REGISTERED No. L 2891.

# ಶರಣ ಸಂದೇಶ

The
Sharana Sandesh.

ನ್ಯಾಯನಿಷ್ಠುರ| ದಾಕ್ಷಿಣ್ಯಪರನಾನಲ್ಲ| ಲೋಕವಿರೋಧಿ| ಶರಣನಾರಾಂಗೂ ಅಂಜುವವನಲ್ಲ|
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ‖ ವ. ೨೨೮ ‖ ಮಹಾನುಭಾವಿ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೨೩ ನೆಯ ಅಗಸ್ಟ ೧೯೩೭. | ಸಂಚಿಕೆ ೧ |
|---|---|---|

ಜನಸೇವೆಯೇ ದೇವರ ಸೇವೆ.

## ಚೀನ - ಜಪಾನ ಯುದ್ಧ!

ಜಪಾನಿ ಸೈನ್ಯಕ್ಕೆ ಚೀನಿ ಸೈನ್ಯವು ಬಲವಾದ
ಮುತ್ತಿಗೆಯನ್ನು ಹಾಕಿದೆ.

ಹಿಂದುಸ್ಥಾನದ ಸೈನ್ಯವು ಚೀನದ ಕಡೆಗೆ ಹೊರಟಿತು.

## ಪಟೇಲ - ನರಿಮನ್ನರ ವ್ಯಾಜ್ಯ.

ಪಟೇಲರು ತಪ್ಪುಗಾರರಾದರೆ ನಾನು ಅವರ ಮಿತ್ರತ್ವವನ್ನು ಬಿಡುವೆನೆಂದು
ಗಾಂಧೀಜಿಯವರು ಪ್ರಕಟಿಸಿದ್ದಾರೆ.

ತಾ. ೩೦-೮-೩೭ ರ ಒಳಗಾಗಿ ಗಾಂಧೀಜಿಯವರ ಕಡೆಗೆ
ತಮ್ಮ ತಮ್ಮ ಹೇಳಿಕೆಯನ್ನು ಕಳಿಸಬೇಕು.

## ಮತ್ತೊಬ್ಬ ಮುಸಲ್ಮಾನ್ ಮಂತ್ರಿಗಳೆ-?

ಮುಂಬೈ ಪ್ರಾಂತಿಕ ಮಂತ್ರಿಮಂಡಲದಲ್ಲಿ ಇನ್ನೊಬ್ಬ ಮುಸಲ್ಮಾನರನ್ನು ತೆಗೆದುಕೊಳ್ಳುವ
ಯೋಚನೆಯನ್ನು ಸರದಾರ ಪಟೇಲ ಮತ್ತು ಮೌ. ಅಬ್ದುಲ್‌ಕಲಮ್ ಆಜದ
ಇವರು ನಡೆಸಿದ್ದಾರಂತೆ!

ದೇಹವೇ ದೇವಾಲಯ.

ಓಂ

# ಶರಣ ಸಂದೇಶ.

ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೨೩ ನೆಯ ಅಗಸ್ಟ ೧೯೩೭. | ಸಂಚಿಕೆ ೧

## ಮಹತ್ವದ ಸುದ್ದಿಗಳು.

—ಮಹಾತ್ಮಾ ಗಾಂಧಿಯವರು ಜಗತ್ತಿನಲ್ಲಿ ಶಾಂತತೆಯನ್ನು ಸ್ಥಾಪಿಸುವವರೆಂದು ನೋಬಲ್ ಪ್ರೈಜ್ ಕೊಡುವಬಗ್ಗೆ, ರೋಮನ್ ರೋಲಂಡ್ ಮೊದಲಾದ ೧೨ ಜನ ಪ್ರಮುಖರು ನೋಬಲ್ ಪ್ರೈಜ್ ಸಂಘಕ್ಕೆ ತಿಳಿಸಿದ್ದಾರೆ.

—ಕಾಂಗ್ರೆಸ್ಸಿನವರಿಗೆ ಸೈನ್ಯ ಶಾಖೆಯ ಆಯವ್ಯಯಗಳಲ್ಲಿ ಪ್ರವೇಶಿಸಲು ಅಧಿಕಾರ ದೊರೆತರೆ ವರುಷಕ್ಕೆ ೪೦ ಕೋಟಿ ರೂ. ಗಳನ್ನು ಉಳಿಸುವುದಾಗಿ ಮದ್ರಾಸಿನ ಮಂತ್ರಿಗಳಾದ ಶ್ರೀ. ಗಿರಿ ಇವರು ಒಂದು ಭಾಷಣದಲ್ಲಿ ಹೇಳಿದರು.

—ಈಗಿನ ಹೊಸ ರಾಜ್ಯಘಟನೆಯಲ್ಲಿ ತಿದ್ದುಪಾಟನ್ನು ಮಾಡಲು ಇಂಗ್ಲಿಷ್ ಜನರು ಇಷ್ಟವುಳ್ಳವರಾಗಿಲ್ಲವೆಂದು ಮಧ್ಯವರ್ತಿ ಅಸೆಂಬ್ಲಿಯ ಅಧ್ಯಕ್ಷರಾದ ಅಬ್ದುಲ್ ರಹೀಮ ಇವರು ಒಂದು ಸಂಭಾಷಣೆಯಲ್ಲಿ ಹೇಳಿದರು. ಇವರು ಕಳೆದವಾರ ವಿಲಾಯತಿಯಿಂದ ಈ ದೇಶಕ್ಕೆ ಬಂದರು.

—ಬಲ್ಸಾರ ಮುನಸಿಪಾಲ್ಟಿಯ ಉರ್ದು ಶಾಲೆಯ ವಿದ್ಯಾರ್ಥಿಗಳು "ವಂದೇಮಾತರಂ" ಗೀತೆಯನ್ನು ಶಾಲೆಯಲ್ಲಿ ಹೇಳಲು ಮುನಸಿಪಾಲ್ಟಿಯವರು ಮಾಡಿದ ಅಪ್ಪಣೆಯನ್ನು ಮಾನ್ಯ ಮಾಡದೆ ಗಟ್ಟಿ ಮಾಡಿಕೊಂಡರು. ಆಗ ಮುನಸಿಪಾಲ್ಟಿಯವರು ತಮ್ಮ ಅಪ್ಪಣೆಯನ್ನು ತಾತ್ಕಾಲಿಕವಾಗಿ ತಿರುಗಿ ತೆಗೆದುಕೊಂಡರು. ವಂದೇಮಾತರಂ ಗೀತೆಗೆ ಪ್ರತಿಯಾಗಿ ಯಾವುದಾದರೊಂದು ಉರ್ದು ಗೀತೆಯನ್ನು ಮುನಸಿಪಾಲ್ಟಿಯವರು ಗೊತ್ತುಮಾಡಬೇಕಾಗಿ ಮುಸಲ್ಮಾನ್ ಪ್ರಮುಖರು ಕೇಳಿಕೊಂಡಿದ್ದಾರೆ!

—ಗಯಾ ಜಿಲ್ಲೆಯ ಗಾಂಗಲಿ ಎಂಬಲ್ಲಿ ಒಬ್ಬ ರಜಪೂತ ಸ್ತ್ರೀಯಳು ಸ್ತ್ರೀ ಪುರುಷ ಅವಯವವುಳ್ಳ ಒಂದು ಮಗುವನ್ನು ಹೆತ್ತಳು. ಅದಕ್ಕೆ ಐದು ಕಾಲುಗಳಿದ್ದವು. ಅದನ್ನು ಸಂಶೋಧನಾಲಯಕ್ಕೆ ಕೊಡಲು ಡಾಕ್ಟರರು ಕೇಳಿದರೆ ತಾಯಿ ತಂದೆಗಳು ಕೊಡಲು ಒಪ್ಪಲಿಲ್ಲ. ಶಿವ-ಶಕ್ತಿಯರ ಅವತಾರವೆಂದೇ ಅವರು ನಂಬಿದ್ದಾರಂತೆ!

—ಮದ್ರಾಸ ಪ್ರಾಂತದಲ್ಲಿ ಮದ್ಯಪಾನ ಪ್ರತಿಬಂಧದ ಚಟುವಟಿಕೆ ಹೆಚ್ಚುವಂತೆ ಕಾಣುತ್ತದೆ. ಅನಂತಪುರ ಜಿಲ್ಲೆಯ ೨೫ ಅಂಗಡಿಗಳಲ್ಲಿ ೨೪ ಅಂಗಡಿಗಳ ಲಿಲಾವಿಗೆ ಜನರೇ ಬರಲಿಲ್ಲ.

—ಬರುವ ಡಿಶಂಬರ ತಿಂಗಳ ಎರಡನೆಯ ವಾರದಲ್ಲಿ ಮಹಾರಾಷ್ಟ್ರ ಹಿಂದು ಮಹಾಸಭೆಯು ಕೊಲ್ಲಾಪುರದಲ್ಲಿ ಕೂಡುವುದಿದೆ. ಪಂಡಿತ ಮಾಲವೀಜಿ ಅಥವಾ ಡಾ. ಮುಂಜೆಯವರು ಅಧ್ಯಕ್ಷರಾಗುವರು.

—ಅಂದಮಾನ ರಾಜಕೈದಿಗಳ ನಿರಶನ ಸತ್ಯಾಗ್ರಹವು ಭೀಕರ ಸ್ಥಿತಿಯನ್ನು ಹೊಂದಿದೆ. ಬ್ರಿಟಿಶ್ ಸರಕಾರವು ಈ ವಿಷಯದಲ್ಲಿ ಜಾಗ್ರತೆ ಸಹಾನುಭೂತಿಯನ್ನು ತೋರಿಸುವುದು ಅತ್ಯಗತ್ಯ.

—ಅಂದಮಾನ ರಾಜಕೈದಿಗಳ ನಿರಶನ ಸತ್ಯಾಗ್ರಹದ ಸಹಾನುಭೂತಿಗಾಗಿ ಪುಣೆಯಲ್ಲಿಯೂ ಶ್ರೀ. ಸಾತೆ ಮೊದಲಾದವರು ಸಾಮೂಹಿಕ ಉಪವಾಸ ವ್ರತವನ್ನು ಕೈಕೊಂಡಿದ್ದಾರೆ.

—ಬಂಗಾಲ ಪ್ರಾಂತದ ಮಂತ್ರಿಮಂಡಲವು ೨೨ ಜನ ಉಪಮಂತ್ರಿಗಳನ್ನು ನಿಯಮಿಸಿಕೊಳ್ಳುವದು. ಅವರಲ್ಲಿ ೧೯ ಜನರು ಮುಸಲ್ಮಾನರು. ೨ ಆದಿಹಿಂದುಗಳು. ಒಬ್ಬರು ಹಿಂದುಗಳು. ಈ ಉಪಮಂತ್ರಿಗಳಿಗೆ ತಿಂಗಳಿಗೆ ೫೦೦ ರೂ. ಇಂದ ೧೦೦೦ ರೂ. ವರೆಗೆ ವೇತನ.

—ಮಧ್ಯಪ್ರಾಂತ ಸರಕಾರವು ೫ ವರ್ಷಗಳಲ್ಲಿ ಮದ್ಯಪಾನವನ್ನು ಸಂಪೂರ್ಣ ನಿಲ್ಲಿಸುವ ಯೋಜನೆ ಮಾಡುತ್ತಾ ಇದೆ. ಸರಕಾರಿ ಅಧಿಕಾರಿಗಳ ವೇತನದಲ್ಲಿ ನೂರಕ್ಕೆ ೫ ರಿಂದ ೨೫ ರ ವರೆಗೆ ಕಡಿಮೆ ಮಾಡುವ ವಿಚಾರದಲ್ಲಿಯೂ ಇದೆ.

—ಶ್ರೀ. ಪಟೇಲ-ನರಿಮಾನರ ವಿವಾದದಲ್ಲಿ ಶ್ರೀ. ನರಿಮನ್ನರಿಗೆ ನ್ಯಾಯ ದೊರೆಯಬೇಕೆಂದು ಶ್ರೀ. ಅನಂತರಾವ ಗದ್ರೆ ಎಂಬುವವರು ಒಂದು ವಾರದ ನಿರಶನ ಸತ್ಯಾಗ್ರಹವನ್ನು ಆಚರಿಸಿದರು.

—ಮಧ್ಯಪ್ರಾಂತದ ಮುಖ್ಯ ಮಂತ್ರಿಗಳಾದ ಡಾ. ಖರೆ ಇವರು ಅಲ್ಲಿಯ ಗವ್ಹರ್ನರರಿಗೆ ಖಾದಿಯನ್ನು ಕಾಣಿಕೆಯಾಗಿ ಕೊಟ್ಟರು. ಅವರು ಅದನ್ನು ಪ್ರೇಮ ಮತ್ತು ಸಹಾನುಭೂತಿಯ ದ್ಯೋತಕಗಳೆಂದು ಸ್ವೀಕರಿಸಿದರು.

—ವಿಜಾಪುರ ಜಿಲ್ಲಾ ದುಷ್ಕಾಳ ನಿವಾರಣಾರ್ಥವಾಗಿ ಸರಕಾರದಿಂದ ಕೊಡಲ್ಪಟ್ಟ ೧೦ ಸಾವಿರ ರೂ. ಗಳು ಸಾಲದಾಗಿವೆ.

# ಆರ್ಯ ಸಂಸ್ಕೃತಿಯ ಸಮಾಧಿ.

ಲೇಖಕರು— (ಶ್ರೀ. ತರ್ಕತೀರ್ಥ ಲಕ್ಷ್ಮಣ ಶಾಸ್ತ್ರಿ ಜೋಶಿ.)

[illegible] ಸಂಸ್ಕೃತಿಯೆಂದರೆ ಅದೇನು ಒಂದು ಶಾಶ್ವತವಾದ ಅಖಂಡ ಸಂಸ್ಕೃತಿಯೇನೂ ಅಲ್ಲ. ಅದರ ವೈಶಿಷ್ಟ್ಯವು ತ್ರಿಕಾಲಾಬಾಧಿತವಾದುದೂ ಅಲ್ಲ. ಪ್ರಾಚೀನ ಕಾಲದಲ್ಲಿ ಹಿಂದುಸ್ಥಾನಕ್ಕೆ ಬಂದ ಮತ್ತು ಹಿಂದುಸ್ಥಾನದ ಹೊರಗಿದ್ದ ಆರ್ಯರೆಂಬ ಒಂದು ಜನಾಂಗದವರು ದೇಶ, ಕಾಲ, ಪರಿಸ್ಥಿತಿಗಳಿಗನುಸರಿಸಿ ತಮ್ಮ ಪ್ರಯತ್ನದಿಂದ ಆಗಾಗ್ಗೆ ಉಂಟುಮಾಡಿಕೊಂಡ ಸಂಸ್ಕೃತಿಗೇನೇ ಆರ್ಯ ಸಂಸ್ಕೃತಿಯೆಂದು ಹೇಳಬಹುದು.

ಆರ್ಯರು ಹಿಂದುಸ್ಥಾನಕ್ಕೆ ಬರುವ ಮುಂಚೆ ಅವರಲ್ಲಿದ್ದ ಸಂಸ್ಕೃತಿಗೂ ಎಂದರೆ ಆಚಾರ, ವಿಚಾರ, ಭಾವನೆ ಮೊದಲಾದವುಗಳಿಗೂ ಹಿಂದುಸ್ಥಾನಕ್ಕೆ ಬಂದನಂತರ ಉಂಟಾದ ಸಂಸ್ಕೃತಿಗೂ ಮಹದಂತರವಾಯಿತು. ಆ ಮುಂಚಿನ ಸಂಸ್ಕೃತಿಯು ಅಳಿದುಹೋಗಿ ಎರಡು ಸಾವಿರ ವರುಷಗಳಾದವು. ಆರ್ಯರ ಆಗಿನ ಸಂಸ್ಕೃತಿಗೂ ಆರ್ಯೇತರ ಸಂಸ್ಕೃತಿಗೂ ಹೋರಾಟವಾಗಿ ಅನೇಕ ತಿದ್ದುಪಾಟುಗಳೂ ಹೆಚ್ಚು ಕಡಿಮೆಗಳೂ ಉಂಟಾಗಿ ಒಂದು ಬೇರೆ ವಿಧವಾದ ಸಂಸ್ಕೃತಿಯೇ ಜನ್ಮವೆತ್ತಿತು. ಇದೇ ಈಗಿನ ಹಿಂದು ಸಂಸ್ಕೃತಿಯು. ಇದು ಹುಟ್ಟಿ ಸಾಧಾರಣ ೨-೨॥ ಸಾವಿರ ವರುಷಗಳಾದವು.

## ಆರ್ಯ ಮತ್ತು ದಾಸರ ಕಲಹ.

ಭಾಷೆ, ಆಚಾರ, ವಿಚಾರಗಳ ಸಾಮ್ಯದಿಂದ ಹಿಂದುಸ್ಥಾನಕ್ಕೆ ಬಂದ ಆರ್ಯರ ಮತ್ತು ಹಿಂದುಸ್ಥಾನದ ಹೊರಗಿದ್ದ ಆರ್ಯರ ವಂಶವು ಒಂದೇ ಆಗಿದ್ದಿತೆಂದು ಈ ವರೆಗೂ ತಿಳಿಯಲ್ಪಡುತ್ತಿತ್ತು. ಆದರೆ ಇತ್ತೀಚಿನ ಶೋಧದಿಂದ ಆರ್ಯರೆಂದು ಹೇಳಿಕೊಳ್ಳುವವರೆಲ್ಲರೂ ಒಂದೇ ವಂಶದವರಲ್ಲವೆಂದೇ ಸಿದ್ಧವಾಗಿದೆ. ಏಕೆಂದರೆ ಅವರಲ್ಲಿ ಶರೀರ ಸಾಮ್ಯವು ಎಷ್ಟೆಷ್ಟೂ ಇಲ್ಲ.

ಋಗ್ವೇದದಲ್ಲಿ ಹತ್ತು ಸಾವಿರ ಮಂತ್ರಗಳಿವೆ. ಇವುಗಳಲ್ಲಿ ಆರ್ಯರ ಆಚಾರ, ವಿಚಾರ, ಭಾವನೆಗಳು ಸ್ಪಷ್ಟವಾಗಿ ಮೂಡಿವೆ. ಆ ಕಾಲದ ಆರ್ಯರ ಸಾಹಿತ್ಯವೇ ಋಗ್ವೇದವು. ಅದರಲ್ಲಿ ಅವರ ಧಾರ್ಮಿಕ ಕಲ್ಪನೆಗಳು ವಿಶೇಷವಾಗಿವೆ. ಋಗ್ವೇದದಲ್ಲಿರತಕ್ಕ ಸಂಗತಿಗಳಮೇಲಿಂದ ಆಗಿನ ಆರ್ಯರು ಐಹಿಕ ಸುಖ ಸಂಪಾದನೆಗೆ ಪ್ರಯತ್ನಿಸುವವರೂ ಯುದ್ಧ, ಸುಲಿಗೆ, ಆಕ್ರಮಣ, ಗಳಲ್ಲಿ ಉತ್ಸಾಹವುಳ್ಳವರೂ ಆಗಿದ್ದರಿಂದು ಸ್ಪಷ್ಟ ಗೊತ್ತಾಗುತ್ತದೆ. ಅವರ ವೈರಿಗಳೇನೂ ಸಾಮಾನ್ಯರಿರಲಿಲ್ಲ. ಅವರಿಗೆ ಆರ್ಯರು ಶೂದ್ರ, ದಾಸ, ದಸ್ಯು, ಅರಣ, ಎಂಬುದಾಗಿ ಹೇಳುತ್ತಿದ್ದರು. ದಾಸ ಅಥವಾ ದಸ್ಯು ಎಂದರೆ ಎಸೆಯುವವನು, ತಳ್ಳುವವನು, ಪ್ರತಿಕಾರ ಮಾಡುವವನು ಎಂಬ ಅರ್ಥ. ಅರಣ ಎಂದರೆ ಭಯಪ್ರದ ಎಂಬ ಅರ್ಥ.

ಆರ್ಯರ ವೈರಿಗಳಾಗಿದ್ದ ಈ ದೇಶದ ಆಗಿನ ದಾಸ, ಅರಣ ಈ ಜನರು ದೊಡ್ಡ ದೊಡ್ಡ ಪಟ್ಟಣಗಳನ್ನು ನಿರ್ಮಿಸಿ ಸುತ್ತಲೂ ಬಲವಾದ ಕೋಟೆಗಳನ್ನು ಕಟ್ಟಿಕೊಂಡು ವಾಸವಾಗಿದ್ದರು. ಆಕಳು, ಮತ್ತು ಎತ್ತುಗಳ ದೊಡ್ಡ ದೊಡ್ಡ ತಂಡುಗಳನ್ನು ಇಟ್ಟುಕೊಂಡು ಸಂಪತ್ತುಳ್ಳವರಾಗಿದ್ದರು. ಅವರು ಒಟ್ಟುಗೂಡಿಯೇ ವೈರಿಗಳ ಸಂಗಡ ಯುದ್ಧಮಾಡುತ್ತಿದ್ದರು. ಋಗ್ವೇದದಲ್ಲಿ ಇಂಥ ವೈರಿಗಳ ಸಂಬಂಧವಾಗಿಯೂ ಇವರನ್ನು ಸೋಲಿಸಲು ತಮಗೆ ಶಕ್ತಿಯು ಬರಲೆಂಬುದಾಗಿಯೂ ಪ್ರಾರ್ಥಿಸಿದ ಅನೇಕ ವಚನಗಳಿವೆ.

ಆರ್ಯರಿಗಿಂತ ಈ ದೇಶದ ಜನರು ಆಗ ಅನೇಕ ಸಂಗತಿಗಳಲ್ಲಿ ಹೆಚ್ಚು ಸಂಸ್ಕೃತರಾಗಿದ್ದರು. ಮೊಹಂಜೋದಾರೊ ಮತ್ತು ಹರಪ್ಪಾ ಈ ಸ್ಥಳಗಳಲ್ಲಿ ದೊರೆತ ಪ್ರಾಚೀನ ವಸ್ತುಗಳೇ ಇದಕ್ಕೆ ಸಾಕ್ಷಿಯಾಗಿವೆ. ವೈದಿಕ ಆರ್ಯರು ಈ ದೇಶಕ್ಕೆ ಬರುವಾಗ ಕುದುರೆಗಳನ್ನು ತೆಗೆದುಕೊಂಡು ಬಂದರು. ಆಗ ಇವರು ಉಕ್ಕಿನ ಆಯುಧಗಳನ್ನು ಉಪಯೋಗಿಸುತ್ತಿದ್ದರು. ಅವರು ಬಲಶಾಲಿಗಳೂ ಆಕ್ರಮಣಶೀಲರೂ ಆಗಿದ್ದರು. ಅಂತೆಯೇ ಈ ದೇಶದಲ್ಲಿ ಶಾಂತತೆಯಿಂದಿದ್ದ ಜನರಮೇಲೆ ಏರಿಬಂದು ವಿಜಯಶಾಲಿಗಳಾದರು. ಇಲ್ಲಿಯ ಜನರನ್ನು ಸೋಲಿಸಿದ್ದರಿಂದ ದಾಸ ಎಂಬುದರ ಅರ್ಥ ಸೇವಕ ಎಂಬುದಾಗಿ ಆಯಿತು.

## ಆರ್ಯರ ದೇವರು.

ಭಕ್ತನು ತನ್ನ ಇಷ್ಟದಂತೆ ದೇವರ ರೂಪವನ್ನು ಚಿತ್ರಿಸುತ್ತಾನಷ್ಟೆ. ಆದುದರಿಂದ ದೇವರ ಗುಣ ರೂಪಾದಿಗಳ ವರ್ಣನೆಗಳಮೇಲಿಂದ ಭಕ್ತನ ಇಷ್ಟ ಅಭಿರುಚಿ ಮೊದಲಾದವುಗಳನ್ನು ಕಂಡುಕೊಳ್ಳಬಹುದು. ಆರ್ಯರ ಮುಖ್ಯ ದೇವರು ಇಂದ್ರ. ಅವರಿಗೆ ಅಧ್ಯಾತ್ಮ ಶಾಸ್ತ್ರವಾಗಲಿ, ಅಥವಾ ಮೋಕ್ಷದ ಆಕಾಂಕ್ಷೆಯಾಗಲಿ ಮೊದಲು ಇರಲಿಲ್ಲ. ಭೌತಿಕ ಸುಖ, ಐಹಿಕ ಸುಖ ಸೌಲಭ್ಯ ಇವೇ ಅವರ ಮುಖ್ಯ ಗುರಿಗಳಾಗಿದ್ದವು. ಅಗ್ನಿ, ಸೂರ್ಯ ಉಷಾ, ಪರ್ಜನ್ಯ, ವರುಣ, ಮರುತ್ ಮೊದಲಾದ ನೈಸರ್ಗಿಕ, ಶಕ್ತಿಗಳೇ ಆರ್ಯರ ದೇವರು.

ಇಂದ್ರನು ಈ ಎಲ್ಲ ದೇವರಿಗಿಂತ ಹೆಚ್ಚಿನವನು. ಈತನು ಮಹಾ ಪರಾಕ್ರಮಿಯು. ಈತನು ಉಕ್ಕಿನ ಮತ್ತು ವಜ್ರಧ ಆಯುಧಗಳನ್ನು ಧರಿಸಿ, ಸೋಮ ಮತ್ತು ಮದ್ಯವನ್ನು ಕುಡಿದು ವೈರಿಗಳ ಕೋಟೆಗಳನ್ನು ಹಾಳುಮಾಡಿ ಶತ್ರುಗಳನ್ನು ಸಂಹಾರ ಮಾಡುವುದರಲ್ಲಿ ಬಹು ಧೀರನು. ಗೋಮಾಂಸ ಪ್ರಿಯನು. ವೈರಿಗಳ ಗೋಧನವನ್ನು ಹರಣಮಾಡುವುದರಲ್ಲಿ ಬಹು ಶೂರನು. ಭಕ್ತರಿಗೆ ಬೇಕಾದ ಸ್ತ್ರೀಯರನ್ನು ಓಡಿಸಿ ತಂದು ಕೊಡುವವನು. ಆರ್ಯರ ಯುದ್ಧದಲ್ಲಿ ಅವರಿಗೆ ಯಾವಾಗಲೂ ಸಹಾಯ ಮಾಡುವವನು.

ಈಪ್ರಕಾರ ಆರ್ಯರು ತಮ್ಮ ಇಷ್ಟ ಮತ್ತು ಪರಾಕ್ರಮಗಳನ್ನು ತಮ್ಮ ದೇವರಾದ ಇಂದ್ರನಲ್ಲಿವೆಯೆಂದು ತಿಳಿದು ಇಂದ್ರನನ್ನು ಪ್ರಾರ್ಥಿಸಿದ ಅನೇಕ ಮಂತ್ರಗಳು ಋಗ್ವೇದದಲ್ಲಿವೆ. ಆಕಳು, ಕುದುರೆ, ಕುರಿ, ಆಡು ಇವುಗಳನ್ನು ಯಜ್ಞದಲ್ಲಿ ಆರ್ಯರು ಹವನ ಮಾಡಿ ತಮ್ಮ ದೇವತೆಗಳಿಗೆ ಅರ್ಪಿಸುತ್ತಿದ್ದರು. ಇವುಗಳ ಪ್ರಾಪ್ತಿಗಾಗಿ ದೇವರನ್ನು ಬೇಡಿಕೊಳ್ಳುತ್ತಿದ್ದರು.

## ವರ್ಣಗಳ ಉತ್ಪತ್ತಿ.

ಆರ್ಯರು ಅನೇಕ ಪತ್ನಿಯರನ್ನು ಮಾಡಿಕೊಳ್ಳುತ್ತಿದ್ದರು. ಮದ್ಯ, ಜೇನುತುಪ್ಪ, ಸೋಮರಸ, ಇವು ಅವರಿಗೆ ಬಹು ಪ್ರಿಯವಾಗಿದ್ದವು. ಯುದ್ಧದಲ್ಲಿ ತಾವು ಸೋಲಿಸಿದವರನ್ನು ಶೂದ್ರರೆಂದು ಅವರನ್ನು ಹೀನವಾಗಿ ಕಂಡರು. ಮೊದಲು ಆರ್ಯ ಮತ್ತು ದಾಸ ಎಂಬ ಎರಡೇ ವರ್ಗಗಳಿದ್ದವು. ಆರ್ಯರು ಅಧಿಕಾರಾರೂಢರಾದನಂತರ ಪುರೋಹಿತ ಅಥವಾ ಬ್ರಾಹ್ಮಣ ವರ್ಗ ಮತ್ತು ವೈಶ್ಯ ವರ್ಗಗಳುಂಟಾದವು. ರಾಜ್ಯಾಧಿಕಾರಗಳನ್ನು ನಡೆಯಿಸುತ್ತಿದ್ದವರೇ ಕ್ಷತ್ರಿಯರು. ಈ ಮೂರೂ ವರ್ಣದವರು ಆರ್ಯರು. ಇವರು ಈ ದೇಶದ ಅನಾರ್ಯ ಸ್ತ್ರೀಯರನ್ನು ಲಗ್ನವಾಗಿ ತಮ

ಜನ ಸಂಖ್ಯೆಯನ್ನು ಹೆಚ್ಚಿಸಿದರು. ಈ ಆರ್ಯರು ಪಂಜಾಬ ಮತ್ತು ಗಂಗಾ-ಯಮುನಾ ನದಿಗಳ ಪ್ರದೇಶಗಳಲ್ಲಿ ವಾಸವಾಗಿದ್ದರು. ಇವರು ಬೇರೆ ಬೇರೆ ಭಾಗಗಳಲ್ಲಿ ಹೋಗಿ ರಾಜ್ಯವನ್ನು ಸಂಪಾದಿಸಿದರು. ಆದರೆ ಚಕ್ರವರ್ತಿಗಳಾಗಿ ಮಾತ್ರ ಆಳಲಿಲ್ಲ. ಋಗ್ವೇದದಲ್ಲಿರುವ ದಾಶರಾಜ್ಞ ಯುದ್ಧವು ಆರ್ಯರ ಯುದ್ಧವನ್ನೇ ವಿವರಿಸತಕ್ಕದ್ದಾಗಿದೆ.

### ಬ್ರಾಹ್ಮಣರ ಪ್ರಾಬಲ್ಯ.

ಯಜ್ಞ, ಯಾಗ, ವ್ರತ, ಹೋಮ ಮಂತ್ರ, ತಂತ್ರ, ಗ್ರಹ ದೇವತಾ ಪೂಜೆ ಮೊದಲಾದ ನಾನಾ ರೀತಿಗಳಿಂದ ಬ್ರಾಹ್ಮಣರ ವರ್ಚಸ್ಸು ಆರ್ಯರಲ್ಲಿ ದಿನೆ ದಿನೆ ಹೆಚ್ಚಿತು. ಯಜುರ್ವೇದ, ಬ್ರಾಹ್ಮಣ ಗ್ರಂಥ ಮತ್ತು ಮಂತ್ರ, ತಂತ್ರ, ಮಾಟ ಮೊದಲಾದವುಗಳಿಂದ ಕೂಡಿದ ಅಥರ್ವಣ ವೇದ ಇವು ಬ್ರಾಹ್ಮಣರ ಪ್ರಾಬಲ್ಯವನ್ನು ತೋರಿಸತಕ್ಕ ಗ್ರಂಥಗಳಾಗಿವೆ. ಭಾರತೀಯ ಯುದ್ಧದನಂತರ ಕ್ಷತ್ರಿಯರ ವರ್ಚಸ್ಸು ಬಹು ಮಟ್ಟಿಗೆ ಲೋಪವಾಯಿತು. ಇದರಿಂದ ಬ್ರಾಹ್ಮಣರ ಪ್ರಾಬಲ್ಯವು ಪೌರಾಣಿಕ ಕಾಲದಲ್ಲಿ ವಿಶೇಷವಾಗಿ ನಾಲ್ಕು ವರ್ಣಗಳು ಸ್ಥಿರಪಟ್ಟವು. ಶೂದ್ರರೆಂಬ ಮಾನವ ವರ್ಗದ ಬಹು ದೊಡ್ಡ ಭಾಗವು ಕೀಳಾಗಿ ತಿಳಿಯಲ್ಪಟ್ಟು ಬಹು ಹೀನ ವೃತ್ತಿಗೆ ತಳ್ಳಲ್ಪಟ್ಟಿತು. ಜನ್ಮದಿಂದಲೇ ಜಾತಿಯ ಮೇಲು ಕೀಳುಗಳು ಎಣಿಸಲ್ಪಟ್ಟವು. ಬ್ರಾಹ್ಮಣನು ಎಂಥ ಅಪರಾಧವನ್ನು ಮಾಡಿದರೂ ಆತಗೆ ದೇಹ ದಂಡನೆಯ ಶಿಕ್ಷೆಯಿಲ್ಲ. ನ್ಯಾಯ ನಿರ್ಣಯದ ಕಾರ್ಯವನ್ನು ಮೂರ್ಖನಾದ ಬ್ರಾಹ್ಮಣನಾದರೂ ಮಾಡಬಹುದು. ಆದರೆ ಜಾಣನಾದ ಶೂದ್ರನು ಮಾತ್ರ ಮಾಡಕೂಡದೆಂದು ಶಾಸನವೇ ಏರ್ಪಟ್ಟಿತು. ಬುದ್ಧನ ವರೆಗೆ ಚತುರ್ವರ್ಣಗಳ ರೀತಿ ನೀತಿಗಳು ಬಲಗೊಳ್ಳುತ್ತಲೇ ಇದ್ದವು. ಅನೇಕ ಸ್ಮೃತಿ ಗ್ರಂಥಗಳು ಏರ್ಪಟ್ಟವು. ವರ್ಣಗಳು ವಿಷಮತ್ವದಿಂದಲೇ ಏರ್ಪಟ್ಟವುಗಳಾಗಿವೆ.

### ಪ್ರತಿಕ್ರಿಯೆಯ ಪ್ರಾರಂಭ.

ಆರ್ಯರ ರೀತಿನೀತಿಗಳನ್ನೂ ಆಕ್ರಮಣವನ್ನೂ ತಡೆಯುವಂತಹ ಬೇರೆ ಬೇರೆ ಮಾನವ ವಂಶಗಳು ಈ ದೇಶದಲ್ಲಿ ಇದ್ದೇ ಇದ್ದವು. ಶೂದ್ರರು ಅಥವಾ ಸಂಕರ ಜಾತಿಯವರು ಇಲ್ಲವೇ ವ್ರಾತ್ಯರು ಎಂಬ ಜನರು ಆರ್ಯರಿಂದ ತುಳಿಯಲ್ಪಟ್ಟಿದ್ದರು. ಕೆಲವರು ಸ್ವತಂತ್ರವಾಗಿಯೂ ಇದ್ದರು. ಅವರಲ್ಲಿ ಕೆಲವರು ಲಿಂಗ ಪೂಜಕರೂ ಮೂರ್ತಿ ಪೂಜಕರೂ ಇದ್ದರು. ಇವರೆಲ್ಲರೂ ಆರ್ಯೇತರರು. ಇವರು ಆರ್ಯರ ಯಜ್ಞ ಸಂಸ್ಕೃತಿಯನ್ನು ವಿರೋಧಿಸುತ್ತಿದ್ದರು. ಪರಪುಷ್ಟ ಬ್ರಾಹ್ಮಣರ ವರ್ಚಸ್ಸನ್ನು ಕಡಿಮೆಮಾಡಲು ಪ್ರಯತ್ನಿಸುತ್ತಿದ್ದರು.

ಜೈನ ಧರ್ಮ ಮತ್ತು ಬೌದ್ಧ ಧರ್ಮಗಳು ಈ ವೈದಿಕ ಧರ್ಮದಮೇಲೆ ಬಂದ ಬಲವಾದ ಆಘಾತಗಳು. ಆಯಾಯ ಧರ್ಮಗಳ ಪ್ರಚಾರಕರು ಸನ್ಯಾಸಿಗಳಿರುತ್ತಿದ್ದರು. ಬ್ರಾಹ್ಮಣರಾದರೋ ಗೃಹಸ್ಥಾಶ್ರಮಿಗಳು. ಇವರು ಜನಸಾಮಾನ್ಯರ ನಿತ್ಯ ನೈಮಿತ್ತಿಕ ಆಚಾರ ವ್ರತಾದಿಗಳಿಗೆ ಬೇಕಾಗುತ್ತಿದ್ದರು. ಆದುದರಿಂದ ಜನಸಾಮಾನ್ಯರ ಮೇಲಿದ್ದ ಇವರ ವರ್ಚಸ್ಸು ಅಳಿಯಲಿಲ್ಲ. ಜನರ ಮನೋವೃತ್ತಿಗೆ ತಕ್ಕಂತೆ ಭಕ್ತಿಮಾರ್ಗದ ಪೂಜೆ, ಜಪ, ವ್ರತಾದಿಗಳನ್ನು ಬ್ರಾಹ್ಮಣರು ಅನುಸರಿಸಿ ಅವರ ಮೇಲೆ ತಮ್ಮ ವರ್ಚಸ್ಸನ್ನು ಇಟ್ಟುಕೊಂಡರು.

ಹಿಂದಿನ ಯಜ್ಞಯಾಗ ಮಾರ್ಗಗಳನ್ನು ಬಿಟ್ಟು ಭಕ್ತಿಮಾರ್ಗವನ್ನೇ ಅನುಸರಿಸಿದರು. ಆರ್ಯರ ಇಂದ್ರ, ಸೂರ್ಯ, ವರುಣ, ಉಷಾ, ಇವುಗಳ ಪೂಜೆಯು ನಿಂತು ಶಿವ, ವಿಷ್ಣು ಮೊದಲಾದ ದೇವತೆಗಳ ಪೂಜೆ ಪ್ರಾರಂಭವಾಯಿತು. ಯಜ್ಞ ಮಂಟಪಗಳಿಗೆ ಪ್ರತಿಯಾಗಿ ದೇವಾಲಯಗಳುಂಟಾದವು. ತುಪ್ಪ, ಮಾಂಸ, ಸಮಿಧಾಗಳ ಆಹುತಿಗಳು ಅಡಗಿ ಚಂದನಾದಿ ಗಂಧಲೇಪನ, ಆರತಿ ಮೊದಲಾದವುಗಳು ಉದಯವಾದವು.

ಐಹಿಕ ಸುಖದ ಕಡೆಗಿದ್ದ ಆರ್ಯರ ಆಗಿನ ವಿಚಾರಸರಣಿ ಲೋಪವಾಗಿ ಇಹಲೋಕಸುಖವು ಕ್ಷಣಭಂಗುರವೂ ಪರಲೋಕ ಸುಖವೇ ಶಾಶ್ವತವೂ ಎಂಬ ಕಲ್ಪನೆಗಳುಂಟಾದವು. ಹೀಗೆ ಎಲ್ಲ ದೃಷ್ಟಿಗಳಿಂದಲೂ ಆರ್ಯ ಸಂಸ್ಕೃತಿಯು ಸಮಾಧಿಯಾಗಿ ಸಾವಿರಾರು ವರುಷಗಳಾದವು. ಈಗಿನ ಹಿಂದು ಸಂಸ್ಕೃತಿಯು ಏರ್ಪಟ್ಟು ಮತ್ತೆ ಅದರಲ್ಲಿ ವ್ಯತ್ಯಾಸಗಳಾಗುತ್ತಾ ಇವೆ. ಆರ್ಯ ಸಂಸ್ಕೃತಿಯ ಸಮಾಧಿಯ ಮುಂದೆ ಜೀರ್ಣವಾದ ಹಿಂದು ಸಂಸ್ಕೃತಿಯು ಈಗ ಆರತಿಯನ್ನು ಬೆಳಗುತ್ತಾ ಇದೆ. ಏಕೆಂದರೆ, ನೀನು ಮತ್ತೆ ಸಮಾಧಿಯಿಂದ ಎದ್ದು ಬಾ; ಎಂದು. ಇದು ದೇಶದ ದುರ್ದೈವವಲ್ಲವೆ?

---

## ಪ್ರಚಂಡ ಸಾಹಸ!

ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಅನೇಕ ಸ್ತ್ರೀ ಪುರುಷರು ನಾನಾ ಶೋಧಗಳಿಗಾಗಿ ಮೃತ್ಯುವನ್ನು ಕೂಡಾ ಎದರಿಸುವಂತಹ ಪ್ರಚಂಡ ಸಾಹಸಕ್ಕೆ ಎದೆ ಕೊಡುತ್ತಿದ್ದಾರೆ. ಹಿಮಾಲಯದಲ್ಲಿಯ ನಂಗಾ ಪರ್ವತದ ಶಿಖರವನ್ನು ಹತ್ತಲು ಜರ್ಮನಿಯ ಸಾಹಸಿಗಳು ಮಾಡುತ್ತಿರುವ ಪ್ರಯತ್ನವು ಅತ್ಯದ್ಭುತವಾದುದು.

೧೯೩೪ನೆಯ ಮಾರ್ಚ ತಿಂಗಳಲ್ಲಿ ಜರ್ಮನಿಯ ವಿಲಿಮರ್ಕಲ್ ಎಂಬ ಪ್ರಚಂಡ ಸಾಹಸಿಯು ನಂಗಾ ಪರ್ವತದ ಶಿಖರವನ್ನೇರುವ ಕಾರ್ಯಕ್ಕಾಗಿ ಜರ್ಮನಿಯಿಂದ ಹೊರಟು ಮೇ ತಿಂಗಳಲ್ಲಿ ಹಿಮಾಲಯವನ್ನು ಸೇರಿದನು. ಈ ಪರ್ವತ ಶಿಖರವು ೨೬೬೪೦ ಅಡಿ ಎತ್ತರವಾಗಿದೆ. ಈ ಪ್ರವಾಸಿಯು ೨೫೩೦೦ ಅಡಿಗಳ ವರೆಗೆ ಹೋಗಿ ಜುಲೈ ೧೭ ನೆಯ ತಾರೀಖಿನ ದಿವಸ ಹಿಮಗಡ್ಡೆಯ ಆಘಾತದಿಂದ ಮೃತಪಟ್ಟನು.

ಈ ಪ್ರವಾಸದ ಭೀಕರ ಸ್ಥಿತಿಯು ಗೊತ್ತಿದ್ದರೂ ಕಳೆದ ಮೇ ತಿಂಗಳಲ್ಲಿ ಜರ್ಮನಿಯ ಮತ್ತೊಂದು ಸಾಹಸಿಗಳ ಗುಂಪು ಈ ಪರ್ವತದ ಶಿಖರವನ್ನೇರಲು ಪ್ರಯತ್ನಿಸಿ ಜಯ ಹೊಂದದೆ ಮೃತಪಟ್ಟಿತಷ್ಟೆ. ಈ ಪ್ರವಾಸಿಗಳಲ್ಲಿ ಪ್ರಾಯಶಃ ಯಾರೂ ತಿರುಗಿ ಬಾರದಿದ್ದುದರಿಂದ ಅವರು ಎಲ್ಲಿಯವರೆಗೆ ಹೋಗಿದ್ದರೆಂಬುದಾಗಲೀ ಅವರಿಗೆ ಯಾವ ವಿಪತ್ತು ಬಂದಿತೆಂಬುದಾಗಲೀ ಗೊತ್ತಾಗಲಿಲ್ಲ. ಇವರ ಈ ಪ್ರಚಂಡ ಸಾಹಸವು ಕೌತುಕಾಸ್ಪದವಾದುದಲ್ಲವೆ?

## ವಿಶ್ವ ವಿದ್ಯಾಲಯಗಳಲ್ಲಿ
## ವಚನ ವಾಙ್ಮಯದ ಅಭ್ಯಾಸ.

ಬಸವಾದಿ ಪ್ರಮಥರು ಕರ್ನಾಟಕ ಭಾಷೆಯಲ್ಲಿ ಹೊರಪಡಿಸಿದ ವಚನ ವಾಙ್ಮಯವು ಎಷ್ಟು ಮಹತ್ವದ್ದೆಂಬದು ಈಗ ಎಲ್ಲರಿಗೂ ತಿಳಿದದ್ದೇ ಆಗಿದೆ. ಇದರ ಮೂಲಕ ಕನ್ನಡ ಭಾಷೆಗೆ ಶೋಭೆಯುಂಟಾಗಿದೆಯಷ್ಟೇ ಅಲ್ಲ; ಹಿಂದುಸ್ಥಾನದ ಭಾಷೆಗಳಲ್ಲಿ ಕನ್ನಡಕ್ಕಿರುವ ಇದೊಂದು ವೈಶಿಷ್ಟ್ಯವೆಂದು ಹೇಳಿಸಿಕೊಳ್ಳುವ ಸ್ಥಿತಿಯೂ ಉಂಟಾಗಿದೆ. ಈಚೆಗೆ ಈ ವಾಙ್ಮಯಕ್ಕೆ ವಿಶ್ವವಿದ್ಯಾಲಯಗಳಲ್ಲಿ ಸಹ ಸ್ಥಾನವು ದೊರೆಯಹತ್ತಿದೆಂಬದು ಸಮಾಧಾನಕರವಾದದ್ದು. ಮೈಸೂರು, ಮುಂಬೈ ವಿಶ್ವವಿದ್ಯಾಲಯಗಳ ಉಚ್ಚ ಪರೀಕ್ಷೆಗಳಲ್ಲಿ ವಚನ ಗ್ರಂಥಗಳು ಈಗ ಉಪಯೋಗಿಸಲ್ಪಡುತ್ತಲಿವೆ. ಇದು ಶಿವಾನುಭವ ಪತ್ರಿಕೆಯ ದ್ವಾರಾ ವಚನ ಗ್ರಂಥಗಳು ಹೊರಪಟ್ಟದ್ದರ ಪರಿಣಾಮವೇ ಸರಿ.

ಮೈಸೂರು ವಿಶ್ವವಿದ್ಯಾಲಯದ ಈ ವರ್ಷದ ಬಿ. ಎ. ಪರೀಕ್ಷೆಯಲ್ಲಿ ಬಸವೇಶ್ವರನ ವಚನಗಳಲ್ಲಿಯ ಮಹೇಶ್ವರ ಸ್ಥಲದ ವಚನಗಳು ನಿಯಮಿಸಲ್ಪಟ್ಟಿರುತ್ತವೆ.

ಅದೇ ವಿಶ್ವವಿದ್ಯಾಲಯದ ಬಿ ಎ. ಆನರ್ಸ್ ಪರೀಕ್ಷೆಯಲ್ಲಿ ಬಸವೇಶ್ವರನ ವಚನ ಗ್ರಂಥದಲ್ಲಿಯ ೧ ನೇ ಪುಟದಿಂದ ೭೮ ಪುಟಗಳವರೆಗಿನ ಭಾಗವೂ ಅಲ್ಲದೆ ಮಹದೇವಿಯಕ್ಕನ ವಚನಗಳೂ ದೇವರದಾಸಿಮಯ್ಯನ ವಚನಗಳೂ, ಚನ್ನಬಸವೇಶ್ವರನ ವಚನಗಳೂ ನಿಯಮಿಸಲ್ಪಟ್ಟಿವೆ.

ಇದೇ ಪ್ರಕಾರ ಈ ಗ್ರಂಥಗಳು ಮುಂಬೈ ವಿಶ್ವವಿದ್ಯಾಲಯದಲ್ಲಿಯೂ ಕೂಡ ಉಪಯೋಗಿಸಲ್ಪಡುತ್ತಲಿರುವುದು ಕಂಡು ಬರುತ್ತಿದೆ.

ವಚನಶಾಸ್ತ್ರಸಾರ ಭಾಗ ೧ ಇದರಲ್ಲಿಯ ಕೆಲ ಭಾಗಗಳು ಅನೇಕ ವರುಷಗಳಿಂದಲೂ ಬಿ. ಎ. ಎಂ. ಎ. ಪರೀಕ್ಷೆಗಳಲ್ಲಿ ನಿಯಮಿಸಲ್ಪಡುತ್ತ ಬಂದಿವೆ.

೧೯೩೬ ನೇ ಇಸವಿಯಲ್ಲಿಯ ಬಿ. ಎ. ಪರೀಕ್ಷೆಗೆ ಮಹಾದೇವಿಯಕ್ಕನ ವಚನಗಳು ಇಡಲ್ಪಟ್ಟಿದ್ದವು. ೧೯೩೮ ನೇ ಇಸ್ವಿಯ ಎಂ. ಎ. ಪರೀಕ್ಷೆಗೆ ಮೊಗ್ಗೆಮಾಯಿದೇವರ ಕನ್ನಡದಲ್ಲಿ ಪರಿವರ್ತಿಸಲ್ಪಟ್ಟ ಶಿವಾನುಭವ ಸೂತ್ರಕ್ಕೆ ಪ್ರಭುದೇವರ ವಚನಗಳೂ ನಿಯಮಿಸಲ್ಪಟ್ಟಿವೆ. ಘನಲಿಂಗನ ವಚನ ಗ್ರಂಥವೂ ನಿಯೋಜಿಸಲ್ಪಟ್ಟಿವೆ.

ಇದರಿಂದ ಈ ಗ್ರಂಥಗಳನ್ನು ವಿಮರ್ಶಾತ್ಮಕ ಬುದ್ಧಿಯಿಂದ ಅಭ್ಯಾಸಿಸಲಿಕ್ಕೂ, ವೀರಶೈವ ಮತದ ತಿರುಳನ್ನು ತಿಳಿಯಲಿಕ್ಕೂ ವಿದ್ಯಾರ್ಥಿಗಳಿಗೂ ಕನ್ನಡ ಪ್ರೊಫೆಸರರಿಗೂ ಬಹಳ ಅನುಕೂಲವಾಗಿರುತ್ತದೆ.

ಮುಂಬೈ ಇಲಾಖೆಯ ಎಮ್. ಎ. ಪರೀಕ್ಷೆಗೆ ಕರ್ನಾಟಕ ಸಂಸ್ಕೃತಿ ಎಂಬ ವಿಷಯವಿದೆ. ೧೯೩೬ ನೇ ವರ್ಷದಲ್ಲಿ ಈ ವಿಷಯದ ಬಗ್ಗೆ ವೀರಶೈವ ಸಂಸ್ಕೃತಿಯು ನಿಯಮಿಸಲ್ಪಟ್ಟಿತ್ತು. ಇದರ ಪ್ರಶ್ನೆಗಳ ಕಾಗದವು ಶಿವಾನುಭವದ ವಾಚಕರಿಗೆ ಬೋಧಪ್ರದವಾಗಬಹುದೆಂದು ಎಣಿಸಿ ಅವುಗಳನ್ನು ನಾವು ಇಲ್ಲಿ ಕೊಟ್ಟಿರುತ್ತೇವೆ. ಇದರ ಮೇಲಿಂದ ವೀರಶೈವ ವಾಙ್ಮಯದಲ್ಲಿಯ ಮಹತ್ವದ ಗ್ರಂಥಗಳನ್ನು ಹೊರಪಡಿಸುವದು ಎಷ್ಟು ಅಗತ್ಯವೆಂಬುದು ವೀರಶೈವರಿಗೆ ಗೋಚರವಾಗದೆ ಇರಲಾರದು. ಆ ಪ್ರಶ್ನೆಗಳು ಯಾವವೆಂದರೆ—

(೧) ಪಿಂಡ ಮತ್ತು ಬ್ರಹ್ಮಾಂಡ ಇವುಗಳ ಉತ್ಪತ್ತಿಯನ್ನು ವಿವರಿಸಿರಿ. ೨ ಶಿವತತ್ವಗಳೆಂದರೆ ಅವವು ? ಆತ್ಮ ಪ್ರಗತಿಯ ಕಾರ್ಯದಲ್ಲಿ ಅವುಗಳ ಮಹತ್ವವೇನು ? ೩ ಶಕ್ತಿ, ಭಕ್ತಿ, ಲಿಂಗ ಇವುಗಳಲ್ಲಿಯ ಉಪಭೇದಗಳಾವವು ? ಷಟ್‌ಸ್ಥಲ ಶಾಸ್ತ್ರದಲ್ಲಿ ಅವುಗಳ ಮಹತ್ವವಾವುದು ? ೪ ಷಟ್‌ಸ್ಥಲಗಳಾವವು? ಅವುಗಳ ರೀತಿಗಳನ್ನು ವಿರೂಪಾಕ್ಷ ಪಂಡಿತನು ಹೇಗೆ ವಿವರಿಸಿದ್ದಾನೆ? ೫ ಲಿಂಗ ಪೂಜೆಯಲ್ಲಿ ಯಾವ ಯಾವ ಭೇದಗಳಿವೆ ? ಅವುಗಳಿಂದ ಮನುಷ್ಯನ ಆತ್ಮಿಕ ಪ್ರಗತಿಯು ಹೇಗೆ ಉಂಟಾಗುತ್ತದೆ? ೬ ಅರ್ಪಣ ಮತ್ತು ಪ್ರಸಾದ ಇವುಗಳ ಧಾರ್ಮಿಕ ಮಹತ್ವವನ್ನು ವಿವರಿಸಿರಿ. ಅವುಗಳಲ್ಲಿಯ ಉಪಭೇದಗಳಾವವು ? ಅವುಗಳನ್ನು ಮಹದೇವಿಯಕ್ಕನು ಹೇಗೆ ಅನುಭವಕ್ಕೆ ತಂದುಕೊಂಡಿದ್ದಳು ? ೭ ವೀರಶೈವ ಧರ್ಮದಲ್ಲಿ ಪಂಚಾಕ್ಷರ ಮಂತ್ರದ ಮಹತ್ವವು ಅವುದಿದೆ ? ೮ ಮಹಾದೇವಿಯಕ್ಕನು ಅನುಭವಿಸಿದ ಶಿವಾನುಭವದ ರೀತಿಯನ್ನು ವಿವರಿಸರಿ. ೯ ಭಾವಚಿಂತಾರತ್ನದ ಧಾರ್ಮಿಕ ಮತ್ತು ಸಾಂಸ್ಕೃತಿಕ ಮಹತ್ವವಾವುದು ?

ಈ ಪ್ರಕಾರ ವೀರಶೈವ ಸಂಸ್ಕೃತಿಯ ಅಭ್ಯಾಸವು ವಚನ ಗ್ರಂಥಗಳನ್ನು ಹೊರಪಡಿಸುವದರಿಂದ ಹೇಗೆ ವಿಶ್ವ ವಿದ್ಯಾಲಯದ ಉಚ್ಚ ಪರೀಕ್ಷೆಗಳಲ್ಲಿ ಸಾಗಹತ್ತಿದೆಂಬದರ ಮನವರಿಕೆಯು ವೀರಶೈವರಿಗೆ ಆಗದೆ ಇರದು. ಈ ತರದ ಪ್ರಯತ್ನಗಳಿಂದಲೇ ಸಮಾಜದ ಮತ್ತು ಧರ್ಮದ ಯೋಗ್ಯತೆಯು ಬೆಳೆಯುವುದು ನಿಶ್ಚಯವು.

ವೀರಶೈವ ವಾಙ್ಮಯದಲ್ಲಿ ವಚನಗಳಲ್ಲದೆ ಇನ್ನೂ ಅನೇಕ ಕಾವ್ಯಗಳೂ, ರಗಳೆಗಳೂ, ಶತಕಗಳೂ, ತ್ರಿಪದಿಗಳೂ ಉಂಟು. ಇವೆಲ್ಲವೂ ಬಹು ಮಹತ್ವದ್ದಾಗಿವೆ. ಆದರೆ ಇವು ಇನ್ನೂ ಹೊರಪಟ್ಟಿಲ್ಲ. ಇವುಗಳಲ್ಲಿ ಹರಿಹರನ ೩೦-೪೦ ರಗಳೆಗಳು ಮಾತ್ರ ಶಿವಾನುಭವ ಪತ್ರಿಕೆಯ ಮೂಲಕ ಹೊರಪಟ್ಟಿವೆ. ಈಚೆಗೆ ಅವುಗಳಲ್ಲಿ ಕೆಲವು ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಗಾಗಿ ಸಿದ್ಧಪಡಿಸಿದ ಪಠ್ಯ ಪುಸ್ತಕಗಳಲ್ಲಿ ಆರಿಸಲ್ಪಡುತ್ತಲಿದ್ದುದು ಕಂಡುಬರುತ್ತದೆ. ಈ ರಗಳೆಗಳ ಮೂಲಕ ಕನ್ನಡ ಭಾಷೆಯ ಸೊಬಗನ್ನು ವಿದ್ಯಾರ್ಥಿಗಳು ಬಹು ಚೆನ್ನಾಗಿ ಅರಿಯಬಹುದಾಗಿದೆ. ಇದರಂತೆಯೇ ವೀರಶೈವ ವಾಙ್ಮಯದಲ್ಲಿ ಇನ್ನೂ ಅನೇಕ ಮಹತ್ವದ ಗ್ರಂಥಗಳು ಇದ್ದು ಅವುಗಳನ್ನು ಬೇಗನೆ ಪ್ರಸಿದ್ಧಿಸುವದು ಅವಶ್ಯವು. ಇಲ್ಲದೆ ಹೋದರೆ ಅವು ಬೇಗನೆ ನಷ್ಟವಾಗಿ ಹೋಗುವ ಸಂಭವವಿದೆ.

ವಿಶ್ವವಿದ್ಯಾಲಯದಲ್ಲಿ ಮೇಲೆ ಹೇಳಿದಂತೆ ವೀರಶೈವ ಗ್ರಂಥಗಳು ಸೇರ್ಪಡೆಯಾಗಿದ್ದರೂ, ಇವುಗಳ ಅಭ್ಯಾಸವು ಮಾತ್ರ ವೀರಶೈವ ಪಾಠಶಾಲೆಗಳಲ್ಲಿ ಇನ್ನೂ ವ್ಯವಸ್ಥಿತವಾಗಿ ಮತ್ತು ಹೆಚ್ಚು ಒತ್ತರದಿಂದ ನಡೆಯದೆ ಇದ್ದದ್ದು ಬಹು ಶೋಚನಿಯವಾಗಿದೆ. ಅವುಗಳಲ್ಲಿಯೂ ಇಂಥ ಗ್ರಂಥಗಳು ಸೇರ್ಪಡೆಮಾಡುವುದು ಬಹು ಅವಶ್ಯವು. ಇದರಿಂದ ಅಲ್ಲಿ ಕಲಿಯುತ್ತಿರುವ ಅನೇಕ ಮಠಾಧಿಕಾರಿಗಳಾದ ವಿದ್ಯಾರ್ಥಿಗಳಿಗೆ ಬಹು ಉಪಯೋಗವಾಗದೆ ಇರದು. ಇತ್ತಕಡೆ ಈ ಸಂಸ್ಥೆಗಳ ಚಾಲಕರು ಮನಗೊಡುವರೆಂದು ನಾವು ಭಾವಿಸಿದ್ದೇವೆ.

"ಶಿವಾನುಭವ"

---

—ಮುಂಬೈ ಪ್ರಾಂತದ ಹೊಸ ಗವ್ಹರ್ನರರಾದ ಸರ್. ಲಂಬ್ಲೆಯವರು ಸಪ್ಟಂಬರ್ ೧೬ ನೆಯ ತಾರೀಖಿನ ದಿವಸ ಮುಂಬೈಗೆ ಬರುವರು. ತಾ. ೧೮ ನೆಯ ದಿನ ಈಗಿನ ಗವ್ಹರ್ನರರಾದ ಲಾರ್ಡ ಬ್ರೆಬರ್ನರು ಇಂಗ್ಲೆಂಡಿಗೆ ಹೋಗುವರು.

## ಗಾಂಧೀಜಿಯವರ ಸೂಚನೆ.

ಮಹಾತ್ಮಾ ಗಾಂಧಿಯವರಿಗೆ ಕೂಲಿಕಾರರ ಪಕ್ಷದ ಪ್ರಮುಖರಾದ ಶ್ರೀ. ನಿಂಬಕರ ಎಂಬುವವರು ಕೆಲವು ಪ್ರಶ್ನೆಗಳನ್ನು ಕೇಳಿದ್ದರು. ಅವುಗಳಿಗೆ ಉತ್ತರವಾಗಿ ತಿಳಿಸಿದ್ದರಲ್ಲಿ ಗಾಂಧೀಜಿಯವರು ಹೀಗೆ ಹೇಳಿದ್ದಾರೆ.



"ಹೊಸ ರಾಜ್ಯಘಟನೆಯ ಕಾರ್ಯವನ್ನು ನಾನಾಗಿಯೇ ಭಂಗಗೊಳಿಸಲು ಎಂದೂ ಪ್ರಯತ್ನಿಸುವುದಿಲ್ಲ. ಅಂತಹ ಪ್ರಸಂಗವೇನಾದರೂ ಉಂಟಾದರೆ ಅದಕ್ಕೆ ಎದೆಗೊಡಲಿಕ್ಕೂ ನಾನು ಸಿದ್ಧನೇ ಇದ್ದೇನೆ. ಶಾಸನಮಂಡಲಗಳಲ್ಲಿ ಸೇರಿದನಂತರ ನನ್ನ ಪಕ್ಷವನ್ನು ಭದ್ರಗೊಳಿಸಲಿಕ್ಕೂ ನನ್ನ ಶಕ್ತಿಯನ್ನು ಕೇಂದ್ರೀಕರಿಸಲಿಕ್ಕೂ ನಾನು ಸಂಪೂರ್ಣ ಪ್ರಯತ್ನಿಸದೆ ಬಿಡುವುದೆಂದರೆ ನನ್ನ ಮೂರ್ಖತನವೇ ಸರಿ."

ರಾಜ್ಯಘಟನೆಯನ್ನು ಭಂಗಗೊಳಿಸುವುದೇ ಶಾಸನ ಮಂಡಲಗಳಲ್ಲಿ ನಮ್ಮ ಮೊದಲನೆಯ ಕಾರ್ಯವೆಂದು ಕಾಂಗ್ರೆಸ್ ಪಕ್ಷದ ಯಾರಾದರೂ ತಿಳಿದುಕೊಂಡಿದ್ದರೆ ಅದು ಎಷ್ಟು ತಪ್ಪೆಂಬುದು ಗಾಂಧೀಜಿಯವರ ಮೇಲಣ ಅಭಿಪ್ರಾಯದಿಂದ ವ್ಯಕ್ತವಾಗುವುದಿಲ್ಲವೆ?

### ಅನ್ಯ ಪಕ್ಷಗಳ ಸಂಗಡ ಹೇಗಿರಬೇಕು?

ಕಾಂಗ್ರೆಸ್ ಪಕ್ಷದ ಅನೇಕ ಜನರು ಕಾಂಗ್ರೆಸ್ಸಿನ ತತ್ವಕ್ಕೆ ಕಲಂಕ ಬರುವಂತೆ ಅನ್ಯ ಪಕ್ಷಗಳ ಸಂಬಂಧವಾಗಿ ಅಸಭ್ಯ ರೀತಿಯಲ್ಲಿ ನಡೆಯುತ್ತಿದ್ದಾರೆಂಬುದು ನಿಷ್ಪಕ್ಷಪಾತಿಗಳಿಗೆ ಅನೇಕ ಸಾರೆ ಗೊತ್ತಾಗಿದೆಯಷ್ಟೆ. ಮಹಾತ್ಮಾ ಗಾಂಧಿಯವರು ಕಳೆದ ೧೪ ನೆಯ ತಾರೀಖಿನ ದಿವಸ "ಹರಿಜನ" ಪತ್ರಿಕೆಯಲ್ಲಿ ಒಂದು ಲೇಖನವನ್ನು ಬರೆದು ಅನ್ಯ ಪಕ್ಷಗಳ ವಿಷಯದಲ್ಲಿ ಕಾಂಗ್ರೆಸ್ ಪಕ್ಷದವರು ಹೇಗೆ ನಡೆದುಕೊಳ್ಳಬೇಕೆಂಬುದನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ. ಗಾಂಧೀಜಿಯವರ ಸೂಚನೆಯು ಹೀಗಿದೆ.

"ಮಧ್ಯಪ್ರಾಂತದ ಅಸೆಂಬ್ಲಿ ಅಧಿವೇಶನದ ಕಾಲಕ್ಕೆ ಕೂಡಿದ್ದ ಪ್ರೇಕ್ಷಕರು ಶ್ರೀ. ರಾಘವೇಂದ್ರರಾಯರ (ಹಿಂದಿನ ಮುಖ್ಯಮಂತ್ರಿಗಳ) ಸಂಬಂಧವಾಗಿ ಅಸಭ್ಯ ರೀತಿಯಿಂದ ನಡೆದರೆಂದು ಪ್ರಕಟವಾಗಿದೆ. ಆ ಪ್ರೇಕ್ಷಕರು ಕಾಂಗ್ರೆಸ್ ಪಕ್ಷದವರು ಅಥವಾ ಕಾಂಗ್ರೆಸ್ಸಿಗೆ ಸಹಾನುಭೂತಿವುಳ್ಳವರು ಇದ್ದರೆಂಬುದು ಸ್ಪಷ್ಟವಾದುದು.

ನಾವು ಸಂಪೂರ್ಣ ಸ್ವಾತಂತ್ರ್ಯವನ್ನು ಹೊಂದಿದನಂತರ ಕೂಡಾ ದೇಶದಲ್ಲಿ ಬೇರೆ ಬೇರೆ ರಾಜಕೀಯ ಪಕ್ಷಗಳು ಇದ್ದೇ ಇರುತ್ತವೆ. ಹೀಗಿರುವಾಗ ಬೇರೆ ಪಕ್ಷದವರೊಂದಿಗೆ ಶಿಷ್ಟಾಚಾರಕ್ಕೆ ತಕ್ಕಂತೆ ನಡೆದುಕೊಳ್ಳದಿದ್ದರೆ ರಾಜ್ಯಭಾರವನ್ನು ನಡೆಯಿಸುವುದೇ ಕಷ್ಟವಾಗಬಹುದು. ಅಖಿಲ ಹಿಂದುಸ್ಥಾನದ ಪ್ರಾತಿನಿಧ್ಯವೇ ತನ್ನ ಕಡೆಗಿದೆಯೆಂದು ಹೇಳಿಕೊಳ್ಳುವ ಕಾಂಗ್ರೆಸ್ ಪಕ್ಷವಂತೂ ಅನ್ಯ ಪಕ್ಷಗಳ ವಿಷಯದಲ್ಲಿ ಸಹಿಷ್ಣುತೆಯನ್ನು ಹೊಂದುವುದು ಅತ್ಯಗತ್ಯವಾಗಿದೆ.

ಕಾಂಗ್ರೆಸ್ ಪಕ್ಷವು ಸಮಗ್ರ ಹಿಂದುಸ್ಥಾನವನ್ನೇ ಒಳಕೊಂಡದ್ದಾಗಿದ್ದರೆ— ಈಗ ಆ ಪ್ರಕಾರ ಒಳಕೊಂಡಿದೆ— ಅದರಲ್ಲಿ ಎಲ್ಲ ಪಕ್ಷಗಳ ಅಭಿಪ್ರಾಯಗಳೂ ಪ್ರತಿಬಿಂಬಿತವಾಗಲೇಬೇಕು. ಶ್ರೀ. ರಾಘವೇಂದ್ರರಾಯರು ಮುಂಚೆ ಕಾಂಗ್ರೆಸ್ ಸಂಘಟನೆಯ ಸರ್ವಮಾನ್ಯ ಸಭಾಸದರಾಗಿದ್ದರು. ಆದಕಾರಣ ಕಾಂಗ್ರೆಸ್ ಅವರ ಪ್ರತಿನಿಧಿಯೆಂದು ಹೇಳಬಹುದು. ಅವರ ಚುನಾವಣೆಯಲ್ಲಿ ಏನಾದರೂ ತಪ್ಪು ಸಂಭವಿಸಿದ್ದರೆ ಅದನ್ನು ನಿರ್ಣಯಿಸುವುದು ಸರಕಾರಿ ಶಾಸನದ ಕೆಲಸವು. ಹಾಗೆ ಅವರು ತಪ್ಪುಗಾರರೆಂದು ನಿರ್ಣಯವಾಗುವವರೆಗೂ ಅವರು ಪ್ರಮಾಣಿಕರೆಂದೇ ತಿಳಿಯುವುದು ವಿಹಿತವಾಗಿದೆ.

ಒಂದುವೇಳೆ ಅವರು ತಪ್ಪುಗಾರರೆಂದು ಗೊತ್ತಾದರೂ ಅವರ ವಿಚಾರದಲ್ಲಿ ಹೀಗೆ ಅಸಭ್ಯ ರೀತಿಯಿಂದ ನಡೆಯುವುದು ಯಾರಿಗೂ ಯುಕ್ತವಾದುದಲ್ಲ. ಅಸಹಿಷ್ಣುತೆ, ಅಸಭ್ಯ ರೀತಿ, ಒರಟಾಟ, ಇವೆಲ್ಲಾ ಕಾಂಗ್ರೆಸ್ಸಿನ ಕ್ರಮಕ್ಕೂ, ಶೀಲಕ್ಕೂ ವಿರುದ್ಧವಾಗಿವೆ. ಇಷ್ಟೇ ಅಲ್ಲ. ಸಭ್ಯ ಜನಾಂಗದಲ್ಲಿ ಇವೆಲ್ಲಾ ತ್ಯಾಜ್ಯವಾಗಿಯೇ ಪರಿಣಮಿಸುತ್ತವೆ. ಜನಾಭಿಪ್ರಾಯದ ಪ್ರಭುತ್ವಕ್ಕಂತೂ ಈ ರೀತಿಯು ತುಂಬಾ ವಿರುದ್ಧವಾದುದು."

ಕಾಂಗ್ರೆಸ್ ಪಕ್ಷದ ಅನೇಕ ಪಕ್ಷಾಂಧರೂ, ದುರಭಿಮಾನಿಗಳೂ ಅನ್ಯ ಪಕ್ಷದವರ ವಿಚಾರದಲ್ಲಿ ಸಲ್ಲದ ನಾನಾ ಲೇಖನ, ಭಾಷಣ, ನಡವಳಿಕೆಗಳ ಮೂಲಕ ವಿರೋಧವನ್ನು ಹೆಚ್ಚಿಸುತ್ತಿದ್ದಾರಷ್ಟೆ. ಇಂಥವರು ಗಾಂಧೀಜಿಯವರ ಉಪದೇಶವನ್ನಾದರೂ ಕೇಳಿ ಸಭ್ಯ ನಡೆನುಡಿಗಳಿಂದ ನಡೆಯುವರೆ?

---

## ಭಾರತೀಯ ನೃತ್ಯಶಾಲಾ.

ಹಿಂದುಸ್ಥಾನವು ಬಹು ಪ್ರಾಚೀನ ಕಾಲದಿಂದಲೂ ಸಂಗೀತ ನೃತ್ಯ ಮೊದಲಾದ ಲಲಿತ ಕಲೆಗಳಲ್ಲಿ ಬಹು ಪ್ರಸಿದ್ಧಿಯನ್ನು ಹೊಂದಿದೆ. ಈ ದೇಶದ ನಾನಾ ನೃತ್ಯಗಳ ರೀತಿನೀತಿಗಳನ್ನು ಶ್ರೀ. ಉದಯಶಂಕರ ಇವರು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಪ್ರದರ್ಶಿಸಿ ಬಹು ಪ್ರಸಿದ್ಧಿಯನ್ನು ಹೊಂದಿದ್ದಾರಷ್ಟೆ.

ಶ್ರೀ. ಉದಯಶಂಕರ ಇವರ ಈ ಜಾಣ್ಮೆಯಿಂದ ಪ್ರಪಂಚದಲ್ಲಿ ಭಾರತೀಯ ನೃತ್ಯಕಲೆಯ ಕೀರ್ತಿಯು ಈಗ ಎಷ್ಟೋ ಬೆಳಗಲು ಕಾರಣವಾಯಿತು. ಅನೇಕ ರಾಷ್ಟ್ರಗಳಿಂದ ಭಾರತೀಯ ನೃತ್ಯಕಲೆಯನ್ನು ಕಲಿಯಲು ಅನೇಕರು ಬರಲುಪಕ್ರಮಿಸಿದ್ದಾರೆ. ಆದುದರಿಂದ ಶ್ರೀ. ಉದಯಶಂಕರ ಇವರು ಮುಂದಣ ವಸಂತ ಕಾಲದಲ್ಲಿ ಒಂದು ಭಾರತೀಯ ನೃತ್ಯ ಶಾಲೆಯನ್ನು ಕಾಶಿಯಲ್ಲಿ ಸ್ಥಾಪಿಸುವವರಿದ್ದಾರೆ. ಈ ದೇಶದ ನಾನಾ ಭಾಗಗಳಲ್ಲಿರುವ ಕುಣಿತಗಳ ರೀತಿನೀತಿಗಳನ್ನೆಲ್ಲಾ ಸಂಗ್ರಹಿಸಿ ಅದಕ್ಕೊಂದು ಶಾಸ್ತ್ರೀಯ ಸ್ವರೂಪವನ್ನು ಕೊಡುವವರಿದ್ದಾರೆ.

---



---

## ವಿಮರ್ಶಾತ್ಮಕ ಪ್ರಶ್ನೋತ್ತರ.

### ಕಾಂಗ್ರೆಸ್‌ಪಕ್ಷ ಮತ್ತು ಶರಣ ಸಂದೇಶ.

**ಪ್ರಶ್ನೆ**— ನೀವು ಕಾಂಗ್ರೆಸ್ಸಿನ ವಿರುದ್ಧವಾಗಿ ಇತ್ತೀಚಿಗೆ ಬರಿಯುತ್ತಿದ್ದೀರಿ. ಅದನ್ನೊಂದು ಬಿಟ್ಟರೆ ನಿಮ್ಮ ಪತ್ರಿಕೆಯ ಕಾರ್ಯ ಕರ್ನಾಟಕದಲ್ಲಿ ಎಷ್ಟೋ ಉತ್ತಮವೆಂದು ಹೇಳಬಹುದು. ಇನ್ನು ಮೇಲಾದರೂ ಕಾಂಗ್ರೆಸ್ಸಿಗೆ ವಿರುದ್ಧವಾಗಿ ಬರೆಯುವದನ್ನು ಬಿಡಬಾರದೆ?

**ಉತ್ತರ**— ನೀವು ಹೀಗೆ ತಿಳಿದುಕೊಂಡಿರುವಿರಾ? ಒಳ್ಳೆಯದಾಯಿತು! ಕಾಂಗ್ರೆಸ್ಸಿಗೆ ವಿರುದ್ಧವಾಗಿ ಬರೆಯುವದೆಂದರೇನು? ಕಾಂಗ್ರೆಸ್ಸು ಸ್ವಾತಂತ್ರ್ಯಬೇಕೆಂದು ಹೇಳುತ್ತದೆ. ನಾವು ಸ್ವಾತಂತ್ರ್ಯ ಬೇಡವೆಂತಲೂ ಇಂಗ್ಲಿಷರ ಪ್ರಭುತ್ವವೇ ಇರಲೆಂತಲೂ ಬರೆಯುತ್ತಿದ್ದೇವೆಯೇ? ಅಥವಾ ಕಾಂಗ್ರೆಸ್ಸು ಸತ್ಯ ಮತ್ತು ಅಹಿಂಸಾ ಮಾರ್ಗಗಳಿಂದ ಸ್ವಾತಂತ್ರ್ಯವನ್ನು ಹೊಂದಬೇಕೆಂದು ಹೇಳುತ್ತಿರುವಾಗ ನಾವು ಅಸತ್ಯ ಮತ್ತು ಹಿಂಸಾ ಮಾರ್ಗಗಳಿಂದ ಸ್ವಾತಂತ್ರ್ಯವನ್ನು ಹೊಂದಬೇಕೆಂದು ಬರೆಯುತ್ತಿದ್ದೇವೆಯೆ? ಕಾಂಗ್ರೆಸ್ಸಿಗೆ ವಿರುದ್ಧ ಬರೆಯುತ್ತಿದ್ದೇವೆಂದು ನೀವು ತಿಳಿದುಕೊಂಡುದು ಯಾತರಮೇಲಿಂದ ಎಂಬುದನ್ನು ಸ್ಪಷ್ಟ ತಿಳಿಸಿದರೆ ಒಳ್ಳೆಯದು.

**ಪ್ರಶ್ನೆ**— ನೀವು ಹಾಗೇನೂ ಬರೆಯುವದಿಲ್ಲ. ಆದರೆ ಕರ್ನಾಟಕದ ಎಲ್ಲ ಕಾಂಗ್ರೆಸ್ ಪತ್ರಗಳೂ ಹೇಗೆ ಬರೆಯುತ್ತವೋ ಹಾಗೆ ಬರೆಯುವದಿಲ್ಲ. ಕಾಂಗ್ರೆಸ್ಸಿನ ಮೇಲೆ ಏನಾದರೂ ಒಂದು ಟೀಕೆ ಮಾಡೇ ಮಾಡುತ್ತೀರಿ. ಅದರಿಂದ ನೀವು ಕಾಂಗ್ರೆಸ್ಸಿನ ವಿರುದ್ಧ ಬರೆಯುತ್ತೀರೆಂದೇ ಜನರ ತಿಳುವಳಿಕೆಯಾಗಿದೆ.

**ಉತ್ತರ**— ಕಾಂಗ್ರೆಸ್ ಪಕ್ಷಕ್ಕೆ ಸೇರಿದ ಪತ್ರಿಕೆಗಳು ಪ್ರಾಯಶಃ ಆ ಪಕ್ಷದ ಎಲ್ಲ ಕಾರ್ಯಕಲಾಪಗಳನ್ನೂ ಸ್ತುತಿಸುವುದು ಸ್ವಾಭಾವಿಕ. ಕೆಲವು ಸತ್ಯ ಪ್ರಿಯರಾದ ಕಾಂಗ್ರೆಸ್ ಸಭಾಸದರು ಮಾತ್ರ ತಮ್ಮ ಭಿನ್ನಾಭಿಪ್ರಾಯಗಳನ್ನು ಹೇಳುತ್ತಿರುವುದುಂಟು. ಆದರೆ ಅಂಥವರ ಸಂಖ್ಯೆ ಕಡಿಮೆ. ಅಂಥ ಭಿನ್ನಾಭಿಪ್ರಾಯಗಳನ್ನು ಪ್ರಕಟಿಸುವ ಕಾಂಗ್ರೆಸ್ ಪಕ್ಷದ ಪತ್ರಿಕೆಗಳೂ ಕಡಿಮೆ. ಒಟ್ಟಿಗೆ ತಮ್ಮ ಪಕ್ಷದ ಮೇಲನ್ನೇಮಾಡಿ ತೋರಿಸುವವರೇ ಹೆಚ್ಚು. ಒಂದು ಪಕ್ಷಕ್ಕೆ ಸೇರಿದನಂತರ ಹೀಗಾಗುವುದು ಸ್ವಾಭಾವಿಕ. ನಾವು ಕಾಂಗ್ರೆಸ್ ಪಕ್ಷಕ್ಕೆ ಸೇರಿಲ್ಲ. ಅಥವಾ ಇನ್ನಾವ ಒಂದು ಪಕ್ಷದ ಸಭಾಸದರೂ ಅಲ್ಲ. ಎಂದಮೇಲೆ ನಮಗೆ ಅಯುಕ್ತವಾಗಿ ತೋರಿದುದನ್ನು ಅದು ಯಾವ ಪಕ್ಷದಲ್ಲಿದ್ದರೂ ಸ್ಪಷ್ಟವಾಗಿ ಹೇಳುವುದರಲ್ಲಿ ಹೆಚ್ಚೇನು? ನಿಮ್ಮ ಸ್ವಂತ ವಿಚಾರಗಳನ್ನೆಲ್ಲಾ ಮೂಲೆಗೊತ್ತಿ ಕಾಂಗ್ರೆಸ್ಸಿನ ಕಾರ್ಯಕಲಾಪಗಳನ್ನೇ "ಉಧೋ! ಉಧೋ!" ಎಂದು ಹೊಗಳುವುದಿಲ್ಲವಲ್ಲಾ! ಎಂದೇ ಶರಣ ಸಂದೇಶವು ಕಾಂಗ್ರೆಸ್ಸಿನ ವಿರೋಧ ಪತ್ರಿಕೆಯೆಂದು ನೀವು ತಿಳಿದುಕೊಂಡಿದ್ದರೆ ಅದು ಅಂಥ ವಿರೋಧ ಪತ್ರಿಕೆಯಾಗಿಯೇ ಈ ವರೆಗೂ ಇದೆ, ಇನ್ನು ಮೇಲೆಯೂ ಹಾಗೆಯೇ ಅದು ಜೀವಿಸಿರುವವರೆಗೂ ಇರುವದು.

**ಪ್ರಶ್ನೆ**— ಕಾಂಗ್ರೆಸ್ ಪಕ್ಷದ ಕಾರ್ಯಗಳಲ್ಲಿ ಏನಾದರೂ ಹೆಚ್ಚುಕಡಿಮೆಗಳಾದರೆ ಅದನ್ನು ತಿಳಿಸಬೇಕೆಂದೇ ನಾನಾದರೂ ಹೇಳುತ್ತೇನೆ. ಮೊನ್ನೆ ಮುಂಬೈ ಪ್ರಾಂತದ ಮಂತ್ರಿಮಂಡಲ ನಿರ್ಮಾಣದ ಕುಂದು ಕೊರತೆಗಳನ್ನು ನೀವು ಬರೆದದ್ದರಲ್ಲಿ ವೀರ ನರಿಮಾನರ ಬಗ್ಗೆ ಬರೆದದ್ದು ಯೋಗ್ಯವಾಗಿದೆ. ಹಾಗೆ ಬರೆಯಬೇಕಾದುದು ಯೋಗ್ಯವೇ ಸರಿ. ಕಾಂಗ್ರೆಸ್ ನಮ್ಮದೆಂದು ತಿಳಿದು ಅದರ ಕುಂದು ಕೊರತೆಗಳನ್ನು ಬರೆಯುವುದು ಬೇರೆ. ಕಾಂಗ್ರೆಸ್ಸಿನ ದೋಷವನ್ನೇ ಹುಡುಕಿ ಅದನ್ನೇ ಎತ್ತಿ ಬರೆಯುವದು ಬೇರೆ.

ನೀವು ಅದರ ದೋಷವನ್ನೇ ಹುಡುಕಿ ಬರೆಯುವಂತೆ ನಮಗೆ ತೋರುತ್ತದೆ. ಮೊನ್ನೆ ಝೂಂಸಿ ಭಾಗದ ಉಪಚುನಾವಣೆಯ ಪರಿಣಾಮವನ್ನು ಬರೆಯುವಾಗ ಪಂಡಿತ ಜವಾಹರಲಾಲ ನೆಹರುರವರು ಚುನಾವಣೆ ಪ್ರಚಾರಕ್ಕೆ ಹೋಗಿದ್ದರಿಂದೂ ಕಾಂಗ್ರೆಸ್ ಹುರಿಯಾಳು ಸೋತು ಮುಸ್ಲಿಂಲೀಗಿನ ಹುರಿಯಾಳು ಗೆದ್ದರೆಂದೂ ತಿಳಿಸಿರುವಿರಿ. ಈ ಸಂಗತಿಯನ್ನು ತಿಳಿಸುವಾಗ ಪಂಡಿತಜೀಯವರು ಪ್ರಚಾರಕ್ಕೆ ಹೋಗಿದ್ದರೆಂದು ಏಕೆ ಬರೆಯಬೇಕಾಗಿತ್ತು?

**ಉತ್ತರ**— ಕಾಂಗ್ರೆಸ್ ಪಕ್ಷದ ಕಾರ್ಯಕಲಾಪಗಳಲ್ಲಿಯ ಕುಂದುಕೊರತೆಗಳನ್ನು ಬರೆಯಬಹುದೆಂದು ನೀವು ತಿಳಿದಿರುವುದು ಅತ್ಯಂತ ಅಭಿನಂದನೀಯವು. ಕಾಂಗ್ರೆಸ್ಸಿನ ಅಂಧ ಭಕ್ತರಾಗಲು ನೀವೂ ಸಿದ್ಧರಿಲ್ಲವಷ್ಟೆ. ಎಂದಮೇಲೆ ಕಾಂಗ್ರೆಸ್ ಪಕ್ಷದ ಪತ್ರಿಕೆಗಳಲ್ಲಿ ಕಾಂಗ್ರೆಸ್ಸಿನ ಕಾರ್ಯಕಲಾಪಗಳು ಎಷ್ಟರಮಟ್ಟಿಗೆ ವಿಮರ್ಶಿಸಿ, ಕುಂದು ಕೊರತೆಗಳು ಬೈಲಿಗೆ ಹಾಕಲ್ಪಡುತ್ತಲಿವೆಯೆಂಬುದನ್ನು ನೀವೇ ನಿಷ್ಪಕ್ಷಪಾತ ದೃಷ್ಟಿಯಿಂದ ನೋಡಿರಿ.

ಕಾಂಗ್ರೆಸ್ಸಿನ ದೋಷಗಳನ್ನೇ ಹುಡುಕಿ ಅವುಗಳನ್ನೇ [illegible]ಯುತ್ತಿರುವುದೇನೂ ನಮ್ಮ ಉದ್ದೇಶವಲ್ಲ. ದೋಷಗಳನ್ನು ಜ[illegible] ಮುಂದಿಡಬಾರದೆಂದು ಅವುಗಳನ್ನು ಪ್ರಸಿದ್ಧಿಸದೆ ಅಥವಾ ಅವುಗಳ ಮೇಲೆ ಟೀಕೆ ಮಾಡದೆ ಸುಮ್ಮನಿರಬೇಕೆಂಬುದೂ ನಮ್ಮ ಧ್ಯೇಯವಲ್ಲ. ಕಾಂಗ್ರೆಸ್ಸಿನ ಅಥವಾ ಕಾಂಗ್ರೆಸ್ ಕಾರ್ಯ ನಿರ್ವಾಹಕರ ಅಭಿಪ್ರಾಯಗಳ ಸತ್ಯಾಸತ್ಯತೆ ಮತ್ತು ಹಿತಾಹಿತಗಳನ್ನು ವಿಮರ್ಶಾತ್ಮಕ ದೃಷ್ಟಿಯಿಂದ ಜನ ಸಾಮಾನ್ಯರೂ ಓದಿ ರಾಜಕಾರಣದಲ್ಲಿಯೂ ಚಿಕಿತ್ಸಕ ಬುದ್ಧಿಯುಳ್ಳವರಾಗಬೇಕೇ ವಿನಾ ಅಂಧಭಕ್ತರಾಗಬಾರದೆಂದೇ ನಮ್ಮ ಉದ್ದೇಶ. ಆದುದರಿಂದ ದೋಷಗಳನ್ನೂ ನಾವು ಪ್ರಕಟಿಸಿ ಟೀಕಿಸುವುದು ಅನೇಕರಿಗೆ ವಿರೋಧವಾಗಿ ತೋ[illegible]ರುತ್ತಿರಬಹುದು. ಏಕೆಂದರೆ ಬೇರೆ ಪತ್ರಿಕೆಗಳಲ್ಲಿ ಅವರು ಇಂಥ ಸಂಗತಿಗಳನ್ನು ಓದುವುದು ಕಡಿಮೆ.

ಝೂಂಸಿ ಭಾಗದ ಉಪಚುನಾವಣೆಯ ಕಾಲಕ್ಕೆ ಪಂಡಿತ ಜವಾಹರಲಾಲರು ಪ್ರಚಾರಕ್ಕೆ ಹೋದುದು ಸುಳ್ಳೇ? ಸುಳ್ಳು ಸಂಗತಿಯನ್ನೇನಾದರೂ ಬರೆದು ಕಾಂಗ್ರೆಸ್ಸಿನ ವಿರುದ್ಧ ಪ್ರಚಾರ ಮಾಡಿದ್ದಾಯಿತೆ? ಸತ್ಯ ಸಂಗತಿಯನ್ನು ಬರೆದರೆ ಸತ್ಯವೇ ಧ್ಯೇಯವಾಗಿರುವ ನಿಮಗೆ ಅಸಮಧಾನವೇಕೆ? ಸತ್ಯವನ್ನು ಕೇಳುವುದು ನಿಮ್ಮಂಥವರಿಗೇನೇ ಅಪ್ರಿಯವಾದಮೇಲೆ ಬೇರೆ ಪಕ್ಷದವರ ಸ್ಥಿತಿ ಹೇಗಿರಬಹುದು? ಅನ್ಯ ಪಕ್ಷದವರು ಚುನಾವಣೆಯಲ್ಲಿ ಸೋತರೆ "ಉರುಳಿದರು, ಬಿದ್ದರು" ಎಂದು ದೊಡ್ಡ ದೊಡ್ಡ ಅಕ್ಷರಗಳಲ್ಲಿ ಪ್ರಕಟಿಸುವುದೂ ತಮ್ಮವರು ಸೋತರೆ ಅಪಜಯವಾಯಿತೆಂದು ಎಲ್ಲೋ ಮೂಲೆಯಲ್ಲಿ ಚಿಕ್ಕದಾಗಿ ಪ್ರಕಟಿಸುವುದೂ, ಗೆಲುವಾದರೆ "ಪ್ರಚಂಡ ವಿಜಯ" ಎಂದು ಬರೆಯುವುದೂ, ಯಾರ ರೀತಿನೀತಿಗಳಾಗಿವೆಯೋ ಅವರಿಗೆ ನಾವು ಬರೆದುದು ಕಾಂಗ್ರೆಸ್ಸಿನ ವಿರೋಧವೆಂದು ಕಾಣುವುದು ಸ್ವಾಭಾವಿಕ.

ರಾಷ್ಟ್ರಾಧ್ಯಕ್ಷರು ಪ್ರಚಾರಕ್ಕೆ ಹೋಗಿದ್ದರೂ ಕಾಂಗ್ರೆಸ್ಸಿಗೆ ಅಪಜಯವಾಯಿತೆಂಬುದು ಜನರಿಗೆ ತಿಳಿಯಬಾರದೆಂದೇ ಯಾ[illegible]ದರೂ ಹಾಗೆ ಬರೆದಿರಲಿಕ್ಕಿಲ್ಲ. ನಾವಾದರೋ ಮುಸಲ್ಮಾನ ಜಾತಿನಿಷ್ಠೆಯು ಎಷ್ಟಿದೆಯೆಂಬುದು ಜನರಿಗೆ ಸ್ಪಷ್ಟ ತಿಳಿಯಲೆಂದೇ ಹಾಗೆ ವಿವರವಾಗಿ ಬರೆದುದು. ಇದ್ದ ಸ್ಥಿತಿಯು ಸ್ಪಷ್ಟ[illegible]

# ಮುಂಬೈ ಅಸೆಂಬ್ಲಿಯ ಕಾರ್ಯಕಲಾಪ.

## ಹಳ್ಳಿಯ ಕಡೆಗೆ ತಿರುಗಿದ ರಾಜ್ಯಭಾರ.

ಈ ಮುಂಚೆ ಗೊತ್ತಾದಂತೆ ಮುಂಬೈ ಪ್ರಾಂತಿಕ ಅಸೆಂಬ್ಲಿಯ ಅಧಿವೇಶನವು ಶ್ರೀ. ಮಾವಲಣಕರರ ಅಧ್ಯಕ್ಷತೆಯಲ್ಲಿ ತಾರೀಖು ೧೭-೮-೩೭ ನೆಯ ದಿಸವ ಪುಣೆ ಅಸೆಂಬ್ಲಿ ಭವನದಲ್ಲಿ ಪ್ರಾರಂಭವಾಯಿತು. ಅರ್ಥಸಚಿವರಾದ ಶ್ರೀ. ಲಠ್ಠೆಯವರು ವಾರ್ಷಿಕ ಆಯವ್ಯಯ ಪತ್ರಿಕೆಯನ್ನು ಅಸೆಂಬ್ಲಿ ಮುಂದಿಟ್ಟು ಅತ್ಯಂತ ಮನನೀಯವಾದ ಭಾಷಣವನ್ನು ಮಾಡಿದರು. ಇವರ ಭಾಷಣದ ಮುಖ್ಯಾಂಶ ಹೀಗಿದೆ—

"ಕ್ರಿ. ಶ. ೧೯೩೭-೩೮ನೆ ವರ್ಷದಲ್ಲಿ ಸಾಧಾರಣ ೧೨ ಕೋಟಿ ರೂ. ಗಳ ಆದಾಯವು ೧೨ ಕೋಟಿ ೧೭|| ಲಕ್ಷ ರೂ. ಗಳ ವೆಚ್ಚವು ಆಗಬಹುದು. ವೆಚ್ಚಕ್ಕೆ ಕಡಿಮೆ ಬೀಳಬಹುದಾದ ೧೭|| ಲಕ್ಷ ರೂ. ಗಳನ್ನು ಕಳೆದ ವರುಷ ಉಳಿದುದರಲ್ಲಿ ತೆಗೆದುಕೊಳ್ಳಲಾಗುವುದು.

### ಹಳ್ಳಿಯ ಜನರ ಹಿತ.

ಶ್ರೀ. ಲಠ್ಠೆಯವರು ಹಳ್ಳಿಯ ಜನರ ಹಿತಾರ್ಥವಾಗಿ ವಾರ್ಷಿಕ ವೆಚ್ಚದಲ್ಲಿ ಈ ಕೆಳಗಿನ ಮುಖ್ಯ ಸಂಗತಿಗಳನ್ನು ಸೇರಿಸಿದ್ದಾರೆ.

ಹಳ್ಳಿಯವರ ನೀರಿನ ಅನುಕೂಲಕ್ಕಾಗಿ ೧೦ ಲಕ್ಷ ರೂ. ಮಾರ್ಗಗಳ ಸುಧಾರಣೆಗಾಗಿ ೩| ಲಕ್ಷ ರೂ. ಗ್ರಾಮೋದ್ಯೋಗಗಳಿಗಾಗಿ ೧|| ಲಕ್ಷ ರೂ. ಆದಿಹಿಂದುಗಳ ಬೌದ್ಧಿಕ ಮತ್ತು ಶಾರೀರಿಕ ಶಿಕ್ಷಣೆಗಾಗಿ ೫೦ ಸಾವಿರ ರೂ. ಗಳು ವೆಚ್ಚಮಾಡಲ್ಪಡುವವು.

ಒಕ್ಕಲಿಗರ ಮೇಲಿರತಕ್ಕ ಭೂಕಂದಾಯದ ಭಾರವನ್ನು ಇಳಿಸುವುದಕ್ಕಾಗಿ ಕಟ್ಟಾಗಿ ನಿಂತಿದ್ದ ೧೬ ಲಕ್ಷ ರೂ. ಗಳನ್ನು ಬಿಟ್ಟುಬಿಡುವುದು. ಮತ್ತು ಹುಲ್ಲಬನ್ನಿಯಿಂದ ಬರತಕ್ಕ ೫ ಲಕ್ಷ ರೂ. ಗಳನ್ನೂ ಬಿಟ್ಟುಬಿಡುವುದು. ಮುಂದಿನ ವರುಷದಿಂದ ೮ ಲಕ್ಷ ರೂ. ಕಂದಾಯವನ್ನು ಕಡಿಮೆಮಾಡಲಾಗುವುದು.

ಈ ಪ್ರಕಾರ ೨೧ ಲಕ್ಷ ರೂ. ಗಳ ಭಾರವನ್ನು ಈ ವರುಷ ಕಡಿಮೆಮಾಡಿದ್ದಲ್ಲದೆ ೧೫ ಲಕ್ಷ ರೂ. ಗಳನ್ನು ಹಳ್ಳಿಗಾಗಿಯೇ ಹೆಚ್ಚು ವೆಚ್ಚಮಾಡುವುದಾಗಿರುವ ಈ ಆಯವ್ಯಯ ಪತ್ರಿಕೆಯು ರಾಜ್ಯಭಾರವು ಹಳ್ಳಿಯ ಕಡೆಗೆ ತಿರುಗಿತೆಂಬುದನ್ನು ಸ್ಪಷ್ಟಗೊಳಿಸುವುದಿಲ್ಲವೆ?

### ಹೊಸ ಕಂದಾಯದ ಕಾಟವಿಲ್ಲ.

ಹೊಸದಾಗಿ ಯಾವ ವಿಧವಾದ ಕಂದಾಯವನ್ನೂ ಈಗ ಜನಗಳಮೇಲೆ ಹೇರುವಂತಿಲ್ಲವೆಂಬುದನ್ನು ಅರ್ಥಸಚಿವರು ಬಹು ಸಮಂಜಸವಾಗಿ ಈ ರೀತಿ ಪ್ರತಿಪಾದಿಸಿದ್ದಾರೆ—

"ಕಳೆದ ೧೭ ವರುಷಗಳಲ್ಲಿ ೭೯ ಲಕ್ಷ ರೂ. ಗಳ ಹೊಸ ಕಂದಾಯಗಳ ಭಾರವು ಹೆಚ್ಚಿದೆ. ಸರಕಾರದ ವೆಚ್ಚವು ಕೂಡಾ ೧೭ ವರುಷಗಳಲ್ಲಿ ೨||| ಕೋಟಿ ರೂ. ಹೆಚ್ಚಾಗಿದೆ. ಮೊದಲು ಪೆನ್ಶನ್ನಿಗಾಗಿ ೫೦ ಲಕ್ಷ ರೂ. ವೆಚ್ಚವಾಗುತ್ತಿತ್ತು. ಈಗ ಒಂದು ಕೋಟಿ ರೂ. ವೆಚ್ಚವಾಗುತ್ತದೆ.

ನಮ್ಮ ಪ್ರಾಂತವಾದರೋ ಬೇರೆ ಪ್ರಾಂತಗಳಿಗಿಂತ ಹೆಚ್ಚಾದ ಕಂದಾಯವನ್ನು ಈಗಲೇ ಹೊತ್ತುಕೊಂಡಿದೆ. ಬೇರೆ ಪ್ರಾಂತಗಳಲ್ಲಿ ತಲೆ ಒಂದಕ್ಕೆ ೧ ರಿಂದ ೧|| ರೂ. ಗಳ ವರೆಗೆ ಭೂ ಕಂದಾಯವಿದ್ದರೆ ನಮ್ಮ ಪ್ರಾಂತದಲ್ಲಿ ಭೂ ಕಂದಾಯವು ತಲೆ ಒಂದಕ್ಕೆ ಸಾಧಾರಣ ೨ ರೂ. ಇದೆ.

ಮಾದಕ ದ್ರವ್ಯಗಳ ಆದಾಯವೂ ಸ್ವಲ್ಪ ಕಡಿಮೆಯಾಗಿ ಇದೇ ಪ್ರಮಾಣದಲ್ಲಿದೆ. ಹೀಗೆ ಹಿಂದುಸ್ಥಾನದ ಯಾವ ಪ್ರಾಂತದಲ್ಲಿಯೂ ಇಲ್ಲ. ಈ ಪ್ರಾಂತದ ಎಲ್ಲ ಕಂದಾಯಗಳನ್ನು ಕೂಡಿಸಿದರೆ ತಲೆಯೊಂದಕ್ಕೆ ವರುಷಕ್ಕೆ ೬ ರೂ. ಪ್ರಕಾರ ಜನಗಳ ಮೇಲೆ ಭಾರವಿದೆ. ಬೇರೆ ಪ್ರಾಂತಗಳಲ್ಲಾದರೋ ಈ ಭಾರವು ೨ ರೂ. ಯಿಂದ ೪|| ವರೆಗೆ ಮಾತ್ರ ಇದೆ. ಹೀಗೆ ಈಗಲೇ ಜನರು ಕಂದಾಯದ ಭಾರದಿಂದಲೂ ವ್ಯಾಪಾರದ ಮಂದಿಯಿಂದಲೂ ಹಣ್ಣಾಗಿರುವಾಗ ಮತ್ತೆ ಕಂದಾಯಗಳನ್ನು ಹೆಚ್ಚಿಸುವುದು ಸರಿಯಲ್ಲ. ಇದ್ದದ್ದರಲ್ಲಿಯೇ ಮಿತವ್ಯಯದಿಂದ ಮುಂದೆ ಸಾಗಬೇಕಾಗಿದೆ.

### ಆಯುವ್ಯಯಗಳ ಮುಖ್ಯ ವಿವರ.

ಭೂ ಕಂದಾಯ ೩ ಕೋಟಿ ೨೯ ಲಕ್ಷ ರೂ. ಮಾದಕ ಪದಾರ್ಥಗಳಿಂದ ೩ ಕೋಟಿ ೧೩ ಲಕ್ಷ ರೂ. ಸ್ಟಾಂಪ ೧ ಕೋಟಿ ೪೦ ಲಕ್ಷ ರೂ. ಅರಣ್ಯಶಾಖೆ ೪೨ ಲಕ್ಷ ರೂ. ರಜಿಸ್ಟರ್ ೧೫ ಲಕ್ಷ ರೂ. ಬೇರೆ ಕಂದಾಯಗಳಿಂದ ೮೫ ಲಕ್ಷ ರೂ. ಬರುವವು. ಇವೇ ಆದಾಯದ ಮುಖ್ಯ ಮಾರ್ಗಗಳು.

ವೆಚ್ಚದ ಮುಖ್ಯ ಮಾರ್ಗಗಳು— ಶಿಕ್ಷಣಕ್ಕಾಗಿ ೧ ಕೋಟಿ ೬೧ ಲಕ್ಷ ರೂ. ಪೋಲಿಸ್ ೧ ಕೋಟಿ ೪೦ ಲಕ್ಷ ರೂ. ಗವ್ಹರ್ನರರ ವೇತನ ೧ ಕೋಟಿ ೨೦ ಲಕ್ಷ ರೂ. ಈ ಮುಂತಾದ ದೊಡ್ಡ ದೊಡ್ಡ ವೆಚ್ಚಗಳಿವೆ. ಸಂಬಳ ಮೊದಲಾದವುಗಳಲ್ಲಿ ಕಡಿಮೆಮಾಡಿ ೧೦ ಲಕ್ಷ ರೂ. ಉಳಿಸಿದೆ. ಮಂತ್ರಿಮಂಡಲದ ವೇತನದಿಂದಲೇ ೧ ಲಕ್ಷ ೩೧ ಸಾವಿರ ರೂ. ಗಳು ಉಳಿದಿವೆ."

### ವಿರೋಧಪರ ಭಾಷಣ.

ಈ ಆಯುವ್ಯಯ ಪತ್ರಿಕೆಗೆ ವಿರೋಧವಾದ ಭಾಷಣವನ್ನು ಶ್ರೀ. ಜಮನಾದಾಸ ಮೆಹತಾರವರು ಮಾಡಿ ತಾವು ಮಂತ್ರಿಗಳಾಗಿದ್ದಾಗ ಮಾಡಿದ ಯೋಜನೆಯನ್ನು ಈಗಿನ ಮಂತ್ರಿಗಳು ಅಲ್ಲಗಳೆದಿದ್ದಾರೆಂದೂ ಇವರ ಯೋಜನೆಯು ಅಸಮಾಧಾನಕರವಾದುದೆಂದೂ ಪ್ರತಿಪಾದಿಸಿದರು. ವಿಜಾಪುರ ಜಿಲ್ಲೆಯ ಮುಸಲ್ಮಾನ್ ಪ್ರತಿನಿಧಿಗಳಾದ ಮಿ. ಇಳಕಲ್ಲ ಇವರು ಈ ಆಯವ್ಯಯ ಪತ್ರಿಕೆ ನಿರಾಶಾಜನಕವಾದುದೆಂದೂ ಮದ್ಯಪಾನವು ನಿಲ್ಲುವುದು ಅಶಕ್ಯವೇ ಸರಿಯೆಂದೂ ಹೇಳಿದರು.

ಶ್ರೀ. ಚಿತಳೆ, ಬೆಳಗಾವಿಯ ಶ್ರೀ. ಗೋಖಲೆ, ಮೊದಲಾದ ಅನೇಕ ಸಭಾಸದರು ಆಯುವ್ಯಯ ಪತ್ರಿಕೆಯನ್ನು ಶ್ಲಾಘಿಸಿದರು.

---

ಜನರಿಗೆ ಗೊತ್ತಾಗಲೆಂದು ಹೀಗೆ ಬರೆದರೆ ಕಾಂಗ್ರೆಸ್ಸಿನ ವಿರುದ್ಧ ಪ್ರಚಾರ ಮಾಡಿದಂತಾಯಿತೆ? ಕಾಂಗ್ರೆಸ್ಸಿಗೆ ಜಯವಾದ ಸಂಗತಿಗಳನ್ನೇನೂ ನಾವು ಪ್ರಕಟಿಸುತ್ತಾ ಇಲ್ಲವೆ? ಕಾಂಗ್ರೆಸ್ಸಿಗೇನೇ ಮತ ಕೊಡಬೇಕೆಂದು ನಾವು ಅನೇಕಸಾರೆ ಸಕಾರಣಗಳಿಂದ ವಿಸ್ತಾರವಾಗಿ ವಿವೇಚಿಸಿ ಮತದಾರರಿಗೆ ತಿಳಿಸಲಿಲ್ಲವೆ?

(ಸಶೇಷ.)




ಶಾ. ಶ. ೧೮೫೯ ನೆಯ ಶ್ರಾವಣ ಬ|| ೨ ಸೋಮವಾರ.

# ನಮ್ಮ ಕಳೆದ ಆರು ವರುಷ.

ಶರಣ ಸಂದೇಶ ಪತ್ರಿಕೆಯು ಜನ್ಮವೆತ್ತಿ ಆರು ವರುಷಗಳಾದವು. ಈ ದಿನ ಇದು ಏಳನೆಯ ವರುಷದಲ್ಲ ಅಡಿಯಿಟ್ಟಿದೆ. ಆದುದರಿಂದ ಕಳೆದ ಅರ್ಧ ಪಟ್ಟದಲ್ಲಿ ತನ್ನಿಂದಾದ ಕಾರ್ಯಗಳ ಸಾಮಾನ್ಯ ನಿರೀಕ್ಷಣೆಯನ್ನು ಮಾಡುವುದು ಸಮಂಜಸವಾಗಿಯೇ ಇದೆಯಷ್ಟೆ. ಈ ಪತ್ರಿಕೆಯು ತಾನು ಜನ್ಮವೆತ್ತಿದ ದಿನವೇ ತನ್ನ ಉದ್ದೇಶವನ್ನು ಈ ಪ್ರಕಾರವಾಗಿ ಸ್ಪಷ್ಟೀಕರಿಸಿದೆ—

"ಹಿಂದುಸ್ಥಾನದ ರಾಜಕೀಯ ಸ್ವಾತಂತ್ರ್ಯಕ್ಕೂ ಹಿಂದು ಸಮಾಜ ಸಂಘಟನೆಗೂ ಬಸವಾದಿ ಪ್ರಮಥರ ತತ್ವ ಪ್ರಸಾರಣೆಗೂ ಪ್ರಯತ್ನಿಸುವುದೇ ಈ ಪತ್ರಿಕೆಯ ಮುಖ್ಯೋದ್ದೇಶಗಳಾಗಿವೆ."

ಹೀಗೆ ರಾಜಕೀಯ ಸಾಮಾಜಿಕ ಮತ್ತು ಧಾರ್ಮಿಕ ವಿಷಯಗಳಲ್ಲಿ ಜಾಗೃತಿಯನ್ನುಂಟುಮಾಡುವಾಗ ನಮ್ಮ ಸದಸದ್ವಿವೇಕ ಬುದ್ಧಿಗೆ ನ್ಯಾಯವೆಂದು ತೋರಿದುದನ್ನೇ ಸ್ಪಷ್ಟವಾಗಿ ಜನಾಂಗದ ಮುಂದಿಡುವ ಸಂಕಲ್ಪವುಳ್ಳವರಾಗಿದ್ದೇವೆ. ಹಾಗೆ ಮಾಡುವುದು ಒಂದು ಸಮಯದಲ್ಲಿ ಯಾವುದೊಂದು ಪಕ್ಷಕ್ಕೆ ಅಥವಾ ಸಂಸ್ಥೆಗೆ ಇಲ್ಲವೆ ವ್ಯಕ್ತಿಗೆ ಅಪ್ರಿಯವಾಗಿ ತೋರಿದರೂ ಅದನ್ನು ಸಹಿಸಿಕೊಂಡು ನಮಗೆ ಸತ್ಯವಾಗಿ ತೋರಿದುದನ್ನೇ ಸಾರುತ್ತಿರಬೇಕೆಂಬುದೂ ನಮ್ಮ ಸಂಕಲ್ಪವು.

ಅಂತೆಯೇ ಬಸವಮಹಾನುಭಾವರು ನುಡಿದಿರುವ "ನ್ಯಾಯ ನಿಷ್ಠುರ, ದಾಕ್ಷಿಣ್ಯಪರನಾನಲ್ಲ; ಲೋಕವಿರೋಧಿ," ಎಂಬ ದಿವ್ಯ ವಚನವನ್ನು ಪತ್ರಿಕೆಯ ಶಿರೋಭಾಗದಲ್ಲಿಟ್ಟುಕೊಂಡು ಅದರ ಬೆಳಕಿನಲ್ಲಿಯೇ ಮುಂದಡಿಯಿಡುತ್ತಾ ಬಂದಿದ್ದೇವೆ.

ಮಹಾತ್ಮಾ ಗಾಂಧೀಜಿಯವರು ಶರಣ ಸಂದೇಶ ಪತ್ರಿಕೆಗೆ ತಾ. ೬-೩-೩೪ ರಲ್ಲಿ ಕೊಟ್ಟ ಸಂದೇಶವೂ "ಸತ್ಯದ ವಿನಾ ಬೇರೆ ಧರ್ಮವೇ ಇಲ್ಲ." ಎಂಬುದಿದ್ದುದರಿಂದ ಅದನ್ನೂ ಶಿರೋಭಾಗದಲ್ಲಿಯೇ ಇಟ್ಟುಕೊಂಡು ನಮ್ಮ ನಡಿಗೆಗೆ ಬಲವನ್ನುಂಟುಮಾಡಿಕೊಂಡಿದ್ದೇವೆ.

## ಮಾಡಿದ ಕಾರ್ಯ ಯಾವುದು?

ಕರ್ನಾಟಕದಲ್ಲಿ ವೀರಶೈವ ಸಮಾಜವು ಒಂದು ಮುಖ್ಯ ಜನಾಂಗವಾಗಿದೆ. ಆದುದರಿಂದ ಇದರಲ್ಲಿ ಐಕಮತ್ಯ, ವ್ಯಾಪಕವಾದ ಕಾರ್ಯೋತ್ಸಾಹ, ಸ್ವಮತದ ಉದಾರಾಚರಣೆ ಇವುಗಳೆಲ್ಲಾ ಕಾರ್ಯರೂಪದಲ್ಲಿ ಬಂದದ್ದಾದರೆ ಈ ಭಾಗದ ರಾಜಕೀಯ ಮತ್ತು ಸಾಮಾಜಿಕ ಅಭಿವೃದ್ಧಿಗಳಿಗೆ ತುಂಬಾ ಸಹಾಯವಾಗುತ್ತದೆಂಬ ನಮ್ಮ ದೃಢವಾದ ತಿಳುವಳಿಕೆ.

ಈ ಕಾರ್ಯಕ್ಕೆ ವೀರಶೈವ ಸಮಾಜದಲ್ಲುಂಟಾಗಿರು "ಪಂಚಾಚಾರ್ಯರ ಪಕ್ಷ" ಎಂಬ ಒಂದು ಹೊಸ ಪಂಥ ತುಂಬಾ ವಿಘ್ನಕಾರಿಯಾಗಿದೆ. ಇಷ್ಟೇ ಅಲ್ಲ; ಶ್ರೀ. ಬಸವಾ ಮಹಾ ಶಿವಶರಣರು ಯಾವ ಸಮತಾ ತತ್ವವನ್ನು ಜಗತ್ತಿಗೆ ಬೋಧಿಸಿ ಮಹದುಪಕಾರವನ್ನು ಮಾಡಿದ್ದಾರೆಂದು ನಿಷ್ಪಕ್ಷಪಾತಿಗಳಾ ಅನೇಕ ದೇಶ ವಿದೇಶಗಳ ಅನ್ಯಮತೀಯ ಮಹಾ ಮಹಾ ವಿದ್ವಾಂಸರು ಹೇಳುತ್ತಿದ್ದಾರೆಯೋ ಅಂತಹ ಸಮತಾ ತತ್ವಕ್ಕೆ ಘಾತವಾದ ಜನ್ಮವಿಶಿಷ್ಟ ಮೇಲುಕೀಳುಗಳ ವಿಷ ಬೀಜವನ್ನು ಜನಾಂಗದ ಮನೋಭೂಮಿಕೆಯಲ್ಲಿ ಬಿತ್ತತಕ್ಕದ್ದಾಗಿದೆ.

ಅಂತೆಯೇ ಮೊದಲು ಈ ವಿಷಯದ ಕಡೆಗೆ ಹೆಚ್ಚು ಲ ಸಿ ವೀರಶೈವ ವಿಧ್ವಂಸಕರಾದ ಈ ನೂತನ ಪಂಥಿಗಳ ವಿಚಾ ಸರಣಿಯಲ್ಲಿರತಕ್ಕ ನಾನಾ ದೋಷಗಳನ್ನು ನೂರಾರು ಲೇಖ ಳಿಂದ ನಿಷ್ಠುರವಾಗಿಯೇ ಖಂಡಿಸಿದೆವು. ರೋಗವು ಬಲಿತ ತರ ಅದರ ನಿವಾರಣೆಗಾಗಿ ಮಾಡುವ ಔಷಧವೂ ತೀಕ್ಷ್ಣತರ ದುದೇ ಇರಬೇಕಾಗುತ್ತದಷ್ಟೆ.

ಗುರು-ಪೀಠಗಳನ್ನು ಹೊಂದಿದವರೂ ಗುರುಗಳೆಂದು ಸಮಾಜದಲ್ಲ ಮಾನ ಮನ್ನಣೆಗಳನ್ನು ಹೊಂದುತ್ತಿರುವವರೂ ಆದ ಅನೇಕ ಮಹಾಶಯರೇ ಈ ಪ್ರಕಾರ ವಿಘಾತಕವಾದ ಚಟುವಟಿಕೆಯ ಪ್ರಚಾರಕರಾಗಿರುವಾಗ ಸಮಾಜವನ್ನು ಜಾಗೃತಗೊಳಿಸಬೇಕಾದರೆ ಖಂಡು ತುಂಡಾದ ನ್ಯಾಯನಿಷ್ಠುರದ ಬರವಣಿಗೆಯೇ ಅಗತ್ಯವಲ್ಲವೆ? ಈ ಕಾರ್ಯಕ್ಕೆ ಸಮಾಜದ ಅನೇಕ ವಿದ್ವಾಂಸರೂ ತಮ್ಮ ದಿವ್ಯ ಲೇಖನಗಳಿಂದ ತುಂಬಾ ನೆರವಾದರು. ಕಳೆದ ಆರು ವರುಷಗಳಲ್ಲಿ ಈ ಸಂಬಂಧವಾಗಿ ಪ್ರಕಟವಾದ ತಾತ್ವಿ ಲೇಖನಗಳನ್ನೆಲ್ಲಾ ಒಟ್ಟುಗೂಡಿಸಿ ಪುಸ್ತಕ ರೂಪದಲ್ಲಿ ಪ್ರಕಟಿಸಿ ದ್ದಾದರೆ ಅದೊಂದು ವೀರಶೈವ ಸಮಾಜಕ್ಕೆ ಅತ್ಯುಪಯುಕ್ತವಾದ ಪುಸ್ತಕವಾಗಬಹುದೆಂದೇ ನಮ್ಮ ತಿಳುವಳಿಕೆ.

ಧಾರ್ಮಿಕ ವಿಚಾರದಲ್ಲಿ ಪ್ರಬಲವಾಗಿರುವ ಒಂದು ಪಕ್ಷದ ಸಂಗಡ ಹೇಗೆ ಹೋರಾಡಬೇಕಾಯಿತೋ ಹಾಗೆಯೇ ರಾಜಕೀಯ ವಿಷಯದಲ್ಲಿ ಪ್ರಬಲವಾಗಿರುವ ಕಾಂಗ್ರೆಸ್ ಪಕ್ಷದ ಕೆಲವು ಧೋ ರಣ ಮತ್ತು ಕಾರ್ಯಗಳ ಸಂಬಂಧವಾಗಿ ಮುಂಬೈ ಕಾಂಗ್ರೆಸ್ಸಿ ನಂತರ (ಕ್ರಿ. ಶ. ೧೯೩೪) ಭಿನ್ನಾಭಿಪ್ರಾಯಗಳನ್ನು ಸ್ಪಷ್ಟವಾ ಯೇ ಆಗಾಗ್ಗೆ ಪ್ರತಿಪಾದಿಸುವ ಪ್ರಸಂಗ ಬಂದಿತು. ಇದರಿಂ ಅನೇಕರು ನಾವು ಕಾಂಗ್ರೆಸ್ ವಿರೋಧಿಗಳೆಂತಲೂ, ಜಾತಿವಾ ಗಳೆಂತಲೂ, ಜನರಲ್ಲಿ ದುರಭಿಪ್ರಾಯವನ್ನುಂಟುಮಾಡಲು ಪ್ರ ತ್ನಿಸಿದರು.

ಈ ಧಾರ್ಮಿಕ ಮತ್ತು ರಾಜಕೀಯ ವಿಚಾರಗಳಂತೆ ಹಿಂದು ಸಂಘಟನೆಯ ಸಾಮಾಜಿಕ ವಿಚಾರದಲ್ಲಿಯೂ ನೂ ರು ಲೇಖನಗಳನ್ನು ಪ್ರಕಟಿಸಿ, ಹಿಂದು ಮಹಾ ಸಭೆ ಪ್ರತ್ಯೇಕ ಸಂಚಿಕೆಯನ್ನೂ ಹೊರಡಿಸಿ, ಕರ್ನಾಟಕದಲ್ಲಿ ಇದ ದು ಪ್ರಮುಖ ಸಾಮಾಜಿಕ ಪತ್ರಿಕೆಯಾಗುವಂತೆಯೇ ಪ್ರಯ ಸಿದ್ದಾಯಿತು. ಹಿಂದು ಸಮಾಜದಲ್ಲಿರುವ ಬ್ರಾಹ್ಮಣಾದಿ ವರ್ಣ

ಕಲ್ಪನೆಯು ಅಳಿದುಹೋಗಬೇಕೆಂಬುದೇ ನಮ್ಮ ದೃಢವಾದ ತಿಳುವಳಿಕೆ.

ಆದುದರಿಂದ ನಾವು ಬ್ರಾಹ್ಮಣರ ದ್ವೇಷಿಗಳೆಂತಲೂ, ಬ್ರಾಹ್ಮಣೇತರ ಪಕ್ಷದವರೆಂತಲೂ ಅನೇಕರು ಈ ಪತ್ರಿಕೆಯ ವಿರುದ್ಧವಾಗಿ ಪ್ರಚಾರ ನಡೆಸಿದರು.

### ಈ ವರೆಗಿನ ಅನುಭವ,

ಮೊದಲನೆಯ ಮೂರು ವರುಷ ಈ ಪತ್ರಿಕೆಯ ಉಪೇಕ್ಷೆಯು ಅನಂತರ ವಿರೋಧವು, ಉಂಟಾದವು. ಧಾರ್ಮಿಕ ವಿಚಾರದಲ್ಲಿ ಕೇವಲ ಪಂಚಾಚಾರ್ಯರ ಪಕ್ಷದವರೆಂದು ಹೇಳಿಕೊಳ್ಳುವವರಿಗೇ ಅಲ್ಲ; ಬಸವಾದಿ ಪ್ರಮಥರ ಪಕ್ಷದವರೆಂದು ಹೇಳಿಕೊಳ್ಳುವ ಅನೇಕ ಮಹಾಶಯರಲ್ಲಿಯೂ ಭಕ್ತ ಮಹೇಶ ಎಂಬೆರಡು ಜನ್ಮವಿಶಿಷ್ಟ ಕೀಳುಮೇಲುಗಳ ಜಾತಿಯಿವೆಯೆಂಬುವವರು ಇರುವುದರಿಂದ ಅವರಿಗೂ ಶರಣ ಸಂದೇಶವು ದಿನೆ ದಿನೆ ಅಪ್ರಿಯವಾಗುತ್ತಾ ಬಂದಿತು.

ಕಾಂಗ್ರೆಸ್ಸಿನ ಕೆಲವು ಅಂಧಭಕ್ತರಿಗೂ, ದುರಾಭಿಮಾನಿಗಳಿಗೂ ಈ ಪತ್ರಿಕೆಯು ರಾಜಕೀಯ ರಂಗದಲ್ಲಿ ಬರುವುದು ಅಶುಭಕರವೆಂದೇ ತೋರಿತು. ಜನ್ಮದಿಂದಲೇ ತಾವು ಮೇಲು, ಇನ್ನೊಬ್ಬರು ಕೀಳೆಂದು ತಿಳಿದುಕೊಂಡಿರುವ ಹಿಂದು ಸಮಾಜದ ಅನೇಕರಿಗೂ ಇದರ ವಿಚಾರಸರಣಿಯು ಕರ್ಣಕಠೋರವಾಗಿ ಪರಿಣಮಿಸಿತು.

ಹೀಗೆ ಶರಣ ಸಂದೇಶವು ಈಗ ಅನೇಕರ ಕಣ್ಣಿನಲ್ಲಿ ಒತ್ತುವ ಪತ್ರಿಕೆಯಾಗಿರುವಂತೆಯೇ ಅನೇಕರ ಮುದ್ದಿನ ಪತ್ರಿಕೆಯೂ ಆಗಿದೆ. ಇದು ತನ್ನ ಕಾರ್ಯವನ್ನು ಎಷ್ಟೋ ಪರಿಣಾಮಕಾರಿಯಾಗಿ ಮಾಡಿದೆಯೆಂಬುದಕ್ಕೆ ಈ ವಿಧವಾದ ಅಭಿಪ್ರಾಯಗಳುಂಟಾಗಿರುವುದೇ ಸಾಕ್ಷಿಯು.

### ಮುಂದಿನ ಮಾರ್ಗ.

ಈ ವರೆಗಿನ ಸಂಕ್ಷಿಪ್ತ ವಿವೇಚನೆಯಿಂದ ನಮ್ಮ ಮಾರ್ಗವು ಎಷ್ಟು ಕಠಿಣವಾದುದಾಗಿಯೂ ಇದರಲ್ಲಿಯೇ ಮುಂದರಿಯಬೇಕಾದುದು ಎಷ್ಟು ಅವಶ್ಯಕವಾದುದಾಗಿಯೂ ಇದೆಯೆಂಬುದು ನಿಷ್ಪಕ್ಷಪಾತಿಗಳಾದ ಕುಶಲ ವಾಚಕರಿಗೆ ಗೊತ್ತಾಗಬಹುದು.

ರಾಜಕೀಯ ಸಾಮಾಜಿಕ ಮತ್ತು ಧಾರ್ಮಿಕ ವಿಷಯಗಳಲ್ಲಿಯ ಈ ವರೆಗಿನ ನಮ್ಮ ವಿಚಾರಸರಣಿಯೇ ನ್ಯಾಯವಾಗಿಯೂ ಶ್ರೇಯಸ್ಕರವಾಗಿಯೂ ನಮಗೆ ತೋರುತ್ತಿರುವುದರಿಂದ ಇನ್ನುಮುಂದೆಯೂ ಇದಕ್ಕೂ ಹೆಚ್ಚಾದ ರೀತಿಯಲ್ಲಿ ಇದೇ ಪ್ರಕಾರ ಜನಸೇವೆಯನ್ನು ಮಾಡುವ ನಮ್ಮ ಉದ್ದೇಶಕ್ಕೆ ನ್ಯಾಯಪ್ರಿಯರಾದ ಸಕಲ ಮಹಾಶಯರೂ ತುಂಬಾ ನೆರವಾಗಬೇಕಾಗಿ ಪ್ರಾರ್ಥಿಸಿ ಈ ಆತ್ಮನಿರೀಕ್ಷಣೆಯನ್ನು ಮುಗಿಸುತ್ತೇವೆ.

---

## ಕಾಂಗ್ರೆಸ್ ರಾಜ್ಯದ ರೀತಿ.

ಕಾಂಗ್ರೆಸ್ ಪಕ್ಷವು ಆರು ಪ್ರಾಂತಗಳಲ್ಲಿ ತನ್ನ ಪ್ರಭುತ್ವವನ್ನು ಪ್ರಾರಂಭಿಸಿದೆಯಷ್ಟೆ. ಈ ಪಕ್ಷದ ರಾಜ್ಯ ರೀತಿಯು ಹೇಗಾಗುವುದೆಂದು ಜನರು ನಿರೀಕ್ಷಿಸುತ್ತಿರುವುದು ಸ್ವಾಭಾವಿಕವು. ಕಳೆದ ೧೭ ನೆಯ ತಾರೀಖಿನ ದಿವಸ ನಮ್ಮ ಮುಂಬೈ ಪ್ರಾಂತದ ಆಯವ್ಯಯ ಪತ್ರಿಕೆಯನ್ನು ಅರ್ಥಸಚಿವರಾದ ಶ್ರೀ. ಲಠ್ಠೆಯವರು ಅಸೆಂಬ್ಲಿಯ ಮುಂದಿಟ್ಟರು. ಅದರಿಂದ ಕಾಂಗ್ರೆಸ್ಸಿನ ರಾಜ್ಯರೀತಿಯು ಎಷ್ಟೋವಮಟ್ಟಿಗೆ ಗೊತ್ತಾಗುವಂತಿದೆ.

ಈಗ ಅಸೆಂಬ್ಲಿಯ ಮುಂದೆ ಬಂದ ಆಯವ್ಯಯ ಪತ್ರಿಕೆಯ ಚರ್ಚೆಯು ಅಸೆಂಬ್ಲಿಯ ಒಳಗೂ ಮತ್ತು ಹೊರಗೂ ಆಗುತ್ತಲೇ ಇದೆ. ಈ ವಿಷಯದಲ್ಲಿ ಭಿನ್ನಾಭಿಪ್ರಾಯವಿರುವುದು ಸ್ವಾಭಾವಿಕವು. ಈ ಆಯವ್ಯಯ ಪತ್ರಿಕೆಯನ್ನು ವಿರೋಧಿಸುವವರ ಮುಖ್ಯಾಭಿಪ್ರಾಯಗಳು ಅಸೆಂಬ್ಲಿಯಲ್ಲಿ ನಡೆದ ಅವರ ಭಾಷಣಗಳಿಂದ ಈ ಪ್ರಕಾರವಾಗಿವೆಯೆಂದು ಗೊತ್ತಾಗುತ್ತದೆ—

ಶ್ರೀ. ಜಮನಾದಾಸ ಮೆ.ಹತಾರವರು ಇದು ೧೯ ನೆಯ ಶತಮಾನದ ಆಯವ್ಯಯ ಪತ್ರಿಕೆಯೆಂದೂ ಶ್ರೀ. ಶಾಮರಾವ ಪರುಳೆಕರ ಇವರು ಇದು ಕ್ರಿಸ್ತ ಪೂರ್ವ ೪ ನೆಯ ಶತಮಾನದ ಆಯವ್ಯಯ ಪತ್ರಿಕೆಯೆಂದೂ ತಮ್ಮ ಭಾಷಣಗಳಲ್ಲಿ ಹೇಳಿದರು. ಶ್ರೀ. ಜಾಬವಾಲಾ ಎಂಬುವವರಾದರೋ ಈ ಪತ್ರಿಕೆಯಲ್ಲಿ ಯಾವ ಕ್ರಾಂತಿಕಾರಕ ಸೂಚನೆಗಳೂ ಇಲ್ಲವೆಂತಲೂ ಅರ್ಥಸಚಿವರು ಕೆಲವು ಕಾರ್ಯಗಳಿಗಾಗಿ ಅಷ್ಟಿಷ್ಟು ರೂಪಾಯಿ ಕೊಟ್ಟುದನ್ನು ನೋಡಿದರೆ ಕಾಠೇವಾಡದ ಯಾವುದಾದರೊಂದು ಸಂಸ್ಥಾನಾಧೀಶರು ತಮ್ಮ ವರ್ಧಂತಿಯ ದಿವಸ ಅಥವಾ ಪುತ್ರೋತ್ಸವದ ದಿವಸ ಕೊಡುವ ದಾನಗಳ ಜ್ಞಾಪಕವಾಗುತ್ತದೆಂತಲೂ ಹೇಳಿದರು.

ಈ ಎಲ್ಲ ಟೀಕೆಗಳಮೇಲಿಂದ ಜನಗಳಮೇಲೆ ಹೆಚ್ಚಾದ ಕಂದಾಯವನ್ನು ಹೇರಿ ಕೋಟಿಗಟ್ಟಲೆ ರೂ. ಗಳನ್ನು ಗಳಿಸಿ ಕೋಟಿಗಟ್ಟಲೆ ಸಾರ್ವಜನಿಕ ಕಾರ್ಯಗಳಿಗೆ ವೆಚ್ಚಮಾಡುವುದಿಲ್ಲವಲ್ಲಾ! ಎಂಬುದೇ ಕಾಂಗ್ರೆಸ್ ಆಯವ್ಯಯ ಪತ್ರಿಕೆಯಮೇಲಿನ ಮುಖ್ಯ ಆಕ್ಷೇಪಣೆಯೆಂಬುದು ಸ್ಪಷ್ಟಗೊತ್ತಾಗುತ್ತದೆ. ಶ್ರೀ. ಬಾಪುಸಾಹೇಬ ಫಿರೋದಿಯಾ ಇವರು ತಮ್ಮ ಭಾಷಣದಲ್ಲಿ "ಇದು ಬಡಜನಗಳ ಆಯವ್ಯಯ ಪತ್ರಿಕೆಯೇ ವಿನಾ ದುಂದುಗಾರ ಮಗನ ಪತ್ರಿಕೆಯಲ್ಲ" ಎಂದು ಹೇಳಿರುವುದು ಈ ಆಕ್ಷೇಪಣೆಗೆ ಸರಿಯಾದ ಉತ್ತರವೆಂದು ನಮಗೆ ತೋರುತ್ತದೆ.

ರೋಗದಿಂದ ನಿರ್ಬಲನಾದವನು ಬಲಶಾಲಿಯಂತೆ ಒಮ್ಮೆಲೇ ಅಂಗಸಾಧನೆಗೆ ಹೋದರೆ ಕೈಕಾಲುಗಳನ್ನು ಮುರಿದುಕೊಳ್ಳುವಂತೆ ಬಡತನದಿಂದ ಬೇದು ಬೆಂಡಾಗಿರುವ ಭಾರತೀಯರು ಪಾಶ್ಚಾತ್ಯ ರಾಷ್ಟ್ರಗಳಂತೆ ಒಮ್ಮೆಲೇ ಆಯವ್ಯಯಗಳ ಸಾಹಸಕ್ಕೆ ಕೈ ಹಾಕಿದರೆ ಅಪಾಯಕ್ಕೀಡಾಗಬೇಕಾಗುವುದಲ್ಲವೆ? ಸ್ವಲ್ಪಸ್ವಲ್ಪಾಗಿಯೇ ಶಕ್ತಿಯನ್ನು ಹೆಚ್ಚಿಸಿಕೊಳ್ಳುತ್ತಾ ಬಲಪಡಬೇಕಾಗಿದೆ. ಅಂತೆಯೇ ಬಂಡಿಯಲ್ಲಿ ಕುಳಿತು ಹಳ್ಳಿಯಕಡೆಗೆ ಕಾಂಗ್ರೆಸ್ಸಿನ ರಾಜ್ಯ ಹೊರಟಿದೆ. ಮೋಟಾರಿನಲ್ಲಿ ಕುಳಿತು ಪಟ್ಟಣದ ಕಡೆಗಾಗಲೀ ವಿಮಾನಿನಲ್ಲಿ ಕುಳಿತು ದೇಶಾಂತರಗಳಿಗಾಗಲೀ ಸಂಚಾರಕ್ಕೆ ಇದು ಹೊರಟಿಲ್ಲ.

ಅಂತೆಯೇ "ಸ್ವಲ್ಪ ತಾಳಿರಿ" ಎಂದು ವೀರ ನರಿಮಾನರು ಭಾಯಿ ಜಾಬವಾಲಾರವರಿಗೆ ಹೇಳಿದುದು ಅರ್ಥಪೂರ್ಣವಾದುದು. ಈಗ ದೊರೆತ ಅಲ್ಪಾಧಿಕಾರದಿಂದಲೇ ಹಳ್ಳಿಗಳಿಂದ ಪಟ್ಟಣಗಳ ವರೆಗೆ ಶಕ್ತಿಯನ್ನು ಸ್ವಲ್ಪಾದರೂ ಹೆಚ್ಚಿಸಿಕೊಂಡು ಅನಂತರ ಸಾಹಸದ ಕಾರ್ಯಕ್ಕೆ ಕೈಹಾಕಬೇಕಾಗಿದೆ. ಆದುದರಿಂದ ಕಾಂಗ್ರೆಸ್ ರಾಜ್ಯದ ರೀತಿಯು ಈಗ ಇದೇ ಪ್ರಕಾರ ಇರಬೇಕಾದುದೇ ಕ್ಷೇಮಕರವು. ಇದರಿಂದಲೇ ಹೊಸ ಸುಧಾರಣೆಯ ಅಪೂರ್ಣತ್ವವು ಜನ ಸಾಮಾನ್ಯಕ್ಕೂ ಮನವರಿಕೆಯಾಗುವುದು.

ಆದಕಾರಣ ಅರ್ಥಸಚಿವರಾದ ಶ್ರೀ. ಲಠ್ಠೆಯವರು ಬಹುಜಾಣ್ಮೆಯಿಂದ ಸಿದ್ಧಗೊಳಿಸಿದ ಆಯವ್ಯಯ ಪತ್ರಿಕೆಯನ್ನು ನಾವು ಅಭಿನಂದಿಸುತ್ತೇವೆ. ಇದರಲ್ಲಿ ಪ್ರಾಥಮಿಕ ಶಿಕ್ಷಣವನ್ನು ಒತ್ತಾಯವಾಗಿ ಪ್ರಸಾರಗೊಳಿಸುವ ಯೋಜನೆಯೊಂದಿಲ್ಲದಿದ್ದುದು ದೊಡ್ಡ ಕೊರತೆಯೇ ಸರಿ. ಈ ಕೊರತೆಯು ನಿವಾರಣೆಯಾಗುವುದೆಂದೇ ನಾವು ನಂಬಿದ್ದೇವೆ.

---

# " ವೀರಶೈವನಿಗೆ ಶಿವದೀಕ್ಷೆಯು ಜನ್ಮಸಿದ್ಧ ಹಕ್ಕು. "

ಶ್ರೀ. ಬಂಥನಾಳ ಪಾಟೀಲ ಬಸವಲಿಂಗಪ್ಪನವರು "ವೀರಶೈವ ತತ್ವವೇತ್ತರಿಗೊಂದು ಸೂಚನೆ" ಎಂಬ ತಲೆಕಟ್ಟಿನಲ್ಲಿ ಒಂದು ಲೇಖವನ್ನು ತಾ. ೨-೮-೩೭ ರ ಶ. ಸಂ. ದ ಸಂಚಿಕೆಯಲ್ಲಿ ಪ್ರಸಿದ್ಧಿಸಿರುವುದು ತಿಳಿಯಿತು. ಅದು ಸ್ವತಂತ್ರ ವಿಷಯವಾಗಿರದೆ ಹಿಂದೆ ನಡೆದ 'ಅಯ್ಯನವರು' ಎಂಬ ವಿಷಯದ ಭಾಗವಾಗಿಯೇ ಇರುವದೆಂಬದು ಸ್ಪಷ್ಟವದೆ. ಶಂಕಾ ಸಮಾಧಾನಮಾಡದೆ (ಎತ್ತಿದ ಸಂದೇಹಗಳಿಗೆ ಸಮರ್ಪಕವಾದ ಉತ್ತರಕೊಡದೆ) ಬರೀ ವಿಷಯ ಪ್ರತಿಪಾದನೆಯನ್ನೆಷ್ಟುಮಾಡಿದರೂ ಮನಸ್ಸಿಗೆ ಎಂದೂ ತೃಪ್ತಿಯಾಗುವದಿಲ್ಲ. ವಿನಾಕಾರಣ ಮಾತಿಗೆ ಮಾತು ಬೆಳೆದು, ಮೂಲ ವಿಷಯವು ಬದಿಗುಳಿದು, ಮನಸ್ತಾಪಕ್ಕೆ ಕಾರಣವಾಗಬಾರದೆಂಬ ಸದುದ್ದೇಶದಿಂದಲೇ ಸಂಪಾದಕ ಮಹಾಶಯರು ಉತ್ತರ ಪ್ರತ್ಯುತ್ತರಗಳ ವಿಷಯವಾಗಿ ಬಂದ ಪತ್ರಗಳನ್ನು ಮುದ್ರಿಸಲಿಕ್ಕೆ ತಡೆಹಾಕಿ ತಮ್ಮ ವಿಮರ್ಶಾತ್ಮಕ ಲೇಖವನ್ನು ಹುಲುಬಿಸಿದರೆ ಅದರಿಂದ ಎಲ್ಲರಿಗೂ ಸಮಾಧಾನವಾಗಬಹುದೆಂದು ಊಹಿಸಿದ್ದರು. ಆದರೆ ಹಾಗೇನೂ ಆಗಲಿಲ್ಲ. ಒಳಗೆ ಹೆಗ್ಗಣಿಟ್ಟು ಗುದ್ದು ಬಡಿದು ಮೇಲೆ ಎಷ್ಟೇ ನುಣುಪುಮಾಡಿದರೂ ಅದೆಲ್ಲ ನಿಷ್ಫಲವು. ಹಿಂದಿನ ಇವರೆರಡು ಪತ್ರಗಳಿಂದ, ವೀರಶೈವರಲ್ಲಿ ಭಕ್ತರು ಅಯ್ಯನವರು ಎಂಬೆರಡು ಜನ್ಮಸಿದ್ಧ ಜಾತಿಗಳಿರುವವೆಂದು ಇವರು ಗಟ್ಟಿ ನಂಬಿದ್ದುದು ಸ್ಪಷ್ಟವಾಗಿ ಕಾಣುತ್ತಿತ್ತು. "ಅಂತೇ ಸಾರ್ವತ್ರಿಕ ಲಿಂಗಧಾರಣಾದಿ ಸಂಸ್ಕಾರಗಳು ನಿಲ್ಲುವಂತೆ ಪ್ರಯತ್ನಿಸಿರಿ. ಅದು ಸಾಧ್ಯವಾದರೆ ಮಾತ್ರ ಅಯ್ಯಾಚಾರ ಸಂಸ್ಕಾರಗಳೂ ಕೂಡ ನಿಮ್ಮ ಪ್ರಯತ್ನದಿಂದ ನಿಲ್ಲಬಹುದೆಂದು ನೆನಿಸಿರಿ." ಎಂದು ಉದ್ಗಾರತೆಗೆದಿದ್ದರು. ಅದರ ಉತ್ತರವು ಪ್ರಕಟವಾಗದೆ ಹೋದುದರಿಂದ ಈಗ ಪುನಃ ಅದೇ ವಿಷಯವು 'ತತ್ವವೇತ್ತರಿಗೊಂದು ಸೂಚನೆ' ಎಂಬ ರೂಪದಿಂದ ಮುಂದೆ ಬಂದದೆ.

ಈ ಲೇಖನದಲ್ಲಿ ಅವರು "ಅಯ್ಯಾಚಾರವು ಜನ್ಮವಿಶಿಷ್ಟವಲ್ಲ" ಎಂದು ನಿರ್ಣಯಿಸಿದಂತೆ "ಶಿವದೀಕ್ಷೆಯು (ಲಿಂಗಧಾರಣ ಸಂಸ್ಕಾರವು) ಜನ್ಮವಿಶಿಷ್ಟವೋ ? ಗುಣವಿಶಿಷ್ಟವೋ ? " ಎಂಬದನ್ನು ನಿರ್ಣಯಿಸಬೇಕು. ಎಂದು ಆಹ್ವಾನಿಸಿರುವರು. ಈ ಬಗ್ಗೆ ನಾನು "ಶಿವದೀಕ್ಷೆಯೂ ಅಯ್ಯಾಚಾರವೂ " ಎಂಬ ಒಂದು ಲೇಖವನ್ನು ಬರೆದು ಇದೇ ಪತ್ರದಲ್ಲಿ ಪ್ರಕಟಿಸಿದ್ದೇನೆ. ಅದರಲ್ಲಿ ಶಿವದೀಕ್ಷೆಯು ಪ್ರತಿಯೊಬ್ಬ ವೀರಶೈವನ ಜನ್ಮಸಿದ್ಧಹಕ್ಕೆಂತಲೂ ಅಯ್ಯಾಚಾರವು ಮಾತ್ರ ಅಂತಹದಲ್ಲವೆಂತಲೂ ಪ್ರತಿಪಾದಿಸಲ್ಪಟ್ಟದೆ.

ಪ್ರಾಥಮಿಕ (ಕನಿಷ್ಟ) ಶಿಕ್ಷಣವು ಎಲ್ಲರ ಜನ್ಮಸಿದ್ಧ ಹಕ್ಕು. ಆದರಂತೆ ದ್ವೈತೀಯಿಕ (ಮಧ್ಯಮ) ತಾರ್ತೀಯಿಕ (ಉಚ್ಚ) ಶಿಕ್ಷಣಗಳು ಮಾತ್ರವಲ್ಲ. ಅಂತೆಯೇ ಪ್ರಾಥಮಿಕ ಶಿಕ್ಷಣವನ್ನು ಮಾತ್ರ ಸಾರ್ವತ್ರಿಕವಮಾಡಬೇಕೆಂದು ಎಲ್ಲ ರಾಷ್ಟ್ರದವರು ಯತ್ನಿಸುತ್ತಿದ್ದಾರೆ. ಹೆಚ್ಚು ಬುದ್ಧಿಶಾಲಿಯಾದವರು (ಗುಣಯುಕ್ತರಾದವರು) ಮಾತ್ರ ಮುಂದಿನ ಶಿಕ್ಷಣಕ್ಕೆ ಕೈಹಾಕತಕ್ಕ ವಿಷಯವಾಗಿರುವದರಿಂದ, ಅವೇನೂ ಸಾರ್ವತ್ರಿಕವಾಗಿಲ್ಲ. ಹಾಗೆಯೇ ಜನ್ಮತಃ ವೀರಶೈವನಾದವನು (ವೀ, ಶೈ. ತಂದೆ ತಾಯಿಗಳಿಂದ ಜನಿಸಿದವನು) ಪ್ರಾಥಮಿಕ ಸಂಸ್ಕಾರವಾದ ಶಿವದೀಕ್ಷೆಗೆ ಮಾತ್ರ ಹಕ್ಕುದಾರನು. ಅದು ಆತ್ಮೋದ್ಧಾರಾರ್ಥವಾಗಿ ಸಾರ್ವತ್ರಿಕ ರೀತಿಯಿಂದ ಎಲ್ಲರಿಗೂ ಆಗಲೇಬೇಕು. ಅಯ್ಯಾಚಾರವು ಪ್ರಾಥಮಿಕವಲ್ಲ. ದ್ವೈತೀಯಿಕವು. ಆದರಲ್ಲಿ ಸಮಾಜೋದ್ಧಾರಕ್ಕೆ ಸಂ[illegible]ಸಿದ ಗದ್ದುಗೆ ಭಿಕ್ಷಾಟನಗಳು ಸಮಾವಿಷ್ಟವಾಗಿವೆ. ಆದು[illegible]ದಲೇ ಇಡೀ ಸಮಾಜದೊಳಗಿಂದ ಯೋಗ್ಯ (ಗುಣವಿಶಿಷ್ಟ) [illegible]ವರನ್ನು ಆರಿಸಬೇಕಾದುದು ಅತ್ಯವಶ್ಯ.

ಹೀಗೆ ಬರೆದುದರ ಅರ್ಥವನ್ನು ಮಾತ್ರ "ಶಿವದೀಕ್ಷೆ[illegible] ಗುಣವಿಶಿಷ್ಟವಾದುದಲ್ಲ" ಎಂದು ಯಾರೂ ತಿಳಿಯಲಾಗದು. [illegible] ಗುಣವಿಶಿಷ್ಟವೇ. ಈ ಗುಣವು (ಸಂಸ್ಕೃತಿಯು) ಜನ್ಮತಃ [illegible]ಶೈವನಾದವನಲ್ಲಿ ಉತ್ಪನ್ನವಾಗಬೇಕೆಂದೇ ಅವನು ಕೂಸಾಗಿ[illegible]ಗಲೇ ಇಷ್ಟಲಿಂಗ ಸಂಬಂಧವನ್ನು ಮಾಡುವರು. ಮುಂದೆ [illegible] ಬರುತ್ತ ಮನೆಯವರ ಬಳಿಕೆಯಿಂದಲೂ ಅನುಕರಣ ಶಕ್ತಿ[illegible] ಮೂಲಕವಾಗಿಯೂ ಅವನು ಆ ಸಂಸ್ಕೃತಿಯನ್ನು ತನ್ನ[illegible] ಮಾಡಿಕೊಳ್ಳುತ್ತ ನಡೆಯುವನು. ಮತ್ತೂ ವಿಶೇಷವೇನಂದ[illegible] ವೀರಶೈವರಲ್ಲಿ ಮನೆ ಮನೆಗೆ ಕುಲ ಗುರುಗಳು ನೇಮಿಸಲ್ಪಟ್ಟದ್ದ[illegible] ಅವರು ಮೇಲಿಂದ ಮೇಲೆ ಶಿಷ್ಯರ ಮನೆಗಳಿಗೆ ಹೋಗಿ, ಪ್ರತ್ಯ[illegible] ಪರಿಸ್ಥಿತಿಯನ್ನವಲೋಕಿಸಿ, ಸಂಸ್ಕೃತಿಗೆ ವಿರುದ್ಧವಾಗಿ ನಡೆಯು[illegible]ದ್ದರೆ ತಿದ್ದಿ ದಾರಿಗೆ ಹಚ್ಚಿ ಸರಿಪಡಿಸುವದರಲ್ಲಿಯೇ ನಿಮಗ್ನರಾಗಿರಬೇಕಾಗುತ್ತದೆಂಬದನ್ನು ಎಲ್ಲರೂ ಬಲ್ಲರು. ಶಾಲೆಯ ಬಾ[illegible]ಕರು ಹೇಗೆ ತಮ್ಮ ಗುರುಗಳಲ್ಲಿ ತುಸು ಹಿಂದೆ ಮುಂದೆಯಾದ[illegible] ಪ್ರಾ. ಶಿ. ವನ್ನು ಪಡೆಯುವಂತೆ ಮೂಲತಃ ವೀರಶೈವನಾದವ[illegible] ತಮ್ಮ ಕುಲಗುರುಗಳ ಹಾಗು ಹಿರಿಯರ ಶಿಕ್ಷಣದಿಂದ ಶಿವ[illegible]ಕ್ಷೆಗೆ ಅವಶ್ಯವಾದ ಗುಣಯುಕ್ತನಾಗೇ ಆಗುವನು. ಮತ್ತು ಸ[illegible]ಲದಲ್ಲಿ ಆ ಗುರುವು ಅವನಿಗೆ ಶಿವದೀಕ್ಷೆಯನ್ನು ಮಾಡಿಯೇ ತೀ[illegible]ವನು. ಇದು ಅವನಿಗೆ ಅಪರಿಹಾರ್ಯ ಸಂಸ್ಕಾರವು ಅರ್ಥಾ[illegible] ಗುಣವಿಶಿಷ್ಟವಾದರೂ ಜನ್ಮಸಿದ್ಧಹಕ್ಕು. ಇದು ತಪ್ಪಿದರೆ ವೀ[illegible]ಶೈವ ಮತವೇ ಶೂನ್ಯವಾಗುವದು.

ಲೌಕಿಕದಲ್ಲಿ ನಾವು ಔರಸ ಪುತ್ರ ದತ್ತಪುತ್ರರನ್ನು ನೋಡ[illegible]ವದಿಲ್ಲವೇ ? ಅವರಲ್ಲಿರುವ ಅಂತರವೇ ಜನ್ಮಸಿದ್ಧ ವೀರಶೈವನಿಗೂ ಹೊಸದಾಗಿ ಅದರಲ್ಲಿ ಪ್ರವಿಷ್ಟನಾಗುವ ಅನ್ಯ ಗೃಹಸ್ಥನಿಗೂ ಉಂಟು. ಔರಸಪುತ್ರನು ಎಂಥವನೇ ಇರಲಿ (ದಡ್ಡನೇ ಇರಲಿ ಮಡ್ಡನೇ ಇರಲಿ) ಸಾಗಿಸಿಕೊಂಡು ಹೋಗಿ, ಶಕ್ಯವಿದ್ದಷ್ಟು ತಿದ್ದಿ, ಮನೆಯೊ[illegible]ಡೆಯನನ್ನು ಮಾಡೇತೀರಬೇಕಾಗುವದು.

ಆದರೆ ದತ್ತಕ ತೆಗೆದುಕೊಳ್ಳುವದಿದ್ದರೆ ಆ ಹುಡುಗನ ಬುದ್ಧಿವಂತಿಕೆ ಗುಣ ಶೀಲಗಳನ್ನೆಲ್ಲ ಒಳಿತಾಗಿ ಪರೀಕ್ಷಿಸಿ, ತಮ್ಮ ಸಂರಕ್ಷಣೆ ಮಾಡುವದಲ್ಲದೆ ಮನೆತನದ ಇಭ್ರತಿಯನ್ನು ಕಾಯ್ದುಕೊಂಡು ಹೋಗುವವನಾದಾನೋ ಇಲ್ಲವೋ ಎಂಬುದನ್ನು ಸಹ ನೋಡ[illegible]ಬೇಕಾಗುತ್ತದೆ. ಅಲ್ಲಿಮಾತ್ರ ಗುಣಯುಕ್ತನಾಗಿರಬೇಕೆಂಬ ಕಟ್ಟ[illegible]ನ್ನು ಹೆಚ್ಚಾಗಿ ಅನುಸರಿಸಬೇಕಾಗುವುದು. ದತ್ತ ಪುತ್ರನಂತಿರು[illegible] ಈ ಹೊಸ ವೀರಶೈವನು ಜಾಗೃತೆಯಿಂದ ನಡೆದು ವೀರಶೈ[illegible] ಸಂಸ್ಕೃತಿಯನ್ನು ಒಳಿತಾಗಿ ಅಭ್ಯಾಸಿಸುವನು. ಮುಂದೆ ಆತ[illegible] ಸಂತತಿಯಾದರೂ ಜನ್ಮವಿಶಿಷ್ಟ ವೀರಶೈವವೇ ಆಗುವುದು.

ಈ ವಿವರಣಗಳಿಂದ ನಮ್ಮ ಸಮಾಜದಲ್ಲಿ "ಜನ್ಮತಃ ಲಿಂ[illegible]ಧಾರಣೆ-ಶಿವದೀಕ್ಷೆಯು ಅದೇಕೆ ನಿರಾತಂಕವಾಗಿ ಸಾಗುತ್ತ ಬಂದದೆ? " ಎಂಬುದರ ಕಾರಣವು ಎಲ್ಲರಿಗೂ ನಿಚ್ಚಳವಾ[illegible] ಹೊಳೆಯದೇ ಇರದು. ಹಾಗು ಶಾಸ್ತ್ರವು ಒಂದು ರೀತಿಯಿಂ[illegible] ಹೇಳಿದರೆ ಸಮಾಜವು ಬೇರೊಂದು ರೀತಿಯಿಂದ ನಡೆಯುತ್ತದೆಂ[illegible] ಆರೋಪಣೆಯೂ ಅಡಗುವುದು. ಅನ್ಯಾಯದ ವಾಸನೆಯೂ ಬ[illegible]ಲಾರದು. ಅಯೋಗ್ಯತೆಯೂ ಕಾಣಲಾರದು.

ಇದೆಲ್ಲ ಆಯಿತು. ಆದರೆ ಇನ್ನೊಂದು ವಿಷಯವನ್ನು [illegible] ವಿವರಿಸದೆ ಈ ಲೇಖನಕ್ಕೆ ಪೂರ್ಣತ್ವ ಬರಲಾರದು. ಅದಾವುದೆಂದ[illegible]

ಈಗ ಪ್ರತ್ಯಕ್ಷ ವ್ಯವಹಾರದಲ್ಲಿ ನಿರೀಕ್ಷಿಸಿದರೆ ಬಹುಶಃ ಎಲ್ಲ ವೀರಶೈವರು ಶ್ರೀ. ಬಸವಲಿಂಗಪ್ಪನವರು ತೋರಿಸಿದ ಶಾಸ್ತ್ರಾಧಾರಗಳ ವಿರುದ್ಧ ಸ್ಥಿತಿಯವರೇ ಕಂಡುಬರುತ್ತಾರೆ. ಇದಕ್ಕೆ ಪ್ರಬಲವಾದ ಕಾರಣವೆಂದರೆ ಮೇಲ್ವಿಚಾರಕರೂ ಸಮಾಜನೇತಾರರೂ ಆದ ಅಯ್ಯನವರು (ಗುರುಜಂಗಮ ವರ್ಗದವರು) ಕರ್ತವ್ಯಪರಾಙ್ಮುಖರಾದುದೇ! ಆದುದರಿಂದಲೇ ೩೫ ಲಕ್ಷ ವೀರಶೈವರಲ್ಲಿ ಸಹ ಅಂಗ ಗುಣವಳಿದು ಲಿಂಗಗುಣ ಪಿಡಿದವರನ್ನು ಕಾಣುವುದು ಅಪುರೂಪವಾಗಿದೆ. ಮೂಲತಃ ಮಳೆಯೇ ಇಲ್ಲವಾದರೆ ಬುಗ್ಗೆಗಳಲ್ಲಿ ನೀರು ಅದೆಲ್ಲಿಂದ ಬರುವುದು? ಆದುದರಿಂದಲೇ ಸಮಾಜದಲ್ಲಿ ವಿಪರೀತ ಪರಸ್ಥಿತಿಯು ಪಸರಿಸಿ ನೆಲೆಗೊಂಡು ಒಳ್ಳೊಳ್ಳೇ ಬುದ್ಧಿವಂತರು ಕೂಡಾ ದಿಗ್ಭ್ರಾಂತಿಪಟ್ಟು ಶಾಸ್ತ್ರಕ್ಕೂ ವ್ಯವಹಾರಕ್ಕೂ ತಾಳಮೇಳವಿಲ್ಲೆನ್ನುವ ಕಠಿಣ ಕಾಲ ಬಂದೊದಗಿತು. ಇನ್ನಾದರೂ ಸಮಾಜವು ಕಣ್ಣು ತೆರೆಯಲಿ!

ಬಸಪ್ಪ ಚನ್ನಪ್ಪ ಪಟ್ಟೇದ.

## ನೈಜಾಮ ಪ್ರಾಂತದ ವೃತ್ತಾಂತ.

—ಹೈದರಾಬಾದ ಸಂಸ್ಥಾನದ ಮುಖ್ಯಮಂತ್ರಿಗಳಾದ ಸರ್. ಅಕಬರ ಹೈದರಿ ಇವರಿಗೆ ಉಸ್ಮಾನಿಯಾ ವಿಶ್ವವಿದ್ಯಾಲಯದವರು ಒಂದು ಔತಣವನ್ನು ಕೊಟ್ಟರು. ಆಗ ಸರ್. ಅಕಬರ ಹೈದರಿಯವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ನಮ್ಮ ಸಂಸ್ಥಾನವಲ್ಲಿ ಆಳುವವರು ಮತ್ತು ಆಳಲ್ಪಡುವವರು ಎಂಬ ಭೇದ ಭಾವವು ಇಲ್ಲವೇ ಇಲ್ಲ."

—ನಿಜಾಮ ಪ್ರಾಂತದ ಅನೇಕ ಸ್ಥಳಗಳಲ್ಲಿಯ ಆರ್ಯ ಸಮಾಜದ ಕಾರ್ಯಗಳಿಗೆ ಅಲ್ಲಿಯ ಪೊಲೀಸ್ ಅಧಿಕಾರಿಗಳಿಂದ ತೊಂದರೆಯಾಗುತ್ತಲಿದೆಯೆಂದು ಭಾಯಿ ಪರಮಾನಂದರವರಿಗೆ ಒಬ್ಬರು ತಿಳಿಸಿದ್ದಾರೆ.

—ಉದ್ಗಿರಿಯ ಪ್ರಸಿದ್ಧ ವಕೀಲರೂ ನೈಜಾಮ ಪ್ರಾಂತದ ವೀರಶೈವ ಸಮಾಜದ ಪ್ರಮುಖ ಮುಂದಾಳುಗಳೂ ಆದ ಶ್ರೀ. ಶೇಟೆ ಸಂಗ್ರಾಮಪ್ಪನವರು ನೈಜಾಮ ಪ್ರಾಂತದ ವೀರಶೈವ ವಿದ್ಯಾಭಿವೃದ್ಧಿಯ ಫಂಡನ್ನು ಹೆಚ್ಚಿಸಬೇಕಾಗಿ ಪ್ರಾಂತಿಕ ಪರಿಷತ್ತಿನಲ್ಲಿ ಗೊತ್ತಾದಂತೆ ಜಾಗ್ರುತೆ ಕಾರ್ಯ ಪ್ರಾರಂಭಿಸಬೇಕೆಂದು ಆ ಭಾಗದವರಲ್ಲಿ ಬಹು ಕಳಕಳಿಯ ವಿಜ್ಞಾಪನೆಯನ್ನು ಮಾಡಿಕೊಂಡಿದ್ದಾರೆ.

—ಅಂಬೆಜೋಗಾಯಿ ಎಂಬಲ್ಲಿಯ ಜೋಗೇಶ್ವರ ವಿದ್ಯಾಲಯದಲ್ಲಿಯ ಹೈಸ್ಕೂಲ್ ವರ್ಗವನ್ನು ನಿಲ್ಲಿಸಿಬಿಡಬೇಕಾಗಿ ಶಿಕ್ಷಣ ಶಾಖೆಯವರು ಆ ವಿದ್ಯಾಲಯದ ವ್ಯವಸ್ಥಾಪಕರಿಗೆ ತಿಳಿಸಿದ್ದಾರೆಂದು ತಿಳಿಯುತ್ತದೆ.

—"ದ್ನುನಿಯಾಕೆ ಮಜದೂರ ಏಕ ಹೋಜಾವ" ಎಂಬ ಮರಾಠಿ ಪುಸ್ತಕವು ಈ ಸಂಸ್ಥಾನದಲ್ಲಿ ಬರಕೂಡದೆಂದು ಸರಕಾರದ ಅಪ್ಪಣೆಯಾಗಿದೆ.

—ಗಡಿದಾಟಿಸಲ್ಪಟ್ಟ ಶ್ರೀ. ತುಳಜಾಪುರಕರರ ಸಹಾಯಾರ್ಥವಾಗಿ ಪುಣೆಯಲ್ಲಿ ಪ್ರಕಟವಾದ ಹಸ್ತಪತ್ರಿಕೆಗಳು ಹೈದರಾಬಾದದ ಶ್ರೀ. ವಾಘಮಾರೆ ಎಂಬುವವರ ಮನೆಯಲ್ಲಿ ಪೋಲಿಸರಿಗೆ ೩೦೩ ದೊರೆತವು. ಇನ್ನೂ ಅನೇಕ ಕಡೆ ಶೋಧ ನಡೆದಿದೆ.

—ಬ್ಯಾರಿಸ್ಟರ್ ರಾಮಚಂದ್ರರಾವ ನಾಯಕ ಇವರನ್ನು ಹೈದರಾಬಾದ ಹೈಕೋರ್ಟಿನ ಜಜ್ಜರನ್ನಾಗಿ ನಿಯಮಿಸಿದ್ದಾರೆ.

—ಇಂಜಿನಿಯರಿಂಗ್ ಕಾಲೇಜಿನ ಅಕೌಂಟೆಂಡ್ ಬರಕತ ಉಲ್ಲಾ ಇವರು ೧೨೭೫೮ ರೂ. ಗಳ ಮೋಸ ಮಾಡಿದ್ದರ ಅಪರಾಧಕ್ಕಾಗಿ ೪ ವರುಷ ಕಠಿಣ ಶಿಕ್ಷೆ ಮತ್ತು ಎರಡು ಸಾವಿರ ರೂ. ಗಳ ದಂಡವಾಯಿತು. ಇವರು ಸಾಧಾರಣ ಒಂದು ಲಕ್ಷ ರೂ. ಮೋಸಮಾಡಿದ್ದಾರೆಂದು ವ್ಯಾಜ್ಯವಾಗಿತ್ತು. ಆದರೆ ಅಷ್ಟು ಹಣದ ವಿಚಾರವಾಗಿ ಪ್ರಮಾಣಗಳು ದೊರೆಯಲಿಲ್ಲ.

—ಗುಲಬರ್ಗಾದಲ್ಲಿ ಕಾಲರಾ ಪ್ರಾರಂಭವಾಗಿದೆ. ಪ್ರತಿನಿತ್ಯ ೫-೬ ಮರಣಗಳಾಗುತ್ತಲಿವೆ. ಅಲ್ಲಲ್ಲಿ ಇಲಿಗಳು ಬೀಳುವುದೂ ಹೆಚ್ಚಿದೆ. ಕಾಲರಾ ಮತ್ತು ಪ್ಲೇಗ ಎರಡೂ ಪ್ರಸಾರವಾಗುವ ದುಶ್ಚಿನ್ಹಗಳು ತೋರುತ್ತಲಿವೆ.

—ಕಾಮಾರಡ್ಡಿ ತಾಲೂಕಿನ ಒಂದು ಹಳ್ಳಿಯಲ್ಲಿ ವೆಂಕಯ್ಯ ಎಂಬುವವನು ತನ್ನ ಹೊಲಕ್ಕೆ ಗೊಬ್ಬರವನ್ನು ಹೇರಿಕೊಂಡು ಹೋಗುತ್ತಿರುವಾಗ ರಾಮಕೃಷ್ಣಯ್ಯ ಎಂಬುವವನು ಆತನನ್ನು ತಡೆದು ಬಂದೂಕಿನಿಂದ ಹೊಡೆದು ಕೊಂದನು. ಇದನ್ನು ನೋಡಿ ವೆಂಕಯ್ಯನ ಮಕ್ಕಳಾದ ಪೆದ್ದಬಾಲಯ್ಯ, ಚಿನ್ನಬಾಲಯ್ಯ ಬುಚಯ್ಯ ಎಂಬುವವರು ಬಂದು ರಾಮಕೃಷ್ಣಯ್ಯನನ್ನು ಹೊಡೆದು ಕೊಂದರು.

ಈ ಮೂರು ಅಪರಾಧಿಗಳಮೇಲೆ ಕೊಲೆಯ ವ್ಯಾಜ್ಯ ನಡೆದಿತ್ತು. ತಂದೆಯನ್ನು ಕೊಂದ ಸಂತಾಪದಲ್ಲಿ ಆ ಮೂವರು ಈ ಅಪರಾಧವನ್ನು ಮಾಡಿದ್ದರಿಂದ ಅವರು ನಿರ್ದೋಷಿಗಳೆಂದೇ ಸೆಶೆನ್ಸ ಜಜ್ಜರು ತೀರ್ಮಾನಮಾಡಿದರು.

## ಇದೊಂದು ಹೊಸ ಡೈರಿ.—

[ ಬಸವದಾಸ ಎಂಬ ಹೆಸರನ್ನಿಟ್ಟುಕೊಂಡ ಶಿವಾನುಭವ ಪ್ರಿಯರಾದ ಒಬ್ಬ ಮಹಾಶಯರು ಪ್ರತಿನಿತ್ಯ ತಮಗೆ ತೋರಿದ ಸಂಗತಿಗಳನ್ನು ಗದ್ಯ ಮತ್ತು ಪದ್ಯಗಳಲ್ಲಿ ಬರೆದಿಡಲು ಪ್ರಾರಂಭಿಸಿದ್ದಾರೆ. ಹೀಗೆ ಕಳೆದ ಜನವರಿ ಒಂದು ತಿಂಗಳಲ್ಲಿ ಬರೆದ ಡೈರಿಯನ್ನು ಪ್ರಕಟನೆಗಾಗಿ ನಮ್ಮ ಕಡೆ ಕಳಿಸಿದ್ದಾರೆ. ಇದೊಂದು ಹೊಸರೀತಿ. ಎಷ್ಟೋ ಉಪದೇಶಪರವಾದ ಸಂಗತಿಗಳಿವೆ. ಪ್ರತಿವಾರದಲ್ಲಿಯೂ ಸ್ವಲ್ಪ ಸ್ವಲ್ಪಾಗಿ ಕೊಡುತ್ತಾ ಹೋಗುವೆವು, ಸಂಪಾದಕ. ]

ಶ್ರೀ. ಶಿವ ಚಿದಂಬರಾಯ ನಮಃ

ಶ್ರೀಗುರು ಬಸವಲಿಂಗಾಯ ನಮಃ

[ಬಸವದಾಸ ವಿರಚಿತ ಗದ್ಯ ಪದ್ಯಾತ್ಮಕ ಡಾಯರಿಯೆಂಬ ನೂತನ ಕಾವ್ಯವು.]

———:ಃ:———

(ಶಿಲ. ೯ ಬ. ೫ ಶುಕ್ರ. ೧-೧-೩೭.)

ಬಸವ ಲಿಂಗವೇ ! ದಾಸನಿಗೆ ಆಜ್ಞೆಯನ್ನು ಕೊಟ್ಟು ಸೇವೆಯನ್ನು ತೆಗೆದುಕೊಳ್ಳುವುದು !!

ತ್ರಿಪದಿ|| ಬಾಗುವುದು ಬೇಗದೊಳು ಸಾಗಿದ ಜಗತ್ತಿಗೆ|
ನೀಗಿ ಸಂಸಾರ ಚಿದಂಬರ ಲೀಲೆಯೊಳ್|
ಭಾಗ ತೆಗೆದುಕೋ ದಾಸಾರ್ಯ ||೧||

ಅರ್ಥಾತ್ ದಾಸನೆ, ನಿನ್ನ ಧ್ಯೇಯವು ಚಿದ್ರೂಪ ಶಿವ ಲೀಲೆಯೊಳ್ ಪಾಲುಗಾರನಾಗುವದಿರಲಿ.

× × ×

ಶ್ರೀ. ಶಿವ ಚಿದಂಬರಾಯ ನಮಃ

(ಶಿಲ. ೯ ಬ. ೬ ಶನಿ. ೨-೧-೩೭)

ಗದ್ಯ— ಇಹಪರ ಪ್ರಾಪ್ತಿಗೆ ಪ್ರಯತ್ನವೇ ಬೇಕಯ್ಯ.
ಪದ್ಯ— ತಾ ಮಾಡಿರ್ದ ಕರ್ಮಹೇಮಾದಿಗಳಮೂಲ||
ತಾ ಮಾಳ್ಪ ಮನದ ವಾಸನೆಯ ಸಂಹಾರ|
ಧಾಮ ನಿಜಮೂಲ ದಾಸಾರ್ಯ ||೨||

ಧಾಮ—ಪ್ರಕಾಶ, ಪ್ರಭಾವ ನಿಜಧಾಮ—ಶಿವ ಪ್ರಕಾಶ, ಐಕ್ಯಸ್ಥಲ ತಾತ್ಪರ್ಯ— ತನ್ನ ಸುಕೃತ ದುಷ್ಕೃತಂಗಳು ಹೊನ್ನು ಹೆಣ್ಣು ಮಣ್ಣಿಗೆ ಕಾರಣವು ಅರ್ಥಾತ್ ಇಹಲೋಕದ ಸುಖ ದುಃಖಗಳಿಗೆ ಮೂಲವು. ವಾಸನಾ ಕ್ಷಯದ ತನ್ನ ಪ್ರಯತ್ನವು ನಿಜಧಾಮದ ಮೂಲವು ಅಂದರೆ ಸುಸೂತ್ರ ದೇಹ ವಿಸರ್ಜನೆಯಾಗಲಿಕ್ಕೂ ಮುಕ್ತಿಗೂ ಕಾರಣವು.

× × ×

ಶ್ರೀ ಶಿವ ಚಿದಂಬರಾಯ ನಮಃ

(ಶಿಲ. ೯ ಬ. ೭ ರವಿ ೩-೧-೩೭.)

ನಿನ್ನೆ ಆಡಿದ ಸಂಗತಿಗಳಲ್ಲಿ ಒಂದನ್ನು ಬಿಟ್ಟು ಮತ್ತೊಂದು ನಡೆಯುವಂತೆ ಇಲ್ಲ. ಎರಡೂ ಬೇಕು. ಮಾನವನು ಇಹ ಪರಗಳೆರಡನ್ನೂ ಸಾಧಿಸಬೇಕೆಂದೇ ಕಲ್ಯಾಣದಲ್ಲಿ ಶ್ರೀ. ಬಸವಣ್ಣನವರ ಅವತಾರವಾದದ್ದು.

ಆದುದರಿಂದ ಅವರಿಗೇ ಶರಣುಹೋಗಿ ನಾನಿಂತು ಬೇಡಿಕೊಳ್ವೆಂ. ಅಯ್ಯಾ ಬಸವಲಿಂಗವೇ, ತನು ಮನ ಧನಂಗಳಂ ಗುರುಲಿಂಗ ಜಂಗಮ ಸೇವೆಗರ್ಪಿಸಿ ಆಮ್ ಅಮರಪಿಹನೆಂಬ ನೆನಹು ನೆಲೆಗೊಳ್ಳಲೆಂದು ಮರಣವು ಗೆಲ್ಲಲ್ಪಡುವದೆಂದು ತಿಳಿಯುತ್ತಿದೆ ಮಾತ್ರ. ಆದರೆ ಸ್ವಾಮಿನ್ ಆ ಸಾಮರ್ಥ್ಯವು ನಿನ್ನ ಕೃಪಾವೃಷ್ಟಿಯಲ್ಲುಂಟು.

ತ್ರಿಪದಿ|| ದೇವತವಪಾದಕೆ ಭಾವದಿಂದಲಿ ಶರಣು|
ಕಾವುದೈ ಹೆಜ್ಜೆ ಹೆಜ್ಜೆಗೆ ಪಾಮರನಿಹ|
ಸಾವು ತಪ್ಪಿಸೈ ಬಸವೇಶ ||೩||

× × ×

## ನರಗುಂದದಲ್ಲಿ ಶಿವಕೀರ್ತನ ಸಮಾರಂಭ.

ಶ್ರೀ. ವಿರಕ್ತಮಠದಲ್ಲಿ ಶಿವಭಕ್ತರಿಂದ ಸ್ಥಾಪಿಸಲ್ಪಟ್ಟ ವೀರಶೈವ ಸಮಾಜೋನ್ನತಿ ಸಂಸ್ಥೆಯಿಂದ ಶ್ರೀಧರ್ಮಾರ್ಥ ಜ್ಯೋತಿಷ್ಯ ವೈದಿಕ ಪಾಠಶಾಲೆಯೊಂದು ಪ್ರಾರಂಭವಾಗಿದ್ದು ಯಾವತ್ತರಿಗೂ ಗೊತ್ತಿದ್ದ ಸಂಗತಿಯಷ್ಟೆ. ಹಾಗೂ ಸದರಿ ಸಂಸ್ಥೆಯಿಂದ ಪ್ರತಿವರುಷ ಶ್ರಾವಣ ಮಾಸದಲ್ಲಿ ಈ ಮಠದ ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ ಚನ್ನಬಸವ ಮಹಾಸ್ವಾಮಿಗಳವರ ಕರ್ತೃಪೀಠಕ್ಕೆ ಮಹಾ ರುದ್ರಾಭಿಷೇಕವು ಪಂಡಿತರಿಂದ ಪುರಾಣ ಪ್ರವಚನ ಕೀರ್ತನಗಳೂ ಸಾಂಗೋಪಾಂಗವಾಗಿ ಜರುಗಿದಂತೆ ಈ ವರುಷವಾದರೂ ಶ್ರಾವಣ ಶುದ್ಧ ಪ್ರತಿಪದದಿಂದ ಶ್ರೀ. ಕರ್ತೃಪೀಠಕ್ಕೆ ಮಹಾ ರುದ್ರಾಭಿಷೇಕವೂ ಸಂಜೆ ೮ ಘಂಟೆಗೆ ವಿರಕ್ತ ಮಠದಲ್ಲಿ ಶ್ರೀ|| ಬನಹಟ್ಟಿ ಶಿವಕೀರ್ತನಕಾರ ವೀರ ಸಂಗಯ್ಯ ಸ್ವಾಮಿಗಳಿಂದ ಧಾರ್ಮಿಕ, ನೈತಿಕ, ಸಾಮಾಜಿಕ ವಿಷಯಗಳಿಂದೊಡಗೂಡಿದ ಕೀರ್ತನವು ಒಳ್ಳೇ ವಿಜೃಂಭಣೆಯಿಂದ ಆ ಬಾಲವೃದ್ಧರಿಗೂ ಪರಿಣಾಮವಾಗುವಂತೆ ಜರುಗಿದನಂತರ ಪಾಠಶಾಲೆಯ ವಿದ್ಯಾರ್ಥಿಗಳ ಮಂಜುಳ ಧ್ವನಿಯುಕ್ತ ಮಂಗಲವಾಗಿ ಮುಕ್ತಾಯವಾಗುವದು. ಈ ಕಾರ್ಯಕ್ರಮಗಳು ಶ್ರಾವಣಮಾಸ ಪೂರ್ತಿಯಾಗುವವರೆಗೂ ಜರುಗುವವು. ಪ್ರತಿಯೊಂದು ಗ್ರಾಮದ ವೀರಶೈವ ಬಾಂಧವರು ಸಮಾಜೋನ್ನತಿ ಸಂಸ್ಥೆಯೊಂದನ್ನು ಸ್ಥಾಪಿಸಿ ಆ ಸಂಸ್ಥೆಯಿಂದ ಧಾರ್ಮಿಕ, ನೈತಿಕ ಸಾಮಾಜಿಕ ಕಾರ್ಯಗಳನ್ನು ಮಾಡಿ ಇಹದಲ್ಲಿ ಕೀರ್ತಿಯನ್ನು ಪರದಲ್ಲಿ ಗತಿಯನ್ನು ಹೊಂದಬೇಕಾಗಿ ನಮ್ಮ ಸಂಸ್ಥೆಯಮೂಲಕ ಆಗ್ರಹದ ಸೂಚನೆ.

ಬಸಲಿಂಗಪ್ಪ ವೀರಭದ್ರಪ್ಪ ಬ್ಯಾಹಟ್ಟಿ.
ಕಾರ್ಯದರ್ಶಿ.
ವೀರಶೈವ ಸಮಾಜೋನ್ನತಿ ನರಗುಂದ.

---

### ಪ್ರಸಿದ್ಧ ಕ್ರಿಕೆಟ್ ಪಟುವಿನ

## ವಿಷಾದಕರ ವೃತ್ತಾಂತ.

ಜಗತ್ತಿನ ಕ್ರಿಕೆಟ್ ಆಟಗಾರರಲ್ಲಿ ಮೂರನೆಯವರಾದ ಶ್ರೀ. ಪಿ. ಬಾಳು ಎಂಬುವವರು ಮುಂಬೈಯಲ್ಲಿದ್ದಾರೆ. ಇವರಿಗೆ ಈಗ ೬೨ ವರುಷ ವಯಸ್ಸು. ಇವರು ಜನ್ಮದಿಂದ ಚಮ್ಮಗಾರರು. ಆದಿ ಜನಗಳಲ್ಲಿ ಒಬ್ಬ ಪ್ರಸಿದ್ಧ ಮುಂದಾಳುಗಳು. ಇವರ ಜೀವನ ಚರಿತ್ರೆಯಲ್ಲಿಯ ಅನೇಕ ಸಂಗತಿಗಳಿಂದ ಹಿಂದು ಸಮಾಜದಲ್ಲಿರುವ ಅಸ್ಪೃಶ್ಯತಾ ಪಾಪವು ಎಷ್ಟು ಘೋರವಾದುದೆಂಬುದು ಗೊತ್ತಾಗುತ್ತದೆ. ಇವರ ಜೀವನ ಚರಿತ್ರೆಯಲ್ಲಿಯ ಕೆಲವು ಸಂಗತಿಗಳು ಪ್ರಕಟವಾಗಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಟ್ಟಿದೆ—

ಶ್ರೀ. ಬಾಳು ಇವರ ತಂದೆಯವರು ಪುಣೆಯ ಸೈನ್ಯ ಶಾಖೆಯಲ್ಲಿ ಒಬ್ಬ ನೌಕರರಾಗಿದ್ದರು. ಆದುದರಿಂದ ಅನೇಕ ಸಾಹೇಬ ಜನರು ಕ್ರಿಕೆಟ್ ಆಡುವುದನ್ನು ಚಿಕ್ಕಂದಿನಲ್ಲಿಯೇ ಇವರು ನೋಡುತ್ತಿದ್ದರು. ಕೆಲವು ಹುಡುಗರ ಸಂಗಡ ಇವರೂ ಅರವಿಯ ಚಂಡನ್ನು ಮಾಡಿಕೊಂಡು ಆಡುತ್ತಿದ್ದರು. ಇವರು ಬಡವರಾಗಿದ್ದುದರಿಂದ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಕಳಿಸಲು ತಂದೆಗೆ ಶಕ್ಯವಿರಲಿಲ್ಲ. ಆದುದರಿಂದ ಚಿಕ್ಕಂದಿನಲ್ಲಿಯೇ ಒಂದು ಪಾರ್ಶಿ ಜನರ ವ್ಯಾಯಾಮ ಶಾಲೆಯಲ್ಲಿ ಕೂಲಿಯ ಕೆಲಸಕ್ಕಾಗಿ ಇವರು ಸೇರಿಕೊಂಡಿದ್ದರು.

"ಒಂದು ದಿನ ವಿಲ್‌ಕಿನ್ಸ್ ಎಂಬ ಕಲೇಕ್ಟರರು ತಾವೊಬ್ಬರೇ ಆಡುತ್ತಿದ್ದರು. ಆಗ ಅವರ ಚಂಡು ಹಾರಿ ದೂರಬಿದ್ದಿತು. ನಾನು ಅದನ್ನು ತೆಗೆದುಕೊಂಡು ಅವರ ಕಡೆಗೆ ಎಸೆದೆನು. ಆ ನನ್ನ ಎಸೆಯುವಿಕೆಯು ಅವರಿಗೆ ಬಹು ವಿಸ್ಮಯವನ್ನುಂಟುಮಾಡಿತು. ನನಗೆ ಪ್ರತಿನಿತ್ಯ ಆಡಲಿಕ್ಕೆ ಬರಹೇಳಿದರು. ಆಡಿ ಮನೆಗೆ ಹೋಗುವಾಗ ೪-೬ ಆಣೆಗಳನ್ನು ನನಗೆ ಕೊಡುತ್ತಿದ್ದರು. ನನ್ನ ಆ "ಬೋಲಿಂಗ್" ನೋಡಿ ಅವರು ಹೀಗೆ ಹೇಳಿದರು—

"ಬಾಳು, ನೀವು ಚಿಕ್ಕಂದಿನಲ್ಲಿಯೇ ಇಷ್ಟು ಚನ್ನಾಗಿ ಬೋಲಿಂಗ್ ಮಾಡುತ್ತೀರಿ. ದೊಡ್ಡವರಾದಮೇಲೆ ನೀವು ಒಳ್ಳೇ ಬೋಲರ ಆಗುವಿರಿ."

#### ಜಾತಿಯ ಮೇಲುಕೀಳಿನ ಕೊಳೆ.

ಆಮೇಲೆ ನಾನು ಪುಣೆ ಸೈನ್ಯ ಶಾಖೆಯಲ್ಲಿ ನೌಕರನಿರುವಾಗ ಅಲ್ಲೊಂದು ಟೆನಿಸ್ ಆಟದ ಸಂಘವಿತ್ತು. ಅದರಲ್ಲಿ ನನ್ನನ್ನು ಸದಸ್ಯನನ್ನಾಗಿ ಸೇರಿಸಿಕೊಳ್ಳಲು ಒಪ್ಪಲಿಲ್ಲ. ಏಕೆಂದರೆ ನಾನು ಹುಟ್ಟಿದ್ದು ಚಮ್ಮಗಾರರಲ್ಲಿ. ಕಾಮಾಠಿ ಜಾತಿಯ ಶ್ರೀ. ಸಾಯನ್ನಾ ಮೊದಲಾದವರು ನನ್ನ ಪರವಾಗಿ ಬಹು ಪರಿಶ್ರಮಪಟ್ಟಿದ್ದರಿಂದ ಕೊನೆಗೆ ಸದಸ್ಯನಾಗಿ ಸೇರಿಕೊಳ್ಳಲು ಅವಕಾಶದೊರೆಯಿತು.

ನಾನು ಅದರಲ್ಲಿ ಸದಸ್ಯನಾದುದರಿಂದ ಆ ಸಂಘಕ್ಕೆ ಬಹು ಜಯ ದೊರೆಯಿತು. ಸಾತಾರೆಯಲ್ಲಿಯ ಐರೋಪ್ಯರ ಆಟದ ಸಂಘವನ್ನು ಸೋಲಿಸಿತು. ಆಗಿನ ಆಟದಲ್ಲಿ ನನ್ನ ಕುಶಲತ್ವವನ್ನು ನೋಡಿ ನನಗೊಂದು ಬೆಳ್ಳಿಯ ಬಟ್ಟಲನ್ನು ಬಹುಮಾನವಾಗಿ ಕೊಟ್ಟರು. ಅದನ್ನು ನ್ಯಾ. ರಾನಡೆಯವರು ತಮ್ಮ ಹಸ್ತದಿಂದ ನನ್ನನ್ನು ಮುಟ್ಟಿ ಕೊಟ್ಟರು. ಆ ಬ್ರಾಹ್ಮಣರು ನನ್ನನ್ನು ಮುಟ್ಟಿದ್ದರಿಂದ ಅವರ ವಿರುದ್ಧವಾಗಿ ಅನೇಕ ಪತ್ರಿಕೆಗಳು ಕಟುವಾಗಿ ಅವರನ್ನು ಟೀಕಿಸಿದವು.

ನಾನು ೧೯೧೧ ರಲ್ಲಿ ಹಿಂದು ಆಟಗಾರರ ಸಂಘದಿಂದ ಇಂಗ್ಲೆಂಡಿಗೆ ಹೋದೆನು. ಆಗ ನಮ್ಮ ಸಂಘದವರನ್ನು ಕಳಿಸಲು ಅನೇಕರು ಹಡಗದ ಹತ್ತಿರ ಬಂದಿದ್ದರು. ಎಲ್ಲರಿಗೂ ಹೂಮಾಲೆಗಳನ್ನು ಹಾಕಿ ಸತ್ಕರಿಸಿದರು. ಆದರೆ ನನಗೂ ನನ್ನ ತಮ್ಮನಿಗೂ ಮಾತ್ರ ಹೂಮಾಲೆಗಳನ್ನು ಕೊಡಲಿಲ್ಲ! ಏಕೆಂದರೆ ನಾವು ಅಸ್ಪೃಶ್ಯರು!

ಈ ಅವಮಾನವು ನನ್ನ ಮನಸ್ಸಿಗೆ ಬಹು ನೋವನ್ನುಂಟುಮಾಡಿತು. ನನಗೆ ಯಾವಾಗಲೂ ಅದೇ ಯೋಚನೆ ಬರಲಾರಂಭವಾಯಿತು. ನಾನು ನನ್ನ ಕೌಶಲ್ಯವನ್ನು ಅಲ್ಲಿಯ ಆಟದಲ್ಲಿ ತೋರಿಸಿ ಇದಕ್ಕಿಂತಲೂ ಹೆಚ್ಚಾದ ಮನ್ನಣೆ ಹೊಂದಬೇಕೆಂದೇ ಯೋಚಿಸಿದೆನು. ಕೊನೆಗೆ ಆ ನನ್ನ ಇಚ್ಛೆಯು ಪೂರ್ತಿಯಾಯಿತು."

ಶ್ರೀ ಬಾಳು ಇವರು ಇಂಗ್ಲೆಂಡಿನಲ್ಲಿ ಬಹು ಪ್ರಸಿದ್ಧಿಯನ್ನು ಹೊಂದಿದರು. ಕ್ರಿಕೆಟ್ ಆಟದಲ್ಲಿ ಇವರು ಜಗತ್ತಿನಲ್ಲಿಯೇ ಮೂರನೆಯವರಾದರು. ಹಿಂದುಗಳಲ್ಲಿರುವ ಜನ್ಮ ವಿಶಿಷ್ಟ ಮೇಲುಕೀಳಿನ ಈ ಪಾಪವು ಬಹುಕಾಲದಿಂದಲೂ ಅಸಂಖ್ಯ ವ್ಯಕ್ತಿಗಳನ್ನು ನಾನಾ ದುಃಖಗಳಿಗೀಡುಮಾಡಿ ಅವರ ಶಕ್ತಿಯನ್ನೇ ಹಾಳುಮಾಡಿವೆ. ಅಂತೆಯೇ ಈ ರಾಷ್ಟ್ರಕ್ಕೆ ಇಂದಿನ ಅಧೋಗತಿಯು ಬಂದಿತು. ಇನ್ನಾದರೂ ಈ ಪಾಪಕ್ಕೆ ಹಿಂದುಗಳು ಹೇಸಬಾರದೆ?

## ಸ್ತ್ರೀಯರ ಕೈಯಲ್ಲಿ ರಾಜ್ಯಸೂತ್ರ.

ಹಿಂದುಸ್ಥಾನದ ಪ್ರಭುತ್ವವು ದಿನೆ ದಿನೆ ಜನಾಭಿಪ್ರಾಯಕ್ಕೆ ಒಳಪಡಲಾರಂಭವಾಗಿದೆಯಷ್ಟೆ. ಎಂದಮೇಲೆ ಸ್ತ್ರೀಯರ ಕೈಯಲ್ಲಿಯೂ ರಾಜ್ಯಸೂತ್ರಬರುವುದು ಸ್ವಾಭಾವಿಕವು. ಮ್ಯಾಂಟಗೋ-ಚೇಮ್ಸಫರ್ಡ ಸುಧಾರಣೆಯಿಂದ ಹಿಂದುಸ್ಥಾನದ ಪ್ರಾಂತಿಕ ಶಾಸನ ಮಂಡಲಗಳಲ್ಲಿ ನಾಲ್ಕು ಜನ ಸ್ತ್ರೀಯರು ಮಾತ್ರ ಸಮಾವೇಶವಾಗಿದ್ದರು. ಆದರೆ ೧೯೩೫ ನೆಯ ಇಸವಿ ಶಾಸನದಂತೆ ಹತ್ತು ಪ್ರಾಂತಿಕ ಶಾಸನ ಮಂಡಲಗಳಲ್ಲಿ ಒಟ್ಟು ೪೧ ಸ್ಥಳಗಳು ಸ್ತ್ರೀಯರಿಗಾಗಿಯೇ ಕಾದಿಡಲ್ಪಟ್ಟಿವೆ. ಗಡಿನಾಡಿನಲ್ಲಿ ಮಾತ್ರ ಸ್ತ್ರೀ ಸಭಾಸದರಿಲ್ಲ.

ಹತ್ತು ಪ್ರಾಂತಗಳ ೧೫೮೫ ಸಭಾಸದರಲ್ಲಿ ೪೧ ಸಭಾಸದರು ಸ್ತ್ರೀಯರೇ ಇರಬೇಕೆಂದು ಗೊತ್ತಾಗಿರುವುದರಿಂದ ಅಷ್ಟು ಜನ ಸ್ತ್ರೀಯರು ಆರಿಸಲ್ಪಟ್ಟರಲ್ಲದೆ ಪುರುಷರ ಸ್ಥಾನಗಳಲ್ಲಿಯೂ ೧೫ ಸ್ಥಳಗಳನ್ನು ಆಕ್ರಮಿಸಿಕೊಂಡು ಒಟ್ಟು ಹತ್ತು ಪ್ರಾಂತಗಳಲ್ಲಿ ೫೬ ಸ್ತ್ರೀ ಸಭಾಸದರಿದ್ದಾರೆ. ಇವರಲ್ಲಿ ಸೌ|| ವಿಜಯಲಕ್ಷ್ಮಿ ಪಂಡಿತ ಇವರು ಸಂಯುಕ್ತ ಪ್ರಾಂತದಲ್ಲಿ ಒಬ್ಬ ಮಂತ್ರಿಗಳಾಗಿದ್ದಾರೆ. ಸೌ|| ರುಕ್ಮಿಣೀಲಕ್ಷ್ಮೀಪತಿ ಇವರು ಮದ್ರಾಸ್ ಪ್ರಾಂತಿಕ ಮಂಡಲದ ಮತ್ತು ಸೌ|| ಅನುಸೂಯಾದೇವಿ ಕಾಳೆ ಇವರು ಮಧ್ಯ ಪ್ರಾಂತದ ಅಸೆಂಬ್ಲಿಯ ಉಪಾಧ್ಯಕ್ಷರಾಗಿದ್ದಾರೆ. ಆದರೆ ಸ್ತ್ರೀ ಶಿಕ್ಷಣದಲ್ಲಿ ಎಷ್ಟೋ ಮುಂದರಿದಿದ್ದ ಈ ನಮ್ಮ ಮುಂಬೈ ಪ್ರಾಂತದಲ್ಲಿಯೇ ಸ್ತ್ರೀಯರ ಕೈಯಲ್ಲಿ ರಾಜ್ಯಸೂತ್ರವು ಪ್ರತ್ಯಕ್ಷವಾಗಿ ಬಾರದಿದ್ದುದು ಒಂದು ಕೊರತೆಯೆಂದು ನಾವು ಈ ಮುಂಚೆಯೇ ತಿಳಿಸಿದ್ದೆವಷ್ಟೆ. ಆ ಕೊರತೆಯನ್ನು ಶ್ರೀ. ಖೇರ ಮಂತ್ರಿಮಂಡಲವು ಸ್ವಲ್ಪಾದರೂ ನಿವಾರಣೆಮಾಡಲು ಸೌ|| ಹಂಸ ಮೆಹತಾ ಇವರನ್ನು ಉಪಮಂತ್ರಿಗಳನ್ನಾಗಿ ನಿಯಮಿಸಿಕೊಂಡುದು ಅತ್ಯಂತ ಅಭಿನಂದನೀಯವಾದುದು.

### ಸೌ|| ಹಂಸ ಮೆಹತಾರವರ ಹೇಳಿಕೆ.

ಪುಣೆಗೆ ಹೋಗುವ ಮುಂಚೆ ಪತ್ರಿಕಾ ಪ್ರತಿನಿಧಿಗಳಲ್ಲಿ ಸೌ|| ಹಂಸದೇವಿಯವರು ಹೀಗೆ ಹೇಳಿದರು—

"ಹೆಣ್ಣುಮಕ್ಕಳಿಗೆ ಶಿಕ್ಷಣವೇಕೆ? ಎಂದು ಇನ್ನೂ ಬಹು ಜನರು ಕೇಳುತ್ತಿದ್ದಾರೆ. ಹುಡುಗರಿಗೆ ಶಿಕ್ಷಣವನ್ನು ಕೊಡಬೇಕಾದುದು ತಮ್ಮ ಕರ್ತವ್ಯವೆಂದು ಪಾಲಕರೂ ಸರಕಾರದವರೂ ತಿಳಿದುಕೊಂಡಂತೆ ಹುಡುಗಿಯರಿಗೆ ಶಿಕ್ಷಣವನ್ನು ಕೊಡುವುದು ತಮ್ಮ ಕರ್ತವ್ಯವೆಂದು ಇನ್ನೂ ತಿಳಿದುಕೊಂಡಿಲ್ಲ.

ಸ್ತ್ರೀಯರಿಗೆ ಬೇರೆಯಾದ ಶಿಕ್ಷಣವೇ ಬೇಕು. ಹೀಗಿದ್ದರೂ ಈಗಿರುವ ಶಿಕ್ಷಣವಾದರೂ ಅವರಿಗೆ ದೊರೆಯಬಾರದೆ? ಬಾಲ್ಯ ಶಿಕ್ಷಣವನ್ನು ಹುಡುಗ ಹುಡುಗಿಯರು ಕೂಡಿಯೇ ಹೊಂದಲು ಅಡ್ಡಿಯಿಲ್ಲ. ಆದರೆ ಪ್ರೌಢ ಶಿಕ್ಷಣವನ್ನು ಬೇರೆ ಬೇರೆಯಾಗಿಯೇ ಇದ್ದು ಹೊಂದುವುದು ಒಳ್ಳೆಯದು.

ಸ್ತ್ರೀಯರು ಆರ್ಥಿಕ ದೃಷ್ಟಿಯಿಂದ ಸ್ವಾವಲಂಬಿಗಳಾಗುವುದು ಅತ್ಯಗತ್ಯವಾಗಿದೆ. ಆದುದರಿಂದ ಕೈಗಾರಿಕೆಯ ಶಿಕ್ಷಣವೂ ಅವರಿಗೆ ಬೇಕು. ಸರಕಾರಿ ಅಧಿಕಾರಗಳೂ ಅವರಿಗೆ ದೊರೆಯಬೇಕು. ಈಗಿನ ಶಿಕ್ಷಣದಲ್ಲಿ ಸಂಗೀತವನ್ನೂ ಸೇರಿಸಿ ಅದರಲ್ಲಿಯೂ ಪದವಿಯನ್ನು ಕೊಡುವಂತೆ ವಿಶ್ವ ವಿದ್ಯಾಪೀಠದಲ್ಲಿ ನಾನು ಒಂದು ಗೊತ್ತುವಳಿಯನ್ನು ತರುವವಳಿದ್ದೇನೆ."

ಹೀಗೆ ಹೆಣ್ಣುಮಕ್ಕಳೇ ತಮ್ಮ ಕಣ್ಣಿಂದ ತಮ್ಮ ಹಿತಾಹಿತಗಳನ್ನು ಕಂಡುಕೊಳ್ಳಲು ರಾಜಕಾರಣದಲ್ಲಿಯೂ ಅವರಿಗೆ ತುಂಬಾ ಅವಕಾಶವಿರಬೇಕಲ್ಲವೆ?

## ಶರಣಮ್ಮನ ಹೇಳಿಕೆ.

ಬಿಶಪ್ ಅಲ್ಮಾ ವ್ಹಾಯಿಟ್ ಎಂಬ ೭೫ ವರ್ಷ ವಯಸ್ಸಿನ ಒಬ್ಬ ಅಮೇರಿಕೆಯ ಧರ್ಮೋಪದೇಶಕಳು "ಫಿಲರ್ ಆಫ್ ಫಾಯರ್" ಎಂಬ ಅಂತರ ರಾಷ್ಟ್ರೀಯ ಧಾರ್ಮಿಕ ಸಂಸ್ಥೆಯ ಚಾಲಕಳು. ಈಗ ಜಗತ್ತಿನ ಕ್ರೈಸ್ತ ಸಮಾಜದಲ್ಲಿ ಇವಳೊಬ್ಬಳೇ ಶರಣಮ್ಮನು. ಈ ಅಮ್ಮನು ಜಗತ್ತಿನ ನಾನಾ ಭಾಗಗಳಲ್ಲಿ ೪೫ ಸಾವಿರ ಮೈಲು ಪ್ರವಾಸಮಾಡಿ ತನಗೆ ಬಂದ ಅನುಭವವನ್ನು ಕುರಿತು ಲಂಡನ್ನಿನ ಪತ್ರಿಕಾ ಪ್ರತಿನಿಧಿಗಳಲ್ಲಿ ಹೀಗೆ ಹೇಳಿದಳು.

### ಅನೀತಿಯ ಪ್ರಚಾರ.

ಈಗ ಜಗತ್ತಿನಲ್ಲ ಅನೀತಿಯು ಹೆಚ್ಚುತ್ತಾಯಿದೆ. ತರುಣ ತರುಣಿಯರು ಸ್ವೇಚ್ಛೆಯಿಂದಿರುವ ಕಡೆಗೇನೇ ಹೆಚ್ಚು ಒಲವು. ಅನೇಕ ಕಡೆ ಅನೀತಿಯನ್ನು ಸ್ತುತಿಸುವುದೂ ಪ್ರಾರಂಭವಾಗಿದೆ. ಅಮೇರಿಕೆಯ ತರುಣಿಯರಲ್ಲಿ ಸ್ವೇಚ್ಛಾಚಾರವು ಹೆಚ್ಚು. ಮನೆಯಲ್ಲಿ ಯೋಗ್ಯ ಶಿಕ್ಷಣ ದೊರೆಯುವುದಿಲ್ಲ. ಹೊರಗಿನ ವಾತಾವರಣವೂ ಪ್ರತಿಕೂಲವಾದುದು. ಪ್ರಾರ್ಥನಾ ಮಂದಿರಗಳು ನಾಟಕ ಶಾಲೆಗಳಂತೆ ಮನೋರಂಜನೆಯ ಸ್ಥಳಗಳಾಗುತ್ತ ನಡೆದಿವೆ.

ಈ ವರೆಗೂ ಸ್ತ್ರೀಯರು ಪುರುಷರ ಅತ್ಯಾಚಾರಗಳಿಗೆ ಬಲಿಗಾಗುತ್ತಿದ್ದರು. ಈಗಲಾದರೋ ಸ್ತ್ರೀಯರೇ ತಮ್ಮ ವ್ಯಾಮೋಹದಿಂದ ಪುರುಷರನ್ನು ಎಳೆದು ತಮ್ಮ ಮತ್ತು ಅವರ ನಾಶಕ್ಕೆ ಕಾರಣರಾಗುತ್ತಿದ್ದಾರೆ. ಆದುದರಿಂದ ತರುಣಿಯರು ಮನೋನಿಗ್ರಹದ ಕಡೆಗೆ ಲಕ್ಷಿಸುವುದು ಅಗತ್ಯವಾಗಿದೆ. ಇವರು ಪುರುಷರಿಗೆ ಉತ್ತೇಜನಗೊಳಿಸದಿದ್ದರೆ ಜಗತ್ತಿನ ಪಾಪಕೃತ್ಯಗಳಲ್ಲಿ ಅರ್ಧದಷ್ಟು ಕೃತ್ಯಗಳು ಕಡಿಮೆಯಾಗಬಹುದು.

ಸಮಾರಂಭ, ನೃತ್ಯ, ಅಪೂರ್ಣ ಉಡುಪು ಇವು ಪಾಶ್ಚಾತ್ಯ ಸ್ತ್ರೀಯರ ಮುಖ್ಯ ದೋಷಗಳಾಗಿವೆ. ಇವರು ಎಷ್ಟು ಮರ್ಯಾದೆ ಶೀಲಗಳುಳ್ಳವರಾಗುವರೋ ಅಷ್ಟು ಪುರುಷರೂ ದಾರಿಗೆ ಬರುತ್ತಾರೆ. ಕಳೆದ ವರ್ಷ ನಾನು ಪ್ಯಾಲಿಸ್ಟಾಯಿನ್ ಪ್ರಾಂತಕ್ಕೆ ಹೋಗುತ್ತಿದ್ದಾಗ ಒಂದು ಹಡಗಿನಲ್ಲಿ ಒಬ್ಬ ಹುಡುಗಿಯನ್ನು ನೋಡಿದೆನು. ಅವಳನ್ನು ನೋಡಿದನಂತರ ಪುನಃ ಅವಳ ಕಡೆ ನೋಡುವ ಮನಸೇ ನನಗಾಗಲಿಲ್ಲ. ಸುಮ್ಮನೆ ಇರುವುದೂ ನನ್ನಿಂದಾಗಲಿಲ್ಲ. ಆಗ ಹತ್ತಿರ ಹೋಗಿ "ರಾಣಿಯವರೆ, ನೀವು ಇನ್ನಿಷ್ಟು ಬಟ್ಟೆಯನ್ನು ಉಟ್ಟುಕೊಂಡರೆ ನಿಮಗಾಗುವ ನಷ್ಟವೇನು?" ಎಂದು ಕೇಳಿದೆನು. ಆಗ ನನ್ನ ಮಾತಿನ ಅಭಿಪ್ರಾಯವನ್ನು ತಿಳಿದು ಬೇರೆ ಕಡೆ ಹೋಗಿ ಸರಿಯಾಗಿ ಬಟ್ಟೆಯನ್ನು ಉಟ್ಟುಕೊಂಡು ಬಂದಳು.

ಕಳೆದ ೫೦ ವರುಷಗಳಲ್ಲಿ ಅನೀತಿಯ ಪ್ರಚಾರವು ಹೆಚ್ಚಾಗಿದೆ. ಈಗ ನೃತ್ಯಕ್ಕೆ ವ್ಯಭಿಚಾರದ ಸ್ವರೂಪವು ಬರಲಾರಂಭವಾಗಿದೆ. ನಾವು ಅಮೇರಿಕೆಯಲ್ಲಿ ಎರಡು ಕಡೆ ನಭೋವಾಣಿ ಭವನಗಳನ್ನು ಏರ್ಪಡಿಸಿದ್ದೇವೆ. ಅವುಗಳ ಮೂಲಕ ಜನಾಂಗದ ಅನೀತಿಯನ್ನು ನಿವಾರಣೆಮಾಡಲು ಆಗಾಗ್ಗೆ ಉಪದೇಶಪರವಾದ ಇಂತಹ ಸಂದೇಶಗಳನ್ನೇ ಕೊಡುತ್ತಿದ್ದೇವೆ."

ಹಿಂದುಸ್ಥಾನದ ಸ್ತ್ರೀಯರ ವಿಷಯವಾಗಿ ಸಲ್ಲದ ನಾನಾ ದೋಷಾರೋಪಣೆಗಳನ್ನು ಮಾಡುತ್ತಿರುವ ಮೇಯೋ ಅಮ್ಮನ ದೇಶದಲ್ಲಿ ನಡೆದಿರುವ ನೀತಿಯನ್ನು ಈ ಶರಣಮ್ಮನ ಮಾತಿನಿಂದ ತಿಳಿದುಕೊಳ್ಳಬಹುದಲ್ಲವೆ? ಪಾಶ್ಚಾತ್ಯ ಸ್ತ್ರೀಯರ ಅನುಕರಣವನ್ನು ಮಾಡುವವರು ಎಚ್ಚರಿಕೆಯುಳ್ಳವರಾಗಿರುವುದು ಅಗತ್ಯವಲ್ಲವೆ?

## ೬೩ ಪುರಾತನರ ಜಾತಿಗಳು.

| ಹೆಸರುಗಳು. | ಅವರ ಜಾತಿಗಳು. |
|---|---|
| (೧) ಸೌಂದರನಂಬಿಗಳು. | ಶೈವಬ್ರಾಹ್ಮಣ |
| (೨) ತಿರುನೀಲಕಂಠ ದೇವರು | ಕುಂಬಾರ |
| (೩) ಸಿಂಧು ಬಲ್ಲಾಳನು | ವೇಶ್ಯ |
| (೪) ಎಳೆಮಾಂಡ ಗುಡಿಯಮಾರರು | ಶೂದ್ರ |
| (೫) ಸೇದಿ ರಾಜಯ್ಯನವರು | ಕ್ಷತ್ರಿಯ |
| (೬) ಮೆರಿಮಿಂಡ ದೇವರು | ಶೂದ್ರ |
| (೭) ಅಮರ ನೀತಿಗಳು | ವೇಶ್ಯ |
| (೮) ಇರಿಭಕ್ತರು | |
| (೯) ಏನಾದಿನಾಥರು | ಶೂದ್ರ |
| (೧೦) ಕಣ್ಣಪ್ಪದೇವರು | ಬೇಡ |
| (೧೧) ಕಂಗುಲಿ ಕಲಿಯಾಂಡರು | ಬ್ರಾಹ್ಮಣ |
| (೧೨) ಮಾನಕಂಜರರು | ಕ್ಷತ್ರಿಯ |
| (೧೩) ಅರಿವಾಳ್ತಾಂಡರು | ಶೂದ್ರ |
| (೧೪) ಆನೈನಾರರು | ಗೌಳಿಗ |
| (೧೫) ವಲಘಂಡ ಮೂರ್ತಿಗಳು | ವೈಶ್ಯ |
| (೧೬) ಮುರುಗರು | ಬ್ರಾಹ್ಮಣ |
| (೧೭) ರುದ್ರಪಶುಪತಿಗಳು | ಶೈವಬ್ರಾಹ್ಮಣ |
| (೧೮) ತಿರುನಾಳ್ಪೋವರು | ಚಂಡಾಲ |
| (೧೯) ತಿರುಕುರುಪಿತೊಂಡರು | ಅಗಸ |
| (೨೦) ತಂಡೀಶರು | ಬ್ರಾಹ್ಮಣ |
| (೨೧) ವಾಗೀಶ್ವರರು | ಶೂದ್ರ |
| (೨೨) ಕುಲಚ್ಚರಿಯರು | ಕ್ಷತ್ರಿಯ |
| (೨೩) ಪಿರುಮಳೆಕುರುಂಬರು | ವೈಶ್ಯ |
| (೨೪) ಕರಿಕಾಲಮ್ಮೆ | ವೇಶ್ಯ ಸ್ತ್ರೀ |
| (೨೫) ಆಪ್ಪೂದಿಯಡಿಯಳ್ | ಬ್ರಾಹ್ಮಣ |
| (೨೬) ತಿರುನೀಲನಕ್ಕರು | ಬ್ರಾಹ್ಮಣ |
| (೨೭) ನಮಿನಂದಿಗಳು | ಬ್ರಾಹ್ಮಣ |
| (೨೮) ತಿರುಜ್ಞಾನ ಸಂಬಂಧರು | ಬ್ರಾಹ್ಮಣ |
| (೨೯) ಕಲಿಕಾಮದೇವರು | ಶೂದ್ರ |
| (೩೦) ತಿರುಮೂಲದೇವರು | ಗೌಳಿಗ |
| (೩೧) ನಾಟ್ಯಮುಹತಂಡಿಯವರು | |
| (೩೨) ಅಚ್ಯುತರು | ಶೂದ್ರ |
| (೩೩) ಸೋಮಾಸಿಮಾರರು | ಬ್ರಾಹ್ಮಣ |
| (೩೪) ಸಾಂಖ್ಯನಾರರು | ಶೂದ್ರ |
| (೩೫) ಚಿರುಪುಲಿಯಾಂಡರು | ಬ್ರಾಹ್ಮಣ |
| (೩೬) ಚಿರುತೊಂಡಭಕ್ತರು | ಬ್ರಾಹ್ಮಣ |
| (೩೭) ಚೇರಮರಾಜರು | ಕ್ಷತ್ರಿಯ |
| (೩೮) ಕಲಿಗಣನಾಥರು | ಬ್ರಾಹ್ಮಣ |
| (೩೯) ವೇಳ್ಕೂತರು | ಕ್ಷತ್ರಿಯ |
| (೪೦) ಪಗಲ್ಪೋಳರಾಯರು | ಕ್ಷತ್ರಿಯ |
| (೪೧) ನರಸಿಂಗಮೊನೆಯರು | ಕ್ಷತ್ರಿಯ |
| (೪೨) ಅತಿಭಕ್ತರು | ಶೂದ್ರ |
| (೪೩) ಕಲಿಕಂಭರು | ವೈಶ್ಯ |
| (೪೪) ಕಲಿಯನಾಯನಾರರು | ಗಾಣಿಗ |
| (೪೫) ಕಳಚತ್ತಿಯಾಂಡರು | ಶೂದ್ರ |
| (೪೬) ಐಯಡಿಗಳು | ಕ್ಷತ್ರಿಯ |
| (೪೭) ಕಣಂಬುಲ್ಲನಂಬಿಗಳು | ಶೂದ್ರ |
| (೪೮) ಕಡಪೂರಕಾರಿಗಳು | ಬ್ರಾಹ್ಮಣ |
| (೪೯) ಸೌಂದರಪಾಂಡ್ಯರಾಜರು | ಕ್ಷತ್ರಿಯ |
| (೫೦) ವಾಹಿಲ್ಯರು | ಶೂದ್ರ |
| (೫೧) ಮನೆಯಾಂಡರು | ಶೂದ್ರ |
| (೫೨) ಕುಲಚಂಗರು | ಕ್ಷತ್ರಿಯ |
| (೫೩) ಅಡವಘೆಯಪೆರುಮಾಳರು | ಕ್ಷತ್ರಿಯ |
| (೫೪) ಚಿರುತೊಣೆಯಾಂಡರು | ಶೂದ್ರ |
| (೫೫) ಪೊಗಲ್ತೊಣೆಯಾಂಡರು | ಬ್ರಾಹ್ಮಣ |
| (೫೬) ಕೊಲ್ಲುಲಿಯಾಂಡರು | ಶೂದ್ರ |
| (೫೭) ವಾಹಿಲ್ಯರು | ಬ್ರಾಹ್ಮಣ |
| (೫೮) ಮಂಗಾಯಕ್ಕರಸಿಯರು | ಕ್ಷತ್ರಿಯ ಸ್ತ್ರೀ |
| (೫೯) ನೈಸ ಭಕ್ತರು | ಜೇಡ |
| (೬೦) ಕಳೆಚಂಗಳೆಯರು ಮಾಳೆಯರು | ಕ್ಷತ್ರಿಯ |
| (೬೧) ತಿರುನೀಲಕಂಠಪಾಣರು | ಶಿಂಪಳ |
| (೬೨) ಜಡೆಯನಾರರು | ಶೈವಬ್ರಾಹ್ಮಣ |
| (೬೩) ಯಸ್ಯಜ್ಞಾನಿಯವರು | ಬ್ರಾಹ್ಮಣಸ್ತ್ರೀ |

ಸಂಗ್ರಾಹಕರು:— ರೇವಯ್ಯ ವಿರೂಪಾಕ್ಷಯ್ಯ
ಸ್ಥಾವರಮಠ ಗಲಗಲಿ.

---

—ಶ್ರೀ. ನೆಸ್ವಿಯವರನ್ನು ಅರ್ಥಸಚಿವರಾದ ಶ್ರೀ. ಲಠ್ಠೆಯವರ ಉಪಮಂತ್ರಿಗಳನ್ನಾಗಿ ನಿಯಮಿಸಿದ್ದಾರೆ.

—ಮುಂಬೈ ಪ್ರಾಂತಿಕ ಅಸೆಂಬ್ಲಿ ಕಾಂಗ್ರೆಸ್ ಪಕ್ಷದ ಸಭಾಸದರ ಕಾರ್ಯ ನಿರ್ವಾಹಕ ಮಂಡಲದಲ್ಲಿ ಶ್ರೀ. ಜೋಗ ಇವರೂ ಒಬ್ಬ ಸದಸ್ಯರು.

---

### ವಿಜಾಪುರ ಜಿಲ್ಲೆಯ ಭೀಕರ ಸ್ಥಿತಿ!

ವಿಜಾಪುರ ಜಿಲ್ಲೆಯಲ್ಲಿ ಕಳೆದ ೪-೬ ವರುಷಗಳಿಂದಲೂ ಸರಿಯಾದ ಮಳೆಯಾಗದೆ ಜನರು ದಿನೆ ದಿನೆ ಬಹು ತೊಂದರೆ ಪಡುತ್ತಾ ಇದ್ದಾರಷ್ಟೆ. ಈ ವರುಷ ಈ ಜಿಲ್ಲೆಯ ಅನೇಕ ಸ್ಥಳಗಳಲ್ಲಿ ಈ ವರೆಗೆ ಒಂದೆರಡು ಇಂಚು ಕೂಡಾ ಮಳೆಯಾಗಿಲ್ಲ.

ಮೊದಲು ಮೋಡವಾದರೂ ಮುಸುಕಿ ಮಳೆ ಬರುವ ಆಶೆಯನ್ನುಂಟುಮಾಡುತ್ತಿತ್ತು. ಈಗ ಕಳೆದ ವಾರದಿಂದ ಅಂಥ ಆಶೆಯೂ ಇಲ್ಲ. ಜನರು ಬಹು ನಿರಾಶರಾಗಿದ್ದಾರೆ. ಭೀಕರ ಸ್ಥಿತಿ ಬರುವಂತೆ ಕಾಣುತ್ತದೆ. ಜನಗಳಿಗಿಂತಲೂ ದನಗಳ ಗೋಳು ವಿಪರೀತವಾಗಿದೆ. ಈಗಲೇ ಈ ಗತಿಯಾದ ಮೇಲೆ ಮುಂದೆ ಈ ಭಾಗದಲ್ಲಿ ದನಗಳ ಜೋಪಾನವು ಅಶಕ್ಯವೇ ಸರಿ.

—ಮುಂಬೈ ಪ್ರಾಂತಿಕ ಶಾಸನಮಂಡಲದಲ್ಲಿರುವ ಮುಸ್ಲಿಂ ಲೀಗಿನ ಸಭಾಸದರು ಕಳೆದ ವಾರ ಮುಂಬೈಯಲ್ಲಿ ಸೇರಿದ್ದರು. ಬ್ಯಾ. ನೂರಿ ಇವರನ್ನು ಮಂತ್ರಿಮಂಡಲದಲ್ಲಿ ತೆಗೆದುಕೊಂಡದ್ದರಿಂದ ಖೇರ ಮಂತ್ರಿಮಂಡಲದ ಧೋರಣವನ್ನು ನಿಷೇಧಿಸಿ ಅದಕ್ಕೆ ಗವ್ಹರ್ನರರು ಒಪ್ಪಿಗೆಕೊಟ್ಟದ್ದರಿಂದ ಅವರ ಕೃತಿಯನ್ನೂ ನಿಷೇಧಿಸಿದರು.

ಈ ನಿಷೇಧವನ್ನು ವ್ಯಕ್ತಗೊಳಿಸಲು ಗವ್ಹರ್ನರರ ಭಾಷಣವು ಶಾಸನಮಂಡಲದಲ್ಲಿ ನಡೆದಾಗ ಮುಸ್ಲಿಂ ಲೀಗ ಸಭಾಸದರು ಹೊರಟುಬರಬೇಕೆಂತಲೂ ಅವರ ಸನ್ಮಾನಾರ್ಥವಾದ ಯಾವ ಔತಣದಲ್ಲಿಯೂ ಭಾಗವಹಿಸಕೂಡದೆಂತಲೂ ನಿರ್ಣಯಿಸಿದರು.

—ಮದ್ರಾಸ ಸರಕಾರದವರು ಒಂದು ಕೋಟಿ ರೂ. ಗಳನ್ನು ಸಾಲ ತೆಗೆಯಲು ಹಿಂದುಸ್ಥಾನ ಸರಕಾರವು ಒಪ್ಪಿಗೆ ಕೊಟ್ಟಿದೆ.

## ಶಿ ರ ಸಿ.

ಇಲ್ಲಿಯ ಉಣ್ಣೀಮಠದಲ್ಲಿ ಶ್ರೀಮನ್ನಿರಂಜನ ಶ್ರೀ ಗುರುಸಿದ್ಧ ಸ್ವಾಮಿಗಳವರ ಸನ್ನಿಧಿಯಲ್ಲಿ "ಸದ್ಧರ್ಮ ದೀಪಿಕೆ" ಯ ಸಂಪಾದಕರಾದ ಶ್ರೀಯುತ ಚನಮಲ್ಲಪ್ಪನವರು ಶಿರಿಯಾಳಕೊಪ್ಪ ಇವರಿಂದ ದಿನಂಪ್ರತಿ ಸಾಯಂಕಾಲ ಪ್ರವಚನ ವ್ಯಾಖ್ಯಾನಗಳು ಜರುಗುತ್ತಿದ್ದು ಮತ ಮತಾಂತರದವರು ಬಂದು ಕೇಳಿ ತಮ್ಮ ಆನಂದವನ್ನು ವ್ಯಕ್ತಮಾಡುತ್ತಲಿದ್ದಾರೆ. ಇದು ಒಳ್ಳೇ ಸ್ತುತ್ಯವೂ ಅಭಿನಂದನೀಯವೂ ಆಗಿದೆ.

ಸಂಗಮೇಶ್ವರ ದೊಣ್ಣೀಮಠ
ಶಿರಸಿ.

---



## ವಿ ಜ್ಞಾ ಪ ನೆ.

ಹರಪನಹಳ್ಳಿ ವೀರಶೈವ ವಿದ್ಯಾರ್ಥಿನಿಲಯದ ಪ್ರವೇಶೋತ್ಸವವು ಮ|| ರಾ|| ಶ್ರೀ ವೈ. ಮಹಾಬಲೇಶ್ವರಪ್ಪ ಹಾಸ್ಟಲ ಕಮಿಟಿ ಮತ್ತು ಜಿಲ್ಲಾ ಬೋರ್ಡು ಪ್ರಸಿಡೆಂಟರು ಇವರ ಅಧ್ಯಕ್ಷತೆಯಲ್ಲಿ ತಾ|| ೨೮-೮-೩೭ ಶ್ರಾವಣ ಬ|| ೭ ಶನಿವಾರ ಸಾಯಂಕಾಲ ೩ ಘಂಟೆಗೆ ನಡೆಸಲ್ಪಡುತ್ತದೆ.

ವೇ|| ಡಾಕ್ಟರು ಯಸ್. ಸಿ. ನಂದಿಮಠ ಯಂ. ಎ. ಪಿ. ಹೆಚ್. ಡಿ. (ಲಂಡನ್) ಪ್ರಿನ್ಸಿಪಾಲ್ ಶ್ರೀ ಲಿಂಗರಾಜ ಕಾಲೇಜು ಬೆಳಗಾವಿ ಇವರ ಸುಹಸ್ತದಿಂದ ವಿದ್ಯಾರ್ಥಿನಿಲಯದ ಪ್ರವೇಶವು ಪ್ರಾರಂಭಿಸಲ್ಪಡುವುದು.

ತಾವು ದಯಮಾಡಿಸಿ ಈ ಉತ್ಸವವನ್ನು ಜಯಪ್ರದವಾಗುವಂತೆ ಮಾಡಬೇಕೆಂದು ವಿನಂತಿ.

ತಮ್ಮ ಆಗಮನಾಭಿಲಾಷಿಗಳು,
ಟಿ. ಯಂ. ಪಂಚಾಕ್ಷರಯ್ಯ.
ಹೆಚ್. ಯಂ. ಶಿದ್ಧಲಿಂಗಯ್ಯ,
ಕಾರ್ಯದರ್ಶಿಗಳು.

ಅಖಿಲ ಕರ್ನಾಟಕದಲ್ಲಿ ಪ್ರಸಿದ್ಧವಾದ

ರಾಷ್ಟ್ರೀಯ ಕಂಪನಿಯೆಂದರೆ

ಇದೊಂದೇ.

# ದಿ ಸ್ವರಾಜ್ಯ ಬ್ಯಾಂಕಿಂಗ ಮತ್ತು ಇನ್ಸುರನ್ಸ ಕಂ. ಲಿ.

# ಧಾರವಾಡ.

| ಚೇರಮನ್ | ವ್ಹಾಯಿಸ್ ಚೇರಮನ್ |
| --- | --- |
| ದೇಶಭಕ್ತ ಶ್ರೀಯುತ ಎಸ್. ಕೆ. ಹೊಸಮನಿ | ಶ್ರೀಯುತ ವ್ಹಿ. ಬಿ. ಹಾಲಭಾವಿ |
| B. A. LL. B. M. L. A. | B. A. LL. B. ರಿಟಾಯರ್ಡ |
| ಪ್ರೆಸಿಡೆಂಟ ಕೆ. ಪಿ. ಸಿ. ಸಿ. | ಫರ್ಸ್ಟ ಕ್ಲಾಸ್ ಸಬ್ ಜಜ್ಜ ಧಾರವಾಡ. |

| ಭವಿಷತ್ಕಾಲದ ಜೀವಿತದ ನಿರ್ವಾಹಕ್ಕೆ | ಈ ಕಂಪನಿಯನ್ನು ಕೇವಲ ರಾಷ್ಟ್ರೋನ್ನತಿಗಾಗಿ | ತೊಂದರೆಯಿಲ್ಲದ ಒತ್ತಾಯದ ಉಳಿತಾಯ |
| --- | --- | --- |

ಸ್ಥಾಪಿಸಿರುವರು.

## ರೂ. ೫೦೦ ರಿಂದ ರೂ. ೫೦೦೦ ಗಳ ವರೆಗೆ ಜೀವ ವಿಮಾ ಪಾಲಿಸಿಗಳು.

ಉದಾರ ಶರ್ತಿನ ಪಾಲಿಸಿಗಳು ! ಮಿತವ್ಯಯದ ಆಡಳಿತ ! ! ಸುಲಭವಾದ ಕಂತಗಳು ! ! !

ಈ ಕಂಪನಿಯವರು ಕಾರ್ಯ ಕುಶಲತೆಯಿಂದ ನಾನಾ ಎಂಬುವ ಕಂಪನಿಗಳಿಗೂ ಮುಂದೆ ಇದ್ದಾರೆ. ಸ್ಥಾಪಿಸಿದ ಎರಡೇ ವರ್ಷಗಳಲ್ಲಿ ಇಷ್ಟು ಪ್ರಗತಿಯನ್ನು ಮಾಡಿ ತೋರಿಸಲಿಕ್ಕೆ ಉಜ್ವಲ ದೇಶಭಕ್ತರೂ, ಸುಪ್ರಸಿದ್ಧರೂ, ಲೋಕಪ್ರಿಯರೂ, ವಿಮೆಯ ವ್ಯವಹಾರದಲ್ಲಿ ನುರಿತ ಪರಿಪಕ್ವ ಬುದ್ಧಿಯುಳ್ಳವರೂ ಇರುವ ಬೋರ್ಡಿನ ಡಾಯರೆಕ್ಟರರ ಆಡಳಿತೆಯೇ ಕಾರಣ. ಗೌರವದ ಕನ್ನಡಿಗ ವಿಮೇಚ್ಛುಗಳು ತಮ್ಮ ಹಿತವನ್ನೊಳಗೊಂಡ ಕರ್ನಾಟಕ ಮಾತೆಯ ಈ ತರಹದ ಸೇವೆಗಾಗಿ ತಮ್ಮ ಬೆಂಬಲವನ್ನೀಯುವರೆಂದು ತುಂಬಾ ನಂಬಿರುವೆವು.

### ಎಲ್ಲ ಕಡೆಯಲ್ಲಿಯೂ ಕುಶಲ ಏಜಂಟರು ಬೇಕು.

The Manager.

ಮುದ್ದಾದ ಅಕ್ಷರ! ಸುಲಭ ದರ!

## ಶ್ರೀ ರಂಗನಾಥ ಟೈಪ್ ಫೌಂಡರಿ

ಬೆಂಗಳೂರು.

ಕನ್ನಡ ಮತ್ತು ಇಂಗ್ಲಿಷ, ಎಲ್ಲಾ ತರದ ಟೈಪುಗಳೂ ಒಳ್ಳೊಳ್ಳೇ ಬಾರ್ಡರಗಳೂ ನಮ್ಮ ಫೌಂಡರಿಯಲ್ಲಿ ತಯಾರಾಗುತ್ತವೆ.

ಒಳ್ಳೇ ಮೆಟಲ್. ಬಹು ಅಂದವಾದ ಅಕ್ಷರಗಳು. ಬಲು ಸುಲಭ ದರ. ಕ್ಯಾಟಲಾಗ ತರಿಸಿಕೊಳ್ಳಿರಿ. ಒಮ್ಮೆ ಟೈಪುಗಳನ್ನು ತರಿಸಿಕೊಂಡು ಅನುಭವ ಹೊಂದಿರಿ. ಹಳೆ ಟೈಪುಗಳಿದ್ದರೆ ಸುಲಭ ಚಾರ್ಜಿಗೆ ಹೊಸದಾಗಿ ಹೊಯಿದು ಕೊಡುತ್ತೇವೆ.

ಪ್ರೊಪ್ರೈಟರ,
ಶ್ರೀ ರಂಗನಾಥ ಟೈಪ್ ಫೌಂಡರಿ
೬೭ ಕುಬೇರ. ಸಾಹುಜಿ ಲೈನ್
ಚಿಕ್ಕಪೇಟೆ, ಬೆಂಗಳೂರು ಸಿಟಿ.

ನಮ್ಮಲ್ಲಿ ಫೋಟೋ, ಲೈನ್ ಬ್ಲಾಕುಗಳು, ಹಿತ್ತಾಳೆ ಮತ್ತು ಸೀಸದ ಬ್ಲಾಕುಗಳು, ಅರಗಿನ ಸೀಲು ಜವಾನರ ಬಿಲ್ಲೆಗಳು, ರಬ್ಬರ್ ಮೊಹರುಗಳು, ದೇವರ ೩ ಬಣ್ಣದ ಪಠಗಳು, ಕ್ಯಾಲೆಂಡರುಗಳು ನಿಮ್ಮ ಮನ ಒಪ್ಪುವಂತೆ ತಯಾರಾಗುತ್ತವೆ.

ಓಂ

# ಶರಣ ಸಂದೇಶ.

## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೩೦ ನೆಯ ಅಗಸ್ಟ ೧೯೩೭. | ಸಂಚಿಕೆ ೨

## ಮಹತ್ವದ ಸುದ್ದಿಗಳು.

—ಬೆಳಗಾವ ಜಿಲ್ಲಾ ಲೋಕಲ್ ಬೋರ್ಡಿನಲ್ಲಿ ಲೋಕಲ್ ಫಂಡ್ ಅರ್ಧ ಆಣೆ ಕಡಿಮೆ ಮಾಡಬೇಕೆಂದೂ ಬೋರ್ಡಿನವರ ಶಾಲೆಗಳಲ್ಲೆಲ್ಲಾ ವಂದೇ ಮಾತರಂ ಗೀತೆಯನ್ನು ಹೇಳಬೇಕೆಂದೂ ಗೊತ್ತಾಯಿತು.

—ಮುಂಬೈಯಲ್ಲಿಯ ನಾಲ್ಕು ಜನ ಪಠಾಣರು ಮೂರು ಹುಡುಗರನ್ನು ಓಡಿಸಿಕೊಂಡು ಪುಣೆಗೆ ತೆಗೆದುಕೊಂಡು ಬಂದಿದ್ದಾರೆಂದು ಗೊತ್ತಾಗಿದೆ. ಹುಡುಗಿಯರಂತೆ ಹುಡುಗರನ್ನು ಓಡಿಸಿಕೊಂಡು ಹೋಗುವುದೂ ಪ್ರಾರಂಭವಾಗಿದೆ.

—ಮುಂಬೈ ಇಲಾಖೆಯಲ್ಲಿ ಪ್ರತಿವರುಷ ೭-೮ ಲಕ್ಷ ಜನರು ನಾರುಬೇನೆಯಿಂದ ಬಳಲಿ ೨-೩ ತಿಂಗಳು ಉದ್ಯೋಗವಿಲ್ಲದೆ ತೊಂದರೆಪಡುತ್ತಿದ್ದಾರೆಂತಲೂ ಈ ರೋಗ ನಿವಾರಣೆಗಾಗಿಯೇ ಸಾರ್ವತ್ರಿಕವಾದ ಪ್ರಯತ್ನ ನಡೆಯಬೇಕೆಂತಲೂ ಯೋಚಿಸಿ ಈ ರೋಗ ಪ್ರತಿಬಂಧದ ಪ್ರಯತ್ನಕ್ಕಾಗಿ ಪುಣೆಯಲ್ಲಿ ಒಂದು ಸಂಘವು ಏರ್ಪಟ್ಟಿದೆ.

—ಸೇಲಂ ಜಿಲ್ಲೆಯಲ್ಲಿ ಮಾದಕ ಪದಾರ್ಥ ವಿಕ್ರಯವನ್ನು ನಿಲ್ಲಿಸಲು ಆರಂಭಿಸಿದ್ದಾರೆ. ಈಗ ಗಾಂಜಿ ಮತ್ತು ಅಫಿಮುಗಳ ವಿಕ್ರಯವನ್ನು ಕಡಿಮೆ ಮಾಡಲು ಪ್ರಾರಂಭಿಸಿದ್ದಾರೆ.

—ಮೌಲಾನಾ ನಜಿಮುದ್ದೀನ ಇವರು ಗೋವಧೆಯನ್ನು ಮತ್ತು ಜಾತ್ರೆಯಲ್ಲಾಗುವ ಪಶು ಹಿಂಸೆಯನ್ನು ನಿಲ್ಲಿಸಲು ಮಹಾರಾಷ್ಟ್ರದಲ್ಲಿ ಸಂಚರಿಸುತ್ತಾ ವ್ಯಾಖ್ಯಾನಗಳನ್ನು ಕೊಡುತ್ತಿದ್ದಾರೆ.

—ಮಧ್ಯಪ್ರಾಂತ ಸರಕಾರವು ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳ ಚುನಾವಣೆಯ ಅವಧಿಯನ್ನು ಮುಂದಕ್ಕೆ ಹಾಕಿತು.

—ಇಂಗ್ಲೆಂಡಿನ ರಾಜಸಿಂಹಾಸನವನ್ನು ತ್ಯಾಗಮಾಡಿದ ಡ್ಯೂಕ್ ಆಫ್ ವಿಂಡಸರ್ ಇವರಿಗೆ ಆಸ್ಟ್ರಿಯಾ ದೇಶದ ರಾಜಪಟ್ಟವನ್ನು ಅಲ್ಲಿಯವರು ಕೊಡಲು ಇಚ್ಛಿಸಿದರು. ಆದರೆ ಡ್ಯೂಕ್ ಆಫ್ ವಿಂಡಸರರು ತಮಗೆ ರಾಜಕಾರಣವೇ ಬೇಕಿಲ್ಲವೆಂದು ಕೃತಜ್ಞತಾಪೂರ್ವಕ ಅದನ್ನು ನಿರಾಕರಿಸಿದರು.

— ಅಹಮ್ಮದನಗರ ವೀರಶೈವ ತರುಣಸಂಘದ ಕಾರ್ಯಾಲಯದಲ್ಲಿ ಅಲ್ಲಿಯ ಮುದ್ರಣ ಯಂತ್ರದ ಕೆಲಸಗಾರರ ಸಭೆಯು ಸೇರಿ ತಮ್ಮ ಉನ್ನತಿಗಾಗಿ ಒಂದು ಸಂಘವನ್ನು ಸ್ಥಾಪಿಸಿಕೊಂಡರು.

—ಮದ್ರಾಸ್ ಕಾರ್ಪೋರೇಶನ್ನಿನ ಮೇಲೆ ರಾಷ್ಟ್ರೀಯ ಧ್ವಜವನ್ನು ಇರಿಸಬೇಕೆಂದು ಬಹುಮತದಿಂದ ನಿರ್ಣಯವಾಯಿತು.

—ಡಾ. ಪರಾಂಜಪೆಯವರು ತಾವು ಹುಟ್ಟಿದ ಮುರ್ಡಿ ಎಂಬ ಗ್ರಾಮದಲ್ಲಿ ಪ್ರಾಥಮಿಕ ಶಿಕ್ಷಣವನ್ನು ಉಚಿತವಾಗಿಯೂ ಒತ್ತಾಯವಾಗಿಯೂ ಕೊಡಲು ಹತ್ತು ಸಾವಿರ ರೂ. ಗಳನ್ನು ಸರಕಾರದ ಕಡೆಗೆ ಕೊಟ್ಟಿದ್ದರು. ಸರಕಾರವು ಅಲ್ಲಿಯ ಶಿಕ್ಷಣ ವೆಚ್ಚದ ಮೂರನೆಯ ಎರಡು ಭಾಗವನ್ನು ಮಾತ್ರ ತಾನು ವಹಿಸಬೇಕೆಂದು ತಿಳಿಸಿದ್ದರು. ಇವರ ಇಷ್ಟದಂತೆ ಈಗಿನ ಮಂತ್ರಿಮಂಡಲವು ಕಾರ್ಯವನ್ನು ಪ್ರಾರಂಭಿಸಲು ಒಪ್ಪಿದೆ.

—ಸಂಯುಕ್ತ ಪ್ರಾಂತದ ಮುಖ್ಯ ಮಂತ್ರಿಗಳ ಕಡೆಗೆ ಪ್ರತಿನಿತ್ಯ ಸಾಧಾರಣ ೩೦೦ "ತಕರಾರಿ ಅರ್ಜಿ" ಗಳು ಬರುತ್ತಲಿವೆಯಂತೆ.

—ರಶಿಯಾ ಸರಕಾರದ ಮದ್ದುಗುಂಡಿನ ಶಾಖೆಯಲ್ಲಿ ಅವುಗಳನ್ನು ಕೆಡಿಸುವ ಉದ್ದೇಶದಿಂದ ಸೇರಿದ್ದರೆಂಬ ಅಪರಾಧಕ್ಕಾಗಿ ಎಂಟು ಜನರಿಗೆ ಮರಣದ ಶಿಕ್ಷೆಯಾಯಿತು.

—ಮಧ್ಯ ಪ್ರಾಂತದ ಮುಖ್ಯ ಮಂತ್ರಿಗಳಾದ ಡಾ. ಖರೆ ಇವರು ಈ ಮುಂಚೆ ಸರಕಾರದಿಂದ ಪ್ರತಿಬಂಧಗೊಳಿಸಲ್ಪಟ್ಟಿದ್ದ ಪುಸ್ತಕಗಳಲ್ಲಿ ೫ ಪುಸ್ತಕಗಳಮೇಲಿರುವ ಪ್ರತಿಬಂಧವನ್ನು ನಿವಾರಣೆಮಾಡಿದರು.

—ಪುಣೆ ಜಿಲ್ಲೆಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ಒತ್ತಾಯವಾಗಿ ಕೊಡಲು ಅನುಕೂಲವಾಗುವಂತಹ ಸೌಲಭ್ಯವನ್ನು ಜಿಲ್ಲಾ ಲೋಕಲ್ ಬೋರ್ಡಿನವರು ಉಂಟುಮಾಡಬೇಕೆಂದು ಆ ಜಿಲ್ಲೆಯ ಲೋಕಲ್ ಬೋರ್ಡಿನಲ್ಲಿ ಒಂದು ತೀರ್ಮಾನವಾಯಿತು.

—ಅಂದಮಾನದಲ್ಲಿರುವ ರಾಜಕೈದಿಗಳನ್ನು ಆಯಾಯ ಪ್ರಾಂತದವರು ತಮ್ಮ ತಮ್ಮ ಪ್ರಾಂತಗಳಿಗೆ ಕರೆಯಿಸಿಕೊಳ್ಳಲು ಹಿಂದುಸ್ಥಾನ ಸರಕಾರವು ಒಪ್ಪಿತು.

## ಕಾಂಗ್ರೆಸ್ಸಿನ ಅಧಿಕಾರ ಸ್ವೀಕಾರ.

### ಸರ್. ರಾಧಾಕೃಷ್ಣನ್ ಇವರ ಅಭಿಪ್ರಾಯ.

ಸರ್. ರಾಧಾಕೃಷ್ಣನ್‌ರವರು ಜಗತ್ಪ್ರಸಿದ್ಧರಾದ ಭಾರತೀಯ ತತ್ವಜ್ಞಾನಿಗಳಷ್ಟೆ. ಇವರು ಪೌರ್ವಾತ್ಯ ಮತ್ತು ಪಾಶ್ಚಾತ್ಯರಲ್ಲಿ ಸಂಸ್ಕೃತಿಯ ಸಂಬಂಧವನ್ನು ಹೆಚ್ಚಿಸುವವರು. ಇವರು ಹೀಗೆ ಅಭಿಪ್ರಾಯಪಟ್ಟಿದ್ದಾರೆ—

"ಇಷ್ಟು ನಿಜ; ಪೂರ್ವವೂ ಪಶ್ಚಿಮವೂ ತಮ್ಮ ಹಳೆಯ ಜಾಡನ್ನು ಬಿಟ್ಟು ಒಂದು ಹೊಸ ಮಾದರಿಯ ಆಲೋಚನೆಗೆ ಮನಸೋತು ಸಾಗುತ್ತಿವೆ. ಇದೇ ಮುಂದಿನ ಮಾನವರ್ಗದ ಏಳಿಗೆಯ ದಾರಿಯನ್ನುಬಹುದು. ಭಾರತವು ಪಾಶ್ಚಿಮಾತ್ಯರ ಆದರ್ಶ ನಕ್ಷತ್ರವಾಗಬಹುದು. ಲಂಡನ್ ಮತ್ತು ಕೇಂಬ್ರಿಡ್ಜ ಇವೂ ಪೌರ್ವಾತ್ಯ ವಿದ್ಯಾ ಸಂಸ್ಕೃತಿಗಳ ರಕ್ಷ ಪೀಠಗಳಾಗಬಹುದು.

ಈಗ ಭಾರತದ ಪರಿಸ್ಥಿತಿಗಳನ್ನು ಕುರಿತು ಒಂದು ಮಾತನ್ನು ಧೈರ್ಯವಾಗಿ ಹೇಳಬಹುದು. ಕಾಂಗ್ರೆಸ್ ಅಧಿಕಾರವನ್ನು ಸ್ವೀಕರಿಸಿದ ಸುದ್ದಿ ನನ್ನ ಕಿವಿಯನ್ನು ಮುಟ್ಟದೊಡನೆಯೇ ನಾನು ಆನಂದದಲ್ಲಿ ತೇಲಿಹೋದೆನು. ನಾನು ಅವರಿಗೆ ಹೃತ್ಪೂರ್ವಕವಾದ ಸ್ವಾಗತವನ್ನು ಬಯಸುತ್ತೇನೆ. ಕಾಂಗ್ರೆಸ್ಸಿನಲ್ಲಿ ಅಧಿಕಾರ ಸ್ವೀಕಾರ ವಿರೋಧಿಗಳು ಇನ್ನೂ ಇದ್ದಾರು, ಆದರೆ ದೇಶದ ಸೇವಕನಿಗೆ ಇಲ್ಲೂ ಅವಕಾಶವಿದೆ, ದೇಶವನ್ನು ಉದ್ಧಾರಮಾಡುವುದು ಒಂದು ಉತ್ತಮವಾದ ಮಾರ್ಗವೇನೋ ಹೌದು. ಆದರೆ ಅದು ನಾಶವಾಗದಂತೆ ನೋಡಿಕೊಳ್ಳುವುದೂ ಅತ್ಯವಶ್ಯಕ ಮಾರ್ಗ. ಎರಡೂ ಮುಖ್ಯವೇ. ಕಾಂಗ್ರೆಸ್ ದೇಶವನ್ನು ಹಿತವಾಗಿ ಆಳಲು ಶಕ್ತ ಎಂಬುದು ನನ್ನ ಅಭಿಪ್ರಾಯ. ಬ್ರಿಟಿಷ್ ಪ್ರಭುತ್ವದವರೂ, ಭಾರತದ ಜನತೆಯೂ ಒಮ್ಮುಖವಾಗಿದ್ದಾರೆಂದು ನಾನು ಹೇಳಬಲ್ಲೆ. ಗಾಂಧೀಜಿಯವರು ತಮ್ಮ ಅನುಯಾಯಿಗಳಿಗೆ ಸೇವೆ ಮತ್ತು ಆತ್ಮ ಯಜ್ಞದ ಬೀಜಮಂತ್ರಗಳನ್ನು ಉಪದೇಶಮಾಡಿದ್ದಾರೆ. ಈಗ ಅವರೆಲ್ಲರೂ ತಮ್ಮ ಕಾರ್ಯನಿರ್ವಾಹದಕ್ಷತೆಯನ್ನು ತೋರಿಸಬಹುದು. ಹಾಕಿಕೊಂಡಿರುವ ಪಟ್ಟಿಯನ್ನು ನಿರಹಂಕಾರದಿಂದ ನಿಷ್ಪಕ್ಷಪಾತದಿಂದ ಕಾಂಗ್ರೆಸ್ ಮಂತ್ರಿಗಳು ಸಾರ್ಥಕಗೊಳಿಸಿದ್ದೇ ಆದರೆ ಅವರು ಭಾರತೀಯ ರಾಜಕೀಯ ಪ್ರಗತಿಯನ್ನುಂಟುಮಾಡಿದಂತಾಗುತ್ತದೆ. ಇದುವರೆಗೂ ಸರಕಾರದ ನೌಕರರೆಲ್ಲರೂ ಭಾರತೀಯರಾದರೂ ಅವರು ಸರಕಾರಿ ನೀತಿಯ ಕೈಗೊಂಬೆಗಳೆನ್ನುವ ಭಾವಕ್ಕೆ ಆಧಾರವಿತ್ತು. ಈಗ ಆ ಭಾವಕ್ಕೆ ಆಳಿಗಾಲಬಂದಿದೆ. ವೃತ್ತಿಗಳಲ್ಲಿರುವವರು ಸರಕಾರದ ಸೇವಕರಾದರೂ ಪ್ರಜಾ ವರ್ಗದ ಸೇವಕರೆನ್ನುವ ಭಾವಕ್ಕೆ ಸರ್ವಸಿದ್ಧತೆಗಳಾಗುತ್ತವೆ. ಸಾವಿರಾರು ಬಗೆಗಳಲ್ಲಿ ಸರಕಾರವನ್ನು ಸಾಮ್ರಾಜ್ಯ ದೃಷ್ಟಿಯಿಂದ ಪ್ರಜಾದೃಷ್ಟಿಯ ಕಡೆಗೆ ಅನುಗೊಳಿಸಲು ಅವಕಾಶವಿದೆ. ಆರಂಭ ಮಂಗಳಕರವಾಗಿದೆ. ಜನತೆಯನ್ನು ಜನತೆಯನ್ನಾಗಿ ಮಾಡಲು ಅವರು ದುಡಿಯುವ ಹಂಬಲನ್ನು ಪ್ರಕಾಶಗೊಳಿಸಿದ್ದಾರೆ.

ಬಾಲಕರಿಗೂ ಬಾಲಕಿಯರಿಗೂ ನಿರ್ಬಂಧ ಶಿಕ್ಷಣ, ಹಳ್ಳಿಹಳ್ಳಿಗಳಿಗೆ ಶೋಧಿತ ಜಲವನ್ನು ಹಂಚುವುದು, ಕಂದಾಯಗಳನ್ನು ಇಳಿಸುವುದು ಮತ್ತ್ರವಶ್ಯಕವಾದ ಕಡೆಗಳಲ್ಲಿ ಉಳಿಸುವುದು, ಮಧ್ಯಮ ವರ್ಗದವರ ನಿರುದ್ಯೋಗ ಸಮಸ್ಯೆಯನ್ನು ಬಗೆಹರಿಸುವುದು ಜಿಟ್ಟದ ತುದಿಯ ತಂಪಿನ ಅರಮನೆಗಳನ್ನು ರದ್ದು ಮಾಡುವುದು ಸಾರ್ವಜನಿಕ ಸೇವಕರ ಸಂಬಳಗಳನ್ನು ಪರಿಶೀಲಿಸುವುದು, ಮದ್ಯಪಾನವನ್ನು ನಿಲ್ಲಿಸುವುದು ಇವೆಲ್ಲಾ ಸಾಧ್ಯವಾಗಬಹುದು.

ಕೋಮುವಾರು ಕೀಟಲೆಯು ಭಾರತದ ವಿನಾಶದ ಮೂಲವಾಗಿದೆ. ಇದು ಹೆಚ್ಚು ಸಂಬಳವನ್ನು ತಿನ್ನುವರ ಮುಖ್ಯ ಕೆಲಸವಾಗಿಬಿಟ್ಟಿದೆ. ಈಗ ಭಾರತೀಯರು ಹಿಂದುಗಳು, ಅಧಿಕಾರ ಸೂತ್ರಗಳನ್ನು ವಹಿಸಿದ್ದಾರೆ. ಇನ್ನಾದರೂ ಈ ಭೂತ ಸತ್ತು ಹೋಗುವುದೆಂದೂ ಸಮತಾದೃಷ್ಟಿ ಉದಯಿಸುವುದೆಂದೂ ಆಶಿಸುತ್ತೇನೆ.

ಈ ಹೆಬ್ಬಯಿಕೆ ಕಾಂಗ್ರೆಸ್ ಮಂತ್ರಿಗಳು ಹೇಗೆ ಈ ವಿಚಾರಗಳಲ್ಲಿ ವರ್ತಿಸುವರೆಂಬ ವಿಮರ್ಶಾದೃಷ್ಟಿ ಕೆಲವರಿಗೆ ಮಿತಿಮೀರಿದೆ. ಇಲ್ಲಿ ಕಾಂಗ್ರೆಸ್ ಗೆದ್ದರೆ ನಾವು ನಮ್ಮ ಸದಾಕಾಂಕ್ಷೆಯನ್ನು ಮುಟ್ಟಿದಂತಾಗುತ್ತದೆಂದು ನನ್ನ ಅಭಿಪ್ರಾಯ. ನನ್ನ ಅಧಿಪತ್ಯವಾದ ಮದರಾಸಿನಲ್ಲಿನ ಗವ್ಹರ್ನರರನ್ನು ನಾನು ಬಲ್ಲೆ. ಈಗಿನ ಪ್ರಧಾನಾಮಾತ್ಯರೂ ನನ್ನ ಸ್ನೇಹಿತರು. ಅವರಿಬ್ಬರೂ ಪರಸ್ಪರ ಸೌಹಾರ್ದದಿಂದ ನಡೆಯುತ್ತಾರೆಂಬ ಭರವಸೆ ನನಗಿದೆ. ಭಾರತದ ಪ್ರಗತಿಯ ಹಾದಿಯು ಮೊದಲಾಗಿದೆ. ಮುಂದುವರಿಯಬೇಕೆಂಬ ಪ್ರಬಲೋತ್ಸಾಹ ನಮಗೆ ಅಷ್ಟು ಇಲ್ಲದಿದ್ದರೂ ಈಗಿನ ಸಂದರ್ಭಗಳು ಚರಿತ್ರೆಯನ್ನು ರಚಿಸಿಕೊಂಡು ಮುನ್ನುಗ್ಗುತ್ತಿವೆ."

—ವಿಶ್ವ ಕರ್ನಾಟಕ.

## ಶ್ರೀ. ಅನ್ನದಾನೇಶ್ವರ ವಿರಕ್ತಮಠರವರಲ್ಲಿ ವಿನಂತಿ.

ತಾವು ಶರಣ ಸಂದೇಶ ಪತ್ರಿಕೆಯ ೧೯-೭-೩೭ ರ ಸಂಚಿಕೆಯಲ್ಲಿ "ಶರಣ ಸಂದೇಶ ವಾಚಕರಲ್ಲಿ ಸೂಚನೆ" ಎಂಬ ಒಂದು ಲೇಖವನ್ನು ಬರೆದದ್ದು ಆದರಲ್ಲಿ ವಾಚಕರಿಗೆ ಈ ಕೆಳಗಿನ ಒಂದು ವಾಕ್ಯವು ಸಂಶಯಕ್ಕೀಡು ಮಾಡತಕ್ಕದ್ದಿದ್ದುದರಿಂದ ಈ ಬರಹದ ಮೂಲಕ ಕೇಳಿಕೊಳ್ಳಬೇಕಾಯಿತು.

"ನನಗೆ ಪಂಚಾಚಾರ್ಯ ಪ್ರಭೆಯ ಎಲ್ಲ ಅಭಿಪ್ರಾಯಗಳು ಸರಿದೋರದಿರುವಂತೆ ಶರಣ ಸಂದೇಶದ ಸಕಲ ಅಭಿಪ್ರಾಯಗಳು ಸರಿದೋರುವದಿಲ್ಲ." ಎಂದು ಬರೆದಿರುವಿರಷ್ಟೆ.

"ಪಂಚಾಚಾರ್ಯ ಪ್ರಭೆಯ ಎಲ್ಲ ವಿಚಾರಗಳು ನನಗೆ ಸರಿದೋರದಿರುವಂತೆ ಶರಣ ಸಂದೇಶದ ಎಲ್ಲ ಅಭಿಪ್ರಾಯಗಳು ನನಗೆ ಸರಿದೋರುವದಿಲ್ಲ" ಎಂಬುದರ ಗುಟ್ಟೇನು ? ಪಂಚಾಚಾರ್ಯ ಪತ್ರಿಕೆಯೇನೋ ಸಿಂಹಾಸನಾಧೀಶರ ಶ್ರೇಷ್ಠತೆಯನ್ನು ಬಸವಪ್ರಭುವಾದಿ ಶರಣರ ವ್ಯಕ್ತಾವ್ಯಕ್ತಹೀಯಾಳಿಕೆಯನ್ನು ಮಾಡುತ್ತಿರುವುದರಿಂದ ಅದು ಸಮಂಜಸವೂ ಅಲ್ಲ. ಸಂದೋರದಿರಲೂ ಅಡ್ಡಿ ಇಲ್ಲ. ಆದರೆ ಯಾವ ವೀರಶೈವ ಸಮಾಜದ (ಬಸವ ತತ್ವದ) ಪ್ರಚಾರಕ್ಕಾಗಿ ಪ್ರಯತ್ನಪಡುತ್ತಿರುವ ಸತ್ಯ ಸತ್ಯಗಳನ್ನು ಬೈಲಿಗಿಡುವ ನಿಷ್ಪಕ್ಷಪಾತ ಬುದ್ಧಿಯ ಶರಣ ಸಂದೇಶದ ಎಲ್ಲ ಮಾತುಗಳು ಸರಿದೋರುವದಿಲ್ಲವೆಂಬುದರ ಇಂಗಿತವೇನು ? "ಇಂತಹ ಕೆಲವು ಅಭಿಪ್ರಾಯಗಳು" ಎಂದಿದ್ದರೆ ಮಾತ್ರ ಯಾವವೋ ಸಾಮಾಜಿಕ ರಾಜಕೀಯಗಳಲ್ಲಿ ಸರಿಯಿರಲಿಕ್ಕಿಲ್ಲವೆಂದು ಗ್ರಹಿಸಬಹುದಾಗಿತ್ತು. ಇಲ್ಲಿ ನಡೆದಿರುವ ಧಾರ್ಮಿಕ ಚರ್ಚೆಯಲ್ಲಿ "ಎಲ್ಲ ಮಾತುಗಳೂ ಸರಿಬರುವದಿಲ್ಲ" ವೆಂಬುದು ಅದು ಪ್ರಚುರಪಡಿಸುತ್ತಿರುವ ಬಸವ ತತ್ವದ ವಿರೋಧ ಭಾವವನ್ನು ವ್ಯಕ್ತಗೊಳಿಸಲಿಚ್ಛಿಸುವಂತೆ ವಾಚಕರೆಲ್ಲರಿಗೆ ಕಾಣಬಹುದಾಗಿದೆ. ತಾವಾದರೋ ಬಸವ ತತ್ವ ಪ್ರಚಾರಕರಲ್ಲೊಬ್ಬರೆಂಬುದು ತಮ್ಮ ಲೇಖನಗಳಿಂದ ತಿಳಿಯಬಹುದಾಗಿದೆ. ಹೀಗಿದ್ದು ಪಂಚಾಚಾರ್ಯ ಪ್ರಭೆಯ ಕೂಡ ಶರಣ ಸಂದೇಶದ ಮೇಲೂ ಹರಿಹಾಯುವದರ ತಾತ್ಪರ್ಯವೇನು ? ಈ ತಮ್ಮ ವಾಕ್ಯವು ಶರಣ ಸಂದೇ

## ಮಹಿಳೆಯರೂ ಮಹಾತ್ಮಾಜಿಯವರೂ.

ಹಿಂದುಮಹಿಳೆಯರ ಸಂಬಂಧವಾಗಿ ಗಾಂಧೀಜಿಯವರು ತಮ್ಮ ಅಭಿಪ್ರಾಯಗಳನ್ನು ಹೀಗೆ ತಿಳಿಸಿದ್ದಾರೆ—

(೧) ಸ್ತ್ರೀಯರು ಕೀಳೆಂಬ ಕಲ್ಪನೆಯು ಹಿಂದುಗಳ ಹೃದಯದಲ್ಲಿ ಅಂಟಿಕೊಂಡುಬಿಟ್ಟಿದೆ. ಇದು ಹಿಂದು ಸಮಾಜದ ಅವನತಿಗೆ ಕಾರಣವಾದುದಾಗಿದೆ. ಈ ಕೀಳು ಕಲ್ಪನೆಯು ಇವರ ಹೃದಯವನ್ನು ವ್ಯಾಪಿಸಿದೆ. ಧಾರ್ಮಿಕ ಪುರುಷರು ಕೂಡಾ ಇದರಂತೆಯೇ ಅನುಸರಿಸುತ್ತಿದ್ದಾರೆ.

(೨) ಸ್ತ್ರೀ ಪುರುಷರ ಜನ್ಮವಿಶಿಷ್ಟ ಭೇದಗಳು ಹೇಗೇ ಇರಲಿ; ಅವರ ವೈಶಿಷ್ಟ್ಯಗಳಂತೆ ಕರ್ತವ್ಯಗಳು ಭಿನ್ನಗಳಾಗಿಯೂ ಹಿತಕರವಾಗಿಯೂ ಇರುತ್ತವೆ. ಆ ದಾಗ್ಯೂ ಇವರೀರ್ವರಲ್ಲಿ ಯಾರೂ ಒಬ್ಬರು ಶ್ರೇಷ್ಠರಲ್ಲ. ಮತ್ತು ಇನ್ನೊಬ್ಬರು ಕೀಳೂ ಅಲ್ಲ. ಇವರೀರ್ವರೂ ಸಮಾನರೇ ಆಗಿದ್ದು ಸಮಾಜದ ಅಂಗವಾಗಿದ್ದಾರೆ.

(೩) ಪುರುಷನು ಒಂದು ರೀತಿಯಿಂದ ಸ್ತ್ರೀ ಜಾತಿಯನ್ನು ಮೂಲೆಗೊತ್ತಿ ಅಜ್ಞಾನ ಸ್ಥಿತಿಯಲ್ಲಿಟ್ಟು ಅವರನ್ನು ನಿಂದಿಸುತ್ತಿದ್ದಾನೆ. ಮತ್ತು ತನ್ನ ಇಚ್ಛೆಗಳನ್ನು ಪೂರ್ತಿಗೊಳಿಸುವ ಒಂದು ಸಾಧನವೆಂದು ತಿಳಿದು ಗೊಂಬೆಯಂದದಿ ಸ್ತ್ರೀಯರನ್ನು ಮನಬಂದಂತೆ ವಸ್ತ್ರಾಭರಣಗಳಿಂದ ಶೃಂಗರಿಸಿ ಆನಂದ ಉಲ್ಹಾಸಗಳನ್ನನುಭವಿಸುತ್ತಾನೆ. ಇದರಂತೆ ಸ್ತ್ರೀಯರಲ್ಲಿ ಸೌಂದರ್ಯದ ಸೊಬಗನ್ನು ಹೆಚ್ಚಿಸುತ್ತಾ ಕಾಲಹರಣಮಾಡುತ್ತಾನೆ. ಇವುಗಳಿಂದ ಸ್ತ್ರೀ ಪುರುಷರೇ ಏಕೆ ಇಡಿ ಸಮಾಜವೇ ಹೀನಸ್ಥಿತಿಗೆ ಹೋಗುತ್ತಾ ಇದೆ.

(೪) ತಂದೆ ತಾಯಿಗಳು (ಪಾಲಕರು) ಸಂರಕ್ಷಣೆ ಮತ್ತು ವಿದ್ಯಾಭ್ಯಾಸಗಳಲ್ಲಿ ಹುಡುಗ ಹುಡುಗಿಯರಲ್ಲಿ ಭೇದವೆಣಿಸಿ ಹುಡುಗಿಯ ಏಳ್ಗೆಗೆ ಅಡ್ಡಿಯನ್ನು ಮಾಡಿದ್ದಾರೆ.

(೫) ಪುರುಷನು ಎಷ್ಟರಮಟ್ಟಿಗೆ ಸ್ವಾತಂತ್ರ್ಯವುಳ್ಳವನಾಗಿದ್ದಾನೆಯೋ ಅಷ್ಟರಮಟ್ಟಿಗೆ ಸ್ತ್ರೀಯಳೂ ಸ್ವಾತಂತ್ರ್ಯವುಳ್ಳವಳಾಗಿದ್ದಾಳೆ. ಸ್ತ್ರೀಯಳು ಅಬಲೆಯಲ್ಲ. ಒಂದು ವೇಳೆ ಅವಳು ತನ್ನ ಶಕ್ತಿಯನ್ನು ತಿಳಿದದ್ದೇ ಆದರೆ ಪುರುಷನಿಗಿಂತಲೂ ಹೆಚ್ಚು ಸಾಮರ್ಥ್ಯವುಳ್ಳವಳಾಗಬಲ್ಲಳು. ಜನನಿಯಾಗಿ ಮಗುವಿನಂತೆ ಸೌಮ್ಯ ಸ್ವಭಾವವುಳ್ಳವಳಾಗಿದ್ದು ಪತ್ನಿಯಳಾಗಿ ತನ್ನ ಪತಿಗೆ ಸಲಹೆಯನ್ನು ಕೊಡುತ್ತಿದ್ದಾಳೆ.

(೬) ಸ್ತ್ರೀ ಜಾತಿಯಿಂದಲೇ ಈ ಸಂಸಾರದಲ್ಲಿ ಧರ್ಮ ರಕ್ಷಣೆಯಾಗುತ್ತದೆ.

(೭) ನಾವು ಸಂಪೂರ್ಣ ಸ್ವರಾಜ್ಯವನ್ನು ಹೊಂದಬೇಕೆಂಬ ಇಚ್ಛೆಯುಳ್ಳವರಾದರೆ ಸ್ತ್ರೀಯರನ್ನು ಮನ್ನಿಸಿ ಅವರನ್ನು ಸುಧಾರಿಸುವುದು ಆದ್ಯ ಕರ್ತವ್ಯವಾಗಿದೆ. ಎಲ್ಲಿಯವರೆಗೆ ಒಬ್ಬ ಹೆಣ್ಣುಮಗಳಾದರೂ ನಮ್ಮ ಇಚ್ಛಾತೃಪ್ತಿಯ ಒಂದು ಸಲಕರಣೆಯಾಗಿ ಇರುತ್ತಾಳೆಯೋ ಅಲ್ಲಿಯವರೆಗೆ ನಾವು ಈ ಪ್ರಪಂಚದಲ್ಲಿ ತಲೆ ತಗ್ಗಿಸಿಕೊಂಡೇ ಇರಬೇಕಾಗುವುದು.

(೮) ಸ್ತ್ರೀಯರನ್ನು ಸುಧಾರಿಸದೆ ಮತ್ತು ಅವರಿಗೆ ಯೋಗ್ಯ ಶಿಕ್ಷಣವನ್ನು ಕೊಡದೆ ಇಲ್ಲಿಯವರೆಗೆ ಯಾವ ರಾಷ್ಟ್ರವೂ ಊರ್ಜಿತ ಸ್ಥಿತಿಯನ್ನು ಹೊಂದಿಲ್ಲ. ಮತ್ತು ಹೊಂದುವುದೂ ಇಲ್ಲ. ಸ್ತ್ರೀಯರಿಗೆ ಸಂಪೂರ್ಣ ಸ್ವಾತಂತ್ರ್ಯ ಕೊಡಬೇಕೆಂಬುದೇ ನನ್ನ ಅಭಿಪ್ರಾಯ. ಸಾಮಾಜಿಕ ದೋಷಗಳನ್ನು ಕಿತ್ತೊಗೆಯಲು ಇಚ್ಛಿಸುತ್ತೇನೆ. ಇದರಿಂದಲೇ ನಮ್ಮ ರಾಷ್ಟ್ರವು ಈ ದುಸ್ಥಿತಿಯಲ್ಲಿದ್ದು ಪರ ರಾಷ್ಟ್ರಗಳ ಪ್ರಭುತ್ವಕ್ಕೊಳಗಾಗಿದೆ. ಬಾಲ್ಯ ವಿವಾಹವನ್ನು ನಾನು ಸಂಪೂರ್ಣ ನಿಷೇಧಿಸುತ್ತೇನೆ.

(೯) ತಾಯಿ ತಂದೆಗಳು ಹೆಣ್ಣು ಹುಡುಗಿಯರೆಂದರೆ ಎರಡನೆಯವರ ಸಂಪತ್ತು ಎಂಬ ತಿಳುವಳಿಕೆಯಿಂದ ಅವರನ್ನು ಲಗ್ನ ಮಾಡಿ ಕೊಟ್ಟುಬಿಡುವುದೊಂದೇ ತಮ್ಮ ಕರ್ತವ್ಯವೆಂದು ತಿಳಿಯುತ್ತಾರೆ. ಇದರಂಥ ಅಯೋಗ್ಯಕರವಾದ ನಡತೆಯು ಇನ್ನಾವದು?

"ಕ್ರಾಂತಿ." ಅನುವಾದಕ,

ಎನ್. ಸಿದ್ಧರಾಮಪ್ಪ ಎಲೇರಿ.

---

## ಹಿಂದೂ ಧರ್ಮ ಪ್ರವಚನ ಸಪ್ತಾಹವು.

ಕಳೆದ ವಾರ ನಂದ್ಯಾಲ ಪಟ್ಟಣದ ಶ್ರೀ ಮಹಾ ನಂದೀಶ್ವರ ದೇವಾಲಯದ ಭವ್ಯ ಪಟಾಂಗಣದಲ್ಲಿ ಇಲ್ಲಿಯ ಡಿಸ್ಟ್ರಿಕ್ಟ್ ಮುನಿಸಿಫರಾದ ಶ್ರೀ. ಟಿ. ಹೆಚ್. ಎಂ. ಸದಾಶಿವಯ್ಯ ಎಂ. ಎ. ಬಿ. ಎಲ್ ಇವರ ಅಧ್ಯಕ್ಷತೆಯಲ್ಲಿ ಕಾಶೀಕ್ಷೇತ್ರದ ಶ್ರೀ ಪಂಡಿತ ಯು. ಪಿ. ಕೃಷ್ಣಮಾಚಾರ್ಯ ಇವರಿಂದ ಸನಾತನ ಹಿಂದೂ ಧರ್ಮ ಸಿದ್ಧಾಂತದ ಬಗ್ಗೆ ೭ ದಿನಗಳು ಉಪನ್ಯಾಸಗಳು ಮಾಡಲ್ಪಟ್ಟವು. ಈ ಉಪನ್ಯಾಸಗಳನ್ನು ಕೇಳಲು ಸರಕಾರೀ ಉದ್ಯೋಗಸ್ಥರೂ, ವಕೀಲರೂ, ವರ್ತಕರೂ ಮೊದಲಾಗಿ ಅನೇಕ ಜನರು ಪ್ರತಿ ದಿನವೂ ಕಿಕ್ಕಿರಿಯುತ್ತಿದ್ದರು. ಪಂಡಿತರು ಸಂಸ್ಕೃತ ಮತ್ತು ಇಂಗ್ಲೀಷ್ ಭಾಷೆಗಳಲ್ಲಿ ಚೆನ್ನಾಗಿ ನುರಿತವರಾಗಿದ್ದು ಸನಾತನ ಹಿಂದೂ ಧರ್ಮಪ್ರಚಾರ ಕಾರ್ಯದಲ್ಲಿ ತಮ್ಮ ಜೀವಿತವನ್ನು ಧಾರೆಯೆರೆದು ಇಡೀ ಭರತಖಂಡದಲ್ಲೇ ಸುಪ್ರಸಿದ್ಧರಾಗಿರುವರು. ಅವರು ಈ ಸಪ್ತಾಹದಲ್ಲಿ ಸೃಷ್ಟಿಕ್ರಮ, ಪರಮಾತ್ಮನ ನಾಮ ರೂಪಗಳು, ಸಾಕಾರೋಪಾಸನಕ್ರಮ. ದೇವಾಲಯ ನಿರ್ಮಾಣತತ್ವ, ಹಿಂದೂ ದೇವಾಲಯ ಪ್ರವೇಶಾಧಿಕಾರವು ಯಾರ್ಯಾರಿಗೆ ಎಷ್ಟೆಷ್ಟರ ಮಟ್ಟಿಗಿರುತ್ತದೆ ಇವೇ ಮುಂತಾದ ವಿಷಯಗಳನ್ನು ಆಧುನಿಕ, ಭೌತಿಕ ಶಾಸ್ತ್ರಾಧಾರಗಳ ಮೇಲೆ ಪ್ರತಿಪಾದಿಸಿದರು. ಇವರ ಅಭಿಪ್ರಾಯದ ಮೇರೆಗೆ ದೇವಾಲಯಗಳು ಬರೀ ಪ್ರಾರ್ಥನಾಮಂದಿರಗಳಲ್ಲ; ವಿದ್ಯುಚ್ಛಕ್ತಿ ನಿರ್ಮಾಣಗೃಹಗಳಂತೆ ಪರಮಾತ್ಮನ ಚಿಚ್ಛಕ್ತಿಯ ಆವಾಸಸ್ಥಾನಗಳು. ಮಹಾ ಪುರುಷರು ತಮ್ಮ ದಿವ್ಯ ತಪೋಬಲದಿಂದ ಈಶ ಶಕ್ತಿಯನ್ನು ಆಹ್ವಾನಿಸಿ ಶಾಸ್ತ್ರ ನಿಬಂಧನೆಗಳ ಮೇರೆಗೆ ದೇವಾಲಯಗಳಲ್ಲಿ ನೆಲೆಗೊಳಿಸಿರುವರು. ಯಾವ ರೀತಿ ವಿದ್ಯುಚ್ಛಕ್ತಿ ನಿರ್ಮಾಣ ಗೃಹಗಳಲ್ಲಿ ಎಲ್ಲರಿಗೂ ಪ್ರವೇಶಾಧಿಕಾರವಿರುವುದಿಲ್ಲವೋ ಅದೇ ರೀತಿ ದೇವಾಲಯಗಳಲ್ಲಿ ಯಾವ ಯಾವ ತರಗತಿಯವರು ಎಲ್ಲೆಲ್ಲಿಯ ವರೆಗೆ ಪ್ರವೇಶಿಸಬೇಕೆಂಬುದಕ್ಕೆ ಶಾಸ್ತ್ರ ನಿಯಮಗಳಿರುತ್ತವೆ. ಆ ನಿಯಮಗಳು ಅನುಲ್ಲಂಘನೀಯಗಳು. ಯಾರಾದರೂ ಆ ನಿಯಮಗಳನ್ನು ಉಲ್ಲಂಘಿಸಿದರೆ ದೇವಸ್ಥಾನವು ಮಲಿನವಾಗುವದು. ಆದರಲ್ಲಿ ಆರೂಢವಾಗಿರುವ ಈಶ ಶಕ್ತಿಯು ಲಯವಾಗಿ ಲೋಕಾರಿಷ್ಟಕ್ಕೆ ಕಾರಣವಾಗುವುದು ಎಂದು ಮುಂತಾಗಿ ಭಾಷಣಮಾಡಿದರು.

---

ಕ್ಕೆ ಒಪ್ಪತಕ್ಕದ್ದಲ್ಲವಾದ್ದರಿಂದ ಅದು ಯಾವ ಮಾತಿನ ಸಲುವಾಗಿ ಬರೆಯಲ್ಪಟ್ಟಿತೆಂಬದನ್ನು ದಯಮಾಡಿ ಮುಂದಿನ ಸಂಚಿಕೆಯಲ್ಲಿ ತಿಳಿಸಬೇಕಾಗಿ ಪ್ರಾರ್ಥನೆ—

ನೀ. ವಿ. ಗುಗ್ರಿ ಹೆ| ಮಾ|
ಯಾದವಾಡ.

### ಅಧ್ಯಕ್ಷರಾದ ಶ್ರೀ. ಸದಾಶಿವಯ್ಯನವರು

ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು— ನಿರ್ಗುಣ ಬ್ರಹ್ಮೋಪಾಸನೆಯನ್ನು ಪ್ರತಿಪಾದಿಸುವ ಉಪನಿಷತ್ತುಗಳೂ ಸಗುಣ ಬ್ರಹ್ಮೋಪಾಸನೆಯನ್ನು ಪ್ರತಿಪಾದಿಸುವ ಆಗಮಗಳೂ ಒಂದೇ ಕಾಲದಲ್ಲಿ ಉಗಮವಾಗಿದ್ದು ಒಂದೇ ಸಿದ್ಧಾಂತವನ್ನು ಎಂದರೆ ಶಿವಜೀವೈಕ್ಯ ತತ್ವವನ್ನು ಬೋಧಿಸುವುವು. ಆಧುನಿಕ ಯುಗದಲ್ಲಿ ಉಪನಿಷತ್ತುಗಳ ಪ್ರಚಾರ ಕಾರ್ಯವಾದಂತೆ ಆಗಮಗಳ ಪ್ರಚಾರವಾಗದೇ ಇರುವುದು ಬಹು ಶೋಚನೀಯವಾದುದು. ಆಗಮಗಳ ಬಗ್ಗೆ ಹಿಂದುಗಳೆನ್ನಿಸಿಕೊಳ್ಳುವವರಲ್ಲೇ ಅನೇಕ ತಪ್ಪು ತಿಳುವಳಿಕೆಗಳಿರುವವು. ಆಗಮಗಳು ಅವೈದಿಕ ಗ್ರಂಥಗಳೆಂದೂ ತಾಮಸೋಪಾಸನೆಯನ್ನು ಮಂಡಿಸುವುವೆಂದೂ ಜರಿಯುತ್ತಿದ್ದ ಮಹನೀಯರುಗಳೇ ಈಗ ದೇವಸ್ಥಾನ ಪ್ರವೇಶ ಪ್ರಶ್ನೆಯು ಎದ್ದಿರುವುದರಿಂದ ಆಗಮಗಳ ಹೆಸರು ಹೇಳುತ್ತ ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುತ್ತಿರುವರು. ಆದರೆ ನಿಜವಾದ ಆಗಮ ಗ್ರಂಥಗಳನ್ನು ಇದ್ದಕ್ಕಿದ್ದಂತೆಯೇ ಮುದ್ರಿಸಿ ಪ್ರಚಾರಮಾಡುವ ಪುಣ್ಯ ಕಾರ್ಯವನ್ನು ಇದು ವರೆಗೂ ಯಾವ ಮಹನೀಯರೂ ಕೈಕೊಂಡಿಲ್ಲ. ಅದು ಕಾರಣ ನಿಜವಾದ ಆಗಮಗಳು ಲೋಪವಾಗುತ್ತಾ ಬಂದಿದ್ದು ಅವುಗಳ ಬದಲು ಹೊಸ ಹೊಸ ವೇಷದ ಆಗಮಗಳು ಹುಟ್ಟುತ್ತಾ ನಡೆದಿರುವವು. ಇದು ಬಹು ಶೋಚನೀಯವಾದ ಸಂಗತಿಯು. ಅನೇಕ ಸ್ವಾರ್ಥ ಪರಾಯಣರು ತಮ್ಮ ಧ್ಯೇಯವನ್ನು ಸಾಧಿಸಿಕೊಳ್ಳಲು ಅನೇಕ ಕೃತ್ರಿಮ ಶ್ಲೋಕಗಳನ್ನು ಆಗಮಗಳಲ್ಲಿ ಸೇರಿಸುತ್ತಿರುವರು. ಆಗಮಗಳನ್ನು ಸ್ವಲ್ಪ ಮಟ್ಟಿಗಾದರೂ ಬೆಳಕಿಗೆ ತಂದ ಪುಣ್ಯವು ರೆ|| ಪೋಪ್, ಹೊಯ್ಸಿಂಗಡನ್, ಡಾ|| ತಿಬಾಟ್ ಮುಂತಾದ ಪಾಶ್ಚಾದ್ದೇಶೀಯ ಪಂಡಿತರಿಗೆ ಸಲ್ಲುತ್ತದೆ. ಡಾ. ತಿಬಾಟ್‌ರವರು ಆಗಮ ಶಾಸ್ತ್ರಗಳಲ್ಲುಕ್ತವಾದ ಅದ್ವೈತ ಸಿದ್ಧಾಂತಕ್ಕೂ ಶ್ರೀ. ಶಂಕರಾಚಾರ್ಯರ ಅದ್ವೈತವಾದಕ್ಕೂ ಇರುವ ಭೇದವನ್ನು ನಿರೂಪಿಸಿ ಆಗಮ ಸಿದ್ಧಾಂತಕ್ಕೇನೇ ಪ್ರಾಶಸ್ತ್ಯವನ್ನು ಕೊಟ್ಟಿರುವರು. ಸಾಂಪ್ರತದಲ್ಲಿ ಎದ್ದಿರುವ ದೇವಸ್ಥಾನ ಪ್ರವೇಶ ಪ್ರಶ್ನೆಯ ಆಂದೋಳನದ ಮೂಲಕವಾದರೂ ಆಗಮ ಶಾಸ್ತ್ರಗಳ ಪ್ರಸಾರವಾಗಲೆಂದು ಆಶಿಸುವ.

ಉಪನಿಷತ್ತುಗಳಂತೆ ಆಗಮಗಳು ವೇದಗಳಲ್ಲಿ ಪ್ರತಿಪಾದಿಸಿರುವ ಹಿಂಸಾಪರ ಯಜ್ಞಾದಿಕರ್ಮಗಳನ್ನು ಖಂಡಿಸುವವು. ಜೀವಾತ್ಮನು ಪರಮಾತ್ಮನ ಸನ್ನಿಧಿಯಲ್ಲಿ ತನ್ನ ಪಶುತ್ವವನ್ನು ಬಲಿಕೊಟ್ಟು ತನ್ನ ವ್ಯಕ್ತಿತ್ವವನ್ನು ಅಳಿದು, ಸರ್ವಸ್ವದಲ್ಲಿ ಲೀನವಾಗುವುದೇ ನಿಜವಾದ ಯಜ್ಞವೆಂದು ಆಗಮಗಳೂ ಉಪನಿಷತ್ತುಗಳೂ ಸಾರುವವು. "ನಕರ್ಮಣಾ ಪ್ರಜಯಾನ ಧನೇನತ್ಯಾಗೇನೈಕೇ ಅಮೃತತ್ವ ಮಾನಶುಃ" ಎಂಬುದೆ ಇವೆರಡರ ದಿವ್ಯ ಸಂದೇಶವು. ಈ ತ್ಯಾಗವೆಂಬ ಯಾಗವನ್ನು ಮಾಡಲೋಸುಗವೇ ದೇವಾಲಯಗಳು ನಿರ್ಮಿಸಲ್ಪಟ್ಟಿದ್ದು ಈ ರಚನೆಯಲ್ಲಿ ನಿಷ್ಕಾಮ ಭಕ್ತಿಗಿದ್ದಷ್ಟು ಪ್ರಾಶಸ್ತ್ಯವು ಮತ್ತಿನ್ನಾವುದಕ್ಕೂ ಇಲ್ಲ. ಆದಿಯಲ್ಲಿ ಒಂದೇ ಒಂದಾಗಿದ್ದ ಪರವಸ್ತುವನ್ನು ಎರಡುಮಾಡಿದ ಮೂಲಶಕ್ತಿಯು ಪರಮಾತ್ಮನನ್ನು ಹೊಂದಿ 'ಕಳೆ' ಎನಿಸಿತು. ಜೀವಾತ್ಮನನ್ನು ಹೊಂದಿ 'ಭಕ್ತಿ' ಎನಿಸಿತು. ಸರ್ವ ಶಕ್ತಿಯುತವಾದ ಈ ಭಕ್ತಿಯು ಕೇವಲ ನರ ಮಾತ್ರ ನಿರ್ಮಿತ ವಿಧಿನಿಯಮಗಳಿಗೆ ಒಳಪಟ್ಟುದಲ್ಲ. ಭಕ್ತಿ ಪ್ರೇರಿತವಾದ ಮಾನವನು ಜನ್ಮ ಮಾತ್ರದಿಂದ ಯಾವ ಕುಲದವನಾಗಿದ್ದರೂ ಪರಮಾತ್ಮನ ಸಾನ್ನಿಧ್ಯಕ್ಕೆ ಕೃತ್ರಿಮವಾದ ಆತಂಕಗಳಿರುವುದಿಲ್ಲ. ಎಂದು ಮುಂತಾಗಿ ಉಪನ್ಯಸಿಸುತ್ತಾ ಅಲ್ಲಲ್ಲಿ ಆಗಮಸಿದ್ಧಾಂತಕ್ಕೂ ಅನುಗುಣ್ಯವಾದ ಮಾಣಿಕ್ಯ ವಾಚಕನ, ಮೇಯು, ಕಂಡನ ಶಿವಪ್ರಕಾಶ ಸ್ವಾಮಿಗಳ ಮುಂತಾದ ದ್ರಾವಿಡ ಶರಣರ ಮತ್ತು ಶ್ರೀ ಬಸವೇಶ್ವರ ಚೆನ್ನಬಸವೇಶ್ವರ ಮುಂತಾದ ವಿಭೂತಿಗಳ ವಚನಗಳನ್ನೂ "ತಿರುವಾಚಕಂ" 'ತಿರುಕ್ಕುರಲ್' ಮುಂತಾದ ಗ್ರಂಥಗಳ ವಾಕ್ಯಗಳನ್ನೂ ಉದಹರಿಸಿದರು. ಆಗಮಗಳಲ್ಲಿ ಪ್ರತಿಪಾದಿಸಿರುವ ಸಿದ್ಧಾಂತವನ್ನು ಇತರ ಪಾಶ್ಚಾತ್ಯ ಪೌರ್ವಾತ್ಯ ಸಿದ್ಧಾಂತಗಳೊಡನೆ ತುಲನಾತ್ಮಕ ದೃಷ್ಟಿಯಿಂದ ವಿವೇಚಿಸಿ ಆಗಮಗಳಲ್ಲಿ ಉಕ್ತವಾದ ಚರ್ಯೆ (ದಾಸಮಾರ್ಗ) ಕ್ರಿಯ (ಸತ್ಪುತ್ರಮಾರ್ಗ) ಯೋಗ (ಸಹಮಾರ್ಗ) ಜ್ಞಾನ (ಸನ್ಮಾರ್ಗ) ಮಾರ್ಗಗಳನ್ನು ವರ್ಣಿಸುತ್ತಾ ಲಿಂಗಪೂಜೆಯಲ್ಲಿ ಅಡಕವಾಗಿರುವ ಶಿವ ಜೀವೈಕ್ಯ ತತ್ವವನ್ನು ಸಕಲರಿಗೂ ತಿಳಿಯುವಂತೆ ಒಡೆದು ಹೇಳಿದರು. ಲಿಂಗ ಪೂಜೆಯ ಬಗ್ಗೆ ಕೆಲವು ಜನರಲ್ಲಿರುವ ತಪ್ಪು ಅಭಿಪ್ರಾಯಗಳನ್ನು ಸಪ್ರಮಾಣವಾಗಿ ಖಂಡಿಸಿದರು. ಸ್ಮೃತಿಗಳೇ ಹಿಂದೂ ಧರ್ಮಕ್ಕೆ ಪ್ರಧಾನಪ್ರಮಾಣ ಗ್ರಂಥಗಳೆಂಬುದು ತಪ್ಪು ತಿಳುವಳಿಕೆ ಎಂದೂ ಸನಾತನ ಹಿಂದೂ ಧರ್ಮವು ಯುಗ ಯುಗಾಂತರಗಳಿಂದಲೂ ಬಂದಿರುವುದಕ್ಕೆ ಅದರ ಉದಾತ್ತ ತತ್ವವೇ ಕಾರಣವೆಂದೂ, ಅದರ ನೈಜಸ್ವರೂಪವನ್ನು ಬೈಲಿಗಿಡುವುದು ಪಂಡಿತರ ಕರ್ತವ್ಯವೆಂದೂ, ಭರತಖಂಡವು ನವ ಚೈತನ್ಯದಿಂದ ವಿಜೃಂಭಿಸುತ್ತಾ ನವಸ್ವರೂಪವನ್ನು ತಾಳುತ್ತಿರುವ ಈ ಕಾಲದಲ್ಲಿ ಧರ್ಮ ಸಂಸ್ಕೃತಿಯ ಪುನರುಜ್ಜೀವನವಾಗುವುದು ಪರಮಾವಶ್ಯಕವೆಂದೂ ಕಾರಣ ಹಿಂದುಗಳು ಕೇವಲ ಕಾಲ್ಪನಿಕ ಭೇದಭಾವಗಳನ್ನು ಬಿಟ್ಟು, ವಿಶ್ವಕಲ್ಯಾಣ ಕಾರ್ಯಕ್ಕೆ ಬದ್ಧಕಂಕಣರಾಗುವುದು ವಿಹಿತವೆಂದೂ ಹೇಳಿ ತಮ್ಮ ಭಾಷಣವನ್ನು ಮುಗಿಸಿದರು.

ಓರ್ವ ಸಭಿಕ.

---

## ಇಂದಿನ ಮಂತ್ರಿಗಳು
## ಅಶೋಕನ ಕಡೆಗೆ ತಿರುಗಲಿ!

——:೦:——

ಸುಪ್ರಸಿದ್ಧ ಭಾರತೀಯ ತತ್ವಜ್ಞರಾದ ಶ್ರೀ. ಧರ್ಮಾನಂದ ಕೋಸಂಬಿ ಇವರು ಕಾಂಗ್ರೆಸ್ ಪಕ್ಷದ ಈಗಿನ ಮಂತ್ರಿಗಳು ಅಶೋಕ ಚಕ್ರವರ್ತಿಯ ದಿವ್ಯ ನಡತೆಯ ಕಡೆಗೆ ಲಕ್ಷ್ಯಿಸಬೇಕೆಂದು ಒಂದು ಲೇಖನವನ್ನು ಬರೆದಿದ್ದಾರೆ. ಅದರಲ್ಲಿ ಅವರು ಹೀಗೆ ಹೇಳಿದ್ದಾರೆ—

"ಮಹಾತ್ಮಾ ಗಾಂಧಿಯವರು ಕಾಂಗ್ರೆಸ್ ಪಕ್ಷದ ಮಂತ್ರಿ ಮಂಡಲವು ಅಬುಬೇಕರ್ ಮತ್ತು ಓಮರ ಈ ಉಭಯ ಖಲೀಫರ ನಡವಳಿಕೆಯನ್ನು ಅನುಸರಿಸಬೇಕಾಗಿ ತಮ್ಮ ಲೇಖನದಲ್ಲಿ ಸೂಚಿಸಿದ್ದಾರೆ. ಸತ್ಪುರುಷರು ಯಾವ ಧರ್ಮದಲ್ಲಿ ಮತ್ತು ಯಾವ ದೇಶದಲ್ಲಿ ಜನ್ಮವೆತ್ತಿದರೂ ಅವರ ಆಚರಣೆಯು ಅನುಕರಣೀಯವಾಗಿರುವುದು ಯುಕ್ತವೇ ಸರಿ. ನನಗಾದರೋ ಈಗಿನ ಮಂತ್ರಿಗಳು ಅಶೋಕ ಚಕ್ರವರ್ತಿಯ ಕಡೆಗೆ ತಿರುಗಬೇಕಾಗಿ ತೋರುತ್ತದೆ.

### ಹಿಂದುಸ್ಥಾನದ ಈಗಿನ ದೇವತೆಗಳು!

ರೂಪನಾಥ ಎಂಬಲ್ಲಿಯ ಶಿಲಾಲೇಖನದಲ್ಲಿ ಅಶೋಕನು ಹೀಗೆ ಬರೆದಿದ್ದಾನೆ—

"ಈ ಭರತಖಂಡದಲ್ಲಿ ಯಾವವು ನಿಜವಾದ ದೇವತೆಗಳೆಂದು ತಿಳಿಯಲ್ಪಡುತ್ತಿದ್ದವೋ ಅವುಗಳೆಲ್ಲಾ ಸುಳ್ಳೆಂಬುದನ್ನು ನಾನು ಒಂದು ವರುಷ ಬುದ್ಧ ಸಂಘದ ಸಕಲ ನಿಯಮಗಳನ್ನು ಪಾಲಿಸಿ ನನ್ನ ಆಚರಣೆಯಿಂದಲೇ ಸಿದ್ಧಮಾಡಿಕೊಟ್ಟೆನು."

ಆಗ ಹಿಂದುಸ್ಥಾನದ ದೇವತೆಗಳು ಬಹು ಹಿಂಸಕಗಳಾಗಿದ್ದವು. ಕಾಳಿ, ದುರ್ಗಾ, ಮೊದಲಾದ ದೇವತೆಗಳಿಗೆ ಪ್ರಾ

ಬಲಿಯನ್ನು ಕೊಡುತ್ತಿದ್ದರು. ಬ್ರಾಹ್ಮಣರಂತೂ ಯಜ್ಞಗಳಲ್ಲಿ ಸಾವಿರಾರು ಪ್ರಾಣಿಗಳನ್ನು ಕೊಲ್ಲುತ್ತಿದ್ದರು. ಈ ಎಲ್ಲಾ ದೇವರುಗಳನ್ನು ಮುಸಲ್ಮಾನರಂತೆ ಅಶೋಕನು ಶಸ್ತ್ರಬಲದಿಂದ ನಾಶ ಮಾಡಲು ಪ್ರಯತ್ನಿಸಲಿಲ್ಲ. ಆದರೆ ತಾನು ಬುದ್ಧನ ಅಹಿಂಸಾ ವ್ರತವನ್ನು ಸಂಪೂರ್ಣ ಪಾಲಿಸಿ ಆದರಿಂದ ತನ್ನ ರಾಜ್ಯದಲ್ಲಿ ಪ್ರಾಣಿ ಬಲಿಯು ನಿಲ್ಲುವಂತೆ ಮಾಡಿದನು. ಅಶೋಕನು ಬಹು ಸಾದಾ ಉಡುಪನ್ನು ಧರಿಸಿ, ಸಾದಾ ಆಹಾರವನ್ನು ಸೇವಿಸಿ, ತನ್ನ ಪವಿತ್ರ ನಡತೆಯಿಂದಲೇ ಹಿಂಸಕ ದೇವತೆಗಳೆಲ್ಲಾ ಸುಳ್ಳೆಂಬುದನ್ನು ಜನರಿಗೆ ಮನವರಿಕೆಮಾಡಿಕೊಟ್ಟನು.

**ಈಗಿನ ಗವ್ಹರ್ನರ್- ಗವ್ಹರ್ನರ್ ಜನರಲ್‌ರು**

ಹಿಂದುಸ್ಥಾನದ ದೇವತೆಗಳಾಗಿದ್ದಾರೆ. ಗವ್ಹರ್ನರರಾಗುವುದು ಹಿಂದುಗಳ ಹಣೆಯಲ್ಲಿ ಬರೆಯಲ್ಪಟ್ಟಿದ್ದೇ ಕಡಿಮೆ. ಐ. ಸಿ. ಎಸ್. ಆದರೆ ಅವರು ಈ ದೇವತೆಗಳ ಶ್ರೇಣಿಯಲ್ಲಿ ಸೇರಿದರಲ್ಲಾ ಎಂದು ನಮಗೆ ಬಹು ಸಂತೋಷ! ಅದೇ ಜಾತಿಯ ಜನರು ಅವರಿಗೆ ವಿಜ್ಞಾಪನಾ ಪತ್ರಿಕೆಗಳನ್ನು ಅರ್ಪಿಸುತ್ತಾರೆ. ಈ ದೇವತೆಗಳಿಗೆ ಕುರಿ ಕೋಳಿಗಳೇನೂ ಬೇಕಾಗಿಲ್ಲ. ದೊಡ್ಡ ದೊಡ್ಡ ವೇತನಗಳೇ ಅವುಗಳಿಗೆ ಕೊಡುವ ಬಲಿ. ಜನಸಾಮಾನ್ಯರನ್ನು ಹಿಂಡಿಯೇ ಈ ಬಲಿಯು ಸಿದ್ಧವಾಗುತ್ತದೆ. ಕಾಂಗ್ರೆಸ್ಸಿನ ಮಂತ್ರಿಗಳೂ ಅವರಂತೆ ದೊಡ್ಡ ದೊಡ್ಡ ಸಂಬಳಗಳನ್ನೂ ಔತಣ ಉಪಚಾರಗಳನ್ನೂ ಹೊಂದಿದರೆ ಆ ದೇವತೆಗಳು ಸುಳ್ಳೆಂಬುದನ್ನು ಹೇಗೆ ಸಿದ್ಧ ಮಾಡಿ ಕೊಡುವರು? ಅಶೋಕನಂತೆ ಈಗಿನ ಮಂತ್ರಿಗಳೂ ಆತ್ಮ ಶುದ್ಧಿಯ ಕಡೆಗೆ ಲಕ್ಷಿಸಿ ಸಾದಾ ರೀತಿಯಿಂದ ನಡೆದರೇನೇ ಈಗಿನ ಹಿಂದುಸ್ಥಾನದ ದೇವತೆಗಳು ಸುಳ್ಳೆಂದು ಜನಸಾಮಾನ್ಯವು ತಿಳಿಯುವುದು. ಹಾಗೆ ಆದಾಗಲೇ ಕಾಂಗ್ರೆಸ್ಸಿನ ವಿಜಯ. ಅದೇ ಅಹಿಂಸಾತ್ಮಕ ಸ್ವರಾಜ್ಯ ಧರ್ಮದ ಜಯ.

**ಋಣಮುಕ್ತನಾಗಬೇಕು.**

ಆರನೆಯ ಶಿಲಾ ಶಾಸನದಲ್ಲಿ ಅಶೋಕನು ಹೀಗೆ ಹೇಳಿದ್ದಾನೆ—

"ಎಲ್ಲ ಜನರಿಗೆ ಹಿತವನ್ನು ಮಾಡುವುದು ನನ್ನ ಕರ್ತವ್ಯವಾಗಿದೆ. ಎಲ್ಲ ಜನರ ಹಿತಾರ್ಥವಾಗಿ ನ್ಯಾಯವನ್ನುಂಟುಮಾಡುವುದಕ್ಕಿಂತ ಹೆಚ್ಚಿನ ಕಾರ್ಯವೇ ನನಗೆ ಬೇರೊಂದಿಲ್ಲ. ನನ್ನ ಎಲ್ಲ ಕಾರ್ಯಗಳೂ ಪ್ರಾಣಿಗಳ ಋಣದಿಂದ ಮುಕ್ತನಾಗಲಿಕ್ಕಾಗಿಯೇ ಇವೆ."

"ನಾವಿಷ್ಣುಃ ಪೃಥಿವೀಪತಿಃ" ಎಂಬ ವಾಕ್ಯವು ನಮ್ಮಲ್ಲಿ ಪ್ರಸಿದ್ಧವಷ್ಟೆ. ಇದು ಅಶೋಕನಿಗೆ ಸಮ್ಮತವಾಗಿರಲಿಲ್ಲ. ತಾನು ದೇವರ ಅವತಾರಿಯೆಂದು ಅವನು ಎಂದೂ ತಿಳಿಯಲಿಲ್ಲ. ರೂಸೊ ಮೊದಲಾದ ಪಾಶ್ಚಾತ್ಯ ಗ್ರಂಥಕಾರರು ರಾಜನು ಪ್ರಜೆಗಳ ಸೇವಕನೆಂದು ಸಾರಿದ್ದಾರಷ್ಟೆ. ಅಶೋಕನಿಗೆ ಈ ಪಾಶ್ಚಾತ್ಯರ ವಿಚಾರ ಸರಣಿಯೂ ಸರಿಯಾಗಿ ತೋರಲಿಲ್ಲ. ತಾನು ಪ್ರಜೆಗಳ ಋಣಿಯೆಂದೇ ಆತನು ತಿಳಿದನು. ತಾನು ಪ್ರಜೆಗಳು ದುಡಿದು ಸಂಪಾದಿಸುವ ಅನ್ನವನ್ನೇ ಸೇವಿಸುವುದರಿಂದ ಅವರಿಗೆ ಋಣಿಯಾಗಿರುತ್ತೇನೆ. ಆದಕಾರಣ ಆ ಋಣದಿಂದ ಮುಕ್ತನಾಗಬೇಕಾದರೆ ಅವರಿಗೆ ನ್ಯಾಯದೊರೆಯುವಂತೆಯೇ ತಾನು ಯಾವಾಗಲೂ ಪ್ರಯತ್ನಿಸಬೇಕಾದುದು ತನ್ನ ಕರ್ತವ್ಯವೆಂದೇ ಅಶೋಕನು ತಿಳಿದು ಆ ಪ್ರಕಾರ ಆಚರಿಸಿದನು.

ಕಾಂಗ್ರೆಸ್ಸಿನ ಮಂತ್ರಿಗಳು ಇದನ್ನೇ ತಮ್ಮ ದೃಷ್ಟಿಯ ಮುಂದಿಟ್ಟುಕೊಳ್ಳಬೇಕು. ಕರಾಚಿ ಕಾಂಗ್ರೆಸ್ಸಿನಲ್ಲಿ ಠರಾವಾದಂತೆ ೫೦೦ ರೂ. ವೇತನವನ್ನು ತೆಗೆದುಕೊಂಡಮಾತ್ರದಲ್ಲಿ ತಮ್ಮ ಕರ್ತವ್ಯ ಪೂರೈಸಿತೆಂದು ತಿಳಿದರೆ ಅದು ದೊಡ್ಡ ತಪ್ಪಾಗುವುದು.

ಅಶೋಕನಿಗೆ ಆತನ ತಂದೆ ತಾತರಿಂದ ರಾಜ್ಯ ದೊರೆತಂತೆ ಕಾಂಗ್ರೆಸ್ ಮಂತ್ರಿಗಳಿಗೇನೂ ದೊರೆತಿಲ್ಲ. ಜನರೇ ಅವರಿಗೆ ಈ ಅಧಿಕಾರವನ್ನು ಕೊಟ್ಟದ್ದಾರೆ. ತಾವು ಜನರ ಸೇವಕರೆಂದೂ ಇವರು ಆಗಾಗ್ಗೆ ಹೇಳುತ್ತಿದ್ದಾರೆ. ಇವರು ಜನರ ಸೇವಕರಲ್ಲ. ಜನರ ಋಣದಿಂದ ಬದ್ಧರಾದವರು. ಆದಕಾರಣ ಆ ಋಣ ವಿಮೋಚನೆಗಾಗಿ ಇವರು ಸಾದಾ ವೃತ್ತಿಯಲ್ಲಿಯೇ ಇದ್ದುಕೊಂಡು ನ್ಯಾಯ ದಾನಕ್ಕಾಗಿಯೇ ಸತತ ಪ್ರಯತ್ನಿಸಬೇಕಾದುದು ಇವರ ಕರ್ತವ್ಯವಾಗಿದೆ."

---

## ಪಾರಿವಾಳಗಳ ರಾಷ್ಟ್ರಸೇವೆ!

ಪಾರಿವಾಳಗಳಿಗೆ ತಮ್ಮ ಗೂಡಿನಮೇಲೆ ಬಹು ಪ್ರೇಮ. ಎಲ್ಲಿಂದ ಅವುಗಳನ್ನು ಬಿಟ್ಟರೂ ತಮ್ಮ ಮನೆಗೇನೇ ಬರುವುದರಲ್ಲಿ ಅವುಗಳಿಗಿರುವ ಜಾಣ್ಮೆಯು ಅತ್ಯಾಶ್ಚರ್ಯಕರವಾದುದು. ಅವುಗಳಲ್ಲಿರುವ ಮನೆಯ ಮೇಲಿನ ಈ ಮಮಕಾರದಿಂದ ಮಾತೃಭೂಮಿಯ ಅಗಾಧವಾದ ಸೇವೆಯನ್ನು ಕೂಡಾ ಅವುಗಳಿಗೆ ಮಾಡುವುದು ಶಕ್ಯವಾಗಿದೆ.

ಇಂಡೋ- ಚಾಯನಾದಲ್ಲಿಯ ಸೈಗಾನ ಎಂಬಲ್ಲಿಂದ ಒಂದು ಪಾರಿವಾಳವನ್ನು ತೆಗೆದುಕೊಂಡು ಹೋಗಿ ಫ್ರಾನ್ಸ್ ದೇಶದ ಆರಾಸ ಎಂಬಲ್ಲಿ ಇಟ್ಟರು. ಅದನ್ನು ಅಲ್ಲಿಂದ ಬಿಡಲಾಗಿ ೨೪ನೆ ದಿವಸ ಸೈಗಾನದ ತನ್ನ ಗೂಡಿಗೆ ಬಂದಿತು! ಇವೆರಡೂ ಸ್ಥಳಗಳ ಅಂತರ ೭೨೦೦ ಮೈಲುಗಳು.

ಈ ಮುಂಚೆ ಕರಾಕಸ್‌ದಿಂದ ಬ್ರುಕಲಿನ್‌ದ ವರೆಗೆ ೨೨೦೦ ಮೈಲು ಹಾರಿಹೋಗಿ ಒಂದು ಪಾರಿವಾಳವು ತನ್ನ ಗೂಡನ್ನು ಸೇರಿತ್ತು. ಅದಕ್ಕಿಂತಲೂ ಇದು ಎಷ್ಟೋಪಟ್ಟು ಹೆಚ್ಚು ದೂರ ಹಾರಿಹೋಯಿತು. ಇವುಗಳಿಗೆ ಹೀಗೆ ತಮ್ಮ ಗೂಡನ್ನೇ ಸೇರುವುದಕ್ಕಾಗಿ ಚಿಕ್ಕಂದಿನಲ್ಲಿಯೇ ಶಿಕ್ಷಣಕೊಡುತ್ತಾರೆ! ಯುದ್ಧದ ಕಾಲಕ್ಕೆ ಈ ಪಾರಿವಾಳಗಳು ವಾರ್ತೆಯನ್ನು ಮುಟ್ಟಿಸುವ ಅತ್ಯದ್ಭುತವಾದ ಕಾರ್ಯಗಳನ್ನು ಮಾಡುತ್ತವೆ. ಅಮೇರಿಕೆಯಲ್ಲಿ ಈ ವಿಧವಾದ ಶಿಕ್ಷಣವನ್ನು ಪಾರಿವಾಳಗಳಿಗೆ ಕೊಡುವ ಒಂದು ಸ್ವತಂತ್ರ ಶಿಕ್ಷಣಾಲಯವೇ ಇದೆ.

ಜರ್ಮನಿಯವರಂತೂ ಪಾರಿವಾಳಗಳ ಕಾಲಿಗೆ ಒಂದು ವಿಧವಾದ ಸೂಕ್ಷ್ಮವಾದ "ಕ್ಯಾಮರಾ" ಕಟ್ಟಿ ಶತ್ರುಸೈನ್ಯವು ಇಳಿದುಕೊಂಡಿದ್ದ ಸ್ಥಳಗಳ ಛಾಯಚಿತ್ರವನ್ನು ತರಿಸಿಕೊಳ್ಳುತ್ತಿದ್ದಾರೆ!

ಹೀಗೆ ಅತ್ಯಂತ ಕ್ಷುದ್ರಪ್ರಾಣಿಗಳೆಂದು ಎಣಿಸಲ್ಪಡುತ್ತಿರುವ ಪಾರಿವಾಳಗಳಿಗೂ ಕೂಡಾ ಶಿಕ್ಷಣ ಕೊಟ್ಟು ಅವುಗಳಿಂದ ಪಾಶ್ಚಾತ್ಯ ರಾಷ್ಟ್ರಗಳು ರಾಷ್ಟ್ರಸೇವೆಯನ್ನು ಮಾಡಿಸಿಕೊಳ್ಳುತ್ತಿರುವುದರಿಂದಲೇ ಅವರು ಪ್ರಪಂಚದಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸಲು ಸಮರ್ಥರಾಗಿದ್ದಾರೆ.

ಹಿಂದುಗಳಾದ ನಾವಾದರೋ ೬-೭ ಕೋಟಿ ಆದಿ ಹಿಂದುಗಳಾದ ಮನುಷ್ಯರನ್ನು ಸಾವಿರಾರು ವರುಷಗಳಿಂದ ಪಶುಪಕ್ಷಿಗಳಿಗಿಂತಲೂ ಕೀಳಾಗಿ ಕಂಡದ್ದರಿಂದಲೇ ಈ ದಾಸತ್ವದಲ್ಲಿ ಬಳಲುತ್ತಿದ್ದೇವೆ. ನಮ್ಮ ಪಾಪದ ಫಲವೇ ಈ ಪಾರತಂತ್ರ್ಯವು. ಇನ್ನಾದರೂ ಈ ಪಾಪಕ್ಕೆ ಹೇಸಬಾರದೇ?

## ವಿಮರ್ಶಾತ್ಮಕ ಪ್ರಶ್ನೋತ್ತರ.

### ಪಾಗೋಟಿ ಪತ್ರಿಕೆ ಬಂತು!

ಪ್ರಶ್ನೆ— ಶರಣ ಸಂದೇಶ ಪತ್ರಿಕೆಯು ಬಂದೊಡನೆ ಪಾಗೋಟಿ ಪತ್ರಿಕೆ ಬಂತೆಂದು ನಾವು ಹೇಳುತ್ತೇವೆ. ನಿಮ್ಮ ಪತ್ರಿಕೆಗೆ ಈ ಹೆಸರು ಬರದಾತೆ ನೀವು ಮಾಡುವುದು ಒಳ್ಳೆಯದಲ್ಲವೆ?

ಉತ್ತರ— ಪಾಗೋಟಿ ಪತ್ರಿಕೆಯೆಂದರೆ ಅರ್ಥವೇನು? ಅದನ್ನು ತಿಳಿಸಿದರೆ ಆ ಹೆಸರನ್ನು ತಪ್ಪಿಸಲು ಸಾಧ್ಯವೆ? ಎಂಬುದನ್ನು ತಿಳಿಸುತ್ತೇವೆ.

ಪ್ರಶ್ನೆ— ಪಾಗೋಟಿ ಪತ್ರಿಕೆಯೆಂದರೆ ಪುಣೆಯ ಕೇಶರೀ ಪತ್ರಿಕೆ. ಅದರಂತೆಯೇ ನೀವೂ ಕಾಂಗ್ರೆಸ್ಸಿನ ಬಗ್ಗೆ ಟೀಕಿಸುತ್ತೀರಿ. ಅದೂ ಶರಣ ಸಂದೇಶ ಒಂದೇ.

ಉತ್ತರ— ನಿಮಗೆ ಶರಣ ಸಂದೇಶವು ಹೀಗೆ ಪಾಗೋಟಿ ಪತ್ರಿಕೆಯಾಗಿ ತೋರುವದೋ? ಕೆಲವರಿಗೆ ಪಂಜಾಬಿ ಪತ್ರಿಕೆಯಾಗಿ ತೋರುತ್ತದಂತೆ! ಇನ್ನು ಕೆಲವರು ಕಂಬಳಿಯವರ ಪತ್ರಿಕೆಯೆಂದು ಹೇಳಿದುದೂ ಉಂಟು. ಕಾಂಗ್ರೆಸ್ಸಿನ ಮೇಲೆ ಟೀಕಿಸಿದ ಮಾತ್ರದಲ್ಲಿ ಪಾಗೋಟಿ ಪತ್ರಿಕೆಯಾಯಿತೆ? ಹಿಂದು ಸಂಘಟನೆಯ ವಿಚಾರವಾಗಿ ಬರೆಯುತ್ತಿರುವುದರಿಂದ ಭಾಯಿ ಪರಮಾನಂದರ ನೆನಪಾಗಿ ಪಂಜಾಬಿ ಪತ್ರಿಕೆಯೆಂದು ಹೇಳುತ್ತಾರಂತೆ. ವೀರಶೈವ ಮಹಾ ಸಭೆಯಲ್ಲಾದ ಠೀವರ್ಮಾನಗಳನ್ನು ಕುರಿತು ಬರೆದಾಗ ಕೆಲವರಿಗೆ ಕಂಬಳಿಯವರ ಪತ್ರಿಕೆಯಾಗಿ ಕಂಡಿತು. ಇದರ ಮೇಲಿಂದಲೇ ಇದು ಯಾವುದೊಂದು ಪಕ್ಷದ ಅಥವಾ ವ್ಯಕ್ತಿಯ ಪತ್ರಿಕೆಯಲ್ಲವೆಂಬುದಂತೂ ತಾನೇ ಸಿದ್ಧವಾಗುತ್ತದಷ್ಟೆ.

ಪಾಗೋಟಿ ಪತ್ರಿಕೆಯು ಲೋಕಶಾಹಿ ಸ್ವರಾಜ್ಯ ಪಕ್ಷದ ಪತ್ರಿಕೆ. ಕಾಂಗ್ರೆಸ್ಸಿಗೆ ಮತವನ್ನು ಕೊಡಬೇಡಿರೆಂದೇ ಸಾರಿದ ಪತ್ರಿಕೆ. ಆದರೆ ಶರಣ ಸಂದೇಶ ಪತ್ರಿಕೆಯು ಕಾಂಗ್ರೆಸ್ಸಿಗೇನೇ ಮತಕೊಡಿರೆಂದು ಸಾರಿದ ಪತ್ರಿಕೆ. ಕಾಂಗ್ರೆಸ್ ಪಕ್ಷವು ಅಧಿಕಾರವನ್ನು ಸ್ವೀಕರಿಸಬೇಕೆಂದು ಮತ್ತು ಇದು ಜಾತಿ ನಿರ್ಣಯದ ವಿಷಯದಲ್ಲಿ ಮುಸಲ್ಮಾನರಿಗೆ ದಾಕ್ಷಿಣ್ಯವಹಿಸಿ ನಡೆಯುತ್ತದೆಂದು ಹೇಳುವ ಪ್ರಸಂಗಗಳಲ್ಲಿ ಎರಡೂ ಪತ್ರಿಕೆಗಳ ಅಭಿಪ್ರಾಯವು ಒಂದೇಯಾಗಿರುವುದು ನಿಜ. ಕಾಂಗ್ರೆಸ್ ಪಕ್ಷವು ಕಡೆಗೆ ಅಧಿಕಾರವನ್ನು ವಹಿಸಿದ್ದರಿಂದಲೂ ಶ್ರೀ. ಕೃಪಲಾನಿಯವರು ಬ್ಯಾ. ಜಿನ್ನಾರವರಿಗೆ ಕೊಟ್ಟ ಉತ್ತರದಲ್ಲಿ ಕಾಂಗ್ರೆಸ್ ಪಕ್ಷವು ಜಾತಿ ನಿರ್ಣಯದ ಗೊತ್ತುವಳಿ ಕಾಲಕ್ಕೆ ದಾಕ್ಷಿಣ್ಯವಹಿಸಿತೆಂದು ಸ್ಪಷ್ಟ ಹೇಳಿದ್ದರಿಂದಲೂ ಶರಣ ಸಂದೇಶವು ಈ ವರೆಗೂ ಸಾರುತ್ತಾ ಬಂದುದೇ ನಿಜವೆಂದು ಈಗಲಾದರೂ ಸಿದ್ಧವಾಗಲಿಲ್ಲವೆ? ಇದು ಯಾವುದೊಂದು ಪಕ್ಷಕ್ಕೆ ಸೇರಿ ಆ ಪಕ್ಷದ ತಪ್ಪು, ಒಪ್ಪುಗಳನ್ನೆಲ್ಲಾ ಹೊಗಳುತ್ತಲೇ ಇರುವುದಿಲ್ಲವಾದುದರಿಂದಲೇ ಬೇರೆ ಬೇರೆಯವರಿಗೆ ಬೇರೆ ಬೇರೆ ಪಕ್ಷದ ಪತ್ರಿಕೆಯಾಗಿ ತೋರುತ್ತದೆ. ಇನ್ನು ಮುಂದೆಯೂ ಇದು ಹೀಗೆಯೇ ನಡೆಯುವುದು.

ಪ್ರಶ್ನೆ— ಶರಣ ಸಂದೇಶವು ಮೊದಲು ಕಾಂಗ್ರೆಸ್ಸಿನ ಮೇಲೆ ಟೀಕೆಮಾಡುತ್ತಿರಲಿಲ್ಲ. ರಾಯಚೂರು ಮಹಾ ಸಭೆಯನಂತರ ನಡೆದ ವಾದದಲ್ಲಿ ಕಂಬಳಿಯವರ ಪಕ್ಷ ವಹಿಸಿ ಆ ಮೇಲೆ ಕಾಂಗ್ರೆಸ್ಸಿನ ಮೇಲೆ ಟೀಕೆಮಾಡಹತ್ತಿತು. ಚುನಾವಣೆಯಲ್ಲಿ ಆವರು ಆರಿಸಿಬಂದದ್ದಕ್ಕೆ ಅವರ ಬ್ಲಾಕ್ ಹಾಕಿ ಸರ್ ಪದವಿ ಬಂದದ್ದಕ್ಕೆ ಅಭಿನಂದಿಸಿತು. ಅದಕ್ಕೇ ಜನರು ಕಂಬಳಿಯವರ ಪಕ್ಷದ ಪತ್ರಿಕೆಯೆಂದು ಹೇಳಿರಬೇಕು.

ಉತ್ತರ— ಪಕ್ಷಾಂಧರು ಅಥವಾ ವ್ಯಕ್ತಿ ದ್ವೇಷಿಗಳು ಹೇಗೆ ಗ್ರಹಿಸುತ್ತಾರೆಂಬುದಕ್ಕೆ ಈ ನಿಮ್ಮ ವಿಚಾರ ಸರಣಿಯು ಒಂದು ದೃಷ್ಟಾಂತವೆನ್ನಬಹುದು. ರಾಯಚೂರು ಮಹಾ ಸಭೆಯ ನಂತರ ಕಾಂಗ್ರೆಸ್ಸಿನ ವಿಚಾರವಾಗಿ ಟೀಕಿಸುತ್ತೇವೆಂದು ತಿಳಿದಿರುವುದೇ ದೊಡ್ಡ ತಪ್ಪು. ಮುಂಬೈ ಕಾಂಗ್ರೆಸ್ಸಿನಲ್ಲಿ (೧೯೩೪) ಜಾತಿ ನಿರ್ಣಯದ ಸಂಬಂಧವಾಗಿ ಕಾಂಗ್ರೆಸ್ ಪಕ್ಷವು ವಹಿಸಿದ ಧೋರಣವನ್ನು ನೋಡಿ ಅಂದಿನಿಂದಲೇ ಕಾಂಗ್ರೆಸ್ಸಿನ ಧೋರಣದ ವಿಚಾರವಾಗಿ ಟೀಕಿಸಲಾರಂಭಿಸಿದೆ. ಆಗಿನ ಪತ್ರಿಕೆಗಳನ್ನಾದರೂ ಹುಡುಕಿ ಓದಿನೋಡಿರಿ.

ಅನ್ಯರಿಗೆ ರಾ| ಬ| ಪದವಿ ದೊರೆತುದಕ್ಕಾಗಿ ಅವರ ಬ್ಲಾಕ ಹಾಕಿ ಅವರ ಬಗ್ಗೆ ಬರೆದ ರಾಷ್ಟ್ರೀಯ "ಉಜ್ವಲ" ಪತ್ರಿಕೆಗಳ ಹೆಸರನ್ನು ಹೇಳಬೇಕೆ? ಕಾಂಗ್ರೆಸ್ ಪಕ್ಷದ ಹುರಿಯಾಳುಗಳಲ್ಲದ ಶ್ರೀ. ನಲವಡಿಯವರ ಮತ್ತು ಶ್ರೀ. ಶಂಕರಗೌಡರ ಬ್ಲಾಕ್ ಹಾಕಿ ಪ್ರಸಿದ್ಧಿಸಿದ "ಕಾಂಗ್ರೆಸ್" ಪತ್ರಿಕೆಯ ಹೆಸರನ್ನು ಹೇಳಬೇಕೆ? ಹಾಗೆ ಮಾಡಿದ್ದರಿಂದ ಅವು ಅವರವರ ಪಕ್ಷದ ಪತ್ರಿಕೆಯಾದವೆ?

ರಾಯಚೂರು ಮಹಾ ಸಭೆಯಲ್ಲಾದ ಠೀವರ್ಮಾನಕ್ಕೆ ರಾಷ್ಟ್ರದ್ರೋಹಿಗಳ ಠೀವರ್ಮಾನವೆಂದು ಹೇಳಿದವರೇ ಈಗ ಅಧಿಕಾರವನ್ನು ಸ್ವೀಕರಿಸಿ ರಾಜನಿಷ್ಠೆಯ ಶಪಥವನ್ನು ಮಾಡಿದರಲ್ಲವೆ? ಇವರು ಈಗ ರಾಷ್ಟ್ರದ್ರೋಹಿಗಳೆ? ತಾವು ಮಾಡಿದರೆ ರಾಷ್ಟ್ರ ಸೇವೆ. ಅದನ್ನೇ ಅನ್ಯರು ಹೇಳಿದರೆ ರಾಷ್ಟ್ರದ್ರೋಹ!

ಪ್ರಶ್ನೆ— ಇಷ್ಟೆಲ್ಲಾ ತತ್ವಗಳನ್ನು ವರ್ತಮಾನಪತ್ರ ಓದುವವರೇನು ಬಲ್ಲರು? ನನಗಿಂತ ತಿಳಿದವರು ನಿಮ್ಮ ಪತ್ರಿಕೆಯನ್ನು ಓದುವವರಲ್ಲಿ ಕಡಿಮೆ ಇರಬಹುದು. ನನಗೇನೇ ನಿಮ್ಮ ಪತ್ರಿಕೆ ಕಾಂಗ್ರೆಸ್ಸಿನ ವಿರೋಧ ಪತ್ರಿಕೆಯೆಂದು ತೋರುತ್ತದೆ. ಅಂದಮೇಲೆ ಬೇರೆ ಜನರಿಗೆ ಹೇಗೆ ಕಾಣುತ್ತಿರಬಹುದು? ದಡ್ಡ ಜನರಿಗೆ ನಿಮ್ಮ ಬರವಣಿಗೆಯಿಂದ ತಪ್ಪು ತಿಳುವಳಿಕೆಯಾಗಿ ಕೇಡಾಗುತ್ತದೆಂದ ಮೇಲೆ ನೀವಾದರೂ ಎಲ್ಲರಂತೆ ಕಾಂಗ್ರೆಸ್ಸಿನ ಬಗ್ಗೆ ಒಳ್ಳೆಯದನ್ನೇ ಬರೆಯಿರಿ. ತಪ್ಪು ಕಂಡದ್ದನ್ನು ಬರೆಯದೆ ಬಿಟ್ಟರಾಯಿತು ಇದರಿಂದ ಪತ್ರಿಕೆಯೂ ಹೆಚ್ಚು ಪ್ರಸಾರವಾಗುವುದು.

ಉತ್ತರ— ತಮ್ಮ ಪಕ್ಷದ ವಿನಾ ಬೇರೆ ಪಕ್ಷದ ವಿಚಾರಗಳೇ ಜನರಲ್ಲಿ ಸೇರದೆ ಅವರು ತಮ್ಮನ್ನೇ ಹಿಂಬಾಲಿಸಬೇಕೆಂಬ ಈ ನಿಮ್ಮ ಯುಕ್ತಿಯು ಅನೇಕರಿಗೆ ಮಾನ್ಯವಿರಬಹುದು. ಅದರಂತೆಯೇ ಅವರು ಗಾಳಿ ಬೀಸಿದಕಡೆ ನಡೆದು ಪತ್ರಿಕೆಯ ಪ್ರಸಾರವಾದರೆ ಸಾಕೆಂತಲೂ ಹಾಗೆ ಬರೆಯುತ್ತಿರಬಹುದು. ಇದಕ್ಕಾಗಿ ಶರಣ ಸಂದೇಶದ ಜನ್ಮವಾಗಿಲ್ಲ. ಪತ್ರಿಕೆಯನ್ನು ನಿಲ್ಲಿಸಿಬಿಡುವುದು ನಮಗೆ ವಿಹಿತ ತೋರುತ್ತದೆಯೇ ವಿನಾ ಅದರ ಪ್ರಸಾರವಾಗುವುದಕ್ಕಾಗಿ ಜನರಿಗೆ ಬೇಕಾದುದನ್ನೇ ಬರೆಯುವುದು ನಮಗೆ ಇಷ್ಟವಿಲ್ಲ.

ಕಾಂಗ್ರೆಸ್ ಪಕ್ಷವೇ ಮೊನ್ನೆ ಅಧಿಕಾರವನ್ನು ಸ್ವೀಕರಿಸುವಾಗ ಜನರ ಅಭಿಪ್ರಾಯವನ್ನು ಲಕ್ಷಿಸಿ ಸ್ವೀಕರಿಸಬೇಕಾಯಿತೆಂದು ಹೇಳಿದೆ. ಎಂದಮೇಲೆ ಜನಾಭಿಪ್ರಾಯವೇ ಮುಖ್ಯವೆಂದು ಹೇಳುವವರೂ ನೀವೇ. ಜನರಿಗೆ ಬೇರೆ ವಿಚಾರ ಬರದಂತೆ ಕಾಂಗ್ರೆಸ್ಸಿನ ಕಾರ್ಯಕ್ರಮಗಳನ್ನೇ ಉಘೋ! ಉಘೋ! ಎಂದು ಹೊಗಳುತ್ತಾ ಇರಬೇಕೆಂಬುವವರೂ ನೀವೆ!

# ಮುಂಬೈ ಅಸೆಂಬ್ಲಿಯ ಕಾರ್ಯಕಲಾಪ.

ಮುಂಬೈ ಅಸೆಂಬ್ಲಿಯ ಕಳೆದವಾರದ ಕಾರ್ಯಗಳಲ್ಲಿ ಈ ಕೆಳಗಿನ ಚರ್ಚೆಗಳು ಬಹು ಮುಖ್ಯವಾದವುಗಳಿದ್ದವು.

## ಮಂತ್ರಿಗಳ ವೇತನ.

ತಾ. ೨೩ ನೆಯ ದಿವಸ ಮುಖ್ಯ ಮಂತ್ರಿಗಳಾದ ಶ್ರೀ. ಖೇರ ಇವರು ಮಂತ್ರಿಗಳ ವೇತನದ ಸಂಬಂಧವಾಗಿ ಈ ಕೆಳಗಿನ ಅಭಿಪ್ರಾಯದ ಗೊತ್ತುವಳಿಯನ್ನು ಅಸೆಂಬ್ಲಿಯ ಮುಂದಿಟ್ಟರು.

"ಪ್ರತಿಯೊಬ್ಬ ಮಂತ್ರಿಗಳಿಗೂ ತಿಂಗಳಿಗೆ ೫೦೦ ರೂ. ಸಂಬಳ ೧೦೦ ರೂ. ಮನೆ ಭಾಡಿಗೆ, ೧೫೦ ರೂ. ಮೋಟಾರ ಅಲಾವನ್ಸ್ ದೊರೆಯಬೇಕು."

ಈ ಗೊತ್ತುವಳಿಯನ್ನು ಇಡುವಾಗ ಮುಖ್ಯ ಮಂತ್ರಿಗಳು ಹೀಗೆ ಹೇಳಿದರು— "ಮುಖ್ಯ ಮಂತ್ರಿಗಳಿಗೆ ತಿಂಗಳಿಗೆ ೪೦೦೦ ರೂ. ಮತ್ತು ಬೇರೆ ಮಂತ್ರಿಗಳಿಗೆ ೩೫೦೦ ರೂ. ದೊರೆಯಬೇಕೆಂದು ಮೊದಲು ಯೋಜನೆಮಾಡಿತ್ತು. ನಾವು ಸ್ವಾರ್ಥತ್ಯಾಗದ ಭಾವನೆಯಿಂದ ೫೦೦ ರೂ. ವೇತನವನ್ನು ಗೊತ್ತುಮಾಡಿದ್ದೇವೆ. ಇದಕ್ಕೆ ಅಸೆಂಬ್ಲಿಯು ಒಪ್ಪುವುದೆಂದು ನಾನು ನಂಬಿದ್ದೇನೆ."

## ಡಾ. ಆಂಬೇಡಕರರ ವಿರೋಧ.

ಸ್ವತಂತ್ರ ಕೂಲಿಕಾರರ ಪಕ್ಷದ ಪ್ರಮುಖರಾದ ಡಾ. ಆಂಬೇಡಕರರು ಇದಕ್ಕೆ ವಿರೋಧವಾಗಿ ಭಾಷಣಮಾಡುವಾಗ ಹೀಗೆ ಹೇಳಿದರು—

"ಮಂತ್ರಿ ಮಂಡಲದಲ್ಲಿ ಅಲೌಕಿಕ ಬುದ್ಧಿಶಾಲಿಗಳಿರಬೇಕಾಗುತ್ತದೆ. ಎಂದಮೇಲೆ ಅವರಿಗೆ ತೃಪ್ತಿಕರವಾದಷ್ಟು ವೇತನ ಬೇಕೇಬೇಕು. ೪ ಸಾವಿರ ರೂ. ಕೊಡಿರೆಂದು ನಾನು ಹೇಳುವುದಿಲ್ಲ. ಆದರೆ ೫೦೦ ರೂ. ಬಹು ಕಡಿಮೆ. ಬ್ರಿಟಿಶ್ ಸಾಮ್ರಾಜ್ಯದ ಇತರ ವಸಾಹತ ದೇಶಗಳಲ್ಲಿಯ ವೇತನ ಸರಾಸರಿ ೨೦೦೦ ರೂ. ಇದೆ.

ನಮ್ಮ ದೇಶದಲ್ಲಿ ಬ್ರಾಹ್ಮಣಾದಿ ವರ್ಣಗಳ ವ್ಯವಸ್ಥೆಯಿಂದ ಶಿಕ್ಷಣವು ಒಂದು ಚಿಕ್ಕ ಸಮಾಜದ ಸ್ವಾಧೀನವಾಗಿಬಿಟ್ಟಿದೆ. ಸಮಾಜದಲ್ಲಿಯ ಈ ದೋಷವನ್ನು ಇಂಗ್ಲಿಷ್ ಸರಕಾರಕ್ಕೆ ಕೂಡಾ ಕಳೆಯಲು ಸಾಧ್ಯವಾಗಲಿಲ್ಲ. ಯಾರಿಗೆ ಎಲ್ಲಿಯೂ ಏನೂ ದೊರೆಯುವದಿಲ್ಲವೋ ಅವರು ಮಂತ್ರಿಮಂಡಲದಲ್ಲಿ ಸೇರಬಹುದು. ಸ್ವಾರ್ಥತ್ಯಾಗದ ಈ ಹೊಳಪಿನ ಮಾತಿನಿಂದ ಜನರ ಕಣ್ಣಲ್ಲಿ ಮಣ್ಣು ತೂರಬೇಡಿರಿ. ಹರಿಜನ ಪತ್ರಿಕೆಯಲ್ಲಿ ಬರೆದಂತೆ ತಿಂಗಳಿಗೆ ೭೫ ರೂ. ಏಕೆ ತೆಗೆದುಕೊಳ್ಳಬಾರದು? ಎತ್ತಿನ ಬಂಡಿಯಲ್ಲಿ ಏಕೆ ಹೋಗಬಾರದು? ಮಂತ್ರಿಪದವು ಯಾವಾಗಲೂ ತಮ್ಮ ಕೈಯಲ್ಲಿಯೇ ಇರಬೇಕೆಂಬುದಕ್ಕೆ ಇದೊಂದು ಉಪಾಯ"

ಲೋಕಶಾಹಿ ಸ್ವರಾಜ್ಯ ಪಕ್ಷದ ಬ್ಯಾ. ಮೆಹತಾರವರು ಮತ್ತು ಮುಸ್ಲಿಂ ಲೀಗಿನ ಖಾ. ಬ. ಅಬ್ದುಲ್ ಲತೀಫರು ಮುಖ್ಯ ಮಂತ್ರಿಗಳ ಗೊತ್ತುವಳಿಯನ್ನು ವಿರೋಧಿಸಿದರು. ಆ ಮೇಲೆ ಮುಖ್ಯ ಮಂತ್ರಿಗಳು ಉತ್ತರವಾಗಿ ಭಾಷಣಮಾಡುವಾಗ ಹೀಗೆ ಹೇಳಿದರು—

"ವರ್ಣ ವ್ಯವಸ್ಥೆಯಿಂದ ಮೊದಲು ಕೆಲವರಿಗೆ ಶಿಕ್ಷಣ ದೊರೆಯುತ್ತಿರಲಿಲ್ಲವೆಂದು ಡಾ. ಆಂಬೇಡಕರರು ಹೇಳಿದರು. ಅದು ನಿಜ. ಈಗ ದೊರೆಯುತ್ತಿದ್ದುದರಿಂದ ಎಂತಹ ವಿದ್ವಾಂಸರು ದೊರೆಯುತ್ತಿದ್ದಾರೆಂಬುದಕ್ಕೆ ಡಾಕ್ಟರ್ ಮಹಾಶಯರೇ ದೃಷ್ಟಾಂತವಾಗಿದ್ದಾರೆ. ಹಿಂದಿನ ಬ್ರಾಹ್ಮಣರು ಅಧ್ಯಯನ ಮತ್ತು ಅಧ್ಯಾಪನಗಳಲ್ಲಿಯೇ ಆಸಕ್ತರಾಗಿದ್ದರು. ಆಗ ಅವರು ದಾರಿದ್ರ್ಯದ ವ್ರತವನ್ನೇ ಸ್ವೀಕರಿಸಿದ್ದರು. ಅದನ್ನು ಈಗ ಬಿಟ್ಟದ್ದರಿಂದಲೇ ಅವರ ವಿದ್ವತ್ತು ಮತ್ತು ಮಹತ್ವ ಹೋಗಿವೆ. ಸಾರ್ವಜನಿಕ ದೃಷ್ಟಿಯಿಂದಲೇ ನಾವು ೭೫ ರೂ. ಗಳಿಗೆ ಪ್ರತಿಯಾಗಿ ೫೦೦ ರೂಗಳನ್ನು ತೆಗೆದುಕೊಳ್ಳುತ್ತಿದ್ದೇವೆ."

## ಬೀಳು ಭೂಮಿಯನ್ನು ಕೊಡುವ ಆಗ್ರಹ.

ಯಾರಿಗೆ ಸ್ವಂತ ಭೂಮಿಯಿಲ್ಲವೋ ಆದರೆ ಅವರು ಒಕ್ಕಲತನದ ಕೂಲಿಯಿಂದಲೇ ಜೀವಿಸುತ್ತಿದ್ದಾರೆಯೋ ಅಂಥವರಿಗೆ ಬೀಳು ಭೂಮಿಯನ್ನು ಸರಕಾರದವರು ಕೊಟ್ಟು ದೇಶದ ಆದಾಯವನ್ನು ಹೆಚ್ಚಿಸಲು ಪ್ರಯತ್ನಿಸಬೇಕೆಂಬ ಅಭಿಪ್ರಾಯವನ್ನು ವ್ಯಕ್ತಗೊಳಿಸಲು ಶ್ರೀ. ಪರೂಳೆಕರ ಎಂಬುವವರು ಒಂದು ಸೂಚನೆಯನ್ನು ತಂದರು. ಇದಕ್ಕೆ ಬ್ಯಾ. ಜಮನಾದಾಸರು ಒಪ್ಪಿಗೆ ಕೊಡುವಾಗ ಹೀಗೆ ಹೇಳಿದರು—

"ಮುಂಬೈ ಇಲಾಖೆಯಲ್ಲಿ ೨ ಕೋಟಿ ಜನ ಸಂಖ್ಯೆಯಿದೆ. ವಾರ್ಷಿಕ ಧಾನ್ಯದ ಉತ್ಪನ್ನ ೨೦ ಲಕ್ಷ ಟನ್ ಮಾತ್ರ ಇದೆ. ಒಬ್ಬ ಮನುಷ್ಯನಿಗೆ ಪ್ರತಿನಿತ್ಯ ಮೂರರಲ್ಲಿ ಎರಡು ಭಾಗದಷ್ಟು ಪೌಂಡು ಧಾನ್ಯಕೂಡಾ ದೊರೆಯುವುದಿಲ್ಲ. ಸರಕಾರವು ಬೀಳು ಭೂಮಿಯನ್ನು ಸಾಗುವಳಿಗೆ ಕೊಟ್ಟರೆ ಈ ಪ್ರಾಂತವನ್ನು ನಂದನವನವನ್ನಾಗಿ ಮಾಡಬಹುದು. ಸರಕಾರವು ತಾಳಿರೆಂದು ಹೇಳುತ್ತದೆ. ನಾವು ಈಗ ೧೫೦ ವರುಷಗಳಿಂದಲೂ ತಾಳುವುದರಿಂದಾದ ಫಲವನ್ನು ನೋಡುತ್ತಲೇ ಬಂದಿದ್ದೇವೆ."

ಇದಕ್ಕೆ ಉತ್ತರವಾಗಿ ಭೂಕಂದಾಯದ ಮಂತ್ರಿಗಳಾದ ಶ್ರೀ. ಮುರಾರಜಿ ದೇಸಾಯಿಯವರು ಈ ಪ್ರಕಾರ ಹೇಳಿದರು—

"ಸರಕಾರದ ಕಡೆಗಿರುವ ೧೧ ಲಕ್ಷ ಎಕರೆ ಬೀಳು ಭೂಮಿಯಲ್ಲಿ ಸಾಗುವಳಿಗೆ ಬರುವ ಭೂಮಿ ಒಂದು ಲಕ್ಷ ಎಕರೆಯಾದರೂ ಇದೆಯೋ? ಇಲ್ಲವೋ? ಕೂಲಿಯ ಒಕ್ಕಲಿಗರಿಗೆ ಬೀಳು ಭೂಮಿಯನ್ನು ಕೊಟ್ಟರೆ ನೂರರಲ್ಲಿ ೧೦ ಜನರಿಗಾದರೂ ಭೂಮಿ ದೊರೆಯಲಾರದು. ಒಕ್ಕಲಿಗರ ಉನ್ನತಿಗಾಗಿ ನಮಗೂ ವಿಶೇಷ ಪ್ರಯತ್ನಿಸುವ ಇಚ್ಛೆಯಿದೆ. ಆದರೆ ಈಗಿನ ಶಾಸನದಂತೆ ಶಕ್ಯವಿದ್ದಷ್ಟನ್ನೇ ಮಾಡಬೇಕಾಗಿದೆ. ಆದುದರಿಂದ ಈ ಸಂಬಂಧವಾಗಿ ಯೋಚಿಸಿ ಮುಂದಿನ ಆಯವ್ಯಯ ಪತ್ರಿಕೆಯಲ್ಲಿ ತಿಳಿಸಲಾಗುವುದು."

ಈ ಸೂಚನೆಗೆ ೪೯ ಅನುಕೂಲ ೯೫ ಪ್ರತಿಕೂಲ ಮತಗಳು ದೊರೆತು ಸೂಚನೆಯು ಬಿದ್ದು ಹೋಯಿತು. ಆಮೇಲೆ ಒಕ್ಕಲಿಗರ ಸಂರಕ್ಷಣೆಯ ವಿಚಾರವಾಗಿ ಶ್ರೀ. ಪರೂಳೆಕರ್ ಇವರು ಮತ್ತೊಂದು ಸೂಚನೆಯನ್ನು ತಂದು ಸರಕಾರವು ನಮ್ಮ ಹೇಳಿಕೆಯನ್ನು ಸಹಾನುಭೂತಿಯಿಂದ ವಿಚಾರಮಾಡಬೇಕೇ ವಿನಾ ಪಕ್ಷದ ಬಲದಿಂದ ಹೀಗೆ ತಳ್ಳಿಬಿಡಬಾರದಾಗಿ ತಿಳಿಸಿದರು.

## ಅಸೆಂಬ್ಲಿಯಲ್ಲಿ ಮೊದಲನೆಯ ಕನ್ನಡ ಭಾಷಣಕಾರರು.

ಆ ಮೇಲೆ ಶ್ರೀ. ದೊಡ್ಡಮೇಟಿ ಅಂದಾನಪ್ಪನವರು ಕನ್ನಡದಲ್ಲಿ ಭಾಷಣಮಾಡಿದರು. ಇವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಕಾಂಗ್ರೆಸ್ಸಿನ ರಾಜ್ಯದಲ್ಲಿ ಶ್ರೀಮಂತರಿಗೆ ಒಂದು ಬಡವರಿಗೆ ಮತ್ತೊಂದು, ಕಾರ್ಯಾಲಯದವರಿಗೊಂದು, ಕೂಲಿಕಾರರಿಗೆ ಮತ್ತೊಂದು, ಹೀಗೆ ಭಿನ್ನ ರೀತಿಯ ಶಾಸನವಿಲ್ಲ. ಮಹಾತ್ಮಾ ಗಾಂಧಿಯವರ ಸ್ವರಾಜ್ಯ ಕಲ್ಪನೆಯು ಹೀಗೇನೂ ಇಲ್ಲ."

ಇವರ ಭಾಷಣ ನಡೆದಾಗ ಅನೇಕರು ನಗುತ್ತಾ ಗದ್ದಲ ಮಾಡಿದರು. ಆಗ ಅಧ್ಯಕ್ಷರು ಎಲ್ಲರೂ ಶಾಂತತೆಯಿಂದ ಕೇಳಬೇಕಾಗಿ ಸೂಚಿಸಿದರು. ಶ್ರೀ. ಪರೂಳೆಕರರು ಇವರ ಭಾಷಣವು ವಿಷಯಕ್ಕೆ ಸಂಬಂಧಪಟ್ಟಿಲ್ಲವೆಂದು ವಿರೋಧಿಸಿದರು. ಅಧ್ಯಕ್ಷರು ಆ ವಿರೋಧವನ್ನು ತಡೆದು ಇವರ ಭಾಷಣವು ವಿಷಯಕ್ಕೆ ಸಂಬಂಧಿಸಿದೆಯೆಂದೇ ತಿಳಿಸಿದರು. ಕೊನೆಗೆ ಈ ಸೂಚನೆಯು ಬಿದ್ದು ಹೋಯಿತು.




ಶಾ. ಶ. ೧೮೫೯ ನೆಯ ಶ್ರಾವಣ ಬ|| ೯ ಸೋಮವಾರ.

## ಇದು ಪಾಪದ ಪ್ರದರ್ಶನ!

ಹಿಂದು ಸಮಾಜದಲ್ಲಿ ಬಹು ಕಾಲದಿಂದಲೂ ಅನೇಕ ಹೀನ ಆಚಾರ ವಿಚಾರಗಳು ಇದ್ದೇ ಇವೆ. ಅವು ಆಗಾಗ್ಗೆ ಪ್ರಕಟವಾಗಿ ಜನಾಂಗಕ್ಕೆ ಅನೇಕ ಅಪಾಯುಗಳನ್ನು ಉಂಟುಮಾಡುತ್ತಲೂ ಇರುತ್ತವೆ. ಆಗ ಅವುಗಳನ್ನು ನೋಡಿ ದೇಶ ಸುಧಾರಕರು ಜಾಗೃತರಾಗಿ ಸಮಾಜದಲ್ಲಿ ವ್ಯಾಪಿಸಿರುವ ಅಂಥ ಹೀನ ಪ್ರವೃತ್ತಿಗಳನ್ನು ನಿರ್ಮೂಲಮಾಡಲು ಪ್ರಚಂಡವಾದ ಪ್ರಯತ್ನವನ್ನು ಮಾಡಬೇಕು. ಇಲ್ಲದಿದ್ದರೆ ಆ ಪಾಪವೃತ್ತಿಗಳೇ ಜನಾಂಗದ ನಾಶಕ್ಕೆ ಕಾರಣವಾಗುತ್ತವೆ.

### ಪಾದರಕ್ಷೆಗಳ ವೃಷ್ಟಿ!

ಬ್ಯಾ. ಸಾವರಕರರು ಮೊನ್ನೆ ಸೋಲ್ಲಾಪುರಕ್ಕೆ ಆಗಮಿಸಿದಾಗ ಅಲ್ಲಿಯ ಬಹು ಜನ ನಾಗರಿಕರೇನೋ ಸಮಾರಂಭದಿಂದಲೇ ಅವರನ್ನು ಬರಮಾಡಿಕೊಂಡು ಅವರ ವಿಷಯದಲ್ಲಿರತಕ್ಕ ತಮ್ಮ ಆದರಾಭಿಮಾನಗಳನ್ನು ವ್ಯಕ್ತಗೊಳಿಸಿದರು. ಆದರೆ ಅನೇಕರು ಅವರ ಮೇಲೆ ಅನೇಕ ಕೊಳೆ ಪದಾರ್ಥಗಳನ್ನೂ ಪಾದರಕ್ಷೆಗಳನ್ನೂ ಯಥೇಚ್ಛವಾಗಿ ಎಸೆದು ತಮ್ಮ ಪಾಪವೃತ್ತಿಯನ್ನು ಪ್ರದರ್ಶಿಸಿದರು.

ಬ್ಯಾ. ಸಾವರಕರರ ಮೇಲಿನ ಈ ಅತ್ಯಾಚಾರವು ವ್ಯಕ್ತಿದ್ವೇಷದಿಂದಾದುದಲ್ಲ. ಇದೊಂದು ಸಾರ್ವಜನಿಕ ಮನೋವೃತ್ತಿಯ ದ್ಯೋತಕವು. ಹಿಂದು ಸಮಾಜದಲ್ಲಿರುವ ಒಂದು ವಿಧವಾದ ಪಾಪದ ಪ್ರದರ್ಶನವೇ ಇದು. ಅಂತೆಯೇ ಇದರ ಮೂಲ, ವ್ಯಾಪಕತೆ, ಮತ್ತು ಪರಿಣಾಮುಗಳನ್ನು ಕುರಿತು ಸರಿಯಾಗಿ ಯೋಚಿಸಿ ಯುಕ್ತವಾದ ಪ್ರಯತ್ನಗಳನ್ನು ಮಾಡುವುದು ಅತ್ಯಗತ್ಯವು.

ಸ್ವಾತಂತ್ರ್ಯ ವೀರರಾದ ಸಾವರಕರರ ಮೇಲೆ ಈ ಅತ್ಯಾಚಾರಗಳನ್ನು ಕೆಲವು ಸನಾತನಿಗಳು ಮಾಡಿದರೆಂದು ಅನೇಕರು ಹೇಳುತ್ತಿದ್ದರೆ, ಕಾಂಗ್ರೆಸ್ ಪಕ್ಷದ ಕೆಲವರು ಈ ನಿಂದ್ಯ ಕಾರ್ಯಗಳನ್ನು ಮಾಡಿದರೆಂದು ಹಲವರು ಹೇಳುತ್ತಿದ್ದಾರೆ. ಇವರಲ್ಲಿ ಯಾರು ಯಾರು ಈ ಹೀನ ಕಾರ್ಯ ಮಾಡಿದರೆಂಬುದೇನೂ ಮುಖ್ಯವಾದ ಪ್ರಶ್ನೆಯಲ್ಲ. ಆದರೆ ಇಂಥ ಪೂಜ್ಯ ವಿಭೂತಿಯ ಮೇಲೆ ಇಂಥ ಪಾಪಕೃತ್ಯಗಳೂ ಏಕೆ ಮಾಡಲ್ಪಡುತ್ತವೆಂಬುದೇ ಮುಖ್ಯ ಪ್ರಶ್ನೆಯು.

ದೇಶಭಕ್ತ ಸಾವರಕರರು ರಾಜಕೀಯ ವಿಷಯದಲ್ಲಿ ಸ್ವಾತಂತ್ರ್ಯವಾದಿಗಳಾಗಿದ್ದಾರೆ. ಇವರಲ್ಲಿರುವ ಉಜ್ವಲವಾದ ಸ್ವಾತಂತ್ರ್ಯ ಪ್ರೇಮದ ವಿಷಯದಲ್ಲಿ ಯಾವ ಪಕ್ಷದ ಯಾವ ವ್ಯಕ್ತಿಯೂ ಎಳ್ಳಷ್ಟಾದರೂ ಸಂಶಯವನ್ನು ಹೊಂದಲಿಕ್ಕಿಲ್ಲ. ಆದರೆ ಸ್ವಾತಂತ್ರ್ಯವನ್ನು ಸಂಪಾದಿಸುವ ವಿಷಯದಲ್ಲಿ ಇವರು ಈಗ ದೇಶದಲ್ಲಿ ಪ್ರಚಂಡವಾಗಿರುವ ಕಾಂಗ್ರೆಸ್ ಪಕ್ಷಕ್ಕೆ ಮಾತ್ರ ಸೇರಿ ಆ ಮೂಲಕ ಕಾರ್ಯಮಾಡುವವರಾಗಿಲ್ಲ. ಕಾಂಗ್ರೆಸ್ಸಿನ ರೀತಿನೀತಿಗಳು ಅವರಿಗೆ ಸಂಪೂರ್ಣ ಮಾನ್ಯವಿಲ್ಲ.

ಇವರು ಸರಕಾರದ ಪ್ರತಿಬಂಧದಿಂದ ಬಿಡುಗಡೆಯಾದೊಡನೆ ಕಾಂಗ್ರೆಸ್ ಪಕ್ಷಕ್ಕೆ ಸೇರಿ ಹೀಗೆ ಸಂಚಾರ ಹೊರಟು ಕಾಂಗ್ರೆಸ್ಸಿನ ಪ್ರಚಾರ ಕಾರ್ಯವನ್ನು ಮಾಡಿದ್ದರೆ ಸೋಲ್ಲಾಪುರದಲ್ಲಿ ಮೊಚ್ಚೆಯ ಮಳೆಗರಿಯದೆ ಹೂವಿನ ಮಳೆಗರಿಯುತ್ತಿದ್ದಿತೆಂದು ಧಾರಾಳವಾಗಿ ಹೇಳಬಹುದು. ಇವರ ಸಾಮಾಜಿಕ ಮತ್ತು ಧಾರ್ಮಿಕ ವಿಚಾರಗಳು ಎಷ್ಟೋ ಜನರಿಗೆ ಎಷ್ಟೇ ಭಿನ್ನವಾಗಿದ್ದರೂ ಇಂಥ ಅತ್ಯಾಚಾರಗಳನ್ನು ಹೀಗೆ ಮಾಡಲು ಯಾರಿಗೂ ಧೈರ್ಯವಾಗುತ್ತಿರಲಿಲ್ಲ.

ಈಗ ಕಾಂಗ್ರೆಸ್ಸಿನಲ್ಲಿರುವವರೆಲ್ಲರೂ ಧಾರ್ಮಿಕ ಮತ್ತು ಸಾಮಾಜಿಕ ವಿಚಾರಗಳಲ್ಲಿ ಸನಾತನಿಗಳಾಗಿದ್ದಾರೆಯೆ? ಧರ್ಮವೇ ಬೇಡವೆಂದು ಹೇಳುವವರಿಲ್ಲವೆ? ಯಾವ ಕುಲ ಜಾತಿಗಳನ್ನೂ ಎಣಿಸದೆ ಬೇಕಾದಲ್ಲಿ ಬೇಕಾದುದನ್ನು ಉಂಡು ಉಡುವವರೂ ಇಲ್ಲವೆ? ಆದರೆ ಅವುಗಳೆಲ್ಲಾ ಮುಚ್ಚಿ ಹೋಗಿ ಅವರ ರಾಷ್ಟ್ರಸೇವೆ ಬೆಳಗುತ್ತಿರುವುದೇಕೆ? ಹೋದಲ್ಲೆಲ್ಲ ಹೂವಿನ ಮಳೆಗರೆಯುತ್ತಿರುವುದೇಕೆ? ಅವರು ಕಾಂಗ್ರೆಸ್ಸಿನಲ್ಲಿ ಸೇರಿ ಕೆಲಸಮಾಡುತ್ತಿದ್ದಾರೆಂದು.

ಕಾಂಗ್ರೆಸ್ಸಿನ ವಿರುದ್ಧವಾಗಿ ಮತಪ್ರದರ್ಶಿಸಿದರೆ ಪುಷ್ಪಕ್ಕೆ ಬದಲಾಗಿ ಪಾದರಕ್ಷೆಗಳು ಬಂದವೆಂದೇ ತಿಳಿಯಬೇಕು! ಬ್ಯಾ. ಸಾವರಕರರ ಮೇಲೆ ಈಗ ಹೆಚ್ಚು ಪಾದರಕ್ಷೆಗಳು ಬಂದಿದ್ದರೆ ಪಂಡಿತ ಮಾಲವೀಜಿಯವರ ಮೇಲೆ ಒಂದೆರಡು ಬಂದಿದ್ದವು. ನಾಳೆ ಪಂಡಿತ ಜವಾಹರಲಾಲರು ಕಾಂಗ್ರೆಸ್ಸಿನ ವಿರುದ್ಧವಾಗಿ ಸಮತಾವಾದದ ಪ್ರಚಾರಕ್ಕೆ ಹೊರಟರೆ ಅವರಿಗೂ ಇದೇ ಬಹುಮಾನ ಬಂದೇ ಬರುವುದು!

ಭಿನ್ನ ವಿಚಾರಸರಣಿಯ ಅಲ್ಪ ಸಂಖ್ಯಾಕರ ವಿಷಯದಲ್ಲಿ ಅಸಹಿಷ್ಣುತೆಯುಂಟಾಗಿ ಇಂಥ ಅತ್ಯಾಚಾರಗಳು ನಡೆಯುವುದು ಅವರಲ್ಲಿರುವ ಪಾಪದ ಪ್ರದರ್ಶನವೆಂದೇ ತಿಳಿಯಬೇಕು. ವಿಚಾರ ಸ್ವಾತಂತ್ರ್ಯಕ್ಕೆ ಹೀಗೆ ಪ್ರತಿಬಂಧವಾಗುವುದು ರಾಷ್ಟ್ರಕ್ಕೆ ಮಹತ್ತರವಾದ ಅನರ್ಥವೇ ಸರಿ. ಮಹಾತ್ಮಾ ಗಾಂಧಿಯವರು ಪರಮತ ಸಹಿಷ್ಣುತೆಯ ವಿಚಾರವಾಗಿ ಆಗಾಗ್ಗೆ- ಮುಖ್ಯವಾಗಿ ಕಾಂಗ್ರೆಸ್ ಪಕ್ಷದವರಿಗೆ- ಬೋಧಿಸುತ್ತಿರುವುದನ್ನು ಪ್ರತಿಯೊಂದು ಸ್ಥಳದ ಕಾಂಗ್ರೆಸ್ ಪ್ರಮುಖರೂ ಸ್ಥಳೀಯ ಕಾಂಗ್ರೆಸ್ ಸದಸ್ಯರಿಗೆ ತಿಳಿಸಿ ಅವರಿಂದ ಇಂಥ ಅತ್ಯಾಚಾರಗಳು ನಡೆಯದಂತೆ ಪ್ರಯತ್ನಿಸುವುದು ಅತ್ಯಾವಶ್ಯಕವಾಗಿದೆ. ಕಾಂಗ್ರೆಸ್ಸಿನ ವಿಷಯದಲ್ಲಿರುವ ಆದರಾಭಿಮಾನಗಳಿಗೆ ಕೊರತೆಯನ್ನುಂಟುಮಾಡುವ ಇಂಥ ಪುಂಡರ ಕೃತಿಗಳನ್ನು ಎಲ್ಲರೂ ಖಂಡಿಸಿ ಪರಮತಸಹಿಷ್ಣುಗಳಾಗಿ ವರ್ತಿಸುವಂತೆ ಅವರನ್ನು ಸುಧಾರಿಸಬೇಕು.

ಸೊಲ್ಲಾಪುರ, ಬಾರ್ಶಿ, ಮೊದಲಾದ ಸ್ಥಳಗಳಲ್ಲಿ ಬ್ಯಾ. ಸಾವರಕರರ ಮೇಲಾದ ಈ ಅತ್ಯಾಚಾರವು ಕಾಂಗ್ರೆಸ್ ಪಕ್ಷದಿಂದ ಎಷ್ಟು ನಿಷೇಧಿಸಲ್ಪಡಬೇಕಾಗಿದ್ದಿತೋ ಅಷ್ಟು ನಿಷೇಧಿಸಲ್ಪಡದಿದ್ದುದು ವಿಷಾದದ ಸಂಗತಿಯು. ಬೇರೆ ಪಕ್ಷದವರಿಗೆ ಅವಮಾನವಾದರೆ ನಮಗೇನೆಂದೋ ಅಥವಾ ಇದೇನು ಅಷ್ಟು ಮಹತ್ವದ ವಿಷಯವಲ್ಲವೆಂದೋ ಅನೇಕರಿಂದ ಉಪೇಕ್ಷಿಸಲ್ಪಟ್ಟಿರಬಹುದು. ಇದು ಯುಕ್ತವಲ್ಲ. ಮೊದಲೇ ಕಾಂಗ್ರೆಸ್ ಪಕ್ಷವು ಬಹು ದೊಡ್ಡದಾಗಿದೆ. ಇದು ಅಹಿಂಸೆ, ವ್ಯಕ್ತಿ ಸ್ವಾತಂತ್ರ್ಯಗಳನ್ನು ಸಾರುವುದಾಗಿದೆ. ಎಂದಮೇಲೆ ಚಿಕ್ಕ ಪಕ್ಷದವರ ಮೇಲೆ ಹೀಗೆ ಅತ್ಯಾಚಾರವಾಗದಂತೆ ನೋಡಿಕೊಳ್ಳುವುದು ಇದರ ಮೇಲೆ ಹೆಚ್ಚಿನ ಹೊಣೆಗಾರಿಕೆಯಿದೆ. ಇದಲ್ಲದೆ ಈ ಪಕ್ಷವೇ ಈಗ ಅಧಿಕಾರಾರೂಢವೂ ಆಗಿದೆ. ಎಂದಮೇಲೆ ಇದು ತನ್ನ ಸತ್ಯ ಅಹಿಂಸಾದಿ ಶೀಲಗಳ ಕಡೆಗೆ ಹೆಚ್ಚು ಲಕ್ಷಿಸಬೇಕಾದುದು ಆಗತ್ಯವಲ್ಲವೆ?

**ಹಿಂದುತ್ವದ ಸಮಾಧಿಯ ಮೇಲೆ ಸ್ವಾತಂತ್ರ್ಯ ಧ್ವಜ!**

ಬ್ಯಾ. ಸಾವರಕರರು ರಾಜಕೀಯ ವಿಷಯದಲ್ಲಿ ಎಷ್ಟು ಸ್ವಾತಂತ್ರ್ಯಪ್ರಿಯರೋ ಅಷ್ಟೇ ಸಾಮಾಜಿಕ ವಿಷಯದಲ್ಲಿ ಸ್ವಾತಂತ್ರ್ಯವನ್ನು ಕೊಡುವವರಾಗಿದ್ದಾರೆ. ಈ ದೇಶದ ಮೇಲೆ ಪರರ ಪ್ರಭುತ್ವವಿರಬಾರದೆಂದು ಹೇಳುವಂತೆ ಹಿಂದು ಸಮಾಜದ ಮೇಲೆ ಯಾವುದೊಂದು ಜಾತಿಗೂ ಜನ್ಮವಿಶಿಷ್ಟವಾದ ಶ್ರೇಷ್ಠತೆಯ ವರ್ಚಸ್ಸು ಇರಬಾರದೆಂದೇ ಸಾರುವವರಾಗಿದ್ದಾರೆ.

ಹಿಂದುಗಳಲ್ಲಿರುವ ವರ್ಣ ವಿಶಿಷ್ಟವಾದ ಕೃತ್ರಿಮ ಮೇಲು ಕೀಳುಗಳು ರಾಜಕೀಯ ಪಾರತಂತ್ರ್ಯದಷ್ಟೇ ಭೀಕರವಾದವುಗಳೆಂತಲೂ ಅವು ಪಾರತಂತ್ರ್ಯದಂತೆಯೇ ಜಾಗ್ರತೆ ನಿವಾರಣೆಯಾಗಬೇಕೆಂತಲೂ ಹೇಳುವವರಾಗಿದ್ದಾರೆ. ರಾಜಕೀಯ ದೋಷದಂತೆಯೇ ಈ ಸಾಮಾಜಿಕ ದೋಷವೂ ಅವರಿಗೆ ಅಸಹ್ಯವಾಗಿ ತೋರುತ್ತದೆ. ಅಂತೆಯೇ ಹಿಂದು ಸಂಘಟನೆಗಾಗಿ ಪ್ರಬಲ ಕಾರ್ಯಗಳನ್ನೂ ಮಾಡುತ್ತಿದ್ದಾರೆ.

ಹೇಗಾದರೂ ರಾಜಕೀಯ ಸ್ವಾತಂತ್ರ್ಯವೊಂದು ದೊರೆಯಲಿ, ಸಾಮಾಜಿಕ ದೋಷಗಳನ್ನು ಎತ್ತಿ ಜನ ಬಲವನ್ನೇಕೆ ಕಡಿಮೆ ಮಾಡಿಕೊಳ್ಳಬೇಕು? ಎಂಬುವವರು ಇವರಲ್ಲ. ಹಿಂದು ಧರ್ಮ ಹಿಂದು ಸಂಸ್ಕೃತಿಗಳು ಹಾಳಾಗಿ ಹೋಗಲಿ. ನಮಗೆ ಬೇಕಾದುದು ರಾಜಕೀಯ ಸ್ವಾತಂತ್ರ್ಯ. ಆದುದರಿಂದ ಮುಸಲ್ಮಾನರ ಮನ ಒಲಿಸಲು ಹಿಂದುತ್ವದ ಸಮಾಧಿಯಾದರೂ ಸ್ವಾತಂತ್ರ್ಯ ಧ್ವಜವನ್ನು ನಿಲ್ಲಿಸಲಿಕ್ಕೆ ಸಾಹಸಪಡುವವರು ಇವರಲ್ಲ. ಸಾಮಾಜಿಕ ವಿಷಮತ್ವದಿಂದ ಹಿಂದುಗಳಲ್ಲಿಯ ಅಸಂಖ್ಯ ಜನರನ್ನು ಗುಲಾಮಗಿರಿಯಲ್ಲಿಟ್ಟುಕೊಂಡು ರಾಜಕೀಯ ಸ್ವಾತಂತ್ರ್ಯವೊಂದನ್ನು ಕೈವಶಮಾಡಿಕೊಳ್ಳುವ ಹಂಚಿಕೆಯವರೂ ಇವರಲ್ಲ. ಅತ್ತ ಸಮತಾವಾದಕ್ಕೆ ಕೈ ಎತ್ತಿ, ಇತ್ತ ಜನ್ಮವಿಶಿಷ್ಟ ವಿಷಮವಾದವನ್ನು ಬೆಳೆಯಿಸುವವರೂ ಇವರಲ್ಲ. ಇಂಥ ತಮ್ಮ ನಾನಾ ಬಣ್ಣಗಳೆಲ್ಲಾ ಕಾಂಗ್ರೆಸ್ಸಿನಲ್ಲಿ ಸೇರಿಬಿಟ್ಟರೆ ಹೊರಗೆ ಕಾಣುವುದಿಲ್ಲವೆಂದು ಕಾಂಗ್ರೆಸ್ಸಿನ ಮರೆಯಲ್ಲಿ ನಿಂತವರೂ ಇವರಲ್ಲ.

ಇವರು ನಿಜವಾಗಿಯೂ ಸ್ವಾತಂತ್ರ್ಯ ವೀರರು. ಕೇವಲ ರಾಜಕಾರಣದಲ್ಲಿಯೇ ಅಲ್ಲ. ಸಾಮಾಜಿಕ ವಿಷಯದಲ್ಲಿಯು ಕೂಡ. ಇವರ ಸಮಾಜ ಸುಧಾರಣೆ ನುಡಿಯಲ್ಲಿಯೇ ಅಲ್ಲ. ಅದು ನಡೆಯಲ್ಲಿಯು ಕೂಡ ಇದೆ. ಆ ನಡೆಯಾದರೋ ಜನ್ಮವಾದಿಗಳ ಕಣ್ಣು ಕುಕ್ಕುವಂತಹ ತೀಕ್ಷ್ಣವಾದುದು. ಸಾವಿರಾರು ವರುಷಗಳಿಂದ ಯಾವ ಜನರ ನೆಳಲು ಕೂಡಾ ತಮ್ಮ ಮೇಲೆ ಬೀಳಬಾರದೆಂದು ತಿಳಿದಿದ್ದರೋ ಆ ಜನರ ಕೈ ಅನ್ನವನ್ನು ಬಹಿರಂಗವಾಗಿ ಸಮಾರಂಭದೊಡನೆ ಸಾವಿರಾರು ಶ್ರೇಷ್ಠ ವರ್ಣದವರನ್ನು ಕೂಡಿಸಿಕೊಂಡು ಊಟಮಾಡುವ ರೀತಿ ಇವರದು.

ಎಂದಮೇಲೆ ಅನೇಕ ಸನಾತನಿಗಳಿಗೆ ಬ್ಯಾ. ಸಾವರಕರರು ಧರ್ಮನಾಶಕ ದೆವ್ವದಂತೆ ಕಂಡು ಅವರ ಕೈಯಿಗೆ ಪಾದರಕ್ಷೆಗಳು ಬಂದುದು ಆಶ್ಚರ್ಯವೇನೂ ಅಲ್ಲ. ಅಂತೆಯೇ ಸೊಲ್ಲಾಪುರದಲ್ಲಿ ಪಾದರಕ್ಷೆಗಳ ವೃಷ್ಟಿಯಾಯಿತು! ಹಿಂದು ಸಮಾಜದಲ್ಲಿರುವ ಜನ್ಮವಿಶಿಷ್ಟ ಮೇಲು ಕೀಳಿನ ಘೋರ ಪಾಪವೇ ಆ ಪಾದರಕ್ಷೆಗಳ ರೂಪದಿಂದ ಹಾಗೆ ಪ್ರದರ್ಶಿಸಲ್ಪಟ್ಟಿತು.

**ಈ ದೇಶದಲ್ಲಿ ಯಾವುದು ಕಠಿಣ?**

ರಾಜ್ಯ ಗಳಿಸಿಕೊಡುವೆನೆಂದು ಜನರನ್ನು ಹಿಂಬಾಲಿಸಿಕೊಳ್ಳುವುದು ಸುಲಭ. ಅಧಿಕಾರ, ಸಂಪತ್ತು, ಮಾನ ಮನ್ನಣೆಗಳು ದೊರೆಯುತ್ತವೆಂದು ಇಂಥವರನ್ನು ಹಿಂಬಾಲಿಸುವವರೂ ಅತ್ಯಧಿಕ. ಅನ್ಯರ ಕೈಯಲ್ಲಿಯ ಅಧಿಕಾರವನ್ನು ಸೆಳೆದುಕೊಳ್ಳುವುದು ಯಾರಿಗೆ ಬೇಡ? ಆದರೆ ತಮ್ಮ ಕೈಯಲ್ಲಿಯ ಅಧಿಕಾರವನ್ನು ಅನ್ಯರಿಗೆ ಕೊಡುವುದು ಮಾತ್ರ ಯಾರಿಗೂ ಇಷ್ಟವಿರುವುದಿಲ್ಲವಷ್ಟೆ. ತಮಗೆ ಜನ್ಮದಿಂದಲೇ ಬರುವ ಘನತೆಯನ್ನು ಅದೇಕೆ ಬಿಡಲು ಒಪ್ಪುವರು? ತಮ್ಮಲ್ಲಿಯ ದೋಷಗಳನ್ನು ತಿದ್ದಿಕೊಳ್ಳುವುದು ಹೇಗೆ ತಾನೆ ಪ್ರಿಯವಾಗುವುದು? ಆದಕಾರಣ ರಾಜಕೀಯ ಸುಧಾರಣೆಗಿಂತಲೂ ಸಾಮಾಜಿಕ ಸುಧಾರಣೆಯು ಈ ದೇಶದಲ್ಲಿ ಬಹು ಕಷ್ಟ.

ಈ ದೇಶವು ರಾಜಕೀಯ ವಿಷಯದಲ್ಲಿ ಸ್ವತಂತ್ರವಾಗಿದ್ದಾಗ ಸಾವಿರಾರು ವರುಷಗಳಿಂದಲೂ ಸಾಮಾಜಿಕ ಗುಲಾಮಗಿರಿಯಲ್ಲಿ ಕೋಟ್ಯಂತರ ಜನರು ಬಳಲುತ್ತಲೇ ಇದ್ದರು. ಈ ದಿವಸ ಹಿಂದುಸ್ಥಾನಕ್ಕೆ ಸ್ವತಂತ್ರ ದೊರೆತರೂ ಹಿಂದು ಸಮಾಜದಲ್ಲಿಯ ಸಾಮಾಜಿಕ ವಿಷಮತ್ವವು ನಿವಾರಣೆಯಾಗದಿದ್ದರೆ ಅವರು ಬಳಲುತ್ತಲೇ ಇರಬೇಕಾಗುವುದು. ಹಿಂದು ಸಮಾಜವು ಬಹು ಕಾಲದಿಂದಲೂ ಈ ಸಾಮಾಜಿಕ ವಿಷಮತ್ವವನ್ನು ದೃಢಗೊಳಿಸುತ್ತಲೇ ಬಂದಿದೆ. ಅದನ್ನು ನಿವಾರಣೆಮಾಡಲು ಪ್ರಯತ್ನಿಸಿದ ಪ್ರತಿಯೊಬ್ಬ ಮಹಾ ವಿಭೂತಿಯು ಮೊದಲು ಜನಗಳ ರೋಷಕ್ಕೆ ಪಾತ್ರನಾಗಿ ಅನೇಕ ಕಷ್ಟಗಳನ್ನು ಅನುಭವಿಸಿದ್ದಾನೆ.

ಅದೇ ಪ್ರಕಾರ ಬ್ಯಾ. ಸಾವರಕರರು ಈಗ ಅನೇಕರ ರೋಷಕ್ಕೆ ಪಾತ್ರರಾಗಿದ್ದಾರೆ. ಅವರಿಗೆ ಅವಮಾನಗೊಳಿಸಿದೆವೆಂದು ಅನೇಕರು ಹಿಗ್ಗುತ್ತಿದ್ದಾರೆ. ಈಗ ಪಾದರಕ್ಷೆಗಳನ್ನು ಎಸೆದವರ ಮಕ್ಕಳೇ ಮುಂದೆ ಬ್ಯಾ. ಸಾವರಕರರ ಭಾವ ಚಿತ್ರಕ್ಕಾದರೂ ಹೂ ಮಾಲೆಯನ್ನು ಹಾಕುವ ಪ್ರಸಂಗ ಬಂದೇ ಬರುವುದು. ಹಿಂದುಗಳಲ್ಲಿಯ ಈ ಜಾತಿ ವಿಶಿಷ್ಟ ದುರಹಂಕಾರವು ಅನೇಕ ಪಾಪ ಕೃತ್ಯಗಳನ್ನು ಈ ವರೆಗೆ ಅನೇಕ ವಿಭೂತಿಗಳ ವಿಷಯದಲ್ಲಿ ಮಾಡಿದಂತೆ ಬ್ಯಾ. ಸಾವರಕರರ ವಿಷಯದಲ್ಲಿಯೂ ಮಾಡಿದೆ.

ಮಹಾತ್ಮಾ ಗಾಂಧಿಯವರು ಒಂದೇ ವರುಷದಲ್ಲಿ ಸ್ವರಾಜ್ಯ ಕೊಡಿಸುವೆನೆಂದು ಹೇಳಿ ರಾಜಕಾರಣದಲ್ಲಿ ಅದ್ಭುತ ಕ್ರಾಂತಿಯನ್ನುಂಟುಮಾಡಿದಾಗ ಸಾಕ್ಷಾತ್ ಕೃಷ್ಣಪರಮಾತ್ಮನೆಂದು ಸ್ತುತಿಸಿದ ಅನೇಕರಿಗೆ ಅವರು ದೇವಾಲಯ ಪ್ರವೇಶದ ಚಟುವಟಿಕೆಯನ್ನು ಪ್ರಾರಂಭಿಸಿದೊಡನೆ ಕಲಿ ಪುರುಷರಾಗಿ ತೋರಿದರು. ಆ ಮಹಾ ಪೂಜ್ಯ ವಿಭೂತಿಯ ಮೇಲೆ ಬಾಂಬು ಗುಂಡನ್ನು ಕೂಡಾ ಎಸೆದು ತಮ್ಮಲ್ಲಿದ್ದ ಪಾಪವೃತ್ತಿಯನ್ನು ಪ್ರದರ್ಶಿಸಿದರು.

ಈಗ ಹಿಂದು ರಾಷ್ಟ್ರದ ಪುನರ್ಘಟನೆಯ ಮಹಾ ಕಾರ್ಯವು ಪ್ರಚಂಡವಾಗಿ ನಡೆದಿದೆ. ಇಂತಹ ಕಾಲದಲ್ಲಿ ಎಲ್ಲರಿಗೂ ತಮ್ಮ ತಮ್ಮ ವಿಚಾರಗಳನ್ನು ಜನಾಂಗದಲ್ಲಿ ಪ್ರಸಾರಗೊಳಿಸಲು ನ್ಯಾಯವಾದ ಅಧಿಕಾರವು ಇದ್ದೇ ಇರಬೇಕಾಗಿದೆ. ಸ್ವತಂತ್ರ ವಿಚಾರಿಗಳ ಮೇಲೆ ಹೀಗೆ ಅತ್ಯಾಚಾರಗಳನ್ನು ನಡೆಯಿಸುವುದು ತಮ್ಮ ಪಾಪದ ಪ್ರದರ್ಶನವೇ ವಿನಾ ಪೂಜ್ಯ ವಿಭೂತಿಗಳಿಗೆ ಮಾಡಿದ ಅವಮಾನವೇನೂ ಅಲ್ಲ.

# ನೈಜಾಮ ಭಾಗದ ಚಂದಾದಾರರಿಗೆ ವಿಜ್ಞಾಪನೆ.

ನೈಜಾಮ ಭಾಗದ ಬಹು ಸ್ಥಳಗಳಲ್ಲಿ ಬ್ರಿಟಿಶ್ ಪೋಸ್ಟ್ ಇಲ್ಲವಷ್ಟೆ. ಆದುದರಿಂದ ಅಲ್ಲಿಯ ಶರಣ ಸಂದೇಶ ಪತ್ರಿಕಾ ಚಂದಾದಾರರು ತಮ್ಮ ಚಂದಾ ಹಣವನ್ನು ಕಳಿಸಲು ತುಂಬಾ ಅನಾನುಕೂಲವಾಗುತ್ತದೆಂದು ತಿಳಿಸುತ್ತಿದ್ದಾರೆ. ವ್ಹಿ. ಪಿ. ಮಾಡಿದರೆ ತಿರುಗಿ ಬರುವುದೇ ಹೆಚ್ಚು.

ಆದಕಾರಣ ಸಮಕ್ಷಮ ಅಥವಾ ಮನಿಯಾರ್ಡರ್ ಮೂಲಕ ಇಲ್ಲವೆ ವ್ಹಿ. ಪಿ. ಇಂದ ತಮ್ಮ ಚಂದಾ ಹಣ ಹಾಲಿ ೩॥ ರೂ. ಕೊಡಲು ಅನುಕೂಲವಾಗುವಂತೆ ಗುಲಬರ್ಗಾದಲ್ಲಿ ಈ ಕೆಳಗಿನ ವಿಳಾಸದ ನಮ್ಮ ಎಜಂಟರ ಕಡೆಗೆ ವ್ಯವಸ್ಥೆಮಾಡಿದೆ.

ಇನ್ನುಮುಂದೆ ನೈಜಾಮ ಭಾಗದ ಚಂದಾದಾರರು ತಮ್ಮ ಚಂದಾ ಹಣವನ್ನು ಅವರ ಕಡೆಗೇನೇ ಕೊಟ್ಟು ರಸೀದಿ ಹೊಂದಬೇಕು. ಅಥವಾ ಅಲ್ಲಿಗೇನೇ ತಮ್ಮ ಟಪ್ಪಾಲಖಾನೆಯಿಂದ ಹಾಲಿ ೩॥ ರೂ. ಮನಿಯಾರ್ಡರ್ ಮಾಡಬೇಕು. ಇಲ್ಲವೆ ಈಗ ಅಲ್ಲಿಂದಲೇ ವ್ಹಿ. ಪಿ. ಮಾಡಲು ಪ್ರಾರಂಭಿಸಿರುವುದರಿಂದ ತಪ್ಪದೇ ವ್ಹಿ. ಪಿ. ಯನ್ನು ಸ್ವೀಕರಿಸಬೇಕು.

ನೈಜಾಮ ಭಾಗದ ಚಂದಾದಾರರು ಈ ಸೌಲಭ್ಯದ ಉಪಯೋಗವನ್ನು ಮಾಡಿಕೊಳ್ಳುವರೆಂದು ನಾವು ತುಂಬಾ ನಂಬಿದ್ದೇವೆ. ತಮಗೆ ಪತ್ರಿಕೆಯು ಸರಿಯಾಗಿ ಮುಟ್ಟದಿದ್ದರೆ ಅಲ್ಲಿಗೇನೇ ತಿಳಿಸಬೇಕಾಗಿ ಪ್ರಾರ್ಥನೆ. ಮ್ಯಾನೇಜರ್.

ವಿಳಾಸ— ಸಿಂದಗಿ ಶಿವಲಿಂಗಣ್ಣ

ಮ್ಯಾನೇಜರ್ ಕಲ್ಯಾಣ ಕರ್ನಾಟಕ ಬುಕ್ ಡಿಪೋ

ಪೋಸ್ಟ. ಗುಲಬರ್ಗಾ.

## ಮಹಿಳೆಯರ ಮತಪ್ರಚಾರ.

### ಬೈಲಹೊಂಗಲ.

ವೀರಶೈವರಲ್ಲಿ ತಮ್ಮ ಮತ ಪ್ರಚಾರಮಾಡುವ ಗುಗ್ಗುಳೋತ್ಸವ ಮೊದಲಾದವುಗಳಿದ್ದಂತೆ ಅನೇಕ ಹಬ್ಬ ಹುಣ್ಣುಮೆಗಳೂ ಇವೆ. ಅವು ಮುಖ್ಯವಾಗಿ ಮತತತ್ವ ಪ್ರಚಾರಕ್ಕಾಗಿಯೇ ಏರ್ಪಟ್ಟವು. ಶ್ರಾವಣಮಾಸದಲ್ಲಿ ಮತ ಪ್ರಚಾರಕ್ಕೋಸ್ಕರವಾಗಿಯೇ ಪುರಾಣ, ಪ್ರವಚನಾದಿಗಳು ಜರುಗುತ್ತಲಿವೆ.

ಬೈಲಹೊಂಗಲದಲ್ಲಿ ಕಳೆದ ೨೦ ವರುಷಗಳಿಂದ ಇಲ್ಲಿಯ ವೀರಶೈವ ಮಹಿಳೆಯರು ಶ್ರಾವಣ ಮಾಸದಲ್ಲಿ ಬಸವಣ್ಣನವರ ಚರಿತ್ರೆಯನ್ನು ಹಾಡುಗಳ ಮೂಲಕ ಪ್ರತಿನಿತ್ಯ ಜನರಿಗೆ ಬೋಧಿಸುತ್ತಾ ಬಂದಿದ್ದಾರೆ. ಈ ಸಾರೆಯೂ ಈ ಕಾರ್ಯವು ನಡೆದಿದೆ. ಇಲ್ಲಿಯ ಯಕ್ಕುಂಡಿ ಮಠದಲ್ಲಿಯೇ ಹಾಡುಗಳ ಸಮಾರಂಭ ನಡೆಯುತ್ತದೆ. ಶ್ರೀಮತಿ ಶರಣಪ್ಪನವರ ಬಾಳವ್ವನವರು ಹಾಡುಗಾರತಿಯರಲ್ಲಿ ಹಿರೇಮಣಿಗಳು. ಇವರ ಭಾವಪೂರಿತ ಹಾಡುಗಳನ್ನು ಕೇಳಲು ಪ್ರತಿನಿತ್ಯ ೪-೫ ನೂರು ಮಹಿಳೆಯರು ಬರುತ್ತಿದ್ದಾರೆ. ಇಲ್ಲಿಯ ಯಕ್ಕುಂಡಿ. ಮಠಕ್ಕೆ ಶಿವಾನುಭವ ಪ್ರಿಯರಾದ ಶ್ರೀಮನ್ನಿರಂಜನ ಶ್ರೀ ಸಿದ್ಧರಾಮ ಸ್ವಾಮಿಗಳು ಈ ಸಾರೆ ಆಗಮಿಸಿ ಬಸವಾದಿ ಪ್ರಮಥರ ವಚನ ಪ್ರವಚನವನ್ನೂ ನಡೆಯಿಸಿರುವುದರಿಂದ ಮಹಿಳೆಯರ ಮತಪ್ರಚಾರದ ಕಾರ್ಯಕ್ಕೆ ಹೆಚ್ಚಿನ ಕಳೆ ಬಂದಿದೆ.

ಆ ಜಗದಣ್ಣ ಬಸವಣ್ಣನವರ ಜನ್ಮಾದಿಯಿಂದ ಅವರು ಸಂಗಮನಾಥನಲ್ಲಿಗೆ ಹೋದವರೆಗಿನ ಚರಿತ್ರೆಯನ್ನು ಹಾಡುಗಳಿಂದಲೇ ತಿಳಿಸುತ್ತಿದ್ದಾರೆ. ಶ್ರಾವಣ ಮಾಸದ ೩೦ ದಿನಗಳಲ್ಲಿಯೂ ಈ ಸಮಾರಂಭ ಜರುಗುತ್ತಲಿದೆ. ಮೊನ್ನೆ ಬಸವಣ್ಣನವರ ಲಗ್ನ ಸಮಾರಂಭವು ಹಾಡುಗಳಿಂದ ಬಹು ಚನ್ನಾಗಿ ಜರುಗಿತು. ಈ ಪದ್ಧತಿಯು ಮಹಿಳೆಯರಲ್ಲಿ ಜಾಗೃತಿಯುಂಟಾಗಲು ಬಹು ಅನುಕೂಲವಾದುದು. ಎಲ್ಲ ಕಡೆಗೂ ಮಹಿಳಾಸಂಘಗಳು ಏರ್ಪಟ್ಟು ಶ್ರಾವಣ ಮಾಸದಲ್ಲಿ ಈ ಪದ್ಧತಿಯನ್ನು ಅನುಸರಿಸಿದರೆ ಎಷ್ಟೋ ಒಳ್ಳೆಯದು.

ಓರ್ವ ಸಮಾಜ ಸೇವಕ.

## ದೇವರೂಗಿಯಲ್ಲಿ ಪುರಾಣ ಸಮಾರಂಭ.

ಇಲ್ಲಿಗೆ ಬಂಥನಾಳದ ಶ್ರೀಮನ್ನಿರಂಜನ ಶ್ರೀ ಸಂಗನಬಸವ ಮಹಾ ಶಿವಯೋಗಿಗಳು ಈ ಶ್ರಾವಣಮಾಸದಲ್ಲಿ ಆಗಮಿಸಿ ಶ್ರೀ ಚೋರಬಸವ ಪುರಾಣವನ್ನು ಬಹು ಉತ್ತಮವಾಗಿ ಬೋಧಿಸುತ್ತಿದ್ದಾರೆ. ಸುತ್ತಲಿನ ಭಾಗಗಳಿಂದ ಸಾವಿರಾರು ಜನರು ಕೇಳಲಿಕ್ಕೆ ಬರುತ್ತಿದ್ದಾರೆ. ಶ್ರೀ. ಬಸವಾದಿ ಪ್ರಮಥರ ವಚನಗಳಿಗೂ ಆಧುನಿಕ ವಿಚಾರ ಸರಣಿಗೂ ಉಪನಿಷತ್ ಆಗಮಗಳ ಸಿದ್ಧಾಂತಗಳಿಗೂ ಸಮನ್ವಯಮಾಡಿ ಬಹು ಪರಿಣಾಮಕಾರಿಯಾಗುವಂತೆ ಬೋಧಿಸುತ್ತಿದ್ದಾರೆ. ಇದರಿಂದ ವೀರಶೈವ ನಿಜತತ್ವಗಳ ಪ್ರಚಾರವಾಗುತ್ತಾ ಇದೆ. ಪುರಾಣ ಶ್ರವಣಕ್ಕೆ ಬರುವ ಪರಸ್ಥಳದವರ ಸತ್ಕಾರವನ್ನು ಸ್ಥಳೀಯ ಜನರು ಬಹುದಕ್ಷತೆಯಿಂದ ಮಾಡುತ್ತಿರುವುದು ಅಭಿನಂದನೀಯವಾದುದು.

ಓರ್ವ ಪ್ರತ್ಯಕ್ಷದರ್ಶಿ

## ನೈಜಾಮ ಪ್ರಾಂತದ ವೃತ್ತಾಂತ.

—ಹೈದರಾಬಾದ ಸಂಸ್ಥಾನದ ೧೯೩೪ ನೆಯ ಇಸವಿ ಪ್ರಾಚೀನ ವಸ್ತು ಸಂಶೋಧನ ಶಾಖೆಯ ವರದಿಯು ಪ್ರಕಟವಾಗಿದೆ. ಈ ಶಾಖೆಯಿಂದ ಕೊಪ್ಪಳ, ಕುಕುನೂರು, ಕಲ್ಲೂರು ಮೊದಲಾದ ಕೆಲವು ಸ್ಥಳಗಳಲ್ಲಿಯ ಕನ್ನಡ ಶಿಲಾ ಶಾಸನಗಳನ್ನು ಶೋಧಿಸಿ ಅವುಗಳಲ್ಲಿಯ ಸಂಗತಿಗಳನ್ನು ಸಂಗ್ರಹಿಸಿಡುವುದಾಗಿ ತಿಳಿಯುತ್ತದೆ.

—ಗುಲಬರ್ಗಾದಲ್ಲಿ ಕಾಲರಾ ದಿನೆ ದಿನೆ ಹೆಚ್ಚುತ್ತಲಿದೆ. ಪ್ರತಿನಿತ್ಯ ೧೫-೨೦ ಮರಣಗಳು ಸಂಭವಿಸುತ್ತಲಿವೆ.

—ನೈಜಾಮ ಪ್ರಾಂತದ ಕನ್ನಡನಾಡಿನಲ್ಲಿ ಕನ್ನಡ ಪ್ರಚಾರವಾಗಬೇಕೆಂದು ಹೆಚ್ಚಾಗಿ ಪ್ರಯತ್ನಿಸುತ್ತಿರುವ ಹೈದರಾಬಾದಿನ ಶ್ರೀ. ಬಿ. ಜಿ. ಚಿಮಲಗಿಕರ್ ಇವರು ಉದ್ಗಿರಿಗೆ ಆಗಮಿಸಿ ಕನ್ನಡ ಪ್ರಚಾರದ ಬಗ್ಗೆ ವೀರಶೈವ ಸಮಾಜದವರ ಪರವಾಗಿ ವ್ಯಾಖ್ಯಾನ ಮಾಡಿದರು.

ಇವರು ವೀರಶೈವ ಸಮಾಜದವರ ವಾಚನಾಲಯಕ್ಕೆ ೫೧ ಕನ್ನಡ ಪುಸ್ತಕಗಳನ್ನು ಕಾಣಿಕೆಯಾಗಿ ಕೊಟ್ಟರು. ಈ ಮಹಾಶಯರು ಒಂದು ನಕಾಶವನ್ನು ಸಿದ್ಧಗೊಳಿಸಿ ಕನ್ನಡ ನಾಡಿನವರಿಗೆ ಎಷ್ಟೋ ಸಹಾಯಮಾಡಿದ್ದಾರೆ.

— ವ್ಹಾಯಿಸ್‌ರಾಯರಾದ ಲಾರ್ಡ ಲಿನ್ ಲಿಥಗೊರವರು ಬರುವ ಜನವರಿ ತಿಂಗಳ ೧೭ ನೆಯ ತಾರೀಖಿಗೆ ಹೈದರಾಬಾದಿಗೆ ಬಂದು ಒಂದು ವಾರ ಅಲ್ಲಿ ಇರತಕ್ಕವರಿದ್ದಾರೆ.

### ಗುಲಬರ್ಗಾ.

ಗುಲಬರ್ಗಾ ವೀರಶೈವ ತರುಣಸಂಘದಿಂದ ಶ್ರೀಯುತ ಶರಣಯ್ಯ ಮಹಾಗಾಂವ ಮತ್ತು ರಾ|| ಮಲ್ಲಪ್ಪ ಇಟಗಿಕರ್ ಇವರೀರ್ವರು ಈ ಶ್ರಾವಣಮಾಸದಲ್ಲಿ ಧರ್ಮ ಪ್ರಚಾರ ಕಾರ್ಯವನ್ನು ಕೈಕೊಂಡು ಹುಮನಾಬಾದ ಕಲ್ಯಾಣ ಪ್ರಾಂತದಕಡೆ ಹೊರಟಿದ್ದಾರೆ. ಈ ಒಂದು ತಿಂಗಳದ ವರೆಗೆ ಇವರು ವೀರಶೈವ ಧರ್ಮದ ನಿಜತತ್ವಗಳನ್ನು ಮತ್ತು ನಮ್ಮ ಜನಾಂಗದಲ್ಲಿರುವ ಕುಂದು ಕೊರತೆಗಳನ್ನು ವಿಶದವಾಗಿ ತಿಳುಹಿಸಿಕೊಡುವವರಿದ್ದಾರೆ. ಕಾರಣ ಇವರು ಈ ಅಲ್ಪ ಅವಧಿಯಲ್ಲಿ ಮಾಡುವ ಮಹತ್ತರ ಕಾರ್ಯದಿಂದ ಸರ್ವರೂ ಲಾಭಪಡೆಯಬೇಕು.

ಇದು ಅಲ್ಲವೆ ಪ್ರತಿಯೊಂದು ಪ್ರಾಂತದ ವೀರಶೈವ ತರುಣ ಸಂಘದವರಿಗೆ ತಿಳಿಸುವದೇನೆಂದರೆ, ಈ ಶ್ರಾವಣಮಾಸದಲ್ಲಿ ತಮ್ಮ ತಮ್ಮ ಸಂಘಗಳ ವತಿಯಿಂದ ಉತ್ತಮವಾದ ವ್ಯಾಖ್ಯಾತರನ್ನೂ ಕೀರ್ತನಕಾರರನ್ನೂ, ಭಜನಿಯವರನ್ನೂ ಪ್ರತಿಯೊಂದು ಭಾಗಕ್ಕೆ ಕಳುಹಿಸಿಕೊಟ್ಟು ಜನಜಾಗೃತಿಮಾಡಬೇಕಾಗಿ ವಿನಂತಿ.

ಇದರಂತೆ ಪ್ರತಿವರ್ಷ ಶ್ರಾವಣಮಾಸದ ಪವಿತ್ರ ದಿನಗಳಲ್ಲಿ ಸರ್ವ ವೀರಶೈವ ತರುಣಸಂಘದವರು ಇಂಥ ಕಾರ್ಯಗಳನ್ನು ಕೈಕೊಳ್ಳುವದರಿಂದ ನಮ್ಮ ಸಂಘಗಳ ಶಕ್ತಿ ಸಾಹಸಗಳು ಬಲಿಯುತ್ತ ಹೋಗಿ ನಮ್ಮ ಜನಾಂಗದಲ್ಲಿ ಆಧುನಿಕ ನವಚೈತನ್ಯವುಂಟಾಗಿ ನಮ್ಮ ಸಮಾಜವು ಆದರ್ಶಪ್ರದವೆನಿಸುವದರಲ್ಲಿ ಏನೂ ಸಂದೇಹವಿಲ್ಲ.

ಸೆಕ್ರೆಟರಿ
ಜಿ. ಸಿ. ಮಹದೇವಪ್ಪ.

—ಹೈದರಾಬಾದ ಕಾರ್ಪೊರೇಶನ್ನಿನಲ್ಲಿ ೩೭ ಜನ ಸಭಾಸದರಿದ್ದಾರೆ. ಇವರಲ್ಲಿ ೧೩ ಜನರು ಮಾತ್ರ ಜನಗಳಿಂದ ಆರಿಸಲ್ಪಟ್ಟವರು ಇರುವರು. ಇವರ ಚುನಾವಣೆಯು ಇದೇ ಸೆಪ್ಟೆಂಬರ್ ೪ ನೆಯ ತಾರೀಖಿನ ದಿವಸ ನಡೆಯುವದಿದೆ.

—ಸೌ|| ಸರೋಜನಿ ದೇವಿಯವರು ವರ್ಧಾದಲ್ಲಿ ಜರುಗಿದ ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಕಾರ್ಯವನ್ನು ಪೂರೈಸಿಕೊಂಡು ಹೈದರಾಬಾದಿಗೆ ಬಂದಿದ್ದಾರೆ.

### ದೊಂಬಿಯ ವ್ಯಾಜ್ಯದ ತೀರ್ಮಾನ.

ಕಳೆದ ಡಿಶಂಬರ ತಿಂಗಳಲ್ಲಿ ಮಾಣಿಕ ನಗರದಲ್ಲಿ ನಡೆದ ಹಿಂದು ಮುಸಲ್ಮಾನರ ದೊಂಬಿಯ ವ್ಯಾಜ್ಯದ ತೀರ್ಮಾನವು ಹೈದರಾಬಾದಿನಲ್ಲಿ ತಾ. ೨೩ ನೆಯ ದಿವಸ ಸ್ಪೆಶಲ್ ಮ್ಯಾಜಿಸ್ಟ್ರೇಟರಿಂದ ಈ ಪ್ರಕಾರ ಮಾಡಲ್ಪಟ್ಟಿತು.

"ಶ್ರೀ. ಬನಸಿಲಾಲ, ಶ್ರೀ. ಶಾಮಲಾಲ, ಈ ಉಭಯ ಆರ್ಯ ಸಮಾಜದವರು ಅಪರಾಧಿಗಳು. ಪ್ರತಿಯೊಬ್ಬರು ಇನ್ನೂರು ರೂ. ಗಳ ಪ್ರಕಾರ ದಂಡ ಕೊಡಬೇಕು. ಶ್ರೀ. ದತ್ತಾತ್ರಯ ಪ್ರಸಾದ ಮತ್ತು ಪಂಡಿತ ನರೇಂದ್ರಜಿ ಇವರಿಬ್ಬರು ನಿರ್ದೋಷಿಗಳು. ಈ ನಾಲ್ವರು ಅಪ್ಪಣೆ ಪಡೆಯದೆ ಮೆರವಣಿಗೆ ಹೊರಡಿಸಿದ್ದರೆಂಬ ದೋಷಾರೋಪಣೆ ಸರಿಯಾದುದಲ್ಲ."

ಈ ಮೇಲಿನ ನಾಲ್ವರಲ್ಲಿ ಮೂವರು ಆರ್ಯಸಮಾಜದವರು ಮತ್ತು ವಕೀಲಿ ಕೆಲಸ ಮಾಡುವವರು ಇದ್ದಾರೆ.

---

|| ಶ್ರೀಗುರು ಬಸವಲಿಂಗಾಯ ನಮಃ ||

## ಪುರಾಣ ಪ್ರವಚನ ಸಮಾರಂಭ.

ದೇವರೂಗಿ ಭಕ್ತ ಮಂಡಳಿಯ ಇಚ್ಛಾನುಸಾರವಾಗಿ ಸುಕ್ಷೇತ್ರ ಬಂಥನಾಳ ಸದ್ಗುರು ಮಹಾಸ್ವಾಮಿಗಳವರಿಂದ ಚೋರ ಬಸವ ಪುರಾಣ ಪ್ರವಚನವು ಇದೇ ಶ್ರಾವಣ ಶುದ್ಧ ೩. ತಾ|| ೯-೮-೩೭ನೇ ಸೋಮವಾರದಿಂದ ಪ್ರಾರಂಭವಾಗಿ ಭಾದ್ರಪದ ಶುದ್ಧ ೨. ಸೋಮವಾರ ಮಹಾಗಣಾರಾಧನೆಯೊಡನೆ ಭಾ. ಶು. ೩ ತಾ|| ೭-೯-೩೭ ಮಂಗಳವಾರ ದಿವಸ. ಪುರಾಣ ಸಮಾಪ್ತಿಗೊಳಿಸಲ್ಪಡುವದು. ಪ್ರಯುಕ್ತ ಶ್ರವಣೇಚ್ಛುಗಳೆಲ್ಲರೂ ಅವಶ್ಯವಾಗಿ ಬರಬೇಕೆಂದು ಅಪೇಕ್ಷಿಸುವ,

ವ್ಯವಸ್ಥಾಪಕ ಮಂಡಳಿ.

| | |
|---|---|
| ಮಲಕಯ್ಯಾ ಮಠಪತಿ | ಚನಮಲ್ಲಪ್ಪಾ ಮಸಳಿ |
| ಇಮಾಮಸಾಹೇಬ ಪಾಟೀಲ | ಚಂದ್ರಾಮಪ್ಪ ಗಿಂಡಿ |
| ಗೋಪಾಳರಾವ ಕುಲಕರ್ಣಿ | ನಂದಪ್ಪಾ ಎಳ್ಳಿಗಾವ |
| ಚಂದ್ರಾಮಪ್ಪಾ ಕೊಟಗೊಂಡ | ರುದ್ರಪ್ಪ ಹುಣಶಿ |

---

## ವೀರಶೈವರಲ್ಲಿ ಇಕೋ ! ಇವರು ಶೂದ್ರರಂತೆ !

ಮಹಾಶಯರೇ, ನಮ್ಮ ವೀರಶೈವ ಮತದಲ್ಲಿ ಈಗ ೧೫-೨೦ ವರುಷಗಳಿಂದ ಕೆಲವು ಶಾಸ್ತ್ರಿ ವರ್ಗದವರು ತಾವು ಕಾಶಿಯಿಂದ ಕಲಿತು ಬಂದು ಶಾಸ್ತ್ರ ವಿದ್ಯಾ ಪ್ರಚಾರಕ್ಕಾಗಿ ಕೆಲವು ಪುಸ್ತಕಗಳನ್ನು ಬರೆದಿರುವರಷ್ಟೆ.

ಅವರಲ್ಲಿ ಬೆಂಗಳೂರಿನ "ಸುಮತಿ ಪಂಡಿತ ರೇವಣಾರಾಧ್ಯ ಶಾಸ್ತ್ರಿಗಳು ೧೯೩೭ ರಲ್ಲಿ ಬರೆದ "ಬಿಳಿಅಂಗಡಿ ಮದಗಜಾಂಕುಶ" ಎಂಬ ಪುಸ್ತಕದ ೨೪ ನೇ ಪುಟದಲ್ಲಿ "ವೀರಶೈವರಲ್ಲಿ ಕುಲಾಲ, (ಕುಂಬಾರ) ನಾಪಿಕ (ಕ್ಷೌರಿಕ) ಸಿಂಪಿಗ (ಜವಳಿ) ಬಣಗಾರಾದಿ" ಸಕಲ ಶೂದ್ರರೂ ಭಸ್ಮ, ರುದ್ರಾಕ್ಷ, ಲಿಂಗಗಳೆಂಬ ವೀರಶೈವ ಬ್ರಾಹ್ಮಣ ಚಿನ್ಹಗಳನ್ನು ಧರಿಸಿದ್ದಾರೆ. ಎಂದೂ

ಅದೇ ಪುಸ್ತಕದ ೨೬ ನೇ ಪುಟದಲ್ಲಿ "ವೀರಶೈವರಲ್ಲಿ ದೀಕ್ಷಾ ಪ್ರಭೇದಗಳಿಂದಲೂ, ಬ್ರಾಹ್ಮಣ್ಯಾದಿ ವರ್ಣಾಶ್ರಮ ಪ್ರಭೇದಗಳಿಂದಲೂ, ಕರ್ಮ ಭೇದ ರೂಪ, ವೈದಿಕಾವೈದಿಕಭಾವಗಳಿಂದಲೂ ಸ್ಥಿತ್ಯಂತರವಾದ ಆಚಾರ, ವ್ಯವಹಾರಗಳಿಂದಲೂ ಶಿಖಾದಿ ವೈಲಕ್ಷಣ್ಯಾದಿಗಳಿಂದಲೂ, ವೇದಾಗಮೋಕ್ತ ವೀರಶೈವ ತತ್ವಾವಲಂಬಿಗಳಾದ ಶ್ರೀಮತ್ ಪಂಚಾಚಾರ್ಯ ಗೋತ್ರ ಸೂತ್ರ ಪ್ರವರಗಳುಳ್ಳ ಸಂಪ್ರದಾಯದವರಿಗೂ ಅದಿಲ್ಲದೆ ನಿರಾಧಾರವಾದ ಬಸವನಿಗೂ ಅವನ ತತ್ವಾವಲಂಬಿಗಳಾದ ಅಸಂಪ್ರಾಯದವರಿಗೂ ಇರುವ ಭಿನ್ನ ಭೇದ ಭಾವಗಳಿಂದಲೂ ಅಗ್ರ ವರ್ಣದವರಾದ ವಿಶೇಷ ವೀರಶೈವರು(ಗುರುವರ್ಗ) ಸಾಮಾನ್ಯ ವೀರಶೈವರು ( ಭಕ್ತವರ್ಗ ) ಹಾಗೂ ಮಾರ್ಗ ವೀರಶೈವರಲ್ಲಿ ಪರಸ್ಪರ ಬಳಿಕೆ, ಭೋಜನ ಮಾಡುವುದು ಅನಾದಿಯಾಗಿಯೂ ಇದ್ದಿಲ್ಲವೆಂದೂ, ಬರೆದಿರುತ್ತಾರೆ.

ಮತ್ತು ಸನ್ ೧೯೩೪ ರಲ್ಲಿ ಕಾಶಿನಾಥ ಗ್ರಂಥಮಾಲಾ ೪ ನೇ ಪುಷ್ಪದ "ಸನ್ಯಾಸಾಶ್ರಮಾ ತತ್ವ ಸ್ಥಿರೀಕರಣಾ" ಎಂಬ ಪುಸ್ತಕವನ್ನು ಮೈಸೂರಿನ ಬಿ. ಗುರುಸಿದ್ಧ ಶಾಸ್ತ್ರಿ ಎಂಬ ಹೆಸರಿನಿಂದ ಬರೆದು ಅದರಲ್ಲಿ ವಿರಕ್ತರಿಗೂ, ಮತ್ತು ಬಸವೇಶ್ವರನಿಗೂ ಪೂಜ್ಯತೆ ಬಗ್ಗೆ ಅಗೌರವ ಕಲ್ಪಿಸಿ ಬರೆದಿರುತ್ತಾರೆ.

ಮೇಲ್ಕಂಡ ಶಾಸ್ತ್ರಿಗಳು ಪಂಚಪೀಠದವರ 'ಆತ್ಮಸ್ತುತಿ' ಯನ್ನು ಮಾಡುವುದಕ್ಕಾಗಿಯೇ ಜನಾಂಗದಲ್ಲಿ ಇಂಥ ಪ್ರಚಾರಗಳನ್ನು ಮಾಡಿರುವುದರಿಂದ ಇವರುಗಳು ಪಾಚಪೀಠದವರ ಕಡೆ ವಕೀಲಿಗಳು ಎಂದು ಹೇಳುವುದರಲ್ಲಿ ಅಡ್ಡಿಯಿಲ್ಲವಷ್ಟೆ ?

ಈ ಗ್ರಂಥಗಳ ಮೇಲೆ ಖಂಡನೆ ಮಂಡನೆಗಳು ಬೇಕಾದಷ್ಟು ನಡೆದಿದ್ದರೂ ಸಹ ವೀರಶೈವ ಮತಕ್ಕೆ ಜವಾಬ್ದಾರರಾದ ಯಾರೊಬ್ಬ ಗುರುಗಳಿಂದ ಸರಿಯಾದ ಬರಹ ಮೂಲಕವಾದ ಜಾಹಿರಾತುಗಳು ಇದುವರೆಗೂ ಹೊರಟಿರುವದಿಲ್ಲ.

ಈ ಸಂದರ್ಭದಲ್ಲಿ ಶಿವಮೊಗ್ಗದ ಕೆಲವು ವೀರಶೈವರು ಇಂಥ ಅನುಮಾನಾಸ್ಪದ ವಿಚಾರವಾದ ವಿಷಯವನ್ನು ವಿಮರ್ಶೆ ರೀತಿಯಿಂದ ಸಂಸ್ಥಾನದಿಂದ ಸ್ವತಂತ್ರಿಸಿ ಜಾಹಿರಾತು ಮಾಡಬೇಕಾಗಿ ತಾವು ೮ ಜನರು ರುಜುಮಾಡಿ ತಾ. ೨೧-೬-೩೭ ರಲ್ಲಿ ಶಿವಮೊಗ್ಗಕ್ಕೆ ಮುಕ್ಕಾಂಮಾಡಿದ ಶ್ರೀ. ರಂಭಾಪುರಿ ಮಠಾಧಿಕಾರಿಗಳಿಗೆ ತಾ. ೩೦-೬-೩೭ ರಲ್ಲಿ ಪ್ರಿಂಟಾದ ಅರ್ಜಿ ಮೂಲಕ ರಜಿಸ್ಟರ್‌ಮಾಡಿ ಕಳಿಸಿಕೊಟ್ಟಿರುತ್ತಾರೆ. (ಇದುವರೆಗೂ ಬರವಣಿಗೆಗೆ ಯಾವ ಉತ್ತರವಿಲ್ಲ.)

ತಾವು ಯಾವಾಗಲೂ ವೀರಶೈವರ ಧಾರ್ಮಿಕ, ಆಚಾರ ವಿಚಾರಗಳ ಪರಿಶೀಲನೆಗೆ ದೇಶದಮೇಲೆ ಹೊರಡುತ್ತೇವೆಂದು ಸರಕಾರದಿಂದ ರಹದಾರಿ ಪಡೆದು ಹೊರಟ, ಬಾಳೆಹೊನ್ನೂರು ಶ್ರೀಗಳವರು ಕೇವಲ ಆತ್ಮಸ್ತುತಿಮಾಡಿಸಿಕೊಳ್ಳುತ್ತಲೂ ಮಾಡಿಕೊಳ್ಳುತ್ತಲೂ, ಅರಿಯದ ಭಕ್ತರಿಂದ ಕಾಣಿಕೆ ವಗೈರೆ ಉಪಾಯದಿಂದ ವಸೂಲುಮಾಡಿಕೊಳ್ಳುತ್ತಲೂ ಇವರು ಹೋದಕಡೆಯಲ್ಲೆಲ್ಲಾ ಭಕ್ತರು ಎರಡು ಪಾರ್ಟಿಗಳಾಗಿ ಇವೇ ಪ್ರಶ್ನೆಗಳನ್ನು ಕೇಳಿದರೂ ಸಹ ಎಲ್ಲಿಯೂ ಸರಿಯಾದ ಬರವಣಿಗೆಯ ಜಾಹಿರಾತುಗಳನ್ನು ಸಂಸ್ಥಾನದಿಂದ ಹೊರಡಿಸದೆಯೂ ಇರುತ್ತಾರೆ.

ಜನಾಂಗದವರೇ, ಈಗ ಬರೆದ ಸಣ್ಣ ಪುಸ್ತಕಗಳೇ ಮುಂದೆ ಆಗಮ ಗ್ರಂಥಗಳಾಗಿ ನಿಮ್ಮ ಪೀಳಿಗೆಯವರ ಕಲಹಕ್ಕೆ ಅವಕಾಶವಾಗಬಹುದು. ಆದ್ದರಿಂದ ನಿಮ್ಮ ಮೇಲಿನ ದೋಷವನ್ನು ಕಳೆದುಕೊಳ್ಳಲಿಕ್ಕೆ ನೀವು ಸ್ವತಂತ್ರರಾಗಿ ಜೀವಿಸಿದರೇನೆ ಮನುಷ್ಯರಲ್ಲಿ ಬಾಳುವಿರಿ. ಎಚ್ಚರವಿರಲಿ !

ಸಮಾಜ ಸೇವಕ.

---

## ಶ್ರೀಶರಣ ಬಸವೇಶ್ವರ
### ಪುರಾಣ ಪ್ರವಚನ.

ಬಾದಾಮಿ ತಾಲೂಕು ಬೇಲೂರ ಜಾಲೀಹಾಳ ಗ್ರಾಮದಲ್ಲಿ ಹಾಲಕೆರೆಯ ಶ್ರೀಮನ್ನಿರಂಜನ ಅನ್ನದಾನ ಮಹಾಸ್ವಾಮಿಗಳವರ ಮಠದಲ್ಲಿ ಅವರ ನೇತೃತ್ವದಲ್ಲಿ ಶ್ರೀವಿದ್ಯಾ ವಾಚಸ್ಪತಿ ವಿದ್ಯಾಲಂಕಾರಾದಿ ಬಿರುದಾಂಕಿತರಾದ ಪಟ್ಟಾಧ್ಯಕ್ಷ ಶ್ರೀ. ಶಂಭುಲಿಂಗ ಶಿವಾಚಾರ್ಯರು ವಿಜಾಪುರ ಇವರಿಂದ ಶ್ರೀಶರಣ ಬಸವೇಶ್ವರ ಪುರಾಣ ಪ್ರವಚನವು ಅತ್ಯಂತ ಅಮೋಘವಾಗಿ ಜರುಗುತ್ತಲಿದೆ. ಬಸವಾದಿ ಪ್ರಮಥರ ವಚನಗಳಲ್ಲಿಯ ರಹಸ್ಯಗಳನ್ನು ವೇದಾಗಮೋಪನಿಷತ್ತುಗಳಿಗೆ ಸಮನ್ವಯವಾಗಿ ಶ್ರೋತೃಗಳ ಮನಸ್ಸಿನಮೇಲೆ ಪರಿಣಾಮವಾಗುವಂತೆ ಹೇಳುವ ಪದ್ಧತಿಯು ತುಂಬಾ ಆಕರ್ಷಕವಾಗಿರುವುದು. ನೂತನ ಪದ್ಧತಿ, ವಿದ್ವತ್ ಪುರಾಣ, ಬಹುಜನ ಸಮ್ಮತಿ ವಿವೇಚನ, ಧರ್ಮಾಸಕ್ತಿಗಳನ್ನು ನೆಲೆಗೊಳಿಸುವ ಚಾತುರ್ಯ ಮುಂತಾದವುಗಳು ಹೊಗಳತಕ್ಕವಾಗಿವೆ. ದಿನೇ ದಿನೇ ಜನಸಮೂಹವು ಅಭಿವೃದ್ಧಿ ಹೊಂದುತ್ತಲಿದೆ. ಪರಸ್ಥಳದವರ ಸತ್ಕಾರವನ್ನು ಮಾಡುವದರಲ್ಲಿ ಜಾಲೀಹಾಳ ಬೇಲೂರ ಭಕ್ತಜನರು ಬದ್ಧಕಂಕಣರಾಗಿದ್ದಾರೆ. ಆಸ್ತಿಕರು ಲಾಭಪಡೆಯಬೇಕೆಂಬ ಆಶೆ.

ಓರ್ವ ಪ್ರತ್ಯಕ್ಷದರ್ಶಿ.

---

## ಬೇಕಾಗಿದ್ದಾರೆ.

ಸಂಸ್ಕೃತ ಭಾಷಾ ಜ್ಞಾನ ಸರಿಯಾಗಿ ಇದ್ದು ಯಾವ ವಿಶ್ವವಿದ್ಯಾಲಯದ ಬಿ. ಎ. ಯಂ. ಎ. ಬಿ. ಯಸ್. ಯಲ್. ಪಿ. ಯಸ್. ಅಥವಾ ಯಂ. ಬಿ. ಬಿ. ಯಸ್. ಪರೀಕ್ಷೆ ಪಾಸಾದವರು ಅಥವಾ ಪಾಸಾಗದವರು, ಅಥವಾ ಸಂಸ್ಕೃತದಲ್ಲಿ ಹೆಚ್ಚಿನ ಅಭ್ಯಾಸಮಾಡಿದವರು (ಶಾಸ್ತ್ರಿಗಳು) ಆಯುರ್ವೇದ ಶಾಸ್ತ್ರ ಅಭ್ಯಾಸಮಾಡಿ ನಿಜವಾದ ಸ್ವಾರ್ಥತ್ಯಾಗದಿಂದ ಸಮಾಜ ಸೇವೆ ಮಾಡಲಿಚ್ಛಿಸುವ ಸುಮಾರು ೨೫ ವರುಷದ ತರುಣರು ಬೇಕಾಗಿದ್ದಾರೆ. ಅವರ ಈ ಅಭ್ಯಾಸದ ಸೌಕರ್ಯಕ್ಕಾಗಿ ಶಕ್ಯವಾದ ಸಹಾಯವನ್ನು ಒದಗಿಸಿಕೊಡುವ ವಿಚಾರವಿದೆ. ಉತ್ಸುಕರಾದ ಈ ತರುಣರು ಬೇಗನೆ ಕೆಳಗಿನ ವಿಳಾಸಕ್ಕೆ ದಯಮಾಡಿ ಬರೆದು ತಿಳಿಸಬೇಕು.

ಬಸಪ್ಪ ಮಲ್ಲಪ್ಪ ಕಂಕಣವಾಡಿ.
ಕರ್ನಾಟಕ ಆಯುರ್ವೇದ ವಿದ್ಯಾಪೀಠ
ಬೆಳಗಾಂವ.

## ಪಾರಮಾರ್ಥಿಕ "ಡೈರಿ!"

ಶ್ರೀ ಶಿವ ಚಿದಂಬರಾಯ ನಮಃ

ಶ್ರೀಗುರು ಬಸವಲಿಂಗಾಯ ನಮಃ

(೫೮. ೯ ಬ. ೭ ಸೋಮ. ೪-೧-೩೭.)

ಅಪೂರ್ವ ಜನ್ಮದ ಅನುಕೂಲ ದಿನಗಳನ್ನೆಲ್ಲ ಹಾಳುಮಾಡಿಕೊಂಡು ಮುಪ್ಪಿನೋಳ್ ಮರಣವ ಗೆಲ್ವೆನೆಂಬ ಸಾಹಸಕ್ಕೆ ಕೈ ಹಾಕುವರೆ? ಬಂದ ಅಥವಾ ತಂದುಕೊಂಡ ಪರಿಸ್ಥಿತಿಗೆ ಕಂಗೆಟ್ಟರಾಗುವದೇನು? "ಧೈರ್ಯಂ ಸರ್ವತ್ರ ಸಾಧನಂ" ಅಂದದ್ದದೆ. ಆದುದರಿಂದ ಆಲಸ್ಯವೇಕೆ?

ತ್ರಿಪದಿ|| ಅನುಕೂಲ ಸಮಯದೊಳ್ ದಿನಗಳಂ ಕಳೆಕಳೆದು|
ಅನುಕೂಲ ತೀರೆ ಬುದ್ಧಿಬರೆ ಧೈರ್ಯ ಸಾ|
ಧನವು ಚಟುವಟಿಕೆ ದಾಸಾರ್ಯ ||೪||

ತಾ||— ಕಾರ್ಯಸಿದ್ಧಿಗೆ ಧೈರ್ಯ ಮತ್ತು ಚಟುವಟಿಕೆಗಳು ಸಾಧನಂಗಳು.

× × ×

ಶ್ರೀ. ಶಿವ ಚಿದಂಬರಾಯನಮಃ

ಶ್ರೀಗುರು ಬಸವಲಿಂಗಾಯ ನಮಃ

(೫೮. ೯ ಬ. ೮ ಮಂಗಳ. ೫-೧-೩೭.)

ಈಶ್ವರನ ಮನೆಯು ತನ್ನಮನೆಯಂತೆ ಎಂದು ಕಾಣುವದಯ್ಯ!

ತ್ರಿಪದಿ|| ತನ್ನ ಮನೆಯಂತೆಸಲೆ ಚನ್ನನ ಮನೆತಾನು|
ಭಿನ್ನ ನೋಟಳಿದು ಪ್ರೇಮದಿಂ ಜನನೋಡೆ|
ಬಿನ್ನಣವಕ್ಕು ದಾಸಾರ್ಯ ||೫||

ಭಾವಾರ್ಥ — ವಿಷಮ ದೃಷ್ಟಿಯು. ಅಂದರೆ ಸಮಾಜವನ್ನು ಅನ್ಯಿಗರೆಂದು ನೋಡುವ ದೃಷ್ಟಿಯು ಇಲ್ಲದಂತಾದಾಗ್ಗೆ ತನ್ನ ಮನೆಯಲ್ಲಿ ತಾನಿರುವಾತೆ ಈಶ್ವರನ ಮನೆಯಲ್ಲಿರಲಿಕ್ಕೆ ಚನ್ನಾಗಿ ದೊರಕುವದು.

ಊರೊಳಗಿಂದ ಒಂದು ಹಾದರದ ಸುದ್ದಿ ಕಿವಿಗೆ ಬಂದದ್ದು— ವಿಟನು ಏಟುತಪ್ಪಿಸಿಕೊಂಡು ಅಡವೀ ಬಿದ್ದಿರುವನಂತೆ! ನಂಜು ವೆರೆಸಿದ ಸವಿಯೂಟವೆಂದು ಗೊತ್ತಾಗಲಿಲ್ಲೆ? ಜೇನುತುಪ್ಪ ಸವರಿದ ಕತ್ತಿಯನ್ನೇಕೆ ನೆಕ್ಕಬೇಕು !!

ತ್ರಿಪದಿ|| ಹಾದರವ ಮಾಡಿ ಸಂಪಾದಿಸಿದ್ದೇನಕಟ|
ಬೀದಿಯಾ ನಾಯಿ ತಾವಾಗಿ ಪೋದರ್‍ಕೈ|
ಬಾಧೆ ಗೊತ್ತಿದ್ದು ದಾಸಾರ್ಯ ||೬||

ಮೀನು ಪರಿಣಾಮ ಗೊತ್ತಿಲ್ಲದೆ ಗಂಟಲಿಗೆ ಗಾಣವನ್ನು ಸಿಕ್ಕಿಸಿಗೊಳ್ಳುತ್ತದೆ. ಮಾನವನು ಗೊತ್ತಿದ್ದು ಸಂಕಟವನ್ನು ತಂದು ಕೊಳ್ಳುತ್ತಾನಲ್ಲ! ಸರ್ವಜ್ಞ ಕವಿಯು ಏನನ್ನುತ್ತಾನೆ?

ಹೆಣ್ಣಿನಾ ಹೊನ್ನಿನಾ ಮಣ್ಣಿನಾ ಬಲೆಯನ್ನು|
ಹಣ್ಣಿಸಿ ಜಗವನದರೊಳು ಹಿಡಿದಾಮು|
ಕ್ಕಣ್ಣನ ನೋಡು ಸರ್ವಜ್ಞ ||

ಪ್ರ.— ಇಂತು ಬಲೆಯನ್ನೊಡ್ಡಿಕೊಂಡು ಕೂತ ಆ ಬಲೆಗಾರನು ಪ್ರಸನ್ನನಾಗಬೇಕಾದರೆ ಏನು ಕೊಡಬೇಕು?

ಉ.— ಆ ಬಲೆಗಳನ್ನೇ ಆಹುತಿಯಾಗಿ ಇಲ್ಲವೆ ಬಲಿಯಾಗಿ ಕೊಡಬೇಕು.

ತ್ರಿಪದಿ|| ಹೆಣ್ಣು ಹೊನ್ನುಗಳೇಕೆ ಮಣ್ಣಿನಾ ಮೋಹೇಕೆ|
ಕಣ್ಣು ಮೂರವನ ಕೃಪೆಗಾಗಿ ಇವು ಮೂರು
ಮುನ್ನ ಕೊಡು ಬೆಲೆಯ ದಾಸಾರ್ಯ. ||೭||

[ಮಣ್ಣಿನ ಮೋಹವೇಕೆ] ಮಣ್ಣು — ದೇಹ ಕಣ್ಣು ಮೂರವ— ಕಣ್ಣು ಮೂರಿನವ - ಮೂರು ಕಣ್ಣಿನವ - ಕಣ್ಣು ಮೂರು + (ಉಳ್ಳ) ಅವನ

---

ಗದ್ಯ— ಬಂದು ಬಂದು ಪೋಗುವ ವೈರಿಗಳೆ ಷಡ್ರಿಪುಗಳೆಂದು ಪ್ರಸಿದ್ಧರಾಗಿರ್ಪರ್ ಆದರೆ ಆವಾಗಲೂ ಹತ್ತಿರಿರುವನೇಕೆ ಪ್ರಸಿದ್ಧನಾಗನಯ್ಯ? ಆದೇಕೆ ಸುಭಾಷಿತಕಾರನ ದೃಷ್ಟಿಯೊಳಗಿಂದಾತನು ತಪ್ಪಿಸಿಕೊಂಡಿಲ್ಲ. "ಆಲಸ್ಯಂ ಹಿ ಮನಷ್ಯಾಣಾಂ ಶರೀರಸ್ಥೊ ಮಹಾರಿಪುಃ"

ತ್ರಿಪದಿ|| ಆರು ವೈರಿಗಳುಂಟು ವೈರಿದೊಡ್ಡವನೊಬ್ಬ|
ಸಾರಿದೆನಾಲಸನಂ ಕೊಂದು ಸುಖಿಯಾಗು|
ಕೋರಿ ಸಂಪದವ ದಾಸಾರ್ಯ ||೮||

ಸಂಪದವ ಕೋರಿ— ಸಂಪತ್ತನ್ನು ಬಯಸುತ್ತಿದ್ದರೆ

× × ×

ಶ್ರೀ. ಶಿವ ಚಿದಂಬರಾಯ ನಮಃ

ಶ್ರೀಗುರು ಬಸವಲಿಂಗಾಯ ನಮಃ

(೫೮. ೯ ಬ. ೯ ಬುಧ. ೬-೧-೩೭.)

ಪ್ರ— ೭ ನೇ ವೈರಿಯನ್ನು ಸಂಹರಿಸುವ ಸಾಧನವೇನಯ್ಯ?
ಉ— ಚಟುವಟಿಕೆ.

ಕಂದ|| ಬಹು ದೊಡ್ಡ ವೈರಿ ದೇಹದಿ|
ಅಹರ್ನಿಶತಾನುಸುಗಿ ಕೆಲಸ ಕೆಡಿಸುವ ತಡೆದು|
ಬಹು ಚಟುವಟಿಕೆಯಿಂದವನ|
ಇಹಸಾಧಿಸು ದಾಸ ಕಡಿದು ತಿಳಿಯಾಲಸನಂ ||೯||

ಅಹರ್ನಿಶ—ಹಗಲಿರುಳು, ಇಹ—ಇಹಲೋಕ ಅರ್ಥಾತ್ ಪ್ರಪಂಚ

× × ×

# ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರುಘಾರಾಜೇಂದ್ರ ಮಹಾಸ್ವಾಮಿ ಶ್ರೀ ಮಚ್ಚಿನ್ಮೂಲಾದ್ರಿ ಬೃಹನ್ಮಠ ಮಹಾಸಂಸ್ಥಾನದ ಏಜಂಟರ ಆಫೀಸಿನಿಂದ-

ಸಮಸ್ತ ವೀರಶೈವ ಭಕ್ತಾದಿಗಳಿಗೆ ಈ ಮೂಲಕ ಅಪ್ಪಣೆ ಕೊಡಿಸುವದೇನಂದರೆ—ಇದೇ ತಿಂಗಳ ೨ನೇ ವಾರದಲ್ಲಿ ಬೆಂಗಳೂರಿನ ಪಂಡಿತ ರೇವಣಾರಾಧ್ಯರೆಂಬವರು ಶ್ರೀ ಮಹಾ ಸನ್ನಿಧಿಗೆ ೨೫ ಪ್ರಶ್ನೆಗಳನ್ನು ಪ್ರಜಾಬಂಧು ಪತ್ರಿಕೆಯಲ್ಲಿ ಮತ್ತು ಪುಸ್ತಕದ ಮೂಲಕ ಬಹಿರಂಗವಾಗಿ ವಿಜ್ಞಾಪಿಸಿಕೊಂಡಿದ್ದಾರೆ. ಈ ಪ್ರಶ್ನೆಗಳಲ್ಲಿರತಕ್ಕ ಸಂಗತಿಗಳು ನಮ್ಮಂತೆಯೇ ಅನೇಕ ವೀರಶೈವ ಜನಗಳ ಸಂಶಯದ ಸಂಗತಿಗಳಾಗಿವೆಯೆಂತಲೂ ಅರಿಕೆಮಾಡಿಕೊಂಡಿದ್ದಾರೆ. ಇವರಾಗಲಿ ಅಥವಾ ಇವರಂತೆ ಸಂಶಯಗ್ರಸ್ತರಾದ ಬೇರೆಯವರಾಗಲಿ ಶ್ರೀ ಮಹಾ ಸನ್ನಿಧಿಗೆ ಬಂದು ಪ್ರತ್ಯಕ್ಷ ಸಂಭಾಷಿಸಿ ತಮಗುಂಟಾದ ಸಂಶಯ ನಿರಸನ ಮಾಡಿಕೊಳ್ಳಬಹುದಾಗಿತ್ತು. ಆ ವಿಷಯದಲ್ಲಿ ಯಾವ ತಡೆಯೂ ಇರಲಿಲ್ಲ. ಹೀಗಿದ್ದರೂ ಈ ವರೆಗೂ ಆ ಸಂಶಯಗಳನ್ನು ಶ್ರೀ ಮಹಾ ಸನ್ನಿಧಿಯಲ್ಲಿ ಯಾರೂ ಬಿನ್ನೈಸಿಕೊಳ್ಳದೆ ಒಮ್ಮೆಲೇ ಇವರು ಈ ಪ್ರಕಾರ ಪ್ರಕಟಿಸಿರುವುದರಿಂದ ಜನಗಳಲ್ಲಿ ತಪ್ಪು ತಿಳುವಳಿಕೆಯುಂಟಾಗುವ ಸಂಭವವಿದೆ. ಆದುದರಿಂದ ಇವರಾಗಲಿ ಅಥವಾ ಇವರಂತೆ ಸಂಶಯವುಳ್ಳವರಾಗಲಿ ಶ್ರೀ ಮಹಾ ಸನ್ನಿಧಿಗೆ ಬಂದು ಪ್ರತ್ಯಕ್ಷ ಸಂಭಾಷಿಸಿ ತಮ್ಮ ತಮ್ಮ ಸಂಶಯಗಳನ್ನು ನಿವಾರಣೆ ಮಾಡಿಕೊಳ್ಳಬೇಕು. ಇವರ ೨೫ ಪ್ರಶ್ನೆಗಳ ಮುಖ್ಯಾಂಶವನ್ನು ಕುರಿತು ಆ ವಿಷಯಗಳಲ್ಲಿ ಶ್ರೀ ಮಹಾ ಸನ್ನಿಧಿಯ ಅಭಿಪ್ರಾಯವನ್ನು ಸಂಕ್ಷಿಪ್ತವಾಗಿ ಈ ಮೂಲಕ ವ್ಯಕ್ತಗೊಳಿಸೋಣವಾಗಿದೆ--

ಈ ೨೫ ಪ್ರಶ್ನೆಗಳಲ್ಲಿ ಮುಖ್ಯವಾಗಿ ಮೂರು ಸಂಗತಿಗಳಿವೆ.

(೧) ಶ್ರೀಮಹಾಸಂಸ್ಥಾನಕ್ಕೆ ಸಂಬಂಧಪಟ್ಟ ಸಂಗತಿಗಳು
(೨) ಖಾಸ ಶ್ರೀ ಮಹಾ ಸನ್ನಿಧಿಗೆ ಸಂಬಂಧಪಟ್ಟ ವಿಷಯಗಳು.
(೩) ವೀರಶೈವ ಮತ ವಿಷಯಗಳು.

ಒಂದನೇ ಸಂಗತಿಯಲ್ಲಿ ಶ್ರೀ ಮಹಾ ಸಂಸ್ಥಾನವು ವೀರಶೈವ ಸಮಾಜಕ್ಕೇನೇ ಸಂಬಂಧಪಟ್ಟದ್ದಾಗಿರುವುದರಿಂದ ಅದಕ್ಕೆ ಪೂರ್ವದಿಂದಲೂ ಇದ್ದಂಥ ಮತ್ತು ಅನಂತರ ಉಂಟಾದಂಥ ಕೊರತೆ ಸೌಲಭ್ಯ ಘನತೆಗಳೆಲ್ಲಾ ಇಡೀ ಸಮಾಜಕ್ಕೇನೇ ಸಂಬಂಧಪಟ್ಟವುಗಳಾಗಿವೆ. ಆದಕಾರಣ ಆ ವಿಷಯವಾಗಿ ಯಾರಿಂದ ಯಾವ ವಿಧವಾದ ಪ್ರಯತ್ನಗಳು ಸಂಭವಿಸಿದ್ದರೂ ಅವುಗಳೆಲ್ಲಾ ಇಡೀ ವೀರಶೈವ ಸಮಾಜಕ್ಕೇನೇ ಸೇರಿದವುಗಳಾಗಿವೆಯೆಂದು ತಿಳಿಯುವುದು ಯುಕ್ತವಾಗಿದೆ.

(೨) ಶ್ರೀ ಮಹಾ ಸನ್ನಿಧಿಯು ನಡೆಸಿದ ಕಾರ್ಯಗಳ ನಿಜ ಸಂಗತಿಗಳನ್ನು ಪ್ರಸ್ತಾಪಿಸಿದ್ದಾದರೆ ಆಯಾಯ ವ್ಯಕ್ತಿಗಳ ಕರ್ತವ್ಯ ಶೂನ್ಯತೆ ದೋಷಗಳು ವ್ಯಕ್ತವಾಗುವ ಮೂಲಕ ಶ್ರೀ ಮಹಾ ಸನ್ನಿಧಿಯ ಆತ್ಮ ಶ್ಲಾಘನೆಯಾಗಿ ಜನರಿಂದ ಪರಿಗಣಿಸಲ್ಪಡುವದಾದ ಕಾರಣ ಆ ವಿಷಯಗಳನ್ನು ಉದಾಹರಿಸಲಾಗುವದಿಲ್ಲ.

(೩) ಹೊಸದಾಗಿಯೆ ಒಂದು ಮತವನ್ನುಂಟುಮಾಡಿದಾತನೇ ಮತಸ್ಥಾಪಕನೆಂದು ತಿಳಿಯುವುದುಂಟು. ಆದರೆ ಇದರ ಅರ್ಥವು ಹಾಗಲ್ಲ. ಪರಮತ ನಿರಾಕರಣ ಪೂರ್ವಕ ಸ್ವಮತ ಸಿದ್ಧಾಂತ ಕಥನವೇ ಸ್ಥಾಪನೆ ಪದಕ್ಕೆ ಅರ್ಥವು. ತತ್ ಕರ್ತೃವೆ ಸ್ಥಾಪನ ಪದಕ್ಕೆ. ಈ ವಿಧವಾದ ಅರ್ಥವಾಗುವುದರಿಂದ ಶ್ರೀ ಬಸವೇಶನು ಉಪನಯನ ಮೊದಲಾದ ಸಂಸ್ಕಾರಗಳನ್ನು ನಿರಾಕರಿಸಿದ್ದೇ ಪರಮತ ನಿರಾಕರಣೆಯು. ಲಿಂಗಧಾರಣಾದಿ ಸಂಸ್ಕಾರ ಮತ್ತು ಷಟ್‌ಸ್ಥಲ ಸಿದ್ಧಾಂತ ಕಥನವೇ ಸ್ವಮತ ಸಿದ್ಧಾಂತವು. ಆದುದರಿಂದ ಶ್ರೀ ಬಸವೇಶನು ವೀರಶೈವ ಮತಸ್ಥಾಪಕನಾಗುತ್ತಾನೆ.

ಅನಾದಿ ಸಂಸಿದ್ಧವಾದ ಈ ವೀರಶೈವ ಮತವನ್ನು ನಂದಿ ಅವತಾರಿಯಾದ ಶ್ರೀ ಬಸವೇಶನು ೧೨ ನೇ ಶತಮಾನದಲ್ಲಿ ಸಂಸ್ಥಾಪಿಸಿದನು. ಆಗಿನ ಶಿವಶರಣರೂ ಅಂದಿನಿಂದ ಈ ವರೆಗಾದ ಅಸಂಖ್ಯಾತ ವೀರಶೈವ ಪರಮ ಪೂಜ್ಯ ವಿಭೂತಿಗಳೂ ಮಹಾ ಮಹಾ ಕವಿಗಳೂ ಇದೇ ಪ್ರಕಾರ ತಿಳಿದು ಆಚರಿಸಿರುವದಾಗಿ ಅನೇಕ ಗ್ರಂಥಗಳಿಂದಲೂ ಅಂದಿನಿಂದ ಈ ವರೆಗಿನ ಯಾವ ಬದಲಾವಣೆಯೂ ಇಲ್ಲದ ವೀರಶೈವರ ಆಚರಣೆಗಳಿಂದಲೂ ಸ್ಪಷ್ಟವಾಗುತ್ತದೆ. ಇಂತಹ ಶ್ರೀ ಬಸವೇಶ್ವರನು ಸಮಸ್ತ ವೀರಶೈವರಿಗೂ ಪರಮ ಪೂಜ್ಯನು. ಇಂಥ ಅವತಾರಿಗಳ ಪೂಜ್ಯತ್ವಕ್ಕೆ ಅವರು ಜನಿಸಿದ ವರ್ಣಾದಿಗಳೇನೂ ಅವಶ್ಯಕವಾದವುಗಳಲ್ಲವೆಂಬುದಕ್ಕೆ ವರ್ಣವಾದಿಗಳಾದ ಬ್ರಾಹ್ಮಣರು ಕೂಡಾ ಕ್ಷತ್ರಿಯ ವರ್ಣದಲ್ಲಿ ಜನಿಸಿದ ಶ್ರೀ ರಾಮಚಂದ್ರನನ್ನು ಪರಮ ಪೂಜ್ಯನನ್ನಾಗಿ ತಿಳಿದಿರುವುದೇ ದೃಷ್ಟಾಂತವಾಗಿರುವಾಗ ಅತಿವರ್ಣಿಗಳಾದ ವೀರಶೈವರಂತೂ ಶ್ರೀ ಬಸವೇಶನನ್ನು ಪೂಜ್ಯನನ್ನಾಗಿ ತಿಳಿದಿರುವುದು ವಿಹಿತವೂ ಧರ್ಮವೂ ಆಗಿದೆಯೆಂದು ಬೇರೆ ಹೇಳಬೇಕಾದುದಿಲ್ಲ. ವೀರಶೈವ ಮತ ಸಂಬಂಧವಾದ ಸಿದ್ಧಾಂತಗಳ ನಿಜಜ್ಞಾನವಾಗಿ ತಪ್ಪು ತಿಳುವಳಿಕೆಗಳೂ, ಸಂಶಯಗಳೂ ನಿವಾರಣೆಯಾಗಬೇಕಾದರೆ ಶಾಸ್ತ್ರಾಧಾರಗಳಿಂದ ಸವಿಸ್ತಾರವಾಗಿ ಸಮಕ್ಷಮ ಸಂಭಾಷಿಸುವದೇ ವಿಹಿತವಾದ ಮಾರ್ಗವಾಗಿರುವುದರಿಂದ ಅಂತಹ ಶಂಕಿತರು ಶ್ರೀ ಮಹಾ ಸನ್ನಿಧಿಗೆ ಬಂದು ಸಂಭಾಷಿಸಿ ತಿಳಿದುಕೊಳ್ಳಬೇಕಲ್ಲದೆ ಹೀಗೆ ಅಸಂಬದ್ಧವಾಗಿ ಪ್ರಕಟಿಸುವ ಲೇಖನಗಳು ಗಮನಿಸಲು ಯೋಗ್ಯಗಳಲ್ಲವೆಂಬುದನ್ನು ಲಕ್ಷ್ಯಕ್ಕೆ ತಂದು ಅಂಥ ಲೇಖನಗಳನ್ನು ಪ್ರಕಟಿಸಬಾರದಾಗಿ ಈ ಮೂಲಕ ತಿಳಿಸೋಣವಾಗಿದೆ.

ತಾ. ೧೫-೭-೩೪ ಮುಕ್ಕಾಂ. ಹಾವೇರಿ.

[ಈ ವಿಷಯವನ್ನು ಅನೇಕರು ಅಪೇಕ್ಷಿಸಿದ್ದರಿಂದ ತಾ ೩೦-೭-೩೪ ನೆಯ ಶರಣ ಸಂದೇಶದಲ್ಲಿ ಪ್ರಕಟವಾದುದನ್ನೇ ಇಲ್ಲಿ ಕೊಡಲಾಗಿದೆ.

ಸಂಪಾದಕ]

ಓಂ.

ವೀರಶೈವ ಸಮಾಜಕ್ಕೆ ಧರ್ಮ ರಕ್ಷಕರು ಮತ್ತು ಜವಾಬ್ದಾರರು ಆದ

# ಶ್ರೀ ಜಗದ್ಗುರುಗಳಲ್ಲಿ ವಿಜ್ಞಾಪನೆಗಳು.

ಶಿವಮೊಗ್ಗ.

ಈ ಕೆಳಗೆ ಕಂಡವರು ಪ್ರಕಟಿಸಿರುವ ಶಾಸ್ತ್ರಸಂಬಂಧದ ಅಭಿಪ್ರಾಯಗಳು ಭಿನ್ನವಾಗಿರುವುದರಿಂದ ಸಮಾಜಕ್ಕೆ ಅವಶ್ಯವಾದ ಇದರ ನಿಜತತ್ವವನ್ನು ಮಹಾ ಜನಾಂಗದ ಹಿತಕ್ಕಾಗಿ ತಾವುಗಳು ಅಂದರೆ ಜಗದ್ಗುರುಗಳು ಉದಾರ ಮನಸ್ಸಿನಿಂದ ಲಿಖಿತಮೂಲಕವಾಗಲೀ ಜಾಹೀರಾತು ಮೂಲಕವಾಗಲೀ ನಮ್ಮಗಳಿಗೆ ತಿಳಿಸಬೇಕಾಗಿ ಕೋರುತ್ತೇವೆ.

೧. ವೀರಶೈವರಲ್ಲಿ ಒಳಪಂಗಡಗಳಲ್ಲಿ ಜಾತಿಭೇದಗಳಿವೆಯೆಂದೂ ಅವರಲ್ಲಿ ಪರಸ್ಪರ ಕೆಲವು ಪಂಗಡಗಳಲ್ಲಿ ಬಳಕೆ ಭೋಜನಗಳನ್ನು ಮಾಡಬಾರದೆಂದೂ ಬೆಂಗಳೂರಿನ ಸುಮತಿ ಪಂಡಿತ ರೇವಣಾರಾಧ್ಯರೆಂಬವರು "ಬಿಳಿ ಅಂಗಡಿ ಮದಗಜಾಂಕುಶ" ವೆಂಬ ಪುಸ್ತಕ ಬರೆದು ಸಮರ್ಥಿಸಿರುತ್ತಾರೆ.

೨. ಅದಕ್ಕೆ ಪ್ರತಿಯಾಗಿ ಹುಬ್ಬಳ್ಳಿ ವಕೀಲರಾದ ಶ್ರೀಯುತ ಬಿಳೆ ಅಂಗಡಿಯವರು, ಬಿ. ಎ., ಎಲ್. ಎಲ್. ಬಿ. ಇವರು "ವೀರಶೈವರಲ್ಲಿ ಜಾತಿಭೇದಗಳಿಲ್ಲ" ವೆಂಬ ಪುಸ್ತಕ ಬರೆದು ಅದರಲ್ಲಿ ಲಿಂಗಧಾರಿಗಳಾದ ವೀರಶೈವರೆಲ್ಲಾ ಒಂದೇ ರೀತಿಯಾಗಿರುತ್ತಾರೆಂದೂ ಅವರಲ್ಲಿ ಯಾವ ಭೇದವೂ ಇಲ್ಲದೆ ಊಟ ಉಪಚಾರಗಳನ್ನು ಮಾಡಬೇಕೆಂದೂ ಇದಕ್ಕೆ ಯಾವ ಶಾಸ್ತ್ರಗಳೇ ಆಗಲೀ ನಿರ್ಬಂಧ ಮಾಡುವುದಿಲ್ಲವೆಂದೂ ಸಮರ್ಥಿಸಿ ಬರೆದಿರುತ್ತಾರೆ.

೩. ಶ್ರೀ ಕಾಶಿನಾಥ ಗ್ರಂಥಮಾಲಾ ನಾಲ್ಕನೇ ಪುಷ್ಪದಲ್ಲಿ ಪಂಡಿತ ಬಿ. ಗುರುಸಿದ್ಧಶಾಸ್ತ್ರಿಗಳು "ಸನ್ಯಾಸಾಶ್ರಮ ವಿಮರ್ಶ ತತ್ವ ಸ್ಥಿರೀಕರಣ" ವೆಂಬ ಪುಸ್ತಕ ಬರೆದು ಅದರಲ್ಲಿ ವಿರಕ್ತರಿಗೆ ಸಮಾಜದಲ್ಲಿ ಪೂಜ್ಯತೆ ಇಲ್ಲವೆಂದೂ ಅವರು ಮಠದ ಅಯ್ಯನವರಿಗೂ ಸಹಾ ಶಿಷ್ಯರಾಗುತ್ತಾರೆಂದೂ ಅವರು ಅರಣ್ಯವಾಸಿಗಳಾಗಿರಬೇಕಲ್ಲದೆ ಊರು ಕೇರಿಗಳಲ್ಲಿ ಬರಬಾರದೆಂದೂ ಹಾಗೆ ಏನಾದರೂ ಬಂದಲ್ಲಿ ಊಟ ಉಪಚಾರ (ವಿಶೇಷ) ಮಾಡಿದಲ್ಲಿ ಕೆಟ್ಟ ಅಭಕ್ಷತಿಂದಂತೆ ಬಹು ಹೀನಾಯಮಾನವಾಗಿ ಬರವಣಿಗೆ ಉಪಯೋಗ ಮಾಡಿರುತ್ತಾರೆ.

೪. ಬಸವಾದಿಗಳು ಅವರ ಅನುಯಾಯಿಗಳು ಅಸಂಪ್ರದಾಯಕರೆಂದೂ ಅವರಿಗೆ ಸಮಾಜದಲ್ಲಿ ಗೌರವವಿಲ್ಲವೆಂದೂ ಬರೆದಿರುತ್ತಾರೆ.

೫. ಕಲಶಗಳ ಸ್ಥಾಪನೆಯಲ್ಲಿಯೂ ಐದು ಅಕ್ಷರ ಅಥವಾ ಐದು ಗುರುಗಳಿಗೋಸ್ಕರ ಐದೇ ಕಲಶಸ್ಥಾಪಿಸಬೇಕೆಂದೂ ಅದಕ್ಕೆ ಪ್ರತಿಯಾಗಿ ಆರು ಸ್ಥಾಪಿಸುವುದು ಶಾಸ್ತ್ರ ವಿರುದ್ಧವೆಂದೂ ಬರೆದಿರುತ್ತಾರೆ.

೬. ಇದಕ್ಕೆ ಪ್ರತಿಯಾಗಿ ಶಿರಾಳಕೊಪ್ಪದ ಮ|| ರಾ|| ಕೆ. ಚನ್ನಮಲ್ಲಪ್ಪನವರು ಜಂಗಮಾಧಿಕ್ಯವೆಂಬ ಪುಸ್ತಕ ಬರೆದು ಅದರಲ್ಲಿ ಅಷ್ಟಾವರಣದಲ್ಲಿ ಹೇಳಿರತಕ್ಕ ಜಂಗಮತ್ವವು ವಿರಕ್ತರಿಗೆ ಸಲ್ಲತಕ್ಕದ್ದೆಂದೂ ಗುರುವಿಗಿಂತ ಜಂಗಮವೇ ಅಧಿಕವೆಂತಲೂ ಅಂಥ ಜಂಗಮ ಅಥವಾ ವಿರಕ್ತರ ಮಾನ್ಯ ಮಾಡಬೇಕಾದದ್ದು ಗುರುವರ್ಗದವರ ಶಾಸ್ತ್ರಬದ್ಧ ಸಂಪ್ರದಾಯವೆಂದೂ ಬರೆದಿರುತ್ತಾರೆ.

೭. ಕಲಶಸ್ಥಾಪನೆಯಲ್ಲಿಯೂ ಸಹ ಅವು ತತ್ವಕ್ಕೆ ಸಂಬಂಧಪಟ್ಟವಾದ್ದರಿಂದ ವ್ಯಕ್ತಿಗೆ ಹೋಲಿಸುವುದು ಸ್ವಾರ್ಥತೆಯೆಂದೂ ತತ್ವಕ್ಕೆ ಹೋಲಿಸಿ ಆ ಪ್ರಕಾರ "ನಮಃಶಿವಾಯಃ" ಎಂಬ ಪಂಚಾಕ್ಷರಿ ಮಂತ್ರಕ್ಕೆ ಮೂಲರೂಪವಾದ ಓಂಕಾರವನ್ನು ಹೇಗೆ ಬಿಡುವುದಿಲ್ಲವೋ ಅದರಂತೆ ಷಟ್‌ಕಲಶದ ಅವಶ್ಯಕವಿರುವುದಾಗಿ ಗ್ರಂಥಗಳ ಆಧಾರದಿಂದ ಬರೆದಿರುತ್ತಾರೆ

೮. "ಸನ್ಯಾಸಾಶ್ರಮ ವಿಮರ್ಶ" ಎಂಬ ಬುಕ್ಕಿನಲ್ಲಿ ಬರೆದಂತೆ ಸನ್ಯಾಸಿ ತತ್ವವು ಅಲಿಂಗಿ ಸನ್ಯಾಸಿಗೆ ಸಂಬಂಧಿಸಿರುವುದಾಗಿಯೂ ಮತ್ತು ಗುರುವೇ ಜಂಗಮನಾಗಬಲ್ಲನೆಂಬ ಅಭಿಪ್ರಾಯವು ಕೇವಲ ಸ್ವಾರ್ಥತೆಗಾಗಿರುವದೆಂದೂ ಬರೆದಿರುತ್ತಾರೆ.

೯. ವಿರಶೈವ ಧರ್ಮ ಸಿದ್ಧಾಂತ ರೀತಿಯಿಂದ ಶಾಸ್ತ್ರವು ಎರಡಿಲ್ಲದೆ ಒಂದೇ ಇರಬೇಕಾದದ್ದು ನ್ಯಾಯ. ಹೀಗಿರುವಲ್ಲಿ ಜವಾಬ್ದಾರಿಯಾದ ಜಗದ್ಗುರುಗಳು ಮೇಲ್ಕಂಡ ಭಿನ್ನಾಭಿಪ್ರಾಯವನ್ನು ಹೋಗಲಾಡಿಸುವ ಬಗ್ಗೆ ಶಾಸ್ತ್ರರೀತಿಯಿಂದ ನಿಜವಾದದ್ದೂ ನ್ಯಾಯವಾದದ್ದೂ ಆದ ಒಂದೇ ಅಭಿಪ್ರಾಯವನ್ನು ಬರಹ ಮೂಲಕ ಜನಾಂಗದ ತಿಳುವಳಿಕೆ ಬಗ್ಗೆ ಈ ಕೆಳಗೆ ನಮೂದಿಸಿರುವ ಪ್ರಶ್ನೆಗಳಿಗೆ ಉತ್ತರ ರೂಪವಾಗಿ ಪ್ರಚುರಪಡಿಸಬೇಕಾಗಿ ನಮ್ಮಗಳ ಕೋರಿಕೆ.

೧. (a) ವೀರಶೈವರಲ್ಲಿ ಜಾತಿಭೇದಗಳಿವೆಯೆ? (b)ಅದರಲ್ಲಿ ಶೂದ್ರರೆಂಬವರು ಇದ್ದಾರೆಯೇ? (c) ವೀರಶೈವರೆಲ್ಲರೂ ಪರಸ್ಪರ ಭೋಜನಾದಿಗಳನ್ನು ಮಾಡಬಹುದೆ? ೨. (a) ಗುರು ಮತ್ತು ವಿರಕ್ತರಲ್ಲಿ ಅಧಿಕ ಪೂಜ್ಯರು ಯಾರು? (b) ಪಂಚಾಚಾರ್ಯರನ್ನು ಉತ್ಸವಾದಿಗಳಿಂದ ಸತ್ಕರಿಸುವಂತೆ ವಿರಕ್ತ ಗುರುಗಳನ್ನೂ ಮತ್ತು ಬಸವಾದಿ ಪ್ರಮಥರನ್ನೂ ವೀರಶೈವರು ಉತ್ಸವಾದಿಗಳಿಂದ ಸತ್ಕರಿಸುವುದರಲ್ಲಿ ತಮ್ಮ ಅಭಿಪ್ರಾಯವೇನು? ೩. ಕಲಶಸ್ಥಾಪನೆಯಲ್ಲಿ ಭಿನ್ನಾಭಿಪ್ರಾಯವಿರುವುದನ್ನು ಯಾವ ರೀತಿ ಆಚರಿಸಬೇಕು? ೪. ಷಟ್ ಕಲಶಸ್ಥಾಪನೆಯಿಂದ ಯಾವ ದೋಷವಿದೆ?

ವೀರಶೈವರ ಸಮಾಜದ ಹಿತಕ್ಕಾಗಿ ಬೇಡುವವರಾದ—

| | |
|---|---|
| ೧. ಎಲ್. ಕರಿಬಸಪ್ಪ | ೫. ಸಿ. ಬಸಪ್ಪ |
| ೨. ಎಚ್. ಚಂದಪ್ಪ. | ೬. ಕೋರಿ ವೀರಪ್ಪ. |
| ೩. ಡಿ. ಎಚ್. ಚನ್ನಪ್ಪ. | ೭. ಎಚ್. ಎಸ್. ಬಸಪ್ಪ. |
| ೪. ಎಂ. ಪಿ. ಬಸಪ್ಪ. | ೮. ಎಂ. ಸಿ. ಕೊಟ್ರಪ್ಪ. |

# SUSHEELA & CO., KOLLEGAL. (S. INDIA.)

## 1000 ರೂಪಾಯಿಗಳ ಬಹುಮಾನ.

ಪ್ರತಿ ಎರಡು ಕೂರ್ಪಗಳಿಗೂ ಒಂದು ಕೂರ್ಪ ಉಚಿತ.

ಉತ್ತರಗಳನ್ನು ಸ್ವೀಕರಿಸುವ ಕಡೇ ದಿನ 18-10-1937 ಫಲಿತಾಂಶವನ್ನು ಪ್ರಕಟಿಸುವ ದಿನ 2?-10-1937

ಮೂರು ಕೂರ್ಪಗಳೂ ಸರಿಯಾಗಿ ಕಳುಹಿಸಿದವರಿಗೆ 500 ರೂಪಾಯಿಗಳು.

ಒಂದು ಕೂಪನ್ ತಪ್ಪುಳ್ಳವರಿಗೆ 200 ರೂಪಾಯಿಗಳು.

ಎರಡು ಕೂರ್ಪ ತಪ್ಪುಳ್ಳವರಿಗೆ 100 ರೂಪಾಯಿಗಳು

### ಇತರ ಬಹುಮಾನಗಳು

ಮೂರು ಕೂರ್ಪಗಳೂ ಸರಿಯಾಗಿ ಕಳುಹಿಸಿದ ಪ್ರಥಮ ಸ್ತ್ರೀಗೆ 125 ರೂಪಾಯಿಗಳು.

ಹೆಚ್ಚಾಗಿ ಕೂರ್ಪಗಳು ಕಳುಹಿಸಿದವರಿಗೆ 75 ರೂಪಾಯಿಗಳು.

|  |  |  |
|---|---|---|
|  |  |  |
|  | 26 |  |
|  |  |  |

**ಸುಶೀಲ ಅಂಡ್ ಕೋ., ಕೊಳ್ಳೇಗಾಲ**

ಈ ಸ್ಪರ್ಧೆಯ ನಿಯಮಗಳಿಗೆ ಬದ್ಧನಾಗಿದ್ದೇನೆ

ಹೆಸರು..............................................................

ವಿಳಾಸ..............................................................

..............................................................

ಪೋಸ್ಟಲ್ ಮಣಿಯಾರ್ಡರ್ ನಂಬರು.........................................

ಸ್ಟಾಂಪುಗಳು..................... ತಾರೀಖು.........................1937

ಉತ್ತರಗಳನ್ನು ಕಳುಹಿಸುವ ಕ್ರಮ:— ಎಲ್ಲಾ ಕಡೆಗಳಿಂದಲೂ ಮೇಲಿಂದ, ಅಡ್ಡಲಾಗಿ ಮೂಲೆಗಳಿಂದ 78 ಬರುವಂತೆ ಒಂದು ಸಲ ಉಪಯೋಗಿಸಿದ ಸಂಖ್ಯೆಯನ್ನು ತಿರುಗಿ ಅದೇ ಚದುರದಲ್ಲಿ ಉಪಯೋಗಿಸದೆ ಶಾಯಿನಲ್ಲಿ ಬರೆದು ಕಳುಹಿಸಬೇಕು.

### ನಿಬಂಧನೆಗಳು.

ಪ್ರವೇಶ ಧನ ಕೂರ್ಪಗೆ 0—8—0 ಆಣೆ ಪ್ರವೇಶ ಧನವನ್ನು ಪೋಸ್ಟೇಜ್ ಸ್ಟಾಂಪುಗಳ ರೂಪದಲ್ಲಾಗಲಿ ಮಣಿಯಾರ್ಡರ್ ಅಥವಾ ಪೋಸ್ಟಲ್ ಆರ್ಡರ್ ಮೂಲಕವಾಗಲಿ ಕಳುಹಿಸಬೇಕು. ಉತ್ತರಗಳು 18-10-1937 ರೊಳಗೆ ನಮ್ಮ ಕೈಸೇರಬೇಕು. ಈ ಸ್ಪರ್ಧೆ ಸಂಬಂಧವಾಗಿ ಕಳುಹಿಸಿದ ಹಣವನ್ನುಯಾವ ಕಾರಣದಿಂದಲೂ ವಾಪಸು ಮಾಡಲಾಗುವುದಿಲ್ಲ. ಮತ್ತು ಯಾವ ಪತ್ರವ್ಯವಹಾರಕ್ಕೂ ಅವಕಾಶವಿಲ್ಲ. ಉತ್ತರಗಳ ಸಂಖ್ಯಾನುಸಾರ ಬಹುಮಾನದ ಮೊತ್ತವನ್ನು ಹೆಚ್ಚು ಕಡಿಮೆ ಮಾಡಲಾಗುವುದು. ಒಂದಕ್ಕಿಂತ ಜಾಸ್ತಿಯಾಗಿ ಉತ್ತರಗಳು (ಎಲ್ಲಾ ) ಬಂದಲ್ಲಿ ಬಹುಮಾನಗಳನ್ನು ಸಮವಾಗಿ ಹಂಚಲಾಗುವುದು. ಮೇನೇಜರ್ ತೀರ್ಮಾನವೇ ಕಡೇ ತೀರ್ಮಾನ. ತಮ್ಮ ವಿಳಾಸದೊಡನೆ 0—1—0 ಆಣೆ ಸ್ಟಾಂಪು ಕಳುಹಿಸಿದವರಿಗೆ ಫಲಿತಾಂಶವನ್ನು ಕಳುಹಿಸಲಾಗುವುದು. ಮೇಲ್ಕಂಡ ಷರತ್ತುಗಳನ್ನು ಒಪ್ಪುವವರು ಮಾತ್ರ ಸ್ಪರ್ಧೆಗಳಿಗೆ ಉತ್ತರಗಳನ್ನು ಕಳುಹಿಸಬೇಕು.

ಮ್ಯಾನೇಜರ್

**ಸುಶೀಲ ಅಂಡ್ ಕೋ., ಕೊಳ್ಳೇಗಾಲ.**

---

## ವರನು ಬೇಕು.

ಓರ್ವ ೧೨--೧೩ ವರುಷಗಳ ಸಲಕ್ಷಣ ಸುಸ್ವರೂಪ ಸುಶಿಕ್ಷಿತ ಲಿಂಗಾಯತ ಕನ್ಯೆ ಇದೆ. ವರನು ಸ್ವತಂತ್ರ ಉದ್ಯೋಗದಿಂದ ತಕ್ಕಷ್ಟು ಆದಾಯವುಳ್ಳವನಾಗಲಿ ಅಥವಾ ಯಾವದೊಂದು ಸರಕಾರಿ ನೌಕರಿಯುಳ್ಳವನಾಗಲಿ ಇರಬೇಕು. ಒಳಪಂಗಡ ಏಕೀಕರಣಕ್ಕೆ ಒಪ್ಪಿಗೆಯುಳ್ಳವರು ಈ ಕೆಳಗಿನ ವಿಳಾಸಕ್ಕೆ ಪತ್ರವ್ಯವಹಾರ ಮಾಡಬೇಕು.

ಎಸ್. Clo.

ಶರಣ ಸಂದೇಶ ಆಫೀಸ್ ಆಲಮಟ್ಟಿ.

--೧೯೩೭ ನೆಯ ಇಸವಿಯಲ್ಲಿ ಹಿಂದು-ಮುಸಲ್ಮಾನರ ಕ... ಹದಿಂದ ದೀರ್ಘಕಾಲದ ಶಿಕ್ಷೆಯನ್ನು ಅನುಭವಿಸಿದ್ದ ೫ ಜ... ಹಿಂದುಗಳನ್ನು ೨ ಮುಸಲ್ಮಾನರನ್ನು ಮಧ್ಯಪ್ರಾಂತ ಸರಕಾರ... ಬಿಡುಗಡೆಮಾಡಿತು. ಇವರಲ್ಲಿ ೪ ಜನರು ಅಂದಮಾನ ದ್ವೀಪ... ಲ್ಲಿದ್ದರು. ಅವರನ್ನೂ ಕೂಡಲೆ ಬಿಡಬೇಕಾಗಿ ತಿಳಿಸಿದ್ದಾರೆ.

---

**ಲೋಕ**ಮತ ದಿನ ಪತ್ರಿಕೆಯನ್ನು ಪ್ರತಿದಿ... ವೂ ತಪ್ಪದೇ ಓದಿ ಎಲ್ಲ ವಿಷಯಗಳನ್ನೂ ತಿಳಿದುಕೊಳ್ಳಿರಿ.

ವಿಳಾಸ— ಮ್ಯಾನೇಜರ್ "ಲೋಕಮತ"

ಹುಬ್ಬ...

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣಮಂದಿರದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891

# ಶರಣ ಸಂದೇಶ

The
Sharana Sandesh.

ನ್ಯಾಯನಿಷ್ಠುರಿ| ದಾಕ್ಷಿಣ್ಯಪರನಾನಲ್ಲ| ಲೋಕವಿರೋಧಿ| ಶರಣನಾರಾರಿಗೂ ಅಂಜುವವನಲ್ಲ|
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ || ವ. ೨೨೮ || ಮಹಾನುಭಾವಿ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು,

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೬ ನೆಯ ಸಪ್ಟೆಂಬರ್ ೧೯೩೭. | ಸಂಚಿಕೆ ೩ |
|---|---|---|

ಜನಸೇವೆಯೇ ದೇವರ ಸೇವೆ.

# ಗೋವಧೆಯ ಭಯಂಕರ ಕಟ್ಟಡ!

ಪ್ರತಿನಿತ್ಯ ೩-೪ ಸಾವಿರ ಗೋವುಗಳನ್ನು
ಸಂಹಾರ ಮಾಡುವಂಥ ಭಯಂಕರವಾದ ಕಟ್ಟಡವು
ಪಂಜಾಬದಲ್ಲಿ ಏರ್ಪಡುವುದು!

ಅದಕ್ಕೆ

೧೧ ಲಕ್ಷ ರೂ. ಗಳು ವೆಚ್ಚವಾಗುವುವು!!
೧ ಕೋಟಿ ರೂ. ವೆಚ್ಚಮಾಡಿ ಸಂಹಾರದ ಯಂತ್ರಗಳನ್ನು
ಅದರಲ್ಲಿಡುವರು!

ಈ ಘೋರ ಕೃತ್ಯವನ್ನು ನಿಲ್ಲಿಸಲು
ಎಲ್ಲ ಕಡೆಗಳಿಂದಲೂ ವ್ಹಾಯಿಸ್‌ರಾಯರ ಕಡೆಗೆ ತಂತಿ ಹೋಗುತ್ತಲಿವೆ.
ಹುಬ್ಬಳ್ಳಿ, ದಾವಣಗೆರೆ, ಮೊದಲಾದ ಕರ್ನಾಟಕದಲ್ಲಿಯ
ಪ್ರಮುಖ ಸ್ಥಳಗಳಿಂದಲೂ ವ್ಹಾಯಿಸ್‌ರಾಯರ ಕಡೆಗೆ
ತಂತೀ ಕಳಿಸಲಾಗಿದೆ.
ನೀವೂ ನಿಮ್ಮಲ್ಲಿಂದ
ಕಳಿಸಿರಿ.

ದೇಹವೇ ದೇವಾಲಯ.

ಓಂ

# ಶರಣ ಸಂದೇಶ.

ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೬ ನೆಯ ಸಪ್ಟೆಂಬರ್ ೧೯೩೭. | ಸಂಚಿಕೆ ೩

## ಮಹತ್ವದ ಸುದ್ದಿಗಳು.

:(:o:):

—ವಿಜಾಪುರ ಮತ್ತು ಧಾರವಾಡಗಳಲ್ಲಿ 'ಕ್ಷ' ಕಿರಣ ಸ್ಥಾಪಿಸಲು ಈಗಿನ ಮಂತ್ರಿಮಂಡಲವು ೨೦ ಸಾವಿರ ರೂ. ಗಳನ್ನು ವಿನಿಯೋಗಿಸುವುದು.

—ವಿಜಾಪುರ ಜಿಲ್ಲೆಯಲ್ಲಿ ಈ ವಾರವೂ ಮಳೆಯಾಗದೆ ತುಂಬಾ ಭೀಕರ ಸ್ಥಿತಿಯುಂಟಾಗಿದೆ.

—ಅಥಣಿ ಮುನಸಿಪಾಲ್ಟಿ ಬಾವಿ ಮತ್ತು ಬೇರೆ ಜಲಾಶಯಗಳು ಎಲ್ಲ ಜಾತಿಯ ಜನರ ಉಪಯೋಗಕ್ಕೆ ಕೊಡಲ್ಪಟ್ಟವು.

—ಧಾರವಾಡ ಜಿಲ್ಲಾ ಹಾನಗಲ್ಲ ತಾಲೂಕು ಕೂಸನೂರಲ್ಲಿ ಭಾವಸಾರ ಕ್ಷತ್ರಿಯ ಜಾತಿಯ ಒಬ್ಬ ಅಲ್ಪವಯಿ ಹುಡುಗಿಯನ್ನು ಓಡಿಸಿಕೊಂಡು ಹೋದ ಅಪರಾಧಕ್ಕಾಗಿ ಪೀರಸಾಬ ಎಂಬ ಮುಸಲ್ಮಾನನಿಗೆ ೩ ವರ್ಷಗಳ ಕಠಿಣ ಶಿಕ್ಷೆಯಾಯಿತು.

—ಡಾ. ನಂದಿಮಠರವರು ಕೌಮುದಿ ಪತ್ರಿಕಾಕರ್ತರ ಮೇಲೆ ಮಾಡಿದ ಮಾನನಷ್ಟದ ವ್ಯಾಜ್ಯವು ಸೆಪ್ಟೆಂಬರ್ ೧೦ ನೆಯ ತಾ. ದಿನ ಬೆಳಗಾವಿಯಲ್ಲಿ ನಡೆಯುವುದು.

—ಹಿಂದುಸ್ಥಾನಕ್ಕೆ ೧೧೬೦ ಕೋಟಿ ರೂ. ಗಳ ಸಾಲವಿದೆಯೆಂದು ಮಧ್ಯವರ್ತಿ ಅಸೆಂಬ್ಲಿಯಲ್ಲಿ ಸರಕಾರವು ಒಂದು ಪ್ರಶ್ನೆಗೆ ಉತ್ತರವಾಗಿ ತಿಳಿಸಿತು.

—ಗುಲಬರ್ಗಾದ ನೂತನ ವಿದ್ಯಾಲಯವೆಂಬ ಸಾರ್ವಜನಿಕ ಶಿಕ್ಷಣ ಸಂಸ್ಥೆಗೆ ಶ್ರೀ. ದಯಾರಾಮ ಸೂರಜಮಲ ಲಾಹೋಟಿ ಇವರು ೧೫ ಸಾವಿರ ರೂ. ಗಳನ್ನು ಸಹಾಯಾರ್ಥವಾಗಿ ಕೊಟ್ಟರು.

—ಅಂದಮಾನ ದ್ವೀಪದಲ್ಲಿ ಕೈದಿಗಳನ್ನಿಡುವ ಪದ್ಧತಿಯನ್ನೇ ನಿಲ್ಲಿಸಿಬಿಡಬೇಕಾದುದು ಯುಕ್ತವಾಗಿದೆಯಷ್ಟೆ. ಈ ವಿಚಾರವಾಗಿ ಕಾಂಗ್ರೆಸ್ ಪಕ್ಷವು ತುಂಬಾ ಪ್ರಯತ್ನಿಸುವುದೆಂದೇ ಇಂಗ್ಲೆಂಡಿನ ಮ್ಯಾಂಚೆಸ್ಟರ್ ಗಾರ್ಡಿಯನ್ ಪತ್ರಿಕೆಯೂ ನಂಬಿದೆ.

—ಸರ್. ಎಂ. ವಿಶ್ವೇಶ್ವರಯ್ಯನವರು ಹಿಂದುಸ್ಥಾನದ ಆರ್ಥಿಕ ಉನ್ನತಿಗಾಗಿ ಐದು ವರುಷಗಳ ಒಂದು ಯೋಜನೆಯನ್ನು ಗೊತ್ತು ಮಾಡಿದ್ದಾರೆ. ಕಳೆದ ಎರಡನೆಯ ತಾ. ದಿವಸ ಪುಣೆಯ ತಮ್ಮ ಭಾಷಣದಲ್ಲಿ ಇದನ್ನು ತಿಳಿಸಿದರು. ಮುಖ್ಯ ಮಂತ್ರಿಗಳು ಅಧ್ಯಕ್ಷರಾಗಿದ್ದರು.

—ರಶಿಯಾದ ಮಂತ್ರಿಗಳಾದ ಮಿ. ಲ್ಯುಬೆಂಕೊ ಇವರು ಕಳೆದ ಸೋಮವಾರ ಆತ್ಮಹತ್ಯಮಾಡಿಕೊಂಡರು. ಇವರು ಈಗಿದ್ದ ಸರಕಾರದ ವಿರುದ್ಧವಾಗಿ ಒಳಸಂಚು ನಡೆಸಿದ್ದರಂತೆ. ಅದು ಬೈಲಿಗೆ ಬಂದದ್ದರಿಂದ ಈ ಆತ್ಮಹತ್ಯ ಸಂಭವಿಸಿತು.

—ಈಗಿನ ರಶಿಯಾ ಸರಕಾರದ ವಿರುದ್ಧವಾಗಿದ್ದ ಹತ್ತು ಜನ ಪ್ರಮುಖರನ್ನು ಶೂಲಕ್ಕೇರಿಸಿದರು.

—ಹರಿಪುರದಲ್ಲಿ ಕೂಡುವ ರಾಷ್ಟ್ರೀಯ ಸಭೆಗೆ ಶ್ರೀ. ದರಬಾರ ಸಾಹೇಬ ಗೋಪಾಳದೇಸಾಯಿ ಇವರು ಸ್ವಾಗತ ಸಂಘಾಧ್ಯಕ್ಷರಾದರು. ಶ್ರೀ. ಸುಭಾಷಚಂದ್ರರು ರಾಷ್ಟ್ರೀಯ ಸಭೆಯ ಅಧ್ಯಕ್ಷರಾಗಬಹುದೆಂದು ಬಹು ಜನರ ಊಹೆ.

—ಚೀನ ದೇಶದ ೧೮ ರಿಂದ ೪೫ ವರ್ಷಗಳೊಳಗಿನ ಎಲ್ಲರೂ ಸೈನ್ಯ ಶಾಖೆಯಲ್ಲಿ ಸೇರಬೇಕೆಂದು ಚೀನ ಸರಕಾರವು ಅಪ್ಪಣೆ ಮಾಡಿದೆ.

—ಪ್ಯಾಲಿಸ್ಟಾಯಿನ್‌ದಲ್ಲಿ ಪುನಃ ದೊಂಬಿಯಾಗಿ ೩ ಜನ ಯಹುದಿಗಳು ಕೊಲ್ಲಲ್ಪಟ್ಟರು.

—ಶ್ರೀ. ಬಾಬಾಗೋವಿಂದ ರಾಮದಾಸ ಇವರು ಪ್ರಸಿದ್ಧ ಕವಿಗಳು. ಇವರು ಹಿಂದು ಧರ್ಮವನ್ನು ಬಿಟ್ಟು ಮುಸಲ್ಮಾನ್ ಧರ್ಮದಲ್ಲಿ ಸೇರಿ ಮೌಲಾನಾ ಅಬ್ದುಲ್ಲಾ ರಾಮದಾಸ ಎಂಬ ಹೆಸರಿನಿಂದ ಆದಿ ಹಿಂದುಗಳನ್ನು ಮುಸಲ್ಮಾನ್ ಧರ್ಮಕ್ಕೆ ಸೇರಿಸಲು ಪ್ರಯತ್ನಿಸಿದರು. ಅನೇಕ ಮುಸಲ್ಮಾನ್ ಸಂಸ್ಥೆಗಳ ಚಾಲಕರಾಗಿದ್ದರು.

ಇವರು ತಾ. ೧೫-೮-೩೭ ನೆಯ ದಿವಸ ನಾಗಪುರದಲ್ಲಿ ಹಿಂದು ಮಹಾಸಭೆಯ ಪರವಾಗಿ ಶುದ್ಧಿ ಹೊಂದಿ ಪುನಃ ಹಿಂದು ಧರ್ಮದಲ್ಲಿ ಬಂದು ಅನೇಕ ಮುಸಲ್ಮಾನರು ಮಾಡುತ್ತಿರುವ ಕನ್ಯಾಪಹಾರಾದಿ ಅತ್ಯಾಚಾರಗಳನ್ನು ನಿಷೇಧಿಸಿದರು.

—ಕಳೆದ ೨೧ ನೆಯ ತಾರೀಖಿನ ದಿನ ಇಬ್ಬರು ಕ್ರಿಸ್ತರನ್ನು ಕೊಲ್ಹಾಪುರ ಆರ್ಯಸಮಾಜದವರು ಶುದ್ಧಗೊಳಿಸಿ ತಮ್ಮಲ್ಲಿ ತೆಗೆದುಕೊಂಡರು.

# ಬ್ರಿಟಿಶ್ ರಾಜಕಾರಣದ ಧೋರಣ.

### ಮುಂದೆ ಯಾವ ಸ್ಥಿತಿ ಬರುವುದು?

ಈಗ ಜಗತ್ತಿನ ಎಲ್ಲ ರಾಷ್ಟ್ರಗಳಲ್ಲಿಯೂ ದಿನೆ ದಿನೆ ಪರಸ್ಪರ ಸಂಬಂಧವು ಹೆಚ್ಚುತ್ತಲಿದೆಯಷ್ಟೆ. ಆದುದರಿಂದ ಯಾವ ರಾಷ್ಟ್ರದಲ್ಲುಂಟಾಗುವ ಸ್ಥಿತ್ಯಂತರವಾದರೂ ಅದರಿಂದ ಬಹು ದೂರದಲ್ಲಿರುವ ರಾಷ್ಟ್ರದ ಮೇಲೂ ಅದು ತನ್ನ ಪರಿಣಾಮವನ್ನು ಈಗ ಉಂಟುಮಾಡದೆ ಬಿಡುವುದೇ ಇಲ್ಲ. ಎಂದಮೇಲೆ ಜಗತ್ತಿನ ಅತ್ಯಂತ ವಿಸ್ತಾರವಾದ ಬ್ರಿಟಿಶ್ ಸಾಮ್ರಾಜ್ಯದ ಧೋರಣವು ಅನೇಕ ರಾಷ್ಟ್ರಗಳ ಮೇಲೆ ಬೇರೆ ಬೇರೆ ಪರಿಣಾಮವನ್ನುಂಟುಮಾಡುವುದರಲ್ಲಿ ಆಶ್ಚರ್ಯವೇನು?

ಅಂತರ ರಾಷ್ಟ್ರೀಯ ರಾಜಕಾರಣವು ಈಗ ಹಿಂದುಸ್ಥಾನದ ರಾಜಕಾರಣಕ್ಕೂ ಬಹು ಸಂಬಂಧಪಟ್ಟದ್ದಾಗಿರುವುದರಿಂದ ಆ ವಿಷಯದಲ್ಲಿ ವಿಚಾರ ಜಾಗೃತಿಯುಂಟಾಗಬೇಕೆಂದು ಕಾಂಗ್ರೆಸ್ ಸಮತಾವಾದಿ ಪಕ್ಷದವರು ಮುಂಬೈಯಲ್ಲಿ ಇಂತಹ ವಿಚಾರಗಳನ್ನು ವ್ಯಕ್ತಗೊಳಿಸಲು ಒಂದು ವ್ಯಾಖ್ಯಾನ ಮಾಲೆಯನ್ನು ಏರ್ಪಡಿಸಿದ್ದಾರೆ. ಶ್ರೀಯುತ ಅಚ್ಯುತರಾವ ಪಟವರ್ಧನ ಎಂಬುವವರು ಆ ವ್ಯಾಖ್ಯಾನ ಮಾಲೆಯ ಪರವಾಗಿ ಬ್ರಿಟಿಶ್ ರಾಜಕಾರಣದ ಧೋರಣವನ್ನು ಕುರಿತು ಒಂದು ವ್ಯಾಖ್ಯಾನವನ್ನು ಮಾಡಿದರು. ಅದರ ಮುಖ್ಯಾಂಶ ಹೀಗಿದ್ದಿತು—

"ಬ್ರಿಟಿಶ್ ಸಾಮ್ರಾಜ್ಯದ ಪರರಾಷ್ಟ್ರೀಯ ರಾಜಕಾರಣವು ಬಹು ತೊಡಕಿನದು. ಸಾಮಾನ್ಯರಿಗೆ ಅದರ ತಿಳುವಳಿಕೆಯಾಗುವುದಿಲ್ಲ. ಇವರ ಧೋರಣವು ಎಂದೂ ಪರಿಣಾಮಕಾರಿಯಾಗಿಲ್ಲ. ಮಹಾಯುದ್ಧವು ೧೯೧೮ ರಲ್ಲಿ ನಿಂತರೂ ಅದರಿಂದುಂಟಾಗಿದ್ದ ದ್ವೇಷಾಸೂಯೆಗಳು ೧೯೩೪ ರ ವರೆಗೂ ಇದ್ದವು. ಯುದ್ಧದ ನಂತರ ಅಮೇರಿಕಾ- ಇಂಗ್ಲಂಡಗಳಲ್ಲಿ ಸ್ಪರ್ಧೆಯುಂಟಾಯಿತು.

ಜಪಾನವು ಮ್ಯಾಂಚುಕೊ ಪ್ರದೇಶವನ್ನು ನುಂಗಿತಷ್ಟೆ. ಅದಕ್ಕೆ ಇಂಗ್ಲೆಂಡ್ ಸುಮ್ಮನಿದ್ದಿತು. ರಾಷ್ಟ್ರಗಳ ಬಲದಲ್ಲಿ ಸಮತೂಕವುಂಟಾಗಲೆಂಬ ಉದ್ದೇಶದಿಂದಲೇ ಅದು ಹಾಗೆ ಮಾಡಿರಬೇಕು. ಜಪಾನವು ಮ್ಯಾಂಚುಕೊ ನುಂಗಿ ಬಲವಾದುದು ರಶಿಯಾ ಮತ್ತು ಅಮೇರಿಕೆಗಳ ಮೇಲೆ ವರ್ಚಸ್ಸನ್ನು ಸ್ಥಾಪಿಸಲಿಕ್ಕಾಗಿಯೇ ಸರಿ. ಇಂಗ್ಲೆಂಡ್ ಆಗ ವಿರೋಧಿಸಿದ್ದರೆ ಮ್ಯಾಂಚುಕೊ ಭಾಗವನ್ನು ನುಂಗುವ ಧೈರ್ಯವೇ ಜಪಾನಕ್ಕೆ ಆಗುತ್ತಿರಲಿಲ್ಲ.

ಜಪಾನದ ಈ ಆಕ್ರಮಣ ವೃತ್ತಿಯನ್ನು ನೋಡಿ ಜರ್ಮನಿಯು ತನ್ನ ಮೇಲೆ ಯುದ್ಧದ ಕಾಲದಲ್ಲಿ ಹೇರಲ್ಪಟ್ಟ ಎಲ್ಲ ಪ್ರತಿಬಂಧಗಳನ್ನೂ ಕಿತ್ತೊಗೆಯಿತು. ಅದರಲ್ಲಿ ಹಣವಿಲ್ಲವೆಂಬುದು ಗೊತ್ತಿದ್ದರೂ ಅಮೇರಿಕೆಯು ಜರ್ಮನಿಗೆ ಸಾಲವನ್ನು ಕೊಟ್ಟಿತು. ಆದರಿಂದ ಜರ್ಮನಿಯ ಈ ಸ್ವೇಚ್ಛಾ ಪ್ರವೃತ್ತಿಯನ್ನೂ ಬ್ರಿಟಿಶ್ ವಿರೋಧಿಸದೆ ಸುಮ್ಮನುಳಿದಿತು.

ಜರ್ಮನಿಯು ಬಲ ಹೊಂದಿ ಫ್ರಾನ್ಸಿನಮೇಲೆ ಅದರ ವರ್ಚಸ್ಸು ಬೀಳಲೆಂಬುದೇ ಬ್ರಿಟಿಶ್‌ದ ಉದ್ದೇಶ. ಪ್ರೆಸಿಡೆಂಟ್ ವಿಲ್ಸನ್‌ರ ರಾಷ್ಟ್ರಸಂಘವು ಒಂದು ಗೊಂಬೆಯಾಗಿ ಪರಿಣಮಿಸಿತು. ಇದಕ್ಕೆ ಇಂತಹ ಸ್ಥಿತಿ ಬರಲು ಬ್ರಿಟಿಶ್ ಅವಕಾಶವನ್ನು ಕೊಟ್ಟದ್ದರಿಂದಲೇ ಹಿಟಲರ್ ಇಷ್ಟು ಪ್ರಬಲನಾಗಿ ಮುಂದಣ ಮಹಾ ಯುದ್ಧದ ಭೀತಿಯನ್ನುಂಟುಮಾಡಿದ್ದಾನೆ.

ಜಪಾನ ದೇಶವು ಮ್ಯಾಂಚುಕೊ ಪ್ರದೇಶವನ್ನು ತೆಗೆದುಕೊಂಡಾಗ ಬ್ರಿಟಿಶ್ ಪತ್ರಿಕೆಗಳು ಹಿಂದುಳಿದ ರಾಷ್ಟ್ರಗಳನ್ನು ಸುಧಾರಿಸುವುದು ಮುಂದರಿದ ರಾಷ್ಟ್ರಗಳ ಜನ್ಮಸಿದ್ಧ ಅಧಿಕಾರವೆಂದೇ ಹೇಳಿದವು. ಬ್ರಿಟಿಶ್‌ರು ಈ ತತ್ವದಿಂದಲೇ ತಮ್ಮ ಸಾಮ್ರಾಜ್ಯವನ್ನು ಬೆಳಸಿದ್ದಾರೆ. ಇದೇ ತತ್ವವನ್ನು ಅನುಸರಿಸಿ ಇಟಲಿಯು ಅಬಸೀನಿಯಾ ರಾಷ್ಟ್ರವನ್ನು ನುಂಗಿತು. ಆಗ ಬ್ರಿಟಿಶ್ ಸಾಮ್ರಾಜ್ಯವು (ಜಾನ್‌ಬುಲ್) ಸುಮ್ಮನೆ ನೋಡುತ್ತ ಕುಳಿತಿತು. ಫ್ರಾನ್ಸ್ ದೇಶವು ಇಟಲಿಗೆ ಸಹಾಯಮಾಡುತ್ತಿದ್ದುದರಿಂದ ಬ್ರಿಟಿಶ್ ಸಾಮ್ರಾಜ್ಯವು ಸುಮ್ಮನಿರಬೇಕಾಯಿತು.

ಸ್ಪೇನದ ದೊಂಬಿಯ ವಿಷಯದಲ್ಲಿಯು ಮತ್ತು ಪ್ಯಾಲಿಸ್ಟಾಯಿನ್ ವಿಭಾಗಣೆ ವಿಷಯದಲ್ಲಿಯು ಬ್ರಿಟಿಶ್ ಅನುಸರಿಸುವ ಧೋರಣವು ತನ್ನ ಸಾಮ್ರಾಜ್ಯ ಸಂರಕ್ಷಣೆಯ ಒಂದು ಉಪಾಯವಾಗಿಯೇ ಇದೆ. ಈಗಿನ ದೊಂಬಿಯಿಂದ ಸ್ಪೇನ್ ಹಣ್ಣಾಗಿ ಜಿಬ್ರಾಲ್ಟರ್ ಸುರಕ್ಷಿತವಾಗಿರಬೇಕೆಂದೇ ಅದರ ಇಂಗಿತ. ಈ ಎಲ್ಲಾ ಸಂಗತಿಗಳಿಂದ ಜಾನ್‌ಬುಲ್ (ಬ್ರಿಟಿಶ್ ಸಾಮ್ರಾಜ್ಯ) ಗುರ್ ಎಂದು ಹೆದರಿಸುತ್ತದೆಯೇ ವಿನಾ ಕಚ್ಚುವುದಿಲ್ಲವೆಂದು ಜಗತ್ತಿಗೆ ಗೊತ್ತಾಗಿದೆ. ಮಹಾ ಯುದ್ಧದಿಂದ ಬ್ರಿಟಿಶ್ ವ್ಯಾಪಾರಕ್ಕೆ ತೊಂದರೆಯಾಯಿತು. ಮುಂದಿನ ಘೋರ ಯುದ್ಧದಿಂದಲೂ ಅದರ ವ್ಯಾಪಾರಕ್ಕೆ ಅಡ್ಡಿಯುಂಟಾಗುತ್ತದೆ. ಅಂತೆಯೇ ಅದಕ್ಕೆ ಯುದ್ಧ ಬೇಕಾಗಿಲ್ಲ.

ಹೀಗಿದ್ದರೂ ಇಷ್ಟರಲ್ಲೇ ಮಹಾ ಯುದ್ಧ ಪ್ರಾರಂಭವಾಗುತ್ತದೆ. ಆಗ ಬ್ರಿಟಿಶ್ ಅದರಲ್ಲಿ ಸೇರಲೇಬೇಕಾಗುವುದು. ಇದು ಹಿಂದುಸ್ಥಾನಕ್ಕೆ ಬಂಗಾರದಂಥ ಸಮಯ. ಅದರ ಉಪಯೋಗವನ್ನು ಮಾಡಿಕೊಳ್ಳಬೇಕೆಂದೇ ಕಾಂಗ್ರೆಸ್ ಸಮತಾವಾದಿಗಳ ಉದ್ದೇಶ.

ಜಪಾನವು ಮ್ಯಾಂಚುಕೊ ಪ್ರದೇಶವನ್ನು ನುಂಗಲಿಕ್ಕೂ ಜರ್ಮನಿಯು ಸ್ವೇಚ್ಛೆಯಿಂದ ನಡೆಯಲಿಕ್ಕೂ, ಇಟಲಿಯು ಅಬಸೀನಿಯಾ ರಾಷ್ಟ್ರವನ್ನು ಆಕ್ರಮಿಸಲಿಕ್ಕೂ ಬ್ರಿಟಿಶ್ ಸಾಮ್ರಾಜ್ಯ ಅವಕಾಶವನ್ನು ಕೊಟ್ಟದ್ದರಿಂದಲೇ ಅದಕ್ಕೂ ಮುಂದೆ ತೊಂದರೆ ಬರುವುದಲ್ಲದೆ ಮುಂದಿನ ಮಹಾ ಯುದ್ಧವೂ ಉಂಟಾಗುವುದು."

---

# ಪ್ಯಾಲಿಸ್ಟಾಯಿನ್‌ದ ವಿಭಾಗ.

ಪ್ಯಾಲಿಸ್ಟಾಯಿನ್‌ದಲ್ಲಿ ಅರಬರಿಗೂ ಯಹುದಿಗಳಿಗೂ ವಿರೋಧವುಂಟಾದುದರಿಂದ ಅದನ್ನು ವಿಭಾಗಮಾಡಬೇಕೆಂದು ಬ್ರಿಟಿಶ್ ಸರಕಾರವು ನಿರ್ಧರಿಸಿದೆಯಷ್ಟೆ. ಈ ತನ್ನ ಯೋಜನೆಯನ್ನು ರಾಷ್ಟ್ರ ಸಂಘದ ಮುಂದಿಟ್ಟು ಒಪ್ಪಿಗೆಯನ್ನು ಕೇಳಿದ್ದಿತು. ರಾಷ್ಟ್ರ ಸಂಘವು ಬ್ರಿಟಿಶ್ ಯೋಜನೆಯನ್ನು ಮಾನ್ಯಮಾಡಿರುವುದರಿಂದ ಪ್ಯಾಲಿಸ್ಟಾಯಿನ್ ವಿಭಾಗವು ಇನ್ನು ಮುಂದೆ ಸಂಭವಿಸುವುದು.

ಇದು ಅರಬರಿಗೆ ತುಂಬಾ ಅಸಮಾಧಾನದ ಸಂಗತಿಯು. ಯಹುದಿಗಳಿಗೂ ಇಷ್ಟವಿಲ್ಲ. ಆದರೂ ಜುರಿಚ್ ಎಂಬ ಯಹುದಿಗಳ ಪರಿಷತ್ತು ಮಾಡಿದ ಠರಾವಿನಿಂದ ಅವರ ಅಸಮಾಧಾನವನ್ನು ಎಷ್ಟೋ ಮಟ್ಟಿಗೆ ನಿವಾರಣೆಮಾಡುವುದು ಶಕ್ಯವಾಗಿದೆ. ಯಹುದಿಗಳಿಗೆ ಅನೇಕ ದುಃಖಗಳಿವೆಯೆಂದೂ ಅರಬರ ಸಂಗಡ ಅವರನ್ನು ಹೋಲಿಸಲು ಬರುವಂತಿಲ್ಲವೆಂದೂ ರಾಷ್ಟ್ರ ಸಂಘವು ಹೇಳಿರುವುದರಿಂದ ಅರಬರ ಅಸಂತೋಷವೇನೂ ರಾಷ್ಟ್ರ ಸಂಘದಿಂದ ನಿವಾರಣೆಯಾಗುವಂತೆ ತೋರುವುದಿಲ್ಲ.

### ವಿರೋಧ ಮಾಡುವವರಾರು?

ಇಟಲಿಯು ಈ ವಿಭಾಗಣೆಯ ವಿರೋಧಕ್ಕೆ ಒಳಸಂಚು ನಡೆಸಿತ್ತು. ಆದರೆ ಅದಕ್ಕೆ ಈಗ ಅಬಸೀನಿಯಾದ ಕಾರ್ಯಮಾಡಲು ಸಾಲಬೇಕಾಗಿರುವುದರಿಂದ ಬ್ರಿಟಿಶ್‌ದ ಮನ ಒಲಿಸಬೇಕಾಗಿ

ಇರಾನ ಮತ್ತು ತುರ್ಕಸ್ಥಾನ ಈ ಮುಸಲ್ಮಾನ್ ರಾಷ್ಟ್ರಗಳು ಅರಬರ ಕಡೆಗಿವೆ. ಆದರೆ ಇರಾಕಕ್ಕೆ ಬೇಕಾಗಿರುವ ೧೦ ಲಕ್ಷ ಪೌಂಡು ಸಾಲದ ದೆಸೆಯಿಂದ ಆದಾದರೂ ವಿರೋಧ ಮಾಡುವ ಸ್ಥಿತಿಯಲ್ಲಿಲ್ಲ. ಆದಕಾರಣ ಅನಿರ್ವಾಹದಿಂದಲಾದರೂ ಅರಬರು ಪ್ಯಾಲಿಸ್ಟಾಯಿನ್‌ದ ವಿಭಾಗವನ್ನು ಈಗ ಒಪ್ಪಿಕೊಳ್ಳಲೇಬೇಕಾದ ಪ್ರಸಂಗ ಬಂದೇ ಬರುವುದು.

---

## ಮಹಾ ವಿಭೂತಿಗಳ ಆಹಾರ ಪದಾರ್ಥ.

:(:o:):

ಮನುಷ್ಯನು ಸೇವಿಸತಕ್ಕ ಆಹಾರ ಪದಾರ್ಥಗಳಲ್ಲಿರತಕ್ಕ ಗುಣ ಧರ್ಮಗಳು ಆತನ ನಡೆನುಡಿಗಳಲ್ಲಿಯೂ ಬಂದೇಬರುವವು. ಆಹಾರದಂತೆ ಗುಣ ಸ್ವಭಾವಗಳುಂಟಾಗುತ್ತಿರುತ್ತವೆ. ಆದುದರಿಂದ ಮನುಷ್ಯನು ಹಿತವಾದ ಆಹಾರವನ್ನು ಮಿತವಾಗಿ ಸೇವಿಸಿದರೇನೇ ಆತನಲ್ಲಿ ಕಾರ್ಯಶಕ್ತಿಯು ಪ್ರಕಾಶಿಸುತ್ತದೆ. ಯುರೋಪ ಖಂಡದ ಈಗ ನಾಲ್ಕು ಜನ ಮಹಾ ವಿಭೂತಿಗಳ ಆಹಾರ ಪದಾರ್ಥಗಳು ಈ ಮಾತಿನ ನಿಜತ್ವವನ್ನು ತೋರಿಸುತ್ತವೆ.

### ಹಿಟಲರರ ಊಟ.

ಜರ್ಮನಿಯ ಸರ್ವಾಧಿಕಾರಿಗಳಾದ ಹೇರ ಹಿಟಲರರು ಮಾಂಸವನ್ನು ತಿನ್ನುವುದೇ ಇಲ್ಲ. ಆದರೆ ಮೀನವನ್ನು ಎಂದಾದರೂ ತಿನ್ನುವುದುಂಟು ಇವರ ಊಟಕ್ಕೆ ತತ್ತಿ ಮತ್ತು ಹಸಿ ಕಾಯಿ, ಸೊಪ್ಪು ಆಲುಗಡ್ಡಿ ಇವು ಮಾತ್ರ ಬೇಕೇಬೇಕು. ಚಹಾ ಕುಡಿಯುವುದಂತೂ ಇವರಿಗೆ ಬೇಡವೇಬೇಡ. ಸಿಗಾರೇಟ್ ಮೊದಲಾದ ಯಾವ ರೀತಿಯ ತಂಬಾಕನ್ನೂ ಇವರು ಸೇದುವುದೇ ಇಲ್ಲ.

### ಮುಸೋಲಿನಿಯವರ ಊಟ ಒಂದೇಹೊತ್ತು.

ಇಟಲಿಯ ಸರ್ವಾಧಿಕಾರಿಗಳಾದ ಮುಸೋಲಿನಿಯವರು ಮಾಂಸಾಹಾರವನ್ನು ಬಿಟ್ಟು ಎಷ್ಟೋ ವರುಷಗಳಾದವು. ಇವರು ದಿವಸದಲ್ಲಿ ಒಂದೇಸಾರೆ ಊಟಮಾಡುತ್ತಾರೆ. ಊಟಕ್ಕೆ ಇವರಿಗೆ ಹಣ್ಣು ಹಂಪಲಗಳೇ ಬೇಕು. ಎಂದಾದರೂ ಇವರು ಸ್ವಲ್ಪ ಮದ್ಯವನ್ನು ಸೇವಿಸುವುದುಂಟು.

### ಕೆಮಲ ಪಾಶಾರವರ ಆಹಾರ.

ತುರ್ಕಸ್ಥಾನದ ಸರ್ವಾಧಿಕಾರಿಗಳಾದ ಕೆಮಲ ಪಾಶಾರವರು ಮಾಂಸವನ್ನು ಸೇವಿಸುವುದೇ ಇಲ್ಲ. ಹಸಿ ಕಾಯಿ, ಪಲ್ಲೆ, ಹಣ್ಣು ಹಂಪಲಗಳೇ ಇವರ ಆಹಾರ ಪದಾರ್ಥಗಳು. ಆಗಾಗ್ಗೆ ಮೀನವನ್ನು ತಿನ್ನುವುದುಂಟು.

### ಉಪ್ಪಿನ ಸ್ಟ್ಯಾಲಿನ್.

ರಶಿಯಾ ದೇಶದ ರಾಜ್ಯಸೂತ್ರವು ಯಾರ ಕೈಯಲ್ಲಿದೆಯೋ ಆ ಸ್ಟ್ಯಾಲಿನ್‌ರ ಕೈಯಲ್ಲಿ ಊಟದ ಕಾಲಕ್ಕೆ ಉಪ್ಪೇ ಉಪ್ಪು!

ಇವರು ಗಡ್ಡೆ, ಗೆಣಸು, ಸೊಪ್ಪು ಮೊದಲಾದವುಗಳಿಂದ ಕೂಡಿದ ಒಂದು ಪಾಕವನ್ನು ಮಾಡಿಸಿ ಊಟಮಾಡುತ್ತಾರೆ. ಅದರಲ್ಲಿ ಮಾಂಸವನ್ನೂ ಸೇರಿಸಿಯೇ ಆ ಪಾಕವನ್ನು ಮಾಡಿಸಿದರೂ ಊಟದಕಾಲಕ್ಕೆ ಅದರಲ್ಲಿದ್ದ ಮಾಂಸವನ್ನು ತೆಗೆದು ಊಟಮಾಡುತ್ತಾರೆ. ಆ ಪಾಕಕ್ಕೆ ಇವರು ಉಪ್ಪನ್ನು ಹಾಕಿಕೊಳ್ಳುತ್ತಾ ಊಟ ಮಾಡುತ್ತಾರೆ. ಇವರಿಗೆ ಊಟಕ್ಕೆ ಉಪ್ಪು ಬಹಳ ಬೇಕು.

ಇವರು ಉಪ್ಪು ಹಾಕಿಕೊಂಡು ಉಣ್ಣುವ ಪಾಕವನ್ನು ಬೇರೆ ಯಾರೂ ಉಣ್ಣಲಾರರು. ಅಷ್ಟು ಅದು ಉಪ್ಪಾಗಿರುತ್ತದೆ. ಉಪ್ಪು ಶರೀರದ ಬೆಳವಣಿಗೆಗೂ ಬುದ್ಧಿಯ ಚುರುಕುತನಕ್ಕೂ ಅತ್ಯಗತ್ಯವಾಗಿದೆಯಂತೆ. ಸ್ಟ್ಯಾಲಿನ್‌ರ ಕೈಯಿಂದ ಉಪ್ಪು ಹೋದರೆ ರಶಿಯಾದ ರಾಜ್ಯಸೂತ್ರವೂ ಅವರ ಕೈಯಿಂದ ಹೋಗುವುದಂತೆ.

ಹಾಗಾದರೆ ಉಪ್ಪು ಹೆಚ್ಚು ತಿಂದವರೆಲ್ಲಾ ಸ್ಟ್ಯಾಲಿನ್‌ರಾಗುವುದಿಲ್ಲ. ಹಾಗಾಗುತ್ತಿದ್ದರೆ ಆಡಿನ ಹಾಲನ್ನು ಕುಡಿದವರೆಲ್ಲಾ ಮಹಾತ್ಮಾ ಗಾಂಧಿಯವರಾಗಬೇಕಾಗಿತ್ತು. ಉಪ್ಪಿಗೂ ಹಾಲಿಗೂ ಇರುವಷ್ಟೇ ಅಂತರವು ಸ್ಟ್ಯಾಲಿನ್‌ರ ತತ್ವಕ್ಕೂ ಗಾಂಧಿಜೀಯವರ ತತ್ವಕ್ಕೂ ಇದೆಯೇ?

ಯುರೋಪ ಖಂಡದ ಮಹಾ ವಿಭೂತಿಗಳು ಮಾಂಸಾಹಾರವನ್ನು ಬಿಟ್ಟು ಹೆಚ್ಚಾಗಿ ಶಾಕಾಹಾರಿಗಳಾಗಿರುವುದನ್ನು ನೋಡಿಯಾದರೂ ಶಾಕಾಹಾರಿಗಳಲ್ಲಿ ಅನೇಕರು ಇತ್ತೀಚಿಗೆ ಮಾಂಸಕ್ಕೆ ಮೋಹಿಸಿರುವುದನ್ನು ಬಿಡುವರೆ?

---

## ಮಂತ್ರಿಗಳು ಹೊಂದುವ ಮನ್ನಣೆ

### ಗಂಡನು ಹೆಂಡತಿಯಿಂದ ಹೊಂದುವ ಸಲಾಮು!

ಕಾಂಗ್ರೆಸ್ ಪಕ್ಷದ ಮಂತ್ರಿಗಳು ಸಂಚಾರ ಮಾಡುತ್ತಿದ್ದಾರಷ್ಟೆ. ಆಗ ಅಲ್ಲಲ್ಲಿ ಜನರಿಂದಲೂ ಪೋಲಿಸರಿಂದಲೂ ಹೊಂದುವ ಮನ್ನಣೆಯ ಸಂಬಂಧವಾಗಿ ಶ್ರೀಯುತ ಮಹದೇವ ಭಾಯಿ ದೇಸಾಯಿ ಇವರು ಗಾಂಧೀಜಿಯವರ ಹರಿಜನ ಪತ್ರಿಕೆಯಲ್ಲಿ ಒಂದು ಲೇಖನವನ್ನು ಬರೆದಿದ್ದಾರೆ. ಅದರಲ್ಲಿ ಹೀಗೆ ತಿಳಿಸಿದ್ದಾರೆ—

"ಮಂತ್ರಿಗಳು ಸಂಚಾರ ಹೊರಟಾಗ ತಾವು ಯಾವ ಸ್ಥಳಕ್ಕೆ ಹೋಗುವವರಿದ್ದಾರೆಯೋ ಆ ಸ್ಥಳದವರಿಗೆ ಯಾವ ವಿಧವಾದ ಆಡಂಬರ ಉತ್ಸವಾದಿಗಳನ್ನು ಇಟ್ಟುಕೊಳ್ಳದಂತೆಯೂ ಅನವಶ್ಯಕವಾದ ವೆಚ್ಚಗಳನ್ನು ಮಾಡದಂತೆಯೂ ಮುಂಚೆಯೇ ತಿಳಿಸಬೇಕು. ಕಾಂಗ್ರೆಸ್ ಮಂತ್ರಿಗಳು ಪೋಲಿಸರಿಂದ ಸಲಾಮು ಹೊಂದುವುದು ಮತ್ತು ಅಹಿಂಸಾ ವ್ರತವನ್ನು ಪಾಲಿಸುತ್ತಿದ್ದೇವೆಂದು ತಿಳಿಯುವುದು ಪರಸ್ಪರ ವಿರುದ್ಧವಾಗಿವೆ. ಇವರ ಈ ಸಮಾರಂಭವು ದೂಷಿತವಾದುದು.

ನೀವು ಮುಖ್ಯ ಮಂತ್ರಿಗಳಾಗಿದ್ದಾಗ ಪೋಲಿಸರಿಂದ ನೀವು ಸಲಾಮು ಹೊಂದುತ್ತಿರುವ ತಮಾಷೆಯನ್ನು ನಾನೊಮ್ಮೆ ನೋಡಬೇಕಾಗಿದೆಯೆಂದು ಶ್ರೀ. ಜಮುನಾ ಲಾಲಜಿಯವರು ಶ್ರೀ. ರಾಜಗೋಪಾಲಾಚಾರ್ಯರಿಗೆ ವಿನೋದವಾಗಿ ಹೇಳಿದರು. ಆಗ ಆಚಾರ್ಯರು ನನಗೆ ಅದು ಬಹು ಅಸಹ್ಯಕರವಾದುದಾಗಿದೆಯೆಂದೂ ಆ ಸಲಾಮು ಗಂಡನು ಹೆಂಡತಿಯಿಂದ ಅಥವಾ ತಂದೆಯು ಮಗನಿಂದ ಹೊಂದುವಂಥಾದ್ದಾಗಿಯೇ ಇದೆಯೆಂದೂ ಹೇಳಿದರು. ಇಂಥ ನಿರುಪಯೋಗದ ಆಡಂಬರಗಳಿಗೆ ಬಡ ಜನಗಳ ಹಣವನ್ನೇಕೆ ಸೂರೆಮಾಡಬೇಕು?

ಶ್ರೀ. ಗಂಗಾಧರರಾವ ದೇಶಪಾಂಡೆಯವರು ಗಾಂಧೀಜಿಯವರಿಗೆ ಒಂದು ಪತ್ರದಲ್ಲಿ ಹೀಗೆ ಹೇಳಿದ್ದಾರೆ— "ನಾವು ಮೊದಲು ಯಾವುದನ್ನು ನಿಷೇಧಿಸುತ್ತಿದ್ದೆವೋ ಅದೇ ಈಗಲೂ ಇದೆಯೆಂದು ಈ ಆಡಂಬರಗಳಿಂದ ಜನಸಾಮಾನ್ಯವು ತಿಳಿಯಬಹುದು. ಜನಸಾಮಾನ್ಯದಲ್ಲಿ ಬೆರೆತಿರಬೇಕು. ಆದಷ್ಟು ಈಗಿನ ಆಡಂಬರಗಳನ್ನೆಲ್ಲಾ ಕಡಿಮೆ ಮಾಡಬೇಕು."

ಶ್ರೀ. ಮಹದೇವ ಭಾಯಿಯವರ ಈ ಅಭಿಪ್ರಾಯಗಳು ಅನುಕರಣೀಯವಾಗಿವೆ. ತಮ್ಮ ಪಕ್ಷದವರಲ್ಲಿರುವ ದೋಷಗಳನ್ನು ಹೀಗೆ ತಿಳಿಸಿದುದು ಅತ್ಯಂತ ಅಭಿನಂದನೀಯವಾದುದು. ಹೀಗೆ

## ಬ್ರಿಟಿಶ್ ರಾಜಕಾರಣದ ಧೋರಣ.

### ಮುಂದೆ ಯಾವ ಸ್ಥಿತಿ ಬರುವುದು ?

ಈಗ ಜಗತ್ತಿನ ಎಲ್ಲ ರಾಷ್ಟ್ರಗಳಲ್ಲಿಯೂ ದಿನೆ ದಿನೆ ಪರಸ್ಪರ ಸಂಬಂಧವು ಹೆಚ್ಚುತ್ತಲಿದೆಯಷ್ಟೆ. ಆದುದರಿಂದ ಯಾವ ರಾಷ್ಟ್ರದಲ್ಲುಂಟಾಗುವ ಸ್ಥಿತ್ಯಂತರವಾದರೂ ಅದರಿಂದ ಬಹು ದೂರದಲ್ಲಿರುವ ರಾಷ್ಟ್ರದ ಮೇಲೂ ಅದು ತನ್ನ ಪರಿಣಾಮವನ್ನು ಈಗ ಉಂಟುಮಾಡದೆ ಬಿಡುವುದೇ ಇಲ್ಲ. ಎಂದಮೇಲೆ ಜಗತ್ತಿನ ಅತ್ಯಂತ ವಿಸ್ತಾರವಾದ ಬ್ರಿಟಿಶ್ ಸಾಮ್ರಾಜ್ಯದ ಧೋರಣವು ಅನೇಕ ರಾಷ್ಟ್ರಗಳ ಮೇಲೆ ಬೇರೆ ಬೇರೆ ಪರಿಣಾಮವನ್ನುಂಟುಮಾಡುವುದರಲ್ಲಿ ಆಶ್ಚರ್ಯವೇನು ?

ಅಂತರ ರಾಷ್ಟ್ರೀಯ ರಾಜಕಾರಣವು ಈಗ ಹಿಂದುಸ್ಥಾನದ ರಾಜಕಾರಣಕ್ಕೂ ಬಹು ಸಂಬಂಧಪಟ್ಟದ್ದಾಗಿರುವುದರಿಂದ ಆ ವಿಷಯದಲ್ಲಿ ವಿಚಾರ ಜಾಗೃತಿಯುಂಟಾಗಬೇಕೆಂದು ಕಾಂಗ್ರೆಸ್ ಸಮತಾವಾದಿ ಪಕ್ಷದವರು ಮುಂಬೈಯಲ್ಲಿ ಇಂತಹ ವಿಚಾರಗಳನ್ನು ವ್ಯಕ್ತಗೊಳಿಸಲು ಒಂದು ವ್ಯಾಖ್ಯಾನ ಮಾಲೆಯನ್ನು ಏರ್ಪಡಿಸಿದ್ದಾರೆ. ಶ್ರೀಯುತ ಅಚ್ಯುತರಾವ ಪಟವರ್ಧನ ಎಂಬುವವರು ಆ ವ್ಯಾಖ್ಯಾನ ಮಾಲೆಯ ಪರವಾಗಿ ಬ್ರಿಟಿಶ್ ರಾಜಕಾರಣದ ಧೋರಣವನ್ನು ಕುರಿತು ಒಂದು ವ್ಯಾಖ್ಯಾನವನ್ನು ಮಾಡಿದರು. ಅದರ ಮುಖ್ಯಾಂಶ ಹೀಗಿದ್ದಿತು—

“ ಬ್ರಿಟಿಶ್ ಸಾಮ್ರಾಜ್ಯದ ಪರರಾಷ್ಟ್ರೀಯ ರಾಜಕಾರಣವು ಬಹು ತೊಡಕಿನದು. ಸಾಮಾನ್ಯರಿಗೆ ಅದರ ತಿಳುವಳಿಕೆಯಾಗುವುದಿಲ್ಲ. ಇವರ ಧೋರಣವು ಎಂದೂ ಪರಿಣಾಮಕಾರಿಯಾಗಿಲ್ಲ. ಮಹಾಯುದ್ಧವು ೧೯೧೮ ರಲ್ಲಿ ನಿಂತರೂ ಅದರಿಂದುಂಟಾಗಿದ್ದ ದ್ವೇಷಾಸೂಯೆಗಳು ೧೯೩೩ ರ ವರೆಗೂ ಇದ್ದವು. ಯುದ್ಧದ ನಂತರ ಅಮೇರಿಕಾ- ಇಂಗ್ಲಂಡಗಳಲ್ಲಿ ಸ್ಪರ್ಧೆಯುಂಟಾಯಿತು.

ಜಪಾನವು ಮ್ಯಾಂಚುಕೊ ಪ್ರದೇಶವನ್ನು ನುಂಗಿತಷ್ಟೆ. ಅದಕ್ಕೆ ಇಂಗ್ಲಂಡ್ ಸುಮ್ಮನಿದ್ದಿತು. ರಾಷ್ಟ್ರಗಳ ಬಲದಲ್ಲಿ ಸಮತೂಕವುಂಟಾಗಲೆಂಬ ಉದ್ದೇಶದಿಂದಲೇ ಅದು ಹಾಗೆ ಮಾಡಿರಬೇಕು. ಜಪಾನವು ಮ್ಯಾಂಚುಕೊ ನುಂಗಿ ಬಲವಾದುದು ರಶಿಯಾ ಮತ್ತು ಅಮೇರಿಕೆಗಳ ಮೇಲೆ ವರ್ಚಸ್ಸನ್ನು ಸ್ಥಾಪಿಸಲಿಕ್ಕಾಗಿಯೇ ಸರಿ. ಇಂಗ್ಲಂಡ್ ಆಗ ವಿರೋಧಿಸಿದ್ದರೆ ಮ್ಯಾಂಚುಕೊ ಭಾಗವನ್ನು ನುಂಗುವ ಧೈರ್ಯವೇ ಜಪಾನಕ್ಕೆ ಆಗುತ್ತಿರಲಿಲ್ಲ.

ಜಪಾನದ ಈ ಆಕ್ರಮಣ ವೃತ್ತಿಯನ್ನು ನೋಡಿ ಜರ್ಮನಿಯು ತನ್ನ ಮೇಲೆ ಯುದ್ಧದ ಕಾಲದಲ್ಲಿ ಹೇರಲ್ಪಟ್ಟ ಎಲ್ಲ ಪ್ರತಿಬಂಧಗಳನ್ನೂ ಕಿತ್ತೊಗೆಯಿತು. ಅದರಲ್ಲಿ ಹಣವಿಲ್ಲವೆಂಬುದು ಗೊತ್ತಿದ್ದರೂ ಅಮೇರಿಕೆಯು ಜರ್ಮನಿಗೆ ಸಾಲವನ್ನು ಕೊಟ್ಟಿತು. ಆದರಿಂದ ಜರ್ಮನಿಯ ಈ ಸ್ವೇಚ್ಛಾ ಪ್ರವೃತ್ತಿಯನ್ನೂ ಬ್ರಿಟಿಶ್ ವಿರೋಧಿಸದೆ ಸುಮ್ಮನುಳಿದಿತು.

ಜರ್ಮನಿಯು ಬಲ ಹೊಂದಿ ಫ್ರಾನ್ಸಿನಮೇಲೆ ಅದರ ವರ್ಚಸ್ಸು ಬೀಳಲೆಂಬುದೇ ಬ್ರಿಟಿಶ್‌ದ ಉದ್ದೇಶ. ಪ್ರೆಸಿಡೆಂಟ್ ವಿಲ್ಸನ್‌ರ ರಾಷ್ಟ್ರಸಂಘವು ಒಂದು ಗೊಂಬೆಯಾಗಿ ಪರಿಣಮಿಸಿತು. ಇದಕ್ಕೆ ಇಂತಹ ಸ್ಥಿತಿ ಬರಲು ಬ್ರಿಟಿಶ್ ಅವಕಾಶವನ್ನು ಕೊಟ್ಟದ್ದರಿಂದಲೇ ಹಿಟಲರ್ ಇಷ್ಟು ಪ್ರಬಲನಾಗಿ ಮುಂದಣ ಮಹಾಯುದ್ಧದ ಭೀತಿಯನ್ನುಂಟುಮಾಡಿದ್ದಾನೆ.

ಜಪಾನ ದೇಶವು ಮ್ಯಾಂಚುಕೊ ಪ್ರದೇಶವನ್ನು ತೆಗೆದುಕೊಂಡಾಗ ಬ್ರಿಟಿಶ್ ಪತ್ರಿಕೆಗಳು ಹಿಂದುಳಿದ ರಾಷ್ಟ್ರಗಳನ್ನು ಸುಧಾರಿಸುವುದು ಮುಂದರಿದ ರಾಷ್ಟ್ರಗಳ ಜನ್ಮಸಿದ್ಧ ಅಧಿಕಾರವೆಂದೇ ಹೇಳಿದವು. ಬ್ರಿಟಿಶ್‌ರು ಈ ತತ್ವದಿಂದಲೇ ತಮ್ಮ ಸಾಮ್ರಾಜ್ಯವನ್ನು ಬೆಳೆಸಿದ್ದಾರೆ. ಇದೇ ತತ್ವವನ್ನು ಅನುಸರಿಸಿ ಇಟಲಿಯು ಅಬಸೀನಿಯಾ ರಾಷ್ಟ್ರವನ್ನು ನುಂಗಿತು. ಆಗ ಬ್ರಿಟಿಶ್ ಸಾಮ್ರಾಜ್ಯವು (ಜಾನ್‌ಬುಲ್) ಸುಮ್ಮನೆ ನೋಡುತ್ತ ಕುಳಿತಿತು. ಫ್ರಾನ್ಸ್ ದೇಶವು ಇಟಲಿಗೆ ಸಹಾಯಮಾಡುತ್ತಿದ್ದುದರಿಂದ ಬ್ರಿಟಿಶ್ ಸಾಮ್ರಾಜ್ಯವು ಸುಮ್ಮನಿರಬೇಕಾಯಿತು.

ಸ್ಪೇನದ ದೊಂಬಿಯ ವಿಷಯದಲ್ಲಿಯು ಮತ್ತು ಪ್ಯಾಲಿಸ್ಟಾಯಿನ್ ವಿಭಾಗಣೆ ವಿಷಯದಲ್ಲಿಯು ಬ್ರಿಟಿಶ್ ಅನುಸರಿಸುವ ಧೋರಣವು ತನ್ನ ಸಾಮ್ರಾಜ್ಯ ಸಂರಕ್ಷಣೆಯ ಒಂದು ಉಪಾಯವಾಗಿಯೇ ಇದೆ. ಈಗಿನ ದೊಂಬಿಯಿಂದ ಸ್ಪೇನ್ ಹಣ್ಣಾಗಿ ಜಿಬ್ರಾಲ್ಟರ್ ಸುರಕ್ಷಿತವಾಗಿರಬೇಕೆಂದೇ ಅದರ ಇಂಗಿತ. ಈ ಎಲ್ಲಾ ಸಂಗತಿಗಳಿಂದ ಜಾನ್‌ಬುಲ್ ( ಬ್ರಿಟಿಶ್ ಸಾಮ್ರಾಜ್ಯ) ಗುರ್ ಎಂದು ಹೆದರಿಸುತ್ತದೆಯೇ ವಿನಾ ಕಚ್ಚುವುದಿಲ್ಲವೆಂಬುದು ಜಗತ್ತಿಗೆ ಗೊತ್ತಾಗಿದೆ. ಮಹಾ ಯುದ್ಧದಿಂದ ಬ್ರಿಟಿಶ್ ವ್ಯಾಪಾರಕ್ಕೆ ತೊಂದರೆಯಾಯಿತು. ಮುಂದಿನ ಘೋರ ಯುದ್ಧದಿಂದಲೂ ಅದರ ವ್ಯಾಪಾರಕ್ಕೆ ಅಡ್ಡಿಯುಂಟಾಗುತ್ತದೆ. ಅಂತೆಯೇ ಅದಕ್ಕೆ ಯುದ್ಧ ಬೇಕಾಗಿಲ್ಲ.

ಹೀಗಿದ್ದರೂ ಇಷ್ಟರಲ್ಲೇ ಮಹಾ ಯುದ್ಧ ಪ್ರಾರಂಭವಾಗುತ್ತದೆ. ಆಗ ಬ್ರಿಟಿಶ್ ಅದರಲ್ಲಿ ಸೇರಲೇಬೇಕಾಗುವುದು. ಅದು ಹಿಂದುಸ್ಥಾನಕ್ಕೆ ಬಂಗಾರದಂಥ ಸಮಯ. ಅದರ ಉಪಯೋಗವನ್ನು ಮಾಡಿಕೊಳ್ಳಬೇಕೆಂದೇ ಕಾಂಗ್ರೆಸ್ ಸಮತಾವಾದಿಗಳ ಉದ್ದೇಶ.

ಜಪಾನವು ಮ್ಯಾಂಚಿಕೊ ಪ್ರದೇಶವನ್ನು ನುಂಗಲಿಕ್ಕೂ ಜರ್ಮನಿಯು ಸ್ವೇಚ್ಛೆಯಿಂದ ನಡೆಯಲಿಕ್ಕೂ, ಇಟಲಿಯು ಅಬಸೀನಿಯಾ ರಾಷ್ಟ್ರವನ್ನು ಆಕ್ರಮಿಸಲಿಕ್ಕೂ ಬ್ರಿಟಿಶ್ ಸಾಮ್ರಾಜ್ಯ ಅವಕಾಶವನ್ನು ಕೊಟ್ಟದ್ದರಿಂದಲೇ ಅದಕ್ಕೂ ಮುಂದೆ ತೊಂದರೆ ಬರುವುದಲ್ಲದೆ ಮುಂದಿನ ಮಹಾ ಯುದ್ಧವೂ ಉಂಟಾಗುವುದು.”

---

## ಪ್ಯಾಲಿಸ್ಟಾಯಿನ್‌ದ ವಿಭಾಗ.

ಪ್ಯಾಲಿಸ್ಟಾಯಿನ್‌ದಲ್ಲಿ ಅರಬರಿಗೂ ಯಹುದಿಗಳಿಗೂ ವಿರೋಧವುಂಟಾದುದರಿಂದ ಅದನ್ನು ವಿಭಾಗಮಾಡಬೇಕೆಂದು ಬ್ರಿಟಿಶ್ ಸರಕಾರವು ನಿರ್ಧರಿಸಿದೆಯಷ್ಟೆ. ಈ ತನ್ನ ಯೋಜನೆಯನ್ನು ರಾಷ್ಟ್ರ ಸಂಘದ ಮುಂದಿಟ್ಟು ಒಪ್ಪಿಗೆಯನ್ನು ಕೇಳಿದ್ದಿತು. ರಾಷ್ಟ್ರ ಸಂಘವು ಬ್ರಿಟಿಶ್ ಯೋಜನೆಯನ್ನು ಮಾನ್ಯಮಾಡಿರುವುದರಿಂದ ಪ್ಯಾಲಿಸ್ಟಾಯಿನ್ ವಿಭಾಗವು ಇನ್ನು ಮುಂದೆ ಸಂಭವಿಸುವುದು.

ಇದು ಅರಬರಿಗೆ ತುಂಬಾ ಅಸಮಾಧಾನದ ಸಂಗತಿಯು. ಯಹುದಿಗಳಿಗೂ ಇಷ್ಟವಿಲ್ಲ. ಆದರೂ ಜುರಿಚ್ ಎಂಬಲ್ಲಿ ಯಹುದಿಗಳ ಪರಿಷತ್ತು ಮಾಡಿದ ಠರಾವಿನಿಂದ ಅವರ ಅಸಮಾಧಾನವನ್ನು ಎಷ್ಟೋ ಮಟ್ಟಿಗೆ ನಿವಾರಣೆಮಾಡುವುದು ಶಕ್ಯವಾಗಿದೆ. ಯಹುದಿಗಳಿಗೆ ಅನೇಕ ದುಃಖಗಳಿವೆಯೆಂದೂ ಅರಬರ ಸಂಗಡ ಅವರನ್ನು ಹೋಲಿಸಲು ಬರುವಂತಿಲ್ಲವೆಂದೂ ರಾಷ್ಟ್ರ ಸಂಘವು ಹೇಳಿರುವುದರಿಂದ ಅರಬರ ಅಸಂತೋಷವೇನೂ ರಾಷ್ಟ್ರ ಸಂಘದಿಂದ ನಿವಾರಣೆಯಾಗುವಂತೆ ತೋರುವುದಿಲ್ಲ.

### ವಿರೋಧ ಮಾಡುವವರಾರು ?

ಇಟಲಿಯು ಈ ವಿಭಾಗಣೆಯ ವಿರೋಧಕ್ಕೆ ಒಳಸಂಚು ನಡೆಸಿತ್ತು. ಆದರೆ ಅದಕ್ಕೆ ಈಗ ಅಬಸೀನಿಯಾದ ಕಾರ್ಯಮಾಡಲು ಸಾಲಬೇಕಾಗಿರುವುದರಿಂದ ಬ್ರಿಟಿಶ್‌ದ ಮನ ಒಲಿಸಬೇಕಾಗಿ

ಇರಾನ ಮತ್ತು ತುರ್ಕಸ್ಥಾನ ಈ ಮುಸಲ್ಮಾನ್ ರಾಷ್ಟ್ರಗಳು ಅರಬರ ಕಡೆಗಿವೆ. ಆದರೆ ಇರಾಕಕ್ಕೆ ಬೇಕಾಗಿರುವ ೧೦ ಲಕ್ಷ ಪೌಂಡು ಸಾಲದ ದೆಸೆಯಿಂದ ಅದಾದರೂ ವಿರೋಧ ಮಾಡುವ ಸ್ಥಿತಿಯಲ್ಲಿಲ್ಲ. ಆದಕಾರಣ ಅನಿರ್ವಾಹದಿಂದಲಾದರೂ ಅರಬರು ಪ್ಯಾಲಿಸ್ಟಾಯಿನ್‌ದ ವಿಭಾಗವನ್ನು ಈಗ ಒಪ್ಪಿಕೊಳ್ಳಲೇಬೇಕಾದ ಪ್ರಸಂಗ ಬಂದೇ ಬರುವುದು.

---

## ಮಹಾ ವಿಭೂತಿಗಳ ಆಹಾರ ಪದಾರ್ಥ.

:(:o:):

ಮನುಷ್ಯನು ಸೇವಿಸತಕ್ಕ ಆಹಾರ ಪದಾರ್ಥಗಳಲ್ಲಿರತಕ್ಕ ಗುಣ ಧರ್ಮಗಳು ಆತನ ನಡೆನುಡಿಗಳಲ್ಲಿಯೂ ಬಂದೇಬರುವವು. ಆಹಾರದಂತೆ ಗುಣ ಸ್ವಭಾವಗಳುಂಟಾಗುತ್ತಿರುತ್ತವೆ. ಆದುದರಿಂದ ಮನುಷ್ಯನು ಹಿತವಾದ ಆಹಾರವನ್ನು ಮಿತವಾಗಿ ಸೇವಿಸಿದರೇನೇ ಆತನಲ್ಲಿ ಕಾರ್ಯಶಕ್ತಿಯು ಪ್ರಕಾಶಿಸುತ್ತದೆ. ಯುರೋಪ ಖಂಡದ ಈಗ ನಾಲ್ಕು ಜನ ಮಹಾ ವಿಭೂತಿಗಳ ಆಹಾರ ಪದಾರ್ಥಗಳು ಈ ಮಾತಿನ ನಿಜತ್ವವನ್ನು ತೋರಿಸುತ್ತವೆ.

### ಹಿಟಲರರ ಊಟ.

ಜರ್ಮನಿಯ ಸರ್ವಾಧಿಕಾರಿಗಳಾದ ಹೇರ ಹಿಟಲರರು ಮಾಂಸವನ್ನು ತಿನ್ನುವುದೇ ಇಲ್ಲ. ಆದರೆ ಮೀನವನ್ನು ಎಂದಾದರೂ ತಿನ್ನುವುದುಂಟು ಇವರ ಊಟಕ್ಕೆ ತತ್ತಿ ಮತ್ತು ಹಸಿ ಕಾಯಿ, ಸೊಪ್ಪು ಆಲುಗಡ್ಡಿ ಇವು ಮಾತ್ರ ಬೇಕೇಬೇಕು. ಚಹಾ ಕುಡಿಯುವುದಂತೂ ಇವರಿಗೆ ಬೇಡವೇಬೇಡ. ಸಿಗಾರೇಟ್ ಮೊದಲಾದ ಯಾವ ರೀತಿಯ ತಂಬಾಕನ್ನೂ ಇವರು ಸೇದುವುದೇ ಇಲ್ಲ.

### ಮುಸೋಲಿನಿಯವರ ಊಟ ಒಂದೇಹೊತ್ತು.

ಇಟಲಿಯ ಸರ್ವಾಧಿಕಾರಿಗಳಾದ ಮುಸೋಲಿನಿಯವರು ಮಾಂಸಾಹಾರವನ್ನು ಬಿಟ್ಟು ಎಷ್ಟೋ ವರುಷಗಳಾದವು. ಇವರು ದಿವಸದಲ್ಲಿ ಒಂದೇಸಾರೆ ಊಟಮಾಡುತ್ತಾರೆ. ಊಟಕ್ಕೆ ಇವರಿಗೆ ಹಣ್ಣು ಹಂಪಲಗಳೇ ಬೇಕು. ಎಂದಾದರೂ ಇವರು ಸ್ವಲ್ಪ ಮದ್ಯವನ್ನು ಸೇವಿಸುವುದುಂಟು.

### ಕೆಮಲ ಪಾಶಾರವರ ಆಹಾರ.

ತುರ್ಕಸ್ಥಾನದ ಸರ್ವಾಧಿಕಾರಿಗಳಾದ ಕೆಮಲ ಪಾಶಾರವರು ಮಾಂಸವನ್ನು ಸೇವಿಸುವುದೇ ಇಲ್ಲ. ಹಸಿ ಕಾಯಿ, ಪಲ್ಲೆ, ಹಣ್ಣು ಹಂಪಲಗಳೇ ಇವರ ಆಹಾರ ಪದಾರ್ಥಗಳು. ಆಗಾಗ್ಗೆ ಮೀನವನ್ನು ತಿನ್ನುವುದುಂಟು.

### ಉಪ್ಪಿನ ಸ್ಟ್ಯಾಲಿನ್.

ರಶಿಯಾ ದೇಶದ ರಾಜ್ಯಸೂತ್ರವು ಯಾರ ಕೈಯಲ್ಲಿದೆಯೋ ಆ ಸ್ಟ್ಯಾಲಿನ್‌ರ ಕೈಯಲ್ಲಿ ಊಟದ ಕಾಲಕ್ಕೆ ಉಪ್ಪೇ ಉಪ್ಪು!

ಇವರು ಗಡ್ಡೆ, ಗೆಣಸು, ಸೊಪ್ಪು ಮೊದಲಾದವುಗಳಿಂದ ಕೂಡಿದ ಒಂದು ಪಾಕವನ್ನು ಮಾಡಿಸಿ ಊಟಮಾಡುತ್ತಾರೆ. ಅದರಲ್ಲಿ ಮಾಂಸವನ್ನೂ ಸೇರಿಸಿಯೇ ಆ ಪಾಕವನ್ನು ಮಾಡಿಸಿದರೂ ಊಟದಕಾಲಕ್ಕೆ ಅದರಲ್ಲಿದ್ದ ಮಾಂಸವನ್ನು ತೆಗೆದು ಊಟಮಾಡುತ್ತಾರೆ. ಆ ಪಾಕಕ್ಕೆ ಇವರು ಉಪ್ಪನ್ನು ಹಾಕಿಕೊಳ್ಳುತ್ತಾ ಊಟ ಮಾಡುತ್ತಾರೆ. ಇವರಿಗೆ ಊಟಕ್ಕೆ ಉಪ್ಪು ಬಹಳ ಬೇಕು.

ಇವರು ಉಪ್ಪು ಹಾಕಿಕೊಂಡು ಉಣ್ಣುವ ಪಾಕವನ್ನು ಬೇರೆ ಯಾರೂ ಉಣ್ಣಲಾರರು. ಅಷ್ಟು ಅದು ಉಪ್ಪಾಗಿರುತ್ತದೆ. ಉಪ್ಪು ಶರೀರದ ಬೆಳವಣಿಗೆಗೂ ಬುದ್ಧಿಯ ಚುರುಕುತನಕ್ಕೂ ಅತ್ಯಗತ್ಯವಾಗಿದೆಯಂತೆ. ಸ್ಟ್ಯಾಲಿನ್‌ರ ಕೈಯಿಂದ ಉಪ್ಪು ಹೋದರೆ ರಶಿಯಾದ ರಾಜ್ಯಸೂತ್ರವೂ ಅವರ ಕೈಯಿಂದ ಹೋಗುವುದಂತೆ.

ಹಾಗಾದರೆ ಉಪ್ಪು ಹೆಚ್ಚು ತಿಂದವರೆಲ್ಲಾ ಸ್ಟ್ಯಾಲಿನ್‌ರಾಗುವುದಿಲ್ಲ. ಹಾಗಾಗುತ್ತಿದ್ದರೆ ಆಡಿನ ಹಾಲನ್ನು ಕುಡಿದವರೆಲ್ಲಾ ಮಹಾತ್ಮಾ ಗಾಂಧಿಯವರಾಗಬೇಕಾಗಿತ್ತು. ಉಪ್ಪಿಗೂ ಹಾಲಿಗೂ ಇರುವಷ್ಟೇ ಅಂತರವು ಸ್ಟ್ಯಾಲಿನ್‌ರ ತತ್ವಕ್ಕೂ ಗಾಂಧಿಜೀಯವರ ತತ್ವಕ್ಕೂ ಇದೆಯೇ?

ಯುರೋಪ ಖಂಡದ ಮಹಾ ವಿಭೂತಿಗಳು ಮಾಂಸಾಹಾರವನ್ನು ಬಿಟ್ಟು ಹೆಚ್ಚಾಗಿ ಶಾಕಾಹಾರಿಗಳಾಗಿರುವುದನ್ನು ನೋಡಿಯಾದರೂ ಶಾಕಾಹಾರಿಗಳಲ್ಲಿ ಅನೇಕರು ಇತ್ತೀಚಿಗೆ ಮಾಂಸಕ್ಕೆ ಮೋಹಿಸಿರುವುದನ್ನು ಬಿಡುವರೆ?

---

## ಮಂತ್ರಿಗಳು ಹೊಂದುವ ಮನ್ನಣೆ

### ಗಂಡನು ಹೆಂಡತಿಯಿಂದ ಹೊಂದುವ ಸಲಾಮು!

ಕಾಂಗ್ರೆಸ್ ಪಕ್ಷದ ಮಂತ್ರಿಗಳು ಸಂಚಾರ ಮಾಡುತ್ತಿದ್ದಾರಷ್ಟೆ. ಆಗ ಅಲ್ಲಲ್ಲಿ ಜನರಿಂದಲೂ ಪೋಲಿಸರಿಂದಲೂ ಹೊಂದುವ ಮನ್ನಣೆಯು ಸಂಬಂಧವಾಗಿ ಶ್ರೀಯುತ ಮಹದೇವ ಭಾಯಿ ದೇಸಾಯಿ ಇವರು ಗಾಂಧೀಜಿಯವರ ಹರಿಜನ ಪತ್ರಿಕೆಯಲ್ಲಿ ಒಂದು ಲೇಖನವನ್ನು ಬರೆದಿದ್ದಾರೆ. ಅದರಲ್ಲಿ ಹೀಗೆ ತಿಳಿಸಿದ್ದಾರೆ—

"ಮಂತ್ರಿಗಳು ಸಂಚಾರ ಹೊರಟಾಗ ತಾವು ಯಾವ ಸ್ಥಳಕ್ಕೆ ಹೋಗುವವರಿದ್ದಾರೆಯೋ ಆ ಸ್ಥಳದವರಿಗೆ ಯಾವ ವಿಧವಾದ ಆಡಂಬರ ಉತ್ಸವಾದಿಗಳನ್ನು ಇಟ್ಟುಕೊಳ್ಳದಂತೆಯೂ ಅನವಶ್ಯಕವಾದ ವೆಚ್ಚಗಳನ್ನು ಮಾಡದಂತೆಯೂ ಮುಂಚೆಯೇ ತಿಳಿಸಬೇಕು. ಕಾಂಗ್ರೆಸ್ ಮಂತ್ರಿಗಳು ಪೋಲಿಸರಿಂದ ಸಲಾಮು ಹೊಂದುವುದು ಮತ್ತು ಅಹಿಂಸಾ ವ್ರತವನ್ನು ಪಾಲಿಸುತ್ತಿದ್ದೇವೆಂದು ತಿಳಿಯುವುದು ಪರಸ್ಪರ ವಿರುದ್ಧವಾಗಿವೆ. ಇವರ ಈ ಸಮಾರಂಭವು ದೂಷಿತವಾದುದು.

ನೀವು ಮುಖ್ಯ ಮಂತ್ರಿಗಳಾಗಿದ್ದಾಗ ಪೋಲಿಸರಿಂದ ನೀವು ಸಲಾಮು ಹೊಂದುತ್ತಿರುವ ತಮಾಷೆಯನ್ನು ನಾನೊಮ್ಮೆ ನೋಡಬೇಕಾಗಿದೆಯೆಂದು ಶ್ರೀ. ಜಮುನಾ ಲಾಲಜಿಯವರು ಶ್ರೀ. ರಾಜಗೋಪಾಲಾಚಾರ್ಯರಿಗೆ ವಿನೋದವಾಗಿ ಹೇಳಿದರು. ಆಗ ಆಚಾರ್ಯರು ನನಗೆ ಅದು ಬಹು ಅಸಹ್ಯಕರವಾದುದಾಗಿದೆಯೆಂದೂ ಆ ಸಲಾಮು ಗಂಡನು ಹೆಂಡತಿಯಿಂದ ಅಥವಾ ತಂದೆಯು ಮಗನಿಂದ ಹೊಂದುವಂಥಾದ್ದಾಗಿಯೇ ಇದೆಯೆಂದೂ ಹೇಳಿದರು. ಇಂಥ ನಿರುಪಯೋಗದ ಆಡಂಬರಗಳಿಗೆ ಬಡ. ಜನಗಳ ಹಣವನ್ನೇಕೆ ಸೂರೆಮಾಡಬೇಕು?

ಶ್ರೀ. ಗಂಗಾಧರರಾವ ದೇಶಪಾಂಡೆಯವರು ಗಾಂಧೀಜಿಯವರಿಗೆ ಒಂದು ಪತ್ರದಲ್ಲಿ ಹೀಗೆ ಹೇಳಿದ್ದಾರೆ— "ನಾವು ಮೊದಲು ಯಾವುದನ್ನು ನಿಷೇಧಿಸುತ್ತಿದ್ದೆವೋ ಅದೇ ಈಗಲೂ ಇದೆಯೆಂದು ಈ ಆಡಂಬರಗಳಿಂದ ಜನಸಾಮಾನ್ಯವು ತಿಳಿಯಬಹುದು. ಜನಸಾಮಾನ್ಯದಲ್ಲಿ ಬೆರೆತಿರಬೇಕು. ಅದಷ್ಟು ಈಗಿನ ಆಡಂಬರಗಳನ್ನೆಲ್ಲಾ ಕಡಿಮೆ ಮಾಡಬೇಕು."

ಶ್ರೀ. ಮಹದೇವ ಭಾಯಿಯವರ ಈ ಅಭಿಪ್ರಾಯಗಳು ಅನುಕರಣೀಯವಾಗಿವೆ. ತಮ್ಮ ಪಕ್ಷದವರಲ್ಲಿರುವ ದೋಷಗಳನ್ನು ಹೀಗೆ ತಿಳಿಸಿದುದು ಅತ್ಯಂತ ಅಭಿನಂದನೀಯವಾದುದು. ಹೀಗೆ

ತಮಗೆ ಯುಕ್ತವಾದ ಅಭಿಪ್ರಾಯವನ್ನು ತಿಳಿಸಿದರೆ ಅವರು ಕಾಂಗ್ರೆಸ್ ವಿರೋಧಿಗಳೆಂದು ತಿಳಿಯಬಹುದೆ? ಕಾಂಗ್ರೆಸ್ಸಿನ ಎಲ್ಲರ ಎಲ್ಲ ಆ ವಿಚಾರಗಳನ್ನೂ ಕಣ್ಣು ಮುಚ್ಚಿಕೊಂಡು ಅನುಸರಿಸುವುದು ಯುಕ್ತವಲ್ಲವೆಂದೇ ಇದರಿಂದಲಾದರೂ ಗೊತ್ತಾಗುವುದಿಲ್ಲವೆ?

---

## ನರಯಜ್ಞ ನಡೆದಿದೆ!

ಪ್ರಪಂಚವು ಈಗ ತಾನು ನವನಾಗರಿಕ ಯುಗದಲ್ಲಿದ್ದೇನೆಂದು ಜಂಭ ಕೊಚ್ಚಿಕೊಳ್ಳುತ್ತದೆ. ಹಿಂದಿನ ಯುಗ ಕಾಡ ಯುಗವೆಂದು ಜರಿಯುತ್ತದೆ. ಈ ನಾಗರಿಕ ಯುಗದಲ್ಲಿ ನಡೆದಿರುವ ನರಯಜ್ಞದ ಕಡೆಗೆ ನೋಡಿದರೆ ಯಾರು ಕಾಡು ಸ್ಥಿತಿಯಲ್ಲಿದ್ದಾರೆಂಬುದು ಗೊತ್ತಾಗುವುದಿಲ್ಲವೆ?

ಕ್ರಿ. ಶ. ೧೯೧೪ ನೆಯ ಇಸವಿ ಅಗಸ್ಟ ೪ ನೆಯ ತಾರೀಖಿನ ದಿವಸ ಮಹಾಯುದ್ಧದ ಬೆಂಕಿ ಹತ್ತಿತು. ನಾಲ್ಕು ವರುಷಗಳಲ್ಲಿ ಆ ರಣಯಜ್ಞದಲ್ಲಿ ಸಾಧಾರಣ ಹತ್ತು ಲಕ್ಷ ಜನಗಳ ಆಹುತಿಯಾಯಿತು. ಆಗಿನ ಆ ಭೀಕರ ಸ್ಥಿತಿಯನ್ನು ನೋಡಿ "ದೇವರೇ ನಮಗೆ ಇನ್ನುಮೇಲೆ ಇಂಥ ಸಂಕಟವನ್ನು ತರಬೇಡ" ಎಂದೇ ಪ್ರಪಂಚವು ಬೇಡಿಕೊಂಡಿತು. ಅನಂತರ ಕಳೆದ ೧೮ ವರುಷಗಳಲ್ಲೇನೂ ನರಯಜ್ಞ ನಿಂತಿದೆಯೇ? ಪ್ರಪಂಚದಲ್ಲಿ ನಿಜವಾದ ಶಾಂತತೆಯುಂಟಾಗಿದೆಯೇ? ಈ ಕೆಳಗಿನ ಭೀಕರ ಸ್ಥಿತಿಯು ಹೇಳುವುದೇನು?

**ಹಿಂದುಸ್ಥಾನ—** ೧೯೧೮ ರಲ್ಲಿ ಅಮೃತಸರದಲ್ಲಾದ ಕೊಲೆಯಿಂದ ೪೦೦ ಜನರು ಮೃತಪಟ್ಟರು. ಅನಂತರ ಮೂರನೆಯ ಅಫಗಾಣ ಯುದ್ಧ ಮತ್ತು ವಜೀರ ಸ್ಥಾನದ ಗಲಾಟೆಗಳುಂಟಾದವು. ೧೯೨೧ ರಲ್ಲಿ ಮಲಬಾರದಲ್ಲುಂಟಾದ ಮೊಪಲಾ ದೊಂಬಿಯಿಂದ ೧೪ ಸಾವಿರ ಜನರು ಮೃತಪಟ್ಟರು. ಗಡಿನಾಡಿನಲ್ಲಿ ಮೊನ್ನೆ ನಡೆದ ದೊಂಬಿಯಿಂದ ೨ ಸಾವಿರ ಜನರು ಮೃತ್ಯುವಿಗೆ ತುತ್ತಾದರು. ಈ ಪ್ರಕಾರ ಕಳೆದ ೧೮ ವರುಷಗಳಲ್ಲಿ ಒಟ್ಟು ೪೦ ಸಾವಿರ ಜನರು ಇಂಥ ಅನೇಕ ಅತ್ಯಾಚಾರಗಳಿಗೆ ಆಹುತಿಯಾದರಂತೆ.

**ರಶಿಯಾ—** ರಶಿಯಾ ದೇಶದಲ್ಲಂತೂ ನರಯಜ್ಞವು ಭೀಕರವಾಗಿ ನಡೆಯಿತು. ೧೯೨೧ ರಲ್ಲಿ ಕ್ಷಾಮದಿಂದಲೇ ೧೩ ಲಕ್ಷ ಜನರು ಮೃತಪಟ್ಟರು.

**ತುರ್ಕಸ್ಥಾನ—** ಇದು ಈಗ ಜಗತ್ತಿನ ಒಂದು ಪ್ರಬಲ ರಾಷ್ಟ್ರವೇ ಆಗಿದೆಯಷ್ಟೆ. ಇದು ಗ್ರೀಸ್ ದೇಶದ ಸಂಗಡ ಯುದ್ಧಮಾಡಿ ಜಯಹೊಂದಬೇಕಾದರೆ ೪೦ ಸಾವಿರ ಜನರನ್ನು ರಣಯಜ್ಞದಲ್ಲಿ ಆಹುತಿ ಕೊಡಬೇಕಾಯಿತು. ಆಗಲೇ ಕೆಮಲಪಾಶಾರವರು ಇಂಥ ಸರ್ವಾಧಿಕಾರವನ್ನು ಹೊಂದಿದರು. ಕೆಮಲಪಾಶಾರವರ ಕೈ ಯಾವಾಗ ರಕ್ತದಲ್ಲಿ ಎದ್ದಲ್ಪಡುತ್ತದೋ ನಿಯಮವಿಲ್ಲ. ೧೯೨೦ ರಲ್ಲಿ ಆರ್ಮಿನಿಯಾ ಜನರು ದೊಂಬಿ ಎದ್ದನಂತರ ೨೩ ಸಾವಿರ ಜನರನ್ನು ಗುಂಡುಹಾಕಿಸಿ ಕೊಲ್ಲಿಸಿದರು! ೧೯೨೫ ರಲ್ಲಿ ಕುರದಿಸ್ಥಾನದ ಜನರು ದೊಂಬಿ ಏಳಲು ಎರಡು ತಿಂಗಳುಗಳಲ್ಲಿಯೇ ಅವರನ್ನು ಹಣ್ಣುಮಾಡಿ ೪೬ ಪ್ರಮುಖರನ್ನು ಶೂಲಕ್ಕೆ ಹಾಕಿಸಿದರು. ಫೇಜ್ ಟೋಪಿ ಹಾಕಿಕೊಳ್ಳುವವರಿಗೆ ಮರಣ ದಂಡನೆಯನ್ನು ವಿಧಿಸಲಾರಂಭಿಸಿದರು!

**ಇಟೆಲಿ—** ೧೯೨೨ ರಲ್ಲಿ ಇಟೆಲಿಯ ರಾಜ್ಯಕ್ರಾಂತಿಯು ಭೂಮಿಗೆ ರಕ್ತ ಬೀಳದಂತೆ ಸಂಭವಿಸಿತೆಂದರೂ ಅನೇಕ ಬುದ್ಧಿಶಾಲಿಗಳು ಭಯಂಕರವಾದ ದ್ವೀಪಾಂತರ ಶಿಕ್ಷೆಗೊಳಗಾದರು. ಅಬಿಸೀನಿಯಾದಲ್ಲಂತೂ ಭಯಂಕರ ನರಯಜ್ಞವನ್ನುಮಾಡಿ ಲಕ್ಷಾಂತರ ಜನರನ್ನು ಆಹುತಿಕೊಟ್ಟರು.

**ಜರ್ಮನಿ—** ಹೇರ್ ಹಿಟಲರರ ಕೈಯಲ್ಲಿ ಕತ್ತಿಯು ಯಾವಾಗಲೂ ಹೊಳೆಯುತ್ತಲೇ ಇರುತ್ತದೆ. ತಮ್ಮ ವಿರುದ್ಧವಾಗಿ ಏಳಬಹುದೆಂಬ ಸಂಶಯ ಬಂದೊಡನೆ ಅನೇಕರನ್ನು ಗುಂಡಿಗೆ ಗುರಿಮಾಡುತ್ತಿದ್ದಾರೆ.

**ಸ್ಪೇನ್ ಮತ್ತು ಜಪಾನ—** ಈ ರಾಷ್ಟ್ರಗಳು ಈಗ ಘೋರ ನರಯಜ್ಞವನ್ನು ನಡೆಸಿವೆ. ಸಾವಿರಾರು ಜನರು ಆಹುತಿಯಾಗುತ್ತಿದ್ದಾರೆ.

ಹೀಗೆ ಹದಿನೆಂಟು ವರುಷಗಳಿಂದಲೂ ಒಂದಲ್ಲ ಒಂದುಕಡೆ ನರಯಜ್ಞವು ನಡದೇ ಇದೆಯಲ್ಲವೆ? ಇದು ಮನುಷ್ಯ ಜಾತಿಯು ಸುಧಾರಿಸಿದ್ದರ ಲಕ್ಷಣವೆ? ಯಾವ ರಾಷ್ಟ್ರಗಳು ತಾವು ಸುಧಾರಿಸಿದ್ದೇವೆಂದು ಹೇಳಿಕೊಳ್ಳುತ್ತಲಿವೆಯೋ ಅವೇ ಈ ನರಯಜ್ಞಕ್ಕೆ ಈಗ ಕಾರಣವಾಗಿಲ್ಲವೆ? ವಿಷವಾಯು, ಬಾಂಬು ಮೊದಲಾದ ಮನುಷ್ಯ ಜಾತಿಗೆ ಕಲಂಕವನ್ನುಂಟುಮಾಡುವ ಅತ್ಯಂತ ಭಯಂಕರ ಸಂಹಾರ ಸಾಧನಗಳನ್ನು ಹೆಚ್ಚಿಸುವುದರಲ್ಲಿಯೂ ಶೋಧಿಸುವುದರಲ್ಲಿಯೂ ಅನೇಕರ ದ್ರವ್ಯ ಮತ್ತು ಬುದ್ಧಿ ಶಕ್ತಿಗಳ ವ್ಯಯವಾಗುತ್ತಲಿವೆಯಲ್ಲವೆ? ಈ ಎಲ್ಲ ಭೀಕರ ದೃಶ್ಯಗಳನ್ನು ನೋಡಿಯೇ ಶಾಂತತಾ ಪ್ರಿಯರು ಈಗ ಪ್ರಪಂಚದಲ್ಲಿ ನರಯಜ್ಞ ನಡೆದಿದೆಯೆಂದು ಹೇಳುತ್ತಿದ್ದಾರೆ.

---

## ಶ್ರೀ. ನೀ. ವಿ. ಗುಗ್ರಿ ಹೆ| ಮಾ| ಯಾದವಾಡ ಇವರ ಸಂಶಯ ನಿವಾರಣೆ.

ಮಹಾಶಯರೆ,

ಶರಣ ಸಂದೇಶ ಸಂಪಾದಕರು ನಿಮ್ಮ ವಿನಂತಿಯು ಪ್ರಕಟವಾದ ಸಂಚಿಕೆಯನ್ನು ನನ್ನ ಕಡೆಗೆ ಕಳಿಸಿದ್ದಕ್ಕಾಗಿ ನಾನು ನಿಮ್ಮ ವಿನಂತಿಗೆ ಉತ್ತರ ಕೊಡಲು ಅನುಕೂಲವಾಯಿತು. ನಿಮ್ಮ ವಿಧಾನಗಳನ್ನು ನೋಡಿ ನನಗೆ ಆಶ್ಚರ್ಯವಾಯಿತು. ನನ್ನ ಪೂರ್ವದ ಲೇಖನದ ಅವತರಣಿಕೆಯನ್ನು ತಪ್ಪು ಬರೆದು ಅನಂತರ ಅದರ ಗುಟ್ಟೇನು? ಇಂಗಿತವೇನು? ಎಂದು ನೀವು ಕೇಳಿರುವಿರಿ. ಹೀಗೆ ನೀವು ಕೇಳುವುದರ ಗುಟ್ಟೇನು? ಎಲ್ಲ ಮಾತುಗಳು ಸರಿಬರುವದಿಲ್ಲ. ಪಂಚಾಚಾರ್ಯ ಪ್ರಭೆಯು ಕೂಡ ಶರಣ ಸಂದೇಶದ ಮೇಲೂ ಹರಿಹಾಯುವದರ ತಾತ್ಪರ್ಯವೇನು? ಎಂದು ನೀವು ಕೇಳಿರುವಿರಷ್ಟೆ. ಹೀಗೆ ನೀವು ಕೇಳುವದರ ತಾತ್ಪರ್ಯವೇ ನನಗಾಗಲೊಲ್ಲದು.

ನನ್ನ ಮೊದಲಿನ ಲೇಖನವನ್ನು ನೀವು ಸರಿಯಾಗಿ ನೋಡಿದ್ದರೆ ಇಂಥ ಬಿರುನುಡಿಗಳಿಂದಯುಕ್ತವಾದ ವಿಧಾನಗಳನ್ನು ನೀವು ಮಾಡುತ್ತಿರಲಿಲ್ಲವೆಂದು ತೋರುತ್ತದೆ. "ಇಂತಹ ಕೆಲವು ಅಭಿಪ್ರಾಯಗಳು ಎಂದಿದ್ದರೆ ಮಾತ್ರ ಯಾವವೋ ಸಾಮಾಜಿಕ ರಾಜಕೀಯಗಳಲ್ಲಿ ಸರಿಯಿರಲಿಕ್ಕಿಲ್ಲೆಂದು ಗ್ರಹಿಸಬಹುದಾಗಿತ್ತು." ಎಂದು ನೀವು ತಿಳಿಸಿರುವಿರಿ. ಇಂತಹವು ಎಂದು ಹೇಳಿದಮೇಲೆ ನೀವು ಸಾಮಾಜಿಕ ರಾಜಕೀಯವೆಂದು ಹೇಗೆ ಗ್ರಹಿಸುವಿರಿ? ಧಾರ್ಮಿಕ ವಿಷಯಗಳಲ್ಲಿಯೇ ಮತಭೇದವಿದೆಯೆಂದು ಹೇಳಿದರೆ ಆಗ ನೀವೇನು ಗ್ರಹಿಸುವಿರಿ? ರಾಜಕೀಯದಲ್ಲಾಗಲಿ ಧಾರ್ಮಿಕದಲ್ಲಾಗಲಿ ಅಥವಾ ಇನ್ನಾವ ಕ್ಷೇತ್ರದಲ್ಲಾಗಲಿ ಒಬ್ಬನೊಬ್ಬ ಸಂಪಾದಕರ ಎಲ್ಲ ವಿಚಾರಗಳೂ ಒಬ್ಬರಿಗೆ ಮಾನ್ಯವಿರಲೇಬೇಕೆಂದು ನೀವು ಹೇಗೆ ಹೇಳುವಿರಿ? ಯಾರೊಬ್ಬರಿಗೆ ಕೆಲವೊಂದು ಮಾನ್ಯವಿಲ್ಲೆಂದರೆ ಅವರು ವಿರೋಧ ಭಾವವನ್ನು ವ್ಯಕ್ತಗೊಳಿಸಿದಂತೆ ಇಲ್ಲವೆ ಹರಿಹಾಯ್ದಂತೆ, ಎಂದು ನೀವು ಅಭಿಪ್ರಾಯಪಟ್ಟಿರುವದು ವಿಚಾರವಂತರು ಒಪ್ಪತಕ್ಕ ಮಾತಲ್ಲವೆಂದು ನಾನು ನಮ್ರವಾಗಿ ಸೂಚಿಸುತ್ತೇನೆ.

ಶರಣ ಸಂದೇಶ ಪತ್ರಿಕೆಯು ಸಕಲ ಸಮಾಜದ ಪ್ರಚಾರಕವೆಂದು ತಿಳಿಯುವುದೂ ಪಂಚಾಚಾರ್ಯ ಪ್ರಭಾ ಪತ್ರಿಕೆಯು ಸಂಪೂರ್ಣ ಸರಿದೋರುವದಿಲ್ಲವೆಂದು ತಿಳಿಯುವದೂ ಶರಣರಿಗೆ ಒಪ್ಪತಕ್ಕದ್ದಲ್ಲ. ಕೊನೆಯಲ್ಲಿ ಅದು ಯಾವ ಮಾತಿನ ಸಲುವಾಗಿ ಬರೆಯಲ್ಪಟ್ಟಿತೆಂಬುದನ್ನು ತಿಳಿಸಲು ನೀವು ಕೇಳಿರುವಿರಿ. ಇದನ್ನು ಸಾರ್ವಜನಿಕವಾಗಿ ತಿಳಿಸುವದು ಅಗತ್ಯವಿರದಿದ್ದರೂ ತಿಳಿಸದೆ ಬಿಟ್ಟರೆ ಕೆಲವರಲ್ಲಿ ವೃಥಾ ಸಂಶಯವುಂಟಾಗಬಹುದೆಂದು ಅಲ್ಪಸ್ವಲ್ಪ ತಿಳಿಸುತ್ತೇನೆ.

ಶರಣ ಸಂದೇಶ ಪತ್ರಿಕೆಯು ಈಗ ವೀರಶೈವ ಸಮಾಜದಲ್ಲಿ ಒಂದು ಪಕ್ಷವನ್ನು ಎತ್ತಿಹಿಡಿಯುವ ಪತ್ರಿಕೆಯಾಗಿ ಪರಿಣಮಿಸಿದ್ದರಿಂದ ಅಖಿಲ ವೀರಶೈವರ ಕಲ್ಯಾಣದ ಪ್ರಚಾರ ಮಾಡಬಯಸುವ ನಮ್ಮಂಥ ಪ್ರಚಾರಕರಿಗೆ ಆಗಾಗ್ಗೆ ತೊಂದರೆಯುಂಟಾಗುತ್ತಿದ್ದಿತು. ನಾನು ವೀರಶೈವ ಧರ್ಮ ಪ್ರಚಾರ ಮಾಡುತ್ತೇನೆಂದರೆ ಕೆಲವರು ಶರಣ ಸಂದೇಶ ಸಂಪಾದಕರ ವಿಧಾನಗಳನ್ನು ಪ್ರಚುರಗೊಳಿಸುವವರೆಂದು ತಿಳಿದಿದ್ದುದು ಕಂಡುಬಂದದ್ದರಿಂದ ನನ್ನ ವಿಷಯವಾಗಿ ಆ ತರಹದ ವಾತಾವರಣವು ಸಮಾಜದಲ್ಲಿ ಉಂಟಾಗಬಾರದೆಂದು ನಾನು ಹಾಗೆ ಪ್ರಕಟಿಸಲು ಕಾರಣವಾಯಿತು.

ಅನ್ನದಾನೀಶ್ವರ ವಿರಕ್ತಮಠ.

## ನಮ್ಮ ಪ್ರಾರ್ಥನೆ,

[ಒಬ್ಬರ ಎಲ್ಲ ಅಭಿಪ್ರಾಯಗಳೂ ಇನ್ನೊಬ್ಬರಿಗೆ ಮಾನ್ಯವಿರಲೇಬೇಕೆಂಬ ಕಟ್ಟೇನೂ ಇಲ್ಲ. ಹಾಗೆ ಮಾನ್ಯವಿಲ್ಲದಿದ್ದ ಮಾತ್ರದಿಂದ ಅವರು ವಿರೋಧಕರೆಂದು ತಿಳಿಯಬೇಕಾದುದೂ ಇಲ್ಲ. ಅಂತೆಯೇ ನಾವು ತಾ. ೧೯-೭-೩೭ ನೆಯ ಸಂಚಿಕೆಯಲ್ಲಿ ಶ್ರೀ. ಅನ್ನದಾನೀಶ್ವರ ವಿರಕ್ತಮಠ ಇವರ ಲೇಖನ ಪ್ರಕಟವಾದಾಗ ಈ ಸಂಬಂಧವಾಗಿ ಪ್ರಸ್ತಾಪಿಸಿರಲಿಲ್ಲ.

ಆದರೆ ಈಗ "ಶರಣ ಸಂದೇಶ" ದ ವಿಚಾರವಾಗಿ ಇವರು ವ್ಯಕ್ತಗೊಳಿಸಿದ ಅಭಿಪ್ರಾಯವನ್ನು ನೋಡಿ ಈ ಕೆಳಗಿನ ವಿಷಯವನ್ನು ಪ್ರಸ್ತಾಪಿಸಬೇಕಾಯಿತು. ಇವರ ಅಭಿಪ್ರಾಯದಲ್ಲಿ ಎರಡು ಸಂಗತಿಗಳಿವೆ—

(೧) ಶರಣ ಸಂದೇಶವು ವೀರಶೈವ ಸಮಾಜದಲ್ಲಿ ಒಂದು ಪಕ್ಷವನ್ನು ಎತ್ತಿ ಹಿಡಿಯುತ್ತದೆ. ಆದರೆ ತಾವು ಅಖಿಲ ವೀರಶೈವರ ಕಲ್ಯಾಣದ ಪ್ರಚಾರಕರು.

(೨) ಆದಕಾರಣ ಶರಣ ಸಂದೇಶದ ವಿಧಾನಗಳನ್ನು ಪ್ರಚಾರಗೊಳಿಸುವವರು ತಾವಲ್ಲವೆಂಬುದು ಸಮಾಜದವರಿಗೆ ಗೊತ್ತಾಗಬೇಕು.

ಈ ಸಂಕ್ಷಿಪ್ತ ವಿವರಣೆಯಿಂದ ವೀರಶೈವ ಧಾರ್ಮಿಕ ವಿಚಾರದಲ್ಲಿಯೇ ಭಿನ್ನಾಭಿಪ್ರಾಯವಿದೆಯೆಂಬುದು ಸ್ಪಷ್ಟವಾಗುತ್ತದೆ. ಎಂದಮೇಲೆ ಶ್ರೀ. ಗುಗ್ರಿಯವರು "ಯಾವ ಮಾತಿನ ಸಲುವಾಗಿ" ಎಂದು ಇವರನ್ನು ಕೇಳಿದ್ದು ಯುಕ್ತವಾಯಿತಷ್ಟೆ. ಆದರೆ ಆ ಮಾತು ಮಾತ್ರ ವಿವರವಾಗಿ ತಿಳಿಸಲ್ಪಟ್ಟಿಲ್ಲ. ಇನ್ನುಮೇಲಾದರೂ ತಿಳಿಸುವುದು ಅಗತ್ಯವೆಂದೇ ನಮಗೂ ತೋರುತ್ತದೆ.

ಏಕೆಂದರೆ ನಮ್ಮ ಅಭಿಪ್ರಾಯವು ವೀರಶೈವರಲ್ಲಿ ಒಂದು ಪಕ್ಷದವರಿಗೆ ಮಾತ್ರ ಹಿತವಾಗುವುದೂ ಶ್ರೀ. ಅನ್ನದಾನೀಶ್ವರರ ಅಭಿಪ್ರಾಯವು ಅಖಿಲ ವೀರಶೈವರಿಗೆ ಕಲ್ಯಾಣಕರವಾದುದೂ ಇದೆಯೆಂಬ ಇವರ ತಿಳುವಳಿಕೆಯು ಸರಿಯಾಗಿದ್ದುದಾದ ಪಕ್ಷದಲ್ಲಿ ಇವರ ಮಾರ್ಗವನ್ನೇ ಅನುಸರಿಸುವುದು ನಮಗೂ ಯುಕ್ತವಲ್ಲವೆ? ನಾವು ಸಾರುತ್ತಿರುವ ಶ್ರೀಬಸವಾದಿ ಪ್ರಮಥರ ತತ್ವವೇ ಅಖಿಲ ವೀರಶೈವರ ಕಲ್ಯಾಣಕ್ಕೆ ಕಾರಣವಾಗಿದೆಯೆಂದು ನಾವು ತಿಳಿದಿದ್ದೇವೆ.

ಈ ನಮ್ಮ ತಿಳುವಳಿಕೆಯು ಸರಿಯಾಗಿಲ್ಲವೆಂದೂ ಇದರಿಂದ ವೀರಶೈವರ ಒಂದು ಪಕ್ಷಕ್ಕೇನೇ ಹಿತವಾಗುತ್ತದೆಂದೂ ತಮ್ಮ ಮಾರ್ಗವು ಅಖಿಲ ವೀರಶೈವರಿಗೆ ಹಿತಪ್ರದವಾಗಿದೆಯೆಂದೂ ಶ್ರೀ. ಅನ್ನದಾನೀಶ್ವರರು ತೋರಿಸಿಕೊಟ್ಟರೆ ನಾವು ಅದೇ ಪ್ರಕಾರ ನಡೆಯಲು ಸಿದ್ಧರಿದ್ದೇವೆ. ಏಕೆಂದರೆ ನಮಗೆ ಬೇಕಾದುದೂ ಅಖಿಲ ವೀರಶೈವರ ಕಲ್ಯಾಣವೇ ಸರಿ.

ಶರಣ ಸಂದೇಶದ ವಿಧಾನದಿಂದ ತಾವು ಮೈಲಿಗೆಯಾಗಿಲ್ಲವೆಂದು ಸಮಾಜಕ್ಕೆ ತಿಳಿಸಿದಂತೆ ಅನ್ಯರಿಗೂ ಈ ಮೈಲಿಗೆ ತಟ್ಟದಹಾಗೆ ಇದನ್ನೇ ತಮ್ಮ ತತ್ವದಂತೆ ಶುದ್ಧಗೊಳಿಸುವುದೂ ಧರ್ಮ ಪ್ರಚಾರಕರ ಕರ್ತವ್ಯವೇ ಆಗಿಲ್ಲವೆ?

ಆದುದರಿಂದ ಶರಣ ಸಂದೇಶವು ಯಾವ ಪಕ್ಷವನ್ನು ಎತ್ತಿ ಹಿಡಿಯುವ ಪತ್ರಿಕೆಯಾಗಿ ಪರಿಣಮಿಸಿತು? ಇದು ಮೊದಲು ಹೇಗಿತ್ತು? ಈಗ ಹೇಗೆ ಪರಿಣಮಿಸಿದ್ದರಿಂದ ಅಖಿಲ ವೀರಶೈವರ ಕಲ್ಯಾಣಕ್ಕೆ ಹೇಗೆ ಕಂಟಕವಾಗಿದೆ? ತಮ್ಮ ನಿಷ್ಕಂಟಕವಾದ ಮಾರ್ಗವು ಯಾವುದು? ಎಂಬ ಸಂಗತಿಗಳನ್ನು ದಯವಿಟ್ಟು ಶ್ರೀ. ಅನ್ನದಾನೀಶ್ವರ ಇವರು ಇದೇ ಪತ್ರಿಕೆಯಲ್ಲಿ ಪ್ರಕಟಿಸಲು ಬರೆದು ಕಳುಹಿಸಬೇಕಾಗಿ ಪ್ರಾರ್ಥನೆ.

—ಸಂಪಾದಕ ]

# ಕರ್ನಾಟಕದಲ್ಲಿ ಒಂದು ಅಪೂರ್ವ ಸಾಹಸವು.

### ಕರ್ನಾಟಕದ ಪರಿಚಯ ಗ್ರಂಥದ ಪ್ರಕಾಶವು.

### ಪರದೇಶ ಪರಪ್ರಾಂತಗಳಲ್ಲಿ ಕರ್ನಾಟಕದ ಪ್ರಚಾರ.

ಮಹನೀಯರೆ,

ಸದ್ಯದ ಪ್ರಕಟನೆಯ ಯುಗದಲ್ಲಿ (Edvertising Era) ಬಹುತರ ಎಲ್ಲ ದೇಶಗಳಲ್ಲಿಯೂ ತಮ್ಮ ತಮ್ಮ ನಾಡಿನ ಹಾಗೂ ನಾಡಿನಲ್ಲಿಯ ವ್ಯಕ್ತಿ ಸಂಸ್ಥೆಗಳ ಪರಿಚಯವನ್ನು ಎಲ್ಲರಿಗೂ ಮಾಡಿಕೊಟ್ಟು ನಾನಾವಿಧದಿಂದ ಪ್ರಕಟನೆ ಹಾಗೂ ಪ್ರಚಾರವನ್ನು (Publicity and Propaganda) ಮಾಡಿ ತಮ್ಮ ನಾಡಿನಲ್ಲಿಯ ವ್ಯಾಪಾರೋದ್ಯಮಾದಿಗಳನ್ನು ವೃದ್ಧಿಗೊಳಿಸುವ ಅನೇಕಾನೇಕ ಪ್ರಯತ್ನಗಳು ನಡೆದಿವೆಂಬುದು ಎಲ್ಲರಿಗೂ ಗೊತ್ತಿದ್ದ ಮಾತಾಗಿದೆ. ಬೇರೆ ನಾಡಿನವರು ಈ ಮೇರೆಗೆ ಸಾಧ್ಯವಿದ್ದ ಎಲ್ಲ ಮಾರ್ಗಗಳಿಂದ ತಮ್ಮ ಪ್ರಚಾರ ಕಾರ್ಯವನ್ನು ನಡೆಸಿರುವಾಗ ಕರ್ನಾಟಕವು ಮಾತ್ರ ಇನ್ನೂ ಅಂಧಃಕಾರದಲ್ಲಿಯೇ ಉಳಿದಿರುವದೆಂಬ ವಿಷಾದಕರವಾದ ಸಂಗತಿಯನ್ನು ನಾವು ಒಪ್ಪಲೇಬೇಕಾಗಿದೆ. ಆದರೆ ಕೇವಲ ವಿಷಾದ ಪ್ರದರ್ಶನದಿಂದ ನಾವು ಸ್ವಸ್ಥ ಕೂಡದೆ ಶಕ್ಯವಿದ್ದ ಎಲ್ಲ ಪ್ರಕಾರದಿಂದ ಕರ್ನಾಟಕೇತರರಿಗೆ ನಮ್ಮ ಪ್ರಾಂತದಲ್ಲಿಯ ಪ್ರಮುಖ ಪಟ್ಟಣಗಳ, ಸಂಸ್ಥೆಗಳ ಉದ್ಯಮಗಳ ಹಾಗೂ ವ್ಯಕ್ತಿಗಳ ಪರಿಚಯವನ್ನು ಮಾಡಿಕೊಟ್ಟು ಕರ್ನಾಟಕವೆಂದರೊಂದು ಹಿಂದುಳಿದ ಪ್ರಾಂತವೆಂದು ಅವರ ಮನಸಿನಲ್ಲಿದ್ದ ಭಾವನೆಯನ್ನು ನಾವು ಹೋಗಲಾಡಿಸಲಿಕ್ಕೆಬೇಕು. ಇದೇ ಉದ್ದೇಶದಿಂದ ನಾವು ನಮ್ಮ ಅಖಿಲ ಕರ್ನಾಟಕದಲ್ಲಿಯ (ಅಂದರೆ ಮುಂಬೈ ಹಾಗು ಮದ್ರಾಸ ಕರ್ನಾಟಕ ಮೈಸೂರು ಸಂಸ್ಥಾನ ಹಾಗೂ ಕೂರ್ಗ ನೈಜಾಂ, ಸೊಂಡೂರ ಮತ್ತು ದಕ್ಷಿಣ ಮಹಾರಾಷ್ಟ್ರ ಸಂಸ್ಥಾನಗಳಲ್ಲಿಯ ಕರ್ನಾಟಕ ಭಾಗದಲ್ಲಿಯ) ಪ್ರಮುಖ ಪಟ್ಟಣಗಳ ಸಂಸ್ಥೆಗಳ ಉದ್ಯಮಗಳ ಹಾಗೂ ರಾಜಕೀಯ ಸಾಮಾಜಿಕ ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಚಳವಳಿಗಳ ಸಂಕ್ಷಿಪ್ತ ಪರಿಚಯವನ್ನು ಕೊಟ್ಟು ಆಬಳಿಕ ಮೇಲೆ ವಿವರಿಸಿದ 'ವಿಶಾಲಕರ್ನಾಟಕ' ದಲ್ಲಿಯ ಪ್ರಮುಖ ವ್ಯಕ್ತಿಗಳ ಅಂದರೆ ಬೇರೆ ಬೇರೆ ವಿಧಿಮಂಡಳಗಳ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳ ಹಾಗೂ ಉಳಿದ ಸಾರ್ವಜನಿಕ ಸಂಸ್ಥೆಗಳ ಸಭಾಸದರೂ ಕೋಆಪರೇಟಿವ್ಹ ಬ್ಯಾಂಕುಗಳ ವಿಮಾಕಂಪನಿಗಳ ಹಾಗೂ ಬೇರೆ ಲಿಮಿಟೆಡ್ ಕಂಪನಿಗಳ ಡಾಯರೆಕ್ಟರರೂ ಪ್ರಸಿದ್ಧ ವಕೀಲರು ಡಾಕ್ಟರರು ಪ್ರೊಫೆಸರರು ನಟರು ಹಾಗು ಕಲಾಕೋವಿದರು ಪತ್ರಪಂಡಿತರು ಲೇಖಕರು ಹಾಗು ಮುದ್ರಕರು ವರ್ತಕರು ಹಾಗು ಏಜೆಂಟರು ಈ ಪ್ರಕಾರ ಕರ್ನಾಟಕದಲ್ಲಿಯ ಹಾಗೂ ಕರ್ನಾಟಕದಿಂದ ವ್ಯವಸಾಯಕ್ಕಾಗಿ ಹೊರಗಿನ ಪ್ರಾಂತಗಳಲ್ಲಿ ಹೋಗಿ ವಾಸಿಸಿರುವ ಪ್ರಮುಖ ಸ್ತ್ರೀಪುರುಷ ಕನ್ನಡಿಗರ ಸಂಕ್ಷಿಪ್ತ ಪರಿಚಯವನ್ನು ಎಲ್ಲರಿಗೂ ಮಾಡಿಕೊಡುವ ಉದ್ದೇಶದಿಂದ ನಾವು ಒಂದು ಕರ್ನಾಟಕ ಪರಿಚಯ ಗ್ರಂಥ (Karnatak who's who) ಎಂಬ ಒಂದು ಸಚಿತ್ರ ಗ್ರಂಥದ ಪ್ರಸಿದ್ಧೀಕರಣದ ಕಾರ್ಯವನ್ನು ಕೈಕೊಂಡಿದ್ದು, ಈ ಕಾರ್ಯದಲ್ಲಿ ಎಲ್ಲ ಕನ್ನಡಿಗರು ನಮಗೆ ಉದಾರ ಮನಸಿನಿಂದ ಸಹಾಯವನ್ನೀಯುವರೆಂದು ನಂಬಿದ್ದೇವೆ.

ಕ್ರೌನ ೧|೮ ಆಕಾರದ ಸುಮಾರು ೪೦೦ ಪುಟಗಳ ಈ ಗ್ರಂಥದಲ್ಲಿ ವಿಶಾಲಕರ್ನಾಟಕದ ಒಂದು ನಕ್ಷೆಯನ್ನು ಮತ್ತು ಕರ್ನಾಟಕದಲ್ಲಿಯ ಪ್ರಮುಖ ಪಟ್ಟಣಗಳ ಸಂಘ ಸಂಸ್ಥೆಗಳ ಉದ್ಯಮಾಲಯಗಳ ಹಾಗೂ ಪ್ರಮುಖ ವ್ಯಕ್ತಿಗಳ ಪಡಿಯಚ್ಚುಗಳನ್ನಾದರೂ ನಾವು ಮುದ್ರಿಸತಕ್ಕವರಿದ್ದೇವೆ. ಈ ಗ್ರಂಥಕ್ಕಾಗಿ ನಾವು ಉತ್ತಮ ತರಗತಿಯ ಹೊಳಪಿನ ಕಾಗದವನ್ನು ಉಪಯೋಗಿಸತಕ್ಕವರಿದ್ದು ಶಕ್ಯವಿದ್ದ ರೀತಿಯಿಂದ ಅದನ್ನು ಆಕರ್ಷಕವಾಗಿಯೂ ಅಂದವಾಗಿಯೂ ಸಿದ್ಧಪಡಿಸಿದ ಈ ಉಪಯುಕ್ತ ಗ್ರಂಥವು ಶಾಶ್ವತವಾಗಿ ಉಳಿಯಬೇಕೆಂದು ಅದಕ್ಕೆ ಕ್ಯಾಲಿಕೊ ಬಾಯಿಂಡಿಂಗ ಮಾಡಿಸತಕ್ಕವರಿದ್ದೇವೆ. ಇಷ್ಟಿದ್ದರೂ ಇಂಥ ಸಚಿತ್ರ ಅಮೌಲ್ಯವಾದ ಈ ಗ್ರಂಥದ ಬೆಲೆಯು ಮಾತ್ರ ಕೇವಲ ಮೂರೇ ರೂಪಾಯಿ ಇರುವದು.

ಆದರೆ ತಾ|| ೧ ನೇ ಜನವರಿ ೧೯೩೮ ರೊಳಗಾಗಿ ಮುಂಗಡ ಹಣವನ್ನು ಕಳುಹಿಸುವವರಿಗೆ ಈ ಗ್ರಂಥವು ಕೇವಲ ೨-೮-೦ ರೂ, ಗಳಿಗೆ ಕೊಡಲಾಗುವುದು.

ಈ ಗ್ರಂಥವು ಕನಿಷ್ಟ ೬೦ ಸಾವಿರ ವಾಚಕರಿಂದ ಓದಲ್ಪಡಬಹುದಾದ್ದರಿಂದ ಎಲ್ಲ ಪ್ರಮುಖ ಸ್ತ್ರೀಪುರುಷರು ಈ ಗ್ರಂಥದಲ್ಲಿ ತಮ್ಮ ಪರಿಚಯವನ್ನು ಪ್ರಸಿದ್ಧಿಸುವ ಸುಸಂಧಿಯನ್ನು ಕಳಕೊಳ್ಳಲಿಕ್ಕಿಲ್ಲವೆಂದು ನಂಬಿದ್ದೇವೆ.

ಈ ಯೋಜನೆಯ ಲಾಭವನ್ನು ಪಡೆಯಲಿಚ್ಛಿಸುವವರು ವಿಶೇಷ ವಿವರಗಳಿಗಾಗಿ ಕೆಳಗಿನ ವಿಳಾಸಕ್ಕೆ ಬರೆಯಬೇಕು.

ಶಂ. ವಾ. ಜಕಾರ

ಕರ್ನಾಟಕ ಪಬ್ಲಿಸಿಟಿ ಸರ್ವ್ಹೀಸ

ಗಾಂಧಿ-ಚೌಕ ಧಾರವಾಡ.

---

—ಬರುವ ಅಕ್ಟೋಬರ್ ತಿಂಗಳಿಂದ ಮದ್ರಾಸ್ ಪ್ರಾಂತದ ಸೇಲಂ ಜಿಲ್ಲೆಯಲ್ಲಿ ಮದ್ಯಪಾನವು ನಿಲ್ಲಿಸಲ್ಪಡುವುದು. ಆದರಿಂದ ೧೩ ಲಕ್ಷ ರೂ. ಗಳ ಆದಾಯ ಕಡಿಮೆಯಾಗುವುದು.

## ಜಪಾನಿನ ಕಣ್ಣು ಹಿಂದುಸ್ಥಾನದಮೇಲೆ!

ಎಲ್ಲ ರಾಷ್ಟ್ರಗಳೂ ಬಾಯಿಂದ ಶಸ್ತ್ರ ಸನ್ಯಾಸದ ಮಾತನ್ನು ಹೇಳುತ್ತಿದ್ದರೂ ಕೈಯಿಂದ ಸೈನ್ಯಶಾಖೆಗೆ ಕೋಟಿಗಟ್ಟಲೆ ಹಣವನ್ನು ಸೂರೆಮಾಡಿ ಯುದ್ಧೋಪಕರಣಗಳನ್ನು ಹೆಚ್ಚಿಸುತ್ತಲೇ ಇವೆ. ಮತ್ತು ಸಾಮ್ರಾಜ್ಯ ಪದ್ಧತಿಯನ್ನು ನಿಷೇಧಿಸುವ ವೇದಾಂತ ಪ್ರವಚನಗಳು ನಡೆಯುತ್ತಿದ್ದರೂ ನೆರೆಯ ರಾಷ್ಟ್ರಗಳನ್ನು ಆಕ್ರಮಿಸಿಕೊಳ್ಳುವ ಕಾರ್ಯಗಳೂ ಸಾಗಿವೆ. ಅಂತೆಯೇ ಪ್ರಪಂಚದಲ್ಲಿ ಈಗಲೂ ಭಯ ವಿಶಿಷ್ಟ ಶಾಂತತೆಯಿದೆಯೇ ವಿನಾ ನಿರ್ಭಯದ ಶಾಂತಿಯಿಲ್ಲ.

ಜಪಾನವು ಯುರೋಪದ ರಾಜಕಾರಣವನ್ನೇ ಅನುಸರಿಸಿ ಏಶಿಯಾ ಖಂಡದಲ್ಲಿ ತನ್ನ ಸ್ವಾಮಿತ್ವವನ್ನು ಸ್ಥಾಪಿಸಲು ಪ್ರಯತ್ನಿಸುತ್ತಲಿದೆ. ಚೀನ ದೇಶವನ್ನು ಅಷ್ಟಷ್ಟೇ ನುಂಗಿ ಬಲಗೊಳ್ಳುವುದೇಕೆ? ಹಿಂದುಸ್ಥಾನದ ಮೇಲೆ ಅದರ ಕಣ್ಣು. ವ್ಯಾಪಾರ ದೃಷ್ಟಿಯಿಂದಲಂತೂ ಅದು ಹಿಂದುಸ್ಥಾನದ ಮೇಲೆ ಎಷ್ಟೋ ತನ್ನ ವರ್ಚಸ್ಸನ್ನು ಈಗ ಸ್ಥಾಪಿಸಿವೆ,

ಜಪಾನಿನ ಹಿಂದಿನ ಮುಖ್ಯ ಮಂತ್ರಿಗಳು ಒಂದು ಯೋಜನೆಯನ್ನು ಸಿದ್ಧಗೊಳಿಸಿಟ್ಟಿದ್ದಾರೆಂತಲೂ ಅದರಲ್ಲಿ ಮಂಚೂರಿಯಾ ಪ್ರದೇಶವನ್ನು ನುಂಗಿ ಆಮೇಲೆ ಹಿಂದುಸ್ಥಾನದ ಮೇಲೂ ದಾಳಿ ಇಡಬೇಕೆಂದು ಗೊತ್ತಾಗಿದೆಯೆಂತಲೂ ಚೀನ್ ದೇಶದ ಈಗಿನ ಅಧ್ಯಕ್ಷರು ಬ್ರಿಟಿಶ್ ಸರಕಾರದ ಲಕ್ಷಕ್ಕೆ ತಂದುಕೊಟ್ಟಿದ್ದಾರೆ. ಈಗ ಜಪಾನ ರಾಷ್ಟ್ರವು ಚೀನ ದೇಶವನ್ನು ಆಕ್ರಮಿಸಿಕೊಳ್ಳುತ್ತಿರುವುದು ಹಿಂದುಸ್ಥಾನಕ್ಕೂ ಒಂದು ಭಯ ಸೂಚಕ ಲಕ್ಷಣವೇ ಸರಿ. ಆದುದರಿಂದ ಈ ವಿಷಯದಲ್ಲಿ ಹಿಂದುಸ್ಥಾನವು ಉಪೇಕ್ಷಿಸಕೂಡದು.

ಹಿಂದಿನ ಮಹಾಯುದ್ಧದಲ್ಲಿ ಹಿಂದುಸ್ಥಾನದ ಶಾಂತತೆಯನ್ನು ರಕ್ಷಿಸುವುದು ಜಪಾನಿನಕಡೆಗೂ ಇದ್ದಿತು. ಇನ್ನುಮುಂದಿನ ಮಹಾಯುದ್ಧದಲ್ಲಿಯೂ ಅಂತಹ ಅವಕಾಶವನ್ನು ಅದಕ್ಕೆ ಕೊಡಬಹುದೆ? ಹಿಂದುಸ್ಥಾನವು ಯಾವಾಗಲೂ ಪರರ ಕೈ ಕೂಸಾಗಿಯೇ ಪ್ರಪಂಚದಲ್ಲಿ ಬಾಳಬೇಕೆ? ಅದಕ್ಕೇನೂ ಸ್ವಸಂರಕ್ಷಣೆಯ ಸಾಮರ್ಥ್ಯ ಬರಲೇಬಾರದೆ? ಇವೆಲ್ಲಾ ಈಗ ಹಿಂದುಸ್ಥಾನದ ಮುಂದಿರುವ ಮಹತ್ವದ ಪ್ರಶ್ನೆಗಳೇ ಆಗಿವೆ.

ಹಿಂದುಸ್ಥಾನದಲ್ಲಿರುವ ಬ್ರಿಟಿಶ್ ಸೈನ್ಯ ಕಡಿಮೆಯಾಗಿ ಹಿಂದಿ ಸೈನ್ಯವು ಹೆಚ್ಚಬೇಕು. ಇದರಿಂದ ಸೈನ್ಯ ಶಾಖೆಯ ವೆಚ್ಚವು ಕಡಿಮೆಯಾಗಿ ಆ ಹಣವು ರಾಷ್ಟ್ರದ ಶೈಕ್ಷಣಿಕ ಮತ್ತು ಆರ್ಥಿಕ ಅಭಿವೃದ್ಧಿಯ ಕಾರ್ಯಗಳಿಗೆ ವಿನಿಯೋಗಿಸಲ್ಪಡಲು ಅನುಕೂಲವಾಗುತ್ತದೆ. ಮತ್ತು ಹಿಂದಿ ಸೈನ್ಯವು ಹೆಚ್ಚಿ ಹಿಂದುಸ್ಥಾನಕ್ಕೆ ಸ್ವಸಂರಕ್ಷಣೆಯ ಶಕ್ತಿಯೂ ಬರುತ್ತದೆ. ಈ ವಿಷಯದಲ್ಲಿ ಬ್ರಿಟಿಶ್ ಸರಕಾರವು ಉಪೇಕ್ಷಿಸಕೂಡದೆಂದೂ ಹಾಗೆ ಮಾಡಿದರೆ ಅದಕ್ಕೂ ಕೇಡೇ ಸರಿಯೆಂದೂ ಅನೇಕರ ಅಭಿಪ್ರಾಯ.

ಹಿಂದುಸ್ಥಾನದವರ ಮೇಲೆ ಈಗ ದಿನೆ ದಿನೆ ರಾಜ್ಯಭಾರದ ಹೊಣೆಗಾರಿಕೆ ಹೆಚ್ಚುತ್ತಿತ್ತ ಇದೆ. ಆದಕಾರಣ ಯುದ್ಧ ವಿದ್ಯೆಯ ಪ್ರಸಾರವಾಗುವುದೂ ಅತ್ಯಗತ್ಯವು. ಈ ದೃಷ್ಟಿಯಿಂದ ನೋಡಿದರೆ ಡಾ. ಮುಂಜೆಯವರ ಯುದ್ಧ ವಿದ್ಯಾಲಯವು ಎಷ್ಟೋ ಮಹತ್ವದ್ದೆಂಬುದೂ ಬ್ಯಾ. ಸಾವರಕರರು ತರುಣರ ಕೈಯಲ್ಲಿ ಪುಸ್ತಕವಿರುವಂತೆ ಹುಸಿ ಗುಂಡಿನ (ಗಾಳಿ) ಬಂದೂಕಾದರೂ ಬರಲೆಂದು ಹೇಳುವ ಮಾತಿನಲ್ಲಿ ಯಾವ ಮಹತ್ವದ ಅಭಿಪ್ರಾಯ ಅಡಗಿದೆಯೆಂಬುದೂ ಗೊತ್ತಾಗುವುದಿಲ್ಲವೆ?

## ಮುಂಬೈ ಅಸೆಂಬ್ಲಿಯ ಕಾರ್ಯಕಲಾಪ.

ಮುಂಬೈ ಪ್ರಾಂತಿಕ ಅಸೆಂಬ್ಲಿಯ ಈ ವಾರದ ಕಾರ್ಯಕಲಾಪಗಳಲ್ಲಿ ಉದ್ಯೋಗಾಭಿವೃದ್ಧಿ ಮತ್ತು ವೈದ್ಯಶಾಖೆಗಳ ಸಂಬಂಧವಾದ ಚರ್ಚೆಗಳು ಬಹು ಮುಖ್ಯವಾಗಿದ್ದವು. ಕಾಂಗ್ರೆಸ್ ಪಕ್ಷದ ಕೈಯಲ್ಲಿ ಅಧಿಕಾರ ಬಂದುದರಿಂದ ಇಂಥ ಅತೃಪ್ತಿಕರವಾದ ರಾಜ್ಯಘಟನೆಯಲ್ಲಿಯು ಕೂಡಾ ಎಷ್ಟರ ಮಟ್ಟಿಗೆ ಹಿತಮಾಡುವುದು ಶಕ್ಯವಿದೆಯೆಂಬುದು ತೋರಿತು. ವಿರೋಧ ಪಕ್ಷದವರು ಕಡಿತದ ಸೂಚನೆಗಳನ್ನು ತಂದು ಕಾಂಗ್ರೆಸ್ ಪಕ್ಷದ ಕಾರ್ಯದಕ್ಷತೆಯನ್ನು ಪ್ರಕಾಶಗೊಳಿಸುತ್ತಿದ್ದಾರೆ.

### ಸರಕಾರದ ಯೋಜನೆ.

ಉದ್ಯೋಗಶಾಖಾ ಮಂತ್ರಿಗಳಾದ ಶ್ರೀ. ಲಕ್ಷ್ಮಣರಾವ ಪಾಟೀಲ ಇವರು ಉದ್ಯೋಗಾಭಿವೃದ್ಧಿಗಾಗಿ ಗೊತ್ತಾದ ಸರಕಾರದ ಯೋಜನೆಯನ್ನು ಈ ಪ್ರಕಾರ ತಿಳಿಸಿದರು—

"ಗ್ರಾಮೋದ್ಯೋಗಗಳಿಗಾಗಿ ೧|| ಲಕ್ಷ ರೂ. ವೆಚ್ಚವಾಗುವದಿದೆ. ಇದರಲ್ಲಿ ಅಧಿಕಾರಿಗಳ ವೇತನ ಭತ್ತೆಗಳಿಗೆ ೩೫೧೦೦ ರೂ. ವೆಚ್ಚವಾಗುವವು. ಕೈಮಗ್ಗಗಳ ಉತ್ತೇಜನಕ್ಕೆ ೪೫ ಸಾವಿರ ರೂ. ಮನೆ ಕಸಬುಗಳಿಗಾಗಿ ೧೯೬೦೦ ರೂ. ವೆಚ್ಚವಾಗತಕ್ಕವುಗಳಿವೆ. ಅಂತೂ ೨೪೯೦೦೦ ರೂ. ಗಳು ಉದ್ಯೋಗಾಭಿವೃದ್ಧಿಗೆ ಬೇಕಾಗಿವೆ."

### ಖಾದಿಯ ಮಹತ್ವ.

ಬ್ಯಾ. ಜಮನಾದಾಸರು ಉದ್ಯೋಗಾಭಿವೃದ್ಧಿಯ ಸಂಬಂಧವಾಗಿ ನಡೆದ ಚರ್ಚೆಯಕಾಲಕ್ಕೆ ಮಾಡಿದ ಭಾಷಣದಲ್ಲಿ ಹೀಗೆ ಹೇಳಿದರು—

"ಹಿಂದುಸ್ಥಾನದಲ್ಲಿ ನಿರುದ್ಯೋಗಿಗಳು ಸಾಧಾರಣ ೪ ಕೋಟಿ ಜನರಿದ್ದಾರೆ. ಇವರಲ್ಲಿ ಸಾಧುಗಳು ೬೦ ಲಕ್ಷ! ಇಂಗ್ಲಿಷ್ ಸರಕಾರದ ರಾಜ್ಯಪದ್ಧತಿಯ ದೋಷದಿಂದಲೇ ಈ ದೇಶದಲ್ಲಿ ಈ ಭೀಕರವಾದ ನಿರುದ್ಯೋಗವು ಹೆಚ್ಚಿದೆ. ದೊಡ್ಡ ದೊಡ್ಡ ಕಾರ್ಯಾಲಯಗಳಾಗದೆ ಈಗಿನ ನಿರುದ್ಯೋಗವು ನಿವಾರಣೆಯಾಗುವುದಿಲ್ಲ. ಖಾದಿಯಿಂದ ಸ್ವರಾಜ್ಯ ದೊರೆಯುತ್ತದೆಂದು ನನಗೆ ತೋರುವುದಿಲ್ಲ. ಆದರಿಂದ ಈ ನಿರುದ್ಯೋಗವು ನಿವಾರಣೆಯಾಗುವುದಿಲ್ಲ.

ಈಗ ಖಾದಿ ಉದ್ಯೋಗದಿಂದ ಹಿಂದುಸ್ಥಾನದಲ್ಲೆಲ್ಲಾ ೩೦ ಸಾವಿರ ಜನರು ಮಾತ್ರ ಹೊಟ್ಟೆತುಂಬಿಸಿಕೊಳ್ಳುತ್ತಿದ್ದಾರೆ. ಖಾದಿಯು ರಾಜಕೀಯ ದೃಷ್ಟಿಯಿಂದ ಅಗತ್ಯವಾದುದು. ಇದು ಕಾಂಗ್ರೆಸ್ ಪಕ್ಷದವರಲ್ಲಿಯ ಭೇದಭಾವವನ್ನು ಕಳೆಯುತ್ತದೆ. ಹಿಂದು ಮುಸಲ್ಮಾನರಲ್ಲಿಯ ಭೇದವನ್ನು ಕಳೆಯಲು ಗಾಂಧಿ ಟೊಪ್ಪಿಗೆ ಬಹು ಸಹಾಯಮಾಡುತ್ತದೆ."

### ಚತುರ್ವರ್ಣಗಳ ಭೂತ!

ಬೆಳಗಾವ ಜಿಲ್ಲೆಯಿಂದ ಆರಿಸಿಬಂದ ಡಾ. ಆಂಬೇಡಕರರ ಸ್ವತಂತ್ರ ಕೂಲಿಕಾರರ ಪಕ್ಷದ ಶ್ರೀ. ವರಾಳೆಯವರು ಮರಾಠಿಯಲ್ಲಿ ಭಾಷಣಮಾಡಿ ಹೀಗೆ ತಿಳಿಸಿದರು—

"ಚತುರ್ವರ್ಣಗಳ ಭೂತವು ಯಾವ ಸಮಾಜದ ತಲೆಯ ಮೇಲೆ ಕೂತಿದೆಯೋ ಆ ಸಮಾಜದಲ್ಲಿರುವ ಅಸ್ಪೃಶ್ಯರಿಗೆ. ಹಳ್ಳಿಯಲ್ಲಿ ಉದ್ಯೋಗವೇ ಇಲ್ಲ. ದನಗಳನ್ನು ಜೋಕೆಮಾಡಿ ಹಾಲು ಬೆಣ್ಣೆಗಳನ್ನು ಮಾರಿ ಅವರು ಜೀವಿಸುವಂತಿಲ್ಲ. ಮನೆ ಕೆಲಸಗಳಿಗೆ ಅವರನ್ನು ಇಟ್ಟುಕೊಳ್ಳುವುದಿಲ್ಲ. ಆ ಜನರ ನಿರುದ್ಯೋಗ ಸ್ಥಿತಿಯನ್ನು ನಿವಾರಣೆ ಮಾಡಲು ಸರಕಾರವು ಹೆಚ್ಚು ಲಕ್ಷಿಸಬೇಕು."

ಶರಣ ಸಂದೇಶ

[illegible]

ಗಾಂಧಿ

ಶಾ. ಶ. ೧೮೫೯ ನೆಯ ಭಾದ್ರಪದ ಶು|| ೨ ಸೋಮವಾರ.

# ಕಾಂಗ್ರೆಸ್ಸಿನ ಮಾದರಿ ಸರಕಾರ.

ಕಾಂಗ್ರೆಸ್ಸಿನ ಅಧಿಕಾರಕ್ಕೆ ಒಳಪಡದಿರುವ ಬಂಗಾಲ ಪಂಜಾಬ ಮೊದಲಾದ ಐದು ಪ್ರಾಂತಗಳಿಗೆ ಕಾಂಗ್ರೆಸ್ ಸರಕಾರವು ಮಾದರಿ ಸರಕಾರವಾಗಿರುವಂತೆ ಕಾಂಗ್ರೆಸ್ ಅಧಿಕಾರಕ್ಕೆ ಒಳಪಟ್ಟ ಆರು ಪ್ರಾಂತಗಳಿಗೆ ಮದ್ರಾಸ್ ಸರಕಾರವು ಮಾದರಿ ಸರಕಾರವಾಗಿದೆ. ಅದು ಅಧಿಕಾರವನ್ನು ಸ್ವೀಕರಿಸಿದ ಮಂಗಲಕರವಾದ ರೀತಿ, ಅದು ಮದ್ಯಪಾನ ಪ್ರತಿಬಂಧಕ್ಕೋಸ್ಕರ ಮುಂದೆ ಬಂದ ಸಾಹಸ, ಅಲ್ಲಿಯ ಉಭಯ ಶಾಸನ ಮಂಡಲಗಳ ಸಂಯುಕ್ತ ಅಧಿವೇಶನದ ಕಾಲಕ್ಕೆ ಗವ್ಹರ್ನರರು ತಮ್ಮ ಭಾಷಣದಲ್ಲಿ ವ್ಯಕ್ತಗೊಳಿಸಿದ ಸಹಾನುಭೂತಿ, ಇವೆಲ್ಲವೂ ಅನ್ಯ ಪ್ರಾಂತಗಳಿಗೆ ಮಾದರಿಯಾಗಿಲ್ಲವೆ ?

ಕಳೆದ ೧ ನೆಯ ತಾರೀಖಿನ ದಿವಸ ಮದ್ರಾಸ ಸರಕಾರದ ಮುಖ್ಯ ಮಂತ್ರಿಗಳಾದ ಶ್ರೀ. ರಾಜಗೋಪಾಲಾಚಾರ್ಯರು ೧೯೩೭-೩೮ ನೆಯ ವರುಷದ ಆಯವ್ಯಯ ಪತ್ರಿಕೆಯನ್ನು ಅಸೆಂಬ್ಲಿಯ ಮುಂದಿಟ್ಟರು. ಅದರಲ್ಲ ಈ ಸಂಗತಿಗಳಿವೆ—

ವಾರ್ಷಿಕ ಆದಾಯ ೧೫ ಕೋಟಿ ೯೩ ಲಕ್ಷ ೭೩ ಸಾವಿರ ರೂ. ವೆಚ್ಚ ೧೫ ಕೋಟಿ ೯೩ ಲಕ್ಷ ೬೭ ಸಾವಿರ ರೂ. ೬ ಸಾವಿರ ರೂ. ಮಾತ್ರ ಉಳಿತಾಯ. ಜೈಲಿನಲ್ಲಿರುವ ಕೈದಿಗಳಿಗೆಲ್ಲಾ ಮಜ್ಜಿಗೆಯನ್ನು ಕೊಡಲಿಕ್ಕಾಗಿ ೭೫ ಸಾವಿರ ರೂ. ಗಳನ್ನೂ ನೂಲು ತೆಗೆಯುವುದಕ್ಕಾಗಿ ೨ ಲಕ್ಷ ರೂ. ಗಳನ್ನೂ ಕೊಡಲು ಈ ಪತ್ರಿಕೆಯಲ್ಲಿ ಸೂಚಿಸಿರುವುದು ಅಭಿನಂದನೀಯವಾದುದಲ್ಲವೆ ? ಒಕ್ಕಲಿಗರ ಸಾಲ ತೀರಿಸಲಿಕ್ಕೆ ೩೦ ಲಕ್ಷ, ಅವರ ಕಂದಾಯಸಂಹಾರಕ್ಕೆ ೭೫ ಲಕ್ಷ ರೂ. ಗಳನ್ನು ವಿನಿಯೋಗಿಸುವುದು ಸ್ತುತ್ಯವಾಗಿಲ್ಲವೆ?

ಈಗಿನ ರಾಜ್ಯಘಟನೆಯು ಈ ಅಸೆಂಬ್ಲಿಗೆ ಮಾನ್ಯವಿಲ್ಲವೆಂತಲೂ ಇದನ್ನು ಆದಷ್ಟು ಜಾಗ್ರತೆ ತೆಗೆದುಹಾಕಿ ಹಿಂದುಸ್ಥಾನದ ಜನರು ಅಪೇಕ್ಷಿಸುವಂತಹ ರಾಜ್ಯ ಪದ್ಧತಿಯನ್ನು ಉಂಟುಮಾಡಬೇಕೆಂತಲೂ ಈ ಅಸೆಂಬ್ಲಿಯ ಅಭಿಪ್ರಾಯವಿದೆಯೆಂದು ಮುಖ್ಯ ಮಂತ್ರಿಗಳು ಒಂದು ಗೊತ್ತುವಳಿಯನ್ನು ತಂದರು. ಅದು ಒಪ್ಪಿಗೆಯೂ ಆಯಿತು. ಬೇರೆ ಪ್ರಾಂತಗಳ ಅಸೆಂಬ್ಲಿಗಳಲ್ಲಿಯೂ ಈ ಮಹತ್ವದ ಗೊತ್ತುವಳಿಯಾಗುವುದು ಅಗತ್ಯವಾಗಿಲ್ಲವೆ ?

---

# ಶ್ರೀ. ಬಾಳೆಹಳ್ಳಿ ಸ್ವಾಮಿಗಳ ತಪ್ಪುದಾರಿ.

ವೀರಶೈವ ಸಮಾಜದ ಒಂದು ಪೂಜ್ಯ ಗುರುಪೀಠದಲ್ಲಿರುವ ಈಗಿನ ಶ್ರೀ. ಬಾಳೆಹಳ್ಳಿ ಸ್ವಾಮಿಗಳವರು ವೀರಶೈವ ತತ್ವಕ್ಕೆ ವಿರೋಧವಾದ ಚತುರ್ವರ್ಣಗಳನ್ನು ವೀರಶೈವರಲ್ಲಿ ಕಲ್ಪಿಸಿ, ಜನ್ಮವಿಶಿಷ್ಟ ಜಾತಿಗಳನ್ನು ಹೇಳುತ್ತ ಸಮಾಜದಲ್ಲಿ ಮೇಲುಕೀಳಿನ ವಿಷಬೀಜವನ್ನು ಬಿತ್ತುತ್ತಿದ್ದಾರಷ್ಟೆ. ಈಗ ಇವರು ವೀರಶೈವರ ಪೂಜಾಪದ್ಧತಿಯಲ್ಲಿಯೂ ವ್ಯತ್ಯಾಸ ಮಾಡಿ ಬೇರೆ ಬೇರೆ ದೇವರನ್ನು ಪೂಜೆ ಮಾಡಲು ಹಚ್ಚಿದ್ದಾರೆ!

ಶ್ರಾವಣ ಮಾಸದಲ್ಲಿ ಶ್ರೀಗಳವರು ಶಿವಮೊಗ್ಗಾದಲ್ಲಿ ನಡೆಯಿಸಿದ ಪೂಜಾ ಪದ್ಧತಿಯು "ಕರ್ನಾಟಕ ಬಂಧು" ವಾರ ಪತ್ರಿಕೆಯಲ್ಲಿಯೂ ಬೇರೆ ಕರ ಪತ್ರಗಳಲ್ಲಿಯೂ ಪ್ರಕಟವಾಗಿದೆ. ಅದರಲ್ಲಿ ಈ ಕೆಳಗಿನ ಸಂಗತಿಗಳಿವೆ—

"ಭದ್ರಕಾಳಿದೇವಿಗೆ ಅಭಿಷೇಕ, ಕುಂಕುಮಾರ್ಚನೆ, ರುದ್ರಶ್ಯಾಂತ್ಯರ್ಥ ಹವನ ಹೋಮಗಳು ನಡೆಯುವವು. ಶ್ರೀಭದ್ರಕಾಳಿ ಸಹಸ್ರನಾಮ ಕುಂಕುಮಾರ್ಚನೆಗೆ ೩ ರೂ. ಶ್ರೀಭದ್ರಕಾಳಿ ತ್ರಿಶತಿ ಕುಂಕುಮಾರ್ಚನೆಗೆ ೨ ರೂ. ಶ್ರೀಭದ್ರಕಾಳಿ ಅಷ್ಟೋತ್ತರ ಶತ ಕುಂಕುಮಾರ್ಚನೆಗೆ ೧ ರೂ."

ಈಗಿನ ಶ್ರೀಗಳು ಮೈಸೂರಿಗೆ ಹೋದಾಗ ವೀರೇಶನ ಪೂಜೆಯೊಂದನ್ನು ಪ್ರಾರಂಭಿಸಿದರು. ಈಗ ಶಿವಮೊಗ್ಗಾದಲ್ಲಿ ಭದ್ರಕಾಳಿ ಪೂಜೆಯನ್ನು ರೂಪಾಯಿಗಳ ಮೇಲಿಂದ ತರಗತಿ ಗೊತ್ತುಮಾಡಿ ಪ್ರಾರಂಭಮಾಡಿದರು. ಇನ್ನುಮೇಲೆ ಮತ್ತೆ ಯಾವ ಯಾವ ದೇವರ ಪೂಜೆಯನ್ನು ವೀರಶೈವರು ಮಾಡುವಂತೆ ಮಾಡುತ್ತಾರೊ!

ಇಷ್ಟಲಿಂಗದ ವಿನಾ ಬೇರೆ ದೇವರ ಪೂಜೆ ವೀರಶೈವರಿಗೆ ನಿಷಿದ್ಧವಾದುದೆಂಬುದು ಸರ್ವಶ್ರುತ ಸಂಗತಿ. "ಇಷ್ಟಲಿಂಗವಿದ್ದಂತೆ ಸ್ಥಾವರ ಲಿಂಗಕ್ಕೆ ಶರಣೆಂದರೆ ತಡೆಯದೆ ಹುಟ್ಟಿಸುವ ಶ್ವಾನನ ಗರ್ಭದಲ್ಲಿ" ಎಂದು ಅಕ್ಕಮಹದೇವಿಯು ಲಿಂಗಾಂಗಿಗಳ ಪೂಜೆಯ ಸಿದ್ಧಾಂತವನ್ನು ಸ್ಪಷ್ಟವಾಗಿ ತಿಳಿಸಿದ್ದಾಳೆ. ಸ್ಥಾವರ ಲಿಂಗ ಪೂಜೆಯೇ ನಿಷಿದ್ಧವಾದಮೇಲೆ ವೀರೇಶ, ಭದ್ರಕಾಳಿ, ದೇವರ ಪೂಜೆಯ ಮಾತೇಕೆ ? ಈ ಭದ್ರಕಾಳಿ ಪೂಜೆಯು ಹೆಣ್ಣುಮಕ್ಕಳ ಅಂಧಭಕ್ತಿಯನ್ನು ಮತ್ತಿಷ್ಟು ಹೆಚ್ಚಿಸಿ ಲಿಂಗನಿಷ್ಠೆಯನ್ನು ಕಡಿಮೆ ಮಾಡಿ ತಪ್ಪು ದಾರಿಗೆ ತಿರುಗಿಸಬಹುದಲ್ಲವೆ ? ಈ ರೀತಿಯು ವೀರಶೈವ ತತ್ವಕ್ಕೂ ಘಾತಕವಾದುದಲ್ಲವೆ ?

ಬೆಂಗಳೂರಿನ ಶ್ರೀ ವೀರೇಶ್ವರ ಎಂಬ ಲೇಖಕರು ಬಸವರಾಜ ಪತ್ರಿಕೆಯಲ್ಲಿ ಶ್ರೀಗಳ ಈ ಹೊಸ ರೀತಿಯನ್ನು ಸಮರ್ಪಕವಾಗಿ ಖಂಡಿಸಿದ್ದಾರೆ. ಇದನ್ನು ನೋಡಿ ಉಮರಾವತಿಯ ವೀರಶೈವ ಸಂಜೀವನಿ ಸಂಪಾದಕರು ತಾ. ೧-೯-೩೭ ನೆಯ ಸಂಚಿಕೆಯಲ್ಲಿ ಈ ಕೆಳಗಿನಂತೆ ಶ್ರೀಗಳಿಗೆ ತಿಳಿಸಿದ್ದಾರೆ—

"ಕಾಲೀ ಮಾತಾಕೀ ಜಯ!

ಶ್ರೀ ವೀರೇಶ್ವರರು ಬರೆದದ್ದು ನಿಜವಿದ್ದಿದ್ದರೆ ಕಾಲಿಭಕ್ತ ಕಾಲಭೈರವೇಶ್ವರ ಸ್ವಾಮಿಗಳಿಗೆ ನಮ್ಮ ಸೂಚನೆಯೇನಂದರೆ— ಅವರು ತಮ್ಮ ಶಾಕ್ತಪಂಥದ ಶಾಖೆಗಳನ್ನು ಊರು ಊರಿಗೆ ಸ್ಥಾಪಿಸಬೇಕು. ಹಾಗಾದರೆ ಇವರು ವೀರಶೈವರಲ್ಲಿಯ ನವಮತಪಾಡಿಗಳ ಜಗದ್ಗುರುಗಳೆಂದು ಮೆರೆಯಬಹುದು. ಏಕೆಂದರೆ, ಶಾಕ್ತ

ಪಂಥಿಯವರ ಮುಖ್ಯ ಧ್ಯೇಯವಾದ ಮದ್ಯಪಾನ ಮತ್ತು ಯಜ್ಞಯಾಗಾದಿ ಕರ್ಮ ಕಾಂಡಗಳ ಹೆಸರಿನಿಂದ ಪಶು ಬಲಿಯನ್ನು ಕೊಟ್ಟು ಪ್ರಸಾದವೆಂದು ಮಾಂಸಾಹಾರ ಮಾಡುವ ಉದ್ದೇಶಗಳು ಅನಾಯಾಸವಾಗಿಯೇ ಸಾಧಿಸುತ್ತವೆ.''

ಸಂಜೀವನಿ ಪತ್ರಿಕಾಕರ್ತರಿಗು ಕೂಡಾ ಬಾಳೆಹಳ್ಳಿ ಶ್ರೀಗಳ ಈ ಮಾರ್ಗವು ಎಷ್ಟು ನಿಷಿದ್ಧವಾದುದಾಗಿ ತೋರುತ್ತದೆಂಬುದು ಅವರ ಮೇಲಣ ಅಭಿಪ್ರಾಯದಿಂದ ಗೊತ್ತಾಗುತ್ತದೆ. ಶ್ರೀಗಳು ಇನ್ನಾದರೂ ಈ ತಮ್ಮ ತಪ್ಪುದಾರಿಯನ್ನು ಬಿಡುವರೆ? ವೀರಶೈವ ಮಠದ ನಿಜತತ್ವದಂತೆ ನಡೆಯಬೇಕೆಂಬ ಸ್ತ್ರೀ ಪುರುಷರಲ್ಲಿ ಶ್ರೀಗಳ ಈ ತಪ್ಪುದಾರಿಗೆ ಈ ಸಾರೆಯಾರಾದರೂ ಹೋಗಿದ್ದರೆ ಅದಕ್ಕಾಗಿ ಅವರು ಪಶ್ಚಾತ್ತಾಪಪಟ್ಟು ಇನ್ನುಮೇಲಾದರೂ ಈ ಸಲ್ಲದ ರೀತಿಯನ್ನು ಬಿಟ್ಟು ಇಷ್ಟಲಿಂಗ ಪೂಜೆಯಲ್ಲಿಯೇ ಆಸಕ್ತರಾಗುವರೆ?

## ಕಾಂಗ್ರೆಸ್ ಪ್ರಮುಖರಲ್ಲಿ ಭಿನ್ನಾಭಿಪ್ರಾಯ.

ಕಾಂಗ್ರೆಸ್ ಪಕ್ಷದವರ ಕಾರ್ಯಗಳ ಸಂಬಂಧವಾಗಿ ಆಗಾಗ್ಗೆ ಬೇರೆಯವರೇ ಭಿನ್ನಾಭಿಪ್ರಾಯಪಡುತ್ತಿದ್ದಾರೆಂದಲ್ಲ. ಕಾಂಗ್ರೆಸ್ ಪಕ್ಷದವರಲ್ಲಿಯೂ ಪರಸ್ಪರ ಭಿನ್ನಾಭಿಪ್ರಾಯಗಳಿರುವುದುಂಟು. ಅವುಗಳನ್ನು ಅವರು ಕಂಠೋಕ್ತವಾಗಿ ಹೇಳುತ್ತಲೂ ಇದ್ದಾರೆ. ಹಾಗಾದ ಮಾತ್ರದಲ್ಲಿ ಅವರು ಕಾಂಗ್ರೆಸ್ ವಿರೋಧಿಗಳಾಗಲಿ ಅಥವಾ ರಾಷ್ಟ್ರದ್ರೋಹಿಗಳಾಗಲಿ ಎಣಿಸಲ್ಪಡುತ್ತಾ ಇಲ್ಲ. ಚೀನ ದೇಶದ ಕಡೆಗೆ ಹಿಂದಿ ಸೈನ್ಯವನ್ನು ಕಳುಹಿಸಲು ಕಾಂಗ್ರೆಸ್ ಪಕ್ಷದ ಮಧ್ಯವರ್ತಿ ಅಸೆಂಬ್ಲಿಯ ಪ್ರಮುಖ ಸಭಾಸದರು ಒಪ್ಪಿಗೆಯನ್ನು ಕೊಟ್ಟಿದ್ದರಿಂದ ಉಂಟಾದ ವಿವಾದವನ್ನು ಕುರಿತು ಪ್ರಾಗತಿಕ ಪಕ್ಷದ ಜ್ಞಾನ ಪ್ರಕಾಶ ಪತ್ರಿಕೆಯು ತಾ. ೩೧-೮-೩೭ ರಲ್ಲಿ ಹೀಗೆ ಬರೆದಿದೆ—

“ಹಾಂಗ್ ಕಾಂಗ್ ಇದು ಬ್ರಿಟಿಶರ ಭಾಗ. ಇದನ್ನು ಸಂರಕ್ಷಿಸಬೇಕಾದುದು ಅಗತ್ಯ. ಆದರೆ ಅದನ್ನು ಹಿಂದಿ ಸೈನ್ಯವು ಸಂರಕ್ಷಿಸಬೇಕೆ? ಅದರ ವೆಚ್ಚವನ್ನು ಹಿಂದುಸ್ಥಾನ ಸರಕಾರವು ಸಹಿಸಬೇಕೆ? ಎಂಬುದೇ ಇಲ್ಲಿ ಮುಖ್ಯ ಪ್ರಶ್ನೆ. ಇದಕ್ಕೆ ಮಧ್ಯವರ್ತಿ ಅಸೆಂಬ್ಲಿಯು ಒಪ್ಪಿಗೆಯನ್ನು ಕೊಡಕೂಡದೆಂದೇ ನಮ್ಮ ಅಭಿಪ್ರಾಯ. ಆದರೆ ಕಾಂಗ್ರೆಸ್ ಪಕ್ಷದ ಮಧ್ಯವರ್ತಿ ಅಸೆಂಬ್ಲಿ ಪ್ರಮುಖ ಸಭಾಸದರಾದ ಶ್ರೀ. ಭುಲಾಭಾಯಿ ಮತ್ತು ಶ್ರೀ. ಸತ್ಯಮೂರ್ತಿಯವರು ಒಪ್ಪಿಗೆಯನ್ನು ಕೊಟ್ಟಿದ್ದಾರೆ. ತಾವು ಒಪ್ಪಿಗೆಕೊಟ್ಟುದು ಯೋಗ್ಯವೆಂದೇ ಇವರು ಪ್ರತಿಪಾದಿಸಿದ ಒಂದು ಪತ್ರಿಕೆಯಲ್ಲಿ ಕಾರಣವನ್ನು ಈ ಪ್ರಕಾರ ತಿಳಿಸಿದ್ದಾರೆ—

“ಸೈನ್ಯ ಶಾಖೆಯನ್ನೇ ಸಂಪೂರ್ಣ ಹಿಂದೀಕರಣ ಮಾಡುವುದಿದೆ. ಈ ದೃಷ್ಟಿಯಿಂದ ಕೆಲವು ಸೈನ್ಯವು ಚೀನದ ಕಡೆಗೆ ಹೋಗಿ ಅಲ್ಲಿ ತನ್ನ ಕಾರ್ಯ ಸಾಹಸಗಳನ್ನು ತೋರಿಸಿದ್ದಾದರೆ ಆಕ್ಷೇಪಕರ ಬಾಯಿ ಮುಚ್ಚಲು ಅನುಕೂಲವಾಗುವುದಿಲ್ಲವೆ?”

ಇವರ ಈ ವಿಚಾರಸರಣಿಯನ್ನು ಬಂಗಾಲದ ಕಾಂಗ್ರೆಸ್ ಪ್ರಮುಖರಾದ ಶ್ರೀ. ಶರಚ್ಚಂದ್ರ ಬೋಸರವರು ಖಂಡಿಸಿ ಈ ಪ್ರಕಾರ ತಿಳಿಸಿದ್ದಾರೆ—

“ಈಗ ಕಳಿಸಿದ ಸೈನ್ಯದಲ್ಲಿ ೪೪ ಅಧಿಕಾರಿಗಳಿದ್ದಾರೆ. ಅವರಲ್ಲಿ ೨೭ ಜನರು ಮಾತ್ರ ಹಿಂದಿಗಳು. ಅವರು ಕೂಡಾ ಕಡಿಮೆ ತರದ ಅಧಿಕಾರಿಗಳು. ಇವರ ಶೂರತ್ವದಿಂದ ಹಿಂದಿ ಜನರ ಶೌರ್ಯವನ್ನು ಒರೆಹಚ್ಚುವುದು ಯೋಗ್ಯವೂ ಅಲ್ಲ. ಹಾಂಗ್ ಕಾಂಗದ ಸಂರಕ್ಷಣೆಯ ಹೊಣೆಗಾರಿಕೆಯು ಹಿಂದುಸ್ಥಾನ ಸರಕಾರಕ್ಕಿಂತಲೂ ಬ್ರಿಟಿಶ್ ಸರಕಾರದ ಮೇಲೆಯೇ ಹೆಚ್ಚಾಗಿದೆ. ಆದುದರಿಂದ ಶ್ರೀ. ಭುಲಾಭಾಯಿ ಮತ್ತು ಶ್ರೀ. ಸತ್ಯಮೂರ್ತಿಗಳ ವರ್ತನವು ಕಾಂಗ್ರೆಸ್ಸಿನ ಯುದ್ಧ ವಿರೋಧಿ ಧೋರಣಕ್ಕೆ ತುಂಬಾ ಅಸಂಗತವಾದುದಾಗಿದೆ.”

ಶ್ರೀ. ಬೋಸರ ಈ ಖಂಡನೆಯು ನಿಷ್ಪಕ್ಷಪಾತಿಗಳಾದ ಯಾವ ಕಾಂಗ್ರೆಸ್ ಭಕ್ತರಿಗಾದರೂ ಮಾನ್ಯವಾಗದೆ ಇರಲಾರದು. ಪಂಡಿತ ಜವಾಹರಲಾಲರು ಈ ವಿಚಾರವಾಗಿ ವ್ಯಕ್ತಗೊಳಿಸಿದ ಅಭಿಪ್ರಾಯವು ಕೂಡಾ ಶ್ರೀ. ಬೋಸರ ಹೇಳಿಕೆಯನ್ನೇ ಸಮರ್ಥಿಸುವಂತಿದೆ.

ಶ್ರೀ. ಭುಲಾಭಾಯಿಯವರು ಮಾಡಿದ ಈ ತಪ್ಪನ್ನೇ ಪ್ರಾಗತಿಕ ಅಥವಾ ಲೋಕಶಾಹಿ ಸ್ವರಾಜ್ಯ ಪಕ್ಷದವರು ಮಾಡಿದ್ದರೆ ಕಾಂಗ್ರೆಸ್ ಪಕ್ಷದ ಪತ್ರಿಕೆಗಳು ಅವರ ಮೇಲೆ ಏರಿಹೋಗುತ್ತಿದ್ದವು. ಆದರೆ ಭುಲಾಭಾಯಿಯವರು ಮಾಡಿದ್ದರಿಂದ ಕಾಂಗ್ರೆಸ್ ಪಕ್ಷದ ಪತ್ರಿಕೆಗಳು ಮೂಗು ಮುಚ್ಚಿಕೊಂಡು ಸುಮ್ಮನೇ ಕುಳಿತಿವೆ.”

ಭಾಯಿಯವರ ಕೃತಿಯು ಸರಿಯೇ? ಬೋಸರ ಮಾತು ಸರಿಯೇ? ಇವುಗಳಲ್ಲಿರುವ ವ್ಯತ್ಯಾಸವನ್ನು ಬೈಲಿಗಿಡದ ಕಾಂಗ್ರೆಸ್ ಪತ್ರಿಕೆಗಳ ರೀತಿ ಸರಿಯೆ? ವಾಚಕರೇ ಅವರವರ ವಿಚಾರದ ಒರೆಗಲ್ಲಿಗೆ ಹಚ್ಚಿ ನೋಡಲಿ. ಇವುಗಳ ಸಮನ್ವಯಮಾಡುವ ಭಾಷ್ಯಕಾರರು ತಮ್ಮ ಪಾಂಡಿತ್ಯವನ್ನು ಪ್ರದರ್ಶಿಸಲಿ. ನಮಗಂತೂ ಈ ಸಂದರ್ಭದಲ್ಲಿ ಶ್ರೀ. ಭುಲಾಭಾಯಿಯವರ ಕೃತಿಯೇ ಸರಿಯೆಂದು ತೋರುತ್ತದೆ.

## ಗೋವಧೆ ನಿಲ್ಲಿಸುವ ಶಾಸನ ಬೇಡ!

ಸಂಯುಕ್ತ ಪ್ರಾಂತವು ಕಾಂಗ್ರೆಸ್ಸಿನ ಅಧಿಕಾರಕ್ಕೆ ಒಳಪಟ್ಟಿದೆಯಷ್ಟೆ. ಅಲ್ಲಿಯ ಸರಕಾರವು ಹೀಗೆ ಸಾರಿದೆಯೆಂದು ಪ್ರಕಟವಾಗಿದೆ—

“ನಮ್ಮ ಅಸೆಂಬ್ಲಿಯಲ್ಲಿ ಗೋವಧೆ ನಿಲ್ಲಿಸುವ ಗೊತ್ತುವಳಿಯು ಬರುವಂತಿಲ್ಲ. ಏಕೆಂದರೆ, ಅದರಿಂದ ಮುಸಲ್ಮಾನರ ಧಾರ್ಮಿಕ ಭಾವನೆಗೆ ನೋವುಂಟಾಗಬಹುದು.''

ಇದು ನಿಜವಾಗಿರುವ ಪಕ್ಷದಲ್ಲಿ ಸಂಯುಕ್ತ ಪ್ರಾಂತದ ಕಾಂಗ್ರೆಸ್ ರಾಜ್ಯವು ಹಿಂದಣ ಅನೇಕ ಮುಸಲ್ಮಾನ್ ರಾಜ್ಯಗಳಿಗಿಂತಲೂ ಮುಸಲ್ಮಾನರ ಧಾರ್ಮಿಕ ಭಾವನೆಯ ಸೂಕ್ಷ್ಮತ್ವವನ್ನು ಅರಿತುಕೊಂಡು ಅದನ್ನು ಸಂರಕ್ಷಿಸುವುದರಲ್ಲಿ ಹೆಚ್ಚು ದಕ್ಷತೆಯುಳ್ಳದ್ದಾಗಿದೆಯೆಂದು ಹೇಳಬೇಕಾಗುವುದು. ಏಕೆಂದರೆ, ಆಗಿನ ಮುಸಲ್ಮಾನ್ ರಾಜರು ಕೂಡಾ ಗೋ ಸಂಹಾರದಿಂದ ಹಿಂದುಗಳ ಧಾರ್ಮಿಕ ಭಾವನೆಗೆ ನೋವುಂಟಾಗುತ್ತದೆಂದೇ ಗೋ ಸಂಹಾರವನ್ನು ನಿಲ್ಲಿಸಿದ್ದರು.

ಗೋ ಸಂಹಾರದಿಂದ ಹಿಂದುಗಳ ಧಾರ್ಮಿಕ ಭಾವನೆಗೆ ಹೆಚ್ಚು ನೋವಾಗುತ್ತದೆಯೋ? ಅಥವಾ ಅದು ನಿಲ್ಲುವುದರಿಂದ ಮುಸಲ್ಮಾನರ ಧಾರ್ಮಿಕ ಭಾವನೆಗೆ ಹೆಚ್ಚು ನೋವಾಗುತ್ತದೆಯೋ? ಅದು ಅಲ್ಲಿಯ ಸರಕಾರಕ್ಕೇ ಗೊತ್ತು. ಅದು ಸರಿಯೆಂದು ಸಿದ್ಧಮಾಡುವ ಭಾಷ್ಯಕಾರರು ಕಾಂಗ್ರೆಸ್ ಪಕ್ಷದಲ್ಲಿ ಯಾರಾದರೂ ಇದ್ದರೆ ಅವರಿಗೆ ಗೊತ್ತು. ನಮಗೇನೋ ಈ ವಿಧವಾದ ವಿಚಾರ ಸರಣಿಯು ಹಿಂದುಗಳಲ್ಲಿರುವ ಸೌಜನ್ಯವನ್ನು ಅವಮಾನಗೊಳಿಸತಕ್ಕದ್ದಾಗಿಯೂ ಮುಸಲ್ಮಾನರ ಮೆಚ್ಚಿಗೆ ಹೊಂದುವ ಉಪಾಯಗಳಲ್ಲಿ ಇದೂ ಒಂದಾಗಿಯೂ ಇದೆಯೆಂದೇ ತೋರುತ್ತದೆ. ಈ ವಿಧವಾದ ಧೋರಣದಿಂದ ಜಾತ್ಯಾಭಿಮಾನಿಗಳಾದ ಮುಸಲ್ಮಾನರ ಜಾತಿ ಭಾವನೆಯು ಬಲಪಡುವುದೇ ವಿನಾ ಅವರಲ್ಲಿ ಪರಧರ್ಮ ಸಹಿಷ್ಣುತೆಯೇನೂ ಉಂಟಾಗಲಾರದು.

## ಕೊಲ್ಹಾಪುರ ವೀರಶೈವರಲ್ಲಿ ಜಾಗೃತಿ.

ಕೊಲ್ಹಾಪುರದಲ್ಲಿ ಅನೇಕ ವೀರಶೈವರ ಮನೆತನಗಳಿರುವವು. ಶ್ರೀ ಜಗದ್ಗುರು ಚಿತ್ರದುರ್ಗದ ಸ್ವಾಮಿಗಳವರು ಒಂದು ವಿಶಾಲವಾದ ಮತ್ತು ಭವ್ಯವಾದ ಮಠವನ್ನು ಕಟ್ಟಿಸಿರುವರು. ಆದರೆ ಈ ಮಠದಲ್ಲಿ ಒಬ್ಬ ಯೋಗ್ಯರಾದ ಸ್ವಾಮಿಗಳು ಸ್ಥಾಯಿಕವಾಗಿರಬೇಕೆಂದು ಇಲ್ಲಿಯ ವೀರಶೈವರು ಶ್ರೀ ಜಗದ್ಗುರುಗಳಿಗೆ ಪ್ರಾರ್ಥನೆ ಮಾಡಿಕೊಂಡದ್ದಕ್ಕೆ ಪೂಜ್ಯ ಜಗದ್ಗುರುಗಳು ಒಬ್ಬ ವಿದ್ವಾನ ಮತ್ತು ಸದಾಚಾರ ಸಂಪನ್ನರಾದ ಶ್ರೀ. ನಿ. ಪ್ರ. ಗುರುಶಾಂತ ಸ್ವಾಮಿ ಮಿರಜ (ಲಕ್ಷ್ಮೇಶ್ವರ) ಇವರನ್ನು ಇಲ್ಲಿಯ ಮಠಕ್ಕೆ ಅಧಿಕಾರಿಯನ್ನಾಗಿ ನಿಯಮಿಸಿರುವರು. ಇವರು ಬಂದಂದಿನಿಂದ ಇಲ್ಲಿಯ ವೀರಶೈವ ಪ್ರಮುಖರನ್ನು ಬರಮಾಡಿಕೊಂಡು ಅವರಕೂಡ ಧಾರ್ಮಿಕ ಮತ್ತು ಸಾಮಾಜಿಕ ಸಂಗತಿಗಳ ಬಗ್ಗೆ ವಿಚಾರ ವಿನಿಮಯಮಾಡಿ ಸಮಾಜ ಸುಧಾರಣೆಯನ್ನು ಮಾಡುವ ಸದುದ್ದೇಶದಿಂದ ಆಗಾಗ್ಗೆ ಸಭೆಯನ್ನು ಕೂಡಿಸಿ ಅನ್ಯಧರ್ಮದ ಅಂಧಾನುಕರಣೆಯನ್ನು ಅಲ್ಲಗಳೆದು ಸಮಾಜದಲ್ಲಿ ಶಿಸ್ತ ಶೀಲ ಸದಾಚಾರ ಬೆಳೆಯಲು ಒಳಪಂಗಡಗಳ ಏಕೀಕರಣವು ಅವಶ್ಯವೆಂಬುದನ್ನು ತಿಳಿಸುವಾಗ್ಗೆ ಅವರ ಉಪದೇಶಾಮೃತದ ಮತಿತಾರ್ಥವು ಮುಂದಿನಂತಿದ್ದಿತು.

ವೀರಶೈವ ಧರ್ಮವು ಬುನಾದಿಯಿಂದ ಬಂದುದು. ಆದರೂ ಕಾಲಮಾನ ಪರಿಸ್ಥಿತಿಗನುಸರಿಸಿ ಅದು ಅಳಿಯುವ ಸ್ಥಿತಿಯಲ್ಲಿದ್ದಾಗ್ಗೆ ಶ್ರೀಬಸವಾದಿ ಪ್ರಮಥರು ಜನ್ಮತಾಳಿ ಅಳಿಯುವ ವೀರಶೈವ ಧರ್ಮವನ್ನು ಉಳಿಸಿ, ಬೆಳೆಸಿ ಬಲವಾದ ವಿಶ್ವಧರ್ಮವಾಗುವಂತೆ ಹೆಣಗಾಡಿದರು. ದೇಹವೇ ದೇಗುಲವೆಂದರು. ಭಕ್ತಿಯಿಲ್ಲದೆ ಮುಕ್ತಿಯಿಲ್ಲವೆಂದರು. ಕಾಯಕವೇ ಕೈಲಾಸವೆಂದರು. ಲಿಂಗಾಂಗಿಗಳು ಭೇದ ಭಾವವಿಲ್ಲದೆ ಊಟ, ಉಡಿಗೆ, ತೊಡಿಗೆ ಮತ್ತು ಹೆಣ್ಣು ಗಂಡುಗಳ ವ್ಯವಹಾರವನ್ನು ಮಾಡಬಹುದೆಂದರು. ನುಡಿದಂತೆ ನಡೆದು ತೋರಿಸಿದರು. ಹೆಚ್ಚೇನು? ಆಗಮ ಮತ್ತು ವೇದಾಂತಗಳಲ್ಲಿಯ ತತ್ವಗಳ ತಿರುಳನ್ನು ತಿಳಿಗನ್ನಡದಲ್ಲಿ ವಚನ ವಾಙ್ಮಯ ರೂಪದಿಂದ ಹೊರಸೂಚಿಸಿದರು. ಶಕ್ತಿ ವಿಶಿಷ್ಟಾದ್ವೈತ ತತ್ವದಂತೆ ಲಿಂಗಾಂಗ ಸಾಮರಸ್ಯ ಹೊಂದಲು ಕೆಲವು ಕಟ್ಟುಗಳು ಬೇಕೆಂದು ಅಷ್ಟಾವರಣ ಪಂಚಾಚಾರ ಷಟ್‌ಸ್ಥಳ ಮುಂತಾದವುಗಳನ್ನು ಏರ್ಪಡಿಸಿದರು. ಮೋಕ್ಷ ಹೊಂದಲು ದೀಕ್ಷೆಯು ಒಂದು ಮುಖ್ಯ ಮೆಟ್ಟಲಲ್ಲವೆ? ಇರಲಿ. ಇತ್ತಿತ್ತಲಾಗಿ ವೀರಶೈವರ ಗಂಡುಮೆಟ್ಟಾದ ಕರ್ನಾಟಕದಲ್ಲಿ ಕೆಲವರು ಶೀಲದಿಂದ ಶ್ರೇಷ್ಠರೆಂದರೆ, ಹಲವರು ಕುಲದಿಂದ ಶ್ರೇಷ್ಠರೆಂತಲೂ ಇನ್ನಿತರರು ಮತ್ತೊಂದು ಮೊಗದೊಂದುರಿಂದ ಶ್ರೇಷ್ಠರೆಂದೂ ತಮ್ಮ ತಮ್ಮ ಪ್ರತಿಷ್ಠೆಯನ್ನು ಬೆಳಸಿಕೊಳ್ಳುವುದುಂಟು. ಇದರಿಂದ ವೀರಶೈವ ಸಮಾಜದಲ್ಲಿ ಅಲ್ಲೋಲ ಕಲ್ಲೋಲವುಂಟಾಗಿ ಅನೇಕ ಪಕ್ಷ ಪಂಗಡಗಳುಂಟಾಗಿ ವಿಶ್ವ ಧರ್ಮದಂತಿದ್ದ ವೀರಶೈವ ಧರ್ಮವೆಂಬ ದೇಹವು ಛಿನ್ನವಿಚ್ಛಿನ್ನವಾಗಿ ಹೀನದೀನ ಸ್ಥಿತಿಗಿಳಿಯುತ್ತಿರುವದು ಶೋಚನೀಯವಲ್ಲವೆ? ಹೊಟ್ಟೆಯ ವಿರುದ್ಧ ಕೈಕಾಲು ಮುಂತಾದವಯವಗಳು ಅಸಹಕಾರಮಾಡಿದ್ದರಿಂದಾದ ವಿಪರೀತ ಪರಿಣಾಮಗಳ ಪುನರುಚ್ಚಾರ ಮಾಡಬೇಕೆ? ಈ ಪ್ರಕಾರ ಶ್ರೀ. ನಿ. ಪ್ರ. ಗುರುಶಾಂತ ಸ್ವಾಮಿಗಳು ಚೊಕ್ಕಾಗಿ ಮನಮೆಚ್ಚುವಂತೆ ಮುದ್ದಾದ ಮನೆಮಾತಿನಲ್ಲಿ ಮಾತನಾಡಿದರು. ಸಭೆಗೆ ಬಂದಿದ್ದ ಅನೇಕ ಜನರ ಮನಸ್ಸಿನಮೇಲೆ ಒಳ್ಳೇ ಪರಿಣಾಮವಾಗಿ "ಲಿಂಗಾಯತ ಸಮಾಜ ಸೇವಾಸಂಘ" ವನ್ನು ಸ್ಥಾಪಿಸಲು ನಿಶ್ಚಯಿಸಿದರು. ಶ್ರೀ. ಗುರುಶಾಂತ ಸ್ವಾಮಿಗಳನ್ನು ಇಲ್ಲಿಯ ಪಟ್ಟಾಧಿಕಾರಿಗಳನ್ನಾಗಿ ಮಾಡಿಕೊಳ್ಳುವ ಪ್ರಯತ್ನ ನಡೆದಿದೆ. ಇದೇ ಶುಕ್ರವಾರ ದಿವಸ ಯಾವತ್ತೂ ವೀರಶೈವರ ಒಳಪಂಗಡಗಳ ಏಕೀಕರಣ ಮಾಡುವುದಕ್ಕಾಗಿ ಭೋಜನ ಸಮಾರಂಭವನ್ನು ಇಲ್ಲಿಯ ಮಠದಲ್ಲಿ ಮಾಡುವವರಿರುವರು. ಆಗ್ಗೆ ಖರ್ಚಿಲ್ಲದೆ ಶಿವದೀಕ್ಷಾ ಸಮಾರಂಭವೂ ನಡೆಯುವುದು. ಇದರಿಂದ ಯಾವತ್ತೂ ವೀರಶೈವರ ಉದ್ಧಾರವು ಬಿದಿಗೆಯ ಚಂದ್ರನಂತೆ ಹಬ್ಬಲೆಂದು ಹಾರೈಸುವಾ. ಇದು ಸ್ತುತ್ಯವು. ಉಳಿದ ವೀರಶೈವರೂ ಇದನ್ನು ಅನುಕರಿಸುವರೊ?

ಓರ್ವ ಪ್ರೇಕ್ಷಕ

---

## ಪಾರಮಾರ್ಥಿಕ "ಡೈರಿ"

ಶ್ರೀ ಶಿವ ಚಿದಂಬರಾಯ ನಮಃ

ಶ್ರೀಗುರು ಬಸವಲಿಂಗಾಯ ನಮಃ

(ಶಿಲ. ೯ ಬ. ೧೦ ಗುರು. ೭-೧-೩೭.)

ಹಿಂದಕ್ಕೆ ಎಷ್ಟೋಸಾರೆ ಇನ್ನುಮೇಲೆ ಉತ್ಕೃಷ್ಟ ಕರ್ಮಯೋಗಿಯಾಗಬೇಕೆಂದು ಶೀಲ (ಆವೇಶ) ತುಂಬಿದವನಂತೆ ಕೆಲಸಕ್ಕೆ ತೊಡಗುತ್ತಿದ್ದೆ. ಕೆಲಹೊತ್ತಿನಮೇಲೆ ಆ ವೃತ್ತಿಯು ಅಡಗಿ ಬಾರೋಯನ್ನ ಮುನ್ನಿನಯ್ಯಾ ಎಂಬಂತೆ ಸ್ಥಿತಿಯಾಗುತ್ತಿತ್ತು. ಇಂದು ಹೊಂಗಲದಿಂದ ಬಂದೊಡನೆ ವಿಶ್ರಮಿಸಿ ಆ ವೃತ್ತಿಯ ನಿಷೇಧಾರ್ಥವಾಗಿ ಮನಸಿಗೆ ಬೋಧಮಾಡಿದ್ದು—

ಕಂದ|| ಆರಂಭ ಶೂರನಾಗದೆ|
ಸಾರಿಬಂದಂಥ ಪ್ರಸಂಗ ವಿಚಾರಿಸು ಕೂತು|
ಸೇರಾಮೇಲೆಯೇ ಕೆಲಸಕೆ|
ಚಾರುತರವಾಗಿ ದಾಸ ಮುಗಿಸು ಸಲೆಕೈ ಹಚ್ಚಿ||೧೦||

ಸಾರಿಬಂದ-ಸಮೀಪಬಂದ ಸೇರು-ತೊಡಗು ಚಾರು-ಸುಂದರ

× × ×

ಶ್ರೀ. ಶಿವ ಚಿದಂಬರಾಯ ನಮಃ

ಶ್ರೀಗುರು ಬಸವಲಿಂಗಾಯ ನಮಃ

(ಶಿಲ. ೯ ಬ. ೧೧ ಶುಕ್ರ. ೮-೧-೩೭.)

ಅತಿಶಯ ಚಳಿ ಬಿದ್ದುದರಿಂ ಉದಾರ—ಇಂದು ಮಾತ್ರ ಹೆಚ್ಚಿಗೆ ಚಳಿ ಬಿದ್ದರೆ ತಣ್ಣೀರಿನಿಂದ ಕೈಗಳಿ ಶೇಡು ಹಿಡಿಯಿತು! ಇಂತು ಶೇಡು ಹಿಡಿಯಲಾವ ಸ್ಥಿತಿಯಾಗಿದೆ ನೋಡು!

ತ್ರಿಪದಿ|| ಶೇಡು ಹಿಡಿಯಿತು ಕೈಗೆ ನೋಡು ತಂಡಿಯನಿಂದು|
ಓಡುವಾ ಚೇಳು ಕಡಿದಂತೆ ಬೆರಳಿಂಗೆ|
ನೋಡು ಹಾಹಾಹ ದಾಸಾರ್ಯ ||೧೧||
ಶೇಡು ಕೈಕಾಲಿಂಗೆ ಹಿಡಿಸಿ ಬಿಟ್ಟಿತು ಚಳಿಯು|
ಜೋಡು ತೊಲೆಗಳು ಸಿಕ್ಕ ಜಿಬ್ಯಾದಂತೆ|
ನೋಡು ನೋವನ್ನು ದಾಸಾರ್ಯ ||೧೨||

ಇಲ್ಲಿಯೇ ಹೀಗೆ ಆದರೆ ನೀರು ಹೆಪ್ಪುಗಟ್ಟುವ ಸ್ಥಳದಲ್ಲಿ ಯಾವ ಸ್ಥಿತಿಯಿರಬೇಕು? ಕರ್ತನ ಲೀಲೆ.

× × ×

---

—ಪುಣೆಯಲ್ಲಿ ಒಬ್ಬ ಬ್ರಾಹ್ಮಣ ತರುಣಿಯನ್ನು ಕೆಲವು ಪುಂಡರು ಏನೇನೋ ಮೋಸದ ಮಾತುಗಳನ್ನು ಹೇಳಿ ಯುರೋಪಿಯನ್ ಹೋಟಲಿಗೂ ಆಮೇಲೆ ಸಿನೇಮಾ ಕಂಪನಿಗೂ ಕರೆದುಕೊಂಡು ಹೋಗಿ ಅವಳ ವಿನಯಭಂಗಮಾಡಲು ಪ್ರಯತ್ನಿಸಿದ್ದರಿಂದ ಅವಳು ಪೋಲಿಸರಿಗೆ ತಿಳಿಸಿ ಅವರ ಕೈಯಿಂದ ಪಾರಾದಳು.

# ನೈಜಾಮು ಭಾಗದ ಚಂದಾದಾರರಿಗೆ ವಿಜ್ಞಾಪನೆ.

ನೈಜಾಮು ಭಾಗದ ಬಹು ಸ್ಥಳಗಳಲ್ಲಿ ಬ್ರಿಟಿಶ್ ಪೋಸ್ಟ ಇಲ್ಲವಷ್ಟೆ. ಆದುದರಿಂದ ಅಲ್ಲಿಯ ಶರಣ ಸಂದೇಶ ಪತ್ರಿಕಾ ಚಂದಾದಾರರು ತಮ್ಮ ಚಂದಾ ಹಣವನ್ನು ಕಳಿಸಲು ತುಂಬಾ ಅನಾನುಕೂಲವಾಗುತ್ತದೆಂದು ತಿಳಿಸುತ್ತಿದ್ದಾರೆ. ವ್ಹಿ. ಪಿ. ಮಾಡಿದರೆ ತಿರುಗಿ ಬರುವುದೇ ಹೆಚ್ಚು.

ಆದಕಾರಣ ಸಮಕ್ಷಮ ಅಥವಾ ಮನಿಯಾರ್ಡರ್ ಮೂಲಕ ಇಲ್ಲವೆ ವ್ಹಿ. ಪಿ. ಇಂದ ತಮ್ಮ ಚಂದಾ ಹಣ ಹಾಲಿ ೩॥ ರೂ. ಕೊಡಲು ಅನುಕೂಲವಾಗುವಂತೆ ಗುಲಬರ್ಗಾದಲ್ಲಿ ಈ ಕೆಳಗಿನ ವಿಳಾಸದ ನಮ್ಮ ಎಜಂಟರ ಕಡೆಗೆ ವ್ಯವಸ್ಥೆ ಮಾಡಿದೆ.

ಇನ್ನುಮುಂದೆ ನೈಜಾಮು ಭಾಗದ ಚಂದಾದಾರರು ತಮ್ಮ ಚಂದಾ ಹಣವನ್ನು ಅವರ ಕಡೆಗೇನೇ ಕೊಟ್ಟು ರಸೀದಿ ಹೊಂದಬೇಕು. ಅಥವಾ ಅಲ್ಲಿಗೇನೇ ತಮ್ಮ ಟಪ್ಪಾಖಾನೆಯಿಂದ ಹಾಲಿ ೩॥ ರೂ. ಮನಿಯಾರ್ಡರ್ ಮಾಡಬೇಕು. ಇಲ್ಲವೆ ಈಗ ಅಲ್ಲಿಂದಲೇ ವ್ಹಿ. ಪಿ. ಮಾಡಲು ಪ್ರಾರಂಭಿಸಿರುವುದರಿಂದ ತಪ್ಪದೆ ವ್ಹಿ. ಪಿ. ಯನ್ನು ಸ್ವೀಕರಿಸಬೇಕು.

ನೈಜಾಮು ಭಾಗದ ಚಂದಾದಾರರು ಈ ಸೌಲಭ್ಯದ ಉಪಯೋಗವನ್ನು ಮಾಡಿಕೊಳ್ಳುವರೆಂದು ನಾವು ತುಂಬಾ ನಂಬಿದ್ದೇವೆ. ತಮಗೆ ಪತ್ರಿಕೆಯು ಸರಿಯಾಗಿ ಮುಟ್ಟದಿದ್ದರೆ ಅಲ್ಲಿಗೇನೇ ತಿಳಿಸಬೇಕಾಗಿ ಪ್ರಾರ್ಥನೆ. ಮ್ಯಾನೇಜರ್.

ವಿಳಾಸ— ಸಿಂದಗಿ ಶಿವಲಿಂಗಣ್ಣ
ಮ್ಯಾನೇಜರ್ ಕಲ್ಯಾಣ ಕರ್ನಾಟಕ ಬುಕ್ ಡಿಪೊ
ಪೋಸ್ಟ. ಗುಲಬರ್ಗಾ.

---

## ಮಸ್ಕಿ ಚರಪಟ್ಟಾಧಿಕಾರ ಮಹೋತ್ಸವ.

ನೈಜಾಮು ಇಲಾಖಾ ಜಿಲ್ಲಾ ರಾಯಚೂರು ತಾ॥ ಲಿಂಗಸೂಗೂರ ಪೈಕಿ ಮಸ್ಕಿ ಗ್ರಾಮದ ಹಿರೇಮಠ (ಗಚ್ಚಿನ ಮಠ) ದಲ್ಲಿ. ಸಾಂಪ್ರದಾಯಾನುಸಾರವಾಗಿ ಶಕೆ ೧೮೫೯ ನೆಯ ಈಶ್ವರನಾಮ ಸಂ॥ ರದ ಶ್ರಾವಣ ಶು॥ ೧೩ ಗುರುವಾರದಲ್ಲು ಚರಪಟ್ಟಾಧಿಕಾರ್ಯವು ಬಹು ವಿಜೃಂಭಣೆಯಿಂದ ಜರುಗಿತು. ಸದರಿ ಅಧಿಕಾರವನ್ನು ಸಿದ್ದಾಪುರ ಮಠದ ಮುರುಘೇಂದ್ರಾರ್ಯನೆಂಬ ವಟುವಿಗೆ ಅನುಗ್ರಹಿಸುವ ವಿಷಯದಲ್ಲಿ ಮಸ್ಕಿ ಗ್ರಾಮದ ಸಮಸ್ತ ದೈವದವರಿಂದ ಪ್ರಾರ್ಥಿಸಲ್ಪಟ್ಟ ಮೇರೆಗೆ ಲಿಂಗಸೂಗೂರು ಸಾವಿರ ದೇವರ ಮಠದ ಪಂಚಾಕ್ಷರಿ ಮಹಾ ಸ್ವಾಮಿಗಳವರು ದಯಮಾಡಿಸಿ ತತ್ಕಾರ್ಯವನ್ನು ವಿಧ್ಯುಕ್ತವಾಗಿ ಜರುಗಿಸಿದ್ದು ಅಭಿನಂದನೀಯ ವಿಷಯವಾಗಿದೆ. ಮತ್ತು ಸಂಸ್ಥಾನ ಗುಡಗುಂಟೆ ರಸ್ತಾಪುರದ ಹಿರೇಮಠದ ಸ್ಥಿರ ಪಟ್ಟಾಧ್ಯಕ್ಷರಾದ ಚಿದ್ಘನಲಿಂಗ ಶಿವಾಚಾರ್ಯರು ತತ್ಸಮಯದಲ್ಲಿದ್ದರು. ಇದೇ ಶು॥ ೧೪ಳ ಶುಕ್ರವಾರ ಮಹಾಗಣಾರಾಧನೆಯು ಸಂತೃಪ್ತಿಕರವಾಗಿ ಜರುಗಿತು. ಶು॥ ೧೫ ಶನಿವಾರ ದಿವಸ ಸಮಸ್ತ ವಾದ್ಯ ವೈಭವ ಛತ್ರ ಚಾಮರಗಳೊಡನೆ ಉಭಯ ಮಹಾಸ್ವಾಮಿಗಳೊಂದಿಗೆ ಸದ್ಯಃ ಚರಪಟ್ಟಾಧಿಕಾರವನ್ನು ಹೊಂದಿದ ಶ್ರೀಮನ್ಮುರುಘೇಂದ್ರ ಸ್ವಾಮಿಗಳವರ ಮೆರವಣಿಗೆಯು ವೈಭವದಿಂದ ಜರುಗಿದ ಮೇಲೆ ಸಭೆಯು ಏರ್ಪಟ್ಟು ಧರ್ಮ ಸಂಬಂಧವಾದ ಭಾಷಣಗಳು ಶ್ರೀ. ಬಳಗಾನೂರು ಕಲ್ಯಾಣಶಾಸ್ತ್ರಿಗಳು, ಶ್ರೀ. ಮಸ್ಕಿ ಸಿದ್ಧರಾಮಪ್ಪನವರು ಶ್ರೀ. ಲಿಂಗಸೂಗೂರ ಪಂಚಾಕ್ಷರಿ ಮಠದ ಬಸವಲಿಂಗಪ್ಪನವರು ಮತ್ತು ಅಲ್ಲಿಯ ಹಿರೇಮಠದ ಶ್ರೀ. ಅಮರಶಾಸ್ತ್ರಿಗಳು ಇವರಿಂದ ಜರುಗಿದವು.

ಓರ್ವ ಉತ್ಸವಭಾಗಿ.

---

## ಕಮಲಾಪುರ.

ತಾ. ೧೭-೮-೩೭ ನೇ ದಿವಸ ಶ್ರೀ ಕಂತಿಮಠದಲ್ಲಿ ಸಂಜೆ ೬ ಘಂಟೆಗೆ ಸಭೆ ಸೇರಿತ್ತು. ಈ ಸಭೆಗೆ ಗುಲಬರ್ಗಾ ತರುಣ ಸಂಘದಿಂದ ಶ್ರೀಯುತ ಶರಣಯ್ಯನವರು ಮತ್ತು ಮಲ್ಲಪ್ಪ ಇಟಗಿ ಇವರು ಆಗಮಿಸಿದ್ದರು. ಶ್ರೀ ಶರಣಯ್ಯನವರು ತಮ್ಮ ಭಾಷಣವು ಎಲ್ಲರಿಗೂ ತಿಳಿಯಲೆಂದು ಸರಳ ಭಾಷೆಯಲ್ಲಿ ಉಪದೇಶಿಸಿದರು. ಅವರು ಯಾವ ಧರ್ಮಕ್ಕೂ ನಿಷೇಧಿಸದೆ ತಮ್ಮ ತತ್ವಗಳನ್ನು ಮುಂದಿಟ್ಟು ಎಲ್ಲರ ಮನಸ್ಸು ಆನಂದಗೊಳಿಸಿದರು. ಇವರ ಪಾಂಡಿತ್ಯವನ್ನು ಕಂಡು ಜನರು ಮರು ದಿವಸ ಮುಂಜಾನೆ ೮ ಘಂಟೆಗೆ ಸಭೆ ಕೂಡಿಸಿದರು. ಈ ದಿವಸ ಶ್ರೀ. ಮಲ್ಲಪ್ಪನವರು ಬಸವನ ವಚನಗಳ ಮಹತ್ವ ಮತ್ತು ಎಲ್ಲರೂ ಕನ್ನಡವನ್ನು ಕಲಿತು ವಚನಗಳ ಸಾರವನ್ನು ಬೀರಬೇಕೆಂದು ಹೇಳಿದರು. ಇದಲ್ಲದೆ ಅವರು ನಮ್ಮ ಧರ್ಮದ ತತ್ವದ ಮಹಿಮೆ, ಐಕ್ಯದ ವಿಷಯ ಆರ್ಯ ಸಮಾಜದ ಕೆಡಕುಗಳನ್ನು ಹೊರಗೆಡವಿದರು. ತದನಂತರ ಶ್ರೀಯುತ ಶರಣಯ್ಯನವರು ನಮ್ಮ ಧರ್ಮದ ತತ್ವ ತಿಳಿಯುವಂತೆ ಸರಳ ಮಾತುಗಳಿಂದಲೂ ಮತ್ತು ಕಥೆಗಳಿಂದಲೂ ಎಲ್ಲರ ಮನಸ್ಸನ್ನೂ ಆನಂದಗೊಳಿಸಿದರು. ಅವರು ಪದ್ಯ ರೂಪದಿಂದ ಹಿಂದಿನ ಕಲ್ಯಾಣದ ಸ್ಥಿತಿ ಮತ್ತು ಈಗಿನ ಕಲ್ಯಾಣದ ಸ್ಥಿತಿಯನ್ನು ವರ್ಣಿಸಿ ಇದಕ್ಕೆಲ್ಲ ನಮ್ಮ ನಮ್ಮ ಹೇಡಿತನವೇ ಕಾರಣವೆಂದು ತಮ್ಮ ದುಃಖವನ್ನು ವ್ಯಕ್ತಪಡಿಸಿದರು. ಆದರಿಂದ ಜನರಲ್ಲಿ ಒಂದು ಹೊಸ ಚೈತನ್ಯವುಂಟಾಯಿತು.

ಸಾಯಂಕಾಲ ಮಹಿಳಾ ಸಭೆಯು ನೆರೆಯಿತು. ಹೆಣ್ಣುಮಕ್ಕಳಿಂದ ಮಠವು ಕಿಕ್ಕಿರಿದಿತ್ತು. ಮಲ್ಲಪ್ಪನವರು ಸ್ತ್ರೀ ಶಿಕ್ಷಣದ ಮಹತ್ವವನ್ನು ಹೇಳಿದರು. ಅದರಿಂದ ಕೂಸುಗಳ ಮೇಲಿನ ಪರಿಣಾಮವನ್ನು ಸಹ ಹೇಳಿದರು. ಶರಣಯ್ಯನವರು ತಮ್ಮ ಭಾಷಣದಲ್ಲಿ ಹೆಣ್ಣುಮಕ್ಕಳ ಕುಂದುಗಳನ್ನೂ ಮತ್ತು ಆಲಸ್ಯತನದ ಸಂಗತಿಗಳನ್ನೂ ಬಿಡಿರೆಂದು ಹೇಳಿದರು. ಭಾಷಣಕ್ಕೆ ಹೆಚ್ಚು ರುಚಿ ಬರುವಂತೆ ಅನೇಕ ಕಥೆಗಳನ್ನೂ ಹೇಳಿದರು.

ಮೂರನೆಯ ದಿವಸ ಪುನಃ ವ್ಯಾಯಾಮ ಪ್ರದರ್ಶನದಲ್ಲಿ ಮಲ್ಲಪ್ಪನವರು ಆಸನಗಳನ್ನು ತೋರಿಸಿ ಯಾವ ಪ್ರಕಾರ ವ್ಯಾಯಾಮ ಮಾಡಬೇಕೆಂದು ಪದ್ಧತಿಗಳನ್ನು ತಿಳಿಸಿದರು. ಇದೇ ಪ್ರಕಾರ ಗುಲಬರ್ಗಾ ತರುಣ ಸಂಘದವರು ಪ್ರಯತ್ನಿಸಲೆಂದು ಕೋರುವ

ಸೆಕ್ರೆಟರಿ
ವೀರಶೈವ ತರುಣ ಬಂಧು
ಕಮಲಾಪುರ.

---

—ನಿಜಾಮು ಸರಕಾರದ ಅಪ್ಪಣೆ ಪ್ರಕಾರ ಮೌಲಾನಾ ಶೌಕತ ಅಲ್ಲಿಯವರಿಗೆ ಅವರು ಜೀವಿಸಿರುವವರೆಗೂ ತಿಂಗಳಿಗೆ ೩೦೦ ರೂ. ಕೊಡುವುದಾಗಿ ಪ್ರಕಟವಾಗಿದೆ.

## ಬೆಳಗಾವ-ಶಹಾಪುರದಲ್ಲಿ ಸಭೆ.

——::೦::——

ಇದೇ ತಿಂಗಳ ತಾ. ೨೩, ೨೪, ೨೫. ಈ ಮೂರು ದಿವಸ ಶ್ರೀ ವೀರಶೈವ ಫ್ರೀ ಬೋರ್ಡಿಂಗಿನಲ್ಲಿ ವಿದ್ಯಾರ್ಥಿಗಳ ಕೋರಿಕೆಯ ಪ್ರಕಾರ ಪ್ರತಿ ನಿತ್ಯವೂ ಎಡೆಬಿಡದೆ ಸಾಯಂಕಾಲ ಸರಿಯಾಗಿ ೬-೩೦ ಕ್ಕೆ ಸಭೆಯು ಕೂಡುತ್ತಿದ್ದಿತು. ಇಲ್ಲಿಗೆ ಬಂದ ಶ್ರೀ. ಶಾಂತವೀರಾರ್ಯ ನಿಶಾನಿಮಠ ದಾವಣಗೇರಿ ಎಂಬೋರ್ವ ಪ್ರವಾಸಿಗಳು ತಮ್ಮ ಮಹಾರಾಷ್ಟ್ರ ಪ್ರವಾಸದಲ್ಲಿ ತಮಗಾದ ಅನ್ನುಭವವನ್ನೂ ಅಲ್ಲಿರುವ ವೀರಶೈವ ಸಮಾಜದ ಶೋಚನೀಯ ಸ್ಥಿತಿಯನ್ನೂ ಹಾಗೂ ತಾವು ಸಂದರ್ಶಿಸಿದ ವೀರಶೈವ ಬೋರ್ಡಿಂಗ್ ವಿದ್ಯಾರ್ಥಿಗಳ ಧಾರ್ಮಿಕ ಜ್ಞಾನದ ಅಭಿಮಾನವನ್ನೂ ವಿವರಿಸಿ ಲಿಂಗದಲ್ಲಿ ನೈಷ್ಠೆ ಬರುವಂತೆ ಬಹು ಸ್ವಾರಸ್ಯವಾಗಿ ವಿವೇಚನೆ ಮಾಡಿಹೇಳಿದರು. ವೀರಶೈವ ವಿದ್ಯಾರ್ಥಿಗಳು ತಮ್ಮ ವಿದ್ಯಾರ್ಥಿ ದೆಶೆಯಲ್ಲಿಯೇ ಲಿಂಗದ ಆಚಾರ, ವಿಚಾರ ರೀತಿ ನೀತಿಗಳನ್ನು ಸಂಪಾದಿಸಬೇಕೆಂದೂ ಆಚಾರವಿಲ್ಲದ ಬಾಳು ಹಾಳು ಆಚಾರ ಭ್ರಷ್ಟನು ಎಂದಿಗೂ ಸದ್ಗತಿಹೊಂದಲಾರನು, ಆದುದರಿಂದಲೇ 'ಆಚಾರಃ ಪ್ರಥಮೋ ಧರ್ಮಃ' ಎಂದು ಪುರಾತನೋಕ್ತಿಯು ಸಾರುವದೆಂದೂ ಹಾಗೂ 'ಆಚಾರವಾನ್ ಪುರುಷೋವೇದ' ಎಂಬುದು ಅತಿ ಮಹತ್ವದ್ದಾಗಿದೆ ಎಂದೂ ವಿವರವಾಗಿ ತಿಳಿಸಿ ಹೇಳಿದರು. ಈಗ ಪ್ರಚಾರವಾಗುತ್ತಿರುವ ದುರಭ್ಯಾಸ, ದುಶ್ಚಟ, ದುರಾಚಾರಗಳಿಗೆ ವಿದ್ಯಾರ್ಥಿಗಳು ತುತ್ತಾಗದೆ ಶಿಷ್ಟ ಸಾಂಪ್ರದಾಯಗಳನ್ನು ಅನುಸರಿಸಿ ನಡೆಯತಕ್ಕದ್ದೆಂದು ವಿದ್ಯಾರ್ಥಿಗಳಿಗೆ ಉಪದೇಶ ಮಾಡಿದರು.

ಇದೇ ಸಭೆಯನ್ನು ಮುಂದೆ ಮೂರನೇ ದಿನ ಮತ್ತೆ ಸಾಗಿಸಬೇಕೆಂದು ಕೆಲವು ಪ್ರಮುಖ ವಿದ್ಯಾರ್ಥಿಗಳು ಕೇಳಿಕೊಂಡದ್ದರಿಂದ ಸಭೆಯು ಆ ಪ್ರಕಾರ ೨೫ ನೇ ತಾರೀಖಿನ ದಿವಸ ಬೋರ್ಡಿಂಗಿನ ಪಟಾಂಗಣದಲ್ಲಿ ಕರೆಯಲ್ಪಟ್ಟಿತು. ಸಭೆಯು ಶ್ರೀಮನ್ನಿರಂಜನ ಶ್ರೀ ನಾಗನೂರ ಮಹಾ ಸ್ವಾಮಿಗಳವರ ಸನ್ನಿಧಾನದಲ್ಲಿ ಕೂಡಿತ್ತು. ಸಭೆಗೆ ಗೊಂಬಿ ಮಠದ ಶ್ರೀಮನ್ನಿರಂಜನ ಶ್ರೀ ಗುರುಶಾಂತ ಸ್ವಾಮಿಗಳವರೂ ಅನೇಕ ಕಾಲೇಜ ಹಾಯಸ್ಕೂಲ ವಿದ್ಯಾರ್ಥಿಗಳೂ ಮತ್ತು ಕೆಲವು ಸಭ್ಯಗೃಹಸ್ಥರೂ ಸ್ತ್ರೀಯರೂ ಬಂದಿದ್ದರು. ವಿಷಯವು "ಶುದ್ಧಿ ಸಂಘಟನೆ" ಎಂಬುದಾಗಿತ್ತು. ಇಲ್ಲಿಗೆ ಅಕಸ್ಮಾತ್ತಾಗಿ ದಯಮಾಡಿಸಿದ, ಹೈದರಾಬಾದ ಸಂಸ್ಥಾನ ನಿವಾಸಿಗಳೂ, ಮತ್ತು ವೀರಶೈವ ಶುದ್ಧಿಸಂಘಟನೆಯೊಂದರ ಅಧ್ಯಕ್ಷರೂ ಆದ ಶ್ರೀಮನ್ನಿರಂಜನ ಗುರುಮಠಕಲ್ಲ ಸ್ವಾಮಿಗಳವರು ಅಧ್ಯಕ್ಷ ಸ್ಥಾನವನ್ನು ವಹಿಸಿದ್ದರು.

ಭಾಷಣಕಾರರಾದ ಶ್ರೀ ನಿಶಾನಿಮಠ ಇವರ ವ್ಯಾಖ್ಯಾನದ ಮುಖ್ಯ ಅಭಿಪ್ರಾಯ— ಈ ಕಾಲದಲ್ಲಿ ಅವಶ್ಯವಾಗಿ ಶುದ್ಧಿ ಸಂಘಟನೆಯ ಕಾರ್ಯವನ್ನು ಕೈಕೊಳ್ಳುವದು ಪ್ರತಿಯೊಬ್ಬ ವೀರಶೈವ ಮತಾಭಿಮಾನಿಯ ಕರ್ತವ್ಯವಾಗಿದೆ. ಇಲ್ಲದಿದ್ದರೆ ಈಗ ಉಳಿದ ಈ ಅಲ್ಪ ಸಂಖ್ಯೆಯು ಸಹ ಪರ ಧರ್ಮಗಳ ಬಾಯಿಗೆ ತುತ್ತಾಗಿ ಹೋಗುವ ಸಂಭವವಿದೆ. ಆದ್ದರಿಂದ ಸದ್ಯದ ತರುಣರು ಅವನತ ಸ್ಥಿತಿಯನ್ನು ಹೊಂದುತ್ತಿರುವ ಈ ಮತವನ್ನು ಪ್ರಸಾರಮಾಡಲೇ ಬೇಕು. ಇತ್ಯಾದಿ- ಹೇಳಿ ತಮ್ಮ ಭಾಷಣ ಮುಗಿಸಿದರು.

ಆ ಮೇಲೆ ಪೂಜ್ಯರಾದ ಅಧ್ಯಕ್ಷ ಮಹಾಶಯರು ಒಂದು ಕೋಟಿ ಜನ ಸಂಖ್ಯೆಯಿದ್ದ ಲಿಂಗಾಯತ ಸಮಾಜವು ದಿನೇ ದಿನೇ ಕ್ಷೀಣಹೊಂದುತ್ತ ಈಗ ಬರೇ ೨೮ ಲಕ್ಷ ಜನ ಸಂಖ್ಯೆಯು ಸಮಾಜವಾಗಿದೆ. ಹೀಗೆ ಅವನತ ಸ್ಥಿತಿಯನ್ನು ಹೊಂದಲಿಕ್ಕೆ ಕಾರಣರಾರು? ವೀರಶೈವ ಸಮಾಜಕ್ಕೆ ಈಗಿದ್ದ ಈ ಗ್ಲಾನಿಯನ್ನು ಹೋಗಲಾಡಿಸಿ ಅದು ತನ್ನ ಮತತತ್ವಗಳ ಮಹಿಮೆಯಿಂದ ಜಗತ್ತಿನ ಕಣ್ಣು ಕುಕ್ಕಿಸುವಂಥದಾಗಬೇಕಾದರೆ ಎಂಥ ಜನರು ಅವಶ್ಯಕರು? ಸದ್ಯದ ವಾತಾವರಣಕ್ಕನುಸರಿಸಿ ಧರ್ಮ ಪ್ರಸಾರವನ್ನು ಹೇಗೆ ಮಾಡಬೇಕು? ಎಂಬಿವೇ ಮೊದಲಾದ ವಿಷಯಗಳನ್ನು ಕುರಿತು ಒಳ್ಳೇ ಸ್ಫೂರ್ತಿದಾಯಕ ಮಾತುಗಳನ್ನಾಡಿದರು. ಕಡೆಗೆ ಅಧ್ಯಕ್ಷರು ಲಿಂಗದ ಮಹತ್ವವನ್ನೂ ನೆರೆದ ಸದ್ಭಕ್ತರಿಂಗೆಲ್ಲ ತಿಳಿಸಿ ಹೇಳಿದರು. ಲಿಂಗದ ಆಚಾರ, ವಿಚಾರಗಳನ್ನು, ಕಲಿಯಲು ವಿದ್ಯಾರ್ಥಿಗಳು ಕೆಲಕಾಲ ಗುರುಕುಲದಲ್ಲಿ ವಾಸಮಾಡಿ ಕಲಿಯಬೇಕೆಂದೂ ಮತ್ತು ಕೇವಲ ಹೊಟ್ಟೆಹೊರೆದುಕೊಳ್ಳುವದರ ಸಲುವಾಗಿ ಯಾವುದಾದರೊಂದು ವಿದ್ಯೆಯನ್ನೂ ಉದ್ಯೋಗ ಅಥವಾ ನೌಕರಿಯನ್ನೂ ಸಂಪಾದಿಸಿದ ಮಾತ್ರಕ್ಕೆ ಆತ್ಮೋನ್ನತಿಯಾಗಲಾರದೆಂದೂ, ಇದಕ್ಕಾಗಿ ಪೂರ್ವಜರು ಬಹು ಶ್ರಮದಿಂದ ಸಂಪಾದಿಸಿದ ಅನುಭವವನ್ನು ವಚನ ವಾಙ್ಮಯದಿಂದಲೂ ಧಾರ್ಮಿಕ ಗ್ರಂಥಗಳಿಂದಲೂ ಸಂಪಾದಿಸತಕ್ಕದ್ದೆಂದೂ ಬಹು ಸ್ವಾರಸ್ಯವಾಗಿ ಹೇಳಿದರು. ಮತ್ತು ಭರದಿಂದ ಪ್ರಸಾರವಾಗುತ್ತಿರುವ ಆರ್ಯ ಸಮಾಜದ ಉನ್ನತಿಗೆ ಕಾರಣರಾದ ಜನರ ಸ್ಥೈರ್ಯ, ಧೈರ್ಯ ಮತ್ತು ನಡೆಗಳನ್ನು ಆಚರಣೆಯಲ್ಲಿ ತರುವ ಜಾಣ್ಮೆ ಮೊದಲಾದ ಸದ್ಗುಣಗಳನ್ನು ಪ್ರಶಂಶಿಸಿ, ಅದರಂತೆಯೇ ನಮ್ಮ ಮತೋದ್ಧಾರಕ್ಕಾಗಿ ಇಂಥ ಬಿಸಿ ರಕ್ತದ ತರುಣರೇ ಯೋಗ್ಯರೆಂದೂ ಮೇಲಿಂದ ಮೇಲೆ ಮನನಮಾಡಿಕೊಟ್ಟರು. ಮತ್ತು ತಾವು ಶುದ್ಧಿ ಸಂಘಟನೆಗಳನ್ನು ಆಯಾ ಕಡೆಗೆ ಸ್ಥಾಪಿಸಿ ಮತ ಪ್ರಸಾರ ಕಾರ್ಯಮಾಡುವಾಗ್ಗೆ ತಮಗೆ ಬಂದ ತೊಂದರೆಗಳನ್ನೂ ಮತ್ತು ಅವುಗಳನ್ನು ಧೈರ್ಯಗುಂದದೆ ಎದುರಿಸಿದ ಬಗೆಯನ್ನೂ ಸವಿಸ್ತಾರವಾಗಿ ಹೇಳಿ ಅಧ್ಯಕ್ಷರು ತಮ್ಮ ಭಾಷಣ ಮುಗಿಸಿದರು. ಆ ಮೇಲೆ ಅಧ್ಯಕ್ಷರ ಹಾಗೂ ವ್ಯಾಖ್ಯಾನಕಾರರ ಆಭಾರಮನ್ನಿಸಲ್ಪಟ್ಟು ವಾದ್ಯ ಸಂಗೀತಗಳೊಂದಿಗೆ ಸಭೆಯು ಸಮಾರೋಪವಾಯಿತು.

ಓರ್ವ ವಿದ್ಯಾರ್ಥೀ.

---

## ಅಭಿನಂದನ.

——::೦::——

ಗದಿಗಿನ ಹಾಲಕೆರೆ ಶ್ರೀ ಮದನ್ನದಾನೀಶ್ವರ ಆನಂದಾಶ್ರಮದಲ್ಲಿ ಸ್ಥಾಪಿಸಲ್ಪಟ್ಟ ಅನಾದಿತೋಂಟದ ಸಿದ್ಧಲಿಂಗಸ್ಮಾರಕ ಆಧ್ಯಾತ್ಮಿಕ ಗ್ರಂಥಭಾಂಡಾರಕ್ಕೆ ಕೆಳಗಿನ ಸದ್ಗೃಹಸ್ಥರು ಉದಾರ ಸಹಾಯಮಾಡಿರುವರು.

(೧) ಸೊಲ್ಲಾಪುರದ ಶ್ರೀ ಜುಂಝುವಕೀಲರು ತಮ್ಮ ಚಿರಂಜೀವನ ಲಗ್ನಕಾಲದಲ್ಲಿ ೫ ರೂ. (೨) ಶ್ರೀ ಗುರಯ್ಯ ಮಾಸ್ತರರು ಸೂಡಿ ೨ ರೂ. (೩) ಶ್ರೀ ಮಹಾಲಿಂಗಪ್ಪ ಶೆಟ್ಟರು ಕೆರೂರು ೨ರೂ. (೪) ಶ್ರೀ ಮತಿ ಗುರುಬಸಮ್ಮನವರು ಕೀರ್ತನಕಾರರು ಸೊಲ್ಲಾಪುರ ೧ ರೂಪಾಯಿ.

ಈ ಪ್ರಕಾರ ಸಹಾಯಮಾಡಿದ ಪುಣ್ಯಾತ್ಮರನ್ನು ನಾವು ಹೃದಯ ಪೂರ್ವಕ ಅಭಿನಂದನಮಾಡುತ್ತೇವೆ.

ಸೆಕ್ರೆಟರಿ,
ಆನಂದಾಶ್ರಮ ಗ್ರಂಥಭಾಂಡಾರ.

---

## ವೀರಶೈವ ವಿದ್ಯಾರ್ಥಿ ನಿಲಯದ ಪ್ರವೇಶೋತ್ಸವ.

ತಾ. ೨೮-೮-೩೭ ರಲ್ಲಿ ಹರಪನಹಳ್ಳಿಯಲ್ಲಿ ಬಳ್ಳಾರಿ ಮಂಡಲದ ವೀರಶೈವ ಮಹಾ ಜನ ಉದಾರಾಶ್ರಯದಿಂದ ನಿರ್ಮಿತವಾದ ವೀರಶೈವ ವಿದ್ಯಾರ್ಥಿನಿಲಯದ ನೂ ತ ನ ಪ್ರವೇಶೋತ್ಸವದ ಸಮಾರಂಭವು ಅತ್ಯುತ್ಸಾಹದಿಂದ ನೆರವೇರಿಸಲ್ಪಟ್ಟಿತು.

ಮೊದಲೇ ಪ್ರಕಟವಾದ ಕಾರ್ಯಕ್ರಮಕ್ಕನುಸರಿಸಿ ತಾ. ೨೮-೮-೩೭ ಶನಿವಾರ ಮಧ್ಯಾಹ್ನ ೩ ಘಂಟೆಯಿಂದ ಮಂಗಳವಾದ್ಯಾದಿಗಳೊಡನೆ ಬೆಳಗಾವಿ ಲಿಂಗರಾಜ ಕಾಲೇಜದ ಪ್ರಿನ್ಸಿಪಾಲರಾದ ಶ್ರೀ. ನಂ ದಿ ಮ ಠ ಎಂ. ಎ. ಪಿ. ಹೆಚ್. ಡಿ. ಮತ್ತು ಶ್ರೀಯುತ ವೈ. ಮಹಾಬಲೇಶ್ವರಪ್ಪ ಡಿ. ಬೋರ್ಡ್ ಪ್ರೆಸಿಡೆಂಟ್ ಬಳ್ಳಾರಿ ಇವರೀರ್ವರನ್ನು ಉತ್ಸವದಿಂದ ವಿದ್ಯಾರ್ಥಿ ನಿಲಯದ ಬಳಿಗೆ ಕರೆತಂದಮೇಲೆ ಸ್ವಾಗತ ಸಭಾಧ್ಯಕ್ಷರಾದ ವೈ. ಮಹಾಬಲೇಶ್ವರಪ್ಪನವರು ಡಾ. ನಂದೀಮಠ ಇವರ ಪರಿಚಯವನ್ನು ವಿವರಿಸುವ ಪ್ರಥಮ ಭಾಷಣವನ್ನು ಮಾಡಿದರು. ಅನಂತರ ಡಾ. ನಂದೀಮಠ ಇವರು ಸಮಯೋಚಿತ ಭಾಷಣದೊಡನೆ ವಿದ್ಯಾರ್ಥಿ ನಿಲಯದ ದ್ವಾರೋದ್ಘಾಟನವನ್ನು ಮಾಡಿ ಸಮಸ್ತ ಮಹಾ ಜನರೊಡನೆ ನೂತನ ಪ್ರವೇಶವನ್ನು ಮಾಡಿದರು. ವಿದ್ಯಾರ್ಥಿ ನಿಲಯದ ಆವರಣದಲ್ಲಿ ಪಶ್ಚಿಮ ತಾಲೂಕುಗಳ ವೀರಶೈವ ಪ್ರಮುಖರು ಸುಮಾರು ೫೦೦ ಜನರು ನೇರಿದ್ದರು. ಹರಪನಹಳ್ಳಿ ತಹಸಿಲ್ದಾರರು - ಮೇಜಿಸ್ಟ್ರೇಟ ಮುಂತಾದ ಸರಕಾರ ಉದ್ಯೋಗಸ್ಥರು ಮತ್ತು ಜಿಲ್ಲಾ ಆರೋಗ್ಯಾಧಿಕಾರಿಗಳಾದ ಡಾ. ಕಮತರವರು ಸಭೆಗೆ ಆಗಮಿಸಿದ್ದರು. ಹಾಸ್ಟಲ್ ಕಮಿಟಿಯ ಜಾಯಿಂಟ್ ಸೆಕ್ರೆಟರಿಗಳಾದ ಸಿದ್ಧಲಿಂಗಯ್ಯನವರು ಬಿ. ಎ. ಎಲ್. ಟಿ. ಹಾಸ್ಟಲಿನ ವರದಿಯನ್ನು ಓದಿದರು. ಮತ್ತು ನಿಲಯದ ಕೋಣೆಗಳ ಪೂರ್ತಿ ಖರ್ಚು ರೂ. ೨೫೦ ಕೊಟ್ಟ ಮಹನೀಯರ ಅಭಿನಂದನ ಗೀತೆಗಳನ್ನು ಚೆನ್ನಬಸಯ್ಯ ಬಿ. ಎ. ಎಲ್. ಟಿ. ಇವರು ಓದಿದರು. ಇವುಗಳನಂತರ ಡಾ. ನಂದಿಮಠರವರು ವಿದ್ಯಾರ್ಥಿ ನಿಲಯಗಳ ಅವಶ್ಯಕತೆಗಳ ವಿ ಷ ಯ ದ ಬಗ್ಗೆ ವೀರಶೈವರ ಮುಂಜಾಗ್ರುತೆಯ ಬಗ್ಗೆ ಮತ್ತು ವಿದ್ಯಾರ್ಥಿಗಳ ವಿದ್ಯಾ ಸಂಪಾದನೆಯನ್ನೂ ಕುರಿತು ಅಮೋಘವಾದ ಭಾಷಣಮಾಡಿದರು. ವಿದ್ಯಾರ್ಥಿ ನಿಲಯದ ಜೀವನ ಆಧುನಿಕ ಪ್ರೌಢ ಶಿಕ್ಷಣದ ಅವಶ್ಯಕತೆ ವಿದ್ಯಾರ್ಥಿಗಳಲ್ಲಿರಬೇಕಾದ ಗುಣಗಳನ್ನು ವೀರಶೈವರಲ್ಲಿ ಪರಮತದ ವಿದ್ಯಾರ್ಥಿಗಳಲ್ಲಿರಬೇಕಾದ ಸೌಹಾರ್ದತೆ ಮತ್ತು ಸಹಾನುಭೂತಿಗಳನ್ನು ಜನರ ಮೇಲೆ ಒಳ್ಳೇ ಪರಿಣಾಮವಾಗುವಂತೆ ಉಪದೇಶವನ್ನಿತ್ತರು. ಇವರ ಭಾಷಣದನಂತರ ಸಭಾಧ್ಯಕ್ಷರಾದ ವೈ. ಮಹಾಬಲೇಶ್ವರಪ್ಪ ( ಡಿ. ಎಲ್. ಬಿ. ಅಧ್ಯಕ್ಷ )ನವರು ತಮ್ಮ ಉಪಸಂಹಾರಾತ್ಮಕ ಭಾಷಣವನ್ನು ಮಾಡಿದರು. ಹಿಂದುಳಿದ ವೀರಶೈವ ಜನಾಂಗದಲ್ಲಿ ಎಷ್ಟೋ ಶ್ರೀಮಂತರು ಇದ್ದರೂ ವಿದ್ಯಾಪ್ರಸಾರಕ್ಕಾಗಿ ಧನ ವ್ಯಯಮಾಡದೆ ಇರುವುದು ಅತಿ ಖೇದಕರವಾದದ್ದೆಂದು, ಇನ್ನಾದರೂ ಈ ಪ್ರಾಂತದವರು ಎಚ್ಚತ್ತು ಇಂತಹ ಅವಶ್ಯ ಕಾರ್ಯಗಳನ್ನು ಮಾಡಿ ಸಮಾಜವನ್ನು ಅಭಿವೃದ್ಧಿಗೊಳಿಸಲೆಂದು ಹಾರೈಸಿದರು. ಸಮಾಜದಲ್ಲಿ ನಿರಕ್ಷರತೆಯನ್ನು ಹೋಗಲಾಡಿಸುವುದಕ್ಕಾಗಿ ವಿದ್ಯಾಪ್ರಿಯವರ್ಧಕ ಶ್ರೀಯುತ ತೋಗರಿ ವೀರಪ್ಪನವರು ಮಾಡಿಯು, ಮಾಡುತ್ತಲು ಇರುವ ಸಾಹಸ ಕಾರ್ಯಗಳನ್ನು ವಿವರಿಸಿದರು. ಈ ಮಹನೀಯರ ಕಾರ್ಯಗಳನ್ನು ಮಾದರಿಯಾಗಿಟ್ಟುಕೊಂಡು ಸರ್ವರು ಶಕ್ತ್ಯಾನುಸಾರ ಸಮಾಜ ಸೇವೆಯನ್ನು ಮಾಡಬೇಕೆಂತಲೂ ಪ್ರತಿ ವರ್ಷದಲ್ಲಿ ಇಂಥ ನಿಲಯಗಳು ನೂತನವಾಗಿ ಉದಯವಾಗಬೇಕೆಂತಲೂ ಮತ್ತು ಡಾ. ನಂದಿಮಠ ಇವರಂತಹ ಸತ್ಪುರುಷರು ಆಗಾಗ್ಗೆ ಬಳ್ಳಾರಿ ಜಿಲ್ಲೆಗೆ ಆಗಮಿಸಿ ಸರ್ವರನ್ನು ಜಾಗೃತಗೊಳಿಸಲೆಂದು ಮತ್ತು ಈ ಜಿಲ್ಲೆಯ ವೀರಶೈವರಿಗೆ ಇಂತಹ ಕಾರ್ಯಗಳಿಗೆ ಪ್ರೋತ್ಸಾಹ ಕೊಡುವ ಸದ್ಬುದ್ಧಿಯನ್ನು ಶ್ರೀ ಪರಮಾತ್ಮನು ದಯಪಾಲಿಸಲೆಂದು ಬಯಸಿದರು.

ಹಾಸ್ಟಲನ್ನು ತೃಪ್ತಿಕರವಾಗಿಯೂ, ಸಕಾಲದಲ್ಲಿಯೂ ಕಟ್ಟಿ ತಯಾರುಮಾಡಿದ್ದಕ್ಕಾಗಿ ಕಂಟ್ರಾಕ್ಟರು ಮಾದೇವಪ್ಪನಿಗೆ ಸುವರ್ಣ ಪದಕ ಒಂದನ್ನು, ಕೀರ್ತನಕಾರರಾದ ಚನ್ನಬಸವ ಶಾಸ್ತ್ರಿಗಳಿಗೆ ಸುವರ್ಣ ಪದಕವೊಂದನ್ನು ಮತ್ತು ಕಂಚಿಕೇರಿ ಇವರಿಗೊಂದು ಸುವರ್ಣ ಪದಕವೊಂದನ್ನು ಶ್ರೀ. ನಂದೀಮಠ ಇವರ ಅಮೃತ ಹಸ್ತದಿಂದ ಮೇಲೆ ಕಾಣಿಸಿದವರಿಗೆ ಕೊಡಲ್ಪಟ್ಟನಂತರ ಸಭಾಧ್ಯಕ್ಷರಿಗೆ - ನಂದೀಮಠರವರಿಗೆ - ಬಂದ ಮಹನೀಯರಿಗೆಲ್ಲ ಆಭಾರ ಮನ್ನಣೆಯನ್ನು ಮಾಡಿದನಂತರ ಸಭೆಯು ವಿಸರ್ಜಿಸಲ್ಪಟ್ಟಿತು.

ರಾತ್ರಿ ೯ ಘಂಟೆಗೆ ಬಂದ ಮಹನೀಯರಿಗೆಲ್ಲ ಮೃಷ್ಟಾನ್ನ ಭೋಜನದಿಂದ ಸತ್ಕಾರಮಾಡಲ್ಪಟ್ಟಿತು. ಓರ್ವ ಸಭಿಕ.

## ಅನುಭವಿಕನ ಹಿತೋಕ್ತಿ.

(೧) ನದಿಯು ತನ್ನ ನೀರನ್ನು ಹೇಗೆ ತಾನು ಪಾನಮಾಡುವುದಿಲ್ಲವೋ ಮತ್ತು ವೃಕ್ಷವು ತನ್ನ ಫಲವನ್ನು ಹೇಗೆ ತಾನು ಸೇವಿಸುವುದಿಲ್ಲವೋ ಅದರಂತೆಯೇ ಮಹಾ ಪುರುಷರ ಸಂಪಾದನೆಯು ಅವರ ಸ್ವಂತದ ಸ ಲು ವಾ ಗಿ ಇರದೆ ಜನಾಂಗಕ್ಕಾಗಿಯೇ ಇರುತ್ತದೆ.

(೨) ನದಿಯಲ್ಲಿ ಹರಿಯುವುದಾದರೂ ನೀರೇ. ಮತ್ತು ಗಟಾರದಲ್ಲಿ ಹರಿಯುವುದಾದರೂ ನೀರೆ. ಆದರೆ ಸತ್ಸಂಗದಿಂದ ನದಿಯ ನೀರು ಕುಡಿಯಲು ಯೋಗ್ಯವಾಗಿದೆ. ಗಟಾರದ ನೀರು ದುಸ್ಸಂಗದಿಂದ ಕುಡಿಯಲು ಆಯೋಗ್ಯವಾಯಿತು.

(೩) ಮನುಷ್ಯನು ನಿಜವಾಗಿ ಒಂದು ಹೂವಾಗಿದ್ದಾನೆ. ಅವನು ಜನಾಂಗದ ಶಿರಸ್ಸಿನ ಮೇಲೆ ಶೋಭಿಸುವನು. ಅಥವಾ ಅಡವಿಯಲ್ಲಿಯೇ ಅರಳಿ ಬಾಡಿ ಬಿದ್ದು ಹೋಗುವನು.

(೪) ಶಕ್ತಿಯ ಪ್ರಭೆಯು ಗುಡಿಸಲಲ್ಲಿಯೇ ಇರುತ್ತದೆಯೇ ಹೊರತು ದೊಡ್ಡ ದೊಡ್ಡ ಭವನಗಳಲ್ಲಿ ಇರುವುದಿಲ್ಲ.

(೫) ಸಾಮರ್ಥ್ಯವು ಅಶಕ್ತರನ್ನು ಬಗ್ಗು ಬಡಿವುದಕ್ಕಾಗಿಲ್ಲ. ಆದರೆ ಅವರ ಸಹಾಯಕ್ಕಾಗಿ ಉಪಯೋಗಿಸಲ್ಪಡತಕ್ಕದ್ದಾಗಿದೆ.

(೬) ಒಂದು ಪಾಪವು ಅನೇಕ ಪುಣ್ಯ ಕಾರ್ಯಗಳನ್ನು ಅಡಗಿಸುತ್ತದೆ. ಆದರೆ ಅನೇಕ ಪುಣ್ಯ ಕಾರ್ಯಗಳು ಒಂದು ಪಾಪವನ್ನು ಅಡಗಿಸಲಾರವು.

(೭) ಮನುಷ್ಯನು ಸಂಕಟ ಸ ಮ ಯ ದ ಲ್ಲಿ ಹೊಂದಿದಷ್ಟು ತಿಳುವಳಿಕೆಯನ್ನು ಇನ್ನಾವ ಕಾಲದಲ್ಲಿಯೂ ಹೊಂದಲಾರನು.

(೮) ಯಾರು ಆಣೆಮಾಡಿ ವ ಚ ನ ವ ನ್ನು ಕೊಡುತ್ತಾರಿಯೋ ಅವರಮೇಲೆ ಸಂಪೂರ್ಣ ನಂಬಿಕೆಯನ್ನಿಡಬೇಡ.

(೯) ಸುಖದಿಂದ ಜೀವಿಸಬೇಕಾದರೆ ಉದ್ರಿಯಿಂದ ಕೊಳ್ಳಬೇಡ.

" ಕ್ರಾಂತಿ. "

---

ಪಂಢರಪುರ ಹಿಂದು ಮಹಾ ಸಭೆಯವರು ಮುಸಲ್ಮಾನರಾಗಿದ್ದ ೩ ಜನರನ್ನು ಕಳೆದ ೧೫ ನೆಯ ತಾರೀಖಿನ ದಿವಸ ಶುದ್ಧಗೊಳಿಸಿ ಹಿಂದುಧರ್ಮದಲ್ಲಿ ತೆಗೆದುಕೊಂಡರು.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣಮಂದಿರದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರಿ! ದಾಕ್ಷಿಣ್ಯಪರನಲ್ಲ! ಲೋಕವಿರೋಧಿ! ಶರಣನಾರಿಂಗೂ ಅಂಜುವವನಲ್ಲ!
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ ವ. ೨೨೮ ॥ ಮಹಾನುಭಾವಿ ಬಸವಣ್ಣನವರು.


ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು,

ಬಿಡಿಸಂಚಿಕೆಗೆ ೧ ಅಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೧೩ನೆಯ ಸಪ್ಟೆಂಬರ್ ೧೯೩೭. | ಸಂಚಿಕೆ ೪


ಜನಸೇವೆಯೇ ದೇವರ ಸೇವೆ.

## ಜಾಗ್ರತೆ ಆರೋಗ್ಯ ದೊರೆಯಲಿ.

ಮಹಾತ್ಮಾ ಗಾಂಧಿ, ಡಾ. ರಬೀಂದ್ರನಾಥ ಟಾಗೋರ, ಪಂಡಿತ ಮಾಲವೀಜಿ, ಸರ್ ಸಪ್ರು, ವೀರ ನರಿಮನ್ ಈ ಮುಖಂಡರು ಈ ವಾರದಲ್ಲಿ ಹಾಸಿಗೆ ಹಿಡಿದಿದ್ದಾರೆ.

ಜಾಗ್ರತೆ ಆರೋಗ್ಯ ದೊರೆಯಲೆಂದೇ ರಾಷ್ಟ್ರವು ಹಾರೈಸುತ್ತದೆ.

## ಗಡಿನಾಡಿನಲ್ಲಿ ಕಾಂಗ್ರೆಸ್ ರಾಜ್ಯ.

ಡಾ. ಖಾನ ಸಾಹೇಬರು ಮುಖ್ಯ ಮಂತ್ರಿಗಳು.

ಕಂದಾಯದ ಮಂತ್ರಿಗಳಾದ ಶ್ರೀ ದೇಸಾಯಿಯವರು ತಾ. ೧೦ ನೆಯ ದಿನ ವಿಜಾಪುರ ಜಿಲ್ಲೆಗೆ ಆಗಮಿಸಿದರು, ಅಪೂರ್ವ ಸಮಾರಂಭ ಜರುಗಿತು. ಜನರ ಕಷ್ಟನಷ್ಟಗಳನ್ನು ಕಣ್ಣಾರೆನೋಡಿ ಮರುಗಿದರು.

## ಈ ವಾರದ ಪತ್ರಿಕೆಯಲ್ಲಿ ಏನಿದೆ?

ರಾಜಕಾರಣದಲ್ಲಿಯ ಅಸ್ಪೃಶ್ಯರು! ದೇವರು ಕೊಟ್ಟರೂ ಪೂಜಾರಿ ಬಿಡ.
ಲೋಕಮತಕಾರರ ವಿಚಾರ ವಿಮರ್ಶೆ. ಅಲ್ಲಲ್ಲಿ ಲಿಂಗಧಾರಣ ಸಮಾರಂಭ.
ಕಾಂಗ್ರೆಸ್ಸಿನ ಮಹತ್ವದ ವಿಜಯ.

ದೇಶವೇ ದೇವಾಲಯ.

ಓಂ

# ಶರಣ ಸಂದೇಶ.

ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೧೩ ನೆಯ ಸಪ್ಟೆಂಬರ್ ೧೯೩೭. | ಸಂಚಿಕೆ ೪

## ಮಹತ್ವದ ಸುದ್ದಿಗಳು.

—ಹರಿಪುರ ಕಾಂಗ್ರೆಸ್ಸಿನ ಕಾರ್ಯ ಕ್ಷೇತ್ರದಲ್ಲಿ ಕಟ್ಟಲ್ಪಡುವ ಕಾಂಗ್ರೆಸ್ ನಗರದ ಅಡಿಗಲ್ಲನ್ನಿಡುವ ಶುಭ ಮಹೋತ್ಸವವು ಪಂಡಿತ ಜವಾಹರಲಾಲರ ಹಸ್ತದಿಂದ ಬರುವ ತಿಂಗಳು ೧೪ ನೆಯ ತಾರೀಖಿನ ದಿವಸ (ವಿಜಯಾ ದಶಮಿ) ಜರುಗುವುದು.

—ಆಲ್ ಇಂಡಿಯಾ ಕಾಂಗ್ರೆಸ್ ಕಮಿಟಿಯ ಅಧಿವೇಶನವು ಬರುವ ತಿಂಗಳ ಕೊನೆಯಲ್ಲಿ ಕಲಕತ್ತಾದಲ್ಲಿ ಕೂಡುವುದೆಂದೂ ಆ ಕಾಲಕ್ಕೆ ಶ್ರೀ. ಸುಭಾಷಚಂದ್ರ ಬೋಸರು ಅಲ್ಲಿ ಇರುವರೆಂದೂ ಊಹಿಸಲಾಗಿದೆ.

—ಮುಂಬೈ ಪ್ರಾಂತದ ಎರಡೂ ಶಾಸನಮಂಡಲಗಳ ಸಭಾಸದರಿಗೆ ತಿಂಗಳಿಗೆ ೭೫ ರೂ. ವೇತನ ಮತ್ತು ಶಾಸನ ಮಂಡಲಗಳ ಕೆಲಸ ನಡೆದಾಗ ದಿವಸಕ್ಕೆ ೩ ರೂ. ಭತ್ತೆ ದೊರೆಯುವುದೆಂದು ಸರಕಾರಿ ಪತ್ರಿಕೆಯಲ್ಲಿ ಪ್ರಕಟವಾಗಿದೆ.

—ಬ್ಯಾ. ಸಾವರಕರರು ಸೊಲ್ಲಾಪುರಕ್ಕೆ ಬಂದಾಗ ನಡೆದ ಅತ್ಯಾಚಾರಗಳ ಸಂಬಂಧವಾಗಿ ಉಂಟಾದ ವ್ಯಾಜ್ಯವು ಅಲ್ಲಿಯ ಸಿಟಿಮ್ಯಾಜಿಸ್ಟ್ರೇಟರಲ್ಲಿ ತಾ. ೧೫-೯-೩೭ ನೆಯ ದಿವಸ ವಿಚಾರಣೆ ನಡೆಯುವುದು.

—ಪಾಣಿಪತ್ತದಿಂದ ೬ ಮೈಲಿನ ಮೇಲಿರುವ ಬಹಾದ್ದೂರ ಎಂಬ ಹಳ್ಳಿಯಲ್ಲಿ ಹಿಂದು-ಮುಸಲ್ಮಾನರ ದೊಂಬಿಯಾಗಿ ಅನೇಕರಿಗೆ ಗಾಯವಾಗಿದೆ.

—ಸಂಯುಕ್ತ ಪ್ರಾಂತದಲ್ಲಿ ಮದ್ಯಪಾನ ನಿರೋಧವು ಈ ವರುಷ ಶಕ್ಯವಿಲ್ಲವೆಂದು ಅಲ್ಲಿಯ ಸರಕಾರವು ತಿಳಿಸಿದೆ.

—ಅಕ್ಕಲಕೋಟಿ ಸಂಸ್ಥಾನಾಧಿಪತಿಗಳು ತಮ್ಮ ಸಂಸ್ಥಾನದಲ್ಲಿ ಗೋಹತ್ಯ ಪ್ರತಿಬಂಧದ ಶಾಸನವನ್ನು ಮಾಡಿದರು. ಮತ್ತು ಪ್ರಜೆಗಳ ಹೇಳಿಕೆಯನ್ನು ಕೇಳಲು ಮಂಗಳವಾರ ಮತ್ತು ಶುಕ್ರವಾರ ಮಧ್ಯಾಹ್ನ ೨ ತಾಸು ಕಾದಿಟ್ಟಿದ್ದಾರೆ.

—ಸಂಯುಕ್ತ ಪ್ರಾಂತದ ಮುಖ್ಯ ಮಂತ್ರಿಗಳಾದ ಶ್ರೀ. ಪಂತರು ತಮ್ಮ ಆಯವ್ಯಯ ಪತ್ರಿಕೆಯ ಭಾಷಣವನ್ನು ಹಿಂದಿ ಮತ್ತು ಉರ್ದು ಭಾಷೆಗಳಲ್ಲಿ ಮುಂಚೆಯೇ ಮುದ್ರಿಸಿ ಅಸೆಂಬ್ಲಿ ಸಭಾಸದರಿಗೆ ಕೊಟ್ಟಿದ್ದರು.

—ಲಾಹೋರಿನಲ್ಲಿ ಕಟ್ಟಲಿರುವ ಗೋವಧಾಲಯದ ನಿಷೇಧವನ್ನು ಕುರಿತು ಗಾಂಧೀಜಿಯವರು ಹೀಗೆ ಹೇಳಿದ್ದಾರೆ—

"ಎಲ್ಲಾ ಗೋವಧಾಲಯಗಳನ್ನು ನಿಷೇಧಿಸುವಂತೆ ನಾನು ಇದನ್ನೂ ನಿಷೇಧಿಸುತ್ತೇನೆ. ಲಾಹೋರಿನ ಮುಸಲ್ಮಾನರೂ ಈ ಗೋವಧಾಲಯದ ವಿರೋಧವಾಗಿ ಪ್ರಯತ್ನಿಸಿದರೆ ಅದನ್ನು ಯಾರೂ ಕಟ್ಟಲಾರರು."

—ಲಾಹೋರಿನ ಗೋವಧಾಲಯದ ವಿರುದ್ಧವಾಗಿ ಅಮೃತಸರದವರು ಸತ್ಯಾಗ್ರಹವನ್ನು ಪ್ರಾರಂಭಿಸುವ ಯೋಚನೆಯಲ್ಲಿದ್ದಾರೆ.

—ಶ್ರೀಮತಿ ಕಮಲಾದೇವಿಯವರು ಮೈಸೂರಲ್ಲಿ ಒಂದು ತಿಂಗಳವರೆಗೆ ಎಲ್ಲಿಯೂ ಭಾಷಣ ಮಾಡಬಾರದಾಗಿ ಸಿಟಿ ಮ್ಯಾಜಿಸ್ಟ್ರೇಟರು ಅಪ್ಪಣೆ ಮಾಡಿದ್ದಾರೆ.

—ಮೈಸೂರು ಪ್ರಾಂತದಲ್ಲಾಗುತ್ತಿರುವ ವ್ಯಕ್ತಿ ಸ್ವಾತಂತ್ರ್ಯದ ಪ್ರತಿಬಂಧ ನಿವಾರಣೆಗಾಗಿ ಆ ಭಾಗದ ಕಾಂಗ್ರೆಸ್ ಕೆಲಸಗಾರರು ಸತ್ಯಾಗ್ರಹ ಪ್ರಾರಂಭಿಸುವ ಯೋಚನೆಯಲ್ಲಿದ್ದಾರೆ.

—ಹರಿಪುರದಲ್ಲಿ ಬರುವ ಫೆಬ್ರುವರಿ ತಿಂಗಳಲ್ಲಿ ಕೂಡುವ ೫೧ ನೆಯ ರಾಷ್ಟ್ರೀಯ ಸಭೆಗೆ ಶ್ರೀ. ಸುಭಾಷಚಂದ್ರ ಬೋಸರವರೇ ಅಧ್ಯಕ್ಷರಾಗುವರೆಂದು ತಿಳಿಯಲಾಗಿದೆ.

—ಗಡಿನಾಡಿನಲ್ಲಿ ಕಾಂಗ್ರೆಸ್ ಪಕ್ಷವು ಬಹುಮತವನ್ನು ಹೊಂದಿ ಅಧಿಕಾರವನ್ನು ಸ್ವೀಕರಿಸಿತು. ಡಾ. ಖಾನಸಾಹೇಬರು ಮುಖ್ಯ ಮಂತ್ರಿಗಳಾದರು. ಕಾಂಗ್ರೆಸ್ಸಿನ ರಾಜ್ಯ ಏಳು ಪ್ರಾಂತಗಳಲ್ಲಿ ಪ್ರಾರಂಭವಾದಂತಾಯಿತು.

—ಲಾಹೋರಿನಲ್ಲಿ ಕಟ್ಟಲ್ಪಡುತ್ತಿರುವ ಗೋವಧಾಲಯದ ನಿಷೇಧವಾಗಿ ಸಿಮಲಾದಲ್ಲಿ ಹರತಾಳವು ಆಚರಿಸಲ್ಪಟ್ಟಿತು.

# ದೇವರು ಕೊಟ್ಟರೂ ಪೂಜಾರಿ ಬಿಡ!

(ಶ್ರೀ. ಪಂಡಿತ ತಾರಾನಾಥರಾಯರು, 'ಪ್ರೇಮಾಯತನ' ತುಂಗಭದ್ರಾ.)

ಈಗ ಕೊಂಗ್ರೆಸ್ ಸರಕಾರವು ನಮ್ಮ ಪ್ರಾಂತ್ಯಗಳನ್ನಾಳು ತ್ತಿದೆ ಎಂಬುದು ಎಲ್ಲರಿಗೂ ಗೊತ್ತೇ. ೬ ಪ್ರಾಂತ್ಯಗಳಲ್ಲಿ ಕೊಂಗ್ರೆ ಸ್ಸಿನದೇ ಅಧಿಕಾರ ಈಗ. ಆದರೆ ಅಷ್ಟರಮಾತ್ರಕ್ಕೆ ನಮ್ಮ ಹಳ್ಳಿ ಗಳ ಉದ್ಧಾರವಾದೀತು ಎಂದು ತಿಳಿಯುವುದು ಹಗಲ ಕನಸು.

ಹಳ್ಳಿಯವರ ಉದ್ಧಾರಕ್ಕಾಗಿ ನಮ್ಮ ಕೌನ್ಸಿಲ್ ಎಸೆಂಬ್ಲಿ ಗಳಲ್ಲಿ ಹೊಸ ಹೊಸ ಕಾನೂನುಗಳುಂಟಾಗಬಹುದು. ಅವುಗಳನ್ನೇ ನಡಿಸಲಿಕ್ಕೆ ಹೊಸ ಹೊಸ ಹುದ್ದೇದಾರರೂ ಉಂಟಾಗಬಹುದು. ಅವರಲ್ಲೆಲ್ಲ ಅಪಾರವಾದ ತಾಯಿತನವೂ ಇದೆ ಎಂದು ಇಟ್ಟುಕೊ ಳ್ಳೋಣ. ಇಷ್ಟಾದರೂ ಎರಡು ಮಾತುಗಳು ಉಳಿದವು. (೧) ಮಗು ಕೂಗಬೇಕು. (೨) ಕೂಗಿದ್ದು ಅಲ್ಲಿಯವರಿಗೆ ಕೇಳಿ ಸಬೇಕು.

ಅಹುದು ಮಗು ಕೂಗಬೇಕು. ಆದರೆ ಕೂಗುತ್ತದೆ ಎಂದು ಅಫೀಮು ತಿನ್ನಿಸುವ ರೂಢಿಯನ್ನು ಅದಕ್ಕೆ ಆಗಲೇ ಮಾಡಿಸಿದ್ದರೆ ಏನು ಗತಿ? ನಮ್ಮ ಬಡ ಹಳ್ಳಿಯವರು ಮೊದಲೇ ಮಕ್ಕಳಿಗಿಂತ ಕಡೆ. ಆದರಲ್ಲಿಯೂ ಬ್ರಿಟಿಷ್ ಸರಕಾರದ ಇಷ್ಟು ವರ್ಷದ ಆಡ ಳಿತದಲ್ಲಿಯೂ ಅಫೀಮು ಚೆನ್ನಾಗಿ ಬಿದ್ದಿದೆ ಅವಕ್ಕೆ! ಸರಕಾರ ಅಂದರೆ 'ಮಾಬಾಪ' ಎಂದು ಹೇಳುವಷ್ಟಕ್ಕೇ ಇದೆ ಆ ಮಿಾಶೆಯ ಮಕ್ಕಳ ಬುದ್ಧಿ! ಅಂಥ ಮದ್ದಿನ ಜೋರಿನಿಂದ ಹಸಿವೆಗೆ ಕೂಡ ಅಳುವ ಗುಣ ಕುಂದಿಹೋಗಿದೆ! ಹೀಗಿರುವಾಗ ಮೊದಲು ಅವು ಗಳಿಗೆ ಅಫೀಮಿನ ರೂಢಿ ತಪ್ಪಿಸಬೇಕಲ್ಲವೆ? ಸರಕಾರವೆಂದರೆ "ಮಾ-ಬಾಪ" ಎಂಬ ಅಫೀಮಿನ ಅಮಲು ಹೋಗಬೇಕಾದರೆ ಮೊದಲು ಯೋಗ್ಯವಾದ ಶಿಕ್ಷಣವಾಗಬೇಕು. ಶಿಕ್ಷಣವೆಂದರೆ ಬರೀ ಗೌಡ-ಕುಲಕರ್ಣಿ, ಪಟೀಲ-ಪಟವಾರಿ ಕೆಲಸಕ್ಕೆ ಬೇಕಾದ ತರಬೇತು ಮಾತ್ರವಲ್ಲ 'ಸರಕಾರ ಎಂದರೆ ತಮ್ಮನ್ನು ಆಳುವವರ ಕಾಟ ವಲ್ಲ, ತಮ್ಮ ಆಳುಗಳ ಕೂಟ' ಎಂಬ ಭಾವನೆಯು ಅವರಲ್ಲಿ ಮೂಡಬೇಕು. ಆ ಸರಕಾರವನ್ನು ಹುಟ್ಟಿಸುವ ಅಳಿಸುವ ಶಕ್ತಿಗಳು ತಮ್ಮನ್ನು ಸೇರಿಕೊಂಡಿರುವ ವಿಷಯಗಳು ಎಂಬ ಮನವರಿಕೆ ಅವ ರಿಗಾಗಬೇಕು. ಇಷ್ಟಾಗಬೇಕಾದರೆ ಬರೀ ಸಾಕ್ಷರತೆ ಒಂದೇ ಸಾಲದು. ಶಿಕ್ಷಣದ ಧಾಟಿಯೇ ಮಾರ್ಪಡಬೇಕು. ಮೊದಲು ಶಿಕ್ಷ ಕರ ಹೃದಯವೇ ಬದಲಾಗಿ ಹೋಗಬೇಕು.

ಇಲ್ಲವಾದರೆ ಬರೀ ಓದುಬರಹದಿಂದಾಗುವ ಲಾಭ ಎಂದರೆ, ಅದು ಯಾರಿಗೆ ಬಾರದೋ ಅಂಥವರ ವಂಚನೆ. ಈಗಲಾದರೂ ಅನೇಕ ಹಳ್ಳಿಗಳಲ್ಲಿ ಓದುಬರಹ ಬಲ್ಲವರು ಇದ್ದಾರೆ. ಆದರೆ ಇವರು ಮಾಡುವ ಕೆಲಸವೇನು? ಬಡಬಗ್ಗರ ಮೋಸ. ಇವರ ಆದರ್ಶ ವೇನು? ಇಷ್ಟೆ- ಊರ ಕುಲಕರ್ಣಿ-ಶಾನುಭಾಗರ ಸಹವಾಸ ಬೇಕು. ಊರ ಸಾಹುಕಾರನ ಕೃಪಾಛತ್ರದಲ್ಲಿರಬೇಕು. ಅಲ್ಲಿರುವ ಯಾವ ದಾದರೊಂದು ಪಾರ್ಟಿಗೆ ಸೇರಬೇಕು. ಅಲ್ಲ-ಸಲ್ಲದ ಜಗಳ ಬಂಡಾ ಟಗಳನ್ನು ಎಬ್ಬಿಸಬೇಕು. ಈಗ ಕಂಡುಬರುವ ಶಿಕ್ಷಣದ ಫಲ ಎಂದರೆ ಇಷ್ಟೆ! ಅಂಥ ಶಿಕ್ಷಣವು ಲುಚ್ಚಾ-ಲಫಂಗರ ಬತ್ತಳಿಕೆಗೆ ಇನ್ನೂ ಹತ್ತು ಬಾಣಗಳನ್ನು ಸೇರಿಸಿದಂತೆಯೇ!

ಸದ್ಯಕ್ಕೆ ಹಳ್ಳಿಗಳ ಆಡಳಿತೆ ಎಂದರೆ ಇಂಥವರ ದರ್ಬಾರೀ! ಬ್ರಿಟಿಷ್ ಪಾರ್ಲಿಮೆಂಟಿಗೆ ಹೇಗೆ "ಮೆನ್-ಆನ್-ದಿ-ಸ್ಪೊಟ" (Man - on - the - spot) ನ ಉನ್ಮಾದವಿದೆಯೋ ಹಾಗೆಯೇ ಈ ಹಳ್ಳಿಯ ಗೌಡ್ರ, ಸಾಹುಕಾರ, ಕುಲಕರ್ಣಿ ಮತ್ತು ಇವರ [illegible]ಗರ ನ್ಯಾಯಾ ವಿಶ್ವಾಸ. ಇಂಡಿಯಾದಲ್ಲಿ ಆಯ್. ಸಿ. ಎಸ್ಸರ ಕೂಟವು ಆಡಿದ್ದೇ, ಅವರು ಮಾಡಿದ್ದೇ ಗವರ್ನರರಿಗೆ ನ್ಯಾಯ; ಗವರ್ನರರು ಮಾಡಿದ್ದೇ ವೈಸ್‌ರಾಯನಿಗೆ ನ್ಯಾಯ, ಈತ ಮಾಡಿದ್ದೇ ಸೆಕ್ರೆಟರಿ ಆಫ್ ಸ್ಟೇಟಿಗೆ ಪರಮ ಧರ್ಮ. ಆತ ಮಾಡಿದ್ದೇ ಪಾರ್ಲಿಮೆಂಟಿಗೆ ಕೈವಲ್ಯ ಹೀಗಿದೆ ಈ ಹಾಳು ಸರಣಿ! ಹಾಗೆಯೇ 'ಗೌಡ-ಕುಲ ಕರ್ಣಿ ಎಂಡ್ ಕಂಪನಿ' ಯವರು ಮಾಡಿದ್ದು ತಹಸೀಲ್ದಾರ್, ಮಾಮಲೇದಾರರಿಗೆ ಸರಿಯಾದ ಕಾಯಿದೆ! ಮತ್ತೆ ಇವರು ಗೀ ಚಿದ್ದೇ ಕಲೆಕ್ಟರರಿಗೆ ಅನಾದಿಗ್ರಂಥ! ಸರಿ, ಸರಪಣಿಯು ಕೆಳಗಿ ನಿಂದ ಮೇಲಿನವರೆಗೆ ನಮ್ಮ ಹಳ್ಳಿಯಿಂದ ಬ್ರಿಟಿಷ್ ಪಾರ್ಲಿಮೆಂ ಟಿನ ವರೆಗೆ ಉದ್ದಕ್ಕೆ ಹೋಯಿತು! ಇಂಥ ಪರಿಸ್ಥಿತಿಯಲ್ಲಿ ಬೋರೇ ಗೌಡನನ್ನು ಕೇಳುವವರಾರು? ಬಡ ರೈತನಿಗೆ ದಿಕ್ಕು ಯಾರು? ಆ ಮಗು ಕೂಗುವುದಕ್ಕೆ ಇನ್ನೂ ಕಲಿಯಲಿಲ್ಲ!

ಪರದೇಶಿ ಸರಕಾರ ಮತ್ತು ಅದರ ಹುದ್ದೇದಾರರ ಕಾಟ, ಒಂದು ಕಡೆಯಿಂದ ಹಳ್ಳಿಗರ ಬಾಯಿ ಮುಚ್ಚಿದರೆ ಇನ್ನೊಂದು ಕಡೆಯಿಂದ ಧರ್ಮವು ಇವರ ಗಂಟಲನ್ನೇ ಹಿಡಿದುಕೊಂಡು ಕೂ ತಿದೆ. 'ಆದದ್ದಾಗಲಿ ಗೋವಿಂದನ ದಯ ಒಂದಿರಲಿ' ಎಂಬ ಭರ ವಸೆಯಿಂದ 'ರಾಮನಾಳಿದರೇನು ರಾವಣನಾಳಿದರೇನು' ಎಂದು ಕೊಂಡು ಬಾಯಿ ಮುಚ್ಚಿಕೊಂಡು ಬಿದ್ದಿರುವುದೇ ಇವರ ನೂರಾರು ವರ್ಷಗಳ ಸಂಪ್ರದಾಯವಾಗಿ ಕೂತಿದೆ. ಈ ಸಂಪ್ರದಾಯಗಳಿಗೆ ಎಲ್ಲ ಕಡೆಗಳಿಂದಲೂ ಏಟು ಹಾಕಿ, "ಪುಣ್ಯವಂತ" ರಂತೆಯೇ ತಮಗೂ ಸುಖವಾಗಿ ಬದುಕಿರುವ ಹಕ್ಕು ಇದೆ, ಶಕ್ತಿಯಿದೆ.... ಎಂಬುದನ್ನೇ ಅವರಿಗೆ ಈಗ ಕಲಿಸಬೇಕು, ಕಲಿಸುವವರು ಬೇಕು.

ಆದರೆ ಈ ಶಿಕ್ಷಣವನ್ನು ಶಾಲೆಗಳಲ್ಲಿಯ ಮಕ್ಕಳಿಗೆ ಕೊಡ ಬೇಕೋ? ಶಾಲೆಯ ಹೊರಗೆ ಇತರರಿಗೆ ಕೊಡಬೇಕೋ? ಇಬ್ಬ ರಿಗೂ ಕಲಿಸಬೇಕು. ಆದರೆ ಮಕ್ಕಳಿಗೆ ಮಾತ್ರ ಬೇರೆಯಾಗಿ ಅದನ್ನೇ ಕಲಿಸುವುದಕ್ಕಾಗದು. ಯಾಕೆಂದರೆ ಅವರಿಗೆ ಕಿವಿಯ ಪಾಠಕ್ಕಿಂತಲೂ ಕಣ್ಣುಮುಂದಿನ ದೃಷ್ಟಾಂತವೇ ಮುಖ್ಯ. ದೊಡ್ಡ ವರ ಗುಣ-ನಡತೆಗಳನ್ನೇ ನೋಡಿ ಮಕ್ಕಳು ತಾವು. ಹೆಜ್ಜೆಹಾಕು ವರು. ಇದು ಅವರ ಸಹಜಪ್ರವೃತ್ತಿ. ಹೀಗಿರುವಾಗ ಅವರಿಗೆ ಶಾಲೆಗಳಲ್ಲಿ ಕಿವಿಗೆ ಬಿದ್ದುದು ಹೊರಗೆ ಹಿರಿಯರ ಜೀವನದಲ್ಲಿ ನೋಡಲಿಕ್ಕೂ ಧಾರಾಳವಾಗಿ ದೊರೆಯಬೇಕು. ಒಂದೇ ಮಾ ನಲ್ಲಿ ಹೇಳುವುದಾದರೆ— ಮಾದರಿ ಬೇಕು.

ಈ ಮಾದರಿ ಯಾರಾಗಬೇಕು? ಯಾರಾಗಬಲ್ಲರೊ, ಯಾ ರಾಗಿದ್ದರೋ ಅವರೇ ಅಲ್ಲದೆ ಇನ್ನಾರು ಮಾದರಿ ಆದಾರು? ಅವರು ಹಳ್ಳಿಗಳಲ್ಲಿಯೇ ಒಮ್ಮೆಗೆ ಹುಟ್ಟುವರೋ? ಇದು— ಅಸಾಧ್ಯ. ಸ್ವಾತಂತ್ರ್ಯಸಂಗ್ರಾಮದಲ್ಲಿ ಹಲವುಬಗೆಯ ಕಷ್ಟ-ನಷ್ಟಗಳ ಬೆಂಕಿ ಯಲ್ಲಿ ಕರಗಿ, ಮತ್ತೆ ಸ್ವಾತಂತ್ರ್ಯದ ನವರೂಪವನ್ನು ಪಡೆದವರು ಬೇಕು. ಅಂಥ ಮಾದರಿಗಳಾಗಲಿಕ್ಕೆ ಪಟ್ಟಣಗಳಲ್ಲಿ ಅಂಥ ಎಷ್ಟು ಮಂದಿ ಯುವಕರಿಲ್ಲ! ಅವರು ಏತಕ್ಕೆ ಹಳ್ಳಿಗಳಿಗೆ ಹೋಗಬಾರದು? ಅವರು ಹಳ್ಳಿಗೆ ಹೋಗಿದ್ದುಕೊಂಡರೆ, ಅವರ ನಿತ್ಯ ಜೀವನದಲ್ಲಿಯೇ ಬಡಹಳ್ಳಿಗರಿಗೆ ಎಷ್ಟೋ ಹಿತೋಪದೇಶವು ಒಡೆದು ತೋರದಿರದು. ಹಳ್ಳಿಯ ಹಳಬರು ಮಾರ್ಪಡುವುದು ಕಷ್ಟಸಾಧ್ಯವೇ ಆಗಿರ ಹುದು, ಆದರೂ ಇಂಥವರ ಸಹವಾಸದ ಪ್ರಭಾವದಿಂದ ಹಳ್ಳಿಯ ಯುವಕರು ಹುರಿಗೊಳ್ಳುವುದರಲ್ಲಿ ಸಂದೇಹವಿಲ್ಲ. ಹಳ್ಳಿಯ ರೈತರಿಗೆ ಧೈರ್ಯ ಬಂದು, ಅವರ ಬೇನೆಯ ಕೂಗು ಏಳುವ ಬುದಕ್ಕೆ ಸಂಶಯವಿಲ್ಲ. ಇದು ನಮ್ಮ ಅನುಭವದ ಮಾತು.

ಅವರ ಕಷ್ಟ-ನಷ್ಟಗಳನ್ನು ಮೊದಲು ಕೇಳಿಬರಬೇಕು. [illegible] ನ್ನು ಮುಂದೆ ಮೇಲಿನ ಅಧಿಕಾರಿಗಳಿಗೆ ತಿಳಿಸಬೇಕು. [illegible]ದಕ್ಕೂ ಸ್ವಾತಂತ್ರ್ಯಪ್ರಿಯ ಯುವಕರು ಹಳ್ಳಿಹಳ್ಳಿಯಲ್ಲಿ[illegible]

ಚಿಕ್ಕಪುಟ್ಟ ಸಂಸ್ಥೆಗಳನ್ನು ಇಡಬೇಕು. ಸರಕಾರವು ತೆರಿಗೆಯನ್ನು ಇಳಿಸಬಹುದು. ಆದರೆ ೮ ಆಣೆಯ ಜಾಗದಲ್ಲಿ ೧ ರೂಪಾಯಿ ರೈತನಿಂದ ವಸೂಲು ಮಾಡಿ, ೮ ಆಣೆಯ ರಸೀದಿಯನ್ನೇ ಆ ನಿರಕ್ಷರನಿಗೆ ಕೊಟ್ಟ ದೃಷ್ಟಾಂತಗಳು ಪ್ರತಿ ಜಮಾಬಂದಿಯ ಕಾಲಕ್ಕೂ ಇಲ್ಲಿ ನಮ್ಮ ಕಣ್ಣಿಗೆ ಬೀಳುತ್ತಲೇ ಇವೆ. ಹೀಗದೆ ಗೌಡ-ಕುಲಕರ್ಣಿಗಳ ಶಕುನಿಯಾಟ! ಗೌಡ-ಕುಲಕರ್ಣಿಗಳು ನಮಗೆ ಹೆದರಿಕೊಂಡಿದ್ದರೂ ರೈತರು ಅವರ ಭಯದಿಂದ ತೆರಿಗೆಯನ್ನು ನಮ್ಮ ಮುಖಾಂತರ ಕೊಡಲಿಕ್ಕೆ ಒಪ್ಪುವುದಿಲ್ಲ. ಆದರೂ ಕೆಲಸವನ್ನು ಬಿಡದೆ ಮಾಡಿದರೆ ಗೌಡ-ಕುಲಕರ್ಣಿಗಳ 'ಅಂಧಾಧುಂದ್' ರಾಜ್ಯವನ್ನು ಇಂದಲ್ಲ ನಾಳೆಯಾದರೂ ಹತೋಟಿಗೆ ತರಬಹುದು ಎಂಬ ನಿಶ್ಚಯವು ನಮಗಿದೆ. ಸ್ವಲ್ಪಮಟ್ಟಿಗಾದರೂ ಇಂಥ ವಿಷಯಗಳಲ್ಲಿ ನಮಗಾದ ಜಯವೇ ಈ ನಿಶ್ಚಯಕ್ಕೆ ಬೆಂಬಲ. ಆದರೆ ಹಳ್ಳಿ-ಹಳ್ಳಿಯಲ್ಲಿಯೂ ಆಗಬೇಕಾದ ಸುಧಾರಣೆಗಳನ್ನು ಮಾಡಲಿಕ್ಕಾಗಿ ಹಳ್ಳಿಯಲ್ಲಿಯೇ ಕೂತು ದುಡಿಯುವ ಧೀರ- ವೀರ-ವೈ ರಾಗ್ಯಶೀಲ ಯುವಕರು ಬೇಕು.

ದೃಷ್ಟಾಂತಕ್ಕಾಗಿ ತೆರಿಗೆ ಒಂದನ್ನೇ ಇಲ್ಲಿ ಚರ್ಚಿಸಿದ್ದೇವೆ. ಪಂಚಾಯತುಗಳು ಅಲ್ಲಲ್ಲಿ ಏನೋ ಸ್ಥಾಪಿತವಾಗುತ್ತಲೇ ಇವೆ. ಆದರೆ ಎಷ್ಟೋ ಕಡೆ ಹಳ್ಳಿಯ ಲುಚ್ಚಾ-ಪಿತಾಮಹರು ಕೆಲಸವೇನನ್ನೂ ಮಾಡದೆ, ಹಣವನ್ನು ನುಂಗಿಹಾಕಿ, ಸುಳ್ಳು ಲೆಕ್ಕದ ಪಟ್ಟಿಗಳನ್ನು ಗೀಚಿ, ಸರಕಾರಕ್ಕೂ ಮಂಕುಬೂದಿ ಎರಚುವುದನ್ನು ನೋಡಿದರೆ, ಎಂಥ ಒಳ್ಳೆಯ ಸರಕಾರವಾದರೂ ಏನು ಮಾಡೀತು ಎಂಬ ಉದ್ಗಾರವು ತಾನೇ ಹೊರಡುತ್ತದೆ! ಮಂಗನಿಗೆ ಮಾಗಣೆಯ ಯಜಮಾನಿಕೆ ಒಪ್ಪಿಸಿದರೆ ಮನುಷ್ಯನಿಗೆ ಆಗುವ ಲಾಭವಾದರೂ ಏನವರಿಂದ? ದರಿದ್ರ ಮನುಷ್ಯರ ಸೇವೆಗೆ ದಯಾರ್ದ್ರ ಮನುಷ್ಯನೇ ಬೇಕು. ಇಲ್ಲವಾದರೆ ಎಂಥ ಉತ್ತಮ ಸರಕಾರವು ಬಂದರೂ ಕಳ್ಳ-ಮಧ್ಯಸ್ಥರ ಕಾಟದಿಂದ, 'ದೇವರು ಕೊಟ್ಟರೂ ಪೂಜಾರಿ ಬಿಡ!, ಎಂಬಂತೆ ಆಗುವದು ಎಂದೆಂದಿಗೂ ತಪ್ಪದು.

ಕೊನೆಯ ಮಾತು: ಕೊಂಗ್ರೆಸ್ಸಿನ ಸಿಪಾಯಿಗಳು ಇನ್ನು ಮುಂದೆ ಹಳ್ಳಿಗಳಲ್ಲಿದ್ದು ದುಡಿಯಬೇಕು.

—ಜಯಕರ್ನಾಟಕ.

---

## ಗೋವಧೆ ನಿಲ್ಲುವ ಶಾಸನ ಮಾಡಿರಿ.

ಗೋಪ್ರಮೋದ ಮೌಲಾನಾ ಶೇಖ ನಜಮುದ್ದೀನ ಈ ಮಹಾಶಯರು ಗೋಸಂಹಾರ ಪ್ರತಿಬಂಧದ ಶಾಸನವಾಗಬೇಕೆಂದು ಈ ಕೆಳಗಿನಂತೆ ತಿಳಿಸಿದ್ದಾರೆ—

"ಗೋವುಗಳ ಮಹತ್ವವು ಎಷ್ಟಿದೆ ಎಂಬುದನ್ನು ಹಿಂದುಸ್ಥಾನದ ಜನರಿಗೇನೂ ಹೇಳಬೇಕಾದುದೇ ಇಲ್ಲ. ಏಕೆಂದರೆ, ಹಿಂದುಗಳು ಗೋವುಗಳನ್ನು ತಾಯಿಯಂತೆ ಕಾಣುತ್ತಾರೆ. ಪೈಗಂಬರ ಸಾಹೇಬರು ಮುಸಲ್ಮಾನರಿಗೆ ಆಜ್ಞೆಮಾಡಿರುವುದೇನೆಂದರೆ—"ನಿಮಗೆ ಉಪಯೋಗವಾಗುವ ಪ್ರಾಣಿಗಳನ್ನು ಸಂಹರಿಸದೆ ಅವುಗಳನ್ನು ಜೋಪಾನಮಾಡಿ ಪ್ರಯೋಜನ ಹೊಂದಿರಿ."

ನಾನು ಕಳೆದ ೨೫-೩೦ ವರುಷಗಳಿಂದ ಗೋ ಸಂರಕ್ಷಣೆಯ ಸಂಬಂಧವಾಗಿ ಪ್ರಚಾರ ಕಾರ್ಯವನ್ನು ಮಾಡುತ್ತಿದ್ದೇನೆ. ಹಿಂದು, ಮುಸಲ್ಮಾನ್, ಯುರೋಪಿಯನ್ ಅಧಿಕಾರಿಗಳು ಗೋ ಸಂರಕ್ಷಣೆಗೆ ಅನುಕೂಲವಾದ ಅಭಿಪ್ರಾಯವುಳ್ಳವರಾಗಿದ್ದಾರೆಂದೇ ನನಗೆ ತೋರಿದೆ. ಆದರೆ ಅವರ ಕೈಯಲ್ಲಿ ಅಧಿಕಾರವಿಲ್ಲ. ಗೋ ಹತ್ಯದ ಕಾರ್ಯಾಲಯಗಳು ನಡದೇ ಇವೆ. ಏಕೆಂದರೆ ಗೋ ಮಾಂಸವು ಪಾಶ್ಚಾತ್ಯ ಜನಗಳಿಗಾಗಿಯೇ ಬೇಕಾಗಿದೆ. ಆದುದರಿಂದ ಮುಸಲ್ಮಾನರು ವ್ಯಾಪಾರಿ ದೃಷ್ಟಿಯಿಂದ ಕಟುಕರ ಕೆಲಸವನ್ನು ಮಾಡುತ್ತಾರೆ. ಹಿಂದುಗಳು ಕಟುಕರಿಗೆ ಗೋವುಗಳನ್ನು ಮಾರುತ್ತಾರೆ. ಈ ಶೋಚನೀಯ ಸ್ಥಿತಿಯನ್ನು ನಿವಾರಣೆಮಾಡುವುದು ಸರಕಾರದ ಕೈಯಲ್ಲಿದೆ.

ಹಿಂದು ಸಂಸ್ಥಾನಗಳಂತೆ ಹೈದರಾಬಾದ, ಭೋಪಾಳ ಈ ಮುಸಲ್ಮಾನ್ ಸಂಸ್ಥಾನಗಳಲ್ಲಿಯೂ ಗೋಸಂಹಾರ ಪ್ರತಿಬಂಧದ ಶಾಸನವಿದೆ. ಇಷ್ಟೇ ಅಲ್ಲ; ವರ್ಹಾಡ ಮಧ್ಯಪ್ರಾಂತದಲ್ಲಿಯೂ ಗೋಹತ್ಯ ಪ್ರತಿಬಂಧದ ಶಾಸನವಿದೆ. ಎಂದಮೇಲೆ ಹಿಂದುಸ್ಥಾನದ ಬೇರೆ ಪ್ರಾಂತಗಳಲ್ಲಿ ಆದೇಕೆ ಗೋವಧೆಯಾಗುತ್ತಾ ಇರಬೇಕು? ಸರಕಾರವು ಈ ವಿಚಾರದಲ್ಲಿ ಉಪೇಕ್ಷಿಸಿರುವುದೇ ಇದಕ್ಕೆ ಕಾರಣವು.

ಈ ವರೆಗೆ ಆದದ್ದಾಯಿತು. ಇನ್ನು ಕಾಂಗ್ರೆಸ್ಸಿನ ರಾಜ್ಯ ಬಂದಿದೆ. ಗಾಂಧೀಜಿಯವರು ಯಾರ ದಾಕ್ಷಿಣ್ಯ ವಿರೋಧಗಳನ್ನೂ ಲಕ್ಷಿಸದೆ ಮುಂದೆ ಬಂದು ಗೋವಧೆಯನ್ನು ನಿಲ್ಲಿಸುವ ಶಾಸನ ಮಾಡಲು ಕಾಂಗ್ರೆಸ್ ಸರಕಾರಕ್ಕೆ ಸೂಚಿಸಬೇಕು. ಈ ಕಾರ್ಯಕ್ಕೆ ಮುಸಲ್ಮಾನ್, ಯುರೋಪಿಯನ್, ಪಾರ್ಶಿ, ಈ ಗೋಮಾಂಸಾಹಾರಿ ಸಮಾಜಗಳು ಎಂದೂ ವಿರೋಧಿಸಲಾರವು."

ಸಂಯುಕ್ತ ಪ್ರಾಂತ ಸರಕಾರವು ಗೋ ಸಂಹಾರ ಪ್ರತಿಬಂಧದ ಶಾಸನವಾದರೆ ಮುಸಲ್ಮಾನ್ ಸಮಾಜದ ಧಾರ್ಮಿಕ ಭಾವನೆಗೆ ನೋವಾಗುತ್ತದೆಂದು ತಿಳಿದದ್ದೇ ನಿಜವಾಗಿದ್ದರೆ ಮುಸಲ್ಮಾನ್ ಸಮಾಜದ ಒಬ್ಬ ಪ್ರಮುಖರೂ ಗೋ ಸಂರಕ್ಷಣೆಯ ಕಾರ್ಯನಿರತರೂ ಆದ ಮೌಲಾನಾ ಶೇಖ ನಜಮುದ್ದೀನರ ಈ ಅಭಿಪ್ರಾಯವನ್ನು ಲಕ್ಷಿಸುವುದು ಯೋಗ್ಯವಾಗಿಲ್ಲವೆ?

---

## ಬಾಬು ರಾಜೇಂದ್ರರು ಹೇಳುವುದೇನು ?

ಕಾಂಗ್ರೆಸ್ ಪಕ್ಷವು ಅಧಿಕಾರವನ್ನು ಸ್ವೀಕರಿಸಿದ್ದರಿಂದ ಅದು ಕೈಕೊಳ್ಳಬೇಕಾದ ಕಾರ್ಯಗಳ ಸಂಬಂಧವಾಗಿ ಅನೇಕರು ಅನೇಕ ಸೂಚನೆಗಳನ್ನು ಮಾಡುತ್ತಿದ್ದಾರಷ್ಟೆ. ಅವರಲ್ಲಿ ಸಮತಾವಾದಿಗಳೂ ಒಬ್ಬರು. ಆರ್ಥಿಕ ದೃಷ್ಟಿಯಿಂದ ಸಮಾಜ ಪುನರ್ಘಟನೆಯ ಕಾರ್ಯವನ್ನು ಕಾಂಗ್ರೆಸ್ ಪಕ್ಷದ ಮಂತ್ರಿಗಳು ಈಗ ಪ್ರಾರಂಭಿಸಬೇಕೆಂದು ಅವರು ಹೇಳುತ್ತಿದ್ದಾರೆ. ಬಾಬು ರಾಜೇಂದ್ರ ಪ್ರಸಾದರು ಇವರ ಸೂಚನೆಯನ್ನು ಕುರಿತು ಹೀಗೆ ಹೇಳಿದ್ದಾರೆ—

"ಸಮತಾವಾದಿಗಳ ಪದ್ಧತಿಯಂತೆ ಸಮಾಜ ಪುನರ್ಘಟನೆಯ ಕಾರ್ಯವನ್ನು ಕಾಂಗ್ರೆಸ್ ಪಕ್ಷವು ಈಗ ಪ್ರಾರಂಭಿಸುವುದು ಶಕ್ಯವಿಲ್ಲ. ಮತ್ತು ಇಷ್ಟವೂ ಅಲ್ಲ. ಹಿಂದುಸ್ಥಾನಕ್ಕೆ ಸಂಪೂರ್ಣ ಅಧಿಕಾರ ದೊರೆತನಂತರವೇ ಆ ವಿಷಯವಾಗಿ ಯೋಚಿಸುವುದು ವಿಹಿತವಾಗಿದೆ. ನಮ್ಮ ಸಾಮಾಜಿಕ, ಮಾನಸಿಕ ಮತ್ತು ಧಾರ್ಮಿಕ ಸಂಗತಿಗಳೆಲ್ಲಾ ಕೇವಲ ಆರ್ಥಿಕ ಸ್ಥಿತಿಯನ್ನೇ ಅವಲಂಬಿಸಿವೆಯೆಂಬ ಸಮತಾವಾದಿಗಳ ಮೂಲ ಸಿದ್ಧಾಂತವು ನನಗೆ ಸಮ್ಮತವಿಲ್ಲ. ಸಮತಾವಾದಿಗಳ ವಿಚಾರಗಳಲ್ಲಿ ಅನೇಕ ಉಪಯುಕ್ತ ಸಂಗತಿಗಳೂ ಇವೆ. ಅವು ಅನುಕೂಲ ಕಾಲದಲ್ಲಿ ಆಚರಣೆಯಲ್ಲಿಯೂ ತರಲ್ಪಡುವುವು."

---

—ಬಂಗಾಲ ಸರಕಾರವು ಕೂಡಾ ಮದ್ಯಪಾನ ಪ್ರತಿಬಂಧದ ಉದ್ದೇಶವನ್ನಿಟ್ಟುಕೊಂಡು ಇಷ್ಟರಲ್ಲೇ ಕೆಲವು ಕಡೆ ಅದರ ಪ್ರಯೋಗವನ್ನು ಪ್ರಾರಂಭಿಸುವದಿದೆ.

## ವಿಮರ್ಶಾತ್ಮಕ ಪ್ರಶ್ನೋತ್ತರ.

'ಲೋಕಮತ' ಪತ್ರಿಕಾ ಕರ್ತರ
ವಿಚಾರ ವಿಮರ್ಶೆ.

---

ಪ್ರಶ್ನೆ—ಕಳೆದವಾರ ಲೋಕಮತ ಪತ್ರಿಕೆಯಲ್ಲಿ ನಿಮ್ಮ ಬಗ್ಗೆ ಬರೆದ ಲೇಖನಗಳನ್ನು ಓದಿದಿರಾ?

ಉತ್ತರ—ಓದಿದೆವು. ಆದರೆ ಅವುಗಳನ್ನು ಬರೆದವರು ಸಂಪಾದಕರೋ? ಅಥವಾ ಬೇರೆಯವರೋ? ಎಂಬ ಸಂಶಯವು ಮಾತ್ರ ಮೊದಲು ಬಂದಿತು.

ಪ್ರಶ್ನೆ—ಅದೇಕೆ?

ಉತ್ತರ—ಒಂದು ಕಡೆ "ಇಚ್ಛಿಸುತ್ತೇವೆ" ಎಂತಲೂ "ವ್ಯವಸಾಯ ಬಂಧುಗಳೇ," ಎಂತಲೂ ಹೇಳಿದ್ದರಿಂದ ಸಂಪಾದಕರೆಂದು ತೋರಿತು. ಇನ್ನೊಂದು ಕಡೆ "ಬಂಧುಗಳೇ," ಎಂದು ಸಂಬೋಧಿಸಿ "ನಂಬಿದ್ದೇನೆ." ಎಂದು ಬರೆದುದರಿಂದ ಬೇರೆಯವರೆಂದು ತೋರಿತು. ಆ ಲೇಖನಗಳಿಗೆ ಯಾರ ಹೆಸರೂ ಇಲ್ಲದ್ದರಿಂದ ಸಂಪಾದಕರ ಸ್ಥಾನದಲ್ಲಿದ್ದು ಬೇರೆಯವರು ಬರೆದಿದ್ದರೂ ಸಂಪಾದಕರ ಲೇಖನವೆಂದು ಗ್ರಹಿಸುವುದು ವಿಹಿತವೆಂದೇ ಕೊನೆಗೆ ತಿಳಿದೆವು.

ಪ್ರಶ್ನೆ—ಸತ್ಯವಾದ ಸಂಗತಿಯನ್ನು ಯಾರು ಹೇಳಿದರೇನು? ಹುಡುಗರು ಹೇಳಿದರೂ ಕೇಳಬೇಕಲ್ಲವೆ?

ಉತ್ತರ—ನಿಜ. ಆದರೆ ಅದು ಸತ್ಯವಾದುದೆಂದು ನಿರ್ಧರವಾದಮೇಲಲ್ಲವೆ?

ಪ್ರಶ್ನೆ—ಕೌನ್ಸಿಲ್ಲಿನಲ್ಲಿ ಸೇರಬೇಕೆಂದು ರಾಯಚೂರ ವೀರಶೈವ ಮಹಾ ಸಭೆಯಲ್ಲಾದ ಠೀರ್ಮಾನವು ಜಾತಿವಾದಿಗಳ ಠೀರ್ಮಾನವಲ್ಲವೆ? ಅವರು ಅಧಿಕಾರ ಸ್ವೀಕರಿಸುವುದಕ್ಕೂ ಈಗ ಕಾಂಗ್ರೆಸ್ ಅಧಿಕಾರವನ್ನು ಸ್ವೀಕರಿಸಿದ್ದಕ್ಕೂ ಮಹದಂತರವಿದೆಯೆಂದು ಲೋಕಮತಕಾರರು ಬರೆದದ್ದು ಯೋಗ್ಯವಾಗಿಲ್ಲವೆ?

ಉತ್ತರ—ರಾಯಚೂರು ಮಹಾ ಸಭೆಯಲ್ಲಾದ ಠೀರ್ಮಾನವನ್ನು ಕುರಿತು ಈ ಮುಂಚೆ ವಾದವುಂಟಾದಾಗ ನಾವು ತಾ. ೨೯-೬-೩೭ ನೆಯ ಸಂಚಿಕೆಯಲ್ಲಿ ಅದರ ವಿವರವನ್ನು ಬರೆದಿದ್ದೇವೆ. ನೀವು ಇನ್ನುಮೇಲಾದರೂ ಅದನ್ನು ಓದಿರಿ. ಆ ಠೀರ್ಮಾನದಲ್ಲಿ ವೀರಶೈವರು ಸುಸಂಘಟಿತರಾಗಿ ಹೆಚ್ಚು ಪ್ರಮಾಣದಿಂದ ಕೌನ್ಸಿಲ್ಲಿನಲ್ಲಿ ಸೇರಿ ದೇಶಕ್ಕೂ ಸಮಾಜಕ್ಕೂ ಹಿತವಾಗುವ ರೀತಿಯಲ್ಲಿ ಕೆಲಸಮಾಡಬೇಕೆಂದಿದೆಯೇ ವಿನಾ ಕಾಂಗ್ರೆಸ್ಸಿನಲ್ಲಿ ಸೇರದೆ ಜಾತಿವಾದಿಗಳಲ್ಲಿ ಸೇರಿರೆಂದು ಎಲ್ಲಿಯೂ ಹೇಳಿಲ್ಲ. ಹಾಗೆ ಹೇಳಿದ್ದರೆ ಲೋಕಮತಕಾರರ ವಿಚಾರಸರಣಿ ಸರಿಯಾದದ್ದಾಗುತ್ತಿದ್ದಿತು.

ಪ್ರಶ್ನೆ—ರಾಜನಿಷ್ಠೆಯ ಶಪಥವನ್ನು ಈಗ ಕಾಂಗ್ರೆಸ್ ತೆಗೆದುಕೊಂಡದ್ದು ಮಂತ್ರಿಗಳಾಗಿ ಜನ ಸೇವೆಯನ್ನು ಮಾಡಲಿಕ್ಕೇ ಹೊರತು ತಮ್ಮ ಹಿತಕ್ಕಲ್ಲ. ಅದಕ್ಕಾಗಿ ಬಸವಣ್ಣನವರು ಹೊಲೆಯರ ಮನೆಯಲ್ಲಾದರೂ ಕೈ ಕೂಲಿಮಾಡುತ್ತೇವೆಂದು ಹೇಳಿದಂತೆ ಇವರು ರಾಷ್ಟ್ರ ಸೇವೆಗೆ ರಾಜ ನಿಷ್ಠೆಯ ಶಪಥ ತೆಗೆದುಕೊಂಡರೆ ರಾಷ್ಟ್ರದ್ರೋಹಿಗಳಾದರೇ? ಎಂದು ಅವರು ಕೇಳಿದ್ದು ಯುಕ್ತವಾಗಿಲ್ಲವೆ?

ಉತ್ತರ—ಅವರು ಹೇಳಿದ್ದು ಸರಿಯಾಗಿದೆ. ನಾವಾದರೂ ಇವರಿಗೆ ರಾಷ್ಟ್ರದ್ರೋಹಿಗಳೆಂದು ಎಲ್ಲಿ ಹೇಳಿದ್ದೇವೆ? ರಾಯಚೂರು ಮಹಾ ಸಭೆಯಲ್ಲಿ ೮ ನೆಯ ಎಡ್ವರ್ಡ ಬಾದಶಹರ ಶ್ರೇಯಃಪ್ರಾರ್ಥನೆಯ ಒಂದು ಶಿಷ್ಟಾಚಾರದ ಠೀರ್ಮಾನವಾದುದಕ್ಕೇನೇ ಆಗ ಯಾರು ಸ್ವಾಭಿಮಾನ ಶೂನ್ಯತೆಯ ಗೊತ್ತುವಳಿಯೆಂದು ಹೇಳಿದ್ದರೋ ಅವರೇ ಈಗ ರಾಜನಿಷ್ಠೆಯ ಶಪಥವನ್ನು ಮಾಡಿದರಲ್ಲಾ! ಈ ಮಂತ್ರಿಪಟ್ಟದ ಸುದ್ದಿಯೇ ಇಲ್ಲದಾಗ ದಿಲ್ಲಿ ಅಸೆಂಬ್ಲಿಯಲ್ಲಿ ರಾಜನಿಷ್ಠೆಯ ಗೊತ್ತುವಳಿಗೆ ಕಾಂಗ್ರೆಸ್ ಒಪ್ಪಿತ್ತಲ್ಲಾ! ಹೀಗೆ ಇವರು ಮಾಡುವುದನ್ನೇ ಅನ್ಯರು ಹೇಳಿದರೆ ಅವರಿಗೆ ರಾಷ್ಟ್ರದ್ರೋಹಿಗಳೆಂದು ಹೇಳುತ್ತಾರೆ. ಇದು ಸರಿಯಲ್ಲವೆಂದೇ ನಾವು ತಾ. ೩೦-೮-೩೭ ನೆಯ ಸಂವಾದ ರೂಪದ ಲೇಖನದಲ್ಲಿ ತಿಳಿಸಿದ್ದೇವೆ.

ಪ್ರಶ್ನೆ—ಜನತಾ ಅಭಿಪ್ರಾಯವೇ ಕಾಂಗ್ರೆಸ್ಸದ ಅಭಿಪ್ರಾಯವೆಂದು ಅವರು ಹೇಳಿದ್ದು ಸರಿಯಾಗಿಲ್ಲವೆ?

ಉತ್ತರ—ಆ ಸಂಬಂಧವಾದ ತಾ. ೩೦-೮-೩೭ ನೆಯ ಸಂಚಿಕೆಯಲ್ಲಿರುವ ಪ್ರಶ್ನೋತ್ತರಗಳನ್ನು ನೀವು ಓದಿ ನೋಡಿರಿ. ನಿಮಗೇನೇ ಅವರು ತಿಳಿದುಕೊಂಡದ್ದು ತಪ್ಪೆಂದು ಗೊತ್ತಾಗುತ್ತದೆ. ಪ್ರಶ್ನೆ ಹೀಗಿತ್ತು— "ಇಷ್ಟೆಲ್ಲಾ ತತ್ವಗಳು ನಿಮ್ಮ ಪತ್ರಿಕೆಯನ್ನು ಓದುವವರಿಗೆ ತಿಳಿಯುವುದಿಲ್ಲ. ಅವರಲ್ಲಿ ದಡ್ಡರೇ ಹೆಚ್ಚು. ಅದಕ್ಕಾಗಿ ನಿಮಗೆ ಒಪ್ಪಿಗೆಯಿರತಕ್ಕ ಕಾಂಗ್ರೆಸ್ಸಿನ ವಿಷಯಗಳನ್ನೇ ಮಾತ್ರ ಬರೆಯಿರಿ. ಭಿನ್ನ ವಿಚಾರಗಳನ್ನು ಬರೆಯಬೇಡಿರಿ." ಅದಕ್ಕೆ ನಾವು ಹೇಳಿದ್ದೇನೆಂದರೆ,

ಕಾಂಗ್ರೆಸ್ಸಿನ ವಿಚಾರಗಳನ್ನೇ ಮಾತ್ರ ಪ್ರಚಾರಮಾಡಿದರೆ ಬೇರೆ ವಿಚಾರಗಳು ಅವರಿಗೆ ತಿಳಿಯುವುದು ಹೇಗೆ? ಅವರಲ್ಲಿ ಬೇರೆ ವಿಚಾರಗಳೇ ಬಾರದಿದ್ದರೆ ಜನಾಭಿಪ್ರಾಯದಂತೆ ತಾನು ನಡೆಯುತ್ತೇನೆಂದು ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಹೇಳುವುದರಲ್ಲಿ ಅರ್ಥವೇನಿದೆ? ಅದಕ್ಕಾಗಿ ಜನರಿಗೆ ಭಿನ್ನ ಭಿನ್ನ ಪಕ್ಷಗಳ ವಿಚಾರಗಳನ್ನೂ ತಿಳಿಸಲೇಬೇಕು. ಅವರು ವಿಮರ್ಶಕರಾಗಬೇಕು. ಆಗ ಅವರ ಅಭಿಪ್ರಾಯದಂತೆ ಕಾಂಗ್ರೆಸ್ ನಡೆಯುತ್ತದೆಂದು ಹೇಳುವುದರಲ್ಲಿ ಅರ್ಥವಿದೆ.

ಪ್ರಶ್ನೆ—ಕಾಂಗ್ರೆಸ್ಸಿನಲ್ಲಿ ಅಥವಾ ವೀರಶೈವ ಮಹಾ ಸಭೆಯಲ್ಲಿ ಒಂದು ಗೊತ್ತುವಳಿಯಾದರೆ ಆ ಪ್ರಕಾರ ಕಾಂಗ್ರೆಸ್ಸಿನವರು ಅಥವಾ ವೀರಶೈವ ಸಮಾಜದವರು ನಡೆಯಬೇಕೋ? ಅಥವಾ ಗಾಂಧೀಜಿಯವರೇ ತಪ್ಪುಮಾಡಿದ್ದೇವೆಂದು ಹೇಳಿರುವಾಗ ಕಾಂಗ್ರೆಸ್ ತಪ್ಪು ಮಾಡಿಲ್ಲವೆ? ಬಸವಣ್ಣನವರೇ ನನ್ನ ತಪ್ಪು ಅನಂತ ಎಂದು ಹೇಳಿರುವಾಗ ಮಹಾ ಸಭೆಯು ತಪ್ಪು ಮಾಡಿಲ್ಲವೆ? ಎಂದು ತಿಳಿದು ಆಯಾಯ ಸಭೆಗಳಲ್ಲಾದ ಠೀರ್ಮಾನಗಳಂತೆ ನಡೆಯಬಾರದೊ? ಎಂದು ಅವರು ನಿಮ್ಮನ್ನು ಕೇಳಿದ್ದಾರೆ. ನಿಮ್ಮ ಉತ್ತರವೇನು?

ಉತ್ತರ—ರಾಯಚೂರು ವೀರಶೈವ ಮಹಾ ಸಭೆಯಲ್ಲಾದ ಕೌನ್ಸಿಲ್ ಪ್ರವೇಶದ ಗೊತ್ತುವಳಿಯಂತೆ ರಾಷ್ಟ್ರೀಯ ವೀರಶೈವರೆಂದು ಹೇಳಿಕೊಂಡವರು ಅದೇಕೆ ನಡೆಯದೆ ವಿರೋಧಿಸಿದರು? ನೀವು ಕೇಳುವ ಈ ಸಂಗತಿಯು ಅವರವರ ಬುದ್ಧಿ ಮತ್ತು ಭಾವನೆಗಳಿಗೆ ಸಂಬಂಧಿಸಿದ್ದಾಗಿದೆ. ಸಭೆಗಳಲ್ಲಿ ದೊಡ್ಡ ದೊಡ್ಡ ವಿದ್ವಾಂಸರೇ ಕೂಡಿ ಗೊತ್ತುಮಾಡಿರುವಾಗ ಅದರ ಸತ್ಯಾಸತ್ಯತೆ

ಗಳನ್ನು ನಾವೇನೂ ಯೋಚಿಸಬೇಕಾಗಿಲ್ಲ. ಅದರಂತೆಯೇ ನಡೆಯುವುದೊಂದೇ ನಮ್ಮ ಕೆಲಸವೆಂದು ಕೆಲವರು ತಿಳಿದುಕೊಳ್ಳಬಹುದು. ಕೆಲವರಾದರೋ ಸಭೆಯಲ್ಲಾದ ಗೊತ್ತುವಳಿಯು ತಮಗೆ ಒಪ್ಪಿಗೆಯಿಲ್ಲದಿದ್ದರೂ ಕ್ರಮಬದ್ಧತೆಗೆ ಲೋಪಬರಬಾರದೆಂದು ಅದರಂತೆಯೇ ನಡೆಯುತ್ತಾ ತಮಗೇನೂ ಒಪ್ಪಿಗೆಯಿಲ್ಲವೆಂಬುದನ್ನು ಮಾತ್ರ ತಿಳಿಸಬಹುದು. ಇನ್ನು ಕೆಲವರು ತಮಗೆ ಒಪ್ಪಿಗೆಯಿಲ್ಲದ ಸಂಗತಿಯು ಎಂತಹ ದೊಡ್ಡ ಸಭೆಯಿಂದಾಗಲಿ ಅಥವಾ ಮಹಾ ಪುರುಷರಿಂದಾಗಲಿ ಬಂದಿದ್ದರೂ ಅದನ್ನು ಅನುಸರಿಸುವುದಿಲ್ಲವೆಂದೇ ಹೇಳಬಹುದು. ಇದು ಭಿನ್ನಾಭಿಪ್ರಾಯಕ್ಕೊಳಪಟ್ಟ ಸಂಗತಿಯು. ನಾವಾದರೋ ಇವುಗಳಲ್ಲಿ ಮೂರನೆಯ ಪಕ್ಷದವರು.

ಪ್ರಶ್ನೆ—ಪಾಗೋಟ ಪತ್ರಿಕೆಗಳು ಜಾತಿ ನಿರ್ಣಯದ ನಿಷೇಧಮಾಡುವುದು ಯಾಕೆಂಬುದು ನಿಮಗೆ ಲೋಕಮತ ಪತ್ರದಲ್ಲಿಯ ಲೇಖನದಿಂದಲಾದರೂ ಗೊತ್ತಾಯಿತೆ ?

ಉತ್ತರ—ನಿಮ್ಮ ಈ ವರೆಗಿನ ಪ್ರಶ್ನೆಗಳು ಅವರ ಮೊದಲಿನ ಎರಡು ಲೇಖನಗಳಲ್ಲಿದ್ದ ಸಂಗತಿಗಳಿಗೆ ಸಂಬಂಧಿಸಿದ್ದವು. ಈ ನಿಮ್ಮ ಪ್ರಶ್ನೆಯು ಅವರ ಮೂರನೆಯ ಲೇಖನಕ್ಕೆ ಸಂಬಂಧಿಸಿದೆ. ಆ ಲೇಖನಗಳಲ್ಲಿಯ ಸಂಗತಿಗಳೇನೋ ಅಭಿಪ್ರಾಯ ಭಿನ್ನವಾದವುಗಳು. ಆದರೆ ಈ ಮೂರನೆಯ ಲೇಖನ ಹಾಗಿಲ್ಲ. ಒಂದು ಮಾತಿನ ಸಂಬಂಧವಾಗಿ ಅಭಿಪ್ರಾಯ ಭಿನ್ನವಾಗುವುದು ಬೇರೆ. ಒಂದು ಮಾತನ್ನೇ ಸುಳ್ಳು ಹೇಳುವುದು ಬೇರೆ. ಈ ಲೇಖನದಲ್ಲಿ ಸುಳ್ಳು ಬರೆದು ರಾಷ್ಟ್ರದ ಅನೇಕ ಮುಖಂಡರ ಮೇಲೆ ಭಯಂಕರ ದೋಷಾರೋಪಣೆಯನ್ನು ಮಾಡಿದ್ದಾರೆ. ಇಂತಹ ವಿದ್ವಾನ್ ಲೇಖಕರು ಇಷ್ಟು ಸುಳ್ಳು ಬರೆದು ಅನ್ಯರ ಮೇಲೆ ಇಂತಹ ದೋಷಾರೋಪಣೆಮಾಡಿದುದನ್ನು ನೋಡಿ ನಮಗೆ ಬಹು ವಿಷಾದವಾಯಿತು. ಸತ್ಯ ಮತ್ತು ಅಹಿಂಸೆಗಳ ವ್ರತಗಳನ್ನು ಹಿಡಿದ ಕಾಂಗ್ರೆಸ್ಸಿನಲ್ಲಿರುವ ಇಂತಹ ಹೊಣೆಗಾರಿಕೆಯವರೇ ಹೀಗೆ ಬರೆದುದರಿಂದಂತೂ ನಮಗೆ ಹೆಚ್ಚಾದ ನೋವು.

ಪ್ರಶ್ನೆ—ಆ ಲೇಖನದಲ್ಲಿ ಅದೇನು ಅಂಥ ತಪ್ಪಿದೆ ?

ಉತ್ತರ—ಅದಕ್ಕಾಗಿಯೇ ಆ ಲೇಖನದ ಮುಖ್ಯ ಭಾಗವನ್ನೇ ಈ ಪತ್ರಿಕೆಯ ಬೇರೊಂದು ಕಡೆ ಕೊಟ್ಟಿದೆ. ಅದನ್ನು ಓದಿದ ನಿಷ್ಪಕ್ಷಪಾತಿಗಳಿಗೆ ನಮ್ಮಂತೆಯೇ ಖಂಡಿತವಾಗಿಯೂ ವಿಷಾದವಾಗದೆ ಇರಲಾರದು.

ಬಂಗಾಲ, ಪಂಜಾಬ, ಪುಣೆಗಳ ಮಧ್ಯ ತ್ರಿಕೋಣಾಕೃತಿಯಾಗಿ ನಡೆದ ಜಾತಿ ನಿರ್ಣಯ ವಿರೋಧದ ಚಟುವಟಿಕೆಯ ಸಂಘಕ್ಕೆ ಬರದ್ವಾನ್ ಮಹಾರಾಜರೇ ಅಧ್ಯಕ್ಷರೆಂದು ತೋರುವಂತೆ ಬರೆದಿದ್ದಾರೆ. ಇದು ಸುಳ್ಳು. ಬರದ್ವಾನ್ ಮಹಾರಾಜರು ಬಂಗಾಲ ಪ್ರಾಂತದ ಜಾತಿ ನಿರ್ಣಯ ವಿರೋಧ ಸಂಘಕ್ಕೆ ಮಾತ್ರ ಅಧ್ಯಕ್ಷರು. ಅವರ ಒಪ್ಪಂದವು ಬೇರೆ ಪ್ರಾಂತದವರಿಗೆ ಸಂಬಂಧವಿಲ್ಲ. ಮತ್ತು ಬೇರೆ ಪ್ರಾಂತದವರ ಒಪ್ಪಿಗೆಯಿಂದ ಆ ಒಪ್ಪಂದವಾಗಿಲ್ಲ.

ಬಂಗಾಲದಲ್ಲಿ ಮಂತ್ರಿಪದ ಹಿಂದುಗಳಿಗೆ ೩ ಮುಸಲ್ಮಾನರಿಗೆ ೪ ಎಂದು ಲೇಖಕರು ಬರೆದಿದ್ದಾರೆ. ಇದೂ ಸುಳ್ಳು. ಹಿಂದು ಮುಸಲ್ಮಾನರಿಗೆ ಸಮಾನವಾಗಿರಬೇಕೆಂದು ಆ ಒಪ್ಪಂದದಲ್ಲಿತ್ತು. ಬರದ್ವಾನ್ ಮಹಾರಾಜರ ಒಪ್ಪಂದಕ್ಕೆ ಕಾಂಗ್ರೆಸ್ ಪಕ್ಷದವರ ಸಂಬಂಧವಿಲ್ಲವೆಂದು ಆ ಲೇಖನದಲ್ಲಿ ತೋರಿಸಿದ್ದಾರೆ. ಇದೂ ಸುಳ್ಳು. ಬಂಗಾಲದಲ್ಲಿ ಕಾಂಗ್ರೆಸ್ ಪಕ್ಷದ ಅನೇಕ ಪ್ರಮುಖರೂ ಜಾತಿನಿರ್ಣಯ ನಿಷೇಧದ ಚಟುವಟಿಕೆಯಲ್ಲಿ ಮುಂದಾಳುಗಳಾಗಿದ್ದಾರೆ. ಅಂತೆಯೇ ಬರದ್ವಾನ್ ಮಹಾರಾಜರು ತಾವು ಮಾಡಿಕೊಳ್ಳಬೇಕೆಂದು ಯೋಚಿಸಿದ ಒಪ್ಪಂದವನ್ನು ಡಾ. ಬಿಧನ ಚಂದ್ರ ರಾಯ, ಶ್ರೀ. ಶರತ ಬೋಸ, ಇವರಿಗೆ ತೋರಿಸಿದ್ದರು. ಅವರು ಆದರಲ್ಲಿ ಕೆಲವು ತಿದ್ದುಪಾಟನ್ನೂ ಸೂಚಿಸಿದ್ದರು.

ಈ ವಿಧವಾದ ಯೋಜನೆಯನ್ನು ೧೯೩೩ ರಲ್ಲಿ ಜಾಯಿಂಟ್ ಪಾರ್ಲಮೆಂಟರಿ ಕಮಿಟಿಯ ಮುಂದೆ ಹಿಂದು-ಮುಸಲ್ಮಾನರ ಒಪ್ಪಿಗೆಯಿಂದ ಶ್ರೀ. ಬಿ. ಸಿ. ಚತರ್ಜಿಯವರು ಇಟ್ಟಿದ್ದರು. ಈ ಒಪ್ಪಂದಕ್ಕೆ ಸಂಬಂಧಿಸಿದ ಈ ಎಲ್ಲಾ ಸಂಗತಿಗಳೂ ತಾ. ೭-೧-೩೭ ನೆಯ ದಿವಸ ಅಸೋಸಿಏಟೆಡ್ ಪ್ರೆಸ್ಸಿನಿಂದ ಪ್ರಕಟವಾಗಿವೆ. ನೋಡಿಕೊಳ್ಳಬಹುದು.

ಬಂಗಾಲದಲ್ಲಿ ಕಾಂಗ್ರೆಸ್ ಪಕ್ಷದವರೂ ಜಾತಿನಿರ್ಣಯ ವಿರೋಧದ ಚಟುವಟಿಕೆಯಲ್ಲಿ ಎಷ್ಟು ಮುಂದರಿದಿದ್ದಾರೆಂಬುದಕ್ಕೆ ಕಾಂಗ್ರೆಸ್ಸಿನವರು ಮೊನ್ನೆ ಚುನಾವಣೆಯ ಪತ್ರಿಕೆಯಲ್ಲಿ ವ್ಯಕ್ತಗೊಳಿಸಿದ ಧೋರಣದ ಸಂಬಂಧವಾಗಿ ಅವರು ಮಾಡಿದ ಅರ್ಥವೂ ಆ ಮೇಲೆ ಪುನಃ ಕಾಂಗ್ರೆಸ್ ಕಮಿಟಿಯವರೂ ಕಾಂಗ್ರೆಸ್ಸಿನ ಅಧ್ಯಕ್ಷರಾದ ಪಂಡಿತ ಜವಾಹರಲಾಲರೂ ಮಾಡಿದ ಸ್ಪಷ್ಟೀಕರಣವೂ ಸರ್ವಶ್ರುತ ದೃಷ್ಟಾಂತಗಳಾಗಿವೆ.

ಪ್ರಶ್ನೆ—ಈಗ ಇಷ್ಟೆಲ್ಲಾ ಹೇಳುತ್ತೀರಿ. ಆಗ ನೀವಾಗಲಿ ನಿಮ್ಮ ಪಾಗೋಟ ಪತ್ರಿಕೆಯಾಗಲಿ ಬರದ್ವಾನ್ ಮಹಾರಾಜರ ಒಪ್ಪಂದದ ಬಗ್ಗೆ ಚಕಾರ ಶಬ್ದ ಏಕೆ ಬರೆಯಲಿಲ್ಲವೆಂದು ಲೋಕಮತದ ಲೇಖಕರು ಕೇಳಿದ್ದಾರೆ. ಇದಕ್ಕೆ ನಿಮ್ಮ ಉತ್ತರವೇನು ?

ಉತ್ತರ—ಅವರು ಹೀಗೆ ಬರೆದದ್ದು ದೊಡ್ಡ ಸುಳ್ಳು. ಇಷ್ಟು ಸುಳ್ಳು ಇಂತಹ ವಿದ್ವಾನ್ ಸಂಪಾದಕರು ಬರೆದರೆ ? ಎಂಬುದೇ ನಮಗೆ ಆಗಾಗ್ಗೆ ಯೋಚನೆ. ಶರಣ ಸಂದೇಶ ಪತ್ರಿಕೆಯ ತಾ. ೧೮-೧-೩೭ ನೆಯ ಸಂಚಿಕೆಯಲ್ಲಿ "ತಿರುಳಿಲ್ಲದ ಒಪ್ಪಂದ" ಎಂಬ ಒಂದು ಸ್ಫುಟ ಲೇಖನವನ್ನು ವಿವರವಾಗಿ ಬರೆದು ಈ ವಿಷಯವನ್ನು ವಿಮರ್ಶಿಸಿ ಕೊನೆಗೆ ಈ ಕೆಳಗಿನಂತೆ ಸ್ಪಷ್ಟ ನಿಷೇಧಿಸಿದ್ದೇವೆ.

"ಬಂಗಾಲದಲ್ಲಿ ನೂರಕ್ಕೆ ೫೫ ರಂತೆ ಮುಸಲ್ಮಾನರು ೪೫ ರಂತೆ ಹಿಂದುಗಳು ಇದ್ದಾರೆ. ಆದಕಾರಣ ಅರ್ಧಪಾಲು ಬರುತ್ತದೆಂದು ಹಿಗ್ಗಿದರೆ ಮುಂದೆ ಅದೂ ಹೋಗುವ ಸಿದ್ಧತೆಮಾಡಿಕೊಂಡಂತೆಯೇ ಸರಿ. ಅನ್ಯಾಯವೂ ಅನರ್ಥಕರವೂ ಆಗಿರತಕ್ಕ ಈ ಜಾತಿನಿರ್ಣಯವನ್ನು ಹತ್ತು ವರುಷಗಳ ವರೆಗೆ ಪಿಟ್ಟೆನ್ನದೆ ಹೊಟ್ಟೆಯಲ್ಲಿಟ್ಟುಕೊಳ್ಳುವುದೆಂದರೆ ರಾಷ್ಟ್ರೀಯತ್ವವನ್ನು ನಾಶಮಾಡಿಕೊಳ್ಳುವುದಲ್ಲವೆ ? ರಾಷ್ಟ್ರೀಯ ಬಂಗಾಲಿಗಳು ತಿರುಳಿಲ್ಲದ ಈ ಒಪ್ಪಂದವನ್ನು ತಳ್ಳಿಬಿಡುವರೆಂದೇ ನಾವು ನಂಬಿದ್ದೇವೆ. ಈ ಜಾತಿನಿರ್ಣಯದ ವಿರುದ್ಧವಾಗಿ ನ್ಯಾಯ ಸಮ್ಮತವಾದ ಪ್ರಚಂಡ ಚಟುವಟಿಕೆಯನ್ನು ಹೂಡುವುದೇ ಅತ್ಯಗತ್ಯವಾಗಿದೆ."

ಪಾಗೋಟ (ಕೇಸರೀ) ಪತ್ರಿಕೆಯ ತಾರೀಖು ೧೨-೧-೩೭ ನೆಯ ಸಂಚಿಕೆಯಲ್ಲಿ "ಬಂಗಾಲದಲ್ಲಿ ಹಿಂದು-ಮುಸಲ್ಮಾನರ ಒಪ್ಪಂದ" ಎಂಬ ಸ್ಫುಟ ಲೇಖನವನ್ನು ಆ ಪತ್ರಿಕಾ ಕರ್ತರು ಬರೆದು ಈ ಒಪ್ಪಂದವನ್ನು ವಿಮರ್ಶಿಸಿ ಕೊನೆಗೆ ಹೀಗೆ ತಿಳಿಸಿದ್ದಾರೆ—

"ಹಿಂದು ಮಂತ್ರಿಗಳ ಸಂಖ್ಯೆ ಹೆಚ್ಚಾದರೇನು ? ಕಡಿಮೆಯಾದರೇನು ? ಅದರಿಂದ ಹಿಂದು ಜನಾಂಗದ ಹಿತಾಹಿತಗಳ ಮೇಲೆ ಯಾವ ಪರಿಣಾಮವೂ ಆಗುವುದಿಲ್ಲ."

ಹೀಗಿರುವಾಗ ಈ ವಿದ್ವಾನ್ ಲೇಖಕರು ಇಷ್ಟೆಲ್ಲಾ ಸುಳ್ಳು ಬರೆದು ಅನ್ಯರ ಸಂಬಂಧವಾಗಿ ಜನರಲ್ಲಿ ದುರಭಿಪ್ರಾಯವನ್ನುಂಟು

ಮಾಡುವ ಉದ್ದೇಶವೇನೋ ನಮಗೆ ತಿಳಿಯದಾಗಿದೆ. ಅನ್ಯರನ್ನು ಅಲ್ಲಗಳೆದು ಪರಿಹಾಸ್ಯಮಾಡಿದ ಇವರ ಈ ಬರವಣಿಗೆಯ ಶೈಲಿಗೆ ಸುಳ್ಳೇ ಮೂಲವಾಗಿದೆಯೆಂದು ಮೇಲಿನ ಸಂಗತಿಗಳಿಂದ ನಿಮಗಾದರೂ ಗೊತ್ತಾಗಿರಬಹುದು. ಎಂದಮೇಲೆ ಸತ್ಯ ಸಂಗತಿಗಳಿಂದ ಆದಕ್ಕೆ ಸರಿಯಾದ ಶೈಲಿಯಲ್ಲಿಯೇ ಬರೆಯುವುದೇನು ಕಷ್ಟದ ಕೆಲಸವಾಗಿರಲಿಲ್ಲವಷ್ಟೆ.

ತಮ್ಮ ಕಾಂಗ್ರೆಸ್ ಪಕ್ಷವೊಂದನ್ನು ಬೇರೆಯಾಗಿಟ್ಟುಕೊಂಡು, ಹಿಂದು ಮಹಾ ಸಭೆ, ರಾಷ್ಟ್ರೀಯ ಪಕ್ಷ, ಲೋಕಶಾಹಿ ಸ್ವರಾಜ್ಯ ಪಕ್ಷಗಳನ್ನೆಲ್ಲಾ ರಾಷ್ಟ್ರದ್ರೋಹದ ಘೋರ ಪಾಪದಲ್ಲಿ ತಳ್ಳಿ, ಪಂಡಿತ ಮಾಲವೀಜಿ, ಲೋಕನಾಯಕ ಅಣೆ, ಭಾಯಿ ಪರಮಾನಂದರಂತಹ ರಾಷ್ಟ್ರ ಸೇವಕರ ಮೇಲೆ ಭಯಂಕರ ದೋಷಾರೋಪಣೆ ಮಾಡಿರುವುದನ್ನು ನೋಡಿ ನಮಗೆ ಅತ್ಯಂತ ಆಶ್ಚರ್ಯ! ಜನ ಸಾಮಾನ್ಯಕ್ಕೆ ಸರಿಯಾದ ರೀತಿ ನೀತಿಗಳನ್ನು ತಿಳಿಸುವ ಹೆಚ್ಚಿನ ಹೊಣೆಗಾರಿಕೆಯುಳ್ಳ ಇಂತಹ ಮಹಾಶಯರೇ ಅನ್ಯ ಪಕ್ಷಗಳ ವಿಷಯದಲ್ಲಿ ಇಷ್ಟು ತಿರಸ್ಕಾರವುಳ್ಳವರಾಗಿದ್ದ ಮೇಲೆ ಸಾಧಾರಣ ಜನರು ಅನ್ಯ ಪಕ್ಷದವರನ್ನು ಹೇಗೆ ಕಾಣುತ್ತಿರಬಹುದು? ಅವರು ಎಷ್ಟು ಅಂಥ ಶ್ರದ್ಧೆಯವರಿರಬಹುದು? ಅಂತೆಯೇ ರಾಜಕೀಯ ವಿಷಯದಲ್ಲಿಯೂ ವಿಮರ್ಶಕ ಬುದ್ಧಿ ಬರಬೇಕಾಗಿ ನಾವು ಆಗಾಗ್ಗೆ ಹೇಳುತ್ತಾ ಇದ್ದುದು.

ಪ್ರಶ್ನೆ—ನೀವು ಪಾಗೋಟೆ ಪತ್ರಿಕೆಯ ಧೋರಣವನ್ನು ಹಿಡಿಯುವುದಾದರೆ ನಿಮಗೆ ರಾಷ್ಟ್ರೀಯ ಭಾವನೆಯವರೆಂದು ಹೇಳಲಾರರು. ಇನ್ನಾದರೂ ಅವರ ಜಾಲಕ್ಕೆ ಬೀಳದೆ ವಿಕಾರರಹಿತರಾಗಿ ಟೀಕಿಸಿರೆಂದು ನಿಮಗೆ ಅವರು ಬುದ್ಧಿವಾದವನ್ನು ಹೇಳಿದ್ದಾರೆ. ಅದನ್ನು ಲಕ್ಷಿಸಿರಿ.

ಉತ್ತರ—ನಾವು ಟಿಳಕ ಪಾಗೋಟೆ ಜಾಲದಲ್ಲಿಯೂ ಬೀಳುವವರಲ್ಲ. ಗಾಂಧಿ ಟೊಪ್ಪಿಗೆ ಜಾಲದಲ್ಲಿಯೂ ಬೀಳುವವರಲ್ಲ. ನೋಡಿದಿರೋ ಇಲ್ಲವೋ ನಮ್ಮ ತಲೆಯನ್ನು! ಒಬ್ಬರ ಜಾಲದಲ್ಲಿ ಬೀಳುವಷ್ಟು ಅಧೋಗತಿಯು ನಮ್ಮ ದೃಷ್ಟಿಯಲ್ಲಿ ಆತ್ಮಹತ್ಯವು ಕೂಡಾ ಅಲ್ಲ. ನಾವು ನಿರ್ವಿಕಾರಿಗಳಾಗಿ ಟೀಕೆಮಾಡುತ್ತೇವೆಂದು ಇಂತಹವರಿಂದ ಹೇಳಿಸಿಕೊಳ್ಳುವುದೇನೂ ಕಷ್ಟವಲ್ಲ. ಗೋಲುಗುಮಟವು ಪ್ರತಿಧ್ವನಿ ಮಾಡುವಂತೆ ಕಾಂಗ್ರೆಸ್ಸಿನವರು ಹೇಳುವುದನ್ನೆಲ್ಲಾ ಹೇಳುತ್ತ ಇದ್ದರಾಯಿತು.

ಪಂಡಿತ ಮಾಲವೀಜಿ ಮೊದಲಾದ ವಿಭೂತಿಗಳೇ ನೇ ರಾಷ್ಟ್ರದ್ರೋಹಿಗಳೂ, ರಾಷ್ಟ್ರಘಾತದ ಕಾರ್ಯಕ್ಕೈಕೊಂಡವರೂ ಎಂದು ಹೇಳಿ ಇಂಥ ಹಿಂದುಗಳಿರುವುದರಿಂದಲೇ ಜಾತಿನಿರ್ಣಯವಿದೆಯೆಂಬ ಹೊಸ ಶೋಧವನ್ನು ಮಾಡಿದವರು ನಮಗೆ ರಾಷ್ಟ್ರಭಾವನೆಯಿಲ್ಲದವರೆಂದಿಷ್ಟೇ ಹೇಳಿದ್ದು ಘನವಾದ ಗೌರವವನ್ನು ಕೊಟ್ಟ ಮಹದುಪಕಾರವೇ ಸರಿ.

ಲೋಕಮತ ಪತ್ರಿಕಾಕರ್ತರ ಸಂಬಂಧವಾಗಿ ಈ ರೀತಿ ಇಷ್ಟೆಲ್ಲಾ ಹೇಳುವ ಅತ್ಯಂತ ವಿಷಾದದ ಪ್ರಸಂಗವು ಬರಬಹುದೆಂಬ ಕಲ್ಪನೆಯೇ ನಮಗಿರಲಿಲ್ಲ. ಈ ಖೇದದ ಪ್ರಸಂಗವನ್ನು ಇಷ್ಟಾದರೂ ನಾವು ನಮ್ಮ ಕರ್ತವ್ಯವೆಂದೇ ಪ್ರಸ್ತಾಪಿಸಬೇಕಾಯಿತು. ಕಳೆದ ೭ ನೆಯ ತಾರೀಖಿನ ದಿನವೇ ಲೋಕಮತ ಪತ್ರಿಕೆಯಲ್ಲಿಯೂ ಪ್ರಕಟಿಸಲು ನಾವು ಈ ಮುಂಚೆ ಹೇಳಿದ ಶರಣ ಸಂದೇಶದಲ್ಲಿಯ ಮತ್ತು ಕೇಸರೀ ಪತ್ರಿಕೆಯಲ್ಲಿಯ ಸಂಗತಿಗಳನ್ನು ಬರೆದು ಕಳುಹಿಸಿದ್ದೇವೆ. ತಮ್ಮ ಪತ್ರಿಕಾ ವಾಚಕರಿಗೆ ಸತ್ಯ ಸಂಗತಿಯನ್ನು ತಿಳಿಸಬೇಕಾದುದು ಅವರ ಕರ್ತವ್ಯವೇ ಆಗಿರುವುದರಿಂದ ಆ ಲೇಖನವನ್ನು ಅವರು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸುವರೆಂತಲೂ ನಾವು ನಂಬಿದ್ದೇವೆ.

## ಆ ಜೈಲಿಗಿಂತ ಇದು ಕಷ್ಟದ ಜೈಲು!

——:8:——

ಮದ್ರಾಸ ಸರಕಾರದ ಮುಖ್ಯ ಮಂತ್ರಿಗಳಾದ ಶ್ರೀ. ರಾಜಗೋಪಾಲಾಚಾರ್ಯರಿಗೂ ಮಂತ್ರಿಗಳಾದ ಶ್ರೀ. ಯಾಕೂಬಹಸನ್‌ರವರಿಗೂ ಸನ್ಮಾನಾರ್ಥವಾದ ಔತಣವನ್ನು ಮದ್ರಾಸಿನ ರಾ|ಬ| ನಟೇಶನ್‌ರವರು ಕೊಟ್ಟರು. ಆಗ ಮುಖ್ಯಮಂತ್ರಿಗಳು ಹೀಗೆ ಹೇಳಿದರು—

“ನನಗೆ ಈ ವರೆಗೆ ಅನೇಕ ಜೈಲುಗಳಲ್ಲಿದ್ದ ಅನುಭವವಿದೆ. ಆ ಎಲ್ಲಾ ಜೈಲುಗಳಿಗಿಂತ ಕಳೆದ ಆರು ವಾರಗಳಿಂದಿರುವ ಈ ಸರಕಾರಿ ಸೆಕ್ರೆಟರಿ ಏಟ್ ಎಂಬ ಜೈಲು ನನಗೆ ಹೆಚ್ಚು ಕಷ್ಟದಾಯಕವಾದುದಾಗಿದೆ. ಆ ಜೈಲುಗಳಲ್ಲಿ ನನ್ನ ಪ್ರೀತ್ಯಾಸ್ಪದರ ವಿನಾ ಬೇರೆ ಯಾರೂ ಬರುತ್ತಿರಲಿಲ್ಲ. ಬೇಕಾದಷ್ಟು ವಿಶ್ರಾಂತಿ ದೊರೆಯುತ್ತಿತ್ತು. ಈ ಜೈಲಿನಲ್ಲಿ ನನ್ನ ಕಡೆ ಬೇಕಾದವರು ಬರುತ್ತಾರೆ. ಸ್ವಲ್ಪವೂ ವಿಶ್ರಾಂತಿಯಿಲ್ಲ. ಸಂತೋಷವಿಲ್ಲ. ಅಧಿಕಾರವೂ ಇಲ್ಲ. ಜನರು ಹೇಳುವುದನ್ನೆಲ್ಲಾ ಮಾಡಬೇಕಾಗುತ್ತದೆ. ಆ ಜೈಲನ್ನು ತಪ್ಪಿಸಿ ಈ ಜೈಲಿಗೆ ಕಳಿಸಲು ಶ್ರೀ. ನಟೇಶನ್‌ರವರೂ ಕಾರಣರಾಗಿರುವುದರಿಂದ ಇವರು ನನಗೆ ತೊಂದರೆಯನ್ನೇ ಉಂಟುಮಾಡಿದ್ದಾರೆ.

ನಾನು ಆದಕ್ಕಾಗಿ ನೀವು ಖಾದಿಯನ್ನು ಧರಿಸಿರೆಂದು ಹೇಳುತ್ತೇನೆ. ಹಿಂದೆಯೂ ಹೇಳಿದ್ದೆನು. ಇನ್ನೂ ನಾನೇನೂ ನಿರಾಶನಾಗಿಲ್ಲ. ಅಸೆಂಬ್ಲಿ ಭವನದಲ್ಲಿ ನಾನು ಮೊನ್ನೆ ಒಬ್ಬ ಹಳ್ಳಿ ಮುದುಕಿಗೆ ನೂಲಲು ಹೇಳಿದ್ದೆನು. ಅವಳ ಸುತ್ತಲೂ ನೂರಾರು ಎಂ. ಎಲ್. ಎ. ಸದಸ್ಯರು ಕೂಡಿದ್ದರು. ಆ ಹೆಣ್ಣುಮಗಳು ತಾನು ನೂಲುವುದನ್ನು ಬಿಟ್ಟು ಅತ್ತಿತ್ತ ನೋಡಿದಳೆ? ಇವೇನು ನೂರಾರು ಇಲ್ಲಿ ಒಟ ಒಟ ಎನ್ನುತ್ತಿದ್ದಾವೆಂದೇ ಅವಳು ಯೋಚಿಸಿರಬೇಕು. ಅವಳ ಈ ನೂಲುವ ಶ್ರದ್ಧೆಯನ್ನು ನೋಡಿಯೇ ಖಾದಿಗಾಗಿ ನಾನು ಕೇಳಿದ ೨ ಲಕ್ಷ ರೂ. ಗಳನ್ನು ಎಂ. ಎಲ್. ಎ. ಗಳು ಕೊಡಲು ಒಪ್ಪಿರಬೇಕು.”

ಶ್ರೀ. ಯಾಕೂಬ ಹಸನ್‌ರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

“ರಾಜಕಾರಣದಲ್ಲಯ ಸಹಕಾರಕ್ಕೆ ಸಾಮಾಜಿಕ ಸಹಭೋಜನವೂ ಸಹಕಾರಿಯಾಗುದೆಂದೇ ನಾನು ತಿಳಿದಿದ್ದೇನೆ.”

## ಪುಂಡಾಟಿಕೆಯ ಭೀತಿ.

ಬ್ಯಾ. ಸಾವರಕರರು ಸೊಲ್ಲಾಪುರ ಮತ್ತು ಬಾರ್ಶಿಗಳಿಗೆ ಬಂದಾಗ ವಿರುದ್ಧ ಪಕ್ಷದ ಕೆಲವು ಪುಂಡರು ಮಾಡಿದ ಅತ್ಯಾಚಾರಗಳನ್ನು ಕುರಿತು ಈ ಮುಂಚೆ ನಾವು ಬರೆದಿದ್ದೇವಷ್ಟೆ. ಮೊನ್ನೆ ಉಮರಾವತಿಯಲ್ಲಿ ಬಾಮಣಗಾವಕರರು ಮಧ್ಯಪ್ರಾಂತದ ಮುಖ್ಯ ಮಂತ್ರಿಗಳಾದ ಡಾ. ಖರೆ ಇವರ ಹಸ್ತದಿಂದ ಟಿಳಕಾಶ್ರಮದ ಉದ್ಘಾಟನ ಸಮಾರಂಭವನ್ನು ನಡೆಯಿಸಿದರು. ಆಗ ಬೇರೆ ಪಕ್ಷದ ಪ್ರಮುಖರಾದ ಶ್ರೀ. ಖಾಪರ್ಡೆಯವರನ್ನೂ ಆ ಸಮಾರಂಭಕ್ಕೆ ಕರೆಯಿಸಿದ್ದರು. ಆದು ಅಲ್ಲಿಯ ಕಾಂಗ್ರೆಸ್ ಪಕ್ಷದ ಕೆಲವು ಪುಂಡರಿಗೆ ಸಮಾಧಾನವಾಗದೆ ಸಮಾರಂಭದಲ್ಲಿ ಗೊಂದಲಮಾಡಿ ಶ್ರೀ. ಬಾಮಣಗಾವಕರರಿಗೆ ಭಯಗೊಳಿಸಿದರು. ಈ ನಿಂದ್ಯ ರೀತಿಯನ್ನು ಕಾಂಗ್ರೆಸ್ ಪಕ್ಷದ ಪ್ರಮುಖರಾದ ಮುಖ್ಯ ಮಂತ್ರಿಗಳೇ ಅಲ್ಲಿಯೇ ನಿಷೇಧಿಸಲು ಆ ಪುಂಡರ ಪುಂಡಾಟಿಕೆ ನಿಂತಿತು. ಹೀಗೆ ಪ್ರಮುಖರು ಆಗಾಗ್ಗೆ ಪುಂಡರ ಕಿವಿ ಹಿಂಡಬೇಕು. ಈ ಸಂಬಂಧವಾಗಿ ಧನುರ್ಧಾರಿ ಪತ್ರಿಕಾ ಕರ್ತರು ಪುಂಡಾಟಿಕೆಯ ಭೀತಿ ಎಂಬ ಒಂದು ಲೇಖನದಲ್ಲಿ ಹೀಗೆ ಬರೆದಿದ್ದಾರೆ—

"ಬ್ಯಾ. ಸಾವರಕರರು ಸೊಲ್ಲಾಪುರ ಮತ್ತು ಬಾರ್ಶಿಗಳಿಗೆ ಹೋದಾಗ ನಡೆದ ಅತ್ಯಾಚಾರಗಳು ಯಾವ ಪಕ್ಷದವರಿಂದ ನಡೆದಿದ್ದರೂ ಅವು ನಿಂದ್ಯವಾದವುಗಳೇ ಸರಿ. ಸೊಲ್ಲಾಪುರದಲ್ಲಿ ನಡೆದ ನಿಂದ್ಯ ಕಾರ್ಯಗಳ ಸಂಬಂಧವಾಗಿ ಅನೇಕರ ಮೇಲೆ ಈಗ ವ್ಯಾಜ್ಯ ನಡೆದಿದೆಯಷ್ಟೆ. ಕಾಂಗ್ರೆಸ್ ಪಕ್ಷ ಮತ್ತು ಲೋಕಶಾಹಿ ಸ್ವರಾಜ್ಯ ಪಕ್ಷ ಇವುಗಳ ವಿರೋಧವು ಕೊನೆಗೆ ಈ ರೀತಿಯಾಗಿ ಪರಿಣಮಿಸಿದ್ದು ಎರಡೂ ಪಕ್ಷಗಳಿಗೆ ಕಲಂಕವಾದುದೇ ಸರಿ. ಈಗ ತಾನೆ ಜನಾಧಿಕಾರದ ಸ್ವರಾಜ್ಯ ಪ್ರಾರಂಭವಾಗಿದೆ. ಇಂಥ ಪ್ರಸಂಗದಲ್ಲಿ ಹೀಗೆ ನಮ್ಮ ನಮ್ಮಲ್ಲೇ ಪಕ್ಷಗಳ ತಿಕ್ಕಾಟ ಪ್ರಾರಂಭವಾದರೆ ಜನರು ಮೊದಲಿನ ಸರಕಾರವೇ ಒಳ್ಳೆಯದಾಗಿತ್ತೆಂದು ಹೇಳಬಹುದು. ಕಾಂಗ್ರೆಸ್ ಪಕ್ಷದವರು ಅಲ್ಲಿ ನಡೆದ ಅತ್ಯಾಚಾರಕ್ಕೆ ಯಾರು ಕಾರಣರೆಂಬುದನ್ನು ಕಂಡುಹಿಡಿದು ಬೈಲಿಗೆ ತರುವುದು ಅತ್ಯಗತ್ಯವಾಗಿದೆ.

ಉಮರಾವತಿಯಲ್ಲಿ ಶ್ರೀ. ಬಾಮಣಗಾವಕರ ಇವರ ಸಂಬಂಧವಾಗಿ ಅಲ್ಲಿಯ ಕೆಲವು ಕಾಂಗ್ರೆಸ್ ಕೆಲಸಗಾರರು ನಡೆಸಿದ ಪುಂಡಾಟಿಕೆ ಅತ್ಯಂತ ನಿಂದ್ಯವಾದುದು. ಶ್ರೀ. ಖಾಪರ್ಡೆಯವರು ಆ ಸಮಾರಂಭಕ್ಕೆ ಬಂದದ್ದನ್ನು ನೋಡಿ ಡಾ. ಖರೆ ಇವರಿಗೆ ಸಂತೋಷವಾಯಿತು. ಆದರೆ ಅವರ ಭಕ್ತರು ಮಾತ್ರ ಹೀಗೆ ಪುಂಡಾಟಿಕೆಯನ್ನು ಮಾಡಬಹುದೆ? ಅವರಿಗೆ ಭಯಗೊಳಿಸಬಹುದೆ? ಶ್ರೀ. ಬಾಮಣಗಾವಕರರು ಆ ಪುಂಡಾಟಿಕೆಗೆ ಅಂಜದೆ ಮನೋಧೈರ್ಯವನ್ನು ವ್ಯಕ್ತಗೊಳಿಸಿದ್ದು ಅತ್ಯಂತ ಅಭಿನಂದನೀಯವಾಗಿದೆ. ಕಾಂಗ್ರೆಸ್ ರಾಜ್ಯದಲ್ಲಿ ಈ ಅಸಹಿಷ್ಣುತೆಯ ಪರಮಾವಧಿಯು ಉಂಟಾಗದಂತೆ ಈಗಲೇ ಪ್ರಯತ್ನಿಸಬೇಕು. ಜನಸಾಮಾನ್ಯವು ಈಗಲೇ ಹಿಡಿವಿನಲ್ಲಿರದೆ ಸ್ವೇಚ್ಛೆಯಾಗಿ ನಡೆಯುವ ರೂಢಿಯುಂಟಾದರೆ ಲೋಕ ಪ್ರಭುತ್ವಕ್ಕೆ ಪ್ರತಿಯಾಗಿ ಪುಂಡರ ಪ್ರಭುತ್ವ ಪ್ರಾರಂಭವಾಗಬಹುದೆಂಬ ಭೀತಿಯುಂಟಾಗಲಿಕ್ಕಿಲ್ಲವೆ?"

## ಧಾರವಾಡ.

ಶ್ರೀಮನ್ನಿರಂಜನ ಜಗದ್ಗುರು ಮುರಘರಾಜೇಂದ್ರ ಪ್ರ ಬೋರ್ಡಿಂಗ ಈ ಸಂಸ್ಥೆಯಲ್ಲಿ ಪದ್ಧತಿ ಪ್ರಕಾರ ಶ್ರಾವಣ ಶು|| ೧ (೭-೮-೩೭) ರಿಂದ ಬೆಳಿಗ್ಗೆ ಶ್ರೀ. ಮಹಾ ತಪಸ್ವಿಗಳ ಶ್ರೀ ಪಾದಕ್ಕೆ ರುದ್ರಾಭಿಷೇಕ ಬಿಲ್ವಾರ್ಚನೆ ಶ್ರೀ. ನಿ. ಪ್ರ. ಕರ್ಜಗಿ ಹೊಸಮಠ ಸ್ವಾಮಿಗಳ ಪಾದಪೂಜೆ ಶ್ರಾವಣ ಶು|| ೧೩ ವರೆಗೆ ಗಣಾರಾಧನೆ ಸಾಯಂಕಾಲ ಸಂಸ್ಥೆಯ ಶ್ರೀ. ಅಧ್ಯಾಪಕರಾದ ವೆ| ಪಂ| ವೀರಭದ್ರ ಶಾಸ್ತ್ರಿಗಳು ಕೊಂಗವಾಡ ಹಿರೇಮಠ ಇವರಿಂದ ಚಾಮರಸ ಕೃತ ಪ್ರಭುಲಿಂಗ ಲೀಲೆಯ ಪುರಾಣವು ಮತ್ತು ಶಿವಭಜನೆಗಳೂ ಹಾಗೂ ಮಧ್ಯ ಮಧ್ಯದಲ್ಲಿ ಕೀರ್ತನೆಗಳೂ ಉಪನ್ಯಾಸಗಳೂ ಮತ್ತು ಪ್ರವಚನ ಮೊದಲಾದ ಕಾರ್ಯಗಳು ಜರುಗಿ ಇದೇ ಭಾದ್ರಪದ ಶು|| ೧ (ತಾ. ೫-೯-೩೭) ರವಿವಾರ ಮಹಾಗಣಾರಾಧನೆಯೊಡನೆ ಸರ್ವ ಕಾರ್ಯಗಳು ಶ್ರೀ ಮಹಾ ತಪಸ್ವಿಗಳ ಕೃಪೆಯಿಂದ ಸಾಂಗವಾಗಿ ನೆರವೇರಿದವು. ಈ ಸುಸಮಯದಲ್ಲಿ ದಯಮಾಡಿಸಿದ ಶ್ರೀ. ಗುರುಲಿಂಗ ದೇವರು ಚಂದ್ರಶೇಖರ ಮಠ ಬೆಳಗಾವ (ನ್ಯಾಯಾಚಾರ್ಯ) ಇವರು ರವಿವಾರ ಬೆಳಿಗ್ಗೆ ಭಕ್ತಿಯೋಗ ಈ ವಿಷಯದ ಮೇಲೆ ಸರ್ವರಿಗೂ ಆನಂದವಾಗುವ ಹಾಗೆ ಪ್ರವಚನ ಮಾಡಿದರು.

ಸೆಕ್ರೆಟರಿ.

## ಗೋವಧಾಲಯದ ವಿರೋಧ.

ವ್ಹಾಯಿಸರಾಯರಿಗೆ ಬಾಗಲಕೋಟೆ ಮರ್ಚೆಂಟ ಅಸೋಸಿಯೇಶನ್ ಮತ್ತು ಪಾಂಜರಪೋಳ (ಗೋರಕ್ಷಣ) ಸಂಸ್ಥೆಯವರಿಂದ ತಂತಿ—

ಲಾಹೋರ ಲಷ್ಕರಿಶಾಹಿಯವರಿಂದ ತೆರೆಯಲಿರುವ ಗೋವಧ ನಿಲಯವನ್ನು ಕೂಡಲೇ ನಿಲ್ಲಿಸಿಬಿಡಬೇಕೆಂದು ನಾಮದಾರ ವ್ಹಾಯಿಸರಾಯರನ್ನು ಆಗ್ರಹಪೂರ್ವಕವಾಗಿ ಈ ಸಭೆಯು ಬಿನ್ನಹಿಸುತ್ತದೆ. ವ್ಹಾಯಿಸರಾಯರು ರೈತರ ಸಂಪತ್ತನ್ನು ಹೆಚ್ಚಿಸಲಿಕ್ಕೆ ಬೋಧಿಸುವಾಗ ವ್ಯಾಪಾರಕ್ಕಾಗಿ ಗೋವಧೆಯ ಮಾಡಿಸುವದು ಧ್ಯೇಯದ ವಿರೋಧವಾಗುವದೆಂದೂ ಹಿಂದಿಯರ ಧಾರ್ಮಿಕ ಭಾವನೆಯನ್ನು ನೋವುಮಾಡುವದೆಂದೂ ಈ ಸಭೆಯವರ ಅಭಿಮತವು.—

ಈ ಪ್ರಕಾರ ಠರಾವನ್ನು ಪಾಸುಮಾಡಿ ಶಿವ್ಲಾಕ್ಕೆ ತಾರಿನಿಂದ ವ್ಹಾಯಿಸರಾಯರಿಗೂ ಮತ್ತು ಕಮಾಂಡರ ಯಿನ್ ಚೀಫ್ ಫಾರ ಇಂಡಿಯಾ ಇವರಿಗೂ ಕಳಿಸಬೇಕೆಂದು ಠರಾವು ಸರ್ವಾನುಮತದಿಂದ ಪಾಸುಮಾಡಲ್ಪಟ್ಟಿತು.

ತಾ|| ೩-೯-೩೭ಇಸ್ವಿ. ಬಸವಂತರಾವ ನಾಗರಾಳೆ
ಪ್ರೆಸಿಡೆಂಟ

## ಬನವಾಸಿ.

ಬನವಾಸಿಯಲ್ಲಿ ತಾ. ೫-೯-೩೭ ನೆಯ ದಿವಸ ನಾಗರಿಕರ ಸಭೆ ಸೇರಿ ಕಾಂಗ್ರೆಸ್ ಕಮಿಟಿಯು ಸ್ಥಾಪನೆಯಾಯಿತು. ಶ್ರೀ. ಲಿಂಗಪ್ಪ ಉಳ್ಳಾಗಡ್ಡಿ ಇವರು ಅಧ್ಯಕ್ಷರಾಗಿಯೂ ಶ್ರೀ. ಸುಬ್ರಾಯ ಮಂಜಭಟ್ಟಾ ಮತ್ತಿಹಳ್ಳಿ ಇವರು ಉಪಾಧ್ಯಕ್ಷರಾಗಿಯೂ ಶ್ರೀ. ಚೆನ್ನಪ್ಪ ಚನಬಸಪ್ಪ ಮುಳಗುಂದ ಇವರು ಸೆಕ್ರೆಟರಿಗಳಾಗಿಯೂ ಆರಿಸಲ್ಪಟ್ಟರು. ಮತ್ತು ೧೧ ಜನರ ಒಂದು ಕಾರ್ಯಕಾರಿ ಮಂಡಲವೂ ಏರ್ಪಟ್ಟಿತು.

—ಓರ್ವ ಸುದ್ದಿಗಾರ



ಶಾ. ಶ. ೧೮೫೯ ನೆಯ ಭಾದ್ರಪದ ಶು|| ೮ ಸೋಮವಾರ.

## ರಾಜಕಾರಣದಲ್ಲಿಯ ಅಸ್ಪೃಶ್ಯರು!

ಹಿಂದುಗಳಲ್ಲಿ ಕೆಲವು ಜನರು ಅಸ್ಪೃಶ್ಯರೆಂದು ಬಹು ಕಾಲದಿಂದಲೂ ಎಣಿಸಲ್ಪಟ್ಟದ್ದಾರಷ್ಟೆ. ಅವರು ಧಾರ್ಮಿಕ, ಸಾಮಾಜಿಕ, ಮೊದಲಾದ ಎಲ್ಲ ವಿಷಯಗಳಲ್ಲಿಯೂ ಅಸ್ಪೃಶ್ಯರು. ಅವರಿಗೆ ಮಾರ್ಗಗಳಲ್ಲಿ ವೈಭವದಿಂದ ಹೋಗುವ ಅಧಿಕಾರವಿಲ್ಲ. ಅವರಿಗೆ ಸಭೆಗಳಲ್ಲಿ ಬಂದು ಮಾತನಾಡಲು ಅಧಿಕಾರವಿಲ್ಲ. ಅವರು ಮನುಷ್ಯ ಜಾತಿಗೇನೇ ಹೊರಗೆಂದು ಅನೇಕರ ತಿಳುವಳಿಕೆ. ಇಷ್ಟೇ ಅಲ್ಲ; ಅನೇಕ ಪಶು ಪಕ್ಷಿಗಳಿಗಿಂತಲೂ ಅವರು ಕೀಳಾಗಿಯೇ ಬಹು ಜನಗಳಿಂದ ಎಣಿಸಲ್ಪಡುತ್ತಿದ್ದಾರೆ. ಈ ಎಲ್ಲ ಕಷ್ಟ, ನಷ್ಟ, ಅವಮಾನಗಳು ಅವರಿಗೇಕೆಂದರೆ, ಅವರು ತಮ್ಮ ಜಾತಿಯವರಲ್ಲ; ಅನ್ಯ ಕೀಳು ಜಾತಿಯವರು. ಎಂಬುದೇ ಸ್ಪೃಶ್ಯ ಹಿಂದುಗಳ ಮುಖ್ಯ ಹೇಳಿಕೆ. ಇದು ಸರ್ವಶ್ರುತ ಸಂಗತಿಯಷ್ಟೆ.

ಹಿಂದುಸ್ಥಾನದಲ್ಲಿ ಇತ್ತೀಚಿಗೆ ಇನ್ನೊಂದು ಅಸ್ಪೃಶ್ಯ ಜಾತಿಯುಂಟಾಗುತ್ತಾ ಇದೆ! ಆ ಜಾತಿಯವರು ರಾಜಕಾರಣದಲ್ಲಿ ಅಸ್ಪೃಶ್ಯರು. ಅವರಿಗೆ ಮೆರವಣಿಗೆಯಾಗಬಾರದು. ಅವರ ಸಭೆಗಳು ಸಾಂಗವಾಗಿ ಜರುಗಬಾರದು. ಅವರು ತಮ್ಮ ವಿರೋಧವಾಗಿ ಲೇಖನಗಳನ್ನು ಬರೆಯಬಾರದು. ಅವರು ಸ್ಪೃಶ್ಯ ರಾಜಕಾರಣದವರ ಸಭೆಯಲ್ಲಿ ಬಂದು ಮಾತನಾಡಬಾರದು. ಹಾಗೇನಾದರೂ ಅವರಿಂದ ಅಪರಾಧ ಜರುಗಿದರೆ ಅವರಿಗೆ ತಮ್ಮಿಂದ ಶಕ್ಯವಿರುವ ಎಲ್ಲ ಕಷ್ಟ, ನಷ್ಟ, ಅವಮಾನಗಳನ್ನು ಮಾಡಲು ಸ್ಪೃಶ್ಯ ರಾಜಕಾರಣದ ಅನೇಕ ಸನಾತನಿಗಳು ಸಿದ್ಧರಾಗಿದ್ದಾರೆ. ಏಕೆಂದರೆ, ಅವರ ಕಾಂಗ್ರೆಸ್ ಜಾತಿ ಹೆಚ್ಚಿನದು. ಕಾಂಗ್ರೆಸ್ಸೇತರ ರಾಜಕೀಯ ಜಾತಿಗಳೆಲ್ಲಾ ಅಸ್ಪೃಶ್ಯ ಜಾತಿಗಳು. ಅವು ರಾಷ್ಟ್ರದ್ರೋಹದ ಜಾತಿಗಳು. ಅವು ತಲೆ ಎತ್ತದಂತೆ ಶಕ್ಯವಿದ್ದ ಎಲ್ಲ ಪ್ರಯತ್ನಗಳನ್ನೂ ಮಾಡುವುದು ರಾಷ್ಟ್ರಭಕ್ತಿಯ ದ್ಯೋತಕವೇ ಆಗಿದೆ.

ಈ ವಿಧವಾದ ವಿಚಾರಸರಣಿಯು ಇತ್ತೀಚಿಗೆ ಕಾಂಗ್ರೆಸ್ ಜಾತಿಯ ಅನೇಕರಲ್ಲಿ ಹೆಚ್ಚುತ್ತಾ ಇದೆ. ಬ್ಯಾ. ಸಾವರಕರರಿಗೆ ಸೊಲ್ಲಾಪುರ ಮತ್ತು ಬಾರ್ಶಿಗಳಲ್ಲಿ ಮೆರವಣಿಗೆಯ ಕಾಲಕ್ಕೆ ಸಂಭವಿಸಿದ ಪ್ರಸಂಗಗಳು ಇನ್ನೂ ಅನೇಕರ ಕಣ್ಣ ಮುಂದೆ ಕಟ್ಟಿದಂತೆ ಇವೆ. ಮಧ್ಯಪ್ರಾಂತದ ಅಸೆಂಬ್ಲಿಯಲ್ಲಿ ಕಾಂಗ್ರೆಸ್ ಜಾತಿಯ ಅನೇಕರು ನಡೆಸಿದ ಪುಂಡಾಟಿಕೆಯನ್ನು ಕುರಿತು ಮಹಾತ್ಮಾ ಗಾಂಧಿಯವರು ಬೋಧಿಸಿದ ದಿವ್ಯ ತತ್ವವು ಇನ್ನೂ ಅನೇಕರ ಸ್ಮರಣೆಯಲ್ಲಿದೆ. ಇಷ್ಟರಲ್ಲೇ ಉಮರಾವತಿಯಲ್ಲಿ ಶ್ರೀ. ಬಾಮಣಗಾವಕರರ ಮೇಲೆ ಬಂದ ಪ್ರಸಂಗವೂ ಬೇರೊಂದು ಕಡೆ ಕೊಡಲ್ಪಟ್ಟಿದೆ.

ಶ್ರೀ. ಬಾಮಣಗಾವಕರರು ಮಧ್ಯ ಪ್ರಾಂತದ ಮಂತ್ರಿಗಳಾದ ಡಾ. ಖರೆ ಇವರಿಂದಲೇ ತಮ್ಮ ಟಿಳಕಾಶ್ರಮದ ಉದ್ಘಾಟನ ಸಮಾರಂಭವನ್ನು ನಡೆಯಿಸಿದರು. ಆ ಸಮಾರಂಭದ ಸ್ವಾಗತಾಧ್ಯಕ್ಷರು ಶ್ರೀ. ಖಾಪರ್ಡೆಯವರು. ಇವರು ಕಾಂಗ್ರೆಸ್ ಜಾತಿಯವರಲ್ಲ. ಆದುದರಿಂದ ಸ್ವಾಗತ ಸಂಘಾಧ್ಯಕ್ಷರು ತಮ್ಮ ಭಾಷಣವನ್ನು ಪ್ರಾರಂಭಿಸಿದೊಡನೆ ಅನೇಕ ಕಾಂಗ್ರೆಸ್ ಜಾತಿಯವರು ಅವರ ಭಾಷಣಕ್ಕೆ ಪ್ರತಿಬಂಧ ಮಾಡಿದರು! ಅವರ ಆಮಂತ್ರಣದ ಮೇರೆಗೆ ಅವರಲ್ಲಿ ಬಂದು ಅವರಿಗೇನೇ ಮಾತಾಡಬೇಡಿರೆಂದು ಇವರ ಅಪ್ಪಣೆ! ಹೇಗಿದೆ ಈ ಸನಾತನಿಗಳ 'ಜುಲುಮ್'?

ಕಾಂಗ್ರೆಸ್ ಜಾತಿಯಲ್ಲಿ ಎಲ್ಲರೂ ಇಂಥ ಕ್ಷುದ್ರ ವಿಚಾರದ ಕರ್ಮಠರಿದ್ದಾರೆಯೇ? ಸ್ಪೃಶ್ಯ ಹಿಂದುಗಳಲ್ಲಿಯೂ ಹೇಗೆ ಅನೇಕರು ಉದಾರಿಗಳಿದ್ದಾರೆಯೋ ಹಾಗೆಯೇ ಕಾಂಗ್ರೆಸ್ ಜಾತಿಯಲ್ಲಿಯೂ ಬಹು ಜನರು ತಮ್ಮ ಜಾತಿಯ ನಿಜತ್ವವನ್ನು ಅರಿತವರಿದ್ದಾರೆ. ಆದುದರಿಂದ ಆಗ ಅಲ್ಲಿ ಅಧ್ಯಕ್ಷರಾಗಿದ್ದ ಡಾ. ಖರೆ ಇವರೇ ಆ ಸ್ವಜಾತಿಯ ಪುಂಡರ ಕಿವಿ ಹಿಂಡಿದರು.

### ಈ ಶ್ರೇಷ್ಠತ್ವ ಹೇಗೆ ಬಂತು?

ಕಾಂಗ್ರೆಸ್ ಎಂಬ ಶಬ್ದವು ಜನರಿಗೆ ಏಕೆ ಇಷ್ಟು ಆದರಪಾತ್ರವಾಗಿದೆಯೆಂಬುದು ಕಾಂಗ್ರೆಸ್ ಜಾತಿಯ ಈ ಪುಂಡಾಟಿಕೆ ಮಾಡುವವರಿಗೂ ಅನ್ಯ ರಾಜಕೀಯ ಜಾತಿಯವರೆಲ್ಲಾ ದೇಶದ್ರೋಹಿಗಳೆಂದು ತಿಳಿದ ಕರ್ಮಠರಿಗೂ ಚೆನ್ನಾಗಿ ಗೊತ್ತಿಲ್ಲ. ಮಹಾತ್ಮಾ ಗಾಂಧಿಯವರೇ ಮೊದಲಾದ ಮಹಾ ವಿಭೂತಿಗಳು ಕಳೆದ ೧೫ ವರುಷಗಳಿಂದಲೂ ಸತ್ಯ ಮತ್ತು ಅಹಿಂಸೆಗಳನ್ನು ರಾಜಕಾರಣದ ಚಿಕ್ಕ ಪುಟ್ಟ ಕಾರ್ಯಗಳಲ್ಲಿಯೂ ಉಪಯೋಗಿಸಿ ಅವುಗಳ ಭಂಗವಾದಾಗ ಘೋರ ಉಪವಾಸಾದಿ ವ್ರತಗಳನ್ನೂ ಆಚರಿಸಿ ಪರಪಕ್ಷದವರ ಮನಸ್ಸನ್ನು ಕರಗಿಸಿದರು.

ಆ ಹಿಂದಿನ ಮಹಾ ತಪಸ್ಸಿನ ಶಕ್ತಿಯೇ ಕಾಂಗ್ರೆಸ್ಸಿಗೆ ಇಂದು ಇಂತಹ ಶ್ರೇಷ್ಠತ್ವವನ್ನು ತಂದುಕೊಟ್ಟಿದೆ. ಪ್ರಬಲವಾದ ಸರಕಾರವು ಕೂಡಾ ತಲೆಬಾಗುವಂತೆ ಮಾಡಿದೆ. ಗುಂಡಿನ ಬಾಯಿಗೆ ಅನೇಕ ಸತ್ಯಾಗ್ರಹಿಗಳು ನಿಂತರು. ಆದರೆ ವಿರೋಧಿಗಳ ಮೈಮೇಲೆ ಕೈ ಮಾಡಲಿಲ್ಲ. ಪೋಲಿಸರ ಬಡಗಿಗೆ ಬೆನ್ನು ಕೊಟ್ಟರು. ಆದರೆ ಅವರಿಗೆ ಒಂದು ಬಿರುನುಡಿಯನ್ನಾದರೂ ಆಡಲಿಲ್ಲ. ಸೆರೆಮನೆಗೆ ಸಂತೋಷದಿಂದ ಹೋದರು. ಪರಪಕ್ಷದವರ ಆಕ್ಷೇಪಣೆಯನ್ನು ಶಾಂತತೆಯಿಂದ ಸಹಿಸಿದರು. ತಮ್ಮ ನಡೆ ನುಡಿ ತಪ್ಪಿತೆಂದು ತಿಳಿದೊಡನೆ ಆತ್ಮ ಶುದ್ಧಿಗಾಗಿ ಉಪವಾಸ ವ್ರತವನ್ನು ಕೈಕೊಂಡರು. ಈ ಪ್ರಕಾರ ಸತ್ಯ ಮತ್ತು ಅಹಿಂಸಾ ವ್ರತಗಳನ್ನು ಕಾಯಾ, ವಾಚಾ, ಮನಸುಗಳಿಂದ ಕಳೆದ ೧೫ ವರುಷ ಕಾಂಗ್ರೆಸ್ಸಿನ ಸಾವಿರಾರು ಪೂಜ್ಯ ವ್ಯಕ್ತಿಗಳು ಆಚರಿಸಿದ್ದರಿಂದಲೇ ಕಾಂಗ್ರೆಸ್ಸಿಗೆ ಈ ದಿನ ಇಂಥ ಶ್ರೇಷ್ಠತೆ ಬಂದಿದೆ.

ಇದನ್ನು ಕಾಂಗ್ರೆಸ್ಸಿನ ಮುಖ್ಯ ಕಾರ್ಯ ನಿರ್ವಾಹಕರು ಆಗಾಗ್ಗೆ ಕಾಂಗ್ರೆಸ್ಸಿನ ಜನಸಾಮಾನ್ಯದ ಲಕ್ಷ್ಯಕ್ಕೆ ತಂದು ಕೊಡುವುದು ಅತ್ಯವಶ್ಯ. ಇದರ ಮರವು ಜನಸಾಮಾನ್ಯದಲ್ಲಿ

ಹೆಚ್ಚಿದಂತೆ ಕಾಂಗ್ರೆಸ್ಸಿನ ವಿಷಯದಲ್ಲಿರುವ ಆದರವು ಕಡಿಮೆ ಯಾಗುತ್ತದೆಂದು ತಿಳಿಯಬೇಕು.

### ಸ್ವರಾಜ್ಯವು ಸುರಾಜ್ಯವೂ ಆಗಬೇಕು.

ಒಂದು ದೇಶವು ಪರತಂತ್ರದಲ್ಲಿದ್ದರೇನೇ ಅದು ನಾನಾ ದುಃಖಗಳಲ್ಲಿರುತ್ತದೆಂದಲ್ಲ. ಸ್ವತಂತ್ರವಾಗಿರತಕ್ಕ ದೇಶದಲ್ಲಿಯೂ ಬಹು ಜನರಿಗೆ ಅನೇಕ ಕಷ್ಟನಷ್ಟಗಳಿರುವುದುಂಟು. ಆದಕಾರಣ ಸ್ವರಾಜ್ಯವೇ ಮುಖ್ಯವಾದುದಲ್ಲ. ಅದು ಸುರಾಜ್ಯವಾಗಿಯೂ ಇರ ಬೇಕಾದುದು ಅತ್ಯಗತ್ಯ. ಈ ದೇಶದಲ್ಲಿ ವರ್ಣವಾದಿಗಳ ಸ್ವರಾಜ್ಯವಿದ್ದಾಗ ಆದಿ ಹಿಂದುಗಳೇ ಮೊದಲಾದ ಅಸಂಖ್ಯ ಜನರು ಅನಿರ್ವಚನೀಯ ಕಷ್ಟನಷ್ಟಗಳಿಗೀಡಾಗಿರಲಿಲ್ಲವೆ ? ಈಗ ಪಾಶ್ಚಾತ್ಯ ರಾಷ್ಟ್ರಗಳು ಸ್ವತಂತ್ರವಾಗಿದ್ದರೂ ಕೂಲಿಕಾರರೇ ಮೊದಲಾದ ಬಹು ಜನ ಸಾಮಾನ್ಯಕ್ಕೆ ಅನೇಕ ದೇಶಗಳಲ್ಲಿ ನಾನಾ ದುಃಖ ಗಳಿಲ್ಲವೆ ?

ಆದುದರಿಂದ ಈ ದೇಶದಲ್ಲಿ ಸ್ಥಾಪನೆಯಾಗುವ ಸ್ವರಾಜ್ಯವು ಅದು ಸುರಾಜ್ಯವೂ ಆಗಬೇಕಾಗಿದೆ. ಹಾಗಾಗಬೇಕಾದರೆ ಎಂತಹ ಚಿಕ್ಕದಾದ ಭಿನ್ನ ರಾಜಕೀಯ ಪಕ್ಷವಾದರೂ ಕಾಂಗ್ರೆಸ್ ಜಾತಿ ಯವರಿಗೆ ಅಸ್ಪೃಶ್ಯವಾಗಬಾರದು. ನಮ್ಮ ವಿಚಾರವನ್ನು ಹೇಳ ಲಿಕ್ಕೆ ಅವಕಾಶವಿಲ್ಲವಲ್ಲಾ ಎಂಬ ಚಿಂತೆಯು ಅವರಿಗಿರಬಾರದು. ನಾವು ನಮಗೆ ತಿಳಿದುದನ್ನು ಹೇಳಿದರೆ ಯಾವ ಕಷ್ಟ ನಷ್ಟಗಳು ಸಂಭವಿಸಬಹುದೋ ? ಎಂಬ ಭೀತಿಯು ಅವರಲ್ಲಿರಬಾರದು. ಹೀಗಾದರೆ ಸ್ವರಾಜ್ಯವು ಸುರಾಜ್ಯವೂ ಆಗಲು ಅನುಕೂಲ.

ಇಂತಹ ಸ್ಥಿತಿಯನ್ನುಂಟುಮಾಡುವುದು ಈಗ ಕಾಂಗ್ರೆಸ್ ಜಾತಿಯವರ ಮೇಲೆ ಬಿದ್ದ ಭಾರ. ಅವರು ಸಂಖ್ಯೆಯಿಂದ ಅತ್ಯಧಿಕವಾಗಿದ್ದಾರಲ್ಲದೆ ಈಗ ಅಧಿಕಾರವುಳ್ಳವರೂ ಆಗಿದ್ದಾರೆ. ತಮಗೆ ಈಗ ಬಂದ ಸ್ಥಿತಿಗೆ ಕಾರಣವಾದ ದಿವ್ಯ ಮಾರ್ಗಗಳ ಕಡೆಗೆ ಯಾರೂ ಉಪೇಕ್ಷಿಸದಂತೆ ನೋಡಿಕೊಳ್ಳಬೇಕಾದುದು ಮುಖ್ಯ ಕರ್ತವ್ಯ. ಈ ನೈತಿಕ ಬಲವೇ ಇವರ ಮಹಾ ಶಕ್ತಿ. ಹೆಚ್ಚಿನ ಬಂಡವಾಳ. ಆದಕಾರಣ ಈ ರಾಜಕಾರಣದಲ್ಲಿಯ ಅಸ್ಪೃಶ್ಯತೆಯೂ ನಿವಾರಣೆಯಾಗುವಂತೆ ಪ್ರಮುಖರು ಈಗಲಿಂದಲೇ ಪ್ರಯತ್ನಿಸಬೇಕಾಗಿ ಪ್ರಾರ್ಥನೆ.

## ಕಾಂಗ್ರೆಸ್ಸಿನ ಮಹತ್ವದ ವಿಜಯ.

ಕಾಂಗ್ರೆಸ್ಸು ಹಿಂದುಗಳ ಸಂಸ್ಥೆಯೆಂದು ಅನೇಕ ಮುಸಲ್ಮಾನರು ಆಕ್ಷೇಪಿಸುತ್ತಿರುವುದುಂಟಷ್ಟೆ. ಇದು ನಿರಾಧಾರವಾದ ಸಂಗತಿಯೆಂಬುದಕ್ಕೆ ಗಡಿನಾಡಿನ ಪ್ರಾಂತವು ಈಗ ಕಾಂಗ್ರೆಸ್ಸಿನ ಅಧೀನವಾದುದೂ ಅಲ್ಲಿಯ ಮಂತ್ರಿಮಂಡಲದಲ್ಲಿ ಮುಸಲ್ಮಾನರೇ ಅಧಿಕವಾಗಿರುವುದೂ ಒಂದು ಮುಖ್ಯ ದೃಷ್ಟಾಂತವಾಗಿದೆ. ಹೀಗಾದುದು ಕಾಂಗ್ರೆಸ್ ತತ್ವದ ಒಂದು ಮಹಾ ವಿಜಯವೆಂದೇ ತಿಳಿಯಬೇಕು. ಕಾಂಗ್ರೆಸ್ಸಿಗೆ ಯಾವ ಧರ್ಮ ಮತ ಪಂಥಗಳೂ ಇಲ್ಲ. ಯಾರು ಅದರಲ್ಲ ಸೇರಿ ಅದರ ತತ್ವದಂತೆ ನಡೆಯುತ್ತಾರೆಯೋ ಅವರಿಗೆ ಅದರ ಸೌಲಭ್ಯಗಳೆಲ್ಲಾ ತಾವಾಗಿಯೇ ಪ್ರಾಪ್ತ ವಾಗುತ್ತವೆ.

ಗಡಿನಾಡಿನ ಪ್ರಾಂತದ ಜನಸಂಖ್ಯೆ ೨೪ ಲಕ್ಷ ಮಾತ್ರ ಇದೆ. ಅದರಲ್ಲಿ ನೂರಕ್ಕೆ ೯೧ ಜನರು ಮುಸಲ್ಮಾನರು. ಇನ್ನುಳಿದ ೯ ಜನರಲ್ಲಿ ಹಿಂದು ಜನಾಂಗದ ಶೀಖ ಮೊದಲಾದ ಎಲ್ಲ ಸಮಾಜದವರೂ ಇದ್ದಾರೆ. ಎಂದಮೇಲೆ ಗಡಿನಾಡು ಮುಸಲ್ಮಾನ್ ಸಂಸ್ಕೃತಿಯ ಪ್ರಾಂತವಾಗಿದೆಯೆಂದು ಧಾರಾಳವಾಗಿ ಹೇಳಬಹುದಲ್ಲವೆ? ಅದರ ವಾರ್ಷಿಕ ಆದಾಯ ೫೫ ಲಕ್ಷ ರೂ. ಮಾತ್ರ. ಹೀಗಿದ್ದರೂ ಹಿಂದುಸ್ಥಾನ ಸರಕಾರವು ಅದು ಗಡಿನಾಡೆಂದೂ ಅಲ್ಲಿ ರಕ್ಷಣೆಯ ಅಗತ್ಯವಿದೆಯೆಂದೂ ಅದನ್ನು ಪ್ರತ್ಯೇಕವಾದ ಪ್ರಾಂತವನ್ನಾಗಿ ಮಾಡಿ ಪ್ರತಿವರುಷ ಅದರ ವೆಚ್ಚಕ್ಕಾಗಿ ಒಂದು ಕೋಟಿ ರೂ. ಗಳನ್ನು ಕೊಡುತ್ತಾ ಇದೆ.

ಇಂತಹ ಮುಸಲ್ಮಾನಿ ಪ್ರಾಂತವು ಈಗ ಕಾಂಗ್ರೆಸ್ ಪ್ರಾಂತವಾದುದೇಕೆ? ಗಡಿನಾಡಿನ ಗಾಂಧಿಯವರೇ ಮೊದಲಾದ ಪ್ರಮುಖರು ಜಾತಿ ನಿರ್ಣಯದ ಕೊಳೆಯಲ್ಲಿ ಕೈಹಾಕದೆ ರಾಷ್ಟ್ರೀಯ ದೃಷ್ಟಿಯ ಕಾಂಗ್ರೆಸ್ಸಿನಲ್ಲಿ ಸೇರಿ ತಮ್ಮ ಅನುಯಾಯಿಗಳೂ ಕಾಂಗ್ರೆಸ್ಸಿನಲ್ಲಿ ಸೇರುವಂತೆ ಮಾಡಿದ್ದರಿಂದಲ್ಲವೆ? ಪಂಜಾಬ, ಸಿಂಧ, ಬಂಗಾಲ ಪ್ರಾಂತಗಳ ಮುಸಲ್ಮಾನರೂ ಇದೇ ಮಾರ್ಗವನ್ನು ಅನುಸರಿಸಿದರೆ ಬಹು ಸಂಖ್ಯಾಕರಾದ ತಮಗೆ ಸ್ವಾಭಾವಿಕವಾಗಿಯೇ ದೊರೆಯುವ ರಾಜಕೀಯ ಸೌಲಭ್ಯಗಳು ದೊರೆಯುವವಲ್ಲದೆ ರಾಷ್ಟ್ರ ಸೇವೆಯನ್ನು ಮಾಡಿದ ಶ್ರೇಯಸ್ಸೂ ಪ್ರಾಪ್ತವಾಗುತ್ತದೆ. ಆದಕಾರಣ ಇನ್ನು ಮೇಲಾದರೂ ಅವು ಎಚ್ಚರಿಯುವವೆ ?

### ಲಿಂಗಧಾರಣ ಮಹೋತ್ಸವ

ದೇವರೂಗಿಯಲ್ಲಿ ಮೊದಲೇ ಪ್ರಸಿದ್ಧಪಡಿಸಿದಂತೆ ತಾ. ೭-೯-೩೭ ನೇ ಮಂಗಳವಾರ ದಿವಸ ಮಹಾಗಣಾರಾಧನೆ ಶ್ರೀಗಳವರ ಅಡ್ಡ ಪಲ್ಲಕ್ಕಿ ಮಹೋತ್ಸವದೊಡನೆ ಅತಿ ವೈಭವದಿಂದ ಚೋರ ಬಸವ ಪುರಾಣವು ಸಮಾಪ್ತಿಗೊಳಿಸಲ್ಪಟ್ಟಿತು.

ಶ್ರೀ ಸದ್ಗುರು ಬಂಥನಾಳ ಶಿವಯೋಗಿಗಳವರ ಸದ್ಬೋಧೆಯಿಂದ ನಾಲ್ಕೈದು ನೂರು ಜನರು ಲಿಂಗಧಾರಿಗಳಾದರು. ಚಹಾ ಚುಟ್ಟಾ ದುಶ್ಚಟ ಬಿಟ್ಟು ಅನೇಕ ಜನರು ಪವಿತ್ರರಾದರು. ಗ್ರಾಮಗಳಲ್ಲಿಯ ಪಂಗಡಗಳು ಏಕಾದವು. ಈ ತಿಂಗಳಲ್ಲಿ ಈ ಭಾಗದ ಅರ್ಧ ಲಕ್ಷಕ್ಕಿಂತ ಹೆಚ್ಚು ಜನರು ಶ್ರವಣಭಾಗಿಗಳಾದರು. ಅಂತು ಈ ಭಾಗವು ಕಲ್ಯಾಣ ಕ್ಷೇತ್ರದ ನೆನಪು ಮಾಡಿಕೊಡುವ ಭಕ್ತಿ ಭಾವಗಳಿಂದ ಕೂಡಿದ್ದಾಗಿತ್ತೆಂದು ಹೇಳಬಹುದು. ಈ ಸುಯೋಗವನ್ನು ಒದಗಿಸಿ ಕೊಟ್ಟ ಶರಣ ದಂಪತಿಗಳಾದ ಬಸವಲಿಂಗಯ್ಯನವರನ್ನು ಮಾತೋಶ್ರೀ ಗಿರಿಯಮ್ಮನವರನ್ನು ಹಾಗು ದೇವರೂಗಿ ಮತ್ತು ಬೋಳೆಗಾಂವ ಭಕ್ತ ಮಂಡಳಿಯನ್ನು ಎಷ್ಟು ಅಭಿನಂದಿಸಿದರೂ ಕಡಿಮೆಯೇ ಸರಿ. ಓರ್ವಪ್ರತ್ಯಕ್ಷದರ್ಶಿ.

### ಹಾವೇರಿ ಹಿಂದು ತರುಣಸಂಘ.

ತಾ. ೩೦-೮-೩೭ ನೇ ಸೋಮವಾರ ದಿವಸ ಶ್ರೀ. ಚನ್ನಬಸಪ್ಪ ಹಂಚಿಗೇರಿ ಇವರ ಅಧ್ಯಕ್ಷತೆ ಕೆಳಗೆ ಹಾವೇರಿ ತರುಣರ ಸಭೆಗೂಡಿ ಹಿಂದು ದೇಶದ ಮತ್ತು ಹಿಂದು ಧರ್ಮದ ರಕ್ಷಣೆಯ ಉದ್ದೇಶವಾಗಿ ಹಿಂದು ತರುಣಸಂಘವೆಂಬುದು ಸ್ಥಾಪನೆಯಾಯಿತು. ಈಗಾಗಲೇ ಈ ಸಂಘಕ್ಕೆ ನೂರಾರು ತರುಣರು ಉತ್ಸಾಹದಿಂದ ಸದಸ್ಯರಾಗಿದ್ದಾರೆ.

ಹಾವೇರಿಯಲ್ಲಿಯ ತರುಣರು ಈ ಸಂಘಕ್ಕೆ ಹೆಚ್ಚು ಉತ್ಸಾಹದಿಂದ ಮೆಂಬರರಾಗಿ ಭಾಗವಹಿಸಿ ತಮ್ಮ ಸೇವೆಯನ್ನು ಅರ್ಪಿಸುವರೆಂದು ಆಶಿಸುತ್ತೇವೆ.

(೧) ರಾಮಕೃಷ್ಣ ಗಣಪೂತಿ (ಅಧ್ಯಕ್ಷ) (೨) ಕೃಷ್ಣರಾಗರಾವ ಹವಾಲದಾರ (ಉಪಾಧ್ಯಕ್ಷ) (೩) ಕರಿಯಪ್ಪ ಅಂಬಲಗಿ (ಕೋಶಾಧ್ಯಕ್ಷ) (೪) ಶಾಂತರಾಮ ಅವಘಾನ (ಗೌ. ಕಾರ್ಯದರ್ಶಿ) (೫) ಚನ್ನಬಸಪ್ಪ ಮೆಳ್ಳಿಹಳ್ಳಿ (ಉ. ಕಾರ್ಯದರ್ಶಿ.)

ಹಾವೇರಿ ಹಿಂದೂ ತರುಣ ಸಂಘದವರು ತಾ. ೮-೯-೩೭ ನೇ ದಿವಸ ಸಂಘದ ಸಭೆಯನ್ನು ಶ್ರೀ ಸಿದ್ಧಲಿಂಗೇಶ್ವರ ವಾಚನಾಲಯದಲ್ಲಿ ಕರೆದು ಲಾಹೋರದಲ್ಲಿ ಕಟ್ಟಲಿರುವ ಗೋವಧಾಲಯದ ನಿಷೇಧಮಾಡಿ ನಾ. ವ್ಹಾಯಿಸ್‌ರಾಯರಿಗೆ ತಂತಿ ಮೂಲಕ ತಿಳಿಸಿರುತ್ತಾರೆ.

ಗೌ|| ಕಾರ್ಯದರ್ಶಿ.

## ಸ್ಪಷ್ಟೀಕರಣ.

ಶ್ರೀ. 'ಶರಣ ಸಂದೇಶ' ಪತ್ರಿಕಾ ಸಂಪಾದಕರಿಗೆ—

ನಿಮ್ಮ 'ನಮ್ಮ ಪ್ರಾರ್ಥನೆ' ಎಂಬ ಪ್ರಕಟನೆಯನ್ನು ನೋಡಿದೆನು. ನೀವು ನನಗೆ ವೀರಶೈವ ಧಾರ್ಮಿಕ ವಿಷಯದಲ್ಲಿ ಯಾವ ಮಾತಿನ ಸಲುವಾಗಿ ಭಿನ್ನಾಭಿಪ್ರಾಯವಿರುವದೆಂದು ಕೇಳಿದ್ದೀರಷ್ಟೆ.

ಮೊದಲು ಆ ನಿಮ್ಮ ಪ್ರಕಟನೆಯ ವಿಷಯವಾಗಿ ಸ್ವಲ್ಪ ಬರೆಯುವದು ಅಗತ್ಯವಾಗಿದೆ. ನನ್ನ ವಿಧಾನವನ್ನು ತಿಳಿದುಕೊಂಡು ಅಖಿಲ ವೀರಶೈವರಿಗೆ ಅದು ಹಿತವಾಗಿದ್ದರೆ ಅದರಂತೆ ನಡೆಯಲು ನೀವು ಸಿದ್ಧರಿರುವಿರಾಗಿ ತಿಳಿಸಿರುವಿರಷ್ಟೆ. ಆದರೆ ನಿಮ್ಮ ಪ್ರಕಟನೆಯಲ್ಲಿ ನನ್ನ ವಿಧಾನಗಳನ್ನು ಆಯ್ದುಕೊಂಡ ರೀತಿಯನ್ನು ನೋಡಿದರೆ ನಿಮ್ಮ 'ಪ್ರಾರ್ಥನೆ' ಎಂಬುದು ವ್ಯಂಗ್ಯವಾಗಿ ಹೇಳಲ್ಪಟ್ಟಂತೆ ನನಗೆ ತೋರುತ್ತದೆ. ಅದು ಹೇಗೆಂಬುದನ್ನು ಇಲ್ಲಿ ವಿವರಿಸುತ್ತೇನೆ.

'ಶರಣ ಸಂದೇಶ' ತಾ. ೬-೯-೩೭ ನೆಯ ಸಂಚಿಕೆಯಲ್ಲಿ ೭ ನೆಯ ಪುಟದಲ್ಲಿರುವ ಎಲ್ಲ ವಿಷಯವನ್ನು ತುಲನೆ ಮಾಡಿನೋಡುವ ನಿಷ್ಪಕ್ಷಪಾತಿಗಳಿಗೆ ನನ್ನ ಅಭಿಪ್ರಾಯದಲ್ಲಿಯ (೧) ಮತ್ತು (೨) ಸಂಗತಿಗಳು ಹೇಗೆ ಮಾರ್ಪಾಟ ಆಗಿವೆ ಎಂಬುದು ಗೊತ್ತಾಗದಿರಲಾರದು. ಅವು ಈ ಪ್ರಕಾರ ಇದ್ದಿದ್ದರೆ ನನ್ನ ಅಭಿಪ್ರಾಯವನ್ನು ಯಥಾರ್ಥವಾಗಿ ಪ್ರಕಟಿಸಿದಂತಾಗುತ್ತಿದ್ದಿತಲ್ಲವೆ?

"ಶರಣ ಸಂದೇಶ ಪತ್ರಿಕೆಯು ಈಗ ವೀರಶೈವ ಸಮಾಜದಲ್ಲಿ ಒಂದು ಪಕ್ಷವನ್ನು ಎತ್ತಿಹಿಡಿಯುವ ಪತ್ರಿಕೆಯಾಗಿ ಪರಿಣಮಿಸಿದೆ, ತಾವು ಅಖಿಲ ವೀರಶೈವರ ಕಲ್ಯಾಣದ ಪ್ರಚಾರ ಮಾಡಬಯಸುವ ಪ್ರಚಾರಕರಲ್ಲಿ ಒಬ್ಬರು."

(೨) "ತಾವು ವೀರಶೈವ ಧರ್ಮಪ್ರಚಾರ ಮಾಡುತ್ತಾರೆಂದರೆ ಕೆಲವರು ಶರಣ ಸಂದೇಶ ಸಂಪಾದಕರ ವಿಧಾನಗಳನ್ನು ಪ್ರಚುರಗೊಳಿಸುವವರೆಂದು ತಿಳಿದಿದ್ದುದು ಕಂಡುಬಂದದ್ದರಿಂದ ತಮ್ಮ ವಿಷಯವಾಗಿ ಸಮಾಜದಲ್ಲಿ ಆ ತರಹದ ವಾತಾವರಣವು ಉಂಟಾಗಬಾರದು."

ಈ ಪ್ರಕಾರ ಕೊಟ್ಟಿದ್ದರೆ ನನ್ನ ವಿಧಾನಗಳನ್ನು ಪ್ರಾಮಾಣಿಕವಾಗಿ ಪ್ರಕಟಿಸಿದಂತಾಗುತ್ತಿದ್ದಿತು.

ಕಲ್ಯಾಣ ಬಯಸುವವರು ಮೊದಲು ಒಬ್ಬರ ವಿಧಾನಗಳನ್ನು ಸ್ಪಷ್ಟವಾಗಿ ಪ್ರಕಟಿಸಬೇಕು. ಅವರ ವಿಧಾನ ಅವರಿಗೆ ಒಪ್ಪಿಗೆಯಾದಮೇಲೆ ಅದರ ವಿಷಯವಾಗಿ ಚರ್ಚೆ ಮಾಡಬೇಕು. ಅಂದರೆ ಸಮಾಜಕ್ಕೆ ಸುಲಭವಾಗಿ ತಿಳಿಯಲನುವಾಗುವದು.

ಸಮಾಜಕ್ಕೆ ಜ್ಞಾನವಾಗಬೇಕೆಂದೇ ನಮ್ಮ ಚರ್ಚೆ ಇರಬೇಕು. ಸಮಾಜದಲ್ಲಿ ಮತ್ತಿಷ್ಟು ಗೊಂದಲಕ್ಕೆ ಆಸ್ಪದವಾಗಬಾರದಷ್ಟೆ. ಅದು ಅಖಿಲ ವೀರಶೈವ ಸಮಾಜದ ಕಲ್ಯಾಣ ಬಯಸುವವರ ರೀತಿ ನೀತಿಯಾಗದು.

ನಿಮ್ಮ ಕೆಳಗಿನ ವಿಧಾನಗಳನ್ನು ನೋಡಿದರೆ ನಿಮ್ಮ 'ಪ್ರಾರ್ಥನೆ'ಯು ಎಷ್ಟು ವ್ಯಂಗ್ಯವಾದ ರೀತಿಯಲ್ಲಿರುವದೆಂಬುದು ವಾಚಕರಿಗೆ ಇನ್ನೂ ಸ್ಪಷ್ಟವಾಗುವುದು. ಅದೇನೆಂದರೆ—

(೧) "ಶರಣ ಸಂದೇಶ ವಿಧಾನದಿಂದ ತಾವು ಮೈಲಿಗೆಯಾಗಿಲ್ಲವೆಂದು ಸಮಾಜಕ್ಕೆ ತಿಳಿಸಿದಂತೆ ಅನ್ಯರಿಗೂ ಈ ಮೈಲಿಗೆ ತಟ್ಟದಹಾಗೆ ಇದನ್ನೇ ತಮ್ಮ ತತ್ವದಂತೆ ಶುದ್ಧಗೊಳಿಸುವದೂ ಧರ್ಮಪ್ರಚಾರಕರ ಕರ್ತವ್ಯವೇ ಆಗಿಲ್ಲವೆ?"

"ಆದುದರಿಂದ ಶರಣ ಸಂದೇಶವು ಯಾವ ಪಕ್ಷವನ್ನು ಎತ್ತಿಹಿಡಿಯುವ ಪತ್ರಿಕೆಯಾಗಿ ಪರಿಣಮಿಸಿತು? ಇದು ಮೊದಲು ಹೇಗಿತ್ತು? ಈಗ ಹೀಗೆ ಪರಿಣಮಿಸಿದ್ದರಿಂದ ಅಖಿಲ ವೀರಶೈವರ ಕಲ್ಯಾಣಕ್ಕೆ ಹೇಗೆ ಕಂಟಕವಾಗಿದೆ? ತಮ್ಮ ನಿಷ್ಕಂಟಕವಾದ ಮಾರ್ಗವು ಯಾವದು?"

ಮೇಲಣ ನಿಮ್ಮ ವಿಧಾನಗಳಲ್ಲಿಯ 'ಮೈಲಿಗೆ' ತತ್ವದಂತೆ 'ಶುದ್ಧಗೊಳಿಸುವದು' 'ಕಂಟಕ' ಇವೇ ಮುಂತಾದ ಶಬ್ದಗಳು ಅಖಿಲ ವೀರಶೈವ ಸಮಾಜದ ಕಲ್ಯಾಣದ ದೃಷ್ಟಿಯಿಂದ ಮಾಡಿಕೊಂಡ 'ಪ್ರಾರ್ಥನೆ'ಗೆ ತಕ್ಕಂತೆ ಇರುವವೆ?

"ಶರಣ ಸಂದೇಶವು ಕಂಟಕವಾಗಿ ಪರಿಣಮಿಸಿದೆಯೆಂದೂ, ನನ್ನದು 'ನಿಷ್ಕಂಟ' ಮಾರ್ಗವೆಂದೂ ಬರೆದಿರುವೆನೇ?"

ನನ್ನ ವಿಧಾನಗಳನ್ನು ಎಷ್ಟು ವ್ಯತ್ಯಾಸವಾಗಿ ಪ್ರಕಟಿಸಿರುವಿರಲ್ಲಾ! ಯಾವದೊಂದು ಪತ್ರಿಕಾ ಸಂಪಾದಕರ ವಿಧಾನಗಳೆಲ್ಲವೂ ಪರಿಪೂರ್ಣವಿರುತ್ತವೆಂದು ಭಾವಿಸಬಾರದೆಂದೂ, ಆ ವಿಧಾನಗಳಿಂದ ಧರ್ಮ ಪ್ರಚಾರಕರಿಗೆ ಕೆಲವರಿಂದ ತೊಂದರೆಯಾಗಬಾರದೆಂದೂ ಹೇಳುವದೇ ನನ್ನ ಉದ್ದೇಶವಿದ್ದಿತು. ಈ ನನ್ನ ವಿವರಣೆಯಿಂದ ನೀವು ಕೇಳಿದ್ದನ್ನು ಹೇಳದೆ ಉಳಿಯಬೇಕೆಂಬುದು ನನ್ನ ಅಭಿಪ್ರಾಯವಲ್ಲ.

ನೀವು ಪ್ರಕಟಿಸುವುದಾಗಿ ಹೇಳಿದ್ದರಿಂದ ನನ್ನ ವಿಧಾನಗಳನ್ನು ಇದ್ದಕ್ಕಿದ್ದಂತೆ ಮೂಲ ಭಾವಕ್ಕೆ ವ್ಯತ್ಯಾಸಬಾರದಂತೆ ಪ್ರಕಟಿಸುತ್ತ ಹೋಗಬೇಕು. ಅನಂತರ ಯುಕ್ತ ಕಂಡರೆ ಭಿನ್ನಾಭಿಪ್ರಾಯಗಳನ್ನು ಕುರಿತು ಚರ್ಚಿಸಲು ಅಡ್ಡಿಯಿಲ್ಲ. ನೀವು ಕೇಳಿದ ಸಂಗತಿಗಳನ್ನು ನಿಮ್ಮ ಪತ್ರಿಕೆಯಲ್ಲಿಯೇ ಪ್ರಕಟಿಸಲು ಬರೆದು ಕಳುಹಿಸಲೂಬಹುದು.

ಅನ್ನದಾನೀಶ್ವರ ವಿರಕ್ತಮಠ.

[ನೀವು ಬರೆದುದನ್ನು ಪ್ರಕಟಿಸದೆ ನಿಮ್ಮ ಅಭಿಪ್ರಾಯವೆಂದು ನಾವೇ ಬೇರೊಂದನ್ನೇನೂ ಬರೆದಿಲ್ಲ. ನೀವು ಬರೆದದ್ದೂ ಅದನ್ನು ನಾವು ಹೇಗೆ ಗ್ರಹಿಸಿದ್ದೇವೆಂಬುದೂ ಒಂದೇ ಕಡೆ ಇವೆ. ಇವುಗಳ ಸತ್ಯಾಸತ್ಯತೆಗಳನ್ನು ಕುಶಲ ವಾಚಕರು ತಿಳಿದುಕೊಳ್ಳುವರು. ಇದೇನೂ ಈಗಿನ ವಾದದ ವಿಷಯವಲ್ಲವಷ್ಟೆ. ನಿಮ್ಮ ಲೇಖನದಲ್ಲಿಯ ಶಬ್ದಗಳಿಂದಲೇ ಕೇಳಬೇಕೆಂದರೆ (೧) ಶರಣ ಸಂದೇಶ ಪತ್ರಿಕೆಯು ಈಗ ವೀರಶೈವ ಸಮಾಜದಲ್ಲಿ ಒಂದು ಪಕ್ಷವನ್ನು (ಎಂದರೆ ಯಾವ ಪಕ್ಷವನ್ನು) ಎತ್ತಿ ಹಿಡಿಯುವ ಪತ್ರಿಕೆಯಾಗಿ ಪರಿಣಮಿಸಿದೆ? (೨) ಅದರಿಂದ ಅಖಿಲ ವೀರಶೈವರ ಕಲ್ಯಾಣದ ಪ್ರಚಾರ ಮಾಡಬಯಸುವ ನಮ್ಮಂಥ ಪ್ರಚಾರಕರಿಗೆ (ಎಂದರೆ ನಿಮಗೆ) ಆಗಾಗ್ಗೆ ಯಾವ ತೊಂದರೆಯುಂಟಾಗುತ್ತಿದ್ದಿತು? ಎಂಬವುಗಳೇ ಆಗಿವೆ. ಆದುದರಿಂದ ದಯವಿಟ್ಟು ಅವುಗಳನ್ನು ತಿಳಿಸಬೇಕಾಗಿ ಪುನಃ ಪ್ರಾರ್ಥನೆ. —ಸಂಪಾದಕ]

## ಬೈಲಹೊಂಗಲ.

ಪದ್ಧತಿಯ ಪ್ರಕಾರ ಇಲ್ಲಿಯ ಎಕ್ಕುಂಡಿ ವಿರಕ್ತ ಮಠದಲ್ಲಿ ಶ್ರೀಮನ್ನಿರಂಜನ ಶ್ರೀ ಸಿದ್ಧರಾಮ ಸ್ವಾಮಿಗಳವರ ನೇತೃತ್ವದಲ್ಲಿ ಶ್ರಾವಣ ಮಾಸದ ಪ್ರವಚನ ಬಸವಣ್ಣನವರ ಹಾಡು ಮೊದಲಾದ ಸಮಾರಂಭಗಳು ಬಹು ಸಂಭ್ರಮದಿಂದ ಜರುಗಿ ಕೊನೆಗೆ ಸಾವಿರಾರು ಜನಗಳ ಮಹಾ ಗಣಾರಾಧನೆಯೂ ಸಾಗಿತು. ಈ ಸಾರೆ ಶ್ರೀ ಸಿದ್ಧರಾಮ ಸ್ವಾಮಿಗಳು ಆಗಮಿಸಿದ್ದರಿಂದ ಇಲ್ಲಿಯ ಕಾರ್ಯಕ್ಕೆ ಹೆಚ್ಚು ಕಳೆ ಬಂದಿತ್ತು.

ಓರ್ವ ವೀರಶೈವ.

## ಪಾರಮಾರ್ಥಿಕ ''ಡೈರಿ''

ಶ್ರೀ ಶಿವ ಚಿದಂಬರಾಯನಮಃ

ಶ್ರೀಗುರು ಬಸವಲಿಂಗಾಯ ನಮಃ

(ಜಲ. ೯ ಬ. ೧೨ ಶನಿ. ೯-೧-೩೭.)

ದಾಸನ ಡಾಯರಿಯ ಉದ್ದೇಶವು ಜಗದಂಬೆಯ ಮುಂದೆ ಶಕ್ಯವಿದ್ದಷ್ಟು ಹೃದಯವನ್ನು ಬಿಚ್ಚಿ ತೋರಿಸಿ ಆಕೆಯ ಹೊರ ಒಳಗಿನ ಸೂಚನೆಗಳಂ ಸ್ವೀಕರಿಸುತ್ತ ಆತ್ಮೋನ್ನತಿಯಂ ಮಾಡಿಕೊಳ್ಳುವದಿರುತ್ತದೆ. ಅರ್ಥಾತ್ ಸತ್ಯ ಶೋಧನ ಮನವು ಮರ್ಕಟವೂ ಉಂಟು. ಮಾರುತಿಯೂ ಹೌದು. ಭಗವಂತನ ವಿ ಭೂ ತಿ ಯೂ ಸರಿಯೇ! ಆದುದರಿಂದ ಡಾಯರಿಯಲ್ಲಿ ಕ್ಷುಲ್ಲಕ ಸಂಗತಿಗಳೂ ಗಹನ ವಿಷಯಗಳೂ ಕೂಡೇ ಬರುತ್ತವೆ. ಸಾರಾಂಶ- ದಾ ಸ ನು ಡಾಯರಿಯನ್ನು ಬರೆಯುವುದು ಮುಖ್ಯವಾಗಿ ಶಿಕ್ಷಣಪಡೆಯುವುದಕ್ಕಲ್ಲದೆ ಶಿಕ್ಷಣ ಕೊಡುವುದಕ್ಕಲ್ಲ. ಒಟ್ಟಿಗೆ ಸಾಧಕ ದಶೆಯಿಂದ ಸಿದ್ಧಸ್ಥಿತಿಗೆ ಮುಟ್ಟಬೇಕೆಂಬುದು ! ಷಟಸ್ಥಲದ ಮೆಟ್ಟಲುಗಳನ್ನೇರಬೇಕೆಂದು. ಊಟದೋಳ್‌ಗಡಬಿಡಿ—ಗಡಬಿಡಿಯು ಎಲ್ಲಿಯೂ ತಕ್ಕದ್ದಲ್ಲ.

ಊಟದ ಗಡಿಬಿಡಿಯಿಂದ ಆರೋಗ್ಯಕ್ಕೆ ಹಾನಿ. ಇಂದೋರವರ್ ಊಟ ನಡೆದಾಗ್ಗೆ ಭೆಟ್ಟಿಯ ಜರೂರಿ ತೋರಿಸಲ್ ಚೀಲದಲ್ಲಿ ತುಂಬಿದಂತೆ ಅವಸರ ಮಾಡಿದ್ದು ಅನುಚಿತ. ಶ್ರೀ. ಬಸವಣ್ಣ-ಲಿಂಗಾರ್ಪಿತ ಮಾಡಿದ ಬಳಿಕ ತುತ್ತಿಗೊಮ್ಮೆ ಶಿವಶರಣ ಎನ್ನುತ್ತಿರಬೇಕು. ಕರಣ ವೃತ್ತಿಗಳಡಗುವವು ಕೂಡಲ ಸಂಗಮ ದೇವರ ನೆನೆಯುತ್ತ ಉಂಡರೆ. ಕೆಲಸಕ್ಕೆ ಬಂದವರು ವಿಶ್ರಾಂತಿಗೊಳ್ವಂತೆ ಹೊರಗೆ ಸ್ಥಳವ ನಿರ್ಮಿಸಿರಬೇಕು.

ಕಂದ|| ಗಡಿಬಿಡಿಯಲ್ಲಿಯು ಬೇಡೈ|
ಅಡಬಡಿಸದುಣ್ಣು ಶಿವನ ನೆನೆಯುತ ನೀನು|
ಕಡು ಕೆಲಸಕೆ ಬಂದವರು|
ಸಡಗರದಿ ಕೂತುಕೊಳ್ವ ಸ್ಥಳವ ನಿರ್ಮಿಸು ದಾಸ|

ಅಡಬಡಿಸು—ಅವಸರಮಾಡು

ಸಕಲ ಪ್ರಾಣಿಗಳಿಗೂ ಸ್ವತಂತ್ರತೆಯೇ ಬೇಕು. ಏಕದೆ ಸ್ವತಂತ್ರತೆಯಿಂ ಸುಖಮುಕ್ಕುಂ ಎಂಬನುಭವ? ಇಷ್ಟು ದಿವಸ ನಮ್ಮ ನಾಯಿಯ ಕಟ್ಟಿಹಾಕಿಲ್ಲ. ತೋಟ ಕಾಯಲೆಂದು ಮಹಾರುದ್ರಪ್ಪ ಕರಬಸಪ್ಪ ಕೂಡಿ ಕಟ್ಟಿಹಾಕಿರುವರು. ಇಟ್ಟ ಅನ್ನ ಮುಟ್ಟದೆ ತಟ್ಟೇ ಕಡಿದು ರಂಬಾಟಮಾಡಿ ಬಿಟ್ಟಿದೆ. ಸರ್ಪಳಿಯ ಬಿಚ್ಚಿಬಿಡಲು ಆನಂದದಿಂದ ಓಡಿತು.

ಕಂದ|| ಏಕೈ ಹಿಂಸೆಯು ನಾಯಿಗೆ |
ಬೇಕೈ ಸ್ವತಂತ್ರತೆಯದಕೆ ತಿರುಗಾಡಲಿಕೆ ||
ಸಾಕು ಮಾಡೀ ಕಟ್ಟುವಿಕೆ |
ಮೂಕ ಪಶುಗಳ ನಿಂತು ಕಾಡದಿರು ದಾಸಾರ್ಯ||

× × ×

ಶ್ರೀ. ಶಿವ ಚಿದಂಬರಾಯನಮಃ

ಶ್ರೀಗುರು ಬಸವಲಿಂಗಾಯ ನಮಃ.

(ಜಲ. ೯ ಬ. ೮ ಮಂಗಳ. ೩೦-೧-೩೭.)

ದೇವ ಮಂತ್ರಾದಿಗಳೋಳ್ ಭಾವನೆಯಂತಿಹುದಂತೆ ಫಲಂಗಳ್ - ತೋಟದೋಳ್ ಮಂಡಳಿ ಏನು ನಡಿಸಿರ್ಪರು. ಕಲ್ಲಂಗಡಿ ಬಳ್ಳಿಗಳಿ ನಜರೆಂದು ಬೆದರು (ಅಂಗೀ ತೊಡಿಸಿ ಮನುಷ್ಯಾಕೃತಿ) ಮಾಡ್ವುದಂತೆ! ಮೇಣ್ ಫಲಂಗಳೆ ದೃಷ್ಟಿಯಾಗದಂತೆ ಕುಂಬಾರ ಬಟ್ಟಿಯೊಳಗಿನ ಬೂದಿಯಂ ಮೂಕಿನಿಂದ (ಮಾತಾಡದೆ) ತಂದೊಗೆಯುವಂತೆ ಬೀಜವ. ನೆಲದ ಗುಣದೋಷಗಳಂ ನೋಡುವದ ಬಿಟ್ಟು ಅವರದು ಸಾಗಲಿ. ಬೇಡೆಂದರೆ ಕೇಳ್ವರೆ ?

ತ್ರಿ:— ಅವರವರ ಭಾವನೆಯು ಅವರಿಗವರಿಗನುಕೂಲ |
ಅವರು ಮಾಡಿರ್ಪ ಯಡಿಯರುಣ್ವಂತೆ |
ಶಿವನ ಕೃತಿ ನೋಡು ದಾಸಾರ್ಯ ||

ನಿದ್ರೆಯ ವೇಳೆ— ಸಂಕ್ರಾಂತಿಗೆಂದು ಬಂದ ಚಹಾದ ಅಂಗಡಿಯವರು ಬ್ರಾಹ್ಮಣರ ಫಾರ್ಸ ನಡಿಸಿದ್ದಾರೆ, ಅವರು ಲಿಂಗವಂತರ ಫಾರ್ಸ ನಡಿಸುವದನ್ನು ಮರಿಯುವರೇಕೋ ? ಎರಡು ದಿನದ ಆಯುಷ್ಯವನ್ನು ಸಟರ್ ಪಟರ್‌ಗಳಲ್ಲಿ ಕಳೆಯುವೆವಲ್ಲದೆ ಜನ್ಮದ ಸ್ಥಿತಿಗತಿ ಏನೆಂಬದನ್ನು ವಿಚಾರಮಾಡುವದಿಲ್ಲವಲ್ಲ!

ಕಂದ|| ದೇವರೆ ದಯಮಾಡಯ್ಯಾ |
ಆವಾಗಲು ನಿನ್ನ ಸ್ಮರಣೆ ನನಗಿರುವಂತೆ ||
ಸಾವು ಹುಟ್ಟುಗಳ ಬಿಡಿಸೈ |
ಭಾವಲಿಂಗವೆ ಮೊರೆಹೊಕ್ಕೆ ದಾಸತವಪದಕೆ ||

---

## ಕೊಲ್ಹಾಪುರದಲ್ಲಿ ಶಿವ ದಿಕ್ಷಾ ಸಮಾರಂಭ.

ಕೊಲ್ಹಾಪುರವು ಉತ್ತರ ಕರ್ನಾಟಕದಲ್ಲಿಯ ಒಂದು ಮುಖ್ಯ ಸ್ಥಳವಾಗಿದೆ. ಈ ಭಾಗದಲ್ಲಿ ವೀರಶೈವರ ಸಂಖ್ಯೆಯೂ ಹೆಚ್ಚಿದೆ. ಶ್ರೀ ಜಗದ್ಗುರು ಜಯದೇವ ಮುರಘಾರಾಜೇಂದ್ರ ಮಹಾಸ್ವಾಮಿಗಳವರು ಕೊಲ್ಹಾಪುರದಲ್ಲಿ ಅತ್ಯಂತ ಘನವಾದ ಮ ಠ ವ ನ್ನು ಸ್ಥಾಪಿಸಿ ಈ ಭಾಗದ ವೀರಶೈವ ಪ್ರೌಢ ವಿದ್ಯಾರ್ಥಿಗಳ ನಿವಾಸಕ್ಕೆ ಇಲ್ಲಿ ಅನುಕೂಲಪಡಿಸಿದ್ದಾರಷ್ಟೆ. ಈ ಮಠಕ್ಕೆ ಸಮರ್ಥರೂ ಸುವಿದ್ಯಾ ಸದಾಚಾರ ಯುಕ್ತರೂ ಸಮಾಜಸೇವೆಯಲ್ಲಿ ಅತ್ಯಂತ ಆಸಕ್ತಿಯುಳ್ಳವರೂ ಆದ ಶ್ರೀಮನ್ನಿರಂಜನ ಶ್ರೀ ಗುರುಶಾಂತ ಸ್ವಾಮಿಗಳನ್ನು ಜಗದ್ಗುರುಗಳವರು ಮೊನ್ನೆ ಮಾತ್ರ ನಿಯಮಿಸಿದ್ದಾರೆ. ಇಷ್ಟರಲ್ಲೇ ಶ್ರೀಮನ್ನಿರಂಜನ ಗುರುಶಾಂತ ಸ್ವಾಮಿಗಳು ಕೊಲ್ಹಾಪುರದ ವೀರಶೈವರಲ್ಲ ಜಾಗೃತಿಯನ್ನುಂಟುಮಾಡಿ ಸಹಭೋಜನ ಮತ್ತು ಶಿವದೀಕ್ಷೆಗಳ ಸಮಾರಂಭ ಜರುಗುವಂತೆ ಮಾಡಿದ್ದು ಅತ್ಯಂತ ಅಭಿನಂದನೀಯವಾಗಿದೆ. ಇಲ್ಲಿ ನಡೆದ ಮಹತ್ಕಾರ್ಯದ ವಿವರ ಹೀಗಿದೆ—

### ಸಹಭೋಜನ ಮತ್ತು ಲಿಂಗಧಾರಣ.

ಕೊಲ್ಹಾಪುರದ ಶ್ರೀ. ಜ ಗ ದ್ಗು ರು ಮುರಘಾರಾಜೇಂದ್ರ ಮಹಾಸ್ವಾಮಿಗಳವರ ಮಠದಲ್ಲಿ ಈ ಮುಂಚೆ ಗೊತ್ತಾದ ಪ್ರಕಾರ ತಾ. ೩-೯-೩೭ ನೆಯ ದಿವಸ ೩೦೦ ವೀರಶೈವರಿಗೆ ಮಂತ್ರ ದೀಕ್ಷೆಯನ್ನು ಕೊಡಲಾಯಿತು. ವೀರಶೈವರಲ್ಲಿ ನಾಲ್ಕು ವರ್ಣಗಳಾಗಲಿ ಒಳಪಂಗಡಗಳ ಮೇಲು ಕೀಳುಗಳಾಗಲಿ, ಇಲ್ಲವೇ ಇಲ್ಲವೆಂದು ಆ ಕಾಲದಲ್ಲಿ ಶ್ರೀಗಳವರು ಮತ್ತು ಶ್ರೀ. ಶ್ರೇಷ್ಠಿ ವಕೀಲರೇ ಮೊದಲಾದ ಮುಖಂಡರು ಭಾಷಣಮಾಡಿದರು. ಅನಂತರ ೪-೫ ನೂರು ವೀರಶೈವರ ಸಹಭೋಜನ ಜರುಗಿತು.

ಒಂದು ದಿನ ಮುಂಚೆ ತಾ. ೨-೯-೩೭ ರಲ್ಲಿ ಅಲಿಂಗಿಗಳಾಗಿದ್ದ ಒಂದು ಕುಟುಂಬದ ನಾಲ್ಕು ಜನರಿಗೆ ಲಿಂಗಧಾರಣ ದೀಕ್ಷೆಯನ್ನು ಮಾಡಿ ಅವರನ್ನೂ ಮ ಠ ದ ಲ್ಲಿ ತೆಗೆದುಕೊಂಡರು. ಈ ಎಲ್ಲಾ ಕಾರ್ಯಗಳು ಶ್ರೀಮನ್ನಿರಂಜನ ಶ್ರೀ ಗುರುಶಾಂತ ಸ್ವಾ ಮಿ ಗ ಳ ನೇತೃತ್ವದಲ್ಲಿ ಜರುಗಿದವು.

ಓರ್ವ ವೀರಶೈವ.

## ಶ್ರೀ ಶಿವಯೋಗಮಂದಿರ.

ಇಲ್ಲಿ ಪ್ರತಿ ವರುಷ ಪದ್ಧತಿಯಂತೆ ಈ ಸಲವೂ ಶ್ರಾವಣದ ಸರ್ವ ಕಾರ್ಯಗಳೂ ಯಥಾ ರೀತಿಯಲ್ಲಿ ಸಾಂಗವಾಗಿಯೂ ಸಕ್ರಮವಾಗಿಯೂ ಜರುಗಿಸಲ್ಪಟ್ಟವು. ಶ್ರಾ| ಶು| ೧ ರಿಂದ ಶ್ರಾ| ಬ| ೩೦ ರ ವರೆಗೂ ನಿತ್ಯ ತಪ್ಪದೇ ತ್ರಿಕಾಲ ಲಿಂಗಾರ್ಚನೆ, ಪ್ರಾತಃಕಾಲ ೭ ಘಂಟೆಗೆ ಶಿವಾನುಭವ ಪ್ರವಚನವೂ ಸಂಜೆಯ ೪|| ಘಂಟೆಗೆ (ಬ್ರಹ್ಮೋತ್ತರಖಂಡ) ಪುರಾಣವೂ ಇಲ್ಲಿಯ ಶಿವಯೋಗ ಸಾಧಕರಿಂದಲೇನೇ ಶ್ರೀ ಮ| ನಿ| ಸದಾಶಿವ ಸ್ವಾಮಿಗಳವರು ಹಾನಗಲ್ಲ ಇವರ ನೇತೃತ್ವದಲ್ಲಿ ನಡೆಯಿಸಲ್ಪಡುತ್ತಿದ್ದವು. ಈ ಮೂವತ್ತೂ ದಿನಗಳಲ್ಲಿ ಕೆಲವರು ಪೌರ್ಣಿಮೆಯ ವರೆಗೆ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳ ವಿಚಾರವಾಗಿಯೂ ಮತ್ತೆ ಕೆಲವು ಜನ ಸಾಧಕರು ಮುಂದಿನ ೧೫ ದಿನಗಳಲ್ಲಿ ಬಸವಣ್ಣ, ಚೆನ್ನಬಸವಣ್ಣ, ಮಹಾ ಶರಣೆ ಮಹಾದೇವಿಯಕ್ಕ ಮತ್ತು ಆದಿಕವಿ ಹರಿಹರ ಇವರೆಲ್ಲರ ಜೀವನದ ವಿಚಾರವಾಗಿಯೂ ಸಾಹಿತ್ಯದ ವಿಚಾರದಲ್ಲಿಯೂ ಸತ್ವ ಪೂರಿತವಾಗಿ, ತತ್ವ ಪೂರಿತವಾಗಿ ವಿವೇಕ ಪರಿಪ್ಲುತವಾಗಿ, ವಿವಿಧ ರಂಜನ ಸಮೇತವಾಗಿ, ಸಹಜವೂ, ಸಮಂಜಸವೂ, ಆದ ಯೋಗ್ಯ ವಿಮರ್ಶೆಯಿಂದ ಮುದ್ದಾದ ಮಾತುಗಳಿಂದ ಸರ್ವ ಜನ ವೇದ್ಯವಾಗುವಂತೆ ಚರ್ಚಿಸಿ, - ವಿವೇಚಿಸಿ ಬಹು ಹೃದಯಂಗಮವಾಗಿ ಹೇಳಿದರು. ದಿನಾಲು ಪ್ರವಚನವು ಪೂರೈಸಿದನಂತರ ಶ್ರೀಗಳವರು ಸುಂದರವಾಗಿಯೂ ಸ್ವಾರಸ್ಯವಾಗಿಯೂ ಸರ್ವಜನ ಸಮ್ಮತವಾಗುವಂತೆಯೂ ಉಪಸಂಹಾರಾತ್ಮವಾಗಿ ತಮ್ಮ ಅಮೋಘವೂ ಅಸ್ಖಲಿತವೂ ಆದ ವಾಣಿಯಿಂದ ಅಪ್ಪಣೆಕೊಡಿಸುತ್ತಿದ್ದರು.

ಈ ಸಮಯದಲ್ಲಿ ಚೊಳಚಗುಡ್ಡ, ನೆಲವಿಗಿ, ನಂದಿಕೇಶ್ವರ, ಮಂಗಳೂರ, ಐಹೊಳೆ ಮುಂತಾದ ಗ್ರಾಮದ ಸದ್ಭಕ್ತರು ಪ್ರತಿ ವರ್ಷಕ್ಕಿಂತಲೂ ಈ ಸಲ ಹೆಚ್ಚಾಗಿ ಬರುತ್ತಿದ್ದರು. ಬಂದ ಅತಿಥಿಗಳಿಗಾಗಿ ಇಲ್ಲಿಯ ದಾಸೋಹದಲ್ಲಿ ಯೋಗ್ಯ ವ್ಯವಸ್ಥೆ ಇಡಲ್ಪಟ್ಟಿತ್ತು. ಈ ವಿಚಾರವಾಗಿ ಸದ್ಯದ ಚಾಲಕರಾದ ಶ್ರೀ| ಮ| ನಿ| ಹಾನಗಲ್ಲ ಶ್ರೀಗಳವರ ಲಕ್ಷವು ವಿಶೇಷವಾಗಿದ್ದುದರಿಂದ ಯಾವಾಗಲೂ ಯಾವದರಲ್ಲಿಯೂ ಕೊಂಚವೂ ಕೊಂಕು ಕೊರತೆಗಳು ಕಂಡುಬಗದಂತೆ ವ್ಯವಸ್ಥೆ ಇದ್ದಿತು. ಮೇಲಿನ ಮಠದಲ್ಲಿ ನಿತ್ಯವೂ ಜಂಗಮದ ಪಾದಪೂಜೆಯಾಗುತ್ತಲಿದ್ದು ಸೋಮವಾರಕ್ಕೊಮ್ಮೆ ಯಾರಾದರೂ ಸದ್ಭಕ್ತರು ವಹಿಸಿಕೊಂಡುಮಾಡಿದರೆ ಮಧ್ಯದಲ್ಲಿಯೂ ಶ್ರೀ ಪಾದಕ್ಕೆ ಮಹಾರುದ್ರಾಭಿಷೇಕವು ದಿವ್ಯವಾಗಿಯೂ ಭವ್ಯವಾಗಿಯೂ ನಡೆಯುತ್ತಲಿದ್ದಿತು. ಇದಲ್ಲದೆ ಇಲ್ಲಿಯ ಗುರುವರ್ಯ ಶ್ರೀ. ಮ. ನಿ. ಪ್ರಣವಸ್ವರೂಪಿಗಳಾದ ಹಾನಗಲ್ಲ ಕುಮಾರ ಶಿವಯೋಗಿಗಳವರ ಗದ್ದುಗೆಯಲ್ಲಿ ಎಂದಿನಿಂದಲೂ ಎಂದಿಗೂ ನಡೆಯುತ್ತಿರುವ ಶ್ರೀ ರುದ್ರಾಭಿಷೇಕವು ಈ ಪುಣ್ಯ ಮಾಸದಲ್ಲಿ ವಿಶೇಷ ವೈಭವದಿಂದ ಯಥಾ ವಿಧಿಯಾಗಿ ಜರುಗಿದ್ದಿತು. ಹೀಗೆ ಈ ಮಾಸದ ಮೂವತ್ತು ದಿನಗಳು ಸುಗಮವಾಗಿ, ಸಪ್ರಯೋಜಕವಾಗಿ ಕಳೆಯಲ್ಪಟ್ಟವು. ಈ ವೇಳೆಯಲ್ಲಿ ಬಾಗಲಕೋಟೆ, ಹಾವೇರಿ ಚೊಳಚಗುಡ್ಡ, ಗುಲಬರ್ಗಾ, ದೇವಿಹೊಸೂರ, ಕುಮಾರಗೊಪ್ಪ, ಬದಾಮಿ ಮೊದಲಾದ ಗ್ರಾಮದ ಸದ್ಭಕ್ತರು ಯಥಾಶಕ್ತಿಯಾಗಿ ಅಭಿಷೇಕ-ಆರಾಧನೆಗಳನ್ನು ಮಾಡಿಸಿ ತಮ್ಮಲ್ಲಿರುವ ಭಕ್ತಿ-ವಿಶ್ವಾಸಗಳನ್ನು ಮಾಡಿರುವರು. ವಿಸ್ತಾರವಾಗುವ ಮೂಲಕ ಅವರೆಲ್ಲರ ಹೆಸರುಗಳನ್ನು ಪ್ರಸಿದ್ಧಮಾಡಲು ಶಕ್ಯವಾಗಲಿಲ್ಲ.

—ಮ್ಯಾನೇಜರ್.

## ಶ್ರೀ ಜಗದ್ಗುರುಗಳವರ ಮಠಕ್ಕೆ ಶ್ರೀಮನ್ಮಹಾರಾಜರವರ ಭೇಟಿ.

ಮಹಾ ತಪೋನಿಷ್ಠರೂ, ಲೋಕವಿಖ್ಯಾತರೂ, ವಿಶ್ವಪ್ರೇಮಿಗಳೂ, ಲೋಕಕಲ್ಯಾಣಕ್ಕಾಗಿ ಅಹೋರಾತ್ರಿ ಶ್ರಮಪಡುತ್ತಿರುವವರೂ ಆದ ಚಿತ್ರದುರ್ಗದ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರುಘಾರಾಜೇಂದ್ರ ಮಹಾಸ್ವಾಮಿಗಳವರ ಮಹಾಸಂಸ್ಥಾನಕ್ಕೆ ಕರ್ನಾಟಕ ಸಿಂಹಾಸನಾಧೀಶ್ವರರೂ, ಮಾದರಿಯ ಮೈಸೂರಿನ ಒಡೆಯರೂ, ಪ್ರಜಾವಾತ್ಸಲ್ಯರಾದ ಪ್ರಭುಗಳೂ ಆದ ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರರವರು ಇದೇ ತಾ|| ೧೪-೯-೧೯೩೭ನೇ ಮಂಗಳವಾರ ಭೇಟಿ ಕೊಡಲಿರುವರೆಂಬ ಆನಂದದ ಸಂಗತಿಯನ್ನು ಕೇಳಿ ಪ್ರಜೆಗಳೆಲ್ಲರೂ ಹರ್ಷ ಭರಿತರಾಗಿರುವರು. ಶ್ರೀ ಜಗದ್ಗುರು ಮಹಾಸ್ವಾಮಿಗಳವರು ವೀರಶೈವಮತಕ್ಕೆ ಮಾತ್ರವೇ ಅಲ್ಲದೆ ರಾಷ್ಟ್ರೋದ್ಧಾರ ಕಾರ್ಯಕ್ಕೂ ಬಹಳ ಮಟ್ಟಿನ ಸಹಾಯ ಮತ್ತು ಪ್ರೋತ್ಸಾಸಹಗಳನ್ನು ಮಾಡುತ್ತಲಿರುವರು. ಮಹಾಸ್ವಾಮಿಗಳು ಅಜ್ಞಾನಾಂಧಕಾರದಲ್ಲಿ ಮುಳುಗಿರುವ ಜನರನ್ನು ಮುಂದಕ್ಕೆ ತರಲು ವಿದ್ಯೆಯೇ ಅವಶ್ಯಕವೆಂದು ಭಾವಿಸಿ ವಿದ್ಯಾಪ್ರಚಾರಕ್ಕಾಗಿ ಇದುವರೆಗೆ ಯಾರೂ ಮಾಡದಿದ್ದಷ್ಟು ಮಹಾಕಾರ್ಯಗಳನ್ನು ಮಾಡಿರುವರೆಂದರೆ ಅತಿಶಯೋಕ್ತಿಯಾಗಲಾರದು. ಇವರು ೭-೮ ಲಕ್ಷ ರೂಪಾಯಿಗಳನ್ನು ವಿನಿಯೋಗಿಸಿರುವರೆಂದರೆ ಯಾರಿಗೆ ತಾನೆ ಆನಂದವಾಗದಿದ್ದೀತು? ನಿಗರ್ವಿಗಳಾಗಿ, ಶಾಂತತಾಮೂರ್ತಿಗಳಾಗಿ, ವೈರಾಗ್ಯಶಾಲಿಗಳಾಗಿ, ಶಿಷ್ಯೋದ್ಧಾರ ಕಾರ್ಯವಲ್ಲದೆ ದೇಶೋದ್ಧಾರ ಕಾರ್ಯದಲ್ಲಿಯೂ ಆಸಕ್ತಿಯುಳ್ಳವರಾಗಿ, ಪತಿತರನ್ನು ಅಲಕ್ಷಿಸದೇ ಅಹಿಂಸಾಪ್ರೇಮಿಗಳಾಗಿ, ಬಾಹ್ಯಾಡಂಬರಗಳಿಲ್ಲದೆ ಕೇವಲ ಸಾತ್ವಿಕಮೂರ್ತಿಗಳಾಗಿ ಶೋಭಿಸುತ್ತಿರುವ ಈ ಜಗದ್ಗುರು ಮಹಾಸ್ವಾಮಿಗಳವರ ಮತ್ತು ಮಾದರಿಯ ಮೈಸೂರೆಂದು ಪ್ರಖ್ಯಾತವಾಗಿ ರಾಜಋಷಿಗಳೆಂದು ವಿಖ್ಯಾತವಾಗಿರುವ ನಿಷ್ಪಕ್ಷಪಾತಿಗಳೂ, ಮಹಾ ಸಾತ್ವಿಕರೂ, ದೈವಸಂಭೂತರೂ, ಗುರುಭಕ್ತರೂ, ಆಚಾರಶೀಲರೂ ಆದ ಶ್ರೀಮನ್ಮಹಾರಾಜರವರ ಭೇಟಿಯು ಅತ್ಯಂತ ಶುಭದಾಯಕ ಲಕ್ಷಣವಾಗಿದೆ. ಶ್ರೀ ಜಗದ್ಗುರು ಹಾಗೂ ಮಹಾಪ್ರಭುಗಳ ಭೇಟಿಯಿಂದ ಪ್ರಜೆಗಳಿಗೂ ಮತ್ತು ದೇಶಕ್ಕೂ ಅತ್ಯುತ್ತಮವಾದ ಫಲ ಪ್ರಯೋಜನಗಳಾಗಿ ದೇಶವು ಸುಖಸಮೃದ್ಧಿಯಿಂದ ಮೆರೆಯಲವಕಾಶವಾಗಲೆಂದು ಪ್ರಾರ್ಥಿಸುವೆವು.

ಹಿತೈಷಿ.

---



---

—ಬರುವ ೧೯೩೮ ನೆಯ ಇಸವಿ ಚಳಿಗಾಲದಲ್ಲಿ ಚಕ್ರವರ್ತಿಗಳಾದ ಅರನೆ ಜಾರ್ಜರವರು ಹಿಂದುಸ್ಥಾನಕ್ಕೆ ಆಗಮಿಸುವರೆಂದೂ ಆಗ ಮೈಸೂರು ಮತ್ತು ನೈಜಾಮ ಸಂಸ್ಥಾನಗಳಿಗೆ ಹೋಗುವರೆಂದೂ ಊಹೆ.

## ಲಿಂಗಧಾರಣ ಸಮಾರಂಭ.

ಕೃಷ್ಣರಾಜ ನಗರ ತಾಲೂಕು ಸಾಲಿಗ್ರಾಮದ ಹೋಬಳಿ ಗಾಯನಹಳ್ಳಿ ಗ್ರಾಮದಲ್ಲಿ ತಾ. ೨೬-೮-೩೭ ನೆಯ ಶ್ರಾವಣ ಬಹುಳ ಪಂಚಮಿ ಗುರುವಾರ ಪಶುಪತಿ ಗ್ರಾಮದ ಸಿ. ನಂಜುಂಡಯ್ಯ ಮೈಸೂರು ನಂಜಪ್ಪ ವಗೈರೆ ಹೆಣ್ಣು ಗಂಡು ಹದಿನಾರು ಜನಗಳು ಈಗ್ಗೆ ಬಹು ದಿವಸಗಳಿಂದಲೂ ಕಾರಣಾಂತರದಿಂದ ಲಿಂಗವಿಲ್ಲದೆ ಸಹಪಂಕ್ತಿ ಸಂಪರ್ಕಾದಿಗಳಿಗೆ ಅವಕಾಶವಿಲ್ಲದೆ ಸಮಾಜ ಬಹಿಷ್ಕೃತರಾಗಿದ್ದವರನ್ನು ಪಶುಪತಿ ಚೇರಮನ್ ಬಸಪ್ಪನವರ ಪ್ರೋತ್ಸಾಹದಿಂದ ಶ್ರೀ. ಬಾಳೆಹೊನ್ನೂರು ಸಂಸ್ಥಾನದ ಪರವಾಗಿ ಬಂದಿದ್ದ ಹಾವೇರಿ ಬಣ್ಣದ ಮಠದ ಶ್ರೀ ||ಷ|| ||ಬ್ರ|| ಚರಪಟ್ಟಾಧ್ಯಕ್ಷ ಚನ್ನಮಲ್ಲ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಹೆಬ್ಬೂರು ವೆ|| ಎಂ. ರುದ್ರಪ್ಪಯ್ಯನವರ ಪೌರೋಹಿತ್ಯದೊಡನೆ ಲಿಂಗಧಾರಣ ಸಮಾರಂಭವೂ ಮಾಹೇಶ್ವರ ಗಣಾರಾಧನವೂ ವಿಧಿವತ್ತಾಗಿ ಅತ್ಯಂತ ವಿಜೃಂಭಣೆಯಿಂದ ಜರುಗಿತು. ಈ ಮಹಾ ಸಮಾರಂಭಕ್ಕೆ ಹೆಬ್ಬೂರು ಭೂಸುರ ಮಠಾಧ್ಯಕ್ಷ ಶ್ರೀ. ಶಿದ್ಧಲಿಂಗಯ್ಯನವರೂ ಕೆಲ್ಲಾಪುರದ ಮಠದ ಶ್ರೀ. ಸಿದ್ಧಲಿಂಗಯ್ಯ ಸ್ವಾಮಿಗಳೂ ಸಹ ದಯಮಾಡಿಸಿ ದೀಕ್ಷಾ ಮಂಟಪವನ್ನು ಶೋಭೆಗೊಳಿಸಿದ್ದರು.

ಇದೇ ದಿವಸ ಸಾಯಂಕಾಲ ನೆರದಿದ್ದ ಸಭೆಯಲ್ಲಿ ಹೆಬ್ಬೂರು ವೆ|| ಎಂ|| ರುದ್ರಪ್ಪಯ್ಯನವರು "ವೀರಶೈವ ಮಠಗಳೂ ಮತ್ತು ಸ್ವಾಮಿಗಳೂ ಅವರ ಕರ್ತವ್ಯ" ಎಂಬ ವಿಚಾರವಾಗಿ ಹೃದಯಂಗಮವೂ ಸ್ಫೂರ್ತಿದಾಯಕವೂ ಆದ ಭಾಷಣವನ್ನು ಮಾಡಿ ಸಭೆಯನ್ನು ಆನಂದಗೊಳಿಸಿದರು. ಮರುದಿವಸ ಗಣಾರಾಧನಾನಂತರ ಹಾವೇರಿ ಮಠದ ಶ್ರೀಗಳವರ ಮತ್ತು ಮುಕ್ಕಂದೂರು ಚಿದಾನಂದ ಶಿವಯೋಗಿಗಳವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಮುಕ್ಕಂದೂರು ಶ್ರೀಗಳವರು ವೀರಶೈವರ ಏಳ್ಗೆಗೆ ಅನುಕೂಲವಾದ ವಿಚಾರವಾಗಿಯೂ ವೀರಶೈವ ಏಕೀಕರಣ ವಿಚಾರವಾಗಿಯೂ ಅನಂತರ ವೇ|| ಎಂ|| ರುದ್ರಪ್ಪಯ್ಯನವರು ಶಿವಯೋಗ ಎಂಬ ವಿಚಾರವಾಗಿ ಸರಳ ಶೈಲಿಯಲ್ಲಿ ಸರ್ವರಿಗೂ ಬೋಧೆಯಾಗುವ ರೀತಿ ಭಾಷಣ ಮಾಡಿದರು. ಈ ಮಹಾ ಸಮಾರಂಭಕ್ಕೆ ಸಹಾಯ ಸಂಪತ್ತನ್ನೊದಗಿಸಿ ನಿರ್ವಿಘ್ನವಾಗಿ ನೆರವೇರುವಂತೆ ಕಾರ್ಯವನ್ನಾಗಮಾಡಿಸಿದ ಗಾಯನಹಳ್ಳಿ ಪಟೇಲ ಕೆಂಪಣ್ಣನವರಿಗೂ, ಚೇರಮನ್ ಕಾಳಯ್ಯನವರಿಗೂ ಚಿಕ್ಕಣ್ಣನವರಿಗೂ ಗೌಡಪ್ಪನವರ ಕಾಳಯ್ಯನವರಿಗೂ ಉಭಯ ಶ್ರೀಗಳವರು ಆಶೀರ್ವದಿಸಿದ್ದಲ್ಲದೆ ನಮ್ಮನ್ನಾಳುವ ಶ್ರೀಮನ್ ಮಹಾರಾಜರವರ ಶ್ರೇಯಃ ಪ್ರಾರ್ಥನೆಯೊಡನೆ ಸಭೆಯು ಮುಕ್ತಾಯವಾಯಿತು.

ಚೇರಮನ್ ಕಾಳಯ್ಯ.

---

## ಹುಲಿಹೈದರದಲ್ಲಿ ಶಿವದೀಕ್ಷಾ ಸಮಾರಂಭ.

ಶ್ರೀ. ಕೇದಾರ ಪೀಠದವರು ಅಪ್ಪಣೆ ಕೊಟ್ಟಮೇರೆಗೆ ನಿಜಾಂ ಇಲಾಖಾ ಜಿಲ್ಲಾ ರಾಯಚೂರು, ತಾಲೂಕು ಗಂಗಾವತಿ, ಮುಕ್ಕಾಂ ಕನಕಗಿರಿ ಬೃಹನ್ಮಠದ ಚಿರಸ್ಥಿರ ಪಟ್ಟಾಧ್ಯಕ್ಷ ಪಂಚಾಕ್ಷರ ಶಿವಾಚಾರ್ಯರು ಸದರಿ ಜಿಲ್ಲಾ ತಾಲೂಕು ಕುಷ್ಟಗಿ ಮುಕ್ಕಾಂ ಸಂಸ್ಥಾನ ಹುಲಿಹೈದರ ಗ್ರಾಮದಲ್ಲಿ ನಾಲ್ಕೈದು ನೂರು ಜನರಗೆ ಶಿವದೀಕ್ಷೆ (ಲಿಂಗಧಾರಣ) ಮಾಡಿ ತೀರ್ಥ ಪ್ರಸಾದಕೊಟ್ಟು ಬಳಿಕ ಭೋಜನ ಮಾಡಿರುತ್ತಾರೆ. ಆದರಿಂದ ಇಲ್ಲಿ ವೀರಶೈವರಲ್ಲಿ ಹಾಹಾಕಾರ ಹುಟ್ಟಿದೆ.

ಬಸವೇಶ್ವರನು ಜಾತಿ ಸಾಂಕರ್ಯ ಮಾಡಿದನೆಂದು ಬಸವಪಕ್ಷದವರು ಹಂಡಬಂಡ ಜಾತಿಯವರು ಜಾತಿ ಸಾಂಕರ್ಯ ಮಾಡತಕ್ಕವರೆಂದು ವೀರಶೈವರಲ್ಲಿ ವರ್ಣಾಶ್ರಮಗಳಿರುವವೆಂದು ಗ್ರಂಥಾಧಾರಗಳಿಂದ ಅನೇಕ ಲೇಖಗಳನ್ನು ಪಂಚಾಚಾರ್ಯಪ್ರಭಾ ಪತ್ರಿಕೆಯಲ್ಲಿ ಬರೆಯುತ್ತಾರೆ. ಮತ್ತೆ ತಾವೆ ಇಂಥಾ ಕಾರ್ಯಗಳನ್ನು ಮಾಡುತ್ತಾರೆ. ಆದರೆ ತಾವು ಬರೆದ ಲೇಖ, ಆಧಾರ ಕೊಟ್ಟ ಗ್ರಂಥಗಳ ಅವಸ್ಥೆಯೇನು? ನುಡಿಯುವದೊಂದು ನಡೆಯುವದೊಂದು ಆಯಿತಲ್ಲವೆ? ಇವರು ಪಾಕರಡ್ಡಿಯವರಲ್ಲ. ಲಿಂಗಧಾರಣಕ್ಕೆ ಯೋಗ್ಯರಿರುವದಿಲ್ಲ. ಈ ಬಗ್ಗೆ ನಿಮ್ಮ ಅಭಿಪ್ರಾಯವೇನು? ಶರಣ ಸಂದೇಶದಲ್ಲಿ ತಿಳಿಸಬೇಕಾಗಿ ಕೋರಿಕೆ.

ಓರ್ವ ವೀರಶೈವಾಭಿಮಾನಿ.

[ಕನಕಗಿರಿ ಪಟ್ಟಾಧ್ಯಕ್ಷರಾದ ಶ್ರೀ. ಪಂಚಾಕ್ಷರ ಶಿವಾಚಾರ್ಯರು ಅತ್ಯಂತ ಅಭಿನಂದನೀಯವಾದ ಕಾರ್ಯವನ್ನು ಮಾಡಿದ್ದಾರೆ. ಇವರೇ ಶ್ರೀ ರೇಣುಕಾದಿ ಪಂಚಾಚಾರ್ಯರ ನಿಜ ತತ್ವಗಳನ್ನು ಪ್ರಸಾರಮಾಡುವ ಗುರುಗಳು. ವೀರಶೈವರಲ್ಲಿ ವರ್ಣಗಳಿವೆಯೆಂದೂ ಬಸವ ಪಂಥ ಬೇರೆಯೆಂದೂ ಲೇಖ ಬರೆಯುವವರೂ ಪ್ರಸಾರಮಾಡುವವರೂ ಪರಮಪೂಜ್ಯರಾದ ಆ ರೇಣುಕಾದಿ ಪಂಚಾಚಾರ್ಯರ ಅನುಯಾಯಿಗಳೇ ಅಲ್ಲ. ಅವರ ಹೇಳಿಕೆ ಅಯೋಗ್ಯವಾದುದೆಂದೇ ಈ ಶ್ರೀಗಳು ತಮ್ಮ ಕೃತಿಯಿಂದ ಸಾರಿಹೇಳಿದ್ದಾರೆ. ಅವರ ಲೇಖನ, ಗ್ರಂಥಗಳ ಅವಸ್ಥೆಯೇನು? ಎಂದು ಕೇಳಿರುವಿರಷ್ಟೆ. ಆ ವಿಷಯ ಗೆದ್ದಲು ಹುಳಗಳಿಗೂ, ಮಿಠಾಯಿ ಮಾರುವ ಅಂಗಡಿಕಾರರಲ್ಲಿರುವ ಕಾಗದಗಳಿಗೂ ಗೊತ್ತು.

ಶುದ್ಧಾಹಾರಿಗಳಾದ ಶಿವಭಕ್ತಿಯುಳ್ಳ ಆ ನಾಲ್ಕೈದು ನೂರು ಜನರ ಜನ್ಮ ಕುಲಾದಿಗಳನ್ನೇನೂ ಎಣಿಸಬೇಕಾದುದಿಲ್ಲ. ಹಾಗೆ ಎಣಿಸುವುದು ಶ್ರೀ ರೇಣುಕಾದಿ ಗುರುಗಳ ತತ್ವಕ್ಕೆ ವಿರೋಧವಾದುದು. ಬಸವಾದಿ ಪ್ರಮಥರ ಮಾರ್ಗಕ್ಕೆ ಭಿನ್ನವಾದುದು. ಆದಕಾರಣ ಅಲ್ಲಿಯ ವೀರಶೈವ ಮಹಾಜನರು ಹಾಹಾಕಾರ ಮಾಡದೆ ಭಲೆ ಜಯರೇಣುಕ, ಬಸವ, ಪ್ರಭು ಎಂದು ಜಯ ಜಯಕಾರ ಮಾಡಬೇಕು. ಇದೇ ನಮ್ಮ ಅಭಿಪ್ರಾಯ. —ಸಂಪಾದಕ]

---

## ಸಾದರ ಸ್ವೀಕಾರ.

ಬೈಲಹೊಂಗಲ ಮಹಿಳಾ ಸಮಾಜದ ಅಧ್ಯಕ್ಷರಾದ ಶ್ರೀಮತಿ ಮೆಟಗುಡ್ಡದ ಸಾವಿತ್ರಮ್ಮನವರು ಅಲ್ಲಿ ನಡೆದಿರುವ ಶ್ರೀ ಬಸವೇಶ್ವರನ ಹಾಡಿನ ಸಮಾರಂಭದ ಕಾಲಕ್ಕೆ ಲಗ್ನದ ಪ್ರಸಂಗ ಬಂದಾಗ ಶರಣ ಸಂದೇಶ ಪತ್ರಿಕೆಗೆ ೨ ರೂ. ಕಾಣಿಕೆಯಾಗಿ ತೆಗೆದು ಕಳುಹಿಸಿದುದನ್ನು ಕೃತಜ್ಞತಾಪೂರ್ವಕ ಸ್ವೀಕರಿಸಿದ್ದೇವೆ. ಇವರು ಸಾರ್ವಜನಿಕ ಕಾರ್ಯಗಳಿಗೆ ಆಗಾಗ್ಗೆ ಧನ ಸಹಾಯ ಮಾಡುತ್ತಿರುವುದು ಅತ್ಯಂತ ಅಭಿನಂದನೀಯವಾದುದು.

ಹುನಗುಂದದ ಶ್ರೀ. ಗುರುಬಸವಾರ್ಯ ಮಠ ಮಾಸ್ತರವರು ಶರಣ ಸಂದೇಶಕ್ಕೆ ಕೊಟ್ಟ ೧ ರೂ. ದೇಣಿಗೆಯನ್ನು ಕೃತಜ್ಞತಾಪೂರ್ವಕ ಸ್ವೀಕರಿಸಿದ್ದೇವೆ.

—ಮ್ಯಾನೇಜರ್.

# ಶರಣ ಸಂದೇಶಕಾರರ ಸಂಶಯ ನಿವಾರಣೆ.

[ಲೋಕಮತಕಾರರು ಬರೆದ ಲೇಖನಗಳ ವಿಮರ್ಶೆಯನ್ನು ಬೇರೆಕಡೆ ಮಾಡಿದೆ. ಆದಕಾರಣ ಅವರು ಒಂದು ಲೇಖನದಲ್ಲಿ ಹೇಗೆ ಬರೆದಿದ್ದಾರೆಂಬುದು ನಮ್ಮ ವಾಚಕರಿಗೆ ತಿಳಿಯಲೆಂದು ಅದನ್ನು ಇಲ್ಲಿ ಕೊಟ್ಟದೆ. —ಸಂಪಾದಕ.]

ಜಾತೀಯ ನಿರ್ಣಯದ ವಿಷಯದಲ್ಲಿ ಪಾಗೋಟೆ ಪತ್ರಿಕೆಯ ವಿಚಾರವೂ ನಿಮ್ಮ ವಿಚಾರವೂ ಒಂದೇ ಇರುವದೆಂದು ನೀವು ಹೇಳುವುದಾದರೆ ನಿಮ್ಮ ರಾಷ್ಟ್ರೀಯತ್ವದ ವಿಷಯವಾಗಿ ನಮಗೆ ತುಂಬಾ ಸಂದೇಹತೋರುತ್ತದೆ. ಪಾಗೋಟೆ ಪತ್ರಿಕೆಗಳ ರೀತಿನೀತಿಯನ್ನು ನೋಡಿದ ಯಾರಾದರೂ ಅವು ರಾಷ್ಟ್ರಘಾತಕ ಕಾರ್ಯಕ್ಕೇನೇ ಕೈ ಹಾಕಿವೆಯೆಂದೇ ಹೇಳದಿರಲಾರರು. ಇದನ್ನು ಸ್ವಲ್ಪದರಲ್ಲಿಯೇ ಸ್ಪಷ್ಟಪಡಿಸಲಿಚ್ಛಿಸುತ್ತೇವೆ.

ಬ್ರಿಟಿಷ್ ಮಂತ್ರಿಗಳು ಜಾತೀಯ ನಿರ್ಣಯದ 'ವರ' ವನ್ನು ದಯಪಾಲಿಸಿದರಷ್ಟೆ. ಆಗ ರಾಷ್ಟ್ರೀಯವೆಂದು ಹೇಳುತ್ತಿದ್ದ ಕಾಂಗ್ರೆಸ್ ಪಕ್ಷವು ಮುಗ್ಧಭಾವ ತಾಳಿತು. ಹಿಂದು ಮಹಾಸಭೆಯು ಆ ಜಾತಿ ನಿರ್ಣಯವನ್ನು ನಿಷೇಧಿಸಲು ಮೊದಲುಮಾಡಿತು. ಅದರ ಬೆಸಿಗೆಯು ಪುಣೆ ಪಾಗೋಟೆಗಳಿಗೆ ತಗುಲಿತು. ಅವೂ ಜಾತಿಯ ನಿರ್ಣಯವನ್ನು ನಿಷೇಧಿಸಹತ್ತಿದವು. ಬಂಗಾಲದಿಂದ ಪಂಜಾಬದವರೆಗೆ ಪಂಜಾಬದಿಂದ ಪುಣೆಯವರೆಗೆ ಪುನಃ ಪುಣೆಯಿಂದ ಬಂಗಾಲದವರೆಗೆ ತ್ರಿಕೋಣಾಕೃತಿಯಲ್ಲಿ ಈ ಚಟುವಟಿಕೆ ನಡೆಯಿತು. ಈ ಚಟುವಟಿಕೆಯಲ್ಲಿ ಅಣೆ ಮಾಲವೀಯರೂ ಸೇರಿಕೊಂಡು ನಿಷೇಧಿಸಹತ್ತಿದರು. ರಾಷ್ಟ್ರಸಂಘಕ್ಕೆ ಕೂಡಾ ಪ್ರತ್ಯೇಕ ಮತದಾರ ಪದ್ಧತಿಯನ್ನು ತೆಗೆದುಹಾಕಿ ಸಂಯುಕ್ತ ಮತದಾರ ಪದ್ಧತಿಯನ್ನು ಸ್ಥಾಪಿಸಬೇಕೆಂದು ಕೇಳಿಕೊಳ್ಳಲಾಯಿತು. ಸಂಯುಕ್ತ ಮತದಾರ ಸಂಘದ ಬೇಡಿಕೆಯಲ್ಲಿ ಹಿಂದುಮಹಾಸಭೆಯು ಅದ್ವಿತೀಯ ರಾಷ್ಟ್ರೀಯ ಭಾವನೆಯನ್ನು ವ್ಯಕ್ತಪಡಿಸುತ್ತಿರುವಂತೆ ತೋರಿತು. ಆದರೆ........?

ಆದರೆ ಒಂದು ಉತ್ಕೃಷ್ಟ ಬೆಳಗುಮುಂಜಾನೆ ಆಶ್ಚರ್ಯಕರವಾದ ಒಂದು ಸುದ್ದಿಯು ಜನ್ಮತಾಳಿತು! ನೋಡುವವರಿಗೆ ಕೇಳುವವರಿಗೆ ತಮ್ಮ ಕಣ್ಣು ಕಿವಿಗಳನ್ನು ನಂಬಬೇಕೋ ಬೇಡವೋ ಎಂಬಂತೆ ಆಯಿತು. ಅದೆಂದರೆ ಬರ್ದ್ವಾನ್ ಮಹಾರಾಜರ ಮಹತ್ವದ ಪತ್ರವ್ಯವಹಾರ. ಮಹಾರಾಜರು ಜಾತೀಯ ನಿರ್ಣಯ ವಿರೋಧಿ ಸಂಘದ ಅಧ್ಯಕ್ಷರು. ಬಂಗಾಲದ ಪ್ರಮುಖ ಮುಸಲ್ಮಾನರಿಗೆ ಪತ್ರ ಬರೆದಿದ್ದರು. ಏನೆಂದರೆ, ಬಂಗಾಲದಲ್ಲಿ ೪ ಮಂತ್ರಿಪದ ಮುಸಲಮಾನರಿಗೆ ೩ ಮಂತ್ರಿಪದ ಹಿಂದುಗಳಿಗೆ ಕೊಡಲು ಮುಸಲಮಾನರ ಸಮ್ಮತಿ ಇದ್ದರೆ ಜಾತೀಯ ನಿರ್ಣಯ ವಿರೋಧಿ ಚಟುವಟಿಕೆಯನ್ನು ಹಿಂದುಗಳು ನಿಲ್ಲಿಸಿಬಿಡುವರು !!

ಹಾಯ್! ರಾಷ್ಟ್ರೀಯತ್ವವೆ! ಬಂಗಾಲದ ಒಂದು ಹೆಚ್ಚಿನ ಮಂತ್ರಿಪದಕ್ಕಾಗಿ ಇಷ್ಟೆಲ್ಲ ಅಲ್ಲೋಲಕಲ್ಲೋಲವಾಯಿತೆ? ಒಂದು ಮಂತ್ರಿಪದ ಹೆಚ್ಚು ಸಿಕ್ಕಿದ್ದರೆ ಸಂಯುಕ್ತ ಮತದಾರ ಸಂಘದ ಎಲ್ಲ ಲಾಭಗಳು ದೊರೆತಂತಾಯಿತೆ? ಎತ್ತ ಹೋದರು ಮಾಲವೀಯರು? ಎತ್ತ ಹೋದರು ಪರಮಾನಂದರು? ಎಲ್ಲಿವೆ ಅವರ ದೊಡ್ಡ ದೊಡ್ಡ ಮಾತುಗಳು? ಇಷ್ಟೆಲ್ಲ ಅರ್ಭಾಟ ಇದಿಷ್ಟಕ್ಕಾಗಿಯೇ ನಡೆಯಿತೆ? ವ್ಯವಸಾಯ ಬಂಧುಗಳೆ, ಪಾಗೋಟೆ ಪತ್ರಿಕೆಗಳ ಜಾತೀಯ ನಿರ್ಣಯ ನಿಷೇಧ ಕಲ್ಪನೆಯು ಈ ಪ್ರಕಾರವಾಗಿದೆ ತಿಳಿದಿರಾ. ಪಂಜಾಬದಲ್ಲಾಗಲಿ ಬಂಗಾಲದಲ್ಲಾಗಲಿ ಇನ್ನೆರಡು ಸೀಟುಗಳನ್ನು ಮುಸಲಮಾನರು ಬಿಟ್ಟು ಕೊಟ್ಟದ್ದರೆ ಹಿಂದುವಾದಿಗಳು ರಾಷ್ಟ್ರವು ಪಾತಾಳಕ್ಕೆ ಹೋದರೂ ಅಡ್ಡಿಯಿಲ್ಲ; ತಮಗೆ ಭಿನ್ನ ಮತದಾರ ಸಂಘವೇ ಬೇಕೆಂದು ಹೇಳಿಬಿಡುತ್ತಿದ್ದರೆಂಬುದರಲ್ಲಿ ಸಂಶಯವಿಲ್ಲ. ಆಗಿನ ಅವರ ಗುಡು ಗುಡು ಸಪ್ಪಳವನ್ನೂ ಹಿಂದಿನಿಂದ ಅವರು ವ್ಯಕ್ತಪಡಿಸಿದ ಹೀನವರ್ತನವನ್ನೂ ನೋಡಿದರೆ 'ಗರ್ಜಂತಿ ಕೇಚಿದ್ ವೃಥಾ' ಎಂದು ಹೇಳಬೇಕಾಗುತ್ತದೆ.

ಅದೇ ಆಗ ಪಂ|| ಜವಾಹರಲಾಲರು ಬಿಡುಗಡೆ ಹೊಂದಿ ಜಾತೀಯ ನಿರ್ಣಯವನ್ನು ನಿಷೇಧಿಸುತ್ತಿದ್ದರು. ಅವರಿಗೆ ಈ ಪತ್ರವ್ಯವಹಾರ ತಿಳಿದೊಡನೆ ಸಂತಾಪದಿಂದ ಉರಿಯಹತ್ತಿದರು. ಅವರು ಹೀಗೆ ಅಭಿಪ್ರಾಯಪಟ್ಟರು— "ಬಂಗಾಲದ ಹಿಂದುಗಳು ಈ ಪ್ರಕಾರದ ಸಂಧಾನಮಾಡಿಕೊಳ್ಳುವುದು ಘಾತಕತನವಾಗಿದೆ. ಇವರ ಜೊಳ್ಳುತನವನ್ನು ನೋಡಿದರೆ ಕಾಂಗ್ರೆಸ್ಸು ಏಕೆ ತಟಸ್ಥವಾಯಿತೆಂಬುದು ಸ್ಪಷ್ಟವಾಗುತ್ತದೆ."

ಕಾಂಗ್ರೆಸ್ಸು ಆಗ ಮೌನತಾಳಿದ್ದರಿಂದ ಯಾರು ಅದು ಅರಾಷ್ಟ್ರೀಯವೆಂದು ಹೇಳುತ್ತಾರೆಯೋ ಅವರು ಈ ಪತ್ರವ್ಯವಹಾರವನ್ನು ಕುರಿತು ಒಂದು ಚಕಾರವನ್ನಾದರೂ ಬರೆಯಬಾರದಿತ್ತೆ? ಪುಣೆ ಪಾಗೋಟೆಗಳು ಸುಮ್ಮನಾದವು. ಅತ್ತ ಭಾಯಿ ಪರಮಾನಂದರು ಹೀಗೆ ವ್ಯಕ್ತಪಡಿಸಿದರು. "ಈ ಸಂಧಾನಕ್ಕೆ ಗವರ್ನರರು ಸಮ್ಮತಿಸುವರೋ ಇಲ್ಲವೋ ತಿಳಿಯದು." ಮಾಲವೀಯರಂತೂ ಇದಕ್ಕೆ ಏನಂದರೋ ಪ್ರಕಟವಾಗಲೇ ಇಲ್ಲ. ೨೨ ಕೋಟಿ ರೂ. ದಾವಾಮಾಡಿ ಸಮುದ್ರದಾಚೆಯ ಜಗತ್ತಿನ ಕೋರ್ಟಿನವರೆಗೆ ನ್ಯಾಯಮಾಡಿ ಕೊನೆಗ ಒಳಗಿಂದೊಳಗೆ ೩ ರೂ. ಕರಾರುಮಾಡಿ ರಾಜಿ ಮಾಡಿಕೊಂಡಂತಾಯಿತು. ಅದುಕೂಡಾ ಮುಂದೆ ದೊರೆಯಲೇ ಇಲ್ಲವೆಂಬ ಮಾತು ಬೇರೇ! ಎತ್ತ ಹೋಯಿತು ಹಿಂದು ಮಹಾಸಭೆ? ಎತ್ತ ಹೋಯಿತು ಆ ಎಲ್ಲ ಗುಲ್ಲು? ಎತ್ತ ಹೋದವು ಆ ಮೂ....ರು ಮಂತ್ರಿಪದವಿಗಳು? ಇಂಥ ರಾಷ್ಟ್ರದ್ರೋಹವು ಹಿಂದುಗಳಲ್ಲಿ ಕಂಡುಬರುವದರಿಂದಲೇ ಆ ಜಾತಿನಿರ್ಣಯ ಇನ್ನೂ ಹೋಗಲೊಲ್ಲದು.

ಆದುದರಿಂದ ಬಂಧುಗಳೇ ಪಾಗೋಟೆ ಪತ್ರಿಕೆಗಳು ಜಾತೀಯ ನಿರ್ಣಯವನ್ನು ತಿರಸ್ಕರಿಸುವದು ಸಂಯುಕ್ತ ಮತದಾರ ಸಂಘವುಂಟಾಗಬೇಕೆಂಬ ಪ್ರಾಮಾಣಿಕ ಉದ್ದೇಶದಿಂದಲ್ಲ. ಆದರೆ ಹಿಂದುಗಳಿಗೆ ಇನ್ನೆರಡು ಸೀಟುಗಳು ಗುಲ್ಲೆಬ್ಬಿಸಿದರೆ ಸಿಗುತ್ತವೋ ಹೇಗೆಂಬುದನ್ನು ನೋಡುವ ಹೇತುವಿನಿಂದ! ಅಂಥ ಪಾಗೋಟೆ ಪತ್ರಿಕೆಗಳ ಧೋರಣವನ್ನೇ ನೀವೂ ಹಿಡಿಯುವುದಾದರೆ ನೀವಾದರೂ ರಾಷ್ಟ್ರೀಯ ಭಾವನೆಯುವರೆಂದು ನಾವು ಹೇಗೆ ಕರೆಯಬೇಕು? ಬೇಕಾದರೆ ಇನ್ನೂ ನೋಡಿರಿ. ಸಂಯುಕ್ತ ಮತದಾರ ಸಂಘಕ್ಕಾಗಲಿ ಜಾತೀಯ ನಿರ್ಣಯ ಹೊಡೆದೋಡಿಸುವದಕ್ಕಾಗಲಿ ಪಾಗೋಟೆಗಳು ಮುಂದೆ ಬರುವವೋ ಗಾಂಧಿ ಟೊಪ್ಪಿಗೆಗಳು ಮುಂದೆ ಬರುವವೋ?

ಆದುದರಿಂದ ಪಾಗೋಟೆಗಳ ಜಾಲಕ್ಕೆ ಮರುಳಾಗದೆ ಇನ್ನು ನೀವು ಆಯಾ ಸಂಸ್ಥೆಗಳ ಯಥಾರ್ಥ ಸ್ವರೂಪವನ್ನು ತಿಳಿದುಕೊಂಡು ಜನರಿಗೆ ಕಲ್ಯಾಣವಾಗುವ ರೀತಿಯಲ್ಲಿ ವಿಕಾರರಹಿತರಾಗಿ ಟೀಕಿಸುವಿರೆಂದು ನಂಬಿದ್ದೇನೆ.

---

## ಹ ಡ ಪ ದ ವ ರ
## ವೀರಶೈವ ದೀಕ್ಷಾ ಸಮಾರಂಭ.

ಇದೇ ಶ್ರಾವಣ ಬ| ೮ ಭಾನುವಾರ ಶುಭ ಮುಹೂರ್ತದಲ್ಲಿ ಹರಪನಹಳ್ಳಿ ನಗರದೊಳಗೆ ಪ್ರಸಿದ್ಧ ವರ್ತಕರಾದ, ಹಡಪದ ಮಲ್ಲಪ್ಪನವರ ನೂತನ ಗೃಹದಲ್ಲಿ ಅತ್ಯಂತ ಶೋಭಾಯಮಾನವಾದ ದೀಕ್ಷಾಮಂಟಪದೊಳು ಶಾಸ್ತ್ರ ವಿಧಿಪ್ರಕಾರ ಪಂಚಕಲಶಗಳನ್ನು ಆರನೇ ನಿರಂಜನ (ಷಟ್ ಕಲಶ) ಸ್ಥಾಪನೆ ಮಾಡಿ ಇಲ್ಲಿಯ ತೆಲಗಿ ಹರಪನಹಳ್ಳಿ ಮಠಾಧ್ಯಕ್ಷರಾದ ಬ್ರ|| ಶ್ರೀ ವೇ|| ಪುಟ್ಟಯ್ಯ ಸ್ವಾಮಿಯವರ ಅಧ್ಯಕ್ಷತೆಯಿಂದಲೂ ಗುತ್ತಲದ ಮಾನಿಹಳ್ಳಿ ಮಠದ ಸಿದ್ಧಾಂತಿ ಕಲಿವೀರಯ್ಯ ಶಾಸ್ತ್ರಿಯವರ ಪೌರೋಹಿತ್ಯದಿಂದಲೂ, ಮಂತ್ರವಿಧಿ ಪ್ರಕಾರ ನೂರಾರು ಹಡಪದವರ ಕುಟುಂಬದವರಿಗೆ ಅತ್ತ್ರೈಕ ವೈಭವದಿಂದ ವೀರಶೈವ ದೀಕ್ಷಾ ಕಾರ್ಯವು ಸಾಂಗವಾಗಿ ಜರುಗಿಸಲ್ಪಟ್ಟಿತು. ಈ ದೀಕ್ಷಾ ಸಮಾರಂಭ ಕಾರ್ಯಕ್ಕೆ ಹರಪನಹಳ್ಳಿ, ಹಡಗಲಿ, ಕೂಡ್ಲಿಗಿ ತಾಲೂಕುಗಳ ಯಾವತ್ತೂ ಗ್ರಾಮಗಳ ಹಡಪದ ಮಹಾಜನಂಗಳು ಆಯಾ ಗ್ರಾಮದ ಮಠಾಧಿಕಾರಿಗಳು ವೇ|| ತೆಲಗಿ ಹಾಲಪ್ಪದೇವರ ಮಠದ ಶಿದ್ಧಲಿಂಗಯ್ಯನವರು ವೇ|| ತೆಲಗಿ ಗೂಡಿ ವಡೇರ ಮಠದ ಶಿದ್ಧವೀರಯ್ಯನವರು ವೇ|| ಕುಂಚೂರು ಹಿರೇಮಠದ ಬಸಯ್ಯನವರು ವೇ|| ಸಲ್ಗುಂದ ಪಟ್ಟದೇವರ ಮಠದ ಬಸಯ್ಯನವರು ವೇ|| ಹೆಗ್ಗಡಾಳು ಹನಸಿ ಬೊಪ್ಪಲಾಪುರ ಮಠದ ಮುರಿಗೆಯ್ಯನವರು ಇನ್ನೂ ಅನೇಕ ಪರಸ್ಥಳದ ಮಠಾಧಿಕಾರಿಗಳು ಆಗಮಿಸಿದ್ದರು. ಮತ್ತು ಹರಪನಹಳ್ಳಿಯ ವೈದ್ಯ ಪಂಡಿತರಾದ ವೇ|| ತೆಲಗಿ ಹರಪನಹಳ್ಳಿ ಮಠದ ಚೆನ್ನವೀರಪ್ಪನಯ್ಯವರು ಡಿ. ವೇ|| ಚಿದಾನಂದಪ್ಪಯ್ಯನವರು ಹಿರೇಹಡಗಲಿ ಗುರುಪಾದ್ದೇವರ ಮಠದ ವೇ|| ಚೆನ್ನಬಸಪ್ಪಯ್ಯನವರು ಡಿ. ವೇ|| ನಿಜಲಿಂಗಪ್ಪಯ್ಯನವರು, ಕರ್ಸಿಹಳ್ಳಿ ಮಠದ ವೇ|| ಚೆನ್ನಬಸಯ್ಯನವರು ದುರ್ಗದ ಮಠದ ವೇ|| ತೋಟಪ್ಪಯ್ಯನವರು ಡಿ. ವೇ|| ಚೆನ್ನತೋಟಪ್ಪಯ್ಯನವರು ಡಿ. ವೆ|| ಬಸಯ್ಯನವರು ಡಿ. ಬಸಯ್ಯನವರು ಕುಂಬಾರಗೇರಿ ಹೊಸಮಠದ ವೇ|| ಬಸಯ್ಯನವರು ಡಿ. ಶಿವಯ್ಯನವರು ಆಗಮಿಸಿದ್ದರು. ಈ ದೀಕ್ಷಾ ಕಾರ್ಯವು ಪೂರೈಸಿದನಂತರ ಸ್ಥಳ ಪರಸ್ಥಳದ ಯಾವತ್ತೂ ಮಹಾಶಯರಿಗೂ ಸಹ ಪಂಕ್ತಿಯಿಂದ ಮೃಷ್ಟಾನ್ನ ಭೋಜನವು ದಕ್ಷಿಣ-ತಾಂಬೂಲಾದಿಗಳಿಂದ ಸಂತೃಪ್ತಿಪಡಿಸಿದನಂತರ ಸಾಯಂಕಾಲ ಸದ್ರಿ ಮಲ್ಲಪ್ಪನವರ ಮಂದಿರದಲ್ಲಿ ತನ್ನ ಪುತ್ರಿಯ ಮತ್ತು ತಮ್ಮ ಬಂಧು ವರ್ಗದವರ ಎರಡು ಲಗ್ನ ಕಾರ್ಯಗಳು ಸಾಂಗವಾಗಿ ಜರುಗಿದವು ಎಲ್ಲಾ ಕಾರ್ಯಗಳು ಜರುಗಿದನಂತರ ಬ್ಯಾಂಡು ವಾದ್ಯಾದಿಗಳಿಂದ ಮೆರವಣಿಗೆ ಉತ್ಸವ ಕಾರ್ಯವು ಅತ್ಯಂತ ವೈಭವದೊಡನೆ ಜರುಗಿತು. ಈ ಘನ ಕಾರ್ಯಭಾಗದಲ್ಲಿ ಹ|| ಶಿವಪ್ಪನವರು ಮಲ್ಲಪ್ಪನವರು ಇಟ್ಟಿಗುಡಿ ಭರಮಪ್ಪನವರು ತನು-ಮನ ಧನಗಳಿಂದ ತುಂಬಾ ಶ್ರಮ ವಹಿಸಿ ಯಾವ ಕೊರತೆಗಳಿಲ್ಲದೆ ಜರುಗಿಸಿ ಸಮಸ್ತರ ಮೆಚ್ಚುಗೆಗೆ ಪಾತ್ರರಾಗಿ ಶಾಶ್ವತವಾದ ಕೀರ್ತಿ ಹೊಂದಿದರು.

ಪರಸ್ಥಲದಿಂದ ಬಂದ ಎಲ್ಲಾ ಜನರಿಗೂ ಭೋಜನದ ವ್ಯವಸ್ಥೆಯನ್ನು ಚೆನ್ನಾಗಿ ಏರ್ಪಾಟುಮಾಡಿದ್ದರು. ಈ ಮಹತ್ಕಾರ್ಯವು ಜರುಗಿದ ಸಂತೋಷ ಸಮಾರಂಭದಲ್ಲಿ ಮದ್ರಾಸು ಇಲಾಖೆಯಲ್ಲಿ ಕನ್ನಡ ಭಾಷಾಭಿಮಾನಕ್ಕೆ ಹೋರಾಡುತ್ತಿರುವ ಒಂದೇ ಒಂದಾದ ಬಳ್ಳಾರಿಯಲ್ಲಿ ಹೊರಡುತ್ತಿರುವ "ನವಸಂದೇಶ" ವಾರಪತ್ರಿಕೆಗೆ ವೀರಶೈವ ಹಡಪದ ಸಮಾಜದವರು ಕಾಣಿಕೆಯಾಗಿ ಒಪ್ಪಿಸಿದ ರೂ. ೨ ಗಳನ್ನು ಆದರಪೂರ್ವಕವಾಗಿ ಸ್ವೀಕರಿಸಿದರು. ಈ ವೀರಶೈವ ಹಡಪದ ಸಮಾಜದವರಿಗೆ ಶ್ರೀ ಗುರುಬಸವ ರಾಜೇಂದ್ರ ಮಹಾಸ್ವಾಮಿಯು ಆಯುರಾರೋಗ್ಯ ಐಶ್ವರ್ಯಾಭಿವೃದ್ಧಿಯನ್ನುಂಟು ಮಾಡಬೇಕೆಂದು ಪ್ರಾರ್ಥಿಸುತ್ತೇವೆ.

ಯಾವತ್ತೂ ದೇಶಗಳ ದೀಕ್ಷೆಯಾಗದೆ ಇರುವ ವೀರಶೈವ ಹಡಪದವರಿಗೆ ವಿನಯ ಪೂರ್ವಕವಾಗಿ ಸೂಚಿಸುವುದೇನಂದರೆ—ಅಲ್ಲಿ ತಮ್ಮ ಪ್ರದೇಶಗಳಲ್ಲಿ ದೀಕ್ಷೆಯಾಗುವುದಕ್ಕೆ ಅನುಕೂಲವಾಗದಿದ್ದರೆ ಇಲ್ಲಿಗೆ ಯಾರಾದರೂ ಒಬ್ಬರು ಬಂದರೆ ಇಲ್ಲಿಂದ ದೀಕ್ಷೆ ಮಾಡುವದಕ್ಕೆ ಸಂಸ್ಥಾನದ ಪ್ರತಿನಿಧಿಯಾದ ಅಧಿಕಾರಿಗಳನ್ನು ಕಳಿಸಿಕೊಡುತ್ತೇವೆ. ಇಂಥಾ ಸುಸಮಯವನ್ನು ಕಳೆದುಕೊಳ್ಳದೆ ದೀಕ್ಷೆಯಾಗದೆ ಇರುವ ಪ್ರತಿಯೊಬ್ಬರು ದೀಕ್ಷೆಯಾಗಬೇಕೆಂದು ನಮ್ಮಗಳ ಸವಿನಯ ಪ್ರಾರ್ಥನೆ.

ಹರಪನಹಳ್ಳಿ ವೀರಶೈವ ಹಡಪದ ಮಹಾಜನ ಸಂಘ
ಹರಪನಹಳ್ಳಿ (ಜಿಲ್ಲಾ ಬಳ್ಳಾರಿ)

ಸೆಕ್ರೆಟರಿಗಳು
ಕುಂಬಾರಗೇರಿ ಕೊಟ್ರಪ್ಪನವರು.
ಹ| ಶಿವಪ್ಪನವರು.
ಇಟ್ಟಿಗುಡಿ ಭರ್ಮಪ್ಪನವರು.
ಹ|| ಮಲ್ಲಪ್ಪನವರು.
ಡಿ. ಹಾಲಪ್ಪನವರು.



—ಸೊಲ್ಲಾಪುರ ಹಿಂದು ಮಹಾ ಸಭೆಯವರು ಕಳೆದ ೩೭ನೆಯ ತಾರೀಖಿನ ದಿನ ಈ ಮುಂಚೆ ಮುಸಲ್ಮಾನರಾಗಿದ್ದ ಆರು ಜನಗಳ ಒಂದು ಕುಟುಂಬವನ್ನು ಶುದ್ಧಗೊಳಿಸಿ ಹಿಂದು ಧರ್ಮದಲ್ಲಿ ತೆಗೆದುಕೊಂಡರು.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣಮಂದಿರದಲ್ಲಿ ಶ್ರೀ ಹರ್ಡೀಕರ್ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೀಕರ್ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 3391.

# ಶರಣ ಸಂದೇಶ



## The Sharana Sandesh.

ನ್ಯಾಯನಿಷ್ಠುರ| ದಾಕ್ಷಿಣ್ಯಪರನಾನಲ್ಲ| ಲೋಕವಿರೋಧಿ| ಶರಣನಾರಾರಿಗೂ ಅಂಜುವವನಲ್ಲ|
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ‖ ವ. ೨೨೮ ‖ ಮಹಾನುಭಾವಿ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು,

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೨೦ನೆಯ ಸಪ್ಟೆಂಬರ್ ೧೯೩೭. | ಸಂಚಿಕೆ ೫

ಜನಸೇವೆಯೇ ದೇವರ ಸೇವೆ.

# ಗೋವಧಾಲಯ ಕಟ್ಟಲ್ಪಡುವುದಿಲ್ಲ.

:(:o:):

## ವ್ಹಾಯಿಸ್‌ರಾಯರಾದ ಲಾರ್ಡ ಲಿನ್‌ಲಿಥಗೋರವರು

ಈ ಕೆಳಗಿನಂತೆ ಪ್ರಕಟಿಸಿ ಅಖಿಲ ಭಾರತೀಯರ ಅಭಿನಂದನೆಗೆ ಪಾತ್ರರಾದರು.

"ಜನಗಳ ಧಾರ್ಮಿಕ ಭಾವನೆಗೆ ನೋವುಂಟಾಗುವುದೆಂದು
ದೇಶದ ಎಲ್ಲ ಕಡೆಗಳಿಂದಲೂ ತಿಳಿದುಬಂದುದರಿಂದ
ಲಾಹೋರಿನಲ್ಲಿ ಕಟ್ಟಲ್ಪಡುತ್ತಿದ್ದ ಪಶುಹತ್ಯಾಲಯವು
ಸ್ಥಗಿತಗೊಳಿಸಲ್ಪಟ್ಟಿದೆ.
ಇದರಿಂದ ಸರಕಾರಕ್ಕೆ ೫೦ ಲಕ್ಷ ರೂ. ಗಳು
ನಷ್ಟವಾಗುವುವು."

## ಸತ್ಯಾಗ್ರಹ ಹೋರಾಟದಲ್ಲಿ

ಮುಂಬೈ ಸರಕಾರವು ಸ್ವಾಧೀನಪಡಿಸಿಕೊಂಡ ಭೂಮಿ ಮೊದಲಾದ ಸ್ಥಿರಾಸ್ತಿಗಳು
ಅವುಗಳ ಯಜಮಾನರಿಗೆ ಈಗಿನ ಕಾಂಗ್ರೆಸ್ ಸರಕಾರದಿಂದ ತಿರುಗಿ ಕೊಡಲ್ಪಡುವುವು.

## ಈ ವಾರದ ಪತ್ರಿಕೆಯಲ್ಲೇನಿದೆ ?

ಬಲಹೀನರ ಬವಣೆ !
ವರ್ಣವ್ಯವಸ್ಥೆಯು ಆದರ್ಶವಾದುದೆ ?
ಶ್ರೀ ಜಗದ್ಗುರುಗಳ ಮತ್ತು ಶ್ರೀ ಮಹಾರಾಜರ ಸಮಾಗಮ.
'ಹರಿಜನ' ಎಂದು ಹೇಳಬೇಡಿರಿ.
ಡಾ. ನಂದೀಮಠರ ಹೇಳಿಕೆ
ಡಾ. ಖಾನರು ಯಾರು ?
ಇದು ಸರಿಯಾದ ರೀತಿಯಲ್ಲ.
ವೀರಶೈವ ತತ್ವಕ್ಕೆ ವಿರೋಧ.

ದೇಹವೇ ದೇವಾಲಯ.

# ಬೇಕಾಗಿದ್ದಾರೆ.

ಸಂಸ್ಕೃತ ಭಾಷಾ ಜ್ಞಾನ ಸರಿಯಾಗಿ ಇದ್ದು ಯಾವದೆ ವಿಶ್ವವಿದ್ಯಾಲಯದ ಬಿ. ಎ. ಯಂ. ಎ. ಬಿ. ಯಸ್. ಯಲ್. ಸಿ. ಪಿ. ಯಸ್. ಅಥವಾ ಯಂ. ಬಿ. ಬಿ. ಯಸ್. ಪರೀಕ್ಷೆ ಪಾಸಾದವರು ಅಥವಾ ಪಾಸಾಗದವರು, ಅಥವಾ ಸಂಸ್ಕೃತದಲ್ಲಿ ಹೆಚ್ಚಿನ ಅಭ್ಯಾಸಮಾಡಿದವರು (ಶಾಸ್ತ್ರಿಗಳು) ಆಯುರ್ವೇದದ ಶಾಸ್ತ್ರದ ಅಭ್ಯಾಸಮಾಡಿ ನಿಜವಾದ ಸ್ವಾರ್ಥತ್ಯಾಗದಿಂದ ಸಮಾಜ ಸೇವೆ ಮಾಡಲಿಚ್ಛಿಸುವ ಸುಮಾರು ೨೫ ವರುಷದ ತರುಣರು ಬೇಕಾಗಿದ್ದಾರೆ. ಅವರ ಈ ಅಭ್ಯಾಸದ ಸೌಕರ್ಯಕ್ಕಾಗಿ ಶಕ್ಯವಾದ ಸಹಾಯುವನ್ನು ಒದಗಿಸಿಕೊಡುವ ವಿಚಾರವಿದೆ. ಉತ್ಸಾಹೋತ್ಸಾಹಿ ತರುಣರು ಬೇಗನೆ ಕೆಳಗಿನ ವಿಳಾಸಕ್ಕೆ ದಯಮಾಡಿ ಬರೆದು ತಿಳಿಸಬೇಕು.

ಬಸಪ್ಪ ಮಲ್ಲಪ್ಪ ಕಂಕಣವಾಡಿ.
ಕರ್ನಾಟಕ ಆಯುರ್ವೇದ ವಿದ್ಯಾಪೀಠ
ಬೆಳಗಾಂವ.

ಓಂ

# ಶರಣ ಸಂದೇಶ.

ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೨೦ ನೆಯ ಸಪ್ಟೆಂಬರ್ ೧೯೩೭. | ಸಂಚಿಕೆ ೫

## ಮಹತ್ವದ ಸುದ್ದಿಗಳು.

—ಶ್ರೀ. ಸುಭಾಷಚಂದ್ರ ಬೋಸರವರಿಗೆ ಇನ್ನೂ ಎರಡು ತಿಂಗಳು ಸಂಪೂರ್ಣ ವಿಶ್ರಾಂತಿ ಬೇಕಾದುದರಿಂದ ಅವರು ಕಲಕತ್ತಾದಲ್ಲಿ ಕೂಡುವ ಕಾಂಗ್ರೆಸ್ ವರ್ಕಿಂಗ್ ಕಮಿಟಿಗೆ ಹೋಗುವುದಿಲ್ಲವಾಗಿ ತಿಳಿದಿದೆ.

—ಮುಂಬೈ ಪ್ರಾಂತದ ಹೊಸ ಗವ್ಹರ್ನರರಾದ ಸರ್. ಲುಮ್ಲೆಯವರು ತಾ. ೧೬ ನೆಯ ದಿವಸ ಮುಂಬೈಗೆ ಬಂದು ಅಲ್ಲಿಯ ಕಾರ್ಪೊರೇಶನ್ನಿನ ಮಾನ ಪತ್ರವನ್ನು ಹೊಂದಿ ಪ್ರತ್ಯೇಕವಾದ ಉಗಿಬಂಡಿಯಲ್ಲಿ ಪುಣೆಗೆ ತೆರಳಿದರು.

—ಅಹಮ್ಮದನಗರದ ಹಿಂದು ಸಭೆಯವರು ಕಳೆದ ೯ ನೆಯ ತಾರೀಖಿನ ದಿವಸ ಒಬ್ಬ ಕ್ರಿಸ್ತ ಮತೀಯನನ್ನು ಹಿಂದು ಧರ್ಮದಲ್ಲಿ ತೆಗೆದುಕೊಂಡು ಆತನಿಗೆ ಪ್ರತಾಪ ಎಂಬ ಹೆಸರನ್ನಿಟ್ಟರು.

—ಸಾಂಗಲಿಯಲ್ಲಿ ಒಬ್ಬ ಹಿಂದು ಹುಡುಗಿಗೆ ಕಳೆದತಿಂಗಳು ೨೭ ನೆಯ ತಾರೀಖಿನ ದಿವಸ ಅಪಾಯಗೊಳಿಸಿದ್ದರಿಂದ ದಾರಾಮಿಯಾ ಮಹಮ್ಮದ ಎಂಬ ಮುಸಲ್ಮಾನ ಅಪರಾಧಿಗೆ ೧೮ ತಿಂಗಳ ಕಠಿಣ ಶಿಕ್ಷೆಯಾಯಿತು.

—ಆಂಧ್ರ ದೇಶದ ತ್ಯಾಗವೀರರೂ ಮಹಾ ದೇಶ ಭಕ್ತರೂ ಆದ ಶ್ರೀ. ನಾಗೇಶ್ವರ ರಾಯರಿಗೆ ಆ ಭಾಗದಲ್ಲಿ "ಆಂಧ್ರಕರ್ಣ" ಎಂದು ಹೇಳುತ್ತಾರೆ. ಬಿಜವಾಡದಲ್ಲಿ ಹಾಲು ಕಲ್ಲಿನ ಇವರ ಒಂದು ಪ್ರತಿಮೆಯನ್ನು ಸ್ಥಾಪಿಸಿ ಆಂಧ್ರ ಸೇವಾ ಸಂಘವನ್ನೂ ಇವರಲ್ಲಿಯ ಆದರಕ್ಕಾಗಿ ಮಹಾಜನರು ಏರ್ಪಡಿಸುವವರಿದ್ದಾರೆ.

—ನಾಡ ಹಬ್ಬದಲ್ಲಿ ಅಕ್ಟೋಬರ್ ೧೦ ನೆಯ ತಾರೀಖು ಕರ್ನಾಟಕ ಏಕೀಕರಣದ ದಿನವೆಂದು ಆಚರಿಸಬೇಕಾಗಿ ಕರ್ನಾಟಕ ಏಕೀಕರಣದ ಸಂಘದವರು, ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯವರು, ಅಸೆಂಬ್ಲಿ ಸದಸ್ಯರು ಮತ್ತು ಕರ್ನಾಟಕ ವಣಿಕಸಂಘದವರು ಪ್ರಾರ್ಥಿಸಿಕೊಂಡಿದ್ದಾರೆ.

—ದಿಲ್ಲಿಯ ಕೇಂದ್ರ ಶಾಸನ ಮಂಡಲವು ೧೯೩೮ ನೆಯ ಇಸವಿಯ ವರೆಗೆ ಮುಂದರಿಸಲ್ಪಟ್ಟಿದೆಯೆಂದು ವ್ಹಾಯಿಸ್‌ರಾಯರು ತಮ್ಮ ಭಾಷಣದಲ್ಲಿ ತಿಳಿಸಿದರು.

—ಅಂದಮಾನದ ರಾಜಕೀಯ ಕೈದಿಗಳಲ್ಲಿ ೭ ಜನರು ಮಾತ್ರ ಇನ್ನೂ ನಿರಶನ ಸತ್ಯಾಗ್ರಹವನ್ನು ನಡೆಯಿಸಿದ್ದರಷ್ಟೆ. ಅವರು ಕೂಡಾ ಈಗ ಸತ್ಯಾಗ್ರಹವನ್ನು ನಿಲ್ಲಿಸಿ ಆಹಾರವನ್ನು ಸೇವಿಸಿದರು.

—ಹಿಂದಕ್ಕೆ ಪುಣೆ ಫರ್ಗ್ಯುಶನ್ ಕಾಲೇಜಿನಲ್ಲಿ ನಾ. ಹಾಟಸನ್‌ರವರನ್ನು ಕೊಲೆ ಮಾಡಲು ಪ್ರಯತ್ನಿಸಿದ್ದ ಶ್ರೀ. ಗೋಗಟೆಯವರನ್ನು ಮುಂಬೈ ಸರಕಾರದವರು ಜೈಲಿನಿಂದ ಬಿಡುಗಡೆ ಮಾಡಿದರು. ತಮಗೆ ಅಹಿಂಸಾ ತತ್ವವೇ ರಾಜಕಾರಣದಲ್ಲಿ ಯೋಗ್ಯವೆಂಬ ವಿಶ್ವಾಸವು ಈಗ ಉಂಟಾಗಿದೆಯೆಂದು ಇವರು ಹೇಳಿದ್ದಾರೆ. ಇವರು ಗಾಂಧಿ ಟೊಪ್ಪಿಗೆಯನ್ನು ಹಾಕಿಕೊಂಡು ಪುಣೆಯಲ್ಲಿ ಅಸೆಂಬ್ಲಿಯ ಅಧಿವೇಶನದ ಕಾರ್ಯವನ್ನು ನೋಡಲು ಹೋಗಿದ್ದರು.

—ಜಿನೆವಾದಲ್ಲಿ ಕೂಡಿದ್ದ ರಾಷ್ಟ್ರಸಂಘಕ್ಕೆ ನಾ. ಆಗಾಖಾನರವರು ಅಧ್ಯಕ್ಷರಾಗಿದ್ದಾರೆ. ಇದು ಹಿಂದುಸ್ಥಾನಕ್ಕೇ ಭೂಷಣಪ್ರದವಾದುದು.

—ಚೀನ ದೇಶವು ಜಪಾನದ ವಿರುದ್ಧವಾಗಿ ರಾಷ್ಟ್ರಸಂಘದ ಕಡೆಗೆ ಕೊಟ್ಟ ವ್ಯಾಜ್ಯವನ್ನು ವಿಚಾರಣೆ ಮಾಡಲು ೫ ಸಭಾಸದರ ಒಂದು ಸಮಿತಿಯು ಏರ್ಪಟ್ಟಿದೆ.

—ಡಾ. ರವೀಂದ್ರನಾಥ ಟಾಗೋರರ ಪ್ರಕೃತಿ ಸುಧಾರಿಸುತ್ತಲಿದೆಯೆಂಬ ಸಂತೋಷದ ಸುದ್ದಿ ಪ್ರಕಟವಾಗಿದೆ.

—ಸರ್. ಸಪ್ರುರವರು ಸಂಯುಕ್ತ ಪ್ರಾಂತದ ತಾತ್ಕಾಲಿಕ ಗವ್ಹರ್ನರರಾಗುವರೆಂದು ಸುದ್ದಿ.

—ಇದೇ ೨೨ ನೆಯ ತಾರೀಖಿನ ದಿವಸ ನೈಜಾಮ ರಾಜ್ಯದ ರಾಜಕೀಯ ಸುಧಾರಣೆಯ ರೀತಿ ನೀತಿಗಳು ಸರ್. ಅಕಬರ ಹೈದರಿಯವರಿಂದ ಪ್ರಕಟಿಸಲ್ಪಡುವವು.

# ವರ್ಣ ವ್ಯವಸ್ಥೆಯು ಆದರ್ಶವಾದುದೆ?

ಸವರ್ಣ ಹಿಂದುಗಳು ಚತುರ್ವರ್ಣಗಳಿಂದ ಹಿಂದು ಸಮಾಜವೇ ಹಾಳಾಗುತ್ತಿರುವುದನ್ನು ತಿಳಿದೂ ತಿಳಿದು ಅವುಗಳನ್ನು ಕಿತ್ತೊಗೆಯಲು ಒಡಂಬಡುತ್ತಾ ಇಲ್ಲ. ಮಹಾ ಮಹಾ ದೇಶಭಕ್ತರು ಮತ್ತು ಸಮತಾವಾದಿ ಹಿಂದು ಮುಂದಾಳುಗಳು ವರ್ಣವ್ಯವಸ್ಥೆ ನಾಶವಾಗುವುದನ್ನು ಸಹಿಸರು. ದೇಶದಲ್ಲಿ ಆರ್ಥಿಕ ಸ್ಥಿತಿ ಸಮಾನವಾಗಬೇಕೆಂದು ಪ್ರಚಾರ ಮಾಡುವ ಅನೇಕ ಸಮತಾವಾದಿ ಹಿಂದುಗಳು ಚತುರ್ವರ್ಣಗಳ ವ್ಯವಸ್ಥೆಯನ್ನು ಕಾಯಲು ಹೆಣಗಾಡುತ್ತಿದ್ದಾರೆ. ಏಕೆಂದರೆ, ಅವರು ಕೇವಲ ಸ್ವಾರ್ಥಿಗಳು. ಅನ್ಯರ ಕಷ್ಟವನ್ನರಿಯರು. ಸವರ್ಣ ಹಿಂದುಗಳಿಗಂತೂ ಉಚ್ಚತರವಾದ ಪದವಿ ಸಿಕ್ಕಿದೆ. ಆದುದರಿಂದಲೇ ಅವರು ಶೂದ್ರರ ಕಷ್ಟಗಳನ್ನರಿಯರು. ಧನಿಕರಲ್ಲಿಯೂ ಬಡವರಲ್ಲಿಯೂ ಹೆಚ್ಚು ಕಡಿಮೆ ಇರುವುದು ಅವರಿಗೆ ಸಹನವಾಗುವುದಿಲ್ಲ. ಆದುದರಿಂದಲೇ ಅವರು ಆರ್ಥಿಕ ಸ್ಥಿತಿಯನ್ನು ಸಮಾನಗೊಳಿಸಲು ಪ್ರಚಾರಮಾಡುತ್ತಿದ್ದಾರೆ.

ಇವರು ಆರ್ಥಿಕ ಬಲವೇ ಮಿಗಿಲಾದ ಬಲವೆಂದು ತಿಳಿದಿದ್ದಾರೆ. ಆದರೆ ಜಗತ್ತಿನ ಅನೇಕ ದೊಡ್ಡ ದೊಡ್ಡ ಕೋಟ್ಯಾಧೀಶರು ಲಂಗೋಟಿ ಹಾಕಿಕೊಂಡ ಬಡ ಸನ್ಯಾಸಿಯ ಪಾದಸೇವೆ ಮಾಡುತ್ತಿರುವುದನ್ನು ಮರೆತು ಬಿಟ್ಟಿದ್ದಾರೆ. ಒಂದುವೇಳೆ ಸಂಪತ್ತು ಮತ್ತು ಅಧಿಕಾರ ಇವೇ ಮಿಗಿಲಾಗಿದ್ದಿದ್ದರೆ ದೊಡ್ಡ ದೊಡ್ಡ ನವಾಬರು ಮತ್ತು ರಾಜರು ಬಡ ಸನ್ಯಾಸಿಗಳ ಶಾಪಕ್ಕೆ ಹೆದರಿ ಅತಿ ನಂಬ್ರ ಭಾವನೆಯಿಂದ ಪಾದಚಾರಿಗಳಾಗಿ ಅವರಿದ್ದಲ್ಲಿಗೆ ಹೋಗುತ್ತಿರಲಿಲ್ಲ. ಯುಗ ಯುಗಾಂತರದಿಂದ ನಡೆದುಬಂದ ಧರ್ಮದ ಪರಿಣಾಮವು ಬ್ರಾಹ್ಮಣ ಮತ್ತು ಭಂಗಿಗಳ ಮಧ್ಯದಲ್ಲಿ ಬ್ರಾಹ್ಮಣರೇ ಶ್ರೇಷ್ಠರೆಂಬ ಭಾವನೆಯ ಗೋಡೆಯನ್ನು ಕಟ್ಟಿಬಿಟ್ಟಿದೆ. ಎಲ್ಲಿಯವರೆಗೆ ಅದನ್ನು ಕೆಡಗುವುದಿಲ್ಲವೋ ಅಲ್ಲಿಯ:ವರೆಗೆ ಆರ್ಥಿಕ ಸಮಾನತೆಯಾಗುವುದು ಅಶಕ್ಯವು.

ಈ ವರೆಗೆ ಭಾರತ ದೇಶದಲ್ಲಿ ಆಗಿಹೋದ ಮಹಾ ಮಹಾ ಸುಧಾರಕರು ಸವರ್ಣ ಹಿಂದುಗಳಲ್ಲಿಯೇ ಜನಿಸಿರುವುದು ಶೋಚನೀಯ ಸ್ಥಿತಿಯಾಗಿದೆ. ಆದುದರಿಂದಲೇ ಚತುರ್ವರ್ಣಗಳಿಂದಾಗುವ ಭಯಂಕರ ಅನಾಹುತಗಳನ್ನು ಅವರು ಚೆನ್ನಾಗಿ ಅರಿತಿಲ್ಲ. ಅರಿತಿದ್ದರೆ ಬೇರೆ ಸಂಗತಿಗಳನ್ನು ಬಿಟ್ಟು ಮೊದಲು ಚತುರ್ವರ್ಣಗಳ ಮೂಲಕ್ಕೇನೇ ಕೊಡಲಿಯ ಹೊಡತವನ್ನು ಹಾಕುತ್ತಿದ್ದರು. ನಾನು ತಾ. ೨೪-೫-೩೭ ನೆಯ ದಿವಸ ಡಾ|| ಅಂಬೇಡಕರರ ಪುತ್ರರಾದ ಶ್ರೀ. ಯಶ್ವಂತರಾಯರನ್ನೂ ಮತ್ತು ಅವರ ಅಳಿಯಂದಿರಾದ ಶ್ರೀ. ಮುಕುಂದರಾಯರನ್ನೂ ಭೆಟ್ಟಿಯಾಗಿ ಅವರ ಸಂಗಡ ಸಂಭಾಷಿಸಿದ್ದರಿಂದ ಗೊತ್ತಾದ ಸಂಗತಿಯೇನಂದರೆ "ಹಿಂದು ಮುಂದಾಳುಗಳಾದ ಸುಪ್ರಸಿದ್ಧ ಶ್ರೀ. ಮಾಲವೀಜಿಯರಂಥವರೇ ಶೂದ್ರರರಿಗೆ ಶೀಖ ಧರ್ಮವನ್ನು ಸ್ವೀಕರಿಸಲಿಕ್ಕೆ ಸಲಹೆಯನ್ನಿತ್ತರಂತೆ. ಏಕೆಂದರೆ, ಸವರ್ಣಿಗಳಾದ ಹಿಂದುಗಳು ಚತುರ್ವರ್ಣಗಳನ್ನು ಎಂದೂ ಬಿಡುವದಿಲ್ಲವಂತೆ." ಇದನ್ನು ಕೇಳಿದಾಕ್ಷಣವೇ ನನಗೆ ನಮ್ಮ ಹಿಂದು ಸಮಾಜದ ಕೀಳು ಕಲ್ಪನೆ ಮತ್ತು ಅದರ ಮೂರ್ಖತನಕ್ಕೆ ಅಳುಬಂತು. ಶೂದ್ರರರು ಹಿಂದು ಧರ್ಮವನ್ನು ಬಿಟ್ಟು ಚತುರ್ವರ್ಣ ಮಾನಿಸದಂಥ ಬೇರೆ ಧರ್ಮದಲ್ಲಿ ಹೋಗಲಿಕ್ಕೆ ಸಲಹೆಯನ್ನೀಯುವುದೆಂದರೆ ಹಿಂದು ವಿಧವೆಯು ಬೇರೆ ಧರ್ಮವನ್ನು ಸ್ವೀಕರಿಸಿ ವಿವಾಹವಾಗಲು ಸಲಹೆ ಕೊಟ್ಟಂತೆಯೇ ಸರಿ. ಏಕೆಂದರೆ ಅವರು ಹಿಂದು ಧರ್ಮದಲ್ಲಿ ಇರುವುದರಿಂದ ಪುನರ್ವಿವಾಹವಾಗಲು ಧರ್ಮದ ಪ್ರತಿಬಂಧವಿದೆ. ನಾವು ನಮ್ಮ ಧರ್ಮಕ್ಕೆ ವಿಘ್ನಕಾರಿಯಾದ ಈ ಚತುರ್ವರ್ಣಗಳನ್ನು ಕಿತ್ತೊಗೆಯುತ್ತಿದ್ದೇವೆ. ನೀವು ಬೇರೆ ಯಾವ ಧರ್ಮದಲ್ಲಿಯೂ ಸೇರಬೇಡಿರಿ. ಎಂದು ಸಲಹೆಯನ್ನು ಕೊಡುವುದಕ್ಕೆ ಬದಲಾಗಿ ನಾವು ಮಾತ್ರ ಇಂಥ ಮಹಾ ಪಾಪ ಕರ್ಮವನ್ನು ಬಿಡಲಾರೆವು. ನೀವು ಮಾತ್ರ ಎರಡನೆಯ ಧರ್ಮದಲ್ಲಿ ಸೇರಿರಿ. ಇದರಿಂದ ನಿಮಗೆ ಹಿತವಾಗುವುದು. ಎಂದು ಹೇಳುವುದೆಂದರೆ ಮೃತ್ಯುವಿನ ಬಾಯಿಯಲ್ಲಿ ನಿಂತ ಈ ಸಮಾಜವು ಅದರಿಂದ ತಪ್ಪಿಸಿಕೊಂಡು ಹೋಗಲು ಪ್ರಯತ್ನಿಸದೆ ಇರತಕ್ಕದ್ದೇ ಆಗಿದೆ. ಅಂದಮೇಲೆ ಇದರ ಜೀವಿತ ಕಾಲವನ್ನು ಕೈ ಬೆರಳಿನಿಂದ ಎಣಿಸಬೇಕಾಗುವುದು.

ಚತುರ್ವರ್ಣಗಳು ಈಶ್ವರನ ಕೃಪೆಯಿಂದುಂಟಾದವುಗಳೋ ಅಥವಾ ಆತನ ಶಾಪದಿಂದುಂಟಾದವುಗಳೋ? ಇವುಗಳಿಂದ ಹಿಂದು ಸಮಾಜದಲ್ಲಿ ಶಾಂತಿ ಮತ್ತು ಸಂಘಟನೆಗಳು ನೆಲೆಸಿವೆಯೊ? ಅಥವಾ ಅಶಾಂತತೆ ಮತ್ತು ವಿಘಟನೆಗಳುಂಟಾಗಿವೆಯೊ? ಎಂಬ ಪ್ರಶ್ನೆಗಳಿಗೆ ಡಾ|| ಅಂಬೇಡಕರವರೇ ಸರಿಯಾದ ಉತ್ತರವನ್ನು ಕೊಡಲು ಸಮರ್ಥರೇ ಹೊರತು ಸವರ್ಣಿಗಳಾದ ಹಿಂದುಗಳು ಸಮರ್ಥರಲ್ಲ. ಯಾಕೆಂದರೆ ಚತುರ್ವರ್ಣಗಳ ಕೆಟ್ಟ ನಡತೆಯು ಎಷ್ಟು ಅವರಿಗೆ ಅನುಭವವಿದೆಯೋ ಅಷ್ಟು ಶ್ರೀ. ಮಾಲವೀಜಿ ಮತ್ತು ಮಹಾತ್ಮಾ ಗಾಂಧಿಯವರಿಗಿರುವುದಿಲ್ಲ. ಆದುದರಿಂದ ಹಿಂದು ಸಮಾಜದ ಇಂಥ ದುಸ್ಥಿತಿಯ ಕಾಲಕ್ಕೆ ಪ್ರತಿಯೊಬ್ಬ ಸವರ್ಣೀಯ ಹಿಂದು ಡಾ|| ಅಂಬೇಡಕರರ ವಿಚಾರಗಳಮ್ನು ತಿಳಿದುಕೊಳ್ಳುವುದು ಅತ್ಯಗತ್ಯವೂ ಹಿತಕರವೂ ಆಗಿದೆ.

ಜಾತಿ ಭೇದ ವರ್ಣ ವ್ಯವಸ್ಥೆಗಳು ಕೆಲಸಗಳ ವಿಭಾಗಕ್ಕೇನೂ ಏರ್ಪಟ್ಟಿಲ್ಲ. ಆದರೆ ಕೆಲಸಮಾಡುವವರಿಗಾಗಿ ವಿಭಾಗ ಮಾಡಲ್ಪಟ್ಟಿವೆ. ಈ ವಿಭಾಗಗಳಲ್ಲಿ ಮನುಷ್ಯನು ತನ್ನ ಬುದ್ಧಿ ಶಕ್ತಿ ಸಾಮರ್ಥ್ಯಗಳಿಂದ ಯಾವದಾದರೊಂದು ಉದ್ಯೋಗವನ್ನು ಕೈಕೊಳ್ಳಬಹುದು. ಆದರೆ ವರ್ಣ ವಿಭಾಗದಲ್ಲಿ ಮಾತ್ರ ಒಂದು ವಿಶಿಷ್ಟ ವರ್ಣದಲ್ಲಿ ಹುಟ್ಟಿದವನು ಆ ವರ್ಣಕ್ಕನುಸಾರವಾದ ಕೆಲಸವನ್ನೇ ಮಾಡತಕ್ಕದ್ದು. ಇನ್ನೊಂದು ವರ್ಣದ ಕರ್ಮವನ್ನು ಮಾಡಕೂಡದು. ಈ ವರ್ಣ ವ್ಯವಸ್ಥೆಯಲ್ಲಿ ಭಂಗಿಯು ಮಿಠಾಯಿಗಾರನ ಕೆಲಸವನ್ನಾಗಲಿ ಅಥವಾ ಟಾಂಗ ಹೊಡೆಯುವ ಕೆಲಸವನ್ನಾಗಲಿ ಇಲ್ಲವೇ ಪೌರೋಹಿತ್ಯವನ್ನಾಗಲಿ ಮಾಡಲಾರನು. ಇದರಂತೆ ಒಬ್ಬ ಕ್ಷತ್ರಿಯನು ತಾನು ಉಪವಾಸದಿಂದ ಬಳಲಿ ಸಾಯಲಾದರೂ ಅವನು ಕುಂಟೆಯ ಮೇಳೆಯನ್ನು ಎಂದೂ ಹಿಡಿಯಲಾರನು. ಈ ವರ್ಣ ವ್ಯವಸ್ಥೆಯಿಂದ ಒಬ್ಬ ಹಿಂದು ಮತ್ತೊಬ್ಬ ಹಿಂದುವಿನಿಂದ ವಿಭಾಗಿಸಲ್ಪಟ್ಟಿದ್ದಾನೆ. ಹಿಂದುಗಳನ್ನು ಒಂದೇ ಸೂತ್ರದಲ್ಲಿ ನೆಲೆಗೊಳಿಸುವಂಥ ಒಂದಾದರೂ ಪ್ರಸಂಗವಿಲ್ಲ. ಬ್ರಾಹ್ಮಣನಿಂದ ಭಂಗಿಯವರೆಗಿನ ಹಿಂದುಗಳನ್ನೆಲ್ಲಾ ಒಟ್ಟುಗೂಡಿಸುವಂಥ ಒಂದಾದರೂ ಕಾರ್ಯವು ಈ ಸಮಾಜದಲ್ಲಿಲ್ಲ. ಹಿಂದುಗಳನ್ನೆಲ್ಲಾ ಒಂದೇ ಕಡೆಗೆ ತರಲು ಅಂಥ ಒಂದಾದರೂ ಏರ್ಪಾಟವಿಲ್ಲ. ಎಲ್ಲವೂ ಹಿಂದು ಸಮಾಜವನ್ನು ವಿಂಗಡಿಸತಕ್ಕವುಗಳೇ ಆಗಿವೆ.

ಹಿಂದು ಸಮಾಜವನ್ನು ವಿಂಗಡಿಸಿದ ರೀತಿ ಹೀಗಿದೆ. ಹಿಂದುಗಳು ತಾವೆಲ್ಲರೂ ಒಂದೇ ಜಾತಿಯವರೆಂದು ತಿಳಿಯುತ್ತಾ ಇಲ್ಲ. ಇವರಿಗೆ ಯಾವಾಗಲೂ ತಮ್ಮ ತಮ್ಮ ವರ್ಣಗಳ ಕಲ್ಪನೆಯೇ ಇರುತ್ತದೆಯೇ ಹೊರತು ಬೇರೆ ವರ್ಣದವರ ಕಲ್ಪನೆಯೇ ಇಲ್ಲ. ನೀನು ಯಾರು ಎಂದು ಯಾವನೊಬ್ಬ ಹಿಂದುವಿನನ್ನು ಕೇಳಿದ್ದಾದರೆ ಅದಕ್ಕಾತನು ತಾನು ಹಿಂದು ಎಂದು ಹೇಳದೆ ನಾನು ಬ್ರಾಹ್ಮಣ, ಅಥವಾ ಕ್ಷತ್ರಿಯ ಇಲ್ಲವೆ ವೈಶ್ಯನೆಂದೇ

ಉತ್ತರವನ್ನು ಕೊಡುತ್ತಾನೆ. ಹಿಂದು ಮನುಷ್ಯನು ತಾನು ಹುಟ್ಟಿದಂದಿನಿಂದ ಸಾಯುವವರೆಗೂ ಸಂಕುಚಿತವಾದ ವರ್ಣದ ವರ್ತುಲದಲ್ಲಿಯೇ ಜೀವಿಸುತ್ತಿದ್ದಾನೆ. ಆತನು ಎರಡನೆ ಹಿಂದು ಮನುಷ್ಯನ ಸುಖ ದುಃಖಗಳ ಕಡೆಗೆ ಲಕ್ಷಿಸಿ ಯಾವ ವಿಧದಿಂದಲೂ ಸಹಾಯವನ್ನು ಮಾಡುವುದಿಲ್ಲ. ಪ್ರತಿಯೊಂದು ವರ್ಣದ ಹಿಂದುಗಳು ಇನ್ನೊಂದು ವರ್ಣದವನನ್ನು ಹೀಯಾಳಿಸಿ ಕೀಳಾಗಿ ಕಾಣುತ್ತಾರೆ. (ಸಶೇಷ)

ಸಂಪಾದಕ "ಕ್ರಾಂತಿ." ಅನುವಾದಕ

ಎನ್. ಸಿದ್ಧರಾಮಪ್ಪ ಎಲೇರಿ.

---

## ಮುಸಲ್ಮಾನರಿಗೆ ಬುದ್ಧಿವಾದ.

ಡಾ. ಪಟ್ಟಾಭಿಸೀತಾರಾಮಯ್ಯನವರು ಮಛಲಿ ಪಟ್ಟಣದಲ್ಲಿ ಕಳೆದವಾರ ಒಂದು ಮಹತ್ವದ ಭಾಷಣವನ್ನು ಮಾಡಿದರು. ಅದರಲ್ಲಿ ಮುಸಲ್ಮಾನ್ ಬಂಧುಗಳನ್ನು ಕುರಿತು ಹೀಗೆ ಹೇಳಿದರು—

"ನೀವು ಮೊದಲು ನಿಮ್ಮ ಮಾತೃಭೂಮಿಯಾದ ಹಿಂದುಸ್ಥಾನದ ಕಡೆಗೆ ಲಕ್ಷಿಸಿರಿ. ನಿಮ್ಮ ಈ ಜನ್ಮ ಭೂಮಿಯಲ್ಲಿ ನಡೆದಿರುವ ನಷ್ಟ ಕಷ್ಟಗಳನ್ನು ನಿವಾರಿಸಲು ಮೊದಲು ಪ್ರಯತ್ನಿಸಿರಿ. ಆಮೇಲೆ ಪ್ಯಾಲಿಸ್ಟಾಯಿನ್ ಕಡೆಗೆ ತಿರುಗಿರಿ. ಪ್ಯಾಲಿಸ್ಟಾಯಿನ್‌ದಲ್ಲಿಯ ಅರಬರು ತಮ್ಮನ್ನು ತಾವು ರಕ್ಷಿಸಿಕೊಳ್ಳುವಷ್ಟು ಶಕ್ತರಿದ್ದಾರೆ.

ಫಲವತ್ತಾದ ಭೂಮಿ ಯಹುದಿಗಳಿಗೆ. ಬೀಳು ಮತ್ತು ನಿರುಪಯೋಗವಾದ ಭೂಮಿ ಅರಬರಿಗೆ. ಈ ಪ್ರಕಾರ ಬ್ರಿಟಿಶ್ ಸರಕಾರವು ಪ್ಯಾಲಿಸ್ಟಾಯಿನ್ ವಿಭಾಗಿಸಿದೆ. ಅರಬರ ಪವಿತ್ರ ಕ್ಷೇತ್ರಗಳು ಅನ್ಯರ ಕಡೆಗೆ ಹೋಗಿವೆ. ಬ್ರಿಟಿಶ್ ಸಾಮ್ರಾಜ್ಯದ ಈ ರೀತಿಯನ್ನು ಹಿಂದುಸ್ಥಾನದ ಮುಸಲ್ಮಾನ್ ಬಂಧುಗಳು ಈಗಲಾದರೂ ಚೆನ್ನಾಗಿ ತಿಳಿದುಕೊಂಡು ಕಾಂಗ್ರೆಸ್ಸಿನಲ್ಲಿ ಸೇರಬಾರದೆ ?"

ಡಾ. ಮಹಾಶಯರ ಈ ಮಾತ್ರೆಯೇನೋ ದೇಶಾಭಿಮಾನಿಗಳಾದ ಮುಸಲ್ಮಾನ್ ಬಂಧುಗಳಿಗೆ ಬಹು ಹಿತಕರವಾದುದೇ ಸರಿ ಆದರೆ ಯಾರು ದೇಶಭಕ್ತಿಗಿಂತಲೂ ಧರ್ಮಾಭಿಮಾನವೇ ಹೆಚ್ಚಿನದಾಗಿದೆಯೆಂದು ತಿಳಿದಿದ್ದಾರೆಯೋ ಅಂತಹ ಮುಸಲ್ಮಾನ್ ಬಂಧುಗಳಿಗೆ ಈ ಮಾತ್ರೆ ಕಹಿಯಾಗಿ ತೋರಲಾರದೆ ?

---

## 'ಹರಿಜನ' ಎಂದು ಹೇಳಬೇಡಿರಿ.

ಆದಿ ಹಿಂದುಗಳಿಗೆ ಮಹಾತ್ಮಾ ಗಾಂಧಿಯವರು "ಹರಿಜನ" ಎಂಬ ಹೆಸರನ್ನಿಟ್ಟರಷ್ಟೆ. ಆಗಲೇ ನಾವು ಅದು ಸರಿಯಾದ ಹೆಸರಲ್ಲವೆಂದೂ ಆದಿಜನ ಎಂದೇ ಅವರಿಗೆ ಹೇಳಬೇಕೆಂದೂ ತಿಳಿಸಿದುದು ವಾಚಕರಿಗೆ ಗೊತ್ತಿರಬಹುದು. ಆದಿ ಹಿಂದುಗಳ ಉನ್ನತಿಗಾಗಿ ಪ್ರಯತ್ನಿಸುವ ಶ್ರೀ ಜಗದ್ಗುರು ಶಂಕರಾಚಾರ್ಯ ಡಾ. ಕುರ್ತಕೋಟಿಯವರು, ಶ್ರೀ ಜಗದ್ಗುರು ಜಯದೇವ ಮುರಘರಾಜೇಂದ್ರ ಸ್ವಾಮಿಗಳವರು, ಪಂಡಿತ ಮಾಲವೀಜಿ ಮೊದಲಾದ ಅನೇಕ ಪ್ರಮುಖರು ಕೂಡಾ 'ಹರಿಜನ' ಎಂಬ ಹೆಸರು ಸರಿಯಾಗಿಲ್ಲವೆಂದೇ ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸಿದ್ದಾರೆ.

ಆದಿ ಹಿಂದುಗಳಲ್ಲಿಯ ಡಾ. ಭಾಗ್ಯರಡ್ಡಿ ಮೊದಲಾದ ಅನೇಕ ಪ್ರಮುಖರಂತೂ ತಮಗೆ "ಹರಿಜನ" ಎಂಬ ಹೆಸರು ಬೇಡವೆಂತಲೂ ಇದು ತಮಗೆ ಅವಮಾನಕರವಾದುದೆಂತಲೂ ಸ್ಪಷ್ಟ ತಿಳಿಸಿದ್ದಾರೆ. ಹೀಗಿದ್ದರೂ ಗಾಂಧೀಜಿಯವರೇನೂ ಆ ಹೆಸರನ್ನು ಬಿಟ್ಟಿಲ್ಲ. ಎಂದ ಮೇಲೆ ಕಾಂಗ್ರೆಸ್ ಪಕ್ಷದವರು ಆ ಹೆಸರನ್ನು ಬಿಡುವುದೆಂತು?

ಕಳೆದ ವಾರ ಮಛಲಿ ಪಟ್ಟಣದಲ್ಲಿ ಆದಿ ಹಿಂದುಗಳ ಪರಿಷತ್ತು ಕೂಡಿತ್ತು. ಡಾ. ಎಸ್ ಹನುಮಂತರಾವ ಎಂಬುವವರು ಅಧ್ಯಕ್ಷರಾಗಿದ್ದರು. ನಮಗೆ ಹರಿಜನ ಎಂದು ಹೇಳದೆ ಆದಿಆಂಧ್ರರೆಂದು ಹೇಳಬೇಕಾಗಿ ಸರಕಾರಕ್ಕೆ ತಿಳಿಸುವ ಒಂದು ಗೊತ್ತುವಳಿಯನ್ನು ಆ ಪರಿಷತ್ತಿನವರು ಮಾಡಿದರು.

ಈ ಪರಿಷತ್ತಿನವರ ಪ್ರಾರ್ಥನೆ ಎಷ್ಟರಮಟ್ಟಿಗೆ ಮಾನ್ಯವಾಗುವುದೋ ನೋಡಬೇಕು. ಅವರಿಗೆ ಬೇಡಾದ ಹೆಸರಿನಿಂದಲೇ ನಾವು ಅವರನ್ನು ಕರೆಯುವುದೂ ಒಂದು ವಿಧವಾದ ಹಿಂಸೆಯ ರೀತಿಯಲ್ಲವೆ?

---

## ಮಂತ್ರಿಗಳ ಮಾತನ್ನಾದರೂ ಕೇಳಿರಿ.

——::o::——

ಕಾಂಗ್ರೆಸ್ ಕೆಲಸಗಾರರಲ್ಲಿ ಅನೇಕರು ಈಗ ಸತ್ಯ ಮತ್ತು ಅಹಿಂಸೆಯ ತತ್ವಗಳನ್ನೇನೂ ಅಷ್ಟು ಲಕ್ಷಿಸದೆ ತಮಗೆ ಬಂದ ಬಲ ಮತ್ತು ಅಧಿಕಾರಗಳಿಂದ ಅನ್ಯ ಪಕ್ಷದವರ ಮೇಲೆ ಆಕ್ರಮಣ ಅತ್ಯಾಚಾರಗಳನ್ನು ಮಾಡುತ್ತಿದ್ದಾರಷ್ಟೆ. ಇದು ಅನ್ಯಾಯವೆಂದು ನಾವು ಅನೇಕ ಸಾರೆ ಹೇಳಿದ್ದೇವೆ. ನಾವು ಹೇಳಿದರೆ ಕೆಲವರಿಗೆ ಕೋಪ. ರಾಷ್ಟ್ರದ್ರೋಹಿಗಳ ಮಾತೆಂದು ತೋರುತ್ತದೆ. ಅಂಥ ಮಹಾಶಯರು ಕಾಂಗ್ರೆಸ್ ಪಕ್ಷದ ಮಂತ್ರಿಗಳ ಮಾತನ್ನಾದರೂ ಕೇಳುವರೆ ?

ಕಂದಾಯದ ಮಂತ್ರಿಗಳಾದ ಶ್ರೀ. ದೇಸಾಯಿಯವರು ವಿಜಾಪುರಕ್ಕೆ ಆಗಮಿಸಿದಾಗ ಸಾರ್ವಜನಿಕ ಪ್ರಚಂಡ ಸಭೆಯಲ್ಲಿ ಬ್ರಾಹ್ಮಣ-ಬ್ರಾಹ್ಮಣೇತರ ಜಾತಿಯ ಜಗಳ ಅನರ್ಥಕರವೆಂದೂ ಇಂಥ ಜಾತಿಯ ಜಗಳದಿಂದಲೇ ನಾವು ಪಾರತಂತ್ರ್ಯದಲ್ಲಿ ಈಗ ಬಳಲುತ್ತಿದ್ದೇವೆಂದೂ, ಕಾಂಗ್ರೆಸ್ ಸಂಸ್ಥೆಯಲ್ಲಿಯೂ ಇದು ಪ್ರವೇಶಿಸಿರುವುದು ದುಃಖದ ಸಂಗತಿಯೆಂದೂ, ತಿಳಿಸಿ ಇದರ ನಿವಾರಣೋಪಾಯವಾಗಿ ಹೀಗೆ ಹೇಳಿದರು—

"ಮಹಾತ್ಮಾ ಗಾಂಧಿಯವರು ಬೋಧಿಸಿದ ಸತ್ಯ ಮತ್ತು ಅಹಿಂಸಾ ತತ್ವಗಳಿಂದ ಎಂತಹ ಅದ್ಭುತ ಕಾರ್ಯಗಳಾಗುತ್ತವೆಂಬುದು ನಮ್ಮ ಕಣ್ಣ ಮುಂದೇ ಇದೆ. ಇವುಗಳ ಶಕ್ತಿಯು ಅತ್ಯದ್ಭುತವಾದುದು. ಈ ಮಾರ್ಗದಿಂದಲೇ ನಾವು ನಡೆಯಬೇಕು. ಹಾಗಾದರೇನೇ ಈ ಜಾತಿಯ ಜಗಳವೂ ನಾಶವಾಗುವುದರಲ್ಲಿ ಸಂದೇಹವಿಲ್ಲ."

ಶಾಸನ ಮಂತ್ರಿಗಳಾದ ಶ್ರೀ. ಮುನಸಿಯವರು ಮುಂಬೈಯಲ್ಲಿ ಕಳೆದ ವಾರ ಕಾಂಗ್ರೆಸ್ ಕಾರ್ಯಕರ್ತರನ್ನು ಕುರಿತು ಹೀಗೆ ತಿಳಿಸಿದರು—

"ಕಾಂಗ್ರೆಸ್ ಕೆಲಸಗಾರರು ತಮ್ಮ ಚಟುವಟಿಕೆಗಳನ್ನು ಅಹಿಂಸಾ ತತ್ವಕ್ಕನುಸರಿಸಿಯೇ ನಡೆಯಿಸಬೇಕು. ಅವರು ತಮ್ಮ ನಡೆ ಮತ್ತು ನುಡಿಗಳಲ್ಲಿ ಅಹಿಂಸಾ ತತ್ವವನ್ನು ಪಾಲಿಸಬೇಕು. ಹೀಗೆ ಮಾಡುವುದರಿಂದ ಮಂತ್ರಿಗಳ ಕಾರ್ಯಕ್ಕೆ ಬಹು ಸಹಾಯವಾಗುತ್ತದೆ. ಇದೇ ನೀವು ಮಂತ್ರಿಗಳಿಗೆ ಉಂಟುಮಾಡಿಕೊಡುವ ಹೆಚ್ಚಿನ ಸೌಲಭ್ಯ."

ಹೀಗೆ ಮಂತ್ರಿಗಳು ಕಾಂಗ್ರೆಸ್ ಕೆಲಸಗಾರರಿಗೆ ಹೇಳುವುದೇಕೆ ? ಅವರೇನು ಕೊಲೆಸುಲಿಗೆ ನಡೆಸಿದ್ದಾರೆಯೆ ? ಎಂದು ಯಾರಿಗಾದರೂ ಸಂಶಯ ಬಂದರೆ ಅವರು ಹೇಳಿದ್ದರ ಅರ್ಥ

ಅದಲ್ಲ. ಕಾಂಗ್ರೆಸ್ ಕೆಲಸಗಾರರು ಹಾಗೇನೂ ಮಾಡುತ್ತಾ ಇಲ್ಲ. ಕಾಂಗ್ರೆಸ್ ಕೆಲಸಗಾರರು ಪಕ್ಷಾಭಿಮಾನದಿಂದ ಅಸತ್ಯ ಸಂಗತಿಗಳನ್ನೇನೂ ತಿಳಿಸಬಾರದು. ಈಗ ಕಾಂಗ್ರೆಸ್ ರಾಜ್ಯದಲ್ಲಿ ಅವರ ಮಾತಿನ ಕಡೆಗೆ ಸರಕಾರವು ಹೆಚ್ಚು ಲಕ್ಷಿಸಿ ನಡೆಯಬೇಕಾಗಿದೆಯಲ್ಲವೆ ? ಅನ್ಯ ಪಕ್ಷದವರ ಮೇಲೆ ತಮ್ಮ ಬಲವಿದೆಯೆಂದು ಲೇಖನ, ಭಾಷಣ, ಪುಂಡಾಟಿಕೆಗಳಿಂದ ಆಕ್ರಮಣಮಾಡಬಾರದು. ಇವೆಲ್ಲಾ ಹಿಂಸೆಯ ರೀತಿಗಳೇ ಸರಿ. ಇವನ್ನೂ ಬಿಡಬೇಕೆಂದೇ ಅವರ ಹೇಳಿಕೆಯ ಅರ್ಥ.

---

## ಸ್ವಾತಂತ್ರ್ಯ ಪ್ರಿಯರಿಗೆ ಸಂದೇಶ.

ಈಗ ಚೀನ-ಜಪಾನಗಳ ಯುದ್ಧ ಪ್ರಾರಂಭವಾಗಿರುವುದರಿಂದ ಚೀನ ಮತ್ತು ಜಪಾನ ದೇಶಗಳ ಸ್ಥಿತಿಗತಿಗಳ ವಿಷಯದಲ್ಲಿಯೂ ಆಯಾಯ ದೇಶಗಳ ಪ್ರಮುಖರ ಸಂಬಂಧವಾಗಿಯೂ ಜನರು ಹೆಚ್ಚಾಗಿ ಲಕ್ಷಿಸುವುದು ಸ್ವಾಭಾವಿಕ. ಡಾ. ಆರ್. ಎಸ್. ರಾಯ ಎಂಬುವವರು ರೂಸೋ-ಜಪಾನ ಯುದ್ಧದಕಾಲಕ್ಕೆ ಅಮೇರಿಕೆಗೆ ಹೋದಾಗ ಚೀನ ದೇಶದ ಮುಖಂಡರಾಗಿದ್ದ ಸನ್ ಯಿತ್ ಸೇನ್ ಎಂಬುವವರ ಸಂದರ್ಶನಕ್ಕೆ ಹೋಗಿದ್ದರಂತೆ. ಆಗ ನಡೆದ ಅವರ ಸಂಭಾಷಣೆಯು ಈಗ ಪ್ರಕಟವಾಗಿದೆ. ಅದರ ಮುಖ್ಯಾಂಶ ಹೀಗಿದೆ.

“ ಪ್ರಶ್ನೆ— ಹಿಂದುಸ್ಥಾನಕ್ಕೆ ಸ್ವತಂತ್ರತೆಯು ಎಂದು ದೊರೆಯಬಹುದೆಂದು ನಿಮಗೆ ತೋರುತ್ತದೆ?

ಉತ್ತರ— ನಾನು ನಿಮ್ಮ ಸ್ವಾತಂತ್ರ್ಯದ ಚಟುವಟಿಕೆಗಳನ್ನು ಅರಿತುಕೊಳ್ಳುತ್ತಾ ಇದ್ದೇನೆ. ಅದರಿಂದ ನೀವು ಜಾಗ್ರತೆ ಸ್ವತಂತ್ರರಾಗುವಿರೆಂದು ನನಗೆ ತೋರುವುದಿಲ್ಲ. ನಿಮಗಿಂತ ಚೀನ ದೇಶವೇ ಜಾಗ್ರುತೆ ಸ್ವತಂತ್ರವಾಗುವುದು.

ಪ್ರಶ್ನೆ— ನೀವು ಹೀಗೇಕೆ ಹೇಳುತ್ತೀರಿ?

ಉತ್ತರ— ನೀವು ಬಹು ಅಂಜುಬುರಕರು.

ಪ್ರಶ್ನೆ— ಏತರ ಮೇಲಿಂದ ನೀವು ಹೀಗೆ ಹೇಳುವುದು?

ಉತ್ತರ— ನಿಮಗೆ ಏನು ಬೇಕಾಗಿದೆಯೆಂಬುದನ್ನೇ ನೀವು ಇನ್ನೂ ನಿರ್ಧರಿಸಿಲ್ಲ.

ಪ್ರಶ್ನೆ— ರಕ್ತಪಾತದಿಂದ ನಮ್ಮ ಧ್ಯೇಯವನ್ನು ಸಾಧಿಸಬೇಕೆಂದು ನೀವು ಹೇಳುವಿರಾ?

ಉತ್ತರ— ಹಾಗೆ ಮಾಡಲು ಹಿಂದುಸ್ಥಾನಕ್ಕೆ ಈಗ ಶಕ್ತಿಯಿಲ್ಲ. ಆದರೆ ನಾನು ಇಷ್ಟು ಮಾತ್ರ ಹೇಳಬಲ್ಲೆನು. ಹಿಂದುಸ್ಥಾನವು ಸ್ವತಂತ್ರವಾಗುವ ಮುಂಚೆ ರಕ್ತದ ಕಾಲಿವೆ ಹರಿಯುವುದು. ಚೀನ ಜನರಿಗೆ ಮರಣದ ಭಯವಿಲ್ಲ. ಅಂತೆಯೇ ಅವರು ಜಾಗ್ರುತೆ ಸ್ವತಂತ್ರರಾಗುವರು. ಅವರು ಪರದೇಶದವರ ಸಂಸ್ಕೃತಿಯನ್ನು ಅನುಸರಿಸದೆ ತಮ್ಮ ಪೂರ್ವಜರ ಪದ್ಧತಿಯನ್ನೇ ಅನುಸರಿಸುವವರಾಗಿದ್ದಾರೆ. ನಿಮ್ಮ ಮುಂದಾಳುಗಳು ನಿಮ್ಮ ಪೂರ್ವಜರನ್ನು ಕೀಳಾಗಿ ಕಾಣುತ್ತಾರೆ. ಹೀಗೆ ಮಾಡುವುದರಿಂದ ಸ್ವಾತಂತ್ರ್ಯಕ್ಕೆ ಬಹು ಕಾಲ ಬೇಕಾಗುತ್ತದೆ. ಮೊದಲು ನೀವು ಹಿಂದಿ ಜನರಾಗಲು ಪ್ರಯತ್ನಿಸಿರಿ.

ಪ್ರಶ್ನೆ— ನೀವು ಹಿಂದುಸ್ಥಾನಕ್ಕಾಗಿ ಒಂದು ಸಂದೇಶವನ್ನು ಕೊಡಬೇಕಾಗಿ ನನ್ನ ಪ್ರಾರ್ಥನೆ.

ಉತ್ತರ— ಹಿಂದುಸ್ಥಾನಕ್ಕೆ ಸಂದೇಶ ಕೊಡಲು ನಾನಾರು? ಹಿಂದುಸ್ಥಾನವೇ ಚೀನ ದೇಶಕ್ಕೆ ಪ್ರಾಚೀನ ಕಾಲದಲ್ಲಿ ಅನೇಕ ಸಂದೇಶಗಳನ್ನು ಕೊಟ್ಟಿದೆ. ಸ್ವಾತಂತ್ರ್ಯ ಸಂಪಾದನೆಗಾಗಿ ಪ್ರಯತ್ನಿಸುವವರಿಗೆಲ್ಲಾ ನಾನು ಹೇಳುವುದಿಷ್ಟೆ.

ನಿರ್ಭಯರಾಗಿರಿ. ನಿಮ್ಮ ಧ್ಯೇಯವನ್ನು ನಿಶ್ಚಯಿಸಿರಿ. ಅದಕ್ಕಾಗಿ ಸರ್ವಸ್ವವನ್ನೂ ಸಮರ್ಪಿಸಲು ಸಿದ್ಧರಾಗಿರಿ.”

ಸನ್‌ಯಿತ್ ಸೇನರು ೧೯೧೧ ರಲ್ಲಿ ಚೀನ ದೇಶವನ್ನು ಸ್ವತಂತ್ರಮಾಡಿದರು. ಅವರು ಈಗ ಇದ್ದಿದ್ದರೆ ಗಾಂಧೀಜಿಯವರ ಅತ್ಯದ್ಭುತವಾದ ಆತ್ಮ ಶಕ್ತಿಯಿಂದ ಹಿಂದಿಯರು ಎಷ್ಟು ನಿರ್ಭಯರೂ ಅಹಿಂಸಾವ್ರತನಿಷ್ಠರೂ ಆಗಿದ್ದಾರೆಂಬುದನ್ನು ನೋಡಿ ಸಂತೋಷಿಸುತ್ತಿದ್ದರಲ್ಲವೆ?

---

## ಡಾ. ಖಾನಸಾಹೇಬರು ಯಾರು ?

ಗಡಿನಾಡಿನಲ್ಲಿ ೧೦೦ಕ್ಕೆ ೯೧ ರಂತೆ ಮುಸಲ್ಮಾನರಿದ್ದಾರೆ. ಇಂತಹ ಪ್ರಾಂತದಲ್ಲಿ ಈಗ ಕಾಂಗ್ರೆಸ್ ರಾಜ್ಯ ಪ್ರಾರಂಭವಾಯಿತು. ಇದಕ್ಕೆ ಡಾ. ಖಾನಸಾಹೇಬರೇ ಮುಖ್ಯಕಾರಣರೆಂದು ಹೇಳಬಹುದು. ಎಂದಮೇಲೆ ಡಾ. ಖಾನಸಾಹೇಬರು ಯಾರೆಂಬುದನ್ನು ಹೆಚ್ಚಾಗಿ ತಿಳಿದುಕೊಳ್ಳುವ ಉತ್ಸುಕತೆಯುಂಟಾಗುವುದು ಸ್ವಾಭಾವಿಕ.

ಗಡಿನಾಡಿನ ಗಾಂಧಿಯವರೆಂದು ಪ್ರಸಿದ್ಧರಾಗಿರುವ ಖಾನ ಅಬ್ದುಲ್ ಗಫಾರಖಾನರ ಅಣ್ಣಂದಿರೇ ಇವರೆಂಬುದು ಮಾತ್ರ ಎಲ್ಲರಿಗೂ ತಿಳಿದ ಸಂಗತಿಯಷ್ಟೆ. ಇವರಿಗೆ ಈಗ ೬೦ ವರುಷ. ಪಾಶ್ಚಾತ್ಯ ಶಿಕ್ಷಣವನ್ನು ಇವರು ಆ ದೇಶಗಳಲ್ಲಿದ್ದು ಹೊಂದಿದ್ದಾರೆ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಇವರು ಹೆಚ್ಚುಕಾಲ ವಾಸವಾಗಿಯೂ ಇದ್ದಾರೆ.

ಇವರು ದೊಡ್ಡ ಮನೆತನಕ್ಕೆ ಸೇರಿದವರು. ಬಹು ಕುಶಾಗ್ರಬುದ್ಧಿಗಳು. ಅಂತೆಯೇ ತಂದೆಯವರು ಇವರನ್ನು ಯುರೋಪಕ್ಕೆ ವಿದ್ಯಾಭ್ಯಾಸಕ್ಕಾಗಿ ಕಳಿಸಿದರು. ಇವರು ಯುರೋಪದಲ್ಲಿ ೧೨ ವರುಷ ವಾಸವಾಗಿದ್ದರು. ಎಂ. ಆರ್. ಸಿ. ಎಸ್. ಎಂಬ ವೈದ್ಯ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಮಹಾಯುದ್ಧದ ಕಾಲಕ್ಕೆ ಸೈನ್ಯಶಾಖೆಯಲ್ಲಿ ಡಾಕ್ಟರಿ ಕೆಲಸವನ್ನು ನಡೆಯಿಸಿದರು. ಫ್ರಾನ್ಸಿನಲ್ಲಿಯೂ ಇವರು ಕೆಲವು ಕಾಲ ಡಾಕ್ಟರರಾಗಿದ್ದರು. ಸ್ವದೇಶಕ್ಕೆ ಬರುವಾಗ ಒಬ್ಬ ಐರೋಪ್ಯಳನ್ನು ವಿವಾಹ ಮಾಡಿಕೊಂಡು ಬಂದರು.

ಇವರ ರೀತಿ ಅಭಿರುಚಿಗಳೆಲ್ಲಾ ಹೆಚ್ಚಾಗಿ ಪಾಶ್ಚಾತ್ಯ ಪದ್ಧತಿಗಳನ್ನೇ ಅನುಸರಿಸಿದ್ದವು. ಕ್ರಿಕೆಟ್ ಆಟವು ಇವರಿಗೆ ಬಹು ಪ್ರಿಯವಾದುದು. ಸಿಗಾರೇಟ್ ಸೇದುವುದಂತೂ ವಿಶೇಷವಾಗಿತ್ತು. ೧೯೩೦ ನೆಯ ಇಸವಿಯವರೆಗೂ ಪ್ರಾಯಶಃ ಇವರು ಇದೇ ರೀತಿಯಲ್ಲಿದ್ದರು. ಇವರು ಈ ದೇಶಕ್ಕೆ ೧೯೨೦ ರಲ್ಲಿ ಬಂದಾಗ ಇವರ ತಂದೆಯವರೂ ಬಂಧುಗಳೂ ಸೆರೆಮನೆಯನ್ನು ಸೇರಿದ್ದರು. ಇವರ ಬಂಧುಗಳು ಪ್ರಾರಂಭಿಸಿದ್ದ ಖುದಾಇ ಖಿದಮತದಾರ ಸಂಘವು ಅದ್ಭುತವಾದ ಕಾರ್ಯವನ್ನು ಮಾಡಿದ್ದಿತು. ೧೯೩೦ ರಲ್ಲಿ ಪೇಶಾವರದಲ್ಲಿ ಭಯಂಕರ ದೊಂಬಿಯಾಗಲು ಸರಕಾರವು ಈ ಖಾನ ಬಂಧುಗಳನ್ನು ಸೆರೆಯಲ್ಲಿಟ್ಟರು. ತಮ್ಮ ಮೇಲೆ ಸೆರೆಮನೆ ಸೇರುವ ಪ್ರಸಂಗ ಒಂದು ದಿನ ಬಂದೇ ಬರುವುದೆಂದು ಡಾ. ಖಾನಸಾಹೇಬರು ಯೋಚಿಸಿ ತಾವು ಸಾದಾ ರೀತಿಯಲ್ಲಿರಲು ಕಲಿತು ಸಿಗಾರೇಟನ್ನು ಸಂಪೂರ್ಣ ಬಿಟ್ಟು ಗಾಂಧೀಜಿಯವರ ಸಂಪೂರ್ಣ ಅನುಯಾಯಿಗಳಾದರು. ಈ ಪ್ರಕಾರ ಡಾ. ಖಾನಸಾಹೇಬರು ರಾಷ್ಟ್ರಸೇವೆಯ ಒಬ್ಬ ವೀರರೂ ಗಾಂಧೀಜಿಯವರ ಅನುಯಾಯಿಗಳೂ ಆಗಿದ್ದಾರೆ.

# ಕೀರ್ತಿಶೇಷ ವಾರದ ಮಲ್ಲಪ್ಪನವರ ಸ್ಮಾರಕ.

ಸೊಲ್ಲಾಪುರ ನಗರ ಭೂಷಣ ಕೀರ್ತಿಶೇಷ ರಾ| ಬ| ವಾರದ ಮಲ್ಲಪ್ಪನವರ ಸ್ಮಾರಕದ ಕಾರ್ಯಕ್ಕೋಸ್ಕರ ಯೋಚಿಸಲು ಕಳೆದ ತಿಂಗಳು ೨೪ ನೆಯ ತಾರೀಖಿನ ದಿವಸ ಸೊಲ್ಲಾಪುರದಲ್ಲಿ ಅಲ್ಲಿಯ ಕಲೆಕ್ಟರರಾದ ಮಿ. ಲ್ಯಾಂಬ್ರಿಕ್‌ರವರ ಅಧ್ಯಕ್ಷತೆಯಲ್ಲಿ ಒಂದು ಸಭೆ ಕೂಡಿತ್ತು. ಆಗ ಅಲ್ಲಿಯ ಎಲ್ಲ ಧರ್ಮ ಮತ ಪಂಥಗಳ ಪ್ರಮುಖರ ಒಂದು ಸ್ಮಾರಕ ಸಮಿತಿಯು ಏರ್ಪಟ್ಟು ಅದಕ್ಕೆ ರಾ| ಬ| ಮುಳೆಯವರು ಅಧ್ಯಕ್ಷರಾಗಿಯೂ ಶ್ರೀ. ಶಿವಬಾಳಪ್ಪ ದೇಶಮುಖ ಮತ್ತು ಶ್ರೀ. ಎಸ್. ಎಮ್. ಕಲ್ಯಾಣಶೆಟ್ಟಿ ವಕೀಲ ಈ ಉಭಯರು ಕಾರ್ಯದರ್ಶಿಗಳಾಗಿಯೂ ನಿಯಮಿಸಲ್ಪಟ್ಟರು.



ರಾ| ಬ| ವಾರದ ಮಲ್ಲಪ್ಪನವರು.

ಈ ಸ್ಮಾರಕ ಸಮಿತಿಯವರು ಒಂದು ಪ್ರಕಟನೆಯನ್ನು ಹೊರಡಿಸಿ ಶ್ರೀ. ಮಲ್ಲಪ್ಪನವರ ಸ್ಮಾರಕ ಕಾರ್ಯಮಾಡುವುದು ಅತಿ ಅಗತ್ಯವಾಗಿದೆಯೆಂದೂ ಈ ಕಾರ್ಯಕ್ಕೆ ಸಕಲರೂ ಧನಸಹಾಯಮಾಡಬೇಕೆಂದೂ ವಿಜ್ಞಾಪಿಸಿಕೊಂಡಿದ್ದಾರೆ. ಈ ಮುಂಚೆ ಈ ಸಂಬಂಧವಾಗಿ ಯೋಚನೆ ನಡೆದಾಗ ಕೂಡಿದ ೪-೫ ಸಾವಿರ ರೂ. ಗಳು ಈಗ ಈ ಸ್ಮಾರಕ ಸಮಿತಿಯ ಕಡೆಗೆ ಕೊಡಲ್ಪಡುವವೆಂದೂ ಹಣವು ಯಾವ ಪ್ರಮಾಣದಲ್ಲಿ ಕೂಡುವದೋ ಅದಕ್ಕೆ ತಕ್ಕಂತೆ ವ್ಯಾಪಾರಿ ಕಾಲೇಜ್, ವ್ಯಾಪಾರಿ ಶಾಲೆ, ಸಾರ್ವಜನಿಕ ಭವನ, ಶಿಲಾ ಪ್ರತಿಮೆ ಸ್ಥಾಪನೆ ಮೊದಲಾದವುಗಳಲ್ಲಿ ಒಂದು ಅಥವಾ ಅನೇಕ ಕಾರ್ಯ ಮಾಡಲ್ಪಡುವವೆಂದೂ ತಿಳಿಸಲ್ಪಟ್ಟಿದೆ.

ಶ್ರೀ ಮಲ್ಲಪ್ಪನವರು ಜನಾಂಗಕ್ಕೆ ಮಾಡಿದ ಅನೇಕ ಮಹೋಪಕಾರಗಳನ್ನು ನೋಡಿದರೆ ಈ ಕಾರ್ಯವು ಈ ಮುಂಚೆಯೇ ಎಂದೋ ನೆರವೇರಬೇಕಾಗಿದ್ದಿತು. ಈ ಮಹನೀಯರು ನಿಧನಹೊಂದಿ ೨೫ ವರ್ಷಗಳ ನಂತರವಾದರೂ ಸೊಲ್ಲಾಪುರದ ಅನೇಕ ಮುಂದಾಳುಗಳು ಈ ಮಹತ್ಕಾರ್ಯಕ್ಕೆ ಮುಂದರಿದುದು ಅಭಿನಂದನೀಯುವೇ ಸರಿ. ಏಕೆಂದರೆ ವೀರಶೈವ ಸಂಜೀವನಿಕಾರರು ಹೇಳಿರುವಂತೆ ಏನನ್ನೂ ಮಾಡದಿರುವುದಕ್ಕಿಂತ ನಿಧಾನವಾಗಿ ಮಾಡುವುದಾದರೂ ಉತ್ತಮವೇ ಸರಿ.

ಶ್ರೀ ಮಲ್ಲಪ್ಪನವರ ಸುದೀರ್ಘ ಪ್ರಯತ್ನ ವಿಶೇಷದಿಂದಲೇ ಸೊಲ್ಲಾಪುರವು ಈಗ ಬಟ್ಟೆಯ ಗಿರಣಿಗಳ ಇಂತಹ ಮಹತ್ವದ ಸ್ಥಳವಾಯಿತೆಂದು ಧಾರಾಳವಾಗಿ ಹೇಳಬಹುದು. ವ್ಯಾಪಾರ ಒಕ್ಕಲತನಗಳಲ್ಲಿ ಇವರು ಮಾಡಿದ ಆಗಿನ ಸುಧಾರಣೆಗಳು ಆ ಭಾಗದ ಜನರಲ್ಲಿ ಹೊಸ ಜಾಗೃತಿಯನ್ನೇ ಉಂಟುಮಾಡಿದವು. ವೀರಶೈವ ಸಮಾಜಕ್ಕೆ ಈ ಮಹಾಶಯರು ಅನೇಕ ಮಹದುಪಕಾರಗಳನ್ನು ಮಾಡಿದರು. ಇವರ ಪವಿತ್ರವಾದ ಮತ್ತು ಸಾಹಸೋತ್ಸಾಹಗಳ ಜೀವನವು ಜನಾಂಗಕ್ಕೆ ಆದರ್ಶಪ್ರಾಯವಾದುದು.

ಶ್ರೀ. ಮಲ್ಲಪ್ಪನವರು ಕರ್ನಾಟಕ ಮತ್ತು ಮಹಾರಾಷ್ಟ್ರ ದೇಶಗಳ ಅನೇಕ ಸಾರ್ವಜನಿಕ ಕಾರ್ಯಗಳಿಗೆ ಉದಾರವಾದ ಧನ ಸಹಾಯವನ್ನು ಮಾಡಿ ಚಿರಸ್ಮರಣೀಯರಾಗಿದ್ದಾರೆ. ಆದುದರಿಂದ ಈಗಿನ ಸ್ಮಾರಕ ಸಮಿತಿಯಲ್ಲಿ ಬೇರೆ ಸ್ಥಳಗಳ ಅನೇಕ ಪ್ರಮುಖರೂ ಇದ್ದು ಅದು ಹೆಚ್ಚು ವ್ಯಾಪಕವಾದುದಾಗಿದ್ದಿದ್ದರೆ ಕರ್ನಾಟಕ ಮತ್ತು ಮಹಾರಾಷ್ಟ್ರಗಳ ಅನೇಕ ಸ್ಥಳಗಳಿಂದಲೂ ಧನಸೇಖರವಾಗಿ ಹೆಚ್ಚಿನ ಕಾರ್ಯಗಳಿಗೆ ಅನುಕೂಲವಾಗುತ್ತಿದ್ದಿತೆಂದು ನಮಗೆ ತೋರುತ್ತದೆ. ಸ್ಮಾರಕ ಸಮಿತಿಯವರು ಯೋಚಿಸಿರುವ ಎಲ್ಲ ಕಾರ್ಯಗಳೂ ಜರಗುವಂತೆ ಎಲ್ಲ ಕಡೆಯ ಧನಿಕ ಮಹಾಶಯರೂ ಮಲ್ಲಪ್ಪನವರಿಂದಾದ ಅನೇಕ ಮಹತ್ಕಾರ್ಯಗಳ ಕಡೆಗೆ ಲಕ್ಷಿಸಿ ತುಂಬಾ ಧನ ಸಹಾಯಮಾಡುವರೆಂದೇ ನಾವು ನಂಬಿದ್ದೇವೆ.

---

—ಪಂಡಿತ ಜವಾಹರಲಾಲರು ಬಡೋದೆಗೆ ತಾ. ೧೪ ನೆಯ ದಿನ ಆಗಮಿಸಲು ಅತ್ಯದ್ಭುತವಾದ ಮೆರವಣಿಗೆಯಾಯಿತು. ಪ್ರಚಂಡ ಸಭೆ ಮಳೆ ಬರುತ್ತಿರುವಾಗಲೇ ಜರುಗಿತು. ತಮಗೆ ಈ ನೋಟ ಚಿರಸ್ಮರಣೀಯವೆಂದು ಪಂಡಿತಜಿಯವರು ನುಡಿದರು.

—ರಂಗಪುರದ ಹತ್ತಿರ ಬಾಮನೇರ್ಚ ಎಂಬಲ್ಲಿ ಹಿಂದು-ಮುಸಲ್ಮಾನರ ದೊಂಬಿಯಾಯಿತು. ಮುಸಲ್ಮಾನರು ಕಾಳಿಕಾ ದೇವಿಯನ್ನು ಒಡೆದು ಗುಡಿಗೆ ಬೆಂಕಿಹಚ್ಚಿದರು. ಹಿಂದುಗಳು ಸರಕಾರದಲ್ಲಿ ಮೊರೆಯಿಟ್ಟಿದ್ದಾರೆ.

## ಪತ್ರಿಕೆಗಳು ಕೊಡಬೇಕಾದ ಶಿಕ್ಷಣ.

ಕಲಕತ್ತಾ ಪಟ್ಟಣದ ಅಮೃತ ಬಜಾರ್ ಎಂಬ ಸುಪ್ರಸಿದ್ಧ ಪತ್ರಿಕೆಯ ಸಂಪಾದಕರಾದ ಶ್ರೀ. ತುಷಾರಕಾಂತ ಘೋಷ ಎಂಬುವವರು ಅಲ್ಲಿಯ ತರುಣರ ಸಂಘದ ಪರಿಷತ್ತಿನ ಅಧ್ಯಕ್ಷರಾಗಿ ಮಾಡಿದ ಭಾಷಣದಲ್ಲಿ ಹೀಗೆ ಹೇಳಿದರು.—

"ಹಿಂದುಸ್ಥಾನದ ಬಹು ಸಂಖ್ಯಾಕರಾದ ಜನರು ಇನ್ನೂ ಸರಿಯಾದ ಶಿಕ್ಷಣವನ್ನು ಹೊಂದೇ ಇಲ್ಲ. ವರ್ತಮಾನ ಪತ್ರಿಕೆಗಳಲ್ಲಿ ಪ್ರಕಟವಾದ ಸಂಗತಿಗಳ ಮೇಲಿಂದಲೇ ಅವರು ರಾಜಕೀಯ ಸಂಗತಿಗಳನ್ನು ತಿಳಿದುಕೊಳ್ಳುವವರಾಗಿದ್ದಾರೆ. ಆದಕಾರಣ ಈ ದೇಶದ ಪತ್ರಿಕೆಗಳು ರಾಜಕೀಯ ಸಂಗತಿಗಳನ್ನು ತಿಳಿಸಬೇಕಾದ ಪ್ರಸಂಗವಿದೆ. ಹೀಗಿರುವಾಗ ಅವು ತಮ್ಮ ದೇಶ ಬಾಂಧವರಿಗೆ ರಾಜಕಾರಣದ ಸರಿಯಾದ ಜ್ಞಾನವನ್ನುಂಟುಮಾಡಿ ಕೊಡುವುದು ಅವುಗಳ ಕರ್ತವ್ಯವಾಗಿದೆ. ಹೀಗೆ ಅವು ಜನರಿಗೆ ರಾಜಕೀಯ ಶಿಕ್ಷಣವನ್ನು ಕೊಟ್ಟರೇನೇ ತಮ್ಮ ಜತಿಯಲ್ಲಿ ಅವರನ್ನೂ ಕರೆದುಕೊಂಡು ಹೋಗುವುದು ಶಕ್ಯ."

ಎಂದಮೇಲೆ ರಾಜಕಾರಣದ ಬೇರೆ ಬೇರೆ ಪಕ್ಷಗಳ ತತ್ವಗಳನ್ನೂ ಜನರ ಮುಂದಿಟ್ಟು ಅವುಗಳ ವಿಮರ್ಶೆಮಾಡಿ ಜನರು ಸ್ವತಂತ್ರ ವಿಚಾರಿಗಳಾಗುವಂತೆ ಮಾಡುವುದೇ ಕ್ಷೇಮಕರವೆಂದು ತೋರುವುದಿಲ್ಲವೆ?

---

## ವೀರಶೈವ ತತ್ವಕ್ಕೆ ವಿರೋಧವಾದ ಉಪದೇಶ.

ವೀರಶೈವರಿಗೆ ಪೂಜ್ಯವಾಗಿರತಕ್ಕ ಶ್ರೀ ಬಾಳೆಹಳ್ಳಿ ಪೀಠಕ್ಕೆ ಈಗಿನ ಸ್ವಾಮಿಗಳವರು ಅಧಿಕಾರಿಗಳಾಗಿ ಬಂದನಂತರ ವೀರಶೈವ ತತ್ವಕ್ಕೆ ವಿರೋಧವಾದ ವರ್ಣಗಳ ಕಲ್ಪನೆಯನ್ನು ಪ್ರಸಾರಮಾಡುತ್ತಾ ಭದ್ರಕಾಳಿ ಪೂಜೆಯನ್ನೂ ವೀರಶೈವರು ಪ್ರಾರಂಭಿಸುವಂತೆ ಪ್ರಯತ್ನಿ ಸುತ್ತಿದ್ದಾರೆಂದೂ ಇನ್ನೂ ಯಾವ ಯಾವ ದೇವರ ಬೆನ್ನು ಬೀಳುವಂತೆ ಮಾಡುವರೋ ನೋಡಬೇಕಾಗಿದೆಯೆಂದೂ ನಾವು ಎರಡು ವಾರಗಳ ಹಿಂದೆ ಹೇಳಿದ್ದೆವಷ್ಟೆ. ಕಳೆದ ೭ ನೆಯ ತಾರೀಖಿನ ದಿವಸ ಶಿವಮೊಗ್ಗಾದಲ್ಲಿ ಶ್ರೀ ಬಾಳೆಹಳ್ಳಿ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಚಿದರಿ ಮಠದ ಶ್ರೀ. ವೀರಭದ್ರ ಶಾಸ್ತ್ರಿಗಳವರು ಒಂದು ಭಾಷಣವನ್ನು ಮಾಡಿ ಅದರಲ್ಲಿ ಹೀಗೆ ಹೇಳಿದರೆಂದು ತಾ. ೧೫-೯-೩೭ ನೆಯ ತರುಣ ಕರ್ನಾಟಕ ಪತ್ರಿಕೆಯಲ್ಲಿ ಶಿವಮೊಗ್ಗೆಯ ಒಬ್ಬ ಸುದ್ದಿಗಾರರಿಂದ ಪ್ರಕಟವಾಗಿದೆ—

"ನೈಮಿತ್ತಿಕವಾಗಿ ತಮ್ಮ ಅಭಿಮಾನ ದೇವತೆಗಳಾದ ವೀರಭದ್ರ ಭದ್ರಕಾಳಿ, ರೇಣುಕಾದಿ ಮೂರ್ತಿಗಳನ್ನೂ ಸ್ವಯಂಭು ಜ್ಯೋತಿರ್ಲಿಂಗಗಳನ್ನೂ ಪೂಜಿಸಬಹುದು. ವಿವಾಹಾದಿಗಳಲ್ಲಿ ಗಣಪತಿ, ವಿಷ್ಣು, ಬ್ರಹ್ಮೇಂದ್ರಾದಿಗಳನ್ನೂ ಪೂಜಿಸಬಹುದು. ಪತಿವ್ರತೆಯು ತನ್ನ ಪತಿಯೊಡನೆ ಸಾಮರಸ್ಯವುಳ್ಳವಳಾಗಿ ಇತರ ಅತಿಥಿಗಳನ್ನು ಕೂಡಾ ಉಪಚರಿಸುವಂತೆ ಲಿಂಗದೇಹಿಯಾದ ವೀರಶೈವನು ಲಿಂಗಸಾಮರಸ್ಯವುಳ್ಳವನಾಗಿ ಇತರ ದೇವತೆಗಳನ್ನೂ ಪೂಜಿಸಬಹುದು. ವೀರಶೈವ ಸಮಾಜದ ಎಲ್ಲಾ ವರ್ಣದವರೂ ಮೋಕ್ಷಕ್ಕೆ ಅರ್ಹರಾಗಿದ್ದಾರೆ."

ಶ್ರೀ. ವೀರಭದ್ರ ಶಾಸ್ತ್ರಿಗಳವರು ಹೀಗೆ ಹೇಳಿದ್ದು ನಿಜವಾಗಿರುವ ಪಕ್ಷದಲ್ಲಿ ಈ ಉಪದೇಶವು ವೀರಶೈವ ತತ್ವಕ್ಕೆ ವಿರೋಧವಾದುದು. ಇದು ಶ್ರೀ. ಬಾಳೆಹಳ್ಳಿ ಸ್ವಾಮಿಗಳು ವೀರಶೈವರನ್ನು ಮತಾಂತರಗೊಳಿಸುವುದಕ್ಕಾಗಿ ಹಾಕಿದ ಮತ್ತೊಂದು ಬಲೆ.

ಶ್ರೀ. ವಾರದ ಅಪ್ಪಾಸಾಹೇಬರು ಪ್ರಕಟಗೊಳಿಸಿದ ಪುಸ್ತಕಗಳನ್ನು ಈ ವೀರಶೈವ ವಿಧ್ವಂಸಕ ಸಂಗಡದವರು ಬಹು ಸ್ತುತಿಸುತ್ತಿರುವುದುಂಟಷ್ಟೆ. ಆ ಪುಸ್ತಕಗಳಲ್ಲಿಯೇ ಒಂದಾದ ಸೂಕ್ಷ್ಮಾಗಮದ ೭ ನೆಯ ಪಟಲದಲ್ಲಿ ಶೈವ ಮತದ ನಾನಾ ಭೇದಗಳನ್ನು ಹೇಳಿದೆ. ಆಚಾರ ಭೇದದಿಂದ ಸಾಮಾನ್ಯ ಶೈವ, ಮಿಶ್ರಶೈವ, ಶುದ್ಧ ಶೈವ ಮತ್ತು ವೀರಶೈವಗಳೆಂಬ ನಾಲ್ಕು ಭೇದಗಳಿವೆಯೆಂದು ಅವುಗಳ ಆಚಾರಗಳನ್ನೂ ತಿಳಿಸಿದೆ. ಅವುಗಳ ಮೇಲಿಂದ ಶ್ರೀ. ವೀರಭದ್ರ ಶಾಸ್ತ್ರಿಗಳವರು ವೀರಶೈವರನ್ನು ಮಿಶ್ರ ಶೈವ ಮತಕ್ಕೆ ಕಳಿಸುವ ಉಪದೇಶ ಮಾಡಿದರೆಂದು ಈ ಕೆಳಗಿನ ಆಧಾರಗಳಿಂದಲೇ ಸ್ಪಷ್ಟವಾಗುತ್ತದೆ.

> ಶಿವಂ ವಿಷ್ಣುಂ ವಿಧಾತಾರಂ ಕುಮಾರಂ ಗಣನಾಯಕಂ|
> ಆದಿತ್ಯ ಮಂಬಿಕಾಂಚೈವ ಮಿಶ್ರೀ ಕೃತ್ಯ ಸಮಾರ್ಚನಂ|
> ಅನ್ಯ ಪೂಜಾ ಮಿಶ್ರ ತತ್ಪಾನ್ಮಿಶ್ರಶೈವ ಮುದೀರಿತಂ||

ಅರ್ಥ— ಶಿವ, ವಿಷ್ಣು, ಬ್ರಹ್ಮ, ಷಣ್ಮುಖ, ಗಣಪತಿ, ಆದಿತ್ಯ, ಅಂಬಿಕಾ, ಈ ಎಲ್ಲಾ ದೇವರನ್ನೂ ಪೂಜೆ ಮಾಡುತ್ತಾ ಇರುವ ಶೈವರು ಮಿಶ್ರ ಶೈವರು. ಏಕೆಂದರೆ, ಇವರ ಪೂಜೆಯು ಮಿಶ್ರವಾದುದಾಗಿದೆ.

ವೀರಶೈವನಾದರೋ ಲಿಂಗವೇ ಪತಿ, ತಾನೇ ಸತಿಯೆಂದು ತಿಳಿದು ಅನ್ಯ ದೇವರನ್ನು ಪೂಜಿಸದೆ ಕೇವಲ ಇಷ್ಟಲಿಂಗ ಪೂಜೆ ಧ್ಯಾನಗಳಲ್ಲಿ ಆಸಕ್ತನಾಗಿರಬೇಕು. ಅಂತೆಯೇ ಅದೇ ಆಗಮದಲ್ಲಿ ಈ ಪ್ರಕಾರ ವೀರಶೈವನ ಪೂಜೆಯನ್ನು ಹೇಳಿದೆ—

> ಸರ್ವಮನ್ಯತ್ಪರಿತ್ಯಜ್ಯ ತೃಣವದ್ದೇವತಾಂತರಂ |
> ಶೈವಲಿಂಗಂ ಸದಾಧ್ಯಾಯೇತ್ಸರ್ವಸಿದ್ಧಿಷು ಸಂಸ್ಥಿತಂ ||

ಅರ್ಥ— ಬೇರೆ ದೇವರುಗಳು ಹುಲ್ಲುಕಡ್ಡಿಯ ಹಾಗಿವೆಯೆಂದು ಅವುಗಳನ್ನೆಲ್ಲಾ ಬಿಟ್ಟು ಇಷ್ಟಲಿಂಗಧ್ಯಾನದಲ್ಲಿದ್ದರೇನೇ ಸಕಲ ಸಿದ್ಧಿಗಳು ಲಭಿಸುವವು.

> ದೇವನೊಬ್ಬ ನಾಮ ಹಲವು. ಪರಮಪತಿವ್ರತೆಗೆ ಗಂಡನೊಬ್ಬ. ಮತ್ತೊಂದಕ್ಕೆರಗಿದರೆ ಕಿವಿ ಮೂಗ ಕೊಯ್ವನು. ಹಲವು ದೈವದಂಜಲವ ತಿಂಬುವರ ನೇನೆಂಬೆ ಕೂಡಲ ಸಂಗಮದೇವ?

ಎಂದು ಬಸವಣ್ಣನವರು ಹೇಳಿರುವ ದಿವ್ಯ ವಚನವಾದರೋ ವೀರಶೈವರ ಪೂಜೆಯ ಮುಖ್ಯ ಸಿದ್ಧಾಂತವೇ ಆಗಿದೆ. ವೀರಶೈವ ಆಚಾರಶೀಲರಲ್ಲಿ ಅನೇಕರು ಇದೇ ಪ್ರಕಾರ ಆಚರಿಸುತ್ತಲೂ ಇದ್ದಾರೆ. ಹೀಗಿರುವಾಗ ವೀರಶೈವರಿಗೆ ಗುರುಗಳೆಂದು ಹೇಳಿಕೊಳ್ಳುತ್ತಿರುವ ಶ್ರೀ ಬಾಳೆಹಳ್ಳಿ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ವೀರಶೈವ ಪಂಡಿತರೆಂದು ತಿಳಿಯಲ್ಪಡುತ್ತಿರುವ ಶ್ರೀ. ವೀರಭದ್ರ ಶಾಸ್ತ್ರಿಗಳವರು ವೀರಶೈವ ತತ್ವಕ್ಕೆ ವಿರುದ್ಧವಾದ ಮಿಶ್ರ ಶೈವರ ಪೂಜಾ ವಿಧಿಯ ಬೋಧಿಸಬಹುದೆ? ಶಾಸ್ತ್ರಿಗಳವರು ತಮ್ಮ ಭಾಷಣದಲ್ಲಿ ವೀರಶೈವರಲ್ಲಿ ವರ್ಣಗಳಿವೆಯೆಂಬ ಅಭಿಪ್ರಾಯವನ್ನೂ ವ್ಯಕ್ತಮಾಡಿದ್ದಾರಷ್ಟೆ.

ಈ ಎಲ್ಲ ಪ್ರಬಲ ಪ್ರಮಾಣಗಳಿಂದಲಾದರೂ ಶ್ರೀ ಬಾಳೆಹಳ್ಳಿ ಸ್ವಾಮಿಗಳವರ ಆಧಿಪತ್ಯದಲ್ಲಿ ವೀರಶೈವ ವಿಧ್ವಂಸಕರ ಒಂದು ಪ್ರಚಂಡ ಚಟುವಟಿಕೆಯು ಸಂಘಟಿತವಾಗಿಯೇ ನಡೆಯುತ್ತಲಿದೆಯೆಂದು ನಾವು ಈ ಮುಂಚೆ ಅನೇಕಸಾರೆ ಹೇಳಿರುವುದು ನಿಜವೆಂದೇ ಅವರ ಅಂಧ ಅನುಯಾಯಿಗಳಿಗೆ ಗೊತ್ತಾಗುವುದೆ?

---

—ಕಲಕತ್ತಾದಲ್ಲಿ ತಾ. ೨೭ ನೆಯ ದಿವಸ ಕಾಂಗ್ರೆಸ್ ವರ್ಕಿಂಗ್ ಕಮಿಟಿಯು, ತಾ. ೩೦ ನೆಯ ದಿವಸ ಆಲ್ ಇಂಡಿಯಾ ಕಾಂಗ್ರೆಸ್ ಕಮಿಟಿಯು ಕೂಡುವವು.

# ಮಹಾ ವಿಭೂತಿಗಳ ಮಹತ್ವದ ಸಮಾಗಮ.



"ಮಹಾ ಸ್ವಾಮಿಗಳವರು ಮಾಡಿರತಕ್ಕ ಕಾರ್ಯಗಳು ಮೈಸೂರು ಸಂಸ್ಥಾನಕ್ಕೇ ಕೀರ್ತಿಯನ್ನು ತರತಕ್ಕವುಗಳು ಆಗಿವೆ."

—ಶ್ರೀ ಕೃಷ್ಣರಾಜ ಒಡೆಯರವರು.



ಈ ಮುಂಚೆ ಗೊತ್ತಾದಂತೆ ತಾರೀಖು ೧೪-೯-೩೭ ನೆಯ ದಿವಸ ಪ್ರಾತಃಕಾಲ ೯| ಗಂಟೆಗೆ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರಘರಾಜೇಂದ್ರ ಮಹಾಸ್ವಾಮಿಗಳವರ ಚಿತ್ರದುರ್ಗದ ಬೃಹನ್ಮಠಕ್ಕೆ ಮೈಸೂರು ಶ್ರೀಮನ್ಮಹಾರಾಜ ಕೃಷ್ಣ ರಾಜೇಂದ್ರ ಒಡೆಯರ್ ಬಹದ್ದೂರ್‌ರವರು ದಿವಾನ ಸಾಹೇಬರೇ ಮೊದಲಾದವರೊಂದಿಗೆ ಆಗಮಿಸಿದರು. ಆಗ ಈ ಭವ್ಯ ಮಠವು ತಳಿರು ತೋರಣಾದಿಗಳಿಂದ ಬಹು ಮನೋಹರವಾಗಿ ಶೃಂಗರಿಸಲ್ಪಟ್ಟಿದ್ದಿತು. ಶ್ರೀಮಜ್ಜಗದ್ಗುರುಗಳ ಮತ್ತು ಶ್ರೀಮನ್ಮಹಾರಾಜರ ಈ ಅಪೂರ್ವ ಶುಭ ಸಮಾಗಮವನ್ನು ನೋಡಿ ಸಂತೋಷಿಸಬೇಕೆಂದು ಸುತ್ತಲಿನ ಪ್ರಾಂತಗಳಿಂದ ಅಸಂಖ್ಯ ಜನ ಸಮೂಹವು ಬಂದು ಮಠದ ಸುತ್ತಲಿನ ಪ್ರದೇಶವನ್ನೆಲ್ಲಾ ವ್ಯಾಪಿಸಿದ್ದಿತು.

ಶ್ರೀಮನ್ಮಹಾರಾಜರವರು ಮಠ ಪ್ರದೇಶಕ್ಕೆ ಆಗಮಿಸಿದೊಡನೆ ಸಂತೋಷಾರ್ಥವಾದ ೩೧ ಗುಂಡುಗಳು ಹಾರಿಸಲ್ಪಟ್ಟವು. ಮಠದ ಏಜಂಟರೂ ಅನೇಕ ಸ್ಥಳಗಳ ಪ್ರಮುಖ ಭಕ್ತರೂ ಮಠದ ಸುವರ್ಣ ಪಲ್ಲಕ್ಕಿ ಮೊದಲಾದ ಸಕಲ ಬಿರುದಾವಳಿಗಳೊಂದಿಗೆ ಮಹಾರಾಜರವರನ್ನು ಎದುರ್ಗೊಂಡು ಮಠಕ್ಕೆ ಮೋಟಾರಿನಲ್ಲಿ ಮಹಾವೈಭವದ ಮೆರವಣಿಗೆಯಿಂದ ಕರೆತಂದರು. ಶ್ರೀಮಜ್ಜಗದ್ಗುರುಗಳವರು ಮಠದ ಮಹಾದ್ವಾರದಲ್ಲಿ ಶ್ರೀಮನ್ಮಹಾರಾಜರನ್ನು ಒಳಗೆ ಬರಮಾಡಿಕೊಂಡನಂತರ ಶ್ರೀ ಕರ್ತೃ ಗದ್ದುಗೆಯ ದರ್ಶನ ಮಂಗಲಾರ್ತಿಗಳನ್ನು ಮಹಾರಾಜರವರು ಹೊಂದಿ ಶ್ರೀ ಜಗದ್ಗುರುಗಳೊಂದಿಗೆ ಶ್ರೀ ಜಯದೇವ ಭವನಕ್ಕೆ ದಯಮಾಡಿಸಿದರು.

ಆ ಮೇಲೆ ತಾವು ಮುಹೂರ್ತಗೊಳ್ಳಬೇಕೆಂದು ಮಹಾರಾಜರವರು ಜಗದ್ಗುರುಗಳಿಗೆ ಅರಿಕೆಮಾಡಿಕೊಂಡ ಪ್ರಕಾರ ಜಗದ್ಗುರುಗಳವರು ಮುಹೂರ್ತಗೊಳ್ಳಲು ಮಹಾ ಸನ್ನಿಧಿಗೆ ಅರ್ಪಿಸಲು ತಂದಿದ್ದ ಅಮೋಘವಾದ ವಸ್ತ್ರಾದಿಗಳನ್ನೂ ಕಾಣಿಕೆಯನ್ನೂ ಅರ್ಪಿಸಿ ಮಹಾ ಪಾದಕ್ಕೆ ನಮಸ್ಕರಿಸಿದರು. ಅನಂತರ ಮಹಾರಾಜರವರು ಮಹಾ ಸ್ವಾಮಿಗಳವರ ಇಷ್ಟದಂತೆ ಮುಹೂರ್ತಮಾಡಲು ಶ್ರೀ ಜಗದ್ಗುರುಗಳವರು ಶ್ರೀಮನ್ಮಹಾರಾಜರವರಿಗೆ ಭಸ್ಮ ರುದ್ರಾಕ್ಷಿ ಮಡಿಗಳನ್ನು ಆಶೀರ್ವದಿಸಿದರು. ಮಹಾರಾಜರು ಭಕ್ತಿ ಪುರಸ್ಸರ ಸ್ವೀಕರಿಸಿ ಭಸ್ಮವನ್ನು ನೇತ್ರಕ್ಕೆ ಸ್ಪರ್ಶಗೊಳಿಸಿಕೊಂಡರು.

ಅನಂತರ ಉಭಯ ಮಹಾ ವಿಭೂತಿಗಳಲ್ಲಿ ಕುಶಲ ಸಂಭಾಷಣೆ ಜರುಗಿತು. ತಾವು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಸಂಚರಿಸಿ ಆರೋಗ್ಯವನ್ನು ಹೊಂದಿದುದು ನಮಗೆ ಅತ್ಯಂತ ಆನಂದಕರವಾದ ಸಂಗತಿಯೆಂದು ಜಗದ್ಗುರುಗಳವರು ಅಪ್ಪಣೆ ಕೊಡಿಸಿದರು. ಅದೆಲ್ಲಾ ತಮ್ಮಂತಹ ಮಹಿಮರ ಕೃಪೆಯಿಂದೇ ಮಹಾರಾಜರವರೂ ಅಪ್ಪಣೆ ಕೊಡಿಸಿದರು. ಆಮೇಲೆ ಜಗದ್ಗುರುಗಳವರು ವೀರಶೈವ ಮತ ಸಿದ್ಧಾಂತವನ್ನು ಸ್ವಲ್ಪ ತಿಳುಹಿಸಿ ಬಸವಾದಿ ಶಿವಶರಣರ ವಚನಗಳು ಉಪನಿಷತ್ತುಗಳಿಗೆ ಸಮಾನವಾಗಿವೆಯೆಂದು ಬಸವಣ್ಣನವರ ಒಂದೆರಡು ವಚನಗಳನ್ನು ಅಪ್ಪಣೆ ಕೊಡಿಸಿ ಆ ವಚನ ಗ್ರಂಥಗಳನ್ನು ಮಹಾರಾಜರವರ ಅವಲೋಕನಾರ್ಥವಾಗಿ ಕೊಡಲು ಮಹಾರಾಜರು ಸಂತೋಷ ಚಿತ್ತದಿಂದ ಸ್ವೀಕರಿಸಿದರು.

ಆ ಬಳಿಕ ಮಹಾರಾಜರವರು ಶ್ರೀ ಜಗದ್ಗುರುಗಳನ್ನುದ್ದೇಶಿಸಿ "ಮಹಾ ಸ್ವಾಮಿಗಳವರು ಮಾಡಿರುವ ಕಾರ್ಯಗಳು ಮೈಸೂರು ಸಂಸ್ಥಾನಕ್ಕೇ ಕೀರ್ತಿಯನ್ನು ತರತಕ್ಕವುಗಳಾಗಿವೆ." ಎಂದು ತಿಳಿಸಿದರು. ಅನಂತರ ಮಠದ ಕೆಲವು ಮುಖ್ಯ ಭಾಗಗಳನ್ನು ಮಹಾರಾಜರವರು ಅವಲೋಕಿಸಿ ಸಂತೋಷಪಟ್ಟು ತೆರಳಿದರು. ಆ ಕಾಲದಲ್ಲಿ ಸೇರಿದ್ದ ಅಸಂಖ್ಯ ಜನಗಳು ಜಯಘೋಷವನ್ನು ಮಾಡಿ ತಮ್ಮ ಆನಂದವನ್ನು ಪ್ರದರ್ಶಿಸಿದರು.

ಶ್ರೀಮನ್ಮಹಾರಾಜರವರ ಈ ಶುಭಾಗಮನದ ಸ್ಮರಣಾರ್ಥವಾಗಿ ಶ್ರೀ ಜಗದ್ಗುರು ಮಹಾ ಸ್ವಾಮಿಗಳವರು ಸಾರ್ವಜನಿಕ ಕಾರ್ಯಗಳ ಪ್ರೀತ್ಯರ್ಥವಾಗಿ ಸರಕಾರದ ಕಡೆಗೆ ಹತ್ತು ಸಾವಿರ ರೂ. ಗಳನ್ನು ಕೊಟ್ಟರೆಂದು ತಿಳಿದಿದೆ.

ಶ್ರೀ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳವರ ಮತ್ತು ಜಗದ್ವಂದ್ಯ ಮಹಾತ್ಮಾ ಗಾಂಧಿಯವರ ಸಮಾಗಮವು ಹೇಗೆ ವೀರಶೈವ ಸಮಾಜಕ್ಕೆ ಒಂದು ಭೂಷಣಪ್ರದವಾದ ಪ್ರಸಂಗವಾಗಿದ್ದಿತೋ ಹಾಗೆಯೇ ಶ್ರೀ ಜಗದ್ಗುರುಗಳವರ ಮತ್ತು ಮಹಾರಾಜರವರ ಈ ಮಹತ್ವದ ಸಮಾಗಮವೂ ವೀರಶೈವ ಸಮಾಜಕ್ಕೂ ನಮ್ಮ ಮೈಸೂರು ದೇಶಕ್ಕೂ ಎಷ್ಟೋ ಫಲಪ್ರಯೋಜನಗಳನ್ನುಂಟು ಮಾಡುವುದಾಗಿದೆಯೆಂಬ ನಮ್ಮ ನಿರೀಕ್ಷಣೆಯು ಈಗಾಗಲೇ ನಿಜವಾಗಿ ತೋರಲಾರಂಭವಾಯಿತೆಂದು ಬಹು ಜನಗಳು ಮಾತನಾಡುತ್ತ ಪರಮಸಂತೋಷಪಟ್ಟರು.

ಓರ್ವ ಸುದ್ದಿಗಾರ.



ಶಾ. ಶ. ೧೮೫೯ ನೆಯ ಭಾದ್ರಪದ ಶು|| ೧೫ ಸೋಮವಾರ.

# ಬಲಹೀನರ ಬವಣೆ!

ಈ ದಿವಸವು ಅಖಿಲ ಹಿಂದುಸ್ಥಾನದಲ್ಲಿ ಚೀನ ದೇಶದ ದಿನವೆಂದು ಆಚರಿಸಲ್ಪಡಬೇಕಾಗಿ ರಾಷ್ಟ್ರೀಯ ಸಭಾಧ್ಯಕ್ಷರಾದ ಪಂ. ಜವಾಹರಲಾಲರು ರಾಷ್ಟ್ರಕ್ಕೆ ವಿಜ್ಞಾಪಿಸಿಕೊಂಡಿದ್ದಾರೆ. ಆ ಪ್ರಕಾರ ಅನೇಕ ಸ್ಥಳಗಳಲ್ಲಿ ಈ ದಿನವು ಚೀನ ದೇಶದ ದಿನವೆಂದೇ ಆಚರಿಸಲ್ಪಡುವುದು. ಜಪಾನ ದೇಶವು ಅನ್ಯಾಯವಾಗಿ ಚೀನ ದೇಶವನ್ನು ಆಕ್ರಮಿಸಿಕೊಳ್ಳುತ್ತಾ ಅನೇಕ ಚೀನಿ ಹೆಣ್ಣುಮಕ್ಕಳ ಮೇಲೂ, ಹುಡುಗರ ಮೇಲೂ, ನಿರಾಯುಧರಾದ ನಾಗರಿಕರ ಮೇಲೂ ಬಾಂಬುಗಳನ್ನು ಎಸೆದು ಮಾಡುತ್ತಿರುವ ಬಹು ನಿಂದ್ಯ ಕೃತ್ಯಗಳನ್ನು ನಿಷೇಧಿಸುವುದೇ ಈ ಚೀನ ದಿನದ ಉದ್ದೇಶವಾಗಿದೆ.

ಹಿಂದುಸ್ಥಾನದವರಾದ ನಾವು ಈ ಮುಂಚೆ ಅಬಸೀನಿಯಾ ದಿನವನ್ನಾಚರಿಸಿದೆವು. ಆ ಮೇಲೆ ಪ್ಯಾಲಿಸ್ಟಾಯಿನ್ ದಿನವನ್ನಾಚರಿಸಿದೆವು. ಈ ದಿನ ಚೀನದಿನವನ್ನಾಚರಿಸುತ್ತೇವೆ. ಇನ್ನು ಮೇಲೆ ಮತ್ತೆ ಯಾವ ದೇಶದ ದಿನವನ್ನಾಚರಿಸುವ ಪ್ರಸಂಗಬರುತ್ತದೆಯೊ? ನಾವೇನೋ ಇಂತಹ ಅನೇಕ ಬಲಹೀನ ದೇಶಗಳ ದಿನವನ್ನಾಚರಿಸುತ್ತಿದ್ದೇವೆ. ಆದರೆ ಹಿಂದುಸ್ಥಾನದ ದಿನವನ್ನು ಪ್ರಪಂಚದ ಬೇರೆ ಯಾವ ರಾಷ್ಟ್ರಗಳಾದರೂ ಆಚರಿಸುತ್ತಲಿವೆಯೆ? ಇಲ್ಲವೇ ಇಲ್ಲ. ಏಕೆಂದರೆ, ಹಿಂದುಸ್ಥಾನಕ್ಕಿಂತ ಬಲಹೀನವಾದ ದೇಶವು ಪ್ರಪಂಚದಲ್ಲಿ ಬೇರೊಂದು ಇಲ್ಲವೇ ಇಲ್ಲ.

ಬಲಹೀನರಾದ ನಮ್ಮ ನಿಷೇಧದಲ್ಲಿ ಎಷ್ಟು ಬಲವಿರಬಹುದು? ಅದು ಪ್ರಬಲರಿಗೂ ಗೊತ್ತು. ನಮಗೂ ಗೊತ್ತು. ಹೀಗಿದ್ದರೂ ನಾವು ಬಲಹೀನರಿಗೆ ಇಂಥ ಬವಣೆ ಬಂದಾಗ ನಿಮ್ಮ ವಿಷಯದಲ್ಲಿ ನಮಗೂ ದುಃಖವಾಗುತ್ತದೆಂದೂ ಸಹಾನುಭೂತಿಯಿದೆಯೆಂದೂ ಹೇಳುವುದರಿಂದ ನಮ್ಮ ಮನಸ್ಸಿಗೆ ಒಂದು ವಿಧವಾದ ಸಮಾಧಾನವಾಗುವುದಲ್ಲದೆ ಬಲಹೀನರಿಗಿರುವ ನೈತಿಕ ಬಲಕ್ಕೆ ಎಷ್ಟೋ ಕಳೆ ಬರುತ್ತದೆ. ಅಂತೆಯೇ ಈ ದಿನ ಚೀನದ ದಿನವೆಂದು ನಾವು ಆಚರಿಸುವುದು.

ಸಾಮ್ರಾಜ್ಯದ ದುರಾಶೆಯು ಪಾಶ್ಚಾತ್ಯರಲ್ಲಿದ್ದರೇನೇ ಅದು ಅನರ್ಥಕರವೆಂದಲ್ಲ. ಪೌರ್ವಾತ್ಯರಲ್ಲಿದ್ದರೂ ಅಪಾಯಕರವೇ ಸರಿ. ಇದಕ್ಕೆ ಜಪಾನದ ಈಗಿನ ನಿಂದ್ಯ ಕಾರ್ಯಗಳೇ ದೃಷ್ಟಾಂತವಾಗಿವೆ ಪ್ರಬಲ ರಾಷ್ಟ್ರಗಳು ನಿರ್ಬಲ ರಾಷ್ಟ್ರಗಳನ್ನು ನುಂಗುತ್ತ ಮತ್ತೂ ಬಲಪಡುತ್ತಲೇ ಹೋಗುತ್ತಿರುವ ಈಗಿನ ಶೋಚನೀಯ ಸ್ಥಿತಿಯನ್ನು ನೋಡಿದರೆ ಬಲಹೀನರಿಗೆ ಇನ್ನೂ ಎಂತೆಂತಹ ಬವಣೆಗಳು ಬರುತ್ತವೋ ತಿಳಿಯದು. ಪ್ರಪಂಚದ ನಿರ್ಬಲ ರಾಷ್ಟ್ರಗಳ ಸಂರಕ್ಷಣೆಗಾಗಿ ಏರ್ಪಟ್ಟ ರಾಷ್ಟ್ರ ಸಂಘವು ಇಟಲಿಯು ಅಬಸೀನಿಯಾ ರಾಷ್ಟ್ರವನ್ನು ನುಂಗುತ್ತಿದ್ದಾಗ ಏನು ಮಾಡಿತು?

ರಾಷ್ಟ್ರ ಸಂಘವೆಂದರೆ ತೋರಿಕೆಗಾಗಿ ಇರುವ ಬೆದರು ಗೊಂಬೆಯೆಂದೇ ಪುಂಡ ರಾಷ್ಟ್ರಗಳಿಗೆ ಗೊತ್ತಾಗಿದೆ. ಅಂತೆಯೇ ಅವು ಬಲವು ಸಿದ್ಧವಾದೊಡನೆ ಬಲಹೀನ ರಾಷ್ಟ್ರಗಳನ್ನು ನುಂಗಲು ಪ್ರಾರಂಭಿಸುತ್ತವೆ. ಅಬಸೀನಿಯಾ ದೇಶವು ರಾಷ್ಟ್ರ ಸಂಘಕ್ಕೆ ಮೊರೆಯಿಟ್ಟಂತೆಯೇ ಈಗ ಚೀನ ರಾಷ್ಟ್ರವೂ ಇಟ್ಟಿದೆ. ಅದರ ಫಲಿತಾಂಶವೂ ತಿಳಿದ ಮಾತೆ.

ಜಪಾನ ದೇಶವು ದಿನೆ ದಿನೆ ತನ್ನ ಆಕ್ರಮಣವನ್ನು ಹೆಚ್ಚಿಸುತ್ತಾ ಇದೆ. ಅದು ಪಾಶ್ಚಾತ್ಯ ಯುದ್ಧಕಲೆಯ ಎಲ್ಲ ಘೋರ ರೀತಿಗಳನ್ನೂ ಕಲಿತಿದೆ. ಈ ವರೆಗೆ ೩೦ ಸಾವಿರ ಚೀನಿಗಳನ್ನು ಕೊಂದು ೨೦ ಸಾವಿರ ಜನಗಳನ್ನು ಗಾಯಗೊಳಿಸಿರುವುದಾಗಿ ಅದರ ಊಹೆ. ಜಪಾನದ ೧೩ ಸಾವಿರ ಸೈನಿಕರು ಮೃತಪಟ್ಟಿದ್ದಾರಂತೆ. ನಿಜಸ್ಥಿತಿಯು ಎಷ್ಟರಮಟ್ಟಿಗಿದೆಯೋ? ಅಂತು, ಜಪಾನವೇನೋ ಚೀನದ ಉತ್ತರ ಭಾಗವನ್ನು ಅಷ್ಟಷ್ಟೇ ನುಂಗುತ್ತಾ ಚೀನ ಸೈನ್ಯವನ್ನು ಹೆಚ್ಚಾಗಿ ನಾಶಗೊಳಿಸಿರುವುದರಲ್ಲೇನೂ ಸಂದೇಹವಿಲ್ಲ.

## ಹಿಂದುಸ್ಥಾನವು ಲಕ್ಷಿಸುವುದೇಕೆ ?

ಜಪಾನದ ಈ ಆಕ್ರಮಣದ ಕಡೆಗೆ ಹಿಂದುಸ್ಥಾನವು ಭೂತದಯೆಯ ದೃಷ್ಟಿಯಿಂದಲೇ ನೋಡಿದರೆ ಸಾಲದು. ಅದರ ದುರಾಶೆಯು ಸಫಲವಾಗುತ್ತಾ ಬಂದರೆ ತನಗೂ ಅದು ಅನರ್ಥಕಾರಿಯಾಗಿಯೇ ಪರಿಣಮಿಸುವದೆಂಬ ತಿಳುವಳಿಕೆಯಿಂದಲೂ ಹಿಂದುಸ್ಥಾನವು ಜಪಾನಿನ ಆಕ್ರಮಣದ ಕಡೆಗೆ ನೋಡಬೇಕು. ಹಿಂದುಸ್ಥಾನವು ಬಲಹೀನ ರಾಷ್ಟ್ರವೆಂದು ಪ್ರಪಂಚಕ್ಕೇನೇ ಗೊತ್ತಿದೆಯಷ್ಟೆ. ಅದರಂತೆಯೇ ಇದು ಯಾರ ಕೈಯಲ್ಲಿರುತ್ತದೆಯೋ ಅವರು ಪ್ರಪಂಚದಲ್ಲಿಯೇ ಹೆಚ್ಚಿನವರಾಗಿರುತ್ತಾರೆಂಬುದೂ ತಿಳಿದ ಸಂಗತಿಯೇ ಆಗಿದೆ. ಆದುದರಿಂದ ಅದರ ಕಣ್ಣು ಇದರ ಮೇಲೂ ಬೀಳುವುದು ಸ್ವಾಭಾವಿಕ.

ಆರ್ಥಿಕ ದೃಷ್ಟಿಯಿಂದ ನೋಡಿದರೆ ಉತ್ತರ ಚೀನವು ಅದರ ಸ್ವಾಧೀನವಾದರೆ ತನಗೆ ಬೇಕಾಗುವ ಹತ್ತಿ ಮೊದಲಾದ ಪದಾರ್ಥಗಳನ್ನು ಅದು ಅಲ್ಲಿಯೇ ಹುಟ್ಟಿಸುವುದು. ಆಗ ಹಿಂದುಸ್ಥಾನಕ್ಕೆ ಒಂದು ದೊಡ್ಡ ಗಿರಾಕಿಯೇ ಇಲ್ಲದಂತಾಗುವುದೂ ಸ್ವಾಭಾವಿಕ. ಹಾಗಾದರೆ ಹಿಂದುಸ್ಥಾನಕ್ಕೆ ಒಂದು ದೊಡ್ಡ ನಷ್ಟವೇ ಸರಿ.

ಹೀಗೆ ಜಪಾನವು ಈಗ ನಡೆಸಿರುವ ಆಕ್ರಮಣವು ಹಿಂದುಸ್ಥಾನಕ್ಕೂ ಅಹಿತಕರವಾದುದಾಗಿಯೇ ಇದೆ. ಆದರೆ ಅದನ್ನು ತಡೆಯುವ ಬಲವು ಮಾತ್ರ ಇದರಲ್ಲಿಲ್ಲ. ಈ ಯುದ್ಧವು ಮತ್ತೊಂದು ಮಹಾ ಯುದ್ಧಕ್ಕೆ ಕಾರಣವಾಗುವುದೆಂದೂ ಆಗ ನಿರಾಯಾಸವಾಗಿ ಹಿಂದುಸ್ಥಾನಕ್ಕೆ ಸ್ವರಾಜ್ಯ ದೊರೆಯುವುದೆಂದೂ ಕೆಲವರ ಯೋಚನೆ. ನೆರೆಮನೆಗೆ ಬೆಂಕಿ ಹತ್ತಿದರೆ ನಮ್ಮ ಎಣ್ಣೆ ಸುಡದೆ ನಮಗೆ ಬೆಳಕು ದೊರೆಯುತ್ತದೆಂದು ಯೋಚಿಸಿದಂತೆಯೇ ಈ ಯೋಚನೆಯು. ಆದುದರಿಂದ ಜಪಾನದ ಈ ಆಕ್ರಮಣವು ನೈತಿಕ ದೃಷ್ಟಿಯಿಂದಲೂ ಹಿಂದುಸ್ಥಾನದ ಹಿತ ದೃಷ್ಟಿಯಿಂದಲೂ

ತುಂಬಾ ನಿಷಿದ್ಧವಾದುದೂ ಬಲಹೀನರ ಬವಣೆಯನ್ನು ಹೆಚ್ಚಿಸ ತಕ್ಕುದೂ ಆಗಿರುವುದರಿಂದ ಇದು ಜಾಗ್ರತಿ ನಿಲ್ಲಲೆಂದೇ ನಾವು ಹಾರೈಸುತ್ತೇವೆ.

## ಇದು ಅನುಕೂಲ ಕಾಲ.

ಯಾವ ಕೆಲಸವನ್ನಾದರೂ ಹದವರಿತು ಮಾಡಿದರೆ ಸುಲಭ ಸಾಧ್ಯವಷ್ಟೆ. ಕರ್ನಾಟಕ ಏಕೀಕರಣದ ಕಾರ್ಯಕ್ಕೆ ಇದು ಒಳ್ಳೆಯ ಸಮಯ. ಡಾ. ಯು. ರಾಮರಾಯರಂತಹ ವೀರ ಕನ್ನಡಿಗರು ಕರ್ನಾಟಕದ ಏಕೀಕರಣದ ಕಾರ್ಯಕ್ಕೆ ಮುಂದೆ ನಿಂತು ಎಲ್ಲರನ್ನೂ ಕರೆಯುತ್ತಿದ್ದಾರೆ. ಮುಂಬೈ ಮತ್ತು ಮದ್ರಾಸ್ ಪ್ರಾಂತಗಳು ಕಾಂಗ್ರೆಸ್ ರಾಜ್ಯಕ್ಕೆ ಒಳಪಟ್ಟಿವೆ. ಮುಖ್ಯ ಮಂತ್ರಿಗಳು ಕನ್ನಡದ ಅಭಿಮಾನಿಗಳೂ ಇದ್ದಾರೆ. ಮರಾಠಿಗರ ಮುಂದಾಳುಗಳಾದ ಶ್ರೀ. ನ. ಚಿ. ಕೇಳಕರರಂತಹವರೂ ಕರ್ನಾಟಕ ಏಕೀಕರಣಕ್ಕೆ ಸಹಾನುಭೂತಿಯುಳ್ಳವರಾಗಿದ್ದಾರೆ.

ಈಗಿನ ಅಸೆಂಬ್ಲಿಯಲ್ಲಿ ವಿರೋಧ ಪಕ್ಷದ ಪ್ರಮುಖರಾದ ಬ್ಯಾ. ಜಮನಾದಾಸರಂತೂ ಕರ್ನಾಟಕ ಏಕೀಕರಣಕ್ಕೆ ತಾವು ತುಂಬಾ ನೆರವಾಗುವೆವೆಂದೂ ಬಂಗಾಲ ವಿಭಜನೆಗಿಂತಲೂ ಕರ್ನಾಟಕದ ಈಗಿನ ವಿಭಜನೆಯು ಅಹಿತಕರವಾದುದಾಗಿದೆಯೆಂದೂ ಹೇಳಿದ್ದಾರೆ.

ಈ ಪ್ರಕಾರ ಅನುಕೂಲವಾದ ಗಾಳಿಯೇನೋ ಬೀಸುತ್ತಿದೆ. ಎಂದಮೇಲೆ ಈಗಲೇ ಕಾರ್ಯ ಸಾಧಿಸಿಕೊಳ್ಳಬೇಕಾದುದು ಕನ್ನಡಿಗರ ಕರ್ತವ್ಯವಲ್ಲವೆ? ಮೊದಲು ಬ್ರಿಟಿಶ್ ಕರ್ನಾಟಕವಾದರೂ ಒಂದಾಗಲಿ. ಅದಕ್ಕಾಗಿಯಾದರೂ ಪ್ರಚಂಡ ಚಟುವಟಿಕೆಯು ಈಗ ಪ್ರಾರಂಭವಾಗಲಿ. ಈಗ ಇಷ್ಟೆಲ್ಲಾ ಅನುಕೂಲವಿದ್ದರೂ ನಾವೇ ಹೆಚ್ಚಾದ ಚಟುವಟಿಕೆಯನ್ನು ನಡೆಯಿಸದಿದ್ದರೆ ಈ ಕಾರ್ಯ ಸಾಧ್ಯವಿಲ್ಲ. ಆದುದರಿಂದ ಕರ್ನಾಟಕ ಏಕೀಕರಣ ಸಂಬಂಧವಾಗಿ ನಾಡಿನಲ್ಲಿ ವಿಶೇಷವಾದ ಜಾಗೃತಿಯನ್ನುಂಟುಮಾಡಿ ಸರಕಾರವು ಕೂಡಲೇ ಇತ್ತ ಲಕ್ಷಿಸುವಂತೆ ಮಾಡಬೇಕು. ಏಕೆಂದರೆ, ಇದು ಅನುಕೂಲ ಕಾಲ.

## ಶ್ರಾವಣ ಮಾಸದ ಸಮಾರಂಭ.

ಶ್ರಾವಣ ಮಾಸದಲ್ಲಿ ಬಹು ಕಡೆ ಪುರಾಣ ಪ್ರವಚನಗಳು ವೀರಶೈವ ಮಹಾ ಜನರಿಂದ ನಡೆಯಿಸಲ್ಪಡುತ್ತಲಿವೆಯಷ್ಟೆ. ಆದರೆ ಅವು ಕೇವಲ ಬೋಧಮಾತ್ರದಲ್ಲಿಯೇ ಮುಕ್ತಾಯವಾಗದೆ ವೀರಶೈವ ತತ್ವಾವಲಂಬಿಗಳ ಸಂಖ್ಯೆಯನ್ನು ಹೆಚ್ಚಿಸಲಿಕ್ಕೂ ಕಾರಣವಾಗಬೇಕಾದುದು ಅಗತ್ಯ. ಅಂತೆಯೇ ಶ್ರಾವಣ ಮಾಸಾಂತ್ಯದಲ್ಲಿ ಪುರಾಣ ಪ್ರವಚನಗಳ ಸಮಾಪ್ತಿಯ ಕಾಲಕ್ಕೆ ವೀರಶೈವ ಏಕೀಕರಣ, ಲಿಂಗಧಾರಣ, ಮೊದಲಾದ ವಿಧಾಯಕ ಕಾರ್ಯಗಳಾಗಬೇಕೆಂದು ನಾವು ಈ ಮುಂಚೆ ಅನೇಕಸಾರೆ ವಿಜ್ಞಾಪಿಸಿಕೊಂಡಿದ್ದೇವೆ.

ಈ ಸಾರೆ ಶ್ರಾವಣಮಾಸದಲ್ಲಿ ನಾಲ್ಕು ಕಡೆ ಇಂತಹ ಮಹತ್ಕಾರ್ಯಗಳು ಜರುಗಿದುದನ್ನು ನಾವು ಕಳೆದ ವಾರ ಮತ್ತು ಈ ವಾರ ಪತ್ರಿಕೆಯಲ್ಲಿ ಕೊಟ್ಟಿದ್ದೇವೆ. ಕೊಲ್ಲಾಪುರ, ಹರಪನಹಳ್ಳಿ, ದೇವರುಗ್ಗಿ, ಹುಲಿಹೈದರಗಿ, ಗಾಯನಹಳ್ಳಿ, ಗೋಕಾಕ, ಶರ್ಕಸಪೇಟೆ, ಈ ಸ್ಥಳಗಳಲ್ಲಿ ವೀರಶೈವ ಏಕೀಕರಣ ಮತ್ತು ಲಿಂಗಧಾರಣ ಮಹಾ ಕಾರ್ಯಗಳು ಜರುಗುವಂತೆ ಮಾಡಿದ ಮಹನೀಯರನ್ನೂ ಆಯಾಯ ಸ್ಥಳಗಳಲ್ಲಿ ಈ ಕಾರ್ಯಗಳಿಗೆ ಭಾಗಿಗಳಾದ ಮಹಾಶಯರನ್ನೂ ನಾವು ಹೃದಯಪೂರ್ವಕ ಅಭಿನಂದಿಸುತ್ತೇವೆ. ಶ್ರಾವಣ ಮಾಸದ ಪುರಾಣ ಸಮಾಪ್ತಿಯ ಸಮಾರಂಭವು ಹೀಗಿರಬೇಕು. ಮತಬೋಧೆಯನ್ನು ಮಾಡಿಸುವ ಮುಖ್ಯ ಉದ್ದೇಶವೇ ಇದು. ಇನ್ನು ಮೇಲೆ ಶ್ರಾವಣ ಮಾಸದ ಪುರಾಣೋತ್ಸವಗಳ ಕೊನೆಯಲ್ಲಿ ಇಂತಹ ಸಮಾಜ ಸಂಘಟನೆಯ ಮುಖ್ಯ ಕಾರ್ಯಗಳು ಜರುಗಲೆಂದು ಹಾರೈಸುತ್ತೇವೆ.

## ಇದು ಸರಿಯಾದ ರೀತಿಯಲ್ಲ.

ಮುಂಬೈ ಪ್ರಾಂತಿಕ ಅಸೆಂಬ್ಲಿಯಲ್ಲಿ ಕಳೆದ ೨ ನೆಯ ತಾರೀಖಿನ ದಿನ ಆದಿ ಹಿಂದುಗಳಿಗೆ ನೀರನ್ನು ಒದಗಿಸಿಕೊಡುವ ವಿಚಾರವಾಗಿ ಸರಕಾರದ ಲಕ್ಷ್ಯವನ್ನು ತಿರುಗಿಸಲು ಸ್ವತಂತ್ರ ಕೂಲಿಕಾರ ಪಕ್ಷದ ಸಭಾಸದರಾದ ಶ್ರೀ. ರಾಜಾಭಾವು ಭೋಳೆ ಎಂಬುವವರು ಒಂದು ಕಡಿತದ ಗೊತ್ತುವಳಿಯನ್ನು ತಂದಿದ್ದರು. ಆ ವಿಷಯದಲ್ಲಿ ಭಾಷಣಗಳೂ ಜರುಗಿದವು. ಪುಣೆ ಪಟ್ಟಣದ ಪರವಾಗಿ ಆರಿಸಿಬಂದ ಕಾಂಗ್ರೆಸ್ ಪಕ್ಷದ ಸಭಾಸದರಾದ ಶ್ರೀ. ಭಾವುಸಾಹೇಬ ಗುಪ್ತೆ ಎಂಬುವವರು ಆ ಕಾಲಕ್ಕೆ ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಅಸ್ಪೃಶ್ಯ ಜನರ ವಿಷಯದಲ್ಲಿ ನನಗೆ ಸಹಾನುಭೂತಿಯಿದ್ದರೂ ಈ ಕಡಿತದ ಗೊತ್ತುವಳಿಗೆ ನಾನು ಒಪ್ಪಿಗೆಯನ್ನು ಕೊಡಲಾರೆನು. ಏಕೆಂದರೆ, ಹೊಸ ರಾಜಕೀಯ ಶಾಸನವು ನಮಗೆ ಅಸ್ಪೃಶ್ಯತೆಯನ್ನು ಉಂಟುಮಾಡಿದೆ. ಅಧಿಕಾರಿಗಳ ವೇತನ ಮೊದಲಾದ ಅನೇಕ ವಿಷಯಗಳಲ್ಲಿ ನಮಗೆ ಏನನ್ನೂ ಮಾಡಲು ಬರುವಂತಿಲ್ಲ. ಈ ರಾಜಕೀಯ ಅಸ್ಪೃಶ್ಯತೆಯನ್ನು ಕಳೆಯಲು ನೀವು ನಮಗೆ ಸಹಾಯಮಾಡಿದ್ದಾದರೆ ನಾವು ನಿಮ್ಮ ಸಾಮಾಜಿಕ ಕೊರತೆಗಳನ್ನು ದೂರಮಾಡಲು ಬೇಕಾದ ಸಹಾಯಮಾಡುವೆವು."

ಹೊಸ ರಾಜಕೀಯ ಸುಧಾರಣೆಯು ಹಿಂದುಸ್ಥಾನದವರನ್ನೇ ಅಸ್ಪೃಶ್ಯರನ್ನಾಗಿಮಾಡಿದೆಯೆಂದು ಗ್ರಹಿಸಬೇಕಾಗಿದೆಯೇ ವಿನಾ ಸವರ್ಣಿಯ ಹಿಂದುಗಳನ್ನಾಗಲಿ ಅಥವಾ ಕಾಂಗ್ರೆಸ್ ಪಕ್ಷದವರನ್ನಾಗಲಿ ಆ ಶಾಸನವು ಅಸ್ಪೃಶ್ಯರನ್ನೇನೂ ಮಾಡಿಲ್ಲ. ಎಂದಮೇಲೆ ಶ್ರೀ ಗುಪ್ತೆಯವರ ಈ ವ್ಯಾಪಾರಿ ಮಾತು ಹೇಗೆ ಸರಿಯಾಗುವುದು? ನಮಗೆ ನೀವು ಸಹಾಯಮಾಡಿದರೆ ನಿಮಗೆ ನಾವು ಮಾಡುತ್ತೇವೆಂಬ ಈ ಮಾತಿನ ರೀತಿ ಸರಿಯಾದುದೆ? ಕಾಂಗ್ರೆಸ್ಸಿಗೆ ನೀವು ಸೇರಿದರೇನೇ ನಿಮ್ಮ ಅಸ್ಪೃಶ್ಯರಿಗಿರುವ ಸಾಮಾಜಿಕ ತೊಂದರೆಗಳನ್ನು ನಾವು ನಿವಾರಿಸುತ್ತೇವೆಂದು ಹೇಳಿದಂತಾಗಲಿಲ್ಲವೆ?

ಶ್ರೀ. ಗುಪ್ತೆಯವರಂತಹ ಪ್ರಮುಖರು ನಮಗೆ ನೀವು ಸಹಾಯಮಾಡಿರೆಂದೂ ಆಮೇಲೆ ನಿಮಗೆ ನಾವು ಮಾಡುತ್ತೇವೆಂದೂ ಹೀಗೆ ರಾಜಕೀಯ ವಿಷಯದಲ್ಲಿ ಹೇಳಿದುದು ಅತ್ಯಂತ ವಿಷಾದದ ಸಂಗತಿಯು. ಹಿಂದುಸ್ಥಾನಕ್ಕೆ ಸ್ವರಾಜ್ಯ ದೊರೆಯುವುದಾದರೆ ಅದಿ ಹಿಂದುಗಳನ್ನು ಬಿಟ್ಟು ಇವರಿಗೇನೇ ದೊರೆಯುತ್ತದೆಯೋ? ರಾಜಕೀಯ ವಿಷಯದಲ್ಲಿ ನಮಗೆ ಎಂಬ ಭೇದಭಾವವು ಹೇಗೆ ಸಂಭವಿಸುತ್ತದೆ? ಇಂತಹ ವಿಚಾರಸರಣಿಯ ರಾಜಕಾರಣ ಪಟುಗಳು ಅನೇಕರಿರುವುದರಿಂದಲೇ ಈ ದೇಶದ ರಾಜಕಾರಣವು ಬಹು ತೊಡಕಿನದಾಗಿಲ್ಲವೆ?

**ತಾರೀಖು ೨೬ ರಿಂದ ಒಂದು ವಾರ ಗಾಂಧಿ ಸಪ್ತಾಹವನ್ನು ಆಚರಿಸಿರಿ.**

## ಡಾಕ್ಟರ ನಂದೀಮಠರವರ ಹೇಳಿಕೆ.

'ಕೌಮುದಿ' ಎಂಬ ಮರಾಠಿ ಪತ್ರದ ಜುಲಾಯಿ ೩೧ ನೆಯ ತಾರೀಖಿನ ಸಂಚಿಕೆಯಲ್ಲಿ ಅಪಮಾನಕಾರಕವಾದ ಲೇಖವನ್ನು ಪ್ರಸಿದ್ಧಮಾಡಿದುದರ ಬಗ್ಗೆ ಸದರಿ ಕೌಮುದಿ ಪತ್ರಿಕೆಯ ಸಂಪಾದಕರು, ಮುದ್ರಕರು ಮತ್ತು ಪ್ರಕಾಶಕರ ಮೇಲೆ ಬೆಳಗಾಂವಿ ಸಿಟ ಮ್ಯಾಜಿಸ್ಟ್ರೇಟರ ಕೋರ್ಟಿನಲ್ಲಿ ಫಿರ್ಯಾದಿಮಾಡಲಾಗಿದೆ. ಈ ಖಟ್ಲೆಯಲ್ಲಿ ಫಿರ್ಯಾದಿಗಾರರಾದ ಡಾ. ಎಸ್. ಸಿ. ನಂದೀಮಠ ಎಂ. ಎ. ಪಿ. ಎಚ್. ಡಿ. (ಲಂಡನ್) ಪ್ರಿನ್ಸಿಪಾಲ ಲಿಂಗರಾಜ ಕಾಲೇಜ ಬೆಳಗಾವಿ ಇವರು ಕೋರ್ಟಿಗೆ ಸಾದರು ಮಾಡಿದ ಹೇಳಿಕೆಯು ಕೆಳಗಿನಂತಿರುತ್ತದೆ.

"ನಾನು ಮುಂಬೈ ವಿಶ್ವವಿದ್ಯಾಲಯದ ಎಂ. ಎ. ಪದವಿಧರನೂ ಲಂಡನ್ ವಿಶ್ವವಿದ್ಯಾಲಯದ ಪಿ. ಎಚ್. ಡಿ. ಪದವಿಧರನೂ ಗ್ರೇಟಬ್ರಿಟನ್ ಮತ್ತು ಆಯರ್ಲಂಡದ ರಾಯಲ್ ಏಸಿಯಾಟಿಕ್ ಸೊಸಾಯಿಟಿಯ ಸಭಾಸದನೂ ಆಗಿರುತ್ತೇನೆ. ಮತ್ತು ಮುಂಬೈ ವಿಶ್ವವಿದ್ಯಾಲಯದ ಸಿನೇಟಿನ ಫೆಲೊ, ಎಕಾಡೆಮಿಕ್ ಕೌನ್ಸಿಲದ ಮೆಂಬರ, ಕನ್ನಡ ಅಭ್ಯಾಸ ಕ್ರಮ ನಿಯಾಮಕ ಮಂಡಲದ ಅಧ್ಯಕ್ಷ, ಸಂಸ್ಕೃತ ಅಭ್ಯಾಸಕ್ರಮನಿಯಾಮಕ ಮಂಡಲದ ಸಭಾಸದ, ವಿದ್ಯಾರ್ಥಿಹಿತ ಸಂವರ್ಧಕ ಮಂಡಲದ (Students' Welfare Committee) ಸಭಾಸದ, ಸ್ಪೋರ್ಟ್ಸ ಕಮೀಟಿಯ ಸಭಾಸದ ಮತ್ತು ಲೋಕಲ್ ಸ್ಪೋರ್ಟ್ಸ ಕಮೀಟಿಯ ಅಧ್ಯಕ್ಷನೂ ಆಗಿರುತ್ತೇನೆ. ನಾನು ಮುಂಬೈ ವಿಶ್ವವಿದ್ಯಾಲಯದ ಎಂ. ಎ ಪರೀಕ್ಷೆಯ ಪರೀಕ್ಷಕನೂ ಆಗಿದ್ದೆನು.

ನಾನು ಲಿಂಗರಾಜ ಕಾಲೇಜದ ಪ್ರಿನ್ಸಿಪಾಲನಾಗಿದ್ದೇನೆ. ನಮ್ಮ ಕಾಲೇಜದಲ್ಲಿ ಸಂಸ್ಕೃತ ವಿಷಯವನ್ನು ಕಲಿಸುವ ಜವಾಬ್ದಾರಿಯು ನನ್ನ ಮೇಲೆಯೇ ಇರುತ್ತದೆ. ಪರೀಕ್ಷೆಗಳಲ್ಲಿ ನಮ್ಮ ಕಾಲೇಜಿನ ಸಂಸ್ಕೃತ ವಿಷಯದ ಪರಿಣಾಮವನ್ನೂ ಇತರ ಎಲ್ಲ ವಿಷಯಗಳ ಪರಿಣಾಮವನ್ನೂ ತುಲನೆಗಾಗಿ ವಿಶ್ವವಿದ್ಯಾಲಯದ ಪರಿಣಾಮವನ್ನೂ ಕೋರ್ಟಿಗೆ ಹಾಜರಮಾಡಿರುತ್ತೇನೆ.

ಕೌಮುದಿ ಪತ್ರಿಕೆಯಲ್ಲಿ ಪ್ರಕಟವಾದ ಲೇಖಾಂಶ (Passages) ಗಳನ್ನು ನಾನು ಓದಿರುವೆನು. ಅವು ನನ್ನ ಮತ್ತು ನಮ್ಮ ಕಾಲೇಜದ ಯೋಗ್ಯತೆಯನ್ನು ಜನರಲ್ಲಿ ಕಡಿಮೆಮಾಡಿ ತೋರಿಸುವ ಉದ್ದೇಶದಿಂದ ಮತ್ತು ಕುತ್ಸಿಕ ಬುದ್ಧಿಯಿಂದ ಬರೆಯಲ್ಪಟ್ಟಿರುವವು. ಈ ಲೇಖಾಂಶಗಳಲ್ಲಿ ನನ್ನನ್ನು ತೀರ ಅಯೋಗ್ಯ ಮತ್ತು ವಿದ್ಯೆಯ ಗಂಧವಿಲ್ಲದಂತಹ ಮನುಷ್ಯನಂತೆ ಚಿತ್ರಿಸಿರುವರು. ಮತ್ತು ನಾನು ಲಿಂಗವಂತನಿದ್ದುದರಿಂದಲೇ ನನ್ನನ್ನು ಕಾಲೇಜಿನ ಪ್ರಿನ್ಸಿಪಾಲ ಈ ಸ್ಥಳಕ್ಕೆ ನೇಮಿಸಿರುವರೆಂದು ಅಂದು ನನ್ನ ಯೋಗ್ಯತೆ ಮತ್ತು ವಿದ್ವತ್ತುಗಳನ್ನು ಆಕ್ಷೇಪಿಸಿದ್ದಾರೆ. ಲಿಂಗವಂತರಿಗೆ ಪ್ರಾಣಕ್ಕಿಂತಲೂ ಪ್ರಿಯವಾದ ಲಿಂಗವನ್ನು "ಟ್ರಂಕ್" ಎಂದು ಹೀಯಾಳಿಸಿರುವುದು ನನ್ನ ಧಾರ್ಮಿಕ ಭಾವನೆಗಳಿಗೆ ಬಲವಾದ ನೋವನ್ನುಂಟುಮಾಡಿರುವದು.

ಎರಡನೆಯ ಪ್ಯಾರಾದಲ್ಲಿ ನಮ್ಮ ಕಾಲೇಜನ್ನು ಉಡುಪಿಯ ಹಾಟೇಲಿಗೆ ಹೋಲಿಸಿರುವರು. ಕಾಲೇಜದಲ್ಲಿ ಶಿಕ್ಷಣ ಕೊಡುವ ವಿದ್ವಾಂಸರಾದ ಅಧ್ಯಾಪಕರನ್ನು ನಿರ್ಜೀವ ವಸ್ತುಗಳೂ ಉಡುಪಿ ಹಾಟೇಲುಗಳಲ್ಲಿ ಕೆಲಸಮಾಡುವ ಅಡಿಗೆಯವರೂ ಎಂಥು ಹೀಯಾಳಿಸಿರುವರು.

ಈ ಎಲ್ಲ ವಿಷಯಗಳನ್ನು ಆರೋಪಿಗಳು ಮತ್ಸರ ಬುದ್ಧಿಯಿಂದ ಬರೆದು ಪ್ರಸಿದ್ಧಿಸಿರುವರು. ನಾನು ನನ್ನ ಜವಾಬ್ದಾರಿಯ ಕರ್ತವ್ಯಗಳನ್ನು ಸಾಗಿಸಿಕೊಂಡು ಹೋಗುವಲ್ಲಿ ನನ್ನ ಕರ್ತವ್ಯಗಳ ವಿರುದ್ಧವಾಗಿ ಯಾರಾದರೂ ಕೆಲಸವನ್ನು ಅವರ ಮನ ಮೆಚ್ಚುವಂತೆ ಮಾಡಿಕೊಟ್ಟಿರಲಿಕ್ಕಿಲ್ಲ. ಅಂಥವರು ಈ ಆರೋಪಿಗಳ ಮಿತ್ರರಿರಬಹುದು. ಆದುದರಿಂದ ಆರೋಪಿಗಳು ನನ್ನ ಮೇಲೆ ಮತ್ಸರ ಬುದ್ಧಿಯಿಂದ ಇಂತಹ ಲೇಖವನ್ನು ಬರೆದು ಪ್ರಸಿದ್ಧಿಸಿರುವರು.

ಈ ಲೇಖದಿಂದ ನನಗೂ ನಮ್ಮ ಕಾಲೇಜಿಗೂ ಬಹಳ ಹಾನಿಯಾಗಿರುವುದು. ನಾನು ವಿಶ್ವವಿದ್ಯಾಲಯದ ಅನೇಕ ವಿಷಯಗಳಲ್ಲಿ ಭಾಗವಹಿಸುತ್ತಿರುವೆನು. ಈ ಲೇಖದಿಂದ ನಾನು ಅಂತಹ ವಿಷಯಗಳಲ್ಲಿ ಭಾಗವಹಿಸಲು ಬಾರದಂತಹ ಪರಿಸ್ಥಿತಿಯು ಉಪಸ್ಥಿತವಾಗುವುದು. ಇತರ ಸಾರ್ವಜನಿಕ ಜೀವನಗಳಲ್ಲಿಯೂ ನನಗೆ ಈ ಲೇಖದಿಂದ ಹಾನಿಯುಂಟಾಗುವುದು. ನಮ್ಮ ಕಾಲೇಜದ ವಿದ್ಯಾರ್ಥಿಗಳ ಸಂಖ್ಯೆಯು ದಿನೇ ದಿನೇ ಬೆಳೆಯುತ್ತಿದ್ದು ಅದೂ ಈ ಲೇಖದಿಂದ ಕಡಿಮೆಯಾಗುವುದು."

ಆರೋಪಿಗಳ ವಕೀಲ ಮಿ. ಎಂ. ರಾಮರಾವ ಇವರು ಡಾ. ನಂದೀಮಠ ಇವರನ್ನು ಕ್ರಾಸ್ ಎಕ್ಸಾಮಿನ್ ಮಾಡತೊಡಗಿದ್ದು ಅದು ಇನ್ನೂ ಪೂರ್ಣವಾಗಿದ್ದಿಲ್ಲ. ಖಟ್ಲೆಯು ಇದೇ ತಿಂಗಳ ೨೭ ನೆಯ ತಾರೀಖಿಗೆ ಮುಂದೆ ಹಾಕಲ್ಪಟ್ಟಿದೆ. ಓರ್ವಸುದ್ದಿಗಾರ.

---

## ಪಾರಮಾರ್ಥಿಕ "ಡೈರಿ"

ಶ್ರೀ ಶಿವ ಚಿದಂಬರಾಯ ನಮಃ

ಶ್ರೀಗುರು ಬಸವಲಿಂಗಾಯ ನಮಃ

(೫ಲ, ೯ ಬ. ೧೪ ಸೋಮ. ೧೧-೧-೩೭.)

ತ್ರಿಪದಿ— ಮಹದೇವ ನಿಮ್ಮನು ಮಹಿಮೆಗಳ ಪೊಗಳಲ್ಕೆ
ಬಹಳ ಬೆಲೆಯುಳ್ಳ ದೇಹ ವೀಣೆಯಾಗಿ
ಸಹಾಯವಾಗಲಿ ಬಸವೇಶ ||೧೭||

ಹೃದಯಸ್ಥ ಚಿದಂಬರಾ! ಈ ದೇಹವೆಂಬ ವೀಣೆಯನ್ನು ನುಡಿಸುವ (ಬಾರಿಸುವ) ಯಜಮಾನನು ನೀನಾಗಯ್ಯ.

ಏನು ಪೇಳಲಿ ಶಿವನೆ ಜಗದೊಳು ನೀನು ಗುಪ್ತದಿ ಮಾಳ್ಪ ಕಾರ್ಯವ|
ಜಾಣತನದಲಿವೊಂದು ಕಲ್ಪನೆ ರಚಿಸಿಯುದರಿಂದ ||
ಕಾಣಬರುತಿಹ ಗಣನೆಯಿಲ್ಲದ ಸಾನುರಾಗದ ಕೌತುಕಂಗಳು|
ಭಾನುವಿನ ರಚನೆಯಂ ನೋಡುತ ದಾಸನುಗವೆಂದ ||೧೮||

ಅನ್ವಯ:— ದಾಸನು ಭಾನುವಿನ ರಚನೆಯಂ ನೋಡುತ ಕೌತುಕಂಗಳು ಉಗಮ ಎಂದ. ಅಗಣಿತ ಮಹಿಮೆಯುನಗಲದ ವಿಭವನೆ! ನಿನ್ನದೊಂದು ಕೃತಿಯೋಳ್ ಅನೇಕ ಕಾರ್ಯಂಗಳು ಧ್ವನಿಸಿ ಮೆರೆಯುತಿರ್ಪ ಪ್ರಭೊ !!! ಈ ಸೂರ್ಯನ ದೃಷ್ಟಾಂತದಂತೆಯೇ ನಿನ್ನ ದೃಷ್ಟಿಯೊಳಗಿನ ಮಹಿಮೆಗಳ ಶ್ರೇಣಿಯು!!! ಬುದ್ಧ, ಶಂಕರಾಚಾರ್ಯ, ಬಸವ, ಕ್ರಿಸ್ತ, ಮಹಮ್ಮದ ಪೈಗಂಬರ ಮುಂತಾದ ಅಲೌಕಿಕ ವ್ಯಕ್ತಿಗಳ ನಿರ್ಮಾಣಮಾಡಿದೆಯೆಂದರೆ ಭೂಲೋಕದೋಳ್ ಧಾರ್ಮಿಕ ಘಡಾಮೋಡಿ (ಕಿಕ್ಕೂರುವಿಕೆ) ಗೆ ಏನು ಕೊರತೆ? ಹಾಗೆಯೇ ಪದ್ಮಿನಿ, ಮುಮತಾಜ, ನೂರಜಹಾನ ಸಿಂಪ್ಸನ್ ರಂಥ ಸುಂದರ ವ್ಯಕ್ತಿಗಳಂ ನಿರ್ಮಾಣಗೈಯಲ್ ಅನರ್ಘ್ಯ ಅದ್ವಿತೀಯ ಕೃತಿ, ವೈಶಿಷ್ಟ್ಯ, ಕೌತುಕಗಳೇನು ಕೊರತೆ? ಹಾಗೆಯೇ ಉಗೆ ಬಂಡಿಯುತ್ಪಾದಕ ಮೋಟಾರಗಳುತ್ಪಾದಕ (ಫೋರ್ಡ) ರಂಥ ಕಲ್ಪಕ ವ್ಯಕ್ತಿಗಳುದಯದಿಂದ ಮಾನವ ಸುಖಸಾಧನಗಳಲ್ಲಿಯೂ ಅದರಿಂದ ಜನರ ಪರಿಸ್ಥಿತಿಯಲ್ಲಾಗುವ ಕ್ರಾಂತಿಗೂ ಏನು ಕೊರತೆ?

## ಹಾಗಾದರೆ
## ಅಯ್ಯಾಚಾರವೂ ಜನ್ಮಸಿದ್ಧ ಹಕ್ಕೇ ಸರಿ!

ಶರಣ ಸಂದೇಶ ಪತ್ರಿಕೆಯ ತಾ. ೨-೭-೩೭ ನೆಯ ಸಂಚಿಕೆಯಲ್ಲಿ ವೀರಶೈವ ತತ್ವವೇತ್ತರಿಗೊಂದು ಸೂಚನೆಯೆಂಬ ನಮ್ಮ ಲೇಖವು ಪ್ರಸಿದ್ಧವಾಗಿದೆಯಷ್ಟೆ. ಅದು ಪ್ರಸಿದ್ಧವಾಗಿ ಈಗಾಗಲೇ ಒಂದೂವರೆ ತಿಂಗಳ ಮೇಲಾದರೂ ಶ್ರೀ. ಬಸಪ್ಪ ಚನ್ನಪ್ಪ ಪಟ್ಟೇದ ಎಂಬವರ ಲೇಖನದ ಹೊರ್ತಾಗಿ ಇನ್ನುಳಿದ ಯಾವ ವೀರಶೈವ ತತ್ವವೇತ್ತರೂ ಅದಕ್ಕೆ ಉತ್ತರ ಬರೆದು ನಮ್ಮ ಜಿಜ್ಞಾಸವನ್ನು ಪೂರ್ಣ ಮಾಡದಿದ್ದುದು ವಿಷಾದಕರವು. ಇರಲಿ. ಪಟ್ಟೇದವರು ಬರೆದ ಲೇಖವೂ ಕೂಡಾ ಬುಡವಿಲ್ಲದ ಮಡಿಕೆಯಂತೆ ಆಧಾರರಹಿತವಾದುದಾಗಿ ಅವರ ಲೇಖವು ಅವರಿಗೆಯೇ ಅನುಮಾನ ಹುಟ್ಟಿಸುವದಾಗಿದೆಯೆಂಬುದನ್ನು ಕೆಳಗಣ ವಿವರಣೆಯಿಂದ ವಾಚಕ ಮಹಾಶಯರು ಮನಗಾಣಬಹುದು.

ಶ್ರೀಯುತ ಪಟ್ಟೇದವರು ತಮಗೆ ಬೇಕಾದದ್ದು ಬೆಲ್ಲದಕ್ಕಿಂತ ಸವಿ. ತಮಗೆ ಬೇಡಾದದ್ದು ಬೇವಿನಕ್ಕಿಂತ ಕಹಿ ಎಂಬ ನಾಣ್ಣುಡಿಯಂತೆ ಪ್ರಮಾಣ ಗ್ರಂಥಗಳ ಆಧಾರವಿಲ್ಲದೆ ಅಯ್ಯಾಚಾರವು ಗುಣವಿಶಿಷ್ಟವು. ಆದರೆ ಶಿವದೀಕ್ಷೆಯು ಮಾತ್ರ ಜನ್ಮವಿಶಿಷ್ಟವಾದುದೆಂದು ಕೇವಲ ಯುಕ್ತಿವಾದದಿಂದಲೇ ಸಾಧಿಸಲು ಪ್ರಯತ್ನಿಸಿರುತ್ತಾರೆ. ಆದರೆ ಅದೂ ಕೂಡಾ ತಡವರಿಸುತ್ತಲೇ ಸರಿ. ಹ್ಯಾಗಂದರೆ, ಪ್ರಾಥಮಿಕ ಶಿಕ್ಷಣವು ಎಲ್ಲರ ಜನ್ಮಸಿದ್ಧ ಹಕ್ಕಾಗಿರುವಂತೆ ದ್ವೈತಿಯಕ ಹಾಗು ತಾರ್ತೀಯಕ ಶಿಕ್ಷಣಗಳು ಮಾತ್ರ ಹಾಗಲ್ಲ. ಜನ್ಮತಃ ವೀರಶೈವನಾದವನು ಪ್ರಾಥಮಿಕ ಸಂಸ್ಕಾರ ರೂಪವಾದ ಶಿವದೀಕ್ಷೆಗೆ ಮಾತ್ರ ಹಕ್ಕುದಾರನು. ಮೊದಲಾಗಿ ಬರೆಯುತ್ತ ಹೋಗಿ ಹೀಗೆ ಬರೆದುದರ ಅರ್ಥವನ್ನು ಮಾತ್ರ ಶಿವದೀಕ್ಷೆಯು ಗುಣವಿಶಿಷ್ಟವಾದುದಲ್ಲವೆಂದು ಯಾರೂ ತಿಳಿಯಕೂಡದು. ಅದೂ ಕೂಡಾ ಗುಣವಿಶಿಷ್ಟವೆ. ಎಂದು ಮತ್ತೆ ಬರೆದಿರುತ್ತಾರೆ. ಇದರ ಮೇಲಿಂದ ಶಿವದೀಕ್ಷೆಯು ಜನ್ಮ ವಿಶಿಷ್ಟವೆಂದು ಹೇಳುವದು ಬಂಜೆಯ ಮಗನಿವನೆಂದು ಹೇಳಿದಂತಾಗಲಿಲ್ಲವೆ?

ಮುಂದೆ ಅವರು ಬರೆದುದೇನಂದರೆ— ಈ ಗುಣವು ಜನ್ಮತಃ ವೀರಶೈವನಾದವನಲ್ಲಿ ಉತ್ಪನ್ನವಾಗಬೇಕೆಂದೇ ಆತನು ಕೂಸಾಗಿರುವಾಗಲೇ ಇಷ್ಟಲಿಂಗ ಸಂಬಂಧವನ್ನು ಮಾಡುವರು. ಮುಂದೆ ಬರಬರುತ್ತ ಮನೆಯವರ ಬಳಿಕೆಯಿಂದಲೂ ಅನುಕರಣ ಶಕ್ತಿಯ ಮೂಲಕವಾಗಿಯೂ ಅವನು ಆ ಸಂಸ್ಕೃತಿಯನ್ನು ತನ್ನದಾಗಿ ಮಾಡಿಕೊಳ್ಳುವನು ಎಂದು ಬರೆದಿರುವರು. ಹಾಗಾದರೆ ಅಯ್ಯಾಚಾರವು ಕೂಡಾ ಇದರಂತೆ ಜನ್ಮತಃ ಅಯ್ಯನವರಿಗೆ ಚಿಕ್ಕಂದಿನಲ್ಲಿ ಆಗಿ ಮನೆಯವರ ಬಳಿಕೆಯಿಂದಲೂ ಅನುಕರಣ ಶಕ್ತಿಯಿಂದಲೂ ಆ ಸಂಸ್ಕೃತಿಯನ್ನು ಆತನು ತನ್ನದಾಗಿ ಮಾಡಿಕೊಳ್ಳುವುದಿಲ್ಲವೇಕೆ?

ಮತ್ತೆ ಅವರು ಔರಸ ಪುತ್ರನ ಹಾಗು ದತ್ತಕ ಪುತ್ರನ ದೃಷ್ಟಾಂತದಿಂದ ಔರಸ ಪುತ್ರನು ಹೇಗಿದ್ದರೂ ಸರಿಯೆ. ಆತನು ಪಿತ್ರಾರ್ಜಿತ ಆಸ್ತಿಗೆ ಹಕ್ಕುದಾರನಾಗುವನು. ಆದರೆ ದತ್ತಕ ಪುತ್ರನು ಮಾತ್ರ ಗುಣವಿಶಿಷ್ಟನಾಗಿರಬೇಕಾದುದಗತ್ಯ. ಇದರಂತೆ ಜನ್ಮತಃ ವೀರಶೈವನಾದವನು ಹೇಗಿದ್ದರೂ ಕೂಡಾ ಶಿವದೀಕ್ಷೆಗೆ ಹಕ್ಕುದಾರನು. ಹೊಸದಾಗಿ ವೀರಶೈವನಾಗುವವನು ಮಾತ್ರ ಗುಣವಿಶಿಷ್ಟನಾಗಿರಬೇಕೆಂದು ಬರೆದಿರುವರು. ಆದರೆ ಈ ಯುಕ್ತಿವಾದವು ತಮ್ಮ ಅಭಿಪ್ರಾಯವನ್ನೇ ಬಾಧಿಸುವುದೆಂಬುದನ್ನು ಕೂಡ ಅವರು ವಿಚಾರ ಮಾಡದವರಾಗಿದ್ದಾರೆ. ಯಾಕೆಂದರೆ ಔರಸ ಪುತ್ರನಂತೆ ಜನ್ಮತಃ ಅಯ್ಯನವರಾದವರು ಹೇಗಿದ್ದರೂ ಸರಿಯೆ. ಅಯ್ಯಾಚಾರಕ್ಕೆ ಜನ್ಮಸಿದ್ಧ ಹಕ್ಕುದಾರನೇಕಾಗಬಾರದು? ಹೊಸದಾಗಿ ಅಯ್ಯನವರಾಗುವವರು ಮಾತ್ರ ದತ್ತ ಪುತ್ರನಂತೆ ಗುಣ ವಿಶಿಷ್ಟರಾಗಿರಬೇಕೆಂದು ಅವರ ದೃಷ್ಟಾಂತದಿಂದಲೇ ಹೇಳಲು ಅಡ್ಡಿ ಏನಿದೆ?

ಕಡೆಗೆ ಅವರು ಪ್ರತ್ಯಕ್ಷ ವ್ಯವಹಾರದಲ್ಲಿ ಬಂಥನಾಳ ಪಾಟೀಲ ಬಸವಲಿಂಗಪ್ಪನವರು ತೋರಿಸಿದಂತೆ ಎಲ್ಲರೂ ಶಾಸ್ತ್ರಾಧಾರ ವಿರುದ್ಧ ಸ್ಥಿತಿಯವರೇ ಕಂಡುಬರುತ್ತಾರೆಂದು ಬರೆದಿರುವದರ ಮೇಲಿಂದ ಶಿವದೀಕ್ಷೆಯು ಕೂಡಾ ಜನ್ಮವಿಶಿಷ್ಟವಾದುದಲ್ಲವೆಂದು ಪಟ್ಟೇದವರೂ ಕೂಡಾ ಪರ್ಯಾಯದಿಂದ ಒಪ್ಪಿದಂತಾಗಲಿಲ್ಲವೆ?

ಒಟ್ಟಿನಮೇಲೆ ಪಟ್ಟೇದವರು ವೀರಶೈವನಿಗೆ ಶಿವದೀಕ್ಷೆಯು ಜನ್ಮಸಿದ್ಧ ಹಕ್ಕು ಎಂದು ಬರೆಯಲ್ಪಟ್ಟ ಲೇಖವು ಶಾಸ್ತ್ರಾಧಾರದಿಂದ ಬರೆಯಲ್ಪಟ್ಟುದುದೂ ಅಲ್ಲ. ರೂಢಿಗನುಸರಿಸಿಯೂ ಬರೆಯಲ್ಪಟ್ಟುದುದೂ ಅಲ್ಲ. ಇಂಥ ಲೇಖನಗಳಿಂದ ಜಿಜ್ಞಾಸುಗಳ ಸಮಾಧಾನವೆಂದಿಗೂ ಆಗಲು ಶಕ್ಯವಿಲ್ಲ. ಪ್ರಯುಕ್ತ ಸತ್ಯವನ್ನೇ ತಮ್ಮ ಧ್ಯೇಯವಾಗಿಟ್ಟುಕೊಂಡ ಸಂಪಾದಕ ಮಹಾಶಯರೇ ಈ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸಿ ಜಿಜ್ಞಾಸುಗಳ ಇಚ್ಛೆಯನ್ನು ಪೂರ್ಣ ಮಾಡುವರೆಂದು ಹಾರೈಸುವ,

ಪಾಟೀಲ ಬಸವಲಿಂಗಪ್ಪ ಬಂಥನಾಳ.

[ಶ್ರೀ. ಪಾಟೀಲ ಬಸವಲಿಂಗಪ್ಪನವರ ಸಂಶಯವು ಶ್ರೀ. ಪಟ್ಟೇದ ಬಸವಪ್ಪನವರ ಉತ್ತರದಿಂದ ನಿವಾರಣೆಯಾಗಿಲ್ಲವೆಂಬುದು ಮೇಲಣ ಲೇಖನದಿಂದ ಸ್ಪಷ್ಟವಾಗುತ್ತದೆ. ಇವರು "ವೀರಶೈವ ತತ್ವವೇತ್ತರಿಗೊಂದು ಸೂಚನೆ" ಎಂಬ ಲೇಖನದಲ್ಲಿ ವ್ಯಕ್ತಗೊಳಿಸಿದ ಸಂಶಯವು ಹೀಗೆಂದು ತಿಳಿದಿದ್ದೇವೆ—

**ಸಂಶಯ**— ವೀರಶೈವ ತತ್ವದಲ್ಲಿ ೧೦೧ ಸ್ಥಲಗಳೆಂದು ವಿಭಾಗವಾಗಿದೆ. ಅವುಗಳಲ್ಲಿ ಪಿಂಡ, ಪಿಂಡಜ್ಞಾನ, ಸಂಸಾರ ಹೇಯ, ಗುರುಕಾರುಣ್ಯ, ಎಂಬ ನಾಲ್ಕು ಸ್ಥಳಗಳನ್ನು ದಾಟಿದ ಮೇಲೆಯೇ ಲಿಂಗಧಾರಣ ಎಂಬ ಸ್ಥಳವಿದೆ. ಎಂದಮೇಲೆ ಈ ದಿನ ಲಿಂಗಾಯತರಲ್ಲಿ ಹುಟ್ಟಿದ ಮಗು ಈ ನಾಲ್ಕು ಸ್ಥಳಗಳನ್ನು ದಾಟಿ ಎಂದರೆ ಅಷ್ಟು ಯೋಗ್ಯತೆಯನ್ನು ಹೊಂದಿ ಲಿಂಗಧಾರಣವಾಗುವುದೆ? ಅದಕ್ಕೆ ಅಷ್ಟು ಯೋಗ್ಯತೆಯಿಲ್ಲದಿದ್ದ ಮೇಲೆ ಲಿಂಗಧಾರಣವು ಅದಕ್ಕೆ ಅನಾವಶ್ಯಕವಲ್ಲವೆ? ಒಂದು ವೇಳೆ ಅವಶ್ಯಕವಾಗಿದ್ದರೆ ಶಾಸ್ತ್ರ ನಿಯಮವು ಅಪ್ರಯೋಜನವಾಯಿತಲ್ಲವೆ?

**ಉತ್ತರ**— ಅಯ್ಯಾಚಾರವು ಎಂದರೆ ಗುರುದೀಕ್ಷೆಯು ಹೇಗೆ ಗುಣಕರ್ಮವಿಶಿಷ್ಟವಾಗಿದೆಯೋ ಹಾಗೆಯೇ ಲಿಂಗಧಾರಣವು ಕೂಡಾ ಗುಣ ಕರ್ಮ ವಿಶಿಷ್ಟವಾದುದಾಗಿಯೇ ಇದೆಯೆಂದು ನಮಗೆ ತೋರುತ್ತದೆ. ಮತ್ತು ಈಗ ಲಿಂಗಾಯತರು ತಮ್ಮಲ್ಲಿ ಹುಟ್ಟುವ ಮಗುವಿಗೆ ಅದೇ ಕಾಲದಲ್ಲಿ ಲಿಂಗಧಾರಣ ಮಾಡುವುದಕ್ಕೂ ಶಾಸ್ತ್ರಗಳಲ್ಲಿ ನಾಲ್ಕು ಸ್ಥಳಗಳ ಯೋಗ್ಯತೆ ಬಂದನಂತರ ಲಿಂಗಧಾರಣಮಾಡಬೇಕೆಂದು ಹೇಳಿರುವ ನಿಯಮಕ್ಕೂ ಪರಸ್ಪರ ವಿರೋಧವೇನೂ ಇಲ್ಲವೆಂತಲೂ ನಮಗೆ ತೋರುತ್ತದೆ. ಏಕೆಂದರೆ,

ಲಿಂಗಾಯತರಲ್ಲಿ ಹುಟ್ಟಿದ ಮಗುವಿಗೆ ಲಿಂಗಧಾರಣಮಾಡುವುದು ಮುಖ್ಯವಾಗಿ ತಾಯಿ ತಂದೆ ಮೊದಲಾದ ಅವರ ಮನೆಯವರ ಆಚಾರ ಶುದ್ಧಿಗಾಗಿ. ಆ ಮಗುವಿನ ಆತ್ಮೋನ್ನತಿಗೆ ಅದು ಆಗ ಗೌಣವಾದುದು. ಲಿಂಗಾಂಗಿಯು ಅಲಿಂಗಿಗಳ ಸಂಪರ್ಕದ ಅನ್ನಾಹಾರಾದಿಗಳನ್ನು ಸೇವಿಸಕೂಡದಷ್ಟೆ. ಮಗುವು ಅಸ್ಪೃಶ್ಯವಾದುದಾಗಿ ಮನೆಯಲ್ಲಿದ್ದು ತಾಯಿ ತಂದೆಗಳಿಂದ ಜೋಕೆಯಾಗುವುದು ಹೇಗೆ?

ಅಂತೆಯೇ ಲಿಂಗಾಯತರು ತಮ್ಮಲ್ಲಿ ಹುಟ್ಟುವ ಮಕ್ಕಳಿಗೆ ಆಗಲೇ ಲಿಂಗಧಾರಣಮಾಡಿ ತಮ್ಮ ಆಚಾರಕ್ಕೆ ಅನುಕೂಲಮಾಡಿಕೊಳ್ಳಬೇಕಾದುದು ಅಗತ್ಯವಾಗಿಯೇ ಇದೆ. ವಿಶೇಷ ಆಚಾರಶೀಲರು ತಾವು ಸಾಕಿದ ಹಸು ಮೊದಲಾದ ಪ್ರಾಣಿಗಳಿಗೂ ಲಿಂಗಧಾರಣಮಾಡುವುದುಂಟು. ಮಗುವಿಗೆ ಚಿಕ್ಕಂದಿನಲ್ಲಿಯೇ ಲಿಂಗಧಾರಣ ಸಂಸ್ಕಾರವಾಗುವುದರಿಂದ ಅದರ ಮನಸ್ಸಿನಮೇಲೆ ಒಳ್ಳೆಯ ಪರಿಣಾಮವಾಗುವುದೂ ಉಂಟು. ಆದರೆ ಆಗಿನ ಲಿಂಗಧಾರಣವು ಮಗು ತಾನು ತನ್ನ ಆತ್ಮೋನ್ನತಿಗೆಂದು ಗುಣವಿಶಿಷ್ಟವಾದುದಾಗಿ ಗುರುಗಳಿಂದ ಹೊಂದಿರತಕ್ಕುದೇನೂ ಅಲ್ಲ. ಹಾಗಾಗಿದ್ದರೆ ಪುನಃ ದೀಕ್ಷೆಯನ್ನು ಆ ಮಗು ಹೊಂದಲೇಬೇಕೆಂದು ಶಾಸ್ತ್ರನಿಯಮವುಂಟಾಗುತ್ತಿರಲಿಲ್ಲ. ಆ ನಿಯಮವು ವೀರಶೈವ ಸದಾಚಾರ ಸಂಗ್ರಹದಲ್ಲಿ ಹೀಗಿದೆ—

> ಗರ್ಭಾಷ್ಟಮೇ ಕೃತಾ ಮುಖ್ಯಾ ದೀಕ್ಷಾ ಸಾ ಷೋಡಶಾವಧಿ ॥ ಗೌಣಾ ತದೂರ್ಧ್ವ ಮಧಮಾ ದೀಕ್ಷಾ ವೀರಾನ್ವಯಾಯಿನಾಮ್ ॥

ಅರ್ಥ— ವೀರಶೈವ ವಂಶಜರು ಗರ್ಭದಿಂದ ೮ ನೆಯ ವರುಷದಲ್ಲಿ ಹೊಂದುವ ದೀಕ್ಷೆಯು ಉತ್ತಮವಾದುದು. ೧೬ ನೆಯ ವರುಷದೊಳಗಾಗಿ ಹೊಂದುವುದು ಮಧ್ಯಮವು. ಅನಂತರ ಹೊಂದುವುದು ಕನಿಷ್ಟವು.

ಎಂಟು ವರುಷಗಳೊಳಗಾಗಿಯೇ ಪಿಂಡಾದಿ ನಾಲ್ಕು ಸ್ಥಳಗಳವರೆಗಿನ ಯೋಗ್ಯತೆಯನ್ನು ಹೊಂದಿ ದೀಕ್ಷೆಯನ್ನು ಪಡೆಯುವವರು ಅಲೌಕಿಕ ವ್ಯಕ್ತಿಗಳು. ಅಂತೆಯೇ ಅವರು ಉತ್ತಮರು. ಹದಿನಾರು ವರುಷಗಳೊಳಗಾದರೂ ಅಂಥ ಯೋಗ್ಯತೆಯನ್ನು ಹೊಂದಿ ಲಿಂಗಾಯತರಾಗುವವರು ಸಾಮಾನ್ಯರು. ಆ ವರೆಗೂ ಪಿಂಡಾದಿ ಸ್ಥಳಗಳ ಯೋಗ್ಯತೆಯನ್ನು ಹೊಂದದೆ ಅನ್ಯರ ಬಳಕೆಗಾಗಿಯೇ ಲಿಂಗವನ್ನು ಧಾರಣಮಾಡಿಕೊಂಡಿದ್ದು ಆಮೇಲೆ ದೀಕ್ಷೆಯಾಗುವವರು ಕನಿಷ್ಟರು. ಆ ಮೇಲೆಯೂ ತಾನು ಈ ಲಿಂಗವನ್ನು ಇಷ್ಟು ಕಾಲ ಏಕೆ ಧರಿಸಿದ್ದೇನೆ? ಇದರಿಂದ ಪ್ರಯೋಜನವೇನು? ಎಂಬಿವೇ ಮೊದಲಾದ ಸಂಗತಿಗಳನ್ನು ಯೋಚಿಸಿ ದೀಕ್ಷೆಯಾಗದೆ ದೇಹ ಬಿಡುವವರು ಅನ್ಯರಿಗಾಗಿ ಲಿಂಗಾಯತರಾದವರೇ ವಿನಾ ಅವರಿಗಾಗಿಯೇನೂ ಅವರು ಲಿಂಗಾಯತರಾದವರಲ್ಲ.

ಈ ಸಂಕ್ಷಿಪ್ತ ವಿವರಣೆಯ ಮುಂಖ್ಯಾಂಶವೇನೆಂದರೆ— ಲಿಂಗಧಾರಣ ದೀಕ್ಷೆಯೂ ಗುಣಕರ್ಮ ವಿಶಿಷ್ಟವಾದುದೇ ಸರಿ. ಅಂತೆಯೇ ಲಿಂಗಾಯತರಲ್ಲಿ ಹುಟ್ಟಿ ಆಗಲೇ ಲಿಂಗಧಾರಣ ಹೊಂದಿದವರು ಕೂಡಾ ೮-೧೬ ಅಥವಾ ಅದಕ್ಕಿಂತ ಹೆಚ್ಚು ವರುಷಗಳ ಮೇಲಾದರೂ ದೀಕ್ಷೆಯನ್ನು ಹೊಂದಲೇಬೇಕೆಂದು ನಿಯಮವಿದೆ. ಎಂದರೆ ಅಷ್ಟರೊಳಗಾಗಿ ಪಿಂಡಾದಿ ನಾಲ್ಕು ಸ್ಥಳಗಳ ಯೋಗ್ಯತೆಯನ್ನು ಹೊಂದಲೇಬೇಕು. ಇದೊಂದೇ ನಿಯಮವನ್ನಿಟ್ಟದ್ದರೆ ಅಷ್ಟು ವರುಷಗಳ ವರೆಗೆ ಅಲಿಂಗಿಗಳ ಸಂಪರ್ಕ ದೋಷವು ಅವರ ಮನೆಯವರಿಗೆ ಸಂಭವಿಸುತ್ತಿದ್ದಿತು. ಮತ್ತು ಆ ವರೆಗೆ ಆ ವ್ಯಕ್ತಿಯ ಮೇಲಾಗುವ ಸಂಸ್ಕಾರದ ಪರಿಣಾಮವೂ ತಪ್ಪುತ್ತಿತ್ತು. ಎಂದಮೇಲೆ ಸಾರ್ವತ್ರಿಕವಾಗಿ ಈಗ ಹುಟ್ಟಿದೊಡನೆಯೇ ಲಿಂಗಧಾರಣ ಮಾಡುವುದು ಕ್ರಮಪ್ರಾಪ್ತವೂ ಸಮಂಜಸವೂ ಆಗಿಲ್ಲವೆ?

ಸಂಪಾದಕ.]

---

—ಶಿರಸಿ ತಾಲೂಕಿನಲ್ಲಿ ಮಳೆ ಅಗತ್ಯಬೇಕಾಗಿತ್ತು. ಕಳೆದವಾರ ೪ ಇಂಚು ಮಳೆಯಾಗಿ ಎಷ್ಟೋ ಸಮಾಧಾನವಾಯಿತು.

—ಹುಬ್ಬಳ್ಳಿ ಶ್ರೀ ಸಿದ್ಧಾರೂಢ ಸ್ವಾಮಿಗಳ ಮಠದ ಮೇಲ್ವಿಚಾರಣೆಯು ಪಂಚರ ಕಡೆಗೆ ವಹಿಸಲ್ಪಟ್ಟಿತು.

## ಬಾಗಲಕೋಟೆ.

ತಾ. ೧೫-೯-೩೭ ನೆಯ ದಿವಸ ರಾತ್ರಿ ೭॥ ಘಂಟೆಗೆ ಮಾರ್ಕೇಟದ ಹತ್ತರಿರುವ ಶ್ರೀ ಬಸವೇಶ್ವರ ದೇವಾಲಯದಲ್ಲಿ ಶ್ರೀಯುತ ಸೋಮಲಿಂಗಪ್ಪಾ ಶಾಬಾದಿ ಇವರ ಅಧ್ಯಕ್ಷತೆಯ ಕೆಳಗೆ ಸಭೆ ಕೂಡಿತ್ತು. ವಿಜಾಪುರ ಜಿಲ್ಲಾ ಕಾ. ಕ. ಅಧ್ಯಕ್ಷರಾದ ಪಂಡಿತ ಮರುಳಾರಾಧ್ಯ ಶಾಸ್ತ್ರಿಗಳವರು ಕಾಂಗ್ರೆಸ್ಸದ ಬಲ ಮತ್ತು ನಾ| ದೇಸಾಯಿ ಕಂದಾಯ ಮಂತ್ರಿಗಳ ಸಂದೇಶ ಈ ವಿಷಯದಮೇಲೆ ಜನರ ಮೇಲೆ ಒಳ್ಳೇ ಪರಿಣಾಮವಾಗುವಂತೆ ಭಾಷಣಮಾಡಿದರು. ನಂತರ ಶ್ರೀಯುತ ಸಿದ್ಧನಾಥ ಪಂತರು ಬೆಂಗಳೂರು ಹಿಂದೀ ಭಾಷೆಯ ಬಗ್ಗೆ ಮತ್ತು ಹುನಗುಂದ ತಾ. ಕಾ. ಕ. ಅಧ್ಯಕ್ಷರಾದ ಬಸವಶೆಟ್ಟೆಪ್ಪಾ ಬಳುಟಗಿ ಇವರು ಖಾದಿಯ ಮಹತ್ವ ಮತ್ತು ಮಂತ್ರಿಗಳ ಸಂದೇಶ ಮತ್ತು ಕಣಬೂರ ಬಿ. ಎ. ಎಲ್. ಎಲ್. ಬಿ. ವಕೀಲ ಇವರು ರೈತರು ಮಾಡಬೇಕಾದ ಕರ್ತವ್ಯದ ಬಗ್ಗೆ ಭಾಷಣಮಾಡಿದರು. ಆಮೇಲೆ ಅಧ್ಯಕ್ಷರು ತಮ್ಮ ಸಮಾರೋಪ ಭಾಷಣಮಾಡಿದರು. ಶ್ರೀಯುತ ಲಿಂಗಯ್ಯ ಜಂಗಿನ ಇವರು ವ್ಯಾಖ್ಯಾತರ, ಸಭಿಕರ ಮತ್ತು ಅಧ್ಯಕ್ಷರ ಆಭಾರ ಮನ್ನಿಸಿದರು.

ಸೆಕ್ರೆಟರಿ,

---

—ಇದೇ ೨೦ ನೆಯ ತಾರೀಖಿನ ದಿವಸ ಹಿಂದುಸ್ಥಾನವು ಚೀನ ದಿನಾಚರಣೆಯನ್ನು ಆಚರಿಸಬೇಕಾಗಿ ರಾಷ್ಟ್ರೀಯ ಸಭಾಧ್ಯಕ್ಷರಾದ ಪಂಡಿತ ಜವಾಹರಲಾಲರು ರಾಷ್ಟ್ರಕ್ಕೆ ತಿಳಿಸಿದ್ದಾರೆ. ಜಪಾನ ದೇಶದ ಆಕ್ರಮಣವನ್ನು ಎಲ್ಲರೂ ನಿಷೇಧಿಸಿ ಚೀನ ದೇಶದ ವಿಚಾರವಾಗಿ ಸಹಾನುಭೂತಿಯುಳ್ಳವರಾಗಬೇಕು.

## ನೈಜಾಮು ಪ್ರಾಂತದ ವೃತ್ತಾಂತ.

### ಪುರಾಣ ಶ್ರವಣ ಸಮಾರಂಭ.

:(:೦:):

ಗುಲ್ಬರ್ಗಾ ಜಿಲ್ಲಾ ಸುಲೇಪೇಟಿ ಖಟ್ವಾಂಗೇಶ್ವರ ಮಠದಲ್ಲಿ ಇದೇ ಶ್ರಾವಣ ಶು|| ೧ ಇಂದ ಶ್ರೀ ಚೆನ್ನಬಸವೇಶ್ವರ ಪುರಾಣ ಶ್ರವಣವು ಪ್ರಾರಂಭವಾಗಿ ಶ್ರಾವಣ ಬ|| ೩೦ ಶನಿವಾರ ಸಮಾಪ್ತಿಯಾಯಿತು. ಈ ಪುರಾಣವನ್ನು ಸಂಗೀತ ಸಾಹಿತ್ಯದಲ್ಲಿ ಪ್ರೌಢಿಮೆಯನ್ನು ಹೊಂದಿದ ಶ್ರೀಮನ್ನಿರಂಜನ ಸದಾಶಿವ ಸ್ವಾಮಿಗಳವರು ವೇದಾಗಮೋಪನಿಷತ್ತುಗಳ ಪ್ರಮಾಣದಿಂದಲೂ ಮತ್ತು ಭಗವಾನ್ ಶ್ರೀ ಬಸವೇಶ್ವರಾದಿ ಪುರಾತನರ ವಚನ ಪ್ರಮಾಣಗಳಿಂದಲೂ ಬಹು ಮನೋಹರವಾಗಿ ಭಕ್ತಾದಿಗಳಿಗೆ ಬೋಧವಾಗುವಂತೆ ಬೋಧಿಸುತ್ತಿದ್ದರು. ಇವರ ಪುರಾಣ ಪ್ರವಚನದ ವಾಗ್ವೈಖರಿಯನ್ನು ನೋಡಬೇಕೆಂಬುದಾಗಿ ಅನೇಕ ಭಕ್ತ ಮಂಡಲಿಯು ಬಂದು ಮಠದಲ್ಲಿ ಕಿಕ್ಕಿರಿಯುವಂತೆ ತುಂಬುತ್ತಿತ್ತು. ವೀರಶೈವ ಶುದ್ಧಿ ಸಂಘಟನೆ ವಿಷಯವನ್ನೂ ಮತ್ತು ಪರಮತೀಯರಿಗೆ ಲಿಂಗ ಧಾರಣೆಯನ್ನು ಮಾಡಿ ವೀರಶೈವರನ್ನಾಗಿ ಮಾಡಿಕೊಳ್ಳುವ ವಿಷಯವನ್ನೂ ಕುರಿತು ವೀರಶೈವ ಧರ್ಮ ಶಾಸ್ತ್ರೋಕ್ತ ಪ್ರಕಾರವಾಗಿ ಪ್ರತಿಪಾದಿಸುತ್ತಿದ್ದರು. ಮತ್ತು ಮಠಪತಿ ಚಂದ್ರಯ್ಯನವರ ಪುರಾಣ ವಾಚನವಾದರೂ ಬಹು ಮನರಂಜಕವಾಗಿತ್ತು. ಪ್ರತಿ ದಿವಸದಲ್ಲಿಯೂ ಮಠದಲ್ಲಿ ನೂರಾರು ಜನರಿಗೆ ಮೇಲ್ಪಟ್ಟು ಅನ್ನ ಸಂತರ್ಪಣೆಯು ಎಡಬಿಡದೆ ನಡೆದಿತ್ತು.

ಭಾದ್ರಪದ ಶು|| ೧ ದಿವಸ ನಡೆದ ಮಹಾ ಪಾದ ಪೂಜೆ ಸಮಾರಂಭದಲ್ಲಿ ಬ್ರಾಹ್ಮಣಾದಿ ಎಲ್ಲ ಜಾತಿಯವರೂ ಭಾಗವಹಿಸಿ ಕಾರ್ಯವನ್ನು ನೆರವೇರಿಸಿದರು. ಈ ಕಾರ್ಯವು ಈ ರೀತಿಯಾಗಿ ನೆರವೇರುವುದಕ್ಕೆ ಸ್ವಾಮಿಗಳವರ ತಪಃ ಪ್ರಭಾವವೇ ಮುಖ್ಯ ಕಾರಣವಾಗಿರುತ್ತದೆ. ಭಾದ್ರಪದ ಶು|| ೨ ಸೋಮವಾರ ಬೆಳಿಗ್ಗೆ ಬಾಜಾ ಬಜಂತ್ರಿ ಬ್ಯಾಂಡ ವಾದ್ಯಗಳಿಂದಲೂ ಮತ್ತು ವೀರಶೈವ ತರುಣ ಸಂಘದ ಭಜನೆ ಮತ್ತು ಬಸವೇಶ್ವರ ವಚನಗಳ ಘೋಷಣಗಳಿಂದಲೂ ಪುರಾಣ ಮೆರೆವಣಿಗೆಯೂ ಸ್ವಾಮಿಗಳವರ ಪಲ್ಲಕ್ಕಿ ಉತ್ಸವವೂ ಬಹು ವಿಜೃಂಭಣೆಯಿಂದ ಜರುಗಿದವು. ಸ್ವಾಮಿಗಳವರು ಇಂಥಾ ಕ್ಷಾಮ ಕಾಲದಲ್ಲಿ ಕೂಡ ಕರ್ತವ್ಯದಕ್ಷತೆಯಿಂದ ಕಾರ್ಯವನ್ನು ನಿರ್ವಿಘ್ನವಾಗಿ ಕೊನೆಗಾಣಿಸಿದ್ದಕ್ಕಾಗಿ ಸರ್ವ ವೀರಶೈವ ಮಂಡಲಿಯವರಿಗೆ ಹಿಡಿಸಲಾರದಷ್ಟು ಸಂತೋಷವಾಗಿದೆ.

ಶಿವಲಿಂಗಯ್ಯ ಬೀರ್ನಳ್ಳಿ
ಧರ್ಮ ಕಾರ್ಯದರ್ಶಿ.

### ಗುಲಬರ್ಗಾ.

ಇಲ್ಲಿಯ ಶ್ರೀಶರಣಬಸವೇಶ್ವರ ಸ್ಕೂಲಿನ ಮೊದಲನೆ ವರ್ಷದ ವರದಿಯು ನಮ್ಮಕಡೆ ಬಂದಿದೆ. ಈ ಸ್ಕೂಲಿನಲ್ಲಿ ೯೦ ವಿದ್ಯಾರ್ಥಿಗಳು ಕನ್ನಡ, ಉರ್ದು, ಇಂಗ್ಲಿಷ, ಮರಾಠಿ ಕಲಿಯುವವರಿದ್ದಾರೆ. ಇದು ಸಾರ್ವಜನಿಕ ಸ್ವತಂತ್ರ ಶಾಲೆ. ಇಲ್ಲಿಯ ಅಧ್ಯಾಪಕ ಮಂಡಲಿಯ ಸ್ವಾರ್ಥತ್ಯಾಗದಿಂದ ಈ ಸ್ತುತ್ಯ ಕಾರ್ಯ ನಡೆದಿದೆ. ಧನಿಕರು ತುಂಬಾ ಧನಸಹಾಯ ಮಾಡಬೇಕು. —ಸಂಪಾದಕ.

### ಶಿವದೀಕ್ಷಾ ಸಮಾರಂಭ.

ನೈಜಾಮು ಪ್ರಾಂತದ ಪೈಕಿ ಜಿಲ್ಲಾ ಬಸರಾಬಾದ ತಾಲೂಕು ಚಿತಾಪುರ ಇಲಾಖಾ ಪಾಯಗಾ ತರ್ಕಸಪ್ಯಾಟ ಜನರು ಶ್ರೀಮನ್ನಿರಂಜನ ಶಿವಾನಂದ ಸ್ವಾಮಿ ಸೊನ್ನ ಇವರ ಪ್ರಯತ್ನದಿಂದ ತಮ್ಮ ಮಠಕ್ಕೆ ಶ್ರೀಮದ್ಘನಲಿಂಗ ಚಕ್ರವರ್ತಿ ಭೋಸಿಗಿ ಶ್ರೀ ಕೆಂಚಬಸವ ಸ್ವಾಮಿ ಮತ್ತು ಶಿವಮೂರ್ತಿ ಮಲ್ಲಿಕಾರ್ಜುನಶಾಸ್ತ್ರಿ ಜೇರಟಗಿ ಮತ್ತು ಸದರಿ ಗ್ರಾಮದ ಅಯ್ಯಪ್ಪನವರು ಹಿರೇಮಠ ಮತ್ತು ಸದರಿ ಪುರಸಮೂಹ ಸದ್ಗೃಹಸ್ಥರು ಪರಸ್ಥಳೀಯ ಪ್ರಮುಖ ಜನರು ಮತ್ತು ಸುತ್ತಲಿನ ಸದ್ಗೃಹಸ್ಥರನ್ನು ಬರಮಾಡಿಕೊಂಡು ಯಾವತ್ತರ ಒಪ್ಪಿಗೆಯಿಂದ ಶಾಸ್ತ್ರೋಕ್ತಪೂರ್ವಕ ಪರಿಶುದ್ಧವಾಗಿ ದೀಕ್ಷಾ ಸಮಾರಂಭವು ಬಹು ಮಹೋತ್ಸವದಿಂದ ಜರುಗಿಸಿ ತಪಃಸ್ತೇಜೋಮಯರಾದ ಸದರಿ ಸ್ವಾಮಿಗಳ ಅಮೃತ ಹಸ್ತದಿಂದ ಸರ್ವರದು ಸಹಪಂಕ್ತಿ ಭೋಜನವು ಬಹು ಆನಂದದಿಂದ ಇದೇ ಮಿತಿ ಭಾದ್ರಪದ ಶು| ೨ ಸೋಮವಾರ ಶಕೆ ೧೮೫೯ ಈಶ್ವರನಾಮಸಂವತ್ಸರದಲ್ಲಿ ಆಗಲ್ಪಟ್ಟಿದೆ.

ದೀಕ್ಷಾ ಆದ ಮನೆತನದವರ ಹೆಸರು.

ಚಂದಪ್ಪಾ ಮೇಲಪ್ಪನವರ ವ ದೊಡ್ಡಅಂಬಣ್ಣಾ ಮೇಲಪ್ಪನವರ ಮನೆತನದ ತರ್ಕಸಪ್ಯಾಟ ಪಾಕಮರಡ್ಡಿ ಜನರು ೨೦

ಆಗಮಿಸಿದ ಪ್ರಮುಖ ಜನರು.

(೧) ಷಡಾಕ್ಷರ ಸ್ವಾಮಿ ಭೋಸಿಗಿ (೨) ಗುರುನಾಥ ಮಾಸ್ತರ ಯತ್ನಾಳ (೩) ಗುಂಡೇರಾವ ಕುಲಕರ್ಣಿ ಸೊನ್ನ (೪) ಸಿದ್ದಪ್ಪಾ ನಾಲೀ ಪಾಟೀಲ ಜವಳಿಗಿ (೫) ರೇವಣಸಿದ್ಧಪ್ಪಾ ಪೋಲೀಸ ಪಾಟೀಲ ಸೊನ್ನ (೬) ಗುರಪ್ಪಾ ಮಾಕಾ ಸೊನ್ನ (೭) ಸಾಹೇಬಗೌಡಾ ಇಜೇರಿ (೮) ಬಸವಂತರಾಯಾ ಬಿ. ಪಾ. ಎಲಗೋಡ.

ಯಲ್ಲಪ್ಪಾ ಕಕ್ಕೇರಿ
ಇಜೇರಿ.

### ಶಿವದೀಕ್ಷಾ ಸಮಾರಂಭ.

ಶ್ರೀಮನ್ನಿರಂಜನ ಕುಮಾರೇಂದ್ರ ಜಗದ್ಗುರು ಶಿವಲಿಂಗ ಮಹಾಸ್ವಾಮಿಗಳು ಸಂ. ಸಾವಳಗಿ ಮಠ ಇವರ ಶಾಖಾಮಠ ಗೋಕಾಕ ಶ್ರೀ ಶಿವಲಿಂಗೇಶ್ವರ ಫ್ರೀ ಬೋರ್ಡಿಂಗಿನಲ್ಲಿ ಇದೇ ಈಶ್ವರನಾಮ ಸಂವತ್ಸರದ ಶ್ರಾವಣ ಮಾಸದಲ್ಲಿ ಪ್ರಥಮ ಸೋಮವಾರದಿಂದ ಶ್ರಾವಣಾಂತ್ಯದ ವರೆಗೂ ಶ್ರೀಮನ್ನಿರಂಜನ ಮೂರ್ತಿಗಳವರ ಪಾದಪೂಜಾ ಮತ್ತು ಶ್ರೀ ಚೋರ ಬಸವೇಶ್ವರ ಪುರಾಣವು ಶ್ರೋತೃ ಜನಗಳಿಗೆ ಸುಗಮಸದ್ಬೋಧೆಯಿಂದ ಮನಸ್ಸಿನ ಮೇಲೆ ಪರಿಣಾಮವಾಗಿ ಶಿವದೀಕ್ಷೆಯನ್ನು ತೆಗೆದುಕೊಳ್ಳುತ್ತೇವೆಂದು ಉತ್ಕಟೇಚ್ಛೆಯನ್ನು ತೋರಿಸಿದ್ದರಿಂದ ಉಕ್ತ ಶ್ರೀಗಳವರು ಸ್ತ್ರೀ ಪುರುಷರು ಒಟ್ಟು ೪೫ ಜನಗಳಿಗೆ ಶಿವದೀಕ್ಷೆ ಸಮಾರಂಭವನ್ನು ಸದ್ಭಕ್ತರ ಸಮ್ಮತಿಯಂತೆ ಮಾಡಿಸಿದರು. ಈ ಪೌರಾಣ ಮತ್ತು ಪಾದ ಪೂಜೆಯು ಭಾದ್ರಪದ ಶುದ್ಧ ೮ ತಾ. ೧೩-೯-೩೭ ನೆ ಸೋಮವಾರ ದಿವಸ ಸಮಾಪ್ತಿಯಾಯಿತು.

ಓರ್ವ ಪ್ರತ್ಯಕ್ಷದರ್ಶಿ.

---

—ಗುಲಬರ್ಗಾದಲ್ಲಿ ಈಗ ಕಾಲಾರಾ ಕಡಿಮೆಯಾಗಿದೆ. ಮಳೆ ಮಾತ್ರ ಇಲ್ಲ. ಈ ಭಾಗದಲ್ಲಿ ಮಳೆ ಈಗ ಅಗತ್ಯವಾಗಿದೆ.

## ಕಲ್ಯಾಣದಲ್ಲಿ ಸಮಾರಂಭ.

ಜಿಲ್ಲಾ ಗುಲಬರ್ಗಾ ಪೈಕಿ ಕಿಲ್ಲೆಕಲ್ಯಾಣ ಗ್ರಾಮಕ್ಕೆ ಗುಲಬರ್ಗಾ ವೀರಶೈವ ತರುಣ ಸಂಘದಿಂದ ಶ್ರೀ. ಶರಣ ಕವಿ ಮತ್ತು ಮಲ್ಲಪ್ಪ ಇಟಗಿ ಇವರು ತಾ|| ೨೩-೮-೩೭ ನೇ ದಿವಸ ಆಗಮಿಸಿದ್ದರು. ಮರು ದಿವಸ ರಾತ್ರಿ ೭ ಘಂಟೆಯಿಂದ ೧೦ ಘಂಟೆಯ ವರೆಗೆ ವೀರಶೈವರಲ್ಲಿ ಒಳಪಂಗಡಗಳ ಬಗ್ಗೆ ಮತ್ತು ಶುದ್ಧಿ ಸಂಘಟನೆ ಮೇಲೆ ವ್ಯಾಖ್ಯಾನವಾಯಿತು. ಈ ಸಭೆಗೆ ೫೦೦-೬೦೦ ಜನರು ಸೇರಿದ್ದರು. ಮತ್ತು ವೈದರ್ಗಿ ವೀರಶೈವ ಪುಢಾರಿ ಶ್ರೀ. ಧೂಳಪ್ಪಾ ಜಕಾಪುರ ಮತ್ತು ಹುಮನಾಬಾದ, ಕಮಲಾಪುರ, ಧನ್ನೂರ, ಬಾಲಕುಂದಾ, ಪ್ರತಾಪುರ ಇಷ್ಟು ಗ್ರಾಮಗಳ ಜನರು ಆಗಮಿಸಿದ್ದರು. ಶ್ರೀ. ಶರಣ ಕವಿಗಳ ಭಾಷಣದಿಂದ ಜನರಲ್ಲಿ ಒಂದು ಹೊಸ ಚೈ ತ ನ್ಯ ಹುಟ್ಟಿತು. ಕಲ್ಯಾಣ ವೀರಶೈವರ ಸ್ಥಿತಿಯನ್ನು ನೋಡಿ ಅವರ ಮನಸ್ಸಿಗೆ ಬಹಳೇ ವಿಷಾದವೆನಿಸಿತು. ಮರು ದಿವಸ ಕಲ್ಯಾಣ ಪೈಕಿ ಬೇಟ ಬಾಲಕುಂದಿ ಗ್ರಾಮಕ್ಕೆ ಹೋಗಿ ಅಲ್ಲಿ ಶ್ರೀ ಬಸವೇಶ್ವರನ ಗುಡಿಯಲ್ಲಿ ೪ ರಿಂದ ೬| ಘಂಟೆಯ ತನಕ ಭಾಷಣಮಾಡಿದರು. ಸಭೆಗೆ ೨೦೦-೩೦೦ ಜನರು ಸೇರಿದ್ದರು. ಅಲ್ಲಿರುವ ಬಸವಣ್ಣಪ್ಪಾ ಕೊಳವಿ ಶರಣನ ಮಾನ ಮನ್ನಣೆಹೊಂದಿ ಕಲ್ಯಾಣಕ್ಕೆ ಆಗಮಿಸಿದರು.

ಶ್ರೀ ಕ್ಷೇತ್ರ ಕಲ್ಯಾಣ ಬಸವೇಶ್ವರ ಮಠದಲ್ಲಿ ರಾತ್ರಿ ೮ ರಿಂದ ೧೦ ಘಂಟೆಯ ವರೆಗೆ ಶಂಕಾಸಮಾಧಾನ ಹೇಳಿ ಧರ್ಮ ಜಾಗೃತಿಯನ್ನುಂಟುಮಾಡಿದ್ದಾರೆ. ಕಲ್ಯಾಣ ಭಾಗದಲ್ಲಿ ಧರ್ಮ ಪ್ರಚಾರಕರು ಬೇಕಾಗಿದ್ದಾರೆ. ಧರ್ಮ ಪ್ರಚಾರಕ್ಕೆ ಹೊರಟರೆ ಮಾತ್ರ ಈ ಭಾಗದಲ್ಲಿ ಉಪಯೋಗವಾಗುತ್ತದೆ. ನೈಜಾಮ ಭಾಗದ ವೀರಶೈವ ಪುಢಾರಿ ಜನರು ಮೊದಲು ಕಲ್ಯಾಣದ ಕಡೆ ಲಕ್ಷಕೊಡಬೇಕೆಂದು ಪ್ರಾರ್ಥಿಸುತ್ತೇನೆ.

ವಿರೂಪಾಕ್ಷಪ್ಪಾ ಬಸವೇಶ್ವರಮಠ.

---

## ಕೆ ರ ಳ್ಳಿ.

ನೈಜಾಮ ಪ್ರಾಂತದ ಕೆರಳ್ಳಿಯಲ್ಲಿ ಭಜನಾಸಂಘವು ಶ್ರಾವಣ ಮಾಸದಲ್ಲಿ ಪ್ರತಿನಿತ್ಯ ರಾತ್ರಿ ಭಜನೆ ಮಾಡಿ ಜ ನ ರ ಲ್ಲಿ ಧಾರ್ಮಿಕ ಜಾಗೃತಿಯನ್ನು ಮಾಡಿತು. ಶರಣ ಕವಿಗಳ ಬಸವ ಭೂಮಿ ಪುಸ್ತಕದಲ್ಲಿಯ ಪದಗಳೇ ಮುಖ್ಯವಾಗಿದ್ದವು. ಭಜನೆ ಕಾಲದಲ್ಲಿ ರೇಣುಕಾಚಾರ್ಯರ ಬಸವೇಶ್ವರ ಸಿದ್ಧರಾಮೇಶ್ವರರ ಫೋಟೊ ಇಟ್ಟಿತ್ತು. ಕಡೆಗೆ ಗಣಾರಾಧನೆಯಾಯಿತು. ಶ್ರೀ. ಬಸವೇಶ್ವರ ಚಿತ್ರದ ಮೆರವಣಿಗೆ ಬಹು ವೈಭವದಿಂದ ನಡೆಯಿತು.

ಕಡೇದಿವಸ ಸುಲೇಪೇಟೆ ಸ್ಕೂಲ್ ಮಾಸ್ತರ ಶ್ರೀ. ಎಸ್. ಬಸವೇಶ್ವರಾನಂದ ನಾಯಕಲ್ ಇ ವ ರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಪಂಡಿತ ಚಂದ್ರಶೇಖರ ಶಾಸ್ತ್ರಿಗಳು ಮೈಸೂರು ಇ ವ ರೇ ಮೊದಲಾದ ವಿದ್ವಾಂಸರು ವೀರಶೈವ ಏಕೀಕರಣ ಶುದ್ಧಿ ಸಂಗತಿಗಳನ್ನೂ ಆರ್ಯ ಸಮಾಜದ ಅನೇಕ ತಪ್ಪು ವಿಚಾರಗಳನ್ನೂ ಕುರಿತು ಭಾಷಣಮಾಡಿದರು.

ಸಿದ್ಧಪ್ಪ ಬೇನೂರ.

---

—ನಿಜಾಮಪ್ರಾಂತದ ತುಳಜಾಪುರದಲ್ಲಿ ಹಿಂದುಗಳು ಮೆರವಣಿಗೆ ಹೊರಡಿಸಿದಾಗ ಮುಸಲ್ಮಾನರು ದೊಂಬಿ ಮಾ ಡಿ ದ ರು. ಅನೇಕ ಹಿಂದುಗಳಿಗೆ ಗಾಯವಾಗಿದೆ. ತುಳಜಾಪುರದಲ್ಲಿ ವರ್ತಕರು ಹರತಾಳವನ್ನು ಆಚರಿಸಿದರು.

## ನರಗುಂದದಲ್ಲಿ ಶಿವಕೀರ್ತನ ಸಮಾಪ್ತಿ.

ಶ್ರೀ. ವಿರಕ್ತಮಠದಲ್ಲಿ ಸದ್ಭಕ್ತರಿಂದ ಸ್ಥಾಪಿಸಿದ ವೀರಶೈವ ಸಮಾಜೋನ್ನತಿ ಸಂಸ್ಥೆಯಿಂದ, ಮೊದಲೇ ಪ್ರಸಿದ್ಧಪಡಿಸಿದ ಪ್ರಕಾರ ಇದೇ ಶ್ರಾವಣ ಶುದ್ಧ ಪ್ರತಿಪದದಿಂದ ಪ್ರತಿನಿತ್ಯ ಬೆಳಿಗ್ಗೆ ಶ್ರೀ ಮನ್ನಿರಂಜನ ಪ್ರಣವಸ್ವರೂಪಿಗಳಾದ ಚೆನ್ನಬಸವ ಸ್ವಾಮಿಗಳವರ ಕರ್ತೃ ಪೀಠಕ್ಕೆ ಈ ಸಂಸ್ಥೆಯಿಂದ ಸ್ಥಾಪಿಸಿದ ಜ್ಯೋತಿಷ್ಯವೈದಿಕ ಪಾಠಶಾಲೆಯ ಅಧ್ಯಾಪಕ ವ ವಿದ್ಯಾರ್ಥಿಗಳ ಸಂದೋಹದಿಂದ ಮಹಾ ರುದ್ರಾಭಿಷೇಕವನ್ನು ಸಂಜೆ ೪ ಘಂಟೆಗೆ ಬನಹಟ್ಟಿ ಹಿರೇಮಠದ ಶಿ|| ವೀರಸಂಗಯ್ಯನವರು ಶಿವಕೀರ್ತನಗಾರ ಇವರ ನೈತಿಕ ಧಾರ್ಮಿಕ ಸಾಮಾಜಿಕ ವಿಷಯಗಳಿಂದೊಡಗೂಡಿದ ಕೀರ್ತನವನ್ನು ಆಬಾಲವೃದ್ಧರಿಗೂ ಬೋಧವಾಗುವಂತೆ ಒಳ್ಳೇ ವಿಜೃಂಭಣೆಯಿಂದ ಸಾಗಿಸಿ ಭಾದ್ರಪದ ಶು|| ೨ ಸೋಮವಾರ ದಿವಸ ಆರಾಧನೆ ದಾನ ಧರ್ಮಾದಿ ಕಾರ್ಯಗಳನ್ನೆಸಗಿ ಮಂಗಲ ಜಯಘೋಷದೊಡನೆ ಮಹಾ ರುದ್ರಾಭಿಷೇಕ ವ ಕೀರ್ತನವನ್ನು ಸಮಾಪ್ತಿಗೊಳಿಸಲಾಯಿತು.

ಈ ಒಂದು ತಿಂಗಳವರೆಗೆ ಜರುಗಿದ ಕೀರ್ತನರೂಪ ಸದ್ಬೋಧೆಯ ಪರಿಣಾಮವು ಯಾವತ್ತೂ ಜನಾಂಗದ ಮನೋಭೂಮಿಕೆಯನ್ನಾವರಿಸಲು ಪ್ರತಿಯೊಬ್ಬರು ಧರ್ಮಜಾಗೃತಿಯುಳ್ಳವರಾದದ್ದಲ್ಲದೆ ಬಹುಜನರು ದುಡ್ಡು ಆಯುಷ್ಯ ಶಕ್ತಿಯನ್ನು ನಾಶಮಾಡುವ ದುಷ್ಟ ಚಟಗಳಾದ ಚುಟ್ಟಾ ಸಿಗ್ರೇಟ ಸೇದುವುದನ್ನೂ ಚಹಾ ಕಾಫಿ ಕುಡಿಯುವುದನ್ನು ತ್ರಿಕರಣ ಶುದ್ಧಿಯಿಂದ ಪ್ರ ಮಾ ಣ ಪೂರ್ವಕವಾಗಿ ಬಿಡುತ್ತೇವೆಂದು ವಚನಕೊಟ್ಟರು. ಇದೊಂದು ನಮ್ಮ ಸಂಸ್ಥೆಗೆ ಭೂಷಣವೇ ಸರಿ. ಈ ಪ್ರಕಾರ ನುಡಿದಂತೆ ನಡೆದು ನಡೆದಂತೆ ನುಡಿದು ತೋರಿಸುವ ಬೋ ಧ ಕ ರ ಬೋಧಾಮೃತದಿಂದ ಜ ನಾ ಂ ಗ ವು ಕ್ಷಿಪ್ರದಲ್ಲಿಯೇ ಸುಧಾರಿಸುವುದೆಂಬುದಕ್ಕೆ ಏನೂ ಅಭ್ಯಂತರವಿಲ್ಲ.

ಪ್ರಯುಕ್ತ ಪ್ರತಿಯೊಬ್ಬ ಸುಧಾರಕರು ತಮ್ಮ ತಮ್ಮ ಗ್ರಾಮಗಳಲ್ಲಿ ಒಂದೊಂದು ಸಂಸ್ಥೆಗಳನ್ನು ಸ್ಥಾಪಿಸಿ ಆ ಸಂಸ್ಥೆಯ ಮೂಲಕ ನೈತಿಕ ಧಾರ್ಮಿಕ ಸಾಮಾಜಿಕ ವಿಷಯಗಳ ಬಗ್ಗೆ ವಿದ್ವಜ್ಜನರಿಂದ ಭಾಷಣ ರೂಪದಿಂದಾಗಲಿ ಕೀರ್ತನ ಪುರಾಣ ರೂಪದಿಂದಾಗಲಿ ಸದ್ಬೋಧೆಯನ್ನು ಮಾಡಿಸಿ ಜನಾಂಗದಲ್ಲಿರುವ ಅಜ್ಞಾನಾಂಧಕಾರವನ್ನು ಹೋಗಲಾಡಿಸಿ ಧರ್ಮ ಮಾರ್ಗದರ್ಶಕರಾಗಿ ಇಹದಲ್ಲಿ ಕೀರ್ತಿಯನ್ನು ಪರದಲ್ಲಿ ಗತಿಯನ್ನು ಹೊಂದಬೇಕಾಗಿ ಪ್ರಾರ್ಥನೆ.

ಕಾರ್ಯದರ್ಶಿ.

ಶ್ರೀ. ವೀರಶೈವ ಸಮಾಜೋನ್ನತಿ ಸಂಸ್ಥೆ.

---

## ರಾಜೀನಾಮೆ ಪತ್ರ.

ಶ್ರೀ. ರಾ. ರಾ. ಮಹಾಂತಪ್ಪ ಚೋಳಪ್ಪ ಸೂಡಿ ಪ್ರೆಸಿಡೆಂಟ್ ವೀರಶೈವ ಶುದ್ಧಿ ಸಂಘಟನೆ ಸಂಘ ಇಲಕಲ್ಲ ಇವರಿಗೆ—

ನಾನು ಚೆನ್ನಬಸಪ್ಪ ರೇವಣಸಿದ್ಧಪ್ಪ ಹರಿಹರ ಸೆಕ್ರೆಟರಿ ವೀರಶೈವ ಶುದ್ಧೀ ಸಂಘಟನೆ ಸಂಘ ಇಲಕಲ್ಲ ಈ ಲೇಖನದಿಂದ ರಾಜೀನಾಮೆ ಪತ್ರ ಕೊಡುವದೇನೆಂದರೆ—

ಇಲ್ಲಿ ಈ ಸಂಘವನ್ನು ಸ್ಥಾಪಿಸಿ ೨ ವರುಷಗಳಾದವು. ಅದರ ಮೊದಲನೇ ಉದ್ದೇಶವು ವೀರಶೈವ ಒಳಪಂಗಡಗಳ ಐಕೆಮಾಡುವುದು. ಎರಡನೇ ಉದ್ದೇಶವು ಧರ್ಮಾಂತರ ಹೊಂದಿದ ವೀರಶೈವರಿರಲಿ ಅಥವಾ ಮಾಂಸಾಹಾರಿಯಲ್ಲದ ಹಿಂದುವಿರಲಿ ಅವರನ್ನು ಶುದ್ಧೀಮಾಡಿ ವೀರಶೈವರನ್ನಾಗಿಮಾಡುವುದು. ಇವೆರಡೇ ಉದ್ದೇಶ. ಈ ಸಂಘವನ್ನು ಸ್ಥಾಪಿಸುವ ಕಾಲಕ್ಕೆ ವೀರಶೈವರಲ್ಲಿಯ ಎಲ್ಲ ಪಂಗಡಗಳ ೧೦೧ ಜನ ಮುಖಂಡರ ಒಪ್ಪಿಗೆ ಹಾಗೂ ಅವರ ಸಹಿಗಳನ್ನುತಕ್ಕೊಂಡು ಎಲ್ಲರೂ ಆಚರಣೆಗೆ ತರಬೇಕೆಂದು ಠರಾವು ಮಾಡಿತು. ಅದರಂತೆ ಮೊದಲನೇ ವರುಷದಲ್ಲಿ ೩೭ ಜನ ವೀರಶೈವ ವ ವೀರಶೈವೇತರನ್ನು ಶುದ್ಧೀಮಾಡಿ ವೀರಶೈವರನ್ನಾಗಿ ಮಾಡಿ ಈ ಸಂಘದಲ್ಲಿ ಸೇರಿಸಿಕೊಳ್ಳಲ್ಪಟ್ಟಿತು. ಇದು ಸಂಘದ ಎರಡನೇ ಉದ್ದೇಶಕ್ಕೊಳಪಟ್ಟದ್ದು. ಮೊದಲನೇ ಉದ್ದೇಶಕ್ಕಿಂತ ಇದು ಮಹತ್ವದ್ದಿದ್ದು ತೀವ್ರವೇ ಆಚರಣೆಗೆ ಬಂದಿತೆಂದೂ ಇದರಲ್ಲಿ ಮೂಲ ಉದ್ದೇಶವು ಸಮಾವೇಶ ಆಯಿತೆಂದೂ ನಾನು ಸಂಪೂರ್ಣ ನಂಬಿದ್ದೆ. ಆದರೆ ಅದು ಬೂದಿ ಮುಚ್ಚಿದ ಕೆಂಡದಂತೆ ಒಳಗೇ ಇದ್ದದ್ದು ನನ್ನ ಸ್ವಂತ ಅನುಭವದ ಮೇಲಿಂದ ಕಂಡುಬಂದದ್ದೇನೆಂದರೆ—

ನನ್ನ ಮನೆಯಲ್ಲಿ ಒಂದು ಕಾರ್ಯದ ನಿಮಿತ್ಯ ಊಟಕ್ಕೆ ಹೇಳುವ ಪ್ರಸಂಗ ಬಂದಾಗ್ಯೆ ಕೆಲವರು ಬರುತ್ತೇವೆಂದೂ ಕೆಲವರು ಆಗದೆಂದೂ ನಿರಾಕರಿಸಿದರು. ಇದರಿಂದ ಒಳಪಂಗಡಗಳ ಏಕೀಕರಣವಾಗುವುದು ಸಾಧ್ಯವಿಲ್ಲವೆಂದು ಮನಸ್ಸಿಗೆ ಬಹಳ ವಿಷಾದವೆನಿಸಿತು. ನಾನೂ ಒಂದು ಮನಸ್ಸಿನಲ್ಲಿ ನಿಶ್ಚಯಮಾಡಿದೆ. ಏನೆಂದರೆ ಯಾರು ನನ್ನ ಮನೆಗೆ ಊಟಕ್ಕೆ ಬರುವರೋ ಅವರಲ್ಲಿ ಹೋಗಬೇಕು. ಬಾರದವರಲ್ಲಿ ಹೋಗಬಾರದು.

ಇನ್ನೊಂದು ವಿಷಾದದ ಸಂಗತಿಯೆಂದರೆ— ಇದೇ ವಾರದಲ್ಲಿ ವೀರಶೈವರಲ್ಲಿಯ ಭಿನ್ನ ಭಿನ್ನ ಪಂಗಡಗಳಲ್ಲಿ ಊಟಕ್ಕೆ ಹೇಳುವ ಪ್ರಸಂಗ ಬಂತು. ಆಗ್ಯೆ ಪರಧರ್ಮಿಯರಿಗೆ ಕೊಡುವಂತೆ ಶೀದಾ ಕೊಟ್ಟು ಬಿಟ್ಟರು. ಇಂಥವರು ಸಂಘದ ಮೆಂಬರರು. ಅಂದ ಮೇಲೆ ಸಂಘದ ಉದ್ದೇಶವೇನು ? ಮಾಡುವ ಕೃತಿಯೇನು ? ಇಂಥ ಸಂಘದಲ್ಲಿ ಸೆಕ್ರೆಟರಿಯಾಗಿ ಕೆಲಸಮಾಡಲು ನನಗೆ ನಾಚಿಕೆಯೆನಿಸಿ ಇದರಲ್ಲಿಯ ನನ್ನ ಅಂಗವನ್ನು ತಕ್ಕೊಳ್ಳಬೇಕೆಂದು ನಿಶ್ಚಯಿಸಿ ಇಂದು ಈ ಲೇಖಿಯಿಂದ ರಾಜೀನಾಮೆಯನ್ನು ಕೊಟ್ಟಿದ್ದೇನೆ. ಆದ್ದರಿಂದ ಪ್ರೆಸಿಡೆಂಟರವರು ನನ್ನ ಸೆಕ್ರೆಟರಿಯ ಸ್ಥಾನದಲ್ಲಿಯ ಹೆಸರನ್ನು ರದ್ದುಗೊಳಿಸಬೇಕೆಂದು ವಿನಂತಿಮಾಡಿಕೊಳ್ಳುತ್ತೇನೆ.

ಚೆನ್ನಬಸಪ್ಪ ರೇವಣಸಿದ್ಧಪ್ಪ ಹರಿಹರ
ಇಲಕಲ್ಲ.

[ ಶ್ರೀ. ಹರಿಹರ ಚೆನ್ನಬಸವಪ್ಪನವರ "ರಾಜೀನಾಮೆ" ಪತ್ರವನ್ನು ಪ್ರಕಟಿಸಲು ನಾವು ತುಂಬಾ ವಿಷಾದಿಸುತ್ತೇವೆ. ವೀರಶೈವ ಸಮಾಜ ಕಾರ್ಯದಲ್ಲಿ ಮುಂದರಿದ ಇಳಕಲ್ಲಿನಂತಹ ಸ್ಥಳದಲ್ಲಿಯೂ ಈ ವಿಧವಾದ ವೀರಶೈವ ಒಳಭೇದವಿದ್ದುದು ಅತ್ಯಂತ ದುಃಖದ ಸಂಗತಿಯು. ವೀರಶೈವ ಸಮಾಜದ ಈಗಿನ ಅನೇಕ ಕಷ್ಟ ನಷ್ಟಗಳಿಗೆ ಈ ಒಳಪಂಗಡಗಳ ಮೇಲು ಕೀಳಿನ ಹೀನ ಪದ್ಧತಿಯೂ ಒಂದು ಮುಖ್ಯವಾದುದಾಗಿದೆಯೆಂದೂ ಚಹಾ ಅಂಗಡಿಗಳ ಮೂಲಕ ಸಹಭೋಜನದ 'ಮಡಿಯು' ಪ್ರಾಯಶಃ ಎಲ್ಲರ ಮನೆಯಲ್ಲಿಯೂ ಸೇರಿದ ಈ ಕಾಲದಲ್ಲಿ ಸ್ವಮತೀಯರನ್ನು ಹೀಗೆ ಕಡಿಮೆಯಾಗಿ ಕಾಣುವದು ಅತ್ಯಂತ ಅನ್ಯಾಯವೆಂದೂ ಇಳಕಲ್ಲಿನಂತಹ ಸ್ಥಳದಲ್ಲಿರುವ ಅನೇಕರಿಗೆ ಇನ್ನೂ ತಿಳಿಯದಿದ್ದುದು ಆಶ್ಚರ್ಯದ ಸಂಗತಿಯು.

ಶ್ರೀ. ಚೆನ್ನಬಸವಪ್ಪನವರು ಈ ವಿಷಯದಲ್ಲಿ ತೋರಿಸಿದ ಸ್ವಾಭಿಮಾನವನ್ನು ನಾವು ಹೃದಯಪೂರ್ವಕ ಅಭಿನಂದಿಸುತ್ತೇವೆ. ತಮ್ಮಲ್ಲಿ ಊಟಕ್ಕೆ ಯಾರು ಬರುವುದಿಲ್ಲವೋ ಅವರಲ್ಲಿ ತಾವೂ ಹೋಗದಿರುವುದು ನ್ಯಾಯವಾದುದಾಗಿದೆ. ಸೀದಾ ತೆಗೆದುಕೊಳ್ಳುವುದು ಅತ್ಯಂತ ಅಗೌರವವು. ಎಲ್ಲರೂ ಶ್ರೀ. ಚೆನ್ನಬಸವಪ್ಪನವರ ಈ ರೀತಿನೀತಿಗಳನ್ನೇ ಅನುಸರಿಸುವುದು ಅಗತ್ಯವು.

ಈ ಸಂದರ್ಭದಲ್ಲಿ ನಾವು ಶ್ರೀ. ಚೆನ್ನಬಸವಪ್ಪನವರಿಗೆ ಒಂದು ಸಂಗತಿಯನ್ನು ವಿಜ್ಞಾಪಿಸಿಕೊಳ್ಳದಿರಲಾರೆವು. ಅದೇನೆಂದರೆ— ಯಾರು ಆ ಸಂಘದ ಉದ್ದೇಶಗಳಂತೆಯೇ ನಡೆಯಲು ಸಿದ್ಧರಾಗಿದ್ದಾರೆಯೋ ಅಂತಹವರನ್ನು ಕೂಡಿಸಿ ಸಂಘ ಮೂಲಕ ವೀರಶೈವ ಏಕೀಕರಣದ ಪ್ರಯತ್ನವನ್ನು ಪುನಃ ಹೆಚ್ಚು ಸಾಹಸೋತ್ಸಾಹಗಳಿಂದ ಪ್ರಾರಂಭಿಸಬೇಕೇ ವಿನಾ ಆ ಕಾರ್ಯವನ್ನೇ ಬಿಟ್ಟುಬಿಡಬಾರದು. ಅಲ್ಲಿಯ ಅನೇಕ ಮಹಾಶಯರು ಶ್ರೀ. ಚೆನ್ನಬಸವಪ್ಪನವರಂತೆಯೇ ವೀರಶೈವ ಏಕೀಕರಣದ ಕಾರ್ಯಕ್ಕೆ ತುಂಬಾ ಅನುಕೂಲವಾಗಿದ್ದಾರೆಂದೇ ನಾವು ನಂಬಿದ್ದೇವೆ.

—ಸಂಪಾದಕ]

---

## ಯತ್ನಿಸು.

(ಒಂದು ಇಂಗ್ಲಿಷ ಕವಿತೆಯ ಅನುವಾದ)

ಝುಳದಿಂ ಕಾಯ್ದಿರೆ ಕಬ್ಬಿಣವನು ನೀವ್ ಹೊಡಿಯಿರಿ ಬಲದಿಂದ | ಮೊಳೆಯನು ನೆಟ್ಟಗೆ ಹಿಡಿಯುತ ಹೊಡಿಯಿರಿ ತಲೆಯಲಿ ಛಲದಿಂದ ||೧||

ಎಸಗುವ ಕಾರ್ಯನೆಸಗುವದಾದೊಡೆ ಮನದಿಂದೆಸಗುವುದು| ಎಸೆಯುವ ಸ್ಥಾನವ ತಲಪುವದಾದೊಡೆ ನೋರಡಿಯ ಹತ್ತುವದು ||೨||

ನೆಲದಲಿ ನಿಲ್ಲುತ ಮುಗಿಲನು ನೋಡಿದರೇನಾಯಿತೆನ್ನಣ್ಣಾ ಒಲವಿನ ಯತ್ನವದಿಲ್ಲದೆ ಎಲ್ಲಿಗೆ ಮುಟ್ಟುವದೆಂತಣ್ಣಾ ||೩||

ಎಡವಿದರೇನಾಯ್ತಣ್ಣನೆ ಎಂದೆಂದೆದೆಗುಂದದೆ ನೀನು | ಬಿಡದಲೆ ಯತ್ನಿಸು ಯತ್ನಿಸು ಕೊನೆಯಲಿ ಪಡೆಯುವೆ ಗೆಲುವನ್ನು ||೪||

ಅನ್ನದಾನೇಶ್ವರ ಕುಪಸ್ತ ಗುಡೂರು.

---

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣಮಂದಿರದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

## The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ |
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ‖ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೨೭ನೆಯ ಸಪ್ಟೆಂಬರ್ ೧೯೩೭. | ಸಂಚಿಕೆ ೬ |
|---|---|---|

ಜನಸೇವೆಯೇ ದೇವರಸೇವೆ.

### ಜೈ! ಮಹಾತ್ಮಾ ಗಾಂಧೀ ಮಹಾರಾಜಕೀ ಜೈ!!

ಮಹಾತ್ಮಾ
ಗಾಂಧೀಜಿಯವರ
೬೯ ನೆಯ
ವರ್ಷ ವರ್ಧಂತಿಯನ್ನು
ಅಕ್ಟೋಬರ್
೨ ನೆಯ ತಾರೀಖಿನ ದಿನ
ತಪ್ಪದೇ
ಆಚರಿಸಿರಿ.
ಆ ವರೆಗೆ
ಗಾಂಧೀ ಸಪ್ತಾಹವನ್ನೂ
ನಡೆಯಿಸಿರಿ.



**ಗಾಂಧೀ ಸಪ್ತಾಹದಲ್ಲಿ ಏನು ಮಾಡಬೇಕು?**

೧ ಅಸ್ಪೃಶ್ಯತಾ ನಿವಾರಣೆ.
೨ ಖಾದಿ ಪ್ರಸಾರ.
೩ ಮದ್ಯಪಾನ ಪ್ರತಿಬಂಧ.
೪ ಗೋಸಂರಕ್ಷಣೆ.
೫ ಕಾಂಗ್ರೆಸ್ಸಿಗೆ ಸದಸ್ಯರನ್ನು ಮಾಡುವುದು.
೬ ಗಾಂಧೀಜಿಯವರ ತತ್ವ ಪ್ರಸಾರಗೊಳಿಸುವುದು.

**ಕರ್ನಾಟಕವನ್ನು ಪ್ರತ್ಯೇಕ ಪ್ರಾಂತವನ್ನಾಗಿ ಮಾಡಲು**
ಗಾಂಧೀಜಿಯವರು ತುಂಬಾ ಒಪ್ಪಿ ಮುಂಬೈ ಮಂತ್ರಿಮಂಡಲಕ್ಕೂ ಈ ವಿಚಾರವಾಗಿ
ಪ್ರಯತ್ನಿಸಲು ತಿಳಿಸಿದ್ದಾರೆ.

ದೇಹವೇ ದೇವಾಲಯ.



# ಶರಣ ಸಂದೇಶ

THE SHARANA SANDESHA.



## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೨೭ ನೆಯ ಸಪ್ಟೆಂಬರ್ ೧೯೩೭. | ಸಂಚಿಕೆ ೩

## ಮಹತ್ವದ ಸುದ್ದಿಗಳು.

—ಜಪಾನಿ ಸೈನ್ಯದವರು ವಿಮಾನುಗಳಿಂದ ಚೀನಿ ಸೈನ್ಯದ ಮೇಲೆ ಪತ್ರಿಕೆಗಳನ್ನು ಎಸೆದು ಬಾಂಬಿನ ಈ ಆಘಾತದಿಂದ ಪಾರಾಗಿರಿ. ಎಂದು ಎಚ್ಚರಿಸುತ್ತಿದ್ದಾರೆ.

—ಕಾಂಗ್ರೆಸ್ಸಿನ ಅಧ್ಯಕ್ಷರಾದ ಪಂಡಿತ ಜವಾಹರಲಾಲರು ಚಿಕ್ಕ ಪುಟ್ಟ ವಿಷಯಗಳಲ್ಲೆಲ್ಲಾ ಕೂಲಿಕಾರರು ಕಟ್ಟುಮಾಡಿಕೊಳ್ಳಬಾರದಾಗಿ ತಿಳಿಸಿದ್ದಾರೆ.

—ಸಂಯುಕ್ತ ಪ್ರಾಂತದ ಬುಲಂದಶಹರ ಜಿಲ್ಲೆಯಲ್ಲಿಯ ಚಿತ್ತಾ ಎಂಬ ಗ್ರಾಮದ ಕಾಂಗ್ರೆಸ್ ಕಮಿಟಿಯವರ ಕೈಯಲ್ಲಿದ್ದ ರಾಷ್ಟ್ರಧ್ವಜವನ್ನು ಅಲ್ಲಿಯ ಜಮೀನುದಾರರು ಕಿತ್ತಿಸೆದು ಕೆಲವು ಕೆಲಸಗಾರರಿಗೆ ಹೊಡೆದಿದ್ದಾರೆ.

—ಬರುವ ತಿಂಗಳು ಮೈಸೂರಲ್ಲಿ ೧೭-೧೮ ನೆಯ ತಾರೀಖುಗಳಲ್ಲಿ ಕೂಡುವ ಮೈಸೂರು ಸಂಸ್ಥಾನದ ಲೋಕಲ್ ಬೋರ್ಡುಗಳ ಪರಿಷತ್ತಿಗೆ ವೀರ ನರಿಮನ್ನರು ಅಧ್ಯಕ್ಷರಾಗಿರುವರು.

—ನಾನಕಿಂಗ್ ಪಟ್ಟಣದ ಮೇಲೆ ಜಪಾನಿ ೫೦ ವಿಮಾನುಗಳು ಬಾಂಬುಗಳನ್ನು ಎಸೆದು ಬಹು ಅನರ್ಥವನ್ನುಂಟುಮಾಡಿದವು. ೧೦೦ ಜನರು ಮೃತಪಟ್ಟರು. ೪೦ ಸ್ಥಳಗಳಲ್ಲಿ ಭಯಂಕರವಾದ ಬೆಂಕಿಹತ್ತಿ ೨೦೦೦ ಜನರಿಗೆ ಗಾಯವಾಯಿತು.

—ನಿಜಾಮ ಸರಕಾರವು ತನ್ನ ರಾಜಕೀಯ ಸುಧಾರಣೆಯ ರೀತಿನೀತಿಗಳನ್ನು ತಿಳಿಸಲು ದಿ. ಬ. ಅರ್ವಮುಧು ಅಯಂಗಾರರ ಅಧ್ಯಕ್ಷತೆಯಲ್ಲಿ ೫ ಜನರ ಒಂದು ಸಮಿತಿಯನ್ನು ಏರ್ಪಡಿಸಿದೆ. ಈ ಸಮಿತಿಯಲ್ಲಿ ೪ ಮುಸಲ್ಮಾನರು ೨ ಹಿಂದುಗಳು ಸಭಾಸದರು. ಇನ್ನು ಆರು ತಿಂಗಳುಗಳೊಳಗಾಗಿ ವರದಿಯು ಪ್ರಕಟವಾಗುವುದು.

### ಗಾಂಧೀಜಿಯವರ ಸೂಚನೆ.

ಅಮೇರಿಕೆಗೆ ಹಿಂದುಸ್ಥಾನದಿಂದ ವೈದ್ಯಶಾಸ್ತ್ರದ ಶೋಧಾರ್ಥವಾಗಿ ಕೊಲ್ಲಲು ಮಂಗಗಳನ್ನು ವಿಪರೀತವಾಗಿ ತೆಗೆದುಕೊಂಡು ಹೋಗುತ್ತಿದ್ದಾರೆ. ಇದನ್ನು ನಿಲ್ಲಿಸಬೇಕಾಗಿ ಅಮೇರಿಕೆಯಿಂದಲೆ ೫೦ ಪತ್ರಗಳು ಗಾಂಧೀಜಿಯವರ ಕಡೆಗೆ ಬಂದಿವೆ. ಆದುದರಿಂದ ಗಾಂಧೀಜಿಯವರು ಹರಿಜನ ಪತ್ರಿಕೆಯಲ್ಲಿ ಹೀಗೆ ಸೂಚಿಸಿದ್ದಾರೆ—

"ಮನುಷ್ಯನು ಸುಖವೃದ್ಧಿಗಾಗಿ ಈ ಬಡ ಪ್ರಾಣಿಗಳನ್ನು ಕೊಲ್ಲುವುದು ವಿಹಿತವಲ್ಲ. ಪ್ರಾಣಿಗಳಲ್ಲಿ ದಯವಿರಬೇಕೆಂಬುದು ಕೃತಿಯಲ್ಲಿ ಬರುವುದರಿಂದಲೇ ಮನುಷ್ಯನ ದುಃಖವು ಸಹಿಸಲ್ಪಡುವುದು. ನನ್ನಲ್ಲಿ ಅಧಿಕಾರವಿದ್ದಿದ್ದರೆ ಈ ಅಮಾನುಷ ಕೃತಿಯನ್ನು ಕೂಡಲೆ ನಿಲ್ಲಿಸುತ್ತಿದ್ದೆನು. ಹಿಂದುಸ್ಥಾನ ಸರಕಾರವು ಇದನ್ನು ನಿಲ್ಲಿಸಬೇಕು."

---

### ಚಿತ್ರಗಳ ಸ್ಪಷ್ಟೀಕರಣ.

ಶರಣ ಸಂದೇಶ ಪತ್ರಿಕೆಯು ಕಾಂಗ್ರೆಸ್ಸಿನ ವಿರುದ್ಧವಾಗಿ ಪ್ರಚಾರ ಮಾಡುವ ಅರಾಷ್ಟ್ರೀಯ ಪತ್ರಿಕೆಯೆಂದೂ ಇದು ಬ್ರಾಹ್ಮಣರ ವಿರೋಧದ ಪತ್ರಿಕೆಯೆಂದೂ ಇತ್ತೀಚಿಗೆ ಕೆಲವರು ಜನರಲ್ಲಿ ದುರಭಿಪ್ರಾಯವನ್ನುಂಟುಮಾಡುತ್ತಿದ್ದಾರೆ. ಆದುದರಿಂದ ಈ ಪತ್ರಿಕೆಯ ಉದ್ದೇಶ ಮತ್ತು ಧೋರಣಗಳು ಸ್ಪಷ್ಟ ಕಾಣುವಂತೆ ಈ ೭ ನೆಯ ವರ್ಷದ ಮೊದಲನೆ ಸಂಚಿಕೆಯಿಂದಲೇ ಕೆಲವು ಚಿತ್ರಗಳನ್ನು ಹಾಕಬೇಕೆಂದು ಯೋಚಿಸಿದ್ದೆವು. ಆದರೆ ಅವು ಸಕಾಲಕ್ಕೆ ಮಾಡಲ್ಪಡಲಿಲ್ಲ. ಆದಕಾರಣ ಈ ಗಾಂಧೀಜಿಯವರ ಸಪ್ತಾಹದಿಂದ ಅವುಗಳನ್ನು ಹಾಕಲುಪಕ್ರಮಿಸಿದ್ದೇವೆ.

### ಅಭಿನಂದನ.

ಈ ಚಿತ್ರಗಳನ್ನು ನಮ್ಮ ಮಿತ್ರರಾದ ಬೆಂಗಳೂರಿನ ಯಜಮಾನ್ ಎಂಡ್ ಸನ್ ಕಂಪನಿಯ ಯಜಮಾನರು ಸಕಾಲಕ್ಕೆ ಬರೆಸಿ ಬ್ಲಾಕ್ ಮಾಡಿ ಕಳಿಸಿದ್ದಕ್ಕಾಗಿ ನಾವು ಆ ಮಹಾಶಯರಿಗೆ ಹೃದಯಪೂರ್ವಕ ಅಭಿನಂದಿಸುತ್ತೇವೆ.

### ಸಾದರ ಸ್ವೀಕಾರ.

ದೇವರೂಗಿ ಪುರಾಣ ಮಹೋತ್ಸವದ ಕಾಲಕ್ಕೆ ಶರಣ ಸಂದೇಶ ಪತ್ರಿಕೆಯ ಸಹಾಯಾರ್ಥವಾಗಿ ಕಳುಹಿಸಿದ ೨ ರೂ. ಗಳನ್ನು ಕೃತಜ್ಞತಾಪೂರ್ವಕ ಸ್ವೀಕರಿಸಿದ್ದಾಗಿದೆ.

ಮ್ಯಾನೇಜರ್.

# "ಶರಣ ಸಂದೇಶ" ದ ವಾಚನದಿಂದಾದ ಅನುಭವ.

(ಲೇಖಕರು— ಶ್ರೀ. ಪ್ರಲ್ಹಾದ ಜಯವಂತ ಬುರ್ಲಿ ಯಾದಗಿರಿ.)

ಮೇಲ್ಕಾಣಿಸಿದ ಪತ್ರಿಕೆಯು ಪೂರ್ವಾರ್ಧಪಟ್ಟದ ತನ್ನ ಕಾರ್ಯಕ್ರಮವನ್ನು ಮುಗಿಸಿ ಈಗ ಉತ್ತರಾರ್ಧದಲ್ಲಿ ಅಡಿ ಇಟ್ಟಿರುವುದಾಗಿದೆ. ಪ್ರಥಮ ವರುಷದಲ್ಲಿಯೇ ಇದರ ಪರಿಚಯದ ಸುದೈವವು ನನಗುಂಟಾಯಿತು. ಅಗಿನಿಂದಲೇ ಈ ಪತ್ರಿಕೆಯು ತನ್ನ ಪವಿತ್ರ ಕರ್ತವ್ಯ ಶಕ್ತಿಯಿಂದ ನನ್ನ ಮನಸ್ಸನ್ನಾಕರ್ಷಿಸಿಕೊಂಡಿದೆ. ಮೂರ್ತಿ ಸಣ್ಣದಾದರೂ ಕೀರ್ತಿ ಮಾತ್ರ ದೊಡ್ಡದಾಗಿದೆ. ಈ ಪತ್ರಿಕೆಯು ಬೆಲ್ಲದಂತಿರದೆ ಬೇವಿನಂತಿರುವುದು. ಇದಕ್ಕೆ ಪಾಗೋಟೆ ಪತ್ರಿಕೆಯೆಂದೂ, ಪಂಜಾಬಿ ಪತ್ರಿಕೆಯೆಂದೂ, ಮತ್ತು 'ಕಂಬಳಿಯವರ' ಪತ್ರಿಕೆಯೆಂದೂ ಬೇರೆ ಬೇರೆ ಜನರು ಬೇರೆ ಬೇರೆ ರೀತಿಯಲ್ಲಿ ಹೇಳುತ್ತಿರುವಂತೆ ನಾನಾದರೂ ಈ ಪತ್ರಿಕೆಯು "ಹಿಂದು ರಾಷ್ಟ್ರ ಜೀವನ" ಪತ್ರಿಕೆಯೆಂದೇ ಹೇಳಬಲ್ಲೆನು. ರೋಗವು ಬಹು ಭಯಂಕರವಾದುದಿರುವಂತೆಯೇ ಔಷಧವಾದರೂ ಕೂಡ ಬಹು ತೀಕ್ಷ್ಣತರವಾದುದಿರುತ್ತದೆ, ಔಷಧವು ರೋಗಿಗೆ ಸೇರದಿದ್ದರೂ ಕೂಡ ವೈದ್ಯನು ಹೇಗೆ ಬಲಾತ್ಕಾರದಿಂದಲಾದರೂ ಹಾಕುತ್ತಾನೆಯೋ ಹಾಗೆಯೇ 'ಶರಣ ಸಂದೇಶ' ವು ಎಷ್ಟೋ ಜನರಿಗೆ ಅಪ್ರಿಯವಾದ ಪತ್ರಿಕೆಯಾದರೂ ಕೂಡ ಅದರ ಸಂಪಾದಕ ಮಹಾಶಯರು ತಮ್ಮ ಕಾರ್ಯವನ್ನು ಹಾಗೇ ಸಾಗಿಸಿಯೇ ಇರುವರು. ಸಾಗಿಸಲೇ ಬೇಕು. ವೈದ್ಯನು ರೋಗಿಯ ಕ್ಷಣಿಕ ದೃಷ್ಟಿಯಿಂದ ಶತ್ರುವಾಗಿ ಕಂಡರೂ ಕೂಡ ನಿಜವಾಗಿಯೂ ಆತನು ಮಿತ್ರನಲ್ಲವೆ?

'ಬೈದವರು ಬುದ್ಧಿಹೇಳಿದರು' ಎಂಬ ನಾಣ್ಣುಡಿಯು ಈ ಪತ್ರಿಕೆಯನ್ನೋದುವುದರಿಂದ ನೆನಪಿಗೆ ಬರುತ್ತದೆ. 'ನಮ್ಮ ಹಿತಚಿಂತಕರಿಗೇನೇ ನಾವು ನಮ್ಮ ಶತ್ರುಗಳೆಂದು ತಿಳಿಯುತ್ತೇವೆ.' ಎಂದು ಒಬ್ಬ ಹಿಂದು ಕವಿಯು ತನ್ನ ಉರ್ದು ಕವಿತೆಯಲ್ಲಿ ಹೇಳಿರುವನು. 'ನಡೆಯುವವನು ಎಡವುವನು' ಎಂಬಂತೆ ಉತ್ತಮ ಕಾರ್ಯಗಳಲ್ಲಿ ಎಡರುಗಳು ಬರುವದು ಹೆಚ್ಚೆಂಬ ಸಂಗತಿಯು ಲೋಕ ವ್ಯವಹಾರದಲ್ಲಿ ಹೆಜ್ಜೆಜ್ಜೆಗೆ ಕಂಡುಬರುವದು. ಇದೇ ಸ್ಥಿತಿಯು ಈಗ ಈ ಪತ್ರಿಕೆಗೆ ಪ್ರಾಪ್ತವಾಗಿದೆ. ಇದು ತನ್ನ ಆತ್ಮ ನಿರೀಕ್ಷಣೆಯಲ್ಲಿ ಹೇಳಿಕೊಂಡಿರುವಂತೆ ತನ್ನ ಮುಖ್ಯ ಮೂರು ಉದ್ದೇಶಗಳಿಂದ ಮೂರು ಪಂಗಡದವರಿಗೂ ಕಣ್ಣಿನಲ್ಲ ಒತ್ತುವ ಪತ್ರಿಕೆಯಾಗಿದ್ದರೂ ಬಹು ಜನರಿಂದುಂಟಾದ ಒಂದು ಪಂಗಡದವರಿಗೆ ಮಾತ್ರ ಬಲು ಮುದ್ದಾದ ಪತ್ರಿಕೆಯಾಗಿದೆ. ದಿನೆ ದಿನೆ ಇದೇ ಪಂಗಡದವರ ಸಂಖ್ಯೆಯು ಹೆಚ್ಚುತ್ತಿರುವದೊಂದು ಶುಭ ಲಕ್ಷಣ.

ಇದು ಭಾರತದ ಸ್ವಾತಂತ್ರ್ಯ, ಹಿಂದು ಸಮಾಜ ಸಂಘಟನೆ, ಹಾಗು ವೀರಶೈವ ಧರ್ಮ ಸುಧಾರಣೆ ಎಂಬ ತನ್ನ ಈ ಮೂರು ಶ್ರೇಷ್ಠ ಕರ್ತವ್ಯಗಳಿಂದ ಕೆಲವು ಕಾಂಗ್ರೆಸ್ಸಿನವರಿಗೂ ಸನಾತನಿಗಳಿಗೂ ಮತ್ತು ಪಂಚಾಚಾರ್ಯರ ಪಂಗಡದವರಿಗೂ ಬೇಡಾದ ಪತ್ರಿಕೆಯಾಗಿದೆ. ಆದರೆ ಯಾರಿಗೆ 'ಹಿಂದುತ್ವ' ವಿಶಿಷ್ಟವಾದ ಸ್ವಾತಂತ್ರ್ಯವೂ ಬೇಕಾಗಿದೆಯೋ ಅವರು ಯಾವ ಪಂಗಡದವರೇ ಇರಲಿ ಅವರಿಗೆ ಮಾತ್ರ ಇದು ಪ್ರೇಮದ ಪತ್ರಿಕೆಯಾಗಿದೆ. ಭಾರತದ ಸ್ವಾತಂತ್ರ್ಯಕ್ಕೆ ಹಿಂದು ಮುಸಲ್ಮಾನರ ಐಕ್ಯವೂ ಹಿಂದು ಮುಸಲ್ಮಾನರ ಐಕ್ಯಕ್ಕೆ ಹಿಂದು ಸಂಘಟನೆಯೂ, ಹಿಂದು ಸಂಘಟನೆಗೆ ಅದರಲ್ಲಿರುವ ಅನೇಕ ಪಂಗಡಗಳ ಸುಧಾರಣೆಯೂ ಅವಶ್ಯಕವೆಂಬುವದು ಯಾರಿಗೆ ತಾನೇ ತಿಳಿದಿರಲಿಕ್ಕಿಲ್ಲ? ತಿಳಿದೂ ತಿಳಿದೂ ಒಣ ಹುರುಳಿಲ್ಲದ ದುರಾಭಿಮಾನವೇಕೆ? ಇದು ಕಾಂಗ್ರೆಸ್ಸಿನ ವಿರುದ್ಧ ಪ್ರಚಾರ ಮಾಡುವ ಪತ್ರಿಕೆಯೆಂಬ ಆಕ್ಷೇಪಣೆಯು ಸರಿಯಾದುದಲ್ಲ. ಏಕೆಂದರೆ, ಚುನಾವಣೆಯ ಕಾಲದಲ್ಲಿ ಕಾಂಗ್ರೆಸ್ಸಿಗೇನೇ ಮತಕೊಡಿರೆಂದು ಸಾರಿದ ಸಂಗತಿ ಈ ಪತ್ರಿಕೆಯನ್ನೋದುತ್ತಿರುವವರೆಲ್ಲರಿಗೂ ಗೊತ್ತಿರುವದು. ಆದರೆ ಕಾಂಗ್ರೆಸ್ಸಿನ ಕೆಲವು ಪಕ್ಷಾಂಧ ಜನರ ನಡಾವಳಿಗಳು ಮಾತ್ರ ಇದಕ್ಕೆ ಮಾನ್ಯವಿಲ್ಲ. ಮೊನ್ನೆ ಸೊಲ್ಲಾಪುರದಲ್ಲಿ ಸ್ವಾತಂತ್ರ್ಯವೀರ ಬ್ಯಾ. ಸಾವರಕರರ ಮೇಲಾದ ಪಾದರಕ್ಷೆಗಳ ವೃಷ್ಟಿಯ ನಿಷೇಧವೇ ಇದಕ್ಕೆ ದೃಷ್ಟಾಂತ. ಕಾಂಗ್ರೆಸ್ಸೇತರ ಪಕ್ಷಗಳೆಲ್ಲ ಅರಾಷ್ಟ್ರೀಯವಾದವುಗಳೆಂಬ ಕಾಂಗ್ರೆಸ್ಸಿನವರ ಆಕ್ಷೇಪಣೆಯನ್ನು ಮಾತ್ರ ಇದು ಯಾವಾಗ್ಯೂ ಟೀಕಿಸುತ್ತಲೇ ಬಂದಿರುವದು.

ಸುಸಂಘಟಿತವಾದ ಮುಸಲ್ಮಾನ ಸಮಾಜವು ಮುಸ್ಲಿಂಲೀಗ್ ವನ್ನು ಸ್ಥಾಪಿಸಿದರೆ ಮಾತ್ರ ತಪ್ಪಲ್ಲ. ಆದರೆ ಸಂಘಟನೆ ಇಲ್ಲದ ಹಿಂದು ಸಮಾಜವು ತನ್ನ ಸಂಘಟಿತದ ಸಲುವಾಗಿ 'ಹಿಂದು ಮಹಾಸಭೆ' ಯನ್ನು ಸ್ಥಾಪಿಸಿದುದು ಮಾತ್ರ ತಪ್ಪಲ್ಲವೆ? ಹಿಂದು ಧರ್ಮದ ಸಮಾಧಿಯಾಗಿ ಅದರ ಮೇಲೆ ಸ್ವಾತಂತ್ರ್ಯ ಧ್ವಜವು ಹಾರಾಡುವಂತಿದ್ದರೆ ಅದಕ್ಕಿಂತಲೂ ಈಗಿದ್ದ ಪಾರತಂತ್ರ್ಯವೇ ಮೇಲೆಂದು ಯಾವ ಹಿಂದುತ್ವಾಭಿಮಾನಿಗೆ ಅನಿಸಲಿಕ್ಕಿಲ್ಲ? ಕಾಂಗ್ರೆಸ್ಸಿನ ಮುಂದಾಳಾಗಿದ್ದ ಪಂ. ಮಾಲವೀಜಿಯವರು ಕಾಂಗ್ರೆಸ್ ಪಕ್ಷವನ್ನು ಬಿಟ್ಟು ಬೇರೆ ಪಕ್ಷವನ್ನು ಸ್ಥಾಪಿಸಿದುದೇತರಸಲುವಾಗಿ? ಆ ಜಾತಿ ನಿರ್ಣಯವೆಂಬ ಕುಠಾರದ ಸಲುವಾಗಿಯೇ ಅಲ್ಲವೆ? '೩೩ ಕೋಟಿ ಜನರು ನನ್ನ ವಿರುದ್ಧವಾದರೂ ನನ್ನನ್ನು ಕಡಿದು ತುಂಡು ತುಂಡು ಮಾಡಿದರೂ ಕೂಡ ನಾನು ನನ್ನ ಅಭಿಪ್ರಾಯವನ್ನು ಮಾತ್ರ ಬಿಡುವವನಲ್ಲ' ಎಂದು ಬ್ಯಾ. ಸಾವರಕರರು ಹೇಳುವುದೇತಕ್ಕೆ? ಆ ಉಜ್ವಲವಾದ ಹಿಂದುತ್ವದ ಸದಭಿಮಾನದಿಂದಲ್ಲವೆ? ಭಾರತದಲ್ಲಿರುವ ಬಹು ಸಂಖ್ಯಾಕ ಹಿಂದುಗಳಿಗೆ ಮುಸಲ್ಮಾನೇತರರೆಂದು ಸಂಬೋಧಿಸುವದೇನು ಸ್ವಲ್ಪೇ ಅವಮಾನಕರವೆ? ಒಂದು ವೇಳೆ ಸ್ವಾತಂತ್ರ್ಯವು ಇಂದಿಲ್ಲ ನಾಳೆಯಾದರೂ ದೊರೆಯಬಹುದು. ಆದರೆ ಕಳೆದು ಹೋದಮೇಲೆ ಹಿಂದುತ್ವವು ಪುನಃ ದೊರೆಯಬಹುದೆ? ಆದಕಾರಣ ಈ ಪತ್ರಿಕೆಯು ಈ ವರೆಗೂ ಮಾಡುತ್ತ ಬಂದಿರುವ ರಾಜಕೀಯ ಕಾರ್ಯವು ಬಹು ಯೋಗ್ಯವಾದುದಿರುತ್ತದೆ.

ಇನ್ನು, ಸನಾತನಿಗಳು ಈ ಪತ್ರಿಕೆಯು ಆರ್ಯ, ಸಂಸ್ಕೃತಿ, ವೇದ ಹಾಗೂ ಬ್ರಾಹ್ಮಣರ ವಿರುದ್ಧ ಬರೆಯುವದೆಂದು ಕೂಗಾಟವನ್ನೇ ಎಬ್ಬಿಸಿರುವರು. ಈಗ ಈ ದೇಶದಲ್ಲಿ ನಾನು ಶುದ್ಧ ಆರ್ಯನೆಂದು ಹೇಳಿಕೊಳ್ಳಲು ಯಾರಿಗೆ ತಾನೆ ಎದೆ ಇರುವುದು? ಆರ್ಯ ಮತ್ತು ದ್ರಾವಿಡ ಎರಡು ಜನಾಂಗಗಳು ಪರಸ್ಪರ ಪ್ರೇಮದಿಂದಲೇ ಆಗಲಿ, ಬಲಾತ್ಕಾರದಿಂದಲೇ ಆಗಲಿ ಅಥವಾ ದೀರ್ಘ ಕಾಲದ ಸಹವಾಸದಿಂದಲೇ ಆಗಲಿ ಇತಿಹಾಸ ಕಾಲದ ಪೂರ್ವದಲ್ಲಿಯೇ ಒಂದರಲ್ಲೊಂದು ಬೆರೆತು ಹೋಗಿ ಈಗಿನ ಹಿಂದು ಸಮಾಜವಾಗಿದೆ. ಅಂದಮೇಲೆ ಒಣ ಅಭಿಮಾನವೇಕೆ? ಇನ್ನು, ದಾಸಕೂಟದವರು ಸಂಸ್ಕೃತವನ್ನು ಬಿಟ್ಟು ಮಾತೃಭಾಷೆಯಾದ ತಿಳಿಗನ್ನಡದಲ್ಲಿಯೇ ಪದ್ಯಗಳನ್ನು ರಚಿಸಿರುವುದೇಕೆ? ಅವರಿಗೂ ಸಂಸ್ಕೃತ ದ್ವೇಷಿಗಳೆಂದು ಸುಲಭವಾಗಿಯೇ ಹೇಳಬಹುದಲ್ಲವೆ? ಭಾಸ್ಕರನ ಮಂಡಲವ ಕಂಡು ನ| ಮಸ್ಕರಿಸಿ ಮೋದಿಸದೆ ದ್ವೇಷದಿ| ತಸ್ಕರನು ನಿಂದಿಸಲು ಕುಂದಹುದೇ ದಿವಾಕರಗೆ|| ಸಂಸ್ಕೃತವಿದಲ್ಲೆಂದು ಕುಹಕತಿ| ರಸ್ಕರಿಸಲೇನಹುದು ಭಕ್ತಿ ಪು| ರಸ್ಸರದಿ ಕೇಳ್ವರಿಗೆ ಒಲಿವನು ಪುಷ್ಕರಾಕ್ಷ ಸದಾ|| ಎಂದು ಶ್ರೀ ಜಗನ್ನಾಥ ದಾಸರಾಯರು ತಮ್ಮ 'ಹರಿಕಥಾಮೃತಸಾರ' ದಲ್ಲಿ

ಹೇಳಿರುವದು ಯಾವ ಸಂಸ್ಕೃತಾಭಿಮಾನಿಯು ನೋಡಿರಲಿಕ್ಕಿಲ್ಲ?
ಇದರಿಂದ ತಿಳಿದು ಬರುವದೇನೆಂದರೆ— ಐಹಿಕ ಅಥವಾ ಪಾರ
ಮಾರ್ಥಿಕ ಯಾವ ವಿಷಯವೇ ಇರಲಿ, ಜನ ಸಾಮಾನ್ಯರಿಗೆ ತಿಳಿ
ಯುವ ಭಾಷೆಯಲ್ಲಿಯೇ ಹೇಳಬೇಕೇ ಹೊರತು ಅವರಿಗೆ ಅಪರಿ
ಚಿತವಾದ ಭಾಷೆಯಲ್ಲಿ ಹೇಳಿದ್ದಾದರೆ ಉರ್ದು ಭಾಷೆ ಅರಿಯದ
ಹಳ್ಳಿಯವರಿಗೆ ಒಬ್ಬ ಪೋಲಿಸನು ಬಂದು ಬೆದರಿಸಿದಂತಾಗುವುದಿ
ಲ್ಲವೆ? ಆದುದರಿಂದಲೇ ಶಿವಶರಣರು ಕೂಡ ಧಾರ್ಮಿಕ ತತ್ವ
ಗಳನ್ನು ಕನ್ನಡ ವಚನ ರೂಪದಲ್ಲಿಯೇ ಜನರ ಮುಂದಿಟ್ಟಿದು
ದು. ಇದರಿಂದ ಇವರಿಗೆಲ್ಲ ಸಂಸ್ಕೃತ ದ್ವೇಷಿಗಳೆಂದು ಹೇಳುವುದು
ಉಚಿತವಲ್ಲ.

ಇನ್ನು, ಬ್ರಾಹ್ಮಣರಲ್ಲಿಯೇ ಒಂದು ಪಂಗಡದವರು ಯಜ್ಞ
ದಲ್ಲಿಯ ಪಶು ಹಿಂಸೆಯು ವೇದ ಸಮ್ಮತವೆಂದು ಹೇಳಿ ಅದರಂ
ತೆ ಆಚರಿಸುತ್ತಿದ್ದರೆ ಇನ್ನೊಂದು ಪಂಗಡದವರು ಯಜ್ಞದಲ್ಲಿ
ಪಶು ಹಿಂಸೆ ಮಾಡುವುದು ವೇದ ವಿರುದ್ಧವೆಂದು ಹೇಳುವರು.
ಅಂದಮೇಲೆ ಇವೆರಡು ಪಂಗಡಗಳಲ್ಲಿ ಯಾವದಾದರೊಂದು ಪಂಗ
ಡದವರಿಗೆ ವೇದ ದ್ರೋಹಿಗಳೆಂದು ಹೇಳಬೇಕಾಗುವದಿಲ್ಲವೆ? ಹಾಗೆ
ಈಗ ಹೇಳುತ್ತಿರುವರೆ? ಹಿಂದಕ್ಕೆ ಒಂದು ಕಾಲದಲ್ಲಿದ್ದ ಶ್ರಾದ್ಧ
ದಲ್ಲಿಯ ಮಾಂಸ ಭಕ್ಷಣೆಯೂ, ಹಾಗು ನಿಯೋಗ ಪದ್ಧತಿಯೂ
ಈ ಕಾಲದಲ್ಲೇಕೆ ಪ್ರಚಾರದಲ್ಲಿಲ್ಲ? ಆಗ ಅವು ಧರ್ಮ ಸಮ್ಮ
ತವೆಂದು ಹೇಳಲ್ಪಡುತ್ತಿದ್ದರೆ, ಈಗ ಅವು ಅಧರ್ಮಗಳು ಹೇಗೆ
ಆದವು? ಅಂದಮೇಲೆ ಆಯಾ ಕಾಲದ ನಿಯಮಗಳು ಆ ಆ
ಕಾಲಕ್ಕೇನೇ ಹಿತದಾಯಕವಾದವುಗಳೆಂದು ಸಿದ್ಧವಾಗುವುದಿಲ್ಲವೆ?
ಆದಕಾರಣ ರೂಢಿಗಳ ಹಾಗು ಗ್ರಂಥಗಳ ದಾಸರಾಗದೆ ಕಾಲ
ಮಾನಕ್ಕನುಸರಿಸಿ ಆಚರಣೆಯಲ್ಲಿಯೂ ಬದಲಾವಣೆಗಳನ್ನು ಮಾಡಿ
ಕೊಳ್ಳುವದು ಅವಶ್ಯವಲ್ಲವೆ? ಶಾಸ್ತ್ರಗಳ ಸಲುವಾಗಿ ಮನುಷ್ಯ
ರೇನು ಜನ್ಮವೆತ್ತದೆ, ಮನುಷ್ಯರ ಸಲುವಾಗಿಯೇ ಶಾಸ್ತ್ರಗಳು ಏ
ರ್ಪಟ್ಟಿರುವವೆಂಬುವದು ಮಾತ್ರ ಮರೆಯಕೂಡದು. ಇನ್ನು, ಈ
ಪತ್ರಿಕೆಯು ಬ್ರಾಹ್ಮಣರ ವಿರುದ್ಧ ಬರೆಯುವದೆಂಬುದು ಎಷ್ಟರ
ಮಟ್ಟಿಗೆ ನಿಜವಿರುವದೆಂಬುದನ್ನು ನೋಡುವ. ಈಗಿದ್ದ ವರ್ಣ
ಪದ್ಧತಿಯ ಜನ್ಮವಿಶಿಷ್ಟವಾದ ಮೇಲು ಕೀಳುಗಳೆಂಬ ಭಾವನೆ
ಯನ್ನು ಅಳಿಯಲೇಬೇಕೆಂದು ಹೇಳುವ ಧರ್ಮಾತ್ಮ ಪಂಡಿತ ಮಾ
ಲವೀಜಿಯವರು ಬ್ರಾಹ್ಮಣರಲ್ಲವೆ? ಅವರಂತೆಯೇ ಬ್ಯಾ. ಸಾವರ
ಕರ ಮತ್ತು 'ಹಿಂದು ಮಹಾ ಸಭೆಯ' ಅಧ್ಯಕ್ಷರಾದ ಶ್ರೀ.
ಶಂಕರಾಚಾರ್ಯರು (ಡಾ. ಕುರ್ತಕೋಟಿ) ಬ್ರಾಹ್ಮಣರೇ ಅಥವಾ
ಅಬ್ರಾಹ್ಮಣರೆ? ಅವರಿಗೇನು ತಮ್ಮ ಬ್ರಾಹ್ಮಣತ್ವದ ಮೇಲೆ
ಅಭಿಮಾನವಿಲ್ಲವೆ? ಅಂದಮೇಲೆ ಅವರು ಹಾಗೆ ಹೇಳುವದೇಕೆ?
ಈಗಿನ ಕಾಲಕ್ಕೆ ಅತ್ಯವಶ್ಯಕವಾದ ಹಿಂದು ಸಂಘಟನೆಗೆ ಇದು
ವಿಘ್ನಕಾರಿಯೆಂದೇ ಅಲ್ಲವೆ?

ನಿಜ ಬ್ರಾಹ್ಮತ್ವವಾದ ಜ್ಞಾನಕ್ಕೇನಾದರೂ ಅವರು ವಿರೋ
ಧಿಗಳಾಗಿರುವರೇ? ಅವರು ಹಿಂದು ಸಮಾಜದ ಈಗಿನ ಹೀನ
ದೀನ ಸ್ಥಿತಿಯನ್ನು ಕಂಡು ಇದು ಪರ ಧರ್ಮದವರ ಆಹುತಿಗೆ
ಎಲ್ಲಿ ತುತ್ತಾಗುವದೋ ಎಂಬ ಕಳಕಳಿಯಿಂದ ಹಿಂದು ಸಂಘಟ
ನೆಗೆ ಇಷ್ಟು ಆತುರಪಡುತ್ತಿರುವರೇ ಹೊರತು ವರ್ಣಗಳ ಮೇಲಿ
ನ ದ್ವೇಷದಿಂದಾಗಲೀ, ವರ್ಣಕಾರರ ಮೇಲಿನ ದ್ವೇಷದಿಂದಾಗ
ಲೀ ಅಥವಾ ಬ್ರಾಹ್ಮಣರ ಮೇಲಿನ ದ್ವೇಷದಿಂದಾಗಲೀ ಹೀಗೆ
ಹೇಳುತ್ತಿರುವುದಿಲ್ಲ. ಈಗ ವರ್ಣ ಪದ್ಧತಿಯು ಕೂಡ ನಡೆಯ
ಲ್ಲಿರದೆ ನುಡಿಯಲ್ಲಿ ಹಾಗು ಶಾಸ್ತ್ರಗಳಲ್ಲಿ ಮಾತ್ರ ಉಳಿದುಕೊಂ
ಡಿರುವದು.

ಅಂದಮೇಲೆ ಈ ಪತ್ರಿಕೆಯು ಬ್ರಾಹ್ಮಣರ ವಿರುದ್ಧ ಬರೆ
ಯುವದೆಂಬ ಕೂಗಾಟವು ಎಷ್ಟರ ಮಟ್ಟಿಗೆ ಯೋಗ್ಯವಾಗಿರುವದೆಂ
ಬುವದು ಸ್ಪಷ್ಟವಾಗುವದಿಲ್ಲವೆ? ಇದು ಚುನಾವಣೆಯ ಕಾಲದ
ಲ್ಲಿ ಲಿಂಗಾಯತ ಬ್ರಾಹ್ಮಣರೆಂಬ ಬೇಧವನ್ನೆಣಿಸದೆ ಕಾಂಗ್ರೆಸ್ಸಿನವ
ರಿಗೇನೇ ಮತ ಕೊಡಿರೆಂದು ಬರೆದಿರಲಿಲ್ಲವೆ? ಮಂತ್ರಿಮಂಡಲ
ದಲ್ಲಿ ಒಬ್ಬರಾದರೂ ಲಿಂಗಾಯತರಿಲ್ಲವೆಂಬ ಆಕ್ಷೇಪಣೆಗೆ ಈ
ಪತ್ರಿಕೆಯು ಏನೆಂದು ಉತ್ತರಕೊಟ್ಟಿರುವದು? ಎಷ್ಟೋ ಜನ
ಬ್ರಾಹ್ಮಣರು ಬರೇ ಇದರ ಹೆಸರಿನಿಂದಲೇ ಇದು ಲಿಂಗಾಯತ
ರಿಗೆ ಸಂಬಂಧಪಟ್ಟ ಪತ್ರಿಕೆಯೆಂದು ತಿಳಿದುಕೊಂಡಿರುವರೆಂಬ
ಸಂಗತಿಯನ್ನು ಈ ಪತ್ರಿಕೆಯ ಪ್ರತಿನಿಧಿಗಳಿಗೆ ನಾನು ಭೆಟ್ಟಿಯಾ
ದಾಗ ಹೇಳಿರುವೆನು. ನನಗೂ ಕೂಡ ಈ ಮಾತಿನ ಅನುಭವ
ವಾಗಿರುವದು.

ತಮ್ಮ ಸಮಾಜ ಸುಧಾರಣೆಯ ಕಾರ್ಯಗಳನ್ನು ಮಾಡಿದ
ರೆ ಬ್ರಾಹ್ಮಣರ ದ್ವೇಷಮಾಡಿದಂತಾಯಿತೆ? ಬ್ರಾಹ್ಮಣ ಪತ್ರಿಕಾ
ಕರ್ತರಿಗೆ ಈ ಕಾರ್ಯ ಮಾಡಲಿಕ್ಕೆ ಯಾರು ಆತಂಕಪಡಿಸುವ
ರು? ಅವರಿಗೆ ಸ್ವರಾಜ್ಯಗಳಿಸುವ ಗಡಬಡಿಯಲ್ಲಿ ಸಂಕುಚಿತವಾದ
ಸಮಾಜ ಸುಧಾರಣೆಯ ಕಾರ್ಯಕ್ಕೆ ಸಮಯ ಹೇಗೆ ದೊರೆಯ
ಬೇಕು? ಇನ್ನು, ಶರಣ ಸಂದೇಶಕಾರರಿಗೆ ಪಂಚಾಚಾರ್ಯರ ಪಂಗಡ
ದವರು ಗುರುದ್ರೋಹಕರೆಂಬ ಬಹುಮಾನದ ಬಿರುದನ್ನು ಕೊಟ್ಟು
ಅವರ ಸಂಬಂಧ ಕೋಲಾಹಲವನ್ನೇ ಎಬ್ಬಿಸಿರುವರು. ಇದರ
ಸಂಬಂಧವಾಗಿ ನಾನು ಹೆಚ್ಚಿಗೆ ಬರೆಯಲಾರೆ. ಏಕೆಂದರೆ ನಮ್ಮ
ಮತದ ಸಂಬಂಧವಾಗಿ ಬರೆಯಲಿಕ್ಕೆ ಇವರಿಗೇನು ಅಧಿಕಾರ
ಎಂಬ ಪ್ರಶ್ನೆಗಳು ಹುಟ್ಟಬಹುದು. ಆದರೂ ನಾನು ಅವರಿಗೆ
ಹಿಂದು ಬಾಂಧವ ಎಂಬ ಅಧಿಕಾರದಿಂದ ಹಿಂದುತ್ವದ ಕಡೆ
ಲಕ್ಷ್ಯಗೊಟ್ಟು ಇಷ್ಟು ಮಾತ್ರ ಹೇಳದೆ ಇರಲಾರೆನು. ಬ್ರಾಹ್ಮಣ
ರ ವರ್ಣಪದ್ಧತಿಯ ಈಗಿನ ಮೇಲು ಕೀಳು ಭಾವನೆಯು ಹಿಂದು
ಸಂಘಟನೆಗೆ ಹೇಗೆ ವಿಘ್ನಕಾರಿಯೋ ಹಾಗೆಯೇ ಪಂಚಾಚಾರ್ಯ
ಪಂಗಡದವರ ಅಭಿಪ್ರಾಯಗಳು ಕೂಡ ಪ್ರತಿಕೂಲವಾದವುಗಳೇ
ಸರಿ. ಈಗಿನ ಹಿಂದು ಸಮಾಜ ಸಂಘಟನೆಗೆ ಬಸವೇಶ್ವರನ
ಸಮಾನತ್ವದ ತತ್ವಗಳು ಎಷ್ಟು ಫಲಕಾರಿಗಳೆಂಬುದನ್ನು ನಾನೇ
ಏಕೆ? ದೊಡ್ಡ ದೊಡ್ಡ ಬ್ರಾಹ್ಮಣ ಪಂಡಿತರೂ ಹಾಗು ಅನ್ಯ
ಮತದವರು ಕೂಡ ಹೇಳುತ್ತಿರುವರಲ್ಲವೆ? ಆದಕಾರಣ ಇವರ
ಸಂಬಂಧ ಪಂಚಾಚಾರ್ಯ ಪಂಗಡದವರು ಎಬ್ಬಿಸಿದ ಕೋಲಾ
ಹಲವು ವ್ಯರ್ಥವಾದುದಲ್ಲವೆ?

ಇವರು ಹೊರಡಿಸಿದ ಹಿಂದು ಮಹಾ ಸಭಾ ಸಂಚಿಕೆ ಪ್ರ
ಖ್ಯಾತವಾಗಿರುವದು. ಇದರಿಂದ ಕರ್ನಾಟಕದಲ್ಲಿ ಹಿಂದು ಮಹಾ
ಸಭೆಯ ಪ್ರಕಾಶವು ಎಷ್ಟೋ ಮಟ್ಟಿಗೆ ಬಿದ್ದಿರುವದು. ಇದು
ಪ್ರತಿಯೊಂದು ಮನೆಯಲ್ಲಿರತಕ್ಕ ಸಂಚಿಕೆಯು. ನನ್ನನ್ನು ಹಿಂದು
ಸಂಘಟನೆಯ ಕಡೆಗೆ ತಿರುಗಿಸಿದ್ದು ಇದೇ ಸಂಚಿಕೆಯು. ಕರ್ನಾ
ಟಕದಲ್ಲಿ ಹಿಂದು ಸಮಾಜ ಸಂಘಟನೆಗಾಗಿ ಪ್ರಯತ್ನಿಸುವವರು
ಶರಣ ಸಂದೇಶಕಾರರೊಬ್ಬರೇ ಎಂದರೆ ಅದೇನು ಅತಿಶಯೋಕ್ತಿ
ಎನ್ನಿಸಲಾರದು. ಇದರಿಂದ ಶರಣ ಸಂದೇಶ ಪತ್ರಿಕೆಯು ಮಾಡು
ತ್ತಿರುವ ಕಾರ್ಯವು ಎಷ್ಟು ಶ್ಲಾಘನೆಯುಳ್ಳದ್ದೂ, ಮತ್ತು ಈ
ಪತ್ರಿಕೆಯ ಜೀವಿತವು ಎಷ್ಟು ಅವಶ್ಯಕವೆಂಬುವದೂ ಗೊತ್ತಾಗು
ವುದಿಲ್ಲವೆ?

---

—ಜಪಾನ ಸೈನ್ಯವು ಚೀನದ ಉತ್ತರ ಭಾಗವನ್ನು ಬಹು
ವೇಗದಿಂದ ಆಕ್ರಮಿಸಿಕೊಳ್ಳುತ್ತಾ ಇದೆ. ಒಟ್ಟು ೧ ಲಕ್ಷ ಚೀನಿ
ಸೈನ್ಯವನ್ನು ಜಪಾನ ಸೈನ್ಯವು ಮುತ್ತಿ ಅಲ್ಲಲ್ಲಿ ಅದನ್ನು ಹಣ್ಣಿಗೆ
ತಂದಿದೆ.

## ಗಾಂಧೀಜಿಯವರ ಅಹಿಂಸೆ.

ರಾಜಕೀಯ ಕೊಲೆಗಾರರಾದ ಅನೇಕ ಕೈದಿಗಳನ್ನು ಕಾಂಗ್ರೆಸ್ ಮಂತ್ರಿಮಂಡಲವು ಬಿಡುಗಡೆಮಾಡಿದೆಯಷ್ಟೆ. ಹೀಗೆ ಬಿಡುಗಡೆ ಹೊಂದಿದ ಕಾಕೋರಿ ಕೈದಿಗಳನ್ನು ಅನೇಕ ಕಾಂಗ್ರೆಸ್ ಭಕ್ತರು ಬಹು ಸಂಭ್ರಮದಿಂದ ಸ್ವಾಗತಿಸಿದರು. ಈ ವಿಚಾರವಾಗಿ ಗಾಂಧೀಜಿಯವರು ತಾ. ೪-೯-೩೭ ನೆಯ "ಹರಿಜನ" ಪತ್ರಿಕೆಯಲ್ಲಿ ಹೀಗೆ ಬರೆದಿದ್ದಾರೆ—

"ಹಿಂಸೆಯನ್ನು ರಾಜಕೀಯ ದೃಷ್ಟಿಯಿಂದಲೇ ಮಾಡಲಿ ಅಥವಾ ವ್ಯಕ್ತಿ ದ್ವೇಷದಿಂದಲೇ ಮಾಡಲಿ ಅದರಲ್ಲೇನೂ ಭೇದವಿಲ್ಲವೆಂದೇ ನಾನು ತಿಳಿದಿದ್ದೇನೆ. ಏಕೆಂದರೆ, ಹಿಂಸೆಗೆ ಆಹುತಿಯಾಗತಕ್ಕಂಥವರಿಗೆ ಆ ಎರಡರಲ್ಲಿ ಏನು ವ್ಯತ್ಯಾಸ ತೋರುವುದು? ನನಗೆ ಅಹಿಂಸೆಯಲ್ಲಿ ಅಪಾರವಾದ ವಿಶ್ವಾಸವಿರುವುದರಿಂದ ಈ ಎರಡು ರೀತಿಗಳಲ್ಲಿ ಯಾವ ಪ್ರಕಾರದ ಕೊಲೆ ಮಾಡಿದವರನ್ನಾದರೂ ದಂಡಿಸುವುದು ನನಗೆ ಸಮ್ಮತವಿಲ್ಲ.

ಅಹಿಂಸೆಯಲ್ಲಿ ನನಗಿರುವಷ್ಟು ನಂಬಿಕೆಯು ಮಂತ್ರಿಗಳಿಗಿಲ್ಲವೆಂಬುದು ನನಗೆ ಗೊತ್ತು. ಅವರು ರಾಜಕೀಯ ಕೊಲೆಗಾರರನ್ನು ಬಿಟ್ಟುದು ರಾಜಕೀಯ ದೃಷ್ಟಿಯಿಂದಲೇ ಸರಿ. ಈ ಜನರು ಹಿಂಸಾ ಮಾರ್ಗವನ್ನು ಬಿಟ್ಟು ಕಾಂಗ್ರೆಸ್ಸಿನ ಅಹಿಂಸಾ ಮಾರ್ಗದಲ್ಲಿ ಸೇರಿ ತಮ್ಮ ಶಕ್ತಿಯನ್ನುಪಯೋಗಿಸಲೆಂದೇ ಇವರ ಉದ್ದೇಶ.

ಕಾಕೋರಿ ಕೈದಿಗಳನ್ನು ಸಾರ್ವಜನಿಕವಾಗಿ ಸ್ವಾಗತಿಸಿ ಅವರನ್ನು ಸನ್ಮಾನಿಸಿದುದು ಒಂದು ರಾಜಕೀಯವಾದ ತಪ್ಪೆಂದೇ ನಾನು ಕಾಂಗ್ರೆಸ್ಸಿನ ಕಾರ್ಯಪದ್ಧತಿಯನ್ನು ಖಂಡಿಸದಿರಲಾರೆನು. ಈ ಕೈದಿಗಳ ಕೃತಿಗಳು ಸರಿಯಾದವುಗಳೆಂದೇ ಸ್ವಾಗತಿಸಿದವರು ತಮ್ಮ ಉತ್ಸಾಹದ ಭರದಲ್ಲಿ ಒಪ್ಪಿಕೊಳ್ಳುವರೆ? ಹಾಗಾದರೆ ಅವರಿಗೆ ಕಾಂಗ್ರೆಸ್ಸಿನ ನೀತಿಯೇ ತಿಳಿದಿಲ್ಲವೆಂದು ಹೇಳಬೇಕಾಗುವುದು. ಇಷ್ಟೇ ಅಲ್ಲ; ಮಂತ್ರಿಮಂಡಲದ ಕಾರ್ಯಕ್ಕೆ ಮತ್ತಿಷ್ಟು ತೊಂದರೆಯನ್ನೇ ಉಂಟುಮಾಡುತ್ತಿದ್ದಾರೆಂತಲೂ ತಿಳಿಯಬೇಕು."

### ಪಂಡಿತಜಿಯವರ ಅಹಿಂಸೆ.

ಕಾಂಗ್ರೆಸ್ಸಿನ ಅಧ್ಯಕ್ಷರಾದ ಪಂಡಿತ ಜವಾಹರಲಾಲ ನೆಹರುರವರು ರಾಜಕೀಯ ಕೊಲೆಗಾರರ ಸ್ವಾಗತದ ಸಂಬಂಧವಾಗಿ ತಮ್ಮ ಅಭಿಪ್ರಾಯವನ್ನು ಹೀಗೆ ತಿಳಿಸಿದ್ದಾರೆ—

"ಅತ್ಯಾಚಾರದ ಚಟುವಟಿಕೆಯಿಂದ ಶಿಕ್ಷೆಹೊಂದಿದ ಕೆಲವು ರಾಜಕೈದಿಗಳು ಮೊನ್ನೆ ಬಿಡುಗಡೆಹೊಂದಿದರು. ಅವರನ್ನು ಜನರೂ ಕಾಂಗ್ರೆಸ್ ಭಕ್ತರೂ ಉತ್ಸಾಹದಿಂದ ಸ್ವಾಗತಿಸಿದರು. ಈ ವಿಚಾರವಾಗಿ ನಮಗೆ ಪ್ರಶ್ನೆ ಮಾಡಲ್ಪಟ್ಟಿರುವುದೇನಂದರೆ, ಸ್ವಾಗತವು ಅತ್ಯಾಚಾರಕ್ಕೆ ಸಮ್ಮತಿಯನ್ನು ತೋರಿಸುವ ಲಕ್ಷಣವಾಗಿಲ್ಲವೆ? ಹೀಗೆ ಪ್ರಶ್ನೆಮಾಡುವುದೆಂದರೆ ಜನರ ಮತ್ತು ಕಾಂಗ್ರೆಸ್ ಭಕ್ತರ ಮನೋವೃತ್ತಿಯ ವಿಷಯದಲ್ಲಿ ಅಜ್ಞಾನವನ್ನು ಪ್ರಕಟಿಸಿದಂತೇ ಸರಿ."

ಭಾಯಿ ಪರಮಾನಂದರು ಮತ್ತು ಧನುರ್ಧಾರಿ ಸಂಪಾದಕರು ಮಹಾತ್ಮಾ ಗಾಂಧಿಯವರ ಅಹಿಂಸೆಯ ವಿಚಾರ ಸರಣಿಯನ್ನು ಟೀಕಿಸಿ ಪಂಡಿತಜಿಯವರ ರೀತಿಯೇ ಸರಿಯೆಂದು ಹೇಳಿದ್ದಾರೆ. ನಮಗಾದರೋ ಗಾಂಧಿಯವರ ವಿಚಾರಸರಣಿಯೇ ವಿಹಿತವಾಗಿ ತೋರುತ್ತದೆ. ಹಿಂಸೆಯ ಮಾರ್ಗವನ್ನು ಅನುಸರಿಸಿದವರ ದೇಶಭಕ್ತಿಯೇನೋ ಉಜ್ವಲವಾದುದೇ ಇದ್ದರೂ ಅವರು ಅನುಸರಿಸಿದ ಮಾರ್ಗವು ತ್ಯಾಜ್ಯವಾದುದಷ್ಟೆ. ಉದ್ದೇಶದೊಂದಿಗೆ ಅದನ್ನು ಸಾಧಿಸುವ ರೀತಿಯೂ ಪವಿತ್ರವಾದುದೇ ಇರಬೇಕು. ಈಗ ಕಾಂಗ್ರೆಸ್ಸು ಅದೇ ತತ್ವವನ್ನು ಬೋಧಿಸುತ್ತದೆ.

ಸತ್ಯಾಗ್ರಹಿಯು ವಿರೋಧಿಗಳ ಕತ್ತಿಗೆ ಕತ್ತನ್ನು ಕೊಡುವುದರಲ್ಲಿ ಪರಾಕ್ರಮವು ಹೆಚ್ಚಿಗಿದೆಯೇ ವಿನಾ ವಿರೋಧಿಗಳ ಕತ್ತನ್ನು ಕತ್ತರಿಸುವುದರಲ್ಲಿಲ್ಲ. ಇದೇ ಗಾಂಧಿಯವರ ಅಹಿಂಸಾ ಧರ್ಮದ ಸಿದ್ಧಾಂತ. ಈಗ ಬಿಡುಗಡೆ ಹೊಂದಿದ ಕೈದಿಗಳು ಈ ಮಾರ್ಗದಲ್ಲಿದ್ದವರಲ್ಲ. ಎಂದಮೇಲೆ ಅಂತಹ ಅಹಿಂಸಾ ವೀರರಿಗೆ ಸಲ್ಲಬೇಕಾದ ಸ್ವಾಗತ ಮತ್ತು ಸನ್ಮಾನಗಳು ಇವರಿಗೆ ಹೇಗೆ ತಾನೆ ಯೋಗ್ಯವಾಗುವವು? ಇವರಿಗೂ ಅಂತಹ ಮನ್ನಣೆಯುಂಟಾದರೆ ಜನಸಾಮಾನ್ಯದ ಭಾವನೆಯಲ್ಲಿ ವ್ಯತ್ಯಾಸವಾಗಲಾರದೆ? ಆದುದರಿಂದ ಕೊಲೆಯ ಮಾರ್ಗವನ್ನನುಸರಿಸಿದ ರಾಜಕೈದಿಗಳ ವಿಷಯದಲ್ಲಿ ಅಹಿಂಸಾ ವ್ರತವನ್ನು ಹಿಡಿದ ಕಾಂಗ್ರೆಸ್ಸಿನವರು ಸಾರ್ವಜನಿಕವಾಗಿ ತೋರಿಸಬೇಕಾದ ಮಾನ ಮನ್ನಣೆಗಳಲ್ಲಿ ಬಹು ಎಚ್ಚರಿಕೆಯುಳ್ಳವರಾಗಿರಬೇಕಾದುದೇ ವಿಹಿತವು.

## ಗಾಂಧೀಜಿಯವರ ಮಾರ್ಗ.

"ನಾನು ಹಿಂದುಸ್ಥಾನಕ್ಕೆ ಬಂಧಿತನಾಗಿದ್ದೇನೆ. ಏಕೆಂದರೆ, ನನ್ನ ಸರ್ವಸ್ವವೂ ಅದರಿಂದಲೇ ಪ್ರಾಪ್ತವಾದುದು. ಜಗತ್ತಿಗೆ ಹಿಂದುಸ್ಥಾನವು ಒಂದು ವಿಶಿಷ್ಟ ಸಂದೇಶವನ್ನು ಕೊಡತಕ್ಕದ್ದಾಗಿದೆಯೆಂದೇ ನನ್ನ ದೃಢ ವಿಶ್ವಾಸ. ಯುರೋಪದ ಅಂಧಾನುಕರಣವನ್ನು ಹಿಂದುಸ್ಥಾನವು ಮಾಡಬಾರದೆಂದೇ ನಾನು ತಿಳಿದಿದ್ದೇನೆ.

ಹಿಂದುಸ್ಥಾನವು ಶಸ್ತ್ರವನ್ನು ಧರಿಸಿದ್ದಾದರೆ ಆಗ ನನ್ನ ಪರೀಕ್ಷೆಯ ಕಾಲ ಬಂದಿತೆಂದೇ ನಾನು ತಿಳಿದಿದ್ದೇನೆ. ಆಗ ನಾನು ಆ ಪರೀಕ್ಷೆಯಲ್ಲಿ ಉತ್ತೀರ್ಣನಾಗುವೆನೆಂದೇ ನನ್ನ ದೃಢ ನಂಬಿಕೆ. ಈ ನನ್ನ ಧರ್ಮವು ಸ್ಥಳಭೇದಗಳಿಂದ ಕೂಡಿದ್ದಾಗಿಲ್ಲ.

ನಾನು ನನ್ನ ಜೀವಿತವನ್ನು ಹಿಂದುಸ್ಥಾನದ ಸೇವೆಗಾಗಿ ಅರ್ಪಿಸಿದ್ದೇನೆ. ಈ ನನ್ನ ಸೇವೆಯನ್ನಾದರೋ ಅಹಿಂಸಾ ಧರ್ಮದಿಂದಲೇ ಮಾಡುವವನಾಗಿದ್ದೇನೆ. ಹಿಂದುಸ್ಥಾನದ ಅಸ್ತಿತ್ವಕ್ಕೆ ಅಹಿಂಸೆಯೇ ಅಡಿಗಲ್ಲೆಂದು ನಾನು ತಿಳಿದಿದ್ದೇನೆ."

— ಯಂಗ ಇಂಡಿಯಾ. ತಾ. ೧೪-೮-೨೦

## ಗಾಂಧೀಜಿಯವರ ಸತ್ಯ ಧರ್ಮ.

"ಸಕಲ ಧರ್ಮಗಳಲ್ಲಿ ಹಿಂದು ಧರ್ಮವು ನಿಶ್ಚಯವಾಗಿಯೂ ಶ್ರೇಷ್ಠತರವಾದುದಾಗಿದೆ. ಆದರೆ ನಾನು ಯಾವ ಧರ್ಮದ ಸಂಬಂಧವಾಗಿ ಆಲೋಚಿಸುತ್ತಿದ್ದೇನೆಯೋ ಅದು ಹಿಂದು ಧರ್ಮಕ್ಕಿಂತಲೂ ಶ್ರೇಷ್ಠತಮವಾದುದಾಗಿದೆ. ಅದು ಮನುಷ್ಯನ ಸ್ವಭಾವವನ್ನು ಕೂಡಾ ಬೇರೆ ಮಾಡುತ್ತದೆ. ಅಂತಃಕರಣದಲ್ಲಿ ಸೇಖರವಾಗಿರಶಕ್ಯ ಸತ್ಯ ತತ್ವಕ್ಕೂ ಮನುಷ್ಯನಿಗೂ ಅದು ಸಾಮರಸ್ಯವನ್ನುಂಟುಮಾಡುತ್ತದೆ. ಮನುಷ್ಯನ ಒಳಹೊರಗಿನ ಪವಿತ್ರತೆಯನ್ನು ಅದು ಎಂದೂ ಭ್ರಷ್ಟಗೊಳಿಸುವುದಿಲ್ಲ.

ಇದು ಮನುಷ್ಯ ಸ್ವಭಾವದಲ್ಲಿಯ ಸನಾತನ ತತ್ವವು. ಈ ತತ್ವ ಪ್ರಕಾಶಕ್ಕೋಸ್ಕರ ಮನುಷ್ಯನು ಎಷ್ಟು ತ್ಯಾಗಮಾಡಿದರೂ ಅದು ಸ್ವಲ್ಪವೇ ಸರಿ."

—ಯಂಗ್ ಇಂಡಿಯಾ. ತಾ. ೧೨-೫-೨೦

## ವ್ಹಾಯಿಸ್‌ರಾಯರ ಸತ್ಯ ಧರ್ಮ.

ಮಹಾತ್ಮಾ ಗಾಂಧಿಯವರಿಗೆ ಗ್ರಾಮೋದ್ಯೋಗಗಳು ಹೇಗೆ ಪ್ರಿಯವಾಗಿವೆಯೋ ಹಾಗೆಯೇ ಈಗಿನ ವ್ಹಾಯಿಸ್‌ರಾಯರಾದ ಲಾರ್ಡ ಲಿನ್ ಲಿಥಗೋರವರಿಗೂ ಅವು ಪ್ರಿಯವಾಗಿವೆಯಷ್ಟೆ. ಗಾಂಧೀಜಿಯವರಿಗೆ ಸತ್ಯವೇ ಹೇಗೆ ಪರಮಧರ್ಮವಾಗಿದೆಯೋ ಹಾಗೆಯೇ ವ್ಹಾಯಿಸ್‌ರಾಯರಿಗೂ ಸತ್ಯವೇ ಶ್ರೇಷ್ಠ ಧರ್ಮವಾಗಿದೆ. ಲಾರ್ಡ ಲಿನ್ ಲಿಥಗೋರವರು ಸಿಮುಲಾದಲ್ಲಿಯ "ಬಿಶಪ್ ಕಾಟನ್ ಸ್ಕೂಲ್" ವಿದ್ಯಾರ್ಥಿಗಳಿಗೆ ಮೊನ್ನೆ ಒಂದು ಭಾಷಣದಲ್ಲಿ ಸತ್ಯದ ಮಹತ್ವವನ್ನೂ ಸಮಯ ವಾದಕ್ಕಿಂತ ಧ್ಯೇಯ ವಾದದಲ್ಲಿರುವ ಶ್ರೇಷ್ಠತ್ವವನ್ನೂ ಕುರಿತು ಅಮೋಘವಾದ ಉಪದೇಶವನ್ನು ಮಾಡಿದರು. ಅದರ ಮುಖ್ಯಾಂಶ ಹೀಗಿದ್ದಿತು—

" ಮನುಷ್ಯನು ತನ್ನ ಆಯುಷ್ಯವನ್ನು ಸಾರ್ಥಕಗೊಳಿಸಿಕೊಳ್ಳಬೇಕಾಗಿದ್ದರೆ ಆತನು ತನ್ನ ಸುಧಾರಣೆಗಾಗಿ ತಾನು ನಿರಂತರ ಪ್ರಯತ್ನಿಸುತ್ತಿರಬೇಕು, ಜಗತ್ತಿನಲ್ಲಿ ಯಾವುದೂ ಸ್ಥಿರವಾಗಿರತಕ್ಕದ್ದಲ್ಲ. ಒಂದು ಉನ್ನತಿಯ ಮಾರ್ಗ. ಇನ್ನೊಂದು ಅವನತಿಯ ಮಾರ್ಗ. ಉನ್ನತಿಯು ನಿಂತಿತೆಂದರೆ ಅವನತಿಯು ಪ್ರಾರಂಭವಾಯಿತೆಂದೇ ತಿಳಿಯಬೇಕು. ಆದುದರಿಂದ ಯಾವಾಗಲೂ ಮುಂದರಿಯುವ ಪ್ರಯತ್ನವನ್ನೇ ಮಾಡಿರಿ.

ಯಾರು ಸತ್ಯವನ್ನೇ ಅನುಸರಿಸುತ್ತಾರೆಯೋ ಅವರೇ ಕೊನೆಗೆ ಜಯಶಾಲಿಗಳಾಗುತ್ತಾರೆ. ಮತ್ತು ಯಾರು ಸತ್ಯ ಮಾರ್ಗಾವಲಂಬಿಗಳೋ ಅವರೇ ಈ ಜಗತ್ತಿನಲ್ಲಿ ಕಾರ್ಯವನ್ನು ಮಾಡಲು ಸಮರ್ಥರು. ಈ ಸತ್ಯ ಮಾರ್ಗದಲ್ಲಿ ಹೋಗುತ್ತಿರುವಾಗ ಅನೇಕ ವಿಪತ್ತುಗಳು ಬರಬಹುದು. ಆದರೂ ನೀವು ಸತ್ಯವನ್ನು ಮಾತ್ರ ಬಿಡಬೇಡಿರಿ.

ನೀವು ನಿಮ್ಮ ಜೀವನವೆಂಬ ಹಡಗದಮೇಲೆ ಧ್ಯೇಯವಾದದ ಧ್ವಜವನ್ನು ಕಟ್ಟಲು ಸ್ವಲ್ಪವೂ ಭಯಪಡಬೇಡಿರಿ. ನೀವು ನಿಮ್ಮ ಮಹತ್ವಾಕಾಂಕ್ಷೆಯನ್ನು ಮುಚ್ಚಿಡುವಂಥ ಹೇಡಿಗಳಾಗಬೇಡಿರಿ. ಧ್ಯೇಯದಲ್ಲಿಯೂ ಕೃತಿಯಲ್ಲಿಯೂ ಮಹದಂತರವಿರಬಹುದು. ಆದರೆ ಅದಕ್ಕೋಸ್ಕರ ನೀವು ನಿಮ್ಮ ಧ್ಯೇಯ ವಾದವನ್ನು ಕೆಳಗಿಳಿಸಿದ್ದಾದರೆ ನೀವು ಖಂಡಿತವಾಗಿಯೂ ಅಧೋಗತಿಗೇ ಹೋಗುವಿರಿ."

## ರಾಷ್ಟ್ರ ಸಂಘದಲ್ಲಿಯೂ ಗಾಂಧೀಜಿಯವರು!

ಒಂದು ವ್ಯಕ್ತಿಯ ದೇಹವಿದ್ದ ಸ್ಥಳದಲ್ಲಿಯೇ ಆ ವ್ಯಕ್ತಿಯಿದೆಯೆಂದಲ್ಲ. ಆ ವ್ಯಕ್ತಿಯ ತತ್ವವಿದ್ದಲ್ಲಿಯೂ ಆದು ಇದೆಯೆಂದೇ ತಿಳಿಯಬೇಕು. ಈ ದೃಷ್ಟಿಯಿಂದ ನೋಡಿದರೆ ರಾಷ್ಟ್ರ ಸಂಘದಲ್ಲಿಯೂ ಮೊನ್ನೆ ಗಾಂಧೀಜಿಯವರಿದ್ದರೆಂದು ಈ ಕೆಳಗಿನ ಸಂಗತಿಯಿಂದ ಹೇಳಬಹುದು.

ರಾಜಕಾರಣದಲ್ಲಿ ಅಹಿಂಸಾ ತತ್ವವನ್ನು ಆಚರಣೆಗೆ ತರಲು ಪ್ರಾರಂಭಿಸಿದ ಮಹಾವಿಭೂತಿಯು ಆಧುನಿಕ ಯುಗದಲ್ಲಿ ಮಹಾತ್ಮಾ ಗಾಂಧಿಯವರೇ ಮೊದಲನೆಯವರಾಗಿದ್ದಾರಷ್ಟೆ. ಹಿಂದುಸ್ಥಾನದ ಈಗಿನ ವ್ಹಾಯಿಸ್‌ರಾಯರಾಗಿರುವ ಲಾರ್ಡ ಲಿನ್ ಲಿಥಗೋರವರೂ ಮೊನ್ನೆ ಸಿಮಲಾದಲ್ಲಿ ಕೂಡಿದ್ದ ಶಾಸನ ಮಂಡಲಗಳ ಸಂಯುಕ್ತ ಅಧಿವೇಶನದ ಭಾಷಣದಲ್ಲಿ "ಹಿಂಸೆಯು ಬ್ರಿಟಿಶರಿಗೂ ಹಿಂದುಸ್ಥಾನದವರಂತೆಯೇ ಮನಸ್ಸಿನಿಂದಲೂ ಬೇಡಾದುದು. ಅದರ ಕಲ್ಪನೆಯು ಕೂಡಾ ನಮ್ಮ ಮನಸ್ಸಿನಲ್ಲಿ ಬರುವುದಿಲ್ಲ." ಎಂದು ಹೇಳಿದರು. ಅದೇ ದಿನವೇ ಜನಿವಾ ರಾಷ್ಟ್ರ ಸಂಘದಲ್ಲಿ ಅಧ್ಯಕ್ಷರಾಗಿದ್ದ ನಾ. ಆಗಾಖಾನರವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ರಾಷ್ಟ್ರಸಂಘ ಸ್ಥಾಪನೆಯು ಯಾವ ತತ್ವದ ಮೇಲಿದೆಯೋ ಆ ತತ್ವವೇ ನನ್ನ ರಾಷ್ಟ್ರದ ಮೂಲಸಿದ್ಧಾಂತವಾಗಿದೆ. ನಮ್ಮ ರಾಷ್ಟ್ರದ ಮಹಾ ಮಹಾ ಪುರುಷರು ಪ್ರಾಚೀನ ಕಾಲದಿಂದಲೂ ಅಹಿಂಸಾ ಧರ್ಮದ ಶ್ರೇಷ್ಠತ್ವವನ್ನೇ ಮಾನ್ಯಮಾಡಿ ಹಿಂಸಾಮಯ ಮಾರ್ಗದಿಂದ ಅದನ್ನು ಸಂರಕ್ಷಿಸಿದ್ದಾರೆ."

## ಅಹಿಂಸೆಯ ವಿಜಯ.

ಮಹಾತ್ಮಾ ಗಾಂಧೀಜಿಯವರ ರಾಜಕಾರಣದಲ್ಲಿಯ ಅಹಿಂಸಾ ತತ್ವವು ದಿನೆ ದಿನೆ ವಿಜಯ ಹೊಂದುತ್ತ ಬಂದಿದೆಯಷ್ಟೆ. ಇದಕ್ಕೆ "ಮ್ಯಾಂಚಸ್ಟರ ಗಾರ್ಡಿಯನ್" ಎಂಬ ಇಂಗ್ಲಿಷ ಪತ್ರಿಕೆಯೂ ಒಪ್ಪಿ ಕೊಂಡಿದೆ. ಗಡಿನಾಡಿನ ಶಾಂತತೆಯನ್ನು ಕುರಿತು ಈ ಪತ್ರಿಕೆಯು ಹೀಗೆ ಬರೆದಿದೆ.—

"ಗಡಿನಾಡಿನಲ್ಲಿ ಯುದ್ಧಕ್ಕಾಗಿ ಆಗುತ್ತಿರುವ ವೆಚ್ಚವನ್ನು ನಿಲ್ಲಿಸಿ ಅಲ್ಲಿ ಶಾಂತತೆಯನ್ನು ಸ್ಥಾಪಿಸಲು ಖಾನ ಅಬ್ದುಲ್ ಗಫಾರಖಾನರು ಸಮರ್ಥರಿದ್ದಾರೆಂದು ಕಾಂಗ್ರೆಸ್ ಪಕ್ಷವು ಹೇಳುತ್ತಿದೆ. ಅದನ್ನು ಅನೇಕರು ಒಪ್ಪುತ್ತಿದ್ದಾರೆ. ಖಾನರು ಪಂಜಾಬದ ಗಲಭೆಯ ಕಾಲಕ್ಕೆ ಗಡಿನಾಡಿನ ಕೆಲವು ಮುಸಲ್ಮಾನರೊಂದಿಗೆ ಬ್ರಿಟಿಶ್ ಸರಕಾರದ ವಿರುದ್ಧವಾಗಿ ನಿಂತಿದ್ದರು.

ಇವರು ೧೯೨೯ರಲ್ಲಿ ಲಾಹೋರಿನಲ್ಲಿ ಕೂಡಿದ್ದ ಕಾಂಗ್ರೆಸ್ಸಿಗೆ ಹೋಗಿ ಅಹಿಂಸೆಯ ಮಹತ್ವವನ್ನು ಅಲ್ಲಿ ತಿಳಿದುಕೊಂಡು ತಮ್ಮ ಪ್ರಾಂತದಲ್ಲಿಯೂ ಅದನ್ನು ಪ್ರಸಾರಗೊಳಿಸಲಾರಂಭಿಸಿದರು. ಇವರು ಪ್ರಚಾರಗೊಳಿಸಿದ ಅಹಿಂಸಾ ತತ್ವವು ಅಲ್ಲಿಯ ಪಠಾಣರಲ್ಲಿ ಬಹು ಪರಿಣಾಮಕಾರಿಯಾಗಿ ಪರಿಣಮಿಸಿತೆಂದು ಧಾರಾಳವಾಗಿ ಹೇಳಬಹುದು. ಏಕೆಂದರೆ, ಅವರು ಅನೇಕ ದುಃಖಗಳನ್ನು ಶಾಂತತೆಯಿಂದಲೇ ಸಹಿಸಿಕೊಂಡರೇ ವಿನಾ ಸೇಡುತೀರಿಸಿಕೊಳ್ಳುವವರಾಗಲಿಲ್ಲ."

## ಗಣೇಶನ ಬಗ್ಗೆ ಕೆಲವು ಸಂಶಯ.

ಶ್ರೀ ಗಣೇಶನ ಮೂರ್ತಿಯನ್ನು ಹಿಂದುಗಳು ಪೂಜಿಸುತ್ತಿದ್ದಾರೆ. ಈ ಭಾದ್ರಪದ ಶುದ್ಧದಲ್ಲಿ ಉತ್ಸವವೂ ನಡೆಯುತ್ತದೆ. ಗಣೇಶನ ಬಗ್ಗೆ ಜನರಲ್ಲಿರತಕ್ಕ ಈ ಕೆಳಗಿನ ಕಲ್ಪನೆಗಳನ್ನು ಪರಧರ್ಮದವರು ನೋಡಿ ಹಿಂದುಗಳ ಧರ್ಮವನ್ನು ಹೀಯಾಳಿಸುತ್ತಾರೆ. ಆದಕಾರಣ ತಾವು ತಮ್ಮ ಪತ್ರಿಕೆಯಲ್ಲಿ ಈ ಸಂಶಯಗಳ ಬಗ್ಗೆ ಲೇಖ ಬರೆಯಬೇಕಾಗಿ ಆಗ್ರಹದ ಬೇಡಿಕೆ.

ಸಂಶಯ— (೧) ಗಣಪತಿಯು ಪಾರ್ವತಿಯ ಮೈ ಮಣ್ಣಿನಿಂದ ಹುಟ್ಟಿದ್ದು ನಿಜವೆ? (೨) ಬಹು ಕ್ಷುದ್ರವಾದ ಇಲಿಯನ್ನು ಗಣಪತಿಯು ತನ್ನ ವಾಹನವನ್ನಾಗಿ ಯಾಕೆ ಮಾಡಿಕೊಂಡನು? (೩) ಗಣಪತಿಯು ಊಟಮಾಡಿ ಹೋಗುವಾಗ ಬಿದ್ದು, ಹೊಟ್ಟೆ ಒಡೆದುಕೊಂಡು, ಊಟ ಮಾಡಿದ್ದನ್ನೆಲ್ಲಾ ಮತ್ತೆ ಹೊಟ್ಟೆಯಲ್ಲಿ ಹಾಕಿಕೊಂಡು ಹಾವಿನಿಂದ ಹೊಟ್ಟೆ ಕಟ್ಟಿಕೊಂಡದ್ದೂ ಚಂದ್ರ ನೋಡಿ ನಕ್ಕದ್ದೂ ನಿಜವೆ?

ಬಸವಣ್ಣಯ್ಯ ಚನ್ನಬಸಯ್ಯ ಸಾಲಿಮಠ
ಪ್ರೆಸಿಡೆಂಟ
ವೀರಶೈವ ತರುಣ ಸಂಘ ಬೆಳಗಾಲಪೇಟೆ.

[ಉತ್ತರ— ಹಿಂದು ಧರ್ಮದಲ್ಲಿ ಪ್ರಕೃತಿ ಪೂಜೆಯೂ, ಪಿತೃ ಪೂಜೆಯೂ, ತತ್ವ ಪೂಜೆಯೂ ಇವು ಮೂರೂ ಉಂಟು. ಇವು ಬೇರೆ ಬೇರೆಯಾಗಿ ಅಥವಾ ಕೂಡಿ ಇದ್ದರೂ ಇರಬಹುದು. ಜನ ಸಾಮಾನ್ಯಕ್ಕೆ ತತ್ವವನ್ನು ಬೋಧಿಸುವುದಕ್ಕಾಗಿಯೇ ಅದನ್ನು ಒಂದು ರೂಪದಲ್ಲಿಟ್ಟು ತೋರಿಸುವುದುಂಟು. ಗಣಪತಿಯ ಪೂಜೆಯು ಈ ಪ್ರಕಾರ ತತ್ವ ವಿಶಿಷ್ಟವಾದುದೆಂದು ನಮ್ಮ ತಿಳುವಳಿಕೆ.

ಓಂಕಾರವೇ ಪರಬ್ರಹ್ಮ ಸ್ವರೂಪವೆಂದು ಹಿಂದುಗಳ ತಿಳುವಳಿಕೆ. ಆ ಓಂಕಾರವೇ ಒಂದು ರೂಪದಲ್ಲಿ ಮೊದಲು ಇಡಲ್ಪಟ್ಟಿತು. ಆದರಲ್ಲಿ ಕಾಲಕಾಲಕ್ಕೆ ವ್ಯತ್ಯಾಸವಾಗುತ್ತಾ ಅದಕ್ಕೆ ಈಗಿನ ರೂಪ ಬಂದಿತು. ಮನುಷ್ಯನು ತನ್ನ ಭಾವನೆ ಮತ್ತು ಅಭಿರುಚಿಗಳಂತೆ ದೇವರನ್ನು ಚಿತ್ರಿಸುತ್ತಾ ಹೋಗುತ್ತಾನೆ. ಈಗ 'ಕ್ರಾಪಿನ' ಗಣಪತಿ, "ಗಾಂಧಿ ಟೊಪ್ಪಿಗೆ" ಗಣಪತಿ, "ಮೋಟಾರ ನಡೆಸುವ" ಗಣಪತಿಗಳು ಅನೇಕ ಕಡೆ ಏರ್ಪಡುತ್ತಾ ಇಲ್ಲವೆ?

ಯಾರು ಓಂಕಾರ ಎಂದರೆ ಪರಬ್ರಹ್ಮ ಸಾಕ್ಷಾತ್ಕಾರಿಗಳೋ ಅವರು ಅಹಿಂಸಾ ಮೂರ್ತಿಗಳಾಗುತ್ತಾರೆ. ಆ ದಯಾನಿಧಿಗಳಿಗೆ ಪ್ರಪಂಚದಲ್ಲಿ ಯಾರೂ ವೈರಿಗಳೇ ಇಲ್ಲ; ಇಷ್ಟೇ ಅಲ್ಲ. ಅವರ ನೆರೆಯಲ್ಲಿರುವ ಜಾತಿ ವೈರಿಗಳು ಕೂಡಾ ತಮ್ಮ ತಮ್ಮ ವೈರತ್ವವನ್ನು ಬಿಟ್ಟು ಪರಸ್ಪರ ಪ್ರೇಮಿಗಳಾಗುತ್ತಾರೆ. ಇದನ್ನೇ ಜನಗಳ ಅನುಭವದಲ್ಲಿರುವ ಹಾವು ಮತ್ತು ಇಲಿಗಳ ರೂಪದಿಂದ ಆ ತತ್ವವೇತ್ತರು ತೋರಿಸಿದ್ದಾರೆ. ಈ ಜಾತಿ ವೈರಿ ಪ್ರಾಣಿಗಳು ಕೂಡಾ ಗಣೇಶನ ಹತ್ತಿರ ಪ್ರೇಮದಿಂದಿವೆ. ಆದಕಾರಣ ದಯಾಧರ್ಮದ ಮಹತ್ವವನ್ನು ತೋರಿಸುವುದಕ್ಕಾಗಿಯೇ ಗಣೇಶನ ರೂಪ ಮತ್ತು ಪೂಜೆಗಳು ಏರ್ಪಟ್ಟಿರಬೇಕು.

ಇದನ್ನು ಜನಸಾಮಾನ್ಯಕ್ಕೆ ಒಂದು ಕಥೆಯ ರೂಪದಲ್ಲಿ ಹೇಳುವಾಗ ಅನೇಕ ಸಂಗತಿಗಳನ್ನು ಸೇರಿಸುವುದು ಸ್ವಾಭಾವಿಕ. ಆದರೆ ಅವೇನೂ ಮುಖ್ಯವಲ್ಲ. ಪಾರ್ವತಿ ಎಂದರೆ ಭೂದೇವಿ. ಮನುಷ್ಯನು ಭೂದೇವಿಯ ಮಗನಲ್ಲವೆ? ಈ ದೇಹ ಪೃಥ್ವಿ ತತ್ವ ವಿಶಿಷ್ಟವಲ್ಲವೆ? ಜನರು ಮೊದಲು ಗಣರೂಪದಲ್ಲಿ ಎಂದರೆ ಗುಂಪು ಗುಂಪಾಗಿಯೇ ಇರುತ್ತಿದ್ದರು. ಅವರಿಗೆ ಒಬ್ಬನು ಮುಖ್ಯಸ್ಥನಿರುತ್ತಿದ್ದನು. ಅವನೇ ಗಣಗಳಿಗೆಲ್ಲಾ ಪತಿಯು. ಆ ಗಣಪತಿಯ ಪೂಜೆಯೇ ಈ ಪ್ರಕಾರ ಪರಿಣಮಿಸಿತೆಂತಲೂ ಐತಿಹಾಸಿಕ ದೃಷ್ಟಿಯಿಂದ ನೋಡುವವರು ಹೇಳುವುದುಂಟು. ಇದು ಪಿತೃ ಪೂಜೆಯ ಕಲ್ಪನೆ. ಹೀಗೆ ಗಣೇಶನ ಮೂರ್ತಿಯು ಒಂದು ವಿಶಿಷ್ಟ ತತ್ವ ಬೋಧಕವಾದುದೆಂದೂ ಆ ತತ್ವವು ನಮ್ಮಲ್ಲಿ ಬರುವಂತೆ ಪ್ರಯತ್ನಿಸುವುದಕ್ಕಾಗಿಯೇ ಪೂಜೆಯು ಏರ್ಪಟ್ಟಿತೆಂದೂ ತಿಳಿಯುವುದೇ ವಿಹಿತವೆಂದು ನಮ್ಮ ತಿಳುವಳಿಕೆ. ಸಂಪಾದಕ.]

---

## ಗಾಂಧೀಜಿಯವರ ಅಹಿಂಸಾ ಧರ್ಮ.

"ನಾನು ಮನೋರಾಜ್ಯವನ್ನು ಚಿಂತಿಸುವವನಲ್ಲ. ಮನಸ್ಸಿನಲ್ಲಿರುವ ಶ್ರೇಷ್ಠ ಕಲ್ಪನೆಗಳನ್ನು ಆಚರಣೆಯಲ್ಲಿ ತರುವವನಾಗಿದ್ದೇನೆ. ಅಹಿಂಸಾ ಧರ್ಮವು ಋಷಿಗಳಿಗೂ ಸಾಧು ಸಂತರಿಗೂ ಮಾತ್ರ ಸಂಬಂಧಿಸಿದ್ದಾಗಿದೆಯೆಂದು ತಿಳಿಯಬಾರದು. ಅದು ಜನ ಸಾಮಾನ್ಯಕ್ಕೂ ಆಚರಣೀಯವಾದುದೇ ಇದೆ.

ಮನುಷ್ಯ ಜಾತಿಯ ವ್ಯಾವಹಾರಿಕ ನಿಯಮವು ಅಹಿಂಸೆಯೇ ಆಗಿದೆ. ಪಶುಗಳ ನಿಯಮವು ಮಾತ್ರ ಹಿಂಸೆಯು. ಪಶುಗಳಲ್ಲಿ ಆತ್ಮವು ಸುಪ್ತಾವಸ್ಥೆಯಲ್ಲಿರುತ್ತದೆ. ಆದುದರಿಂದ ಅವುಗಳಿಗೆ ಶಾರೀರಿಕ ಬಲದ ಕಲ್ಪನೆಯ ವಿನಾ ಬೇರೆ ಯಾವ ನಿಯಂತ್ರಣದ ಕಲ್ಪನೆಗಳೂ ಗೊತ್ತಿರುವುದಿಲ್ಲ.

ಮನುಷ್ಯನು ಪಶುಗಳಿಗಿಂತಲೂ ಹೆಚ್ಚಿನ ಶ್ರೇಣಿಯವನಾದುದರಿಂದ ಆತನು ಪಶುಗಳ ನಿಯಮಕ್ಕಿಂತ ಹೆಚ್ಚಿನ ನಿಯಮವನ್ನು ಅನುಸರಿಸಬೇಕಾದುದು ಆತನ ಕರ್ತವ್ಯವೇ ಆಗಿದೆ. ಆತ್ಮ ಶಕ್ತಿಯನ್ನುಪಯೋಗಿಸಬೇಕಾದುದೇ ಆ ಹೆಚ್ಚಿನ ನಿಯಮವು.

ನಾನು ಹಿಂದುಸ್ಥಾನದ ಮುಂದೆ ಪುರಾತನವಾದ ಆ ಸ್ವಾರ್ಥತ್ಯಾಗದ ಧರ್ಮವನ್ನಿಡುವ ಸಾಹಸ ಮಾಡಿದ್ದೇನೆ. ಸತ್ಯಾಗ್ರಹ ಮತ್ತು ಅದರಿಂದುಂಟಾದ ಅಸಹಕಾರ, ಶಾಸನ ಭಂಗ, ಇವು ಆ ಸಹಿಷ್ಣು ಧರ್ಮದ ಈಗಿನ ಹೆಸರುಗಳು. ಎಲ್ಲ ಕಡೆಗೂ ಹಿಂಸೆಯ ಪ್ರಾಬಲ್ಯವಿದ್ದಾಗ ಯಾರು ಈ ಅಹಿಂಸಾ ಧರ್ಮವನ್ನು ಕಂಡುಹಿಡಿದರೋ ಆ ಋಷಿಗಳು ನ್ಯೂಟನ್ನನಿಗಿಂತಲೂ ಹೆಚ್ಚಿನ ಬುದ್ಧಿಶಾಲಿಗಳಿದ್ದರು. ಮತ್ತು ವೆಲಿಂಗಟನ್‌ನಿಗಿಂತಲೂ ಹೆಚ್ಚು ಪರಾಕ್ರಮಶಾಲಿಗಳಿದ್ದರು. ಅವರಿಗೆ ಶಸ್ತ್ರ ವಿದ್ಯೆಯ ಜ್ಞಾನವಿತ್ತು ಮತ್ತು ಶಸ್ತ್ರಗಳನ್ನು ಅವರು ಉಪಯೋಗಿಸಿದ್ದರು. ಅವರಿಗೆ ಶಸ್ತ್ರವು ನಿರುಪಯೋಗವಾದುದೆಂದು ಗೊತ್ತಾದುದರಿಂದಲೇ ಶಸ್ತ್ರದಿಂದ ಬಳಲುತ್ತಿದ್ದ ಜಗತ್ತಿನ ಉದ್ಧಾರವು ಹಿಂಸೆಯಿಂದಾಗದೆ ಅಹಿಂಸಾ ಧರ್ಮದಿಂದಲೇ ಆಗುತ್ತದೆಂದು ಉಪದೇಶ ಮಾಡಿದರು."

—ಯಂಗ್ ಇಂಡಿಯಾ ತಾ. ೧೮ ೮-೧೯೨೦

# ಹಿಂದು ಧರ್ಮ ರಕ್ಷಣೆ = ಗಂಟೆ ಬಾರಿಸಲಿ!




## ಹೀಗೆ ಸುಮ್ಮನಿದ್ದರೆ ೪೦೦ ವರುಷಗಳಲ್ಲೇನಾಗುವುದು?

ಕರ್ಹಾಡ ಜಿಲ್ಲಾ ಸಾತಾರಾ ಎಂಬಲ್ಲಿಯ ಶ್ರೀ. ಗೊ. ಭಿ. ಬದಾಮಿ ಎಂಬುವವರು ಹಿಂದು ಧರ್ಮ ರಕ್ಷಣೆಯ ಒಬ್ಬ ಕಾರ್ಯಕರ್ತರು. ಇವರು ಈ ವರೆಗಿನ ತಮ್ಮ ಅನುಭವವನ್ನು ಕುರಿತು ಅನೇಕ ಸಂಗತಿಗಳನ್ನು ತಿಳಿಸಿದ್ದಾರೆ. ಇವರು ಹೇಳುವುದೇನೆಂದರೆ—

"ಹಿಂದು ಧರ್ಮದ ಈಗಿನ ಸ್ಥಿತಿಯು ಬಹು ಶೋಚನೀಯವಾದುದಾಗಿದೆ. ಪ್ರತಿ ನಿಮಿಷದಲ್ಲಿಯೂ ಅನ್ಯ ಧರ್ಮಗಳ ಆಕ್ರಮಣಕ್ಕೆ ತುತ್ತಾಗುತ್ತಲಿದೆ. ಈ ಕಾರ್ಯ ಹೀಗೆಯೇ ನಡೆದದ್ದಾದರೆ ಇನ್ನು ೪೦೦ ವರುಷಗಳಲ್ಲಿ ಹಿಂದು ಧರ್ಮವು ನಾಮಶೇಷವಾಗುವ ಪ್ರಸಂಗ ಬರಬಹುದು.

ಮುಸಲ್ಮಾನ್ ಧರ್ಮ ಪ್ರಸಾರದ ಕಾರ್ಯಕ್ಕೋಸ್ಕರ ದಿಲ್ಲಿಯಲ್ಲಿ ಮೊನ್ನೆ ತಬಲೀಘ ಪರಿಷತ್ತು ಕೂಡಿತ್ತು. ಆಗ ಬ್ಯಾರಿಸ್ಟರ್ ಅಹಮ್ಮದ ಅಮೀನ ಇವರು ಹೀಗೆ ಹೇಳಿದರು— "ಮುಸಲ್ಮಾನರು ತಮಗೆ ಬೇಕಾಗುವ ಪದಾರ್ಥಗಳನ್ನು ಮುಸಲ್ಮಾನರಲ್ಲಿಯೇ ತೆಗೆದುಕೊಳ್ಳಬೇಕು. ಪ್ರತಿಯೊಬ್ಬ ಮುಸಲ್ಮಾನನು ತನ್ನ ಆಯುಷ್ಯದ ಹತ್ತು ವರುಷಗಳಲ್ಲಿ ೫ ಜನ ಹಿಂದುಗಳನ್ನಾದರೂ ಮುಸಲ್ಮಾನ್ ಧರ್ಮದಲ್ಲಿ ತೆಗೆದುಕೊಳ್ಳಬೇಕು. ಬೇರೆ ಚಳವಳಿಗಳನ್ನೆಲ್ಲಾ ಬಿಟ್ಟು ತಬಲೀಘ ಚಟುವಟಿಕೆಯೊಂದನ್ನೇ ನಡೆಯಿಸಿ ೧೫ ಕೋಟಿ ಮುಸಲ್ಮಾನರನ್ನು ಮಾಡಿ ಸ್ವರಾಜ್ಯ ದೊರೆತಾಗ ಆದರ ಸೂತ್ರ ಮುಸಲ್ಮಾನರ ಕೈಯಲ್ಲಿ ಬರುವಂತೆ ಮಾಡಬೇಕು." ಈ ಕಾರ್ಯಕ್ಕಾಗಿ ಫಂಡ್ ಕೂಡಿಸಲ್ಪಟ್ಟಿತು. ಅನೇಕರು ಪ್ರತಿ ವರುಷ ೨೦೦ ರೂ. ಕೊಡಲು ಒಪ್ಪಿದರು.

ಕ್ರಿಸ್ತಮತ ಪ್ರಸಾರವೂ ಈ ದೇಶದಲ್ಲಿ ಪ್ರಚಂಡವಾಗಿ ಸಾಗಿದೆ. ಪ್ರತಿ ಹತ್ತು ವರುಷಗಳಿಗೆ ೯ ಲಕ್ಷ ಕ್ರಿಸ್ತರ ಸಂಖ್ಯೆ ಹೆಚ್ಚುತ್ತದೆ. ಎಂದರೆ ಪ್ರತಿದಿವಸ ೨೪೮ ಜನರು ಕ್ರಿಸ್ತರಾಗುತ್ತಿದ್ದಾರೆ. ಇವರು ಧರ್ಮ ಪ್ರಸಾರಕ್ಕಾಗಿ ವೈದ್ಯಾಲಯ, ಶಾಲೆ, ಮುದ್ರಣಾಲಯ ಮೊದಲಾದ ಅನೇಕ ಏರ್ಪಾಟುಗಳನ್ನು ಮಾಡಿಕೊಂಡು ಕೋಟಿಗಟ್ಟಲೆ ರೂ. ಗಳನ್ನು ವೆಚ್ಚ ಮಾಡುತ್ತಿದ್ದಾರೆ.

ನಾನು ಕಳೆದ ೫-೬ ವರುಷಗಳಿಂದಲೂ ಆದಿ ಹಿಂದುಗಳ ಉನ್ನತಿಗಾಗಿ ಪ್ರಯತ್ನಿಸುತ್ತಿದ್ದೇನೆ. ಈ ಜನರೇ ಪರಧರ್ಮಿಗಳಿಗೆ ಹೋಗುವುದು ಹೆಚ್ಚು. ನಾನು ಕಳೆದ ವರುಷ ಹಿಂದು ಧರ್ಮ ರಕ್ಷಣೆಯ ಸಂಘವನ್ನು ಸ್ಥಾಪಿಸಿ ಮಹರಾಷ್ಟ್ರ ಮತ್ತು ಕರ್ನಾಟಕಗಳಲ್ಲಿ ಸಾಧಾರಣ ೧೦೦-೧೨೫ ಗ್ರಾಮಗಳಲ್ಲಿ ಸಂಚರಿಸಿದೆನು."

### ಗಂಟೆ ಬಾರಿಸಿದ ಸತ್ಯಾಗ್ರಹ.

ಪುಣೆ ಸೋನ್ಯಾಮಾರುತಿ ಗುಡಿಯಲ್ಲಿ ಗಂಟೆ ಬಾರಿಸಬಾರದಾಗಿ ಸರಕಾರದಿಂದಾಗಿದ್ದ ಅಪ್ಪಣೆಯನ್ನು ಮೀರಿ ೧೦೮ ಜನರು ಸತ್ಯಾಗ್ರಹವನ್ನು ಮಾಡಿ ಗಂಟೆ ಬಾರಿಸಿ ಶಿಕ್ಷೆಗೆ ಗುರಿಯಾಗಿದ್ದರಷ್ಟೆ. ಇವರಲ್ಲಿ ಶ್ರೀ. ನ. ಚಿ. ಕೇಳಕರರೇ ಮೊದಲಾದ ಕೆಲವರು ಶಿಕ್ಷೆಯ ವಿರುದ್ಧವಾಗಿ ವ್ಯಾಜ್ಯ ಹೂಡಿದ್ದರು. ತಾ. ೨೧ ನೆಯ ದಿನ ಮುಂಬೈ ಹೈಕೋರ್ಟಿನವರು ಶಿಕ್ಷೆಯು ಅನ್ಯಾಯವಾದುದೆಂದೂ ದಂಡದ ಹಣವನ್ನು ತಿರುಗಿ ಕೊಡಬೇಕೆಂದೂ ತೀರ್ಮಾನ ಮಾಡಿದರು. ಇನ್ನಿತರರ ದಂಡದ ಹಣವೂ ತಿರುಗಿ ಬರುವಂತೆ ತೋರುತ್ತದೆ.

### ಕ್ರಿಸ್ತರ ಬಲೆಗೆ ಬೀಳಲಿಲ್ಲ.

ಹರಿಹರದಿಂದ ೪ ಮೈಲು ದೂರದಲ್ಲಿರುವ ಹಳೆಬಾಕಿ ಎಂಬ ಗ್ರಾಮದ ಸಾಧಾರಣ ಒಂದು ನೂರು ಆದಿ ಹಿಂದುಗಳು ದಾವಣಗೆರೆ ಕ್ರಿಸ್ತಿಗಳ ಬಲೆಗೆ ಬೀಳುವವರಿದ್ದರು. ಅಷ್ಟರಲ್ಲಿ ಹರಿಹರದ ಶ್ರಿ. ಆರ್. ಟಿ. ಗೋವಿಂದರಾಯರೇ ಮೊದಲಾದ ಅನೇಕ ಸವರ್ಣೀಯ ಹಿಂದುಗಳೂ, ಆದಿ ಹಿಂದುಗಳೂ ಹಳೆಬಾಕಿ ಗ್ರಾಮಕ್ಕೆ ಹೋಗಿ ಅಲ್ಲಿಯ ಆದಿ ಹಿಂದುಗಳಿಗಿರುವ ಅನಾನುಕೂಲಗಳನ್ನು ನಿವಾರಣೆಮಾಡುವುದಾಗಿ ತಿಳಿಸಿದರು. ವಿವೇಕಶಾಲಿಗಳಾದ ಆ ಜನರು ತಾವು ಮತಾಂತರ ಹೊಂದುವುದಿಲ್ಲವಾಗಿ ಪ್ರತಿಜ್ಞೆ ಮಾಡಿದರು. ಇದು ಹರಿಹರದವರಿಗೂ ಹಳೆಬಾಕಿ ಗ್ರಾಮದವರಿಗೂ ತುಂಬಾ ಭೂಷಣವಾದುದು.

ಶರಣ ಸಂದೇಶ



ಶಾ. ಶ. ೧೮೫೯ ನೆಯ ಭಾದ್ರಪದ ಬ|| ೮ ಸೋಮವಾರ.

## ಗಾಂಧೀಜಿಯವರ ವಿಜಯ.

ಮಹಾತ್ಮಾ ಗಾಂಧಿಯವರು ಕೇವಲ ಹಿಂದುಸ್ಥಾನದ ಉದ್ಧಾರಕ್ಕಾಗಿಯೇ ತಮ್ಮ ಸರ್ವಸ್ವವನ್ನೂ ತ್ಯಾಗಮಾಡಿರತಕ್ಕ ಮಹಾ ವಿಭೂತಿಗಳೆಂದಲ್ಲ. ಆಧುನಿಕ ಜಗತ್ತಿಗೇನೇ ಮಾರ್ಗವನ್ನು ತೋರಿಸುವ ಮಹಾ ದೀಪಸ್ತಂಭವಾಗಿದ್ದಾರೆ. ಈ ಮಹಾತ್ಮರು ಹಿಂದುಸ್ಥಾನದ ರಾಜಕಾರಣದಲ್ಲಿ ಪ್ರತ್ಯಕ್ಷ ಪ್ರವೇಶಿಸಿ ೧೮ ವರುಷಗಳಾದವು. ಈ ಅಲ್ಪಾವಧಿಯಲ್ಲಿಯೇ ಅನೇಕ ಜಾತಿ, ಧರ್ಮ, ಮತ, ಪಂಗಡಗಳಿಂದಲೂ ಭಾಷೆಗಳಿಂದಲೂ ಕೂಡಿರುವ ಈ ವಿಶಾಲವಾದ ರಾಷ್ಟ್ರದಲ್ಲಿ ಅತ್ಯದ್ಭುತವಾದ ವಿಚಾರ ಮತ್ತು ಆಚಾರಗಳ ಕ್ರಾಂತಿಯನ್ನುಂಟುಮಾಡಿ ರಾಜಕೀಯ, ಸಾಮಾಜಿಕ, ಸಾಂಪತ್ತಿಕ ಉನ್ನತಿಗಳ ಸಂಬಂಧವಾಗಿ ಮಾಡಿರತಕ್ಕ ಅಪೂರ್ವ ಕಾರ್ಯಗಳು ಕೇವಲ ಹಿಂದುಸ್ಥಾನದ ಚರಿತ್ರೆಯಲ್ಲಿಯೇ ಅಲ್ಲ; ಜಗತ್ತಿನ ಚರಿತ್ರೆಯಲ್ಲಿಯೇ ಮಹತ್ವವಾದವುಗಳೆಂದು ಧಾರಾಳವಾಗಿ ಹೇಳಬಹುದು.

ಹಿಂದುಸ್ಥಾನದ ರಾಜಕೀಯ ಪಾರತಂತ್ರ್ಯ ಪಾಶವು ಎಷ್ಟು ಪ್ರಬಲವಾದುದೆಂಬುದನ್ನು ಹೇಳಬೇಕಾದುದೇ ಇಲ್ಲ. ಕಳೆದೊಂದು ಸಾವಿರ ವರುಷಗಳಿಂದಲೂ ಇದು ಪರಾಧೀನವಾಗುತ್ತಲೇ ಬಂದಿದೆ. ಜಗತ್ತಿನಲ್ಲಿ ಅತ್ಯಂತ ಬಲಾಢ್ಯವಾದ ಬ್ರಿಟಿಶ್ ಸಾಮ್ರಾಜ್ಯದ ಹಿಡಿತದಲ್ಲಿ ಇದು ಸಿಕ್ಕಿಕೊಂಡು ಎಷ್ಟು ಬಳಲುತ್ತಿದೆಯೆಂಬುದು ಸರ್ವಶ್ರುತ. ಇಂತಹ ಶೋಚನೀಯ ಸ್ಥಿತಿಯನ್ನು ಭೂಮಿಗೆ ಒಂದು ರಕ್ತದ ಹನಿಯೂ ಬೀಳಗೊಡದಂತೆ ನಿವಾರಣೆಮಾಡಲು ಪ್ರಯತ್ನಿಸುತ್ತಿರುವ ಗಾಂಧೀಜಿಯವರ ಪ್ರಯತ್ನವು ಮನುಷ್ಯ ಜಾತಿಯ ಚರಿತ್ರೆಯಲ್ಲಿಯೇ ಅಪೂರ್ವವಾದುದು.

ಹಿಂಸೆಯ ಮಾರ್ಗವನ್ನು ಅನುಸರಿಸಿದ್ದ ವೀರ ರಾಷ್ಟ್ರ ಸೇವಕರು ಆ ದಾರಿಯು ತಪ್ಪೆಂದು ಈಗ ಅಹಿಂಸಾ ಮಾರ್ಗಕ್ಕೆ ಬರುತ್ತಿರುವುದು ಗಾಂಧೀಜಿಯವರ ವಿಜಯದ ಹೆಗ್ಗುರುತು. ಸಂತೋಷದಿಂದ ಸೆರೆಮನೆಗೆ ಹೋದ ಕಾಂಗ್ರೆಸ್ ಸಂಸ್ಥೆಯು ಈಗ ಅರಮನೆಯ ಎಷ್ಟೋ ಅಧಿಕಾರವನ್ನು ಕೈವಶಮಾಡಿಕೊಂಡಿರುವುದು ಗಾಂಧೀಜಿಯವರ ವಿಜಯದ ಮತ್ತೊಂದು ಕುರುಹು. ಗಾಂಧೀಜಿಯವರು ಹಿಂದುಸ್ಥಾನದಲ್ಲಿ ಸ್ವರಾಜ್ಯವನ್ನು ಸ್ಥಾಪಿಸಿ ಪ್ರಪಂಚದ ಚರಿತ್ರೆಯಲ್ಲಿ ಸುವರ್ಣಾಕ್ಷರಗಳ ಒಂದು ಹೊಸ ಅಧ್ಯಾಯವನ್ನು ಬರೆಯಲು ಕಾರಣರಾಗಲೆಂದೂ ದೀರ್ಘಾಯುರಾರೋಗ್ಯಗಳನ್ನು ಹೊಂದಲೆಂದೂ ಆ ಮಹಾತ್ಮರ ೬೯ ನೆಯ ವರ್ಷ ವರ್ಧಂತಿಯ ಈ ಸಪ್ತಾಹದಲ್ಲಿ ನಾವು ಹಾರೈಸುತ್ತೇವೆ.

## ಪಂಡಿತಜಿಯವರ ವಿಚಾರಸರಣಿ.

ಪಂಡಿತ ಜವಾಹರಲಾಲ ನೆಹರುರವರು ಅಹಮದಾಬಾದಿನ ಒಂದು ಸಭೆಯಲ್ಲಿ ಹೀಗೆ ಹೇಳಿದರು—

"ಹಿಂದು—ಮುಸ್ಲಿಂ ಪ್ರಶ್ನೆಯು ಸಾಮಾನ್ಯ ಜನತೆಯ ಪ್ರಶ್ನೆಯಾಗಿರದೆ ಮೇಲಿನ ತರಗತಿಯವರ ಪ್ರಶ್ನೆಯು. ಹಿಂದು, ಮುಸ್ಲಿಂ ಸಾಮಾನ್ಯ ಜನತೆಯು ಅನ್ನ ಪ್ರಶ್ನೆಯಿಂದ ಒಂದೇ ತರನಾಗಿ ಬಳಲುತ್ತಿದೆ. ಉಭಯರ ಕಷ್ಟನಷ್ಟಗಳೂ ಒಂದೇ ಆಗಿದ್ದು ಅವುಗಳ ನಿವಾರಣೆಯಾದರೂ ಉಭಯರಿಗೆ ಸಂಬಂಧಿಸಿದವೇ ಆಗಿವೆ."

ಈ ದೇಶದ ಜಾತಿವಿಶಿಷ್ಟ ಪ್ರಶ್ನೆಗಳನ್ನೆಲ್ಲಾ ದುಡ್ಡಿನಿಂದ ತೂಕಮಾಡುವ ಪಂಡಿತಜಿಯವರ ಈ ವಿಚಾರಸರಣಿಯೇನೂ ಹೊಸದಲ್ಲ. ಹಿಂದೆಯೇ ಅನೇಕ ಸಾರೆ ಹೇಳಿದ್ದಾರೆ. ದುಡ್ಡು ಸಮನಾದರೆ ಧಾರ್ಮಿಕ ಭಾವನೆ, ಕಲ್ಪನೆ, ಅಭಿಮಾನಗಳೆಲ್ಲಾ ಸಮಾನವಾಗುತ್ತವೆಯೇ ?

ಈ ದೇಶದಲ್ಲಿ ಹಿಂದು ಮತ್ತು ಮುಸ್ಲಿಂ ಎಂಬ ಜಾತಿವಿಶಿಷ್ಟ ಪ್ರಶ್ನೆಯು ಹಣವಂತರಿಂದ ಉಂಟಾದುದೇ ವಿನಾ ಬಡಜನಗಳಲ್ಲಿ ಈ ವ್ಯತ್ಯಾಸವಿಲ್ಲವೆಂದೇ ಇವರು ಸಾರುತ್ತಿರುವರು. ಇದು ಸರಿಯಲ್ಲ. ಜನಸಾಮಾನ್ಯವಾದ ಹಿಂದು ಮತ್ತು ಮುಸಲ್ಮಾನ ಸಮಾಜಗಳಲ್ಲಿಯೂ ಜಾತಿವಿಶಿಷ್ಟ ವೈಷಮ್ಯವು ಬಲವಾಗಿಯೇ ಇದೆ. ಅದನ್ನೇ ಆಯಾಯ ಜಾತಿಯ ಮೇಲಿನ ತರಗತಿಯ ಅನೇಕ ಜನರು ಸ್ವಾರ್ಥಸಾಧಿಸಿಕೊಳ್ಳಲು ಉಪಯೋಗಿಸುತ್ತಿದ್ದಾರೆಂದು ತಿಳಿಯಬೇಕಾದುದೇ ವಿಹಿತವು.

ಹಣದ ತೂಕ ಕಡಿಮೆಯಿದ್ದಂತೆ ಜಾತಿಯ ಭಾವನೆ ಕಡಿಮೆಯಿರುತ್ತದೆಂದು ತಿಳಿಯುವುದಾದರೆ ಸಾಮಾನ್ಯವಾಗಿ ಹಿಂದುಗಳಿಗಿಂತ ಮುಸಲ್ಮಾನರು ಹೆಚ್ಚು ಬಡವರೆಂದೇ ಹೇಳಬಹುದು. ಆದರೆ ಜಾತಿ ಭಾವನೆಯಾದರೋ ಹಿಂದುಗಳಿಗಿಂತ ಮುಸಲ್ಮಾನರಲ್ಲಿ ಹೆಚ್ಚೆಂದು ಹೇಳಬೇಕಾದುದೇ ಇಲ್ಲ. ಆದುದರಿಂದ ಹಿಂದು-ಮುಸಲ್ಮಾನ್ ಪ್ರಶ್ನೆಯನ್ನು ಕೇವಲ ದುಡ್ಡಿನ ತೂಕದಿಂದ ಬಗೆಹರಿಸುವ ರೀತಿಯು ಅಸಂಗತವಾದುದೇ ಸರಿ. ಸಮತಾವಾದದ ಈ ಹಣವಿನ ಮಾತ್ರೆಯು ಈ ದೇಶದ ಹಿಂದು - ಮುಸಲ್ಮಾನರ ವೈಮನಸ್ಸಿನ ರೋಗವನ್ನು ಕಳೆಯುವುದೆಂಬ ಪಂಡಿತಜಿಯವರ ಅಭಿಪ್ರಾಯ ನಮಗೆ ಸರಿತೋರುವುದಿಲ್ಲ.

### ಬಾಬುರಾಜೇಂದ್ರರು ಹೇಳುವುದೇನು ?

ಪಂಡಿತ ನೆಹರುರವರಂತಹ ದೊಡ್ಡ ಮನುಷ್ಯರ ಅಭಿಪ್ರಾಯ ತಪ್ಪೆಂದು ಹೇಳಬಹುದೆ? ಎಂದು ಯಾರಾದರೂ ಶಂಕಿಸಿದರೆ ಅವರಂತೆಯೇ ಮತ್ತೊಬ್ಬ ದೊಡ್ಡವರಾದ ಬಾಬುರಾಜೇಂದ್ರರು ಹೀಗೆ ಹೇಳಿದ್ದಾರೆ—

" ನಮ್ಮ ಸಾಮಾಜಿಕ, ಮಾನಸಿಕ ಮತ್ತು ಧಾರ್ಮಿಕ ಸಂಗತಿಗಳೆಲ್ಲಾ ಕೇವಲ ಆರ್ಥಿಕ ಸ್ಥಿತಿಯನ್ನೇ ಅವಲಂಬಿಸಿವೆಯೆಂಬ ಸಮತಾವಾದಿಗಳ ಮೂಲ ಸಿದ್ಧಾಂತವು ನನಗೆ ಸಮ್ಮತವಿಲ್ಲ."

—ಕಳೆದ ೨೫ ನೆಯ ತಾರೀಖು ಗಾಂಧೀಜಿಯವರ ಯರವಡಾ ಒಪ್ಪಂದದ ೫ ನೆಯ ಸ್ಮೃತಿದಿನವಾಗಿತ್ತು.

# 'ವಂದೇಮಾತರಂ' ಗೀತೆಗೆ ವಿರೋಧ!




## 'ವಂದೇಮಾತರಂ' ಗೀತೆಯ ವಿಚಾರವಾಗಿ ಪಂಡಿತಜಿಯವರ ಅಭಿಪ್ರಾಯ.

ಮದ್ರಾಸ್ ಅಸೆಂಬ್ಲಿಯ ಕಾರ್ಯ ಪ್ರಾರಂಭದ ಕಾಲಕ್ಕೆ ವಂದೇಮಾತರಂ ಗೀತೆಯನ್ನು ಹೇಳುವ ಪದ್ಧತಿಯುಂಟಾಗಿದೆ. ಒಂದು ದಿನ ಗೀತೆಯನ್ನು ಹೇಳುವವರಿಲ್ಲದಿದ್ದಾಗ ಅಸೆಂಬ್ಲಿಯ ಅಧ್ಯಕ್ಷರಾದ ಶ್ರೀ. ಸಾಂಬಮೂರ್ತಿಯವರೇ ಗೀತೆಯನ್ನು ಹೇಳಿ ಕಾರ್ಯವನ್ನು ಪ್ರಾರಂಭಿಸಿದ್ದರು.

ಈ ಪದ್ಧತಿಯ ಪ್ರಕಾರ ತಾ. ೫ ನೆಯ ದಿನ ವಂದೇಮಾತರಂ ಗೀತೆ ಪ್ರಾರಂಭವಾಗಲು ಇದು ಇಸ್ಲಾಂ ಧರ್ಮಕ್ಕೆ ಅವಮಾನಕರವಾದುದೆಂದು ಮಿ. ಲಾಲಜಾನ ಎಂಬ ಮುಸ್ಲಿಂ ಸಭಾಸದರು ಹೇಳಿ ಈ ವಿಷಯವನ್ನು ಅಧ್ಯಕ್ಷರು ತೀರ್ಮಾನಮಾಡಬೇಕಾಗಿ ಕೇಳಿಕೊಂಡರು. ಪ್ರಾರ್ಥನೆ ಮುಗಿದನಂತರ ತಿಳಿಸುವುದಾಗಿ ಅಧ್ಯಕ್ಷರು ಸೂಚಿಸಲು ಮಿ. ಲಾಲಜಾನರು ಸಭೆಯಿಂದ ಎದ್ದು ಹೋಗಿ ಪ್ರಾರ್ಥನೆಯಾದನಂತರ ಬಂದರು.

ಮಂತ್ರಿಗಳಾದ ಯಾಕೂಬ ಹಸನ್‌ರು ಮಿ. ಲಾಲಜಾನರ ರೀತಿಯನ್ನು ಖಂಡಿಸಿ ಅಧ್ಯಕ್ಷರನ್ನು ಪ್ರತ್ಯೇಕವಾಗಿ ಕಂಡು ಈ ವಿಚಾರವಾಗಿ ತಿಳಿದುಕೊಳ್ಳಬೇಕಾಗಿತ್ತೆಂದು ಹೇಳಿದರು. ಮುಸ್ಲಿಂ ಪಕ್ಷದ ಪ್ರಮುಖರಾದ ಮಿ. ಹಮೀದಖಾನರು ವಂದೇಮಾತರಂ ಗೀತೆಯ ಸಂಬಂಧವಾಗಿ ಬಹು ದಿನಗಳಿಂದಲೂ ಮುಸಲ್ಮಾನರಲ್ಲಿ ಅಸಂತೋಷವಿದೆಯೆಂತಲೂ ಆದರೆ ಮಿ. ಲಾಲಜಾನರು ಇಲ್ಲಿ ಆ ಸಂಗತಿಯನ್ನು ಪ್ರಸ್ತಾಪಿಸಬಾರದಾಗಿತ್ತೆಂತಲೂ ತಿಳಿಸಿದರು, ಆ ಮೇಲೆ ಮಿ. ಲಾಲಜಾನರು ತಮ್ಮ ಪ್ರಶ್ನೆಯನ್ನು ಹಿಂದಕ್ಕೆ ತೆಗೆದುಕೊಂಡರು.

ಅಧ್ಯಕ್ಷರು ತಮ್ಮ ಅಭಿಪ್ರಾಯವನ್ನು ಈ ಪ್ರಕಾರ ತಿಳಿಸಿದರು— "ಹೀಗೆ ಕಾರ್ಯಾರಂಭದಲ್ಲಿ ದೇವರ ಪ್ರಾರ್ಥನೆಯನ್ನು ಮಾಡುವುದು ಕಾನಡಾ ಪಾರ್ಲಿಮೆಂಟಿನಲ್ಲಿಯೂ ಇದೆ. ಪರತಂತ್ರವಾದ ದೇಶಕ್ಕೆ ಮಾತೃಭೂಮಿಯೇ ದೇವತೆ. ಈ ವಂದೇಮಾತರಂ ಗೀತೆಯನ್ನು ಹಿಂದು, ಮುಸ್ಲಿಂ, ಕ್ರಿಸ್ತ, ಎಲ್ಲಾ ಧರ್ಮದವರೂ ಹೇಳುತ್ತಿದ್ದಾರೆ. ಒಂದೊಂದು ದಿನ ಒಂದೊಂದು ಪ್ರಾರ್ಥನೆಯನ್ನು ಮಾಡಲು ಹಿಂದು, ಮುಸಲ್ಮಾನ್, ಕ್ರಿಸ್ತ ಧರ್ಮದವರ ಉಕ್ತಿಗಳನ್ನು ಆರಿಸಿ ತೆಗೆಯಬೇಕೆಂಬ ಯೋಚನೆಯೂ ನಡೆದಿದೆ."

### ಪಂಡಿತಜಿಯವರ ಅಭಿಪ್ರಾಯ.

ಅಖಿಲ ಭಾರತ ರಾಟಿ ಸಂಘದ ದಿಲ್ಲಿ ಕೆಲಸಗಾರರಾದ ಮಿ. ಅಲ್ಲಿ ಸರದಾರ ಜಾಫ್ರಿಯವರು ಕಾಂಗ್ರೆಸ್ಸಿನ ಅಧ್ಯಕ್ಷರಾದ ಪಂಡಿತ ಜವಾಹರಲಾಲರಿಗೆ ವಂದೇ ಮಾತರಂ ರಾಷ್ಟ್ರಗೀತೆಯಾಗಲು ಯೋಗ್ಯವಾಗಿದೆಯೆ? ಎಂದು ಪ್ರಶ್ನೆಮಾಡಿದ್ದಕ್ಕೆ ಉತ್ತರವಾಗಿ ಪಂಡಿತಜಿಯವರು ಹೇಳಿದ್ದರಲ್ಲಿ ಈ ಕೆಳಗಿನ ಅಭಿಪ್ರಾಯವಿದೆ—

"ಕಾಂಗ್ರೆಸ್ ಸಂಸ್ಥೆಯು ಈ ವರೆಗೂ ಯಾವ ಗೀತೆಯನ್ನೂ ರಾಷ್ಟ್ರಗೀತೆಯನ್ನಾಗಿ ಸ್ವೀಕರಿಸಿಲ್ಲ. ಕಳೆದ ೩೦ ವರುಷಗಳಿಂದ ವಂದೇ ಮಾತರಂ ಗೀತೆಯು ಕಾಂಗ್ರೆಸ್ಸಿನವರಿಂದ ಹೇಳಲ್ಪಡುತ್ತಾ ಇದೆ. ಅದು ರಾಷ್ಟ್ರ ಗೀತೆಯಾಗಲು ತಕ್ಕದ್ದೆಂದು ನನಗೆ ತೋರುವುದಿಲ್ಲ. ಜನರಿಗೆ ತಿಳಿಯದಂತಹ ಕಠಿಣ ಶಬ್ದಗಳಿವೆ. ಈಗಿನ ರಾಷ್ಟ್ರೀಯರಿಗೆ ಒಪ್ಪಿಗೆಯಾಗುವ ವಿಚಾರಗಳೂ ಅದರಲ್ಲಿಲ್ಲ. ಬೇರೊಂದು ರಾಷ್ಟ್ರ ಗೀತೆಯನ್ನು ಉಂಟುಮಾಡಿಕೊಳ್ಳುವವರೆಗೆ ಇದನ್ನೇ ಹೇಳುವುದರಲ್ಲಿ ಅಭ್ಯಂತರವಿಲ್ಲ."

---

### ಘಟನಾ ಸಮಿತಿಗೆ ಒಪ್ಪಿಗೆ.

ಮುಂಬೈ ಸರಕಾರದ ಮುಖ್ಯ ಮಂತ್ರಿಗಳಾದ ಶ್ರೀ. ಖೇರ ಇವರು ಅಸೆಂಬ್ಲಿಯಲ್ಲಿ ಘಟನಾ ಸಮಿತಿಯ ಒಂದು ಗೊತ್ತುವಳಿಯನ್ನು ತಂದಿದ್ದರು. ಅದಕ್ಕೆ ೯೬ ಅನುಕೂಲ ೪೩ ಪ್ರತಿಕೂಲ ಮತಗಳು ದೊರೆತು ಬಹು ಮತದಿಂದ ಒಪ್ಪಿಗೆಯಾಯಿತು. ಆ ಗೊತ್ತುವಳಿಯ ಅಭಿಪ್ರಾಯ ಹೀಗಿತ್ತು—

"೧೯೩೫ ನೆಯ ಇಸವಿ ರಾಜ್ಯಘಟನೆಯು ರಾಷ್ಟ್ರದ ಇಚ್ಛೆಯಿಂದ ಕೂಡಿದ್ದಾಗಿಲ್ಲ, ಹಿಂದಿಗಳನ್ನು ದಾಸ್ಯದಲ್ಲಿಡಬೇಕೆಂದೇ ಅದರ ಉದ್ದೇಶವಿದ್ದುದರಿಂದ ಅದು ತ್ಯಾಜ್ಯವಾದುದಾಗಿದೆ. ಹಿಂದಿಗಳ ಪ್ರೌಢ ಮತಾಧಿಕಾರ ತತ್ವವನ್ನನುಸರಿಸಿ ಏರ್ಪಡುವ ರಾಜ್ಯ ಘಟನೆಯು ಇದಕ್ಕೆ ಪ್ರತಿಯಾಗಿ ಸ್ಥಾಪಿಸಲ್ಪಡಬೇಕು. ಅದೇ ಹಿಂದಿ ರಾಷ್ಟ್ರದ ಆಕಾಂಕ್ಷೆಯನ್ನು ಪೂರ್ತಿಗೊಳಿಸುವುದು."

# ಶಿವಾನುಭವ ಮಂಟಪದಲ್ಲಿ

## ಬಸವಣ್ಣನವರ ಶ್ರೇಷ್ಠತ್ವದ ಕಾರಣವನ್ನು ಕುರಿತು ವಿವೇಚನೆ.



### ಕುಲದಲ್ಲಿ ಹುಟ್ಟಿ ಕುಲವ ಬೆರಿಸದೆ ತನ್ನ ನಿಲವ ಬಲಿದಿಪ್ಪವರಾರು ಹೇಳಾ?

ಮಹಾನುಭಾವರಾದ ಬಸವಣ್ಣನವರು ಹನ್ನೆರಡನೆಯ ಶತಮಾನದಲ್ಲಿ ಅತ್ಯದ್ಭುತವಾದ ಧಾರ್ಮಿಕ, ವಿಚಾರ ಕ್ರಾಂತಿಯನ್ನೂ ಆಚಾರ ಕ್ರಾಂತಿಯನ್ನೂ ಉಂಟುಮಾಡಿದ್ದರಷ್ಟೆ. ಆ ತಮ್ಮ ಅದ್ವಿತೀಯವಾದ ಕಾರ್ಯದ ಕೇಂದ್ರ ಸ್ಥಾನವು ಶಿವಾನುಭವ ಮಂಟಪವಾಗಿದ್ದಿತು. ಅಲ್ಲಿ ಮಹಾ ಮಹಾ ಶಿವಶರಣೆಯರೂ ಶರಣರೂ ಸೇರಿ ಧಾರ್ಮಿಕ ವಿಷಯಗಳನ್ನು ಚರ್ಚಿಸುತ್ತಿದ್ದರು. ಜಂಗಮಪುಂಗವರಾದ ಪ್ರಭುದೇವರು ಆ ಶಿವಾನುಭವ ಮಂಟಪದಲ್ಲಿಯ ಚರ್ಚೆಯ ಕಾಲಕ್ಕೆ ಅಧ್ಯಕ್ಷರಾಗಿರುತ್ತಿದ್ದರು. ಒಂದು ದಿನ ಆ ಗುರುವರೇಣ್ಯರಾದ ಪ್ರಭುದೇವರು ಬಸವಣ್ಣನವರ ಶ್ರೇಷ್ಠತ್ವವನ್ನು ಕುರಿತು ಹೀಗೆ ವಿವೇಚಿಸಿದರು—

ಕುಲದೊಳಗೆ ಹುಟ್ಟಿ ಕುಲವ ಬೆರಿಸದೆ ತನ್ನ ನಿಲವ ಬಲಿದಿಪ್ಪವರಾರು ಹೇಳಾ? ಹಬ್ಬಿದ ಮೂರು ಬೆಟ್ಟಕ್ಕೆ ತನ್ನ ಮನವ ಹಬ್ಬಲೀಯದೆ ಲಿಂಗ ಜಂಗಮಕ್ಕೆ ಸವಿಸಿ ಸ್ವಯ ಲಿಂಗವಪ್ಪವರಿನ್ನಾರು ಹೇಳಾ? ಸ್ವಯೋಲಿಂಗ, ಸ್ವಯೋಶರಣ, ಸ್ವಯೋಭೋಗವೆಂದುದಾಗಿ ಗುಹೇಶ್ವರ ನಿಮ್ಮ ಶರಣ ಸಂಗನಬಸವಣ್ಣಂಗೆ ನಮೋ ನಮೋ ಎಂಬೆನು.

ಮನುಷ್ಯನಿಗಿರುವ ಅಷ್ಟಮದಗಳಲ್ಲಿ ಕುಲಮದವೂ ಒಂದಾಗಿದೆ. ತಾನು ಹೆಚ್ಚಿನ ಕುಲದಲ್ಲಿ ಹುಟ್ಟಿದ್ದೇನೆಂದೂ ಅದರಿಂದಲೇ ತಾನು ಶ್ರೇಷ್ಠನೆಂದೂ ತಿಳಿಯುವವರೇ ಹೆಚ್ಚು. ಹೀಗಿರುವಾಗ ಬಸವಣ್ಣನಿಗೆ ಈ ಕುಲಮದವೇನಾದರೂ ಇದೆಯೆ? ಆತನು ಹುಟ್ಟಿದ ಕುಲವೇನಾದರೂ ಜನರ ತಿಳುವಳಿಕೆಯಲ್ಲಿ ಸಾಮಾನ್ಯವಾದುದೆ? ಬ್ರಾಹ್ಮಣ ಕುಲದಲ್ಲಿ ಹುಟ್ಟಿದಾತನು. ಭೂಸುರರೆಂದು ಬಹು ಜನಗಳಿಂದ ತಿಳಿಯಲ್ಪಡುವ ಕುಲದವರಲ್ಲಿ ಹುಟ್ಟಿದವನು. ಹೀಗಿದ್ದರೂ ಆ ತನ್ನ ಕುಲದವರಲ್ಲಿಯೇ ಕೂಡಿಕೊಂಡಿರದೆ ತನ್ನಲ್ಲಿರುವ ಶಿವಭಕ್ತಿಯ ನಿಜಸ್ಥಿತಿಯನ್ನು ತಿಳಿದು ಅದನ್ನೇ ಬಲಿಸಿಕೊಳ್ಳಲು ಶಿವಭಕ್ತರೆಲ್ಲಾ ಅವರು ಯಾವ ಕುಲದಲ್ಲಿ ಹುಟ್ಟಿರಲಿ, ಅಥವಾ ಯಾವ ಕೈಕಸಬನ್ನು ಮಾಡುತ್ತಿರಲಿ, ಅವರೆಲ್ಲರೂ ತನ್ನ ಬಂಧು ಬಾಂಧವರೆಂದು ತಿಳಿದು ಆ ಪ್ರಕಾರ ನಡೆಯುತ್ತಿರುವವರು ಬಸವಣ್ಣನ ಹೊರತು ಮತ್ತಾರಿದ್ದಾರೆ ಹೇಳಿರಿ?

ಜಗತ್ತಿನಲ್ಲಿ ಎಲ್ಲರ ಮುಂದೆಯೂ ಹೊನ್ನು, ಹೆಣ್ಣು, ಮಣ್ಣುಗಳೆಂಬ ಮೂರು ಬೆಟ್ಟಗಳು ಇದ್ದೇ ಇವೆ. ಇವುಗಳಲ್ಲಿ ತನ್ನ ಮನಸ್ಸನ್ನಿಡದೆ ಲಿಂಗಪೂಜೆಯಲ್ಲಿ ಮನಸ್ಸನ್ನೂ ಅಂಗದಲ್ಲಿ ಲಿಂಗವುಳ್ಳವರೆಲ್ಲರೂ ಸಾಕ್ಷಾತ್ ಸಂಗಮನಾಥನೆ ಸರಿಯೆಂದು ತಿಳಿದು ಲಿಂಗಾಂಗಿಗಳಾದ ಆ ಜಂಗಮ ವೃಂದಕ್ಕೆ ತನ್ನ ಧನವನ್ನೂ ಸವಿಸಿ ತಾನೇ ಲಿಂಗಸ್ವರೂಪಿಯಾಗಿರತಕ್ಕವನು ಬಸವಣ್ಣನ ವಿನಾ ಇನ್ನಾರಿದ್ದಾರೆ ಹೇಳಿರಿ?

ಅಂತೆಯೇ ಗುಹೇಶ್ವರನೇ, ನಿನ್ನ ಶರಣನಾದ ಸಂಗನಬಸವಣ್ಣನು ತಾನೇ ಲಿಂಗಸ್ವರೂಪನೂ ಲಿಂಗಮತ ಪ್ರಸಾರದಲ್ಲಿ ಶರಣ ಶ್ರೇಷ್ಠನೂ, ಲಿಂಗಭೋಗೋಪಭೋಗಿಯೂ ಆಗಿರುವುದರಿಂದ ಆತನಿಗೆ ನಾನು ಪುನಃ ಪುನಃ ವಂದಿಸುತ್ತೇನೆಂದು ಪ್ರಭುದೇವರು ಆ ಶಿವಾನುಭವ ಮಂಟಪದಲ್ಲಿ ಬಸವಣ್ಣನವರ ಶ್ರೇಷ್ಠತ್ವವನ್ನು ಕುರಿತು ವಿವೇಚಿಸಿ ಆ ಮಹಾನುಭಾವನ ವಿಷಯದಲ್ಲಿದ್ದ ತಮ್ಮ ಆದರವನ್ನೂ ವ್ಯಕ್ತಗೊಳಿಸಿದರು.

ಇದು ಅಲ್ಲಿದ್ದ ಶಿವಶರಣರಿಗೂ ಶರಣೆಯರಿಗೂ ತುಂಬಾ ಮಾನ್ಯವಾಯಿತು. "ಅಪ್ಪನು ನಮ್ಮ ಮಾದಾರ ಚೆನ್ನಯ್ಯ" ಎಂದು ಬಸವಣ್ಣನವರ ಹೊರತು ಇನ್ನಾರು ಈ ವರೆಗೆ ಹೇಳಿದ್ದಾರೆ? ಎಂದು ಶಿವಾನುಭವ ಮಂಟಪವು ಉಘೇ ಚಾಂಗು ಭಲಾ ಬಸವಣ್ಣ! ನಿನಗೆ ಜಯವಾಗಲೆಂದು ಜಯಜಯಕಾರ ಮಾಡಿತು.

# ನೈಜಾಮು ಪ್ರಾಂತದ ವೃತ್ತಾಂತ.

## ಕೀರಣಗಿ ಮರಗಮ್ಮನ ಜಾತ್ರೆ !

ಗುಲಬರ್ಗಾ ತಾಲೂಕು ಪೈಕಿ ಕೀರಣಗಿ ಎಂಬದೊಂದು ದೊಡ್ಡ ಗ್ರಾಮ ಇರುವುದು. ಆ ಊರಲ್ಲಿ ತಕ್ಕಮಟ್ಟಿಗೆ ವೀರಶೈವರು ಮತ್ತು ದೊಡ್ಡ ಸಾಹುಕಾರರು ಇರುವರು. ಮತ್ತು ಆ ಊರಲ್ಲಿ ಒಂದು ವಿರಕ್ತಮಠ ಇದ್ದು ಶ್ರೀ. ರಾಜೋಟಿ ಸ್ವಾಮಿಗಳೆಂಬ ಘನ ವಿದ್ವಾಂಸರು ಇರುತ್ತಾರೆ. ಮೊನ್ನೆ ಇದೇ ಜ್ಯೇಷ್ಠ ಶುದ್ಧ ೭ ಮಂಗಳವಾರ ಈ ಊರ ಶ್ರೀ ಮರಗಮ್ಮದೇವಿ ಎಂಬ ಗ್ರಾಮ ದೇವತೆಯ ಜಾತ್ರೆಯಾಯಿತು. ಬಹು ವಿಜೃಂಭಣೆಯಿಂದ ಆಗುವುದೆಂದು ನನಗೆ ಸುದ್ದಿ ಹತ್ತಿತು. ಯಾಕೆ ನೋಡಬಾರದೆಂದು ನಾನು ಕೀರಣಗಿಗೆ ಹೋದೆನು. ಜ್ಯೇಷ್ಠ ಶುದ್ಧ ೫ ಆದಿತ್ಯವಾರ ಸಾಯಂಕಾಲಕ್ಕೆ ಆ ಊರ ಪಾಡೇವಾರರು ಅಂದರೆ ಹೊಲೆಯರು ಮತ್ತು ಕೆಲವು ಜನ ಕಬ್ಬೇರರು ಕೂಡಿ ಹಲಿಗೆ ಸಹಿತವಾಗಿ ಊರು ಬಿಟ್ಟು ೭ ಫರ್ಲಾಂಗ ಮೇಲೆ ಇರುವ ಮರಗಮ್ಮನ ಗುಡಿಗೆ ಹೋಗಿ ರಾತ್ರಿ ಎಲ್ಲಾ ಅಲ್ಲಿ ಕಳೆದು ಬೆಳಗ್ಗೆ ಆ ದೇವಿಯನ್ನು ಕರಕೊಂಡು ಬರುವರು. ಹೊಲಗೇರಿ ಮುಂದಿನ ಕಟ್ಟೆಯಮೇಲೆ ಕೂಡ್ರಿಸುವರು. ಸೋಮವಾರ ಮತ್ತು ಮಂಗಳವಾರ ಈ ಎರಡು ದಿವಸ ಊರ ಜನರು ಎಲ್ಲಾ ಹದಿನೆಂಟು ಜಾತಿಯವರು "ವೀರಶೈವರು ವಿಶೇಷವಾಗಿ" ಆ ದೇವಿಗೆ ನೈವೇದ್ಯ ಕಾಯಿ ಸಕ್ಕರೆ ಕೊಡುವರು. ಮಂಗಳವಾರ ದಿವಸ ಆ ದೇವಿಯನ್ನು ಸಣ್ಣದೊಂದು ರಥ ಮಾಡಿ ರಥದಲ್ಲಿ ಕುಳ್ಳಿರಿಸಿಕೊಂಡು ಮತ್ತೆ ಗುಡಿಗೆ ಹೋಗುವರು.

ಮರುದಿವಸ ಮುಂಜಾನೆ ಆ ದೇವಿಯ ಮುಂದೆ ಆ ಊರ ಮತ್ತು ಹಳ್ಳಿಪಳ್ಳಿಯ ಹೊಲೆಯರು ಮಾದಿಗರು ಅಸಂಖ್ಯ ಕುರಿ ಕೋಣಗಳನ್ನು ಕಡಿಯುತ್ತಾರೆ. ಇದನ್ನು ಅಕ್ಕರದಿಂದ ನೋಡುವುದಕ್ಕಾಗಿ ಎಷ್ಟೊ ಜನರು ಸ್ತ್ರೀಯರು ಬಾಲ ಬಾಲಕಿಯರು ದೊಡ್ಡ ದೊಡ್ಡ ಪ್ರತಿಷ್ಠಿತ ಜನರು ಗೌಡ ಕುಲಕರ್ಣಿಯವರು ಬಹು ಜನರು ಬಂದಿರುತ್ತಾರೆ. ಅಹಹಾ! ಏನು ನೋಡಬೇಕು? ರಾಕ್ಷಸ ಸದೃಶರಾದ ಎಷ್ಟೋ ಜನರು ಕಬ್ಬೇರು ಹೊಲೆಯರು ಕೈಯಲ್ಲಿ ಹದನಾದ ಕತ್ತಿಯನ್ನು ಹಿಡಿದುಕೊಂಡು ನಿಂತಿರುತ್ತಾರೆ. ಎಷ್ಟೋ ಕೋಣಗಳು ದೀನವದನವಾಗಿ ಆ ನೆರದ ಜನರ ಕಡೆಗೆ ನೋಡುತ್ತವೆ. ಯಾರು ನಮ್ಮನ್ನು ಈ ಸಂಕಟದಿಂದ ಬಿಡಿಸುತ್ತಾರೋ ಎನ್ನುವಂತೆ ನೋಡುತ್ತವೆ. ಪಾಪ! ನೋಡದೇನು ಮಾಡ್ಯಾವು? ಹಲಗಿ ಬಡೆಯಲಿಕ್ಕೆ ಪ್ರಾರಂಭವಾಗುತ್ತದೆ. ಕೈಯಲ್ಲಿರುವ ಹದನಾದ ಕತ್ತಿಯಿಂದ ಪ್ರತಿಯೊಂದು ಕೋಣವನ್ನು ಕಡಿಯುತ್ತಾರೆ. ಒಂದೇ ಕಡತಕ್ಕೆ ರುಂಡವು ಮುಂಡದಿಂದ ಹೋಗುವುದಿಲ್ಲ. ಆ ಪಶುವು ಕೆಟ್ಟ ಧ್ವನಿಯಿಂದ ಒದರುತ್ತದೆ. ಚೀರುತ್ತದೆ. ಮೂರು ನಾಲ್ಕು ಕಡಿತಕ್ಕೆ ರುಂಡವು ಮುಂಡದಿಂದ ಕಡೆಗಾಗುತ್ತದೆ. ಆ ಮೇಲೆ ಒದ್ದಾಡುವ ಮುಂಡದಿಂದ ಹೊರಸೂಸುವ ರಕ್ತವನ್ನು ನೋಡಲಾಗದು. ಒಂದು ಬಲಗಾಲನ್ನು ಕಡಿದು ಆ ರುಂಡದ ಬಾಯಲ್ಲಿ ಕೊಡುತ್ತಾರೆ. ಆ ರುಂಡಗಳನ್ನೆಲ್ಲ ಆ ದೇವಿಯ ಮುಂದೆ ಇಡುತ್ತಾರೆ. ಹೀಗೆ ಅನೇಕ ಕೋಣಗಳನ್ನು ಕಡಿಯುತ್ತಾರೆ. ಶಿವ ಶಿವಾ! ಆ ನೋಟವನ್ನು ನೋಡಬಾರದು ಕಂಡಿರಾ. ಕಣ್ಣಿಗೆ ಮೂರ್ಛೆ ಬರುತ್ತದೆ. ಅಳ್ಳೆದೆಯವರು ಆ ನೋಟವನ್ನು ನೋಡುವುದಿಲ್ಲ. ಆ ದೇವಿಯ ದರ್ಶನವಂತೂ ಇರಲಿ. ಗುಡಿಯ ದರ್ಶನವೂ ಕೂಡಾ ಬೇಡವೆನಿಸುತ್ತದೆ. ಕುರಿಗಳನ್ನಂತೂ ಒಂದೇ ಕಡತಕ್ಕೆ ಎರಡು ತುಂಡು ಮಾಡುತ್ತಾರೆ. ಇಂಥಾ ಭಯಂಕರ ನೋಟವನ್ನು ಆನಂದದಿಂದ ನೋಡಲು ಗುಡಿಯಮೇಲೆ ಅಥವಾ ಮರದ ಮೇಲೆ ಕೂಡ್ರುವುದಕ್ಕಾಗಿ ನಾನು ಮುಂದೆ ನೀನು ಮುಂದೆಯೆನ್ನುವ ವೀರಶೈವರು ಬಹಳವಾಗಿ ಇರುತ್ತಾರೆ.

ಮತ್ತೆ ಮಧ್ಯಾನ್ಹಕ್ಕೆ ಇನ್ನೊಂದು ಹೃದಯ ದ್ರಾವಕ ನೋಟ (ಕುರಿಗಾಂವ) ಎಂಬದೊಂದು ನಡೆಯುತ್ತದೆ. ಅದಂತೂ ನೋಡಲು ಅಸಾಧ್ಯ. ಜೀವಂತ ಕುರಿಯನ್ನು ಹಿಡಿದು ಪೋತರಾಜರು ಆ ಕುರಿಯನ್ನು ಬಾಯಿಂದ ಹರಿದು ಜೀವ ಹಿಂಡುತ್ತಾರೆ. ಮತ್ತೊಂದು ವಿಚಿತ್ರ ಸಂಗತಿಯೇನಂದರೆ ಈ ಊರ ಮಾಲಿಗೌಡರು ವೀರಶೈವರಿದ್ದು ಪಟ್ಟದ ಕೋಣ ಅವರೇ ಕಡಿಯಬೇಕಂತೆ. ಆದರೆ ಈಗ ಅದು ಹೋಗಿ ತಮ್ಮ ಕತ್ತಿಯನ್ನು ಕೊಟ್ಟು ಎರಡನೆಯವರ ಕಡೆಯಿಂದ ಕಡಿಸುತ್ತಾರೆ. ಇದು ಬಹು ಸೋಜಿಗವಾದ ಮಾತು. ಮತ್ತು ಆ ಊರ ಪೋಲಿಸ ಗೌಡರು ಶೈವ ಬ್ರಾಹ್ಮಣರಿದ್ದು ಪ್ರತಿಯೊಂದು ಕೋಣಿನ ಚೀಟಿಗಳ ತಪಾಸು ಮಾಡಿ ಕಡಿಯಲಿಕ್ಕೆ ಅಪ್ಪಣೆ ಕೊಡುತ್ತಾರೆ. ಈ ಜಾತ್ರೆ ಎರಡು ವರುಷಕ್ಕೆ ಒಂದು ಸಲ ಆಗುತ್ತದೆ.

ಕುರಿ ಕೋಣಗಳನ್ನು ನಿರ್ದಯವಾಗಿ ಕಡಿದು ಪಶು ಬಲಿ ಕೊಡುವುದಕ್ಕಿಂತ ಕಾಯಿ ಸಕ್ಕರೆ ಕೊಟ್ಟರೆ ನೆಟ್ಟಗಾಗುವುದಿಲ್ಲವೆ? ಆ ದೇವಿಯು ಕುರಿ ಕೋಣಗಳನ್ನೇ ಬೇಡುತ್ತಾಳೊ ಹೇಗೆ? ಮ. ಗಾಂಧಿಯವರು "ಅಹಿಂಸಾ ಪರಮೋಧರ್ಮ" ಎಂದು ಪದೆ ಪದೆ ಸಾರುತ್ತಾರೆ. ಅದಕ್ಕೆ ಇವರು ಲಕ್ಷ್ಯಕೊಡದೆ ಹೆಚ್ಚಿಗೆ ಉತ್ತೇಜನ ಕೊಡುತ್ತಾರೆ. ಇಂಥ ಜಾತ್ರೆಮಾಡುವದರ ಬದಲಾಗಿ ಊರ ಹನುಮಂತ ದೇವರ ಮತ್ತು ವೀರಭದ್ರದೇವರ ಜಾತ್ರೆ ಮಾಡಿದರೆ ಎಂಥ ಚಲೋ ಆಗುತ್ತದೆ. ಈ ಊರ ವೀರಶೈವರು ಅಂಥ ಜಾತ್ರೆಯನ್ನು ಮಾಡಲಿಕ್ಕೆ ಯಾಕೆ ಉತ್ತೇಜನಕೊಡುತ್ತಾರೋ ತಿಳಿಯದು. ನೆರೆ ಹೊರೆ ಊರ ಗ್ರಾಮದ ವೀರಶೈವರನ್ನು ನೋಡಬಾರದೆ? ಎಂಥಾ ಮರುಳತನವಿದು?

ಓರ್ವ ಪ್ರವಾಸಿ.

## ಲಿಂಗಸೂಗೂರು.

ರಾಯಚೂರ ಜಿಲ್ಲಾ ಪೈಕಿ ತಾಲೂಕು ಲಿಂಗಸೂಗೂರದಲ್ಲಿ ಶ್ರೀಮನ್ನಿರಂಜನ ಇಲಕಲ್ಲ ವಿಜಯ ಮಹಾಂತೇಶರವರ ಮಠದಲ್ಲಿ ಇದೇ ಸಂವತ್ಸರದ ಶ್ರಾವಣ ಶುದ್ಧ ೭ ಗುರುವಾರ ದಿವಸ ಶ್ರೀ ಶರಣ ಬಸವೇಶ್ವರ ಪುರಾಣ ಪ್ರವಚನ ನಡೆದು ಭಾದ್ರಪದ ಶು| ೯ ಸೋಮವಾರ ಪುರ ಭಕ್ತರ ಪ್ರತಿ ಗೃಹದಲ್ಲಿ ಗಣಾರಾಧನೆ ಜರುಗಿ ಮೆರವಣಿಗೆಯು ಛತ್ರ ಚಾಮರ ಮುಂತಾದ ಸಕಲ ವಾದ್ಯ ವೈಭವದೊಡನೆ ಸಾಂಗವಾಯಿತು. ಮೆರವಣಿಗೆಯಲ್ಲಿ ಜನರ ದಟ್ಟಣೆಯಿದ್ದ ಕಾರಣ ತರುಣ ಸಂಘದವರು ವಿಶೇಷ ಶ್ರಮವಹಿಸಿ ಕೆಲಸಮಾಡಿದರು. ಮರು ದಿವಸ ಸದರಿ ಸಂಘದವರು "ಸಕಳೇಶ ಮಾದರಸ" ರ ಚರಿತ್ರೆಯನ್ನು ನಾಟಕ ರೂಪದಿಂದ ಜನರಿಗೆ ಸುಬೋಧವಾಗುವಂತೆ ಪ್ರದರ್ಶಿಸಿದರು.

ಸದಾಶಿವಪ್ಪ

ಅಂಡರ ಸೆಕ್ರೆಟರಿ ವೀರಶೈವ ತರುಣ ಸಂಘ.

## ಹಿಂದುಗಳ ಹೀನತನ.

ವಿಶೇಷವಾಗಿ ನಿಜಾಮ ಇಲಾಖೆಯ ಹಿಂದುಗಳಿಗೆ ವಿಷಾದವುಳ್ಳದ್ದೂ ನಾಚಿಕೆವುಳ್ಳದ್ದೂ ಮಾತಾಗಿದೆ. ಅದೇನೆಂದರೆ—

ಸೂಬೆ ಗುಲಬರ್ಗಾದ ಕೆಲವು ಹಳ್ಳಿಗಳಲ್ಲಿ ಮತ್ತು ಕೆಲವು ತಾಲೂಕುಗಳಲ್ಲಿ ಕ್ರಿಸ್ತ ಮತದವರು ತಮ್ಮ ಧರ್ಮದ ಪ್ರಚಾರ ವೇಗದಿಂದ ನಡೆಸಿದ್ದಾರೆ. ಆ ಅನಾಥ ಮೂಢ ಮತ್ತು ಅಬಲರಾದ ಮಾದಿಗರನ್ನು ಮತ್ತು ಹೊಲೆಯರನ್ನು ಏನೋ ಒಂದು ಕೆಲವು ದಿವಸದ ಆಶೆಯನ್ನು ತೋರಿಸಿ ವೇಗದಿಂದ ತಮ್ಮ ಧರ್ಮದಲ್ಲಿ ತೆಗೆದುಕೊಳ್ಳುತ್ತಿದ್ದಾರೆ. ಇದು ಎಷ್ಟು ವಿಷಾದವುಳ್ಳ ಮಾತಾಗಿದೆ? ಇನ್ನೂ ಹಿಂದು ಜನಾಂಗವು ತನ್ನ ಗಾಢ ನಿದ್ರೆಯಲ್ಲಿದೆ. ಇನ್ನೂ ನಮ್ಮ ಬಾಂಧವರಿಗೆ ಎಚ್ಚರಿಕೆ ಬಾರದು. ಹಿಂದುಗಳು ದಿನೆ ದಿನೆ ವೇಗದಿಂದ ಕಡಿಮೆಯಾಗುತ್ತ ನಡೆದಿದ್ದಾರೆ. ಕಾರಣವೇನಂದರೆ, ಎರಡನೆ ಧರ್ಮದವರು ನಮ್ಮ ಬಾಂಧವರನ್ನು ತೆಗೆದುಕೊಳ್ಳುತ್ತಿದ್ದಾರೆ. ಈ ಕಾರ್ಯವನ್ನು ಕಂಡು ಎಲ್ಲ ಹಿಂದುಗಳಿಗೆ ವಿಷಾದವಾಗಲೇಬೇಕು. ಇನ್ನು ಮೇಲೆ ಇದೇ ಪ್ರಕಾರ ನಡೆದರೆ ಕೆಲವು ವರ್ಷಗಳಲ್ಲಿ ಹಿಂದೂ ಜನಾಂಗದ ಹೆಸರು ಮುಳುಗುವುದು. ಆದಕಾರಣ ನನ್ನ ವಿನಂತಿ ಏನಂದರೆ, ಇತರ ಪ್ರಾಂತದ ವೀರಶೈವ ಬಾಂಧವರಾಗಲಿ ಅಥವಾ ಆರ್ಯ ಸಮಾಜ ಬಾಂಧವರಾಗಲಿ ಈ ವಿಷಯದ ಮೇಲೆ ತೀವ್ರ ಲಕ್ಷ ಕೊಡಬೇಕೆಂದು ನನ್ನ ಪುನಃ ವಿನಂತಿಯಿದೆ. ಆ ಅನಾಥ ಹಿಂದೂ ಬಾಂಧವರನ್ನು ತೀವ್ರವೇ ಎಚ್ಚರಗೊಳಿಸಬೇಕು. ಮತ್ತು ಪುನಃ ನಮ್ಮ ಧರ್ಮದಲ್ಲಿ ತೆಗೆದುಕೊಳ್ಳಬೇಕೆಂದು ನಮ್ರ ಬೇಡಿಕೆ.

ಹಿಂದುಗಳ ಅಭಿಮಾನಿ
ಶಾಮರಾವ ಟಪಾಲ.

---

## ಮಹಾಗಾವ.

ಶ್ರೀಮದ್ವೀರಶೈವ ತರುಣ ಸಂಘ ಜಿಂಗಿನ ಮಠ ಮಹಗಾವ ಈ ಸಂಸ್ಥೆಯ ಮೂಲಕ ತಾ. ೧೩-೯-೩೭ ಸೋಮವಾರ ಕಳ್ಳಿ ಮಠದಲ್ಲಿ ಶ್ರೀ. ಪಂಡಿತ ರುದ್ರಾರಾಧ್ಯ ಶಾಸ್ತ್ರಿಗಳವರ ಅಧ್ಯಕ್ಷತೆಯಲ್ಲಿ ಗುಲಬರ್ಗಾ ತರುಣ ಸಂಘ ಪ್ರಚಾರಕರಾದ ಶ್ರೀ. ಶರಣ ಕವಿ ಮಹಾಗಾವ ಇವರ ರಸವತ್ತಾದ ಭಾಷಣದೊಡನೆ ಶ್ರೀಮದ್ವೀರಶೈವ ತರುಣ ಸಂಘದ ಅನಾವರಣ ಸಮಾರಂಭವು ನೆರವೇರಿತು. ಇದಲ್ಲದೆ ಮಹಾಗಾವದಲ್ಲಿ ಶ್ರೀ ಬಸವೇಶ್ವರ ವಾಚನಾಲಯವು ಸ್ಥಾಪಿತವಾಗಿದೆ.

ಗುರುಲಿಂಗಪ್ಪ ಹತ್ತಿ
ಸೆಕ್ರೆಟರಿ.

---

## ರಾಯಚೂರು.

ಶ್ರೀಮದ್ವೀರಶೈವ ಉಜ್ಜಯನಿ ಸದ್ಧರ್ಮ ಸಿಂಹಾಸನ ಶಾಖಾ ಮಠೀಯಕ ||ಕಿ|| ರಾಯಚೂರು ಶಿಖರ ಮಠಾಧ್ಯಕ್ಷ ಶ್ರೀಗುರುಲಿಂಗ ದೇಶಿಕೇಂದ್ರ ಮಹಾಸ್ವಾಮಿಗಳವರ ಮಠದಲ್ಲಿ ಪ್ರತಿ ವರುಷದಂತೆ ವ್ಯಾಸಪ್ರಣೀತ ಬಸವಪುರಾಣ ಜರುಗುತ್ತ ಬಂದು ಭಕ್ತವರ್ಗವನ್ನೆಲ್ಲಾ ಭಕ್ತಿಯುಕ್ತರನ್ನಾಗಿ ಮಾಡಿದ್ದಲ್ಲದೆ ಪ್ರತಿ ದಿನವೂ ಗಣತೃಪ್ತಿಯು, ಬಡವರಿಗೆ ಅನ್ನದಾನವು ಮಾಡುತ್ತ ಬಂದದ್ದಾಯಿತು. ಪುರಾಣವನ್ನು ನವಯುಗದ ಕವಿಕಾಳಿದಾಸರೆಂಬ ತುರುವಿಹಾಳು ಮಠದ ಷಡಕ್ಷರ ಕವಿಗಳು ತಮ್ಮ ಅಸ್ಖಲಿತ ವಾಣಿಯಿಂದ ಶ್ರೋತೃ ವರ್ಗಕ್ಕೆಲ್ಲಾ ಮನದಣಿಯುವಂತೆ ಹೇಳಿದರು. ಸಂಸ್ಥಾನ ಸುರಪುರಕ್ಕೆ ಸೇರಿದ ಬಿಜಾಸ್ಪುರದ ಬಸವಯ್ಯನೆಂಬುವವರು ಮೂರು ದಿನಗಳ ವರೆಗೆ ಶಿವಶರಣರ ಚರಿತ್ರೆಯನ್ನು ಕೀರ್ತನ ರೂಪದಲ್ಲಿ ಹೇಳಿ ಸ್ಥಳ ಪರಸ್ಥಳಗಳಿಂದ ಬಂದ ಮಹನೀಯರುಗಳಿಗೆಲ್ಲಾ ಆನಂದಸಾಗರದಲ್ಲಿ ಮುಳುಗುವಂತೆ ಮಾಡಿದರು. ದೇವದುರ್ಗ ಸಂಗೀತ ವಿದ್ವಾನ್ ರಾಚಯ್ಯನವರು ಪುರಾಣದಲ್ಲಿ ಭಾಗವಹಿಸಿ ಶ್ರೋತೃಗಳನ್ನು ಆನಂದಿತರನ್ನಾಗಿ ಮಾಡಿದರು. ಶ್ರಾವಣ ಬ|| ೧೩ ಗುರುವಾರ ದಿವಸ ಪುರಾಣದ ಮಂಗಲ ದಿನವಾದ್ದರಿಂದ ಬಹು ದೊಡ್ಡ ಗಣವೃಂದ ತೃಪ್ತಿಯಿಂದ ಸಮಾಪ್ತಿಯಾಯಿತು. ಮಾರನೆ ದಿನ ಸಭೆಯೊಂದನ್ನು ಕರೆದು ಸಭೆಯ ಅಧ್ಯಕ್ಷತೆಯನ್ನು ಶ್ರೀ. ವಿದ್ವಾನ್ ದಿನ್ನಿ ಸೂಗುವೀರಶಾಸ್ತ್ರಿಗಳು ವಹಿಸಿದ್ದರು. ಮಠದ ಶ್ರೀಗಳವರು ತಮ್ಮ ಅಮೃತವಾಣಿಯಿಂದ ಭಕ್ತ ವರ್ಗಕ್ಕೆಲ್ಲಾ ಒಳ್ಳೆ ಪರಿಣಾಮವಾಗುವಂತೆ ಬೋಧಿಸಿದರು. ಮಿರ್ಜಾಪುರ ಬಸವರಾಜ ಶಾಸ್ತ್ರಿಗಳು ವೀರಶೈವ ಧರ್ಮದ ವಿಷಯವಾಗಿ ಬಹು ಸ್ವಾರಸ್ಯವಾಗಿ ಮಾತನಾಡಿದರು. ಮತ್ತು ಸಂಗೀತ ವಿದ್ವಾನ್ ರಾಚಯ್ಯನವರು ಇದನ್ನೇ ಸಮರ್ಥಿಸಿದರು.

ಈ ಪ್ರಕಾರ ಭಕ್ತರಲ್ಲಿ ಭಕ್ತಿ ವಿಷಯ ಪರಿಣಾಮವಾಗುವಂತೆ ಇದನ್ನೆಲ್ಲಾ ರಚಿಸಿ ಬಹುಪ್ರಕಾರದ ಶ್ರಮವನ್ನು ವಹಿಸಿದವರೆಂದರೆ ಶ್ರೀ ಸಿದ್ಧಾಂತಿ ಸಿದ್ಧರಾಮ ಶಾಸ್ತ್ರಿಗಳು ಮತ್ತು ಶ್ರೀ. ಶೆಟ್ಟಿ ಸಿದ್ಧಣ್ಣನವರು. ಇನ್ನುಳಿದ ಅನೇಕ ಮಹನೀಯರು ಬಹು ಪ್ರಕಾರದ ಸಹಾಯವನ್ನು ಮಾಡಿ ಮಂಗಲಕಾರ್ಯವನ್ನು ಪೂರ್ಣಗೊಳಿಸಿದುದಕ್ಕಾಗಿ ಮುಂದೆಯಾದರೂ ಇದೇ ಪ್ರಕಾರ ಸ್ಥಿರವಾದ ಭಕ್ತಿಯು ಬಲಗೊಂಡು ನಮ್ಮ ಸಮಾಜದಲ್ಲಿರುವ ಅನೈಕ್ಯತೆಯ ನಿವಾರಣವಾಗಿ ಸಮಾಜದ ಏಳ್ಗೆಯನ್ನು ಬಯಸುವ ಬುದ್ಧಿಯನ್ನು ಕೊಡಲೆಂದು ದೇವರಲ್ಲಿ ಅನನ್ಯಭಾವದಿಂದ ಬೇಡುವ

ಓರ್ವ ಸಮಾಜಸೇವಕ.

---

—ಉದ್ಗಿರಿ ಭಾಗದಲ್ಲಿ ಪ್ಲೇಗ್ ಪ್ರಾರಂಭವಾಗಿದೆ. ಗುಲಬರ್ಗಾದಲ್ಲಿ ಕಾಲರಾ ನಿಂತಿದೆ. ಕೆಲವುಕಡೆ ಈಗ ಮಳೆ ಅಗತ್ಯವಾಗಿ ಬೇಕಾಗಿದೆ.

—ಹೈದರಾಬಾದ ಕಾರ್ಪೊರೇಶನ್ನಿನ ೩೫ ಸಭಾಸದರಲ್ಲಿ ೧೫ ಜನ ಸಭಾಸದರು ಜನರಿಂದ ಆರಿಸಲ್ಪಡತಕ್ಕವರು. ಇವರಲ್ಲಿ ಶ್ರೀ. ಗುಂಡುರಾವ ಹರವಾಳಕರ, ಶ್ರೀ. ಪ್ರೇಮಜಿಲಾಲಜಿ, ಬ್ಯಾರಿಸ್ಟರ್ ಶ್ರೀಧರನಾಯಕ, ಶ್ರೀ. ವೈದ್ಯನಾರಾಯಣದಾಸ ಮತ್ತು ಶ್ರೀ. ಕೃಷ್ಣಸ್ವಾಮಿ ಮುದಲಿಯರ ಈ ಐದು ಜನ ಹಿಂದು ಹುರಿಯಾಳುಗಳು ಆರಿಸಿಬಂದಿದ್ದಾರೆ.

—ಕಳೆದ ೧೯ ನೆಯ ತಾರೀಖಿನ ದಿವಸ ನ್ಯಾಯಮೂರ್ತಿ ರಾಮಚಂದ್ರ ನಾಯಕ ಇವರಿಗೆ ಡಾ. ಭಾಲಚಂದ್ರ ಮತ್ತು ಸೌ|| ಸುಶೀಲಾದೇವಿ ಘಾಟಕ ಇವರು ಒಂದು ಔತಣವನ್ನು ಕೊಟ್ಟರು. ಆ ಕಾಲಕ್ಕೆ ಸೌ|| ಸರೋಜಿನಿದೇವಿ ನಾಯಡು ಮೊದಲಾದ ೬೦-೭೦ ಪ್ರಮುಖರು ಬಂದಿದ್ದರು.

— ಸರ್. ಮಹಮ್ಮದ ಯಾಕೋಬರವರು ಹೈದರಾಬಾದಕ್ಕೆ ಬಂದು ಸರಕಾರದ ಅತಿಥಿಗಳಾಗಿ ಒಂದು ವಾರ ಇದ್ದು ಸಿಮ್ಲಾಕ್ಕೆ ಹೋದರು. ಮದ್ರಾಸಿನ ಮುಖ್ಯ ಮಂತ್ರಿಗಳಾದ ಶ್ರೀ. ರಾಜಗೋಪಾಲಾಚಾರ್ಯರೂ ಇಷ್ಟರಲ್ಲೇ ಇಲ್ಲಿಗೆ ಬರುವವರಿದ್ದಾರೆಂದು ಸುದ್ದಿ.

# ಶರಣರ ನೀತಿ.

ಬೆಳಗಾವ-ಶಹಾಪುರದ ಶ್ರೀ ಗೊಂಬಿ ಮಠದಲ್ಲಿ ಶ್ರೀಮನ್ನಿರಂಜನ ಪ್ರ. ಸ್ವ. ಗುರುಮಠಕಲ್ಲ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಪಂ. ವೈ. ನಾಗೇಶ ಶಾಸ್ತ್ರಿಗಳು 'ಶರಣರ ನೀತಿ' ಎಂಬ ವಿಷಯದ ಮೇಲೆ ಸುಮಾರು.೧॥ ಘಂಟೆಯ ವರೆಗೆ ಬಹು ಸ್ವಾರಸ್ಯವಾದ ಮತ್ತು ವಿಚಾರಯುಕ್ತವಾದ ಭಾಷಣವಿತ್ತರು. ಅವರ ಭಾಷಣದ ಸಾರಾಂಶ—

ನೀತಿಯು ಸರ್ವ ಕಾಲದಲ್ಲಿ, ಸರ್ವ ದೇಶಗಳಲ್ಲಿ, ಸರ್ವರಿಗೂ ಬೇಕಾದ ಮಾತು. ದಯವೇ ಧರ್ಮದ ಮೂಲ, ನೀತಿಯೇ ದಯೆಯ ಮೂಲ. ನೀತಿಯು ಸರ್ವ ಸಮ್ಮತವೆಂದು ಹೇಳುವದು ಬಹು ಸುಲಭ. ಆದರೆ ಅದರಂತೆ ನಡೆಯುವದು ಅಷ್ಟೇ ಕಷ್ಟ. ನೀತಿಯೆಂದರೇನು? ಪರರಿಗೆ ಹಿತವಾಗುವಂತೆ ವರ್ತಿಸುವದೇ ನೀತಿಯು. ಅಲಂಕಾರ ಭಾಷೆಯಲ್ಲಿ ಹೇಳಬೇಕಾದರೆ, ನೀತಿಯು ಧರ್ಮದ ಒರೆಗಲ್ಲು. ಆಚಾರವನ್ನು ಅಳೆಯುವ ಸೇರು ಮತ್ತು ಜ್ಞಾನವನ್ನು ತೂಗುವ ತಕ್ಕಡಿ. ವಿಚಾರದಿಂದ ಕೂಡಿದ ಆಚಾರ, ಆಚಾರದಿಂದ ಕೂಡಿದ ವಿಚಾರವೇ ನೀತಿಯೆಂದು ವೀರಶೈವರ ಮತವು. ಪರಾರ್ಥವೇ ನೀತಿ. ಸ್ವಾರ್ಥವೇ ಅನೀತಿ, ದಾನವೇ ತ್ಯಾಗ. ತ್ಯಾಗವೇ ಪರಾರ್ಥ. ಮತ್ತು ಪರಾರ್ಥವೇ ನೀತಿ. ನಾವು ದುಡಿಯುವದು ಕೇವಲ ಹೊಟ್ಟೆಬಟ್ಟೆಗಾಗಿಲ್ಲ. ಆದರೆ ಸಮಾಜೋದ್ಧಾರಕ್ಕೂ ಮತ್ತು ದೇಶ ಸೇವೆಗಾಗಿ. ಯಾವ ಧರ್ಮದಲ್ಲಿ ಪರಾರ್ಥವಿರುತ್ತದೆಯೋ ಅಲ್ಲಿ ನೀತಿಗೆ ಆಸ್ಪದವಿರುತ್ತದೆ. ಸದಾಚಾರವೇ ನೀತಿಯ ತಳಹದಿಯು. ಅಹಂಕಾರ ಮಮಕಾರಗಳೇ ಅನೀತಿ. ನೀತಿಯೆಂದರೆ ಮಾನವನ ಜನ್ಮಸಿದ್ಧ ಹಕ್ಕು. ಇದಕ್ಕಾಗಿಯೇ ಅವನು ಹೆಣಗಾಡುವದು ಅವನ ಆದ್ಯ ಕರ್ತವ್ಯ. ಮಗನು ಹೇಗೆ ತಂದೆಯ ಆಸ್ತಿಗೆ ಹಕ್ಕುದಾರನೋ ಹಾಗೇ ನಾವು ಶರಣರ ನೀತಿಗೆ ಹಕ್ಕುದಾರರು. ಧೀರನ ಹೊರ್ತು ಮತ್ತ್ಯಾರಿಗಾದರೂ ನೀತಿಯನ್ನನುಸರಿಸುವದು ಅಸಾಧ್ಯ. ಧರ್ಮಕ್ಕಿಂತಲೂ ಮರ್ಮಯುಕ್ತವಾದ ನೀತಿಯೇ ಶ್ರೇಷ್ಠವಾದುದು. ಆದುದರಿಂದಲೇ ಬಸವಣ್ಣನವರು "ಧರ್ಮ ಭ್ರಷ್ಟನಾದರೂ ನೀತಿ ಭ್ರಷ್ಟನಾಗಬೇಡ" ಎಂದು ಖಂಡಿತವಾಗಿ ಹೇಳಿದ್ದಾರೆ.

ನೀತಿಯು— (೧) ಸತ್ಯ (೨) ಅಹಿಂಸೆ (೩) ಅಸ್ತೇಯ (೪) ಬ್ರಹ್ಮಚರ್ಯ (೫) ಅಪರಿಗ್ರಹ ಈ ಐದು ಗುಣಗಳಿಂದೊಡಗೂಡಿದೆ.

(೧) ಸತ್ಯ ಮಾತಾಡುವವನ ಕೋಪವು ಪರರಿಗೆ ಶಾಪವಾಗಿಯೂ, ಅವನ ಪ್ರೀತಿಯೇ ಅವರಿಗೆ ಅನುಗ್ರಹವಾಗಿಯೂ ಪರಿಣಮಿಸುತ್ತದೆ. ಇದು ಸತ್ಯ ಪ್ರೇಮಿಗಳ ಪ್ರಭಾವವು. (೨) ಅಹಿಂಸೆ. ಕೇವಲ ಪ್ರಾಣಿಗಳ ವಧೆಯೇ ಹಿಂಸೆಯೆಂದು ತಿಳಿಯಲಾಗದು. ತ್ರಿಕರಣ ಶುದ್ಧವಾದ ಅಂದರೆ ಕಾಯಾ, ವಾಚಾ, ಮನಸಾ, ಮಾಡುವ ಅಹಿಂಸೆಯೇ ನಿಜವಾದ ಅಹಿಂಸೆಯು. ಇದು ದೇಶದ ಕಾಲಮಾನಕ್ಕನುಸರಿಸಿ ಪಾಲಿಸಲ್ಪಡುತ್ತದೆ. ಹೇಗೆಂದರೆ, ಅತಿ ಶೀತ ಪ್ರದೇಶಗಳಲ್ಲಿರುವ ಎಸ್ಕಿಮೋ ಜನರು ಪ್ರಾಣಿಗಳ ಮೇಲೆ ಉಪಜೀವಿಸಬೇಕಾಗುತ್ತದೆ. (೩) ಅಸ್ತೇಯವೆಂದರೆ ಕಳ್ಳತನದಿಂದ ದೂರಿರುವದು. ಕೇವಲ ಪರರ ವಸ್ತುಗಳನ್ನು. ಅಪಹರಿಸುವದೇ ಮಾತ್ರ ಕಳ್ಳತನವೆಂದು. ತಿಳಿಯಲಾಗದು. ಆದ್ದರಿಂದ ಕಾಯಾ, ವಾಚಾ, ಮನಸಾ ಕಳ್ಳತನ ಮಾಡದಿರುವದೇ ನಿಜವಾದ ಅಸ್ತೇಯವು. ಮನುಷ್ಯನು ಸಂಘ ಜೀವಿಯಾದುದರಿಂದ ಸಮಾಜದೊಡನೆಯೇ ಅವನ ಉದ್ಧಾರವಾಗತಕ್ಕದ್ದು. ಆದ್ದರಿಂದ ನಾವು ಪರರ ಕೂಡ ನೀತಿಯಿಂದ ವರ್ತಿಸಲಿಕ್ಕೆ ಕಲಿಯುವದು ಅತ್ಯವಶ್ಯವು. (೪) ಬ್ರಹ್ಮಚರ್ಯ. ಬರೇ ಸ್ತ್ರೀ ಸಂಗರಹಿತನಾಗಿರುವದೇ ಬ್ರಹ್ಮಚರ್ಯವಲ್ಲ. ಇದು ಶರಣರ ಸಮ್ಮತವಾದ ಬ್ರಹ್ಮಚರ್ಯವಲ್ಲ. ಮನೋ ನಿಗ್ರಹಮಾಡುವುದೇ ನಿಜವಾದ ಬ್ರಹ್ಮಚರ್ಯ. (೫) ಅಪರಿಗ್ರಹ. ಸಂಗ್ರಹಮಾಡದಿರುವದೇ ಅಪರಿಗ್ರಹವು. ಈ ದಿನದಗಳಿಕೆ ನಾಳಿಗೆ ತಂಗುಳು ಎಂದು ಶರಣರು ಹೇಳಿದ್ದಾರೆ. ಆದರೆ ಇದು ಸಂಗ್ರಹಕಾರನ ಭಾವನೆಯ ಮೇಲೆ ಅವಲಂಬಿಸಿರುತ್ತದೆ. ಪರರ ಉದ್ಧಾರಕ್ಕೆಂದು ಪವಿತ್ರತೆಯಿಂದ ಸಂಗ್ರಹಮಾಡುವದು ಅಪರಿಗ್ರಹವೆನಿಸುತ್ತದೆ. ಇದನ್ನು ಶರಣರು ತಮ್ಮ ಕಾಯಕಯೋಗದಿಂದ ನಡೆಯಲ್ಲಿ ತಂದು ಎಲ್ಲರನುಭವಕ್ಕೆ ತಂದುಕೊಟ್ಟಿದ್ದಾರೆ. ಇದರಂತೆ ಇನ್ನೂ ಅನೇಕ ಗುಣಗಳಿರುತ್ತವೆ. ಆದರೆ ನಿಜಗುಣ ಶಿವಯೋಗಿಗಳು ಹೇಳಿದಂತೆ ಒಂದೇ ಮಾತಿನಲ್ಲಿ ಹೇಳಬೇಕಾದರೆ ಗುಣವಿಕಾಸವೇ ಮುಕ್ತಿ. ಗುಣ ಸಂಕೋಚವೇ ಬಂಧನ.

(ಸಶೇಷ.)

---

## ಅಖಿಲ ಕರ್ನಾಟಕ ಕುರುಬರ

### ೩ ನೆಯ ಮಹಾ ಸಭೆ.

**ಕಂಬಳಿ ಹಾಗು ಕುರಿಯ ಪ್ರದರ್ಶನ.**

ಈ ಮೊದಲೇ ಪ್ರಕಟವಾದ ಧಾರವಾಡ ಜಿಲ್ಲಾ ಕುರುಬರ ಪರಿಷತ್ತನ್ನು ಕೂಡಿಸುವ ಯೋಜನೆಯು, ಅನೇಕ ಜನರ ಅಭಿಪ್ರಾಯದ ಮೇರೆಗೆ ಬದಲಾಗಿ, ಅಕ್ಟೋಬರ ೧೬-೧೭ನೇ ತಾರೀಖುಗಳಲ್ಲಿ ಧಾರವಾಡ ಜಿಲ್ಲಾ ರಾಣೆಬೆನ್ನೂರಿನಲ್ಲಿ ಡಾ. ಆರ್. ನಾಗನಗೌಡರ ಅಧ್ಯಕ್ಷತೆಯ ಕೆಳಗೆ ಅಖಿಲ ಕರ್ನಾಟಕ ಕುರುಬರ ೩ ನೆಯ ಮಹಾ ಸಭೆಯನ್ನು ಕರೆಯುವದು ನಿರ್ಧಾರವಾಯಿತು. ಕಂಬಳಿ ಹಾಗು ಕುರಿಯ ಪ್ರದರ್ಶನವೂ ನಡೆಯುವದು. ಕರ್ನಾಟಕ ಕುರುಬ ಬಂಧುಗಳು ಸಭೆಗೆ ಆಗಮಿಸಿ ಕಾರ್ಯವನ್ನು ಯಶಸ್ವಿಯನ್ನಾಗಿ ಮಾಡಬೇಕಲ್ಲದೆ, ಸಮಯವರಿತು, ಧನಸಹಾಯವನ್ನೂ ಮಾಡಬೇಕೆಂದು ವಿಜ್ಞಾಪಿಸಿಕೊಳ್ಳುತ್ತೇನೆ.

ರಾಣೆಬೆನ್ನೂರ<br>ತಾ॥ ೨೦-೯-೩೭ } ಕರಿಯಪ್ಪ ಹುಚ್ಚಣ್ಣನವರ<br>ಸ್ವಾಗತಾಧ್ಯಕ್ಷ

---



---

— ಹೈದರಾಬಾದದಲ್ಲಿ ಅಖಿಲ ಭಾರತೀಯ ಆರ್ಥಿಕ ಪರಿಷತ್ತು ಬರುವ ಡಿಶಂಬರ ತಿಂಗಳಲ್ಲಿ ಉಸ್ಮಾನಿಯಾ ವಿಶ್ವವಿದ್ಯಾಲಯದ ನೇತೃತ್ವದಲ್ಲಿ ನಡೆಯುವುದಿದೆ.

## ಶ್ರೀಮನ್ನಿರಂಜನ ಬಸವಾದಿಪ್ರಮುಥ ನಿಂದಕರ
## ವಾ ಕ್ಬಂ ಥ ನ ವೆಂ ಬ
# ವೀರಶೈವಾಚಾರ ಪಂಚರತ್ನ.

ಶ್ರೀ ಮದುಜ್ಜಯನಿ ಸದ್ಧರ್ಮ ಸಿಂಹಾಸನಾಧೀಶ ಜಗದ್ಗುರು ಚರಪಟ್ಟಾಧ್ಯಕ್ಷ ಶ್ರೀ ಸಿದ್ಧಲಿಂಗ ಸ್ವಾಮಿಗಳು ಯಾವತ್ತು ವೀರಶೈವರು ವೇದಾಗಮ ಶಾಸ್ತ್ರಾಧಾರಗಳಿಂದ ತಯಾರು ಮಾಡಿಸಿರುವ ವೀರಶೈವಾಚಾರ ಪಂಚರತ್ನದಲ್ಲಿ ಹೇಳಿದ ಪಾದ ಪೂಜಾದಿ ಯಾವತ್ತು ಆಚಾರ ಕ್ರಮಗಳನ್ನು ಜರುಗಿಸಿಕೊಂಡು ಹೋಗಬೇಕೆಂದು ಸಂಸ್ಥಾನ ಮೊಹರು ಸಹಿ ಹಾಕಿ ಹುಕುಂ ಮಾಡಿರುವ ವೀರಶೈವಾಚಾರ ಪಂಚರತ್ನದಲ್ಲಿ ಜಂಗಮ ಪಾದಪೂಜಾ ಲಿಂಗಧಾರಣ ದೀಕ್ಷಾ ಲಿಂಗಪೂಜಾ ವಿವಾಹ ಮುಂತಾದ ಮುಖ್ಯ ಕಾರ್ಯಗಳಲ್ಲಿ ಪಂಚ ಕಲಶಗಳನ್ನು ೬ ನೆ ನಿರಂಜನ ಷಟ್ಕಲಶ ಸ್ಥಾಪನೆ ಮಾಡಿ ಕಾರ್ಯಗಳನ್ನು ಮಾಡಬೇಕೆಂತಲೂ ಪಾದ ಪೂಜಾ ಕಾಲದಲ್ಲಿ ಬಸವಾಕ್ಷರ ಮಹಾ ಮೂಲ ಮಂತ್ರವನ್ನು ಬಸವಾಕ್ಷರ ಪ್ರಣಮಗಳನ್ನು ಉಪಯೋಗಿಸಬೇಕೆಂತಲೂ ನಿರಂಜನ ಜಂಗಮ ಪಾದೋದಕದ ಶ್ರೇಷ್ಠತೆಯನ್ನು ಆಗಮ ಶಾಸ್ತ್ರಾಧಾರಗಳಿಂದ ಚೆನ್ನಾಗಿ ಬರೆದಿರುತ್ತೆ. ಉಜ್ಜಯನಿ ಸದ್ಧರ್ಮ ಪೀಠದ ಸ್ಥಿರ ಚರಪಟ್ಟಾಧಿಕಾರವು ಜರುಗುವ ಕಾಲದಲ್ಲಿ ನಿರಂಜನ ಜಂಗಮವು ಸಾಕ್ಷಿ ಗುರುವಾಗಿ ಕೂತುಕೊಂಡು ಷಟ್ಕಲಶ ಸ್ಥಾಪನಾ ಮಾಡಿದ ಭವ್ಯವಾದ ಫೋಟೋಗಳನ್ನು ಹಾಕಿರುತ್ತೆ. ಮೇಲ್ಕಂಡ ಶ್ರೀ ಸಿದ್ಧಲಿಂಗ ಸ್ವಾಮಿಗಳ ಗುರುಗಳಾದ ಶ್ರೀ ಮರುಳಸಿದ್ಧ ಸ್ವಾಮಿಗಳು ಬಸವಾಕ್ಷರ ಮೂಲ ಪ್ರಣಮಗಳ ಮಹಿಮೆಯನ್ನು ನಿರಂಜನ ಜಂಗಮ ಪಾದಪೂಜಾ ಶ್ರೇಷ್ಠತೆ ವಿಷಯವಾಗಿ ಬರೆದಿರುವ ಲೇಖನಗಳನ್ನು ಶ್ರೀಮನ್ನಿರಂಜನ ಬಸವಾದಿ ಪ್ರಮುಥರನ್ನು ಅನೇಕ ವಿಧವಾಗಿ ನಿಂದಿಸಿ ಪ್ರಕಟಿಸುತ್ತಿರುವ ಮೈಸೂರು ಪಂಚಾಚಾರ್ಯ ಪ್ರಭಾ ಪತ್ರಿಕಾ ಸಂಪಾದಕರಾದ ವೇ|| ಶಿ ರ ಶಿ ಗುರುಶಾಂತ ಶಾಸ್ತ್ರಿಗಳು ನಿರಂಜನ ಜಂಗಮೋತ್ಪತ್ತಿ ಕ್ರಮವನ್ನು ಪಂಚಾಚಾರ್ಯರಿಗೆ ನಿರಂಜನ ಜಂಗಮವೇ ಗುರುವೆಂದು ಆಗಮ ಶಾಸ್ತ್ರ ಪ್ರಮಾಣಗಳಿಂದ ಪ್ರಕಟಿಸಿರುವ ಲೇಖನಗಳನ್ನು ಬರೆದಿರುತ್ತೆ.

ಮತ್ತು ಈ ಪಂಚಾಚಾರ್ಯ ಪ್ರಭಾ ಪತ್ರಿಕೆಯವರು ಪ್ರಮಾಣ ಗ್ರಂಥಗಳೆಂದು ಹೊಗಳಿ ಪ್ರಕಟಿಸಿರುವ ಚತುರಾಚಾರ್ಯ ಪುರಾಣ ಪಂಚಾಚಾರ್ಯ ಪುರಾಣಗಳಲ್ಲಿ ಬಸವೇಶ್ವರನ ಅತ್ಯಂತ ಶ್ರೇಷ್ಠತೆ ಮಹಿಮಾ ವಿಷಯಗಳನ್ನು, ಬಸವೇಶ್ವರನು ವೀರಶೈವ ಮತೋದ್ಧಾರಕನೆಂತಲೂ ನಾಲ್ಕು ಯುಗಗಳಲ್ಲಿ ಬಸವೇಶ್ವರನು ನಾಮ ಭೇದದಿಂದ ಅವತಾರಮಾಡಿದ ವಿಷಯುವನ್ನು, ರೇಣುಕಾಚಾರ್ಯರು ನಿರಂಜನ ಜಂಗಮ ಪಾದಪೂಜಾ ಮಾಡಿಕೊಂಡ ವಿಷಯುವನ್ನು, ಬಸವೇಶ್ವರನನ್ನು ಪಂಚಾಚಾರ್ಯರು ಬ್ರಹ್ಮ ವಿಷ್ಣು ರುದ್ರ ಇಂದ್ರಾದಿ ದೇವತೆಗಳು ಅನೇಕ ವಿಧವಾಗಿ ಸ್ತೋತ್ರ ಮಾಡಿದ ವಿಷಯುವನ್ನು, ವೇದಾಗಮ ಶಾಸ್ತ್ರಾಧಾರಗಳಿಂದಲೂ ಬಸವೇಶ್ವರನನ್ನು ಮಹಾ ಮಹಾ ಕವಿಗಳಾದ ಸೋಮನಾರಾಧ್ಯ ನಿಜಗುಣ ಶಿವಯೋಗಿಗಳು ಷಡಕ್ಷರ ಕವಿಗಳು ಬ್ರಾಹ್ಮಣ ಕವಿಗಳು ಆಂಗ್ಲೇಯ ಕವಿಗಳು ಸ್ತೋತ್ರಮಾಡಿ ಕೊಂಡಾಡಿದ ಲೇಖನಗಳನ್ನು, ಬಹು ವಿಸ್ತಾರವಾಗಿ ಬರೆದಿರುತ್ತೆ. ನಿಂದಕರೇ ಹೊಗಳಿರುವ ಗ್ರಂಥಗಳಲ್ಲಿ ಬಸವೇಶ್ವರನ ಅತ್ಯಂತ ಶ್ರೇಷ್ಠತೆ ವಿಷಯಗಳನ್ನು ಬರೆದಿರುವದನ್ನು ಪ್ರತಿಯೊಬ್ಬರು ನೋಡಿ ಎಷ್ಟು ಆನಂದಾಶ್ಚರ್ಯಪಡುವಿರೋ ನಾವು ಹೆಚ್ಚು ಬರೆಯಲಾರೆವು.

ಉಜ್ಜಯನಿ ಪರ್ವತ ಬಾಳೆಹೊನ್ನೂರು ಪೀಠದ ಸ್ಥಿರ ಚರ ಪಟ್ಟದ ಮಹಾಸ್ವಾಮಿಗಳು ಶ್ರೀಮನ್ನಿರಂಜನ ಜಗದ್ಗುರು ಪೂಜ್ಯ ಪಾದರುಗಳಾದ ಶ್ರೀ ಮುರಘಾಸ್ವಾಮಿಗಳಿಗೂ ಶ್ರೀ ಉರವಕೊಂಡಿ ಸ್ವಾಮಿಗಳಿಗೂ ಉಜ್ಜಯನಿ ಪೀಠದ ಕ್ರಿಯಾಮೂರ್ತಿ ಸ್ವಾಮಿಗಳಿಗೂ ಗುರುತ್ವ ಭಾವದಿಂದ ಸಂಸ್ಥಾನ ಮೊಹರು ಸಹಿಗಳಿಂದ ಬರಕೊಂಡ ಬಿನ್ನಹ ಪತ್ರಗಳ ರಿಕಾರ್ಡುಗಳನ್ನು ಲಿಂಗಧಾರಣ ದೀಕ್ಷಾ ಲಿಂಗಪೂಜಾ ಪಾದಪೂಜಾ ವಿವಾಹ ಈ ೫ ಮುಖ್ಯ ಆಚಾರ ವಿಧಿಗಳನ್ನು ಮಂತ್ರಗಳ ವಿಧಿಪ್ರಕಾರ ವಿಸ್ತಾರವಾಗಿ ಬರೆದಿರುತ್ತೆ. ವೀರಶೈವ ಮತದಲ್ಲಿ ನಾಲ್ಕು ವರ್ಣಗಳು ಇಲ್ಲವೆಂತಲೂ ಅಷ್ಟಾವರ್ಣವುಳ್ಳ ಸಮಸ್ತರು ಸಮಭಾವತ್ವದಿಂದ ವರ್ತಿಸಬೇಕೆಂತಲೂ ವಿಶ್ವಾರಾಧ್ಯರು ಆಗಮ ಪ್ರಮಾಣಗಳಿಂದ ಬರೆದಿರುವ ವಿಷಯವನ್ನು ಶ್ರೀ ಮಹಾ ವಿಷ್ಣುವು ಲಿಂಗಪೂಜಾ ಮಾಡಿಕೊಂಡ ವಿಷಯುವನ್ನು ಪಾದೋದಕ ಪ್ರಸಾದಗಳ ವಿಷಯುದಲ್ಲಿ ಆಂಗ್ಲೇಯ ಕವಿಗಳು ಕೊಟ್ಟ ಸದಭಿಪ್ರಾಯ ಲೇಖನಗಳನ್ನು ಶ್ರೀ ಮೃತ್ಯುಂಜಯ ಮಹಾ ವಜ್ರ ಕವಚವನ್ನು ಸರ್ವ ದೇವತಾ ಪ್ರತಿಷ್ಠಾವಿಧಿಯನ್ನು ಬಹು ಚನ್ನಾಗಿ ಬರೆದಿರುತ್ತೆ. ನಿಂದಕರು ಬಾಯಿ ಎತ್ತದಂತೆಯೂ ಈ ಸಂಶಯಾತ್ಮಕರು ತುಂಬಾ ಸಂತೋಷಭರಿತರಾಗುವಂತೆಯೂ ಈ ಗ್ರಂಥದ ಅನೇಕ ಸಾವಿರ ಪ್ರತಿಗಳನ್ನು ಪ್ರಿಂಟು ಮಾಡಿಸಿ ಎಲ್ಲಾ ದೇಶಗಳಲ್ಲಿ ಪ್ರಸಿದ್ಧಮಾಡಬೇಕೆಂದು ಏರ್ಪಾಟು ಮಾಡಿರುತ್ತೇವೆ. ಇದಕ್ಕಿಂತಲೂ ಹೆಚ್ಚಿನ ಸಮಾಜದ ಕಾರ್ಯದಾವುದೂ ಇಲ್ಲ. ಕಾರಣ ಪ್ರತಿಯೊಬ್ಬ ವೀರಶೈವ ಶ್ರೀಮಂತರು ಒಂದೊಂದು ಸಾವಿರ ಪ್ರತಿಗಳನ್ನು ತಮ್ಮ ತಮ್ಮ ಫೋಟೋಗಳನ್ನು ಹಾಕಿಸಿ ಪ್ರಿಂಟುಮಾಡಿಸಿಕೊಟ್ಟು ನಿರಂಜನ ಬಸವ ಸಮಾಜೋದ್ಧಾರವನ್ನು ಮಾಡಿ ಆ ಚಂದಾರ್ಕ ಪರ್ಯಂತರವಿರುವ ಸ್ಥಿರವಾದ ಕೀರ್ತಿ ಹೊಂದಿರಿ. ೧ ಸಾವಿರ ಪ್ರತಿಗಳನ್ನು ಪ್ರಿಂಟುಮಾಡಿಸುವ ಖರ್ಚು ೬೦ ರೂ. ಹಿಡಿಯಬಹುದು. ಈ ಗ್ರಂಥಗಳಿಂದ ಬಂದ ಹಣವನ್ನು ಇಲ್ಲಿಯ ವೀರಶೈವ ಪುರಾತನ ಗ್ರಂಥ ಪರಿಶೋಧನಾಲಯದ ಫಂಡಿಗೆ ಏ ಪಾ ರ್ ಟು ಮಾಡಿರುತ್ತೆ. ಪ್ರಿಂಟು ಮಾಡಿಸುವ ಇಷ್ಟವುಳ್ಳವರು ಜವಾಬ ಬರೆಯಬೇಕೆಂದು ಬೇಡುತ್ತೇವೆ. ಕ್ರಯ ಪ್ರತಿ ೧ ಕ್ಕೆ ರೂ. ೧-೦-೦

ವಿಳಾಸ— ಮ್ಯಾನೇಜರ್

ವೀರಶೈವ ಪುರಾತನ ಗ್ರಂಥ ಪರಿಶೋಧನಾಲಯ

ಹರಪನಹಳ್ಳಿ (ಜಿಲ್ಲಾ. ಬಳ್ಳಾರಿ)

---

## ಮೈಂದರಗಿ

——::೦::——

ಇಲ್ಲಿ ಪ್ರತಿನಿತ್ಯ ವೀರಶೈವ ತರುಣ ಸಂಘದ ಪ್ರಭಾತ ಫೇರಿ ನಡೆದಿದೆ. ಸಂಗಡ ಬಸವೇಶ್ವರನ ಭಾವ ಚಿತ್ರ ಮತ್ತು ನಂದಿ ಧ್ವಜ ಇರುತ್ತವೆ. ಬಸವ ಭೂಮಿ ಪುಸ್ತಕದಲ್ಲಿಯ ಪದಗಳನ್ನು ಹೇಳುತ್ತಾರೆ.

ಇಲ್ಲಿ ಗುರುಸ್ಥಳದ ಮಠಕ್ಕೆ ಯಾದಗಿರಿಯಲ್ಲಿ ಕಲಿತ ವಿದ್ಯಾವಂತರಾದ ಶ್ರೀ. ವೀರಸಂಗ ದೇವರನ್ನು ಪಟ್ಟಾಧಿಕಾರಿಗಳನ್ನಾಗಿ ಮಾಡಿದರು. ಈಗಿನ ಪಂಚಾಚಾರ್ಯರ ಚಳವಳಿಯಲ್ಲಿ ಸೇರುವುದಿಲ್ಲ. ಬಸವೇಶ್ವರರಲ್ಲಿ ಪೂಜ್ಯ ಬುದ್ಧಿಯುಳ್ಳವರಾಗಿರುತ್ತೇವೆ. ದೈವದ ಅಪ್ಪಣೆ ಹೊಂದಿ ಮುಂದೆ ಮರಿ ಮಾಡಿಕೊಳ್ಳುತ್ತೇವೆಂದು ಕರಾರು ಬರೆಸಿಕೊಂಡಿದೆ.

ಓರ್ವ ವೀರಶೈವ

## ಚಡಚಣ.

—ooo—

ಇಲ್ಲಿ ತಾ. ೪-೯-೩೭ ನೆಯ ದಿವಸ ಶ್ರೀ ಸಂಗಮೇಶ್ವರ ಗುಡಿಯ ಮುಂದೆ ಸಭೆ ಕೂಡಿತ್ತು. ಪರಸ್ಥಳಗಳ ಜನರೂ ವಿಶೇಷ ಕೂಡಿದ್ದರು. ಹೊಸ ರಾಜಕೀಯ ಸುಧಾರಣೆ ಮತ್ತು ಕಾಂಗ್ರೆಸ್ ಮಂತ್ರಿಮಂಡಲದ ಕಾರ್ಯ ಈ ಬಗ್ಗೆ ಕೆಲವರ ವ್ಯಾಖ್ಯಾನಗಳಾದವು. ಆಗ ಒಬ್ಬಿಬ್ಬ ವ್ಯಾಖ್ಯಾತರು ಸರಕಾರವು ಪಾಯಖಾನೆ ಕೀಲಿಕೈ ನಮ್ಮ ಮಂತ್ರಿಮಂಡಲದ ಕಡೆ ಕೊಟ್ಟಿದೆ. ದನ ಕಾಯುವ ಕೆಲಸವನ್ನು ನಮ್ಮ ಮಂತ್ರಿಮಂಡಲಕ್ಕೆ ಕೊಟ್ಟಿದೆ ಎಂದು ಹೋಲಿಸಿ ಹೇಳಿದರು.

ಕಾಂಗ್ರೆಸ್‌ದ ತತ್ವಗಳನ್ನು ಅರಿಯದೆ ಮತ್ತು ಈಗ ಸ್ವಾರ್ಥತ್ಯಾಗದಿಂದ ಮಂತ್ರಿಮಂಡಲದಲ್ಲಿ ಸೇರಿ ಕೆಲಸ ಮಾಡುವ ಮಹನೀಯರ ಉದಾತ್ ತತ್ವಗಳನ್ನು ತಿಳಿದುಕೊಳ್ಳದೆ ಸಿಕ್ಕ ಸಿಕ್ಕ ಹಾಗೆ ಮಾತಾಡುವದರಿಂದ ಕಾಂಗ್ರೆಸ್‌ದ ವರ್ಚಸ್ಸನ್ನೂ ಮತ್ತು ಘನತೆಯನ್ನೂ ಕಡಿಮೆಮಾಡಿದಂತಾಗುವದಿಲ್ಲವೆ? ಇನ್ನು ಮೇಲೆ ಪ್ರತಿಯೊಂದು ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರು ಕಾಂಗ್ರೆಸ್ಸಿನ ಸಲುವಾಗಿ ಸಭೆಯಲ್ಲಿ ಮಾತಾಡಬೇಕಾದರೆ ಸಪ್ರಮಾಣವಾದ ಸತ್ಯ ಸಂಗತಿಗಳನ್ನು ತಿಳಿದುಕೊಳ್ಳದ ಹೊರತು ಸಿಕ್ಕ ಸಿಕ್ಕ ಹಾಗೆ ಮಾತಾಡಬಾರದೆಂಬದಾಗಿ ತಮ್ಮ ಕಾರ್ಯಕರ್ತರಿಗೆ ಸೂಚಿಸುವದು ವಿಹಿತವಲ್ಲವೆ?

ಓರ್ವ ಕಾಂಗ್ರೆಸ್‌ದ ಹಿತಚಿಂತಕ.

## ಮುನವಳ್ಳಿ.

ಸವದತ್ತಿ ತಾಲೂಕು ಮುನವಳ್ಳಿಯಲ್ಲಿ ತಾ. ೯-೮-೩೭ ನೆಯ ದಿವಸ ಇಲ್ಲಿಯ ವಿರಕ್ತಮಠದ ಶ್ರೀಮನ್ನಿರಂಜನ ಶಿವಮೂರ್ತಿ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಹಾಲುಮತ ಮತ್ತು ಮರಾಠಾ ಸಮಾಜದವರು ಶ್ರೀ ಎಲ್ಲಪ್ಪ ಧರೆಪ್ಪ ಕುದರಿ ಡಿ. ಎಸ್. ಬಿ. ಮೆಂಬರ ಬೆಳಗಾವ ಇವರಿಗೆ ಅಭಿನಂದನಗಳನ್ನರ್ಪಿಸುವ ಸಭೆ ಕೂಡಿಸಿದ್ದರು. ಇವರು ಹಾಲುಮತದ ಉನ್ನತಿಗಾಗಿ ಪ್ರಯತ್ನಿಸುತ್ತಿದ್ದಾರೆ.

ಇಲ್ಲಿಯ ವಿರಕ್ತ ಮಠದಲ್ಲಿ ಇದೇ ಬರುವ ಆಶ್ವೀಜ ಶು ೧೦ ದಿವಸ ಒಂದು ಧರ್ಮಾರ್ಥ ಸಂಸ್ಕೃತ ಪಾಠಶಾಲೆ ಸ್ಥಾಪನೆಯಾಗುವದಿದೆ. ಪಂಡಿತ ಸಿದ್ಧಲಿಂಗ ಶಾಸ್ತ್ರಿಗಳು ಹಡಗಲಿ ಇವರು ಅಧ್ಯಾಪಕರಾಗುವವರಿದ್ದಾರೆ.

ಓರ್ವ ಸುದ್ದಿಗಾರ.

## ಮಾದಾಪುರ.

—o—o—

ಇಲ್ಲಿ ಸ್ಥಾಪನೆಯಾದ ಶ್ರೀ ಚೆನ್ನಬಸವ ಗುರುಕುಲಾಶ್ರಮದ ವಿದ್ಯಾರ್ಥಿಗಳು ಹುಲ್ಲಳ್ಳಿ ಗ್ರಾಮದ ಭಕ್ತರ ಪ್ರಾರ್ಥನೆ ಪ್ರಕಾರ ಗೌರಿ ಹಬ್ಬಕ್ಕೆ ಹೋಗಿ ಅಲ್ಲಿ ನಗರ ಕೀರ್ತನೆ, ಉಪನ್ಯಾಸಗಳನ್ನು ನಡೆಸಿದರು. ಅಲ್ಲಿಯ ಭಕ್ತರು ಧನ ಧಾನ್ಯಗಳನ್ನು ಆಶ್ರಮಕ್ಕೆ ಸಲ್ಲಿಸಿದರು. ಪುರ ಎಂಬ ಗ್ರಾಮದ ಶ್ರೀ. ಸಂಗಪ್ಪನವರು ವರ್ಷಕ್ಕೆ ೨॥ ರೂ. ಚಂದಾ ಕೊಡುವುದಾಗಿ ತಿಳಿಸಿದರು.

ಓರ್ವ ಪಂಚಿತ.

## ಸದಲಗಿ.

**೧೦೦೦ ಜನರಿಗೆ ದೀಕ್ಷೆ ಮಾಡಿಸಿದವರು !**

ಬೆಳಗಾವ ಜಿಲ್ಲಾ ಚಿಕ್ಕೋಡಿ ತಾಲೂಕು ಸದಲಗಿಯಲ್ಲಿಯ ಪ್ರಸಿದ್ಧ ದಾನಶೂರರೂ ವೀರಶೈವ ಸಮಾಜೋನ್ನತಿಗೆ ಪ್ರಯತ್ನಿಸುವವರೂ ಆದ ಶ್ರೀಮಂತ ಮಲ್ಲಪ್ಪ ಅಣ್ಣಾ ಹಾಲಪ್ಪನವರ ಇವರು ಪದ್ಧತಿ ಪ್ರಕಾರ ಶ್ರಾವಣ ಮಾಸ ಒಂದು ತಿಂಗಳು ಭಜನೆ, ಕೀರ್ತನೆ, ಪುರಾಣ ವ್ಯಾಖ್ಯಾನಗಳನ್ನು ಈ ಸಾರೆಯೂ ಮಾಡಿಸಿದರು. ಹೋದ ಸಾರೆ ಒಂದು ಸಾವಿರ ಜನರಿಗೆ ಲಿಂಗ ಧಾರಣ ಮತ್ತು ದೀಕ್ಷಾ ಮಾಡಿಸಿದ್ದರು. ಒಂದು ಧರ್ಮಶಾಲೆಯನ್ನು ಎಲ್ಲ ಬಡವರಿಗಾಗಿ ಕಟ್ಟಿಸಿದ್ದಾರೆ. ಇದೇ ಪ್ರಕಾರ 'ಇವರಿಂದ ಧರ್ಮ ಕಾರ್ಯ ನಡೆಯಲೆಂದು ದೇವರಲ್ಲಿ ಪ್ರಾರ್ಥನೆ.

ಓರ್ವ ಹಿತೈಷಿ.


ನಮ್ಮಲ್ಲಿ ಫೋಟೋ,
ಲೈನ್ ಬ್ಲಾಕುಗಳು,
ಹಿತ್ತಾಳೆ ಮತ್ತು ಸೀಸದ
ಬ್ಲಾಕುಗಳು ಅರಗಿನ
ಸೀಲು, ಜವಾನರ ಬಿಲ್ಲೆಗ
ಳು. ದೇವರ 3 ಬಣ್ಣದ
ಪಟಗಳು, ಕ್ಯಾಲೆಂಡರು
ಗಳು, ನಿಮ್ಮ ಮನ
ಒಪ್ಪುವಂತೆ ತಯಾರಾ
ಗುತ್ತವೆ.
ಯಾಜವರ್ಗ ಅಂಡ್ ಕಂ.
ಚಿಕ್ಕಪೇಟೆ.
ಬೆಂಗಳೂರು ಸಿಟಿ

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣಮಂದಿರದಲ್ಲಿ ಶ್ರೀ ಹರ್ಡೆಕರ್ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೆಕರ್ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

# ಶರಣ ಸಂದೇಶ

The
## Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಂಗೂ ಅಂಜುವವನಲ್ಲ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೪ ನೆಯ ಅಕ್ಟೋಬರ್ ೧೯೩೭. | ಸಂಚಿಕೆ ೭ |
|---|---|---|


ಜನಸೇವೆಯೇ ದೇವರಸೇವೆ.

## ಮದ್ಯಪಾನ ಪ್ರತಿಬಂಧ.

ಸೇಲಂ ಜಿಲ್ಲೆಯಲ್ಲಿ ತಾ. ೧-೧೦-೩೭ ನೆಯ ದಿವಸದಿಂದ
ಮಾದಕ ಪದಾರ್ಥಗಳ ಮಾರಾಟ ನಿಂತಿತು.
ಮದ್ಯದ ಅಂಗಡಿಗಳಿದ್ದಲ್ಲಿ ಚಹಾದ ಅಂಗಡಿಗಳು ಏರ್ಪಟ್ಟು
೧೫ ದಿನ ಉಚಿತವಾಗಿ ಚಹಾ ಕೊಡಲ್ಪಡುವುದು.

---

## ಪ್ಯಾಲಿಸ್ಟಾಯಿನ್‌ದಲ್ಲಿ ಭೀಕರ ಸ್ಥಿತಿ!

ಇಂಗ್ಲಿಷ ಅಧಿಕಾರಿಯ ಕೊಲೆ! ೨೦೦ ಅರಬರ ಕೈಸೆರೆ!
"ಅರಬ ಹಾಯರ ಕಮೊಟಿ" ಶಾಸನ ವಿರೋಧದ
ಸಂಘವಾಯಿತು.
ಅನೇಕ ಅರಬರ ಕೈಸೆರೆ! ಪ್ರಮುಖರ ಸೀಮಾಂತರ!!

### ಈ ವಾರದ ಪತ್ರಿಕೆಯಲ್ಲೇನಿದೆ?


(೧) ಕಾಂಗ್ರೆಸ್ ಪಕ್ಷದ ಅರಾಷ್ಟ್ರೀಯ ಕೃತಿ.
(೨) ಡಾ. ರವೀಂದ್ರರ ದಿವ್ಯ ನಡೆನುಡಿ.
(೩) ಲೋಕಮತಕಾರರ ವಿಚಾರ ವಿಮರ್ಶೆ.
(೪) ಲೊ. ಅಣೆಯವರ ಮಹತ್ವದ ಭಾಷಣ.
(೫) ಹಿಂದು ಮಹಾಸಭೆ ಮತ್ತು ಪಂಡಿತಜಿ.
(೬) ಇದು ಜಗದ್ಗುರುಗಳ ಕೃತಿಯೆ?


ದೇಹವೇ ದೇವಾಲಯ.



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೪ ನೆಯ ಅಕ್ಟೋಬರ್ ೧೯೩೭. | ಸಂಚಿಕೆ ೭

## ಮಹತ್ವದ ಸುದ್ದಿಗಳು.

—ಪುಣೆ ಮುನಸಿಪಾಲ್ಟಿ ಸ್ಕೂಲ್ ಬೋರ್ಡಿನಲ್ಲಿ ಕೆಳಗಿನ ನಿರ್ಣಯಗಳಾದವು. (೧) ಎಲ್ಲ ಶಾಲೆಗಳಲ್ಲಿ 'ವಂದೇ ಮಾತರಂ' ರಾಷ್ಟ್ರಗೀತೆಯನ್ನು ಹೇಳಬೇಕು. (೨) ಗಾಂಧೀಜಿಯವರ ಚಿತ್ರವನ್ನು ಪ್ರತಿಯೊಂದು ಶಾಲೆಯಲ್ಲಿಡಬೇಕು. (೩) ಕಾಂಗ್ರೆಸ್ಸು ಸ್ವಾತಂತ್ರ್ಯ ದಿನವನ್ನಾಚರಿಸುವಾಗ ವಿದ್ಯಾರ್ಥಿಗಳಿಗೆ ವಿಶ್ರಾಂತಿ ಕೊಡಬೇಕು. (೪) ಹಿಂದು ವಿದ್ಯಾರ್ಥಿಗಳಿಗೆ ಧಾರ್ಮಿಕ ಜಾಗೃತಿಗಾಗಿ ಜ್ಞಾನೇಶ್ವರರ ಆಶೀರ್ವಾದಾತ್ಮಕ ಪದ್ಯಗಳನ್ನು ಕಲಿಸಬೇಕು. (೫) ನೌಕರರು ಕಾಂಗ್ರೆಸ್ ಸದಸ್ಯರಾಗಲು ಅಡ್ಡಿಯಿಲ್ಲ.

—ಜಪಾನ ದೇಶವು ಚೀನ ದೇಶದ ಮೇಲೆ ಭಯಂಕರ ಅತ್ಯಾಚಾರಗಳನ್ನು ನಡೆಸಿದ್ದರಿಂದ ರಾಷ್ಟ್ರಸಂಘವು ಅದರ ಕೃತಿಯನ್ನು ನಿಷೇಧಿಸಿತು. ಪ್ರಪಂಚದ ಎಲ್ಲ ರಾಷ್ಟ್ರಗಳೂ ಜಪಾನಿನ ಪದಾರ್ಥಗಳನ್ನು ಬಹಿಷ್ಕರಿಸಿ ಅದಕ್ಕೆ ಬುದ್ಧಿಯನ್ನು ಕಲಿಸಬೇಕಾಗಿದೆ.

—ಬ್ಯಾ. ಸಾವರಕರರು ಸೊಲ್ಲಾಪುರಕ್ಕೆ ಬಂದಾಗ ನಡೆದ ದೊಂಬೆಯ ವ್ಯಾಜ್ಯ ಇದೇ ೮ ನೆಯ ತಾರೀಖಿನ ದಿನ ವಿಚಾರಣೆಯಾಗುವುದಿದೆ. ವ್ಯಾಜ್ಯವು ೨೦ ಜನಗಳ ಮೇಲಿದೆ.

—ಮದ್ರಾಸ ಪ್ರಾಂತದಲ್ಲಿ ಬಟ್ಟೆಯ ವ್ಯಾಪಾರಿಗಳು ಅಪ್ಪಣೆಯನ್ನು ಹೊಂದಬೇಕೆಂದೂ ಹೀಗೆ ಅಪ್ಪಣೆ ಹೊಂದಲು ಮಾಸಿಕ ೫೦೦೦ ರೂ. ಗಳಿಗಿಂತ ಕಡಿಮೆ ವ್ಯಾಪಾರ ಮಾಡುವವರು ವಾರ್ಷಿಕ ಎರಡು ರೂ. ಇತರರು ೫ ರೂ. ಕೊಡಬೇಕಾಗುವುದೆಂದೂ ಕೈಮಗ್ಗಗಳ ಬಟ್ಟೆ ವ್ಯಾಪಾರಿಗಳಿಗೆ ಈ ನಿಯಮವಿಲ್ಲವೆಂದೂ ಮದ್ರಾಸ್ ಅಸೆಂಬ್ಲಿಯಲ್ಲಿ ತೀರ್ಮಾನವಾಯಿತು.

—ಸರಕಾರಿ ನೌಕರರಿಗೆ ಇನ್ನುಮೇಲೆ ಗಿರಣಿ ಬಟ್ಟೆಗಳನ್ನು ಕೊಡದೆ ಖಾದಿ ಬಟ್ಟೆ ಕೊಡಬೇಕೆಂದು ಮುಂಬೈ ಸರಕಾರದವರು ಯೋಚಿಸುತ್ತಿದ್ದಾರೆ.

—ಈ ವಾರದಲ್ಲಿ ಇಟಾಲಿಯ ಸರ್ವಾಧಿಕಾರಿಗಳಾದ ಮುಸೋಲಿನಿಯವರು ಜರ್ಮನಿಯಲ್ಲಿ ಸಂಚರಿಸಿದರು. ಜರ್ಮನಿಯು ಅತ್ಯದ್ಭುತವಾದ ಸ್ವಾಗತವನ್ನು ಮಾಡಿತು.

—ಹೇರ್ ಹಿಟಲರರ ಮತ್ತು ಮುಸೋಲಿನಿಯವರ ಸಂಭಾಷಣೆಯು ಕೇವಲ ಯುರೋಪದ ರಾಜಕಾರಣಕ್ಕೇನೇ ಅಲ್ಲ; ಜಗತ್ತಿನ ರಾಜಕಾರಣಕ್ಕೇನೇ ಬಹು ಸಂಬಂಧಪಡುವುದಿದೆಯೆಂದು ಅನೇಕರ ಊಹೆ.

—ಮುಂಬೈ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಕೋಶಾಧ್ಯಕ್ಷರಾದ ಸರದಾರ ವಲ್ಲಭಭಾಯಿ ಪಟೇಲರ ಅಳಿಯ ಶ್ರೀ. ಆಯ್. ಎಸ್. ಪಟೇಲ ಇವರು ಕಾಂಗ್ರೆಸ್ ಫಂಡಿನ ೨೫೦೦ ರೂ. ಗಳ ವ್ಯತ್ಯಾಸಮಾಡಿದ್ದಾರೆಂದು ಅವರ ಮೇಲೆ ಆಕ್ಷೇಪಣೆ. ಅಧ್ಯಕ್ಷರಾದ ವೀರ ನರಿಮನ್ನರು ವಿಚಾರಣೆಮಾಡಿ ಕಾಂಗ್ರೆಸ್ ಕಮಿಟಿ ಕೂಡಿಸಿದರು. ಈಗ ಶ್ರೀ. ಪಟೇಲರು ತಮ್ಮ ಕೆಲಸಕ್ಕೆ ರಾಜಿನಾಮೆ ಕೊಟ್ಟದ್ದಾರಂತೆ.

—ಪ್ಯಾಲಿಸ್ಟಾಯಿನ್‌ದಲ್ಲಿ ಇಬ್ಬರು ಇಂಗ್ಲಿಷರ ಕೊಲೆಯಾಗಿರುವುದರಿಂದ ಅಲ್ಲಿಯ ಬ್ರಿಟಿಶ್ ಅಧಿಕಾರಿಗಳು ನೂರಾರು ಅರಬರನ್ನು ಹಿಡಿದಿದ್ದಾರೆಂದು ತಿಳಿದಿದೆ.

—ಮೈಸೂರು ಪ್ರಾಂತದ ಹುಣಸೂರು ತಾಲೂಕು ಹಿರಿಯ ಕೇತನ ಹಳ್ಳಿಯಲ್ಲಿ ಹಿಂದು ಮುಸಲ್ಮಾನರ ದೊಂಬಿಯಾಗಿ ೪ ಜನ ಮುಸಲ್ಮಾನರಿಗೂ ೧೫ ಜನ ಹಿಂದುಗಳಿಗೂ ಗಾಯಗಳಾಗಿವೆ. ಕೆಲವು ಮುಸಲ್ಮಾನರು ಹಿಂದು ಹೆಂಗಸರಿಗೆ ಅವಮಾನಗೊಳಿಸಿದ್ದೇ ಈ ದೊಂಬೆಗೆ ಕಾರಣವೆಂದು ತಿಳಿದಿದೆ.

—ವರ್ಧಾದ ಹತ್ತಿರ ಬೋರಗಾಂವ ಎಂಬಲ್ಲಿ ೭೭ ಆದಿ ಹಿಂದುಗಳು ತಮ್ಮನ್ನು ಸವರ್ಣೀಯರು ಸರಿಯಾಗಿ ನಡೆಯಿಸಿಕೊಳ್ಳುವುದಿಲ್ಲವೆಂದು ಮುಸಲ್ಮಾನ್ ಧರ್ಮಕ್ಕೆ ಹೋದರು.

—ಮುಸೋಲಿನಿಯವರು ಹೇರ್ ಹಿಟಲರರಿಗೆ ಇಟಲಿಗೆ ಬರಲು ಆಮಂತ್ರಣ ಕೊಟ್ಟದ್ದಾರೆ.

## ಗಾಂಧೀಜಿಯವರ ಉಪದೇಶ.



### ಸದಸದ್ವಿವೇಕ ಬುದ್ಧಿ.

"ನಮ್ಮ ಸಂಗಡ ನಮ್ಮ ಮಿತ್ರರು ಬಾರದಿದ್ದರೂ ನಾವು ಮುಂದೆ ಹೋಗಲೇಬೇಕಾದ ಕೆಲವು ಪ್ರಸಂಗಗಳು ನಮ್ಮ ಆಯುಷ್ಯದಲ್ಲಿ ಬಂದೇಬರುತ್ತವೆ.

ಯಾವ ಕಾಲದಲ್ಲಿ ಎರಡು ಕರ್ತವ್ಯಗಳ ಸಂಬಂಧವಾಗಿ ನಮ್ಮ ಅಂತಃಕರಣದಲ್ಲಿ ಹೊಯಿದಾಟವುಂಟಾಗುತ್ತದೆಯೋ ಆಗ ನಮ್ಮ ಸದಸದ್ವಿವೇಕ ಬುದ್ಧಿಯು ತಿಳಿಸುವಂತೆಯೇ ನಾವು ನಡೆಯಬೇಕು.

ಎಲ್ಲಿ ಸದಸದ್ವಿವೇಕ ಬುದ್ಧಿಯ ಪ್ರಶ್ನೆಯುಂಟಾಗುತ್ತದೆಯೋ ಅಲ್ಲಿ ಬಹುಮತವನ್ನು ಮಾನ್ಯ ಮಾಡಲೇಬೇಕೆಂದು ಹೇಳಲಿಕ್ಕಾಗದು."

ಮಹಾತ್ಮಾ ಗಾಂಧಿ

—ಯಂಗ್ ಇಂಡಿಯಾ ತಾ. ೧೪-೮-೧೯೩೦

### ತರುಣರಿಗೆ ಸಂದೇಶ.

ಮುಂಬೈ ಪ್ರಾಂತದ ಮುಖ್ಯ ಮಂತ್ರಿಗಳಾದ ಶ್ರೀ. ಖೇರರವರು ಕಳೆದ ೨೪ನೆಯ ತಾರೀಖಿನ ದಿನ ಫರ್ಗ್ಯುಸನ್ ಕಾಲೇಜಿನ ವಿದ್ಯಾರ್ಥಿಗಳಿಗೆ ತಮ್ಮ ಭಾಷಣದಲ್ಲಿ ಹೀಗೆ ಸಂದೇಶ ಕೊಟ್ಟರು—

"ಒಂದು ಶ್ರೇಷ್ಠವಾದ ಧ್ಯೇಯವನ್ನಿಟ್ಟುಕೊಂಡು ಕಾರ್ಯ ಪ್ರಾರಂಭಮಾಡಿರಿ. ಧಾರ್ಮಿಕ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ವಿಷಯಗಳಲ್ಲಿ ಸಂಪೂರ್ಣ ಕ್ರಾಂತಿಯನ್ನು ಶಾಂತಿ ಮಾರ್ಗದಿಂದಲೇ ಉಂಟುಮಾಡಿರಿ.

ವ್ಯಕ್ತಿತ್ವವನ್ನು ಬಿಡಬೇಡಿರಿ. ಸ್ವಾರ್ಥಿಗಳಾಗಬೇಡಿರಿ. ಸ್ವಂತ ಯೋಚನೆ ಮಾಡಿರಿ. ಕೇವಲ ರಾಜಕೀಯ ವಿಷಯವೊಂದರಿಂದಲೇ ಅಲ್ಲ; ಅಜ್ಞಾನ, ದಾರಿದ್ರ್ಯ, ಲೋಕಭ್ರಮೆ, ಇವುಗಳಿಂದಲೂ ರಾಷ್ಟ್ರವನ್ನು ಬಿಡುಗಡೆಮಾಡಿರೆಂದೇ ನಿಮಗೆ ನನ್ನ ಸಂದೇಶ."

## ಪಾರ್ಶಿಗಳ ಸುರಕ್ಷತೆ.

ಹಿಂದುಸ್ಥಾನದಲ್ಲಿ ಅಲ್ಪ ಸಂಖ್ಯಾಕರ ಸಂರಕ್ಷಣೆಯ ಸಂಬಂಧವಾಗಿ ೭ ಕೋಟಿ ಜನರಿರತಕ್ಕ ಮುಸಲ್ಮಾನರೇ ಹೆಚ್ಚಾಗಿ ಸಂಕಯಪಡುತ್ತಿದ್ದಾರಷ್ಟೆ. ಇವರಿಗಿಂತ ಸಂಖ್ಯೆಯಲ್ಲಿ ಬಹು ಕಡಿಮೆಯಿರತಕ್ಕ ಕ್ರಿಸ್ತರಾಗಲಿ ಪಾರ್ಶಿಗಳಾಗಲಿ ಅಷ್ಟೇನೂ ಹಿಂದುಗಳಿಗಾಗಿ ಭಯಪಡುವುದಿಲ್ಲ. ಮುಸಲ್ಮಾನರಿಗೇನೇ ತಾವು ಸಂಖ್ಯೆಯಲ್ಲಿ ಹಿಂದುಗಳ ಮೂರನೆಯ ಒಂದು ಭಾಗದಷ್ಟಿದ್ದರೂ ಇಷ್ಟು ಸಂಕಯವೇಕೆ? ಪ್ರತ್ಯೇಕ ಪ್ರಾತಿನಿಧ್ಯದ ಹಟವೇಕೆ? ಸ್ವಸಂರಕ್ಷಣೆಯ ಚಿಂತೆಯೋ? ಆಕ್ರಮಣದ ಆಕಾಂಕ್ಷೆಯೋ?

ಮುಂಬೈ ಪ್ರಾಂತಿಕ ಅಸೆಂಬ್ಲಿಯಲ್ಲಿ ಭಾಯಿ ಝಾಬವಾಲಾರವರು ಮೊನ್ನೆ ತಮ್ಮ ಭಾಷಣದ ಕಾಲಕ್ಕೆ ಮುಸಲ್ಮಾನರನ್ನು ಕುರಿತು ಹೀಗೆ ಹೇಳಿದರು—

"ನಾನೇನೂ ಜಾತ್ಯಂಧನಲ್ಲ. ಆದರೆ ಈಗ ಜಾತಿಯ ಜಗಳವಿದ್ದುದರಿಂದ ಹೇಳಬೇಕಾದ ಪ್ರಸಂಗ ಬಂದಿದೆ. ಈ ದೇಶಕ್ಕೆ ಪಾರ್ಶಿಗಳು ೧೩೦೦ ವರುಷಗಳ ಹಿಂದೆ ಬಂದರು. ಆಗ ಇನ್ನೂರು ಜನರು ಮಾತ್ರ ಇದ್ದರು. ಇವರು ಸ್ವಾವಲಂಬನೆಯಿಂದ ಈಗ ೧ ಲಕ್ಷ ಜನರಾಗಿದ್ದಾರೆ. ಈ ವರೆಗೂ ಅವರು ಹಿಂದು ಮುಸಲ್ಮಾನರೊಡನೆ ಸಹಕಾರದಿಂದಲೇ ನಡೆಯುತ್ತ ಬಂದಿದ್ದಾರೆ. ಅವರು ಎಂದೂ ಪ್ರತ್ಯೇಕ ಪ್ರಾತಿನಿಧ್ಯವನ್ನು ಕೇಳಿಲ್ಲ. ಹೀಗಿದ್ದರೂ ಈ ಶಾಸನ ಮಂಡಲಕ್ಕೆ ಈ ವರೆಗೆ ೪-೫ ಪಾರ್ಶಿ ಗೃಹಸ್ಥರೇ ಆರಿಸಿಬಂದಿದ್ದಾರೆ. ಪಾರ್ಶಿಗಳಿಗೆ ಪ್ರತ್ಯೇಕ ಪ್ರಾತಿನಿಧ್ಯವಿದ್ದಿದ್ದರೆ ನನ್ನ ಮಿತ್ರರಾದ ಗಿಲ್ಡರ್, ನರಿಮನ್, ಕೂಪರ್ ಇವರು ಆರಿಸಿ ಬರುತ್ತಿದ್ದರೆ? ಈ ಪಾರ್ಶಿಗಳ ಉದಾಹರಣೆಯನ್ನು ತಮ್ಮ ಮುಂದಿಟ್ಟುಕೊಳ್ಳಬೇಕಾಗಿ ಮುಸಲ್ಮಾನ್ ಬಂಧುಗಳಿಗೆ ನನ್ನ ವಿಜ್ಞಾಪನೆ."

## ಕೌಮುದಿಕಾರರ ಮೇಲಿನ ವ್ಯಾಜ್ಯ.

ಡಾ. ನಂದಿಮಠರವರು ಕೌಮುದಿಕಾರರ ಮೇಲೆ ಮಾಡಿದ ಮಾನ ನಷ್ಟದ ವ್ಯಾಜ್ಯದಲ್ಲಿ ನಡೆದ ಸಾಕ್ಷಿದಾರರು ಸಾಕ್ಷಿ ಹೀಗೆ ಹೇಳಿದರು—

ರಾ| ಬ| ಚೌಗುಲಾ ಎಲ್. ಎಲ್. ಬಿ. ವಕೀಲ ಇವರು ಹೀಗೆ ಹೇಳಿದರು— "ನನಗೆ ಇಂಗ್ಲಿಷ, ಸಂಸ್ಕೃತ, ಹಿಂದಿ, ಗುಜರಾತಿ, ಮರಾಠಿ, ಕನ್ನಡ ಈ ಭಾಷೆಗಳು ಬರುತ್ತವೆ. ಕೌಮುದಿಯಲ್ಲಿಯ ಲೇಖನವನ್ನು ಓದಿದ್ದೇನೆ. ಡಾ. ನಂದಿಮಠರವರಿಗೆ ಅವಮಾನವಾಗಿರುವುದು ನಿಜ. ಆ ಲೇಖನದಿಂದ ಡಾ. ನಂದಿಮಠರವರು ಜನರಿಗೆ ಕೀಳಾಗಿ ಕಾಣುವರು."

ಶ್ರೀ. ಗಂಗಾಧರ ರಘುನಾಥ ಇನಾಮದಾರ ಎಲ್. ಎಲ್. ಬಿ. ವಕೀಲರು ತಮ್ಮ ಸಾಕ್ಷಿಯಲ್ಲಿ ಹೀಗೆ ಹೇಳಿದರು— "ನಾನು ಜಾತಿಯಿಂದ ಬ್ರಾಹ್ಮಣನು. ನನ್ನ ಭಾಷೆ ಮರಾಠಿ. ನಾನು ಕೌಮುದಿ ಓದಿದ್ದೇನೆ. ಡಾ. ನಂದಿಮಠ ಮತ್ತು ಲಿಂಗರಾಜ ಕಾಲೇಜಿನ ಅವಮಾನವಾಗಿದೆ. ಲಿಂಗದ ಮತ್ತು ಲಿಂಗಾಯತರ ಅವಮಾನ ಮಾಡಲ್ಪಟ್ಟಿದೆ."

# ಡಾ. ರವೀಂದ್ರನಾಥರ ದಿವ್ಯ ನಡೆನುಡಿಗಳು.

ಕವಿಕುಲತಿಲಕರಾದ ಡಾ. ರವೀಂದ್ರನಾಥ ಟಾಗೋರರವರು ಮೊನ್ನೆ ಮೃತ್ಯುವಿನ ಬಾಯಿಂದ ಹೊರಗೆ ಬಂದು ಪ್ರಪಂಚಕ್ಕೇನೇ ಪರಮಸಂತೋಷವನ್ನುಂಟುಮಾಡಿದರಷ್ಟೆ. ಇವರ ದೇಹಾರೋಗ್ಯ ಸರಿಯಾಗಿಲ್ಲದಿದ್ದಾಗ ಪ್ರಪಂಚವೇ ಇವರ ಕಡೆಗೆ ಅದೇಕೆ ಚಿಂತೆಯಿಂದ ನೋಡುತ್ತಿದ್ದಿತು ? ಇವರು ಪ್ರಪಂಚದ ಸುಖಕ್ಕಾಗಿಯೇ ಚಿಂತಿಸಿ ತಮ್ಮ ಆಯುಷ್ಯವನ್ನು ಸವಿಸುತ್ತಿದ್ದುದರಿಂದ. ಯಾರು ಪ್ರಪಂಚದ ಚಿಂತೆಯನ್ನು ಮಾಡುತ್ತಾರೆಯೋ ಅವರ ಚಿಂತೆಯನ್ನು ಪ್ರಪಂಚವು ಮಾಡುವುದು ಸ್ವಾಭಾವಿಕವಲ್ಲವೆ ?

### ನಿತ್ಯದ ನಡೆ.

ಕವಿವರ್ಯರಿಗೆ ಈಗ ೭೭ ನೆಯ ವರುಷ. ಈ ವೃದ್ಧಾಪ್ಯದಲ್ಲಿಯು ಕೂಡಾ ತರುಣರು ಮಾಡದಿದ್ದಷ್ಟು ಕಾರ್ಯಗಳನ್ನು ಇವರು ಪ್ರತಿನಿತ್ಯ ಮಾಡುತ್ತಿದ್ದಾರೆ. ಒಂದು ಕಾರ್ಯದಿಂದ ಇನ್ನೊಂದು ಕಾರ್ಯಕ್ಕೆ ಹೋಗುವುದೇ ಇವರ ವಿಶ್ರಾಂತಿ. ನಿತ್ಯದ ೨೪ ತಾಸುಗಳಲ್ಲಿ ೪-೫ ತಾಸು ನಿದ್ರೆಗಾಗಿ ಉಪಯೋಗಿಸಿ ಇನ್ನುಳಿದ ಕಾಲವನ್ನೆಲ್ಲಾ ಅತ್ಯುಪಯುಕ್ತವಾದ ಲೋಕಸೇವೆಯ ಮಹಾಕಾರ್ಯಗಳಲ್ಲಿಯೇ ಕಳೆಯುತ್ತಿದ್ದಾರೆ.

ಜಗಪ್ರಸಿದ್ಧರಾದ ಈ ಮಹಾ ವಿಭೂತಿಗಳ ದರ್ಶನಕ್ಕೆ ಜಗತ್ತಿನ ಅನೇಕ ಭಾಗಗಳಿಂದ ಅನೇಕರು ಬರುತ್ತಿದ್ದಾರೆ. ಇವರ ಹಸ್ತಾಕ್ಷರಗಳನ್ನು ಹೊಂದಬೇಕೆಂತಲೂ, ಇವರಿಂದ ತಮ್ಮ ಗ್ರಂಥಕ್ಕೆ ಪೀಠಿಕೆಯನ್ನು ಬರೆಯಿಸಬೇಕೆಂತಲೂ, ಇವರ ಅಭಿಪ್ರಾಯ ಕೇಳಿ ಗ್ರಂಥ ಬರೆಯಬೇಕೆಂತಲೂ ಇವರಿಂದ ಬಹುಮಾನ ಹೊಂದಬೇಕೆಂತಲೂ ಚಿತ್ರಕಲೆ, ಸಂಗೀತ ಶಾಸ್ತ್ರ, ರಾಜಕಾರಣ ಧಾರ್ಮಿಕ ಸಾಮಾಜಿಕ ಮೊದಲಾದ ವಿವಿಧ ವಿಷಯಗಳನ್ನು ಬಲ್ಲ ಮಹಾ ಪಂಡಿತರು ಈ ಕವೀಂದ್ರರಲ್ಲಿ ಸಂಭಾಷಿಸಬೇಕೆಂತಲೂ ಬರುತ್ತಿದ್ದಾರೆ.

ಜಗತ್ತಿನ ನಾನಾ ದೇಶಗಳಿಂದ ಅನೇಕ ವಿಷಯಗಳಲ್ಲಿ ಅಭಿಪ್ರಾಯವನ್ನು ತಿಳಿದುಕೊಳ್ಳಲು ಬರುವ ಪತ್ರಗಳಂತೂ ವಿಪರೀತ. ತೆರಪಿಲ್ಲದೆ ಈ ಎಲ್ಲಾ ಕಾರ್ಯಗಳನ್ನು ಮಾಡುತ್ತಾ ಅನೇಕ ಪ್ರಸಿದ್ಧ ಮಾಸ ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುತ್ತ, ಗ್ರಂಥ ರಚನೆಯನ್ನೂ ಮಾಡುತ್ತ ಶಾಂತಿನಿಕೇತನದಲ್ಲಿಯ ವಿದ್ಯಾರ್ಥಿಗಳಿಗೆ ಪಾಠವನ್ನೂ ಕ್ರಮವಾಗಿ ಹೇಳಿಕೊಡುತ್ತಿದ್ದಾರೆ. ಇವೆಲ್ಲವುಗಳಲ್ಲದೆ ಆತ್ಮ ಚರಿತ್ರೆಯನ್ನೂ ಬರೆಯುವ ಕೆಲಸ. ಈ ಮಹಾ ವಿಭೂತಿಗಳು ಇಂತಹ ವೃದ್ಧಾಪ್ಯದಲ್ಲಿ ಇಷ್ಟು ಮಹತ್ವದ ಕಾರ್ಯಗಳಲ್ಲಿ ಆಸಕ್ತರಾಗಿರುವುದನ್ನು ಕೇಳಿಯಾದರೂ ನಮಗೆ ಪ್ರತಿನಿತ್ಯ ಪತ್ರಿಕೆ ಓದಲಿಕ್ಕೆ ಹೊತ್ತಿಲ್ಲ ದೊರೆಯುತ್ತದೆಂದು ಹೇಳುವವರು ಸ್ವಲ್ಪ ಪಾಠವನ್ನು ಕಲಿಯುವರೇ ?

### ದಿವ್ಯೋಪದೇಶ.

ಡಾ. ರವೀಂದ್ರರು ಅಂತರ ರಾಷ್ಟ್ರೀಯ ಮಹಾಪುರುಷರು. ಎಂದರೆ ಜಗತ್ತಿನ ಕಲ್ಯಾಣಕ್ಕಾಗಿ ಪ್ರಯತ್ನಿಸುವ ವಿಭೂತಿಗಳು. ಇವರು ಕೇವಲ ದೇಶಭಕ್ತರಲ್ಲ. ವಿಶ್ವಬಂಧುಗಳು. ಅಂತೆಯೇ ಈ ದೇಶದ ಅನೇಕ ದೇಶಭಕ್ತರಿಗೆ ಇವರ ವಿಶ್ವ ಬಂಧುತ್ವದ ಉಪದೇಶವು ತಮ್ಮ ಕಾರ್ಯಕ್ಕೆ ವಿಘ್ನವನ್ನುಂಟುಮಾಡುತ್ತಲಿದೆಯೆಂದೂ ತೋರುತ್ತಲಿದೆ!

೧೯೩೧ ನೆಯ ಇಸವಿಯಲ್ಲಿ ಈ ಮಹರ್ಷಿಗಳು "ವಿಶ್ವಭಾರತೀ" ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಪರಮಾತ್ಮನು ಸತ್ಯಂ, ಶಿವಂ, ಸುಂದರಂ ಎಂಬ ಗುಣವಿಶಿಷ್ಟನಾಗಿರುವುದರಿಂದ ಆತನ ಸಾಕ್ಷಾತ್ಕಾರವಾಗಬೇಕಾದರೆ ಮಾಡಬೇಕಾದ ಆತ್ಮಾರ್ಪಣದ ರೀತಿ ನೀತಿಗಳನ್ನು ಕಲಿಸುವುದೇ ಈ ವಿಶ್ವ ಭಾರತೀ ಸಂಸ್ಥೆಯ ಮುಖ್ಯೋದ್ದೇಶವು.

ಇದು ಹಿಂದು ಸಂಸ್ಕೃತಿಯ ಸಂರಕ್ಷಣೆ ಮತ್ತು ಸಂವರ್ಧನೆಗಳಿಗಾಗಿ ಅನೇಕ ಮಾರ್ಗಗಳನ್ನು ಶೋಧಿಸುತ್ತಲಿದೆ. ಜಗತ್ತಿನ ನಾನಾ ರಾಷ್ಟ್ರಗಳಲ್ಲಿಯ ಜ್ಞಾನಸಂಚಯ ಕಾರ್ಯವೂ ಇಲ್ಲಿ ನಡೆದಿದೆ. ಇದು ಜಗತ್ತಿನ ಮಹಾ ವಿದ್ಯಾ ಸಂಸ್ಥೆಗಳಲ್ಲಿ ಒಂದು. ಪ್ರಪಂಚದ ಅನೇಕ ರಾಷ್ಟ್ರಗಳಿಂದ ಮೇಧಾವಿಗಳು ಇಲ್ಲಿಗೆ ಬಂದು ಶಿಕ್ಷಣ ಹೊಂದುತ್ತಿದ್ದಾರೆ.

ವಿಶ್ವದ ಸುಖಶಾಂತಿಗಳಿಗೆ ಅವಶ್ಯಕವಾಗಿರತಕ್ಕ ನಾನಾ ವಿದ್ಯೆಗಳ ಅಂಗೋಪಾಂಗಗಳ ಶೋಧದಲ್ಲಿಯೇ ಇಲ್ಲಿ ಅನೇಕ ವಿದ್ವಾಂಸರು ಮಗ್ನರಾಗಿರುತ್ತಾರೆ. ಡಾ. ಟಾಗೋರರವರು ಹೇಳುವುದೇನೆಂದರೆ— "ನನ್ನ ದೇಶಕ್ಕೆ ಯಾವ ಮಹಾನ್ ವಿಭೂತಿಯು ಮರವೆಯಾಗಿದೆಯೋ ಆ ರಾಜಾರಾಮ ಮೋಹನರಾಯರ ವಿಶ್ವ ಕುಟುಂಬತ್ವದ ಬೋಧೆಯು ನನ್ನ ಮನಸ್ಸಿನಲ್ಲಿ ನಾಟಿದೆ. ಹಿಂದು, ಮುಸಲ್ಮಾನ್, ಕ್ರಿಸ್ತ ಸಂಸ್ಕೃತಿಗಳು ಪರಸ್ಪರ ಪ್ರೇಮದಿಂದ ನೆಲೆಸಬೇಕು."

ಕಳೆದ ವರುಷ ಫ್ರಾನ್ಸ ದೇಶದಿಂದ ಇವರ ಶಾಂತಿನಿಕೇತನವನ್ನು ನೋಡಲು ಇಬ್ಬರು ವಿದ್ವಾಂಸರು ಬಂದಿದ್ದರು. ಅವರು ಹೋಗುವಾಗ ಗುರುದೇವ ಟಾಗೋರರಲ್ಲಿ ಸಂದೇಶವನ್ನು ಕೇಳಿದರು, ಆಗ ಯುರೋಪಖಂಡಕ್ಕೆ ಹೀಗೆ ಸಂದೇಶಕೊಟ್ಟರು—

"ಹಿಂದುಸ್ಥಾನವು ನಿಮ್ಮ ಈಗಿನ ಕೃತಿಗಳನ್ನು ದುಃಖಿತ ಅಂತಃಕರಣದಿಂದ ನೋಡುತ್ತಲಿದೆಯೆಂದೂ ಸಂಯುಕ್ತ ಯುರೋಪ ಖಂಡದಂತೆಯೇ ಮುಂದೆ ಸಂಯುಕ್ತ ಭರತಖಂಡವೂ ಏರ್ಪಟ್ಟಾಗ ಈ ಉಭಯ ಖಂಡಗಳಲ್ಲಿಯೂ ಶಾಂತಿಮಯ ಸಧಾರಣೆಯು ಸ್ಥಾಪಿಸಲ್ಪಡುವುದೆಂದೂ ಆ ಸುಧಾರಣೆಯಿಂದಲೇ ಹಿಂದುಸ್ಥಾನದ ಪ್ರಾಚೀನ ಬೌದ್ಧಿಕ ಮತ್ತು ಆಧ್ಯಾತ್ಮಿಕ ಜ್ಞಾನಗಳ ಹಾಗು ಪಾಶ್ಚಾತ್ಯರ ಆಧುನಿಕ ಭೌತಿಕ ಜ್ಞಾನಗಳ ಸಮ್ಮೇಲನವಾಗಿ ಮನುಷ್ಯ ಜಾತಿಗೆ ಚಿರಶಾಂತಿ ಪ್ರಾಪ್ತವಾಗುವುದೆಂದೂ ಯುರೋಪ ಖಂಡದವರಿಗೆ ತಿಳಿಸಿರಿ."

ಕುಲಗುರು ಟಾಗೋರರ ಈ ಕೆಳಗಿನ ದಿವ್ಯೋಪದೇಶವು ಎಲ್ಲರ ಕಣ್ಣಮುಂದೆಯೂ ಇರಬೇಕಾದುದು ಅತ್ಯಗತ್ಯ.

"ಅನೀತಿಯಿಂದ ನಡೆದು ಮನುಷ್ಯನು ಕೆಲವು ಕಾಲ ಉತ್ಕರ್ಷವನ್ನು ಹೊಂದಬಹುದು. ತನ್ನ ವೈರಿಯನ್ನು ಸೋಲಿಸಬಹುದು. ಇಷ್ಟೇ ಅಲ್ಲ; ತನ್ನ ಇಚ್ಛೆಗಳನ್ನು ಪೂರ್ತಿಗೊಳಿಸಿಕೊಳ್ಳಬಹುದು. ಆದರೆ ಅದೇ ಕಾಲದಲ್ಲಿ ತನ್ನ ನಾಶದ ಬೀಜವನ್ನೂ ಆತನು ಬಿತ್ತಿಕೊಳ್ಳುತ್ತಾನೆಂಬುದನ್ನು ಮಾತ್ರ ಮರೆಯಲಾಗದು."

---

—ಅಖಿಲಭಾರತ ಮುಸ್ಲಿಂಲೀಗಿನ ವಾರ್ಷಿಕ ಅಧಿವೇಶನವು ಆಕ್ಟೋಬರ್ ೧೫, ೧೬, ೧೭ ಈ ತಾರೀಖುಗಳಲ್ಲಿ ಲಖನೌ ಪಟ್ಟಣದಲ್ಲಿ ಕೂಡುವುದು. ಅಧ್ಯಕ್ಷ ಸ್ಥಾನವನ್ನು ಮಿ. ಮಹಮ್ಮದಅಲ್ಲಿ ಜೀನಾರವರು ವಹಿಸುವರು.

—ಮುಂಬೈ ಸರಕಾರದ ಮಂತ್ರಿಗಳಾದ ಮಿ. ನೂರಿಯವರ ತಾ. ೨೭ ನೆಯ ದಿನ ವಿಜಾಪುರಕ್ಕೆ ಬಂದಾಗ ಮುಸ್ಲಿಂಲೀಗಿನ ಕೆಲವು ಸ್ವಯಂಸೇವಕರು ಸ್ಟೇಶನ್ನಿನ ಹೊರಗೆ ಕರಿ ನಿಶಾನೆಯನ್ನು ಹಿಡಿದಿದ್ದರು.

—ಎಲ್ಲೂರ ಜೈಲಿನಲ್ಲಿದ್ದ ೫ ಬಂಗಾಲಿ ರಾಜಕೈದಿಗಳನ್ನು ಬಂಗಾಲ ಪ್ರಾಂತಕ್ಕೆ ಕಳಿಸಲಾಯಿತು.

## ಹಿಂದು ಮಹಾಸಭೆ ಮತ್ತು ಪಂಡಿತಜಿ.

### ಅಜಮೀರದಲ್ಲಿ ಸ್ಪಷ್ಟೀಕರಣ.

ವರ್ಹಾಡ ಹಿಂದು ಮಹಾಸಭೆಯ ಅಧಿವೇಶನದ ಸ್ವಾಗತ ಸಂಘಕ್ಕೆ ಸದಸ್ಯರಾಗಿರೆಂದು ಅಕೋಲಾದಲ್ಲಿಯ ಪ್ರಸಿದ್ಧ ಕಾಂಗ್ರೆಸ್ ಕೆಲಸಗಾರರಾದ ಶ್ರೀ. ವ್ರಜಲಾಲ ಬಿಯಾಣಿ ಇವರನ್ನು ಶ್ರೀ. ಜೋಗಳೆಕರ್ ಎಂಬುವವರು ಕೇಳಿಕೊಂಡರು. ಅದಕ್ಕೆ ಅವರು ಒಪ್ಪಲಿಲ್ಲ. ರಾಷ್ಟ್ರೀಯ ಸಭಾಧ್ಯಕ್ಷರಾದ ಪಂಡಿತ ಜವಾಹರಲಾಲ ನೆಹರುರವರನ್ನು ಈ ವಿಚಾರವಾಗಿ ಶ್ರೀ. ಬಿಯಾಣಿಯವರು ಕೇಳಿದರು. ಆಗ ಪಂಡಿತಜಿಯವರು ಹೀಗೆ ತಿಳಿಸಿದರು—

"ಹಿಂದು ಮಹಾಸಭೆಯ ಸ್ವಾಗತ ಸಂಘಕ್ಕೆ ನೀವು ಸದಸ್ಯರಾಗಬೇಡಿರಿ. ಹಿಂದು ಮಹಾಸಭೆಯಿಂದ ಕಾಂಗ್ರೆಸ್ಸಿನವರು ದೂರಿರಬೇಕು."

ಪಂಡಿತಜಿಯವರ ಈ ಸೂಚನೆಯ ಪ್ರಕಾರ ಮೊದಲು ಸ್ವಾಗತ ಸಂಘಕ್ಕೆ ಸೇರಿದ್ದ ಕೆಲವು ಕಾಂಗ್ರೆಸ್ ಕೆಲಸಗಾರರು ತಮ್ಮ ಅಂಗವನ್ನು ತೆಗೆದುಕೊಂಡರು ಶ್ರೀ. ದೇಶಪಾಂಡೆ ಶ್ರೀ. ಓಕ ಎಂಬ ಕಾಂಗ್ರೆಸ್ ಕೆಲಸಗಾರರು ಪಂಡಿತಜಿಯವರ ಅಭಿಪ್ರಾಯವನ್ನು ಮರಾಠಿಯಲ್ಲಿ ಭಾಷಾಂತರಗೊಳಿಸಿ ಹತ್ತು ಸಾವಿರ ಪ್ರತಿಗಳನ್ನು ಜಿಲ್ಲಾ, ತಾಲೂಕು. ಸ್ಥಳಗಳಲ್ಲೆಲ್ಲಾ ಹಂಚಿದರು. ಇದರಿಂದ ಆ ಭಾಗದಲ್ಲಿ ದೊಡ್ಡ ಚರ್ಚೆಯೇ ಪ್ರಾರಂಭವಾಯಿತು.

ಅನೇಕರು ಮಹಾಸಭೆಯಿಂದ ದೂರಾದರು. ಕೆಲವರು "ನಾವೇನೂ ಮಹಾಸಭೆಯನ್ನು ಬಿಡುವುದಿಲ್ಲ. ಪಂಡಿತಜಿಯವರು ನಾಳೆ ಈ ದೇವರನ್ನು ಪೂಜಿಸಬೇಡಿರಿ. ಆ ಹಬ್ಬವನ್ನು ಮಾಡಬೇಡಿರಿ. ಎಂದು ಅಪ್ಪಣೆ ಮಾಡಿದರೆ ಆ ಪ್ರಕಾರ ನಡೆಯಬೇಕೆ?" ಎಂದು ಕೇಳಿ ಮಹಾಸಭೆಯ ಸದಸ್ಯರಾಗಿಯೇ ಉಳಿದರು.

ಅನೇಕ ಮುಸಲ್ಮಾನರು ಮುಸ್ಲಿಂಲೀಗಿನ ಸದಸ್ಯರಿದ್ದು ಕಾಂಗ್ರೆಸ್ಸಿನಲ್ಲಿಯೂ ಸೇರಿದ್ದಾರೆಂತಲೂ ಪಂಜಾಬ ಭಾಗದಲ್ಲಿ ಹಿಂದು ಮಹಾಸಭೆಯ ಕಾರ್ಯನಿರ್ವಾಹಕರಲ್ಲಿಯೇ ಅನೇಕರು ಕಾಂಗ್ರೆಸ್ ಕೆಲಸಗಾರರೂ ಇದ್ದಾರೆಂತಲೂ ಪಂಡಿತಜಿಯವರು ಹೀಗೆ ಹೇಳಿದುದು ಸರಿಯಲ್ಲವೆಂತಲೂ ಹಿಂದು ಪತ್ರಿಕಾಕರ್ತರು ಪಂಡಿತಜಿಯವರ ರೀತಿಯನ್ನು ಖಂಡಿಸಿದರು. ಮುಸಲ್ಮಾನರ ದಾಕ್ಷಿಣ್ಯಕ್ಕೆ ಒಳಗಾಗಿಯೇ ಪಂಡಿತಜಿಯವರು ಹೀಗೆ ನಡೆಯುತ್ತಿದ್ದಾರೆಂತಲೂ ಅನೇಕರು ಟೀಕಿಸಿದರು.

### ಪಂಡಿತಜಿಯವರ ಸ್ಪಷ್ಟೀಕರಣ.

ಕಳೆದ ೧೯ ನೆಯ ತಾರೀಖಿನ ದಿವಸ ಪಂಡಿತಜಿಯವರು ಅಜಮೀರಕ್ಕೆ ಹೋಗಿದ್ದರು. ಅಲ್ಲಿ ೨೦ ಸಾವಿರ ಜನರ ಪ್ರಚಂಡ ಸಭೆ ಸೇರಿತ್ತು. ಆ ಕಾಲದಲ್ಲಿ ರಾಜಸ್ಥಾನ ಪ್ರಾಂತಿಕ ಹಿಂದು ಮಹಾಸಭೆಯ ಅಧ್ಯಕ್ಷರಾದ ಶ್ರೀ. ಕುವರಶಾರದಾ ಇವರು ಪಂಡಿತಜಿಯವರಿಗೆ ಹೀಗೆ ಪ್ರಶ್ನೆಮಾಡಿದರು—

"ಕಾಂಗ್ರೆಸ್ ಸದಸ್ಯರು ಹಿಂದು ಮಹಾ ಸಭೆಯ ಸದಸ್ಯರಾಗಬಾರದೆಂದು ತಾವು ಶ್ರೀ. ಬಿಯಾಣಿಯವರಿಗೆ ತಿಳಿಸಿರುವುದು ಕಾಂಗ್ರೆಸ್ ನಿಯಮದಂತೆಯೇ ? ಅಥವಾ ತಮ್ಮ ಇಷ್ಟದಂತೆಯೇ ?"

ಆಗ ಪಂಡಿತಜಿಯವರು ಹೀಗೆ ಹೇಳಿದರು—

"ಕಾಂಗ್ರೆಸ್ ನಿಯಮಗಳಲ್ಲಿ ಈ ವರೆಗೂ ಇಂತಹ ಯಾವ ನಿಯಮವಿಲ್ಲ. ಕಾಂಗ್ರೆಸ್ಸಿನ ಕಾರ್ಯನಿರ್ವಾಹಕರು ಹಿಂದು ಮಹಾಸಭೆಯ ಸದಸ್ಯರಾದರೆ ಅವರ ಕಾರ್ಯಕ್ಕೆ ಪ್ರತಿಬಂಧವಾಗಬಹುದೆಂಬ ನನ್ನ ತಿಳುವಳಿಕೆಯಿಂದಲೇ ನಾನು ಹಾಗೆ ತಿಳಿಸಿದ್ದೇನೆ. ಕಾಂಗ್ರೆಸ್ಸಿನ ಸಾಮಾನ್ಯ ಸದಸ್ಯರು ಹಿಂದು ಮಹಾ ಸಭಾ ಅಥವಾ ಅನ್ಯ ಸಭೆಗಳ ಸದಸ್ಯರಾಗಲು ಯಾವ ತರದ ಅಭ್ಯಂತರವೂ ಇಲ್ಲ. ಅಂಥವರ ದೆಸೆಯಿಂದ ನಾನು ಹೇಳಿಲ್ಲ. ಕಾಂಗ್ರೆಸ್ಸಿನ ಮುಖ್ಯ ಕಾರ್ಯನಿರ್ವಾಹಕರನ್ನು ಕುರಿತೇ ನಾನು ಹಾಗೆ ಹೇಳಿದ್ದೆನು".

### ಇದೇ ಉಧೋ ! ಉಧೋ ! ವೃತ್ತಿ.

ಕಾಂಗ್ರೆಸ್ಸಿನ ಕೆಲಸಗಾರರಲ್ಲಿ ಕೆಲವರು ಉಧೋ! ಉಧೋ! ವೃತ್ತಿಯವರಿದ್ದಾರೆಂದೂ ಇಂಥವರಿಂದ ಕಾಂಗ್ರೆಸ್ಸಿನ ಕಾರ್ಯಕ್ಕೇನೇ ತೊಂದರೆಯಾಗುತ್ತದೆಂದೂ ನಾವು ಅನೇಕ ಸಾರೆ ಹೇಳಿದ್ದೇವಷ್ಟೆ. ಈ ಉಧೋ ಉಧೋ ಎಂಬುದು ಕೆಲವರಿಗೆ ಸೇರದಿದ್ದರೆ ಅವರು ಗೋಲಗುಮುಟದ ವೃತ್ತಿಯೆಂದು ತಿಳಿದುಕೊಳ್ಳಲಿ. ಅಂಧಭಕ್ತಿಯಿಂದಲೋ ಅಥವಾ ಇನ್ನಾವ ದ್ವೇಷಾಸೂಯೆಗಳಿಂದಲೋ ಕಾಂಗ್ರೆಸ್ಸಿನ ಕೆಲವು ಕೆಲಸಗಾರರು ಹೀಗೆ ವರ್ತಿಸುತ್ತಿದ್ದಾರೆಂಬುದಕ್ಕೆ ಶ್ರೀ. ದೇಶಪಾಂಡೆಯವರೇ ಮೊದಲಾದವರು ಹತ್ತು ಸಾವಿರ ಪ್ರತಿಗಳನ್ನು ಅಚ್ಚುಮಾಡಿಸಿ ಆ ಭಾಗದಲ್ಲಿ ಹಂಚಿದ್ದೇ ಹೊಸ ದೃಷ್ಟಾಂತ.

ಈ ವಿರೋಧ ಪ್ರಚಾರವು ಅನಾವಶ್ಯಕವಾಗಿತ್ತು. ಪಂಡಿತಜಿಯವರ ಅಭಿಪ್ರಾಯ ಹಾಗಿಲ್ಲವೆಂಬುದು ಮೇಲಣ ಅವರ ಸ್ಪಷ್ಟೀಕರಣದಿಂದಲೇ ಗೊತ್ತಾಗುತ್ತದೆ ಕಾಂಗ್ರೆಸ್ಸಿನ ಸಾಮಾನ್ಯ ಸದಸ್ಯರೆಲ್ಲಾ ಹಿಂದು ಮಹಾ ಸಭೆಯಿಂದ ದೂರಿರಬೇಕೆಂದು ಅವರು ಇಚ್ಛಿಸುವುದಿಲ್ಲ. ಎಂದಮೇಲೆ ತಮ್ಮ ಮುಂದಾಳುಗಳ ಅಭಿಪ್ರಾಯವೇನೆಂಬುದನ್ನು ವಿಮರ್ಶಕ ದೃಷ್ಟಿಯಿಂದ ನೋಡಿ ಕೆಲಸಮಾಡಬೇಕೇ ವಿನಾ ಅಂಧ ಭಕ್ತಿಯಿಂದ ಏನನ್ನಾದರೂ ಮಾಡಿದರೆ ಅದರಿಂದ ಕಾಂಗ್ರೆಸ್ ಕಾರ್ಯಕ್ಕೂ ತೊಂದರೆಯಲ್ಲವೆ ? ಅಂತೆಯೇ ರಾಜಕಾರಣದಲ್ಲಿಯೂ ವಿಮರ್ಶಕ ದೃಷ್ಟಿ ಬರಲಿ. ಅಂಧ ಭಕ್ತಿ ಅಳಿಯಲಿ.

---

## ಅಸೆಂಬ್ಲಿಯಲ್ಲಿ ಕನ್ನಡ ಭಗಿನಿ.

ಮುಂಬೈ ಪ್ರಾಂತಿಕ ಅಸೆಂಬ್ಲಿಯಲ್ಲಿ ಸೇರಿದವರು ಮೊದಲನೆಯ ಕನ್ನಡ ಭಗಿನಿ ಸೌ|| ಪಾಟೀಲ ನಾಗಮ್ಮನವರು. ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣದ ಶಿವಾನುಭವ ಮಂಟಪದಲ್ಲಿ ಅನೇಕ ಶಿವಶರಣೆಯರು ಧಾರ್ಮಿಕ ಚರ್ಚೆ ನಡೆಸುತ್ತಿದ್ದರು. ಅನಂತರ ಎಂಟನೂರು ವರುಷಗಳ ಮೇಲೆ ಪುಣೆಯ ರಾಜಕಾರಣದ ಸಭೆಯಲ್ಲಿ ಸೌ|| ಪಾಟೀಲ ನಾಗಮ್ಮನವರು ಕನ್ನಡದಲ್ಲಿಯೇ ಶಿಕ್ಷಣದ ವಿಚಾರವಾಗಿ ಭಾಷಣಮಾಡಿದರು. ಇದು ಕನ್ನಡಿಗರಿಗೆ ಅವರಲ್ಲಿ ಲಿಂಗಾಯತರಿಗೆ ಹೆಚ್ಚು ಭೂಷಣದ ಸಂಗತಿಯಲ್ಲವೆ ? ಇವರು ತಮ್ಮ ಭಾಷಣದಲ್ಲಿ ಹೀಗೆ ಸೂಚಿಸಿದರು.—

"ಶಿಕ್ಷಣ ಪದ್ಧತಿಯಲ್ಲಿ ರಾಷ್ಟ್ರೀಯ ದೃಷ್ಟಿಯಿಂದ ಮಹತ್ವದ ಸುಧಾರಣೆಯಾಗಬೇಕಾಗಿದೆ. ಬಾಲಿಕಾ ಪಾಠಶಾಲೆಗಳಲ್ಲಿ ಪಾಕಶಾಸ್ತ್ರ ಮತ್ತು ಆರೋಗ್ಯ ಶಾಸ್ತ್ರಗಳನ್ನು ಕಲಿಸುವ ವ್ಯವಸ್ಥೆಯಾಗಬೇಕು. ಅಲ್ಲಿ ಸ್ತ್ರೀ ಅಧ್ಯಾಪಿಕೆಯರನ್ನು ನಿಯಮಿಸಬೇಕೇ ವಿನಾ ಪುರುಷರನ್ನು ಶಿಕ್ಷಕರನ್ನಾಗಿ ನಿಯಮಿಸಬಾರದು."

---

# ಮಹಾನವಮಿ ಹಬ್ಬದಲ್ಲಿ ಮಾಡಬೇಕಾದುದೇನು?




## ಹಿಂದು ಸಂಘಟನೆಯೂ ಹಿಂದುಸ್ಥಾನದ ಸಂರಕ್ಷಣೆಗೆ ಸಾಧನ.

ಹಿಂದುಸ್ಥಾನದಲ್ಲಿರುವ ೨೫ ಕೋಟಿ ಹಿಂದುಗಳು ಧಾರ್ಮಿಕ ದೃಷ್ಟಿಯಿಂದಲೂ ಸಾಮಾಜಿಕ ರೀತಿ ನೀತಿಗಳಿಂದಲೂ ಸುಸಂಘಟಿತರಾದ ವಿನಾ ಹಿಂದುಸ್ಥಾನದಲ್ಲಿ ನಿಜವಾದ ಸುಖ ಶಾಂತಿಗಳು ನೆಲೆಸುವುದಿಲ್ಲ. ಹಿಂದು ಸಂಘಟನೆಯಾಗಬೇಕಾದರೆ ಆ ಸಂಬಂಧವಾದ ಜಾಗೃತಿಯು ಜನರಲ್ಲುಂಟಾಗಿ ಸಾವಿರಾರು ವರುಷಗಳಿಂದಿರುವ ಅನೇಕ ದೋಷಗಳು ಅಳಿದುಹೋಗಬೇಕು. ಮಹಾನವಮಿಯ ಹಬ್ಬವು ಹಿಂದುಗಳಿಗೆ ಬಹು ಮುಖ್ಯವಾದುದಾಗಿರುವುದರಿಂದ ಈ ಹಬ್ಬದ ೯ ದಿನಗಳಲ್ಲಿಯೂ ಹಿಂದು ಸಂಘಟನೆಗೆ ಅನುಕೂಲವಾದ ಈ ಕೆಳಗಿನ ಕಾರ್ಯಗಳನ್ನು ನಡೆಯಿಸಬೇಕೆಂದು ಮಹಾರಾಷ್ಟ್ರ ಹಿಂದು ಮಹಾಸಭೆಯವರು ನಿರ್ಧರಿಸಿದ್ದಾರೆ.

### ಮಹಾನವಮಿ ಹಬ್ಬದ ಕಾರ್ಯಕ್ರಮ.

(೧) ಆಶ್ವೀನ ಶುದ್ಧ ೧ (ತಾ. ೫-೧೦-೩೭) ಧರ್ಮಗ್ರಂಥ ದಿನ. ಆ ದಿವಸ ಹಿಂದು ಧರ್ಮಗ್ರಂಥ ವಾಚನ, ಪ್ರಚಾರ ಮೊದಲಾದ ಕಾರ್ಯಗಳು. (೨) ತಾ. ೬ ನೆಯ ದಿನ ಹಿಂದು ಧರ್ಮ ಸಂರಕ್ಷಕ ದಿನ. ಆ ದಿವಸ ಬಂದಾಬೈರಾಗಿ, ರಾಣಾಪ್ರತಾಪ, ಶಿವಾಜಿ, ಸಂಭಾಜಿ, ಸ್ವಾಮಿ ಶ್ರದ್ಧಾನಂದ ಮೊದಲಾದ ವಿಭೂತಿಗಳ ಸಂಸ್ಮರಣ ಮತ್ತು ಅವರ ಮಹತ್ವ ಪ್ರಚಾರ.

(೩) ತಾ. ೭ ನೆಯ ದಿನ ಶುದ್ಧೀಕರಣ ದಿನ. ಆ ದಿವಸ ಹಿಂದು ಧರ್ಮದಲ್ಲಿ ಬರುವವರನ್ನು ಶುದ್ಧಗೊಳಿಸಿ ಹಿಂದು ಧರ್ಮದಲ್ಲಿ ತೆಗೆದುಕೊಳ್ಳುವುದು. (೪) ತಾ. ೮ ನೆಯ ದಿನ ಅಸ್ಪೃಶ್ಯತಾ ನಿವಾರಣೆಯ ದಿನ. ಅಸ್ಪೃಶ್ಯತೆಯ ನಿವಾರಣೆಯಾಗುವುದಕ್ಕೋಸ್ಕರ ಆ ದಿವಸ ಪ್ರಚಾರ ಕಾರ್ಯ ಮಾಡುವದು. (೫) ತಾ. ೯ ನೆಯ ದಿವಸ ಮಹಿಳಾ ದಿನ. ಹಿಂದು ಮಹಿಳೆಯರ ಈಗಿನ ಸ್ಥಿತಿ, ಅವರ ಸಂಘಟನೆ, ವೀರ ಹಿಂದು ಮಹಿಳೆಯರ ಸಂಸ್ಮರಣೆ ಮೊದಲಾದ ವಿಷಯಗಳಲ್ಲಿ ಜಾಗೃತಿಯನ್ನುಂಟುಮಾಡುವುದು.

(೬) ತಾ. ೧೦ ನೆಯ ದಿವಸ ಹಿಂದು ಯುವಕರ ದೇಹ ಬಲ ವರ್ಧನೆಗಾಗಿ ಆಟ ಮೊದಲಾದವುಗಳು ನಡೆಯಬೇಕು. ಆ ದಿನ ಬಲವರ್ಧನ ದಿನ. (೭) ತಾ. ೧೧ ನೆಯ ದಿವಸ ಗೋ ಸಂರಕ್ಷಣ ದಿನ. (೮) ತಾ. ೧೨ ನೆಯ ದಿವಸ ರಾಷ್ಟ್ರೀಯತ್ವ ಮತ್ತು ಧರ್ಮಗಳ ಸಂಬಂಧವಾಗಿ ಜಾಗೃತಿ. (೯) ತಾ. ೧೩ ನೆಯ ದಿವಸ ಹಿಂದು ಸಂಘಟನೆ. (೧೦) ತಾ. ೧೪ ನೆಯ ದಿವಸ ಮೆರವಣಿಗೆ.

ಈ ಪ್ರಕಾರ ಮಹಾರಾಷ್ಟ್ರದಲ್ಲಿ ಹಿಂದು ಮಹಾಸಭೆಯ ಶಾಖೆಗಳಿಂದ ಕಾರ್ಯಗಳು ಜರುಗಬೇಕೆಂದು ಗೊತ್ತಾಗಿದೆ. ಇವೆಲ್ಲ ಹಿಂದುಗಳ ಉನ್ನತಿಗೆ ಅಗತ್ಯವಾಗಿಲ್ಲವೆ? ಇವುಗಳಲ್ಲಿ ಪರಧರ್ಮದ ವಿರುದ್ಧವಾಗಿ ಅಥವಾ ಸ್ವಾತಂತ್ರ್ಯ ಪ್ರಾಪ್ತಿಯ ವಿರುದ್ಧವಾಗಿ ಯಾವ ಕಾರ್ಯಗಳಿವೆ? ಸ್ವರಾಜ್ಯವು ಹೇಗೆ ಜನ್ಮಸಿದ್ಧ "ಹಕ್ಕೋ" ಹಾಗೆಯೇ ಸ್ವಧರ್ಮವೂ ಜನ್ಮಸಿದ್ಧ "ಹಕ್ಕ"ಲ್ಲವೆ?

---

### ಹಿಂದುಗಳ ಸಂಖ್ಯೆ ಕಡಿಮೆಯಾಗುವುದೆಷ್ಟು?

ಕ್ರಿ. ಶ. ೧೯೧೧ ರಿಂದ ೧೯೨೧ ರೊಳಗಾಗಿ ಹತ್ತು ವರುಷಗಳಲ್ಲಿ ೧ ಕೋಟಿ ೧೨ ಲಕ್ಷ ಹಿಂದುಜನರು ಹಿಂದು ಸಮಾಜದಲ್ಲಿ ಕಡಿಮೆಯಾಗಿದ್ದಾರೆ. ಇಷ್ಟು ಜನರು ಮುಸಲ್ಮಾನ್, ಕ್ರಿಸ್ತ, ಸಮಾಜಗಳಲ್ಲಿ ಹೆಚ್ಚಾಗಿದ್ದಾರೆಂಬುದನ್ನು ಹೇಳಬೇಕಿಲ್ಲವಷ್ಟೆ. ಸರಕಾರದ ಲೆಕ್ಕದಿಂದ ಗೊತ್ತಾಗುವುದೇನೆಂದರೆ—

ಹಿಂದು ಸಮಾಜದ ೫೨ ಜಾತಿಗಳಲ್ಲಿ ಜನಸಂಖ್ಯೆಯು ಹೆಚ್ಚು ಪ್ರಮಾಣದಿಂದ ಕಡಿಮೆಯಾಗುತ್ತಾ ಇದೆ. ಅವುಗಳಲ್ಲಿ ಮೇಲಿನ ಹತ್ತು ವರುಷಗಳಲ್ಲಿ ಈ ಕೆಳಗಿನ ಜಾತಿಗಳಲ್ಲಿ ಕಡಿಮೆಯಾದ ಜನಸಂಖ್ಯೆಯ ವಿವರ—

(೧) ಬ್ರಾಹ್ಮಣ ೩೪೦೭೧೭. (೨) ಲಿಂಗಾಯತ ೨೩೮೭೧೭ (೩) ಹೊಲೆಯರು ೩೪೦೧೭೪ ಚಮ್ಮಾಗಾರರು ೨೩೦೦೮೫.

---

ಮೇಲಿನ ಚಿತ್ರಗಳ ಹೆಸರುಗಳು— ವಾಚಕರ ಬಲದಿಂದ— ಶ್ರೀ. ಶಂಕರಾಚಾರ್ಯರು. ಶ್ರೀ. ಬುದ್ಧದೇವರು. ಶ್ರೀ. ರಾಮಾನುಜಾಚಾರ್ಯರು. ಶ್ರೀ. ಬಸವಣ್ಣನವರು. ಶ್ರೀ. ಮಧ್ವಾಚಾರ್ಯರು. ಶ್ರೀ. ಮಹಾವೀರ ಸ್ವಾಮಿಗಳು. ಶ್ರೀ. ದಯಾನಂದ ಸರಸ್ವತಿಗಳು. ಶ್ರೀ. ಗುರುನಾನಕರು. (ಶೀಖ ಮತಸ್ಥಾಪಕರು.)

## ವಿಮರ್ಶಾತ್ಮಕ

# ಪ್ರಶ್ನೋತ್ತರ.

### "ಲೋಕಮತ" ಪತ್ರಿಕಾಕರ್ತರ ವಿಚಾರ ವಿಮರ್ಶೆ.

ಪ್ರಶ್ನೆ— ಲೋಕಮತ ಪತ್ರಿಕಾಕರ್ತರು ತಾ. ೧೭-೯-೩೭ ನೆಯ ಸಂಚಿಕೆಯಲ್ಲಿ ತಾ. ೧೩-೯-೩೭ ನೆಯ "ಲೋಕಮತ ಪತ್ರಿಕಾಕರ್ತರ ವಿಚಾರ ವಿಮರ್ಶೆ" ಎಂಬ ನಿಮ್ಮ ಲೇಖನದಿಂದ ನಿಮ್ಮಲ್ಲಿ ತೋರಿದ ಸಂಶಯ ನಿವಾರಣೆಗಾಗಿ ಪುನಃ ಬರೆದಿರುವುದನ್ನು ನೀವು ಓದಿರುವಿರಾ?

ಉತ್ತರ— ಓದಿದ್ದೇವೆ. ಆ ವಿಚಾರವಾಗಿ ಅವರ ಪತ್ರಿಕೆಯಲ್ಲಿಯೇ ಒಂದು ಲೇಖನವನ್ನು ಪ್ರಕಟಿಸಬೇಕೆಂದು ಯೋಚಿಸಿ ತಾ. ೨೧-೯-೩೭ ನೆಯ ದಿವಸ ಸಂಪಾದಕ ಮಹಾಶಯರಿಗೆ ಒಂದು ಪತ್ರ ಬರೆದು ನಮ್ಮ ಲೇಖನವನ್ನು ಪ್ರಕಟಿಸುವಿರಾ? ಎಂದು ಕೇಳಿಕೊಂಡಿದ್ದೆವು. ಅದಕ್ಕೆ ಈ ವರೆಗೂ ಉತ್ತರ ಬರಲಿಲ್ಲ.

ಪ್ರಶ್ನೆ— ನೀವು ಅವರ ಪತ್ರಿಕೆಯಲ್ಲಿ ಲೇಖನವನ್ನು ಏಕೆ ಪ್ರಕಟಿಸಬೇಕೆಂದು ಯೋಚಿಸಿದಿರಿ? ತಾ. ೧೭ ನೆಯ ಲೇಖನದಲ್ಲಿಯೇ ಅವರು "ಇಷ್ಟಕ್ಕೆ ನಾವು ಈ ವಾದವಿವಾದವನ್ನು ಮುಗಿಸಿದ್ದೇವೆ." ಎಂದು ತಿಳಿಸಿದ್ದಾರಲ್ಲಾ. ಎಂದಮೇಲೆ ನಿಮ್ಮ ಲೇಖನವನ್ನಾದರೂ ಏಕೆ ಪ್ರಕಟಿಸುವರು?

ಉತ್ತರ— ಅವರು ಯಾವ ಸಂಗತಿಯನ್ನು ಸುಳ್ಳು ಬರೆದಿದ್ದಾರೆಂದು ನಾವು ತಾ. ೧೩-೯-೩೭ ನೆಯ ಸಂಚಿಕೆಯಲ್ಲಿ ಆಧಾರ ಪೂರ್ವಕವಾಗಿ ತೋರಿಸಿದ್ದೇವೆಯೋ ಅಷ್ಟನ್ನಾದರೂ ಅವರು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿ ಅದರಮೇಲೆ ಟೀಕೆ ಮಾಡಿದ್ದರೆ ಆ ಪತ್ರಿಕಾ ವಾಚಕರಿಗೆ ಯಾರ ಅಭಿಪ್ರಾಯವು ಸರಿಯೆಂಬುದು ಸ್ಪಷ್ಟ ಗೊತ್ತಾಗುತ್ತಿದ್ದಿತು. ನಾವು ಪುನಃ ಈ ವಿಷಯವನ್ನು ಪ್ರಸ್ತಾಪಿಸುವ ಕಾರಣವೂ ಇರಲಿಲ್ಲ. ಅವರು ಹಾಗೆ ಮಾಡದೆ ಮತ್ತೆ ತಾ. ೧೭-೯-೩೭ ನೆಯ ಸಂಚಿಕೆಯಲ್ಲಿ 'ಸುಳ್ಳು ಬರೆದು' ಶರಣ ಸಂದೇಶದ ವಿಚಾರವಾಗಿ ಜನರಲ್ಲಿ ಯಾವ ಅಭಿಪ್ರಾಯವನ್ನು ಪ್ರಸಾರಗೊಳಿಸಬೇಕೆಂಬ ಉದ್ದೇಶದಿಂದ ನಮ್ಮ ಸಂಶಯ ನಿವಾರಣೆಯ ಕಾರ್ಯವನ್ನು ಪ್ರಾರಂಭಿಸಿದರೋ ಆ ಉದ್ದೇಶವನ್ನು ಸಾಧಿಸಲು ಪ್ರಯತ್ನಿಸಿದ್ದಾರೆ. ಅಂತೆಯೇ ತಮ್ಮ ಪತ್ರಿಕೆಯಲ್ಲಿ ನಮ್ಮ ಲೇಖನ ಪ್ರಕಟಿಸುವಿರಾ? ಎಂದು ಕೇಳಿದ್ದು.

ನಮ್ಮ ಲೇಖನದ ಮೇಲೆ ಅವರು ಮಾಡಿದ ಟೀಕೆ ಮತ್ತು ನಾವು ಎಷ್ಟು "ಸಂಶಯದ ಮೊಟ್ಟೆಯನ್ನೇ ಹೊತ್ತುಕೊಳ್ಳಹತ್ತಿದ್ದೇವೆ" ಎಂದು ತಮ್ಮ ವಾಚಕರಿಗೆ ತೋರಿಸಿ ಕೊಡುವ ಅವರ ಲೇಖನದ ರೀತಿ ಇವುಗಳನ್ನು ನೋಡಿದರೆ "ಇಷ್ಟಕ್ಕೆ ನಾವು ಈ ವಾದವಿವಾದವನ್ನು ಮುಗಿಸಿದ್ದೇವೆ." ಎಂಬುದು ತಮ್ಮಲ್ಲಿ ಪ್ರಶ್ನೆ ಮಾಡಿದವರ ಮಟ್ಟಿಗೇನೇ ಸರಿಯೆಂದು ಅರ್ಥ ಮಾಡಿ ಅವರು ಹೇಳಿದರೂ ಹೇಳಬಹುದು. ಅಂತೆಯೇ ಅದರ ಪರಿಷ್ಕಾರಕ್ಕಾಗಿ ನಾವು ಅವರಿಗೆ ಪತ್ರವನ್ನು ಬರೆದು ವಿವರವಾಗಿ ತಿಳಿಸಿದ್ದು.

ಪ್ರಶ್ನೆ— ತಾ. ೧೭-೯-೩೭ ನೆಯ ಸಂಚಿಕೆಯಲ್ಲಿ ಮತ್ತೆ ಸುಳ್ಳು ಬರೆದುದೇನು?

ಉತ್ತರ— ಒಂದನ್ನೇ ನಿಮಗೆ ತೋರಿಸುತ್ತೇವೆ. ನಾವು ತಾ. ೧೩-೯-೩೭ ನೆಯ ಸಂಚಿಕೆಯಲ್ಲಿ ಹೀಗೆ ಬರೆದಿದ್ದೇವೆ.

"ಅನ್ಯರನ್ನು ಅಲ್ಲಗಳೆದು ಪರಿಹಾಸ್ಯಮಾಡಿದ ಇವರ ಈ ಬರವಣಿಗೆಯ ಶೈಲಿಗೆ ಸುಳ್ಳೇ ಮೂಲವಾಗಿದೆಯೆಂದು ಮೇಲಿನ ಸಂಗತಿಗಳಿಂದ ನಿಮಗಾದರೂ ಗೊತ್ತಾಗಿರಬಹುದು."

ಇದನ್ನು ಲೋಕಮತಕಾರರು ತಮ್ಮ ತಾರೀಖು ೧೭-೯-೩೭ ನೆಯ ಸಂಚಿಕೆಯಲ್ಲಿ ಹೀಗೆ ಕೊಟ್ಟಿದ್ದಾರೆ—

"ಅನ್ಯರನ್ನು ಅಲ್ಲಗಳೆದು ಪರಿಹಾಸ್ಯಮಾಡಿದ" ನಿಮ್ಮ ಬರವಣಿಗೆಯನ್ನು ಏಕೆ ಪ್ರಾರಂಭಿಸಬೇಕಾಗಿತ್ತು?"

ಹೀಗೆ ಪ್ರಶ್ನೆಯನ್ನು ಸುಳ್ಳು ರೀತಿಯಲ್ಲಿಟ್ಟುಕೊಂಡು ಅದಕ್ಕೆ ಹೀಗೆ ಉತ್ತರ ಕೊಟ್ಟಿದ್ದಾರೆ—

"ಶರಣ ಸಂದೇಶಕಾರರ ಸಂಶಯ ನಿವಾರಣೆ" ಎಂದು ನಾವು ಲೇಖನಗಳನ್ನು ಬರೆದುದು ಯಾರನ್ನಾದರೂ ಪರಿಹಾಸ್ಯಮಾಡಬೇಕೆಂದಲ್ಲ. ಅಥವಾ ದುರಭಿಪ್ರಾಯವನ್ನು ಹುಟ್ಟಿಸುವದೂ ಇರಲಿಲ್ಲ. ಹಾಗಿದ್ದರೆ ನಾವು ಆ ಪ್ರಕಾರ ತಲೆಕಟ್ಟನ್ನು ನಮ್ಮ ಲೇಖನಗಳಿಗೆ ಕೊಡುತ್ತಲೇ ಇರಲಿಲ್ಲ."

ಇಲ್ಲಿ, ಬರವಣಿಗೆ ಪ್ರಾರಂಭವಾದ ವಿಚಾರವಿರಲಿಲ್ಲ. ಅದರ 'ಶೈಲಿ' ಯ ವಿಚಾರವಿದೆ. ಆ 'ಶೈಲಿ' ಯು ಪರಿಹಾಸ್ಯಕರವಾದುದಾಗಿದೆಯೆ? ಇಲ್ಲವೆ? ಅದು ಅಲ್ಲಗಳೆಯಲ್ಪಡುವ 'ಶೈಲಿ' ಯಲ್ಲಿ ಬರೆಯಲ್ಪಟ್ಟದೆಯೆ? ಇಲ್ಲವೆ? ಅವರ ೩-೪-೯-೩೭ ನೆಯ ಸಂಚಿಕೆಯಲ್ಲಿ ಹೇಗಿದೆಯೋ ಹಾಗೆಯೇ ಇಲ್ಲಿ ಕೊಡುತ್ತೇವೆ. ನೀವು ಇನ್ನೊಮ್ಮೆ ನೋಡಿರಿ. ಸಾಹಿತ್ಯ ಶಾಸ್ತ್ರ ಬಲ್ಲವರಾದರೂ ಯೋಚಿಸಲಿ.

"ಎತ್ತ ಹೋದರು ಮಾಲವೀಯರು! ಎತ್ತ ಹೋದರು ಪರಮಾನಂದರು? ಎಲ್ಲಿವೆ ಅವರ ದೊಡ್ಡ ದೊಡ್ಡ ಮಾತುಗಳು? ಇಷ್ಟೆಲ್ಲ ಅರ್ಭಾಟ ಇದಿಷ್ಟಕ್ಕಾಗಿಯೇ ನಡೆಯಿತೆ?

"ಆಗಿನ ಅವರ ಗುಡುಗುಡು ಸಪ್ಪಳವನ್ನೂ ಹಿಂದಿನಿಂದ ಅವರು ವ್ಯಕ್ತಪಡಿಸಿದ ಹೀನ ವರ್ತನವನ್ನೂ ನೋಡಿದರೆ "ಗರ್ಜಂತಿ ಕೇಚಿದ್ ವೃಥಾ" ಎಂದು ಹೇಳಬೇಕಾಗುತ್ತದೆ"

"೨೨ ಕೋಟಿ ರೂ. ದಾವಾಮಾಡಿ ಸಮುದ್ರದಾಚೆಯ ಜಗತ್ತಿನ ಕೋರ್ಟಿನ ವರೆಗೆ ನ್ಯಾಯಮಾಡಿ ಕೊನೆಗೆ ಒಳಗಿಂದೊಳಗೆ ೩ ರೂ. ಕರಾರುಮಾಡಿ ರಾಜಿಮಾಡಿಕೊಂಡಂತಾಯಿತು. ಅದೂ ಕೂಡಾ ಮುಂದೆ ದೊರೆಯಲೇ ಇಲ್ಲವೆಂಬ ಮಾತು ಬೇರೆ! ಎತ್ತ ಹೋಯಿತು ಹಿಂದು ಮಹಾ ಸಭೆ? ಎತ್ತ ಹೋಯಿತು ಆ ಎಲ್ಲ ಗುಲ್ಲು? ಎತ್ತ ಹೋದವು ಆ ಮೂ........ರು ಮಂತ್ರಿ ಪದವಿಗಳು? ಇಂಥ ರಾಷ್ಟ್ರದ್ರೋಹವು ಹಿಂದುಗಳಲ್ಲಿ ಕಂಡುಬರುವುದರಿಂದಲೇ ಆ ಜಾತಿ ನಿರ್ಣಯ ಇನ್ನೂ ಹೋಗಲೊಲ್ಲದು."

ಈ "ಉಪಮೆ" ಈ "ಶೈಲಿ" ಪಂಡಿತ ಮಾಲವೀಜಿಯವರಂತಹ (ಧರ್ಮಾತ್ಮರೆಂದು ಗಾಂಧೀಜಿಯವರೇ ಯಾರಿಗೆ ಹೇಳುತ್ತಿದ್ದಾರೆಯೋ) ರಾಷ್ಟ್ರಭಕ್ತರ ಸಂಬಂಧವಾಗಿ ಇಂತಹ ವಿದ್ವಾನ್ ಲೇಖಕರಿಂದ ಉಪಯೋಗಿಸಲ್ಪಟ್ಟುದು ನಮಗಂತೂ ಅತ್ಯಂತ ವಿಷಾದವನ್ನುಂಟುಮಾಡುತ್ತದೆ. ಆ ಲೇಖನವು ನಿಷ್ಪಕ್ಷಪಾತಿಗಳಾದ ರಾಷ್ಟ್ರಾಭಿಮಾನಿಗಳಿಗೆ ತುಂಬಾ ಸಂತಾಪವನ್ನುಂಟುಮಾಡದೆ ಇರಲಾರದು. ಹೀಗೆ ಬರೆದೂ "ನಾವೇ ಸಂಶಯದ ಮೊಟ್ಟೆ ಹೊತ್ತುಕೊಳ್ಳುತ್ತಿದ್ದೇವೆಂದು" ತಮ್ಮ ವಾಚಕರಿಗೆ ತೋರಿಸಿಕೊಡುವ ಇವರ ರೀತಿಯು ಅಪೂರ್ವವಾದುದು.

ಅವರ ತಾ. ೧೭-೯-೩೭ ನೆಯ ಲೇಖನದಿಂದ ಶರಣ ಸಂದೇಶದ ವಿಚಾರವಾಗಿ ತಮ್ಮ ವಾಚಕರಲ್ಲಿ ಯಾವ ಅಭಿಪ್ರಾಯವನ್ನುಂಟುಮಾಡಲು ಪ್ರಯತ್ನಿಸುತ್ತಿದ್ದಾರೆಂಬುದು ನಮಗೆ ಸ್ಪಷ್ಟ ಗೊತ್ತಾಯಿತು.

# ಮತ್ತೆ 'ವಂದೇಮಾತರಂ' ಗೀತೆಗೆ ವಿರೋಧ!




"ವಂದೇಮಾತರಂ" ರಾಷ್ಟ್ರ ಗೀತೆಯ ವಿರುದ್ಧವಾಗಿ ಈಗ ಅನೇಕ ಮುಸಲ್ಮಾನರು ಚಟುವಟಿಕೆಯನ್ನು ನಡೆಯಿಸಿದ್ದಾರಷ್ಟೆ. ಮದ್ರಾಸ್ ಅಸೆಂಬ್ಲಿಯಲ್ಲಿ ಮುಸ್ಲಿಂ ಸಭಾಸದರೊಬ್ಬರು ಈ ಗೀತೆಗೆ ವಿರೋಧಮಾಡಿದರು. ಇದೇ ವಿಷಯವನ್ನು ದಿಲ್ಲಿ ಅಸೆಂಬ್ಲಿಯಲ್ಲಿ ಸರ್. ಮಹಮದ ಯಾಕೂಬರವರು ನಿಲುವಳಿಯ ಸೂಚನೆಯ ಮೂಲಕ ಪ್ರಸ್ತಾಪಿಸುವುದಾಗಿ ಸೂಚಿಸಿದರು. ಆದರೆ ಆ ವಿಷಯವು ಪ್ರಾಂತಿಕ ಸರಕಾರಕ್ಕೆ ಸಂಬಂಧಪಟ್ಟದ್ದೆಂದು ಅಧ್ಯಕ್ಷರು ಅವಕಾಶಕೊಡಲಿಲ್ಲ.

ಈ 'ವಂದೇ ಮಾತರಂ' ಪದ್ಯವು ಸುಪ್ರಸಿದ್ಧ ಬಂಗಾಲಿ ಸಾಹಿತಿಗಳಾದ ಕೀರ್ತಿಶೇಷ ಬಂಕಿಮಚಂದ್ರರ "ಆನಂದ ಮಠ" ಎಂಬ ಗ್ರಂಥದಲ್ಲಿದೆ. ಅದನ್ನೇ ಕಳೆದ ೩೦ ವರುಷಗಳಿಂದಲೂ ಭೂಮಾತೆಯ ಸ್ತೋತ್ರವೆಂದು ರಾಜಕಾರಣದ ಸಭೆಗಳಲ್ಲಿ ಹೇಳುತ್ತಾ ಬಂದಿದ್ದಾರೆ. ಇತ್ತೀಚಿಗೆ ಅನೇಕ ಮುಸಲ್ಮಾನರಲ್ಲಿ ಧಾರ್ಮಿಕ ಕಲ್ಪನೆಯು ಎಲ್ಲೆಲ್ಲಿಯೂ ಸೇರಲಾರಂಭವಾಗಿದೆ. ಬಂಗಾಲ ವಿಶ್ವವಿದ್ಯಾಲಯದ ಗುರುತಿನ ಚಿತ್ರವು ಮುಸಲ್ಮಾನ್ ಧರ್ಮಕ್ಕೆ ವಿರೋಧವಾದುದೆಂದು ಈಗ ಕೆಲವರಿಗೆ ತೋರಿ ಬಂಗಾಲ ಅಸೆಂಬ್ಲಿಯಲ್ಲಿ ಇದರ ಚರ್ಚೆಯಾಯಿತು.

ಈಗ ವಂದೇ ಮಾತರಂ ಪದ್ಯವು ಮುಸಲ್ಮಾನ್ ಧರ್ಮದ ವಿರುದ್ಧವಾಗಿ ಯುದ್ಧಕ್ಕೆ ಆಹ್ವಾನ ಕೊಟ್ಟ ಪದ್ಯವೆಂದೇ ಕೆಲವರಿಗೆ ತೋರಲಾರಂಭವಾಗಿದೆ. ಯಾವುದು ಮುಸ್ಲಿಂ ಭೂಮಿಯಲ್ಲವೋ ಅದು ಮುಸ್ಲೀಮರಿಗೆ ಯುದ್ಧ ಭೂಮಿಯೆಂದೇ ತಿಳಿಯಬೇಕಾಗಿ ಅವರಲ್ಲಿ ಕೆಲವರ ಅಭಿಪ್ರಾಯ.

ಈ ಪ್ರಕಾರ ರಾಜಕಾರಣದಲ್ಲಿರುವ ಸುಶಿಕ್ಷಿತರಲ್ಲಿಯೇ ಧಾರ್ಮಿಕ ಭಾವನೆಯಿದ್ದಮೇಲೆ ಜನ ಸಾಮಾನ್ಯದಲ್ಲಿ ಯಾವ ಪ್ರಕಾರ ಇರಬಹುದೆಂಬುದು ಗೊತ್ತಾಗುವುದಿಲ್ಲವೆ ? ಮೊನ್ನೆ ಕಲಕತ್ತಾದಲ್ಲಿ ಮುಸಲ್ಮಾನರ ಪ್ರಚಂಡ ಸಭೆ ಸೇರಿತ್ತು. ಅದರಲ್ಲಿ ಮುಸಲ್ಮಾನ್ ಕವಿಗಳೂ, ವಿದ್ವಾಂಸರೂ, ಅಸೆಂಬ್ಲಿ ಸಭಾಸದರೂ ಇದ್ದರು. ಇಂಥ ಸಭೆಯಲ್ಲಿ "ಆನಂದ ಮಠ" ಪುಸ್ತಕಕ್ಕೆ ಬೆಂಕಿ ಹಚ್ಚಿ ಸುಟ್ಟರು! ಏನೇನೋ ಭಾಷಣ. ರಾಷ್ಟ್ರೀಯ ವೃತ್ತಿಯ ಮುಸಲ್ಮಾನರು ಇಂತಹ ಅತ್ಯಾಚಾರಗಳನ್ನು ಎಂದಿಗೂ ಒಪ್ಪರು. ಆದರೆ ಇವರ ಸಂಖ್ಯೆಯು ಬಹು ಕಡಿಮೆಯಷ್ಟೆ.

ಪಂಡಿತ ಜವಾಹರಲಾಲ ನೆಹರುರವರು ಒಂದು ಹೊಸ ರಾಷ್ಟ್ರಗೀತೆ ಬೇಕೆಂದು ಹೇಗಾದರೂ ಹೇಳಿದ್ದಾರಷ್ಟೆ. ಎಂದ ಮೇಲೆ ಆ ಪ್ರಕಾರ ಹೊಸ ರಾಷ್ಟ್ರಗೀತೆಯಾಗುವ ಪ್ರಸಂಗವು ಜಾಗ್ರತೆ ಬರಲು ಮುಸಲ್ಮಾನರ ಈ ಚಟುವಟಿಕೆಯು ಕಾರಣವಾಗದೆ ಇರಲಾರದು.

ತಾ. ೩೦ ನೆಯ ದಿವಸ ಮದ್ರಾಸ ಪ್ರಾಂತಿಕ ಅಸೆಂಬ್ಲಿಯಲ್ಲಿ ಮಿ. ಶೇಖಮಹಮ್ಮದ ಲಾಲಜಾನ ಎಂಬುವವರು ಪುನಃ "ವಂದೇ ಮಾತರಂ" ಗೀತೆಯ ವಿಚಾರವಾಗಿ ವಿರೋಧಿಸಿದರು. ಆಗ ಈ ಪ್ರಕಾರ ಸಂಭಾಷಣೆ ಜರುಗಿತು—

ಮಿ. ಲಾಲಜಾನರು— ವಂದೇಮಾತರಂ ಗೀತೆಯು ಇಸ್ಲಾಂ ಧರ್ಮದ ವಿರುದ್ಧವಾಗಿ ರಣಗರ್ಜನೆಯಿದೆಯೆಂದು ನಾನು ತಾ. ೨೩ ರಲ್ಲಿ ಮಾಡಿದ ಆಕ್ಷೇಪಣೆಗೆ ಅಧ್ಯಕ್ಷರು ಕೊಟ್ಟ ನಿರ್ಣಯದ ಸಂಬಂಧವಾಗಿ ನಾನು ಹೇಳುವುದೇನೆಂದರೆ

ಅಧ್ಯಕ್ಷರು— ನೀವು ಭಾಷಣಮಾಡದೆ ನಿಮ್ಮ ಆಕ್ಷೇಪಣೆ ಯೇನಿದೆ ಎಂಬುದನ್ನು ಮಾತ್ರ ತಿಳಿಸಿರಿ.

ಮಿ. ಲಾಲಜಾನರು- ಅಧ್ಯಕ್ಷರಿಂದ ನನಗೆ ಕೆಲವು ಸಂಗತಿ ತಿಳಿಯಬೇಕಾಗಿದೆ. ಅಧ್ಯಕ್ಷರು- ನಿಮಗೆ ಯಾವ ಸಂಗತಿ ತಿಳಿಯಬೇಕೆಂಬುದನ್ನು ಕಾಗದದಲ್ಲಿ ಬರೆದುಕೊಡಿರಿ. ಮಿ. ಲಾಲಜಾನರು- ಆ ಪ್ರಕಾರ ಒಂದು ಕಾಗದದಲ್ಲಿ ಬರೆದುಕೊಟ್ಟ ಮೇಲೆ ಅಧ್ಯಕ್ಷರು ತಮ್ಮ ಕೋಣೆಗೆ ಕರೆದು ಈ ಸಂಬಂಧವಾಗಿ ಮುಸಲ್ಮಾನ್ ಸಭಾಸದರ ಸಂಗಡ ವಿಚಾರ ವಿನಿಮಯಮಾಡಲು ಒಪ್ಪಿಗೆ ಕೊಟ್ಟರು.

---

ಆದಕಾರಣ ಅವರು ತಮ್ಮ ಪತ್ರಿಕೆಯಲ್ಲಿ ಈ ವಾದವನ್ನು ಇಷ್ಟಕ್ಕೇ ನಿಲ್ಲಿಸಿದರೆ ನಾವು ಅದಕ್ಕೂ ಸ್ವಲ್ಪ ಮುಂದೆ ಹೋಗಿ ಅವರ ಪತ್ರಿಕೆಯಲ್ಲಿ ಶರಣ ಸಂದೇಶದ ಸಂಬಂಧವಾಗಿಯಾಗಲಿ ಅಥವಾ ನಮ್ಮ ಸಂಬಂಧವಾಗಿಯಾಗಲಿ ಇನ್ನು ಮೇಲೆ ಯಾರು ಏನು ಬರೆದರೂ ನಾವು ಅದನ್ನು ಲಕ್ಷಿಸುವುದಿಲ್ಲ. ಮತ್ತು ಆ ಸಂಬಂಧವಾಗಿ ಪ್ರಸ್ತಾಪಿಸಲು ಈ ಪತ್ರಿಕೆಯಲ್ಲಿ ಅವಕಾಶವನ್ನೂ ಕೊಡುವುದಿಲ್ಲ. ಎಂದು ನಿಮಗೆ ತಿಳಿಸುತ್ತೇವೆ. ಇನ್ನು ಮೇಲೆ ಆ ವಿಷಯವನ್ನು ಬಿಟ್ಟೇ ಪ್ರಸ್ತಾಪಿಸಬೇಕಾಗಿ ಕೋರಿಕೆ.



ಶಾ. ಶ. ೧೮೫೯ ನೆಯ ಭಾದ್ರಪದ ಬ|| ೩೦ ಸೋಮವಾರ.

# ಕಾಂಗ್ರೆಸ್ ಪಕ್ಷದ ಮತ್ತೊಂದು ಅರಾಷ್ಟ್ರೀಯ ಕೃತಿ.

ಕಾಂಗ್ರೆಸ್ ಪಕ್ಷವು ಜಾತಿನಿರ್ಣಯದ ಗೊತ್ತುವಳಿಯ ಕಾಲಕ್ಕೆ ದಿಲ್ಲಿ ಅಸೆಂಬ್ಲಿಯಲ್ಲಿ ಕೈಕಟ್ಟಿಕೊಂಡು ಕುಳಿತ ಅರಾಷ್ಟ್ರೀಯ ಕೃತಿಯು ಸರ್ವಶ್ರುತವಷ್ಟೆ. ಅದೇ ವಿಧವಾದ ಇನ್ನೊಂದು ಕೃತಿಯನ್ನು ಮೊನ್ನೆ ಸಿಮುಲಾದಲ್ಲಿ ಕೂಡಿದ್ದ ಅಸೆಂಬ್ಲಿಯಲ್ಲಿ ಕಾಂಗ್ರೆಸ್ ಪಕ್ಷವು ಮಾಡಿದುದು ಅತ್ಯಂತ ವಿಷಾದದ ಸಂಗತಿಯು. ಜಾತಿ ನಿಷ್ಠೆಯನ್ನು ನಿಷೇಧಿಸಿ ರಾಷ್ಟ್ರ ನಿಷ್ಠೆಯನ್ನೇ ಪುರಸ್ಕರಿಸುವ ಕಾಂಗ್ರೆಸ್ ಪಕ್ಷವು ಮುಸಲ್ಮಾನರ ಜಾತಿ ನಿಷ್ಠೆಯ ಗೊತ್ತುವಳಿಗೆ ವಿರೋಧಿಸದೆ ಮೌನವಾಗಿದ್ದು ಒಂದು ರೀತಿಯಲ್ಲಿ ಒಪ್ಪಿಗೆಯನ್ನೇ ಕೊಟ್ಟುದು ಅರಾಷ್ಟ್ರೀಯವಲ್ಲವೆ ?

ಸಿಮುಲಾದಲ್ಲಿ ಕೂಡಿದ ಅಸೆಂಬ್ಲಿಯಲ್ಲಿ ಸರ್. ಮಹಮ್ಮದ ಯಾಕೂಬರವರು ಈ ಕೆಳಗಿನ ಅಭಿಪ್ರಾಯದ ಒಂದು ಗೊತ್ತುವಳಿಯನ್ನು ತಂದರು.

"ಹಕ್ಕುದಾರರಿಲ್ಲದ (ಬೆವಾರಸದಾರ) ಮುಸಲ್ಮಾನರ ಅಸ್ತಿಯು ಸರಕಾರಕ್ಕೆ ಸಲ್ಲದೆ ಅದು ಮುಸಲ್ಮಾನ್ ಸಮಾಜಕ್ಕೆ ಸಲ್ಲಬೇಕು."

ಈ ಗೊತ್ತುವಳಿಯನ್ನು ರಾಷ್ಟ್ರೀಯ ಪಕ್ಷದ ಪ್ರಮುಖರಾದ ಶ್ರೀ. ಅಣೆಯವರು ವಿರೋಧಿಸುವಾಗ ಮಾಡಿದ ಭಾಷಣದ ಮುಖ್ಯಾಂಶವನ್ನು ನಾವು ಬೇರೆ ಕಡೆ ಕೊಟ್ಟಿದ್ದೇವೆ. ಶ್ರೀ. ಅಣೆಯವರ ಅಭಿಪ್ರಾಯವು ಎಷ್ಟು ಸಮಂಜಸವಾದುದು ಮತ್ತು ಎಂತಹ ಉಜ್ವಲ ರಾಷ್ಟ್ರೀಯ ವಿಚಾರ ಯುಕ್ತವಾದುದು ಇದೆಯೆಂಬುದು ನಿಷ್ಪಕ್ಷಪಾತಿಗಳಿಗೆ ಸ್ಪಷ್ಟವಾಗದೆ ಇರಲಾರದು.

ಹಕ್ಕುದಾರರಿಲ್ಲದ ಅಸ್ತಿಯು ಸರಕಾರಕ್ಕೇನೇ ಸೇರಬೇಕಾದುದು ನ್ಯಾಯವು. ಆ ಸರಕಾರದ ಹಣವು ಜಾತಿ ಮತ ಪಂಥಗಳ ಕಟ್ಟಿಲ್ಲದೆ ಪುನಃ ಜನಗಳ ಹಿತಾರ್ಥವಾಗಿಯೇ ವಿನಿಯೋಗಿಸಲ್ಪಡುತ್ತದಷ್ಟೆ. ಎಂದರೆ ಅಂತಹ ಅಸ್ತಿಯು ರಾಷ್ಟ್ರದ ಅಸ್ತಿಯೇ ವಿನಾ ಒಂದು ಜಾತಿಯ ಅಸ್ತಿಯಲ್ಲ. ಹೀಗಿರಬೇಕಾದುದೇ ನ್ಯಾಯವು. ಹಾಗಿಲ್ಲದೆ ಒಂದು ಜಾತಿಯವರ ಹಣವು ಅದೇ ಜಾತಿಯವರಿಗೇನೇ ಸೇರಬೇಕೆಂಬ ನಿಯಮವಾದರೆ ಈ ನಿಯಮವು ಎಲ್ಲ ಜಾತಿಯವರಿಗಾದರೂ ಅನ್ವಯಿಸಬೇಕು. ಇದಾದರೂ ಒಂದು ರೀತಿ. ಇದರಿಂದ ಜಾತಿಭಾವನೆಯನ್ನು ಉಳಿಸಿದಂತಾಗುತ್ತದೆ. ಆದರೆ ಅನ್ಯಾಯವನ್ನೇನೂ ಮಾಡಿದಂತಾಗುವುದಿಲ್ಲ.

ಇವೆರಡನ್ನೂ ಬಿಟ್ಟು ಹಕ್ಕುದಾರರಿಲ್ಲದ ಮುಸಲ್ಮಾನರ ಅಸ್ತಿಯು ಮುಸಲ್ಮಾನ್ ಸಮಾಜಕ್ಕೇನೇ ಸೇರಬೇಕು. ಆದರೆ ಹಿಂದುಗಳ ಅಸ್ತಿಯು ಮಾತ್ರ ರಾಷ್ಟ್ರದ ಅಸ್ತಿಯೆಂದು ಎಲ್ಲಾ ಜಾತಿಯವರಿಗೂ ಹಂಚಲ್ಪಡಬೇಕು. ಎಂಬ ನಿಯಮವಾದರೆ ಅದು ಅರಾಷ್ಟ್ರೀಯವೂ ಅನ್ಯಾಯವೂ ಎಂದೇ ನಿಷ್ಪಕ್ಷಪಾತಿಗಳು ನಿರ್ದಾಕ್ಷಿಣ್ಯವಾಗಿ ಹೇಳಲಾರರೆ ?

ಸರ್ ಮಹಮ್ಮದ ಯಾಕೂಬರ ಗೊತ್ತುವಳಿಯು ಎಷ್ಟು ಅನುಚಿತವಾದುದು ಮತ್ತು ಕಾಂಗ್ರೆಸ್ ಪಕ್ಷವು ಅದನ್ನು ವಿರೋಧಿಸಬೇಕಾಗಿದ್ದುದು ಎಷ್ಟು ಅಗತ್ಯವಾದುದು ಎಂಬುದನ್ನು ನಾವೀನೂ ವಿವರಿಸಬೇಕಾದುದೇ ಇಲ್ಲ. ಶ್ರೀ. ಅಣೆಯವರು ಈ ಸಂಗತಿಗಳನ್ನೆಲ್ಲಾ ಬಹು ಚೆನ್ನಾಗಿ ಸ್ಪಷ್ಟೀಕರಿಸಿದ್ದಾರೆ.

ಈ ಜಾತಿ ನಿಷ್ಠೆಯ ಗೊತ್ತುವಳಿಗೆ ಕಾಂಗ್ರೆಸ್ ಪಕ್ಷವು ವಿರೋಧಿಸದೆ ಮೌನವಾಗಿದ್ದುಕೊಂಡು ಮತ್ತೊಂದು ಅರಾಷ್ಟ್ರೀಯ ಕೃತಿಯನ್ನು ಮಾಡಿತೆಂದು ನಾವು ಹೇಳದಿರಲಾರೆವು. ಮುಸಲ್ಮಾನರ ವಿಷಯದಲ್ಲಿ ಈ ಪಕ್ಷವು ಹೀಗೆ ಎಲ್ಲಿಯವರೆಗೂ ದಾಕ್ಷಿಣ್ಯದಿಂದ ಅರಾಷ್ಟ್ರೀಯ ಕೃತಿಗಳನ್ನು ಆಚರಿಸುತ್ತಿರುತ್ತದೆಯೋ ಅಲ್ಲಿಯವರೆಗೂ ಅನೇಕ ಮುಸಲ್ಮಾನರಲ್ಲಿರುವ ಜಾತಿ ನಿಷ್ಠೆಯು ಬೆಳೆಯುತ್ತಲೇ ಹೋಗುವುದರಲ್ಲಿ ಸಂದೇಹವೇ ಇಲ್ಲ. ಹಾಗಾಗುವುದು ರಾಷ್ಟ್ರಕ್ಕೆ ಅನರ್ಥಕರವಲ್ಲವೆ?

ಹಿಂದುಗಳಲ್ಲಿ ವಿಷಮತೆಯ ವರ್ಣಗಳುಂಟಾಗಿ ಭಿನ್ನ ಭಿನ್ನ ರೀತಿಗಳು ಏರ್ಪಟ್ಟಿರುವುದು ಅನ್ಯಾಯವೂ ಹಿಂದು ಸಂಘಟನೆಗೆ ಅಪಾಯಕರವೂ ಆಗಿಲ್ಲವೆ? ಹಕ್ಕುದಾರರಿಲ್ಲದ ಆಸ್ತಿಯು ರಾಜನಿಗೇನೇ ಸಂಬಂಧಪಟ್ಟಿದೆ. ಆದರೆ ಇದಕ್ಕೆ ಬ್ರಾಹ್ಮಣರು ಮಾತ್ರ ಅಪವಾದವಂತೆ. ಹಕ್ಕುದಾರರಿಲ್ಲದ ಬ್ರಾಹ್ಮಣರ ಅಸ್ತಿಯು ಬ್ರಾಹ್ಮಣರಿಗೇನೇ ಸೇರಬೇಕೆಂದು ಮನು, ನಾರದಾದಿ ಸ್ಮೃತಿಕಾರರು ಬರೆದಿದ್ದಾರಂತೆ. ಇಂತಹ ಸೈತಾನಿ ವೃತ್ತಿಯ ನಿಯಮಗಳುಳ್ಳ ಸ್ಮೃತಿಗಳು ಹಿಂದು ಜನಾಂಗದಲ್ಲಿದ್ದುಕೊಂಡು ಸಾವಿರಾರು ವರುಷ ಕೋಟಿಗಟ್ಟಲೆ ಜನಗಳಮೇಲೆ ತಮ್ಮ ಪ್ರಭುತ್ವವನ್ನು ನಡೆಸಿದ್ದರಿಂದಲೇ ಹಿಂದು ಜನಾಂಗಕ್ಕೂ ಹಿಂದು ರಾಷ್ಟ್ರಕ್ಕೂ ಈಗಿನ ಶೋಚನೀಯ ಸ್ಥಿತಿ ಬಂದಿದೆ. ಇದನ್ನು ನೋಡಿಯಾದರೂ ಏಕ ರಾಷ್ಟ್ರೀಯತ್ವದ ನಿರ್ಮಾಣಕ್ಕಾಗಿ ಹೋರಾಡುತ್ತಿರುವ ಕಾಂಗ್ರೆಸ್ ಪಕ್ಷವು ಅರಾಷ್ಟ್ರೀಯ ವೃತ್ತಿ ಬೆಳೆಯದಂತೆ ಇಂಥ ಗೊತ್ತುವಳಿಗಳಿಗೆ ವಿರೋಧಿಸುವುದೇ ಪವಿತ್ರ ಕರ್ತವ್ಯವಾಗಿಲ್ಲವೆ?

---

# ನಾಡ ಹಬ್ಬ ಹೀಗಿರಲಿ.

ಕನ್ನಡನಾಡಿಗೆ ನಿಜವಾದ ಹಬ್ಬವು ಈ ನಾಡೆಲ್ಲ ಒಂದೇ ಪ್ರಾಂತವಾದ ದಿನ. ಅಂದೇ ಮಾನವಮಿ. ಅಂದೇ ಕನ್ನಡಿಗರ ವಿಜಯ ದಶಮಿ. ಅಂಥ ನಾಡಹಬ್ಬ ಜಾಗ್ರತೆ ಬರಲು ಈ ನಾಡಹಬ್ಬದಲ್ಲಿ ಕರ್ನಾಟಕ ಏಕೀಕರಣದ ಚಟುವಟಿಕೆಯೇ ಹಳ್ಳಿಯಿಂದ ಪಟ್ಟಣದವರೆಗೆ ಪ್ರಚಂಡವಾಗಿ ನಡೆಯಲಿ.

## ಶ್ರೀ. ಅಣೆಯವರ ಭಾಷಣ.

ಹಕ್ಕುದಾರರಿಲ್ಲದ ಮುಸಲ್ಮಾನರ ಆಸ್ತಿಯು ಮುಸಲ್ಮಾನ್ ಸಮಾಜಕ್ಕೆ ಸೇರಬೇಕೆಂದು ಸರ್ ಮಹಮ್ಮದ ಯಾಕೂಬರವರು ಸಿಮಲಾದಲ್ಲಿ ಕೂಡಿದ್ದ ಅಸೆಂಬ್ಲಿಯಲ್ಲಿ ತಂದ ಗೊತ್ತುವಳಿಗೆ ಲೋಕನಾಯಕ ಅಣೆಯವರು ತಾ. ೯-೯-೩೭ ನೆಯ ದಿವಸ ವಿರೋಧಿಸಿ ಭಾಷಣ ಮಾಡಿದ್ದರಲ್ಲಿ ಹೀಗೆ ಹೇಳಿದರು—

"ಬೆ ವಾರಸದಾರ" ಆಸ್ತಿಗೆ ಇಡೀ ಮುಸಲ್ಮಾನ ಸಮಾಜವೇ ಅಧಿಕಾರವುಳ್ಳದ್ದಾಗುವುದಿಲ್ಲ. ಆ ಆಸ್ತಿಯು ಬಡ ಮುಸಲ್ಮಾನರಿಗಾಗಿಯೇ ವಿನಿಯೋಗಿಸಲು ಟ್ರಸ್ಟ್ ಮಾಡಿಡಲ್ಪಡಬೇಕೆಂದೇ ನ್ಯಾಯಮೂರ್ತಿ ಅಮೀರ ಅಲ್ಲಿಯವರು ತಮ್ಮ ಗ್ರಂಥದಲ್ಲಿ ಹೇಳಿದ್ದಾರೆ. ಈ ಪ್ರಕಾರ ವ್ಯವಸ್ಥೆ ಮಾಡಬೇಕೆಂದು ಹಿಂದು ಧರ್ಮದ ಅನೇಕ ಸ್ಮೃತಿಕಾರರೂ ಹೇಳಿದ್ದಾರೆ. ಹಕ್ಕುದಾರರಿಲ್ಲದವರ ಆಸ್ತಿಯು ರಾಜನಿಗೇನೇ ಸೇರಬೇಕೆಂದು ಸ್ಮೃತಿ ಗ್ರಂಥಗಳಲ್ಲಿ ಹೇಳಿದೆ. ಆದರೆ ಇದಕ್ಕೆ ಬ್ರಾಹ್ಮಣರು ಮಾತ್ರ ಅಪವಾದ. ಹಕ್ಕುದಾರರಿಲ್ಲದ ಬ್ರಾಹ್ಮಣರ ಆಸ್ತಿಯು ಮಾತ್ರ ಬೇರೆ ಬ್ರಾಹ್ಮಣನಿಗೇನೇ ಸೇರಬೇಕೆಂದು ಮನು, ನಾರದ ಮೊದಲಾದವರ ಸ್ಮೃತಿಯಲ್ಲಿ ಹೇಳಿದೆ.

ಬಡ ಮುಸಲ್ಮಾನರಿಗಾಗಿ ಮಾಡಲ್ಪಟ್ಟ ಹಕ್ಕುದಾರರಿಲ್ಲದ ಮುಸಲ್ಮಾನರ ಆಸ್ತಿಯ ಟ್ರಸ್ಟಿನ ವ್ಯವಸ್ಥೆಯು ಸರಕಾರದ ಕಡೆಗೇನೇ ಇರಬೇಕೆಂದು ಸ್ಪಷ್ಟವಾದ ಶಾಸನವು ಬಂಗಾಲ ಮತ್ತು ಮದ್ರಾಸ ಸರಕಾರಗಳಲ್ಲಿದೆ. ಆ ಪ್ರಕಾರ ಈಗ ಅಲ್ಲಿ ಅದು ೧೫ ವರುಷಗಳಿಂದಲೂ ಆಚರಣೆಯಲ್ಲಿದೆ. ಹೀಗಿರುವಾಗ ಈಗ ಈ ಗೊತ್ತುವಳಿಯೇಕೆ? ಇದು ಪ್ರಾಂತಿಕ ವಿಷಯ. ಇಲ್ಲಿ ಶಾಸನವಾದರೆ ಇಡೀ ಹಿಂದುಸ್ಥಾನದಲ್ಲಿಯೇ ಇದು ಆಚರಿಸಲ್ಪಡಬೇಕಾಗುವುದು. ಈಗ ಪ್ರಾಂತಿಕ ಪ್ರಭುತ್ವ ಪ್ರಾರಂಭವಾಗಿರುವಾಗ ಇದು ಇಲ್ಲಿ ಬರುವುದು ಅನುಚಿತವಾಗಿಯೂ ಇಲ್ಲವೆ?

ನನ್ನ ಮುಖ್ಯವಾದ ಅಭಿಪ್ರಾಯವೇನೆಂದರೆ— ಈ ದೇಶದಲ್ಲಿ ಹಿಂದು, ಮುಸಲ್ಮಾನ್, ಕ್ರಿಸ್ತ ಈ ಎಲ್ಲ ಸಮಾಜದವರೂ ಪರಸ್ಪರ ಶಾಂತತೆಯಿಂದಿರಬೇಕಾಗಿದೆ. ಆದಕಾರಣ ಎಲ್ಲರೂ ಒಂದೇ ವಿಧವಾದ ಶಾಸನದಂತೆ ಆದಷ್ಟುಮಟ್ಟಿಗೆ ನಡೆಯಲು ಪ್ರಯತ್ನಿಸಬೇಕಾದುದೇ ವಿಹಿತ. ಕೆಲವು ವೈಯಕ್ತಿಕ ಶಾಸನಗಳಿರಲಿ. ಕಳೆದ ೧೫ ವರುಷಗಳಿಂದ ಅಂಥ ಶಾಸನವಿದೆಯಲ್ಲವೆ? ಈಗ ಭೇದವನ್ನು ಹೆಚ್ಚಿಸುವ ಈ ಶಾಸನದ ಅಗತ್ಯವೇನಿದೆ? ಇದು ರಾಷ್ಟ್ರೀಯ ವೃತ್ತಿಗೆ ಘಾತಕವಾದುದಲ್ಲವೆ? ಇದೊಂದು ದುಷ್ಕೃತ್ಯವೇ ಆಗಬಹುದು.

ನಾನು ಮುಸಲ್ಮಾನರಿಗೆ ಹೇಳುವುದೇನೆಂದರೆ— ಹಿಂದು ಮತ್ತು ಮುಸಲ್ಮಾನರಿಗೆ ಈ ವಿಚಾರವಾಗಿ ಒಂದೇ ವಿಧವಾದ ಶಾಸನವಿರಬೇಕು. ಹಿಂದುವಾಗಲಿ ಅಥವಾ ಮುಸಲ್ಮಾನನಾಗಲಿ ಮೃತಪಟ್ಟನಂತರ ಆತನ ಆಸ್ತಿಗೆ ಯಾರೂ ಹಕ್ಕುದಾರರಿಲ್ಲದಿದ್ದರೆ ಆ ಆಸ್ತಿಯು ಆಯಾಯ ಧರ್ಮದ ಬಡಜನಗಳಿಗಾಗಿಯೇ ಟ್ರಸ್ಟ ಮೂಲಕ ಸರಕಾರದ ಕಡೆಗೇನೇ ಇರಬೇಕು. ಇದರಿಂದ ಸಮಾನವಾದ ಶಾಸನವಾಗಿ ಎರಡೂ ಸಮಾಜಗಳ ಹಿತವನ್ನು ಆಯಾಯ ಧರ್ಮಗ್ರಂಥಗಳ ಪ್ರಕಾರವೇ ಮಾಡಿದಂತಾಗುವುದು.

ಕಾಂಗ್ರೆಸ್ ಪಕ್ಷಕ್ಕೆ ನಾನು ಸೂಚಿಸುವುದೇನೆಂದರೆ— ಎಲ್ಲೋ ಸಂದಿ ಮೂಲೆಗಳಲ್ಲಿ ಅಸಮಾಧಾನವುಂಟಾಗಬಹುದೆಂಬ ಕಾಲ್ಪನಿಕ ಭೀತಿಯಿಂದ ಈ ಅರಾಷ್ಟ್ರೀಯವಾದ ಮತ್ತು ಅನ್ಯಾಯದ ಗೊತ್ತುವಳಿಗೆ ಒಪ್ಪಿಗೆಕೊಡಬೇಡಿರಿ. ನಮ್ಮ ಮುಂದೆ ಸ್ವತಂತ್ರ ಹಿಂದುಸ್ಥಾನದ ಧ್ಯೇಯವಿಲ್ಲವೆ? ಬೇರೆ ದೇಶಗಳಂತೆಯೇ ನಮ್ಮ ದೇಶವೂ ಸ್ವತಂತ್ರ ಮತ್ತು ಸಮಾನತೆಗಳಿಂದ ಕೂಡಿದ್ದಾಗಿರಬೇಕಾಗಿಲ್ಲವೆ? ಆದಕಾರಣ ರಾಷ್ಟ್ರೀಯ ವೃತ್ತಿಯೇ ಪ್ರಸಾರವಾಗಬೇಕು. ಅಂತಹ ವೃತ್ತಿಗೆ ಘಾತಕವಾದ ಈ ಗೊತ್ತುವಳಿಗೆ ನೀವು ಸಹಾಯಕರಾಗಬೇಡಿರಿ.

ಅಸೆಂಬ್ಲಿಯ ಒಳಗೂ, ಹೊರಗೂ ನಾನು ಕಾಂಗ್ರೆಸ್ಸಿನ ಪರವಾಗಿಯೇ ಹೋರಾಡುತ್ತಿದ್ದೇನೆ. ನಾನು ಕಾಂಗ್ರೆಸ್ಸಿನವನಾಗಿದ್ದೆನು. ಆಗಿದ್ದೇನೆ; ಇನ್ನು ಮುಂದೆಯೂ ಕಾಂಗ್ರೆಸ್ಸಿನವನಾಗಿಯೇ ಇರುವೆನು. ಕಾಂಗ್ರೆಸ್ಸಿನವನೆಂದೇ ನಾನು ಮರಣಪಡುವೆನು. ಕಾಂಗ್ರೆಸ್ಸು ನನ್ನದೆಂಬ ಭಾವನೆಯಿಂದಲೇ ನಾನು ಕಾಂಗ್ರೆಸ್ ಪಕ್ಷಕ್ಕೆ ಹೇಳುವುದೇನೆಂದರೆ— ಈ ಅನ್ಯಾಯವಾದ ಮತ್ತು ಜಾತಿಯ ವೃತ್ತಿಯ ಗೊತ್ತುವಳಿಗೆ ಖಂಡತುಂಡಾದ ವಿರೋಧವನ್ನೇ ಮಾಡಿರಿ. ಮುಂಬೈ "ಬಾರ ಅಸೋಸಿಏಶನ್" ಈ ಗೊತ್ತುವಳಿಯನ್ನು ವಿರೋಧಿಸಿದೆ. ಇದು ಲಕ್ಷಿಸಬೇಕಾದ ಸಂಗತಿಯು."

ಶ್ರೀ ಅಣೆಯವರು— ಕಾಂಗ್ರೆಸ್ಸಿನಲ್ಲಿರುವ ಅಣೆಯವರು— ಕಾಂಗ್ರೆಸ್ ಪಕ್ಷಕ್ಕೆ ಇಷ್ಟು ಬುದ್ಧಿಯನ್ನು ಹೇಳಿದರೂ ಅದು ತನ್ನ ಮುಸಲ್ಮಾನ್ ಪಕ್ಷಪಾತದ ವೃತ್ತಿಯನ್ನು ಮತ್ತೆ ವ್ಯಕ್ತಗೊಳಿಸಿ ಈ ಅರಾಷ್ಟ್ರೀಯ ಗೊತ್ತುವಳಿಯನ್ನು ವಿರೋಧಿಸದೆ ಮೌನ ವೃತ್ತಿಯನ್ನು ತಾಳಿತು.

---

## ಮದ್ಯ ಪ್ರತಿಬಂಧ ದಿನ.

ಹಿಂದುಸ್ಥಾನದ ಆಧುನಿಕ ಚರಿತ್ರೆಯಲ್ಲಿ ಕಳೆದ ೧ ನೆಯ ತಾರೀಖು ಸುವರ್ಣಾಕ್ಷರಗಳಿಂದ ಬರೆಯಲ್ಪಡತಕ್ಕದಾಗಿದೆ. ಆ ದಿನ ಸೇಲಂ ಜಿಲ್ಲೆಯಲ್ಲಿ ಮಾದಕ ಪದಾರ್ಥಗಳೆಲ್ಲವೂ ಶಾಸನದಿಂದಲೇ ನಿಷೇಧಿಸಲ್ಪಟ್ಟವು. ಮುಖ್ಯ ಮಂತ್ರಿಗಳಾದ ಶ್ರೀ. ರಾಜಗೋಪಾಲಾಚಾರ್ಯರು ಆ ಜಿಲ್ಲೆಯಲ್ಲಿ ಆ ದಿನ ಅನೇಕ ವ್ಯಾಖ್ಯಾನಗಳನ್ನು ಮಾಡಿದರು. ಒಬ್ಬ ಕುಡುಕನಿಂದಲೇ ಶೀಸೆಯನ್ನು ಒಡಿಸಿ ಮದ್ಯದ ಮಾರಿಯ ಸಂಹಾರಮಾಡಿಸಿದರು. ಕುಡುಕ ಪೋಲಿಸ್ ಅಧಿಕಾರಿಗಳನ್ನು ಬೇರೆ ಜಿಲ್ಲೆಗೆ ಕಳಿಸಲಾಗಿದೆ. ಹೆಣ್ಣುಮಕ್ಕಳು ತಮ್ಮ ಕುಡುಕ ಗಂಡನನ್ನು ಕಾಯುವ ಪೋಲಿಸರಾಗಬೇಕೆಂದು ಮುಖ್ಯ ಮಂತ್ರಿಗಳು ಬೋಧಿಸಿದರು. ಜನರಲ್ಲಿ ಅಪೂರ್ವ ಉತ್ಸಾಹ ಮತ್ತು ಆನಂದ.

---

## ಕೆಲಸಗಾರರ ಸಂಘ.

ಕಳೆದ ವಾರ ಬ್ಯಾ. ಜಮುನಾದಾಸರು ಪುಣೆಯಲ್ಲಿ ಕೆಲಸಗಾರರ ಸಂಘಟನೆಯ ಸಂಬಂಧವಾಗಿ ಒಂದು ವ್ಯಾಖ್ಯಾನ ಮಾಡಿದರು. ಆಗ ಅಧ್ಯಕ್ಷರಾಗಿದ್ದ ಶ್ರೀ. ಬೋಂಡೆ ಎಂಬುವವರು ಕೆಲಸಗಾರರ ಸಂಘದ ವಿಚಾರವಾಗಿ ಹೀಗೆ ಹೇಳಿದರು—

"೧೯೧೮ ನೆಯ ಇಸವಿಯಿಂದ ಈ ದೇಶದಲ್ಲಿ ಕೆಲಸಗಾರರ ಚಟುವಟಿಕೆ ಪ್ರಾರಂಭವಾಯಿತು. ಇದು ಕೇವಲ ಆರ್ಥಿಕ ಮತ್ತು ನೈತಿಕ ಚಟುವಟಿಕೆ. ಈ ವರೆಗೆ ಈ ದೇಶದಲ್ಲಿ ೨೩೭ "ಟ್ರೇಡ್ ಯುನಿಯನ್ಸ್" ಎಂಬ ಸಂಘಗಳು ರಜಿಸ್ಟರ್ ಆಗಿವೆ. ಇವುಗಳಲ್ಲಿ ೨೦೫ ಸಂಘಗಳ ವರದಿ ಪ್ರಕಟವಾಗಿವೆ. ಅವುಗಳಿಂದ ಅಷ್ಟು ಸಂಘಗಳಲ್ಲಿ ೨,೬೮೦೦೦ ಸದಸ್ಯರಿದ್ದಾರೆಂದೂ ೫| ಲಕ್ಷ ರೂ. ಅವುಗಳ ವಾರ್ಷಿಕ ಉತ್ಪನ್ನವಿದೆಯೆಂದೂ ಗೊತ್ತಾಗುತ್ತದೆ. ಪ್ರತಿಯೊಂದು ಸಂಘಕ್ಕೆ ಸರಾಸರಿ ೨೬೦೦ ರೂ. ಬರುತ್ತವೆ. ಪ್ರತಿಯೊಬ್ಬ ಸದಸ್ಯನು ರೂ. ೨-೨-೯ ಕೊಡುವನು."

# ಬಸವಣ್ಣನವರು ಲೋಕಕ್ಕೆ ತೋರಿಸಿದ ದಿವ್ಯಮಾರ್ಗ.



## ತನು, ಮನ, ಧನಗಳನ್ನು ಹೇಗೆ ಸವಿಸಬೇಕು ?

ಶ್ರೀ ಪ್ರಭುದೇವರು ಶಿವಾನುಭವ ಮಂಟಪದಲ್ಲಿ ಬಸವಣ್ಣನವರು ಈ ಲೋಕಕ್ಕೆ ತೋರಿಸಿದ ದಿವ್ಯವಾದ ಮಾರ್ಗವನ್ನು ಕುರಿತು ಹೀಗೆ ತಿಳಿಸಿದರು—

"ತನುವ ಗೆಲಲರಿಯದೆ, ಮನವಗೆಲಲರಿಯದೆ, ಧನವ ಗೆಲಲರಿಯದೆ, ಭ್ರಮೆಗೊಂಡಿತ್ತು ಲೋಕವೆಲ್ಲವು. ತನು ದಾಸೋಹಕ್ಕೆ ಸವಿಸಿ, ಮನವ ಲಿಂಗಧ್ಯಾನದಲ್ಲಿ ಸವಿಸಿ, ಧನವ ಜಂಗಮದಲ್ಲಿ ಸವಿಸಿ, ಗೆಲಬಲ್ಲರೆ ಸಂಗನಬಸವಣ್ಣನಲ್ಲದೆ ಮತ್ತಾರನು ಕಾಣೆ. ಗುಹೇಶ್ವರ ನಿಮ್ಮ ಶರಣ ಸಂಗನಬಸವಣ್ಣಂಗೆ ನಮೋ ನಮೋ ಎನುತಿರ್ದೆನು."

ಮನುಷ್ಯನಿಗೆ ತನ್ನ ದೇಹವನ್ನು ಗೆಲ್ಲುವ ಎಂದರೆ ಸದುಪಯೋಗ ಮಾಡಿಕೊಳ್ಳುವ ರೀತಿಯೇ ಗೊತ್ತಿಲ್ಲ. ಅದನ್ನು ನಾನಾ ವಸ್ತ್ರಾಲಂಕಾರಗಳಿಂದ ಶೃಂಗರಿಸಿದರೆ ಅದರ ಪ್ರಯೋಜನವಾಯಿತೆ? ಅಥವಾ ಅನೇಕ ಬಲವರ್ಧನೆಯ ಪದಾರ್ಥಗಳಿಂದ ಅದನ್ನು ಮಿತಿಮೀರಿ ಬೆಳಿಸಿದರೆ ಅದರ ಪ್ರಯೋಜನವಾಯಿತೆ? ಇಲ್ಲವೇ ಅನೇಕ ವಿಷಯೋಪಭೋಗಗಳನ್ನು ಅದರಿಂದ ಹೊಂದಿದರೆ ಅದರ ಸದುಪಯೋಗವಾಯಿತೆ? ಇವೆಲ್ಲಾ ಪ್ರವೃತ್ತಿ ಮಾರ್ಗದವುಗಳೆಂದು ಕೆಲವು ಪಾರಮಾರ್ಥಿಗಳು ನಿರಾಕರಿಸಬಹುದು.

ಹಾಗಾದರೆ ಈ ದೇಹವನ್ನು ನಾನಾ ಉಗ್ರ ವ್ರತೋಪವಾಸಗಳಿಂದಲೂ ಜಪತಪಗಳಿಂದಲೂ ಕ್ಷೀಣಗೊಳಿಸಿದರೆ ಇದರ ಸದುಪಯೋಗಮಾಡಿಕೊಂಡಂತಾಯಿತೆ ? ಪಾರಮಾರ್ಥಿಗಳ ಈ ವಿಚಾರಸರಣಿಯಂತೆ ನಡೆದರೆ ದೇಹವನ್ನು ಗೆದ್ದಂತಾಯಿತೆ ? ದೇಹವನ್ನು ಬಲಿಸಿದರೂ ಅದನ್ನು ಗೆದ್ದಂತಾಗಲಿಲ್ಲ. ಅಥವಾ ಕ್ಷೀಣಗೊಳಿಸಿದರೂ ಅದನ್ನು ಗೆದ್ದಂತಾಗಲಿಲ್ಲ. ದೇಹವನ್ನು ಗೆಡೆಯುವ ರೀತಿಯು ಗೊತ್ತಿಲ್ಲದ ಈ ಜಗತ್ತಿಗೆ ಅದನ್ನು ದಾಸ ಭಾವದಿಂದ ಶಿವ ಸಮಾಜದ ಸೇವೆಗೆ ಸವಿಸಬೇಕೆಂದೂ ಅದೇ ದೇಹವನ್ನು ಗೆಲ್ಲುವ ಎಂದರೆ ಸದುಪಯೋಗಮಾಡಿಕೊಳ್ಳುವ ರೀತಿಯೆಂದೂ ಬಸವಣ್ಣನವರು ತೋರಿಸಿಕೊಟ್ಟರು.

ಯಾರು ತಮ್ಮ ದೇಹವನ್ನು ಲೋಕಸೇವೆಗಾಗಿಯೇ ಸವಿಸುತ್ತಾರೆಯೋ ಅವರ ದೇಹವೇ ನಿಜವಾದ ದೇಹ. ಪವಿತ್ರ ದೇಹ. ಪೂಜ್ಯ ದೇಹ. ಅದೇ ಕೈಲಾಸ. ಅದೇ ಸುಂದರ ಕಾಯ. ಅದರ ದರ್ಶನಕ್ಕಾಗಿ ಪ್ರಪಂಚವೇ ಹಂಬಲಿಸುತ್ತದೆ.

ಮನಸ್ಸನ್ನು ಗೆದೆಯಬೇಕೆಂದು ಅನೇಕ ಉಗ್ರ ವ್ರತೋಪವಾಸಗಳನ್ನು ಮಾಡಲಿಲ್ಲ. ಅಥವಾ ಗುಡ್ಡ ಗವಿಗಳಲ್ಲಿ ಹೋಗಿ ವಾಸಮಾಡಲಿಲ್ಲ. ಲಿಂಗ ದೇವನಲ್ಲಿ ಮನಸ್ಸನ್ನಿಟ್ಟು ಪ್ರಪಂಚದಲ್ಲಿ ವಾಸವಾಗಿದ್ದೇ ಅದನ್ನು ಬಸವಣ್ಣನು ಗೆದ್ದನು. ಧನವನ್ನಾದರೋ ಸರ್ವ ಜನಗಳ ಉಪಕಾರಾರ್ಥವಾಗಿಯೇ ಸಂಚರಿಸುತ್ತಿರುವ ಜಂಗಮಮೂರ್ತಿಗಳಿಗೆ ಸಮರ್ಪಿಸಿ ಅದರ ಸದುಪಯೋಗ ಮಾಡುವ ರೀತಿಯನ್ನು ತೋರಿಸಿದನು.

ಅನೇಕರು ಗುಡಿಗುಂಡಾರಗಳನ್ನು ಕಟ್ಟಲಿಕ್ಕೋ, ತೀರ್ಥಯಾತ್ರೆಗಳನ್ನು ಮಾಡಲಿಕ್ಕೋ, ಹಣವನ್ನು ವೆಚ್ಚಮಾಡಿದರೆ ಅದರ ಸದುಪಯೋಗವಾಯಿತೆಂದು ತಿಳಿಯುತ್ತಾರೆ. ಧನವನ್ನು ಗೆಲ್ಲುವ ರೀತಿಯು ಅದಲ್ಲ. ತನ್ನಲ್ಲಿ ಧನವಿದೆಯೆಂದು ಅದನ್ನು ವಿಷಯೋಪಭೋಗಗಳಿಗೆ ವೆಚ್ಚಮಾಡುವುದಂತೂ ನಿಂದ್ಯವೇ ಸರಿ.

ಪ್ರಾಣಿಗಳ ದೇಹವೇ ದೇವಾಲಯು. ಆ ದೇವಾಲಯದಲ್ಲಿಯ ಪ್ರಾಣವೇ ದೇವರು. ಜೀವಿಗಳ ಉದ್ಧಾರಕ್ಕಾಗಿಯೇ ಈ ಲೋಕದಲ್ಲಿ ಸಂಚರಿಸುತ್ತಿರುವ ಜಂಗಮ ಮೂರ್ತಿಗಳಿಗೆ ತಾನು ದುಡಿದ ಧನವನ್ನು ಸಮರ್ಪಿಸಿದರೆ ಆ ಹಣವು ಅವರಿಂದ ಜನಗಳ ಹಿತಾರ್ಥವಾಗಿ ಹಂಚಲ್ಪಡುತ್ತದೆ. ಆಗ ಧನವನ್ನು ಗೆದ್ದಂತಾಯಿತು. ಸಮುದ್ರದ ನೀರನ್ನು ಮೇಘಗಳು ಭೂಮಿಯಮೇಲೆ ತಂದು ಹಾಕಿ ಪ್ರಾಣಿಗಳನ್ನು ಬದುಕಿಸುವಂತೆ ಧನಿಕನ ಧನವನ್ನು ಲೋಕಸೇವೆಯ ಜಂಗಮರು ತೆಗೆದುಕೊಂಡು ಬಂದು ಜನಗಳ ಉದ್ಧಾರಕ್ಕಾಗಿ ವಿನಿಯೋಗಿಸುತ್ತಾರೆ.

ಅದಕಾರಣ ಜಗತ್ತಿಗೆ ಈ ಮೂರು ರೀತಿಗಳನ್ನು ತಿಳಿಸಿದ ಬಸವಣ್ಣನಿಗೆ ಸಮಾನರು ಇನ್ನಾರಿದ್ದಾರೆ ? ಅಂತೆಯೇ ಆತನಿಗೆ ನಾನು ಪುನಃ ಪುನಃ ವಂದಿಸುತ್ತೇನೆ.

## ಪಾರಮಾರ್ಥಿಕ "ಡೈರಿ"

ಶ್ರೀ. ಶಿವ ಚಿದಂಬರಾಯ ನಮಃ

ಶ್ರೀಗುರು ಬಸವಲಿಂಗಾಯ ನಮಃ

(೫೮. ೯ ಬ. ೩೦ ಮಂಗಳ. ೧೨-೧-೩೭.)

ನಿನ್ನಿನ ದಿವಸ ಈರ್ವರು ಪ್ರತಿಷ್ಠರು ಕೈಲಾಸವಾಸಿಯಾದ್ದರಿಂದ ಅವರವರ ಮನೆಗೆ ಮಾತಾಡಿಸಲಿಕ್ಕೆ ಪೋದದ್ದು—

ಅರ್ಜುನನು ಘಾಬರಿಯಾಗಿ ವಿರಾಟ್ ಸ್ವರೂಪವನ್ನು ನೋಡುತ್ತ ಭಗವಂತನಿಗೆ ಅಯ್ಯಾ! ಈ ಅಗಮ್ಯ ಸ್ವರೂಪದ ನೀನಾರೆಂದು ಕೇಳಲು 'ನಾನೇ ಮಹಾಕಾಲನು ಎಲ್ಲರನ್ನೂ ಗ್ರಾಸಿಸಲಿಕ್ಕೆ ಪ್ರಕಟವಾಗಿರುವೆನು.' ಎಂದನು. ಸೂಕ್ಷ್ಮರೀತಿಯಿಂದ ವಿಚಾರ ಮಾಡಿದರೆ ಅರ್ಜುನನಿಗೆ ತೋರಿದ ಮಹಾಕಾಲನೇ ಸದಾ ತೋರೀ ತೋರದಂತೆ ತನ್ನ ಕಾಯಕ ನಡೆಸಿಯೇ ಇರುವನು.

ತ್ರಿಪದಿ॥ ಮಹಾಕಾಲನು ತೋರಿತಾ ತೋರದಿಹನು।
ಮಹಾದೇವನ ನಂಬಿ ತಾ ದಾಸನಿಹನು ॥೧೯॥

× × ×

ಶ್ರೀ. ಶಿವ ಚಿದಂಬರಾಯನಮಃ

ಶ್ರೀಗುರು ಬಸವಲಿಂಗಾಯ ನಮಃ

(೫೮, ೧೦ ಶು. ೧೪ ಬುಧ. ೧೩-೧-೩೭.)

ನಂಬು ನಂಬೆಲೆ ಮನವೆ ಹಂಬಲಿಸದಿರು ಬಂದೆ। ನಂಬುಗೆಯೆ ಕಾರಣವು ಸಾಂಬನೊಲಿವುದಕೆ [ಶ್ರೀ ಸಪ್ಪಣ್ಣ ಶಿವಯೋಗಿ]

ತ್ರಿ:— ನಂಬಿ ಕೆಟ್ಟವರಿಲ್ಲ. ಕುಂಭಿನಿಯೊಳು ಹಿಂದೆ।
ಸಾಂಬನಾ ದಯವು ಅಬಾಧಿತವಿರಲು
ನಂಬು ಹಂಬಲವೆ? ದಾಸಾರ್ಯ ॥೨೦॥

ನಾನೂ ಬ್ರಹ್ಮ ನೀನೂ ಬ್ರಹ್ಮ ಇನ್ನೇನದೆ ಜಪತಪವೇತಕ್ಕೆ? ಎಂದು ನಾನು ಹೇಳಿದ್ದರೆ ವಾಗಾದ್ವೈತಿಗಳು ತಲೆದೂಗುತ್ತಿದ್ದರೋ ಏನೋ! ಆಗಲಿ ಇಂಥ ಜನರಿಂದ ಅಗಬೇಕಾದ್ದೇನು ಬಸವಲಿಂಗ! ಸರ್ವಜ್ಞ ಉಕ್ತಿಯಂತೆ—

ಸತ್ತಂತೆ ಇರುಯೆಂದಡೆತ್ತಣ ಭಯವಯ್ಯ।
ಕತ್ತೆ ಮಾನವರು ತಿಳಿಯರು ಇದು ಮಹಾ।
ತತ್ವದ ನುಡಿಯು ಸರ್ವಜ್ಞ ॥೧॥

ಪರಮಾತ್ಮನ ಮುಂದೆ ನಾವು ಕೂಸುಗಳು ಆ ಸ್ಥಿತಿಯಲ್ಲಿರುವದೇ ಒಳಿತಲ್ಲವೆ?

ತ್ರಿ:— ತೊಟ್ಟಿಲ ಕೂಸಿನ ನಡಿ ಇಟ್ಟು ಪಡಿ ಸುಖವನ್ನು।
ಕೆಟ್ಟ ಮನಸಿಂಗೆ ಒಮ್ಮೆಲೇ ವಿಶ್ವದಾ।
ಪಟ್ಟ ಬೇಕೆಂದ ದಾಸಾರ್ಯ ॥೨೧॥

## ಹ ಳ್ಳಿ ಕೇ ರಿ .

——:೦:——

ಇಲ್ಲಿಯ ವೀರಶೈವ ತರುಣಸಂಘದ ಭಜನಾ ಸಂಘಕ್ಕೆ ಶ್ರೀ. ಶೀಲವಂತರ ಮಹಂತಪ್ಪನವರು ಸಿಂಗ್ವಾಲೂರಿಗೆ ಆಮಂತ್ರಣ ಕೊಟ್ಟ ಪ್ರಕಾರ ಅಲ್ಲಿಯ ಶ್ರೀ. ವೀರಭದ್ರೇಶ್ವರ ಗುಡಿಯಲ್ಲಿ ಭಜನೆ ಮಾಡಲು ಅವರು ಕೊಟ್ಟ ಮೂರು ರೂ. ಗಳನ್ನು ಮತ್ತು ಅದೇ ಸ್ಥಳಕ್ಕೆ ಶ್ರೀ. ನಾಗಯ್ಯನವರು ಮುರಕುಂಬಿ ಮಠ ಮಾಸ್ತರ ಇವರು ಆಮಂತ್ರಣ ಕೊಟ್ಟ ಪ್ರಕಾರ ಅಲ್ಲಿಗೆ ಹೋಗಿ ಭಜನೆ ನಡೆಯಿಸಲು ಅವರು ಕೊಟ್ಟ ಬೆಳ್ಳಿಯ ಪದಕವನ್ನು ಸಂಘದವರು ಕೃತಜ್ಞತಾಪೂರ್ವಕ ಸ್ವೀಕರಿಸಿದ್ದಾರೆ.

ಮಾಳೇ ಕೊಪ್ಪದ ದೈವದವರೂ ತಮ್ಮಲ್ಲಿಯ ಭಜನಾ ಸಪ್ತಾಹಕ್ಕೆ ಈ ಭಜನಾ ಸಂಘದವರನ್ನು ಕರೆಯಿಸಿ ವೀರಶೈವ ತರುಣ ಸಂಘಕ್ಕೆ ೨ ರೂ. ಗಳನ್ನು ಕಾಣಿಕೆಯಾಗಿ ಕೊಟ್ಟಿದ್ದಾರೆ. ಇದಕ್ಕೂ ಸಂಘದವರು ಬಹಳ ಆಭಾರಿಯಾಗಿದ್ದಾರೆ.

ಕಾರ್ಯದರ್ಶಿ.

## ಪುಣೆಯಲ್ಲಿ ಸಮಾರಂಭ.

ಪುಣೆಯಲ್ಲಿ ಕಳೆದ ೨೩ ನೆಯ ತಾರೀಖಿನ ದಿವಸ ಮುಂಬೈ ಪ್ರಾಂತಿಕ ಶಾಸನಮಂಡಲಗಳಿಗೆ ಆರಿಸಿಬಂದ ವೀರಶೈವ ಸಭಾಸದರಿಗೆ ಪುಣೆ ವೀರಶೈವ ಸಮಾಜದ ಪರವಾಗಿ ಸನ್ಮಾನವನ್ನು ಮಾಡುವ ಸಮಾರಂಭವು ಅಲ್ಲಿಯ ಪ್ರಸಿದ್ಧ ನಾಗರಿಕರಾದ ಶ್ರೀ. ಅಯ್ಯಾಸಾಹೇಬ ಮಾನೋಳಕರರ ಅಧ್ಯಕ್ಷತೆಯಲ್ಲಿ ಜರುಗಿತು.

ಈ ಸಮಾರಂಭಕ್ಕೆ ಸೌ|| ಪಾಟೀಲ ನಾಗಮ್ಮನವರು, ಶ್ರೀ. ಕೆ. ಪಾಟೀಲರು, ಶ್ರೀ. ಎಂ. ಪಿ. ಪಾಟೀಲರು, ಶ್ರೀ. ನೆಸ್ವಿಯವರು, ಶ್ರೀ. ನಲವಡಿಯವರು, ಶ್ರೀ. ಸುಳ್ಳದ ದೇಸಾಯರು, ಶ್ರೀ. ತಲ್ಲೂರು ದೇಸಾಯರು, ಶ್ರೀ. ಕೊಣ್ಣೂರು ದೇಸಾಯರು, ಶ್ರೀ. ಎಂ. ಆರ್. ಪಾಟೀಲ, ಶ್ರೀ. ಕಲ್ಯಾಣಿ ಈ ಸಭಾಸದರು ಬಂದಿದ್ದರು. ಮಹಾರಾಷ್ಟ್ರದ ವೀರಶೈವರಲ್ಲಿ ಶಿಕ್ಷಣ ಪ್ರಸಾರವಾಗಬೇಕೆಂದು ಕೆಲವರು ಸೂಚಿಸಿದರು.

## ಗುಡೂರು.

ಇಲ್ಲಿ ಶ್ರೀ. ನಾಲವತ್ವಾಡ ಶಿವಶರಣರ ಪುರಾಣದ ಉಪದೇಶ ಕಾರ್ಯವು ಶ್ರಾವಣ ಶು|| ೩ ಇಂದ ನಡೆದಿದೆ. ಶ್ರವಣಕ್ಕೆ ೨-೩ ನೂರು ಜನರು ಕೂಡುತ್ತಿದ್ದಾರೆ.

ತಾ. ೨೨ ನೆಯ ದಿವಸ ಇಲ್ಲಿ ಪರಮ ಪೂಜ್ಯ ಶ್ರೀ. ಕೂರ್ಮಾಚಾರ್ಯರು ಗಲಗಲಿ :ಇವರು ಧರ್ಮ ಮತ್ತು ಖಾದಿ ಇವುಗಳ ಬಗ್ಗೆ ಬಹು ಪರಿಣಾಮಕಾರಿಯಾದ ಭಾಷಣಮಾಡಿದರು. ಅದೇ ದಿನ ಮಳೆಯು ಚನ್ನಾಗಿ ಆದದ್ದರಿಂದ ಜನರಿಗೆ ವಿಶೇಷ ಸಂತೋಷವಾಯಿತು.

ಹುನಗುಂದ ತಾಲೂಕು ಕಾಂಗ್ರೆಸ್ ಕಮಿಟಿ ಅಧ್ಯಕ್ಷರಾದ ಶ್ರೀ. ಬಲೂಟಗಿ ಬಸವಶೆಟ್ಟೆಪ್ಪನವರು ತಾ. ೨೪ ನೆಯ ದಿನ ಖಾದಿಯ ಬಗ್ಗೆ ಮತ್ತು ಶ್ರೀ. ಕಣಬೂರ ವಕೀಲರು ರೈತರ ಕರ್ತವ್ಯದ ಬಗ್ಗೆ ಮಹತ್ವದ ಭಾಷಣಮಾಡಿದರು.

ಅಂದಾನಪ್ಪ ಕುಪಸ್ತ.

## ಬ್ಯಾಡಗಿ.

ಇಲ್ಲಿ ಮಳೆ ಇದ್ದಿಲ್ಲ. ಅದಕ್ಕಾಗಿ ಅನೇಕ ಜನರು ಶ್ರೀ. ಮುರಘೇಂದ್ರ ಸ್ವಾಮಿ ಮಠದಲ್ಲಿಯು ಶ್ರೀ ವೀರಭದ್ರ ದೇವಸ್ಥಾನದಲ್ಲಿಯು ಮತ್ತು ಶ್ರೀ ಮಾರುತಿ ಗುಡಿಯಲ್ಲಿ ಭಾದ್ರಪದ ಶು. ೧೫ ಇಂದ ದೇವರ ಭಜನೆಯನ್ನು ಪ್ರಾರಂಭಿಸಿದರು. ಪರಮಾತ್ಮನ ಕೃಪೆಯಿಂದ ಭಾದ್ರಪದ ಬಹುಳ ೪ ದಿನ ವಿಶೇಷ ಮಳೆಯಾಗಿ ಅತ್ಯಾನಂದವಾಯಿತು.

ಇಲ್ಲಿ ಒಂದು ಗೋರಕ್ಷಣ ಸಂಸ್ಥೆ ಸ್ಥಾಪನೆಯಾಗಿ ೨೦ ವರುಷಗಳಾಗಿವೆ. ಈಗ ಅದರ ಕೆಲಸ ಒಳ್ಳೇ ರೀತಿಯಿಂದ ನಡೆದಿದೆ. ಶ್ರೀ ಮುರಘರಾಜೇಂದ್ರ ಪೇಟೆಂಟಿನ ಹತ್ತಿರ ಬೈಲು ಪ್ರದೇಶಕ್ಕೆ ಈಗ ಈ ಸಂಸ್ಥೆಯನ್ನು ತಂದು ಅಲ್ಲಿ ಗೋರಕ್ಷಣೆ ಕಾರ್ಯ ನಡೆಸಿದ್ದಾರೆ. ಹೀಗೆ ಎಲ್ಲಾ ಹಳ್ಳಿ ಗ್ರಾಮ ಮತ್ತು ಪಟ್ಟಣಗಳಲ್ಲಿ ಗೋರಕ್ಷಣೆಯ ಕಾರ್ಯ ನಡೆಯಬೇಕು.

ಓರ್ವ ಹಿತೈಷಿ.

## ಕುರಿಕೋಟೆ.

ನಮ್ಮಲ್ಲಿ ತಾ. ೩೧-೮-೩೭ ನೆಯ ದಿವಸ ಚಿಂಚನಸೂರ ಕಲ್ಲು ಮಠದ ಶ್ರೀ ಸಿದ್ಧಮಲ್ಲ ಶಿವಯೋಗಿಗಳ ಅಧ್ಯಕ್ಷತೆಯಲ್ಲಿ ಸಭೆಸೇರಿ ಶ್ರೀ ಮದ್ವೀರಶೈವ ತರುಣ ಸಂಘ ಸ್ಥಾಪಿಸಲ್ಪಟ್ಟಿತು. ಮಹಾಗಾವ ತರುಣ ಸಂಘದಿಂದ ಹತ್ತು ಹದಿನೈದು ಜನರು ಆಗಮಿಸಿದ್ದರು. ಗುಲಬರ್ಗಾ ತರುಣ ಸಂಘದಿಂದ ಶ್ರೀಮಾನ್ ಶರಣಯ್ಯನವರು ಆಗಮಿಸಿ ಇಂದಿನ ಕಲ್ಯಾಣದ ಸ್ಥಿತಿಯನ್ನು ಹಿಂದಿನ ಕಲ್ಯಾಣದ ವೈಭವವನ್ನು ಮತ್ತು ಇಂದಿನ ಸಮಾಜದ ಹೀನಾವಸ್ಥೆಯನ್ನು ಮತ್ತು ನಾವು ಮುಂದೆ ಮಾಡಬೇಕಾದ ಮಹಾಕಾರ್ಯಗಳನ್ನು ಬಹು ಚೆನ್ನಾಗಿ ಉಪದೇಶಮಾಡಿದರು. ಆಮೇಲೆ ಬಸವ ಮಹಾತ್ಮನ ಜಯಘೋಷದೊಡನೆ ಸಭೆಯು ವಿಸರ್ಜಿಸಲ್ಪಟ್ಟಿತು.

ಸೆಕ್ರೆಟರಿ.

## ಯಾತಗಿರಿ.

ಯಾತಗಿರಿಯಲ್ಲಿ ಪ್ರತಿ ವರ್ಷದಂತೆ ಈ ವರುಷವಾದರೂ ಭಾ. ಶು. ೪ ಇಂದ ೧೪ ರ ವರೆಗೆ "ಬ್ರಾಹ್ಮಣ ಸಮಾಜ" ಮತ್ತು "ವ್ಯಾಪಾರಿ ಮಂಡಲ" ಇವರಿಂದ ಗಜಾನನ ಮಹೋತ್ಸವಗಳು ಬಹು ವಿಜೃಂಭಣೆಯಿಂದ ಜರುಗಿದವು. ಪ್ರತಿ ದಿವಸ ಕೀರ್ತನ ಪ್ರವಚನ ಮತ್ತು ಭಜನೆಗಳು ಜರುಗುತ್ತಿದ್ದವು. ಕಡೆ ದಿವಸ ವಿಸರ್ಜನ ಮಹೋತ್ಸವದ ಎರಡೂ ಮೆರವಣಿಗೆಗಳು ಕೂಡಿಯೆ ನಡೆದಿದ್ದವು. ಅದನ್ನು ನೋಡಿದರೆ ಈ ಮುಂಚೆ ಇಲ್ಲಿ ಅಖಿಲ ಹಿಂದುಗಳಿಂದ ಜರಗುತ್ತಿದ್ದ ಸಾರ್ವಜನಿಕ ಗಜಾನನ ಮಹೋತ್ಸವದ ನೆನಪಾಗಿ ಅಂತಹ ಕಾಲವು ಪುನಃ ಒದಗಲೆಂದು ಗಣೇಶನನ್ನು ಬೇಡಿಕೊಳ್ಳುವ ಓರ್ವ ಹಿಂದು ಸಮಾಜ ಸೇವಕ.

## ತೆಲಸಂಗ.

ತೆಲಸಂಗ ಸದ್ಭಕ್ತ ಮಂಡಳಿಯ ಇಚ್ಛೆಯ ಪ್ರಕಾರ ಹಿರೇಮಠದ ಸ್ವಾಮಿಗಳು 'ರೇವಣಸಿದ್ಧೇಶ್ವರ' ಪುರಾಣವನ್ನು ಪ್ರಾರಂಭಮಾಡಿದ್ದರು. ಸುತ್ತು ಮುತ್ತಲಿನ ಜನರೂ ಊರ ಜನರೂ ಶ್ರವಣೇಚ್ಛೆಯಿಂದ ಬಹಳ ನೆರೆಯುತ್ತಿದ್ದರು. ಸ್ವಾಮಿಗಳವರ ಸದ್ಬೋಧೆಯಿಂದ ಜನರಲ್ಲಿ ಧರ್ಮಜಾಗೃತಿಯಾಗುತ್ತಿದೆ.

ತಾ. ೨೦-೯-೩೭ ನೆ ಸೋಮವಾರ ಮಹಾ ಗಣಾರಾಧನೆಯು ನಡೆದು ನಂತರ ಜಗದ್ಗುರು ರೇಣುಕಾಚಾರ್ಯರ ಜಯಘೋಷದೊಡನೆ ಸಭಾಕಾರ್ಯವು ಮುಗಿದು ಪನಿವಾರ ಹಂಚಲ್ಪಟ್ಟಿತು.

ಓರ್ವ ಸ್ಥಳೀಕ.

## "ವಿಮಾ ವಾಣಿಜ್ಯ" ಸಾಹಿತ್ಯ ಸ್ಪರ್ಧೆ.

ಈ ಮೇಲ್ಕಂಡ ಸ್ಪರ್ಧೆಗೆ ಕತೆ, ಕವನಗಳನ್ನು (ವಿಮಾ ವಾಣಿಜ್ಯ, ಕುಸೀದ—Banking ಈ ವಿಷಯಗಳಲ್ಲಿ) ಕಳುಹಿಸಲು ಗಣೇಶನ ಚತುರ್ಥಿಯು ಕೊನೆಯ ದಿನವೆಂದು ಗೊತ್ತುಮಾಡಲಾಗಿತ್ತು. ಆದರೆ ಸ್ಪರ್ಧೆಯಲ್ಲಿ ಭಾಗವಹಿಸಬೇಕೆಂದಿರುವ ಹಲವರು ಅವಧಿಯನ್ನು ಮುಂದುವರಿಸಬೇಕೆಂದು ಕೋರಿರುವುದರಿಂದ ೧೯೩೮ ನೇ ಜನವರಿ ೧ ನೇ ತಾರೀಖಿಗೆ ಅವಧಿ ಹೆಚ್ಚಿಸಿದೆ. ಕನ್ನಡನಾಡಿನ ಲೇಖಕ ಲೇಖಕಿಯರೆಲ್ಲರೂ ಈ ಸ್ಪರ್ಧೆಯಲ್ಲಿ ಭಾಗವಹಿಸಬೇಕೆಂದು ಬಿನ್ನವಿಸುವೆವು.

—ಸಂಪಾದಕ.

## ಆಯುರ್ವೇದ ವೈದ್ಯಕಿಯ ಹಿತಚಿಂತಕರಿಗೆ ವಿನಂತಿ.

ಸದ್ಯಕ್ಕೆ ಶಿಕ್ಷಣ ಪಡೆದು ನಿರುದ್ಯೋಗಿಯಾಗಿರುವ ವಿದ್ಯಾರ್ಥಿಗಳಿಗೆ ಉಪಜೀವನಕ್ಕೆ ಸಾಧನವಾಗಬೇಕು. ಮತ್ತು ಅವರು ಹಳ್ಳಿಗಳಲ್ಲಿಯ ಬಡ ರೋಗಿಗಳ ಆರೋಗ್ಯವನ್ನು ಕಾಪಾಡಲಿಕ್ಕೆ ಮತ್ತು ಗ್ರಾಮ ಸುಧಾರಣೆಯ ಕಾರ್ಯಕ್ಕೆ ಉಪಯೋಗವಾಗಬೇಕೆಂಬ ಹೇತುವಿನಿಂದ ತಾ. ೨೮-೬-೩೩ ಇಸವಿಯಿಂದ ಬೆಳಗಾವಿಯಲ್ಲಿ ಕರ್ನಾಟಕ ಆಯುರ್ವೇದ ವಿದ್ಯಾಪೀಠವು ಸ್ಥಾಪನೆಯಾದದ್ದು ಈಗ್ಗೆ ತಮ್ಮೆಲ್ಲರಿಗೂ ಗೊತ್ತಾಗಿರಬಹುದು. ಅಂದಿನಿಂದ ಇಂದಿನ ವರೆಗೆ ಎಡೆಬಿಡದೆ ನಡೆದ ಪ್ರಯತ್ನದಿಂದ ವಿದ್ಯಾಪೀಠದ ಉಪಯುಕ್ತತೆಯು ಜನರಿಗೆ ಮನವರಿಕೆಯಾದದ್ದರ ಪರಿಣಾಮವೇ, ಅದರ ಶಾಖೆಗಳು ನಿಪ್ಪಾಣಿ ಮತ್ತು ವಿಜಾಪುರದಲ್ಲಿ ಹೊರಬಿದ್ದು ಈಗಾಗಲೇ ಈ ವಿದ್ಯಾಪೀಠದಿಂದ ತಯಾರಾದ ಸುಮಾರು ೨೫ ವಿದ್ಯಾರ್ಥಿಗಳು ಸ್ವದೇಶಿ, ಪರೋಪಕಾರಿ ಮತ್ತು ಸ್ವತಂತ್ರ ಉದ್ಯೋಗಮಾಡಿ ತಮ್ಮ ಉಪಜೀವಿಕೆಯನ್ನು ಸಾಗಿಸುತ್ತಿದ್ದಲ್ಲದೆ ಸದ್ಯಕ್ಕೆ ಸುಮಾರು ೫೦ ವಿದ್ಯಾರ್ಥಿಗಳು ಆರ್ಯ ವೈದ್ಯಕೀಯ ಶಿಕ್ಷಣವನ್ನು ಹೊಂದುತ್ತಿದ್ದಾರೆ.

ಈ ವಿದ್ಯಾಪೀಠದ ಹೇತುವನ್ನು ಮುಂದೆ ಸಾಗಿಸಲಿಕ್ಕೆ ಒಂದು ಸ್ವತಂತ್ರ ಸಂಸ್ಥೆಯು ( ಕರ್ನಾಟಕ ಆಯುರ್ವೇದ ವಿದ್ಯಾಪೀಠ ಸೊಸಾಯಿಟಿ ಬೆಳಗಾವ ) ಈಗ್ಗೆ ನಿರ್ಮಾಣವಾಗಿದ್ದು ಸರಕಾರದಲ್ಲಿ ರಜಿಷ್ಟರವಾಗಿರುತ್ತದೆ. ಇಷ್ಟೇ ಅಲ್ಲ; ಅದರ ಸ್ಥಿರತೆಗಾಗಿ ಬೆಳಗಾವಿ ಮುನಸಿಪಾಲಟಿ ಹದ್ದಿನೊಳಗೆ ಖಾಸಭಾಗದಲ್ಲಿ ಹೊಸ ಒಂದು ಇಮಾರತಿಯನ್ನು ಕೊಂಡುಕೊಂಡಿದ್ದು ಅದರಲ್ಲಿ ವ್ಯಾಪಾರಿ ದೃಷ್ಟಿಯಿಂದ ಅಲ್ಲ. ಆದರೆ ಶಾಸ್ತ್ರೀಯ ದೃಷ್ಟಿಯಿಂದ ಒಳ್ಳೆ ಗುಣಕಾರಿಯಾಗುವಂಥ ಆರ್ಯ ವೈದ್ಯಕಿಯ ಔಷಧವನ್ನು ತಯಾರಿಸಿ ಮುನಸಿಪಾಲಟಿ, ಲೋಕಲ್ ಬೋರ್ಡ ಮುಂತಾದ ಸಂಸ್ಥೆಗಳ ಮುಖಾಂತರ ನಡೆದಿರುವ ಧರ್ಮಾರ್ಥ ದವಾಖಾನೆಗಳ. ಉಪಯೋಗಕ್ಕಾಗಿ ಅವನ್ನು ಪೂರೈಸಲಿಕ್ಕೆ ೧೯೩೩ ನೆ ಇಸ್ವಿಯಿಂದ ವಿದ್ಯಾಪೀಠವು ಪ್ರಯೋಗದ ಸುಲವಾಗಿ ನಡೆಸಿದ್ದರ ಶಾಲೆಯ ಕಾರ್ಯವನ್ನು ಬೆಳೆಯಿಸುವ ಉದ್ಯೋಗವನ್ನು ಈಗ ಈ ಸಂಸ್ಥೆಯು ಕೈಕೊಂಡಿರುತ್ತದೆ.

ಆದ್ದರಿಂದ ಆರ್ಯ ವೈದ್ಯಕಿಯ ಹಿತಚಿಂತಕರಿಗೆ ವಿನಂತಿಮಾಡಿಕೊಳ್ಳುವದೇನೆಂದರೆ— ಯಾರಿಗಾದರೂ ಖಾತ್ರಿಪೂರ್ವಕ ಗುಣಕಾರಿಯೆಂದು ಅನುಭವ ಸಿದ್ಧವಾದ ಔಷಧಗಳನ್ನು ತಯಾರಿಸುವ ಕ್ರಮವು ಗೊತ್ತಿದ್ದರೆ ಅವರು ದಯಮಾಡಿ ಆ ಕ್ರಮಗಳನ್ನು ಕೆಳಗಿನ ವಿಳಾಸಕ್ಕೆ ಪತ್ರದ್ವಾರದಿಂದ ಅಥವಾ ಸಮಕ್ಷಮ ತಿಳಿಸಿದರೆ ಆರ್ಯ ವೈದ್ಯಕಿಯ ಶಾಸ್ತ್ರವನ್ನು ಪುನರುಜ್ಜೀವನ ಮಾಡಿದ ಆನಂದವು ಅವರಿಗೆ ಉಪಭೋಗಿಸಲಿಕ್ಕೆ ಸಿಗದೆ ಇರಲಾರದು.

ನಮ್ಮಲ್ಲಿ ಎಷ್ಟೋ ಜನರಿಗೆ ಅದ್ಭುತ ಚಮತ್ಕಾರವೆನಿಸುವಂಥ ಔಷಧಗಳು ಗೊತ್ತಿದ್ದು ಅವು ಅವರ ಸಂಗಡವೇ ಮಣ್ಣು ಮರೆಯಾಗಿ ಹೋಗುತ್ತಿರುತ್ತವೆ. ಈ ಅನರ್ಥವನ್ನು ತಪ್ಪಿಸಲಿಕ್ಕೆ ದಯಾಘನ ಪರಮಾತ್ಮನು ಯಾವತ್ತರಿಗೂ ಸುಬುದ್ಧಿಯನ್ನು ದಯಪಾಲಿಸಲೆಂದು ಬೇಡಿಕೊಳ್ಳುತ್ತೇನೆ!

ತಮ್ಮ ಕೃಪಾಭಿಲಾಷಿಯಾದ
ಬಸಪ್ಪ ಮಲ್ಲಪ್ಪಾ ಕಂಕಣವಾಡಿ
ಜನರಲ್ ಸೆಕ್ರೆಟರಿ, ಬೆಳಗಾವ.

## ಶರಣರ ನೀತಿ.

[ಶ್ರೀ. ವಿದ್ವಾನ್ ವೈ. ನಾಗೇಶ ಶಾಸ್ತ್ರಿಗಳವರು ಬೆಳಗಾವ-ಶಹಪುರದ ಶ್ರೀ ಗೊಂಬಿ ಮಠದಲ್ಲಿ ಮಾಡಿದ ವ್ಯಾಖ್ಯಾನದ ಮುಖ್ಯಾಂಶ]

“ಶರಣರ ನೀತಿಗಳು ಎಲ್ಲಾ ದೇಶಗಳ ನೀತಿಗಳ ತಳಹದಿಯಾಗಿವೆ. ಆದ್ದರಿಂದ ವೀರಶೈವ ಧರ್ಮವು ನೀತಿಯ ಬಲದಿಂದ ಜಗತ್ತಿನ ಆದರ್ಶಭೂತ ಧರ್ಮವಾಗಲಿಕ್ಕೆ ಎಳ್ಳಷ್ಟೂ ಅಡ್ಡಿಯಿಲ್ಲ. ವೀರಶೈವ ಧರ್ಮವು ಷಟಸ್ಥಲ ಪಂಚಾಚಾರ ಅಷ್ಟಾವರಣಗಳಿಂದ ನೀತಿಯನ್ನು ಬೋಧಿಸುತ್ತದೆ. ಇವುಗಳ ಬಗ್ಗೆ ಭಾಷಣಕಾರರು ಹೇಳಿದಷ್ಟು ಕೊಡಲಿಕ್ಕೆ ಅವಕಾಶವಿಲ್ಲ. ಪಂಚಾಚಾರ (೧) ಸದಾಚಾರ— ಮನುಷ್ಯನು ತನ್ನ ನಿತ್ಯದ ಉದ್ಯೋಗದಲ್ಲಿ ತೊಡಗಿರುವದರಲ್ಲಿಯೇ ಅವನ ಆಚಾರವು ಒಡೆದು ಕಾಣುವದು. ಅವನು ಏನು ಮಾಡದೆ ತನ್ನಷ್ಟಕ್ಕೆ ತಾನೇ ಒಂದು ಕಡೆಗೆ ಸುಮ್ಮನಿದ್ದರೆ ಅದು ಸದಾಚಾರವೆನಿಸಲಾಗದು. (೨) ಲಿಂಗಾಚಾರ— ಲಿಂಗಪೂಜೆಯೆಂದರೆ ಮೂರ್ತಿಪೂಜೆಯಲ್ಲ. ದೇವರು ಆಕಾರರಹಿತನು. ಎಲ್ಲ ಆತ್ಮಗಳ ಏಕೀಕರಣಕ್ಕೆಯೇ ದೇವರೆನ್ನಬಹುದು. ಆದ್ದರಿಂದ ಮನಸ್ಸನ್ನು ಏಕಾಗ್ರ ಚಿತ್ತದಲ್ಲಿರಿಸಬೇಕಾದರೆ ಲಿಂಗವು ಅತ್ಯವಶ್ಯವು. ಇದಲ್ಲದೆ ಬರೆ ಸಂಕೋಚ ಭಾವನೆಯಿಂದ ಏಕಾಗ್ರಚಿತ್ತವು ಲಭಿಸಲಾರದು. ಮನೋನಿಗ್ರಹವೇ ನೀತಿಯ ತಳಹದಿಯು. ಕಂಡ ದೇವರಿಗೆ ಕಂಡಕೂಡಲೆ ಕೈ ಮುಗಿಯುವದು ಮನೋನಿಗ್ರಹವಲ್ಲ. (೩) ಶಿವಾಚಾರ— ಶಿವಭಾವನೆ. ಅಂದರೆ ಶಿವನಲ್ಲಿ ಪೂಜ್ಯಭಾವನೆಯನ್ನಿಟ್ಟು ನಂಬುವದು. ಹೀಗೆ ಹೇಳಿದಾಕ್ಷಣವೇ ಅನ್ಯ ದೇವರನ್ನು ದೂಷಿಸುವುದೆಂತಲ್ಲ. ಅನೇಕ ದೇವರಲ್ಲಿ ನಂಬಿಗೆಯನ್ನಿಟ್ಟ ಮೇಲೆ ಅದು ಸ್ಥಿರವಾಗಿ ಉಳಿಯುವುನು ಅಶಕ್ಯ. ಮತ್ತು ಹಾಗೆ ಮಾಡುವದರಿಂದ ಸಮಾಜದಲ್ಲಿ ಐಕ್ಯತೆ ಉಳಿಯಲಾರದು. (೪) ಭೃತ್ಯಾಚಾರ— ಶಿವಭಕ್ತ-ಜಂಗಮರ ಕಾಯಕಯೋಗ, ಸಮಾಜಸೇವೆ ದೇಶ ಸೇವೆಗಳೆಲ್ಲಾ ಭೃತ್ಯಾಚಾರದಲ್ಲಿ ಬರುತ್ತವೆ. ದೇವ ಮತ್ತು ಭಕ್ತರ ನಡುವೆ ಯಜಮಾನ ಮತ್ತು ಸೇವಕನಂತೆ ಭಾವನೆಯಿರಬೇಕು. ಶರಣರು ನುಡಿದಂತೆ ನಡೆದು ತೋರಿಸಿದ್ದಾರೆ. ‘ಎನಗಿಂತ ಕಿರಿಯರಿಲ್ಲ. ಶಿವಭಕ್ತರಿಗಿಂತ ಹಿರಿಯರಿಲ್ಲ.’ ಎಂಬ ಶರಣರ ವಚನದಲ್ಲಿ ಅಮೂಲ್ಯ ತಥ್ಯಾಂಶವಿದೆ. (೫) ಗಣಾಚಾರ— ಇದು ಶಿವನಿಂದೆ ಮತ್ತು ಭಕ್ತನಿಂದೆ ಮಾಡುವವರಿಗೆ ತಕ್ಕ ಪ್ರಾಯಶ್ಚಿತ್ ಮಾಡುಯೆಂದು ಸಾರಿಹೇಳುವದು. ಆದರೆ ಇದು ದುರಾಭಿಮಾನವಲ್ಲ. ಸತ್ಯಕ್ಕೆ ತೊಡರುಬೀಳುವ ಸಂದರ್ಭದಲ್ಲಿ ಇದರ ಉಪಯೋಗ ಮಾಡಬಹುದು.

‘ಲಾಂಛನಕ್ಕೆ ಶರಣೆಂಬೆ, ಅವಗುಣಕ್ಕೆ ಛೀ ಎಂಬೆ’ ಎಂಬ ಬಸವಣ್ಣನವರ ಉಕ್ತಿಯಂತೆ ನಡೆಯುವುದೇ ಯೋಗ್ಯ. ಸಮಾಜದಲ್ಲಿದ್ದ ಅವಗುಣಗಳನ್ನು ಬಚ್ಚಿಡದೆ ಹೋಗಲಾಡಿಸಿ ಧರ್ಮೋದ್ಧಾರಮಾಡಬೇಕಲ್ಲದೆ ಧರ್ಮಾಂತರ ಅಥವಾ ಧರ್ಮಭ್ರಷ್ಟನಾಗಕೂಡದು. ಭವಿಗಳನ್ನು ನಾಶಮಾಡುವದು ಎಂದು ಹೇಳಿದೊಡನೆ ಅವರನ್ನು ದ್ವೇಷಿಸಿದಂತಲ್ಲ. ಆದರೆ ಅವರಲ್ಲಿದ್ದ ಅವಗುಣಗಳನ್ನು ಹೋಗಲಾಡಿಸಿ ಅವರನ್ನು ಕೃತಾರ್ಥರನ್ನಾಗಿ ಮಾಡು ಎಂಬ ಬೇಡಿಕೊಂಡಂತೆ.” ಓರ್ವ ಸಭಿಕ.

---

—ಚೀನ ದೇಶದ ಶಾಂಘಾಯ ಪಟ್ಟಣದಲ್ಲಿದ್ದ ೭೫೦ ಹಿಂದಿ ಜನರು ಈ ದೇಶಕ್ಕೆ ಬಂದರು. ಇವರಲ್ಲಿ ಪಂಜಾಬಿಗಳೇ ಹೆಚ್ಚಾಗಿದ್ದಾರೆ.

—ತ್ರಾವಣಕೋರ ಸಂಸ್ಥಾನದಲ್ಲಿ ಏಳು ಲಕ್ಷ ಆದಿಹಿಂದುಗಳು ಕ್ರಿಸ್ತಮತಕ್ಕೆ ಸೇರಿದ್ದಾರೆ.

## ನೂತನ ಲಿಂಗಧಾರಿಗಳ

### ಗಣಾರಾಧನೆ ಮಹೋತ್ಸವ ಕಂಪ್ಲಿ.

——:೦:——

ಆಸೇತು ಹಿಮಾಚಲ ಪರ್ಯಂತ ವ್ಯಾಪಿಸಿದ ವೀರಶೈವ ಮತವು ಅನ್ಯಮತದವರ ದಾಳಿಯಿಂದ ನ್ಯೂನತೆಯನ್ನು ಹೊಂದಿದಂಥ ಕಾಲಕ್ಕೆ ಜೀರ್ಣೋದ್ಧಾರ ಮಾಡಲು ೮೦೦ ವರುಷಗಳ ಹಿಂದೆ ಕರ್ನಾಟಕ ಸಾಮ್ರಾಜ್ಯದಲ್ಲಿ ನಂದೀಶ್ವರ ಪರಾವತಾರಿಯಾದ ಮಹಾತ್ಮಾ ಬಸವೇಶ್ವರನು ಅವತರಿಸಿ ಗುರು ಲಿಂಗ ಜಂಗಮ ದಾಸೋಹಿಯಾಗಿ ಮತ ಪ್ರಚಾರ ಕಾರ್ಯದಿಂದ ವೀರಶೈವ ಮತವು ಪ್ರಸಿದ್ಧಹೊಂದಿ ಉನ್ನತ ಶಿಖರವನ್ನೇರಿತ್ತು. ಅಲ್ಲಿಂದ ಇಲ್ಲಿಯವರಿಗೂ ನಮ್ಮ ಅನೇಕ ಗುರುಗಳು ಶ್ರೀ. ಬಸವೇಶ್ವರ ಸಾಂಪ್ರದಾಯವನ್ನು ಅನುಸರಿಸದೆ ಪತಿತರಾದವರನ್ನು ಲಿಂಗಧಾರಣ ಕಾರ್ಯದಿಂದ ಉದ್ಧರಿಸಲು ಪ್ರಯತ್ನಿಸದೆ ಬಿಟ್ಟದ್ದು ನಮ್ಮ ಮತೀಯರ ಉದಾಸೀನವೇ ಕಾರಣವೆಂದರೆ ತಪ್ಪಾಗದು. ನಮ್ಮ ಮತದಿಂದ ಹೊರಹೋಗುವ ಜನರನ್ನು ಸದ್ಬೋಧದಿಂದ ತಡೆಯುತ್ತಲೂ ನಮ್ಮ ಮತ ದೀಕ್ಷೆ ಹೊಂದಲು ಸಿದ್ಧರಿರುವ ಶುದ್ಧಾಚರಣೆಯವರಲ್ಲಿ ಮತಪ್ರಚಾರ ಮಾಡುವದು ಧರ್ಮಗುರುಗಳ ಮುಖ್ಯ ಕರ್ತವ್ಯವಾಗಿದೆ. ಅಂತೇ ಪೀಠಾಚಾರ್ಯರು ಬಸವೇಶ್ವರ ಸಾಂಪ್ರದಾಯವನ್ನು ಅನುಸರಿಸಿ ಕಾರ್ಯ ನಡಿಸಲು ನೇಮಿಸಿದ ಕನಕೇರಿ ಬೃಹನ್ಮಠದ ಸ್ಥಿರಪಟ್ಟಾಧ್ಯಕ್ಷ ಪಂಚಾಕ್ಷರ ಶಿವಾಚಾರ್ಯರು ಹುಲಿಹೈದರ ಮುಕ್ಕಾಮಿನಲ್ಲಿ ಆಯಾ ಪ್ರಾಂತದ ಮಠ ಮಹತ್ತು ದೈವದವರ ಸಮ್ಮತಿಯಿಂದ ಇದೇ ಕಳೆದ ಶ್ರಾವಣ ಬ|| ೧೨ ದಿನ ಐದಾರು ನೂರು ಪಾಕರಡ್ಡಿ ಸದಾಚಾರ ಜನಾಂಗದವರಿಗೆ ಶಿವ ದೀಕ್ಷಾ ಸಂಸ್ಕಾರದಿಂದ ಪುನೀತರನ್ನಾಗಿ ಮಾಡಿದರು. ಸದರಿಯವರಿಂದ ದೀಕ್ಷಿತರಾದ ಕಂಪ್ಲಿ ಪಾಕರಡ್ಡಿ ಆದಿಮನಿ ನಾಗಪ್ಪ, ದೊಡ್ಡಪ್ಪ, ವಿರುಪಣ್ಣ, ಗುಂಡೂರು ಬಸಪ್ಪ, ರುದ್ರಪ್ಪ, ಅಯ್ಯಪ್ಪ ಈ ಆರು ಜನರು ಕುಟುಂಬ ಸಹಿತವಾಗಿ ಕಂಪ್ಲಿ ಗ್ರಾಮದ ಮಠ ಮಹತ್ತ ದೈವದವರ ಸಮ್ಮತಿ ಮೇರೆಗೆ ಸಂಸ್ಕೃತ ಪಾಠ ಶಾಲಾದಲ್ಲಿ ಇದೇ ಭಾದ್ರಪದ ಶು|| ೧೧ ಗುರುವಾರ ಜರುಗಿಸಿದ ಮಹಾಗಣಾರಾಧನೆಯಲ್ಲಿ ಸಹಪಂಕ್ತಿ ಭೋಜನಾದಿ ಕಾರ್ಯಗಳು ಸುವಿಧಾನವಾಗಿ ನಡೆಯೋಣವಾಯಿತು. ತತ್ಪ್ರಯುಕ್ತ ವೀರಶೈವರು ಈ ಮತಕ್ಕೆ ಬರುವ ಸದಾಚಾರಿಗಳಾದ ಅಲಿಂಗಿಗಳನ್ನು ಲಿಂಗಧಾರಿಗಳನ್ನಾಗಿ ಮಾಡಿ ಮತಪ್ರಚಾರ ಮಾಡುವಿರೆಂದು ನಂಬಿರುತ್ತೇವೆ.

ಕಾರ್ಯದರ್ಶಿಗಳು.

(೧) ವೋಡ್ಯೊ ಕರಿಬಸಯ್ಯನವರು
(೨) ತಂಬ್ರಹಳ್ಳಿ ಗುರುಸಿದ್ಧಯ್ಯನವರು.
(೩) ಕಲ್ಗುಡಿ ಶಂಕರಪ್ಪನವರು
(೪) ಬಣಗಾರು ಗುಂಡಪ್ಪನವರು
(೫) ಕರಿ ಮಲ್ಲಿಕಾರ್ಜುನಪ್ಪನವರು

---

## ಲಚ್ಯಾಣ.

—೦೦೦—

ಪ್ರತಿವರ್ಷದ ಪದ್ಧತಿಯಂತೆ ಲಚ್ಯಾಣದ ಶ್ರೀ ಸಿದ್ಧಲಿಂಗ ಮಹಾರಾಜರ ಪುಣ್ಯತಿಥಿಯು ಇದೇ ಭಾದ್ರಪದ ವದ್ಯ ಅಷ್ಟಮಿ ಸೋಮವಾರ ದಿವಸ ನೈರಂತರ್ಯ ಭಜನೆಯಿಂದಲೂ ಭೂರಿ ಅನ್ನ ಸಂತರ್ಪಣೆಯಿಂದಲೂ ಶ್ರೀಗಳ ಅಡ್ಡಪಲ್ಲಕ್ಕಿ ಉತ್ಸವದಿಂದಲೂ ಒಳ್ಳೇ ವಿಜೃಂಭಣೆಯಿಂದ ಪೂರೈಸಲ್ಪಟ್ಟಿತು. ಕಡೆಗೆ ಪ್ರಚಂಡ ಸಭೆಯು ಜರುಗಿ ಕುಲಕರ್ಣಿ ಬಾಗಲಕೋಟೆ, ಶಂಕರಲಿಂಗ ಸಾಧು ಗದಗ, ಆದಮ ಸಾಹೇಬ ಮುಸಳಿ, ಅಣ್ಣಾರಾವ ಪಾಟೀಲ, ಬಾಬುರಾವ ಹಂಡಿ ಸೊಲ್ಲಾಪುರ ಮೊದಲಾದವರು ಸಿದ್ಧಲಿಂಗ ಸಾಧುಗಳ ಗುಣಕಥನ ವಿಷಯವಾಗಿ ಮಾತನಾಡಿದರು. ಆಮೇಲೆ ಸುಕ್ಷೇತ್ರ ಬಂಥನಾಳ ಶಿವಯೋಗಿಗಳು ಸಾಧು ಸಮಾಗಮ ಮತ್ತು ಸಾಧು ಯಾರಿಗನ್ನಬೇಕು? ನಿತ್ಯ ಸುಖದ ವಿಚಾರವಾಗಿ ಪಂಡಿತ ಪಾಮರರಿಗೂ ಕೂಡಾ ಚೆನ್ನಾಗಿ ತಿಳಿಯುವಂತೆ ಉಪದೇಶ ಮಾಡಿದಮೇಲೆ ಸಭೆಯ ಕೆಲಸವು ಪೂರೈಸಲ್ಪಟ್ಟಿತು.

ಓರ್ವ ಪ್ರತ್ಯಕ್ಷದರ್ಶಿ.

---

## ವೀರಶೈವ ಸಜ್ಜನ ಬಾಂಧವರಲ್ಲಿ ವಿನಂತಿ.

ಮಹನೀಯರೇ,

ಬಾಗಲಕೋಟೆಯಲ್ಲಿ ತಾ. ೭-೯-೧೯೩೬ ನೆ ದಿವಸ ಶ್ರೀ. ಜಗದ್ಗುರು ಗುರುಸಿದ್ಧರಾಜಯೋಗೀಂದ್ರ ಮಹಾಸ್ವಾಮಿಗಳು ಮೂರು ಸಾವಿರಮಠ ಹುಬ್ಬಳ್ಳಿ ಇವರ ಅಧ್ಯಕ್ಷತೆಯಲ್ಲಿ ವೀರಶೈವ ಸಜ್ಜನ ಸುಧಾರಣಾ ಸಭೆಯು ಸೇರಿ ಅನೇಕ ಮಹತ್ವದ ಠರಾವುಗಳು ಪಾಸಾದವು—

ಸಭೆಯು ಯಾವತ್ತೂ ಕಾರ್ಯಕಲಾಪಗಳನ್ನು ನಡೆಯಿಸುವದಕ್ಕಾಗಿ "ಸಜ್ಜನ ಸುಧಾರಣಾ ಸಂಘವು" ಸ್ಥಾಪಿಸಲ್ಪಟ್ಟಿತು. ಈ ಸಂಘದವರು ಬಾಗಲಕೋಟೆಯಲ್ಲಿ ಪಾಸಾದ ಠರಾವುಗಳ ಪ್ರಚಾರಕ್ಕಾಗಿ ತಾರೀಖು ೧೬-೧೧-೧೯೩೬ ನೆ ದಿವಸ ಹುಬ್ಬಳ್ಳಿಯಲ್ಲಿ ಒಂದು ಸಭೆಯನ್ನು ಕರೆದು ಆ ಎಲ್ಲ ಠರಾವುಗಳಿಗೂ ವಿಶೇಷವಾಗಿ ಒಳಪಂಗಡಗಳ ಏಕೀಕರಣದ ಠರಾವಿಗೂ ಪುಷ್ಟಿ ಕೊಡಲ್ಪಟ್ಟಿತು. ಈ ಸಂಘದ ಮಧ್ಯವರ್ತಿ ಮಂಡಲದವರು ಸಭೆಯಲ್ಲಿ ಪಾಸಾದ ಠರಾವಿಗನುಸರಿಸಿ ಒಳಪಂಗಡಗಳ ಏಕೀಕರಣಕ್ಕಾಗಿ ಪ್ರಯತ್ನವನ್ನು ತಪ್ಪದೇ ನಡೆಯಿಸಿರುತ್ತಾರೆ. ಶ್ರೀ. ಬಸವಂಣೆಪ್ಪಾ ಮಲ್ಲಪ್ಪಾ ಧಾರವಾಡಕರ ಇವರ ವಿಶೇಷ ಪ್ರಯತ್ನದಿಂದ ಶ್ರೀ. ಸಿದ್ಧಲಿಂಗಪ್ಪ ಶಿರಸಂಗಿ ಸಾ|| ಧಾರವಾಡ ಇವರಿಗೆ ಕೊಟ್ಟೂರೊಳಗಿನ ಶ್ರೀ. ಸಿದ್ಧಪ್ಪಾ ಜಡಿಶಲಿ ಇವರ ಮಗಳನ್ನು ಕೊಟ್ಟು ಸನ್ನ ೧೯೩೬ ನೆ ಜುಲೈ ೨ ನೆ ತಾರೀಖಿನ ದಿವಸ ಲಗ್ನವಾಯಿತು. ಈ ವಿವಾಹ ಸಂಬಂಧದಲ್ಲಿ ವರಪಕ್ಷದವರು ಒಂದು ಕಡಗದವರೂ, ಕನ್ಯಾಪಕ್ಷದವರು ಐದು ಕಡಗದವರೂ ಇದ್ದು ಕೊಟ್ಟೂರಲ್ಲಿ ಈ ವಿವಾಹಸಮಾರಂಭಕ್ಕೆ ಯಾವತ್ತೂ ಸಜ್ಜನಬಾಂಧವರು ಆಗಮಿಸಿ ಕಾರ್ಯವನ್ನು ಸಾಂಗಗೊಳಿಸಿದರು. ಈ ಸಮಾಜದಲ್ಲಿ ಸಾವಕಾಶವಾಗಿಯಾದರೂ ಒಳಪಂಗಡಗಳ ಏಕೀಕರಣವು ನಡೆದಿದೆಯೆಂಬುವದು ಸಂತೋಷದ ಸಂಗತಿಯು.

ಆದರೆ ಬಾಂಧವರೇ, ದುಡ್ಡು ಇಲ್ಲದಲೇ ಯಾವ ಕಾರ್ಯಗಳೂ ನಡಿಯಲಾರವು. ಅದನ್ನರಿತು ಬಾಗಲಕೋಟೆಯ ಸಭೆಯಲ್ಲಿ ಸಂಘದ ಕಾರ್ಯಗಳು ನಡೆಯುವದಕ್ಕೆ ಫಂಡು ಏರ್ಪಡಿಸುವದು ಅವಶ್ಯವೆಂಬ ಠರಾವು ಪಾಸುಮಾಡಲ್ಪಟ್ಟು ಕೆಲವು ಮಹನೀಯರಿಂದ ಸಭೆಯಲ್ಲಿಯೇ ೪೦೦೦, ರೂಪಾಯಿಗಳ ಮೇಲ್ಪಟ್ಟು ವಾಗ್ದಾನವಾಗಿದೆ. ಕಾರಣ ವಾಗ್ದಾನಮಾಡಿದ ಮಹನೀಯರು ಸಂಘದ ಅಧ್ಯಕ್ಷರಾದ ಶ್ರೀ. ರಾಚೋಟೆಪ್ಪನವರು ಸಜ್ಜನಶೆಟ್ಟರ ಸಾಕೀನ ಅಲವಾನಿ ಇವರ ಕಡೆಗೆ ಹಣವನ್ನು ಕಳಿಸಿಕೊಡಬೇಕು. ಅಥವಾ ಸಂಘದ ಕಾರ್ಯದರ್ಶಿಗಳ ಕಡೆಗೆ ಕೊಟ್ಟು ಪಾವತಿ ಪಡೆದುಕೊಳ್ಳಬೇಕಾಗಿ ಬಿನ್ನಹ.

ತಮ್ಮ ಕೃಪಾಭಿಲಾಷಿ
ಫಕೀರಪ್ಪ ಕೊರ್ಲಹಳ್ಳಿ ಮಾಸ್ತರ ಹುಬ್ಬಳ್ಳಿ ಕಾರ್ಯದರ್ಶಿ.

## ಇದು ಜಗದ್ಗುರುಗಳ ಕೃತಿಯೆ ?

ಶ್ರೀ ಬಾಳೇಹಳ್ಳಿ ಸ್ವಾಮಿಗಳು ಮೊನ್ನೆ ಶ್ರಾವಣ ಮಾಸದಲ್ಲಿ ಶಿವಮೊಗ್ಗಾದಲ್ಲಿ "ಭದ್ರ ಕಾಳಿದೇವಿಗೆ ಅಭಿಷೇಕ, ಕುಂಕುಮಾರ್ಚನೆ, ಹವನ ಹೋಮುಗಳು, ಶ್ರೀ ಭದ್ರಕಾಳಿ ಸಹಸ್ರ ನಾಮ ಕುಂಕುಮಾರ್ಚನೆ, ಶ್ರೀ ಭದ್ರಕಾಳಿ ತ್ರಿಶತಿ ಕುಂಕುಮಾರ್ಚನೆ, ಶ್ರೀ ಭದ್ರಕಾಳಿ ಅಷ್ಟೋತ್ತರ ಶತ ಕುಂಕುಮಾರ್ಚನೆ" ಇವೇ ಮೊದಲಾದ ಪೂಜಾ ಪದ್ಧತಿಯನ್ನು ನಡಿಸಿದರೆಂದು ತಿಳಿಯಿತು.

ಯಾವ ವೀರಶೈವ ಮತದಲ್ಲಿ ಇಷ್ಟಲಿಂಗವನ್ನು ಬಿಟ್ಟು ಬೇರೆ ಇನ್ನಾವ ದೇವರ ಪೂಜೆಯನ್ನೂ ಮಾಡಬಾರದೆಂದು ಹೇಳಿದೆಯೋ, ಇಷ್ಟೇ ಅಲ್ಲ; ಸ್ಥಾವರ ಲಿಂಗ ಪೂಜೆಯು ಕೂಡ ಯಾವ ಮತದಲ್ಲಿ ನಿಷೇಧಿಸಲ್ಪಟ್ಟಿದೆಯೋ ?

"ಶ್ರೀ ಗುರು ಸ್ವಾಮಿ ಕರುಣಿಸಿಕೊಟ್ಟ ಇಷ್ಟ ಲಿಂಗವನ್ನು ಉದರದಲ್ಲಿ ಧರಿಸಿಕೊಂಡು ಅದು ದೇವರೆಂದು ನಂಬದೆ ಧರೆಯ ಮೇಲೆ ಕಂಡ ಕಂಡ ದೇವರ ಕಂಡು, ಕಲ್ಪಿಸಿ ಹರಿದಾಡುವ ಭಕ್ತರೆಂದರೆ ಅಘೋರ ನರಕ ತಪ್ಪದಯ್ಯ ಅಖಂಡೇಶ್ವರಾ" ಎಂದೂ "ಅಂಗದ ಮೇಲಣ ಲಿಂಗವ ಹಿಂಗಿ ಸ್ಥಾವರಲಿಂಗಕ್ಕೆರಗುವ ಭಂಗಿತರ ಮುಖವ ನೋಡಲಾಗದು. ಅದೆಂತೆಂದೊಡೆ, ತನ್ನ ಗಂಡನ ಬಿಟ್ಟು ಅನ್ಯ ಗಂಡರಿಗೆರಗುವ ಹಾದರಗಿತ್ತಿಯಂತೆ ಅವಂದಿರ ಭಕ್ತಿ. ಅಂತಪ್ಪ ಪಂಚ ಮಹಾ ಪಾತಕರ ಮುಖದತ್ತ ತೋರದಿರಾ ಗುಹೇಶ್ವರಾ" ಎಂದು ಯಾವ ಮತದಲ್ಲಿ ಹೇಳಲ್ಪಟ್ಟಿದೆಯೋ ಅಂತಹ ವೀರಶೈವ ಮತದ ಜಗದ್ಗುರುಗಳೆಂದು ಹೇಳಕೊಳ್ಳುವ ಈ ನಮ್ಮ ಬಾಳೆಹಳ್ಳಿ ಶ್ರೀಗಳವರ ಈ ವರ್ತನೆಯನ್ನು ನೋಡಿ ಪ್ರತಿಯೊಬ್ಬ ನಿಜ ವೀರಶೈವನಿಗೆ ಸಂತಾಪವಾಗದೆ ಇರಲಾರದು.

ಯಾವ ಜಗದ್ಗುರುಗಳು, ಭಕ್ತರು ಎಲ್ಲಾದರೂ ತಪ್ಪಿದರೆ ಕಿವಿ ಹಿಂಡಿ ಅವರನ್ನು ಸುಧಾರಿಸಿ ದಾರಿಗೆ ತರಬೇಕಾದುದು ಯಾರ ಕರ್ತವ್ಯವಾಗಿರುತ್ತದೆಯೋ ಅಂತಹವರು ತಾವೇ ವೀರಶೈವ ಮತ ತತ್ವಗಳಿಗೆ ವಿರುದ್ಧವಾಗಿ ತಪ್ಪುದಾರಿಯಿಂದ ನಡೆಯಬಹುದೆ? "ಅಯ್ಯಾ ನಿರಾಳ ನಿಶ್ಶೂನ್ಯ ಪರಮ ಭಕ್ತ ಜಂಗಮ ತಾನಾಗಲರಿಯದೆ, ಬರಿದೆ ಅಹಂಕರಿಸಿ, ಮೂರು ಮಲವ ಸ್ವೀಕರಿಸಿ ನಾವೇ ಭಕ್ತ ಜಂಗಮವೆಂದು ನುಡಿವ ಕರ್ಮಕಾಂಡಿಗಳು ಕಾಶಿ, ಕೇದಾರ, ಶ್ರೀಶೈಲ, ಗಯಾ, ಪ್ರಯಾಗ, ಶಿವಗಂಗೆ, ಕಂಚಿ, ಕಾಳಹಸ್ತಿ, ಪಂಪಾಕ್ಷೇತ್ರ, ವೀರಣ್ಣ, ಬಸವಣ್ಣ, ಕಲ್ಲಣ್ಣ, ಮಲ್ಲಣ್ಣ.....ಸೂರ್ಯ ಚಂದ್ರ, ಅಗ್ನಿ, ದೀಪಾರತಿ, ಗಂಗೆ, ಗೌರಿ, ವಿಘ್ನೇಶ್ವರ ಮೊದಲಾದ ಇವು ದೇವಂಗಳೆಂದು ಕಲ್ಲು ಮಣ್ಣು ಲೋಹ ಮರದಿಂದ ರಚಿಸಿ........ಎಂಜಲು ತಿಂಬುವರ ದೇವಭಕ್ತರೆನ್ನಬಹುದೆ ? ಇಂತಪ್ಪ ಅನಾಚಾರ ಭಕ್ತ ಜಂಗಮ ದೇವರೆಂದು ಪೂಜಿಸಲಾಗದು..... ಎಂದು ಶಿವಶರಣರು ಕಠೋರವಾಗಿಯೇ ಹೇಳಿದ್ದಾರೆ

ವೀರಶೈವ ಮತದ ನಿಜ ತತ್ವದಂತೆ ತ್ರಿಕರಣಪೂರ್ವಕವಾಗಿ ನಡೆಯುತ್ತಾ ಅದರಂತೆ ತಮ್ಮ ಶಿಷ್ಯರನ್ನು ನಡೆಸುತ್ತಾ ಸಮಾಜದ ಹಿತವೇ ತಮ್ಮ ಹಿತವು, ಸಮಾಜದ ದುಃಖವೇ ತಮ್ಮ ದುಃಖವು ಎಂಬ ಭಾವನೆಯಿಂದ ಸಮಾಜ ಸೇವೆಯನ್ನು ಮಾಡುತ್ತಾ, ಸಮಾಜದಲ್ಲಿ ಎಲ್ಲಾದರೂ ಅಜ್ಞಾನ ಕೊಳುಕು ಸೇರಿದೊಡನೆ ಅದನ್ನು ತಮ್ಮ ಉಪದೇಶದಿಂದ ನಿವಾರಣೆಮಾಡುತ್ತಾ ಒಟ್ಟಿನಲ್ಲಿ ಹೇಳಬೇಕೆಂದರೆ ಸಮಾಜವೇ ತಾವು, ತಾವೇ ಸಮಾಜವು ಎಂಬ ಪವಿತ್ರ ಭಾವನೆಯಿಂದ ಅಹೋ ರಾತ್ರಿ ಸಮಾಜದ ಅಭಿವೃದ್ಧಿಗಾಗಿ ಚಿಂತಿಸುತ್ತಾ ಕಷ್ಟಪಡುತ್ತಾ ಯಾರು ಇರುತ್ತಾರೆಯೋ ಅವರೇ ಆ ಸಮಾಜದ ನಿಜವಾದ ಜಗದ್ಗುರುಗಳು. ಇದರ ವಿರುದ್ಧವಾಗಿ ನಡೆಯುವವರು ಅವರು ಯಾವದೇ ಪೀಠದ ಮೇಲೆ ಕೂತಿರಲಿ, ಅವರಲ್ಲಿ ಎಷ್ಟೇ ಆನೆ, ಒಂಟೆ, ಕುದುರೆಗಳಿರಲಿ, ಅವರು ಉದ್ದ, ಅಡ್ಡ ಪಲ್ಲಕ್ಕಿಗಳಲ್ಲಿ ಕೂತು ಎಷ್ಟೇ ಮೆರೆಯುತ್ತಿರಲಿ, ಅವರು ಜಗದ್ಗುರುಗಳಲ್ಲ. ಅವರು ಕುಳಿತಿರುವ ಪೀಠದಮೇಲಿಂದ ಕೆಳಗಿಳಿಸಬೇಕಾದುದೇ ನ್ಯಾಯವೂ ಕ್ಷೇಮಕರವೂ ಆಗಿದೆ.

ರಾಜರೆಂದರೆ ದೇವರ ಸ್ವರೂಪರೆಂದೇ ಎಲ್ಲಾ ಕಡೆ ತಿಳಿಯುತ್ತಿದ್ದರಷ್ಟೆ! ಮೊನ್ನೆ ಮೊನ್ನೆ ಇಂಗ್ಲೆಂಡಿನ ರಾಜರಾದ ಎಡ್ವರ್ಡರನ್ನ ಅಲ್ಲಿನ ಪ್ರಜೆಗಳು ರಾಜ ಸಿಂಹಾಸನದಿಂದ ಕೆಳಗೇಕೆ ಇಳಿಸಿದರು ? ಇಂಗ್ಲೆಂಡಿನ ರಾಜ ತತ್ವಗಳಿಗೆ ವಿರುದ್ಧವಾಗಿ ಎಡ್ವರ್ಡರವರು ನಡೆದುದರಿಂದಲ್ಲವೆ ?

ವೀರಶೈವರೇ, ನಿಜವಾಗಿ ನೀವು ವೀರಶೈವರೇ ಆಗಿದ್ದರೆ ನಿಮ್ಮ ಗ್ರಾಮದಲ್ಲಿ ವೀರಶೈವರ ಸಾರ್ವಜನಿಕ ಸಭೆಯನ್ನು ಕೂಡಿಸಿ ಆ ಸಭೆಯಲ್ಲಿ "ಬಾಳೆಹಳ್ಳಿ ಸ್ವಾಮಿಗಳು ವೀರಶೈವ ಮತದ ತತ್ವಗಳಿಗೆ ವಿರುದ್ಧವಾಗಿ ಹೇಗೆ ನಡೆಯುತ್ತಿರುವರೆಂಬುವದನ್ನೂ ಇವರು ವೀರಶೈವ ಮತದ ನಿಜ ತತ್ವಗಳನ್ನು ಹೇಗೆ ಮಣ್ಣುಗೂಡಿಸುತ್ತಿರುವರೆಂಬುದನ್ನೂ ಜನಗಳಿಗೆ ವಿಶದವಾಗಿ ತಿಳಿಸಿರಿ. ಆ ಮೇಲೆ ಒಂದು ಠರಾವನ್ನು ಕೆಳಗಿನಂತೆ ಪಾಸುಮಾಡಿರಿ. "ಈಗಿನ ಬಾಳೆಹಳ್ಳಿ ಪೀಠದ ಮಹಾ ಸ್ವಾಮಿಗಳು ವೀರಶೈವ ಮತದ ನಿಜ ತತ್ವಗಳಿಗೆ ವಿರುದ್ಧವಾಗಿ ಭದ್ರಕಾಳಿ ಪೂಜೆ, ವೀರೇಶ್ವರ ಪೂಜೆ, ಹೋಮ ಹವನಗಳನ್ನು ಮಾಡಿಸುತ್ತಾ ಭಕ್ತರಲ್ಲಿ ಲಿಂಗ ನಿಷ್ಠೆಯನ್ನು ಕಡಿಮೆ ಮಾಡಿಸುತ್ತಾ ಅವರನ್ನು ತಪ್ಪು ದಾರಿಗೆ ತಿರುಗಿಸುತ್ತಿರುವರು." ಸ್ವಾಮಿಗಳ ಈ ಅಧರ್ಮವಾದ ಕೃತಿಯನ್ನು ಈ ಸಭೆಯು ತೀವ್ರವಾಗಿ ನಿಷೇಧಿಸುತ್ತದೆ."

ಈ ಪ್ರಕಾರ ಠರಾವನ್ನು ಪಾಸುಮಾಡಿ ರಂಭಾಪುರಿ ಮಹಾ ಸ್ವಾಮಿಗಳಿಗೆ ತಿಳಿಸಿರಿ. ಇಷ್ಟು ಮಾಡಿದರೆ ವೀರಶೈವರು ನಿಜವಾಗಿ ವೀರಶೈವರೇ ಆಗಿದ್ದಾರೆಂದೂ, ತಮ್ಮ ಮತದ ನಿಜ ತತ್ವಗಳಿಗೆ ವಿರುದ್ಧವಾಗಿ ಎಂತಹ ದೊಡ್ಡ ಮಹಾ ಸ್ವಾಮಿಗಳು ಆಚರಿಸಿದಾಗ್ಯೂ ಕೂಡ ಅದನ್ನು ಅವರು ಸೇರುವುದಿಲ್ಲವೆಂದೂ, ವೀರಶೈವ ಸಮಾಜದಲ್ಲಿ ಇನ್ನೂ ಜೀವವಿದೆಯೆಂದೂ ಜಗತ್ತಿಗೆ ತೋರಿಸಿ ಕೊಟ್ಟಂತಾಗುವದು. ನಿಜವಾದ ವೀರಶೈವರಾಗಿರಿ, ನಾಮಧಾರಿ ವೀರಶೈವರಾಗಬೇಡಿರೆಂದೇ ನನ್ನ ಪ್ರಾರ್ಥನೆ.

ತಮ್ಮ ಅಡಿಯಾಳು
ರಾಚಪ್ಪಾ ಹೇರೂರು ಸೆಕ್ರೆಟರಿ
ವೀರಶೈವ ತರುಣ ಸಂಘ
ಕಾಂಡೂರು.

## ಹುನಗುಂದ ತಾಲೂಕು ಕಾಂಗ್ರೆಸ್ ಕಮಿಟಿ ಪ್ರಚಾರ ಕಾರ್ಯ.

ಈ ತಾಲೂಕು ಕಾಂಗ್ರೆಸ್ ಕಮಿಟಿ ಅಧ್ಯಕ್ಷರಾದ ಶ್ರೀ. ಬಳೂಟಗಿ ಬಸವಶೆಟ್ಟೆಪ್ಪನವರು ತಾ. ೨೨-೯-೩೭ ನೆಯ ದಿವಸ ಬೇವಿನಮಟ್ಟಿಗೆ ಬಂದು ಕಾಂಗ್ರೆಸ್ ಸದಸ್ಯರನ್ನು ಮಾಡಿ ಅಮೀನಗಡಕ್ಕೆ ಹೋಗಿ ಅಲ್ಲಿ ೨೦೦ ಜನ ಸದಸ್ಯರನ್ನು ಮಾಡಿದರು. ಅಲ್ಲಿಯ ಶ್ರೀಮನ್ನಿರಂಜನ ಶ್ರೀ ತೋಂಟದಾರ್ಯ ಸ್ವಾಮಿಗಳು ಕಾಂಗ್ರೆಸ್ ಸದಸ್ಯರಾದದ್ದು ಬಹಳೇ ಸಂತೋಷದ ಸಂಗತಿ.

ಆ ಮೇಲೆ ತಾ. ಕಾ. ಕಮಿಟಿ ಸೆಕ್ರೆಟರಿಗಳಾದ ಶ್ರೀ. ಪ್ರಾಣೇಶಾಚಾರ್ಯರ ಸಮೇತ ಸೂಳಿಭಾವಿಗೆ ಹೋಗಿ ಅಲ್ಲಿ ಕಾಂಗ್ರೆಸ್ ಸದಸ್ಯರನ್ನು ಮಾಡಿದರು. ತಾ. ೨೪ ಕ್ಕೆ ಗುಡೂರಿಗೆ ಹೋಗಿ ಅಲ್ಲಿ ಕಾಂಗ್ರೆಸ್ ಸದಸ್ಯರನ್ನು ಮಾಡಿ ಖಾದಿ ಬಗ್ಗೆ ಭಾಷಣಮಾಡಿದರು. ತಾ. ೨೫ ನೆಯ ದಿವಸ ಕೆಲೂರಿಗೆ ಹೋಗಿ ಅಲ್ಲಿಯ ನಾಡಗೌಡರಿಗೂ ಶ್ರೀ. ಪರಪ್ಪ ಅಂಗಡಿ ಇವರಿಗೂ ಕಾಂಗ್ರೆಸ್ ಸದಸ್ಯರನ್ನು ಮಾಡಲು ತಿಳಿಸಿ ಹುನಗುಂದಕ್ಕೆ ತಿರುಗಿದರು.

ಶ್ರೀ. ವೀರಪ್ಪ ಗಾಣಿಗೇರ ಸಾ|| ಕರಡಿ ಇವರು ಕರಡಿ ಕೋಡಿಹಾಳ ಮೊದಲಾದ ಸ್ಥಳಗಳಲ್ಲಿ ಸಂಚರಿಸಿ ೨೨೦ ಜನರನ್ನು ಶ್ರೀ. ಮಹಂತಪ್ಪ ಶ್ರೀ. ನಾಗಪ್ಪ ದಡ್ಡಿಮನಿ ಶ್ರೀ. ಶಿವಮೂರ್ತೆಪ್ಪ ಕಮತಗಿ ಇವರು ಕಡಿವಾಲ ಮೊದಲಾದ ಸ್ಥಳಗಳಲ್ಲಿ ಸಂಚರಿಸಿ ೨೦ ಜನರನ್ನೂ ಕಾಂಗ್ರೆಸ್ ಸದಸ್ಯರನ್ನಾಗಿ ಮಾಡಿದರು.

ಓರ್ವ ರಾಷ್ಟ್ರೀಯ.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣಮಂದಿರದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರ, ದಾಕ್ಷಿಣ್ಯಪರನಾನಲ್ಲ, ಲೋಕವಿರೋಧಿ, ಶರಣನಾರಾರಿಗೂ ಅಂಜುವವನಲ್ಲ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೧೧ ನೆಯ ಅಕ್ಟೋಬರ್ ೧೯೩೭. | ಸಂಚಿಕೆ ೮

ಜನಸೇವೆಯೇ ದೇವರಸೇವೆ.

## ಮೆರವಣಿಗೆಯಲ್ಲಿ ಬಾಂಬು!

ಅಲಿಗಡದಲ್ಲಿ ತಾ. ೬ ನೆಯ ದಿವಸ ರಾಮಲೀಲಾ ಮೆರವಣಿಗೆ
ಬರುವ ದಾರಿಯಲ್ಲಿಯೇ ಯಾರೋ ಬಾಂಬು ಇಟ್ಟಿದ್ದರು.
ಮೆರವಣಿಗೆ ಬಂದನಂತರ ಅದು ಒಡೆದು
೧೨ ಜನರಿಗೆ ಗಾಯವಾಯಿತು. ಶ್ರೀ. ಗಣೇಶಲಾಲ ಎಂಬುವವರು
ಮೃತಪಟ್ಟರು.
ಹಿಂದು ಅಂಗಡಿಕಾರರು ಹರತಾಳವನ್ನು ಆಚರಿಸಿದರು.

ಓರಿಸಾ ಪ್ರಾಂತದಲ್ಲಿ ಮುಖ್ಯ ಮಂತ್ರಿಗಳಿಗೂ ಗವ್ಹರ್ನರರಿಗೂ
ಭಿನ್ನಾಭಿಪ್ರಾಯವುಂಟಾಗಿದೆಯೆಂದು ಪ್ರಕಟವಾದ
ಸಂಗತಿ ಸುಳ್ಳೆಂದು ಮಂತ್ರಿಗಳೇ ಪ್ರಕಟಿಸಿದ್ದಾರೆ.

### ಈ ವಾರದ ಪತ್ರಿಕೆಯಲ್ಲೇನಿದೆ?

(೧) ಹಿಂದು-ಮುಸಲ್ಮಾನರ ಐಕಮತ್ಯ.
(೨) ಡಾ. ಹರದಯಾಲರು ಯಾರು?
(೩) ಕಾಂಗ್ರೆಸ್ ಮತ್ತು ಮುಸಲ್ಮಾನರು.
(೪) ಡಾ. ಕುರ್ತಕೋಟಿಯವರ ಉಪದೇಶ.
(೫) ತಿಬೇಟದ ವಿಚಿತ್ರ ಆಚಾರ.
(೬) ಲಿಂಗಾಯತ ಸಂಸ್ಕೃತಿಯ ಶ್ರೇಷ್ಠತೆ.

ದೇಹವೇ ದೇವಾಲಯ.



# ಶರಣ ಸಂದೇಶ

THE SHARANA SANDESHA.



## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೧೧ನೆಯ ಅಕ್ಟೋಬರ್ ೧೯೩೭. | ಸಂಚಿಕೆ ೮

## ಮಹತ್ವದ ಸುದ್ದಿಗಳು.

—ಜಗತ್ತಿನ ನಾನಾ ದೇಶಗಳಿಂದ ಗಾಂಧೀಜಿಯವರಿಗೆ ಅವರ ವರ್ಷ ವರ್ಧಂತಿಯ ಅಭಿನಂದನದ ಅಸಂಖ್ಯ ತಂತೀ ಪತ್ರ ಮೊದಲಾದವುಗಳು ಬಂದಿವೆ. ಅವರೆಲ್ಲರಿಗೂ ಗಾಂಧೀಜಿಯವರು ಅಭಿನಂದಿಸಿದ್ದಾರೆ.

—ಲಂಡನ್ನಿನಲ್ಲಿ ಗಾಂಧೀ ಜಯಂತಿಯು ಜರುಗಿತು. ಡಾ. ಮ್ಯಾನ್‌ರವರು ತಮ್ಮ ಭಾಷಣದಲ್ಲಿ ಗಾಂಧೀಜಿಯವರು ಜಗತ್ತಿಗೆ ಅಹಿಂಸಾ ಮಾರ್ಗವನ್ನು ತೋರಿಸುವವರಾಗಿದ್ದಾರೆಂದು ಹೇಳಿದರು,

—ತಾ. ೨ ನೆಯ ಅಕ್ಟೋಬರ್ ತಿಂಗಳಿಗೆ ಮುಗಿದ ಒಂದು ವಾರದಲ್ಲಿ ೩೮೩೭೧೧೩ ರೂ. ಗಳ ಬಂಗಾರವು ಮುಂಬೈ ಬಂದರದಿಂದ ಪರದೇಶಗಳಿಗೆ ಹೋಯಿತು.

—ಶ್ರೀ. ಸುಭಾಷಚಂದ್ರ ಬೋಸರು ಆರೋಗ್ಯ ಹೊಂದಿ ಕಲಕತ್ತಾ: ಪಟ್ಟಣಕ್ಕೆ ಬಂದು ಕುರ್ಸಾಂಗ ಎಂಬಲ್ಲಿಗೆ ಹೋದರು. ಈ ತಿಂಗಳ ಕೊನೆಯಲ್ಲಿ ಕಲಕತ್ತಾ ಪಟ್ಟಣದಲ್ಲಿ ಕೂಡುವ ಕಾಂಗ್ರೆಸ್ ಕಮಿಟಿಗೆ ಇವರು ಬರಬಹುದೆಂದು ಊಹಿಸಲಾಗಿದೆ.

—ಮುಂಬೈ ಪ್ರಾಂತಿಕ ಕಾಂಗ್ರೆಸ್ ಕಮಿಟಿಯಲ್ಲಿ ಶ್ರೀ. ಪಟೇಲರು ಮಾಡಿದ ಹಣವಿನ ವ್ಯತ್ಯಾಸದ ಸಂಬಂಧವಾಗಿ ಶ್ರೀ. ಆಲರೀಜಾ ಎಂಬುವವರು ಗಾಂಧೀಜಿಯವರಿಗೆ ಒಂದು ಪತ್ರವನ್ನು ಬರೆದು ಒಂದು ವಾರದೊಳಗಾಗಿ ಈ ವಿಷಯದಕಡೆಗೆ ತಾವು ಲಕ್ಷ್ಯ ಸಲ್ಲೇಬೇಕಾಗಿ ಹೇಳಿಕೊಂಡಿದ್ದಾರೆ.

—ಅಂದಮಾನದಲ್ಲಿ ೨೧೧ ಕ್ರಾಂತಿಕಾರಕ ಕೈದಿಗಳಿದ್ದಾರೆ. ಅವರಲ್ಲಿ ೨೧೦ ಜನರು ಬಂಗಾಲಿಗಳು.

—ಜಪಾನ ದೇಶವು ಈ ವರೆಗೆ ಚೀನದ ೧೨೫೦ ಮೈಲು ಪ್ರದೇಶವನ್ನು ಆಕ್ರಮಿಸಿಕೊಂಡಿತು. ಈಗ ಉತ್ತರ ಭಾಗದಲ್ಲಿ ಒಂದು ಸ್ವತಂತ್ರ ಪ್ರಾಂತವನ್ನೇ ಮಾಡುತ್ತದಂತೆ!

—ಹಿಂದುಸ್ಥಾನದ ಸೈನ್ಯಶಾಖೆಯ ವೆಚ್ಚ ವರ್ಷಕ್ಕೆ ೪೫ ಕೋಟಿ ರೂ. ಗಳು. ಇವುಗಳಲ್ಲಿ ಬ್ರಿಟಿಶ್ ಸೈನ್ಯಕ್ಕೆ ೧೨ ಕೋಟಿ ರೂ. ವೆಚ್ಚವಾಗುತ್ತವೆ. ಈ ಹಣವನ್ನು ಬ್ರಿಟಿಶ್ ಸರಕಾರವು ಹಿಂದುಸ್ಥಾನ ಸರಕಾರಕ್ಕೆ ಕೊಡುವಂತೆಯೂ ಹಿಂದುಸ್ಥಾನ ಸರಕಾರವು ಪ್ರಾಂತಿಕ ಸರಕಾರಗಳಿಗೆ ಅಧನ್ನು ಹಂಚಿಕೊಡುವಂತೆಯೂ ಸರಕಾರವು ಏರ್ಪಾಟುಮಾಡುವುದೆಂದೂ ಸುದ್ದಿ.

—ಈ ತಿಂಗಳ ಕೊನೆಯಲ್ಲಿ ಗಾಂಧೀಜಿಯವರು ಗಡಿನಾಡಿನ ಪ್ರವಾಸಕ್ಕಾಗಿ ಹೊರಡಬಹುದೆಂದು ಊಹೆ.

—ಪ್ಯಾಲಿಸ್ಟಾಯಿನ್ ವಿಚಾರವಾಗಿ ಕೇಂದ್ರ ಶಾಸನ ಸಭೆಯಲ್ಲಿ ಸರ್ ಮಹಮ್ಮದ ಯಾಕೂಬರವರು ಒಂದು ನಿಲುವಳಿ ಸೂಚನೆಯನ್ನು ತರುವವರಿದ್ದರು. ಇದು ಹಿಂದುಸ್ಥಾನ ಸರಕಾರಕ್ಕೆ ಸಂಬಂಧಪಟ್ಟಿದ್ದಲ್ಲವೆಂದು ವ್ಹಾಯಿಸ್‌ರಾಯರು ಅಪ್ಪಣೆ ಕೊಡಲಿಲ್ಲ.

—ಪ್ರಭಾತ ಸಿನೇಮಾ ಕಂಪನಿಯವರ ಲೋಕಪ್ರಿಯ "ತುಕಾರಾಮ" ಚಿತ್ರಪಟವನ್ನು ಮೈಸೂರು ಮಹಾರಾಜರವರು ತಮ್ಮ ಅರಮನೆಯಲ್ಲಿ ನೋಡಿ ತುಂಬಾ ಸಂತೋಷಪಟ್ಟರು. ಈ ಚಿತ್ರಪಟವನ್ನು ವ್ಹಾಯಿಸ್‌ರಾಯರಿಗೆ ತೋರಿಸಲು ದಿಲ್ಲಿಗೆ ಕಳಿಸುವರಾಗಿ ಸುದ್ದಿ.

—ಕಲಕತ್ತಾದಲ್ಲಿ ಕೆಲವರು ಕೃತ್ರಿಮ ನೋಟುಗಳನ್ನು ಮಾಡುವರೆಂಬ ಅಪರಾಧದಿಂದ ಹಿಡಿಯಲ್ಪಟ್ಟಿದ್ದಾರೆ.

—ಡಾ. ನಂದಿಮಠರವರು ಕೌಮುದಿ ಪತ್ರಿಕೆಯ ಮೇಲೆ ಮಾಡಿದ ಮಾನ ನಷ್ಟದ ವ್ಯಾಜ್ಯದಲ್ಲಿ ಆ ಪತ್ರಿಕಾ ಸಂಪಾದಕರೇ ಮೊದಲಾದವರ ಮೇಲೆ ನ್ಯಾಯಾಧೀಶರು "ಚಾರ್ಜ" ಇಟ್ಟಿದ್ದಾರೆ. ಈ ತಿಂಗಳ ೧೭ ನೆಯ ತಾರೀಖಿಗೆ ವಿಚಾರಣೆ ಪುನಃ ನಡೆಯುವುದು.

—ನಿಜಾಮ ಸಂಸ್ಥಾನವು ಮುಂದೆ ಬರುವ ಫೆಡರಲ್ ರಾಜ್ಯಘಟನೆಯಲ್ಲಿ ಸೇರಿಕೊಳ್ಳಲು ಒಪ್ಪಿರುವುದಾಗಿ ಸರ್. ಅಕಬರ ಹೈದರಿಯವರು ತಿಳಿಸಿದರು.

# ಹಿಂದುಗಳ ಈಗಿನ ಕರ್ತವ್ಯ.

[ಜಗದ್ಗುರು ಡಾ. ಕುರ್ತಕೋಟಿಯವರ ಪ್ರವಚನ]

ನಾಶಿಕದಲ್ಲಿ ಶ್ರೀ ಜಗದ್ಗುರು ಶಂಕರಾಚಾರ್ಯ ಡಾ. ಕುರ್ತಕೋಟಿಯವರು ಕಳೆದ ಗಣೇಶೋತ್ಸವದಲ್ಲಿ ಮಾಡಿದ ಪ್ರವಚನಗಳ ಮುಖ್ಯಾಂಶ ಈ ಕೆಳಗಿನಂತಿದ್ದಿತು—



ಡಾ. ಕುರ್ತಕೋಟಿಯವರು.

"ಈಗ ಪ್ರಪಂಚವೇ ಬಹು ದುರವಸ್ಥೆಗೀಡಾಗಿದೆ. ಯಾವ ರಾಷ್ಟ್ರವೂ ಸುಖಶಾಂತಿಗಳಲ್ಲಿಲ್ಲ. ಇದಕ್ಕಿಂತಲೂ ಹೆಚ್ಚಿನ ಕಷ್ಟನಷ್ಟಗಳ ಕಾಲವು ಮುಂದೆ ಬರುವುದಿದೆ. ಏಕೆಂದರೆ, ಯುದ್ಧಾಗ್ನಿಯು ಎಲ್ಲೆಲ್ಲಿಯೂ ಹಬ್ಬುತ್ತಲಿದೆ. ಸ್ವತಂತ್ರ ರಾಷ್ಟ್ರಗಳೇ ಇಂಥ ಶೋಚನೀಯ ಸ್ಥಿತಿಗೆ ಬಂದಿರುವಾಗ ಪರತಂತ್ರ ರಾಷ್ಟ್ರದ ಗತಿಯು ಹೇಗಾಗಬಹುದೆಂಬುದನ್ನು ಹೇಳಬೇಕಾದುದೇ ಇಲ್ಲ. ಬ್ರಿಟಿಶ್ ಸಾಮ್ರಾಜ್ಯಕ್ಕೆ ಯಾವುದು ವಿರೋಧವಾಗುತ್ತದೆಯೋ ಆ ರಾಷ್ಟ್ರದ ಸಂಗಡ ಹಿಂದುಸ್ಥಾನವು ನಿಷ್ಕಾರಣವಾಗಿ ವೈರತ್ವವನ್ನು ಕಟ್ಟಿಕೊಳ್ಳುವ ಪ್ರಸಂಗ ಬಂದಿದೆ.

ಇಂತಹ ಪ್ರಸಂಗದಲ್ಲಿ ಹಿಂದುಗಳು ನಿರಾಶರಾಗದೆ ಧೈರ್ಯದಿಂದ ತಮ್ಮ ಉನ್ನತಿಗಾಗಿ ಪ್ರಯತ್ನಿಸಲೇಬೇಕು. ಈಗ ಸುಮ್ಮನುಳಿದರೆ ಹಿಂದುಗಳು ನಾಮಶೇಷರಾಗುವರು. ನಾಮವಾದರೂ ಶೇಷವಾಗಿರುತ್ತದೋ? ಇಲ್ಲವೋ? ಏಕೆಂದರೆ, ಹಿಂದುಸ್ಥಾನವೆಂಬ ಹೆಸರು ಹಿಂದುಗಳ ಸ್ಥಾನವೆಂಬುದನ್ನಾದರೂ ಸೂಚಿಸುತ್ತದಷ್ಟೆ. ಅದು ಕೂಡಾ ಈಗ ಹೋಗಲಾರಂಭಿಸಿದೆ. 'ಇಂಡಿಯಾ' ಎಂಬ ಹೆಸರು ಪ್ರಚಾರದಲ್ಲಿ ಬರಲಾರಂಭವಾಗಿದೆ.

ನಾವು ನಮ್ಮ ಪೂರ್ವಜರ ದಿವ್ಯ ಚಾರಿತ್ರ್ಯವನ್ನೂ ಅವರು ಜಗತ್ತಿನ ಹಿತಾರ್ಥವಾಗಿ ಬೋಧಿಸಿದ ತತ್ವಗಳನ್ನೂ ಯಾವಾಗಲೂ ನಮ್ಮ ದೃಷ್ಟಿಯ ಮುಂದಿಟ್ಟುಕೊಂಡು ಆ ಪ್ರಕಾರ ನಡೆದು ಜಗತ್ತಿಗೆ ಮಾರ್ಗದರ್ಶಿಗಳಾಗಬೇಕಾಗಿದೆ. ಹೀಗಾಗಲು ಮೊದಲು ನಾವು ಹಿಂದುಸ್ಥಾನವನ್ನು ಪಾರತಂತ್ರ್ಯ ಪಾಶದಿಂದ ಬಿಡುಗಡೆಮಾಡಬೇಕು.

ಹಿಂದುಸ್ಥಾನದ ಬಂಧಮುಕ್ತತೆಯು ಅನ್ಯ ರಾಷ್ಟ್ರಗಳನ್ನು ಪೀಡಿಸಲಿಕ್ಕಲ್ಲ. ಆದರೆ ತಾನು ಸುಖಿಯಾಗಿದ್ದು ಅನ್ಯರೂ ಸುಖಿಗಳಾಗುವುದಕ್ಕಾಗಿ. ಕೇವಲ ಭೌತಿಕ ಉನ್ನತಿಯಿಂದಲೇ ಮನುಷ್ಯನಲ್ಲಿ ಸುಖ ಶಾಂತಿಗಳು ನೆಲೆಸುವುದಿಲ್ಲ. ಆದುದರಿಂದಲೇ ಈಗ ಎಲ್ಲ ಕಡೆಗೂ ರಾಕ್ಷಸೀ ಮಹತ್ವಾಕಾಂಕ್ಷೆಯು ವ್ಯಾಪಿಸುತ್ತಾ ಇದೆ. "ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ" ಎಂಬ ಶ್ರುತಿ ವಾಕ್ಯದಂತೆ ಜಗತ್ತಿನ ಸುಸ್ಥಿತಿಗೆ ಬೇಕಾದ ಧರ್ಮವನ್ನು ಪ್ರಸಾರಗೊಳಿಸುವುದೇ ಹಿಂದುಸ್ಥಾನದ ಕರ್ತವ್ಯವಾಗಿದೆ.

ಹಿಂದುಸ್ಥಾನವು ಒಂದು ರಾಷ್ಟ್ರವೇ ಅಲ್ಲ; ಒಂದು ಖಂಡವು. ಇದರಲ್ಲಿ ಅಷ್ಟು ಜಾತಿ, ಭಾಷೆ, ಮೊದಲಾದ ಭಿನ್ನ ಭಿನ್ನ ಮತಪ್ರಾಂತಗಳಿವೆ. ಹೀಗಿದ್ದರೂ "ಏಕಂ ಸದ್ವಿಪ್ರಾ ಬಹುಧಾ ವದಂತಿ" ಎಂಬ ವೇದ ಘೋಷದ ಕಡೆಗೆ ಲಕ್ಷಿಸಿ ಜನರು ಐಕಮತ್ಯದಿಂದ ಕೆಲಸಮಾಡದಿದ್ದುದು ಆಶ್ಚರ್ಯಕರವು. ಈ ದೇಶದಲ್ಲಿ ಅನೇಕ ಶತಮಾನಗಳಿಂದ ಸ್ವಜನರನ್ನೇ ದೂರಮಾಡಿ ಅನೈಕ ಮತ್ಯವನ್ನು ಹೆಚ್ಚಿಸುವ ರೋಗವು ಬೆಳೆಯುತ್ತಲೇ ಇದೆ. ಈ ಘಾತಕವಾದ ವೃತ್ತಿಯನ್ನು ತೆಗೆದು ಹಾಕಲು ನಾವು ಮೊದಲು ಪ್ರಯತ್ನಿಸಬೇಕು.

### ಧರ್ಮದ ಗುಟ್ಟು ಎಲ್ಲಿದೆ ?

ಮಹಾಭಾರತದಲ್ಲಿ ಧರ್ಮದ ಗುಟ್ಟನ್ನು ಸ್ಪಷ್ಟವಾಗಿ ಈ ಕೆಳಗಿನಂತೆ ಹೇಳಿದೆ—

"ಯದನ್ಯೈರ್ವಿಹಿತಂ ನೇಚ್ಛೇದಾತ್ಮನಃ ಕರ್ಮ ಪುರುಷಃ
ನ ತತ್ಪರಸ್ಯ ಕುರ್ವೀತ ಜಾನನ್ನಪ್ರಿಯಮಾತ್ಮನಃ"

ಅರ್ಥ— ಯಾವುದನ್ನು ಅನ್ಯರು ನಮಗೆ ಮಾಡಿದರೆ ಅದು ನಮಗೆ ಒಪ್ಪಿಗೆಯಾಗುವುದಿಲ್ಲವೋ ಅದನ್ನು ನಾವು ಅನ್ಯರಿಗೆ ಮಾಡಬಾರದು.

ಧರ್ಮದ ಮಹತ್ವ ಸಿದ್ಧಾಂತವನ್ನು ನಾವು ತಿಳಿದೂ ತಿಳಿದು ಇದರ ಹೆಸರಿನಿಂದ ಈ ವರೆಗೆ ಎಷ್ಟು ಅತ್ಯಾಚಾರಗಳನ್ನು ಮಾಡುತ್ತಾ ಬಂದಿದ್ದೇವಲ್ಲಾ! ನಾವು ಪವಿತ್ರ ಆಚರಣೆಯಲ್ಲಿರುವುದು ಬೇರೆ, ಅನ್ಯರನ್ನು ಹೀನಾಗಿ ಕಾಣುವುದು ಬೇರೆ. ನಾವು ಪವಿತ್ರರಾಗಿರಲು ಅನ್ಯರನ್ನು ಹೀನಾಗಿ ಕಾಣಬೇಕಾದ ಅಗತ್ಯವೇನೂ ಇಲ್ಲ. ಯಾವ ಜನರನ್ನು ನಾವು ಧರ್ಮದ ಹೆಸರಿನಿಂದ ದೂರಮಾಡುತ್ತೇವೆಯೋ ಅದೇ ಜನರು ಕ್ರಿಸ್ತ ಅಥವಾ ಮುಸಲ್ಮಾನ್ ಧರ್ಮದಲ್ಲಿ ಸೇರಿದರೆ ಅವರನ್ನು ನಾವು ಎಷ್ಟು ಹತ್ತಿರ ಮಾಡಿಕೊಳ್ಳುತ್ತಿದ್ದೇವಲ್ಲಾ! ಇದು ಸನಾತನ ಧರ್ಮದ ಲಕ್ಷಣವೆ?

ಮಹಾಭಾರತ ಶಾಂತಿಪರ್ವದಲ್ಲಿ "ಧರ್ಮ ಏಷ ಸನಾತನಃ" ಎಂದು ಹೇಳಿದೊಡನೆಯೇ "ಅನ್ಯೋ ಧರ್ಮಃ ಸಮರ್ಥಸ್ಯ ವಿಷಮಸ್ಥಸ್ಯ ಚಾಪರಃ" ಎಂದು ಹೇಳಿ ಸುಸ್ಥಿತಿಯ ಕಾಲದ ಧರ್ಮ ಬೇರೆ, ಕಷ್ಟಕಾಲದ ಧರ್ಮ ಬೇರೆ, ಎಂಬುದನ್ನೂ ಸ್ಪಷ್ಟಗೊಳಿಸಿದೆ. ನಾವು ಸಮ ಭೂಮಿಯ ಮೇಲೆ ಓಡಾಡುವಾಗ ಮತ್ತು ಏರು, ಇಳುವುಗಳಲ್ಲಿ ಓಡಾಡುವಾಗ ನಮ್ಮ ದೇಹದ ತೂಕವನ್ನು ಸಮುಪಡಿಸಿಕೊಳ್ಳಲು ಹಿಂದೆ ಮುಂದೆ ಬಾಗಿ ನಡೆಯುವುದಿಲ್ಲವೆ? ನಡಿಗೆಯ ಈ ವ್ಯತ್ಯಾಸವು ಭೂಮಿಯ ಸ್ಥಿತಿಯ ಮೇಲೆಯೇ ಅವಲಂಬಿಸಿಲ್ಲವೆ? ಹಾಗೆಯೇ ಕಾಲಮಾನಕ್ಕನುಗುಣವಾಗಿ ನಾವು ನಡೆಯಬೇಕು. ಅದೇ ಧರ್ಮ. ಅದೇ ಸನಾತನ ಧರ್ಮ.

ಈಗ ಕೆಲವು ರಾಜಕಾರಣ ಪ್ರಮುಖರಿಗೆ ಧರ್ಮವೇ ಅಸಹ್ಯವಾಗಿ ತೋರಿದೆ. ಅದನ್ನು ನಾಶಮಾಡಬೇಕೆಂದೇ ಹಂಬಲಿಸು

ತ್ತಿದ್ದಾರೆ. ಧಾರ್ಮಿಕ ಕ್ಷೇತ್ರದಲ್ಲಿರುವ ಕೆಲವರು ವರ್ಣಸಂಕರ ಮಾಡುವ ಈಗಿನ ರಾಜಕಾರಣವೇ ಬೇಡೆಂತಲೂ ಇದು ಅಳಿದು ಹೋಗಬೇಕೆಂತಲೂ ಹೇಳುತ್ತಿದ್ದಾರೆ. ಈ ಉಭಯರಿಗೂ ಭಗವದ್ಗೀತೆಯ ಉಕ್ತಿಯಂತೆ ಹೇಳಬೇಕೆಂದರೆ "ಉಭೌತೌ ನ ವಿಜಾನೀತಃ" (ಇಬ್ಬರೂ ತಿಳಿಯದವರು.)

ಕ್ರಿಸ್ತಿ ಮತದ ಸಂಕುಚಿತವಿಚಾರಸರಣಿಯನ್ನು ನೋಡಿ ಆ ದೇಶದ ಸಮತಾವಾದಿಗಳು ಧರ್ಮವನ್ನು ನಿರಾಕರಿಸಿದರೆಂದು ನಮ್ಮಲ್ಲಿಯವರೂ ಧರ್ಮವನ್ನು ನಿರಾಕರಿಸಲು ಹೇಳುತ್ತಿದ್ದಾರೆ ಕ್ರಿಸ್ತಾದಿಗಳಂತೆ ಕೆಲವು ವಿಶಿಷ್ಟ ಆಚಾರ ವಿಚಾರಗಳಿಗೇನೇ ನಮ್ಮವರು ಧರ್ಮವೆಂದು ಹೇಳಿಲ್ಲ. ಯಾವುದು ಯಾವ ಕಾಲಕ್ಕೆ ನಮ್ಮ ಅಭ್ಯುದಯಕ್ಕೂ ನಿಶ್ರೇಯಕ್ಕೂ ಸಾಧನವಾಗುತ್ತದೋ ಅದೇ ಧರ್ಮವೆಂದು ಹೇಳಿದ್ದಾರೆ. ಎಂದಮೇಲೆ ಈಗ ನಮ್ಮ ಹಿತದ ಮಾರ್ಗವೇ ಧರ್ಮ ಮಾರ್ಗವಲ್ಲವೆ? ಅದನ್ನು ನಿರಾಕರಿಸುವುದೇಕೆ? ಯಾರು ಧರ್ಮವೇ ಬೇಡವೆಂದು ಹೇಳುತ್ತಾರೆಯೋ ಅವರಿಗೆ ನಮ್ಮ ಧರ್ಮದ ಲಕ್ಷಣವೇ ತಿಳಿದಿಲ್ಲವೆಂದು ಹೇಳಬೇಕು. ಸ್ನಾನ ಸಂಧ್ಯಾದಿ ಕಾರ್ಯಗಳಿಗೇನೇ ಅವರು ಧರ್ಮವೆಂದು ತಿಳಿದಿದ್ದಾರೆ. ಅವೆಲ್ಲಾ ಕಾಲಮಾನಕ್ಕನುಗುಣವಾಗಿ ವ್ಯತ್ಯಾಸವಾಗತಕ್ಕ ಆಚಾರ ಧರ್ಮಕ್ಕೆ ಸೇರಿದವುಗಳೆಂಬುದನ್ನು ಅವರು ಅರಿಯರು.

"ಮಾಮನುಸ್ಮರ ಯುಧ್ಯ ಚ" ಎಂಬ ಗೀತೋಕ್ತಿಯಂತೆ ಪರಮಾತ್ಮನ ಸ್ಮರಣೆಯಿಂದ ಸಕಲರೂ ತಮ್ಮ ಕರ್ತವ್ಯದಲ್ಲಿ ದಕ್ಷರಾಗಿದ್ದರೇನೇ ಇಂಥ ಕಠಿಣ ಕಾಲದಲ್ಲಿ ಅವರು ವರ್ಣಾಶ್ರಮ ಧರ್ಮವನ್ನು ಪಾಲಿಸಿದಂತೆಯೇ ಸರಿ.

ವರ್ಣಾಶ್ರಮ ಧರ್ಮಗಳ ಪರಿಪಾಲನೆಯಿಂದಲೇ ಸ್ವರಾಜ್ಯ ದೊರೆಯುವುದೆಂದು ಅನೇಕರು ತಿಳಿದುಕೊಂಡಿದ್ದಾರೆ! ಆದರೆ ಅವರೇ ಈ ಕಲಿಯುಗದಲ್ಲಿ ಕ್ಷತ್ರಿಯ ಮತ್ತು ವೈಶ್ಯ ವರ್ಣಗಳಿಲ್ಲವೆಂತಲೂ ಬ್ರಾಹ್ಮಣ ಮತ್ತು ಶೂದ್ರ ಎಂಬ ಎರಡೇ ವರ್ಣಗಳಿವೆಯೆಂತಲೂ ಹೇಳುತ್ತಿದ್ದಾರೆ.

ಇವರ ಈ ಎರಡೂ ವಿಚಾರಗಳು ಪರಸ್ಪರ ವಿರುದ್ಧವಾಗಿಲ್ಲವೆ? ಈಗ ಕ್ಷತ್ರಿಯ ವರ್ಣವಿದೆಯೆಂದು ಇವರು ಹೇಳುವುದಾದರೆ ಅವರೇ ಯುದ್ಧಮಾಡಿ ಸ್ವರಾಜ್ಯ ಸಂಪಾದಿಸಬೇಕಲ್ಲವೆ? ಎಂದಮೇಲೆ ಇತರರ ಪ್ರಯತ್ನವಾದರೂ ಏಕೆ ಬೇಕು? ಹಿಂದಕ್ಕೆ ಶಿವಾಜಿ ಮಹಾರಾಜರು ಸ್ಥಾಪಿಸಿದ ಸ್ವರಾಜ್ಯ ಈ ಕಾಲದಲ್ಲಿ ಹೇಗೆ ತಾನೆ ಶಕ್ಯ? ಈಗ ಬೇಕಾದ ಸ್ವರಾಜ್ಯ ಜನಾಧಿಕಾರಕ್ಕೊಳಪಡುವಂತಹದು. ಅದನ್ನು ಸಂಪಾದಿಸಲು ಒಬ್ಬರು ಇನ್ನೊಬ್ಬರಿಗೆ ವಿರೋಧಿಸದೆ ತಮ್ಮ ತಮ್ಮ ಮಾರ್ಗಗಳಲ್ಲಿ ಕಾರ್ಯಮಾಡುವುದೇ ಕ್ಷೇಮಕರವು."

## ಹಿಂದು-ಮುಸ್ಲಿಂ ಐಕ್ಯ.

ಹಿಂದುಸ್ಥಾನದ ಸುಖ ಶಾಂತಿಗಳಿಗೆ ಹಿಂದು-ಮುಸಲ್ಮಾನರ ಐಕ್ಯವು ಅತ್ಯಂತ ಆವಶ್ಯಕವಾದುದೆಂಬ ವಿಷಯದಲ್ಲಿ ಮತಭೇದವೇ ಇಲ್ಲ. ಆದರೆ ಇದನ್ನು ಉಂಟುಮಾಡುವ ರೀತಿ ನೀತಿಗಳ ಸಂಬಂಧವಾಗಿ ಮಾತ್ರ ಭಿನ್ನಾಭಿಪ್ರಾಯಗಳಿವೆ. ಮುಸಲ್ಮಾನರ ಇಷ್ಟದಂತೆ ಹಿಂದುಗಳು ನಡೆದುಕೊಳ್ಳುವುದೇ ಹಿಂದು-ಮುಸಲ್ಮಾನ್ ಐಕ್ಯತೆಗೆ ಕಾರಣವೆಂದು ಕೆಲವರು ಹೇಳುತ್ತಿದ್ದಾರೆ. ಮುಸಲ್ಮಾನರು ನಮ್ಮ ಸಂಗಡ ಹೇಗೆ ನಡೆದುಕೊಳ್ಳುತ್ತಾರೆಯೋ ಹಾಗೆಯೇ ನಾವು ಅವರ ಸಂಗಡ ನಡೆದುಕೊಳ್ಳುವುದೇ ಹಿಂದು-ಮುಸಲ್ಮಾನ್ ಐಕ್ಯತೆಗೆ ಸಾಧನವೆಂದು ಕೆಲವರು ಹೇಳುತ್ತಿದ್ದಾರೆ. ಈ ಎರಡೂ ರೀತಿಗಳಿಂದ ಈಗ ಪ್ರಯತ್ನಗಳು ನಡೆಯುತ್ತಲೇ ಇವೆ.

ಪ್ರೊಫೆಸರ್ ಸಯ್ಯದ ಹುಸೇನ ಎಂಬುವವರು ಅನೇಕ ವರುಷ ಪಾಶ್ಚಾತ್ಯ ದೇಶಗಳಲ್ಲಿ ಸಂಚರಿಸಿ ಈಗ ತಾನೇ ಈ ದೇಶಕ್ಕೆ ಬಂದಿದ್ದಾರೆ. ಇವರು ಪತ್ರಿಕಾ ಪ್ರತಿನಿಧಿಗಳಲ್ಲಿ ಹೀಗೆ ಹೇಳಿದರು—

"ಅಲ್ಪ ಸಂಖ್ಯಾಕರ ಪ್ರಶ್ನೆಯು ಈ ದೇಶದಲ್ಲಿ ಅತ್ಯಂತ ಮಹತ್ವದ್ದಾಗಿದೆ. ಹಿಂದು ಮುಸಲ್ಮಾನರ ಐಕಮತ್ಯದ ವಿನಾ ಸ್ವತಂತ್ರ ಹಿಂದುಸ್ಥಾನದ ದೃಶ್ಯವು ನನ್ನ ಕಣ್ಣಿಗೆ ಕಾಣುವುದಿಲ್ಲ. ಬೇರೆ ದೇಶಗಳಿಗೆ ಹೋಲಿಸಿ ಈ ದೇಶವನ್ನು ನೋಡಿದರೆ ಇದು ಮಧ್ಯಯುಗದಲ್ಲಿದ್ದಂತೆ ಕಾಣುತ್ತದೆ. ನಾವು ಸತತ ಪ್ರಯತ್ನಮಾಡಿದ್ದಾದರೆ ಹಿಂದು ಮುಸಲ್ಮಾನ್ ಪ್ರಶ್ನೆಯ ಬಿಡುಗಡೆಯಾಗುವುದೆಂದೇ ನನಗೆ ತೋರುತ್ತದೆ. ಈ ಪ್ರಯತ್ನವನ್ನು ಎರಡೂ ಸಮಾಜಗಳ ಪ್ರಮುಖರು ಮಾಡಬೇಕಾದುದೇ ವಿನಾ ಇಂಗ್ಲೆಂಡಿನ ಬ್ರಿಟಿಶ್ ಮುತ್ಸದ್ದಿಗಳಾಗಲಿ ಅಥವಾ ಹಿಂದುಸ್ಥಾನದ ಬ್ರಿಟಿಶ್ ಪೋಲಿಸರಾಗಲಿ ಮಾಡತಕ್ಕದ್ದಲ್ಲ. ಈ ಸಂಬಂಧವಾದ ಪ್ರಯತ್ನದಲ್ಲಿ ಜಯ ದೊರೆಯಲಿಲ್ಲವೆಂದು ನಿರಾಶರಾಗಬಾರದು.

ಮುಂದಣ ಜನಾಂಗವು ಜಾತೀಯ ವೃತ್ತಿಯುಳ್ಳದ್ದಾಗಬಾರದೆಂದು ಈಗಲೇ ಮಕ್ಕಳಿಗೆ ಅಂತಹ ಶಿಕ್ಷಣವನ್ನು ಕೊಡಬೇಕು. ಬಾಲ್ಯದಲ್ಲಿ ದೊರೆತ ಈ ಶಿಕ್ಷಣವನ್ನು ಮುಂದೆ ಅವರು ಮರೆಯಲಾರರು."

## ಸ್ವಸ್ತಿಕ ಲೀಗ್.

ಕ್ರಿ. ಶ. ೧೯೨೯ ನೆಯ ಇಸವಿಯಲ್ಲಿ ಹಿಂದು-ಮುಸಲ್ಮಾನರ ದೊಂಬಿಯು ಮುಂಬೈಯಲ್ಲಿ ಬಹು ಭಯಂಕರವಾಗಿ ಜರುಗಿತಷ್ಟೆ. ಆ ಕಾಲದಲ್ಲಿ ಕೇವಲ ದೈವವನ್ನೇ ನಂಬಿ ಕುಳಿತಿದ್ದ ಹಿಂದು ಜನ ಸಾಮಾನ್ಯವು ಬಹು ವಿಪತ್ತಿಗೀಡಾಯಿತು. ಹಿಂದು ಸಂಘಟನೆಯು ಎಷ್ಟು ಅಗತ್ಯವೆಂಬುದು ಬಹು ಜನರಿಗೆ ಆಗ ಚೆನ್ನಾಗಿ ಗೊತ್ತಾಯಿತು. ಜನಸಾಮಾನ್ಯದ ಗುಂಪನ್ನು ಸಂರಕ್ಷಿಸಲು ಅನೇಕ ತರುಣರು ಆಗ ಮುಂದೆ ಬಂದು ಅನೇಕ ಸಾಹಸದ ಕಾರ್ಯಗಳನ್ನು ಮಾಡಿದರು.

ಮುಂಬೈಯಲ್ಲಿ ಆಗ ಉಂಟಾಗಿದ್ದ ಸ್ಥಿತಿಯನ್ನು ನೋಡಿ ಡಾ. ಜಿ. ಬಿ. ಗೋಳೆ, ಡಾ. ಸಿ. ಆರ್. ಆಠವಲೆ ಡಾ. ಎಸ್. ಎಸ್. ನಬನೀಸ, ಡಾ. ವ್ಹಿ. ಪಿ. ಕಾಮತ ಈ ನಾಲ್ಕು ಜನ ಡಾಕ್ಟರರು ಜನಸೇವೆಯ ಉದಾತ್ತ ಧ್ಯೇಯವನ್ನು ಮುಂದಿಟ್ಟು ಸ್ವಸ್ತಿಕ ಲೀಗ್ ಸಂಘವನ್ನು ಸ್ಥಾಪಿಸಿದರು.

ಈ ಸಂಘಕ್ಕೆ ೧೯೩೭ ನೆಯ ಇಸವಿ ಅಂತ್ಯದೊಳಗಾಗಿ ೯೯ ಸದಸ್ಯರಾಗಿದ್ದಾರೆ. ಬ್ಯಾ. ಜಯಕರರೇ ಈ ಸಂಘದ ಅಧ್ಯಕ್ಷರು. ಹಿಂದು-ಮುಸಲ್ಮಾನರ ದೊಂಬಿ, ಬಿಹಾರ ಭೂಕಂಪದಿಂದಾದ ಅನರ್ಥ ಮೊದಲಾದ ಲೋಕಸೇವೆಯ ಪ್ರತಿಯೊಂದು ಅಗತ್ಯದ ಕಾರ್ಯದಲ್ಲಿ ಈ ಲೀಗಿನವರು ಮುಂದರಿದು ಕೆಲಸ ಮಾಡುತ್ತಿದ್ದಾರೆ. ಈ ಸಂಘದ ಪರವಾಗಿ "ಸ್ವಸ್ತಿಕ ಹೆರಲ್ಡ್" ಎಂಬ ಮಾಸಪತ್ರಿಕೆಯೂ ಹೊರಡುತ್ತದೆ. ಶೇಟ ವರಜೀವನದಾಸ ಸರ್ರೈಯಾ ಇವರು ೨ ಸಾವಿರ ರೂ. ಗಳನ್ನು ಇದಕ್ಕೆ ಮೊದಲು ಕೊಟ್ಟರು. ಈಗ ಈ ಸಂಘದ ಸ್ವತಂತ್ರ ಕಟ್ಟಡವು ಮುಂಬೈಯಲ್ಲಿದೆ.

# ಲಿಂಗಾಯತ ಧರ್ಮ ಮತ್ತು ಸಂಸ್ಕೃತಿ.

[ಮಿಸ್. ವ್ಹಿ. ಟಿ. ಲಕ್ಷ್ಮೀ ಎಂ. ಎ. ಇವರು "ಮುಂಬೈ ಕ್ರಾನಿಕಲ್" ಪತ್ರಿಕೆಯ ತಾರೀಖು ೨೫-೭-೩೭ ನೆಯ ಸಂಚಿಕೆಯಲ್ಲಿ "ಲಿಂಗಾಯತ ಧರ್ಮ ಮತ್ತು ಸಂಸ್ಕೃತಿ"ಯ ಸಂಬಂಧವಾಗಿ ಒಂದು ಲೇಖನವನ್ನು ಬರೆದಿದ್ದಾರೆ. ಅದರ ಮುಖ್ಯಾಂಶವನ್ನು ಇಲ್ಲಿ ಕೊಟ್ಟಿದೆ.]

ಶಿವಸಂಸ್ಕೃತಿಯು ಹಿಂದುಸ್ಥಾನದಲ್ಲಿಯ ಅತ್ಯಂತ ಪ್ರಾಚೀನ ಮತ್ತು ಸುವಿಖ್ಯಾತ ಸಂಸ್ಕೃತಿಯು. ಋಗ್ವೇದದಲ್ಲಿ 'ರುದ್ರ' ನು ಒಬ್ಬ ಪ್ರಮುಖ ದೇವನೆಂದೇ ಉಲ್ಲೇಖಿಸಲ್ಪಟ್ಟಿದ್ದಾನೆ. ಯಜುರ್ವೇದ ಕಾಲದಲ್ಲಿ ಶಿವನೇ ಶಂಕರ ಮತ್ತು ಮಹಾದೇವನೆಂದೂ ಭಗವದ್ಗೀತೆಯಲ್ಲಿ ಸೃಷ್ಟಿಯನಿಯಾಮಕನೆಂದೂ ಹೇಳಲ್ಪಟ್ಟನು.

### ಶಿವ ಧರ್ಮದ ಸಂದೇಶ.

ಕ್ರಿಸ್ತ ಪೂರ್ವ ಮೂರನೆಯ ಶತಮಾನದ ವರೆಗೆ ಹಿಂದುಸ್ಥಾನದಲ್ಲಿ ಶಿವ ಧರ್ಮವು ಬಹು ಪ್ರಬಲವಾಗಿದ್ದಿತು. "ಸೋಹಂ" ಎಂಬ ಶ್ರೇಷ್ಠ ವಿಚಾರದ ಉತ್ಪಾದಕರಾದ ಬ್ರಾಹ್ಮಣರು ತಮ್ಮ ತ್ಯಾಗವೃತ್ತಿಯಿಂದ ಶ್ರೇಷ್ಠರಾಗಿ ಧಾರ್ಮಿಕಕ್ರಾಂತಿಯನ್ನುಂಟುಮಾಡಿದರು. ಕೊನೆಗೆ ಆ ಕ್ರಾಂತಿಯು ಜೈನ ಮತ್ತು ಬೌದ್ಧ ಧರ್ಮಗಳ ಉದಯಕ್ಕೆ ಕಾರಣವಾಯಿತು. ಈ ಶಿವ ಧರ್ಮದ ಸಂದೇಶವೇನೆಂದರೆ— ಪ್ರೇಮವು ಜ್ಞಾನಕ್ಕಿಂತ ಶ್ರೇಷ್ಠವಾದುದು. ಮತ್ತು ಮುಕ್ತಿಗಿಂತ ಸೇವೆಯು ಹೆಚ್ಚಿನದು.

ಈ ಹೊಸದಾಗಿ ಉದಯವಾದ ಧರ್ಮಗಳೂ ಹಿಂದುಳಿದು ಶೈವ ಧರ್ಮವೇ ಮುಂದರಿಯಿತು. ಹರಿಹರರಲ್ಲಿ ಭೇದವಿಲ್ಲವೆಂತಲೂ ಹರಿ ಹರ ಬ್ರಹ್ಮ ಮೂರೂ ಒಂದೇ ಎಂತಲೂ ಪ್ರತಿಪಾದಿಸುವ ರೀತಿಗಳೂ ಉಂಟಾದವು. ಆದರೆ ಅವು ಹೆಚ್ಚು ಪ್ರಸಾರವಾಗಲಿಲ್ಲ. ಸಾಂಪ್ರದಾಯಕ ಮತಗಳೇ ಮುಂದರಿದವು. ಈ ಹೋರಾಟದಲ್ಲಿ ಜೈನ ಮತ್ತು ಬೌದ್ಧ ಮತಗಳು ಮಾತ್ರ ಕ್ಷೀಣಿಸಿದವು. ಆರು ಮತ್ತು ಒಂಬತ್ತನೆಯ ಶತಮಾನಗಳಲ್ಲಿ ಜೈನ ಮತ್ತು ಬೌದ್ಧ ಮತಗಳ ವಿರುದ್ಧವಾಗಿ ಕಾಶ್ಮೀರದಲ್ಲಿ ಶೈವ ಪಂಥವು ಉದಯಹೊಂದಿ ಬಹು ಪ್ರಬಲವಾಯಿತು. ಆಗಿನ ಕಾರ್ಯಕರ್ತರನ್ನು ಅಭಿನಂದಿಸಬೇಕಾಗಿದೆ.

ಈ ಶೈವ ಮತೋದ್ಧಾರಕರಲ್ಲಿ ಶಂಕರಾಚಾರ್ಯರೇ ಪ್ರಮುಖರು. ಇವರ ಪ್ರಯತ್ನದಿಂದ ಶೈವ ಮತದಲ್ಲಿದ್ದ ಅನೇಕ ದೋಷಗಳು ನಿವಾರಣೆಯಾದವು. ಹತ್ತನೆಯ ಶತಮಾನದಲ್ಲಿ ದಕ್ಷಿಣ ಹಿಂದುಸ್ಥಾನದಲ್ಲಿ ಶೈವಮತವು ಪ್ರಬಲವಾಯಿತು. ಇದಕ್ಕೆ ಪಾಶುಪತ ಮತವೆನ್ನುತ್ತಾರೆ. ಮಹಾಭಾರತದ ಶಾಂತಿಪರ್ವದಲ್ಲಿ ಈ ಪಾಶುಪತ ಮತದ ಉಲ್ಲೇಖವಿದೆ. ಇದನ್ನು ಶ್ಲಾಘಿಸಿದ್ದಾರೆ. ಈ ಮತದ ಸಂಸ್ಥಾಪಕನು ಲಕುಲೀಶನು. ವಾಯು ಪುರಾಣ ಮತ್ತು ಕೂರ್ಮ ಪುರಾಣಗಳಲ್ಲಿ ಈ ಲಕುಲೀಶನ ಸಂಬಂಧವಾಗಿ ಬರೆಯಲ್ಪಟ್ಟಿದೆ. ಇದು ಹಿಂದಿನ ಶೈವ ಮತದ ಪುನರುದ್ಧಾರವೇ ಸರಿ. ಇದು ವೈದಿಕ ಮತವೇ ಆಗಿತ್ತು.

### ಬಸವನ ಮಹತ್ಕಾರ್ಯ.

ಅನಂತರ ಕಲಚೂರಿ ಬಿಜ್ಜಳ ರಾಜನ ಕಾಲದಲ್ಲಿ ಬಸವನು ಶಿವಪೂಜೆಯ ಪ್ರಸಾರಗೊಳಿಸಿ ಅನೇಕ ಸುಧಾರಣೆಗಳನ್ನೂ ಸಂಸ್ಕಾರಗಳನ್ನೂ ಪ್ರಯತ್ನಪೂರ್ವಕ ಉಂಟುಮಾಡಿ ಶೈವ ಧರ್ಮಕ್ಕೆ ಪುನಃ ಜೈತನ್ಯವನ್ನುಂಟುಮಾಡಿದನು. ಈತನ ವೀರಶೈವ "ಲಿಂಗಾಯತ" ಅಥವಾ "ಲಿಂಗವಂತ" ಎಂಬ ಪಂಥದಲ್ಲಿರುವ ಶ್ರೇಷ್ಠ ತತ್ವಗಳನ್ನು ನೋಡಿ ಅನೇಕರು ಸ್ವಸಂತೋಷದಿಂದ ದೀಕ್ಷೆ ಹೊಂದಿ ಈ ಮತದಲ್ಲಿ ಸೇರಿದರು.

ಬೇರೆ ಶೈವರಿಗೂ ಇವರಿಗೂ ಬಾಹ್ಯದಲ್ಲಿ ವ್ಯತ್ಯಾಸವೇನೆಂದರೆ, ಇವರು ಬೆಳ್ಳಿಯ ಒಂದು ಸಣ್ಣ ಡಬ್ಬಿಯಲ್ಲಿ ಲಿಂಗವನ್ನು ಇರಿಸಿ ಅದನ್ನು ತಮ್ಮ ದೇಹದ ಮೇಲೆ ಧರಿಸಿಕೊಂಡು ಯಾವಾಗಲೂ ತಮ್ಮ ಹತ್ತಿರವೇ ಇಟ್ಟುಕೊಳ್ಳುವುದು.

ಈ ಲಿಂಗವಂತರು ತಾವು ಸಂಪೂರ್ಣ ಶೈವ ಧರ್ಮದವರೆಂದೇ ಹೇಳಿಕೊಳ್ಳುತ್ತಿದ್ದರು. ಇವರು ಶೂರರೂ, ಸಾಹಸಿಗಳೂ ಇದ್ದರು. ಇವರ ಸಮಾಜದಲ್ಲಿ ಬ್ರಾಹ್ಮಣಾದಿ ಎಲ್ಲ ಜಾತಿಯವರೂ ಇದ್ದರು.

ಈ ಜನರು ವ್ಯಾಪಾರವನ್ನೇ ತಮ್ಮ ಮುಖ್ಯ ಉದ್ಯೋಗವನ್ನಾಗಿಟ್ಟುಕೊಂಡರು. ಇವರಲ್ಲಿಯ ಬ್ರಾಹ್ಮಣರಿಗೆ ಆರಾಧ್ಯರೆಂದು ಹೇಳುತ್ತಿದ್ದರು. ಅವರು ವೀರಶೈವರ ಮಾತೃ ಭಾಷೆಯಾದ ಕನ್ನಡದಲ್ಲಿ ಬಹು ಪಾಂಡಿತ್ಯವನ್ನು ಹೊಂದಿ ಉತ್ತರದಿಂದ ಆಕ್ರಮಣ ನಡೆಸಿದ್ದ ಮರಾಠಿ ಭಾಷೆಯಿಂದ ಕನ್ನಡವನ್ನು ರಕ್ಷಿಸಿದರು. ಇವರು ಒಕ್ಕಲತನದವರ ಸೇವೆಯನ್ನು ಮಾಡುತ್ತಿದ್ದರು. ಸಾಹಸಿಗಳೂ ಬುದ್ಧಿಶಾಲಿಗಳೂ ಆದ ಜನರು ದೇಶ ವಿದೇಶಗಳಲ್ಲಿ ಸಂಚರಿಸಿ ವ್ಯಾಪಾರಮಾಡುತ್ತಿದ್ದರು.

### ವೀರಶೈವರ ಆಚಾರ ವಿಚಾರ.

ವೀರಶೈವರು ಲಿಂಗವನ್ನೂ ಶಿವನ ವಾಹನವಾದ ನಂದಿಯನ್ನೂ ಪೂಜಿಸುತ್ತಿದ್ದರು. ವೇದಾಧಿಕಾರವನ್ನು ಅಮಾನ್ಯಮಾಡುತ್ತಿದ್ದರು. ಪುನರ್ಜನ್ಮವನ್ನು ನಂಬುತ್ತಿರಲಿಲ್ಲ. ಬಾಲ್ಯ ವಿವಾಹದ ತಿರಸ್ಕಾರ, ವಿಧವಾ ವಿವಾಹಕ್ಕೆ ಮಾನ್ಯತೆ. ಗುರು (ಉಪದೇಶಕ) ಲಿಂಗ (ಲಿಂಗ ಮೂರ್ತಿ) ಜಂಗಮ (ಸಹಧರ್ಮಿಗಳು) ಈ ಮೂವರ ಸೇವೆಯಲ್ಲಿಯೇ ಸಕಲ ಪುಣ್ಯಗಳಿವೆಯೆಂದು ಇವರು ತಿಳಿದ್ದರು. ಮಂತ್ರೋಪದೇಶ ಮತ್ತು ಲಿಂಗಧಾರಣ ಸ್ತ್ರೀಪುರುಷರಿಗೂ ಸಲ್ಲುತ್ತಿತ್ತು.

ಮದ್ಯ, ಮಾಂಸ, ಎಲೆ ತಿನ್ನುವುದು, ಇವು ನಿಷಿದ್ಧ. ಗುರುಗಳು ಕಾವಿ ಬಣ್ಣದ ಬಟ್ಟೆಯನ್ನು ಧರಿಸುತ್ತಿದ್ದರು. ವೀರಶೈವ ಧರ್ಮ ಸಂಸ್ಥಾಪಕರು ಒಕ್ಕಲತನದವರ ಹಿತಾರ್ಥವಾಗಿ ಈ ಕೆಳಗಿನಂತೆ ಪ್ರಯತ್ನಿಸಿದರು.

### ಲೋಕ ಸೇವೆಯ ರೀತಿಯು.

ಹಿಂದುಸ್ಥಾನದ ಮುಂದೆ ಅವರು ಅತ್ಯುತ್ತಮವಾದ ವ್ಯಾಪಕ ಧರ್ಮವನ್ನಿಟ್ಟರು. ಜಾತಿ, ಯಾತ್ರೆ, ಜಪ, ತಪಾದಿಗಳ ಅಂಧ ಶ್ರದ್ಧೆಯನ್ನು ನಿವಾರಣೆಮಾಡಿ ಅವುಗಳ ನಿರರ್ಥಕತೆಯನ್ನು ಜಗತ್ತಿಗೆ ತೋರಿಸಿದರು. ಬಾಲವಿಧವೆಯರಿಗೆ ಪುನರ್ವಿವಾಹಕ್ಕೆ ಅವಕಾಶಕೊಟ್ಟು ಅವರ ದುಃಖವನ್ನು ನಿವಾರಣೆಮಾಡಿ ಪ್ರೌಢ ವಿವಾಹವನ್ನು ಬಳಕೆಯಲ್ಲಿ ತಂದು ಅದು ಜನಪ್ರಿಯವಾಗುವಂತೆ ಮಾಡಿದರು. ಕನ್ನಡ ಭಾಷೆಯನ್ನು ಅಭಿವೃದ್ಧಿಗೆ ತಂದು ಅದರಲ್ಲಿ ಶ್ರೇಷ್ಠ ಸಂಸ್ಕೃತಿಯನ್ನು ನಿರ್ಮಾಣಮಾಡಿದರು. ಪ್ರಗತಿಪರ ವಿಚಾರಿಗಳೂ ಸಾಹಸಿಗಳೂ ಆದ ವರ್ತಕರು ದೇಶದ ವ್ಯಾಪಾರವನ್ನು ಹೆಚ್ಚಿಸಿದರು.

ಈ ಪ್ರಕಾರ ವೀರಶೈವರು ಧಾರ್ಮಿಕ, ಸಾಮಾಜಿಕ, ಆರ್ಥಿಕ, ವಾಙ್ಮಯಾತ್ಮಕ ಮುಂತಾದ ಎಲ್ಲ ಸಂಗತಿಗಳಲ್ಲಿಯೂ ತಮ್ಮ ದೇಶವು ಅಭಿವೃದ್ಧಿಗೆ ಬರುವಂತೆ ಪ್ರಯತ್ನಿಸಿದರು. ಇವರ ಈ ಸೇವೆಯು ಎಂದೂ ನಿರ್ಲಕ್ಷಿಸಲ್ಪಡತಕ್ಕುದಾಗಿಲ್ಲ.

ವೀರಶೈವ ಮತೋದ್ಧಾರಕನಾದ ಬಸವನ ವಿಚಾರಗಳು ಆತನ ಕಾಲದ ಮಾನದಂತೆ ಬಹು ಮುಂದರಿದವುಗಳು.

ಸಾದಾ ಜೀವನವುಳ್ಳವನೂ ಶ್ರೇಷ್ಠ ವಿಚಾರಸರಣಿಯವನೂ ಇದ್ದನು. ಧಾರ್ಮಿಕ ಜೀವನವು ಸಾಮಾಜಿಕದಿಂದ ಬೇರೆಯಿಲ್ಲವೆಂಬುದೇ ಆತನ ಸಿದ್ಧಾಂತ. ರೈಸ್ ಸಾಹೇಬರ ಮಾತಿನಲ್ಲಿ ಹೇಳಬೇಕೆಂದರೆ "ಬಸವನು ಧಾರ್ಮಿಕ ಸುಧಾರಣೆಯಿಂದಲೇ ಸಾಮಾಜಿಕ ಕ್ರಾಂತಿಯನ್ನುಂಟುಮಾಡಿದನು."

### ವೀರಶೈವ ಧರ್ಮದ ಶ್ರೇಷ್ಠತ್ವ.

ವೀರಶೈವ ಧರ್ಮವು ಸಾದಾತನದಲ್ಲಿ ಬೌದ್ಧ ಧರ್ಮಕ್ಕೆ ಸಮಾನವಾದುದಾಗಿದೆ. ತಾತ್ವಿಕ ವಿಷಯಗಳಲ್ಲಿ ವೈದಿಕ ಧರ್ಮಕ್ಕೆ ಸಮಾನವಾಗಿದೆ. ಕ್ರೈಸ್ತ ಧರ್ಮದಂತೆ ಅದರಲ್ಲಿ ಪ್ರೇಮದ ಮಹತ್ವವೂ ಇದೆ. ಇಸ್ಲಾಂ ಧರ್ಮದಂತೆ ಶಾಂತಿ ಮತ್ತು ಸುವ್ಯವಸ್ಥೆಗಳೂ ಅದರಲ್ಲಿವೆ. ಇಂಥ ವೀರಶೈವ ಧರ್ಮವು ೧೨ ನೆಯ ಶತಮಾನದಲ್ಲಿ ಕನ್ನಡ ಮತ್ತು ತೆಲಗು ದೇಶಗಳಲ್ಲಿ ಬಹು ಪ್ರಸಿದ್ಧವಾಗಿ ಶೋಭಿಸುತ್ತಿತ್ತು. ನಾಸ್ತಿಕವಾದದ ಹತ್ತಿರಕ್ಕೆ ಬಂದಿದ್ದ ಜೈನ ಮತದ ಮುಂದಣ ಅನರ್ಥಗಳನ್ನು ನಿವಾರಿಸಲಿಕ್ಕೂ ಬ್ರಾಹ್ಮಣರ ವರ್ಚಸ್ಸನ್ನು ಅಮಾನ್ಯಮಾಡುವುದಕ್ಕೂ ಪ್ರೌಢ ವಿವಾಹ ಮತ್ತು ವಿಧವಾ ವಿವಾಹಗಳನ್ನು ಮಾನ್ಯಮಾಡುವುದಕ್ಕೂ ಈ ಧರ್ಮವು ಏರ್ಪಟ್ಟಿತು. ಹಿಂದುಸ್ಥಾನದ ಧರ್ಮ ರತ್ನಮುಕುಟದಲ್ಲಿ ಇದೊಂದು ಧರ್ಮ ರತ್ನವು ಸೇಖರವಾಯಿತೆಂಬುದು ಸತ್ಯವಾದ ಸಂಗತಿಯಾಗಿದೆ."

[ವೀರಶೈವ ಸಂಜೀವನಿ.]

---

## ಡಾ. ಲಾಲಾ ಹರದಯಾಲರು ಯಾರು?

——:‍:೦:‍:——

ಮೊನ್ನೆ ಕೇಂದ್ರಶಾಸನ ಮಂಡಲದಲ್ಲಿ ಡಾ. ಹರದಯಾಲರ ಪ್ರಶ್ನೆ ಬಂದಿತ್ತು. ಸರ್. ಸಪ್ರುರವರೂ ಹರದಯಾಲರು ತನ್ನ ಪರಿಚಯದವರೆಂದು ತಿಳಿಸಿದರು. ಇವರು ಮಹಾನ್ ರಾಷ್ಟ್ರಭಕ್ತರು. ಆದರೆ ಇವರ ಮಾರ್ಗ ಬೇರೆಯಿತ್ತು. ಈಗ ಇವರು ಶಾಂತಿಮಾರ್ಗದಲ್ಲಿದ್ದಾರೇದು ತಿಳಿಯಲಾಗಿದೆ. ಹಿಂದುಸ್ಥಾನದ ಅನೇಕ ವೀರ ರಾಷ್ಟ್ರಭಕ್ತರಲ್ಲಿ ಇವರೂ ಒಬ್ಬರು. ಪರದೇಶಗಳಲ್ಲಿರುವ ಭಾರತೀಯ ದೇಶಭಕ್ತರ ಮೇಲೆ ಸರಕಾರದ ದಬ್ಬಾಳಿಕೆಯ ಪ್ರತಿಬಂಧವಿರಕೂಡದೆಂದೇ ಈಗ ಈ ದೇಶದಲ್ಲಿ ಪ್ರಬಲವಾದ ಚಟುವಟಿಕೆ ನಡೆದಿದೆ.

ಡಾ. ಹರದಯಾಲರು ಈಗ ಫ್ರಾನ್ಸ್ ದೇಶದಲ್ಲಿದ್ದಾರಂತೆ. ಅವರು ಈ ದೇಶಕ್ಕೆ ಬರಲು ಯಾವ ಪ್ರತಿಬಂಧವೂ ಇರಕೂಡದೆಂದೇ ರಾಷ್ಟ್ರದ ಅಪೇಕ್ಷೆ. ಈ ಮಹಾನ್ ದೇಶಭಕ್ತರ ಸ್ವಲ್ಪ ಪರಿಚಯವು ಈ ಕೆಳಗಿನ ಸಂಗತಿಗಳಿಂದ ನಮ್ಮ ವಾಚಕರಿಗೆ ಆಗಬಹುದು.

ಲಾಲಾ ಹರದಯಾಲರು ದಿಲ್ಲಿಯಲ್ಲಿ ೧೮೮೪ ನೆಯ ಇಸವಿಯಲ್ಲಿ ಒಂದು ಪ್ರತಿಷ್ಠಿತ ಮನೆತನದಲ್ಲಿ ಜನ್ಮವೆತ್ತಿದರು. ಇವರು ಬಹು ಚುರುಕುಬುದ್ಧಿಯವರು. ವಿದ್ಯಾಭ್ಯಾಸದಲ್ಲಿ ಎಲ್ಲರಿಗಿಂತ ಮುಂದೆ. ಲಾಹೋರ ಸರಕಾರಿ ಕಾಲೇಜಿನಲ್ಲಿ ಕಲಿತು ೧೯೦೬ ರಲ್ಲಿ ಎಂ. ಎ. ಪರೀಕ್ಷೆಯಲ್ಲಿ ಪಂಜಾಬ ವಿಶ್ವವಿದ್ಯಾಲಯಕ್ಕೇನೇ ಒಂದನೆಯವರಾಗಿ ತೇರ್ಗಡೆಯಾದರು.

ಇವರು ಇಂಗ್ಲಿಷ್ ಭಾಷೆಯಲ್ಲಿ ಅದ್ವಿತೀಯ ಪಾಂಡಿತ್ಯವುಳ್ಳವರು. ಪರೀಕ್ಷೆಯಲ್ಲಿ ೧೦೦ ಕ್ಕೆ ೧೦೦ ಗುಣಗಳನ್ನು ಹೊಂದಿದ್ದರು. ಅನಂತರ ಇತಿಹಾಸ ವಿಷಯವನ್ನು ಅಧ್ಯಯನಮಾಡಿ ಅದರಲ್ಲಿಯೂ ಎಂ. ಎ. ಪದವಿಯನ್ನು ಅತ್ಯಂತ ಉನ್ನತ ರೀತಿಯಲ್ಲಿ ಹೊಂದಿದರು. ಸರಕಾರದವರು ಇವರ ಬುದ್ಧಿ ವೈಭವವನ್ನು ನೋಡಿ ಮುಂದಣ ಶಿಕ್ಷಣಕ್ಕಾಗಿ ವಾರ್ಷಿಕ ೨೦೦ ಪೌಂಡುಗಳ ವಿದ್ಯಾರ್ಥಿ ವೇತನವನ್ನು ಕೊಟ್ಟು ೧೯೦೬ ರಲ್ಲಿ ಇಂಗ್ಲೆಂಡಿಗೆ ಕಳಿಸಿದರು.

### ವಿಚಾರ ಪರಿವರ್ತನೆ.

ಆಕ್ಸಫರ್ಡ ವಿಶ್ವವಿದ್ಯಾಲಯದಲ್ಲಿ ಅಭ್ಯಾಸಮಾಡುತ್ತಿದ್ದಾಗ ಪ್ರಸಿದ್ಧ ಭಾರತೀಯ ಕ್ರಾಂತಿಕಾರಕರಾಗಿದ್ದ ಶಾಮಜಿ ಕೃಷ್ಣವರ್ಮರ ಪರಿಚಯವಾಯಿತು. ಅವರ ವಿಚಾರಸರಣಿ ಇವರಿಗೆ ಸರಿತೋರಿತು.

ಹಿಂದುಸ್ಥಾನವನ್ನು ಸ್ವತಂತ್ರ ಮಾಡಬೇಕೆಂಬುದೇ ಇವರ ಧ್ಯೇಯವಾಗಿ ಪರಿಣಮಿಸಿತು. ಇಂಗ್ಲಿಷ್ ಸರಕಾರದ ವಿಷಯದಲ್ಲಿ ಅಸಹಕಾರವನ್ನು ತೊಟ್ಟರು. ತಮಗೆ ದೊರೆಯುತ್ತಿದ್ದ ೨೦೦ ಪೌಂಡುಗಳ ವೇತನವನ್ನು ತ್ಯಾಗಮಾಡಿ ೧೯೦೭ ರಲ್ಲಿ ಹಿಂದುಸ್ಥಾನಕ್ಕೆ ಬಂದರು.

ಆಗ ಇವರಿಗೆ ೨೩ ವರುಷ ಮಾತ್ರ. ಬಿಸಿ ರಕ್ತ. ಮಹಾಮೇಧಾವಿಗಳು, ಉತ್ಸಾಹ ಮತ್ತು ತ್ಯಾಗ ವೃತ್ತಿಗಳಿಂದ ಎಂತಹ ಕಠಿಣ ಕಾರ್ಯವನ್ನಾದರೂ ಕೈಕೊಳ್ಳಲು ಸಿದ್ಧರಾದರು. ಈ ದೇಶಕ್ಕೆ ಬಂದೊಡನೆ ಪಾಶ್ಚಾತ್ಯ ಪದ್ಧತಿಯ ಉಡುಪನ್ನು ತೆಗೆದುಹಾಕಿ ದೇಶಿ ಬಟ್ಟೆಗಳನ್ನು ದೇಶದ ಪದ್ಧತಿಯಂತೆಯೇ ಧರಿಸಲಾರಂಭಿಸಿದರು.

ಮುಸಲ್ಮಾನ್ ಮತ್ತು ಕ್ರಿಸ್ತರ ಸಂಬಂಧವನ್ನಿಟ್ಟುಕೊಳ್ಳಲಿಲ್ಲ. ಇವರು ಪರದೇಶಿ ಸಂಸ್ಕೃತಿಯನ್ನು ಬೆಳೆಯಿಸತಕ್ಕವರೆಂದೇ ವೀರ ಹರದಯಾಲರು ತಿಳಿದರು. ಈ ದೇಶದಲ್ಲಿ ರಾಜಕೀಯ ಚಟುವಟಿಕೆಯನ್ನು ಪ್ರಬಲವಾಗಿ ನಡೆಯಿಸಲು ಪ್ರಾರಂಭಿಸಿದರು. ಆಗ ಕೆಲವರ ಸಲಹೆ ಪ್ರಕಾರ ೧೯೦೮ ರಲ್ಲಿ ಈ ದೇಶವನ್ನು ಬಿಟ್ಟು ಫ್ರಾನ್ಸ್ ದೇಶಕ್ಕೆ ಹೋಗಿ ತಮ್ಮ ಮುಂದಾಳುಗಳಾಗಿದ್ದ ಶಾಮಜಿ ಕೃಷ್ಣವರ್ಮರ ಸಂಗಡ ಇರಲಾರಂಭಿಸಿದರು.

### ಹಿಂಸಾಮಯ ಕ್ರಾಂತಿ ವಿಚಾರ.

ಹಿಂಸಾಮಯ ಕ್ರಾಂತಿಯಿಂದ ಹಿಂದುಸ್ಥಾನಕ್ಕೆ ಸ್ವತಂತ್ರತೆಯನ್ನುಂಟುಮಾಡಬೇಕೆಂದು ಇವರು ಯೋಚಿಸಿದರು. ಫ್ರಾನ್ಸ್ ದೇಶದಲ್ಲಿ ಫ್ರೆಂಚ್ ಮತ್ತು ಜರ್ಮನ್ ಭಾಷೆಗಳನ್ನು ಕಲಿತು ೧೯೧೧ ರಲ್ಲಿ ಅಮೇರಿಕೆಗೆ ಹೋದರು. ಅಲ್ಲಿ 'ಕೆಲಿಫೋರ್ನಿಯೋ" ವಿಶ್ವ ವಿದ್ಯಾಲಯದಲ್ಲಿ ಹಿಂದು ತತ್ವಜ್ಞಾನ ಬೋಧಕರಾಗಿ ಹಿಂದಿ ವಿದ್ಯಾರ್ಥಿಗಳಲ್ಲಿ ತಮ್ಮ ಕ್ರಾಂತಿಯ ವಿಚಾರಗಳನ್ನು ಪ್ರಸಾರಗೊಳಿಸಲಾರಂಭಿಸಿದರು.

ಇವರ ಅದ್ವಿತೀಯ ಪಾಂಡಿತ್ಯ, ಅಸಾಧಾರಣವಾದ ಉಪದೇಶ ಕ್ರಮಗಳಿಂದ ವಿದ್ಯಾರ್ಥಿ ವೃಂದವು ಸ್ವಲ್ಪ ದಿನಗಳಲ್ಲಿಯೇ ಇವರ ಕಡೆಗೆ ತಿರುಗಿತು. ಇವರ ಉಗ್ರತರವಾದ ವಿಚಾರಪ್ರಚಾರವನ್ನು ಅಲ್ಲಿಯ ಸರಕಾರದವರು ನೋಡಿ ಇವರನ್ನು ಪ್ರತಿಬಂಧಗೊಳಿಸಿದರು. ಆದರೆ ತಮ್ಮ ಅನುಯಾಯಿಗಳ ಸಹಾಯದಿಂದ ಬಿಡುಗಡೆ ಹೊಂದಿ ೧೯೧೪ ರಲ್ಲಿ ಸ್ವಿತ್ಸರ್ಲಂಡ್ ದೇಶಕ್ಕೆ ಹೋದರು.

ಮಹಾ ಯುದ್ಧವು ಪ್ರಾರಂಭವಾದೊಡನೆ ಜರ್ಮನಿಗೆ ಹೋಗಿ ಅಲ್ಲಿಯ ಇಂಡಿಯನ್ ಕಮಿಟಿಯಲ್ಲಿ ಸೇರಿದರು. ಇವರ ವಿಚಾರಸರಣಿಯನ್ನು ಜರ್ಮನ್ ಸರಕಾರದವರು ತಿಳಿದುಕೊಂಡು ಮಹಾ ಯುದ್ಧ ನಿಲ್ಲುವವರೆಗೂ ಜರ್ಮನಿಯಿಂದ ಇವರು ಬೇರೆ ಕಡೆ ಹೋಗಕೂಡದೆಂದು ಪ್ರತಿಬಂಧಗೊಳಿಸಿದರು. ಆದುದರಿಂದ ೩ ವರುಷ ೮ ತಿಂಗಳು ಜರ್ಮನಿಯಲ್ಲಿಯೇ ಇವರು ಇರಬೇಕಾಯಿತು.

## ವಿಮರ್ಶಾತ್ಮಕ ಪ್ರಶ್ನೋತ್ತರ.

### ಹಿಂದು ಮಹಾಸಭೆಯ ಕಾರ್ಯಕ್ರಮ.

ಪ್ರಶ್ನೆ— ನಿಮ್ಮ ಪತ್ರಿಕೆಯನ್ನು ಓದಿದ ಮೇಲೆ ನಾನು. ಹಿಂದು ಮಹಾಸಭೆಯ ಸದಸ್ಯನಾಗಬೇಕೆಂದು ಯೋಚಿಸಿದೆ. ಆದರೆ ಕರ್ನಾಟಕದಲ್ಲಿ ಆ ಸಭೆ ಇದ್ದಂತೆ ನನಗೆ ಕಾಣಲಿಲ್ಲ. ಕರ್ನಾಟಕದಲ್ಲಿ ಯಾಕೆ ಆ ಸಭೆಯನ್ನು ಸ್ಥಾಪಿಸಲಿಲ್ಲ?

ಉತ್ತರ— ವಿಜಾಪುರ ಮತ್ತು ಬೆಳಗಾವ ಈ ಎರಡು ಸ್ಥಳಗಳಲ್ಲಿ ಹಿಂದು ಮಹಾಸಭೆಯ ಶಾಖೆಗಳಿವೆಯೆಂದು ನಾವು ಕೇಳಿದ್ದೇವೆ. ನೀವು ಅಲ್ಲಿಗೆ ಬರೆದು ತಿಳಿದುಕೊಳ್ಳಬೇಕಾಗಿತ್ತು.

ಪ್ರಶ್ನೆ— ನಿಮ್ಮ ಪತ್ರಿಕೆಯಲ್ಲಿ ಆ ಸಂಗತಿಯನ್ನು ನಾನು ಓದಿದ್ದೆನು. ಆಯಾಯ ಸ್ಥಳಗಳಿಗೆ ಪತ್ರ ಬರೆದರೆ ಉತ್ತರವೇ ಇಲ್ಲ. ಪುಣೆಯಲ್ಲಿರುವ ಹಿಂದು ಮಹಾಸಭೆಗೆ ಪತ್ರ ಬರೆದೆನು. ಅವರು ಸದಸ್ಯರನ್ನು ಮಾಡಿಕೊಳ್ಳುವುದಾಗಿ ತಿಳಿಸಿದರು. ಆದರೆ ನಾನು ಕನ್ನಡಿಗನು. ಆ ಮರಾಠಿ ಪ್ರಾಂತದ ಸದಸ್ಯನಾಗಲು ಇಷ್ಟಪಡಲಿಲ್ಲ. ಕನ್ನಡಿಗರು ಈ ಕಾರ್ಯದಲ್ಲಿ ಯಾಕೆ ಮುಂದರಿಯಬಾರದು?

ಉತ್ತರ— ಕನ್ನಡಿಗರಿಗೇ ಏಕೆ? ದಕ್ಷಿಣ ಹಿಂದುಸ್ಥಾನದವರಿಗೇನೇ ಈ ಹಿಂದು ಮಹಾಸಭೆಯ ಕಾರ್ಯ ಕಲಾಪಗಳು ಈಗ ಬೇಕಾಗಿಲ್ಲ. ಉತ್ತರ ಹಿಂದುಸ್ಥಾನದ ಮಹಾಸಭಾ ಪ್ರಮುಖರಿಗಾದರೂ ತಮ್ಮ ಕಾರ್ಯವು ದಕ್ಷಿಣ ದೇಶದಲ್ಲಿಯೂ ಜರುಗಬೇಕೆಂಬ ಇಷ್ಟವೆಲ್ಲಿದೆ? ಹಾಗಿದ್ದಿದ್ದರೆ ಇಷ್ಟರಲ್ಲಿ ಸ್ವಲ್ಪಾದರೂ ಕಾರ್ಯ ಜರುಗುತ್ತಿದ್ದಿತು.

ಪ್ರಶ್ನೆ— ಹಿಂದು ಸಮಾಜದ ಹಿತಕ್ಕಾಗಿ ಈ. ಪ್ರಕಾರ ಉತ್ತರ ದೇಶ ಮತ್ತು ದಕ್ಷಿಣ ದೇಶ ಎಂಬ ಭೇದಮಾಡುವುದೇಕೆ? ದಕ್ಷಿಣ ದೇಶದ ಹಿಂದು ಸಮಾಜವು ಎಲ್ಲ ರೀತಿಗಳಿಂದ ಉನ್ನತಿಯನ್ನು ಹೊಂದಿದೆಯೋ? ಇಲ್ಲಿ ಸುಧಾರಿಸತಕ್ಕ ಸಂಗತಿಗಳಿಲ್ಲವೆ? ಉತ್ತರ ದೇಶದ ಹಿಂದು ಮುಂದಾಳುಗಳಾದರೂ ಈ ಕಡೆಗೆ ಯಾಕೆ ಲಕ್ಷಿಸಬಾರದು?

ಉತ್ತರ— ಹಿಂದು ಮಹಾಸಭೆ ಸ್ಥಾಪನೆಯಾಗಿ ೨೦ ವರುಷಗಳಾಗುತ್ತಾ ಬಂದರೂ ಪುಣೆಯಿಂದ ದಕ್ಷಿಣಕ್ಕೆ ಒಂದುಸಾರೆಯಾದರೂ ಈ ಸಭೆಯ ಅಧಿವೇಶನ ಕೂಡಿದೆಯೋ? ಪುಣೆಯವರೆಗೆ ಬಂದುದಾದರೂ ಮೊನ್ನೆ. ಎಂದಮೇಲೆ ಈ ಮಹಾಸಭೆಯ ಚಾಲಕರ ದೃಷ್ಟಿಯ ಮುಂದೆ ಅಖಿಲ ಹಿಂದುಸ್ಥಾನದ ಹಿಂದು ಸಮಾಜದ ದೃಶ್ಯವಿದೆಯೆಂದು ಹೇಳಲಿಕ್ಕಾಗುವುದೆ?

ಉತ್ತರ ದೇಶದಲ್ಲಿ ಮುಸಲ್ಮಾನರ ಪ್ರಾಬಲ್ಯ ಹೆಚ್ಚು. ಅವರ ಆಕ್ರಮಣವೂ ಅವ್ಯಾಹತವಾಗಿ ಭಿನ್ನ ಭಿನ್ನ ರೀತಿಗಳಿಂದ ಬಹುಕಾಲ ನಡೆಯುತ್ತಲೇ ಬಂದಿದೆ. ಆದಕಾರಣ ಆ ಭಾಗದ ಹಿಂದುಗಳು ಸ್ವಸಂರಕ್ಷಣೆಯ ದೃಷ್ಟಿಯಿಂದ ಹಿಂದು ಸಮಾಜದ ಕಡೆಗೆ ಲಕ್ಷಿಸಿ ಅದರಲ್ಲಿ ಸಂಘಟನೆ ಮಾಡಬೇಕೆಂದಿದ್ದಾರೆ. ದಕ್ಷಿಣದವರ ಕಡೆಗೆ ಅವರೇಕೆ ಲಕ್ಷಿಸುವರು?

ಪ್ರಶ್ನೆ— ದಕ್ಷಿಣ ದೇಶದಲ್ಲಿ ಕ್ರಿಸ್ತ ಮತ ಪ್ರಸಾರವು ಬಹು ಕಾಲದಿಂದಲೂ ಅವ್ಯಾಹತವಾಗಿ ನಡೆದಿಲ್ಲವೆ? ಉತ್ತರದವರಿಗೆ ಮುಸಲ್ಮಾನರ ಪ್ರಶ್ನೆಯಿದ್ದಂತೆ ದಕ್ಷಿಣದವರಿಗೆ ಕ್ರಿಸ್ತರ ಪ್ರಶ್ನೆಯಿಲ್ಲವೆ?

ಉತ್ತರ— ದಕ್ಷಿಣ ದೇಶದಲ್ಲಿ ಮತಾಚಾರಗಳ ಕಟ್ಟು ಉತ್ತರಕ್ಕಿಂತಲೂ ಹೆಚ್ಚು. ಮುಸಲ್ಮಾನರ ಅನೇಕ ಶತಮಾನಗಳ ಆಕ್ರಮಣದಿಂದ ಉತ್ತರದ ಹಿಂದುಗಳಲ್ಲಿ ದಕ್ಷಿಣದವರಷ್ಟು ಪರಸ್ಪರ ವೈಷಮ್ಯ ಉಳಿದಿಲ್ಲ. ದಕ್ಷಿಣದಲ್ಲಿ ಕ್ರಿಸ್ತ ಮತಕ್ಕೆ ಸೇರುವವರೆಲ್ಲಾ ಹೆಚ್ಚಾಗಿ ಆದಿ ಹಿಂದುಗಳೇ ಮೊದಲಾದ ಕೀಳು ಕುಲದವರೆಂದು ತಿಳಿಯಲ್ಪಟ್ಟವರು. ಅದೊಂದು ಅಪವಿತ್ರ ಜನಾಂಗ ಹೋಗಿಬಿಟ್ಟರೆ ತಾವು ಸ್ವಲ್ಪೇ ಜನರಾದರೂ ಪರಿಶುದ್ಧರಿರುತ್ತೇವೆಂದೇ ಅನೇಕರ ಕಲ್ಪನೆ. ಮುಸಲ್ಮಾನರಂತೆ ಕ್ರಿಸ್ತರು ಉಗ್ರವಾದ ಆಕ್ರಮಣ ಮಾರ್ಗವನ್ನೂ ಅನುಸರಿಸುವುದಿಲ್ಲ. ಅಲ್ಲದೆ ಇವರು ಮುಸಲ್ಮಾನರಷ್ಟು ಬಹು ಸಂಖ್ಯಾಕರಾಗಿಲ್ಲ.

ಪ್ರಶ್ನೆ— ಹಾಗಾದರೆ ಈಗಿನ ಹಿಂದು ಮಹಾಸಭೆಯ ಕಾರ್ಯ ಅಷ್ಟು ವ್ಯಾಪಕವಾದುದಲ್ಲವೆ? ಇದರ ಕಡೆಗೆ ಲಕ್ಷಿಸುವ ಅಗತ್ಯವಿಲ್ಲವೆ?

ಉತ್ತರ— ಹಿಂದು ಸಮಾಜ ಸುಧಾರಣೆಯ ಕಾರ್ಯ ಅತ್ಯಂತ ಮಹತ್ವವಾದುದು. ೨೫ ಕೋಟಿ ಹಿಂದುಗಳು ಧಾರ್ಮಿಕ ಮತ್ತು ಸಾಮಾಜಿಕ ದೃಷ್ಟಿಗಳಿಂದ ಒಂದಾದರೆ, ಈ ದೇಶದ ಕಡೆಗೆ ಕೆಟ್ಟ ದೃಷ್ಟಿಯಿಂದ ನೋಡಲು ಜಗತ್ತಿನ ಎಂತಹ ಬಲಾಢ್ಯ ರಾಷ್ಟ್ರಕ್ಕೂ ಧೈರ್ಯವಾಗಲಾರದು. ಮನುಷ್ಯ ಜಾತಿಯ ಸುಖಶಾಂತಿಗಳಿಗೆ ಎಷ್ಟೋ ಸಹಾಯವಾಗುವುದು. ಹಿಂದು ಮಹಾಸಭೆಯ ಶಾಖೆಗಳು ಹಿಂದುಸ್ಥಾನದ ಎಲ್ಲ ಕಡೆಗಳಲ್ಲಿಯೂ ವ್ಯಾಪಿಸಬೇಕು. ಎಲ್ಲ ಭಾಗಗಳ ಹಿಂದುಗಳಿಗೂ ಸಂಬಂಧಿಸಿರುವ ಅಸ್ಪೃಶ್ಯತಾ ನಿವಾರಣೆ ಮೊದಲಾದ ನಾಲ್ಕೈದು ಮುಖ್ಯ ವಿಧಾಯಕ ಕಾರ್ಯಗಳನ್ನು ಗೊತ್ತುಮಾಡಿ ಅವುಗಳಿಗಾಗಿಯೇ ಪ್ರಚಂಡ ಚಟುವಟಿಕೆಯನ್ನು ಪ್ರಾರಂಭಿಸಬೇಕು.

ಈಗ ರಾಜಕಾರಣದ ಕಡೆಗೇ ಇದ್ದ ಇದರ ಒಲವು ಹೋಗಬೇಕು. ಇದು ಕೇವಲ ಧಾರ್ಮಿಕ ಮತ್ತು ಸಾಮಾಜಿಕ ಕಾರ್ಯಗಳ ಸಂಸ್ಥೆಯಾಗಿಯೇ ಪರಿಣಮಿಸಬೇಕು. ಈ ವಿಧವಾದ ಕಾರ್ಯ ಈಗಲೇ ಅಗತ್ಯವಾಗಿದೆಯೆಂದಲ್ಲ; ಈ ದೇಶಕ್ಕೆ ಸ್ವರಾಜ್ಯ ದೊರೆತ ಮೇಲೆಯೂ ಅತ್ಯಗತ್ಯವಾಗಿಯೇ ಇದೆ.

---

### ಶಾಂತಿಯ ಮಾರ್ಗ ತೋರಿತು.

ಹೀಗೆ ವೀರ ಹರದಯಾಲರು ೧೪ ವರುಷ ಹಿಂಸಾಮಯ ಕ್ರಾಂತಿಯ ವಿಚಾರದಲ್ಲಿಯೇ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಸಂಚರಿಸಿದನಂತರ ಆ ಮಾರ್ಗವು ಸರಿಯಲ್ಲವೆಂದೂ ಶಾಂತಿಯ ಮಾರ್ಗವೇ ಯುಕ್ತವೆಂದೂ ತಿಳಿದುಕೊಂಡರು. ಮಹಾತ್ಮಾ ಗಾಂಧಿಯವರು ೧೯೨೦ ರಲ್ಲಿ ಪ್ರಾರಂಭಿಸಿದ ಅತ್ಯದ್ಭುತವಾದ ಶಾಂತಿಮಾರ್ಗದ ಕಾರ್ಯಕ್ರಮಗಳ ಪರಿಣಾಮವೂ ಇವರ ಮನಸ್ಸಿನ ಮೇಲೆ ಆಗಿರಬೇಕು. ಆದುದರಿಂದ ಹಿಂಸಾ ಮಾರ್ಗವನ್ನು ಬಿಟ್ಟು ಇಂಗ್ಲೆಂಡಿಗೆ ಬಂದು ಮತ್ತೆ ವಿದ್ಯಾಭ್ಯಾಸವನ್ನು ಮಾಡಲಾರಂಭಿಸಿದರು.

೧೯೨೫ ರಲ್ಲಿ ಲಂಡನ್ ವಿಶ್ವವಿದ್ಯಾಲಯದಲ್ಲಿ ಸೇರಲು ಅಪ್ಪಣೆಯನ್ನು ಹೊಂದಿ ಪಿ. ಎಚ್. ಡಿ. ಪದವಿಯನ್ನು ಹೊಂದಿದರು.

### ಯೋಗಿ ಹರದಯಾಲರು.

ಡಾ. ಹರದಯಾಲರು ಈಗ ಮಹಾ ತತ್ವಜ್ಞಾನಿಗಳಾಗಿದ್ದಾರೆ. ಆ ವಿಚಾರವಾಗಿ ಮಹಾ ಗ್ರಂಥವನ್ನು ಬರೆಯುತ್ತಿದ್ದಾರೆ. ಶಾಂತಿಮಾರ್ಗವನ್ನೇ ಲೋಕಕ್ಕೆ ಬೋಧಿಸುವವರಾಗಿದ್ದಾರೆ.

ಇಂತಹ ಮಹಾನ್ ವ್ಯಕ್ತಿಯು ಜಾಗ್ರತೆ ಈ ದೇಶಕ್ಕೆ ಬಂದು ಹಿಂದುಸ್ಥಾನಕ್ಕೆ ಶೋಭಿಸತಕ್ಕಂತಹ ಅಹಿಂಸಾಮಯ ಮಾರ್ಗದಿಂದ ಭಾರತಮಾತೆಯ ಸೇವೆಯನ್ನು ಮಾಡುವ ಸಮಯ ಪ್ರಾಪ್ತವಾಗಲಿ.

# ದೇಶ ತಾಯಿ. ಧರ್ಮ ತಂದೆ.




## ಹಿಂದುಗಳು ದೇಶದ್ರೋಹಿಗಳಾಗಲಿ, ಧರ್ಮದ್ರೋಹಿಗಳಾಗಲಿ, ಆಗಬಾರದು.

—ಮಸೂರಾಶ್ರಮ ಪತ್ರಿಕಾ.

### ಯಾರು ತಾಯಿ ತಂದೆಗಳು?

ನಾವು ಹುಟ್ಟಿದ ದೇಶ ನಮಗೆ ನಮ್ಮ ತಾಯಿಯೆಂಬುದು ಬಹು ಜನರಿಗೆ ಗೊತ್ತು. ಆ ತಾಯಿಯ ಸ್ವಾತಂತ್ರ್ಯಕ್ಕಾಗಿ ಹೋರಾಡುವ ವೀರರೂ ಹೆಚ್ಚುತ್ತಿದ್ದಾರೆ, ಆದರೆ ನಮ್ಮ ತಂದೆ ಯಾರೆಂಬುದನ್ನು ತಿಳಿದುಕೊಂಡವರು ಕಡಿಮೆ. ತಾಯಿಯನ್ನು ಬಂಧನದಿಂದ ಬಿಡಿಸುವಾಗ ತಂದೆಯನ್ನು ಕೊಲೆ ಮಾಡಬೇಕೆ? ಹಿಂದುಗಳೆಂದು ಹೇಳಿಕೊಳ್ಳುವವರಿಗೆ, ಅನೇಕ ಮಹಾವಿಭೂತಿಗಳ ಅದ್ವಿತೀಯವಾದ ಆತ್ಮ ಜ್ಞಾನದಿಂದುಂಟಾದ ಪವಿತ್ರ ಸಂಸ್ಕೃತಿಯಲ್ಲಿ ಬೆಳೆದವರಿಗೆ, ಮನುಷ್ಯತ್ವದ ಸುಖಶಾಂತಿಗಳನ್ನನುಭವಿಸುವ ದಿವ್ಯ ಮಾರ್ಗವನ್ನು ಜಗತ್ತಿಗೆ ತೋರಿಸಿದವರ ವಂಶಜರಿಗೆ, ತಂದೆ ಯಾರು? ಹಿಂದು ಧರ್ಮವಲ್ಲವೆ? ತಂದೆಯ ಕೊಲೆ ಮಾಡಿದ ರಕ್ತದ ಕೈಯಿಂದ ತಾಯಿಯ ಪಾರತಂತ್ರ್ಯ ಪಾಶವನ್ನು ಹರಿಯ ಹೋದರೆ ತಾಯಿಗೆ ಸಂತೋಷವೆ?

ಈಗ ನಮ್ಮ ತಾಯಿ ತಂದೆಗಳೀರ್ವರಿಗೂ ವಿಪತ್ತು ಬಂದಿದೆ. ಕಾಂಗ್ರೆಸ್ ಪಕ್ಷವು ತೋರಿಸುವ ಮಾರ್ಗದಲ್ಲಿ ನಡೆದು ತಾಯಿಯ ಪಾರತಂತ್ರ್ಯ ಕಳೆಯಬೇಕು. ಹಿಂದು ಮಹಾಸಭೆಯು ಸೂಚಿಸುವಂತೆ ಆಚರಿಸಿ ತಂದೆಯ ರಕ್ಷಣೆ ಮಾಡಬೇಕು. ಈ ಉಭಯ ಕಾರ್ಯಗಳು ಎಂದು ಜಯಪ್ರದವಾಗುವವೋ ಅಂದೇ ನಿಜವಾದ ವಿಜಯಾದಶಮಿ. ಅದು ಜಾಗ್ರತೆ ಬರಲಿ.

### ಸಿಂಹಲ ದ್ವೀಪದ ಹಿಂದು ಸಂಸ್ಕೃತಿ.

ಭಾರತಮಾತೆಯ ಅಡಿಯಲ್ಲಿ ತಾವರೆಯಂತೆ ಶೋಭಿಸುವ ಸಿಂಹಲದ್ವೀಪವು ಹಿಂದು ಸಂಸ್ಕೃತಿಯಿಂದ ವ್ಯಾಪಿಸಲ್ಪಟ್ಟಿದು. ಅಲ್ಲಿ ಈಗ ೫೫ ಲಕ್ಷ ಜನಸಂಖ್ಯೆ ಇದೆ.

ಹಿಂದುಸ್ಥಾನವು ಯಾರ ಮಾತೃ ಭೂಮಿಯೋ ಮತ್ತು ಈ ಪುಣ್ಯ ಭೂಮಿಯಲ್ಲಿ ಅವತರಿಸಿದ ಮಹಾತ್ಮನ ಮತವನ್ನೇ ಯಾರು ಅನುಸರಿಸುತ್ತಾರೆಯೋ ಅವರೇ ಹಿಂದುಗಳೆಂದು ಬ್ಯಾ. ಸಾವರಕರರು ಹೇಳಿರುವುದು ಹಿಂದು ಮಹಾ ಸಭೆಗೂ ಒಪ್ಪಿಗೆಯಾಗಿದೆಯಷ್ಟೆ. ಈ ವ್ಯಾಖ್ಯೆಯ ಪ್ರಕಾರ ಹಿಂದುಸ್ಥಾನದ ಬೌದ್ಧರು ಕೂಡಾ ಹಿಂದುಗಳಾಗಿಯೇ ಪರಿಣಮಿಸುತ್ತಾರೆ. ಸಿಂಹಲದ್ವೀಪದಲ್ಲಿರುವ. ಬೌದ್ಧರು ಹಿಂದು ಸಂಸ್ಕೃತಿಯನ್ನು ಹೇಗೆ ಸಂರಕ್ಷಿಸುತ್ತಿದ್ದಾರೆಂಬುದು ಈ ಕೆಳಗಿನ ಸಂಗತಿಗಳಿಂದ ಗೊತ್ತಾಗುವುದು.

ಸಿಂಹಲದ್ವೀಪದಲ್ಲಿ ಬಹು ಸಂಖ್ಯಾಕರು ಬೌದ್ಧರು. ಹಿಂದುಗಳು ೧೩-೧೪ ಲಕ್ಷ ಜನರು ಮಾತ್ರ ಇದ್ದಾರೆ. ಆದರೂ ಆ ದೇಶದಲ್ಲಿ ಸಾಧಾರಣ ಎರಡು ಸಾವಿರ ದೇವಾಲಯಗಳಿವೆ. ಅವುಗಳಲ್ಲಿ ಗಣಪತಿ ಮತ್ತು ಷಣ್ಮುಖನ ದೇವರ ಗುಡಿಗಳೇ ಹೆಚ್ಚು. ಇವುಗಳಲ್ಲಿ ಅನೇಕ ದೇವಾಲಯಗಳು ಬುದ್ಧರ ಸ್ವಾಧೀನದಲ್ಲಿವೆ. ಅವುಗಳ ಪೂಜೆಯನ್ನು ಮಾಡುವವರು ಬುದ್ಧರೇ.

ಬುದ್ಧರ ಮಂದಿರಗಳೂ ಹಿಂದುಗಳ ದೇವಾಲಯಗಳೂ ಒಂದಕ್ಕೊಂದು ಹೊಂದಿಯು ಕೂಡಾ ಇವೆ. ಕಟರಾಗಂ ಎಂಬಲ್ಲಿಯ ಸ್ಕಂದನ, ತ್ರಿಂಕೋಮಾಲಿ ಮತ್ತು ಯುವನೇಶ್ವರ ಎಂಬಲ್ಲಿಯ ಶಿವನ, ಮತ್ತು ಡೊಂಡ್ರಾ ಎಂಬಲ್ಲಿಯ ವಿಷ್ಣುವಿನ ದೇವಾಲಯಗಳು ಬಹು ಮಹತ್ವವಾದವುಗಳು. ಇವು ಬುದ್ಧರ ಸ್ವಾಧೀನದಲ್ಲಿದ್ದು ಅವರಿಂದಲೇ ಪೂಜಿಸಲ್ಪಡುತ್ತಲಿವೆ. ಇಂತಹ ಪರಮತ ಸಹಿಷ್ಣುತೆಯಿಂದಲೇ ಹಿಂದು ಸಂಘಟನೆಯಾಗುವುದು.

### ಶುದ್ಧಿ-ಸಂಘಟನೆ.

—ಕಳೆದ ೨೮ ನೆಯ ತಾರೀಖಿನ ದಿವಸ ಧುಳೆ ಪಟ್ಟಣದಲ್ಲಿ ಶ್ರೀಮತಿ ಕೇಶರಬಾಯಿ ಎಂಬುವವರಿಗೆ ಹಿಂದು ಧರ್ಮದ ದೀಕ್ಷೆ ಕೊಟ್ಟು ಸ್ವಧರ್ಮದಲ್ಲಿ ತೆಗೆದುಕೊಂಡದ್ದಾಯಿತು. ಪರಧರ್ಮದವರ ಬಲತ್ಕಾರದಿಂದ ಈ ಹೆಣ್ಣುಮಗಳು ಧರ್ಮಭ್ರಷ್ಟಳಾಗಿದ್ದಳು. ಈ ಹೆಣ್ಣುಮಗಳ ಪತಿ ಶ್ರೀ. ಗಿರಿಧರ ಪಾಟೀಲ ಎಂಬುವವರು ಈ ದೀಕ್ಷಾ ಸಮಾರಂಭಕ್ಕೆ ಬಂದಿದ್ದರು. ತನ್ನ ಸತಿಯನ್ನು ಪುನಃ ಸ್ವೀಕರಿಸುವುದಾಗಿ ಹೇಳಿದರು.

—ಶೀಖ, ಜೈನ, ಲಿಂಗಾಯತ, ಮಾನಭಾವ, ಆರ್ಯ ಸಮಾಜ, ನೇಪಾಳಿ, ಸನಾತನಿ, ಇವರೆಲ್ಲರೂ ಹಿಂದುಗಳಲ್ಲಿಯ ಬೇರೆ ಬೇರೆ ಪಂಗಡದವರು. ಇವರೆಲ್ಲರೂ ಸಂಘಟಿತರಾಗಬೇಕು.

—ಶ್ರೀ ಮಹದೇವ ಶಾಸ್ತ್ರಿ ದಿವೇಕರ.



ಶಾ. ಶ. ೧೮೫೯ ನೆಯ ಆಶ್ವೀನ ಶು|| ೭ ಸೋಮವಾರ.

# ಹಿಂದು-ಮುಸಲ್ಮಾನರ ಐಕಮತ್ಯ.

ಹಿಂದುಸ್ಥಾನಕ್ಕೆ ಸ್ವತಂತ್ರ ಬೇಕಾಗಿದ್ದರೆ ಹಿಂದು ಮತ್ತು ಮುಸಲ್ಮಾನರು ಐಕಮತ್ಯದಿಂದಿರಬೇಕೆಂದು ಅನೇಕರು ಅನೇಕ ದಿವಸಗಳಿಂದ ಹೇಳುತ್ತಾ ಬಂದಿದ್ದಾರೆ. ಅನೇಕರು ಈ ಉಭಯ ಜನಾಂಗಗಳಲ್ಲಿ ಐಕಮತ್ಯವುಂಟಾಗಲು ಅನೇಕ ರೀತಿಗಳಿಂದ ಈ ವರೆಗೂ ಪ್ರಯತ್ನಿಸಿದ್ದಾರೆ. ಈಗಲೂ ಪ್ರಯತ್ನಿಸುತ್ತಿದ್ದಾರೆ. ಕಳೆದ ೩೦ ವರುಷಗಳಿಂದ ಈ ವಿಷಯವು ಹಿಂದುಸ್ಥಾನದ ರಾಜಕಾರಣದಲ್ಲಿ ದಿನೆ ದಿನೆ ಬಹು ಮಹತ್ವದ್ದಾಗಿಯೇ ಪರಿಣಮಿಸುತ್ತಾ ಇದೆ. ಪ್ರಾಂತಿಕ ಪ್ರಭುತ್ವ ಪ್ರಾರಂಭವಾದಮೇಲೆ ಮತ್ತೆ ಈ ವಿಷಯಕ್ಕೆ ಹೊಸ ಹುರುಪು ಬಂದು ಉಭಯ ಸಮಾಜಗಳ ಐಕಮತ್ಯಕ್ಕಾಗಿ ವಿಶೇಷ ಪ್ರಯತ್ನ ನಡೆದಿದೆ.

ಹೀಗೆ ಪುನಃ ಪುನಃ ಪ್ರಯತ್ನ ಮಾಡಬೇಕಾದುದೇ ಯುಕ್ತವಾಗಿದೆ. ಹಿಂದು-ಮುಸಲ್ಮಾನರ ಐಕಮತ್ಯವು ಪೂರ್ವ ಪಶ್ಚಿಮಗಳ ಏಕತ್ವದಂತೆಯೇ ಅಶಕ್ಯವೆಂತಲೂ ಕೆಲವರು ತಿಳಿದಿರುವುದುಂಟು. ಕೆಲವರಾದರೋ ಇದೇನು ದೊಡ್ಡ ವಿಷಯ? ಇದಕ್ಕಾಗಿ ಪರಿಶ್ರಮಪಡದೆ ನಾವು ಬ್ರಿಟಿಶ್ ಸರಕಾರದ ಸಂಗಡ ಕಠೋರತರವಾಗಿ ಹೋರಾಡಿದರೆ ಸ್ವಾತಂತ್ರ್ಯ ಬಂದೇಬರುತ್ತದೆಂದು ತಿಳಿದವರೂ ಇದ್ದಾರೆ. ಈ ಉಭಯರ ವಿಚಾರಸರಣಿಯೂ ಸರಿಯಲ್ಲವೆಂದು ಹಿಂದು ಮುಸಲ್ಮಾನರ ಐಕಮತ್ಯ ಶಕ್ಯವಿದೆಯೆಂತಲೂ ಇದು ಅತ್ಯವಶ್ಯಕವಾಗಿ ಸ್ವಾತಂತ್ರ್ಯ ಪ್ರಾಪ್ತಿಗೆ ಬೇಕೆಂತಲೂ ತಿಳಿದ ಬಹು ಜನ ಮುಂದಾಳುಗಳು ಪುನಃ ಪುನಃ ಪ್ರಯತ್ನವನ್ನು ಮಾಡುತ್ತಲೇ ಇದ್ದಾರೆ. ಆ ಪ್ರಯತ್ನಗಳು ಸಂಪೂರ್ಣ ಫಲಕಾರಿಯಾಗದಿದ್ದರೂ ಎಷ್ಟೋಮಟ್ಟಿಗೆ ಅನುಕೂಲ ಪರಿಸ್ಥಿತಿಯನ್ನುಂಟು ಮಾಡುತ್ತಾ ಇವೆ.

ಈಗಿನ ಎಲ್ಲ ಪ್ರಯತ್ನಗಳನ್ನು ಮುಖ್ಯವಾಗಿ ಎರಡು ಪ್ರಕಾರ ವಿಂಗಡಿಸಬಹುದು. (೧) ಮುಸಲ್ಮಾನರು ಹಿಂದುಗಳ ಸಂಗಡ ಯಾವ ರೀತಿನೀತಿಧೋರಣಗಳಿಂದ ನಡೆದುಕೊಳ್ಳುತ್ತಾರೆಯೋ ಅದೇ ಪ್ರಕಾರ ಹಿಂದುಗಳೂ ಅವರ ಸಂಗಡ ನಡೆದುಕೊಳ್ಳಬೇಕು. (೨) ಹಿಂಸೆಯನ್ನು ಅಹಿಂಸೆಯಿಂದ ಗೆಲ್ಲುವಂತೆ ಮುಸಲ್ಮಾನರ ಜಾತಿನಿಷ್ಠೆಯನ್ನು ಹಿಂದುಗಳು ರಾಷ್ಟ್ರ ನಿಷ್ಠೆಯಿಂದ ಗೆದ್ದು ಹಿಂದು ಮುಸಲ್ಮಾನ್ ಐಕಮತ್ಯವನ್ನುಂಟುಮಾಡಬೇಕು.

ಹಿಂದುಸ್ಥಾನದ ರಾಜಕೀಯ ಕ್ಷೇತ್ರದಲ್ಲಿರುವ ಪಂಗಡಗಳಲ್ಲಿ ಲೋಕಶಾಹಿ ಸ್ವರಾಜ್ಯಪಕ್ಷ, ಹಿಂದುಮಹಾಸಭಾ ಪಕ್ಷ ಇವು ಮೇಲಣ ಒಂದನೆಯ ರೀತಿಯಂತೆಯೂ ಕಾಂಗ್ರೆಸ್ ಪಕ್ಷವು ಎರಡನೆಯ ರೀತಿಯಂತೆಯೂ ನಡೆಯತಕ್ಕವುಗಳಾಗಿವೆಯೆಂದು ಸಾಮಾನ್ಯವಾಗಿ ಹೇಳಬಹುದು.

## ಇದೊಂದು ಮಲ್ಲಯುದ್ಧದ ಹಿಡಿತವೆ?

ಹಿಂದು-ಮುಸಲ್ಮಾನರ ಐಕಮತ್ಯಕ್ಕಾಗಿ ಹಿಂದು ಮುಂದಾಳುಗಳು ಎಷ್ಟು ಅಭಿರುಚಿ ಆತುರಗಳುಳ್ಳವರಾಗಿದ್ದಾರೆಯೋ ಅಷ್ಟು ಮುಸಲ್ಮಾನ್ ಮುಂದಾಳುಗಳಿಲ್ಲವೆಂಬುದು ನಿರ್ವಿವಾದವಾದ ಸಂಗತಿಯು. ಐಕಮತ್ಯವಾಗಬೇಕಾದರೆ ಉಭಯ ಪಕ್ಷಗಳಿಗೂ ಅದರ ಆತುರವಿರಬೇಕಾದುದೂ ಅಗತ್ಯ. ಹಿಂದುಗಳು ಈ ದೇಶದಲ್ಲಿ ಬಹು ಸಂಖ್ಯಾಕರು, ಎಂದಮೇಲೆ ಪಾರತಂತ್ರ್ಯದ ದುಃಖ ಅವರಿಗೆ ಹೆಚ್ಚು ಪ್ರಮಾಣದಲ್ಲಿ ಬಾಧಿಸುವುದು ಸ್ವಾಭಾವಿಕ. ಆಗ ಅವರು ಹೆಚ್ಚು ಸ್ವಾರ್ಥತ್ಯಾಗ ಮಾಡಬೇಕಾದ ಪ್ರಸಂಗ ಬಂದೇ ಬರುವುದು. ಎಂದಮೇಲೆ 'ಕಾಳಗಕ್ಕೆ ನಮ್ಮಣ್ಣ; ಕುಳಿತು ಉಣ್ಣಲಿಕ್ಕೆ ನಾನ.' ಎಂಬಂತೆ ಮುಸಲ್ಮಾನರು ಯೋಚಿಸಿದರೆ ಅದೇನೂ ಮನುಷ್ಯ ಸ್ವಭಾವಕ್ಕೆ ಬಾರದ ಸಂಗತಿಯಲ್ಲ. ಇದಲ್ಲದೆ "ಒಡಕು ಹುಟ್ಟಿಸಿ ಒಡೆತನ ಮಾಡುವ" ವಿದ್ಯೆಯಲ್ಲಿ ಬಲ್ಲಿದರಾದ ಇಂಗ್ಲಿಷ ಸರಕಾರದವರು ತಮಗೆ ಎಷ್ಟೋ ಅನುಕೂಲಮಾಡಿಕೊಡುತ್ತಿದ್ದಾರೆಂಬುದು ಮುಸಲ್ಮಾನರ ಅನುಭವದ ಸಂಗತಿಯಾಗಿಯೂ ಇದೆ. ಆದುದರಿಂದ ಈ ವಿಷಯ ಇಷ್ಟು ಬಿಗುವಾಗಿದೆ.

ಈಗ ಮೇಲಿನ ಎರಡು ಮಾರ್ಗಗಳಿಂದಲೂ ಪ್ರಯತ್ನಗಳು ನಡೆದಿವೆ. ಜಾತಿ ನಿರ್ಣಯವನ್ನು ಕಾಂಗ್ರೆಸ್ ಪಕ್ಷವು ಖಂಡತುಂಡಾಗಿ ಏಕೆ ನಿಷೇಧಿಸಲಿಲ್ಲವೆಂಬುದು ಈಗಲಾದರೂ ಸೂರ್ಯಪ್ರಕಾಶದಷ್ಟು ಸ್ಪಷ್ಟ ತೋರುತ್ತದೆ. ಮುಸಲ್ಮಾನರ ವಿಷಯದಲ್ಲಿ ಕಾಂಗ್ರೆಸ್ ದಾಕ್ಷಿಣ್ಯ ವೃತ್ತಿಯಿಂದ ನಡೆಯುವುದಿಲ್ಲವೆಂದು ಇನ್ನು ಮೇಲಾದರೂ ಯಾರಿಗೂ ಹೇಳಲಿಕ್ಕೆ ಬರುವಂತಿಲ್ಲ. ಬಿಹಾರ ಪ್ರಾಂತದಲ್ಲಿ ಘಟನಾಸಮಿತಿಯ ಸಂಬಂಧವಾಗಿ ಆದ ಠರಾವನವೇ ಇದಕ್ಕೆ ಸಾಕ್ಷಿ. ಬಿಹಾರ ಪ್ರಾಂತದ ಮಂತ್ರಿಗಳಾದ ಡಾ. ಸೈಯದ ಮಹಮ್ಮದರವರೇ "ಮುಸಲ್ಮಾನರನ್ನು ಸಂತೋಷಗೊಳಿಸಲಿಕ್ಕಾಗಿಯೇ ಕಾಂಗ್ರೆಸ್ಸು ಜಾತಿ ನಿರ್ಣಯವನ್ನು ಒಪ್ಪಿತು." ಎಂದು ಸ್ಪಷ್ಟ ಹೇಳಿದ್ದಾರೆ.

ರಾಜಕಾರಣದ ಮಲ್ಲಯುದ್ಧದಲ್ಲಿ ಕಾಂಗ್ರೆಸ್ ಪಕ್ಷವು ಇದೊಂದು ಹಿಡಿತದಿಂದಲೇ ಈಗ ನಡೆಯುತ್ತಲಿದೆಯೆಂದು ಅನೇಕರು ಹೇಳುವುದುಂಟು. ಇಂಗ್ಲಿಷರು ಮುಸಲ್ಮಾನರನ್ನು ತಮ್ಮ ಕಡೆ ಮಾಡಿಕೊಂಡಂತೆ ನಾವಾದರೂ ಈಗ ನಮ್ಮ ಕಡೆ ಮಾಡಿಕೊಳ್ಳಲು ಹೀಗೆ ನಡೆಯುವುದೇ ವಿಹಿತವೆಂತಲೂ ಅವರ ಪ್ರತಿಪಾದನೆ. ಹಾಗಾದರೆ ಸತ್ಯದ ಮರೆಯಲ್ಲಿ ಈ ಹಿಡಿತ ಇರಬಾರದು. ಆದಿ ಹಿಂದುಗಳಿಗೆ ಪ್ರತ್ಯೇಕ ಪ್ರಾತಿನಿಧ್ಯದಲ್ಲಿದ್ದ ಸ್ಥಳಗಳಿಗಿಂತಲೂ ಈಗ ಹೆಚ್ಚು ಸ್ಥಳಗಳನ್ನು ಕೊಟ್ಟಂತೆ ಸಂಯುಕ್ತ ಮತದಾರ ಪದ್ಧತಿಯನ್ನು ಸೇರಿಸಿ ಈಗಿನಕ್ಕಿಂತಲೂ ಇವರಿಗೆ ಹೆಚ್ಚಿಗೆ ಸ್ಥಳಗಳನ್ನು ಕೊಡಬೇಕು. ಹಾಗೆ ಮಾಡಿದರೆ ಜಾತಿನಿಷ್ಠೆಯನ್ನು ರಾಷ್ಟ್ರ ನಿಷ್ಠೆಯಿಂದ ಗೆದ್ದಂತಾಗುವುದಲ್ಲದೆ ಅಸತ್ಯವನ್ನು ಸತ್ಯದಿಂದಲೂ ಗೆದ್ದಂತಾಗುವುದು. ಕಾಂಗ್ರೆಸ್ ಪಕ್ಷವು ಈಗಿನ ಅರಾಷ್ಟ್ರೀಯ ರೀತಿಯನ್ನು ಬಿಟ್ಟು ಹೀಗೆ ಮಾಡುವುದು ಹಿತವಲ್ಲವೆ?

# ಕಾಂಗ್ರೆಸ್-ಮುಸ್ಲಿಂಲೀಗ್ ಹೋರಾಟ.




## ಕಾಂಗ್ರೆಸ್ - ಮುಸ್ಲಿಂಲೀಗ್ ಹೋರಾಟ.

ಸಂಯುಕ್ತ ಪ್ರಾಂತದಲ್ಲಿ ಕಾಂಗ್ರೆಸ್ ಪಕ್ಷಕ್ಕೂ ಮುಸ್ಲಿಂ ಲೀಗಿಗೂ ಹೆಚ್ಚಾದ ಹೋರಾಟ. ಪಂಡಿತ ಜವಾಹರಲಾಲ ನೆಹರುರವರು ಮುಸಲ್ಮಾನರನ್ನು ಕಾಂಗ್ರೆಸ್ಸಿನಲ್ಲಿ ಸೇರಿಸಿಕೊಳ್ಳಬೇಕೆಂದು ಪ್ರತ್ಯೇಕವಾದ ಏರ್ಪಾಟನ್ನೇ ಮಾಡಿದನಂತರ ಈ ಪ್ರಾಂತದಲ್ಲಿ ಆ ಚಟುವಟಿಕೆಯು ಹೆಚ್ಚಾಗಿ ನಡೆದಿದೆ. ಈ ವರೆಗೆ ಆ ಪ್ರಾಂತದ ಸಾಧಾರಣ ೭೦ ಸಾವಿರ ಕಾಂಗ್ರೆಸ್ ಸದಸ್ಯರಲ್ಲಿ ೩ ಸಾವಿರ ಸದಸ್ಯರು ಮುಸಲ್ಮಾನರಿದ್ದಾರೆ. ಆದರೆ ಇಷ್ಟೇ ಕಾಂಗ್ರೆಸ್ ಸದಸ್ಯರಿದ್ದ ಬಿಹಾರ ಪ್ರಾಂತದಲ್ಲಿ ಮುಸಲ್ಮಾನ್ ಸದಸ್ಯರು ಹತ್ತು ಸಾವಿರ ಇದ್ದಾರೆ.

ಮುಸ್ಲಿಂ ಲೀಗಿನಿಂದ ಆರಿಸಿಬಂದ ಮಿ. ಹಾಫೀಜ ಮಹಮ್ಮದ ಇಬ್ರಾಹಿಮ್ ಇವರು ಆ ಮೇಲೆ ಕಾಂಗ್ರೆಸ್ಸಿಗೆ ಸೇರಿ ಈಗ ಸಂಯುಕ್ತ ಪ್ರಾಂತದ ದಿವಾನರಾಗಿದ್ದಾರೆ. ಹೀಗೆ ಮಾಡಿದ್ದು ಅನ್ಯಾಯವೆಂದು ಮುಸ್ಲಿಂಲೀಗಿನವರು ದಿವಾನರ ನಡತೆಯನ್ನು ಖಂಡಿಸಿದರು. ಈಗ ಅವರು ತಮ್ಮ ಕೆಲಸಕ್ಕೆ ರಾಜಿನಾಮೆ ಕೊಟ್ಟು ಕಾಂಗ್ರೆಸ್ ಪಕ್ಷದಿಂದಲೇ ಹೊಸದಾಗಿ ಆರಿಸಿ ಬರಲು ಸಿದ್ಧರಾಗಿದ್ದಾರೆ. ಈ ಉಪಚುನಾವಣೆಯು ಇದೇ ತಿಂಗಳು ೩೦ ನೆಯ ತಾರೀಖಿನ ದಿವಸ ಇದೆ.

### ಪ್ರಚಂಡವಾದ ಹೋರಾಟ.

ಮಿ. ಹಾಫೀಜ್ ಇಬ್ರಾಹಿಮರವರಿಗೆ ವಿರೋಧವಾಗಿ ಮುಸ್ಲಿಂ ಲೀಗಿನಿಂದ ಮೌಲಾನಾ ಹಜರತ್ ಮೋಹಾನಿ ಇವರು ಹುರಿಯಾಳುಗಳಾಗಿ ನಿಂತಿದ್ದಾರೆ. ಈ ಹೋರಾಟವನ್ನು ನಡೆಯಿಸಲು ಮುಸ್ಲಿಂಲೀಗಿನವರು ಒಂದು ಲಕ್ಷ ರೂ. ಗಳ ಫಂಡನ್ನು ಕೂಡಿಸಿದ್ದಾರೆ.

ಮಹಮ್ಮದಾಬಾದಿನ ರಾಜರು, ಮೌಲಾನಾ ಅಬ್ದುಲ್ ಹಮೀದ, ಬ್ಯಾ. ಜಿನ್ನಾರವರೇ ಮೊದಲಾದವರು ಮುಸ್ಲಿಂಲೀಗಿನ ಪರವಾಗಿ ಈ ಚುನಾವಣೆಯಲ್ಲಿ ಪ್ರಯತ್ನಿಸುತ್ತಿದ್ದಾರೆ. ಕಾಂಗ್ರೆಸ್ಸಿನ ಪರವಾಗಿ ಮುಖ್ಯಮಂತ್ರಿಗಳಾದ ಶ್ರೀ. ಗೋವಿಂದ ವಲ್ಲಭ ಪಂತರವರೇ ಮೊದಲಾದವರು ಪ್ರಯತ್ನಿಸುತ್ತಿದ್ದಾರೆ. ಈ ಹೋರಾಟದಲ್ಲಿ ಉಭಯ ಸಂಸ್ಥೆಗಳ ಸಾಮರ್ಥ್ಯವು ಆ ಭಾಗದಲ್ಲಿ ಎಷ್ಟಿದೆಯೆಂಬುದು ಗೊತ್ತಾಗುವುದು.

## ಪ್ರಾಂತಿಕ ಪ್ರಭುತ್ವದ ಸಮಾಚಾರ.

—ಮದ್ರಾಸ್ ಪ್ರಾಂತದ ಮುಖ್ಯಮಂತ್ರಿಗಳಾದ ಶ್ರೀ. ರಾಜಗೋಪಾಲಾಚಾರ್ಯರಿಗೆ ಸೇಲಂದಲ್ಲಿ ಕೊಟ್ಟ ವಿಜ್ಞಾಪನಾ ಪತ್ರದಲ್ಲಿ ಹಿಂದೆ ಪೋಲಿಸರು ಮಾಡಿದ ಅನ್ಯಾಯವು ಉಲ್ಲೇಖಿಸಲ್ಪಟ್ಟಿತ್ತು. ಅದನ್ನು ಕುರಿತು ಮಂತ್ರಿಗಳು ಹೀಗೆ ಹೇಳಿದರು—

"ಕಾಂಗ್ರೆಸ್ಸಿನವರಿಗೆ ಆಗ ಪೋಲಿಸರು ಹೊಡೆದುದರಿಂದಲೇ ಈಗ ಕಾಂಗ್ರೆಸ್ಸಿನವರ ಕೈಯಲ್ಲಿ ಅಧಿಕಾರ ಬಂದಿದೆ. ಆದಕಾರಣ ಕಾಂಗ್ರೆಸ್ಸಿನವರು ಪೋಲಿಸರಿಗೆ ಋಣಿಗಳಾಗಿರಬೇಕು. ಕಾಂಗ್ರೆಸ್ಸಿನವರು ಸ್ವಸಂತೋಷದಿಂದಲೇ ಕಷ್ಟ ಸಹಿಸಲು ಸಿದ್ಧರಾಗಿದ್ದರು. ಆದಕಾರಣ ಅವರಿಗೆ ಕೊಡಲ್ಪಟ್ಟ ತೊಂದರೆಗಳನ್ನು ಕುರಿತು ಈಗ ಆಕ್ಷೇಪಿಸುವುದು ಸರಿಯಲ್ಲ."

—ಸಂಯುಕ್ತ ಪ್ರಾಂತದ ಅಸೆಂಬ್ಲಿಯಲ್ಲಿ ಮಹಾತ್ಮ ಗಾಂಧಿಯವರ ೬೯ ನೆಯ ವರುಷ ವರ್ಧಂತಿಯ ನಿಮಿತ್ತವಾಗಿ ತಾ. ೨-೧೦-೩೭ ನೆಯ ದಿವಸ ಅವರ ಅಭಿನಂದನೆಯ ಒಂದು ಗೊತ್ತುವಳಿಯನ್ನು ತಂದಿದ್ದರು. ಅದನ್ನು ಎಲ್ಲ ಪಕ್ಷದವರೂ ಮನಃಪೂರ್ವಕ ಒಪ್ಪಿದರು. ಗಾಂಧೀಜಿಯವರ ಜಯಜಯಕಾರದಿಂದ ಅದು ತೀರ್ಮಾನವಾಯಿತು.

—ಸಂಯುಕ್ತ ಪ್ರಾಂತದ ಅಸೆಂಬ್ಲಿಯಲ್ಲಿ ಸೌ|| ವಿಜಯಲಕ್ಷ್ಮಿ ಪಂಡಿತ ಇವರು ತಂದ ಘಟನಾಸಮಿತಿಯ ಗೊತ್ತುವಳಿ ನಾಲ್ಕು ದಿನ ಚರ್ಚೆಯಾಗಿ ಬಹುಮತದಿಂದ ತೀರ್ಮಾನವಾಯಿತು. ಮುಸ್ಲಿಂಲೀಗಿನ ಮಿ. ನಬಾಬ ಇಸ್ಮಾಯಿಲ್‌ರವರು ತಂದ ಉಪಸೂಚನೆಗೆ ೪೫ ಅನುಕೂಲ ೧೨೫ ಪ್ರತಿಕೂಲ ಮತಗಳು ದೊರೆತು ಬಿದ್ದುಹೋಯಿತು. ಘಟನಾಸಮಿತಿಯ ಗೊತ್ತುವಳಿ ತೀರ್ಮಾನವಾಗುವಾಗ ಮುಸ್ಲಿಂಲೀಗಿನ ಸಭಾಸದರು ಅಸೆಂಬ್ಲಿಯನ್ನು ಬಿಟ್ಟು ಹೋಗಿದ್ದರು.

—ಮುಂಬೈ ಪ್ರಾಂತದಲ್ಲಿ ೧೯೩೬-೩೭ ನೆಯ ವರ್ಷ ಬಾರದಿದ್ದ ಭೂಕಂದಾಯದ ಕಟ್ಟು ಬಾಕಿಯನ್ನು ಬಿಟ್ಟುಬಿಡಬೇಕಾಗಿ ಕಾಂಗ್ರೆಸ್ ಸರಕಾರವು ಅಪ್ಪಣೆಮಾಡಿದೆ.

—ಸಂಯುಕ್ತ ಪ್ರಾಂತದಲ್ಲಿರುವ ಕೈದಿಗಳಲ್ಲಿ ಹತ್ತು ಸಾವಿರ ಕೈದಿಗಳನ್ನು ಬಿಟ್ಟು ವೆಚ್ಚವನ್ನು ಉಳಿಸಿ ಜೈಲುಗಳ ಸುಧಾರಣೆಯನ್ನು ಅಲ್ಲಿಯ ಕಾಂಗ್ರೆಸ್ ಸರಕಾರವು ಮಾಡುವುದಿದೆ.

# ಬಸವಣ್ಣನವರು ಜಗತ್ತಿಗೆ ತೋರಿಸಿದ ಮಾರ್ಗ.



"ಬಸವಣ್ಣನ ಸಾನ್ನಿಧ್ಯದಿಂದ ನಾನು ಸದ್ಭಕ್ತನಾದೆನಯ್ಯ"

ಶ್ರೀ ಬಸವಣ್ಣನವರಿಂದ ತಾವು ಕಲಿತುದೇನೆಂಬುದನ್ನು ಶ್ರೀ ಪ್ರಭುದೇವರು ಈ ಕೆಳಗಿನಂತೆ ಹೇಳಿದ್ದಾರೆ—

"ಅದ್ವೈತವ ನುಡಿದು ಅಹಂಕಾರಿಯಾದೆನಯ್ಯ. ಬ್ರಹ್ಮವ ನುಡಿದು ಭ್ರಮಿತನಾದೆನಯ್ಯ. ಶೂನ್ಯವ ನುಡಿದು ನಾನು ಸುಖ ದುಃಖಕ್ಕೆ ಗುರಿಯಾದೆನಯ್ಯ. ಗುಹೇಶ್ವರ ನಿಮ್ಮ ಶರಣ ಸಂಗನ ಬಸವಣ್ಣನ ಸಾನ್ನಿಧ್ಯದಿಂದಾನು ಸದ್ಭಕ್ತನಾದೆನಯ್ಯ."

ನಾನೇ ದೇವರೆಂದು ವಾದಿಸುತ್ತ ಬಂದುದರಿಂದ ನನ್ನಲ್ಲಿ ಅಹಂಕಾರವುಂಟಾಯಿತು. "ಶಿವೋಹಂ" ಎಂದು ಹೇಳಿಕೊಳ್ಳುತ್ತಾ ಇದ್ದುದರಿಂದ ಅನ್ಯರ ಆದರ ಸತ್ಕಾರ ಸೇವೆಗಳೆಲ್ಲಾ ಲೋಪವಾದವು. ಅಂತೆಯೇ ನನ್ನಲ್ಲಿ ಅಹಂಕಾರವು ಹೆಚ್ಚುತ್ತಾ ಬಂದಿತು.

ಈ ವಿಶ್ವದಲ್ಲಿ ತೋರುವುದೆಲ್ಲಾ ಬ್ರಹ್ಮವೇ ವಿನಾ ಬೇರೊಂದು ಇಲ್ಲವೇ ಇಲ್ಲವೆಂದು ವಾದಿಸುತ್ತ ನನ್ನ ಬುದ್ಧಿಯು ಭ್ರಮೆಗೊಂಡಿತು. ನುಡಿಯಲ್ಲಿ ಹೀಗೆ ಸಕಲವೂ ಬ್ರಹ್ಮವೆಂದು ಹೇಳಲಿಕ್ಕಾಗುವುದೇ ವಿನಾ ನಡೆಯಲ್ಲಿ ಅದು ಅಶಕ್ಯ. ನುಡಿ ನಡೆಗಳಲ್ಲಿ ಮೇಳವಿಲ್ಲದಿರುವುದೇ ಭ್ರಮೆಗೊಳಗಾದವರ ಸ್ಥಿತಿ.

ದೇವರೇ ಇಲ್ಲವೆಂಬ ಶೂನ್ಯವಾದವನ್ನು ಮಾಡುತ್ತಾ ಬಂದುದರಿಂದ ನಾನು ಮಾಡಿದ ಹಿತಾಹಿತದ ಕಾರ್ಯಗಳ ಸುಖ ದುಃಖಗಳನ್ನು ಅನುಭವಿಸಬೇಕಾಯಿತು. ಏಕೆಂದರೆ, ಕರ್ಮವು ಅದರ ಫಲವನ್ನು ತನ್ನ ಸಂಗಡಲೇ ತೆಗೆದುಕೊಂಡು ಬಂದೇ ಬರುತ್ತದೆ.

ಆದುದರಿಂದ ಅದ್ವೈತ ವಾದವಾಗಲಿ ಅಥವಾ ಶೂನ್ಯ ವಾದವಾಗಲಿ ಜಗತ್ತಿಗೆ ಹಿತಕರವಲ್ಲವೆಂದೇ ಈ ಸಂಗನ ಬಸವಣ್ಣನ ಸನ್ನಿಧಿಗೆ ಬಂದುದರಿಂದ ನನಗೆ ಗೊತ್ತಾಯಿತು. ಬಸವಣ್ಣನ ಭಕ್ತಿಯ ಮಾರ್ಗವೇ ಉದ್ಧಾರಕ್ಕೆ ಯೋಗ್ಯವಾದುದೆಂಬುದು ನನ್ನ ಅನುಭವಕ್ಕೂ ಬಂದಿತು. ಬಸವಣ್ಣನು ಹೀಗೆ ಹೇಳುತ್ತಾನೆ.—

ದ್ವೈತಾದ್ವೈತವನೋದಿ ಏನು ಮಾಡುವಿರಯ್ಯ ನಮ್ಮ ಶರಣರಿಂಗುರಿಗರಗಾಗಿ ಕರಗದನ್ನಕ್ಕ ? ಸ್ಥಾವರ ಜಂಗಮ, ಒಂದೇ ಎಂದು ನಂಬದನ್ನಕ್ಕ ? ಕೂಡಲ ಸಂಗಮದೇವ ಬರಿಯ ಮಾತಿನ ಮಾಲೆಯುಲೇನಹುದು ?

ಜೀವನಿಗೂ ಶಿವನಿಗೂ ಭಿನ್ನವೆಂಬ ದ್ವೈತವನ್ನಾಗಲಿ ಜೀವನೂ, ಶಿವನೂ ಒಂದೇ ಎಂಬ ಅದ್ವೈತವನ್ನಾಗಲಿ ಓದಿ ವಾದಿಸಿ ನೀವು ಮಾಡುವುದೇನು ? ಇಂಥ ಮಾತಿನ ಜಾಣತನಕ್ಕೆ ದೇವರು ಮೆಚ್ಚುತ್ತಾನೆಯೆ ? ಮಾತಿನ ಬಂಟರಾಗಬೇಡಿರಿ.

ಶಿವಭಕ್ತರ ಸೇವೆಯಲ್ಲಿ ನಿಮ್ಮ ತನು ಮನ ಧನಗಳನ್ನು ಅರಗು ಉರಿಗೆ ಹೇಗೆ ಕರಗುತ್ತದೆಯೋ ಹಾಗೆಯೇ ಕರಗಿಸಿರಯ್ಯ. ನೀವು ಧರಿಸಿರುವ ಲಿಂಗವೇ ಶಿವಭಕ್ತನಾಗಿ ಬಂದಿದೆ. ಅದೇ ಜಂಗಮ. ಅದರ ಸೇವೆಯಲ್ಲಿಯೇ ಸರ್ವವನ್ನೂ ಸವಿಸಿರಿ. ಹಾಗಾದರೆ ಶಿವನು ತಾನೇ ಒಲೆಯುತ್ತಾನೆ.

"ತನು, ಮನ, ಧನ ಹಿಂದಿಕ್ಕಿಕೊಂಡು ಒಣ ಮಾತಿನ ಬೊಣಬಿಯನ್ನೇ ಒಟ್ಟಿದರೇನು ಫಲ ? ಮಾತಿನ ಮಾಲೆಯಲ್ಲಿಪ್ಪುದೆ ಭಕ್ತಿ ? ಮಾಡಿ ತನು ಮನ ಧನ ಸವೆಯದನ್ನಕ್ಕ ? ಆಡಿದರೇನು, ಹಾಡಿದರೇನು, ಓದಿದರೇನು ? ಈ ತ್ರಿವಿಧ ದಾಸೋಹ ಇಲ್ಲದನ್ನಕ್ಕ ?

ಬಾಯಿಂದ ಅದ್ವೈತದ ಮಾತನಾಡಿದರೇನು ? ಬೇಕಷ್ಟು ಭಸ್ಮ ರುದ್ರಾಕ್ಷಿಗಳನ್ನು ಧರಿಸಿ ಶಿವಭಜನೆ ಮಾಡುತ್ತ ಕುಣಿದಾಡಿದರೇನು ? ಇವುಗಳಿಂದ ಶಿವನು ಮೆಚ್ಚುವುದಿಲ್ಲ. ತನು ಮನ ಧನಗಳನ್ನು ಶಿವ ಸಮಾಜಕ್ಕೆ ಸವಿಸಬೇಕೆಂಬುದನ್ನು ನಾನು ಬಸವಣ್ಣನಿಂದ ಕಲಿತೆನು. ಇದನ್ನೇ ಎಲ್ಲರೂ ಕಲಿಯಬೇಕು. ಬಸವಣ್ಣನು ಜಗತ್ತಿಗೆ ಈ ಸೇವಾ ಮಾರ್ಗವನ್ನೇ ತೋರಿಸಿದನು.

## ಕಾಂಗ್ರೆಸ್ ಮತ್ತು ಮುಸಲ್ಮಾನರು.

ಕಾಂಗ್ರೆಸ್ ಪಕ್ಷವು ಮುಸಲ್ಮಾನರ ದಾಕ್ಷಿಣ್ಯಕ್ಕೊಳಗಾಗಿ ಜಾತಿನಿಷ್ಠರಾದ ಅನೇಕ ಮುಸಲ್ಮಾನರಿಗೆ ಪ್ರೋತ್ಸಾಹ ದೊರೆಯುವಂತೆ ನಡೆಯುತ್ತಲಿದೆಯೆಂದು ನಾವು ಅನೇಕ ಸಾರೆ ತೋರಿಸಿಕೊಟ್ಟದ್ದೇವಷ್ಟೆ. ಕಾಂಗ್ರೆಸ್ ಪಕ್ಷದ ಮುಸಲ್ಮಾನರೇ ಈಗ ಹೇಳುತ್ತಿರುವುದನ್ನಾದರೂ ಕೇಳಿದರೆ ಕಾಂಗ್ರೆಸ್ಸಿನ ರೀತಿ ನೀತಿಗಳು ಈ ವಿಷಯದಲ್ಲಿ ಹೇಗಿವೆಯೆಂಬುದು ಗೊತ್ತಾಗುವುದು.

### ಡಾ. ಸಯ್ಯದ ಮಹಮ್ಮದರು.

ಬಿಹಾರ ಪ್ರಾಂತದಲ್ಲಿ ಹಿಂದುಗಳು ೧೦೦ಕ್ಕೆ ೮೫ ರಂತೆ ಇದ್ದಾರೆ. ಆ ಪ್ರಾಂತವು ಈಗ ಕಾಂಗ್ರೆಸ್ಸಿನ ಅಧಿಕಾರಕ್ಕೊಳಗಾಗಿದೆ. ಡಾ. ಸೈಯದ ಮಹಮ್ಮದ ಇವರು ಆ ಪ್ರಾಂತದ ಶಿಕ್ಷಣ ಮಂತ್ರಿಗಳು.

ಇವರು ಬಿಹಾರ ಪ್ರಾಂತದ ಅಸೆಂಬ್ಲಿಯಲ್ಲಿರುವ ಎಲ್ಲ ಮುಸಲ್ಮಾನ್ ಸಭಾಸದರಿಗೂ ಒಂದು ಔತಣವನ್ನು ಕೊಟ್ಟಿದ್ದರು. ಕಾಂಗ್ರೆಸ್ಸಿನ ರೀತಿ ನೀತಿಗಳನ್ನು ಅವರಿಗೆ ತಿಳಿಸಿ ಅವರ ಆಕ್ಷೇಪಣೆಗಳಿಗೆಲ್ಲಾ ಉತ್ತರ ಕೊಡುವುದೇ ಈ ಔತಣದ ಉದ್ದೇಶವಾಗಿದ್ದಿತು. ಆ ಕಾಲದಲ್ಲಿ ಶ್ರೀ. ರಾಜೇಂದ್ರಪ್ರಸಾದರೂ ಇದ್ದರು. ಔಪಚಾರಿಕ ಸಂಭಾಷಣೆ ಜರುಗಿದನಂತರ ಡಾ. ಸೈಯದ ಮಹಮ್ಮದರವರು ಹೀಗೆ ಹೇಳಿದರು—

"ಮುಸಲ್ಮಾನರ ಇಷ್ಟವನ್ನು ಪೂರ್ತಿಗೊಳಿಸಬೇಕೆಂದೇ ಕಾಂಗ್ರೆಸ್ ಪಕ್ಷವು ಯಾವಾಗಲೂ ಪ್ರಯತ್ನಿಸುತ್ತದೆ. ಜಾತಿನಿರ್ಣಯವನ್ನು ಒಪ್ಪುವುದು ಕಾಂಗ್ರೆಸ್ಸಿಗೆ ಇಷ್ಟವಿರಲಿಲ್ಲ. ಮುಸಲ್ಮಾನರನ್ನು ಸಂತುಷ್ಟಗೊಳಿಸುವುದಕ್ಕಾಗಿಯೇ ಇದು ಜಾತಿನಿರ್ಣಯವನ್ನು ಒಪ್ಪಿಕೊಂಡಿತು. ಉರ್ದು ಭಾಷೆಯನ್ನು ಕೋರ್ಟಿನ ಭಾಷೆಯನ್ನಾಗಿಯೂ ಮಾಡಲು ಕಾಂಗ್ರೆಸ್ ಒಪ್ಪಿಕೊಂಡಿದೆ. ಒಪ್ಪಿಕೊಳ್ಳದಿರುವ ಯಾವ ಕೇಳಿಕೆಗಳೂ ಇಲ್ಲವೆಂದೇ ನನ್ನ ಭಾವನೆ."

ಮಿ. ಯುನಿಸಿಯವರು ಮುಸಲ್ಮಾನರ ಕೇಳಿಕೆಗಳನ್ನು ಕುರಿತು ಹೀಗೆ ಹೇಳಿದರು— "ಮುಸಲ್ಮಾನರಿಗೆ ಗೋಹತ್ಯ ಮತ್ತು ಮಸೀದಿಯ ಮುಂದೆ ವಾದ್ಯ ಬಾರಿಸುವುದು ಈ ಎರಡು ಪ್ರಶ್ನೆಗಳು ಅತಿ ಮಹತ್ವದವುಗಳಾಗಿವೆ. ಈ ವಿಷಯಗಳನ್ನು ಕಾಂಗ್ರೆಸ್ ಜಾಗ್ರತೆ ಒಪ್ಪಿಕೊಳ್ಳುವುದು ಅಗತ್ಯ. ಮತ್ತು "ವಂದೇಮಾತರಂ" ಪದ್ಯವು ಮುಸಲ್ಮಾನರ ಧಾರ್ಮಿಕ ಭಾವನೆಯನ್ನು ನೋಯಿಸುವುದಾಗಿದೆ.

ಖಾನ್ ಬಹದ್ದೂರ್ ಎಸ್. ಎಂ. ಇಸ್ಮಾಯಿಲ್‌ರವರು ಹೀಗೆ ಹೇಳಿದರು— 'ವಂದೇಮಾತರಂ' ಗೀತೆಯ ವಿಷಯವು ಮುಸಲ್ಮಾನರಿಗೆ ಅತಿ ದುಃಖದಾಯಕವಾದುದಾಗಿದೆ. ಮಿ. ಅಬ್ದುಲ್ ಮಜೀದರು ಹೇಳಿದ್ದೇನೆಂದರೆ— "ವಂದೇಮಾತರಂ" ಗೀತೆಯು ಮೂರ್ತಿ ಪೂಜೆಯನ್ನು ಕಲಿಸುತ್ತದೆ. "ಹೇ ದುರ್ಗಾ ನಿನಗೆ ನಾನು ನಮಸ್ಕಾರಮಾಡುತ್ತೇನೆ." ಎಂದು ಆ ಗೀತೆಯಲ್ಲಿದೆ.

ಅನಂತರ ಬಾಬು ರಾಜೇಂದ್ರಪ್ರಸಾದರು ಹೀಗೆ ಹೇಳಿದರೆಂದು ಪ್ರಕಟವಾಗಿದೆ—

"ಕಾಂಗ್ರೆಸ್ಸು ಮುಸಲ್ಮಾನರ ಎಲ್ಲ ಯೋಗ್ಯ ಕೇಳಿಕೆಗಳನ್ನು ಪೂರ್ತಿಮಾಡಿಕೊಡಲು ಯಾವಾಗಲೂ ಸಿದ್ಧವಾಗಿದೆ. ಏಕೆಂದರೆ ಕಾಂಗ್ರೆಸ್ಸಿನಲ್ಲಿ ಸಹನಶಕ್ತಿಯಿದೆ. ಆದುದರಿಂದ ಕಾಂಗ್ರೆಸ್ಸಿನ ಯೋಗ್ಯ ಅಧಿಕಾರಗಳಲ್ಲಿ ನೀವು ನಂಬಿಕೆಯನ್ನಿಡಿರಿ. ವಂದೇಮಾತರಂ ಗೀತೆಯು ಮೂರ್ತಿ ಪೂಜೆಯನ್ನು ಕಲಿಸುವುದಿಲ್ಲ. ಅದರಲ್ಲಿ ಪ್ರಯೋಗಿಸಲ್ಪಡುವ ದುರ್ಗಾ ಶಬ್ದವು ಯಾವುದೊಂದು ಮೂರ್ತಿಯನ್ನು ಉದ್ದೇಶಿಸಿ ಅಲ್ಲ. ಮಾತೃ ಭೂಮಿಗೆ ದುರ್ಗಾ ಎಂಬ ಶಬ್ದವನ್ನೂ ಉಪಯೋಗಿಸುತ್ತಾರೆ."

## ಗಾಂಧೀಜಿಯವರ ಉಪದೇಶ.

"ಮುಸಲ್ಮಾನರ ಪಕ್ಷವು ನ್ಯಾಯವಾದುದಾಗಿದ್ದರೆ ಹಿಂದುಗಳು ಅವರಿಗೆ ಶಕ್ಯವಿರುವ ಎಲ್ಲ ಸಹಾಯಗಳನ್ನೂ ಮಾಡಲೇಬೇಕು. ಹಾಗೆ ಮಾಡದಿದ್ದರೆ ಅದು ಹಿಂದುಗಳ ಹೇಡಿತನ ಮತ್ತು ಬಂಧುದ್ರೋಹಗಳನ್ನು ವ್ಯಕ್ತಗೊಳಿಸುವುದು."

—ಯಂಗ್ ಇಂಡಿಯಾ. ತಾ. ೨೯-೫-೨೦

"ಕೇವಲ ಇಂಗ್ಲಿಷ್ ಮನುಷ್ಯನಿಗೇ ಅಲ್ಲ. ಜಗತ್ತಿನ ಯಾವ ಮನುಷ್ಯನಿಗೂ ನೋವನ್ನುಂಟುಮಾಡದೆ ನನ್ನ ದೇಶಬಾಂಧವರ ಸೇವೆಯನ್ನು ಮಾಡುವುದೇ ನನ್ನ ವೈಯಕ್ತಿಕ ಧರ್ಮವು. ನಾನು ಯಾವುದನ್ನು ನನ್ನ ಸಹೋದರರಿಗೆ ಮಾಡಲಾರೆನೋ ಅದನ್ನು ನಾನು ಇಂಗ್ಲಿಷರಿಗೂ ಮಾಡಲಾರೆನು. ನಾನು ಅನ್ಯರಿಗೆ ಹಿಂಸೆಗೊಳಿಸಲಾರೆನು. ಆದರೆ ಅಗತ್ಯ ಕಂಡಾಗ ಅವರಿಗೆ ಸಹಕಾರವನ್ನು ಮಾತ್ರ ಮಾಡಲಾರೆನು."

—ಯಂಗ್ ಇಂಡಿಯಾ ೫-೫-೨೦.

## ಮುಸಲ್ಮಾನರ ಸ್ವತಂತ್ರ ರಾಷ್ಟ್ರ!

ಕಲಕತ್ತಾ ಪಟ್ಟಣದಲ್ಲಿ ಕಳೆದ ವಾರ ಬಂಗಾಲ ಪ್ರಾಂತಿಕ "ಮುಸ್ಲಿಂಲೀಗ್" ಪರಿಷತ್ತು ಮೌಲಾನಾ ಜಾಫರ ಅಲ್ಲಿ ಖಾನ ಇವರ ಅಧ್ಯಕ್ಷತೆಯಲ್ಲಿ ಕೂಡಿದ್ದಿತು. ಇವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಮುಸಲ್ಮಾನ್ ಸಮಾಜವು ಸ್ವತಂತ್ರವಾದುದು. ಇದು ಒಂದು ವಿಶಿಷ್ಟ ವರ್ಗವು ಇದೊಂದು ಸ್ವತಂತ್ರ ರಾಷ್ಟ್ರವಾಗಿಯೇ ಇದ್ದು ಸ್ವಸಂರಕ್ಷಣೆಯ ಸಾಮರ್ಥ್ಯವುಳ್ಳದ್ದಾಗಿದೆ. ಇದು ಸ್ವಾವಲಂಬನೆಯಿಂದಲೇ ಜೀವಿಸುವುದು. ಮುಸಲ್ಮಾನ್ ರಾಷ್ಟ್ರದ ಈ ವಿಶಿಷ್ಟತ್ವವನ್ನು ಅದು ಚಿರಸ್ಥಾಯಿಗೊಳಿಸಲು ಇಚ್ಛಿಸುತ್ತದೆ."

ಐರ್ಲಂಡದಲ್ಲಿ "ಅಲ್ಸ್ಟರ್" ಪ್ರಾಂತವು ಹೇಗೆ ಸ್ವತಂತ್ರವಾದುದಾಗಿದೆಯೋ ಹಾಗೆಯೇ ಹಿಂದುಸ್ಥಾನದಲ್ಲಿ ಮುಸಲ್ಮಾನರ ಸ್ವತಂತ್ರ ರಾಷ್ಟ್ರವಿರಬೇಕೆಂದೇ ಇವರ ಅಭಿಪ್ರಾಯ. ಜಾತಿನಿರ್ಣಯದ ಪದ್ಧತಿಯಿಂದ ಮುಸಲ್ಮಾನರಿಗೆ ಹಿತವಾಯಿತೆಂದೇ ಇವರ ತಿಳುವಳಿಕೆ. ಇವರು ತಮ್ಮ ಭಾಷಣದಲ್ಲಿ ಮಹಾತ್ಮಾ ಗಾಂಧಿಯವರನ್ನೂ ಪಂಡಿತ ಜವಾಹರಲಾಲರನ್ನೂ ಯಥೇಚ್ಛವಾಗಿ ನಿಂದಿಸಿದರು.

---

—ಬ್ರಾಹ್ಮಣೇತರ ಪಕ್ಷದ ಮುಂದಾಳುಗಳಾದ ಶ್ರೀ. ಕೇಶವರಾವ ಜಾಗಡೆ ಮತ್ತು ಶ್ರೀ. ಶಂಕರರಾವ ಮೋರೆ ಇವರು ಕಾಂಗ್ರೆಸ್ ಪಕ್ಷಕ್ಕೆ ಸೇರಿದರು.

# ಹೈನಿನ ಉದ್ಯೋಗ ಹೆಚ್ಚಬೇಕು.

## ೧೦೦೦ ಕೋಟಿ ರೂ. ವಾರ್ಷಿಕ ಆದಾಯ.

## ಗೋವಿಗೆ ಇಷ್ಟೇಕೆ ಮಹತ್ವ?

ಹಿಂದುಸ್ಥಾನದಲ್ಲಿ ಗೋವುಗಳನ್ನು ತಾಯಿಯಂತೆ ಕಾಣುತ್ತಿರುವುದೇಕೆ? ಹಿಂದುಸ್ಥಾನದ ಜನರು ಎಂದು ಹೊಟ್ಟೆತುಂಬಾ ಊಟಮಾಡಿ ಪುಷ್ಟದೇಹಿಗಳೂ ದೀರ್ಘಾಯುಗಳೂ ಆಗುವರು? ಎಲ್ಲ ಗ್ರಾಮೋದ್ಯೋಗಗಳಲ್ಲಿ ಯಾವುದು ಹೆಚ್ಚಿನ ಉದ್ಯೋಗ? ಹಿಂದುಸ್ಥಾನವು ಎಂದು ನಿಜವಾದ ಸ್ವರಾಜ್ಯದ ಸುಖವನ್ನು ಹೊಂದುವುದು? ಈ ಎಲ್ಲಾ ಪ್ರಶ್ನೆಗಳಿಗೆ ಕೆಳಗಿನ ಸಂಗತಿಗಳೇ ಸರಿಯಾದ ಉತ್ತರಗಳಾಗಿವೆ.

ಈಗಿನ ವ್ಹಾಯಿಸ್‌ರಾಯರು ಒಕ್ಕಲತನದ ವಿಷಯದಲ್ಲಿ ಬಹು ಅಭಿರುಚಿಯುಳ್ಳವರು. ಗೋವು, ಎತ್ತುಗಳೆಂದರೆ ಅವರಿಗೆ ಬಹು ಪ್ರೇಮ. ಹಿಂದುಸ್ಥಾನದ ಉನ್ನತಿಗೆ ಈ ಪ್ರಾಣಿಗಳ ಸುಧಾರಣೆಯು ಬಹು ಅಗತ್ಯವೆಂದು ಇವರ ಸಿದ್ಧಾಂತ. ಅಂತೆಯೇ ಈ ಶಾಸ್ತ್ರದಲ್ಲಿ ಬಹು ಪ್ರಸಿದ್ಧರಾದ ಇಂಗ್ಲೆಂಡಿನ ಡಾ. ನಾರ್ಮನ್ ಎಂಬುವವರನ್ನು ಈ ದೇಶಕ್ಕೆ ಕರೆಯಿಸಿ ಇಲ್ಲಿಯ ಸ್ಥಿತಿಗತಿಗಳನ್ನೆಲ್ಲಾ ತಿಳಿದುಕೊಂಡು ಒಂದು ವರದಿಯನ್ನು ಪ್ರಕಟಿಸಲು ಹೇಳಿದ್ದರು.

ಡಾ. ನಾರ್ಮನ್‌ರವರು ಈ ದೇಶದ ಬೇರೆ ಬೇರೆ ಭಾಗಗಳಲ್ಲಿ ೫ ತಿಂಗಳು ಸಂಚರಿಸಿ ೪೦ ಸ್ಥಳಗಳ ಸಂಗತಿಗಳನ್ನು ತಿಳಿದುಕೊಂಡು ಕಳೆದ ೨೨ ನೆಯ ತಾರೀಖಿನ ದಿವಸ ಒಂದು ವರದಿಯನ್ನು ಪ್ರಕಟಿಸಿದರು. ಅದರಿಂದ ಈ ಕೆಳಗಿನ ಸಂಗತಿಗಳು ಗೊತ್ತಾಗಿವೆ ಆ ವರದಿಯ ಮುಖ್ಯಾಂಶ ಹೀಗಿದೆ—

"ಹಿಂದುಸ್ಥಾನದಲ್ಲಿ ಪ್ರತಿವರುಷ ೮೦ ಕೋಟಿ ಮಣ ಹಾಲು ಉಂಟಾಗುತ್ತದೆ. ಇದರ ಕ್ರಯ ಸಾಧಾರಣ ೩೦೦ ಕೋಟಿ ರೂ. ಗಳು. ಅಮೇರಿಕೆಯ ವಿನಾ ಜಗತ್ತಿನ ಇನ್ನಾವ ದೇಶದಲ್ಲಿಯೂ ಇಷ್ಟು ಹಾಲು ದೊರೆಯುವುದಿಲ್ಲ.

### ನಾವು ಹಾಲು ಕುಡಿಯುವುದೆಷ್ಟು?

ಈ ದೇಶದಲ್ಲಿ ಹಾಲು ಇಷ್ಟು ಹೆಚ್ಚಿದ್ದರೂ ಜನ ಸಂಖ್ಯೆಯ ಪ್ರಮಾಣದಿಂದ ನೋಡಿದರೆ ಅದು ಬಹು ಕಡಿಮೆ. ನಮ್ಮಲ್ಲಿ ತಲೆ ಒಂದಕ್ಕೆ ೮ ಔಂಸ ಮಾತ್ರ ಹಾಲು ದೊರೆಯುತ್ತದೆ. ಇಂಗ್ಲೆಂಡಿನಲ್ಲಿ ೧೪ ಔಂಸಿನಂತೆ, ಫ್ರಾನ್ಸಿನಲ್ಲಿ ೩೩ ಔಂಸಿನಂತೆ, ಜರ್ಮನಿಯಲ್ಲಿ ೩೪ ಔಂಸಿನಂತೆ, ಅಮೇರಿಕೆಯಲ್ಲಿ ೩೭ ಔಂಸಿನಂತೆ, ನ್ಯೂಜಿಲ್ಯಾಂಡಿನಲ್ಲಿ ೨೪೪ ಔಂಸಿನಂತೆ ಹಾಲು ದೊರೆಯುತ್ತದೆ.

ಪಂಜಾಬ ಪ್ರಾಂತದ ೧೦೦ ಕುಟುಂಬಗಳ ಸ್ಥಿತಿಯನ್ನು ನೋಡಿದ್ದಾಯಿತು. ಆ ಭಾಗದಲ್ಲಿ ಪ್ರತಿಯೊಬ್ಬ ಮನುಷ್ಯನು ಪ್ರತಿ ದಿವಸ ೫-೬ ಔಂಸಿನಂತೆ ಹಾಲನ್ನು ಸೇವಿಸುತ್ತಾನೆ. ತುಪ್ಪ, ಮಸರು, ಮಜ್ಜಿಗೆ ಈ ಎಲ್ಲಾ ಪದಾರ್ಥಗಳ ತೂಕವನ್ನು ನೋಡಿದರೆ ತಲೆ ಒಂದಕ್ಕೆ ೧೬ ಔಂಸಿನಂತೆ ಹೈನವನ್ನು ಅಲ್ಲಿ ಉಪಯೋಗಿಸಿದಂತಾಯಿತು.

ದಕ್ಷಿಣ ಹಿಂದುಸ್ಥಾನದ ೪೪ ಕುಟುಂಬಗಳ ಸ್ಥಿತಿಯ ಮೇಲಿಂದ ೩೧ ಕುಟುಂಬಗಳಲ್ಲಿ ಹಾಲೇ ಇರಲಿಲ್ಲ. ಉಳಿದ ೧೩ ಕುಟುಂಬಗಳಲ್ಲಿ ತಲೆ ಒಂದಕ್ಕೆ ೩ ಔಂಸದಷ್ಟು ಮಾತ್ರ ಹಾಲು ಇದ್ದಿತು. ಮುಂಬೈ ಕೂಲಿಕಾರರಲ್ಲಿ ೨೫೦೦ ಜನರ ಸ್ಥಿತಿಯನ್ನು ನೋಡಲು ತಲೆಗೆ ಅರ್ಧ ಔಂಸು ಹಾಲು ಕೂಡಾ ಅವರಿಗೆ ದೊರೆಯುವುದಿಲ್ಲ. ಈ ದೇಶದ ಪಟ್ಟಣವಾಸಿಗಳಾದ ಕೂಲಿಕಾರರ ಸ್ಥಿತಿಯು ಸ್ವಲ್ಪ ಹೆಚ್ಚುಕಡಿಮೆಯಾಗಿ ಹೀಗೆಯೇ ಇದೆ.

### ನಮ್ಮ ಬಡತನವೆಷ್ಟು?

ಜಗತ್ತಿನ ಎಲ್ಲ ರಾಷ್ಟ್ರಗಳಿಗಿಂತಲೂ ನಾವು ಬಡವರು. ಆಹಾರದಲ್ಲಿ "ಪ್ರೊಟೆನ್" ಎಂಬ ದ್ರವ್ಯವಿರಬೇಕಾಗುತ್ತದೆ. ಅದು ಹಾಲಿನಲ್ಲಿಯೇ ಹೆಚ್ಚಾಗಿರುತ್ತದೆ. ಈ ದೇಶದವರಿಗೆ ೧೬ ಗ್ರಾಮ್ ಪ್ರೋಟೆನ್ ಬೇಕೇ ಬೇಕು. ಅಷ್ಟು ದೊರೆಯಬೇಕಾದರೆ ಪ್ರತಿನಿತ್ಯ ೧೫ ಔಂಸು ಹಾಲನ್ನಾದರೂ ಪ್ರತಿಯೊಬ್ಬನು ಸೇವಿಸಬೇಕು. ಇಂಗ್ಲಿಷ್ ಜನರಿಗೆ ಇಷ್ಟು ಹಾಲು ದೊರೆಯುತ್ತದೆ. ಆದರೆ ಹಿಂದುಸ್ಥಾನದವರಿಗೆಲ್ಲಿ? ದಕ್ಷಿಣ ಹಿಂದುಸ್ಥಾನದ ವಿದ್ಯಾರ್ಥಿ ಗೃಹದಲ್ಲಿ ತಿಂಗಳಿಗೆ ೩॥ ರೂ. ಒಬ್ಬ ವಿದ್ಯಾರ್ಥಿಯ ಊಟದ ವೆಚ್ಚ! ಇಂಥ ಬಡತನದಲ್ಲಿ ಹಾಲೆಲ್ಲಿ?

### ಸೈನ್ಯದ ಜೋಪಾನ.

ಹಿಂದುಸ್ಥಾನದಲ್ಲಿರುವ ಬ್ರಿಟಿಶ್ ಸೈನ್ಯಕ್ಕೆ ಪ್ರತಿ ವರುಷ ೧೩,೦೯,೫೫,೭೭ ಪೌಂಡು ಹಾಲು, ಹಿಂದಿ ಸೈನ್ಯಕ್ಕೆ ೩೯,೬೫,೮೧೭ ಪೌಂಡು ಹಾಲು ಕೊಡಲ್ಪಡುತ್ತದೆ. ಬ್ರಿಟಿಶ್ ಸೈನ್ಯಕ್ಕೆ ಕೊಡುವ ಕಾಲುಭಾಗದಷ್ಟು ಹಾಲನ್ನು ಹಿಂದಿ ಸೈನ್ಯಕ್ಕೆ ಕೊಡಲಾಗುತ್ತದೆ. ದುಗ್ಧಾಲಯಗಳೆಲ್ಲಾ ಬ್ರಿಟಿಶ್ ಸೈನ್ಯಕ್ಕಾಗಿಯೇ ಸರಿ.

### ಗ್ರಾಮೋದ್ಯೋಗವಾಗಬೇಕು.

ಹಿಂದುಸ್ಥಾನದಲ್ಲಿ ೧೦೦ ಕ್ಕೆ ೮೯ ಜನರು ಹಳ್ಳಿಗಳಲ್ಲಿರುವವರು. ಆದುದರಿಂದ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ದುಗ್ಧಾಲಯಗಳನ್ನು ಏರ್ಪಡಿಸಿದರೆ ಹಳ್ಳಿಯವರಿಗೆ ಪ್ರಯೋಜನವಾಗುವುದಿಲ್ಲ. ಒಂದು ದುಗ್ಧಾಲಯ ಏರ್ಪಡಲು ೪೦ ರಿಂದ ೧೦೦ ಎಕರೆ ಭೂಮಿಯಾದರೂ ಒಬ್ಬರ ಸ್ವಾಮಿತ್ವದಲ್ಲಿರಬೇಕು. ಡೆನ್ಮಾರ್ಕ ಇಂಗ್ಲೆಂಡ್ ಮೊದಲಾದ ದೇಶಗಳಲ್ಲಿ ಈ ಸ್ಥಿತಿಯಿದೆ. ಆದರೆ ಹಿಂದುಸ್ಥಾನದಲ್ಲಿ ಒಬ್ಬನ ವಶಕ್ಕೆ ೨-೩ ಎಕರೆ ಪ್ರಕಾರ ಭೂಮಿ ಬರುವುದು. ಆದಕಾರಣ ದುಗ್ಧಾಲಯಗಳು ಹಳ್ಳಿಯಲ್ಲಿ ಏರ್ಪಡುವಂತಿಲ್ಲ. ಎಂದ ಮೇಲೆ ಇದು ಮನೆಯ ಉದ್ಯೋಗವಾಗಬೇಕು. ಮನೆಮನೆಗೆ ಗೋವುಗಳನ್ನು ಸಾಕಿ ಈ ಉದ್ಯೋಗವನ್ನು ಹೆಚ್ಚಿಸಬೇಕು. ಒಳ್ಳೆಯ ಹೋರಿಗಳು ೧೦ ಲಕ್ಷ ಬೇಕಾಗಿವೆ.

### ಈಗಿರುವ ದನಗಳೆಷ್ಟು?

ಜಗತ್ತಿನಲ್ಲಿ ೬೯ ಕೋಟಿ ದನಗಳಿವೆ. ಹಿಂದುಸ್ಥಾನದಲ್ಲಾದರೋ ೧೮ ಕೋಟಿ ೮೦ ಲಕ್ಷ ದನಗಳಿವೆ. ಇವುಗಳಲ್ಲಿ ೩ ಕೋಟಿ ೬೦ ಲಕ್ಷ ದನಗಳು ಸಂಸ್ಥಾನಗಳಲ್ಲಿವೆ. ಈ ಒಟ್ಟು ದನಗಳಲ್ಲಿ ೩ ಕೋಟಿ ೮೭ ಲಕ್ಷ ಗೋವುಗಳೂ ಒಂದು ಕೋಟಿ ೫೪ ಲಕ್ಷ ಎಮ್ಮೆಗಳೂ ಇವೆ. ಕಳೆದ ೨೦ ವರುಷಗಳಲ್ಲಿ ಗೋವುಗಳು ನೂರಕ್ಕೆ ೩ ರಂತೆ ಹೆಚ್ಚಿವೆ. ಆದರೆ ಎಮ್ಮೆಗಳು ನೂರಕ್ಕೆ ೧೩ ರಂತೆ ಹೆಚ್ಚಿವೆ.

### ಇವುಗಳ ಆದಾಯವೆಷ್ಟು?

೩೦೦ ಕೋಟಿ ರೂ. ಗಳ ಹಾಲು, ೨೭೦ ಕೋಟಿ ರೂ. ಗಳ ಗೊಬ್ಬರ, ೪೦ ಕೋಟಿ ರೂ. ಗಳ ಚರ್ಮ, ೪೦೦ ಕೋಟಿ ರೂ. ಗಳ ಪರಿಶ್ರಮ ಅಂತು ೧೦೦೦ ಕೋಟಿ ರೂ. ಗಳನ್ನು ಈ ಪ್ರಾಣಿಗಳು ರಾಷ್ಟ್ರಕ್ಕೆ ದುಡಿದುಕೊಡುತ್ತವೆ.

ಹಿಂದುಸ್ಥಾನದಲ್ಲಿ ಪ್ರತಿ ವರುಷ ೨ ಕೋಟಿ ೩೦ ಲಕ್ಷ ಮಣ ತುಪ್ಪ ಉಪಯೋಗಿಸಲ್ಪಡುತ್ತದೆ. ಇದರಲ್ಲಿ ೧೦೦ ಕ್ಕೆ ೬ ರಂತೆ ಎಂದರೆ ೧೪ ಲಕ್ಷ ಮಣ ತುಪ್ಪ ವನಸ್ಪತಿಯಿಂದುಂಟಾದುದು ಅಥವಾ ಚರಬಿಯು ಮಿಶ್ರ ಮಾಡಲ್ಪಟ್ಟು ೩ ಕೋಟಿ ರೂ. ಮೋಸ ಮಾಡಿ ವ್ಯಾಪಾರಿಗಳು ಗಳಿಸುತ್ತಿದ್ದಾರೆ."

## ಪಾರಮಾರ್ಥಿಕ "ಡೈರಿ"

ಶ್ರೀ ಶಿವ ಚಿದಂಬರಾಯ ನಮಃ

ಶ್ರೀಗುರು ಬಸವಲಿಂಗಾಯ ನಮಃ

(೫೮, ೧೦ ಶು. ೨ ಗುರು. ೧೪-೧-೩೭.)

ಅಯ್ಯಾ (ಬಾಹ್ಯದೋಳ್) ಸೂರ್ಯನ ಗತಿಯಲ್ಲಿ ಬದಲಾದ್ದರಿಂದ (ಡಿಸೆಂಬರ ೨೧) ನಮ್ಮ ಹಿಂದೂ ಸಮಾಜದಲ್ಲಿ ಇಂದು ಸಂಕ್ರಾಂತಿಯು. ಏನೋ ಪ್ರೇಮದಿಂದ ಇರಬೇಕೆಂದ. ಪರಸ್ಪರ ಎಳ್ಳು ಬೆಲ್ಲ ಕೊಡುವರು ಇರಲಿ. (ಅಂತರಂಗದೋಳ್) ನನ್ನ ಹೃದಯಾಕಾರದೋಳ್ 'ಸತ್ಯ' ಎಂಬ ಸೂರ್ಯನ ಗತಿಯಲ್ಲಿ ಕ್ರಾಂತಿ (ಬದಲು) ಯಾಗಲೆಂದು ಅಪೇಕ್ಷಿಸು. ಏಕೆ ಈ ಸೂರ್ಯನ ಪ್ರಕಾಶ ಪ್ರಭಾವದಿಂದಲೇ ಶಿವನ ಸನ್ನಿಧಿಯಲ್ಲವೆ?

ಸತ್ಯದ ಮಹಿಮೆಯನ್ನು ಸರ್ವಜ್ಞಕವಿಯು ಇಂತು ಹೇಳಿರುವನು.

ಸತ್ಯನುಳ್ಳವನು ತಾ ಸತ್ತನೆಂದನಬೇಡ
ಹೆತ್ತಮ್ಮ ಮಗನ ಕರೆವಂತೆ ದೇವರು
ಎತ್ತಿಕೊಂಬುವನು ಸರ್ವಜ್ಞ||

ಮೋಹನ್ ಮಹಾತ್ಮಾ ಗಾಂಧಿ— "ಸತ್ಯಕೆ ಸಿವಾ ಔರ ಕೊಯಿ ಧರ್ಮ ಮೈನೆ ಜಾನಾ ನಹಿಹೈ, ಔರ ನ ಜಾನನಾ ಚಾಹತಾಹು" ಆದುದರಿಂದ ಎನ್ನಯ ಜೀವನೆ ಹೃದಯದೋಳ್ ಸತ್ಯ ಸೂರ್ಯನು ಎಷ್ಟು ಪ್ರಮಾಣದಿಂದ ಹೆಚ್ಚೆಚ್ಚು ಬೆಳಗುವನೋ ಆ ಪ್ರಮಾಣದಿಂದ ಕಲ್ಯಾಣವಾಗುವುದರಲ್ಲಿ ಸಂದೇಹವೇನು? ಇಲ್ಲದಿರೆ ಏನೇನೋ ಕಾರಣದಿಂದ (ಹಾಯ್ ಭಯ ಡಂಭ ಜನರ ಭಿಡೆ) ಸತ್ಯದೋಳ್ ಸುಳ್ಳು ಮಿಶ್ರಿತವಾಗಹತ್ತಿದರೆ ಇನ್ನೂ ಭ್ರಾಂತಿಯೇ ಬಿಟ್ಟಿಲ್ಲವೆನಬೇಕು. ನೋಡು ನಿಜಗುಣ ಶಿವಯೋಗಿಗಳ ಬೇಡಿಕೆ "ಬೇಡುವೆನಭವಾ......... ಪುಸಿಯನೆಲ್ಲಿಯು ನುಡಿಯದಿಹಸತ್ಯವಿದನು."

ತ್ರಿ:— ಕ್ರಾಂತಿ ಮಾಡುವದುಂಟು ಸಂತಸದಿ ಹೃದಯ
ದೋಳ್|
ಶಾಂತರೊಪ್ಪದಿಹ ಸುಳ್ಳು ಮಿಶ್ರಿತ ಸತ್ಯ|
ಭ್ರಾಂತಿಯಾಕುರುಹು ದಾಸಾರ್ಯ ||೨||

ಮುಗಟಖಾನ ಹುಬ್ಬಳ್ಳಿ ಹತ್ತಿರ ಮಲಾಪಹಾರೀ ತೀರದ ಸಂಕ್ರಾಂತಿ ಮಹೋತ್ಸವ— ವಿಸ್ತಾರವಾದ ಜನ ಸಮೂಹದೋಳ್ ಸಾವಿರಾರು ಜನ ಭಾವಿಕರು ಪರ್ವಕಾಲದ ನದೀ ಸ್ನಾನದಿಂದ ಪುನೀತರಾಗಲಿಕ್ಕೆ ಬಂದಿರಬಹುದು. ಆದರೆ ತಮ್ಮ ತಮ್ಮ ಪ್ರಕೃತಿಗೆ ತಕ್ಕಂತೆ ಹಲನೆ ಚಲನೆ ನಡೆದಿರ್ಪುದು. ವಿಚಾರಮಾಡಿದರೆ ಜಗದೋಳ್ ಸರ್ವರ ಹೃದಯದಲ್ಲಿಯೂ ಸದಾ ಉನ್ನತಿಯಾಗಲಿ ಅವನತಿಯಾಗಲಿ ಕ್ರಾಂತಿಯೇ ಕ್ಷಣ ಕ್ಷಣಕ್ಕೆ ಬದಲಾಗುವಿಕೆ ನಡೆದಿದೆನ್ನಬಹುದು. ಭಗವಂತನ ಅಗಾಧ ಲೀಲೆಯೇ ಅಂಥಾದ್ದು ಗೀತೋಕ್ತಿ ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿಮಾಯಯಾ|

ತ್ರಿ:— ವ್ಯಕ್ತಿಗಳ ಪ್ರಕೃತಿಯೇ ಮುಕ್ತಿಗಡ್ಡಾಗಿಹುದು|
ವ್ಯಕ್ತಿಗಳನೆಲ್ಲ ಕುಣಿಸುತಿಹ ಸೂತ್ರೊಂದೆ|
ಯುಕ್ತವಾಗಿಹುದು ದಾಸಾರ್ಯ ||೩||

ಆ ಸೂತ್ರವೇ ಶಿವ ಶಕ್ತಿಯು ಇಂತು ಶಿವ ಶಕ್ತಿಗಾಧೀನವಾದ ಜಗತ್ತಿನೋಳ್ ಅಥವಾ ಹೃದಯದೋಳ್ ಪ್ರಕೃತಿಯಂ ಗೆಲ್ವ ಗುಣಗಳ ಉತ್ಕ್ರಾಂತಿಯಾಗಹತ್ತುವದೋ ಅಲ್ಲಿ ಶಿವನ ಕೃಪಾದೃಷ್ಟಿಯ ಜುಳುಕು ಬೀಳಹತ್ತಲೆನಬಹುದು.

× × ×

## ಚಿಮನಚೋಡ.

ನಿಜಾಮು ಪ್ರಾಂತದ ಚಿಂಚೋಳಿ ತಾಲೂಕು ಚಿಮನಚೋಡದಲ್ಲಿ ಶ್ರೀಗಜಾನನ ಉತ್ಸವವು ಸಾರ್ವಜನಿಕವಾಗಿ ಬಹು ಸಂಭ್ರಮದಿಂದ ನಡೆಯಿತು. ಪರಮಪೂಜ್ಯ ಶ್ರೀ ಚೆನ್ನವೀರ ಸ್ವಾಮಿಗಳು ಬಿಚ್ಚಾಲ ಇವರ ಮತ್ತು ಶ್ರೀ. ಭೀಮಾಚಾರ್ಯರು ಅಗ್ನಿಹೋತ್ರಿ ಚಿಂಚೋಳಿ ಇವರ ಪ್ರವಚನ ಉತ್ತಮ ರೀತಿಯಿಂದ ಪ್ರತಿ ದಿನ ನಡೆದು ಜನರಲ್ಲಿ ಧಾರ್ಮಿಕ ಜಾಗೃತಿಯಾಯಿತು.

ಗಜಾನನ ವಿಸರ್ಜನೆಯ ಸಮಾರಂಭಕ್ಕೆ ಎಲ್ಲ ಜಾತಿಯ ಜನರೂ ೭-೮ ನೂರರ ವರೆಗೆ ಕೂಡಿದ್ದರು. ಹೀಗೆ ಈ ಊರಲ್ಲಿ ಈ ಸಮಾರಂಭ ಒಳ್ಳೇ ರೀತಿಯಿಂದ ನಡೆಯಿತು.

ಓರ್ವ ಗಜಾನನ ಭಕ್ತ.

## ಲಿಂಗಧಾರಣ ಸಮಾರಂಭ.

ಬೆಳಗಾವ, ಕೊಲ್ಲಾಪುರ, ಮೊದಲಾದ ಕೆಲವು ಭಾಗಗಳಲ್ಲಿ ಫುಲಾರಿ (ಹೂಗಾರರು) ಎಂಬ ಜನರಿದ್ದಾರೆ. ಇವರು ತಾವು ಲಿಂಗಾಯತರೆಂದು ಹೇಳಿಕೊಳ್ಳುತ್ತಿದ್ದಾರೆ. ಆದರೆ ಕೆಲವರು ಲಿಂಗ ಧರಿಸದೆ ಯಜ್ಞೋಪವೀತವನ್ನು ಧರಿಸುತ್ತಿದ್ದಾರೆ. ಇದನ್ನು ನೋಡಿ ಆ ಜನರಲ್ಲಿ ಶ್ರೀ. ಸಿದ್ಧಲಿಂಗಪ್ಪ ಹೂಗಾರ ಧೋಡಗೇರಿ ಇವರು ಬಹು ಪರಿಶ್ರಮಪಟ್ಟು ತಮ್ಮ ಜನರಿಗೆ ಲಿಂಗಧಾರಣಮಾಡಿಕೊಳ್ಳುವಂತೆ ಹೇಳಿದರು.

ಶ್ರೀಮನ್ನಿರಂಜನ ಶ್ರೀ ನಿಡಸೂಸಿ ಮಹಾ ಸ್ವಾಮಿಗಳ ಅಧ್ಯಕ್ಷತೆಯಲ್ಲಿ ಈ ಜನರ ಸಭೆ ಕೂಡಿ ಕೆಲವರು ವಿಧಿವತ್ತಾಗಿ ಲಿಂಗ ಧಾರಣ ಮಾಡಿಸಿಕೊಂಡರು. ಈ ಜನರು ಶುದ್ಧಾಚಾರ ಶೀಲರಿದ್ದಾರೆ. ಇವರ ೩೦೦ ಕುಟುಂಬಗಳು ಇಷ್ಟರಲ್ಲೇ ಲಿಂಗಧಾರಣ ಮಾಡಿಕೊಳ್ಳುವ ಯೋಚನೆಯಲ್ಲಿವೆ.

ಪ್ರತ್ಯಕ್ಷದರ್ಶಿ.

## ಯಾರು ಏನು ಹೇಳುತ್ತಾರೆ?

ಮಹಾನುಭಾವರಾದ ಬಸವಣ್ಣನವರ ವಿಚಾರವಾಗಿ ಯಾರು ಏನು ಹೇಳುತ್ತಾರೆಂಬುದನ್ನು ಶ್ರೀ. ಕಾಟಕರ ಎಂಬುವವರು "ವೀರಶೈವ ಸಂಜೀವನಿ" ಪತ್ರಿಕೆಯ ತಮ್ಮ ವಿಮರ್ಶಾತ್ಮಕ ಲೇಖನದಲ್ಲಿ ಹೀಗೆ ತಿಳಿಸಿದ್ದಾರೆ—

(೧) ಕೈ. ಡಾ. ಕೇತಕರರು ಹೀಗೆ ಹೇಳುತ್ತಾರೆ— "ಬಸವನ ಕಾರ್ಯವು ಮಹತ್ತರವಾದುದಾಗಿದ್ದಿತು. ಬಸವನ ಮತವು ಹಿಂದುಸ್ಥಾನವನ್ನೆಲ್ಲಾ ವ್ಯಾಪಿಸಿದ್ದರೆ ಈಗ ಯಾವ ಸುಧಾರಣೆಗಾಗಿ ಜನರು ತಳಮಳಪಡುತ್ತಿದ್ದಾರೆಯೋ ಆ ಸುಧಾರಣೆಯನ್ನೇ ಉಂಟುಮಾಡಿದ ಶ್ರೇಯಸ್ಸು ಬಸವನಿಗೆ ದೊರೆಯುತ್ತಿದ್ದಿತು."

(೨) ಭಾರತಾಚಾರ್ಯ ಶ್ರೀ. ಚಿ. ವಿ. ವೈದ್ಯ ಇವರು ಹೀಗೆ ಹೇಳಿದ್ದಾರೆ— "ಉದ್ಯೋಗದ ಮಹತ್ವವನ್ನೂ ಶ್ರೇಷ್ಠತ್ವವನ್ನೂ ಪ್ರತಿಪಾದಿಸಿದ ಮತ್ತು ಭಿಕ್ಷೆಬೇಡುವುದನ್ನು ನಿಲ್ಲಿಸಿದ ಹಿಂದುಸ್ಥಾನದಲ್ಲಿಯ ಮೊದಲನೆಯ ತತ್ವವೇತ್ತನೆಂದರೆ ಬಸವನು."

(೩) ಸಾಹಿತ್ಯಾಚಾರ್ಯ ಶ್ರೀ. ಪಾಂಗರಕರರು ಹೇಳುವುದೇನೆಂದರೆ— "ಜೈನ, ಬೌದ್ಧ, ಇಸ್ಲಾಮ್ ಮತಗಳ ಪ್ರಾಬಲ್ಯದ ಕಾಲಕ್ಕೆ ಬಸವ ಪಂಥವು ವೈದಿಕ ಧರ್ಮದ ಮೇಲೆ ಉಪಕಾರವನ್ನೇ ಮಾಡಿತು."

ಇಂಥ ಜಗದಣ್ಣನಾದ ಆ ಬಸವಣ್ಣನ ಮತದ ಲಿಂಗವಂತರಲ್ಲಿ ಈಗ ಅನೇಕ ಜಾತಿವರ್ಣ, ಉದ್ಯೋಗದ ಮೇಲು ಕೀಳು, ಭಿಕ್ಷಾವೃತ್ತಿ ಇವುಗಳೆಲ್ಲಾ ಉಂಟಾಗಿರುವುದು ಶೋಚನೀಯವಾದುದಲ್ಲವೆ?

## ತಿಬೇಟ ದೇಶದ ಆಚಾರ ವಿಚಾರ.

### ಸ್ನಾನ ಅನಾಚಾರ! ಸಹೋದರರಿಗೆ ಒಬ್ಬ ಹೆಂಡತಿ!!

ಆಚಾರಗಳು ದೇಶಕಾಲ ಪರಿಸ್ಥಿತಿಗೆ ತಕ್ಕಂತೆ ಇರುತ್ತವೆ. ತಿಬೇಟ ದೇಶವು ಮನುಷ್ಯ ಜಾತಿಯ ಜನ್ಮ ಭೂಮಿಯೆಂದೇ ಕೆಲವರು ಹೇಳುತ್ತಾರೆ. ತಿಬೇಟವೇ ಹಿಂದಕ್ಕೆ ಸ್ವರ್ಗವಾಗಿತ್ತೆಂದು ಕೆಲವರು ತಿಳಿದಿದ್ದಾರೆ. ಪಾಂಡವರು ಬಂದುದು ತಿಬೇಟ ದೇಶದಿಂದಲೇ ಸರಿಯೆಂದು ಕೆಲವರ ವಾದ. ಇಂಥ ತಿಬೇಟದಲ್ಲಿ ಈಗಿರತಕ್ಕ ಕೆಲವು ಆಚಾರ ವಿಚಾರಗಳನ್ನು ಈ ಕೆಳಗೆ ಕೊಟ್ಟಿದೆ. ಇವುಗಳಿಂದ ಆಚಾರಗಳೆಲ್ಲಾ ದೇಶಕಾಲ ಪರಿಸ್ಥಿತಿಗಳಿಗೆ ತಕ್ಕಂತೆ ಇರುತ್ತವೆಂದೇ ಗೊತ್ತಾಗುವುದು.

ತಿಬೇಟ ದೇಶವು ಹಿಮಾಲಯದ ಹಿಂಭಾಗದಲ್ಲಿದೆ. ಅದರ ಮುಖ್ಯ ಪಟ್ಟಣ ಲ್ಹಾಸಾ ಎಂಬುದು. ದಲಾಯಿಲಾಮಾ ಎಂಬುವವರ ಅಧಿಕಾರಕ್ಕೇನೇ ಆ ದೇಶ ಒಳಪಟ್ಟಿದೆ. ಲಾಮಾ ದಿವಂಗತನಾದುದರಿಂದ ಹೊಸದಾಗಿ ಮಾಡಿಕೊಳ್ಳಬೇಕಾದ ಲಾಮಾನನ್ನು ಆ ದೇಶದವರು ಶೋಧಿಸುತ್ತಿದ್ದಾರೆ.

ಈ ದೇಶದಲ್ಲಿ ಪರರು ಪ್ರವೇಶಿಸಲಿಕ್ಕೆ ಅವಕಾಶವಿಲ್ಲ. ಈ ವರೆಗೆ ಬಹು ಪ್ರಯತ್ನಪಟ್ಟು ೧೦-೧೨ ಯುರೋಪಿಯನ್‌ರು ಆ ದೇಶದಲ್ಲಿ ಪ್ರವಾಸಮಾಡಿದ್ದಾರೆ.

ಈ ದೇಶದಲ್ಲಿ ಸಾಧುಗಳ ತಂಡವೇ ತಂಡ. ಎಲ್ಲೆಲ್ಲಿಯೂ ಸಾಧುಗಳ ಮಠ. ಅಲ್ಲಿ ಸಾಧುಗಳಾಗುವುದು ಬಹು ಸುಲಭ. ಅವರಿಗೆ ಇಂತಹ ಯೋಗ್ಯತೆಯಿರಬೇಕೆಂಬ ನಿಯಮವೇನೂ ಇಲ್ಲ. ಯಾವ ಕೆಲಸವನ್ನೂ ಮಾಡದೆ ಸೋಮಾರಿಯಾಗಿ ಜೀವಿಸಲು ಸಿದ್ಧನಾದರೆ ಆತನು ಸಾಧು.

ಇಂಥ ಸಾಧುಗಳು ರಾಜಧಾನಿಯ ಸುತ್ತಲಿನ ಭಾಗದಲ್ಲಿಯೇ ಸಾಧಾರಣ ಹತ್ತು ಸಾವಿರ ಜನರಿದ್ದಾರೆ. ಇವರು ತಮ್ಮ ಹೊಟ್ಟೆಗಿಲ್ಲದಾಗ ಸುಲಿಗೆ ನಡೆಸಿದರೂ ಅದೇನೂ ಅಪರಾಧವಲ್ಲ. ಆ ದೇಶದಲ್ಲಿ ಪೋಲಿಸರೇ ಇಲ್ಲ. ಪೋಲಿಸ ಶಾಖೆಯಿಲ್ಲದಲೇ ಅಲ್ಲಿಯ ಜನರ ವ್ಯವಸ್ಥೆ ನಡೆದಿದೆ.

### ಆಹಾರದ ರೀತಿ.

ಇಲ್ಲಿಯ ಜನರು ಮಾಂಸಾಹಾರಿಗಳು. ಎಮ್ಮೆಯ ಮಾಂಸವು ಇವರಿಗೆ ಬಹು ಪ್ರೀತಿ. ಹಾಲು ಇವರಿಗೆ ಇಷ್ಟವಲ್ಲ. ಬೆಣ್ಣೆಯೇ ಇವರಿಗೆ ಬಹು ಪ್ರೇಮದ ವಸ್ತು. ಅದು ಎಷ್ಟು ಹಳಿಯದೋ ಅಷ್ಟು ಅದಕ್ಕೆ ಮಹತ್ವ ಹೆಚ್ಚು. ಮೂರ್ತಿಪೂಜಕರು. ದೇವಾಲಯುಗಳಲ್ಲಿಯ ದೀಪಕ್ಕೆ ಈ ಬೆಣ್ಣೆಯನ್ನು ಉಪಯೋಗಿಸುತ್ತಾರೆ.

ಚೀನ ದೇಶದಿಂದ ಇಲ್ಲಿಗೆ ಚಹಾ ಬರುತ್ತದೆ. ಅದಕ್ಕೆ ಬೆಣ್ಣೆಯನ್ನು ಹಾಕಿ ಕಾಸಿ ಕುಡಿಯುತ್ತಾರೆ. ಇದೇ ಅವರಿಗೆ ಬಹು ಪ್ರಿಯವಾದ ಪೇಯ. ಬೀಡಿ, ಸಿಗಾರೇಟ ಮೊದಲಾದ ತಂಬಾಕಿನ ಉಪಯೋಗ ಆ ದೇಶದಲ್ಲಿಲ್ಲವೇ ಇಲ್ಲ. ಯಾರಾದರೂ ತಂಬಾಕು ಸೇದಿದರೆ ಅವರಿಗೆ ಶಿಕ್ಷೆಯಾಗುತ್ತಿದೆ. ಆ ದೇಶದಲ್ಲಿ ಸಕ್ಕರೆ ಅಥವಾ ಯಾವ ವಿಧವಾದ ತರಕಾರಿ ಇಲ್ಲವೇ ಇಲ್ಲ. ತಿಬೇಟಿಗಳ ಹಲ್ಲು ಬಹು ಶುಭ್ರ ಮತ್ತು ಗಟ್ಟಿ. ಆ ದೇಶದಲ್ಲಿ ಒಬ್ಬನಾದರೂ ದಂತ ವೈದ್ಯನಿಲ್ಲ.

### ಮರಣದವರೆಗೂ ಸ್ನಾನವೇ ಇಲ್ಲ!

ಹುಟ್ಟಿದಂದಿನಿಂದ ಸಾಯುವವರೆಗೂ ಎಂದೂ ಸ್ನಾನಮಾಡದಿರುವವರೇ ಆ ದೇಶದಲ್ಲಿ ಹೆಚ್ಚು. ಅಲ್ಲಿ ಶ್ರೇಷ್ಠರೂ ಆಚಾರಶೀಲರೂ, ಸುಶಿಕ್ಷಿತರೂ ಎಂಬುವವರು ಕೈ, ಕಾಲು, ಮೋರೆಗಳನ್ನು ತೊಳೆದುಕೊಳ್ಳುತ್ತಾರೆ.

ಮೈಮೇಲೆ ಮಣ್ಣು ಎಷ್ಟು ಹೆಚ್ಚು ಇರುತ್ತದೆಯೋ ಅಷ್ಟು ಅಲ್ಲಿಯುವರಿಗೆ ಹಿತಕರ! ಅಲ್ಲಿ ಚಳಿಯು ಅತ್ಯಧಿಕ. ಮೈಮೇಲೆ ಮಣ್ಣು ಇರುವುದು ಅವರಿಗೊಂದು ಹೊದಿಕೆಯಂತೆಯೇ ಸರಿ. ಯಾರಾದರೂ ಆಚಾರಶೀಲರಾಗಬೇಕೆಂದು ಅತಿ ಪ್ರಸಂಗಿಯಾಗಿ ಸ್ನಾನಮಾಡಿದರೆ ನ್ಯುಮೋನಿಯಾ ಬೇನೆಯಿಂದ ಅಂತ್ಯವಿಧಿಗೆ ಸಿದ್ಧರಾಗಿದರೆಂದೇ ತಿಳಿಯಬೇಕು!

### ಲಗ್ನದ ರೀತಿ.

ತಿಬೇಟದಲ್ಲಿಯ ಲಗ್ನದ ರೀತಿಯು ಪಾಂಡವರ ಲಗ್ನದಂತೆ. ಆ ದೇಶದಲ್ಲಿ ಲಗ್ನದ ಶಾಸನವೇ ಹಾಗಿದೆ. ಹಿರಿಯ ಅಣ್ಣನು ಲಗ್ನವಾದರೆ ಆತನ ತಮ್ಮಂದಿರೇನೂ ಲಗ್ನವಾಗಬೇಕಾದುದಿಲ್ಲ. ಏಕೆಂದರೆ, ಅಣ್ಣನ ಹೆಂಡತಿಯೇ ಎಲ್ಲ ತಮ್ಮಂದಿರ ಹೆಂಡತಿಯೂ ಆಗುತ್ತಾಳೆ.

ಈ ಮೇಲಿನ ಸಂಗತಿಗಳಿಂದ ಆ ದೇಶದ ಆಚಾರ ವಿಚಾರಗಳು ಈಗಿನ ಸುಧಾರಿಸಿದ ಜನಾಂಗದ ಆಚಾರ ವಿಚಾರಕ್ಕೆ ಎಷ್ಟು ಭಿನ್ನವಾಗಿವೆಯೆಂಬುದು ಗೊತ್ತಾಗುತ್ತದೆ. ಅಲ್ಲಿ ಈಗ ಒಂದು ರೆಡಿಯೋ ಸ್ಟೇಶನ್ ಸ್ಥಾಪನೆಯಾಗಿದೆ. ಮತ್ತು ಒಂದು ಪತ್ರಿಕೆ ಪ್ರಕಟವಾಗಲು ಪ್ರಾರಂಭವಾಗಿದೆ.



—ಸರಕಾರದ ವಿಷಯದಲ್ಲಿ ಅಪ್ರೀತಿಯನ್ನುಂಟುಮಾಡುತ್ತಿದ್ದಾರೆಂಬ ವಿಚಾರವಾಗಿ ಮಾಸ್ಕೊ ಪಟ್ಟಣದಲ್ಲಿ ೧೯ ಜನ ಪ್ರಮುಖರಿಗೆ ಮರಣದಂಡನೆಯನ್ನು ವಿಧಿಸಿದರು.

# ವರ್ಣವ್ಯವಸ್ಥೆಯು ಆದರ್ಶವಾದುದೆ?

[ ೫ನೆಯ ಸಂಚಿಕೆಯಿಂದ ಮುಂದುವರಿದುದು. ]

ಹಿಂದುಗಳಲ್ಲಿ ನಾಲ್ಕು ಸಾವಿರ ಜಾತಿ, ಉಪಜಾತಿಗಳಿವೆ. ಇಷ್ಟು ಜಾತಿಗಳಿರುವುದು ಕ್ಷೇಮಕರವಲ್ಲ. ಆದಕ್ಕಾಗಿ ನಾಲ್ಕು ಸಾವಿರ ತೆಗೆದು ಬ್ರಾಹ್ಮಣಾದಿ ನಾಲ್ಕು ವರ್ಣಗಳನ್ನು ಮಾಡಬೇಕೆಂದೂ ಈಗಿನ ಜಾತಿಗಳು ಜನ್ಮವಿಶಿಷ್ಟವಾಗಿವೆ. ಆದರೆ ವರ್ಣಗಳು ಗುಣ ಕರ್ಮಗಳಿಂದಾದವುಗಳಾಗಬೇಕೆಂದೂ ಆರ್ಯ ಸಮಾಜದವರು ಹೇಳುತ್ತಿದ್ದಾರೆ.

ಆರ್ಯ ಸಮಾಜದವರು ವರ್ಣಗಳ ಚೀಟಿಯನ್ನು ಹಣೆಗೆ ಏಕೆ ಕಟ್ಟಬೇಕೆನ್ನುತ್ತಾರೆಯೋ ತಿಳಿಯದು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ಹಣೆ ಚೀಟಿಯಿಲ್ಲದೆ ಜ್ಞಾನ, ಶೌರ್ಯ, ಧನಾರ್ಜನೆಯ ಗುಣಕರ್ಮಗಳು ಮನುಷ್ಯನಿಂದ ಸಂಭವಿಸುವುದಿಲ್ಲವೆ? ಯುರೋಪ ಖಂಡದಲ್ಲಿ ಜ್ಞಾನಿಗಳೂ, ಯೋದ್ಧರೂ, ಧನಿಕರೂ ಈ ಚೀಟಿಗಳನ್ನು ಹಣೆಗೆ ಕಟ್ಟಿಕೊಂಡಿದ್ದಾರೆಯೆ? ಇಲ್ಲವೇ ಇಲ್ಲ. ಅಂದಮೇಲೆ ಹಿಂದುಗಳಿಗೇನೇ ಈ ವರ್ಣಗಳ ತಲೆಚೀಟಿ ಯಾಕೆ ಬೇಕು?

ಒಮ್ಮೆ ಯಾವ ಕಾರಣದಿಂದಲಾದರೂ ಒಂದು ಗುಂಪಿಗೆ ಒಂದು ಹೆಸರು ಕೊಡಲ್ಪಟ್ಟರೆ ಅದು ಕೆಲವು ದಿನಗಳನಂತರ ಜನರ ಮನಸ್ಸಿನಲ್ಲಿ ಆಳವಾಗಿ ನಾಟಹೋಗುತ್ತದೆ. ಆಮೇಲೆ ಅದನ್ನು ಕಿತ್ತುಹಾಕುವುದು ಎಂಥ ಬುದ್ಧಿಶಾಲಿಗೂ ಶಕ್ಯವಿಲ್ಲ.

ಆ ಹೆಸರಿನ ಸಂಗಡ ಅಂಟಕೊಂಡಿರುವ ಭಾವನೆಯು ಜನರಲ್ಲಿ ಬೇರೂರಿದಮೇಲೆ ಆಡುವ ಮಾತುಗಳೆಲ್ಲಾ ಭಾವನೆಯನ್ನೇನೂ ವ್ಯತ್ಯಾಸ ಮಾಡುವುದಿಲ್ಲವೆಂಬುದು ಅನುಭವಸಿದ್ಧವಾಗಿದೆ. ಭರತಖಂಡದ ಈ ವರೆಗಿನ ಪುರಾಣ ಇತಿಹಾಸ ಶಾಸ್ತ್ರಗಳಲ್ಲೆಲ್ಲಾ ಬ್ರಾಹ್ಮಣರಿಗೆ ಪೂಜ್ಯತ್ವವನ್ನೂ ಶೂದ್ರರಿಗೆ ಹೀನತ್ವವನ್ನೂ ಕೊಟ್ಟೇ ಬರೆದಿದ್ದಾರಷ್ಟೆ.

ಆದಕಾರಣ ಈಗ ಬ್ರಾಹ್ಮಣ ಎಂಬ ಹೆಸರು ಅವರಿಗೆ ಶ್ರೇಷ್ಠತ್ವದ್ದಾಗಿ ತೋರುವುದಲ್ಲದೆ ಅನ್ಯರಿಗೂ ಆ ಶಬ್ದವು ಹೆಚ್ಚಿನದಾಗಿಯೇ ತೋರುತ್ತಿದೆ. ಹೀಗಾಗುವುದು ಮನುಷ್ಯ ಸ್ವಭಾವಕ್ಕೆ ಅನುಸರಿಸಿದ್ದೇ ಆಗಿದೆ. ಆದಕಾರಣ ಈ ಬ್ರಾಹ್ಮಣಾದಿ ವರ್ಣಗಳ ಹೆಸರಿನ ಚೀಟಿಯನ್ನು ಹಣೆಗೆ ಹಚ್ಚುವುದು ಮಹಾ ಪಾಪಕರವೇ ಸರಿ.

ಶೂದ್ರರೆಂಬ ಹೆಸರನ್ನು ಈಗ ಯಾರು ತಮ್ಮ ಹಣೆಯ ಮೇಲೆ ಹಚ್ಚಿಕೊಳ್ಳಲು ಸಿದ್ಧರಿದ್ದಾರೆ? ಎಲ್ಲರಿಗೂ ಬ್ರಾಹ್ಮಣ ಎಂಬ ಶಬ್ದವೇ ಬೇಕಾಗಬಹುದು. ವರ್ಣಗಳ ಹೆಸರುಗಳು ಮೇಲು ಕೀಳು ಭಾವನೆಗಳಿಂದ ಕೂಡಿಕೊಂಡಿವೆ. ಆದಕಾರಣ ಅವು ಈಗ ತ್ಯಾಜ್ಯವಾಗಿಯೇ ತೋರುವುದು ಸ್ವಾಭಾವಿಕ.

ಈ ಮೇಲು ಕೀಳಿನ ವರ್ಣಗಳನ್ನು ಸಮಾಜದಲ್ಲಿ ನೆಲೆಗೊಳಿಸಬೇಕಾದರೆ ರಾಜಶಾಸನವೇ ಬೇಕು. ಅಂಥ ಶಾಸನದಿಂದ ಮಾತ್ರ ಈ ವರ್ಣಗಳ ಹೆಸರನ್ನು ಹಣೆಗೆ ಅಂಟಿಸಬಹುದು. ಶ್ರೀ ರಾಮಚಂದ್ರನು ಶಂಬುಕನನ್ನು ಕೊಲ್ಲಿಸಿದ್ದಕ್ಕಾಗಿ ಅನೇಕರು ರಾಮಚಂದ್ರನನ್ನು ಆಕ್ಷೇಪಿಸುತ್ತಿದ್ದಾರೆ. ಇದು ಸರಿಯಲ್ಲ. ರಾಮಚಂದ್ರನು ರಾಜನಾಗಿದ್ದನು. ಆಗಿನ ರಾಜರು ವರ್ಣಾಶ್ರಮಗಳನ್ನು ರಕ್ಷಿಸುವುದು ಅವರ ಕರ್ತವ್ಯವೇ ಆಗಿತ್ತು. ಶಂಬುಕನು ಶೂದ್ರನಾಗಿದ್ದನು. ಆತನು ತನ್ನ ವರ್ಣದ ಕಾರ್ಯ ಮಾಡದೆ ಜಪತಪಾದಿ ಬ್ರಾಹ್ಮಣೀ ಕರ್ಮವನ್ನು ಮಾಡಿದನು. ಹೀಗೆ ವರ್ಣಕರ್ಮವನ್ನು ಉಲ್ಲಂಘಿಸಿದ್ದರಿಂದ ರಾಜನು ಆತನಿಗೆ ಶಿಕ್ಷೆ ವಿಧಿಸಿದ್ದು ರಾಜಧರ್ಮದಂತೆ ಯೋಗ್ಯವೇ ಆಗಿದೆ. ಇದರಮೇಲಿಂದ ವರ್ಣಗಳನ್ನು ರಕ್ಷಿಸಲು ರಾಜಶಾಸನವು ಅಗತ್ಯವಾಗಿದೆಯೆಂದೇ ಸ್ಪಷ್ಟವಾಗುವದಿಲ್ಲವೆ?

ಶೂದ್ರನು ವೇದ ವಾಕ್ಯಗಳನ್ನು ಕೇಳಿದರೆ ಆತನ ಕಿವಿಯಲ್ಲಿ ಸೀಸವನ್ನು ಕಾಸಿ ಹಾಕಬೇಕೆಂತಲೂ ಆತನು ವೇದ ವಾಕ್ಯಗಳನ್ನು ಉಚ್ಚರಿಸಿದರೆ ಆತನ ನಾಲಿಗೆಯನ್ನು ಕೊಯ್ಯಬೇಕೆಂತಲೂ ಸ್ಮೃತಿಗಳು ಹೇಳುತ್ತವೆ. ಹಾಗೆ ಮಾಡಬೇಕಾದರೆ ರಾಜಶಾಸನವು ಬೇಕಲ್ಲವೆ? ಇವೆಲ್ಲ ಈ ೨೦ ನೆಯ ಶತಮಾನದಲ್ಲಿ ಶಕ್ಯವೆ?

ಇಷ್ಟೆಲ್ಲಾ ಅನಾನುಕೂಲಗಳಿದ್ದರೂ ಬ್ರಾಹ್ಮಣಾದಿ ವರ್ಣಗಳು ಇರಲೇಬೇಕೆಂದರೆ ಅವು ಜನಾಂಗಕ್ಕೆ ಅಹಿತವನ್ನೇ ಮಾಡುತ್ತವೆ. ಕೆಲವರ ಹಿತಕ್ಕಾಗಿ ಬಹು ಜನರಿಗೆ ಕಷ್ಟವನ್ನುಂಟು ಮಾಡುತ್ತವೆ. ಹಿಂದುಗಳ ವಿನಾ ಪ್ರಪಂಚದ ಯಾವ ಜನಾಂಗದವರೂ ಈ ವರ್ಣ ವ್ಯವಸ್ಥೆಯನ್ನಿಟ್ಟುಕೊಂಡಿಲ್ಲ. ಹಿಂದುಸ್ಥಾನವು ಈಗ ಇಂಥ ಹೀನಸ್ಥಿತಿಗೆ ಬಂದುದು ಅದರಲ್ಲಿಯ ಈ ವರ್ಣ ವ್ಯವಸ್ಥೆಯಿಂದಲೇ ಸರಿ.

ವರ್ಣ ವ್ಯವಸ್ಥೆಯು ನಮ್ಮಲ್ಲಿ ಒಡಕನ್ನು ಮಾಡಿತು. ಕಡಿಮೆ ವರ್ಣದಲ್ಲಿ ಹುಟ್ಟಿದವರು ಕೇವಲ ದೈವವಾದಿಗಳಾದರು. ನಮ್ಮ ಹಣೆಯಲ್ಲಿ ಇದನ್ನೇ ಬರೆದಿದೆ. ಇಷ್ಟರಲ್ಲೇ ನಾವಿರಬೇಕೆಂದು ತಿಳಿಯುವಂತೆಮಾಡಿತು. ಅಶೋಕನ ಕಾಲದಲ್ಲಿ ವರ್ಣಗಳು ಲೋಪವಾದುದರಿಂದಲೇ ಆಗಿನ ಭಾರತೀಯರು ಉತ್ತಮ ಸ್ಥಿತಿಗೆ ಬಂದರು. ಒಳ್ಳೆಯ ಗುಣಕರ್ಮಗಳು ಎಲ್ಲರಲ್ಲಿಯೂ ಹೆಚ್ಚಲು ಅವಕಾಶವಾಯಿತು. ಎಲ್ಲರಿಗೂ ಸಾಮಾಜಿಕ ಸ್ವಾತಂತ್ರ್ಯ ಪ್ರಾಪ್ತವಾಗಿತ್ತು.

ವರ್ಣಗಳಿಂದಲೇ ಹಿಂದು ಜನಾಂಗವು ಅಂತಃಕಲಹಕ್ಕೊಳಗಾಗಿ ಬೆಂದುಬೆಂಡಾಗಿದೆ. ಬ್ರಾಹ್ಮಣರು ಕ್ಷತ್ರಿಯರನ್ನು ಹಾಳು ಮಾಡಬೇಕೆಂದೂ ಕ್ಷತ್ರಿಯರು ಬ್ರಾಹ್ಮಣರನ್ನು ನಾಶಮಾಡಬೇಕೆಂದೂ ಎಷ್ಟೋಕಾಲ ಹೋರಾಡಿದ್ದಾರೆ. ಇವರಲ್ಲಿ ಯಾರು ಯಾರಿಗೆ ಮೊದಲು ಮನ್ನಣೆಮಾಡಬೇಕೆಂಬ ವಿಷಯದಲ್ಲಿಯೇ ಎಷ್ಟೋ ಜಗಳಗಳಾಗಿವೆ. ಹಿಂದಿನ ಭಾರತೀಯ ಗ್ರಂಥಗಳಲ್ಲಿ ಇಂಥ ಬೇಕಷ್ಟು ದೃಷ್ಟಾಂತಗಳಿವೆ. ಕ್ಷತ್ರಿಯರೇ ಇಲ್ಲದಂತೆ ಮಾಡಲು ವಿಷ್ಣು ಅವತಾರಮಾಡಿದನೆಂದೇ ಪುರಾಣಗಳು ಹೇಳುತ್ತವೆ. ಹೀಗೆ ಅಂತಃಕಲಹದಿಂದ ಕ್ಷಾತ್ರತೇಜವೂ ಈ ದೇಶದಲ್ಲಿ ನಷ್ಟವಾಗಲು ವರ್ಣಕಲ್ಪನೆಯೇ ಕಾರಣ. ಆದಕಾರಣ ಯಾವ ದೃಷ್ಟಿಯಿಂದ ನೋಡಿದರೂ ವರ್ಣವ್ಯವಸ್ಥೆಯು ಆದರ್ಶವಾದುದಲ್ಲವೆಂದೇ ಸಿದ್ಧವಾಗುತ್ತದೆ. ಆದಕಾರಣ ಇವುಗಳನ್ನು ತೆಗೆದುಹಾಕಿ ಹಿಂದುಗಳೆಲ್ಲಾ ಒಂದಾಗುವಂತೆ ಪ್ರಯತ್ನಿಸಬೇಕು.

ಸಂಪಾದಕ "ಕ್ರಾಂತಿ" ಅನುವಾದಕ

ಎನ್. ಸಿದ್ಧರಾಮಪ್ಪ ಎಲೇರಿ.

---

—ವಿಜಾಪುರ ಜಿಲ್ಲೆಯ ಬಹು ಭಾಗಗಳಲ್ಲಿ ಕಳೆದ ವಾರ ಚೆನ್ನಾಗಿ ಮಳೆಯಾಯಿತು. ಜನರಿಗೆ ಎಷ್ಟೋ ಸಮಾಧಾನ. ಬಿತ್ತುವ ಕೆಲಸ ಎಲ್ಲಕಡೆಗೂ ನಡೆದಿದೆ.

—ಕಳೆದ ಒಂದನೆಯ ತಾರೀಖಿನಿಂದ ಏರ್ಪಟ್ಟ ಫೆಡರಲ್ ನ್ಯಾಯಸ್ಥಾನದ ಮುಂದೆ ಈಗ ಪ್ರಿವ್ಹಿಕೌನ್ಸಿಲ್ಲಿಗೆ ಹೋಗುತ್ತಿದ್ದ ವ್ಯಾಜ್ಯಗಳೆಲ್ಲಾ ಬರುವವು. ಈ ನ್ಯಾಯಸ್ಥಾನದ ಕಾರ್ಯ ಪದ್ಧತಿಯ ರೀತಿ ನೀತಿಗಳನ್ನು ಮೂರು ಜನ ನ್ಯಾಯಾಧೀಶರೂ ಸೇರಿ ಗೊತ್ತುಪಡಿಸುತ್ತಿದ್ದಾರೆ.

—ಚೀನ ದೇಶದ ಮೇಲೆ ಜಪಾನವು ಅತ್ಯಾಚಾರವನ್ನು ನಡೆಸಿದ್ದರಿಂದ ಜಪಾನಿನ ಪದಾರ್ಥಗಳಿಗೆ ಎಲ್ಲ ಕಡೆ ಬಹಿಷ್ಕಾರ ಪ್ರಾರಂಭವಾಗಿದೆ. ಹಿಂದುಸ್ಥಾನವೂ ಬಹಿಷ್ಕಾರಹಾಕಬೇಕೆಂದು ಕಾಂಗ್ರೆಸ್ ಅಧ್ಯಕ್ಷರು ಹೇಳಿದ್ದಾರೆ.

—ಕಲಕತ್ತಾದಲ್ಲಿ ಈ ತಿಂಗಳ ಕೊನೆಗೆ ಕೂಡುವ ಆಲ್ ಇಂಡಿಯಾ ಕಾಂಗ್ರೆಸ್ ಕಮಿಟಿಯ ಸಿದ್ಧತೆಯ ಕಾರ್ಯ ಬಹು ಉತ್ಸಾಹದಿಂದ ನಡೆದಿದೆ. ಸಾಧಾರಣ ಐದು ಸಾವಿರ ಜನರು ಕುಳಿತುಕೊಳ್ಳುವಷ್ಟು ಭವ್ಯವಾದ ಮಂಟಪವನ್ನು ಏರ್ಪಡಿಸುತ್ತಿದ್ದಾರೆ.

—ಮೈಸೂರು ಸರಕಾರವು ಆ ಪ್ರಾಂತದ ಕಾಂಗ್ರೆಸ್ ಕೆಲಸಗಾರರ ಮೇಲೆ ದಬ್ಬಾಳಿಕೆಯನ್ನು ನಡೆಸಿದೆ. ಆದುದರಿಂದ ಆಜ್ಞೆ ಶಾಸನ ಭಂಗದವರೆಗೆ ಕಾಂಗ್ರೆಸ್ ಕೆಲಸಗಾರರು ಚಟುವಟಿಕೆಯನ್ನು ನಡೆಯಿಸುವ ಪ್ರಸಂಗ ಬರುವಂತೆ ತೋರುತ್ತದೆ.

—ವಿಜಾಪುರ ಜಿಲ್ಲಾ ಕಲೆಕ್ಟರ್ ಮಿ. ನೋಡಕ ಇವರು ಗ್ರಾಮೋದ್ಧಾರದ ಕಾರ್ಯಗಳಲ್ಲಿ ವಿಶೇಷ ಪ್ರಯತ್ನಿಸುತ್ತಿದ್ದಾರೆ.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣಮಂದಿರದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. R. 2891.

# ಶರಣ ಸಂದೇಶ

## The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ |
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ‖ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೧೮ ನೆಯ ಅಕ್ಟೋಬರ್ ೧೯೩೭. | ಸಂಚಿಕೆ ೯ |
|---|---|---|

ಜನಸೇವೆಯೇ ದೇವರಸೇವೆ.

# ಪಟೇಲ-ನರಿಮನ್ನರ ವಾದ ನಿರ್ಣಯ.

ಗಾಂಧೀಜಿಯವರು ವಿಜಯಾದಶಮಿಯ ದಿನ
ಪಟೇಲ-ನರಿಮನ್ನರ ವಾದದ ನಿರ್ಣಯವನ್ನು ತಿಳಿಸಿದರು.
ಶ್ರೀ. ನರಿಮನ್ನರೇ ಅಪರಾಧಿಗಳು. ಅವರು ತಮ್ಮ
ಅಪರಾಧವನ್ನೂ ಒಪ್ಪಿಕೊಂಡರು.

ಸೋನ್ಯಾಮಾರುತಿ ಗುಡಿಯ ಮುಂದೆ ವಾದ್ಯಬಾರಿಸುವ ವಿಷಯದಲ್ಲಿ
ಹಿಂದು - ಮುಸಲ್ಮಾನರ ಒಪ್ಪಂದವಾಯಿತು.

---

ಜಬಲಪುರದಲ್ಲಿ ಹಿಂದು - ಮುಸಲ್ಮಾನರ ದೊಂಬಿಯಾಗಿ ೩೦ ಜನರು
ಗಾಯಹೊಂದಿದ್ದಾರೆ.

---

ಹರಿಪುರ ಕಾಂಗ್ರೆಸ್ಸಿಗೆ ೨ ಲಕ್ಷ ೪೦ ಸಾವಿರ ರೂ. ಬೇಕು.
ಕಾಂಗ್ರೆಸ್ ನಗರಕ್ಕೆ 'ವಿಠ್ಠಲ' ನಗರ ಎಂಬ ಹೆಸರು.

---

## ಈ ವಾರದ ಪತ್ರಿಕೆಯಲ್ಲೇನಿದೆ ?

(೧) ಕಾಂಗ್ರೆಸ್ ಪಕ್ಷದಮೇಲೆ ಟೀಕಾಸ್ತ್ರ !
(೨) ಸ್ವದೇಶ, ಸ್ವಧರ್ಮ, ಸ್ವಭಾಷೆಗಳ ಸೇವೆ.
(೩) ಶುದ್ಧಿ ಮತ್ತು ಆಚಾರ್ಯರು.
(೪) ಡಾ. ಅಂಬೇಡಕರರ ವಿಚಾರ.
(೫) ವಂದೇ ಮಾತರಂ ಹೇಗೆ ಪ್ರಚಾರವಾಯಿತು?
(೬) ಕಾಡು ಜನರ ಕಲ್ಪನೆಗಳು.

ದೇಹವೇ ದೇವಾಲಯ.



# ಶರಣ ಸಂದೇಶ

THE SHARANA SANDESHA.



## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೧೮ನೆಯ ಅಕ್ಟೋಬರ್ ೧೯೩೭. | ಸಂಚಿಕೆ ೬

## ಮಹತ್ವದ ಸುದ್ದಿಗಳು.

—ಈ ಸಾರಿ ನಾಡಹಬ್ಬವು ಕರ್ನಾಟಕದ ಎಲ್ಲ ಭಾಗಗಳಲ್ಲಿಯೂ ವಿಶೇಷ ಉತ್ಸಾಹದಿಂದ ಜರುಗಿತು. ಕರ್ನಾಟಕ ಏಕೀಕರಣದ ವಿಚಾರವಾಗಿ ಜಾಗೃತೆಯು ಈ ಸಾರಿ ಹೆಚ್ಚಾಗಿ ಆಯಿತು.

—ಕೊಲ್ಹಾಪುರ ಹಿಂದು ಮಹಾ ಸಭೆಯವರು ಕಳೆದ ೭ ನೆಯ ತಾರೀಖಿನ ದಿವಸ ಮಿ. ಅಬ್ದುಲ್ ರಹಿಮ ಮಹಮ್ಮದ ಎಂಬುವವರನ್ನು ಶುದ್ಧಗೊಳಿಸಿ ಹಿಂದು ಧರ್ಮದಲ್ಲಿ ತೆಗೆದುಕೊಂಡರು. ಇವರಿಗೆ ಸುಮಿತ್ರಾ ಸಕಾರಾಮ ರತ್ನಾಕರ ಎಂಬ ಹೆಸರನ್ನಿಟ್ಟಿದ್ದಾರೆ. ಈ ಸಮಾರಂಭದ ಅಧ್ಯಕ್ಷಸ್ಥಾನವನ್ನು ಅಡ್ವೋಕೇಟ ದಾಭೋಳಕರ ಎಂಬುವವರು ಸ್ವೀಕರಿಸಿದ್ದರು.

—ಸೇಲಂ ಜಿಲ್ಲೆಯಲ್ಲಿ ಮದ್ಯಪಾನ ಪ್ರತಿಬಂಧದ ಶಾಸನವು ಬಹು ಕ್ಷೇಮಕರವಾಗಿ ಪರಿಣಮಿಸಿದೆ. ಒಂದೇ ವಾರದಲ್ಲಿ ಬಡ ಜನಗಳ ಎರಡು ಲಕ್ಷ ರೂ. ಗಳು ಉಳಿದವು. ಸರಕಾರಕ್ಕೆ ೫೦ ಸಾವಿರ ರೂ. ನಷ್ಟವಾಯಿತು. ಕೂಲಿಕಾರರ ಹೆಣ್ಣುಮಕ್ಕಳಿಗಂತೂ ಅತ್ಯಾನಂದ. ಒಬ್ಬ ಕುಡುಕನು ಇನ್ನು ತನಗೆ ಮದ್ಯ ದೊರೆಯುವದಿಲ್ಲವಲ್ಲಾ ಎಂದು ಆತ್ಮಹತ್ಯಮಾಡಿಕೊಂಡನು.

—ರೇವಾ ಸಂಸ್ಥಾನದಲ್ಲಿ ೧೨ ವರುಷಗಳೊಳಗಿನ ಬಾಲಬಾಲಕಿಯರಿಗೆ ತಂಬಾಕನ್ನು ಮಾರುವುದು ಅಪರಾಧವೆಂದೇ ಒಂದು ಶಾಸನವನ್ನು ಮಾಡಿದ್ದಾರೆ. ಬಾಲ್ಯದಲ್ಲಿ ತಂಬಾಕಿನ ಚಟವು ಯಾರಿಗೂ ತಮ್ಮ ಸಂಸ್ಥಾನದಲ್ಲಿ ಉಂಟಾಗಬಾರದೆಂದೇ- ಮಹಾರಾಜರ ಉದ್ದೇಶ.

—ಮುಂಬೈ ಕಾರ್ಪೋರೇಶನ್ನಿನವರು ಅಶಕ್ತ ಹುಡುಗರಿಗೆ ಹಾಲನ್ನು ಕೊಡುವುದಕ್ಕಾಗಿ ೨ ಲಕ್ಷ ರೂ. ಗಳನ್ನು ವಿನಿಯೋಗಿಸುವವರಿದ್ದಾರೆ.

—ಈ ತಿಂಗಳ ಕೊನೆಯಲ್ಲಿ ಕಲಕತ್ತಾದಲ್ಲಿ ಕೂಡುವ ಅಖಿಲ ಭಾರತ ಕಾಂಗ್ರೆಸ್ ಕಮಿಟಿಗೆ ಮಹಾತ್ಮಾ ಗಾಂಧಿಯವರು ಹೋಗುವವರಿದ್ದಾರೆ.

—ಈ ಸಾರಿ ಅಮೇರಿಕೆಯಲ್ಲಿ ಹತ್ತಿಬೆಳೆ ಚೆನ್ನಾಗಿ ಬರುವುದೆಂದೂ ೧೭೫೭೫೦೦೦ ಗಂಟು ಅರಳೆ ಅಲ್ಲಿಯೇ ಈ ಸಾರಿ ದೊರೆಯುವುದೆಂದೂ ಪ್ರಕಟವಾಗಿದೆ. ಇದರಿಂದ ಹಿಂದುಸ್ಥಾನದ ಅರಳೆ ಧಾರಣೆ ಕಡಿಮೆಯಾಗಬಹುದೆಂದು ಊಹೆ.

—ಮಿಸ್. ಅರೋಹಾ ಮೋನಾ ಹಾರ್ಡಕ್ಯಾಸಲ್ ಎಂಬ ಇಂಗ್ಲಿಷ್ ಮಹಿಳೆಯು ಹಿಂದು ಧರ್ಮವನ್ನು ಸ್ವೀಕರಿಸಿದರು. ಇವರನ್ನು ಶುದ್ಧಗೊಳಿಸುವ ಕಾರ್ಯವು ಶ್ರೀ. ಜಗದ್ಗುರು ಶಂಕರಾಚಾರ್ಯ ಡಾ. ಕುರ್ತಕೋಟಿಯವರ ಹಸ್ತದಿಂದ ತಾ. ೨-೧೦-೩೭ ನೆಯ ದಿವಸ ಮುಂಬೈಯಲ್ಲಿ ಜರುಗಿತು.

—ಮಿಸ್. ಅರೋಹಾ ಇವರು ನ್ಯೂಜಿಲಂಡ್ ಎಂಬಲ್ಲಿ ಜನ್ಮವೆತ್ತಿದರು. ಅಲ್ಲಿಯ ವಿಶ್ವವಿದ್ಯಾಲಯದ ಎಂ. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಾರೆ. ಇವರು ಪ್ರಾಚೀನ ರೋಮನ್ ಮತ್ತು ಗ್ರೀಕ ತತ್ವಜ್ಞಾನವನ್ನು ಅಧ್ಯಯನ ಮಾಡಿದ್ದಾರೆ. ಕಳೆದೊಂದು ವರ್ಷದಿಂದಲೂ ಇವರು ಈ ದೇಶದಲ್ಲಿ ಸಂಚರಿಸಿ ಕೊನೆಗೆ ಹಿಂದು ಧರ್ಮವನ್ನು ಸ್ವೀಕರಿಸಿದರು.

—ಸೊಲ್ಲಾಪುರ ಜಿಲ್ಲಾ ಮರಿದ್ರೂಪ ಎಂಬಲ್ಲಿಯ ಶ್ರೀ. ದೇಶಪಾಂಡೆ ಎಂಬುವವರು ೧೯೩೦ ನೆಯ ಇಸವಿ ಶಾಸನಭಂಗದ ಚಟುವಟಿಕೆಯಲ್ಲಿ ಸೇರಿದ್ದರಿಂದ ಅವರ ಜಮೀನು ಸರಕಾರಕ್ಕೆ ಸೇರಿತ್ತು. ಈಗಿನ ಸರಕಾರವು ಅವರ ಜಮೀನವನ್ನು ತಿರುಗಿ ಕೊಟ್ಟಿತು.

— ಬೆಳಗಾವಿಯ “ ಕಥಾಕುಂಜ ” ಎಂಬ ಮಾಸಪತ್ರಿಕೆಯ ವಿಶೇಷಾಂಕವು “ಏಕೀಕರಣಾಂಕ” ಎಂದು ಕಳೆದ ೧೦ ನೆಯ ತಾರೀಖಿನ ದಿನ ಪ್ರಕಟವಾಗಿದೆ.

ಈ ಪತ್ರಿಕಾಕರ್ತರಾದ ಶ್ರೀ. ಪ್ಯಾಟಿ ಶಾಮರಾಯರು ಕರ್ನಾಟಕ ಏಕೀಕರಣದ ಸಂಬಂಧವಾಗಿ ಹಿಂದುಸ್ಥಾನದ ಅನೇಕ ಮುಂದಾಳುಗಳ ಸಂದೇಶವನ್ನು ತರಿಸಿ ಅದರಲ್ಲಿ ಪ್ರಕಟಿಸಿದ್ದಾರೆ. ಈ ವಿಶೇಷಾಂಕವು ಉಪಯುಕ್ತವಾದುದಾಗಿದೆ.

—ಈ ಸಾರಿಯ ಕಾಂಗ್ರೆಸ್ಸಿಗೆ ಶ್ರೀ. ಸುಭಾಷಚಂದ್ರ ಬೋಸರೇ ಅಧ್ಯಕ್ಷರಾಗುವ ಸಂಭವವಿದೆ.

## ಗಾಂಧೀಜಿಯವರ ಉಪದೇಶ.

"ಅನ್ಯಾಯದಿಂದ ನಡೆಯುವ ಮನುಷ್ಯನಿಗೆ ನಾನು ಸಹಾಯಮಾಡದೆ ಯಾವಾಗ ಆತನ ಅನ್ಯಾಯವನ್ನು ವಿರೋಧಿಸುತ್ತೇನೆಯೋ ಆಗ ಅದರಿಂದ ಯಾರಿಗಾದರೂ ತೊಂದರೆಯಾದರೆ ಅದಕ್ಕೆ ನಾನೇನೂ ಹೊಣೆಗಾರನಲ್ಲ."

—ಯಂಗ್ ಇಂಡಿಯಾ ೨೮-೪-೨೦

"ಅಪಜಯ ಮತ್ತು ತಪ್ಪುಗಳು ನಮಗೆ ಬುದ್ಧಿಯನ್ನು ಕಲಿಸುತ್ತವೆ. ಮತ್ತು ಅವು ನಮಗೆ ಹಿತವನ್ನೇ ಮಾಡುತ್ತವೆ. ನಿಜವಾದ ಸೇನಾಪತಿಯು ಚಿಕ್ಕ ಪುಟ್ಟ ಸೋಲುಗಳು ತನಗಾದವೆಂದು ಆತನು ಮುಖ್ಯವಾದ ಯುದ್ಧವನ್ನೇನೂ ನಿಲ್ಲಿಸುವುದಿಲ್ಲ."

— ಯಂಗ್ ಇಂಡಿಯಾ ೧೮-೮-೨೦

---

# ಜಗದ್ಗುರುಗಳ ದಿವ್ಯೋಪದೇಶ.

### ಸ್ವದೇಶ, ಸ್ವಭಾಷೆ, ಸ್ವಧರ್ಮಗಳ ಸೇವೆ.

ವಾಯಿ ಎಂಬಲ್ಲಿ ಶಿವಾಜಿ ಮಹಾರಾಜರ ಭಾವ ಚಿತ್ರವು ಶ್ರೀಮತ್ ಜಗದ್ಗುರುಗಳ ಹಸ್ತದಿಂದ ಅನಾವರಣ ಮಾಡಲ್ಪಟ್ಟಿತು. ಆ ಕಾಲಕ್ಕೆ ಶ್ರೀಜಗದ್ಗುರುಗಳು ಅತ್ಯಂತ ಮಹತ್ವದ ಭಾಷಣವನ್ನು ಮಾಡಿದರು. ಅದರ ಮುಖ್ಯಾಂಶವನ್ನು ಇಲ್ಲಿ ಕೊಟ್ಟಿದೆ—

"ಒಂದು ವ್ಯಕ್ತಿಯ ಯೋಗ್ಯತೆಯನ್ನು ಆ ವ್ಯಕ್ತಿಯ ಪೂರ್ವದಲ್ಲಿ ಒಂದು ಜನಾಂಗದ ಅಥವಾ ದೇಶದ ಸ್ಥಿತಿ ಹೇಗಿತ್ತು? ಆ ವ್ಯಕ್ತಿಯು ದೇಶಕ್ಕಾಗಿ ದುಡಿದನಂತರ ಆ ದೇಶದ ಸ್ಥಿತಿಯಲ್ಲಿ ಏನು ಸುಧಾರಣೆಯಾಯಿತು? ಎಂಬಂಶಗಳನ್ನು ಹೋಲಿಸಿ ನೋಡಿಯೇ ತಿಳಿದುಕೊಳ್ಳಬೇಕು. ಈ ದೃಷ್ಟಿಯಿಂದ ಶಿವಾಜಿ ಮಹಾರಾಜರ ಪೂರ್ವದಲ್ಲಿ ಈ ದೇಶವು ಹೇಗಿತ್ತೆಂಬುದನ್ನು ನೋಡೋಣ.

ಕ್ರಿ. ಶ. ೧೬೬೮ ರಿಂದ ೧೬೭೪ ರ ವರೆಗೆ ಕಯಾರೆ ಎಂಬ ಒಬ್ಬ ಫ್ರೆಂಚ ಪ್ರವಾಸಿಯು ಈ ದೇಶದಲ್ಲಿ ಸಂಚರಿಸಿದ್ದನು. ಆತನು ಹೇಳುವುದೇನೆಂದರೆ— "ಶಿವಾಜಿಯು ಅಲೇಕ್ಝಾಂಡರ್ ದಿ ಗ್ರೇಟ, ಜ್ಯುಲಿಯಸ್ ಸೀಜರ್, ಇವರಂತೆ ಮಹಾ ಪರಾಕ್ರಮಿ ಮತ್ತು ಮುತ್ಸದ್ದಿಯಾದ ರಾಜನು."

ಅಲೇಕ್ಝಾಂಡರ್, ಸೀಜರ್ ಇವರು ಪರರ ರಾಜ್ಯಗಳನ್ನು ಆಕ್ರಮಿಸಿಕೊಳ್ಳುವುದರಲ್ಲಿ ತಮ್ಮ ಪರಾಕ್ರಮವನ್ನು ತೋರಿಸಿದರು. ಶಿವಾಜಿ ಮಹಾರಾಜರಾದರೋ ತಮ್ಮ ದೇಶಕ್ಕೆ ಸ್ವಾತಂತ್ರ್ಯ ದೊರೆಯಲು ತಮ್ಮ ಶೂರತ್ವವನ್ನು ಉಪಯೋಗಿಸಿದರು. ಆದುದರಿಂದ ನೈತಿಕ ಬಲವು ಆ ಉಭಯರಿಗಿಂತ ಶಿವಾಜಿ ಮಹಾರಾಜರಿಗೇನೇ ಅತ್ಯಧಿಕ.

ಅಲೇಕ್ಝಾಂಡರ್, ಗಿಜನಿ ಮಹಮ್ಮದ. ತೈಮೂರಲಂಗ, ಮೊದಲಾದವರು ಈ ದೇಶದಲ್ಲಿ ನುಗ್ಗಿ ಭಯಂಕರ ಕೊಲೆ ಸುಲಿಗೆಗಳನ್ನು ನಡೆಯಿಸಿ ಕುರಿಗಳನ್ನ ಕೊಲ್ಲುವಂತೆ ಈ ದೇಶದವರನ್ನು ಕೊಂದರು. ಅನೇಕ ಶತಮಾನಗಳಿಂದ ಪಾರತಂತ್ರ್ಯದ ಪಾಶವು ಬಹು ಭಯಂಕರವಾಗಿ ಈ ಭೂಮಾತೆಗೆ ಬಿಗಿಯಲ್ಪಟ್ಟಿತ್ತು. ಅದನ್ನು ಹರಿದೊಗೆದು ಭೂಮಾತೆಯನ್ನು ಸ್ವತಂತ್ರಗೊಳಿಸಿ ಭಗವಾಧ್ವಜವನ್ನು ಮೆರೆಯಿಸಿದ ಮೊದಲನೆಯ ಶೂರನೆಂದರೆ ಶಿವಾಜಿಯು.

ಸರ್. ರಿಚರ್ಡ ಕ್ಯಾಂಬಲ್ ಇವರು ಲಂಡನ್ನಿನ "ರಾಯಲ್ ಜಿ ಅಗ್ರಿಕಲ್ಚರಲ್ ರಿಸರ್ಚ ಇನ್ಸ್ಟಿಟ್ಯೂಟ್" ದಲ್ಲಿ ಒಂದು ನಿಬಂಧವನ್ನು ಓದಿದ್ದರು. ಅದರಲ್ಲಿ ಅವರು ಹೇಳಿರುವುದೇನೆಂದರೆ—

"ಯುರೋಪದವರು ಹಿಂದುಸ್ಥಾನಕ್ಕೆ ಕಾಲಿಡದಿದ್ದರೆ ಮರಾಠೆಯವರೇ ಹಿಂದುಸ್ಥಾನದ ಅಧಿಪತಿಗಳಾಗುತ್ತಿದ್ದರು."

ಶ್ರೀಮಚ್ಛತ್ರಪತಿ ಶಿವಾಜಿ ಮಹಾರಾಜರ ಸಾತಾರಾ ರಾಜ್ಯವು ೧೮೪೮ ರಲ್ಲಿ ಲಯವಾಯಿತು. ಮುಂದೆ ಸ್ವಲ್ಪ ಕಾಲದಲ್ಲಿಯೇ ಎಂದರೆ ೧೮೮೫ ರಲ್ಲಿಯೇ ಮುಖ್ಯವಾಗಿ ಮಹಾರಾಷ್ಟ್ರದವರ ಪ್ರಯತ್ನದಿಂದ ಮಹಾರಾಷ್ಟ್ರದ ಕೇಂದ್ರ ಸ್ಥಳವಾದ ಪುಣೆಯಲ್ಲಿಯೇ ರಾಷ್ಟ್ರೀಯ ಸಭೆ ಕೂಡಿ ಸ್ವಾತಂತ್ರ್ಯ ಜ್ಯೋತಿಯನ್ನು ಕಾಯ್ದುಕೊಳ್ಳುತ್ತಾ ಬಂದಿತು.

ಮಧ್ಯ ಏಸಿಯಾದಲ್ಲಿ ಉದ್ಭವಿಸಿ ಬಹು ಧಾವಿಸಿ ಬಂದ ಇಸ್ಲಾಂ ಧರ್ಮ ಮತ್ತು ಸಂಸ್ಕೃತಿಗಳನ್ನು ಬಹು ಸಾಹಸದಿಂದ ವಿರೋಧಿಸಿದವರು ಶೀಖರು, ರಜಪೂತರು ಮತ್ತು ಮರಾಠೆಯವರು. ಇವರಲ್ಲಿ ಶೀಖರು ವೈದಿಕ ಧರ್ಮವನ್ನು ತ್ಯಾಗಮಾಡಿ ಅವರನ್ನು ತಡೆದದ್ದರಿಂದ ಇಸ್ಲಾಂ ಧರ್ಮವೇ ಎಷ್ಟೋ ಮಟ್ಟಿಗೆ ವಿಜಯ ಹೊಂದಿದಂತಾಯಿತು. ರಜಪೂತರಂತೂ ಕೊನೆಗೆ ಮುಸಲ್ಮಾನರಿಗೆ ಸೋತು ತಮ್ಮ ಹೆಣ್ಣುಮಕ್ಕಳನ್ನೂ ಅವರಿಗೆ ಕೊಟ್ಟು ಲಗ್ನ ಮಾಡಿದರು.

ಆದರೆ ಶಿವಾಜಿ ಮಹಾರಾಜನು ಮಾತ್ರ ಧರ್ಮ ದೇಶಗಳೆರಡನ್ನೂ ರಕ್ಷಿಸಿದನು. ಉತ್ತರ ಹಿಂದುಸ್ಥಾನ ಬಂಗಾಲಗಳಲ್ಲಿ ಕುಲಗೆಡಿಸಿ ಮುಸಲ್ಮಾನರ ಸಂಖ್ಯೆಯನ್ನು ಬೆಳಸಿದ್ದರಿಂದ ಈಗ ಆ ಭಾಗಗಳಲ್ಲಿ ಹಿಂದುಗಳಷ್ಟೇ ಅಲ್ಲ; ಹಿಂದುಗಳಿಗಿಂತಲೂ ಮುಸಲ್ಮಾನರ ಸಂಖ್ಯೆಯೇ ಹೆಚ್ಚಾಗಿದೆ. ಆದರೆ ಮಹಾರಾಷ್ಟ್ರದಲ್ಲಿ ಮುಸಲ್ಮಾನರ ಸಂಖ್ಯೆ ನೂರಕ್ಕೆ ೧೨ ರಗಿಂತ ಹೆಚ್ಚಿಲ್ಲ. ಇದರ ಮೇಲಿಂದ ಶಿವಾಜಿ ಮಹಾರಾಜರು ಮುಸಲ್ಮಾನ್ ಧರ್ಮ ಪ್ರಸಾರಕ್ಕೆ ಹೇಗೆ ಇಲ್ಲಿ ಪ್ರತಿಬಂಧವನ್ನುಂಟುಮಾಡಿದ್ದರೆಂಬುದು ಸ್ಪಷ್ಟ ಗೊತ್ತಾಗುತ್ತದೆ. ಆ ಕಾಲದ ಭೂಷಣ ಕವಿಯು ಹೇಳುವುದೇನೆಂದರೆ—

"ಸೇವಾಹು (ಶಿವಾಜಿ) ನ ಹೋತೊ ತೋ ಸುನ್ನತ ಹೋತಿ ಸಬಕಿ"

ಶಿವಾಜಿ ಮಹಾರಾಜರು ಹಿಂದು ಧರ್ಮವನ್ನು ರಕ್ಷಿಸಿದರಲ್ಲದೆ ಅದರಲ್ಲಿ ಸುಧಾರಣೆಯನ್ನೂ ಮಾಡಿದರು. ಪರಧರ್ಮದಲ್ಲಿ ಹೋದವರನ್ನು ಸ್ವಧರ್ಮದಲ್ಲಿ ಪ್ರಾಯಶ್ಚಿತ್ತದಿಂದ ತೆಗೆದುಕೊಳ್ಳುವ ಪದ್ಧತಿಯನ್ನು ಉಂಟುಮಾಡಿ ವೇದಾಧಿಕಾರವು ಬಹು ಜನ ಸಾಮಾನ್ಯಕ್ಕೂ ಇಧೆಯೆಂಬುದನ್ನು ತಮ್ಮ ರಾಜ್ಯಾಭಿಷೇಕದ ರೀತಿಯಿಂದ ತೋರಿಸಿಕೊಟ್ಟರು.

ಕಲ್ಯಾಣದ ಸುಭೇದಾರರ ಮಗಳನ್ನು ಶಿವಾಜಿ ಮಹಾರಾಜರಿಗೆ ಕಾಣಿಕೆಯಾಗಿ ಕೊಟ್ಟಾಗ ಅವಳನ್ನು ಮಗಳಂತೆ ಕಂಡುದು ಅವರಲ್ಲಿಯ ಅದ್ವಿತೀಯವಾದ ನೈತಿಕ ಬಲವನ್ನು ತೋರಿಸುತ್ತದೆ. ಅವರು ಬಹು ಸಾದಾ ರೀತಿಯಲ್ಲಿದ್ದರು. ಸುಖೋಪಭೋಗದ ವಿಲಾಸ ವಸ್ತುಗಳೇ ಅವರಲ್ಲಿರುತ್ತಿರಲಿಲ್ಲ. ಅವರು ತಾಂಬೂಲವನ್ನು ಕೂಡಾ ಸೇವಿಸುತ್ತಿರಲಿಲ್ಲ.

ಇವರು ದಕ್ಷಿಣ ದೇಶಕ್ಕೆ ಬಂದಾಗ ಭಾಗಾ ನಗರದ ಅಧಿಪತಿ ಪೊಗದಿಯನ್ನು ಕೊಟ್ಟು ತಾಂಬೂಲ ಸೇವಿಸಲು ಆಗ್ರಹಮಾಡಿದಾಗ ಹೀಗೆ ಹೇಳಿದರು—

"ಕಾಶಿಗೆ ಹೋಗಿ ಶ್ರೀಯ ಸ್ಥಾಪನೆಮಾಡಿದನಂತರ ನಾನು ತಾಂಬೂಲವನ್ನು ಸೇವಿಸುವೆನು."

ಕಾಶಿಯ ವಿಶ್ವನಾಥನ ದೇವಾಲಯವನ್ನು ಕೆಡವಿ ಎಲ್ಲಿ ಔರಂಗಜೇಬನು ಮಸೀದಿಯನ್ನು ಕಟ್ಟಿಸಿದ್ದನೋ ಅಲ್ಲಿಯೇ ಮೊದಲಿನಂತೆ ವಿಶ್ವೇಶ್ವರನ ಸ್ಥಾಪನೆಮಾಡಬೇಕೆಂದು ಇವರ ಇಚ್ಛೆಯಿದ್ದುದು ಆ ಮಾತಿನಿಂದ ಗೊತ್ತಾಗುತ್ತದೆ.

ಅಷ್ಟ ಪ್ರಧಾನರ ಪದ್ಧತಿಯನ್ನು ಶಿವಾಜಿ ಮಹಾರಾಜರು ಪ್ರಚಾರದಲ್ಲಿ ತಂದರು. ಮರಾಠಿ ಭಾಷೆಯಲ್ಲಿ ಉರ್ದು, ಫಾರ್ಸಿ, ಶಬ್ದಗಳನ್ನು ಕೂಡಿಸದಂತೆ ನೋಡಿಕೊಳ್ಳುತ್ತಿದ್ದರು. ಅವರ ದಿವ್ಯ ಚಾರಿತ್ರ್ಯದಿಂದ ಈಗ ಕಲಿತುಕೊಳ್ಳಬೇಕಾದವು ಮುಖ್ಯ ಐದು ಸಂಗತಿಗಳು—

(೧) ಪ್ರತಿಯೊಂದು ವ್ಯಕ್ತಿಯೂ ಕೇವಲ ತನ್ನ ಮಟ್ಟಿಗೆ ನೋಡಿಕೊಳ್ಳದೆ ತನ್ನ ಸಮಾಜ ಮತ್ತು ದೇಶದ ಕಡೆಗೆ ಲಕ್ಷಿಸಬೇಕು.

(೨) ರಾಜಕಾರಣದಲ್ಲಿ ಸೇರದೆ ದೇಶದ ಯಾವ ಉನ್ನತಿಯನ್ನೂ ಮಾಡುವುದು ಶಕ್ಯವಿಲ್ಲ.

(೩) ರಾಜಕಾರಣವು ಸತ್ಯ ಧರ್ಮ ಮತ್ತು ನೀತಿ ವಿಶಿಷ್ಟವಾದುದಾಗಿರಬೇಕು.

(೪)—ರಾಜ್ಯ ಸೂತ್ರವನ್ನು ಹಿಡಿದವರು ಪ್ರಜಾಪಾಲನೆಯೇ ತಮ್ಮ ಧ್ಯೇಯವೆಂದು ತಿಳಿದು ಪ್ರಜೆಗಳ ಸಂತೋಷವೇ ತಮ್ಮ ಬಲವೆಂದು ಭಾವಿಸಬೇಕು.

(೫) ಸಕಲರೂ ಸ್ವದೇಶ ಸ್ವಧರ್ಮ ಸ್ವಭಾಷೆಗಳ ಉನ್ನತಿಗಾಗಿ ಪ್ರಯತ್ನಿಸಬೇಕು.

---

## ವಿಮಾನ ಶಿಕ್ಷಣ.

ಈಗ ಜಗತ್ತಿನಲ್ಲಿ ವಿಮಾನ ಶಿಕ್ಷಣಕ್ಕೆ ಮಹತ್ವ ಬರಲಾರಂಭವಾಗಿದೆ. ಪ್ರಸಿದ್ಧ ವೈಮಾನಿಕರೇ ರಾಷ್ಟ್ರದ ಶಕ್ತಿಯಾಗುವ ಕಾಲ ಬರುವಂತಿದೆ. ಆದಕಾರಣ ಸಾಹಸಿಗರಾದ ತರುಣರು ವಿಮಾನ ಶಿಕ್ಷಣದ ಕಡೆಗೇ ಈಗ ಲಕ್ಷಿಸುತ್ತಿದ್ದಾರೆ.

ಶ್ರೀ. ಡಿ. ಎ. ಸಾಮಂತ ಎಂಬ ಒಬ್ಬ ಮಹಾರಾಷ್ಟ್ರದ ೨೦ ವರುಷಗಳ ತರುಣರು ಜುಹು ಎಂಬಲ್ಲಿಯ ವಿಮಾನ ಶಿಕ್ಷಣ ಸಂಸ್ಥೆಯಲ್ಲಿ ಸೇರಿ ಪ್ರವೀಣರಾಗಿ ಹೆಚ್ಚಿನ ಶಿಕ್ಷಣಕ್ಕೆ ಇಂಗ್ಲೆಂಡಿಗೆ ಹೋಗಿ ಅಲ್ಲಿಯೂ ತೇರ್ಗಡೆ ಹೊಂದಿದ್ದಾರೆ.

### ಶಿಕ್ಷಣವನ್ನು ಎಲ್ಲಿ ಹೊಂದಬೇಕು?

ಈ ಶಿಕ್ಷಣ ಹೊಂದುವವರಿಗೆ ಇಂಗ್ಲಿಷ ಭಾಷೆಯ ಜ್ಞಾನ ವಿರಬೇಕು. ಕರಾಚಿ ಪಟ್ಟಣವು ಈ ಶಿಕ್ಷಣಕ್ಕೆ ಅನುಕೂಲ. 'ಎ, ಲಾಯಸೆನ್ಸ್, ಅಲ್ಲಿ ಶಿಕ್ಷಣ ಹೊಂದಿ ಪಡೆಯಬೇಕು. ಆ ಮೇಲೆ ಹೆಚ್ಚಿನ ಶಿಕ್ಷಣಕ್ಕೆ ಪರದೇಶಗಳಿಗೆ ಹೋಗಬೇಕು. ಬೇಸಿಗೆ ಕಾಲದಲ್ಲಿ ಪರದೇಶಗಳಿಗೆ ಹೋಗುವುದೇ ಅನುಕೂಲ. ಹಾಗಾದರೆ ಹೋದೊಡನೆ ಶಿಕ್ಷಣ ಪ್ರಾರಂಭವಾಗುತ್ತದೆ. ಕರಾಚಿಯಲ್ಲಿಯ ಶಿಕ್ಷಣಕ್ಕೆ ೭೦೦ ರೂ. ಗಳಿಂದ ೧೫೦೦ ರೂ. ಗಳ ವರೆಗೆ ವೆಚ್ಚ ಬರುತ್ತದೆ.

## ಕಾಡು ಜನರ ಆಚಾರವಿಚಾರ.

ಮನುಷ್ಯ ಪ್ರಾಣಿಯು ಸೃಷ್ಟಿಯ ನಿಯಮದಂತೆ ಉತ್ಕ್ರಾಂತಿ ತತ್ವಕ್ಕನುಸರಿಸಿ ತನ್ನ ಸುಧಾರಣೆಯನ್ನು ಹೊಂದುತ್ತಲಿರುತ್ತದೆ. ಈಗಿರುವ ಕಾಡು ಜನರ ಆಚಾರ ವಿಚಾರಗಳ ಮೇಲಿಂದಲೇ ಈಗಿನ ಸುಧಾರಿಸಿದ ಜನಾಂಗವಾದರೂ ಒಂದು ಕಾಲದಲ್ಲಿ ಇದೇ ಪ್ರಕಾರ ಇದ್ದಿತೆಂದು ಊಹಿಸಿದರೆ ತಪ್ಪಾಗಲಾರದು.

ತ್ರಾವಣಕೋರ ಸಂಸ್ಥಾನದಲ್ಲಿ ಕೆಲವು ಕಡೆ ಅಂಬಪ್ರಲಯ ಮದುವಣ, ಪಂಟಾರಂ, ಉಲ್ಲಾದನ ಮೊದಲಾದ ಹೆಸರಿನ ಕಾಡು ಜನರಿದ್ದಾರೆ. ಈ ಜನರ ಆಚಾರ ವಿಚಾರಗಳ ಮೇಲಿಂದ ನಮ್ಮ ಪೂರ್ವಜರ ಸ್ಥಿತಿಗತಿಗಳನ್ನೂ, ವಿಚಾರಭಾವನೆಗಳನ್ನೂ ಎಷ್ಟೋ ಮಟ್ಟಿಗೆ ತಿಳಿದುಕೊಳ್ಳಬಹುದು. ಪಂಟಾರಂ ಜನರು ಅಡವಿಯಲ್ಲಿಯೇ ಇರುತ್ತಾರೆ. ಇವರು ಗಿಡಗಳನ್ನು ಕಡಿದು ಚಪ್ಪರಗಳನ್ನು ಹಾಕಿಕೊಂಡು ಎಲೆಗಳನ್ನು ಹೊಚ್ಚಿ ಗುಡಿಸಲುಗಳನ್ನು ಮಾಡಿ ಅವರಲ್ಲಿ ವಾಸಿಸುತ್ತಾರೆ. ಇವರ ಮೈಮೇಲೆ ವಸ್ತ್ರಗಳಿಲ್ಲ. ಬೆಂಕಿಯನ್ನು ಯಾವಾಗಲೂ ತಮ್ಮ ಮನೆಯಲ್ಲಿ ಕಾದಿಟ್ಟುಕೊಂಡೇ ಇರುತ್ತಾರೆ.

ಸೂರ್ಯನೇ ಜಗದೊಡೆಯನೆಂದೂ ಆತನೇ ತಮ್ಮ ರಕ್ಷಕನೆಂದೂ ತಿಳಿದು ಸೂರ್ಯನನ್ನು ಸ್ತುತಿಸುತ್ತಾರೆ. ನಾವು ಅರಣ್ಯವಾಸಿಗಳು, ಅಜ್ಞಾನಿಗಳು, ನಮ್ಮ ಸಂಕಟಗಳನ್ನು ನಿವಾರಣೆಮಾಡೆಂದು ಈ ಜನರು ಸೂರ್ಯನನ್ನು ಬೇಡಿಕೊಳ್ಳುತ್ತಾರೆ. ಸೂರ್ಯನು ಜಗತ್ತಿನ ತಂದೆ. ಚಂದ್ರ ಜಗತ್ತಿನ ತಾಯಿ. ಎಂದೇ ಈ ಜನರು ತಿಳಿದಿದ್ದಾರೆ. ಒಂದು ದಿನ ಇವರಿಬ್ಬರೂ ಜಗಳಮಾಡುತ್ತಿದ್ದಾಗ ಸೂರ್ಯನು ಅನ್ನದ ತುತ್ತನ್ನು ಚಂದ್ರನ ಮೋರೆಗೆ ಎಸೆಯಲು ಚಂದ್ರನ ಮೋರೆ ಕಪ್ಪಾಯಿತು. ಅದೇ ಕಪ್ಪಾಗಿರುವುದು. ಎಂದೇ ಇವರ ತಿಳುವಳಿಕೆ.

ಮಲಅರಯನ್ ಜನರು ಸೂರ್ಯ ಚಂದ್ರರಿಬ್ಬರೂ ಒಬ್ಬ ದೇವರ ಮಕ್ಕಳೆಂದೂ ಸೂರ್ಯನು ತಾಯಿಯ ಮಾತಿನಂತೆ ನಡೆಯದಿರಲು ನೀನು ಸುಟ್ಟು ಹೋಗೆಂದು ಶಾಪಕೊಟ್ಟದ್ದರಿಂದ ಆತನು ಬೆಂಕಿಯಾದನೆಂದೂ ಚಂದ್ರನಿಗೆ ತಾಯಿಯ ಕೃಪೆಯಾದುದರಿಂದ ಆತನು ತಂಪಾದನೆಂದೂ ತಿಳಿಯುತ್ತಾರೆ.

ಭೂಮಿ ಎತ್ತಿನ ಕೋಡಿನ ಮೇಲಿದೆ. ಅದಕ್ಕೆ ಭಾರವಾದೊಡನೆ ಒಂದು ಕೋಡಿನಿಂದ ಇನ್ನೊಂದು ಕೋಡಿನ ಮೇಲೆ ಭೂಮಿಯನ್ನಿಟ್ಟುಕೊಳ್ಳುವಾಗ ಭೂಮಿ ನಡುಗುತ್ತದೆ. ಅದೇ ಭೂಕಂಪನವೆಂದು ಈ ಜನರು ತಿಳಿಯುತ್ತಾರೆ. ಮದುವನ್ ಜನರು ದೇವಿಯು ಭೂಮಿಯನ್ನು ಒಂದು ಹೆಗಲಿನಿಂದ ಇನ್ನೊಂದು ಹೆಗಲಮೇಲಿಟ್ಟುಕೊಳ್ಳುವಾಗ ಉಂಟಾಗುವ ನಡುಗೇ ಭೂಕಂಪನವೆಂದು ತಿಳಿಯುತ್ತಾರೆ. ಮಲಅರಯನ್ ಜನರು ಐದು ಹೆಡೆಗಳ ಸರ್ಪನ ಮೇಲೆ ಭೂಮಿ ಇದೆಯೆಂದೂ ಅದು ಹೆಡೆಯನ್ನು ಅಲ್ಲಾಡಿಸಿದಾಗ ಭೂಕಂಪನವಾಗುತ್ತದೆಂದೂ ತಿಳಿದಿದ್ದಾರೆ.

ಸರ್ಪವು ಸೂರ್ಯ ಚಂದ್ರರ ಮೇಲೆ ಹೋದಾಗ ಗ್ರಹಣವಾಗುತ್ತದೆಂದು ಈ ಜನರು ತಿಳಿದಿದ್ದಾರೆ. ರಾಕ್ಷಸರ ಹೊಡದಾಟದ ಸಪ್ಪಳವೇ ಗುಡುಗು ಎಂದು ಈ ಜನರ ಕಲ್ಪನೆ. ಸ್ವರ್ಗದಲ್ಲಿ ಯುದ್ಧ ಪ್ರಾರಂಭವಾದೊಡನೆ ಗುಡುಗು, ಸಿಡಿಲು, ಮಿಂಚು ಉಂಟಾಗುತ್ತವೆಂದೂ ಯೋದ್ಧರ ಮೈಬೆವರೇ ಮಳೆಯೆಂದೂ ದೇವರ ಧನುಷ್ಯವೇ ಇಂದ್ರ ಧನುಷ್ಯವೆಂದೂ ಈ ಜನರು ತಿಳಿದಿದ್ದಾರೆ.

ಹಿಂದುಗಳ ಅನೇಕ ಪುರಾಣಗಳಲ್ಲಿಯೂ ವೇದಗಳಲ್ಲಿಯೂ ಈ ತರದ ವಿಚಾರಗಳೇ ಇವೆಯಲ್ಲವೆ?

# ಸಾಮಾಜಿಕ ಸುಧಾರಣೆ.

ಮತ್ತು

# ರಾಜಕೀಯ ಸುಧಾರಣೆ.

[ಡಾ. ಆಂಬೇಡಕರರು ಲಾಹೋರಿನಲ್ಲಿ ೧೯೩೬ ನೆಯ ಇಸವಿ ಮೇ ತಿಂಗಳಲ್ಲಿ ಕೂಡಿದ್ದ "ಜಾತಪಾತ ತೋಡಕ ಮಂಡಲದ" ಅಧ್ಯಕ್ಷರಾಗಿ ಆರಿಸಲ್ಪಟ್ಟಿದ್ದರು. ಆಗ ಮಾಡಲ್ಪಡುವ ಇವರ



ಡಾ. ಆಂಬೇಡಕರರು

ವ್ಯಾಖ್ಯಾನದ ವಿಷಯವಾಗಿ ಸ್ವಾಗತ ಸಂಘದವರಿಗೂ ಇವರಿಗೂ ಭಿನ್ನಾಭಿಪ್ರಾಯವುಂಟಾದುದರಿಂದ ಆ ಸ್ಥಾನದಲ್ಲಿ ಕುಳಿತು ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸಲು ಶಕ್ಯವಾಗಲಿಲ್ಲ. ಆದರೂ ಅವರ ಆ ಭಾಷಣವೇನೋ ಪ್ರಕಟವಾಯಿತು. ಅದರಲ್ಲಿಯ ಅನೇಕ ಸಂಗತಿಗಳು ಬಹು ಮನನೀಯವಾಗಿರುವುದರಿಂದ ನಮ್ಮ ಪತ್ರಿಕೆಯ ಕೆಲವು ಸಂಚಿಕೆಗಳಲ್ಲಿ ಅವುಗಳನ್ನು ಕೊಡುತ್ತಾ ಹೋಗುವೆವು.

—ಸಂಪಾದಕ]

## ಯಾವುದು ಮೊದಲು ?

ಹಿಂದುಸ್ಥಾನದ ಉನ್ನತಿಗೆ ಸಾಮಾಜಿಕ ಸುಧಾರಣೆಯು ಅಗತ್ಯವೆ ? ಅಥವಾ ರಾಜಕೀಯ ಸುಧಾರಣೆಯು ಅಗತ್ಯವೆ ? ಇವೆರಡೂ ಅಗತ್ಯವಿದ್ದರೆ ಅವುಗಳಲ್ಲಿ ಯಾವುದು ಮೊದಲು ? ಎರಡೂ ಸುಧಾರಣೆಗಳು ಒಂದೇ ಕಾಲದಲ್ಲಿ ಜರುಗಬೇಕೆ ? ಎಂಬಿವೇ ಮೊದಲಾದ ಪ್ರಶ್ನೆಗಳು ದೇಶಸೇವಕರ ಮುಂದೆ ಮೊದಲಿನಿಂದಲೂ ಇವೆ.

ರಾಜಕಾರಣದಷ್ಟೇ ಸಾಮಾಜಿಕ ವಿಷಯವೂ ಮಹತ್ವದ್ದೆಂದೂ ಇವೆರಡೂ ಕೂಡಿಯೇ ಜರುಗಬೇಕೆಂದೂ ಮೊದಲು ಕೆಲವರು ಯೋಚಿಸಿದರು. ರಾಷ್ಟ್ರೀಯ ಸಭೆಯು ಸಂಗಡಲೇ ಸಾಮಾಜಿಕ ಸಭೆಯೂ ಪ್ರಾರಂಭವಾಯಿತು. ಇವೆರಡೂ ಸಭೆಗಳು ಒಂದೇ ಸಭಾ ಮಂಟಪದಲ್ಲಿಯೂ ಕೆಲವು ಕಾಲ ಕೂಡಿದವು. ಶ್ರೀ. ಬಾಲಗಂಗಾಧರ ಟಿಳಕರ ವಿರೋಧದಿಂದ ಸಾಮಾಜಿಕ ಸಭೆಯು ರಾಷ್ಟ್ರೀಯ ಸಭೆಯಿಂದ ಬೇರೆಯಾಯಿತು. ರಾಷ್ಟ್ರೀಯ ಸಭೆಯ ಮಂಟಪದಲ್ಲಿ ಕೂಡಾ ಸಾಮಾಜಿಕ ಸಭೆಗೆ ಅವಕಾಶ ದೊರೆಯಲಿಲ್ಲ. ಅದಕ್ಕಾಗಿ ಬೇರೆ ಮಂಟಪ ಏರ್ಪಟ್ಟರೆ ಅದನ್ನು ಸುಟ್ಟುಹಾಕುವೆವೆಂಬ ಭಯವನ್ನೂ ವಿರೋಧಿಗಳು ತೋರಿಸಿದರು.

## ಪ್ರಶ್ನೆ ಹೀಗಿತ್ತು.

ಅಲಹಾಬಾದಿನಲ್ಲಿ ೧೮೯೨ ನೆಯ ಇಸವಿಯಲ್ಲಿ ಮಿ. ಡಬ್ಲ್ಯು. ಸಿ. ಬಾನರ್ಜಿಯವರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ಸು ಕೂಡಿದ್ದಿತು. ಅವರ ಭಾಷಣವು ಸಾಮಾಜಿಕ ಪರಿಷತ್ತಿನ ಅಂತ್ಯವಿಧಿಯ ಭಾಷಣವಾಗಿಯೇ ಪರಿಣಮಿಸಿತೆಂದು ಹೇಳಬಹುದು. ಅವರ ಪ್ರಶ್ನೆ ಹೀಗಿತ್ತು.

"ಸಮಾಜ ಸುಧಾರಣೆಯಾದ ವಿನಾ ರಾಜಕೀಯ ಸುಧಾರಣೆಗೆ ನಾವು ಯೋಗ್ಯರಾಗುವುದಿಲ್ಲವೆಂದು ಹೇಳುವವರ ಅಭಿಪ್ರಾಯವು ನನಗೆ ಮಾನ್ಯವಿಲ್ಲ. ಈ ಎರಡು ವಿಷಗಳಲ್ಲಿ ಪರಸ್ಪರ ಯಾವ ಸಂಬಂಧವೂ ಇದ್ದಂತೆ ನನಗೆ ತೋರುವುದಿಲ್ಲ. ನಮ್ಮಲ್ಲಿ ವಿಧವಾ ವಿವಾಹವಾಗದಿದ್ದರೆ ನಾವು ರಾಜಕೀಯ ಸುಧಾರಣೆಗೆ ಯೋಗ್ಯರಾಗುವುದಿಲ್ಲವೇ? ನಮ್ಮಲ್ಲಿಯ ಬಾಲ್ಯ ವಿವಾಹನಿಲ್ಲದಿದ್ದರೆ ನಾವು ರಾಜಕೀಯ ಸುಧಾರಣೆಗೆ ಯೋಗ್ಯರಾಗುವುದಿಲ್ಲವೆ ? ನಮ್ಮ ಹೆಣ್ಣುಮಕ್ಕಳು ಗಂಡಸರ ಸಂಗಡ ತಿರುಗಾಡಲಿಕ್ಕೆ ಇಲ್ಲವೆ ಪರದೇಸಗಳಿಗೆ ವಿದ್ಯಾಭ್ಯಾಸಕ್ಕೆ ಹೋಗದಿದ್ದರೆ ನಾವು ರಾಜಕೀಯ ಸುಧಾರಣೆಗೆ ಯೋಗ್ಯರಾಗುವುದಿಲ್ಲವೆ ? (ನಗೆ) "

[ಹಿಂದುಸ್ಥಾನದ ಬೇರೆ ಬೇರೆ ಭಾಗಗಳಲ್ಲಿ ಆದಿ ಹಿಂದುಗಳಿಗೆ ಅನೇಕ ಸವರ್ಣಿಯ ಹಿಂದುಗಳಿಂದಾಗುತ್ತಿರುವ ಅನಿವರ್ಣನೀಯ ಹಿಂಸೆಗಳನ್ನು ಡಾ. ಆಂಬೇಡಕರರು ತಮ್ಮ ಭಾಷಣದಲ್ಲಿ ಉದಾಹರಿಸಿ ಮಿ· ಬಾನರ್ಜಿಯವರ ಪ್ರಶ್ನೆಗೆ ಉತ್ತರವಾಗಿ ಕೆಳಗಿನಂತೆ ಪ್ರಶ್ನೆಮಾಡಿದ್ದಾರೆ.]

## ಉತ್ತರ ಹೀಗಿದೆ.

ಮಿ. ಬಾನರ್ಜಿಯವರಂತಹ ವಿಚಾರಸರಣಿಯುಳ್ಳ ರಾಜಕಾರಣದವರಿಗೆ ನಮ್ಮ ಉತ್ತರವೇನೆಂದರೆ-ಅಸ್ಪೃಶ್ಯರಂತಹ ರಾಷ್ಟ್ರದ ಒಂದು ಘನವಾದ ಸಮಾಜಕ್ಕೆ ಸಾರ್ವಜನಿಕ ಸಾಲೆಗಳಲ್ಲಿ ಪ್ರವೇಶಿಸಲು ಕೂಡಾ ಅವಕಾಶಕೊಡದೆ ನೀವು ರಾಜಕೀಯ ಶಕ್ತಿಯನ್ನು ಸಂಪಾದಿಸಲು ಯೋಗ್ಯರಾಗುವಿರಾ ? ಅವರಿಗೆ ಸಾರ್ವಜನಿಕ ಮಾರ್ಗಗಳಲ್ಲಿ ಓಡಾಡಲಿಕ್ಕೂ ಕೂಡ ಅವಕಾಶಕೊಡದೆ ನೀವು ರಾಜಕೀಯ ಶಕ್ತಿಯನ್ನು ಹೊಂದಲು ಸಮರ್ಥರಾಗುವಿರಾ? ಅವರಿಗೆ ತಮ್ಮ ಇಷ್ಟದಂತೆ ಇರಲಿಕ್ಕೂ ಉಡುಪುಗಳನ್ನು ಧರಿಸಲಿಕ್ಕೂ ಅವಕಾಶವನ್ನು ಕೊಡದೆ ನೀವು ರಾಜಕೀಯ ಶಕ್ತಿಯನ್ನು ಹೊಂದಲು ಪಾತ್ರರಾಗುವಿರಾ ? ಅವರಿಗೆ ತಮ್ಮ ಇಷ್ಟಬಂದ ಪದಾರ್ಥಗಳನ್ನು ಊಟಮಾಡಲು ಕೂಡಾ ಅಧಿಕಾರವಿಲ್ಲದಂತೆ ಮಾಡಿ ನೀವು ರಾಜಕೀಯ ಸಾಮರ್ಥ್ಯವನ್ನು ಹೊಂದಲು ಅಧಿಕಾರವುಳ್ಳವರಾಗುವಿರಾ ? ಮಿ. ಬಾನರ್ಜಿಯವರು ಈಗ ಇದ್ದಿದ್ದರೆ ಏನು ಉತ್ತರಕೊಡುತ್ತಿದ್ದರು? ವಿವೇಕಶಾಲಿಯಾದ ಯಾವ ಮನುಷ್ಯನಾದರೂ ಈ ಪ್ರಶ್ನೆಗಳಿಗೆ 'ಇಲ್ಲ' ಎಂದೇ ಹೇಳದೆ ಇರಲಾರನು.

ಪ್ರತಿಯೊಬ್ಬ ಕಾಂಗ್ರೆಸ್ ಮನುಷ್ಯನು ಒಂದು ದೇಶವು ಇನ್ನೊಂದು ದೇಶವನ್ನು ಆಳಲಿಕ್ಕೆ ಅಧಿಕಾರವುಳ್ಳದ್ದಾಗಿಲ್ಲವೆಂಬ ಮಿಲ್ ಸಾಹೇಬರ ಸಿದ್ಧಾಂತವನ್ನು ಹೇಳುತ್ತಿದ್ದ ಮೇಲೆ ಒಂದು ಸಮಾಜವು ಇನ್ನೊಂದು ಸಮಾಜವನ್ನು ಆಳಲು ಅಧಿಕಾರವುಳ್ಳದ್ದಾಗಿಲ್ಲವೆಂಬ ಅವರ ಸಿದ್ಧಾಂತವನ್ನಾದರೂ ಮಾನ್ಯಮಾಡಲೇಬೇಕಾಗುವುದು.

## ಸಾಮಾಜಿಕ ಪರಿಷತ್ತಿಗೆ ಅಪಜಯವೇಕೆ ?

ಸಮಾಜ ಸುಧಾರಣೆಗಾಗಿ ಏರ್ಪಟ್ಟಿದ್ದ ಸಾಮಾಜಿಕ ಪರಿಷತ್ತಿಗೆ ಅಪಜಯವೇಕೆ ಬಂದಿತು ? ರಾಜಕೀಯಪರಿಷತ್ತೇ ಏಕೆ ಜಯ ಹೊಂದಿತು ?ಎಂಬ ಪ್ರಶ್ನೆಯುಂಟಾಗಬಹುದು. ಸಮಾಜ ಸುಧಾರ

ಣೆಯಲ್ಲಿ ಎರಡುಭಾಗಗಳಿವೆ. (೧) ಹಿಂದುಗಳು ಸಾಮಾಜಿಕ ತೊಂದರೆಗಳನ್ನು ತೆಗೆದುಹಾಕಿಕೊಳ್ಳುವುದು. (೨) ಹಿಂದು ಸಮಾಜದ ರಚನೆ ಮತ್ತು ಸಂಘಟನೆಗಳನ್ನು ಉಂಟುಮಾಡುವುದು.

ವಿಧವಾ ವಿವಾಹ, ಬಾಲ್ಯವಿವಾಹ ನಿಷೇಧ, ಮೊದಲಾದವುಗಳೆಲ್ಲಾ ಸಾಮಾಜಿಕ ತೊಂದರೆಗಳಿಗೆ ಸಂಬಂಧ ಪಟ್ಟವುಗಳು ಸಾಮಾಜಿಕ ಪರಿಷತ್ತು ಇಂತಹ ಕಾರ್ಯಗಳಿಗಾಗಿಯೇ ಏರ್ಪಟ್ಟಿತ್ತು. ಅದರಲ್ಲಿದ್ದವರೆಲ್ಲಾ ಹೆಚ್ಚಿನ ಕುಲದವರೆಂದು ತಿಳಿದುಕೊಂಡ ಹಿಂದುಗಳು. ಹಿಂದುಗಳಲ್ಲಿಯ ಜಾತಿಗಳನ್ನು ತೆಗೆದು ಅದನ್ನು ಪುನಃ ರಚಿಸುವ ಕಲ್ಪನೆಯನ್ನು ಕೂಡಾ ಅವರು ಮಾಡಿರಲಿಲ್ಲ. ಸಂಘಟನೆಯ ವಿಚಾರವೂ ಅವರಲ್ಲಿ ಹೊಳೆದಿರಲಿಲ್ಲ. ಎಂದಮೇಲೆ ಅಂಥ ಸಾಮಾಜಿಕ ಪರಿಷತ್ತಿಗೆ ಹೇಗೆ ತಾನೆ ಜಯ ದೊರೆಯುವುದು? ರಾಜಕೀಯ ಸುಧಾರಣೆಗೂ ಅಂಥ ಸಂಗತಿಗಳಿಗೂ ಸಂಬಂಧವಾದರೂ ಏನು?

ಸಮಾಜ ಸುಧಾರಣೆಯೆಂದರೆ ಸಮಾಜದ ಪುನರ್ನಿರ್ಮಾಣ. ಇದಾಗದೆ ಹಿಂದುಸ್ಥಾನದ ರಾಜಕೀಯ ಸುಧಾರಣೆಯಾಗುವುದು ಶಕ್ಯವೇ ಇಲ್ಲ. ಈ ವರೆಗಿನ ಅನುಭವವಾದರೂ ಇದನ್ನೇ ಹೇಳುತ್ತದೆ.

### ಸಮಾಜ ಸುಧಾರಣೆಗೇ ಜಯ.

ಸಮತಾವಾದದ ಜನಕ ಕಾರ್ಲ ಮಾರ್ಕ್ಸನ ಮಿತ್ರನಾದ ಲಸ್ಲೆ ಎಂಬಾತನು ೧೮೬೨ ರಲ್ಲಿ ಮಾಡಿದ ಒಂದು ಭಾಷಣದಲ್ಲಿ ಹೀಗೆ ಹೇಳಿದ್ದಾನೆ—

"ಶಾಸನ ಪದ್ಧತಿಯಲ್ಲಿ ಅಧಿಕಾರವೇ ಮುಖ್ಯವಾದುದಲ್ಲ. ಶಕ್ತಿಯು ಮುಖ್ಯವಾದುದು. ಒಂದು ದೇಶದಲ್ಲಿಯ ಶಾಸನ ಪದ್ಧತಿಯು ಆ ದೇಶದಲ್ಲಿರುವ ಜನಗಳ ಶಕ್ತಿಯನ್ನೇ ಮುಖ್ಯವಾಗಿ ಅವಲಂಬಿಸಿರುತ್ತದೆ. ಆದಕಾರಣ ಸಮಾಜದಲ್ಲಿ ನೆಲೆಸಿರುವ ಶಕ್ತಿಯ ಮೇಲಿಂದಲೇ ಅಲ್ಲಿಯ ರಾಜಕೀಯ ರಚನಾ ಕ್ರಮದ ಮಹತ್ವ ಮತ್ತು ಅಸ್ತಿತ್ವಗಳನ್ನು ತಿಳಿದುಕೊಳ್ಳಬೇಕು."

ಈ ಸಿದ್ಧಾಂತವು ನಮ್ಮಲ್ಲಿಯ ಈಗಿನ ಸ್ಥಿತಿಯನ್ನೇ ಸೂಚಿಸುತ್ತದೆ. ಜಾತಿನಿರ್ಣಯವೆಂದರೇನು? ಸಮಾಜ ಸುಧಾರಣೆಯೇ ರಾಜಕೀಯ ಸುಧಾರಣೆಗಿಂತ ಮೊದಲಿನದೆಂಬ ತತ್ವವನ್ನು ಸಿದ್ಧಗೊಳಿಸಿದ ದೃಷ್ಟಾಂತ. ಸಮಾಜದ ಪುನರ್ನಿರ್ಮಾಣದ ವಿನಾ ರಾಜಕೀಯ ಸುಧಾರಣೆ ಶಕ್ಯವಿಲ್ಲವೆಂಬ ಪ್ರತಿಪಾದನೆಯ ವಿಜಯದ ಕುರುಹು.

ರಾಜಕಾರಣದವರು ಸಾಮಾಜಿಕ ಸುಧಾರಣೆಯೇನೂ ಅಗತ್ಯವಿಲ್ಲವೆಂದು ಹೇಳುತ್ತಿದ್ದರಷ್ಟೆ. ರಾಜಕೀಯ ಸುಧಾರಣೆಗೂ ಇದಕ್ಕೂ ಸಂಬಂಧವೇನೆಂದು ಕೇಳುತ್ತಿದ್ದರಷ್ಟೆ. ಜಾತಿ ನಿರ್ಣಯವು ಏಕೆ ಏರ್ಪಟ್ಟಿದೆಯೆಂಬುದು ಈಗಲಾದರೂ ಅವರಿಗೆ ಗೊತ್ತಾಗಿದೆಯಲ್ಲವೆ? ಜಾತಿನಿರ್ಣಯವೆಂದರೆ ಅಲ್ಪ ಸಂಖ್ಯಾಕರಿಗೂ ಆಳರಸರಿಗೂ ಆದ ಅಪವಿತ್ರ ಒಪ್ಪಂದ.

### ಈ ವರೆಗಿನ ಅನುಭವ.

ರಾಜಕೀಯ ಕ್ರಾಂತಿಯಾಗುವ ಮುಂಚೆ ಸಾಮಾಜಿಕ ಕ್ರಾಂತಿಯಾಗುತ್ತದೆಂಬುದಕ್ಕೆ ಈ ವರೆಗಿನ ಇತಿಹಾಸವೇ ಸಾಕ್ಷಿಯಾಗಿದೆ. ಲೂಥರನು ಧಾರ್ಮಿಕ ಕ್ರಾಂತಿಯನ್ನುಮಾಡಿದನಂತರವೆ ಯುರೋಪದಲ್ಲಿ ರಾಜ್ಯಕ್ರಾಂತಿಯಾಯಿತು. ಹಜರತ ಮಹಮ್ಮದರು ಅರಬರಲ್ಲಿ ಧಾರ್ಮಿಕ ಕ್ರಾಂತಿಯನ್ನು ಮಾಡಿದಮೇಲೆಯೆ ರಾಜಕೀಯ ಕ್ರಾಂತಿಯಾಯಿತು. ಭಗವಾನ್ ಬುದ್ಧನು ಮಾಡಿದ ಅದ್ಭುತವಾದ ಧಾರ್ಮಿಕ ಕ್ರಾಂತಿಯಿಂದಲೇ ಚಂದ್ರಗುಪ್ತನು ಸಾಮ್ರಾಜ್ಯವನ್ನು ನಿರ್ಮಿಸಿದನು. ಮಹಾರಾಷ್ಟ್ರದ ಸಾಧುಸಂತರು ಜನರಲ್ಲಿ ಧಾರ್ಮಿಕ ಸುಧಾರಣೆಯನ್ನು ಮಾಡಿದ್ದರಿಂದಲೇ ಶಿವಾಜಿ ಮಹಾರಾಜರು ರಾಜ್ಯವನ್ನು ಸ್ಥಾಪಿಸಲು ಅನುಕೂಲವಾಯಿತು. ಗುರುನಾನಕರ ಧಾರ್ಮಿಕ ಕ್ರಾಂತಿಯೇ ಶೀಖರ ರಾಜಕೀಯ ಸ್ವಾಮಿತ್ವಕ್ಕೆ ಕಾರಣವಾಯಿತು. ಆದಕಾರಣ ದೇಶದ ರಾಜಕೀಯ ಸುಧಾರಣೆಯಾಗುವ ಮುಂಚೆ ಜನಾಂಗದ ಬೌದ್ಧಿಕ ಮತ್ತು ಮಾನಸಿಕ ಸುಧಾರಣೆಯಾಗುವುದು ಅತ್ಯವಶ್ಯಕ."

---

## ಗೋಸಂಹಾರದ ವಿವರ.

(ಶ್ರೀ. ಅನಂತದಾಸ "ಗೋವರ್ಧನ ಸಂಸ್ಥೆ" ಪುಣೆ)

ಲಾಹೋರದಲ್ಲಿ ಸ್ಥಾಪನೆಯಾಗುತ್ತಿದ್ದ ಗೋವಧಾಲಯ ನಿಲ್ಲಿಸಲ್ಪಟ್ಟರೂ ವಾಂದ್ರಾ, ಕುರ್ಲಾ, ಮೊದಲಾದ ಕಡೆ ಗೋಸಂಹಾರವು ಪ್ರತಿನಿತ್ಯ ಆಗುತ್ತಲೇ ಇದೆಯಷ್ಟೆ. ಈ ದೇಶದಲ್ಲಾಗುವ ಗೋವು ಮೊದಲಾದ ದನಗಳ ಸಂಹಾರದ ಸಂಖ್ಯೆಯನ್ನು ಗೊತ್ತುಮಾಡಬೇಕೆಂದು ಕಲಕತ್ತಾ ಹೈಕೋರ್ಟಿನ ನ್ಯಾಯಾಧೀಶರಾಗಿದ್ದ ಸರ್. ಜಾನ್ ಉಡ್ರಾಫ್‌ರವರು ೧೮೮೨ ನೆಯ ಇಸವಿಯಲ್ಲಿ ಪ್ರಯತ್ನಿಸಿ ವರ್ಷಕ್ಕೆ ಒಂದು ಕೋಟಿ ಗೋವುಗಳು ಈ ದೇಶದಲ್ಲಿ ಸಂಹಾರಮಾಡಲ್ಪಡುತ್ತವೆಂದು ನಿರ್ಣಯಿಸಿದರು.

ಅನಂತರ ಛಿಂದವಾಡಾ ಎಂಬಲ್ಲಿಯ ವಕೀಲ ಶ್ರೀ. ವ್ರಜಮೋಹನಲಾಲರವರು ಪ್ರಯತ್ನಿಸಿ "ಗೋವಧಕೆ ಭೀಷಣ ಆಂಕಡೆ" ಎಂಬ ಗ್ರಂಥವನ್ನು ೧೯೨೯ ರಲ್ಲಿ ಬರೆದು ಪ್ರಕಟಿಸಿದರು. ಪ್ರತಿ ವರುಷ ೧| ಕೋಟಿ ಗೋವುಗಳನ್ನು ಈ ದೇಶದಲ್ಲಿ ಕೊಲ್ಲುತ್ತಿದ್ದಾರೆಂದು ಇವರು ಪ್ರತಿಪಾದಿಸಿದ್ದಾರೆ. ಇವರ ಲೆಕ್ಕದ ವಿವರ ಹೀಗಿದೆ—

| | |
|---|---|
| ಕಂಟೋನ್ಮೆಂಟ್‌ಗಳಲ್ಲಿ | ೨೦೦೦೦೦ |
| ಸೈನ್ಯಕ್ಕಾಗಿ | ೧೦೦೦೦೦೦ |
| ಒಣಗಿದ ಮಾಂಸದ ವ್ಯಾಪಾರಕ್ಕೆ | ೩೨೦೦೦೦೦ |
| ಮ್ಯುನಸಿಪಾಲ್ಟಿ ಭಾಗಗಳಲ್ಲಿ | ೨೫೦೦೦೦೦ |
| ನೋಟಿಫಾಯಿಡ್ ಏರಿಯಾ | ೯೦೦೦೦೦ |
| ತಾಲೂಕು ಬೋರ್ಡು | ೧೨೫೦೦೦ |
| ಹಳ್ಳಿಗಳಲ್ಲಿ | ೫೦೦೦೦೦೦ |
| ಅಂತು | ೧೨೧೨೫೦೦೦ |

ಈ ಸಂಖ್ಯೆಯು ಕೆಲವರಿಗೆ ಅತಿಶಯೋಕ್ತಿಯಾಗಿ ತೋರಬಹುದು. ಆದುದರಿಂದ ಒಂದೇ ಒಂದು ದೃಷ್ಟಾಂತವನ್ನು ಇಲ್ಲಿ ಕೊಡಲಾಗಿದೆ. ಬ್ರಹ್ಮದೇಶದ ಕಷ್ಟಮ್ ಶಾಖೆಯ ಚೀಫ್ ಕಲೆಕ್ಟರರು ತಿಳಿಸುವುದೇನೆಂದರೆ— ಹಿಂದುಸ್ಥಾನದ ಬಂದರಗಳಿಂದ ವರುಷಕ್ಕೆ ೪೮೦೦೩೯೭೬ ಪೌಂಡು ಒಣಗಿದ ಮಾಂಸ ಬ್ರಹ್ಮದೇಶಕ್ಕೆ ಬಂದಿತು. ಒಂದು ದನವನ್ನು ಕೊಂದರೆ ೧೫-೨೦ ಪೌಂಡು ಒಣಗಿದ ಮಾಂಸ ದೊರೆಯುತ್ತದೆ. ಈ ಲೆಕ್ಕದಿಂದ ಬ್ರಹ್ಮದೇಶಕ್ಕೆ ಹೋಗುವ ಮಾಂಸಕ್ಕಾಗಿ ೨೮-೩೨ ಲಕ್ಷ ದನಗಳನ್ನು ಕೊಲ್ಲುತ್ತಿದ್ದಾರೆಂದು ಸ್ಪಷ್ಟವಾಗುತ್ತದೆ.

ಈ ಒಣಗಿದ ಮಾಂಸದ ವ್ಯಾಪಾರಕ್ಕೆ ಚರ್ಮದ ವ್ಯಾಪಾರ ಹೆಚ್ಚುತ್ತಿರುವುದೂ ಒಂದು ಕಾರಣವಾಗಿದೆ. ಈ ವ್ಯಾಪಾರವು ಪ್ರತಿ ವರುಷ ಹೆಚ್ಚುತ್ತಾ ಇದೆ. ೧೯೧೬-೧೭ ನೆಯ ವರುಷದಲ್ಲಿ ಒಟ್ಟು ೧೩೭೭೨೧೩೭ ಚರ್ಮ ಪರದೇಶಗಳಿಗೆ ಹೋದವು. ಈ ದೇಶದ ಕಾರ್ಯಾಲಯಗಳಿಗೆ ಬೇಕಾಗುವ ಚರ್ಮ ಇವುಗಳ ಹೊರತಾದುದು. ಪ್ರತಿ ವರುಷ ೨೦-೨೧ ಲಕ್ಷ ದನಗಳು ತಾವೇ ಮರಣಹೊಂದುತ್ತವೆ. ಇನ್ನುಳಿದವುಗಳೆಲ್ಲಾ ಕೊಲ್ಲಲ್ಪಡುತ್ತವೆ.

## ಶುದ್ಧಿ ಮತ್ತು ಆಚಾರ್ಯರು.

ಮದ್ರಾಸಿನಲ್ಲಿ ಹಿಂದು ಮುಸಲ್ಮಾನರ ದೊಂಬಿಯಾದನಂತರ ಅಲ್ಲಿಯೂ ಹಿಂದು ಶುದ್ಧಿ- ಸಂಘಟನೆಗಳ ಪ್ರಶ್ನೆ ಮಹತ್ವದ್ದಾಗಿ ಪರಿಣಮಿಸಿದೆ. ಈ ವಿಚಾರವಾಗಿ ಮದ್ರಾಸ್ ಪ್ರಾಂತದ ಮುಖ್ಯ ಮಂತ್ರಿಗಳಿಗೂ ಆರ್ಯ ಸಮಾಜದ ಶ್ರೀ. ಕೇಶವದೇವ ಜ್ಞಾನಿ ಎಂಬುವವರಿಗೂ ನಡೆದ ಸಂಭಾಷಣೆಯು ಈ ಕೆಳಗಿನಂತೆ ಪ್ರಕಟವಾಗಿದೆ—

**ಆಚಾರ್ಯರು—** ಆರ್ಯ ಸಮಾಜದವರ ಶುದ್ಧಿ ಕಾರ್ಯದಿಂದ ಮುಸಲ್ಮಾನರು ಅಸಂತುಷ್ಟರಾಗುತ್ತಾರೆಂಬುದು ನಿಮಗೂ ಮಾನ್ಯವಿದೆಯಷ್ಟೆ. ಎಂದಮೇಲೆ ನೀವು ಆ ಕಾರ್ಯವನ್ನೇಕೆ ನಿಲ್ಲಿಸಬಾರದು ?

**ಜ್ಞಾನೀಜಿಯವರು—** ನಮ್ಮ ಶುದ್ಧೀ ಕಾರ್ಯವು ಮುಖ್ಯವಾಗಿ ಸ್ವ ಸಂರಕ್ಷಣೆಗೆ ಸಂಬಂಧವಾದುದಾಗಿದೆ. ಮುಸಲ್ಮಾನರು ಹಿಂದುಗಳನ್ನು ಧರ್ಮಭ್ರಷ್ಟರನ್ನಾಗಿ ಮಾಡದಿದ್ದರೆ ನಮ್ಮ ಶುದ್ಧೀ ಕಾರ್ಯದ ಅವಶ್ಯಕತೆಯೇ ಇಲ್ಲದಾಗುತ್ತದೆ.

**ಆಚಾರ್ಯರು—** ಈ ಮದ್ರಾಸ್ ಪ್ರಾಂತದಲ್ಲಿ ಮುಸಲ್ಮಾನರ ಸಂಖ್ಯೆ ನೂರಕ್ಕೆ ೬ ರಂತೆ ಇದೆ. ಹಿಂದುಗಳ ಸಂಖ್ಯೆ ೯೦ ರಂತೆ ಇದೆ. ಎಂದಮೇಲೆ ನೀವು ಇಷ್ಟು ಅಂಜುವುದೇಕೆ ?

**ಜ್ಞಾನೀಜಿಯವರು—** ಕೆಲವು ದಿನಗಳ ಹಿಂದೆ ಪಂಜಾಬ ಮತ್ತು ಬಂಗಾಲ ಪ್ರಾಂತಗಳ ಹಿಂದುಗಳೂ ಹೀಗೆಯೇ ಹೇಳುತ್ತಿದ್ದರು. ಆದರೆ ಈಗ ಅವರ ಗತಿ ಹೇಗಾಗಿದೆ? ಅವರನ್ನೇ ಕೇಳಿ ತಿಳಿದುಕೊಳ್ಳಿರಿ.

**ಆಚಾರ್ಯರು—** ನೀವು ನನ್ನ ಅಭಿಪ್ರಾಯವನ್ನು ಸರಿಯಾಗಿ ಗ್ರಹಿಸಲಿಲ್ಲ. ಪರಸ್ಪರ ವೈಮನಸ್ಸನ್ನು ಉಂಟುಮಾಡಿದರೆ ದೇಶದ ಉನ್ನತಿಯಾಗುವುದಿಲ್ಲ.

**ಜ್ಞಾನೀಜಿಯವರು—** "ಶಿವಿಲ್ ಮ್ಯಾರೇಜ್" ಶಾಸನದಂತೆ ನೀವು ಈ ಮತ ಪರಿವರ್ತನದ ವಿಷಯದಲ್ಲಿಯೂ ಒಂದು ಶಾಸನವನ್ನು ಮಾಡಿರಿ. ಮತಾಂತರವಾಗುವವನು ನ್ಯಾಯಾಧೀಶರ ಮುಂದೆ ಬಂದು ತನ್ನ ಹೇಳಿಕೆಯನ್ನು ಕೊಡಬೇಕು. ಹೀಗೆ ಶಾಸನಮಾಡಲು ಆರ್ಯ ಸಮಾಜದವರು ಒಪ್ಪಿಗೆಕೊಡುತ್ತಾರೆ.

**ಆಚಾರ್ಯರು—** ನಾನೇನೋ ಶುದ್ಧೀ ವಿಚಾರವಾಗಿ ನನ್ನ ಅಭಿಪ್ರಾಯವನ್ನು ತಿಳಿಸಿದ್ದೇನೆ. ನೀವೇ ಈ ಸಂಬಂಧವಾಗಿ ಪುನಃ ಯೋಚನೆಮಾಡಿರಿ.

**ಜ್ಞಾನೀಜಿಯವರು—** ಈ ಪ್ರಶ್ನೆಯು ಕೇವಲ ಆರ್ಯ ಸಮಾಜಕ್ಕೇನೇ ಸಂಬಂಧಪಟ್ಟದ್ದಲ್ಲ. ಹಿಂದು ಸಮಾಜಕ್ಕೇನೇ ಸಂಬಂಧಿಸಿದೆ. ನಾನು ತಮ್ಮ ವಿಚಾರಗಳನ್ನು ನನ್ನ ಸಮಾಜದವರ ಮುಂದಿಡುತ್ತೇನೆ.

## ಶುದ್ಧಿ ಮತ್ತು ಗಾಂಧೀಜಿ.

ಶ್ರೀ. ಕೇಶವದೇವ ಜ್ಞಾನಿ ಇವರು ಮಹಾತ್ಮಾ ಗಾಂಧಿಯವರಿಗೆ ಈ ಕೆಳಗಿನಂತೆ ಕೇಳಿಕೊಂಡಿದ್ದರು.

"ಆರ್ಯ ಸಮಾಜದವರು ಮತ್ತು ಹಿಂದು ಮಹಾ ಸಭೆಯವರು ಶುದ್ಧಿ ಕಾರ್ಯವನ್ನು ನಡೆಯಿಸಿರುವುದರಿಂದ ಹಿಂದುಗಳು ಮುಸಲ್ಮಾನರ ವಿರೋಧಮಾಡುತ್ತಿದ್ದಾರೆಂದು ತಿಳಿದಿರುವುದುಂಟು. ಆದುದರಿಂದ ಹಿಂದುಗಳು ಈ ಶುದ್ಧಿ ಕಾರ್ಯವನ್ನು ನಿಲ್ಲಿಸಿ ಪ್ರತಿ ವರುಷ ಲಕ್ಷಾಂತರ ಜನರು ಮುಸಲ್ಮಾನ್ ಮತ್ತು ಕ್ರಿಸ್ತ ಮತಗಳಿಗೆ ತಮ್ಮ ಮತ ಬಾಂಧವರು ಹೋಗಲು ಅವಕಾಶವನ್ನು ಕೊಡಬೇಕೆಂದು ತಾವು ಅಭಿಪ್ರಾಯಪಡುವಿರಾ ?"

### ಗಾಂಧೀಜಿಯವರ ಉತ್ತರ.

"ನಾನು ಇಂತಹ ಪ್ರಶ್ನೆಗಳಿಗೆ ಈ ಮುಂಚೆಯೇ ಅನೇಕ ಸಾರೆ ನನ್ನ ಅಭಿಪ್ರಾಯವನ್ನು ತಿಳಿಸಿದ್ದೇನೆ. ಈಗ ಮತ್ತೆ ತಿಳಿಸಲು ಅಭ್ಯಂತರವೇನೂ ಇಲ್ಲ. ನೀವು ತಿಳಿಸಿರುವುದು ಮತಾಂತರವೆಂದು ನಾನು ಎಣಿಸುವುದಿಲ್ಲ. ಒಂದು ವ್ಯಕ್ತಿಯು ಭಯದಿಂದಲೋ ಅಥವಾ ಬಲಾತ್ಕಾರದಿಂದಲೋ ಇಲ್ಲವೇ ಯಾವುದರದೊಂದು ಆಸೆಯಿಂದಲೋ ಧರ್ಮಾಂತರಗೊಳಿಸಲ್ಪಟ್ಟರೆ ಅದು ಧರ್ಮಾಂತರವೇ ಅಲ್ಲ. ಆತನು ಪರ ಧರ್ಮದವನೆಂದು ಹೇಳಲೇ ಬಾರದು. ಹೃದಯದಿಂದ ಪರಿವರ್ತನವಾಗುವುದೇ ಮತಾಂತರವು.

ದೇವರು ಹೃದಯದಲ್ಲಿದ್ದಾನೆ. ಆತನ ಪ್ರೇರಣೆಯಂತೆ ಮತಾಂತರವಾದರೆ ಅದೇ ನಿಜವಾದ ಮತಾಂತರವು. ದೇವರ ಪ್ರೇರಣೆಯು ಯಾವಾಗಲೂ ಮನುಷ್ಯನ ಇಚ್ಛೆಗಿಂತ ಭಿನ್ನವಾದುದಾಗಿರುತ್ತದೆ. ಆದಕಾರಣ ನೀವು ತಿಳಿಸಿದ ರೀತಿಯು ನಿಜವಾದ ಮತಾಂತರವೇ ಅಲ್ಲ. ವಿಧರ್ಮದವರು ಆಸೆ, ಬಲಾತ್ಕಾರಗಳಿಂದ ಮಾಡುವ ಧರ್ಮಾಂತರವು ಅಯುಕ್ತವಾದುದು.

ಹೀಗೆ ಮತಾಂತರವಾದವರು ಪರಧರ್ಮದವರೇ ಅಲ್ಲವೆಂದು ನಾನು ಅವರನ್ನು ನಮ್ಮ ಮತದಲ್ಲಿ ತೆಗೆದುಕೊಳ್ಳುವೆನು. ಅವರು ಹೃದಯಪೂರ್ವಕ ಪಶ್ಚಾತ್ತಾಪಪಟ್ಟರೆ ಸಾಕು. ಅವರಿಗೆ ಶುದ್ಧೀ ಸಂಸ್ಕಾರವೇ ಅನಾವಶ್ಯಕವೆಂದು ನನ್ನ ಅಭಿಪ್ರಾಯ. ಏಕೆಂದರೆ ಅವರು ಹೃದಯದಿಂದಲೇ ಪರ ಧರ್ಮಕ್ಕೆ ಹೋಗಿಯೇ ಇಲ್ಲವಷ್ಟೆ."

### ಉತ್ತರ ಸರಿಯೆ ?

ಶ್ರೀ. ಜ್ಞಾನೀಜಿಯವರು ತಮ್ಮ ಪ್ರಶ್ನೆಗೆ ಗಾಂಧೀಜಿಯವರಿಂದ ತೃಪ್ತಿಕರವಾದ ಉತ್ತರ ದೊರೆಯಲಿಲ್ಲವೆಂದೇ ತಿಳಿಸಿದ್ದಾರೆ. ಗಾಂಧೀಜಿಯವರು ಮತಾಂತರದ ರೀತಿನೀತಿಗಳ ನಿಜ ತತ್ವಗಳನ್ನು ಈ ಉತ್ತರದಲ್ಲಿ ತಿಳಿಸಿದ್ದಾರೆ. ಈ ಅಭಿಪ್ರಾಯವನ್ನು ಯಾವ ಮತ ಧರ್ಮಗಳ ವಿಚಾರಪರರಾದರೂ ಮಾನ್ಯಮಾಡದೆ ಇರಲಾರರು. ಆದರೆ ಈಗ ದೇಶದಲ್ಲಿ ನಡೆದಿರುವ ಮತಾಂತರದ ಕಾರ್ಯಗಳಿಗೆ ಈ ತತ್ವವು ಎಷ್ಟರ ಮಟ್ಟಿಗೆ ಅನ್ವಯಿಸುತ್ತದೆಂಬುದನ್ನು ನೋಡುವುದೂ ಅಗತ್ಯವಾಗಿದೆ.

ಮುಸಲ್ಮಾನ್ ಅಥವಾ ಕ್ರಿಸ್ತ ಮತಗಳಿಗೆ ಈಗ ಪ್ರತಿ ವರುಷ ಸೇರಿಸಿಕೊಳ್ಳಲ್ಪಡುತ್ತಿರುವ ಲಕ್ಷಾಂತರ ಜನರು ಹಿಂದು ಧರ್ಮದ ತತ್ವಗಳಿಂದ ಸಮಾಧಾನವಾಗದೆ ಅವರ ಹೃದಯ ಪರಿವರ್ತನೆಯಿಂದಲೇ ಆಯಾಯ ಮತಗಳಿಗೆ ಸೇರುತ್ತಿದ್ದಾರೆಂದು ಯಾರೂ ಹೇಳಲಾರರು. ಲಕ್ಷಕ್ಕೆ ಒಬ್ಬಿಬ್ಬರಾದರೂ ಇಂಥವರು ದೊರೆಯುವುದು ದುರ್ಲಭ.

ಇನ್ನುಳಿದವರೆಲ್ಲಾ ಮೋಸ, ಬಲಾತ್ಕಾರ ಮೊದಲಾದ ಸಲ್ಲದ ರೀತಿಗಳಿಂದಲೇ ಮತಾಂತರಗೊಳಿಸಲ್ಪಟ್ಟವರು. ಅವರು ಹಿಂದುಗಳೆಂದೇ ನಾವು ತಿಳಿದರೂ ಅವರುಮಾತ್ರ ಯಾವಮತದವರಿಂದ ಮತಾಂತರಗೊಳಿಸಲ್ಪಟ್ಟಿದ್ದಾರೆಯೋ ಅವರ ಮತದವರಾಗಿ ಹಿಂದು ಧರ್ಮದ ವಿರೋಧಿಗಳೂ ಆಗುವದುಂಟಷ್ಟೆ? ಈಗ ಈ ದೇಶದಲ್ಲಿರುವ ಕೋಟ್ಯಾಂತರ ಅನ್ಯ ಧರ್ಮದವರೆಲ್ಲಾ ಹೃದಯ ಪರಿವರ್ತನೆಯವರಿಂದಾದ ಸಂತತಿಯವರೆ ?-

ಪರಧರ್ಮಕ್ಕೆ ಸೆಳೆಯಲ್ಪಟ್ಟವರು ಪಶ್ಚಾತ್ತಾಪ ಪಟ್ಟರೆ ಅವರಿಗೆ ಶುದ್ಧೀ ಸಂಸ್ಕಾರದ ಅಗತ್ಯವು ಕೂಡಾ ಇಲ್ಲವೆಂಬು

## ಮೈಸೂರು ಪ್ರಾಂತದಲ್ಲಿ ದಬ್ಬಾಳಿಕೆ.

ಮೈಸೂರು ಪ್ರಾಂತದ ಪ್ರಭುತ್ವ ಮಾದರಿ ಪ್ರಭುತ್ವವೆಂದು ಹೆಸರಾಗಿದೆ. ಕಾಂಗ್ರೆಸ್ಸಿನಮೇಲೆ ನಡೆಸಿರುವ ಇದರ ದಬ್ಬಾಳಿಕೆಯೂ ಮಾದರಿ ದಬ್ಬಾಳಿಕೆಯೇ ಸರಿ.

ರಾಷ್ಟ್ರಧ್ವಜಕ್ಕೆ ಆ ದೇಶದಲ್ಲಿ ಪ್ರತಿಬಂಧ ಪ್ರಾರಂಭವಾಗಿದೆ. ಕಾಂಗ್ರೆಸ್ ಪ್ರಚಾರಕಾರ್ಯಕ್ಕೂ ತಡೆ. ಚಿತ್ರದುರ್ಗದ ಜಿಲ್ಲಾಧಿಕಾರಿಗಳು ಇನ್ನು ಎರಡು ತಿಂಗಳು ಅಲ್ಲಿ ಧ್ವಜಾರೋಹಣ ಮಾಡಬಾರದಾಗಿ ಅಪ್ಪಣೆಮಾಡಿದ್ದಾರೆ. ದಾವಣಗೆರೆಯಲ್ಲಿ ಈ ಕೆಳಗಿನಂತೆ ದಬ್ಬಾಳಿಕೆ.

" ದಾವಣಗೆರೆ ಫರ್ಸ್ಟ್‌ಕ್ಲಾಸ್ ಸ್ಪೆಶಲ್ ಮ್ಯಾಜಿಸ್ಟ್ರೇಟರವರು ಹತ್ತು ಮೈಲಿಯ ಸುತ್ತು ಮುತ್ತಲೂ ಎರಡು ತಿಂಗಳ ವರೆಗೆ ಕಾಂಗ್ರೆಸ್ ರಾಷ್ಟ್ರಧ್ವಜಾರೋಹಣ ಮಾಡುವುದೇ ಆಗಲಿ, ರಾಷ್ಟ್ರಧ್ವಜವನ್ನು ಹಿಡಿದುಕೊಂಡು ಮೆರವಣಿಗೆಮಾಡುವದಾಗಲಿ ಮೈಸೂರು ಪೋಲಿಸ್ ರೆಗ್ಯುಲೇಷನ್ ೩೯ ನೆ ಸೆಕ್ಸೆನ್ ಪ್ರಕಾರ ಮಾಡಕೂಡದೆಂದು ದಾವಣಗೆರೆ ತಾಲೂಕು ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಸದಸ್ಯರುಗಳೂ ಮತ್ತು ಮುನಸಿಪಲ್ ಕೌನ್ಸಿಲರುಗಳೂ ಆದ ಈ ಕೆಳಗೆ ಕಂಡ ಮಹಾಶಯರುಗಳಿಗೆ ಮೇಲ್ಕಂಡ ಸೆಕ್ಸೆನ್ ಜಾರಿಮಾಡಿರುತ್ತಾರೆ.

ಶ್ರೀಯುತರುಗಳಾದ ಯಜಮಾನ್ ಮೋತಿ ದೊಡ್ಡಪ್ಪನವರು, ಚನ್ನಗಿರಿ ರಂಗಪ್ಪನವರು, ಕಾಸಲು ಶ್ರೀನಿವಾಸ ಶೆಟ್ಟರು ಜಿ. ವೀರಪ್ಪನವರು, ಬೋಂದಾಡೆ ಹನುಮಂತರಾವ್, ಧೋತ್ರಗಾವಿ ಮೌನೇಶ್ವರಪ್ಪನವರು, ಡಿ. ಆರ್. ಮುದ್ದಪ್ಪನವರು, ಹರಳೆಣ್ಣೆ ಕೊಟ್ರೂರ ಬಸವಪ್ಪನವರು, ಕೆ. ಟಿ. ಜಂಬಣ್ಣನವರು, ಆರ್. ಡಿ. ಎಲ್ಲಪ್ಪನವರು, ರಾಮಕೃಷ್ಣಪ್ಪನವರು. ಮಾಗಾನಳ್ಳಿ ಗುರುಸಿದ್ಧಪ್ಪನವರು, ಗೌಡ್ರ ಗುರುಶಾಂತಪ್ಪನವರು, ಗಾಯಕವಾಡ ನಾರಾಯಣರಾವ, ಡಿ. ವೀರಶೆಟ್ಟರು, ಮುಂಡರಗಿ ವಿರುಪಾಕ್ಷಪ್ಪನವರು-- ಮೇಲ್ಕಂಡ ೧೬ ಸದಸ್ಯರುಗಳಿಗೆ ತಾ. ೧೩ ೧೦-೩೭ ರ ಲಾಗಾಯಿತು ಎರಡು ತಿಂಗಳ ವರೆಗೆ ಸರಕಾರದವರು ೩೯ನೆ ಸೆಕ್ಸೆನ್ ಜಾರಿಮಾಡಿ ಟಾಂ ಟಾಂ ಮೂಲಕ ಊರಲ್ಲಿ ಡಂಗುರ ಹೊಡಿಸಿದರು."

ದಾವಣಗೆರೆಯಲ್ಲಿ ತಾ. ೧೩ ನೆಯ ದಿವಸ ೩ ಸಾವಿರ ಜನರ ಪ್ರಚಂಡ ಮೆರವಣಿಗೆ ಹೊರಟು ಗಾಂಧೀಚೌಕಿನಲ್ಲಿ ಮೈಸೂರು ಸರಕಾರದವರು ಕಾಂಗ್ರೆಸ್ಸಿನವರ ಮೇಲೆ ನಡೆಸಿದ ದಬ್ಬಾಳಿಕೆಯನ್ನು ನಿಷೇಧಿಸಿದರು. ಮೈಸೂರು ದೇಶಕ್ಕೆ ಜವಾಬ್ದಾರಿ ಪ್ರಭುತ್ವಬೇಕೆಂದು ಸಾರಿದರು. ಇಲ್ಲಿಯ ಪ್ರಸಿದ್ಧ ಅಡ್ವೋಕೇಟ್ ಶ್ರೀ. ಚಂದ್ರಶೇಖರಯ್ಯನವರು ವಿಚಾರ ಮತ್ತು ಉತ್ಸಾಹಯುಕ್ತ ಭಾಷಣಮಾಡಿದರು.

### ಹರಿಹರದಲ್ಲಿ

ತಾ. ೧೩-೧೦-೩೭ ನೆಯ ದಿವಸ ಪ್ರಚಂಡ ಸಭೆ ಸೇರಿ ಮೈಸೂರು ಸರಕಾರವು ಕಾಂಗ್ರೆಸ್ ಕೆಲಸಗಾರರಮೇಲೆ ಹೂಡಿದ ದಬ್ಬಾಳಿಕೆಯನ್ನು ನಿಷೇಧಿಸಲಾಯಿತು. ಸಭೆಯ ಅಧ್ಯಕ್ಷಸ್ಥಾನವನ್ನು ಶ್ರೀ. ಗದ್ದಿಮಠದ ಪುಟ್ಟಪ್ಪನವರು ವಹಿಸಿದ್ದರು. ಶ್ರೀ. ಆರ್. ಟಿ. ಗೋವಿಂದರಾಯರೇ ಮೊದಲಾದವರ ಭಾಷಣಗಳಾದವು.

---

## ಹಿಂದು ಧರ್ಮ ಗ್ರಂಥ ದಿನ.

ಕಳೆದ ನವರಾತ್ರಿ ಕಾಲದಲ್ಲ ಹಿಂದು ಮಹಾ ಸಭೆಯ ಪರವಾಗಿ ಪುಣೆಯಲ್ಲಿ ೯ ದಿನ ಹಿಂದು ಸಮಾಜ ಸುಧಾರಣೆಗೋಸ್ಕರ ಅನೇಕ ಕಾರ್ಯಕ್ರಮಗಳು ಜರುಗಿದವು. ಮೊದಲನೆಯ ದಿನ ಹಿಂದು ಧರ್ಮ ಗ್ರಂಥ ದಿನವೆಂದು ಆಚರಿಸಲ್ಪಟ್ಟಿತು. ಆ ದಿನ ವ್ಯಾಖ್ಯಾನ ಮತ್ತು ಪ್ರವಚನಗಳು ಜರುಗಿದವು. ಶ್ರೀ. ಕಾಶಿಕರ ಎಂಬುವವರು ಋಗ್ವೇದ ಕಾಲದ ಸ್ಥಿತಿಯನ್ನು ಕುರಿತು ಒಂದು ಭಾಷಣವನ್ನುಮಾಡಿದರು. ಅದರಲ್ಲಿ ಅವರು ಹೀಗೆ ಹೇಳಿದರು—

"ಲೊ. ಟಿಳಕರು ಹೇಳಿರುವಂತೆ ಆರ್ಯರು ಉತ್ತರ ಧ್ರುವ ಪ್ರದೇಶದಿಂದ ಈ ದೇಶಕ್ಕೆ ಬಂದರು. ಇವರು ಬರುವ ಮುಂಚೆ ಈ ದೇಶದಲ್ಲಿ ದ್ರಾವಿಡರೆಂಬ ಜನರಿದ್ದರು. ಆರ್ಯರು ದ್ರಾವಿಡರಿಗಿಂತ ಸುಧಾರಿಸಿದವರಿದ್ದರು. ಈ ಉಭಯರಿಗೂ ಅನೇಕ ಯುದ್ಧಗಳು ಜರುಗಿದವು. ದ್ರಾವಿಡರು ಸೋತರು. ಅವರನ್ನು ದಾಸರನ್ನಾಗಿ ಮಾಡಿಕೊಂಡರು. ಅವರಲ್ಲಿಯೇ ಶೂದ್ರವರ್ಣ ಉಂಟಾದುದು.

ಯುದ್ಧಮಾಡುವವರು ಕ್ಷತ್ರಿಯರಾದರು. ಒಕ್ಕಲತನ ವ್ಯಾಪಾರಗಳನ್ನು ಮಾಡುವವರು ವೈಶ್ಯರಾದರು. ಆಗಿನ ಆರ್ಯರಿಗೆ ಯಜ್ಞವೇ ಮುಖ್ಯ ಕ್ರಿಯೆಯಾಗಿದ್ದಿತು. ಅದನ್ನು ಮಾಡುವ ಕೆಲಸ ವಹಿಸಿದವರು ಪುರೋಹಿತರೆಂದು ಹೇಳಲ್ಪಟ್ಟರು. ಅವರೇ ಬ್ರಾಹ್ಮಣರು. ಈ ದೇಶಕ್ಕೆ ಬಂದಮೇಲೆ ಈ ಪ್ರಕಾರ ನಾಲ್ಕು ವರ್ಣಗಳಾದವು. ಋಗ್ವೇದಕಾಲದ ಜನರು ಪುನರ್ಜನ್ಮವನ್ನು ನಂಬಿರಲಿಲ್ಲ"

### ಹಿಂದು ಸಂಘಟನೆಯನ್ನು ಹೇಗೆ ಮಾಡಬೇಕು?

ಶ್ರೀ. ಸಿದ್ಧೇಶ್ವರ ಶಾಸ್ತ್ರಿ ಚಿತ್ರಾವ ಎಂಬುವವರು ಹಿಂದು ಸಂಘಟನೆಯ ಸಂಬಂಧವಾಗಿ ಮಾಡಿದ ಪ್ರವಚನದಲ್ಲಿ ಹೀಗೆ ಹೇಳಿದರು—

"ಹಿಂದುಗಳಲ್ಲಿಯ ಎಲ್ಲ ಜನರೂ ವೇದವನ್ನೇನೂ ಮಾನ್ಯಮಾಡುವುದಿಲ್ಲ. ಜೈನ, ಬೌದ್ಧ, ಶೀಖ, ಮಹಾನುಭಾವಿ, ಲಿಂಗಾಯತ, ಮೊದಲಾದ ಮತೀಯರು ವೇದಗಳನ್ನು ಮಾನ್ಯಮಾಡದೆ ತಮ್ಮ ತಮ್ಮ ಮತ ತತ್ವಗಳನ್ನು ತಿಳಿಸುವ ಗ್ರಂಥಗಳಿಗೇನೇ ಧರ್ಮ ಗ್ರಂಥವೆಂದು ಹೇಳುತ್ತಿದ್ದಾರೆ. ಅವರೆಲ್ಲರೂ ತಮ್ಮ ತಮ್ಮ ಧರ್ಮ ಗುರುಗಳನ್ನೇ ಬೇರೆಮಾಡಿಕೊಂಡಿದ್ದಾರೆ. ಇವರೆಲ್ಲರ ಸಂಖ್ಯೆಯೇನೂ ಕಡಿಮೆಯಿಲ್ಲ. ಅವರೆಲ್ಲರೂ ತಾವೂ ಹಿಂದುಗಳೆಂದೇ ಹೇಳಿಕೊಳ್ಳುತ್ತಿದ್ದಾರೆ.

ಆದಕಾರಣ ನಾವು ಅವರ ಧರ್ಮಗ್ರಂಥಗಳಿಗೂ ಧರ್ಮ ಗುರುಗಳಿಗೂ ಮನ್ನಣೆಯನ್ನು ಕೊಟ್ಟು ನಾವೆಲ್ಲರೂ ಹಿಂದು ಎಂಬ ಒಂದೇ ಸೂತ್ರದಲ್ಲಿಯ ಮಣಿಗಳಾಗಬೇಕು."

---

ದು ವಿಹಿತವಾದುದೇ ಸರಿ. ಇದರಿಂದ ಪರಧರ್ಮಗಳಿಗೆ ಸೆಳೆಯಲ್ಪಟ್ಟವರನ್ನು ಹಿಂದು ಧರ್ಮದಲ್ಲಿ ತೆಗೆದುಕೊಳ್ಳಬೇಕೆಂದೇ ಗಾಂಧೀಜಿಯವರೂ ಅಭಿಪ್ರಾಯಪಟ್ಟಿದ್ದಾರೆಂದೇ ಸ್ಪಷ್ಟವಾಗುತ್ತದೆ. ಆದರೆ ಅವರಿಗೆ ಸಂಸ್ಕಾರ ಅಗತ್ಯವಿಲ್ಲವೆಂದು ಗಾಂಧೀಜಿಯವರ ಅಭಿಪ್ರಾಯ. ಹೃದಯ ಪರಿವರ್ತನೆಯಿಲ್ಲದೆ ಅನ್ಯ ಧರ್ಮದಲ್ಲಿದ್ದುದರಿಂದ ಆ ಜನರಿಗೇನೋ ತಾವು ಕುಲಗೆಟ್ಟೆವು, ಅಪವಿತ್ರರಾದೆವು, ಎಂಬ ಕಲ್ಪನೆಗಳುಂಟಾಗುತ್ತವೆ. ಆಯಾಯ ಧರ್ಮದವರ ಸಂಸ್ಕಾರಗಳನ್ನೂ ಮಾಡಿರುತ್ತಾರೆ. ಆದಕಾರಣ ಅವುಗಳೆಲ್ಲಾ ನಿವಾರಣೆಯಾದವೆಂದು ಆ ಜನರ ತಿಳುವಳಿಕೆಯಾಗುವದಕ್ಕಾಗಿ ಶುದ್ಧೀ ಸಂಸ್ಕಾರವು ಬೇಕಾಗುತ್ತದೆ. ಅವರ ಸಂಗಡ ಬಳಿಕೆಮಾಡಲು ಕೂಡಾ ಹಿಂದು ಧರ್ಮದ ಜನಸಾಮಾನ್ಯಕ್ಕೆ ಇಂಥ ಶುದ್ಧೀ ಸಂಸ್ಕಾರವು ಅಗತ್ಯವಾಗಿಯೂ ತೋರಬಹುದು.



ಶಾ. ಶ. ೧೮೫೯ ನೆಯ ಆಶ್ವೀನ ಶು|| ೧೩ ಸೋಮವಾರ.

# ಕಾಂಗ್ರೆಸ್ ಪಕ್ಷದ ಮೇಲೆ ಟೀಕಾಸ್ತ್ರ!

ಕಾಂಗ್ರೆಸ್ ಪಕ್ಷವು ಅಧಿಕಾರವನ್ನು ಸ್ವೀಕರಿಸುವುದಕ್ಕಿಂತ ಮುಂಚೆ ಆ ಪಕ್ಷದ ವಿಷಯದಲ್ಲಿದ್ದ ಅನ್ಯಪಕ್ಷಗಳ ಅಭಿಪ್ರಾಯಕ್ಕೂ ಅದು ಅಧಿಕಾರ ಸೂತ್ರವನ್ನು ಹಿಡಿದು ಈಗ ನಡೆಸುತ್ತಿರುವ ರೀತಿನೀತಿಗಳನ್ನು ನೋಡಿದನಂತರ ಪಡುವ ಅಭಿಪ್ರಾಯಕ್ಕೂ ಎಷ್ಟೋ ವ್ಯತ್ಯಾಸವಿದೆ. ಅಧಿಕಾರವಿಲ್ಲದ ಪಕ್ಷಗಳು ಅಧಿಕಾರ ಹೊಂದಿದ ಪಕ್ಷದ ಸಂಬಂಧವಾಗಿ ಹೀಗೆ ಕಡ್ಡಿಯನ್ನು ಗುಡ್ಡವನ್ನಾಗಿಯೂ ಗುಡ್ಡವನ್ನು ಕಡ್ಡಿಯನ್ನಾಗಿಯೂ ಮಾಡಿ ಸ್ವಪಕ್ಷ ಪ್ರಚಾರಕ್ಕೆ ಸಾಹಸಪಡುವುದು ರಾಜಕಾರಣದಲ್ಲಿ ಒಂದು ರೀತಿಯಾಗಿಯೇ ಇದೆ. ಆದುದರಿಂದ ಆ ವಿಷಯದಲ್ಲಿ ಹೆಚ್ಚು ಯೋಚಿಸಬೇಕಾದ ಅಗತ್ಯವೇನೂ ಇಲ್ಲ.

ಆದರೆ ಕಾಂಗ್ರೆಸ್ ಪಕ್ಷದಲ್ಲಿಯೇ ಭಿನ್ನಾಭಿಪ್ರಾಯಗಳು ರಾಜ್ಯಭಾರ ನಡೆಯಿಸಲು ಪ್ರತಿಬಂಧವಾಗುವಷ್ಟರಮಟ್ಟಿಗೆ ಹೆಚ್ಚಿದರೆ ಆಗ ಆ ವಿಷಯದ ಕಡೆಗೆ ತುಂಬಾ ಲಕ್ಷಿಸುವುದು ಅತ್ಯಗತ್ಯವು.

ಈ ತಿಂಗಳ ಕೊನೆಗೆ ಕಲಕತ್ತಾದಲ್ಲಿ ಕೂಡುವ ಅಖಿಲ ಭಾರತ ರಾಷ್ಟ್ರೀಯ ಸಮಿತಿಯಲ್ಲಿ ಚರ್ಚಿಸಲ್ಪಡತಕ್ಕ ಕೆಲವು ವಿಷಯಗಳನ್ನು ಬೇರೆ ಕಡೆ ಕೊಟ್ಟಿದ್ದೇವೆ. ಅವುಗಳನ್ನು ನೋಡಿದರೆ ಕಾಂಗ್ರೆಸ್ ಪಕ್ಷದಲ್ಲಿಯೇ ಮಹತ್ವದ ಭಿನ್ನಾಭಿಪ್ರಾಯಗಳುಂಟಾಗಿವೆಯೆಂಬುದು ಸ್ಪಷ್ಟ ತೋರುತ್ತದೆ. ಇತ್ತೀಚಿಗೆ ಕಾಂಗ್ರೆಸ್ ಪಕ್ಷದ ವಿಷಯವಾಗಿಯೂ ಕಾಂಗ್ರೆಸ್ ಮಂತ್ರಿಮಂಡಲಗಳ ಕಾರ್ಯಕಲಾಪಗಳ ಸಂಬಂಧವಾಗಿಯೂ ಕಾಂಗ್ರೆಸ್ಸಿನಲ್ಲಿರುವ ಅನೇಕರೇ ಸಲ್ಲದ ರೀತಿಯಲ್ಲಿ ಟೀಕಿಸುತ್ತಿದ್ದಾರೆ. ಈ ರೀತಿಯು ದೇಶಕ್ಕೆ ಕ್ಷೇಮಕರವಲ್ಲ.

ಕಾಂಗ್ರೆಸ್ ಪಕ್ಷವು ರಾಜ್ಯಭಾರವನ್ನು ದೇಶಕ್ಕೆ ಹೆಚ್ಚು ಹಿತಕರವಾಗುವ ರೀತಿಯಲ್ಲಿ ನಡೆಯಿಸುವುದಕ್ಕೋಸ್ಕರ ಸಹಾಯವಾಗುವ ರೀತಿಯಲ್ಲಿ ಅದರ ಮೇಲೆ ಟೀಕೆಮಾಡುವುದು ಬೇರೆ. ಅದರ ಕೈಯಲ್ಲಿರುವ ರಾಜ್ಯಸೂತ್ರ ತನ್ನ ಕೈಯಲ್ಲಿ ಬರಬೇಕೆಂಬುದಕ್ಕೆ ಮಾಡುವ ಟೀಕೆ ಬೇರೆ. ಇವುಗಳಲ್ಲಿ ಮೊದಲನೆಯದು ಈಗ ನಮ್ಮ ದೇಶಕ್ಕೆ ಹಿತಕರವಾದುದು. ಎರಡನೆಯು ಪ್ರತ್ಯಕ್ಷವಾದರೋ ಘಾತಕವಾದುದು. ದೇಶವು ಸಂಪೂರ್ಣ ಸ್ವತಂತ್ರವಾದ ವಿನಾ ಈ ಪ್ರಕಾರ ರಾಜ್ಯಸೂತ್ರ ಪ್ರಾಪ್ತಿಗೆ ಹೋರಾಡ ಹೋದರೆ ಪರಕೀಯರ ಶಕ್ತಿಯೇ ಹೆಚ್ಚುವುದು.

ನಮ್ಮ ಕಾಂಗ್ರೆಸ್ ಪಕ್ಷದ ರಾಜ್ಯವಾಗಿದೆ; ನಮ್ಮ ಪಕ್ಷದ ಮಂತ್ರಿಗಳಿದ್ದಾರೆ; ನಮ್ಮವರು ಮಾಡುವುದೆಲ್ಲಾ ಬಂಗಾರ! ಅದರಲ್ಲಿ ತಪ್ಪು ತಡೆಗಳುಂಟೆ? ಎಂಬ ಅಂಧ ಶ್ರದ್ಧೆಯಿಂದ ಮಂತ್ರಿಮಂಡಲದ ಕಾರ್ಯಕಲಾಪಗಳನ್ನೆಲ್ಲಾ ಉಧೋ! ಉಧೋ! ಎಂದು ಹೊಗಳುತ್ತ ಇರುವುದೂ ದೇಶಕ್ಕೆ ಕ್ಷೇಮಕರವಲ್ಲ. ಪರಕೀಯ ಆಳರಸರನ್ನು ಹೊಗಳಿ ಹೊಗಳಿ ರಾವಸಾಹೇಬ್, ರಾವಬಾಹದ್ದೂರ್, ಪದವಿಗಳನ್ನು ಕೆಲವರು ಹಿಂದೆ ಹೊಂದಿದಂತೆ ಈಗ ಕಾಂಗ್ರೆಸ್ ಅಧಿಕಾರಿಗಳನ್ನು ಕೊಂಡಾಡಿ ದೇಶಭಕ್ತರಾಗಬೇಕೆಂದು ಯಾರಾದರೂ ಇಚ್ಛಿಸಿದರೆ ಅದೂ ತ್ಯಾಜ್ಯವೇ ಸರಿ. ಮಹಾತ್ಮಾ ಗಾಂಧಿಯವರು ಕಾಂಗ್ರೆಸ್ ಮಂತ್ರಿಮಂಡಲಗಳ ಮೇಲೆ ಟೀಕೆಮಾಡುವ ವಿಚಾರವಾಗಿ ಸೂಚಿಸಿರುವುದು ಮನನೀಯವಾಗಿದೆ.

ಕಾಂಗ್ರೆಸ್ ಪಕ್ಷದ "ಪ್ರಕಾಶ" ಎಂಬ ಪತ್ರಿಕೆಯ ಸಂಪಾದಕರು ಮುಂಬೈ ಕಾಂಗ್ರೆಸ್ ಕಮಿಟಿಯಲ್ಲಿ ನಡೆದಿರುವ ಹಣದ ವ್ಯತ್ಯಾಸದ ಗಲಾಟೆಯನ್ನು ಕುರಿತು ಹೀಗೆ ಬರೆದಿದ್ದಾರೆ—

"ಪ್ರಾಗತಿಕ, ಲೋಕಶಾಹಿ, ಬ್ರಾಹ್ಮಣೇತರ, ಕೂಲಿಕಾರ ಈ ಪಕ್ಷಗಳೆಲ್ಲಾ ಕಾಂಗ್ರೆಸ್ಸಿನ ಹೊರಗಿದ್ದು ಅಸೂಯೆಯಿಂದ ಕಾಂಗ್ರೆಸ್ಸನ್ನು ವಿರೋಧಿಸುತ್ತವೆ. ಆದರೆ ಕಾಂಗ್ರೆಸ್ಸಿನೊಳಗಿದ್ದು ಕಾಂಗ್ರೆಸ್ಸಿನ ಕಾರ್ಯಕ್ಕೆ ವಿರೋಧಮಾಡುವ ಪಕ್ಷವೆಂದರೆ ಕಾಂಗ್ರೆಸ್ ಸೋಶಾಲಿಸ್ಟ ಪಕ್ಷವೊಂದೆ. ಮೆಹರಲ್ಲಿ, ಮಸಾಣಿ ಪ್ರಭೃತಿಗಳು ಸೋಶಾಲಿಸ್ಟ ಪಕ್ಷದವರು. ಇವರು ರಾಜ್ಯಸೂತ್ರವನ್ನು ತಮ್ಮ ಕೈಯಲ್ಲಿ ತೆಗೆದುಕೊಳ್ಳಲು ಹೀಗೆ ಪ್ರಯತ್ನಿಸುತ್ತಿದ್ದರೆ ತಾವು ಕಾಂಗ್ರೆಸ್ಸಿನ ವಿಶ್ವಾಸಕ್ಕೆ ಪಾತ್ರರಾಗುವಂತೆ ಕಾರ್ಯ ಮಾಡಲು ಪ್ರಯತ್ನಿಸಬೇಕು."

ಇತ್ತೀಚಿಗೆ ನಮ್ಮ ಅನೇಕ ಭಾಯೀಜಿಯವರು ಕಾಂಗ್ರೆಸ್ ಮಂತ್ರಿಮಂಡಲದ ಮೇಲೆಯೂ ಗಾಂಧೀಜಿಯವರ ರಾಜಕೀಯ ಧೋರಣದ ಮೇಲೆಯೂ ಮಾಡುತ್ತಿರುವ ಸಲ್ಲದ ಟೀಕೆಗಳನ್ನು ನೋಡಿದರೆ ಕಾಂಗ್ರೆಸ್ಸಿನ ಸೂತ್ರ ತಮ್ಮ ಕಡೆ ಬರಲು ಹವಣಿಸುತ್ತಿದ್ದಾರೆಂದೇ ತೋರುತ್ತದೆ. ಇಂಥ ಉದ್ದೇಶವನ್ನಿಟ್ಟುಕೊಂಡು ಕಾಂಗ್ರೆಸ್ಸಿನಲ್ಲಿಯೇ ಕೂಡಿ ಅದರ ವಿರುದ್ಧವಾಗಿಯೇ ಪ್ರಚಾರಕಾರ್ಯ ನಡೆಯಿಸುವುದು ಕ್ಷೇಮಕರವಲ್ಲ. ಮತ್ತು ನ್ಯಾಯವೂ ಅಲ್ಲ. ಆದುದರಿಂದ ಕಾಂಗ್ರೆಸ್ಸಿನವರೂ ಮಹಾ ದೇಶಸೇವಕರೂ ಎಂಬ ಮಾತ್ರದಿಂದಲೇ ಇಂಥವರ ಮಾತಿಗೆ ಒಪ್ಪಿಗೆ ಕೊಡುವುದು ವಿಹಿತವಲ್ಲ.

ಈ ಸಮತಾವಾದಿಗಳಲ್ಲಿ ಅನೇಕರು ಈಗಿನ ಕಾಂಗ್ರೆಸ್ ಮಂತ್ರಿಮಂಡಲಗಳ ಕಾರ್ಯಗಳಲ್ಲಿ ತೊಂದರೆಗಳನ್ನುಂಟುಮಾಡುತ್ತಿದ್ದಾರೆ. ಇವರು ಮಂತ್ರಿಮಂಡಲಗಳ ಮೇಲೆ ಬಿಡುವ ಟೀಕಾಸ್ತ್ರವು ಅಪಾಯಕರವಾದುದು. ಮುಂದೆ ಕಾಂಗ್ರೆಸ್ ಇದೇ ಪಕ್ಷದ ಕೈಸೇರುವ ಪ್ರಸಂಗವೇನೋ ಬಂದೇ ಬರುವುದು. ಆದರೆ ಅದಕ್ಕೂ ಮುಂಚೆ ಈಗಿನ ಕಾಂಗ್ರೆಸ್ ಪಕ್ಷದ ಕೈಯಲ್ಲಿಯೇ ರಾಜ್ಯಸೂತ್ರವಿದ್ದು ಅದರಿಂದ ಶಕ್ಯವಿದ್ದಷ್ಟು ರಾಷ್ಟ್ರಕಾರ್ಯ ಜರುಗಿ ರಾಷ್ಟ್ರವು ಬಲಪಡುವುದೇ ಅಗತ್ಯವಾಗಿದೆ. ಆದಕಾರಣ ಈ ಕ್ರಮವು ಪಕ್ಷದ ಈಗಿನ ವಿರೋಧ ಪದ್ಧತಿಯು ನಿಲ್ಲುವಂತಹ ಕಲಕತ್ತಾ ರಾಷ್ಟ್ರೀಯ ಸಪ್ತಾಹದಲ್ಲಿ ಏರ್ಪಡಲೆಂದು ನಾವು ಹಾರೈಸುತ್ತೇವೆ.

# ಕಾಂಗ್ರೆಸ್ ಮಂತ್ರಿಮಂಡಲಗಳ ಮೇಲೆ ಟೀಕೆ!




## ಕಲಕತ್ತಾ ಅಧಿವೇಶನದಲ್ಲಿ ಮಹತ್ವದ ಚರ್ಚೆ.

ಈ ತಿಂಗಳ ಕೊನೆಯಲ್ಲಿ ಅಖಿಲ ಭಾರತ ಕಾಂಗ್ರೆಸ್ ಕಮಿಟಿಯು ಕಲಕತ್ತಾ ಪಟ್ಟಣದಲ್ಲಿ ಕೂಡುವುದಷ್ಟೆ. ಅಲ್ಲಿ ಅತಿ ಮಹತ್ವದ ಸಂಗತಿಗಳು ಚರ್ಚಿಸಲ್ಪಡುವವು.

### ಕಾಂಗ್ರೆಸ್ ಮಂತ್ರಿಮಂಡಲದ ಮೇಲೆ ಟೀಕೆ.

ಕಾಂಗ್ರೆಸ್ಸಿನ ಸುಪ್ರಸಿದ್ಧ ಮುಂದಾಳುಗಳಾದ ಡಾ. ಪಟ್ಟಾಭಿ ಸೀತಾರಾಮಯ್ಯನವರು ಈ ಕೆಳಗಿನ ಅಭಿಪ್ರಾಯದ ಗೊತ್ತು ವಳಿಯನ್ನು ತರುವವರಿದ್ದಾರೆ—

"ಅನೇಕ ಪ್ರಮುಖ ಮುಂದಾಳುಗಳು ಕಾಂಗ್ರೆಸ್ ಮಂತ್ರಿ ಮಂಡಲದ ಮೇಲೆ ಟೀಕೆ ಮಾಡದೆ ಅದಕ್ಕೆ ಕಾರ್ಯಮಾಡಲು ಅವಕಾಶ ಕೊಡಿರೆಂದು ಹೇಳುತ್ತಿದ್ದಾರೆ. ಆದರೆ ಪ್ರತಿಯೊಬ್ಬ ಕಾಂಗ್ರೆಸ್ ಸಭಾಸದನಿಗೂ ಮಂತ್ರಿಗಳಮೇಲೆ ಟೀಕೆಮಾಡಲು ಅಧಿಕಾರವಿರಬೇಕೆಂದು ಗಾಂಧೀಜಿಯವರು ಸೂಚಿಸಿದ ಈ ಕೆಳಗಿನ ಸೂಚನೆ ಮಾನ್ಯವಾಗಬೇಕು.—

"ಅತ್ಯಂತ ಶ್ರೇಷ್ಠಸ್ಥಾನದಲ್ಲಿರತಕ್ಕ ಕಾಂಗ್ರೆಸ್ ಅಧಿಕಾರಿಗಳ ನಡವಳಿಕೆಯನ್ನು ಕೂಡಾ ಬಹಿರಂಗವಾಗಿ ಟೀಕಿಸಲು ಪ್ರತಿಯೊಬ್ಬ ಕಾಂಗ್ರೆಸ್ ಸಭಾಸದನಿಗೆ ಹಕ್ಕು ಇದೆ. ಇಷ್ಟೇ ಅಲ್ಲ; ಅದು ಅತನ ಕರ್ತವ್ಯವೂ ಆಗಿದೆ. ಆದರೆ ಆ ಟೀಕೆ ಸಭ್ಯತರದ್ದೂ ಸಮಂಜಸವಾದ ಸಂಗತಿಗಳಿಂದ ಕೂಡಿದ್ದೂ ಇರಬೇಕು."

### ಮದ್ರಾಸ ಸರಕಾರದ ನಿಷೇಧ.

ಮದ್ರಾಸ ಪ್ರಾಂತದ ಮಂತ್ರಿಮಂಡಲದ ಕಾರ್ಯ ಪದ್ಧತಿಯನ್ನು ನಿಷೇಧಿಸಲು ಶ್ರೀ. ಕಾಮೇಶ್ವರರಾಯರು ಒಂದು ಸೂಚನೆಯನ್ನು ತರುವವರಿದ್ದಾರೆ.

(೧) ನ್ಯಾಯ ಮತ್ತು ಶಾಸನ ವಿಭಾಗಗಳನ್ನು ಬೇರೆಮಾಡಲು ಒಪ್ಪದಿರುವುದು. (೨) ಭಾಯಿ ಬಾಟಲಿವಾಲಾರವರ ಮೇಲಿನ ವ್ಯಾಜ್ಯಕ್ಕೆ ಒಪ್ಪಿಗೆಕೊಟ್ಟದ್ದು. (೩) ಸಭೆಗಳಿಗೆ 'ಸಿ. ಆಯ್. ಡಿ ರಿಪೋರ್ಟರ' ರರನ್ನು ಕಳಿಸುವುದು. ಈ ಮುಂತಾದವುಗಳ ಸಂಬಂಧವಾಗಿ ಇವರ ಸೂಚನೆಯಿದೆ.

ಸೋಲ್ಲಾಪುರದಲ್ಲಿ ಭಾಯಿ ಶ್ರೀಧರ ಇವರ ಅಧ್ಯಕ್ಷತೆಯಲ್ಲಿ ಸಭೆಕೂಡಿ ಸೋಲ್ಲಾಪುರದಲ್ಲಿ ೧೪೪ ನೆಯ ನಿಯಮವನ್ನು ಉಪಯೋಗಿಸಿದ್ದರಿಂದ ಮುಂಬೈ ಸರಕಾರದ ಮತ್ತು ಭಾಯಿ ಬಾಟಲಿವಾಲಾರವರ ಸಂಬಂಧವಾಗಿ ಮದ್ರಾಸ್ ಸರಕಾರದ ನಿಷೇಧಮಾಡಲಾಯಿತು.

### ಒಕ್ಕಲಿಗರ ವಿಚಾರವಾಗಿ ಸೂಚನೆ.

ಪ್ರೊ. ರಂಗಾ ಇವರು ಒಕ್ಕಲಿಗರ ಹಿತಾರ್ಥವಾಗಿ ಕಾಂಗ್ರೆಸ್ಸಿನ ಎಲ್ಲಾ ಮಂತ್ರಿಮಂಡಲಗಳೂ ಏಕಮುಖವಾದ ಕಾರ್ಯಕ್ರಮವನ್ನು ಇಟ್ಟುಕೊಳ್ಳಬೇಕಾಗಿ ಕಲಕತ್ತಾ ಅಧಿವೇಶನದಲ್ಲಿ ಒಂದು ಸೂಚನೆಯನ್ನು ತರುವವರಿದ್ದಾರೆ.

### ಗಾಂಧೀಜಿಯವರ ಸೂಚನೆ.

"ಕಾಂಗ್ರೆಸ್ಸಿನ ಮಂತ್ರಿಗಳಿಗೆ ರಾಜ್ಯಭಾರದ ಕಾರ್ಯವಹಿಸಲು ತುಂಬಾ ಅವಕಾಶವನ್ನು ಕೊಡಿರಿ. ಸಭೆ, ಸಮ್ಮೇಲನ, ಭಾಷಣ ಮಾನಪತ್ರ, ಮೊದಲಾದವುಗಳಿಗಾಗಿಯೇ ಅವರನ್ನು ಕರೆಯಿಸಿ ಕಾಲಕಳೆಯುವಂತೆ ಮಾಡಬೇಡಿರಿ. ಅವರು ತಮ್ಮ ಮುಂದೆ ಬರುವ ಕಾಗದಗಳಿಗೆ ರುಜುಮಾಡಿದರೆ ತೀರಲಿಲ್ಲ. ರಾಜ್ಯಭಾರದ ಪ್ರತಿಯೊಂದು ವಿಷಯವನ್ನೂ ಚೆನ್ನಾಗಿ ಪರಿಶೀಲಿಸಿ ಕಾರ್ಯ ನಡೆಯಿಸಬೇಕಾಗಿದೆ" ಹೀಗೆಂದು ಜನರಿಗೆ ಗಾಂಧೀಜಿಯವರು ಸೂಚಿಸಿದ್ದಾರೆ.

ಶ್ರೀ. ಸತ್ಯಮೂರ್ತಿಗಳು ತಾ. ೧೦-೧೦-೩೭ ನೆಯ ದಿವಸ ನಾಗಪುರದ ಭಾಷಣದಲ್ಲಿ ಹೀಗೆ ಹೇಳಿದರು—

"ಕಾಂಗ್ರೆಸ್ ಮಂತ್ರಿಮಂಡಲದವರಿಗೆ ತೊಂದರೆಕೊಡಬೇಡಿರಿ. ಅವರ ಕಾರ್ಯಕಲಾಪಗಳಮೇಲೆ ಟೀಕೆ ಮಾಡಬೇಡಿರಿ. ಅವರಿಗೆ ತಮ್ಮ ಕಾರ್ಯಮಾಡಲು ಅವಕಾಶ ಕೊಡಿರಿ. ಕಾಂಗ್ರೆಸ್ ಮಂತ್ರಿಮಂಡಲವು ಯಶಸ್ವಿಯಾದರೇನೇ ಸ್ವರಾಜ್ಯವು ಹತ್ತಿರಬರುತ್ತದೆ. ಅಲ್ಪಸಂಖ್ಯಾಕರ ಪ್ರಶ್ನೆಯು ಸಂಯುಕ್ತ ಮತದಾರ ಪದ್ಧತಿಯಿಂದಲೇ ಬಿಡಿಸಲ್ಪಡುವುದು. ಏಳು ಪ್ರಾಂತಗಳಲ್ಲಿಯೂ ಗವ್ಹರ್ನರರು ಕೈಹಾಕಲು ಬಾರದರೀತಿಯಲ್ಲಿಯೇ ಅಲ್ಲಿನ ಮಂತ್ರಿಮಂಡಲಗಳು ಕಾರ್ಯಮಾಡಬೇಕು."

# ದೀಕ್ಷೆಯೇ ದೇಹ. ಭಕ್ತಿಯೇ ಪ್ರಾಣ.



## ಲೋಕಸೇವೆಗೆ ತನು, ಮನ, ಧನ, ಸವಿಸಿದವರಲ್ಲಿ ಶಿವನಿರುವನು.

ಶ್ರೀ ಪ್ರಭುದೇವರು ಶಿವನನ್ನು ಒಲಿಸುವ ರೀತಿಯ ಕುರಿತು ಶಿವಾನುಭವ ಮಂಟಪದಲ್ಲಿ ಈ ಪ್ರಕಾರ ಒಂದು ದಿನ ಬೋಧಿಸಿದರು:—

"ಘನತರದ ಚಿತ್ರದ ರೂಹ ಬರೆಯಬಹುದಲ್ಲದೆ ಪ್ರಾಣವ ಬರೆಯಬಹುದೆ ಅಯ್ಯಾ? ದಿವ್ಯಾಗಮಂಗಳು ಹೇಳಿದ ಕ್ರಿಯಲು ದೀಕ್ಷೆಯ ಮಾಡಬಹುದಲ್ಲದೆ ಭಕ್ತಿಯಮಾಡಬಹುದೆ ಅಯ್ಯಾ? ಪ್ರಾಣವಹ ಭಕ್ತಿ ತನ್ಮಯ ನೀನು. ಈ ಗುಣವುಳ್ಳಲ್ಲಿ ನೀನಿಹೆ. ಇಲ್ಲದಲ್ಲಿ ನೀನಿಲ್ಲ ಗುಹೇಶ್ವರ."

ಒಬ್ಬ ಮಹಾ ಯೋಗಿಯ ಅಥವಾ ತ್ಯಾಗಿಯ ಚಿತ್ರವನ್ನು ಬಹು ಸೊಗಸಾಗಿ ಚಿತ್ರಿಸಬಹುದು. ಆದರೆ ಆ ವ್ಯಕ್ತಿಯ ಪ್ರಾಣವನ್ನೇನಾದರೂ ಬರೆದು ತೋರಿಸಲಿಕ್ಕೆ ಬರುವುದೆ? ಎಂದರೆ ಕಣ್ಣಿಗೆ ಕಾಣುವ ಜಡವಾದ ದೇಹವನ್ನು ಬರೆಯಬಹುದು. ಆದರೆ ಕಾಣದ ಚೈತನ್ಯವಾದ ಪ್ರಾಣವನ್ನು ಬರೆಯುವುದು ಹೇಗೆ? ಅದು ಕೇವಲ ಅನುಭವದಿಂದ ಗ್ರಹಿಸಲ್ಪಡತಕ್ಕದ್ದಾಗಿದೆ.

ದೇಹದ ಆಯಾಯ ಅವಯವಗಳಿಂದಾಗುತ್ತಿರುವ ಕಾರ್ಯಗಳೆಲ್ಲಾ ತೃಪ್ತಿಕರವಾಗಿ ನಡೆಯುತ್ತಿದ್ದರೇನೇ ಅವು ಇದ್ದುದಕ್ಕೆ ಪ್ರಯೋಜನ. ಹಾಗೆ ಅವು ಕಾರ್ಯತತ್ಪರವಾಗಿದ್ದರೇನೇ ಪ್ರಾಣದಿಂದ ಅವು ಕೂಡಿದವುಗಳೆಂದು ತಿಳಿಯಬೇಕು. ಇಲ್ಲದಿದ್ದರೆ ಆ ದೇಹವು ನಿರರ್ಥಕವಾದುದಾಗುವುದಿಲ್ಲವೆ?

ಲಿಂಗಾಯತ ದೀಕ್ಷೆಯನ್ನು ಆಗಮಾದಿ ಗ್ರಂಥಗಳಲ್ಲಿ ಹೇಳಿದಂತೆ ಮಾಡುವುದಾಗಲಿ ಅಥವಾ ಹೊಂದುವುದಾಗಲಿ ಸುಲಭ. ಅದು ದೇಹದ ಚಿತ್ರವನ್ನು ಬರೆದಂತೆ. ಆ ದೇಹದಲ್ಲಿ ಪ್ರಾಣವಿದ್ದರೇನೇ ಅದಕ್ಕೆ ಭೂಷಣವಲ್ಲವೆ? ಅಂತಹ ಪ್ರಾಣವು ಲಿಂಗಾಯತ ದೀಕ್ಷೆಯೆಂಬ ದೇಹಕ್ಕೆ ಯಾವುದು? ಶಿವಸಮಾಜದ ಕಲ್ಯಾಣಕ್ಕಾಗಿ ತನ್ನ ತನು ಮನ ಧನಗಳನ್ನು ಸವಿಸುವ ಭಕ್ತಿಯೇ ಪ್ರಾಣವು. ಅಂತಹ ಭಕ್ತಿಯೊಂದಿರದೆ ಲಿಂಗಾಯತ ದೀಕ್ಷೆಯೊಂದೇ ಇದ್ದರೆ ಪ್ರಾಣವಿಲ್ಲದ ದೇಹದಂತೆಯೇ ಸರಿ.

ಅದಕ್ಕಾಗಿಯೇ ಬಸವಣ್ಣನು ಆಗಾಗ್ಗೆ ಹೇಳುತ್ತಿರುವುದೇನು? "ಹಲವು ರುದ್ರಾಕ್ಷಿ ಮಣಿಗಳನ್ನು ಕಟ್ಟಿ ಕುಣಿ ಕುಣಿದಾಡಿ ಹಲವು ಪರಿಯಲ್ಲಿ ವಿಭೂತಿಯನ್ನು ಧರಿಸಿ ಗಣಾಡಂಬರದ ನಡುವೆ ನಲಿ ನಲಿದಾಡಿ, ಉಂಡು ತಾಂಬೂಲಗೊಂಡು ಹೋಹುದಲ್ಲ." ಇಷ್ಟೇಮಾಡಿದರೆ ಲಿಂಗಾಯತ ದೀಕ್ಷೆಯಾದುದರಿಂದ ಏನು ಫಲ? ತನು ಮನ ಧನ ಶಿವಸಮಾಜ ಸೇವೆಗೆ ಸಮರ್ಪಿಸಬೇಕು. ಹಾಗೆ ಮಾಡಿದರೇನೇ ಶಿವನು ಮೆಚ್ಚುತ್ತಾನೆ.

ಹೀಗೆ ಲೋಕ ಸೇವೆಗೆ ತನು ಮನ ಧನಗಳನ್ನು ಸವಿಸುವ ಭಕ್ತಿಯೇ ನಿಜವಾದ ಭಕ್ತಿ. ಅದಿದ್ದರೆ ವೀರಶೈವ ದೀಕ್ಷೆಯೆಂಬ ದೇಹದಲ್ಲಿ ಪ್ರಾಣವಿದ್ದಂತಾಯಿತು. ಇಂತಹ ಭಕ್ತಿಯೆಂಬ ಪ್ರಾಣದಿಂದಲೇ ಶಿವನು ಕೂಡಿದ್ದಾನೆ. ಈ ತನು ಮನ ಧನ ಸವಿಸುವ ಸೇವೆಯು ಯಾವ ಮಹಾನುಭಾವನಲ್ಲಿದೆಯೋ ಅಲ್ಲಿಯೇ ಶಿವನಿದ್ದಾನೆ. ಆತನ ಕಾಯವೇ ಕೈಲಾಸ. ಇಂಥ ಭಕ್ತಿಯಿಲ್ಲದವರು ಎಂಥ ದೀಕ್ಷೆಹೊಂದಿದ್ದರೂ ಪ್ರಾಣವಿಲ್ಲದ ದೇಹದಂತೆಯೇ ಅವರ ದೀಕ್ಷೆ.

ತನು ಮನ ಧನಗಳನ್ನು ಸಮಾಜ ಸೇವೆಗೆ ಸವಿಸುವುದು ಕಷ್ಟ. ಅದನ್ನು ಮಾಡಿದಾಗಲೇ ಬಸವಣ್ಣನು ತಿಳಿಸಿದ ಭಕ್ತಿಯನ್ನು ಆಚರಿಸಿದಂತಾಯಿತು. ಅಂಥ ಭಕ್ತಿಯನ್ನು ಮಾತ್ರ ಮಾಡದೆ ಆಗಮಗಳಲ್ಲಿ ಹೇಳಿದ ಮಂತ್ರ ತಂತ್ರಗಳಿಂದ ಆಡಂಬರವಾಗಿ ದೀಕ್ಷೆಹೊಂದಿ ನಾವು ದೀಕ್ಷಿತರೆಂದು ಎಷ್ಟು ಹೇಳಿಕೊಂಡರೂ ಶಿವನೇನೂ ಅವರಿಗೆ ಮೆಚ್ಚುವುದಿಲ್ಲ. ಲೋಕ ಸೇವೆಗೆ ತನು ಮನ ಧನಗಳನ್ನು ಹೆಚ್ಚು ಹೆಚ್ಚಾಗಿ ಸವಿಸಿದಂತೆ ಶಿವನು ಹತ್ತಿರವಾಗುತ್ತಾನೆ. ಕೊನೆಗೆ ಲೋಕಸೇವೆಯಲ್ಲಿಯೇ ಅವುಗಳನ್ನು ಸಂಪೂರ್ಣವಾಗಿ ಸಮರ್ಪಿಸಿಬಿಡುವ ಮಹಾನುಭಾವನೇ ಶಿವನಾಗುತ್ತಾನೆ. ಇದೇ ಬಸವಣ್ಣನು ತೋರಿಸಿದ ಭಕ್ತಿಯ ಮಾರ್ಗ; ಸಾಯದೆ ಹೊಂದುವ ಮುಕ್ತಿಯ ಮಾರ್ಗ; ಸಂಸಾರದಲ್ಲಿ ಶಿಲ್ಕಿದ್ದು ಮತ್ತು ಸಂಸಾರವನ್ನು ಬಿಡದೆ ನಡೆಯುವ ಯುಕ್ತಿಯ ಮಾರ್ಗ.

## ಹರಿಪುರ ಕಾಂಗ್ರೆಸ್.

ಗುಜರಾತದ ಹರಿಪುರದಲ್ಲಿ ಕೂಡುವ ರಾಷ್ಟ್ರೀಯ ಸಭೆಯು ಈ ಸಾರೆ ಅಪೂರ್ವವಾದುದು. ಬರುವ ಫೆಬ್ರವರಿ ೧೮-೧೯-೨೦ ಈ ಮೂರು ತಾರೀಖುಗಳಲ್ಲಿ ಕೂಡುವುದು. ಇದರ ವ್ಯವಸ್ಥೆಗಾಗಿ ಈಗಲೇ ಅನೇಕ ಪ್ರಮುಖರು ಅವಿಶ್ರಾಂತಶ್ರಮಪಡುತ್ತಿದ್ದಾರೆ. ಮೊನ್ನೆ ವಿಜಯ ದಶಮಿಯ ದಿವಸ ಕಾಂಗ್ರೆಸ್ ನಗರವನ್ನು ಕಟ್ಟಲು ಅಡಿಗಲ್ಲನ್ನಿಡುವ ಪವಿತ್ರ ಕಾರ್ಯವು ಸರದಾರ ವಲ್ಲಭಭಾಯಿಯವರ ಹಸ್ತದಿಂದ ಜರುಗಿತು.

ಬಾರ್ಡೋಲಿಯಿಂದ ಹರಿಪುರದ ವರೆಗೆ ಸುವ್ಯವಸ್ಥಿತವಾದ ಮಾರ್ಗ ಏರ್ಪಡುತ್ತಾ ಇದೆ. ನೂರಾರು ಕೆಲಸಗಾರರು ಈ ಉದ್ಯೋಗದಲ್ಲಿದ್ದಾರೆ. ಈ ಸಾರೆಯ ಕಾಂಗ್ರೆಸ್ಸಿಗೆ ನಾಲ್ಕು ಸಾವಿರ ಜನ ಸ್ವಯಂ ಸೇವಕರನ್ನು ನಿಯಮಿಸಿಕೊಳ್ಳಲಾಗುವುದು. ಕಾಂಗ್ರೆಸ್ಸಿನ ಚರಿತ್ರೆಯಲ್ಲಿಯೇ ಇದು ಅಪೂರ್ವವಾದುದು. ಕಾಂಗ್ರೆಸ್ ನಗರವು ಎರಡು ಮೈಲು ಉದ್ದ ಒಂದು ಮೈಲು ಅಗಲ ಇಷ್ಟು ವಿಸ್ತಾರವಾದದ್ದಾಗುವುದು.

ಗ್ರಾಮೋದ್ಯೋಗಗಳ ಅದ್ಭುತವಾದ ಪ್ರದರ್ಶನವು ಏರ್ಪಡುವುದಿದೆ. ಅದಕ್ಕಾಗಿ ಪ್ರತ್ಯೇಕ ಮಂಟಪವನ್ನು ರಚಿಸುತ್ತಿದ್ದಾರೆ. ಗೋವು, ಎತ್ತು, ಹೋರಿಗಳ ಪ್ರತ್ಯೇಕ ಪ್ರದರ್ಶನವು ಏರ್ಪಡುವದಿದೆ.

ಈ ಸಾರೆಯ ಕಾಂಗ್ರೆಸ್ಸಿಗೆ ಸಾಧಾರಣ ೮೦ ಜನ ಮಂತ್ರಿಗಳು ಬರುವರು. ಕಾಂಗ್ರೆಸ್ಸಿನ ಕಾಲಕ್ಕೆ ಏಳು ಪ್ರಾಂತಗಳ ಅಸೆಂಬ್ಲಿ ಕಾರ್ಯಗಳು ನಿಲ್ಲಿಸಲ್ಪಡುವವು.



## ಗಾಂಧೀಜಿಯವರೂ ಜಾತಿನಿಷ್ಠರು!

ಮಹಾತ್ಮಾ ಗಾಂಧಿಯವರು ಹಿಂದು ಜಾತಿನಿಷ್ಠರೆಂದೇ ಅನೇಕ ಮುಸಲ್ಮಾನರು ಅವರನ್ನು ಆಕ್ಷೇಪಿಸುತ್ತಿದ್ದಾರೆ. "ಮದಿನಾ" ಎಂಬ ಮುಸಲ್ಮಾನ ಪತ್ರಿಕಾ ಕರ್ತರು "ಗಾಂಧೀಜಿ ಮತ್ತು ಮುಸಲ್ಮಾನರು" ಎಂಬ ಶಿರೋಲೇಖನದಲ್ಲಿ ಹೀಗೆ ತಿಳಿಸಿದ್ದಾರೆ—

"ಗಾಂಧೀಜಿಯವರು ತಮ್ಮ ಭಾಷೆಯಲ್ಲಿ ಹಿಂದಿ ಶಬ್ದಗಳನ್ನು ಹೆಚ್ಚಾಗಿ ಉಪಯೋಗಿಸುತ್ತಿರುವುದೇ ಅವರ ಜಾತಿನಿಷ್ಠೆಯ ಗುರುತು. ರಾಜಕಾರಣದಲ್ಲಿ ಪ್ರಯೋಗಿಸುವ ಶಬ್ದಗಳನ್ನು ಕೂಡಾ ಅವರು ಹೀಗೆಯೇ ಉಂಟು ಮಾಡುತ್ತಿದ್ದಾರೆ. ಸತ್ಯಾಗ್ರಹ, ಸ್ವರಾಜ್ಯ, ಹರಿಜನ, ಎಂಬ ಶಬ್ದಗಳೆಲ್ಲಾ ಅವರಲ್ಲಿಯ ಜಾತಿನಿಷ್ಠೆಯನ್ನು ತೋರಿಸುತ್ತವೆ. ಸತ್ಯಾಗ್ರಹ ಶಬ್ದಕ್ಕೆ ಪ್ರತಿಯಾಗಿ "ಮಕಾತ ಅಜೋಈ" ಎಂದೂ 'ಹರಿಜನ" ಎಂಬ ಶಬ್ದಕ್ಕೆ ಪ್ರತಿಯಾಗಿ "ಬಂದಾನೆ ಖುದಾ" ಎಂದೂ ಏಕೆ ಹೇಳಬಾರದಾಗಿತ್ತು?"

ಅನ್ಯರು ಜಾತಿನಿಷ್ಠರೆಂದು ಹೇಳುವುದಕ್ಕಾಗಿ ಯಾರಾರು ಎಂತೆಂತಹ ಶೋಧಗಳನ್ನು ಮಾಡುತ್ತಿದ್ದಾರೆಂಬುದಕ್ಕೆ ಇದೊಂದು ದೃಷ್ಟಾಂತ.

## ಧವಳಗಿ.

ಇಲ್ಲಿಯ ಶ್ರೀಮದ್ಘನಲಿಂಗ ಚಕ್ರವರ್ತಿಗಳಾದ ಶಾಂತವೀರ ಸ್ವಾಮಿಗಳವರು ತಾ. ೮-೧೦-೩೭ ನೆ ಶುಕ್ರವಾರ ದಿವಸ ರಾತ್ರಿ ೮ ಘಂಟೆ ಸುಮಾರಕ್ಕೆ ಲಿಂಗೈಕ್ಯರಾದರು. ಅವರ ಎಲ್ಲ ಉತ್ತರ ಕ್ರಿಯಾದಿಗಳು ಶ್ರೀಮತ್ ಘನಲಿಂಗ ಚಕ್ರವರ್ತಿ ಚನ್ನಬಸವ ಸ್ವಾಮಿ ಪಟ್ಟದದೇವರು ಕುಂಟೋಜಿ ಇವರಿಂದ ಯಥಾವತ್ತಾಗಿ ನೆರವೇರಿಸಲ್ಪಟ್ಟವು. ಅಂತ್ಯ ಕಾಲಕ್ಕೆ ಭಕ್ತ ವೃಂದವು ವಿಶೇಷವಾಗಿ ಕೂಡಿತ್ತು.

ಶ್ರೀ ಶಾಂತವೀರ ಸ್ವಾಮಿಗಳವರು ತಮ್ಮ ಅಂತ್ಯಕಾಲದಲ್ಲಿ ಈ ಊರ ಯಾವತ್ತು ಪ್ರಮುಖ ಸದ್ಭಕ್ತ ಜನರನ್ನು ಕರಿಸಿ ಗುರುಬಸವ ಸ್ವಾಮಿ ಎಂಬ ಐದು ವರುಷದ ಬಾಲಕನಿಗೆ ತಮ್ಮ ಮಠದ ಸೂತ್ರಗಳನ್ನೆಲ್ಲಾ ಒಪ್ಪಿಸಿ ಆತನು ಪ್ರಬುದ್ಧನಾಗುವ ವರೆಗೆ ನೀವೆಲ್ಲರೂ ನಿಮ್ಮ ಮಕ್ಕಳಂತೆ ಸಂರಕ್ಷಣೆಮಾಡಿ ವಿದ್ಯಾ ಬುದ್ಧಿಗಳನ್ನು ಕಲಿಸಿ ಧರ್ಮ ತತ್ವಗಳನ್ನರುಹಿ ಪ್ರಬುದ್ಧನಾದನಂತರ ನನ್ನ ಸರ್ವ ಆಸ್ತಿಯನ್ನು ಒಪ್ಪಿಸಿ ಪೂರ್ವ ಸಾಂಪ್ರದಾಯದಂತೆ ಪಟ್ಟಾಧಿಕಾರಿಯನ್ನಾಗಿ ಮಾಡಬೇಕೆಂದು ನಮ್ಮೆಲ್ಲ ಸದ್ಭಕ್ತ ಮಂಡಳಿಗೆ ನಿರೂಪಿಸಿದರು.

ಅದಕ್ಕೆ ಯಾವತ್ತು ಸದ್ಭಕ್ತರು ನಿಮ್ಮ ನಿರೂಪವನ್ನು ತ್ರಿಕರಣಪೂರ್ವಕವಾಗಿ ನಡಿಸುವೆನೆಂತಲೂ ಈ ಎಲ್ಲ ಕಾರ್ಯಕ್ಕೆ ಶಿವಾನುಕೂಲವು ಇರಲೆಂತಲೂ ವಿಜ್ಞಾಪಿಸಿಕೊಂಡರು.

ಹರಪ್ಪ ಸಂಗಪ್ಪ ಪಾಟೀಲ.

## ರಾ| ಬಾ| ಅಂಗಡಿಯವರು.

ರಾ| ಬಾ| ಅಂಗಡಿಯವರು ಬ್ರಾಹ್ಮಣೇತರ ಪಕ್ಷದ ಒಬ್ಬ ಪ್ರಮುಖರಾಗಿದ್ದರಷ್ಟೆ. ಇವರು ಮೊನ್ನೆ ಸಂಪಗಾವಿನ ಸಭೆಗೆ ಬಂದಿದ್ದರು. ತಾವು ಬರುವ ಜನವರಿಯಿಂದ ಕಾಂಗ್ರೆಸ್ಸಿನಲ್ಲಿ ಕೂಡುವೆವೆಂದೂ ಕಾಂಗ್ರೆಸ್ಸಿನ ವಿರುದ್ಧ ಕಾರ್ಯಮಾಡಿದವರೆಲ್ಲಾ ಸ್ವಾರ್ಥಿಗಳೇ ಇದ್ದಾರೆಂದೂ ಅವರಲ್ಲಿ ನಾನೂ ಒಬ್ಬನಾಗಿದ್ದೆನೆಂದೂ ಹೇಳಿದರು!

# ಶ್ರೀ. ಶ್ರದ್ಧಾನಂದ. ಅನಾಥ ಮಹಿಳಾಶ್ರಮ.

ಹಿಂದು ಜನಾಂಗದ ಶೋಚನೀಯ ಸ್ಥಿತಿಯು ಈ ಸಮಾಜದಲ್ಲಿರುವ ಕೋಟಿಗಟ್ಟಲೆ ಆದಿಹಿಂದುಗಳ ಮತ್ತು ಹೆಣ್ಣುಮಕ್ಕಳ ದುರವಸ್ಥೆಗಳ ಮೇಲಿಂದ ಚೆನ್ನಾಗಿ ಗೊತ್ತಾಗುತ್ತದೆ. ಹಿಂದು ಹೆಣ್ಣುಮಕ್ಕಳಿಗಾಗುತ್ತಿರುವ ಅನೇಕ ವಿಪತ್ತುಗಳನ್ನು ನೋಡಿದರೆ ಈ ಸಮಾಜದಲ್ಲಿರುವ ನಾನಾ ದುಷ್ಟ ಪದ್ಧತಿ ಮತ್ತು ಸ್ವಜನರ ಉನ್ನತಿಯ ವಿಷಯದಲ್ಲಿರುವ ಉಪೇಕ್ಷೆಗಳಿಂದ ಸ್ವಾಭಿಮಾನಿಯು ತಲೆ ತಗ್ಗಿಸಬೇಕಾಗುವುದು. ಮುಂಬೈಯಲ್ಲಿರುವ ಶ್ರೀ. ಶ್ರದ್ಧಾನಂದ ಅನಾಥ ಮಹಿಳಾಶ್ರಮವು ಹಿಂದು ಸಮಾಜದ ಶೋಚನೀಯ ಸ್ಥಿತಿಯನ್ನು ತೋರಿಸುವ ಒಂದು ಕನ್ನಡಿಯಾಗಿದೆ.

೧೯೨೫ ನೆಯ ಇಸವಿಯಲ್ಲಿ ಹಿಂದು ಮಹಾ ಸಭೆಯ ಅಧಿವೇಶನವು ಮುಂಬೈಯಲ್ಲಿ ಕೀರ್ತಿಶೇಷ ಲಾಲಾ ಲಜಪತರಾಯರ ಅಧ್ಯಕ್ಷತೆಯಲ್ಲಿ ಜರುಗಿತು. ಆ ಕಾಲದಲ್ಲಿ ಹಿಂದು ಸ್ತ್ರೀಯರ ದುರವಸ್ಥೆಯ ನಿವಾರಣೆಗೆ ಮುಂಬೈಯಲ್ಲಿ ಒಂದು ಅನಾಥಾಲಯವನ್ನು ಸ್ಥಾಪಿಸಬೇಕೆಂದು ಗೊತ್ತುಮಾಡಿದರು. ಆದರೆ ಅದು ಕಾರ್ಯರೂಪದಲ್ಲಿ ಬರಲಿಲ್ಲ ಮುಂದೆ ೧೯೨೧ ರಲ್ಲಿ ಮೋಪಳಾ ದಂಗೆಯಾಗಲು ಹಿಂದುಗಳು ಕಣ್ಣು ತೆರೆದರು. ಧರ್ಮವೀರ ಶ್ರದ್ಧಾನಂದಜಿಯವರು ಆಗ ಮುಂಬೈಗೆ ಬಂದಾಗ ಹಿಂದು ಅನಾಥಾಲಯವನ್ನು ಸ್ಥಾಪಿಸಬೇಕೆಂಬ ಅವರ ಉಪದೇಶವು ಎಷ್ಟೋ ಪರಿಣಾಮಕಾರಿಯಾಯಿತು. ಅನಂತರ ಸ್ವಲ್ಪ ದಿನಗಳಲ್ಲಿಯೇ ಸ್ವಾಮಿಗಳ ಕೊಲೆಯಾಗಲು ಮುಂಬೈಯಿಯ ಶೇಟ ನಾರಾಯಣಲಾಲ ಮೊದಲಾದ ಮುಖಂಡರು ಮುಂದಾಳುಗಳಾಗಿ ಶ್ರೀ. ಶ್ರದ್ಧಾನಂದರ ಹೆಸರಿನಿಂದ ಈ ಆಶ್ರಮವನ್ನು ೧೯೨೭ ನೆಯ ಮಾರ್ಚ ತಿಂಗಳಲ್ಲಿ ಏರ್ಪಡಿಸಿದರು. ಶೇಟ ರಾಮೇಶ್ವರದಾಸ ಬಿರ್ಲಾ, ಬ್ಯಾ. ಜಯಕರ ಈ ಮಹಾಶಯರು ಇದಕ್ಕೆ ತುಂಬಾ ನೆರವಾದರು. ಅನಾಥಾಲಯವು ಸ್ಥಾಪನೆಯಾದೊಡನೆ ಅನಾಥ ಮಹಿಳೆಯರೂ ಬಾಲಕರೂ ಬರಲಾರಂಭಿಸಿದರು. ಮೊದಲನೆಯ ವರುಷ ೨೯ ಹೆಣ್ಣುಮಕ್ಕಳು ೨೧ ಹುಡುಗರು ಇದ್ದರು. ಈ ಸಂಖ್ಯೆಯು ದಿನೆ ದಿನೆ ಹೆಚ್ಚುತ್ತಾ ಬಂದಿತು. ಈ ಸಂಸ್ಥೆಗೆ ಒಂದು ಸ್ವತಂತ್ರ ಕಟ್ಟಡವೇ ಬೇಕಾಯಿತು. ೧೯೩೫ ರಲ್ಲಿ ಮುಂಬೈ ಗವ್ಹರ್ನರರ ಪತ್ನಿಯವರ ಹಸ್ತದಿಂದ ಕಟ್ಟಡದ ಅಡಿಗಲ್ಲನ್ನಿಡಿಸುವ ಸಮಾರಂಭ ಜರುಗಿತು. ಈಗ ಈ ಕಟ್ಟಡವು ಸಿದ್ಧವಾಗಿದೆ. ಇದಕ್ಕೆ ೮೦ ಸಾವಿರ ರೂ. ಗಳು ವೆಚ್ಚವಾದವು. ಇದರಲ್ಲಿ ೧೯೩೫ ನೆಯ ವರುಷದ ಅಂತ್ಯಕ್ಕೆ ೧೩೫ ಅನಾಥ ಮಹಿಳೆಯರು ೮೭ ಹುಡುಗರು ಇದ್ದರು.

### ಕಳೆದ ಎಂಟು ವರುಷಗಳು.

ಈ ಅನಾಥಾಲಯದಲ್ಲಿ ಕಳೆದ ಎಂಟುವರುಷ ಸಹಾಯ ಹೊಂದಿದ ಹಿಂದು ಅನಾಥರ ಈ ಕೆಳಗಿನ ವಿವರವನ್ನು ನೋಡಿದರೆ ಹಿಂದು ಸಮಾಜದಲ್ಲಿರುವ ಅಸಂಖ್ಯ ಅನಾಥ ಮಹಿಳೆಯರ ಮತ್ತು ಬಾಲಕರ ಭೀಕರ ಸ್ಥಿತಿಯ ಕಲ್ಪನೆಯು ಬಾರದೆ ಇರಲಾರದು.

ಪತಿತರು ೩೩೭. ಅನಾಥರು ೧೩೭. ಸಂಕಟಗಳಿಂದಪಾರಾಗಿಬಂದವರು ೧೫೭. ಗಂಡನು ಬಿಟ್ಟವರು ೯೨. ಗಂಡನನ್ನೇ ಬಿಟ್ಟವರು ೧೪೧. ಮ್ಯಾಜಿಸ್ಟ್ರೇಟ ಮತ್ತು ಪೋಲಿಸರಿಂದ ಕೊಡಲ್ಪಟ್ಟವರು ೧೧೮. ಹೆರಿಗೆಗಾಗಿಬಂದವರು ೨೦೭. ಇವರಲ್ಲಿ ೧೧೮ ಜನರು ವಿಧವೆಯರು. ೫೪ ಅವಿವಾಹಿತರು. ೩೫ ವಿವಾಹಿತ ಪತಿತರು.

ಈ ಆಶ್ರಮಕ್ಕೆ ಹೆಣ್ಣುಮಕ್ಕಳು ಬರಲು ಅನೇಕಕಾರಣಗಳಿವೆ. ಹಿಂದು ಸಮಾಜದಲ್ಲಿರುವ ಅನೇಕ ಮೂಢ ಕಲ್ಪನೆ, ವಿಧವಾವಿವಾಹ ಪ್ರತಿಬಂಧ, ಬಾಲ್ಯ ವಿವಾಹ, ಇವುಗಳಲ್ಲದೆ ಮುಖ್ಯವಾಗಿ ಮನೆಯಲ್ಲಿ ಅತ್ತೆ ಮೊದಲಾದವರಿಂದಾಗುವ ಹಿಂಸೆ. ಪ್ರತಿಯೊಂದು ಜಿಲ್ಲಾ ಸ್ಥಳದಲ್ಲಾದರೂ ಹಿಂದು ಅನಾಥಾಲಯವು ಈಗ ಸ್ಥಾಪನೆಯಾಗುವುದು ಅತ್ಯಗತ್ಯವಾಗಿದೆ. ದಾನವೀರರು ಮತ್ತು ಧರ್ಮಾಭಿಮಾನಿಗಳು ಇತ್ತ ಲಕ್ಷಿಸುವರೇ ?

---

## ಚಿಂಚೋಳಿ.

ಜಿಲ್ಹಾ ಕಲ್ಲಬುರಗಿ ಪೈಕಿ ತಾಲೂಕು ಚಿಂಚೋಳಿಯಲ್ಲಿ ವರ್ಷಪರಂಪರೆಯಂತೆ ಈ ವರ್ಷ ವಿನಾಯಕನ ಉತ್ಸವವು ನಿರ್ವಿಘ್ನವಾಗಿ ಭಜನೆ, ಕೀರ್ತನೆ, ಮತ್ತು ಪೂಜಾ ಮುಂತಾದವುಗಳಿಂದ ನೆರವೇರಿಸಲ್ಪಟ್ಟಿತು.

ಭಾ|| ಶು|| ೧೨ ನೇ ದಿನ ಶ್ರೀಯುತ ಶೇಷಗಿರಿರಾವ ಡಾಕ್ಟರ ಇವರ ಧ್ಯಕ್ಷತೆಯಲ್ಲಿ ಶ್ರೀ ಪಂಡಿತ ಗೋಸಲರಾವ ವಕೀಲರು ಬಸವೇಶ್ವರ ಜೀವನಚರಿತ್ರೆಯ ಸಂಬಂಧವಾಗಿ ಭಾಷಣಮಾಡಿ ತಮ್ಮ ಅಮೋಘವಾಣಿಯಿಂದ ಜನರ ಮನಸ್ಸನ್ನು ತಣಿಸಿ ಆಲ್ಹಾದವನ್ನುಂಟು ಮಾಡಿದರು. ಭಾ|| ಶು||೧೩ ನೇ ದಿನ ಮೇಲ್ಕಂಡ ಅಧ್ಯಕ್ಷ ಮತ್ತು ವ್ಯಾಖ್ಯಾತಮಹನೀಯರು ಸರ್ವಜ್ಞಸಂದೇಶವೆಂಬ ವಿಷಯದ ಮೇಲೆ ಒಳ್ಳೇ ಪರಿಣಾಮಕಾರಕ ಭಾಷಣಮಾಡಿ ಸರ್ವಜ್ಞರಲ್ಲಿದ್ದ ಬೆಳಕು ನಮ್ಮ ಬಾಳುವೆಯಲ್ಲಿ ಬೆಳಗಬೇಕೆಂತಲೂ ಮತ್ತು ಅವರ ಉಪದೇಶದವಾಕ್ಯಗಳು ಮನೆ ಮನೆ ತಪ್ಪದಂತೆ ಆಚರಿಸಬೇಕೆಂದು ಹೇಳಿ ಕನ್ನಡದ ಪುನರ್ಜೀವನದ ಕಳೆಯನ್ನುಂಟು ಮಾಡಿದರು.

ಭಾ|| ಶು|| ೧೪ ನೇ ದಿನ ಸಾಯಂಕಾಲ ಗಜಾನನ ಮೆರವಣಿಗೆಯು ಮಲ್ಲಿಕಾರ್ಜುನ ದೇವಾಲಯದಿಂದ ತರತರಹದ ವಾದ್ಯಗಳಿಂದಲೂ ಭಜನಾಮೇಳದಿಂದಲೂ ಗ್ರಾಮಪ್ರದಕ್ಷಣೆಮಾಡುತ್ತ ಹಂಪಯ್ಯನ ಮಠದಲ್ಲಿ ವಿಸರ್ಜಿಸಲ್ಪಟ್ಟಿತು. ಈ ಭಜನೆಯಲ್ಲಿ ಶ್ರೀ ಶರಣಕವಿ ಕೃತ ಪದ್ಯಗಳೇ ಮುಖ್ಯವಾಗಿದ್ದು ಜನರಲ್ಲಿ ನವಸ್ಫೂರ್ತಿಯನ್ನು ಹುಟ್ಟಿಸುತ್ತಿದ್ದವು.

ಕಾರ್ಯದರ್ಶಿ.

---

## ರಾಷ್ಟ್ರದ ಕಣ್ಮರೆಯಾಗುವ ರಾಷ್ಟ್ರಗೀತೆ!

### ರಾಷ್ಟ್ರಭಕ್ತರ ಅಭಿಪ್ರಾಯಗಳು.

"ವಂದೇಮಾತರಂ" ರಾಷ್ಟ್ರಗೀತೆಯು ಮುಸಲ್ಮಾನರಿಗೆ ಧಾರ್ಮಿಕ ಯುದ್ಧದ ಆಹ್ವಾನಗೀತೆಯಾಗಿದೆಯೆಂದು ಈಗ ಕೆಲವು ಮುಸಲ್ಮಾನರು ಹೇಳುತ್ತಾ ಇದು ರಾಷ್ಟ್ರಗೀತೆಯಲ್ಲವೆಂದು ನಿಷೇಧಿಸುತ್ತಲೂ ಇದ್ದಾರಷ್ಟೆ. ರಾಷ್ಟ್ರೀಯ ಸಭಾಧ್ಯಕ್ಷರಾದ ಪಂಡಿತ ಜವಾಹರಲಾಲ ನೆಹರುರವರು ಇನ್ನೊಂದು ರಾಷ್ಟ್ರಗೀತೆ ಸಿದ್ಧವಾಗುವವರೆಗೆ ಇದನ್ನು ಹೇಳಲಿಕ್ಕೆ ಅಡ್ಡಿಯಿಲ್ಲವೆಂದು ತಿಳಿಸಿರುವುದರಿಂದಲು ಮತ್ತು ಮದ್ರಾಸ್ ಅಸೆಂಬ್ಲಿಯ ಅಧ್ಯಕ್ಷರು ಎಲ್ಲ ಮತ ಧರ್ಮದವರಿಗೆ ಒಪ್ಪಿಗೆಯಾಗುವಂತಹ ಒಂದು ಗೀತೆಯನ್ನು ಏರ್ಪಡಿಸುವ ಯೋಚನೆಯಲ್ಲಿರುವೆವೆಂದು ಹೇಳಿದುದರಿಂದಲು "ವಂದೇಮಾತರಂ" ಗೀತೆಗೆ ಈಗಿರುವಷ್ಟು ಘನತೆಯು ಇನ್ನು ಸ್ವಲ್ಪ ದಿನಗಳಲ್ಲಿಯೇ ಇಲ್ಲದಾಗಬಹುದೆಂದು ಊಹಿಸಿದರೆ ಅದೇನೂ ತಪ್ಪಾಗಲಾರದಷ್ಟೆ. ಆದುದರಿಂದ ಇದರ ಪೂರ್ವೇತಿಹಾಸವನ್ನು ಇಲ್ಲಿ ಸಂಕ್ಷಿಪ್ತವಾಗಿ ಕೊಟ್ಟಿದೆ.

**ಸರ್ ಸುರೇಂದ್ರನಾಥ ಬಾನರ್ಜಿಯವರು**— ಇವರು "ಎ ನೇಶನ್ ಇನ್ ಮೇಕಿಂಗ್" ಎಂಬ ತಮ್ಮ ಗ್ರಂಥದಲ್ಲಿ ಈ ಗೀತೆಯ ಸಂಬಂಧವಾಗಿ ಹೀಗೆ ಬರೆದಿದ್ದಾರೆ.

"ಶ್ರೀ. ಬಂಕಿಮ ಚಂದ್ರ ಚತರ್ಜಿ ಇವರು "ಆನಂದಮಠ" ಎಂಬ ತಮ್ಮ ಸುಪ್ರಸಿದ್ಧ ಕಾದಂಬರಿಯಲ್ಲಿ ಈ ಗೀತೆಯನ್ನು ರಚಿಸಿದ್ದಾರೆ. ಈ ಗೀತೆಯು ಬಂಗಾಲಿ ಭಾಷೆಯಲ್ಲಿದ್ದರೂ ಸಂಸ್ಕೃತ ಶಬ್ದಗಳೇ ಹೆಚ್ಚಾಗಿರುವುದರಿಂದ ಹಿಂದುಸ್ಥಾನದ ಎಲ್ಲ ಭಾಗಗಳ ಸುಶಿಕ್ಷಿತರಿಗೂ ಇದರ ಅರ್ಥವಾಗುತ್ತದೆ. ಈ ಗೀತೆಯ ಮೊದಲನೆಯ ಪಂಕ್ತಿಯು ಮಾತೃಭೂಮಿಯಲ್ಲಿಟ್ಟ ಭಕ್ತಿಯನ್ನು ಪ್ರದರ್ಶಿಸುತ್ತದೆ. ಇದು ದೇಶಾಭಿಮಾನಯುಕ್ತವಾದುದು.

ಶ್ರೀ. ಚತರ್ಜಿಯವರು ಇದನ್ನು ರಚಿಸುವಾಗ ಇದು ಈ ಪ್ರಕಾರ ರಾಷ್ಟ್ರಗೀತೆಯಾಗುವದೆಂಬ ಕಲ್ಪನೆಯನ್ನು ಕೂಡಾ ಮಾಡಿರಲಿಕ್ಕಿಲ್ಲ. ಇಟಲಿಯ ಐಕ್ಯದ ವಿಚಾರವಾಗಿ ಡಾಂಟೆ ಕವಿಯು ರಚಿಸಿದ್ದ ಗೀತೆಯನ್ನು ಮ್ಯಾಜಿನಿ ಮತ್ತು ಗ್ಯಾರಿಬಾಲ್ಡಿಯವರು ರಾಜಕೀಯ ಉತ್ಕ್ರಾಂತಿಗೆ ಉಪಯೋಗಿಸಿಕೊಳ್ಳುವರೆಂದು ಆ ಕವಿಗಾದರೂ ಎಲ್ಲಿ ಗೊತ್ತಿತ್ತು?

ಮೊದಲು ಈ ಗೀತೆಗೆ ಸರಕಾರದವರು ಬಹು ವಿರೋಧಿಸಿದರು. ಅನಂತರ ಮಹಾ ಯುದ್ಧದ ಕಾಲದಲ್ಲಿ ಸೈನ್ಯ ಕೂಡಿಸಲು ಬಂಗಾಲದಲ್ಲಿ ಸಭೆಯಾಗುತ್ತಿದ್ದಾಗ ಈ ಗೀತೆಯನ್ನು ಸಭಿಕರು ಹೇಳುತ್ತಿದ್ದುದನ್ನು ಕೇಳಿ ಬ್ರಿಟಿಶ್ ಅಧಿಕಾರಿಗಳು ಎದ್ದು ನಿಲ್ಲುತ್ತಿದ್ದರು. ಮೊದಲು ರಾಜದ್ರೋಹದ್ದೆಂದು ತೋರಿದ ಗೀತೆಯೇ ಆ ಮೇಲೆ ರಾಷ್ಟ್ರಗೀತೆಯೆಂಬುದು ಅವರಿಗೂ ಮಾನ್ಯವಾಯಿತು. ಯುರೋಪದ ಯುದ್ಧದಲ್ಲಿ ಬಂಗಾಲಿ ಸೈನಿಕರು ಒಬ್ಬರನ್ನೊಬ್ಬರು ಕಂಡರೆ "ವಂದೇಮಾತರಂ" ಎಂದು ಹೇಳುತ್ತಿದ್ದರು."

**ಬಾಬು ಅರವಿಂದಘೋಷ**— ಇವರು ೨೯-೧-೧೯೦೮ ನೆಯ ದಿವಸ ಉಮರಾವತಿಯಲ್ಲಿಯ ತಮ್ಮ ಭಾಷಣದಲ್ಲಿ ಹೀಗೆ ಹೇಳಿದ್ದರು—

"ವಂದೇಮಾತರಂ ಗೀತೆಯು ಹಿಂದುಸ್ಥಾನದ ಎಲ್ಲ ಭಾಗಗಳಲ್ಲಿಯೂ ಜನಪ್ರಿಯವಾಗಿ ಹೇಳಲ್ಪಡುತ್ತಿದ್ದುದನ್ನು ನೋಡಿ ನನಗೆ ತುಂಬಾ ಸಂತೋಷವಾಗುತ್ತದೆ. ಇದು ಯುರೋಪ ಖಂಡಗಳಲ್ಲಿ ಹೇಳಲ್ಪಡುತ್ತಿರುವಂತೆ ಕೇವಲ ರಾಷ್ಟ್ರಗೀತೆಯೇ ಅಲ್ಲ. ಇದನ್ನು ರಚಿಸಿದ ಚತರ್ಜಿಯವರು ಪ್ರತಿಭಾಶಾಲಿ ಋಷಿಗಳೇ ಆಗಿದ್ದಾರೆಂದು ಹೇಳಲು ಅಡ್ಡಿಯಿಲ್ಲ. ಮಹಾ ಶಕ್ತಿಯನ್ನು ಉಂಟುಮಾಡುವ ಪವಿತ್ರ ಮಂತ್ರವನ್ನೇ ಅವರು ನಮಗೆ ಕೊಟ್ಟಿದ್ದಾರೆಂದು ಹೇಳಲು ಅಡ್ಡಿಯಿಲ್ಲ.

ಈ ಮಂತ್ರದ ಮಹತ್ವವು ಅವರ ಕಾಲದ ಜನರಿಗೆ ಗೊತ್ತಾಗಿರಲಿಕ್ಕಿಲ್ಲ. ಏಕೆಂದರೆ ಆಗಿನ ಜನರಲ್ಲಿ ದೇಶಾಭಿಮಾನವೇ ಇರಲಿಲ್ಲ. ಬ್ರಿಟಿಶ್ ರಾಜ್ಯದ ಘನತೆಗೇನೇ ಆಗಿನ ಜನರು ಬೆರಗಾಗಿದ್ದರು. ಅಖಿಲ ಭರತ ಖಂಡವೇ ಈ ಗೀತಾನಾದದಿಂದ ತುಂಬಿ ಹೋಗುವಂತಹ ಸಮಯವು ಜಾಗ್ರುತಿ ಬರುವುದೆಂದೇ ನನಗೆ ದೃಢವಾದ ನಂಬಿಕೆಯಿದೆ."

**ಪಂಡಿತ ಮಾಲವೀಜಿಯವರು**— ಕಲಕತ್ತಾ ರಾಷ್ಟ್ರೀಯ ಸಭೆಯಲ್ಲಿ "ವಂದೇಮಾತರಂ" ಈ ಗೀತೆಯ ಸಂಬಂಧವಾಗಿ ಮಾಡಿದ ಭಾಷಣದಲ್ಲಿ ಹೀಗೆ ಹೇಳಿದ್ದರು—

"ವಂದೇಮಾತರಂ" ಗೀತೆಯು ಸ್ವದೇಶ ಭಕ್ತಿ ಯುಕ್ತವಾದುದು. ಸ್ವದೇಶಕ್ಕೆ ಜಯವಾಗಲಿ; ಮಾತೃಭೂಮಿಗೆ ನಾನು ವಂದಿಸುತ್ತೇನೆ. ಎಂದೇ ಈ ಗೀತೆಯಲ್ಲಿ ಹೇಳಿದೆ. ಇಂಥ ನಿರುಪದ್ರವಿ ಗೀತೆಗೆ ಇಂಗ್ಲಿಷರು ವಿರೋಧಿಸುವುದು ಆಶ್ಚರ್ಯದ ಸಂಗತಿಯು."

**ಬ್ಯಾರಿಸ್ಟರ್ ರಸೂಲ್**— ಇವರು ೧೯೦೬ ರಲ್ಲಿ ಬಾರಿಸಾಲಿನಲ್ಲಿ ಕೂಡಿದ್ದ ಬಂಗಾಲ ಪ್ರಾಂತಿಕ ರಾಜಕೀಯ ಪರಿಷತ್ತಿಗೆ ಅಧ್ಯಕ್ಷರಾಗಿದ್ದರು. ಆಗ ತಮ್ಮ ಭಾಷಣದಲ್ಲಿ ಹೀಗೆ ಹೇಳಿದ್ದರು.

"ವಂದೇಮಾತರಂ" ಗೀತೆಯು ದೇಶಭಕ್ತಿಪರವಾದುದು ಇದನ್ನು ಹೇಳಿದರೆ ಸರಕಾರದವರಿಗೆ ಏಕೆ ಕೋಪವೋ ತಿಳಿಯದು. ದೇಶಭಕ್ತಿ ಪರವಾದ ಗೀತೆಗೆ ಯಾವ ದೇಶದಲ್ಲಿಯೂ ರಾಜ್ಯಕರ್ತರು ವಿರೋಧಿಸಿದುದನ್ನು ನಾನು ಕಾಣೆನು."

ಆ ಸಭೆಗೆ ಅನೇಕ ಮುಸಲ್ಮಾನ್ ಗೃಹಸ್ಥರೂ ಬಂದಿದ್ದರು. ಈ ಗೀತೆಯನ್ನು ಹೇಳುವಾಗ ಅವರೆಲ್ಲರೂ ಎದ್ದು ನಿಂತಿದ್ದರು.

**ಪ್ರಾರಂಭವೆಂದು?**— ಕಾಶಿಯಲ್ಲಿ ೧೯೦೫ ನೆಯ ಇಸವಿಯಲ್ಲಿ ಕೀರ್ತಿಶೇಷ ಗೋಖಲೆಯವರ ಅಧ್ಯಕ್ಷತೆಯಲ್ಲಿ ರಾಷ್ಟ್ರೀಯ ಸಭೆ ಕೂಡಿದಾಗ ಬಾಬು ಸುರೇಂದ್ರನಾಥ ಬಾನರ್ಜಿಯವರ ಸೂಚನೆಯ ಮೇರೆಗೆ ಮೊದಲು ಈ ವಂದೇಮಾತರಂ ಗೀತೆಯು ಶ್ರೀಮತಿ ದತ್ತಚೌಧರಾಣಿಯವರೇ ಮೊದಲಾದ ಮಹಿಳೆಯರಿಂದ ಹೇಳಲ್ಪಟ್ಟಿತು. ಅಂದಿನಿಂದ ಇಂದಿನ ವರೆಗೆ ೩೨ ವರುಷ ಈ ರಾಷ್ಟ್ರಗೀತೆಯು ಸರಕಾರದ ವಿರೋಧಕ್ಕೂ ಕುಂದದೆ ಹೆಚ್ಚು ಹೆಚ್ಚಾಗಿಯೇ ಪ್ರಸಾರವಾಗುತ್ತಾ ಬಾಬು ಅರವಿಂದಘೋಷರ ಊಹೆಯಂತೆ ಭರತಖಂಡವನ್ನೇ ವ್ಯಾಪಿಸಿತು.

---

## 'ವಂದೇಮಾತರಂ' ಗೀತೆ.

[ಈಗ ರಾಷ್ಟ್ರ ಗೀತೆಯಾಗಿರುವ (ಕೀರ್ತಿಶೇಷ ಬಂಕಿಮಚಂದ ಚತರ್ಜಿಯವರು "ಆನಂದ ಮಠ" ಗ್ರಂಥದಲ್ಲಿ ರಚಿಸಿರುವ) "ವಂದೇ ಮಾತರಂ" ಗೀತೆಯನ್ನು ಇಲ್ಲಿ ಸಂಪೂರ್ಣವಾಗಿ ಕೊಟ್ಟಿದೆ. --ಸಂ.]

ವಂದೇ ಮಾತರಂ | ಸುಜಲಾಂ ಸುಫಲಾಂ ಮಲಯಜಶೀ
ತಲಾಂ ಶಶ್ಯ ಶಾಮಲಾಂ ಮಾತರಂ |

ಶುಭ್ರಜ್ಯೋತ್ಸ್ನಾ ಪುಲಕಿತ ಯಾಮಿನೀಂ | ಫುಲ್ಲಕುಸುಮಿತ
ದ್ರುಮದಲ ಶೋಭಿನೀಂ | ಸುಹಾಸಿನೀಂ ಸುಮಧುರ ಭಾಷಿಣೀಂ |
ಸುಖದಾಂ ವರದಾಂ ಮಾತರಂ ||೧||

ತ್ರಿಂಶಕೋಟಿ ಕಂಠ ಕಲಕಲನಿನಾದ ಕರಾಲೆ |
ದ್ವಿತ್ರಿಂಶ ಕೋಟಿ ಭುಜೈ ರ್ಧೃತ ಖರ ಕರವಾಲೆ |
ಕೇ ಬೋಲೆ ಮಾ ತುಮಿ ಅಬಲೆ |
ಬಹು ಬಲ ಧಾರಿಣೀಂ ನವಾಮಿ ತಾರಿಣೀಂ |
ರಿಪುದಲ ವಾರಿಣೀಂ ಮಾತರಂ |

ತುಮಿ ವಿದ್ಯಾ ತುಮಿ ಧರ್ಮ
ತುಮಿ ಹೃದಿ ತುಮಿ ಮರ್ಮ
ತ್ವಂ ಹಿ ಪ್ರಾಣಾಃ ಶರೀರೆ |
ಬಾಹುತೆ ತುಮಿ ಮಾ ಶಕ್ತಿ
ಹೃದಯೆ ತುಮಿ ಮಾ ಭಕ್ತಿ
ತೋಮಾರಈ ಪ್ರತಿಮಾ ಗಡೀ

ಮಂದಿರೆ ಮಂದಿರೆ |
ತ್ವಂಹಿ ದುರ್ಗಾ ದಶ ಪ್ರಹರಣ ಧಾರಿಣೀ |
ಕಮಲಾ ಕಮಲದಲ ವಿಹಾರಿಣೀ |
ವಾಣೀ ವಿದ್ಯಾದಾಯಿನೀ |
ನವಾಮಿ ತ್ವಾಂ
ವಂದೇ ಮಾತರಂ ||೩||

ನಮಾಮಿ ಕಮಲಾಂ ಅಮಲಾಂ ಅತುಲಾಂ
ಸುಜಲಾಂ ಸುಫಲಾಂ ಮಾತರಂ
ಶ್ಯಾಮಲಾಂ ಸರಲಾಂ ಸುಸ್ಮಿತಾಂ ಭೂಷಿತಾಂ
ಧರಣೀಂ ಭರಣೀಂ ಮಾತರಂ
ವಂದೇ ಮಾತರಂ||

## "ವಂದೇ ಮಾತರಂ" ಗೀತೆಗೆ ಹೊ ಡೆ ದಾ ಟ!

ವಂದೇ ಮಾತರಂ ಗೀತೆಯ ವಿಚಾರವಾಗಿ ಈಗ ಅನೇಕ ಮುಸಲ್ಮಾನರು ವಿರೋಧಿಸುತ್ತಿದ್ದಾರಷ್ಟೆ.

ಪಾಟಣಾದಲ್ಲಿ ಮೊನ್ನೆ ಗಾಂಧೀಜಿಯವರ ಜಯಂತಿಯ ಕಾಲಕ್ಕೆ ರಾಮಮೋಹನರಾಯ ಸೆಮಿನರಿ ಸ್ಕೂಲಿನಲ್ಲಿ ಹೆಡ್‌ಮಾಸ್ತರರು ವಂದೇ ಮಾತರಂ ಪದ್ಯ ಹೇಳಬಾರದಾಗಿ ಅಪ್ಪಣೆಮಾಡಬೇಕಾದ ಪ್ರಸಂಗಬಂದಿತಂತೆ. ಏಕೆಂದರೆ ಪ್ರತಿ ದಿನದ ಪದ್ಧತಿಯಂತೆ ಒಬ್ಬ ಹಿಂದು ವಿದ್ಯಾರ್ಥಿಯು ಆ ದಿನವೂ ವಂದೇಮಾತರಂ ಗೀತೆಯನ್ನು ಹೇಳಿದನು. ಅದನ್ನು ಮುಸಲ್ಮಾನ್ ವಿದ್ಯಾರ್ಥಿಗಳು ವಿರೋಧಿಸಿ ಕೊನೆಗೆ ಆ ಹುಡುಗನಿಗೆ ಹೊಡೆದರು. ಈ ಹೊಡೆದಾಟದಿಂದ ಆ ಪದ್ಯವನ್ನೇ ಹೇಳಬಾರದಾಗಿ ಅಲ್ಲಿ ಗೊತ್ತುಮಾಡಿದ್ದಾರಂತೆ! ಇದು ನಿಜವಾಗಿರುವ ಪಕ್ಷದಲ್ಲಿ ಯಾರಲ್ಲಿ ಬಲವೋ ಅವರದೇ ನ್ಯಾಯವೆಂದು ಹೇಳಿದಂತಾಗಲಿಲ್ಲವೆ?

## ಕಾಂಗ್ರೆಸ್ಸಿನಲ್ಲಿ ಮುಸಲ್ಮಾನರು.

ಲಖನೌದಲ್ಲಿ ಮುಸಲ್ಮಾನರ ರಾಜಕೀಯ ಪರಿಷತ್ತು ಕೂಡಿದ್ದಿತು. ಮುಸಲ್ಮಾನರಲ್ಲಿ ಸಿಯಾ ಮತ್ತು ಸುನಿ ಎಂಬೆರಡು ಮುಖ್ಯ ಪಂಗಡಗಳಿವೆ. ಸಿಯಾ ಪಕ್ಷದ ಈ ಮುಸಲ್ಮಾನ್ ಪರಿಷತ್ತಿನಲ್ಲಿ ಮುಸಲ್ಮಾನರು ಕಾಂಗ್ರೆಸ್ಸಿಗೆ ಕೊಡಬೇಕೆಂದೇ ತೀರ್ಮಾನವಾಯಿತು.

ಸರ್ ವಜೀರ ಇಸನ್‌ರವರು ಹೀಗೆ ಹೇಳಿದರು—"ಸುನಿ ಪಕ್ಷದ ಮುಸಲ್ಮಾನರು ಸಿಯಾ ಪಕ್ಷದವರ ಸಂಗಡ ಪ್ರಾಮಾಣಿಕತನದಿಂದ ನಡೆಯದಿದ್ದ ಕಾರಣ ನಾವು ಕಾಂಗ್ರೆಸ್ಸಿಗೆ ಕೂಡಬೇಕಾಯಿತು." ಮುಸ್ಲಿಂಲೀಗ್ ಅಖಿಲ ಮುಸಲ್ಮಾನರ ಪ್ರಾತಿನಿಧಿಕ ಸಂಸ್ಥೆಯಲ್ಲ. ಘಟನಾ ಸಮಿತಿಯು ಅತ್ಯಗತ್ಯವಾಗಿದೆ. ಈಗ ಮುಸಲ್ಮಾನರಿಗಿರತಕ್ಕ ಪ್ರತ್ಯೇಕ ಪ್ರಾತಿನಿಧ್ಯವನ್ನು ತೆಗೆದುಹಾಕಿ ಸಂಯುಕ್ತ ಪ್ರಾತಿನಿಧ್ಯವನ್ನೇ ಉಂಟುಮಾಡಬೇಕು. ಆದರೆ ಮುಸಲ್ಮಾನರಿಗೆ ಈಗಿರುವಷ್ಟು ಸ್ಥಳಗಳನ್ನು ಕಾದಿಡಬೇಕು. ಎಂಬುದಾಗಿ ತೀರ್ಮಾನಗಳಾದವು.

## ಹಿರೇಕೇರೂರು.

——::o::——

ಪರಮಪೂಜ್ಯ ಮೃತ್ಯುಂಜಯ ಮಹಾಸ್ವಾಮಿಗಳವರಿಂದ ಸ್ಥಾಪಿಸಲ್ಪಟ್ಟ ಶ್ರೀ ಶಿವಯೋಗೀಶ್ವರ ಶಿವಾನುಭವ ಮಂಟಪದಲ್ಲಿ ವಾರಕ್ಕೊಂದಾವರ್ತಿ ಶಿವಾನುಭವ ನಡೆಯುವದು ಸಾಂಪ್ರದಾಯವಾಗಿದೆ. ಹೆಣ್ಣುಮಕ್ಕಳಿಗೂ ಸಹ ವಾರಕ್ಕೊಮ್ಮೆ ಶಿವಾನುಭವವು ಶ್ರೀ. ವೀರಭದ್ರಶಾಸ್ತ್ರಿಗಳವರಿಂದ ಸಾಗುತ್ತಿರುವದು.

"ಶ್ರೀ ಶಿವಯೋಗೀಶ್ವರ ಶಿವಾನುಭವ ಸಂಸ್ಥೆಯು" ಶ್ರೀ. ದೊಡ್ಡ ಅಡಿವೆಪ್ಪನವರು ಕುಬಸದ ಇವರ ನವ ಚೇತನೆಯಿಂದ ಪದ್ಧತಿಗನುಸಾರವಾಗಿಯೂ, ಒಳ್ಳೇ ಶಿಸ್ತಿನಿಂದಲೂ ನಡೆಯುತ್ತಿರುವದೆಂದು ತಿಳಿಸಲು ಸಂತೋಷವೆನಿಸುತ್ತದೆ.

ಪರಮಪೂಜ್ಯ ಶ್ರೀ ಬಸವಾದಿ ಪ್ರಮಥರ ಅನುಭವ ಮಂಟಪದಲ್ಲಿ ಧಾರ್ಮಿಕ ಚರ್ಚೆಯು ನಡೆಯುತ್ತಿದ್ದಂತೆ ಶಕ್ತ್ಯಾನುಸಾರ ನಾವೂ ನಡಿಸಬೇಕೆಂದು ನಿಶ್ಚಯಿಸಿರುತ್ತೇವೆ. ಅವಶ್ಯಕಂಡಾಗ್ಯೆ ಕೆಲವು ಮಹನೀಯರನ್ನು ಕರಿಸಿ ಪ್ರವಚನವನ್ನು ಮಾಡಿಸುವ ಪದ್ಧತಿಯನ್ನೂ ಇಟ್ಟುಕೊಂಡಿದ್ದೇವೆ. ಆ ಪದ್ಧತಿಗನುಸಾರವಾಗಿ ಶ್ರೀ. ಅನ್ನದಾನೇಶ್ವರ ವಿರಕ್ತಮಠ ಇವರು ನಮ್ಮಗಳ ಬಿನ್ನಹದ ಮೇರೆಗೆ ಇಲ್ಲಿಗೆ ದಯಮಾಡಿಸಿ ತಾ. ೯-೧೦-೩೭ ನೆಯ ದಿನ ಪ್ರವಚನವನ್ನು ಸಾಗಿಸಿದರು.

ಶಿವನೇ ದೈವ! ಕೊಲ್ಲದಿಪ್ಪುದೇ ಧರ್ಮ! ಅಧರ್ಮದಿಂದ ಬಂದುದ ನೊಲ್ಲದಿಪ್ಪುದೇ ನೇಮ! ಆಶಿರೋಷಗಳಲ್ಲಿಪ್ಪುದೇ ತಪ! ವಂಚನೆಯಿಲ್ಲದಿಪ್ಪುದೇ ಭಕ್ತಿ! ಹೆಚ್ಚು ಕುಂದಿಲ್ಲದಿಪ್ಪುದೇ ಸಮಯಾಚಾರ. ಇದು ಸತ್ಯ ಶಿವ ಬಲ್ಲ ಶಿವನಾಣೆ! ಉರುಲಿಂಗ ಪೆದ್ದಿಪ್ರಿಯೇಶ್ವರಾ!!

ಈ ವಚನದ ವಿಚಾರವಾಗಿ ಪ್ರವಚನವು ಪರಿಣಾಮಕಾರಿಯಾಗಿ ಜರುಗಿತೆಂದು ತಿಳಿಸಲಿಕ್ಕೆ ಆನಂದವಾಗುತ್ತದೆ.

ವೀರಭದ್ರಪ್ಪ ಹೆಗಡಾಳ.
ಸೆಕ್ರೆಟರಿ.

# ವೀರಶೈವ ಮಹಾಜನರಲ್ಲಿ ಸೂಚನೆ.

## ಶ್ರೀ ಚೆನ್ನಬಸವೇಶ್ವರ ಸಂಘ ಶಿವಮೊಗ್ಗ.

ಮೇಲ್ಕಂಡ ಸಂಘದವರು ೨೬-೬-೩೭ ರಲ್ಲಿ ಈ ಊರಿಗೆ ಉತ್ಸವದಿಂದ ಬಂದ ಶ್ರೀ ಬಾಳೇಹೊನ್ನೂರು ಶ್ರೀಗಳವರಲ್ಲಿ ರಿಜಿಷ್ಟರ್ ಮೂಲಕ ವಿಜ್ಞಾಪನೆಮಾಡಿಕೊಂಡ ಕೆಲವು ಪ್ರಶ್ನೆಗಳ ಸಂಬಂಧವಾಗಿ ಅದರಂತೆ ಇತರ ಕೆಲವು ಪ್ರಮುಖರಗಳಿಗೂ ಶ್ರೀ ಜಗದ್ಗುರು ವಿರಕ್ತಸ್ವಾಮಿಗಳವರಿಗೂ ಸಹ ಪ್ರಶ್ನೆ ಪತ್ರಿಕೆಗಳನ್ನು ಕಳಿಸಲಾಗಿತ್ತು.

ಅಲ್ಲದೆ ತಾ. ೩೦-೮-೩೭ ರ "ಶರಣ ಸಂದೇಶ" ಪತ್ರಿಕೆಯಲ್ಲಿಯೂ ಸಹ ಪ್ರಕಟಿಸಲಾಗಿತ್ತು. ಅದರ ಪ್ರತಿಫಲವಾಗಿ ತಾ. ೨೦-೯-೩೭ ರಲ್ಲಿ ಶ್ರೀ. ಗುರಪ್ಪ ಮಲ್ಲಪ್ಪ ಗೋಡಿಕಟ್ಟಿ ಧಾರವಾಡ ಇವರು "ಗುರು ಮತ್ತು ವಿರಕ್ತರ ತತ್ವ ನಿರ್ಣಯ" ಎಂಬ ಶಿರೋಲೇಖನದ ಮೇಲೆ ವಿರಕ್ತರ ಪರವಾಗಿ ನಮ್ಮ ಪ್ರಶ್ನೆಗಳಿಗೆ ಉತ್ತರಗಳನ್ನು ಪ್ರಿಂಟ್‌ಮಾಡಿಸಿ ಕಳಿಸಿರುವುದನ್ನು ನಾವು ಆದರದಿಂದ ಸ್ವೀಕರಿಸುತ್ತೇವೆ.

ಅದರಲ್ಲಿ ತತ್ವಗಳು ಮತ್ತು ಉತ್ತರಗಳು ಸಶಾಸ್ತ್ರೀಯವಾಗಿಯೂ ಸಪ್ರಮಾಣವಾಗಿಯೂ ಉದಾಹರಿಸಲ್ಪಟ್ಟು ಅನೇಕ ಮೂಢ ನಂಬಿಕೆಯುಳ್ಳವರಿಗೆ ಜ್ಞಾನಮಾರ್ಗ ತೋರಿಸತಕ್ಕವುಗಳಾಗಿರುತ್ತವೆ.

ಸಂಶಯಾತ್ಮಕ ದೃಷ್ಟಿಯುಳ್ಳವರು ಮೇಲ್ಕಂಡ ಸಂಘದ ಮೆಂಬರುಗಳಲ್ಲಿರುವ ಪ್ರಿಂಟ್ ಪೇಪರಿನಲ್ಲಾಗಲಿ ಲೇಖಕರಾದ ಶ್ರೀ. ಗುರಪ್ಪ ಮಲ್ಲಪ್ಪ ಗೋಡಿಕಟ್ಟಿ ಧಾರವಾಡ ಇವರ ಮೂಲಕವಾಗಲೀ ತಿಳಿದುಕೊಳ್ಳಬಹುದು.

ನಾವು ಕೇಳಿದ ನಾಲ್ಕು ಪ್ರಶ್ನೆಗಳಿಗೆ ಬಾಳೆಹೊನ್ನೂರು ಶ್ರೀಗಳು ಯಾವ ಉತ್ತರವನ್ನೂ ಜಾಹಿರಾತುಮಾಡದೆ ಇದ್ದದ್ದಕ್ಕೆ ವಿಷಾದಿಸಬೇಕಾಗಿದೆ.

ನಾಲ್ಕು ಪ್ರಶ್ನೆಗಳ ಉತ್ತರ ಸಾರಾಂಶವು ಈ ಕೆಳಗೆ ಕಂಡಂತೆ ಇರುತ್ತದೆ.

(೧) ವೀರಶೈವರಲ್ಲಿ ಜಾತಿಭೇದಗಳಿಲ್ಲ. ಪರಸ್ಪರ ಭೋಜನಾದಿಗಳನ್ನು ಮಾಡಬಹುದು. ಯಾವ ಶಾಸ್ತ್ರ ನಿರ್ಬಂಧವೂ ಇರುವುದಿಲ್ಲ. (೨) ಗುರುತ್ವಕ್ಕಿಂತಲೂ ಜಂಗಮತ್ವವೇ (ವಿರಕ್ತ) ಶ್ರೇಷ್ಠ. (೩) ಷಟ್ ಕಲಶ ಸ್ಥಾಪನೆಯೇ ಶಾಸ್ತ್ರೋಕ್ತವಾದದ್ದು (೪) ನಿರಂಜನ ಕಲಶಸ್ಥಾಪನೆಯಿಲ್ಲದೆ ಮಾಡತಕ್ಕ ಪೂಜೆ ಜೀವ (ಆತ್ಮ) ಇಲ್ಲದ ಶರೀರಕ್ಕೆ ಮಾಡಿದಂತೇ ಸರಿ.

ಸೂ— ಮೇಲ್ಕಂಡ ಉತ್ತರರೂಪವಾದ ಪತ್ರಿಕೆಗಳು ನಮ್ಮಲ್ಲಿ ಹೆಚ್ಚಿಗೆ ಇಲ್ಲವಾದ್ದರಿಂದ ಮುಕ್ತಾಬಂದು ಓದಿಕೊಳ್ಳಬೇಕು. ಅವಶ್ಯಕವಿದ್ದವರು ಲೇಖಕರಿಗೆ ಬರೆದು ತರಿಸಿಕೊಳ್ಳಬೇಕಾಗಿ ಕೋರುತ್ತೇವೆ. ಸಮಾಜಕ್ಕೆ ಅವಶ್ಯಕವಾದ ಸಂಗತಿಗಳನ್ನು ಬರೆದ ಈ ಲೇಖಕರಿಗೆ ಸಂಘದ ಪರವಾಗಿ ವಂದನೆಗಳನ್ನು ಅರ್ಪಿಸುತ್ತೇನೆ.

### ಲೇಖಕರು ಕೊಟ್ಟ ಪ್ರಮಾಣಗಳು.

"ವೀರಶೈವರಲ್ಲಿ ಜಾತಿಭೇದಗಳಿಲ್ಲ. ಶಿವದೀಕ್ಷೆಯನ್ನುಹೊಂದಿ ಇಷ್ಟ ಲಿಂಗವನ್ನು ಧರಿಸಿದನಂತರ ಅವರ ಉದ್ಯೋಗಗಳ ಮೇಲಿಂದ ಶ್ರೇಷ್ಠ ಕನಿಷ್ಠಗಳೆಂಬ ಕುಲಗಳನ್ನು ಕಲ್ಪಿಸಲಾಗದು. ಯಾಕೆಂದರೆ ವಾತುಲ ತಂತ್ರೋಕ್ತಿಯು (ಶ್ಲೋ) ಇಂಧನಂ ವಹ್ನಿ ಸಂಪರ್ಕಾದ್ವೃಕ್ಷನಾಮ ವಿನಶ್ಯತಿ| ಶಿವಸಂಸ್ಕಾರಸಂಪನ್ನೇ ಜಾತಿಭೇದಂ ನಕಾರಯೇತ್||

ನಾನಾ ಜಾತಿ ಕಟ್ಟಿಗೆಗಳನ್ನು ಬೆಂಕಿಯು ಸುಟ್ಟನಂತರ ಹೇಗೆ ಬೂದಿಯಲ್ಲಿ ಕಟ್ಟಿಗೆಯ ಜಾತಿಗಳಿರುವದಿಲ್ಲವೋ ಹಾಗೆ ಶಿವದೀಕ್ಷೆಯನ್ನು ಹೊಂದಿದನಂತರ ಆತನಲ್ಲಿ ಹಿಂದಿನ ಕುಲಜಾತಿಗಳುಳಿಯುವದಿಲ್ಲ. ಆದಕಾರಣ ಶಿವಭಕ್ತರಲ್ಲಿ ಜಾತಿಭೇದವನ್ನು ಮಾಡದೆ ಅನ್ಯೋದಕ ವ್ಯವಹಾರಗಳನ್ನು ಮಾಡತಕ್ಕದ್ದು. ಮತ್ತು ಶಿವದೀಕ್ಷೆಯನ್ನು ಹೊಂದದಿದ್ದರೆ ಎಂದೂ ವೀರಶೈವನಾಗಲಾರನು. ಆದಕಾರಣ ಪ್ರತಿಯೊಬ್ಬರು ಶಿವದೀಕ್ಷೆಯನ್ನು ತೆಗೆದುಕೊಳ್ಳಲಿಕ್ಕೇಬೇಕು.

ಭೂರುದ್ರಾಣಾಂ ಗುರುಣಾಂತ ಜಂಗಮಾನಾಂ ಶುಭಾನ್ವಿತಂ|
ತೇಷಾಂ ಮಹೇಶ್ವರಾಣಾಂಚ ಪಾದತೀರ್ಥಂ ಪರಾತ್ಪರಂ ||
ಅಂಘ್ರಿ ಪ್ರಕ್ಷಾಲಿತಂ ತೋಯಂ ರೇಣುಕಾದ್ಯಾಃ ಸನಾತನಾಃ|
ಕಾಂಕ್ಷಯಂತಿ ಸದಾಕಾಂತೆ ಕಿ ಮನ್ಯೆ ನರದೇವತಾಃ ||
ಇತಿ ವೀರಾಗಮ ೬ ಪಟಲೆ.

(ಅಂದರೆ) ಭೂರುದ್ರ ಮಹೇಶ್ವರರು ಗುರು ಸಾರ್ವಭೌಮರು ಮಂತ್ರರಾಜ (ಓಂಕಾರ ಪ್ರಣವ) ಸ್ವರೂಪಿಗಳಾದ ಜಂಗಮ ಮಹಾತ್ಮರ ಮೋಕ್ಷರೂಪವಾದ ಶುಭವನ್ನು ಕೊಡುವ ಪಾದತೀರ್ಥವನ್ನು ಸನಾತನರಾದ ರೇಣುಕಾದ್ಯಾಚಾರ್ಯರೇ ಅಪೇಕ್ಷಿಸುತ್ತಿರುವಾಗ (ಸೇವಿಸುವಲ್ಲಿ) ಮನುಷ್ಯ ದೇವತಾದಿಗಳ ಪಾಡೇನು ಯೆಂದುದಾಗಿ ವೀರಾಗಮ ೬ ನೇ ಪಟಲದಲ್ಲಿ ಪರಶಿವನು ಪಾರ್ವತಿಗೆ ಹೇಳಿದ್ದಾನೆ. ಆದುದರಿಂದ ಜಂಗಮನೇ ಜಗತ್ಪೂಜ್ಯನೂ ಜಗದ್ಗುರುವೂ ಆಗಿರುವನು

ತೇಷಾ ಕಲಶ ಪಂಚಾನಾಂ ಪೂಜಾಂ ಕುರ್ಯಾದ್ವಿಶೇಷತಃ |
ಇತ್ತೇವಂ ಕಲಿಶಾನ್ ... ಸ್ಥಾಪ್ಯಕಾರ ಯೇತ್ಸರ್ವ ಕಾರಣಂ||
ಇತಿ ಅವಿಲಾಗಮ ಸ್ವಾಯಂಭುವಾಗಮೇಷು
ಪ್ರಮಾಣಂ ದರ್ಶಿತಂ ||

(ಅಂದರೆ) ಸೂತ್ರ ಗೋತ್ರಾದಿಗಳಿಂದ ರಹಿತವಾದ ಶಿವನಾಮಕವೆಂಬ ವಜ್ರದ ೬ ನೇ ಕಲಶವನ್ನು ದೀಕ್ಷಾ ವಿವಾಹಾದಿ ಕಾರ್ಯಗಳಲ್ಲಿ ಸಾಕ್ಷಿರೂಪದಿಂದ ಉನ್ನತಾಸನದಲ್ಲಿರಿಸಿ ಷೋಡಶೋಪಚಾರಗಳಿಂದ ವಿಧಿಪೂರ್ವಕವಾಗಿ ಆ ಕಲಶದ ಪೂಜೆಯನ್ನು ಕರ್ಮಕಾರಿಯಾದ ನಿರ್ಮಲ ಮನಸ್ಸುಳ್ಳ ಗುರುವಿನಿಂದ ಮಾಡಿಸಿ ತದನಂತರ ಗೋತ್ರಸೂತ್ರಾದಿಗಳಿಂದ ಕೂಡಿದ ಐದು ಕಲಶಗಳನ್ನು ಕ್ರಮವಾಗಿ ಸ್ಥಾಪಿಸತಕ್ಕದ್ದೆಂದು ಸ್ವಯಂಭು ಆಗಮಾದಿಗಳಲ್ಲಿ ಪರಶಿವನು ಪಾರ್ವತಿಗೆ ಉಪದೇಶಮಾಡಿದ್ದಾನೆ."

ಎನ್. ಎಸ್. ಬಸಪ್ಪ ಶ್ರೀ. ಚೆ. ಸಂಘ

---

## ಬಾಗಲಕೋಟೆ.

ಇಲ್ಲಿಯ ಬಸವೇಶ್ವರ ಹೈಸ್ಕೂಲಿನಲ್ಲಿ ತಾ. ೬-೧೦-೩೭ ನೆಯ ದಿನ ಸಾಧಾರಣ ಮೀಟಿಂಗ್ ಕೂಡಿಸಲ್ಪಟ್ಟಿತು. ಈ ಹೊತ್ತಿನಿಂದ "ಸ್ಟೂಡಂಟ್ಸ ಯುನಿಯನ್" ಸುರುಮಾಡಬೇಕೆಂದು ಪ್ರಿನ್ಸಿಪಾಲ ಸಿ. ವ್ಹಿ. ಸಿರೋಳವರ ಅಧ್ಯಕ್ಷತೆಯಲ್ಲಿ ಪಾಸುಮಾಡಲ್ಪಟ್ಟಿತು ಆಗಲೇ ಚೇಅರಮನ್, ಸೆಕ್ರೆಟರಿ ಮುಂತಾದವರನ್ನು ಆರಿಸುವದಾಯಿತು. ಎಕ್ಸ ಪ್ರಿನ್ಸಿಪಾಲರಾದಂಥ ಎಚ್. ಎಫ್. ಕಟ್ಟಿಮನಿಯವರು ಮೀಟಿಂಗ್ ಸುರುವಾದಾಗ ಅನಾಯಾಸವಾಗಿ ಬಂದು ಯೂನಿಯನ್ ಸಂಬಂಧವಾಗಿ ಕೆಲವು ಹೊತ್ತು ಸ್ಫೂರ್ತಿಯಿಂದ ಭಾಷಣಮಾಡಿದರು. ಮತ್ತು ಉದಾರ ಮನಸ್ಸಿನಿಂದ ಸುರುವಾಗಲಿರುವ "ಸ್ಟೂಡಂಟ್ಸ ಯುನಿಯನ್‌ಕ್ಕೆ" ೫ ರೂಪಾಯಿಗಳ ದೇಣಿಗೆಯನ್ನಿತ್ತರು. ಈ ದಿನದ ಅಧ್ಯಕ್ಷರು ಮತ್ತು ಸ್ಟುಡಂಟ್ಸ ಯುನಿಯನ್‌ದ ಸೆಕ್ರೆಟರಿಯವರು ಅವರಿಗೆ ಅಭಿವಂದನೆಗಳನ್ನಿತ್ತು ಸಭೆಯ ಕಾರ್ಯವನ್ನು ಮುಗಿಸಿದರು.

ಓರ್ವ ವಿದ್ಯಾರ್ಥಿ.

## ಸಂಪಗಾವಿ ವೀರಶೈವರ ಸ್ತುತ್ಯಕಾರ್ಯ.

ತಾ. ೧೧-೧೦-೩೭ ಸೋಮವಾರ ದಿವಸ ಇಲ್ಲಿಯ ಚನ್ನಬಸವಪ್ಪ ಹಡಪದ ಎಂಬುವವರು ೨೫ ವರ್ಷಗಳ ಹಿಂದೆ ದೀಕ್ಷೆಯಾಗಿ ಇಲ್ಲಿಯವರೆಗೂ ವೀರಶೈವೇತರರ ಕ್ಷೌರಮಾಡದೆ ಶುದ್ಧಾಚರಣೆಯಿಂದ ನಡೆದದ್ದು ನೋಡಿ ಇಲ್ಲಿಯ ಗುರುವರ್ಯರಾದ ಶ್ರೀ. ಚರಮೂರ್ತಿ ಸ್ವಾಮಿಗಳು ಪತ್ರೀಮಠದಲ್ಲಿ ಅವರ ಕಡೆಯಿಂದ ಅಡಗೀ ಮಾಡಿಸಿ ವೀರಶೈವರಿಗೆಲ್ಲ ಊಟಕ್ಕೆ ಹೇಳಿಸಿದರು. ಅವರ ಅಪ್ಪಣೆಯ ಮೇರೆಗೆ ಸಮಸ್ತ ದೈವದ ಜನರೆಲ್ಲ ಬಂದು ಭೋಜನವು ಶ್ರೀ. ಬಸವೇಶ್ವರ ಜಯಕಾರದೊಡನೆ ಪ್ರಾರಂಭವಾಯಿತು. ಮಧ್ಯಾಹ್ನ ೧೨ ರಿಂದ ರಾತ್ರಿ ೯ ರ ವರೆಗೆ ೪-೫ ನೂರು ಜನರ ಭೋಜನವಾಯಿತು. ಈ ಸಮಾರಂಭದಲ್ಲಿ ಅಡಗೀ ಮಾಡುವದು ನೀಡುವದು ಮೊದಲಾದ ಕಾರ್ಯಗಳು ಹಡಪದ ಜನರ ಕಡೆಯಿಂದಲೇ ನಡೆದವು. ದೀಕ್ಷೆ ಹೊಂದಿದ ಹಡಪದ ಜನರು ಅನೇಕ ಹಳ್ಳಿಗಳಿಂದ ಬಂದು ಈ ಕಾರ್ಯದಲ್ಲಿ ಭಾಗವಹಿಸಿದ್ದರು.

### ಪುನರ್ವಿವಾಹ.

ತಾ. ೬-೧೦-೩೭ ಬುಧವಾರ ದಿವಸ ಇಲ್ಲಿಯ ಶ್ರೀ. ಚರಮೂರ್ತಿ ಸ್ವಾಮಿಗಳ ಆಜ್ಞೆಯ ಮೇರೆಗೆ ಇಲ್ಲಿಯ ಶ್ರೀ. ಚಂಬಯ್ಯಾ ಪತ್ರಿಮಠ ಎಂಬವನಿಗೆ ಯರಗಟ್ಟಿ ಸಿದ್ರಾಮಯ್ಯ ಹಿರೇಮಠ ಇವರ ಮಗಳಾದ ಸಂಗವ್ವನ ಮೊದಲನೆ ಲಗ್ನದ ಪತಿಯು ಚಿಕ್ಕವಯಸ್ಸಿನಲ್ಲಿಯೇ ತೀರಿಕೊಂಡದ್ದರಿಂದ ಪುನರ್ವಿವಾಹವನ್ನು ರೂಢಿಯಲ್ಲಿ ತರಬೇಕೆಂದು ಸಮಸ್ತ ದೈವದವರು ಕೂಡಿ ಏನೊಂದು ಖರ್ಚು ಇಲ್ಲದೆ ಕಾರ್ಯಮಾಡಿದರು ಇದೇ ಮೇರೆಗೆ ಯರಗೊಪ್ಪಯೆಂಬ ಹಳ್ಳಿಯಲ್ಲಿ ಒಂದು ಪುನರ್ವಿವಾಹ ಜರಗಿತು. ಮೇಲಿನ ಕಾರ್ಯಗಳಿಗೆ ಯಶಸ್ಸು ಬಂದದ್ದು ಇಲ್ಲಿಯ ಶ್ರೀ. ಚರಮೂರ್ತಿ ಸ್ವಾಮಿಗಳೂ ವಿರಶೈವ ತರುಣರೂ ಮಾಡುತ್ತಿರುವ ಸಮಾಜ ಸುಧಾರಣೆಯ ಪ್ರಯತ್ನದ ಫಲವು.

ಓರ್ವ ವಿರಶೈವಾಭಿಮಾನಿ.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು
ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

## The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ!
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ‖ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೨೫ ನೆಯ ಅಕ್ಟೋಬರ್ ೧೯೩೭. | ಸಂಚಿಕೆ ೧೦

ಜನಸೇವೆಯೇ ದೇವರಸೇವೆ.

## 'ವಂದೇ ಮಾತರಂ' ಗೀತೆಯ ಪ್ರಶ್ನೆ.

ಗಾಂಧೀಜಿ, ಪಂಡಿತಜಿ, ಬೋಸ ಪ್ರಭೃತಿಗಳು
'ವಂದೇ ಮಾತರಂ' ಗೀತೆಯ ಸಂಬಂಧವಾಗಿ ವಿಚಾರವಿನಿಮಯ ನಡೆಸಿದ್ದಾರೆ.
ಕಾಂಗ್ರೆಸ್ ವರ್ಕಿಂಗ್ ಕಮಿಟಿಯು
ಕಾಂಗ್ರೆಸ್ ಪಕ್ಷದ ಮತ್ತು ಹಿಂದು, ಮುಸಲ್ಮಾನ್ ಪಕ್ಷಗಳ
ಕೆಲವರ ಒಂದು ಸಮಿತಿಯನ್ನು ಏರ್ಪಡಿಸಿ ಅದರ ಕಡೆಗೆ
ಈ ವಿಷಯವನ್ನು ಒಪ್ಪಿಸುವುದಿದೆ.

## ಖಾದಿ ಉಪಯೋಗಿಸದಿರುವುದು ರಾಜದ್ರೋಹ!

ಮದ್ರಾಸ ಪ್ರಾಂತದ ಮಂತ್ರಿಗಳಾದ ಶ್ರೀ. ಗೋಪಾಳ ರೆಡ್ಡಿಯವರು ಕುಂಭಕೋಣದ ಭಾಷಣದಲ್ಲಿ ಹೀಗೆ ಹೇಳಿದರು— "ಖಾದಿಯನ್ನು ಬಿಟ್ಟು ಬೇರೆ ಬಟ್ಟೆಗಳನ್ನು ಉಪಯೋಗಿಸುವುದು ರಾಜದ್ರೋಹವೆಂದು ಹೇಳುವ ಸಮಯ ಇಷ್ಟರಲ್ಲೇ ಬರುವುದು."

### ಈ ವಾರದ ಪತ್ರಿಕೆಯಲ್ಲೇನಿದೆ?

(೧) ಮುಸ್ಲಿಂಲೀಗಿನ ಆಕ್ರಮಣ.
(೨) ಸಂಘಟನೆಯೇ ಪ್ರಬಲಶಕ್ತಿ
(೩) ಸಮತಾವಾದ ಮತ್ತು ವರ್ಣಭೇದ.
(೪) ಮಾದರಿ ಸರಕಾರದ ದಬ್ಬಾಳಿಕೆ!
(೫) ಹಿಂದು ವ್ಯವಸಾಯ ಸಂಘಟನೆ.
(೬) ಶ್ರೀ ಬಾಳೆಹಳ್ಳಿ ಸ್ವಾಮಿಗಳು ಸ್ವಲ್ಪ ದಾಂಗೆ ಬಂದರು.

ದೇಹವೇ ದೇವಾಲಯ.



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೨೫ನೆಯ ಅಕ್ಟೋಬರ್ ೧೯೩೭. | ಸಂಚಿಕೆ ೧೦


## ಮಹತ್ವದ ಸುದ್ದಿಗಳು.

—ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಕಾರ್ಯಕ್ಕೋಸ್ಕರ ಮಹಾತ್ಮಾ ಗಾಂಧಿಯವರು ತಾ. ೨೬ ನೆಯ ದಿವಸ ಕಲಕತ್ತಾ ಪಟ್ಟಣಕ್ಕೆ ಹೋಗುವರು. ಪಂಡಿತ ನೆಹರುರವರೂ ಆ ದಿನ ಅಲ್ಲಿಗೆ ಬರುವರು. ಉಭಯರೂ ಮುಂದಿನ ಕಾರ್ಯಕ್ರಮಗಳ ಸಂಬಂಧವಾಗಿ ವಿಚಾರವಿನಿಮಯವಮಾಡುವವರಿದ್ದಾರೆಂದು ತಿಳಿದಿದೆ.

—ಗಾಂಧೀಜಿ ಮತ್ತು ಪಂಡಿತಜಿಯವರು ಶ್ರೀ. ಶರಶ್ಚಂದ್ರ ಬೋಸರವರ ಮನೆಯಲ್ಲಿಡುವರು. ಆಲ್ ಇಂಡಿಯಾ ಕಾಂಗ್ರೆಸ್ ಕಮಿಟಿಯ ಸಾಧಾರಣ ೨೫೦ ಸಭಾಸದರು ಈ ಅಧಿವೇಶನಕ್ಕೆ ಬರುವರೆಂದು ಊಹಿಸಲಾಗಿದೆ.

—ಇಂಗ್ಲೆಂಡಿನ ಪರರಾಷ್ಟ್ರಗಳ ಮಂತ್ರಿಗಳಾದ ಮಿ. ಈಡನ್ ಇವರಿಗೆ ೧೯೩೭ ನೆಯ ಇಸವಿಯ ಶಾಂತತಾ ನೋಬಲ್ ಪ್ರಾಯಿಜ್ ದೊರೆಯುವದಿದೆಯಂತೆ.

—ಮುಂಬೈ ಸರಕಾರದವರು ಮೊದಲು ನಿರ್ಬಂಧಗೊಳಿಸಿದ್ದ ರಾಜಕಾರಣದ ಎಲ್ಲ ವ್ಯಕ್ತಿ ಮತ್ತು ಸಂಸ್ಥೆಗಳನ್ನೂ ಈಗಿನ ಕಾಂಗ್ರೆಸ್ ಮಂತ್ರಿಮಂಡಲದವರು ಬಿಡುಗಡೆಮಾಡಿದರು.

—ಭಾಯಿ ಬಾಟಲಿವಾಲಾರವರನ್ನು ಹೊಣೆಗಾರಿಕೆಯ ಮೇಲಿಂದ ಬಿಟ್ಟುಕೊಡಲು ನೆಲ್ಲೂರು ಜಿಲ್ಲಾ ನ್ಯಾಯಾಧೀಶರು ಒಪ್ಪಲಿಲ್ಲ.

—ನ್ಯೂಯಾರ್ಕದಿಂದ ಬರುತ್ತಿದ್ದ ವಿಮಾನು ಹತ್ತು ಸಾವಿರ ಅಡಿಗಳ ಮೇಲಿಂದ ಕೆಳಗೆ ಬಿದ್ದು ಅದರಲ್ಲಿದ್ದ ೧೫ ಜನ ಪುರುಷರು ೪ ಜನ ಸ್ತ್ರೀಯರು ಮೃತಪಟ್ಟರು.

—ಓರಿಸಾ ಪ್ರಾಂತದಲ್ಲಿ ೬೦ ಸಾವಿರ ಜನ ಕಾಂಗ್ರೆಸ್ಸಿನ ಸದಸ್ಯರಾಗಿದ್ದಾರೆ. ಆ ಪ್ರಾಂತದಲ್ಲಿ ೨೪ ಸಾವಿರ ಜನ ಸದಸ್ಯರಾದರೆ ಸಾಕೆಂದು ಯೋಚಿಸಿದ್ದರು.

— ನಾಗಪುರ ಭಾಗದ ವಾಸೀರು ಎಂಬಲ್ಲಿಯ ಪದ್ಮತೀರ್ಥದ ಸಂಬಂಧವಾಗಿ ಹಿಂದು-ಮುಸಲ್ಮಾನರಲ್ಲಿ ವ್ಯಾಜ್ಯನಡೆದಿತ್ತು. ಆ ತೀರ್ಥದಲ್ಲಿ ತಾಬೂತಗಳನ್ನು ಮುಳುಗಿಸಲು ತಮಗೆ ಅಧಿಕಾರವಿದೆಯೆಂದು ಮುಸಲ್ಮಾನರು ವಾದಿಸುತ್ತಿದ್ದರು. ಹೈಕೋರ್ಟಿನಲ್ಲಿಯೂ ಆ ತೀರ್ಥವು ಹಿಂದುಗಳದ್ದೇ ಎಂದು ನಿರ್ಣಯವಾಯಿತು.

— ಪುಣೆಪಟ್ಟಣದಲ್ಲಿ ೭೫೫೯ ಕಾಂಗ್ರೆಸ್ ಸದಸ್ಯರಾಗಿದ್ದಾರೆ. ಮಹಾರಾಷ್ಟ್ರ ಪ್ರಾಂತಿಕ ಕಾಂಗ್ರೆಸ್‌ಕಮಿಟಿಗೆ ಶ್ರೀ. ಕೇಶವರಾವ ಜೇಧೆಯವರನ್ನು ಅಧ್ಯಕ್ಷರನ್ನಾಗಿ ಆರಿಸುವವರಿದ್ದಾರೆ.

— ಮದ್ರಾಸ್ ಅಸೆಂಬ್ಲಿ ಅಧ್ಯಕ್ಷರಾದ ಸಾಂಬಮೂರ್ತಿಯವರು ಅಸೆಂಬ್ಲಿಯ ಕಾರ್ಯಾರಂಭದಕಾಲಕ್ಕೆ ಹೇಳುವ ಗೀತೆಯ ಸಂಬಂಧವಾಗಿ ಬೇರೆ ಬೇರೆ ದೇಶಗಳ ಶಾಸನ ಮಂಡಲಗಳ ಅಧ್ಯಕ್ಷರ ಸಂಗಡ ಮತ್ತು ಈ ದೇಶದ ಶಾಸನ ಮಂಡಲಗಳ ಪ್ರಮುಖರ ಸಂಗಡ ವಿಚಾರ ವಿನಿಮಯ ನಡೆಸಿದ್ದಾರೆ.

—ವಿಜಾಪುರ ಜಿಲ್ಲೆಯಲ್ಲಿ ನಡೆದಿರುವ ದುಷ್ಕಾಳ ಗ್ರಸ್ತ ಜನರ ಕೂಲಿ ಕೆಲಸವನ್ನು ಮುಂಬೈ ಸರಕಾರದವರು ಮುಂದರಿಸಿ ಆ ಜನರ ಸಹಾಯಾರ್ಥವಾಗಿ ೧ ಲಕ್ಷ ೫೬ ಸಾವಿರ ರೂ. ಗಳನ್ನು ವಿನಿಯೋಗಿಸುವರು.

—ಕಿಣೋಲಿ ಎಂಬಲ್ಲಿ ಒಕ್ಕಲತನದ ಪರಿಷತ್ತಿನ ಉದ್ಘಾಟನ ಸಮಾರಂಭವು ಮುಂಬೈ ಪ್ರಾಂತದ ಅರ್ಥಸಚಿವರಾದ ಶ್ರೀ. ಲಠ್ಠೆಯವರ ಹಸ್ತದಿಂದ ಕಳೆದ ೨೦ ನೆಯ ತಾರೀಖಿನ ದಿನ ಜರುಗಿತು. ಪರಿಷತ್ತಿಗೆ ೧೦ ಸಾವಿರ ಒಕ್ಕಲಿಗರು ಬಂದಿದ್ದರು.

—ಶಿಯಾ ಮುಸಲ್ಮಾನ್ ಪರಿಷತ್ತಿನವರು ಸ್ವಾತಂತ್ರ್ಯದ ಹೋರಾಟದಲ್ಲಿ ಕಾಂಗ್ರೆಸ್ಸಿನ ಸಂಗಡ ಸೇರಿದ್ದರಿಂದ ಕಾಂಗ್ರೆಸ್ ಅಧ್ಯಕ್ಷರಾದ ಪಂಡಿತಜಿಯವರು ಆ ಪರಿಷತ್ತಿನವರನ್ನು ಒಂದು ಪ್ರಕಟನೆ ಹೊರಡಿಸಿ ಅಭಿನಂದಿಸಿದ್ದಾರೆ.

—ಮುಸ್ಲಿಂ ಲೀಗಿನ ಮುಖ್ಯ ಸ್ಥಾನ ದಿಲ್ಲಿಯಿಂದ ಮುಂಬೈಗೆ ತಂದಿದ್ದಾರೆ. ವರ್ಕಿಂಗ್ ಕಮಿಟಿಗೆ ೧೧ ಜನರನ್ನು ಆರಿಸಿದ್ದಾರೆ.

## ಗಾಂಧೀಜಿಯವರ ಉಪದೇಶ.

"ಅಧರ್ಮದಿಂದ ನಡೆಯಲು ನಾವು ನಿಮಗೆ ಸಹಾಯ ಮಾಡುವುದಿಲ್ಲವೆಂದು ಸ್ಪಷ್ಟವಾಗಿ ಸರಕಾರಕ್ಕೆ ತಿಳಿಸುವುದು ಜಾಣರಾದ ಪ್ರಜೆಗಳಲ್ಲಿಯ ಪ್ರತಿಯೊಬ್ಬರ ಕರ್ತವ್ಯವೇ ಆಗಿದೆ. ದಾಸ್ಯವೃತ್ತಿ, ದುರ್ಬಲತೆ ಮತ್ತು ಆತ್ಮ ವಿಶ್ವಾಸದ ಅಭಾವ ಇವು ಹೀಗೆ ಹೇಳಲು ನಮಗೆ ಅವಕಾಶವನ್ನು ಕೊಡುವುದಿಲ್ಲ."

—ಯಂಗ್ ಇಂಡಿಯಾ ೩೦-೬-೨೦.

"ಹಿಂದುಸ್ಥಾನವು ಜಗತ್ತಿಗೆ ಕೆಲವು ಸಂಗತಿಗಳನ್ನು ಕಲಿಸಬೇಕಾಗಿದೆ. ಆದುದರಿಂದ ಯುರೋಪ ಖಂಡದ ಎಲ್ಲ ವಿಚಾರಗಳನ್ನೂ ಅಂಧತ್ವದಿಂದ ಅನುಕರಣ ಮಾಡಬಾರದು. ನಾನು ನನ್ನ ಆಯುಷ್ಯವನ್ನು ಭಾರತಮಾತೆಗೆ ಅರ್ಪಿಸಿದ್ದೇನೆ. ಅಹಿಂಸೆಯೇ ನನ್ನ ಧರ್ಮ. ಈ ತತ್ವವನ್ನನುಸರಿಸಿಯೇ ನಾನು ನನ್ನ ಸೇವೆಯನ್ನು ಮಾಡುವೆನು. ಏಕೆಂದರೆ, ಹಿಂದು ಧರ್ಮದ ಸಾರವೇ ಅಹಿಂಸೆಯು."

—ಯಂಗ್ ಇಂಡಿಯಾ ೧೧-೮-೨೦.

## ಸಂಘಟನೆಯೇ ಪ್ರಬಲ ಶಕ್ತಿ.

ಭಾಯಿ ಪರಮಾನಂದರವರ ಅಧ್ಯಕ್ಷತೆಯಲ್ಲಿ ಸಿಂಧ ಪ್ರಾಂತಿಕ ಹಿಂದು ಮಹಾ ಸಭೆಯ ಅಧಿವೇಶನವು ಕಳೆದ ೧೫ ನೆಯ ತಾರೀಖಿನ ದಿವಸ ಜರುಗಿತು. ಆಗ ಭಾಯೀಜಿಯವರು ತಮ್ಮ ಭಾಷಣದಲ್ಲಿ ಹಿಂದುಗಳಿಗೆ ಹೀಗೆ ಎಚ್ಚರಿಕೆ ಕೊಟ್ಟರು—



ಭಾಯಿ ಪರಮಾನಂದರು.

"ಈಗ ಪ್ರಾಂತಿಕ ಪ್ರಭುತ್ವವು ಹೇಗಾದರೂ ಪ್ರಾರಂಭವಾಗಿದೆಯಷ್ಟೆ. ಎಂದಮೇಲೆ ಹಿಂದು ಸಂಘಟನೆಯ ಚಟುವಟಿಕೆಯು ಇನ್ನು ಮೇಲೇಕೆ ಬೇಕು? ಎಂದು ಕೆಲವರು ಕೇಳುತ್ತಿದ್ದಾರೆ. ಈಗಲೂ ಇದು ಅತ್ಯಗತ್ಯವೆಂದೇ ನಾನು ಸಾರಿ ಸಾರಿ ಹೇಳುತ್ತೇನೆ.

ಒಂದು ಜನಾಂಗವು ಸುಖಶಾಂತಿಗಳಿಂದ ಬಾಳಬೇಕಾದರೆ ಅದರಲ್ಲಿರಬೇಕಾದ ಸದ್ಗುಣಗಳೆಲ್ಲವೂ ಹಿಂದು ಜನಾಂಗದಲ್ಲಿವೆ. ಹಿಂದುಗಳ ಪರಂಪರೆಯು ಉಜ್ವಲವಾದುದು. ಈ ಜನಾಂಗದಲ್ಲಿ ಅದ್ವಿತೀಯ ಶೂರರೂ ಮೇಧಾವಿಗಳೂ ಆಗಿಹೋಗಿದ್ದಾರೆ. ಅನೇಕ ಜನಾಂಗಗಳು ಕತ್ತಲೆಯಲ್ಲಿದ್ದಾಗ ಇದು ಪ್ರಭಾವಶಾಲಿಯಾಗಿದ್ದಿತು.

ಹೀಗಿದ್ದರೂ ಪರರ ಆಕ್ರಮಣವನ್ನು ಮಾತ್ರ ನಮ್ಮಿಂದ ತಡೆಯಲಾಗಲಿಲ್ಲ. ಏಕೆಂದರೆ, ನಮ್ಮಲ್ಲಿ ಸಂಘಟನೆಯಿರಲಿಲ್ಲ. ರಾಷ್ಟ್ರೀಯ ತಿಳುವಳಿಕೆಯಂತೂ ಶೂನ್ಯ. ಅಂತೆಯೇ ನಾವು ಪರಾಧೀನರಾದುದು. ಹಿಂದು ಜನಾಂಗವು ಒಂದು ರಾಷ್ಟ್ರವಾಗಿ ಜೀವಿಸಬೇಕಾಗಿದ್ದರೆ ಇದಕ್ಕೆ ಸಂಘಟನೆ ಅತ್ಯಾವಶ್ಯಕ.

ಹಿಂದುಗಳಾದ ನಾವು ಬಹುಸಂಖ್ಯಾಕರಿದ್ದೇವೆಂದು ಕೆಲವರು ಹೆಮ್ಮೆಪಟ್ಟು ಈ ವಿಷಯವನ್ನು ಉಪೇಕ್ಷಿಸುತ್ತಾರೆ. ಇದು ಸರಿಯಲ್ಲ. ಸಂಖ್ಯಾಧಿಕ್ಯಕ್ಕಿಂತಲೂ ಸಂಘಟನೆಯಲ್ಲಿಯೇ ಪ್ರಬಲವಾದ ಶಕ್ತಿಯಿರುತ್ತದೆಂದು ಲೆನಿನ್‌ನು ಹೇಳಿದ್ದಾನೆ. ಸುಸಂಘಟಿತರಾದ ಅಲ್ಪ ಸಂಖ್ಯಾಕರೇ ಆಳಲು ಅರ್ಹರಾಗುತ್ತಾರೆಂಬ ಮಾರ್ಕ್ಸನ ಸಿದ್ಧಾಂತವನ್ನೇ ಲೆನಿನ್‌ನು ಅನುಸರಿಸಿದನು. ಆದುದರಿಂದ ಹಿಂದುಗಳು ಸುಸಂಘಟಿತರಾಗಬೇಕು. ಹಿಂದು ಸಂಘಟನೆಯಾಗದಿದ್ದರೆ ಹಿಂದು ಸುಧಾರಣೆ ಮತ್ತು ಸಂಸ್ಕೃತಿಗಳೆಲ್ಲಾ ನಾಶವಾಗುವುದೇ ನಿಶ್ಚಯ.

### ಕಾಂಗ್ರೆಸ್ ಮತ್ತು ಮುಸಲ್ಮಾನರು.

ಮುಸ್ಲಿಂ ಲೀಗ್ ಮುಸಲ್ಮಾನ್ ಸಮಾಜದ ಮುಖವು. ಅದು ಕಾಂಗ್ರೆಸ್ಸನ್ನು ವಿರೋಧಿಸುತ್ತದೆ. ಮುಸಲ್ಮಾನ್ ಸಮಾಜವು ಪ್ರತ್ಯೇಕವಾಗಿಯೇ ಇರಬೇಕೆಂದು ಹೇಳುತ್ತಿದೆ. ಮುಸಲ್ಮಾನ್ ಎಂಬುದು ಒಂದು ರಾಷ್ಟ್ರವೆಂದೇ ಬ್ಯಾ. ಜಿನ್ನಾರವರು ಹೇಳುತ್ತಿದ್ದಾರೆ. ಹೀಗಿರುವಾಗ ಕಾಂಗ್ರೆಸ್ಸು ಹಿಂದು ಮುಸಲ್ಮಾನರನ್ನು ಒಂದುಮಾಡುವುದು ಹೇಗೆ ಶಕ್ಯ? ನಾನೇನೋ ಹಿಂದು ಮುಸಲ್ಮಾನ್ ಐಕಮತ್ಯವನ್ನು ಯಾವಾಗಲೂ ಅಪೇಕ್ಷಿಸುತ್ತಿದ್ದೇನೆ.

ಈಗಿನ ಜಾತಿ ನಿರ್ಣಯ ವಿಶಿಷ್ಟ ರಾಜ್ಯಪದ್ಧತಿಯಿಂದ ಕಾಂಗ್ರೆಸ್ ಪ್ರಾಂತ ಮತ್ತು ಮುಸಲ್ಮಾನ್ ಪ್ರಾಂತ ಎಂಬೆರಡು ತರದ ಪ್ರಾಂತಗಳು ಏರ್ಪಟ್ಟಿವೆಯಷ್ಟೆ. ಈ ಸಂದರ್ಭದಲ್ಲಿ ಘಟನಾ ಸಮಿತಿಯನ್ನು ಏರ್ಪಡಿಸಲಿಕ್ಕಾಗಿ ಕಾಂಗ್ರೆಸ್ ಪಕ್ಷವು ಪ್ರಯತ್ನಿಸುತ್ತಿರುವುದು ಮಹತ್ತರವಾದ ರಾಜಕೀಯ ದೋಷವು. ಈಗಿನ ರಾಜ್ಯಘಟನೆಯಲ್ಲಿ ದೋಷವಿದ್ದರೂ ಅದನ್ನು ನಿರಾಕರಿಸಕೂಡದೆಂದು ನಾನು ಅಜಮೀರದಲ್ಲಿ ಹಿಂದಕ್ಕೆ ಹೇಳಿದ್ದು ಈಗಲಾದರೂ ಸತ್ಯವಾಯಿತೆ? ಆಗ ಕಾಂಗ್ರೆಸ್ ಪಕ್ಷದ ಪತ್ರಿಕೆಗಳು ನನ್ನನ್ನು ತೀಕ್ಷ್ಣವಾಗಿ ಟೀಕಿಸಿದ್ದವಷ್ಟೆ.

ಮುಂದೆ ಬರುವ ಫೆಡರೇಶನ್ ರಾಜ್ಯಘಟನೆಯನ್ನೂ ಕಾಂಗ್ರೆಸ್ ಪಕ್ಷವು ಅನುಸರಿಸದೆ ಇರುವುದೇ ಇಲ್ಲ. ಇದು ಹಿಂದುಗಳ ಸ್ವಾಭಿಮಾನವನ್ನು ನಾಶಮಾಡುತ್ತದೆ. ಮುಸಲ್ಮಾನರ ಜಾತಿ ನಿಷ್ಠೆಗೆ ಹಿಂದುಗಳ ಹಕ್ಕು ಬಾಧ್ಯತೆಗಳನ್ನು ಆಹುತಿಕೊಡುತ್ತಿದೆ."

# ಮುಸ್ಲಿಂ ಲೀಗಿನ ಸಾಹಸ.

ಕಳೆದ ೧೫ ನೆಯ ತಾರೀಖಿನ ದಿವಸ ಲಖನೌ ಪಟ್ಟಣದಲ್ಲಿ ಮುಸ್ಲಿಂ ಲೀಗಿನ ೨೫ ನೆಯ ಅಧಿವೇಶನವು ಬ್ಯಾ. ಜಿನ್ನಾರವರ ಅಧ್ಯಕ್ಷತೆಯಲ್ಲಿ ಜರುಗಿತು. ಆದರಲ್ಲಿ ನಡೆದ ಕಾರ್ಯಕಲಾಪಗಳನ್ನೂ ಅಧ್ಯಕ್ಷರ ಭಾಷಣವನ್ನೂ ನೋಡಿದರೆ ಮುಸಲ್ಮಾನ್ ಸಮಾಜದ ಒಂದು ದೊಡ್ಡ ಭಾಗವು ಯಾವ ಪ್ರಕಾರ ತನ್ನ ಉದ್ದೇಶ ಸಾಧನೆಗೆ ಸಾಹಸಪಡುತ್ತಲಿದೆಯೆಂಬುದು ಸ್ಪಷ್ಟ ಗೊತ್ತಾಗುತ್ತದೆ.

ಬ್ಯಾ. ಜಿನ್ನಾರವರು ಲಖನೌ ಪಟ್ಟಣಕ್ಕೆ ಬಂದೊಡನೆ ಸ್ವಾಗತ ಸಂಘದವರು ಘನವಾದ ಸ್ವಾಗತವನ್ನಿತ್ತರು. ಸಂಭ್ರಮದ ಮೆರವಣಿಗೆಯಾಯಿತು. ಆದರೆ ಈ ಮುಸ್ಲಿಂ ಲೀಗಿಗೆ ಒಪ್ಪಿಗೆಯಿಲ್ಲದ ಮುಸಲ್ಮಾನರು ಕರೆ ನಿಶಾನೆಯನ್ನು ಹಿಡಿದು ಬ್ಯಾ. ಜಿನ್ನಾರವರ ವಿಷಯದಲ್ಲಿ ಅಸಂತೋಷವನ್ನು ಪ್ರದರ್ಶಿಸಿದರು. ಇವರ ಸಂಖ್ಯೆ ಅತ್ಯಲ್ಪವಾಗಿತ್ತು. ಹೊಡೆದಾಟ ಪ್ರಾರಂಭವಾಗಿ ಈ ಕರೆ ನಿಶಾನೆಯವರಿಗೆ ಹೆಚ್ಚಾಗಿ ಏಟು ಬಿದ್ದವು. ಕೊನೆಗೆ ಗಲಾಟೆ ನಿಂತು ಉತ್ಸವ ಸಾಂಗವಾಗಿ ನೆರವೇರಿತು.



ಬ್ಯಾ. ಜಿನ್ನಾರವರು.

### ಮುಸ್ಲಿಂ ಧ್ವಜವಂದನೆ.

ಈ ಅಧಿವೇಶನಕ್ಕೆ ಸಾಧಾರಣ ೨೦೦೦ ಪ್ರತಿನಿಧಿಗಳು ಸೇರಿದ್ದರು. ಬ್ರಹ್ಮದೇಶ, ಬಲುಚಿಸ್ಥಾನಗಳಿಂದಲೂ ಕೆಲವು ಪ್ರತಿನಿಧಿಗಳು ಬಂದಿದ್ದರು. ಆರಂಭದಲ್ಲಿ ಬ್ಯಾ. ಜಿನ್ನಾರವರ ಹಸ್ತದಿಂದ ಮುಸ್ಲಿಂ ಧ್ವಜವನ್ನು ನಿಲ್ಲಿಸಲಾಯಿತು. ಈ ಧ್ವಜವು ಹಸರು ಬಣ್ಣದ್ದಾಗಿಯೂ ಆದರಮೇಲೆ ಚಂದ್ರ ಮತ್ತು ನಕ್ಷತ್ರಗಳು ಚಿತ್ರಿಸಲ್ಪಟ್ಟದ್ದಾಗಿಯೂ ಇದ್ದಿತು. ಈ ಧ್ವಜವನ್ನು ನಿಲ್ಲಿಸಿದೊಡನೆ "ಅಲ್ಲಾ ಹೋ ಅಕಬರ" ಎಂಬ ಜಯಘೋಷ ಮಾಡಲ್ಪಟ್ಟಿತು.

### ಮುಸ್ಲಿಂ ಲೀಗಿನ ಮೂರು ಪ್ರತಿಜ್ಞೆ.

ಬ್ಯಾ. ಜಿನ್ನಾರವರು ಧ್ವಜವನ್ನು ನಿಲ್ಲಿಸಿದಮೇಲೆ ಹೀಗೆ ಭಾಷಣ ಮಾಡಿದರು— "ಸತ್ಯ, ಸೇವೆ ಮತ್ತು ಆಜ್ಞಾಧಾರಕತ್ವ ಇವು ಈ ಮುಸ್ಲಿಂ ಲೀಗಿನ ಮೂರು ಪ್ರತಿಜ್ಞೆಗಳು. ಈ ಧ್ವಜದಡಿಯಲ್ಲಿ ಎಲ್ಲ ಮುಸಲ್ಮಾನರೂ ಸೇರಿ ಈ ಮೂರು ಪ್ರತಿಜ್ಞೆಗಳನ್ನು ಪಾಲಿಸಬೇಕು. ಪ್ರತಿಯೊಬ್ಬ ಮುಸಲ್ಮಾನನೂ ಈ ಲೀಗಿನ ಉನ್ನತಿಯೇ ತನ್ನ ಉನ್ನತಿಯೆಂದು ತಿಳಿದು ಪ್ರಯತ್ನಿಸಬೇಕು. ಹೀಗೆ ಈ ಮಹಾನ್ ಸಂಸ್ಥೆಯ ಧ್ವಜದಡಿಯಲ್ಲಿ ಸೇರಿ ಕೆಲಸಮಾಡಿದರೆ ಯಾವ ಶಕ್ತಿಯೂ ನಿಮ್ಮನ್ನು ಎದುರಿಸಲಾರದು."

### ಇಸ್ಲಾಮಿ ಭಾಲೆ.

ಅನಂತರ ಲೀಗಿನ ಅಧಿವೇಶನ ಪ್ರಾರಂಭವಾಯಿತು. ಮಹಮುದಾಬಾದಿನ ರಾಜರು ಸ್ವಾಗತಪರ ಭಾಷಣಮಾಡಿದರು. ಪಂಜಾಬದ ಮುಖ್ಯ ಮಂತ್ರಿಗಳಾದ ಸರ್. ಸಿಕಂದರ ಹಯಾತಖಾನರು ಮುಂದಿನ ಅಧಿವೇಶನ ಲಾಹೋರಿನಲ್ಲಿ ಕೂಡಬೇಕೆಂತಲೂ ಬಂಗಾಲದ ಮುಖ್ಯ ಮಂತ್ರಿಗಳಾದ ಫಜಲುಲ್ ಹಕ್ಕರವರು ಕಲಕತ್ತಾದಲ್ಲಿ ಕೂಡಬೇಕೆಂತಲೂ ಆಮಂತ್ರಣಕೊಟ್ಟರು. ಹೀಗೆ ಮುಸ್ಲಿಂ ಲೀಗಿನ ಅಧಿವೇಶನ ಕೂಡಿಸಲು ಉತ್ಸಾಹದಿಂದ ಆಯಾಯ ಪ್ರಾಂತಗಳು ಮುಂದೆ ಬಂದುದನ್ನು ನೋಡಿ ಬ್ಯಾ. ಜಿನ್ನಾರವರು ಸಂತೋಷಪಟ್ಟು ಹೀಗೆ ಹೇಳಿದರು—

"ಇಸ್ಲಾಮಿ ಭಾಲೆಗೆ ಪಂಜಾಬ ಮತ್ತು ಬಂಗಾಲ ಇವೆರಡೂ ಎರಡು ತುದಿಗಳು. ಸಂಯುಕ್ತ ಪ್ರಾಂತವಾದರೋ ಆದರ ಮಧ್ಯ ಪ್ರದೇಶ. ಬರುವ ಫೆಬ್ರುವರಿ ತಿಂಗಳಲ್ಲಿ ಈ ಲೀಗಿನ ವಿಶೇಷ ಅಧಿವೇಶನವು ಲಾಹೋರಿನಲ್ಲಿಯೂ ಅನಂತರ ಬೇಸಿಗೆ ಕಾಲದಲ್ಲಿ ಕಲಕತ್ತಾ ಪಟ್ಟಣದಲ್ಲಿಯೂ ಕೂಡುವುದು."

### ಬ್ಯಾ. ಜಿನ್ನಾರವರ ಅಭಿನಂದನ.

ಬಂಗಾಲ ಪ್ರಜಾಪಕ್ಷದ ಪ್ರಮುಖರಾದ ಮತ್ತು ಮುಖ್ಯಮಂತ್ರಿಗಳಾದ ಫಜಲುಲ್ ಹಕ್ಕರು ತಮ್ಮ ಅನುಯಾಯಿಗಳೊಡನೆ ಮುಸ್ಲಿಂ ಲೀಗಿನ ಅಧಿವೇಶನಕ್ಕೆ ಬಂದೊಡನೆ ಸಭೆಯು ಬಹು ಸಂತೋಷದಿಂದಲೂ ಆದರದಿಂದಲೂ ಬರಮಾಡಿಕೊಂಡಿತು. ಬ್ಯಾ. ಜಿನ್ನಾರವರ ಮುತ್ಸದ್ದಿತನದಿಂದಲೇ ಈ ಪ್ರಕಾರ ಪ್ರಜಾ ಪಕ್ಷವು ಇದರಲ್ಲಿ ಸೇರಿತೆಂದು ಜಿನ್ನಾರವರನ್ನು ಎಲ್ಲರೂ ಅಭಿನಂದಿಸಿದರು. ಬಂಗಾಲ ಪ್ರಜಾ ಪಕ್ಷವೂ ಲೀಗಿನಲ್ಲಿ ಸೇರಿದ್ದರಿಂದ ಸಭಿಕರ ಉತ್ಸಾಹ ದ್ವಿಗುಣಿತವಾಯಿತು.

### ಸಭಾಸದತ್ವ ತೆಗೆದುಹಾಕಲ್ಪಟ್ಟಿತು.

ಲೀಗಿನ ವಿರುದ್ಧವಾಗಿ ನಡೆದುದರಿಂದ ಮದ್ರಾಸಿನ ಮಂತ್ರಿಗಳಾದ ಯಾಕೂಬ ಹಸನರವರನ್ನು ಸಭಾಸದತ್ವದಿಂದ ತೆಗೆದು ಹಾಕಿದರು. ಶಿಯಾ ಪರಿಷತ್ತಿನ ಅಧ್ಯಕ್ಷರಾದ ಸರ್. ವಜೀರ ಹಸನ್‌ರವರಿಗೂ ಇದೇ ನಿಯಮವನ್ನು ಹಚ್ಚಿದರು.

### ಕಾಂಗ್ರೆಸ್ ರಾಜ್ಯ ಹಿಂದು ರಾಜ್ಯ!

ಬ್ಯಾ. ಜಿನ್ನಾರವರು ತಮ್ಮ ಮಹತ್ವದ ಭಾಷಣದಲ್ಲಿ ಹೀಗೆ ಹೇಳಿದರು— "ಕಾಂಗ್ರೆಸ್ ರಾಜ್ಯವೆಂದರೆ ಹಿಂದು ಜನರ ರಾಜ್ಯವೆಂಬುದನ್ನು ನೀವು ಚೆನ್ನಾಗಿ ಲಕ್ಷದಲ್ಲಿಡಿರಿ. ಈಗ ಏಳು ಪ್ರಾಂತಗಳಲ್ಲಿಯೂ ಅದೇ ಅನುಭವಕ್ಕೆ ಬಂದಿದೆ. ಕಾಂಗ್ರೆಸ್ ರಾಷ್ಟ್ರೀಯ ಸಭೆಯೆಂಬ ಹೆಸರಿನಿಂದ ಕೆಲಸಮಾಡುತ್ತಿದ್ದರೂ ಹಿಂದು ಮಹಾ ಸಭೆಯ ಕಾರ್ಯವನ್ನೇ ಅದು ಮಾಡುತ್ತದೆ. ಹಿಂದು ಮಹಾ ಸಭೆಯಾದರೂ ಒಂದು ಪಾಲಿಗೆ ಬೇಕು. ಏಕೆಂದರೆ, ಆದು ತನ್ನ ಉದ್ದೇಶವನ್ನೇನೂ ಮುಚ್ಚಿಟ್ಟಿಲ್ಲ.

ಕಾಂಗ್ರೆಸ್ ಹಿಂದು ಮಹಾ ಸಭೆಗಿಂತಲೂ ಅನರ್ಥಕರವಾದುದು. ರಾಷ್ಟ್ರೀಯ ಹೆಸರಿನಿಂದ ಜನರಿಗೆ ದಿಕ್ಕನ್ನೇ ತಪ್ಪಿಸುತ್ತದೆ. ಹಿಂದಿ ಭಾಷೆ, ವಂದೇ ಮಾತರಂ ರಾಷ್ಟ್ರಗೀತೆ, ಮೂರು ಬಣ್ಣಗಳ ರಾಷ್ಟ್ರೀಯ ಧ್ವಜ, ಈ ಮೂರೂ ಹಿಂದುಗಳ ವರ್ಚಸ್ಸಿನ ದ್ಯೋತಕಗಳಾಗಿವೆ. ಹಿಂದಿಯು ಅಖಿಲ ಹಿಂದುಗಳ ರಾಷ್ಟ್ರೀಯ ಭಾಷೆಯಾಗುವುದು. ಇಷ್ಟೇ ಅಲ್ಲ; ವಂದೇ ಮಾತರಂ ಪದ್ಯ ರಾಷ್ಟ್ರಗೀತೆಯೆಂದೇ ಎಲ್ಲರ ತಲೆಯ ಮೇಲೆ ಬರುವುದು. ಸಕಲರೂ ಕಾಂಗ್ರೆಸ್ಸಿನ ಮೂರು ಬಣ್ಣಗಳ ನಿಶಾನಿಗೇನೇ ನಮಸ್ಕಾರಮಾಡಬೇಕೆಂದು ಒತ್ತಾಯ ಮಾಡಲ್ಪಡುವುದು.

ಸ್ವಲ್ಪ ಅಧಿಕಾರ ದೊರೆತೊಡನೆ ಕಾಂಗ್ರೆಸ್ ಪಕ್ಷವೆಂದರೆ ಬಹುಸಂಖ್ಯಾಕರ ಪಕ್ಷವೆಂತಲೂ ಈ ಹಿಂದುಸ್ಥಾನವು ಹಿಂದುಗಳ ರಾಷ್ಟ್ರವೆಂತಲೂ ಅದು ಹೇಗೆ ನಡೆಯಲು ಪ್ರಾರಂಭಿಸಿತೆಂಬುದನ್ನು ನೋಡಿರಿ.

### ಸ್ವಜನ ದ್ರೋಹದಿಂದ ಕಾಂಗ್ರೆಸ್ಸಿನ ಬಹುಮಾನ.

ಕಾಂಗ್ರೆಸ್ಸಿಗೆ ಸೇರುವ ಮುಸಲ್ಮಾನರು ಸ್ವಜನರಿಗೆ ದ್ರೋಹ ಮಾಡುತ್ತಿದ್ದಾರೆ. ಸ್ವಾರ್ಥಕ್ಕಾಗಿ ಕೆಲವರು ಕಾಂಗ್ರೆಸ್ಸಿನಲ್ಲಿ ಸೇರಿ

ಮಂತ್ರಿಗಳಾದರು. ಸ್ವಪಕ್ಷದ ದ್ರೋಹವನ್ನು ಯಾವ ಮುಸಲ್ಮಾನರು ಎಷ್ಟು ಹೆಚ್ಚು ಮಾಡುತ್ತಾರೋ ಅಷ್ಟು ಕಾಂಗ್ರೆಸ್ಸಿನಿಂದ ಅವರಿಗೆ ಹೆಚ್ಚಿನ ಬಹುಮಾನ. ಪ್ಯಾಲಿಸ್ಟಾಯಿನ್ ವಿಚಾರವಾಗಿ ಬ್ರಿಟಿಶ್ ಸರಕಾರವು ಮುಸ್ಲಿಂ ಅಂತಃಕರಣಕ್ಕೆ ಬಹು ನೋವನ್ನುಂಟುಮಾಡಿದೆ. ಈ ಕಾಲದಲ್ಲಿ ಎಲ್ಲ ಮುಸಲ್ಮಾನರು ಈ ಲೀಗಿನ ಧ್ವಜದಡಿಯಲ್ಲಿ ಸೇರಿ ಪ್ರಯತ್ನಿಸಬೇಕು.

### ಬ್ರಿಟಿಶ್ ಸರಕಾರದ ವಚನಭಂಗ.

ಅಲ್ಪ ಸಂಖ್ಯಾಕರ ಹಿತರಕ್ಷಣೆಯ ವಿಷಯದಲ್ಲಿ ಬ್ರಿಟಿಶ್ ಸರಕಾರವು ಕೊಟ್ಟ ವಚನದಂತೆ ಈಗ ನಡೆಯುತ್ತಾ ಇಲ್ಲ. ಕಾಂಗ್ರೆಸ್ಸಿಗೆ ಅನುಕೂಲವನ್ನು ಕಲ್ಪಿಸಿಕೊಡುತ್ತಾ ಇದೆ. ಕಾಂಗ್ರೆಸ್ಸಿನ ಈ ಧೋರಣದಿಂದ ದೇಶದಲ್ಲಿ ಕಲಹ ವಿರೋಧಗಳು ಹೆಚ್ಚುವವು. ಆಗ ಬ್ರಿಟಿಶ್ ಸಾಮ್ರಾಜ್ಯಕ್ಕೆ ಐಕಮತ್ಯದಿಂದ ವಿರೋಧಿಸಲು ಶಕ್ಯವಾಗುವುದಿಲ್ಲ.

ಕಾಂಗ್ರೆಸ್ಸು ಮುಸಲ್ಮಾನರಿಗೆ ಶರಣಾಗತರಾಗಿ ಬರಲು ಹೇಳುತ್ತದೆ. ನಾವು ಎಂದೂ ಹಾಗೆ ಬರಲು ಸಿದ್ಧರಿಲ್ಲ. ಮಂತ್ರಿಪದವಿಗಳ ಆಶೆಗಾಗಿ ಕೆಲವು ಸ್ವಾರ್ಥಿಗಳು ಕಾಂಗ್ರೆಸ್ಸಿಗೆ ಶರಣಾಗತರಾಗಿದ್ದಾರೆ. ಈಗ ಒಪ್ಪಂದದ ಮಾತು ವ್ಯರ್ಥವೇ ಸರಿ. ನಾವು ಸಂಘಟನೆಯಿಂದ ಸ್ವಾವಲಂಬಿಗಳಾಗಲೇಬೇಕಾಗಿದೆ. ನಿಮಗೆ ಜಾತಿನಿಷ್ಠರೂ, ಪ್ರತಿಗಾಮಿಗಳೂ, ರಾಜನಿಷ್ಠರೂ ಎಂದು ಅನೇಕರು ಹೇಳಬಹುದು. ಇವುಗಳಿಗೆ ಅಂಜಬೇಡಿರಿ. ಮುಸಲ್ಮಾನರನ್ನು ಅಲ್ಲಗಳೆಯುವ ಈ ಪ್ರಯತ್ನವು ಜಗತ್ತಿನಲ್ಲಿ ನಡದೇ ಇದೆ. ದುರ್ಬಲರಾಗಿದ್ದರೆ ಅವರ ಗತಿಯೇನಾಗುತ್ತದೆಂಬುದನ್ನು ಅಬಸೀನಿಯಾ, ಚೀನ, ಸ್ಪೇನ್, ಪ್ಯಾಲಿಸ್ಟಾಯಿನ್ ಇವು ಹಿಂದುಸ್ಥಾನದ ಮುಸಲ್ಮಾನರಿಗೆ ಬುದ್ಧಿಯನ್ನು ಕಲಿಸುತ್ತವೆ.

### ಕಾಂಗ್ರೆಸ್ಸಿನ ನುಡಿನಡೆಗಳಲ್ಲಿ ಭೇದ.

ಕಾಂಗ್ರೆಸ್ ಸಂಪೂರ್ಣ ಸ್ವಾತಂತ್ರ್ಯದ ಮಾತನ್ನಾಡುತ್ತದೆ. ಕೈಯಲ್ಲಿ ೧೯೩೫ ನೆಯ ಇಸವಿ ಶಾಸನವನ್ನು ಹಿಡಿದಿದೆ. ಇದು ಹಾಸ್ಯಾಸ್ಪದವಾದುದಲ್ಲವೆ? ಗಾಂಧಿ-ಆಯರ್ವಿನ್ ಒಪ್ಪಂದದಲ್ಲಿ ಸ್ವಾತಂತ್ರ್ಯವಿತ್ತೊ? ಮೊನ್ನೆ ಅಧಿಕಾರವನ್ನು ಸ್ವೀಕರಿಸುವಾಗ ಸ್ವಾತಂತ್ರ್ಯವಿತ್ತೊ? ಫೆಡರೇಶನ್ನಿನ ವಿಚಾರವಾಗಿ ಬಾಯಲ್ಲಿ ಈಗ ನಿಷೇಧಿಸುತ್ತದೆ. ಮುಂದೆ ಫೆಡರೇಶನ್ನನ್ನೂ ಇದೇ ಅನುಸರಿಸುವುದು. ಸಮತಾವಾದ, ಕೂಲಿಕಾರ ರಾಜ್ಯ, ಇವೆಲ್ಲಾ ಈ ದೇಶದಲ್ಲಿ ಈಗ ಸಾಧ್ಯವಿಲ್ಲ. ಬಡತನವನ್ನೇ ಮುಂದೆಮಾಡಿ ಹೇಳುವ ಮಾತಿಗೆ ಮರುಳಾಗಬೇಡಿರಿ.

### ನೀವು ಅಂಜುವ ಕಾರಣವಿಲ್ಲ.

ಮುಸಲ್ಮಾನರು ಈ ಕಾಲದಲ್ಲಿ ಸಂಘಟಿತರಾಗಿ ಈ ಲೀಗಿನ ಧ್ವಜದಡಿಯಲ್ಲಿ ಸೇರಿ ಕೆಲಸಮಾಡಿದರೆ ೮ ಕೋಟಿ ಜನರಾದ ನೀವು ಯಾರಿಗೂ ಅಂಜಬೇಕಾದ ಪ್ರಸಂಗ ಬರುವುದಿಲ್ಲ. ನಿಮ್ಮ ಕೈಯಲ್ಲಿ ಸಾಮರ್ಥ್ಯವಿದೆ. ಅದರ ಉಪಯೋಗ ಮಾಡುವುದನ್ನು ಕಲಿತರೆ ಸಾಕು."

---

## ಗೋಸಂಹಾರ ಯಾರ ಸಂಹಾರ?

ಹಿಂದುಸ್ಥಾನದಲ್ಲಿ ಗೋರಕ್ಷಣೆ ಸರಿಯಾಗಿ ಆಗದಿರುವುದೂ ಗೋಸಂಹಾರವಾಗುವುದೂ ಹಿಂದಿ ಜನಾಂಗದ ಆಯುಷ್ಯ, ಆರೋಗ್ಯ, ಶಕ್ತಿ, ಸಂಪತ್ತುಗಳ ಸಂಹಾರಕ್ಕೇನೇ ಕಾರಣವಾಗಿದೆಯೆಂಬುದು ಜನಸಾಮಾನ್ಯಕ್ಕೆ ಇನ್ನೂ ಮನವರಿಕೆಯಾಗದಿರುವುದು ವಿಷಾದದ ಸಂಗತಿಯು. ಈ ಸಂಬಂಧವಾಗಿ ಯಾವ ಮಹಾವಿಭೂತಿಯಾಗಲಿ ಅಥವಾ ಸಂಘವಾಗಲಿ ದೇಶದಲ್ಲಿ ಅದ್ಭುತ ಜಾಗೃತಿಯನ್ನುಂಟುಮಾಡಿ ಸರಕಾರವನ್ನೂ ಜನಾಂಗವನ್ನೂ ಎಚ್ಚರಗೊಳಿಸದಿರುವುದು ದುಃಖದ ಸಂಗತಿಯು.

ಹಿಂದುಸ್ಥಾನದಂತಹ ದೇಶದಲ್ಲಿ ಗೋಸಂರಕ್ಷಣೆಯು ಎಷ್ಟು ಅಗತ್ಯವಾಗಿದೆಯೆಂಬುದನ್ನು ನಾವು ಅನೇಕ ಸಾರೆ ಪ್ರಕಟಸಿದ್ದೇವೆ. ಕಳೆದ ೧೧ ನೆಯ ತಾರೀಖನ್ನು ಹಿಂದು ಮಹಾಸಭೆಯವರು "ಗೋರಕ್ಷಣದಿನ" ಎಂದು ಆಚರಿಸಿದರು. ಆಗ ಪುಣೆ ಸಭೆಯಲ್ಲಿ ಈ ಸಂಬಂಧವಾದ ಒಂದು ಗೊತ್ತುವಳಿಯಾಗುವಾಗ ಶ್ರೀ. ವಿ. ವಾ. ದಿವೇಕರ ಎಂಬುವವರು, ಒಂದು ಮನನೀಯವಾದ ಭಾಷಣವನ್ನು ಮಾಡಿದರು. ಅದರ ಮುಖ್ಯಾಂಶ ಹೀಗಿದ್ದಿತು:-

### ಗೋವುಗಳಿಂದಾಗುವ ಪ್ರಯೋಜನ.

"ಗೋವುಗಳನ್ನು ಹಿಂದುಗಳಾದ ನಾವು ಸಾವಿರಾರು ವರುಷಗಳಿಂದಲೂ ಬಹು ಪೂಜ್ಯವಾದವುಗಳೆಂದೇ ತಿಳಿಯುತ್ತಾ ಬಂದಿದ್ದೇವೆ. ಗೋಗ್ರಾಸವನ್ನು ಕೊಡುವುದು ನಮ್ಮ ಪ್ರತಿನಿತ್ಯದ ಧರ್ಮವಾಗಿಯೂ ಇದೆ. ಈ ಭಾವನೆ ಮತ್ತು ಕ್ರಿಯೆಗಳು ತೃಪ್ತಿಕರವಾಗಿ ಈಗ ನಮ್ಮಿಂದ ನಡೆಯುತ್ತಾ ಇಲ್ಲ. ಮಾನ್ಯವರ ಮಾಲವೀಜಿಯವರು ತರುಣರಿಗೆ ಹೇಳುವುದೇನು? "ಗೋವುಗಳನ್ನು ತಾಯಿಯಂತೆ ಪೂಜ್ಯ ಭಾವದಿಂದ ಸಂರಕ್ಷಿಸಿರಿ. ಗೋಕ್ಷೀರವನ್ನು ಯಥೇಚ್ಛವಾಗಿ ಸೇವಿಸಿರಿ. ಗೋವು ವೈಭವದ ಜನನಿಯು." ಈಗಿನ ವ್ಹಾಯಿಸ್‌ರಾಯರಾದ ಲಾರ್ಡ ಲಿನ್‌ಲಿಥಗೋರವರು ಹೀಗೆ ಹೇಳಿದ್ದಾರೆ—

"ಹಿಂದಿ ಜನರ ಒಕ್ಕಲತನದ ಭಾರವೆಲ್ಲಾ ಈ ದೇಶದ ಆಕಳು ಮತ್ತು ಎತ್ತುಗಳ ಸಂರಕ್ಷಣೆಯ ಮೇಲೆಯೇ ಮುಖ್ಯವಾಗಿದೆ."

ಧಾರ್ಮಿಕ ಮತ್ತು ಆರ್ಥಿಕ ದೃಷ್ಟಿಗಳಿಂದ ಗೋಮಾತೆಯು ನಮಗೆ ಇಷ್ಟು ಆದರಣೀಯವಾಗಿದ್ದರೂ ಅದರ ರಕ್ಷಣೆಯ ವಿಷಯದಲ್ಲಿ ನಾವು ಲಕ್ಷಿಸದಿರುವುದು ಅನುಚಿತವಾಗಿಲ್ಲವೆ? ಪಾಶ್ಚಾತ್ಯ ದೇಶಗಳ ಒಕ್ಕಲತನವು ಹೆಚ್ಚಾಗಿ ಯಂತ್ರ ಶಕ್ತಿಯ ಮೇಲೆಯೇ ಇದೆ. ಆದರೆ ಹಿಂದುಸ್ಥಾನದ ಸ್ಥಿತಿಯು ಮಾತ್ರ ಹಾಗಿಲ್ಲ. ಇಲ್ಲಿ ಆಕಳು ಮತ್ತು ಎತ್ತುಗಳ ಸುಸ್ಥಿತಿ ಮತ್ತು ಸಮೃದ್ಧಿಗಳೇ ಅತ್ಯಗತ್ಯ. ಹೀಗಿರುವಾಗ ದಿನೆ ದಿನೆ ಇವುಗಳ ಸಂಖ್ಯೆ ಕಡಿಮೆಯಾಗುತ್ತಿರುವುದು ರಾಷ್ಟ್ರೀಯ ವಿಪತ್ತೇ ಸರಿ.

ಹಿಂದುಸ್ಥಾನದಲ್ಲಿ ೧೦೦ ಜನರಿಗೆ ೬೧ ದನಗಳಂತೆ ಇವೆ. ಆದರೆ ಈ ಪ್ರಮಾಣವು ಬೇರೆ ಸುಧಾರಿಸಿದ ದೇಶಗಳಲ್ಲಿ ಬಹು ಹೆಚ್ಚಾಗಿದೆ. ಡೆನ್ಮಾರ್ಕ ದೇಶದಲ್ಲಿ ೭೪ ರಂತೆ ನ್ಯೂಜಿಲ್ಯಾಂಡ್‌ದಲ್ಲಿ ೧೫೦ ರಂತೆ, ಆಸ್ಟ್ರೇಲಿಯಾದಲ್ಲಿ ೨೪೯ ರಂತೆ, ಇವೆ. ೧೯೩೦ ರಿಂದ ೧೯೩೫ ರೊಳಗಾಗಿ ೫ ವರುಷಗಳಲ್ಲಿ ೫| ಲಕ್ಷ ದನಗಳ ಸಂಖ್ಯೆ ಕಡಿಮೆಯಾಗಿದೆಯೆಂದು ಸರಕಾರದ ಲೆಕ್ಕದಿಂದಲೇ ಗೊತ್ತಾಗುತ್ತದೆ. ಹಿಂದುಸ್ಥಾನದಲ್ಲಿ ಹೈನಿನ ಉದ್ಯೋಗವನ್ನು ಹೆಚ್ಚಿಸುವುದು ಅಗತ್ಯವಾಗಿದೆಯೆಂದೇ ಸರಕಾರದಿಂದ ನಿಯಮಿಸಲ್ಪಟ್ಟ ವಿಚಾರಣಾಸಮಿತಿಯ ವರದಿಯಲ್ಲಿ ಮಿ. ರಾಯಿಟ ಇವರು ಸ್ಪಷ್ಟವಾಗಿ ತಿಳಿಸಿದ್ದಾರೆ.

ಸೈನ್ಯಕ್ಕಾಗಿ ಪ್ರತಿವರುಷ ೩| ಲಕ್ಷ ಗೋವುಗಳನ್ನು ಸಂಹಾರ ಮಾಡುವುದಾಗಿ ಹಿಂದಕ್ಕೆ ಅಸೆಂಬ್ಲಿಯಲ್ಲಿಯೇ ಹೇಳಿದ್ದರು. ಈ ದೇಶದ ಆರ್ಥಿಕ ಅಭಿವೃದ್ಧಿಗೆ ಸಾಧನವಾದ ಗೋಸಂರಕ್ಷಣೆಯ ವಿಷಯದಲ್ಲಿ ಲಕ್ಷಿಸಿ ಗೋಸಂಹಾರವಾಗದಂತೆ ಸರಕಾರದಿಂದ ಶಾಸನ ಏರ್ಪಡಲು ಪ್ರಯತ್ನಿಸುವುದು ಪ್ರತಿಯೊಬ್ಬ ರಾಷ್ಟ್ರೀಯನೆಂಬ ಹಿಂದುವಿನ ಕರ್ತವ್ಯವೇ ಆಗಿದೆ."

## ಸಮತಾವಾದ ಮತ್ತು ವರ್ಣಭೇದ.

(ಡಾ. ಅಂಬೇಡಕರರ ಭಾಷಣ.)

"ಹಿಂದುಸ್ಥಾನದ ಸಮತಾವಾದಿಗಳು ಹಿಂದುಗಳಲ್ಲಿರುವ ವರ್ಣಭೇದವನ್ನು ತೆಗೆದುಹಾಕಲು ಪ್ರಯತ್ನಿಸದೆ ಕೇವಲ ಆರ್ಥಿಕ ಸಮಾನತೆಯ ಕಡೆಗೇನೇ ಲಕ್ಷಿಸಿದ್ದಾರೆ. ಯುರೋಪದ ಸಮತಾವಾದಿಗಳಂತೆಯೇ ಇವರೂ ಆರ್ಥಿಕ ಸಮಾನತೆಯೊಂದನ್ನೇ ಅಪೇಕ್ಷಿಸುತ್ತಿದ್ದಾರೆ.



ಡಾ. ಅಂಬೇಡಕರರು.

ಮನುಷ್ಯನು ಒಂದು ಆರ್ಥಿಕ ಪ್ರಾಣಿಯಾಗಿದ್ದಾನೆಯೆ? ಆತನ ಆಕಾಂಕ್ಷೆ ಭಾವನೆಗಳೆಲ್ಲಾ ಹಣದಿಂದಲೇ ಬಂಧಿತವಾಗಿವೆಯೆ? ಸಂಪತ್ತೆಂಬುದೊಂದೇ ಶಕ್ತಿಯು ಈ ಪ್ರಪಂಚದಲ್ಲುಂಟೆ? ರಾಜಕೀಯ ಮತ್ತು ಸಾಮಾಜಿಕ ಸುಧಾರಣೆಗಳೆಲ್ಲಾ ಭ್ರಮವಿಶಿಷ್ಟವಾದವುಗಳೆಂದೂ ಆರ್ಥಿಕ ಸುಧಾರಣೆಯೊಂದೇ ಎಲ್ಲ ಸುಧಾರಣೆಗಳ ಮೂಲವೆಂದೂ ಇವರು ಹೇಳುತ್ತಿದ್ದಾರಷ್ಟೆ. ವಿಚಾರಪರರು ಇವರ ಈ ಅಭಿಪ್ರಾಯವನ್ನು ಹೇಗೆ ಒಪ್ಪುವರು?

ಹಿಂದುಸ್ಥಾನದಲ್ಲಿ ಲಕ್ಷಾಂತರ ಜನರು ನಿರ್ಧನಿಕರಾದ ಸಾಧುಗಳ ಮತ್ತು ಫಕೀರರ ಆಜ್ಞೆಯನ್ನೇಕೆ ಮಾನ್ಯಮಾಡುತ್ತಿದ್ದಾರೆ? ಲಕ್ಷಾಂತರ ಜನರು ತಮ್ಮ ಮನೆಯ ವಸ್ತ್ರಾಭರಣಗಳನ್ನು ಕೂಡಾ ಮಾರಿ, ಕಾಶಿ, ಮಕ್ಕಾ ಮೊದಲಾದ ಸ್ಥಳಗಳಿಗೆ ಏಕೆ ಹೋಗುತ್ತಿದ್ದಾರೆ? ಹಿಂದುಸ್ಥಾನದ ಚರಿತ್ರೆಯು ನಮಗೆ ತಿಳಿಸುವುದೇನಂದರೆ ಧಾರ್ಮಿಕ ಶಕ್ತಿಯೂ ಒಂದು ಮಹಾ ಶಕ್ತಿಯಾಗಿಯೇ ಈ ದೇಶದಲ್ಲಿದೆ. ಮ್ಯಾಜಿಸ್ಟ್ರೇಟರ ಆಜ್ಞೆಗಿಂತಲೂ ಪುರೋಹಿತರ ಅಪ್ಪಣೆಯನ್ನು ಗೌರವಿಸಿ ನಡೆಯುವ ಜನರು ಈ ದೇಶದಲ್ಲಿ ಕೋಟಿಗಟ್ಟಲೆ ಇದ್ದಾರೆ. ಧಾರ್ಮಿಕ ಮತ್ತು ಸಾಮಾಜಿಕ ಶಕ್ತಿಗಳಿಂದ ನಡೆಯುತ್ತಿರುವ ಇಂತಹ ಅನೇಕ ಕಾರ್ಯಗಳು ಎಲ್ಲಿಯವರೆಗೂ ಲೋಪವಾಗುವುದಿಲ್ಲವೋ ಅಲ್ಲಿಯವರೆಗೆ ಕೇವಲ ಆರ್ಥಿಕ ಸ್ಥಿತಿಯೊಂದರಿಂದಲೇ ಸಮಾನತೆಯನ್ನುಂಟುಮಾಡುವುದು ಶಕ್ಯವೇ ಇಲ್ಲ.

### ವರ್ಣಭೇದ ರಾಕ್ಷಸನ ಸಂಹಾರ.

ಹಿಂದುಸ್ಥಾನದ ಸಮತಾವಾದಿಗಳು ಮಾಡುತ್ತಿರುವ ದೊಡ್ಡ ತಪ್ಪೆಂದರೆ ಯುರೋಪದಲ್ಲಿ ಸಂಪತ್ತೇ ಒಂದು ಶಕ್ತಿಯಾಗಿರುವಂತೆ ಹಿಂದುಸ್ಥಾನದಲ್ಲಿಯೂ ಅದೊಂದೇ ಶಕ್ತಿಯಿದೆಯೆಂದು ತಿಳಿದು ಅದರ ಸುಧಾರಣೆಗಾಗಿಯೇ ಪ್ರಯತ್ನಿಸುತ್ತಿರುವುದು.

ಧಾರ್ಮಿಕ ಶಕ್ತಿಯು ಎಂತಹ ಪ್ರಬಲವಾದುದೆಂಬುದಕ್ಕೆ ರೋಮ. ದೇಶದ ಹಿಂದಿನ ಚರಿತ್ರೆಯೇ ಒಂದು ದೃಷ್ಟಾಂತವಾಗಿದೆ. ಈ ದೇಶದಲ್ಲಿ ಈಗ ಸಮಾಜ ಸುಧಾರಣೆ ಮಾಡದೆ ಆರ್ಥಿಕ ಸಮಾನತೆಯನ್ನುಂಟುಮಾಡುವುದು ನಿಮಗೆ ಶಕ್ಯವೆ? ಎಂಬುದೇ ಸಮತಾವಾದಿಗಳಿಗೆ ನನ್ನ ಪ್ರಶ್ನೆ.

ಆರ್ಥಿಕ ಸಮಾನತೆಯುಂಟಾಗಬೇಕಾದರೆ ಅಂಥ ಮಹತ್ವದ ಕ್ರಾಂತಿಯೇ ಉಂಟಾಗಬೇಕಷ್ಟೆ. ಹಾಗೆ ಕ್ರಾಂತಿಮಾಡಲು ಜನರು ಒಂದಾಗುವರೆ? ಜಾತಿ- ಪಂಥಗಳನ್ನೂ, ಬ್ರಾಹ್ಮಣ - ಶೂದ್ರ ಎಂಬುದನ್ನೂ, ಸ್ಪೃಶ್ಯ-ಅಸ್ಪೃಶ್ಯ ಎಂಬುದನ್ನೂ ಬಿಟ್ಟು ಕ್ರಾಂತಿಗೆ ಜನರು ಒಂದಾಗುವರೆ? ನಿರ್ಧನಿಕರಾದ ಈಗಿನ ಜನರು ಜಾತಿ ಮತ ಪಂಥಗಳ ಮೇಲು ಕೀಳುಗಳನ್ನೇನೂ ಈಗ ಎಣಿಸುತ್ತಾ ಇಲ್ಲವೆ?

ಹಣವಿನ ಆಶೆಗಾಗಿ ಎಲ್ಲರೂ ಕೂಡಿ ಕ್ರಾಂತಿಮಾಡಿದರೆಂದು ತಿಳಿದರೂ ಅನಂತರ ಎಲ್ಲರಿಗೂ ಸಮಾನವಾದ ಸ್ವಾತಂತ್ರ್ಯವಿರಬೇಕೆಂದೇ ಅವರು ಅಪೇಕ್ಷಿಸಲಿಕ್ಕಿಲ್ಲವೆ? ಹಾಗೆ ಅವರಿಗೆ ಜಾತಿ ಮತ ಪಂಥಗಳ ಯಾವ ಮೇಲು ಕೀಳುಗಳೂ ಆಮೇಲೆ ಅಂಟುವುದಿಲ್ಲವೆಂಬುದನ್ನು ಮನಗಾಣಿಸಿ ಕೊಡುವವರಾರು? ಆ ಮೇಲಾದರೂ ಸಮತಾವಾದಿಗಳು ಇವುಗಳ ನಾಶಕ್ಕಾಗಿ ಪ್ರಯತ್ನಿಸಲೇ ಬೇಕಾಗುವುದಷ್ಟೆ. ಆದುದರಿಂದ ಹಿಂದುಸ್ಥಾನದಲ್ಲಿ ವರ್ಣಭೇದದ ರಾಕ್ಷಸ ಇರುವವರೆಗೆ ಸಮತಾವಾದವು ಆಚರಣೆಯಲ್ಲಿ ಬರುವುದು ಶಕ್ಯವೇ ಇಲ್ಲ. ಆದುದರಿಂದ ಮೊದಲು ಈ ರಾಕ್ಷಸನ ಸಂಹಾರಕ್ಕಾಗಿ ಪ್ರಯತ್ನಿಸಬೇಕು."

## "ವಂದೇಮಾತರಂ" ಗೀತೆಯ ವಾದ.

ಇತ್ತೀಚಿಗೆ ಕೆಲವು ಮುಸಲ್ಮಾನರು ವಂದೇಮಾತರಂ ಗೀತೆಯ ಸಂಬಂಧವಾಗಿ ಆಕ್ಷೇಪವನ್ನು ಉಂಟುಮಾಡಿರುವುದರಿಂದ ಈ ತಿಂಗಳ ಕೊನೆಯಲ್ಲಿ ಕಲಕತ್ತಾ ಪಟ್ಟಣದಲ್ಲಿ ಕೂಡುವ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಮುಂದೆ ಮತ್ತು ವರ್ಕಿಂಗ್ ಕಮಿಟಿಯ ಮುಂದೆ ಈ ಪ್ರಶ್ನೆಯನ್ನು ಬಂಗಾಲದ ಕೆಲವು ಪ್ರಮುಖರು ಇಡುವವರಿದ್ದಾರೆ. ಈ ಪದ್ಯದ ವಿಷಯದಲ್ಲಿ ಕೆಲವರು ಪ್ರಕಟಿಸಿದ ಅಭಿಪ್ರಾಯದಿಂದ ಈ ಪ್ರಶ್ನೆಯು ಮತ್ತೂ ತೊಡಕಿನದಾಗಿದೆ.

ಮಹಾತ್ಮಾ ಗಾಂಧಿಯವರೇ ಮೊದಲಾದ ಮುಂದಾಳುಗಳು ಈ ವಿಷಯದ ಕಡೆಗೆ ಲಕ್ಷಿಸಿರುವುದಾಗಿ ತಿಳಿಯಲ್ಪಟ್ಟಿದೆ.

ಕವಿ ಸಮ್ರಾಟರಾದ ಟಾಗೋರರವರಿಂದ ಈ ಗೀತೆಯ ಅರ್ಥವನ್ನು ವರ್ಕಿಂಗ್ ಕಮಿಟಿಯಲ್ಲಿ ತಿಳಿಸುವಂತೆ ಏರ್ಪಾಟುಮಾಡಬೇಕಾಗಿ ಕೆಲವರು ಯೋಚಿಸಿದ್ದಾರೆ.

## ಜಗದ್ಗುರುಗಳ ಮೇಲಿನ ವ್ಯಾಜ್ಯ.

ಶ್ರೀ ಜಗದ್ಗುರು ಶಂಕರಾಚಾರ್ಯ ಡಾ. ಕುರ್ತಕೋಟಿಯವರಿಗೆ ಕರವೀರ ಪೀಠದ ಸಂಬಂಧವಾಗಿ ವರುಷಕ್ಕೆ ಸಲ್ಲುತ್ತಿರುವ ವಾರ್ಷಿಕ ೮೦೦ ರೂ. ಗಳನ್ನು ಇವರು ವರ್ಣಭೇದದ ವಿರುದ್ಧವಾಗಿ ಪ್ರಚಾರಮಾಡುತ್ತಿರುವುದರಿಂದ ಕೊಡಕೂಡದೆಂದು ಒಂದು ವ್ಯಾಜ್ಯವನ್ನು ಹೂಡಿದ್ದರು.

ಮುಂಬೈ ಹೈಕೋರ್ಟಿನಲ್ಲಿ ಇದರ ವಿಚಾರಣೆಯಾಗಿ ಜಗದ್ಗುರುಗಳಿಗೆ ಸಲ್ಲಬೇಕಾದ ಹಣವನ್ನು ನಿಲ್ಲಿಸಲು ಸಕಾರಣಗಳಿಲ್ಲವೆಂದು ವ್ಯಾಜ್ಯವನ್ನು ತೆಗೆದುಹಾಕಿದ್ದಾಯಿತು.

## 'ಭಾಯಿ' ಮಂಡಳಿಗೆ ವಿನಂತಿ.

ಶ್ರೀ. ಕೇಶವರಾವ ಜೇಧೆ ಎಂ. ಎಲ್. ಎ. ಇವರು ಕಾಂಗ್ರೆಸ್ ಪಕ್ಷದ ಪ್ರಮುಖರು. ಇವರು ಕಳೆದ ೧೯ ನೆಯ ತಾರೀಖಿನ ದಿವಸ ಪುಣೆಯಲ್ಲಿ ಕೂಡಿದ್ದ ಈಗಿನ ಮಂತ್ರಿಮಂಡಲದ ಅಭಿನಂದನೆಯ ಸಭೆಯಲ್ಲಿ ಭಾಷಣಮಾಡುವಾಗ ಸಮತಾವಾದಿ 'ಭಾಯಿ' ಮಂಡಳಿಗೆ ಹೀಗೆ ವಿಜ್ಞಾಪಿಸಿಕೊಂಡರು—

"ನೀವು ದೇಶದಲ್ಲಿ ಆರ್ಥಿಕ ಸಮಾನತೆಯನ್ನು ಉಂಟುಮಾಡಲು ಕಾಂಗ್ರೆಸ್ ಮಂತ್ರಿಮಂಡಲಕ್ಕೆ ಒತ್ತಾಯಪಡಿಸುತ್ತಿರುವಿರಷ್ಟೆ. ನೀವು ಮೊದಲು ಧಾರ್ಮಿಕ ಮತ್ತು ಸಾಮಾಜಿಕ ಸಮಾನತೆಗಳನ್ನುಂಟುಮಾಡಲು ಪ್ರಯತ್ನಿಸಿರಿ. ಧರ್ಮದ ಹೆಸರಿನಿಂದ ಸ್ವಾರ್ಥ ಸಾಧಿಸಿಕೊಳ್ಳುತ್ತಿರುವ ಕೆಲವು ಸಂಸ್ಥೆಗಳು ಲೋಪವಾದರೆ ಅವುಗಳ ಹಣವು ಕಾಂಗ್ರೆಸ್ ಮಂತ್ರಿಮಂಡಲದ ಕೈಸೇರಿ ಆರ್ಥಿಕ ಸಮಾನತೆಯನ್ನುಂಟುಮಾಡಲು ಅವರಿಗೆ ಸಹಾಯವಾಗುವುದು.

ಪಾರ್ವತೀ ದೇವಾಲಯದಲ್ಲಿ ಅನೇಕ ಬ್ರಾಹ್ಮಣರು ಉಚಿತವಾಗಿಯೇ ಊಟಮಾಡುತ್ತಿದ್ದಾರೆ. ಗೋರೆ-ಖಾಡಿಕರ ಮೊದಲಾದ ಭಾಯಿ ಮಂಡಳಿಯು ಇದನ್ನು ತೆಗೆದುಹಾಕಲಿ. ಕಾಂಗ್ರೆಸ್ ಎಲ್ಲ ಜನರ ಸಂಸ್ಥೆಯು. ಅದು ಜನರಲ್ಲಿ ಮೇಲು ಕೀಳನ್ನು ಎಣಿಸುವುದಿಲ್ಲ. ಇನ್ನೂ ಸಾಮಾಜಿಕ ವಿಷಯದಲ್ಲಿ ಎಷ್ಟೋ ಅನ್ಯಾಯಗಳು ನಡೆಯುತ್ತಲೇ ಇವೆ. ನಾಶಿಕ ಜಿಲ್ಲೆಯ ಅನೇಕ ಬಾವಿಗಳಲ್ಲಿ ಆದಿಹಿಂದುಗಳು ನೀರನ್ನು ತೆಗೆದುಕೊಳ್ಳಬಾರದೆಂದು ಅವುಗಳಲ್ಲಿ ಮಲವನ್ನು ಎಸೆದವರು ಯಾರು? ಆರ್ಥಿಕ ಅನ್ಯಾಯವನ್ನು ದೂರಮಾಡುವ ಮುಂಚೆ ಸಾಮಾಜಿಕ ಸಮಾನತೆಯನ್ನುಂಟುಮಾಡಲು ಪ್ರಯತ್ನಿಸಿರಿ."

---

## ಮಾದರಿ ಸರಕಾರದ ದಬ್ಬಾಳಿಕೆ.

ಮಾದರಿ ಸಂಸ್ಥಾನವೆಂದು ಹೆಸರುಹೊಂದಿದ ಮೈಸೂರು ಸಂಸ್ಥಾನದಲ್ಲಿ ಕಾಂಗ್ರೆಸ್ಸಿನ ವಿರುದ್ಧವಾಗಿ ದಬ್ಬಾಳಿಕೆಯು ಪ್ರಾರಂಭವಾದುದು ಅದರ ಕೀರ್ತಿಗೆ ಕಲಂಕವನ್ನು ಹಚ್ಚತಕ್ಕದ್ದಾಗಿದೆ. ಮೈಸೂರು ಪ್ರಾಂತದ ಕಾಂಗ್ರೆಸ್ ಕಮಿಟಿಯ ಮುಖ್ಯ ಕಾರ್ಯನಿರ್ವಾಹಕರಾದ ಶ್ರೀ. ಕೆ. ಟಿ. ಭಾಷ್ಯಂರವರ ಮೇಲೆ ರಾಜದ್ರೋಹದ ಅಪರಾಧ ಹೊರಿಸಿ ಅವರನ್ನು ಸೆರೆಹಿಡಿದಿದ್ದಾರೆ. ಮೈಸೂರು ಸರಕಾರದ ಈ ದಬ್ಬಾಳಿಕೆಯನ್ನು ಆ ಸಂಸ್ಥಾನದ ಒಳಗೂ ಹೊರಗೂ ಎಲ್ಲರೂ ನಿಷೇಧಿಸುತ್ತಿದ್ದಾರೆ. ಮೈಸೂರು ಸರಕಾರದ ಕೀರ್ತಿ ಅಪಕೀರ್ತಿಗಳು ಹೆಚ್ಚಾಗಿ ಆ ಸಂಸ್ಥಾನದ ದಿವಾನರವರನ್ನೇ ಅವಲಂಬಿಸಿರುವ ರೂಢಿಯುಂಟಷ್ಟೆ. ಆದಕಾರಣ ಸರ್. ಮಿರ್ಜಾ ಇಸ್ಮಾಯಿಲ್‌ರವರು ತಮ್ಮ ಅದೂರದರ್ಶಿತ್ವದಿಂದ ಕಾಂಗ್ರೆಸ್ಸಿನ ಮೇಲೆ ದಬ್ಬಾಳಿಕೆಯನ್ನು ಹೂಡಿ ಘನವನ್ನು ಹೊಂದಿದ ಮೈಸೂರು ಸರಕಾರಕ್ಕೆ ಅಪಕೀರ್ತಿ ತರಲು ಕಾರಣರಾದುದಕ್ಕೆ ಎಲ್ಲರಿಗೂ ತುಂಬಾ ವಿಷಾದ.

### ದಿವಾನರವರ ಭಾಷಣ.

ಮೈಸೂರು ಪ್ರಜಾ ಪ್ರತಿನಿಧಿ ಸಭೆಯು ಕಾಂಗ್ರೆಸ್ಸಿಗಿಂತಲೂ ಮುಂಚೆಯೇ ಜನ್ಮತಾಳಿ ಪ್ರಜಾಸ್ವಾತಂತ್ರ್ಯದ ಉತ್ಸುಕತೆಯನ್ನು ಜನರಲ್ಲಿ ಉಂಟುಮಾಡಿತು. ಆದರೆ ಅದಕ್ಕೆ ಸರಕಾರದಿಂದ ಸಂಯಾದ ಪ್ರೋತ್ಸಾಹ ದೊರೆಯಲಿಲ್ಲ. ಆದುದರಿಂದ ಅನಂತರ ಜನ್ಮತಾಳಿದ ಕಾಂಗ್ರೆಸ್ಸಿನಲ್ಲಿ. ಅದು ಸೇರಿ ಈಗ ಆ ಪ್ರಾಂತದಲ್ಲಿ ಪ್ರಜಾಹಿತವನ್ನು ಬಯಸುತ್ತಿದೆ. ಇದು ಆಳರಸರಿಗೆ ಅಪ್ರಿಯವಾಗುವುದು ಸ್ವಾಭಾವಿಕ. ತಾವು ಮಾಡಿದುದು ದೇಶ ಹಿತಕ್ಕಾಗಿಯೇ ಸರಿಯೆಂದು ಅಧಿಕಾರಿಗಳು ಸಾಧಿಸುವುದೂ ಹೊಸದೇನೂ ಅಲ್ಲ.



ಮೈ. ದಿವಾನರವರು

ಪ್ರಜಾಪ್ರತಿನಿಧಿ ಸಭೆಯ ೬೭ ನೆಯ ಅಧಿವೇಶನವು ತಾ. ೧೬ ನೆಯ ದಿನ ಮೈಸೂರಲ್ಲಿ ಕೂಡಿದಾಗ ಅಧ್ಯಕ್ಷರಾದ ಸರ್. ಮಿರ್ಜಾ ಇಸ್ಮಾಯಿಲ್‌ರವರು ವಿಸ್ತಾರವಾದ ಭಾಷಣವನ್ನು ಮಾಡಿ ತಾವು ಮಾಡಿದುದು ಸರಿಯೆಂದೇ ವಾದಿಸಿದರು. ಇವರ ಭಾಷಣ ಪ್ರಾರಂಭವಾದೊಡನೆ ಇವರ ಆಳ್ವಿಕೆಯ ಪದ್ಧತಿಯನ್ನು ನಿಷೇಧಿಸಲು ೬೦ ಜನ ಸಭಾಸದರು ಸಭೆಯನ್ನು ಬಿಟ್ಟುಹೋದರು. ಇದು ಪ್ರಜಾಪ್ರತಿನಿಧಿ ಸಭೆಯ ಚರಿತ್ರೆಯಲ್ಲಿಯೇ ಹೊಸದು. ಯಾವ ದಿವಾನರ ಆಳ್ವಿಕೆಯನ್ನೂ ಇಷ್ಟು ಉಗ್ರವಾಗಿ ಅಲ್ಲಿಯ ಶಾಂತತಾಪ್ರಿಯ ಪ್ರಜಾಮುಖಂಡರು ಖಂಡಿಸಿರಲಿಲ್ಲ.

'ಬ್ರಿಟಿಶ್‌ರ ಧ್ವಜ ಮತ್ತು ಮಹಾರಾಜರ ಧ್ವಜ ಈ ಪ್ರಕಾರ ಎರಡು ಧ್ವಜಗಳು ಈ ರಾಜ್ಯದಲ್ಲಿ ಈಗ ಇವೆ. ಕಾಂಗ್ರೆಸ್ ಧ್ವಜ ಅದು ಅಖಿಲ ಭಾರತದ ಧ್ವಜವಾಗಿಲ್ಲ. ಒಂದು ಪಕ್ಷದ ಧ್ವಜವು. ಅದನ್ನು ಆ ಸಂಬಂಧವಾದ ಕಾರ್ಯ ನಡೆದಾಗ ಉಪಯೋಗಿಸಲು ಸರಕಾರದ ಅಡ್ಡಿಯೇನೂ ಇಲ್ಲ. ಆದರೆ ಮಹಾರಾಜರ ಧ್ವಜಕ್ಕೆ ವಿರೋಧವಾಗಿ ಅಥವಾ ಕಾಂಗ್ರೆಸ್ ಪಕ್ಷಕ್ಕೆ ಸೇರದವರಿಗೆ ಉದ್ರೇಕವಾಗುವ ರೀತಿಯಲ್ಲಿ ಅದನ್ನು ಉಪಯೋಗಿಸಲು ಸರಕಾರವು ಅವಕಾಶವನ್ನು ಕೊಡುವುದಿಲ್ಲ.

ಕಾಂಗ್ರೆಸ್ಸಿನ ವಿಧಾಯಕ ಕಾರ್ಯಗಳಾದ ಖಾದಿ ಪ್ರಸಾರ, ಗ್ರಾಮೋದ್ಯೋಗಗಳ ಸುಧಾರಣೆ, ನಿಮ್ನ ಜನೋದ್ಧಾರ ಈ ಕಾರ್ಯಗಳಿಗೆಲ್ಲಾ ಸರಕಾರವು ತುಂಬಾ ಸಹಾಯಮಾಡುತ್ತದೆ. ಆದರೆ ಕಾಂಗ್ರೆಸ್ ಪಕ್ಷವು ಈ ದೇಶದ ಒಳ ಆಡಳಿತದಲ್ಲಿ ಕೈಹಾಕಬಾರದು. ಗಾಂಧೀಜಿಯವರು ಕೂಡಾ ಸಂಸ್ಥಾನಗಳ ಒಳ ಆಡಳಿತಗಳಲ್ಲಿ ಕೈಹಾಕಬಾರದೆಂದೇ ಅಭಿಪ್ರಾಯಪಟ್ಟಿದ್ದಾರೆ."

ದಿವಾನ ಸಾಹೇಬರ ಈ ವಿಚಾರಸರಣಿಯೇನೋ ಯುಕ್ತವೆಂದೇ ತೋರಿದರೂ ದಬ್ಬಾಳಿಕೆಯ ರೀತಿಯೇ ಬೇರೆ. ಮಹಾರಾಜಾ ಸರಕಾರದ ವಿರುದ್ಧವಾಗಿ ರಾಷ್ಟ್ರೀಯ ಧ್ವಜವನ್ನು ಅಲ್ಲಿ ಯಾರೂ ಮೆರೆಸಿಲ್ಲ. ಕಾಂಗ್ರೆಸ್ಸಿನವರು ಮಹಾರಾಜರ ವಿಷಯದಲ್ಲಿ ರಾಜನಿಷ್ಠೆಯುಳ್ಳವರಿಲ್ಲವೆಂಬುದನ್ನೇನೂ ಸರಕಾರದವರು ಸಿದ್ಧಮಾಡಿಲ್ಲ. ಶಾಂತತೆಯ ಹೆಸರಿನಿಂದ ಸರಕಾರವೇ ಅಶಾಂತತೆಗೆ ಕಾರಣವಾಗುವ ದಬ್ಬಾಳಿಕೆಯನ್ನು ಪ್ರಾರಂಭಿಸಿದೆ.

ಮೈಸೂರು ಸರಕಾರವು ಈಗ ಹೂಡಿದ ಈ ದಬ್ಬಾಳಿಕೆಯಿಂದ ಸರಕಾರದ ಉದ್ದೇಶವೇನೂ ನೆರವೇರುವುದಿಲ್ಲ. ಆಳರಸರ ದಬ್ಬಾಳಿಕೆಯು ಜನರ ಸ್ವಾತಂತ್ರ್ಯಾಪೇಕ್ಷೆಯನ್ನು ಹೆಚ್ಚಿಸಲಿಕ್ಕೂ ಸ್ವಾರ್ಥತ್ಯಾಗವನ್ನು ಪ್ರಜ್ವಲಗೊಳಿಸಲಿಕ್ಕೂ ಸಾಧನವಾಗದೆ ಇರಲಾರದು. ಮೈಸೂರಿನ ಪ್ರಜೆಗಳು ತುಂಬಾ ರಾಜನಿಷ್ಠರು. ದಿವಾನರವರ ರೀತಿನೀತಿಗಳನ್ನು ನಿಷೇಧಿಸಲು ಸಭೆಯಿಂದ ಹೊರಟುಹೋದ ಸಭಾಸದರು ಪುನಃ ಬರುವಾಗ "ಮಹಾರಾಜಕಿ ಜೈ" ಎಂದು ಜಯಘೋಷಮಾಡಿರುವುದೇ ಇದಕ್ಕೆ ಸಾಕ್ಷಿಯಾಗಿದೆ.

---

—ಬೆಳಗಾವ ಮುನಸಿಪಾಲ್ಟಿಗೆ ಶ್ರೀ. ಲಾಡ ವಕೀಲರು ಬಹುಮತದಿಂದ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಕಾಂಗ್ರೆಸ್ ಪಕ್ಷದ ಸಭಾಸದರು ಇವರಿಗೆ ಒಪ್ಪಿಗೆಯನ್ನು ಕೊಡಲಿಲ್ಲ.

# ಹಿಂದು - ವ್ಯವಸಾಯ - ಸಂಘಟನೆ.




### ಹಿಂದುಗಳ ಆರ್ಥಿಕ ಸುಧಾರಣೆ.

ಅನೇಕ ಕೈಕಸಬುಗಳು ಕೀಳೆಂದು ಹಿಂದುಗಳಿಂದ ತಿಳಿಯಲ್ಪಟ್ಟು ಅವು ಮುಸಲ್ಮಾನರ ಸ್ವಾಧೀನವಾಗಿವೆ. ಇದರಿಂದ ಹಿಂದುಗಳಲ್ಲಿ ಅಸಂಖ್ಯರು ಉದ್ಯೋಗವಿಲ್ಲದೆ ನಾನಾ ದುಃಖಗಳಿಗೀಡಾಗುತ್ತಿದ್ದಾರೆ. ಆದಕಾರಣ ಹಿಂದು ವ್ಯವಸಾಯ ಸಂಘಟನೆಯೂ ಅಗತ್ಯವೆಂದು ಹಿಂದಕ್ಕೆ ಪುಣೆಯಲ್ಲಿ ಕೂಡಿದ್ದ ಸಂತ ಪರಿಷತ್ತಿನವರು ನಿರ್ಧರಿಸಿದ್ದರು. ಆ ಸಂಬಂಧವಾಗಿ ಶ್ರೀ. ಪಿತ್ರೆ ಎಂಬುವವರು ಹೀಗೆ ತಿಳಿಸಿದ್ದಾರೆಂದು ಪ್ರಕಟವಾಗಿದೆ.

“ಹಿಂದುಗಳು ಹಿಂದುಗಳ ಅಂಗಡಿಯಲ್ಲಿಯೇ ಹಿಂದುಗಳಿಂದ ಉಂಟಾದ ಪದಾರ್ಥಗಳನ್ನೇ ತೆಗೆದುಕೊಳ್ಳಬೇಕೆಂದು ಸಂತ ಪರಿಷತ್ತಿನಲ್ಲಾದ ನಿರ್ಣಯವು ಆಚರಣೆಯಲ್ಲಿ ಬರಬೇಕಾದರೆ ಕೆಲವು ಉದ್ಯೋಗಗಳನ್ನು ಹಿಂದುಗಳು ಕೈಕೊಳ್ಳಬೇಕು. ಹಂಜಿ ಮಾಡುವ, ಗಾದಿ ಹೊಲಿಯುವ ಮೊದಲಾದ ಕೆಲಸಗಳೆಲ್ಲಾ ಪಿಂಜಾರರೆಂಬ ಒಂದು ಜಾತಿಯವರಿಗೇನೇ ಸಂಬಂಧಪಟ್ಟವುಗಳೆಂದು ಹಿಂದುಗಳು ತಿಳಿದಿದ್ದಾರೆ. ಇದು ತಪ್ಪು.

ಅಲ್ಲಲ್ಲಿ ಈ ಕೈಕಸಬನ್ನು ಕಲಿಸಲು ಏರ್ಪಾಟು ಮಾಡಬೇಕು. ಮೂರು ತಿಂಗಳು ವಿದ್ಯಾರ್ಥಿಗಳಿಗೆ ಉಚಿತವಾಗಿ ಊಟೋಪಚಾರಗಳ ವ್ಯವಸ್ಥೆಮಾಡಿ ಹಂಜಿ, ಗಾದಿ, ಲೋಡು ಮೊದಲಾದವುಗಳನ್ನು ಮಾಡುವ ಶಿಕ್ಷಣಕೊಡಬೇಕು. ಇದೇನೂ ಕೀಳು ಉದ್ಯೋಗವೆಂದು ತಿಳಿಯಬಾರದು. ಚೌಘಡ ಬಾರಿಸುವ ಕೆಲಸವೇನೂ ಕೀಳಲ್ಲ. ಅದನ್ನೂ ಕಲಿಯಬೇಕು. ಬಳೆ ಇಡುವುದು ಬೀಡಿಕಟ್ಟುವುದು ಇವಾದರೂ ಹಿಂದುಗಳಿಂದಲೇ ನಡೆಯಬೇಕಾದ ಕಾರ್ಯಗಳು.”

ಈಗ ಸಂತ ಪರಿಷತ್ತಿನವರು ಮತ್ತು ಅನೇಕ ಹಿಂದು ಸಮಾಜ ಸುಧಾರಕರು ಹಿಂದುಗಳು ಹಿಂದುಗಳಲ್ಲಿಯೇ ಹಿಂದುಗಳಿಂದಾದ ಪದಾರ್ಥಗಳನ್ನು ತೆಗೆದುಕೊಳ್ಳಬೇಕೆಂದು ಸಾರುತ್ತಿದ್ದಾರಷ್ಟೆ. ಎಂಟು ನೂರು ವರುಷಗಳ ಹಿಂದೆಯೇ ಮಹಾನುಭಾವರಾದ ಬಸವಣ್ಣನವರು ಲಿಂಗವಂತರು ಲಿಂಗವಂತರಲ್ಲಿಯೇ ಲಿಂಗವಂತರಿಂದಾದ ಪದಾರ್ಥಗಳನ್ನು ತೆಗೆದುಕೊಳ್ಳಬೇಕೆಂದು ಧಾರ್ಮಿಕ ಕಟ್ಟುಮಾಡಿದ್ದು ಎಷ್ಟು ಮಹತ್ವದ ಸಂಘಟನೆ ತತ್ವವೆಂಬುದು ಈಗಲಾದರೂ ಸ್ಪಷ್ಟವಾಗುವುದಿಲ್ಲವೆ?

### ಹಿಂದು ಯುವಕ ಸಂಘ.

ಲೋಕಶಾಹಿ ಸ್ವರಾಜ್ಯ ಪಕ್ಷದ ಪುಣೆ ಶಾಖೆಯವರು “ಹಿಂದು ಯುವಕ ಸಂಘ” ಎಂಬ ಒಂದು ಸಂಘವನ್ನು ಸ್ಥಾಪಿಸಿದ್ದಾರೆ. ಲೋಕಶಾಹಿ ಸ್ವರಾಜ್ಯ ಪಕ್ಷದ ಧ್ಯೇಯ ಧೋರಣಗಳೇ ಈ ಸಂಘಕ್ಕೂ ಮಾನ್ಯ. ಹಿಂದುಸ್ಥಾನವು ಹಿಂದುಗಳ ರಾಷ್ಟ್ರ. ಹಿಂದು ಸಂಘಟನೆಯು ವಿನಾ ಹಿಂದುಸ್ಥಾನಕ್ಕೆ ಸ್ವಾತಂತ್ರ್ಯ ದೊರೆಯುವುದಿಲ್ಲ. ಒಂದು ವೇಳೆ ದೊರೆತರೂ ಬಹುಕಾಲ ಬಾಳುವುದಿಲ್ಲ. ಆದಕ್ಕಾಗಿ ಹಿಂದು ಸಂಘಟನೆಯ ಎಲ್ಲ ಕಾರ್ಯಗಳನ್ನೂ ಮಾಡುವುದಕ್ಕಾಗಿಯೇ ಹಿಂದು ಯುವಕರ ಈ ಸಂಘವು ಏರ್ಪಟ್ಟದೆ.

೧೮ ವರುಷಗಳಿಗೆ ಮೇಲ್ಪಟ್ಟು ೩೫ ವರ್ಷಗಳೊಳಗಿನ ಹಿಂದು ಯುವಕರು ಈ ಸಂಘದಲ್ಲಿ ಸೇರಿ ಹಿಂದು ಧರ್ಮ, ಸಮಾಜ, ಸಂಸ್ಕೃತಿಗಳ ಸಂರಕ್ಷಣೆಗೆ ಪ್ರಯತ್ನಿಸಬೇಕು. ಈ ಉದ್ದೇಶಗಳನ್ನು ಸಾಧಿಸಲು ಯೋಗ್ಯವಾದ ಶಿಕ್ಷಣವು ಯುವಕರಿಗೆ ಕೊಡಲ್ಪಡುವುದು.

### ಹಿಂದುತ್ವವೇ ರಾಷ್ಟ್ರೀಯತ್ವ.

ನಾಗಪುರದಲ್ಲಿ ಸೊಲ್ಲಾಪುರದ ಶ್ರೀ. ರಾಜವಾಡೆಯವರು ಡಾ. ಮುಂಜೆಯವರ ಅಧ್ಯಕ್ಷತೆಯಲ್ಲಿ ಹಿಂದುತ್ವವೇ ರಾಷ್ಟ್ರೀಯತ್ವವೆಂಬ ವಿಷಯವಾಗಿ ಮಹತ್ವದ ಭಾಷಣವನ್ನು ಮಾಡಿದರು. ಅನೇಕ ಕಾಂಗ್ರೆಸ್ ಮುಖಂಡರೂ ಸಭೆಗೆ ಬಂದಿದ್ದರು. ಈ ಸಭೆಯಲ್ಲಿ ಕೆಳಗಿನ ನಿರ್ಣಯಗಳಾದವು.

(೧) “ಬೆವಾರಸದಾರ” ಮುಸಲ್ಮಾನರ ಆಸ್ತಿಯು ಮುಸಲ್ಮಾನ್ ಸಮಾಜಕ್ಕೆ ಸೇರಬೇಕೆಂದು ಕೇಂದ್ರ ಶಾಸನ ಸಭೆಯಲ್ಲಿ ಬಂದ ಗೊತ್ತುವಳಿಯನ್ನು ಈ ಸಭೆಯು ನಿಷೇಧಿಸುತ್ತದೆ. ರಾಜಕಾರಣದಲ್ಲಿ ಈ ವಿಧವಾದ ಜಾತಿ ತತ್ವವಿರಕೂಡದು. ವ್ಹಾಯಿಸ್ ರಾಯರು ಇದಕ್ಕೆ ಅಪ್ಪಣೆಯನ್ನು ಕೊಡಕೂಡದು. (೨) ವಂದೇ ಮಾತರಂ ಗೀತೆಯೇ ರಾಷ್ಟ್ರಗೀತೆಯು. ಅದನ್ನು ತೆಗೆದುಹಾಕಕೂಡದು. (೩) ಕಾಂಗ್ರೆಸ್‌ದಲ್ಲಿದ್ದ ಮುಸಲ್ಮಾನರಿಗೆ ಮುಸ್ಲಿಂ ಲೀಗಿನಲ್ಲಿಯೂ ಸೇರಲು ಹೇಗೆ ಅಧಿಕಾರವಿದೆಯೋ ಹಾಗೆಯೇ ಕಾಂಗ್ರೆಸ್ಸಿನಲ್ಲಿರುವ ಹಿಂದುಗಳಿಗೂ ಹಿಂದು ಮಹಾ ಸಭೆಯಲ್ಲಿ ಸೇರಲು ಅಧಿಕಾರವಿದೆ.



ಶಾ. ಶ. ೧೮೫೯ ನೆಯ ಆಶ್ವೀನ ಬ|| ೬ ಸೋಮವಾರ.

# ಮುಸ್ಲಿಂಲೀಗಿನ ಆಕ್ರಮಣ ವೃತ್ತಿ.

ಹಿಂದುಸ್ಥಾನದ ಮುಸಲ್ಮಾನರಲ್ಲಿ "ಮುಸ್ಲಿಂಲೀಗ್" ಒಂದು ಪ್ರಮುಖ ಸಂಸ್ಥೆಯಾಗಿದೆಯಷ್ಟೆ. ಇದರ ಜಾತಿನಿಷ್ಠೆ ಮತ್ತು ಅರಾಷ್ಟ್ರೀಯ ವೃತ್ತಿಗಳು ಸರ್ವಶ್ರುತ. ಮೊನ್ನೆ ಲಖನೌ ಪಟ್ಟಣದಲ್ಲಿ ಮುಸ್ಲಿಂಲೀಗಿನ ಅಧಿವೇಶನ ಜರುಗಿದಾಗ ಅದರ ಅಧ್ಯಕ್ಷರಾಗಿದ್ದ ಬ್ಯಾ. ಜಿನ್ನಾರವರು ಮಾಡಿದ ಭಾಷಣವನ್ನೂ ಅದರಲ್ಲಾದ ಗೊತ್ತುವಳಿಗಳನ್ನೂ ನೋಡಿದರೆ ಅದರ ಆಕ್ರಮಣವೃತ್ತಿಯೂ ಸ್ಪಷ್ಟ ತೋರುವುದು.

ಯಾವ ಬ್ಯಾ. ಜಿನ್ನಾರವರು ೧೯೧೬ ರಲ್ಲಿ ರಾಷ್ಟ್ರೀಯ ದೃಷ್ಟಿಯಿಂದ ಲಖನೌ ಪಟ್ಟಣದಲ್ಲಿಯೇ ಮುಸಲ್ಮಾನರು ಕಾಂಗ್ರೆಸ್ಸಿನಲ್ಲಿ ಸೇರಲು ಪ್ರಯತ್ನಿಸಿದ್ದರೋ ಅದೇ ಜಿನ್ನಾರವರು ಅದೇ ಸ್ಥಳದಲ್ಲಿ ೨೧ ವರ್ಷಗಳನಂತರ ಕಾಂಗ್ರೆಸ್ಸಿಗೆ ವಿರೋಧವಾಗಿ ಅರಾಷ್ಟ್ರೀಯ ದೃಷ್ಟಿಯಿಂದ ಹಿಂದುಗಳಮೇಲೆ ಆಕ್ರಮಣಮಾಡಲು ಮುಸ್ಲಿಂ ಧ್ವಜವನ್ನು ಎತ್ತಿ ಹಿಡಿದುದು ಅತ್ಯಂತ ವಿಷಾದದ ಸಂಗತಿಯಲ್ಲವೆ ?

ಹಿಂದಿಭಾಷೆ, ವಂದೇಮಾತರಂ ಗೀತೆ, ರಾಷ್ಟ್ರೀಯ ತ್ರಿವರ್ಣ ಧ್ವಜಗಳ ಸಂಬಂಧವಾಗಿ ಬ್ಯಾ. ಜಿನ್ನಾರಂತಹ ರಾಜಕಾರಣ ಪಟುಗಳು ವಿರೋಧಿಸಿರುವುದನ್ನು ನೋಡಿದರೆ ಮುಸ್ಲಿಂಲೀಗ್ ಹಿಂದುಸ್ಥಾನದ ಮೇಲೆ ಮುಸ್ಲಿಂ ವರ್ಚಸ್ಸನ್ನು ಸ್ಥಾಪಿಸಲು ಆಕ್ರಮಣ ವೃತ್ತಿಯುಳ್ಳದ್ದಾಗುವಂತೆ ತೋರುತ್ತದೆ. ಇದು ಅಶಕ್ಯವೂ ಅಹಿತಕರವೂ ಆದುದೆಂದು ಅವರಿಗೆ ಜಾಗ್ರತೆ ಹೊಳೆಯದಿರಲಾರದು.

### ಹಿಂದು ಮಹಾ ಸಭೆಯ ಧೋರಣ.

ಸಿಂಧ ಪ್ರಾಂತದ ಹಿಂದು ಮಹಾ ಸಭೆಯ ಅಧ್ಯಕ್ಷರಾಗಿ ಭಾಯಿ ಪರಮಾನಂದರು ಮೊನ್ನೆ ಮಾಡಿದ ಭಾಷಣವನ್ನೂ ನಾವು ಬೇರೆಕಡೆ ಕೊಟ್ಟಿದ್ದೇವೆ. ಆದರಿಂದ ಹಿಂದು ಮಹಾ ಸಭೆಯ ಧೋರಣವು ಸ್ಪಷ್ಟವಾಗುವುದು.

ಬ್ಯಾ. ಜಿನ್ನಾರವರನ್ನೂ ಭಾಯಿ ಪರಮಾನಂದರನ್ನೂ ಪಂಡಿತ ಜವಾಹರಲಾಲರು ಒಂದೇ ಪಂಗ್ತಿಯಲ್ಲಿ ಸೇರಿಸಿರುವುದು ಅನುಚಿತವಾದುದು. ಭಾಯಿ ಪರಮಾನಂದರು ಸ್ವಸಂರಕ್ಷಣೆಯ ಧೋರಣವನ್ನು ತಿಳಿಸಿದ್ದಾರೆ. ಜಿನ್ನಾರವರಾದರೋ ಆಕ್ರಮಣ ವೃತ್ತಿಯನ್ನು ಸೂಚಿಸಿದ್ದಾರೆ. ಹಿಂದುಗಳು ತಾವೂ ಬದುಕಿ ತಮ್ಮ ನೆರೆಯ ಮುಸಲ್ಮಾನರೂ ತಮ್ಮಂತೆ ಬಾಳಬೇಕೆಂದು ಭಾಯಿ ಪರಮಾನಂದರು ಹೇಳುತ್ತಾರೆ. ತನ್ನ ಅಸ್ತಿತ್ವವನ್ನು ಕಳೆದುಕೊಳ್ಳಲು ಅವರ ಜಾತಿನಿಷ್ಠೆಯು ಸಿದ್ಧವಿಲ್ಲ. ಆದರೆ ಜಿನ್ನಾರವರ ಜಾತಿನಿಷ್ಠೆಯು ಆಕ್ರಮಣವೃತ್ತಿಯುಳ್ಳದ್ದಾಗಿದೆ.

ಬಹುಸಂಖ್ಯಾಕರೂ ಈ ರಾಷ್ಟ್ರದ ಮೂಲ ಜನಾಂಗದವರೂ ಆದ ಹಿಂದುಗಳ ನ್ಯಾಯವಾದ ಅಸ್ತಿತ್ವವು ಕೂಡಾ ಜಿನ್ನಾರವರಿಗೆ ಬೇಕಾಗಿಲ್ಲ.

ಬ್ಯಾ. ಜಿನ್ನಾರವರ ಭಾಷಣದಿಂದ ಮುಸ್ಲಿಂಲೀಗಿನ ಅನರ್ಥಕರ ಪ್ರವೃತ್ತಿಯು ರಾಷ್ಟ್ರಕ್ಕೆ ಸ್ಪಷ್ಟ ತೋರಿತು. ವಿಚಾರಪರರಾದ ಮುಸಲ್ಮಾನ್ ಬಾಂಧವರು ಆದರಿಂದ ಇನ್ನುಮೇಲಾದರೂ ದೂರಾಗದೆ ಇರರು. ಹಿಂದುಗಳು ಈಗಲಾದರೂ ಎಚ್ಚತ್ತು ಹಿಂದುಸಂಘಟನೆಗಾಗಿ ವಿಶೇಷ ಪ್ರಯತ್ನಿಸಲು ಸಿದ್ಧರಾಗಬೇಕು. ಇಂಥ ಜಾತಿನಿಷ್ಠರನ್ನು ಸಮಾಧಾನಗೊಳಿಸುವುದು ಅಶಕ್ಯವೇ ಸರಿಯೆಂದು ಇನ್ನುಮೇಲಾದರೂ ಕಾಂಗ್ರೆಸ್ ಪಕ್ಷಕ್ಕೆ ತೋರದಿರಲಾರದು.

---

## ಶ್ರೀ ಬಾಳೆಹಳ್ಳಿ ಸ್ವಾಮಿಗಳು ಸ್ವಲ್ಪ ದಾರಿಗೆ ಬಂದರು.

ವೀರಶೈವರಲ್ಲಿ ಬ್ರಾಹ್ಮಣಾದಿ ವರ್ಣಗಳಿವೆಯೆಂದು ಶ್ರೀ ಬಾಳೆಹಳ್ಳಿ ಸ್ವಾಮಿಗಳೂ ಅವರ ಕೆಲವು ಅನುಯಾಯಿಗಳೂ ಹೇಳುತ್ತಿದ್ದಾರಷ್ಟೆ. ಶ್ರೀ. ಹಮ್ಮಿಗಿ ಕುಬಸದ ಶಾಂತಪ್ಪನವರಿಗೂ ಶ್ರೀಗಳವರಿಗೂ ನಡೆದ ಪತ್ರವ್ಯವಹಾರವು ಪ್ರಕಟವಾಗಿದೆ. ಅದನ್ನು ಬೇರೆಕಡೆ ಕೊಟ್ಟಿದ್ದೇವೆ. ಅದರಲ್ಲಿಯ ಸಂಗತಿಯು ನಿಜವಾಗಿರುವ ಪಕ್ಷದಲ್ಲಿ ಶ್ರೀ ಬಾಳೆಹಳ್ಳಿ ಸ್ವಾಮಿಗಳು ಈಗ ಸ್ವಲ್ಪ ದಾರಿಗೆ ಬಂದರೆಂದೇ ಎಷ್ಟೋ ಸಮಾಧಾನವಾಗದೆ ಇರಲಾರದು. ಶ್ರೀಗಳು ಅದರಲ್ಲಿ ಹೀಗೆ ಹೇಳಿದ್ದಾರೆ—

"ವೀರಶೈವರಲ್ಲಿ ಭಕ್ತ ಮಹೇಶವೆಂಬ ಪ್ರಭೇದಗಳ ಹೊರತು ಬಣಗಾರ, ಶಿವಚಿಂಪಿಗ ಮೊದಲಾದ ಪರ್ಯಾಯ ನಾಮಗಳು ವೃತ್ತಿಸೂಚಕವಲ್ಲದೆ ಜಾತಿ ಸೂಚಕವಲ್ಲ. ನೀವು ಶೂದ್ರಪದ ವಾಚ್ಯರಲ್ಲ."

ಭಕ್ತ ಮಹೇಶ ಎಂಬ ಪ್ರಭೇದಗಳು ಜನ್ಮವಿಶಿಷ್ಟವಾದವುಗಳೇ ? ಅಥವಾ ಆಚಾರ ಶೀಲಾದಿಗಳಿಂದ ಉಂಟಾದವುಗಳೇ ? ಎಂಬುದೊಂದು ಪ್ರಶ್ನೆಯುಂಟಾಗುತ್ತದಷ್ಟೆ. ಶ್ರೀ. ಶಾಂತಪ್ಪನವರಂತಹ ಗುರುಭಕ್ತ ಕೇಸರಿಗಳು ಶ್ರೀಗಳಿಗೆ ಒತ್ತಾಸೆಪಡಿಸಿದರೇನೆ ಆಗ ಇವರು ಸರಿಯಾದ ದಾರಿಗೆ ಬಂದು ವೀರಶೈವರಲ್ಲಿ ಭಕ್ತ ಮಹೇಶ ಎಂಬ ಪ್ರಭೇದಗಳು ಕೂಡಾ ಜನ್ಮವಿಶಿಷ್ಟವಾಗಿರದೆ ಶೀಲಾಚಾರಗಳಿಂದಲೇ ಉಂಟಾದವುಗಳೆಂದು ಹೇಳದೆ ಇರಲಾರರು. ಅಂತಹ ಸುಯೋಗವು ಜಾಗ್ರತೆ ಬರಲೆಂದು ಹಾರೈಸುತ್ತೇವೆ. ಮತ್ತು ಈ ವಿಷಯದಲ್ಲಿ ಸ್ವಾಭಿಮಾನ ಸಂರಕ್ಷಣೆಗಾಗಿ ಶ್ರೀ. ಕುಬಸದ ಶಾಂತಪ್ಪನವರು ಶ್ರೀಗಳ ಸಂಗಡ ಹೋರಾಡಿದ್ದಕ್ಕಾಗಿ ನಾವು ಇವರನ್ನು ಹೃದಯಪೂರ್ವಕ ಅಭಿನಂದಿಸುತ್ತೇವೆ.

# ಕಾಂಗ್ರೆಸ್ಸಿಗೆ ವಿಜಯವಾಗಲಿ.




### ಕಾಂಗ್ರೆಸ್-ಲೀಗ್ ಹೋರಾಟ.

ಸಂಯುಕ್ತ ಪ್ರಾಂತದಲ್ಲಿ ಮುಸ್ಲಿಂಲೀಗಿನಿಂದ ಆರಿಸಿಬಂದು ಅನಂತರ ಕಾಂಗ್ರೆಸ್ಸಿನಲ್ಲಿ ಸೇರಿ ಮಂತ್ರಿಗಳಾಗಿದ್ದ ಮಿ. ಹಾಫೀಜ್ ಇಬ್ರಾಹಿಂ ಇವರು ತಮ್ಮ ಸದಸ್ಯತ್ವವನ್ನೇ ಬಿಟ್ಟು ಈಗ ಕಾಂಗ್ರೆಸ್ ಪಕ್ಷದ ಪರವಾಗಿ ಚುನಾವಣೆಗೆ ನಿಂತಿದ್ದಾರೆ. ಮುಸ್ಲಿಂಲೀಗಿನಿಂದ ಮಿ. ಅಬ್ದುಲ್ ಸಮಿ ಎಂಬುವವರು ಇವರ ಸ್ಪರ್ಧೆಯ ಹುರಿಯಾಳು. ಚುನಾವಣೆಯ ಪ್ರಚಾರ ಉಭಯ ಪಕ್ಷಗಳಿಂದಲೂ ಪ್ರಚಂಡವಾಗಿ ನಡೆದಿದೆ.

### ಬಿಜನೂರಲ್ಲಿ ಬಾಂಬು !

ಈ ಚುನಾವಣೆಯಾಗುವುದು ಬಿಜನೂರು ಜಿಲ್ಲೆಯಲ್ಲಿ. ಅಲ್ಲಿ ೪೦ ಸಾವಿರ ಮುಸಲ್ಮಾನ್ ಮತದಾರರಿದ್ದಾರೆ. ಮಿ. ಹಾಫೀಜರವರು ೧೨ ವರುಷಗಳಿಂದಲೂ ಆ ಭಾಗದಿಂದ ಆರಿಸಲ್ಪಟ್ಟು ಶಾಸನ ಮಂಡಲದಲ್ಲಿ ಸೇರಿ ಕೆಲಸಮಾಡಿದ್ದಾರೆ. ಇವರಿಗೇನೇ ಮತಕೊಡಿರೆಂದು ಖಾನ ಅಬ್ದುಲ್ ಗಫಾರಖಾನರ “ಖುದಾಯಿ ಖಿದಮತದಾರ” ಸಂಘದವರು ಬಿಜನೂರಿಗೆ ಪ್ರಚಾರಕ್ಕಾಗಿ ಬಂದಿದ್ದರು. ಪ್ರಚಂಡ ಮೆರವಣಿಗೆ ಹೊರಟಾಗ ಯಾರೋ ಬಾಂಬು ಗುಂಡು ಎಸೆದರು. ಅದರಿಂದ ಖುದಾಯಿ ಖಿದಮತದಾರರಲ್ಲಿ ನಾಲ್ಕು ಜನರಿಗೆ ಗಾಯವಾಯಿತು. ಬಾಂಬು ಎಸೆದವನು ಓಡಿಹೋದನು. ಗಡಿನಾಡಿನ ಗಾಂಧಿಯವರೂ ಪಂಡಿತ ನೆಹರುರವರೂ ಕಾಂಗ್ರೆಸ್ ಪರವಾದ ಪ್ರಚಾರಕ್ಕೆ ಇಲ್ಲಿಗೆ ಹೋಗಿದ್ದಾರೆ.

### ಬೇಗಂ ಮಹಮ್ಮದ ಅಲ್ಲಿಯವರು.

ಮುಸ್ಲಿಂಲೀಗಿನ ಹುರಿಯಾಳಿಗೇನೇ ಮತ ಕೊಡಿರೆಂದು ಪ್ರಚಾರ ನಡೆಸಲು ಬ್ಯಾ. ಜಿನ್ನಾರವರೂ ಬೇಗಂ ಮಹಮ್ಮದ ಅಲ್ಲಿಯವರೂ ಮೌ. ಶೌಕತ ಅಲ್ಲಿಯವರೂ ಮೌ. ಜಾಫರ ಅಲ್ಲಿಯವರೂ ಆ ಭಾಗದಲ್ಲಿ ಸಂಚರಿಸಿದರು.

ಬ್ಯಾ. ಜಿನ್ನಾರವರು ಹೀಗೆ ಹೇಳಿದರು— “ರಾಟಿಯಿಂದ ಸ್ವಾತಂತ್ರ್ಯ ದೊರೆಯುವುದಿಲ್ಲ. ಅದು ಹಿಂದು-ಮುಸಲ್ಮಾನರ ಐಕಮತ್ಯದಿಂದಲೇ ದೊರೆಯುವುದು. ಹಿಂದುಸ್ಥಾನದಲ್ಲಿ ಮುಸಲ್ಮಾನ್ ಎಂಬುದೊಂದು ಮಹತ್ವದ ರಾಜಕೀಯ ಸಾಮರ್ಥ್ಯವಿದೆ. ಅದಿಲ್ಲವೆಂದೇ ಪಂ. ನೆಹರುರವರು ಹೇಳುತ್ತಾರೆ. ಮುಸ್ಲಿಂಲೀಗ್ ತನ್ನ ಸ್ವತಂತ್ರ ಅಸ್ತಿತ್ವವನ್ನು ಸಿದ್ಧಮಾಡಿಕೊಡಲಿಕ್ಕಾಗಿಯೇ ಈಗ ಪ್ರಯತ್ನಿಸುತ್ತಿದೆ. ನೀವೆಲ್ಲ ಲೀಗಿಗೇನೇ ಮತಕೊಡಿರಿ.”

ಬೇಗಂ ಮಹಮ್ಮದ ಅಲ್ಲಿಯವರು ಹೀಗೆ ಹೇಳಿದರು— “ನನ್ನ ಪತಿ ಮೌ. ಮಹಮ್ಮದ ಅಲ್ಲಿ ಮತ್ತು ನಾನು ಕಾಂಗ್ರೆಸ್ಸಿನಲ್ಲಿಯೇ ಅನೇಕ ವರುಷ ಕೆಲಸಮಾಡಿದೆವು. ಅದು ರಾಷ್ಟ್ರೀಯ ಸಂಸ್ಥೆಯಾಗಿರದೆ ಹಿಂದು ಸಂಸ್ಥೆಯೆಂದು ನಮಗೆ ಮನವರಿಕೆಯಾದುದರಿಂದಲೇ ನಾವು ಅದನ್ನು ಬಿಟ್ಟೆವು. ನೀವು ಲೀಗಿನ ಹುರಿಯಾಳುಗಳಿಗೇ ಮತಕೊಡಿರಿ.”

ಮುಸ್ಲಿಂಲೀಗ್ ಅನುಸರಿಸಿರುವ ಈ ಅರಾಷ್ಟ್ರೀಯ ಧೋರಣವನ್ನು ಈಗಲಾದರೂ ವಿಚಾರಪರರಾದ ಮಹಮ್ಮದೀಯರು ತಿಳಿದು ಅದಕ್ಕೆ ನೆರವಾಗದೆ ಕಾಂಗ್ರೆಸ್ಸಿಗೇನೇ ಸಹಾಯಮಾಡಿ ಈ ಮಹತ್ವದ ಚುನಾವಣೆಯಲ್ಲಿ ಕಾಂಗ್ರೆಸ್ ವಿಜಯಹೊಂದುವಂತೆ ಮಾಡುವುದು ವಿಹಿತವಲ್ಲವೆ?

### “ ವಂದೇಮಾತರಂ ” ಗೀತೆಯೇ ರಾಷ್ಟ್ರಗೀತೆ.

ಪುಣೆಯ ಮರಾಠಾ ಪತ್ರಿಕಾಕರ್ತರಾದ ಶ್ರೀ. ಕೇತಕರರು ಮತ್ತು ಶ್ರೀ ಕಾಳ ಪತ್ರಿಕಾಸಂಪಾದಕರಾದ ಶ್ರೀ. ಕರಂದಿಕರರು ರಾಷ್ಟ್ರೀಯ ಸಭಾಧ್ಯಕ್ಷರಾದ ಪಂಡಿತ ಜವಾಹರಲಾಲರಿಗೆ ಪತ್ರ ಬರೆದು ವಂದೇಮಾತರಂ ಗೀತೆಯೇ ರಾಷ್ಟ್ರಗೀತೆಯಾಗಿರುವಂತೆ ಮಾಡಬೇಕಾಗಿ ವಿಜ್ಞಾಪಿಸಿಕೊಂಡಿದ್ದಾರೆ.

ಶ್ರೀ. ಲ. ಬ. ಭೋಪಟಕರರು ವಂದೇಮಾತರಂ ಗೀತೆಯ ವಿವರಣೆಯನ್ನು ಮಾಡಿ ಅದೇ ರಾಷ್ಟ್ರಗೀತೆಯಾಗಿರುವಂತೆ ಮಾಡಬೇಕೆಂದು ಶ್ರೀ. ಸುಭಾಷಚಂದ್ರ ಬೋಸರವರಿಗೆ ಬರೆದುಕೊಂಡಿದ್ದಾರೆ.

### ಕಾಂಗ್ರೆಸ್ ಪ್ರಭುತ್ವದ ಮಾದರಿ.

—ಮುಂಬೈ ಸರಕಾರದ ನ್ಯಾಯ ಶಾಖಾ ಮಂತ್ರಿಗಳಾದ ಶ್ರೀ. ಮುನಸಿಯವರು ಕಳೆದ ೨೧ ನೆಯ ತಾರೀಖಿನ ದಿವಸ ಪುಣೆಯ ತಮ್ಮ ವ್ಯಾಖ್ಯಾನದಲ್ಲಿ “ನ್ಯಾಯ ಮತ್ತು ಶಾಸನ” ಶಾಖೆಗಳನ್ನು ಬೇರೆ ಮಾಡುವುದೇ ತಮ್ಮ ಉದ್ದೇಶವಿದೆಯೆಂದು ಸ್ಪಷ್ಟವಾಗಿ ತಿಳಿಸಿದುದು ಅಭಿನಂದನೀಯವಾದುದು.

—ಥಾಯಿ ಬಾಟ್ಲಿವಾಲಾರವರನ್ನು ೩ ಸಾವಿರ ರೂ. ಗಳ ಹೊಣೆಯಮೇಲೆ ಮದ್ರಾಸಿನ ಹೈಕೋರ್ಟಿನವರು ಬಿಟ್ಟಿದ್ದಾರೆ. ಮುಖ್ಯಮಂತ್ರಿಗಳಾದ ಶ್ರೀ. ರಾಜಗೋಪಾಲಾಚಾರ್ಯರು ಈ ವಿಚಾರದಲ್ಲಿ ತುಂಬಾ ಹೊಣೆಗಾರಿಕೆಯಿಂದ ಲಕ್ಷಿಸುವುದಾಗಿ ತಿಳಿಸಿದ್ದಾರೆ.

# ಮಾಯೆಯ ಮರ್ಮ ತಿಳಿಯದೆ ಕೆಡಬೇಡಿ.



## ಹೊನ್ನು, ಹೆಣ್ಣು, ಮಣ್ಣು ಇವು ಮಾಯೆಯಲ್ಲ.

ಹಿಂದು ಧರ್ಮದ ಕೆಲವು ಪ್ರಚಾರಕರು ಹೊನ್ನು, ಹೆಣ್ಣು, ಮಣ್ಣುಗಳನ್ನು ಬಹಳವಾಗಿ ಹಳಿದಿದ್ದಾರೆ. ಇವು ಧರ್ಮಸಾಧನೆಗೆ ವಿಘ್ನಕಾರಿಗಳಂತೆ. ಹೊನ್ನು ಅನರ್ಥಕರವಾದುದಂತೆ. ಹೆಣ್ಣು ಮಾರಿಯಂತೆ. ಮಣ್ಣಿಗಾಗಿ ಮಣ್ಣುಪಾಲಾದವರೆಲ್ಲಾ ಹೀನರಂತೆ. ಇವು ಮೂರನ್ನು ಬಿಟ್ಟವರು ಮೂರು ಲೋಕಗಳಿಗೆ ವಂದ್ಯರಂತೆ.

ಹೊನ್ನು, ಹೆಣ್ಣು, ಮಣ್ಣು ಇವು ಮೂರು ಮುಕ್ತಿಗೆ ವಿಘ್ನವನ್ನುಂಟುಮಾಡಿವೆಯಂತೆ. ಸ್ವರ್ಗದ ಹಾದಿಯನ್ನು ಕಟ್ಟುಮಾಡಿ ಇವು ನರಕಕ್ಕೆ ಕರೆದುಕೊಂಡು ಹೋಗುತ್ತವಂತೆ. ಹೀಗೆ ಒಣ ವೇದಾಂತವು ಈ ದೇಶದಲ್ಲಿ ಬಹುಕಾಲ ಅನೇಕರಿಂದ ಪ್ರಚಾರ ಮಾಡಲ್ಪಟ್ಟಿದೆ.

ಈ ವಿಚಾರಸರಣಿ ಘಾತಕವಾದುದು. ಜನಾಂಗದ ಏಳಿಗೆಗೆ ವಿಘ್ನಕಾರಿ. ಜನಾಂಗವು ನಿಜವಾದ ಸುಖಶಾಂತಿಗಳಿಂದ ಬಾಳಬೇಕಾದರೆ ಹೊನ್ನು ಹೆಣ್ಣು ಮಣ್ಣುಗಳ ವಿಷಯದಲ್ಲಿರುವ ಈ ತಪ್ಪು ತಿಳುವಳಿಕೆ ಅಳಿಯಲೇ ಬೇಕು. ಧರ್ಮ ಸಂರಕ್ಷಣೆ ಮತ್ತು ಸಂವರ್ಧನೆಗಳಿಗೆ ಪ್ರತಿಬಂಧಕಾರಿಯಾದ ಈ ತಪ್ಪು ತಿಳುವಳಿಕೆಯನ್ನು ಬಸವಾದಿ ಶರಣರು ಎಷ್ಟೋ ನಿವಾರಣೆಮಾಡಿದರು. ಈ ಸಂಬಂಧವಾಗಿ ಶ್ರೀ ಜಗದ್ಗುರು ಪ್ರಭುದೇವರು ಶಿವಾನುಭವ ಮಂಟಪದಲ್ಲಿ ಒಂದು ದಿನ ಹೀಗೆ ಬೋಧಿಸಿದರು—

> ಹೊನ್ನು ಮಾಯೆ ಎಂಬರು. ಹೆಣ್ಣು ಮಾಯೆ ಎಂಬರು. ಮಣ್ಣು ಮಾಯೆ ಎಂಬರು. ಹೊನ್ನು ಮಾಯೆಯಲ್ಲ. ಹೆಣ್ಣು ಮಾಯೆಯಲ್ಲ. ಮಣ್ಣು ಮಾಯೆಯಲ್ಲ. ಮನದ ಮುಂದಣಾಸೆಯೇ ಮಾಯೆ ಕಾಣಾ ಗುಹೇಶ್ವರ.

ಬೆಳ್ಳಿ, ಬಂಗಾರ ಮೊದಲಾದ ಸಂಪತ್ತುಗಳೆಲ್ಲಾ ಮಾಯೆಯೆಂದು ಅವುಗಳನ್ನೆಲ್ಲಾ ನಿರಾಕರಿಸಿಬಿಡಿರೆಂದೇ ಹೇಳುತ್ತಿದ್ದಾರಷ್ಟೆ. ಅವು ನಿಮಗೆ ಅನರ್ಥಕರವಾಗಿವೆಯೆಂದೇ ಬೋಧಿಸುತ್ತಿದ್ದಾರಷ್ಟೆ. ಹೀಗೆ ಹೇಳುವವರಿಗೆ ಮಾಯೆಯ ಮರ್ಮವೇ ತಿಳಿಯದು.

ಬೆಳ್ಳಿ ಬಂಗಾರಗಳೆಲ್ಲಾ ಜಡ ಪದಾರ್ಥಗಳು. ಅವು ಲೌಕಿಕ ಸುಖ ಶಾಂತಿಗಳಿಗೆ ಉಪಕರಣಗಳಾಗಿವೆ. ಅವುಗಳಿಲ್ಲದಿದ್ದ ಮಾತ್ರದಿಂದ ಮೋಕ್ಷವು ಸಮೀಪವಾಗುತ್ತದೆಯೆ? ಹಾಗಾದರೆ ಬಡವರೆಲ್ಲಾ ಮೋಕ್ಷಕ್ಕೆ ಹತ್ತಿರದಲ್ಲಿದ್ದಾರೆಂದು ಹೇಳಬೇಕಾಯಿತಷ್ಟೆ. ಇದು ತಪ್ಪು ತಿಳುವಳಿಕೆ. ಸಂಪತ್ತನ್ನು ಹೀಗೆ ನಿರಾಕರಿಸಕೂಡದು. ಆದರೆ ಅದು ಕೇವಲ ತನ್ನ ಸುಖೋಪಭೋಗಕ್ಕಾಗಿಯೇ ಇದೆಯೆಂದು ತಿಳಿದು ಅದರಲ್ಲಿ ಆಶೆಯುಳ್ಳವನಾಗಿರಬಾರದು. ಅದರಲ್ಲಿಡುವ ಆಶೆಯು ಮಾಯೆಯೇ ವಿನಾ ಆ ಸಂಪತ್ತೇನೂ ಮಾಯೆಯಲ್ಲ.

ಸಂಪತ್ತು ಶಿವನ ಸೊತ್ತು. ಅದನ್ನು ನಿಮ್ಮ ಕಡೆ ಕೊಟ್ಟಿದ್ದಾನೆ. ಅದನ್ನು ಸಂರಕ್ಷಿಸಿ ಸಂವರ್ಧಿಸಬೇಕು. ಏತಕ್ಕೆಂದರೆ ಲೋಕೋಪಕಾರದ ಕಾರ್ಯಗಳ ವಿನಿಯೋಗಕ್ಕೆ. ತಾನು ಕಷ್ಟಪಟ್ಟು ಸಂಪತ್ತನ್ನು ಗಳಿಸಿ ಅದರಲ್ಲಿ ಆಸೆಯುಳ್ಳವನಾಗದೆ ಅದನ್ನು ಲೋಕಸೇವೆಗೆ ಸವಿಸಿದರೆ ಸಂಪತ್ತು ನಿಮಗೆ ಕಲ್ಯಾಣವನ್ನೇ ಉಂಟುಮಾಡುವುದು. ಆದುದರಿಂದ ಅದೇನೂ ಮಾಯೆಯಲ್ಲ.

ಅಣ್ಣ ಬಸವಣ್ಣನು ಹೆಣ್ಣನ್ನೇನು ನಿರಾಕರಿಸಿದ್ದಾನೆಯೆ ? ಸಿರಿಯಾಳನೇನು ಚಂಗಳೆಯ ಬಿಟ್ಟಿದ್ದನೆ ? ಮನದಲ್ಲಿಯ ಆಶೆ ಅಳಿದಮೇಲೆ ಹೊನ್ನು, ಹೆಣ್ಣು, ಮಣ್ಣುಗಳಿದ್ದರೇನು ಮಾಡುವವು ? ಹೆಣ್ಣನ್ನು ಬಿಡಲೇಬೇಕೆಂಬ ಅಗ್ರಹಬೇಡ. ಹಿಡಿಯಲೇಬೇಕೆಂಬ ಹಠ ಬೇಡ. ಹಿಡಿದರೂ, ಬಿಟ್ಟರೂ, ಆಶೆಯೊಂದಿಲ್ಲದಿದ್ದರೆ ಸಾಕು. ಆಶೆಯುಳ್ಳವರು ಬಿಟ್ಟರೂ ಹಿಡಿದಂತೆ. ಆಶೆಯಿಲ್ಲದವರು ಹಿಡಿದರೂ ಬಿಟ್ಟಂತೆ.

ಈ ಮೂರನ್ನೂ ನಿರಾಕರಿಸುವುದು ಶಕ್ಯವಿಲ್ಲ. ಅದು ಇಷ್ಟವೂ ಅಲ್ಲ. ಇವುಗಳಲ್ಲಿ ಆಸಕ್ತರಾಗಿಯೇ ಇರುವುದೂ ಹಿತಕರವಲ್ಲ. ಆಶೆಯನ್ನು ಅಳಿದು ಈ ಮೂರರ ಸದುಪಯೋಗಮಾಡುವುದೇ ಲೇಸು. ಇದೇ ಲೋಕಕ್ಕೆ ಶ್ರೇಯಸ್ಕರವಾದ ಶರಣರ ಮಾರ್ಗ.

## ಬಸವನ ಬಾಗೇವಾಡಿ.

ನಮ್ಮಲ್ಲಿ ತಾಲೂಕ ಕಾಂಗ್ರೆಸ್ ಕಮಿಟಿಯು ನಿನ್ನೆ ತಾ. ೨೧-೧೦-೩೭ ನೆಯ ದಿವಸ ವೇದಮೂರ್ತಿ ಮರುಳಾರಾಧ್ಯ ಶಾಸ್ತ್ರಿ ವಿಜಾಪುರ ಇವರಿಂದ ಸ್ಥಾಪಿಸಲ್ಪಟ್ಟಿತು. ಸದರಿ ಕಮಿಟಿಗೆ ಮಿ. ರಾಮರಾವ ಪಾಟೀಲ ಇವರನ್ನು ಅಧ್ಯಕ್ಷರನ್ನಾಗಿ ಆರಿಸಲ್ಪಟ್ಟಿತು. ಸೆಕ್ರೆಟರಿ ಜಾಗಾಕ್ಕೆ ಮಿ. ಚಂದ್ರಾಮಪ್ಪಾ ಹಲಸಂಗಿ ಇವರನ್ನು ಆರಿಸಿತು. ನಮ್ಮ ತಾಲೂಕಾದಲ್ಲಿ ವೇದಮೂರ್ತಿ ಶಾಸ್ತ್ರಿಗಳು ಕಾಂಗ್ರೆಸ್ ಮೆಂಬರರ ಪ್ರಚಾರ ಕಾರ್ಯವನ್ನು ಒಳ್ಳೆ ಜೋರಿನಿಂದ ನಡೆಸಿರುವರು ಈಗ ತಾಲೂಕದಲ್ಲಿ ಅಜಮಾಸ ೭೦೦-೮೦೦ ಜನರು ಕಾಂಗ್ರೆಸ್ ಮೆಂಬರರಾಗಿರುವರು.

ಎಂದೆಂದಿಗೂ ಕಾಂಗ್ರೆಸ್‌ದ ಹೆಸರು ಸಹ ಗೊತ್ತಿಲ್ಲದ ತಾಲೂಕದಲ್ಲಿ ಈಗ ಎತ್ತ ನೋಡಿದತ್ತ ಕಾಂಗ್ರೆಸ್‌ದ ಗಾಳಿಯು ಬಲವಾಗಿ ಬೀಸಹತ್ತಿದೆ. ಇಷ್ಟು ದಿವಸಗಳವರೆಗೆ ಗಾಢನಿದ್ರೆಯಲ್ಲಿದ್ದ ಜನರು ಈಗ ಎಚ್ಚರಾಗಹತ್ತಿರುವರು.

ಜನರ ಬಿತ್ತುಗೆಗಳು ನಡೆದಿವೆ. ಕೆಲವು ಭೂಮಿಗಳು ನಾಟಿದ್ದು ನಾಟಿಗೆಗಳು ನೆಟ್ಟಗಿಲ್ಲದಮೂಲಕ ತಿರುಗಿ ಮುರಿದು ಬಿತ್ತುವ ಪ್ರಸಂಗ ಬಂದಿದೆ. ಬಡರೈತರ ಗೋಳು ದೇವರೇ ಬಲ್ಲ.

ತಾ. ಕಾ. ಕಮಿಟಿ.

ಬಾಗೇವಾಡಿ

ಜಿ. ವಿಜಾಪುರ.

## ಕುಷ್ಟಗಿ.

ಶ್ರೀ. ಎಮ್. ಮಹಾದೇವಯ್ಯನವರು ಹಿರೇಮಠ ಇವರು ಕುಷ್ಟಗಿಯ ಹೆಸರಾದ ವಕೀಲರು, ಸಮಾಜ ಹಿತಾಭಿಲಾಷಿಗಳು, ಜನಾನುರಾಗಿಗಳು ಮೇಲೆ ಬಡವರ ಬಂಧುಗಳು. ಇವರ ಹೊರತು ಇಲ್ಲದೆ ಇಲ್ಲಿಯ ಸಾರ್ವಜನಿಕ ಕಾರ್ಯಗಳೇ ನಡೆಯುವಂತಿದ್ದಿಲ್ಲ. ಇಂಥವರು ಕಳೆದ ಒಂದು ವರುಷದಿಂದ ತಮ್ಮ ವಕೀಲಿಯ ಉದ್ಯೋಗವನ್ನು ವ್ಯಾಜ್ಯದ ಮೂಲಕ ಬಿಟ್ಟುಕೊಟ್ಟು ಹೈದರಾಬಾದಕ್ಕೆ ಹೋಗಿದ್ದರು. ಇದರಿಂದ ಇಲ್ಲಿಯ ಸಾರ್ವಜನಿಕ ಕಾರ್ಯಗಳೆಲ್ಲವೂ ನಿಂತುಹೋಗಿ ನಾಗರಿಕರಿಗೆ ಪರಮಾವಧಿ ವ್ಯಸನವಾಗಿತ್ತು. ಇವರ ವಕೀಲಿಯ ಉದ್ಯೋಗದಿಂದ ಲಾಭಪಡೆಯುತ್ತಿದ್ದ ಇಲ್ಲಿಯ ಮತ್ತು ಈ ತಾಲೂಕಿನ ಜನರಿಗಂತೂ ಅತಿಶಯ ಚಿಂತೆಯಾಗಿತ್ತು. ಅಂಥವರು ಇಲ್ಲಿಯವರೆಗೆ ಹೈದರಾಬಾದದೊಳಗೆ ನಡೆದಿದ್ದ ತಮ್ಮದೊಂದು ವ್ಯಾಜ್ಯದಲ್ಲಿ ಜಯಶೀಲರಾಗಿ ಮೊನ್ನೆ ವಿಜಯಾದಶಮಿಯ ಸುಮುಹೂರ್ತದಲ್ಲಿ ತಿರುಗಿ ಊರಿಗೆ ಬಂದರು. ಅಂದಿನ ವಿಜಯಾದಶಮಿಯಂತಹ ನಾಡಹಬ್ಬದ ಆನಂದದಲ್ಲಿ ವಕೀಲರ ಪುನರಾಗಮನದ ಮಹಾನಂದವು ಕೂಡಿ ಊರಲ್ಲೆಲ್ಲ ಆನಂದವೇ ಆನಂದವಾಗಿತ್ತು. ಈಗ ಇವರು ಮತ್ತೆ ತಮ್ಮ ವಕೀಲಿಯ ಉದ್ಯೋಗವನ್ನು ಆರಂಭಿಸಿರುವರು. ಕರ್ತವ್ಯದಕ್ಷರೂ, ಸತ್ಯನಿಷ್ಠರೂ, ಸರಕಾರ ಮತ್ತು ಜನರ ಪ್ರೀತಿಗೆ ಪಾತ್ರರಾದವರೂ, ಪಕ್ಷಕಾರರ ಹಿತವೇ ತಮ್ಮ ಹಿತವೆಂಬ ಭಾವನೆಯುಳ್ಳವರೂ ಆದ ಇವರು ಇತೋಪ್ಯತಿಶಯವಾದ ಕೀರ್ತಿ ವಿಶ್ವಾಸಗಳನ್ನು ಸಂಪಾದಿಸಿ ಸಮಾಜಸೇವೆ ಮಾಡುವವರಾಗಲೆಂದು ಹಾರೈಸುವೆನು.

ಓರ್ವ ನಾಗರಿಕ.

## ಹಿಂದು ಮಹಾ ಸಭೆಯ ನಿರ್ಣಯ.

ಹಿಂದು ಮಹಾ ಸಭೆಯ ವರ್ಕಿಂಗ್ ಕಮಿಟಿಯು ಮಹಾ ಸಭೆಯ ಉಪಾಧ್ಯಕ್ಷರಾದ ಭಾಯಿ ಪರಮಾನಂದರ ಅಧ್ಯಕ್ಷತೆಯಲ್ಲಿ ಕಳೆದ ೧೦ ನೆಯ ತಾರೀಖಿನ ದಿವಸ ದಿಲ್ಲಿಯಲ್ಲಿ ಕೂಡಿ ಕೆಳಗಿನ ನಿರ್ಣಯಗಳನ್ನು ಮಾಡಿತು.

(೧) ಬಂಗಾಲ ಪ್ರಾಂತದಲ್ಲಿ ವಂದೇಮಾತರಂ ಗೀತೆಯ ವಿಚಾರವಾಗಿಯೂ ಆನಂದ ಮಠ ಪುಸ್ತಕವನ್ನು ಸುಡುವುದರ ಮೂಲಕವಾಗಿಯೂ ಕಲಕತ್ತಾ ವಿಶ್ವವಿದ್ಯಾಲಯದ ವಿರುದ್ಧವಾಗಿಯೂ ಮುಸಲ್ಮಾನರು ನಡೆಸಿರುವ ಚಟುವಟಿಕೆಯನ್ನು ಈ ಸಭೆಯು ನಿಷೇಧಿಸುತ್ತದೆ. ಅಲ್ಲಿಯ ಹಿಂದುಗಳು ಸಂಘಟಿತರೂಪದಿಂದ ಈ ಆಕ್ರಮಣವನ್ನು ತಡೆಯಲು ಪ್ರಯತ್ನಿಸಬೇಕು.

(೨) ವಂದೇಮಾತರಂ ಗೀತೆಯು ರಾಷ್ಟ್ರೀಯ ಗೀತೆಯಾಗಿದೆ. ರಾಷ್ಟ್ರಭಕ್ತರೆಲ್ಲರೂ ಪ್ರಯತ್ನಪೂರ್ವಕ ಇದೇ ಗೀತೆಯು ರಾಷ್ಟ್ರಗೀತೆಯಾಗಿರುವಂತೆ ಮಾಡುವರೆಂದು ಈ ಸಭೆಗೆ ನಂಬಿಕೆಯಿದೆ.

(೩) ಲಾಹೋರದಲ್ಲಿ ಸ್ಥಾಪಿಸಲ್ಪಡುತ್ತಿದ್ದ ಗೋವಧಾಲಯವನ್ನು ವ್ಹಾಯಿಸ್‌ರಾಯರಾದ ಲಾರ್ಡ ಲಿನ್‌ಲಿಥಗೋರವರು ನಿಲ್ಲಿಸಿದ್ದಕ್ಕಾಗಿ ಅವರಿಗೆ ಈ ಸಭೆಯು ತನ್ನ ಧನ್ಯವಾದಗಳನ್ನು ಅರ್ಪಿಸುತ್ತದೆ.

(೪) ಕಾಶಿ, ಮಥುರಾ, ಪ್ರಯಾಗ, ಹರದ್ವಾರ ಮೊದಲಾದ ಸ್ಥಳಗಳಲ್ಲಿರುವ ಗೋವಧಾಲಯಗಳನ್ನು ತೆಗೆದುಹಾಕುವ ಬಗ್ಗೆ ಆಯಾಯ ಸ್ಥಳಗಳ ಜನರು ಪ್ರಚಂಡ ಚಟುವಟಿಕೆಯನ್ನು ನಡೆಯಿಸುವರೆಂದು ಈ ಸಭೆಯು ನಿರೀಕ್ಷಿಸಿದೆ.

## ಮುಸ್ಲಿಂಲೀಗಿನ ನಿರ್ಣಯ.

ಲಖನೌ ಪಟ್ಟಣದಲ್ಲಿ ಕೂಡಿದ್ದ ಅಖಿಲ ಭಾರತ ಮುಸ್ಲಿಂಲೀಗಿನಲ್ಲಿ ಈ ಕೆಳಗಿನ ನಿರ್ಣಯಗಳಾದವು.

(೧) ಹಿಂದುಸ್ಥಾನಕ್ಕೆ ಸಂಪೂರ್ಣ ಸ್ವಾತಂತ್ರ್ಯ ಬೇಕು. ಆದರೆ ಅದರಲ್ಲಿ ಮುಸಲ್ಮಾನ್ ಮೊದಲಾದ ಅಲ್ಪಸಂಖ್ಯಾಕ ಜಾತಿಗಳಿಗೆ ಪ್ರತ್ಯೇಕವಾದ ರಕ್ಷಣೆಯಿರಬೇಕು. (೨) ವಂದೇಮಾತರಂ ಗೀತೆಯು ರಾಷ್ಟ್ರೀಯ ಗೀತೆಯಲ್ಲ. ಅದು ಮುಸಲ್ಮಾನರಿಗೆ ವಿರೋಧವಾದುದು. ಸಭೆ ಸಮ್ಮೇಲನ ಮೊದಲಾದ ಯಾವ ಪ್ರಸಂಗಗಳಲ್ಲಿಯೂ ಯಾವ ಮುಸಲ್ಮಾನರೂ ಅದರ ಸಂಬಂಧವನ್ನಿಟ್ಟುಕೊಳ್ಳಬಾರದು. (೩) ಉರ್ದು ಭಾಷೆಯನ್ನು ಹಿಂದುಸ್ಥಾನದ ರಾಷ್ಟ್ರ ಭಾಷೆಯನ್ನಾಗಿ ಮಾಡಬೇಕು. (೪) ಮುಸ್ಲಿಂಲೀಗಿಗೆ ೧೮ ವರುಷಗಳಿಗೆ ಮೇಲ್ಪಟ್ಟ ಯಾವ ಮುಸಲ್ಮಾನನಾದರೂ ಸದಸ್ಯನಾಗಬಹುದು. ಸದಸ್ಯನು ವರುಷಕ್ಕೆ ೧ ರೂ. ಕೊಡಬೇಕಾಗಿದ್ದುದನ್ನು ತೆಗೆದು ಕೇವಲ ೨ ಆಣೆ ಕೊಡಬೇಕಾಗಿ ಗೊತ್ತುಮಾಡಿದ್ದಾಗಿದೆ. (೫) ಹಳ್ಳಿಗಳಿಂದ ಪಟ್ಟಣಗಳ ವರೆಗೆ ಎಲ್ಲಾ ಕಡೆಗಳಲ್ಲಿಯೂ ಮುಸ್ಲಿಂ ಲೀಗಿನ ಶಾಖೆಗಳನ್ನು ಸ್ಥಾಪಿಸಬೇಕು. (೬) ಮಂತ್ರಿ ಮಂಡಲವನ್ನು ಏರ್ಪಡಿಸುವಾಗ ಅಲ್ಪಸಂಖ್ಯಾಕರಾದ ಮುಸಲ್ಮಾನರ ಹಕ್ಕು ಬಾಧ್ಯತೆಗಳನ್ನು ಗವ್ಹರ್ನರರು ನಿರ್ಲಕ್ಷಿಸಿದ್ದಾರೆ. (೭) ಮುಸ್ಲಿಂಲೀಗಿನ ಕಾರ್ಯಗಳನ್ನು ಪುರುಷರ ಜತೆಯಲ್ಲಿ ಸ್ತ್ರೀಯರೂ ಸೇರಿ ಮಾಡಲು ಎಲ್ಲ ಕಡೆಗೂ ಮುಸ್ಲಿಂಲೀಗಿನ ಮಹಿಳಾ ಶಾಖೆಗಳನ್ನೂ ಏರ್ಪಡಿಸಬೇಕು. (೮) ಶಾಹೀದಗಂಜ ಮಸೀದಿಯನ್ನು ಪುನಃ ಕಟ್ಟಿಸಿ ಮುಸಲ್ಮಾನರ ಸ್ವಾಧೀನಪಡಿಸಬೇಕು.

ಪ್ರಾಚೀನ ಮತ್ತು ಅರ್ವಾಚೀನ ಕಾಲದ

# ನಮ್ಮ ಸಮಾಜದ ಸ್ತ್ರೀಯರು.

[ಕು. ಪಾರ್ವತೆವ್ವ ತಂದಿ ಗುರುಸಿದ್ಧಪ್ಪ ಬಳ್ಳಾರಿ ಇವರು ಗದಗಿನ ಹಡಗಲಿ ಮಠದಲ್ಲಿ ಕೂಡಿದ ಸ್ತ್ರೀಯರ ಸಭೆಯಲ್ಲಿ ಓದಿದ ಲೇಖನವು.]

ಹಿರಿಯರಿಗೆ ವಂದಿಸಿ, ಕಿರಿಯರಿಗೆ ಕೈಮುಗಿದು ನನ್ನ ಭಾಷಣವನ್ನು ಹಿರಿಯರ ಅನುಮತಿಯಿಂದ ಓದಲು ಸುರುವು ಮಾಡುತ್ತೇನೆ. ಇದರಲ್ಲಿಯ ತಪ್ಪು ನನ್ನದು. ಒಪ್ಪು ಅಕ್ಕಮಹದೇವಿಯರದು. ಪ್ರಾಚೀನ ಮತ್ತು ಅರ್ವಾಚೀನ ಕಾಲದ ನಮ್ಮ ಸಮಾಜದ ಮುಖ್ಯ ಮುಖ್ಯ ಸ್ತ್ರೀಯರ ಸಂಕ್ಷಿಪ್ತ ಚರಿತ್ರೆಯನ್ನು ಇಲ್ಲಿ ನಿಮಗೆ ಹೇಳುವೆನು. ಸ್ತ್ರೀಯು ಪುರುಷನ ಅರ್ಧಾಂಗಿಯೆಂದೂ, ಪ್ರಪಂಚ ರಥದ ಒಂದು ಗಾಲಿಯೆಂದೂ 'ಯತ್ರ ನಾರ್ಯಸ್ತು ಪೂಜ್ಯಂತೆ ರಮಂತೆ ತತ್ರ ದೇವತಾ' ಎಂದೂ ಇನ್ನೂ ಮೊದಲಾಗಿ ಸ್ತ್ರೀಯರ ಶ್ರೇಷ್ಠತೆಯನ್ನು ಶಾಸ್ತ್ರದಲ್ಲಿ ಹೊಗಳಿದ್ದರೂ ಅದು ಶಾಸ್ತ್ರದ ಮಾತಾಗಿದ್ದಿತೇ ಹೊರತು ಪ್ರತ್ಯಕ್ಷ ಆಚರಣೆಯಲ್ಲಿ "ನ ಸ್ತ್ರೀ ಸ್ವಾತಂತ್ರ ಮರ್ಹತಿ" ಎಂದೇ ಇದ್ದಿತು. ಶಾಸ್ತ್ರಕ್ಕೊಂದು ಬಟ್ಟೆ ತಮಗೊಂದು ಬಟ್ಟೆ, ಎಂತಿದ್ದ ಈ ಆತ್ಮವಂಚನೆಯ ನಡವಳಿಕೆಯು ನಮ್ಮ ಮತ ಸ್ಥಾಪಕರಾದ ಜಗದ್ಗುರು ಬಸವಣ್ಣನವರಿಗೆ ಸರಿ ಬೀಳಲಿಲ್ಲ. ಅವರು ಈ ನುಡಿಗೂ ನಡೆಗೂ ಇದ್ದ ಭೇದವನ್ನು ತಪ್ಪಿಸಿ ನುಡಿ-ನಡೆ ಒಂದಾಗುವಂತೆ ಮಾಡಿದರು. ಸ್ತ್ರೀಯರ ದರ್ಜೆಯನ್ನು ಸಮಾಜದಲ್ಲಿ ಅದೆಷ್ಟೋ ಹೆಚ್ಚಿಸಿದರು. ಸತಿ ಪತಿಗಳು ಒಂದೇ ಆಚಾರದವರಿರಬೇಕೆಂದು ಅವರ ಮತವಾಗಿದ್ದಿತು. ಅದೇನೆಂದರೆ—

"ಗಂಡ ಶಿವಲಿಂಗ ದೇವರ ಭಕ್ತ. ಹೆಂಡತಿ ಮಾರಿಮಸಣಿಯ ಭಕ್ತೆ. ಗಂಡಕೊಂಬುದು ಪಾದೋದಕ, ಹೆಂಡತಿ ಕೊಂಬುದು ಸುರೆಮಾಂಸ, ಭಾಂಡಭಾಜನ ಶುದ್ಧಿ ಇಲ್ಲದವರ ಭಕ್ತಿ ಹೆಂಡದ ಮಡಕೆಯ ಹೊರಗೆ ತೊಳೆದಂತೆ ಕೂಡಲ ಸಂಗಮದೇವ" ಎಂದು ಹೇಳಿರುವರು. ಗಂಡನ ದಾರಿ ಒಂದು ಬೇರೆ. ಹೆಂಡತಿಯ ದಾರಿ ಒಂದು ಬೇರೆ. ಆದರೆ ಎತ್ತು ಎರಗೆಳೆದರೆ ಕೋಣ ಕೆರೆಗೆಳೆಯಿತು' ಎಂಬ ಗಾದಿಯು ಮಾತಿನಂತಾಗುವುದು. ಇದರಿಂದ ಆ ಮನೆಯಲ್ಲಿ ಅನೈಕ್ಯವೂ, ಅಶಾಂತತೆಯೂ ಉಂಟಾಗಿ ಒಬ್ಬರಿಗೂ ಸುಖವಾಗುವುದಿಲ್ಲ. ಆದ್ದರಿಂದ ಗಂಡ ಹೆಂಡರಿಬ್ಬರೂ ಪರಸ್ಪರ ಪ್ರೇಮದಿಂದ ನಡಕೊಂಡರೆ ಆ ಮನೆಯಲ್ಲಿ ಶಾಂತತೆಯುಂಟಾಗುವುದಲ್ಲದೆ ಆ ಮನೆಯ ಗೌರವವೂ ಹೆಚ್ಚುವುದು. ಹೀಗಾಗಬೇಕಾದರೆ ಸ್ತ್ರೀಯರು ವಿದ್ಯಾವಂತರಾಗುವುದು ಅವಶ್ಯಕ. ನಮ್ಮ ಸಮಾಜದಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ವಿಷಯಗಳಲ್ಲಿ ಸ್ತ್ರೀಯರಿಗಿರುವಷ್ಟು ಸಮಾನತೆ ಮತ್ತು ಸ್ವತಂತ್ರತೆಯು ಯಾವ ಹಿಂದು ಸಮಾಜದ ಸ್ತ್ರೀಯರಿಗಿಲ್ಲದಿರುವುದನ್ನು ನೋಡಿ ನಾವು ಹೆಮ್ಮೆಪಡಬೇಕಾಗಿದೆ. ನಮ್ಮ ಗುರುವಾದ ಬಸವಣ್ಣನವರಿಂದ ಸ್ಥಾಪಿತವಾದ 'ಶಿವಾನುಭವ' ಮಂಟಪದಲ್ಲಿ ಸ್ತ್ರೀಯರೂ ಅಧ್ಯಾತ್ಮದಂಥ ಶ್ರೇಷ್ಠ ಮತ್ತು ಹಾಗೂ ವಿಚಾರದಲ್ಲಿ ಹೇಗೆ ಭಾಗ ತೆಗೆದುಕೊಳ್ಳುತ್ತಿದ್ದರೆಂಬುದು ಮತ್ತು ಅಲ್ಲಿ ಅವರಿಗೆ ಯಾವ ಪ್ರಕಾರದ ಮಾನ-ಮನ್ನಣೆಗಳು ದೊರೆಯುತ್ತಿದ್ದವೆಂಬುದು 'ಶೂನ್ಯ ಸಂಪಾದನೆ' ಎಂಬ ಸಂವಾದರೂಪ ಆ ಶಿವಶರಣರ ವಚನ ಗ್ರಂಥವನ್ನು ಓದಿದವರಿಗೆಲ್ಲ ಸಹಜವಾಗಿಯೇ ತಿಳಿಯುವಂತಿದೆ. ಈ ಶಿವಾನುಭವ ಮಂಟಪದ ಮೂಲಕ ನಮ್ಮ ಸಮಾಜದ ಸ್ತ್ರೀಯರು ಮನೆಗೆಲಸದಲ್ಲಿ ನಿಪುಣರಾದಂತೆ, ಸಾಮಾಜಿಕ, ಧಾರ್ಮಿಕ, ರಾಜಕೀಯ ವಿಷಯಗಳಲ್ಲಿಯೂ ಪ್ರವೀಣರಾದದ್ದು ಕಂಡುಬರುತ್ತದೆ. ಕೆಲ-ಕೆಲವು ಮಹಿಳೆಯರು ಬರೀ ಸ್ತ್ರೀಯರಿಗಷ್ಟೇ ಅಲ್ಲ; ಪುರುಷರಿಗೂ ಮಾರ್ಗದರ್ಶಕರಾಗಿ ಅವರಿಂದ ಅಂದು ಹೊಗಳಿಸಿಕೊಂಡಂತೆ ಇಂದಿನವರ ಮನ್ನಣೆಗೂ ಪಾತ್ರರಾಗಿರುವುದು ನಾವು ಲಕ್ಷಿಸತಕ್ಕ ಮಾತಾಗಿದೆ.

ಇವರಲ್ಲಿ ಮುಖ್ಯರಾದವರೆಂದರೆ— ವೈರಾಗ್ಯ ಮೂರ್ತಿಯಾದ ಅಲ್ಲಮಪ್ರಭುವಿನಿಂದ ಜ್ಞಾನನಿಧಿಯಾದ ಚನ್ನಬಸವೇಶ್ವರರಿಂದ ಭಕ್ತಿಭಾಂಡಾರಿಯಾದ ಬಸವಣ್ಣನವರಿಂದ ಮತ್ತು ಇನ್ನುಳಿದ ಶಿವಶರಣ - ಶರಣೆಯರಿಂದ ಒಳ್ಳೇ ಗೌರವದಿಂದ ಕಾಣಲ್ಪಟ್ಟು 'ಅಕ್ಕ'ನೆಂದು ಎಲ್ಲರಿಂದ ಕರೆಯಿಸಿಕೊಂಡ ನಮ್ಮಗಳೆಲ್ಲರ ಅಭಿಮಾನ ದೇವತೆಯಾದ ಉಡುತಡಿಯ ಮಹದೇವಿಯಕ್ಕನು. ಸ್ತ್ರೀ ಎಂಬ ಈ ಭೇದವನ್ನಷ್ಟು ಬಿಟ್ಟರೆ ಮಾಯಾಕೋಲಾಹಲನೆನಿಸಿಕೊಂಡ ಅಲ್ಲಮಪ್ರಭುವಿಗೆ ಆವ ವಿಷಯದಲ್ಲಿಯೂ ಕಡಿಮೆ ಇರಲಿಲ್ಲ. ಅಜಗಣ್ಣನ ತಂಗಿಯಾದ ಮುಕ್ತಾಯಕ್ಕನ ಬಂಧು ಪ್ರೇಮವು ತತ್ವನಿಷ್ಠೆಯು ಅಪಾರವಾಗಿರುವುದು. ಕಾಶ್ಮೀರದ ಅರಸರು ಬಸವಣ್ಣನವರ ಭಕ್ತಿ ಸಂಪತ್ತಿನ ಮುಂದೆ ತಮ್ಮ ಅರಸೊತ್ತಿಗೆಯ ವೈಭವವು ಸಪ್ಪಗೆಂದು ತಿಳಿದು ತಮ್ಮ ಅರಸೊತ್ತಿಗೆಗೆ ಶರಣು ಹೊಡೆದು ತಮ್ಮ ಸತಿಯೊಂದಿಗೆ ಕಲ್ಯಾಣಕ್ಕೆ ಬಂದು ಕಟ್ಟಿಗೆ ಮಾರುವ ಕಾಯಕವನ್ನು ಕೈಕೊಂಡು ಮೋಳಗಿ ಮಾರಯ್ಯನವರೆಂಬ ಹೆಸರಿನಿಂದ ಪ್ರಸಿದ್ಧರಾದರು. ಉಪನಿಷತ್ ಕಾಲದಲ್ಲಿ ಯಾಜ್ಞವಲ್ಕರು ತಮ್ಮ ಹೆಂಡತಿಯಾದ ಮೈತ್ರೆಯಿಗೆ ಆತ್ಮಜ್ಞಾನವನ್ನು ಹೇಳಿಕೊಟ್ಟಿದ್ದರೆ, ಬಸವಣ್ಣನವರ ಕಾಲದಲ್ಲಿ ಮೋಳಗಿ ಮಾರಯ್ಯನವರ ಹೆಂಡತಿಯಾದ ಮಹದೇವಿಯಮ್ಮನು ತನ್ನ ಗಂಡನ ಅಹಂಕಾರ ಅವಿದ್ಯೆಗಳನ್ನು ತನ್ನ ವಿನಯಪೂರ್ಣ ಸವಿನುಡಿಗಳಿಂದ ಅಲ್ಲಗಳೆದು ದಿವ್ಯಜ್ಞಾನದ ರಹಸ್ಯವನ್ನು ತಿಳಿಹೇಳಿರುವಳು. ಆಯದಕ್ಕಿ ಮಾರಯ್ಯನವರ ಧರ್ಮ ಪತ್ನಿಯರಾದ ಲಕ್ಕಮ್ಮನು ತನ್ನ ಗಂಡನಿಗೆ ಧೈರ್ಯದುಂಬಿಸಿ ಒಂದು ಲಕ್ಷ ತೊಂಬತ್ತಾರು ಸಾವಿರ ಜಂಗಮರೊಡನೆ ಬಸವಾದಿ ಪ್ರಮಥರನ್ನು ಭೋಜನಕ್ಕೆ ಕರೆತಂದು ಸರ್ವರನ್ನು ಸಂತುಷ್ಟಪಡಿಸಿ 'ಮನೆ ನೋಡಾ ಬಡವರು ಮನ ನೋಡಾ ಘನಮಹಿಮ ಸಂಪನ್ನರು' ಎಂದು ಅವರಿಂದ ಹೊಗಳಿಸಿಕೊಂಡ ಮಹಿಮಳಿವಳು. ಇದರಂತೆ ಹಡಪದಪ್ಪಣ್ಣನವರ ಪತ್ನಿಯಾದ ಲಿಂಗಮ್ಮ, ಶರಣರಾದ ಹರಳಯ್ಯನವರ ಪತ್ನಿ ಕಲ್ಯಾಣಮ್ಮ ಇವರು ತಮ್ಮ ಆಚರಣೆಯಿಂದ, ಅನುಭವದಿಂದ ಎಲ್ಲರ ಮೆಚ್ಚುಗೆಗೆ ಪಾತ್ರರಾಗಿರುವರು. ಬಸವಣ್ಣನವರ ಅರಸಿಯರಾದ ಗಂಗಮ್ಮ ನೀಲಾಂಬಿಕೆಯರು ತಮ್ಮ ಪತಿ ಭಕ್ತಿ ಲಿಂಗನಿಷ್ಠೆಯಿಂದ ಎಲ್ಲರಿಗೂ ಪೂಜ್ಯರಾಗಿರುವರು. ಕದಿರೆ ರೆಮ್ಮವ್ವೆ, ಕೊಟ್ಟಣದ ರೇಮವ್ವೆ ಇವರು ತಮ್ಮ ಆಚರಣೆಯಿಂದ ಕಾಯಕದ ಮಹತ್ವವನ್ನು ಹೆಚ್ಚಿಸಿರುವರು. ಭೂಪ ಬಿಜ್ಜಳನ ಸೇನಾಧಿಪತಿಯಾದ ಮಧುವರಸನ ಮನೆಯಲ್ಲಿ ದಾಸಿಯಾಗಿದ್ದುಕೊಂಡು ಸಮಯಸಾಧಿಸಿ ಮಧುವರಸನನ್ನೇ ಲಿಂಗಾಂಗಿಯಾಗುವಂತೆ ಮಾಡಿದ ಶ್ರೇಯಸ್ಸು ದಾಸಿಯಾದ ನಮ್ಮ ಮಹದೇವಿಯದು. ಈಕೆಯ ಈ ಕಾರ್ಯವು ಈಗಿನ ಸಮಾಜ ಸುಧಾರಕರನ್ನು ಸಹ ಬೆರಗುಗೊಳಿಸುವಂತಿದೆ. ಹೀಗೆ ಇನ್ನೂ ಎಷ್ಟೋ ಶಿವಶರಣೆಯರು ಪ್ರಸಿದ್ಧರಾಗಿ ಹೋಗಿರುವರು. ಇವರಿಂದ ಕನ್ನಡ ನಾಡು-ನುಡಿಗಾದ ಉಪಕಾರವು ಅಷ್ಟಿಷ್ಟಲ್ಲ.

ಇನ್ನು ರಾಜಕಾರಣದಲ್ಲಿ ಪ್ರಸಿದ್ಧರಾದ ನಮ್ಮ ಕೆಲ ವೀರ ಮಹಿಳೆಯರ ಚರಿತ್ರೆಯನ್ನಷ್ಟು ಹೇಳುವೆನು. ಹದಿನೇಳನೇ ಶತಮಾನದ ಸುಮಾರಿನಲ್ಲಿ ಕೆಳದಿಯ ಚನ್ನಮ್ಮಾಜಿಯೆಂಬ ವೀರ ರಾಣಿಯಾಗಿಹೋದಳು. ಈಕೆಯು ತನ್ನ ಬೆನ್ನಿಗೆ ಬಿದ್ದ ರಾಜಾರಾಮ ರಾಜನನ್ನು ವೈರಿಯು ಒಪ್ಪಿಸಲು ಕೇಳಿದರೆ ಒಪ್ಪದೆ, ಬೆನ್ನಿಗೆ ಬಿದ್ದವರನ್ನು ರಕ್ಷಿಸುವುದು ರಾಜಧರ್ಮವೆಂದು ತಿಳಿದು ದಂಡೆತ್ತಿ

ಬಂದ ದಿಲ್ಲಿಯ ಚಕ್ರವರ್ತಿಯಾದ ಮಹಾ ಬಲಾಢ್ಯಪ್ರತಾಪಶಾಲಿ ಔರಂಗಜೇಬ ಬಾದಶಹನೊಡನೆ ಸಪ್ಪುಹಾಕದೆ ಯುದ್ಧಮಾಡಿದಳು. ಕರ್ನಾಟಕದ ಮೇಲೆ ದಂಡೆತ್ತಿಬಂದು ಎಲ್ಲೆಲ್ಲಿಯ ವಿಜಯದಿಂದ ಮೈಯುಬ್ಬಿಹೋದ ಶಿವಾಜಿ ಮಹಾರಾಜರ ದೌಡನ್ನು ತಡೆದು ನಿಲ್ಲಿಸಿ, ತನ್ನ ಯುದ್ಧ ಕುಶಲತೆಯಿಂದ ವೈರಿಗಳೂ ತಲೆದೂಗುವಂತೆಮಾಡಿ ಮಹಾರಾಜರಿಂದ 'ವೀರ ಮಾತೆ' ಎಂದು ಕರೆಯಿಸಿಕೊಂಡವಳು ನಮ್ಮ ಬೆಳವಡಿಯ ಮಲ್ಲಮ್ಮನು. ಶರಣಾಗತಳಾಗದೆ ಕಿತ್ತೂರಿನ ಸಲುವಾಗಿ ಕಾದಾಡಿ ಆದರ ಕೀರ್ತಿಯನ್ನು ಬೆಳಗಿಸಿದವಳು ನಮ್ಮ ಚನ್ನಮ್ಮನು. ಮೈಸೂರಿನ ಹುಲಿಯೆಂದೆನಿಸಿಕೊಂಡ ಟೀಪುಸುಲ್ತಾನನ ಸೆರೆಯಲ್ಲಿ ಸಿಕ್ಕು ಬಿದ್ದ ಗಂಡನನ್ನು ಚತುರೋಪಾಯದಿಂದ ಬಿಡಿಸಿಕೊಂಡು ಬಂದವಳು ಶೂರಳಾದ ನಮ್ಮ ಕಿತ್ತೂರಿನ ರುದ್ರಮ್ಮನು.

ಈಗಿನ ಕಾಲದಲ್ಲಿ ಕೂಡಾ, ಶಿವಶರಣೆಯೆಂದು ಪ್ರಸಿದ್ಧರಾಗಿರುವ ಸೊಲ್ಲಾಪುರದ ನಾಲತವಾಡ ಶಿವಶರಣರ ಪುತ್ರಿಯರಾದ ಪಾರ್ವತೆಮ್ಮನವರು ಮತ್ತು ಆದಿಕರ್ನಾಟಕ ಹುಡುಗರನ್ನು ಕರೆತಂದು ಮಕ್ಕಳೋಪಾದಿಯಲ್ಲಿ ಸಾಕಿಸಲುಹತ್ತಿರುವ ಸರದಾರ ವೀರನಗೌಡರ ವೀರ ಪತ್ನಿಯರೂ ಈಗಿನ ಮುಂಬೈ ಶಾಸನ ಸಭೆಯ ಸದಸ್ಯರೂ ಆದ ಕುಂ|| ಸೌ|| ನಾಗಮ್ಮನವರು ನಮ್ಮಗಳ ಆದರ್ಶಮಣಿಗಳಾಗಿ, ಪರಪ್ರಾಂತದಲ್ಲಿ ಕೂಡಾ ಹೆಸರು ಪಡೆದಿರುವುದು ಯಾರಿಗೆ ತಾನೇ ಗೊತ್ತಿಲ್ಲ?

ಇಂಥ ವೀರ ಪುತ್ರಿಯರನ್ನು ಹೆತ್ತ ವೀರ ಕರ್ನಾಟಕ ಮಾತೆಯೇ ನೀನೇ ಧನ್ಯಳು. ಧನ್ಯಳು. ನಿನ್ನ ಈ ವೀರ ಪುತ್ರಿಯರ ನಿತ್ಯ ಸ್ಮರಣದಿಂದ ನಮ್ಮಲ್ಲಿ ನವ ಚೈತನ್ಯವೂ ನಾಡು ನುಡಿಗಾಗಿ ಆದರಾಭಿಮಾನವೂಅಲ್ಪಮಟ್ಟಿಗಾದರೂ ಹುಟ್ಟುವವೆಂಬದರಲ್ಲಿ ಸಂದೇಹವಿಲ್ಲ. ನೀವುಗಳೆಲ್ಲರು ಚಿಕ್ಕವಳಾದ ನನ್ನ ಭಾಷಣವನ್ನು ಶಾಂತಚಿತ್ತದಿಂದ ಕೇಳಿದ್ದಕ್ಕಾಗಿ ನಿಮಗೆ ಮತ್ತೊಮ್ಮೆ ವಂದಿಸಿ ದೇವರು ನಮ್ಮಲ್ಲಿ ಅಂಥ ಶಕ್ತಿಯನ್ನೂ, ಬುದ್ಧಿಯನ್ನೂ ದಯಪಾಲಿಸಲೆಂದು ಬೇಡಿಕೊಳ್ಳುವೆನು.

---

## ಢವಳಗಿಯಲ್ಲಿ ನಾಡಹಬ್ಬ.

ತಾ. ೧೨ ನೆಯ ದಿನ ಇಲ್ಲಿಯ ತರುಣ ಮುಂದಾಳುಗಳಾದ ಶ್ರೀ. ಬಿ. ಎಸ್. ಪಾಟೀಲ ಇವರ ನೇತೃತ್ವದಲ್ಲಿ ಆಸನ, ಗಂಡುವ ಹೆಣ್ಣು ಹುಡುಗರ ಈಸುವುದು, ಶಾರೀರಕ ಶಕ್ತಿಯ ಆಟ ಇವುಗಳ ಶರ್ಯತ್ತುಗಳು ನಡೆದವು.

ತಾ. ೧೩ ನೆಯ ದಿನ ಮುಂಜಾನೆ ಪ್ರಭಾತಫೇರಿಯೊಂದಿಗೆ ಧ್ವಜವಂದನೆಯ ಸಮಾರಂಭವು ಸಾರ್ವಜನಿಕ ಸ್ಥಳದಲ್ಲಿ ನೆರವೇರಿತು. ನಂತರ ಶರ್ಯತ್ತಿನ ಆಟಗಳು ನಡೆದವು. ಸಂಜೆಯ ಮುಂದೆ ವಿದ್ಯಾರ್ಥಿಗಳ ಹಾಗು ಶ್ರೀ. ಪಿ. ಎಸ್. ಪಾಟೀಲರ ಪ್ರವಚನಗಳು ನಡೆದವು. ರಾತ್ರಿ ಇಲ್ಲಿಯ ಶಾಳಾ ವಿದ್ಯಾರ್ಥಿಗಳಿಂದ ತಯಾರಿಸಿದ ಆಲೆಕ್ಝಾಂಡರನ ದೌಡು ( ದೇಶದ್ರೋಹಿ, "ತಕ್ಷಲಿಸ ವಿಶ್ವಾಸಘಾತುಕತನ" ) ಈ ವಿಷಯದ ಮೇಲೆ ಪುಟ್ಟ ಆಖ್ಯಾನವು ಮಾಡಲ್ಪಟ್ಟಿತು. ಆಮೇಲೆ ಎಲ್ಲ ಶರ್ಯತ್ತುಗಳಲ್ಲಿ ಮೇಲಾದವರಿಗೆ ಬೆಳ್ಳಿಯ ಮೆಡ್ಲುಗಳೂ ಖಣಗಳೂ ಹಂಚಲ್ಪಟ್ಟವು. ಈ ಕಾರ್ಯದಲ್ಲಿ ಮಲ್ಹಾರೆಪ್ಪ ಸಿಂಪಿ ಇವರು ಒಳ್ಳೇ ಉದಾರತನವನ್ನು ತೋರಿಸಿದರು. ೨ ದಿವಸ ನಾಡಹಬ್ಬವು ನಡೆದು ಉತ್ಸವವು ಕೊನೆಗಂಡಿತು.

ಪಿ. ಎಸ್. ಪಾಟೀಲ.





---

— ಇದೇ ತಿಂಗಳು ೩೧ ನೆಯ ತಾರೀಖಿಗೆ ಶ್ರೀ. ಸುಭಾಷಚಂದ್ರ ಬೋಸರ ಅಧ್ಯಕ್ಷತೆಯಲ್ಲಿ ಒಂದು ಲಕ್ಷ ಕೂಲಿಕಾರರ ಸಭೆಯು ಕಲಕತ್ತೆಯಲ್ಲಿ ಕೂಡತಕ್ಕದ್ದಿದೆ.

— ತಾ. ೨೦ ನೆಯ ದಿನ ಸಿಮಲಾ, ದಿಲ್ಲಿ ಮತ್ತು ಲಾಹೋರಗಳಲ್ಲಿ ಭೂಕಂಪವಾಯಿತು.

ಆರೋಗ್ಯವೇ ಆಯುರ್ಭಾಗ್ಯವು.

ತರುಣರಿಗೆ ಸುಸಂಧಿ! ಅಮೌಲ್ಯ ಬಹುಮಾನ!

# ಕರ್ನಾಟಕ ವ್ಯಾಯಾಮ ಶಾಲೆ

## ಚಿತ್ರವಾಡಿಗಿ, ಹೊಸಪೇಟೆ.

ಈ ಸಂಸ್ಥೆಯವರಿಂದ ಬರುವ ಡಿಶೆಂಬರ ತಿಂಗಳ ಮೊದಲನೇ ವಾರದಲ್ಲಿ ಶ್ರೀ ಕಲ್ಮತೇಶ್ವರ ಸ್ವಾಮಿ ರಥೋತ್ಸವ ಸಮಯದಲ್ಲಿ ಜರಿಗಿಸುವ ಸ್ಪರ್ಧೆಯಲ್ಲಿ ಬಳ್ಳಾರಿ, ಧಾರವಾಡ, ವಿಜಾಪುರ, ಕೊಪ್ಪಳ ಜಿಲ್ಲೆಗಳ ಮತ್ತು ಸೊಂಡೂರು ಸಂಸ್ಥಾನದ ತರುಣರೆಲ್ಲರೂ ಭಾಗವಹಿಸಿ ಮೆಚ್ಚಿಗೆಯನ್ನು ಪಡೆದು ಯೋಗ್ಯತಾನುಸಾರ ಪಾರಿತೋಷಕವನ್ನು (ಬೆಳ್ಳಿಯ ಕಪ್ಪು ಪದಕಗಳು ಬಹುಮಾನ ಪತ್ರಗಳು) ಪಡೆಯಲು ಈಗಿನಿಂದಲೇ ಹುರುಪಿನಿಂದ ತಯಾರಾಗಬೇಕು. ಸ್ಪರ್ಧೆಯಲ್ಲಿ ಸೇರಲಿಚ್ಛಿಸುವವರು ನವ್ಹಂಬರ ತಿಂಗಳು ೧೫ ನೇ ತಾರೀಖಿನ ಒಳಗಾಗಿ ತಮ್ಮ ಹೆಸರನ್ನು ಪೂರ್ಣ ವಿಳಾಸ ಬರೆದು ಪ್ರವೇಶ ಫೀ (ENTRANCE FEES) ಸಹಿತ ಕಳುಹಿಸಿಕೊಡಬೇಕು.

### ಸ್ಪರ್ಧೆಯ ವಿಷಯಗಳು.

ದೊಡ್ಡವರಿಗೆ (18 ವರ್ಷದ ಮೇಲಿನವರಿಗೆ) (೧) ಐದು ಮೈಲು ಓಡುವುದು. (೨) ೧೨ ಮೈಲು ಜೋರಾಗಿ ಸೈಕಲ್ ಹೊಡೆಯುವುದು. (೩) ಭಾರ ಎತ್ತುವುದು. (Weight lifting front Jurk) (೪) ಗುಂಡು ಒಗೆಯುವುದು (Putting the Shot)

ಚಿಕ್ಕವರಿಗೆ ( 12 ವರ್ಷದ ಮೇಲಿನವರಿಗೆ ) (೧) ಒಂದು ಮೈಲು ಓಡುವುದು, (೨) ಸೂ ರ್ಯ ನ ಮ ಸ್ಕಾ ರ. (೩) ಭಾರ ಎತ್ತುವುದು. (Weight lifting Deadlift) (೪) ಸ್ಯಾಕರೇಸ್ (Sackrace).

ಚಿಕ್ಕಬಾಲಕರು (12 ವರ್ಷದೊಳಗಿನವರು) (೧) ೨೨೦ ಗಜ ಓಡುವುದು. (೨) ಬೈಸ್ಕಿ ಕೂಡ್ರುವುದು. (Bitax) (೩) ಕಣ್ಣು ಕಟ್ಟಾಟ. (Blind mans Buff) ಥ್ರಿ ಲೆಗ್ಡ ರೇಸ್ (Three legged race).

ವಕ್ತೃತ್ವಸ್ಪರ್ಧೆ- ಯಾರಾದರೂ ಸೇರಬಹುದು. ವಯಸ್ಸಿನ ನಿರ್ಬಂಧವಿಲ್ಲ.

(೧) ಈಗಿನ ಪರಿಸ್ಥಿತಿಯಲ್ಲಿ ವಿದ್ಯಾವಂತರು ಗ್ರಾಮೋದ್ಧಾರದ ವಿಷಯದಲ್ಲಿ ಮಾಡಬೇಕಾದ ಕೆಲಸ (೨) ಪ್ರಾಥಮಿಕ ವಿದ್ಯಾ ಪ್ರಚಾರವು ಸರಕಾರದ ಮುಖ್ಯ ಕರ್ತವ್ಯವು. (೩) ಶಾಲೆಗಳಲ್ಲಿ ಮಾತೃಭಾಷೆಯೇ ಪ್ರಥಮ ಭಾಷೆಯಾಗಬೇಕು. ಈ ಮೂರರಲ್ಲಿ ಯಾವದಾದರೂ ಒಂದರಮೇಲೆ ಭಾಷಣಮಾಡಬಹುದು.

### ಪ್ರವೇಶ ಫೀ (ENTRANCE FEES)

ಪ್ರತಿಯೊಂದು ವಿಷಯಕ್ಕೆ ದೊಡ್ಡವರಿಗೆ ಮತ್ತು ವಕ್ತೃತ್ವ ಸ್ಪರ್ಧೆಗೆ ೦—೪—೦ ಚಿಕ್ಕವರಿಗೆ ೦—೨—೦ ಚಿಕ್ಕ ಬಾಲಕರಿಗೆ ೦—೧—೦ ಸೈಕಲ್ ರೇಸಿಗೆ ಮಾತ್ರ ೧—೦—೦ ದೊಡ್ಡವರು ಎಲ್ಲಾ ವಿಷಯಗಳಲ್ಲಿ ಸೇರುವುದಾದರೆ ೧--೮--೦ ಕೊಡಬೇಕು. ಸಂಸ್ಥೆಯ ಪರವಾಗಿ ಪ್ರತಿಯೊಂದು ವಿಷಯಕ್ಕೆ ಇಬ್ಬರನ್ನು ಕಳುಹಿಸಿದರೆ ಅವರು ೫--೦--೦ ಕೊಡಬೇಕು.

ಸೂಚನೆ— ಒಂದನೆ ನಂಬರಿನಲ್ಲಿ ಮೆಚ್ಚಿಗೆಯನ್ನು ಪಡೆದ ವ್ಯಾಯಾಮ ಸಂಸ್ಥೆಗಳಿಗೂ ಶಾಲೆಗಳಿಗೂ ಸಂಘಗಳಿಗೂ ಎವ್ಹರ್ ರೋಲಿಂಗ್ ಕಪ್ಪು (Ever rooling Cup) ಮತ್ತು ಒಂದು ಖಾಯಮ ಕಪ್ಪು (Permanent Cup) ಸಹ ಕೊಡಲ್ಪಡುವುದು. ಆದ್ದರಿಂದ ಪ್ರತಿಯೊಬ್ಬ ತರುಣರು ಸಂಘರೂಪವಾಗಿ ಸೇರುವದು ಯೋಗ್ಯವು. ಒಂದು ವೇಳೆ ಪ್ರತ್ಯೇಕವಾಗಿ ಸೇರಬಹುದು. ಆದರೆ ಅವರಿಗೆ ಮೇಲೆ ಕಾಣಿಸಿದ ಕಪ್ಪುಗಳು ಕೊಡಲಾಗುವುದಿಲ್ಲ. ಪಾರಿತೋಷಕ ಮಾತ್ರ ಕೊಡಲಾಗುವುದು.

### ನಿ ಯ ಮ ಗ ಳು.

(೧) ಪ್ರತಿಯೊಂದು ಸ್ಪರ್ಧೆಯಲ್ಲಿ ೧೦ ಮಂದಿ ತರುಣರಿಗಿಂತ ಕಡಿಮೆ ಸೇರಿದರೆ ಆ ಸ್ಪರ್ಧೆಯನ್ನು ನಿಲ್ಲಿಸಲಾಗುವುದು.

(೨) ಸ್ಪರ್ಧೆಯಲ್ಲಿ ಸೇರಿದ ಪ್ರತಿಯೊಬ್ಬ ತರುಣರು ಈ ಸಂಸ್ಥೆಯವರಿಂದ ನೇಮಿಸಲ್ಪಟ್ಟ ನ್ಯಾಯಾಧೀಶನ (Refree) ಅನುಮತಿಯಂತೆ ನಡೆದುಕೊಳ್ಳತಕ್ಕದ್ದು. ಒಂದುವೇಳೆ ಏನಾದರೂ ಸಂದೇಹ ಬಂದಲ್ಲಿ ೨೪ ಘಂಟೆಯೊಳಗಾಗಿ ಒಂದು ರೂ. ಕಟ್ಟಿ ಈ ಸಂಸ್ಥೆಯ ಸಮಿತಿಯವರಿಗೆ ತಿಳಿಸತಕ್ಕದ್ದು.

(೩) ಸ್ಪರ್ಧೆಯಲ್ಲಿ ಭಾಗವಹಿಸಿದವರು ಯಾವ ವಿಧವಾದ ತಂಟೆ ತೆಗೆದರೆಂದು ತಿಳಿದುಬಂದಲ್ಲಿ ಯಾವ ವಿಚಾರಣೆಮಾಡದೆ ಅವರನ್ನು ಸ್ಪರ್ಧೆಯಿಂದ ಹೊರಗೆ ಹಾಕಲ್ಪಡುವುದು.

(೪) ಸ್ಪರ್ಧೆಯಲ್ಲಿ ಸೇರಲುಬೇಕಾದ ಸೈಕಲ್ ವಗೈರೆ ಸಾಮಾನುಗಳನ್ನು ತಾವೇ ತಂದುಕೊಳ್ಳತಕ್ಕದ್ದು.

(೫) ನಿಯಮಗಳನ್ನು ಸಮಯಾನುಸಾರ ಹೆಚ್ಚು ಕಡಿಮೆ ಮಾಡಲಾಗುವುದು.

ತರುಣರೆಲ್ಲರೂ ಇಂದಿನಿಂದಲೇ ಸಿದ್ಧತೆಮಾಡಿಕೊಂಡು ಸ್ಪರ್ಧೆಯಲ್ಲಿ ಭಾಗವಹಿಸಿ ನಮ್ಮ ಜಿಲ್ಲೆಗಳ ವಿಕ್ರಮ (Record) ವನ್ನು ಹೆಚ್ಚಿಸಿ ಉಳಿದವುಗಳಂತೆ ವ್ಯಾಯಾಮದಲ್ಲಿಯೂ ತರುಣರು ವೈಶಿಷ್ಟ್ಯವನ್ನು ಕಾಯಿದುಕೊಳ್ಳಬೇಕೆಂದು ಬಿನ್ನವಿಸುವೆವು. ಯಾರಾದರೂ ಮೇಲಿನ ಸ್ಪರ್ಧೆಗಳಲ್ಲಿ ಅಲ್ಲದೆ ವ್ಯಾಯಾಮದ ಬೇರೆ ವಿಷಯ ಯಾವದರಲ್ಲಾದರೂ ತಮ್ಮ ವೈಶಿಷ್ಟ್ಯವನ್ನು ತೋರಿಸಲು ಇಚ್ಛಿಸುವವರು ಮೊದಲಿಗೆ ತಿಳಿಸಿದರೆ ಅವರಿಗೆ ಸಾಧ್ಯವಾದಷ್ಟು ಅನುಕೂಲತೆಗಳನ್ನು ಏರ್ಪಡಿಸುವೆವು.

| ಮಹಂತಪ್ಪ ಜವಳಿ<br>ಗೋವಿಂದರಾವ ಪಾಟೀಲ<br>ಕಾರ್ಯದರ್ಶಿಗಳು | ಡಾ. ಆರ್. ನಾಗನಗೌಡರು.<br>M. Sc. Ph. D.<br>ಅಧ್ಯಕ್ಷರು |
|---|---|

ಹೆಚ್ಚಿನ ವಿಷಯಕ್ಕೆ ಮಾಹಿತಿಬೇಕಾದಲ್ಲಿ ಕೆಳಗಿನ ವಿಳಾಸಕ್ಕೆ ಬರೆಯಿರಿ

ಮಹಾಂತಪ್ಪ ಜವಳಿ ಕಾರ್ಯದರ್ಶಿ

ಕರ್ನಾಟಕ ವ್ಯಾಯಾಮ ಶಾಲೆ ಚಿತ್ರವಾಡಿಗಿ, ಹೊಸಪೇಟೆ.

ಚಿತ್ರವಾಡಿಗಿ.

ತಾ. ೧೪-೧೦-೧೯೩೭.

ಈ ಮುಂಚೆ ಮಲ್ಲಸಜ್ಜನ ವ್ಯಾಯಾಮಶಾಲೆ ಚಿತ್ರವಾಡಿಗಿ ಎಂದು ಕರೆಯಲ್ಪಡುತ್ತಿದ್ದ ವ್ಯಾಯಾಮಶಾಲೆಯು ಈಗ ಕರ್ನಾಟಕ ವ್ಯಾಯಾಮಶಾಲೆ ಚಿತ್ರವಾಡಿಗಿ ಎಂಬ ಹೆಸರಿನಿಂದ ನಡೆಯುವುದು.

---

—ಕಸ್ತೋರೆ ಖನಿಯ ಅಧಿಕಾರಿಯೊಬ್ಬನು ಕೂಲಿಯಾಳೊಬ್ಬನನ್ನು ಅನ್ಯಾಯವಾಗಿ ಬಡಿದನೆಂಬುದರಿಂದ ೩೦೦೦ ಮಂದಿ ಕೆಲಸಗಾರರು ಒಮ್ಮಿಂದೊಮ್ಮೆಗೆ ಕೆಲಸವನ್ನು ಬಿಟ್ಟುಗೊಟ್ಟು ಸಂಪು ಹೂಡಿದರು. ಕೂಲಿಕಾರರು ಈ ಮೊದಲೇ ಕೂಲಿಯ ದರವನ್ನು ಏರಿಸಬೇಕೆಂದು ಕೇಳಿಕೊಂಡಿದ್ದರು. ತತ್ಫಲವಾಗಿ ತಾ॥ ೧೭ ನೇ ದಿನ ಕೂಲಿಗಾರರೆಲ್ಲಾ ತಮ್ಮ ಸಂಘದಲ್ಲಿ ಸಭೆಗೂಡಿ, ಪಗಾರವನ್ನು ಏರಿಸದ ಹೊರತು ಮತ್ತು ಅಧಿಕಾರಿಯೊಬ್ಬನ ಅನ್ಯಾಯ ಅತ್ಯಾಚಾರಕ್ಕೆ ತಕ್ಕ ಶಿಕ್ಷೆ ಮಾಡದ ಹೊರತು ಕೆಲಸಕ್ಕೆ ಹೋಗಕೂಡದೆಂದು ನಿರ್ಧರಿಸಿದರು.

॥ಶ್ರೀ ಜಗದ್ಗುರು ರೇಣುಕಾಚಾರ್ಯಃ ಪ್ರಸೀದತು॥

## ಶ್ರೀಮಜ್ಜಗದ್ಗುರು ರಂಭಾಪುರಿ ಮಹಾಸಂಸ್ಥಾನದ ಅಧಿಕಾರ ಸ್ಥಾನದಿಂದ

ಶಿ. ಬಾ. ಜಾವಕ ನಂ. 340/11—10—37

ಶ್ರೀ ಜಗದ್ಗುರು ರಂಭಾಪುರಿ ಮಹಾಸಂಸ್ಥಾನ ಮಠ,

ಬಾ ಳೆ ೀ ಹೊ ನ್ನೂ ರು

ನರಸಿಂಹರಾಜಪುರ ತಾ॥

ಗುರುಭಕ್ತಕೇಸರಿ ಶಾಂತಪ್ಪ ವೀರಭದ್ರಪ್ಪ ಕುಬಸದ ಸಾ॥ ಹೆಮ್ಮಿಗಿ, ತಾಲೂಕು ಗದಗ ಇವರಿಗೆ ಈ ಮೂಲಕ ಶೃತಪಡಿಸುವುದೇನೆಂದರೆ:—

ಬಿಳೇ ಅಂಗಡಿ "ಮದಗಜಾಂಕುಶ" ಮೊದಲಾದ ಪುಸ್ತಕಗಳಲ್ಲಿ ಬಣಗಾರ (ನಾಗಲೀಕ) ಶಿವಚಿಂಪಿಗ ಮೊದಲಾದವರು ಶೂದ್ರರೆಂತಲೂ, ಶಂಕರದಾಸಿಮಾರ್ಯನು ೧೨ನೆಯ ಶತಮಾನದವನೆಂತಲೂ ಬರೆದಿರುವುದು ಅನಾದಿಯಿಂದ ಶ್ರೀ ಜಗದ್ಗುರುಪಂಚಮಹಾಪೀಠಗಳ ಶಿಷ್ಯಪ್ರಶಿಷ್ಯರಾಗಿ ನಡೆದುಕೊಂಡು ಬಂದಿರತಕ್ಕ ನಮ್ಮಗಳಿಗೆ ಅತ್ಯಂತ ದುಃಖದಾಯಕವಾಗಿದೆಯೆಂದು ತಾರೀಖು ೯-೧೦-೧೯೩೭ ರಲ್ಲಿ ನೀವು ಗುಜರಾಯಿಸಿಕೊಂಡ ಅರ್ಜಿ ಪರಾಂಬರಿಸಿದ್ದಾಯಿತು.

### ಇಂಡಾರ್ಸ್.

ಸನಾತನ ಧರ್ಮಿಗಳಾಗಿಯೂ, ಅಷ್ಟಾವರಣ ಪಂಚಾಚಾರ ಪರಾಯಣರಾಗಿಯೂ, ಇರುವ ಬಣಗಾರ (ನಾಗಲೀಕ) ಶಿವಚಿಂಪಿಗ ಮೊದಲಾದ ಭಕ್ತಮಂಡಲಿಗೆ, ವಾದಗ್ರಸ್ತ ಸನ್ನಿವೇಶದೊಳು ರಚಿತವಾದ ಪುಸ್ತಕಗಳಲ್ಲಿ ವ್ಯಕ್ತಿಯನ್ನೂ, ವ್ಯಕ್ತಿಯ ತತ್ವವನ್ನೂ ಖಂಡಿಸಬೇಕಲ್ಲದೆ, ಜಾತಿ ಮತ ದೂಷಣೆಯ ಮೂಲಕ ನಿಮ್ಮಗಳಿಗೆ ಶೂದ್ರರು ಎಂಬ ಶಬ್ದವನ್ನುಪಯೋಗಿಸಿರುವುದು ಅಸಮಂಜಸವೂ; ಶಿಷ್ಟಾಚಾರ ವಿರೋಧವೂ ಆಗಿರುತ್ತದೆ. ಮತ್ತು ಶಂಕರ ದಾಸಿಮಾರ್ಯರು ೧೨ನೆಯ ಶತಮಾನಕ್ಕಿಂತ ಪೂರ್ವದವರೆಂದು ಚರಿತ್ರೆಗಳಿಂದಲೂ, ಐತಿಹಾಸಿಕ ದೃಷ್ಟಿಯಿಂದಲೂ ಸಿದ್ಧವಾಗುತ್ತದೆ. ವೀರಶೈವರಲ್ಲಿ ಭಕ್ತ ಮಹೇಶವೆಂಬ ಪ್ರಭೇಧಗಳ ಹೊರ್ತು ಬಣಗಾರ (ನಾಗಲೀಕ) ಶಿವಚಿಂಪಿಗ ಮೊದಲಾದ ಪರ್ಯಾಯ ನಾಮುಗಳು ವೃತ್ತಿಸೂಚಕವಲ್ಲದೆ ಜಾತಿ ಸೂಚಕವಲ್ಲ.

ಆದ್ದರಿಂದ ಅನಾದಿ ಕಾಲದಿಂದಲೂ ಶ್ರೀ ಜಗದ್ಗುರು ಪಂಚ ಮಹಾಪೀಠಗಳ ಶಿಷ್ಯ ಪ್ರಶಿಷ್ಯರಾಗಿ ಬಂದಿರತಕ್ಕ ನೀವು ಶೂದ್ರಪದ ವಾಚ್ಯರಲ್ಲ.

ಮೊಕ್ಕಾಂ ಶಿವಮೊಗ್ಗಾ, ಹರೀಶ್ವರಶಾಸ್ತ್ರೀ,

೧೧-೧೦-೧೯೩೭. (ಎಂತ ಸಂಸ್ಕೃತದಲ್ಲಿ ರುಜು ಇದೆ.)

ಏಜಂಟ್.

---

### ಜಕ್ಕಲಿ ಶ್ರೀಕುಮಾರ ಸೇವಾ ಸಂಘದ

## ತ್ರೈವಾರ್ಷಿಕ ವರದಿಯು.

ಶ್ರೀ ಕುಮಾರ ಸೇವಾ ಸಂಘವು ತಾ. ೧೭-೧೦-೧೯೩೪ ನೇ ಇಸ್ವಿ ಶ್ರೀ ಶಕೆ ೧೮೫೬ ನೇ ಅಶ್ವೀಜ ಶುದ್ಧ ವಿಜಯ ದಶಮಿಯ ದಿವಸ ಸದರ ಸಂಘವು ಸ್ಥಾಪಿಸಲ್ಪಟ್ಟು, ಅದು ಪರಿಸ್ಥಿತಿಗನುಸಾರವಾಗಿ ತನ್ನ ಸಾಮಾಜಿಕ, ನೈತಿಕ, ಧಾರ್ಮಿಕ ಸೇವೆಯನ್ನು ಮಾಡುತ್ತ ಬಂದಿರುವದಲ್ಲದೆ ಒಂದು ದವಾಖಾನೆಯನ್ನು ಏರ್ಪಡಿಸಿ ಜನತೆಯ ಕಲ್ಯಾಣವನ್ನು ಇಲ್ಲಿಯ ವರೆಗೂ ಸಾಧ್ಯವಾದಷ್ಟು ಮಾಡಿರುತ್ತದೆ. ಅಂದರೆ ಅಂದಾಜು ೩೦೦-೩೫೦ ಕೇಸುಗಳು ಸದರ ಸಂಘದ ದವಾಖಾನೆಯಿಂದ ಗುಣ ಹೊಂದಿರುತ್ತವೆ. ಸದರ ಸಂಘದ ಹುಟ್ಟುವಳಿ ಮತ್ತು ಅದರ ಖರ್ಚು ಕೆಳಗೆ ಬರೆದಂತೆ ಇರುತ್ತದೆ.

### ವಿವರ.

೧೪೧-೧೫-೦ ದೇಣಿಗೆಯ ರೂಪದಿಂದ ಸಂಘಕ್ಕೆ ಬಂದದ್ದು.
೨೦೭- ೧-೦ ಔಷಧ ಸಾಮಾನುಗಳ ಶಿಲ್ಕು.
೧೩೩- ೬-೦ ಒಟ್ಟು ಕಾಯಂ ಸಾಮಾನುಗಳ ಕಿಮ್ಮತ್ತು.
೫೪-೧೩-೦ ಬರತಕ್ಕ ಬಾಕಿ.
೧೫೪-೧೨-೦ ಸಂಘವು ೨ನೆಯವರಿಗೆ ಕೊಡತಕ್ಕದ್ದು.
೬೦- ೦-೦ ಧರ್ಮಾರ್ಥ ಔಷಧ ಕೊಟ್ಟದ್ದು.

ಮತ್ತು ಇದೇ ಸಂಘದ ವತಿಯಿಂದ ಒಂದು ವಾಚನಾಲಯವನ್ನು ಏರ್ಪಡಿಸಿರುತ್ತದೆ, ಅದರಲ್ಲಿಯ ಪುಸ್ತಕಗಳ ತಪಶೀಲು—

೪೦ ಧಾರ್ಮಿಕ ಪುಸ್ತಕಗಳು, ೪೦ ಸಾಮಾಜಿಕ ಪುಸ್ತಕಗಳು, ೨೦ ನೈತಿಕ ಪುಸ್ತಕಗಳು, ೨೨ ಮರಾಠಿ ವ ಹಿಂದಿಯ ಪುಸ್ತಕಗಳು ಇರುತ್ತವೆ. ಇದೂ ಅಲ್ಲದೆ ಶರಣ ಸಂದೇಶ, ತರುಣ ಕರ್ನಾಟಕ, ಉದಯ, ಲೋಕಮತ ಇತ್ಯಾದಿ ಕೆಲವು ವರ್ತಮಾನ ಪತ್ರಗಳನ್ನು ತರಿಸಿ ಜನರಿಗೆ ಆದಷ್ಟು ಸೇವೆಯನ್ನು ಸಲ್ಲಿಸುತ್ತ ಬಂದಿರುವದು.

ಮತ್ತು ಇದೂ ಅಲ್ಲದೆ ಸದರ ಸಂಘದ ಅಂತರ್ಗತವಾದ ಚರಕಾ ಸಂಘವು ಶ್ರೀ ಶಕೆ ೧೮೫೮ನೇ ಧಾತುನಾಮ ಸಂವತ್ಸರ ಅಶ್ವೀಜ ಶುದ್ಧ ೧೪ ಗುರುವಾರ ತಾರೀಖು ೨೯-೧೦-೩೬ನೇ ಇಸ್ವಿಯಲ್ಲಿ ಸ್ಥಾಪಿಸಲ್ಪಟ್ಟು ತಾರೀಖು ೧೪-೧೦-೩೭ನೇ ಇಸ್ವಿಯ ವರೆಗೆ ಒಟ್ಟು ೩೬೦ ರೂಪಾಯಿಗಳ ಶುದ್ಧ ಖಾದಿಯನ್ನು ತಯಾರಿಸಿ ಮಾರಾಟ ಮಾಡಿರುತ್ತದೆ.

ಶ್ರೀ ಕುಮಾರ ಸೇವಾ ಸಂಘದ

ಕಾರ್ಯದರ್ಶಿ

ಅಂದಾನಪ್ಪ ಪಲ್ಲೇದ ಜಕ್ಕಲಿ.

---

## ಸಂಯುಕ್ತ ಹಿಂದಿ ರಾಜ್ಯಘಟನೆ.

ಮುಂದೆ ಬರುವ ಸಂಯುಕ್ತ ಹಿಂದಿ ರಾಜ್ಯಘಟನೆಯಲ್ಲಿ ಫೆಡರಲ್ ಅಸೆಂಬ್ಲಿ ಮತ್ತು ಫೆಡರಲ್ ಕೌನ್ಸಿಲ್ ಎಂಬೆರಡು ಶಾಸನ ಮಂಡಲಗಳು ಏರ್ಪಡುವವು. ಫೆಡರಲ್ ಅಸೆಂಬ್ಲಿಯಲ್ಲಿ ಒಟ್ಟು ೩೭೫ ಸಭಾಸದರು. ಅವರಲ್ಲಿ ೨೫೦ ಬ್ರಿಟಿಶ್ ಹಿಂದುಸ್ಥಾನದಿಂದಲೂ ೧೨೫ ದೇಶಿ ಸಂಸ್ಥಾನಗಳಿಂದಲೂ ಬಂದವರು. ಬ್ರಿಟಿಶ್ ಹಿಂದುಸ್ಥಾನದ ೨೫೦ ಸಭಾಸದರಲ್ಲಿ ೮೨ ಮುಸಲ್ಮಾನರು ೧೨ ಯುರೋಪಿಯನ್‌ರೂ ಕಾದಿಟ್ಟ ಸ್ಥಾನಗಳಲ್ಲಿರುವರು.

ಫೆಡರಲ್ ಕೌನ್ಸಿಲ್ಲಿನಲ್ಲಿ ಒಟ್ಟು ೨೬೦ ಸಭಾಸದರಿರುವರು. ಅವರಲ್ಲಿ ೧೫೬ ಸಭಾಸದರು ಬ್ರಿಟಿಶ್ ಹಿಂದುಸ್ಥಾನದಿಂದಲೂ ೧೦೪ ಸಂಸ್ಥಾನಗಳಿಂದಲೂ ಬಂದವರು. ಈ ಸಂಯುಕ್ತ ಹಿಂದಿ ರಾಜ್ಯಮಂಡಲದಲ್ಲಿ ಹತ್ತು ಜನ ಮಂತ್ರಿಗಳಿರುವರು.

—ಜಬಲಪುರದ ಹಿಂದು-ಮುಸಲ್ಮಾನರ ದೊಂಬಿ ಈಗ ಶಾಂತವಾಗಿದೆ. ಈ ದೊಂಬಿಯಲ್ಲಿ ೧೧೬ ಜನಗಳಿಗೆ ಗಾಯವಾಗಿದೆ. ಈ ವರೆಗೆ ೨೬ ಜನರನ್ನು ಸೆರೆಹಿಡಿದಿದ್ದಾರೆ.

—ತಾ. ೧೬ ನೆಯ ದಿವಸ ಜೇರುಸಲೇಂದಲ್ಲಿ ೧೫೦ ಅರಬರನ್ನು ಕೈಸೆರೆಮಾಡಿದರು. ಲಿಬಿಯಾ ಎಂಬಲ್ಲಿಯ ಅರಬರು ಪ್ಯಾಲಿಸ್ಟಾಯಿನ್ ವಿಚಾರವಾಗಿ ಅರಬರಿಗೆ ಸಹಾನುಭೂತಿಯನ್ನು ತೋರಿಸಿದ್ದಾರೆ.

—ಮುಸ್ಲಿಂ ಲೀಗಿನವರು ಪ್ಯಾಲಿಸ್ಟಾಯಿನ್ ವಿಚಾರವಾಗಿ ಮುಂದೆ ಮಾಡಬೇಕಾದ ಕಾರ್ಯಕ್ರಮಗಳನ್ನು ಯೋಚಿಸಲು ಒಂದು ಸಮಿತಿಯನ್ನು ಏರ್ಪಡಿಸಿದ್ದಾರೆ.

—ಪೋಲಂಡದಲ್ಲಿ ಕನ್ಯೆಯರಿಗೆ ವರ ದೊರೆಯುವುದಿಲ್ಲವೆಂದು ಅವಿವಾಹಿತ ತರುಣರ ಆದಾಯದ ಮೇಲೆ ೧೦೦ ಕ್ಕೆ ೧೦ ರಿಂದ ೨೫ ರ ವರೆಗೆ ಕರವನ್ನು ಹಾಕಿದ್ದಾರೆ!

—ಈ ತಿಂಗಳ ಕೊನೆಯ ರಾಷ್ಟ್ರೀಯ ವಾರದಲ್ಲಿ ಕಾಂಗ್ರೆಸ್ ಪ್ರಾಂತಗಳ ಎಲ್ಲಾ ಶಾಸನಮಂಡಲಗಳ ಅಧ್ಯಕ್ಷರ ಪರಿಷತ್ತು ಕಲಕತ್ತಾದಲ್ಲಿ ಕೂಡುವುದಿದೆ. ಸಮತಾವಾದಿ ಪಕ್ಷದವರ ವರ್ಕಿಂಗ್ ಕಮಿಟಿಯು ಕೂಡಾ ತಾ. ೨೮ ನೆಯ ದಿನ ಕೂಡುವುದಿದೆ.

—ಈ ಸಾರೆಯ ಮೈಸೂರು ದಸರಾ ಮಹೋತ್ಸವವನ್ನು ನೋಡಲು ಮೂರು ಲಕ್ಷ ಜನರು ಬಂದಿದ್ದರೆಂದು ಊಹೆ.

— ಪುಣೆ ಮುನಸಿಪಾಲ್ಟಿ ಶಾಲೆಗಳಲ್ಲಿಯ ವಿದ್ಯಾರ್ಥಿಗಳ ಆರೋಗ್ಯ ಪರೀಕ್ಷಿಸುವ ವ್ಯವಸ್ಥೆಯಾಗಿದೆ.

—ಸಿಂಧ ಹೈದರಾಬಾದಿನಲ್ಲಿ ದಸರಾ ಕಾಲಕ್ಕೆ ಮದ್ದು ಹಾರಿಸಲ್ಪಡುತ್ತಿದ್ದಾಗ ಒಂದು ಬಾಣವು ಸಂಸ್ಕೃತ ಗ್ರಂಥಾಲಯದ ಮೇಲೆ ಬಿದ್ದು ಅದು ಸುಟ್ಟುಹೋಯಿತು. ಈ ಅಪಘಾತದಿಂದ ಒಟ್ಟು ೩೦ ಸಾವಿರ ರೂ. ನಷ್ಟವಾಯಿತು.


ನಮ್ಮಲ್ಲಿ ಫೋಟೋ,
ಲೈನ ಬ್ಲಾಕುಗಳು,
ಹಿತ್ತಾಳಿ ಮತ್ತು ಸೀಸದ
ಬ್ಲಾಕುಗಳು ಅರಗಿನ
ಸೀಲು, ಜವಾನರ ಬಿಲ್ಲೆಗ
ಳು, ದೇವರ ತ್ರಿವರ್ಣದ
ಪಠಗಳು, ಕ್ಯಾಲೆಂಡರು
ಗಳು, ನಿಮ್ಮ ಮನ
ಒಪ್ಪುವಂತೆ ತಯಾರಾ
ಗುತ್ತವೆ.
ಯುಜರ್ಮಾ ಆರ್ಟ ರ್ಸ,
ಚಿಕ್ಕಪೇಟ,
ಬೆಂಗಳೂರು ಸಿಟಿ.

## ಅಖಿಲ ಕರ್ನಾಟಕದಲ್ಲಿ ಪ್ರಸಿದ್ಧವಾದ

### ರಾಷ್ಟ್ರೀಯ ಕಂಪನಿಯೆಂದರೆ

## ಇದೊಂದೇ.

# ದಿ ಸ್ವರಾಜ್ಯ ಬ್ಯಾಂಕಿಂಗ ಮತ್ತು ಇನ್ಸುರನ್ಸ ಕಂ. ಲಿ.

# ಧಾರವಾಡ.

| ಚೇರಮನ್ | ವ್ಹಾಯಿಸ್ ಚೇರಮನ್ |
|---|---|
| ದೇಶಭಕ್ತ ಶ್ರೀಯುತ ಎಸ್. ಕೆ. ಹೊಸಮನಿ | ಶ್ರೀಯುತ ವ್ಹಿ. ಬಿ. ಹಾಲಭಾವಿ |
| B. A. LL. B. M. L. A. | B. A. LL. B. ರಿಟಾಯರ್ಡ |
| ಪ್ರೆಸಿಡೆಂಟ ಕೆ. ಪಿ. ಸಿ. ಸಿ. | ಫರ್ಸ್ಟ ಕ್ಲಾಸ್ ಸಬ್ ಜಜ್ಜ ಧಾರವಾಡ. |

| ಭವಿಷತ್ಕಾಲದ ಜೀವಿತದ ನಿರ್ವಾಹಕ್ಕೆ | ಈ ಕಂಪನಿಯನ್ನು ಕೇವಲ ರಾಷ್ಟ್ರೋನ್ನತಿಗಾಗಿ ಸ್ಥಾಪಿಸಿರುವರು. | ತೊಂದರೆಯಿಲ್ಲದ ಒತ್ತಾಯದ ಉಳಿತಾಯ |
|---|---|---|

### ರೂ. ೫೦೦ ರಿಂದ ರೂ. ೫೦೦೦ ಗಳ ವರೆಗೆ ಜೀವ ವಿಮಾ ಪಾಲಿಸಿಗಳು.

**ಉದಾರ ಶರ್ತಿನ ಪಾಲಿಸಿಗಳು ! ಮಿತವ್ಯಯದ ಆಡಳಿತ ! ! ಸುಲಭವಾದ ಕಂತಗಳು ! ! !**

ಈ ಕಂಪನಿಯವರು ಕಾರ್ಯ ಕುಶಲತೆಯಿಂದ ನಾನಾ ಎಂಬುವ ಕಂಪನಿಗಳಿಗೂ ಮುಂದೆ ಇದ್ದಾರೆ. ಸ್ಥಾಪಿಸಿದ ಎರಡೇ ವರ್ಷಗಳಲ್ಲಿ ಇಷ್ಟು ಪ್ರಗತಿಯನ್ನು ಮಾಡಿ ತೋರಿಸಲಿಕ್ಕೆ ಉಜ್ವಲ ದೇಶಭಕ್ತರೂ, ಸುಪ್ರಸಿದ್ಧರೂ, ಲೋಕಪ್ರಿಯರೂ, ವಿಮೆಯ ವ್ಯವಹಾರದಲ್ಲಿ ನುರಿತ ಪರಿಪಕ್ವ ಬುದ್ಧಿಯುಳ್ಳವರೂ ಇರುವ ಬೋರ್ಡಿನ ಡಾಯರೆಕ್ಟರರ ಆಡಳಿತೆಯೇ ಕಾರಣ. ಗೌರವದ ಕನ್ನಡಿಗ ವಿಮೇಚ್ಛುಗಳು ತಮ್ಮ ಹಿತವನ್ನೊಳಗೊಂಡ ಕರ್ನಾಟಕ ಮಾತೆಯ ಈ ತರಹದ ಸೇವೆಗಾಗಿ ತಮ್ಮ ಬೆಂಬಲವನ್ನೀಯುವರೆಂದು ತುಂಬಾ ನಂಬಿರುವೆವು.

**ಎಲ್ಲ ಕಡೆಯಲ್ಲಿಯೂ ಕುಶಲ ಏಜಂಟರು ಬೇಕು.**

The Manager.

---

ಮುದ್ದಾದ ಅಕ್ಷರ! ಸುಲಭ ದರ!

### ಶ್ರೀ ರಂಗನಾಥ ಟೈಪ್ ಫೌಂಡರಿ

ಬೆಂಗಳೂರು.

ಕನ್ನಡ ಮತ್ತು ಇಂಗ್ಲಿಷ್, ಎಲ್ಲಾ ತರದ ಟೈಪುಗಳೂ ಒಳ್ಳೊಳ್ಳೇ ಬಾರ್ಡರಗಳೂ ನಮ್ಮ ಫೌಂಡರಿಯಲ್ಲಿ ತಯಾರಾಗುತ್ತವೆ.

ಒಳ್ಳೇ ಮೆಟಲ್, ಬಹು ಅಂದವಾದ ಅಕ್ಷರಗಳು, ಬಲು ಸುಲಭ ದರ. ಕ್ಯಾಟಲಾಗ ತರಿಸಿಕೊಳ್ಳಿರಿ. ಒಮ್ಮೆ ಟೈಪುಗಳನ್ನು ತರಿಸಿಕೊಂಡು ಅನುಭವ ಹೊಂದಿರಿ. ಹಳೆ ಟೈಪುಗಳಿದ್ದರೆ ಸುಲಭ ಚಾರ್ಜಿಗೆ ಹೊಸದಾಗಿ ಹೊಯಿದು ಕೊಡುತ್ತೇವೆ.

ಪ್ರೊಪ್ರೈಟರ,
ಶ್ರೀ ರಂಗನಾಥ ಟೈಪ್ ಫೌಂಡರಿ
೬೭ ಕುಬೇರ ಸಾಹುಜಿ ಲೈನ್
ಚಿಕ್ಕಪೇಟೆ, ಬೆಂಗಳೂರು ಸಿಟಿ.

---

**ಲೋಕ**ಮತ ದಿನ ಪತ್ರಿಕೆಯನ್ನು ಪ್ರತಿದಿನವೂ ತಪ್ಪದೇ ಓದಿ ಎಲ್ಲ ವಿಷಯಗಳನ್ನೂ ತಿಳಿದುಕೊಳ್ಳಿರಿ.

ವಿಳಾಸ— ಮ್ಯಾನೇಜರ್ "ಲೋಕಮತ"
ಹುಬ್ಬಳ್ಳಿ.

---

**ನಿ**ಜಾಮ ಪ್ರಾಂತದ ಕನ್ನಡಿಗರಿಗೆ ಕನ್ನಡ ನಾಡಿನ ಎಲ್ಲ ಪ್ರಸಿದ್ಧ ಲೇಖಕರ ಪುಸ್ತಕಗಳೂ ನಮ್ಮಲ್ಲಿ ಯೋಗ್ಯ ಬೆಲೆಗೆ ದೊರೆಯುವವು.

ವಿಳಾಸ— ಎಸ್. ಸಿ. ಶಿವಲಿಂಗಣ್ಣ
ಕಲ್ಯಾಣ ಕರ್ನಾಟಕ ಬುಕ್ಕಡಿಪೊ ಗುಲಬರ್ಗಾ

---

**ವೀರ**ವಾಣಿ. ಇದು ವೀರಶೈವ ಮತದ ನಿಜ ತತ್ವವನ್ನು ತಿಳಿಸುವ ಮಾಸ ಪತ್ರಿಕೆ.

ವಾರ್ಷಿಕ ಚಂದಾ ರೂ. ೧-೮-೦
ಸಂಪಾದಕರು— ಗಂಗಾಧರಪ್ಪ ಹೊದ್ಲೂರು ಹುಬ್ಬಳ್ಳಿ



# ಶರಣ ಸಂದೇಶ

# THE SHARANA SANDESHA.



## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೧ ನೆಯ ನವ್ಹಂಬರ್ ೧೯೩೭. | ಸಂಚಿಕೆ ೧೧

## ಮಹತ್ವದ ಸುದ್ದಿಗಳು.

—ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯು ಧಾರವಾಡದಲ್ಲಿ ಕೂಡಿ ವಂದೇಮಾತರಂ ಗೀತೆಯೇ ರಾಷ್ಟ್ರಗೀತೆಯಾಗಿರಬೇಕೆಂದು ನಿರ್ಣಯಿಸಿತು. ಕಾಂಗ್ರೆಸ್ಸು ಸಂಸ್ಥಾನಗಳ ಆಡಳಿತದಲ್ಲಿ ಕೈಹಾಕಬಾರದೆಂದು ಕೆಲವು ಕಡೆ ಸೂಚಿಸಿರುವುದು ತನಗೆ ಮಾನ್ಯವಿಲ್ಲವೆಂದೂ ಕರ್ನಾಟಕ ಏಕೀಕರಣಕ್ಕೆ ವರ್ಕಿಂಗ್ ಕಮಿಟಿಯು ಒಪ್ಪಿಗೆ ಕೊಡಬೇಕೆಂದೂ ತೀರ್ಮಾನಮಾಡಿತು.

—ಶ್ರೀ. ದೊಡ್ಡಮೇಟಿ ಅಂದಾನಪ್ಪನವರು ಹುನಗುಂದ, ಇಳಕಲ್ಲ, ಗುಡೂರು ಮೊದಲಾದ ಕೆಲವು ಸ್ಥಳಗಳಲ್ಲಿ ಈ ವಾರ ಸಂಚರಿಸಿ ಕಾಂಗ್ರೆಸ್ ಮಂತ್ರಿಮಂಡಲದ ಕಾರ್ಯಕಲಾಪಗಳನ್ನು ಜನರಿಗೆ ತಿಳಿಸಿದರು. ಎಲ್ಲ ಕಡೆಗಳಲ್ಲಿಯೂ ಜನರು ಇವರನ್ನು ಬಹು ಸಂಭ್ರಮದಿಂದ ಬರಮಾಡಿಕೊಂಡರು.

—ವೀರ ನರಿಮಾನರನ್ನು ಮೈಸೂರು ಸರಕಾರವು ಬಂಧಿಸಿದನಂತರ ಮರುದಿನ ಬಿಟ್ಟಿತು. ಅವರು ಆಗಲೇ ಮದ್ರಾಸಿಗೆ ಹೋದರು. ತನ್ನ ದಬ್ಬಾಳಿಕೆಯನ್ನು ಸರಕಾರವು ಒಂದು ಪ್ರಕಟನೆಯ ಮೂಲಕ ಸಮರ್ಥಿಸಿಕೊಂಡಿದೆ.

—ಮುಸ್ಲಿಂಲೀಗ್ ಫಂಡಿಗೆ ಬಂಗಾಲ ಪ್ರಾಂತದ ನ್ಯಾಯಶಾಖಾ ಮಂತ್ರಿಗಳಾದ ನಬಾಬ ಮುಸ್ರಫ್ ಹುಸೇನರವರು ೫ ಸಾವಿರ ರೂ. ಗಳನ್ನು ಕೊಟ್ಟಿದ್ದಾರೆ.

—ಮುಸಲ್ಮಾನರ ಕೇಳಿಕೆಯನ್ನು ಮಾನ್ಯಮಾಡದಿದ್ದರೆ ಹಿಂದು ಹಿಂದುಸ್ಥಾನ ಮತ್ತು ಮುಸಲ್ಮಾನ್ ಹಿಂದುಸ್ಥಾನ ಎಂದು ಈ ದೇಶದಲ್ಲಿ ಎರಡು ಭಾಗಗಳಾಗುವವೆಂದು ಮುಸ್ಲಿಂಲೀಗಿನಲ್ಲಿ ಒಬ್ಬ ವ್ಯಾಖ್ಯಾತರು ಹೇಳಿದರು.

—ಕಾನಪುರದ ಮುನಸಿಪಾಲ್ಟಿ ಉಪಾಧ್ಯಕ್ಷರಾದ ಖಾನಬಹಾದ್ದೂರ್ ಬಶಿರುದ್ದೀನ ಅಹಮ್ಮದ ಇವರು ಕಾಂಗ್ರೆಸ್ಸಿಗೆ ಸೇರಿ ಖಾನಸಾಹೇಬ ಮತ್ತು ಖಾನ ಬಹದ್ದೂರ್ ಎಂಬ ಪದವಿಗಳನ್ನು ಬಿಟ್ಟುಬಿಟ್ಟರು.

—ಮುಂಬೈ ಸರಕಾರದ ಕಂದಾಯ ಮಂತ್ರಿಗಳಾದ ಶ್ರೀ. ದೇಸಾಯಿಯವರು ಗೋಸಂರಕ್ಷಣೆಯ ಸಂಬಂಧವಾಗಿ ಅಸೆಂಬ್ಲಿಯಲ್ಲಿ ಸರಕಾರವು ಒಂದು ಗೊತ್ತುವಳಿಯನ್ನು ತರುವುದಿದೆಯೆಂದು ಪುಣೆಯ ತಮ್ಮ ಭಾಷಣದಲ್ಲಿ ತಿಳಿಸಿದರು.

—ಮದ್ರಾಸದ ಗವ್ಹರ್ನರರು ಸೇಲಂ ಜಿಲ್ಲೆಯ ತಮ್ಮ ಪ್ರವಾಸದಲ್ಲಿ ತಮಗಾಗಿ ಮದ್ಯವನ್ನು ತರಕೂಡದೆಂದು ಅಲ್ಲಿಯ ಕಲೆಕ್ಟರರಿಗೆ ತಿಳಿಸಿದ್ದರು.

—ಲೋಕಶಾಹಿ ಸ್ವರಾಜ್ಯ ಪಕ್ಷದವರು ಕಳೆದ ೨೭ ನೆಯ ತಾರೀಖು ವಂದೇ ಮಾತರಂ ದಿನವೆಂದು ಅನೇಕ ಕಡೆ ಆಚರಿಸಿ ಇದೇ ರಾಷ್ಟ್ರಗೀತೆಯಾಗಿರಬೇಕೆಂದು ನಿರ್ಣಯಿಸಿದರು. ಅದೇ ದಿನ ಪಾರೀಸಿನಿಂದ ಬಂದಿದ್ದ ಮೂರು ಬಣ್ಣಗಳ ರಾಷ್ಟ್ರಧ್ವಜವನ್ನು ಬ್ಯಾ. ಸಾವರಕರರು ಅನಾವರಣಮಾಡಿದರು.

---

## ಮುಂದಿನ ವಾರ

**ಪದ್ಧತಿಯ ಪ್ರಕಾರ ದೀಪಾವಳಿ ಹಬ್ಬದ ನಿಮಿತ್ತವಾಗಿ 'ಶರಣ ಸಂದೇಶ' ಪತ್ರಿಕೆಯು ಪ್ರಕಟವಾಗದೆ ತಾರೀಖು ೧೫-೧೧-೩೭ ನೆಯ ದಿವಸ ಪ್ರಕಟವಾಗುವುದು.**

—ಮ್ಯಾನೇಜರ್.

---

—ಪ್ರಜಾಮತ ಪತ್ರಿಕಾಕರ್ತರಾದ ಶ್ರೀ. ಗುಪ್ತರನ್ನು ಮೈಸೂರು ಸರಕಾರವು ಸೀಮಾಂತರಗೊಳಿಸಿತು.

—ಚೀನ ಜಪಾನ ಯುದ್ಧದಲ್ಲಿ ಈ ವರೆಗೆ ೭೭ ಸಾವಿರ ಚೀನೀ ಸೈನಿಕರು ಮೃತಪಟ್ಟರು. ೧೮೩೦೦೦ ಸೈನಿಕರಿಗೆ ಗಾಯವಾಯಿತು.

—ಮೈಸೂರ ಸರಕಾರದ ದಬ್ಬಾಳಿಕೆಯನ್ನು ಪುಣೆಯ ವಿದ್ಯಾರ್ಥಿಗಳು ಸಭೆಸೇರಿ ನಿಷೇಧಿಸಿದರು.

## ಚತುರ್ವರ್ಣಗಳು ಶ್ರಮವಿಭಾಗದವುಗಳೆ?

(ಡಾ. ಅಂಬೇಡಕರರ ಭಾಷಣ.)

ಬ್ರಾಹ್ಮಣಾದಿ ಚತುರ್ವರ್ಣಗಳು ಹಿಂದು ಸಮಾಜವನ್ನು ನಾಶಮಾಡುತ್ತಲಿವೆ. ಇವು ಸಮಾಜಕ್ಕೆ ಘಾತಕವಾಗಿರುವುದನ್ನು



ಸವರ್ಣೀಯ ಹಿಂದುಗಳು ಕಣ್ಣಾರೆ ನೋಡುತ್ತಿದ್ದರೂ ಇವುಗಳನ್ನು ನಿವಾರಣೆಮಾಡಲು ಮಾತ್ರ ಇವರು ಸಿದ್ಧರಿಲ್ಲ. ಅಷ್ಟು ಈ ಚತುರ್ವರ್ಣಗಳು ಇವರಿಗೆ ಪ್ರಿಯವಾಗಿವೆ. ಮಹಾ ಮಹಾ ದೇಶಭಕ್ತರೂ ದೊಡ್ಡ ದೊಡ್ಡ ಸಮತಾವಾದಿಗಳೂ ಆದ ಹಿಂದು ಮುಂದಾಳುಗಳು ಈ ವರ್ಣವ್ಯವಸ್ಥೆಯ ವಿಧ್ವಂಸವನ್ನು ನೋಡಲು ಇಷ್ಟಪಡುವುದಿಲ್ಲ.

ರಾಷ್ಟ್ರದಲ್ಲಿಯ ಸಂಪತ್ತು ಸಮಾನವಾಗಿ ಹಂಚಲ್ಪಡಬೇಕೆಂದೂ ಧನಿಕರು ಮತ್ತು ದರಿದ್ರರು ಎಂಬ ವಿಷಮತೆಯನ್ನು ದೂರಮಾಡಬೇಕೆಂದೂ ಬಹು ಸುಂದರವಾದ ಸಿದ್ಧಾಂತಗಳನ್ನು ಪ್ರಸಾರಗೊಳಿಸುವ ಹಿಂದು ಸೋಶಾಲಿಸ್ಟರು ಕೂಡಾ ಚತುರ್ವರ್ಣಗಳ ಮೇರೆಯನ್ನು ಸಂರಕ್ಷಿಸಲು ಪ್ರಯತ್ನಿಸುತ್ತಿದ್ದಾರೆ. ಏಕೆಂದರೆ ಮನುಷ್ಯನು ಸ್ವಭಾವತಃ ಸ್ವಾರ್ಥಿಯಾಗಿದ್ದಾನೆ. ಆತನು ತನ್ನ ಕಷ್ಟ ನಷ್ಟಗಳಂತೆ ಅನ್ಯರ ಕಷ್ಟ ನಷ್ಟಗಳ ಸರಿಯಾದ ತಿಳುವಳಿಕೆಯನ್ನು ಹೊಂದುವುದಿಲ್ಲ.

ಸವರ್ಣೀಯ ಹಿಂದುಗಳು ಜನ್ಮದಿಂದಲೇ ಶ್ರೇಷ್ಠತ್ವದ ಪಟ್ಟವನ್ನು ಕಟ್ಟಿಕೊಂಡೇ ಬರುತ್ತಾರೆ. ಆದುದರಿಂದ ಅವರಿಗೆ ಶೂದ್ರರ ಕಷ್ಟ ನಷ್ಟಗಳ ಕಲ್ಪನೆಯೇ ಬರುವುದಿಲ್ಲ.

ಆದರೆ ಇವರಿಗೆ ಧನಿಕತ್ವದ ಮತ್ತು ದಾರಿದ್ರ್ಯದ ಅನುಭವವು ಮಾತ್ರ ಇದೆ. ಅಂತೆಯೇ ಇವೆರಡೂ ಹೋಗಿ ಸಂಪತ್ತು ಸರಿಯಾಗಿ ಹಂಚಲ್ಪಡಬೇಕೆಂದು ಪ್ರಚಾರಮಾಡುತ್ತಿದ್ದಾರೆ. ಜಗತ್ತಿನಲ್ಲಿ ಸಂಪತ್ತೆಂಬ ಶಕ್ತಿಯೊಂದೇಯಿದೆಯೆಂದು ಇವರು ತಿಳಿದಿರುವುದು ಶುದ್ಧ ತಪ್ಪು. ಜನ್ಮದಿಂದಲೇ ಬ್ರಾಹ್ಮಣ ಮತ್ತು ಭಂಗಿಯಲ್ಲಿ ಮೇಲು ಕೀಳುಗಳ ಕಲ್ಪನೆಯು ದೃಢಮೂಲವಾಗಿದೆ. ಈ ವರೆಗೆ ಆಗಿಹೋದ ಸಾಧುಸಂತರು ಸವರ್ಣೀಯರಲ್ಲಿಯೇ ಜನ್ಮವೆತ್ತಿದವರು. ಆದುದರಿಂದ ಚತುರ್ವರ್ಣಗಳಿಂದಾಗುತ್ತಿರುವ ದುಃಖದ ಸರಿಯಾದ ಕಲ್ಪನೆಯೇ ಅವರಿಗೆ ಬಂದಿಲ್ಲ. ಹಾಗೆ ಬಂದಿದ್ದರೆ ಮೊದಲು ಈ ಅನರ್ಥವನ್ನು ನಿವಾರಣೆಮಾಡಲು ಅವರು ಪ್ರಯತ್ನಿಸುತ್ತಿದ್ದರು.

ಬ್ರಾಹ್ಮಣರಿಂದ ಭಂಗಿಯವರೆಗಿನ ಎಲ್ಲ ಹಿಂದುಗಳೂ ಒಂದೇ ಎಂದು ತಿಳಿಯುವಂತಹ ಒಂದಾದರೂ ಏರ್ಪಾಟು ಹಿಂದು ಸಮಾಜದಲ್ಲಿಲ್ಲ. ಶ್ರಮವಿಭಾಗದಿಂದ ವರ್ಣಗಳಿವೆಯೆಂಬುದು ಸುಳ್ಳು. ಹಾಗಿದ್ದಿದ್ದರೆ ಮನುಷ್ಯನು ತನ್ನ ಗುಣ ಸ್ವಭಾವ ಅಭಿರುಚಿಗಳ ಪ್ರಕಾರ ಕಾರ್ಯಗಳನ್ನು ಮಾಡಲು ಸ್ವತಂತ್ರನಿರುತ್ತಿದ್ದನು. ಈಗ ವರ್ಣಗಳೇ ಶ್ರಮವನ್ನು ವಿಭಾಗಗೊಳಿಸಿವೆ. ಭಂಗಿಯು ಎಂದೂ ಪುರೋಹಿತನಾಗಲಾರನು. ಕ್ಷತ್ರಿಯನು ಹೊಟ್ಟೆಗಿಲ್ಲದೆ ಸಾಯುತ್ತಿದ್ದರೂ ನೇಗಿಲನ್ನು ಹಿಡಿಯಲಾರನು. ವರ್ಣಗಳು ಹೀಗೆ ಶ್ರಮವನ್ನು ವಿಭಾಗಿಸಿವೆ.

ಯಾವ ಹಿಂದುವಿನನ್ನಾದರೂ ನೀನು ಯಾರೆಂದು ಕೇಳಿದರೆ ಆತನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ತನ್ನ ವರ್ಣವನ್ನು ಹೇಳುತ್ತಾನೆಯೇ ವಿನಾ ಹಿಂದು ಎಂದು ಹೇಳುವುದಿಲ್ಲ. ವರ್ಣಗಳು ಪರಸ್ಪರ ದ್ವೇಷವನ್ನುಂಟುಮಾಡಿ ಹಿಂದು ಜನಾಂಗವನ್ನು ತುಂಡು ತುಂಡು ಮಾಡಿವೆ. ಅಂತೆಯೇ ಈಗಿನ ಬ್ರಾಹ್ಮಣೇತರರು ಹಿಂದಿನ ಬ್ರಾಹ್ಮಣರು ಮಾಡಿದ ತಪ್ಪಿಗಾಗಿ ಇಂದಿನ ಬ್ರಾಹ್ಮಣರನ್ನು ದ್ವೇಷಿಸುತ್ತಿದ್ದಾರೆ. ಹಿಂದಿನ ಬ್ರಾಹ್ಮಣರು ಕಾಯಸ್ಥರನ್ನು ಕೀಳಾಗಿ ಕಂಡದ್ದರಿಂದ ಆ ಬ್ರಾಹ್ಮಣರ ವಂಶಜರಾದ ಈಗಿನ ಬ್ರಾಹ್ಮಣರನ್ನೂ ಕಾಯಸ್ಥರು ದ್ವೇಷಿಸುತ್ತಿದ್ದಾರೆ. ಇಂಗ್ಲಿಷರಲ್ಲಿ ಈ ಗುಣವೇ ಇಲ್ಲ. ಕ್ರಾಮವೆಲ್ಲನ ಕಾಲದಲ್ಲಿ ಯುದ್ಧಮಾಡಿದ ವಂಶಜರು ಈಗ ಪರಸ್ಪರ ಪ್ರೇಮದಿಂದಿದ್ದಾರೆ. ಹಿಂದು ಜನಾಂಗದಲ್ಲಿ ಪರಸ್ಪರ ದ್ವೇಷವುಳಿದು ಸಂಘಟನೆಗೆ ಪ್ರತಿಬಂಧವಾಗಿರುವುದು ಈ ವರ್ಣ ಕಲ್ಪನೆಯಿಂದ.

### ಆರ್ಯ ಸಮಾಜದವರ ಹಟ.

ಆರ್ಯ ಸಮಾಜದವರು ವರ್ಣಗಳು ಇರಲೇಬೇಕೆಂದು ಹಟ ಹಿಡಿದಿದ್ದಾರೆ. ಗುಣ ಕರ್ಮಗಳಿಂದ ಇವರ ವರ್ಣಗಳು ಏರ್ಪಡುತ್ತವಂತೆ. ಬ್ರಾಹ್ಮಣ ಅಥವಾ ಕ್ಷತ್ರಿಯ ಎಂದು ತಲೆಚೀಟಿಯನ್ನು ಏಕೆ ಹಚ್ಚಿಕೊಳ್ಳಬೇಕೋ ತಿಳಿಯದು. ಹೀಗೆ ಹಚ್ಚಿಕೊಳ್ಳದೆ ಜಗತ್ತಿನ ಅನೇಕ ಜನಾಂಗಗಳಲ್ಲಿ ಬ್ರಾಹ್ಮಣ ಮತ್ತು ಕ್ಷತ್ರಿಯ ಗುಣ ಕರ್ಮಗಳು ಆಚರಿಸಲ್ಪಡುತ್ತಾ ಇಲ್ಲವೇ ಹೇಗೆ? ವರ್ಣಕಲ್ಪನೆಯ ಕುಸಂಸ್ಕಾರವು ಒಮ್ಮೆ ಮನಸಿನಲ್ಲಿ ನಾಟತೆಂದರೆ ಅದನ್ನು ಬಿಡಲು ಮನುಷ್ಯನು ಸಿದ್ಧನಾಗುವುದೇ ಇಲ್ಲ. ಬ್ರಾಹ್ಮಣ ಎಂಬ ಹೆಸರು ಶ್ರೇಷ್ಠತ್ವದ ಕಲ್ಪನೆಯನ್ನು ತನ್ನ ಸಂಗಡಲೇ ತೆಗೆದುಕೊಂಡುಬರುತ್ತದೆ. ಶೂದ್ರ ಎಂಬ ಶಬ್ದವು ಕೀಳೆಂಬ ಭಾವನೆಯನ್ನು ಎಂತಹ ಬುದ್ಧಿಶಾಲಿಯಾದ ಹಿಂದು ಮನುಷ್ಯನಲ್ಲಿಯೂ ಉಂಟುಮಾಡದೆ ಬಿಡುವುದಿಲ್ಲ. ಆದಕಾರಣ ಬ್ರಾಹ್ಮಣಾದಿ ವರ್ಣ ವಿಶಿಷ್ಟ ದುರ್ಗಂಧಮಯ ಹೆಸರುಗಳ ಚೀಟಿಯನ್ನು ಯಾರೂ ಯಾರ ತಲೆಗೂ ಹಚ್ಚಬೇಕಾದುದಿಲ್ಲ. ಈ ಅನರ್ಥಕರವಾದ ವರ್ಣಕಲ್ಪನೆ ನಾಶವಾಗದೆ ಹಿಂದು ಸಂಘಟನೆಯಾಗುವುದಿಲ್ಲ.

### ವರ್ಣಭೇದವು ಶಕ್ಯವೆ?

ಬ್ರಾಹ್ಮಣಾದಿ ವರ್ಣಗಳನ್ನು ಸ್ಥಿರಗೊಳಿಸಬೇಕೆಂಬ ಪ್ರಯತ್ನವಾದರೂ ನೆರವೇರುತ್ತದೆಯೆ? ಮನುಷ್ಯನು ಪರಿವರ್ತನ ಶೀಲನು. ವ್ಯಕ್ತಿಯ ಗುಣ ಸ್ವಭಾವಗಳು ವ್ಯತ್ಯಾಸವಾಗುತ್ತಲೇ ಇರುತ್ತವೆ. ಹೀಗೆ ಪರಿವರ್ತನಹೊಂದುತ್ತಿರುವ ವ್ಯಕ್ತಿಗಳನ್ನು ಒಂದೇ ಕಟ್ಟಿನಲ್ಲಿ ಯಾವಾಗಲೂ ಕೂಡಿಹಾಕುವುದು ಶಕ್ಯವೆ? ಇಂಥ ಅಸಂಭವ ಕಾರ್ಯಗಳನ್ನು ಮಾಡಬೇಕಾದರೆ ರಾಜಶಾಸನ ಬೇಕಾಯಿತು. ಈ ವರೆಗೂ ರಾಜಶಾಸನದಿಂದಲೇ ವರ್ಣಗಳನ್ನು ರಕ್ಷಿಸುತ್ತಾ ಬಂದಿದ್ದಾರೆ. ರಾಮಚಂದ್ರನು ಶಂಬುಕನ ಕೊಲೆ ಮಾಡಿಸಿದುದು ವರ್ಣ ರಕ್ಷಣೆಗಾಗಿಯಲ್ಲವೆ? ಶೂದ್ರರು ವೇದ

ಮಂತ್ರಗಳನ್ನು ಉಚ್ಚರಿಸಿದರೆ ಅವರ ನಾಲಿಗೆಯನ್ನು ಕತ್ತರಿಸಬೇಕೆಂದೂ ಕೇಳಿದ ಕಿವಿಯಲ್ಲಿ ಕಾಸಿದ ಸೀಸವನ್ನು ಹಾಕಬೇಕೆಂದೂ ಮನುಸ್ಮೃತಿಯು ಶಾಸನ ಮಾಡಿದುದೇಕೆ? ವರ್ಣಗಳನ್ನು ರಕ್ಷಿಸಬೇಕೆಂದಲ್ಲವೆ? ಇಪ್ಪತ್ತನೆಯ ಶತಮಾನದಲ್ಲಿ ಇವೆಲ್ಲಾ ಶಕ್ಯವೆ? ಎಂದ ಮೇಲೆ ವರ್ಣಭೇದಗಳನ್ನು ಕಾಪಾಡುವುದಾದರೂ ಹೇಗೆ?

---

## ಗಾಂಧೀಜಿಯವರ ಉಪದೇಶ.

ಎಲ್ಲಿಯವರೆಗೆ ಭಾರತೀಯರ ಅಭಿಪ್ರಾಯವನ್ನು ತಿರಸ್ಕರಿಸುವ ಮತ್ತು ಪರಿಹಾಸ್ಯ ಮಾಡುವುದು ನಡೆದಿರುತ್ತದೆಯೋ ಅಲ್ಲಿಯವರೆಗೆ ದ್ವೇಷವನ್ನು ನಷ್ಟಗೊಳಿಸುವುದು ಶಕ್ಯವಿಲ್ಲ.

ದ್ವೇಷವನ್ನು ಹೊರಗೆ ಹಾಕಲು ಯೋಗ್ಯವಾದ ಅವಕಾಶವನ್ನು ಕೊಡುವುದೇ, ಅದನ್ನು ನಷ್ಟಮಾಡುವ ಒಂದೇ ಒಂದಾದ ಉಪಾಯವು.

—ಯಂಗ್ ಇಂಡಿಯಾ ೮-೧೨-೨೦.

ನಮ್ಮ ದೇಶದಲ್ಲುಂಟಾಗುವ ಪದಾರ್ಥವನ್ನು ಬಿಟ್ಟು ಪರದೇಶಗಳ ಪದಾರ್ಥಗಳನ್ನು ಪಯೋಗಿಸುವುದು ಪಾಪವೆಂದು ಭಾರತೀಯರು ಎಂದು ತಿಳಿಯುವರೋ ಅಂದು ಹಿಂದುಸ್ಥಾನದಮೇಲೆ ದಂಡೆತ್ತಿಬರುವ ಇಚ್ಛೆಯನ್ನು ಜಪಾನದೇಶವು ಮಾಡುವುದಿಲ್ಲ.

—ಯಂಗ್ ಇಂಡಿಯಾ ೨೯-೧೨-೨೦.

## ಮೈಸೂರಲ್ಲಿ ಶಾಸನ ಭಂಗ.

——::೦::——

ಮೈಸೂರು ಸರಕಾರವು ಇತ್ತೀಚಿಗೆ ದಬ್ಬಾಳಿಕೆಯನ್ನು ಪ್ರಾರಂಭಿಸಿದೆಯಷ್ಟೆ. ಶ್ರೀ. ನರಿಮನ್ನರು ಬೆಂಗಳೂರಲ್ಲಿ ಭಾಷಣಮಾಡಕೂಡದೆಂದು ಅಲ್ಲಿಯ ಪೋಲಿಸ್ ಶಾಸನದ ೩೯ ನೆಯ ನಿಯಮದ ಪ್ರಕಾರ ಸರಕಾರದವರು ಅಪ್ಪಣೆಮಾಡಿದರು. ಸರಕಾರದ ಈ ಅನ್ಯಾಯದ ಶಾಸನವನ್ನು ತಾ. ೨೪-೧೦-೩೭ ನೆಯ ದಿವಸ ವೀರ ನರಿಮನ್ನರು ಭಂಗಗೊಳಿಸಿ ಭಾಷಣ ಮಾಡಿದರು. ಇವರ ಭಾಷಣ ೨೦ ನಿಮಿಷ ನಡೆಯಿತು. ಅಷ್ಟರಲ್ಲಿ ಪೋಲಿಸರು ಬಂದು ಇವರನ್ನು ಸೆರೆಹಿಡಿದರು.

ಆಗ ಸಭೆಯಲ್ಲಿ ಗಲಾಟೆಯಾಯಿತು. ಪೋಲಿಸರ ಮೇಲೆ ಕಲ್ಲುಗಳನ್ನು ಎಸೆದರಂತೆ. ಪೋಲಿಸರು ಬಡಗಿ ಹೊಡೆತ ಹೊಡೆದು ಜನಗಳನ್ನು ಚದರಿಸಿದರು. ಪೋಲಿಸರು ವೀರ ನರಿಮನ್ನರನ್ನು ಆ ದಿನ ಸೆಂಟ್ರಲ್ ಜೈಲಿಗೆ ತೆಗೆದುಕೊಂಡು ಹೋದರು.

---

—ಬರುವ ಜನವರಿ ೧೭ ನೇ ತಾರೀಖಿನ ದಿವಸ ಮುಂಬೈ ಗವರ್ನರರ ಹಸ್ತದಿಂದ ಬೆಳಗಾವಿಯಲ್ಲಿ ಒಂದು ಒಕ್ಕಲತನದ ಪ್ರದರ್ಶನವು ತೆರೆಯಲ್ಪಡುವದು. ಅದಕ್ಕಾಗಿ ದಕ್ಷಿಣ ಭಾಗದ ನಾಲ್ಕು ಜಿಲ್ಲೆಗಳಿಂದ ೨೯ ಸಾವಿರ ರೂ.ಗಳು ಕೊಡಲ್ಪಟ್ಟಿವೆ.

---

## ಸಾದರ ಸ್ವೀಕಾರ.

ಕಥಾಕುಂಜ— ಶ್ರೀ. ಪ್ಯಾಟಿ ಶಾಮರಾಯರ ಸಂಪಾದಕತ್ವದಲ್ಲಿ ಇದೊಂದು ಮಾಸಪತ್ರಿಕೆ ಬೆಳಗಾವಿಯಲ್ಲಿ ಪ್ರಕಟವಾಗುತ್ತದೆ. ಸಣ್ಣ ಸಣ್ಣ ಕಥೆಗಳ ಮೂಲಕ ವಿಚಾರಜಾಗೃತಿಯನ್ನುಂಟುಮಾಡುವುದೇ ಇದರ ಮುಖ್ಯೋದ್ದೇಶ. ವಾರ್ಷಿಕ ಚಂದಾ ೧೨ ಆಣೆ. ಈ ಪತ್ರಿಕಾಕರ್ತರು ಕಳೆದ ೧೦ ನೆಯ ತಾರೀಖಿನ ದಿನ ಈ ಪತ್ರಿಕೆಯ ಒಂದು ವಿಶೇಷಾಂಕವನ್ನು ಕರ್ನಾಟಕ ಏಕೀಕರಣದ ವಿಚಾರ ಜಾಗೃತಿಗಾಗಿ ಹೊರಡಿಸಿದ್ದಾರೆ. ಈ ವಿಶೇಷಾಂಕವನ್ನು ನಾವು ಕೃತಜ್ಞತಾಪೂರ್ವಕ ಸ್ವೀಕರಿಸಿದ್ದೇವೆ.

ಕರ್ನಾಟಕ ಏಕೀಕರಣವು ಎಷ್ಟು ಅವಶ್ಯಕವಾದುದೆಂಬುದನ್ನು ಅನೇಕ ಸಂಖ್ಯೆ, ಲೆಕ್ಕ, ಹೋಲಿಕೆಗಳ ಮೇಲಿಂದ ಇದರಲ್ಲಿ ಚೆನ್ನಾಗಿ ವಿವರಿಸಿದ್ದಾರೆ. ಭಾರತೀಯ ಅನೇಕ ಪ್ರಮುಖರ ಸಂದೇಶಗಳನ್ನೂ ತರಿಸಿ ಇದರಲ್ಲಿ ಪ್ರಕಟಿಸಿದ್ದಾರೆ. ಈ ಪ್ರಕಾರ ಕರ್ನಾಟಕ ಏಕೀಕರಣದ ಜಾಗೃತಿಗೆ ಉಪಯುಕ್ತವಾಗುವಂತೆ ಸಂಪಾದಕ ಮಹಾಶಯರು ಈ ವಿಶೇಷಾಂಕವನ್ನು ಪರಿಶ್ರಮಪೂರ್ವಕ ಪ್ರಕಟಿಸಿದ್ದಕ್ಕಾಗಿ ನಾವು ತುಂಬಾ ಅಭಿನಂದಿಸುತ್ತೇವೆ.

ಕಂಠೀರವ— ಮಂಗಳೂರಲ್ಲಿ ಪ್ರಕಟವಾಗುತ್ತಿರುವ ಕಂಠೀರವ ಪತ್ರಿಕಾಕರ್ತರು ಪದ್ಧತಿಯಂತೆ ಈ ಸಾರೆಯೂ ದಸರಾ ಸಂಚಿಕೆಯನ್ನು ಹೊರಡಿಸಿ ಕನ್ನಡ ನಾಡಿನ ವಿಚಾರ ಜಾಗೃತಿಗೆ ತುಂಬಾ ಸಹಾಯಮಾಡಿದ್ದಾರೆ. ಡೆಮ್ಮಿ ನಾಲ್ಕನೆಯ ಒಂದು ಭಾಗದ ೨೧೦ ಪುಟಗಳುಳ್ಳ ಬಹು ದೊಡ್ಡದಾದ ಈ ಸುಂದರ ಸಂಚಿಕೆಯು ಕನ್ನಡಿಗರ ಜ್ಞಾನಾಭಿವೃದ್ಧಿಗೆ ಎಷ್ಟೋ ಸಹಾಯವಾಗಿದೆ. ಬರ್ಲಿನ್‌ದ ಪ್ರೊ. ಕೆ. ಎ. ಭಟ್ಟ ಇವರು ಬರೆದಿರುವ "ಇಂದಿನ ಜರ್ಮನಿಯಲ್ಲಿ ಯುವಕ ಮತ್ತು ಯುವತಿಯರ ಚಳವಳಿ" ಎಂಬ ಸಚಿತ್ರ ಲೇಖನ, ಶ್ರೀ. ಗೋವಿಂದ ಪೈ ಇವರು ಬರೆದ "ತಲಕಾಡಿನ ಪಶ್ಚಿಮ ಗಂಗರ ಕೊನೆಗಾಲ" ಎಂಬ ಲೇಖನ, ಪ್ಯಾರಿಸಿನ ಶ್ರೀ. ಟಿ ಎಸ್. ಆಚಾರ್ ಇವರು ಬರೆದ "ಪ್ಯಾರಿಸಿನ ಅಂತರ ರಾಷ್ಟ್ರೀಯ ಪ್ರದರ್ಶನ" ಎಂಬ ಸಚಿತ್ರ ಲೇಖನ, ಟೋಕಿಯೋದ ಶ್ರೀ. ಕೆ. ಎಲ್. ನಂಜಪ್ಪನವರು ಬರೆದ "ಜಪಾನಿನ ಪುಟ್ಟ ಕೈಗಾರಿಕೆಗಳ ಉದ್ಯಮ" ಎಂಬ ಸಚಿತ್ರ ಲೇಖನ ಅತ್ಯಂತ ಮಹತ್ವದವುಗಳಾಗಿವೆ. ಅನೇಕ ವಿದ್ವಾಂಸರಿಂದ ಬೇರೆ ಬೇರೆ ವಿಷಯಗಳ ಮೇಲೆ ಮಹತ್ವದ ಲೇಖನಗಳನ್ನು ಬರೆಯಿಸಿ ನಾಡ ಹಬ್ಬದ ಕಾಲಕ್ಕೆ ಇದೊಂದು ಜ್ಞಾನ ಹಬ್ಬವೂ ಕನ್ನಡಿಗರಿಗಾಗುವಂತೆ ಕಂಠೀರವ ಪತ್ರಿಕಾಕರ್ತರು ಮಾಡುತ್ತಿರುವ ಪ್ರಯತ್ನವು ಅತ್ಯಂತ ಅಭಿನಂದನೀಯವಾಗಿದೆ. ವರ್ಷ ವರ್ಷಕ್ಕೂ ಈ ಮಹಾಶಯರ ಪ್ರಯತ್ನವು ಹೆಚ್ಚು ಹೆಚ್ಚು ಫಲಕಾರಿಯಾಗುತ್ತಿರುವುದು ಕನ್ನಡಿಗರಿಗೆ ಸಂತೋಷದ ಸಂಗತಿಯು. ಕನ್ನಡಿಗರು ಇದಕ್ಕೆ ಇನ್ನೂ ಹೆಚ್ಚಾಗಿ ಪ್ರೋತ್ಸಾಹಿಸಲೆಂದು ಹಾರೈಸಿ ಪತ್ರಿಕಾಕರ್ತರ ಈ ಪ್ರಯತ್ನವನ್ನು ನಾವು ಹೃದಯ ಪೂರ್ವಕ ಅಭಿನಂದಿಸುತ್ತೇವೆ.

ಕಲ್ಯಾಣ— ಇದೊಂದು ಹೊಸ ಮಾಸಪತ್ರಿಕೆ. ಶ್ರೀಯುತ ಪಾಟೀಲ ಲಿಂಗನಗೌಡರು ಮತ್ತು ಶೀ. ಎಂ. ಪಿ. ಕಲಬುರ್ಗಿ ಇವರ ಸಂಪಾದಕತ್ವದಲ್ಲಿ ಹುಬ್ಬಳ್ಳಿಯಿಂದ ಈಗ ಪ್ರಕಟವಾಗಲಾರಂಭವಾಗಿದೆ. ಸಾಮಾಜಿಕ, ಧಾರ್ಮಿಕ, ರಾಜಕೀಯ ವಿಷಯಗಳನ್ನು ಚರ್ಚಿಸುವುದೂ ವೀರಶೈವ ಮತದ ಪ್ರಾಚೀನ ಗ್ರಂಥಗಳನ್ನು ಪರಿಶೋಧಿಸಿ ಪ್ರಕಟಿಗೊಳಿಸುವುದೂ ಈ ಪತ್ರಿಕೆಯ ಉದ್ದೇಶವು. ಇದು ಸಚಿತ್ರವಾಗಿಯೂ ಇರುವಂತೆ ಮಾಡಿದ್ದಾರೆ.

ಶ್ರೀ. ಸಿದ್ಧರಾಮೇಶನಿಗೆ ನಿರಾಭಾರಿ ಪಟ್ಟಾಭಿಷೇಕ ಎಂಬ ಗ್ರಂಥವು ಈಗ ಈ ಪತ್ರಿಕೆಯಲ್ಲಿ ಪ್ರಕಟವಾಗಲಾರಂಭವಾಗಿದೆ. ಸಂಪಾದಕ ಮಹಾಶಯರ ಉದ್ದೇಶವು ಬಹು ಸ್ತುತ್ಯವಾದುದು. ಪತ್ರಿಕೆಯು ಸಂಗ್ರಾಹ್ಯವಾಗಿದೆ. ಕನ್ನಡಿಗರು ತುಂಬಾ ಪ್ರೋತ್ಸಾಹಿಸಿ ಇದರ ಉದ್ದೇಶವು ಸಾರ್ಥಕವಾಗುವಂತೆ ಮಾಡುವರೆಂದು ನಂಬಿದ್ದೇವೆ.

ಡೆಮ್ಮಿ ಎಂಟನೆಯ ಒಂದು ಭಾಗದ ೪೮ ಪುಟಗಳುಳ್ಳದ್ದಾಗಿದೆ. ಮುದ್ದಾದ ಮುದ್ರಣ. ವಾರ್ಷಿಕ ಚಂದಾ ೩-೪-೦

ಶ್ರೀ ಬಸವಣ್ಣನವರು— ಮಹಾಕಾರುಣಿಕ ಶ್ರೀ ಬಸವಣ್ಣನವರು ಎಂಬ ಒಂದು ಪುಟ್ಟ ಪುಸ್ತಕವು ಬೆಂಗಳೂರು ವೀರಶೈವ ಸಮಾಜ ಸೇವಾಸಂಘದವರಿಂದ ಪ್ರಕಟವಾಗಿದೆ. ಇದನ್ನು ಶ್ರೀ ವೀರೇಶ್ವರ ಎಂಬ ಬೆಂಗಳೂರಿನ ಪ್ರಸಿದ್ಧ ಲೇಖಕರು ಬರೆದಿದ್ದಾರೆ. ಶ್ರೀ. ಡಿ. ಎಸ್. ಚಂದ್ರಪ್ಪನವರು ಬೆಂಗಳೂರು ಈ ಮಹಾಶಯರು ಸ್ವಂತ ವೆಚ್ಚದಿಂದ ಅಚ್ಚುಗೊಳಿಸಿದ್ದಾರೆ. ಶ್ರೀ. ವ್ಹಿ. ಕೆ. ಜವಳಿ ಬಿ. ಎ. ಬೆಳಗಾವ ಇವರು ಇದಕ್ಕೆ ಒಂದು ಚಿಕ್ಕ ಮುನ್ನುಡಿಯನ್ನು ಬರೆದಿದ್ದಾರೆ. ಹೀಗೆ ವೀರಶೈವ ತತ್ವಪ್ರಚಾರಕ ಮಹಾಶಯರ ಪ್ರಯತ್ನದಿಂದ ಪ್ರಕಟವಾದ ಪುಸ್ತಕವು ಅತ್ಯುಪಯುಕ್ತವಾದುದಾಗಿದೆಯೆಂದು ಹೇಳಬೇಕಾದುದೇ ಇಲ್ಲ.

ಬಸವಣ್ಣನವರು ಮಾಡಿದ ಮಹತ್ಕಾರ್ಯಗಳನ್ನು ಈ ಚಿಕ್ಕ ಪುಸ್ತಕದಲ್ಲಿ ಲೇಖಕರು ಬಹು ಸಮಂಜಸವಾಗಿ ವಿವರಿಸಿದ್ದಾರೆ. ಅಂಧಭಕ್ತಿಯನ್ನು ಬಿಟ್ಟು ವಿಮರ್ಶಾತ್ಮಕ ದೃಷ್ಟಿಯಿಂದಲೇ ಬಸವ ಮಹಾನುಭಾವನ ದಿವ್ಯ ತತ್ವಗಳನ್ನು ನೋಡಿ ಜಾಗೃತರಾಗಲು ಲೇಖಕರು ಆಗಾಗ್ಗೆ ಒತ್ತಿಹೇಳಿದ್ದಾರೆ. ಕೊನೆಯಲ್ಲಿ ಆ ಮಹಾತ್ಮನ ೨೫ ಮಹತ್ವದ ವಚನಗಳನ್ನೂ ಕೊಟ್ಟಿದ್ದಾರೆ.

ಇಂಥ ಪುಸ್ತಕವನ್ನು ಬರೆದು ಅಚ್ಚುಗೊಳಿಸಿ ಪ್ರಸಾರಮಾಡಿದುದರಿಂದ ಈ ಎಲ್ಲಾ ಮಹಾಶಯರನ್ನೂ ನಾವು ಹೃದಯಪೂರ್ವಕ ಅಭಿನಂದಿಸುತ್ತೇವೆ. ಶ್ರೀ. ಡಿ. ಎಸ್. ಚಂದ್ರಪ್ಪನವರು ಇಂಥ ಲೋಕೋಪಯೋಗದ ಕಾರ್ಯಕ್ಕೆ ಹಣವನ್ನು ವೆಚ್ಚಮಾಡಿದುದು ಅಭಿನಂದನೀಯವೂ ಅನುಕರಣೀಯವೂ ಆಗಿದೆ. ಇದು ಡೆಮ್ಮಿ ೧೬ ನೆಯ ಭಾಗದ ೫೨ ಪುಟಗಳ ಪುಸ್ತಕ. ಕ್ರಯ ೧॥ ಆಣೆ ಮಾತ್ರ. ಸುಶಿಕ್ಷಿತ ತರುಣರಲ್ಲಿ ಇದು ಆದಷ್ಟು ಹೆಚ್ಚು ಪ್ರಸಾರವಾಗುವಂತೆ ಮಾಡುವುದುತ್ತಮ.

ಅರವಿಂದ ಗ್ರಂಥಮಾಲೆ— ಈ ಗ್ರಂಥಮಾಲೆಯ ೨ ನೇ ವರುಷದ ೩ ನೆಯ ಪುಸ್ತಕ ಬೆಳಗು ಎಂಬುದು ನಾಲ್ಕನೆಯ ಪುಸ್ತಕ ಸನ್ಯಾಸಿ ಎಂಬುದು ನಮ್ಮ ಕಡೆ ಬಂದಿವೆ. ಇವುಗಳನ್ನು ಅಭಿನಂದನಪೂರ್ವಕ ಸ್ವೀಕರಿಸಿದ್ದೇವೆ. ಶ್ರೀ ಮಧುರಚೆನ್ನ ಎಂಬ ಪ್ರಸಿದ್ಧ ಲೇಖಕರು ಬೆಳಗು ಎಂಬುದನ್ನು ಬರೆದಿದ್ದಾರೆ. ಇವರು ಈ ಮುಂಚೆ ಬರೆದಿದ್ದ ಪೂರ್ವರಂಗ ಮತ್ತು ಕಾಳರಾತ್ರಿ ಎಂಬ ಗ್ರಂಥಗಳ ಮುಂದಿನದೇ ಈ ಬೆಳಗು ಎಂಬ ಗ್ರಂಥ.

ಸನ್ಯಾಸಿ ಎಂಬ ಗ್ರಂಥವನ್ನು ಶ್ರೀ. ಕಾಪಸೆ ರೇವಪ್ಪನವರೆಂಬ ಪ್ರಸಿದ್ಧ ಲೇಖಕರು ಬರೆದಿದ್ದಾರೆ. ಈ ಕಥೆಯ ಬೀಜವು ಬಂಗಾಲಿಯ ಒಂದು ತೋಟದ್ದೆಂದು ಲೇಖಕರು ತಿಳಿಸಿದ್ದಾರೆ. ಈ ಗ್ರಂಥಮಾಲೆಯ ಕಾರ್ಯವು ಈ ಪ್ರಕಾರ ಸಕಾಲಕ್ಕೆ ಬಹು ತೃಪ್ತಿಕರವಾಗಿ ಜರುಗುತ್ತಿರುವುದು ಅತ್ಯಂತ ಅಭಿನಂದನೀಯವಾದುದು. ಇದಕ್ಕೆ ಇನ್ನೂ ಹೆಚ್ಚಾದ ಪ್ರೋತ್ಸಾಹ ದೊರೆತು ಗ್ರಂಥಮಾಲೆಯ ಉದ್ದೇಶ ಹೆಚ್ಚು ಫಲಕಾರಿಯಾಗಲೆಂದೇ ಹಾರೈಸುತ್ತೇವೆ.

---

## ವಿಮರ್ಶಾತ್ಮಕ ಪ್ರಶ್ನೋತ್ತರ.

### ಕರ್ನಾಟಕ ಏಕೀಕರಣ.

ಪ್ರಶ್ನೆ— ಕರ್ನಾಟಕ ಏಕೀಕರಣದ ಚಳವಳಿಯು ಈ ವರೆಗೆ ಯಾಕೆ ಪರಿಣಾಮಕಾರಿಯಾಗಿ ನಡೆಯಲಿಲ್ಲ? ಈಗಲಾದರೂ ನಡೆಯಲು ಭಿನ್ನಾಭಿಪ್ರಾಯಗಳುಂಟೆ?

ಉತ್ತರ— ಕರ್ನಾಟಕ ಏಕೀಕರಣದ ಚಟುವಟಿಕೆಯು ಪರಿಣಾಮಕಾರಿಯಾಗಿ ಈ ವರೆಗೂ ನಡೆದಿಲ್ಲವೆಂಬುದನ್ನು ಎಲ್ಲರೂ ಒಪ್ಪುತ್ತಾರೆ. ಆದರೆ ಅದು ಏಕೆ ನಡೆಯಲಿಲ್ಲವೆಂಬ ವಿಷಯದಲ್ಲಿ ಮಾತ್ರ ಭಿನ್ನಾಭಿಪ್ರಾಯಗಳಿರಬಹುದು. ಏಕೀಕರಣವು ಬೇಡವೆಂದು ಕನ್ನಡ ನಾಡಿನ ಯಾವ ಪಕ್ಷ ಅಥವಾ ವ್ಯಕ್ತಿಯೂ ಹೇಳಿಲ್ಲ. ಅದು ಪರಿಣಾಮಕಾರಿಯಾಗುವಂತೆ ಯಾವ ಸಂಘಟಿತ ಪ್ರಚಂಡ ಪ್ರಯತ್ನಗಳೂ ನಡೆದಿಲ್ಲ. ಇದಕ್ಕೆ ಕನ್ನಡಿಗರಾದ ನಮ್ಮಲ್ಲಿ ನಮ್ಮ ವೈಶಿಷ್ಟ್ಯ ಮತ್ತು ನಮ್ಮ ಅಸ್ತಿತ್ವಗಳ ಸಂರಕ್ಷಣೆಗಳಿಗಿರಬೇಕಾದ ಸ್ವಾಭಿಮಾನ ಮತ್ತು ಸ್ವಾರ್ಥತ್ಯಾಗಗಳ ಅಭಾವವೇ ಮುಖ್ಯ ಕಾರಣ. ಇವು ಎಂದು ಉಂಟಾಗುವವೋ ಅಂದೇ ನಮ್ಮಿಂದ ಪರಿಣಾಮಕಾರಿಯಾದ ಚಟುವಟಿಕೆ ನಡೆಯುವುದು.

ಪ್ರಶ್ನೆ— ೧೯೩೦ ರಲ್ಲಿ ಕಾಂಗ್ರೆಸ್ ನಮಗೆ ಪ್ರತ್ಯೇಕ ಪ್ರಾಂತವನ್ನು ಮಾಡಿಕೊಟ್ಟಿತು. ಅಂದಿನಿಂದ ಈ ವರೆಗೆ ಕನ್ನಡಿಗರು ರಾಷ್ಟ್ರದ ಪ್ರತಿಯೊಂದು ಕಾರ್ಯದಲ್ಲಿ ಮುಂದರಿದಿದ್ದಾರೆ. ಕಳೆದ ಶಾಸನಭಂಗದ ಕಾಲಕ್ಕೆ ಕನ್ನಡ ನಾಡು ತನ್ನ ಅಸ್ತಿತ್ವವನ್ನು ಸ್ಪಷ್ಟತೋರಿಸಲಿಲ್ಲವೆ? ಕನ್ನಡ ನಾಡು ಯಾವ ಪ್ರಾಂತಕ್ಕಿಂತ ಹಿಂದೆ ಬಿದ್ದಿದೆ? ಸ್ವಾರ್ಥತ್ಯಾಗವನ್ನೇನು ಕಡಿಮೆ ಮಾಡಿತೆ?

ಉತ್ತರ— ನಮ್ಮ ಅಭಿಪ್ರಾಯವನ್ನು ಬೇರೆಯಾಗಿ ಗ್ರಹಿಸಬೇಡಿರಿ. ಕನ್ನಡನಾಡು ಸ್ವಾರ್ಥತ್ಯಾಗಮಾಡಿಲ್ಲ ಅಥವಾ ಮಾಡುವುದಿಲ್ಲವೆಂದೇನೂ ನಮ್ಮ ಅಭಿಪ್ರಾಯವಲ್ಲ. ಇದು ಬೇರೆ ಪ್ರಾಂತಗಳಿಗಿಂತ ಹಿಂದೆ ಬಿದ್ದಿತೆಂದೂ ನಾವು ಹೇಳಲಿಲ್ಲ. ಆದರೆ ಯಾವ ಸಂಗತಿಗಳಲ್ಲಿ ಎಂಬುದೇ ಇಲ್ಲಿ ಮುಖ್ಯ ಪ್ರಶ್ನೆ.

ಕಾಂಗ್ರೆಸ್ಸಿನ ಚಟುವಟಿಕೆಗಳು ಅಖಿಲ ಹಿಂದುಸ್ಥಾನಕ್ಕೆ ಸಂಬಂಧಪಟ್ಟವುಗಳು. ಅವು ಮುಖ್ಯವಾಗಿ ಹಿಂದುಸ್ಥಾನಕ್ಕೆ ಸ್ವರಾಜ್ಯವನ್ನು ಸಂಪಾದಿಸತಕ್ಕವುಗಳು. ಕರ್ನಾಟಕ ಏಕೀಕರಣದ ಪ್ರಶ್ನೆಯಾದರೋ ಪ್ರಾಂತಿಕವಾದುದು. ಸ್ವರಾಜ್ಯ ದೊರೆಯದ ಮುಂಚೆಯು ಕೂಡಾ ಇದು ಆಚರಣೆಯಲ್ಲಿ ಬರಲು ಅಡ್ಡಿಯಿಲ್ಲ. ಎಂದಮೇಲೆ ಈ ಏಕೀಕರಣದ ಚಟುವಟಿಕೆಯು ಕೇವಲ ಕನ್ನಡಿಗರ ಶಕ್ತಿಸಾಹಸಗಳಿಂದಲೇ ನಡೆಯತಕ್ಕದ್ದಾಗಿದೆಯಲ್ಲವೆ? ಹೀಗೆ ನಮ್ಮ ಪ್ರಾಂತಿಕವಾದ ಒಂದು ಚಟುವಟಿಕೆಯನ್ನಾದರೂ ನಾವು ಪರಿಣಾಮಕಾರಿಯಾಗಿ ಈ ವರೆಗೆ ಮಾಡಿದ್ದೇವೆಯೇ? ಆ ಮೂಲಕ ಅನ್ಯ ಪ್ರಾಂತದವರಿಗೆ ನಮ್ಮ ವೈಶಿಷ್ಟ್ಯ ಅಥವಾ ಅಸ್ತಿತ್ವಗಳ ಅರುವನ್ನು ಉಂಟುಮಾಡಿಕೊಟ್ಟಿದ್ದೇವೆಯೇ?

ರಾಷ್ಟ್ರೀಯ ಪ್ರಚಂಡ ಚಟುವಟಿಕೆ ಬಂದುದರಲ್ಲಿಯೇ ನಾವೂ ಸೇರಿಕೊಂಡಿದ್ದೇವೆಯೇ ವಿನಾ ನಮ್ಮ ಪ್ರಾಂತಕ್ಕಾಗಿಯೇ ಯಾವುದಾದರೊಂದು ಚಟುವಟಿಕೆಯನ್ನು ಪ್ರಚಂಡವಾಗಿ ನಡೆಸಿ

ದ್ದೇವೆಯೇ? ಇದಕ್ಕೆ ನಮ್ಮ ವೈಶಿಷ್ಟ್ಯ ಮತ್ತು ನಮ್ಮ ಅಸ್ತಿತ್ವಗಳ ಸಂಬಂಧವಾದ ಅರುವಿನ ಅಭಾವವೇ ಮುಖ್ಯ ಕಾರಣವೆಂದು ನಮಗೆ ತೋರುತ್ತದೆ. ಇದು ಸಂಕುಚಿತವಾದ ಅರಾಷ್ಟ್ರೀಯ ವೃತ್ತಿಯೆಂದು ಕೆಲವರಿಗೆ ತೋರಿದರೂ ತೋರಬಹುದು.

ಪ್ರಶ್ನೆ— ಹಾಗಾದರೆ ಕರ್ನಾಟಕ ಏಕೀಕರಣವು ನಮ್ಮ ಜೀವಾಳದ ಪ್ರಶ್ನೆಯಾಗಿದೆಯೆಂದು ಎಲ್ಲರಿಗೂ ತಿಳಿದಿಲ್ಲವೆಂದು ನೀವು ಹೇಳುವಿರಾ?

ಉತ್ತರ— ತಿಳಿಯುವುದು ಬೇರೆ. ಅದಕ್ಕಾಗಿ ದುಡಿಯುವುದು ಬೇರೆ. ಕರ್ನಾಟಕ ಏಕೀಕರಣವು ಮಾತ್ರ ಎಲ್ಲರಿಗೂ ಬೇಕು. ಆದರೆ ಅದಕ್ಕಾಗಿ ಮಾತ್ರ ಎಲ್ಲರೂ ದುಡಿಯುವುದಿಲ್ಲ. ಈಗ ಕಾಂಗ್ರೆಸ್ಸಿಗೆ ಸದಸ್ಯರನ್ನು ಮಾಡುವ ಕಾರ್ಯ ಹೇಗೆ ಎಲ್ಲೆಲ್ಲಿಯೂ ನಡೆದಿದೆ? ಏಕೀಕರಣಕ್ಕೆ ರುಜುಮಾಡಿಸುವ ಕಾರ್ಯ ಹೇಗೆ ನಡೆದಿದೆ? ಇದರಿಂದ ಕಾಂಗ್ರೆಸ್ಸಿಗೆ ಸದಸ್ಯರನ್ನು ಮಾಡಬಾರದೆಂದೇನೂ ನಮ್ಮ ಅಭಿಪ್ರಾಯವಲ್ಲ. ಕಾಂಗ್ರೆಸ್ ಕೆಲಸಮಾಡುವವರು ಈ ಕಾರ್ಯವನ್ನು ಮಾಡುವುದಿಲ್ಲವೆಂತಲೂ ನಮ್ಮ ಅಭಿಪ್ರಾಯವಲ್ಲ. ತಕ್ಕಷ್ಟು ಕಾರ್ಯಮಾಡುತ್ತಿದ್ದರೆ ಅವರೇ ಸರಿ. ಆದರೆ ಕಾರ್ಯೋತ್ಸಾಹದಲ್ಲಿ ವ್ಯತ್ಯಾಸವಿಲ್ಲವೆ?

ಪ್ರಶ್ನೆ— ಸಾರ್ವಜನಿಕ ಕಾರ್ಯಮಾಡುವವರಲ್ಲಿ ಈ ವಿಚಾರವು ಏಕೆ ಹೆಚ್ಚು ಉತ್ಸಾಹಕರವಾದುದಾಗಿಲ್ಲ?

ಉತ್ತರ— ಕರ್ನಾಟಕದಲ್ಲಿ ಸಾರ್ವಜನಿಕ ಕಾರ್ಯಮಾಡುವವರ ಸಂಖ್ಯೆಯೇ ಕಡಿಮೆ. ಇದ್ದವರಲ್ಲಿ ಬಹು ಜನರು ಕಾಂಗ್ರೆಸ್ಸಿನ ಕೆಲಸಗಾರರು. ಅವರೇ ಎಲ್ಲಾ ಕಾರ್ಯಗಳಲ್ಲಿಯೂ ಎಷ್ಟರ ಮಟ್ಟಿಗೆ ಪ್ರಯತ್ನಿಸುವುದು ಶಕ್ಯ? ಕರ್ನಾಟಕ ಏಕೀಕರಣ ಒಳ್ಳೆಯದೇ ಸರಿ. ಆಗಲಿ. ಎಂದು ಹೇಳುವವರೇ ಹೆಚ್ಚು. ಕೆಲವರಿಗೆ ಇದು ಪ್ರಾಂತಿಕ ಅಭಿಮಾನದ ವಿಷಯವಾಗಿ ತೋರುತ್ತದೆ. ಹಿಂದುಸ್ಥಾನಕ್ಕೆ ಸ್ವಾತಂತ್ರ್ಯ ದೊರಕಿಸುವ ವಿಶಾಲ ಕಾರ್ಯದ ಕಡೆಗೇ ಅವರ ಮನಸ್ಸು. ಸ್ವಾತಂತ್ರ್ಯ ದೊರೆಯಲು ಮೊದಲು ನಾವೆಲ್ಲರೂ ಎಲ್ಲ ಶಕ್ತಿಗಳನ್ನೂ ಉಪಯೋಗಿಸೋಣ. ಆ ಮೇಲೆ ಇಂಥ ಪ್ರಾಂತಿಕ ಸೌಲಭ್ಯಗಳು ತಾವೇ ದೊರೆಯುತ್ತವೆಂದು ಅವರಿಗೆ ತೋರುತ್ತದೆ.

ಕನ್ನಡ, ಕನ್ನಡ ಎಂದು ಇಷ್ಟೇಕೆ ಹಂಬಲಿಸುತ್ತಿದ್ದೀರಿ? ಈ ಪ್ರಾಂತಿಕ ಸಂಕುಚಿತ ಭಾವನೆಯನ್ನು ತೆಗೆದುಹಾಕಿ ವಿಶಾಲ ಭಾರತದ ಕಡೆಗೆ ಲಕ್ಷಿಸಿರಿ. ಹಿಂದಿ ಭಾಷೆ ಹೇಗಾದರೂ ಇಷ್ಟರಲ್ಲೇ ರಾಷ್ಟ್ರೀಯ ಭಾಷೆಯಾಗುತ್ತದೆ. ಆಧುನಿಕ ಜ್ಞಾನ ಸಂಪತ್ತೆಲ್ಲಾ ಆದರಲ್ಲಿ ಬೇಕಷ್ಟು ಇದೆ. ಮಾತಾಡಲು ಕನ್ನಡ ಭಾಷೆಯೊಂದಿದ್ದರೆ ಸಾಕು. ಬ್ರಿಟಿಶ್ ಭಾಗ ಹೇಗಾದರೂ ಇಷ್ಟರಲ್ಲೇ ಸ್ವರಾಜ್ಯಕ್ಕೆ ಪಾತ್ರವಾಗುತ್ತದೆ. ಎಂದಮೇಲೆ ಯಾವ ಪ್ರಾಂತದಲ್ಲಿ ಯಾರಿದ್ದರೇನು? ಎಲ್ಲರ ಉನ್ನತಿಯೂ ಹೇಗಾದರೂ ಸಮಾನವಾಗಿಯೇ ಆಗುತ್ತದೆಂದು ಕೆಲವರು ಈ ವಿಷಯದ ಕಡೆಗೆ ಉಪೇಕ್ಷಿಸಿರುವುದೂ ಉಂಟು.

ಈ ಕರ್ನಾಟಕ ಏಕೀಕರಣವು ಕರ್ನಾಟಕದಲ್ಲಿ ಯಾವ ಜಾತಿಯ ಜನರು ಹೆಚ್ಚಿದ್ದಾರೆಯೋ ಮತ್ತು ಯಾರಿಗೆ ಕನ್ನಡ ಭಾಷೆಯೇ ಅವರ ಧಾರ್ಮಿಕ ಸಾಮಾಜಿಕ ಸುಧಾರಣೆಗಳಿಗೆ ಅಗತ್ಯವಾಗಿದೆಯೋ ಅವರಿಗೇನೇ ಹೆಚ್ಚು ಪ್ರಯೋಜನವಾದುದು. ಇನ್ನಿತರಿಗೆ ಅಷ್ಟೇನು ಹಿತ? ಎಂತಲೂ ಕೆಲವರ ಯೋಚನೆ. ಕರ್ನಾಟಕ ಏಕೀಕರಣವು ಬೇಡವೆಂದೇನೂ ಯಾರೂ ಹೇಳುವುದಿಲ್ಲ. ಆದರೆ ಅದು ನಾಳೆ ಸ್ವರಾಜ್ಯ ದೊರೆತಮೇಲಲ್ಲ; ಇಂದೇ ಬೇಕು. ಇಂದೇ ಅಲ್ಲ, ಈಗಲೇ ಬೇಕೆಂಬ ಉತ್ಕಟೇಚ್ಛೆಯ ಮಹಾಶಯರು ಬಹು ಸ್ವಲ್ಪ ಜನರು.

ಇದು ಸಪ್ಪೆಯಾದ ಚಟುವಟಿಕೆ. ಅಸೆಂಬ್ಲಿ, ಲೋಕಲ್ ಬೋರ್ಡ್, ಮುನಸಿಪಾಲ್ಟಿಗಳಲ್ಲಿ ಸೇರಿ ತಮ್ಮ ಪಕ್ಷವು ಗೆದಿಯುವಂತೆ ಹೋರಾಡಲಿಕ್ಕೆ ಬರುವಂತಹ ಉತ್ಸಾಹದ ಚಟುವಟಿಕೆಯೆ? ಅವುಗಳಲ್ಲಿ ಜನರು ಹೇಗೆ ಉತ್ಸಾಹಗೊಳ್ಳುತ್ತಿದ್ದಾರೆ? ಖಾದಿ ಪ್ರಸಾರ, ಆದಿ ಹಿಂದುಗಳ ಸೇವೆ, ಗ್ರಾಮೋದ್ಯೋಗ ಸುಧಾರಣೆ ಈ ವಿಷಯಗಳಲ್ಲಿ ಜನರು ಎಷ್ಟರ ಮಟ್ಟಿಗೆ ಸೇರುತ್ತಿದ್ದಾರೆ? ಇವೆಲ್ಲ ಸಪ್ಪೆಯಾದ ಚಟುವಟಿಕೆಗಳೆಂದೇ ಬಹು ಜನರಿಗೆ ತೋರುವುದಿಲ್ಲವೆ? ಇವುಗಳಂತೆಯೇ ಅವರಿಗೆ ಈ ಕರ್ನಾಟಕ ಏಕೀಕರಣದ ವಿಷಯ.

ಹೀಗಿದ್ದರೂ ನಿರಾಶೆಯಾಗುವ ಕಾರಣವಿಲ್ಲ. ಈಗ ಎಷ್ಟೋ ಅನುಕೂಲ ಪರಿಸ್ಥಿತಿಯುಂಟಾಗಿದೆ. ಹಿಂದುಸ್ಥಾನಕ್ಕೆ ಸ್ವಾತಂತ್ರ್ಯ ದೊರೆಯುವವರೆಗೆ ಈ ವಿಷಯವನ್ನು ಬಿಡಬೇಕಾದುದೂ ಇಲ್ಲ. ಕರ್ನಾಟಕ ಏಕೀಕರಣವನ್ನೇ ಹಗಲಿರುಳೂ ಚಿಂತಿಸುತ್ತಿರುವ ಅನೇಕ ಮಹನೀಯರು ಈ ಕಾಲದಲ್ಲಿ ಒಟ್ಟುಗೂಡಿ ಏಕೀಕರಣ ಸಂಘದ ಮೂಲಕ ತಿಳಿಸಿದಂತೆ ಹೆಚ್ಚಾಗಿ ಪ್ರಯತ್ನಿಸುವುದು ಅಗತ್ಯವಾಗಿದೆ.

---

## ಮತ್ತೊಮ್ಮೆ ಮುಸಲ್ಮಾನರ ಪ್ರಭುತ್ವ !

### ಮುಖ್ಯ ಮಂತ್ರಿಗಳ ಭವಿಷ್ಯ ವಾಣಿ !

ಮೊನ್ನೆ ಲಖನೌ ಪಟ್ಟಣದಲ್ಲಿ ಕೂಡಿದ್ದ ಮುಸ್ಲಿಂಲೀಗಿನಲ್ಲಿ ಬಂಗಾಲದ ಮುಖ್ಯ ಮಂತ್ರಿಗಳಾದ ಮಿ. ಫಜಲುಲ್ ಹಕ್ಕ ಇವರು ಈ ಕೆಳಗಿನಂತೆ ಭಾಷಣಮಾಡಿದರೆಂದು "ಸ್ಟೇಟಸ್ ಮನ್" ಪತ್ರಿಕೆಯಲ್ಲಿ ಪ್ರಕಟವಾಗಿದೆ.

"ಮುಸಲ್ಮಾನರೆಲ್ಲಾ ಒಂದಾಗಿ ಈ ಮುಸ್ಲಿಂ ಧ್ವಜದಡಿಯಲ್ಲಿ ಸೇರಿ ಪ್ರಯತ್ನಿಸಿದ್ದಾದರೆ ಮತ್ತೊಮ್ಮೆ ಹಿಂದುಸ್ಥಾನದಲ್ಲಿ ಮುಸಲ್ಮಾನರ ರಾಜ್ಯವನ್ನು ಸ್ಥಾಪಿಸುವುದು ಶಕ್ಯವಿದೆಯೆಂದು ನಾನು ದೃಢವಾಗಿ ನಂಬಿದ್ದೇನೆ. ಮುಖ್ಯ ಮಂತ್ರಿಗಳ ಈ ಭವಿಷ್ಯವಾಣಿಯನ್ನು ಸಭಿಕರು "ಅಲ್ಲಾ ಹೊ ಅಕಬರ" ಎಂಬ ಜಯಧ್ವನಿಯಿಂದ ಸ್ವಾಗತಿಸಿದರು. ಭಾಷಣವು ಬಹು ಉತ್ತೇಜಕವಾದುದಾಗಿತ್ತು. ಹಿಂದುಸ್ಥಾನದಲ್ಲಿ ಉರ್ದು ಭಾಷೆಯೇ ಜನ ಸಾಮಾನ್ಯದ ಭಾಷೆಯಾಗಬೇಕೆಂದು ಹೇಳಿ ಕಾಂಗ್ರೆಸ್ಸಿನ ಸಂಬಂಧವಾಗಿ ಹೀಗೆ ಹೇಳಿದರು—

### ಕಾಂಗ್ರೆಸ್ಸು ಅಸತ್ಯ ಮತ್ತು ಅನರ್ಥಕರಗಳ ಮೂರ್ತಿ.

ಹಿಂದುಸ್ಥಾನದಲ್ಲಿ ಕಾಂಗ್ರೆಸ್ಸಿನಷ್ಟು ಸ್ವಾರ್ಥಿ, ಅಪ್ರಮಾಣಿಕ, ಅನೈಕಮತ್ಯ ಹುಟ್ಟಿಸುವ ಸಂಸ್ಥೆ ಬೇರೆ ಯಾವುದೂ ಇಲ್ಲ. ಹೊಸರಾಜ್ಯಘಟನೆ ತ್ಯಾಜ್ಯವಾದುದು, ಸಾಮ್ರಾಜ್ಯ ಪೋಷಕವಾದುದು ಎಂದು ಮೊದಲು ಹೇಳಿದ ಕಾಂಗ್ರೆಸ್ಸು ಆಮೇಲೆ ಯಾವ ಕಟ್ಟುಪಾಡುಗಳನ್ನೂ ಹೊಂದದೆ ಅಧಿಕಾರವನ್ನು ಸ್ವೀಕರಿಸಿಬಿಟ್ಟಿತು. ಆ ಮುಂಚೆ ಏಳು ಪ್ರಾಂತಗಳಲ್ಲಿ ಮುಸಲ್ಮಾನ್ ಮಂತ್ರಿಮಂಡಲವಿದ್ದುದು ಅದಕ್ಕೆ ಸಹನವಾಗಲಿಲ್ಲ. ಕಾಂಗ್ರೆಸ್ ರಾಜ್ಯವೆಂದರೆ ಹಿಂದು ರಾಜ್ಯ.

### ಕಾಫರರಿಗೆ ಭವಿಷ್ಯ ಜೀವನವೇ ಇಲ್ಲ.

ಪಂಜಾಬ ಮತ್ತು ಬಂಗಾಲ ಪ್ರಾಂತಗಳು ಅದರ ಸ್ವಾಧೀನವಾಗಿಲ್ಲ. ಬಂಗಾಲದಲ್ಲಿ ಒಡಕುಹುಟ್ಟಿಸಲು ಪ್ರಯತ್ನಿಸಿದ್ದು ಸಾಧ್ಯವಾಗಲಿಲ್ಲ. ನಾನು 'ಖುದಾ' ನಲ್ಲಿಯೇ ವಿಶ್ವಾಸವುಳ್ಳವನಾಗಿದ್ದೇನೆ. ನನಗೇನೂ ಮಂತ್ರಿತ್ವದಮೇಲೆ ಮೋಹವಿಲ್ಲ. ಇಸ್ಲಾಮದ ಸೇವೆಗಾಗಿ ಈ ಸೂತ್ರವನ್ನು ಹಿಡಿದಿದ್ದೇನೆ. ಕಾಂಗ್ರೆಸ್ಸು ಅಲ್ಪ ಸಂಖ್ಯಾಕರಿಗೆ ಹಿಂಸೆಪಡಿಸಿದ್ದಾದರೆ ನಾನು ನನ್ನ ಪ್ರಾಂತದಲ್ಲಿ ಅದರ ಸೇಡು ತೀರಿಸಲಿಕ್ಕೆ ಸಿದ್ಧನಿದ್ದೇನೆ. ಕಾಫರರಿಗೆ ಭವಿಷ್ಯ ಜೀವನವೇ ಇಲ್ಲ."

# ಗಡಿನಾಡು ಮತ್ತು ಬಂಗಾಲ.

### ಭಾಯಿ ಪರಮಾನಂದರ ವಿಚಾರಸರಣಿ.

ಭಾಯಿ ಪರಮಾನಂದರು ಹಿಂದು ಪತ್ರಿಕೆಯಲ್ಲಿ 'ಮುಸ್ಲಿಂ ಲೀಗಿನ ಮೂರು ಬಾಹ್ಯ ರೂಪ' ಎಂಬ ಲೇಖನದಲ್ಲಿ ಹೀಗೆ ಬರೆದಿದ್ದಾರೆ—

"ಕಲಕತ್ತಾ ಪಟ್ಟಣದ ಒಂದು ಪ್ರಸಿದ್ಧ ಪತ್ರಿಕೆಯು ಹೀಗೆ ಬರೆದಿದೆ— "ಬಂಗಾಲ ಪ್ರಾಂತವು ಒಂದು ಕಾಲಕ್ಕೆ ಕಾಂಗ್ರೆಸ್ಸಿನ ಕೇಂದ್ರಸ್ಥಾನವಾಗಿತ್ತು. ಇಲ್ಲಿ ಜಾತಿ ವಾದದ ಹೆಸರು ಕೂಡಾ ಇರಲಿಲ್ಲ. ಆದರೆ ಈಗ ಇಲ್ಲಿ ಜಾತಿ ವಾದವು ಅತ್ಯಧಿಕವಾಗಿದೆ. ಗಡಿನಾಡಿನಲ್ಲಿ ಕಾಂಗ್ರೆಸ್ ರಾಜ್ಯವಾಗಿದೆ. ಗಡಿನಾಡಿನ ಗಾಂಧಿಯವರು ಬಂಗಾಲಕ್ಕೆ ಬಂದು ಇಲ್ಲಿ ತಮ್ಮ ಧರ್ಮ ಬಾಂಧವರ ಜಾತಿಯ ವಿಷವನ್ನು ತೆಗೆದುಹಾಕಬಾರದೆ ?"

ಈ ಲೇಖಕರಿಗೆ ಗಡಿನಾಡಿನ ಮುಸಲ್ಮಾನರು ಏಕೆ ಕಾಂಗ್ರೆಸ್ಸಿನಲ್ಲಿ ಸೇರಿದ್ದಾರೆ? ಮತ್ತು ಬಂಗಾಲದ ಮುಸಲ್ಮಾನರು ಏಕೆ ಜಾತಿವಾದಿಗಳಾಗಿದ್ದಾರೆ ? ಎಂಬ ಸಂಗತಿಯ ಕಾರಣ ತಿಳಿಯದಿದ್ದುದು ಆಶ್ಚರ್ಯಕರವು. ಮುಸಲ್ಮಾನರು ಸ್ವಾತಂತ್ರ್ಯ ಪ್ರಿಯರು. ಅವರಿಗೆ ಇಂಗ್ಲಿಷ್ ಪ್ರಭುತ್ವವು ಈ ದೇಶದಲ್ಲಿರಬೇಕೆಂದು ಎಳ್ಳಷ್ಟಾದರೂ ಇಚ್ಛೆಯಿಲ್ಲ. ಇಷ್ಟೇ ಅಲ್ಲ; ಜಗತ್ತಿನಲ್ಲೆಲ್ಲಿಯೂ ಇಂಗ್ಲಿಷರ ರಾಜ್ಯವಿರಬಾರದೆಂದೇ ಇವರು ಹಾರೈಸುವವರು. ಗಡಿನಾಡಿನ ಹತ್ತಿರ ನಿರ್ಜನ ಪ್ರದೇಶದಲ್ಲಿ ನಡೆದ ಹೋರಾಟದ ಕಾಲಕ್ಕೆ ಇಂಗ್ಲಿಷ ಸರಕಾರದ ವಿಚಾರವಾಗಿ ಅವರು ಮಾಡಿದ ದೂರುಗಳೇ ಇದಕ್ಕೆ ಸಾಕ್ಷಿ.

### ಗಡಿನಾಡಿನ ಸ್ಥಿತಿ.

ಗಡಿನಾಡು ಮುಸಲ್ಮಾನರ ರಾಜ್ಯ. ಅಲ್ಲಿ ಮುಸಲ್ಮಾನರೇ ಅತ್ಯಧಿಕ. ಆ ನಾಡಿನ ಸ್ವಾತಂತ್ರ್ಯವೆಂದರೆ ಮುಸಲ್ಮಾನರ ಸ್ವಾತಂತ್ರ್ಯ. ಅಲ್ಲಿಯ ಮುಸಲ್ಮಾನರು ಶಿಕ್ಷಣದಲ್ಲಿ ಬಹು ಹಿಂದುಳಿದವರು. ನೂರಕ್ಕೆ ೨-೩ ಜನರು ಅಕ್ಷರಜ್ಞರು. ಆದರೆ ಅಲ್ಲಿರುವ ಬಹು ಸ್ವಲ್ಪ ಹಿಂದುಗಳಾದರೂ ಎಷ್ಟೋ ಸುಶಿಕ್ಷಿತರು. ನೂರಕ್ಕೆ ೨೫-೩೦ ಜನರಂತೆ ಅಕ್ಷರಜ್ಞರು. ಹೀಗಿದ್ದರೂ ಶಾಲೆ ಮೊದಲಾದ ಶಿಕ್ಷಣ ಶಾಖೆಯ ಎಲ್ಲಾ ಅಧಿಕಾರಗಳೂ ಮುಸಲ್ಮಾನರ ಸ್ವಾಧೀನ. ಇದೇ ಪ್ರಕಾರ ಪೋಲಿಸ್ ಮೊದಲಾದ ಎಲ್ಲ ಶಾಖೆಗಳಲ್ಲಿಯೂ ಮುಸಲ್ಮಾನರೇ.

ಅಲ್ಲಿರುವ ಅಲ್ಪ ಸಂಖ್ಯಾಕರಾದ ಹಿಂದುಗಳು ಮುಸಲ್ಮಾನರ ದಯೆಯಿಂದಲೇ ಜೀವಿಸಬೇಕಾಗಿದೆ. ಇಂತಹ ಸ್ಥಿತಿಯಲ್ಲಿ ಅಲ್ಲಿಯ ಮುಸಲ್ಮಾನರು ಕಾಂಗ್ರೆಸ್ಸಿನಲ್ಲಿ ಸೇರಿ ಅದರ ಬಲದಿಂದ ತಾವು ಸ್ವತಂತ್ರರಾಗುವ ಇಂತಹ ಬಂಗಾರದಂತಹ ಸಮಯವನ್ನೇಕೆ ಕಳೆದುಕೊಳ್ಳುವರು ? ಅವರು ಕಾಂಗ್ರೆಸ್ಸಿನಲ್ಲಿ ಸೇರಿದ್ದನ್ನು ನಾನೇನೂ ಅಲ್ಲಗಳೆಯುವುದಿಲ್ಲ. ಆದರೆ ಇದ್ದ ಸ್ಥಿತಿಯನ್ನು ತಿಳಿಸುತ್ತೇನೆ.

ಗಡಿನಾಡಿನಲ್ಲಿರುವ "ಖುದಾಯಿ ಖಿದಮತಗಾರ" ಎಂಬ ಕೆಂಪಂಗಿಯ ದಳವು ರಾಷ್ಟ್ರೀಯ ದಳವೆಂದು ಹೇಳುತ್ತಾರೆ. ಅದು ನಿಜವಾಗಿ ಇಸ್ಲಾಮ್ ದಳವು. ಮಸಿದಿಯೇ ಅವರ ಕೇಂದ್ರಸ್ಥಾನ. "ಇಸ್ಲಾಂ ಜಿಂದಾಬಾದ" ಎಂಬುದೇ ಅದರ ಜಯಘೋಷ. ಈಗ ಹಳ್ಳಿ ಹಳ್ಳಿಗೆ ಸ್ಥಾಪನೆಯಾಗುವ ಕಾಂಗ್ರೆಸ್ ಸಂಸ್ಥೆಯೆಂದರೆ ಇಸ್ಲಾಂ ಪ್ರಚಾರದ ಸಂಸ್ಥೆ. ಈ ಸಂಸ್ಥೆಗಳು ಇಸ್ಲಾಮದ ರಕ್ಷಣೆಯನ್ನು ಮಾಡುವವೋ ? ಹಿಂದುಗಳ ರಕ್ಷಣೆಯನ್ನು ಮಾಡುವವೋ ? ಭವಿಷ್ಯಕಾಲವೇ ಹೇಳುವುದು. 'ಖುದಾಯಿ ಖಿದ ಮತಗಾರ' ಸಂಸ್ಥೆಯ ಪ್ರಮುಖರಾದ ಡಾ. ಖಾನಸಾಹೇಬರೇ ಕೇಂದ್ರ ಶಾಸನ ಸಭೆಯಲ್ಲಿ ಬನ್ನೂ ಸ್ಥಳದ ಅತ್ಯಾಚಾರದ ಸಂಬಂಧವಾಗಿ ಪ್ರಸ್ತಾಪ ನಡೆದಾಗ ಹೀಗೆ ಹೇಳಿದ್ದರು— "ಯುವಕ ಯುವತಿಯರು ಎಲ್ಲಿ ಪ್ರೌಢರಾಗಿರುವರೋ ಅಲ್ಲಿ ಹೀಗೆ ಸಂಭವಿಸುವುದು ಸ್ವಾಭಾವಿಕವಷ್ಟೆ."

### ಬಂಗಾಲದ ಸ್ಥಿತಿ.

ಬಂಗಾಲದ ಸ್ಥಿತಿ ಗಡಿನಾಡಿನಂತಿಲ್ಲ. ಬಂಗಾಲದಲ್ಲಿ ಬಹುಸಂಖ್ಯಾಕರು ಮುಸಲ್ಮಾನರಿದ್ದರೂ ಗಡಿನಾಡಿನ ಪ್ರಮಾಣದಷ್ಟು ಇಲ್ಲ. ಅಲ್ಲಿಯ ಮುಸಲ್ಮಾನರು ಶಿಕ್ಷಣದಲ್ಲಿ ಹಿಂದುಳಿದವರು. ಹಿಂದುಗಳು ಬುದ್ಧಿಶಾಲಿಗಳು. ಅಧಿಕಾರಸೂತ್ರಗಳೆಲ್ಲಾ ಅವರ ಕೈಯಲ್ಲಿ. ಜಾತಿನಿರ್ಣಯವು ಅಲ್ಲಿಯ ಅಧಿಕಾರ ಸೂತ್ರವನ್ನು ಮುಸಲ್ಮಾನರ ಕೈಯಲ್ಲಿ ಕೊಟ್ಟಿದೆ. ಎಂದಮೇಲೆ ಅದನ್ನೇಕೆ ಅವರು ಬಿಡುವರು ? ಜಾತಿವಾದಿಗಳಾಗಿಯೇ ಬಂಗಾಲದಲ್ಲಿ ತಮ್ಮ ಪ್ರಭುತ್ವವನ್ನು ಸ್ಥಾಪಿಸಲು ಪ್ರಯತ್ನಿಸುತ್ತಿದ್ದಾರೆ.

ಗಡಿನಾಡಿನಲ್ಲಿ ಉರ್ದು ಪ್ರಾಂತಿಕ ಭಾಷೆ. ಹಿಂದುಗಳೂ ಅದನ್ನೇ ಕಲಿಯುತ್ತಾರೆ. ಅದೇ ಇಸ್ಲಾಮಿ ಭಾಷೆಯೂ ಆಗಿದೆ. ಆ ಸ್ಥಿತಿ ಬಂಗಾಲದಲ್ಲಿಲ್ಲ. ಬಂಗಾಲಿ ಭಾಷೆಯೇ ಅಲ್ಲಿ ಪ್ರಾಮುಖ್ಯವಾದುದಾಗಿದೆ. ಮುಸಲ್ಮಾನ್ ಲೇಖಕರೂ ಬಂಗಾಲಿ ಸಾಹಿತ್ಯದಲ್ಲಿ ಪ್ರವೀಣರಾಗಿದ್ದಾರೆ. ಜಮೀನದಾರರೆಲ್ಲಾ ಹಿಂದಗಳು. ಗಡಿನಾಡಿನಲ್ಲಾಗಲಿ ಪಂಜಾಬದಲ್ಲಾಗಲಿ ಮುಸಲ್ಮಾನರೇ ಜಮೀನದಾರರು. ಗಡಿನಾಡಿನಲ್ಲಿ ಜಾತಿವಾದದಿಂದ ಯಾವುದನ್ನೂ ಸಂಪಾದಿಸಬೇಕಾದುದೇ ಇಲ್ಲ. ಎಂದಮೇಲೆ ಅಲ್ಲಿಯವರು ಕಾಂಗ್ರೆಸ್ಸನ್ನು ಏಕೆ ಸೇರುವುದಿಲ್ಲ? ಬಂಗಾಲದಲ್ಲಾದರೋ ಜಾತಿನಿರ್ಣಯದಿಂದ ಇಸ್ಲಾಮಿನ ಅಭಿವೃದ್ಧಿಮಾಡಬೇಕಾಗಿದೆ. ಹೀಗಿರುವಾಗ ಅಲ್ಲಿಯವರು ಕಾಂಗ್ರೆಸ್ಸಿನಲ್ಲಿ ಅದೇಕೆ ಸೇರುತ್ತಾರೆ ?

ಬಂಗಾಲದ ಹಿಂದುಗಳು ತಮ್ಮ ಉನ್ನತಿಯನ್ನು ತಾವೇ ಸಂಘಟಿತರಾಗಿ ಮಾಡಿಕೊಳ್ಳಬೇಕೇ ವಿನಾ ಗಡಿನಾಡಿನ ಗಾಂಧಿಯವರೇನೂ ಅಲ್ಲಿಗೆ ಬಂದು ಅವರ ಧರ್ಮ ಬಾಂಧವರಿಂದ ಹಿಂದುಗಳಿಗೆ ಹಿತವನ್ನು ಮಾಡಿಸಿಕೊಡುವುದಿಲ್ಲ."

---

# ಈ ಮಂತ್ರಿಗಳು ಹೇಗೆ?

ಬಂಗಾಲದ ಮುಖ್ಯ ಮಂತ್ರಿಗಳಾದ ಮಿ. ಫಜಲುಲ್ ಹಕ್ಕ ಇವರು ಮುಸ್ಲಿಂ ಲೀಗಿನಲ್ಲಿ ಭಾಷಣ ಮಾಡಿದಾಗ ಕಾಂಗ್ರೆಸ್ ಮಂತ್ರಿಮಂಡಲವು ಅಲ್ಪ ಸಂಖ್ಯಾಕರಿಗೆ ಹಿಂಸೆಪಡಿಸಿದರೆ ನಾನು ಅದರ ಸೇಡು ತೀರಿಸಿ ಮುಸ್ಲಿಂ ಸೇವೆ ಮಾಡಲಿಕ್ಕಾಗಿಯೇ ಮಂತ್ರಿತ್ವವನ್ನು ವಹಿಸಿದ್ದೇನೆಂದು ಹೇಳಿದರು.

ಆದರೆ ಸಂಯುಕ್ತ ಪ್ರಾಂತದ ಮುಖ್ಯ ಮಂತ್ರಿಗಳಾದ ಶ್ರೀ. ಗೋವಿಂದ ವಲ್ಲಭ ಪಂತರು ಪಾಟಣಾದಲ್ಲಿಯ ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಹಿಂದುಸ್ಥಾನದ ಬೇರೆ ಬೇರೆ ಪ್ರಾಂತಗಳಲ್ಲಿ ಮುಸಲ್ಮಾನರು ಹಿಂದುಗಳನ್ನು ಹಿಂಸೆಪಡಿಸಿದರೂ ನಾನು ನನ್ನ ಪ್ರಾಂತದಲ್ಲಿ ಮುಸ್ಲಿಂ ಹಿತಸಂರಕ್ಷಣೆಯನ್ನೇ ಮಾಡುವೆನು. ಮಂತ್ರಿತ್ವವನ್ನು ವಹಿಸಿದಾಗ ಜಾತೀಯ ಭಾವನೆಯುಳ್ಳವರಾಗಿರುವುದು ವಿಘಾತಕವಾದುದು."

ಇದೇ ಹಿಂದು ಮತ್ತು ಮುಸ್ಲಿಂ ಸಂಸ್ಕೃತಿಗಳಲ್ಲಿರುವ ಮಹತ್ವದ ಭೇದ.

# ಬಂಗಾಲಿ ಹಿಂದುಗಳ ವಿಪತ್ತು.




ಬಂಗಾಲ ಪ್ರಾಂತದಲ್ಲಿ ಮುಸಲ್ಮಾನರೇ ಬಹು ಸಂಖ್ಯಾಕರು. ಅವರಲ್ಲಿ ರಾಷ್ಟ್ರೀಯ ದೃಷ್ಟಿಯಿಂದ ಕಾಂಗ್ರೆಸ್ಸಿನಲ್ಲಿ ಸೇರಿರುವವರು ಕಡಿಮೆ. ಈಗ ಅಲ್ಲಿಯ ಅಧಿಕಾರವು ಮಿ. ಫಜಲುಲ್ ಹಕ್ಕರಂಥ ಜಾತ್ಯಂಧರ ಕೈಯಲ್ಲಿಯೇ ಇದೆ. ಇವರು ಯಾವ ವಿಧವಾದ ವಿಚಾರಸರಣಿಯುಳ್ಳವರೆಂಬುದನ್ನು ಮೊನ್ನೆ ಮುಸ್ಲಿಂ ಲೀಗಿನಲ್ಲಿ ಇವರು ಮಾಡಿದ ಭಾಷಣದಿಂದಲೇ ಗೊತ್ತಾಗುತ್ತದೆ. ಅದನ್ನು ಬೇರೆಕಡೆ ಕೊಟ್ಟಿದ್ದೇವೆ.

ಈಗ ಆ ಪ್ರಾಂತದಲ್ಲಿ ಈ ಜಾತ್ಯಂಧರು ನಡೆಸಿರುವ ಆಕ್ರಮಣವೃತ್ತಿಯನ್ನು ನೋಡಿ ಒಬ್ಬ ಬಂಗಾಲಿಗಳು ಹೀಗೆ ಹೇಳಿದರೆಂದು ಪ್ರಕಟವಾಗಿದೆ.—

"ಹಿಂದಕ್ಕೆ ಲಾರ್ಡ ಕರ್ಜನ್‌ರು ಬಂಗಾಲವನ್ನು ಎರಡು ಭಾಗಮಾಡಿ ಪೂರ್ವ ಬಂಗಾಲವನ್ನು ಮುಸಲ್ಮಾನ್ ಪ್ರಾಂತವನ್ನಾಗಿ ಮಾಡಿದ್ದರು. ಆಗ ನಾವು ಹೋರಾಡಿ ಒಂದಾಗುವಂತೆ ಮಾಡಿದ್ದು ತಪ್ಪಾಯಿತು. ಅವರ ಪ್ರಾಂತವೊಂದು ಬೇರೆಯಾಗಿಯೇ ಇದ್ದಿದ್ದರೆ ಈಗ ನಮಗೆ ಈ ತೊಂದರೆಯಿರಲಿಲ್ಲ."

ಇನ್ನೊಬ್ಬ ಬಂಗಾಲಿ ಹಿಂದು ಜಮೀನದಾರರು ಹೀಗೆ ಹೇಳಿದರಂತೆ—

"ಕಳೆದ ೧೫೦ ವರುಷಗಳಿಂದ ನಡೆದು ಬಂದ ಭೂಕಂದಾಯ ಪದ್ಧತಿಯು ಈಗಿನ ಸರಕಾರದಲ್ಲಿ ಬೇರೆಯಾಗುವುದಿದೆ. ಚಿಕ್ಕ ಚಿಕ್ಕ ಮುಸಲ್ಮಾನ್ ಜಮೀನದಾರರನ್ನು ಉಂಟುಮಾಡುವ ಪ್ರಯತ್ನ ನಡೆದಿದೆ. ಮಂತ್ರಿಪಟ್ಟದ ಆಶೆಗಾಗಿ ಒಬ್ಬ ಹಿಂದು ಜಮೀನದಾರರಾದ ಮಂತ್ರಿಗಳೇ ಈ ವಿಧವಾದ ಗೊತ್ತುವಳಿಯನ್ನು ಅಸೆಂಬ್ಲಿಯಲ್ಲಿ ತಂದಿದ್ದಾರೆ."

ಬಂಗಾಲಿ ಭಾಷೆಯನ್ನು ಹತ್ತಿಕ್ಕುವ ಪ್ರಯತ್ನ ನಡೆದಿದೆ. ಅದರಲ್ಲಿರುವ ಹಿಂದಿ ಶಬ್ದಗಳನ್ನು ತೆಗೆದು ಉರ್ದು ಶಬ್ದಗಳನ್ನು ಸೇರಿಸುವ ಚಟುವಟಿಕೆ ನಡೆದಿದೆ. ಭಾಷೆಯಲ್ಲಿ ಜಾತೀಯತೆ ಇರಬಾರದೆಂದು ಪಠ್ಯ ಪುಸ್ತಕಗಳಲ್ಲಿ ಹೀಗೆ ಮಾಡುತ್ತಿದ್ದಾರಂತೆ! ಯಾವ ಪದ್ಯಗಳಲ್ಲಿ ಗುರು ಗೋವಿಂದ ಸಿಂಗ, ಬಂದಾ ಬಹಾದ್ದೂರ, ಇವರ ಉಲ್ಲೇಖ ಇವೆಯೋ ಅವು ತ್ಯಜಿಸಲ್ಪಡುತ್ತವೆ. ಕವಿ ಸಾರ್ವಭೌಮರಾದ ಟಾಗೋರರೂ ಇವರಿಗೆ ಜಾತ್ಯಂಧರಾಗಿ ತೋರುತ್ತಿದ್ದಾರೆ. ಕವಿತಿಲಕರಿಗೆ ಇವರ ಈ ವೃತ್ತಿಯು ನೋವನ್ನುಂಟುಮಾಡಿದ್ದರಿಂದ ಅವರು ಹೀಗೆ ಹೇಳಿದರು—

"ನನ್ನ ಬರವಣಿಗೆಯಲ್ಲಿ ಜಾತ್ಯಂಧತೆಯ ಒಂದಕ್ಷರವನ್ನಾದರೂ ಯಾರಾದರೂ ತೋರಿಸಿಕೊಟ್ಟರೆ ನಾನು ನನ್ನ ಎಲ್ಲ ಗ್ರಂಥಗಳನ್ನೂ ಸುಟ್ಟುಬಿಡುತ್ತೇನೆ."

ವಂದೇಮಾತರಂ ಗೀತೆಯುಳ್ಳ ಆನಂದಮಠ ಗ್ರಂಥವನ್ನು ಬಹಿರಂಗವಾಗಿಯೇ ಬಂಗಾಲದಲ್ಲಿಯ ಕೆಲವು ಮುಸಲ್ಮಾನರು ಸುಟ್ಟರು.

ಈ ಜಾತ್ಯಂಧರ ಕೈಯಲ್ಲಿ ರಾಜ್ಯಸೂತ್ರ ಬಂದು ನಾಲ್ಕೈದು ತಿಂಗಳುಗಳಲ್ಲಿಯೇ ರಾಜಶಾಹಿ ಕಾಲೇಜನ್ನು ನಿಲ್ಲಿಸಿಬಿಟ್ಟರು. ಅಲ್ಲಿಯ ಹಿಂದು ವಿದ್ಯಾರ್ಥಿಗಳ ವಸತಿ ಗೃಹದಲ್ಲಿ ಮುಸಲ್ಮಾನ್ ವಿದ್ಯಾರ್ಥಿಗಳನ್ನು ಸೇರಿಸಿದ್ದರು. ಅದಕ್ಕೆ ಹಿಂದು ವಿದ್ಯಾರ್ಥಿಗಳು ಒಪ್ಪದಿದ್ದುದು ಅವರ ಮಹಾ ಅಪರಾಧವೆ? ಮುಸಲ್ಮಾನ್ ವಿದ್ಯಾರ್ಥಿಗಳಿಗೆ ಅತ್ತ ಚಟುವಟಿಕೆಯನ್ನು ತೀವ್ರತರವಾಗಿ ನಡೆಯಿಸಿರೆಂದು ಒಳಗೇ ತಿಳಿಸಿದವರೂ ಮುಖ್ಯಮಂತ್ರಿಗಳು; ಕಾಲೇಜ್ ನಿಲ್ಲಿಸಲ್ಪಡದಿದ್ದರೆ ರಕ್ತದ ಕಾಲಿವೆ ಹರಿಯುತ್ತಿತ್ತೆಂದು ಇತ್ತ ಅಸೆಂಬ್ಲಿಯಲ್ಲಿ ಹೇಳಿದವರೂ ಮುಖ್ಯಮಂತ್ರಿಗಳಂತೆ!

ಕಲಕತ್ತಾ ವಿಶ್ವ ವಿದ್ಯಾಲಯದ ಚಿನ್ಹವು ಈಗ ಇವರಿಗೆ ಮೂರ್ತಿ ಪೂಜೆಯ ದ್ಯೋತಕವಾಗಿ ತೋರಿದೆ. ಅದನ್ನು ತೆಗೆದು ಹಾಕಬೇಕಾಗಿ ಅಸೆಂಬ್ಲಿಯಲ್ಲಿ ಹೋರಾಟ. ಚಿನ್ಹವು ಲಂಡನ್ ಕಾಲೇಜ್ ಆಫ್ ಹೆರಾಲ್ಡಿ, ಇಂದ ಸಿದ್ಧವಾದುದು. ಹಿಂದಕ್ಕೆ ಮುಸಲ್ಮಾನ್ ರಾಜರೂ ಇಂಥ ಚಿನ್ಹವನ್ನು ಉಪಯೋಗಿಸಿದ್ದರೆಂದು ತಿಳಿಸಿದರೂ ಒಪ್ಪಿಗೆ ಇಲ್ಲ. ಮುಸಲ್ಮಾನ್ ಬಹು ಸಂಖ್ಯಾಕರಿದ್ದ ಒಂದು ಸಮಿತಿಯ ಕಡೆಗೆ ಇದರ ವಿಚಾರಣೆ ಈಗ ನಡೆದಿದೆ.

### ಹಿಂದುಸ್ಥಾನದಲ್ಲಿ ಪಾದ್ರಿಗಳ ಬಲೆ.

ಕಳೆದ ಹತ್ತು ವರುಷಗಳಲ್ಲಿ ಹಿಂದುಗಳ ಸಂಖ್ಯೆ ನೂರಕ್ಕೆ ೧೦ ರಂತೆ ಮುಸಲ್ಮಾನರ ಸಂಖ್ಯೆ ೧೩ ರಂತೆ ಕ್ರಿಸ್ತರ ಸಂಖ್ಯೆ ೩೨ ರಂತೆ ಹೆಚ್ಚಿದೆ. ಇದರಿಂದ ಮುಸಲ್ಮಾನ್ ಮತ್ತು ಕ್ರಿಸ್ತ ಮತಗಳ ಪ್ರಸಾರ ಹೇಗೆ ಹೆಚ್ಚಿದೆಯೆಂಬುದು ಗೊತ್ತಾಗುತ್ತದೆ.

ಕ್ರಿಸ್ತ ಮತ ಪ್ರಸಾರಕ್ಕೆ ಪಾದ್ರಿಗಳು ಬೀಸಿದ ಬಲೆಯೇ ಮುಖ್ಯಕಾರಣವೆಂದು ತಿಳಿದಿದೆ. ಹಿಂದುಸ್ಥಾನದಲ್ಲಿ ಕೋಟ್ಯಂತರ ರೂ. ಗಳನ್ನು ವೆಚ್ಚಮಾಡಿ ಚಿಕ್ಕ ದೊಡ್ಡ ೪೪೦ ವೈದ್ಯಾಲಯಗಳನ್ನೂ ೮೮ ಮಹಾರೋಗಿಗಳ ಸಂಸ್ಥೆಗಳನ್ನೂ, ೮೧ ಕ್ಷಯರೋಗಿಗಳ ಸಂಸ್ಥೆಗಳನ್ನೂ ೧೫ ಕುಂಟ ಕುರುಡರ ಸಂಸ್ಥೆಗಳನ್ನೂ ೧೧೦ ಅನಾಥಾಲಯಗಳನ್ನೂ ಇವರು ಸ್ಥಾಪಿಸಿದ್ದಾರೆ. ಇವೇ ಬಲೆಗಳು.



ಶಾ. ಶ. ೧೮೫೯ ನೆಯ ಆಶ್ವೀನ ಬ|| ೧೩ ಸೋಮವಾರ.

# ಕಾಂಗ್ರೆಸ್ ಪಕ್ಷದ ಸ್ತುತ್ಯ ನಿರ್ಣಯ.

ರಾಷ್ಟ್ರಕ್ಕೆ ತುಂಬಾ ಅಪ್ರಿಯವಾದ ಸಂಯುಕ್ತ ರಾಜ್ಯ ಘಟನೆಯನ್ನು ಒತ್ತಾಯದಿಂದ ಬ್ರಿಟಿಶ್ ಸರಕಾರವು ಹಿಂದಿ ಜನರ ಮೇಲೆ ಹೇರಲು ಸಿದ್ಧವಾದುದರಿಂದಲೂ ಮುಸ್ಲಿಂಲೀಗು ತನ್ನ ಜಾತ್ಯಂಧತೆಯಿಂದ ರಾಷ್ಟ್ರದಲ್ಲಿ ಅನೈಕ ಮತ್ಯವನ್ನು ಹೆಚ್ಚಿಸಲು ಪ್ರಯತ್ನಿಸಲಾರಂಭಿಸಿದ್ದರಿಂದಲೂ ರಾಷ್ಟ್ರದಲ್ಲಿ ಈಗ ಅನೇಕ ಅತ್ಯಂತ ಮಹತ್ವದ ಪ್ರಶ್ನೆಗಳುಂಟಾಗಿವೆ. ಇಂತಹ ಬಿಕ್ಕಟ್ಟಿನ ಪ್ರಸಂಗದಲ್ಲಿ ಕಾಂಗ್ರೆಸ್ ಪಕ್ಷವು ಯಾವ ನಿರ್ಣಯಗಳನ್ನು ಮಾಡುವುದೋ ಎಂದು ರಾಷ್ಟ್ರವೇ ಕಲಕತ್ತಾದ ಕಡೆಗೆ ನೋಡುತ್ತಿದ್ದಿತು.

ವರ್ಕಿಂಗ್ ಕಮಿಟಿಯಲ್ಲಾದ ನಿರ್ಣಯಗಳನ್ನು ನೋಡಿದರೆ ಕಾಂಗ್ರೆಸ್ ಪಕ್ಷವು ರಾಷ್ಟ್ರದ ಹೃದ್ಗತವನ್ನು ಸರಿಯಾಗಿಯೇ ಗ್ರಹಿಸಿ ಕ್ಷೇಮಕರವಾದ ಸ್ತುತ್ಯ ನಿರ್ಣಯಗಳನ್ನೇ ಮಾಡಿತೆಂದು ಹೇಳಲು ಅಭ್ಯಂತರವಿಲ್ಲ. ರಾಷ್ಟ್ರಕ್ಕೆ ಅಪ್ರಿಯವಾದ ಸಂಯುಕ್ತ ರಾಜ್ಯಘಟನೆಯು ಆಚರಣೆಯಲ್ಲಿ ಬರದಂತೆಯೇ ದೀರ್ಘ ಪ್ರಯತ್ನ ಮಾಡಲೇಬೇಕೆಂದು ತಿಳಿಸಿದುದು ವಿಹಿತವಾಗಿಯೇ ಇದೆ. ಆದರೆ ಆ ಪ್ರಯತ್ನವು ಅಧಿಕಾರ ತ್ಯಾಗ ಮೂಲಕವಾಗಿ ಮಾತ್ರ ಇರಲು ಅವಕಾಶವನ್ನು ಕೊಡದಿರುವುದು ಸಮಂಜಸವಾಗಿರುತ್ತದೆ. ಕಾಂಗ್ರೆಸ್ ಮಂತ್ರಿಗಳೆಲ್ಲರೂ ಕೆಲಸದಿಂದ ನಿವೃತ್ತರಾಗಿ ಸಂಯುಕ್ತ ಘಟನೆಯನ್ನು ಭಂಗಗೊಳಿಸುವುದು ಶಕ್ಯವೂ ಅಲ್ಲ. ಆ ವಿಧವಾದ ಪ್ರಯತ್ನವು ಈಗ ಇಷ್ಟವಾದುದೂ ಅಲ್ಲ.

ಒಂದು ವೇಳೆ ಸಂಯುಕ್ತಘಟನೆ ಆಚರಣೆಯಲ್ಲಿ ಬಂದರೆ ಪ್ರಾಂತಿಕ ಮಂಡಲಗಳಲ್ಲಿ ಸೇರಿ ಅಧಿಕಾರ ಸೂತ್ರವನ್ನು ಹಿಡಿದೇ ಈಗ ಬ್ರಿಟಿಶ್ ಸಾಮ್ರಾಜ್ಯದ ಸಂಗಡ ಹೋರಾಡುತ್ತಿರುವಂತೆ ಸಂಯುಕ್ತ ರಾಜ್ಯಮಂಡಲಗಳಲ್ಲಿಯೂ ಸೇರಿಯೇ ಅದನ್ನು ಜಾಗ್ರತೆ ಭಂಗಗೊಳಿಸಲು ಪ್ರಯತ್ನಿಸಬೇಕೇ ವಿನಾ ಹೊರಗೆ ನಿಂತು ಹೋರಾಡುವುದರಲ್ಲಿ ಫಲವಿಲ್ಲ. ಕಾಂಗ್ರೆಸ್ ಪಕ್ಷವು ಹಾಗೆಯೇ ಮಾಡುವುದೆಂದೇ ಈಗ ಮಾಡಿದ ನಿರ್ಣಯದಿಂದ ಊಹಿಸಬಹುದಾಗಿದೆ.

## ಜಾತ್ಯಂಧರಿಗೆ ಉತ್ತರ.

ಮುಸ್ಲಿಂಲೀಗಿನ ಜಾತ್ಯಂಧರು ಕಾಂಗ್ರೆಸ್ಸಿನ ಮೇಲೆ ಮಾಡಿದ ಆಕ್ಷೇಪಣೆಗಳಿಗೆ ವರ್ಕಿಂಗ್ ಕಮಿಟಿಯು ತನ್ನ ನಿರ್ಣಯಗಳ ಮೂಲಕ ಸರಿಯಾದ ಉತ್ತರವನ್ನೇ ಕೊಟ್ಟಿತು. ಅಲ್ಪಸಂಖ್ಯಾಕರ ಹಿತರಕ್ಷಣೆಯ ವಿಷಯದಲ್ಲಿ ಕಾಂಗ್ರೆಸ್ಸಿನ ನಿರ್ಣಯವನ್ನು ಮತ್ತೆ ಒತ್ತಿ ಹೇಳಿದುದೂ ಜಾತಿನಿರ್ಣಯದ ಅನರ್ಥವನ್ನು ಮತ್ತೆ ಸಾರಿ ಹೇಳಿದುದೂ ವಂದೇಮಾತರಂ ಗೀತೆಯೇ ರಾಷ್ಟ್ರಗೀತೆಯಾಗಿರಬೇಕೆಂದು ಗೊತ್ತುಮಾಡಿ ಬೇರೆ ಗೀತೆಗಳನ್ನೂ ಪ್ರಚಾರದಲ್ಲಿ ತರುವ ಸಂಬಂಧವಾಗಿ ಒಂದು ಸಮಿತಿಯಕಡೆಗೆ ಒಪ್ಪಿಸಿದುದೂ ಯುಕ್ತವಾಗಿದೆ.

ಮುಸ್ಲಿಂಲೀಗಿನ ಜಾತ್ಯಂಧರ ಇಷ್ಟದಂತೆ ನಡೆದು ಅವರನ್ನು ಸಮಾಧಾನಗೊಳಿಸಹೋದರೆ ರಾಷ್ಟ್ರವೇ ಅಧೋಗತಿಗೀಡಾಗಬಹುದು. ಕಾಂಗ್ರೆಸ್ ಪಕ್ಷವು ಅಂತಹ ಅರಾಷ್ಟ್ರೀಯ ವೃತ್ತಿಗೆ ಅವಕಾಶಕೊಡದೆ ಯಾವ ಜಾತಿ ಪಕ್ಷಗಳ ದಾಕ್ಷಿಣ್ಯಕ್ಕೂ ಒಳಗಾಗದೆ ಈ ಮೂರು ನಿರ್ಣಯಗಳನ್ನು ಮಾಡಿದುದೂ ಅಭಿನಂದನೀಯವು.

## ಮೈಸೂರು ಸರಕಾರದ ಭೀಕರ ಸ್ವರೂಪ.

ಮೈಸೂರು ದೇಶವು ಒಳ್ಳೆಯ ನಾಗರಿಕ ದೇಶ. ಅಲ್ಲಿಯ ಜನರು ಬಹು ಶಾಂತತಾಪ್ರಿಯರು. ಮಹಾರಾಜರಾದರೋ ಮಹಾ ದೈವಭಕ್ತರೂ ಸತ್ವಗುಣ ಶೀಲರು. ಹೀಗಿರುವಾಗ ಅಲ್ಲಿಯ ಸರಕಾರ ಇತ್ತೀಚಿಗೆ ದಬ್ಬಾಳಿಕೆಯ ತಪ್ಪು ದಾರಿಯಲ್ಲಿ ಕಾಲಿಟ್ಟು ಈಗ ಭೀಕರ ಸ್ವರೂಪವನ್ನೇ ತಾಳಿರುವುದು ಅತ್ಯಂತ ವಿಷಾದದ ಸಂಗತಿಯು.

ಪ್ರಜಾಮತ ಪತ್ರಿಕಾಕರ್ತರಾದ ಶ್ರೀಮಾನ್ ಗುಪ್ತರನ್ನು ಸೀಮಾಂತರಗೊಳಿಸಿದ ಇದರ ದಬ್ಬಾಳಿಕೆಯ ಕ್ರೂರ ಕೃತಿಯು ತುಂಬಾ ನಿಷೇಧಾರ್ಹವಾದುದು. ದಿವಂಗತ ವ್ಹಿ. ಪಿ. ಮಾಧವರಾಯರು ದಿವಾನರಾಗಿದ್ದಾಗ, ಜನರಲ್ಲಿ ಸ್ವಾತಂತ್ರ್ಯದ ಉತ್ಕಟೇಚ್ಛೆಯುಂಟಾಗದಿದ್ದ ೩೦ ವರುಷಗಳ ಹಿಂದಿನ ಆ ಕತ್ತಲೆಯ ಕಾಲದಲ್ಲಾದ ಮುದ್ರಣ ಶಾಸನವನ್ನು ಇಂತಹ ಕಾಲದಲ್ಲಿ ಸರ್. ಮಿರ್ಜಾ ಇಸ್ಮಾಯಿಲ್‌ರವರು ಆಚರಣೆಗೆ ತಂದು ತಮ್ಮ ಆಳ್ವಿಕೇಗೇ ಬಲವಾದ ಕಲಂಕವನ್ನುಂಟುಮಾಡಿಕೊಂಡದ್ದು ದುಃಖದ ಸಂಗತಿಯು.

ತಮ್ಮ ನಡೆನುಡಿಗಳ ಸ್ವಾತಂತ್ರ್ಯಕ್ಕಾಗಿ ಮೈಸೂರು ದೇಶದ ವೀರ ನಾಗರಿಕರು ಶಾಂತಮಾರ್ಗದಲ್ಲಿ ಹೋರಾಡಲು ಮುಂದೆ ಬಂದು ಅಧಿಕಾರಿಗಳ ದಬ್ಬಾಳಿಕೆಗೆ ಎದೆಕೊಟ್ಟಿದುದು ಅತ್ಯಂತ ಅಭಿನಂದನೀಯವಾದುದು. ಸರಕಾರವು ಇನ್ನು ಮೇಲಾದರೂ ನ್ಯಾಯ ಮಾರ್ಗಕ್ಕೆ ಬಂದು ಶಾಂತವೃತ್ತಿಯನ್ನು ತಾಳುವುದು ಕ್ಷೇಮಕರವಲ್ಲವೆ ?

## ಗೋಸಪ್ತಾಹ.

ಇದೇ ಕಾರ್ತಿಕ ಶುದ್ಧ ಪ್ರತಿಪದೆಯಿಂದ ಏಳು ದಿನ ಸಕಲರೂ ಗೋಸಪ್ತಾಹವನ್ನಾಚರಿಸಿ ಗೋಸಂರಕ್ಷಣೆಯ ಸಂಬಂಧವಾಗಿ ಜನರಲ್ಲಿಯೂ ಸರಕಾರದಲ್ಲಿಯೂ ಜಾಗೃತಿಯನ್ನುಂಟುಮಾಡುವುದು ಅಗತ್ಯವಾಗಿಲ್ಲವೆ? ಪ್ರತಿ ವರುಷಕ್ಕಿಂತಲೂ ಈ ಸಾರೆ ಈ ಸಪ್ತಾಹವು ವಿಶೇಷ ಪರಿಣಾಮಕಾರಿಯಾಗಿ ಜರುಗಲೆಂದೇ ಹಾರೈಸುತ್ತೇವೆ.

# ಕಾಂಗ್ರೆಸ್ ಕಮಿಟಿಯ ಕಾರ್ಯಕಲಾಪ.




## 'ವಂದೇಮಾತರಂ' ಇರಲೇಬೇಕು.

### ವರ್ಕಿಂಗ್ ಕಮಿಟಿಯ ನಿರ್ಣಯ.

ಈ ಮುಂಚೆ ಗೊತ್ತಾದಂತೆ ಕಲಕತ್ತಾ ಪಟ್ಟಣದಲ್ಲ ಕಳೆದ ೨೬ ನೆಯ ತಾರೀಖಿನಿಂದ ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಕಾರ್ಯ ಪ್ರಾರಂಭವಾಯಿತು. ಈ ಮಹಾಕಾರ್ಯಕ್ಕಾಗಿ ಮಹಾತ್ಮಾ ಗಾಂಧಿ, ಪಂಡಿತ ಜವಾಹರಲಾಲ ನೆಹರು, ಸರದಾರ ಪಟೇಲ ಖಾನ ಅಬ್ದುಲ್ ಗಫಾರಖಾನ ಮೊದಲಾದ ರಾಷ್ಟ್ರದ ಮುಖಂಡರು ಆಗಮಿಸಿದ್ದರು. ಅಖಿಲ ಭಾರತ ಕಾಂಗ್ರೆಸ್ ಕಮಿಟಿಯ ಕಾರ್ಯವು ತಾ. ೨೯ ನೆಯ ದಿನ ಪ್ರಾರಂಭವಾಯಿತು. ಇದಕ್ಕೆ ೨೫೦ ಸದಸ್ಯರು ಸಾಧಾರಣ ೫೦೦೦ ಪ್ರೇಕ್ಷಕರು ಆಗಮಿಸಿದ್ದರು.

### ಸಂಯುಕ್ತ ಘಟನೆಯನ್ನು ಹೇಗೆ ಭಂಗಗೊಳಿಸುವುದು ?

ಸಂಯುಕ್ತ ರಾಜ್ಯಘಟನೆಯನ್ನು ಭಂಗಗೊಳಿಸುವ ವಿಚಾರವಾಗಿ ಅನುಸರಿಸಬೇಕಾದ ರೀತಿನೀತಿಗಳನ್ನು ಕುರಿತು ಒಂದು ವರದಿಯನ್ನು ಸಿದ್ಧಗೊಳಿಸಲು ಶ್ರೀ. ಭುಲಾಭಾಯಿ ದೇಸಾಯಿ ಮತ್ತು ಸರದಾರ ಪಟೇಲ ಇವರ ಕಡೆಗೆ ಫೈಜಪುರ ಕಾಂಗ್ರೆಸ್ ಒಪ್ಪಿಸಿದ್ದಿತು. ಆ ಪ್ರಕಾರ ಸಿದ್ಧವಾದ ವರದಿಯು ವರ್ಕಿಂಗ್ ಕಮಿಟಿಯ ಮುಂದೆ ಇಡಲಾಯಿತು. ಅದರ ಮುಖ್ಯಾಂಶ ಹೀಗಿದೆ—

"ಏಳೂ ಪ್ರಾಂತಗಳ ಕಾಂಗ್ರೆಸ್ ಮಂತ್ರಿಗಳು ಒಂದೇ ಸಾರೆಗೆ ಕೆಲಸದಿಂದ ನಿವೃತ್ತರಾಗಬೇಕು. ಆಗ ವ್ಹಾಯಿಸ್‌ರಾಯರು ೯೩ ನೆಯ ನಿಯಮದ ಪ್ರಕಾರ ಪ್ರಾಂತಿಕ ಮಂಡಲಗಳನ್ನು ತೆಗೆದುಹಾಕಬಹುದು. ಹಾಗಾದರೆ ಸಂಯುಕ್ತ ಶಾಸನ ಮಂಡಲದ ಚುನಾವಣೆಗೇ ಅವಕಾಶವಿಲ್ಲದಂತಾಗಬಹುದು. ಒಂದು ವೇಳೆ ಕಾಂಗ್ರೆಸ್ ಮಂತ್ರಿಗಳೆಲ್ಲಾ ಕೆಲಸದಿಂದ ನಿವೃತ್ತರಾದರೂ ಶಾಸನಮಂಡಲಗಳನ್ನು ನಿಲ್ಲಿಸದೆ ಅವುಗಳಲ್ಲಿರುವ ಇತರ ಪಕ್ಷಗಳ ಪ್ರತಿನಿಧಿಗಳ ಮೂಲಕ ಸಂಯುಕ್ತ ಘಟನೆಯನ್ನು ಆಚರಣೆಯಲ್ಲಿ ತರುವುದು ಶಕ್ಯವಿದೆಯೆಂದೂ ಕೆಲವರ ಮತ."

ಈ ವರದಿಯಲ್ಲಿ ಸೂಚಿಸಿದಂತೆ ಮಂತ್ರಿಪದ ನಿರಾಕರಣೆಯು ಗಾಂಧೀಜಿಯವರೇ ಮೊದಲಾದ ಮುಖಂಡರಿಗೆ ಒಪ್ಪಿಗೆ ಇಲ್ಲವಾಗಿಯೇ ತೋರಿತು.

ವರ್ಕಿಂಗ್ ಕಮಿಟಿಯಲ್ಲಿ ಈ ಕೆಳಗಿನ ಮಹತ್ವದ ನಿರ್ಣಯಗಳಾದವು—

(೧) ಸಂಯುಕ್ತ ರಾಜ್ಯಘಟನೆಯು (ಫೆಡರೇಶನ್) ಆಚರಣೆಯಲ್ಲಿ ಬರದಂತೆ ಎಲ್ಲ ಪ್ರಾಂತಿಕ ಸರಕಾರಗಳೂ, ಪಕ್ಷಗಳೂ ಜನತೆಯೂ ಪ್ರಯತ್ನಿಸಬೇಕು.

(೨) ಕರಾಚಿ ಕಾಂಗ್ರೆಸ್ಸಿನಲ್ಲಿ ತೀರ್ಮಾನವಾದ ಅಲ್ಪ ಸಂಖ್ಯಾಕರ ಸಂರಕ್ಷಣೆಯ ತತ್ವವನ್ನೇ ಕಾಂಗ್ರೆಸ್ಸು ಪುನಃ ಸಾರುತ್ತದೆ.

(೩) ಜಾತಿ ನಿರ್ಣಯವು ಅರಾಷ್ಟ್ರೀಯವೂ ಜನಾಧಿಕಾರಕ್ಕೆ ವಿಸಂಗತವೂ ಹಿಂದಿ ಸ್ವಾತಂತ್ರ್ಯಕ್ಕೆ ವಿಘ್ನವೂ ಆಗಿರುವುದರಿಂದ ಅದನ್ನು ಕಾಂಗ್ರೆಸ್ಸು ವಿರೋಧಿಸುತ್ತದೆ.

(೪) ವಂದೇಮಾತರಂ ಗೀತೆಯು ಕಳೆದ ೩೦ ವರುಷಗಳಿಂದ ಮಾಡಿರುವ ರಾಷ್ಟ್ರ ಜಾಗೃತಿಯನ್ನೂ ಅದಕ್ಕಾಗಿ ರಾಷ್ಟ್ರವು ಮಾಡಿದ ಆತ್ಮಾಹುತಿಯನ್ನೂ ನೋಡಿದರೆ ಅದೇ ರಾಷ್ಟ್ರಗೀತೆಯಾಗಿರಬೇಕು. ಅದರ ಮೊದಲಿನ ಎರಡು ಚರಣಗಳೇ ಈಗ ಹೇಳುವ ರೂಢಿಯಿದೆ. ಅಷ್ಟನ್ನು ಎಲ್ಲರೂ ನಿರಾತಂಕವಾಗಿ ಹೇಳಲೇಬೇಕು. ಆ ಪದ್ಯದ ಮುಂದಿನ ಚರಣಗಳನ್ನು ಹೇಳುವುದು ಕಾರ್ಯನಿರ್ವಾಹಕರ ಇಷ್ಟ.

ಈ ಗೀತೆಯ ವಿನಾ ಬೇರೆ ರಾಷ್ಟ್ರಗೀತೆಗಳನ್ನೂ ಹೇಳಬಹುದು. ಈ ಸಂಬಂಧವಾಗಿ ಮುಂದೆ ಅನುಸರಿಸಬೇಕಾದ ರೀತಿಗಳನ್ನು ಕುರಿತು ಯೋಚಿಸಿ ವರ್ಕಿಂಗ್ ಕಮಿಟಿಗೆ ಒಂದು ವರದಿಯನ್ನು ಒಪ್ಪಿಸಲು (೧) ಮೌಲಾನಾ ಆಜದ್ (೨) ಪಂಡಿತ ಜವಾಹರಲಾಲ ನೆಹರು (೩) ಶ್ರೀ. ಸುಭಾಷಚಂದ್ರ ಬೋಸ (೪) ಆಚಾರ್ಯ ನರೇಂದ್ರದೇವ ಈ ನಾಲ್ಕು ಜನರ ಒಂದು ಸಮಿತಿಯನ್ನು ನಿಯಮಿಸಿದ್ದಾಗಿದೆ. ಈ ಸಮಿತಿಯು ಕವಿ ರವೀಂದ್ರನಾಥರ ಸಲಹೆಯನ್ನು ಕೇಳಬೇಕು.

ತಾ. ೨೯ ನೆಯ ದಿವಸ ಕಲಕತ್ತಾ ಪಟ್ಟಣದಲ್ಲಿ ಪಂಡಿತ ಜವಾಹರಲಾಲ ನೆಹರುರವರ ಹಸ್ತದಿಂದ ಧ್ವಜವಂದನೆಯ ಸಮಾರಂಭ ಜರುಗಿತು. ಆಗ ವಂದೇಮಾತರಂ ಗೀತೆಯನ್ನು ಸಂಪೂರ್ಣವಾಗಿ ಹೇಳಿದರು.

### ಸಂಸ್ಥಾನಗಳಲ್ಲಿ ದಬ್ಬಾಳಿಕೆ.

—ಮೈಸೂರು ಪ್ರಾಂತಿಕ ಕಾಂಗ್ರೆಸ್ ಬೋರ್ಡಿನ ಅಧ್ಯಕ್ಷರಾದ ಶ್ರೀ. ಮರಿಸ್ವಾಮಿ ಹಿರೇಮಠ ಇವರನ್ನು ತಾ. ೨೯ ನೆಯ ದಿನ ಬೆಂಗಳೂರಿನಲ್ಲಿ ಸೆರೆಹಿಡಿದರು.

—ಧರ್ಮವೀರ ವಾಮನರಾವ ನಾಯಕ ಇವರ ಪುಣ್ಯತಿಥಿ ಮೆರವಣಿಗೆಗೆ ಹೈದರಾಬಾದಿನಲ್ಲಿ ತಾ. ೨೯ ನೆಯ ದಿನ ಅಲ್ಲಿಯ ಸರಕಾರವು ಪ್ರತಿಬಂಧಗೊಳಿಸಿತು.

# ಡಂಭಾಚಾರಕ್ಕೆ ಶಂಭು ಒಲಿವನೇ?



## ನುಡಿ ಪುರಾತನರದಿದ್ದು, ನಡೆ ಕಿರಾತರದಿದ್ದರೆ?

ಅದ್ವೈತವನ್ನು ಒಂದು ಕೋಟಿ ಸಾರೆ ನುಡಿಯಬಹುದು. ಆದರೆ ಅದರಂತೆ ಒಂದುಸಾರೆಯಾದರೂ ನಡೆಯುವುದು ಕಷ್ಟವಲ್ಲವೆ? ಪುರಾತನಕಾಲದ ಮಹಾ ಭಕ್ತರನ್ನು ಸಾವಿರಸಾರೆ ಬಾಯಿಂದ ಸ್ತುತಿಸಬಹುದು. ಆದರೆ ಅವರು ತನು ಮನ ಧನಗಳನ್ನು ಸವಿಸಿದಂತೆ ಭಕ್ತಿಯಿಂದ ಒಂದು ಸಾರೆಯಾದರೂ ನಡೆಯುವುದು ಕಷ್ಟವಲ್ಲವೆ? ತಾವು ಹಾಗೆ ನಡೆಯದೆ ಪುರಾತನರನ್ನು ಹೊಗಳಿ ಹೊಗಳಿ ತಾವು ಧನ್ಯರಾದೆವೆಂದು ತಿಳಿಯುವ ಡಂಭಾಚಾರಿಗಳನ್ನು ಕುರಿತು ಶಿವಾನುಭವ ಮಂಟಪದಲ್ಲಿ ಒಂದು ದಿನ ಶ್ರೀ ಪ್ರಭುದೇವರು ಹೀಗೆ ಹೇಳಿದರು—

ಕುರೂಪಿ .ಸುರೂಪಿಯ ನೆನೆದಡೆ ಸುರೂಪಿಯಪ್ಪನೆ ? ಆ ಸುರೂಪಿ ಕುರೂಪಿಯ ನೆನೆದಡೆ ಕುರೂಪಿಯಪ್ಪನೆ ? ಧನವುಳ್ಳವರ ನೆನೆದರೆ ದಾರಿದ್ರ್ಯ ಹೋಹುದೆ ? ಪುರಾತನರ ನೆನೆದು ಕೃತಾರ್ಥರಾದೆನೆಂಬರು. ತಮ್ಮಲ್ಲಿ ಭಕ್ತಿನಿಷ್ಠೆಯಿಲ್ಲದವರ ಕಂಡಡೆ ಮೆಚ್ಚನು ಗುಹೇಶ್ವರ.

ತಿರುನೀಲಕಂಠರು ತೋರಿಸಿದಂಥ ಪ್ರಾಮಾಣಿಕತನವಿಲ್ಲದೆ ಅನ್ಯರ ಹೊನ್ನು ಮಣ್ಣಿಗಿಂತ ಕಡೆಯೆಂದು ತಿಳಿಯದೆ ಪರರ ಧನವನ್ನು ಎತ್ತಿಹಾಕಿ ಬಾಯಲ್ಲಿ ತಿರುನೀಲಕಂಠರನ್ನು ಪ್ರತಿನಿತ್ಯ ಸಾವಿರ ಸಾರೆ ನೆನೆದರೂ ಶಿವನೇನು ಮೆಚ್ಚುವನೆ? ಸಿಂಧುಮರಾಯರು ಕರಗಸದಿಂದ ಕೊಯಿಸಿಕೊಂಡು ಶಿವತತ್ವದಲ್ಲಿದ್ದ ತಮ್ಮ ಅದ್ವಿತೀಯ ನಿಷ್ಠೆಯನ್ನು ವ್ಯಕ್ತಗೊಳಿಸಿದರಲ್ಲವೆ? ಶಿವಸಮಾಜದ ಸೇವೆಗೆ ಒಂದು ಹನಿ ಬೆವರು ಕೂಡಾ ಬರದಂತೆ ತನುವನ್ನು ವಂಚಿಸಿಕೊಂಡಿರುವವರು ಎಷ್ಟು ಸಾರೆ ಸಿಂಧುಮರಾಯರನ್ನು ನೆನೆದರೆ ಶಿವನು ಒಲಿವನು?

ಸೇದಿರಾಜಯ್ಯಗಳು, ಮೊನೆವಿಡಿರಾಯರು ಶಿವತತ್ವದ ಶ್ರೇಷ್ಠತ್ವಕ್ಕೋಸ್ಕರ ಶಸ್ತ್ರಗಳಿಂದ ಇರಿಸಿಕೊಂಡರು. ಹಾಗೆ ತಮ್ಮ ತತ್ವ ಪ್ರಸಾರಕ್ಕೆ ದೇಹವನ್ನು ಸ್ವಲ್ಪವೂ ದಂಡಿಸದವರು ಆ ಪುರಾತನರನ್ನು ನೆನೆದರೇನಾಗುವುದು ?

ಒಬ್ಬ ಕುರೂಪಿಯು ಒಳ್ಳೆಯ ರೂಪದವನನ್ನು ನೆನೆದರೆ ಆತನೇನು ಸುರೂಪಿಯಾಗುತ್ತಾನೆಯೆ ? ದರಿದ್ರನು ಧನಿಕನನ್ನು ನೆನೆದರೆ ಆತನೇನು ಧನಿಕನಾಗುತ್ತಾನೆಯೆ ? ನುಡಿಯೇನೋ ಪುರಾತನರದು. ಆದರೆ ತಮ್ಮ ನಡೆ ಕಿರಾತರಂತೆ ಇದ್ದರೆ ಶಿವನು ಮೆಚ್ಚುತ್ತಾನೆಯೆ ? ಒಳಗೆ ಕುಟಿಲವಿದ್ದು ಹೊರಗೆ ವಿನಯ ತೋರಿಸುವವರು ಶಿವನಿಗೂ ಮೋಸಮಾಡಬೇಕೆಂಬುವವರು. ಇಂಥ ಮೋಸಗಾರರ ಡಂಭಾಚಾರಗಳಿಗೆ ದೇವರು ಮೆಚ್ಚುವುದಿಲ್ಲ.

ತನು, ಮನ, ಧನಗಳನ್ನು ಸ್ವಾರ್ಥಸಾಧನೆಗಾಗಿಯೇ ಉಪಯೋಗಿಸುತ್ತ ಜನರ ತೋರಿಕೆಗಾಗಿ ಮಹಾ ಭಕ್ತರೆಂದು ಹೇಳಿಸಿಕೊಳ್ಳಲು ಬರಿಮಾತಿನ ಮಾಲೆಯನ್ನು ತೋರಿಸಿದರೆ ಶಿವನು ಮೆಚ್ಚುತ್ತಾನೆಯೆ ? ಅದು ನಿಜವಾದ ಭಕ್ತಿಯೆ ? ಶಿವಾಚಾರದಲ್ಲಿದ್ದ ನಿಷ್ಠೆಯೆ ? ಅಲ್ಲವೇ ಅಲ್ಲ. ಇಂಥ ಡಂಭಾಚಾರವನ್ನು ಬಿಡಬೇಕು.

ಶಿವ ಸಮಾಜದ ಸೇವೆಗೆ ತನುವನ್ನು ದಂಡಿಸಬೇಕು. ಶಿವಭಕ್ತರ ನೋವನ್ನು ನೋಡಿ ನೊಂದು ಮನಕರಗಿ ಅವರ ಹಿತಾರ್ಥವಾಗಿಯೇ ಚಿಂತಿಸಬೇಕು. ಲೋಕೋಪಕಾರದ .ಕಾರ್ಯಗಳಿಗಾಗಿಯೇ ಧನವನ್ನು ಸವಿಸಬೇಕು. ಪ್ರಾಣಿಗಳ ದೇಹವೇ ದೇವಾಲಯ. ಅಲ್ಲಿರುವ ಪ್ರಾಣವೇ ದೇವರು. ಅಂತಹ ಪ್ರಾಣ ದೇವರ ಸೇವೆಗಾಗಿ ತನು ಮನ ಧನಗಳನ್ನು ಸವಿಸುವವರೇ ಭಕ್ತರು.

ಇಂಥ ಭಕ್ತರಿಗೆ ಶಿವನು ಮೆಚ್ಚುತ್ತಾನೆ. ಹಾಗೆ ನಡೆಯದೆ ಡಂಭಾಚಾರಕ್ಕಾಗಿ ಭಸ್ಮ, ರುದ್ರಾಕ್ಷಿಗಳನ್ನು ಬೇಕಷ್ಟು ಧರಿಸಿ ಭಕ್ತರಾದೆವೆಂದೂ ಪುರಾತನರನ್ನು ನೆನೆದು ಧನ್ಯರಾದೆವೆಂದೂ ಹೇಳುವವರ ರೀತಿಯು ಸರಿಯಲ್ಲ.

ನುಡಿ ಪುರಾತನರದಾದರೇನು? ನಡೆ ಕಿರಾತರಂತೆ ಇದ್ದರೆ ಅವರು ಪುರಾತನರಾಗುವರೆ ? ನಡೆಯೂ ಪುರಾತನರಂತೆಯೇ ಇರಬೇಕು. ತನು ಮನ ಧನಗಳನ್ನು ಲೋಕಸೇವೆಗೆ ಸವಿಸಬೇಕು. ಅದೇ ಭಕ್ತಿ. ಅವರಿಗೇನೇ ಶಿವನು ಮೆಚ್ಚುತ್ತಾನೆ.

## ಹಿಂದು ಸಮಾಜವು ಹಿಂದುಳಿದಿರುವುದೇಕೆ?

(ಲೇಖಕ:— ಶ್ರೀ. ಮಲ್ಲಪ್ಪ ನಿಂಗಪ್ಪ ಚಲವಾದಿ ಇಂಗಳಗಿ ಅಸಿ| ಮಾಸ್ತರ ಕನ್ನಡ ಶಾಳಾ ಸವದತ್ತಿ.)

ಹಿಂದು ಧರ್ಮರಕ್ಷಣೆಗಾಗಿಯೇ ಚಾತುರ್ವರ್ಣ್ಯ ಪದ್ಧತಿಯು ರಚಿಸಲ್ಪಟ್ಟದ್ದಾಗಿದೆಯೆಂದು ಹೇಳುವದಾದರೆ ಈಗ ಅದು ಡೊಂಕಾಗಿ ಹಿಂದುಧರ್ಮದ ನಾಶವನ್ನು ಮಾಡಹತ್ತಿದೆ. ಕೇವಲ ನಾಲ್ಕು ವರ್ಣಗಳ ಸ್ಥಳದಲ್ಲಿ ಇಂದು ಗಣಿತಿಲ್ಲದಷ್ಟು ಜಾತಿಗಳು ಬೆಳೆದಿವೆ. ಅವುಗಳ ಹೆಸರು ಮಾತ್ರ ಉಳಿದು ದಿಕ್ಕು ಇಲ್ಲದ ಅಡವಿ ದನಗಳನ್ನು ಕಟ್ಟಿಹಾಕುವಂತೆ ಈ ವರ್ಣ ಪದ್ಧತಿಯು ಹಿಂದು ಧರ್ಮದವರನ್ನು ಕೈದಿಗಳನ್ನಾಗಿ ಮಾಡಿರುವದು. ಹಿಂದು ಧರ್ಮ ರಕ್ಷಣೆ ರೂಪವಾಗಿದ್ದ ಈ ಪದ್ಧತಿಯು ಈಗ ಹಿಂದು ಸಮಾಜವನ್ನು ನಷ್ಟಮಾಡುತ್ತಿರುವುದು. ಸನಾತನಿಯರೆಂದೆನಿಸಿಕೊಳ್ಳುವವರು ಹಿಂದು ಜನರ ಅಥವಾ ಹಿಂದುಸ್ಥಾನದ ಸೇವೆಯನ್ನು ಕೈಕೊಳ್ಳುವ ಬದಲು ತಮ್ಮ ಶೃಂಖಲೆಗಳನ್ನು ರಕ್ಷಿಸಿಕೊಳ್ಳುವದರಲ್ಲಿ ಮಗ್ನರಾಗಿದ್ದಾರೆ. ಮತ್ತು ಈ ವಿಷಯದ ಬಗ್ಗೆ ಚರ್ಚೆಮಾಡುವದರಲ್ಲಿಯೇ ಇವರ ಸಮಯ ಬುದ್ಧಿ ಮೊದಲಾದವುಗಳು ಹೋಗುತ್ತಿರುವವು. ತೋಳವು ಬಂದು ಕುರಿಗಳ ದಡ್ಡಿಯನ್ನೇ ನಾಶ ಮಾಡಲಿಕ್ಕೆ ನಿಂತಿರುವಾಗ್ಗೆ ಕುರಿಗಳು ಒಂದೊಂದು ದಡ್ಡಿಯನ್ನು ವಶಮಾಡಿಕೊಳ್ಳುವುದಕ್ಕಾಗಿ ಜಗಳಾಡುವದರಲ್ಲಿ ಕಾಲಕಳೆಯುವಂತೆ ಸವರ್ಣಿಯರ ಸ್ಥಿತಿಯಾಗಿದೆ.

ಹಿಂದು ಸಮಾಜವು ಸುಧಾರಣೆಯ ಪರಿಸ್ಥಿತಿಯಲ್ಲಿ ಮುಂದುವರಿಯಬೇಕೆಂದು ಎಷ್ಟೋ ಕಾಲದಿಂದಲೂ ಹಾತೊರೆಯುತ್ತದೆ. ಹೀಗಿದ್ದು ಅದು ಹೀನಸ್ಥಿತಿಯಲ್ಲಿಯೇ ಹೊರಳಾಡುತ್ತಿದೆ. ಇದಕ್ಕೆ ಕಾರಣವೇನಿರಬಹುದೆಂದು ಯೋಚಿಸಲಾಗಿ ಹಿಂದು ಧರ್ಮದಲ್ಲಿ ಮನೆಮಾಡಿಕೊಂಡಿರುವ ಹೀನ ಪದ್ಧತಿಗಳೇ ಈ ಧರ್ಮೋನ್ನತಿಗೆ ದೊಡ್ಡ ಒಡ್ಡಿನಂತೆ ಅಡ್ಡಗಟ್ಟಿರುತ್ತವೆ. ಪವಿತ್ರವಾದ ಹಿಂದು ಸಮಾಜವನ್ನು ಅತಿ ಹೀನಾವಸ್ಥೆಗೆ ತರುವಂಥ ಆಚಾರ ವಿಚಾರಾದಿಗಳಲ್ಲಿ ನಾಲ್ಕು ವರ್ಣಗಳ ವಿಚಾರವೇ ಮುಖ್ಯವಾದುದೆಂದು ಹೇಳಬಹುದು. ಹಿಂದು ಸಮಾಜದಲ್ಲಿ ಈ ಚಾತುರ್ವರ್ಣ್ಯಗಳ ಕೊಳೆಯು ಎಲ್ಲಿಯವರೆಗೆ ಇರುವದೋ ಅಲ್ಲಿಯವರೆಗೆ ಹಿಂದು ಸಮಾಜವು ಸುಧಾರಣೆಯ ಪರಿಸ್ಥಿತಿಯಲ್ಲಿ ಮುಂದರಿಯುವದು ಶಕ್ಯವಿಲ್ಲವೆಂದೇ ಹಿಂದು ಸಮಾಜದಲ್ಲಿಯ ಎಷ್ಟೋ ಘನ ವಿದ್ವಾಂಸರ ಸ್ಪಷ್ಟಮತವಿರುವದು.

ಹಿಂದು ಸಮಾಜ ಸುಧಾರಣೆಗೆ ಚಾತುರ್ವರ್ಣ್ಯಗಳ ಪದ್ಧತಿಯೇ ಅತ್ಯವಶ್ಯವೆಂದು ಗ್ರಹಿಸುವದು ತಪ್ಪಿತವಾದದ್ದಾಗಿದೆ. ಈ ವರ್ಣಗಳ ಹೊಲಸು ತೊಳೆದುಹೋಗದ ವಿನಾ ಹಿಂದುಸಮಾಜವು ಏಳ್ಗೆಯಾಗುವುದು ಶಕ್ಯವೇ ಇಲ್ಲ. ಈ ತರದ ದೋಷಗಳನ್ನು ಸದ್ಯದ ಪರಿಸ್ಥಿತಿಯಲ್ಲಿ ತೆಗೆದುಹಾಕದಿದ್ದರೆ ನಟ್ಟು ಕಡಿಸುವುದಾಗದೆ ರಂಟೆ ಕುಂಟೆಗಳಿಂದ ಬಿತ್ತುವ ಪೂರ್ತಿ ಹಸನುಮಾಡಿಕೊಂಡ ಕರಿಕೆ ಹತ್ತಿದ ಹೊಲಗಳಂತೆ ಆಗುವದು. ಆದ್ದರಿಂದ ಈ ವರ್ಣ ಪದ್ಧತಿಯು ಹೋಗಲೇಬೇಕು. ಈ ವರ್ಣಗಳ ಅಳಿಗಾಲವೇ ಹಿಂದು ಸಮಾಜ ಸುಧಾರಣೆಯ ಉದಯಕಾಲವೆಂದು ತಿಳಿಯಬೇಕು. ಇಂಥ ಆನಂದದಾಯಕವಾದ ಉದಯಕಾಲವು ತೀರ ಸಮೀಪಿಸಿಲ್ಲ. ಆದಿ ಜನೋದ್ಧಾರವೆಂಬ ಭಾಸ್ಕರನುದಯದ ಕಾಲವು ನಾಲ್ಕು ವರ್ಣಗಳೆಂಬ ಕಗ್ಗತ್ತಲೆಯನ್ನು ಇಲ್ಲದಾಗಿ ಮಾಡಲಿ! ಎಂದು ಕಂದುಗೊರಳನನ್ನು ಮುದದಿಂದ ಮುಂಜಾವಿನಲ್ಲಿ ನುತಿಗೈದು ಈ ನನ್ನ ಚಿಕ್ಕ ಲೇಖಕ್ಕೆ ವಿರಾಮವನ್ನೀಯುವೆನು.

## ಶೋಚನೀಯ ನಿಧನ.

ಸುಪ್ರಸಿದ್ಧ ಕನ್ನಡ ಸಾಹಿತಿಗಳಾದ ಶ್ರೀಮಾನ್ ಪಂಜೆ ಮಂಗೇಶರಾಯರು ನ್ಯುಮೋನಿಯಾ ಬೇನೆಯಿಂದ ಕಳೆದ ೨೬ ನೆಯ ತಾರೀಖಿನ ದಿವಸ ಹೈದರಾಬಾದಿನಲ್ಲಿ ದಿವಂಗತರಾದರೆಂದು ತಿಳಿಸಲು ಅತ್ಯಂತ ವಿಷಾದವಾಗುತ್ತದೆ.

ಇವರು ಕನ್ನಡ ಭಾಷೆಯ ಉನ್ನತಿಗಾಗಿ ಅವಿಶ್ರಾಂತಶ್ರಮ ಪಟ್ಟ ಮಹನೀಯರು. ಇವರು ರಾಯಚೂರದಲ್ಲಿ ಕೂಡಿದ್ದ ಕರ್ನಾಟಕ ಸಾಹಿತ್ಯ ಸಮ್ಮೇಲನಕ್ಕೆ ಅಧ್ಯಕ್ಷರಾಗಿ ಮಾಡಿದ ಭಾಷಣವು ಇವರಲ್ಲಿದ್ದ ಅದ್ವಿತೀಯವಾದ ಅನುಭವವನ್ನೂ ಕನ್ನಡದ ಅಭಿಮಾನವನ್ನೂ ವ್ಯಕ್ತಗೊಳಿಸುತ್ತದೆ. ಕನ್ನಡ ದೇವಿಯ ಸದ್ಭಕ್ತರಲ್ಲಿ ಇವರು ಅಗ್ರಜರಾಗಿದ್ದರು. ಇವರ ಶಾಂತವೃತ್ತಿ, ತೇಜೋಮಯವಾದ ಮುಖ ಮುದ್ರೆ, ರಸಿಕ ವಾಣಿಗಳು ಇವರನ್ನು ಕಂಡು ಮಾತನಾಡಿದ ಪ್ರತಿಯೊಬ್ಬರ ಮನಸ್ಸಿನಲ್ಲಿ ಮೂಡದೆ ಹೋಗುತ್ತಿರಲಿಲ್ಲ. ಇವರ ಜಡದೇಹವು ಈಗ ಮಾಯವಾದರೂ ಇವರ ಕೀರ್ತಿಕಾಯವು ಕನ್ನಡ ಸಾಹಿತಿಗಳ ಕಣ್ಣಮುಂದೆ ಯಾವಾಗಲೂ ಕಾಣುತ್ತಲೇ ಉಳಿಯುವುದು. ಇವರ ಆತ್ಮಕ್ಕೆ ಚಿರಶಾಂತಿಯುಂಟಾಗಲೆಂದು ಹಾರೈಸುತ್ತೇವೆ.

## ಶೋಚನೀಯ ನಿಧನ.

ವಿಜಾಪುರ ಜಿಲ್ಹೆಯ ಒಬ್ಬ ಪ್ರಮುಖ ಸಾರ್ವಜನಿಕ ಕೆಲಸಗಾರರೂ, ವಿಜಾಪುರ ಪ್ರಸಿದ್ಧ ವ್ಯಾಪಾರಿಗಳೂ ಆದ ಶ್ರೀಯುತ ಧನಶೆಟ್ಟಿ ಶಂಕರಪ್ಪನವರ ಧರ್ಮ ಪತ್ನಿಯವರಾದ ಸೌ|| ಶರಣವ್ವನವರು ತಾ. ೧೬ ನೆಯ ದಿವಸ ಸೊಲ್ಲಾಪುರದಲ್ಲಿ ಬಾಣಂತಿಬೇನೆಯಿಂದ ಶಿವೈಕ್ಯರಾದರೆಂದು ತಿಳಿಸಲು ತುಂಬಾ ಖೇದವಾಗುತ್ತದೆ.

ಇವರು ಸುಶೀಲರೂ ಭಕ್ತಿಪರರೂ ಆಗಿದ್ದರು. ಇವರ ನಾಲ್ಕು ಹೆಣ್ಣುಮಕ್ಕಳೂ ಎರಡು ಗಂಡುಮಕ್ಕಳೂ ಇನ್ನೂ ಚಿಕ್ಕವರಿದ್ದಾರೆ. ಇವರ ಜೋಪಾನದ ಭಾರವು ಶ್ರೀ. ಶಂಕರಪ್ಪನವರ ಮೇಲೆಯೇ ಇನ್ನು ಬೀಳುವುದು. ಈ ಕಷ್ಟ ತೊಂದರೆಗಳನ್ನೆಲ್ಲಾ ಸಹಿಸುವಂತಹ ದೃಢ ಧೈರ್ಯವು ಶ್ರೀ. ಶಂಕರಪ್ಪನವರಲ್ಲಿ ಉಂಟಾಗಲೆಂದೂ ಸೌ|| ಶರಣವ್ವನವರ ಆತ್ಮಕ್ಕೆ ಶಾಂತಿಯುಂಟಾಗಲೆಂದೂ ಹಾರೈಸುತ್ತೇವೆ.

# ಅಖಿಲ ಕರ್ನಾಟಕ ಏಕೀಕರಣ ಸಂಘ ಬೆಳಗಾವಿ.

## ಏಕೀಕರಣ ಆಂದೋಲನವನ್ನು ಜೋರಿನಿಂದ ಸಾಗಿಸಿರಿ.

### ಈ ವರೆಗಿನ ಕಾರ್ಯ.

ಏಕೀಕರಣ ಸಂಘದವರು ಬಿನ್ನವಿಸಿದ ಮೇರೆಗೆ ಏಕೀಕರಣ ದಿನವು ಮೊನ್ನಿನ ೧೦ನೇ ತಾರೀಖಿಗೆ ಇಡೀ ಕರ್ನಾಟಕದಲ್ಲಿ ಆಚರಿಸಲ್ಪಟ್ಟಿತು. ಅಲ್ಲದೆ ಏಕೀಕರಣದ ಬೇಡಿಕೆಯ ಪತ್ರಿಕೆಗಳಿಗೆ ಸಹಿಗಳು ತಕ್ಕೊಳ್ಳಲ್ಪಟ್ಟಿರುವವು. ಎಷ್ಟೋ ಕಡೆಗೆ ಏಕೀಕರಣ ಸಂಘದ ಶಾಖೆಗಳಾದರೂ ಸ್ಥಾಪಿಸಲ್ಪಟ್ಟಿರುವವು. ಪತ್ರಿಕಾಕರ್ತರನೇಕರು ಅಗ್ರುಲೇಖ, ಬಿಡಿನುಡಿ, ವಿಶೇಷಸಂಚಿಕೆ ಮೊದಲಾದವುಗಳನ್ನು ಪ್ರಕಟಿಸಿ ಏಕೀಕರಣದ ಆಂದೋಲನಕ್ಕೆ ಬೆಂಬಲವನ್ನಿತ್ತಿರುವರು. ಮಹಾತ್ಮಾ ಗಾಂಧಿ, ಸುಭಾಷಚಂದ್ರ ಬೋಸ, ಲೋಕನಾಯಕ ಅಣೆ, ಆಚಾರ್ಯರಾಯ, ಡಾ. ಕುರ್ತುಕೋಟಿ, ಶ್ರೀ. ಸತ್ಯಮೂರ್ತಿ. ಡಾ. ಪಟ್ಟಾಭಿ, ಶ್ರೀ. ಎನ್. ಸಿ. ಕೇಳಕರ ಮೊದಲಾದ ಅಖಿಲ ಭಾರತೀಯ ಮುಖಂಡರನೇಕರು ಏಕೀರಣದ ತತ್ವವನ್ನು ಮಾನ್ಯಮಾಡಿ ನಮ್ಮ ಆಶೆ ಕೈಗೂಡಲೆಂದು ಹೃತ್ಪೂರ್ವಕವಾಗಿ ಹರಸಿರುವರು. ಇದೆಲ್ಲರ ಫಲವಾಗಿ ಮುಂಬಯಿ, ಮದ್ರಾಸ ಕಾಯದೇ ಮಂಡಳಗಳಲ್ಲಿಯ ಕಾಂಗ್ರೆಸ್ ಮತ್ತು ಉಳಿದ ಪಕ್ಷಗಳು ನಮ್ಮ ಬೇಡಿಕೆಗೆ ಬೆಂಬಲಕೊಡುವವೆಂದು ಆಶ್ವಾಸನವಿತ್ತಿದ್ದಾರೆ. ಇದೇ ತಿಂಗಳ ಕೊನೆಯ ವಾರದಲ್ಲಿ ಕಲಕತ್ತೆಯಲ್ಲಿ ಕೂಡುವ ಕಾಂಗ್ರೆಸ್ ವರ್ಕಿಂಗ ಕಮೀಟಿಯವರಾದರೂ ಏಕೀಕರಣದ ಬೇಡಿಕೆಗೆ ಮನ್ನಣೆಕೊಡುವರೆಂದು ನಮಗೆ ಪೂರ್ಣ ವಿಶ್ವಾಸವಿದೆ.

### ಇನ್ನು ಮುಂದೆ ಮಾಡಬೇಕಾದ ಕಾರ್ಯ.

ಏಕೀಕರಣದ ಆಂದೋಲವನ್ನು ನಾವು ಇದಕ್ಕೂ ಹೆಚ್ಚು ಜೋರಿನಿಂದ ಸಾಗಿಸಬೇಕಾಗಿದೆ. ಮುಂಬಯಿ ಮತ್ತು ಮದ್ರಾಸ ಕಾಯದೇ ಮಂಡಲಗಳಲ್ಲಿ ಈ ವಿಷಯವು ಚರ್ಚೆಗೆ ಹೊರಡುವ ಮೊದಲೇ ನಮ್ಮ ಆಂದೋಲನದ ತೀವ್ರತೆಯನ್ನು ಸ್ಪಷ್ಟವಾಗಿ ಕಾಣಿಸಿಕೊಡಬೇಕಾಗಿದೆ. ಆದ್ದರಿಂದ ಇನ್ನೆರಡು ತಿಂಗಳುಗಳೊಳಗಾಗಿ ಅಂದರೆ ಡಿಸೆಂಬರ ತಿಂಗಳಲ್ಲಿ ಮುಂಬಯಿ ಕಾಯದೇ ಮಂಡಲದ ಅಧಿವೇಶನವು ಪ್ರಾರಂಭವಾಗುವದರೊಳಗಾಗಿಯೇ ಕೆಳಗೆ ಕಾಣಿಸಿದಂತೆ ನಾವು ಕಾರ್ಯವನ್ನು ಕೈಕೊಳ್ಳುವದು ಅವಶ್ಯವಿದೆ.

(೧) ಏಕೀಕರಣದ ಬೇಡಿಕೆಯ ಪತ್ರಿಕೆಗಳಿಗೆ ಕನಿಷ್ಠ ಪಕ್ಷಕ್ಕೆ ಒಂದು ಲಕ್ಷ ಸಹಿಗಳನ್ನಾದರೂ ಕಲೆಹಾಕುವುದು.

(೨) ಏಕೀಕರಣ ಸಂಘದ ಕನಿಷ್ಠಪಕ್ಷಕ್ಕೆ ಒಂದು ನೂರು ಶಾಖೆಗಳನ್ನಾದರೂ ಸ್ಥಾಪಿಸುವದು.

(೩) ಅಖಿಲ ಕರ್ನಾಟಕ ಏಕೀಕರಣ ಸಂಘಕ್ಕೆ ಆಯಾ ಶಾಖೆಗಳ ಮುಖಾಂತರ ಇಲ್ಲವೆ ಪ್ರತ್ಯೇಕವಾಗಿ ನಾಲ್ಕಾಣೆಯ ಸದಸ್ಯರನ್ನು ಮಾಡುವದು.

(೪) ಕರ್ನಾಟಕದ ಎಲ್ಲ ಸಂಘ ಸಂಸ್ಥೆಗಳು ಏಕೀಕರಣದ ಗೊತ್ತುವಳಿಯನ್ನು ಪಾಸುಮಾಡಿ ಮುಂಬಯಿ ಮದ್ರಾಸ ಸರಕಾರಗಳಿಗೆ ಕಳಿಸುವದು.

(೫) ಕರ್ನಾಟಕದಲ್ಲಿಯ ಸುಸಂಘಟಿತ ಸಂಸ್ಥೆಗಳಾದ, ಲೋಕಲ್‌ಬೋರ್ಡು, ಮುನಸಿಪಾಲಿಟಿ, ಗ್ರಾಮಪಂಚಾಯತಿ, ಲಾಯಬ್ರರಿ, ಸಹಕಾರಿ ಸಂಘ, ಕರ್ನಾಟಕ ಸಂಘ ಮೊದಲಾದವುಗಳಲ್ಲಿ ಏಕೀಕರಣದ ಗೊತ್ತುವಳಿಗಳನ್ನು ಸ್ವೀಕರಿಸಿ ಸರಕಾರಕ್ಕೆ ಕಳಿಸುವದು.

(೬) ಏಕೀಕರಣದ ಕಾರ್ಯವನ್ನು ಸಾಗಿಸಲು ಹಣ ಕೂಡಿಸಿ ಏಕೀಕರಣ ಸಂಘಕ್ಕೆ ಕಳಿಸುವದು. ಧನಿಕರು ಪ್ರತ್ಯೇಕವಾಗಿ ಕಾಣಿಕೆಯನ್ನು ಸಂಘಕ್ಕೆ ಕಳಿಸಬಹುದು.

(೭) ಏಕೀಕರಣ ಬೇಡಿಕೆಯ ಪತ್ರಿಕೆಗಳು, ನಾಲ್ಕಾಣೆಯ ಸದಸ್ಯತ್ವದ ಪುಸ್ತಕಗಳು, ಶಾಖೆ ಉಪಶಾಖೆಗಳ ನಿಯಮಗಳು, ಮೊದಲಾದವುಗಳು ಬೇಕಿದ್ದವರು ನಮಗೆ ಬರೆದಲ್ಲಿ ಕೂಡಲೇ ಕಳುಹಿಸಿಕೊಡುವೆವು. ಏಕೀಕರಣದ ಗೊತ್ತುವಳಿಗಳನ್ನು ಸ್ವೀಕರಿಸಿ ಶಾಖೆಗಳನ್ನು ಸ್ಥಾಪಿಸಿದವರು ಆ ಬಗ್ಗೆ ಕೂಡಲೇ ಏಕೀಕರಣ ಸಂಘಕ್ಕೆ ವರದಿಯನ್ನು ೧೦ನೇ ತಾರೀಖಿನ ದಿನ ಏಕೀಕರಣ ದಿನವನ್ನಾಚರಿಸಿದವರೆಲ್ಲರೂ ಕೂಡಲೇ ತಾವು ಪಾಸುಮಾಡಿದ ಗೊತ್ತುವಳಿಗಳನ್ನೂ, ಕಾರ್ಯಕ್ರಮದ ವರದಿಯನ್ನೂ, ಏಕೀಕರಣ ಸಂಘಕ್ಕೆ ಕಳಿಸಿಕೊಡಬೇಕಾಗಿ ಬಿನ್ನಹ.

ಬೆಳಗಾವಿ.
೧೪-೧೦-೩೭ } ದಾತಾರ ಬಳವಂತರಾಯರು.
ಕಾರ್ಯಾಧ್ಯಕ್ಷ



—ದಾವಣಗೆರೆಯಿಂದ ೬ ಮೈಲುಗಳ ದೂರದಲ್ಲಿದ್ದ ಹಳೆಬಂಡಿ ಎಂಬ ಗ್ರಾಮದಲ್ಲಿಯ ಆದಿಹಿಂದುಗಳಿಗೆ ಸವರ್ಣಿಯ ಹಿಂದುಗಳು ನೀರಿನ ಅನುಕೂಲವನ್ನು ಕಲ್ಪಿಸಿಕೊಡದಿದ್ದುದರಿಂದ ೨೦೦ ಜನರು ಕ್ರಿಸ್ತ ಮತಕ್ಕೆ ಹೋಗುವವರಿದ್ದರು. ದಾವಣಗೆರೆಯ ಅನೇಕ ಹಿಂದು ಧರ್ಮಾಭಿಮಾನಿಗಳು ಅಲ್ಲಿಗೆ ಹೋಗಿ ಅವರಿಗೆ ಬುದ್ಧಿವಾದ ಹೇಳಿ ನೀರಿನ ಸೌಕರ್ಯವನ್ನು ಕಲ್ಪಿಸಿಕೊಟ್ಟಿದ್ದರಿಂದ ಅವರು ಮತಾಂತರವಾಗುವುದು ನಿಂತಿತು. ಹೀಗೆ ಎಲ್ಲ ಕಡೆಗೂ ಸ್ತುತ್ಯ ಕಾರ್ಯ ಜರುಗಬೇಕು.

# ವಿಜ್ಞಾನರೀತ್ಯಾ ಭಸ್ಮದ ಮಹತ್ವ.

## ವಿಚಿತ್ರ ಊಹೆ!

ವೈಜ್ಞಾನಿಕರು ಎಲೆಕ್ಟ್ರಾನ್ (Negative unit electric charge) ಮತ್ತು ಪ್ರೋಟಾನ್ (Positive unit electric charge) ಎಂಬ ವಿದ್ಯುತ್ತಿನ ೨ ವಿಧ ಶಕ್ತಿ ಸಂಯೋಜನದಿಂದ ಪರಮಾಣು (Atoms) ಗಳಾದುದೆಂದು ತಿಳಿಸುತ್ತಾರೆ. ಒಂದು ಪರಮಾಣುವಿನಗಾತ್ರದಲ್ಲಿ ಮೇಲ್ಕಂಡ ಎರಡು ವಿಧದ ವಿದ್ಯುತ್ತು (Charges) ಗಳ ಗಾತ್ರವು ಲೆಖ್ಖಕ್ಕೆಬಾರದಷ್ಟು ಅಲ್ಪವಾದದ್ದರಿಂದಲೂ ಈ ಪರಮಾಣುಗಳೇ ರಾಸಾಯನಿಕ ಸಂಯೋಜನ ಶಕ್ತಿಯಿಂದ ಒಟ್ಟುಗೂಡಿ ಅಣು (Molecules) ಗಳಾಗಿ, ಆ ಅಣುಗಳ ರಾಸಿಯೇ ನಾನಾ ವಸ್ತುಗಳಾಗಿ ನಮ್ಮ ಕಣ್ಣುಗಳಿಗೆ ಕಾಣತಕ್ಕದ್ದರಿಂದಲೂ ವಿದ್ಯುತ್ತೆಂಬುದು ಶಕ್ತಿಮಾತ್ರವಾದ್ದರಿಂದಲೂ "ಶಕ್ತಿಯ ಒಟ್ಟುವೇ ವಸ್ತು" ವಾಗಿ ನಮಗೆ ತೋರುತ್ತದೆ. ಆದ್ದರಿಂದ ಊಹಿಸಲಸಾಧ್ಯವಾದ ಈ ವಿಶ್ವದಲ್ಲಿ ತುಂಬಿ ತೋರುತ್ತಿರುವ ಸ್ಥಾವರ ಮತ್ತು ಜಂಗಮ ವಸ್ತುಗಳೆಲ್ಲವೂ ತೋರಿಕೆಯ ಮಿಥ್ಯೆ ಅಥವಾ ಮಾಯೆಗಳೇ ಸರಿ. ಶಕ್ತಿಯೇ ನಿಜ!

ಉದಾಹರಣೆಯಾಗಿ "ಪೊಟ್ಯಾಸಿಯಂ ಕಾರ್ಬೋನೇಟ್" ಎಂಬ ಉಪ್ಪನ್ನು ತೆಗೆದುಕೊಳ್ಳಿರಿ. ಅದರಲ್ಲಿ ಪೊಟ್ಯಾಸಿಯಮ್ಮಿನ (K) ೨ ಪರಮಾಣುಗಳೂ, ಇಂಗಾಲದ (C) ಒಂದು ಪರಮಾಣುವೂ, ಮತ್ತು ಆಮ್ಲಜನಕ (O) ದ ೩ ಪರಮಾಣುಗಳೂ, ರಾಸಾಯನದ ಸಂಯೋಜನದಿಂದ ಸ್ವತಂತ್ರವಾಗಿ ಪ್ರಕೃತಿಯಲ್ಲಿ ಇರುವುದಕ್ಕೆ ಸಾಧ್ಯವಾದ ಮೇಲ್ಕಂಡ ಉಪ್ಪಿನ ಅಣುವಾಗಿದೆ.

ನಮ್ಮ ವೀರಶೈವಾಚಾರವು ತನ್ನ ತಳಹದಿಗೆ ಅದ್ಭುತ ವಿಜ್ಞಾನದ ಮೂಲ ಬಂಡೆಯನ್ನೇ ಉಪಯೋಗಿಸಿಕೊಂಡಿದೆಯೆಂದು ನನ್ನ ಊಹೆ. ಇದನ್ನು ಸರಿಯಾಗಿ ಹೇಳುವುದಾದರೆ—

"Veerasaivachar is the essence of super-science for speedy salvation"

ಒಬ್ಬ ವ್ಯಕ್ತಿಯ ಸ್ವಭಾವವು ತನ್ನ ಸಹವಾಸದ ಫಲವೆಂದು ಹೇಳುವುದಾದರೆ ವೀರಶೈವಾಚಾರಕ್ಕೆ ಅಷ್ಟಾವರಣಗಳೇ ಸಾಕ್ಷಿ. ಅವುಗಳ ಪೈಕಿ ಭಸ್ಮ ಮತ್ತು ಅದರ ಪ್ರಭಾವವನ್ನು ನನಗೆ ತೋಚಿದಷ್ಟು ವಿಜ್ಞಾನರೀತ್ಯಾ ತಿಳಿಸುವುದೇ ಈ ಲೇಖನದ ಉದ್ದೇಶ.

ರಾಸಾಯನಿಕ ಪರಿಶೋಧನೆಯಿಂದ ಭಸ್ಮದಲ್ಲಿ "ಪೊಟ್ಯಾಸಿಯಂ ಕಾರ್ಬೋನೇಟ್" ಎಂಬ ಮೇಲೆ ಹೇಳಿದ ಉಪ್ಪೇ ವಿಶೇಷವಾಗಿರತಕ್ಕದ್ದೆಂದು ಕಂಡುಬಂದಿದೆ.

ಈ ಸಂದರ್ಭದಲ್ಲಿ ಇನ್ನೊಂದು ಉದಾಹರಣೆಯನ್ನು ಕೊಡತಕ್ಕದ್ದು ಅವಶ್ಯಕವಾಗಿದೆ. ಅಶುವಾರ್ತಾತರಂಗಗಳು (Wireless waves) "ರಾಷಲೆ" ಉಪ್ಪಿನ ಹಳುಕಿನಿಂದ ಆಕರ್ಷಿಸಲ್ಪಡುತ್ತವೆ. ಈ ಉಪ್ಪಿನ ಹಳುಕು ಆತರಂಗಗಳ ಪ್ರೇರಣೆಯಿಂದ ಅನುಕಂಪಿಸುವುದಕ್ಕೆ (Vibrate) ಪ್ರಾರಂಭಿಸುತ್ತದೆ. 'ರಾಷಲೆಉಪ್ಪಿನಲ್ಲಿ "ಪೊಟ್ಯಾಸಿಯಂ" ಎಂಬ ಲೋಹವೂ ಸೇರಿದೆ. ಮುಖ್ಯವಾಗಿ ಯಾವ ಕೆಲಸವೇ ಆಗಲಿ ಅನುಕಂಪದ ರೂಪದಲ್ಲಿ ಕಂಡುಬರುತ್ತದೆ. ಉಪ್ಪಿನ ಹಳುಕಿನಲ್ಲಿ ಅಣುಗಳು ಸೈನ್ಯಪಡೆಗಳಂತೆ ಸಾಲಾಗಿರುವುದೇ ಇದಕ್ಕೆ ಕಾರಣ. ಅನುಕಂಪಗಳು ತಮ್ಮ ಉತ್ಪತ್ತಿಗೆ ಕಾರಣವಾದ ಶಕ್ತಿಗೆ ಮಾರ್ಪಾಡು ಮಾಡಲ್ಪಡಬಹುದೆಂಬುದಕ್ಕೆ 'ಫೋನೋಗ್ರಾಫ್'' ಪೆಟ್ಟಿಯೇ ನಿದರ್ಶನ.

ಈಗ ನಮ್ಮ ಭಾವನೆಗಳು ಉತ್ಪತ್ತಿಯಾದಾಗ್ಯೆ ಮೆದುಳಿನ ಶಕ್ತಿವ್ಯಯವಾಗುವುದಿಲ್ಲವೇ ? ಭಾವನೆಗಳ ತರಂಗಗಳು ಹೊರಹೊರಡುತ್ತವೆಂದೂ ಆ ತರಂಗಗಳ ಅನುಕಂಪನಗಳು ಶಕ್ತಿ ವ್ಯಯದಿಂದ ಬಂದವೂ ಆಗಿವೆ. ಮಹಾ ಜ್ಞಾನಿಗಳ ಸೂಕ್ಷ್ಮಬುದ್ಧಿಯೂ ಸಹ ಒಂದು ಮೇಲ್ಕಂಡ ಅನುಕಂಪಿತವಾದ 'ರಾಷಲೆ' ಉಪ್ಪಿನಂತೆ. ಆ ಉಪ್ಪಿನ ಹಳುಕು ತಾನು ಆಕರ್ಷಿಸಿದ ಅಶುವಾರ್ತಾ ತರಂಗಗಳನ್ನು ಪುನಃ ಮೊದಲಿನ (ತರಂಗಗಳನ್ನೆಬ್ಬಿಸಿದ) ಶಕ್ತಿಯಾಗಿ ಮಾರ್ಪಡಿಸುವಂತೆ ಮಹಾತ್ಮರ ಬುದ್ಧಿಯು ಅನ್ಯತ್ರ ನಡೆಯುವ ವಿಚಾರಗಳನ್ನು ಗ್ರಹಿಸಿ ಭವಿಷ್ಯ ನುಡಿಯುತ್ತಿರುವುದನ್ನು ನಾವು ಕೇಳಿದ್ದೇವೆ.

ದೇಹದ ವೈಜ್ಞಾನಿಕರು ದೇಹದ ಬಾಳಿಕೆ ಮತ್ತು ಅಭಿವೃದ್ಧಿಗೆ ಅದರಲ್ಲಿರುವ ರಕ್ತದ ನಿರ್ಮಲತೆಯೇ ಕಾರಣವೆಂದು ಹೇಳುತ್ತಾರೆ. ದೀರ್ಘಾಯುಷ್ಯಕ್ಕೆ ರಕ್ತವು 'ಅಲ್ಕಲೈನ್' ಆಗಿರಬೇಕು ಎನ್ನುತ್ತಾರೆ. ಮೇಲೆ ತಿಳಿಸಿದ 'ಪೊಟ್ಯಾಸಿಯಂ ಕಾರ್ಬೋನೇಟ್' ಉಪ್ಪು ದೇಹಕ್ಕೆ ಬೇಕಾದ ಅತಿ ಮುಖ್ಯ ಅಲ್ಕಲಿಯಾಗಿರುತ್ತದೆ.

ಇನ್ನು ನಾವು ಉಪಯೋಗಿಸುವ ಭಸ್ಮವನ್ನು ನೋಡುವ. ಭಸ್ಮವು ಗೋವಿನದೇ ಆಗಿರಬೇಕೆಂಬ ನಿರ್ಬಂಧವಿದೆ. ಇದಕ್ಕೆ ಕಾರಣ ಗೋವುಗಳು ಅಡವಿಯಲ್ಲಿನ ಹುಲ್ಲನ್ನು ತಿನ್ನತಕ್ಕ ಸಾಧು ಪ್ರಾಣಿಗಳಾಗಿರುತ್ತವೆ. ಅಂಥಾ ಸೊಪ್ಪಿನಲ್ಲಿ ಮೇಲ್ಕಂಡ ಪೊಟ್ಯಾಸಿಯಂ ಲೋಹವು ಸಮೃದ್ಧವಾಗಿದೆಯೆಂಬುದನ್ನು ವೈಜ್ಞಾನಿಕರು ನಿರ್ಧರಿಸಿರುತ್ತಾರೆ. ಇಲ್ಲಿ ಎರಡು ಸಂದೇಹಗಳು ಏಳಬಹುದು. (೧) ನಾವು ಭಸ್ಮಕ್ಕೆ ಬದಲು ಹುಲ್ಲನ್ನೇ ತಿಂದರಾಯಿತು. (೨) ಅಥವಾ ಗೋಮಯವೇ ಭಸ್ಮಕ್ಕೆ ಏಕೆ ಬೇಕು? ಇತರೆ ಸಾಧುವಾದ ಕಾಡು ಮೃಗಗಳ ಹಿಕ್ಕೆಯೇಕಾಗಬಾರದು ? ಇದಕ್ಕೆ ಉತ್ತರವಾಗಿ—

(೧) ಹುಲ್ಲನ್ನು ತಿಂದು ರಕ್ತಗತಮಾಡಿಕೊಳ್ಳಬೇಕಾದರೆ ತಕ್ಕಷ್ಟು ಶಕ್ತಿವ್ಯಯವಾಗಲೇಬೇಕು. ಭಸ್ಮವನ್ನು ಧರಿಸಿದರೆ ಚರ್ಮದ ಮೂಲಕ ಪೊಟ್ಯಾಸಿಯಂ ಉಪ್ಪು ಸುಲಭವಾಗಿ ರಕ್ತಗತವಾಗುವುದಲ್ಲದೆ, ಚರ್ಮ ಮತ್ತು ದೇಹದಲ್ಲಿ ಶಾಖೋತ್ಪತ್ತಿಯೂ ಶೀಘ್ರವಾಗಿ ಆಗಿ ಅತಿ ಶೀತ ಹವೆಯಲ್ಲಿಯೂ ಕೂಡ ಬರಿ ಮೈಯಲ್ಲಿ ಏಕಾಗ್ರಚಿತ್ತದೊಡನೆ ಕುಳಿತುಕೊಳ್ಳಲು ಸಾಧ್ಯವಾಗಿರುತ್ತದೆ. ಅಲ್ಲದೆ ಬರೀ ದೇಹವನ್ನು ಪರಿಶುದ್ಧವಾದ ಗಾಳಿಗೆ ಹರಡಿದಂತಾಗಿ ಏಕಕಾಲದಲ್ಲಿ ಶುದ್ಧ ಆಮ್ಲಜನಕವು ಚರ್ಮ ಮತ್ತು ದೇಹದ ವಿಷ ಕ್ರಿಮಿಗಳನ್ನು ನಾಶಮಾಡಿದಂತಾಗುತ್ತದೆ. ಇದೂ ಒಂದು ಭಸ್ಮ ಲೇಪನದ ಧ್ಯೇಯವಾಗಿರಬೇಕು.

(೨) ಆಕಳಿನ ಗಂಜಲವೇ ಏಕಾಗಬೇಕೆನ್ನುವುದಕ್ಕೆ ಸೊಂಕುರೋಗವಿರುವ ಮನೆಯಲ್ಲಿನ ಒಂದು ಕೋಣೆಯನ್ನು ಗೋಮಯದಿಂದ ಸಾರಿಸಿ ಪರೀಕ್ಷಿಸಿದ್ದರಲ್ಲಿ ಆ ಕೋಣೆಯ ವಿಷ ಕ್ರಿಮಿಗಳೆಲ್ಲವೂ ನಾಶವಾಗಿದ್ದವೆಂದು ಆರೋಗ್ಯ ಇಲಾಖೆಯವರು ಪ್ರಕಟಿಸಿರುತ್ತಾರೆ.

ನಮ್ಮ ಊಹೆಯನ್ನು ಇನ್ನು ಸ್ವಲ್ಪ ಮುಂದುವರಿಸಿ ನೋಡುವ. ಮೆಣಸಿನಕಾಯಿಯ ಸ್ಪರ್ಶದಿಂದ ಅದರ ಪ್ರಭಾವವು ನಮಗೆ ತಿಳಿಯುತ್ತದೆ. ಅಂತೆಯೇ ಪ್ರಾಣಿಗಳ ಗುಣತ್ರಯಗಳೂ ಅವರವರ ಆಹಾರದಿಂದಲೇ ಸ್ಪಷ್ಟವಾಗುತ್ತವೆ. ಸ್ವಭಾವಗಳಲ್ಲಿ ಸಾತ್ವಿಕ ಸ್ವಭಾವವೇ ಸರ್ವಶ್ರೇಷ್ಠ. ಈಶ್ವರ ಪ್ರೀತಿಗೆ ಮತ್ತು ಜನ್ಮನಿವೃತ್ತಿಗೆ ಸೇವೆಯೇ ಸರಿಯಾದ ಕಾರ್ಯ. ಸಕಲ ಚರಾಚರ ವಸ್ತುವೂ ತನ್ನ ತನ್ನ ಸೇವೆಯನ್ನು ಸಲ್ಲಿಸಲೇಬೇಕು.

ರೈತನು ದುಡಿದು ತಿನ್ನುವುದರೊಳಗೆ ಎಷ್ಟೋ ಪ್ರಾಣಿಗಳಿಗೂ ಅನ್ನ ದಾನಮಾಡಿರುತ್ತಾನೆ. ಅವನು ದುಡಿಯಲು ಪಶುವು ಸೇವೆಮಾಡಿದ್ದಲ್ಲದೆ ಎಲ್ಲಿಗೂ ಉಪಯೋಗವಿಲ್ಲದ ಕಡ್ಡಿಯನ್ನು ತಿಂದು ಬದುಕುತ್ತದೆ. ಇದಕ್ಕಿಂತಲೂ ಹೆಚ್ಚಿನ ಸೇವೆಯೇ ನನಗಿನ್ನೂವರೆಗೂ ಕಂಡುಬಂದಿಲ್ಲ. ಮೇಲ್ಕಂಡ ಸಾತ್ವಿಕ ಸ್ವಭಾವಜನ್ಯವೇ ಆದ ಗೋ ಭಸ್ಮವು ನಮ್ಮ ರಕ್ತದಲ್ಲಿಯೂ ಅದೇ ಗುಣವನ್ನು ತುಂಬುವುದರಲ್ಲಿ ನನಗೆ ಸಂದೇಹವೇ ಕಂಡುಬರುವುದಿಲ್ಲ. ಅದ್ದರಿಂದ ಪರೀಕ್ಷಿಸಿ ನಿರ್ಧರಿಸದೆ ನಮ್ಮ ಅಚಾರಗಳನ್ನು ಬಿಡಬಾರದೆಂದು ನನಗೆ ತೋರುತ್ತದೆ.

ಇನ್ನು ಭಸ್ಮವನ್ನು ಆಯಾ ಬಣ್ಣದ ಗೋಮಯದಿಂದ ಪ್ರತ್ಯೇಕವಾಗಿ ಮಂತ್ರ ಮೂಲಕವಾಗಿ ಸಂಸ್ಕರಿಸಬೇಕೆಂಬ ವಿಧಿಯದೆ. ಈ ವಿಚಾರದಲ್ಲಿಯೂ ನನ್ನ ನಂಬಿಗೆಯೇ! ವಾಕ್ಪಟುತ್ವದಿಂದ ಎಂಥವರನ್ನಾದರೂ ವಿಸ್ಮಯಗೊಳಿಸಿ ಕೆಲಸವನ್ನು ಅವರಿಂದ ಮಾಡಿಸುವುದಿಲ್ಲವೆ? ವಕ್ತೃತ್ವ ಮತ್ತು ಸಂಗೀತಗಳಿಂದ ಈಗ ಮನೋ ಮತ್ತು ನರಗಳ ರೋಗಗಳನ್ನು ಗುಣಪಡಿಸುವುದಿಲ್ಲವೆ? ಮೊದಲೇ ಉದಹರಿಸಿದ ರೀತಿಯಲ್ಲಿ ವಸ್ತುವಿನಲ್ಲಿ ಅಡಕವಾಗಿರುವ ಶಕ್ತಿಯು ಅನುಕಂಪನದಿಂದ ಪ್ರತಿಫಲಿಸುವುದೆಂದು ತೋರಿಸಿ ಕೊಡಲ್ಪಟ್ಟಿದೆ.

ಅದ್ಭುತ ಶಕ್ತಿಯನ್ನುಂಟುಮಾಡುವ ಮಂತ್ರಗಳು ಭಸ್ಮದ ಪ್ರತಿ ಅಣುವಿನಲ್ಲಿಯೂ ಅನುಕಂಪಿಸುವಂತೆಮಾಡಿದರೆ ಗಂಟೆಯನ್ನು ಬಾರಿಸಿ ನಿಲ್ಲಿಸಿದ ಕೂಡಲೇ ನಿಲ್ಲದೆ ಕೇಳಿಸುವ ನಾದದಂತೆ ಮಂತ್ರಪೂರಿತ ಭಸ್ಮದಲ್ಲಿಯೂ ಸದಾ 'ಓಂ' ಕಾರ ಶಬ್ದವು ಏಕೆ ಅನುಕಂಪಿತವಾಗುತ್ತಿರಬಾರದು? ಅಂಥಾ ಭಸ್ಮವನ್ನು ರಕ್ತಗತವಾಗಿ ಮಾಡುತ್ತಾ ಬರುವುದರಿಂದ; ರಕ್ತವೂ ಅದರಿಂದ ಬೆಳೆಯುತ್ತಿರುವ ಸಕಲ ದೇಹಾವಯವಗಳೂ ಕಾಲಾನುಕ್ರಮದಲ್ಲಿ 'ಓಂ' ಕಾರಮಯವೇ ಆಗುವುದರಲ್ಲಿ ಸಂದೇಹವಿದೆಯೇ? ಅಂಥಾ ದೇಹದ ಮನೋಬುದ್ಧಿಗಳಲ್ಲಿಯೂ 'ಓಂ' ಕಾರವೇ ಆಗಿ ಮುಕ್ತಿಯು ಏಕಜನ್ಮಕ್ಕೇ ಸಾಧ್ಯವಾಗಬಾರದೇಕೆ?

ಅದ್ದರಿಂದ ಮುಕ್ತಿಯಲ್ಲದ ಇನ್ನು ಯಾವಕಾರ್ಯವನ್ನಾದರೂ ಜಯಿಸುವುದಕ್ಕೆ ಅಂಥಾ ಭಸ್ಮವೇ ಸಾಕು. ಇದಕ್ಕೆ ನಮ್ಮ ಯೋಚನೆಗಳೇ ನಮ್ಮ ಸ್ಥಿತಿಗೆ ಕಾರಣಗಳೆಂದು ವಿವೇಕಾನಂದರು ಅಂದದ್ದು, ಹಿಂದಿ ಭಾಷಾಜ್ಞಾನಿಗಳಾದ ದಾಸರು ಬಸವಣ್ಣನವರ ವಚನಾಮೃತವನ್ನು ಸವಿಯಬೇಕೆಂದದ್ದಕ್ಕೆ ಶ್ರೀ ಬಸವೇಶ್ವರರು ಭಸ್ಮವನ್ನು ಕಳಿಸಿದರೆಂದೂ ಆ ಭಸ್ಮದಲ್ಲಿ ಅಂಥಾ ಪ್ರಭಾವವನ್ನು ಅವರು ಅನುಕಂಪನಮಾಡಿದ್ದರಿಂದ ದಾಸರಿಗೆ ಭಾಷಾಜ್ಞಾನವಾಯಿತೆಂದೂ ಪ್ರತೀತಿಯಿದೆ. ಇದು ಸುಳ್ಳಾಗಬಹುದೆ?

ಮುಖ್ಯವಾಗಿ ನಂಬುಗೆ ಬೇಕು. ಅಂಥಾ ಪ್ರಭಾವಯುಕ್ತವಾದ ಭಸ್ಮವನ್ನು ಮಾಡಿಕೊಳ್ಳಬೇಕು. ಮಾಡಿಕೊಂಡದ್ದನ್ನು ಉಪಯೋಗಿಸಿ ಧರಿಸಿ ಅದರ ಫಲವನ್ನು ನಾವೇ ಕಾಣಬಹುದು. ಅದ್ದರಿಂದಲೇ ಬಸವಣ್ಣನವರು 'ಛಲಬೇಕು ಶರಣಂಗೆ ದೈವವೊಂದೇ ಎಂಬ; ಛಲಬೇಕು ಶರಣಂಗೆ ಪರವಾದ ನಿಗ್ರಹದಲ್ಲಿ; ಛಲಬೇಕು ಶರಣಂಗೆ ಗುರುಲಿಂಗ ಜಂಗಮವು ಒಂದೇ ಎಂಬ; ಛಲಬೇಕು ಶರಣಂಗೆ ವಿ ಭೂ ತಿ ರುದ್ರಾಕ್ಷಿಯಲ್ಲಿ, ಛಲಬೇಕು ಶರಣಂಗೆ ಪಾದೋದಕ ಪ್ರಸಾದ ದಿಟವೆಂಬ ಛಲಬೇಕು ಶ........" ಎಂಬುದಾಗಿ ಹೇಳಿದ್ದಾರೆ.

ಎಮ್. ಶಿವರುದ್ರಪ್ಪ
ಸ್ಕೂಲ್ ಮಾಸ್ತರ್ ಸುರ್ವೆಹಳ್ಳಿ
ಜಿ. ಶಿವಮೊಗ್ಗಾ.

## ನೇಗಿಯ ಉದ್ಯೋಗಿಗಳಲ್ಲಿ ಜಾಹೀರ ವಿನಂತಿ.

### ವಿಜಾಪುರ ಜಿಲ್ಲಾ ನೇಕಾರರ ಪರಿಷತ್ತಿನ ಪ್ರಕಟನೆ.

ಅಖಿಲ ಕರ್ನಾಟಕದಲ್ಲಿಯೇ ನಮ್ಮ ಜಿಲ್ಲೆಯು ನೇಗಿಯ ಉದ್ಯೋಗಕ್ಕೆ ಗಂಡುವೆಟ್ಟಿನ ಸ್ಥಳವು. ಇಲಕಲ್ಲ, ಗುಳೇದಗುಡ್ಡ, ರಬಕವಿ, ಬನ್ನಟ್ಟಿ ಮೊದಲಾದ ಊರುಗಳ ಸೀರಿ ಖಣಗಳು ಮಹಾರಾಷ್ಟ್ರ ವರ್ಹಾಡದವರಿಗೆ ಅಂದರೆ ಮಧ್ಯಹಿಂದುಸ್ಥಾನದವರೆಗೂ ಪ್ರಸಿದ್ಧಿಯನ್ನು ಪಡೆದಿವೆ. ನಮ್ಮ ಜಿಲ್ಲೆಯಲ್ಲಿಯ ಸುಮಾರು ಒಂದು ಲಕ್ಷ ಕುಟುಂಬಗಳ ಉದರ ನಿರ್ವಾಹಕ್ಕೆ ಆಧಾರಭೂತವಾದ ಈ ನೇಗಿಯುದ್ಯೋಗವು ಕ್ರಮೇಣ ಕ್ಷೀಣಾವಸ್ಥೆಯನ್ನು ಹೊಂದುತ್ತ ಹೊಂದುತ್ತ ಈಗೀಗ ಅತ್ಯಂತ ಶೋಚನೀಯ ಸ್ಥಿತಿಗೆ ಬಂದು ಮುಟ್ಟಿದೆ. ಇದರಿಂದ ಈ ಉದ್ಯೋಗವನ್ನು ಆಶ್ರಯಿಸಿಕೊಂಡಿದ್ದ ಅನೇಕಾನೇಕ ಕುಟುಂಬಗಳ ಜೀವನೋಪಾಯವೇ ನಿಂತುಹೋಗಿ ಅವರೆಲ್ಲರೂ ಅರಹೊಟ್ಟೆಯಿಂದಲೂ ನಡು ನಡುವೆ ಒಂದು ಉಪವಾಸ, ಎರಡು ಉಪವಾಸಗಳಿಂದಲೂ ದಿನಗಳನ್ನು ನೂಕುತ್ತಿರುವ ಉದಾಹರಣೆಗಳನ್ನು ನಾವು ಊರೂರಿಗೆ ಕಾಣುತ್ತಿರುವೆವು. ಇದೆಲ್ಲ ಅನಾಹುತಕ್ಕೆ ಕಾರಣವೇನು? ಜವಾಬ್ದಾರರು ಯಾರು? ಇದನ್ನು ಸರಿಪಡಿಸಿಕೊಳ್ಳುವ ಉಪಾಯಗಳ್ಯಾವವು? ಈ ಸಂಕಟದಲ್ಲಿ ಸರಕಾರವು ನಮಗೆ ಎಷ್ಟರಮಟ್ಟಿಗೆ ನೆರವಾಗಬಹುದು? ಜನತೆಯ ಮತ್ತು ಕರ್ನಾಟಕ ಮಹಾಜನಗಳ ಸಹಾಯ ಸಹಾನುಭೂತಿಯನ್ನು ಹೇಗೆ ಸಂಪಾದಿಸಬೇಕು? ಇವೇ ಮೊದಲಾದ ವಿಷಯಗಳನ್ನು ಕುರಿತು ವಿಚಾರ ಮಾಡುವದು ಅತ್ಯಗತ್ಯದ ಮಾತಾಗಿದೆ. ಕಾರಣ ನೇಗಿಯುದ್ಯೋಗದಿಂದ ಜೀವಿಸುವ ನೇಕಾರರ ವ್ಯಾಪಾರಿಗಳ ಮತ್ತು ಇದಕ್ಕೆ ಸಂಬಂಧಪಟ್ಟ ಉಪ ಉದ್ಯೋಗಿಗಳ ಪರಿಷತ್ತೊಂದನ್ನು ಕರೆಯಬೇಕೆಂದು ನಾವು ಆಲೋಚಿಸಿದ್ದೇವೆ. ನಮ್ಮ ಈ ಆಲೋಚನೆಯನ್ನು ಕಾರ್ಯರೂಪಕ್ಕೆ ತರುವುದು ನಿಮ್ಮೆಲ್ಲರ ಸಲಹೆ ಸಹಾಯ ಸಹಾನುಭೂತಿಯನ್ನೇ ಅವಲಂಬಿಸಿದೆ ಎಂಬುದನ್ನು ನಾವು ಬೇರೆ ಹೇಳಬೇಕಿಲ್ಲ.

ಕಾರಣ ಜಿಲ್ಲೆಯಲ್ಲಿಯ ಮತ್ತು ಜಿಲ್ಲೆಗೆ ಸಂಬಂಧಿಸಿದ ಸಂಸ್ಥಾನಗಳಲ್ಲಿಯ ನೇಕಾರ ಜನರೂ ಸನಗಿನ ವ್ಯಾಪಾರಿಗಳೂ ಮತ್ತು ಉದ್ಯೋಗಕ್ಕೆ ಪ್ರತ್ಯಕ್ಷ ಅಪ್ರತ್ಯಕ್ಷ ರೀತಿಯಿಂದ ಸಂಬಂಧಪಟ್ಟ ಉಪ ಉದ್ಯೋಗದವರೂ ಮತ್ತು ನೇಕಾರರ ಸದ್ಯದ ಹೀನಾವಸ್ಥೆಯ ಬಗ್ಗೆ ಕಳಕಳಿಯುಳ್ಳ ಉಳಿದ ಮಹಾ ಜನರೂ ಶಕ್ಯವಿದ್ದ ಮಟ್ಟಿಗೆ ಈ ಕಾರ್ಯದಲ್ಲಿ ನಮಗೆ ತನು ಮನ ಧನದಿಂದ ನೆರವಾಗಬೇಕೆಂದು ವಿನಂತಿಪೂರ್ವಕ ಕೇಳಿಕೊಳ್ಳುತ್ತೇವೆ. ಸದರ ಪರಿಷತ್ತನ್ನು ಸಧ್ಯದ ನಮ್ಮ ವಿಚಾರದ ಮೇರೆಗೆ ನವ್ಹೆಂಬರ ತಿಂಗಳ ಕೊನೆಯೊಳಗಾಗಿ ಗುಳೇದಗುಡ್ಡದಲ್ಲಿ ಕರೆಯಬೇಕೆಂದು ನಿರ್ಧರಿಸಿದ್ದೇವೆ.

ನೇಕಾರ ಬಾಂಧವರ ಹಿತೈಷಿಗಳಾದ
ಕೀರ್ತನ ಶಾಸ್ತ್ರಿ ವೆಂಕಟರಾವ ಹೆರೂರ, ಕಟಗೇರಿ
ಕಾರ್ಯದರ್ಶಿ.

---

—೧೮ ರಿಂದ ೪೫ ವರುಷಗಳೊಳಗಿನ ಸ್ಪೇನ ಜನರೆಲ್ಲರೂ ಫ್ರಾನ್ಸ್ ದೇಶವನ್ನು ಬಿಟ್ಟುಹೋಗಬೇಕೆಂದು ಫ್ರೆಂಚ ಸರಕಾರದವರು ಆಜ್ಞೆಮಾಡಿದ್ದಾರೆ, ಬಲಹೀನರ ಬಾಳುವೆ ಕೊನೆಗೆ ಹೀಗೆ.

## ಚಿಂಚೋಳಿ ನಾಡಹಬ್ಬ.

ಪ್ರತಿವರುಷದಂತೆ ಈ ವರ್ಷವೂ ಗುಲಬರ್ಗಾ ಜಿಲ್ಲಾ ಚಿಂಚೋಳಿಯಲ್ಲಿ ಶ್ರೀ ಮಹಾನವಮಿಯ ಉತ್ಸವ (ನಾಡಹಬ್ಬ) ವು ಬಹು ವಿಜೃಂಭಣೆಯಿಂದ ಆಚರಿಸಲ್ಪಟ್ಟಿತು. ಈ ಸಮಯದಲ್ಲಿ ಕನ್ನಡ ನುಡಿ ಮತ್ತು ನಾಡಿನ ಮೇಲೆ ಶ್ರೀ ಬಸವೇಶ್ವರ, ಸರ್ವಜ್ಞಕವಿ ಮುಂತಾದ ವಿಷಯಗಳ ಮೇಲೆ ಶ್ರೀಯುತ ಕೃಷ್ಣಶರ್ಮಾ ಗೌ|| ಕಾರ್ಯದರ್ಶಿ ನಿಜಾಮ ಕರ್ನಾಟಕ ಪರಿಷತ್ತು ಹೈದರಾಬಾದ ಇವರ ಸುಶ್ರಾವ್ಯ, ಮತ್ತು ಹೃದಯಸ್ಪರ್ಶಿ, ಭಾಷಣಗಳಾದವು. ಶ್ರೀಯುತರ ಭಾಷಣಗಳಿಂದ ಚಿಂಚೋಳಿಯ ಗ್ರಾಮಸ್ಥರಲ್ಲಿ ಕನ್ನಡ ನಾಡು ನುಡಿಗಳಬಗ್ಗೆ ನಿಜವಾದ ಪ್ರೀತಿ ಅಭಿಮಾನಗಳು ಜಾಗೃತವಾದಂತೆ ಕಂಡುಬರುತ್ತದೆ.

ವಿಜಯದಶಮಿಯ ದಿನ ಎಂಟು ಗಂಟೆಗೆ ಶ್ರೀಕೃಷ್ಣಶರ್ಮರು ವೀರಶೈವ ಬಂಧು ಸಮಾಜ ವಾಚನಾಲಯವನ್ನು ಸಂದರ್ಶಿಸಿ ಅಲ್ಲಿ ವಾಚನಾಲಯದ ಅಭಿವೃದ್ಧಿಯಬಗ್ಗೆ ಸಮಯೋಚಿತ ಪರಿಣಾಮಕಾರಕ ಭಾಷಣವನ್ನು ಮಾಡಿ ಸಂತೋಷವನ್ನು ವ್ಯಕ್ತಪಡಿಸಿದರು.

ಇದೇ ವಿಜಯದಶಮಿಯ ಸುಮುಹೂರ್ತದವೇಲೆ ಇಲ್ಲಿ ಕರ್ನಾಟಕ ಸಂಘವೂ ಸ್ಥಾಪಿಸಲ್ಪಟ್ಟಿದೆ. ಕನ್ನಡ ನಾಡು ನುಡಿಗಳ ಸಲುವಾಗಿ ಹೆಣಗಾಡುವದೇ ಇದರ ಗುರಿಯಾಗಿದ್ದು ನಿಜಾಮ ಕರ್ನಾಟಕ ಪರಿಷತ್ತಿನೊಂದಿಗೆ ಸಂಬಂಧವಿರಬೇಕೆಂದು ಗೊತ್ತಾಗಿದೆ.

ಕಾರ್ಯದರ್ಶಿ
ವೀರಶೈವ ಬಂಧು ಸಮಾಜ.

---

ಹಾವೇರಿ ಹಿಂದು ತರುಣಸಂಘ
## ಕಾರ್ಯದ ವರದಿ.

ಸಂಘವು ಸ್ಥಾಪನೆಯಾಗಿ ೨ ತಿಂಗಳಾದವು. ಈ ಅವಧಿಯಲ್ಲಿಯೇ ನಮ್ಮೂರ ಸಮೀಪದಲ್ಲಿದ್ದ ಕೋಳೂರು ಗ್ರಾಮದಲ್ಲಿ ಕೆಲವು ಲಿಂಗವಂತ ಜನರು ಕೆಲವು ಕಾರಣಗಳಿಂದ ತಮ್ಮ ಲಿಂಗಗಳನ್ನು ತ್ಯಜಿಸಿದ್ದರು. ಹಾಗೂ ಪರಧರ್ಮ ಸ್ವೀಕರಿಸಲು ಪರಧರ್ಮ ಬೋಧಕರ ಸೆಳೆವಿಗೆ ಸಿಲುಕಿದ್ದರು. ಸಂಘದವರು ಆ ಊರಿಗೆ ತಮ್ಮ ಕೆಲವು ಸಭ್ಯಗೃಹಸ್ಥರನ್ನು ಕರೆದುಕೊಂಡುಹೋಗಿ ಲಿಂಗದ ಮಹತ್ವವನ್ನು ತಿಳಿಹೇಳಿ ಮೂರು ನಾಲ್ಕು ವಾರಗಳಪರಿಯಂತರ ಪ್ರಯತ್ನಮಾಡಿದ್ದರಿಂದ ಕೆಲವರು ಮಾತ್ರ ಲಿಂಗವನ್ನು ಧರಿಸಿರುವರು. ಉಳಿದವರೂ ಧರಿಸುವಂತೆ ಮಾಡಲು ಸಂಘವು ಮನಮುಟ್ಟಿ ದುಡಿಯುತ್ತಿದೆ.

(೨) ಅಸ್ಪೃಶ್ಯ ಹಿಂದುಗಳ ಕೇರಿಗೆ ಹೋಗಿ ಅಲ್ಲಿ ಭಾಷಣಗಳನ್ನು ಹಿಂದುತ್ವದ ಮಹತ್ವವನ್ನು ತಿಳಿಹೇಳಿ ಸವರ್ಣ ಹಿಂದುಗಳ ಕೂಡಾ ಸಮ್ಮಿಶ್ರರೀತಿಯಿಂದ ನಡೆಯುವಂತೆ ಮಾಡಿದ್ದಲ್ಲದೆ ಸಂಘದ ಸದಸ್ಯರನ್ನಾಗಿ ಮಾಡಿಕೊಂಡಿದ್ದೇವೆ.

(೩) ಪರಧರ್ಮದವರು ಹಿಂದೂಧರ್ಮದ ಆಯಾ ಜಾತಿಗಳಲ್ಲಿ ಬಂದುದರಿಂದ ಆಯಾ ಜಾತಿಯ ಜನರು ಅವರನ್ನು ಬಳಿಕೆ ಮಾಡದಂಥ ಸ್ಥಿತಿಯನ್ನು ಕಂಡು ಆಯಾ ಜಾತಿಯ ಜನರನ್ನು ಭೆಟ್ಟಿಯಾಗಿ ಅವರನ್ನು ಬಳಿಕೆಯಲ್ಲಿ ತೆಗೆದುಕೊಳ್ಳುವ ಕಾರ್ಯವು ಜೋರಿನಿಂದ ನಡೆದಿದೆ.

ಗೌ. ಕಾರ್ಯದರ್ಶಿ.
ಶಾಂತಾರಾಮ ಭೀಮಾಜಿ. ಅವಧಾನ.

---

೩ ನೇ ನಿಜಾಮ ಪ್ರಾಂತಿಕ ಪರಿಷತ್ತು.
## ಲಾತೂರು.

ತಾ. ೨೨-೧೦-೩೭ ನೆಯ ದಿವಸ ಉಸ್ಮಾನಾಬಾದದಲ್ಲಿರುವ ಪ್ರಸಿದ್ಧ ಮುಂದಾಳು ಮಲ್ಲಿಕಾರ್ಜುನಪ್ಪಾ ಬಿ. ಎ. ಎಲ್. ಎಲ್. ಬಿ ವಕೀಲ ಇವರ ಅಧ್ಯಕ್ಷತೆಯ ಕೆಳಗೆ ಪಾಶೆಘರ ಮಠದಲ್ಲಿ ಇಲ್ಲಿಯ ಪ್ರಮುಖ ವೀರಶೈವರ ಸಭೆಗೂಡಿತ್ತು. ಇಲ್ಲಿಯ ವೀರಶೈವ ಬಾಲ ಸಮಾಜದ ವಾರ್ಷಿಕ ಉತ್ಸವದಲ್ಲಿ ನಿಜಾಮ ಪ್ರಾಂತಿಕ ಪರಿಷತ್ತಿನ ೩ ನೆ ಅಧಿವೇಶನ ಲಾತೂರಲ್ಲಿ ಕೂಡಿಸಬೇಕೆಂದು ಗೊತ್ತುವಳಿ ಮಾಡಿದ್ದರು. ಆದರ ಬಗ್ಗೆ ವಿಚಾರವಿನಿಯಮವಾಗಿ ಬರುವ ವೈಶಾಖಮಾಸದಲ್ಲಿ ಅಧಿವೇಶನ ಕೂಡಿಸಬೇಕೆಂದು ಎಲ್ಲರನುಮತಿಯಿಂದ ನಿಶ್ಚಯವಾಯಿತು.

ಪರಿಷತ್ತಿನ ಕಾರ್ಯಕಾರಿ ಮಂಡಲದ ಚುನಾವಣೆಮಾಡುವದಕ್ಕಾಗಿ ಬರುವ ಡಿಸೆಂಬರ ತಾ. ೩ ಮಾರ್ಗಶಿರ ಶುದ್ಧ ೧ ಈ ತಾರೀಖು ನಿಶ್ಚಯಿಸಲ್ಪಟ್ಟಿದೆ. ನಿಯಮದಲ್ಲಿ ಪ್ರಾಂತದ ಎಲ್ಲ ಪ್ರಮುಖರು ಬರಬೇಕಾಗಿ ಕೋರಿಕೆ.

ಸೆಕ್ರೆಟರಿ
ಶ್ರೀ ದೇಶಿಕೇಂದ್ರ ಮಹಾರಾಜ ಲಾತೂರು

---

## ಪಾರಮಾರ್ಥಿಕ "ಡೈರಿ"

ಶ್ರೀ ಶಿವ ಚಿದಂಬರಾಯ ನಮಃ

(ಚಳ, ೧೦ ಶು. ೩ ಶುಕ್ರ. ೧೫-೧-೩೭.)

ತ್ರಿಪದಿ— ಮಾತೆಯಾ ಪುಣ್ಯತಿಥಿ ಏತಕ್ಕೆ ನಡಿಸಿರ್ಪೆ|
ಮಾತೃದೇವೋಭವ ನಿತಿ ಪ್ರೇಮದಿ ಮನದಿ|
ಸಾತಿಶಹ ನೆನೆದು ದಾಸಾರ್ಯ ||೨೪||

× × ×

ಶ್ರೀ. ಶಿವ ಚಿದಂಬರಾಯ ನಮಃ

(ಚಳ. ೧೦ ಶು. ೪ ಶನಿ. ೧೬-೧-೩೭.)

ತ್ರಿ:— ಶಿವಾನುಕೂಲವಿರಲು ಅವನಿಯೊಳ್ ವಿಘ್ನಗಳು|
ಅವತರಿಸಿ ಮುನ್ನ ನಿರ್ವಿಘ್ನಗೊಳಿಸುವವು|
ಶಿವಲೀಲೆ ನೋಡು ದಾಸಾರ್ಯ ||೨೫||

× × ×

ಶ್ರೀ. ಶಿವ ಚಿದಂಬರಾಯನಮಃ

(ಚಳ ೧೦ ಶು. ೫ ರವಿ. ೧೭-೧-೩೭.)

ತ್ರಿ:— ಸುಳ್ಳಾಡುವರಯ್ಯಾ ಮಳ್ಳಾಗುವರಯ್ಯಾ|
ಸುಳ್ಳು ಸುಖೆಯಲ್ಲಿ ಮರುಳು ಸ್ತ್ರೀಮುಖದಿ|
ಕೊಳ್ಳುವರು ಬಾಧೆ ದಾಸಾರ್ಯ ||೨೬||

ತ್ರಿ:— ಸೋರುವಾ ಮುಖತಾನು ಚಾರುತರ ತೋರುತ್ತ|
ಮಾರನಿಗೆ ವಶವು ಮಾನವ ತಾನಾಗುತ|
ಜಾರಿ ಬೀಳುವನು ದಾಸಾರ್ಯ ||೨೭||

---

—ಪಂಜಾಬಿನ ಮುಖ್ಯ ಮಂತ್ರಿಗಳಾದ ಸರ್. ಸಿಕಂದರ ಹಯಾತಖಾನರು ಬ್ಯಾ ಜಿನ್ನಾರ ಪಕ್ಷದಲ್ಲಿ ಸೇರಿದ್ದರಿಂದ ಪಂಜಾಬಿ ಹಿಂದುಗಳು ಸಂಘಟನೆಗಾಗಿ ಹೆಚ್ಚು ಪ್ರಯತ್ನಿಸಬೇಕೆಂದು ರಾಜಾ ನರೇಂದ್ರನಾಥರು ನವಂಬರ ೭ ನೆಯ ತಾರೀಖಿಗೆ ಲಾಹೋರಿನಲ್ಲಿ ಹಿಂದುಗಳ ಪರಿಷತ್ತನ್ನು ಕೂಡಿಸುತ್ತಿದ್ದಾರೆ.

## ಮೈಸೂರು ಸರಕಾರದ ದಬ್ಬಾಳಿಕೆ.

—ಮೈಸೂರು ಸರಕಾರದ ದಬ್ಬಾಳಿಕೆ ವಿಪರೀತವಾಗಿದೆ. ಜನವಾಣಿ ಎಂಬ ದಿನ ಪತ್ರಿಕೆಯ ಪ್ರಕಟನೆಗೆ ಪ್ರತಿಬಂಧಗೊಳಿಸಿತು.

—ಮೈಸೂರು ಸರಕಾರದ ದಬ್ಬಾಳಿಕೆಯನ್ನು ನಿಷೇಧಿಸಲು ಬೆಂಗಳೂರು, ಮೈಸೂರು, ದಾವಣಗೆರೆ, ಶಿವಮೊಗ್ಗ, ಸಾಗರ ಮೊದಲಾದ ಆ ಪ್ರಾಂತದ ಎಲ್ಲ ಪ್ರಮುಖ ಸ್ಥಳಗಳಲ್ಲಿಯೂ ಹರತಾಳ ಆಚರಿಸಲ್ಪಟ್ಟಿತು.

—ಶಿವಮೊಗ್ಗೆಯಲ್ಲಿ ಡಾ. ಪಾರ್ಥ ನಾರಾಯಣ ಪಂಡಿತ ಶ್ರೀ. ಮರಿಸ್ವಾಮಿ ಹಿರೇಮಠ ಮೊದಲಾದ ೬ ಜನ ಪ್ರಮುಖರ ಮೇಲೆ ಪೋಲಿಸ್ ಶಾಸನದ ೩೯ ನೆಯ ನಿಯಮವನ್ನು ಅಲ್ಲಿಯ ಸರಕಾರವು ಹೇರಿತು.

—ಸುಪ್ರಸಿದ್ಧ ಹಿಂದಿ ಸಂಗೀತಗಾರರಾದ ಪ್ರೊಫೆಸರ್ ಅಬ್ದುಲ್ ಕರೀಮಖಾನರು ಮದ್ರಾಸಿನಿಂದ ಪಾಂಡಿಚೇರಿಗೆ ಹೋಗುತ್ತಿದ್ದಾಗ ಗಾಡಿಯಲ್ಲಿಯೇ ಹೃದಯಕ್ರಿಯೆ ನಿಂತು ಮೃತಪಟ್ಟರೆಂದು ತಿಳಿಸಲು ಅತ್ಯಂತ ವಿಷಾದಿಸುತ್ತೇವೆ.

## ಶ್ರೀ ವಿದ್ಯಾರಣ್ಯ ಸಮಿತಿ ಬೆಳಗಾವ.

### ಶ್ರೀ ವಿದ್ಯಾರಣ್ಯ ಗ್ರಂಥಮಾಲಾ ಬೆಳಗಾವ.

೧ ನೇ ಹೂವು ಚುರಮುರಿ ಶಾಕುಂತಲ ನಾಟಕವು
೨ ನೇ ಹೂವು ಪುನರ್ಜನ್ಮ ಎರಡೂ ಅರಳಿವೆ.
೩ ನೇ ಹೂವು "ತಾಯಿ" ಅಚ್ಚಿನಲ್ಲಿದೆ. ಡಿಸೆಂಬರ ತಿಂಗಳ ಕೊನೆಯಲ್ಲಿ ಅರಳುವದು.

ವಾ. ಚ. ಅ. ವೆ. ಸೇರಿ ೩-೦-೦ ರೂ. ಗಳು
ಸಂಪಾದಕರು— ವಿ. ರಾ. ನಗರ.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣಮಂದಿರದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರ, ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ, ಶರಣನಾರಾರಿಗೂ ಅಂಜುವವನಲ್ಲ !
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ‖ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೧೫ನೆಯ ನವ್ಹಂಬರ್ ೧೯೩೭. | ಸಂಚಿಕೆ೧೨

ಜನಸೇವೆಯೇ — ದೇವರಸೇವೆ.

## ಭಾಯೀಜಿಯವರಿಗೆ ಶಿಕ್ಷೆ.

ಭಾಯಿ ಬಾಟಲಿವಾಲಾ ಇವರ ಮೇಲೆ ನಡೆದ
ರಾಜದ್ರೋಹದ ವ್ಯಾಜ್ಯದಲ್ಲಿ ನೆಲ್ಲೂರು ಸೆಶನ್ಸ್ ಜಜ್ಜರು
ಆರು ತಿಂಗಳ ಸಾದಾ ಶಿಕ್ಷೆಯನ್ನು ವಿಧಿಸಿದರು.

---

## ಘನ ಘೋರ ಯುದ್ಧ !

ಸ್ಪೇನದಲ್ಲಿ ದೊಂಬೆಗಾರರಿಗೂ ಸರಕಾರ ಪಕ್ಷದವರಿಗೂ ಇಷ್ಟರಲ್ಲೇ
ಘನ ಘೋರ ಯುದ್ಧ ಪ್ರಾರಂಭವಾಗುವುದು.
ಅದರಲ್ಲಿ ಏಳು ಲಕ್ಷ ಸೈನ್ಯ ಸೇರುವುದು !

ಚೀನ - ಜಪಾನ ಯುದ್ಧದಲ್ಲಿ ಜಪಾನ ಸೈನ್ಯವು ಮುಂದರಿಯುತ್ತಾ
ನಾಂಟಾವ ಸ್ವಾಧೀನಪಡಿಸಿಕೊಂಡಿತು.

---

## ಈ ವಾರದ ಪತ್ರಿಕೆಯಲ್ಲೇನಿದೆ ?

(೧) ಕಾಂಗ್ರೆಸ್ಸಿನ ಬಲ ಹೆಚ್ಚುತೇಕೆ ?
(೨) ಕಾಂಗ್ರೆಸ್ ಕೆಲಸಗಾರರ ಶುದ್ಧೀಕರಣ!
(೩) ಜೀವನಶಾಸ್ತ್ರ ಮತ್ತು ವರ್ಣಭೇದ.
(೪) ಜಾತಿನಿಷ್ಠೆ ಮತ್ತು ಜಾತ್ಯಂಧತೆ.
(೫) ಜಾತಿನಿಷ್ಠೆಯ ಹಿತಾಹಿತಗಳು.
(೬) ಬಸವಣ್ಣನವರ ಕರ್ಮಯೋಗ.

ದೇಹವೇ — ದೇವಾಲಯ.



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೧೫ನೆಯ ನವ್ಹಂಬರ್ ೧೯೩೭. | ಸಂಚಿಕೆ ೧೩


## ಮಹತ್ವದ ಸುದ್ದಿಗಳು.

—ಕರ್ನಾಟಕ ಏಕೀಕರಣಕ್ಕೆ ಅಖಿಲಭಾರತ ಕಾಂಗ್ರೆಸ್ ಕಮಿಟಿಯು ಒಪ್ಪಿಗೆಯನ್ನು ಕೊಟ್ಟಿತು. ಕನ್ನಡಿಗರ ಪ್ರಯತ್ನ ಈಗ ಹೆಚ್ಚಾಗಬೇಕು.

—ಮೈಸೂರು ಸರಕಾರದ ದಬ್ಬಾಳಿಕೆಯನ್ನು ಅಖಿಲಭಾರತ ಕಾಂಗ್ರೆಸ್ ಕಮಿಟಿಯು ನಿಷೇಧಿಸಿತು.

—ಬಿಜನೂರಲ್ಲಿ ನಡೆದ ಕಾಂಗ್ರೆಸ್ ಮತ್ತು ಮುಸ್ಲಿಂಲೀಗ್ ಚುನಾವಣೆಯ ಹೋರಾಟದಲ್ಲಿ ಮುಸ್ಲಿಂಲೀಗ್ ಸೋತಿತು. ಕಾಂಗ್ರೆಸ್ ಹುರಿಯಾಳುಗಳಾದ ಮಿ. ಹಫೀಜ ಮಹಮ್ಮದರವರಿಗೆ ೫ ಸಾವಿರ ಹೆಚ್ಚು ಮತಗಳು ದೊರೆತು ಆರಿಸಿ ಬಂದರು.

—ಡಾ. ಮುಂಜೆಯವರು ಬಿಜನೂರ ಚುನಾವಣೆಯಲ್ಲಿ ಕಾಂಗ್ರೆಸ್ಸು ವಿಜಯವಾದುದಕ್ಕೆ ಅದನ್ನು ಅಭಿನಂದಿಸಿದ್ದಾರೆ. ಕಾಂಗ್ರೆಸ್ಸಿನಲ್ಲಿ ಹಿಂದು ಮಹಾಸಭೆಯೂ ಸೇರಬೇಕೆಂದು ಇವರ ಅಭಿಪ್ರಾಯವಂತೆ. ಕಾಂಗ್ರೆಸ್ ಫೆಡರೇಶನ್ನಿನಲ್ಲಿ ಸೇರಬೇಕೆಂದೇ ಇವರು ತಿಳಿಸಿದ್ದಾರೆ.

—ದಿಲ್ಲಿಯಿಂದ ಮುಂಬೈಗೆ ವಾರಕ್ಕೆ ಎರಡಾವರ್ತಿ ವಿಮಾನದಿಂದ ಟಪಾಲು ೭ ತಾಸುಗಳಲ್ಲಿ ಬರಲು ಕಳೆದ ೮ ನೆಯ ತಾರೀಖಿನಿಂದ ಪ್ರಾರಂಭವಾಗಿದೆ. ಸುಪ್ರಸಿದ್ಧರಾದ ಟಾಟಾ ಕಂಪನಿಯವರು ಈ ಕಾರ್ಯವನ್ನು ಪ್ರಾರಂಭಿಸಿದ್ದಾರೆ. ಈ ವಿಮಾನು ತಾಸಿಗೆ ೧೮೦ ಮೈಲುಗಳ ವೇಗದಿಂದ ಬರುತ್ತದೆ. ಈ ಎರಡು ಪಟ್ಟಣಗಳ ಅಂತರ ೯೦೦ ಮೈಲು. ಗ್ವಾಲ್ಹೇರ, ಭೋಪಾಳ, ಇಂದೂರು ಮಾರ್ಗವಾಗಿ ಇದು ಬರುತ್ತಿದೆ. ಒಬ್ಬ ಪ್ರವಾಸಿಗೆ ೧೧೦ ರೂ.

—ಇಂಗ್ಲೆಂಡಿನ ಮುಖ್ಯ ಮಂತ್ರಿಗಳಾಗಿ ಸೇವಾನಿವೃತ್ತರಾಗಿದ್ದ ಮಿ. ರಾಮ್ಸೆ ಮೆಕಡೊನಲ್ಡರವರು ದೇಹಾರೋಗ್ಯದ ಸುಧಾರಣೆಗೆಂದು ದಕ್ಷಿಣ ಅಮೇರಿಕೆಗೆ ಹೋಗುತ್ತಿರುವಾಗ ಹಡಗಿನಲ್ಲಿಯೇ ತಾ. ೯ ನೆಯ ಮಧ್ಯರಾತ್ರಿ ಮೃತಪಟ್ಟರೆಂದು ತಿಳಿಸಲು ತುಂಬಾ ವಿಷಾದವಾಗುತ್ತದೆ.

—ಮುಧೋಳ ಸಂಸ್ಥಾನಾಧೀಶರಾದ ಶ್ರೀಮಂತ ನಾನಾಸಾಹೇಬ ಘೋರಪಡೆಯವರು ದೇಹದ ಅನಾರೋಗ್ಯದಿಂದ ರಾಜ್ಯಭಾರವನ್ನು ಬಿಟ್ಟರು. ಇವರಿಗೆ ಈಗ ೫೩. ವರುಷಗಳು ಮಾತ್ರ. ಯುವರಾಜರಿಗೆ ೮ ವರ್ಷ. ರಾಜ್ಯಭಾರವು ರೀಜನ್ಸಿಕೌನ್ಸಿಲ್ಲಿನಿಂದ ನಡೆಯುವುದು.

—ಮದ್ರಾಸ್ ಕಾರ್ಪೊರೇಶನ್‌ದ ಮೇಯರ ಪಟ್ಟವು ಶ್ರೀ. ಶಿವಷಣ್ಮುಖಂ ಇವರಿಗೆ ದೊರೆತಿತು. ಇವರು ಆದಿಹಿಂದುಗಳು. ಕಾಂಗ್ರೆಸ್ ಪಕ್ಷದವರು. ಆದಿಹಿಂದುಗಳಿಗೆ ಈ ಸ್ಥಾನವು ಎಂದೂ ದೊರೆತಿರಲಿಲ್ಲ.

—ಅಖಿಲ ಭಾರತೀಯ ಸಂಸ್ಥಾನಿ ಪ್ರಜಾಪರಿಷತ್ತಿನ ಕಾರ್ಯಕಾರಿಮಂಡಲವು ಮುಂಬೈಯಲ್ಲಿ ತಾ. ೧೦ ನೆಯ ದಿವಸ ಡಾ. ಪಟ್ಟಾಭಿಸೀತಾರಾಮಯ್ಯನವರ ಅಧ್ಯಕ್ಷತೆಯಲ್ಲಿ ಕೂಡಿದ್ದಿತು.

ಮೈಸೂರು ಸಂಸ್ಥಾನದಲ್ಲಿ ನಡೆದ ದಬ್ಬಾಳಿಕೆಯನ್ನು ನಿಷೇಧಿಸಿದರು. ನಿಜಾಮು ರಾಜ್ಯದಲ್ಲಿ ಆದಿ ಹಿಂದುಗಳನ್ನು ಸಾಮೂಹಿಕವಾಗಿ ಮುಸಲ್ಮಾನ್ ಧರ್ಮಕ್ಕೆ ಸೇರಿಸಿಕೊಳ್ಳುವ ರೀತಿಯನ್ನು ಖಂಡಿಸಿದರು.

—ಕಳೆದ ಶಾಸನಭಂಗದ ಕಾಲಕ್ಕೆ ಗುಜರಾಥ ಮತ್ತು ಕರ್ನಾಟಕದಲ್ಲಿ ಕೆಲವರ ಭೂಮಿಯನ್ನು ಸರಕಾರಕ್ಕೆ ಸೇರಿಸಿಕೊಳ್ಳಲಾಗಿತ್ತು. ೭೫೦ ಎಕರೆ ಭೂಮಿಯನ್ನು ಆಯಾಯ ಭೂಮಿಗಳ ಯಜಮಾನರಿಗೆ ಕಾಂಗ್ರೆಸ್ ಸರಕಾರವು ಬಿಟ್ಟುಕೊಟ್ಟಿತು.

—ಸಂಯುಕ್ತ ಪ್ರಾಂತದ ವಿದ್ಯಾರ್ಥಿಗಳಿಗೆ ರಾಜಕಾರಣದಲ್ಲಿ ಪ್ರವೇಶಿಸಲು ಇದ್ದ ಪ್ರತಿಬಂಧವನ್ನು ಕಾಂಗ್ರೆಸ್ ಸರಕಾರವು ತೆಗೆದುಹಾಕಿತು.

# ಜೀವನ ಶಾಸ್ತ್ರ ಮತ್ತು ವರ್ಣಭೇದ.

(ಡಾ. ಅಂಬೇಡಕರರ ಭಾಷಣ.)



ಹಿಂದು ಸಮಾಜದಲ್ಲಿರುವ ಬ್ರಾಹ್ಮಣಾದಿ ವರ್ಣಗಳು ಈ ಸಮಾಜದ ನಾಶಕ್ಕೇನೇ ಕಾರಣವಾಗಿವೆ. ಹೀಗೆ ತನ್ನ ಏರ್ಪಾಟುಗಳಿಂದ ತಾನೇ ನಾಶಹೊಂದುವಂತಹ ಸಮಾಜವು ಜಗತ್ತಿನಲ್ಲಿ ಜೀಡೊಂದಿಲ್ಲ. ಜಗತ್ತಿನ ಯಾವ ಜನಾಂಗದಲ್ಲಿಯೂ ಈ ವರ್ಣಗಳ ಏರ್ಪಾಟು ಇಲ್ಲವೇ ಇಲ್ಲ.

ಈ ರಾಕ್ಷಸೀ ವರ್ಣವ್ಯವಸ್ಥೆಯು ಜನಾಂಗದ ಶಕ್ತಿಯನ್ನೇ ಕ್ಷೀಣಗೊಳಿಸಿದೆ. ಕೆಲವು ಜನರ ಹಿತಕ್ಕಾಗಿಯೇ ಬಹು ಜನರು ನಿರಾಯುಧರೂ ದರಿದ್ರರೂ ಆಗಿ ಜೀವಿಸಬೇಕಾಯಿತು. ವರ್ಣವ್ಯವಸ್ಥೆಯನ್ನು ಸ್ಥಿರಗೊಳಿಸಲು ಬ್ರಾಹ್ಮಣರು ಕ್ಷತ್ರಿಯರ ನಿರ್ಮೂಲಕ್ಕಾಗಿ ಎಷ್ಟು ಸಾರೆ ಪ್ರಯತ್ನಿಸಿಲ್ಲ? ಕ್ಷತ್ರಿಯರು ಬ್ರಾಹ್ಮಣರ ವರ್ಚಸ್ಸನ್ನು ಹಾಳುಮಾಡಲು ಎಷ್ಟು ಸಾರೆ ಹೋರಾಡಿಲ್ಲ? ಈ ಅಂತಃ ಕಲಹದಿಂದ ಜನಾಂಗ ನಿರ್ವೀರ್ಯವಾಗಲಿಲ್ಲವೆ?

ಈ ದುಷ್ಟ ವರ್ಣವ್ಯವಸ್ಥೆಯನ್ನು ತೆಗೆದೊಗೆಯಲು ಬೇರೆಯವರಿಗೆ ಅವಕಾಶವೇ ಇರಲಿಲ್ಲ. ಹಾಗೆ ಮಾಡಬೇಕಾದರೆ ಕ್ರಾಂತಿಯೇ ಅಗತ್ಯ. ಕ್ರಾಂತಿಗಾದರೋ ಶಸ್ತ್ರಬಲ ಬೇಕು. ಬೇರೆಯವರಿಗೆ ಶಸ್ತ್ರವನ್ನಿಡಲು ಅಧಿಕಾರವೇ ಇರಲಿಲ್ಲ. ಹಿಂದು ಜನಾಂಗದ ದುರ್ಗತಿಗೆ ವರ್ಣವ್ಯವಸ್ಥೆಯ ವಿನಾ ಬೇರೆಯಾವುದೂ ಅಷ್ಟು ಕಾರಣವಾಗಿಲ್ಲ. ಹೀಗಿದ್ದರೂ ಈಗಲೂ ಬಹು ಜನರು ವರ್ಣಗಳ ಅವಶ್ಯಕತೆಯನ್ನೇ ಪ್ರತಿಪಾದಿಸುತ್ತಿರುವುದು ಆಶ್ಚರ್ಯವಲ್ಲವೆ? ವ್ಯಕ್ತಿ ಸ್ವಾತಂತ್ರ್ಯವನ್ನೇ ನಿರ್ಮೂಲಮಾಡಿ ಸದ್ಗುಣ, ಶೌರ್ಯ, ಸಂಪತ್ತುಗಳ ಅಭಿವೃದ್ಧಿಯನ್ನೇ ಕುಂಠಿತಗೊಳಿಸಿದ್ದು ಈ ವರ್ಣವ್ಯವಸ್ಥೆ.

## ರಕ್ತ ಶುದ್ಧಿಗಾಗಿ ವರ್ಣಗಳಿವೆ!

ಬ್ರಾಹ್ಮಣಾದಿ ವರ್ಣಗಳು ಇರಲೇಬೇಕೆಂದು ಹೇಳುವವರು ರಕ್ತ ಶುದ್ಧಿಯ ವಿಷಯವನ್ನು ಮುಂದೆ ಮಾಡುತ್ತಿದ್ದಾರೆ. ಜೀವನ ಶಾಸ್ತ್ರದಲ್ಲಿ ರಕ್ತ ಶುದ್ಧಿಯು ಮುಖ್ಯವೆಂದೂ ವರ್ಣವ್ಯವಸ್ಥೆಯಿಂದಲೇ ಅದು ಸಾಧ್ಯವೆಂದೂ ಅವರ ಹೇಳಿಕೆ. ಈಗಿನ ಹಿಂದು ಸಮಾಜದ ಬ್ರಾಹ್ಮಣಾದಿ ವರ್ಣದವರಲ್ಲಿ ರಕ್ತ ಶುದ್ಧಿಯು ಹೇಗಿದೆ ಎಂಬುದನ್ನು ಈ ಕೆಳಗಿನ ಸಂಗತಿಯಿಂದಲೇ ತಿಳಿದುಕೊಳ್ಳಬಹುದು. ಶ್ರೀಯುತ ಡಿ. ಆರ್. ಭಾಂಡಾರಕರ ಇವರು "ಹಿಂದು ಜನರಲ್ಲಿ ವಿದೇಶಿ ತತ್ವ" (Foreign Elements in the Hinbu Population) ಎಂಬ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ—

"ಹಿಂದುಸ್ಥಾನದ ಯಾವ ಸಮಾಜ ಅಥವಾ ವರ್ಗದಲ್ಲಿಯೂ ವಿದೇಶಿ ರಕ್ತವು ಕೂಡಿಲ್ಲವೆಂದು ಹೇಳಲಿಕ್ಕೆ ಬರುವಂತಿಲ್ಲ. ರಜಪುತ ಮತ್ತು ಮರಾಠಾ ಯುದ್ಧಪ್ರಿಯ ಸಮಾಜಗಳಲ್ಲಿ ಮಾತ್ರವೇ ವಿದೇಶಿ ರಕ್ತ ಕೂಡಿದೆಯೆಂದಲ್ಲ; ಬ್ರಾಹ್ಮಣ ವರ್ಣದಲ್ಲಿಯೂ ಕೂಡಿದೆ. ಹೀಗಿದ್ದರೂ ಅನೇಕರು ತಮ್ಮಲ್ಲಿ ವಿಜಾತೀಯ ರಕ್ತ ಕೂಡಿಲ್ಲವೆಂಬ ತಪ್ಪು ತಿಳುವಳಿಕೆಯುಳ್ಳವರೇ ಆಗಿದ್ದಾರೆ."

ವರ್ಣವ್ಯವಸ್ಥೆಯು ಭಿನ್ನ ಭಿನ್ನ ಜಾತಿಗಳ ರಕ್ತ ಮಿಶ್ರಣವನ್ನು ತಡೆಯಿತೆಂದೇ ಅನೇಕರು ಹೇಳುತ್ತಿದ್ದಾರೆ. ಇದು ತಪ್ಪು ತಿಳುವಳಿಕೆ. ಹಿಂದುಸ್ಥಾನದ ನಾನಾ ಜಾತಿಗಳಲ್ಲಿ ಪರಸ್ಪರ ರಕ್ತ ಸಂಬಂಧವಾದಮೇಲೆಯೇ ವರ್ಣಗಳು ಉಂಟಾದವು. ಪಂಜಾಬಿ ಬ್ರಾಹ್ಮಣರಿಗೂ ಮದ್ರಾಸಿ ಬ್ರಾಹ್ಮಣರಿಗೂ ಯಾವ ವಂಶ ಸಂಬಂಧವಿದೆ? ಬಂಗಾಲದ ಅಸ್ಪೃಶ್ಯರೂ ಮದ್ರಾಸಿ ಅಸ್ಪೃಶ್ಯರೂ ಒಂದೇ ವಂಶದವರೇ ?

ಪಂಜಾಬಿ ಬ್ರಾಹ್ಮಣರಿಗೂ ಪಂಜಾಬಿ ಮೋಚ್ಚಿಗಾರರಿಗೂ ವಂಶಭೇದವೆಲ್ಲಿದೆ? ಮದ್ರಾಸಿ ಬ್ರಾಹ್ಮಣರಿಗೂ ಮದ್ರಾಸಿ ಪರಿಯಾ ಜನರಿಗೂ ಯಾವ ವಂಶಭೇದವಿದೆ? ಆಯಾಯ ಪ್ರಾಂತಗಳ ಬ್ರಾಹ್ಮಣರು ಮತ್ತು ಅಸ್ಪೃಶ್ಯರು ಒಂದೇ ವಂಶಜರಿದ್ದಾರೆ. ಆದ್ದರಿಂದ ವರ್ಣಭೇದವು ವಂಶಭೇದವನ್ನು ತೋರಿಸುವುದಿಲ್ಲ. ಅದು ಸಾಮಾಜಿಕ ವಿಷಮತೆಯನ್ನು ತೋರಿಸುತ್ತದೆ. ಮನುಷ್ಯನಿಗೂ ಪಶುಗಳಿಗೂ ಹೇಗೆ ಭಿನ್ನತ್ವವುಂಟೋ ಹಾಗೆ ಮನುಷ್ಯ ಮನುಷ್ಯರಲ್ಲಿಯೂ ಭಿನ್ನತ್ವವುಂಟೆಂದು ವೈಜ್ಞಾನಿಕರು ಎಲ್ಲಿಯೂ ಹೇಳಿಲ್ಲ.

ವರ್ಣಭೇದವು ಸುಸಂತಾನೋತ್ಪತ್ತಿಯ ತತ್ವಕ್ಕನುಗುಣವಾಗಿ ಏರ್ಪಟ್ಟದೆಯೆಂದು ಕೆಲವರು ಹೇಳುತ್ತಿದ್ದಾರೆ. ಇದಾದರೂ ತಪ್ಪು ಅಭಿಪ್ರಾಯವೇ ಸರಿ. ಮನುಷ್ಯನ ಶ್ರೇಷ್ಠತರ ವಿಚಾರ ಶೀಲಾದಿಗಳು ಸುಸಂತಾನಕ್ಕೆ ಕಾರಣವಾಗಿವೆಯೇ ವಿನಾ ಒಂದೇ ವರ್ಣದವರೆಲ್ಲಾ ಒಳ್ಳೆಯವರೇ ಆಗುತ್ತಾರೆಂಬುದು ಅನುಭವಕ್ಕೂ ವಿರುದ್ಧವಾದುದಾಗಿದೆ. ಹಿಂದು ಸಮಾಜದಲ್ಲಿಯ ೧೦೦ ಕ್ಕೆ ೯೦ ಜನರು ಸೈನ್ಯಶಾಖೆಯಲ್ಲಿ ಸೇರಲು ಅಸಮರ್ಥರಿರುತ್ತಾರೆಂಬ ಒಂದೇ ಒಂದು ದೃಷ್ಟಾಂತವು ಇವರ ಹೇಳಿಕೆಯನ್ನು ಖಂಡಿಸುತ್ತದೆ. ವರ್ಣಭೇದವು ಸ್ವಾರ್ಥಕ್ಕಾಗಿ ದುರುದ್ದೇಶದಿಂದಲೇ ಏರ್ಪಟ್ಟದ್ದಾಗಿದೆ. ಇದು ಹಿಂದು ಸಮಾಜವನ್ನು ಛಿನ್ನ ವಿಚ್ಛಿನ್ನಗೊಳಿಸಿದೆ.

## ಆದಿಮ ನಿವಾಸಿಗಳು.

ಹಿಂದುಸ್ಥಾನದಲ್ಲಿ ಆದಿಮ ನಿವಾಸಿಗಳು ಸಾಧಾರಣ ೧೩ ಲಕ್ಷ ಜನರು ಮಾತ್ರ ಇದ್ದಾರೆ. ಇವರು ಬಹು ಕಾಡು ಸ್ಥಿತಿಯವರು. ಇವರಿಗೆ "ಕ್ರಿಮಿನಲ್ ಟ್ರೈಬ್ಸ್" ಎಂದು ಹೇಳುತ್ತಾರೆ. ಹಿಂದು ಸಮಾಜವು ತಾನು ನಾಗರಿಕ ಸಮಾಜವೆಂದು ಹೇಳಿಕೊಳ್ಳುತ್ತದೆ. ಇಂಥ ಸಮಾಜದ ಮಧ್ಯದಲ್ಲಿ ಈ ಕಾಡು ಜನರು ಸಾವಿರಾರು ವರುಷಗಳಿಂದ ಹೀಗೆಯೇ ಅನಾಗರಿಕ ಸ್ಥಿತಿಯಲ್ಲಿರುವುದೇಕೆ? ಅವರಲ್ಲಿ ಸೇರಿ ಅವರ ನಡೆನುಡಿಗಳನ್ನು ತಿದ್ದಿ ಅವರನ್ನೇಕೆ ನಾಗರಿಕರನ್ನಾಗಿ ಮಾಡಿಲ್ಲ? ವರ್ಣಭೇದವು ಇವರಿಗೆ ಇಂತಹ ಕಾರ್ಯಕ್ಕೆ ಅವಕಾಶವನ್ನು ಕೊಡುವುದಿಲ್ಲ. ಸವರ್ಣಗಳು ತಮ್ಮ ವರ್ಣದ ಹೆಚ್ಚುಗಾರಿಕೆಯಲ್ಲಿಯೇ ಇದ್ದಾರೆ.

ಈ ಜನರನ್ನು ಕ್ರಿಸ್ತ ಪಾದ್ರಿಗಳು ಬಹು ಪ್ರಯತ್ನಪೂರ್ವಕ ಸುಧಾರಿಸಿ ತಮ್ಮ ಮತದಲ್ಲಿ ಸೇರಿಸಿಕೊಳ್ಳುತ್ತಿದ್ದಾರೆ. ಇದರಿಂದ ಹಿಂದುಗಳ ವಿರೋಧಿ ಸೈನ್ಯವು ಹೆಚ್ಚುತ್ತಲಿದೆ ವರ್ಣಭೇದದಿಂದ ಆಗುತ್ತಿರುವ ಅನರ್ಥಗಳಲ್ಲಿ ಇದೂ ಒಂದಾಗಿದೆ.

---

## ಜಾತಿನಿಷ್ಠೆ ಮತ್ತು ಜಾತ್ಯಂಧತೆ.

ಮುಸ್ಲಿಂಲೀಗಿನ ಲಖನೌ ಪರಿಷತ್ತಿನಲ್ಲಾದ ಬ್ಯಾ. ಜಿನ್ನಾರವರ ಭಾಷಣ ಮತ್ತು ಗೊತ್ತುವಳಿಗಳಿಂದ ಜಾತಿನಿಷ್ಠೆಯ ವಿಚಾರವಾಗಿ ಪತ್ರಿಕೆಗಳಲ್ಲಿ ವಿಶೇಷ ಚರ್ಚೆ ನಡೆದಿದೆ. ಪಂ. ಜವಾಹರಲಾಲರು ಶ್ರೀ. ಸತ್ಯಮೂರ್ತಿಗಳು ಮೊದಲಾದ ಮುಖಂಡರು ಭಾಯಿ ಪರಮಾನಂದರನ್ನೂ ಬ್ಯಾ. ಜಿನ್ನಾರವರನ್ನೂ ಒಂದೇ ಸಾಲಿನಲ್ಲಿ ನಿಲ್ಲಿಸಿದ್ದಾರೆ. ಮುಸ್ಲಿಂಲೀಗ್ ಮತ್ತು ಹಿಂದು ಮಹಾಸಭೆ ಇವೆರಡೂ ಒಂದೇ ವಿಧವಾದ ಸಂಸ್ಥೆಗಳೆಂತಲೂ ಹೇಳುತ್ತಿದ್ದಾರೆ. ಆದುದರಿಂದ ಬಹುಜನರಿಗೆ ಹಿಂದು ಮಹಾಸಭೆಯ ವಿಷಯದಲ್ಲಿ ತಪ್ಪು ತಿಳುವಳಿಕೆಯುಂಟಾಗುವಂತಿದೆ. ಅಂತೆಯೇ ನಾವು ಈ ವಿಷಯವನ್ನು ಇಲ್ಲಿ ಪ್ರಸ್ತಾಪಿಸಿದ್ದೇವೆ.

ಜಾತಿನಿಷ್ಠೆ ಮತ್ತು ಜಾತ್ಯಂಧತೆಗಳಲ್ಲಿ ಮಹತ್ವದ ವ್ಯತ್ಯಾಸವಿದೆ. ಹಿಂದು ಮಹಾಸಭೆಯಾಗಲಿ ಅಥವಾ ಭಾಯಿ ಪರಮಾನಂದರಾಗಲಿ ಹೇಳುತ್ತಿರುವುದು ಜಾತ್ಯಂಧತೆಯಿಂದಲ್ಲ. ಜಾತಿನಿಷ್ಠೆಯಿಂದ. ಮುಸಲ್ಮಾನರಿಗಿಂತ ಹಿಂದುಗಳು ಸಂಖ್ಯೆಯಲ್ಲಿ ಅಧಿಕರಾಗಿದ್ದಾರೆಂದಾಗಲಿ ಅಥವಾ ಅವರೇ ಈ ದೇಶದ ಮೂಲನಿವಾಸಿಗಳೆಂದಾಗಲಿ ತಿಳಿದು ಮುಸಲ್ಮಾನರಿಗಿಂತ ತಮಗಾಗಿಯೇ ಯಾವ ಹೆಚ್ಚು ಅನುಕೂಲ ಹಕ್ಕು ಬಾಧ್ಯತೆಗಳಿರಬೇಕೆಂದು ಭಾಯಿ ಪರಮಾನಂದರಾಗಲಿ ಅಥವಾ ಹಿಂದು ಮಹಾಸಭೆಯಾಗಲಿ ಹೇಳುತ್ತಾ ಇಲ್ಲ.

ಮೂರು ಬಣ್ಣಗಳ ರಾಷ್ಟ್ರೀಯ ಧ್ವಜದಲ್ಲಿ ಮುಸಲ್ಮಾನರ ಹಸರು ಬಣ್ಣವನ್ನೇಕೆ ಸೇರಿಸಿದ್ದೀರೆಂದು ಅವರು ಆಕ್ಷೇಪಿಸುವುದಿಲ್ಲ. ಉರ್ದು ಭಾಷೆಯ ಶಿಕ್ಷಣಕ್ಕೆ ಮುಸಲ್ಮಾನರಿಗೆ ಅವಕಾಶ ಕೊಡಬೇಡಿರೆಂದು ಹೇಳುತ್ತಾ ಇಲ್ಲ. ಹಿಂದುಗಳಿಗಾಗಿಯೇ ಇಂತಹ ಒಂದು ಹೆಚ್ಚಿನ ಹಕ್ಕು ಬಾಧ್ಯತೆಗಳನ್ನು ಅವರು ರಾಜಕಾರಣದಲ್ಲಿ ಕೇಳುತ್ತಾ ಇಲ್ಲ. ಎಂದಮೇಲೆ ಭಾಯಿಜಿಯವರನ್ನೂ ಮುಸಲ್ಮಾನರಿಗಾಗಿಯೇ ಹೆಚ್ಚು ಸುಖ ಸೌಲಭ್ಯ ಬಾಧ್ಯತೆಗಳನ್ನು ಕೇಳುವ ಸಾಹೇಬರನ್ನೂ ಒಂದೇ ಸಾಲಿನಲ್ಲಿ ನಿಲ್ಲಿಸುವುದು ಯುಕ್ತವೆ? ವಂದೇಮಾತರಂ ಗೀತೆ, ಹಿಂದಿ ಭಾಷೆ, ರಾಷ್ಟ್ರಧ್ವಜಗಳ ಸಂಬಂಧವಾಗಿ ಬ್ಯಾ. ಜಿನ್ನಾರವರು ಮಾಡಿದ ಆಕ್ಷೇಪಣೆಗಳು ಭಾಯಿ ಪರಮಾನಂದರ ಯಾವ ವಿಚಾರಗಳಿಗೆ ಸಮಾನವಾದವುಗಳಿವೆ?

ಬ್ಯಾ. ಜಿನ್ನಾರವರು ಕಾಂಗ್ರೆಸ್ಸನ್ನು ಆಕ್ಷೇಪಿಸುತ್ತಿರುವುದರಿಂದ ಕಾಂಗ್ರೆಸ್ಸನ್ನು ಆಕ್ಷೇಪಿಸುವವರೆಲ್ಲಾ ಅವರ ವರ್ಗಕ್ಕೆ ಸೇರಿದವರೆಂದು ಹೇಳಬಹುದೆ? ಆಕ್ಷೇಪಿಸುವವರ ಉದ್ದೇಶ, ರೀತಿ ನೀತಿಗಳು ಭಿನ್ನವಾಗಿರುವಂತೆ ಅವರವರ ಸ್ಥಾನಮಾನಗಳೂ ಭಿನ್ನವಾಗಿರಲೇ ಬೇಕಷ್ಟೆ. ಕಾಂಗ್ರೆಸ್ಸು ಮುಸಲ್ಮಾನರಿಗಾಗಿ ಇನ್ನೂ ಹೆಚ್ಚಿನ ಅನುಕೂಲ ಹಕ್ಕು ಬಾಧ್ಯತೆಗಳನ್ನು ಕೊಡಬೇಕೆಂದು ಬ್ಯಾ. ಜಿನ್ನಾರವರು ಕೇಳುತ್ತಿದ್ದಾರೆ. ಹಾಗೆ ಕೊಡದೆ ಇದ್ದುದರಿಂದ ಅವರು ಕಾಂಗ್ರೆಸ್ಸನ್ನು ಆಕ್ಷೇಪಿಸುತ್ತಿದ್ದಾರೆ. ರಾಷ್ಟ್ರ ವಿಘಾತಕವಾದ ಜಾತಿ ನಿರ್ಣಯದ ಗೊತ್ತುವಳಿಯನ್ನು ಬ್ಯಾ. ಜಿನ್ನಾರವರು ಅಸೆಂಬ್ಲಿಯಲ್ಲಿ ಠರಾವುಮಾಡಿಸಿಕೊಳ್ಳುತ್ತಿದ್ದಾಗ ಕಾಂಗ್ರೆಸ್ಸು ವಿರೋಧಿಸದೆ ಮೌನವಾಗಿದ್ದುದೇ ಅವರಿಗೆ ಸಾಲದು. ಜಾತಿ ನಿರ್ಣಯಕ್ಕೆ ಒಪ್ಪಿಗೆಯನ್ನು ಕಾಂಗ್ರೆಸ್ಸು ಕೊಡಬೇಕೆಂದೇ ಅವರ ಇಚ್ಛೆ. ಹಿಂದುಸ್ಥಾನದಲ್ಲಿ ರಾಜಕೀಯ ದೃಷ್ಟಿಯಿಂದ ಮುಸಲ್ಮಾನರ ಪ್ರತ್ಯೇಕ ಸ್ಥಾನಮಾನಗಳನ್ನು ಕಾದಿಡಲು ಕಾಂಗ್ರೆಸ್ಸು ಸಮ್ಮತಿಸಬೇಕೆಂದೇ ಅವರ ಅಭಿಪ್ರಾಯ. ಈ ತಮ್ಮ ಇಷ್ಟಕ್ಕೆ ಕಾಂಗ್ರೆಸ್ಸು ಸಂಪೂರ್ಣ ಒಳಗಾಗದಿದ್ದುದರಿಂದ ಅವರು ಕಾಂಗ್ರೆಸ್ಸಿನ ಮೇಲೆ ಸಲ್ಲದ ಆಕ್ಷೇಪಣೆಗಳನ್ನು ಮಾಡುತ್ತಿದ್ದಾರೆ.

ಭಾಯಿ ಪರಮಾನಂದರು ಹಿಂದುಗಳಿಗಾಗಿ ಇಂತಹ ಹೆಚ್ಚಿನ ಸೌಕರ್ಯಗಳನ್ನು ಕಾಂಗ್ರೆಸ್ಸು ಉಂಟುಮಾಡಿಕೊಡಬೇಕೆಂದು ಕೇಳಿದ್ದಾರೆಯೆ? ಹಾಗೆ ಉಂಟುಮಾಡಿಕೊಡುವುದಿಲ್ಲವಾದುದರಿಂದ ಅದನ್ನು ಆಕ್ಷೇಪಿಸುತ್ತಿದ್ದಾರೆಯೋ? ಹಾಗೆ ಮಾಡಿದ್ದರೆ ಇಬ್ಬರೂ ಒಂದೇ ಸಾಲಿನಲ್ಲಿರುವವರಾಗುತ್ತಿದ್ದರು. ಇಬ್ಬರೂ ಜಾತ್ಯಂಧರೆಂದೇ ಹೇಳಬಹುದಾಗಿತ್ತು.

ಮುಸಲ್ಮಾನರಿಗಾಗಿಯೇ ' ಕಾಂಗ್ರೆಸ್ಸು ಹೆಚ್ಚು ಸೌಲಭ್ಯವನ್ನುಂಟುಮಾಡಿಕೊಡುತ್ತಿದೆಯಲ್ಲಾ! ಅರಾಷ್ಟ್ರೀಯವಾದ ಜಾತಿ ನಿರ್ಣಯವನ್ನು ವಿರೋಧಿಸದೆ ಮೌನವಾಗಿದ್ದಿತಲ್ಲಾ! ಇದರಿಂದ ಅವರ ಜಾತ್ಯಂಧತೆ ಹೆಚ್ಚಿ ಹಿಂದು ಜನಾಂಗಕ್ಕೆ ಅನರ್ಥ ಸಂಭವಿಸುವುದಲ್ಲದೆ ಹಿಂದುಸ್ಥಾನಕ್ಕೂ ಅಹಿತವಾಗುತ್ತದಲ್ಲಾ! ಆದುದರಿಂದ ಹೀಗೆ ಮಾಡಬಾರದೆಂದೇ ಭಾಯಿಜಿಯವರು ಕಾಂಗ್ರೆಸ್ಸಿನ ಮೇಲೆ ಮಾಡುತ್ತಿರುವ ಆಕ್ಷೇಪಣೆ. ಭಾಯಿಜಿಯವರಿಗೆ ಹಿಂದು ಜಾತಿಯ ವಿಷಯದಲ್ಲಿ ಆದರಾಭಿಮಾನಗಳಿವೆ. ಅಂತೆಯೇ ಅದು ಬಳಲಬಾರದು, ಅಳಿಯಬಾರದು, ಎಂದು ಹೀಗೆ ಹೇಳುತ್ತಿದ್ದಾರೆ. ಇದರಿಂದ ಅವರಲ್ಲಿ ಜಾತಿನಿಷ್ಠೆಯಿದೆಯೆಂದು ಸ್ಪಷ್ಟವಾಗುತ್ತದೇ ವಿನಾ ಜಾತ್ಯಂಧತೆಯಿದೆಯೆಂದು ತೋರುತ್ತದೆಯೇ?

ಸಾಹೇಬರಿಗಾದರೋ ನ್ಯಾಯವಾದ ರೀತಿಯಲ್ಲಿ ಹಿಂದುಗಳೊಂದಿಗೆ ಕೂಡಿರುವ ಇಷ್ಟವಿಲ್ಲ. ಹಿಂದುಗಳ ಮೇಲಿರಬೇಕೆಂಬ ಮಹತ್ವಾಕಾಂಕ್ಷೆ. ತಾವು ಸಂಖ್ಯೆಯಲ್ಲಿ ಸಣ್ಣವರಾಗಿದ್ದರೂ ಹಿರಿಯರಿಗಿಂತ ಹಿರಿಯರಾಗಿರಬೇಕೆಂಬ ದುರಾಶೆ ಎಲ್ಲೆಲ್ಲಿಯೂ ಜಾತಿಯ ಕಲ್ಪನೆಯನ್ನೇ ಮುಂದುಮಾಡಿ ಸ್ವಾರ್ಥ ಸಾಧಿಸಲು ಹವಣಿಸುತ್ತಿದ್ದಾರೆ. ಅಂತೆಯೇ ಇವರು ಜಾತ್ಯಂಧರು.

ಭಾಯಿ ಪರಮಾನಂದರಲ್ಲಿ ಸ್ವಸಂರಕ್ಷಣೆಯ ವಿಚಾರಸರಣಿಯಿದೆ. ಬ್ಯಾ. ಜಿನ್ನಾರವರಲ್ಲಿ ಆಕ್ರಮಣವೃತ್ತಿಯಿದೆ. ಇವೆರಡೂ ಒಂದೇ ಎಂದು ಹೇಳಬಹುದೆ? ಸ್ವಸಂರಕ್ಷಣೆಯ ವೃತ್ತಿಯು ಜಾತಿನಿಷ್ಠೆ. ಆಕ್ರಮಣವೃತ್ತಿಯು- ಅದು ಯಾವ ರೀತಿಯಲ್ಲಿಯೇ ಇರಲಿ- ಜಾತ್ಯಂಧತೆ. ಇವುಗಳಲ್ಲಿ ಮೊದಲನೆಯದು ನ್ಯಾಯವಾದುದು. ಎರಡನೆಯದು ಅನ್ಯಾಯವಾದುದು. ಇವೆರಡೂ ಒಂದೇ ಎಂದು ಹೇಳಬಹುದೆ?

ಬ್ಯಾ. ಜಿನ್ನಾರವರ ವಿಚಾರಸರಣಿಯನ್ನು ಸಮರ್ಥಿಸುವ ಒಂದು ಲೇಖನವು "V" ಎಂಬ ಲೇಖಕರಿಂದ "ಕಂಠೀರವ" ಪತ್ರಿಕೆಯಲ್ಲಿ ಪ್ರಕಟವಾದುದನ್ನು ಬೇರೆ ಕಡೆ ಕೊಟ್ಟಿದ್ದೇವೆ. ಅದರಲ್ಲಿ ಲೇಖಕರು ಹೇಳಿರುವಂತೆ ಬ್ಯಾ. ಜಿನ್ನಾರವರು ಮುಸ್ಲಿಂ ಜಾತಿನಿಷ್ಠರಾಗಿದ್ದಿದ್ದರೆ ಅವರನ್ನು ಆಕ್ಷೇಪಿಸುವ ಪ್ರಸಂಗವೇ ಇರಲಿಲ್ಲ. ಮುಸಲ್ಮಾನರು ತಮ್ಮ ಜಾತಿಯ ನಿಜವಾದ ಹಕ್ಕು ಬಾಧ್ಯತೆಗಳನ್ನು ಸಂರಕ್ಷಿಸಬಾರದೆಂದಾಗಲಿ ಅಥವಾ ಹಿಂದುಗಳಿಗಾಗಿ ತಮ್ಮ ಧರ್ಮದವರನ್ನು ನಿರ್ಲಕ್ಷಿಸಬೇಕೆಂದಾಗಲಿ ಯಾರೂ ಹೇಳುವುದಿಲ್ಲ. ಆದರೆ ಅನ್ಯಾಯವಾಗಿ ಜಾತಿಯ ಹೆಸರಿನಿಂದ ಸ್ವಾರ್ಥ ಸಾಧಿಸಬಾರದು. ಆದಕ್ಕಾಗಿ ಅರಾಷ್ಟ್ರೀಯ ವೃತ್ತಿಯನ್ನು ಪ್ರಸಾರಗೊಳಿಸಬಾರದು. ಬ್ಯಾ ಜಿನ್ನಾರವರು ಈಗ ಆ ಪ್ರಕಾರ ಮಾಡುತ್ತಿರುವುದರಿಂದ ಅವರು ಜಾತ್ಯಂಧರೆಂದು ಹೇಳಬೇಕಾಗಿದೆ.

# ಜಾತಿನಿಷ್ಠೆಗೆ ಇಬ್ಬರು ಶತ್ರುಗಳು.

### ಭಾಯಿ ಪರಮಾನಂದರ ವಿಚಾರಸರಣಿ

ಭಾಯಿ ಪರಮಾನಂದರು "ಜಾತಿನಿಷ್ಠೆಗೆ ಇಬ್ಬರು ಶತ್ರುಗಳು" ಎಂಬ ಒಂದು ಲೇಖನವನ್ನು "ಹಿಂದು" ಪತ್ರಿಕೆಯಲ್ಲಿ ಬರೆದಿದ್ದಾರೆ. ಅದರ ಮುಖ್ಯಾಂಶ ಹೀಗಿದೆ—

"ಈಗ ಜಾತಿನಿಷ್ಠೆಯು ಎಲ್ಲರಿಂದಲೂ ಹಳಿಯಲ್ಪಡುತ್ತಲಿದೆ. ರಾಜಕಾರಣದ ಮೂಲಾಕ್ಷರಗಳನ್ನು ತಿಳಿಯದವರು ಕೂಡಾ ಜಾತಿನಿಷ್ಠೆಯ ಸಂಬಂಧವಾಗಿ ಸಲ್ಲದ ರೀತಿಯಲ್ಲಿ ಹೇಳುತ್ತಿದ್ದಾರೆ. ನಾನು ಅವರ ಕಲ್ಪನೆಯಂತೆಯೇ ಜಾತಿನಿಷ್ಠೆಯು ಅನರ್ಥಕರವೆಂದೇ ಗ್ರಹಿಸಿ ಅವರಿಗೆ ಪ್ರಶ್ನೆ ಮಾಡುವುದೇನೆಂದರೆ, ಇದನ್ನು ಉಂಟುಮಾಡಿದವರಾರು?

ವ್ಹಾಯಿಸ್‌ರಾಯರಾದ ಲಾರ್ಡ ಲಿನ್ ಲಿಥಗೋರವರು ಮೊನ್ನೆ ಲಾಹೋರಿಗೆ ಬಂದಾಗ ಜಾತಿನಿಷ್ಠೆಯನ್ನು ಹಳಿದು ಅದನ್ನು ಕಳೆಯಲು ಪ್ರಯತ್ನಿಸುತ್ತಿರುವ ಪಂಜಾಬ ಸರಕಾರವನ್ನು ಕೊಂಡಾಡಿದರು. ಹಿಂದುಸ್ಥಾನ ಸರಕಾರದ ಕೃಪಾಪಾತ್ರರಾದ ಒಬ್ಬ ಮಹಾ ವ್ಯಕ್ತಿಗಳೇ ಈ ಜಾತಿನಿಷ್ಠೆಯನ್ನು ಪ್ರಸಾರಗೊಳಿಸುವವರಲ್ಲಿ ಅಗ್ರಗಣ್ಯರೆಂಬುದು ವ್ಹಾಯಿಸ್‌ರಾಯರಿಗೆ ಗೊತ್ತಿಲ್ಲವೆ?

೧೯೦೬-೭ ನೆಯ ಇಸವಿಯಲ್ಲಿ ರಾಜಕೀಯ ಅಸಂತೋಷವುಂಟಾದಾಗ ಆಗಿನ ವ್ಹಾಯಿಸ್‌ರಾಯರಾಗಿದ್ದ ಲಾರ್ಡ ಮಿಂಟೊರವರು ಯುರೋಪಕ್ಕೆ ಹೊರಟು ಎಡನ್‌ದವರೆಗೆ ಹೋಗಿದ್ದ ಸರ್. ಆಗಾಖಾನರನ್ನು ಬರಮಾಡಿಕೊಂಡು ಅವರಿಂದ ಕೂಡಿದ ಒಂದು ಮಂಡಲವನ್ನು ಏರ್ಪಡಿಸಿ ಮುಸಲ್ಮಾನರಿಗಾಗಿಯೇ ವಿಶೇಷಾಧಿಕಾರ ಕೇಳುವಂತೆ ಮಾಡಿದರು. ಅಂದಿನಿಂದಲೇ ಈ ದೇಶದ ರಾಜಕಾರಣದಲ್ಲಿ ಜಾತಿನಿಷ್ಠೆಯ ವಿಷಪ್ರಯೋಗವಾಯಿತು.

ಆ ಮುಂಚೆ ಸರ್ ಸಯ್ಯದ ಅಹಮ್ಮದರವರು ಮುಸಲ್ಮಾನರಿಗಾಗಿಯೇ ರಾಜಕಾರಣದಲ್ಲಿ ಪ್ರತ್ಯೇಕ ವ್ಯವಸ್ಥೆಯಿರಬೇಕೆಂದೂ ಹಿಂದುಗಳ ಸಂಗಡ ರಾಜಕಾರಣದಲ್ಲಿ ಮುಸಲ್ಮಾನರು ಸೇರಬಾರದೆಂದೂ ಪ್ರಯತ್ನಿಸುತ್ತಿದ್ದುದು ಯಾರಿಗೆ ಗೊತ್ತಿಲ್ಲ?

ಹಳೆ ಸಮಾಚಾರ ಹೋಗಲಿ. ಮೊನ್ನೆ ಹೊಸ ಶಾಸನವನ್ನು ಏರ್ಪಡಿಸುವಾಗ ಜಾತಿನಿಷ್ಠೆಯು ರಾಜಕಾರಣದಲ್ಲಿ ಬಾರದಂತೆ ಮಾಡುವುದು ಸರಕಾರದ ಕೈಯಲ್ಲಿಯೇ ಇರಲಿಲ್ಲವೆ? ಸರ್. ಸಮ್ಯುಅಲ್ಲಹೊಅರರು ಭಾರತ ಮಂತ್ರಿಪಟ್ಟದಮೇಲೆ ಕುಳಿತನಂತರ ಪ್ರತಿನಿಧಿಮಂಡಲದಲ್ಲಿಯೂ ಹಿಂದು ಜನರಿಂದ ಅಲ್ಪ ಸಂಖ್ಯಾಕರಾದವರನ್ನು ಬೇರೆ ಮಾಡಿ ಅವರಿಗೆ ವಿಶೇಷಾಧಿಕಾರವನ್ನು ಕೊಡುವ ಯೋಚನೆಯನ್ನೇ ಮಾಡುತ್ತಿದ್ದರು.

"ಜಾಯಿಂಟ್ ಪಾರ್ಲಮೆಂಟ ಕಮಿಟಿ" ಅಧ್ಯಕ್ಷರು ಇದೇ ಲಾರ್ಡ ಲಿನ್ ಲಿಥಗೋರವರೇ ಆಗಿದ್ದರಷ್ಟೆ. ಆಗ ಜಾತಿನಿರ್ಣಯದ ವಿರುದ್ಧವಾಗಿ ಹಿಂದು ಮಹಾಸಭೆಯವರು ಇವರಿಗೇನೇ ತಿಳಿಸಿರಲಿಲ್ಲವೆ? ಈಗ ಕೇಂದ್ರ ಶಾಸನಮಂಡಲದ ಅಧ್ಯಕ್ಷರಾದ ಸರ್. ಅಬ್ದುರ್ ರಹೀಮರು ಆಗ ಹೇಳಿದುದೇನು? "ಜಾತಿ ನಿರ್ಣಯದ ವಿಚಾರವಾಗಿ ಈ ಕಮಿಟಿಯಲ್ಲಿ ವಿಚಾರಣೆ ನಡೆಯುವುದಾದರೆ ನಾನು ಈ ಕಮಿಟಿಯಲ್ಲಿರಲು ಇಷ್ಟಪಡುವುದಿಲ್ಲ." ಎಂಬುದಾಗಿಯೇ ಅಲ್ಲವೆ? ಆಗ ಸುಮ್ಮನಿದ್ದ ಲಾರ್ಡ ಲಿನ್ ಲಿಥಗೋರವರೇ ಈಗ ರಾಜಕಾರಣದಲ್ಲಿ ಜಾತಿನಿಷ್ಠೆಯನ್ನು ನಿವಾರಣೆಮಾಡಲು ಉಪದೇಶ ಮಾಡುತ್ತಿದ್ದಾರಲ್ಲಾ!

ಜಾತಿನಿಷ್ಠೆಯ ಸಂಬಂಧವಾದ ಎರಡನೆಯ ಶತ್ರು ಕಾಂಗ್ರೆಸ್ ಸಂಸ್ಥೆ. ಈ ಸಂಸ್ಥೆಯು ಪ್ರತಿಯೊಂದು ಪ್ರಸಂಗದಲ್ಲಿಯೂ ಜಾತಿನಿಷ್ಠೆಯನ್ನು ಹಳಿಯುತ್ತಲಿದೆ. ಮುಸ್ಲಿಂಲೀಗಿನ ಜತೆಯಲ್ಲಿಯೇ ಹಿಂದು ಮಹಾ ಸಭೆಯನ್ನು ಸೇರಿಸಲು ಇದು ಯಾವಾಗಲೂ ಪ್ರಯತ್ನಿಸುತ್ತದೆ. ಜಾತಿವಾದವನ್ನು ಯಾರು ಪ್ರಾರಂಭಿಸುತ್ತಾರೆಂಬುದು ಇದಕ್ಕೆ ಗೊತ್ತಿಲ್ಲವೆ? ಎರಡು ವರುಷಗಳಹಿಂದೆ ಶಾಹಿದ್‌ಗಂಜ್ ಜಗಳದ ಕಾಲಕ್ಕೆ ನಡೆದ ಸಂಗತಿಯನ್ನೇ ನೋಡಿರಿ. ಆ ಕಾಲದಲ್ಲಿ ಪಂಜಾಬ ಗವ್ಹರ್ನರರ ಹತ್ತಿರ ಒಂದು ಸಮಿತಿಯು ಕೂಡಿದ್ದಿತು. ಅದರಲ್ಲಿ ನಾನೂ ಇದ್ದೆನು. ನಾನು ಗವ್ಹರ್ನರರಿಗೆ ಹೀಗೆ ಆಗ ಕೇಳಿದೆನು.

"ಈ ದಿನದ ದೊಂಬಿಯಲ್ಲಿ ೧೧ ಕಡೆ ಆಕ್ರಮಣ ಮಾಡಲ್ಪಟ್ಟಿತು. ಅವುಗಳಲ್ಲಿ ಒಂದು ಕಡೆಗಾದರೂ ಹಿಂದುಗಳು ಮುಸಲ್ಮಾನರಮೇಲೆ ಆಕ್ರಮಣಮಾಡಿದರೆಂಬುದನ್ನು ತೋರಿಸಬಲ್ಲಿರಾ? ಹಿಂದುಗಳು ಆತ್ಮರಕ್ಷಣೆಗಾಗಿ ಆಕ್ರಮಣವನ್ನು ತಡೆಯುವುದು ಕೂಡಾ ಅನ್ಯಾಯವೆಂದು ಹೇಳುವಿರಾ?"

ಆಗ ಗವ್ಹರ್ನರರು ಡೆಪ್ಟಿ ಕಮಿಶನರಿಗೆ ಈ ವಿಚಾರವಾಗಿ ಉತ್ತರಕೊಡಲು ತಿಳಿಸಿದರು. ಆಗ ಡೆಪ್ಟಿಕಮಿಶನರಾಗಿದ್ದ ಶ್ರೀ. ಎಸ್. ಪ್ರತಾಪ ಇವರು ಹೀಗೆ ಹೇಳಿದರು—

"ಒಂದು ಕಡೆ ಮಾತ್ರ ಶೀಖ ಮತ್ತು ಮುಸಲ್ಮಾನರಿಬ್ಬರೂ ಹೊಡೆದಾಡಲು ಸಿದ್ಧರಾಗಿದ್ದುದೇ ಸರಿ."

ಹಿಂದುಗಳು ಎಂದೂ ಆಕ್ರಮಣಮಾಡಿಲ್ಲ. ಆತ್ಮರಕ್ಷಣೆಗಾಗಿ ಅವರು ಪ್ರಯತ್ನಿಸುವುದು ಕೂಡಾ ನಮ್ಮ "ಇಂಡಿಯನ್ ದೇಶಭಕ್ತ"ರಿಗೆ ಒಪ್ಪಿಗೆಯಿಲ್ಲದೆ ಹಿಂದು ಮಹಾಸಭೆಯನ್ನು ದೂರುತ್ತಿದ್ದಾರೆ."

# ಬಂಗಾಲದ ಹಿಂದುಗಳು.

ಶ್ರೀಯುತ ನಂದಕಿಶೋರಜಿ ತಿವಾರಿ ಎಂಬುವವರು ತಮ್ಮ ಲೇಖಮಾಲೆಯಲ್ಲಿ ಬಂಗಾಲದ ಹಿಂದುಗಳ ಸಂಬಂಧವಾಗಿ ಹೀಗೆ ಬರೆದಿದ್ದಾರೆ—

"ಹಿಂದುಸ್ಥಾನದ ಯಾವ ಭಾಗದಲ್ಲಿ ಮುಸಲ್ಮಾನರ ಸಂಖ್ಯೆಯು ಅತ್ಯಧಿಕವಾಗಿದೆಯೋ ಅಥವಾ ಮುಸಲ್ಮಾನ್ ಪ್ರಭುತ್ವದಿಂದ ಎಲ್ಲಿಯ ಹಿಂದುಗಳು ಪೀಡಿತರಾಗಿದ್ದಾರೆಯೋ ಅಲ್ಲಿ ಹಿಂದ ಸ್ತ್ರೀಯರನ್ನು ಒಡಿಸಿಕೊಂಡು ಹೋಗುವುದು ಅತ್ಯಧಿಕ. ಬಂಗಾಲದಲ್ಲಿ ಮುಖ್ಯವಾಗಿ ಪೂರ್ವ ಬಂಗಾಲದಲ್ಲಿ- ಹಿಂದುಗಳ ಸ್ಥಿತಿಯು ಬಹು ಭಯಾನಕವಾಗಿದೆ. ಬಂಗಾಲದಂತಹ ಸುಂದರ ಪ್ರಾಂತದಲ್ಲಿ ಪ್ರಾರಂಭವಾಗಿರುವ ಪುಂಡರ ಹಾವಳಿಯನ್ನು ನಿಲ್ಲಿಸುವುದು ಬಂಗಾಲ ಸರಕಾರಕ್ಕಾಗಲಿ ಅಥವಾ ಬಂಗಾಲದ ಹಿಂದುಗಳಿಗಾಗಲಿ ಶಕ್ಯವಿಲ್ಲ. ಅಖಿಲ ಹಿಂದುಸ್ಥಾನದ ಹಿಂದುಗಳು ಪ್ರಯತ್ನಿಸುವುದು ಅಗತ್ಯವಾಗಿದೆ.

ಬಂಗಾಲದ ಹಿಂದು ಜೀವನ ಮತ್ತು ಬಂಗಾಲಿ ಭಗಿನಿಯರ ಸತೀತ್ವಗಳು ಉಗ್ರವಾದ ಒಂದು ಜ್ವಾಲಾಮುಖಿಯಮೇಲೆ ನಿಂತಿವೆ. ಯಾವಕಾಲದಲ್ಲಿ ಅದು ಸ್ಫೋಟವಾಗಿ ಬಂಗಾಲದ ಹಿಂದು ಸಂಸ್ಕೃತಿಯು ನಾಶವಾಗುವುದೋ ತಿಳಿಯದು."

ಈ ತಮ್ಮ ಹೇಳಿಕೆಯನ್ನು ಸಮರ್ಥಿಸುವಂತಹ ಅನೇಕ ಮುಸಲ್ಮಾನ್ ಪುಂಡರು ಹಿಂದು ಸ್ತ್ರೀಯರನ್ನು ಒಡಿಸಿಕೊಂಡು ಹೋದ ಮತ್ತು ಹಿಂದು ಸ್ತ್ರೀಯರಮೇಲೆ ಬಲಾತ್ಕಾರ ನಡೆಸಿದ ಹೃದಯದ್ರಾವಕ ಪ್ರಸಂಗಗಳನ್ನು ಲೇಖಕರು ಕೊಟ್ಟಿದ್ದಾರೆ. ೧೯೩೬ನೆಯ ಇಸವಿಯಲ್ಲಿ ಹಿಂದು ಮಹಾಸಭೆಯು ಮಾಡಿದ ಈ ಕೆಳಗಿನ

ಗೊತ್ತುವಳಿಯನ್ನು ನೋಡಿದರೆ ಲೇಖಕರ ಅಭಿಪ್ರಾಯವು ಎಷ್ಟೋ ಮಟ್ಟಿಗೆ ಸತ್ಯವಾದುದಾಗಿಯೇ ಇದೆಯೆಂದು ತೋರುತ್ತದೆ. ಆ ಗೊತ್ತುವಳಿ ಹೀಗಿದೆ—

"ಹೆಚ್ಚಾಗಿ ಪೂರ್ವ ಮತ್ತು ಉತ್ತರ ಬಂಗಾಲ ಪ್ರಾಂತಗಳಲ್ಲಿ ಹಿಂದು ಬಾಲಕಿಯರ ಮೇಲೆ ಮತ್ತು ಹಿಂದು ಸ್ತ್ರೀಯರಮೇಲೆ ಮುಸಲ್ಮಾನ್ ಪುಂಡರಿಂದ ಅತ್ಯಾಚಾರಗಳು ನಡೆಯುತ್ತಲಿವೆ. ಇದನ್ನು ತೀಕ್ಷ್ಣವಾಗಿ ಹಿಂದು ಮಹಾಸಭೆಯು ನಿಷೇಧಿಸುತ್ತದೆ. ಮತ್ತು ಈ ಅತ್ಯಾಚಾರಗಳನ್ನು ನಿಲ್ಲಿಸಲು ಬಂಗಾಲದ ಹಿಂದು ಮುಖಂಡರು ಹಿಂದು ಯುವಕಸಂಘಗಳನ್ನು ಸ್ಥಾಪಿಸಿ ಪ್ರಯತ್ನಿಸಬೇಕಾಗಿ ಸೂಚಿಸುತ್ತದೆ."

## ವಿಮರ್ಶಾತ್ಮಕ ಪ್ರಶ್ನೋತ್ತರ.

### ಜಾತಿ ನಿಷ್ಠೆಯ ಹಿತಾಹಿತಗಳು.

ಪ್ರಶ್ನೆ— ಈಗ ಹಿಂದುಸ್ಥಾನದಲ್ಲಿ ರಾಷ್ಟ್ರನಿಷ್ಠೆಯೇ ಬೇಕಾಗಿದೆ. ಹೀಗಿರುವಾಗ ಜಾತಿನಿಷ್ಠೆಯ ವಿಚಾರಸರಣಿಗೂ ನೀವು ನಿಮ್ಮ ಪತ್ರಿಕೆಯಲ್ಲಿ ಅವಕಾಶಕೊಡುತ್ತಿರುವಿರಲ್ಲಾ! ಇದರಿಂದ ನೀವೂ ಜಾತಿನಿಷ್ಠರೆಂದೇ ಜನರಿಗೆ ತೋರಲಿಕ್ಕಿಲ್ಲವೆ?

ಉತ್ತರ— ಜಾತಿನಿಷ್ಠೆಯೆಂಬುದು ನಿಮಗೆ ಮಹಾ ದುರ್ಗುಣವಾಗಿ ತೋರುತ್ತಿದ್ದಂತೆ ಕಾಣುತ್ತದೆ. ಅದು ಯಾರಲ್ಲಿರುತ್ತದೆಯೋ ಅವರೆಲ್ಲರೂ ದೇಶದ ಶತ್ರುಗಳಾಗಿಯೇ ನಿಮಗೆ ತೋರುತ್ತಿದ್ದಾರೆಯೆ? ಅಂತೆಯೇ ಅದು ಎಲ್ಲೆಲ್ಲಿಯೂ ಇರಬಾರದೆಂದು ನೀವು ಇಚ್ಛಿಸುತ್ತಿರುವಿರಾ? ಹೀಗೆ ನೀವು ತಿಳಿದಿದ್ದರೆ ಅದು ನಿಮ್ಮ ದೊಡ್ಡ ತಪ್ಪು.

ಪ್ರಶ್ನೆ— ಹಾಗಾದರೆ ಜಾತಿನಿಷ್ಠೆಯು ಸದ್ಗುಣವೆ? ಅದು ದೇಶಕ್ಕೆ ಹಿತಕರವೆ?

ಉತ್ತರ— ಬೆಂಕಿಯು ಹಿತಕರವಾದುದೊ? ಅಹಿತಕರವಾದುದೋ? ಎಂದು ಪ್ರಶ್ನೆಮಾಡಿದರೆ ಅದರ ಯೋಜನೆಯ ಮೇಲೆಯೇ ಹಿತಾಹಿತಗಳು ಅವಲಂಬಿಸಿವೆಯೆಂಬ ಉತ್ತರವನ್ನು ಹೇಗೆ ಕೊಡಬೇಕಾಗುತ್ತದೆಯೋ ಹಾಗೆಯೇ ನಿಮ್ಮ ಈ ಪ್ರಶ್ನೆಗೂ ಉತ್ತರಕೊಡಬೇಕಾಗುವುದು. ಬೆಂಕಿಯನ್ನು ತಪ್ಪು ರೀತಿಯಲ್ಲಿ ಉಪಯೋಗಿಸಿದರೆ ಅದು ನಮ್ಮ ಮೈಯನ್ನು ಸುಡುವುದು. ಅದನ್ನೇ ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಂಡು ದೇಹ ರಕ್ಷಣೆಯ ಆಹಾರವನ್ನು ಸಿದ್ಧಗೊಳಿಸಬಹುದು.

ಅದೇ ಪ್ರಕಾರ ಜಾತಿನಿಷ್ಠೆಯು ಯೋಗ್ಯ ರೀತಿಯಲ್ಲಿ ಆಚರಿಸಲ್ಪಟ್ಟರೆ ಸ್ವಜಾತಿಯ ರಕ್ಷಣೆಯಾಗಿ ಸುಖಶಾಂತಿಗಳನ್ನು ಉಂಟುಮಾಡುವುದು. ಅದನ್ನು ತಪ್ಪು ರೀತಿಯಲ್ಲಿ ಆಚರಿಸಿದ್ದಾದರೆ ಅದೇ ನಮಗೆ ಅಹಿತಕರವಾಗಿ ಪರಿಣಮಿಸುವುದು.

ಪ್ರಶ್ನೆ— ಈ ನಿಮ್ಮ ಜಾತಿನಿಷ್ಠೆಯನ್ನು ಹೇಗೆ ಉಪಯೋಗಿಸಿ ಹಿತಮಾಡಿಕೊಳ್ಳುವಿರಿ? ಮತ್ತು ಅದನ್ನು ಹೇಗೆ ಉಪಯೋಗಿಸಿದರೆ ಅಹಿತವಾಗುತ್ತದೆ? ಈ ಬಗ್ಗೆ ದೃಷ್ಟಾಂತದಿಂದ ಹೇಳುವಿರಾ?

ಉತ್ತರ— ಹಿಂದು, ಮುಸಲ್ಮಾನ್, ಕ್ರಿಸ್ತ ಮೊದಲಾದ ಜಾತಿಯವರು ತಮ್ಮ ತಮ್ಮ ಜಾತಿಯಲ್ಲಿ ನಿಷ್ಠೆಯುಳ್ಳವರಾಗಿರಬಾರದೆಂದೇ ನಿಮ್ಮ ಹೇಳಿಕೆಯಷ್ಟೆ. ಅದು ರಾಷ್ಟ್ರಕ್ಕೆ ಅಹಿತವನ್ನುಂಟುಮಾಡುತ್ತದೆಂದೇ ನೀವು ತಿಳಿದಿರುವಿರಲ್ಲವೆ? ಹಿಂದುಗಳ ಸಂಗತಿಯೊಂದನ್ನು ದೃಷ್ಟಾಂತಕ್ಕೆ ತೆಗೆದುಕೊಳ್ಳೋಣ.

ಹಿಂದು ಜಾತಿಯವರೆಂದು ಯಾರು ಹೇಳಿಕೊಳ್ಳುತ್ತಾರೆಯೋ ಅವರು ಆ ಜಾತಿಯ ಶೀಲಸಂಸ್ಕೃತಿಗಳ ವಿಷಯದಲ್ಲಿ ನಿಷ್ಠೆಯುಳ್ಳವರಾಗಿರಲೇಬೇಕಾದುದು ಅತ್ಯಗತ್ಯ. ತಮಗೆ ಹಿಂದು, ಮುಸಲ್ಮಾನ್ ಮೊದಲಾದ ಯಾವ ಜಾತಿಯ ಕಲ್ಪನೆಯೇ ಇಲ್ಲವೆಂದು ಯಾರಾದರೂ ದೃಢವಾಗಿ ತಿಳಿದುಕೊಂಡಿದ್ದರೆ ಅವರಿಗೆ ಜಾತಿಯೇ ಇಲ್ಲದಮೇಲೆ ನಿಷ್ಠೆಯ ಪ್ರಶ್ನೆಯೆಲ್ಲಿದೆ? ಈ ವಿವೇಚನೆಯು ಅಂಥವರನ್ನು ಕುರಿತು ನಡೆದಿಲ್ಲ. ಯಾರು ತಾವು ಒಂದು ಜಾತಿಯವರೆಂದು ಹೇಳಿಕೊಳ್ಳುತ್ತಿದ್ದಾರೆಯೋ ಅವರ ಸಂಬಂಧವಾಗಿಯೇ ನಡೆದುದು.

ಒಂದು ಹಿಂದು ದೇವಾಲಯವನ್ನು ಪುಂಡರು ಭ್ರಷ್ಟಗೊಳಿಸುತ್ತಿದ್ದರೆ ತನ್ನ ಪ್ರಾಣವನ್ನಾದರೂ ಅರ್ಪಿಸಿ ತಡೆಯಬೇಕು. ಹಿಂದು ಹಬ್ಬ ಹುಣ್ಣುಮೆಗಳ ಉತ್ಸವಗಳನ್ನು ಪುಂಡರು ಅನ್ಯಾಯವಾಗಿ ತಡೆಯುತ್ತಿದ್ದರೆ ಅದರ ನಿರೋಧಕ್ಕಾಗಿ ಪ್ರಯತ್ನಿಸಬೇಕು. ತಮ್ಮ ಜಾತಿಯವರ ಮೇಲೆ ಅನ್ಯ ಜಾತಿಯವರು ಅತ್ಯಾಚಾರ ನಡೆಸುತ್ತಿದ್ದರೆ ಅದನ್ನು ತಡೆಯಲು ಸಿದ್ಧರಾಗಬೇಕು. ಹೀಗೆ ಹಿಂದುಗಳು ಹಿಂದುಗಳ ಮಾನ ಪ್ರಾಣ ಧನ ಹಕ್ಕು ಬಾಧ್ಯತೆಗಳ ರಕ್ಷಣೆಗಾಗಿ ಹೋರಾಡಿದರೆ ಅವರಲ್ಲಿ ಜಾತಿನಿಷ್ಠೆಯಿದೆಯೆಂದು ತಿಳಿಯಬೇಕು. ಇದು ಆ ಜಾತಿಯ ಜನರ ಸುಖಶಾಂತಿಗಳಿಗೆ ಸಹಾಯವಾಗುವುದಲ್ಲದೆ ಮನುಷ್ಯ ಜಾತಿಯಲ್ಲಿ ಸುಶೀಲವೃತ್ತಿಯನ್ನು ಬೆಳೆಯಿಸಲಿಕ್ಕೂ ಸಾಧನವಾಗುತ್ತದೆ.

ಇಂಥ ಸಂದರ್ಭಗಳಲ್ಲಿ ಜಾತಿ ನಿಷ್ಠೆಯು ಹಿತಕರವಾದುದು. ಈ ದೇವರ ಮೂರ್ತಿಯನ್ನು ಭ್ರಷ್ಟಗೊಳಿಸಿದರೆ ಇನ್ನೊಂದನ್ನು ಇಟ್ಟುಕೊಂಡರಾಯಿತು. ಇಲ್ಲಿ ಉತ್ಸವಬರಬಾರದೆಂದರೆ ಉತ್ಸವವನ್ನೇ ಬಿಟ್ಟರಾಯಿತು. ನಮ್ಮ ಜಾತಿಯ ಹೆಣ್ಣುಮಕ್ಕಳನ್ನು ಓಡಿಸಿಕೊಂಡು ಹೋಗಿ ತಮ್ಮ ಜಾತಿಯಲ್ಲಿ ಸೇರಿಸಿಕೊಂಡರೆ ಹೆಣ್ಣುಮಕ್ಕಳು ಹೇಗಾದರೂ ಗಂಡಸರಲ್ಲಿಯೇ ಇರಬೇಕಷ್ಟೆ. ಎಂದಮೇಲೆ ಯಾವ ಜಾತಿಯ ಗಂಡಸರಲ್ಲಿದ್ದರೇನು? ಎಂದು ಸುಮ್ಮನಿದ್ದರಾಯಿತು. ಅನಾಥರೋ, ದರಿದ್ರರೋ, ಆದ ಹಿಂದುಗಳನ್ನು ಮೋಸದಿಂದ ಪರ ಜಾತಿಯಲ್ಲಿ ಕೂಡಿಸಿಕೊಂಡರೆ ಅವರ ರಕ್ಷಣೆಯ ಭಾರವು ತಾನಾಗಿಯೇ ಬೇರೆಕಡೆ ಹೋಯಿತೆಂದು ಸಮಾಧಾನಪಟ್ಟರಾಯಿತು. ಎಂದು ಯಾರು ತಿಳಿಯುತ್ತಾರೆಯೋ ಅಂಥ ಹಿಂದುಗಳು ಹಿಂದು ಜಾತಿದ್ರೋಹಿಗಳು. ಸ್ವಾಭಿಮಾನ ಶೂನ್ಯರು. ಅವರ ಸಾಮರವೃತ್ತಿಯು ವಿಶ್ವಬಂಧುತ್ವವಲ್ಲ. ಹಿಂದು ಮನುಷ್ಯನು ತನ್ನ ಜಾತಿಯ ವಿಷಯದಲ್ಲಿ ನಿಷ್ಠೆಯುಳ್ಳವನಾಗಿರುವುದೆಂದರೆ ಅನ್ಯಜಾತಿಯವರನ್ನು ದ್ವೇಷಿಸುವುದಲ್ಲ. ಅಥವಾ ಅನ್ಯ ಜಾತಿಯ ಮೇಲೆ ಆಕ್ರಮಣಮಾಡುವುದೂ ಅಲ್ಲ. ಅವು ಜಾತ್ಯಂಧತೆಯ ಲಕ್ಷಣಗಳು.

ಜಾತಿನಿಷ್ಠೆಯನ್ನು ರಾಜಕಾರಣ ಮೊದಲಾದವುಗಳಲ್ಲಿ ಉಪಯೋಗಿಸಿದರೆ ಅದು ಅನರ್ಥಕರವು. ಸಕಲ ಜಾತಿಯವರೂ ರಾಜಕಾರಣದಲ್ಲಿ ಸಮಾನರೇ ಎಂದು ತಿಳಿದು ನ್ಯಾಯವಾದ ರೀತಿಯಲ್ಲಿಯೇ ಎಲ್ಲರ ಸಂಗಡಲೂ ನಡೆಯಬೇಕೇ ವಿನಾ ಹಿಂದು ಜಾತಿಯವರೆಂಬ ಕಾರಣದಿಂದಲೇ ಯಾವ ಅಧಿಕಾರ ಅಥವಾ ಸೌಲಭ್ಯಗಳನ್ನು ಉಂಟುಮಾಡಿಕೊಟ್ಟರೂ ಅದು ನಿಂದ್ಯವಾದುದು. ಆದಕಾರಣ ಜಾತಿನಿಷ್ಠೆಯು ಎಲ್ಲ ಕಡೆಗೂ ನಿಂದ್ಯವಲ್ಲ. ಮತ್ತು ವಂದ್ಯವೂ ಅಲ್ಲ. ಅದರ ಯೋಜನೆಯ ಮೇಲೆಯೇ ಅದರ ಹಿತಾಹಿತಗಳು ಅವಲಂಬಿಸಿವೆ.

# ಹಿಂದುಗಳಿಗೆ 'ಗುಲಾಮಗಿರಿ' ಏಕೆ?




### ಡಾ. ಮುಂಜೆಯವರ ವಿಚಾರ.

ಡಾ. ಮುಂಜೆಯವರು ಅಜಮೀರದಲ್ಲಿ ಕಳೆದ ತಿಂಗಳ ೩೦ ನೆಯ ತಾರೀಖಿನ ದಿವಸ ಕೂಡಿದ್ದ ಕೋಳಿರಜಪೂತ ಪರಿಷತ್ತಿನ ಅಧ್ಯಕ್ಷರಾಗಿ ಮಾಡಿದ ಭಾಷಣದಲ್ಲಿ ಹೀಗೆ ಹೇಳಿದರು—

"ನೀವು ಶೂರ ರಜಪೂತ ವಂಶಜರು. ನನಗೆ ಪೂಜ್ಯನಾದ ರಾಣಾ ಪ್ರತಾಪಸಿಂಹನ ವಂಶಜರು ನೀವು. ಹಿಂದುಸಮಾಜದ ಮೇಲಿನ ಆಕ್ರಮಣವನ್ನು ತಡೆಯಲು ನೀವು ಶೂರತನದಿಂದ ಮುಂದೆ ಬರುವಿರೆಂದೇ ನಾನು ನಂಬಿದ್ದೇನೆ. ಪ್ರತಿಯೊಬ್ಬ ಹಿಂದು ತರುಣನೂ ವೀರ ರಜಪೂತನಾಗಲೇಬೇಕು.

ಹಿಂದುಗಳಂತೆ ಬೇರೆ ಸಮಾಜದವರಲ್ಲಿ ವರ್ಣಾಶ್ರಮಗಳಿಲ್ಲ. ಅಂತೆಯೇ ಬೇರೆ ಸಮಾಜದವರು ಬಲಶಾಲಿಗಳಾದರು. ರಜಪೂತರು ಮಾತ್ರವೇ ಯುದ್ಧಮಾಡಬೇಕೆಂದು ನಾವು ಕಟ್ಟು ಹಾಕಿದೆವು. ಆದರಿಂದ ನಾವು ಎಲ್ಲರಿಗೂ ಸೋತು ಗುಲಾಮರಾಗಿರಬೇಕಾಯಿತು. ಆ ದೋಷವನ್ನು ಈಗ ತೆಗೆದುಹಾಕಿ ಹಿಂದುಗಳೆಲ್ಲರೂ ಶೂರ ಸೈನಿಕರಾಗಬೇಕು."

### 'ಹಿಂದೂಗಳ ಮತಾಂತರ'

ಬ್ರಹ್ಮಾವರದಲ್ಲಿ ಕಳೆದ ತಾ. ೨೬ನೇ ಮಂಗಳವಾರ ಸಂಜೆಗೆ ಹಿಂದೂ ಮಹಾ ಸಭೆಯ ಮೈಸೂರು ಪ್ರಾಂತ್ಯದ ಕಾರ್ಯದರ್ಶಿಗಳೂ ಹಿಂದೂ ಮತ ಪ್ರಚಾರಕರೂ ಆದ ಶ್ರೀಯುತ ಎ. ಶೇಷಪ್ಪಯ್ಯನವರು "ಹಿಂದೂಗಳ ಮತಾಂತರ" ಎಂಬು ವಿಷಯವಾಗಿ ಚಲೋ ಭಾಷಣವಿತ್ತರು. ಇಲ್ಲಿಯ 'ರೈತಸಂಘ'ದ ಜತೆ ಕಾರ್ಯದರ್ಶಿಗಳೂ ಉತ್ಸಾಹಿ ತರುಣರೂ ಆದ ಶ್ರೀಯುತ ಬಿ. ವಿ. ಮಾಧವರಾಯರು ಅಧ್ಯಕ್ಷರಾಗಿ ಚುನಾಯಿಸಲ್ಪಟ್ಟ ಮೇಲೆ ಶ್ರೀಯುತ ಶೇಷಪ್ಪಯ್ಯನವರು ಭಾಷಣ ಪ್ರಾರಂಭಿಸುತ್ತ ಹಿಂದೂ ಮಹಾ ಸಭೆಯು ರಾಜಕೀಯ ಸಂಸ್ಥೆಯಲ್ಲವೆಂದೂ, ಬರಿಯ ಹಿಂದೂ ಧರ್ಮದ ಉದ್ಧಾರಾರ್ಥವಾಗಿಯೂ, ರಕ್ಷಣೆಗಾಗಿಯೂ ಪಂಡಿತ ಮಾಲವೀಯರಿಂದ ಸ್ಥಾಪಿತವಾದ ಧರ್ಮ ಸಂಸ್ಥೆಯೆಂದೂ ಹಿಂದೂಗಳಲ್ಲಿರುವ ಒಡಕು, ಜಾತಿಭೇದ, ಅಸ್ಪೃಶ್ಯತಾ ಮುಂತಾದ ನ್ಯೂನತೆಗಳನ್ನು ನಿವಾರಿಸುವುದು ಮಾತ್ರವಲ್ಲದೆ, ಅನ್ಯಮತೀಯರಿಂದ ಹಿಂದೂ ಮತದ ಮೇಲೆ ಆಗುತ್ತಿರುವ ದಾಳಿಯನ್ನು, ಮತಾಂತರದ ಕೆಲಸವನ್ನೂ ಹಿಂದೂ ಸ್ತ್ರೀಯರ ಅಪಹಾರಗಳನ್ನೂ ತಡೆಗಟ್ಟಿ ಸ್ವಮತ ರಕ್ಷಣೆಯನ್ನೂ ಅಭಿಮಾನವನ್ನೂ ಕಾಯುವುದು ಪ್ರತಿಯೊಬ್ಬ ಹಿಂದೂವಿನ ಆದ್ಯ ಕರ್ತವ್ಯವೆಂದರು. ಕ್ರಿ. ಶ. ೧೮೮೧ ರಲ್ಲಿ ಅಖಿಲಭಾರತದಲ್ಲಿ ಸೇಕಡಾ ೭೪ ರಷ್ಟು ಹಿಂದುಗಳು ಇದ್ದರೆಂದೂ ೧೯೩೧ ರಲ್ಲಿ ಅವರ ಸಂಖ್ಯೆಯು ಸೇಕಡಾ ೬೭ ಕ್ಕೆ ಇಳಿದಿದೆಯೆಂದೂ ಈಗ ಅಖಿಲ ಭಾರತದಲ್ಲಿ ಪ್ರತಿದಿನ ೩೦೦ ಮಂದಿ ಹಿಂದುಗಳು ಕ್ರೈಸ್ತ ಮತಕ್ಕೂ, ಸುಮಾರು ೧೫೦ ಜನರು ಮಹಮ್ಮದೀಯ ಮತಕ್ಕೂ ಸೇರುತ್ತಿದ್ದಾರೆಂದೂ, ಅರ್ಧ ಶತಮಾನದಲ್ಲಿ ೧೦೦ ಕ್ಕೆ ೭ ರಂತೆ ಹಿಂದುಗಳ ಸಂಖ್ಯೆ ಕಡಿಮೆಯಾದುದಾಗಿಯೂ, ಇದೇ ರೀತಿಯಾಗಿ ನಡೆದರೆ ಇನ್ನೆರಡು ಮೂರು ಶತಮಾನಗಳಲ್ಲಿ ಹಿಂದುಗಳು ನಾಮಾವಶೇಷವಾಗುವುದರಲ್ಲಿ ಸಂದೇಹವಿಲ್ಲವೆಂದರು. ಆದುದರಿಂದ ಹಿಂದೂ ಮಹಾಸಭೆಯು ಸ್ವಮತ ರಕ್ಷಣೆಗೋಸ್ಕರ ಹೋರಾಡುತ್ತಿದೆಯೆಂದೂ ಹಿಂದುಗಳಲ್ಲಿ ಶಿಸ್ತನ್ನು ತಂದು ಸಂಘಟಿತರನ್ನಾಗಿ ಮಾಡುವುದೇ ತಮ್ಮ ಧ್ಯೇಯವೆಂದೂ ತಮ್ಮ ಭಾಷಣವನ್ನು ಮುಗಿಸಿದರು. ಅಧ್ಯಕ್ಷರಾದ ಶ್ರೀ| ಬಿ. ವಿ. ಮಾಧವರಾಯರು ತಮ್ಮ ಭಾಷಣದಲ್ಲಿ ಹಿಂದುಗಳು ತಮ್ಮ ದಾಸ್ಯ ಮನೋಭಾವವನ್ನೂ ಹೇಡಿತನವನ್ನೂ ಬಿಟ್ಟು ಹಿಂದೂ ಧರ್ಮ ರಕ್ಷಣೆಗೋಸ್ಕರ ಹೊಡೆದಾಡಬೇಕೆಂದೂ ಪ್ರತಿಯೊಬ್ಬ ಹಿಂದೂ ಯುವಕನು ಸೈನಿಕ ಶಿಕ್ಷಣವನ್ನು ಪಡೆದು ವೀರ ಯೋಧನಾಗಿ ಧರ್ಮಕ್ಕೋಸ್ಕರವೂ ಮಾತೃಭೂಮಿಯ ಸ್ವಾತಂತ್ರ್ಯಕ್ಕೋಸ್ಕರವೂ ತಮ್ಮ ರಕ್ತವನ್ನು ಧಾರೆಯೆರೆಯಬೇಕೆಂದೂ ಜಾತಿ ಮಾತ್ಸರ್ಯವನ್ನು ತೊರೆದು ಹಿಂದೂಗಳೆಲ್ಲರೂ ಒಂದೇ ಎಂಬ ಭಾವನೆಯಿಂದ ಒಕ್ಕಟ್ಟಾಗಬೇಕೆಂದೂ ಧಾರ್ಮಿಕ ಸಂಸ್ಥೆಯಾದ ಹಿಂದೂ ಮಹಾಸಭೆಯು ಎಲ್ಲ ನಗರಗಳಲ್ಲಿಯೂ ಹಳ್ಳಿ ಹಳ್ಳಿಗಳಲ್ಲಿಯೂ ಸ್ಥಾಪಿಸಲ್ಪಡಬೇಕೆಂದೂ ಹೇಳಿ ತಮ್ಮ ಭಾಷಣವನ್ನು ಮುಗಿಸಿದರು. ಧನ್ಯವಾದಗಳನ್ನರ್ಪಿಸಿದ ಮೇಲೆ ಸಭೆಯು ಮುಕ್ತಾಯವಾಯಿತು.

ರಾಷ್ಟ್ರಬಂಧು.

---

### ಬಂಗಾಲದ ಹಿಂದುಗಳು.

ಬಂಗಾಲದ ಮುಖ್ಯ ಮಂತ್ರಿಗಳಾದ ಮಿ. ಫಜಲುಲ್‌ಹಕ್ಕ ಇವರು ಜಾತ್ಯಂಧರಾಗಿ ಲಖನೌದಲ್ಲಿ ಮಾಡಿದ ಭಾಷಣವನ್ನು ಬಂಗಾಲ ಹಿಂದು ಮಹಾಸಭೆಯು ನಿಷೇಧಿಸಿದೆ.

ಮುಸಲ್ಮಾನರ ಬಲಾತ್ಕಾರವನ್ನು ನಿರೋಧಿಸಲು ತಾವು ಸಮರ್ಥರಿದ್ದೇವೆಂದು ಅಲ್ಲಿಯ ಹಿಂದು ಮಹಾಸಭೆಯವರು ಹೇಳಿದ್ದಾರೆ. ಹಾಗೆ ಸಮರ್ಥರಾಗಲು ಸಂಘಟನೆ ಬೇಕಷ್ಟೆ.

## ಗಾಂಧೀಜಿಯವರ ಉಪದೇಶ.

(೧) ಯಾವ ವ್ಯಕ್ತಿಯು ಅಥವಾ ರಾಷ್ಟ್ರವು ಅತ್ಯಾಚಾರವನ್ನು ನಿರಾಕರಿಸುತ್ತದೆಯೋ ಆ ವ್ಯಕ್ತಿಯು ಅಥವಾ ರಾಷ್ಟ್ರವು ತನ್ನಲ್ಲಿ ಅಪ್ರತಿಮವಾದ ಶಕ್ತಿಯನ್ನು ಉಂಟುಮಾಡಿಕೊಳ್ಳುತ್ತದೆ.

(೨) ದೃಢನಿಶ್ಚಯಕ್ಕೆ ತಕ್ಕಂತೆ ಸೌಜನ್ಯವೂ ಇದ್ದದ್ದಾದರೆ ಕಾರ್ಯದಲ್ಲಿ ವಿಜಯವು ಖಂಡಿತವಾಗಿಯೂ ದೊರೆಯುತ್ತದೆ. ಹಾಗಲ್ಲದೆ, ಕ್ರೋಧ, ದ್ವೇಷ, ಅವಿಚಾರ ಕೊನೆಗೆ ಅತ್ಯಾಚಾರಗಳ ಸಾಮ್ರಾಜ್ಯವೇ ಪ್ರಾರಂಭವಾದರೆ ಕಾರ್ಯವು ಖಂಡಿತವಾಗಿಯೂ ನಾಶವಾಗುತ್ತದೆ.

—ಯಂಗ್ ಇಂಡಿಯಾ. ತಾ. ೧೦-೩-೧೯೨೦

## ಗಾಂಧಿ-ಗವ್ಹರ್ನರ್ ಸಂಭಾಷಣೆ.

ಮಹಾತ್ಮಾ ಗಾಂಧಿಯವರ ಆರೋಗ್ಯ ಚೆನ್ನಾಗಿಲ್ಲ. ಸಂಪೂರ್ಣ ವಿಶ್ರಾಂತಿ ಬೇಕೆಂದು ಡಾಕ್ಟರರು ಹೇಳುತ್ತಿದ್ದಾರೆ. ಹೀಗಿದ್ದರೂ ಗಾಂಧೀಜಿಯವರು ಬಂಗಾಲದ ಸ್ಥಾನಬದ್ಧ ಕೈದಿಗಳ ಬಿಡುಗಡೆ ವಿಚಾರವಾಗಿ ತುಂಬಾ ಪರಿಶ್ರಮಪಡುತ್ತಿದ್ದಾರೆ.

ಬಂಗಾಲದ ಗವ್ಹರ್ನರರಾದ ಸರ್. ಜಾನ್ ಅಂಡರಸನ್ ರವರನ್ನು ಕಲಕತ್ತಾದಿಂದ ೧೬ ಮೈಲು ದೂರದಲ್ಲಿದ್ದ ಬರಾಕಪೂರ ಎಂಬಲ್ಲಿ ತಾ. ೯ ನೆಯ ದಿನ ಕಂಡು ೨ ತಾಸು ಸಂಭಾಷಣೆ ಮಾಡಿದರು. ಗವ್ಹರ್ನರರು ಗಾಂಧೀಜಿಯವರೊಂದಿಗೆ ತುಂಬಾ ಆದರ ಸಹಾನುಭೂತಿಗಳಿಂದ ಮಾತನಾಡಿದರು.

ಮರುದಿನ ಮಂತ್ರಿಮಂಡಲವನ್ನು ಕೂಡಿಸಿ ಗಾಂಧೀಜಿಯವರ ವಿಚಾರಗಳನ್ನು ಗವ್ಹರ್ನರರು ಮಂತ್ರಿಗಳಿಗೆ ತಿಳಿಸಿದರು. ಸ್ಥಾನಬದ್ಧ ರಾಜಕೀಯ ಕೈದಿಗಳನ್ನೆಲ್ಲಾ ಬಿಡಿಸಬೇಕೆಂಬುದೇ ಗಾಂಧೀಜಿಯವರ ಪ್ರಯತ್ನ. ಈ ಪ್ರಯತ್ನವು ಫಲಕಾರಿಯಾಗಲೆಂದೇ ರಾಷ್ಟ್ರವು ಹಾರೈಸುತ್ತದೆ.

## ಬೆಳಗಾವ ಮರಾಠಿ ಜಿಲ್ಲಾ ಆಗಬೇಕಂತೆ!

ಶ್ರೀ. ದ. ರಾ. ಕೇಳಕರ ಹಲಿಯಾಳ ಇವರು ತಾ. ೯-೧೧-೩೭ ನೆಯ ಕೇಸರೀ ಪತ್ರಿಕೆಯಲ್ಲಿ ಒಂದು ಸಚಿತ್ರ ಲೇಖನವನ್ನು ಬರೆದು ಈ ಪ್ರಕಾರ ಸೂಚಿಸಿದ್ದಾರೆ—

"ಬೆಳಗಾವ ಮತ್ತು ಕಾರವಾರ ಜಿಲ್ಲೆಗಳಲ್ಲಿ ಮರಾಠಿ ಮಾತನಾಡುವವರ ಸಂಖ್ಯೆಯೇ ಹೆಚ್ಚಾಗಿರುವುದರಿಂದ ಈ ಎರಡು ಜಿಲ್ಲೆಗಳ ಬೆಳಗಾವ, ನಂದಗಡಪೇಠಾ, ಖಾನಾಪುರ, ಹಲಿಯಾಳ, ಸುಪಾಪೇಠ್, ಕಾರವಾರ ಈ ತಾಲೂಕುಗಳನ್ನು ಕೂಡಿಸಿ ಒಂದು ಸ್ವತಂತ್ರವಾದ ಮರಾಠಿ ಜಿಲ್ಲೆಯನ್ನು ಮಾಡಬೇಕೆಂದೂ ಅದಕ್ಕೆ ಬೆಳಗಾವಿಯೇ ಜಿಲ್ಲಾ ಸ್ಥಳವಾಗಿರಬೇಕೆಂದೂ ಕರ್ನಾಟಕ ಏಕೀಕರಣದಲ್ಲಿ ಈ ಭಾಗ ಕೂಡಬಾರದೆಂದೂ ಪ್ರತಿಪಾದಿಸಿದ್ದಾರೆ."

ಈ ನಾಲ್ಕು ತಾಲೂಕು ಮತ್ತು ಎರಡು ಪೇಠಾ ಕೂಡಿ ಒಟ್ಟು ೨೬೧೫ ಚದುರು ಮೈಲು ಪ್ರದೇಶವಿದೆಯೆಂದೂ ೬೧೮೭೦೫ ರೂ. ಭೂಕಂದಾಯವಿದೆಯೆಂದೂ ಜನಸಂಖ್ಯೆ ೩೪೧೧೪೮ ಇದೆಯೆಂದೂ ತೋರಿಸಿದ್ದಾರೆ. ಈ ಜನಸಂಖ್ಯೆಯಲ್ಲಿ ಮರಾಠಿ ಮತ್ತು ಕೊಂಕಣಿ ಮಾತನಾಡತಕ್ಕವರೇ ಕನ್ನಡ ಮಾತನಾಡತಕ್ಕವರಿಗಿಂತ ಹೆಚ್ಚಿದ್ದಾರೆಂದೂ ಕೊಂಕಣಿ ಮರಾಠಿಗೆ ಸೇರಿದ್ದೆಂದೂ ಆದಕ್ಕಾಗಿ ಇದು ಮರಾಠಿ ಜಿಲ್ಲಾ ಆಗಬೇಕೆಂದೂ ಲೇಖಕರ ಹೇಳಿಕೆ. ಹೇಗಿದೆ ಕನ್ನಡವನ್ನು ಹಂಚಿಕೊಳ್ಳುವ ಯುಕ್ತಿ?

## ಹಿಂದೂ ಧರ್ಮ ಸ್ವೀಕಾರ.

ವಿಜಾಪುರದ ಸೇವಾನಿವೃತ್ತ ಸಬ್ ಇನಸ್ಪೆಕ್ಟರರಾದ ಮಿ. ಜಮಾಲುದ್ದೀನ ಸಾಹೇಬರ ಪುತ್ರಿ ಬೀಬಿ ಅಮೀನಾ ಇವರು ಹಿಂದೂ ಧರ್ಮದ ತತ್ವಗಳನ್ನು ಚೆನ್ನಾಗಿ ಅಭ್ಯಾಸಮಾಡಿ ಹಿಂದೂ ಧರ್ಮವನ್ನು ಸ್ವೀಕರಿಸಿರುವರು. ಬೀಬಿ ಅಮೀನಾ ಇವರು ಚಿಕ್ಕಂದಿನಿಂದ ಧಾರ್ಮಿಕ ಸಾಹಿತ್ಯದ ವ್ಯಾಸಂಗದಲ್ಲಿಯೇ ವೇಳೆ ಕಳೆಯುತ್ತಿರುವರು. ಅವರ ವಯಸ್ಸು ೨೦-೨೨ ಮಾತ್ರ ಇದೆ. ಶಾಲೆ ಕಾಲೇಜುಗಳಲ್ಲೋದದೇ ಮನೆಯಲ್ಲಿಯೇ ಇಂಗ್ಲಿಷ್ ಮತ್ತು ಪರ್ಶಿಯನ್ ಭಾಷೆಗಳಲ್ಲಿ ಒಳ್ಳೇ ಪ್ರವೀಣರಾಗಿದ್ದಾರೆ. ಸರ್ ಮಹಮ್ಮದ ಇಕ್ಬಾಲರು ಇವರು ಕಟ್ಟಿದ ಕವನಗಳನ್ನು ಓದಿ ಬೆರಗಾಗಿರುವರು. ಅನೇಕ ಪ್ರಸಿದ್ಧ ಸಾಹಿತಿಗಳು ಇವರ ಭಾಷಾ ಶೈಲಿಯನ್ನೂ ವಿಚಾರಗಳನ್ನೂ ಕಂಡು ಅಚ್ಚರಿಗೊಂಡಿರುವರು. 'ಜ್ಞಾನೇಶ್ವರೀಹೃದಯ' ಎಂಬ ಗ್ರಂಥವನ್ನು ಇವರು ಇಂಗ್ಲಿಷಕ್ಕೆ ಕವನರೂಪವಾಗಿ ಭಾಷಾಂತರಿಸಿರುವರು. ಇವರು ಯಾವಾಗಲೂ ಆಧ್ಯಾತ್ಮಿಕ ವಿಚಾರದಲ್ಲಿಯೇ ನಿಮಗ್ನರಾಗಿರುವರು. ಜತ್ತ ಊರಿನ ನ್ಯಾಯಾಧೀಶರಾದ ಶ್ರೀ. ಖಾಸನೀಸರು ಇವರಿಗೆ ಹಿಂದೂ ಧರ್ಮದ ದೀಕ್ಷೆಯನ್ನು ಕೊಟ್ಟು "ಸರಸ್ವತೀದೇವಿ" ಎಂದು ಹೆಸರಿಟ್ಟಿದ್ದಾರೆ.

## ಖೇರರ ಶುಷ್ಕವೇದಾಂತ!

ಮುಖ್ಯ ಮಂತ್ರಿಗಳಾದ ಶ್ರೀ. ಖೇರರವರು ಕಳೆದ ೪ ನೆಯ ತಾರೀಖಿನ ದಿವಸ ಪುಣೆಯಲ್ಲಿ "ಸೋನ್ಯಾಮಾರುತಿ ಒಪ್ಪಂದದ" ವಿಚಾರವಾಗಿ ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಧರ್ಮಗಂಟೆಯಲ್ಲಿಲ್ಲ. ಗಂಟೆಯ ಆಕಾರವು ದೇವರನ್ನು ಜಾಗೃತಗೊಳಿಸುವ ಸಾಧನವಲ್ಲ. ದೇವರು ಗಂಟೆಯಲ್ಲಿಲ್ಲ; ತಾಶಾದಲ್ಲಿಲ್ಲ; ನಗಾರಿಯಲ್ಲಿಲ್ಲ. ಭಕ್ತಿಹೀನರು ಮಂದಿರ ಅಥವಾ ಮಸೀದಿಯಲ್ಲಿ ಸೇರಿದರೆ ದೇವರು ಅಲ್ಲಿಯೂ ಇಲ್ಲ. ಈ ಪ್ರಶ್ನೆ ಕ್ಷುಲ್ಲಕವಾದುದು. ಹಿಂದು-ಮುಸಲ್ಮಾನರ ಐಕಮತ್ಯ ಹೇಗಾಗುವುದೆಂಬುದೇ ಮುಖ್ಯವಾದುದಾಗಿದ್ದಿತು."

ಈಗ ಇಂಥ ಶುಷ್ಕವೇದಾಂತದ ಉಪದೇಶ ಬೇಕಾಗಿಲ್ಲ. ಪ್ರತಿಯೊಂದು ಜಾತಿಯವರಿಗೂ ಅವರವರ ಹಕ್ಕು ಬಾಧ್ಯತೆಗಳನ್ನು ಸಂರಕ್ಷಿಸಿಕೊಳ್ಳುವ ಸಚೇತನವೇದಾಂತಬೇಕು. ಸ್ವಾತಂತ್ರ್ಯ ಮೂರು ಬಣ್ಣಗಳ ಬಟ್ಟೆಯಲ್ಲಿಲ್ಲ; ವಂದೇಮಾತರಂ ಪದ್ಯದಲ್ಲಿಲ್ಲ; ಜೀವಗಳ್ಳರು ಸೇರುವ ಮೆರವಣಿಗೆಯಲ್ಲಿಲ್ಲ. ಎಂದಮೇಲೆ ಇವುಗಳನ್ನು ಬಿಟ್ಟು ಹಿಂದು-ಮುಸಲ್ಮಾನರ ಐಕ್ಯಮಾಡಲು ಶ್ರೀ. ಖೇರರವರು ಪ್ರಯತ್ನಿಸಬಾರದೆ?



ಶಾ. ಶ. ೧೮೫೯ ನೆಯ ಕಾರ್ತೀಕ ಶು|| ೧೨ ಸೋಮವಾರ.

# ಕಾಂಗ್ರೆಸ್ಸಿನ ಬಲ ಹೆಚ್ಚಿತೇಕೆ?

ಹಿಂದುಸ್ಥಾನದ ರಾಜಕಾರಣದಲ್ಲಿ ಕಾಂಗ್ರೆಸ್ ಪಕ್ಷವು ದಿನೆ ದಿನೆ ತನ್ನ ಬಲವನ್ನು ಹೆಚ್ಚಿಸಿಕೊಳ್ಳುತ್ತಲೇ ಬಂದಿದೆಯಷ್ಟೆ. ಹೀಗಾಗಲು ಆಯಾಯ ಕಾಲಗಳಲ್ಲಿ ರಾಷ್ಟ್ರದ ಮಹಾನ್ ವ್ಯಕ್ತಿಗಳು ಈ ಸಂಸ್ಥೆಯ ಮೂಲಕ ರಾಷ್ಟ್ರೋನ್ನತಿಗಾಗಿ ಅವಿಶ್ರಾಂತ ಶ್ರಮಪಟ್ಟುದೇ ಮುಖ್ಯಕಾರಣವು. ಮಹಾತ್ಮಾ ಗಾಂಧಿಯವರ ನೇತೃತ್ವದಲ್ಲಿ ಈ ಸಂಸ್ಥೆಯ ಕಾರ್ಯಕಲಾಪಗಳು ನಡೆಯಲಾರಂಭವಾದನಂತರಂತೂ ಕಾಂಗ್ರೆಸ್ ಬಲವು ಅತ್ಯದ್ಭುತವಾಗಿ ಹೆಚ್ಚಲಾರಂಭವಾಯಿತು. ಸಾವಿರಾರು ಮಹಾ ವಿಭೂತಿಗಳು ಈ ಸಂಸ್ಥೆಯ ಧ್ಯೇಯಸಾಧನೆಗೆ ಆತ್ಮಾರ್ಪಣ ಮಾಡಲು ಕೂಡಾ ಸಿದ್ಧರಾದರು. ಅಂತೆಯೇ ಕಾಂಗ್ರೆಸ್ಸನ್ನು ಮೂಲೆಗೊತ್ತುವುದು ಪ್ರಬಲವಾದ ಇಂಗ್ಲಿಷ್ ಸರಕಾರಕ್ಕು ಕೂಡಾ ಶಕ್ಯವಾಗಲಿಲ್ಲ.

ಕಾಂಗ್ರೆಸ್ಸು ರಾಷ್ಟ್ರದಲ್ಲಿ ನವಚೈತನ್ಯವನ್ನು ಹುಟ್ಟಿಸಿದಂತೆಯೇ ರಾಷ್ಟ್ರದ ಶಕ್ತಿಗನುಗುಣವಾದ ಕಾರ್ಯಕ್ರಮಗಳನ್ನೂ ಅದರ ಮುಂದಿಟ್ಟು ರಾಷ್ಟ್ರಹಿತವಾಗುವಂತೆ ಮಾಡುತ್ತಾ ಬಂದಿದೆ. ಇದು ಇಂಗ್ಲಿಷ್ ಸರಕಾರದ ಸಂಗಡ ಅಸಹಕಾರವನ್ನು ಮಾಡಿ ಅದರ ದೋಷಗಳನ್ನೆಲ್ಲಾ ಬೈಲಿಗೆಳೆದು ಜನರಲ್ಲಿ ಅತ್ಯದ್ಭುತವಾದ ರಾಷ್ಟ್ರಾಭಿಮಾನ ಮತ್ತು ಸ್ವಾರ್ಥತ್ಯಾಗಗಳನ್ನು ಉಂಟುಮಾಡಿದಾಗ ಸರಕಾರದ ಸಂಗಡ ಸಹಕಾರ ಮಾಡಿದ ಒಂದು ಪಂಗಡವು ರಾಷ್ಟ್ರದಲ್ಲಿ ಇದ್ದೇ ಇದ್ದಿತು. ಅದು ಕಾಂಗ್ರೆಸ್ಸಿನಲ್ಲಿ ಆಗ ಸೇರಲು ಸಿದ್ಧವಾಗಲಿಲ್ಲ. ರಾಜಕೀಯ ಸಂಸ್ಥೆಗಳಲ್ಲಿ ಸೇರಿಕೊಂಡೇ ದೇಶ ಸೇವೆಯನ್ನು ಮಾಡಬೇಕೆಂಬುದು ಆ ಪಕ್ಷದ ಉದ್ದೇಶ.

ಕಾಂಗ್ರೆಸ್ ಪಕ್ಷವಾದರೋ ಸರಕಾರದ ನೆಳಲು ಕೂಡಾ ತನಗೆ ಬೇಡವೆಂದು ಆಗ ದೂರದಲ್ಲಿದ್ದಿತು. ಹೊಸ ರಾಜ್ಯಘಟನೆಯು ಆಚರಣೆಯಲ್ಲಿ ಬಂದನಂತರ ಕೂಡಾ ಕಾಂಗ್ರೆಸ್ ಪಕ್ಷವು ಅಧಿಕಾರವನ್ನು ಸ್ವೀಕರಿಸದೆ ಹೊರಗೇ ನಿಂತಿದ್ದರೆ ಆ ಪಕ್ಷವು ಈಗಲೂ ರಾಜಕೀಯ ಸಂಸ್ಥೆಗಳೊಳಗೇ ಇದ್ದುಕೊಂಡು ಕಾಂಗ್ರೆಸ್ಸಿನಿಂದ ದೂರದಲ್ಲಿಯೇ ಇರುತ್ತಿದ್ದಿತು.

ಕಾಂಗ್ರೆಸ್ ಪಕ್ಷವು ಅಂಥ ಅನುಚಿತ ಕಾರ್ಯವನ್ನು ಮಾಡಲಿಲ್ಲ. ಅದು ತನಗೆ ರಾಷ್ಟ್ರದಲ್ಲಿ ದೊರೆತ ಬಹುಮತದ ಬಲವನ್ನು ಸದುಪಯೋಗಮಾಡಿಕೊಳ್ಳಲು ಅಧಿಕಾರವನ್ನು ಹಿಡಿದಿತು. ಅಂತೆಯೇ ಆಗ ಕಾಂಗ್ರೆಸ್ಸಿನಿಂದ ದೂರಿದ್ದ ಜನರು ಈಗ ಇದರಲ್ಲಿ ಬರಲು ಪ್ರಾರಂಭಿಸಿದ್ದಾರೆ. ಬಿಜನೂರಲ್ಲಿ ಕಾಂಗ್ರೆಸ್ ಮುಸ್ಲಿಂಲೀಗನ್ನು ಸೋಲಿಸಿದ್ದು ಕಾಂಗ್ರೆಸ್ ಅಧಿಕಾರವನ್ನು ಹಿಡಿದಿದ್ದರ ಫಲವೆಂದೇ ಹೇಳಬೇಕು.

ರಾ| ಬ| ಅಂಗಡಿಯವರು ರಾ| ಬ| ಬಣಗಾರರು ಈಗ ಕಾಂಗ್ರೆಸ್ಸಿನಲ್ಲಿ ಬರುವುದೇಕೆ? ಕಾಂಗ್ರೆಸ್ಸು ಅಧಿಕಾರವನ್ನು ಹಿಡಿದು ಎಲ್ಲ ರಾಜಕೀಯ ಸಂಸ್ಥೆಗಳ ಸೂತ್ರವನ್ನು ತನ್ನ ಸ್ವಾಧೀನಮಾಡಿಕೊಳ್ಳಲು ಸಿದ್ಧವಾದುದರಿಂದಲ್ಲವೆ? ಗ್ರಾಮಪಂಚಾಯತಿಯಿಂದ ಅಸೆಂಬ್ಲಿವರೆಗಿನ ಎಲ್ಲ ರಾಜ್ಯಭಾರದ ಚಿಕ್ಕ ದೊಡ್ಡ ಸಂಸ್ಥೆಗಳಲ್ಲಿ ಕೆಲಸಮಾಡಬೇಕೆಂಬ ಇಚ್ಛೆಯುಳ್ಳವರೆಲ್ಲರೂ ಇನ್ನು ಮೇಲೆ ಕಾಂಗ್ರೆಸ್ಸಿನಲ್ಲಿ ಸೇರದೆ ಅವರ ಇಷ್ಟವು ನೆರವೇರುವಂತೆಯೇ ಇಲ್ಲ.

ಮೊದಲು ಸರಕಾರದಿಂದ ಹೊರಗಿದ್ದು ಜನರಲ್ಲಿ ಸಂಘಟನೆಯನ್ನು ಮಾಡಿದ ಕಾಂಗ್ರೆಸ್ ಪಕ್ಷವೇ ಈಗ ಸರಕಾರದಲ್ಲಿ ಸೇರಿ ಅಲ್ಲಿದ್ದ ಪಕ್ಷವನ್ನೂ ತನ್ನ ಕಡೆಗೆ ಎಳೆದುಕೊಳ್ಳಲಾರಂಭಿಸಿದೆ. ಅಧಿಕಾರ ಸೂತ್ರವನ್ನು ಹಿಡಿದಿದ್ದರಿಂದಲೇ ಇದು ಶಕ್ಯವಾಯಿತು. ಜನರಿಗು ಕೂಡಾ ಕಾಂಗ್ರೆಸ್ಸು ರಾಷ್ಟ್ರಹಿತಕ್ಕಾಗಿಯೇ ಅಧಿಕಾರವನ್ನು ಹಿಡಿದಿದೆಯೆಂದು ತಿಳಿದುದರಿಂದ ಈಗ ಅದರಲ್ಲಿ ಸೇರಲು ಉತ್ಸಾಹದಿಂದ ಮುಂದೆ ಬರುತ್ತಿದ್ದಾರೆ.

ಹೀಗೆ ಕಾಂಗ್ರೆಸ್ಸಿನ ಸಂಖ್ಯಾಬಲವು ಈಗ ಅತ್ಯಧಿಕವಾಗುತ್ತಿರುವುದಕ್ಕೆ ಅದು ಅಧಿಕಾರಸೂತ್ರವನ್ನು ಹಿಡಿದಿದ್ದೇ ಮುಖ್ಯ ಕಾರಣವು. ಹೊರಗೆ ನಿಂತೇ ರಾಜ್ಯಘಟನೆಯನ್ನು ಭಂಗಗೊಳಿಸಬೇಕೆಂದು ಹೋರಾಡಿದ್ದರೆ ಅದು ಶಕ್ಯವಾಗುತ್ತಿರಲಿಲ್ಲವೆಂಬುದು ಈಗಲಾದರೂ ಸ್ಪಷ್ಟವಾಯಿತಷ್ಟೆ. ಪಂ. ಜವಾಹರಲಾಲ ನೆಹರುರವರು ಮೊನ್ನೆ ಕಲಕತ್ತಾದಲ್ಲಿ ಕೂಡಿದ್ದ ಅಖಿಲ ಭಾರತ ಕಾಂಗ್ರೆಸ್ ಕಮಿಟಿಯ ತಮ್ಮ ಭಾಷಣದಲ್ಲಿ ಅಧಿಕಾರ ಸ್ವೀಕಾರವು ಅನುಕೂಲವಾಯಿತೆಂದೇ ಸ್ಪಷ್ಟವಾಗಿ ಒಪ್ಪಿಕೊಂಡಿದ್ದಾರೆ.

ಕಾಂಗ್ರೆಸ್ಸಿನ ಈ ಬಲವು ಇನ್ನೂ ಹೆಚ್ಚಿ ಹೊಸ ಶಾಸನವು ಆದಷ್ಟು ಜಾಗ್ರತೆ ನಿವಾರಣೆಯಾಗಬೇಕಾದರೆ ಕಾಂಗ್ರೆಸ್ ಸರಕಾರವು ಏಳೂ ಪ್ರಾಂತಗಳಲ್ಲಿ ಬಹು ಪರಿಶ್ರಮಪೂರ್ವಕ ಶಕ್ಯವಿರುವ ಎಲ್ಲ ಹಿತಗಳನ್ನೂ ಮಾಡಬೇಕು. ಈ ವಿಚಾರವಾಗಿ ಮಾಡಲ್ಪಡುವ ಟೀಕೆ ಟಿಪ್ಪಣೆಗಳನ್ನೂ ತಾಳ್ಮೆಯಿಂದ ನೋಡಿ ತಪ್ಪನ್ನು ತಿದ್ದಿಕೊಂಡು ರಾಷ್ಟ್ರಹಿತದ ಕಾರ್ಯಗಳನ್ನೇ ಮಾಡಬೇಕು. ಸಂಯುಕ್ತ ರಾಜ್ಯಘಟನೆಯು ಸರಕಾರದಿಂದ ಹಠಾತ್ತಾಗಿ ಹೇರಲ್ಪಟ್ಟರೆ ಅದರಲ್ಲಿಯು ಕೂಡಾ ಕಾಂಗ್ರೆಸ್ಸು ಸೇರಿ ತನ್ನ ವರ್ಚಸ್ಸನ್ನು ಸ್ಥಾಪಿಸಬೇಕೇ ವಿನಾ ನಿರಾಕರಣೆಯ ಮಾರ್ಗವನ್ನನುಸರಿಸಬಾರದು. ಹಾಗೆ ಮಾಡಿದರೇನೇ ಕಾಂಗ್ರೆಸ್ಸಿನ ಬಲ ಹೆಚ್ಚುತ್ತದೆ. ಹೊಸ ಶಾಸನವು ಆದಷ್ಟು ಜಾಗ್ರತೆ ನಿವಾರಣೆಯಾಗುತ್ತದೆ. ಈ ವರೆಗಿನ ಅನುಭವದಿಂದ ಕಾಂಗ್ರೆಸ್ ಪಕ್ಷವು ಹಾಗೆ ಮಾಡಬಹುದೆಂದೇ ತೋರುವುದಿಲ್ಲವೆ?

ಈಗ ಹೆಚ್ಚುತ್ತಿರುವ ಕಾಂಗ್ರೆಸ್ಸಿನ ಸಂಖ್ಯಾಬಲವು ಫಲಕಾರಿಯಾಗಬೇಕಾದರೆ ಚೆನ್ನಾಗಿ ಪರೀಕ್ಷಿಸಿಯೇ ಕಾರ್ಯನಿರ್ವಾಹಕರನ್ನು ನಿಯಮಿಸಬೇಕು. ಏನೇನೋ ಸ್ವಾರ್ಥಸಾಧಿಸಲಿಕ್ಕೆ ಸೇರುವವರೂ ಉಂಟು. ಮದ್ರಾಸ್ ಕಾರ್ಪೊರೇಶನ್ನಿನಲ್ಲಿಯೂ ತ ವಿ. ಳು ನಾಡಿನಲ್ಲಿಯೂ ಕಾಂಗ್ರೆಸ್ಸಿನ ಅನೇಕ "ದಿವ್ಯ ದೇಶಭಕ್ತರು" ನಡೆಸಿರುವ ಕೃತಿಗಳನ್ನು ನೋಡಿದರೆ ಕಾಂಗ್ರೆಸ್ಸಿನ ಬಲಕ್ಕೆ ಕೆಲಸಗಾರರ ಶುದ್ಧೀಕರಣವೂ ಅಗತ್ಯವೆಂದೇ ತೋರುವುದಿಲ್ಲವೆ?

# ಪಟೇಲ-ನರಿಮನ್ನರ ವ್ಯಾಜ್ಯ ತಿಳಿಸಿದ್ದೇನು?




### ಕೊನೆಗೆ ಹೀಗಾಯಿತು.

ಸರದಾರ ಪಟೇಲ ಮತ್ತು ವೀರ ನರಿಮನ್ನರ ವ್ಯಾಜ್ಯವು ಮಹಾತ್ಮಾ ಗಾಂಧಿಯವರ ಕಡೆಗೆ ಹೋಗಿ ಅವರ ತೀರ್ಮಾನವನ್ನು ಶ್ರೀ. ನರಿಮನ್ನರು ನೋಡಿ ತಾವು ತಪ್ಪಿತಸ್ಥರೆಂದು ಒಪ್ಪಿಕೊಂಡಿದ್ದರಷ್ಟೆ. ಈ ವ್ಯಾಜ್ಯವು ಅಷ್ಟಕ್ಕೇ ಪೂರ್ಣಯಾಗಬೇಕಾಗಿದ್ದಿತು. ಆದರೆ ಹಾಗಾಗಲಿಲ್ಲ. ಶ್ರೀ. ನರಿಮನ್ನರು ಬೆಂಗಳೂರಿನ ತಮ್ಮ ಹೇಳಿಕೆಯಲ್ಲಿ ಗಾಂಧೀಜಿಯವರ ತೀರ್ಮಾನವು ಪಕ್ಷಪಾತಯುಕ್ತವಾದುದೇ ಇದೆಯೆಂದು ಭಾಸವಾಗುವಂತೆ ಹೇಳಿದರು.

ವೀರ ನರಿಮನ್ನರು ಹೀಗೆ ಹೇಳಿದುದು ತುಂಬಾ ಅನುಚಿತವು. ಆಗ ಗಾಂಧೀಜಿಯವರು ತಮ್ಮ ತೀರ್ಮಾನವನ್ನು ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಕಡೆಗೆ ಕಳುಹಿಸಿದರು. ಅಲ್ಲಿ ಅದರ ವಿಚಾರಣೆಯಾಗಿ ಶ್ರೀ. ನರಿಮನ್ನರು ಕಾಂಗ್ರೆಸ್ಸಿನ ಯಾವ ಹೊಣೆಗಾರಿಕೆಯ ಕಾರ್ಯಕ್ಕೂ ಯೋಗ್ಯರಲ್ಲವೆಂದು ತೀರ್ಮಾನಿಸಿದ್ದಲ್ಲದೆ ಇವರ ನಡತೆಯನ್ನು ತೀಕ್ಷ್ಣವಾಗಿ ಖಂಡಿಸಿದರು.

ವೀರ ನರಿಮನ್ನರು ಇವನ್ನು ನೋಡಿ ಮುಂಬೈ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷಸ್ಥಾನವನ್ನು ಬಿಟ್ಟುಕೊಟ್ಟು ವರ್ಕಿಂಗ್ ಕಮಿಟಿಯ ತೀರ್ಮಾನವು ಅನ್ಯಾಯವಾದುದೆಂದೂ ಅದಕ್ಕೆ ಹೀಗೆ ವಿಚಾರಣೆಮಾಡಲು ಅಧಿಕಾರವೇ ಇಲ್ಲವೆಂದೂ ಗಾಂಧೀಜಿಯವರು ವರ್ಕಿಂಗ್ ಕಮಿಟಿಯ ಕಡೆಗೆ ಕಳುಹಿಸಿದುದು ಅನ್ಯಾಯವೆಂದೂ ಒಂದು ಪ್ರಕಟನೆಯನ್ನು ಹೊರಡಿಸಿದ್ದಾರೆ. ಈ ವ್ಯಾಜ್ಯವು ಕೊನೆಗೆ ಹೀಗಾಯಿತು.

### ಇದರಿಂದ ತಿಳಿದಿದ್ದೇನು?

(೧) ರಾಷ್ಟ್ರಕಾರ್ಯಕ್ಕಾಗಿ ಸ್ವಾರ್ಥತ್ಯಾಗಮಾಡಿದ ವೀರ ನರಿಮನ್ನರಂಥವರು ಕೂಡಾ ದಾಕ್ಷಿಣ್ಯಕ್ಕೋ ಇನ್ನಾವುದಕ್ಕೋ ಒಳಗಾಗಿ ಕಾಂಗ್ರೆಸ್ ಅಪ್ಪಣೆಯನ್ನು ಉಲ್ಲಂಘಿಸಿದರು. ಲೋಕಾದರ ಪ್ರಾಪ್ತಿಗಾಗಿ ತಪ್ಪುದಾರಿಯಲ್ಲಿ ನಡೆದರು. ಆದುದರಿಂದ ಬೆಳ್ಳಗಿರುವುದೆಲ್ಲಾ ಹಾಲೆಂದು ತಿಳಿಯಬಾರದೆಂಬ ಗಾದೆಯಂತೆ ಕಾಂಗ್ರೆಸ್ಸಿನಲ್ಲಿರುವವರೆಲ್ಲಾ ದೇವದೂತರೆಂದು ತಿಳಿದು ರಾಷ್ಟ್ರಕಾರ್ಯ ವಹಿಸಬಾರದು. ಮತ್ತು ಅವರ ಕೃತಿಗಳನ್ನು ಕಣ್ಣುಮುಚ್ಚಿಕೊಂಡು ಉಘೋ ಉಘೋ ಎಂದು ಹೊಗಳಬಾರದು.

(೨) ಕಾಂಗ್ರೆಸ್ ಪಕ್ಷಕ್ಕೆ ಬಹುಮತ ದೊರೆಯಲೆಂದು ವಿಶ್ವಾಸಕ್ಕೆ ಅನರ್ಹರಾಗಿದ್ದವರನ್ನೂ ಕಳೆದ ಚುನಾವಣೆಯಲ್ಲಿ ಪಾರ್ಲಮೆಂಟರಿ ಬೋರ್ಡಿನವರು ಹುರಿಯಾಳುಗಳನ್ನಾಗಿ ಆರಿಸಿದ್ದರು.

(೩) ವೀರ ನರಿಮನ್ನರು ಗಾಂಧೀಜಿಯವರ ಮತ್ತು ಶ್ರೀ. ಬಹಾದ್ದೂರಜಿಯವರ ತೀರ್ಮಾನವನ್ನು ಮೊದಲು ಒಪ್ಪಿ ಆ ಮೇಲೆ ನಿರಾಕರಿಸಿದ್ದರಿಂದ ಆ ತೀರ್ಮಾನದ ವಿವರವನ್ನೆಲ್ಲಾ ಸರ್ವ ಜನರ ತಿಳುವಳಿಕೆಗಾಗಿ ಪ್ರಕಟಮಾಡಿಬಿಟ್ಟಿದ್ದರೆ ಸಾಕಾಗಿತ್ತು. ವಿನಾ ವರ್ಕಿಂಗ್ ಕಮಿಟಿಯ ಕಡೆಗೆ ಕಳಿಸಬಾರದಾಗಿತ್ತು.

(೪) ವರ್ಕಿಂಗ್ ಕಮಿಟಿಯವರು ವೀರ ನರಿಮನ್ನರ ವಿಚಾರವಾಗಿ ತೀರ್ಮಾನಮಾಡುವ ಮುಂಚೆ ಅವರ ಹೇಳಿಕೆಯನ್ನು ಕೇಳಬೇಕಾದುದು ನ್ಯಾಯವಾಗಿದ್ದಿತು.

### ಮದ್ರಾಸಿನಲ್ಲಿ ಶುದ್ಧೀಕರಣ!

ಮದ್ರಾಸ್ ಕಾರ್ಪೊರೇಶನ್ನಿನಲ್ಲಿ ಕಾಂಗ್ರೆಸ್ಸಿನ ಬಹುಮತವೇ ಅತ್ಯಧಿಕವಾಗಿದೆ. ಕಾರ್ಪೊರೇಶನ್ನಿನಲ್ಲಿ ಕೆಲಸಗಾರರನ್ನು ನಿಯಮಿಸಿಕೊಳ್ಳುವ ಮೊದಲಾದ ಕಾರ್ಯಗಳಿಗಾಗಿ ಲಂಚದ ಹೊಡೆತ ಹೆಚ್ಚಾಯಿತು. ಆಗ ಇದರ ವಿಚಾರಣೆಗಾಗಿ ಒಂದು ಸಮಿತಿಯನ್ನು ಏರ್ಪಡಿಸಲು ಆ ಸಮಿತಿಯು ವಿಚಾರಣೆ ನಡೆಯಿಸಿ ಈ ಪ್ರಕಾರ ತಿಳಿಸಿದೆ—

"ಅನೇಕರು ತಮ್ಮ ಅಧಿಕಾರದ ದುರುಪಯೋಗವನ್ನು ಮಾಡಿದ್ದಾರೆ. ಜಿಲ್ಲಾ ಕಾಂಗ್ರೆಸ್ ಕಮಿಟಿ ಅಧ್ಯಕ್ಷರಾದ ಶ್ರೀ. ಗೋಪಾಲರತ್ನಂ ಇವರು ಕಾರ್ಪೊರೇಶನ್ನಿನ ಸಭಾಸದರಲ್ಲದಿದ್ದರೂ ಸ್ವಾರ್ಥಕ್ಕಾಗಿಯೂ ಕೆಲವರ ಹಿತಕ್ಕಾಗಿಯೂ ತಮ್ಮ ವರ್ಚಸ್ಸನ್ನು ಉಪಯೋಗಿಸಿದರು.

ಶ್ರೀ. ದಾಮೋದರ ನಾಯುಡು, ಶ್ರೀ. ವಿನಾಯಕ ಮೊದಲಿಯರ, ಶ್ರೀ. ಬಾಲಸುಬ್ರಹ್ಮಣ್ಯ ಇವರು ಕಾರ್ಪೊರೇಶನ್ ಸಭಾಸದತ್ವಕ್ಕೆ ರಾಜೀನಾಮೆ ಕೊಡಬೇಕು. ಇವರಲ್ಲಿ ಕಡೆಯ ಇಬ್ಬರಿಗೆ ಕಾಂಗ್ರೆಸ್ಸಿನಲ್ಲಿ ಯಾವ ಅಧಿಕಾರದ ಸ್ಥಳಗಳನ್ನೂ ಕೊಡಕೂಡದು. ಶ್ರೀ. ಉದಕೇಶವಲೊ. ಶ್ರೀ. ಲಕ್ಷ್ಮಣಸ್ವಾಮಿ ಮುದಲಿಯರ್ ಇವರು ಕಾರ್ಪೊರೇಶನ್ನಿನ ಸ್ಟ್ಯಾಂಡಿಂಗ್ ಕಮಿಟಿಯಲ್ಲಿಯ ಕೆಲಸಕ್ಕೆ ರಾಜೀನಾಮೆ ಕೊಡಬೇಕು. ಶ್ರೀ. ಗೋಪಾಲರತ್ನಂ ಇವರನ್ನು ಕಾಂಗ್ರೆಸ್ ಕಮಿಟಿಯಿಂದ ತೆಗೆದುಹಾಕಬೇಕು."

# ಮೋಸಗಾರನಿಗೆ ಈಶನೊಲಿವನೆ?



ಡಂಭಾಚಾರದ ಪೂಜೆ, ಜಪ, ತಪಾದಿಗಳು ಜನರನ್ನು ಮೋಸಗೊಳಿಸಬಹುದೇ ವಿನಾ ದೇವರನ್ನು ಮೋಸಗೊಳಿಸುವವೆ? ಜನರನ್ನು ನಾನಾ ರೀತಿಗಳಿಂದ ಮೋಸಗೊಳಿಸಿ ಸ್ವಾರ್ಥಸಾಧಿಸಿಕೊಳ್ಳುವವರು ದೇವರ ಪೂಜೆಯನ್ನು ಎಷ್ಟು ಸಂಭ್ರಮದಿಂದ ಮಾಡಿದರೇನು? ದೇವರು ಮೆಚ್ಚುವನೆ? ಆತನೇನು ಲಂಚ ತಿನ್ನುವನೆ? ತಾವು ಮಹಾ ಧಾರ್ಮಿಕರೆಂದು ಹೇಳಿಸಿಕೊಳ್ಳಲು ಅನೇಕ ಠಕ್ಕರು ದೇವರ ಪೂಜೆಯನ್ನು ವೈಭವದಿಂದ ಮಾಡುತ್ತಾರೆ. ಇಂಥ ಡಂಭಾಚಾರವನ್ನು ಆ ಜಗದ್ಗುರು ಪ್ರಭುಸ್ವಾಮಿಗಳು ಶಿವಾನುಭವ ಮಂಟಪದಲ್ಲಿ ಒಂದು ದಿನ ಈ ಪ್ರಕಾರ ಖಂಡಿಸಿದರು—

> ಜಾಲಗಾರನ ಕಾಲು ಮುಳ್ಳು ತಾಗಿ ನೊಂದಿತೆಂಬಂತೆ. ಸೊನೆಗಾರನ ಮನೆಯಲ್ಲಿ ಹೆಣಹೋಗಿ ಅಳುವಂತೆ. ಕನ್ನಗಳ್ಳನ ಮನೆಯಲ್ಲಿ ಬಟ್ಟಲು ಹೋಗಿ ಮರುಗುವಂತೆ. ಠಕ್ಕನ ಪೂಜೆಗೆ ಮೆಚ್ಚುವನೆ ನಮ್ಮ ಗುಹೇಶ್ವರಾ?

ಪ್ರತಿನಿತ್ಯ ಬಲೆಗಳನ್ನು ಒಡ್ಡಿ ಅನೇಕ ಪ್ರಾಣಿಗಳನ್ನು ಹಿಡಿದು ಅವುಗಳನ್ನು ಕೊಲ್ಲುತ್ತಿರುವವನ ಕಾಲಿಗೆ ಒಂದು ದಿನ ಒಂದು ಮುಳ್ಳು ತಾಗಿದರೆ ಎಷ್ಟೋ ನೋವಾಯಿತೆಂದು ಅಳುತ್ತಾನಲ್ಲವೆ? ಆಗಲಾದರೂ ತನ್ನಂತೆಯೇ ಆ ಪ್ರಾಣಿಗಳಿಗೂ ನೋವಾಗುತ್ತದೆಂಬ ತಿಳುವಳಿಕೆ ಬರಬಾರದೆ? ಕಟುಕನು ಅನೇಕ ಪ್ರಾಣಿಗಳನ್ನು ಕೊಲ್ಲುತ್ತಾನೆ. ತನ್ನ ಮನೆಯಲ್ಲಿ ಸತ್ತರೆ ಆಗ ಅಳುವಂತೆ ಅನ್ಯ ಪ್ರಾಣಿಗಳನ್ನು ಕೊಲ್ಲುವಾಗ ಅದೇಕೆ ದುಃಖಿಸುವುದಿಲ್ಲ? ಕನ್ನ ಕೊಡೆದು ಯಾವಾಗಲೂ ಕದಿಯುವ ಕೆಲಸದಲ್ಲಿಯೇ ಇರುವವನ ಮನೆಯಲ್ಲಿಯ ಒಂದು ಬಟ್ಟಲವನ್ನು ಯಾರಾದರೂ ಕಳುವು ಮಾಡಿದರೆ ಆಗ ಅದಕ್ಕಾಗಿ ಅವನು ಎಷ್ಟೋ ಮರುಗುತ್ತಾನೆ.

ಇವರೆಲ್ಲರೂ ತಮ್ಮಂತೆಯೇ ಅನ್ಯರನ್ನು ಕಾಣುವುದಿಲ್ಲವಷ್ಟೆ. ಅವರ ಹಾಗೆಯೇ ಪರರ ಹೊನ್ನು, ಹೆಣ್ಣು, ಮಣ್ಣು ಮೊದಲಾದವುಗಳನ್ನು ಅಪಹರಿಸುವ ಮೋಸಗಾರನಾದರೂ ಅನ್ಯರನ್ನು ತನ್ನಂತೆಯೇ ಎಲ್ಲಿ ನೋಡುತ್ತಾನೆ? ಆ ಠಕ್ಕನು ಜನರನ್ನು ವಂಚಿಸಿ ತಾನು ಶುದ್ಧನಾಗಬೇಕೆಂದು ದೇವರ ಪೂಜೆಯನ್ನು ಮಾಡಿದರೆ ಶುದ್ಧನಾಗುತ್ತಾನೆಯೆ? ಶಿವನು ಆತನ ಪೂಜೆಗೆ ಮೆಚ್ಚುತ್ತಾನೆಯೇ? ಇಲ್ಲವೇ ಇಲ್ಲ.

ಬಸವಣ್ಣನು ಹೇಳಿದುದೇನು? ಪಾಪಿಯು ಹೂಗಳನ್ನು ಧರಿಸಿದರೆ ಶಿವನಿಗೆ ಶಸ್ತ್ರದಿಂದ ಇರಿದಂತಾಗುತ್ತದೆ. ಕೋಪಿಯು ನೀರಿನಿಂದ ಅಭಿಷೇಕಮಾಡಿದರೆ ರಕ್ತವನ್ನೇ ಲಿಂಗದಮೇಲೆ ಎರೆದಂತಾಗುತ್ತದೆ. ಬೇಟೆಗಾರನು ಎತ್ತಿನ ಮರೆಯಲ್ಲಿ ನಿಂತು ಎರಳೆಗೆ ಬಾಣವನ್ನು ಬಿಡುವ ಹಾಗೆ ಈ ಠಕ್ಕರು ಶಿವಪೂಜೆಯ ಮರೆಯಲ್ಲಿ ಪರ ಸ್ತ್ರೀ ಪರ ಧನಗಳ ಬೇಟೆಯಾಡುತ್ತಾರೆ. ಇಂಥ ಮೋಸಗಾರರಿಗೆ ಈಶನು ಹೇಗೆ ಒಲಿವನು?

ತನ್ನಂತೆ ಪರರೆಂಬ ಗುಣವಿರಬೇಕು. ಅನ್ಯರನ್ನು ಠಕ್ಕಿಸುವ ದುರ್ಗುಣವು ಅಳಿಯಬೇಕಾದರೆ ಅವರೂ ತನ್ನಂತೆಯೇ ಸರಿಯೆಂಬ ಸದ್ಗುಣವುಂಟಾಗಬೇಕು. ಇಂಥ ಸದ್ಗುಣವುಳ್ಳವರು ಶಿವನ ಕೃಪೆಗೆ ಪಾತ್ರರಾಗುತ್ತಾರೆ. ಅವರ ಪೂಜೆಗೆ ಶಿವನು ಮೆಚ್ಚುತ್ತಾನೆ. ಅಂಥ ದಯೆಯುಳ್ಳವರ ಪೂಜೆಯು ಈ ಠಕ್ಕರ ಪೂಜೆಯಂತಿರುವುದಿಲ್ಲ. ಇವರಂತೆ ಡಂಭಾಚಾರದ ಪೂಜೆಯನ್ನು ಅವರು ಮಾಡುವುದಿಲ್ಲ.

ಲೋಕೋಪಕಾರಕ್ಕಾಗಿ ತಮ್ಮ ತನು ಮನ ಧನಗಳನ್ನು ಸವಿಸುತ್ತಾರೆ. ದೀನರ ಹೃದಯದಲ್ಲಿ ಶಿವನು ಬಳಲುತ್ತಿರುವುದನ್ನು ಕಂಡು ಕಡು ದುಃಖಿಗಳಾಗಿ ಅವರ ಸೇವೆಗೆ ಸರ್ವಸ್ವವನ್ನೂ ಸೂರೆ ಮಾಡಲು ಸಿದ್ಧರಾಗುತ್ತಾರೆ. ಅದೇ ಅವರಿಗೆ ಬಹು ಸಂತೋಷದ ಶಿವಪೂಜೆ.

ಶಿವಭಕ್ತರ ನೋವೇ ತಮ್ಮ ನೋವೆಂದು ಯಾರು ತಿಳಿದು ಅವರ ನೋವನ್ನು ಕಳೆಯುತ್ತಾರೆಯೋ ಅದಕ್ಕಾಗಿಯೇ ದೃಢಮನಸ್ಕರಾಗಲು ಶಿವಪೂಜೆಯನ್ನು ಮಾಡುತ್ತಾರೆಯೋ ಅದೇ ಶ್ರೇಯಸ್ಕರವಾದ ಪೂಜೆ.

ಅಣ್ಣ ಬಸವಣ್ಣನು ಹೇಳುವುದೇನು? ಕಲ್ಲನಾಗರಕ್ಕೆ ಹಾಲನೆರೆವಂತೆ ಉಣ್ಣದ ಲಿಂಗಕ್ಕೆ ಬೋನವ ಹಿಡಿಯುವ ಪೂಜೆಯು ನಿಜವಾದ ಪೂಜೆಯೇ? ಹಸಿದು ಬಳಲುವ ಪ್ರಾಣಿಗೆ ಅನ್ನ ನೀಡಿದರೆ ಅದೇ ಹೆಚ್ಚಿನ ಪೂಜೆ. ಅನ್ಯರನ್ನು ಠಕ್ಕಿಸಿ ದುಃಖಪಡಿಸಿ ವೆಗ್ಗಳವಾದ ಪತ್ರೆ ಪುಷ್ಪಗಳಿಂದ ಪೂಜೆಮಾಡಿದರೆ ಶಿವನು ಮೆಚ್ಚುವನೆ? ಇಂಥ ಠಕ್ಕರ ಪೂಜೆಗೆ ಶಿವನು ಒಲಿಯುವುದಿಲ್ಲವೆಂಬ ಶ್ರೀ ಪ್ರಭುದೇವರ ಉಪದೇಶವು ಶಿವಾನುಭವ ಮಂಟಪದ ಎಲ್ಲ ಶರಣ ಶರಣೆಯರಿಗೂ ಮಾನ್ಯವಾಯಿತು.

## ಶ್ರೀ ಸ್ವಾಮಿ ರಾಮತೀರ್ಥರ ಭವಿಷ್ಯ ವಾಣಿ!



ಶ್ರೀ ಸ್ವಾಮಿ ರಾಮತೀರ್ಥರು ದೀಪಾವಳಿಯಲ್ಲಿ ದೇಹಧಾರಣಮಾಡಿದರು. ಮತ್ತು ದೀಪಾವಳಿಯಲ್ಲಿಯೇ ಸ್ವೇಚ್ಛೆಯಿಂದ ದೇಹವನ್ನು ತ್ಯಾಗಮಾಡಿದರು. ತಾವು ಜೀವಿಸಿದ್ದ ಅಲ್ಪಾವಧಿಯಲ್ಲಿಯೇ ದೇಶ ವಿದೇಶಗಳಲ್ಲಿ ಭಾರತೀಯ ತತ್ವಜ್ಞಾನಜ್ಯೋತಿಯು ಪ್ರಕಾಶಿಸುವಂತೆ ಮಾಡಿದರು.

ಅಂತ್ಯ ಸಮಯದಲ್ಲಿ ಈ ದಿವ್ಯಜ್ಞಾನಿಗಳು ಹೇಳಿದ ಭವಿಷ್ಯವಾಣಿಯು ಈ ಪ್ರಕಾರವಾದುದು—

"ಜಾಗೃತವಾದ ಒಂದೇ ಒಂದು ಆತ್ಮವು ಅನೇಕ ಆತ್ಮಗಳನ್ನು ಜಾಗೃತಗೊಳಿಸಿ ಅವುಗಳೊಂದಿಗೆ ಭರತಖಂಡದಲ್ಲಿ ನವಜೀವನ ಸಂಚಾರವಾಗುವಂತೆ ಮಾಡುವುದು. ಸ್ವಲ್ಪದಿನಗಳಲ್ಲಿಯೇ ಅಂಧಕಾರ (ಅಜ್ಞಾನ) ಮತ್ತು ನಿರ್ಬಲತೆಗಳು ಭರತಖಂಡದಿಂದ ದೂರಾಗುವವು. ಇಪ್ಪತ್ತನೆಯ ಶತಮಾನದ ಪ್ರಥಮಾರ್ಧದಲ್ಲಿ ಭರತಖಂಡವು ಸ್ವಸಾಮರ್ಥ್ಯದಿಂದ ಪ್ರತಿಷ್ಠೆಯನ್ನು ಹೊಂದುವುದು. ಅಂಧಕಾರವು ನಿವಾರಣೆಯಾಗಿ ಪ್ರಕಾಶವು ಪ್ರಾಪ್ತವಾಗುವುದು."

ಈಗಿನ ಸ್ವಾತಂತ್ರ್ಯ ಸೂರ್ಯೋದಯವೇ ಸ್ವಾಮಿಜಿಯವರ ಜ್ಞಾನರವಿಯ ಆಗಮನವೇ?

## ವನಶಿಗ್ಲಿ.

ಲಕ್ಷ್ಮೇಶ್ವರ ತಾಲೂಕಪೈಕಿ-ವನಶಿಗ್ಲಿಯಲ್ಲಿ ತಾ. ೨೬-೧೦-೩೭ ನೆ ದಿವಸ ದಕ್ಷಿಣ ಮಹಾರಾಷ್ಟ್ರ ಲೋಕಸೇವಕ ಸಂಘವು ಸ್ಥಾಪಿಸಲ್ಪಟ್ಟಿರುತ್ತದೆ. ಇದಕ್ಕೆ ಶ್ರೀಮಂತರನೇಕರು ಮೆಂಬರರಾಗಿ ಬಹು ಉತ್ಸಾಹದಿಂದ ಕೆಲಸ ನಡೆಯಿಸಿರುತ್ತಾರೆ. ಹಾಗೂ ತಾ. ೪-೧೧-೩೭ ನೇ ದಿವಸ ಶ್ರೀ. ಭಾಗ್ಯೋದಯ ಮಂಟಪವು ಶ್ರೀಯುತ ಆದಯ್ಯನವರು ಹಿರೇಮಠ ಇವರ ಹಸ್ತದಿಂದ ತೆರೆಯಲ್ಪಟ್ಟಿತು. ಮತ್ತು ಆ ದಿವಸ ತರುಣರೆಲ್ಲರೂ ಮಹಾತ್ಮಾ ಗಾಂಧೀಜಿಯವರ ಭಾವಚಿತ್ರದ ಮೆರವಣಿಗೆಯನ್ನು ಜಯಜಯಕಾರದೊಡನೆ ಬಹು ವಿಜೃಂಭಣೆಯಿಂದ ಮಾಡುತ್ತ ಮಂಟಪಕ್ಕೆ ಬಂದರು. ಮತ್ತು ಮಂಟಪದಲ್ಲಿ ಶ್ರೀಯುತರನೇಕರು ತಮ್ಮ ಅಸ್ಖಲಿತವಾಣಿಯಿಂದ ಸರ್ವ ವಿಷಯದ ಮೇಲೆ ದಿವ್ಯ ಭಾಷಣ ಮಾಡಿದರು. ಈಗಾಗಲೇ ಮಂಟಪಕ್ಕೆ ಅರವತ್ತು ಜನ ಶೇರ್‌ದಾರರಾಗಿರುತ್ತಾರೆ. ಮಂಟಪದವರು ತಮ್ಮ ಎಲ್ಲ ಹಣದಿಂದ ಬಡವರಿಗೆ ಆಹಾರ, ಖಾದಿಪ್ರಚಾರ, ನಿರುದ್ಯೋಗಸಂಹಾರ ಹೀಗೆ ಮುಖ್ಯ ಮೂರು ಮಾರ್ಗಕ್ಕೈಕೊಂಡಿರುವರು. ಅಲ್ಲದೆ ಬಡವರೆಲ್ಲರ ಅನುಕೂಲಕ್ಕಾಗಿ ಕೇವಲ ನಾಲ್ಕಾಣೆಗೊಂದು ಶೇರ್‌ನಂತೆ ಮಾರುತ್ತಿರುವರು. ಇದು ಅತ್ಯಂತ ಸ್ತುತ್ಯ ಕಾರ್ಯವು. ಇದರಂತೆ ಸರ್ವ ಗ್ರಾಮದವರೂ ಮಾಡಲಿಕ್ಕೆ ಸರ್ವೇಶನು ಸಹಾಯ ಮಾಡುವನೆಂದು ಹಾರೈಸುತ್ತೇವೆ.

ಕಾರ್ಯದರ್ಶಿ

ಕೊಟ್ರಬಸಯ್ಯ ಮುಳಗುಂದಮಠ.

## ಪಾರಮಾರ್ಥಿಕ "ಡೈರಿ"

ಶ್ರೀ. ಶಿವ ಚಿದಂಬರಾಯನಮಃ

(ಶಿಲ ೧೦ ಶು. ೬ ಸೋಮ. ೧೮-೧-೩೭.)

ಹಾಗಾದರೆ ಈ ಹೆಣ್ಣಿನ ಮೋಹವು ಮೇಣ್ ಹೊನ್ನು ಮಣ್ಣಿನ (ದೇಹದ) ಮೋಹವೂ ಎಂತುಪೋಗಿ ಪೂರ್ಣ ಶಾಂತತೆ ಪ್ರಾಪ್ತವಾಗುವದಯ್ಯಾ?

ಭ. ಗೀತೆ ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ  
ತಮೇವ ಶರಣಂ ಗಚ್ಛ ಸರ್ವ ಭಾವೇನ ಭಾರತ|  
ತತ್‌ಪ್ರಸಾದಾತ್ ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ||

ಶ್ರಿ:— ಹೃದಯದೊಳಿರುವಂಥ ಹದಿನಾಲ್ಕು ಲೋಕೇಶ|  
ಮುದದಿಂದೆ ಶರಣು ಸರ್ವ ಭಾವದಿ ಬಂದೆ|  
ಪದಶಾಂತಿಕೊಡೈ ಬಸವೇಶ ||೨೮||

× × ×

ಶ್ರೀ. ಶಿವ ಚಿದಂಬರಾಯ ನಮಃ

(ಶಿಲ. ೧೦ ಶು. ೭ ಮಂಗಳ. ೧೯-೧-೩೭.)

ಬಸವೇಶ್ವರಾ ನಾನು ನಿನಗೆ ಶರಣು ಬಂದಮೇಲೆ ಹ್ಯಾಗೆ ನಡೆಯಬೇಕು? ಮಂದನಿಗೆ ಹೇಳಿ ನಡೆಸಿಕೊಳ್ಳಯ್ಯಾ.

ಭ. ಗೀತೆ ಮನ್ಮನಾಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು|  
ಮಾಮೇ ವೈಷ್ಯಸಿ ಸತ್ಯಂತೇ ಪ್ರತಿಜಾನೆ ಪ್ರಿಯೋಽಸಿಮೆ||

ಶ್ರಿ:— ಮನ್ಮನಾಭವಪದ್ಯ ತನ್ಮಯವಾಗಲೈ|  
ಜನ್ಮವೇ ಸಫಲವಾಗುವದದರಿಂದೆ|  
ಸನ್ಮುನಿ ವಾಕ್ಯ ದಾಸಾರ್ಯ ||೨೯||

× × ×

# ಸಂಯುಕ್ತ ರಾಜ್ಯಘಟನೆಯ ಸಲುವಾಗಿ

## ಫೆಡರಲ್ ಅಸೆಂಬ್ಲಿಯಲ್ಲಿ ಬ್ರಿಟಿಶ್ ಹಿಂದುಸ್ಥಾನದಲ್ಲಿಯ ಪ್ರತಿನಿಧಿಗಳು.

| ಅನುಕ್ರಮ ನಂಬರು. | ಪ್ರಾಂತಗಳು. | ಒಟ್ಟು ಜಾಗೆಗಳು. | ಜನರ್ ಸಾಧಾರಣ ಜಾಗೆ. | ಶೆಡ್ಯೂಲ್ಡ ಜಾತಿಯವರು | ಶಿಖ. | ಮುಸಲ್ಮಾನ್. | ಆಂಗ್ಲೋ ಇಂಡಿಯನ್. | ಯುರೋಪಿಯನ್. | ಇಂಡಿಯನ್ ಕ್ರಿಶ್ಚಿಯನ್. | ವ್ಯಾಪಾರ ಉದ್ಯೋಗ ದಂಡೆಯ ಪ್ರತಿನಿಧಿ | ಜಮೀನದಾರ. | ಕಾಮಗಾರ. | ಸ್ತ್ರೀ. |
|---|---|---|---|---|---|---|---|---|---|---|---|---|---|
| (೧) | ಮದ್ರಾಸ | ೩೭ | ೧೯ | ೪ | - | ೮ | ೧ | ೧ | ೨ | ೨ | ೧ | ೧ | ೨ |
| (೨) | ಮುಂಬೈ | ೩೦ | ೧೩ | ೨ | - | ೬ | ೧ | ೧ | ೧ | ೩ | ೧ | ೨ | ೨ |
| (೩) | ಬಂಗಾಲ | ೩೭ | ೧೦ | ೩ | - | ೧೭ | ೧ | ೧ | ೧ | ೩ | ೧ | ೨ | ೧ |
| (೪) | ಸ. ಪ್ರಾಂತ | ೩೭ | ೧೯ | ೩ | - | ೧೨ | ೧ | ೧ | ೧ | - | ೧ | ೧ | ೧ |
| (೫) | ಪಂಜಾಬ | ೩೦ | ೬ | ೧ | ೬ | ೧೪ | - | ೧ | ೧ | - | ೧ | - | ೧ |
| (೬) | ಬಿಹಾರ | ೩೦ | ೧೬ | ೨ | - | ೯ | - | ೧ | ೧ | - | ೧ | ೧ | ೧ |
| (೭) | ಮಧ್ಯ ಪ್ರಾಂತ | ೧೫ | ೯ | ೨ | - | ೩ | - | - | - | - | ೧ | ೧ | ೧ |
| (೮) | ಆಸಾಮ | ೧೦ | ೪ | ೧ | - | ೩ | - | ೧ | ೧ | - | - | ೧ | - |
| (೯) | ಸರಹದ್ದಪ್ರಾಂತ | ೫ | ೧ | - | - | ೪ | - | - | - | - | - | - | - |
| (೧೦) | ಓರಿಸಾ | ೫ | ೪ | ೧ | - | ೧ | - | - | - | - | - | - | - |
| (೧೧) | ಸಿಂಧ | ೫ | ೧ | - | - | ೩ | - | ೧ | - | - | - | - | - |
| (೧೨) | ಬಲುಚಿಸ್ಥಾನ | ೧ | - | - | - | ೧ | - | - | - | - | - | - | - |
| (೧೩) | ದಿಲ್ಲಿ | ೨ | ೧ | - | - | ೧ | - | - | - | - | - | - | - |
| (೧೪) | ಅಜಮೀರ | ೧ | ೧ | - | - | - | - | - | - | - | - | - | - |
| (೧೫) | ಕೂರ್ಗ | ೧ | ೧ | - | - | - | - | - | - | - | - | - | - |
| (೧೬) | ಇತರ | ೪ | - | - | - | - | - | - | - | ೩ | - | ೧ | - |
| | ಒಟ್ಟು | ೨೫೦ | ೧೦೫ | ೧೯ | ೬ | ೮೨ | ೪ | ೮ | ೮ | ೧೧ | ೭ | ೧೦ | ೯ |

## ಕೌನ್ಸಿಲ್ ಆಫ್ ಸ್ಟೇಟದಲ್ಲಿ ಬ್ರಿಟಿಶ್ ಹಿಂದುಸ್ಥಾನದ ಪ್ರತಿನಿಧಿಗಳು.

| ಅನುಕ್ರಮ ನಂಬರು. | ಪ್ರಾಂತಗಳು. | ಒಟ್ಟು ಜಾಗೆಗಳು. | ಜನರ್ ಸಾಧಾರಣ ಜಾಗೆ. | ಶೆಡ್ಯೂಲ್ಡ ಜಾತಿಯವರು | ಶಿಖ. | ಮುಸಲ್ಮಾನ್. | ಸ್ತ್ರೀ. |
|---|---|---|---|---|---|---|---|
| (೧) | ಮದ್ರಾಸ | ೨೦ | ೧೪ | ೧ | - | ೪ | ೧ |
| (೨) | ಮುಂಬೈ | ೧೬ | ೧೦ | ೧ | - | ೪ | ೧ |
| (೩) | ಬಂಗಾಲ | ೨೦ | ೮ | ೧ | - | ೧೦ | ೧ |
| (೪) | ಸ. ಪ್ರಾಂತ | ೨೦ | ೧೧ | ೧ | - | ೭ | ೧ |
| (೫) | ಪಂಜಾಬ | ೧೬ | ೩ | - | ೪ | ೮ | ೧ |
| (೬) | ಬಿಹಾರ | ೧೬ | ೧೦ | ೧ | - | ೪ | ೧ |
| (೭) | ಮಧ್ಯಪ್ರಾಂತ | ೮ | ೬ | ೧ | - | ೧ | - |
| (೮) | ಆಸಾಮ | ೫ | ೩ | - | - | ೨ | - |
| (೯) | ಸ. ಪ್ರಾಂತ | ೫ | ೧ | - | - | ೪ | - |
| (೧೦) | ಓರಿಸಾ | ೫ | ೪ | - | - | ೧ | - |
| (೧೧) | ಸಿಂಧ | ೫ | ೨ | - | - | ೩ | - |
| (೧೨) | ಬಲುಚಿಸ್ಥಾನ | ೧ | - | - | - | ೧ | - |
| (೧೩) | ದಿಲ್ಲಿ | ೧ | ೧ | - | - | - | - |
| (೧೪) | ಅಜಮೀರ | ೧ | ೧ | - | - | - | - |
| (೧೫) | ಕೂರ್ಗ | ೧ | ೧ | - | - | - | - |
| (೧೬) | ಆ. ಇಂಡಿಯನ್ | ೧ | - | - | - | - | - |
| (೧೭) | ಯುರೋಪಿಯನ್ | ೭ | - | - | - | - | - |
| (೧೮) | ಇ. ಕ್ರಿಶ್ಚನ್ | ೨ | - | - | - | - | - |
| | ಒಟ್ಟು | ೧೫೦ | ೭೫ | ೬ | ೪ | ೪೯ | ೬ |

# ೯ ನೇ ಅಖಿಲ ಕರ್ನಾಟಕ ಪ್ರಾಂತೀಯ ಆಯುರ್ವೇದ ಸಮ್ಮೇಳನ, ರಾಯಚೂರು.

ಅಖಿಲ ಕರ್ನಾಟಕ ಆಯುರ್ವೇದ ಸಮ್ಮೇಲನವು ಇದೇ ಡಿಶೆಂಬರ ತಿಂಗಳ ೨೪-೨೫-೨೬ ಈ ಮೂರು ದಿನಗಳಲ್ಲಿ ನಡೆಯಬೇಕೆಂದು ಗೊತ್ತಾಗಿದೆ. ಇದೇ ಸಮಯಕ್ಕೆ ಅಂದರೆ ೨೪ ನೆಯ ತಾರೀಖಿನಿಂದ ಹತ್ತು ದಿನಗಳವರೆಗೆ ಪ್ರದರ್ಶನವು ನೆರವೇರಿಸಲಾಗುವದು. ಈ ಸಮ್ಮೇಲನಕ್ಕೆ ಮೈಸೂರಿನ ಸರಕಾರಿ ಆಸ್ಪತ್ರೆಯ ಸುಪರಿಂಟೆಂಡೆಂಟ್ ಪ್ರೊಫೆಸರರು ಆದ ಭಿಷಕ್ ಚೂಡಾಮಣಿ ಆಯುರ್ವೇದ ವಿದ್ವಾನ್ ಡಾ|| ವೈ. ಲಕ್ಷ್ಮೀ ನರಸಿಂಹಶಾಸ್ತ್ರಿಗಳವರು L. M. P. ಇವರು ಅಧ್ಯಕ್ಷ ಸ್ಥಾನ ಸ್ವೀಕರಿಸಲು ಸಮ್ಮತಿಸಿರುವರು. ಈ ಸಮ್ಮೇಲನವು ಅತ್ಯಂತ ಯಶಸ್ವಿಯಾಗಬೇಕೆಂದು ನಮ್ಮ ಬಯಕೆ.

ಈ ಸಮ್ಮೇಲನದಲ್ಲಿ ಭಾಷಣಗಳನ್ನು ಮಾಡಲು ಅನೇಕ ವೈದ್ಯರಿಗೂ ಆಯುರ್ವೇದ ಪಂಡಿತರಿಗೂ ಬೇಡಿಕೊಳ್ಳಲಾಗಿದೆ. ಅವರುಗಳಿಂದ ಉತ್ತರ ಬಂದಕೂಡಲೆ ಅವರವರ ಹೆಸರುಗಳನ್ನು ಅವರು ಭಾಷಣಮಾಡುವ ವಿಷಯವನ್ನು ಪ್ರಸಿದ್ಧಿಸಲಾಗುವದು. ಈ ಸಮ್ಮೇಲನದಲ್ಲಿ ಮಾತನಾಡಲು ಇಚ್ಛಿಸುವ ಮಹನೀಯರು ಇದೇ ನವ್ಹಂಬರ ೨೫ ರೊಳಗೆ ತಮ್ಮ ವಿಳಾಸವನ್ನು ವಿಷಯವನ್ನು ತಿಳಿಸಬೇಕಲ್ಲದೆ ಭಾಷಣದ ಸಾರಾಂಶವನ್ನು ಬರೆದು ಕಳಿಸಬೇಕು. ನಿಜಾಮ ಕರ್ನಾಟಕದಲ್ಲಿ ಇದೇ ಮೊದಲನೆ ಸಮ್ಮೇಲನವಾದುದರಿಂದ ನಿಜಾಮ ಕರ್ನಾಟಕದ ವೈದ್ಯರೂ ಆಯುರ್ವೇದಾಭಿಮಾನಿಗಳೂ ಅಲ್ಲದೆ ಕರ್ನಾಟಕದ ಎಲ್ಲ ಭಾಗಗಳಿಂದ ಅನೇಕ ಜನರು ಬರುವರೆಂದು ಆಶಿಸಲಾಗಿದೆ. ಈ ಸಲದ ಸಮ್ಮೇಲನಕ್ಕೆ ಹೆಚ್ಚು ಜನರು ಕೂಡುವ ಸಂಭವವಿರುವುದರಿಂದ ಸಮ್ಮೇಲನಕ್ಕೆ ಬರುವವರು ತಮ್ಮ ತಮ್ಮ ಹೆಸರನ್ನು ನವ್ಹಂಬರ ೨೫ ರೊಳಗೆ ತಿಳಿಸಿದಲ್ಲಿ ಸಾಧ್ಯವಾದಷ್ಟು ಅವರಿಗೆ ಅನುಕೂಲವಾಗುವಂತೆ ವ್ಯವಸ್ಥೆ ಮಾಡಲಾಗುವದು. ಪ್ರತಿನಿಧಿಗಳು ತಮ್ಮ ತಮ್ಮ ಪ್ರತಿನಿಧಿಯತ್ವದ ಶುಲ್ಕವನ್ನು ೨೫ ನೇ ನವ್ಹಂಬರ ಒಳಗಾಗಿ ಕಳಿಸತಕ್ಕದ್ದು.

ರಾಯಚೂರು
೩-೧೧-೩೭

ಕಾರ್ಯದರ್ಶಿ
ಅ. ಕ. ಆ ಸಮ್ಮೇಲನ.

## ಅಸ್ಪೃಶ್ಯರ ಸಭೆ.

ತಾ. ೧-೧೧-೩೭ ನೆಯ ದಿವಸ ಹೊನವಾಡದಲ್ಲಿ (ಜಿ. ವಿಜಾಪುರ) ಅಸ್ಪೃಶ್ಯರ ಸುಧಾರಣಾ ಸಭೆಯು ವೆ|| ಆರ್. ಎಸ್. ಕಾಳೆ ಎಂ. ಎಲ್. ಎ. ಇವರ ಅಧ್ಯಕ್ಷತೆಯಲ್ಲಿ ಕೂಡಿತ್ತು. ಸಭೆಗೆ ವಿಜಾಪುರ ಜಿಲ್ಲೆಯ ಎಲ್ಲ ಭಾಗದ ಸುಶಿಕ್ಷಿತರೂ ಸಮೀಪಿಸಿದ ಪತ್ತಿಪ್ಪತ್ತು ಹಳ್ಳಿಗಳ ಅಸ್ಪೃಶ್ಯರೂ ಬಂದಿದ್ದರು. ಮೊದಲು ಡಾ. ಅಂಬೇಡಕರರ ಫೋಟೋದ ಮೆರವಣಿಗೆಯು ತೆಗೆಯಲ್ಪಟ್ಟನಂತರ ಸಭಾ ಕಾರ್ಯವು ಪ್ರಾರಂಭವಾಗಿ ಕೆಳಗಿನ ಠರಾವುಗಳು ಪಾಸಾದವು. ಸಭೆಗೆ ಒಂದು ಸಾವಿರ ಜನರು ಕೂಡಿದ್ದರು.

(೧) ಸಾರ್ವಭೌಮ ಆರನೇ ಜಾರ್ಜ ಬಾದಶಹರವರ ಆಯುರಾರೋಗ್ಯ ಚಿಂತನೆ, ವ ರಾಜನಿಷ್ಠೆ ವ್ಯಕ್ತಮಾಡುವುದು.

(೨) ಡಾ. ಬಾಬಾಸಾಹೇಬ ಅಂಬೇಡಕರರ ಆಯುರಾರೋಗ್ಯದ ಬಗ್ಗೆ ದೇವರಲ್ಲಿ ಪ್ರಾರ್ಥನೆ—

(೩) ಡಾ. ಅಂಬೇಡಕರರು ಅಸೆಂಬ್ಲಿಯಲ್ಲಿ ತಂದ ಖೋತಪದ್ಧತಿ ನಷ್ಟಮಾಡುವ ವ ವತನದಾರ ಮಹಾರ ವತನೀ ಸುಧಾರಣಾ ಆಕ್ಟ ಬಿಲ್ಲುಗಳಿಗೆ ಸಂಪೂರ್ಣ ಬೆಂಬಲ.

(೪) ಸಧ್ಯದ ಮುಂಬೈ ಪ್ರಾಂತಿಕ ಮಂತ್ರಿಮಂಡಲದಲ್ಲಿ ಅಸ್ಪೃಶ್ಯ ಸಭಾಸದರ ಸಮಾವೇಶವಾಗಿರುವುದಿಲ್ಲ. ಕಾರಣ ಮಂತ್ರಿ ಮಂಡಳದ ನಿಷೇಧ.

(೫) ಧರ್ಮಾಂತರದ ಬಗ್ಗೆ ಬೆಂಬಲ.

(೬) ಸ್ವತಂತ್ರ, ಮಜೂರ ಪಕ್ಷಕ್ಕೆ ಹೆಚ್ಚು ಮೆಂಬರರಾಗುವ ಬಗ್ಗೆ ಪ್ರೋತ್ಸಾಹ.

ಮೇಲಿನಂತೆ ಠರಾವು ಪಾಸಾದನಂತರ ಇಲ್ಲಿಯ ಕನ್ನಡ ಶಾಲೆಯ ಹೆಡ್ ಮಾಸ್ತರ್ ಹೆರಕಲ್ಲ ಇವರು ಶಿಕ್ಷಣದ ಬಗ್ಗೆ ಸುಗಮವಾಗಿ ಭಾಷಣಮಾಡಿದರು. ಮತ್ತು ಸಾಮಾಜಿಕ ಸುಧಾರಣೆಯ ಬಗ್ಗೆ ಕೆಲವರ ಭಾಷಣವಾದನಂತರ ಅಧ್ಯಕ್ಷರ ಸಮಾರೋಪ ಭಾಷಣದ ತರುವಾಯ ಪೂಮಾಲೆ ಅರ್ಪಣವಾಗಿ ಅಂಬೇಡಕರರ ಜಯಜಯಕಾರದೊಂದಿಗೆ ಸಭೆ ವಿಸರ್ಜಿಸಲ್ಪಟ್ಟಿತು. ಇದೇ ದಿವಸ ರಾತ್ರಿ ಸೂಳೆಯ ನಿಷೇಧನೆಂಬ ಸಾಮಾಜಿಕ ನಾಟಕವು ಉತ್ತಮ ರೀತಿಯಾಗಿ ಆಡಲ್ಪಟ್ಟಿತು.

ಗುರುಲಿಂಗಪ್ಪ ಶಿವರುದ್ರಪ್ಪ ಪಾಂಡಿಜರಿ
ಮು. ಪೋ. ಹೊನವಾಡ.

## ಜಿನ್ನಾರವರ ವಿಚಾರ ಸಮರ್ಥನೆ.

[ಬ್ಯಾ. ಜಿನ್ನಾರವರ ವಿಚಾರಸರಣಿಯನ್ನು ಒಂದು ರೀತಿಯಲ್ಲಿ ಸಮರ್ಥಿಸಿ ತಾ. ೨೬-೧೦-೩೭ ನೆಯ ದಿನ 'V' ಎಂಬ ಲೇಖಕರು "ಕಂಠೀರವ" ಪತ್ರಿಕೆಯಲ್ಲಿ ಬರೆದುದರ ಮುಖ್ಯ ಭಾಗವನ್ನು ಇದರಡಿ ಕೊಟ್ಟಿದೆ. "ಜಾತಿನಿಷ್ಠೆ ಮತ್ತು ಜಾತ್ಯಂಧತೆ" ಎಂಬ ನಮ್ಮ ಲೇಖನದಲ್ಲಿ ಈ ಸಂಬಂಧವಾದ ನಮ್ಮ ಅಭಿಪ್ರಾಯವನ್ನು ತಿಳಿಸಿದ್ದೇವೆ. —ಸಂಪಾದಕ.]

"ಲಖನೌವಿನಲ್ಲಿ ಮೊನ್ನೆ ಜರುಗಿದ ಮುಸ್ಲಿಂಲೀಗಿನ ಅಧಿವೇಶನದಲ್ಲಿ ಹಲವು ವಿಶೇಷ ತರದ ವಿಚಾರಗಳು ಉತ್ಪನ್ನವಾಗಿರುತ್ತವೆ. ಈ ಭಾರತ ದೇಶವು ಅಖಂಡವಾದ, ಪ್ರಬಲವಾದ ಒಂದೇ ರಾಷ್ಟ್ರವಾಗುವುದಾಗಲಿ, ದೇಶದ ಸರ್ವ ಜಾತಿ, ಮತಗಳ ಜನರೂ ಒಂದೇ ಜನಾಂಗವಾಗಿ ಒಂದೇ ರಾಷ್ಟ್ರಧರ್ಮ, ರಾಷ್ಟ್ರ ಧ್ಯೇಯಗಳನ್ನು ಬೆಳೆಸುವುದಾಗಲಿ ಸಾಧ್ಯವಿಲ್ಲವೆಂಬುದೇ ಮುಸ್ಲಿಂಲೀಗಿನ ಪ್ರಧಾನ ಚಿಂತೆ, ಮುಖ್ಯ ವಿಚಾರವಾಗಿದೆ. ಇಲ್ಲಲ್ಲಿಯ ಪ್ರಾಂತಗಳು ಸ್ವತಂತ್ರ ಪ್ರಜಾಧಿಪತ್ಯಗಳಾಗಿದ್ದು— ಅಂತಹ ಪ್ರಜಾಧಿಪತ್ಯಗಳ ಸಂಯುಕ್ತ ಕೂಟವೇ ಭಾರತ ದೇಶವನ್ನು ಆಳಬೇಕೆಂದು ಲೀಗಿನ ಧೋರಣೆಯಾಗಿದೆ. ಅನೇಕ ವರುಷಗಳಿಂದ ನಿಶ್ಚಲ ಧ್ಯೇಯಗಳಿಲ್ಲದ ಮುಸ್ಲಿಂ ಲೀಗಿನಲ್ಲಿ ಈ ತರವ ದೃಢ ಧ್ಯೇಯಗಳು ತಲೆದೋರಿದ್ದು, ಭಾರತ ದೇಶದ ರಾಜಕೀಯ ವಾತಾವರಣದಲ್ಲಿ ಸಂಭವಿಸಿದ ಪ್ರಗತಿಯ ಗತಿಯನ್ನು ತೋರಿಸುತ್ತಿದೆ. ಈ ಧ್ಯೇಯಗಳನ್ನು ಆಲೋಚಿಸಿ,— ಅವುಗಳಲ್ಲಿರುವ ಗುಣ, ದೋಷಗಳನ್ನು ಕಂಡುಹಿಡಿಯುವುದು ದೇಶಾಭಿಮಾನಿಗಳೂ, ಜ್ಞಾನಿಗಳೂ ಆದ ಸರ್ವರ ಕರ್ತವ್ಯವೆಂದು ನಾವು ಹೇಳಬೇಕಾದುದಿಲ್ಲ.

ಮುಸ್ಲಿಂ ಲೀಗಿನ ಧ್ಯೇಯಗಳಲ್ಲಿ ಇಷ್ಟೊಂದು ಪ್ರಗತಿಯನ್ನು ತಂದುಬಿಟ್ಟ ಕೀರ್ತಿಯು ಲೀಗಿನ ಅಧ್ಯಕ್ಷರಾದ ಮಹಮ್ಮದಾಲಿ ಜಿನ್ನಾ ಸಾಹೇಬರಿಗೆ ಸೇರಬೇಕಾಗಿದೆಯೆಂಬುದು ಸರ್ವಸಮ್ಮತವಾಗಿದೆ. ಮಹಮ್ಮದಾಲಿ ಜಿನ್ನಾ ಸಾಹೇಬರ ಜೀವನ ಚರಿತ್ರೆಯನ್ನು ಸ್ವಲ್ಪವಾದರೂ ಅರಿಯದೆ ಅವರ ಕಾರ್ಯಕ್ರಮಗಳ ಸಾರಾಂಶ ತತ್ವಗಳು ಸರಿಯಾಗಿ ತಿಳಿಯಲು ಸಾಧ್ಯವಿಲ್ಲ.

ಐಶ್ವರ್ಯವಂತ ಕರಾಚಿಯ ಕುಟುಂಬವೊಂದರಲ್ಲಿ ೧೮೭೬ ನೇ ಡಿಶಂಬರದಲ್ಲಿ ಜಿನ್ನಾಸಾಹೇಬರು ಜನಿಸಿದರು. ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಯನ್ನು ೧೮೯೨ ರಲ್ಲಿ ಪಾಸಾಗಿ ಅವರು ಉಚ್ಚ ವಿದ್ಯಾಭ್ಯಾಸಕ್ಕಾಗಿ ಇಂಗ್ಲಂಡಿನಲ್ಲಿ ೪-೫ ವರುಷಗಳ ತನಕವಿದ್ದರು. ೧೮೯೬ ರಲ್ಲಿ ಬ್ಯಾರಿಸ್ಟರ್ ಪದವಿಯನ್ನು ಹೊಂದಿ ಸ್ವಲ್ಪ ಕಾಲದ ಬಳಿಕ ಮುಂಬೈಯಿಗೆ ಬಂದು ಉಳಕೊಂಡು ಅಂದಿನಿಂದ ಮುಂಬೈಯಲ್ಲಿಯೇ ತನ್ನ ಮನೆಯನ್ನು ಮಾಡಿಕೊಂಡಿರುವರು.

ಇವರು ಪಾರ್ಶೀ ಕೋಟ್ಯಾಧೀಶ್ವರೊಬ್ಬರ ಮಗಳನ್ನು ಮದುವೆಮಾಡಿಕೊಂಡದ್ದರಿಂದ ಇವರ ಐಶ್ವರ್ಯಕ್ಕೆ ಮಿತಿಯಿಲ್ಲ.

ಜಿನ್ನಾಸಾಹೇಬರು ರಾಷ್ಟ್ರಾಭಿಮಾನಿಗಳೆಂಬುದರಲ್ಲಿ ಸಂಶಯವಿಲ್ಲ. ಆದರೆ ಅವರಿಗೆ ಇಸ್ಲಾಂ ಮತದಲ್ಲಿಯೂ ವಿಶೇಷ ಭಕ್ತಿ ಎಂದು ಹೇಳುತ್ತಾರೆ. ಮುಸ್ಲಿಮರು ಹಿಂದುಗಳೊಡನೆ ಸಂಪೂರ್ಣ ಬೆರೆತುಹೋಗುವದು ಅವರಿಗೆ ಸಮ್ಮತವಿಲ್ಲ. ಮುಸ್ಲಿಮರು ಮುಸ್ಲಿಮರಾಗಿಯೇ ಇದ್ದು, ಹಿಂದುಗಳೊಡನೆ ಸಮುದಾಯ ರೀತಿಯಿಂದ ಸಂಧಾನವನ್ನು ಬೆಳಸಿ, ಸ್ವಾತಂತ್ರ್ಯಕ್ಕಾಗಿ ಹೋರಾಡುವುದು ಯುಕ್ತವೆಂದು ಅವರು ಸಾರುತ್ತಿದ್ದಾರೆ. ಅವರ ಧ್ಯೇಯಗಳಲ್ಲಿ ತಪ್ಪನ್ನು ಹಿಡಿಯಲು ಸಾಧ್ಯವಿಲ್ಲ. ಆದರೆ ಮುಸ್ಲಿಮರೊಂದು ಕಡೆ- ಹಿಂದುಗಳೊಂದು ಕಡೆ ಇತರರು ಮೂರನೇ ಕಡೆ - ನಿಂತು ಸಂಧಾನಗಳನ್ನು ಮಾಡುತ್ತಿದ್ದರೆ, ರಾಷ್ಟ್ರದ ಉನ್ನತಿಯ ಕಾರ್ಯಗಳು ಹೇಗೆ ಸಾಧ್ಯವಾಗಬಹುದೆಂಬುದು ಇತರ ಜ್ಞಾನಿಗಳಿಗೆ ತೋರುವುದಿಲ್ಲ.

ಜಿನ್ನಾರ ಅಭಿಪ್ರಾಯಗಳು ಹಿಂದೆ ಹೀಗಿರಲಿಲ್ಲ. ಅವರು ೧೯೦೬ ರಿಂದ ೧೯೨೦ ರ ತನಕ ಕಾಂಗ್ರೆಸ್ಸಿನಲ್ಲಿದ್ದು, ೧೯೧೩ ರಿಂದ ಲೀಗಿನಲ್ಲಿಯೂ ರಾಷ್ಟ್ರಸಭೆಯಲ್ಲಿಯೂ ಕೂಡಿ, ಕೊನೆಗೆ ೧೯೧೬ ರಲ್ಲಿ ಲಖನೌವಿನಲ್ಲಿ ಜರುಗಿದ ಅಧಿವೇಶನಗಳಲ್ಲಿ ರಾಷ್ಟ್ರ ಸಭೆಗೂ ಲೀಗಿಗೂ ಸಂಧಾನವನ್ನು ಮಾಡಿ, ಮುಸ್ಲಿಂ ಗೋಖಲೆ, ಹಿಂದೂ ಮುಸ್ಲಿಂ ಐಕ್ಯತೆಯ ಪ್ರತಿಷ್ಠಾಪನಾಚಾರ್ಯರೆಂದು ಹೆಸರು ಪಡೆದಿದ್ದರು ಹಿಂದೂ ಮುಸ್ಲಿಂ ಐಕ್ಯತೆಯಲ್ಲಿ ಜಿನ್ನರಿಗೆ ಬೇಸರಿಕೆ ಹುಟ್ಟಿದುದು ಮಹಾತ್ಮರು ರಾಷ್ಟ್ರ ಸಭೆಯಲ್ಲಿ ಸೇರಿದಬಳಿಕವೆಂದು ಹೇಳಬಹುದು.

ದೀನ ಸೇವೆಯನ್ನು ಕೈಕೊಂಡ ಮಹಾತ್ಮರೂ ಅವರ ಅಗಣಿತ ಶಿಷ್ಯವೃಂದವೂ ರಾಷ್ಟ್ರ ಸಭೆಯ ಕಾರ್ಯಕ್ರಮಗಳಲ್ಲಿ ಸಂಪೂರ್ಣ ಪರಿವರ್ತನೆಯನ್ನು ಮಾಡಿದಂದಿನಿಂದ ಜಿನ್ನರಿಗೆ ರಾಷ್ಟ್ರಸಭೆಯ ಸಂಪರ್ಕವು ಕೂಡ ಬೇಡವೆಂದು ತೋರುವಂತಾಗಿದೆ. ವೇಗಗತಿಯಿಂದ ಪ್ರವಹಿಸಲಿಕ್ಕೆ ಹೊರಟ ರಾಷ್ಟ್ರ ಸಭೆಯ ಕಾರ್ಯವಾಹಿನಿಯಲ್ಲಿ ಭಾರತ ದೇಶವು ದಡಸಿಕ್ಕದೆ ಎಲ್ಲಿಯಾದರೂ ಹೋಗಿಬಿಡಬಹುದೆಂದು ಅವರು ನಂಬುತ್ತಾರೆ. ಹೀಗಾಗಿ ಮುಸ್ಲಿಮರನ್ನಾದರೂ ತನ್ನೊಡನೆ ಭದ್ರವಾದ ದಡದಲ್ಲಿ ನಿಲ್ಲಿಸುವ ಪ್ರಯತ್ನಗಳನ್ನು ಅವರು ಕೈಕೊಂಡಿದ್ದಾರೆ. ದಾರಿದ್ರ್ಯದ ದುರ್ವಾಸನೆಯೂ ಸಮತಾವಾದದ ದುರ್ಗಂಧವೂ ಜಿನ್ನಾರವರಿಗೆ ಹಿತವಾಗುವುದಿಲ್ಲ.

ಜಿನ್ನರ ಈ ಧ್ಯೇಯ, ಚಿಂತೆಗಳನ್ನರಿಯದೆ ಅವರನ್ನು ಮತಭ್ರಾಂತರೆಂದು ಹೇಳಿದರೆ ಅದು ಜಾಣತನವಾಗದು. ಆದರೆ ಲೀಗಿನಲ್ಲಿ ಜಿನ್ನರಂತೆಯೇ ವಿಚಾರಿಗಳು ಹಲವರಿದ್ದರೂ ಮತಭ್ರಾಂತರೂ ಕೆಲವರಿದ್ದಾರೆ. ಆ ವಿಚಾರಿಗಳು ತಾವು ನಿಶ್ಚಯಿಸಿದ ಮಾರ್ಗದಲ್ಲಿ ಮುಂದರಿಸುವಾಗ ಅವರೊಡನಿದ್ದ ಮತಭ್ರಾಂತರಿಂದ ರಾಷ್ಟ್ರೈಕ್ಯತೆಗೆ ಗಂಡಾಂತರಗಳು ಬರಬಹುದೆಂಬುದು ನಿಜವೇ. ಈ ಗಂಡಾಂತರಗಳನ್ನು ರಾಷ್ಟ್ರಪ್ರೇಮಿಗಳೆಲ್ಲರೂ ಕೂಡಿ ವಿಚಾರದಿಂದ ದೂರಮಾಡಿಕೊಳ್ಳಬೇಕು.

ಈ ಭಾರತ ದೇಶವು ಹಿಂದಿನಿಂದ ಸರ್ವ ಮತ ಧರ್ಮಗಳಿಗೂ ತಾಯಿ ಮನೆಯಾಗಿದೆ. ಮುಸ್ಲಿಮರಾಗಲಿ, ಹಿಂದುಗಳಾಗಲಿ, ಕ್ರೈಸ್ತರಾಗಲಿ ತಮ್ಮ ತಮ್ಮ ಧರ್ಮವನ್ನು ಕಾಪಾಡಿಕೊಳ್ಳುವುದರಿಂದ ದೇಶದ ಕೀರ್ತಿಯು ಕಡಿಮೆಯಾಗದು. ಮತ ವಿಚಾರಗಳಿಂದ ರಾಷ್ಟ್ರದ ಉನ್ನತಿಯ ಸಾಧನೆಗೆ ಕೇಡುಬಾರದಂತೆ ನೋಡಿಕೊಳ್ಳುವುದು ಮಾತ್ರ ವಿಚಾರಿಗಳ ಕರ್ತವ್ಯವಾಗಿದೆ."

---

## ಈ ಅಭಿಪ್ರಾಯ ಕೇಳಿ.

ರೋಯಾಪೇಟೆಯ ತಮ್ಮ ಭಾಷಣದಲ್ಲಿ ಮಿ. ಎಂ. ಎ. ಜಾಬರ್ ಇವರು ಹೀಗೆ ಹೇಳಿದರು—

"ಖಿಲಾಫತ್ ಚಟುವಟಿಕೆಯ ನಂತರ ಮುಸಲ್ಮಾನರು ರಾಜಕಾರಣದಲ್ಲಿ ಹಿಂದುಳಿದರು. ಕಳೆದ ಹತ್ತು ವರುಷಗಳಿಂದ ಕಾಂಗ್ರೆಸ್ಸು ಹಿಂದು ಸಂಸ್ಥೆಯಾಗಿದೆಯೆಂದು ಹೇಳುವುದು ಯೋಗ್ಯವಲ್ಲ. ಮುಸಲ್ಮಾನರಿಗಾಗಿ ಸ್ವತಂತ್ರ ಸಂಸ್ಥೆಯಿರಲಿ. ಆ ಸಂಸ್ಥೆಯು ಅವರ ಸಮಾಜ ಮತ್ತು ಸಂಸ್ಕೃತಿಗಳ ರಕ್ಷಣೆಯ ಕಾರ್ಯವನ್ನೇ ಮಾಡಬೇಕು. ರಾಜಕಾರಣದಲ್ಲಿ ಕಾಂಗ್ರೆಸ್ಸಿನೊಂದಿಗೆ ಸೇರಿ ಕೆಲಸ ಮಾಡಬೇಕು."

# ಬಸವಣ್ಣನವರ ಕರ್ಮಯೋಗ.

## ಶ್ರೀ. ಎಸ್. ಶಿವಯೋಗಿಗಳವರ

### ಉಜ್ವಲ ಭಾಷಣ.

ತಾ. ೨೦-೧-೩೭ ನೆಯ ದಿನ ಶ್ರೀ ಎಸ್. ಶಿವಯೋಗಿಗಳವರು ಶಿರಾಳಕೊಪ್ಪದ "ಕರ್ನಾಟಕ ಸಂಘ"ದ ಆಶ್ರಯದಲ್ಲಿ "ಬಸವಣ್ಣನವರ ಕರ್ಮಯೋಗ" ಎಂಬ ವಿಚಾರವಾಗಿ ಸುಮಾರು ೧॥ ಘಂಟೆಯ ಕಾಲ ತಮ್ಮ ಅಮೋಘವಾದ ವಾಣಿಯಿಂದ ಬಹು ಸ್ವಾರಸ್ಯವಾಗಿ ಮಾತನಾಡಿದರು. ಅದರ ಮುಖ್ಯಾಂಶ ಹೀಗಿದ್ದಿತು—

"ಬಸವಣ್ಣನವರೆಂದರೆ ಕೇವಲ ನಮ್ಮವರಲ್ಲ, ನಿಮ್ಮವರಲ್ಲ; ಕರ್ನಾಟಕಕ್ಕೆ ಸಂಬಂಧಪಟ್ಟವರೂ ಅಲ್ಲ. ವಿಶ್ವದ ಮಹಾ ಪುರುಷರವರು. ಜಗನ್ಮಾರ್ಗದರ್ಶಕರವರು. ಜೀವಜ್ಯೋತಿಗಳವರು. ಅಂತೆಯೇ ಅವರ ನಡೆ, ಅವರ ನುಡಿ, ಅವರ ರೀತಿ, ಅವರ ನೀತಿ ಎಲ್ಲವೂ ಎಲ್ಲರಿಗೂ ಮೆಚ್ಚಾಗಿದೆ; ಉಚ್ಚವಾಗಿದೆ; ಅನುಕರಣೀಯವಾಗಿದೆ ಅವರ ಪ್ರತಿಯೊಂದು ವಚನವೂ ಆಳವಾದ ತಿಳಿಯಾದ ಅನುಭವ ಜೀವನದಿಂದ ಹೊರ ಉಕ್ಕಿ ಬಂದುದಾದ್ದರಿಂದ ಅಲ್ಲಿ ಒಂದು ಬಗೆಯ ಜೀವಕಳೆ ನೆಗೆದಾಡುತ್ತಿದೆ. ಒಂದೊಂದು ಮಾತಿನಲ್ಲಿ ಎದೆಯನ್ನು ನೇರವಾಗಿ ಸೇರಿ ಶೋಧಿಸಿ ಅಲ್ಲಿರುವ ಚೈತನ್ಯವನ್ನು ಅಲುಗಿಸುವ ಒಂದು ವಿಶಿಷ್ಟ ಗುಣವಿದೆ ನೋಡಿ. ಆತನ ಆ ಮುದ್ದು ಮಾತುಗಳು ನನ್ನೆದೆಯನ್ನಂತೂ ಸಂಪೂರ್ಣವಾಗಿ ಸೆಳೆದುಬಿಟ್ಟಿವೆ. ಮನವನ್ನು ಮಂಕುಗೊಳಿಸಿವೆ. ಜೀವನು ದೇವನಾಗಲು ಬೇಕಾದ ಸಾಹಸ, ಯುಕ್ತಿ, ರೀತಿ, ನೀತಿ ಎಲ್ಲವೂ ಅವರ ಅಮೌಲ್ಯ ವಚನಗಳಲ್ಲಿ ಚೆನ್ನಾಗಿ ಚಿತ್ರಿತವಾಗಿದೆ. ಈ ಬಗೆಯಲ್ಲಿರುವ ಮಾದರಿಯ ಸಾಹಿತ್ಯವು ಹಿಂದೆಂದಿಗೂ ಹುಟ್ಟಿಲ್ಲ: ಇಂದಿಗೂ ಇಲ್ಲ, ಮುಂದೆಯೂ ಹುಟ್ಟಲಾರದೆಂದೇ ನಾನು ಸಾಕಷ್ಟು ಸಾರಿ ಧೈರ್ಯವಾಗಿ ಹೇಳಬಲ್ಲೆ. (ಚಪ್ಪಾಳೆ) ಬಸವಣ್ಣನವರು ನುಡಿದು ನಡೆದವರಲ್ಲ, ನಡೆದು ನುಡಿದವರು. ಮೊದಲು ತಾವು ಜೀವನದ ಹೊಳೆಯಲ್ಲಿ ಬಿದ್ದು ಅಲ್ಲಿಯ ನೊರೆ ತೆರೆಗಳ ಅಳ್ಕಿಗೆ ಸಿಕ್ಕಿ ಆದ ಅನುಭವವನ್ನೇ ವಚನಗಳ ರೂಪದಲ್ಲಿ ಚಿತ್ರಿಸಿದ್ದಾರೆ. ಇವರ ಸಾಹಿತ್ಯದಲ್ಲಿ ಅನುಕರಣದ ಆವೇಶವಿಲ್ಲದೇ ಸ್ವತಂತ್ರ, ಭಾವನೆ, ಸ್ವತಂತ್ರ ವಿಚಾರಕ್ಕೇನೇ ಹೆಚ್ಚು ಸ್ಥಾನವಿದೆ. ಅಲ್ಲದೇ ಶುಷ್ಕ ಸಾಂಪ್ರದಾಯದ ಕಣ್ಣಿಯನ್ನು ಕೊಸರಿ ಕಿತ್ತೊಗೆದು ಹಲ ಕೆಲವು ಅರ್ಥವಿಲ್ಲದ ಮೂಢ ರೂಢಿಗಳನ್ನು ಅಲ್ಲಗಳೆದು ಅರ್ಥಯುಕ್ತವಾದ ಉಚಿತವಾದ ತಮ್ಮಯ ಉಚ್ಚ ವಿಚಾರಗಳನ್ನು ತಮ್ಮದೇ ಆದ ಒಂದು ಸುಂದರ ಹೊಸ ಶೈಲಿಯಲ್ಲಿ ರೂಪುಗೊಳಿಸಿದ್ದಾರೆ. ತತ್ವಗಳೇನೋ ರೂಪುಗೊಳ್ಳದಿದ್ದರೂ ಅವು ಸುಸಂಸ್ಕೃತವಾದವು, ಸುವ್ಯವಸ್ಥಿತವಾದವು ಎನ್ನಲಿಕ್ಕೆ ಅಡ್ಡಿಯಿಲ್ಲ. ವೇದಾಗಮಗಳನ್ನವರು ಎದುರಿಸಲಿಲ್ಲ; ಸುಧಾರಿಸಿದರು. ದೋಷಗಳನ್ನು ಚೆಲ್ಲಿ ಭೂಷಣಗೊಳಿಸಿದರು. ಈ ಬಗೆಯ ಒಂದು ಹೊಸ ರೀತಿಯಲ್ಲಿರುವ ಉತ್ತಮ ಸಾಹಿತ್ಯವನ್ನು ಇಂದಿನ ನಮಗೆ ಒದಗಿಸಿಕೊಟ್ಟುದಕ್ಕೆ ಅವರನ್ನು ನಾವು ಎಷ್ಟು ಕೊಂಡಾಡಿದರೂ ಸಾಲದಾಗಿದೆ, ಎಂದು ಹೇಳಿದನಂತರ

ಎನ್ನ ಯೋಗಕ್ಷೇಮ ನಿಮ್ಮದಯ್ಯ. ಎನ್ನ ಹಾನಿ ವೃದ್ಧಿ ನಿಮ್ಮದಯ್ಯ. ಎನ್ನ ಮಾನಾಪಮಾನ ನಿಮ್ಮದಯ್ಯ. ಬಳ್ಳಿಗೆ ಕಾಯಿ ದಿಮ್ಮಿತ್ತೆ? (ಭಾರವಾದೀತೆ?) ಕೂಡಲ ಸಂಗಮ ದೇವ? ಎಂಬ ವಚನವನ್ನೂ

ಯತ್ಕರೋಷಿಯದಶ್ನಾಸಿ ಯಜ್ಜುಹೋಷಿ ದದಾಸಿಯತ್ ।
ಯತ್ತಪಸ್ಯತಿ ಕೌಂತೇಯ ತತ್ಕುರುಷ್ವಮದರ್ಪಣಂ ॥

ಎಂಬ ಗೀತೋಕ್ತಿಯನ್ನೂ ಒಂದಕ್ಕೊಂದು ಜೋಡಿಸಿ ಉದಹರಿಸಿಕೊಂಡು ಅದಕ್ಕೆ ಸಂಬಂಧಿಸಿ ಬಸವಣ್ಣನವರ ಜೀವನ ವಿಚಾರವನ್ನು ಕೆಲವು ಹೇಳಿ ಬಹು ಸರಸವಾಗಿ ಹೇಳಿದರು.

"ಯೋಗಃ ಕರ್ಮಸು ಕೌಶಲಮ್" ಸಾಂಸಾರಿಕ ಉದ್ಯಮದಲ್ಲಿರುವ ಕುಶಲತೆ (ಭಗವದರ್ಪಣ ಬುದ್ಧಿಯಿಂದ ಇಹದಲ್ಲಿ ವ್ಯವಹರಿಸುವುದು) ಇದೇ ನಿಜವಾದ ಯೋಗ, (ಕರ್ಮಯೋಗ) ವೆಂದೂ ಬಸವಣ್ಣನವರು ಮೊದಲು ನಮ್ಮಂತೆ ಮಾನವರಾಗಿದ್ದು ಈ ಯೋಗದ ಸಾಧನೆ ಬಲದಿಂದಲೇ ಮಹಾದೇವನ ಮಟ್ಟಕ್ಕೆ ಮುಟ್ಟಿದರೆಂತಲೂ ಹೇಳಿದರು. ಲೌಕಿಕದ ಎಲ್ಲ ವ್ಯವಹಾರಗಳಲ್ಲಿ ತೊಡಗಿದ್ದರೂ ಪಾರಮಾರ್ಥವನ್ನು ಬಿಟ್ಟಿರಲಿಲ್ಲ. ಬಸವಣ್ಣನವರು ಅರಮನೆಯಲ್ಲಿರುವ ಆನೆಯು ಅಡವಿಯಲ್ಲಿರುವ ತನ್ನ ಬಂಧುವ ನೆನೆವಂತೆ ಅವರ ಮನವು ಯಾವಾಗಲೂ ಕೂಡಲ ಸಂಗನಲ್ಲಿ ನೆಲೆಯಾಗಿತ್ತು. ಸಮರಸವಾಗಿತ್ತು. ಲಿಂಗಾರ್ಚನಾದಿ ಅನಂತ ಕರ್ಮಗಳಲ್ಲಿ ಲೋಲುಪರಾಗಿದ್ದರೂ ಫಲವನ್ನು ಮಾತ್ರ ದೇವರಿಗೆ ಬಿಟ್ಟುಕೊಟ್ಟಿದ್ದರು. ಇದಲ್ಲವೇ ನಿಜವಾದ ಜೀವನ್ಮುಕ್ತಸ್ಥಿತಿ? ಇದಲ್ಲವೇ ಶ್ರೀ ಕೃಷ್ಣನು ಗೀತೆಯಲ್ಲಿ ಸಾರಿದ ಸನ್ಯಾಸ? ಇದೇ ಅಭಿಪ್ರಾಯವನ್ನೇ ಅದ್ವೈತಮತ ಸ್ಥಾಪನಾಚಾರ್ಯರಾಗಿರತಕ್ಕ ಶಂಕರಾಚಾರ್ಯರವರು.

ಆತ್ಮಾತ್ವಂ ಗಿರಿಜಾಮತಿಃ ಸಹಚರಾಃ ಪ್ರಾಣಾಶ್ಶರೀರಂ
ಗೃಹಮ್ ಪೂಜಾತೇ ವಿಷಯೋಪಭೋಗ ರಚನಾ ನಿದ್ರಾಸ
ಮಾಧಿ ಸ್ಥಿತಿಃ ॥ ಸಂಚಾರಃ ಪದಯೋಃ ಪ್ರದಕ್ಷಿಣ ವಿಧಿಃ
ಸ್ತೋತ್ರಾಣಿ ಸರ್ವಾಗಿರೋ ಯದ್ಯತ್ ಕರ್ಮಕರೋಮಿ
ತತ್ತದಖಿಲಂ ಶಂಭೋತವಾರಾಧನಂ ॥

ಎಂಬುದರಲ್ಲಿ ಚೆನ್ನಾಗಿ ಹುದುಗಿಸಿರುವರು. ದ್ವೈತ ಮತವಾದಿಗಳಾಗಿರತಕ್ಕ ಮಧ್ವಾಚಾರ್ಯರೂ ಸಹ.

ಕುರು ಭುಂಕ್ಷ್ವಚ ಕರ್ಮ ನಿಜಂ ನಿಯತಂ ಹರಿಪಾದ
ವಿನಮ್ರಧಿಯಾ ಸತತಮ್ ॥

ಎಂದು ಗಟ್ಟಿಯಾಗಿ ನುಡಿದಿದ್ದಾರೆ. ಕನ್ನಡಮ್ಮನ ಸೇವೆಗಾಗಿ ವೀರಶೈವರಂತೆಯೇ ಮುಂದಾಗಿ ನಿಂತ ದಾಸಕೂಟದವರಾದರೂ

ಅವಶನಾಗಿ ಕರ್ಮಮಾಡು । ಮಾಧವನ ವಾಹನನೆಂದು
ನೀ ನಲಿದಾಡು

ಇಂತೆಂಬ ಗೀತೆಯಲ್ಲಿ ಕರ್ಮಯೋಗದ ತಿರುಳನ್ನೂ ಮುಕ್ತಸ್ಥಿತಿಯ ಹುರುಳನ್ನೂ ಚೆನ್ನಾಗಿ ಹಾಡಿದ್ದಾರೆ. ಒಟ್ಟಿನ ಮೇಲೆ ಮನುಷ್ಯನು ಕೆಸರಿನಲ್ಲಿರುವ ಕುಂಬಾರ ಹುಳದಂತೆ ಈ ಸಂಸ್ಕೃತಿಯಲ್ಲಿದ್ದರೂ ಇಲ್ಲದಂತಿರಬೇಕು. ಇದೇ ಕರ್ಮಯೋಗದ ಮರ್ಮ. ಇದೇ ಜೀವನು ದೇವನಾಗುವಲ್ಲಿ ಬೇಕಾದ ಉಪಾಯ. ಎಂದು ಹೇಳಿ ತಮ್ಮ ಭಾಷಣವನ್ನು ಮುಗಿಸಿದರು. ನಂತರ ವ್ಯಾಖ್ಯಾತೃಗಳ ಆಭಾರಮನ್ನಣೆ ವಂದನೆಗಳು ಪೂರೈಸಿದನಂತರ ಮೈಸೂರು ಶ್ರೀಮನ್ಮಹಾರಾಜರವರ ಶ್ರೇಯಃ ಪ್ರಾರ್ಥನೆಯೊಂದಿಗೆ ಸಭೆಯು ಮುಕ್ತಾಯವಾಯಿತು.

ಓರ್ವ ಸಭಿಕ.

---

—ಬಂಗಾಲ ಉಚಿತ ಪ್ರಾಥಮಿಕ ಶಿಕ್ಷಣ ಶಾಸನದ ಪ್ರಕಾರ ಮೈಮನ್‌ಸಿಂಗ್ ಜಿಲ್ಲೆಯಲ್ಲಿ ೩,೦೦೦ ಶಾಲೆಗಳಾಗುವವು. ಈಗ ಅಲ್ಲಿ ೧,೦೦೦ ಶಾಲೆಗಳಿವೆ.

## ಸಹಕಾರ ದಿನ.

ತಾ. ೬-೧೧-೩೭ ನೇ ದಿವಸ ಶ್ರೀ. ಎಚ್ ಎಮ್. ಹಾವೇರಿ ಬಿ. ಎ. ಎಲ್. ಎಲ್. ಬಿ. ಇವರ ಅಧ್ಯಕ್ಷತೆಯಲ್ಲಿ ಸಹಕಾರ ದಿನದ ಸಮಾರಂಭದ ಸಭೆ ಸೇರಿ ಸಹಕಾರ ಚಳವಳಿಯ ಪ್ರಸಾರ ಮತ್ತು ಸಹಕಾರ ಮುಖಾಂತರ ಒಕ್ಕಲತನದ ಸುಧಾರಣೆ ಈ ವಿಷಯಗಳ ಮೇಲೆ ಶ್ರೀ. ಪಾಟಗೌಡ ವಕೀಲ ಬಿ. ಎ. ಎಲ್. ಎಲ್. ಬಿ ಶ್ರೀ. ಕಕರಡ್ಡಿ ಅಗ್ರಿಕಲ್ಚರಲ್ ಓವ್ಹರಸೀಯರ ಮೊದಲಾದವರ ಮಹತ್ವದ ವ್ಯಾಖ್ಯಾನಗಳಾದವು. ಕಡೆಯಲ್ಲಿ ಅಧ್ಯಕ್ಷರು ಸಹಕಾರ ಸಂಘದ ಸಧ್ಯದ ಅವಶ್ಯಕತೆಯ ವಿಷಯವಾಗಿ ತಮಗೆ ಅನುಭವಕ್ಕೆ ಬಂದ ಕೆಲವು ಉಪಯುಕ್ತ ಸಂಗತಿಗಳನ್ನು ತಿಳಿಸಿ ಸಂಘಗಳನ್ನು ಸರಿಯಾಗಿ ನಡೆಯಿಸಿಕೊಂಡು ಹೋದರೆ ಮಾತ್ರ ಜನತೆಯ ನೈತಿಕ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗಳು ಖಂಡಿತವಾಗಿ ಸುಧಾರಿಸಿ ಸಹಕಾರ ಚಳವಳಿಯು ಜನ್ಮತಾಳಿದ ಉದ್ದೇಶವು ಸಾರ್ಥಕವಾಗುವದೆಂದು ಹೇಳಿದರು. ಆಮೇಲೆ ಶ್ರೀ. ಪಾಟಗೌಡ ವಕೀಲರು ಲಾಹೋರ ಅಲ್ ಇಂಡಿಯಾ ಕೊ. ಅ. ಇನ್‌ಸ್ಟಿಟ್ಯೂಟ್ಸ್ ಅಸೋಸಿಯೇಶನ್‌ದಿಂದ ಸಹಕಾರ ದಿನದ ಬಗ್ಗೆ ಸೂಚಿಸಿದ ಠರಾವನ್ನು ಓದಿದರು ಮತ್ತು ಅದು ಸರ್ವಾನುಮತದಿಂದ ಸ್ವೀಕರಿಸಲ್ಪಟ್ಟಿತು.

ತರುವಾಯ ಅಧ್ಯಕ್ಷರ ಹಾಗೂ ಸಭೆಗೆ ಆಗಮಿಸಿದ ಎಲ್ಲ ಸಹಕಾರಿ ಬಂಧುಗಳ ಆಭಾರವನ್ನು ಮನ್ನಿಸಿದಮೇಲೆ ಸಭಾ ಕಾರ್ಯವು ಯಶಸ್ವಿಯಾಗಿ ಮುಕ್ತಾಯಗೊಂಡಿತು.

ಓರ್ವ ಸಭಿಕ.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣಮಂದಿರದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು, ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED N. B. 2891.

# ಶರಣ ಸಂದೇಶ

The
Sharana Sandesh.

ನ್ಯಾಯನಿಷ್ಠುರ, ದಾಕ್ಷಿಣ್ಯಪರನಾನಲ್ಲ, ಲೋಕವಿರೋಧಿ, ಶರಣನಾರಿಗೂ ಅಂಜುವವನಲ್ಲ ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೨೨ನೆಯ ನವ್ಹೆಂಬರ್ ೧೯೩೭. | ಸಂಚಿಕೆ೧೩ |
|---|---|---|

ಜನಸೇವೆಯೇ ದೇವರಸೇವೆ.

## ಬಂಗಾಲಿ ಕೈದಿಗಳ ಬಿಡುಗಡೆ.

ಮಹಾತ್ಮಾ ಗಾಂಧಿಯವರ ಪರಿಶ್ರಮದಿಂದ
ಬಂಗಾಲದ ೧೧೦೦ ಸ್ಥಾನಬದ್ಧ ರಾಜಕೀಯ ಕೈದಿಗಳು
ಬಿಡುಗಡೆ ಹೊಂದಿದರು.

## ಗಾಂಧೀಜಿಯವರ ಪ್ರಕೃತಿಯು

ಚಿಂತಾಜನಕವಾಗಿದೆಯೆಂದೂ ಸಂಪೂರ್ಣ
ವಿಶ್ರಾಂತಿ ಅಗತ್ಯವೆಂದೂ ತಾ. ೧೯ ನೆಯ ದಿನ
ವರ್ಧಾದಿಂದ ಡಾಕ್ಟರರು ಪ್ರಕಟಿಸಿದ್ದಾರೆ.
ಜಾಗ್ರತೆ ಮಹಾತ್ಮಾಜಿಯವರು ಆರೋಗ್ಯಹೊಂದಲೆಂದು
ಪ್ರಪಂಚವೇ ಹಾರೈಸುತ್ತದೆ.

## ಪಟೇಲ - ನರಿಮಾನರ ವ್ಯಾಜ್ಯದಲ್ಲಿ

ವೀರ ನರಿಮಾನರ ರೀತಿಯೇ ಸರಿಯೆಂದು ಬ್ಯಾ. ವೇಲಿನಕರರ ಅಭಿಪ್ರಾಯ.
ವೀರ ನರಿಮಾನರು ವಿಸ್ತಾರವಾದ ಒಂದು
ಪ್ರಕಟನೆಯನ್ನು ಹೊರಡಿಸಿದ್ದಾರೆ.

ದೇಹವೇ ದೇವಾಲಯ.

ಅಖಿಲ ಕರ್ನಾಟಕದಲ್ಲಿ ಪ್ರಸಿದ್ಧವಾದ

ರಾಷ್ಟ್ರೀಯ ಕಂಪನಿಯೆಂದರೆ

# ಇದೊಂದೇ.

## ದಿ ಸ್ವರಾಜ್ಯ ಬ್ಯಾಂಕಿಂಗ ಮತ್ತು ಇನ್ಸುರನ್ಸ ಕಂ. ಲಿ.

# ಧಾರವಾಡ.

| ಚೇರಮನ್ | ವ್ಹಾಯಿಸ್ ಚೇರಮನ್ |
|---|---|
| ದೇಶಭಕ್ತ ಶ್ರೀಯುತ ಎಸ್. ಕೆ. ಹೊಸಮನಿ | ಶ್ರೀಯುತ ವ್ಹಿ. ಬಿ. ಹಾಲಭಾವಿ |
| B. A. LL. B. M. L. A. | B. A. LL. B. ರಿಟಾಯರ್ಡ |
| ಪ್ರೆಸಿಡೆಂಟ ಕೆ. ಪಿ. ಸಿ. ಸಿ. | ಫರ್ಸ್ಟ ಕ್ಲಾಸ್ ಸಬ್ ಜಜ್ಜ ಧಾರವಾಡ. |

ಭವಿಷತ್ಕಾಲದ ಜೀವಿತದ ನಿರ್ವಾಹಕ್ಕೆ | ಈ ಕಂಪನಿಯನ್ನು ಕೇವಲ ರಾಷ್ಟ್ರೋನ್ನತಿಗಾಗಿ ಸ್ಥಾಪಿಸಿರುವರು. | ತೊಂದರೆಯಿಲ್ಲದ ಒತ್ತಾಯದ ಉಳಿತಾಯ

### ರೂ. ೫೦೦ ರಿಂದ ರೂ. ೫೦೦೦ ಗಳ ವರೆಗೆ ಜೀವ ವಿಮಾ ಪಾಲಿಸಿಗಳು.

ಉದಾರ ಶರ್ತಿನ ಪಾಲಿಸಿಗಳು! ಮಿತವ್ಯಯದ ಆಡಳಿತ!! ಸುಲಭವಾದ ಕಂತಗಳು!!!

ಈ ಕಂಪನಿಯವರು ಕಾರ್ಯ ಕುಶಲತೆಯಿಂದ ನಾನಾ ಎಂಬುವ ಕಂಪನಿಗಳಿಗೂ ಮುಂದೆ ಇದ್ದಾರೆ. ಸ್ಥಾಪಿಸಿದ ಎರಡೇ ವರ್ಷಗಳಲ್ಲಿ ಇಷ್ಟು ಪ್ರಗತಿಯನ್ನು ಮಾಡಿ ತೋರಿಸಲಿಕ್ಕೆ ಉಜ್ವಲ ದೇಶಭಕ್ತರೂ, ಸುಪ್ರಸಿದ್ಧರೂ, ಲೋಕಪ್ರಿಯರೂ, ವಿಮೆಯ ವ್ಯವಹಾರದಲ್ಲಿ ನುರಿತ ಪರಿಪಕ್ವ ಬುದ್ಧಿಯುಳ್ಳವರೂ ಇರುವ ಬೋರ್ಡಿನ ಡಾಯರೆಕ್ಟರರ ಆಡಳಿತೆಯೇ ಕಾರಣ. ಗೌರವದ ಕನ್ನಡಿಗ ವಿಮೇಚ್ಛುಗಳು ತಮ್ಮ ಹಿತವನ್ನೊಳಗೊಂಡ ಕರ್ನಾಟಕ ಮಾತೆಯ ಈ ತರಹದ ಸೇವೆಗಾಗಿ ತಮ್ಮ ಬೆಂಬಲವನ್ನೀಯುವರೆಂದು ತುಂಬಾ ನಂಬಿರುವೆವು.

### ಎಲ್ಲ ಕಡೆಯಲ್ಲಿಯೂ ಕುಶಲ ಏಜಂಟರು ಬೇಕು.

The Manager.

---

ಮುದ್ದಾದ ಅಕ್ಷರ! ಸುಲಭ ದರ!

### ಶ್ರೀ ರಂಗನಾಥ ಟೈಪ್ ಫೌಂಡರಿ

ಬೆಂಗಳೂರು.

ಕನ್ನಡ ಮತ್ತು ಇಂಗ್ಲಿಷ್, ಎಲ್ಲಾ ತರದ ಟೈಪುಗಳೂ ಒಳ್ಳೊಳ್ಳೇ ಬಾರ್ಡರಗಳೂ ನಮ್ಮ ಫೌಂಡರಿಯಲ್ಲಿ ತಯಾರಾಗುತ್ತವೆ.

ಒಳ್ಳೇ ಮೆಟಲ್. ಬಹು ಅಂದವಾದ ಅಕ್ಷರಗಳು. ಬಲು ಸುಲಭ ದರ. ಕ್ಯಾಟಲಾಗ ತರಿಸಿಕೊಳ್ಳಿರಿ. ಒಮ್ಮೆ ಟೈಪುಗಳನ್ನು ತರಿಸಿಕೊಂಡು ಅನುಭವ ಹೊಂದಿರಿ. ಹಳೆ ಟೈಪುಗಳಿದ್ದರೆ ಸುಲಭ ಚಾರ್ಜಿಗೆ ಹೊಸದಾಗಿ ಹೊಯಿದು ಕೊಡುತ್ತೇವೆ.

ಪ್ರೊಪ್ರೈಟರ,
ಶ್ರೀ ರಂಗನಾಥ ಟೈಪ್ ಫೌಂಡರಿ
೭೭ ಕುಬೇರ ಸಾಹುಜಿ ಲೈನ್
ಚಿಕ್ಕಪೇಟೆ, ಬೆಂಗಳೂರು ಸಿಟಿ.

---

ಲೋಕಮತ ದಿನ ಪತ್ರಿಕೆಯನ್ನು ಪ್ರತಿ ದಿನವೂ ತಪ್ಪದೇ ಓದಿ ಎಲ್ಲ ವಿಷಯಗಳನ್ನೂ ತಿಳಿದುಕೊಳ್ಳಿರಿ.

ವಿಳಾಸ— ಮ್ಯಾನೇಜರ್ "ಲೋಕಮತ"
ಹುಬ್ಬಳ್ಳಿ.

---

ನಿಜಾಮ ಪ್ರಾಂತದ ಕನ್ನಡಿಗರಿಗೆ ಕನ್ನಡ ನಾಡಿನ ಎಲ್ಲ ಪ್ರಸಿದ್ಧ ಲೇಖಕರ ಪುಸ್ತಕಗಳೂ ನಮ್ಮಲ್ಲಿ ಯೋಗ್ಯ ಬೆಲೆಗೆ ದೊರೆಯುವವು.

ವಿಳಾಸ— ಎಸ್. ಸಿ. ಶಿವಲಿಂಗಣ್ಣ
ಕಲ್ಯಾಣ ಕರ್ನಾಟಕ ಬುಕ್ಕಡಿಪೋ ಗುಲಬರ್ಗಾ

---

ವೀರವಾಣಿ. ಇದು ವೀರಶೈವ ಮತದ ನಿಜ ತತ್ವವನ್ನು ತಿಳಿಸುವ ಮಾಸ ಪತ್ರಿಕೆ.

ವಾರ್ಷಿಕ ಚಂದಾ ರೂ. ೧-೮-೦
ಸಂಪಾದಕರು— ಗಂಗಾಧರಪ್ಪ ಹೊದ್ಲೂರು ಹುಬ್ಬಳ್ಳಿ



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೨೨ನೆಯ ನವ್ಹಂಬರ್ ೧೯೩೭. | ಸಂಚಿಕೆ ೧೩


## ಮಹತ್ವದ ಸುದ್ದಿಗಳು.

—ಹರಿಪುರದ ಕಾಂಗ್ರೆಸ್ ಬರುವ ಫೆಬ್ರುವರಿ ೧೯-೨೦-೨೧ ಈ ತಾರೀಖುಗಳಲ್ಲಿ ಜರುಗುವುದು.

—ಗಡಿನಾಡಿನ ಕಾಂಗ್ರೆಸ್ ಸರಕಾರವು ಕೆಂಪಂಗಿಯ ರಾಜಕೈದಿಗಳನ್ನೆಲ್ಲಾ ಬಿಟ್ಟುಬಿಡಬೇಕೆಂದು ಗೊತ್ತುಮಾಡಿತು. ಮತ್ತು ಹತ್ತೀಖೇಲ ಗುಂಪಿನ ಮುಂದಾಳು ಮಹಮ್ಮದ ಅಯೂಬಖಾನರನ್ನೂ ಅವರ ಅನುಯಾಯಿಗಳನ್ನೂ ಬಿಟ್ಟುಬಿಡಬೇಕೆಂತಲೂ ನಿರ್ಧರಿಸಿದೆ.

—ಮದ್ರಾಸಿನ ಕಾರ್ಪೊರೇಶನ್ ಮತ್ತು ಶಿಕ್ಷಣ ಸಂಸ್ಥೆಗಳಲ್ಲಿ ಮಹಾತ್ಮಾ ಗಾಂಧಿಯವರ ಭಾವಚಿತ್ರವನ್ನು ಇಡಕೂಡದೆಂದು ಮಾಡಿದ್ದ ಅಪ್ಪಣೆಯನ್ನು ಕಾಂಗ್ರೆಸ್ ಸರಕಾರವು ತೆಗೆದುಹಾಕಿತು.

—ಬಂಗಾಲದ ಮುಖ್ಯಮಂತ್ರಿಗಳಾದ ಮಿ. ಫಜಲುಲ್‌ಹಕ್ ಇವರಿಗೆ ಮಿ. ಹಬಿಬುರ ರಹಮಾನ ಇವರು ಉಪಚುನಾವಣೆಗೆ ಸಿದ್ಧರಾಗಿರೆಂದು ಆಹ್ವಾನಮಾಡಿದ್ದಾರೆ. ಇವರು ಜಾತ್ಯಂಧತೆಯನ್ನು ನಿವಾರಣೆಮಾಡುವವರು.

—ಮುಂಬೈ ಗವ್ಹರ್ನರರಾದ ಸರ್ ಲಮ್ಲೆಯವರಿಗೆ ಅಹಮದಾಬಾದ ಮುನಸಿಪಾಲ್ಟಿಯಿಂದ ಮಾನಪತ್ರವನ್ನು ಕೊಡಬೇಕೆಂಬ ಗೊತ್ತುವಳಿಗೆ ೧೨ ಅನುಕೂಲ ೩೧ ಪ್ರತಿಕೂಲ ಮತಗಳು ದೊರೆತು ಕೊಡಕೂಡದೆಂದು ತೀರ್ಮಾನವಾಯಿತು.

—ಈ ವರೆಗೆ ನಡೆದ ಚೀನ-ಜಪಾನ ಯುದ್ಧದಲ್ಲಿ ೮ ಲಕ್ಷ ಚೀನಿ ಸೈನಿಕರು ಮೃತಪಟ್ಟರೆಂದು ಅಂತರ ರಾಷ್ಟ್ರೀಯ ರೆಡ್ ಕ್ರಾಸ್ ಪ್ರತಿನಿಧಿಗಳು ಪ್ರಕಟಿಸಿದ್ದಾರೆ.

—ಹಿಂದುಸ್ಥಾನ ಸರಕಾರದ ಸೈನ್ಯಶಾಖೆಯ ವೆಚ್ಚಕ್ಕಾಗಿ ಬ್ರಿಟಿಶ್ ಸರಕಾರವು ೧೯೩೮ ನೆಯ ಇಸವಿ ಎಪ್ರೈಲ್ ೧ ನೆಯ ತಾರೀಖಿನಿಂದ ಮೂರು ವರುಷಗಳಿಗೆ ೬ ಲಕ್ಷ ಪೌಂಡುಗಳನ್ನು ಕೊಡುವುದಾಗಿ ಬ್ರಿಟಿಶ್ ಪಾರ್ಲಮೆಂಟ್ ಪ್ರಕಟಿಸಿದೆ.

—ಬರುವ ಎಪ್ರೈಲ್ ತಿಂಗಳಲ್ಲಿ ಮುಂಬೈಯಲ್ಲಿ ಕೂಡುವ ಮಹಾರಾಷ್ಟ್ರ ಸಾಹಿತ್ಯ ಪರಿಷತ್ತಿಗೆ ಬ್ಯಾ. ಸಾವರಕರರನ್ನು ಅಧ್ಯಕ್ಷರನ್ನಾಗಿ ಆರಿಸುವವರಿದ್ದಾರೆ.

—ಪ್ಯಾಲಿಸ್ಟಾಯಿನ್‌ದಲ್ಲಿ ಅರಬರ ಮತ್ತು ಯಹುದಿಗಳ ದೊಂಬಿಯಾಗಿ ೬ ಜನರು ಮೃತಪಟ್ಟರು. ೨೫ ಜನರಿಗೆ ಗಾಯವಾಯಿತು.

—ದೇಹಾರೋಗ್ಯದ ನಿಮಿತ್ತವಾಗಿ ಶ್ರೀ. ಸುಭಾಷಚಂದ್ರ ಬೋಸರು ತಾ. ೧೭ ನೆಯ ದಿವಸ ವಿಮಾನಿನಿಂದ ವಿಲಾಯತಿಗೆ ಹೋದರು. ಡಿಶಂಬರ್ ತಿಂಗಳ ಕೊನೆಗೆ ಬರುವರು.

—ಕರಾಚಿ ಮತ್ತು ಮುಂಬೈಗಳಿಗೆ ೧೭ ನೆಯ ತಾರೀಖಿನಿಂದ ಟಾಟಾ ಕಂಪನಿಯವರ ವಿಮಾನು ಹೋಗಲಾರಂಭವಾಯಿತು. ಅಂದಿನ ಪ್ರಥಮ ಪ್ರವಾಸದಲ್ಲಿ ಪ್ರಿನ್ಸ್ ಅಲ್ಲಿಖಾನರವರು ಇದ್ದರು.

—ತಾ. ೧೭ ರಿಂದ ಸೊಲ್ಲಾಪುರದಲ್ಲಿ ಸಾವರಕರ ಸತ್ಕಾರದೊಂಬಿಯ ವ್ಯಾಜ್ಯ ೨೦ ಜನರ ಮೇಲೆ ನಡೆಯಲಾರಂಭವಾಗಿದೆ.

—ಮುಂಬೈ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಕಟ್ಟಡ ಫಂಡ್ ೪೦ ಸಾವಿರ ರೂ. ಗಳನ್ನು ೧೯೩೨ ನೆಯ ಶಾಸನ ಭಂಗದ ಕಾಲಕ್ಕೆ ಸರಕಾರವು ಸೇರಿಸಿಕೊಂಡಿತ್ತು. ಆ ಹಣವನ್ನು ಈಗ ಕಾಂಗ್ರೆಸ್ ಸರಕಾರವು ತಿರುಗಿ ಕೊಡಬೇಕಾಗಿ ತೀರ್ಮಾನಿಸಿತು.

—ಸೊಲ್ಲಾಪುರ ಸೆಟಲ್‌ಮೆಂಟಿನಲ್ಲಿರುವ ೧೦ ಸಾವಿರ ಜನರ ಸಂಬಂಧವಾಗಿ ಕೆಂಪಂಗಿಯ ಕೂಲಿಕಾರರು ನಡೆಸಿರುವ ಚಟುವಟಿಕೆಯು ಶಾಂತತಾ ಭಂಗಕ್ಕೆ ಕಾರಣವಾಗಬಹುದೆಂದು ಸೊಲ್ಲಾಪುರದಲ್ಲಿ ೧೪೪ ನೆಯ ನಿಯಮವನ್ನು ಆಚರಣೆಗೆ ತರಲಾಗಿದೆ.

—ಮೈಸೂರು ಪ್ರಾಂತದ ಕಾಂಗ್ರೆಸ್ ಬೋರ್ಡಿನ ಅಧ್ಯಕ್ಷರಾದ ಶ್ರೀ. ಚಂಗಲರಾಯ ರೆಡ್ಡಿಯವರು ಮಹಾತ್ಮಾ ಗಾಂಧಿಯವರಿಗೂ ಪಂಡಿತ ಜವಾಹರಲಾಲರಿಗೂ ಪತ್ರ ಬರೆದು ಮೈಸೂರು ಕಾಂಗ್ರೆಸ್ ಚಟುವಟಿಕೆಯ ಸ್ಪಷ್ಟೀಕರಣ ಮಾಡಬೇಕೆಂದು ಕೇಳಿಕೊಂಡಿದ್ದಾರೆ.

# ವರ್ಣಭೇದ ಮತ್ತು ಸಂಘಟನೆ.

(ಡಾ. ಆಂಬೇಡಕರರ ಭಾಷಣ.)



ಹಿಂದು ಸಮಾಜದಲ್ಲಿರುವ ಬ್ರಾಹ್ಮಣಾದಿ ವರ್ಣಭೇದವು ದ್ವೇಷಮೂಲಕವಾದುದಾಗಿದೆ. ಅನ್ಯರನ್ನು ತುಳಿಯಲಿಕ್ಕಾಗಿ ಇವು ಏರ್ಪಟ್ಟಿವೇ ವಿನಾ ಸುಧಾರಿಸಲಿಕ್ಕಲ್ಲ. ಅನ್ಯರಲ್ಲಿರುವ ಎಷ್ಟೋ ಒಳ್ಳೆಯ ನಡತೆಗಳನ್ನು ಕೂಡಾ ಈ ವರ್ಣಗಳ ಮೇಲ್ಮೆಗಾಗಿ ಬಿಟ್ಟು ಬ್ರಾಹ್ಮಣರಾಗಬೇಕೆಂದು ಪ್ರಯತ್ನಿಸಿದ್ದುಂಟು.

ಪಾಠಾರೆ ಪ್ರಭು ಎಂಬ ಒಂದು ಸಮಾಜದವರಿದ್ದಾರೆ. ಇವರಲ್ಲಿ ವಿಧವಾ ವಿವಾಹ ಪದ್ಧತಿಯಿದ್ದಿತು. ಬ್ರಾಹ್ಮಣರು ಇದನ್ನು ನಿಷೇಧಿಸುತ್ತಾರೆಂದೂ ಅವರಲ್ಲಿಯೇ ಕೆಲವರು ತಾವೂ ನಿಷೇಧಿಸಲಾರಂಭಿಸಿದರು. ಹೀಗಾಗಿ ಅವರಲ್ಲಿ ಎರಡು ಪಕ್ಷಗಳಾದವು. ತಾವೂ ಬ್ರಾಹ್ಮಣರಾಗಬೇಕೆಂದೇ ಅದನ್ನು ನಿಷೇಧಿಸಿದವರ ಉದ್ದೇಶ. ಪೇಶ್ವೆಯವರ ಕಾಲಕ್ಕೆ ಬ್ರಾಹ್ಮಣರು ವಿಧವಾ ವಿವಾಹ ನಿಷೇಧಕರ ಪಕ್ಷವನ್ನು ವಹಿಸಿದ್ದರು.

ಬ್ರಾಹ್ಮಣಾದಿ ವರ್ಣಗಳು ಜನ್ಮವಿಶಿಷ್ಟ ಮೇಲುಕೀಳುಗಳ ವಿಷಮತೆಯಿಂದಲೇ ಉಂಟಾಗಿವೆ. ಆದುದರಿಂದ ಮೇಲಿನ ವರ್ಣಕ್ಕೆ ಕೆಳಗಿನವರು ಬರಬಾರದೆಂದೇ ಅವರನ್ನು ಹತ್ತಿಕ್ಕಿ ಅಜ್ಞಾನದಲ್ಲಿಯೇ ಇಡುತ್ತಾ ಬಂದಿದ್ದಾರೆ. ಮುಸಲ್ಮಾನ್ ಅಥವಾ ಕ್ರಿಸ್ತಮತಗಳಂತೆ ಈ ಹಿಂದು ಧರ್ಮವು ಪ್ರಚಾರಕ ಧರ್ಮವಾಗಿಲ್ಲ. ಇದು ಪ್ರಚಾರಕ ಧರ್ಮವಾಗಿದ್ದಾಗ ಅದರಲ್ಲಿ ವರ್ಣಗಳಿರಲಿಲ್ಲ. ಪರಧರ್ಮದವರಿಗೆ ತಮ್ಮ ಧರ್ಮದ ತತ್ತ್ವೋಪದೇಶ ಮಾಡಬಹುದು. ಆದರೆ ಅವರು ಈ ಧರ್ಮದಲ್ಲಿ ಸೇರುತ್ತೇವೆಂದರೆ ಅವರನ್ನು ಯಾವ ವರ್ಣದಲ್ಲಿ ಸೇರಿಸಿಕೊಳ್ಳುತ್ತಾರೆ?

ವರ್ಣಭೇದ ಮತ್ತು ಶುದ್ಧಿ ಇವು ಪರಸ್ಪರ ವಿರುದ್ಧವಾಗಿವೆ. ಎಲ್ಲಿಯವರೆಗೆ ಹಿಂದುಗಳಲ್ಲಿ ವರ್ಣಭೇದವಿದೆಯೋ ಅಲ್ಲಿಯವರೆಗೆ ಶುದ್ಧೀ ಚಟುವಟಿಕೆಯು ಹಾಸ್ಯಾಸ್ಪದವಾದುದೇ ಸರಿ. ವರ್ಣಗಳು ಜನ್ಮವಿಶಿಷ್ಟವಾಗಿವೆ. ಪರಧರ್ಮದವರನ್ನು ಶುದ್ಧಗೊಳಿಸಿದಮೇಲೆ ಅವರನ್ನು ಯಾವ ವರ್ಣದಲ್ಲಿ ಸೇರಿಸಿಕೊಳ್ಳುತ್ತಾರೆ?

## ಹಿಂದುಗಳು ನಿರ್ಬಲರೇಕೆ?

ಶೀಖ ಅಥವಾ ಮುಸಲ್ಮಾನರಂತೆ ಹಿಂದುಗಳು ಬಲಶಾಲಿಗಳಲ್ಲವೆಂದೇ ಎಲ್ಲರೂ ಹೇಳುತ್ತಿದ್ದಾರಷ್ಟೆ. ಹೀಗಾಗಲು ಕಾರಣವೇನು? ಹಿಂದುಗಳಿಗಿಂತ ಅವರೇನು ಹೆಚ್ಚಿನ ಆಹಾರ ಅಥವಾ ವ್ಯಾಯಾಮ ಮೊದಲಾದವುಗಳನ್ನು ಹೊಂದಿ ಬಲಶಾಲಿಗಳಾಗಿದ್ದಾರೆಯೇ? ಹಾಗೇನೂ ಇಲ್ಲ. ಒಬ್ಬ ಶೀಖನಿಗೆ ತನ್ನ ಸಮಾಜವೇ ತನ್ನ ಸಹಾಯಕ್ಕೆ ಸಿದ್ಧವಿದೆಯೆಂಬ ಆತ್ಮವಿಶ್ವಾಸವಿದೆ. ಒಬ್ಬ ಮುಸಲ್ಮಾನನ ಮೇಲೆ ಆಕ್ರಮಣ ನಡೆದರೆ ಅವನ ಜಾತಿಯವರೆಲ್ಲರೂ ಒಟ್ಟುಗೂಡಿ ಬರುತ್ತಾರೆಂದು ಆತನಿಗೆ ನಂಬಿಕೆಯಿದೆ. ಅಂತೆಯೇ ಆತನಲ್ಲಿ ಅಂಥ ಶಕ್ತಿಯುಂಟಾಗುತ್ತದೆ. ಅವರಲ್ಲಿರುವ ಸಂಘಟನೆಯೇ ಅವರಿಗೆ ಬಲವನ್ನುಂಟುಮಾಡಿದೆ.

ಹಿಂದುಗಳಲ್ಲಿ ಯಾವನೊಬ್ಬನಮೇಲೆ ಆಕ್ರಮಣವಾದರೆ ಎಲ್ಲ ಹಿಂದುಗಳೂ ಆತನ ಸಹಾಯಕ್ಕೆ ಬರುವುದಿಲ್ಲವೆಂಬುದು ಆತನಿಗೆ ಗೊತ್ತೇ ಇದೆ. ಆಯಾಯ ವರ್ಣದವರೇ ಅವರವರ ಮಟ್ಟಿಗಿದ್ದಾರೆ. ಈ ವರ್ಣಭೇದದಿಂದ ಅವರಲ್ಲಿ ಸಂಘಟನೆಯೇ ಇಲ್ಲ. ಸಂಘಟನೆಯಿಲ್ಲದಿದ್ದಮೇಲೆ ಶಕ್ತಿಯು ಎಲ್ಲಿಂದ ಬರುವುದು?

ಶೀಖ ಮತ್ತು ಮುಸಲ್ಮಾನ್ ಜನರು ತಮ್ಮ ಜಾತಿಯವರನ್ನು ತಮ್ಮ ಬಂಧುಗಳೆಂದೇ ತಿಳಿಯುತ್ತಾರೆ. ಅವರ ಸಾಮಾಜಿಕ ಆಚಾರ ವಿಚಾರಗಳೂ ಹಾಗೆಯೇ ಇವೆ. ಅಂತೇ ಅವರ ನಡವಳಿಕೆಯಲ್ಲಿಯೂ ಬಂಧುಭಾವವು ಬಂದಿದೆ. ಹಿಂದುಗಳಲ್ಲಿ ಅಂಥ ಒಂದಾದರೂ ನಡವಳಿಕೆಯುಂಟೆ? ಹಿಂದುಗಳೆಲ್ಲರೂ ಪರಸ್ಪರ ಬಂಧುಗಳೆಂದು ಹೇಳಿಕೊಳ್ಳುವರೆ? ಒಬ್ಬರಿಗಿಂತ ಒಬ್ಬರು ಹೆಚ್ಚೆಂದೂ ಇನ್ನೊಬ್ಬರು ಕೀಳೆಂದೂ ತಿಳಿಯುವುದೇ ಇವರ ಆಚಾರ ವಿಚಾರ. ಎಂದಮೇಲೆ ಇವರಲ್ಲಿ ನಿಜವಾದ ಸಂಘಟನೆಯು ಹೇಗೆ ಶಕ್ಯ? ವರ್ಣಭೇದವೇ ಸಂಘಟನೆಗೆ ವಿಘ್ನಕಾರಿಯಾಗಿಲ್ಲವೆ? ಅದಿರುವವರೆಗೂ ಹಿಂದುಗಳು ನಿರ್ಬಲರಾಗಿಯೇ ಇರುವರು.

ಕೆಲವರು ಹಿಂದುಗಳಲ್ಲಿ ಸಹಿಷ್ಣುತೆಯ ಸದ್ಗುಣವಿದೆಯೆಂದು ಇದನ್ನೇ ಹೊಗಳುತ್ತಿದ್ದಾರೆ. ಅದು ತಪ್ಪು. ಹಿಂದುಗಳು ಅವಮಾನ ಮತ್ತು ಆಕ್ರಮಣಗಳನ್ನು ಸಹಿಸಿಕೊಳ್ಳುತ್ತಿರುವುದು ಸಹಿಷ್ಣುತೆಯಿಂದಲ್ಲ. ನಿರ್ಬಲತೆಯಿಂದ. ಪರಸ್ಪರರ ವಿಷಯದಲ್ಲಿರುವ ಉದಾಸೀನತೆಯಿಂದ. ಈ ಉದಾಸೀನತೆಯಂತಹ ದುರ್ಗುಣ ಬೇರೊಂದಿಲ್ಲ. ಹಿಂದುಗಳ ಈ ಉದಾಸೀನತೆಯು ವರ್ಣಭೇದದಿಂದಲೇ ಉಂಟಾಗಿದೆ. ವರ್ಣಭೇದವು ಎಂತಹ ಒಳ್ಳೆಯ ಕಾರ್ಯಗಳಲ್ಲಿ ಕೂಡಾ ಸಂಘಟನೆಯನ್ನುಂಟುಮಾಡಿಕೊಡುತ್ತಾ ಇಲ್ಲ. ಹಿಂದುಗಳ ಎಲ್ಲ ದೇವರೂ ಕ್ಷಮಾಶೀಲಗುಣವುಳ್ಳವುಗಳೇ ಆಗಿವೆಯಷ್ಟೆ. ಹಾಗಿದ್ದರೂ ಅಸ್ಪೃಶ್ಯರ ಮತ್ತು ದುಃಖಿಗಳ ಶೋಚನೀಯ ಸ್ಥಿತಿಯು ಮಾತ್ರ ಹಾಗೆಯೇ ಇರುವುದೇಕೆ? ವರ್ಣಭೇದದ ದೋಷದಿಂದ.

# ಕರ್ನಾಟಕ ಸಂಶೋಧನೆಯಲ್ಲಿ ಒಂದು ಕ್ರಾಂತಿ !

ಲೇ— ಶ್ರೀ. ದೇಸಾಯಿ ಪಾಂಡುರಂಗರಾಯರು ಎಂ. ಎ. (ಆನರ್ಸ)
ಧಾರವಾಡ.

ಕನ್ನಡದ ಮೂಲವನ್ನು ಗೊತ್ತುಹಚ್ಚಲು ಇತ್ತೀಚೆಗೆ ಹಲವು ಸಂಶೋಧಕರು ಹಲವು ಬಗೆಯಿಂದ ಪ್ರಯತ್ನಿಸುತ್ತಿರುವರಷ್ಟೆ. ಈ ವಿಷಯವನ್ನು ಕುರಿತು ಹೆಚ್ಚು ಹೆಚ್ಚು ಪರಿಶ್ರಮಮಾಡುತ್ತ ಹೋದಂತೆ ಕನ್ನಡದ ಪ್ರಾಚೀನತೆ ಮತ್ತು ವಿಸ್ತಾರ ಇವುಗಳು ಹೆಚ್ಚು ಹೆಚ್ಚು ಬೆಳಕಿಗೆ ಬರುತ್ತಲಿವೆ. ಇತ್ತೀಚಿನ ಪರಿಶೋಧನೆಗಳಿಂದ ಇದು ವರೆಗೆ ಸಂಶೋಧಕರಲ್ಲಿ ಗ್ರಹಿಕೆಯಾಗಿರುವ ಕನ್ನಡದ ದೇಶಕಾಲಗಳ ಎಲ್ಲ ಕಟ್ಟುಗಳು ಒಡೆದುಹೋಗುತ್ತ ಕನ್ನಡದ ಸಂಶೋಧನೆಯು ಯಾವುದೋ ಒಂದು ಹೊಸತಾದ ಲೋಕದಲ್ಲಿ ಹೆಜ್ಜೆಯಿಕ್ಕುತ್ತಲಿದೆ.

ಇದೀಗ ಉತ್ತರಕ್ಕೆ ಕೃಷ್ಣೆಯ ಅಕ್ಕಪಕ್ಕದಲ್ಲಿಯೇ ಹರಕಮುರಕಾಗಿ ಹೇಗೋ ಬಾಳಿಕೊಂಡಿರುವ ಕನ್ನಡದ ಮೇರೆಯನ್ನು ಆ ನೃಪತುಂಗನನ್ನು ನಂಬಿ ಗೋದಾವರಿಯ ವರೆಗೆ ಎಳೆದು ಹೇಳಬೇಕೆಂದರೆ, ಕೆಲವರ್ಷಗಳ ಹಿಂದೆ ಎಷ್ಟೋ ಜನರಿಗೆ ಗಾಬರಿಗಾಬರಿಯಾಗುತ್ತಲಿತ್ತು. ಶ್ರೀ. ಶಂಕರರಾಯ ಜೋಶಿಯವರು ನರ್ಮದೆ, ಮಾಳವದ ವರೆಗೆ ಅದನ್ನು ನೂಕುವ ಧೈರ್ಯಮಾಡಲು, ಅವರೀ ಊಹೆಯನ್ನು ಅಭಿನಂದಿಸಿ, ಇದರಲ್ಲಿ ನಿಜಾಂಶವು ಇದೆ ಎಂದು ಅವರ ಬೆನ್ನ ತಟ್ಟಲು ಕೆಲವು ಪಂಡಿತರು ಮುಂದುವರಿದರು.

ಇದರ ಜೊತೆಗೆ ಕಾಲವಿಚಾರದಲ್ಲಿಯೂ ಮತಪರಿವರ್ತನೆಯು ಉಂಟಾಯಿತು. ಕ್ರಿಸ್ತ ಯುಗಾರಂಭಕ್ಕೆ ಬಂದು ನಿಂತಿದ್ದ ಕನ್ನಡ ಜೀವನದ ಉಗಮವು ಕ್ರಿಸ್ತಯುಗದ ಹಿಂದುಹಿಂದಿನ ಕಾಲನ ಗವಿಯಲ್ಲಿ ಇಣಿಕಿಹಾಕತೊಡಗಿತು.

ಇತ್ತೀಚಿನ ಕೆಲವು ಸಂಶೋಧನೆಗಳಿಂದ ಇಂತಹ ಊಹೆಗಳಿಗೆ ಬಲವಾದ ಚಾಲನೆಯು ದೊರೆತು ಕನ್ನಡದ ಹುಟ್ಟನ್ನು ಇತಿಹಾಸಕಾಲದಿಂದ ಇತಿಹಾಸ ಪೂರ್ವಕಾಲದಲ್ಲಿ ಹೊಕ್ಕು ಹುಡುಕುವ ಸಂದರ್ಭವು ಒದಗಿದೆ. ಕೆಲವು ಸಂಶೋಧಕರ ಈಗಿನ ಒಲವನ್ನು ನೋಡಿ, ಅವರ ಮಾತುಗಳನ್ನು ನಂಬಬಹುದಾದಲ್ಲಿ ಕ್ರಿಸ್ತ ಪೂರ್ವ ಸಾವಿರಾರು ವರ್ಷಗಳ ಹಿಂದಕ್ಕೆ, ಉತ್ತರದಲ್ಲಿ ಉತ್ತರ ಭಾರತದಲ್ಲಿ, ಸಿಂಧೂ ನದಿಯ ಕಣಿವೆಗಳಲ್ಲಿ ಕನ್ನಡದ ಹುಟ್ಟಿನ ಕುರುಹುಗಳನ್ನು ಎಣಿಸಿ ನೋಡಬೇಕಾಗುವುದು.

ಕಾಲನ ಒಡಲಲ್ಲಿ ಏನೇನು ಅಡಗಿರುವುದೋ ಯಾರು ಹೇಳಬಲ್ಲರು ? ಸುಮಾರು ೧೫ ವರುಷಗಳ ಹಿಂದೆ ಸಿಂಧ ಪಂಜಾಬ ಪ್ರಾಂತಗಳಲ್ಲಿ ಸಿಂಧು ನದಿಯ ದಂಡೆಯಲ್ಲಿ ನೆಲಸಿರುವ ಮಹೆಂಜೊ ದಾರೊ ಮತ್ತು ಹರಪ್ಪ ಎಂಬ ಸ್ಥಳಗಳ ಪಕ್ಕದಲ್ಲಿ ಅಗೆತವು ನಡೆದು ಅಪೂರ್ವವಾದ ಒಂದು ನಾಗರಿಕತೆಯ ಅವಶೇಷಗಳು ಬಯಲಿಗೆ ಬಂದುವು. ಮಾನವರುಮಾಡಿ ಬಳಸಿದ ಬಗೆಬಗೆಯ ಒಡವೆಗಳಿಂದ ಕೂಡಿದ ಮನೆಗಳೂ ಊರುಗಳೂ ಹೊರಟುವು. ಚಾನ್ಹುದಾರೊ ಮುಂತಾದ ಬೇರೆಡೆಯಲ್ಲಿಯೂ ಇದೇ ಮಾದರಿಯ ಇನ್ನೂ ಹಲವು ವಸ್ತುಗಳು ದೊರೆತವು.

ಈ ನಾಗರಿಕತೆಯ ಅಧ್ಯಯನವು ನಡೆಯಿತು. ಅನೇಕ ಸಂಶೋಧಕರು ಇದರಲ್ಲಿ ಬಹಳ ಪರಿಶ್ರಮಪಟ್ಟರು, ಇನ್ನೂ ಪಡುತ್ತಿರುವರು. ಇದರಲ್ಲಿ ಸಾಮಾನ್ಯವಾಗಿ ಎಲ್ಲ ಪಂಡಿತರು ಒಪ್ಪುವಂತಹ ಕೆಲವು ಮಾತುಗಳು ಸ್ಪಷ್ಟವಾಗಿ ನಿದರ್ಶನಕ್ಕೆ ಬಂದುವು. ಅವು ಯಾವುವೆಂದರೆ—

ಈ ಪ್ರದೇಶದಲ್ಲಿ ಅಪೂರ್ವವಾದ ಒಂದು ಜನಾಂಗವು ವಾಸಿಸುತ್ತಿರಬೇಕು. ಈ ಜನಾಂಗವು ನಾಗರಿಕತೆಯ ಲಕ್ಷಣಗಳಿಂದ ಕೂಡಿದುದಾಗಿತ್ತು. ಅದಕ್ಕೂ, ಈಗ ಜ್ಞಾತವಿರುವ ಲೋಕದಲ್ಲಿಯ ಬೇರಾವ ಜನಾಂಗಕ್ಕೂ ಸಾಕಷ್ಟು ಹೋಲಿಕೆಯು ಸಿಕ್ಕುವುದಿಲ್ಲ. ಈ ಜನಾಂಗದ ಕೆಲವು ಲಕ್ಷಣಗಳು ಬೇರೆ ಜನಾಂಗಗಳೊಡನೆ ಹೋಲುವಂತಹವಾಗಿದ್ದರೂ ಈ ಜನಾಂಗದ ಸಂಸ್ಕೃತಿಯು ವಿಲಕ್ಷಣವಾಗಿದೆ.

ಈ ಜನಾಂಗವು ಅತಿ ಪ್ರಾಚೀನ ಕಾಲದಲ್ಲಿ ಬಾಳಿರಬೇಕು. ಇದರ ಪ್ರಾಚೀನತೆಯ ಬಗೆಗೆ ಭಿನ್ನಾಭಿಪ್ರಾಯಗಳಿದ್ದು ಇದರ ಕಾಲವು ಕ್ರಿಸ್ತಪೂರ್ವ ಮೂರು ಸಾವಿರದಿಂದ ಹತ್ತು ಸಾವಿರ ವರ್ಷಗಳ ವರೆಗೆ ಆಗಬೇಕೆಂದು ಬೇರೆ ಬೇರೆ ಪರಿಶೋಧಕರು ಅಭಿಪ್ರಾಯಪಟ್ಟಿರುವರು.

ಈ ಜನಾಂಗವು ಯಾವ ಜನಾಂಗವಾಗಿರಬೇಕು ? ಕೆಲವರ ಅಭಿಪ್ರಾಯದಂತೆ ಇವರು ಭಾರತವಲ್ಲಿ ಬಂದು ನೆಲಸಿದ ಆರ್ಯರೇ ಆಗಿರಬೇಕು.

ಈ ಜನಾಂಗವು ಸುಮೇರಿಯನ್ ಎಂಬ ಪಶ್ಚಿಮ ಏಶಿಯದ ಇನ್ನೊಂದು ಜನಾಂಗಕ್ಕೆ ಹೋಲುವುದು ಎಂದು ಡಾಕ್ಟರ್ ಪ್ರಾಣನಾಥರು ಸಾಧಿಸಿರುವರು.

ಭಾರತೀಯ ಪ್ರಭುತ್ವದ ಸೇವೆಯಲ್ಲಿದ್ದು, ಈ ಶೋಧನೆಗಳನ್ನು ಕುರಿತು ಪ್ರಮಾಣ ಗ್ರಂಥವನ್ನು ಪ್ರಕಟಗೊಳಿಸಿದ ಪುರಾತತ್ವ ವಿಶಾರದ ಸರ್. ಜಾನ್ ಮಾರ್ಶಲ್ ಇವರು ಇದು ಆರ್ಯಪೂರ್ವ ಜನಾಂಗವಾಗಿದ್ದು, ಮುಂದೆ ದ್ರಾವಿಡವೆಂದು ನಾಮಾಭಿಧಾನವನ್ನು ಪಡೆದ ಜನಾಂಗವಾಗಿರಬಹುದು ಎಂದು ತಮ್ಮ ಮತವನ್ನು ವ್ಯಕ್ತಪಡಿಸಿದರು. ಪ್ರೊ. ಆರ್. ಡಿ. ಬಾನರ್ಜಿಯವರು ಇವರೀ ಅಭಿಪ್ರಾಯವನ್ನು ಎತ್ತಿಹಿಡಿದು ಮಹೆಂಜೊ ದಾರೊ ಹರಪ್ಪ ಇವುಗಳ ಸಂಸ್ಕೃತಿಯನ್ನು ಕಟ್ಟಿದವರು ದ್ರಾವಿಡರು ಅಥವಾ ಆದಿ ದ್ರಾವಿಡರು ಆಗಿರಬೇಕು ಎಂದು ಸಾರಿದರು. ಶ್ರೀ. ಹಂಟರ ಸಾಹೇಬರು ಸಿಂಧದ ನೆರೆಯಲ್ಲಿ, ಬಲುಚಿಸ್ಥಾನದಲ್ಲಿ ಈಗಲೂ ನೆಲಸಿರುವ ಬ್ರಾಹುಇ ಎಂಬ ದ್ರಾವಿಡ ಜನಾಂಗದ ಉದಾಹರಣೆಯನ್ನು ಆಧಾರವಾಗಿಟ್ಟುಕೊಂಡು, ಈ ಜನರು ದ್ರಾವಿಡರು ಆಗಿರಬೇಕು ಎಂದು ನುಡಿದರು.

ಇಲ್ಲಿ ದೊರೆತಿರುವ ಆಕೃತಿಗಳ ಒಲವು, ಈ ಜನರ ನಡವಳಿಕೆಯ ಕುರುಹುಗಳು ಮುಂತಾದ ಈ ಜನಾಂಗದ ಇರುವಿಕೆಯ ರೀತಿಯ ಮೇಲಿಂದ ಇದು ದ್ರಾವಿಡ ಜನಾಂಗವು ಎಂದು ಪಂಡಿತರು ಅಭಿಪ್ರಾಯಪಟ್ಟರೂ, ಹೆಚ್ಚು ಬಲವಾದ ಪ್ರಮಾಣಗಳು ಮುಂದೆ ಬರುವ ವರೆಗೆ ಈ ಅಭಿಪ್ರಾಯದ ಬಗೆಗೆ ಸಂದೇಹಗೊಳ್ಳಲು ಸಾಕಷ್ಟು ಎಡೆಯಿರುವುದು. ಈ ಕುಂದನ್ನು ನೀಗಿ ಈ ಜನಾಂಗದ ಜಾತಿಯನ್ನು ನಿರ್ಧರಿಸಲು ಇನ್ನೊಬ್ಬ ಸಂಶೋಧಕರು ಇದೀಗ ಮುಂದೆ ಬಂದಿರುವರು.

ಈ ಜನಾಂಗದ ಜಾತಿಯನ್ನು ನಿರ್ಧರಿಸಲು ಸಹಾಯಕರಾಗಬಲ್ಲ ಹಲವು ಮಹತ್ವದ ವಸ್ತುಗಳು ಅಲ್ಲಿಯ ಅಗೆತದಲ್ಲಿ ಸಿಕ್ಕಿರುವುವು. ಕೊರೆದ ಆಕೃತಿಗಳುಳ್ಳ ಒಂದು ಬಗೆಯ ಮಣ್ಣುಕಲ್ಲಿನ ಮುದ್ರೆಗಳೇ (Steatite Seals) ಈ ಮಹತ್ವದ ವಸ್ತುಗಳು. ಈ ಆಕೃತಿಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿ ನೋಡಿದಲ್ಲಿ ಇವು ಒಂದು ಬರೆಹವಾಗಿವೆ ಎಂದು ಕಂಡುಬಂದಿತು. ಆದರೆ ಈ ಬ್ರಹ್ಮ ಬರೆಹವನ್ನು ಓದಿ ತಿಳಿದುಕೊಳ್ಳುವ ಬಗೆ ಹೇಗೆ ? ಏಕೆಂದರೆ

ಈ ಬರೆಹದಲ್ಲಿಯ ಭಾಷೆ ಮತ್ತು ಲಿಪಿ ಇವೆರಡೂ ಅಷ್ಟೇ ಅರಿಯದ ಗೂಢವಾಗಿದ್ದುವು. ಈ ಬರೆಹದ ಓದಿನಿಂದ ಈ ಜನಾಂಗದ ಸಮಸ್ಯೆಯನ್ನು ಬಿಡಿಸಲು ಬಹಳ ಸಹಾಯವಾಗುವುದೆಂದು ಬೇರೆ ಹೇಳಬೇಕಾದುದಾಗಿಲ್ಲ

ಈ ಬರೆಹವನ್ನು ಓದಲು ಪ್ರಯತ್ನಿಸಿದವರಲ್ಲಿ, 'ಕೊನೆಗಾಣಿಸಿ ಜಯಶಾಲಿಯಾಗಿದ್ದೇನೆ' ಎಂದು ಧೈರ್ಯವಾಗಿ ಸಾರಿ ಹೇಳಲು ಇದೀಗ ಮುಂಬಯಿಯ ಫಾದರ ಹೆರಾಸರು ಮುಂದುವರಿದಿದ್ದಾರೆ. ಇವರು ಈ ಸ್ಥಳದಲ್ಲಿ ದೊರೆತಿರುವ ಸುಮಾರು ಎರಡು ಸಾವಿರ ಮುದ್ರೆಗಳ ಮೇಲಿನ ಬರೆಹಗಳನ್ನು ಓದಿ ಅರ್ಥವನ್ನು ಅನುಗೊಳಿಸಿ ಪ್ರಕಟಿಸುತ್ತಲಿದ್ದಾರೆ.

### ಮಹೆಂಜೊದಾರೋದ ಒಡಪು.

ಮಹೆಂಜೊದಾರೋ ಸಂಶೋಧನೆಯ ಸಾಂಗೋಪಾಂಗ ನಿರೂಪಣೆಯನ್ನು ಮಾಡುವುದಾದರೆ, ಅದೊಂದು ಮಹಾಭಾರತವನ್ನೇ ಬರೆಯಬೇಕಾದೀತು. ನಾನಿಲ್ಲಿ ಅಷ್ಟು ಉದ್ದಕ್ಕೆ ಹೋಗದೆ ಒಂದೆರಡು ಹೆಚ್ಚಿನ ವಿಚಾರಗಳನ್ನು ಸೂಚಿಸುವೆ.

ಮಹೆಂಜೊದಾರೋ ಬೆಳಕಿಗೆ ಬಂದುದು ಆರ್ಯಸಂಸ್ಕೃತಿಯ ಅಗ್ಗಳಿಕೆಯನ್ನು ಕುಂದಿಸಲಿಕ್ಕೆ ಕಾರಣವಾಗಿದೆ. ಮಹೆಂಜೊದಾರೋವನ್ನು ಕಟ್ಟಿದವರು ಪ್ರಾಚೀನತೆ, ಬುದ್ಧಿವಂತಿಕೆ, ನಾಗರಿಕತೆ ಮುಂತಾದ ಯಾವ ವಿಚಾರದಲ್ಲಿಯೂ ಆರ್ಯರಿಗಿಂತ ಹೀನರಂತೂ ಆಗಿರಲೇ ಇಲ್ಲ, ಶ್ರೇಷ್ಠರೇ ಆಗಿದ್ದರು.—ಎಂದು ಅನೇಕ ಸಂಶೋಧಕರು ಒತ್ತಿ ಒತ್ತಿ ಸಾರಿರುವರು.

ಡಾ. ಪ್ರಾಣನಾಥರೊಬ್ಬರನ್ನುಳಿದರೆ ಮಹೆಂಜೊದಾರೋದ ಸಂಸ್ಕೃತಿಯು ಆದಿದ್ರಾವಿಡವೆಂಬುದಕ್ಕೆ ಸಂಶೋಧಕರಲ್ಲಿ ವಿಶೇಷವಾದ ಭಿನ್ನಾಭಿಪ್ರಾಯಗಳಿಲ್ಲ. ದ್ರಾವಿಡ ಸಂಸ್ಕೃತಿಯಂತೆ ಸುಮೇರಿಯ ಸಂಸ್ಕೃತಿಯಾದರೂ ಅತಿ ಪ್ರಾಚೀನವಾದುದು. ಇವೆರಡು ಸಂಸ್ಕೃತಿಗಳನ್ನು ಕಟ್ಟಿದ ಜನಾಂಗಗಳಲ್ಲಿ ವಿಶೇಷವಾದ ಬಳಕೆಯೂ ಇದ್ದಿತೆಂದು ತೋರುತ್ತದೆ. ಅದುದರಿಂದ ಅತಿ ಪ್ರಾಚೀನವಾದ ಮಹೆಂಜೊದಾರೋದ ಆದಿದ್ರಾವಿಡ ಸಂಸ್ಕೃತಿಯಲ್ಲಿ ಸುಮೇರಿಯ ಸಂಸ್ಕೃತಿಯ ಹೋಲಿಕೆಗಳು ಕಂಡುಬಂದರೆ ಆಶ್ಚರ್ಯವಲ್ಲ. ಆದರೆ ಈ ಹೋಲಿಕೆಗಳು ಹೋಲಿಕೆಗಳೆ ಅಲ್ಲದೆ ಸ್ವರೂಪಲಕ್ಷಣಗಳಲ್ಲ, ಆದುದರಿಂದ ಮಹೆಂಜೊದಾರೋದ ಸಂಸ್ಕೃತಿಯು ಆದಿದ್ರಾವಿಡವೆಂದು ದೃಢಪಡುತ್ತದೆ.

ಆದಿದ್ರಾವಿಡವೆಂಬುದು ಇನ್ನೂ ಸಂದಿಗ್ಧವಾದ ಪ್ರಯೋಗ. ನಿಶ್ಚಿತವಾದ ಅದರ ಸ್ವರೂಪದ ರೂಪರೇಖೆಗಳನ್ನು ನಿರ್ಧರಿಸಿ ಹೇಳುವುದು ಇದುವರೆಗೆ ಸಾಧ್ಯವಾಗಿಲ್ಲ. ಆದಿದ್ರಾವಿಡದ ಮೇಲೆ ಎರಡು ಜನಾಂಗಗಳಿಗೆ ಹೆಚ್ಚಿನ ಬಾಧ್ಯತೆಯು ಉಂಟಾಗುತ್ತದೆ. ಒಂದು ತಮಿಳು, ಇನ್ನೊಂದು ಕನ್ನಡ. ಏಕೆಂದರೆ ದ್ರಾವಿಡ ಜನಾಂಗಗಳಲ್ಲಿ ಇವೆರಡೂ ಬಹಳ ಹಳೆಯವು. ಇವೆರಡರ ಮಾತು ಬಂದೊಡನೆ ಮತ್ತೆ ಮತಭೇದವು ತಲೆದೋರುತ್ತದೆ.

ತಮಿಳು ಹೆಚ್ಚು ಹಳೆಯದು ಎಂದು ಅನೇಕರು ಹೇಳುವರು. ಏಕೆ? ಕನ್ನಡವು ಹೆಚ್ಚು ಹಳೆಯದು ಏಕಾಗಬಾರದು? ಎಂದು ಈಗೀಗ ಕೆಲವು ಕನ್ನಡ ಸಂಶೋಧಕರಲ್ಲಿಯೂ ಕಲ್ಪನೆಯ ಮಿಂಚು ಸುಳಿಯುತ್ತಲಿದೆ. ಕನ್ನಡಕ್ಕೂ ಪ್ರಾಚೀನತೆಯ ಕುರುಹುಗಳುಂಟು. ಇದನ್ನು ಈಗಲೇ ನಿರ್ಣಯಿಸುವುದು ಹಗುರಲ್ಲ. ಇವೆರಡರಲ್ಲಿ ಗೆದ್ದವರ ಕೊರಳಲ್ಲಿ ಮಹೆಂಜೊದಾರೋದ ಮಾಲೆಯು ಬೀಳುವಂತೆ ಕಾಣುತ್ತದೆ.

ತಮಿಳರು ಕನ್ನಡಿಗರಿಗಿಂತ ಜಾಣರು; ಮುಂದುವರಿದವರು. ಅವರು ಅನೇಕ ಪ್ರಕಾರದಿಂದ ತಮಿಳಿನ ಪ್ರಾಚೀನತೆಯನ್ನು ಸಾಧಿಸುತ್ತಿರುವರು. ಮಹೆಂಜೊದಾರೋದ ಈ ಸಂದರ್ಭದಿಂದಂತೂ ಅವರ ಮಹತ್ವಾಕಾಂಕ್ಷೆಗೆ ಪುಟವು ದೊರೆತಿದೆ. ಲಂಕಾದ್ವೀಪನಿವಾಸಿಗಳೂ ಪ್ರಸಿದ್ಧ ದ್ರಾವಿಡ ಭಾಷಾಶಾಸ್ತ್ರಜ್ಞರೂ ಆದ ರೆವರಂಡ ಗ್ನ್ಯಾನ ಪ್ರಕಾಸರ್ ಎಂಬುವವರು ಮಹೆಂಜೊದಾರೋದ ಭಾಷೆಯಲ್ಲಿಯ ಕೆಲವು ಪದ್ಯಗಳನ್ನು ಉದಾಹರಿಸಿ ತಮಿಳು ಏಳು ಸಾವಿರ ವರುಷಗಳ ಹಿಂದೆ ಬಾಳಿತ್ತು. (Tamil verse seven thousand years ago) ಎಂದು ಈಗಾಗಲೆ ಪ್ರತಿಪಾದಿಸಿ ಬಿಟ್ಟಿರುವರು. ಆದರೆ ಕನ್ನಡ ಸಂಶೋಧಕರು? ಕನ್ನಡ ಸಂಶೋಧಕರಿಗೆ ಮುಂದುವರಿಯಲು ಇದೊಂದು ಆಹ್ವಾನವೇ ದೊರೆತಂತಾಗಿದೆ. ಈಗ ಅವರು ಎಂದಿನಂತೆ ಉದಾಸೀನತೆಯನ್ನೇ ಅವಚಿಕೊಂಡು ಕುಳಿತರೆ, ತಮಿಳರು ಮಹೆಂಜೊದಾರೋದ ಮೇಲೆ ತಮ್ಮ ಧ್ವಜವನ್ನು ಹಚ್ಚುವರು ಎಂಬುದರಲ್ಲಿ ಸಂದೇಹವಿಲ್ಲ. "ಹೋಗಲಿ, ಯಾವ ರಾಜನಿಗೆ ಪಟ್ಟವಾದರೇನು, ರಾಗಿ ಬೀಸೋದು ತಪ್ಪಿದ್ದಲ್ಲ." ಎಂಬ ಬಡ ಮುದುಕಿಯ ಸನಾತನ ವೇದಾಂತವನ್ನು ಕನ್ನಡಿಗರು ಇನ್ನೂ ಅವಲಂಬಿಸುವರೋ?

ಮಹೆಂಜೊದಾರೋದ ಒಡಪನ್ನು ಬಿಡಿಸಲು ದ್ರಾವಿಡ ಭಾಷೆಯಷ್ಟು ಬೇರಾವ ಭಾಷೆಯೂ ಸಹಕಾರಿಯಾಗಿಲ್ಲ. ಕೆಲವರು ಅದನ್ನು ಸಂಸ್ಕೃತವೆಂದು ತಿಳಿದು ಓದಲು ಯತ್ನಿಸಿರುವರು. ಕೆಲವರು ಅದರಲ್ಲಿ ಸುಮೇರಿಯವನ್ನೂ ಎತ್ತಿ ನಿಲ್ಲಿಸಲು ಹೆಣಗಿರುವರು. ಆದರೆ ಈ ಪ್ರಯತ್ನಗಳಾವುವೂ ಫಾದರ ಹೆರಾಸರ ಪ್ರಯತ್ನಗಳ ಒಂದಂಶದಷ್ಟಾದರೂ ಯಶಸ್ವಿಯಾಗಿಲ್ಲ. ದ್ರಾವಿಡ ಭಾಷೆಯಲ್ಲಿ ಒಂದು ಅಪೂರ್ವವಾದ ಸೌಕರ್ಯವು ಉಂಟು. ಅದು ಇದುವರೆಗೆ ಪರಮಶ್ರೇಷ್ಠವೆಂದು ಹೊಗಳಿಸಿಕೊಳ್ಳುವ ಸಂಸ್ಕೃತ ಭಾಷೆಯಲ್ಲಿ ಇಲ್ಲ. ಒಂದೆರಡು ಉದಾಹರಣೆಗಳನ್ನು ಹೇಳಬಹುದು.

ಮಹೆಂಜೊದಾರೋದ ಚಿತ್ರಲಿಪಿಯಲ್ಲಿ ಮೀನದ ಆಕೃತಿಯು ಮೇಲಿಂದಮೇಲೆ ಬರುವುದು. ಆದರೆ ಅದರ ಅರ್ಥವು ಮಾತ್ರ ಎಲ್ಲ ಕಡೆಯಲ್ಲಿಯೂ ಒಂದೇ ಬಗೆಯಾಗಿ ಸ್ವೀಕರಿಸಿದರೆ ಸರಿಯಾಗುವುದಿಲ್ಲ. ಸಂದರ್ಭದಂತೆ ಬೇರೆ ಬೇರೆಯಾಗಿ ಅರ್ಥಸೂಚನೆ ಇದೆ ಎಂಬುದು ಸ್ಪಷ್ಟವಾಗುತ್ತದೆ.

ಈ ಮೀನಾಕೃತಿಯನ್ನು ಸಂಸ್ಕೃತ ಭಾಷೆಯ ಉತ್ಪತ್ತಿಯಂತೆ ಓದಿದರೆ 'ಮತ್ಸ್ಯ'ವೆಂದು ಅಥವಾ ದ್ರಾವಿಡದಿಂದ ಕಡ ತೆಗೆದುಕೊಂಡ ಶಬ್ದವನ್ನು ಉಪಯೋಗಿಸಿ ಓದುವುದಾದರೆ 'ಮೀನ' ಎಂದು ಹೇಳಬೇಕಾಗುವುದು. ಇಷ್ಟರಿಂದ ಮಹೆಂಜೊದಾರೋದಲ್ಲಿ ಹಲವು ಕಡೆ ಬರುವ ಈ ಆಕೃತಿಯ ಒಡಪು ಬಿಡಿಸಲಾಗುವುದಿಲ್ಲ. ಅದಕ್ಕಾಗಿ ದ್ರಾವಿಡಭಾಷೆಗೇ ಶರಣುಹೋಗಬೇಕಾಗುತ್ತದೆ. ದ್ರಾವಿಡದಲ್ಲಿ 'ಮೀನ್' ಎಂಬ ಶಬ್ದವು ಮೂರು ಅರ್ಥಗಳನ್ನು ಕೊಡುತ್ತದೆ. ೧. ಮೀನ (Fish); ೨. ಮಿನುಗುವ ಹೊಳೆಯುವ (ಮೀನ್‌ಧಾತು); ೩. ಚಿಕ್ಕೆ (Star), ಅಥವಾ ಮನುಷ್ಯನ ಹೆಸರು.

"ಜಯಕರ್ನಾಟಕ."

---

## ಭಾಯಿ ಪರಮಾನಂದರಿಗೆ

### ಮೈಸೂರಿಗೆ ಆಹ್ವಾನ.

ಮೈಸೂರು ಸಂಸ್ಥಾನದ ದಿವಾನರಾದ ಸರ್. ಮಿರ್ಜಾ ಎಂ. ಇಸ್ಮಾಯಿಲ್‌ರವರು ಹೊಸದಿಲ್ಲಿಯ ಹಿಂದೂ ಮಹಾ ಸಭಾ ಭವನಕ್ಕೆ ಆಗಮಿಸಿ ಕಟ್ಟಡವನ್ನೆಲ್ಲಾ ಅವರು ನೋಡಿ ಅದರ ಶಿಲ್ಪ ಕಲಾಕೌಶಲ್ಯವನ್ನು ಪ್ರಶಂಸಿಸಿದರು.

ಸರ್ ಮಿರ್ಜಾರವರು ಭಾಯಿ ಪರಮಾನಂದರವರಿಗೆ ಮೈಸೂರು ಸಂಸ್ಥಾನಕ್ಕೆ ಬರಬೇಕೆಂದು ಆಹ್ವಾನವಿತ್ತು ಹಿಂದೂ ಸಂಸ್ಕೃತಿಯನ್ನು ಕಾಪಾಡುವುದಕ್ಕೆ ಮೈಸೂರು ಸರಕಾರವು ಏನೇನನ್ನು ಮಾಡುತ್ತಿದೆ ಎಂಬಂಶವನ್ನು ತಿಳಿಯಬಹುದೆಂದು ಹೇಳಿದರು.

## ಬ್ರಿಟಿಶ್ ಹಿಂದುಸ್ಥಾನದ ಕ್ಷೇತ್ರಫಲ ಮತ್ತು ಜನಸಂಖ್ಯೆ.

| ಅನುಕ್ರಮ ನಂಬರು. | ಪ್ರಾಂತದ ಹೆಸರು. | ಕ್ಷೇತ್ರಫಲ ಚೌರಸ ಮೈಲು. | ಒಟ್ಟು ಜನಸಂಖ್ಯೆ. | ಶೆಡ್ಯೂಲಜಾತಿ ಸಹಿತ ಸರ್ವ ಸಾಧಾರಣ. | ಶೆಡ್ಯೂಲ ಜಾತಿ. | ಮುಸಲ್ಮಾನ್. | ಆಂಗ್ಲೋ-ಇಂಡಿಯನ್ | ಯುರೋಪಿಯನ್. | ಹಿಂದೀ ಕ್ರಿಶ್ಚಿಯನ್ |
|---|---|---|---|---|---|---|---|---|---|
| (೧) | ಅ. ಹಿಂದುಸ್ಥಾನ | ೧೫೭೫೧೦೭ | ೩೩೮೧೧೯೧೫೪ | ೨೩೮೬೨೨೬೦೨ | ೫೦೨೫೦೩೪೪೭ | ೭೭೦೪೯೮೬೮ | ೧೧೯೧೪೩ | ೨೭೪೦೨೬ | ೫೫೭೦೨೪೦ |
| (೨) | ಬ್ರಿ. ಹಿಂದುಸ್ಥಾನ | ೮೬೨೫೯೯ | ೨೫೬೮೮೮೩೦೯ | ೧೭೭೧೭೫೪೫೦ | ೩೯೧೩೭೪೦೫ | ೬೬೩೯೨೭೬೬ | ೧೦೧೩೮೦ | ೨೩೮೫೯೨ | ೩೧೯೩೩೩೭ |
| (೩) | ಮದ್ರಾಸ | ೧೨೬೬೬೩ | ೪೪೪೧೮೩೬೯೦ | ೩೯೦೮೩೩೪೨ | ೬೯೪೪೭೪೭ | ೩೨೯೦೨೯೪ | ೨೮೬೩೦ | ೧೨೩೪೧ | ೧೭೦೩೭೯೧ |
| (೪) | ಮುಂಬಯಿ | ೭೭೨೭೧ | ೧೮೧೯೨೪೭೫ | ೧೫೬೦೨೯೩೨ | ೧೬೭೭೩೮೯೬ | ೨೬೦೨೩೮೫ | ೧೪೧೭೬ | ೧೮೦೨೮ | ೨೬೭೪೬೦ |
| (೫) | ಬಂಗಾಲ | ೭೭೫೧೪ | ೫೦೧೧೪೦೦೨ | ೨೨೪೯೩೬೫೯ | ೯೧೨೪೯೨೫ | ೨೭೪೯೭೬೨೪ | ೨೭೫೭೩ | ೨೦೮೯೫ | ೧೨೯೧೩೪ |
| (೬) | ಸ. ಪ್ರಾಂತ | ೧೦೬೨೪೮ | ೪೮೪೦೮೭೬೩ | ೪೦೯೦೫೮೫೬ | ೧೨೫೯೧೫೨೫ | ೭೧೮೧೯೨೭ | ೧೧೨೬೩ | ೨೨೦೪೩ | ೧೭೦೨೧೬ |
| (೭) | ಪಂಜಾಬ | ೯೧೯೧೯ | ೨೩೫೫೧೨೧೦ | ೬೩೨೮೪೧೫ | ೧೪೪೦೭೫೦ | ೧೩೩೦೨೯೯೧ | ೨೯೯೫ | ೧೯೧೦೬ | ೩೯೨೧೪೪ |
| (೮) | ಬಿಹಾರ | ೬೯೩೪೮ | ೩೨೩೭೧೪೩೪ | ೨೮೧೯೪೬೨೧ | ೪೪೯೦೫೯೯ | ೪೧೪೦೩೨೭ | ೫೮೯೨ | ೫೩೯೦ | ೩೩೧೧೮೫ |
| (೯) | ಮಧ್ಯಪ್ರಾಂತ | ೯೯೯೨೦ | ೧೫೫೦೭೭೨೩ | ೧೪೮೧೫೦೫೪ | ೨೯೨೭೩೪೩ | ೬೮೨೮೫೪ | ೪೭೪೦ | ೫೦೭೫ | ೩೫೫೩೧ |
| (೧೦) | ಆಸಾಮ | ೨೭೫೭೨ | ೮೨೧೪೦೭೬ | ೪೮೫೮೭೭೯ | ೫೭೨೪೯೦ | ೨೭೫೩೫೬೩ | ೫೫೮ | ೨೯೬೧ | ೧೧೭೨೦೦ |
| (೧೧) | ಸರಹದ್ದ ಪ್ರಾಂತ | ೧೩೫೧೮ | ೨೪೨೫೦೦೩ | ೧೪೨೯೭೭ | - | ೨೨೨೭೩೦೩ | ೧೫೦ | ೭೯೪೭ | ೪೧೧೬ |
| (೧೨) | ಓರಿಸಾ | ೩೨೬೮೧ | ೮೧೭೪೨೫೧ | ೮೦೪೩೦೧೮ | ೧೦೦೬೯೮೩ | ೧೩೧೨೩೩ | ೬೩೫ | ೮೫೬ | ೩೬೫೭೩ |
| (೧೩) | ಸಿಂಧ | ೪೬೩೭೮ | ೩೮೮೭೦೭೦ | ೧೦೧೫೨೫ | ೯೯೫೫೧ | ೨೮೩೦೮೦೦ | ೧೯೩೦ | ೬೫೭೬ | ೬೬೨೭ |

ಹಿಂದುಳಿದ ವರ್ಗ— (೧) ಬಿಹಾರ ೩೮೫೫೦೭೬ (೨) ಆಸಾಮ ೪೭೦೦೯೩ (೩) ಓರಿಸಾ ೧೧೭೪೫೩೪
ಶೀಖ— ಪಂಜಾಬ ೩೦೬೪೧೪೪ ವಾಯವ್ಯ ಸ. ಪ್ರಾಂತ ೪೨೫೧೦

ಟ್ರಾಯಬಲ ರಿಲಿಜನ್ಸ— ಬಂಗಾಲ ೫೨೮೦೩೭
ಮರಾಠಾ— ಮುಂಬೈ ಪ್ರಾಂತ ೬೬೬೪೫೬೦

## ಗಾಂಧೀಜಿಯವರ ಉಪದೇಶ.

ತಂದೆಯು ಅನ್ಯಾಯದಿಂದ ನಡೆದರೆ ಅತನ ಮನೆಯನ್ನು ಬಿಟ್ಟು ಹೋಗುವುದು ಮಗನ ಕರ್ತವ್ಯವಾಗಿದೆ. ಶಾಲೆಯ ಅಧ್ಯಾಪಕರು ಅನ್ಯಾಯವಾದ ರೀತಿಯಲ್ಲಿ ಶಾಲೆಯನ್ನು ನಡೆಯಿಸುತ್ತಿದ್ದರೆ ಆ ಶಾಲೆಗೆ ಬಹಿಷ್ಕಾರ ಹಾಕುವುದು ವಿದ್ಯಾರ್ಥಿಗಳ ಕರ್ತವ್ಯವು.

ಒಂದು ಸಂಸ್ಥೆಯ ಅಧ್ಯಕ್ಷರು ದುರಾಚಾರಿಯಾಗಿದ್ದರೆ ಆ ಸಂಸ್ಥೆಯ ಸದಸ್ಯರು ಅದನ್ನು ಬಿಟ್ಟು ಬಿಡುವುದು ನ್ಯಾಯವಾಗಿದೆ. ಅದೇ ಪ್ರಕಾರ ಸರಕಾರವು ಅನ್ಯಾಯದಿಂದ ನಡೆದರೆ ಪ್ರಜೆಗಳು ಅದರ ಸಂಬಂಧವನ್ನು ಬಿಟ್ಟು ಬಿಡುವುದು ವಿಹಿತವಾಗಿದೆ.

ಪ್ರತಿಯೊಂದು ಕಾರ್ಯದಲ್ಲಿಯೂ ಶಾರೀರಿಕ ಮತ್ತು ಮಾನಸಿಕ ಯಾತನೆ ಇದ್ದೇಇದೆ. ಯಾತನೆಯನ್ನು ಅನುಭವಿಸದೆ ಸ್ವಾತಂತ್ರ್ಯವು ಲಭಿಸುವದಿಲ್ಲ.

—ಯಂಗ್ ಇಂಡಿಯಾ. ತಾ. ೧೬-೬-೧೯೨೦

## ಬಂಗಾಲ ರಾಜಕೈದಿಗಳ ಬಿಡುಗಡೆ.

ಬಂಗಾಲ ಸರಕಾರದವರು ತಾ. ೧೮-೧೧-೩೭ ನೆಯ ದಿವಸ ಒಂದು ಪ್ರಕಟನೆಯನ್ನು ಹೊರಡಿಸಿ ಈ ಪ್ರಕಾರ ತಿಳಿಸಿದ್ದಾರೆ—

"೧೧೦೦ ಸ್ಥಾನಬದ್ಧ ರಾಜಕೈದಿಗಳನ್ನು ಕೂಡಲೆ ಬಿಡುಗಡೆಮಾಡಲಾಗುವುದು. ಮತ್ತು ೪೫೦ ರಾಜಕೈದಿಗಳ ಬಿಡುಗಡೆ ಸಂಬಂಧವಾಗಿ ಸರಕಾರವು ವಿಚಾರಮಾಡುತ್ತಾ ಇದೆ. ಸ್ಥಾನಬದ್ಧ ರಾಜಕೀಯ ಕೈದಿಗಳನ್ನು ಕಂಡು ಅವರ ಬಿಡುಗಡೆ ಸಂಬಂಧವಾಗಿ ವಿಚಾರಮಾಡಲು ಮಹಾತ್ಮಾ ಗಾಂಧಿಯವರಿಗೆ ಸರಕಾರವು ಶಕ್ಯವಿರುವ ಎಲ್ಲ ಸೌಲಭ್ಯಗಳನ್ನೂ ಒದಗಿಸಿಕೊಡುವುದು."

### ಗಾಂಧೀ - ಮಂತ್ರಿಮಂಡಲ ಒಪ್ಪಂದ.

ಮಹಾತ್ಮಾ ಗಾಂಧಿ ಮತ್ತು ಬಂಗಾಲ ಸರಕಾರದ ಮಂತ್ರಿಗಳಲ್ಲಿ ಈ ಕೆಳಗಿನ ಅಭಿಪ್ರಾಯದ ಒಪ್ಪಂದವಾಗಿದೆಯೆಂದು ತಿಳಿಯಲ್ಪಟ್ಟಿದೆ.

"(೧) ಸ್ಥಾನಬದ್ಧ ರಾಜಕೀಯ ಕೈದಿಗಳನ್ನು ಒಮ್ಮೆಲೆ ಅಥವಾ ಕ್ರಮವಾಗಿ ಬಿಡುಗಡೆ ಮಾಡುತ್ತಾ ಬರಬೇಕು.

(೨) ಗಾಂಧೀಜಿಯವರು ರಾಜಕೀಯ ಕೈದಿಗಳಿರುವ ಸ್ಥಳಗಳಿಗೆ ಹೋಗಿ ಅವರನ್ನು ಕಂಡು ಅವರ ಗುಣಾನುಸಾರ ಬಿಡುಗಡೆ ವಿಚಾರವಾಗಿ ತಮ್ಮ ಅಭಿಪ್ರಾಯವನ್ನು ತಿಳಿಸಬೇಕು.

(೩) ಎಲ್ಲ ರಾಜಕೀಯ ಕೈದಿಗಳ ಬಿಡುಗಡೆಯಾಗುವ ವರೆಗೆ ಗಾಂಧೀಜಿಯವರು ಬಂಗಾಲ ಪ್ರಾಂತದಲ್ಲಿ ಸಂಚರಿಸಿ ಅಹಿಂಸಾ ಪ್ರಚಾರ ಮಾಡುವರು. ಎಲ್ಲಿಯೂ ಅತ್ಯಾಚಾರ ನಡೆಯದಂತೆ ಗಾಂಧೀಜಿಯವರು ಬಂಗಾಲ ಸರಕಾರಕ್ಕೆ ಆಶ್ವಾಸನವನ್ನು ಕೊಟ್ಟಿದ್ದಾರೆ."

## ಪಟೇಲ-ನರಿಮನ್ ವ್ಯಾಜ್ಯ.

### ರಾಜಶಾಸನ ಪ್ರವೀಣರ ಅಭಿಪ್ರಾಯ.

ಸರದಾರ ಪಟೇಲರ ಹೇಳಿಕೆ ಪ್ರಕಾರ ವೀರನರಿಮನ್ನರು ೧೯೩೪ನೆಯ ಇಸವಿ ಚುನಾವಣೆಯಕಾಲಕ್ಕೆ ಅರ್ಜಿಯನ್ನು ಕೊಡದೆ ಕಾಂಗ್ರೆಸ್ಸಿನ ದ್ರೋಹಮಾಡಿದರೆಂದು ಅವರಮೇಲೆ ಮುಖ್ಯ ಅಕ್ಷೇಪಣೆಯಿದೆಯಷ್ಟೆ. ಹೀಗೆ ಅರ್ಜಿಯನ್ನು ಕೊಟ್ಟಿದ್ದರೆ ತಾನು ರಾಜಶಾಸನದಂತೆ ಅಪರಾಧಿಯಾಗುತ್ತಿದ್ದೆನೆಂದು ಶ್ರೀ. ನರಿಮನ್ನರು ಹೇಳಿದ್ದಾರೆ. ಈ ಸಂಬಂಧವಾಗಿ ಮುಂಬೈಯಿಯ ಸುಪ್ರಸಿದ್ಧ ರಾಜಶಾಸನ ಪ್ರವೀಣ ಬ್ಯಾರಿಸ್ಟರ ವೇಲಿನಕರರು ಹೀಗೆ ಅಭಿಪ್ರಾಯಪಟ್ಟಿದ್ದಾರೆಂದು ಪ್ರಕಟವಾಗಿದೆ—

"ಶ್ರೀ. ಬಹದ್ದೂರಜಿಯವರು ಈ ವಿಚಾರವಾಗಿ ಪಟ್ಟ ಅಭಿಪ್ರಾಯವು ಸರಿಯಾದುದಲ್ಲ. ಶ್ರೀ. ನರಿಮನ್ನರು ಪಿನಲಕೋಡ ೪೧೬,೧೮೨,೧೯೯,೨೦೦ ಈ ನಿಯಮಗಳ ಪ್ರಕಾರ ಅಪರಾಧಮಾಡಿದರೆಂದು ಇವರಮೇಲೆ ವ್ಯಾಜ್ಯಮಾಡಲು ಬರುತ್ತಿತ್ತು. ಇಷ್ಟೇ ಅಲ್ಲ; ಸರದಾರ ಪಟೇಲ ಮೊದಲಾದವರು ಈ ಅಪರಾಧಕ್ಕೆ ಸಹಾಯಕರಾಗಿದ್ದಾರೆಂದು ಅವರಮೇಲೆ ಕೂಡಾ ವ್ಯಾಜ್ಯಮಾಡಲು ಬರುತ್ತಿತ್ತು."

ಬ್ಯಾ. ವೇಲಿನಕರರ ಅಭಿಪ್ರಾಯ ಹೀಗಿದ್ದುದೇ ನಿಜವಾಗಿರುವ ಪಕ್ಷದಲ್ಲಿ ವೀರನರಿಮನ್ನರ ಅಪರಾಧದ ಒರೆತೂಕ ಕಡಿಮೆಯಾಗುವದಿಲ್ಲವೆ?

---

## ಸ್ವರಾಜ್ಯವೇ ? ಸೈತಾನಿ ರಾಜ್ಯವೇ ?

ಹಿಂದುಸ್ಥಾನಕ್ಕೆ ಸ್ವರಾಜ್ಯ ದೊರೆಯಬೇಕೆಂದು ಈ ದೇಶದ ಅನೇಕ ಪಕ್ಷಗಳು ಪ್ರಯತ್ನಿಸುತ್ತಲಿವೆಯಷ್ಟೆ. ಅವುಗಳಲ್ಲಿ "ವರ್ಣಾಶ್ರಮ ಸ್ವರಾಜ್ಯ ಸಂಘವು" ಒಂದಾಗಿದೆ. ಈ ಸಂಘದ ವಾರ್ಷಿಕ ಸಭೆಯು ಅಕೋಲಾ ಪಟ್ಟಣದಲ್ಲಿ ಮೊನ್ನೆ ಜರುಗಿತು. ನ್ಯಾಯಪರರಾದ ತ್ರಾವಣಕೋರದ ಮಹಾರಾಜರು ಆದಿಹಿಂದುಗಳಿಗೆ ದೇವಾಲಯ ಪ್ರವೇಶಕ್ಕೆ ಅವಕಾಶವನ್ನು ಕೊಟ್ಟು ಹಿಂದುಗಳ ಸಾಮಾಜಿಕ ಸ್ವಾತಂತ್ರ್ಯ ಸಂಸ್ಥಾಪಕರಾಗಿ ಸ್ವಾತಂತ್ರ್ಯ ಪ್ರೇಮಿಗಳಾದ ಸಕಲರಿಂದಲೂ ಶ್ಲಾಘಿಸಿಕೊಳ್ಳುತ್ತಿರುವಾಗ ಈ ವರ್ಣಾಶ್ರಮ ಸ್ವರಾಜ್ಯ ಸಂಘದ ಸಭೆಯಲ್ಲಿ ತ್ರಾವಣಕೋರ ಮಹಾರಾಜರನ್ನು ನಿಷೇಧಿಸಿದರು! ಎಂದಮೇಲೆ ಇವರು ಸ್ಥಾಪಿಸಬೇಕೆಂಬುದು ಸ್ವರಾಜ್ಯವೆ? ಅಥವಾ ಸೈತಾನಿ ರಾಜ್ಯವೆ? ಎಂಬ ಶಂಕೆಯುಂಟಾಗಲಾರದೆ?

ವರ್ಣವಾದಿಯಾದ ಪುಣೆಯ ಕೇಸರೀ ಪತ್ರಿಕೆಯೇ ಈ ಕೆಳಗಿನಂತೆ ಹೇಳಿದೆ—

"ವರ್ಣಾಶ್ರಮ ಸ್ವರಾಜ್ಯ ಸಂಘದ ಘಟನೆಯಲ್ಲಿ "ಸ್ವರಾಜ್ಯ" ಎಂಬ ಶಬ್ದವಿಲ್ಲದೆ ಹಿಂದಿನ ಶ್ರುತಿಸ್ಮೃತಿಗಳ ಚರ್ಚೆಯನ್ನು ನಡೆಯ್ಸಿಸುವುದೊಂದೇ ಇದ್ದಿದ್ದರೆ ನಾವು ಈ ವಿಷಯವನ್ನೇ ಪ್ರಸ್ತಾಪಿಸುತ್ತಿರಲಿಲ್ಲ. ಆದರೆ ಈ ಸಂಘವು ಸ್ವರಾಜ್ಯ ಪ್ರಾಪ್ತಿಗಾಗಿ ಪ್ರಯತ್ನಿಸುತ್ತಿರುವುದರಿಂದ ತ್ರಾವಣಕೋರ ಮಹಾರಾಜರ ಸಂಬಂಧವಾಗಿ ಮಾಡಿದ ಇದರ ನಿರ್ಣಯವು ಸ್ವರಾಜ್ಯಕ್ಕೆ ಮಾತ್ರವೇ ಅಲ್ಲ; ಹಿಂದು ಧರ್ಮಕ್ಕೂ ಬಾಧಕವಾದುದಾಗಿದೆ."

---

# ೧೯ ನೆಯ ಹಿಂದು ಮಹಾಸಭೆ.




### ಅಹಮ್ಮದಾಬಾದಿನಲ್ಲಿ ಸಿದ್ಧತೆ.

೧೯ ನೆಯ ಹಿಂದು ಮಹಾಸಭೆಯು ಬರುವ ಡಿಶಂಬರ್ ೩೦, ೩೧ ನೆಯ ಮತ್ತು ಜನವರಿ ೧ ನೆಯ ತಾರೀಖುಗಳಲ್ಲಿ ಅಹಮದಾಬಾದಿನಲ್ಲಿ ಜರುಗುವುದು ನಿಶ್ಚಯವಾಗಿದೆ. ಈಗಾಗಲೇ ಸ್ವಾಗತ ಸಂಘವು ಏರ್ಪಟ್ಟು ೨೦೦ ಜನ ಸದಸ್ಯರೂ ಆಗಿದ್ದಾರೆ.

ಸ್ವಾಗತ ಸಂಘಕ್ಕೆ ಶ್ರೀ. ಕೃಷ್ಣಲಾಲ ಕೃಪಾರಾಮ ಇವರು ಅಧ್ಯಕ್ಷರಾಗಿದ್ದಾರೆ. ಅಜಮೀರ, ದಿಲ್ಲಿ, ನಾಗಪುರ ಮೊದಲಾದ ಪ್ರಾಂತಿಕ ಹಿಂದು ಮಹಾಸಭೆಗಳಲ್ಲಿ ಈ ೧೯ ನೆಯ ಅಖಿಲಭಾರತ ಹಿಂದು ಮಹಾಸಭೆಗೆ ಬ್ಯಾರಿಸ್ಟರ್ ಸಾವರಕರರನ್ನೇ ಅಧ್ಯಕ್ಷರನ್ನಾಗಿ ಆರಿಸಿದ್ದಾರೆ ಈ ಸಾರೆಯ ಅಧಿವೇಶನಕ್ಕೆ ಬ್ಯಾ. ಸಾವರಕರರೇ ಅಧ್ಯಕ್ಷರಾಗುವುದು ಅತ್ಯವಶ್ಯಕವಾಗಿರುವುದರಿಂದ ಇವರನ್ನೇ ಗೊತ್ತುಮಾಡುವರೆಂದು ನಿರೀಕ್ಷಿಸಲಾಗಿದೆ.

### ಗೋರಕ್ಷಣೆಯ ಶಾಸನ.

ಮಹಾರಾಷ್ಟ್ರ ಗೋ ಸಂವರ್ಧನ ಪರಿಷತ್ತು ಕಳೆದ ೧೨ ನೇ ತಾರೀಖಿನ ದಿವಸ ಶ್ರೀ ಜಗದ್ಗುರು ಶಂಕರಾಚಾರ್ಯ ಡಾ. ಕುರ್ತಕೋಟಿಯವರ ಅಧ್ಯಕ್ಷತೆಯಲ್ಲಿ ಠಾಣೆ ಜಲ್ಲಾ ಬದಲಾಪುರ ಎಂಬಲ್ಲಿ ಕೂಡಿದ್ದಿತು. ಆಗ ಡಾ. ಕುರ್ತಕೋಟಿಯವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

“ಹಿಂದು ಸಂಸ್ಕೃತಿಯು ಯಾರ ದ್ವೇಷವನ್ನೂ ಮಾಡಲು ಹೇಳುವುದಿಲ್ಲ. ಅಥವಾ ನಮ್ಮ ಅಸ್ತಿತ್ವವನ್ನೇ ನಾಶಮಾಡುತ್ತಿರುವಾಗ ಅದನ್ನು ಉಪೇಕ್ಷಿಸಬೇಕೆಂಬುದಾಗಿಯೂ ತಿಳಿಸುವುದಿಲ್ಲ. ಸಾಮೋಪಚಾರದಿಂದ ದಾರಿಗೆ ಬಾರದಿದ್ದರೆ ದಂಡ ಮಾರ್ಗವನ್ನೂ ಅನುಸರಿಸಬೇಕೆಂದೇ ಅದು ಹೇಳುತ್ತದೆ.

ಗೋಶಾಲಾ ನಿಯಂತ್ರಣದ ಒಂದು ಗೊತ್ತುವಳಿಯು ಮುಂಬೈ ಸರಕಾರದಿಂದ ಅಸೆಂಬ್ಲಿಯಲ್ಲಿ ತರಲ್ಪಡುವದಿದೆಯಷ್ಟೆ. ಇದನ್ನು ಆಶ್ರಯಿಸಿ ಗೋರಕ್ಷಣೆಯನ್ನು ಮಾಡುತ್ತೇವೆಂಬುವವರ ಸ್ಥಿತಿಯು ಧಾನ್ಯದ ಆಶೆಗಾಗಿ ಬುಟ್ಟಿಯಲ್ಲಿ ಸೇರಿದ ಇಲಿಯು ಅಲ್ಲಿ ಹಾವನ್ನು ಕಂಡಂತೆಯೇ ಆಗುವುದರಲ್ಲಿ ಸಂದೇಹವಿಲ್ಲ. ಈ ಗೊತ್ತುವಳಿಯನ್ನು ನಿಷೇಧಿಸಲೇ ಬೇಕು

ನಾವು ಯಾವುದನ್ನು ನಿಷೇಧಿಸಬೇಕಾದರೂ ಅದರ ಹಿಂದೆ ಶಕ್ತಿಯಿರಬೇಕು. ಪ್ರಭಾವಶಾಲಿಯಾದ ಶಕ್ತಿಯ ವಿನಾ ನಿಷೇಧವು ಪರಿಣಾಮಕಾರಿಯಾಗುವುದಿಲ್ಲ. ಸ್ವಸಂಸ್ಕೃತಿಯ ಅಭಿಮಾನ ಮತ್ತು ಸಂಘಟನೆಗಳ ಬಲದಿಂದಲೇ ಹಿಂದುಗಳು ಇನ್ನುಮೇಲೆ ತಮ್ಮ ರಾಷ್ಟ್ರದಲ್ಲಿ ಜೀವಿಸಲು ಸಮರ್ಥರಾಗುವರು.”

(೧) ಅಸೆಂಬ್ಲಿಯಲ್ಲಿ ಬರಲಿರುವ ಗೋಶಾಲಾ ನಿಯಂತ್ರಣದ ಗೊತ್ತುವಳಿಯನ್ನು ಈ ಪರಿಷತ್ತು ತುಂಬಾ ನಿಷೇಧಿಸುತ್ತದೆ. ಇದರಿಂದ ಒಕ್ಕಲತನದ ಮತ್ತು ಪಶು ವೈದ್ಯ ಶಾಖೆಯವರಿಗೆ ಅನಿಯಂತ್ರಿತ ಅಧಿಕಾರ ದೊರೆತು ಗೋಶಾಲಾ ವ್ಯವಸ್ಥಾಪಕರ ಸ್ವಾಭಿಮಾನಕ್ಕೆ ಕೊರತೆಯುಂಟಾಗುವುದು.

(೨) ಹಿಂದುಸ್ಥಾನದಲ್ಲಿ ನಡೆದಿರುವ ಗೋ ಸಂಹಾರದಿಂದ ಹಿಂದುಗಳ ಧಾರ್ಮಿಕ ಭಾವನೆಗೆ ಬಲವಾದ ನೋವುಂಟಾಗುತ್ತಿರುವುದಲ್ಲದೆ ರಾಷ್ಟ್ರದ ಆರೋಗ್ಯ ಮತ್ತು ಒಕ್ಕಲತನಗಳಿಗೂ ಭಯಂಕರ ನಷ್ಟ ಸಂಭವಿಸುತ್ತಲಿದೆ. ಆದುದರಿಂದ ಗೋಸಂಹಾರ ಪ್ರತಿಬಂಧದ ಶಾಸನವನ್ನು ಜಾಗ್ರತೆ ಮಾಡಬೇಕೆಂದು ಪ್ರಾಂತಿಕ ಮತ್ತು ಹಿಂದುಸ್ಥಾನ ಸರಕಾರಗಳಲ್ಲಿ ಈ ಪರಿಷತ್ತು ಕೇಳಿಕೊಳ್ಳುತ್ತದೆ.

---

—ಅಹಮದಾಬಾದಿನಲ್ಲಿ ಅಖಿಲಭಾರತ ಹಿಂದು ಮಹಾಸಭೆಯ ಸ್ವಾಗತ ಸಂಘಾಧ್ಯಕ್ಷರಾದ ಸೇವಾನಿವೃತ್ತ ಸೆಶನ್ಸ ಜಜ್ಜ ಶ್ರೀ. ಕೃಷ್ಣಲಾಲರ ಅಧ್ಯಕ್ಷತೆಯಲ್ಲಿ ಸಭೆ ಕೂಡಿದ್ದಿತು. ಹಿಂದು ಮಹಾಸಭೆಯು ಸಂಪೂರ್ಣ ರಾಷ್ಟ್ರೀಯವಾದುದೆಂಬುದನ್ನು ಇವರು ತಮ್ಮ ಭಾಷಣದಲ್ಲಿ ಸ್ಪಷ್ಟೀಕರಿಸಿದರು.

—ಅಜಮೀರದಲ್ಲಿಯ ಹಿಂದು ಮತ್ತು ಮುಸಲ್ಮಾನ್ ಮುಖಂಡರನ್ನು ಅಲ್ಲಿಯ ಕಮಿಶನರು ಕರೆಯಿಸಿ ವಿಚಾರವಿನಿಮಯಮಾಡಿ ಉಭಯರ ಹಕ್ಕು ಬಾಧ್ಯತೆಗಳನ್ನು ಸಂರಕ್ಷಿಸುವ ಒಪ್ಪಂದವನ್ನು ಈ ಪ್ರಕಾರವಾಗಿ ಮಾಡಿಸಿದರು—“ಸಾಯಂಕಾಲದಲ್ಲಿ ಮುಸಲ್ಮಾನರ ಪ್ರಾರ್ಥನೆಯ ಕಾಲಕ್ಕೆ ಮಸೀದಿಯ ಮುಂದೆ ಹಿಂದುಗಳು ಮಂಜುಳವಾದ್ಯವನ್ನೇ ಬಾರಿಸಬೇಕು.”

—ನಾಗಪುರ ನಗರ ಹಿಂದು ಸಭೆಯವರು ಕಳೆದ ೩೧ ನೆಯ ತಾರೀಖಿನ ದಿವಸ ಚಾಂದ ಬಾ ಸಮಸೇರ ಬಾ ಪಠಾಣ ಎಂಬ ಜನ್ಮಜಾತ ಮುಸಲ್ಮಾನ್ ಗೃಹಸ್ಥರಿಗೆ ಶ್ರೀ. ಮಾಚವೆ ಎಂಬುವವರಿಂದ ಹಿಂದು ಧರ್ಮದ ದೀಕ್ಷೆಯನ್ನು ಕೊಡಿಸಿ ಅವರಿಗೆ ಠಾಕುರ ಚಂದ್ರಶೇಖರ ಎಂಬ ಹೆಸರನ್ನಿಟ್ಟರು.



ಶಾ. ಶ. ೧೮೫೯ ನೆಯ ಕಾರ್ತಿಕ ಬ|| ೫ ಸೋಮವಾರ.

# ಕಾಂಗ್ರೆಸ್ಸಿನಲ್ಲಿ ಹಿಂದು ಮಹಾಸಭೆ ಸೇರುವ ರೀತಿ.

ಬಿಜನೂರು ಉಪಚುನಾವಣೆಯಲ್ಲಿ ಮುಸ್ಲಿಂಲೀಗ್ ಸೋತು ಕಾಂಗ್ರೆಸ್ಸಿಗೆ ಪ್ರಚಂಡ ವಿಜಯ ದೊರೆತುದರಿಂದ ಕಾಂಗ್ರೆಸ್ಸಿನಲ್ಲಿ ಸೇರುವ ವಿಚಾರವಾಗಿ ರಾಷ್ಟ್ರದಲ್ಲಿ ಒಂದು ಹೊಸ ವಿಚಾರಸರಣಿಯು ಪ್ರಸಾರವಾಗುತ್ತಾ ಇದೆ. ಕಾಂಗ್ರೆಸ್ಸಿನಲ್ಲಿ ಸೇರಿಕೊಂಡೇ ನಮ್ಮ ನಮ್ಮ ಧಾರ್ಮಿಕ ಮತ್ತು ಸಾಂಸ್ಕೃತಿಕ ಹಕ್ಕು ಬಾಧ್ಯತೆಗಳನ್ನು ಸಂರಕ್ಷಿಸಿಕೊಳ್ಳಬಹುದೆಂದು ಕೆಲವರಿಗೆ ತೋರಲಾರಂಭವಾಗಿದೆ. ಅಂತೆಯೇ ಜಾತಿನಿಷ್ಠ ಹಿಂದು ಮತ್ತು ಮುಸಲ್ಮಾನರಲ್ಲಿ ಅನೇಕರು ಹಿಂದು ಮಹಾಸಭೆ ಮತ್ತು ಮುಸ್ಲಿಂಲೀಗ್ ಬಿಟ್ಟು ಕಾಂಗ್ರೆಸ್ಸಿನಲ್ಲಿ ಸೇರಿಕೊಳ್ಳಬೇಕೆಂದು ಯೋಚಿಸುತ್ತಿದ್ದಾರೆ

ಈ ವಿಚಾರವಾಗಿ ಶ್ರೀ. ಭಾಯಿ ಪರಮಾನಂದರವರು ತಾ. ೧೫-೧೧-೩೭ ನೆಯ 'ಹಿಂದು' ಪತ್ರಿಕೆಯಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸಿದ್ದಾರೆ. ಅದರ ಮುಖ್ಯಾಂಶ ಹೀಗಿದೆ—

"ಹಿಂದು ಮಹಾಸಭೆಯ ಶತ್ರುಗಳೂ ಅದರ ಮಿತ್ರರೂ ಈಗ ಹಿಂದು ಮಹಾ ಸಭೆಯು ಕಾಂಗ್ರೆಸ್ಸಿನಲ್ಲಿ ಅದೇಕೆ ಸೇರಿಕೊಳ್ಳಬಾರದೆಂದು ಯೋಚಿಸುತ್ತಿದ್ದಾರಷ್ಟೆ. ಹಿಂದು ಮಹಾ ಸಭೆಯು ಕಾಂಗ್ರೆಸ್ಸಿನಲ್ಲಿ ಸೇರಿದರೆ ಅದರ ಅಸ್ತಿತ್ವವೇ ನಷ್ಟವಾಗುವುದು. ಹೀಗಾಗುವುದು ರಾಷ್ಟ್ರಕ್ಕೆ ಹಿತಕರವಲ್ಲ. ಕಾಂಗ್ರೆಸ್ ಸ್ವರಾಜ್ಯ ಪ್ರಾಪ್ತಿಗಾಗಿಯೇ ಪ್ರಯತ್ನಿಸುವುದಾಗಿದೆ. ಹಿಂದು ಮಹಾಸಭೆಯಾದರೋ ಸ್ವರಾಜ್ಯ ಪ್ರಾಪ್ತಿ ಮತ್ತು ಅನಂತರ ಅದರ ಸಂರಕ್ಷಣೆಗಳಿಗಾಗಿ ಪ್ರಯತ್ನಿಸುವುದಾಗಿದೆ.

ಹಿಂದುಸ್ಥಾನದಲ್ಲಿ ಹಿಂದು ಜನಾಂಗವೊಂದೇ ಇಲ್ಲ. ಬೇರೆ ಪ್ರಬಲ ಜನಾಂಗವೂ ಇದೆ. ಆದಕಾರಣ ಹಿಂದು ಸಂಘಟನೆಯು ವಿನಾ ಸ್ವರಾಜ್ಯ ಸಂರಕ್ಷಣೆಯಾಗುವುದಿಲ್ಲ.

ಕಾಂಗ್ರೆಸ್ಸಿನ ರಾಜಕೀಯ ಧೋರಣವು ಜಾತಿ ನಿರ್ಣಯದ ವಿರೋಧಕ್ಕೆ ಪ್ರತಿಕೂಲವಾಗಿದೆ. ಆದಕಾರಣ ಹಿಂದು ಮಹಾಸಭೆಯ ಅವಶ್ಯಕತೆಯಿದೆ ರಾಷ್ಟ್ರೋನ್ನತಿಗೆ ಅಗತ್ಯವಾಗಿರತಕ್ಕ ಕಾರ್ಯಗಳಲ್ಲಿ ಕಾಂಗ್ರೆಸ್ಸಿಗೆ ಹಿಂದು ಮಹಾಸಭೆಯು ಸಹಕಾರವನ್ನು ಮಾಡುತ್ತಲೇ ಬಂದಂತೆ ಇನ್ನು ಮೇಲಾದರೂ ಮಾಡುತ್ತದೆ."

ಭಾಯೀಜಿಯವರ ಈ ಅಭಿಪ್ರಾಯವು ನಮಗೆ ಸರಿತೋರುವುದಿಲ್ಲ. ಹಿಂದು ಮಹಾಸಭೆಯು ಕಾಂಗ್ರೆಸ್ಸಿನಲ್ಲಿ ಕೂಡುವುದೆಂದರೆ ಹಿಂದುಸಂಘಟನೆಯ ಕಾರ್ಯವನ್ನು ನಿಲ್ಲಿಸುವುದಲ್ಲ. ಕಾಂಗ್ರೆಸ್ ಸಂಸ್ಥೆಯು ಮುಖ್ಯವಾಗಿ ರಾಜಕೀಯ ಸಂಸ್ಥೆಯು. ಹಿಂದು ಮಹಾ ಸಭೆಯಾದರೋ ಮುಖ್ಯವಾಗಿ ಧಾರ್ಮಿಕ ಸಂಸ್ಥೆಯು. ಎಂದಮೇಲೆ ಕಾಂಗ್ರೆಸ್ಸಿನಲ್ಲಿ ಹಿಂದು ಮಹಾಸಭೆಯು ಸೇರುವುದೆಂದರೇನು ? ಅದರ ರೀತಿ ಯಾವುದು ?

ಹಿಂದು ಮಹಾಸಭೆಯು ರಾಜಕೀಯ ವಿಷಯದಲ್ಲಿ ಪ್ರತ್ಯೇಕವಾದ ರೀತಿನೀತಿಗಳನ್ನಿಟ್ಟುಕೊಂಡು ಪ್ರಯತ್ನಿಸದಿರುವುದೇ ಅದು ಕಾಂಗ್ರೆಸ್ಸಿನಲ್ಲಿ ಸೇರುವ ರೀತಿಯೆಂದು ನಮಗೆ ತೋರುತ್ತದೆ. ಹಿಂದು ಮಹಾ ಸಭೆಯು ಕಾಂಗ್ರೆಸ್ಸಿನಲ್ಲಿ ಸೇರಬೇಕೆಂದು ಹೇಳುವ ಅನೇಕರ ಅಭಿಪ್ರಾಯವು ಈ ಪ್ರಕಾರವಾಗಿರಬಹುದೇ ವಿನಾ ಹಿಂದುಗಳ ಧಾರ್ಮಿಕ ಮತ್ತು ಸಾಮಾಜಿಕ ಕುಂದುಕೊರತೆಗಳನ್ನೂ ನಾನಾ ದೋಷಗಳನ್ನೂ ತೆಗೆದುಹಾಕಿ ಹಿಂದು ಜನಾಂಗವು ಬಲಶಾಲಿಯಾಗುವಂತೆ ಪ್ರಯತ್ನಿಸಲು ಹಿಂದು ಮಹಾಸಭೆಯು ಇರಕೂಡದೆಂಬುದೇನೂ ಅವರ ಹೇಳಿಕೆಯಲ್ಲ.

ಹಿಂದು ಮಹಾಸಭೆಯವರಾದರೂ ಹಿಂದುಸ್ಥಾನಕ್ಕೆ ಸ್ವಾತಂತ್ರ್ಯವು ಬೇಕೇಬೇಕೆಂದು ಹೇಳುವರಷ್ಟೆ. ಅದನ್ನು ಅಹಿಂಸಾ ಮಾರ್ಗದಿಂದಲೇ ಹೊಂದಬೇಕೆಂಬುದೂ ಅವರ ಉದ್ದೇಶವಲ್ಲವೆ? ಇವರು ಇಚ್ಛಿಸುವ ಸ್ವರಾಜ್ಯವು ಹಿಂದು ಜಾತಿಯವರಿಗೆ ಮಾತ್ರವೇ ಸಂಬಂಧಪಟ್ಟಿಲ್ಲವಷ್ಟೆ. ಎಂದಮೇಲೆ ರಾಜಕಾರಣದಲ್ಲಿ ಕಾಂಗ್ರೆಸ್ಸಿನೊಂದಿಗೇನೇ ಹಿಂದು ಮಹಾಸಭೆಯವರು ಅದೇಕೆ ಕೂಡಿರಬಾರದು ?

ಕಾಂಗ್ರೆಸ್ ಜಾತಿನಿರ್ಣಯವನ್ನು ವಿರೋಧಿಸುವುದಿಲ್ಲವೆಂದು ಈಗಲೂ ಹೇಳುವುದರಲ್ಲಿ ಅರ್ಥವಿಲ್ಲ. ಇದರ ಮೊದಲಿನ ಧೋರಣವು ಈಗಲೂ ಇದೆಯೆಂದು ಹೇಳಲಿಕ್ಕಾಗುವುದಿಲ್ಲ. ಕಾಂಗ್ರೆಸ್ಸಿನಲ್ಲಿ ಕೂಡಾ ಭಿನ್ನಾಭಿಪ್ರಾಯದ ಪಕ್ಷಗಳಿಲ್ಲವೆ? ಕಾಂಗ್ರೆಸ್ ಸಮತಾವಾದಿಗಳು ಆರ್ಥಿಕ ಸಮಾನತೆಯನ್ನು ಕುರಿತು ಒಂದು ವಿಶಿಷ್ಟ ಪದ್ಧತಿಯುಳ್ಳವರಾಗಿದ್ದರೂ ಕಾಂಗ್ರೆಸ್ಸಿನಲ್ಲಿ ಕೂಡಿಲ್ಲವೆ? ಲೋಕನಾಯಕ ಅಣೆಯವರ ರಾಷ್ಟ್ರೀಯ ಪಕ್ಷವು ಕಾಂಗ್ರೆಸ್ಸಿನಲ್ಲಿ ಸೇರಿಕೊಂಡೇ ಹಿಂದುಸಂಸ್ಕೃತಿಯ ಸಂರಕ್ಷಣೆಯ ವಿಷಯದಲ್ಲಿ ಸ್ವತಂತ್ರ ವಿಚಾರಸರಣಿಯುಳ್ಳದ್ದಾಗಿಲ್ಲವೆ?

ಅದೇ ಪ್ರಕಾರ ಹಿಂದು ಮಹಾ ಸಭೆಯಲ್ಲಿರುವವರು ಕೂಡಾ ರಾಜಕೀಯ ಬೇರೆ ಪಕ್ಷವನ್ನಿಟ್ಟುಕೊಳ್ಳದೆ ಕಾಂಗ್ರೆಸ್ಸಿನಲ್ಲಿಯೇ ಅದೇಕೆ ಸೇರಬಾರದು? ಹಿಂದು ಮಹಾಸಭೆಯಲ್ಲಿ ಹಿಂದುಗಳ ಧಾರ್ಮಿಕ ಮತ್ತು ಸಾಮಾಜಿಕ ಸುಧಾರಣೆಯ ಸಂಗತಿಗಳನ್ನೇ ಇಟ್ಟುಕೊಂಡು ತಮ್ಮ ಶಕ್ತಿಸಾಹಸಗಳನ್ನೆಲ್ಲಾ ಹಿಂದುಸಂಘಟನೆಗಾಗಿಯೇ ಅದೇಕೆ ವಿನಿಯೋಗಿಸಕೂಡದು?

ಲೋಕಶಾಹಿ ಸ್ವರಾಜ್ಯ ಪಕ್ಷ ಮತ್ತು ಹಿಂದು ಮಹಾಸಭಾ ಪಕ್ಷ ಇವೆರಡೂ ಕಾಂಗ್ರೆಸ್ ರಾಷ್ಟ್ರೀಯ ಪಕ್ಷದಂತೆಯೇ ಹಿಂದು ಸಂಸ್ಕೃತಿ ಸಂರಕ್ಷಣೆಯ ವಿಷಯದಲ್ಲಿ ಲಕ್ಷ್ಯಸತಕ್ಕವುಗಳಾಗಿವೆ. ಆದಕಾರಣ ಸಂಘಟನೆಯನ್ನಿಚ್ಛಿಸುವ ಈ ಪಕ್ಷಗಳು ವಿಘಟನೆಗೆ ಅವಕಾಶಕೊಡದೆ ಕಾಂಗ್ರೆಸ್ಸಿನಲ್ಲಿಯೇ ಸೇರಿ ರಾಜಕೀಯ ಪ್ರಯತ್ನವನ್ನು ಏಕಮುಖವಾಗಿ ಮಾಡಬೇಕು. ಇದೇ ಕಾಂಗ್ರೆಸ್ಸಿನಲ್ಲಿ ಹಿಂದು ಮಹಾಸಭೆಯು ಸೇರುವ ರೀತಿಯು. ಹಿಂದು ಮಹಾಸಭೆ

# ಕಾಂಗ್ರೆಸ್ ಕಮಿಟಿ-ಗಾಂಧೀಜಿಯವರ ಆಕ್ಷೇಪಣೆ.




ಮಹಾತ್ಮಾ ಗಾಂಧಿಯವರು ಮೊನ್ನೆ ಕಲಕತ್ತಾ ಪಟ್ಟಣದಲ್ಲಿ ಕೂಡಿದ್ದ ಆಲ್ ಇಂಡಿಯಾ ಕಾಂಗ್ರೆಸ್ ಕಮಿಟಿಯಲ್ಲಾದ ಕಾರ್ಯಕಲಾಪಗಳನ್ನು ಕುರಿತು "ಹರಿಜನ" ಪತ್ರಿಕೆಯಲ್ಲಿ ಒಂದು ಮಹತ್ವದ ಲೇಖನವನ್ನು ಬರೆದಿದ್ದಾರೆ. ಆದರ ಮುಖ್ಯಾಂಶ ಹೀಗಿದೆ—

"(೧) ಮಂತ್ರಿಗಳು ತಮ್ಮ ಮತದಾರರಿಗೆ ವ್ಯಕ್ತಿಶಃ ಹೊಣೆಗಾರರು. ಆದಕಾರಣ ಅವರ ವಿಶ್ವಾಸ ತಪ್ಪಿದರೆ ಮಂತ್ರಿಗಳು ಕೆಲಸದಿಂದ ನಿವೃತ್ತರಾಗಬೇಕು.

(೨) ಸಾಮುದಾಯಕವಾಗಿ ಮಂತ್ರಿಮಂಡಲವು ಅಸೆಂಬ್ಲಿಗೆ ಹೊಣೆಗಾರಿಕೆಯುಳ್ಳದ್ದಾಗಿದೆ. ಆದಕಾರಣ ಅದರ ವಿಶ್ವಾಸವಿಲ್ಲದಿದ್ದರೂ ಸಾಮುದಾಯಕವಾಗಿ ಮಂತ್ರಿಮಂಡಲವು ಕಾರ್ಯದಿಂದ ನಿವೃತ್ತವಾಗಬೇಕು.

(೩-೪) ಮಂತ್ರಿಮಂಡಲವು ಪ್ರಾಂತಿಕ ಕಾಂಗ್ರೆಸ್ ಕಮಿಟಿ ಮತ್ತು ಆಲ್ ಇಂಡಿಯಾ ಕಾಂಗ್ರೆಸ್ ಕಮಿಟಿ ಇವುಗಳಿಗೆ ಕೂಡ ಹೊಣೆಗಾರಿಕೆಯುಳ್ಳದ್ದಾಗಿದೆ. ಈ ಪ್ರಕಾರ ಮಂತ್ರಿಮಂಡಲದ ಹೊಣೆಗಾರಿಕೆಯು ಚತುರ್ವಿಧವಾದುದು.

## ಟೀಕೆಯು ಆಕ್ಷೇಪಕರವಾದುದು.

ಮದ್ರಾಸ್ ಸರಕಾರದ ಸಂಬಂಧವಾಗಿ ಆಲ್ ಇಂಡಿಯಾ ಕಾಂಗ್ರೆಸ್ ಕಮಿಟಿಯಲ್ಲಿ ನಡೆದ ಟೀಕೆಯು ಆಕ್ಷೇಪಕರವಾದುದು. ಸತ್ಯ ಮತ್ತು ಅಹಿಂಸೆಗಳ ತತ್ವಕ್ಕೆ ವಿರೋಧವಾಗಿಯೇ ಟೀಕೆಗಳು ನಡೆದವು. ಇದು ಯೋಗ್ಯವಲ್ಲ. ಆ ಟೀಕೆಗಳಂತೆ ಕಮಿಟಿಯು ವರ್ತಿಸಿದ್ದರೆ ಮದ್ರಾಸ ಸರಕಾರದ ಮಂತ್ರಿಮಂಡಲವು ತನ್ನ ಕಾರ್ಯದಿಂದ ನಿವೃತ್ತವಾಗಬೇಕಾಗುತ್ತಿದ್ದಿತು.

## ನಾನು ಮೈಸೂರಿನ ವಕೀಲಿ ಪತ್ರ ಹಿಡಿದಿಲ್ಲ.

ಮೈಸೂರಿನ ದಬ್ಬಾಳಿಕೆಯ ವಿಚಾರವಾಗಿ ತೀರ್ಮಾನವಾದುದಂತೂ ನಿಯಮಬಾಹ್ಯವಾದುದು. ಅದನ್ನು ಯಾರೂ ವಿರೋಧಿಸದಿದ್ದುದು ಆಶ್ಚರ್ಯಕರ. ಸಂಸ್ಥಾನಗಳ ವಿಷಯದಲ್ಲಿ ಕಾಂಗ್ರೆಸ್ ತಟಸ್ಥವಾಗಿರಬೇಕಾದ ನಿಯಮಕ್ಕೆ ಬದ್ಧವಾಗಿದೆ. ಹೀಗಿರುವಾಗ ಇಂಥ ನಿರ್ಣಯವಾದುದು ತುಂಬಾ ಅನುಚಿತವು. ಅಲ್ಲಿ ನಡೆದ ಭಾಷಣಗಳು ಭಾವನಾಪ್ರಧಾನವಾದವುಗಳು. ಈ ಸಂಭಂಧವಾದ ಸಂಗತಿಗಳನ್ನು ತಿಳಿದುಕೊಳ್ಳಲು ಒಂದು ಸಮಿತಿಯು ಏರ್ಪಟ್ಟು ಅನಂತರ ಯೋಚಿಸಬೇಕಾದುದೇ ನ್ಯಾಯವಾಗಿದ್ದಿತು."

## ಸ್ಥಾನಬದ್ಧ ಕೈದಿಗಳ ಬಿಡುಗಡೆ.

ಮಹಾತ್ಮಾ ಗಾಂಧಿಯವರ ಪ್ರಯತ್ನ ವಿಶೇಷದಿಂದಲೂ ಬಂಗಾಲ ಸರಕಾರದ ಸಹಾನುಭೂತಿಯಿಂದಲೂ ಬಂಗಾಲದ ೧೧೦೦ ಸ್ಥಾನಬದ್ಧ ರಾಜಕೀಯ ಕೈದಿಗಳ ಬಿಡುಗಡೆಯಾಯಿತು. ಇದರಿಂದ ಬಂಗಾಲದಲ್ಲಿ ಸಕಲರೂ ಸಂತೋಷವನ್ನು ಪ್ರದರ್ಶಿಸುತ್ತಿದ್ದಾರೆ. ಡಾ. ರವೀಂದ್ರನಾಥ ಟಾಗೋರರವರು ಗಾಂಧೀಜಿಯವರಿಗೂ ಬಂಗಾಲ ಸರಕಾರಕ್ಕೂ ಧನ್ಯವಾದಗಳನ್ನು ಅರ್ಪಿಸಿದ್ದಾರೆ.

ಉಳಿದ ರಾಜಕೀಯ ಕೈದಿಗಳನ್ನೂ ಇಷ್ಟರಲ್ಲೇ ಬಿಡುಗಡೆ ಮಾಡಿ ಸರಕಾರವು ಸಂಪೂರ್ಣವಾಗಿ ಜನರ ಅಭಿನಂದನೆಗೆ ಪಾತ್ರವಾಗಲಿ. ಈ ಸ್ಥಾನಬದ್ಧ ಕೈದಿಗಳ ಬಿಡುಗಡೆಯು ಗಾಂಧೀಜಿಯವರ ಒಂದು ವಿಜಯವೇ ಸರಿ.

## ಅಹಮುದಾಬಾದಿನಲ್ಲಿ ಅಸಂತೋಷ.

ಅಹಮುದಾಬಾದಿನಲ್ಲಿ ೩೧ ಗಿರಣಿಗಳು ನಿಂತುಹೋಗಿವೆ. ಸಾವಿರಾರು ಕೂಲಿಕಾರರು ಕಟ್ಟುಮಾಡಿ ಕೆಲಸವಿಲ್ಲದೆ ಬಳಲುತ್ತಿದ್ದಾರೆ. ಇದರಿಂದ ಅಲ್ಲಿಯ ಸ್ಥಿತಿಯು ಭೀಕರವಾಗಬಹುದೆಂದು ೧೪೪ ನೆಯ ನಿಯಮವನ್ನು ಆಚರಣೆಯಲ್ಲಿ ತಂದಿದ್ದಾರೆ.

ಸೊಲ್ಲಾಪುರ ಮತ್ತು ಅಹಮುದಾಬಾದಗಳಲ್ಲಿ ಇಂಥ ಸ್ಥಿತಿಯನ್ನುಂಟುಮಾಡಿದುದು ಅನುಚಿತವೆಂದು ಗಾಂಧೀಜಿಯವರು ಚಟುವಟಿಕೆಗಾರರ ರೀತಿಯನ್ನು ಖಂಡಿಸಿದ್ದಾರೆ.

ಸೊಲ್ಲಾಪುರದಲ್ಲಿಯೂ ೧೪೪ ನೆಯ ನಿಯಮವನ್ನು ಆಚರಣೆಯಲ್ಲಿ ತರುವಂತಾಗಿದೆ.

---

ಯಲ್ಲಾದರೋ ಹಿಂದು ಜಾತಿಯ ಧಾರ್ಮಿಕ ಮತ್ತು ಸಾಮಾಜಿಕ ಸುಧಾರಣೆಯ ಪ್ರಶ್ನೆಗಳು ಚರ್ಚಿಸಲ್ಪಟ್ಟು ಅವು ಕಾರ್ಯರೂಪದಲ್ಲಿ ಬರುವಂತಾಗಬೇಕು.

ಹೀಗಾದರೆ ಈಗಿನ ಹಿಂದು ಮಹಾಸಭೆಯವರು ಭಾಯೀಜಿಯವರ ಇಷ್ಟದಂತೆ ಸ್ವರಾಜ್ಯ ಸಂಪಾದನೆಗೂ ಸಂರಕ್ಷಣೆಗೂ ಹಿಂದುಗಳು ಸಮರ್ಥರಾಗುವಂತೆಯೇ ಪ್ರಯತ್ನಿಸಿದಂತಾಗುವುದಿಲ್ಲವೆ?

# ಮುಕ್ತಿಯ ಮರ್ಮವ ಕೇಳಿರಿ.



## ಸತ್ತಬಳಿಕ ಅದೆಲ್ಲಿಯ ಮುಕ್ತಿ?

ಮನುಷ್ಯನು ತಾನು ಜೀವಿಸಿರುವ ವರೆಗೂ ಸುಖಶಾಂತಿಗಳಿಂದಿರಬೇಕೆಂದಿಚ್ಛಿಸುವುದಲ್ಲದೆ ಈ ದೇಹವನ್ನು ಬಿಟ್ಟನಂತರ ಕೂಡಾ ತಾನು ಲೋಕಾಂತರಗಳಲ್ಲಿ ಇರುತ್ತೇನೆಂತಲೂ ನಂಬಿ ಅಲ್ಲಿಯು ಕೂಡಾ ತನಗೆ ಇಚ್ಛಿತ ಸುಖಸೌಲಭ್ಯಗಳು ದೊರೆಯಬೇಕೆಂತಲೂ ಅಪೇಕ್ಷಿಸುತ್ತಿದ್ದಾನೆ.

ಸತ್ತಮೇಲೆ ಲೋಕಾಂತರಗಳಲ್ಲಿ ನಾನಾ ಸುಖೋಪಭೋಗಗಳನ್ನು ಅನುಭವಿಸಬೇಕೆಂಬ ಇಚ್ಛೆಯಿಂದ ಬದುಕಿರುವಾಗ ಅನೇಕ ಯಜ್ಞಯಾಗ, ವ್ರತೋಪವಾಸ, ಪೂಜೆ, ಜಪತಪಗಳನ್ನು ಮಾಡುವವರಿದ್ದಾರಷ್ಟೆ. ಈ ಸಂಬಂಧವಾಗಿ ಒಂದುದಿನ ಶಿವಾನುಭವ ಮಂಟಪದಲ್ಲಿ ಶ್ರೀ. ಪ್ರಭುದೇವರು ಹೀಗೆ ಪ್ರತಿಪಾದಿಸಿದರು—

> ಸತ್ತಬಳಿಕ ಮುಕ್ತಿಯ ಹಡದಿಹೆನೆಂದು ಪೂಜಿಸಹೋದರೆ ಆ ದೇವರೇನ ಕೊಡುವರೋ? ಸಾಯದೆ, ನೋಯದೆ, ಸ್ವತಂತ್ರನಾಗಿ ಸಂದು ಭೇದವಿಲ್ಲದಿರ್ದ ಗುಹೇಶ್ವರ ನಿಮ್ಮ ಶರಣ.

ಸತ್ತಮೇಲೆ ಮುಕ್ತಿಯನ್ನು ಹೊಂದಬೇಕೆಂದು ದೇವರ ಪೂಜೆಯನ್ನು ಮಾಡಿದರೆ ಆ ದೇವರು ಕೊಡುವುದೇನು? ಮುಕ್ತಿಯನ್ನು ಕೊಡುತ್ತಾನೆಯೇ? ಮುಕ್ತಿಯೆಂಬುದೊಂದು ಲೋಕವುಂಟೆ? ಸತ್ತಮೇಲೆ ಅಲ್ಲಿಗೆ ದೇವರು ಕಳಿಸುತ್ತಾನೆಯೇ? ಅದಕ್ಕೆ ಸ್ವರ್ಗವೆಂದು ಹೇಳುವರೆ? ಇಲ್ಲ. ಇಲ್ಲ.

ಬಸವಣ್ಣನು ಸಾರಿಸಾರಿ ಹೇಳುತ್ತಿರುವುದೇನು? "ಸ್ವರ್ಗಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ" ಈ ಲೋಕದಲ್ಲಿಯೇ ಅನಂತ ಲೋಕಗಳು. ಸದ್ಗುಣ ಸದಾಚಾರ ಸದ್ಭಾವಗಳುಳ್ಳವನಾಗಿದ್ದರೆ ಆತನಿಗೆ ಇದೇ ಸ್ವರ್ಗಲೋಕ. ಇಲ್ಲಿಯೇ ಆತನಿಗೆ ಜೀವಿಸಿರುವಾಗಲೇ ಮುಕ್ತಿ. ದುರ್ಗುಣ ದುರಾಚಾರ ದುರ್ಭಾವಗಳುಳ್ಳವನಾಗಿದ್ದರೆ ಈ ಲೋಕವೇ ಆತನಿಗೆ ನರಕ ಲೋಕ. ಜೀವಿಸಿರುವಾಗಲೇ ಆತನು ಅನೇಕ ಯಾತನೆಗಳನ್ನು ಅನುಭವಿಸಬೇಕಾಗುತ್ತದೆ.

ಆದುದರಿಂದ ಮುಕ್ತಿಯನ್ನು ಹೊಂದಬೇಕೆಂದು ಸಲ್ಲದ ಜಪತಪ ವ್ರತಗಳನ್ನಾಚರಿಸಿ ನೋಯಬೇಡಿರಿ. ಯಜ್ಞಯಾಗಗಳ ಮೂಲಕ ಪ್ರಾಣಿಗಳನ್ನು ನೋಯಿಸುವ ಪಾಪಾಚರಣೆಗಳನ್ನು ಆಚರಿಸಬೇಡಿರಿ. ತನು ಮನ ಬಳಲುವ ಕಠೋರ ವ್ರತೋಪವಾಸಗಳಿಂದ ಮುಕ್ತಿಯು ದೊರೆಯುವುದೆ? ದೊರೆಯಲು ಅದೇನು ನಿಮ್ಮನ್ನು ಬಿಟ್ಟು ಅನ್ಯ ಕಡೆಗಿದೆಯೆ?

ನೀವು ಸ್ವತಂತ್ರರಾಗಿರಿ. ಸ್ವಾತಂತ್ರ್ಯವೇ ಮುಕ್ತಿ. ಪಾರತಂತ್ರ್ಯವೇ ನರಕ. ಯಾರು ವಿಷಯಗಳ ಅಧೀನರಾಗಿದ್ದಾರೆಯೋ ಅವರೇ ಪರತಂತ್ರರು. ಯಾರು ವಿಷಯಗಳನ್ನು ತಮ್ಮ ಅಧೀನ ಮಾಡಿಕೊಂಡಿದ್ದಾರೆಯೋ ಅವರೇ ಸ್ವತಂತ್ರರು. ವಸ್ತುಸಂಗ್ರಹಾಪೇಕ್ಷೆ (ಹೊನ್ನು) ವಿಷಯ ಭೋಗಾಪೇಕ್ಷೆ (ಹೆಣ್ಣು) ದೇಹದ ಮೇಲಿನ ಮಮತೆ (ಮಣ್ಣು) ಇವುಗಳನ್ನು ಯಾರು ತೊರೆದು ಲೋಕಸೇವೆಗಾಗಿಯೇ ಸರ್ವವನ್ನು ಅರ್ಪಿಸುತ್ತಾರೆಯೋ ಅಂತಹ ಶಿವಶರಣರಿಗೂ ಶಿವನಿಗೂ ಸಂದುಭೇದವಿಲ್ಲದ ಸಂಬಂಧವಿರುತ್ತದೆ. ಅಂಥವರ ಕಾಯವೇ ಕೈಲಾಸ. ಅವರ ಅಂಗಳವೇ ವಾರಣಾಸಿ. ಮುಕ್ತಿಯ ಈ ಮರ್ಮವನ್ನು ಅರಿತು ಲೋಕೋಪಕಾರಾರ್ಥವಾಗಿ ತನು ಮನ ಧನಗಳನ್ನು ಸವಿಸದೆ ಸತ್ತಮೇಲೆ ಸ್ವರ್ಗವನ್ನು ಹೊಂದುವ ಹಂಬಲವೇಕೆ?

ಅಣ್ಣ ಬಸವಣ್ಣನು ಹೇಳಿರುವುದೇನು?

> ಸ್ವರ್ಗಲೋಕ ಮರ್ತ್ಯಲೋಕವೆಂಬ ಸೀಮೆಯುಳ್ಳನ್ನಕ್ಕ ಕೇವಲ ಶರಣನಾಗಲರಿಯ. ಸತ್ತು ಬೆರಸಿಹನೆಂದರೆ ಕಬ್ಬಿನ ತುದಿಯ ಮೆಲಿದಂತೆ ಕೂಡಲ ಸಂಗಮದೇವ.

ಸ್ವರ್ಗವು ಸತ್ತಮೇಲೆ ದೊರೆಯುವುದಲ್ಲ. ಕಬ್ಬಿನ ಬುಡವನ್ನು ಬಿಟ್ಟು ತುದಿಯ ತಿಂದವರುಂಟೆ? ಬದುಕಿರುವಾಗಲೇ ಲೋಕೋಪಕಾರಕ್ಕೆ ತನು ಮನ ಧನಗಳನ್ನು ಅರ್ಪಿಸುವ ಶಿವಾರ್ಪಣಯೋಗದಂತೆ ನಡೆಯುವುದೇ ಮುಕ್ತಿಯನ್ನು ಹೊಂದುವ ರೀತಿ. ಸತ್ತಬಳಿಕ ಮುಕ್ತಿಯುಪಡೆಯಬೇಕೆಂಬ ಭ್ರಮೆಯೇಕೆ?

## ಸ್ತುತ್ಯ ಪ್ರಯತ್ನ.

ರಾಯಚೂರು ಜಿಲ್ಲಾದಲ್ಲಿ ಕೆಲವು ಭಾಗಗಳಲ್ಲಿ ರಡ್ಡಿ ಜನರು ಸ್ವಲ್ಪ ದಿವಸಗಳ ಹಿಂದೆ ಲಿಂಗಧಾರಣ ಶಿವದೀಕ್ಷೆ ಸಂಸ್ಕಾರಗಳನ್ನು ಪಡೆದರು. ಸಹಭೋಜನದ ಗೊಂದಲವು ಬಹಳವಿದ್ದಿತು. ತಾಲೂಕು ಮಾನ್ವಿಯಲ್ಲಿ ಲಿಂಗಧಾರಣವಾದ ರಡ್ಡಿ ಜನರ ಸಂಗಡ ಸಹಭೋಜನವಾಗಿದ್ದಿಲ್ಲ. ಮೊನ್ನೆ ಕಂಬಳಿ ಮಠದ ಶ್ರೀ ಅಮರಯ್ಯನವರು ಸ್ವತಃ ತಮ್ಮ ಶಿಷ್ಯಮಂಡಳಿಯೊಡನೆ ಸಹಭೋಜನಮಾಡಿದರು. ಇದು ಸ್ತುತ್ಯವಾದ ವಿಷಯವೇ ಸರಿ. ಸಹಭೋಜನದ ವಿಷಯವಾಗಿ ಶ್ರೀ. ವಕೀಲ ಶಂಕ್ರಪ್ಪ ಮುಂತಾದ ವೀರಶೈವ ಪ್ರಮುಖರು ಶ್ರೀಗಳವರಿಗೆ ಬೆಂಬಲವಿತ್ತುದಕ್ಕಾಗಿ ನನ್ನ ಅನಂತ ವಂದನೆಗಳು. ಮಾಡ್ಗಿರಿ ರಡ್ಡಿ ಜನರು ಲಿಂಗಧಾರಣವಾದ ಮರುದಿವಸವೇ ಶ್ರೀ. ಮಾಚಣರ ಪೊ. ಪಾಟೀಲ ಬಸವನಗೌಡರು ಶ್ರೀ. ಸಂಗಯ್ಯನವರ ಮನೆಯಲ್ಲಿ ಲಗ್ನ ಸಮಾರಂಭದಲ್ಲಿ ಭೋಜನಶಾಲೆಯ ವ್ಯವಸ್ಥೆಯು ಅದೇ ರಡ್ಡಿ ಜನರಿಗೆ ಎಷ್ಟು ವಿಘ್ನಗಳು ಬಂದಾಗ್ಯೂ ಒಪ್ಪಿಸಿಬಿಟ್ಟಿದ್ದರು. ಶ್ರೀ. ನೀರಮಾನ್ವಿ ಹಂಪನಗೌಡರು ಹರ್ವಿಯಲ್ಲಿ ರಡ್ಡಿ ಜನರಿಗೆ ಲಿಂಗಧಾರಣ ಆದನಂತರ ಸಹಭೋಜನದ ವಿಷಯದಲ್ಲಿ ಅವರು ಯಾವ ರೀತಿ ಕಾರ್ಯಗಳು ಕೈಕೊಂಡಿದ್ದರೆಂದು ಹೇಳಲು ನನಗೆ ಶಕ್ತಿ ಸಾಲದು. ಈ ಮಹನೀಯರಿಗೆ ಇದೇ ರೀತಿಯಾಗಿ ಯಾವಾಗಲೂ ಮತೋದ್ಧಾರದ ಕಾರ್ಯಗಳನ್ನು ಮಾಡಲು ಶ್ರೀ. ಪರಮೇಶ್ವರನು ಮನಸ್ಸೀಯಲೆಂದು ನಾನು ಮನಃಪೂರ್ವಕವಾಗಿ ಪ್ರಾರ್ಥಿಸುತ್ತೇನೆ.

ಪಾಟೀಲ ದೊಡ್ಡಬಸನನಗೌಡ ಹರ್ವಿ.

### ಶೋಚನೀಯ ನಿಧನ.

ಮುಧೋಳ ಸಂಸ್ಥಾನದ ಅಧಿಪತಿಗಳಾಗಿದ್ದ ಶ್ರೀಮಂತ ಸರ್. ಮಾಲೋಜಿರಾವ ಘೋರಪಡೆಯವರು ದೇಹಾರೋಗ್ಯವಿಲ್ಲದ್ದರಿಂದ ಮೊನ್ನೆ ತಾನೆ ರಾಜ್ಯಭಾರ ಸನ್ಯಾಸಮಾಡಿದ್ದರಷ್ಟೆ. ಇವರು ತಾ. ೧೪ ನೆಯ ದಿವಸ ಬೆಳಗಿನ ೪॥ ಗಂಟೆಯಲ್ಲಿ ಮುಂಬೈಯಲ್ಲಿ ನಿಧನಹೊಂದಿದರೆಂದು ತಿಳಿಸಲು ಅತ್ಯಂತ ವಿಷಾದಿಸುತ್ತೇವೆ.

ತಾ. ೧೩ ನೆಯ ದಿನವೇ ಅವರ ರೋಗವು ವಿಕೋಪಸ್ಥಿತಿಗೆ ಬಂದುದರಿಂದ ರಾಣಿಯವರನ್ನು ಮುಂಬೈಯಿಗೆ ಕರೆಯಿಸಿದರು. ರಾಣಿಯವರು ತಾ. ೧೪ ನೆಯ ಮಧ್ಯಾಹ್ನ ಮುಂಬೈಗೆ ಹೋದರು. ಅಷ್ಟರಲ್ಲಿಯೇ ಸಂಸ್ಥಾನಾಧಿಪತಿಗಳು ದೇಹ ಬಿಟ್ಟಿದ್ದರು. ಆ ಮೇಲೆ ಶವವನ್ನು ಭದ್ರಗೊಳಿಸಿ ಮೋಟಾರಿನಿಂದ ಮುಧೋಳಕ್ಕೆ ತಂದನಂತರ ಸಂಸ್ಥಾನದ ಪದ್ಧತಿಯಂತೆ ಸ್ವಾಗತಮಾಡಿ ಅಂತ್ಯವಿಧಿಯನ್ನಾಚರಿಸಿದರು. ಮೃತರ ಆತ್ಮಕ್ಕೆ ಶಾಂತಿ ದೊರೆಯಲೆಂದು ಹಾರೈಸುತ್ತೇವೆ.

## ಕಾಂಗ್ರೆಸ್ಸ ರಾಜ್ಯದ ಶಿಕ್ಷಣ ಪ್ರಸಾರ.

ಮಧ್ಯಪ್ರಾಂತದಲ್ಲಿ ಶಿಕ್ಷಣ ಪ್ರಸಾರವು ಬಹು ತೀವ್ರತರವಾಗಿ ಹೊಸ ಪದ್ಧತಿಯಿಂದ ಜರುಗುವ ವ್ಯವಸ್ಥೆ ನಡೆದಿದೆ. ನಾಗಪುರದಲ್ಲಿ ಶಿಕ್ಷಣ ಮಂತ್ರಿಗಳಾದ ಶ್ರೀ. ರವಿಶಂಕರ ಶುಕ್ಲ ಇವರ ಅಧ್ಯಕ್ಷತೆಯಲ್ಲಿ ಶಿಕ್ಷಣ ಪರಿಷತ್ತು ಜರುಗಿ ಈ ಪ್ರಕಾರ ಗೊತ್ತಾಯಿತು—

(೧) ಯಾವ ಸ್ಥಳದಲ್ಲಿ ಹೈಸ್ಕೂಲು ಇದೆಯೋ ಅಲ್ಲಿಯ ಬಾಲ ಬಾಲಕಿಯರ ಪ್ರಾಥಮಿಕ ಶಿಕ್ಷಣವು ಉಚಿತವಾಗಿಯೂ ಒತ್ತಾಯವಾಗಿಯೂ ನಡೆಯಬೇಕು. (೨) ಹಳ್ಳಿಗಳಲ್ಲಿ ಬಾಲ ಬಾಲಕಿಯರು ಕೂಡಿಯೇ ಪ್ರಾಥಮಿಕ ಶಿಕ್ಷಣವನ್ನು ಹೊಂದಬೇಕು. (೩) ಹೈಸ್ಕೂಲಿನ ಪ್ರವೇಶ ಪರೀಕ್ಷೆಯನ್ನು ತೆಗೆದುಹಾಕಬೇಕು. ಮತ್ತು ಹೈಸ್ಕೂಲ್ ಶಿಕ್ಷಣವು ಕೈಗಾರಿಕೆಯ ಶಿಕ್ಷಣದಿಂದ ಕೂಡಿದ್ದಾಗುವಂತೆ ಮಾಡಬೇಕು.

# ಕರ್ನಾಟಕದಲ್ಲಿಯ ಕಾಂಗ್ರೆಸ್ ಸದಸ್ಯರು ೧೧೯೨೫೮.

ಕರ್ನಾಟಕದಲ್ಲಿ ಎಷ್ಟು ಜನ ಕಾಂಗ್ರೆಸ್ ಸದಸ್ಯರಾಗಿರುವರೆಂಬ ಬಗ್ಗೆ ವಿವರವಾಗಿ ತಿಳಿಸಲು ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಕಾರ್ಯದರ್ಶಿಗಳು ಈ ರೀತಿ ಪ್ರಕಟನೆ ಹೊರಡಿಸಿರುವರು:—

ಈ ವರುಷ ೩೦ ನೇ ಅಕ್ಟೋಬರದ ಒಳಗಾಗಿ ನಮ್ಮ ಪ್ರಾಂತದಲ್ಲಿ ಆದ ಕಾಂಗ್ರೆಸ್ ಸದಸ್ಯರ ಸಂಖ್ಯೆಯನ್ನು ಇಲ್ಲಿ ಕೊಡಲಾಗಿದೆ—

| ಜಿಲ್ಲೆ. | ಹಳ್ಳಿಗರು. | ಪಟ್ಟಣಿಗರು. | ಮುಸಲ್ಮಾನರು. | ಒಟ್ಟು ಸಂಖ್ಯೆ. |
|---|---|---|---|---|
| (೧) ಧಾರವಾಡ ಜಿಲ್ಲೆ | ೨೦೦೦೦ | ೬೮೧೦ | ೧೧೨೧ | ೨೬೮೨೦ |
| (೨) ಬೆಳಗಾವಿ ಜಿಲ್ಲೆ | ೨೨೬೦೮ | ೩೭೦೭ | ೯೭೦ | ೨೬೩೧೪ |
| (೩) ಕಾರವಾರ ಜಿಲ್ಲೆ | ೧೮೪೧೮ | ೭೫೦ | ೫೪೯ | ೧೯೧೬೮ |
| (೪) ಮಂಗಳೂರು (ದ. ಕ.) | ೧೩೦೫೯ | ೩೪೩೯ | ೪೯೪ | ೧೬೪೯೮ |
| (೫) ವಿಜಾಪುರ ಜಿಲ್ಲೆ | ೬೮೨೨ | ೨೮೯೬ | ೩೬೦ | ೯೭೧೮ |
| (೬) ಬಳ್ಳಾರಿ ಜಿಲ್ಲೆ | ೭೦೬. | ೧೮೦೦ | ೭೪ | ೨೫೦೬ |
| (೭) ಕೊಡಗು ಜಿಲ್ಲೆ | ೧೦೯೧ | - | ೫೬ | ೧೦೯೧ |
| (೮) ಮೈಸೂರು ಸಂಸ್ಥಾನ | ೧೨೩೦೩ | ೪೮೩೯ | ೬೪೯ | ೧೭೧೪೨ |
| | ೯೫೦೧೭ | ೨೪೨೪೧ | ೪೨೭೩ | ೧೧೯೨೫೮ |

## ಹುಲಕೋಟೆಯಲ್ಲಿ ಕಾಂಗ್ರೆಸ್ ಉತ್ಸಾಹ.

ಬಾಗೇವಾಡಿ ತಾಲೂಕ ಕಾಂಗ್ರೆಸ್ ಕಮೀಟಿ ಮೆಂಬರರಾದ ಬಸಪ್ಪ ನಿಂಗಪ್ಪ ಶಿರೂರ ಕಲಗುರಕಿ ಇವರು ಕಾಂಗ್ರೆಸ್ ಪ್ರಸಾರವನ್ನು ಜೋರಿನಿಂದ ಮಾಡಲಿಕ್ಕೆ ಹತ್ತಿರುವರು. ಗದಗ ತಾಲೂಕ ಪೈಕಿ ಹುಲಕೋಟೆಯಲ್ಲಿ ೮-೯ ನೂರು ಜನರನ್ನು ಕೂಡಿಸಿ ಗಾಂಧಿಯವರು ಮಾಡಿದ ಸಾಹಸ, ಕಾಂಗ್ರೆಸ್ ಮಾಡಿದ ಮಹತ್ವ, ಈಗಿನ ಮಂತ್ರಿಗಳು ಮಾಡಿದ ಮಹತ್ವ, ಈಗ್ಗೆ ಸಧ್ಯದಲ್ಲಿ ಘಟೋದ್ಗಜನ ಮಾಯಾ ಬಾಜಾರದಂತೆ ನಮ್ಮ ದೇಶವು ದುಶ್ಚಟದ ತವರುಮನೆಯಾಗಿದೆ. ಇದನ್ನು ನಿವಾರಣೆ ಮಾಡುವ ಕೆಲವು ಉಪಾಯವನ್ನು ಪದ್ಯರೂಪದಿಂದ ತಿಳಿಸಿದರು. ಮತ್ತು ಹುಲಕೋಟೆಯಲ್ಲಿ ಕಾಂಗ್ರೆಸ್ ಭಕ್ತರು ರಾಟಿಯನ್ನು, ಮಾಡಿಸಲಿಕ್ಕೆ ಹತ್ತಿರುವರು. ಮತ್ತು ಸೆರೆ ಸಿಂದಿಗಳ ಸಂಬಂಧ ಕೀರ್ತನ ಮಾಡಿಸಲಿಕ್ಕೆ ಹತ್ತಿರುವರು. ಈ ಪ್ರಕಾರ ಪ್ರತಿಯೊಂದು ಗ್ರಾಮವು ಮಾಡಿದ್ದಾದರೆ ನಮ್ಮ ದೇಶವು ತೀವ್ರ ಸುಧಾರಿಸುವದಿಲ್ಲವೇ?

ಓರ್ವ ಸೇವಕ.

---

## ಸರಕಾರಿ ಸಮಾರಂಭಗಳಲ್ಲಿ ಕಾಂಗ್ರೆಸ್ಸಿನವರು ಸೇರಕೂಡದು.

ಶ್ರೀ. ನರೇಶನಾಥ ಮುಕರ್ಜಿಯವರು ಮಹಾತ್ಮಾ ಗಾಂಧಿಯವರಿಗೆ ಒಂದು ಪತ್ರವನ್ನು ಬರೆದು ಕಾಂಗ್ರೆಸ್ಸಿನವರು ಗವ್ಹರ್ನರರನ್ನು ಕಳಿಸಿಕೊಡುವ ಸಮಾರಂಭದಲ್ಲಿ ಭಾಗವಹಿಸಬಹುದೇ ಎಂದು ಕೇಳಿಕೊಂಡದ್ದಕ್ಕೆ ಉತ್ತರವಾಗಿ ಈ ರೀತಿ ತಿಳಿಸಿದ್ದಾರೆ.—

"ಕಾಂಗ್ರೆಸ್ಸಿನವರು ಎಲ್ಲಿಯವರೆಗೆ ಈ ಸಂಬಂಧವಾದ ಪ್ರತಿಬಂಧವನ್ನು ತೆಗೆದುಹಾಕಿಲ್ಲವೋ ಅಲ್ಲಿಯವರೆಗೆ ಅವರು ಅಂಥ ಸರಕಾರಿ ಸಮಾರಂಭಗಳಲ್ಲಿ ಸೇರಕೂಡದು. ನಾನು ಗವ್ಹರ್ನರರನ್ನೂ ಮಂತ್ರಿಮಂಡಲವನ್ನೂ ಕಂಡುಮಾತನಾಡಿದುದು ಅಂಥ ಸಮಾರಂಭವೇನೂ ಅಲ್ಲ. ಅಲ್ಲದೆ ನಾನು ನಾಲ್ಕಾಣೆಕೊಟ್ಟು ಕಾಂಗ್ರೆಸ್ಸಿನ ಸಭಾಸದನು ಕೂಡಾ ಆಗಿಲ್ಲ. ಆದುದರಿಂದ ನನ್ನಂತೆ ಅವರಿಗೆ ಮಾಡಲು ಬರುವಂತಿಲ್ಲ."

## ಆಯುರ್ವೇದ ಸಮ್ಮೇಲನ

### ರಾಯಚೂರ.

ಮೈಸೂರಿನ ಮುಜರಾಯಿ ಕಮಿಶನರರವರು ಆ ಪ್ರಾಂತದ ಆಯುರ್ವೇದ ಮತ್ತು ಯುನಾನಿ ಕಾಲೇಜಿನ ಪಂಡಿತರಿಗೆ ರಾಯಚೂರಿನಲ್ಲಿ ನಡೆಯುವ ಸಮ್ಮೇಲನಕ್ಕೆ ಹೋಗಬಹುದೆಂದು ಹೊರಡಿಸಿದ ಪ್ರಕಟನೆಯೊಂದರ ಪ್ರತಿಯನ್ನು ನಮ್ಮ ಕಡೆಗೆ ಕಳಿಸಿದ್ದಾರೆ. ಅದರ ಸಾರಾಂಶವನ್ನು ಕೆಳಗೆ ಕೊಡಲಾಗಿದೆ.

"ರಾಯಚೂರಿನಲ್ಲಿ ನಡೆಯುವ ಅ. ಕ. ಆ. ಸಮ್ಮೇಲನದ ಅಧ್ಯಕ್ಷರಾಗಲು ಶ್ರೀ. ವೈ. ಲಕ್ಷ್ಮೀ ನರಸಿಂಹ ಶಾಸ್ತ್ರಿಗಳವರಿಗೆ ಪರವಾನಿಗೆಕೊಟ್ಟ 30-I0-37 ನೇ D 2 pis 35, 37-38 ನಂಬರಿನ ಕಾಗದಕ್ಕೆ ಅನುಸರಿಸಿ ತಿಳಿಸುವುದೇನೆಂದರೆ ಸಮ್ಮೇಲನವು ಕ್ರಿಸ್‌ಮಸ್ ರಜೆಯಲ್ಲಿ ನಡೆಯುವದಾದಕಾರಣ ಈ ಸಮ್ಮೇಲನಕ್ಕೆ ಹೋಗಲಿಚ್ಛಿಸುವ ಆಯುರ್ವೇದ ಪಂಡಿತರುಗಳು ಕಾಲೇಜಿನ ಹಾಸ್ಪಿಟಲಿನ ಕೆಲಸಕ್ಕೆ ಬಾಧಕ ಬಾರದಂತೆ ಹೋಗಬಹುದು.

ಈ ಬಗೆಯ ಪ್ರಕಟನೆಯನ್ನು ಹೊರಡಿಸಿ ಸಕಲ ವೈದ್ಯರಿಗೂ ಸಮ್ಮೇಲನದಲ್ಲಿ ಭಾಗ ತೆಗೆದುಕೊಳ್ಳುವ ಸಂಧಿ ಒದಗಿಸಿದ್ದಕ್ಕೆ ಸಮ್ಮೇಲನದ ಕಾ. ಕಾ. ಮಂಡಲವು ಅತ್ಯಂತ ಆಭಾರಿಯಾಗಿದೆ. ಇದೇ ಬಗೆಯ ಪ್ರಕಟನೆಯನ್ನು ಪ್ರತಿಯೊಂದು ಪ್ರಾಂತದಲ್ಲಿಯ ಜಿಲ್ಲಾ ಲೋಕಲ್ ಬೋರ್ಡುಗಳೂ, ಮುನ್ಸಿಪಲ್ ಸಭೆಯವರೂ ಹೊರಡಿಸಿ ಸಕಲ ವೈದ್ಯರಿಗೂ ಈ ಸಮ್ಮೇಲನಕ್ಕೆ ಬರಲು ಅಪ್ಪಣೆಕೊಡಬೇಕಾಗಿ ಬೇಡಿಕೊಳ್ಳುತ್ತೇವೆ.

ಪ್ರತಿನಿಧಿಗಳೂ ಮತ್ತು ಸಮ್ಮೇಲನಕ್ಕೆ ಬರುವ ಸಕಲ ವೈದ್ಯರೂ ಆದಷ್ಟು ತೀವ್ರ ತಮ್ಮ ಪ್ರತಿನಿಧಿಯತ್ವದ ಫೀ ಕಳಿಸಿ ತಮ್ಮ ಹೆಸರು ರಜಿಸ್ಟರ್ ಮಾಡಿಸಬೇಕಾಗಿ ಬೇಡಿಕೆ.

ತಾ. ೧೭-೧೧-೩೭ ನೆಯ ಸಂಯುಕ್ತ ಕರ್ನಾಟಕದಲ್ಲಿ ಪ್ರತಿನಿಧಿಗಳ ಫೀ ರೂ. ೧೩ ಎಂದು ಬಿದ್ದಿದೆ. ಇದನ್ನು ಮೂರು ರೂ. ಎಂದು ಸಕಲ ಮಹನೀಯರು ಓದಿಕೊಳ್ಳಬೇಕು. ಹಾಗೂ ಶ್ರೀ. ಆದ್ಯ ಅನಂತಾಚಾರ್ಯರು ತದ್ವಿಪದ್ಯ ಸಂಭಾಷಾ ಪರಿಷತ್ತಿಗೆ ಅಧ್ಯಕ್ಷರೆಂದು ತಿಳಿದುಕೊಳ್ಳಬೇಕು.

ಸೆಕ್ರೆಟರಿ.

## ರೋಣ ತಾಲೂಕು ನಿವಾಸಿಗಳಿಗೆ
### ಜಾಹೀರ ವಿನಂತಿ.

ರೋಣ ತಾಲೂಕು ಕಾಂಗ್ರೆಸ್ ಕಚೇರಿಯಿಂದ ತಾಲೂಕಿನೊಳಗಿನ ಕಾಂಗ್ರೆಸ್ ಕಾರ್ಯಕರ್ತರಿಗೂ ಸಾರ್ವಜನಿಕರಿಗೂ ವಿನಯಪೂರ್ವಕವಾಗಿ ತಿಳಿಸುವುದೇನೆಂದರೆ—

ಸರಕಾರಿ ಅಧಿಕಾರಿಗಳು ಲಂಚ, ಸರಬರಾಯಿ, ಬಿಟ್ಟಿ ಮೊದಲಾದ ದುಷ್ಕೃಟಗಳಿಗೆ ಅಧೀನರಾಗಿರುವರೆಂಬುವದು ಕಾಂಗ್ರೆಸ್ ಮಂತ್ರಿಗಳಿಗೆ ತಿಳಿದದ್ದರಿಂದ "ಸರಕಾರಿ ಅಧಿಕಾರಿಗಳಿಗೆಚ್ಚರಿಕೆ" ಎಂಬುವ ಪ್ರೆಸ್ ನೋಟನ್ನು ಹೊರಡಿಸಿ ಎಲ್ಲ ಅಧಿಕಾರಿಗಳ ಕಡೆಗೆ ಕಳಿಸಿ ಇಂದಿಗೆ ೩-೪ ತಿಂಗಳವಾಗುತ್ತಬಂತು.

ಆದರೆ ಅಧಿಕಾರಿಗಳು ಮಾತ್ರ ಇದೂ ವರೆಗೆ ತಮ್ಮ ಕಾಯಕವನ್ನು ಬಿಟ್ಟಿರುವದಿಲ್ಲೆಂಬುವದು ಮೇಲಿಂದ ಮೇಲೆ ಕೇಳಿಕೆಯಲ್ಲಿ ಬರುತ್ತಲಿರುವುದರಿಂದ ನಮ್ಮ ಮೇಲಧಿಕಾರಿಗಳು ಜಿಲ್ಲೆಯ ಹಾಗೂ ತಾಲೂಕಿನ ಸರಕಾರಿ ಮುಖ್ಯ ಅಧಿಕಾರಿಗಳಿಗೆ ಭೆಟ್ಟಿಯಾಗಿ ಈ ವಿಷಯವನ್ನು ಮನವರಿಕೆ ಮಾಡಿಕೊಡಲಿಕ್ಕೆ ಹತ್ತಿರುವರು.

ಕಾಂಗ್ರೆಸ್ ಮಂತ್ರಿಗಳಾದರೂ ಸರಕಾರಿ ನೌಕರರ ಈ ದುರ್ವರ್ತನವನ್ನು ತಡೆಯಬೇಕಾದರೆ ಸಾರ್ವಜನಿಕರಾದರೂ ಮನಃಪೂರ್ವಕ ಸಹಾಯಮಾಡಬೇಕೆಂದು ಕೇಳಿಕೊಂಡಿರುವರಷ್ಟೆ. ಆ ಪ್ರಕಾರ ಜನರಾದರೂ ತಮ್ಮಲ್ಲಿಯ ಗ್ರಾಮಸ್ಥರಾಗಲಿ ಸರಕಲ್ಲರಾಗಲಿ ಸಬ್ಬರಜಿಸ್ಟರ ವ ಮಾಮಲೇದಾರ ಕಚೇರಿಯವರಾಗಲಿ ಪೋಲೀಸ ಖಾತೆದವರಾಗಲಿ ಲಂಚ, ಸರಬರಾಯಿ, ಬಿಟ್ಟಿ ಇವೇ ಮೊದಲಾದವುಗಳನ್ನು ತೆಗೆದುಕೊಂಡರೆಂಬುವದು ತಿಳಿದರೆ (ಮುದ್ದಾಂ ತಿಳಿದುಕೊಂಡಾದರೂ) ಕೂಡಲೇ ನಮ್ಮ ಕಚೇರಿಗೆ ಸವಿಸ್ತಾರವಾಗಿ ತಿಳಿಸಬೇಕು. ಅಂದರೆ ನಮ್ಮ ಕಮಿಟಿಯವರು ಸ್ಥಾನಿಕ ಚವಕಶಿಮಾಡಿ ಮೇಲಿನ ಕಮಿಟಿಯವರ ಕಡೆಗೆ ಕಳಿಸಿದರೆ ಆ ಕಮಿಟಿಯವರು ಇಂಥಾ ತಪ್ಪುಳ್ಳ ಅಧಿಕಾರಿಗಳಿಗೆ ಯೋಗ್ಯ ಶಾಸನವನ್ನು ಮಾಡಿಸಬಹುದು.

ನಮ್ಮ ಪ್ರಾಂತದ ಮಂತ್ರಿಗಳು ಕೈಕೊಂಡಿರುವ ಈ ಪವಿತ್ರವಾದ ಕಾರ್ಯಕ್ಕೆ ಮಹಾಜನಗಳೆಲ್ಲರೂ ಯಾವ ಭಯವಿಲ್ಲದೇ ನಿಜ ಸಂಗತಿಯನ್ನು ತಿಳಿಸಿ ಕಾಂಗ್ರೆಸ್ ಸರಕಾರವು ಸತ್ಯ ಅಹಿಂಸೆ ತತ್ವಗಳ ಮೇಲೆ ಕಟ್ಟಬೇಕೆಂದಿರುವ ಸ್ವರಾಜ್ಯಮಂದಿರದ ತಳಹದಿಗೆ ನಮ್ಮ ತಾಲೂಕಿನೊಳಗಿನ ಯಾವತ್ತೂ ಜನರು ಸಹಾಯ ಮಾಡಿ ತಮ್ಮ ಕಲ್ಯಾಣವನ್ನು ಮಾಡಿಕೊಳ್ಳಬೇಕೆಂದು ಪ್ರಾರ್ಥಿಸಿಕೊಳ್ಳುವ

ತಮ್ಮೆಲ್ಲರ ಸೇವಕನಾದ

ಜಕ್ಕಲಿ.
ತಾ. ೧೫-೧೧-೧೯೩೭ } ಮಹಾದೇವಪ್ಪ ಸಿದ್ಧಪ್ಪ ಕಂಬಳಿ
ಕಾರ್ಯದರ್ಶಿ

ರೋಣ ತಾಲೂಕು ಕಾ. ಕ.

---

## ವೀರಶೈವ ಮಹಿಳಾಜ್ಞಾನಮಂದಿರದಲ್ಲಿ
### ನಾ. ಖೇರರ ಕನ್ನಡ ಭಾಷಣ.

ತಾ. ೭-೧೧-೩೭ ನೇ ದಿವಸ ಸಾಯಂಕಾಲ ೬-೧೦ ಕ್ಕೆ ಸೊಲ್ಲಾಪುರ ಮಹಿಳಾಜ್ಞಾನಮಂದಿರಕ್ಕೆ ಮುಂಬಯಿ ಇಲಾಖೆಯ ಮುಖ್ಯಮಂತ್ರಿಗಳಾದ ನಾ. ಖೇರರವರು ಬಂದಕೂಡಲೆ ವಿದ್ಯಾರ್ಥಿನಿಯರು ಮಂಜುಳ ಧ್ವನಿಯಿಂದ ಸ್ವಾಗತಪರ ಪದಗಳನ್ನು ಹಾಡಿದರು. ನಂತರ ಕುಂ॥ ಸೌ॥ ಜಯದೇವಿಬಾಯಿ ಲಿಗಾಡೆಯವರು ಮಹಿಳಾಜ್ಞಾನಮಂದಿರದ ಸಂಪೂರ್ಣ ಪರಿಚಯ ಮಾಡಿಕೊಟ್ಟರಲ್ಲದೆ ಸೊಲ್ಲಾಪುರ ಕನ್ನಡಿಗರ ಕನ್ನಡ ಭಾಷೆಯು ಎಷ್ಟು ಅವನತಿಯನ್ನು ಹೊಂದಿರುವದೆಂಬ ವಿಷಯವಾಗಿ ಹೀಗೆ ಹೇಳಿದರಲ್ಲ— ಇಲ್ಲಿ ೩೫ ಸಾವಿರ ಜನ ಕನ್ನಡಿಗರಿದ್ದು ಒಂದು ಪ್ರಾಥಮಿಕ ಶಾಲೆಯು ಕೂಡಾ ಇಲ್ಲದಿರುವುದೆಂದರೆ ಸಖೇದಾಶ್ಚರ್ಯವನ್ನುಂಟು ಮಾಡತಕ್ಕದ್ದಾಗಿದೆಯೆಂತಲೂ ಆದರೆ ಕೈ. ರಾ| ಬ| ಅಪ್ಪಾಸಾಹೇಬರವರು ೧೯೦೯ ನೇ ಇಸ್ವಿಯಲ್ಲಿ ಸ್ಥಾಪಿಸಿದ ವೀರಶೈವ ಮಹಿಳಾಜ್ಞಾನಮಂದಿರದ ವತಿಯಿಂದ ಈಗ ೩ ವರ್ಷಗಳ ಹಿಂದೆ ಒಂದು ಕನ್ನಡ ಕನ್ಯಾಶಾಲೆಯನ್ನು ಸ್ಥಾಪಿಸಿ ತದ್ವಾರ ಒಕ್ಕಲಿಗರ ಕೂಲಿಕಾರರ ಅನಾಥರ ಇತರ ಜನರ ಬಾಲಕಿಯರಿಗೆ ಜಾತಿಭೇದವಿಲ್ಲದೆ ಉಚಿತವಾಗಿ ಪ್ರಾಥಮಿಕ ಶಿಕ್ಷಣವು ದೊರೆಯುವಂತೆ ಆಗಿದೆಯೆಂತಲೂ ಶಿಕ್ಷಣಮಂತ್ರಿಗಳೂ ಕನ್ನಡ ಭಾಷಾಭಿಮಾನಿಗಳೂ ಆದ ತಾವುಗಳು ಮಹಿಳಾಜ್ಞಾನಮಂದಿರದ ಕಾರ್ಯ ಕಲಾಪಗಳ ಕಡೆಗೆ ಈಕ್ಷಿಸುವರೆಂದು ಮಂತ್ರಿಗಳ ಮನಸ್ಸಿನಮೇಲೆ ಪರಿಣಾಮವಾಗುವಂತೆ ಹೇಳಿ ತಮ್ಮ ಭಾಷಣವನ್ನು ಮುಗಿಸಿದರು.

ಆಮೇಲೆ ನಾ. ಖೇರರವರು — ನೀವುಗಳು ಕೈಕೊಂಡ ಕಾರ್ಯವು ಸ್ತುತ್ಯವಾದದ್ದಾಗಿದೆಯೆಂತಲೂ ನಾನಾದರೂ ಮುಂದಿನ ಸಾರೆ ಇಲ್ಲಿಗೆ ಬಂದಾಗ್ಗೆ ವ್ಯಾಖ್ಯಾನಮಾಡುವಷ್ಟಾದರೂ ಕನ್ನಡ ಭಾಷೆಯನ್ನು ಕಲಿತು ಬರುತ್ತೇನೆಂತಲೂ ನಾನು ಕರ್ನಾಟಕ ದೇಶ ಬಿಟ್ಟು ೩೦ ವರ್ಷಗಳಾದಕಾರಣ ಭಾಷಣಮಾಡುವಷ್ಟು ಕನ್ನಡ ಸಂಸ್ಕಾರವು ಉಳಿದಿಲ್ಲ. ಆದ್ದರಿಂದಲೇ ಇಷ್ಟು ಸಾವಕಾಶವಾಗಿ ಮಾತಾಡುತ್ತಿರುವೆನೆಂತಲೂ ನೀವುಗಳು ಉಪಕ್ರಮಿಸಿದ ಕಾರ್ಯಕ್ಕೆ ಯಶವು ದೊರೆಯುವದೆಂದು ಕನ್ನಡದಲ್ಲಿಯೇ ತಮ್ಮ ವ್ಯಾಖ್ಯಾನವನ್ನು ಮಾಡಿ ಮುಗಿಸಿದರು. ಅನಂತರ ಕೈನೂಲಿನಿಂದ ತಯಾರಿಸಿದ ಮಾಲೆಯನ್ನರ್ಪಿಸಿ ವಂದೇ ಮಾತರಂ ಜಯಧ್ವನಿಯೊಡನೆ ಸಭೆಯು ಮುಕ್ತಾಯವಾಯಿತು.

ಕುಂ॥ ಸೌ॥ ಸಂಗವ್ವಬಾಯಿ ಮಡಕಿ
ಸೆಕ್ರೆಟರಿ
ವೀರಶೈವ ಮಹಿಳಾಜ್ಞಾನಮಂದಿರ.

---

## ವೀರಶೈವ ತರುಣ ಸಂಘ ಹಳಖೇಡ.

ಕಾರ್ತಿಕ ಶುದ್ಧ ಪಂಚಮಿ ಸೋಮವಾರ ಪಂ. ವೀರಪ್ಪಣ್ಣ ಕೋರಿ ವಕೀಲ ಇವರ ಅಧ್ಯಕ್ಷತೆಯಲ್ಲಿ ಬೀದರಕೋಟೆಯ ಪಂ. ಸಿದ್ಧೇಶ್ವರ ಶಾಸ್ತ್ರಿಗಳು ವಿರಶೈವ ಧರ್ಮದ ವಿಷಯವಾಗಿ ಶರಣರ ವಚನಗಳ ಆಧಾರದಿಂದ ಸ್ಫೂರ್ತಿದಾಯಕ ಭಾಷಣವನ್ನು ಮಾಡಿದರು. ಸಭೆಗೆ ಗ್ರಾಮದ ಪ್ರಮುಖರೊಡನೆ ಎಲ್ಲಾ ಮತದ ಜನರೂ ಆಗಮಿಸಿದ್ದರು. ಇಲ್ಲಿಯ ತರುಣಸಂಘದವರಲ್ಲಿ ಸಂಗ್ರಾಮ ಸಜ್ಜನಶೆಟ್ಟಿ ಮತ್ತು ನಾಗಭೂಷಣ ಸಜ್ಜನಶೆಟ್ಟಿ ಎಂಬ ಸಣ್ಣ ಬಾಲಕರು ವಚನಗಳನ್ನು ಅಂದು ಅವುಗಳನ್ನು ಸರಿಯಾಗಿ ಸ್ಪಷ್ಟೀಕರಣಮಾಡಿದರು. ಇದರಿಂದ ಜನರಲ್ಲಿ ಹೊಸಚೈತನ್ಯವುಂಟಾದಂತಾಗಿ ತರುಣಸಂಘದ ಪ್ರತಿಯೊಬ್ಬ ಮೆಂಬರನೂ ಬಸವಬೋಧಾಮೃತವೆಂಬ ಪುಸ್ತಕವನ್ನು ಪಠ್ಯಪುಸ್ತಕವನ್ನಾಗಿ ಇಟ್ಟುಕೊಳ್ಳಬೇಕೆಂದು ತಮ್ಮೊಳಗೆ ಠರಾವು ಪಾಸುಮಾಡಿದರು. ಕಡೆಗೆ ಶಾಂತಿಪಾಠಮಾಡಿ ಬಸವ ಜಯಘೋಷದೊಡನೆ ಸಭಾ ವಿಸರ್ಜನೆ ಮಾಡಲ್ಪಟ್ಟಿತು.

ವೀರೇಂದ್ರ ಹುಲಸೂರ
ಸೆಕ್ರೆಟರಿ.

## ಸಹೃದಯರಲ್ಲಿ ಬಿನ್ನಹ.

ವನಿತಾಸೇವಾಸಮಾಜವು ಧಾರವಾಡದಲ್ಲಿ ಕ್ರಿ. ಶ. ೧೯೨೮ ರಲ್ಲಿ ಕೇವಲ ಸ್ತ್ರೀಯರ ಸರ್ವಾಂಗೀಣ ಉನ್ನತಿಗಾಗಿ ಸರ್ವತೋಪರಿ ಪ್ರಯತ್ನಿಸುವುದಕ್ಕಾಗಿ ಸಂಸ್ಥಾಪಿತವಾದ ಸಂಸ್ಥೆಯು ! ಜನತೆಯ ಸಹಾಯ ಸಹಾನುಭೂತಿ, ತನ್ನ ಶಕ್ತಿ ತ್ಯಾಗಗಳಿಂದ ಇದು ವರೆಗೂ ಇದ. ತನ್ನ ಕೈಲಾದಮಟ್ಟಿಗೆ ಸೇವೆಯನ್ನು ಸಲ್ಲಿಸುತ್ತ ಬಂದಿದೆ. ಅಂತೆಯೇ ಕೇವಲ ಒಬ್ಬಿಬ್ಬರಿಂದ ಮಾತ್ರ ಪ್ರಾರಂಭವಾಗಿದ್ದ ಈ ಸಂಸ್ಥೆಯಲ್ಲಿ ಇದೀಗ ೨೫ ಜನ ಕೆಲಸಗಾರರು ದುಡಿಯುತ್ತಿರುವರು. ಅಖಿಲ ಕರ್ನಾಟಕದೊಳಗಿನ ಎಲ್ಲಕಡೆಯ ೪೦ ವಿದ್ಯಾರ್ಥಿನಿಯರು ವಸತಿಗೃಹದಲ್ಲಿ ಉಚಿತವಾಗಿ ವಾಸಿಸುತ್ತಿರುವರು. ೧೪೦ ವಿದ್ಯಾರ್ಥಿನಿಯರು ವಿದ್ಯಾರ್ಜನೆ ಮಾಡುತ್ತಿರುವರು. ಹೆಣ್ಣುಮಕ್ಕಳ ಶರೀರಬಲ ಬೆಳೆಯುವುದಕ್ಕೆ, ಬುದ್ಧಿ ಬಲ ವೃದ್ಧಿಯಾಗಲಿಕ್ಕೆ ನೀತಿ ಬಲ ಹೆಚ್ಚಾಗುವುದಕ್ಕೆ ಸಂಸ್ಥೆಯು ತನ್ನ ಅನುಕೂಲತೆ, ಯೋಗ್ಯತೆಗೆ ತಕ್ಕಂತೆ ಎಲ್ಲ ತರಹದ ಏರ್ಪಾಟನ್ನು ಮಾಡಿದೆ; ಮಾಡುತ್ತಲಿದೆ. ಆಗಾಗ ಕನ್ನಡ ನಾಡಿನ ಹಿರಿಯರನೇಕರು ಸಂಸ್ಥೆಯನ್ನು ಸಂದರ್ಶಿಸಿ ತಮ್ಮ ಸಂತೋಷವನ್ನು ವ್ಯಕ್ತಗೊಳಿಸಿರುವರು ! ಸಂಸ್ಥೆಯು ಸರಕಾರದಿಂದ ಮಾನ್ಯತೆಪಡೆದಿದೆ. ಜನತೆಯಿಂದ ಮನ್ನಣೆ ಹೊಂದಿದೆ. ಕೇವಲ ಜನಾಶ್ರಯದ ಮೇಲಿಂದ ವರ್ಷಕ್ಕೆ ಹನ್ನೆರಡು ಸಾವಿರ ರೂಪಾಯಿಗಳ ವೆಚ್ಚದ ಹೊಣೆಯನ್ನು ಸಮಾಜವು ಹೊತ್ತಿದೆ. ಒಟ್ಟೇನು? ಅಖಿಲ ಕರ್ನಾಟಕದಲ್ಲಿ ಜೀವಂತ ಸಂಸ್ಥೆಗಳಲ್ಲಿ ಇದೊಂದೆಂದು ಹೆಮ್ಮೆಯಿಂದ ಹೇಳಬಹುದು.

ಇದು ವಸ್ತುಸ್ಥಿತಿ ! ಸತ್ಯಸಂಗತಿಯ ಸಾರವು !! ಆದರೇನು? ಎಲ್ಲಿ ಹೋದರೂ ವಿಘ್ನಸಂತೋಷಿಗಳು—ವಿಘಾತುಕರು ಇದ್ದೇ ಇರುವರಷ್ಟೇ! ಪುರಾಣ ಪುರುಷರಾದ, ಪುಣ್ಯ ಪುರುಷರಾದ ಪ್ರತ್ಯಕ್ಷ ಪರಮಾತ್ಮನ ಅವತಾರರೇ ಆದ ಶ್ರೀರಾಮಕೃಷ್ಣರಿಗೇ ವಿರೋಧಿಗಳಿರುವಾಗ ಇಂತಹ ಸಂಸ್ಥೆಗಳಿಗೆ ವಿರೋಧಿಗಳಿರುವದೇನಾಶ್ಚರ್ಯ? ಅಂತಹ ವಿರೋಧಿಯೊಬ್ಬನು ಇತ್ತೀಚಿಗೆ ಮುಂದೆಬರಲು ಧೈರ್ಯಸಾಲದೆ "ಹಿತೈಷಿ" ಎಂಬ ಹೆಸರಿನ ಬುರಕೆಯನ್ನು ಹಾಕಿಕೊಂಡು ಸಮಾಜದ ನೃತ್ಯದ ವಿಷಯದಲ್ಲಿ ಇಲ್ಲದ್ದೊಂದು ಸುಳ್ಳುವಿಧಾನವನ್ನು ವ್ಯಕ್ತಗೊಳಿಸಿ ಜನತೆಯಲ್ಲಿ ತಪ್ಪು ಕಲ್ಪನೆಯನ್ನು ಹರಡುವ ಮಹಾ ಪುಣ್ಯ (?) ಕಾರ್ಯವನ್ನು ಕಟ್ಟಿಕೊಂಡನು! ಮೊದಲು "ಹಿತೈಷಿ"ಯು ಹುಬ್ಬಳ್ಳಿಯಲ್ಲಿ ಹೊರಡುವ "ಲೋಕಮತ" ದೈನಿಕ ಪತ್ರಿಕೆಯಲ್ಲಿ ತಾ. ೨೪-೧೦-೩೭ ನೇ ದಿನ ಪ್ರಕಟನಾಗಿ ತನ್ನ ವಿಷವನ್ನು ಕಾರಿದನು! ಅದಕ್ಕೆ ಉತ್ತರವೆಂದು ಸಮಾಜದ ಕಾರ್ಯಕರ್ತರು ಅಧಿಕೃತ ರೀತಿಯಿಂದ ಸಮಂಜಸ ಉತ್ತರವನ್ನು ಕೊಟ್ಟರು. ಆದರೆ ಆತನಿಗೆಲ್ಲಿ ಅದರಿಂದ ತೃಪ್ತಿಯಾಗಬೇಕು? ನಿಜವಾದ ಹಿತೈಷಿಯಾಗಿದ್ದರೆ ಆತನು ಸಮಾಜದ ಕಾರ್ಯದರ್ಶಿಗಳು ಸೂಚಿಸಿದ ಸಮಂಜಸ ಮಾರ್ಗಗಳಿಂದ ಹೋಗಿ ತನ್ನ ಮನಸ್ಸಿನ ನಂಬಿಗೆಯನ್ನು ಮಾಡಿಕೊಳ್ಳುತ್ತಿದ್ದನು. ಯಾವುದಾದರೊಂದು ನಿಮಿತ್ಯದಿಂದ ತನ್ನ ಹೊಟ್ಟೆಯೊಳಗಿನ ಹಾಲಾಹಲ ವಿಷವನ್ನು ಕಾರಿಕೊಂಡೇ ತೀರಬೇಕೆಂದು ಹೊರಟವನವನು! ಅಂದಬಳಿಕ ಅವನು ಸನ್ಮಾರ್ಗ, ಶಿಷ್ಟಸಮ್ಮತ ದಾರಿಯನ್ನು ಹಿಡಿಯಬಹುದೆ? ಅಂತೆಯೇ ಅವನು ಮತ್ತೆ ಕಾರ್ಯದರ್ಶಿಗಳು ಲೋಕಮತದಲ್ಲಿ ಕೊಟ್ಟ ಉತ್ತರಕ್ಕೆ ಪ್ರತ್ಯುತ್ತರವೆಂದು ಒಂದು ಅಸಂಬದ್ಧ ರಗಳೆಯನ್ನು ಬರೆದು 'ಲೋಕಮತ'ಕ್ಕೆ ಕಳಿಸಿದನು! ಆದರೆ ಅಷ್ಟರಲ್ಲಿ ನಿಜಸಂಗತಿಯನ್ನರಿತ ಮಾನ್ಯ ಸಂಪಾದಕರು ಆ ಲೇಖನವನ್ನು ಪ್ರಕಟಿಸಲು ಅಲ್ಲಗಳೆದರು; ಅದಕ್ಕೆ ನಿರೂಪಾಯನಾಗಿ ಧಾರವಾಡ "ರಾಜಹಂಸ"ಕ್ಕೆ ಶರಣುಹೊಕ್ಕನು! ಕದಾಚಿತ್ ಸತ್ಯ ಸಂಗತಿ ಇದ್ದರೆ ಬಯಲಿಗೆ ಬರಲೆಂಬ ಸದುದ್ದೇಶದಿಂದ ಆ ಸಂಪಾದಕರು ಅದಕ್ಕೆ ತಮ್ಮಲ್ಲಿ ಇಂಬುಕೊಟ್ಟರು. ಮತ್ತೆ ಆದಕ್ಕೆ ನಿರೂಪಾಯವೆಂದು ಸಮಾಜದ ಪರವಾಗಿಯೂ ಉತ್ತರಕೊಡಲಾಯಿತು. ರಾಜಹಂಸ ಸಂಪಾದಕರು ಹೀಗೆ ಉಭಯ ಪಕ್ಷಗಳಿಗೆ ಆಶ್ರಯ ಕೊಡುತ್ತ ಹೋಗುವುದಕ್ಕಿಂತ ಒಮ್ಮೆ ಸತ್ಯ ಸಂಗತಿಯನ್ನು ಕಣ್ಣಾರೆಕಂಡು ಮನಗಾಣಬೇಕೆಂದು ತಮ್ಮ ಸ್ವಂತ ಪ್ರತಿನಿಧಿಯನ್ನು ಸಮಾಜಕ್ಕೆ ಕಳಿಸಿಕೊಟ್ಟರು. ಅವರ ಪ್ರತಿನಿಧಿಗಳು ಸಮಾಜಕ್ಕೆ ಬಂದು ಎಲ್ಲ ವಿಧವಾಗಿ ವಿಚಾರಮಾಡಿ ಕೇಳಿ ನೋಡಿ "ಹಿತೈಷಿ"ಗಳ ಲೇಖನ ಪೂರ್ಣ ನಿರಾಧಾರವಾಗಿರುವುದಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸಿದರು. ಅದನ್ನೇ ಸಂಪಾದಕರು ತಮ್ಮ ತಾ. ೬-೧೧-೩೭ ಶನಿವಾರ ಪತ್ರಿಕೆಯಲ್ಲಿ ಈ ರೀತಿಯಾಗಿ ಉಲ್ಲೇಖಿಸಿರುವರು.

"ನೃತ್ಯದಲ್ಲಿ ಭಾಗವಹಿಸಿದ ಎಲ್ಲ ಪೌಢ ವಿದ್ಯಾರ್ಥಿನಿಯರ ಲೇಖಗಳಿಂದ ವಸತಿ ಗೃಹದ ಎಲ್ಲ ವಿದ್ಯಾರ್ಥಿನಿಯರ ಹೇಳಿಕೆಯ ಮೇಲಿಂದ ಇತರ ಪರಿಸ್ಥಿತಿಯನ್ನು ಕಣ್ಣಾರೆ ನೋಡುವುದರಿಂದ ನಮ್ಮ ಪ್ರತಿನಿಧಿಗೆ ತಿಳಿದುಬಂದ ಸಂಗತಿಯೇನಂದರೆ—

ನೃತ್ಯ ಕಲಿಸುವದಕ್ಕಾಗಿಯಾಗಲಿ ಹಾಗು ಆ ನರ್ತನಗಳನ್ನು ಬೇರೆ ಬೇರೆ ಸ್ಥಳಗಳಲ್ಲಿ ಪ್ರದರ್ಶಿಸುವುದಕ್ಕಾಗಿಯಾಗಲಿ ಯಾರ ಮೇಲೆಯೂ ಯಾವ ಬಗೆಯಿಂದಲೂ ಯಾರಿಂದಲೂ ಒತ್ತಾಯವಾಗಿದ್ದು ಕಂಡುಬರಲಿಲ್ಲ. ಹಿತೈಷಿಯು ಬರೆದುದು ನಿರಾಧಾರವೆಂದು ಕಂಡುಬರುತ್ತದೆ. ಸಮಾಜದ ಇತರ ಕಾರ್ಯಕಲಾಪಗಳು ಸಹ ಪರಿಸ್ಥಿತಿಗನುಸಾರವಾಗಿ ತಕ್ಕಮಟ್ಟಿಗೆ ಸಮಾಧಾನಕಾರಕವಾಗಿವೆ."

ಇದೀಗ ನಾವು ಜನತಾಜನಾರ್ದನನಲ್ಲ ಬಿನ್ನಹಿಸಿಕೊಳ್ಳುವುದೇನಂದರೆ ಇಂತಹ ಸಂದರ್ಭಗಳಲ್ಲಿ ಹೀಗೆ ಪರದೆಯ ಮರೆಯೊಳಗೆ ಕುಳಿತುಕೊಂಡು ಆಗಲಾರದ ಅನ್ಯರ ಮಾತು ಕೇಳಿಕೊಂಡು ಬರೆಯುತ್ತಿರುವ ಹಿತೈಷಿಗಳ ಆ ಉದ್ದುದ್ದ ಲೇಖಗಳಿಗೆ ಆ ಮೋಹಕ ಭಾಷಾಶೈಲಿಗೆ ಮೋಹಗೊಳ್ಳದೆ ಸಾರಾಸಾರ ವಿಚಾರಮಾಡಿ ಸಮಾಜದ ಕಾರ್ಯಕರ್ತರನ್ನು ಕಂಡು ಮಾತನಾಡಿ ಬಳಿಕ ತಮ್ಮ ಮನಸಿನ ನಿರ್ಧಾರಮಾಡಿಕೊಳ್ಳಬೇಕು ವನಿತಾಸೇವಾಸಮಾಜವೇನು ಒಬ್ಬ ವ್ಯಕ್ತಿಯ ಸೊತ್ತಲ್ಲ. ಅದೊಂದು ಸಾರ್ವಜನಿಕ ಸಂಸ್ಥೆ. ಅದರ ಆಡಳಿತೆಯನ್ನು ನೋಡಲು ಕನ್ನಡ ನಾಡಿನಲ್ಲಿ ಗಣ್ಯರೆಂದೆನಿಸಿಕೊಂಡ ಮಹಾನುಭಾವರ ಮಂಡಲವಿದೆ. ಮುಂಬೈ ಕಾನೂನುಮಂಡಲದ ಅನುಭವಿಕ ಸದಸ್ಯರಾದ ಶ್ರೀ. ಜೋಗರಾಯರು, ರಾ. ಸಾ. ಪಿ. ಜಿ. ಹಳಕಟ್ಟಿಯವರು, ರಾ. ಬ. ಸಿದ್ಧಪ್ಪ ಬಣಗಾರ, ಡಿಸ್ಟ್ರಿಕ್ಟ ಜಡ್ಜರಾದ ಶ್ರೀ. ಸಿ. ಸಿ. ಹುಲಕೋಟಿಯವರು, ಶ್ರೀ. ವೈ. ಮಹಾಬಳೇಶ್ವರಪ್ಪನವರು ಶ್ರೀ. ಡಿ. ವ್ಹಿ. ಬೆಳವಿ ವಕೀಲರು ಮುಂತಾದ ೬೧ ಜನರು ವನಿತಾಸೇವಾಸಮಾಜದ ಮಂಡಲದಲ್ಲಿದ್ದಾರೆಂಬುದನ್ನು ದಯವಿಟ್ಟು ನೆನಪಿನಲ್ಲಿಟ್ಟುಕೊಳ್ಳಬೇಕು. ಅಲ್ಲದೆ ಶ್ರೀಯುತರಾದ ಎಚ್. ಎಸ್. ಶಿವಲಿಂಗ ಶಾಸ್ತ್ರಿ, ಡಿ. ಎಲ್ಲ. ಪಾಟೀಲ ಎಸ್. ಎಸ್. ಮಳಿಮಠ, ಸಿ. ಕೆ. ಒಡೆಯರ ಮುಂತಾದವರನ್ನೊಳಗೊಂಡ ಹತ್ತು, ಜನರ ಕಾರ್ಯಕಾರೀ ಮಂಡಲವಿದೆ.

ಈ ರೀತಿಯಾಗಿ ಎಲ್ಲ ಬಗೆಯಿಂದ ಭದ್ರವಾಗಿರುವ ಸಂಸ್ಥೆಯ ವಿಷಯವಾಗಿ ಯಾವನೊಬ್ಬ ಹೊಣೆಗಾರಿಕೆಯನ್ನರಿಯದ ಅಪ್ರಬುದ್ಧನು ವೃತ್ತ ಪತ್ರಿಕೆಯಲ್ಲಿ ಒಂದು ಲೇಖವನ್ನು ಕೊಟ್ಟನೆಂದಾಕ್ಷಣಕ್ಕೆ ಅದಕ್ಕೆ ಅಷ್ಟು ಮಹತ್ವಕೊಡಬಾರದು. ಅದುಮೊದಲು ಸಮಾಜದ ವರೆಗೊಮ್ಮೆ ಬಂದು ನೋಡಬೇಕು. ಕಾರ್ಯದರ್ಶಿಗಳನ್ನು ಕಾಣಬೇಕು. ಕೆಲಸಗಾರರನ್ನು ವಿಚಾರಿಸಬೇಕು. ಅಷ್ಟರಿಂದ ತೃಪ್ತಿಯಾಗದಿದ್ದರೆ ಸಮಾಜದ ಗವ್ಹರ್ನಿಂಗ ಬಾಡಿಯಿದೆ, ಕೌನ್ಸಿಲ್ಲಿದೆ, ಈ ರೀತಿಯಾಗಿ ಕ್ರಮಬದ್ಧರೀತಿಯಿಂದ ಹೋಗಿಯೂ ಸಮಾಧಾನವಾಗದಿದ್ದರೆ ನಿರೂಪಾಯವೆಂದು

ವೃತ್ತಪತ್ರಿಕೆಯಲ್ಲಿ ಬಿಚ್ಚಿಡಬಹುದು. ಇದು ನಿಜವಾದ ಹಿತೈಷಿಗಳ ರೀತಿ! ಇದು ಸತ್ಯವಾಗಿ ಹಿತಚಿಂತನೆ ಮಾಡುವವರ ನೀತಿ!! ಆದರೆ ಇದೀಗ ಕೈಕೊಂಡಿರುವ 'ಹಿತೈಷಿ' ಯ ರೀತಿಯು ರೀತಿಯಲ್ಲ, ನೀತಿಯಲ್ಲ; ಕಡೆಗೆ ಒಂದೇ ಮಾತಿನಲ್ಲಿ ಹೇಳಬೇಕೆಂದರೆ, ಈ ಲೇಖಗಳೆಂದರೆ ಆ ಹಿತೈಷಿಯ ಕಲುಷಿತ ಹೃದಯದ ನೃತ್ಯವೆಂದೇ ಹೇಳಬಹುದು.

ಕಟ್ಟಕಡೆಯ ಕೋರಿಕೆಯೆಂದರೆ, ಯಾರೂ ಇಂತಹ 'ಹಿತೈಷಿ' ಗಳ ಬಲೆಗೆ ಬೀಳದೆ ಯಥಾವತ್ ಸಮಾಜದ ಕಾರ್ಯಕಲಾಪಗಳಿಗೆ ಹೃತ್ಪೂರ್ವಕ ಸಹಾಯನೀಡಬೇಕು! ಉತ್ತೇಜನಕೊಡಬೇಕು! ಮಾರ್ಗದೋರಿಸಬೇಕು!

ಕರ್ನಾಟಕಮಾತೆಯು ಎಲ್ಲರಿಗೂ
ಅಂತಹ ಸದ್ಬುದ್ಧಿಯನ್ನು
ಕೊಡಲಿ!!!

ಡಾ. ಲ. ನೆ. ಮಳಿಬೆನ್ನೂರ
ಕಾರ್ಯದರ್ಶಿ.

---

## ಸ್ಪಷ್ಟೀಕರಣಕ್ಕೆಂದು.

ಸಂಪಾದಕರು 'ಶರಣ ಸಂದೇಶ' ಅವರ ಸನ್ನಿಧಿಯಲ್ಲಿ. ಸವಿನಯ ವಂದನೆಗಳು.

ಇತ್ತಿತ್ತಲಾಗಿ ಕನ್ನಡ ಸಾಹಿತ್ಯವು ಭರದಿಂದ ಬೆಳೆಯುತಿರುವಂತೆ ಕಾಣುತಿದೆ. ದಿನದಿನವೂ ಕರ್ನಾಟಕದ ಮೂಲೆ ಮೂಲೆಗಳಲ್ಲಿ ಹೊಸ ಹೊಸ ಪತ್ರಿಕೆಗಳು ಜನ್ಮವೆತ್ತುತಿವೆ. ಅವುಗಳಲ್ಲಿ ಹೊಸ ಹುರುಪಿನ ಲೇಖಕರ, ಕವಿಗಳ, ಹೆಸರುಗಳೂ ಕಂಗೊಳಿಸುತ್ತವೆ. ಎಲ್ಲೆಲ್ಲಿಯೂ ಎಲ್ಲರಲ್ಲಿಯೂ "ನಾನು ಕವಿಯಾಗಬೇಕು, ಲೇಖಕನಾಗಬೇಕು, ಕೀರ್ತಿಪಡೆಯಬೇಕು, ಹೆಸರುವಾಸಿಯಾಗಬೇಕು" ಎಂಬ ಹಂಬಲವು ಮೂಡುತಿದೆ. ಇದೆಲ್ಲಾ ಸರಿಯೇ! ಆದರೆ ಕವಿಯಾಗಬೇಕಾದರೆ, ಲೇಖಕನಾಗಬೇಕಾದರೆ ಅಗತ್ಯವಿದ್ದ ಅವ್ಯಾಹತ ಅಭ್ಯಾಸವೂ ಅನವರತ ತಪಸ್ಸೂ ಅವಿರತ ಪರಿಶ್ರಮವೂ ಬೇಕೆಂದು ಬೇರೆ ಹೇಳಬೇಕೆ? ಇದಿಲ್ಲದೆ "ಕವಿಯಾಗಬೇಕು, ಲೇಖಕನಾಗಬೇಕು" ಎಂಬ ಹುಚ್ಚುಹಂಬಲದಲ್ಲಿ "ಬರಿ ಹೆಸರಿಗಾಗಿ" ಮಾಡಬಾರದ್ದನ್ನು ಮಾಡಿ ಎಷ್ಟೋ ಜನರು, ಕವಿಗಳಾಗಬಯಸುತ್ತಿದ್ದಾರೆ; ಲೇಖಕರಾಗಲೆಳಸುತ್ತಿದ್ದಾರೆ. ಇಂಥವರಲ್ಲಿ ಸುಳ್ಳು ಕವಿಗಳೂ ಇರಬಹುದು; ಕಳ್ಳ ಕವಿಗಳೂ ಇರಬಹುದು; ಕೈಗಡ ಕವಿಗಳೂ ಇರಬಹುದು; ಸೋಗಿನ ಕವಿಗಳೂ ಇರಬಹುದು. ಜೊಳ್ಳನ್ನು ತೂರಿ ಕಾಳನ್ನು ತುಂಬಿ ಕೊಳ್ಳುವಾಗ ಇಂಥವರು ಪಡೆಯಬೇಕಾದ ಸ್ಥಾನವಾವುದು?

ನನ್ನ ಕವಿತೆಗಳನ್ನು ತೆಗೆದುಕೊಂಡು ಕೆಲ ಕೆಲ ಗೆಳೆಯರು, ಆಪ್ತರು, ಸುಪ್ರಸಿದ್ಧ ವ್ಯಾಪಾರಸ್ಥರು, ಅಪರಿಚಿತರು, ದೂರದವರು ಕವಿಗಳಾಗಿದ್ದಾರೆ. ಲೇಖಕರಾಗಿದ್ದಾರೆ. ಇದರಿಂದ ಇವರಿಗೆ ಬಂದ ಲಾಭವೇನು? ಎಂದು ಯಾರಾದರೂ ಕೇಳಬಹುದು. ಉತ್ತರವು ಮೇಲೆಯೇ ಇದೆ. ಜೊಳ್ಳು ಕೀರ್ತಿಗಾಗಿ, ಗೊಳ್ಳು ಹೆಸರಿಗಾಗಿ ಇಂಥವರು ಹೀಗೆ ಮಾಡುತ್ತಿರುವರು. ಇದರಿಂದ ಒಮ್ಮೊಮ್ಮೆ ಲಾಭಕ್ಕಿಂತ ಹಾನಿಯಾಗುವ ಸಂಭವವೇ ಹೆಚ್ಚು. ಹಿತಕ್ಕಿಂತ ಅಹಿತವಾಗುವ ಸಂದರ್ಭವೇ ಹೆಚ್ಚು.

ಶ್ರೀ. ಅನ್ನದಾನೇಶ್ವರ ಕುಪಸ್ತ, ಗುಡೂರ ಇವರು ತಮ್ಮ 'ಶರಣ ಸಂದೇಶ' ದ ತಾ. ೨೦-೯-೩೭ ರ ಸಂಚಿಕೆಯಲ್ಲಿ "ಯತ್ನಿಸು" ಎಂಬ ಒಂದು ಕವಿತೆಯನ್ನು ತಮ್ಮ (ಕುಪಸ್ತ) ಹೆಸರಿನಿಂದ ಪ್ರಕಟಿಸಿದ್ದಾರೆ. ಈ ಕವಿತೆಯನ್ನು ನಾನು ನಾಲ್ಕೈದು ವರುಷಗಳ ಹಿಂದೆ ರಬಕವಿಯಲ್ಲಿ ಇಂಗ್ಲಿಷ್ ಶಾಲೆಯ ಶಿಕ್ಷಕನಿದ್ದಾಗ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಇಂಗ್ಲಿಷ್ ಕವಿತೆಯಿಂದ ಅನುವಾದಿಸಿದ್ದೆ. ಅಲ್ಲದೆ ಇದು ಈ ಮೊದಲೇ 'ಶಿವಾನುಭವ' ಪತ್ರಿಕೆಯಲ್ಲಿ ಪ್ರಕಟವಾಗಿದೆ. ಹೀಗಿರಲು ಶ್ರೀ. ಕುಪಸ್ತ ಅನ್ನದಾನೇಶ್ವರರವರು ತಮ್ಮ ಹೆಸರಿನಿಂದ ಈ ಕವಿತೆಯನ್ನು ಪ್ರಕಟಿಸುವ ಸಾಹಸವನ್ನು ಹೇಗೆ ಮಾಡಿದರೋ ಹೇಳಲಾರೆ!

ಅಲ್ಲದೆ ಇವರು ಇದೇ ಕವಿತೆಯನ್ನು ಆಶ್ವೀನ ಕಾರ್ತಿಕ ಮಾಸದ (ಹುಬ್ಬಳ್ಳಿಯಲ್ಲಿ ಹೊರಡುವ) 'ವೀರವಾಣಿ' ಯಲ್ಲಿಯೂ ತಮ್ಮ ಹೆಸರಿನಿಂದ ಪ್ರಕಟಿಸಿದ್ದಾರೆ. ಇದರ ಬಗ್ಗೆ ನಾನು ಮೊನ್ನೆ ವೀರವಾಣಿಯ ಸಂಪಾದಕರಿಗೆ ಒಂದು ಪತ್ರವನ್ನು ಬರೆದಿರುವೆ. ಇಂದು ಅಕಸ್ಮಾತ್ತಾಗಿ ತಮ್ಮ 'ಶರಣ ಸಂದೇಶ' ದ ಹಳೆಯ ಸಂಚಿಕೆಗಳನ್ನು ಮಗುಚುತ್ತಿರಲು ಈ ಕವಿತೆಯು ಕಣ್ಣಿಗೆ ಬಿದ್ದಿತು.

ಶ್ರೀ ಕುಪಸ್ತರವರು ನನ್ನ ಅನೇಕ ಕವಿತೆಗಳಲ್ಲಿ ಇದೊಂದನ್ನೇ ಏಕೆ ಎತ್ತಿಹಾಕಿರುವರೋ ತಿಳಿಯಲಾರದು. ಇದರಂತೆ ಉಳಿದ ಕವಿತೆಗಳನ್ನು ಎತ್ತಿಹಾಕಿದ್ದರೂ ಬರುವಂತಿತ್ತು. ಅವರು ಈ ಕವಿತೆಯು ತಮ್ಮದೆಂದೂ ತಮ್ಮಿಂದಲೇ ರಚಿತವಾಗಿರುವುದೆಂದೂ ಸಿದ್ಧಮಾಡಿಕೊಡಲಿ, ಅದಕ್ಕೆ ನನ್ನ ಸಂತೋಷವೇ ಇದೆ. ಇದೆಲ್ಲದರ ಬಗ್ಗೆ ಅವರು 'ಶರಣ ಸಂದೇಶ' ಪತ್ರಿಕೆಯ ಮುಖಾಂತರವಾಗಿ ಉತ್ತರಕೊಡಲಿ.

ಹೀಗೆನ್ನುವದರಿಂದ ಶ್ರೀ. ಕುಪಸ್ತರವರಿಗಿಂತ ನಾನು ಶ್ರೇಷ್ಠನೆಂದಾಗಲಿ, ಮಹಾಕವಿಯೆಂದಾಗಲಿ ಅರ್ಥವಲ್ಲ. ಇನ್ನುಮುಂದೆ ಸಾಹಿತ್ಯದಲ್ಲಿ ಈ ಬಗೆಯ ವಾಙ್ಮಯಚೌರ್ಯವು ಘಟಿಸಬಾರದೆಂಬ ಸದುದ್ದೇಶದಿಂದ ಈ ಪತ್ರವನ್ನು ತಮಗೆ ಬರೆದಿರುವೆ.

ದಯವಿಟ್ಟು ಈ ಪತ್ರಕ್ಕೆ ತಮ್ಮ ಶರಣ ಸಂದೇಶದ ಮುಂದಿನ ಸಂಚಿಕೆಯಲ್ಲಿ ಸ್ಥಳ ದೊರೆಯಬೇಕೆಂದು ವಿನಂತಿ.

ಬೆಳಗಾವ
೧೨-೧೧-೩೭

ತಮ್ಮ,
ಈಶ್ವರ ಸಣಕಲ್ಲ.

ನನ್ನ ವಿಳಾಸ— ಈಶ್ವರ ಮ. ಸಣಕಲ್ಲ
ಕೊತವಾಲಗಲ್ಲಿ, ಮನೆ ನಂಬರ ೩೮೪೧ ಬೆಳಗಾವ.

---

—ಮೈಸೂರಲ್ಲಿ ರಾಸಾಯನಿಕ ಪದಾರ್ಥಗಳನ್ನು ಉಂಟು ಮಾಡಲು ೧೦ ರೂ. ಗಳ ಒಂದು ಶೇರಿನ (ಪಾಲಿನ) ೨॥ ಲಕ್ಷ ಸೇರುಗಳುಳ್ಳ ೨೫ ಲಕ್ಷ ರೂ. ಗಳ ಬಂಡವಾಳದ ಒಂದು ಲಿಮಿಟೆಡ್ ಕಂಪನಿಯು ಏರ್ಪಟ್ಟು ಈಗಾಗಲೇ ಅದರ ಸೇರುಗಳು ಕೊಳ್ಳಲ್ಪಡುತ್ತಲಿವೆ.

—ಈಗ ಅರಳೆ ಧಾರಣೆ ಇಳಿದುದರಿಂದ ಅದೇ ಪ್ರಕಾರ ರೇಲ್ವೆಚಾರ್ಜ ಇಳಿಸಬೇಕೆಂದು ಇಂಡಿಯನ್ ಮರ್ಚಂಟ್ಸ ಚೇಂಬರದವರು ಪ್ರಯತ್ನಿಸುತ್ತಿದ್ದಾರೆ.

—ಕಳೆದ ಶನಿವಾರಕ್ಕೆ ಪೂರ್ತಿಯಾದ ಒಂದು ವಾರದಲ್ಲಿ ಮುಂಬೈ ಬಂದರದಿಂದ ೧೮೦೬೪೬೭ ರೂ. ಗಳ ಬಂಗಾರವು ಪರದೇಶಗಳಿಗೆ ಹೋಯಿತು. ಇಂಗ್ಲೆಂಡವು ಬಂಗಾರದ ಚಲಾವಣೆಯನ್ನು ನಿಲ್ಲಿಸಿದಂದಿನಿಂದ ಈ ವರೆಗೆ ಒಟ್ಟು ೩೦೫೮೪೭೫೭೦೦ ರೂ. ಬಂಗಾರವು ಹಿಂದುಸ್ಥಾನದಿಂದ ಪರದೇಶಗಳಿಗೆ ಹೋಯಿತು.

—ಬಾರ್ಶಿ ಹತ್ತಿರ ಮಹಮ್ಮದ ದಾದಾಭಾಯಿ ಎಂಬ ಮು ಸಲ್ಮಾನನು ಪಂಢರಪುರ ಯಾತ್ರೆಗೆ ಹೋಗುತ್ತಿದ್ದ ಒಬ್ಬ ಸ್ತ್ರೀಯಳ ಮೇಲೆ ಅತ್ಯಾಚಾರ ನಡೆಸಿದನೆಂದು ಆತನ ಮೇಲೆ ವ್ಯಾಜ್ಯನಡೆದಿದೆ.

**ಟಂಕಸಾಲೆಯಲ್ಲಿ ಕಳವು.**

ಹೈದರಾಬಾದ ಸಂಸ್ಥಾನದ ಟಂಕಸಾಲೆಯಲ್ಲಿ ೬೦ ಸಾವಿರ ರೂ. ಗಳ ಕಳವಾಗಿದ್ದಿತು. ಶೋಧಮಾಡಲು ೫೭೭೫೦ ರೂ. ಗಳ ನೋಟುಗಳು ಒಬ್ಬನಲ್ಲಿ ದೊರೆತವು.

—ಬಂಗಾಲ ಸರಕಾರವು ರಾಜಕೈದಿಗಳೆಲ್ಲರನ್ನೂ ಬಿಡದಿದ್ದುದರಿಂದ ಶ್ರೀ. ಸುಭಾಷಚಂದ್ರ ಬೋಸರು ಅಸಮಾಧಾನವನ್ನು ವ್ಯಕ್ತಗೊಳಿಸಿದರು.

—ಗಾಂಧೀಜಿಯವರ ಪ್ರಯತ್ನದಿಂದ ಬಂಗಾಲದ ೧೧೦೦ ಸ್ಥಾನಬದ್ಧ ರಾಜಕೈದಿಗಳು ಬಿಡುಗಡೆಹೊಂದಿದರಷ್ಟೆ. ಇದಕ್ಕಾಗಿ ಲೋಕಶಾಹಿ ಸ್ವರಾಜ್ಯ ಪಕ್ಷವು ಗಾಂಧಿಯವರನ್ನು ಅಭಿನಂದಿಸಿದೆ.


ನಮ್ಮಲ್ಲಿ ಫೋಟೋ,
ಲೈನ್ ಬ್ಲಾಕುಗಳು,
ಹಿತ್ತಾಳೆ ಮತ್ತು ಸೀಸದ
ಬ್ಲಾಕುಗಳು ಅರಗಿನ
ಶೀಲು, ಜವಾನರ ಬಿಲ್ಲೆಗ
ಳು. ದೇವರ 3 ಬಣ್ಣದ
ಪಠಗಳು, ಕ್ಯಾಲೆಂಡರು
ಗಳು, ನಿಮ್ಮ ಮನ
ಒಪ್ಪುವಂತೆ ತಯಾರಾ
ಗುತ್ತವೆ.
ಯೂಜರ್ಸ್ ಆಂಡ್ ಕಂ.
ಚಿಕ್ಕಪೇಟೆ.
ಬೆಂಗಳೂರು ಸಿಟಿ

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣಮಂದಿರದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

## The Sharana Sandesh.

ನ್ಯಾಯನಿಷ್ಠುರ, ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೨೯ನೆಯ ನವ್ಹಂಬರ್ ೧೯೩೭. | ಸಂಚಿಕೆ ೧೪

ಜನಸೇವೆಯೇ

ದೇವರಸೇವೆ.

# ಶೋಚನೀಯ ನಿಧನ.

ಹಿಂದುಸ್ಥಾನದ ಸುಪ್ರಸಿದ್ಧ ರಸಾಯನ ಶಾಸ್ತ್ರಜ್ಞರಾದ
ಸರ್. ಜಗದೀಶಚಂದ್ರ ಬೋಸರು
ತಾ. ೨೩ ನೆಯ ದಿನ ಮೃತಪಟ್ಟರು.

# ಬಾಗಲಕೋಟೆಯಲ್ಲಿ ಮುಸಲ್ಮಾನರ ದೊಂಬೆ!

ತಾ. ೨೩ ನೆಯ ದಿನ ರಾತ್ರೆ ೨೦೦ ಜನ ಮುಸಲ್ಮಾನರು
"ಶಿವಾನಂದ" ನಾಟಕ ಮಂದಿರವನ್ನು ಮುತ್ತಿ
ಇಲೆಕ್ಟ್ರಿಕ್ ಬಲ್ಪುಗಳನ್ನು ಒಡೆದು
ಸಾಹಿತ್ಯ ಸಾಮ್ರಾಜ್ಯ ನಾಟಕ ಸಂಘದವರಿಗೆ
ಗಾಯಗೊಳಿಸಿದರು.

ದೇಹವೇ

ದೇವಾಲಯ.



# ಶರಣ ಸಂದೇಶ

THE SHARANA SANDESHA.



## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೨೯ನೆಯ ನವ್ಹಂಬರ್ ೧೯೩೭. | ಸಂಚಿಕೆ ೧೪


## ಮಹತ್ವದ ಸುದ್ದಿಗಳು.

—ಲಖನೌ ವಿಶ್ವವಿದ್ಯಾಲಯದ ಕಟ್ಟಡಗಳ ಮೇಲೆ ರಾಷ್ಟ್ರ ಧ್ವಜವನ್ನು ಇರಿಸಬೇಕಾಗಿ ಗೊತ್ತಾಯಿತು.

—ಲಂಡನ್ನಿನಲ್ಲಿ ಕ್ರೈಸ್ತ ಗುರುಗಳು ಮಹಾತ್ಮಾ ಗಾಂಧಿಯವರ ಆರೋಗ್ಯಾಭಿವೃದ್ಧಿಗಾಗಿ ದೇವರ ಪ್ರಾರ್ಥನೆಯನ್ನು ಮಾಡಿದರು.

—ಸರ್. ಜಗದೀಶಚಂದ್ರ ಬೋಸರ ನಿಧನದಿಂದ ಡಾ. ರವೀಂದ್ರನಾಥ ಟಾಗೋರವರು, ಸರ್. ರಾಮನ್, ಸೌ॥ ಸರೋಜನಿದೇವಿ ಮೊದಲಾದ ರಾಷ್ಟ್ರದ ಮುಖಂಡರೂ ಬಂಗಾಲದ ಗವ್ಹರ್ನರರೂ ತಮಗಾದ ದುಃಖವನ್ನು ಪ್ರದರ್ಶಿಸಿದ್ದಾರೆ.

—ಪ್ಯಾಲಿಸ್ಟಾಯಿನ್‌ದಲ್ಲಿಯ ಬ್ರಿಟಿಶರ ಧೋರಣವನ್ನು ಗ್ರೇಟ್‌ಬ್ರಿಟನ್ ಮುಸ್ಲಿಂ ಸಂಘದವರು ಲಂಡನ್ನಿನಲ್ಲಿ ಸೇರಿ ನಿಷೇಧಿಸಿದರು.

—ಕಾರವಾರ ಜಿಲ್ಲಾ ಕಲೆಕ್ಟರ್ ಶ್ರೀ. ದೀಕ್ಷಿತ ಇವರು ಕೋರ್ಟಿಗೆ ಅವಮಾನಗೊಳಿಸಿದರೆಂಬ ಅಪರಾಧಕ್ಕಾಗಿ ೫೦೦ ರೂ. ಗಳ ಅರ್ಥದಂಡಕ್ಕೆ ಗುರಿಯಾದರು.

—ಮಿರಜ ಸಂಸ್ಥಾನದಲ್ಲಿ ಕಾಂಗ್ರೆಸ್ ಕಮಿಟಿಗಳ ಮೇಲಿದ್ದ ನಿರ್ಬಂಧವು ನಿವಾರಣೆ ಮಾಡಲ್ಪಟ್ಟಿತು.

—ಬೆಳಗಾವಿ ಶ್ರೀ. ಲಿಂಗರಾಜ ಕಾಲೇಜಕ್ಕೆ ಮುಂಬೈ ಪ್ರಾಂತದ ಮುಖ್ಯ ಮಂತ್ರಿಗಳಾದ ಶ್ರೀ. ಖೇರ ಇವರು ಬರುವ ತಿಂಗಳು ಕೊನೆಯ ವಾರದಲ್ಲಿ ಬರುವವರಿದ್ದಾರೆ.

—ಧಾರವಾಡ ಜಿಲ್ಲಾ ಕಲೆಕ್ಟರರಾದ ಶ್ರೀ. ಭಿಡೆ ಇವರು ಹಾವೇರಿಯಲ್ಲಿ ಆ ತಾಲೂಕಿನ ರೈತರಿಗೆ ನೀವು ಯಾವ ಸರಕಾರಿ ನೌಕರರಿಗೂ ಲಂಚಕೊಡಬೇಡಿರಿ. ಮತ್ತು ಕೊಡಿಸಬೇಡಿರಿ. ಎಂದು ಉಪದೇಶಮಾಡಿದರು.

—ಚೀನ ಸರಕಾರವು ರಶಿಯಾ ಸರಕಾರದಿಂದ ೫೦ ಯುದ್ಧದ ವಿಮಾನುಗಳನ್ನು ಹೊಂದಿದೆ.

—ಬಂಗಾಲದ ಗವ್ಹರ್ನರರಾಗಿ ಬರುವ ಲಾರ್ಡ ಬ್ರೈಬರ್ನರವರು ಅಧಿಕಾರವನ್ನು ಸ್ವೀಕರಿಸಿದನಂತರ ಅಂದಮಾನ ಕೈದಿಗಳನ್ನು ಕರೆಸುವ ಯೋಚನೆ ಮಾಡಲಾಗುವುದೆಂದು ಪ್ರಕಟವಾಗಿದೆ.

—ಗಾಂಧೀಜಿಯವರ ಪ್ರಕೃತಿಯು ಸುಧಾರಿಸುತ್ತಲಿದೆ. ಪಂಡಿತ ಮಾಲವೀಜಿಯವರು ಗಂಗಾ ತಟಾಕದಲ್ಲಿದ್ದುದರಿಂದ ಅವರ ಪ್ರಕೃತಿಯು ಎಷ್ಟೋ ಮಟ್ಟಿಗೆ ಸುಧಾರಿಸಿದೆ. ಈಗ ಕಾಶಿಗೆ ಬಂದಿದ್ದಾರೆ.

—ದಿಲ್ಲಿ ಪ್ರಾಂತಿಕ ಕಾಂಗ್ರೆಸ್ ಕಮಿಟಿ ಸಭಾಸದರಾದ ಶ್ರೀ. ಸ್ವಾಮಿ ಸರೂಪಾನಂದರವರು ಇನ್ನು ಮೂರು ತಿಂಗಳು ಯಾವ ರಾಜಕೀಯ ಕಾರ್ಯಕಲಾಪಗಳಲ್ಲಿಯೂ ಸೇರಕೂಡದೆಂದು ಅವರನ್ನು ಪ್ರತಿಬಂಧಿಸಲಾಗಿದೆ.

—ಮುಖ್ಯ ಮಂತ್ರಿಗಳಾದ ಶ್ರೀ. ಖೇರರು ಅರ್ಥಸಚಿವರಾದ ಶ್ರೀ. ಲಟ್ಠೆಯವರು ಡಿಶಂಬರ ೨೪ ನೆಯ ತಾರೀಖಿನಿಂದ ೨೯ ನೆಯ ತಾರೀಖಿನ ವರೆಗೆ ಬೆಳಗಾವ, ಧಾರವಾಡ, ಕಾರವಾರ ಜಿಲ್ಹೆಗಳಲ್ಲಿ ಸಂಚರಿಸುವರು.

—ಶಾಸನ ಭಂಗದ ಕಾಲದಲ್ಲಿ ಸರಕಾರಕ್ಕೆ ಸೇರಿಸಿಕೊಂಡ ಹಣ ಸಾಧಾರಣ ೧ ಲಕ್ಷ ೩೦ ಸಾವಿರ ರೂ. ಆಗಬಹುದೆಂದೂ ಅದನ್ನು ತಿರುಗಿ ಕೊಡಲು ಮುಂಬೈ ಸರಕಾರವು ನಿರ್ಧರಿಸಿದೆಯೆಂದೂ ತಿಳಿಯುತ್ತದೆ.

—ಮುಖ್ಯ ಮಂತ್ರಿಗಳಾದ ಶ್ರೀ. ಖೇರರ ಕಡೆಗೆ ಸಾತಾರಾ ಜಿಲ್ಹೆಯ ಒಬ್ಬ ಇನಾಮದಾರರು ೪ ಆಣೆಗಳನ್ನು ಕಳಿಸಿ ತಾವು ಕಾಂಗ್ರೆಸ್ ಸದಸ್ಯರಾಗುತ್ತೇವೆಂದು ತಿಳಿಸಿದ್ದಾರೆ. ಮಂತ್ರಿಗಳು ಅದನ್ನು ಸಾತಾರಾ ಜಿಲ್ಲಾ ಕಾಂಗ್ರೆಸ್ ಕಮಿಟಿ ಕಡೆ ಕಳಿಸಿದ್ದಾರೆ.

—ಮುಂಬೈ ಅಸೆಂಬ್ಲಿಯ ಅಧಿವೇಶನವು ಜನವರಿ ೭-೭ ನೆಯ ತಾರೀಖಿಗೆ ಪ್ರಾರಂಭವಾಗಿ ಮಾರ್ಚ ಮೊದಲನೆಯ ವಾರದ ಕೊನೆಯವರೆಗೆ ನಡೆಯಬಹುದೆಂದು ಊಹಿಸಲಾಗಿದೆ.

—ಅಲಹಾಬಾದ ವಿದ್ಯಾಪೀಠದ ಮೇಲೆ ಪಂಡಿತ ಜವಾಹರಲಾಲ ನೆಹರುರವರ ಹಸ್ತದಿಂದ ರಾಷ್ಟ್ರಧ್ವಜವನ್ನು ನಿಲ್ಲಿಸಲಾಯಿತು.

# ನನ್ನ ಆದರ್ಶ ಸಮಾಜ.

(ಡಾ. ಅಂಬೇಡಕರರ ಭಾಷಣ.)



ಹಿಂದುಗಳಲ್ಲಿಯ ಬ್ರಾಹ್ಮಣಾದಿ ವರ್ಣಭೇದಗಳು ಜನರ ಸಾರ್ವಜನಿಕ ಜೀವನ ಕ್ರಮವನ್ನು ಘಾತಕಗೊಳಿಸಿವೆ. ಹಿಂದುಗಳ ವರ್ಣಭೇದವು ಜನಾಭಿಪ್ರಾಯವನ್ನು ಹತ್ತಿಕ್ಕಿದೆ. ವರ್ಣಭೇದವು ಸದ್ಗುಣಗಳ ಅಭಿವೃದ್ಧಿಗೆ ಪ್ರತಿಬಂಧವನ್ನುಂಟುಮಾಡಿದೆ. ಈ ಮೇಲು ಕೀಳುಗಳ ಕಲ್ಪನೆಯಿಂದುಂಟಾದ ವರ್ಣಭೇದವು ಗುಣಿಗಳನ್ನು ಪ್ರಶಂಸಿಸಲು ಅಡ್ಡಿಮಾಡಿದೆ. ಹೊಟ್ಟಿಗಿಲ್ಲದೆ ಬಳಲುವವರಿಗೆ ದಾನಮಾಡದಂತೆ ಪ್ರತಿಬಂಧಗೊಳಿಸಿದೆ.

ದಾನವೇನೋ ಸದ್ಗುಣವೆಂದು ಹಿಂದುಗಳು ಹೇಳುತ್ತಾರೆ. ಆದರೆ ಆ ತಮ್ಮ ದಾನವೃತ್ತಿಯು ತಮ್ಮ ವರ್ಣದವರಲ್ಲಿ ಮಾತ್ರವೇ ಆಚರಣಿಗೆ ಬರುವಂತೆ ಕಟ್ಟುಮಾಡಿದ್ದಾರೆ. ಹಿಂದುಗಳಲ್ಲಿ ಪ್ರತಿಯೊಂದು ವರ್ಣದವರೂ ತಮ್ಮ ತಮ್ಮ ವರ್ಣದವರನ್ನೇ ಮುಂದೆ ತರಲು ಪ್ರಯತ್ನಿಸುತ್ತಾರೆ. ತಮ್ಮ ವರ್ಣದ ಪ್ರಮುಖರನ್ನೇ ಹಿಂಬಾಲಿಸಲು ಸಂತೋಷಿಸುತ್ತಾರೆ. ತಮ್ಮ ತಮ್ಮ ವರ್ಣ ಮತ್ತು ಉಪವರ್ಣದವರ ಹಿತಾರ್ಥವಾಗಿ ದೇಶದ ವಿರುದ್ಧ ವಿಶ್ವಾಸಘಾತಮಾಡಿದವರಿಲ್ಲವೆ? ಹಿಂದುಗಳ ಸಮಾಜರಚನೆಯೇ ವರ್ಣ ಮೂಲಕವಾದ ಸಂಕುಚಿತ ಸ್ವಭಾವದ್ದಾಗಿದೆ.

## ಸ್ವಾತಂತ್ರ್ಯ, ಸಮಾನತೆ, ಬಂಧುತ್ವ.

ಹಿಂದು ಸಮಾಜದ ಮೂಲವಾದ ವರ್ಣಭೇದವು ಅನರ್ಥಕರವಾದುದೆಂದೇ ನನ್ನ ದೃಢಾಭಿಪ್ರಾಯ. ಹಾಗಾದರೆ ನಿಮ್ಮ ಸಮಾಜರಚನೆಗೆ ಮೂಲವಾವುದು? ನಿಮ್ಮ ಆದರ್ಶ ಸಮಾಜವು ಹೇಗಿರುವುದು? ಎಂದು ನೀವು ಕೇಳಬಹುದು. ನನ್ನ ಆದರ್ಶ ಸಮಾಜವು ಸ್ವಾತಂತ್ರ್ಯ, ಸಮಾನತೆ ಮತ್ತು ಬಂಧುತ್ವಗಳಿಂದ ಕೂಡಿದ್ದಾಗಿದೆ.

ಆದರ್ಶ ಸಮಾಜವು ಗತಿಶೀಲವುಳ್ಳದ್ದಾಗಿರಬೇಕು. ಅದು ಕೃತ್ರಿಮ ಕಟ್ಟುಗಳುಳ್ಳದ್ದಾಗಿರಕೂಡದು. ಪ್ರತಿಯೊಂದು ವ್ಯಕ್ತಿಗೂ ಆಚಾರ ವಿಚಾರ ಉಚ್ಚಾರಗಳ ಸ್ವಾತಂತ್ರ್ಯವಿರಬೇಕು. ಧನಾರ್ಜನೆಯ ಅಥವಾ ಜ್ಞಾನಾರ್ಜನೆಯ ಯಾವ ಉದ್ಯೋಗಗಳನ್ನಾದರೂ ಅನುಸರಿಸಲು ಪ್ರತಿಯೊಂದು ವ್ಯಕ್ತಿಗೂ ಜನ್ಮಸಿದ್ಧವಾದ ಸ್ವಾತಂತ್ರ್ಯವಿರಬೇಕು. ಹಿಂದುಗಳ ವರ್ಣಭೇದವು ಇಂಥ ಉದ್ಯೋಗ ಸ್ವಾತಂತ್ರ್ಯವನ್ನು ಕೊಟ್ಟಿಲ್ಲ. ಜ್ಞಾನ, ಧನ, ಮೊದಲಾದವುಗಳ ವಿಷಯದಲ್ಲಿ ಅನೇಕರನ್ನು ಪಾರತಂತ್ರ್ಯದಲ್ಲಿ ಈ ವರ್ಣಭೇದವೇ ಇಟ್ಟಿದೆ. ಇದರಿಂದ ಅನೇಕರು ಅನ್ಯರ ಇಷ್ಟದಂತೆ ದಾಸ್ಯವೃತ್ತಿಯಲ್ಲಿ ನಡೆಯಬೇಕಾಗಿದೆ.

ಸಮಾನತೆಯು ಕೂಡಾ ನನ್ನ ಆದರ್ಶ ಸಮಾಜದ ಮುಖ್ಯಾಂಗವಾಗಿದೆ. ಫ್ರಾನ್ಸಿನ ರಾಜ್ಯ ಕ್ರಾಂತಿಯು ಪ್ರಪಂಚಕ್ಕೆ ತಿಳಿಸುವುದೇನು? ಮನುಷ್ಯರೆಲ್ಲರೂ ಸಮಾನರೆಂದೂ ಅವರವರಲ್ಲಿರತಕ್ಕ ಬೌದ್ಧಿಕಾದಿ ಸಕಲ ಶಕ್ತಿಗಳೂ ಅಭಿವೃದ್ಧಿಹೊಂದಲು ಸಮಾನವಾದ ಅವಕಾಶವಿರಬೇಕೆಂದೂ ತಿಳಿಯುವುದು ನ್ಯಾಯವಾಗಿಲ್ಲವೆ? ಮನುಷ್ಯನ ಶಾರೀರಿಕ, ಮಾನಸಿಕ ಮತ್ತು ಬೌದ್ಧಿಕ ಅಭಿವೃದ್ಧಿಗಳಿಗಾಗಿ ಸಮಾನವಾದ ಸೌಲಭ್ಯಗಳನ್ನು ಕಲ್ಪಿಸಿಕೊಡುವುದು ಅಗತ್ಯವಾಗಿಲ್ಲವೆ? ಹೀಗಾದರೇನೇ ಮನಷ್ಯನ ಗುಣ ಶೀಲಾದಿಗಳು ಅಭಿವೃದ್ಧಿಯಾಗುವುದು ಶಕ್ಯವು.

ಇವುಗಳಲ್ಲಿ ಸಮಾನತೆಯನ್ನಿಡದೆ ವಿಷಮ ದೃಷ್ಟಿ ಕೋನದಿಂದ ನಡೆದದ್ದಾದರೆ ಅದರ ಪರಿಣಾಮವು ಜನಾಂಗದ ಮೇರೆ ಹೇಗಾಗಬಹುದು? ಯಾವ ವ್ಯಕ್ತಿಗೆ ಜನ್ಮದಿಂದಲೇ ಶಿಕ್ಷಣ, ಪರಿವಾರ, ವ್ಯವಸಾಯ, ಧನಿಕತೆ, ಸೌಲಭ್ಯಗಳೆಲ್ಲಾ ದೊರೆತಿರುತ್ತವೆಯೋ ಆ ವ್ಯಕ್ತಿಯೇ ಮುಂದರಿಯುವುದೂ ಇವುಗಳೆಲ್ಲಾ ಇಲ್ಲದ ವ್ಯಕ್ತಿಯು ಹಿಂದುಳಿಯುವುದೂ ಸ್ವಾಭಾವಿಕವಲ್ಲವೆ?

ಅಂತೆಯೇ ಸ್ವಾತಂತ್ರ್ಯ ಮತ್ತು ಸಮಾನತೆ ಇವು ನನ್ನ ಆದರ್ಶ ಸಮಾಜದಲ್ಲಿ ಮುಖ್ಯವಾದವುಗಳು. ಇವು ಇದ್ದ ವಿನಾ ಬಂಧುತ್ವವುಂಟಾಗುವುದಿಲ್ಲ. ಇವು ಇದ್ದಮೇಲೆ ಗುಣ ಶೀಲಾದಿಗಳೆಲ್ಲಾ ಆಯಾಯ ವ್ಯಕ್ತಿಗಳ ಸ್ಥಿತಿಗನುಗುಣವಾಗಿ ಬೆಳೆಯುತ್ತವೆ. ಆಗ ಪರಸ್ಪರ ಊಟೋಪಚಾರ, ಶರೀರ ಸಂಬಂಧ ಮೊದಲಾದವುಗಳು ಕೂಡಾ ನಡೆಯಲು ಅಭ್ಯಂತರವಿಲ್ಲ. ಈಗ ಹಿಂದುಗಳಲ್ಲಿ ವರ್ಣಭೇದದಿಂದ ಸ್ವಾತಂತ್ರ್ಯ, ಸಮಾನತೆ ಮತ್ತು ಬಂಧುತ್ವ ಇವು ಮೂರು ಇಲ್ಲವೇ ಇಲ್ಲ. ಇವುಗಳನ್ನುಂಟುಮಾಡುವುದೇ ನಮ್ಮ ಮುಖ್ಯೋದ್ದೇಶವಾಗಬೇಕು.

## ಹಿಂದು ಮತ್ತು ಅಹಿಂದು.

ಕೆಲವರು ವರ್ಣಭೇದವು ಅಗತ್ಯವೆಂದು ಹೇಳುತ್ತಿದ್ದಾರಷ್ಟೆ. ಅವರ ವಿಚಾರಸರಣಿಯು ಎಷ್ಟು ಘಾತಕವಾದುದೆಂಬುದನ್ನು ಈ ವರೆಗೆ ತಿಳಿಸಿದ್ದಾಗಿದೆ. ಕೆಲವರು ಈ ವಿಷಯವನ್ನು ಉಪೇಕ್ಷಿಸಿದ್ದಾರೆ. ಹಿಂದುಗಳಲ್ಲಿ ಜಾತಿಗಳಿದ್ದಂತೆ ಅಹಿಂದುಗಳಾದ ಮುಸಲ್ಮಾನ್, ಶೀಖ, ಕ್ರೈಸ್ತರಲ್ಲಿಯೂ ಇಲ್ಲವೆ? ಅವರಲ್ಲಿಯೂ ಅನೇಕ ಭೇದಗಳಿವೆಯೆಂದು ಅವರ ಹೇಳಿಕೆ.

ಅಹಿಂದುಗಳಲ್ಲಿ ಭೇದಗಳಿದ್ದರೂ ಹಿಂದುಗಳಲ್ಲಿಯ ಜಾತಿಯಂತೆ ಅವುಗಳಿಗೆ ಭಿನ್ನವಾದ ಅಸ್ತಿತ್ವವೇ ಇಲ್ಲ. ಒಬ್ಬ ಮುಸಲ್ಮಾನನಿಗೆ ನೀನು ಯಾರೆಂದು ಕೇಳಿದರೆ ಆತನು ತಾನು ಮುಸಲ್ಮಾನನೆಂದು ಹೇಳುತ್ತಾನೆಯೇ ವಿನಾ ತಾನು ಸಿಯಾ, ಸುನ್ನಿ, ಶೇಖ, ಮೊಗಲ ಎಂಬ ಯಾವ ಭೇದವನ್ನೂ ಹೇಳುವುದಿಲ್ಲ. ಅದೇ ಪ್ರಕಾರ ಶೀಖರಾಗಲಿ ಅಥವಾ ಕ್ರಿಸ್ತರಾಗಲಿ ತಮ್ಮ ಪಂಗಡಗಳನ್ನು ಹೇಳುವುದಿಲ್ಲ. ಹಿಂದುಗಳಲ್ಲಿ ಯಾರನ್ನಾದರೂ ಕೇಳಿದರೆ

ಆತನು ತನ್ನ ಜಾತಿಯನ್ನು ಹೇಳುತ್ತಾನೆಯೇ ವಿನಾ ತಾನು ಹಿಂದು ಎಂದು ಹೇಳುವುದೇ ಇಲ್ಲ.

ಹಿಂದುಗಳಿಗೂ ಅಹಿಂದುಗಳಿಗೂ ಇರತಕ್ಕ ಇನ್ನೊಂದು ಮಹತ್ವದ ಭೇದವೇನೆಂದರೆ— ಅಹಿಂದುಗಳು ತಮ್ಮಲ್ಲಿರತಕ್ಕ ಭೇದಗಳನ್ನು ಒಬ್ಬನು ತೆಗೆದುಹಾಕಿದರೆ ಆತನಿಗೆ ಧಾರ್ಮಿಕ ಬಹಿಷ್ಕಾರವೇನೂ ಇಲ್ಲ. ಆದರೆ ಆತನು ಶ್ರೇಷ್ಠನಾಗುತ್ತಾನೆ. ಹಿಂದುಗಳಲ್ಲಿಯಾದರೋ ತನ್ನ ಜಾತಿಭೇದವನ್ನು ತೆಗೆದುಹಾಕಿದರೆ ಆತನು ಬಹಿಷ್ಕೃತನಾಗುತ್ತಾನೆ. ಮತ್ತು ಆತನು ಎಲ್ಲರಿಂದಲೂ ನಿಂದೆಗೊಳಗಾಗುತ್ತಾನೆ. ಇದರಿಂದ ಹಿಂದುಗಳ ಜಾತಿಭೇದವು ಅಹಿಂದುಗಳಲ್ಲಿರುವ ಭೇದಕ್ಕಿಂತ ತೀರ ಭಿನ್ನವಾದುದೆಂದೇ ಸ್ಪಷ್ಟವಾಗುವುದಿಲ್ಲವೆ?

---

# ಗೋರಕ್ಷಣೆ ಹಿಂದುಸ್ಥಾನದ ಧರ್ಮ.

### ( ಶ್ರೀ. ಜಗದ್ಗುರುಗಳ ದಿವ್ಯ ಭಾಷಣ. )

ಮಹಾರಾಷ್ಟ್ರ ಗೋ ಸಂವರ್ಧನ ಪರಿಷತ್ತು ಬದಲಾಪುರದಲ್ಲಿ ಕಳೆದ ೧೨ ನೆಯ ತಾರೀಖಿನ ದಿವಸ ಜರುಗಿದಾಗ ಅಧ್ಯಕ್ಷರಾಗಿ ಶ್ರೀ. ಜಗದ್ಗುರು ಶಂಕರಾಚಾರ್ಯ ಡಾ. ಕುರ್ತಕೋಟಿಯವರು ಅತ್ಯಂತ ಮಹತ್ವವಾದ ಒಂದು ಭಾಷಣವನ್ನು ಮಾಡಿದರು. ಅದರ ಮುಖ್ಯಾಂಶವನ್ನು ಇಲ್ಲಿ ಕೊಟ್ಟಿದೆ—



ಶ್ರೀ. ಜ. ಶಂಕರಾಚಾರ್ಯ (ಡಾ. ಕುರ್ತಕೋಟಿಯವರು.)

ಈ ದೇಶದಲ್ಲಿ ನಡೆದಿರುವ ಗೋವಧೆಯಿಂದ ಹಿಂದುಗಳಾದ ನಮಗೆ ಅತ್ಯಂತ ದುಃಖವಾಗುತ್ತದೆಂದೂ ಆದಕಾರಣ ಗೋವಧೆಯನ್ನು ನಿಲ್ಲಿಸಿರೆಂದೂ ನಾವು ಸರಕಾರಕ್ಕೆ ಕೇಳಿಕೊಳ್ಳುತ್ತಿದ್ದೇವೆ. ಸರಕಾರವಾದರೋ ನಮ್ಮ ಹೇಳಿಕೆಯನ್ನು ಕೇಳಿ ಗೋಶಾಲಾ ನಿಯಂತ್ರಣ ಶಾಸನವನ್ನು ಮಾಡಲು ಮುಂದೆ ಬಂದಿದೆ. ಈ ಶಾಸನವು ಗೋಶಾಲೆಯನ್ನೇ ಹತ್ತಿಕ್ಕುವಂತಿದೆ. ಇದನ್ನು ನೋಡಿ ನಮಗೆ ನಮ್ಮ ಹೇಡಿತನದ ಕಲ್ಪನೆ ಬರುವುದು ಕೂಡಾ ಬಹು ತಾಪದಾಯಕವಾದುದಾಗಿದೆ.

### ವಿಪರೀತ ಅಲಂಕಾರ.

ಸಂಸ್ಕೃತದಲ್ಲಿ ವಿಪರೀತ ಅಲಂಕಾರ ಎಂಬುದೊಂದಿದೆ. ಧಾನ್ಯವನ್ನು ತಿನ್ನಬೇಕೆಂದು ಒಂದು ಇಲಿಯು ಒಂದು ಪುಟ್ಟಿಯಲ್ಲಿ ಹೋಗಲು ಅಲ್ಲಿ ಒಂದು ಸರ್ಪವು ಅದನ್ನು ತಿಂದಿತಂತೆ. ಇದಕ್ಕೆ ವಿಪರೀತ ಅಲಂಕಾರ ಎಂದು ಹೇಳುತ್ತಾರೆ. ಶ್ರೀ ಕೃಷ್ಣನೇ, ನಿನ್ನ ಹತ್ತಿರ ಹಾಲು ಬೆಣ್ಣೆ ಬೇಕಷ್ಟು ಇವೆಯೆಂದು ಅವುಗಳನ್ನು ಸೇವಿಸಲು ನಾನು ಬಂದರೆ ನನಗೆ ಮೊಲೆ ಹಾಲು ಕೂಡಾ (ಜನನ) ಇಲ್ಲದಂತೆ ಮಾಡಿದೆಯಲ್ಲಾ ! ಎಂದು ಹೇಳುವುದು ವಿಪರೀತ ಅಲಂಕಾರ.

ನಾನು ಒಬ್ಬ ಸಾಧುಗಳನ್ನು ಕಾಣಲು ಹೋಗುತ್ತಿದ್ದೆನು. ಆಗ ಒಬ್ಬರು ನನಗೆ ಅವರು ವಿಶೇಷವಾಗಿ ಮದ್ಯಪಾನ ಮಾಡುತ್ತಿದ್ದಾರೆಂದೂ, ಅದನ್ನು ಬಿಡಿಸಿರೆಂದೂ, ಹೇಳಿದರು ಆಗ ನಾನು ಪ್ರಯತ್ನಿಸಿ ನೋಡುತ್ತೇನೆಂದು ಅವರಿಗೆ ತಿಳಿಸಿದೆನು. ಆ ಸಾಧುಗಳಲ್ಲಿ ನಾನು ಆ ವಿಷಯವನ್ನು ಪ್ರಸ್ತಾಪಿಸಲು ಅವರು ಹೀಗೆ ಹೇಳಿದರು—

"ಮಹಾರಾಷ್ಟ್ರದ ಈಗಿನ ಶೋಚನೀಯ ಸ್ಥಿತಿಯನ್ನು ನಾನು ನೋಡಲಾರೆ. ಇದರ ಸ್ಮರಣವು ಕೂಡಾ ನನಗೆ ಆಗಬಾರದೆಂದು ನಾನು ಮದ್ಯವನ್ನು ಸೇವಿಸಿ ಎಚ್ಚರುತಪ್ಪಿ ಬೀಳುತ್ತಿದ್ದೇನೆ."

ಆಕಳ ಹಾಲಿನಿಂದ ಸ್ಮರಣಶಕ್ತಿ ಹೆಚ್ಚುತ್ತದೆಂದು ಸಾಂಗಲಿಯ ಒಬ್ಬ ವೈದ್ಯರು ಹೇಳುತ್ತಿದ್ದಾರಂತೆ. ನಾನಾದರೂ ಆಕಳ ಹಾಲನ್ನೇ ಕುಡಿಯಬಾರದೆಂದು ಹೇಳುವ ಸ್ಥಿತಿಬಂದಿದೆ. ಏಕೆಂದರೆ ನಮ್ಮ ಈಗಿನ ಶೋಚನೀಯ ಸ್ಥಿತಿಯ ಸ್ಮರಣವು ಕೂಡಾ ಅಸಹ್ಯ ವೇದನೆಯನ್ನೇ ಉಂಟುಮಾಡತಕ್ಕದ್ದಾಗಿದೆ.

### ಈ ಶೋಚನೀಯ ಸ್ಥಿತಿಗೆ ಕಾರಣ.

ನಾವು ನಮ್ಮ ಪೂರ್ವ ಸ್ಥಿತಿಯನ್ನು ಮರೆತಿರುವುದೇ ನಮ್ಮ ಈ ಶೋಚನೀಯ ಸ್ಥಿತಿಗೆ ಮೂಲ ಕಾರಣ. ಹಿಂದುಸ್ಥಾನವು ಹಿಂದುಗಳ ದೇಶವು. ಈ ದೇಶದ ಹೆಸರನ್ನು ಕೂಡಾ ಕೆಡಿಸಿ ಇದಕ್ಕೆ "ಇಂಡಿಯಾ" ಎಂಬ ಹೆಸರನ್ನಿಟ್ಟು ಹಿಂದುತ್ವದ ಸ್ಮರಣವು ಕೂಡಾ ನಮಗೆ ಇಲ್ಲದಂತೆ ಮಾಡುವ ಪ್ರಯತ್ನ ನಡೆದಿದೆ.

ಹಿಟಲರಿಗೆ 'ಸರ್' ಎಂದು ಹೇಳಿದರೆ ಆತನು ಮೆಚ್ಚುವನೇ ? ಹೇಳುವವನ ಕೈ ಹಿಡಿದು ನೀನು ನನಗೆ "ಹರ್ ಹಿಟಲರ್" ಎಂಬುದಾಗಿ ಹೇಳೆಂದೇ ಆತನಿಗೆ ತಿಳಿಸಲಿಕ್ಕಿಲ್ಲವೆ ? ಆದರೆ ನಮಗೆ ಈಗ 'ಮಿಸ್ಟರ್' ಎಂದು ಹೇಳಿಸಿಕೊಳ್ಳುವುದು ಅಭಿಮಾನದ ಸಂಗತಿಯಾಗಿದೆ.

ಯಾವ ಪದಾರ್ಥವನ್ನು ನಾವು ಉಪಭೋಗಿಸಬೇಕಾದರೂ ಅದು ನಮ್ಮ ಸ್ವಾಧೀನವಿರಬೇಕಾಗುತ್ತದೆ. ರಾಜನೇನೋ ವಿಷ್ಣುವಿನ ಅವತಾರವೇ ಸರಿ. ಆದರೆ ಆತನು ರಾಷ್ಟ್ರದ ಸೇವಕನಾಗಿರಬೇಕಲ್ಲವೆ ? ಕಳ್ಳರು ಗೋವುಗಳನ್ನು ಕಳವುಮಾಡಿಕೊಂಡು ಹೋದಾಗ ಅರ್ಜುನನನ್ನು ಮಧ್ಯ ರಾತ್ರಿಯಲ್ಲಿ ಬ್ರಾಹ್ಮಣರು ಎಬ್ಬಿಸಿಕೊಂಡು ಹೋದರು. ಹಾಗೆ ರಾಷ್ಟ್ರ ಸೇವೆಯನ್ನು ಮಾಡಲು ಸಿದ್ಧರಾಗಿರುವವರು ವಿಷ್ಣುವಿನ ಅವತಾರವೇ ಸರಿ. ರಾಜನಿಂದ ಹೀಗೆ ಸೇವೆಯನ್ನು ಮಾಡಿಸಿಕೊಳ್ಳಲು ರಾಷ್ಟ್ರದ ಪ್ರತಿಯೊಂದು ವ್ಯಕ್ತಿಗೂ ಅಧಿಕಾರವೇ ಇದೆ. ರಾಜನಿಷ್ಠೆಯ ಸ್ತುತಿ

ಗೊಳಗಾಗಿ ರಾಜನ ಕೃತಿಗಳ ಕಡೆ ಉಪೇಕ್ಷಿಸುವುದು ಹಿಂದು ಧರ್ಮಕ್ಕೆ ಮಾನ್ಯವಿಲ್ಲ.

### ಅಹಿಂಸೆಯ ರೀತಿ.

ಕಳ್ಳರ ಮನಸ್ಸು ನೋಯುವುದೆಂದು ಮನೆಯ ಮತ್ತು ಪೆಟ್ಟಿಗೆಯ ಬಾಗಿಲುಗಳನ್ನು ತೆರೆದಿಡಬೇಕೆಂಬುದೇನೂ ಅಹಿಂಸೆಯಲ್ಲ. ಹಿಂದು ಧರ್ಮಕ್ಕೆ ಈ ವಿಧವಾದ ಅಹಿಂಸೆಯು ಮಾನ್ಯವಿಲ್ಲ. ಕ್ರೂರ ಪಶು ಊರಲ್ಲಿ ಬಂದರೆ ಅನೇಕ ಪ್ರಾಣಿಗಳ ಹಿಂಸೆಯನ್ನು ತಪ್ಪಿಸುವುದಕ್ಕಾಗಿ ಆ ಕ್ರೂರ ಪ್ರಾಣಿಯನ್ನು ಕೊಲ್ಲಬೇಕೆಂದೇ ವೈದಿಕ ಧರ್ಮವು ಹೇಳುತ್ತದೆ.

ಪ್ಲೇಗಿನ ಜಂತುಗಳು ನಾಶವಾಗುವವೆಂದು ಪ್ಲೇಗಿಗೆ ಜನರು ಆಹುತಿಯಾಗುವ ಅಹಿಂಸೆಯು ಹಿಂದು ಧರ್ಮಕ್ಕೆ ಸಮ್ಮತವಲ್ಲ. ಇದು ಅಹಿಂಸೆಯ ಅತಿರೇಕ. ಇದೇ ಪ್ರಕಾರ ಸತ್ಯ, ಕ್ಷಮೆ ಮೊದಲಾದವುಗಳಲ್ಲಿಯೂ ಕ್ರಮಗಳಿವೆ. ಮಸೀದಿಯ ಮುಂದೆ ವಾದ್ಯಗಳನ್ನು ಬಾರಿಸಬಾರದೆಂಬುದು ಮುಸಲ್ಮಾನರ ಧರ್ಮಕಟ್ಟಳೆಯಾಗಿದ್ದರೆ ಅದನ್ನು ಅವರು ಪಾಲಿಸಲಿ. ಅನ್ಯರಮೇಲೆ ಆ ಕಟ್ಟಳೆಯ ಬಂಧನವೇಕೆ? ನಮಗೆ ನಮ್ಮ ಶುಭ ಕಾರ್ಯಗಳಲ್ಲಿ ಮಂಗಲವಾದ್ಯಗಳ ಅವಶ್ಯಕತೆಯಿದೆಯಷ್ಟೆ:

### ಭಯಂಕರ ದುಃಖವೆಂದರೇನು?

ಗೋವಧೆಯಿಂದ ಹಿಂದುಗಳಿಗೆ ಭಯಂಕರ ದುಃಖವಾಗುತ್ತದೆಂದು ನೀವು ನಿಮ್ಮ ಗೊತ್ತುವಳಿಯಲ್ಲಿ ಹೇಳಿದ್ದೀರಿ. ಹಾಗೆಂದರೇನು? ಹಿಂದುಗಳಿಗೆ ಭಯಂಕರ ದುಃಖವಾಗುತ್ತಾ ಇಲ್ಲವೆಂದೇ ಈಗ ಈ ದೇಶದಲ್ಲಿ ಗೋ ವಧೆ ನಡೆದಿದೆಯೆಂದು ನನಗೆ ತೋರುತ್ತದೆ, ಅನ್ಯರಿಗೆ ಭಯವನ್ನುಂಟುಮಾಡತಕ್ಕಂತಹ ದುಃಖಕ್ಕೇನೇ ಭಯಂಕರ ದುಃಖವೆಂದು ಹೇಳುತ್ತಾರೆ. ನಮಗೆ ಇಂತಹ ದುಃಖವು ಈಗ ಆಗುತ್ತಾ ಇಲ್ಲ. ಏಕೆಂದರೆ ನಮ್ಮಲ್ಲಿ ಅಂಥ ಹೇಡಿತನವಿದೆ.

ಹಿಂದುಸ್ಥಾನದಲ್ಲಿ ನಡೆದಿರುವ ಗೋಹತ್ಯವು ನಿಲ್ಲಲೇಬೇಕು. ಏಕೆಂದರೆ ಗೋಸಂರಕ್ಷಣೆಯು ಹಿಂದುಸ್ಥಾನದ ಧರ್ಮವಾಗಿದೆ. ಗೋಹತ್ಯವನ್ನು ಈ ದೇಶದಲ್ಲಿ ಮಾಡುವಂತಹ ಇಚ್ಛೆಯೇ ಉಂಟಾಗದಂತೆ ನಾವು ಮಾಡಬೇಕು. ಶಿವಾಜಿ ಮಹಾರಾಜರು ಹಾಗೆಯೇ ಮಾಡಿದರು. ನಮ್ಮಲ್ಲಿ ಬಂದವರು ನಮ್ಮಂತೆಯೇ ಆಗಬೇಕಷ್ಟೆ. ಪರದೇಶದಿಂದ ಬಂದವರು ತಮ್ಮ ಪರಕೀಯತ್ವವನ್ನು ಬಿಡಲೇಬೇಕು. ಹಾಗೆ ಬಿಡದೆ ಅವರು ಪರಕೀಯತ್ವವನ್ನು ಇಟ್ಟುಕೊಂಡೇ ಇಲ್ಲಿರುವುದೆಂದರೆ ನಮ್ಮ ನಾಶವನ್ನು ಮಾಡುವುದೇ ಆಗಿದೆ. ಇಂಗ್ರಜಿ ಕವಿ ಕಿಪಲಿಂಗ್ ಇವರೇ ನಮಗೆ East is East West is West.

ನಮ್ಮ ಸಂಸ್ಕೃತಿಯು ದೇಶ ಕಾಲ ಪರಿಸ್ಥಿತಿಗಳಿಂದ ಅತೀತವಾದುದು. ನಮಗೆ ಯಾರೂ ಪರಕೀಯರಲ್ಲ. ಇಲ್ಲಿರುವವರು ತಮ್ಮ ಪರಕೀಯತ್ವವನ್ನು ಬಿಟ್ಟುಬಿಟ್ಟರೆ ಅವರು ನಮ್ಮವರೇ ಆಗುತ್ತಾರೆ. ಹಾಗೆ ಮಾಡದೆ ಅವರು ನಮಗೆ ತೊಂದರೆ ಪಡಿಸಿದರೆ ಆಗ ನಾವು ನಮ್ಮ ತೇಜದ ಕಡೆಗೆ ಲಕ್ಷಿಸಬೇಕು. ಅನ್ಯರಿಗೆ ಒತ್ತಾಯಪಡಿಸುವ ಬಲಬೇಡ. ಆತ್ಮ ವಿಶ್ವಾಸದ ಬಲವು ನಮ್ಮಲ್ಲಿ ಹೆಚ್ಚಬೇಕು.

ವಿಕ್ಟೋರಿಯಾ ರಾಣಿಯವರ ಪತಿಯು ಒಮ್ಮೆ ಮುನಿಸು ಗುಟ್ಟಿ ಬಾಗಿಲನ್ನು ಹಾಕಿಕೊಂಡು ಕುಳಿತಿರಲು ಮೊದಲು ತಾನು ಸತಿಯೆಂಬ ಭಾವದಿಂದಲೇ ಬಾಗಿಲನ್ನು ತೆರೆಯಲು ಪ್ರಾರ್ಥಿಸಿಕೊಂಡರು, ಅದನ್ನು ಲಕ್ಷಿಸದಿದ್ದಮೇಲೆ ಗ್ರೇಟಬ್ರಿಟನ್‌ದ ರಾಣಿಯು ಬಾಗಿಲನ್ನು ತೆರೆಯಲು ಅಪ್ಪಣೆಮಾಡುತ್ತಿದ್ದಾಳೆಂದು ಹೇಳಿದರು. ಆಗ ಬಾಗಿಲು ತೆರೆಯಲ್ಪಟ್ಟಿತು. ಎಲ್ಲಾ ಕಾಲಗಳಲ್ಲಿಯೂ ಸಾತ್ವಿಕ ರೀತಿಯು ಯುಕ್ತವಾದುದಲ್ಲ.

### ಸೌಮ್ಯತನ ಹೇಗಿರಬೇಕು?

ನಮ್ಮ ಸೌಮ್ಯ ವೃತ್ತಿಯು ತೇಜೋಮಯವಾದುದಿರಬೇಕು. ಬತ್ತಿಯು ಮೆತ್ತಗಿದ್ದರೂ ಅದರ ಕೊನೆಯಲ್ಲಿ ಜ್ಯೋತಿಯಿರುವುದರಿಂದಲೇ ಅದು ಎಣ್ಣೆಯನ್ನು ಹೀರಿಕೊಳ್ಳಲು ಸಮರ್ಥವಾಯಿತು. ಆದುದರಿಂದ ನೀವು ಗೋ ಸಂರಕ್ಷಣೆಯ ವಿಷಯವನ್ನಾಗಲಿ ಅಥವಾ ಹಿಂದು ಸಂಘಟನೆಯ ಸಂಗತಿಯನ್ನಾಗಲಿ ಯಾವುದನ್ನು ತೆಗೆದುಕೊಂಡರೂ ಅದು ವ್ಯಾಪಕವೂ ತೇಜೋಮಯವೂ ಆಗಿರುವಂತೆಯೇ ಗೊತ್ತುಪಡಿಸಬೇಕು. ಸಾತ್ವಿಕತನವು ಕೂಡಾ ವಿಚಾರಯುಕ್ತವಾದುದಿರಬೇಕೇ ವಿನಾ ಅವಿಚಾರದ ಸಾತ್ವಿಕತನವಿದ್ದರೆ ಅದು ಕಾರ್ಯನಾಶಕ್ಕೇನೇ ಕಾರಣವಾಗುವುದು.

ಹಿಂದು ಜನರು ಮೂರ್ಖರೆಂಬುದು ಕಟುಕರಿಗೆ ಗೊತ್ತಿದೆ. ಗೋಪಾಷ್ಟಮಿಯ ದಿನ ಒಂದು ಆಕಳಿಗೆ ಬೇಕಷ್ಟು ರೂಪಾಯಿಗಳನ್ನು ಕೊಟ್ಟು ಕೊಂಡುಕೊಂಡು ಆಮೇಲೆ ಅನೇಕ ಆಕಳುಗಳನ್ನು ನಮಗೆ ಕಡಿಯಲಿಕ್ಕೆ ಕೊಡುತ್ತಾರೆಂಬುದು ಆ ಕಟುಕರಿಗೆ ಗೊತ್ತೇ ಇದೆ. ಗೋರಕ್ಷಣೆಯ ಇಂಥ ಅವ್ಯವಹಾರ್ಯ ಕಾರ್ಯಕ್ರಮವಿರಕೂಡದು. ನಾನು ಆಕಳ ಹಾಲನ್ನೇ ಸೇವಿಸುವೆನೆಂಬ ಕಟ್ಟನ್ನು ಮಾಡಿಕೊಂಡರೆ ಗೋರಕ್ಷಣೆಯಾಗುವುದಿಲ್ಲ. ಎಮ್ಮೆಯ ಹಾಲಿಗೆ ನೀರನ್ನು ಕೂಡಿಸಿ ಮಾರುವ ಪ್ರವೃತ್ತಿಯುಂಟಾಗಬಹುದು. ರಾಮದುರ್ಗದ ಬಾಬಾಸಾಹೇಬ ಭಾವೆ ಎಂಬುವವರು ಸ್ನಾನಮಾಡಿದ ಬ್ರಾಹ್ಮಣನ ಸಂಗಡ ಮಾತ್ರ ನಾನು ಮಾತನಾಡುವೆನೆಂದು ಗೊತ್ತುಮಾಡಿಕೊಂಡಿದ್ದರು. ಆಗ ಅನೇಕರು ಸ್ನಾನಮಾಡದೆ ಗಂಧವನ್ನು ಹಚ್ಚಿಕೊಂಡು ಅವರ ಹತ್ತಿರ ಹೋಗಲಾರಂಭಿಸಿದರು.

ಆದುದರಿಂದ ಯಾವ ನಿರ್ಬಂಧವೂ ಇಲ್ಲದೆ ಗೋರಕ್ಷಣೆಯ ವಿಷಯದಲ್ಲಿ ಎಲ್ಲರೂ ಸೇರುವಂಥ ಕಾರ್ಯಕ್ರಮಗಳನ್ನು ಗೊತ್ತುಪಡಿಸಿರಿ. ಪ್ರತಿಯೊಬ್ಬರೂ ಗೋಸೇವಕರಾಗಬೇಕು. ಗೋಸಂರಕ್ಷಣೆಯ ಸಂಘದಲ್ಲಿ ಎಲ್ಲರೂ ಸಭಾಸದರಾಗುವಂತೆ ಅವಕಾಶವಿರಬೇಕು.

### ಹಿಂದು ಸಂಸ್ಕೃತಿಯ ವೈಶಿಷ್ಟ್ಯ.

ಅನ್ಯರನ್ನು ಸಂಹಾರಮಾಡದೆ ತಾನು ನಾಶಹೊಂದದೆ ಅನ್ಯರ ಬೆಳವಣಿಗೆಗೆ ಸಹಾಯಮಾಡುವುದೇ ಹಿಂದು ಸಂಸ್ಕೃತಿಯ ಮುಖ್ಯ ವೈಶಿಷ್ಟ್ಯವು. ಅತ್ತಿ, ಅರಳಿ, ಆಲದ ಮರಗಳ ಮೇಲೆ ಬೇರೆ ಗಿಡಗಳು ಹುಟ್ಟುತ್ತಿರುವುದರಿಂದಲೇ ಅವು ಪೂಜ್ಯ ವೃಕ್ಷಗಳಾಗಿವೆ.

ಪ್ರಾಣಿಗಳಲ್ಲಿ ಗೋವಿನಷ್ಟು ಹಿತಕರವಾದ ಪ್ರಾಣಿಯು ಬೇರೊಂದಿಲ್ಲ. ಅದರ ರಕ್ಷಣೆಗಾಗಿ ಎಲ್ಲ ಮತಧರ್ಮದವರೂ ಸೇರುವಂತಹ ಕಾರ್ಯಕ್ರಮವನ್ನೇ ಗೊತ್ತುಮಾಡಿರಿ. ನೀವು ಸರಕಾರದ ಕಡೆಗೆ ಕಳಿಸುವ ಪ್ರಾರ್ಥನಾ ಪತ್ರಿಕೆಯಮೇಲೆ ನಿಮ್ಮ ಕಾರ್ಯನಿಷ್ಠೆಯಭಾರವಿರಲಿ. ಇಲ್ಲದಿದ್ದರೆ ಅದು ಸರಕಾರಿ ಅಧಿಕಾರಿಗಳ ಮುಂದಿದ್ದಾಗ ಹಾರಿಹೋಗುತ್ತದೆ. ಸರಕಾರಿ ಕಟ್ಟಡಕ್ಕೆ ಕಿಡಕಿಗಳು ಬಹಳ. ಆದಕಾರಣ ನಿಮ್ಮ ಪ್ರಾರ್ಥನೆಯನ್ನು ಮಾನ್ಯಮಾಡದಿದ್ದರೆ ನಿವೇನು ಮಾಡುವಿರೆಂಬುದನ್ನು ಹೇಳದೆ ಬಿಡಬೇಡಿರಿ. ತುಕಾರಾಮ ಮಹಾರಾಜರು ಹೇಳಿರುವಂತೆ "ನಾವು ಮೇಣದಗಿಂತ ಮೆತ್ತಗೆ ಮತ್ತು ವಜ್ರವನ್ನು ಭೇದಿಸುವಷ್ಟು ಕಠೋರ" ಇದ್ದೇವೆಂಬುದನ್ನು ಸಿದ್ಧಮಾಡಿಕೊಡಿರಿ.

---

# ಇಲಾಖೆಯ ಗವ್ಹರ್ನರರ ಪಗಾರ ಮತ್ತು ಭತ್ತೆ.

| ಅನುಕ್ರಮ ನಂಬರು. | ಇಲಾಖೆಯ ಹೆಸರು. | ವಾರ್ಷಿಕ ಪಗಾರು. | ಹೊಸ ಸಾಮಾನ ಖರೀದಿ. | ಸಾಮಾನ ಸ್ವಚ್ಛತೆ ಹಾಗು ದುರಸ್ತಿ | ದಂಡಿನ ಸೆಕ್ರೆಟರಿ ಮತ್ತು ಅವರ ಖಾತೆ. | ವೈದ್ಯ ಮತ್ತು ಅವರ ಖಾತೆ. | ಬ್ಯಾಂಡ ಮತ್ತು ಆತ್ಮ ಸಂರಕ್ಷಕರು | ಪ್ರವಾಸದ ಖರ್ಚು. | ಅವಶ್ಯ ಬಿದ್ದರೆ ಭತ್ತೆ. | ಮೋಟಾರ ಗಾಡಿ ವಗೈರೆ ವಿವಿಧ ಕಾರಣಗಳ ದೆಶೆಯಿಂದ | ಒಟ್ಟು. | ನಿಯಮಿಸಿದ ಮೇಲೆ ವಿಲಾಯತಿಯಿಂದ ಹೊರಡುವ ತಯಾರಿ. | ರಜೆಯ ದಿವಸಗಳಲ್ಲಿ ತಿಂಗಳ ಭತ್ತೆ. |
|---|---|---|---|---|---|---|---|---|---|---|---|---|---|
| - | - | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ಪೌಂಡು | ರೂ. |
| (೧) | ಮದ್ರಾಸ. | ೧೨೦೦೦೦ | ೧೪೦೦೦ | ೨೧೫೦೦ | ೧೧೨೦೦೦ | ೩೬೬೦೦ | ೧೬೯೦೦೦ | ೧೧೩೦೦೦ | ೧೮೦೦೦ | ೯೨೦೦೦ | ೫೭೬೧೦೦ | ೨೦೦೦ | ೪೦೦೦ |
| (೨) | ಮುಂಬೈ. | ೧೨೦೦೦೦ | ೨೩೦೦೦ | ೨೫೦೦೦ | ೧೩೬೦೦೦ | ೩೩೬೦೦ | ೧೨೩೦೦೦ | ೬೫೦೦೦ | ೨೫೦೦೦ | ೧೦೮೦೦೦ | ೫೩೮೬೦೦ | ೨೦೦೦ | ೪೦೦೦ |
| (೩) | ಬಂಗಾಲ. | ೧೨೦೦೦೦ | ೨೦೫೦೦ | ೩೪೦೦೦ | ೧೨೧೦೦೦ | ೩೪೮೦೦ | ೧೫೦೦೦೦ | ೧೨೨೦೦೦ | ೨೫೦೦೦ | ೧೦೦೦೦೦ | ೬೦೭೩೦೦ | ೨೦೦೦ | ೪೦೦೦ |
| (೪) | ಸಂ. ಪ್ರಾಂತ. | ೧೨೦೦೦೦ | ೪೦೦೦ | ೧೪೫೦೦ | ೧೧೬೦೦೦ | - | - | ೧೨೫೦೦೦ | ೧೫೦೦೦ | ೨೩೦೦೦ | ೨೯೭೫೦೦ | ೧೮೦೦ | ೪೦೦೦ |
| (೫) | ಪಂಜಾಬ. | ೧೦೦೦೦೦ | ೩೦೦೦ | ೧೦೫೦೦ | ೮೮೦೦೦ | - | - | ೬೦೦೦೦ | ೧೨೦೦೦ | ೨೧೭೦೦ | ೧೯೫೨೦೦ | ೧೫೦೦ | ೪೦೦೦ |
| (೬) | ಬಿಹಾರ. | ೧೦೦೦೦೦ | ೪೫೦೦ | ೧೩೦೦೦ | ೭೫೦೦೦ | - | - | ೬೦೦೦೦ | ೬೦೦೦ | ೨೧೭೦೦ | ೧೮೦೨೦೦ | ೧೫೦೦ | ೪೦೦೦ |
| (೭) | ಮಧ್ಯ ಪ್ರಾಂತ. | ೭೨೦೦೦ | ೨೯೦೦ | ೯೮೦೦ | ೬೧೦೦೦ | - | - | ೨೬೦೦೦ | ೬೦೦೦ | ೨೬೬೦೦ | ೧೨೨೩೦೦ | ೧೨೦೦ | ೩೦೦೦ |
| (೮) | ಆಸಾಮ. | ೬೬೦೦೦ | ೧೦೦೦ | ೪೦೦೦ | ೬೩೦೦೦ | - | - | ೫೫೦೦೦ | ೬೦೦೦ | ೧೪೧೦೦ | ೧೪೩೧೦೦ | ೧೨೦೦ | ೨೭೫೦ |
| (೯) | ಸರಹದ್ದ ಪ್ರಾಂತ. | ೬೬೦೦೦ | ೧೭೦೫೦ | ೫೦೦೦ | ೬೮೦೦೦ | - | - | ೧೮೦೦೦ | ೬೦೦೦ | ೧೪೦೦೦ | ೧೧೨೮೫೦ | ೧೨೦೦ | ೨೭೫೦ |
| (೧೦) | ಸಿಂಧಪ್ರಾಂತ. | ೬೬೦೦೦ | ೧೦೦೦ | ೪೦೦೦ | ೫೯೦೦೦ | - | - | ೩೦೦೦೦ | ೮೦೦೦ | ೧೭೮೦೦ | ೧೧೯೮೦೦ | ೧೨೦೦ | ೨೭೫೦ |
| (೧೧) | ಓರಿಸಾ. | ೬೬೦೦೦ | ೨೫೦೦ | ೮೦೦೦ | ೪೦೦೦೦ | - | - | ೩೫೦೦೦ | ೬೦೦೦ | ೧೧೫೦೦ | ೧೦೩೦೦೦ | ೧೨೦೦ | ೨೭೫೦ |

## ಗಾಂಧೀಜಿಯವರ ಉಪದೇಶ.

(೧) ನಾನು ಬದುಕಿರುವವರೆಗೂ ಸತ್ಯಾಗ್ರಹ ಧರ್ಮದ ಉಪದೇಶವನ್ನೇ ಮಾಡುತ್ತಿರುವೆನು.

(೨) ನಮ್ಮ ಪ್ರಾಚೀನ ಋಷಿಗಳು ತಮ್ಮ ಆತ್ಮ ಬಲವನ್ನು ಹೆಚ್ಚಿಸಿಕೊಳ್ಳಲು ದೇಹಕಷ್ಟವನ್ನು ಸಹಿಸಿ ಕೊಳ್ಳುತ್ತಿದ್ದರು.

(೩) ದುಷ್ಟರು ನಮಗೆ ಎಂತಹ ಶಾರೀರಿಕ ದುಃಖವನ್ನು ಉಂಟುಮಾಡಿದರೂ ನಾವು ಅದನ್ನು ಸಹಿಸಿಕೊಳ್ಳಬೇಕೇ ವಿನಾ ಅವರ ಇಷ್ಟವನ್ನು ಮಾತ್ರ ಮಾನ್ಯಮಾಡಬಾರದು.

—ಯಂಗ್ ಇಂಡಿಯಾ. ತಾ. ೧೬-೬-೧೯೨೦

## ಲಂಚದ ಹಾವಳಿ ಮತ್ತು ಕಾಂಗ್ರೆಸ್ ಸರಕಾರ.

ಈ ದೇಶದ ರಾಜ್ಯಭಾರದಲ್ಲಿ ಲಂಚದ ಹಾವಳಿಯೊಂದು ಅತ್ಯಂತ ಅಪಾಯಕರವಾದುದಾಗಿದೆ. ಜನಸಾಮಾನ್ಯದಲ್ಲಿರುವ ಅಜ್ಞಾತೆಯೇ ಅನೇಕ ಅಧಿಕಾರಿಗಳ ಈ ಲಂಚದ ಹಾವಳಿಗೆ ಮೂಲಕಾರಣವು. ಯಾವ ಭಾಗದಲ್ಲಿ ಲಂಚದ ಹಾವಳಿಯು ಹೆಚ್ಚಿದೆಯೋ ಅಲ್ಲಿಯ ಜನಸಾಮಾನ್ಯವು ಹೆಚ್ಚು ಅಶಿಕ್ಷಿತ ಸ್ಥಿತಿಯಲ್ಲಿದೆಯೆಂದು ಹೇಳಬಹುದು.

ಬಡವರ ಆರ್ಥಿಕ ಸ್ಥಿತಿಯನ್ನು ಸುಧಾರಿಸಬೇಕೆಂಬುವವರು ಈ ಲಂಚದ ಹಾವಳಿಯಿಂದಾಗುತ್ತಿರುವ ಹಾನಿಯನ್ನು ಬಿಡಿಸುವುದೂ. ಅಗತ್ಯವಾಗಿದೆ. ಕಾಂಗ್ರೆಸ್ ಪಕ್ಷವು ಅಧಿಕಾರವನ್ನು ಸ್ವೀಕರಿಸಿದನಂತರ ಏಳು ಪ್ರಾಂತಗಳಲ್ಲಿಯೂ ಹೆಚ್ಚುಕಡಿಮೆಯಾಗಿ ಈ ವಿಷಯದ ಕಡೆಗೇನೋ ಲಕ್ಷಿಸಿದ್ದಾಗಿದೆ. ಆದರೆ ಇನ್ನು ಮೇಲೆ ಪರಿಣಾಮಕಾರಿಯಾದ ಕಾರ್ಯ ಜರುಗಬೇಕಾಗಿದೆ.

ಸಂಯುಕ್ತ ಪ್ರಾಂತವು ಈ ವಿಷಯದಲ್ಲಿ ಮುಂದರಿದಿದೆ. ಒಬ್ಬ ಹಿಂದಿ ಐ. ಸಿ. ಎಸ್. ಅಧಿಕಾರಿಗಳನ್ನೇ ಈ ಲಂಚದ ಹಾವಳಿಯನ್ನಡಗಿಸಲು ನಿಯಮಿಸಿ ಯೋಗ್ಯವಾದ ರೀತಿಯಲ್ಲಿ ಪ್ರಯತ್ನಿಸಲಾರಂಭಿಸಿದೆ. ಮದ್ರಾಸ್ ಸರಕಾರವೂ ಈ ವಿಚಾರವಾಗಿ ಹೆಚ್ಚುಲಕ್ಷಿಸಿ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳ ಮಂತ್ರಿಗಳಾದ ಶ್ರೀ. ಗೋಪಾಲರೆಡ್ಡಿಯವರು ಸರಿಯಾದ ಎಚ್ಚರಿಕೆ ಕೊಟ್ಟದ್ದಾರೆ

ಮುಂಬೈ ಸರಕಾರವೂ ಲಂಚದ ಹಾವಳಿಯು ಅಡಗಬೇಕೆಂದು ಒಂದು ಪ್ರಕಟನೆಯನ್ನೇನೋ ಹೊರಡಿಸಿದೆ. ಆದರೆ ಪರಿಣಾಮಕಾರಿಯಾದ ಯಾವ ಕಾರ್ಯವನ್ನೂ ಕೈಕೊಂಡಿಲ್ಲ. ಅಂಥ ಪ್ರಕಟನೆಗಳಿಂದಲೇ ಈ ಹಾವಳಿಯು ಅಡಗುವುದಿಲ್ಲ. ಜನರು ಇನ್ನೂ ಬಹು ಅಶಿಕ್ಷಿತ ಸ್ಥಿತಿಯಲ್ಲಿದ್ದಾರೆ. ಪೋಲಿಸ, ರಜಿಸ್ಟರ, ರೆವಿನ್ಯು ಮೊದಲಾದ ಶಾಖೆಗಳಲ್ಲಿ ಅನೇಕರಿಂದ ನಡೆಯುತ್ತಿರುವ ಈ ಲಂಚದ ಹಾವಳಿ ನಿಲ್ಲಬೇಕಾದರೆ ಇದಕ್ಕಾಗಿಯೇ ಪ್ರತಿಯೊಂದು ತಾಲೂಕು ಸ್ಥಳದಲ್ಲಿಯೂ ಗುಪ್ತ ಶೋಧಕರನ್ನು ನಿಯಮಿಸಬೇಕು. ಈ ಹಾವಳಿಯನ್ನು ಅಡಗಿಸಲು ಯಾವ ಯಾವ ಏರ್ಪಾಟುಗಳನ್ನು ಮಾಡಬೇಕೆಂಬ ವಿಚಾರವಾಗಿ ಯೋಚಿಸಲು ತಜ್ಞರ ಒಂದು ಸಮಿತಿಯನ್ನು ನಿಯಮಿಸಬೇಕು. ಹೀಗೆ ಮುಂಬೈ ಸರಕಾರದಿಂದ ಯೋಗ್ಯವಾದ ಏರ್ಪಾಟೇನಾದರೂ ಆಗುವುದೆ?

## ಫೆಡರೇಶನ್ ವಿರೋಧಿಸುವ ಸಿದ್ಧತೆ.

ಪುಣೆಯಲ್ಲಿ ತಾ. ೨೧ ನೆಯ ದಿವಸ ಶ್ರೀ. ಭುಲಾಭಾಯಿ ದೇಸಾಯಿಯವರು ಫೆಡರೇಶನ್ನಿಗೆ ಹೇಗೆ ವಿರೋಧಿಸಬೇಕೆಂಬ ವಿಚಾರವಾಗಿ ಒಂದು ಮನನೀಯ ವ್ಯಾಖ್ಯಾನ ಮಾಡಿದರು. ಅದರ ಮುಖ್ಯಾಂಶ ಹೀಗಿದ್ದಿತು.—

" ಮಹಾತ್ಮಾ ಗಾಂಧಿಯವರು ಈ ದೇಶದ ರಾಜಕಾರಣದಲ್ಲಿ ಪ್ರವೇಶಿಸಿದನಂತರ ಕಳೆದ ೧೭ ವರುಷಗಳಲ್ಲಿ ಅತ್ಯದ್ಭುತವಾದ ರಾಜಕೀಯ ಜಾಗೃತಿಯನ್ನುಂಟುಮಾಡಿದರು. ಹಳ್ಳಿಯ ಗುಡಿಸಲಿನವರೆಗೆ ರಾಜಕಾರಣವನ್ನು ಮುಟ್ಟಿಸಿದರು. ಜನರು ಶಿಕ್ಷಿತರಲ್ಲದಿದ್ದರೂ ತಮ್ಮ ಮತವನ್ನು ಯಾರಿಗೆ ಕೊಟ್ಟರೆ ತಮ್ಮ ಹಿತವಾಗುತ್ತದೆಂಬುದಾದರೂ ಅವರಿಗೆ ತಿಳಿಯುವಷ್ಟು ರಾಜಕೀಯ ಜಾಗೃತಿ ಅವರಲ್ಲುಂಟಾಯಿತು. ಇದೇನೂ ಸಾಮಾನ್ಯವಾದುದಲ್ಲ. ನಾವು ಕಳೆದ ೨೦ ವರುಷಗಳಲ್ಲಿ ಮಾಡಿದ ಪ್ರಯತ್ನದಿಂದ ಇಂಥ ಮಹತ್ವದ ಪ್ರಯೋಜನವಾಗಿದೆ. ಇದರಿಂದಲೇ ಕಳೆದ ಚುನಾವಣೆ ಕಾಲಕ್ಕೆ ३ ಕೋಟಿ ಜನರ ವಿಶ್ವಾಸವನ್ನು ನಾವು ಸಂಪಾದಿಸಿದೆವು.

ಸುಶಿಕ್ಷಿತರೆಂಬುವವರಲ್ಲಿಯೇ ಅನೇಕರು ತಪ್ಪು ದಾರಿಯಲ್ಲಿ ಹೋದರು. ೧೯೩೦ ರಲ್ಲಿ ನಾಶಿಕದ ಕಲೆಕ್ಟರರು ವಕೀಲರೇ ಮೊದಲಾದ ಸುಶಿಕ್ಷಿತರನ್ನು ಕರೆಯಿಸಿ ನಿಮ್ಮ ಮಕ್ಕಳು ರಾಜಕೀಯ ಈ ಚಟುವಟಿಕೆಯಲ್ಲಿ ಸೇರದಂತೆ ಮಾಡಿರೆಂದು ತಿಳಿಸಿದರು. ಅವರ ಮಾತಿಗೆ ಅನೇಕರು ಒಪ್ಪಿದರೆಂಬುದು ನನಗೆ ಗೊತ್ತಿದೆ. ಅದೇ ಕಲೆಕ್ಟರರಿಗೆ ನಾನು ೨-೩ ವರುಷಗಳ ಮೇಲೆ ಹೀಗೆ ಕೇಳಿದೆನು— " ನೀವು ನಿಮ್ಮ ದೇಶದ ಸ್ವಾತಂತ್ರ್ಯಕ್ಕೆ ಲೋಪವುಂಟಾಗುವ ಪ್ರಸಂಗ ಬಂದಾಗ ನಿಮ್ಮಲ್ಲಿಯ ಪಾಲಕರಿಗೆ ನೀವು ಹೀಗೆಯೇ ಹೇಳುತ್ತಿದ್ದಿರೋ? ಕಳೆದ ಮಹಾ ಯುದ್ಧದಲ್ಲಿ ೨೦ ವರುಷಗಳ ಮೇಲಿನ ತರುಣನು ಮಾರ್ಗಗಳಲ್ಲಿ ಓಡಾಡುತ್ತಿದ್ದುದು ಹೇಡಿತನದ ಲಕ್ಷಣವೆಂದು ನಿಮಗೆ ತೋರುತ್ತಿರಲಿಲ್ಲವೆ?"

### ಸ್ವಾವಲಂಬಿಗಳಾಗಿರಿ.

ನಮ್ಮ ಜನರು ಇನ್ನೂ ಪರಾವಲಂಬನಾಪ್ರಿಯರು. ಅವರಿಗೆ ತಮ್ಮ ಕಾರ್ಯವನ್ನು ಅನ್ಯರು ಮಾಡಬೇಕೆಂದೇ ತೋರುತ್ತದೆ. ಜರ್ಮನ್, ಅಮೇರಿಕಾ, ಅಫಗಾಣಿಸ್ಥಾನ ಮೊದಲಾದ ಜಗತ್ತಿನ ಯಾವ ರಾಷ್ಟ್ರದ ಜನರನ್ನೇ ಆಗಲಿ ನೀವು ಯಾರೆಂದು ಅವರನ್ನು ಕೇಳಿದರೆ ಅವರು ಅಮೇರಿಕನ್ ಅಥವಾ ಜರ್ಮನ್, ಎಂದು ತಮ್ಮ ದೇಶದ ಹೆಸರನ್ನು ಹೇಳುವರು. ಆದರೆ ಹಿಂದುಸ್ಥಾನದಲ್ಲಿ ನೀವು ಯಾರೆಂದು ನಿಮ್ಮನ್ನು ಕೇಳಿದರೆ ನಾವು " ಚಿತ್ಪಾವನ ಬ್ರಾಹ್ಮಣ" ಎಂದು ಹೇಳುವಿರಿ! ಬಂಗಾಲಿ, ಗುಜರಾಥಿ, ಎಂದು ಹೇಳಿದರೂ ಹೇಳಬಹುದು.

ಜಾತಿಯ ಅಥವಾ ಪ್ರಾಂತದ ಅಭಿಮಾನವನ್ನು ಬಿಟ್ಟ ವಿನಾ ಉಜ್ವಲವಾದ ಭವಿತವ್ಯವು ತೋರಲಾರದು. ನನ್ನ ಮುಂಬೈ ಮಿತ್ರರು (ಬ್ಯಾ. ಜಮನಾದಾಸರು) ಫೆಡರೇಶನ್ ನಮ್ಮ ಮೇಲೆ ಬಂದೇ ಬರುತ್ತದೆಂದು ನಿಮಗೆ ಆಗಲೇ ತಿಳಿಸಿದ್ದಾರೆ. ಹೀಗೆ ಹೇಳುವುದೆಂದರೆ ಒಂದು ರೀತಿಯಿಂದ ಫೆಡರೇಶನ್ ವಿಚಾರವಾಗಿ ಒಪ್ಪಿಗೆಯನ್ನೇ ಕೊಟ್ಟಂತಾಗುವುದು. ನಾವು ನ್ಯಾಯಬದ್ಧವಾದ ಈಗಿನ ಎಲ್ಲ ಮಾರ್ಗಗಳಿಂದಲೂ ಅದಕ್ಕೆ ವಿರೋಧವಾಗಿ ಪ್ರಯತ್ನಿಸುತ್ತೇವೆ. ಅಗತ್ಯ ಕಂಡರೆ ಸತ್ಯಾಗ್ರಹವನ್ನೂ ನಾವು ಪ್ರಾರಂಭಿಸುವೆವು. ನೀವು ಆತ್ಮ ವಿಶ್ವಾಸದಿಂದ ಸಿದ್ಧರಾಗಿ ಮುಂದೆ ಬರುವಿರೆಂದೇ ನನ್ನ ನಂಬಿಕೆ. "

## ಮೈಸೂರು ದಿವಾನರ ವಿಚಾರ ಸರಣಿ.

ಮೈಸೂರು ಪಟ್ಟಣದ ವರ್ತಕರು ತಾ. ೨೫ ನೆಯ ದಿವಸ ಮೈಸೂರು ದಿವಾನರಾದ ಸರ್. ಮಿರ್ಜಾ ಇಸ್ಮಾಯಿಲ್‌ರವರಿಗೆ ಒಂದು ವಿಜ್ಞಾಪನಾ ಪತ್ರಿಕೆಯನ್ನು ಅರ್ಪಿಸಿದರು. ಅದಕ್ಕೆ ಉತ್ತರವಾಗಿ ದಿವಾನರು ಮಾಡಿದ ಭಾಷಣದಲ್ಲಿ ಹೀಗೆ ಹೇಳಿದರು—



ಮೈ. ದಿವಾನರವರು.

"ಮಹಾರಾಜರು ನನಗೆ ಮಾರ್ಗದರ್ಶಕರು. ಅವರ ರಾಜ್ಯದ ಘನತೆ ಹೆಚ್ಚಲು ಪ್ರಯತ್ನಿಸುವವರಲ್ಲಿ ನಾನೇನೂ ಹಿಂದುಳಿಯುವವನಲ್ಲ. ನಾನು ಈ ರಾಜ್ಯದಲ್ಲಿ ಇನ್ನೂ ಕೆಲವು ಕಾಲ ನನ್ನ ಸೇವೆಯನ್ನು ಅರ್ಪಿಸಬೇಕೆಂದಿದ್ದೇನೆ. ಆದರೆ ತಾವು ತೋರಿಸುತ್ತಲಿರುವ ಈ ಪ್ರೇಮಾದರಗಳ ಮಧ್ಯದಲ್ಲಿಯೇ ನಾನು ಸೇವಾ ನಿವೃತ್ತನಾದರೆ ಅದು ನನಗೆ ಉಚಿತವಾದ ಪ್ರತಿಫಲವೆಂದೂ ತಿಳಿಯುತ್ತೇನೆ.

ಈಗ ಈ ರಾಜ್ಯದಲ್ಲಿ ನಡೆಸಿರುವ ಚಟುವಟಿಕೆಗಾರರ ಉದ್ದೇಶವು ರಾಜ್ಯಭಾರವನ್ನೇ ತಲೆ ಕೆಳಗೆ ಮಾಡುವುದಾಗಿದೆ. ಮಹಾರಾಜರ ಘನತೆಗೂ ರಾಜ್ಯಭಾರಕ್ಕೂ ಕಳಂಕವನ್ನು ತರತಕ್ಕದ್ದಾಗಿದೆ. ನೀವು ಇಂಥ ಚಟುವಟಿಕೆಯನ್ನು ಮಾನ್ಯಮಾಡಲಾರಿರೆಂದೇ ನಾನು ದೃಢವಾಗಿ ನಂಬಿದ್ದೇನೆ.

### ದಿವಾನರ ಆತ್ಮ ಸ್ತುತಿ.

ಶಾಂತತೆಯಿಂದಲೂ ಸುವ್ಯವಸ್ಥೆಯಿಂದಲೂ ಮುಂದುವರಿಯುವಂತೆ ಮಾಡುತ್ತಿರುವ ಈಗಿನ ರಾಜ್ಯಭಾರದ ಪದ್ಧತಿಯನ್ನೇ ನೀವು ಒಪ್ಪುವಿರೆಂದು ನನ್ನ ನಂಬಿಕೆ. ಈಗಿನ ಈ ಚಟುವಟಿಕೆಗಾರರು ಕಾಂಗ್ರೆಸ್ಸಿನ ನಿಜವಾದ ಸೇವಕರಲ್ಲ. ಕಾಂಗ್ರೆಸ್ಸಿಗೆ ಕಲಂಕವನ್ನು ತರುವವರು. ನಾನೇ ನಿಜವಾದ ಕಾಂಗ್ರೆಸ್ ಸೇವಕನು. ಕಾಂಗ್ರೆಸ್ಸಿನ ವಿಧಾಯಕ ಕಾರ್ಯಗಳನ್ನು ಈ ರಾಜ್ಯದಲ್ಲಿ ನಾನು ಈ ವರೆಗೂ ಮಾಡುತ್ತಾ ಬಂದಿದ್ದೇನೆ. ಇನ್ನು ಮುಂದೆಯೂ ಮಾಡುವೆನು.

### ಕಾಂಗ್ರೆಸ್ಸಿನವರ ನಿಂದೆ.

ಇಲ್ಲಿ ಚಟುವಟಿಕೆಯನ್ನು ನಡೆಸುತ್ತಿರುವ ಕಾಂಗ್ರೆಸ್ಸಿನವರೆಂದು ಹೇಳಿಕೊಳ್ಳುತ್ತಿರುವವರು ಮಹಾರಾಜರಿಗೆ ಅವಿಧೇಯರಾಗಿದ್ದಾರೆ. ಜನಸಾಮಾನ್ಯದ ಮನಸ್ಸಿನಲ್ಲಿ ವಿಷಬೀಜವನ್ನು ಬಿತ್ತುವವರಾಗಿದ್ದಾರೆ. ಪರ ಪ್ರಾಂತಗಳಲ್ಲಿ ಈ ರಾಜ್ಯದ ವಿಚಾರವಾಗಿ ಅಪಕೀರ್ತಿಯುಂಟಾಗುವಂತೆ ಪ್ರಯತ್ನಿಸುವವರಾಗಿದ್ದಾರೆ. ಇವರು ಕಾಂಗ್ರೆಸ್ಸಿನವರೆಂದು ಹೇಳಿಕೊಳ್ಳಲು ಅರ್ಹರಲ್ಲ.

ಜನರಿಗೆ ರಾಜ್ಯಾಂಗದಲ್ಲಿ ಅಧಿಕಾರ ಬೇಕೆಂಬುದೂ ನೌಕರಿಗಳು ದೊರೆಯಬೇಕೆಂಬುದೂ ಜೀವನಕ್ಕಾಗಿ ಉದ್ಯೋಗಗಳು ಬೇಕಾಗಿವೆಯೆಂಬುದೂ ನನಗೆ ಗೊತ್ತಿದೆ. ಜನರ ಎಲ್ಲಾ ಆಕಾಂಕ್ಷೆಗಳನ್ನು ಎಂಥ ಸರಕಾರವಾದರೂ ಪೂರೈಸಿಕೊಡಲಾರದು. ಶಕ್ಯವಿರುವ ಎಲ್ಲ ಸೌಲಭ್ಯಗಳನ್ನೂ ಒದಗಿಸಿಕೊಡಲು ಯಾವಾಗಲೂ ಮಹಾರಾಜಾ ಸರಕಾರವು ಸಿದ್ಧವಾಗಿದೆ. ಆ ಪ್ರಕಾರ ಪ್ರಯತ್ನಗಳೂ ನಡೆದಿವೆ.

ಸಂಸ್ಥಾನದ ಸಂಪದಭಿವೃದ್ಧಿಗಾಗಿ ಅನೇಕ ಮಹತ್ಕಾರ್ಯಗಳು ಪ್ರಾರಂಭಿಸಲ್ಪಟ್ಟಿವೆ. ಅವುಗಳೆಲ್ಲಾ ಫಲಕಾರಿಯಾಗುತ್ತಲೂ ಇವೆ. ನಿರುದ್ಯೋಗದ ಪ್ರಶ್ನೆಯನ್ನು ಬಿಡಿಸಲು ನಾನು ಬಹು ಆತುರ ಮತ್ತು ಉತ್ಸಾಹಗಳುಳ್ಳವನಾಗಿದ್ದೇನೆ. ಸರಕಾರದ ಧೋರಣದಲ್ಲಿ ನೀವು ವಿಶ್ವಾಸವುಳ್ಳವರಾಗಿ ತಾಳ್ಮೆಯಿಂದ ನಡೆದದ್ದಾದರೆ ನಮ್ಮ ಸಂಸ್ಥಾನವು ಅಭಿವೃದ್ಧಿಗೆ ಬರುವುದು. ನೀವು ನನಗೆ ತೋರಿಸಿದ ಪ್ರೋತ್ಸಾಹಕ್ಕಾಗಿ ನಾನು ನಿಮಗೆ ತುಂಬಾ ಕೃತಜ್ಞನಾಗಿದ್ದೇನೆ."

---

ಬಾಗಲಕೋಟೆಯಲ್ಲಿ

## ಮುಸಲ್ಮಾನರ ದೊಂಬಿ.

ಇಲ್ಲಿಗೆ ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಲಿಯವರು ಬಂದು ಶಿವಾನಂದ ನಾಟಕ ಥೇಟರಿನಲ್ಲಿ "ರಾಷ್ಟ್ರವೀರ" ಎಂಬ ನಾಟಕವನ್ನು ತಾರೀಖು ೨೩ ನೆಯ ದಿವಸ ಆಡುವವರಿದ್ದರು. ರಾತ್ರಿ ೮ ಗಂಟೆ ಸಮಯಕ್ಕೆ ಸಾಧಾರಣ ೨೦೦ ಜನ ಮುಸಲ್ಮಾನರು "ಅಲ್ಲಾಹೊ ಅಕಬರ" ಎಂದು ಕೂಗುತ್ತ ಶಿವಾನಂದ ಥೇಟರಿನ ಕಡೆಗೆ ಬಂದು ಅದರಮೇಲೆ ಕಲ್ಲುಗಳನ್ನು ಎಸೆಯಹತ್ತಿದರು. ಕೆಲವು ಇಲೆಕ್ಟ್ರಿಕ್ ಬಲ್ಬುಗಳನ್ನು ಒಡೆದರು. ಬಾಗಿಲ ಮೇಲಿರುವ ಕಮಾನನ್ನು ಹರಿದು ಸುಟ್ಟರು. ನಾಟಕ ಮಂಡಲಿಯ ಅನೇಕರಿಗೆ ಗಾಯಗೊಳಿಸಿದರು.

ಇವರು ಆಡುವ "ರಾಷ್ಟ್ರವೀರ" ನಾಟಕದಲ್ಲಿ ಇಸ್ಲಾಂ ಧರ್ಮಕ್ಕೆ ಅವಮಾನಗೊಳಿಸುವ ಸಂಗತಿಗಳಿವೆಯೆಂದು ಊರಲ್ಲಿ ಯಾರೋ ಸುದ್ದಿಯನ್ನು ಹುಟ್ಟಿಸಿದ್ದರು. ಈ ನಾಟಕವನ್ನು ಮಂಡಲಿಯವರು ಈ ಮುಂಚೆ ಗದಗ, ಹುಬ್ಬಳ್ಳಿ, ವಿಜಾಪುರ ಮೊದಲಾದ ಸ್ಥಳಗಳಲ್ಲಿ ಆಡಿದ್ದಾರೆಂದು ತಿಳಿಯುತ್ತದೆ.

ಮುಸಲ್ಮಾನರ ಈ ದೊಂಬಿಯ ಸುದ್ದಿ ಊರಲ್ಲಿ ಹರಡಿದೊಡನೆ ವಿಶೇಷ ಜನರು ಕೂಡಿದರು. ರಾತ್ರಿ ೧೧ ಗಂಟೆ ಸಮಯಕ್ಕೆ ಸಾಧಾರಣ ಹತ್ತು ಸಾವಿರ ಜನರು ಥೇಟರದ ಸುತ್ತಲೂ ನೆರೆದರು. ಪೋಲಿಸರು ಸಕಾಲಕ್ಕೆ ಬಂದು ಯೋಗ್ಯ ವ್ಯವಸ್ಥೆ ಮಾಡಿದರು. ನಾಟಕವು ಆ ದಿನ ಆಡಲ್ಪಡಲಿಲ್ಲ. ನಾಟಕ ನೋಡಲಿಕ್ಕೆ ಬಂದವರ ಟಿಕಿಟಿನ ಹಣವನ್ನು ತಿರುಗಿ ಕೊಡಲಾಯಿತು.

ಓರ್ವ ಪ್ರೇಕ್ಷಕ.

---

— ಭಾಯಿಪರಮಾನಂದರು ಮೈಸೂರು ಪ್ರಾಂತದಲ್ಲಿ ಸಂಚರಿಸಿದರೆ ಹಿಂದು-ಮುಸಲ್ಮಾನರ ತಿಕ್ಕಾಟ ಹೆಚ್ಚುವುದೆಂದೂ ಅದಕ್ಕಾಗಿ ಅವರು ಬರಕೂಡದೆಂದೂ ಮೈಸೂರು ಸೀಮೆಯ ಕೆಲವರು ಸೂಚಿಸಿದ್ದಾರೆ.

—ಸೊಲ್ಲಾಪುರದ ಶ್ರೀ ಸಿದ್ಧರಾಮೇಶ್ವರ ದೇವರ ಸಂಸ್ಥೆಗೆ ಸಂಬಂಧಪಟ್ಟ ಸಾಖರ ಪೇಟೆಯಲ್ಲಿಯ ಸ್ಥಳವು ತಮ್ಮದೆಂದು ಕೆಲವು ಮುಸಲ್ಮಾನರು ವ್ಯಾಜ್ಯ ಹೂಡಿದ್ದರು. ಈ ವ್ಯಾಜ್ಯವು ಎರಡೂ ಕೋರ್ಟುಗಳಲ್ಲಿ ವಿಚಾರಣೆಯಾಗಿ ಶ್ರೀ ಸಿದ್ಧರಾಮೇಶ್ವರ ಸಂಸ್ಥೆಯ ಸ್ಥಳವೆಂದೇ ತೀರ್ಮಾನವಾಯಿತು.

—ಹತ್ತಿಯ ಮೇಲಿನ ಚಾರ್ಜನ್ನು ಕಡಿಮೆಮಾಡಬೇಕೆಂದು ಕರ್ನಾಟಕ ವಣಿಕಸಂಘದವರು ರೇಲ್ವೆ ಬೋರ್ಡಿನವರಿಗೆ ತಿಳಿಸಿದ್ದಾರೆ.

—ಪಾಂಡಿಚೇರಿಯಲ್ಲಿ ಶ್ರೀ. ಬಾಬು ಅರವಿಂದ ಘೋಷರವರು ತಾ. ೨೪ನೆಯ ದಿನ ಜನರಿಗೆ ದರ್ಶನವಿತ್ತರು. ಅವರ ದರ್ಶನಕ್ಕೆ ಹೋದ ೪೦೦ ಪ್ರಮುಖ ಜನರಲ್ಲಿ ಸರ್. ಅಕಬರ ಹೈದರಿಯವರೂ ಒಬ್ಬರು.



ಶಾ. ಶ. ೧೮೫೯ ನೆಯ ಕಾರ್ತಿಕ ಬ|| ೧೩ ಸೋಮವಾರ.

# ಗಾಂಧೀಜಿಯವರ ರಾಜಕಾರಣ.

ಮಹಾತ್ಮಾ ಗಾಂಧಿಯವರ ರಾಜಕಾರಣವು ಅಪೂರ್ವವಾದುದು. ಅದು ಕೇವಲ ಪಾಶ್ಚಾತ್ಯ ರಾಜನೀತಿಯನ್ನನುಸರಿಸಿಲ್ಲ. ಅಥವಾ ಕೇವಲ ಭಾರತೀಯ ರಾಜನೀತಿಯನ್ನವಲಂಬಿಸಿಲ್ಲ. ಇಲ್ಲವೆ ಇವೆರಡನ್ನೂ ಬಿಟ್ಟು ಬೇರೊಂದು ಹೊಸ ಶೋಧವನ್ನವಲಂಬಿಸಿಯೇ ನಡೆಯುತ್ತದೆಂದು ಹೇಳುವಂತಿಲ್ಲ. ಸತ್ಯ ಮತ್ತು ಅಹಿಂಸೆ ಎಂಬ ಕಂಬಿಗಳ ಮೇಲೆ ಗಾಂಧೀಜಿಯವರ ರಾಜಕಾರಣವೆಂಬ ಗಾಡಿಯು ನಡೆದಿದೆ. ಅದರಲ್ಲಿ ಪಾಶ್ಚಾತ್ಯ ಮತ್ತು ಪೌರ್ವಾತ್ಯ ರಾಜಕಾರಣಗಳಲ್ಲಿಯ ಉತ್ತಮೋತ್ತಮವಾದ ಎಲ್ಲ ಸುಖ ಸೌಲಭ್ಯಗಳೂ ಅಡಕವಾಗಿವೆ.

ಗಾಂಧೀಜಿಯವರು ತಮಗೆ ಅಯುಕ್ತವೆಂದು ತೋರಿದ ಸಂಗತಿಯಲ್ಲಿ ಅಸಹಕಾರಮಾಡಿ ಎಷ್ಟು ದೂರಿರಲು ಸಿದ್ಧರೋ ಅಷ್ಟೇ ತಮಗೆ ಸಮಂಜಸವೆಂದು ತೋರಿದ ಸಂಗತಿಯಲ್ಲಿ ಸಹಕಾರಮಾಡಲು ಹತ್ತಿರ ಬರಲಿಕ್ಕೂ ಸಿದ್ಧ. ಜಗತ್ತಿಗೇನೇ ಇವರ ಅಸಹಕಾರ ಅಥವಾ ಸಹಕಾರಗಳು ಅಯುಕ್ತವಾಗಿ ತೋರಿದರೂ ಇವರು ಮಾತ್ರ ತಮ್ಮ ಮಾರ್ಗವನ್ನು ಬಿಡುವವರಲ್ಲ. ಈ ವಿಧವಾದ ಸ್ವಾತಂತ್ರ್ಯವು ತಮಗೆ ಮಾತ್ರವೇ ಇದೆಯೆಂದು ಅವರು ಹೇಳುವುದಿಲ್ಲ. ತಾವು ಹೇಳುವಂತೆಯೇ ಜನರೆಲ್ಲರೂ ನಡೆಯಲೇಬೇಕೆಂದು ಅವರ ಆಗ್ರಹವಿಲ್ಲ. ಹಾಗಿದ್ದಿದ್ದರೆ ಅದು "ಸರ್ವಾಧಿಕಾರ" ದ ರೀತಿಯಾಗುತ್ತಿದ್ದಿತು. ಅದು "ಹಿಟ್ಲರ್" ಅಥವಾ "ಮುಸೋಲಿನಿ" ತತ್ವವಾಗುತ್ತಿದ್ದಿತು. ಗಾಂಧೀಜಿಯವರು ತಮಗೆ ವ್ಯಕ್ತಿ ಸ್ವಾತಂತ್ರ್ಯವನ್ನು ಎಷ್ಟು ಇಟ್ಟುಕೊಂಡಿದ್ದಾರೆಯೋ ಅಷ್ಟೇ ಇತರರಿಗೂ ಇದೆಯೆಂದೇ ಹೇಳುತ್ತಿದ್ದಾರೆ.

ಗಾಂಧೀಜಿಯವರ ರಾಜಕಾರಣವು ಅಂಧಾನುಕರಣವಲ್ಲ. ಮೂಢ ಭಕ್ತಿಯಿಂದ ಉಧೋ ಉಧೋ ಎಂದು ಸ್ತುತಿಸುತ್ತ ಹಿಂಬಾಲಿಸಬೇಕೆಂಬುದಲ್ಲ. ಅಥವಾ ವ್ಯಕ್ತಿ ಸ್ವಾತಂತ್ರ್ಯದ ಹೆಸರಿನಿಂದ ಸ್ವೇಚ್ಛಾಚಾರಕ್ಕೆ ಇಂಬುಗೊಡುವುದೂ ಅಲ್ಲ. ಪಕ್ಷಾಂಧತೆಯಿಂದ ತಪ್ಪುಗಳನ್ನು ಮುಚ್ಚಿಡುವುದು ಇವರ ರಾಜಕಾರಣದಲ್ಲಿಲ್ಲ. ಅಥವಾ ವಿರೋಧಕ್ಕಾಗಿ ಇಲ್ಲದ ಆಕ್ಷೇಪಗಳನ್ನು ಮುಂದು ಮಾಡುವುದೂ ಇವರ ರಾಜಕಾರಣಕ್ಕೆ ಮಾನ್ಯವಿಲ್ಲ. ಇಂಥ ವ್ಯಕ್ತಿಸ್ವಾತಂತ್ರ್ಯ, ಮತ್ತು ಸತ್ಯಪ್ರಿಯತೆಗಳೆಂಬ ಎರಡು ಮಗ್ಗಲುಗಳುಳ್ಳ ಇವರ ರಾಜಕಾರಣವೆಂಬ ಖಡ್ಗಕ್ಕೆ ಅಹಿಂಸೆಯೇ ಹಿಡಿಕೆಯಾಗಿದೆ. ಈ ಅಪೂರ್ವವಾದ ಖಡ್ಗವನ್ನು ಹಿಡಿದೇ ರಾಜಕೀಯ ರಣರಂಗದಲ್ಲಿ ಹೋರಾಡುವ ವೀರರು ಹೆಚ್ಚಿದಷ್ಟು ಗಾಂಧೀಜಿಯವರ ರಾಜಕಾರಣವು ಪ್ರಭಾವಶಾಲಿಯಾಗುತ್ತದೆ. ಕಳೆದ ವಾರ ಪ್ರಕಟವಾದ ಗಾಂಧೀಜಿಯವರ ಈ ಕೆಳಗಿನ ಅತ್ಯಂತ ಮಹತ್ವದ ವಿಚಾರಗಳು ಅವರ ರಾಜಕಾರಣದ ಮೇಲೆ ಹೆಚ್ಚಾದ ಬೆಳಕನ್ನು ಹಿಡಿಯತಕ್ಕವುಗಳಾಗಿವೆ.

### ಶತ್ರುವಿಗು ಕೂಡಾ ಯೋಗ್ಯವಾದ ಬೆಲೆಯನ್ನು ಕೊಡಿರಿ.

ಸ್ಥಾನಬದ್ಧ ಬಂಗಾಲಿ ಕೈದಿಗಳನ್ನು ಬಿಡುಗಡೆ ಮಾಡಿದ ವಿಚಾರವಾಗಿ ಬಂಗಾಲ ಸರಕಾರವು ಹೊರಡಿಸಿದ ಪ್ರಕಟನೆಯನ್ನು ಕುರಿತು ಗಾಂಧೀಜಿಯವರು ಒಂದು ಸ್ಪಷ್ಟೀಕರಣವನ್ನು ತಿಳಿಸಿದ್ದಾರೆ. ಅದರ ಮುಖ್ಯಾಂಶ ಹೀಗಿದೆ—

"ಬಂಗಾಲ ಸರಕಾರದ ಕೃತಿಯನ್ನು ನಾವು ಅಭಿನಂದಿಸಲೇಬೇಕು. ಕಾಂಗ್ರೆಸ್ ಪಕ್ಷದ ಕಾರ್ಯಕ್ರಮಗಳ ಒರೆಗಲ್ಲಿಗೆ ಬಂಗಾಲ ಸರಕಾರದ ಕಾರ್ಯಗಳನ್ನು ತಿಕ್ಕಿನೋಡಿ ಬಣ್ಣವನ್ನು ಕಂಡುಹಿಡಿಯುವುದು ವಿಹಿತವಲ್ಲ. ಏಕೆಂದರೆ, ಕಾಂಗ್ರೆಸ್ಸಿನ ಕಾರ್ಯಕ್ರಮವನ್ನು ಬಂಗಾಲ ಸರಕಾರವು ಮಾನ್ಯಮಾಡಿಲ್ಲ. ಆದರೂ ಅದರ ಕಾರ್ಯಕ್ರಮಗಳನ್ನು ಅನುಸರಿಸಲು ಅದು ಪ್ರಯತ್ನಿಸುತ್ತಲಿದೆ. ರಾಜಕೀಯ ಭಿನ್ನ ಪಕ್ಷದ ಶತ್ರುವಿಗು ಕೂಡಾ ಆತನ ಯೋಗ್ಯತೆಗೆ ತಕ್ಕಂತಹ ಮನ್ನಣೆಯನ್ನು ಕೊಡಲೇಬೇಕು.

ಬಂಗಾಲ ಸರಕಾರವು ಜನಾಭಿಪ್ರಾಯಕ್ಕೆ ಎಷ್ಟೋ ಮಟ್ಟಿಗೆ ಮನ್ನಣೆಯನ್ನು ಕೊಟ್ಟಿತು. ಗವ್ಹರ್ನರರು ಕೂಡಾ ಈ ವಿಷಯದಲ್ಲಿ ಬಹು ಸಹಾಯಮಾಡಿದರೆಂದು ಹೇಳದಿದ್ದರೆ ತಪ್ಪಾಗುವುದು. ಅವರ ಸಹಕಾರವಿಲ್ಲದೆ ಬಂಗಾಲದ ಮಂತ್ರಿಮಂಡಲದ ಇಷ್ಟವು ನೆರವೇರುತ್ತಿರಲಿಲ್ಲ."

ಗಾಂಧೀಜಿಯವರ ಈ ವಿಚಾರಗಳು ವಿರೋಧ ಪಕ್ಷದಲ್ಲಿರುವ ಒಳಿತುಗಳನ್ನು ಹೇಗೆ ನಿರ್ವಂಚನೆಯಿಂದ ಒಪ್ಪಿಕೊಂಡು ಅವುಗಳನ್ನು ಗೌರವಿಸಿ ಆ ಮೂಲಕ ರಾಷ್ಟ್ರಸೇವೆ ಮಾಡಬೇಕೆಂಬುದನ್ನು ಸೂಚಿಸುತ್ತವೆ. ಇಲ್ಲಿ ಸ್ವ ಪಕ್ಷದ ದುರಭಿಮಾನವಿಲ್ಲ. ಪರ ಪಕ್ಷದ ತಿರಸ್ಕಾರವಿಲ್ಲ. ಅಸಹಕಾರದ ಅಹಂಕಾರವಿಲ್ಲ. ಸಹಕಾರದ ದೈನ್ಯವಿಲ್ಲ. ಈ ವಿಧವಾದ ರಾಜಕಾರಣದ ರೀತಿನೀತಿಗಳು ಪರತಂತ್ರದಿಂದ ಬೆಂದು ಬಳಲುತ್ತಿರುವ ನಾನಾ ಪಕ್ಷಗಳ ತಿಕ್ಕಾಟದ ಈ ದೇಶಕ್ಕಂತೂ ಈಗ ಅತ್ಯಗತ್ಯವಾಗಿವೆ. ಗಾಂಧೀಜಿಯವರ ಈ ವ್ಯಾವಹಾರಿಕ ರಾಜಕಾರಣವನ್ನು ನಾವು ಎಷ್ಟರ ಮಟ್ಟಿಗೆ ಹೆಚ್ಚಾಗಿ ಅನುಸರಿಸುವೆಯೋ ಅಷ್ಟರ ಮಟ್ಟಿಗೆ ಸ್ವಾತಂತ್ರ್ಯವು ನಮಗೆ ಸಮೀಪವಾಗುತ್ತದೆ.

ಅನ್ಯ ಪಕ್ಷದವರನ್ನು ದೂಷಿಸುತ್ತ ಸ್ವ ಪಕ್ಷವನ್ನು ಸ್ತುತಿಸುತ್ತಿರುವುದೇ ಮಹಾ ದೇಶಭಕ್ತಿಯ ಲಕ್ಷಣವೆಂದು ತಿಳಿಯಕೂಡದು. ನಾವು ಪರ ಪಕ್ಷದ ಹಿತಕೃತಿಗಳನ್ನೂ ಪ್ರೇಮಾದರಗಳಿಂದ ಅಂಗೀಕರಿಸಿ ಸ್ವ ಪಕ್ಷದ ಅಸಂಗತ ಕೃತಿಗಳನ್ನು ನಿಷೇಧಿಸಲು ಸಿದ್ಧರಾದಾಗಲೇ ಗಾಂಧೀಜಿಯವರ ರಾಜಕಾರಣವನ್ನು ಅನುಸರಿಸಿದಂತಾಗುವುದು. ಹಾಗಾದಾಗಲೇ ಕಾಂಗ್ರೆಸ್ಸಿನ ನಿಜವಾದ ಅನುಯಾಯಿಗಳಾದಂತಾಗುವುದು. ಕಾಂಗ್ರೆಸ್ಸಿನ ಬಲವು ದಿನೆ ದಿನೆ ಹೆಚ್ಚುತ್ತಿರುವ ಈ ಕಾಲದಲ್ಲಿ ಅವರ ಈ ಮುಖ್ಯ ಸಿದ್ಧಾಂತವು ಜನಸಾಮಾನ್ಯದ ಆಚರಣೆಯಲ್ಲಿ ಬರುವಂತೆ ಪ್ರಯತ್ನಗಳಾಗಬೇಕು. ಅದೇ ಸ್ಪಷ್ಟೀಕರಣದಲ್ಲಿ ಗಾಂಧೀಜಿಯವರು ಹೀಗೆ ಹೇಳಿದ್ದಾರೆ—

### ಸ್ವಾಭಿಮಾನವನ್ನು ಮಾರಬೇಡಿರಿ.

"ಸ್ಥಾನಬದ್ಧ ಕೈದಿಗಳಾರೂ ತಮ್ಮ ಸಲುವಾಗಿ ಏರ್ಪಡುವ ಸಾರ್ವಜನಿಕ ಸ್ವಾಗತ ಸಮಾರಂಭ ಮೊದಲಾದವುಗಳಲ್ಲಿ ಸೇರಬಾರದು. ಮತ್ತು ಜನರಾದರೂ ಆ ರೀತಿ ಅವರಿಗೆ ಸಮಾರಂಭಗಳನ್ನು ಮಾಡಬಾರದು. ಅವರು ಸದ್ದಿಲ್ಲದೆ ರಾಷ್ಟ್ರ ಸೇವೆಯನ್ನು ಮಾಡಬೇಕೆಂದೇ ನನ್ನ ಕೋರಿಕೆ. ಅವರಿಗೆ ದೊಡ್ಡ ದೊಡ್ಡ ಔದ್ಯೋಗಿಕ ಸಂಸ್ಥೆಗಳು ಕಾರ್ಯಗಳನ್ನು ಕೊಟ್ಟು ತುಂಬಾ ಸಹಾಯಮಾಡಬೇಕು. ಅವರು ತಮ್ಮ ಕೃತಿಯಿಂದಲೂ ಅಹಿಂಸೆಯ ವಾತಾವರಣವನ್ನುಂಟುಮಾಡಬೇಕಾಗಿದೆ.

ತಮ್ಮ ಬಿಡುಗಡೆಗಾಗಿ ನಾನು ಸರಕಾರಕ್ಕೆ ಯಾವ ವಿಧವಾದ ಅಭಿವಚನವನ್ನೂ ಕೊಡಕೂಡದೆಂದು ನನಗೆ ಅವರು ತಿಳಿಸಿರುವರಲ್ಲದೆ ತಾವು ಕೂಡಾ ಹಾಗೆ ಯಾವ ಅಭಿವಚನವನ್ನೂ ಕೊಡುವವರಲ್ಲವೆಂದೂ ಹೇಳಿದ್ದಾರೆ. ನಾನಾದರೋ ಅವರ ಬಿಡುಗಡೆಗಾಗಿ ಅವರ ಸ್ವಾಭಿಮಾನವನ್ನೇನೂ ಮಾರುವವನಲ್ಲವೆಂದೇ ಅವರಿಗೆ ತಿಳಿಸಿದ್ದೇನೆ. ಆದರೆ ಸ್ವಾತಂತ್ರ್ಯ ಸಂಪಾದನೆಗಾಗಿ ಅವರು ಅಹಿಂಸಾ ಮಾರ್ಗವನ್ನನುಸರಿಸುವರೆಂದೇ ನಾನು ಈ ವಿಷಯದಲ್ಲಿ ಪ್ರವೇಶಿಸಿದೆನೆಂಬುದನ್ನು ಮಾತ್ರ ಯಾರೂ ಮರೆಯಬಾರದು.

ಬಂಗಾಲದಲ್ಲಿಯ ನನ್ನ ಕಾರ್ಯ ಇನ್ನೂ ಮುಗಿದಿಲ್ಲ. ನನಗೆ ದೇಹಾರೋಗ್ಯವು ಪ್ರಾಪ್ತವಾದೊಡನೆ ನಾನು ಪುನಃ ಬಂಗಾಲಕ್ಕೆ ಹೋಗುವೆನು. ಬಿಡುಗಡೆ ಹೊಂದದೆ ಉಳಿದಿರುವ ಕೈದಿಗಳನ್ನು ಕಂಡು ಮಾತನಾಡುವೆನು. ಅಂದಮಾನದ ಕೈದಿಗಳಿಗೂ ಇಲ್ಲಿಯ ಕೈದಿಗಳಿಗೂ ವ್ಯತ್ಯಾಸವಿದೆಯೆಂದು ಸರಕಾರವು ಹೇಳುವುದನ್ನು ನಾನಾದರೂ ಒಪ್ಪಿಕೊಳ್ಳುತ್ತೇನೆ. ಈ ವರೆಗಿನ ಕಾರ್ಯವು ತೃಪ್ತಿಕರವಾಗಿ ಸಾಗಿದ್ದಾದರೆ ನನ್ನ ಕಾರ್ಯವು ಸಂಪೂರ್ಣ ನೆರವೇರುವುದೆಂದು ನಾನು ನಂಬಿದ್ದೇನೆ."

ಗಾಂಧೀಜಿಯವರ ಈ ವಿಚಾರಗಳು ಸ್ವಾಭಿಮಾನವುಳ್ಳ ಪ್ರತಿಯೊಂದು ವ್ಯಕ್ತಿಗೂ ಮಾನ್ಯವಾಗತಕ್ಕವುಗಳೇ ಇವೆ. ವ್ಯಕ್ತಿಸ್ವಾತಂತ್ರ್ಯವನ್ನೇನೂ ಇವರು ಹತ್ತಿಕ್ಕುವುದಿಲ್ಲ. ಆದರೆ ಇವರ ರಾಜಕಾರಣಕ್ಕೆ ಅಹಿಂಸೆಯೇ ಮೂಲವಾಗಿರುವುದರಿಂದ ಅದೊಂದನ್ನು ಮಾತ್ರ ಅನುಸರಿಸಲೇಬೇಕಾಗುವುದು. ಹಿಂಸೆ ಮತ್ತು ಅಸತ್ಯಗಳಿಗೆ ಮಾತ್ರ ಇವರ ರಾಜಕಾರಣದಲ್ಲಿ ಸ್ಥಾನವಿಲ್ಲ. ಇದೇನೂ "ಸರ್ವಾಧಿಕಾರ" ದ ರೀತಿಯೆಂದು ಹೇಳಲಿಕ್ಕಾಗುವುದಿಲ್ಲ.

### ಕಮ್ಯುನಿಷ್ಟರ ಆತುರತೆ.

ಕಮ್ಯುನಿಷ್ಟರು ಸೊಲ್ಲಾಪುರ ಸೆಟಲ್‌ಮೆಂಟನಲ್ಲಿರುವ ಜನಗಳ ಮತ್ತು ಅಹಮದಾಬಾದ, ಕಾನಪುರ ಗಿರಣಿಗಳಲ್ಲಿಯ ಕೂಲಿಗಾರರ ಸುಧಾರಣೆಗಾಗಿ ಮಾಡುತ್ತಿರುವ ಸಲ್ಲದ ಚಟುವಟಿಕೆಗಳನ್ನು ಕುರಿತು ಗಾಂಧೀಜಿಯವರು ಕಳೆದ ೩೦ ನೆಯ ತಾರೀಖಿನ "ಹರಿಜನ" ಪತ್ರಿಕೆಯಲ್ಲಿ ಒಂದು ಲೇಖನವನ್ನು ಬರೆದಿದ್ದಾರೆ. ಅದರಲ್ಲಿ ಪ್ರಕಟವಾದ ಗಾಂಧೀಜಿಯವರ ಈ ಕೆಳಗಿನ ವಿಚಾರಗಳು ಅವರ ರಾಜಕಾರಣದ ರೀತಿ ನೀತಿಗಳನ್ನು ಸ್ಪಷ್ಟಗೊಳಿಸತಕ್ಕವುಗಳಾಗಿವೆ. ಗಾಂಧೀಜಿಯವರು ಆ ಲೇಖನದಲ್ಲಿ ಹೀಗೆ ಹೇಳಿದ್ದಾರೆ—

"ಸೊಲ್ಲಾಪುರ ಸೆಟಲ್‌ಮೆಂಟನಲ್ಲಿರುವ ಜನರು ಕೊಲೆಗಾರರೆಂದು ತಿಳಿದು ಅವರ ವಿಷಯದಲ್ಲಿ ನಿರ್ಬಂಧಗಳನ್ನುಂಟುಮಾಡುವುದು ವಿಹಿತವಲ್ಲ. ಅವರನ್ನು ಬಂಧುಗಳಂತೆ ತಿಳಿದೇ ಸುಧಾರಿಸುತ್ತ ಅವರಲ್ಲಿ ರಾಷ್ಟ್ರೀಯ ಭಾವನೆಯನ್ನುಂಟುಮಾಡಬೇಕು. ಹೀಗೆ ಸುಧಾರಿಸಲು ಆತುರರಾದ ಕಮ್ಯುನಿಷ್ಟರು ಕಾಂಗ್ರೆಸ್ಸಿನವರಾಗಿ ಅದರ ನೀತಿ ರೀತಿಗಳನ್ನು ಅನುಸರಿಸುವವರಾಗಿದ್ದಾರೆಯೇ? ಕಾಂಗ್ರೆಸ್ಸಿನ ಕೆಲಸಗಾರರ ಸಹಾನುಭೂತಿ ಮತ್ತು ಪೋಲಿಸ್ ಶಾಖೆ, ಸೈನ್ಯ ಶಾಖೆಗಳ ಸಹಾಯ ಇವುಗಳ ವಿನಾ ಕಾಂಗ್ರೆಸ್ ಮಂತ್ರಿಮಂಡಲವು ತೃಪ್ತಿಕರವಾದ ರೀತಿಯಲ್ಲಿ ರಾಜ್ಯಭಾರವನ್ನು ನಡೆಸಲಾರದು."

ತಪ್ಪುಗಳನ್ನು ತಿದ್ದಿಕೊಂಡು ಸುಧಾರಿಸಲು ಅನುಕೂಲವಾಗುವಂತೆಯೇ ಚಟುವಟಿಕೆಗಳು ನಡೆಯಬೇಕೇ ವಿನಾ ತಪ್ಪುಗಳು ಹೆಚ್ಚಲು ಸಹಾಯವಾಗುವ ರೀತಿಯಲ್ಲಿ ಚಟುವಟಿಕೆಗಳಿರಕೂಡದು. ವಿಧಾಯಕ ಮಾರ್ಗವೇ ಶ್ರೇಯಸ್ಕರವಲ್ಲದೆ ವಿಧ್ವಂಸಕ ಮಾರ್ಗವು ಕ್ಷೇಮಕರವಲ್ಲವೆಂಬುದನ್ನು ನಾವು ಮರೆಯಕೂಡದು. ಗಾಂಧೀಜಿಯವರು ಕಮ್ಯುನಿಷ್ಟರ ಈಗಿನ ಉಗ್ರ ಮಾರ್ಗವನ್ನು ಸ್ಪಷ್ಟವಾಗಿ ನಿಷೇಧಿಸಿದ್ದಾರೆ.

ಕಾಂಗ್ರೆಸ್ ಮಂತ್ರಿಮಂಡಲವು ಈಗ ಕೈಕೊಂಡ ಕಾರ್ಯಕ್ರಮಗಳನ್ನು ನೆರವೇರಿಸಲು ಪ್ರಯತ್ನಿಸುತ್ತಲಿದೆ. ಇದರಿಂದ ರಾಷ್ಟ್ರದ ಶಕ್ತಿಯು ಹೆಚ್ಚುವುದಿಲ್ಲವೆಂದಾಗಲಿ ಅಥವಾ ಆ ರೀತಿ ಕಾಂಗ್ರೆಸ್ ಮಂತ್ರಿಮಂಡಲವು ಕಾರ್ಯವನ್ನು ಮಾಡುವುದಿಲ್ಲವೆಂದು ತೋರಿದರಾಗಲಿ ಅದನ್ನು ಹೊರಗೆ ಕರೆಯಲು ಕಾಂಗ್ರೆಸ್ ಯಾವಾಗಲೂ ಸಿದ್ಧವಾಗಿಯೇ ಇದೆ. ಹೀಗಿರುವಾಗ ಕಮ್ಯುನಿಷ್ಟರು ಆತುರದಿಂದ ಸಲ್ಲದ ರೀತಿಯಲ್ಲಿ ನಡೆಯುವುದು ಅನುಚಿತವಲ್ಲವೆ?

### ಕಾಂಗ್ರೆಸ್ಸಿನಲ್ಲಿ ಪರಿಶುದ್ಧತೆಯುಂಟಾಗಲಿ.

ಗಾಂಧೀಜಿಯವರು ಅದೇ ಲೇಖನದಲ್ಲಿ ಹೀಗೆ ತಿಳಿಸಿದ್ದಾರೆ—"ಕಾಂಗ್ರೆಸ್ ಸಂಸ್ಥೆಯು ಬಲಶಾಲಿಯಾಗುವುದೂ ಪರಿಶುದ್ಧವಾಗುವುದೂ ಅತ್ಯಗತ್ಯ. ಕಾಂಗ್ರೆಸ್ಸಿನಲ್ಲಿ ಹೆಚ್ಚು ಜನರು ಸೇರಿದ ಮಾತ್ರದಲ್ಲಿ ಅದು ಬಲಶಾಲಿಯಾಗಲಾರದು. ಅದರಲ್ಲಿರುವ ಸದಸ್ಯರು ಸತ್ಯ ಮತ್ತು ಅಹಿಂಸೆಯ ತತ್ವಗಳನ್ನು ಅನುಸರಿಸುವವರೂ ಆಗಿರಬೇಕು. ಕಾಂಗ್ರೆಸ್ ಸಂಸ್ಥೆ ಜನಾಂಗಕ್ಕೆ ರಾಜಕಾರಣದ ಇಂಥ ಶಿಕ್ಷಣ ಕೊಡುವ ಒಂದು ವಿದ್ಯಾಲಯವೆಂದೇ ನಾನು ತಿಳಿದಿದ್ದೇನೆ. ಕಾಂಗ್ರೆಸ್ ಸಂಸ್ಥೆಯಲ್ಲಿ ಸದಸ್ಯರ ಸಂಖ್ಯೆಯನ್ನು ಸುಳ್ಳು ಸುಳ್ಳೇ ಬರೆದು ಭವ್ಯವಾಗಿ ತೋರುವಂತೆ ಮಾಡುತ್ತಿದ್ದಾರೆಂದು ಕೇಳಿದ್ದೇನೆ. ನಾವು ಸತ್ಯ ಮತ್ತು ಅಹಿಂಸೆಗಳಲ್ಲಿ ನಿಜವಾಗಿಯೂ ಶ್ರದ್ಧೆಯುಳ್ಳವರಾಗಿರುವೆವೋ? ಹಾಗಿದ್ದುದೇ ನಿಜವಾಗಿದ್ದರೆ ಈಗಿನ ಅಧಿಕಾರ ಸ್ವೀಕಾರವು ಸ್ವಾತಂತ್ರ್ಯವನ್ನು ನಮಗೆ ಹತ್ತಿರ ಮಾಡುವುದು. ಇಲ್ಲದಿದ್ದರೆ ಅಧಿಕಾರ ಸ್ವೀಕಾರವು ತಪ್ಪಾಯಿತೆಂದೇ ಸಿದ್ಧವಾಗದಿರದು."

ಗಾಂಧೀಜಿಯವರ ಈ ಸ್ಪಷ್ಟೋಕ್ತಿಗಳಿಂದ ಕಾಂಗ್ರೆಸ್ಸಿನ ಅನೇಕ ಕೆಲಸಗಾರರು ಅದರ ತತ್ವದಂತೆ ನಡೆಯಬೇಕಾದುದು ಎಷ್ಟು ಅಗತ್ಯವೆಂಬುದು ತೋರುವುದಿಲ್ಲವೆ? ಹೆಸರುವಾಸಿಗಾಗಿಯೋ ಇನ್ನಾವ ಸ್ವಾರ್ಥಕ್ಕಾಗಿಯೋ ಆ ಮಹಾ ಸಂಸ್ಥೆಯಲ್ಲಿದ್ದುಕೊಂಡು ಅಸತ್ಯವಾದ ರೀತಿಯಲ್ಲಿ ನಡೆದರೆ ರಾಷ್ಟ್ರಭಕ್ತರಾಗದೆ ರಾಷ್ಟ್ರದ್ರೋಹಿಗಳೇ ಆಗುತ್ತೇವೆಂದು ಅವರು ತಿಳಿಯಬೇಕು. ಗಾಂಧೀಜಿಯವರ ರಾಜಕಾರಣದ ಈ ರಹಸ್ಯಗಳನ್ನು ಅರಿತೇ ಅದರಲ್ಲಿಯ ಅನೇಕ ಕೆಲಸಗಾರರು ಇನ್ನಾದರೂ ನಡೆಯಲೆಂದು ನಾವು ಹಾರೈಸುತ್ತೇವೆ.

---

—ಸರ್. ಜಗದೀಶ ಚಂದ್ರ ಬೋಸರ ಶವವು ತಾ. ೨೪ ನೆಯ ದಿನ ಕಲಕತ್ತಾ ಪಟ್ಟಣಕ್ಕೆ ಬಂದಿತು. ಅದರ ಮೆರವಣಿಗೆಯ ಸಂಗಡ ೫ ಸಾವಿರ ಜನರಿದ್ದರು. ಆ ದಿನ ಅಂತ್ಯ ಸಂಸ್ಕಾರವಾಯಿತು.

—ಮುಂಬೈ "ಮಲಬಾರಹಿಲ್" ದಲ್ಲಿರುವ ೨ ಬಂಗಲೆಗಳನ್ನು ಮಾರಿ "ಚರ್ಚಗೇಟ್" ದ ಹತ್ತಿರ ಬೈಲಲ್ಲಿ ಮಂತ್ರಿಗಳಿಗೂ ಅವರ ಸೆಕ್ರೆಟರಿಗಳಿಗೂ ಇರಲಿಕ್ಕೆ ಕಟ್ಟಡಗಳನ್ನು ಕಟ್ಟಿಸಬೇಕೆಂದು ಈಗಿನ ಕಾಂಗ್ರೆಸ್ ಮಂತ್ರಿಮಂಡಲದವರು ನಿರ್ಧರಿಸಿದ್ದಾರೆ.

## ಸರ್. ಜಗದೀಶಚಂದ್ರ ಬೋಸರ ಶೋಚನೀಯ ನಿಧನ.

ಜಗಪ್ರಸಿದ್ಧರಾದ ಸರ್. ಜಗದೀಶಚಂದ್ರ ಬೋಸರವರು ತಾ. ೨೩-೧೧-೩೭ ನೆಯ ದಿವಸ ಪ್ರಾತಃಕಾಲ ಹೃದಯಕ್ರಿಯೆ ನಿಂತು ಮರಣಹೊಂದಿದರೆಂದು ತಿಳಿಸಲು ಅತ್ಯಂತ ವಿಷಾದವಾಗುತ್ತದೆ. ಇವರ ನಿವಾಸಸ್ಥಾನವಾದ ಗಿರಿದಿಹ ಎಂಬಲ್ಲಿಂದ ಕಲಕತ್ತಾ ಪಟ್ಟಣಕ್ಕೆ ಇವರ ಶವವನ್ನು ತಂದು ಅಲ್ಲಿ ಅಂತ್ಯ ವಿಧಿಯನ್ನು ನೆರವೇರಿಸಿದರು.

ಸರ್. ಜಗದೀಶಚಂದ್ರ ಬೋಸರವರು ಜಗತ್ತಿನ ರಸಾಯನ ಶಾಸ್ತ್ರಜ್ಞರಲ್ಲಿ ಒಬ್ಬ ಪ್ರಮುಖರಾಗಿದ್ದರು. ವನಸ್ಪತಿಗಳಲ್ಲಿಯೂ ಜೀವಕಳೆಯು ಹೇಗಿರುತ್ತದೆಂಬುದನ್ನು ಸಪ್ರಯೋಗಗಳಿಂದ ಸಿದ್ಧಮಾಡಿಕೊಟ್ಟು ಪ್ರಪಂಚದ ರಸಾಯನ ಶಾಸ್ತ್ರಜ್ಞರಲ್ಲಿ ಒಂದು ನೂತನ ವಿಚಾರ ಕ್ರಾಂತಿಯನ್ನುಂಟುಮಾಡಿದ್ದರು. ಇವರ ಈ ಸಂಶೋಧವು ಜಗತ್ತಿನಲ್ಲಿ ಒಂದು ಅಪೂರ್ವವಾದುದಾಗಿದ್ದಿತು. ವನಸ್ಪತಿಗಳಿಗು ಕೂಡಾ ಸುಖದುಃಖಗಳ ಸಂವೇದನವು ಹೇಗಾಗುತ್ತದೆಂಬುದನ್ನು ಇವರು ಪ್ರಯೋಗಗಳಿಂದ ತೋರಿಸುವ ಅತ್ಯಾಶ್ಚರ್ಯಕರ ಯಂತ್ರ ವಿಶೇಷವನ್ನುಂಟುಮಾಡಿದ್ದಾರೆ. ಇವರ ಈ ಶೋಧವು ಕೇವಲ ತಾತ್ವಿಕ ದೃಷ್ಟಿಯಿಂದಲೇ ಮಹತ್ವದ್ದಾಗಿರದೆ ವ್ಯಾವಹಾರಿಕವಾದ ಒಕ್ಕಲತನ, ತೋಟ, ಮೊದಲಾದ ಉದ್ಭಿಜ ಕೋಟಿಯಿಂದ ಮನುಷ್ಯ ಜಾತಿಗಾಗುವ ಹಿತಗಳನ್ನು ಸಾಧಿಸುವ ಕಾರ್ಯಗಳಿಗು ಕೂಡಾ ಸಹಾಯಕವಾದುದಾಗಿದೆ. ಇಂಥ ಅಪೂರ್ವ ಭಾರತೀಯ ಸುಪ್ರಸಿದ್ಧ ಸಂಶೋಧಕರು ನಿಧನಹೊಂದಿದುದರಿಂದ ಇಡೀ ಹಿಂದುಸ್ಥಾನವೇ ವಿಷಾದಿಸುತ್ತದೆ.

### ಸಂಕ್ಷಿಪ್ತ ಚರಿತ್ರೆ.

ಸರ್. ಜಗದೀಶಚಂದ್ರ ಬೋಸರು ಡಾಕಾ ಜಿಲ್ಲೆಯ ರಾಣಿಖಲ ಎಂಬ ಗ್ರಾಮದಲ್ಲಿ ತಾ. ೩೦-೧೧-೧೮೫೮ ನೆಯ ದಿವಸ ಜನ್ಮವೆತ್ತಿದ್ದರು. ಚಿಕ್ಕಂದಿನಿಂದಲೂ ಇವರಲ್ಲಿ ಚಿಕಿತ್ಸಕ ಪ್ರವೃತ್ತಿ ಹೆಚ್ಚು. ಹದಿನಾರನೆಯ ವರುಷದಲ್ಲಿಯೇ ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಕಲಕತ್ತಾ ಸೇಂಟ್ ಜೇವ್ಹಿಅರ್ಸ ಕಾಲೇಜಿನಲ್ಲಿ ಅಭ್ಯಾಸ ಪ್ರಾರಂಭಿಸಿ ೨೨ ನೆಯ ವರುಷದಲ್ಲಿ ಬಿ. ಏ. ಬಿ. ಎಸ್‌ಸಿ. ಪದವಿಯನ್ನು ಹೊಂದಿದರು.

ಅನಂತರ ಹೆಚ್ಚಿನ ಶಿಕ್ಷಣಕ್ಕಾಗಿ ಇಂಗ್ಲೆಂಡಿಗೆ ಹೋಗಿ ೧೮೮೨ ರಲ್ಲಿ ಬಿ. ಎಸ್‌ಸಿ. ಪರೀಕ್ಷೆಯಲ್ಲಿಯೂ ೧೮೮೪ ರಲ್ಲಿ ಕೆಂಬ್ರಿಜ್ ವಿಶ್ವವಿದ್ಯಾಲಯದ ಬಿ. ಎ. ಪರೀಕ್ಷೆಯಲ್ಲಿಯೂ ಉತ್ತೀರ್ಣರಾದರು

ಆ ಬಳಿಕ ಕಲಕತ್ತಾ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಅಧ್ಯಾಪಕರಾಗಿ ತಮ್ಮ ಅತ್ಯಂತ ಪ್ರಿಯವಾದ ಸಂಶೋಧನ ಕಾರ್ಯವನ್ನು ಪ್ರಾರಂಭಿಸಿ ಅನೇಕ ಸಾರೆ ಯುರೋಪಖಂಡದಲ್ಲಿ ಸಂಚರಿಸಿ ತಮ್ಮ ಅತ್ಯದ್ಭುತವಾದ ಶೋಧದ ಮಹತ್ವವನ್ನು ಶಾಸ್ತ್ರಜ್ಞರಿಗೆ ಮನವರಿಕೆ ಮಾಡಿಕೊಟ್ಟರು. ಇವರ ಶೋಧವು ರಸಾಯನ ಶಾಸ್ತ್ರಜ್ಞರಿಗೆ ಅತ್ಯಾಶ್ಚರ್ಯವನ್ನುಂಟುಮಾಡಿತು.

೧೯೧೭ ರಲ್ಲಿ ಇವರು ತಮ್ಮ ಸಂಶೋಧನೆಗಾಗಿ ಒಂದು "ವಿಜ್ಞಾನಮಂದಿರ" ಎಂಬುದನ್ನು ಸ್ಥಾಪಿಸಿ ಅದನ್ನು ರಾಷ್ಟ್ರಕ್ಕೇನೇ ಅರ್ಪಿಸಿದರು. ಅಲ್ಲಿಯೇ ಇವರು ಈ ೭೯ ನೆಯ ವರುಷದ ವೃದ್ಧಾಪ್ಯದಲ್ಲಿಯು ಕೂಡಾ ಸಂಶೋಧನೆಯ ಕಾರ್ಯವನ್ನು ನಡೆಯಿಸಿದ್ದರು. ವಿದ್ಯುಚ್ಛಕ್ತಿಯ ಸಂಬಂಧವಾಗಿಯೂ ಇವರು ಅನೇಕ ಶೋಧಗಳನ್ನು ಮಾಡಿದ್ದರು. ಇವರ ಆತ್ಮಕ್ಕೆ ಚಿರಶಾಂತಿಯುಂಟಾಗಲಿ.

## ಗಡಿನಾಡಿನ ಗಾಂಧಿಯವರ ಮುಂದಿನ ಕಾರ್ಯ.

ಖಾನ ಅಬ್ದುಲ್ ಗಫಾರಖಾನರವರು ವಾಯುವ್ಯ ಸರಹದ್ದಿನ ತಮ್ಮ ಪ್ರವಾಸವನ್ನು ಪೂರೈಸಿಕೊಂಡು ತಾ. ೨೬ ನೆಯ ದಿನ ಪೇಶಾವರಕ್ಕೆ ಬಂದಿದ್ದಾರೆ. ಅಲ್ಲಿ ಬೇರೆ ಬೇರೆ ವಾರ್ಡುಗಳಲ್ಲಿರುವ ಕಾಂಗ್ರೆಸ್ ಕಮಿಟಿಗಳ ಸಂಘಟನೆಯನ್ನು ಮಾಡುವ ಕಾರ್ಯದಲ್ಲಿಯೇ ತಮ್ಮ ವೇಳೆಯನ್ನು ಅವರು ಕಳೆಯುವ ವಿಚಾರವಿದೆ. ಸ್ಥಳಿಕ ಕಮಿಟಿಗಳಲ್ಲಿ ಅಲ್ಪ ಸಂಖ್ಯಾಕರರಿಗೆ ಕೆಲವು ಸ್ಥಳಗಳನ್ನು ಕಾದಿಟ್ಟು ಸಂಯುಕ್ತ ಮತದಾನ ಪದ್ಧತಿಯನ್ನೇ ಸಾಗಿಸಬೇಕೆಂದೇ ಕಾಂಗ್ರೆಸ್ ಮಂತ್ರಿಮಂಡಲದ ಉದ್ದೇಶವೆಂದು ತಿಳಿಯುತ್ತದೆ.

## ದುಃಖಪ್ರದರ್ಶನದ ಮಹಾಸಭೆ.

ತಾ. ೨೬ ನೇ ದಿನ ಲಂಡನ್ನಿನಲ್ಲಿ ರಾಮ್ಸೆ ಮ್ಯಾಕ್ಡೋನಾಲ್ಡರ ನಿಧನದಿಂದ ಸಾರ್ವಜನಿಕರಿಗಾದ ದುಃಖವನ್ನು ಪ್ರದರ್ಶಿಸಲು ನಿಶಾನೆಗಳನ್ನು ಪಾರ್ಲಿಮೆಂಟ ಮತ್ತು ಲಂಡನ್ ಬಿಲ್ಡಿಂಗುಗಳ ಮೇಲೆ ಅರ್ಧ ಏರಿಸಿದ್ದರು. ವೆಸ್ಟ ಮಿನಿಸ್ಟರ ಅಬ್ಬೇದಲ್ಲಿ ಅಂತ್ಯ ಸಂಸ್ಕಾರವಾಯಿತು. ದುಃಖಪ್ರದರ್ಶನದ ಮಹಾ ಸಭೆಯಲ್ಲಿ ರಾಜ ಪ್ರತಿನಿಧಿಯಾಗಿ ಬಂದಿದ್ದ ಡ್ಯೂಕ್ ಆಫ್ ಗ್ಲೌಸೇಸ್ಟರರೂ, ಕ್ಯಾಬಿನೆಟ್‌ಮೆಂಬರರೂ ಸಭಿಕರೊಡನೆ ತಮ್ಮ ದುಃಖವನ್ನು ಪ್ರದರ್ಶನ ಮಾಡಿದರು.

### ಬಾಗಲಕೋಟೆ ದೊಂಬಿಯ ವಿಚಾರ.

ಬಾಗಲಕೋಟಿ ಮುಸಲ್ಮಾನರು ಮಾಡಿದ ದೊಂಬೆಗೆ ಕಾರಣವಾದ ರಾಷ್ಟ್ರವೀರ ಎಂಬ ನಾಟಕದಲ್ಲಿಯ ಮುಸಲ್ಮಾನ್ ಧರ್ಮಕ್ಕೆ ಅವಮಾನಕರವಾದ ಕೆಲವು ಶಬ್ದಗಳನ್ನು ನಾಟಕದಲ್ಲಿ ಉಪಯೋಗಿಸಕೂಡದೆಂದು ಅಲ್ಲಿಯ ಮ್ಯಾಜಿಸ್ಟ್ರೇಟರು ನಾಟಕದವರಿಗೆ ಅಪ್ಪಣೆಮಾಡಿಯೇ ಅದನ್ನು ಆಡಲು ಅವಕಾಶಕೊಟ್ಟಿದ್ದರಿಂದೂ ಅದಕ್ಕೆ ಮುಸಲ್ಮಾನ್ ಮುಖಂಡರು ಒಪ್ಪಿದ್ದರೆಂದೂ ಹೀಗಿರುತ್ತಾ ಕೆಲವರು ಹೀಗೆ ದೊಂಬಿ ಮಾಡಿದ್ದು ಅಯುಕ್ತವೆಂದೂ ಒಬ್ಬರು ತಿಳಿಸುತ್ತಾರೆ.

—ಬಂಗಾಲ ಸರಕಾರದವರು ಸಾಧಾರಣ ಮೂರು ಸಾವಿರ ರಾಜಕೈದಿಗಳನ್ನು ಬಿಡುಗಡೆ ಮಾಡುವವರಿದ್ದಾರೆಂದು ಊಹಿಸಲಾಗಿದೆ.

—ಬನಾರಸದ ಹಿಂದು ಯುನಿವ್ಹರ್ಸಿಟಿಯ ಪದವೀದಾನ ಸಮಾರಂಭವು ಡಿಶೆಂಬರ ೨೮ ನೆಯ ತಾರೀಖಿನ ದಿನ ಜರುಗುವುದು. ಸುಪ್ರಸಿದ್ಧ ತತ್ವವೇತ್ತರಾದ ಸರ್. ರಾಧಾಕೃಷ್ಣರವರು ಪದವೀಧರರಿಗೆ ಘಟಿಕೋತ್ಸವ ಭಾಷಣಮಾಡುವರೆಂದು ತಿಳಿದು ಬಂದಿದೆ.

—ಹಿಂದು ಶೀಖ ನವಜೀವನ ಸಭೆಯ ೫ ಜನ ಮುಂದಾಳುಗಳಿಗೆ ಜಮ್ಮು ಸಂಸ್ಥಾನದಿಂದ ಹದ್ದುಪಾರು ಮಾಡಲಾಗಿದೆ.

—ಅಫಗಾಣಿಸ್ಥಾನದಲ್ಲಿ ಉದ್ಯೋಗ ಚಟುವಟಿಕೆಗಳು ಪ್ರಬಲವಾಗಿ ಸಾಗುವವು. ಮೊನ್ನೆ ತೆಗೆದ ಔದ್ಯೋಗಿಕ ಕಾಲೇಜದಲ್ಲಿ ೨೫೦ ವಿದ್ಯಾರ್ಥಿಗಳು ೫ ಜನ ಜರ್ಮನ್ ಪ್ರೊಫೆಸರರಿಂದ ಶಿಕ್ಷಣ ಹೊಂದುತ್ತಿರುವರು.

# ಹಿಂದುಸ್ಥಾನದ ಮೇಲೆ ವೈಮಾನಿಕ ಆಕ್ರಮಣವುಂಟಾದರೆ..?

## ಸರಕಾರದ ಸಂರಕ್ಷಣೆಯ ಯೋಜನೆ.

ವೈರಿಗಳ ವಿಮಾನಗಳು ಹಿಂದುಸ್ಥಾನದ ಮೇಲೆ ಆಕ್ರಮಣ ಮಾಡಿದರೆ ಜನರು ಯಾವ ಪ್ರಕಾರ ಸಂರಕ್ಷಣೆಮಾಡಿಕೊಳ್ಳಬೇಕೆಂಬ ಯೋಜನೆಯನ್ನು ಹಿಂದುಸ್ಥಾನ ಸರಕಾರದವರು ಪ್ರಾಂತಿಕ ಸರಕಾರಗಳ ಸಹಕಾರದಿಂದ ತೀವ್ರವೇ ಕಾರ್ಯರೂಪದಲ್ಲಿ ತರುವವರಿದ್ದಾರೆ. ಈಗಾಗಲೇ ಆ ದೇಶವ್ಯಾಪಿ ಯೋಜನೆಯ ಅಂಗವೊಂದು ಕರಾಚಿಯಲ್ಲಿ ಒಂದು ಕ್ಯಾಶ್‌ಪ್ರೂಫ್ ಕೋಣೆಯನ್ನು ಕಟ್ಟಿಸಲಾಗುತ್ತಿದೆ.

### ಹಿಂದುಸ್ಥಾನಕ್ಕೆ ಮುತ್ತಿಗೆಯ ಭೀತಿ.

ಈ ಬಗ್ಗೆ ಈ ಪ್ರಕಾರ ಹೇಳಲಾಗುತ್ತದೆ— ಭೌಗೋಲಿಕ ಸ್ಥಿತಿಯ ಪರಿಣಾಮವಾಗಿ. ಯಾವ ಯಾವ ದೇಶಗಳು ವೈಮಾನಿಕ ಆಕ್ರಮಣಕ್ಕೆ ತುತ್ತಾಗಲು ಆಸ್ಪದವುಂಟಾಗಿದೆಯೋ ಆ ದೇಶಗಳು ವಿಮಾನಗಳಿಂದ ಹೇಗೆ ಸಂರಕ್ಷಣೆ ಹೊಂದಬೇಕೆಂಬ ಉಪಾಯಗಳನ್ನು ಕಲ್ಪಿಸುವದು ಅವಶ್ಯವೇ ಆಗಿದೆ. ಇದೇ ಮೇರೆಗೆ ಹಿಂದುಸ್ಥಾನ ಸರಕಾರದವರಿಗೂ ವಿಮಾನಗಳ ಆಕ್ರಮಣದ ಗಂಡಾಂತರವು ತೋರುತ್ತಿರುವುದರಿಂದ ಅದನ್ನು ಎಷ್ಟು ಶೀಘ್ರವಾಗಿ ಎದುರಿಸಲು ಶಕ್ಯವಿದೆಯೋ ಅಷ್ಟು ಹಿತಕರವೆಂದು ಅವರು ತಿಳಿಯುತ್ತಾರೆ.

ಈ ಯೋಜನೆಯು ಇನ್ಶ್ಯೂರನ್ಸ ಪಾಲಿಸಿಯ ಯೋಜನೆಯಂತೆಯೇ ಈ ಕೆಳಗಿನಂತೆ ಇರುತ್ತದೆಂದು ಹೇಳಲಾಗುತ್ತದೆ—

"ಅಲ್ಲಲ್ಲಿ ನಿರೀಕ್ಷಕರನ್ನು ನಿಯಮಿಸಬೇಕು. ವೈರಿಗಳ ವಿಮಾನಗಳು ಬಂದ ಕೂಡಲೆ ಅವರು ಸಕಾಲಕ್ಕೆ ಜನರಿಗೆ ಎಚ್ಚರಕೊಡಬೇಕು. ನಗರಗಳಲ್ಲಿ ದೀವಿಗೆಗಳನ್ನು ಹಚ್ಚುವ ಬಗ್ಗೆ ಮೇಲ್ವಿಚಾರಣೆ ಇರಬೇಕು. ಅಂದರೆ ವೈರಿಗಳ ವಿಮಾನಗಳು ಬಂದ ಕೂಡಲೆ ಅವರು ಒಮ್ಮೆಲೆ ದೀವಿಗೆಗಳನ್ನು ಆರಿಸಿ ವೈಮಾನಿಕರಿಗೆ ಯಾವ ಸ್ಥಳದಲ್ಲಿ ಬಾಂಬುಹಾಕಬೇಕೆಂಬುದನ್ನು ತಿಳಿಯದಂತೆ ಮಾಡಬೇಕು. ಸ್ಫೋಟಕ ಬಾಂಬು, ಜ್ವಾಲಾಗ್ರಾಹಿ ವಾಯು, ಸಿಡಿಯುವ ಮದ್ದು ಮೊದಲಾದವುಗಳು ಸಂಭವಿಸದಂತೆ ನೋಡಿಕೊಳ್ಳಲು ಸಂಘಗಳನ್ನು ಸ್ಥಾಪಿಸುವದು; ಒಂದುವೇಳೆ ಸಂಭವಿಸಿ ಬೆಂಕಿಯ ಅನಾಹುತ ಒದಗಿದರೆ ಫಾಯರ್ ಬ್ರಿಗೇಡದ ಜನರನ್ನು ವಿಶೇಷ ಶಿಕ್ಷಣಕೊಟ್ಟು ಸ್ಥಾಪಿಸುವದು, ಗಂಡಾಂತರಗಳು ಬಂದರೆ ಅವುಗಳಿಂದ ಜನರನ್ನು ಸಂರಕ್ಷಿಸುವ ಸಂಘಗಳನ್ನು ಉಂಟುಮಾಡುವುದು, ವಿಷವಾಯು ಪ್ರಸಾರವಾಗದಂತೆ ವ್ಯವಸ್ಥೆಮಾಡುವುದು ಮತ್ತು ವಿಮಾನಗಳು ಏಂಬಂದರೆ ಯಾವ ಕಟ್ಟಡಗಳಲ್ಲಿ ಕುಳಿತರೆ ಆಶ್ರಯ ದೊರೆಯಬಹುದು ಮತ್ತು ವಿಷವಾಯು ಪ್ರಸರಿಸಿದರೆ ಯಾವ ಸ್ಥಳವನ್ನು ಆಶ್ರಯಿಸಬೇಕು ಮತ್ತು ಅಂಥ ಕಟ್ಟಡ ಅಥವಾ ಸ್ಥಳಗಳು ಯಾವ ಪಟ್ಟಣಗಳಲ್ಲಿ ದೊರೆಯುವವೋ ಅವುಗಳ ಸುತ್ತುಮುತ್ತು ನಿರೀಕ್ಷಣೆಮಾಡುವದು.

ಇವುಗಳಲ್ಲಿ ಮೊದಲನೆಯ ಮತ್ತು ಕಡೆಯ ವ್ಯವಸ್ಥೆಗಳನ್ನು ಪ್ರಸಂಗಕ್ಕೆ ತಕ್ಕಂತೆ ಶೀಘ್ರದಲ್ಲಿಯೇ ಒದಗುವಂಥ ಸ್ಥಳಗಳಲ್ಲಿ ಉಂಟುಮಾಡಬೇಕಾಗುವುದು. ಮತ್ತು ಅತ್ಯಂತ ಅವಶ್ಯಕವಾದ ನೀರಿನ ಪುರವಣೆ, ವಿದ್ಯುತ್ತಿನ ಸಂಗ್ರಹ ಮುಂತಾದವುಗಳ ವ್ಯವಸ್ಥೆಯನ್ನೂ ಮಾಡಬೇಕಾಗುವದು.

### ಜನರು ಸಹಕರಿಸಬೇಕು.

ಗಂಡಾಂತರಗಳು ಒದಗಿದ ಕೂಡಲೆ ಎಲ್ಲಕ್ಕೂ ಮೊದಲು ಜನರು ಪ್ರಸಂಗವನ್ನು ಹೇಗೆ ಎದುರಿಸಬೇಕೆಂಬ ಶಿಕ್ಷಣಕೊಡುವದೂ ಮತ್ತು ಪ್ರಥಮ ಉಪಾಯವನ್ನೇನು ಕೈಕೊಳ್ಳಬೇಕೆಂಬುದೂ ಮುಖ್ಯವಾದವುಗಳಾಗಿವೆ. ಮತ್ತು ಜನರು ಅಧಿಕಾರಿಗಳ ಸಲಹೆಗಳೊಡನೆ ಸಹಕರಿಸಲೂ ಬೇಕಾಗುವದು.

ಆಕ್ರಮಣದ ಸಮ್ಮುಖದಲ್ಲಿ ಸಂರಕ್ಷಣೆಮಾಡಿಕೊಳ್ಳಬೇಕಾದ ಪ್ರಸಂಗಗಳು ಯಾವ ಯಾವ ದೇಶಗಳ ಸಭ್ಯ ಜನರಿಗೆ ಪ್ರಾಪ್ತವಾಗಿವೆಯೋ ಆಯಾ ದೇಶಗಳ ಜನರು ತಮ್ಮ ತಮ್ಮ ನಗರ ಸಂಸ್ಥೆಗಳ ಅಧಿಕಾರಿಗಳೊಡನೆ ಸಹಕಾರಮಾಡುವದು ಅಗತ್ಯವೆಂಬುದನ್ನು ಅರಿತಿದ್ದಾರೆ. ಈ ಪ್ರಕಾರ ಅವರು ಸಮಾಧಾನಕಾರಕ ರೀತಿಯಲ್ಲಿ ಸಹಕಾರಮಾಡಿದ್ದರಿಂದ ಒಳ್ಳೇ ಉಪಯುಕ್ತವಾದ ಪರಿಣಾಮವು ಅನುಭವಕ್ಕೆ ಬಂದಿದೆ. ಜನರ ಈ ತರದ ವೃತ್ತಿಯಿಂದ ವೈಮಾನಿಕ ಆಕ್ರಮಣದ ಭೀತಿಯು ಎಷ್ಟೋ ಮಟ್ಟಿಗೆ ಕಡಿಮೆಯಾಗಿದೆ.

ಹಿಂದುಸ್ಥಾನದ ಭೌಗೋಲಿಕ ಸ್ಥಾನ ಮತ್ತು ಹೆಚ್ಚಾದ ಉದ್ದಳತೆಯನ್ನು ನೋಡುತ್ತಿರಲು ಅದರ ಬಹು ಭಾಗವು ವಿಮಾನದ ಆಕ್ರಮಣಗಳಿಗೆ ತುತ್ತಾಗುವಂತೆ ತೋರುವದಿಲ್ಲ. ಆದರೆ ಕೆಲಕೆಲವು ಪ್ರದೇಶಗಳಲ್ಲಿ ಯುದ್ಧ ವಿಮಾನಗಳನ್ನು ಹೆಚ್ಚಿಸಬೇಕಾಗುವದರಿಂದ ಅವು ಆಕ್ರಮಣಕ್ಕೆ ಆಹುತಿಯಾಗುವ ಸಂಭವವಿದೆ. ಒಂದುವೇಳೆ ಮಹಾ ಯುದ್ಧವು ಪ್ರಾರಂಭವಾದರೆ ವಿಮಾನಗಳು ಹಿಂದುಸ್ಥಾನದ ಬಂದರಗಳ ಮೇಲೆ ಮತ್ತು ನಡುಗಡ್ಡೆಗಳಲ್ಲಿರುವ ಪಟ್ಟಣಗಳ ಮೇಲೆ ಆಕ್ರಮಣಮಾಡುವ ಶಕ್ಯತೆಯನ್ನು ಕಡಿಮೆ ಮಾಡಲಾಗುವದು. ವಿಮಾನಗಳು ಆಕ್ರಮಣಮಾಡಿದ ಕೂಡಲೆ ಪಟ್ಟಣಗಳಲ್ಲಿಯ ದೀವಿಗೆಗಳನ್ನು ಆರಿಸುವದಿಷ್ಟೇ ಅಲ್ಲದೆ ಯಾವ ಸ್ಥಳದ ಮೇಲೆ ಬಾಂಬುಹಾಕಬೇಕೆಂದು ವೈರಿ ವಿಮಾನವು ಹೋಗುತ್ತಿದೆಯೋ ಅದರ ಮಾರ್ಗದ ಮೇಲಿನ ದೀವಿಗೆಗಳನ್ನೆಲ್ಲಾ ನೊಂದಿಸಬೇಕಾಗುವದು.

ಹಿಂದುಸ್ಥಾನ ಸರಕಾರದವರು ಜನರು ವಿಮಾನದ ಆಕ್ರಮಣಕ್ಕೆ ತುತ್ತಾಗಬಾರದೆಂದು ಆಲೋಚಿಸುತ್ತಿರುವ ಕಾರಣವೆಂದರೆ ಅವರು ಯಾವುದಾದರೊಂದು ಕಡೆಯಿಂದ ವಿಮಾನದ ಆಕ್ರಮಣ ಉಂಟಾಗುವದೆಂದು ಭೀತಿಪಟ್ಟಿರುವರೆಂದರ್ಥವಲ್ಲ. ಆದರೆ ಸದ್ಯಕ್ಕೆ ಜಗತ್ತಿನ ಪರಿಸ್ಥಿತಿಯೇ ಹಾಗಿದೆಯಾದ್ದರಿಂದ ಆ ಪ್ರಕಾರದ ವ್ಯವಸ್ಥೆಮಾಡಲಾಗಿದೆ.

ಯುದ್ಧವು ಬರುವದೇ ಆದರೆ ಅದು ಬಹುತರವಾಗಿ ಗೊತ್ತಿಲ್ಲದಂತೆಯೇ ಬರುವದು.

---



---

## ಕಾಂಗ್ರೆಸ್ ಮತ್ತು ಫೆಡರೇಶನ್.

ಬ್ಯಾ. ಜಮನಾದಾಸ ಮೆಹತಾರವರು ತಾ. ೨೦ ನೆಯ ದಿವಸ ಪುಣೆಯಲ್ಲಿ ಶ್ರೀ. ಲ. ಬ. ಭೋಪಟ್ಕರರ ಅಧ್ಯಕ್ಷತೆಯಲ್ಲಿ "ಪ್ರಾಸ್ಪೆಕ್ಟ್ಸ್ ಆಫ್ ಫೆಡರೇಶನ್" ಎಂಬ ವಿಷಯವಾಗಿ ಒಂದು ಮಹತ್ವದ ಭಾಷಣವನ್ನು ಮಾಡಿದರು. ಅದರ ಮುಖ್ಯಾಂಶ ಹೀಗಿದ್ದಿತು—

"ಫೆಡರಲ್ ಅಸೆಂಬ್ಲಿಯಲ್ಲಿ ಒಟ್ಟು ೩೭೫ ಸಭಾಸದರಿರುವರು. ಅವರಲ್ಲಿ ೧೨೫ ಜನರು ಸಂಸ್ಥಾನಗಳಿಂದ ಬರುವವರು. ೨೫೦ ಜನರು ಬ್ರಿಟಿಶ್ ಪ್ರಾಂತದವರು. ಸಂಸ್ಥಾನಗಳಲ್ಲಿ ಒಟ್ಟು ೮ ಕೋಟಿ ಜನರಿದ್ದಾರೆ. ಎಂದರೆ ಹಿಂದುಸ್ಥಾನದ ನಾಲ್ಕನೆಯ ಒಂದು ಭಾಗ. ಹೀಗಿದ್ದರೂ ಅವರಿಗೆ ಪ್ರತಿನಿಧಿತ್ವವು ಮಾತ್ರ ಎರಡನೆಯ ಒಂದು ಭಾಗ!

ಫೆಡರಲ್ ಕೌನ್ಸಿಲ್ಲಿನಲ್ಲಿಯೂ ಇದೇ ಸ್ಥಿತಿ. ಅಲ್ಲಿಯ ೨೬೦ ಸ್ಥಳಗಳಲ್ಲಿ ೧೦೪ ಸ್ಥಳಗಳು ಸಂಸ್ಥಾನಗಳಿಗಾಗಿವೆ. ಪ್ರತಿನಿಧಿಗಳನ್ನು ಅವರಿಗೆ ಹೆಚ್ಚು ಕೊಟ್ಟರೂ ಒಂದು ಶಾಸನವು ತೀರ್ಮಾನವಾದರೆ ಅದು ಸಂಸ್ಥಾನಗಳಲ್ಲಿ ಆಚರಣೆಗೆ ಬಂದೇ ಬರುತ್ತದೆಂದು ಹೇಳಲಿಕ್ಕಾಗುವುದಿಲ್ಲ. ಸಂಸ್ಥಾನಾಧಿಪತಿಗಳ ಇಚ್ಛೆಯಿದ್ದರೆ ಮಾತ್ರ ಅದು ಆಚರಣೆಯಲ್ಲಿ ಬರುವುದು.

ಸಂಸ್ಥಾನಿಕರಿಗೆ ಇಷ್ಟೇ "ಸೇಫ್ ಗಾರ್ಡ" (ಸಂರಕ್ಷಣೆ) ಸಾಕಾಗಿಲ್ಲ. ಇನ್ನೂ ಹೆಚ್ಚಬೇಕೆಂದು ಅವರು ಪ್ರಯತ್ನಿಸುತ್ತಿದ್ದಾರೆ. ಶ್ರೀ. ಭುಲಾಭಾಯಿ ದೇಸಾಯಿಯವರು ಅವರ ವಕೀಲರು. ಸಂಸ್ಥಾನಿಕರಲ್ಲಿ ಹಣ ವಿಪುಲವಾಗಿದೆ. ಶ್ರೀ. ದೇಸಾಯರ ಕೈ ಬಹು ದೊಡ್ಡದಾಗಿಯೂ ಇದೆ. ಎಂದಮೇಲೆ ಅದು ಹೇಗಾದರೂ ನಡೆಯಲಿ. ಇದೇ ದೇಸಾಯರು ಕೇಂದ್ರ ಶಾಸನ ಸಭೆಯಲ್ಲಿ ಕಾಂಗ್ರೆಸ್ ಪಕ್ಷದ ಪ್ರಮುಖರು. ಕಾಂಗ್ರೆಸ್ ಪಕ್ಷವಾದರೂ ಫೆಡರೇಶನ್ ಮುರಿದುಹಾಕಬೇಕೆಂದು ಹೇಳುತ್ತಲಿದೆ!

### ವಿಷಮ ವಿಭಾಗ.

ಫೆಡರಲ್ ಶಾಸನ ಮಂಡಲಗಳಲ್ಲಿ ಪ್ರತಿನಿಧಿ ಸ್ಥಾನಗಳು ನ್ಯಾಯವಾದ ರೀತಿಯಲ್ಲಿ ವಿಭಾಗಿಸಲ್ಪಟ್ಟಿಲ್ಲ. ಸಂಸ್ಥಾನಾಧಿಪತಿಗಳಿಗೇನೇ ವಿಶೇಷ ಸೌಲಭ್ಯವುಂಟಾಗಿದೆ. ಹೀಗಿದ್ದರೂ ಅವರು ಇನ್ನೂ ವಿಚಾರ ನಡೆಸಿದ್ದಾರಂತೆ. ಬ್ರಿಟಿಶ್ ಸರಕಾರಕ್ಕೆ ಶಂಕರನಿಗಿದ್ದಂತೆ ಮೂರು ಕಣ್ಣುಗಳಿವೆ. ಅದು ಎರಡೇ ಕಣ್ಣುಗಳಿಂದ ಎಲ್ಲಿಯವರೆಗೆ ನೋಡುತ್ತಿರುತ್ತದೆಯೋ ಅಲ್ಲಿಯವರೆಗೆ ಇವರ ವಿಚಾರ ವಿನಿಮಯ. ಮೂರನೆಯದಾದ ಅಗ್ನಿ ನೇತ್ರವನ್ನು ಬಿಟ್ಟೊಡನೆ ಇವರ ವಿಚಾರಗಳೆಲ್ಲಾ ಸುಟ್ಟು ಬೂದಿಯಾಗುತ್ತವೆ.

ಫೆಡರಲ್ ಅಸೆಂಬ್ಲಿಯಲ್ಲಿನ ತಕ್ಕ ಬ್ರಿಟಿಶ್ ಭಾಗದ ೨೫೦ ಸ್ಥಾನಗಳಲ್ಲಿ ೮೨ ಮುಸಲ್ಮಾನರಿಗೆ. ೧೦೫ ಹಿಂದುಗಳಿಗೆ. ಇವುಗಳಲ್ಲಿ ೧೯ ಸ್ಥಳಗಳು ಶೆಡ್ಯೂಅಲ್ ವರ್ಗದ ಜನರಿಗೆ. ಉಳಿದ ೮೬ ಸ್ಥಳಗಳು ಮಾತ್ರ ಹಿಂದುಗಳಿಗಿದ್ದಂತೆ. ೨೨ ಕೋಟಿ ಹಿಂದುಗಳಿಗೆ ೮೬ ಸ್ಥಳಗಳು. ೭ ಕೋಟಿ ಮುಸಲ್ಮಾನರಿಗೆ ೮೨ ಸ್ಥಳಗಳು. ಇದರ ಮೇಲಿಂದ ಹಿಂದುಗಳ ಬೆಲೆ ಮುಸಲ್ಮಾನರ ನಾಲ್ಕನೆಯ ಒಂದು ಭಾಗವೆಂದೇ ಹೇಳಿದಂತಾಗಲಿಲ್ಲವೆ? ರಾಜಕಾರಣದಲ್ಲಿ ಹಿಂದುಗಳಿಗೆ ಹಿಂದುಳಿದ ಜಾತಿಯವರೆಂದೇ ತಿಳಿದಿದ್ದಾರೆ. ಮುಸಲ್ಮಾನರಿಗೆ ಹೆಚ್ಚಿಗೆ ಕೊಡಬೇಡಿರೆಂದು ನಾವೇನೂ ಹೇಳುವುದಿಲ್ಲ. ಆದರೆ ನಮಗೆ ಮಾತ್ರ ಕಡಿಮೆಮಾಡಬೇಡಿರಿ.

### ಕಾಂಗ್ರೆಸ್ ಮುಂದೇನು ಮಾಡುವುದು?

ಈ ಪ್ರಕಾರ ಸಂಸ್ಥಾನಿಕರಿಗೂ ಮುಸಲ್ಮಾನರಿಗೂ ಫೆಡರೇಶನ್ನಿನಲ್ಲಿ ಹೆಚ್ಚು ಸೌಲಭ್ಯವಿದೆಯೆಂಬುದು ಎಲ್ಲರಿಗೂ ಮಾನ್ಯ. ಈ ಘಟನೆಯೇ ಅಯೋಗ್ಯವಾಗಿದೆಯೆಂದೂ ಎಲ್ಲರೂ ಹೇಳುತ್ತಿದ್ದಾರೆ. ಪಂಡಿತ ಜವಾಹರಲಾಲರು ಇದನ್ನು ಮುರಿದು ತುಳಿದು ನಾಶಮಾಡಬೇಕೆಂದು ಹೇಳುತ್ತಿರುವುದೂ ನಿಜ. ಶ್ರೀ. ಭುಲಾಭಾಯಿಯವರು ಅದು ಶಕ್ಯವಿಲ್ಲವೆಂದೇ ಹೇಳಿರುವುದು ಎಲ್ಲರಿಗೂ ಗೊತ್ತಿದೆ. ಸರದಾರ ವಲ್ಲಭಭಾಯಿಯವರಿಗೂ ಅದು ಮಾನ್ಯವಿದೆ. ಗಾಂಧೀಜಿಯವರಾದರೋ ಮೌನವಾಗಿದ್ದಾರೆ.

ಎಂದಮೇಲೆ ಕಾಂಗ್ರೆಸ್ ಏನು ಮಾಡುತ್ತದೆಂಬುದನ್ನು ಹೇಳಬೇಕೆ? ಗಾಂಧೀಜಿಯವರು ಹೇಳಿದುದನ್ನು ಪಂಡಿತಜಿಯವರು ಮಾನ್ಯ ಮಾಡುತ್ತಾರೆ. ಅವರ ಆರ್ಭಟದ ಘಟನಾಭಂಜನ ಮಾತುಗಳೆಲ್ಲಾ ವ್ಯರ್ಥವಾದವುಗಳೇ ಸರಿ. ಕಾಂಗ್ರೆಸ್ಸು ಫೆಡರೇಶನ್ನಿನಲ್ಲಿ ಸೇರುವುದೆಂದೇ ನನಗೆ ದೃಢವಾದ ನಂಬಿಕೆ. ಅದು ಹಾಗೆ ಸೇರಲೇಬೇಕೇ ವಿನಾ ಬಹಿಷ್ಕಾರ ಹಾಕಬಾರದು. ಅದರಲ್ಲಿ ಸೇರಿಯೇ ತನ್ನ ವರ್ಚಸ್ಸನ್ನು ಸ್ಥಾಪಿಸಬೇಕು. ಮುಂಬೈ ಸರಕಾರವು ಫೆಡರೇಶನ್ನಿನಲ್ಲಿ ಸೇರುವ ಸಿದ್ಧತೆಯಲ್ಲಿದೆಯೆಂದೇ ನನ್ನ ತಿಳುವಳಿಕೆ.

ಕೋಳಿ ಕೂಗದ ವಿನಾ ಸೂರ್ಯನು ಉದಯಿಸಬಾರದೇ? ಅದು ಶಕ್ಯವೆ? ಸೂರ್ಯೋದಯದ ಕಾಲಕ್ಕೇನೇ ಕೋಳಿಯು ಕೂಗುವಂತೆ ಮಾಡುವುದೇ ಶಕ್ಯ. ಜಾರ್ಜ ಚಕ್ರವರ್ತಿಗಳು ಹಿಂದುಸ್ಥಾನಕ್ಕೆ ಬರುವ ನಿಶ್ಚಯವು ಫೆಡರೇಶನ್ ಆಚರಣೆಯಲ್ಲಿ ಬರುವುದು ನಿರ್ಧರವಾದೊಡನೆ ಸಾರಲ್ಪಡುವುದು. ಆ ಸಿದ್ಧತೆಗಾಗಿಯೇ ಬಂಗಾಲದ ರಾಜಕೈದಿಗಳನ್ನು ಬಿಟ್ಟು ಬಂಗಾಲ ಪ್ರಾಂತವೂ ಸಮಾಧಾನ ಹೊಂದುವಂತೆ ಮಾಡುತ್ತಿದ್ದಾರೆ. ಈ ಎಲ್ಲ ಲಕ್ಷಣಗಳಿಂದ ಅಪ್ರಿಯವಾದ ಫೆಡರೇಶನ್ ಆಚರಣೆಯಲ್ಲಿ ಬಂದೇ ಬರುತ್ತದೆಂದೂ ಅದರಲ್ಲಿ ಕಾಂಗ್ರೆಸ್ಸು ಸೇರುತ್ತದೆಂದೂ ಸ್ಪಷ್ಟವಾಗುವುದಿಲ್ಲವೆ?"

## ಸ್ತ್ರೀಯರ ಉನ್ನತಿ ಮತ್ತು ರಾಷ್ಟ್ರಸಂಘ.

ಜನಾಂಗದ ಸುಖಶಾಂತಿಗಳಿಗೆ ಸ್ತ್ರೀ ಸಮಾಜವೂ ನೆರವಾಗುವುದು ಅತ್ಯವಶ್ಯಕವಷ್ಟೆ. ಆದರೆ ಬಹುಕಾಲದಿಂದ ಅನೇಕ ಸಮಾಜಗಳು ಸ್ತ್ರೀಯರನ್ನು ಬಹು ಹೀನಾವಸ್ಥೆಯಲ್ಲಿಯೇ ಇಟ್ಟು ಮನುಷ್ಯ ಜಾತಿಯ ಉನ್ನತಿಗೆ ಅವರಿಂದ ಆಗಬಹುದಾದ ಫಲ ಪ್ರಯೋಜನಗಳನ್ನು ಹೊಂದಿಲ್ಲ. ಇತ್ತೀಚಿಗೆ ಜಗತ್ತಿನ ರಾಜಕೀಯ, ಸಾಮಾಜಿಕ, ಆರ್ಥಿಕ ವಿಷಯಗಳಲ್ಲಿ ಸ್ತ್ರೀಯರು ಹೆಚ್ಚುಹೆಚ್ಚಾಗಿ ಸೇರುತ್ತ ಬಹು ಪರಿಣಾಮಕಾರಿಯಾದ ಕಾರ್ಯಗಳನ್ನು ಮಾಡಲಾರಂಭಿಸಿದುದನ್ನು ರಾಷ್ಟ್ರಸಂಘವು ನೋಡಿ ಸ್ತ್ರೀಯರ ಉನ್ನತಿಯ ಕಡೆಗೆ ಲಕ್ಷಿಸಿದೆ. ಅದರಿಂದ ಈ ಕೆಳಗಿನ ಸಂಗತಿಗಳು ಗೊತ್ತಾಗಿವೆ.

ರಾಷ್ಟ್ರಸಂಘದವರೂ ಸ್ತ್ರೀಯರ ಉನ್ನತಿಗಾಗಿ ಪ್ರಯತ್ನಿಸುವ ಅನೇಕ ಸಂಘದವರೂ ಪ್ರಯತ್ನಿಸಿ ಇಂಗ್ಲೆಂಡ, ಹಿಂದುಸ್ಥಾನ, ಚೀನ, ಅಮೇರಿಕಾ, ತುರ್ಕಸ್ಥಾನ ಮೊದಲಾದ ಜಗತ್ತಿನ ೩೮ ರಾಷ್ಟ್ರಗಳಲ್ಲಿಯ ಸ್ತ್ರೀಯರ ಸ್ಥಿತಿಗತಿಗಳನ್ನು ಸಂಗ್ರಹಿಸಿದ್ದಾರೆ. ಈ ೩೮ ರಾಷ್ಟ್ರಗಳಲ್ಲಿ ಸ್ತ್ರೀಯರಿಗೆ ರಾಜಶಾಸನದಿಂದ ಸಮಾನವಾದ ಅಧಿಕಾರವನ್ನು ಕೊಟ್ಟ ರಾಷ್ಟ್ರಗಳು ಹತ್ತು. ಇಪ್ಪತ್ತು ರಾಷ್ಟ್ರಗಳು ಸ್ತ್ರೀಯರಿಗೆ ಪುರುಷರಂತೆ ಸಮಾನವಾದ ಅಧಿಕಾರವನ್ನು ಕೊಟ್ಟಿಲ್ಲ. ಎಂಟು ರಾಷ್ಟ್ರಗಳ ಸ್ಥಿತಿ ತಿಳಿದಿಲ್ಲ.

ಪಾರ್ಲಮೆಂಟಿಗೆ ಸಭಾಸದರಾಗಲು ಅಥವಾ ಮತಗಳನ್ನು ಕೊಡಲು ೨೪ ರಾಷ್ಟ್ರಗಳಲ್ಲಿಯ ಸ್ತ್ರೀಯರಿಗೆ ಅಧಿಕಾರವಿದೆ. ೧೪ ರಾಷ್ಟ್ರಗಳಲ್ಲಿ ಅಧಿಕಾರವಿಲ್ಲ. ಈ ೧೪ ರಾಷ್ಟ್ರಗಳಲ್ಲಿ ೭ ರಾಷ್ಟ್ರಗಳು ಯುರೋಪಖಂಡದಲ್ಲಿವೆ! ಪುರುಷರಂತೆ ಅಧಿಕಾರ ನಡೆಸುವ ಸ್ವಾತಂತ್ರ್ಯವು ೧೪ ರಾಷ್ಟ್ರಗಳ ಸ್ತ್ರೀಯರಿಗೆ ಮಾತ್ರ ಇದೆ. ವಿವಾಹಿತ ಸ್ತ್ರೀಯರಿಗೆ ತನ್ನ ನಿವಾಸಸ್ಥಾನವನ್ನು ಗೊತ್ತುಮಾಡಿಕೊಳ್ಳುವ ಅಧಿಕಾರ ೪ ರಾಷ್ಟ್ರಗಳಲ್ಲಿಯೂ ಮಕ್ಕಳ ಪೋಷಣೆಮಾಡುವ ಅಧಿಕಾರ ೭ ರಾಷ್ಟ್ರಗಳಲ್ಲಿಯೂ ಇದೆ. ಸ್ಥಿರಚರಾಸ್ತಿಗಳಲ್ಲಿ ೨೪ ರಾಷ್ಟ್ರಗಳ ಸ್ತ್ರೀಯರಿಗೆ ಪಾಲುಗಾರಿಕೆಯುಂಟು. ೧೦ ರಾಷ್ಟ್ರಗಳಲ್ಲಿ ಇದು ಕೂಡಾ ಇಲ್ಲ.

# ನಿ ಡ ಗು ಂ ದಿ.

## ಶ್ರೀಮನ್ನಿರಾಭಾರಿ ನಿರಂಜನ ಚರಪಟ್ಟಾಭಿಷೇಕ ಮಹೋತ್ಸವ.

ನಿಡಗುಂದಿ ಗ್ರಾಮದ ಶೆಟ್ಟರು, ಸಮಸ್ತ ದೈವದವರು ತಮ್ಮ ಗ್ರಾಮದಲ್ಲಿರುವ ವಿರಕ್ತಮಠಕ್ಕೆ ಮಾರಕಬ್ಬಿನ ಹಳ್ಳಿಯ ಶ್ರೀ ಮಲ್ಲಿಕಾರ್ಜುನ ದೇವರನ್ನು ಅಧಿಕಾರಿಗಳನ್ನಾಗಿ ಮಾಡಬೇಕೆಂದು ಬಿನ್ನಹ ಮಾಡಿಕೊಂಡ ಪ್ರಕಾರ ಇದೇ ಈಶ್ವರ ನಾಮ ಸಂವತ್ಸರದ ಕಾರ್ತಿಕ ಶುದ್ಧ ದಶಮಿಯ ದಿವಸ ಶ್ರೀಮನ್ನಿರಂಜನ ಚನ್ನಬಸವ ಸ್ವಾಮಿಗಳು ಗಚ್ಚಿನ ಮಠ ಅಥಣಿ ಇವರು, ಗೋಟಖಿಂಡಿ ಮಠದ ಮುರಿಗೆಪ್ಪ ಸ್ವಾಮಿಗಳು ಯಾಳವಾರ ಮತ್ತು ಜತ್ತ ಗ್ರಾಮಗಳ ಪಟ್ಟದ ದೇವರು ಮತ್ತು ಪಂಡಿತ ರಾಜಶೇಖರ ಶಾಸ್ತ್ರಿಗಳೂ ಕೆಲವು ಪಾಠಶಾಲೆಯ ವಿದ್ಯಾರ್ಥಿಗಳೊಡನೆ ದಯಮಾಡಿಸಿ ಶಿವಾನುಭವ ಪ್ರವಚನ ಪ್ರಾರಂಭಿಸಿ ದ್ವಾದಶಿಯ ಸೋಮವಾರದ ಉದಯಕ್ಕೆ ಶುಭ ಮುಹೂರ್ತದಲ್ಲಿ ಸದರಿ ಮಲ್ಲಿಕಾರ್ಜುನ ಮರಿ ದೇವರು ಮಾರಕಬ್ಬಿನಹಳ್ಳಿ ಇವರಿಗೆ ಅನುಗ್ರಹಸ್ಥಲ ಕೊಟ್ಟು, ಮಧ್ಯಾನ್ಹಕ್ಕೆ ಮಹಾಗಣಾರಾಧನೆ, ಸಾಯಂಕಾಲಕ್ಕೆ ಅಧಿಕಾರ ಸ್ವೀಕಾರವೂ ಆದಬಳಿಕ ಸಭೆಯಲ್ಲಿ ಕೂಡಿದ ಭಕ್ತಾದಿಗಳಿಗೆ ಶ್ರೀ ಚನ್ನಬಸವ ಸ್ವಾಮಿಗಳವರು "ನಿರಾಭಾರಿ ವಿರಕ್ತಾಶ್ರಮ" ವಿಷಯದಮೇಲೆ ಬೋಧವಾಗುವಂತೆ ಉಪದೇಶಮಾಡಿದರು.

ನಂತರ ಭಕ್ತಾದಿಗಳ ಇಚ್ಛೆಯಮೇರೆಗೆ ನವೀನ ಸ್ವಾಮಿಗಳವರ ಪಾಲಕಿ ಉತ್ಸವವು ವಾದ್ಯ ವೈಭವದೊಡನೆ ತಳಿರು ತೋರಣಗಳಿಂದ ಅಲಂಕೃತವಾದ ರಾಜಬೀದಿಯಲ್ಲಿ ಅತಿ ವಿಜೃಂಭಣೆಯಿಂದ ಜರುಗಿತು. ಮರುದಿವಸ ಮಧ್ಯಾನ್ಹಕ್ಕೆ ಎರಡು ಗಂಟೆಗೆ ಶ್ರೀಮನ್ನಿರಂಜನ ಚನ್ನಬಸವ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಸಭೆಯು ಸೇರಿತು. ಆಗ್ಗೆ ಪಂಡಿತ ರಾಜಶೇಖರ ಶಾಸ್ತ್ರಿಗಳವರು ಸ್ವಾಮಿಗಳವರ ಕರ್ತವ್ಯದ ಬಗ್ಗೆ ಭಾಷಣಮಾಡಿದರು. ಬಳಿಕ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳವರು "ಧರ್ಮ" ವೆಂಬ ಬಗ್ಗೆ ಭಾಷಣ ಮಾಡಿದರು. ಬಳಿಕ ಶ್ರೀಮನ್ನಿರಂಜನ ಚನ್ನಬಸವ ಸ್ವಾಮಿಗಳವರು ಅದೇ ವಿಷಯವನ್ನು ಸಮಾರೋಪಣ ಮಾಡಿ ಈ ಊರ ಪ್ರಮುಖರಾದ ಶ್ರೀಯುತರುಗಳಾದ ವಿರೂಪಾಕ್ಷಪ್ಪ ಶೆಟ್ಟರು, ವೆಂಕನಗೌಡರು ಪಾಟೀಲ, ಮಲಕಾಜಪ್ಪ ನಾಗಠಾಣ, ಮಲಕಾಜಪ್ಪ ಹುಂಡೇಕಾರ, ವೀರಭದ್ರಪ್ಪ ಪಟ್ಟಣಶೆಟ್ಟಿ, ಲೋಕಪ್ಪ ಭೂಯಾರ, ವೀರಪ್ಪ ಮುಚ್ಚಂಡಿ, ಮುಂತಾದ ಸದ್ಭಕ್ತರು ಅತಿ ಶ್ರದ್ಧೆಯಿಂದ ಈ ಕಾರ್ಯವನ್ನು ಯಶಸ್ವಿಯಾಗುವಂತೆ ಮಾಡಿದ್ದನ್ನು ನೋಡಿ ಇದಕ್ಕಿಂತಲೂ ಹೆಚ್ಚಾಗಿ ಸಮಾಜ ಕೆಲಸಗಳನ್ನು ಮಾಡಿ ಶಿವಯೋಗಿಗಳವರ ಕೃಪೆಗೆ ಪಾತ್ರರಾಗಬೇಕೆಂದು ಹೇಳಿ ಆಶೀರ್ವದಿಸಿದರು. ವೇಳೆಯು ಬಹಳವಾದುದರಿಂದ ಸರ್ವಭಕ್ತರೂ ಫಲಾಶೀರ್ವಾದಗಳನ್ನು ಹೊಂದಿ ನಮ್ಮ ಮಠಕ್ಕೆ ಯೋಗ್ಯ ದೇವರನ್ನು ಕೊಟ್ಟುದಕ್ಕಾಗಿ ಶ್ರೀಗಳವರಿಗೆ ಕೃತಜ್ಞತೆಯನ್ನು ವ್ಯಕ್ತಮಾಡಿದರು. ಕೊನೆಗೆ ಆ ದಿನದ ಕಾರ್ಯವು ಜಯಘೋಷಣೆಯಿಂದ ಮುಕ್ತಾಯವಾಯಿತು.

ನಿಡಗುಂದಿ.
ಜಿ. ವಿಜಾಪುರ
ತಾ. ೧೭-೧೧-೩೭.

**ವ್ಯವಸ್ಥಾಪಕ ಮಂಡಳಿ.**

(೧) ವಿರೂಪಾಕ್ಷಪ್ಪ ಶೆಟ್ಟರು.
(೨) ವೆಂಕನಗೌಡರು ಪಾಟೀಲ
(೩) ಮಹಾಲಿಂಗಪ್ಪ ಮೇಲಪ್ಪ ಮುಚ್ಚಂಡಿ.
(೪) ಲೋಕಪ್ಪ ಚನಮಲ್ಲಪ್ಪ ಭೂಯಾರ.
(೫) ಮಲಕಾಜಪ್ಪ ಶಿವಪ್ಪ ಹುಂಡೇಕಾರ.





—ಜಗದ್ವಿಖ್ಯಾತ ಸರ್. ಜಗದೀಶಚಂದ್ರ ಬೋಸರು ಬಂಗಾಲದ ಸಂತಾಳ ಜಾಗೀರಿನ ಗಿರಿದಿಹ ಎಂಬ ಹಳ್ಳಿಯಲ್ಲಿ ತಾ. ೨೩ನೆಯ ಪ್ರಾತಃಕಾಲ ಹೃದಯಸ್ತಂಭನದಿಂದ ಮೃತಪಟ್ಟರೆಂದು ತಿಳಿಸಲು ಅತ್ಯಂತ ವಿಷಾದವಾಗುತ್ತದೆ. ಮೃತರ ಆತ್ಮಕ್ಕೆ ಪರಶಿವನು ಶಾಂತಿಯನ್ನೀಯಲಿ.

# ಆರೋಗ್ಯ ವಿಜ್ಞಾನ.

(ಅಶುತೋಷ.)

## ನಾಗರ ಹಾವಿನ ಕಡಿತಕ್ಕೆ ಜಲಚಿಕಿತ್ಸೆ.

ಕೆಲವು ವರ್ಷಗಳ ಹಿಂದೆ ಒಂದು ದಿನ ಭಾವನಗರ ಸಂಸ್ಥಾನದ ಭಂದೇರಿಯಾ ಗ್ರಾಮದಲ್ಲಿ ವಾಸ ಮಾಡುತ್ತಿದ್ದವನೊಬ್ಬನು, ಹಾವಿನ ಕಡಿತದಿಂದ ಪ್ರಜ್ಞೆ ತಪ್ಪಿ ಬಿದ್ದಿದ್ದನು. ಇವನ ತಲೆಗೆ ಕೊಡದಲ್ಲಿ ತುಂಬ ನೀರನ್ನು ಸುರಿಯುತ್ತ ಬಂದ ಮೇಲೆ ಅವನಿಗೆ ಪ್ರಜ್ಞೆ ಬಂದ ಚಿಹ್ನೆಗಳು ಕಾಣಿಸಿಕೊಂಡವು. ಆಗ ಅವನು 'ನನಗೆ ಬಹಳ ಚಳಿಯಾಗುವುದು. ನೀರನ್ನು ಸುರಿಯಬೇಡಿರಿ.' ಎಂದು ಕೂಗಿಕೊಂಡನು. ಬಳಿಕ ಅವನಿಗೆ ಸಕ್ಕರೆಗೆ ಬದಲಾಗಿ ಉಪ್ಪನ್ನು ಸೇರಿಸಿದ ಕಾಫಿಯನ್ನು ಕೊಟ್ಟು ಇಬ್ಬರು ಕೈ ಹಿಡಿದುಕೊಂಡು ಅತ್ತಿತ್ತ ನಡೆಸಿದರು. ಹೀಗೆ ಮಾಡಿದ್ದರಿಂದ ಅವನ ಪ್ರಾಣವು ಉಳಿಯಿತು. ಹೀಗೆ ಅನೇಕರು ನಾಗರಹಾವಿನ ಕಡಿತದಿಂದ ರಕ್ಷಿಸಲ್ಪಟ್ಟಿರುವುದರಿಂದ, ನಾಗರಹಾವಿನ ಕಡಿತಕ್ಕೆ ತಲೆಯ ಮೇಲೆ ನೀರು ಸುರಿಯುವುದೇ ಅನುಕೂಲವಾದ ಚಿಕಿತ್ಸೆಯಾಗಿ ಕಂಡು ಹಿಡಿದಿದ್ದಾರೆ.

× × × × ×

## ಹೆಚ್ಚು ಮಾತಾಡುವುದು ಮತ್ತು ಓದುವುದು.

ಅನಾವಶ್ಯಕವಾಗಿ ಮಾತಾಡುವುದರಲ್ಲಿ ನಮ್ಮ ನರಗಳ ಶಕ್ತಿಯು ತಗ್ಗುವುದು. ಬಲಹೀನರು ಅಧಿಕವಾಗಿ ಮಾತಾಡಕೂಡದು. ನಾವು ಮಲಗಿಕೊಳ್ಳುವಾಗ ಒಂದು ಗಂಟೆಯ ಕಾಲಕ್ಕೆ ಮೊದಲಿನಿಂದಲೇ ಮಿತಭಾಷಿಯಾಗಿರಬೇಕು. ಹೆಚ್ಚು ಮಾತಾಡಿದರೆ ನಿದ್ರೆಯು ಬಾರದು.

ರೋಗಿಗಳ ಹತ್ತಿರ ಅಧಿಕ ಕಾಲ ನಿಂತಿರಬಾರದು. ಮತ್ತು ಹೆಚ್ಚು ಮಾತಾಡುವ ಸ್ವಭಾವವುಳ್ಳವರನ್ನು ರೋಗಿಯ ಹತ್ತಿರ ಸೇರಿಸಲೂ ಬಾರದು.

ಬುದ್ಧಿಗೆ ವಿಶೇಷ ಕೆಲಸವನ್ನು ಕೊಡದೆ ಸ್ವಲ್ಪವಾಗಿ ಓದುವುದು ಉತ್ತಮ. ವಿನೋದವಾದ ನಾವಲುಗಳನ್ನಾಗಲಿ ಅಥವಾ ಅಂದವಾದ ಸಣ್ಣ ಕಥೆಗಳನ್ನಾಗಲಿ ಓದುವುದು ಒಳ್ಳೆಯದು. ಮುಖ್ಯವಾಗಿ ಅದು ನಮ್ಮ ದೇಹಕ್ಕೆ ಆಯಾಸವನ್ನುಂಟು ಮಾಡಬಾರದು.

× × × × ×

## ಕುಡಿತದಿಂದುಂಟಾಗುವ ಕೇಡು.

ಮದ್ಯಪಾನದಿಂದ ಈ ಕೆಳಗೆ ಕಂಡ ಅನೇಕ ಹಾನಿಗಳುಂಟು:—

೧ ಯುಕ್ತಾಯುಕ್ತ ವಿವೇಚನೆಯನ್ನು ತಪ್ಪಿಸುವುದು; ೨ ಜ್ಞಾಪಕಶಕ್ತಿಯನ್ನು ಕ್ಷೀಣಿಸುವುದು; ೩ ದೇಹದಲ್ಲಿ ಅನೇಕ ಉಪದ್ರವಗಳಿಗೆ ಕಾರಣವಾಗುವುದು; ೪ ರೂಪಲಾವಣ್ಯಗಳನ್ನು ಕೆಡಿಸುವುದು; ೫ ದೇಹಬಲವನ್ನು ತಗ್ಗಿಸುವುದು; ೬ ರಕ್ತವನ್ನು ಅಶುದ್ಧ ಪಡಿಸುವುದು; ೭ ಕಾಳಜದಲ್ಲಿ ಉರಿಯನ್ನು ಹುಟ್ಟಿಸುವುದು; ೮ ಮಿದುಳಿನ ಬಲವನ್ನು ತಗ್ಗಿಸುವುದು; ೯ ಶರೀರದ ಬಾಹ್ಯಾಭ್ಯಂತರ ಭಾಗಗಳೆರಡರಲ್ಲಿಯೂ ಚಿಕಿತ್ಸೆಗೆ ಸಾಧ್ಯವಿಲ್ಲದ ವ್ರಣಗಳನ್ನು ಹುಟ್ಟಿಸುವುದು.

ಆದುದರಿಂದ ಮದ್ಯವೆಂಬುದು ವಿವೇಕ ಜ್ಞಾನಕ್ಕೆ ಶೂನ್ಯದೇವತೆ! ಆತ್ಮಕ್ಕೆ ಅಪಮೃತ್ಯು! ಕೈಲಿದ್ದ ಹಣವನ್ನು ಕೊಳ್ಳೆ ಹೊಡೆಯುವ ಕಳ್ಳ! ತಿರುಪೆ ಮಾಡುವುದಕ್ಕೆ ಪ್ರೋತ್ಸಾಹಿಸುವ ಮಿತ್ರನು! ಕೈ ಹಿಡಿದ ಪತ್ನಿಯರಿಗೆ ಚಿಂತಾಗ್ನಿಯೆಂಬ ಚಿತೆ! ಮಕ್ಕಳಿಗೆ ಮಹಾಮಾರಿ! ಮನುಷ್ಯನನ್ನು ಆತ್ಮಘಾತುಕನನ್ನಾಗಿಯೂ, ಮೃಗಪ್ರಾಯನನ್ನಾಗಿಯೂ ಮಾಡತಕ್ಕ ಮಹಾವೈರಿ.

"ಕಂಠೀರವ."

---

## ಜ್ಞಾನೋದಯ ನಾಟಕ ಮಂಡಳ

### ಹಂದಿಗನೂರ.

ಈ ಕಂಪನಿಯವರು ಸಿಂದಿಗಿ ತಾಲೂಕದ ಬೀಬೀ ಇಂಗಳಿಗ್ರಾಮದಲ್ಲಿ ಹೇಮರಡ್ಡಿ ಮಲ್ಲಮ್ಮಾ, ನನ್ನ ಭೂಮಿ, ಅಕ್ಕಮಹಾದೇವಿ, ಮಾಯಾಮಚ್ಛೇಂದ್ರ ಎಂಬ ಈ ನಾಲ್ಕು ಆಖ್ಯಾನವನ್ನು ಆಡಿತೋರಿಸಿದರು. ನಾಟಕ ಕಂಪನಿಯ ಮಾಲಕರಾದ ದೇಶಭಕ್ತ ರಾಚಪ್ಪ ಹೋಳಿಗಿ ಹಂದಿಗನೂರ ಇವರು ಮುಖ್ಯ ಸ್ತ್ರೀ ಪಾತ್ರವನ್ನು ವಹಿಸುವರು. ಅಕ್ಕಮಹಾದೇವಿಯ ನಾಟಕವು ಬಹು ಮನರಂಜನವಾಗುವದಲ್ಲದೆ ವೀರಶೈವ ಮತೋದ್ಧಾರ, ಲಿಂಗಭಕ್ತಿ, ಅಷ್ಟಾವರಣಮಹಾತ್ಮೆ, ಸದಾಚಾರವಂತ, ಅಸ್ಪೃಶ್ಯರ ಸ್ಪರ್ಶನ, ಗೋಸೇವೆ ವೀರಶೈವ ಮತಪ್ರೇಮಿಗಳಿಗೆ ಲಿಂಗಧಾರಣ ಮುಂತಾದ ಮತದ ಏಳ್ಗೆಯ ಕಡೆಗೂ ಸ್ತ್ರೀ ಸಮಾಜದ ಉನ್ನತಿಗಾಗಿಯೂ ಬಹು ಪರಿಣಾಮಕಾರಿಯಾಗುವಂತೆ ಮಾಡಿ ತೋರಿಸುತ್ತಾರೆ. ಇದರಿಂದ ಅವರು ಹಳ್ಳಿಯ ಜನರ ಕಲ್ಯಾಣ ಮಾಡಿದಂತೆಯೇ ಸರಿ. ಎಂಥ ಬಡಹಳ್ಳಿಯಲ್ಲಿ ಸಹ ಈ ಕಂಪನಿಯವರು ನಾಟಕವನ್ನು ಮಾಡಿ ತೋರಿಸಿ ಗ್ರಾಮಸುಧಾರಣೆಗೆ ಅನುಕೂಲರಾಗುತ್ತಾರೆ. ಮತ್ತು ಬಡಜನರ ಸಲುವಾಗಿ ಟಿಕೀಟ ಇಲ್ಲದೆ ತೋರಿಸುತ್ತಾರೆ. ಕಂಪನಿಯ ಮಾಲಕರು ವೀರಶೈವರಿದ್ದು ಮತ ಸುಧಾರಣೆಯ ಕಥೆಗಳನ್ನೇ ಆಡಿ ತೋರಿಸುವದರಿಂದ ಇದೊಂದು ಮತಪ್ರಚಾರಕ ಕಾರ್ಯಕ್ಕೆಕೊಂಡಂತೆಯೇ ಸರಿ. ಆದರೆ ಆಡಿತೋರಿಸುವ ರೀತಿನೀತಿಗಳಂತೆ ಆಚರಣೆಯಲ್ಲಿ ಸಹ ತರುವ ಬುದ್ಧಿಯನ್ನು ಪರಮಾತ್ಮನು ದಯಪಾಲಿಸಲೆಂದು ಹಾರೈಸುತ್ತೇನೆ.

ಓರ್ವ ಪ್ರೇಕ್ಷಕ.

---

# ವಿಜ್ಞಾನ ವಿಷಯ.

“ವಿಜ್ಞಾನಿ.”

## ಯಂತ್ರಯುಗ.

ಮಾನವನು ವಿಚಿತ್ರ ಪ್ರಾಣಿಯೇ ಸರಿ. ಏಕೆಂದರೆ ತಾನು ಅರಿಯಲಾಗದ ವಿಚಾರಗಳನ್ನು ಅರಿತು ಅದನ್ನು ತನಗೆ ತಿಳಿಸುವಂತಹ ಯಂತ್ರಗಳನ್ನು ಅವನು ಸೃಜಿಸಿದ್ದಾನೆ. ತನ್ನ ಶಕ್ತಿಗೆ ಅಗೋಚರವಾದ ಅನೇಕ ವಿಚಾರಗಳನ್ನು ಅವನಿಂದ ನಿರ್ಮಿತವಾದ ಯಂತ್ರಗಳು ಅರಿತುಕೊಳ್ಳಬಲ್ಲವು. ಒಂದಲ್ಲ ಒಂದು ಬಾರಿ ಮಾನವನು ತಪ್ಪು ಮಾಡಬಹುದಾದರೂ ಈ ಯಂತ್ರಗಳು ಮಾತ್ರ ಆ ರೀತಿ ತಪ್ಪು ಮಾಡುವುದಿಲ್ಲ.

ಈ ವರೆಗೆ ನಾವು ಅನೇಕಾನೇಕ ಯಂತ್ರಗಳನ್ನು ನೋಡಿದ್ದೇವೆ. ಸ್ಟೀವನ್‌ಸಿಂದ ಆವಿಷ್ಕೃತವಾದ ರೇಲ್ವೆ ಎಂಜಿನು, ಗಟನ್‌ಬರ್ಗನಿಂದ ನಿರ್ಮಿತವಾದ ಮುದ್ರಾಯಂತ್ರ, ಮಾರ್ಕೋನಿಯಿಂದ ಆವಿಷ್ಕೃತವಾದ ರೇಡಿಯೋ ಮೊದಲಾದ ಯಂತ್ರಗಳೆಲ್ಲವೂ ಬಹು ವಿಚಿತ್ರವಾಗಿವೆ. ಆದರೆ ಅವು ಯಾವುವೂ ಇತ್ತೀಚೆಗೆ ಹೊರಬಿದ್ದಿರುವ ಕೆಲವು ಯಂತ್ರಗಳಷ್ಟು ವಿಚಿತ್ರವಾಗಿಲ್ಲವೆನ್ನಬಹುದು. ಸಾವನ್ನು ಸೂಚಿಸುವ ಯಂತ್ರ - ಧೈರ್ಯವನ್ನಳೆಯುವ ಯಂತ್ರ - ಯಾವಾಗ ಹುಚ್ಚು ಹಿಡಿಯುವುದೆಂಬುದನ್ನು ಸೂಚಿಸುವ ಯಂತ್ರ-ಆಹಾರಗಳ ಮೇಲಿನ ಅಪೇಕ್ಷೆಯನ್ನಳೆಯುವ ಯಂತ್ರ - ಈ ಹೆಸರುಗಳನ್ನು ಕೇಳಿದರೆ ಇಂತಹ ಯಂತ್ರಗಳು ಇರುವುದೆಂಬುದನ್ನು ಕೂಡ ಅನೇಕರು ನಂಬಲಾರರು. ನಮ್ಮ ಪ್ರೇಮ ನಮ್ಮ ಅಂತರಂಗದ ವಿಚಾರ. ಈ ಪ್ರೇಮವನ್ನು ಕಂಡು ಹಿಡಿದು ಅಳೆಯಲು ಸಾಧ್ಯವೆ? ನಮ್ಮ ಸಾವು ಪರಮಾತ್ಮನ ಅನುಜ್ಞೆಗೆ ಒಳಪಟ್ಟದ್ದು ಭೌತಿಕವಾದ ಯಂತ್ರವು ಅದನ್ನು ನಿರ್ಧರಿಸಬಲ್ಲುದೇ ಎಂದು ಯಾರಾದರೂ ಕೇಳಬಹುದು. ಈ ವರೆಗೆ ಈ ವಿಚಾರಗಳನ್ನು ನಿರ್ಧರಿಸಲಾಗುತ್ತಿರಲಿಲ್ಲ. ಆದರೆ ಇನ್ನು ಮೇಲೆ ಮಾತ್ರ ಇವು ಸಾಧ್ಯ.

ಸಾಯುವವರು ಯಾರು?—ಯಾರು ಯಾವಾಗ ಸಾಯುವರೆಂಬುದನ್ನು ನಿರ್ಧರಿಸಿ ಹೇಳುವ ಯಂತ್ರವೊಂದಿದೆ. ಈ ಯಂತ್ರವನ್ನು ಪ್ಯಾರಿಸ್ ನಗರದ ಪ್ಯಾಶ್ಚರ್ ಇನ್‌ಸ್ಟಿಟ್ಯೂಟ್ ಎಂಬ ಸಂಸ್ಥೆಯ ಲಿಕೋಮ್ ಟ ಡಿ ನೋಯ್ ಎಂಬ ವಿದ್ವಾಂಸರು ಇದನ್ನು ಕಂಡು ಹಿಡಿದರು.

ಈ ಯಂತ್ರರಚನೆಯಲ್ಲಿ ಅವರು ಅನುಸರಿಸಿರುವ ತತ್ವವು ಎಲ್ಲಾ ವೈದ್ಯರುಗಳಿಗೆ ಗೊತ್ತಾದ ವಿಚಾರವೇ. ನಮ್ಮ ರಕ್ತಕಣಗಳಲ್ಲಿ ಜೀವಸತ್ವವಿದೆ. ಶರೀರದ ಕಾಯಿಲೆ ಅಥವಾ ನಿಶ್ಶಕ್ತತೆಯು ಹೆಚ್ಚು ಕಡಿಮೆಯಾದಂತೆಲ್ಲ ಜೀವಸತ್ವಗಳ ಶಕ್ತಿಯು ವ್ಯತ್ಯಾಸವಾಗುತ್ತ ಹೋಗುತ್ತದೆ. ಸಾವಿನ ಭವಿಷ್ಯವನ್ನು ಸೂಚಿಸುವ ಯಂತ್ರವು ಈ ರಕ್ತಕಣಗಳಲ್ಲಿನ ಜೀವಸತ್ವದ ಶಕ್ತಿಯನ್ನಳೆದು, ಅದು ಹೆಚ್ಚುವುದೋ ತಗ್ಗುವುದೋ ಎಂಬುದನ್ನು ನಿರ್ಧರಿಸಿ, ಅದು ಯಾವಾಗ ಪೂರ್ಣವಾಗಿ ಸ್ತಬ್ಧವಾಗುವುದೆಂಬುದನ್ನು ಸೂಚಿಸಬಲ್ಲುದು.

ನೋಯ್‌ರವರೂ ಅವರ ಸಹೋದ್ಯೋಗಿಗಳೂ ಸುಮಾರು ೮೦೦೦ ಜನರ ಮೇಲೆ ಈ ಯಂತ್ರವನ್ನು ಪ್ರಯೋಗಿಸಿ ನೋಡಿದರು. ಅದರ ಫಲಿತಾಂಶವು ಅನೇಕಾನೇಕ ಸಂದರ್ಭಗಳಲ್ಲಿ ಸರಿ ಬಂದಿತು. ಇದರ ಫಲಿತಾಂಶದೊಡನೆ ದೊಡ್ಡ ದೊಡ್ಡ ವೈದ್ಯರು ತಮ್ಮ ಚಿಕಿತ್ಸೆಗೊಳಗಾದ ರೋಗಿಗಳ ಸಾವಿನ ಬಗ್ಗೆ ಹೇಳುವ ಭವಿಷ್ಯಗಳನ್ನು ನೋಡಿದರೆ ಅವರು ಸರಿಯಾಗಿ ಭವಿಷ್ಯ ಹೇಳುವುದಕ್ಕಿಂತ ಹತ್ತರಷ್ಟು ಹೆಚ್ಚಾಗಿ ತಪ್ಪು ಹೇಳುವರೆಂಬುದು ಗೊತ್ತಾಯಿತು. ಮರಣ ಭವಿಷ್ಯಸೂಚನೆಯ ಯಂತ್ರವು ತಿಳಿಸುವ ಭವಿಷ್ಯವು ಅಷ್ಟು ನಿರ್ದಿಷ್ಟವಾದದ್ದು. ಆದರೆ ಈ ಯಂತ್ರವು ಅಪಘಾತದಿಂದಾಗುವ ಮರಣವನ್ನು ಸೂಚಿಸಲಾರದು.

ಪ್ರಣಯಸೂಚಕಯಂತ್ರ-ಈಯಂತ್ರವೂ ಅದ್ಭುತವಾದದ್ದೇ. ತರುಣತರುಣಿಯರಿಬ್ಬರು ತಾವು ಒಬ್ಬರನ್ನೊಬ್ಬರು ಪ್ರೀತಿಸುವುದಾಗಿ ಹೇಳುತ್ತಾರೆಂದು ಭಾವಿಸೋಣ. ಆ ಯಂತ್ರದ ಒಂದು ಭಾಗವನ್ನು ತರುಣಿಯು ಹಿಡಿದುಕೊಂಡಲ್ಲಿ ಒಡನೆಯೇ ಯಂತ್ರವು ಅವಳು ತನ್ನ ಪ್ರಿಯನ ಬಗ್ಗೆ ಎಷ್ಟು ಪ್ರೇಮವನ್ನಿಟ್ಟಿದ್ದಾಳೆಂಬುದನ್ನು ತೋರಿಸುವುದು. ಅದೇ ರೀತಿ ತರುಣನು ಯಂತ್ರದ ಒಂದು ಭಾಗವನ್ನು ಹಿಡಿದು ನಿಂತಾಗ ಅವಳು ತನ್ನನ್ನೆಷ್ಟು ಮಟ್ಟಿಗೆ ಪ್ರೀತಿಸುವಳೆಂಬುದನ್ನು ಯಂತ್ರದಲ್ಲಿರುವ ಮೀಟರ್‌ನಲ್ಲಿ ನೋಡಿ ತಿಳಿದುಕೊಳ್ಳಬಹುದು.

ಇದೇ ರೀತಿ ನಿಮಗೆ ಯಾವ ತಿಂಡಿಯ ಮೇಲೆ ಅಭಿಲಾಷೆ ಹೆಚ್ಚೆಂಬುದನ್ನು ನಿರ್ಧರಿಸಲು ಒಂದು ಯಂತ್ರವು ತಯಾರಿಸಲ್ಪಟ್ಟಿದೆ. ಯಾವುದಾದರೊಂದು ಆಹಾರವು ನಿಮ್ಮ ಮುಂದಿದ್ದಾಗ ಅಥವಾ ಆ ಆಹಾರವನ್ನು ನೀವು ನೆನಸಿಕೊಂಡಾಗ ನಿಮ್ಮ ಬಾಯಿಯಲ್ಲಿ ಎಷ್ಟರ ಮಟ್ಟಿಗೆ ಜೊಲ್ಲು ಸುರಿಯುವುದೆಂಬುದನ್ನು ಅಳತೆ ಮಾಡಿ ಈ ಯಂತ್ರವು ನಿಮಗೆ ಯಾವ ಯಾವ ತಿಂಡಿಯ ಮೇಲೆ ಅಭಿಲಾಷೆ ಇದೆ ಎಂಬುದನ್ನು ಪತ್ತೆ ಹಚ್ಚಬಹುದು.

ಇನ್ನೊಂದು ಯಂತ್ರವು ಇದಕ್ಕಿಂತ ವಿಚಿತ್ರವಾಗಿದೆ. ಅದು ನಿಮ್ಮ ಧೈರ್ಯಾಧೈರ್ಯಗಳನು ಲೆಕ್ಕಹಾಕಿ ತೋರಿಸುವುದು. ಎಷ್ಟೋ ಬಲಶಾಲಿಗಳೆಂದೂ ಧೈರ್ಯಶಾಲಿಗಳೆಂದೂ ಖ್ಯಾತರಾದ ಸೇನಾನಾಯಕರ ಹೃದಯದಲ್ಲಿ ಕೂಡ ಅಲ್ಪಸ್ವಲ್ಪ ಅಧೈರ್ಯವು ಉಂಟೆಂಬುದನ್ನು ಈ ಯಂತ್ರವು ತೋರಿಸಿಕೊಟ್ಟಿದೆ. ವಿಮಾನ ವಿದ್ಯೆಯನ್ನು ಕಲಿಯುವವರ ಧೈರ್ಯವನ್ನು ಸ್ಥೈರ್ಯವನ್ನು ಅಳೆಯಲು ಈಗ ಈ ಯಂತ್ರವು ವಿಶೇಷವಾಗಿ ಉಪಯೋಗಿಸಲ್ಪಡುತ್ತದೆ.

ಇದಲ್ಲದೆ ಇನ್ನೊಂದು ವಿಚಿತ್ರವಾದ ಯಂತ್ರವಿದೆ. ಅದು, ನಿಮಗೆ ಹುಚ್ಚು ಹಿಡಿಯುತ್ತದೆಯೇ, ಹಾಗಾದರೆ ಯಾವಾಗ ಎಂಬುದನ್ನು ಗೊತ್ತು ಹಚ್ಚುವ ಯಂತ್ರ. ಈ ಯಂತ್ರವು ಮನುಷ್ಯನ ಮೆದುಳಿನಲ್ಲಿ ಏಳುವ ಅಲೆಗಳನ್ನು ಅಳೆದು ಮೆದುಳಿನ ಶಾಂತತೆ ಕಳವಳಗಳನ್ನು ಗೊತ್ತು ಮಾಡುವುದಲ್ಲದೆ, ಈ ಶಾಂತತೆ ಕಳವಳಗಳ ಪರಿಣಾಮವಾಗಿ ಇನ್ನು ಹಲವು ಕಾಲದೊಳಗಾಗಿ ಮನಸ್ಸಿನ ಸ್ಥಿತಿ ಹೇಗಿರಬಹುದೆಂಬುದನ್ನು ಸೂಚಿಸುತ್ತದೆ. ಮೆದುಳಿನಲ್ಲಿ ಈ ಅಲೆಗಳೇಳುವುದು ಹೆಚ್ಚಾಗುವುದೇ ಹುಚ್ಚುತನಕ್ಕೆ ಕಾರಣವಂತೆ. ಅಲ್ಲದೆ ಈ ಅಲೆಗಳು ದಡ್ಡರ ತಲೆಗಳಲ್ಲಿ ಕಡಿಮೆಯಾಗಿಯೂ, ಬುದ್ಧಿವಂತರ ತಲೆಗಳಲ್ಲಿ ಹೆಚ್ಚಾಗಿಯೂ, ಹುಚ್ಚರ ತಲೆಗಳಲ್ಲಿ ವಿಪರೀತವಾಗಿಯೂ ಏಳುವುವಂತೆ.

ಈ ಎಲ್ಲಾ ಯಂತ್ರಗಳಿಗಿಂತ ಹೆಚ್ಚಾಗಿ ಉಪಯೋಗದಲ್ಲಿರುವ ಯಂತ್ರವೆಂದರೆ ಸುಳ್ಳನ್ನು ಪತ್ತೆಮಾಡುವ ಯಂತ್ರ. ಯುರೋಪ್, ಅಮೇರಿಕಾಗಳಲ್ಲಿ ಪೋಲೀಸರು ಅಪರಾಧಿಗಳ ಹೇಳಿಕೆಗಳನ್ನು ಪರೀಕ್ಷಿಸುವಾಗ ಈ ಯಂತ್ರವನ್ನು ತಗುಲಿಸಿದರೆ ಅವನ ಹೇಳಿಕೆಯಲ್ಲಿನ ಸತ್ಯಾಂಶ ಅಸತ್ಯಾಂಶಗಳನ್ನು ಈ ಯಂತ್ರವು ತೋರಿಸುತ್ತದೆ. ಸತ್ಯವನ್ನು ಹೇಳುವುದಕ್ಕಿಂತ ಸುಳ್ಳನ್ನು ಹೇಳುವಾಗ ವ್ಯಕ್ತಿಯ ಕಳವಳವು ಹೆಚ್ಚೆಂಬುದನ್ನನುಸರಿಸಿ ಈ ಯಂತ್ರವನ್ನು ತಯಾರಿಸಿದ್ದಾರೆ. ವ್ಯಕ್ತಿಯಲ್ಲಿ ಕಳವಳವು ಸ್ವಲ್ಪ ಹೆಚ್ಚುಕಡಿಮೆಯಾದರೂ ಅದನ್ನು ಈ ಯಂತ್ರವು ಸ್ಪಷ್ಟವಾಗಿ ತೋರಿಸುತ್ತದೆ. ಈ ಯಂತ್ರದೆದುರು ನಿಂತು ಸುಳ್ಳನ್ನು ಹೇಳಿ ಜಯಿಸಿಕೊಳ್ಳುವುದು ಸುಲಭವಲ್ಲ.

ಹೀಗೆಯೇ ಇನ್ನು ಹಲವು ವರ್ಷಗಳಲ್ಲಿ ಇನ್ನೆಂತಹ ಯಂತ್ರಗಳು ತಯಾರಿಸಲ್ಪಡುವುವೋ ಹೇಳಲು ಶಕ್ಯವಿಲ್ಲ. ಮಾನವನ ಶಕ್ತಿಸಾಧನೆಗಳು ವಿಚಿತ್ರವಾದುವೇ ಸರಿ. “ಕಂಠೀರವ.”

## ರಾಯಚೂರು ಆಯುರ್ವೇದ ಸಮ್ಮೇಲನದ ಅಧ್ಯಕ್ಷರು ಯಾರು ?

ಅಖಿಲ ಕರ್ನಾಟಕ ಆಯುರ್ವೇದ ಸಮ್ಮೇಲನದ ಕಾರ್ಯಕಾರಿ ಸಮಿತಿಯ ಸದಸ್ಯರೊಬ್ಬರು ಹೀಗೆ ಬರೆಯುತ್ತಾರೆ—

ರಾಯಚೂರು ಆಯುರ್ವೇದ ಸಭೆಗೆ ಪಂಡಿತ ತಾರಾನಾಥರೇ ಅಧ್ಯಕ್ಷರಾಗಬೇಕು ಎಂದು ಮತ ಕಳಿಸಿದ ಗೆಳೆಯರನೇಕರು ನನಗೆ ಹೀಗೆಂದು ಬರೆಯುತ್ತಲೆ ಇದ್ದಾರೆ-

"ಒಂದು ಕಡೆ, ಅಧ್ಯಕ್ಷಸ್ಥಾನಕ್ಕೆ ಪಂಡಿತ ತಾರಾನಾಥರಿಗೇ ಹೆಚ್ಚು ಓಟುಗಳು ಬಿದ್ದಿವೆ ಎಂದು ಕೇಳುತ್ತೇವೆ. ಇನ್ನೊಂದು ಕಡೆ, ವೃತ್ತಪತ್ರಗಳಲ್ಲಿ ಶ್ರೀ|| ವೈ. ಲಕ್ಷ್ಮೀನರಸಿಂಹ ಶಾಸ್ತ್ರಿ, ಸುಪರಿಂಟೆಂಡೆಂಟ್, ಮೈಸೂರು ಆಯುರ್ವೇದಿಕ್ ಕಾಲೇಜ್ ಅವರು ಅಧ್ಯಕ್ಷರೆಂದು ಓದುತ್ತೇವೆ. ಇದರ ಗುಟ್ಟೇನು?"

ಪ್ರತ್ಯೇಕವಾಗಿ ಪ್ರತಿಯೊಬ್ಬರಿಗೆ ಉತ್ತರಕೊಡುವ ಬದಲು ಎಲ್ಲರಿಗೂ ತಿಳಿಯುವಂತೆ ವೃತ್ತಪತ್ರಗಳಿಗೇ ಬರೆಯುತ್ತಲಿದ್ದೇನೆ.

ಪಂಡಿತ ತಾರಾನಾಥರಿಗೇ ಅಧ್ಯಕ್ಷಸ್ಥಾನಕ್ಕಾಗಿ ಹೆಚ್ಚು ಓಟ್ ಬಂದದ್ದೇನೋ ನಿಜ. ಆದರೆ ೧೯೧೧ ರಿಂದ ಪಂಡಿತರು ನಿಜಾಮ ರಾಜ್ಯದಲ್ಲಿ ಪ್ರಜಾಹಿತದ ಅನೇಕ ಚಳವಳಿಗಳನ್ನು ಎಡಬಿಡದೆ ನಡೆಸಿದ್ದರಿಂದ, ೧೯೩೦ ರಲ್ಲಿ ಅವರನ್ನೇ ಗಡಿಪಾರು ಮಾಡಲಾಯಿತು. ಆದ್ದರಿಂದ ನಿಜಾಮ ರಾಜ್ಯದಲ್ಲಿ ಇರುವ ರಾಯಚೂರಿಗೆ ಅವರು ಬರಲಾರರೆಂತಲೂ, ಅವರನ್ನು ರಾಯಚೂರಿಗೆ ಕರೆಸಿಕೊಳ್ಳಲಿಕ್ಕೆ ಪ್ರಯತ್ನಮಾಡಲು ರಾಯಚೂರ ಸ್ವಾಗತಸಮಿತಿಯವರು ತಾವು ಅಸಮರ್ಥರೆಂದು ವ್ಯಕ್ತಮಾಡಿದ್ದರಿಂದಲೂ ಮತ್ತು ಪಂಡಿತರ ತರುವಾಯದಲ್ಲಿ ಹೆಚ್ಚು ಓಟು ಶ್ರೀ|| ವೈ. ಲಕ್ಷ್ಮೀನರಸಿಂಹ ಶಾಸ್ತ್ರಿಗಳಿಗೆ ಬಂದುದರಿಂದಲೂ ಶ್ರೀ|| ವೈ. ಲಕ್ಷ್ಮೀನರಸಿಂಹ ಶಾಸ್ತ್ರಿಗಳಿಗೆ ಅಧ್ಯಕ್ಷಸ್ಥಾನವು ಸಲ್ಲಿಸಲಾಗಿದೆ." ನಿಜವಾಗಿರುವ ವಿಷಯವಿಷ್ಟೆ.




**ಸ್ಥಳೀಯ** ಸಂಸ್ಥೆಗಳ ಪತ್ರಿಕೆ— ಮುನಸಿಪಾಲ್ಟಿ ಲೋಕಲ್ ಬೋರ್ಡ ಮೊದಲಾದ ಸ್ಥಾನಿಕ ಸ್ವರಾಜ್ಯದ ಸಂಗತಿಗಳನ್ನು ತಿಳಿದುಕೊಳ್ಳಬೇಕೆಂಬುವವರು ಈ ಪಕ್ಷ ಪತ್ರಿಕೆಯನ್ನು ತರಿಸಿಕೊಳ್ಳಿರಿ.

ವಾರ್ಷಿಕ ಚಂದಾ ೨ ರೂ.

ವಿಳಾಸ— ಟಿ. ಎನ್. ಚೆನ್ನಪ್ಪ
ಗಾಂಧಿ ನಗರ ಬೆಂಗಳೂರು ಸಿಟಿ.

---

**ಅರವಿಂದ** ಗ್ರಂಥಮಾಲೆಯಲ್ಲಿ ವರ್ಷಕ್ಕೆ ಆರು ಒಳ್ಳೊಳ್ಳೇ ಗ್ರಂಥ ಕುಸುಮಗಳು ಅರಳುತ್ತವೆ.

ಸಂಪಾದಕರು— ಮಧುರ ಚೆನ್ನರು.

ವಾರ್ಷಿಕ ಚಂದಾ ೨-೮-೦ (ಅಂಚೆ ವೆಚ್ಚ ಸೇರಿ)

ವಿಳಾಸ— ಅರವಿಂದ ಗ್ರಂಥಮಾಲಾ ಕಾರ್ಯಾಲಯ.
ಪೋ. ಹಲಸಂಗಿ. ಜಿ. ವಿಜಾಪುರ

---

# ಎಲ್ಲರೂ ಓದಲೇಬೇಕಾದ ಪುಸ್ತಕಗಳು.

## ಇಕೋ, ಇಲ್ಲಿವೆ.

### ಹರ್ಡೇಕರ ಮಂಜಪ್ಪನವರು ಬರೆದ ಪುಸ್ತಕಗಳು.

| | |
|---|---|
| ಬುದ್ಧಿಯ ಮಾತು | ೦-೩-೦ |
| ವೀರಶೈವ ಮತಬೋಧೆ | ೦-೨-೦ |
| ವೀರಶೈವ ಮತತತ್ವ | ೦-೪-೦ |
| ಕಾಯಕವೆ ಕೈಲಾಸ | ೦-೩-೦ |
| ಶ್ರೀ. ಲಿಂಗರಾಜರ ಚರಿತ್ರೆ | ೦-೬-೦ |
| ಪ್ರಭುದೇವರ ಕಥೆ | ೦-೧-೬ |
| ಏಕಲವ್ಯನ ಕಥೆ | ೦-೧-೬ |
| ಲಜಪತರಾಯರ ಚರಿತ್ರೆ | ೦-೧-೬ |
| ಆದಿಜನ ಸುಧಾರಣೆ | ೦-೨-೦ |
| ಬಸವ ಬೋಧಾಮೃತ | ೦-೬-೦ |
| ಭಜನಾವಳಿ | ೦-೧-೬ |
| ಜಾತಿಯ ವಾದ ವಿಮರ್ಶೆ | ೦-೧-೦ |
| ವಚನಕಾರರ ಸಮಾಜರಚನೆ | ೦-೨-೦ |
| ವೀರಶೈವ ಏಕೀಕರಣ | ೦-೦-೩ |
| ಪುಲಿಕೇಶಿಯ ಚರಿತ್ರೆ | ೦-೧-೬ |
| ಕಚದೇವನ ಕಥೆ | ೦-೧-೬ |
| ಸ್ವಾಮಿ ವಿವೇಕಾನಂದರ ಚರಿತ್ರೆ | ೦-೧-೬ |
| ಸುಕಲಾದೇವಿಯ ಕಥೆ | ೦-೧-೬ |
| ಸ್ತ್ರೀನೀತಿ ಸಂಗ್ರಹ | ೦-೪-೦ |
| ದಾಂಪತ್ಯ ಧರ್ಮ | ೦-೩-೦ |
| ದೇವಯಾನಿಯ ಕಥೆ | ೦-೧-೬ |
| ವಿಜಯವಾಣಿ | ೦-೨-೦ |
| ರಾಷ್ಟ್ರಗೀತೆ | ೦-೦-೬ |
| ಜೀವನ ರಹಸ್ಯ (ಅನ್ನದಾನೀಶ್ವರ ಕೃತ.) | ೦-೧-೦ |
| ಶುದ್ಧಿ ಮತ್ತು ಸಂಘಟನೆ | ೦-೪-೦ |
| ಸ್ಮಾರಕ ಚಂದ್ರಿಕೆ | ೧-೦-೦ |
| ಪ್ರಮಥಾಚಾರ ದೀಪಿಕೆ | ೦-೩-೦ |
| ೬೩. ಪುರಾತನರ ಚರಿತ್ರೆ (ಖರ್ಚೀ ಕೃತ) | ೨-೦-೦ |

ವಿಳಾಸಃ- ಜ್ಞಾನೋದಯ ಗ್ರಂಥ ಭಾಂಡಾರ ಆಲಮಟ್ಟಿ. ಪೋ. ಆಲಮಟ್ಟಿ ಜಿ. ವಿಜಾಪುರ.

ಅಖಿಲ ಭಾರತ ವಸ್ತು ಪ್ರದರ್ಶನದಲ್ಲಿ
ಸುವರ್ಣ ಪದಕಗಳನ್ನು ಮತ್ತು ಸರ್ಟಿಫಿಕೇಟುಗಳನ್ನು ಪಡೆದು ಹೆಸರಾದ
ಇಂಡಿಯಾ ಸರಕಾರದಲ್ಲಿ ರಜಿಸ್ಟರ್ ಆದ

# ಸಿದ್ಧೇಶ್ವರ ಟ್ರೇಝರಿ ಕಂಪನಿ, ಹುಬ್ಬಳ್ಳಿ.










ನಮ್ಮ "ಸಿದ್ಧೇಶ್ವರ ಟ್ರೇಝರಿ" ಗಳನ್ನು ಈ ವರೆಗೆ ಕೈಗಾರಿಕೆಯ ಕೆಲಸಗಳಲ್ಲಿ ಹೆಸರಾದ ಯುರೋಪ, ಅಮೇರಿಕಾ ವಗೈರಿ ಪರರಾಷ್ಟ್ರಗಳಲ್ಲಿ ತಯಾರಾಗುವ ಟ್ರೇಝರಿಗಳ ಪದ್ಧತಿಯ ಮೇರೆಗೆ ಹೊಸ ಉಕ್ಕಿನ ಅಖಂಡ ಒಂದೇ ತಗಡಿನಲ್ಲಿ ೧೨ ಮೂಲೆಗಳನ್ನು ೨೫೦ ಟನ್ ಪ್ರೇಷರ ಕೊಡುವ ಮಶಿನ್ನಿನಿಂದ ಬಗ್ಗಿಸಿ, ರಿವ್ಹಿಟ್ಸ ಮೊದಲಾದವುಗಳಿಂದ ಜಾಯಿಂಟ ಮಾಡದೆ ಇಲೆಕ್ಟ್ರಿಸಿಟಿಯಿಂದ ಬೆಸೆದು ತಯಾರಿಸುತ್ತೇವೆ.

ಈ ಹೊಸ ಸುಧಾರಣೆಯಿಂದ ಮಾಡಿದ ತಿಜೋರಿಗಳಿಗೂ ಮತ್ತು ಯಾವದೇ ನಮ್ಮ ಸಾಮಾನಕ್ಕೂ ಯಾವ ತರದ ಭಯವಿಲ್ಲ. ಮತ್ತು ಅವು ಒಳ್ಳೇ ಮಜಬೂತವಾಗಿಯೂ ಸುಂದರವಾಗಿಯೂ ಆಗುತ್ತವೆ. ನಾವು ನಮ್ಮ ತಿಜೋರಿಗಳಿಗೂ ಮತ್ತು ನಮ್ಮಲ್ಲಿ ತಯಾರಾಗುವ ಉಕ್ಕಿನ ಕಪಾಟು, ಕ್ಯಾಶಬಾಕ್ಸ, ಸ್ಟ್ರಾಂಗರೂಮ ಡೋರ್ಸು ಗಳಿಗೂ ನಮ್ಮ ಕಾರಖಾನೆಯಲ್ಲಿಯೇ ತಯಾರಾಗುವ ಉತ್ತಮವಾದ ಮತ್ತು ಮಜಬೂತವಾದ ಕೀಲಿಗಳನ್ನು ಹಚ್ಚುತ್ತೇವೆ. ಮತ್ತು ಇದಲ್ಲದೆ ನಮ್ಮಲ್ಲಿ ಹೊಸ ಪದ್ಧತಿಯ ಮೇರೆಗೆ ತಯಾರಾಗುವ ಕಾಂಬಿನೇಶನ್ ಕೀ ಲೆಸ್ಸಾ ಲಾಕ್ಸು ( ನಂಬರ ಕೀಲಿ ) ಗಳನ್ನು ತಿಜೋರಿಗಳಿಗೆ ಹಚ್ಚಿಸಿದರೆ ಆ ತಿಜೋರಿಗಳನ್ನು ಯಾರೂ ತೆಗೆಯಲು ಸಾಧ್ಯವಿಲ್ಲ. ಯಾರಾದರೂ ತೆಗೆದರೆ ಅವರಿಗೆ

**೧೦೦೦ ರೂ. ಬಹುಮಾನ ಕೊಡುವೆವು.**

ನಮ್ಮ ಫಾಯರ ಪ್ರೂಫ್ ತಿಜೋರಿಗಳು ತುಂಬಾ ಖಾತ್ರಿಯಾದವುಗಳಿರುತ್ತವೆ.

**ಈ ಬಗ್ಗೆ ಅನೇಕ ವಸ್ತು ಪ್ರದರ್ಶನಗಳಲ್ಲಿ ಒಳಗೆ ನೋಟು ವಗೈರೆ ಸಾಮಾನುಗಳನ್ನು ಇಟ್ಟು ಕೆಂಪಗೆ ಕಾಸಿದನಂತರ ಒಳಗಿಟ್ಟ ಸಾಮಾನುಗಳು ಸುಡದೆ ಇದ್ದದ್ದನ್ನು ಖಾತ್ರಿ ಮಾಡಿಕೊಟ್ಟಿದ್ದೇವೆ.**

ಧಾರಣೆಗಳ ಬಗ್ಗೆ ನಮ್ಮ ಸಚಿತ್ರ ಕ್ಯಾಟಲಾಗುಗಳಿಗೆ ಬರೆಯಿರಿ.
ಅ ಥ ವಾ
ಸಮಕ್ಷಮ ಬಂದಲ್ಲಿ ತಿಳಿಯುವದು.

ತಮ್ಮ ಕಲಾಭಿಮಾನಿ,
ಸಿದ್ಧೇಶ್ವರ ಮತ್ತು ಕಂಪನಿ
ಟ್ರೇಝರಿ ಮೇಕರ್ಸ
ಹುಬ್ಬಳ್ಳಿ.

ಫ್ಯಾಕ್ಟರಿ ಮತ್ತು ಹೆಡ್ ಆಫೀಸ್-
ಹುಬ್ಬಳ್ಳಿ.

ಬ್ರ್ಯಾಂಚ ಆಫೀಸುಗಳು-
ಹೈದರಾಬಾದ (ಡೆಕ್ಕನ) ಮತ್ತು ಕೊಲ್ಹಾಪುರ (ಲಕ್ಷ್ಮೀಪುರಿ)

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣಮಂದಿರದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

Sha... ...ch.

ನ್ಯಾಯನಿಷ್ಠುರ. ದಾ... ...ಅಂಜುವವನಲ್ಲ ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —... ...ರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ...:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೭ | ಆಬನುಬ್ಬಿ- ಸೋಮವಾರ ತಾರೀಖು ೬ ನೆಯ ಡಿಶಂಬರ್ ೧೯೩೭. | ಸಂಚಿಕೆ೧೫ |
|---|---|---|

ಜನಸೇವೆಯೇ ದೇವರಸೇವೆ.

# ರಾಜಕೈದಿಗಳ ಅನ್ನತ್ಯಾಗ!

ಅಲಿಪುರ ಕಾರಾಗೃಹದಲ್ಲಿರುವ ರಾಜಕೈದಿಗಳು
ತಮ್ಮನ್ನು ಜಾಗ್ರತೆ ಬಿಡುಗಡೆ ಮಾಡದಿದ್ದರೆ
ತಾವು ಅನ್ನತ್ಯಾಗದ ಸತ್ಯಾಗ್ರಹವನ್ನು
ಪ್ರಾರಂಭಿಸುವೆವೆಂದು
ಗಾಂಧೀಜಿಯವರಿಗೆ ತಂತೀ ಮೂಲಕ
ತಿಳಿಸಿದ್ದಾರೆ.

## ಚೀನ-ಜಪಾನ ಒಪ್ಪಂದ?

ಚೀನ-ಜಪಾನಗಳಲ್ಲಿ ಇಷ್ಟರಲ್ಲೇ ಒಪ್ಪಂದ
ವಾಗುವುದೆಂದೂ ಮುಸೋಲಿನಿಯವರು
ಒಪ್ಪಂದ ಮಾಡಿಕೊಳ್ಳಲು ಚೀನ ದೇಶಕ್ಕೆ ಸಲಹೆ
ಕೊಟ್ಟಿದ್ದಾರೆಂದೂ ಪ್ರಕಟವಾಗಿದೆ.
ಚೀನ ದೇಶದ ೪೦ ಪ್ರಮುಖರು ಮತ್ತು ಅಧಿಕಾರಿಗಳು
ಹಾಂಗ್ ಕಾಂಗದ ಕಡೆಗೆ ಹೋದರೆಂದು ಸುದ್ದಿ.

ದೇಹವೇ ದೇವಾಲಯ.



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೬ ನೆಯ ಡಿಶಂಬರ್ ೧೯೩೭. | ಸಂಚಿಕೆ ೧೫

## ಮಹತ್ವದ ಸುದ್ದಿಗಳು.

—ಬೆಳಗಾವ ಜಿಲ್ಲಾ ಲೋಕಲ್‌ಬೋರ್ಡ್ ಶಾಲೆಗಳಲ್ಲೆಲ್ಲಾ ಖಾದಿಯನ್ನೇ ಉಪಯೋಗಿಸಬೇಕೆಂಬ ಬಗ್ಗೆ ಒಂದು ಅಪ್ಪಣೆಯನ್ನು ಹೊರಡಿಸಬೇಕೆಂದು ಬೆಳಗಾವ ಜಿಲ್ಲಾ ಲೋಕಲ್‌ಬೋರ್ಡಿನಲ್ಲಿ ಠರಾವು ಪಾಸಾಯಿತು.

—ಪುಣೆ ಜಿಲ್ಲಾ ಲೋಕಲ್‌ಬೋರ್ಡ್ ಕಟ್ಟಡದ ಮೇಲೆ ರಾಷ್ಟ್ರಧ್ವಜವನ್ನು ಇರಿಸುವ ಸಮಾರಂಭವು ಮುಖ್ಯ ಮಂತ್ರಿಗಳಾದ ಶ್ರೀ. ಖೇರ ಇವರ ಹಸ್ತದಿಂದ ಜರುಗಿತು. ಮತ್ತು ಮಹಾತ್ಮಾ ಗಾಂಧಿ, ಪಂಡಿತ ನೆಹರು ಇವರ ಭಾವ ಚಿತ್ರವನ್ನು ಅದೇ ಕಟ್ಟಡದಲ್ಲಿ ಇಡುವ ಕಾರ್ಯವು ಸ್ಥಾನಿಕ ಸ್ವರಾಜ್ಯ ಮಂತ್ರಿ ಶ್ರೀ. ಪಟೇಲ ಇವರ ಹಸ್ತದಿಂದ ಜರುಗಿತು.

—ಬೆಳಗಾವಿಯಲ್ಲಿ ಕರ್ನಾಟಕದ ಒಕ್ಕಲತನದ ಪ್ರದರ್ಶನವು ಜನವರಿ ೧೭ ನೆಯ ತಾರೀಖಿನ ದಿವಸ ಗವ್ಹರ್ನರರಾದ ಸರ್. ಲನ್ಲೀಯವರ ಹಸ್ತದಿಂದ ತೆರೆಯಲ್ಪಡುವುದು. ಈ ಪ್ರದರ್ಶನವು ಅನಂತರ ಹತ್ತು ದಿನ ತೆರೆದಿಡಲ್ಪಡುವುದು.

—ದಿವಂಗತ ಸರ್. ಜಗದೀಶಚಂದ್ರ ಬೋಸರವರು ಕಾಂಗ್ರೆಸ್ ಮಂತ್ರಿಮಂಡಲದ ಕಾರ್ಯಕ್ಕೋಸ್ಕರ ಒಂದು ಲಕ್ಷ ರೂ. ಗಳನ್ನು ಶ್ರೀ. ರಾಜೇಂದ್ರ ಪ್ರಸಾದರ ಕಡೆಗೆ ಕೊಡುವ ವ್ಯವಸ್ಥೆ ಮಾಡಿದ್ದಾರೆಂದು ಪ್ರಕಟವಾಗಿದೆ. ಇವರು ತಮ್ಮ ಜೀವಿತದಲ್ಲಿ ೧೭ ಲಕ್ಷ ರೂ. ಗಳನ್ನು ದಾನಮಾಡಿದ್ದಾರೆ.

—ಬೆಳಗಾವ ಜಿಲ್ಲಾ ಎಲ್ಲಾ ತಾಲೂಕು ಶಾಲೆಗಳಲ್ಲಿಯ ಪಟ್ಟೇವಾಲರಿಗೆ ಶುದ್ಧ ಖಾದಿಯ ಉಡುಪನ್ನೇ ಕೊಡಬೇಕೆಂದು ಜಿಲ್ಲಾ ಸ್ಕೂಲ್ ಬೋರ್ಡಿನವರು ನಿರ್ಧರಿಸಿದ್ದಾರೆ.

—ಸ್ಪೇನ ಸರಕಾರದ ಅಧೀನದಲ್ಲಿರುವ ಎಲ್ಲ ಬಂದರಗಳಿಗೂ ದೊಂಬಿಗಾರರ ದಳಪತಿ ಫ್ರಾಂಕೋ ಇವರು ಮುತ್ತಿಗೆ ಹಾಕುವವರಿದ್ದಾರೆ.

—ಮದ್ರಾಸ್ ಸರಕಾರದವರು ಖಾದಿ ಪ್ರಚಾರಕ್ಕಾಗಿ ಕೊಡುವ ವಾರ್ಷಿಕ ಎರಡು ಲಕ್ಷ ರೂ. ಗಳನ್ನು ಅಖಿಲ ಭಾರತ ರಾಟಿ ಸಂಘಕ್ಕೇನೇ ಕೊಟ್ಟು ಆ ಮೂಲಕ ಖಾದಿ ಪ್ರಸಾರ ಮಾಡಿಸುವವರಿದ್ದಾರೆ.

—ಕ್ಷಯರೋಗ ನಿವಾರಣೆಗಾಗಿ ಲೇಡಿ ಲಿನ್ ಲಿಥಗೋರವರು ಪ್ರಾರಂಭಿಸಿದ ಚಟುವಟಿಕೆಗಾಗಿ ಅವರು ಹತ್ತು ಲಕ್ಷ ಪೌಂಡು ಕೂಡಿಸುವವರಿದ್ದಾರೆ. ಚಕ್ರವರ್ತಿಗಳು ಒಂದು ಸಾವಿರ ಪೌಂಡುಗಳನ್ನು ಕೊಟ್ಟಿದ್ದಾರೆ. ಲೇಡಿ ಲಿನ್ ಲಿಥಗೋರವರು ಹತ್ತು ಸಾವಿರ ರೂ. ಗಳನ್ನು ಕೊಟ್ಟಿದ್ದಾರೆ.

—ಕಾಂಗ್ರೆಸ್ಸಿನ ಮುಂದಾಳುಗಳು ವಿಶ್ವಾಸಿಕರೆಂದು ತಿಳಿದು ಅವರೊಡನೆ ಸಂಬಂಧವನ್ನಿಟ್ಟುಕೊಳ್ಳಬೇಕಾಗಿ ಸಂಯುಕ್ತಪ್ರಾಂತ ಸರಕಾರವು ಆ ಪ್ರಾಂತದ ಜಿಲ್ಲಾಧಿಕಾರಿಗಳಿಗೆ ತಿಳಿಸಿದೆ.

—ಹರಿಪುರದ ಕಾಂಗ್ರೆಸ್ಸಿನ ಮಂಚೆಯೇ ಅಖಿಲ ಭಾರತ ರಾಷ್ಟ್ರೀಯಸಭೆಯ ಕಾರ್ಯಕಾರಿ ಮಂಡಲವು ಕೂಡುವುದಿಲ್ಲವೆಂದು ಶ್ರೀ. ಆಚಾರ್ಯ ಕೃಪಲಾನಿಯವರು ಪ್ರಕಟಿಸಿದ್ದಾರೆ.

—ಹೈದರಾಬಾದಿನ ನಿಜಾಮಸಂಸ್ಥಾನಾಧಿಪತಿಗಳು ಆಂಧ್ರ ವಿದ್ಯಾಪೀಠಕ್ಕೆ ಒಂದು ಲಕ್ಷ ರೂ. ಗಳನ್ನು ಕೊಡುವರೆಂದು ಪ್ರಕಟವಾಗಿದೆ.

—ಇಟಲಿಯು ಜಪಾನ ದೇಶವು ಆಕ್ರಮಿಸಿಕೊಂಡ ಚೀನ ದೇಶದ ಮಾಂಚುಕೊ ಸರಕಾರಕ್ಕೆ ತನ್ನ ಒಪ್ಪಿಗೆಯನ್ನು ಕೊಟ್ಟಿತು. ಇನ್ನು ಇಟಲಿ-ಜಪಾನಗಳ ವ್ಯಾಪಾರಿ ಒಪ್ಪಂದವು ಜರುಗಿ ಅಬಸಿನಿಯಾದಲ್ಲೆಲ್ಲಾ ಜಪಾನವು ತನ್ನ ವ್ಯಾಪಾರಿಜಾಲವನ್ನು ಬೀಸುವುದು.

—ಜಪಾನವು ಸ್ಪೇನಿನ ದೊಂಬಿಗಾರ ಫ್ರಾಂಕೊ ಇವರ ಅಧಿಕಾರಕ್ಕೆ ಒಪ್ಪಿಗೆಯನ್ನು ಕೊಟ್ಟಿತೆಂದು ಪ್ರಕಟವಾಗಿದೆ.

—ಅಹಮದಾಬಾದಿನಲ್ಲಿ ಗಿರಣಿಗಳ ಕಟ್ಟುನಿಂತು ಎಲ್ಲಾ ಕಡೆಗೂ ಶಾಂತತೆಯುಂಟಾದುದರಿಂದ ೧೪೪ ನೆಯ ನಿಯಮವನ್ನು ತೆಗೆದುಹಾಕಲಾಯಿತು.

ವಂದೇ ಮಾತರಂ

## ಗಾಂಧೀಜಿಯವರ ಉಪದೇಶ.

ರಾಜಕಾರಣದಲ್ಲಿ ಧಾರ್ಮಿಕ ಭಾವನೆಯನ್ನು ಸೇರಿಸಿ ಅದರಿಂದ ಯಾವ ಫಲಿತಾಂಶವುಂಟಾಗುತ್ತದೆಂಬ ಪ್ರಯೋಗವನ್ನು ನಾನು ನನ್ನ ಮೇಲೂ ನನ್ನ ಕೆಲವು ಮಿತ್ರರ ಮೇಲೂ ನಡೆಯಿಸಿದ್ದೇನೆ.

(೧) ಸಕಲ ಧರ್ಮಗಳಲ್ಲಿ ಹಿಂದು ಧರ್ಮವು ಶ್ರೇಷ್ಠವಾದುದಾಗಿದೆ. ಆದರೆ ನಾನು ಯಾವ ಧರ್ಮದ ಸಂಬಂಧವಾಗಿ ವಿಚಾರಮಾಡುತ್ತಿದ್ದೇನೆಯೋ ಅದು ಹಿಂದು ಧರ್ಮವೇನೂ ಅಲ್ಲ. ಅದಕ್ಕಿಂತಲೂ ಶ್ರೇಷ್ಠವಾದುದು.

(೨) ಮನುಷ್ಯನ ಅಂತಃಕರಣದಲ್ಲಿ ಅಡಗಿರುವ ಸತ್ಯ ತತ್ವವೂ ನಾನು ಯೋಚಿಸುತ್ತಿರುವ ಧರ್ಮವೂ ಏಕರೂಪವಾಗಿವೆ. ಈ ಧರ್ಮವು ಮನುಷ್ಯನ ಸ್ವಭಾವದಲ್ಲಿಯೇ ಪರಿವರ್ತನೆಯನ್ನುಂಟುಮಾಡಿ ಆತನು ಒಳಗೂ ಹೊರಗೂ ಪರಿಶುದ್ಧನಾಗುವಂತೆ ಮಾಡುವುದು.

—ಯಂಗ್ ಇಂಡಿಯಾ. ತಾ. ೧೨-೫-೧೯೨೦

ವಂದೇ ಮಾತರಂ

## ಮಹಾದೇವಿಯಕ್ಕನ ಜೀವನ ಚರಿತ್ರೆ.

(ಲೇಖಕರು:— ಶ್ರೀ. ಜಯದೇವ ತನಯ.)

ಮಹಾದೇವಿಯಕ್ಕನ ಚರಿತ್ರೆಯು ವೀರಶೈವ ವಾಙ್ಮಯದಲ್ಲಿ ಒಂದು ಮಹತ್ವದ ಗ್ರಂಥವಾಗಿದೆ. ಇವರ ವಚನಗಳು ಕನ್ನಡ ಸಾಹಿತ್ಯಕ್ಕೆ ಒಂದು ಅಪೂರ್ವ ಬೆಲೆಯನ್ನು ಕೊಡುತ್ತವೆ. ಇವರ ಚರಿತ್ರೆಯು ಎಲ್ಲಾ ಪುಸ್ತಕಗಳಲ್ಲಿಯೂ ಒಂದೇ ಸಮನಾಗಿಲ್ಲ. ಹಾಗೂ ಇವರ ಚರಿತ್ರೆಯು ಒತ್ತಟ್ಟಿಗೆ ಸಿಗುವುದಿಲ್ಲ. ಇಂಥ ಮಹತ್ವದ ಗ್ರಂಥವನ್ನು ಕೊಲ್ಲಾಪುರದ "ಬಸವನ ಬಳಗ"ದ ಸದಸ್ಯರೂ ಕಾರ್ಯದರ್ಶಿಗಳೂ ಸುಂದರವಾಗಿ ಅಚ್ಚು ಹಾಕಿಸಿದ್ದಕ್ಕಾಗಿ ಕನ್ನಡಿಗರು ಅವರಿಗೆ ಋಣಿಯಾಗಿದ್ದಾರೆ.

ಈ ಗ್ರಂಥವನ್ನು ಬರೆದವರು ಪ್ರೊ. ಕೆ. ಜಿ. ಕುಂದಣಗಾರ ಎಂ. ಎ. ಇವರು ಇದ್ದು ಶ್ರೀಯುತರೇ ಇದಕ್ಕೆ ೩೦ ಪುಟಗಳುಳ್ಳ ಒಂದು ವಿಸ್ತೃತವಾದ ಮುನ್ನುಡಿಯನ್ನು ಬರೆದಿರುವರು. ಈ ಮುನ್ನುಡಿಯಲ್ಲಿ ಅವರು ಅಕ್ಕನವರ ಮದುವೆಯ ವಿಚಾರವನ್ನು ಎತ್ತಿ ಎಲ್ಲ ಲೇಖಕರ ಮದುವೆಯ ವಿಚಾರದ ಲೇಖನಗಳನ್ನು ಪ್ರಕಟಿಸಿರುವರಲ್ಲದೆ ಆ ಸಂಶಯದ ನಿರಸನಕ್ಕೆಂದು ಶ್ರೀಯುತರಾದ ಪ್ರೊ. ನಂದಿಮಠ, ಶ್ರೀ. ಎಸ್. ಡಿ. ಪಾವಟೆ, ರಾ. ಸಾ. ಹಳಕಟ್ಟಿ ಹಾಗೂ ಶ್ರೀ. ಮಂಜಪ್ಪನವರು ಹರ್ಡೇಕರ ಇವರ ಅಭಿಪ್ರಾಯಗಳನ್ನು ಪ್ರಕಟಿಸಿರುವರಲ್ಲದೆ ಕೊನೆಗೆ ತಾವು ಶ್ರೀ ಮನ್ನಿರಂಜನ ಗುರುಶಾಂತದೇವರೊಡಗೂಡಿ ಸಂಪೂರ್ಣ ವಿವೇಚಿಸಿ ಅವರ ಅಪ್ಪಣೆಯಮೇರೆಗೆ ಚನ್ನಬಸವಾಂಕನ ಮಹಾದೇವಿಯಕ್ಕನ ಪುರಾಣವನ್ನು ಅನುಸರಿಸಿ ಲಗ್ನವಾಗಿವೆ ಎಂದು ಬರೆದಿರುತ್ತಾರೆ. ಕೊನೆಯಲ್ಲಿ ಇದು ಕೊನೆಯ ನಿರ್ಣಯವೆಂದು ಯಾರೂ ತಿಳಿಯಕೂಡದು ಸಂಶೋಧನೆಯ ಕಾರ್ಯದಲ್ಲಿ ಇನ್ನೂ ಆವಾವ ಆಧಾರಗಳು ಉಳಿದು ಹೋಗಿವೆಯೋ ತಿಳಿಯದು. ಈಗ ದೊರೆತ ಆಧಾರಗಳಮೇಲೆ ಒಂದು ನಿರ್ಣಯಕ್ಕೆ ಬಂದದ್ದಾಗಿದೆ. ಹೊಸ ಆಧಾರಗಳು ದೊರೆತು ನಿರ್ಣಯವು ಬೇರೆಯಾದಲ್ಲಿ ಅದು ಸಂತೋಷದ ಸಂಗತಿ. ಹೀಗೆಂದು ತಮ್ಮ ಸ್ಪಷ್ಟ ಅಭಿಪ್ರಾಯವನ್ನು ತಿಳಿಸಿರುವರು. ಶ್ರೀ. ಮಂಜಪ್ಪನವರು ಹರ್ಡೇಕರವರು ಕೂಡಾ ಅದೇ ಅಭಿಪ್ರಾಯವನ್ನು ಸ್ಪಷ್ಟಗೊಳಿಸಿದ್ದಾರೆ. ಮತ್ತು ಅಕ್ಕನವರ ಕಾವ್ಯಸ್ಫೂರ್ತಿ ಭಕ್ತಿ ಮೊದಲಾದವುಗಳು ಎಂತಹದೆಂಬುದನ್ನು ಚನ್ನಾಗಿ ಬರೆದಿದ್ದಾರೆ. ಮದುವೆಯ ವಿಚಾರವನ್ನು ತಿಳಿಯುವವರು ಅವಶ್ಯವಾಗಿ ಈ ಮುನ್ನುಡಿಯನ್ನು ಓದಬೇಕು.

ಶ್ರೀ. ಕುಂದಣಗಾರರು ಈ ಗ್ರಂಥವನ್ನು ಬರೆದದ್ದು ಅಕ್ಕನವರ ಮಹತ್ವದ ಕಾರ್ಯವನ್ನು ತಿಳಿಸಲಿಕ್ಕಾಗಿಯೇ. ಈ ಮಹಿಮಳ ವಿಷಯವಾಗಿ ಲೇಖಕರು ಬಹು ಪೂಜ್ಯ ಭಾವನೆಯನ್ನು ತಾಳಿ ಅವರ ಬಗ್ಗೆ ಮುನ್ನುಡಿಯಲ್ಲಿಯೇ ಒಂದು ವಚನವನ್ನು ಸುಂದರವಾಗಿ ಹಾಡಿದ್ದಾರೆ. ನಿಜವಾಗಿ ಮಹದೇವಿಯಕ್ಕನವರು ಸ್ತ್ರೀ ಸಮಾಜಕ್ಕೆ ಆದರ್ಶಪ್ರಾಯಳಾಗಿದ್ದಾರೆ. ಅವರ ವಚನಗಳಲ್ಲಿ ಉಜ್ವಲ ಸಾಹಿತ್ಯವಿದೆ. ಉಚ್ಚ ಮತ್ತು ದೀರ್ಘ ವಿಚಾರಗಳು ಪ್ರತಿಬಿಂಬಿತವಾಗಿರುತ್ತವೆ. ಇವರು ಶಿವಾನುಭವ ಮಂಟಪದಲ್ಲಿ ಮಾಡಿದ ವಾದವನ್ನು ೧೭ ನೇ ಸ್ಥಲದಲ್ಲಿ ಬಹಳ ಚನ್ನಾಗಿ ಚಿತ್ರಿಸಿದ್ದಾರೆ.

ಮಹಾದೇವಿಯಕ್ಕನವರ ಮದುವೆಯ ವಿಚಾರದಲ್ಲಿ ಅವರು ಚರ್ಚಿಸುವಾಗ ಮದುವೆಯಾಗಿತ್ತೆಂದು ಬರೆದರೆ ವಿರಶೈವರು ದೂಷಿಸಬಹುದು ಎಂಬುದಾಗಿಯೂ ಧಾರ್ಮಿಕ ಭಾವನೆಯನ್ನು ಧಿಕ್ಕರಿಸಿ ಒಂದು ಸಮಾಜವನ್ನೇ ಎದುರಿಸಿದಂತಾಗುತ್ತದೆಂದೂ ಹೆದರಿಕೆ ಇತ್ತೆಂದು ಅವರು ಬರೆದಿರುವರು. ನಿಜವಾದ ಸಂಶೋಧನೆ ನಡೆಸಿ ಸರಿಯಾದ ಆಧಾರ ತೋರಿಸಿ ಬರೆದರೆ ಇವರನ್ನೇಕೆ ದೂಷಿಸುವರು? ಇವರಿಗಾದರೂ ಬೇಕಾದದ್ದು ನಿಜವಾದ ಸಂಶೋಧನೆ. ಲೇಖಕರು ಹಾಗೇನಾದರೂ ತಿಳಿದುಕೊಂಡಿದ್ದರೆ ಇದನ್ನು ಬಿಡಬೇಕೆಂದು ನನ್ನ ಪ್ರಾರ್ಥನೆ. ಸಂಶೋಧನೆಗೆ ನಾವೆಲ್ಲರೂ ಮಹತ್ವಕೊಡಬೇಕಾದುದು ಯೋಗ್ಯವಾದುದು. ಆದ್ದರಿಂದ ಹರಿಹರದೇವನು ಚನ್ನಬಸವಾಂಕನೇ ತಮ್ಮ ರಗಳೆಗಳಲ್ಲಿ ಕಾಣಿಸಿದ ವಿಷಯ ಮೊದಲಾದವರು ಕಾಣಿಸಿರುವ ವಿಷಯಗಳನ್ನು ಸ್ಪಷ್ಟವಾದ ಆಧಾರಗಳು ದೊರೆಯುವತನಕ ಅವುಗಳನ್ನು ನಂಬುವುದರಲ್ಲಿ ಯಾವ ತಪ್ಪಿಲ್ಲವೆಂದು ನನ್ನ ಭಾವನೆ.

ಶ್ರೀಯುತರು ದೀಕ್ಷೆ ಹಾಗೂ ಕೆಲವು ಧರ್ಮಗಳ ವಿಷಯವಾಗಿ ಸಾಮಾನ್ಯವಾಗಿಯೇ ಬರೆದಿದ್ದರೂ ಸುವ್ಯಸ್ಥಿತವಾಗಿ ಸುಬೋಧವಾಗಿ ಹೇಳಿದ್ದಾರೆ. ಇದರಲ್ಲಿ ಒಟ್ಟು ೩೦ ಸ್ಥಲಗಳಿವೆ. ಬಸವನ ಬಳಗವು ತನ್ನ ಬಾಲ್ಯಾವಸ್ಥೆಯಲ್ಲಿಯೇ ಇಂಥ ಮಹತ್ಕಾರ್ಯ ಕೈಕೊಂಡುದು ಬಹಳ ಸ್ತುತ್ಯ ಹಾಗೂ ಆದರ್ಶಪ್ರಾಯವಾಗಿದೆ. ಬಳಗವು ಇತ್ತೋಪಯಶಸ್ವಿಯಾಗಿ ಬೆಳೆಯಲೆಂದೇ ನನ್ನ ಹಾರೈಕೆ.

ಗ್ರಂಥದ ಮುದ್ರಣವೂ ಬಾಯಿಂಡೂ ಸುಂದರವಾಗಿವೆ. ೧೬೬ ಪುಟಗಳುಳ್ಳ ಈ ಗ್ರಂಥದ ಬೆಲೆ ೧ ರೂಪಾಯಿ ಇರುತ್ತದೆ. ಇದನ್ನು ಪ್ರತಿಯೊಬ್ಬ ಕನ್ನಡಿಗನು ಸಂಗ್ರಹಿಸಬೇಕಾದದ್ದು ಅವಶ್ಯ.

---

—ಸಂಯುಕ್ತ ಪ್ರಾಂತ ಸರಕಾರವು ೩೦೦೦ ಕೈದಿಗಳನ್ನು ಡಿಶಂಬರ ೧೫ ನೆಯ ತಾರೀಖಿಗೆ ಬಿಡುವುದೆಂದು ತಿಳಿದಿದೆ.

—ಮೈಸೂರು ಮಹಾರಾಜರವರು ಸಂಸ್ಥಾನದ ದಿವಾನರಾಗಿರುವ ಸರ್. ಮಿರ್ಜಾ ಇಸ್ಮಾಯಿಲ್‌ರವರ ದಿವಾನಗಿರಿಯನ್ನು ೧೯೪೦ರ ವರೆಗೆ ಐದು ವರುಷಗಳ ವರೆಗೆ ಪುನಃ ಹೆಚ್ಚಿಸಿರುವರು.

# ವರ್ಣಭೇದ ನಿವಾರಣೋಪಾಯ.

ಡಾ.

ಅಂಬೇಡಕರರ ಭಾಷಣ.



ಹಿಂದು ಸಮಾಜದಲ್ಲಿರುವ ಬ್ರಾಹ್ಮಣಾದಿ ವರ್ಣಭೇದಗಳ ನಿವಾರಣೆಯು ಅತ್ಯಗತ್ಯವಾಗಿದೆ. ವರ್ಣಭೇದವೇ ಈ ಸಮಾಜದ ಜೀವನವಾಗಿದೆಯೆಂದು ತಿಳಿದವರೂ ಇದ್ದಾರೆ. ಹಿಂದು ಧರ್ಮವು ನಾಲ್ಕಾರು ಸಾವಿರ ವರುಷಗಳಿಂದ ಎಂತಹ ವಿಪತ್ತುಗಳಲ್ಲಾದರೂ ಅಳಿದು ನಾಮಶೇಷವಾಗದೆ ಅದು ಈ ವರೆಗೂ ಬದುಕಿದೆಯೆಂದೂ ಇವರಿಂದಲೇ ಇದರಲ್ಲಿ ಶ್ರೇಷ್ಠ ತತ್ವಗಳಿವೆಯೆಂದು ಸ್ಪಷ್ಟವಾಗುತ್ತದೆಂದೂ ಪ್ರೊಫೆಸರ್ ರಾಧಾಕೃಷ್ಣನ್‌ರವರು "Hindu View of Life" ಎಂಬ ಪುಸ್ತಕದಲ್ಲಿ ಬರೆದಿದ್ದಾರೆ.

ಒಂದು ವ್ಯಕ್ತಿಯು ಅಥವಾ ಸಮಾಜವು ಬದುಕಿದ್ದ ಮಾತ್ರದಲ್ಲಿಯೇ ಅದರಲ್ಲಿ ಉತ್ತಮ ತತ್ವಗಳಿವೆಯೆಂದು ತಿಳಿಯಬಾರದು. ಅದು ಯಾವ ರೀತಿಯಲ್ಲಿ ಬದುಕಿದೆಯೆಂಬುದನ್ನು ತಿಳಿದುಕೊಳ್ಳಬೇಕು. ಆ ರೀತಿಯ ಮೇಲಿಂದ ಅದು ಬದುಕಿದ್ದರ ಯೋಗ್ಯತೆಯನ್ನು ಅರಿತುಕೊಳ್ಳಬೇಕು. ಹಿಂದು ಸಮಾಜವು ಪರಾಜಿತ ಜೀವನದಲ್ಲಿಯೇ ಈ ವರೆಗೂ ಬದುಕಿದೆ. ಇದು ತನ್ನದೊಂದು ಸ್ವತಂತ್ರವಾದ ಜೀವನದಲ್ಲಿ ಇಲ್ಲವೇ ಇಲ್ಲ. ಇಂಥ ಬಾಳುವೆಯು ನಿಜವಾದ ಬಾಳುವೆಯೇ ಅಲ್ಲ.

### ವರ್ಣಭೇದ ನಿವಾರಣೆ.

ಹಿಂದು ಸಮಾಜದಲ್ಲಿರುವ ಬ್ರಾಹ್ಮಣಾದಿ ವರ್ಣಗಳ ಭೇದವನ್ನು ಕಳೆಯಲು ಅನೇಕರು ಅನೇಕ ಉಪಾಯಗಳನ್ನು ಸೂಚಿಸುತ್ತಿದ್ದಾರೆ. ಅವುಗಳಲ್ಲಿ ಮುಖ್ಯವಾದ ಒಂದೆರಡು ಉಪಾಯಗಳನ್ನು ಕುರಿತು ಮೊದಲು ಸ್ವಲ್ಪ ವಿಚಾರಮಾಡುವಾ.

(೧) ಒಂದೊಂದು ವರ್ಣದಲ್ಲಿರುವ ಅನೇಕ ಉಪವರ್ಣಗಳನ್ನು ತೆಗೆದುಹಾಕಿದರೆ ವರ್ಣಭೇದವು ಕೊನೆಗೆ ತಾನೇ ಹೋಗುತ್ತದೆಂದು ಕೆಲವು ಹೇಳುತ್ತಿದ್ದಾರೆ. ಇದರಿಂದ ವರ್ಣಭೇದದಲ್ಲಿರುವ ಮೇಲು ಕೀಳುಗಳೇನೂ ಲೋಪವಾಗುವುದಿಲ್ಲ. ಉಪವರ್ಣಗಳನ್ನೆಲ್ಲಾ ಕೂಡಿಸಿದರೆ ಅವು ಗಟ್ಟಿಗೊಂಡು ವರ್ಣಗಳು ಮತ್ತೆ ಸ್ಥಿರಗೊಳ್ಳುತ್ತವೇ ವಿನಾ ಅಳಿಯುವುದಿಲ್ಲ.

ಹೀಗೆ ಉಪವರ್ಣಗಳನ್ನು ಕೂಡಿಸುವುದು ಸಮಾನತೆಯ ದೃಷ್ಟಿಯಿಂದ ಯೋಗ್ಯವಾಗಿಯೂ ಇಲ್ಲ. ದೃಷ್ಟಾಂತಕ್ಕಾಗಿ ದಕ್ಷಿಣ ಮತ್ತು ಉತ್ತರ ಹಿಂದುಸ್ಥಾನದ ಬ್ರಾಹ್ಮಣರನ್ನು ತೆಗೆದುಕೊಳ್ಳೋಣ. ಉತ್ತರ ಮತ್ತು ಮಧ್ಯ ಹಿಂದುಸ್ಥಾನದ ಬ್ರಾಹ್ಮಣರು ಮುಂಬೈ ಮತ್ತು ಮದ್ರಾಸ ಪ್ರಾಂತಗಳ ಬ್ರಾಹ್ಮಣರಿಗಿಂತ ಸಾಮಾಜಿಕ ಶೈಕ್ಷಣಿಕ ಮೊದಲಾದ ವಿಷಯಗಳಲ್ಲಿ ಬಹು ಕಡಿಮೆಯವರಿದ್ದಾರೆ. ಆದರೆ ವೈಶ್ಯರು ಮತ್ತು ಕಾಯಸ್ಥರು ಮಾತ್ರ ಅವರಿಗೆ ಸಮಾನರಾಗಿದ್ದಾರೆ.

ಊಟೋಪಚಾರಗಳಲ್ಲಿ ಕೂಡಾ ಕಾಶ್ಮೀರಿ, ಬಂಗಾಲಿ ಬ್ರಾಹ್ಮಣರು ಮುಂಬೈ ಮತ್ತು ಮದ್ರಾಸಿ ಬ್ರಾಹ್ಮಣರಿಗಿಂತ ಕಡಿಮೆ ತರದವರು. ಎಂದರೆ ಅವರು ಮಾಂಸಾಹಾರಿಗಳು. ಇವರು ಶಾಕಾಹಾರಿಗಳು. ಆದರೆ ಗುಜರಾತಿ, ಮಾರವಾಡಿ, ಜೈನ ಮೊದಲಾದ ಬ್ರಾಹ್ಮಣೇತರ ಶಾಕಾಹಾರಿಗಳೂ ಮುಂಬೈ ಮತ್ತು ಮದ್ರಾಸಿ ಬ್ರಾಹ್ಮಣರೂ ಊಟೋಪಚಾರಗಳಲ್ಲಿ ಸಮಾನರಾಗಿದ್ದಾರೆ. ಒಂದೇ ವರ್ಣದಲ್ಲಿರುವ ಈ ಭೇದಗಳು ಪರಸ್ಪರ ಕೂಡಲು ಅನಾನುಕೂಲವಾಗಿವೆಯೇ ವಿನಾ ಅನುಕೂಲವಾಗಿಲ್ಲ. ಭಿನ್ನ ವರ್ಣದ ಅನೇಕ ಜಾತಿಗಳೇ ಪರಸ್ಪರ ಕೂಡಲು ಎಷ್ಟೋ ಅನುಕೂಲವಾಗಿವೆ.

(೨) ಸಹಭೋಜನ ಪದ್ಧತಿಯಿಂದ ವರ್ಣಭೇದವು ನಿವಾರಣೆಯಾಗುತ್ತದೆಂದು ಕೆಲವರು ಹೇಳುತ್ತಿದ್ದಾರೆ. ವರ್ಣಭೇದ ನಿವಾರಣೆಗೆ ಇದು ಕೂಡಾ ಪರಿಣಾಮಕಾರಿಯಾದ ಮಾರ್ಗವಲ್ಲ. ಅನೇಕರಲ್ಲಿ ಪರಸ್ಪರ ಊಟೋಪಚಾರಗಳೇನೋ ನಡೆಯುತ್ತವೆ. ಆದರೆ ಅವರಲ್ಲಿರುವ ಜಾತಿಭೇದದ ಕಲ್ಪನೆಯು ಮಾತ್ರ ನಿವಾರಣೆಯಾಗಿಲ್ಲ.

(೩) ವರ್ಣಭೇದ ನಿವಾರಣೆಗೆ ಅಂತರ್ಜಾತೀಯ ವಿವಾಹವೇ ಮುಖ್ಯೋಪಾಯವೆಂದು ನನ್ನ ದೃಢವಾದ ಅಭಿಪ್ರಾಯವು. ರಕ್ತ ಸಂಬಂಧವಿಲ್ಲದೆ ನಿಜವಾದ ಬಂಧುಭಾವನೆಗಳುಂಟಾಗುವುದಿಲ್ಲ. ವರ್ಣಭೇದ ನಿವಾರಣೆಯಾಗಬೇಕಾದರೆ ಯಾವ ವರ್ಣದವರೇ ಆಗಿರಲಿ, ತಮ್ಮ ವರ್ಣದವರಲ್ಲಿಯೇ ವಿವಾಹವಾಗಬೇಕೆಂಬ ಕಟ್ಟನ್ನು ಇಟ್ಟುಕೊಳ್ಳದೆ ಹಿಂದುಗಳೆಲ್ಲರೂ ಒಂದೇ ಎಂದು ತಿಳಿದು ಪರಸ್ಪರ ವಿವಾಹ ನಡೆದ ವಿನಾ ವರ್ಣಭೇದವು ನಿವಾರಣೆಯಾಗುವುದಿಲ್ಲ.

### ಜಾತಪಾತ ತೋಡಕ ಮಂಡಲ.

ಲಾಹೋರಿನಲ್ಲಿರುವ ಜಾ ತ ಪಾ ತ ತೋಡಕಮಂಡಲದವರ ಕಾರ್ಯಪದ್ಧತಿಯು ಅಭಿನಂದನೀಯವಾಗಿದೆ ಅಂತರ್ಜಾತೀಯ ವಿವಾಹವನ್ನು ಆಚರಣೆಯಲ್ಲಿ ತರಬೇಕೆಂಬ ಈ ಮಂಡಲದವರ ಉದ್ದೇಶವು ಯೋಗ್ಯವಾಗಿದೆ. ರಾಜಕಾರಣದಲ್ಲಿ ಸರಕಾರದ ಸಂಗಡ ಹೋರಾಡುವವರಿಗಿಂತ ಸಮಾಜದ ಸಂಗಡ ಹೋರಾಡುವ ಇಂಥ ಕಾರ್ಯಕರ್ತರು ಹೆಚ್ಚಿನ ಶೂರರು. ಅವರಿಗಿಂತ ಇವರಲ್ಲಿ ಹೆಚ್ಚಿನ ಧೈರ್ಯ ಸಾಹಸಗಳು ಬೇಕಾಗುತ್ತವೆ.

ಜಾತಿಭೇದವೆಂಬುದೇನೂ ಒಂದು ಕಬ್ಬಿಣದ ಸರಪಳಿಯಂತೆ ಸ್ಥೂಲವಾದುದಲ್ಲ. ಅದು ದೇಹ ಬಲದಿಂದ ಮುರಿದುಹಾಕಲ್ಪಡತಕ್ಕುದೂ ಅಲ್ಲ. ಜಾತಿಭೇದವೆಂಬುದು ಭಾವನಾವಿಶಿಷ್ಟವಾದುದು. ಅದೊಂದು ಮಾನಸಿಕ ಸ್ಥಿತಿಯು. ಅದನ್ನು ವಿಚಾರ ಕ್ರಾಂತಿಯಿಂದಲೇ ತೆಗೆದುಹಾಕಬೇಕಾಗಿದೆ. ಜಾತಿಭೇದ ಮಾಡುವವರ ತಿಳುವಳಿಕೆಯೇ ತಪ್ಪಾಗಿದೆ. ಅವರೇನೂ ಇದಕ್ಕೆ ಕಾರಣರ

ಲ್ಲ. ಅವರಿಗೆ ಧರ್ಮವು ಪ್ರಾಣಕ್ಕಿಂತ ಪ್ರಿಯವಾಗಿ ತೋರುತ್ತಿರುವುದರಿಂದಲೂ ಜಾತಿಭೇದವು ಧರ್ಮದ ಪ್ರಾಣವೇ ಆಗಿದೆಯೆಂತಲೂ ಭಾಸವಾಗಿದೆ. ಅಂತೆಯೇ ಅವರು ಹೀಗೆ ಆಚರಿಸುತ್ತಿದ್ದಾರೆ.

### ಗ್ರಂಥಗಳ ದಾಸರಾಗಬೇಡಿರಿ.

ಜಾತಿಭೇದವನ್ನು ಬೋಧಿಸುತ್ತಿರುವ ಶಾಸ್ತ್ರಗಳೇ ಇವರಲ್ಲಿ ಇಂಥ ತಪ್ಪು ತಿಳುವಳಿಕೆಯುಂಟಾಗಲು ಕಾರಣವಾಗಿವೆ. ಆದಕಾರಣ ಅಂಥ ಧರ್ಮ ಗ್ರಂಥಗಳಲ್ಲಿರುವ ಇವರ ನಂಬಿಕೆಯು ಮೊದಲು ನಿವಾರಣೆಯಾಗಬೇಕು. ಧರ್ಮಗ್ರಂಥಗಳಿಗೆ ಜನರು ದಾಸರಾಗಿದ್ದಾರೆ. ಈ ಗುಲಾಮಗಿರಿಯನ್ನು ಮೊದಲು ತೆಗೆದುಹಾಕಿರಿ, ಎಂದರೆ ಜಾತಿಭೇದವು ತಾನೇ ನಿವಾರಣೆಯಾಗುತ್ತದೆ.

ಮಹಾತ್ಮಾ ಗಾಂಧಿಯವರೇ ಮೊದಲಾದವರು ಅಸ್ಪೃಶ್ಯತಾ ನಿವಾರಣೆಗಾಗಿ ಪ್ರಯತ್ನಿಸುತ್ತಿದ್ದಾರಷ್ಟೆ. ಇವರು ಎಲ್ಲಿಯವರೆಗೆ ಧರ್ಮ ಗ್ರಂಥಗಳ ಆಧಾರವನ್ನೇ ತೋರಿಸುವರೋ ಅಲ್ಲಿಯವರೆಗೆ ಜನರಲ್ಲಿರುವ ಗ್ರಂಥಗಳ ಮೂಢ ಭಕ್ತಿಯು ಹೋಗುವುದಿಲ್ಲ, ಮತ್ತು ಅಸ್ಪೃಶ್ಯತಾ ನಿವಾರಣೆಯಾಗುವುದಿಲ್ಲ.

ಭಗವಾನ್ ಬುದ್ಧ ಮತ್ತು ನಾನಕರಂತೆ ಆಯೋಗ್ಯವಾದ ಸಂಗತಿಗಳನ್ನು ಹೇಳುವ ಧರ್ಮ ಗ್ರಂಥಗಳನ್ನೇ ಮೊದಲು ನಿಷೇಧಿಸಬೇಕು. ಅವುಗಳಲ್ಲಿರುವ ಜನರ ಮೂಢ ಕಲ್ಪನೆಯನ್ನು ತೆಗೆದುಹಾಕಬೇಕು. ತರ್ಕ, ವ್ಯಾಕರಣ ಶಾಸ್ತ್ರಗಳಿಂದ ಅರ್ಥಮಾಡಿ ಧರ್ಮ ಗ್ರಂಥಗಳ ಮಹತ್ವವನ್ನು ಸಂರಕ್ಷಿಸುವುದರಿಂದ ಜಾತಿಭೇದವನ್ನೂ ಸಂರಕ್ಷಿಸಿದಂತೆಯೇ ಆಗುವುದು. ಆದಕಾರಣ ತಪ್ಪು ತಿಳುವಳಿಕೆಯನ್ನುಂಟುಮಾಡುವ ಈ ಧರ್ಮಗ್ರಂಥಗಳನ್ನು ಮೊದಲು ತೆಗೆದುಹಾಕಿರಿ.

---

## ಅಮೇರಿಕೆಯಲ್ಲಿ ಶಿವಾಲಯ.

ಉತ್ತರ ಅಮೇರಿಕೆಯ ಉತ್ತರ ಕೆಲಿಫೋರ್ನಿಯಾದ ಹತ್ತಿರ ಎರಿಜೋನಾ ಪ್ರದೇಶದ ಒಂದು ಪರ್ವತದ ಮೇಲೆ ಅತಿ ಪ್ರಾಚೀನ ಕಾಲದ ಒಂದು ಶಿವಾಲಯವು ಶೋಧಿಸಲ್ಪಟ್ಟಿದೆ. ಈ ಪರ್ವತವು ೧೨೦೦ ಅಡಿ ಎತ್ತರವಾದುದಾಗಿದೆ.

ಕಳೆದ ಸೆಪ್ಟಂಬರ್ ತಿಂಗಳಲ್ಲಿ ಅಮೇರಿಕೆಯ "ಮ್ಯುಜಿಯುಮ್ ಆಫ್ ನ್ಯಾಚರಲ್ ಹಿಸ್ಟ್ರಿ" ಎಂಬ ಸಂಘದ ಸದಸ್ಯರು ಈ ಪ್ರಾಚೀನ ಶಿವಾಲಯವನ್ನು ಕಂಡುಹಿಡಿದಿದ್ದಾರೆ. ಈ ಸಂಘದ ಪ್ರಮುಖರಾದ ಡಾ. ಹೆರಲ್ಡ್ ಎಂಥನಿ ಎಂಬುವವರು ವಿಮಾನಿನಲ್ಲಿ ಸಂಚರಿಸುವಾಗ ಆ ಸ್ಥಳವನ್ನು ಕಂಡು ಅಲ್ಲಿ ತಾ. ೧೫ ರಿಂದ ೨೬ ರ ವರೆಗೆ ಇದ್ದು ಶಿವಾಲಯದ ಎಲ್ಲ ಸ್ಥಿತಿಗತಿಗಳನ್ನೂ ನೋಡಿಕೊಂಡು ಬಂದಿದ್ದಾರೆ.

ಡಾ. ಎಂಥನಿಯವರು ನ್ಯೂಯಾರ್ಕದಲ್ಲಿ ಈ ಶಿವಾಲಯದ ಸಂಬಂಧವಾಗಿ ಒಂದು ಮಹತ್ವದ ಭಾಷಣವನ್ನು ಮಾಡಿದರು. ಅದರ ಹತ್ತಿರಿನ ಇನ್ನೊಂದು ಪರ್ವತದಮೇಲೆ ಸ್ತೂಪವಿದೆ. ಅನೇಕ ಆಯುಧಗಳೂ ಅಲ್ಲಿ ದೊರೆತಿವೆ.

ಈ ಎಲ್ಲ ಸಂಗತಿಗಳ ಮೇಲಿಂದ ಈ ಶಿವಾಲಯವು ಅತಿ ಪ್ರಾಚೀನವಾದುದೆಂದೂ ಅಲ್ಲಿ ಹಿಂದು ಸಂಸ್ಕೃತಿಯು ಹಿಂದಕ್ಕೆ ಪ್ರಚಾರವಾಗಿದ್ದಿತೆಂದೂ ಸ್ಪಷ್ಟನಾಗುತ್ತದೆ. ಪ್ರಪಂಚದಲ್ಲೆಲ್ಲಾ ಒಂದು ಕಾಲಕ್ಕೆ ಪ್ರಸಾರವಾಗಿದ್ದ ಹಿಂದು ಸಂಸ್ಕೃತಿಗೆ ಈಗ ಎಂತಹ ಸ್ಥಿತಿ ಬಂದಿದೆಯೆಂಬುದನ್ನು ಹಿಂದುಗಳು ಲಕ್ಷಿಸಿ ತಮ್ಮ ಸಂಸ್ಕೃತಿಯ ಸಂರಕ್ಷಣೆ ಮತ್ತು ಸಂವರ್ಧನೆಗಳಿಗಾಗಿ ಪ್ರಯತ್ನಿಸುವುದು ಅಗತ್ಯವಾಗಿಲ್ಲವೆ ?

## ಬೋಸರ ಸಂಶೋಧನೆಯ ಮಹತ್ವ.

ದಿವಂಗತ ಸರ್. ಜಗದೀಶಚಂದ್ರ ಬೋಸರವರು ಯುಗಪ್ರವರ್ತಕ ಶಾಸ್ತ್ರಜ್ಞರು ಎಂದು ಸುಪ್ರಸಿದ್ಧ ರಸಾಯನ ಶಾಸ್ತ್ರಜ್ಞರಾದ ಸರ್. ಪ್ರಫುಲ್ಲಚಂದ್ರರಾಯರವರು ಹೇಳಿದ್ದಾರೆ. ಸರ್. ಬೋಸರವರ ಸಂಶೋಧನವು ಇಷ್ಟು ಮಹತ್ವವಾದುದೆ? ಎಂಬ ಶಂಕೆಯುಂಟಾಗಬಹುದು. ಅಂತೆಯೇ ಅವರ ಸಂಶೋಧನೆಯ ಸಂಗತಿಗಳನ್ನು ಕುರಿತು ಈ ಕೆಳಗಿನಂತೆ ಸಂಕ್ಷಿಪ್ತವಾಗಿ ವಿವರಿಸಿದ್ದಾಗಿದೆ.

### ವನಸ್ಪತಿಗಳ ವಾಚಸ್ಪತಿ.

"ಆ ಬ್ರಹ್ಮಸ್ತಂಬ ಪರ್ಯಂತ" ಒಂದೇ ತತ್ವವು ಈ ವಿಶ್ವವನ್ನು ವ್ಯಾಪಿಸಿದೆಯೆಂದು ಪ್ರಾಚೀನ ಭಾರತೀಯ ತತ್ವಜ್ಞಾನಿಗಳು ಹೇಳುತ್ತಾ ಬಂದಿದ್ದಾರಷ್ಟೆ. 'ಸ್ತಂಬ' ಎಂದರೆ ಹುಲ್ಲು. ಹುಲ್ಲಿನಲ್ಲಿಯು ಕೂಡಾ ಚೇತನವುಂಟೆಂದೇ ಪ್ರಾಚೀನ ಋಷಿಗಳು ಹೇಳಿದ್ದಾರೆ. ಅದನ್ನು ಶಾಸ್ತ್ರೀಯ ದೃಷ್ಟಿಯಿಂದ ಪ್ರಪಂಚಕ್ಕೆ ತೋರಿಸಿದವರು ಜಗದೀಶಚಂದ್ರ ಬೋಸರು. ಧರ್ಮ ಮತ್ತು ವಿಜ್ಞಾನಗಳಲ್ಲಿ ಈ ಸಂಬಂಧವಾದ ಮತೈಕ್ಯವನ್ನುಂಟುಮಾಡಿದವರು ಬೋಸರು.

ಪ್ರಾಣಿಗಳ ಉತ್ಕ್ರಾಂತಿಯ ಸರಪಳಿಯನ್ನು ಡಾರ್ವಿನ್‌ರವರು ಕೂಡಿಸಿದರು. ಬೋಸರವರಾದರೋ ವನಸ್ಪತಿಗಳಿಗೂ ಸುಖದುಃಖಗಳ ಸಂವೇದನವು ಪ್ರಾಣಿಗಳಂತೆಯೇ ಆಗುತ್ತದೆಂಬುದನ್ನು ಪ್ರತ್ಯಕ್ಷ ಶಾಸ್ತ್ರವಾದ ವಿಜ್ಞಾನ ಶಾಸ್ತ್ರದಿಂದಲೇ ಸಿದ್ಧಮಾಡಿಕೊಟ್ಟು ಡಾರ್ವಿನ್‌ರ ಸರಪಳಿಯನ್ನು ವನಸ್ಪತಿಯ ವರೆಗೆ ಮುಟ್ಟಿಸಿದರು.

### ಯಂತ್ರ ವಿಶೇಷ.

ತಂತಿ ಇಲ್ಲದೆ ಸಮಾಚಾರವನ್ನು ತಿಳಿಸುವ ಚಮತ್ಕಾರದ ಸಂಶೋಧಕರು ಮಾರ್ಕೋನಿ ಎಂಬುವವರೆಂದು ಜನರು ಹೇಳುತ್ತಿದ್ದರೂ ಈ ಸಂಶೋಧನದ ಜನಕರು ಬೋಸರೇ ಆಗಿದ್ದಾರೆ. ಇವರೇ ೧೮೯೫ ರಲ್ಲಿ ಕಲಕತ್ತಾ ಟೌನ್‌ಹಾಲಿನಲ್ಲಿ ಗವ್ಹರ್ನರರ ಸಮಕ್ಷಮ ಒಂದು ಕೋಣೆಯಿಂದ ಇನ್ನೊಂದು ಕೋಣೆಗೆ ಇಂಥ ಪ್ರಯೋಗವನ್ನು ಮಾಡಿ ತೋರಿಸಿದ್ದರು.

ವನಸ್ಪತಿಗಳಿಗೆ ಕಲ್ಮಿಮಾಡುವಾಗ ಅವುಗಳಿಗೆ ದುಃಖವಾಗಬಾರದೆಂದು ಬೋಸರು ಒಂದು ಔಷಧಿಯನ್ನು ಕಂಡುಹಿಡಿದು ಆ ಗಿಡಕ್ಕೆ ಲೇಪಿಸಿ ಆ ಮೇಲೆ ಅದರ ಟೊಂಗೆಯನ್ನು ಕತ್ತರಿಸಿ ಕಲ್ಮಿಮಾಡಿ ಜಯಶಾಲಿಗಳಾದರು. ಅಂತೆಯೇ ಇವರಿಗೆ ವನಸ್ಪತಿಯ ವಾಚಸ್ಪತಿ ಎಂದು ಹೇಳುವರು.

ವನಸ್ಪತಿಗಳ ಪ್ರತಿನಿಮಿಷದ ಬೆಳವಣಿಗೆಯು ನಮ್ಮ ಕಣ್ಣಿಗೆ ಕಾಣಬೇಕೆಂದು ಒಂದು ಕೋಟಿ ಪಟ್ಟು ದೊಡ್ಡದಾಗಿ ತೋರುವಂತಹ ಮತ್ತು ಒಂದು ಸೆಕೆಂಡಿನ ನೂರು ಪಟ್ಟು ಚಿಕ್ಕದಾದ ಕಾಲವನ್ನು ಗೊತ್ತುಮಾಡುವಂತಹ ಅಪೂರ್ವ ಯಂತ್ರಗಳನ್ನು ಇವರು ನಿರ್ಮಿಸಿದ್ದಾರೆ.

೧೯೦೨ ನೆಯ ಇಸವಿಯಲ್ಲಿ ಸರ್. ಬೋಸರು ಇಂಗ್ಲಂಡಿನ "ರಾಯಲ್ ಇನ್‌ಸ್ಟಿಟ್ಯೂಶನ್" ದ ತಮ್ಮ ಭಾಷಣದಲ್ಲಿ ಹೀಗೆ ಹೇಳಿದ್ದರು—

"ಅಣು ರೇಣುಗಳಿಂದ ಸೂರ್ಯ ಮಂಡಲದ ವರೆಗೆ ಒಂದೇ ತತ್ವವು ಭರಿತವಾಗಿದ್ದಂತೆ ನನಗೆ ತೋರುತ್ತದೆ."

---

# ಈಗಿನ ರಾಜಕೀಯ ಪರಿಸ್ಥಿತಿ.

(ಬ್ಯಾ. ಸಾವರಕರರ ಭಾಷಣ.)

ಸ್ವಾತಂತ್ರ್ಯವೀರ ಸಾವರಕರ ಇವರು ತಾ. ೧೯-೧೧-೩೭ ನೇ ದಿವಸ ಶ್ರೀ. ಜಮುನಾದಾಸರ ಅಧ್ಯಕ್ಷತೆಯಲ್ಲಿ ಈಗಿನ ರಾಜಕೀಯ ಪರಿಸ್ಥಿತಿಯ ಸಂಬಂಧವಾಗಿ ಮುಂಬೈಯಲ್ಲಿ ಒಂದು ಮಹತ್ವದ ಭಾಷಣವನ್ನು ಮಾಡಿದರು. ಅದರ ಮುಖ್ಯಾಂಶ ಹೀಗಿದ್ದಿತು—

"ಕಳೆದ ೩೦ ವರುಷಗಳಲ್ಲಿ ನಮ್ಮ ದೇಶವು ಎಷ್ಟೋ ಮುಂದರಿದಿದೆ. ಆದರೆ ಅನ್ಯ ದೇಶಗಳಷ್ಟು ಮಾತ್ರ ಇದು ಮುಂದೆ ಬಂದಿಲ್ಲ. ಹೀಗಿದ್ದರೂ ಈಗ ಈ ದೇಶದಲ್ಲಿ ನಡೆದಿರುವ ಚಟುವಟಿಕೆಗಳೇನೂ ಉಪೇಕ್ಷಿಸತಕ್ಕಂಥವುಗಳಲ್ಲ. ನಾನು ಮೂವತ್ತು ವರುಷಗಳನಂತರ ಒಬ್ಬ ಹೊಸ ಮನುಷ್ಯನಾಗಿಯೇ ಈಗ ಈ ವಿಷಯವನ್ನು ಪ್ರಸ್ತಾಪಿಸುತ್ತಿದ್ದೇನೆ.

೩೦ ವರುಷಗಳ ಹಿಂದೆ ಅಸ್ಪೃಶ್ಯತಾನಿವಾರಣೆಯ ಚಟುವಟಿಕೆಯು ಇರಲಿಲ್ಲ. ಕೂಲಿಕಾರರ ಅಥವಾ ಒಕ್ಕಲಿಗರ ಹಿತಾರ್ಥವಾದ ಪ್ರಯತ್ನಗಳ ಸುದ್ದಿಯೇ ಇರಲಿಲ್ಲ. ರಾಜಕಾರಣವು ವ್ಯಾಪಕಾರ್ಥದಲ್ಲಿದೆ. ಅದರಲ್ಲಿ ಸಾಮಾಜಿಕ, ಆರ್ಥಿಕ ಮೊದಲಾದ ಎಲ್ಲ ವಿಷಯಗಳೂ ಅಡಕವಾಗುತ್ತವೆ.

### ಇದು ಸ್ವರಾಜ್ಯವಲ್ಲ.

ಈಗ ದೊರೆತ ಸುಧಾರಣೆಯು ಸ್ವರಾಜ್ಯವಲ್ಲ. ಕಾಂಗ್ರೆಸ್ ರಾಜ್ಯವೆಂದು ಹೇಳುವುದೂ ತಪ್ಪು. ಈಗ ಸ್ವಲ್ಪಮಟ್ಟಿಗೆ ಅಧಿಕಾರ ದೊರೆತಿದೆ. ಇಷ್ಟಕ್ಕೇ ಸ್ವರಾಜ್ಯವೆಂದರೆ ಸ್ವರಾಜ್ಯದ ಅವಮಾನವನ್ನು ಮಾಡಿದಂತೆಯೇ ಸರಿ. ಹಿಂದಕ್ಕೆ ಚಂದ್ರಗುಪ್ತ, ಶಿವಾಜಿ, ಇವರ ರಾಜ್ಯವಿದ್ದುದೇ ಸ್ವರಾಜ್ಯ.

ಈಗ ದೊರೆತಿರುವ ಅಧಿಕಾರವಾದರೂ ಒಂದೇ ವ್ಯಕ್ತಿಯ ಅಥವಾ ಪಕ್ಷದ ಪರಿಶ್ರಮದ ಫಲವೆಂದು ತಿಳಿಯುವುದು ತಪ್ಪು. ೧೮೫೭ ರಿಂದ ಸತ್ಯಾಗ್ರಹದ ವರೆಗಿನ ಅನೇಕರ ಪರಿಶ್ರಮದಿಂದಲೇ ಇಷ್ಟಾದರೂ ಅಧಿಕಾರ ದೊರೆತಿದೆ. ಗೋಖಲೆ, ರಾಸಬಿಹಾರಿ ಘೋಷ, ಟಿಳಕ, ಗಾಂಧಿ ಈ ಎಲ್ಲರ ಪರಿಶ್ರಮದಿಂದಲೇ ಈಗಿನ ಸ್ಥಿತಿ ಪ್ರಾಪ್ತವಾಗಿದೆ.

### ಐಕಮತ್ಯದ ಭ್ರಮೆ.

ಭಿನ್ನಾಭಿಪ್ರಾಯವಿರಕೂಡದೆಂದೂ ಬಹುಮತವುಳ್ಳ ಪಕ್ಷದ ವಿರುದ್ಧವಾಗಿ ಏನನ್ನೂ ಟೀಕಿಸಕೂಡದೆಂದೂ ಕೆಲವರ ತಿಳುವಳಿಕೆ. ಇದು ಐಕಮತ್ಯದ ಭ್ರಮೆಯು. ಪ್ರತಿಯೊಬ್ಬನಿಗೂ ತನ್ನ ಸ್ವತಂತ್ರ ಅಭಿಪ್ರಾಯವನ್ನು ತಿಳಿಸುವ ಅಧಿಕಾರವಿದೆ. ಏಕೆಂದರೆ ಎಂಥವರಾದರೂ ತಪ್ಪುವುದುಂಟು. ಗಾಂಧೀಜಿಯವರು ತಾವೇ ತಪ್ಪಿದೆವೆಂದು ಹೇಳಿಲ್ಲವೆ? ನೆಹರುರವರು ಅಧಿಕಾರ ಸ್ವೀಕರಿಸಬಾರದೆಂದು ತಾವು ಮುಂಚೆ ಹೇಳಿದ್ದು ತಪ್ಪೆಂದು ಈಗ ಒಪ್ಪಿಕೊಳ್ಳಲಿಲ್ಲವೆ? ಗಾಂಧೀಜಿಯವರಿಂದ ರಾಷ್ಟ್ರದ ಮಹಾನ್ ಸೇವೆಯಾಗಿದೆ. ಹೀಗಿದ್ದರೂ ಅವರು ತಪ್ಪು ಮಾಡೇ ಇಲ್ಲವೆಂದಾಗಲಿ ಅಥವಾ ಮಾಡುವುದೇ ಇಲ್ಲವೆಂದಾಗಲಿ ಹೇಳುವುದು ಯುಕ್ತವಲ್ಲ.

ಕಾಂಗ್ರೆಸ್, ಹಿಂದು ಮಹಾಸಭೆ, ಲೋಕಶಾಹಿ ಸ್ವರಾಜ್ಯ ಪಕ್ಷ ಇವು ಮೂರೂ ರಾಷ್ಟ್ರಭಕ್ತಿಯ ಸಂಸ್ಥೆಗಳೇ ಆಗಿವೆ. ಆದರೆ ಇವುಗಳ ಕಾರ್ಯ ಪದ್ಧತಿ ಮಾತ್ರ ಬೇರೆ. ಒಂದೇ ಪಕ್ಷದಲ್ಲಿ ಸೇರಿ ಗಲಾಟೆಮಾಡುವುದಕ್ಕಿಂತ ಹೀಗೆ ಬೇರೆ ಬೇರೆಯಾಗಿದ್ದು ತಮ್ಮ ತಮ್ಮ ಇಷ್ಟದಂತೆ ಕಾರ್ಯ ಮಾಡುವುದೇ ವಿಹಿತವೆಂದು ನನ್ನ ಅಭಿಪ್ರಾಯವು.

### ಹಿಂಸೆ ಮತ್ತು ಅಹಿಂಸೆ.

ಯಾವ ಪ್ರಾಣಿಯ ಹಿಂಸೆಯೂ ಕಾಯಾ, ವಾಚಾ, ಮನಸ್ಸುಗಳಿಂದ ಸಂಭವಿಸಬಾರದೆಂಬ ತತ್ವವು ಕೇವಲ ನುಡಿ ಮಾತ್ರವೇ ವಿನಾ ಜಗತ್ತಿನಲ್ಲಿ ಯಾರಿಂದಲೂ ಎಂದೂ ಆಚರಿಸಲ್ಪಟ್ಟುದುದಲ್ಲ. ಕಣ್ಣಿನ ರೆಪ್ಪೆಗಳನ್ನು ಆಡಿಸುವುದರಿಂದಲೂ ಹಿಂಸೆ ಸಂಭವಿಸುತ್ತದೆ.

ಜಪಾನಿಗಳಾಗಲಿ ಅಥವಾ ಅಫಗಾನಿಸ್ಥಾನದವರಾಗಲಿ ಹಿಂದುಸ್ಥಾನದ ಮೇಲೆ ದಂಡೆತ್ತಿಬಂದರೆ ಆಗ ನಾವು ಕಾಂಗ್ರೆಸ್ಸಿನವರೆಂತಲೂ ನಮ್ಮ ತತ್ವವು ಅಹಿಂಸೆಯೆಂತಲೂ ಹೇಳಿ ಅಹಿಂಸೆಯ ಬಲದಿಂದಲೇ ಅವರನ್ನು ಸೋಲಿಸುವುದು ಶಕ್ಯವೆ? ಹಿಂದಕ್ಕೆ ಸಿಂಧು ದೇಶದ ಮೇಲೆ ಮುಸಲ್ಮಾನರು ದಂಡೆತ್ತಿ ಬಂದಿದ್ದರು. ಆಗ ಅಲ್ಲಿ ಬೌದ್ಧಮತ ಪ್ರಚಾರ ವಿಶೇಷವಾಗಿತ್ತು. ಅಹಿಂಸೆಯ ಬಲದಿಂದ ಕ್ರೂರ ಪಶುಗಳನ್ನು ಕೂಡಾ ಜಯಿಸಬಹುದೆಂದ ಮೇಲೆ ಮನುಷ್ಯರ ಮಾತೇಕೆ? ಎಂದು ಬುದ್ಧ ಭಿಕ್ಷುಗಳು ಹೇಳಿದರು.

ರಾಜನು ಕ್ಷತ್ರಿಯನಾಗಿದ್ದುದರಿಂದ ಆತನು ಯುದ್ಧಮಾಡುವುದು ತನ್ನ ಧರ್ಮವೆಂತಲೂ ದಂಡೆತ್ತಿಬಂದ ವೈರಿಗಳನ್ನು ಸಂಹರಿಸುವುದು ತನ್ನ ಕರ್ತವ್ಯವೆಂತಲೂ ಹೇಳಿ ಯುದ್ಧಮಾಡಿದನು. ಈ ಯುದ್ಧದಲ್ಲಿ ಅವನು ಸೋತನು. ಮುಸಲ್ಮಾನರು ಜನಸಂಹಾರಮಾಡಿದರು. ಆಗ ಬುದ್ಧ ಭಿಕ್ಷುಗಳು ಹೀಗೆ ಹೇಳಿದರು—

"ನಾವು ಬೌದ್ಧರು. ಅಹಿಂಸಾವಾದಿಗಳು. ಹಿಂಸೆಯನ್ನು ಮಾಡಕೂಡದೆಂದೇ ನಮಗೆ ನಮ್ಮ ಧರ್ಮವು ಹೇಳುತ್ತದೆ. ಆದುದರಿಂದಲೇ ನಾವು ನಿಮ್ಮನ್ನು ವಿರೋಧಿಸಲಿಲ್ಲ. ನೀವಾದರೂ ನಮ್ಮನ್ನು ಹಿಂಸೆಗೊಳಿಸಬೇಡಿರಿ."

ಆಗ ಮುಸಲ್ಮಾನರು ಹೀಗೆ ಹೇಳಿದರು— "ನೀವು ನಿಮ್ಮ ಧರ್ಮದಂತೆ ನಡೆದಿರಿ. ನಾವು ನಮ್ಮ ಧರ್ಮದಂತೆ ನಡೆಯುತ್ತೇವೆ. ಅನ್ಯ ಧರ್ಮದವರನ್ನು ಮುಸಲ್ಮಾನ್ ಧರ್ಮದಲ್ಲಿ ತೆಗೆದುಕೊಳ್ಳಿರಿ. ಅವರು ಬರದಿದ್ದರೆ ಅವರನ್ನು ಕೊಲ್ಲಿರೆಂದು ನಮ್ಮ ಧರ್ಮವು ನಮಗೆ ಹೇಳುತ್ತದೆ." ಆಗ ಕೆಲವು ಬೌದ್ಧರು ಮುಸಲ್ಮಾನ್ ಧರ್ಮವನ್ನು ಸ್ವೀಕರಿಸಿ ಸುಂತಾಮಾಡಿಕೊಂಡು ಮಕ್ಕೆ ಯಾತ್ರೆಗೆ ಹೋದರು. ಇತರರು ಶಿರಚ್ಛೇದದ ಶಿಕ್ಷೆಗೊಳಗಾದರು. ರಜಪುತರಿಗೆ ಯಾವ ಅನುಭವ ಬಂದಿತೆಂಬುದು ನಿಮಗೆ ಗೊತ್ತಿದೆ. ಅಹಿಂಸೆಯೇನೋ ಸದ್ಗುಣವೇ. ಆದರೆ ಸದ್ಗುಣದ ಅತಿರೇಕವು ದುರ್ಗುಣವೆಂಬುದನ್ನು ಮರೆಯಬೇಡಿರಿ.

ಗಾಂಧೀಜಿಯವರು ಕೂಡಾ ತಮ್ಮ ಹಿಂಸೆಯನ್ನು ತಪ್ಪಿಸಿಕೊಳ್ಳಲಿಕ್ಕಾಗಿ ತಮ್ಮ ಹೊಟ್ಟೆಯಲ್ಲಿಯ ಕ್ರಿಮಿಗಳ ಹಿಂಸೆಯನ್ನು ಮಾಡಿಸಿದರು. ರಾಮಕೃಷ್ಣ ಪರಮಹಂಸರ ಸ್ಥಿತಿಯೂ ಹೀಗೆಯೇ ಆಯಿತು. ಗಾಂಧೀಜಿಯವರಂತೆಯೇ ರಾಷ್ಟ್ರಕ್ಕೂ "ಅಪೆಂಡಿ ಸಾಯಿಟೀಸ್" ರೋಗವುಂಟಾದರೆ ಆಗ ಹಿಂಸೆಯು ಅಗತ್ಯವಾಗಿಯೇ ಪರಿಣಮಿಸುತ್ತದೆ. ಅಹಿಂಸೆಯೆಂದರೆ ಹಿಂಸೆಗೊಳಿಸದೆ ಇರುವುದೇ ಅಲ್ಲ. ದೊಡ್ಡ ಹಿಂಸೆಯನ್ನು ತಪ್ಪಿಸುವುದಕ್ಕಾಗಿ ಸಣ್ಣ ಹಿಂಸೆಯನ್ನು ಮಾಡುವುದು ಅಹಿಂಸೆಯೇ.

ಕಾಂಗ್ರೆಸ್ ಪಕ್ಷವು ಅಧಿಕಾರವನ್ನು ಸ್ವೀಕರಿಸಿದನಂತರ ಪೋಲೀಸರ ಕೈಯಲ್ಲಿದ್ದ ಬಡಗಿ ಹೋಗುವುದೆಂದೂ ಜೈಲುಗಳಿಗಿದ್ದ ಬೀಗವನ್ನು ತೆಗೆದುಹಾಕಿ ಅಲ್ಲಿ ಒಬ್ಬ ಶಾಸ್ತ್ರಿಗಳು ಬಂದು ಪುಸ್ತಕವನ್ನು ಹಿಡಿದುಕೊಂಡು ಕೈದಿಗಳೇ ನೀವು ಇಲ್ಲಿಯೇ ಇರುವುದು ನಿಮ್ಮ ಧರ್ಮವೆಂಬುದಾಗಿ ಬೋಧಿಸುವರೆಂದೂ ತಿಳಿದವರೂ ಇರಬಹುದು. ಈಗ ರಾಜ್ಯಭಾರ ಹೇಗೆ ನಡೆದಿದೆ? ಶಸ್ತ್ರ ಬಲದ

ವಿನಾ ರಾಷ್ಟ್ರದ ಅಸ್ತಿತ್ವವೇ ಇಲ್ಲ. ಅದಕ್ಕಾಗಿ ಶಸ್ತ್ರ ನಿರ್ಬಂಧ ಶಾಸನವನ್ನು ತೆಗೆದುಹಾಕಲು ಪ್ರಬಲವಾದ ಚಟುವಟಿಕೆಯನ್ನು ಹೂಡಬೇಕು.

### ಪರ ರಾಷ್ಟ್ರಗಳ ರಾಜಕಾರಣ.

ನಾವು ಪರ ರಾಷ್ಟ್ರಗಳಲ್ಲಿ ಏನು ನಡೆದಿದೆಯೆಂಬುದನ್ನು ತಿಳಿದುಕೊಂಡ. ಸಮಯದ ಸದುಪಯೋಗಮಾಡಿಕೊಳ್ಳಬೇಕು. ಅದರಲ್ಲಿ ನ್ಯಾಯಾನ್ಯಾಯಗಳನ್ನು ಯೋಚಿಸಬಾರದು. ಮೊದಲು ಬಲಶಾಲಿಗಳಾಗಿರಿ. ಆ ಮೇಲೆ ನ್ಯಾಯ. ಚೀನದ ಮೇಲೆ ಅನ್ಯಾಯ ನಡೆದಿರುವುದೇನೋ ನಿಜ. ಆದರೆ ಜಪಾನದ ಕೋಪ ನಮ್ಮ ಮೇಲೆ ಬರುವಂತೆ ನಾವೇಕೆ ನಡೆಯಬೇಕು ? ಸುಮ್ಮನಿದ್ದರಾಯಿತು. ಅಬಸೀನಿಯಾ, ಚೀನ, ಇವುಗಳ ವಿಷಯದಲ್ಲಿ ನಿರ್ಬಲರಾದ ನಿಮ್ಮ ಸಹಾನುಭೂತಿಯಿಂದ ಬಂದ ಫಲವೇನು ?

ಪ್ಯಾಲಿಸ್ಟಾಯಿನ್ ದಿನವನ್ನಾಚರಿಸುವುದಂತೂ ಹಾಸ್ಯಾಸ್ಪದವಾದುದು. ಯಹುದಿ ಜನರಿಗೆ ಅವರ ಪವಿತ್ರ ಕ್ಷೇತ್ರದ ವಿಷಯದಲ್ಲಿ ಅದೇಕೆ ಅಭಿಮಾನವಿರಕೂಡದು? ಅರಬರು ನಮ್ಮ ಮೇಲೆ ಮಾಡಿದ ಅತ್ಯಾಚಾರವನ್ನು ನೋಡಿದರೆ ನಾವು ಅವರ ವಿಷಯದಲ್ಲಿ ಏಕೆ ಸಹಾನುಭೂತಿಯನ್ನು ತೋರಿಸಬೇಕು?

ಯಾರೂ ಯಾರ ರಕ್ಷಣೆಗೆ ಬರುವುದಿಲ್ಲವೆಂಬುದನ್ನು ನೆನಪಿನಲ್ಲಿಡಿರಿ. ಯಾರು ಅನ್ಯರ ಸಹಾಯವನ್ನೇ ಅಪೇಕ್ಷಿಸುತ್ತಾರೆಯೋ ಅವರು ಜಗತ್ತಿನಲ್ಲಿ ಜೀವಿಸಲು ಅಯೋಗ್ಯರು."

---

## ವಿಚಾರಯುಗದ ತತ್ವಜ್ಞಾನ.

(ಲೇ. ತರ್ಕತೀರ್ಥ ಜೋಸಿ ಲಕ್ಷ್ಮಣ ಶಾಸ್ತ್ರಿಗಳವರು.)

ಶ್ರೀ. ತರ್ಕತೀರ್ಥ ಲಕ್ಷ್ಮಣ ಶಾಸ್ತ್ರಿಗಳವರು ಮಹಾರಾಷ್ಟ್ರದ ಒಬ್ಬ ಪ್ರಮುಖ ವಿದ್ವಾಂಸರು. ಹಿಂದು ಸಮಾಜೋನ್ನತಿಗಾಗಿ ಪ್ರಯತ್ನಿಸುತ್ತಿರುವ ಒಬ್ಬ ಪ್ರಮುಖ ಮುಂದಾಳುಗಳು. ಈ ಮಹಾಶಯರು ಈ ತಿಂಗಳ "ಕಿರ್ಲೋಸ್ಕರ್" ಮಾಸಿಕದಲ್ಲಿ ಮೇಲಣ ವಿಷಯವನ್ನು ಕುರಿತು ವಿಚಾರಾತ್ಮಕವಾದ ಒಂದು ಮಹತ್ವದ ಲೇಖನವನ್ನು ಬರೆದಿದ್ದಾರೆ. ಅದರ ಮುಖ್ಯಾಂಶ ಹೀಗಿದೆ—

### ಧಾರ್ಮಿಕ ವಿಚಾರ ಪದ್ಧತಿ.

"ಮನುಷ್ಯ ಪ್ರಾಣಿಯ ಈ ವರೆಗಿನ ವಿಚಾರ ಪದ್ಧತಿಯ ಚರಿತ್ರೆಯನ್ನು ನೋಡಿದರೆ ಧಾರ್ಮಿಕ ವಿಚಾರ ಪದ್ಧತಿಯೇ ಮೊದಲನೆಯದೆಂದು ತೋರುತ್ತದೆ. ಮನುಷ್ಯನು ಜನ್ಮತಃ ಧಾರ್ಮಿಕ ಅಥವಾ ಶ್ರದ್ಧಾಯುಕ್ತನಾಗಿಯೇ ಇರುತ್ತಾನೆಂದು ತಿಳಿಯಬಾರದು. ಶ್ರದ್ಧೆಯಿಂದ ಮನುಷ್ಯನ ಉನ್ನತಿಯೇನೂ ಆಗಿಲ್ಲ. ಸಂಶೋಧನ ಪ್ರವೃತ್ತಿಯೇ ಮಾನವ ಬುದ್ಧಿಯ ಸ್ವಭಾವವಾಗಿದೆ.

ವಿಚಾರ ಮಾಡುತ್ತ ಕಾರ್ಯಕಾರಣ ಭಾವವನ್ನು ಸಂಶೋಧಿಸುವುದೇ ಮನುಷ್ಯ ಪ್ರಾಣಿಯ ವೈಶಿಷ್ಟ್ಯವು. ವಿಮರ್ಶಕ ಬುದ್ಧಿಯು ವಿಜಯಕ್ಕೆ ಕಾರಣವಾಗಿದೆ. ಬುದ್ಧಿಯ ದೌರ್ಬಲ್ಯವೇ ಶ್ರದ್ಧೆಯು. ಶ್ರದ್ಧೆಯಿಂದ ಪ್ರಗತಿಯು ಕುಂಠಿತವಾಗುತ್ತದೆ. ಚಿಕಿತ್ಸಕ ಬುದ್ಧಿಯಿಂದಲೇ ಜ್ಞಾನಾಭಿವೃದ್ಧಿಯಾಗುತ್ತದೆ.

ಮನುಷ್ಯನು ಮೊದಲು ತನ್ನ ಸುತ್ತಲು ನಡೆಯುತ್ತಿರುವ ಕಾರ್ಯಗಳ ಕಡೆಗೆ ಲಕ್ಷಿಸುತ್ತಾನೆ. ಅವುಗಳ ಕಾರಣವನ್ನು ಕಂಡು ಹಿಡಿಯಲು ಪ್ರಯತ್ನಿಸುತ್ತಾನೆ. ಆತನ ಬುದ್ಧಿಗೆ ಕಾರಣವು ತಿಳಿಯದಿದ್ದರೆ ಕಲ್ಪನೆಯನ್ನಾಶ್ರಯಿಸಿ ಶ್ರದ್ಧೆಯಿಂದ ಸಮಾಧಾನ ಹೊಂದುತ್ತಾನೆ. ಕಾರ್ಯದ ಕಾರಣ ತಿಳಿಯದಿದ್ದರೆ ಅಲ್ಲಿ ದೇವರು ರಾಕ್ಷಸ, ಪಿಶಾಚಿ ಮೊದಲಾದ ಅದೃಶ್ಯ ಶಕ್ತಿಯಿದ್ದು ಕಾರ್ಯ ಮಾಡುತ್ತದೆಂದು ತಿಳಿಯುತ್ತಾನೆ.

ಜಗತ್ತಿನ ಅನಂತ ಕಾರ್ಯಗಳ ಕಾರಣವು ತಿಳಿಯದಿದ್ದ ಅಜ್ಞಾನ ಯುಗದಲ್ಲಿಯೇ ಧರ್ಮವು ಜನ್ಮವೆತ್ತಿತು. ಅತಿವೃಷ್ಟಿಯಾದರೆ ಮಳೆಯ ದೇವರು ಸಿಟ್ಟಾದನೆಂದೂ ಅನಾವೃಷ್ಟಿಯಾದರೆ ಆ ದೇವರು ಮುನಿಸುಗುಟ್ಟಿದನೆಂದೂ ವಾಯು, ಪೃಥ್ವಿ, ಅಗ್ನಿ ಇವೆಲ್ಲಾ ದೇವರುಗಳೆಂದೂ ಇವುಗಳಿಗು ಕೂಡಾ ನಮ್ಮಂತೆಯೇ ಸುಖ, ದುಃಖ, ಕೋಪ, ತಾಪಗಳಿವೆಯೆಂದೂ ಕಾಡು ಸ್ಥಿತಿಯಲ್ಲಿದ್ದಾಗ ಮನುಷ್ಯನು ತಿಳಿದಿದ್ದನು. ವೈದಿಕ ಯಜ್ಞ ಸಂಸ್ಥೆ ಮತ್ತು ವೈದಿಕ ಧರ್ಮಗಳ ಇತಿಹಾಸದಲ್ಲಿ ಮೇಲಿನ ಸಂಗತಿಗಳು ಸ್ಪಷ್ಟವಾಗಿ ತೋರುತ್ತವೆ.

ಜನರು ಕಾಡು ಸ್ಥಿತಿಯಲ್ಲಿದ್ದಾಗ ವನಸ್ಪತಿ, ಪಶುಪಕ್ಷಿಗಳಿಗೂ ಕೂಡಾ ದೇವರೆಂದು ತಿಳಿದು ಅವುಗಳ ಕೃಪೆಗಾಗಿ ಪ್ರಾರ್ಥಿಸುತ್ತಿದ್ದದುಂಟು. ಅತ್ತಿ, ಆಲ, ಮೊದಲಾದ ವನಸ್ಪತಿಗಳು, ಎತ್ತು, ಕುದುರೆ, ಆನೆ, ಗರುಡ, ಹಾವು ಮೊದಲಾದ ಪ್ರಾಣಿಗಳು ಈಗಲೂ ಪೂಜೆಗೊಳ್ಳುತ್ತಿರುವುದೇ ಇದಕ್ಕೆ ಸಾಕ್ಷಿ. ದೇವರೂ ನಮ್ಮಂತೆ ಲಗ್ನಮಾಡಿಕೊಳ್ಳುತ್ತಾನೆ, ಮಕ್ಕಳನ್ನು ಹೆರುತ್ತಾನೆ, ವ್ಯಭಿಚಾರ ಮಾಡುತ್ತಾನೆ, ಯುದ್ಧಮಾಡುತ್ತಾನೆ, ಕೋಪತಾಪಗಳಿಗೀಡಾಗುತ್ತಾನೆ, ಎಂದು ತಿಳಿಯುತ್ತಾರೆಂಬುದಕ್ಕೆ ಧರ್ಮ ಗ್ರಂಥಗಳೇ ಸಾಕ್ಷಿ.

### ಆಧ್ಯಾತ್ಮಿಕ ಪದ್ಧತಿ.

ಧಾರ್ಮಿಕ ವಿಚಾರ ಪದ್ಧತಿಯು ಕಾಡು ಸ್ಥಿತಿಯಲ್ಲಿ ಜನ್ಮವೆತ್ತಿ ಅದು ಬೆಳೆಯುತ್ತ ಬಂದಿತು. ಅನೇಕರಿಗೆ ಅದರಲ್ಲಿರುವ ಕಾರ್ಯಕಾರಣ ಭಾವಗಳು ತಿಳಿಯಲಾರಂಭಿಸಿದವು. ಅವರೇ ಪುರೋಹಿತರು. ಈ ಪುರೋಹಿತ ವರ್ಗವು ಜನರ ಅಜ್ಞಾನವನ್ನು ಉಪಯೋಗಿಸಿಕೊಂಡು ಧರ್ಮಗ್ರಂಥ, ಧರ್ಮ ಶಾಸ್ತ್ರಗಳನ್ನು ನಿರ್ಮಿಸಿತು. ಅನಂತರ ಆಧ್ಯಾತ್ಮಿಕ ವಿಚಾರ ಪದ್ಧತಿಯು ಉದಯವಾಯಿತು.

ಆಗ ಸ್ವರ್ಗ, ನರಕ, ಪುಣ್ಯ, ಪಾಪ ಮೊದಲಾದವುಗಳ ಕಲ್ಪನೆ ಜಗತ್ತಿನ ಸೂಕ್ಷ್ಮ ತತ್ವಗಳ ಸಂಶೋಧನೆ ಮೊದಲಾದವುಗಳು ಉಂಟಾಗುತ್ತವೆ. ನೈತಿಕ ಬಲವು ಮಹಾಬಲವೆಂಬ ತಿಳುವಳಿಕೆಯುಂಟಾಗುತ್ತದೆ. ಇದು ಬೆಳೆಯುತ್ತ ಧಾರ್ಮಿಕ ಮೂಢ ನಂಬಿಕೆ, ಸ್ವರ್ಗ ನರಕಗಳ ಕಲ್ಪನೆ ಇವುಗಳೆಲ್ಲ ಲಯವಾಗುತ್ತ ಬರುತ್ತವೆ. ಹಿಂದುಸ್ಥಾನ ಮತ್ತು ಗ್ರೀಸ ದೇಶಗಳ ಪ್ರಾಚೀನ ತತ್ವವೇತ್ತರೇ ಇದಕ್ಕೆ ಸಾಕ್ಷಿ.

### ವಿಜ್ಞಾನ ಪದ್ಧತಿ.

ಆಧ್ಯಾತ್ಮಿಕ ಪದ್ಧತಿಯಿಂದ ವಿಜ್ಞಾನ ಪದ್ಧತಿಯ ಕಡೆಗೆ ಮನುಷ್ಯನ ವಿಚಾರಶಕ್ತಿಯು ತಿರುಗುತ್ತದೆ. ಆಗ ಯಂತ್ರಯುಗವು ಪ್ರಾರಂಭವಾಗುತ್ತದೆ. ಪಂಚಭೂತಗಳ ಸಂಶೋಧನದಿಂದ ಜಗತ್ತಿನ ಎಲ್ಲ ಕಾರ್ಯಗಳ ಕಾರಣವನ್ನು ಪರಿಶೀಲಿಸುವ ಪ್ರವೃತ್ತಿಯುಂಟಾಗುತ್ತದೆ. ಆಗ ಧಾರ್ಮಿಕ ಶ್ರಮೆಯು ಬಯಲಾಗುತ್ತದೆ.

ಧಾರ್ಮಿಕ ವಿಚಾರಸರಣಿಗೆ ಶ್ರದ್ಧೆಯೇ ಮೂಲವಾಗಿದೆ. ಆಧ್ಯಾತ್ಮಿಕ ವಿಚಾರಸರಣಿಗೆ ಕಲ್ಪನೆಯೇ ಕಾರಣವಾಗಿದೆ. ಇವೆರಡೂ ಅಸ್ತವಾಗುತ್ತಾ ವಿಜ್ಞಾನ ವಿಚಾರ ಶಕ್ತಿಯು ಮನುಷ್ಯನಲ್ಲಿ ಉದಯವಾಗುತ್ತಾ ಬರುತ್ತದೆ, ವಿಜ್ಞಾನ ವಿಚಾರ ಶಕ್ತಿಗೆ ವಿಮರ್ಶಕ ಬುದ್ಧಿಯೇ ಮೂಲವಾಗಿದೆ. ಈ ವಿಜ್ಞಾನ ವಿಚಾರ ಶಕ್ತಿಯು ಜನಾಂಗದಲ್ಲೆಲ್ಲಾ ವ್ಯಾಪಿಸಿದಾಗಲೇ ಅನಂತ ಅಜ್ಞಾನಗಳಿಂದ ಬಂಧಿತವಾದ ಮಾನವ ಸಮಾಜಕ್ಕೆ ಸುಖಪ್ರಾಪ್ತಿ."

# ಹಿಂದು ಮಹಾಸಭೆಯ ನಿರ್ಣಯ.




### ಹಿಂದು ಮಹಾಸಭೆಯ ಘಟನೆ.

ಸ್ವಾತಂತ್ರ್ಯವೀರ ವಿನಾಯಕರಾವ ಸಾವರಕರರ ಅಧ್ಯಕ್ಷತೆಯಲ್ಲಿ ಮಧ್ಯಪ್ರಾಂತೀಯ ಹಿಂದು ಮಹಾ ಸಭಾ ಚತುರ್ಥ ಅಧಿವೇಶನವು ಕಳೆದ ೨೭ ನೆಯ ತಾರೀಖಿನ ದಿವಸ ಅಕೋಲಾ ಪಟ್ಟಣದಲ್ಲಿ ಕೂಡಿದ್ದಿತು. ಆಗ ಅನೇಕ ಮಹತ್ವದ ನಿರ್ಣಯಗಳಾದವು. ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಟ್ಟಿದೆ.

(೧) ಅಖಿಲ ಭಾರತ ಹಿಂದು ಮಹಾಸಭೆಯ ಘಟನೆಯಲ್ಲಿರುವ ಎರಡನೆಯ ನಿಯಮವನ್ನು ತೆಗೆದು ಅದಕ್ಕೆ ಪ್ರತಿಯಾಗಿ ಈ ಕೆಳಗಿನ ನಿಯಮವನ್ನು ಸೇರಿಸಬೇಕು.

"ಹಿಂದುವಂಶ, ಹಿಂದು ಸಂಸ್ಕೃತಿ ಮತ್ತು ಹಿಂದು ಸುಧಾರಣೆ ಇವುಗಳ ರಕ್ಷಣೆಗಾಗಿ ಮತ್ತು ಹಿಂದು ರಾಷ್ಟ್ರದ ಉತ್ಕರ್ಷತೆಗಾಗಿ ನ್ಯಾಯ ಸಮ್ಮತವಾದ ಎಲ್ಲ ಮಾರ್ಗಗಳಿಂದಲೂ ಹಿಂದುಸ್ಥಾನಕ್ಕೆ ಪೂರ್ಣ ರಾಜಕೀಯ ಸ್ವಾತಂತ್ರ್ಯವನ್ನು ಸಂಪಾದಿಸುವುದೇ ಹಿಂದು ಮಹಾಸಭೆಯ ಧ್ಯೇಯವಾಗಿದೆ."

(೨) ಅಸ್ಪೃಶ್ಯರಿಗೆ ಸಾರ್ವಜನಿಕ ದೇವಸ್ಥಾನ, ಬಾವಿ ಮೊದಲಾದ ಸ್ಥಳಗಳು ಪ್ರವೇಶಿಸಲು ಅವಕಾಶವಿರಬೇಕೆಂದು ಪುಣೆ ಹಿಂದು ಮಹಾ ಸಭೆಯಲ್ಲಾದ ಠರಾವನ್ನು ಈ ಸಭೆಯು ಪುಷ್ಟೀಕರಿಸುವುದಲ್ಲದೆ ಸಾರ್ವಜನಿಕ ಉಪಾಹಾರಗೃಹಗಳೂ ಅವರ ಪ್ರವೇಶಕ್ಕೆ ಅನುಕೂಲವಾಗಿರಬೇಕು.

(೩) ಮಧ್ಯಪ್ರಾಂತ ಮೊದಲಾದ ಕೆಲವು ಪ್ರಾಂತಗಳು ಅಂದಮಾನದ ರಾಜಕೀಯ ಕೈದಿಗಳನ್ನು ಬಿಡಲು ಮಾಡಿದ ಏರ್ಪಾಟನ್ನು ಈ ಸಭೆಯು ಅಭಿನಂದಿಸುತ್ತದೆ. ದೇಶಭಕ್ತ ಖಾನ ಖೋಜೆ ಮೊದಲಾದ ಪರದೇಶಗಳಲ್ಲಿರುವ ನಿಯಂತ್ರಣಕ್ಕೊಳಗಾದ ದೇಶಭಕ್ತರನ್ನು ಬರಮಾಡಿಕೊಳ್ಳಲು ಪ್ರಾಂತಿಕ ಸರಕಾರಗಳು ಪ್ರಯತ್ನಿಸಬೇಕೆಂದು ಈ ಸಭೆಯು ಪ್ರಾರ್ಥಿಸಿಕೊಳ್ಳುತ್ತದೆ.

(೪) ಹಿಂದುಸ್ಥಾನದ ರಾಜ್ಯಘಟನೆಯಲ್ಲಿ ಪ್ರತಿಯೊಂದು ಜಾತಿಗೂ ಅದರ ಧರ್ಮ, ಸಂಸ್ಕೃತಿ, ಭಾಷೆ ಮತ್ತು ನಾಗರಿಕತ್ವಗಳ ಮೂಲ ಭೂತ ಹಕ್ಕುಗಳು ಸಂರಕ್ಷಿಸಲ್ಪಡಲು ಸಂಪೂರ್ಣ ಸ್ವಾತಂತ್ರ್ಯವಿರಬೇಕೆಂದು ಈ ಸಭೆಯ ಅಭಿಪ್ರಾಯವು. ಅಂತೆಯೇ ಈಗಿನ ರಾಜ್ಯಘಟನೆಯಲ್ಲಿ ಮುಸಲ್ಮಾನರಿಗೆ ಪ್ರತ್ಯೇಕ ಸ್ಥಳಗಳನ್ನು ಕಾದಿಟ್ಟುಕೊಟ್ಟ ಸೌಲಭ್ಯವನ್ನೂ ಜಾತಿನಿರ್ಣಯವನ್ನೂ ಈ ಸಭೆಯು ನಿಷೇಧಿಸುತ್ತದೆ.

(೫) ಜನರಲ್ಲಿ ವೀರವೃತ್ತಿಯುಂಟಾಗಿ ದೇಶ ರಕ್ಷಣೆಗೆ ಅವರು ಸಮರ್ಥರಾಗುವುದಕ್ಕೋಸ್ಕರ ಎಲ್ಲ ಪ್ರಾಂತಿಕ ಸರಕಾರಗಳೂ ಜಿಲ್ಲೆಗೊಂದು ಯುದ್ಧ ವಿದ್ಯಾಲಯವನ್ನು ಸ್ಥಾಪಿಸಬೇಕು.

(೬) ಯಾವ ಧರ್ಮದವರಾದರೂ ಬಲಾತ್ಕಾರದಿಂದಾಗಲಿ, ಅಥವಾ ಮೋಸಗಾರಿಕೆಯಿಂದಾಗಲಿ ಧರ್ಮಾಂತರಗೊಳಿಸದಂಥ ನಿರ್ಬಂಧದ ಶಾಸನವನ್ನು ಸರಕಾರವು ಮಾಡಬೇಕು. ಇಂಥ ನಿರ್ಬಂಧದ ಶಾಸನವು ಯಾವ ರೀತಿಯಾಗಿರಬೇಕೆಂಬುದನ್ನು ಸೂಚಿಸಲು ಒಂದು ಸಮಿತಿಯನ್ನು ಏರ್ಪಡಿಸಬೇಕು.

### ಅಖಿಲ ಭಾರತ ಹಿಂದು ಮಹಾಸಭೆ.

ಈ ತಿಂಗಳ ಕೊನೆಯಲ್ಲಿ ಅಹಮದಾಬಾದಿನಲ್ಲಿ ಕೂಡುವ ಅಖಿಲ ಭಾರತ ಹಿಂದು ಮಹಾಸಭೆಗೆ ಸ್ವಾತಂತ್ರ್ಯವೀರ ವಿನಾಯಕರಾವ ಸಾವರಕರರನ್ನೇ ಅಧ್ಯಕ್ಷರನ್ನಾಗಿ ಮಾಡಬೇಕೆಂದು ಎಂಟು ಪ್ರಾಂತಿಕ ಹಿಂದು ಮಹಾಸಭಾ ಮಂಡಲದವರು ಸೂಚಿಸಿದ್ದಾರೆ.

### ಕೊಲ್ಹಾಪುರದಲ್ಲಿ ಹಿಂದು ಮಹಾಸಭೆ.

ಇದೇ ತಿಂಗಳು ೧೮-೧೯ ನೆಯ ತಾರೀಖುಗಳಲ್ಲಿ ಮಹಾರಾಷ್ಟ್ರ ಹಿಂದು ಮಹಾಸಭೆಯ ಅಧಿವೇಶನವು ಡಾ. ಮುಂಜೆಯವರ ಅಧ್ಯಕ್ಷತೆಯಲ್ಲಿ ಕೊಲ್ಹಾಪುರದಲ್ಲಿ ಕೂಡುವುದು.

### ಲಂಡನ್ನಿನಲ್ಲಿ ಹಿಂದು ದೇವಾಲಯ.

ಲಂಡನ್ನಿನಲ್ಲಿ ಹಿಂದು ದೇವಾಲಯ ಮತ್ತು ಹಿಂದು ಸಂಸ್ಕೃತಿಯ ಗ್ರಂಥಾಲಯವನ್ನು ಸ್ಥಾಪಿಸಲು ೭ ಲಕ್ಷ ರೂ. ಗಳು ಬೇಕಾಗಿವೆಯೆಂದೂ ಹಿಂದು ಧನಿಕರು ಸಹಾಯ ಮಾಡಬೇಕೆಂದೂ ಶ್ರೀ. ರಾಜೇಂದ್ರ ಪ್ರಸಾದ, ಶ್ರೀ. ಭುಲಾಭಾಯಿ, ಶ್ರೀ ಜಯಕರ ಮೊದಲಾದ ಪ್ರಮುಖರು ಹಿಂದು ಜನಾಂಗಕ್ಕೆ ವಿಜ್ಞಾಪಿಸಿಕೊಂಡಿದ್ದಾರೆ.

### ಶುದ್ಧಿ ಸಮಾಚಾರ.

ಖಾನದೇಶ ಹಿಂದುಧರ್ಮ ಪ್ರಚಾರಕ ಸಂಘದವರು ನಂದುರಾಬಾದ ಎಂಬಲ್ಲಿ ಕ್ರಿಸ್ತ ಮತಕ್ಕೆ ಸೇರಿದ್ದ ೭ ಜನ ಭಿಲ್ಲರನ್ನು ಹಿಂದು ಧರ್ಮದಲ್ಲಿ ಕಳೆದ ೨೪ ನೇ ತಾರೀಖಿನ ದಿನ ತೆಗೆದುಕೊಂಡರು.



ಶಾ. ಶ. ೧೮೫೯ ನೆಯ ಮಾರ್ಗಶಿರ ಶು|| ೩ ಸೋಮವಾರ.

## ಹಿಂದುಸ್ಥಾನದ ಮೇಲೆ ಜಪಾನಿನ ದಾಳಿ?

ಸಾಮ್ರಾಜ್ಯದ ದಾಹವು ಈಗ ಯುರೋಪ ಖಂಡದ ರಾಷ್ಟ್ರಗಳಿಗೇನೇ ಇದೆಯೆಂದಲ್ಲ, ಏಸಿಯಾ ಖಂಡದಲ್ಲಿಯೂ ಸಾಮ್ರಾಜ್ಯದ ಆಕಾಂಕ್ಷೆಯು ಹೆಚ್ಚಲಾರಂಭವಾಗಿದೆ. ನಿರಪರಾಧಿಯಾದ ಅಬಿಸೀನಿಯಾ ದೇಶವನ್ನು ಇಟಲಿಯೇ ನುಂಗಿತೆಂದಲ್ಲ; ನಿರುಪದ್ರವಿಯಾದ ಚೀನ ದೇಶವನ್ನು ಜಪಾನ ರಾಷ್ಟ್ರವೂ ನುಂಗಲಾರಂಭಿಸಿದೆ.

ಜಪಾನ ರಾಷ್ಟ್ರವೂ ಇಟಲಿಯಂತೆಯೇ ಅನೇಕ ಘೋರ ಕೃತಿಗಳನ್ನು ಮಾಡುತ್ತ ಚೀನ ದೇಶವನ್ನು ಆಕ್ರಮಿಸಿಕೊಳ್ಳುತ್ತಾ ಇದೆ. ಚೀನ ರಾಷ್ಟ್ರವು ಜಪಾನಿನ ಭಯಂಕರ ಯುದ್ಧೋಪಕರಣಗಳ ಮುಂದೆ ನಿಲ್ಲಲು ಸಾಧ್ಯವಾಗದೆ ಹಿಮ್ಮೆಟ್ಟುತ್ತಲಿದೆ. ಇಷ್ಟರಲ್ಲೇ ಜಪಾನಿನ ಇಷ್ಟದಂತೆ ಚೀನ ರಾಷ್ಟ್ರವು ಒಪ್ಪಂದವನ್ನು ಮಾಡಿಕೊಳ್ಳುವ ಪ್ರಸಂಗ ಬರುವುದೆಂದೇ ತೋರುತ್ತದೆ.

### ಸರ್. ಹ್ಯಾಮಿಲ್ಟನ್‌ರ ಅಭಿಪ್ರಾಯ.

ಜಪಾನಕ್ಕೆ ದೊರೆಯುತ್ತಿರುವ ಈಗಿನ ವಿಜಯವು ಅದರ ಸಾಮ್ರಾಜ್ಯ ದಾಹವನ್ನು ಹೆಚ್ಚಿಸದೆ ಬಿಡುವುದಿಲ್ಲ. ಚೀನ ದೇಶವನ್ನು ಆಕ್ರಮಿಸಿಕೊಂಡದ್ದರಿಂದ ಅದು ಮತ್ತಿಷ್ಟು ಬಲಶಾಲಿಯಾಗುವುದು ಸ್ವಾಭಾವಿಕ.

ಜಪಾನಿನಲ್ಲಿ ಅನೇಕ ವರ್ಷಗಳವರೆಗಿದ್ದು ಅಲ್ಲಿಯ ಅನುಭವವನ್ನು ಹೊಂದಿರುವ ಇಂಗ್ಲೆಂಡಿನ ಒಬ್ಬ ಸುಪ್ರಸಿದ್ಧ ಸೇನಾಧಿಪತಿಗಳಾದ ಸರ್. ಹ್ಯಾಮಿಲ್ಟನ್‌ರವರು ಲಂಡನ್ನಿನಲ್ಲಿ ಕಳೆದ ೧ ನೆಯ ತಾರೀಖಿನ ದಿನ ಒಂದು ಮಹತ್ವದ ಭಾಷಣವನ್ನು ಮಾಡಿದರು. ಅದರಲ್ಲಿ ಈ ಪ್ರಕಾರ ಹೇಳಿದರು—

"ಜಪಾನ ಸಿಂಗಾಪುರ ದಿಕ್ಕಿಗೆ ನಡೆದಿದೆ. ಜಪಾನಿ ಚಕ್ರವರ್ತಿಗಳ ಮಾರ್ಗವು ಈ ಕೆಳಗಿನಂತಿದೆ— ಹಂಕೊ, ಹಾಂಗಕಾಂಗ, ಸಿಂಗಾಪುರ, ಬ್ರಹ್ಮದೇಶ, ಆಸಾಮ ಆ ಮೇಲೆ ಬಂಗಾಲ. ಅಖಿಲ ಯುರೋಪ ಖಂಡವು ನಮ್ಮನ್ನು ಎದುರಿಸಲು ಅಡ್ಡಬಂದ ವಿನಾ ನಮ್ಮ ಸೈನ್ಯವನ್ನು ಯಾರೂ ಅಡ್ಡಗಟ್ಟಲಾರರೆಂದೇ ಅವರು ತಿಳಿದಿದ್ದಾರೆ.

ಹೀಗಿರುವಾಗ ಯುರೋಪದ ರಾಷ್ಟ್ರಗಳು ಸ್ಪೇನದ ಎಲುವಿಗಾಗಿ ನಾಯಿಗಳಂತೆ ಜಗಳಾಡುತ್ತಲಿವೆ. ಯುದ್ಧಕಾಲದಲ್ಲಿ ನಮ್ಮ ಸೈನ್ಯದ ವಸತಿ ಸ್ಥಾನವು ಸಿಂಗಾಪುರಕ್ಕೆ ಪ್ರತಿಯಾಗಿ ಟ್ರಿನ್ಕೊಮಾಲಿ ಇರಬೇಕೆಂದೇ ನಾನು ಮೊದಲಿನಿಂದಲೂ ಹೇಳುತ್ತಾ ಬಂದಿದ್ದೇನೆ."

ಹಾಂಗಕಾಂಗದಲ್ಲಿ ಗುಪ್ತಕಾರಸ್ಥಾನಗಳು ನಡೆದಿವೆಯೆಂದೂ ಅದರಿಂದ ಆಂಗ್ಲೋ-ಜಪಾನಿ ಸಂಬಂಧಕ್ಕೆ ವ್ಯತ್ಯಯ ಉಂಟಾಗಬಹುದೆಂದೂ ಹಾಂಗಕಾಂಗದಲ್ಲಿರುವ ಜಪಾನಿ ರಾಯಭಾರಿಗಳು ತಿಳಿಸಿರುವುದನ್ನು ನೋಡಿದರೆ ಸರ್. ಹ್ಯಾಮಿಲ್ಟನ್‌ರ ಮಾತು ಕಲ್ಪನಾ ಸೃಷ್ಟಿಯಲ್ಲಿದ್ದುದೆಂದು ಹೇಳಲಿಕ್ಕಾಗುವುದಿಲ್ಲ.

### ಕಲಕತ್ತಾ ಪಟ್ಟಣದ ಮೇಲೆ ವಿಮಾನಿನ ದಾಳಿ?

ಬಂಗಾಲ ಸರಕಾರದ ಚೀಫ್ ಸೆಕ್ರೆಟರಿಗಳಾದ ಮಿ. ಹ್ಯಾಗ್ ಇವರು ತಾ. ೩೦-೧೧-೩೭ ನೆಯ ದಿವಸ ಕಲಕತ್ತೆಯ ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಹಿಂದಿನ ಮಹಾ ಯುದ್ಧದಲ್ಲಿ ಕಲಕತ್ತಾ ಪಟ್ಟಣವು ಸುರಕ್ಷಿತವಾಗಿದ್ದಿತು. ಆದರೆ ಮುಂದಿನ ಯುದ್ಧದಲ್ಲಿ ಇದರ ಮೇಲೆ ವಿಮಾನಿನ ದಾಳಿ ಬರುವ ಸಂಭವವಿದೆ. ನಾನೇನೂ ಭಯಗೊಳಿಸಲು ಹೀಗೆ ಹೇಳುವುದಿಲ್ಲ. ಅಂಥ ಪ್ರಸಂಗ ಬಂದರೆ ಬಾಂಬಿನ ಸುರಿಮಳೆಯಿಂದ ಉಂಟಾಗುವ ಅಗ್ನಿ ಪ್ರಳಯವನ್ನು ತಡೆಯಲು ಸೈನ್ಯಾಧಿಕಾರಿಗಳ ಸಂಗಡ ನೀವು ಸಹಕರಿಸಬೇಕೆಂದೇ ನನ್ನ ಇಚ್ಛೆ."

ಜಪಾನಿಗಿರುವ ಸಾಮ್ರಾಜ್ಯದ ಮಹತ್ವಾಕಾಂಕ್ಷೆ, ಅದು ಈಗ ಹೊಂದುತ್ತಿರುವ ವಿಜಯ, ಹಿಂದುಸ್ಥಾನದಲ್ಲಿ ಬ್ರಿಟಿಶ್ ಸಾಮ್ರಾಜ್ಯದ ವಿಷಯಕ್ಕಿರುವ ಅಪ್ರೀತಿ, ಇವುಗಳನ್ನೆಲ್ಲಾ ಲಕ್ಷಿಸಿ ಈಗ ಅನೇಕ ಬ್ರಿಟಿಶ್ ಅಧಿಕಾರಿಗಳು ಕೊಡುತ್ತಿರುವ ಎಚ್ಚರಿಕೆಗಳನ್ನು ಕೇಳಿದರೆ ಹಿಂದುಸ್ಥಾನದ ಮೇಲೆ ಜಪಾನಿನ ದಾಳಿ ಬರುವುದು ಅಶಕ್ಯವೆಂದು ಮಾತ್ರ ಹೇಳುವಂತಿಲ್ಲ. ಇಂದಲ್ಲ; ನಾಳೆ ಇಂಥ ಪ್ರಸಂಗ ಬಂದೇ ಬರಬಹುದು.

### ಈ ವಿಪತ್ತಿನ ನಿವಾರಣೋಪಾಯ.

ಹಿಂದುಸ್ಥಾನದ ಮೇಲೆ ಜಪಾನಿನ ದಾಳಿ ಬಂದರೆ ಹಿಂದುಸ್ಥಾನಕ್ಕೆ ಹಿತವೇ ಆಗುವುದೆಂದು ತಿಳಿದವರೂ ಇದ್ದಾರೆ. ಅಂಥ ಪ್ರಸಂಗದಲ್ಲಿ ಬ್ರಿಟಿಶ್‌ರು ಹಿಂದುಸ್ಥಾನದ ಆಕಾಂಕ್ಷೆಯನ್ನು ಪೂರೈಸಲೇಬೇಕಾಗುತ್ತದೆಂದೇ ಅವರ ತಿಳುವಳಿಕೆ. ಅದು ವಿಪತ್ತು ಬಂದನಂತರ ಅದರಲ್ಲಿಯೂ ಪ್ರಯೋಜನವನ್ನು ಮಾಡಿಕೊಳ್ಳುವ ರೀತಿಯಾಯಿತೇ ವಿನಾ ವಿಪತ್ತೇ ಬಾರದಂತೆ ಮಾಡಿಕೊಳ್ಳುವ ಉಪಾಯವೇನೂ ಅಲ್ಲ.

ವಿಶೇಷವಾದ ಯುದ್ಧೋಪಕರಣಗಳನ್ನು ಸಿದ್ಧಗೊಳಿಸಿದರೆ ಈ ವಿಪತ್ತು ನಿವಾರಣೆಯಾಗಬಹುದೆಂದು ಅನೇಕರು ತಿಳಿದಿರಬಹುದು. ಅದರಿಂದಲೂ ಶಕ್ಯವಿಲ್ಲ. ಆದುದರಿಂದ ಭಾರತೀಯರಿಗೆ ಜಾಗ್ರತೆ "ವಸಾಹತ" ಸ್ವರಾಜ್ಯವನ್ನು ಬ್ರಿಟಿಶರು ಕೊಟ್ಟು ಶಾಂತಗೊಳಿಸುವುದೇ ಜಪಾನಿನ ದಾಳಿಯನ್ನು ತಡೆಯುವ ಅತ್ಯಂತ ಪರಿಣಾಮಕಾರಿಯಾದ ಮುಖ್ಯೋಪಾಯವು. ಬ್ರಿಟಿಶರು ಈ ರೀತಿ ಮಾಡುವರೊ? ಅಥವಾ ಯುದ್ಧ ಬಲವನ್ನು ಹೆಚ್ಚಿಸಲು ಸಾಹಸಪಡುವರೊ?

# ಹರಿಪುರ ಕಾಂಗ್ರೆಸ್ ಸಿದ್ಧತೆ.




### ಕಾಂಗ್ರೆಸ್ ಮತ್ತು ಪ್ರದರ್ಶನ.

ಹರಿಪುರದಲ್ಲಿ ಕೂಡುವ ಕಾಂಗ್ರೆಸ್ಸಿನ ಸಿದ್ಧತೆಯು ಈಗ ಬಹು ಪ್ರಚಂಡವಾಗಿ ನಡೆದಿದೆ. ಈ ಸಾರಿಯ ಕಾಂಗ್ರೆಸ್ಸಿಗೆ ವಿಶೇಷ ಜನರು ಬರುವರೆಂದು ನಿರೀಕ್ಷಿಸಲಾಗಿದೆ. ಎಲ್ಲ ಕಾರ್ಯಗಳ ವ್ಯವಸ್ಥೆಗಾಗಿ ೪೦೦೦ ಸ್ವಯಂಸೇವಕರೂ ೧೫೦೦ ಸ್ವಯಂಸೇವಿಕೆಯರೂ ಬೇಕಾಗುವರೆಂದು ಗೊತ್ತುಮಾಡಿದ್ದಾರೆ.

ಈಗಾಗಲೇ ಕಾಂಗ್ರೆಸ್ಸಿನ ವಿಠ್ಠಲನಗರದಲ್ಲಿ ಪೋಸ್ಟು, ಟೆಲಿಗ್ರಾಫ್, ಆಫೀಸುಗಳು ಏರ್ಪಟ್ಟಿವೆ. ಕಾಂಗ್ರೆಸ್ಸಿನ ಸಮಾಚಾರವು ಕ್ಷಣ, ಕ್ಷಣ, ಜನರ ತಿಳುವಳಿಕೆಗೆ ಬರಲು ಅನುಕೂಲವಾಗಬೇಕೆಂದು ಅಲ್ಲಿಯೇ ಒಂದು ಮುದ್ರಣಮಂದಿರವನ್ನು ಏರ್ಪಡಿಸಿದ್ದಾರೆ. ಅದಕ್ಕೆ ೮ ಸಾವಿರ ರೂ. ಗಳನ್ನು ವೆಚ್ಚಮಾಡುವರು.

### ಊಟೋಪಚಾರ.

ಕೈಯಿಂದ ಕುಟ್ಟಿದ ಅಕ್ಕಿ ಮತ್ತು ಕೈಯಿಂದ ಬೀಸಿದ ಹಿಟ್ಟನ್ನೇ ಕಾಂಗ್ರೆಸ್ಸಿಗೆ ಬಂದ ಜನರ ಊಟಕ್ಕೆ ಉಪಯೋಗಿಸುವರು. ೫೦೦ ಶ್ರೇಷ್ಠವಾದ ಗೋವುಗಳನ್ನು ಅಲ್ಲಿಯೇಕಟ್ಟಿ ಹಾಲು, ಮೊಸರು ವಿಪುಲವಾಗಿ ಎಲ್ಲರಿಗೂ ದೊರೆಯುವಂತೆ ಮಾಡುವವರಿದ್ದಾರೆ.

ಸೂರತ್ ಪಟ್ಟಣದಿಂದ ವಿದ್ಯುಚ್ಛಕ್ತಿಯ ದೀಪವು ವಿಠ್ಠಲನಗರವನ್ನೆಲ್ಲಾ ವ್ಯಾಪಿಸುವ ಏರ್ಪಾಟು ಮಾಡುವವರಿದ್ದಾರೆ. ಕುಟುಂಬಸಹಿತವಾಗಿ ಪ್ರತ್ಯೇಕ ಇರಲು ಇಷ್ಟಪಡುವರು ಮುಂಚೆಯೇ ತಿಳಿಸಿದರೆ ಅವರಿಗೂ ವ್ಯವಸ್ಥೆ ಮಾಡಿಕೊಡುವರು.

### ವಸ್ತು ಪ್ರದರ್ಶನ.

ಕಾಂಗ್ರೆಸ್ಸಿನ ಕಾಲಕ್ಕೆ ಘನವಾದ ವಸ್ತು ಪ್ರದರ್ಶನವನ್ನೂ ಅಲ್ಲಿ ಏರ್ಪಡಿಸುವ ಸಿದ್ಧತೆಯು ಪ್ರಚಂಡವಾಗಿಯೇ ನಡೆದಿದೆ. ಗ್ರಾಮೋದ್ಯೋಗಗಳಿಗೇನೇ ಆ ಪ್ರದರ್ಶನದಲ್ಲಿ ಅಗ್ರಸ್ಥಾನ. ಕೈ ಕುಶಲತೆಯ ಅನೇಕ ಪದಾರ್ಥಗಳನ್ನೂ ಅಲ್ಲಿಗೆ ಕಳಿಸಬಹುದು. ಈ ಮಹಾಕಾರ್ಯವನ್ನು ಅಖಿಲ ಭಾರತ ರಾಟೆ ಸಂಘ ಮತ್ತು ಗ್ರಾಮೋದ್ಯೋಗ ಸಂಘಗಳ ಕಡೆಗೆ ವಹಿಸಿದ್ದಾರೆ.

### “ವಂದೇ ಮಾತರಂ” ಗೀತೆಯ ವಾದ.

ಲಾಹೋರಿನಲ್ಲಿ ಮಾಸಿಕ ಧ್ವಜವಂದನೆಯ ಕಾಲಕ್ಕೆ ಕೆಲವು ಮುಸಲ್ಮಾನ್ ಪ್ರಮುಖರು ಮೊದಲು ಡಾ. ಮಹಮ್ಮದ ಇಕಬಾಲ ಇವರ ರಾಷ್ಟ್ರಗೀತೆಯನ್ನು ಹೇಳಿ ಅನಂತರ “ವಂದೇಮಾತರಂ” ಗೀತೆಯನ್ನು ಹೇಳುತ್ತಾರೆ. ಕಾಂಗ್ರೆಸ್ ಸಮಾರಂಭದ ಕಾಲದಲ್ಲಿ ಡಾ. ಇಕಬಾಲರ ರಾಷ್ಟ್ರಗೀತೆಯನ್ನು ಹೇಳಬೇಕೆ? ಬೇಡವೆ? ಎಂಬ ವಿಚಾರವಾಗಿ ಅಲ್ಲಿಯ ಕಾಂಗ್ರೆಸ್ ಪ್ರಮುಖರಲ್ಲಿ ಭಿನ್ನಾಭಿಪ್ರಾಯವುಂಟಾಗಿದೆ. ಅದುದರಿಂದ ಅಲ್ಲಿಯ ಪ್ರಾಂತಿಕ ಕಾಂಗ್ರೆಸ್ ಕಮಿಟಿಯವರು ಅಲ್ ಇಂಡಿಯಾಕಾಂ ಗ್ರೆಸ್ ಕಮಿಟಿಯ ಕಡೆಗೆ ಬರೆದುಕೊಂಡಿದ್ದಾರೆ.

ಗಡಿನಾಡಿನ ಮುಖ್ಯ ಮಂತ್ರಿಗಳಾದ ಡಾ. ಖಾನಸಾಹೇಬರವರು ಹೀಗೆ ತಿಳಿಸಿದ್ದಾರೆ—

“ವಂದೇಮಾತರಂ ಮತ್ತು ಅಲ್ಲಾಹೊ ಅಕಬರ ಇವೆರಡೂ ಬೇರೆ ಬೇರೆ ಪದ್ಯಗಳಿವೆ. ಮೊದಲನೆಯದು ರಾಷ್ಟ್ರಗೀತೆ. ಎರಡನೆಯದು ಇಸ್ಲಾಂ ಧರ್ಮದ ಗೀತೆ. ವಂದೇಮಾತರಂ ಗೀತೆಯಲ್ಲಿ ಮುಸಲ್ಮಾನರು ಆಕ್ಷೇಪಿಸುವಂತಹ ಯಾವ ಸಂಗತಿಯೂ ಇಲ್ಲ. ಅದನ್ನು ರಾಷ್ಟ್ರಗೀತೆಯೆಂದು ನಾನು ಮಾನ್ಯಮಾಡುತ್ತೇನೆ.”

ಕಲಕತ್ತಾ ಪಟ್ಟಣದಲ್ಲಿ ಸೌ|| ಸರೋಜಿನಿ ದೇವಿಯವರ ಅಧ್ಯಕ್ಷತೆಯಲ್ಲಿ ದಿವಂಗತ ಚಿತ್ತರಂಜನ ದಾಸರ ಪುಣ್ಯತಿಥಿಯು ಜರುಗಿತು. ಆ ಕಾಲಕ್ಕೆ ಸಭೆಯಲ್ಲಿ ವಂದೇಮಾತರಂ ಗೀತೆಯನ್ನು ಹೇಳುತ್ತಿದ್ದಾಗ ಒಬ್ಬ ಪೋಲಿಸ ಅಧಿಕಾರಿಗಳು ಎದ್ದುನಿಲ್ಲಲಿಲ್ಲ. ಆಗ ಸೌ|| ದೇವಿಯವರು ಅವರಿಗೆ ಏಳಲು ತಿಳಿಸಿದರು. ನಮಗೆ ಪೊಲೀಸ್ ಕಮಿಶನರ ಅಪ್ಪಣೆಯಾಗಿದೆಯೆಂದು ಸಬ್ ಇನ್‌ಸ್ಪೆಕ್ಟರರು ಹೇಳಿದರು. ಈ ಸಂಗತಿಯನ್ನು ಗೃಹ ಮಂತ್ರಿ ನಾಜಿಮುದ್ದೀನ ಇವರಿಗೆ ತಿಳಿಸುವೆನೆಂದು ಸೌ|| ಸರೋಜನಿ ದೇವಿಯವರು ಸೂಚಿಸಿದರು.

---

೧೯೩೪ ನೆಯ ಇಸವಿ ಅಸೆಂಬ್ಲಿ ಚುನಾವಣೆ ಕಾಲಕ್ಕೆ ಸರ್. ಜಹಾಂಗೀರವರು, ಮತದಾರರ ಸುಳ್ಳು ಪಟ್ಟಿಯನ್ನು ಸಿದ್ಧಗೊಳಿಸಿದ್ದರಿಂದು ವೀರ ನರಿಮನ್ನರು ವ್ಯಾಜ್ಯ ಹೂಡಲು ಸರದಾರ ಪಟೇಲ, ಶ್ರೀ. ಭುಲಾಭಾಯಿ ಶ್ರೀ. ರಾಜಗೋಪಾಲಾಚಾರ್ಯರಿಗೆ ತಿಳಿಸಿದ್ದರೆಂತಲೂ ಅದಕ್ಕೆ ಈ ಮುಖಂಡರು ಅವಕಾಶ ಕೊಡಲಿಲ್ಲವೆಂತಲೂ ವೀರ ನರಿಮನ್ನರು ಪ್ರಕಟನೆಯ ಮೂಲಕ ತಿಳಿಸಿದ್ದಾರೆ.

—ಪ್ರಾಂತಿಕ ಪ್ರಭುತ್ವದ ನಿರೀಕ್ಷಣೆಗಾಗಿ ಲಾರ್ಡ ಲೋಥಿಯನ್‌ರು ಹಿಂದುಸ್ಥಾನಕ್ಕೆ ಆಗಮಿಸಿದ್ದಾರೆ.

## ಬಾಗಲಕೋಟಿಯಲ್ಲಿ "ರಾಷ್ಟ್ರವೀರ" ನಾಟಕ ಆಡಲ್ಪಟ್ಟಿತು.

ಬಾಗಲಕೋಟಿಯಲ್ಲಿ "ರಾಷ್ಟ್ರವೀರ" ನಾಟಕವನ್ನು ಆಡಬಾರದಾಗಿ ಮುಸಲ್ಮಾನರು ದೊಂಬಿಯನ್ನ ಮಾಡಿದ್ದರು. ಹೀಗೆ ದೊಂಬಿ ಮಾಡಿದರೆ ನಾಟಕ ಕಂಪನಿಯವರು ಹೆದರಿ ಆ ನಾಟಕವನ್ನೇ ಆಡುವುದಿಲ್ಲವೆಂದು ದೊಂಬಿಗಾರರು ತಿಳಿದಿದ್ದರು. ಅವರ ಈ ಭ್ರಮೆಯು ಬಯಲಾಯಿತು.

ನಾಟಕ ಕಂಪನಿಯವರು ವಿಜಾಪುರಕ್ಕೆ ಹೋಗಿ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರಲ್ಲಿ ತಮ್ಮ ದೂರನ್ನು ಹೇಳಿಕೊಂಡರು. ಕಲೆಕ್ಟರ್ ಸಾಹೇಬರು ಎಲ್ಲಾ ಸಂಗತಿಗಳನ್ನು ತಿಳಿದುಕೊಂಡು ಹೀಗೆ ಪುಂಡಾಟಿಕೆ ನಡೆಸುವವರಿಗೆ ಆಸ್ಪದ ಕೊಡುವುದೆಂದರೆ ಸರಕಾರದ ಅಪ್ಪಣೆಗೆ ಏನೂ ಮಹತ್ವವೇ ಇಲ್ಲವೆಂದು ಸಿದ್ಧಮಾಡಿಕೊಟ್ಟಂತಾಗುವದೆಂದು ಯೋಚಿಸಿ ತಾವು ಸ್ವತಃ ಬಾಗಲಕೋಟಿಗೆ ಬಂದದ್ದಲ್ಲದೆ ಡಿಸ್ಟ್ರಿಕ್ಟ ಪೊಲಿಸ ಸುಪರಿಂಟೆಂಡೆಂಟರೇ ಮೊದಲಾದ ಪೊಲಿಸ ಅಧಿಕಾರಿಗಳನ್ನೂ ಬಾಗಲಕೋಟೆಗೆ ಕರೆಸಿ ಸುತ್ತಲಿನ ಪ್ರಮುಖ ಸ್ಥಳಗಳಿಂದ ಹೆಚ್ಚಿನ ಪೊಲಿಸ ದಳವನ್ನು ತರಿಸಿ ತಾ. ೨೭-೧೧-೩೭ ನೆಯ ಶನಿವಾರ ಸಾಯಂಕಾಲ ೩ ಗಂಟೆಗೆ ರಾಷ್ಟ್ರವೀರ ನಾಟಕವನ್ನು ಬಾಗಲಕೋಟಿಯಲ್ಲಿ ಮಾಡಿಸಿದರು.

ಯಾವ ಪ್ರಕಾರ ಕೆಲವು ಶಬ್ದಗಳನ್ನು ಮತ್ತು ಪ್ರಸಂಗಗಳನ್ನು ಬಿಟ್ಟು ನಾಟಕ ಮಾಡಲು ಬಾಗಲಕೋಟಿ ಮ್ಯಾಜಿಸ್ಟ್ರೇಟರವರು ಮೊದಲು ಅಪ್ಪಣೆ ಕೊಟ್ಟಿದ್ದರೋ ಅದೇ ಪ್ರಕಾರ ರಾಷ್ಟ್ರವೀರ ನಾಟಕವನ್ನು ಮಾಡಿದರು. ಅನೇಕ ಮುಸಲ್ಮಾನ್ ಪ್ರಮುಖರಿಗೆ ಆಮಂತ್ರಣ ಕೊಟ್ಟಿತ್ತು. ನಾಲ್ಕಾಣೆ ಟಿಕೀಟ ಆಣೆ ಮಾಡಿದ್ದರು. ಜನರು ವಿಶೇಷವಾಗಿ ಸೇರಿದ್ದರು. ದೊಂಬಿಯನ್ನು ಯಾರು ಮಾಡುತ್ತಾರೆಂಬುದು ಸ್ಪಷ್ಟ ಗೊತ್ತಾಗಬೇಕೆಂದೇ ಈ ಪ್ರಕಾರ ಹಗಲು ನಾಟಕ ಇಟ್ಟಿದ್ದರು. ಆ ದಿನದ ಒಂದೇ ನಾಟಕಕ್ಕೆ ೧೩೩೫ ರೂ. ಗಳಾದವು. ಈ ಕಂಪನಿಯವರು ಪುನಃ ಇದೇ ತಿಂಗಳಲ್ಲಿ ಇಲ್ಲಿಗೆ ಬಂದು ಈ ಆಖ್ಯಾನವನ್ನು ಆಡುವವರಿದ್ದಾರಂತೆ.

ಧಾರ್ಮಿಕ ದುರಭಿಮಾನದಿಂದ ಹೀಗೆ ಪುಂಡಾಟಿಕೆ ನಡೆಯದಂತೆ ಮೇಲಾಧಿಕಾರಿಗಳು ನ್ಯಾಯವಾದ ವ್ಯವಸ್ಥೆಯನ್ನು ಮಾಡಿದ್ದು ಅವರಿಗೆ ಭೂಷಣವೇ ಆಗಿದೆ. ಮತ್ತು ಸಮಂಜಸ ವಿಚಾರದ ಮುಸಲ್ಮಾನ್ ಬಾಂಧವರು ಇಂಥ ಪುಂಡಾಟಿಕೆಗೆ ಒಪ್ಪದಿದ್ದುದು ಅವರಿಗೂ ಭೂಷಣವೇ ಸರಿ. — ಓರ್ವ ರಾಷ್ಟ್ರೀಯ.

## ದನಗಳ ಪ್ರದರ್ಶನ.

ಹಾಸನದ ಡಿಸ್ಟ್ರಿಕ್ಟು ಅರಸೀಕೆರೆ ತಾಲ್ಲೋಕು, ಕಸಬಾ ಹೋಬಳಿ, ಮಾಲೇಕಲ್ಲು ತಿರುಪತಿ ಶ್ರೀ. ವೆಂಕಟರಮಣಸ್ವಾಮಿಯವರ ದೇವಸ್ಥಾನದ ಮತ್ತು ಹುಳಿಯಾರು ರಸ್ತೆಮಧ್ಯೆ ಇರುವ ಹೊಲಗಳಲ್ಲಿ ದನಗಳ ಪ್ರದರ್ಶನವು ೧೯೩೭ನೆಯ ಇಸ್ವಿ ಡಿಶಂಬರ ಮಾಹೆ ೧೮ ನೆಯ ತಾರೀಖು. ಲಾಗಾಯ್ತು ೨೨ ನೆಯ ತಾರೀಖಿನವರೆಗೆ ೫ ದಿವಸಗಳು ನಡೆಸಲು ಏರ್ಪಡಿಸಿರುತ್ತೆ.

ಈ ವರ್ಷ ಮಾತ್ರ ದನಗಳಿಗೇ ಆಗಲಿ ಅಂಗಡಿಗಳಿಗೇ ಆಗಲಿ ಯಾವ ವಿಧವಾದ ರುಸುಂ ವಿಧಿಸುವುದಿಲ್ಲ. ಜನಜಾನುವಾರುಗಳಿಗೆ ಯಾವ ವಿಧವಾದ ರೋಗಾದಿ ಉಪದ್ರವಗಳು ಇಲ್ಲ. ಪ್ರದರ್ಶನಾಲಯಕ್ಕೆ ಬರತಕ್ಕ ರಾಸುಗಳ ಉಪಯೋಗಕ್ಕೆ ಆವಶ್ಯಕವಾದ ಹುಲ್ಲು ಕ್ರಯಕ್ಕೆ ದೊರೆಯುತ್ತದೆ. ನೀರು ನೆರಳಿನ ವಸತಿ ಚೆನ್ನಾಗಿರುತ್ತೆ.

ಪ್ರದರ್ಶನದ ಕಮಿಟಿಯವರಿಂದ ಚುನಾಯಿಸುವ ಉತ್ತಮ ರಾಸುಗಳಿಗೆ ಬಹುಮಾನ ಕೊಡಲ್ಪಡುತ್ತೆ. ಒಂದು ಬಹು ಮಾನವನ್ನು ಹೊಂದಿದ ರಾಸು ಮತ್ತೊಂದು ಬಹು ಮಾನವನ್ನು ಹೊಂದುವುದಕ್ಕೆ ಅವಕಾಶವಾಗುವುದಿಲ್ಲ.

ತಿರುಪತಿ ಗ್ರಾಮವು ರೈಲ್ವೆ ಜಂಕ್ಷನ್ ಸ್ಥಳವಾದ ಅರಸೀಕೆರೆಗೆ ೧॥ ಮೈಲಿ ಫಾಸಲೆಯಲ್ಲಿರುತ್ತೆ. ಒಳ್ಳೆ ಯಾತ್ರಾಸ್ಥಳವಾಗಿದೆ.

ಅನೇಕ ಸ್ಥಳಗಳಿಂದ ರಾಸುಗಳು ಬಂದು ಸೇರುವ ಪ್ರಯುಕ್ತ ವ್ಯಾಪಾರಸ್ಥರಿಗೆ ತುಂಬಾ ಲಾಭ ಉಂಟು. — ಕಾರ್ಯದರ್ಶಿ.

## ಶಿವಲಿಂಗಧಾರಣ.

### (ನಾಗನಹಳ್ಳಿಯಲ್ಲಿ.)

ನೈಜಾಮ ಸ್ಟೇಟ ಜಿಲ್ಲಾ ಬಸಿರಾಬಾದ ಪೈಕಿ ನಾಗನಹಳ್ಳಿ ಗ್ರಾಮದಲ್ಲಿ ಶ್ರೀಯುತ ಶರಣಪ್ಪ ಪೊ. ಪಾಟೀಲ ಇವರ ನೇತೃತ್ವದಲ್ಲಿ ಶ್ರೀಗುರುವರ್ಯ ಶರಣಯ್ಯ ಹಿರೇಮಠ ಇವರ ಹಸ್ತದಿಂದ ಬಹುಮತದ ಪ್ರಕಾರ ಹಾಲುಮತವರಾದ ಶ್ರೀ ಮಲ್ಲೇಶಪ್ಪ, ಅವರ ಧರ್ಮಪತ್ನಿ ವೀರಮ್ಮ, ಸಮ್ಮಗಾರ ವಂಶಜರಾದ ಬಸವಣ್ಣಪ್ಪ, ಅವರ ಧರ್ಮಪತ್ನಿ ಅಂಬಾದೇವಿ ಈ ಎರಡು ಕುಟುಂಬಗಳು ಬಹು ದಿವಸಗಳಿಂದ ಶುದ್ಧಾಚಾರಸಂಪನ್ನರಾಗಿದ್ದ ಕಾರಣ ಶಿವಲಿಂಗಧಾರಣೆ ಮಾಡಲ್ಪಟ್ಟಿತು. ಕಾರಣ ಸಕಲ ಬಾಂಧವರು ಮೇಲ್ಕಾಣಿಸಿದ ಬಸವಣ್ಣಪ್ಪನವರನ್ನು ಇನ್ನುಮೇಲೆ ಸಮ್ಮಗಾರರೆಂದು ತಿಳಿಯದೆ ಎಲ್ಲರಂತೆ ಬಾವಿ ಮೊದಲಾದ ಸಾರ್ವಜನಿಕ ಸ್ಥಳಗಳಲ್ಲಿ ಸಮಾನತೆಯಿಂದ ವರ್ತಿಸಬೇಕಾಗಿ ಪ್ರಾರ್ಥನೆ. ಸೆಕ್ರೆಟರಿ

ಸಿದ್ಧಪ್ಪ ಕೊಟ್ರಗಿ.

## ತಿ ಪ ಟೂ ರ.

. ತಾ. ೨೭-೧೧-೩೭ ನೆಯ ಭಾನುವಾರ ಸಂಜೆ ೬ ಘಂಟೆಗೆ ಶ್ರೀ ವೀರಶೈವಾನಂದಾಶ್ರಮದಲ್ಲಿ ಸೋಲಾಪುರದ ವೀರಶೈವ ಮಹಿಳಾ ಜ್ಞಾನಮಂದಿರದ ಸಂಚಾಲಕರಾದ ಶ್ರೀಮತಿ ಜಯದೇವಿಬಾಯಿ ಲಿಗಾಡೆ ಇವರು 'ಸ್ತ್ರೀ ಧರ್ಮ' ಎಂಬ ವಿಷಯವಾಗಿ ಭಾಷಣಮಾಡಿದರು. ಶ್ರೀಮಾನ್ ಡಿ. ಎಸ್. ಮಲ್ಲಪ್ಪನವರ ಧರ್ಮಪತ್ನಿಯವರಾದ ಶ್ರೀಮತಿ ಗಂಗಮ್ಮನವರು ಅಧ್ಯಕ್ಷತೆ ವಹಿಸಿದ್ದರು.

ಉಪನ್ಯಾಸಕರು ಭಾಷಣಮಾಡುತ್ತಾ 'ಜೀವನಯಾತ್ರೆಯು ಸುಗಮವಾಗಿ ಸಾಗಲು ದಂಪತಿಗಳಿಬ್ಬರೂ ವಿದ್ಯಾವಂತರಾಗಬೇಕು. ಸ್ತ್ರೀಯು ಗೃಹರಾಜ್ಯದ ಮಹಾರಾಜ್ಞಿ. ಈಕೆಯು ವಿವೇಕಶಾಲೆಯೂ ಸುಶಿಕ್ಷಿತಳೂ ಆಗದಿದ್ದರೆ ತನ್ನಲ್ಲಿ ಜನಿಸುವ ಭಾವೀ ಜನಾಂಗವನ್ನು ಹೇಗೆ ಉನ್ನತಿಪಡಿಸಬಲ್ಲಳು? ಮಕ್ಕಳಿಗೆ ಮಾತೆಯೇ ಮೊದಲು ಗುರು. ಮಾತೆಯ ಶಿಕ್ಷಣದಿಂದಲೇ ದೇಶಸೇವಕರೂ, ಸಾಧುಗಳೂ, ಮಹಾತ್ಮರೂ, ಸಾಧ್ವೀಮಣಿಯರೂ ಆಗಿದ್ದಾರೆ. ಜನಾಂಗದ ಉನ್ನತಿಯೂ ಅವನತಿಯೂ ಮಾತೆಯ ಕೈಯಗದೆ. ಸೀತಾ, ದಮಯಂತಿ, ಅನುಸೂಯಾ, ಮೊದಲಾದವರ ಪತಿವ್ರತೆಯನ್ನೂ, ಅಕ್ಕಮಹಾದೇವಿ, ರೆಮ್ಮವ್ವೆ, ರೇಚವ್ವೆ ಮೊದಲಾದ ಸಾಧ್ವಿಯರನ್ನೂ ನಾವು ಆಗಾಗ್ಗೆ ನೆನೆಸಬೇಕು. ಅವರ ಜಯಂತಿಗಳನ್ನು ಆಚರಿಸಬೇಕು.

ಪ್ರತಿಯೊಬ್ಬ ಸ್ತ್ರೀಯೂ ದೇಶ ಭಾಷೆಯಲ್ಲಿ ಚೆನ್ನಾಗಿ ಓದಿ ಬರೆಯುವುದನ್ನೂ, ಸರಳ ಜೀ ವ ನ, ಶುಚಿತ್ವ ವಿನಯ ಮತ್ತು ಗಾಂಭೀರ್ಯಗಳನ್ನೂ ಗಳಿಸಬೇಕು. ಮಕ್ಕಳ ಲಾಲನೆ ಪಾಲನೆ ಚೆನ್ನಾಗಿ ಪಾಕ ಮಾಡುವುದು ಇವುಗಳಲ್ಲಿ ಪ್ರವೀಣೆಯರಾಗಬೇಕು. ಸತ್ಯ, ಅಹಿಂಸೆ, ಅತಿಥಿಸತ್ಕಾರ ಇವುಗಳು ನಿಮ್ಮ ಮುಖ್ಯ ಮಂತ್ರಗಳಾಗಬೇಕು. ಮುಖ್ಯವಾಗಿ ನೀವೆಲ್ಲರೂ ಕನ್ನಡ ನಾಡಿನ ಆದರ್ಶ ಮಹಿಳೆಯರಾಗಬೇಕು." ಎಂದು ತಮ್ಮ ಭಾಷಣವನ್ನು ಮುಗಿಸಿದರು. ಅಧ್ಯಕ್ಷರು ಉಪನ್ಯಾಸಕರು ಮಹಾರಾಷ್ಟ್ರ ದೇಶದವರಾದರೂ ಅವರಿಗಿರುವ ಕನ್ನಡ ಭಾಷಾ ನೈಪುಣ್ಯತೆಯನ್ನೂ ಕನ್ನಡ ಪ್ರಸಾರಕ್ಕಾಗಿ ಅವರು ದುಡಿಯುತ್ತಿರುವುವನ್ನೂ ಶ್ಲಾಘಿಸಿ, ಅವರ ಭಾಷಣದಂತೆ ನಡೆಯಬೇಕಾಗಿ ಪ್ರಾರ್ಥಿಸಿದರು. ವಂದನಾರ್ಪಣಾನಂತರ ಸಭೆಯು ಮುಗಿಯಿತು. ಸ್ತ್ರೀಯರೂ ಪುರುಷರೂ ಬಹಳವಾಗಿ ನೆರೆದಿದ್ದರು.

ಮ್ಯಾನೇಜರ್<br>
ಶ್ರೀ ವೀರಶೈವಾನಂದಾಶ್ರಮ<br>
ತಿಪಟೂರು.

## ಹಂಡರಗಲ್ಲ.

ಆಕಳು ಒಂದೇಕಾಲಕ್ಕೆ ಮೂರು ಹೋರಿಗಳನ್ನು ಈದಿದೆ

ಮುದ್ದೇಬಿಹಾಳದಿಂದ ೭ ಮೈಲಿನ ಮೇಲೆ ಕೃಷ್ಣಾತೀರದಲ್ಲಿರುವ ಹಂಡರಗಲ್ಲದಲ್ಲಿ ಹನುಮಪ್ಪ ಮಂಕಣಿ ಎಂಬವರ ಮನೆಯಲ್ಲಿರುವ ಒಂದು ಆಕಳು ಕೆಲವು ಕಾಲಹಿಂದೆ ಒಮ್ಮೆಲೇ ಮೂರು ಹೋರಿಗಳನ್ನು ಈದಿರುತ್ತದೆ. ಮೂರು ಹೋರಿಗಳು ಕರೆ ಮಾಸ ಇದ್ದು ಈಗ ಹಂಗಾಮಕ್ಕೆ ಬಂದಿವೆ.

ಈದಕೂಡಲೆ ಮುದ್ದೇಬಿಹಾಳ ದನದ ದವಾಖಾನೆಯ ಆಫೀಸರರಿಗೆ ಯಜಮಾನರು ಬಂದು ತಿಳಿಸಿದರು. ಮುಂದೆ ತಾ. ೨೨-೬-೩೭ ನೇ ದಿನ ಡಾಕ್ಟರರು ತಾಯಿ, ಮಕ್ಕಳು ನಾಲ್ಕು ದನಗಳಿಗೂ ಇನಾಕ್ಯುಲೇಶನ್ ಮಾಡಿದ್ದಾರೆ.

ದೇವರ ಅನುಗ್ರಹದಿಂದ ಮೂರು ಹೋರಿಗಳು ಹುಟ್ಟಿದವೆಂದು ಸಂರಕ್ಷಣಮಾಡಿ, ಈಗ ನಾಲ್ಕನೇ ಹೋರಿಯನ್ನು ಕೊಂಡು ೨ ಜೋಡುಗಳಿಂದ ಒಕ್ಕಲತ ಸಾಗಿಸುತ್ತಿರುವರು. ಗೋಪುತ್ರ ಮತ್ತು ಪುತ್ರ, ರತ್ನರನ್ನು ಬಡವರಲ್ಲಿಯೇ ಹೆಚ್ಚಾಗಿ ಕೊಡುವದುಂಟು. ಯಾಕಾದರೆ ಬಡತನ ಹಿಂಗಲೆಂದು. ಮೇಲೆ ಬರೆದ ರೈತನ ಸ್ಥಿತಿಯು ಈಗ ಸುಧಾರಿಸತೊಡಗಿದೆ.

ಮುದ್ದೇಬಿಹಾಳ.<br>
ತಾ|| ೨೪-೧೧-೩೭.

ಮಲಕಪ್ಪ. ಬಿ.<br>
ವ್ಹೆಟೆರಿನರಿ ಸಾಲೋತ್ರಿ ಬಿ. ವ್ಹಿ. ಸಿ.

## ಆದಿ ಜನರ ಐತಿಹ್ಯ.

ಲೇಖಕ:— ಶ್ರೀ. ಮಲ್ಲಪ್ಪ ನಾಗಪ್ಪ ಚಲವಾದಿ (ಇಂಗಳಗಿ)<br>
ಅಸಿ| ಮಾಸ್ತರ ಶಾಳಾ ಸವದತ್ತಿ.

ಅತಿ ಪ್ರಾಚೀನ ಕಾಲದಲ್ಲಿ ಆರ್ಯರು ಈ ನಮ್ಮ ಭರತಖಂಡವನ್ನು ಪ್ರವೇಶಿಸಿ ಈ ದೇಶವನ್ನು ಆಗ ಆಳುತ್ತಿದ್ದ ಅತಿ ಬಲಿಷ್ಠವಾದ ಜನಾಂಗವನ್ನು ಗೆದ್ದು ಅವರ ಸ್ವತ್ತನ್ನು ಅಪಹರಿಸಿ ಅವರನ್ನು ಅಡವಿಗಟ್ಟಿದರು. ಮತ್ತು ಅವರಲ್ಲಿ ಶರಣಾಗತರಾದ ಜನರಿಗೆ ಅತಿ ನೀಚವಾದ ಉದ್ಯೋಗಗಳನ್ನು ಕೊಟ್ಟು ತಮ್ಮ ಸೇವೆಯನ್ನು ಮಾಡಿಸಿಕೊಳ್ಳಹತ್ತಿದರು. ಆ ಶರಣಾಗತರಾದ ಅತಿ ಬಲಾಢ್ಯ ಜನಾಂಗದ ವಂಶದವರೇ ಆದಿಜನರು.

ಆರ್ಯರ ಅಭಿಮಾನದ ಗ್ರಂಥಗಳಾದ ವೇದಗಳಲ್ಲಿ ಆರ್ಯರಿಗೂ ಮೂಲನಿವಾಸಿಗಳಿಗೂ ನಡೆದ ಯುದ್ಧಗಳನ್ನು ಅನೇಕ ಮಂತ್ರಗಳು ವರ್ಣಿಸುತ್ತವೆ. ಅವುಗಳನ್ನು ಸೂಕ್ಷ್ಮ ರೀತಿಯಿಂದ ಓದಿದವರಿಗೆ ಮೂಲನಿವಾಸಿಗಳು ಎಂಥ ಬಲಾಢ್ಯರೂ, ಸುಧಾರಿಸಿದವರೂ, ಯುದ್ಧಕಲಾಪಟುಗಳೂ ಆಗಿದ್ದರೆಂಬುದು ಕಂಡುಬರುವದು. ಋಗ್ವೇದದ ಏಳನೇ ಮಂಡಲದಲ್ಲಿರುವ ಹತ್ತು ಜನ ಅರಸರ ಸಂಗ್ರಾಮದ ವರ್ಣನೆಯನ್ನು ನೋಡಿದರೆ ಅವರಲ್ಲಿಯ ಆದಿಜನ ಮುಖಂಡರ ಧೈರ್ಯ ಸಾಹಸಾದಿಗಳು ಎಲ್ಲರಿಗೂ ಆನಂದಾಶ್ಚರ್ಯವನ್ನುಂಟು ಮಾಡದೆ ಇರವು. ಆ ಮುಖಂಡನೇ ಹಿಂದು ದೇಶದ ಮೂಲನಿವಾಸಿಗಳಿಂದ ಆದಿಜನಗಳ ಅರಸನಾಗಿದ್ದನು. ಅಂಥ ಮಹಾ ಬಲಶಾಲಿಯ ವಂಶದವರೇ ಆದಿಜನರು.

ಬರಬರುತ್ತ ಆರ್ಯರು ಎಲ್ಲ ದೇ ಶ ವ ನ್ನು ಕೈವಶಮಾಡಿಕೊಂಡು ಮೊದಲಿನವರನ್ನು ಅಡವಿಗಟ್ಟಿದರು. ಈಗ ಕಾಡುಪಾಲಾಗಿರುವ ಎಷ್ಟೋ ಜನರು ಮೂಲನಿವಾಸಿಗಳ (ಆದಿಜನರ) ವಂಶದವರೇ ಆಗಿರುವರು. ಆರ್ಯರು ಆ ಮೂಲನಿವಾಸಿ (ಆದಿಜನ)ಗಳಿಗೆ ದಸ್ಯುಗಳೆಂದೂ, ರಾಕ್ಷಸರೆಂದೂ ಮನಬಲ್ಲಂತೆ ಹಳಿದು ತಮ್ಮ ಬಾಯಿ ತಿಂಡಿಯನ್ನು ತೀರಿಸಿಕೊಂಡಿರುವರು. ಆದರೆ ಈಗ ನಡೆದಿರುವ ವಿಶೋಧಗಳನ್ನು ನೋಡಿದರೆ ಇದಕ್ಕೆ ವಿಪರೀತ ಸ್ಥಿತಿ ಇದ್ದಂತೆ ಸ್ಪಷ್ಟವಾಗುವದು.

ಈಗ ಪ್ರಾಚೀನ ವಸ್ತು ಸಂಶೋಧನ ಶಾಖೆಯವರು ಕೆಲವು ವರ್ಷಗಳ ಹಿಂದೆ ಸಿಂಧ ಪ್ರಾಂತದಲ್ಲಿ "ಹರಪ ಮತ್ತು ಮೋಹಂಜೆದಾರೋ" ಎಂಬ ಊರುಗಳ ಹತ್ತರ ಅಗಿಯುವಾಗ್ಗೆ ಎಷ್ಟೋ ವಿಸ್ಮಯಕಾರಕವಾದ ಪುರಾಣ ವಸ್ತುಗಳು ದೊರೆತಿವೆ. ಅವು ಕ್ರಿಸ್ತಶಕಕ್ಕೂ ಪೂರ್ವದಲ್ಲಿ ಸುಮಾರು ನಾಲ್ಕು ಸಾವಿರ ವರ್ಷಗಳ ಹಿಂದಿನವೆಂದೂ, ಆರ್ಯರು ಹಿಂದುಸ್ಥಾನವನ್ನು ಪ್ರವೇಶಿಸುವ ಮೊದಲು ಎಷ್ಟೋ ಕಾಲ ಹಳೆಯವೆಂದೂ, ಅವುಗಳಿಂದ ಆ ಕಾಲದಲ್ಲಿದ್ದ ಜನಾಂಗವು ಬಹಳೇ ಸುಧಾರಿಸಿದುದು ಇದ್ದಿರಬೇಕೆಂದೂ ವಿದ್ವಾಂಸರು ಅಭಿಪ್ರಾಯಪಡುವರು. ಮತ್ತು ಆರ್ಯರು ರಾಜ್ಯವ್ಯವಸ್ಥೆ ಮೊದಲಾದ ಎಷ್ಟೋ ಉತ್ತಮವಾದ ವಿಚಾರಗಳನ್ನು ಮೂಲ ನಿವಾಸಿಗಳಿಂದಲೂ ಕಲಿತುಕೊಂಡರೆಂದು ಹೇಳುವರು.

## ಸುಲೇಪೇಟೆ.

### ಶ್ರೀ ಖಟ್ವಾಂಗೇಶ್ವರ ಫ್ರಿ ಬೋರ್ಡಿಂಗಿಗೆ ಸದರ ಮೊಹತ್ಮಿಮರವರ ಆಗಮನ,

ಈ ಜಗತ್ತಿನಲ್ಲಿ ಪ್ರತಿಯೊಂದು ರಾಷ್ಟ್ರವೂ ಪ್ರತಿಯೊಂದು ಜನಾಂಗವು ಮುಂದರಿಯಬೇಕಾದರೆ ವಿದ್ಯೆಯೇ ಮೂಲಾಧಾರವೆಂಬುವುದು ಪ್ರಪಂಚದಲ್ಲಿ ಜನಜನಿತವಾದ ಸಂಗತಿಯಾಗಿರುವುದಷ್ಟೆ. ಆದರೆ ನೈಜಾಂ ದೇಶದ ವೀರಶೈವರು ವಿದ್ಯೆಯಲ್ಲಿ ಬಹಳ ಹಿಂದುಳಿದಿರುತ್ತಾರೆಂಬ ಸಂಗತಿಯು ಮಹಾ ವಿಷಾದಕರವಾದದ್ದು. ಇದನ್ನು ತಿಳಿದೇ ಉದಾರಿಗಳೂ, ಮಹಾ ಮತಾಭಿಮಾನಿಗಳೂ ಆದ ಖಟ್ವಾಂಗೇಶ್ವರ ಮಠದ ಶ್ರೀ|| ಬ್ರ|| ಶ್ರೀನಿರಂಜನ ಸದಾಶಿವ ಸ್ವಾಮಿಗಳವರು ವೀರಶೈವರಿಗೂ ಮತ್ತು ವಿದ್ಯೆಯಲ್ಲಿ ಹಿಂದುಳಿದ ಇತರ ಹಿಂದು ಸಮಾಜಕ್ಕೂ ಉಪಯೋಗವಾಗುವಂತಹ ಒಂದು ಫ್ರೀ ಬೋರ್ಡಿಂಗನ್ನು ತೆಗೆದು ಇಂದಿಗೆ ಮೂರು ವರುಷಗಳಾಗುತ್ತಾ ಬಂದವು. ಶ್ರೀ ಸ್ವಾಮಿಗಳವರಿಗೆ ಮಠದಿಂದ ಬರತಕ್ಕ ಉತ್ಪತ್ತಿಯು ಏನೂ ಇರುವದಿಲ್ಲ. ತಮ್ಮ ಭಿಕ್ಷಾ ಪಾತ್ರೆಯಿಂದಲೇ ಈ ಬೋರ್ಡಿಂಗನ್ನು ಸಾಗಿಸಿಕೊಂಡು ಬಂದಿರುತ್ತಾರೆ. ಸಧ್ಯ ಹದಿನೈದು ವಿದ್ಯಾರ್ಥಿಗಳಿರುತ್ತಾರೆ. ಮತ್ತು ಇದಕ್ಕಿಂತಲೂ ಇನ್ನೂ ಹೆಚ್ಚಿಗೆ ವಿದ್ಯಾರ್ಥಿಗಳಿಗೆ ಸಹಾಯ ಒದಗಿಸಿಕೊಡಬೇಕೆಂಬ ಕುತೂಹಲವು ಪೂರ್ಣವಿರುತ್ತದೆ. ಅಂದಮೇಲೆ ಸ್ವಾಮಿಗಳಲ್ಲಿರುವ ಸಮಾಜದ ಕಳಕಳಿಯು ಎಷ್ಟರಮಟ್ಟಿನದೆಂಬುದು ಇದರ ಮೇಲಿಂದಲೇ ವ್ಯಕ್ತವಾಗುವುದಿಲ್ಲವೆ?

ತಾ. ೨೬-೧೧-೩೭ ರಲ್ಲಿ ಗುಲಬರ್ಗಾದಿಂದ ಇಲ್ಲಿಗೆ ಆಗಮಿಸಿದ ವಿದ್ಯಾಖಾತೆಯ ಸದರ ಮೊಹತ್ಮಿಮರವರಾದ ಶ್ರೀರಾಯ ಶಂಭು ಪ್ರಸಾದರವರು ಈ ಸ್ವಾಮಿಗಳ ಅತ್ಯುದಾರ ಭಾವನೆಯನ್ನು ಕೇಳಿ ಬೋರ್ಡಿಂಗನ್ನು ನೋಡಬೇಕೆಂಬ ಹೇತುವಿನಿಂದ ಖಟ್ವಾಂಗೇಶ್ವರ ಮಠಕ್ಕೆ ದಯಮಾಡಿಸಿದರು. ಮತ್ತು ದೊಡ್ಡ ಸಭೆಯು ಸೇರಿದ್ದಿತು. ಶ್ರೀ ಸ್ವಾಮಿಗಳವರು ಅವರು ಆಗಮಿಸಿದ ಕೂಡಲೆ ಸುಸ್ವಾಗತವನ್ನು ಮಾಡಿದರು. ಆಮೇಲೆ ಹಾರ ತುರಾಯಿಗಳು ಅರ್ಪಿಸಲ್ಪಟ್ಟವು ಸದರ ಮೊಹತ್ಮಿಮರವರು ಮಠದೊಳಗಿರುವ ಬೋರ್ಡಿಂಗಿನ ಸುವ್ಯವಸ್ಥೆಯನ್ನೆಲ್ಲಾ ಚೆನ್ನಾಗಿ ಪರಾಂಬರಿಸಿ ಮಹದಾನಂದವನ್ನು ಹೊಂದಿದರು. ವೀರಶೈವರಲ್ಲದೆ ಇತರ ವರ್ಣದವರೂ ಈ ಬೋರ್ಡಿಂಗಿನಲ್ಲಿರುವುದನ್ನು ನೋಡಿ ಮತ್ತಿಷ್ಟೂ ಹರ್ಷಭರಿತರಾದರು. ಆಮೇಲೆ ಸಭೆಯು ಪ್ರಾರಂಭಿಸಲ್ಪಟ್ಟಿತು. ಮೊದಲು ನೈಜಾಂ ಪ್ರಭುಗಳವರ ಪ್ರಾರ್ಥನೆಯಾದನಂತರ ಸಜ್ಜನಶೆಟ್ಟಿ ವಕೀಲ ನಾಗಪ್ಪನವರು ಶ್ರೀ ಮೊಹತ್ಮಿಮರವರ ಆಭಾರವನ್ನು ಮನ್ನಿಸಿದರು. ಮಿಡ್ಲ್ ಸ್ಕೂಲ್ ಮಾಸ್ತರರವರು ಶಂಭು ಪ್ರಸಾದರವರ ಮೇಲೆ ಉರ್ದು ಭಾಷೆಯಲ್ಲಿ ಮಾಡಿದ ಒಂದು ಕವನವನ್ನು ಓದಿದರು. ಫ್ರೀ ಬೋರ್ಡಿಂಗಿನ ಕೆಲವು ವಿದ್ಯಾರ್ಥಿಗಳೂ ಕೂಡಾ ಭಾಷಣವನ್ನು ಮಾಡಿದರು. ನಂತರ ಭಾಲ್ಕಿ ಬಸವಣ್ಣಪ್ಪನವರಿಂದ ಬೋರ್ಡಿಂಗಿನ ಮತ್ತು ವಿದ್ಯಾ ವಿಷಯದಿಂದ ಗರ್ಭಿತವಾದ ಭಾಷಣವು ಮಾಡಲ್ಪಟ್ಟಿತು. ಮತ್ತು ಜ್ಯೋತೀಪುರ ಮಠದ ಬ್ರ|| ಶ್ರೀ|| ಸಿದ್ಧಾಂತಿ ವಿದ್ವಾನ್ ಚಂದ್ರಶೇಖರ ಶಾಸ್ತ್ರಿಗಳವರ ಅಮೋಘವಾದ ಭಾಷಣವೂ ಶಂಭು ಪ್ರಸಾದರವರ ಮೇಲೆ ರಚಿಸಿದ ಬಹು ಮನೋಹರವಾದ "ನವರತ್ನ ಮಾಲಿಕಾ" ಎಂಬ ಕವಿತೆಯೂ ಓದಲ್ಪಟ್ಟಿತು.

ಕಡೆಗೆ ಶ್ರೀ ಸದಾಶಿವ ಸ್ವಾಮಿಗಳವರು ಸದರ ಮೊಹತ್ಮಿಮರವರ ಆಗಮನದಿಂದ ಬಹು ಸಂತುಷ್ಟರಾಗಿ ಎಂಥಾ ಕಠಿಣ ಮನಸ್ಸಿನವನ ಹೃದಯವಾದರೂ ಕೂಡ ಕರಗುವಂತಹ ಸುಶ್ರಾವ್ಯವಾದ ಭಾಷಣವನ್ನು ಮಾಡಿದರು. ಇದನ್ನೆಲ್ಲಾ ಕೇಳಿ ಆಮೇಲೆ ಸದರ ಮೊಹತ್ಮಿಮ ಸಾಹೇಬರವರು ಅಪ್ಪಣೆ ಕೊಡಿಸಿದ್ದೇನೆಂದರೆ "ನಾನು ಈ ನೈಜಾಂ ಸ್ಟೇಟಿನಲ್ಲಿ ೨೫ ವರುಷಗಳಲಾಗಾಯ್ತು ಕೆಲಸಮಾಡುತ್ತಾ ಬಂದಿರುತ್ತೇನೆ. ನಾನು ಇದು ವರೆಗೂ ಭಿಕ್ಷವನ್ನು ಮಾಡಿ ಈ ರೀತಿ ಬೋರ್ಡಿಂಗು ನಡೆಸತಕ್ಕವರನ್ನು ಎಲ್ಲಿಯೂ ನೋಡಿರಲಿಲ್ಲ. ಶ್ರೀ ಸ್ವಾಮಿಗಳವರನ್ನು ಕೇವಲ ಬಡವರ ಬಂಧುಗಳೆಂದು ಹೇಳಲಿಕ್ಕೆ ಯಾವ ಸಂದೇಹವೂ ಇರುವದಿಲ್ಲ ಆದರೊಳಗೂ ಎಲ್ಲ ವರ್ಣದವರಿಗೂ ಈ ಬೋರ್ಡಿಂಗಿನಲ್ಲಿ ಸೇರಲಿಕ್ಕೆ ಅವಕಾಶನಿದೆಯೆಂದಮೇಲೆ ಇವರ ವಿಶಾಲ ಭಾವವು ಎಷ್ಟರ ಮಟ್ಟಿಗೆ ಇರಬಹುದೆಂದು ಊಹಿಸಲಿಕ್ಕೆ ಅಸಾಧ್ಯವಾಗಿದೆ. ಇವರ ಇಂತಹ ವಿಶಾಲ ಭಾವವನ್ನು ಇನ್ನೂ ಹೆಚ್ಚಿಸುವಂತೆ ಪರಮಾತ್ಮನನ್ನು ಅನನ್ಯಭಾವದಿಂದ ಬೇಡಿಕೊಳ್ಳುತ್ತೇನೆಂದು ಹೇಳಿ ತರುವಾಯ ವಿದ್ಯಾರ್ಥಿಗಳನ್ನು ಕುರಿತು ನೀವುಗಳು ಇಂಥಾ ಸುಸಮಯ ಒದಗಿದ ಕಾಲದಲ್ಲಿಯೇ ಚನ್ನಾಗಿ ಕಷ್ಟಪಟ್ಟು ಅಭ್ಯಾಸವನ್ನು ಮಾಡಿ ಅನ್ನವನ್ನು ಕೊಟ್ಟವರಿಗೂ ನಿಮಗೂ ಕೂಡ ಯಶಸ್ಸು ಬರುವಂತೆ ಪ್ರಯತ್ನವನ್ನು ಮಾಡಬೇಕೆಂಬುದಾಗಿ ಹೇಳಿದರು. ಇವರ ಈ ಅಮೋಘವಾದ ಭಾಷಣಕ್ಕೆ ಜನರೆಲ್ಲರೂ "ರಾಯ ಶಂಭು ಪ್ರಸಾದ ಮಹಾರಾಜಕಿ ಜೈ!" ಎಂಬುದಾಗಿ ಜಯಘೋಷವನ್ನು ಮಾಡಿದಮೇಲೆ ಸಭೆಯು ವಿಸರ್ಜಿಸಲ್ಪಟ್ಟಿತು. ಕಡೆಗೆ ಕರ್ತರ ಗದ್ದುಗೆಯಬಳಿಗೆ ದಯಮಾಡಿಸಿ ಮಂಗಳಾರತಿಯನ್ನು ಮಾಡಿ ಶ್ರೀ ಸ್ವಾಮಿಗಳವರಿಂದ ಆಶಿರ್ವಾದವನ್ನು ಪಡೆದು ಆತ್ಮಾನಂದಭರಿತರಾಗಿ ತಮ್ಮ ಸ್ವಸ್ಥಾನವನ್ನು ಕುರಿತು ತೆರಳಿದರು. ಈಗಿನ ಕಾಲದಲ್ಲಿ ಇಂಥಾ ಕಾರ್ಯದಲ್ಲಿ ಪ್ರವರ್ತಕರಾಗಿರತಕ್ಕ ಶ್ರೀ ಸದಾಶಿವ ಸ್ವಾಮಿಗಳವರ ಜನ್ಮವೇ ಧನ್ಯ ಧನ್ಯ.

ಪ್ರತ್ಯಕ್ಷದರ್ಶಿ.
ಬಸವಣ್ಣಪ್ಪ ಭಾಲ್ಕಿ
ಸುಲೇಪೇಟೆ.

---

# ಶ್ರೀ. ಪಾವಟೆ ಸಿದ್ಧರಾಮಪ್ಪನವರ ಭಾಷಣ.

ಶಿವಮೊಗ್ಗಾ ಡಿ|| ನೇಮತಿಯಲ್ಲಿ ಹುಬ್ಬಳ್ಳಿಯ ಪ್ರಸಿದ್ಧ ವಕೀಲರಾದ ಶ್ರೀಯುತ ಪಾವಟೆ ಬಿ. ಎ. ಎಲ್. ಎಲ್. ಬಿ. ಶ್ರೀಯುತ ಬಿಳೆಅಂಗಡಿ ಬಿ. ಎ. ಎಲ್. ಎಲ್. ಬಿ. ಇವರುಗಳ ಅಮೋಘವಾದ ಭಾಷಣ.

ನೇಮತಿ ತರುಣ ಸಂಘದವರ ಆಶ್ರಯದಲ್ಲಿ ಅಲ್ಲಿಯ ಕೆಲವು ವೀರಶೈವರ ಕೋರಿಕೆಯಂತೆ ಹುಬ್ಬಳ್ಳಿಯ ಪ್ರಸಿದ್ಧ ವಕೀಲರಾದ ಶ್ರೀಯುತ ಪಾವಟೆಯವರು ಮತ್ತು ಬಿಳೆಅಂಗಡಿಯವರು ಸಹ ತಮ್ಮ ಮಿತ್ರರೊಂದಿಗೆ ತಾ. ೬-೧೧-೩೭ ನೆಯ ಶುಕ್ರವಾರ ಸಾಯಂಕಾಲ ನೇಮತಿಗೆ ಆಗಮಿಸಿದರು. ಊರಿನ ಪ್ರಮುಖರು ದೊಡ್ಡ ರಸ್ತೆಗೆ ಹೋಗಿ ಅವರನ್ನು ಎದುರುಗೊಂಡು ಊರಿನೊಳಕ್ಕೆ ಕರೆದುಕೊಂಡು ಬಂದರು.

ತಾ. ೬ ನೆಯ ಶುಕ್ರವಾರ ಸಾಯಂಕಾಲವೂ ಶನಿವಾರ ಪ್ರಾತಃಕಾಲವೂ ಮತ್ತು ಸಾಯಂಕಾಲವೂ ಉಪನ್ಯಾಸಗಳು ಆದವು. ಉಪನ್ಯಾಸಕ್ಕೆ ಸ್ಥಳದವರೂ ಪರಸ್ಥಳದ ಕೆಲವರೂ ಸುಮಾರು ೭೦೦-೮೦೦ ಜನರು ಸೇರುತ್ತಿದ್ದರು. ಅದರಲ್ಲಿ ಮುಖ್ಯವಾಗಿ ಈಗ ೧೦ ವರುಷಗಳಿಂದಲೂ ಪಂಚಾಚಾರ್ಯರಲ್ಲಿ ಒಬ್ಬರಾದ ಬಾಳೆಹೊನ್ನೂರು ಸ್ವಾಮಿಗಳನ್ನು ಹೊತ್ತು ವಿಶೇಷ ಉತ್ಸವದಿಂದ ತನು, ಮನ, ಧನಗಳಿಂದ ಮೆರೆದು ಅದರ ಪ್ರತಿಫಲವಾಗಿ ಬಿಳಿ ಅಂಗಡಿ "ಮದಗಜಾಂಕುಶ" ಎಂಬ ಪುಸ್ತಕದಲ್ಲಿ ಬೆಂಗಳೂರಿನ ಪಂಚಾಚಾರ್ಯ ಕಡೆಯವನಾದ 'ಪಂಡಿತ ರೇವಣಾರಾಧ್ಯ' ನಿಂದ ರುದ್ರಪದ ವಾಚ್ಯರಾಗಿದ್ದ ನೇಮತಿ ಬಣಗಾರ (ನಾಗಲೀಕ) ಪೈಕಿ ಪ್ರಮುಖರಾದ ಮ|| ರಾ|| ಹೊಂಬರಡಿ ಸಂಗಪ್ಪ ಮತ್ತು ಹಂಪಣ್ಣ ವಗೈರೆಯವರು ತುಂಬಾ ಉತ್ಸಾಹದಿಂದ ಭಾಷಣದಲ್ಲಿ ಭಾಗವಹಿಸಿದ್ದಲ್ಲದೆ ತಮ್ಮ ಬಂಧುವಾದ 'ಗುರುಭಕ್ತ ಕೇಸರಿ' ಹಮ್ಮಿಗಿಯವರ ಮುಖಾಂತರ ಸ್ವಾಭಿಮಾನ ದೃಷ್ಟಿಯಿಂದ ಬಾಳೆಹೊನ್ನೂರು ಶ್ರೀಗಳಿಂದ ಎಲ್ಲಾ ಬಾಯಿ ಬಿಡದೆ ಇದ್ದು 'ಮೂಗು ಹಿಡಿದರೆ ಬಾಯಿ ಬಿಡುವರು' ಎಂಬ ನಾಣ್ನುಡಿಯಂತೆ ಚಾತುರ್ವರ್ಣದ ಖಂಡನೆಯನ್ನು ಶಿವಮೊಗ್ಗಾ ಮೊಕ್ಕಾಂನಲ್ಲಿ ಮಾಡಿಸಿದ ಸಂಬಂಧವಾಗಿ ನಾವುಗಳು ಸ್ವತಂತ್ರವಾಗಿರುವುದೇ ಈಗ ಉತ್ತಮವಾಗಿದೆಯೆಂಬ ಭಾವನೆಯನ್ನು ಪ್ರತಿಪಾದಿಸುತ್ತಿದ್ದರು.

ಭಾಷಣಕಾರರೂ ಸಹ ತಮ್ಮ ಭಾಷಣಗಳಲ್ಲಿ ವೀರಶೈವ ನಿಜತತ್ವಗಳನ್ನೂ ಲಿಂಗಾಂಗ ಸಾಮರಸ್ಯವನ್ನೂ ಸಭೆಯವರಿಗೆಲ್ಲಾ ಸಾವಧಾನವಾಗಿಯೂ ಸಮಂಜಸವಾಗಿಯೂ ಸಪ್ರಮಾಣವಾಗಿಯೂ ತಿಳಿಯಪಡಿಸಿದ್ದಲ್ಲದೆ ಮುಖ್ಯವಾಗಿ ವೀರಶೈವರು ಜಾತಿಭೇದಗಳಿಂದ ದೂರವಾಗಿರಲು ಅವಕಾಶವೇ ಇಲ್ಲವೆಂದೂ ಭಕ್ತ, ಮಹೇಶ ಎಂಬ ಪರ್ಯಾಯ ನಾಮಗಳು ಆಚಾರದಿಂದ ಕೂಡಿರುವವೆಂದೂ 'ಗುರು ತತ್ವ' ನಿಜವಾಗಿ ಯಾವ ರೀತಿಯಿದೆ ಎಂಬುವನ್ನೂ ವಿವರವಾಗಿ ತಿಳಿಸಿದರು.

ವೀರಶೈವರಲ್ಲಿ ಅನೇಕ ವರ್ಗಗಳಿಲ್ಲ. ಕಾಯಕಗಳಿವೆ. ಗುರುವರ್ಗವೆಂಬುದಿಲ್ಲ. ತಿಳಿದ ಜ್ಞಾನಿಗಳೇ ಗುರುಗಳು. ಭಕ್ತರ ಮನೆ[ಯ]ಣ್ಣು ತೆಗೆದುಕೊಟ್ಟದ್ದೂ ಇದಕ್ಕೆ ನಿದರ್ಶನವಾಗಿದೆಯೆಂದೂ [ಇಂ]ಣಿ ಮುಖ್ಯವಾಗಿ ವೀರಶೈವರೆಲ್ಲಾ ಮತ ಧರ್ಮವನ್ನು ಚೆನ್ನಾಗಿ [ತಿ]ಳಿದುಕೊಂಡಿರಬೇಕಲ್ಲದೆ ಅವಶ್ಯಕವಾದ ಅಷ್ಟಾವರಣ ಪಂಚಾಚಾರ ಪರಾಯಣರಾಗಿದ್ದು ಎಲ್ಲಾ ಧರ್ಮವನ್ನೂ ಕಾಪಾಡಿಕೊ[ಳ್ಳ]ಬೇಕೆಂದೂ ತಿಳಿಸಿದರು.

ಅಲ್ಲದೆ ಅನೇಕ ಚಳುವಳಿಕಾರರು ಸಮಾಜದಲ್ಲಿ ಗೊಂದಲವೆಬ್ಬಿಸಿ ಸಮಾಜದಲ್ಲಿ ತಾವು ಅಗ್ರವರ್ಣದವರಾಗಬೇಕೆಂದೂ ತಮ್ಮ ಕಾಯಕವು ಸಮಾಜದಲ್ಲಿ ಸ್ಥಿರಪಟ್ಟು ತಮ್ಮ ಜೀವನ ಮಾರ್ಗವು ಉತ್ತಮಗೊಂಡು ತಮ್ಮ ಸುಖಕ್ಕೆ ಅಡ್ಡಿಯಾಗಬಾರದೆಂಬ ಉದ್ದೇಶದಿಂದ ಅನೇಕ ವೇಷಗಳಿಂದ ಕಾಲಕ್ಕೆ ತಕ್ಕಂತೆ ವರ್ತಿಸಿ ಜನರನ್ನು ಮರುಳುಮಾಡಿ, ದುಡಿಸಿ ಸ್ವಾರ್ಥ ಸಾಧನೆ ಮಾಡಿಕೊಳ್ಳುತ್ತಿರುವುದರಿಂದ ಇನ್ನು ಮುಂದೆ ಸಮಾಜವು ಎಚ್ಚತ್ತು ಇಂತಹ ವೇಷಗಳಿಗೆ ಮೋಸಹೋಗದೆ ಇರಬೇಕಾಗಿಯೂ ಇನ್ನೂ ಅನೇಕ ವಿಷಯಗಳನ್ನು ವಿಶದವಾಗಿ ಜನರ ಮನಸ್ಸಿಗೆ ತಿಳಿಯುವಂತೆ ತಿಳಿಸಿ ಸಂಶಯವುಳ್ಳವರು ಚರ್ಚಿಸಿ ತಿಳಿದುಕೊಳ್ಳಬಹುದೆಂದೂ ಸೂಚಿಸಿದರು.

ಅನೇಕರು ತಮಗೆ ಸಂಶಯದ ವಿಚಾರಗಳನ್ನು ಬಹಿರಂಗವಾಗಿ ಚರ್ಚಿಸಿ ಕೇಳಿಕೊಂಡರು. ಇನ್ನೂ ಕೆಲವರು ತಮಗೆ ತಿಳಿದೋ ತಿಳಿಯದೋ ಅಥವಾ ಸ್ವಾರ್ಥ ದೃಷ್ಟಿಯಿಂದಲೋ ಸಮಾಜಕ್ಕೆ ಕೇವಲ ಸಮ್ಮಂಧಪಡದ ಪ್ರಶ್ನೆಗಳಿಂದ ಕೊನೆಯ ದಿವಸ ಸಾಯಂಕಾಲದ ಭಾಷಣದ ಮಧ್ಯ ಭಾಗದಲ್ಲಿ ಗಲಭೆಮಾಡಿ ಸಭೆಯಿಂದ ಹೊರಟುಹೋದರು.

ವಿ. ಸೂ.— ಈಗಿನ ಚಳವಳಿ ಸಮಯದಲ್ಲಿ ಭಾಷಣಕಾರರು ತಮ್ಮ ಹೆಚ್ಚಿನ ವಯಸ್ಸಿನಲ್ಲಿಯೂ ಆಯಾಸವನ್ನು ಲೆಕ್ಕಿಸದೆ ಸಮಾಜ ಸೇವೆಯ ದೃಷ್ಟಿಯಿಂದ ಬಹು ದೂರ ಬಂದು ವೀರಶೈವ ತತ್ವಗಳನ್ನು ನಿಸ್ವಾರ್ಥತೆಯಿಂದ ಬೋಧಿಸಿದ್ದಕ್ಕೂ ಅಂಥಾ ಅವಕಾಶವನ್ನು ನೇಮತಿ ವೀರಶೈವರು ಅದರಲ್ಲಿಯೂ ತರುಣ ಸಂಘದವರು ಕಲ್ಪಿಸಿ ಕೊಟ್ಟದ್ದಕ್ಕೂ ಮೇಲ್ಕಂಡದವರಿಗೆ ವಂದನೆಗಳನ್ನು ಅರ್ಪಿಸುತ್ತೇನೆ. ಮತ್ತು ಇತರೆ ಎಲ್ಲಾ ಕಡೆಯಲ್ಲಿಯೂ ಮಹಾ ಜನಗಳು ತಮ್ಮ ಸಂಘಗಳ ಮೂಲಕ ಮತದ ನಿಜತತ್ವಗಳನ್ನು ಪ್ರಚಾರಮಾಡಿ ಜನಜಾಗೃತಿ ಮಾಡಬೇಕಾಗಿ ಅತ್ಯಂತ ವಿನಯದಿಂದ ಬೇಡುತ್ತೇನೆ.

ಎನ್. ಎಸ್ ಬಸಪ್ಪ
ಶ್ರೀ ಚೆನ್ನಬಸವೇಶ್ವರ ಸಂಘ.

---

# ಪಡನೂರ ವೀರಶೈವ ಏಕೀಕರಣ.

ತಾರೀಖು. ೧೮-೧೧-೩೭ ನೇ ದಿವಸ ಪಡನೂರ ಭಕ್ತ ಮಂಡಳಿಯು ಶ್ರೀಮನ್ನಿರಂಜನ ಬಂಥನಾಳ ಶಿವಯೋಗಿಗಳನ್ನು ಅಡ್ಡಪಲ್ಲಕ್ಕಿ ಉತ್ಸವದೊಡನೆ ಬರಮಾಡಿಕೊಂಡರು. ಮಹಾಸ್ವಾಮಿಗಳು ಎರಡು ಮೂರು ದಿವಸಗಳ ವರೆಗೆ ಮಾನವನ ಕರ್ತವ್ಯ ಹಾಗೂ ವೀರಶೈವ ಏಕೀಕರಣ ಈ ವಿಷಯಗಳ ಮೇಲೆ ಜನರ ಮೇಲೆ ಅತ್ಯಂತ ಪರಿಣಾಮವಾಗುವಂತೆ ಬೋಧಿಸಿದರು. ಈ ಮುಂಚೆ ಊರಲ್ಲಿ ಪೂರ್ವದಿಂದಲೂ ಅಷ್ಟಾವರಣ ಪಂಚಾಚಾರ ಪರಾಯಣರಾಗಿರುವ ಹಂಡೆ ಲಿಂಗಾಯತ ಸಮಾಜಕ್ಕೆ ಹೆಚ್ಚಿನ ಕುಲದವರೆಂದೆನಿಸಿಕೊಳ್ಳುವವರು ಅವರ ಧಾರ್ಮಿಕ ಕೆಲಸಗಳಿಗೆ ಊರ ಜಂಗಮರನ್ನು ಕಳಿಸಿಕೊಡುತ್ತಿದ್ದಿಲ್ಲ. ಅವರು ಪರಸ್ಥಳದ ಜಂಗಮರಿಂದಲೇ ತಮ್ಮ ಧಾರ್ಮಿಕ ಕೆಲಸ ಪೂರೈಸುತ್ತಿದ್ದರು. ಶ್ರೀಗಳವರ ಉಪದೇಶದಿಂದ ಅವರಲ್ಲಿ ಜಂಗಮರಿಷ್ಟು ಹೋಗುವದಲ್ಲದೆ ಎಲ್ಲ ವೀರಶೈವರು ಏಕೀಕರಣ ಮಾಡಿದರು. ಈ ಕಾರ್ಯದಲ್ಲಿ ಚೆನ್ನಬಸವಯ್ಯನವರು ಮಠ ವ ಚಂದ್ರಶಾ ವ ಪಂಚಪ್ಪ ಈ ಮೊದಲಾದ ಮಂಡಳಿಯು ಅತಿ ಕಳವಳಿಕೆಯಿಂದ ಕೆಲಸಮಾಡಿದರೆಂದು ತಿಳಿಸಲು ಸಂತೋಷವೆನಿಸುತ್ತದೆ.

ಪ್ರತ್ಯಕ್ಷದರ್ಶಿ.

## ಕರ್ನಾಟಕ ಪ್ರಾಥಮಿಕ ಖಾಸಗಿ ಶಾಲಾ ಯರಗೋಳ.

ಇಲ್ಲಿಯ ನನ್ನ ಮಿತ್ರರೂ ಮತ್ತು ಸಹಪಾಠಿಗರೂ ಆದ ಶ್ರೀ. ಹುಣಸಿಗಿ ವಿರುಪಾಕ್ಷಯ್ಯನವರು ಈಗ ಸುಮಾರು ಒಂದು ವರುಷದಿಂದ ಇಲ್ಲಿ ಒಂದು ಕನ್ನಡ ಖಾಸಗಿ ಶಾಲೆಯನ್ನು ತೆಗೆದಿದ್ದಾರೆ. ಸರಕಾರಿ ನಿಯಮದಂತೆ ಅಭ್ಯಾಸವನ್ನು ಮಾಡಿಸಬೇಕು. ಲೆಕ್ಕಪತ್ರವನ್ನು ಸರಿಯಾಗಿ ಇಡಬೇಕು. ತಿಂಗಳಿಗೊಮ್ಮೆ ಕಾರ್ಯಕಲಾಪಗಳನ್ನು ಸರಕಾರಕ್ಕೆ ತಿಳಿಸಬೇಕು. ಎಂಬ ಕಟ್ಟುಗಳಿಂದ ಸರಕಾರವು ತಾ. ೧೦-೬-೪೬ ಫಸಲಿ ದಿವಸ (ಮ. ನಂ. ೪೬೬೪) ೨ ವರುಷದ ಅಪ್ಪಣೆಕೊಟ್ಟಿದೆ. ಆ ಮೇಲೆ ಸಾಲೆಯ ಸ್ಥಿತಿಯನ್ನು ನೋಡಿ ಮುಂದೆ ಮತ್ತೆ ಅಪ್ಪಣೆಕೊಡುವೆವೆಂದು ಹೇಳಿದ್ದರಂತೆ ಇಲ್ಲಿ ಒಂದು ಸರಕಾರಿ ಪ್ರಾಥಮಿಕ ಕನ್ನಡ ಶಾಲೆ ಕೂಡ ಇರುವದು. ಶ್ರೀ. ವಿರುಪಾಕ್ಷಯ್ಯನವರ ಅಪೇಕ್ಷೆಯ ಮೇರೆಗೆ ನಾನು ತಾ. ೨೩-೧೧-೩೭ ನೆಯ ದಿವಸ ಶಾಲೆಯನ್ನು ಸಂದರ್ಶಿಸಿದೆನು. ಇಲ್ಲಿ ನಾಲ್ಕನೆ ಇಯತ್ತೆಯ ವರೆಗೆ ಅಭ್ಯಾಸವಾಗುತ್ತಿದೆ. ಒಟ್ಟು ಹುಡುಗರ ಸಂಖ್ಯೆ ೨೩ ಇದ್ದು ಅವರಲ್ಲಿ ೨ ಮುಸಲ್ಮಾನ್ ಮತ್ತು ೩ ಆದಿಹಿಂದು ಹುಡುಗರಿದ್ದಾರೆ. ಪ್ರಾರ್ಥನೆಯ ಕಾಲಕ್ಕೆ ಆದಿಹಿಂದು ಹುಡುಗರ ಸಹಿತ ಎಲ್ಲರೂ ಒಂದೇ ಸ್ಥಾಲಿನಲ್ಲಿ ನಿಂತಿರುವದು ನೋಡಿ ಆನಂದವಾಯಿತು. ಹುಡುಗರ ಅಭ್ಯಾಸದ ಸ್ಥಿತಿಯು ಸಾಧಾರಣ ಚನ್ನಾಗಿದೆ. ಪ್ರತಿಯೊಬ್ಬ ಹುಡುಗನಿಗೆ ತಿಂಗಳೊಂದಕ್ಕೆ ಸಾಧಾರಣ ೮ ರಿಂದ ೧೦ ಆಣೆ ವರೆಗೆ ಫೀ ಬೀಳುವದು.

ಇದು ಬಹು ಹೆಚ್ಚಾಯಿತು. ಹುಡುಗರ ಸಂಖ್ಯೆ ಹೆಚ್ಚಾದಂತೆ ಫೀಸು ಕಡಿಮೆಮಾಡುವುದು ಒಳ್ಳೇದು. ಶಾಲೆಗೆ ಯೋಗ್ಯವಾದ ಸ್ಥಳವಿಲ್ಲ. ಹುಡುಗರಿಗೆ ಇತಿಹಾಸ, ಭೂಗೋಲ, ಆರೋಗ್ಯ ಶಾಸ್ತ್ರ ಮತ್ತು ಧಾರ್ಮಿಕ ಸಂಬಂಧವಾದ ತಿಳುವಳಿಕೆಮಾಡಿಸುವದು ಅಗತ್ಯವಾಗಿದೆ. ಇನ್ನೂ ಹೆಚ್ಚಾಗಿ ಆದಿ ಹಿಂದು ಹುಡುಗರನ್ನು ಪ್ರಯತ್ನಮಾಡಿ ಸೇರಿಸಿಕೊಳ್ಳಬೇಕು. ಶ್ರೀ. ವಿರುಪಾಕ್ಷಯ್ಯನವರ ಅಭ್ಯಾಸವು ಪ್ರಾಥಮಿಕ ಪೂರ್ತಿ ಆಗಿದ್ದು ಅವರ ಈ ಸಾಹಸದ ಕಾರ್ಯವು ಅಭಿನಂದನೀಯವಾದುದು. ಅದರಲ್ಲಿಯೂ ಆದಿ ಹಿಂದು ಹುಡುಗರನ್ನು ಸೇರಿಸಿಕೊಂಡುದು ಅತ್ಯಂತ ಶ್ಲಾಘನೀಯವಾದುದು. ಈ ಶಾಲೆಗೆ ಸರಕಾರದಿಂದ ಸಹಾಯ ದೊರಿತು ದಿನ ದಿನಕ್ಕೆ ಅಭಿವೃದ್ಧಿ ಹೊಂದಿ ಚಿರಕಾಲ ಕನ್ನಡ ಸರಸ್ವತಿಯ ಸೇವೆಮಾಡಲೆಂದು ಹಾರೈಸುವ

ಪ್ರ ಜ. ಬುರ್ಲಿ.

---

## ಕರ್ನಾಟಕ ವಣಿಕ ಸಂಘ.

### ಇಲೆಕ್ಟ್ರಿಕ್ ವಾಯರಮೆನ್ ಮತ್ತು ಸುಪರವಾಯಿಜರ ಪರೀಕ್ಷೆ, ಬಾಗಲಕೋಟೆ

ಮುಂಬರುವ ಜನವರಿ ತಿಂಗಳಲ್ಲಿ ಮುಂಬಯಿಯೊಳಗೆ ಮೇಲ್ಕಂಡ ಪರೀಕ್ಷೆಗಳು ಜರುಗುತ್ತವೆ. ಕಾರಣ ಆ ಪರೀಕ್ಷೆಗಳಿಗೆ ಕೂಡಲಿಚ್ಛಿಸುವ ಕನ್ನಡ ವಿದ್ಯಾರ್ಥಿಗಳು ತಮ್ಮ ಪರೀಕ್ಷೆಗಳನ್ನು ಕನ್ನಡದಲ್ಲಿ ತೆಗೆದುಕೊಳ್ಳುವ ಬಗ್ಗೆ ಆಯಾ ಅಧಿಕಾರಿಗಳಿಗೆ ಮೊದಲು ತಿಳುಹಿಸಬೇಕು. ಸರಕಾರದವರು ಕನ್ನಡ ವಿದ್ಯಾರ್ಥಿಗಳಿಗೋಸ್ಕರ ಈ ಪರೀಕ್ಷೆಗಳನ್ನು ಕನ್ನಡದಲ್ಲಿ ತೆಗೆದುಕೊಳ್ಳುವರೆಂಬ ಸಂಗತಿಯನ್ನು ಈ ಮೊದಲೇ ಪ್ರಕಟಿಸಲಾಗಿದೆ. ಗೌ| ಕಾ|

ಮು. ಸೋ. ಜಂಗಿನ
ವಿ. ಬ. ಬಳ್ಳಾರಿ,

## ಮುದುಕಿಯ ಹಬ್ಬ!

ಹಿಂದುಗಳ ಅಂಧ ವಿಶ್ವಾಸಗಳು ದಿನದಿನಕ್ಕೆ ಬೆಳೆಯುತ್ತಲೇ ಇವೆಯೇ ವಿನಃ ಕಡಿಮೆಯಾಗಲೊಲ್ಲವು. ಯಾವದೋ ಒಂದು ಊರಲ್ಲಿ ಯಾವನೋ ಒಬ್ಬನು ಅಡವಿಯಲ್ಲಿ ಒಂದು ಮುದುಕಿಯನ್ನು ಕಂಡನಂತೆ! ಆ ಮುದುಕಿಯು ಒಂದು ಕಿವಿಯಲ್ಲಿ ಹೋಳಿಗೆಗಳನ್ನು ಮತ್ತೊಂದು ಕಿವಿಯಲ್ಲಿ ಕೀಲಿ ಕೈಗಳನ್ನು ಹಾಕಿಕೊಂಡಿತ್ತಂತೆ. ತಲೆಯಲ್ಲಿ ಕಣ್ಣುಗಳಿದ್ದವಂತೆ. ಮುದುಕಿಯು ಆತನಿಗೆ "ನೀನು ಊರಲ್ಲಿ ಹೋಗಿ ಮುದುಕಿಯ ಹಬ್ಬವನ್ನು ಆಚರಿಸುವಂತೆ ಹೇಳೆಂದು" ಯಾರು ಆಚರಿಸುವುದಿಲ್ಲವೋ ಅವರ ಮನೆಗೆ ಕೀಲಿ ಹಾಕುತ್ತೇನೆಂದು (ಮನೆಯುವರನ್ನೆಲ್ಲ ನಾಶಮಾಡುತ್ತೇನೆಂದು) ಹೇಳಿದಳಂತೆ. ಇತ್ತ ಕಡೆ ಎಲ್ಲ ಸಣ್ಣ ದೊಡ್ಡ ಊರುಗಳಲ್ಲಿ ಮುದುಕಿಯ ಹಬ್ಬ ಶುಕ್ರವಾರ ಮತ್ತು ಮಂಗಳವಾರಗಳಲ್ಲಿ ಒಳ್ಳೇ ಜೋರಿನಿಂದ ಸಾಗಿದೆ. ಅವತ್ತಿನ ದಿವಸ ದೇವರಿಗೆ ಮತ್ತು ಗುರುಗಳಿಗೆ ನೈವೇದ್ಯವು ಶೂನ್ಯವಂತೆ. ಮುದುಕಿಗೇನೇ ನೈವೇದ್ಯವಂತೆ. ಹೇಗಿದೆ ಹಿಂದುಗಳ ಅಂಧಾನುಕರುಣವು? ಈ ತರದ ಅಂಧ ಭಕ್ತಿಯಿಂದಲೇ ಹಿಂದು ಸಮಾಜವು ಇಂಥ ಹೀನ ಸ್ಥಿತಿಗೆ ಬಂದುದು. ತಮ್ಮ ನೆರೆಯ ಸಮಾಜದವರನ್ನು ಕಂಡಾದರೂ ಹಿಂದುಗಳು ಬುದ್ಧಿಗಲಿಯಬಾರದೆ?

ಪ್ರ. ಜ. ಬುರ್ಲಿ
ಯಾದಗಿರಿ.

---

## ಯಾದಗಿರಿ ತಾಲೂಕ.

ಇತ್ತ ಕಡೆ ಈಗ ವಾತಾವರಣವು ಚನ್ನಾಗಿದೆ. ರೋಗಾದಿಗಳೇನೂ ಇಲ್ಲ. ಮುಂಗಾರಿ ಬೆಳೆ ಸಾಧಾರಣ ಬಂದಿದೆ. ಹಿಂಗಾರಿ ಬೆಳೆಗಳು ಚಾತಕ ಪಕ್ಷಿಗಳಂತೆ ಮಳೆಗಾಗಿ ಬಾಯಿಬಿಡುತ್ತಿರುವವು. ಸುರಪುರ, ಶಹಪುರ, ಜೇವರಿಗಿ, ಮುಂತಾದ ತಾಲೂಕುಗಳಲ್ಲಿಯ ಸ್ಥಿತಿಯು ಬಹು ಭೀಕರವಾಗಿದೆ. ಅತ್ತ ಕಡೆ ಮುಂಗಾರಿ ಬೆಳೆ ಬಂದಿಲ್ಲ. ಹಿಂಗಾರಿ ಬೆಳೆಗಳು ಕೂಡ ಒಣಗಹತ್ತಿವೆ. ಜನರು ತಮ್ಮ ತಮ್ಮ ದನಕರುಗಳನ್ನು ಹೊಡಕೊಂಡು ಊರು ಬಿಟ್ಟು ಹೋಗುತ್ತಿದ್ದಾರೆ. ಮಳೆ ಬಂದರೆ ಬೆಳೆಗಳ ಆಶೆ. ಇಲ್ಲದೆ ಹೋದರೆ ನಿರಾಶೆ. ಮಳೆಯ ಲಕ್ಷಣವೇನೂ ಇಲ್ಲ. ಚಳಿಯಂತೂ ಶೂನ್ಯ. ಅಂತು ಒಕ್ಕಲಿಗರಿಗೆ ಕೈಗೆಬಂದ ತುತ್ತು ಬಾಯಿಗೆ ಬರಲಿಲ್ಲ" ಎಂಬ ಸ್ಥಿತಿ ಬಂದಿದೆ. ಒಕ್ಕಲಿಗರ ಶ್ರಮವು ವ್ಯರ್ಥವಾಗಬಾರದೆಂದು ದೇವರಿಗೆ ನನ್ನ ಪ್ರಾರ್ಥನೆ.

ಯಾದಗಿರಿಯಲ್ಲಿ ನೀರಿನ ತೊಂದರೆ ವಿಶೇಷವಾಗಿದೆ. ಈಗ ಇಲ್ಲಿ ಇಷ್ಟರಲ್ಲೇ ಲೈಟುಗಳು ಪ್ರಾರಂಭವಾಗುವವಿವೆ. ಆ ಮೇಲೆ ನಳಗಳ ಪ್ರಶ್ನೆಯಂತೆ. ಇಲ್ಲಿ ಗೋಕಾಕದ ಶ್ರೀ. ಶಾರದಾ ಸಂಗೀತ ನಾಟಕ ಮಂಡಲಿಯವರು ಒಂದು ತಿಂಗಳಿಂದ ತಮ್ಮ ನಾಟಕಗಳಿಂದ ಜನರನ್ನು ಆನಂದಗೊಳಿಸುತ್ತಿರುವರು. ಅಕ್ಕ ಮಹದೇವಿ ಎಂಬ ನಾಟಕವು ಸ್ತ್ರೀಯರಿಗೆ ಬೋಧಪ್ರದವಾಗಿದೆ. ಹಳ್ಳಿಯಲ್ಲಿಯ ಜನರಿಗೆ ಕೂಳಿನ ಚಿಂತೆಯಾದರೆ ದೊಡ್ಡ ಊರುಗಳಲ್ಲಿ ನಾಟಕ ಸಿನೇಮಾಗಳ ಚಿಂತೆ.

ಪ್ರ. ಜ. ಬುರ್ಲಿ.

## ಜಗತ್ತಿನ ಕ್ರಾಂತಿ.

ಪಂಡಿತ ಜವಾಹರಲಾಲ ನೆಹರುರವರು ಗೌಹತ್ತಿಯಲ್ಲಿ "ಕಾಟನ್ ಕಾಲೇಜ್ ಸೊಸೈಟಿ" ಮಾನಪತ್ರಕ್ಕೆ ಉತ್ತರವಾಗಿ ಮಾಡಿದ ಭಾಷಣದಲ್ಲಿ ಹೀಗೆ ಹೇಳಿದರು—

"ಯಾರಿಗೆ ಈಗ ಕ್ರಾಂತಿಯು ಇಷ್ಟವಾಗಿ ತೋರುವುದಿಲ್ಲವೋ ಅವರು ತಾವು ಈ ಕಾಲದಲ್ಲಿ ಹುಟ್ಟಿದ್ದೇ ತಪ್ಪಾಯಿತೆಂದು ತಿಳಿಯಬೇಕು. ಏಕೆಂದರೆ, ಕ್ಷಣಾರ್ಧದಲ್ಲಿಯೇ ಜಗತ್ತಿನ ಸ್ಥಿತಿಯೇ ಬೇರೆಯಾಗುವಂತಹ ಭೂಕಂಪನಕ್ಕೆ ಒಳಗಾಗದೆ ಯಾರೂ ಉಳಿದುಕೊಳ್ಳುವುದೇ ಶಕ್ಯವಿಲ್ಲ.

ಈಗ ಜಗತ್ತಿನಲ್ಲೆಲ್ಲಾ ಕಡೆಗೂ ಬದಲಾವಣೆಯಾಗುತ್ತಾ ಇದೆ. ಹಿಂದಿ ವಿದ್ಯಾರ್ಥಿಗಳೂ ಇದಕ್ಕೆ ಸಿದ್ಧರಾಗಿಯೇ ಇರಬೇಕು. ನಮ್ಮ ಶಕ್ತಿಯಲ್ಲಿಯೇ ಜಗತ್ತಿನ ಭವಿತವ್ಯವು ಅವಲಂಬಿಸಿದೆಯೆಂದು ಒಕ್ಕಲಿಗರು ತಿಳಿದುಕೊಂಡಿದ್ದಾರೆ. ಆದರೆ ಸುಶಿಕ್ಷಿತ ವರ್ಗದಲ್ಲಿ ಈ ಶಕ್ತಿಯ ಕಲ್ಪನೆ ಇನ್ನೂ ಬಂದಿಲ್ಲ. ಏಕೆಂದರೆ, ಪರಕೀಯರ ಪ್ರಭುತ್ವದಿಂದ ಅವರ ಅಂತಃಕರಣವು ಕಮರಿ ಹೋಗಿದೆ."

---

## ಹೊಸ ಅಂಚೆ ಟಿಕೀಟುಗಳು.

ಒಂದು ಬಿಲ್ಲಿಯಿಂದ ೨೫ ರೂ. ಗಳ ಕಿಮ್ಮತ್ತಿನ ಬೇರೆ ಬೇರೆ ಹೊಸ ಅಂಚೆ ಟಿಕೀಟುಗಳು ಡಿಶಂಬರ ೧೫ ನೆಯ ತಾರೀಖಿನಿಂದ ಎಲ್ಲಾ ಬ್ರಿಟಿಶ್ ಅಂಚೆಕಟ್ಟೆಗಳಲ್ಲಿಯೂ ದೊರೆಯುವವು. ಒಂದು ಬಿಲ್ಲಿಯಿಂದ ಒಂದು ರೂಪಾಯಿ ವರೆಗಿನ ಟಿಕೀಟುಗಳು ಮಾತ್ರ ಎಲ್ಲಾ ಅಂಚೆಕಟ್ಟೆಗಳಲ್ಲಿ ದೊರೆಯುತ್ತವೆ. ಅದಕ್ಕಿಂತ ಹೆಚ್ಚಿನ ೨೫ ರೂ. ಗಳ ವರೆಗಿನ ಕಿಮ್ಮತ್ತಿನ ಟಿಕೀಟುಗಳು ಮಾತ್ರ ದೊಡ್ಡ ದೊಡ್ಡ ಸ್ಥಳಗಳಲ್ಲಿಯ ಅಂಚೆಕಟ್ಟೆಗಳಲ್ಲಿ ದೊರೆಯುವವು.

---

### ಸರಕಾರಿ ಅಧಿಕಾರಿಗಳ
## ಸಂಬಳದಲ್ಲಿ ಕಡಿತ.

ಮುಂಬೈ ಸರಕಾರದವರು ಸರಕಾರಿ ಅಧಿಕಾರಿಗಳ ಸಂಬಳದಲ್ಲಿ ಕಡಿತವನ್ನು ಮಾಡಬೇಕೆಂದು ಗೊತ್ತುಮಾಡಿರುವುದಾಗಿ ಪ್ರಕಟವಾಗಿದೆ. ಕಾಂಗ್ರೆಸ್ ಮಂತ್ರಿಮಂಡಲವು ಮಾಡಿದ ಕಡಿತದ ಯೋಜನೆಯು ಈ ಕೆಳಗಿನಂತಿದೆ—

ಮುಂಬೈ ಸರಕಾರವು ಸರಕಾರಿ ಅಧಿಕಾರಿಗಳಿಗಾಗಿ ವರುಷಕ್ಕೆ ೪॥ ಕೋಟಿ ರೂ. ಗಳನ್ನು ಕೊಡಬೇಕಾಗುತ್ತದೆ. ಈ ಸಂಬಳದಲ್ಲಿ ಮೇಲಾಧಿಕಾರಿಗಳ ೫೦-೬೦ ಲಕ್ಷ ರೂ. ಗಳ ಸಂಬಳಕ್ಕೆ ಮಂತ್ರಿಮಂಡಲವು ಕೈಹಚ್ಚಲು ಬರುವಂತಿಲ್ಲ. ಉಳಿದ ಸಾಧಾರಣ ೪ ಕೋಟಿ ರೂ. ಸಂಬಳದಲ್ಲಿ ತಿಂಗಳಿಗೆ ಒಂದು ನೂರು ರೂ. ಗಳಿಗಿಂತ ಕಡಿಮೆ ಸಂಬಳವುಳ್ಳವರ ಸಂಖ್ಯೆಯೇ ಅತ್ಯಧಿಕ. ಅವರ ಸಂಬಳವನ್ನು ಕಡಿಮೆ ಮಾಡಬಾರದೆಂದೇ ಮಂತ್ರಿಮಂಡಲವು ಯೋಚಿಸಿದೆ.

೧೧ ರೂ. ಇಂದ ೫೦೦ ರೂ. ವರೆಗೆ ತಿಂಗಳ ಸಂಬಳವುಳ್ಳವರಲ್ಲಿ ೧೦೦ ಕ್ಕೆ ೧೦ ರಂತೆ, ೫೦೦ ರಿಂದ ೧೦೦೦ ರೂ ಸಂಬಳವುಳ್ಳವರಿಗೆ ೧೦೦ ಕ್ಕೆ ೧೫ ರಂತೆ, ೧೦೦೦ ರೂ. ಗಿಂತ ಹೆಚ್ಚಿಗೆ ಸಂಬಳವುಳ್ಳವರಿಗೆ ೧೦೦ ಕ್ಕೆ ೨೫ ರಂತೆ ಕಡಿತವನ್ನು ಮಾಡಬೇಕು.

## ದುಃಖಕಾರಕ ನಿಧನ.

ನಿಜಾಮ ಇಲಾಖಾ ಪೈಕಿ ಗುಲಬರ್ಗಾ ಜಿಲ್ಲೆಗೆ ಸೇರಿದ ಚಿತಾಪುರ ಗ್ರಾಮದಲ್ಲಿ ಇದೇ ಕಾರ್ತಿಕ ಬ॥ ೫ ಸೋಮವಾರ ಅಂದರೆ ತಾ. ೨೨-೧೧-೩೭ ನೇ ದಿವಸ ಮಧ್ಯಾನ್ಹ ೨ ಗಂಟೆಗೆ ರಾ॥ ರಾ॥ ಶ್ರೀಯುತ ನಾಗಶೆಟ್ಟಿ ಪಾಟೀಲ ಇವರು ಸ್ವರ್ಗಸ್ಥರಾದರೆಂದು ತಿಳಿಸಲು ಬಹಳೇ ವಿಷಾದವೆನಿಸುತ್ತದೆ. ಶ್ರೀಯುತ ಪಾಟೀಲ ಇವರು ಮರಣದ ವೇಳೆಯಲ್ಲಿ ೩೨ ಅಥವಾ ೩೩ ವರುಷದವರಿದ್ದರು. ಇವರು ದೊಡ್ಡ ಮನೆತನಸ್ಥರೂ ಸಭ್ಯಗೃಹಸ್ಥರೂ ಶಾಂತಚಿತ್ತರೂ ಉದಾರ ಹೃದಯದವರೂ ಆಗಿ ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದೆಂಬ ಆರ್ಯೋಕ್ತಿಗನುಸರಿಸಿ ಕೀರ್ತಿಸಂಪನ್ನರಾಗಿ ಹೋದರು. ಇದಲ್ಲದೆ ಇವರಿಗೆ ಉರ್ದು, ಮರಾಠಿ, ಕನ್ನಡ ಈ ಮೂರು ವಿದ್ಯೆಗಳು ಬರುತ್ತಿದ್ದವು. ಕಾರಣ ಇದೇ ಗ್ರಾಮದ ಮುನಸಿಪಾಲ್ಟಿ ಕಚೇರಿಯಲ್ಲಿ ಆದಾರೋಗಾ ಕೆಲಸವನ್ನು ಮಾಡುತ್ತಿದ್ದರು. ಇದೇ ಜಹಾಗೀರಿಯ ನವಾಬ ಸಾಹೇಬರ ಕಡೆಯಿಂದ ತಿಂಗಳಿಗೆ ೧೫ ರೂ. ದೊರೆಯುತ್ತಿದ್ದವು. ಈ ತರದ ಅಧಿಕಾರ ಕೈಯಲ್ಲಿದ್ದರೂ ಯಾರಿಗೂ ಯಾವ ರೀತಿಯಿಂದಲೂ ತ್ರಾಸ ಮಾಡದೆ ಹಿಂದು-ಮುಸಲ್ಮಾನ್‌ವೆಂಬ ಭೇದಭಾವನೆ ಇಲ್ಲದೆ ಸಜ್ಜನರು ಒಪ್ಪುವಂತೆ ಕೆಲಸವನ್ನು ಮಾಡಿದರು. ಅಂತೇ ಇವರ ಅಂತ್ಯಕಾಲದಲ್ಲಿ ಅನೇಕ ಬಡ ಜನರು ಇವರಿಂದಾದ ಉಪಕಾರಗಳನ್ನು ನೆನೆಸಿದರು. ಅಳುವ ಧ್ವನಿಯು ಎಲ್ಲ ಕಡೆಗೂ ವ್ಯಾಪಿಸಿಬಿಟ್ಟಿತ್ತು. ಸರ್ವ ಮತದವರ ನೇತ್ರಗಳು ದುಃಖಾಶೃಗಳಿಂದ ತುಂಬಿದ್ದವು. ಪಟ್ಟಣದ ಯಾವ ಭಾಗದಲ್ಲಿ ನೋಡಿದರೂ ದುಃಖಧ್ವನಿ ವಿನಹ ಬೇರೊಂದು ಕೇಳಿಸುತ್ತಿದ್ದಿಲ್ಲ.

ಪಾಟೀಲರ ದುಃಖ ಪ್ರದರ್ಶನಕ್ಕಾಗಿ ಬಜಾರ ಗಿರಣಿ ಮುಂತಾದ ಎಲ್ಲ ಕಾರ್ಯಾಲಯಗಳು ಬಂದಾಗಿಡಲ್ಪಟ್ಟಿದ್ದವು. ಇವರು ಎಲ್ಲರಿಗೂ ಪ್ರೇಮಿಗಳಾಗಿ ನಡೆದ ಮೂಲಕ ಸ್ಮಶಾನಯಾತ್ರೆಗೆ ೩-೪ ಸಾವಿರ ಜನರು ಸೇರಿದ್ದರು. ಅಂತೇ ನೋಡುವವರಿಗೆ ಇದೇನು ಉತ್ಸವವೋ ಅಥವಾ ಯಾವದೇ ದೇವರ ತೇರೋ ಎನ್ನುವಂತೆ ತೋರಿತ್ತು. ಈ ಪ್ರಕಾರ ದ್ವಾರಗಾಯಯನ್ನು ದೂರದಲ್ಲೊಯ್ದು ದೇವನು ಎಲ್ಲರಿಗೂ ದುಃಖಸಾಗರದಲ್ಲಿ ಮುಳುಗಿಸಿಬಿಟ್ಟನು. ಆ ಸಮಯಕ್ಕೆ ಮನೆಯವರಿಗಾದ ದುಃಖವನ್ನು ವರ್ಣನೆ ಮಾಡಲಿಕ್ಕೆ ನನ್ನ ಲೇಖಣಿಗೆ ಸಾಧ್ಯವಿಲ್ಲವು. ಮೃತಸ್ಥರ ಆತ್ಮಕ್ಕೆ ಶಾಂತಿಯನ್ನೀಯಲೆಂದು ಪರಮಾತ್ಮನಲ್ಲಿ ಪ್ರಾರ್ಥಿಸುತ್ತೇವೆ.

ತರುಣ ಸಂಘ
ಚಿತಾಪುರ.

---

## ಶ್ರೀ ವಿದ್ಯಾರಣ್ಯ ಸಮಿತಿ ಬೆಳಗಾವ.

—ಖೈರಬಾಗ ಸಂಸ್ಥಾನಾಧಿಪತಿಗಳಾದ ವೀರೇಂದ್ರಸಿಂಗ ಬಹದ್ದೂರರವರು ಶುದ್ಧಖಾದಿಯನ್ನೇ ಧರಿಸಲಾರಂಭಿಸಿದ್ದಾರೆ. ತಮ್ಮ ಸಂಸ್ಥಾನದ ಎಲ್ಲ ಸರಕಾರಿ ನೌಕರರೂ ಖಾದಿಯನ್ನೇ ಉಪಯೋಗಿಸಬೇಕಾಗಿ ಆಗ್ರಹಪೂರ್ವಕ ಸೂಚಿಸಿದ್ದಾರೆ.

—ಕೀರ್ತಿಶೇಷ ಜಗದೀಶಚಂದ್ರ ಬೋಸರು ಕಲಕತ್ತಾ ವಿದ್ಯಾಪೀಠಕ್ಕೆ ೧ ಲಕ್ಷ ರೂ. ಗಳನ್ನೂ ಪ್ರಾಥಮಿಕ ಶಿಕ್ಷಣ ಪ್ರಸಾರಕ್ಕೆ ೧ ಲಕ್ಷ ರೂ. ಗಳನ್ನೂ ಪ್ರೆಸಿಡೆನ್ಸಿ ಕಾಲೇಜಿಗೆ ೫೦ ಸಾವಿರ ರೂ. ಗಳನ್ನೂ ಕೊಟ್ಟಿದ್ದಾರೆ.

—ಬನಾರಸ ಹಿಂದು ವಿಶ್ವವಿದ್ಯಾಲಯಕ್ಕೆ ಹತ್ತು ಕೋಟಿ ರೂ. ಗಳು ಬೇಕಾಗಿವೆಯೆಂದು ಪಂಡಿತ ಮಾಲವೀಜಿಯವರು ವಿದ್ಯಾಲಯದ ವಾರ್ಷಿಕ ಸಭೆಯಲ್ಲಿ ಹೇಳಿದರು.

—ಸೊಲ್ಲಾಪುರ ನಗರ ಕಾಂಗ್ರೆಸ್ ಕಮಿಟಿಯ ಕಾರ್ಯದರ್ಶಿ ಶ್ರೀ. ಅಬ್ದುಲ್ ಕರಿಮ ಲುಂಜೆ ಇವರು ಒಂದು ಪ್ರಕಟನೆಯನ್ನು ಹೊರಡಿಸಿ ಕಾಂಗ್ರೆಸ್ ಮಂತ್ರಿಮಂಡಲವು ೧೮೪೯ನೆಯ ನಿಯಮವನ್ನು ಅಲ್ಲಿ ಉಪಯೋಗಿಸಿದುದು ಅನುಚಿತವೆಂದು ಮಂತ್ರಿಮಂಡಲದ ಈ ಕೃತಿಯನ್ನು ನಿಷೇಧಿಸಿದ್ದಾರೆ.

—ಅಹಮ್ಮದನಗರ ಜಿಲ್ಲಾ ನೆವಾಸೆ ತಾಲೂಕ ಒಕ್ಕಲಿಗರ ಸಭೆಯು ಶ್ರೀ. ಶಾಮರಾವ ಪರೂಳಕರ ಎಂ. ಎಲ್. ಎ. ಇವರ ಅಧ್ಯಕ್ಷತೆಯಲ್ಲಿ ಜರುಗಿತು. ಅಧ್ಯಕ್ಷರು ಕಾಂಗ್ರೆಸ್ ಮಂತ್ರಿಮಂಡಲವು ಒಕ್ಕಲಿಗರ ವಿಷಯದಲ್ಲಿಟ್ಟುಕೊಂಡ ಧೋರಣವನ್ನು ನಿಷೇಧಿಸಿದರು.

—ಮೈಸೂರು ಜಿಲ್ಲಾ ಕಾಂಗ್ರೆಸ್ ಕಮಿಟಿ ಅಧ್ಯಕ್ಷರಾದ ಶ್ರೀ. ರಂಗರಾಮಯ್ಯನವರು ರಾಜದ್ರೋಹಕರವಾದ ಭಾಷಣ ಮಾಡಿದರೆಂಬ ಆರೋಪದಿಂದ ಮೈಸೂರು ಸರಕಾರದವರು ಅವರನ್ನು ಸೆರೆಹಿಡಿದು ವಿಚಾರಣೆಗೆ ಗುರಿ ಮಾಡಿದ್ದಾರೆ.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣಮಂದಿರದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೧೩ ನೆಯ ಡಿಶಂಬರ್ ೧೯೩೭. | ಸಂಚಿಕೆ೧೩

ಜನಸೇವೆಯೇ ದೇವರಸೇವೆ.

## ಚೀನದ ರಾಜಧಾನಿಯಲ್ಲಿ ಜಪಾನಿ ಸೈನ್ಯ!

ಚೀನದ ರಾಜಧಾನಿಯಾದ ನಾಂಕಿಂಗ್ ಪಟ್ಟಣದಲ್ಲಿ
ಜಪಾನಿ ಸೈನ್ಯವು ತಾ. ೧೦ ನೆಯ ದಿನ
ಪ್ರವೇಶ ಮಾಡಿತು.

ಚೀನದ ರಾಜಧಾನಿಯಲ್ಲಿ ಘನಘೋರ ಯುದ್ಧ
ಜರುಗಿ ಅದು ಜಪಾನಿಗಳ ಕೈಸೇರುವುದೆಂದೂ
ಚೀನದ ಅರ್ಧ ರಾಜ್ಯ ಜಪಾನಿನ ಪಾಲಾಗುವುದೆಂದೂ
ಊಹಿಸಲಾಗಿದೆ.

ಮಹಾತ್ಮಾ ಗಾಂಧಿಯವರು
ಮುಂಬೈ ಹತ್ತಿರ ಜುಹುದಲ್ಲಿ ವಾಸವಾಗಿದ್ದಾರೆ.
ಅಲ್ಲಿಯ ಹವೆಯು ಇವರಿಗೆ
ಆರೋಗ್ಯಕರವಾಗಿದೆ.

ನಾಗಪುರ ವಿದ್ಯಾಪೀಠದವರು ಗಾಂಧೀಜಿಯವರಿಗೆ
ಎಲ್ ಎಲ್. ಡಿ. ಪದವಿಯನ್ನು ಅರ್ಪಿಸಿದರು.

ದೇಹವೇ ದೇವಾಲಯ.



# ಶರಣ ಸಂದೇಶ

# THE SHARANA SANDESHA.




ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೧೩ನೆಯ ಡಿಶಂಬರ್ ೧೯೩೭. | ಸಂಚಿಕೆ ೧೭


## ಮಹತ್ವದ ಸುದ್ದಿಗಳು.

—ಪ್ಯಾಲಿಸ್ಟಾಯಿನದಲ್ಲಿ ಅರಬರು ದೊಂಬಿಯನ್ನು ಪ್ರಾರಂಭಿಸಿದಂದಿನಿಂದ ಈ ವರೆಗೆ ೮೦೦ ಜನ ಅರಬರನ್ನು ಬ್ರಿಟಿಶರು ಜೈಲಿನಲ್ಲಿ ಹಾಕಿಟ್ಟದ್ದಾರಂತೆ.

—ಮಿ. ಟಿಲಮನ್ ಎಂಬುವ ಇಂಗ್ಲಿಷ್ ಪ್ರವಾಸಿಯ ನೇತೃತ್ವದಲ್ಲಿ ೭ ಜನ ಬ್ರಿಟಿಶ್ ಸಾಹಸಿಗಳು ಹಿಮಾಲಯ ಪರ್ವತಾರೋಹಣ ಮಾಡಲು ಇಷ್ಟರಲ್ಲೇ ಹೊರಡುವರು.

—ಶ್ರೀ. ಸುಭಾಷಚಂದ್ರ ಬೋಸರನ್ನು ಲಂಡನ್ನಿಗೆ ಕರೆಯಿಸಿ ಪಾರ್ಲಮೆಂಟ ಸಭಾಸದರ ಮುಂದೆ ಅವರ ಭಾಷಣವನ್ನು ಮಾಡಿಸುವವರಿದ್ದಾರೆ. ಶ್ರೀ. ಬೋಸರ ಆತ್ಮ ಚರಿತ್ರೆಯು ವ್ಹಿಯನ್ನಾದಲ್ಲಿ ಅಚ್ಚಾಗಿ ಇಷ್ಟರಲ್ಲೇ ಪ್ರಕಟವಾಗುವುದಿದೆ.

—ಮುಂಬೈ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಪರವಾಗಿ ಹಿಂದು ಮುಸಲ್ಮಾನ್ ಮೊದಲಾದ ಎಲ್ಲ ಜಾತಿಯವರ ಒಂದು ಸಹಭೋಜನ ಸಮಾರಂಭವು ಮುಂಬೈಯಲ್ಲಿ ನಡೆಯಿತು.

—ಎಲ್ಲಾ ಪ್ರಾಂತಿಕ ಶಾಸನ ಮಂಡಲಗಳ ಅಧ್ಯಕ್ಷರ ಪರಿಷತ್ತು ಬರುವ ಜನವರಿ ೬ ನೆಯ ತಾರೀಖಿನಿಂದ ಮೂರು ದಿನ ದಿಲ್ಲಿಯಲ್ಲಿ ಕೂಡುವುದಿದೆ.

—ಅಹಮ್ಮದನಗರ ಜಿಲ್ಲಾ ಲೋಕಲ್ ಬೋರ್ಡಿನವರು ೧೭೫೦ ಪ್ರಾಥಮಿಕ ಶಾಲೆಗಳನ್ನು ಹೊಸದಾಗಿ ಪ್ರಾರಂಭಿಸಲು ೧೭ ಸಾವಿರ ರೂ. ಗಳನ್ನು ವೆಚ್ಚಮಾಡುವವರಿದ್ದಾರೆ.

—ಬೆಳಗಾವಿಯಲ್ಲಿ ಕೂಡಲಿರುವ ಒಕ್ಕಲತನದ ಪ್ರದರ್ಶನದ ಕಾಲಕ್ಕೆ ಬೆಳಗಾವಿಗೆ ಆಗಮಿಸುವ ಗವ್ಹರ್ನರ್ ಸರ್. ಲಮ್ಲೆಯವರಿಗೂ ಕಾಂಗ್ರೆಸ್ ಮಂತ್ರಿಗಳಿಗೂ ಬೆಳಗಾವ ಜಿಲ್ಲಾ ಲೋಕಲ್ ಬೋರ್ಡಿನಿಂದ ಮಾನಪತ್ರವನ್ನು ಕೊಡಬೇಕೆಂದು ಕಾಂಗ್ರೆಸ್ ಸಭಾಸದರ ಒಪ್ಪಿಗೆ ಸಹಿತ ಒಂದು ನಿರ್ಣಯವಾಗಿದೆ.

—ನಾಗಪುರ ಹಿಂದು ಸಭೆಯ ಸೆಕ್ರೆಟರಿಗಳಾದ ಶ್ರೀ. ಜಗನ್ನಾಥ ಪ್ರಸಾದ ವರ್ಮ ಇವರಿಗೆ ಜಾತಿಜಾತಿಗಳಲ್ಲಿ ಕಲಹವುಂಟಾಗುವಂತಹ ಯಾವ ಚಟುವಟಿಕೆಯಲ್ಲಿಯೂ ಸೇರಕೂಡದೆಂದು ಅಲ್ಲಿಯ ಜಿಲ್ಹಾಧಿಕಾರಿಗಳು ಅಪ್ಪಣೆಮಾಡಿದ್ದಾರೆ.

—ಮುಂಬೈ ಕಾರ್ಪೋರೇಶನ್ ಪರವಾಗಿ ತಾರೀಖು ೭ ನೆಯ ದಿವಸ ಮುಖ್ಯ ಮಂತ್ರಿಗಳಾದ ಶ್ರೀ. ಖೇರ ಮತ್ತು ಇತರ ಮಂತ್ರಿಗಳಿಗೆ ಮಾನಪತ್ರವನ್ನು ಅರ್ಪಿಸಿದರು.

—ಮಧ್ಯಪ್ರಾಂತದ ಕೆಲವು ಭಾಗಗಳಲ್ಲಿ ಬರುವ ಜನವರಿ ೧ ನೆಯ ತಾರೀಖಿನಿಂದ ಮದ್ಯಪಾನ ಪ್ರತಿಬಂಧದ ಶಾಸನವು ಆಚರಣೆಯಲ್ಲಿ ಬರುವುದು.

—ಉರಲ್ ಭಾಗದ ಒಕ್ಕಲತನವನ್ನು ಉದ್ದೇಶಪೂರ್ವಕವಾಗಿ ಹಾಳುಮಾಡಿದರೆಂಬ ಅಪರಾಧಕ್ಕಾಗಿ ರಶಿಯಾ ಸರಕಾರವು ಎಂಟು ಪ್ರಮುಖ ಅಧಿಕಾರಿಗಳಿಗೆ ಮರಣ ದಂಡನೆಯ ಶಿಕ್ಷೆಯನ್ನು ವಿಧಿಸಿತು.

—ಮುಂಬೈ ಶಾಸನ ಮಂಡಲದಲ್ಲಿಯ ಕಾಂಗ್ರೆಸ್ ಪಕ್ಷದ ಕಾರ್ಯದರ್ಶಿಗಳಾದ ಶ್ರೀ. ಕೆ. ಶ್ರೀನಿವಾಸನ್ ಇವರು ತಮಗೆ ಬಹು ಜನರು ವಿರೋಧಿಗಳಿರುವುದರಿಂದ ತಾವು ಈ ಕಾರ್ಯವನ್ನು ವಹಿಸುವುದಿಲ್ಲವೆಂದು ಆ ಕಾರ್ಯದಿಂದ ನಿವೃತ್ತರಾಗಿದ್ದಾರೆ.

—ಮದ್ರಾಸ್ ಸರಕಾರದ ಮುಖ್ಯ ಮಂತ್ರಿಗಳಾದ ಶ್ರೀ. ರಾಜಗೋಪಾಲಾಚಾರ್ಯರು ಈ ತಿಂಗಳಲ್ಲಿ ಬೆಂಗಳೂರಿಗೆ ಮೈಸೂರು ಸರಕಾರದ ಅತಿಥಿಗಳಾಗಿ ಬರುವವರಿದ್ದಾರೆ. ಮೈಸೂರು ಸರಕಾರವು ಕಾಂಗ್ರೆಸ್ಸಿನ ವಿರುದ್ಧವಾಗಿ ದಬ್ಬಾಳಿಕೆಯನ್ನು ನಡೆಸಿರುವುದರಿಂದ ಸಂಸ್ಥಾನದ ಆಮಂತ್ರಣವನ್ನು ಮುಖ್ಯ ಮಂತ್ರಿಗಳು ಸ್ವೀಕರಿಸಬಾರದಾಗಿತ್ತೆಂದು ಕೆಲವರು ಹೇಳುತ್ತಿದ್ದಾರೆ.

—ಸಂಯುಕ್ತ ಪ್ರಾಂತ ಸರಕಾರವು ಸರಕಾರಿ ಅಧಿಕಾರಿಗಳು ಜಾತಿವಿಶಿಷ್ಟ ಪಕ್ಷಪಾತದ ಚಟುವಟಿಕೆಗಳಲ್ಲಿ ಭಾಗವಹಿಸಬಾರದಾಗಿ ಅಧಿಕಾರಿಗಳಿಗೆ ಎಚ್ಚರಿಕೆ ಕೊಟ್ಟಿದೆ.

# ಸ್ವರಾಜ್ಯ ಯಾರಿಗೆ?

### (ಬ್ಯಾ. ಸಾವರಕರರ ಭಾಷಣ.)

ಕಳೆದ ೨೭ ನೆಯ ತಾರೀಖಿನ ದಿವಸ ಮಧ್ಯ ಪ್ರಾಂತೀಯ ಹಿಂದು ಮಹಾಸಭೆಯ ನಾಲ್ಕನೆಯ ಅಧಿವೇಶನವು ಅಕೋಲಾ ಪಟ್ಟಣದಲ್ಲಿ ಸ್ವಾತಂತ್ರ್ಯವೀರ ಸಾವರಕರರ ಅಧ್ಯಕ್ಷತೆಯಲ್ಲಿ ಕೂಡಿದ್ದಿತು. ಆ ಮಹಾಸಭೆಯ ಉಪಕ್ರಮ ಸಮಾರಂಭದ ಕಾಲದಲ್ಲಿ ಶ್ರೀ. ಅಣ್ಣಾರಾವ ಭೋಪಟಕರ ಇವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

### ಶ್ರೀ. ಭೋಪಟಕರರ ಭಾಷಣ.

"ಹಿಂದು ಮಹಾಸಭೆಯು ಅರಾಷ್ಟ್ರೀಯವೆಂದು ಅನೇಕ ವಿರೋಧಿಗಳು ಅದನ್ನು ಆಕ್ಷೇಪಿಸುತ್ತಿದ್ದಾರೆ. ಇದು ಮಾನ್ಯರಾದ ಪಂಡಿತ ಮಾಲವೀಜಿ, ಲಾಲಾ ಲಜಪತರಾಯರಂತಹ ರಾಷ್ಟ್ರಭಕ್ತರಿಂದಲೇ ಉಂಟಾಗಿ ಅಭಿವೃದ್ಧಿಯನ್ನು ಹೊಂದಿದೆ.

೧೯೩೩ ನೆಯ ಇಸವಿಯ ವರೆಗೆ ಹಿಂದು ಮಹಾಸಭೆಯು ರಾಜಕೀಯ ವಿಷಯದಲ್ಲಿ ಪ್ರತ್ಯೇಕವಾಗಿ ಲಕ್ಷ್ಯಕೊಡುತ್ತಿರಲಿಲ್ಲ. ಏಕೆಂದರೆ, ರಾಷ್ಟ್ರೀಯತ್ವ ಮತ್ತು ಜನಾಭಿಪ್ರಾಯಗಳಂತೆಯೇ ರಾಜಕಾರಣವನ್ನು ಕಾಂಗ್ರೆಸ್ಸು ಆ ವರೆಗೂ ನಡೆಸುತ್ತಿದ್ದಿತು. ಇತ್ತಲಾಗಿ ಅದು ಈ ಎರಡೂ ಮಾರ್ಗಗಳನ್ನು ಬಿಟ್ಟದ್ದರಿಂದ ಹಿಂದು ಮಹಾಸಭೆಯು ರಾಜಕಾರಣದಲ್ಲಿ ಪ್ರತ್ಯಕ್ಷ ಸೇರಬೇಕಾಯಿತು. ಈಗ ಬಹುಸಂಖ್ಯಾಕರಾದ ಹಿಂದುಗಳ ಹಕ್ಕು ಬಾಧ್ಯತೆಗಳನ್ನೆಲ್ಲಾ ನಾಶ ಮಾಡುವ ಒಳಸಂಚು ನಡೆದಿದೆ.

ಇಂಗ್ಲಿಷರಿಗೆ ಪ್ರತಿಯಾಗಿ ಮುಸಲ್ಮಾನರು ನಮ್ಮನ್ನು ಅಂಕಿತದಲ್ಲಿಟ್ಟುಕೊಳ್ಳುವರೆಂದು ಹಿಂದುಗಳಿಗೆ ಅನಿಸಹತ್ತಿದೆ. ಯಾರ ದೃಷ್ಟಿಯು ಹಿಂದುಸ್ಥಾನದ ಕಡೆಗಿರದೆ ಮಕ್ಕಾ ಮದಿನಾಗಳ ಕಡೆಗಿದೆಯೋ ಯಾರು ಚಂದ್ರ ಚಿನ್ಹಾಂಕಿತ ಹಸರು ನಿಶಾನೆಯನ್ನು ಹಿಮಾಲಯದಿಂದ ಕನ್ಯಾ ಕುಮಾರಿ ವರೆಗೆ ಮೆರೆಯಿಸಬೇಕೆಂದು ಇಚ್ಛಿಸುತ್ತಿದ್ದಾರೆಯೋ ಅಂಥವರಿಗೆ ನೀವು ಅಂಕಿತರಾಗಿರುವಿರಾ? ಹೀಗಾದರೆ ಅದು ನಿಮಗೆ ಸ್ವರಾಜ್ಯವೆ?

ನಮ್ಮ ತಲೆಯ ಮೇಲಿದ್ದ ಇಂಗ್ಲಿಷರು ಇಳಿದು ಮುಸಲ್ಮಾನರು ಹತ್ತಿದರೆ ಅದು ಸುಧಾರಣೆಯೆ? ಈಗಿನ ಸುಧಾರಣೆಯು ಇದೇ ಪ್ರಕಾರದ್ದಾಗಿದೆ. ೩|| ಕೋಟಿ ಜನರ ಮುಸೋಲಿನಿ, ೮ ಕೋಟಿ ಜನರ ಹಿಟಲರ್ ಜಗತ್ತನ್ನೇ ನಡುಗಿಸುತ್ತಿರುವಾಗ ೨೫ ಕೋಟಿ ಹಿಂದುಗಳಿಗೆ ಸ್ವರಾಜ್ಯವನ್ನು ಸಂಪಾದಿಸುವ ಶಕ್ತಿಯಿಲ್ಲವೆ? ನಿಮ್ಮ ದೌರ್ಬಲ್ಯವನ್ನು ತೆಗೆದುಹಾಕಿ ಸಂಘಟಿತರಾಗಿರಿ. ಎಂದರೆ ನಿಜವಾದ ಸ್ವರಾಜ್ಯವು ಲಭಿಸುತ್ತದೆ."

### ಬ್ಯಾ. ಸಾವರಕರರ ಭಾಷಣ.

ಅನಂತರ ಅಧ್ಯಕ್ಷರಾದ ಸ್ವಾತಂತ್ರ್ಯವೀರ ಸಾವರಕರರು ತಮ್ಮ ಉಜ್ವಲ ಭಾಷಣದಲ್ಲಿ ಈ ಪ್ರಕಾರ ಹೇಳಿದರು—

"ಹಿಂದುಸ್ಥಾನಕ್ಕೆ ಸ್ವರಾಜ್ಯ ಬೇಕೆಂದು ಹೇಳುವುದರಲ್ಲಿ ಈಗ ಮಹತ್ವವೇನೂ ಇಲ್ಲ. ಸ್ವಾತಂತ್ರ್ಯವೇ ನಮ್ಮ ಮುಖ್ಯೋದ್ದೇಶವಾಗಿದೆಯೆಂದು ಈಗ ಸಾರಿ ಸಾರಿ ಹೇಳಿದ್ದಾಗಿದೆ. ಹಿಂದುಸ್ಥಾನದ ಸ್ವಾತಂತ್ರ್ಯ ಹೇಗಿರಬೇಕೆಂಬುದನ್ನೇ ನಾನು ಈಗ ಇಲ್ಲಿ ಪ್ರಸ್ತಾಪಿಸುತ್ತೇನೆ.

ಹಿಂದುಸ್ಥಾನಕ್ಕೆ ಪ್ರತಿಯಾಗಿ ಹಿಂದಿ ಸ್ಥಾನ, ಇಂಡಿಯಾ ಎಂದು ಹೇಳಿ "ಹಿಂದು" ಎಂಬುದನ್ನೇ ಅಳಿಸಿಬಿಡುವ ಪ್ರಯತ್ನ ನಡೆದಿದೆ. ಪಂಜಾಬ, ಬಲುಚಿಸ್ಥಾನ, ಸಿಂಧ, ಕಾಶ್ಮೀರ ಕೂಡಿಸಿ "ಪಾಕಿಸ್ಥಾನ" ಎಂದು ಹೇಳಬೇಕೆಂಬ ಪ್ರಯತ್ನವೂ ಸಾಗಿದೆ. ಇಷ್ಟಾದರೂ ನಾವು ಕಣ್ಣು ತೆರೆಯಬಾರದೆ?

### ನನ್ನ ಸ್ವರಾಜ್ಯ.

ನೀವು ಹಿಂದುಸ್ಥಾನದ ಸ್ವರಾಜ್ಯವೆಂದು ಹೇಳಿಕೊಳ್ಳಿರೆಂತಲೂ ಕೆಲವರು ತಿಳಿಸುತ್ತಿದ್ದಾರೆ. ಹಿಂದುಸ್ಥಾನವೆಂದರೆ ಈ ದೇಶದಲ್ಲಿರುವ ಮಣ್ಣು, ನೀರು, ಕಲ್ಲು, ಕಟ್ಟಿಗೆಗಳೆ? ಅವುಗಳ ರಾಜ್ಯವೇ ಸ್ವರಾಜ್ಯವೆ?

ಎಲ್ಲಿ ನನ್ನ ಸಂಸ್ಕೃತಿಯು ಉದಯವಾಗಿ, ಅಭಿವೃದ್ಧಿಯನ್ನು ಹೊಂದಿತೋ, ಎಲ್ಲಿ ನನ್ನ ಪೂರ್ವಜನರು ತಮ್ಮ ದಿವ್ಯ ಚರಿತ್ರೆಯನ್ನು ಪ್ರಕಾಶಗೊಳಿಸಿದರೋ, ಎಲ್ಲಿ ನನ್ನ ಸಾಹಿತ್ಯದ ಅಮೋಘ ಸಂಪತ್ತು ನಿರ್ಮಾಣವಾಯಿತೋ ಅಲ್ಲಿ ಅವುಗಳ ಸಂರಕ್ಷಣೆ ಮತ್ತು ಸಂವರ್ಧನೆಗಳು ಯಾತರಿಂದ ಸಂಭವಿಸುತ್ತವೆಯೋ ಅದಕ್ಕೇನೇ ನಾನು ಸ್ವರಾಜ್ಯವೆಂದು ಹೇಳುತ್ತೇನೆ. ಇದೇ ನನ್ನ ಸ್ವರಾಜ್ಯ. ಸ್ವದೇಶದ ಸ್ವರಾಜ್ಯವೆಂದರೆ ಸ್ವಜಾತಿಯ ಸ್ವರಾಜ್ಯವೆಂದೇ ನನ್ನ ಅಭಿಪ್ರಾಯ. ಈ ದೇಶವು ಯಾರ ಪುಣ್ಯಭೂಮಿ ಮತ್ತು ಪಿತೃಭೂಮಿಯಾಗಿದೆಯೋ ಆ ಎಲ್ಲ ಜೈನ, ಶೀಖ ಮೊದಲಾದವರು ನನ್ನ ಹಿಂದು ಜಾತಿಯವರೇ ಆಗಿದ್ದಾರೆ.

### ನಮ್ಮ ಸಂಸ್ಕೃತಿ.

ಇಂಗ್ಲಿಷ್ ಸಂಸ್ಕೃತಿ, ಜರ್ಮನ್ ಸಂಸ್ಕೃತಿ, ರಶಿಯನ್ ಸಂಸ್ಕೃತಿಯೆಂದು ಮಾತ್ರ ನಾವು ಹೇಳುತ್ತೇವೆ. ಅದೇ ಪ್ರಕಾರ ಹಿಂದು ಸಂಸ್ಕೃತಿಯೆಂದರೆ ಮಾತ್ರ ಅನೇಕರಿಗೆ ಅದರ ಅರ್ಥವೇ ಆಗುವುದಿಲ್ಲವಂತೆ! ಇತರ ಸಂಸ್ಕೃತಿಗಳಿಗಿರುವಂತೆಯೇ ನಮಗೂ ನಮ್ಮ ದೇಶ, ಧರ್ಮ, ಸಂಸ್ಕೃತಿ, ಭಾಷೆ, ವಾಙ್ಮಯ, ಇತಿಹಾಸ ಇವೆಲ್ಲವೂ ಇವೆ. ಇತರ ರಾಷ್ಟ್ರಗಳಿಗಿಂತ ನಮ್ಮ ರಾಷ್ಟ್ರದ ಇತಿಹಾಸ, ಸಾಹಿತ್ಯ, ಸಂಸ್ಕೃತಿಗಳು ಅತಿ ಪ್ರಾಚೀನವಾದವುಗಳಿವೆ. ಹೀಗಿದ್ದರೂ ಅನ್ಯ ರಾಷ್ಟ್ರಗಳ ಸಂಸ್ಕೃತಿ ಗೊತ್ತಾಗುತ್ತದಂತೆ. ನಮ್ಮ ಹಿಂದು ಸಂಸ್ಕೃತಿಯೇ ಅವರಿಗೆ ತಿಳಿಯುವುದಿಲ್ಲವಂತೆ!

ಯಾವ ಸ್ವಾತಂತ್ರ್ಯದಲ್ಲಿ, ಯಾವ ಸ್ವರಾಜ್ಯದಲ್ಲಿ, ಸ್ವಜಾತಿಯ ಘನತೆಯು ಉಳಿಯುತ್ತದೆಯೋ, ಸ್ವ ಸಂಸ್ಕೃತಿಯು ಸಂವರ್ಧನೆಯನ್ನು ಹೊಂದುತ್ತದೆಯೋ, ಅದೇ ನಮ್ಮ ಸ್ವಾತಂತ್ರ್ಯ. ಅದೇ ನಮ್ಮ ಸ್ವರಾಜ್ಯ. ಅವು ಅಳಿದುಹೋದ ಕೇವಲ ಭೌಗೋಲಿಕ ಸ್ವರಾಜ್ಯವು ಪ್ರೇತವತ್ ಸ್ವರಾಜ್ಯವೆಂದು ತಿಳಿಯಬೇಕು.

### ತೋರಿಕೆಯ ಐಕಮತ್ಯ.

೨೫ ವರ್ಷಗಳ ಹಿಂದೆ ಇಂಗ್ಲಿಷ್ ಅಧಿಕಾರದ ವಿರುದ್ಧವಾಗಿ ಪ್ರಚಾರಮಾಡುವುದು ನನ್ನ ಕರ್ತವ್ಯವೆಂದು ತಿಳಿದಿದ್ದೆನು. ಈಗ ಸ್ವರಾಜ್ಯದ ಹೆಸರಿನಿಂದ ನಮ್ಮ ಸಂಸ್ಕೃತಿ, ಭಾಷೆ, ಹಕ್ಕು ಬಾಧ್ಯತೆಗಳ ವಿಷಯದಲ್ಲಿ ನಡೆದಿರುವ ಆಕ್ರಮಣದ ವಿಚಾರವಾಗಿ ನಿಜಸ್ಥಿತಿಯನ್ನು ನಿಮಗೆ ತಿಳಿಸುವುದು ನನ್ನ ಕರ್ತವ್ಯವೆಂದು ತಿಳಿದಿದ್ದೇನೆ. ನೀವು ಕಣ್ಣು ತೆರೆದು ಈ ಸಂಗತಿಗಳ ಕಡೆಗೆ ನೋಡಿರಿ. ಇಲ್ಲದಿದ್ದರೆ ಎಲ್ಲವನ್ನೂ ಕಳೆದುಕೊಳ್ಳುವಿರಿ.

ಈಗ ಕೆಲವರು ಉನ್ಮತ್ತರಾಗಿ ಬಂಗಾಲದ ಹಿಂದುಗಳಿಗೆ ಪಾಠವನ್ನು ಕಲಿಸುತ್ತೇವೆಂದು ಹೇಳುತ್ತಿದ್ದಾರೆ. ಈಗ ಅವರು ಯಾವ ಸ್ಥಾನದಮೇಲೆ ಕುಳಿತಿದ್ದರಿಂದ ಉನ್ಮತ್ತರಾಗಿ ಹೀಗೆ ಹೇಳುತ್ತಿದ್ದಾರೆಯೋ ಆ ಸ್ಥಾನವು ಯಾರ ಸ್ವಾರ್ಥತ್ಯಾಗದಿಂದ ಅವರಿಗೆ ದೊರೆತಿದೆ? ಎಷ್ಟು ಮುಸಲ್ಮಾನರು ಅಂದಮಾನಕ್ಕೆ ಹೋಗಿದ್ದರು? ಎಷ್ಟು ಜನ ಮುಸಲ್ಮಾನ್ ತರುಣರು ಕಾರಾಗೃಹದಲ್ಲಿ ವಾಸವಾಗಿದ್ದರು? ಹಿಂದುಗಳ ಆತ್ಮಯಜ್ಞದಿಂದಲೇ ಈ ಗವರ್ನ್ಮೆಂಟಿಯ ಗಾದಿಯು ಅವರಿಗೆ ದೊರೆತಿದೆ. ಈಗ ಸ್ಪಷ್ಟ ಮಾತಾಡುವ

ಕಾಲವೇ ಬಂದುದರಿಂದ ನಾನಾದರೂ ಮಹಾರಾಷ್ಟ್ರದಲ್ಲಿ ಮುಸಲ್ಮಾನರಿಗೆ ಸರಿಯಾದ ಪಾಠವನ್ನೇ ಕಲಿಸುವೆನೆಂದು ಹೇಳಬೇಕಾಗಿದೆ.

ಹೇಗೆ ಇಂಗ್ಲಿಷರಿಗೆ ಇಂಗ್ಲಿಷ್ ಜಾತಿಯು, ಜರ್ಮನ್‌ರಿಗೆ ಜರ್ಮನ್ ಜಾತಿಯು, ಪ್ರಿಯವಾಗಿದೆಯೋ ಹಾಗೆಯೇ ನನಗೆ ಹಿಂದು ಜಾತಿಯು ಪ್ರಿಯವಾಗಿದೆ. ನೀವು ಇದಕ್ಕೆ ನಾನು ಜಾತಿನಿಷ್ಠನೆಂದು ಹೇಳಿದರೆ ನನಗೇನೂ ವಿಷಾದವಾಗುವುದಿಲ್ಲ.

ನಾವು ಪಾರ್ಶಿಗಳ ಸಂಗಡ ಅಥವಾ ಯಹೂದಿಗಳ ಸಂಗಡ ಇಲ್ಲವೆ ಕ್ರಿಸ್ತರ ಸಂಗಡ ಮಾತನಾಡತಕ್ಕದ್ದೇನೂ ಇಲ್ಲ. ಏಕೆಂದರೆ ಅವರು ತಮ್ಮ ತಮ್ಮ ಕ್ಷೇತ್ರದಲ್ಲಿಯೇ ಕಾರ್ಯಮಾಡುತ್ತಿದ್ದಾರೆ. ಇಷ್ಟೇ ಅಲ್ಲ; ಮಹರ್ಷಿ ದಾದಾಭಾಯಿ, ಮಡಮ್ ಕಾಮಾ ಇವರು ನಮಗೆ ಸಹಾಯವನ್ನೇ ಮಾಡಿದ್ದಾರೆ.

ಆದರೆ ಮುಸಲ್ಮಾನ್ ಜಾತಿಯು ಮಾತ್ರ ತಾನು ಅಲ್ಪಸಂಖ್ಯಾಕವಾಗಿದ್ದರೂ ಬಹು ಸಂಖ್ಯಾಕವಾದ ಹಿಂದು ಜಾತಿಯ ಮೇಲೆ ಆಕ್ರಮಣ ನಡೆಯಿಸಿ ಹಿಂದು ಸಂಸ್ಕೃತಿಯ ನಾಶಕ್ಕೆ ಪ್ರಯತ್ನಿಸುತ್ತಿರುವುದರಿಂದ ಅದು ನಮಗೆ ಸಹನವಾಗುತ್ತಾ ಇಲ್ಲ.

ಮುಸಲ್ಮಾನರಿಗೆ ನಮ್ಮ ಹೆಸರು ಬೇಕಾಗಿಲ್ಲ, ನಮ್ಮ ಸಂಸ್ಕೃತಿ ಬೇಕಾಗಿಲ್ಲ, ನಾವು ಬಹು ಸಂಖ್ಯಾಕರಾಗಿರುವುದೂ ಬೇಕಾಗಿಲ್ಲ ಅದಕ್ಕಾಗಿಯೇ ನಮ್ಮ ಸಂಖ್ಯೆಯನ್ನು ಕಡಿಮೆಮಾಡಲು ನಾನಾ ಪ್ರಯತ್ನಗಳನ್ನು ನಡೆಸಿದೆ. ನಮಗೆ ತೊಂದರೆಪಡಿಸತಕ್ಕ ಯಾವ ಪ್ರಯತ್ನಗಳೂ ಉಳಿದಿಲ್ಲ. ಹೀಗಿರುವಾಗ ಇಂಥ ಸಮಾಜದ ತೋರಿಕೆಯ ಐಕಮತ್ಯಕ್ಕೆ ಮೋಸಹೋಗಬೇಡಿರಿ.

ಅದು ಸರಕಾರದಲ್ಲಿಯೂ ಸೇರುತ್ತದೆ. ಕಾಂಗ್ರೆಸ್ಸಿನಲ್ಲಿಯೂ ಸೇರುತ್ತದೆ. ಎಲ್ಲಿಯಾದರೂ ಸೇರಿ ಸಾಧ್ಯವಿದ್ದಷ್ಟು ಹಕ್ಕು ಬಾಧ್ಯತೆಗಳನ್ನು ಹೊಂದುತ್ತಲಿದೆ. ಇಂಥ ಸಮಯದಲ್ಲಿ ನಾವು ಕಣ್ಣು ಮುಚ್ಚಿಕೊಂಡು ಕುಳಿತರೆ ಒಂದು ದಿನ ಯಾವುದು ಆಗಬಾರದೋ ಅದು ಆಗೇ ತೀರುತ್ತದೆಂದು ತಿಳಿಯಿರಿ."

## ಹರಿಪುರ ಕಾಂಗ್ರೆಸ್ಸಿನಲ್ಲಿ ಹೊಸದು!

ಹರಿಪುರ ಕಾಂಗ್ರೆಸ್ಸಿಗೆ ಒಕ್ಕಲಿಗರು ವಿಶೇಷವಾಗಿ ಬರುವವರಿದ್ದಾರೆ. ಅವರಿಗೆ ಊಟದ ವ್ಯವಸ್ಥೆಯು ಸರಿಯಾಗಿ ಆಗಬೇಕೆಂದೂ ಹೆಚ್ಚಿಗೆ ವೆಚ್ಚ ಬೀಳಬಾರದೆಂದೂ ಸ್ವಾಗತ ಸಂಘದವರು ಈ ಕೆಳಗಿನ ಒಂದು ಹೊಸ ಏರ್ಪಾಟನ್ನು ಮಾಡಿದ್ದಾರೆ.-

ಬಾರ್ಡೋಲಿ ತಾಲೂಕಿನಲ್ಲಿ ಪ್ರತಿಯೊಂದು ಮನೆಯವರೂ ಒಂದು ಮಣ ಕೈಯಿಂದ ಕುಟ್ಟಿದ ಅಕ್ಕಿಯನ್ನು ಹರಿಪುರ ಕಾಂಗ್ರೆಸ್ ಸಮಾರಾಧನೆಗೆ ಕೊಡಬೇಕು. ಹೀಗೆ ಮಾಡಿ ೫೦ ಸಾವಿರ ಮಣ ಅಕ್ಕಿ ೫ ನೂರು ಮಣ ಬೇಳೆಯನ್ನು ಕೂಡಿಸುವವರಿದ್ದಾರೆ.

ಕಾಂಗ್ರೆಸ್ಸಿನ ಕಾಲಕ್ಕೆ ಕೂಡುವ ಪ್ರದರ್ಶನದಲ್ಲಿ ಅಂಗಡಿಯ ಭಾಡಿಗೆ ಬಹು ಕಡಿಮೆಯೆಂದರೆ ೩೦ ರೂ.

ಕಾಂಗ್ರೆಸ್ಸಿಗೆ ಬರುವ ಜನರಿಗಾಗಿ ರೇಲ್ವೆಯವರು ಕಡಿಮೆ ದರವನ್ನು ಇಡುವುದಾಗಿ ಅಭಿವಚನ ಕೊಟ್ಟಿದ್ದಾರಂತೆ.

ಒಬ್ಬ ಸ್ವಯಂಸೇವಕನ ಉಡುಪಿಗೆ ೬ ರೂ. ಒಬ್ಬ ಸ್ವಯಂಸೇವಕಳ ಉಡುಪಿಗೆ ೧೦ ರೂ.ಗಳು ಬೇಕಾಗುವವೆಂದು ಸ್ವಾಗತ ಸಂಘದವರು ನಿರ್ಣಯಿಸಿದ್ದಾರೆ.

ಹರಿಪುರ ಕಾಂಗ್ರೆಸ್ಸಿನ ಸ್ವಾಗತ ಸಂಘದವರು ಪರ ರಾಷ್ಟ್ರಗಳ ಅನೇಕ ಪ್ರಮುಖರಿಗೆ ಆಮಂತ್ರಣವನ್ನು ಕೊಟ್ಟು ಕಾಂಗ್ರೆಸ್ಸಿನ ಸಂಕ್ಷಿಪ್ತ ಚರಿತ್ರೆಯನ್ನೂ ತಿಳಿಸಿದ್ದಾರೆ.

# ಪಕ್ಷದ ದಾಸರಾಗಬೇಡಿರಿ.

## ಸತ್ಯದ ದಾಸರಾಗಿರಿ.

ಅನ್ನಾಮಲಯ ವಿಶ್ವವಿದ್ಯಾಪೀಠದ ಕುಲ ಗುರುಗಳಾದ ಶ್ರೀಮಾನ್ ಶ್ರೀನಿವಾಸ ಶಾಸ್ತ್ರಿಗಳವರು ವಿದ್ಯಾಪೀಠದ ವಾರ್ಷಿಕ ಪದವಿದಾನದ ಕಾಲಕ್ಕೆ (ಕಳೆದ ೪ ನೆಯ ತಾರೀಖಿನ ದಿನ) ಪದವಿಧರರಿಗೆ ಉಪದೇಶ ಪರವಾದ ಅತ್ಯಂತ ಮಹತ್ವದ ಒಂದು ಭಾಷಣವನ್ನು ಮಾಡಿದರು. ಆಗ ಶ್ರೀ. ಶಾಸ್ತ್ರಿಗಳವರು ಹೀಗೆ ಹೇಳಿದರು—



ಶ್ರೀ. ಶಾಸ್ತ್ರಿಗಳವರು.

"ನಾವು ಈಗ ಬ್ರಿಟಿಶರ ಪ್ರಜಾಪ್ರಭುತ್ವದ ಪದ್ಧತಿಯಂತೆ ಏರ್ಪಟ್ಟ ರಾಜ್ಯಭಾರದ ಅಧೀನದಲ್ಲಿದ್ದೇವೆ. ಈ ಪ್ರಜಾಪ್ರಭುತ್ವವು ತುಂಬಾ ಫಲಕಾರಿಯಾಗಬೇಕಾದರೆ ಇದರಲ್ಲಿರುವ ಕುಂದು ಕೊರತೆಗಳನ್ನು ನಾವು ತೆಗೆದು ಹಾಕಲು ಪ್ರಯತ್ನಿಸಬೇಕು. ಅಂಧಾನುಕರಣವನ್ನು ಮಾಡಬಾರದು.

ಪ್ರಜಾಪ್ರಭುತ್ವದಲ್ಲಿ ಪಕ್ಷಗಳು ಏರ್ಪಡುವುದು ಸ್ವಾಭಾವಿಕ. ಪಕ್ಷಗಳ ನಿಯಮನಿರ್ಬಂಧಗಳನ್ನು ಆಯಾಯ ಪಕ್ಷಕ್ಕೆ ಸೇರಿದವರು ಅನುಸರಿಸಬೇಕಾದದೂ ಅಗತ್ಯವೇ ಸರಿ. ಆದರೆ ಅದಕ್ಕೆ ಮೇರೆ ಇದೆ. ಪಕ್ಷದ "ಶಿಸ್ತು" ಎಂದು ವ್ಯಕ್ತಿ ಸ್ವಾತಂತ್ರ್ಯದ ಕೊಲೆ ಮಾಡಬಾರದು.

ಪ್ರತಿಯೊಂದು ವ್ಯಕ್ತಿಗೂ ವಿಚಾರಸ್ವಾತಂತ್ರ್ಯವಿದೆ. ಯಾವ ರಾಜಕೀಯ ಪಕ್ಷವಾದರೂ ವ್ಯಕ್ತಿಯ ವಿಚಾರಸ್ವಾತಂತ್ರ್ಯಕ್ಕೆ ಅವಕಾಶವನ್ನು ಕೊಡಲೇಬೇಕು. ಶಿಸ್ತಿನ ಬಲದಿಂದ ವ್ಯಕ್ತಿತ್ವವನ್ನೇ ನಾಶಮಾಡಬಾರದು.

ಪಕ್ಷದ ಗುಲಾಮನಾದರೆ ಪರಪಕ್ಷದ ಸತ್ಯ ಸಿದ್ಧಾಂತಗಳನ್ನು ಕೂಡಾ ಆಚರಿಸುವ ಸಾಮರ್ಥ್ಯವಿಲ್ಲದಂತಾಗುತ್ತದೆ. ಆದಕಾರಣ ಪಕ್ಷದ ದಾಸರಾಗಬೇಡಿರಿ. ಸತ್ಯದ ದಾಸರಾಗಿರಿ. ಹಕ್ಸಲೆಯು ಹೀಗೆ ಹೇಳುತ್ತಿದ್ದನು—

"ನಾನು ಪಾರ್ಲಮೆಂಟಿನಲ್ಲಿ ಸೇರುವುದಿಲ್ಲ. ಏಕೆಂದರೆ ನಾನು ಸತ್ಯವನ್ನು ಶೋಧಿಸಬೇಕಾಗಿದೆ. ಅಸತ್ಯವನ್ನು ಅನುಸರಿಸಿ ನಾನು ನನ್ನ ಜೀವಿತವನ್ನು ವ್ಯರ್ಥಮಾಡಿಕೊಳ್ಳಲಾರೆನು."

### ಗಾಂಧೀಜಿಯವರು ಆದರ್ಶವಿಭೂತಿ.

ಗಾಂಧೀಜಿಯವರು ನಮಗೆ ಆದರ್ಶ ವಿಭೂತಿಗಳಾಗಿದ್ದಾರೆ. ಅವರು ಸತ್ಯೋಪಾಸಕರು. ವಾರಕ್ಕೊಂದು ದಿನ ಮೌನವಾಗಿದ್ದು ಅವರು ತಮ್ಮ ವಿಚಾರ ಮತ್ತು ಉಚ್ಚಾರಗಳ ನಿಗ್ರಹವನ್ನು ಮಾಡುತ್ತಿದ್ದಾರೆ. ಅಂಧಾನುಕರಣವು ಅವರಿಗೆ ಮಾನ್ಯವಿಲ್ಲ.

ಗಾಂಧೀಜಿಯವರಷ್ಟು ಸತ್ಯಾವಲಂಬಿಗಳು ಈಗ ಬೇರೆ ಯಾರೂ ಇಲ್ಲವೆನ್ನಬಹುದು. ಅಹಿಂಸೆ ಮತ್ತು ಸತ್ಯ ಇವೆರಡೂ ಗಾಂಧೀಜಿಯವರ ನಡವಳಿಕೆಯ ಎರಡು ಮಗ್ಗಲುಗಳಾಗಿವೆ. ಇವರಂತೆಯೇ ನಾವು ಸತ್ಯೋಪಾಸಕರಾಗಲು ಪ್ರಯತ್ನಿಸಬೇಕು. ಹೀಗೆ ಮಾಡುವಾಗ ನಾವು ನಮ್ಮ ಸದಸದ್ವಿವೇಕ ಬುದ್ಧಿಗನುಸರಿಸಿ ನಡೆಯಬೇಕೇ ಹೊರತು ಪಕ್ಷದ ದಾಸರಾಗಬಾರದು. ಅನ್ಯ ಪಕ್ಷದವರನ್ನು ಶತ್ರುಗಳೆಂದು ತಿಳಿಯಬೇಡಿರಿ. ನಿಮ್ಮ ಪಕ್ಷದಲ್ಲಿ ನಿಷ್ಠೆಯುಳ್ಳವರಾಗಿದ್ದರೂ ರಾಷ್ಟ್ರವು ಅದಕ್ಕಿಂತ ಹೆಚ್ಚಿನದೆಂದು ತಿಳಿಯಿರಿ."

# ಆರ್ಯ ಸಮಾಜ ಮತ್ತು ಕಾಂಗ್ರೆಸ್.

( ಶ್ರೀ. ಭಾಯಿ ಪರಮಾನಂದರ ಲೇಖ. )

ಶ್ರೀ. ಭಾಯಿ ಪರಮಾನಂದರು "ಆರ್ಯ ಸಮಾಜ ಕಾಂಗ್ರೆಸ್ ಮತ್ತು ಹಿಂದು ಮಹಾಸಭಾ" ಎಂಬ ಒಂದು ಲೇಖನವನ್ನು "ಹಿಂದು" ಪತ್ರಿಕೆಯಲ್ಲಿ ಬರೆದಿದ್ದಾರೆ. ಅದರ ಮುಖ್ಯಾಂಶ ಹೀಗಿದೆ—

### ಆರ್ಯ ಸಮಾಜದ ಉದ್ದೇಶ.

ಆರ್ಯ ಸಮಾಜವು ಶ್ರೀ. ಸ್ವಾಮಿ ದಯಾನಂದರಿಂದ ಕ್ರಿ. ಶ. ೧೮೭೫ ರಲ್ಲಿ ಮುಂಬೈಯಲ್ಲಿ ಸ್ಥಾಪನೆಯಾಯಿತು. ಆಗ ೨೮ ಅದರ ನಿಯಮಗಳಿದ್ದವು. ಎರಡು ವರುಷಗಳಮೇಲೆ ಲಾಹೋರಿನಲ್ಲಿ ಆರ್ಯ ಸಮಾಜವು ಏರ್ಪಡಲು ಆಗ ೧೦ ನಿಯಮಗಳನ್ನು ಮಾಡಲಾಯಿತು. ವೈದಿಕ ಸಂಸ್ಕೃತಿಯನ್ನು ಸಂರಕ್ಷಿಸಿ ಸಂವರ್ಧನೆಗೊಳಿಸುವುದೇ ಆರ್ಯ ಸಮಾಜದ ಮುಖ್ಯೋದ್ದೇಶವೆಂದು ಸ್ವಾಮಿಜಿಯವರು ಸ್ಪಷ್ಟವಾಗಿ ಹೇಳಿದ್ದಾರೆ. ಅವರು ವೈದಿಕ ಸಂಸ್ಕೃತಿಯ ಮೂರ್ತಿಗಳೇ ಆಗಿದ್ದರು.

ವೈದಿಕ ಸಂಸ್ಕೃತಿಗೂ ಹಿಂದು ಸಂಸ್ಕೃತಿಗೂ ಭಿನ್ನವಿಲ್ಲವೆಂದೇ ನಾನು ತಿಳಿದಿದ್ದೇನೆ. ಸ್ವಾಮಿಜಿಯವರ ವೈದಿಕ ಸಂಸ್ಕೃತಿಗೇನೇ ಹಿಂದು ಮಹಾಸಭೆಯು ಹಿಂದು ಸಂಸ್ಕೃತಿಯೆಂದು ಹೇಳುತ್ತದೆ. ಮತ್ತು ಅದರ ಸಂರಕ್ಷಣೆಗಾಗಿ ಪರಿಶ್ರಮಪಡುತ್ತಲಿದೆ.

### ಕಾಂಗ್ರೆಸ್ಸಿನ ಪ್ರಯತ್ನದ ರೀತಿ.

ಕಾಂಗ್ರೆಸ್ ಸಂಸ್ಥೆಯು ಆರ್ಯ ಸಮಾಜ ಸ್ಥಾಪನೆಯಾದ ಹತ್ತು ವರ್ಷಗಳನಂತರ ಜನ್ಮವೆತ್ತಿತು. ರಾಜಕಾರಣವೇ ಇದರ ಮುಖ್ಯ ಗುರಿಯು. ಇತ್ತಲಾಗಿ ರಾಜಕೀಯ ಸ್ವಾತಂತ್ರ್ಯವೇ ತನ್ನ ಧ್ಯೇಯವೆಂದು ಕಾಂಗ್ರೆಸ್ ಹೇಳಿತು.

ಕಾಂಗ್ರೆಸ್ ದೇಶದ ರಾಜಕೀಯ ಸ್ವಾತಂತ್ರ್ಯವೊಂದನ್ನೇ ಸ್ಥಾಪಿಸುವುದಕ್ಕಾಗಿ ಪ್ರಯತ್ನಿಸುತ್ತಿದ್ದರೆ ನಾವು ಅದರ ವಿರುದ್ಧವಾಗಿ ಹೇಳುವ ಪ್ರಸಂಗವೇ ಬರುತ್ತಿರಲಿಲ್ಲ. ಮತ್ತು ಬೇರೆ ದೇಶಗಳಂತೆ ಈ ದೇಶದಲ್ಲಿಯೂ ಒಂದೇ ಸಂಸ್ಕೃತಿಯಿದ್ದಿದ್ದರೆ ದೇಶದ ರಾಜಕೀಯ ಸ್ವಾತಂತ್ರ್ಯದಿಂದ ಸಂಸ್ಕೃತಿಯ ಸಂರಕ್ಷಣೆಯೂ ಆಗೇ ಆಗುತ್ತಿದ್ದಿತು. ಆದರೆ ಈ ದೇಶದಲ್ಲಿ ಅಂಥ ಸ್ಥಿತಿಯಿಲ್ಲ.

ಅರಬಸ್ಥಾನದ ಮುಸ್ಲಿಂ ಸಂಸ್ಕೃತಿಯೊಂದು ಈ ದೇಶದಲ್ಲಿ ಪ್ರಬಲವಾಗಿದೆ. ಹಿಂದು ಸಂಸ್ಕೃತಿಗೂ ಅದಕ್ಕೂ ಪರಸ್ಪರ ಎಷ್ಟೋ ವಿರೋಧವಿದೆ. ಆದುದರಿಂದ ರಾಜಕೀಯ ಸ್ವಾತಂತ್ರ್ಯ ಪ್ರಾಪ್ತಿಗಾಗಿ ಕಾಂಗ್ರೆಸ್ ಮಾಡುತ್ತಿರುವ ಪ್ರಯತ್ನಗಳಲ್ಲಿ ಯಾವ ಅನರ್ಥವಿದೆಯೆಂಬುದನ್ನು ನೋಡಬೇಕಾಗಿದೆ.

ಸ್ವಾತಂತ್ರ್ಯ ಪ್ರಾಪ್ತಿಗೆ ಹಿಂದು-ಮುಸಲ್ಮಾನರು ಒಂದಾಗಬೇಕೆಂದು ಈ ಉಭಯ ಜಾತಿಯವರೂ ತಮ್ಮ ತಮ್ಮ ಜಾತಿ ಭಾವನೆಯನ್ನು ಬಿಟ್ಟು ಇಬ್ಬರೂ ಕೂಡಿ "ಹಿಂದುಸ್ಥಾನಿ" ಸಂಸ್ಕೃತಿಯವರಾಗಿರೆಂದು ಕಾಂಗ್ರೆಸ್ ಪ್ರಯತ್ನಿಸುತ್ತಲಿದೆ. ಕಾಂಗ್ರೆಸ್ಸಿನ ಈ ಪ್ರಯತ್ನದಿಂದ ಹಿಂದು ಸಂಸ್ಕೃತಿಯು ಲೋಪವಾಗುತ್ತಾ ಹಿಂದುಸ್ಥಾನಿ ಸಂಸ್ಕೃತಿಯು ಉದಯವಾಗಲಾರಂಭವಾಗಿದೆ.

### ಪರಸ್ಪರ ವಿರೋಧವಲ್ಲವೆ ?

ಅಂತೆಯೇ ಆರ್ಯ ಸಮಾಜದವರಿಗೆ ನನ್ನ ಪ್ರಶ್ನೆಯೇನೆಂದರೆ— ಶ್ರೀ. ಸ್ವಾಮಿ ದಯಾನಂದರು ಹಿಂದು ಸಂಸ್ಕೃತಿಯ ಸಂರಕ್ಷಣೆಗಾಗಿಯೇ ಆರ್ಯ ಸಮಾಜವನ್ನು ಸ್ಥಾಪಿಸಿದರು. ಆ ಸಮಾಜದವರಾದ ನೀವು ಕಾಂಗ್ರೆಸ್ ಪ್ರಚಾರಕರಾಗುವುದೆಂದರೆ ಹಿಂದು ಸಂಸ್ಕೃತಿಯ ನಾಶದ ಪ್ರಚಾರಕರಾದಂತಾಗುವುದಿಲ್ಲವೆ? ನಿಮ್ಮ ಸಮಾಜದ ಉದ್ದೇಶಕ್ಕೂ ನೀವು ಮಾಡುವ ಪ್ರಚಾರ ಕಾರ್ಯಕ್ಕೂ ಪರಸ್ಪರ ವಿರೋಧವಲ್ಲವೆ ?

### ಆಕ್ಷೇಪ ನಿರಸನ.

ನಾನು ಆರ್ಯ ಸಮಾಜದವರಿಗೆ ಮಾಡಿದ ಈ ಪ್ರಶ್ನೆಗೆ ಉತ್ತರವಾಗಿ ಪಂಜಾಬ ಆರ್ಯ ಸಮಾಜದ ಪ್ರಮುಖರಾದ ಶ್ರೀ. ಕೃಷ್ಣ ಇವರು ಹೀಗೆ ತಿಳಿಸಿದ್ದಾರೆ.—

(೧) ಕಾಂಗ್ರೆಸ್ಸಿನ ಪ್ರಯತ್ನವು ಸ್ವರಾಜ್ಯಕ್ಕಾಗಿದೆ. ಶ್ರೀ. ಸ್ವಾಮಿ ದಯಾನಂದರು "ಸ್ವರಾಜ್ಯ" ಶಬ್ದವನ್ನು ಉಪಯೋಗಿಸಿದ ಮೊದಲನೆಯ ಪ್ರಮುಖರು. ಅವರೂ ಸ್ವರಾಜ್ಯ ಸ್ಥಾಪನೆಗಾಗಿ ಬೋಧಿಸಿದ್ದಾರೆ, ಆದುದರಿಂದ ಕಾಂಗ್ರೆಸ್ಸಿನ ಉದ್ದೇಶಕ್ಕೂ ಸ್ವಾಮಿಜಿಯವರ ಉದ್ದೇಶಕ್ಕೂ ಪರಸ್ಪರ ವಿರೋಧವಿಲ್ಲ.

(೨) ಆರ್ಯಸಮಾಜದವರಿಗೆ ಸಂಧ್ಯಾಮಂದಿರದಲ್ಲಿ "ವಂದೇ ಮಾತರಂ" ಗೀತೆಯನ್ನು ಹೇಳುವ ಅಧಿಕಾರವಿಲ್ಲ.

ಶ್ರೀ. ಕೃಷ್ಣ ಇವರ ಮೇಲಿನ ಎರಡೂ ಅಭಿಪ್ರಾಯಗಳು ತಪ್ಪಾಗಿವೆ. ಶ್ರೀ. ಸ್ವಾಮಿ ದಯಾನಂದರು ಅಪೇಕ್ಷಿಸಿದ ಸ್ವರಾಜ್ಯ ಬೇರೆ. ಈಗ ಕಾಂಗ್ರೆಸ್ಸಿನವರು ಸ್ಥಾಪಿಸಬೇಕೆಂಬ ಸ್ವರಾಜ್ಯ ಬೇರೆ. ಸ್ವಾಮಿಜಿಯವರ ಸ್ವರಾಜ್ಯವು ವೈದಿಕ ಸಂಸ್ಕೃತಿ ವಿಶಿಷ್ಟವಾದುದು. ಕಾಂಗ್ರೆಸ್ಸಿನವರು ಸ್ಥಾಪಿಸುವ ಸ್ವರಾಜ್ಯವು ಹಿಂದಿ ಸಂಸ್ಕೃತಿಯುಳ್ಳದ್ದು. ಅದರಲ್ಲಿ ಹಿಂದು ಎಂಬ ಹೆಸರು ಕೂಡಾ ಬರುವಂತಿಲ್ಲ. ಆದಕಾರಣ ಇಂಥ ಸ್ವರಾಜ್ಯದ ವಿಚಾರವಾಗಿ ಆರ್ಯ ಸಮಾಜವು ವಿರೋಧಿಸಲು ಅಧಿಕಾರವುಳ್ಳದ್ದಾಗಿಯೇ ಇದೆ.

ಹಿಂದು ಸಂಸ್ಕೃತಿಯನ್ನು ತೆಗೆದುಹಾಕಿ ಬೇರೊಂದು ರಾಷ್ಟ್ರೀಯತ್ವದ ಸಂಸ್ಕೃತಿಯನ್ನು ನಿರ್ಮಾಣಮಾಡುವುದೇ ಕಾಂಗ್ರೆಸ್ಸಿನ ಸ್ವರಾಜ್ಯದಿಂದುಂಟಾಗುವ ಫಲವು.

ಮೊನ್ನೆ ಲಾಹೋರಿನ ದಯಾನಂದ .ಕಾಲೇಜಿನಲ್ಲಿ ವಿದ್ಯಾರ್ಥಿಗಳು ಸಂಧ್ಯಾವಂದನೆಯ ಸ್ಥಾನದಲ್ಲಿಯೇ ವಂದೇ ಮಾತರಂ ಗೀತೆಯನ್ನು ಹಾಡಿದ್ದಾರೆ. "

ಶ್ರೀ. ಭಾಯಿ. ಪರಮಾನಂದರ ಮೇಲಿನ ವಿಚಾರಸರಣಿಯು ಸಮಂಜಸವಾಗಿ ತೋರುವುದಿಲ್ಲ. ಶ್ರೀ. ದಯಾನಂದರ ಸ್ವರಾಜ್ಯಕ್ಕೂ ಕಾಂಗ್ರೆಸ್ಸಿನ ಸ್ವರಾಜ್ಯಕ್ಕೂ ಮಹದಂತರವಿದೆಯೆಂದು ಭಾಯೀಜಿಯವರು ಹೇಳಿರುವುದು ಯುಕ್ತವಾಗಿದೆ. ಎರಡೂ ಒಂದೇ ವಿಧವಾದ ಸ್ವರಾಜ್ಯವೆಂದು ವಾದಿಸುವುದು ವಿಹಿತವಲ್ಲ. ಆದರೆ ಕಾಂಗ್ರೆಸ್ಸಿನವರು ಸ್ಥಾಪಿಸಬೇಕೆಂದಿರುವ ಸ್ವರಾಜ್ಯದಿಂದ ಹಿಂದು ಸಂಸ್ಕೃತಿಯು ನಷ್ಟವಾಗುತ್ತದೆಂದೂ ಅದಕ್ಕಾಗಿ ಕಾಂಗ್ರೆಸ್ ಪ್ರಚಾರ ಮಾಡಬಾರದೆಂದೂ ಇವರು ಹೇಳುವುದು ವಿಹಿತವಲ್ಲ. ಈ ದೇಶಕ್ಕೆ ಪಾರತಂತ್ರ್ಯವಿರುವುದರಿಂದಲೇ ನಮ್ಮ ಸಂಸ್ಕೃತಿಯು ಲೋಪವಾಗುತ್ತಾ ಇದೆ. ಸ್ವರಾಜ್ಯ ಪ್ರಾಪ್ತಿಯಿಂದ ನಮ್ಮ ಸಂಸ್ಕೃತಿಯ ಏಳಿಗೆಗೆ ಸಹಾಯವೇ ಆಗುವುದರಲ್ಲಿ ಸಂದೇಹವಿಲ್ಲ.

ಹಿಂದುಗಳು ತಮ್ಮ ಸಾಮಾಜಿಕ ದೋಷಗಳನ್ನೂ ಧಾರ್ಮಿಕ ತಪ್ಪು ತಿಳುವಳಿಕೆಗಳನ್ನೂ ತೆಗೆದುಹಾಕಲು ಪ್ರಯತ್ನಿಸಬೇಕು. ಅವೇ ಹಿಂದು ಸಂಸ್ಕೃತಿಯ ನಾಶಕ್ಕೆ ಕಾರಣವಾಗಿವೆ. ಅವುಗಳ ನಿವಾರಣೆಗಾಗಿ ಪ್ರಯತ್ನಿಸದೆ ರಾಜಕೀಯ ಹೋರಾಟದಲ್ಲಿ ಭಿನ್ನಾಭಿಪ್ರಾಯವುಂಟಾದ ಮಾತ್ರದಿಂದ ಹೀಗೆ ಸ್ವರಾಜ್ಯ ಪ್ರಾಪ್ತಿಯ ಪ್ರಯತ್ನದಲ್ಲಿ ವಿಮುಖರಾಗಲು ಒಂದು ಸಮಾಜದವರಿಗೆ ಸೂಚಿಸುವುದು ಅತ್ಯಂತ ಅನುಚಿತವಲ್ಲವೆ?

# ಸ್ವಾತಂತ್ರ್ಯವೀರ ಸಾವರಕರರ ಭಾಷಣ ವಿಮರ್ಶೆ.

ಸ್ವಾತಂತ್ರ್ಯವೀರ ಬ್ಯಾ. ಸಾವರಕರರು ವೊನ್ನೆ ಮಧ್ಯಪ್ರಾಂತೀಯ ಹಿಂದು ಮಹಾಸಭೆಯ ಅಧ್ಯಕ್ಷರಾಗಿ ಮಾಡಿದ ಭಾಷಣದ ಮುಖ್ಯಾಂಶವನ್ನು ಇದೇ ಪತ್ರಿಕೆಯ ಬೇರೊಂದು ಕಡೆ ಕೊಟ್ಟಿದ್ದೇವೆ. ಅದನ್ನು ಓದಿದರೆ ಅವರಲ್ಲಿರುವ ಅತ್ಯುಜ್ವಲವಾದ ಹಿಂದುತ್ವದ ಅಭಿಮಾನವೂ ಹಿಂದು ರಾಷ್ಟ್ರದ ಸ್ವಾತಂತ್ರ್ಯಪೇಕ್ಷೆಯೂ ಸ್ಪಷ್ಟ ಗೊತ್ತಾಗುತ್ತವೆ.

ಹಿಂದು ಜಾತಿಗೂ ಹಿಂದು ರಾಷ್ಟ್ರಕ್ಕೂ ಸಂಪೂರ್ಣ ಸ್ವಾತಂತ್ರ್ಯ ದೊರೆಯಬೇಕೆಂಬುದೇ ಅವರ ಮುಖ್ಯೋದ್ದೇಶವು. ಹಿಂದು ಜನಾಂಗವು ತನ್ನ ಸಂಸ್ಕೃತಿಯನ್ನು ನಾಶಮಾಡಿಕೊಂಡು ಅಥವಾ ತನ್ನ ಅಸ್ತಿತ್ವವೇ ಇಲ್ಲದಂತೆ ಮಾಡಿಕೊಂಡು ಈ ದೇಶಕ್ಕೆ ರಾಜಕೀಯ ಸ್ವಾತಂತ್ರ್ಯವನ್ನು ಸಂಪಾದಿಸುವುದೆಂದರೆ ಅದು ಈ ಜನಾಂಗದ ಮರಣವೆಂದೇ ಬ್ಯಾ. ಸಾವರಕರರ ದೃಢವಾದ ಅಭಿಪ್ರಾಯವು.

ಅದುದರಿಂದ ಹಿಂದುಸ್ಥಾನದ ರಾಜಕೀಯ ಸ್ವಾತಂತ್ರ್ಯವನ್ನು ಸಂಪಾದಿಸುವ ಆತುರದಲ್ಲಿ ಹಿಂದು ಜನಾಂಗದ ಸಂಸ್ಕೃತಿಗೆ ಯಾವ ವಿಧವಾದ ಲೋಪವೂ ಉಂಟಾಗದಂತೆ ಮತ್ತು ಹಿಂದು ಜನಾಂಗವು ಅನ್ಯ ಸಮಾಜಗಳ ಆಕ್ರಮಣಕ್ಕೆ ಆಹುತಿಯಾಗದಂತೆ ನೋಡಿಕೊಳ್ಳುವುದು ಪ್ರತಿಯೊಬ್ಬ ಹಿಂದುವಿನ ಮುಖ್ಯ ಕರ್ತವ್ಯವೆಂದು ಅವರು ಹೇಳುತ್ತಿದ್ದಾರೆ.

ಬ್ಯಾ. ಸಾವರಕರರು ತಮ್ಮಲ್ಲಿರುವ ಈ ಉಜ್ವಲವಾದ ಹಿಂದುತ್ವದ ಅಭಿಮಾನದಿಂದ ಅನ್ಯ ಸಮಾಜ ಅಥವಾ ಸಂಸ್ಕೃತಿಗಳ ಮೇಲೆ ಯಾವ ವಿಧವಾದ ಆಕ್ರಮಣ ಅಥವಾ ಒತ್ತಾಯವನ್ನು ಎಳ್ಳಷ್ಟಾದರೂ ಮಾಡುವವರಾಗಿಲ್ಲವೆಂಬುದು ಕೂಡಾ ಅವರ ದಿವ್ಯ ಭಾಷಣದಿಂದ ಸ್ಪಷ್ಟವಾಗುತ್ತದೆ. ಅಂತೆಯೇ ಸಾವರಕರರು ಹಿಂದು ಜಾತಿನಿಷ್ಠರೇ ವಿನಾ ಹಿಂದು ಜಾತ್ಯಂಧರಲ್ಲ ಹಿಂದು ಜಾತಿನಿಷ್ಠ ಶೂನ್ಯರಂತೂ ಅಲ್ಲವೇ ಅಲ್ಲ. ತಾವು ಹೇಗೆ ಅನ್ಯ ಜಾತಿಯ ಹಕ್ಕು ಬಾಧ್ಯತೆಗಳನ್ನು ಅವು ಎಷ್ಟೇ ಸಣ್ಣವಿದ್ದರೂ ಆಕ್ರಮಿಸಿಕೊಳ್ಳಲು ಇಷ್ಟಪಡುವುದಿಲ್ಲವೋ ಹಾಗೆಯೇ ಅನ್ಯ ಸಮಾಜವು ಎಷ್ಟೇ ಪ್ರಬಲವಿದ್ದರೂ ಅದರ ಆಕ್ರಮಣವು ಸ್ವ ಸಮಾಜದ ಮೇಲೆ ಆಗಗೊಡಲೂ ಸಿದ್ಧರಿಲ್ಲ.

ತಮ್ಮ ನೆರೆಯವರೂ ಬದುಕುವಂತೆ ತಾವೂ ಬಾಳಬೇಕೆಂಬುದೇ ಇವರ ಉದ್ದೇಶವೇ ವಿನಾ ಅನ್ನರ ಬಾಳುವೆಗಾಗಿ ತಾವು ತುತ್ತಾಗಬೇಕೆಂದಾಗಲಿ ಅಥವಾ ತಮ್ಮ ಬಾಳುವೆಗೆ ಅನ್ಯರು ಆಹುತಿಯಾಗಬೇಕೆಂದಾಗಲಿ ಇವರು ಹೇಳುವವರಲ್ಲ. ನಿಷ್ಪಕ್ಷಪಾತಿಗಳಾದ ವಿಚಾರಪರರಿಗೆ ಬ್ಯಾ. ಸಾವರಕರರ ಈ ವಿಚಾರಸರಣಿಯು ಸಮಂಜಸವಾಗಿಯೇ ತೋರದೆ ಇರಲಾರದು.

### ಭಾಷಣದಲ್ಲಿದ್ದ ಕೊರತೆ.

ಬ್ಯಾ. ಸಾವರಕರರ ಅಧ್ಯಕ್ಷೀಯ ಭಾಷಣವು ಈ ಪ್ರಕಾರ ಒಂದು ರೀತಿಯಿಂದ ಬಹು ತೃಪ್ತಿಕರವಾಗಿಯೇ ಇದೆ. ಆದರೆ ಹಿಂದು ಜನಾಂಗದ ಉನ್ನತಿಗಾಗಿ ಮಾಡಬೇಕಾಗಿರುವ ಪ್ರಯತ್ನಗಳನ್ನು ನೋಡಿದರೆ ಅಧ್ಯಕ್ಷರಾಗಿ ಬ್ಯಾ. ಸಾವರಕರರು ತಮ್ಮ ಭಾಷಣದಲ್ಲಿ ಇಷ್ಟೇ ಹೇಳಿದುದು ಒಂದು ದೊಡ್ಡ ಕೊರತೆಯೆಂದು ಅತ್ಯಂತ ವಿಷಾದದಿಂದ ಹೇಳಬೇಕಾಗಿದೆ.

ಹಿಂದು ಜಾತಿಯ ಉನ್ನತಿಗಾಗಿ ರಾಜಕೀಯ ದೃಷ್ಟಿಯಿಂದ ಮಾಡಬೇಕಾದ ಪ್ರಯತ್ನವೊಂದನ್ನೇ ಇವರು ತಮ್ಮ ಈ ಭಾಷಣದಲ್ಲಿ ವಿವೇಚಿಸಿದ್ದಾರೆ. ಇದರ ಜತೆಯಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ಸಂಗತಿಗಳಿಂದಲೂ ಹಿಂದು ಜಾತಿಯ ಉನ್ನತಿಗಾಗಿ ಯಾವ ಯಾವ ಪ್ರಯತ್ನ ಮಾಡಬೇಕೆಂಬುದನ್ನು ಹಿಂದು ಸಮಾಜಕ್ಕೆ ತಿಳಿಸುವುದು ಅಗತ್ಯವಾಗಿರಲಿಲ್ಲವೆ? ಹಿಂದು ಜನಾಂಗವು ಈಗ ತನ್ನ ಅನೇಕ ಧಾರ್ಮಿಕ ತಪ್ಪುತಿಳುವಳಿಕೆಗಳಿಂದಲೂ ಸಾಮಾಜಿಕ ದೋಷಗಳಿಂದಲೂ ಅಧೋಗತಿಗೀಡಾಗುತ್ತಾ ಇಲ್ಲವೆ? ತನ್ನಲ್ಲಿರುವ ಈ ದೋಷಗಳನ್ನು ತೆಗೆದುಹಾಕಿದ ವಿನಾ ಈ ಸಮಾಜವು ಇಂಥ ಸ್ಪರ್ಧೆಯ ಕಾಲದಲ್ಲಿ ಗೌರವದಿಂದ ಬಾಳುವುದು ಶಕ್ಯವೆ?

ಸ್ವಾತಂತ್ರ್ಯವೀರ ಸಾವರಕರರು ಈಗ ಅಖಿಲ ಭಾರತ ಹಿಂದು ಮಹಾಸಭೆಯ ಅಧ್ಯಕ್ಷರಾಗಿದ್ದಾರೆ. ಅಂತೆಯೇ ನಾವು ಈ ವಿಷಯವನ್ನು ಪ್ರಸ್ತಾಪಿಸಿದ್ದೇವೆ. ಆ ತಮ್ಮ ಅಧ್ಯಕ್ಷೀಯ ಭಾಷಣದಲ್ಲಾದರೂ ಈ ಕೊರತೆಯು ಇರಬಾರದೆಂಬುದೇ ನಮ್ಮ ಆಗ್ರಹದ ಪ್ರಾರ್ಥನೆಯು.

ಹಿಂದು ಸಮಾಜವು ಧಾರ್ಮಿಕ ಮತ್ತು ಸಾಮಾಜಿಕ ಸಂಗತಿಗಳಲ್ಲಿ ಯಾವ ಯಾವ ತಿದ್ದುಪಾಟುಗಳನ್ನು ಈಗ ಅತ್ಯಾವಶ್ಯಕವಾಗಿ ಮಾಡಿಕೊಳ್ಳಬೇಕಾಗಿದೆ? ಅವು ಕ್ರಮಬದ್ಧವಾಗಿ ನಡೆಯತಕ್ಕ ಏರ್ಪಾಟುಗಳಾವುವು? ಕೆಲವು ವಿಧಾಯಕ ಕಾರ್ಯಗಳನ್ನು ಸಮಾಜದ ಮುಂದಿಟ್ಟು ಅವು ಅಖಿಲ ಹಿಂದು ಜನಾಂಗದಲ್ಲಿ ಪ್ರಚಂಡವಾಗಿ ನಡೆಯಲು ಯಾವ ವ್ಯವಸ್ಥೆಯನ್ನು ಮಾಡಬೇಕು?

ಈ ಸಂಗತಿಗಳನ್ನೂ ಅಧ್ಯಕ್ಷರು ತಮ್ಮ ಭಾಷಣದಲ್ಲಿ ಸೂಚಿಸಿ ಹಿಂದು ಸಮಾಜವೇ ಜಾಗೃತವಾಗಿ ತನ್ನಲ್ಲಿರುವ ಕುಂದು ಕೊರತೆಗಳನ್ನು ತಿದ್ದಿಕೊಳ್ಳಲು ಅವಕಾಶವಾಗುವಂತೆ ಮಾಡುವುದು ಅಗತ್ಯವಾಗಿಲ್ಲವೆ? ಮಧ್ಯಪ್ರಾಂತೀಯ ಹಿಂದು ಮಹಾಸಭಾ ಅಧ್ಯಕ್ಷರಾಗಿ ಮಾಡಿದ ಭಾಷಣದಲ್ಲಿ ಈ ಯಾವ ಸಂಗತಿಗಳೂ ಇಲ್ಲವೇ ಇಲ್ಲವಷ್ಟೆ.

ಮುಸಲ್ಮಾನ್ ಸಮಾಜ ಮತ್ತು ಕಾಂಗ್ರೆಸ್ ಪಕ್ಷ ಯಾವ ಯಾವ ತಪ್ಪುಮಾಡುತ್ತಲಿವೆಯೆಂಬುದನ್ನು ತಿಳಿಸುವುದೊಂದೇ ಸಾಲದು. ಹಿಂದುಗಳು ತಾವು ಧಾರ್ಮಿಕ ಮತ್ತು ಸಾಮಾಜಿಕ ವಿಷಯಗಳಲ್ಲಿ ಯಾವ ಯಾವ ತಪ್ಪುಮಾಡುತ್ತಿದ್ದಾರೆಂಬುದನ್ನೂ ತಿಳಿಸುವುದು ಅತ್ಯಗತ್ಯವಾಗಿದೆ. ಹಿಂದುಗಳು ತಮ್ಮ ದೋಷಗಳನ್ನು ತೆಗೆದುಹಾಕಿದ ವಿನಾ ಇವರಲ್ಲಿ ನಿಜವಾದ ಸಾಮರ್ಥ್ಯವುಂಟಾಗುವುದು ಶಕ್ಯವೇ ಇಲ್ಲ.

ಎಲ್ಲಿಯ ವರೆಗೆ ನಾವು ನಿರ್ಬಲರಾಗಿರುತ್ತೇವೆಯೋ ಅಲ್ಲಿಯ ವರೆಗೆ ಅನ್ಯರ ಆಕ್ರಮಣ ನಡೆಯುತ್ತಿರುವುದು ಸ್ವಾಭಾವಿಕ. ಆದಕಾರಣ ಹಿಂದು ಸಮಾಜವು ಈಗ ತನ್ನಲ್ಲಿರುವ ಯಾವ ಯಾವ ದೋಷಗಳನ್ನು ಹೇಗೆ ಹೇಗೆ ನಿವಾರಣೆಮಾಡಿಕೊಳ್ಳಲು ಸಿದ್ಧವಾಗಬೇಕೆಂಬುದನ್ನು ಬ್ಯಾ. ಸಾವರಕರರು ತಮ್ಮ ಈ ಅಧ್ಯಕ್ಷೀಯ ಭಾಷಣದಲ್ಲಿಯಾದರೂ ತಿಳಿಸಿ ಅವು ಆಚರಣೆಯಲ್ಲಿ ಬರುವಂತೆ ಮಾಡುವರೆಂದು ನಾವು ದೃಢವಾಗಿ ನಂಬಿದ್ದೇವೆ.

---

### ಬ್ಯಾ. ಸಾವರಕರರು ಅಧ್ಯಕ್ಷರು.

ಈ ತಿಂಗಳ ಕೊನೆಯಲ್ಲಿ ಅಹಮದಾಬಾದಿನಲ್ಲಿ ಕೂಡುವ ಅಖಿಲ ಭಾರತ ಹಿಂದು ಮಹಾಸಭೆಗೆ ಸ್ವಾತಂತ್ರ್ಯ ವೀರ ಸಾವರಕರರನ್ನು ಅಧ್ಯಕ್ಷರನ್ನಾಗಿ ಆರಿಸಿದ್ದಾರೆ.

## ಗಾಂಧೀಜಿಯವರ ಉಪದೇಶ.

ರಾಜಕಾರಣವೆಂದರೆ ಅದೇನೂ ಒಂದು ಆಟವಲ್ಲ. ಆದರೆ ಹಿಂದುಸ್ಥಾನದಲ್ಲಿ ಮಾತ್ರ ಒಂದು ಆಟವನ್ನಾಗಿ ಮಾಡಿಕೊಂಡಿರುವುದನ್ನು ನೋಡಿ ಗೋಖಲೆಯವರಿಗೆ ತುಂಬಾ ವಿಷಾದವಾಗುತ್ತಿದ್ದಿತು.

(೨) ಸ್ವಂತ ಮಾನದ ವಿಷಯವಾಗಿ ಅದರಲ್ಲಿಯೂ ಧರ್ಮದ ಸಂಬಂಧವಾಗಿ ಸಂಕಟ ಪ್ರಾಪ್ತವಾದಾಗ ಎಷ್ಟು ಸ್ವಾರ್ಥತ್ಯಾಗ ಮಾಡಿದರೂ ಅದು ಕಡಿಮೆಯೇ ಸರಿ.

(೩) ಜನಾಭಿಪ್ರಾಯದಂತೆ ನಡೆಯುವ ಸರಕಾರದಿಂದ ಅಲ್ಪಾಧಿಕಾರ ದೊರೆಯಬೇಕಾಗಿದ್ದರೂ ಪ್ರಾಣವನ್ನು ಕೂಡಾ ಅರ್ಪಿಸಬೇಕಾಗುತ್ತದೆ. ಆದರೆ ಜನಾಭಿಪ್ರಾಯವನ್ನು ಹತ್ತಿಕ್ಕುವ ಸರಕಾರವು ಘನವಾದ ಉಂಬಳಿಯನ್ನು ಹಾಕಿಕೊಟ್ಟರೂ ಅದು ಗುಲಾಮಗಿರಿಯ ಚಿನ್ಹವಾಗಿಯೇ ಪರಿಣಮಿಸುತ್ತದೆ.

—ಯಂಗ್ ಇಂಡಿಯಾ. ತಾ. ೧೧-೮-೨೦

## ಪೌರೋಹಿತ್ಯಕ್ಕೆ ಪ್ರತಿಬಂಧ.

ಡಾ.
ಅಂಬೇಡಕರರ ಭಾಷಣ.



ಹಿಂದು ಸಮಾಜದಲ್ಲಿರುವ ಜಾತಿಭೇದವನ್ನು ತೆಗೆದುಹಾಕುವುದು ಸುಲಭವಲ್ಲ. ಈ ಕಾರ್ಯಕ್ಕೆ ಪೌರೋಹಿತ್ಯವನ್ನು ನಡೆಸುತ್ತಿರುವ ಬ್ರಾಹ್ಮಣರು ಮುಂದಾಳುಗಳಾಗಿಬರುವುದು ಶಕ್ಯವೇಇಲ್ಲ.

ಪ್ರೊಫೆಸರ್ ಡಾಯಿಸ್ ಎಂಬುವವರು "ಇಂಗ್ಲಿಶ್ ಕನ್‌ಸ್ಟಿಟ್ಯೂಶನ್" ಎಂಬ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ— "ಕ್ರಾಂತಿಕಾರಕ ವಿಚಾರವುಳ್ಳವರು ಪೋಪರಾಗುವುದಿಲ್ಲ. ಪೋಪರಾಗಿದ್ದವರು ಕ್ರಾಂತಿಕಾರಕರಾಗುವುದಿಲ್ಲ."

ಹಿಂದು ಸಮಾಜದಲ್ಲಿಯ ಪುರೋಹಿತರಿಗೂ ಇದೇ ಮಾತು ಅನ್ವಯವಾಗುವಂತಿದೆ. ಲೇಜಲಿ ಸ್ಟಿಫನ್‌ರವರು ಹೀಗೆ ಹೇಳಿದ್ದಾರೆ—"ನೀಲಿ ಬಣ್ಣದ ಕಣ್ಣುಗಳುಳ್ಳ ಹುಡುಗರನ್ನೆಲ್ಲಾ ಕೊಂದುಹಾಕಬೇಕೆಂದು ಪಾರ್ಲಮೆಂಟಿನಲ್ಲಿ ಒಂದು ಶಾಸನವಾಗುವುದು ಶಕ್ಯವೇ ಇಲ್ಲ."

ಅದೇ ಪ್ರಕಾರ ಪೌರೋಹಿತ್ಯ ಪ್ರತಿಬಂಧದ ಶಾಸನವು ಬ್ರಾಹ್ಮಣರಿಂದಲೇ ಉಂಟಾಗುವುದು ಶಕ್ಯವಿಲ್ಲ. ಹಿಂದು ಸಮಾಜದಲ್ಲಿಯ ಜಾತಿಭೇದಕ್ಕೆ ಬ್ರಾಹ್ಮಣೀ ಧರ್ಮವೇ ಮೂಲವಾಗಿದೆ.

ಹಿಂದು ಸಮಾಜದಲ್ಲಿರುವ ಜಾತಿಭೇದವು ಎರಡು ರೀತಿಗಳಿಂದ ಕೇಡನ್ನುಂಟುಮಾಡುತ್ತಲಿದೆ. ಇದು ಹಿಂದು ಸಮಾಜವನ್ನು ಬೇರೆ ಬೇರೆಯಾಗಿ ಛಿದ್ರಿಸುತ್ತದೆ. ಮತ್ತು ಪ್ರತಿಯೊಂದು ಒಳಜಾತಿಯೂ ತಾನೇ ಎಲ್ಲ ಜಾತಿಗಳಿಗಿಂತ ಹೆಚ್ಚಿನದೆಂದು ಹೇಳಿಕೊಳ್ಳುವಂತೆ ಮಾಡಿದೆ.

ಊಟೋಪಚಾರ ಮತ್ತು ಶರೀರಸಂಬಂಧಗಳಲ್ಲಿ ಒಂದು ಜಾತಿಯು ಇನ್ನೊಂದು ಜಾತಿಗಿಂತ ಹೆಚ್ಚಿನದೆಂದೇ ತಿಳಿದುಕೊಳ್ಳುತ್ತದೆ. ತನಗಿಂತ ಹೆಚ್ಚಿನದಾದ ಜಾತಿಯು ತನ್ನಲ್ಲಿ ಊಟೋಪಚಾರಗಳನ್ನೇಕೆ ಮಾಡುವುದಿಲ್ಲವೆಂದು ಕೇಳುತ್ತದೆಯೇ ವಿನಾ ತಾನು ತನಗಿಂತ ಕಡಿಮೆಯೆಂದು ತಿಳಿಯಲ್ಪಡುವ ಜಾತಿಯಲ್ಲಿ ಊಟೋಪಚಾರಮಾಡಲು ಸಿದ್ಧವಿಲ್ಲ. ಒಟ್ಟಿಗೆ ಎಲ್ಲರೂ ಜಾತಿಯ ದಾಸರೇ ಆಗಿದ್ದಾರೆ.

### ಪುರೋಹಿತರ ಮೇಲೆ ನಿಯಂತ್ರಣ.

ಹಿಂದು ಸಮಾಜದಲ್ಲಿಯ ಜಾತಿಭೇದವನ್ನು ನಿವಾರಣೆಮಾಡಲು ಪೌರೋಹಿತ್ಯದ ಮೇಲೆ ಈ ಕೆಳಗಿನ ನಿಯಂತ್ರಣವಿರುವುದು ಅತ್ಯಗತ್ಯವಾಗಿದೆ.

(೧) ಧರ್ಮಗ್ರಂಥವು ಒಂದೇ ಒಂದು ಇರಬೇಕು. ಅದರ ವಿನಾ ಬೇರೆಯವು ಧರ್ಮಗ್ರಂಥಗಳೆಂದು ಎಣಿಸಲ್ಪಡಬಾರದು.
(೨) ವಂಶ ಪಾರಂಪರ್ಯವಾಗಿ ಪುರೋಹಿತರಾಗುವ ಪದ್ಧತಿಯನ್ನು ತೆಗೆದುಹಾಕಬೇಕು. ಹಿಂದುಗಳಲ್ಲಿ ಯಾರಾದರೂ ಪುರೋಹಿತರಾಗಬಹುದು. ಅದೊಂದು ಪರೀಕ್ಷೆಯಾಗಿರಬೇಕು. ಆ ಪರೀಕ್ಷೆಯಲ್ಲಿ ತೇರ್ಗಡೆಹೊಂದಿದವರೇನೇ ಪೌರೋಹಿತ್ಯವನ್ನು ನಡೆಯಿಸಬೇಕು. ಅನ್ಯರು ನಡೆಯಿಸಿದರೆ ಅವರು ಶಿಕ್ಷೆಗೆ ಗುರಿಯಾಗಬೇಕು. ಮತ್ತು ಪರೀಕ್ಷೆ ಹೊಂದದವರು ನಡೆಯಿಸಿದ ಪೌರೋಹಿತ್ಯವು ಧರ್ಮಬಾಹ್ಯವೆಂದು ತಿಳಿಯಬೇಕು.

(೩) ಈ ಪರೀಕ್ಷೆಯಲ್ಲಿ ಕೂಡಾ ಅವಶ್ಯವಿದ್ದಷ್ಟು ಜನರು ಮಾತ್ರ ತೇರ್ಗಡೆಯಾಗುವಂತೆ ಮಾಡಬೇಕು. ಇಂಜನಿಯರ್, ಡಾಕ್ಟರ್, ಲಾಯರ್ ಹೇಗೆ ಪದವಿಯನ್ನು ಹೊಂದಿದಮೇಲೆಯೇ ಆಯಾಯ ಉದ್ಯೋಗಗಳನ್ನು ನಡೆಸುತ್ತಾರೆಯೋ ಹಾಗೆಯೇ ಪೌರೋಹಿತ್ಯದ ಕಾರ್ಯವನ್ನೂ ಆ ಸಂಬಂಧವಾದ ಪರೀಕ್ಷೆಯಲ್ಲಿ ತೇರ್ಗಡೆಹೊಂದಿದನಂತರವೇ ನಡೆಯಿಸಬೇಕು.

ಪುರೋಹಿತರೇನೂ ತಮ್ಮ ಉದ್ಯೋಗಕ್ಕೆ ಸರಿಯಾದ ವಿದ್ಯೆ ಶೀಲಾಚಾರಗಳುಳ್ಳವರಾಗಿರಬೇಕಾಗಿಲ್ಲವೆ? ಒಂದು ವಂಶದಲ್ಲಿ ಹುಟ್ಟಿದ ಮಾತ್ರದಿಂದಲೇ ಅವರು ಕೀಳು ಮನಸ್ಸಿನವರಾಗಿದ್ದರೂ ಉಪದಂಶಾದಿ ರೋಗಪೀಡಿತರಾಗಿದ್ದರೂ ಅನೇಕ ದುರ್ಗುಣದುರಾಚಾರ ವಿಶಿಷ್ಟರಾಗಿದ್ದರೂ ಧರ್ಮಾಚಾರಗಳನ್ನು ನಡೆಯಿಸಲಿಕ್ಕೂ

# ಮಹಾರಾಷ್ಟ್ರ ಹಿಂದು ಧರ್ಮ ಪರಿಷತ್ತು.




### ಕೊಲ್ಲಾಪುರಕ್ಕೆ ಹೊರಡಿರಿ.

ಮಹಾರಾಷ್ಟ್ರ ಹಿಂದು ಧರ್ಮ ಪರಿಷತ್ತಿನ ೭ ನೆಯ ಅಧಿವೇಶನವು ಇದೇ ತಿಂಗಳು ೧೭-೧೮ ನೆಯ ತಾರೀಖುಗಳಲ್ಲಿ ಧರ್ಮವೀರ ಡಾ. ಮುಂಜೆಯವರ ಅಧ್ಯಕ್ಷತೆಯಲ್ಲಿ ಕೊಲ್ಲಾಪುರದಲ್ಲಿ ಕೂಡುವುದು. ಈ ಪರಿಷತ್ತಿಗೆ ಸಕಲ ಹಿಂದುಗಳೂ ಆ ಗ ಮಿ ಸಿ ಇದನ್ನು ಯಶಸ್ವಿಯಾಗುವಂತೆ ಮಾಡಬೇಕೆಂದು ಶ್ರೀ. ದಿವೇಕರ ಮಹದೇವ ಶಾಸ್ತ್ರಿಗಳು ವಿಜ್ಞಾಪಿಸಿಕೊಂಡಿದ್ದಾರೆ. ಇವರು ತಮ್ಮ ವಿಜ್ಞಾಪನಾ ಪತ್ರಿಕೆಯಲ್ಲಿ ಹೇಳಿರುವುದೇನೆಂದರೆ—

"ಮುಸಲ್ಮಾನರಿಗೆ ಹೇಗೆ ಹೈದರಾಬಾದ ಸಂ ಸ್ಥಾ ನ ವೊ ಹಾಗೆಯೇ ಹಿಂದುಗಳಿಗೆ ಕೊಲ್ಲಾಪುರ ಸಂಸ್ಥಾನವು. ಹಿಂದು ರಾಜ್ಯ ಸಂಸ್ಥಾಪಕರಾದ ಶ್ರೀ. ಛತ್ರಪತಿ ಶಿವಾಜಿ ಮಹಾರಾಜರ ವಂಶಜರೇ ಇಲ್ಲಿಯ ಅಧಿಪತಿಗಳು. ಹಿಂದು ಧರ್ಮಕ್ಕೆ ಈಗಲೂ ವಿಪತ್ತು ಬಂದಿದೆ. ಹಿಂದು ಸಮಾಜದ ಪುನರ್ಘಟನೆಯು ಛತ್ರಪತಿಯ ಇದೇ ಪುಣ್ಯ ಸ್ಥಳದಲ್ಲಿ ಜರುಗಬೇಕಾಗಿದೆ. ಹಿಂದು ಸಮಾಜದ ಅನೇಕ ದೋಷಗಳನ್ನು ತೆಗೆದುಹಾಕಬೇಕಾಗಿದೆ. ಅಧ್ಯಕ್ಷರೂ ಅಂಥ ಧರ್ಮವೀರರೇ ದೊರೆತಿದ್ದಾರೆ. ಆದ.ದರಿಂದ ಮಹಾರಾಷ್ಟ್ರದ ಶೀಖ, ಜೈನ, ಲಿಂಗಾಯತ, ಆರ್ಯಸಮಾಜಿ ಮೊದಲಾದ ಹಿಂದು ಧರ್ಮದ ಎಲ್ಲ ಸಮಾಜದವರೂ ಈ ಪರಿಷತ್ತಿಗೆ ಆವಶ್ಯಕವಾಗಿ ಆಗಮಿಸಬೇಕು."

ಕೊಲ್ಲಾಪುರದ ಸುತ್ತಲಿನ ಕನ್ನಡ ನಾಡಿನ ಎಲ್ಲ ಸುಶಿಕ್ಷಿತ ಹಿಂದುಗಳೂ ಈ ಪರಿಷತ್ತಿಗೆ ಹೋಗುವುದು ಕ್ಷೇಮಕರವಲ್ಲವೆ?

---

ದೇವತಾರ್ಚನೆ ಮೊದಲಾದ ಪವಿತ್ರ ಕಾರ್ಯಗಳನ್ನು ಮಾಡಲಿಕ್ಕೂ ಸಮರ್ಥರಾಗುತ್ತಾರೆಯೆ ?

ಜನಾಂಗವು ಮಾನಸಿಕ ಮತ್ತು ನೈತಿಕ ಅಧೋಗತಿಗಿಳಿಯಲು ಕಾರಣವಾಗಿರುವ ಇಂಥ ಪುರೋಹಿತರು ಪರಮಾತ್ಮನ ಸೃಷ್ಟಿಯಲ್ಲಿ ಅನಿಷ್ಟಕಾರಕ ಜಂತುಗಳಾಗಿದ್ದಾರೆ. ಇವರ ಮೇಲೆ ನಿಯಂತ್ರಣವು ಅಗತ್ಯವಾಗಿದೆ. ಪ್ರಜಾ ಪ್ರಭುತ್ವದಲ್ಲಿ ಇಂಥ ನಿಯಂತ್ರಣವುಂಟಾಗಬೇಕು. ಹಿಂದು ಧರ್ಮವನ್ನು ನಷ್ಟಗೊಳಿಸುತ್ತಿರುವ ಈ ಪುರೋಹಿತರ ನಿಯಂತ್ರಣವು ಹಿಂದು ಜನಾಂಗದ ಕ್ಷೇಮಕ್ಕೆ ಅತ್ಯಗತ್ಯವಾಗಿದೆ.

### ಬ್ಯಾ. ಸಾವರಕರರ ಸಂಚಾರ.

ಮಧ್ಯಪ್ರಾಂತೀಯ ಹಿಂದು ಮಹಾಸಭೆಯ ಕಾರ್ಯ ಮುಗಿದೊಡನೆ ಆ ಭಾಗದ ಕಾರಂಜಾ, ಪುಸದ, ದಾರವ್ಹಾ ಮೊದಲಾದ ಅನೇಕ ಸ್ಥಳಗಳಿಗೆ ಬ್ಯಾ. ಸಾವರಕರರು ಹೋಗಿ ಹಿಂದುತ್ವದ ಪ್ರಚಾರ ಕಾರ್ಯವನ್ನು ಸಾಗಿಸಿದರು. ಇವರು ಹೋದಲ್ಲೆಲ್ಲಾ ಜನರು ಉತ್ಸಾಹದಿಂದ ಬರಮಾಡಿಕೊಂಡು ಮಾನ ಪತ್ರವನ್ನೂ ಸಹಾಯನಿಧಿಯನ್ನೂ ಅರ್ಪಿಸಿದರು.

### ಹಿಂದು ಸಂರಕ್ಷಕ ಮಂಡಲ.

ಕೊಲ್ಲಾಪುರದ ಶ್ರೀ. ನಾರಾಯಣ ಕೃಷ್ಣ ಕಿಂಕರ ಎಂಬುವವರು ಹಿಂದು ಸಂರಕ್ಷಕ ಮಂಡಲದ ಉದ್ದೇಶವನ್ನು ನೆರವೇರಿಸಲು ಪ್ರಚಾರಕರ ಮೂಲಕ ಪ್ರಯತ್ನಿಸಬೇಕೆಂತಲೂ ಈ ಮಹತ್ಕಾರ್ಯಕ್ಕೆ ವಾರ್ಷಿಕ ೨೦ ಸಾವಿರ ರೂ. ವೆಚ್ಚ ಮಾಡಬೇಕೆಂತಲೂ ಮನನೀಯವಾದ ಸಂಗತಿಗಳನ್ನು ತಿಳಿಸಿದ್ದಾರೆ.

---

—ಅಹಮದಾಬಾದ ಹಿಂದು ಮಹಾಸಭೆಯ ಎಲ್ಲ ಸಿದ್ಧತೆಗಳನ್ನು ಬಹು ಪ್ರಚಂಡವಾಗಿ ನಡೆಸಿದ್ದಾರೆ. ಮಹಾರಾಷ್ಟ್ರದಿಂದ ೨ ಸಾವಿರ ಜನರು ಬರುವರೆಂದೂ ವರ್ಧಾದಿಂದ ಒಂದು ಮಹಾಸಭಾ "ಸ್ಪೆಶಲ್ ಟ್ರೇನ್" ಹೊರಡುವುದೆಂದೂ ತಿಳಿದಿದೆ.

—ಹಿಂದು ಮಹಾಸಭೆಯು ರಾಜಕೀಯ ವಿಷಯದಲ್ಲಿ ಪ್ರವೇಶಿಸದೆ ತನ್ನ ಎಲ್ಲ ಶಕ್ತಿಯನ್ನೂ ಹಿಂದು ಸಮಾಜ ಸಂಘಟನೆಗಾಗಿಯೇ ಉಪಯೋಗಿಸಬೇಕೆಂಬ ಪಕ್ಷವುಂಟಾಗಿದೆ. ರಾಜಕಾರಣದಲ್ಲಿಯೂ ಇದು ಸೇರಿ ಕಾಂಗ್ರೆಸ್ಸನ್ನು ದಾರಿಗೆ ತರಬೇಕೆಂಬ ಒಂದು ಪಕ್ಷವೂ ಇದೆ.

—ಏಳು ವ ರು ಷ ಗ ಳ ಹಿಂದೆ ಮುಸಲ್ಮಾನ್ ಧರ್ಮದಲ್ಲಿ ಸೇರಿದ್ದ ಒಬ್ಬ ಮಹಿಳೆಯನ್ನು ಅಹಮದಾಬಾದ ಹಿಂದು ಸಂಘದವರು ಶುದ್ಧಗೊಳಿಸಿ ಹಿಂದು ಧರ್ಮದಲ್ಲಿ ತೆಗೆದುಕೊಂಡರು.

—೨೦ ದಿನಗಳ ಹಿಂದೆ ಮುಸಲ್ಮಾನ್ ಧರ್ಮದಲ್ಲಿ ಸೇರಿದ್ದ ಹಿರಣ್ಣಾ ಎಂಬ ತೆಲಗು ಚಮ್ಮಗಾರ ಗೃಹಸ್ಥನನ್ನು ಲೋಣಾವಳದಲ್ಲಿಯ ಹಿಂದು ಸಭೆಯವರು ಶುದ್ಧಗೊಳಿಸಿ ತಾ. ೨೧-೧೧-೩೭ ನೆಯ ದಿನ ಹಿಂದು ಧರ್ಮದಲ್ಲಿ ತೆಗೆದುಕೊಂಡರು.




ಶಾ. ಶ. ೧೮೫೯ ನೆಯ ಮಾರ್ಗಶಿರ ಶು|| ೧೦ ಸೋಮವಾರ.

# ಹಿಂದು ಮಹಾಸಭೆಯ ಮುಂದಿರುವ ಕಾರ್ಯ.

ಈ ತಿಂಗಳ ಕೊನೆಗೆ ಅಖಿಲ ಭಾರತ ಹಿಂದು ಮಹಾಸಭೆಯ ೧೯ ನೆಯ ಅಧಿವೇಶನವು ಸ್ವಾತಂತ್ರ್ಯವೀರ ಸಾವರಕರರ ಅಧ್ಯಕ್ಷತೆಯಲ್ಲಿ ಅಹಮದಾಬಾದಿನಲ್ಲಿ ಕೂಡುವುದಷ್ಟೆ. ಆ ಮಹಾಸಭೆಯು ಯಾವ ಯಾವ ಕಾರ್ಯಕ್ರಮಗಳನ್ನು ಹಿಂದು ಜನಾಂಗದ ಮುಂದಿಟ್ಟು ಅವು ಪರಿಣಾಮಕಾರಿಯಾಗಿ ಜರುಗುವಂತೆ ಮಾಡುವುದೋ ಎಂದು ಹಿಂದು ಸಮಾಜ ಹಿತಚಿಂತಕರೆಲ್ಲರೂ ನಿರೀಕ್ಷಿಸುತ್ತಿರುವುದು ಸ್ವಾಭಾವಿಕವೇ ಆಗಿದೆ.

ಹಿಂದು ಸಮಾಜದಲ್ಲಿರುವ ಅನೇಕ ಸಾಮಾಜಿಕ ಮತ್ತು ಧಾರ್ಮಿಕ ದೋಷಗಳಿಂದಲೂ ಮುಸಲ್ಮಾನ್ ಮತ್ತು ಕ್ರಿಸ್ತಮತ ಪ್ರಚಾರಕರು ಹಿಂದು ಧರ್ಮದ ಮೇಲೆ ನಡೆಸಿರುವ ಪ್ರಚಂಡವಾದ ಆಕ್ರಮಣದಿಂದಲೂ ಅನೇಕ ಹಿಂದು ಪ್ರಮುಖರು ಹೆಚ್ಚಾಗಿ ರಾಜಕೀಯ ವಿಷಯದಲ್ಲಿಯೇ ಲಕ್ಷಿಸಿ ಈ ದೇಶದಲ್ಲಿ ಮುಖ್ಯವಾಗಿರುವ ಹಿಂದು ಜಾತಿಯ ಹಕ್ಕು ಬಾಧ್ಯತೆಗಳ ವಿಷಯದಲ್ಲಿ ಉಪೇಕ್ಷಿಸಿರುವುದರಿಂದಲೂ ಹಿಂದು ಮಹಾಸಭೆಯ ಮೇಲೆ ಹಿಂದು ಜನಾಂಗದ ಮತ್ತು ಹಿಂದು ರಾಷ್ಟ್ರದ ಹಿತಾಭಿವೃದ್ಧಿಯ ಹೊಣೆಗಾರಿಕೆಯು ವರ್ಷವರ್ಷಕ್ಕೂ ಹೆಚ್ಚಾಗಲಾರಂಭವಾಗಿದೆ. ಅಂತೆಯೇ ಹಿಂದು ಮಹಾಸಭೆಯ ಕಾರ್ಯಕಲಾಪಗಳ ಕಡೆಗೆ ದೇಶ ಹಿತಚಿಂತಕರೆಲ್ಲರೂ ಲಕ್ಷಿಸುತ್ತಿದ್ದಾರೆ.

### ಕಳೆದೆರಡು ವರುಷಗಳ ಕಾರ್ಯ.

ಹಿಂದು ಮಹಾಸಭೆಯ ೧೭ ನೆಯ ಅಧಿವೇಶನವು ಪುಣೆಯಲ್ಲಿ ಧರ್ಮಾತ್ಮಾ ಮಾಲವೀಜಿಯವರ ಅಧ್ಯಕ್ಷತೆಯಲ್ಲಿ ಜರುಗಿದನಂತರ ಕಳೆದೆರಡು ವರುಷ ಮಹಾರಾಷ್ಟ್ರದಲ್ಲಿ ಹಿಂದು ಮಹಾಸಭೆಯ ಚಟುವಟಿಕೆಗಳು ವಿಶೇಷವಾಗಿ ಜರುಗಿವೆ. ಹಿಂದುತ್ವದ ವಿಷಯದಲ್ಲಿಯೂ ಹಿಂದು ಶುದ್ಧಿ ಮತ್ತು ಸಂಘಟನೆಗಳ ವಿಷಯದಲ್ಲಿಯೂ ಮಹಾರಾಷ್ಟ್ರವು ಎಷ್ಟೋ ಜಾಗೃತಿಯನ್ನುಂಟುಮಾಡಿದೆ.

ಹಿಂದು ಮಹಾಸಭೆಯು ಮಹಾರಾಷ್ಟ್ರವನ್ನು ದಾಟಿ ದಕ್ಷಿಣಕ್ಕೆ ಕರ್ನಾಟಕ, ಆಂಧ್ರ, ತಮಿಳು ಈ ದ್ರಾವಿಡ ಪ್ರಾಂತಗಳಿಗೆ ಇನ್ನೂ ಬಾರದೆ ಇದ್ದುದು ಒಂದು ದೊಡ್ಡ ಕೊರತೆಯೇ ಆಗಿದೆ. ಹಿಂದು ಸಂಘಟನೆ ಮತ್ತು ಶುದ್ಧಿ ಚಟುವಟಿಕೆಗಳು ಈ ದಕ್ಷಿಣ ದೇಶದಲ್ಲಿ ಅಗತ್ಯವೆಂದು ಉತ್ತರ ಭಾಗದ ಹಿಂದು ಮುಂದಾಳುಗಳಿಗೆ ತೋರದಿದ್ದುದಾಗಲಿ ಅಥವಾ ಈ ದಕ್ಷಿಣ ಭಾಗದ ಹಿಂದು ಮುಂದಾಳುಗಳಲ್ಲಿ ಈ ವಿಷಯಗಳ ಅವಶ್ಯಕತೆ ತೋರದಿದ್ದುದಾಗಲಿ ವಿಷಾದದ ಸಂಗತಿಯೇ ಸರಿ.

ಉತ್ತರ ದೇಶದಲ್ಲಿರುವಷ್ಟು ಮುಸಲ್ಮಾನರ ಪ್ರಾಬಲ್ಯ ಅಥವಾ ಕಾಟವು ಈ ದಕ್ಷಿಣ ಪ್ರಾಂತಗಳಲ್ಲಿಲ್ಲದಿರುವುದರಿಂದಲೂ ದಕ್ಷಿಣದಲ್ಲಿ ನಡೆದಿರುವ ಕ್ರೈಸ್ತ ಮತ ಪ್ರಚಾರಕರ ಆಕ್ರಮಣವು ಮುಸಲ್ಮಾನರ ಆಕ್ರಮಣದಂತೆ ಭೀಕರವಾಗಿ ತೋರದಿದ್ದುದರಿಂದಲೂ ಹಿಂದು ಮುಖಂಡರು ಈ ಪ್ರಾಂತಗಳ ಹಿಂದುಗಳ ಕಡೆಗೆ ಲಕ್ಷಿಸಿಲ್ಲವೆ?

ಹಾಗಿದ್ದ ಪಕ್ಷದಲ್ಲಿ ಹಿಂದು ಸಮಾಜದ ಹಿತಾರ್ಥವಾದ ಈಗಿನ ಕಾರ್ಯವು ಅಪೂರ್ಣವಾದುದೂ ದೋಷಯುಕ್ತವಾದುದೂ ಆಗಿದೆಯೆಂಬೇ ಹೇಳಬೇಕಾಗುವುದು. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗಿನ ಯಾವ ಪ್ರಾಂತದ ಯಾವ ಸ್ಥಳದಲ್ಲಿರುವ ಹಿಂದುವಿನ ದುಃಖವಾದರೂ ಅದು ಹಿಂದು ಮಹಾಸಭೆಗೆ ಸಂಬಂಧಪಟ್ಟುದೇ ಆಗಿದೆಯೆಂಬ ನಿಜವಾದ ಹಿಂದು ಸಂಘಟನೆಯುಂಟಾದಾಗಲೇ ಹಿಂದು ಮಹಾಸಭೆಯ ಉದ್ದೇಶವು ನೆರವೇರಿತೆಂದು ಹೇಳಬೇಕು. ಈ ವಿಷಯದಲ್ಲಿ ಪ್ರಾಂತಿಕ ವ್ಯತ್ಯಾಸಗಳಾವುವೂ ಇರಕೂಡದು. ಹಿಂದು ಮಹಾಸಭೆಯು ಅಖಿಲ ಭಾರತೀಯವಾದುದೆಂಬುದು ಅದರ ಕೃತಿಗಳಿಂದಲೂ ಸ್ಪಷ್ಟವಾಗಬೇಕಾದರೆ ಈ ದಕ್ಷಿಣ ಪ್ರಾಂತಗಳಲ್ಲಿಯೂ ಅದು ಜಾಗೃತಿಯನ್ನುಂಟುಮಾಡಲೇಬೇಕು.

ಧರ್ಮಾತ್ಮಾ ಮಾಲವೀಜಿಯವರು ಅಖಿಲ ಭಾರತ ಪ್ರವಾಸವನ್ನು ಮಾಡಿ ಹಿಂದು ಮಹಾಸಭೆಯ ಕಾರ್ಯಕಲಾಪಗಳಿಗಾಗಿ ವಿಶೇಷವಾದ ದ್ರವ್ಯವನ್ನು ಕೂಡಿಸುವರೆಂದು ಆಗ ನಿರೀಕ್ಷಿಸಲ್ಪಟ್ಟಿತ್ತು. ದೇಹದ ಅನಾರೋಗ್ಯದಿಂದ ಆ ಮಹಾಕಾರ್ಯ ಅವರಿಂದ ಜರುಗಿರಲಿಕ್ಕಿಲ್ಲ. ಅನಂತರ ಶ್ರೀ ಜಗದ್ಗುರು ಶಂಕರಾಚಾರ್ಯ ಡಾ. ಕುರ್ತಕೋಟಿ ಇವರಿಂದ ಮಹಾಸಭೆಯ ಸಂಬಂಧವಾದ ಜಾಗೃತಿಯು ದೇಶದ ಎಲ್ಲ ಭಾಗಗಳಲ್ಲಿಯೂ ಉಂಟಾಗಬಹುದೆಂದು ಊಹಿಸಲಾಗಿದ್ದಿತು. ಅದು ಕೂಡಾ ಜರುಗದಿದ್ದುದು ವಿಷಾದದ ಸಂಗತಿಯು. ಕಾಂಗ್ರೆಸ್ಸಿನ ಅಧ್ಯಕ್ಷರು ಮತ್ತು ಮುಸ್ಲಿಂ ಲೀಗಿನ ಅಧ್ಯಕ್ಷರು ಹೇಗೆ ತಮ್ಮ ತಮ್ಮ ತತ್ವ ಪ್ರಚಾರಕ್ಕಾಗಿ ಅವಿಶ್ರಾಂತ ಸಂಚರಿಸುತ್ತಿದ್ದಾರೆಯೋ ಹಾಗೆಯೇ ಹಿಂದುಮಹಾಸಭೆಯ ಅಧ್ಯಕ್ಷರು ಸಮಗ್ರ ವರ್ಷದಲ್ಲೆಲ್ಲಾ ದೇಶ ಸಂಚಾರ ಮಾಡಿ ಹಿಂದು ಮಹಾಸಭೆಯ ವಿಷಯದಲ್ಲಿ ವಿಶೇಷವಾದ ಜಾಗೃತಿಯನ್ನುಂಟುಮಾಡಬೇಕು. ಈ ಮಹಾ ಕಾರ್ಯವನ್ನು ಸ್ವಾತಂತ್ರ್ಯವೀರ ಸಾವರಕರರು ಮುಂದಣ ವರುಷ ಮಾಡುವರೆಂದೇ ನಾವು ದೃಢವಾಗಿ ನಂಬಿದ್ದೇವೆ.

### ವಿಧಾಯಕ ಕಾರ್ಯಕ್ರಮ ಬೇಕು.

ಹಿಂದು ಮಹಾಸಭೆಯೇನೋ ಈ ತಿಂಗಳ ಅಂತ್ಯದಲ್ಲಿ ಬಹು ಸಂಭ್ರಮದಿಂದಲೇ ಜರುಗುತ್ತದೆ. ತುಂಬಾ ಯಶಸ್ವಿಯಾಯಿತೆಂತಲೂ ಅನಂತರ ಹೇಳಲ್ಪಡುತ್ತದೆ. ಆದರೆ ಅದು ಗೊತ್ತುಮಾಡುವ ವಿಧಾಯಕ ಕಾರ್ಯಕ್ರಮ ಮತ್ತು ಅವು ಆಚರಣೆಯಲ್ಲಿ

ಬರುವ ರೀತಿ ಇವುಗಳ ಮೇಲಿಂದಲೇ ಮಹಾಸಭೆಯು ಎಷ್ಟು ಪರಿಣಾಮಕಾರಿಯಾಗಿ ಜರುಗಿತೆಂಬುದನ್ನು ಗೊತ್ತುಮಾಡುವುದು ವಿಹಿತವಾಗಿದೆ. ಮಹಾ ಸಭೆಯು ಕೆಲವು ವಿಧಾಯಕ ಕಾರ್ಯಗಳನ್ನು ಹಿಂದು ಸಮಾಜದ ಮುಂದಿಟ್ಟು ಅವುಗಳನ್ನು ಸಾಧಿಸಲಿಕ್ಕಾಗಿಯೇ ತನ್ನ ಶಕ್ತಿಯನ್ನು ವರ್ಷದಲ್ಲೆಲ್ಲಾ ಉಪಯೋಗಿಸದಿದ್ದರೆ ಪರಧರ್ಮದವರ ಈ ಆಕ್ರಮಣದ ಕಾಲದಲ್ಲಿ ಹಿಂದು ಸಮಾಜವು ಬಲಶಾಲಿಯಾಗಿರುವುದು ಶಕ್ಯವಿಲ್ಲ. ಅಂತೆಯೇ ಈ ಕೆಳಗಿನ ಕಾರ್ಯಗಳನ್ನು ಮಹಾಸಭೆಯು ಈ ವರುಷ ಸಮಾಜದ ಮುಂದಿಡಬೇಕೆಂದು ನಮಗೆ ತೋರುತ್ತದೆ.

(೧) ಹಿಂದು ಮಹಾಸಭೆಯ ಉದ್ದೇಶವನ್ನು ನೆರವೇರಿಸಲು ಒಂದು ಘನವಾದ ಧನರಾಸಿಯನ್ನು ಏರ್ಪಡಿಸಬೇಕು. (೨) ಹಿಂದುಸ್ಥಾನದ ಎಲ್ಲ ಪ್ರಾಂತಗಳಲ್ಲಿಯೂ ಹಿಂದು ಮಹಾಸಭೆಯ ಪ್ರಾಂತಿಕ ಮಂಡಲಗಳನ್ನು ಸ್ಥಾಪಿಸಬೇಕು. (೩) ಪ್ರತಿಯೊಂದು ಪ್ರಾಂತದ ಜಿಲ್ಲೆಗೂ ಒಂದೊಂದು ಮಹಾಸಭೆಯ ಶಾಖೆ ಒಂದು ಹಿಂದು ಶುದ್ಧಿ ಸಂಘ ಮತ್ತು ಒಂದು ಹಿಂದು ಅನಾಥಾಲಯ ಏರ್ಪಡುವಂತೆ ಪ್ರಯತ್ನಿಸಬೇಕು. (೪) ಪ್ರಸಿದ್ಧ ಕ್ಷೇತ್ರಗಳಲ್ಲಿಯೂ ದೇವಾಲಯಗಳಲ್ಲಿಯೂ ಹಿಂದು ಅನಾಥಾಲಯಗಳನ್ನು ಏರ್ಪಡಿಸಬೇಕು. (೫) ಪ್ರತಿಯೊಂದು ಪ್ರಾಂತಿಕ ಮಂಡಲವೂ ಮಹಾಸಭೆಯ ಅನೇಕ ಕಾರ್ಯಗಳು ಹಿಂದು ಜನಸಾಮಾನ್ಯದಿಂದ ನಡೆಯುವಂತೆ ಪ್ರಚಾರಕರ ಮತ್ತು ಪ್ರಕಟನೆಗಳ ಮೂಲಕ ಪ್ರಯತ್ನಿಸಬೇಕು.

ಹೀಗೆ ಹಿಂದು ಮಹಾಸಭೆಯು ಕೆಲವು ವಿಧಾಯಕ ಕಾರ್ಯಗಳನ್ನು ಈ ಸಾರೆ ತನ್ನ ಮುಂದಿಟ್ಟುಕೊಂಡು ಅವುಗಳಿಗಾಗಿಯೇ ಅಖಿಲ ಭಾರತ ಹಿಂದು ಸಮಾಜವು ಏಕಮುಖವಾಗಿ ಪ್ರಯತ್ನಿಸುವಂತೆ ಮಾಡುವುದು ಅತ್ಯವಶ್ಯಕವಾಗಿದೆ. ಹೀಗಾದ ವಿನಾ ಹಿಂದು ಸಮಾಜದಲ್ಲಿ ನಿಜವಾದ ಜಾಗೃತಿಯುಂಟಾಗುವುದು ಶಕ್ಯವಿಲ್ಲ. ಅಂಥ ಜಾಗೃತಿಯುಂಟಾದ ವಿನಾ ಹಿಂದು ಸಂಘಟನೆಯಾಗಲಿ ಅಥವಾ ಅನ್ಯರ ಆಕ್ರಮಣ ಪ್ರತಿಬಂಧವಾಗಲಿ ಆಗುವುದಿಲ್ಲ.

ಆದಕಾರಣ ಈ ಸಾರೆಯ ಅಹಮದಾಬಾದದ ಹಿಂದು ಮಹಾ ಸಭೆಯಲ್ಲಿ ಹಿಂದುತ್ವದ ದಿವ್ಯ ಮೂರ್ತಿಯೇ ಆದ ಸ್ವಾತಂತ್ರ್ಯವೀರ ಸಾವರಕರರು ವಿಧಾಯಕ ಕಾರ್ಯಗಳನ್ನು ನಿರ್ಧರಿಸಿ ಮಹಾ ಸಭೆಗೆ ಹೊಸ ಚೈತನ್ಯವನ್ನೇ ಉಂಟುಮಾಡುವರೆಂದು ನಾವು ದೃಢವಾಗಿ ನಂಬಿದ್ದೇವೆ.

---

## "ವಂದೇಮಾತರಂ" ಗೀತೆಯ ಬಿಟ್ಟರು !

ಕಳೆದ ೨೯ ನೆಯ ತಾರೀಖಿನ ದಿವಸ ಲಾಹೋರ ಪಟ್ಟಣದಲ್ಲಿ ಕಾಂಗ್ರೆಸ್ ಕಮಿಟಿ ಪರವಾಗಿ ಮಾಸಿಕ ಧ್ವಜವಂದನೆಯು ಜರುಗಿತು. ಆಗ ವಂದೇಮಾತರಂ ಗೀತೆಯನ್ನು ಹೇಳದೆ ಸರ್. ಮಹಮ್ಮದ ಇಕಬಲ ಇವರ "ಸಾರೆ ಜಹನಸೆ ಅಚ್ಛಾ ಹಿಂದುಸ್ಥಾನ ಹಮಾರಾ" ಎಂಬ ಗೀತೆಯನ್ನು ಹೇಳಿದರು. ಧ್ವಜವಂದನೆಯ ಕಾಲಕ್ಕೆ ಈ ಗೀತೆಯನ್ನು ಹೇಳಿದ್ದು ಇದೇ ಮೊದಲು. ಕಲಪದ್ಧತಿಯಂತೆ ವಂದೇಮಾತರಂ ಗೀತೆಯನ್ನು ಹೇಳಲಿಲ್ಲ. ಕಲಕತ್ತಾ ವರ್ಕಿಂಗ್ ಕಮಿಟಿಯ ನಿರ್ಣಯವನ್ನು ಇದಕ್ಕೆ ಸಾಕ್ಷಿಯಾಗಿ ತೋರಿಸಿದರು. ಕೆಲವರು ವಂದೇಮಾತರಂ ಗೀತೆಯ ಎರಡು ನುಡಿಗಳನ್ನು ಹಟಾತ್ತಾಗಿ ಹೇಳಿದರು. ಈಗ ಅಲ್ಲಿ ಇದೊಂದು ವಾದದ ವಿಷಯವೇ ಆಗಿದೆ. ಮುಸಲ್ಮಾನರಲ್ಲಿ "ಪಾಕಿಸ್ಥಾನ"ದ ಕಲ್ಪನೆಯನ್ನು ತಂದುಕೊಟ್ಟ ಸುಪ್ರಸಿದ್ಧ ಕವಿಗಳಾದ ಸರ್. ಇಕಬಲರವರೇ ಮೇಲಿನ ಗೀತೆಯನ್ನು ಮಾಡಿದ್ದಾರೆ.

## ಮಸ್ಕಿ ಮಹಾ ಜನರಿಗೆ ವಿನಂತಿ.

ನಿಜಾಮ ಇಲಾಖಾ ರಾಯಚೂರ ಜಿಲ್ಲಾ ಮಸ್ಕಿ ಗ್ರಾಮವು ಇತಿಹಾಸ ಪ್ರಸಿದ್ಧ ಸ್ಥಳವು. ಇದು ಅಶೋಕ ಮಹಾರಾಜನ ಕಾಲದಲ್ಲಿ ಬಹು ಪ್ರಸಿದ್ಧಿಯನ್ನು ಹೊಂದಿತ್ತೆಂದು ಇಲ್ಲಿ ಈಗ ದೊರೆಯುತ್ತಿರುವ ಪ್ರಾಚೀನ ವಸ್ತು ಸಂಶೋಧನದಿಂದ ಗೊತ್ತಾಗುತ್ತದೆ.

ಅಶೋಕ ರಾಜನು ಈ ಭರತಖಂಡದಲ್ಲಿ ಮೊದಲನೆ ಐತಿಹಾಸಿಕ ಚಕ್ರವರ್ತಿಯು. ಈತನು ಅಹಿಂಸಾಮೂರ್ತಿಯಾಗಿದ್ದನು. ಮಸ್ಕಿ (ಮಾಸಂಗಿಪುರ) ಗೆ ಆಗ ಧರ್ಮೋಪದೇಶಕರನ್ನು ಕಳಿಸಿದ್ದನಂತೆ. ಇಲ್ಲಿಯ ಆಗಿನ ಜನರು ಧರ್ಮಪರಾಯಣರೂ ಅಹಿಂಸಾವ್ರತ ಪಾಲಕರೂ ಆಗಿದ್ದರು.

ಅಂಥ ಪ್ರಸಿದ್ಧ ಮಸ್ಕಿ ಗ್ರಾಮಕ್ಕೆ ಈಗಲೂ ೫೬ ದೇಶದ ಕಟ್ಟೆಮನೆ ಎಂಬ ಹೆಸರಿದ್ದದ್ದನ್ನು ನೋಡಿದರೆ ಇಲ್ಲಿಯ ಜನರು ಎಂಥ ಆದರ್ಶಪ್ರಾಯವಾದ ನಡವಳಿಕೆಯುಳ್ಳವರಾಗಿರಬೇಕೆಂಬುದು ಗೊತ್ತಾಗುವದಿಲ್ಲವೆ? ಇತ್ತೀಚಿಗೆ ಅಹಿಂಸಾಧರ್ಮವು ಲಯವಾಗಿ ಹಿಂಸೆಯ ಕರ್ಮವು ಹೆಚ್ಚಿತು. ದುರಗವ್ವನ ಜಾತ್ರೆ ಮಾಡುತ್ತೇವೆಂದು ಕುರಿ ಕೋಣಗಳನ್ನು ಕೊಂದು ಅಧರ್ಮಕ್ಕೀಡಾಗುವವರು ಹೆಚ್ಚಿದರು. ಈ ಸಾರೆ ಈ ಗ್ರಾಮದಲ್ಲಿ ಇಂಥ ಹಿಂಸಾಮಯ ಜಾತ್ರೆಯನ್ನು ಮಾಡದೆ ತಮ್ಮ ಗ್ರಾಮಕ್ಕೆ ಶೋಭಿಸುವಂತೆ ಅಹಿಂಸೆಯ ಸಾತ್ವಿಕ ಉತ್ಸವವನ್ನೇ ಇಲ್ಲಿಯ ಮಹಾ ಜನರು ಮಾಡಿ ಪುಣ್ಯವನ್ನೂ ಕೀರ್ತಿಯನ್ನೂ ಹೊಂದಲೆಂದು ಹಾರೈಕೆ.

ತಮ್ಮ ಸೇವಕ,
ಕಾಂತಪ್ಪ.

---

## ಸಹಕಾರ ವಾರ್ತಾ.

ತಾ. ೧೯-೧೨-೩೭ನೇ ದಿವಸ ಬದಾಮಿ ತಾಲೂಕ ಪೈಕಿ ಕಟಗೇರಿಯಲ್ಲಿ, ತಾ ೨೬-೧೨-೩೭ನೇ ದಿವಸ ಬಾಗಲಕೋಟೆ ತಾಲೂಕ ಪೈಕಿ ಸುನಗದಲ್ಲಿ ಮ್ಯಾನೇಜಿಂಗ ಕಮಿಟಿ ಮೆಂಬರರ ಟ್ರೇನಿಂಗ ಕ್ಲಾಸುಗಳನ್ನು ಕರೆಯುವದು ಗೊತ್ತು ಮಾಡಿದೆ.

ಆದ್ದರಿಂದ ಸದರೀ ಊರುಗಳ ಸುತ್ತುಮುತ್ತಲಿನ ಎಲ್ಲ ಸಂಘಗಳ ಮ್ಯಾ. ಕ. ಮೆಂಬರರೂ ಸೆಕ್ರೆಟರಿಗಳೂ ತಮಗೆ ಸಮೀಪವೆನಿಸುವ ಕ್ಲಾಸುಗಳಿಗೆ ಹಾಜರಾಗಿ, ಇವುಗಳ ಲಾಭವನ್ನು ಪಡೆಯುವರೆಂದು ಆಶಿಸುವೆ. ಈ ಕ್ಲಾಸುಗಳು ಪ್ರಾರಂಭವಾಗುವ ವೇಳೆಯು ಮಧ್ಯಾಹ್ನದ ೨ ಘಂಟೆ.

ಎಮ್. ಪಿ. ನಾಡಗೌಡ.
ಬಿ. ಎ. ಎಲೆಲ್. ಬಿ.
ಆ. ಸೆಕ್ರೆಟರಿ,
ಕೊ. ಇನ್‌ಸ್ಟಿಟ್ಯೂಟ, ಬಾಗಲಕೋಟೆ.

---

—ವ್ಹಾಯಿಸ್‌ರಾಯರಾದ ಲಾರ್ಡ ಲಿನ್ ಲಿಥಗೋರವರು ಮತ್ತು ಡಾ. ಮುಂಜೆಯವರು ದಿಲ್ಲಿಯಲ್ಲಿ ಈಗಿನ ರಾಜಕೀಯ ಪರಿಸ್ಥಿತಿಯ ಸಂಬಂಧವಾಗಿ ತಾ. ೯ ನೆಯ ದಿವಸ ಸಂಭಾಷಣೆ ಮಾಡಿದರು.

—ಮುಂಬೈ ಪ್ರಾಂತಿಕ ಅಸೆಂಬ್ಲಿಯ ಕಾರ್ಯವು ಬರುವ ತಿಂಗಳು ೧೧ ನೆಯ ತಾರೀಖಿಗೆ ಪ್ರಾರಂಭವಾಗುವುದಿದೆ.

# ಹುಲಿ ಆಕಳ ತಿಂದು ನರಿಗೆ ಬಿಟ್ಟಂತೆ.



## ಇವರ ದಾಸೋಹದ ರೀತಿಯ ಕೇಳಿರಿ.

ದಾನವೇನೋ ಬಹು ಒಳ್ಳೆಯದೇ ಸರಿ. ಧನ, ಧಾನ್ಯ, ವಸ್ತ್ರ, ವಾಹನಾದಿಗಳನ್ನು ಅನ್ಯರಿಗೆ ಒಬ್ಬರು ದಾನಮಾಡುತ್ತಿದ್ದ ಮಾತ್ರದಿಂದಲೇ ಅವರು ಮಹಾ ಪರೋಪಕಾರಿಗಳೂ, ಸುಶೀಲರೂ ಎಂದು ಹೇಳಲಿಕ್ಕಾಗುವುದಿಲ್ಲ. ಅವರು ದಾನಮಾಡಿದ ಆ ಹಣವನ್ನು ಹೇಗೆ ಗಳಿಸಿದರು? ಆ ಹಣವು ಅವರಿಗೆ ಹೇಗೆ ಬಂದಿತು? ಅವರು ಈ ರೀತಿ ದಾನಮಾಡುತ್ತಿರುವ ಉದ್ದೇಶವೇನು? ಎಂಬಿವೇ ಮೊದಲಾದ ಸಂಗತಿಗಳನ್ನೂ ತಿಳಿದುಕೊಳ್ಳುವುದು ಅಗತ್ಯ. ಈ ವಿಚಾರವಾಗಿ ಒಂದು ದಿನ ಶಿವಾನುಭವ ಮಂಟಪದಲ್ಲಿ ಜ್ಞಾನನಿಧಿಗಳಾದ ಶ್ರೀ ಜಗದ್ಗುರು ಚೆನ್ನಬಸವೇಶ್ವರ ಸ್ವಾಮಿಗಳು ಹೀಗೆ ಹೇಳಿದರು—

ತನು ಮನ ಬಳಲದೆ. ಉದ್ದಂಡವೃತ್ತಿಯಲ್ಲಿ ಧನವ ಗಳಿಸಿ ಗುರು ಲಿಂಗ ಜಂಗಮಕ್ಕೆ ವೆಚ್ಚಿಸಿ, ದಾಸೋಹವಮಾಡಿ ಭಕ್ತರಾದೆವೆಂಬುವವರ ಮುಖವ ತೋರದಿರಯ್ಯ ಎನಗೆ. ಅವ ಪರ ಧನ ಚೋರ. ಅವ ಪಾಪಿ. ಕೋಪಿ. ಪಂಭ್ರಷ್ಟ ಅವನ ಕಾಯಕವ ವಿಚಾರಿಸದೆ ಉಪದೇಶವ ಕೊಟ್ಟ ಗುರು ಲಿಂಗೆ ರೌರವನರಕ. ಅವನ ಆಯತವ ವಿಚಾರಿಸದೆ ಅವನ ಮನೆಯಲ್ಲಿ ಹೊಕ್ಕು ಲಿಂಗಾರ್ಚನೆಯ ಮಾಡುವ ಜಂಗಮಕೆ ಏಳನೆಯ ಪಾತಕ. ಇಂತಪ್ಪ ಗುರು ಶಿಷ್ಯ ಜಂಗಮದ ಬಾಳುವೆ ಹುಲಿ ಕಪಿಲೆಯ ತಿಂದು ಮಿಕ್ಕಿದ ನರಿ ತಿಂದಂತಾಯಿತ್ತು, ಕಾಣಾ ಕೂಡಲ ಚೆನ್ನ ಸಂಗಮ ದೇವ.

ದಾನ ಮಾಡುವಾತನು ತನ್ನ ತನು ಮನಗಳನ್ನು ಸವಿಸಿ ಆ ಹಣವನ್ನು ನ್ಯಾಯವಾದ ರೀತಿಯಲ್ಲಿ ಗಳಿಸಿರಬೇಕು. ಅಂಥ ಹಣವನ್ನು ದರಿದ್ರರಿಗೂ, ಅಂಗಹೀನರಿಗೂ, ಅಥವಾ ಗುರು ಜಂಗಮರಿಗೂ ಇಲ್ಲವೇ ಸಾರ್ವಜನಿಕ ಕಾರ್ಯಗಳಿಗೂ ವೆಚ್ಚಮಾಡಿದರೆ ಅದು ನಿಜವಾದ ದಾನವು. ಹಾಗಿಲ್ಲದೆ ಅನ್ಯರನ್ನು ವಂಚಿಸಿ, ಅಥವಾ ಅವರ ರಕ್ತವನ್ನೆಲ್ಲಾ ಹೀರಿ ಇಲ್ಲವೆ ಕೊಲೆ ಸುಲಿಗೆ ಮೊದಲಾದ ದುಷ್ಟವೃತ್ತಿಗಳಿಂದ ಗಳಿಸಿ ಜನರ ಮೆಚ್ಚುಗೆಗೆ ಪಾತ್ರನಾಗಬೇಕೆಂದು ಆಡಂಬರದ ದಾನಗಳನ್ನೆಲ್ಲಾ ಮಾಡಿದರೆ ಆತನು ನಿಜವಾದ ಭಗವದ್ಭಕ್ತನೇ? ಆತನು ಸುಶೀಲನೇ? ಆತನು ಪರೋಪಕಾರಿಯೆ?

ತನ್ನ ದೋಷಗಳನ್ನು ಮುಚ್ಚಲು ಹೀಗೆ ಅನೇಕ ಉಪಾಯಗಳನ್ನು ಮಾಡಬಹುದು. ಸಾವಿರಗಟ್ಟಲೆ ಅನ್ಯಾಯವಾಗಿ ಗಳಿಸಿ ನೂರು ಗಟ್ಟಲೆ ದಾನಮಾಡಿದರೆ ಅದೊಂದು ವ್ಯಾಪಾರವಾಗಿಯೇ ಪರಿಣಮಿಸಿತಲ್ಲವೆ? ಇಂಥ ದಾನ ಪದ್ಧತಿಯನ್ನು ಶ್ರೀ. ಚೆನ್ನಬಸವ ದೇವರು ಕಟುವಾಗಿಯೇ ಖಂಡಿಸಿದ್ದಾರೆ. ಈ ದುಷ್ಟವೃತ್ತಿಯವರು ಬೇಕಾದ ಪಕ್ವಾನ್ನಗಳನ್ನು ಮಾಡಿಸಿದ್ದಾರೆಂದೂ ಹೆಚ್ಚಾದ ದಕ್ಷಿಣೆಯನ್ನು ಕೊಡುತ್ತಾರೆಂದೂ ಅವರಲ್ಲಿ ಹೋಗಿ ಯಥೇಚ್ಛವಾಗಿ ಉಂಡುಟ್ಟು ಅವರನ್ನು ಬಾಯಿ ತುಂಬಾ ಹೊಗಳುತ್ತ ಬರುವ ಗುರು ಜಂಗಮರು ಪಾಪಿಗಳೇ ಸರಿಯೆಂದು ಅವರು ಘಂಟಾಘೋಷವಾಗಿ ಹೇಳಿದ್ದಾರೆ.

ಹುಲಿಯು ಒಂದು ಹಸುವನ್ನು ತಿಂದಮೇಲೆ ಮಿಕ್ಕುಳಿದುದನ್ನು ನರಿಯು ತಿನ್ನುವಂತೆ ಅನ್ಯರ ಗೋಣು ಮುರಿದು ಧನವನ್ನು ಗಳಿಸಿದಾತನು ಹುಲಿಯ ಹಾಗೆಯೇ ಸರಿಯೆಂದೂ ತಾನು ಆ ಹಣದಿಂದ ಸುಖೋಪಭೋಗಿಯಾಗಿ ಅದರಲ್ಲಿ ಕೆಲವನ್ನು ಗುರು ಜಂಗಮರಿಗೆ ಕೊಡುವುದರಿಂದ ಅವರು ನರಿಗಳಂತೆಯೇ ಸರಿಯೆಂದೂ ಈ ವಚನದಲ್ಲಿ ಹೇಳಿದ್ದಾರೆ.

ಆದುದರಿಂದ ನ್ಯಾಯವಾದ ಕಾಯಕದಿಂದಲೇ ಗಳಿಸಿದುದನ್ನು ದಾನಮಾಡಿದಾಗಲೇ ಆತನಿಗೆ ಅದರ ಒಳ್ಳೆಯ ಫಲವು ಬರುವುದು. ಮತ್ತು ದಾನವನ್ನು ಹೊಂದುವವರು ಕೂಡಾ ದಾನಿಯ ಕಾಯಕ ಯಾವುದೆಂದೂ ಆತನು ಆ ಹಣವನ್ನು ಹೇಗೆ ಗಳಿಸಿದ್ದಾನೆಂದು ನೋಡುವುದು ಅತ್ಯಗತ್ಯವೆಂದೂ ಈ ವಚನದಲ್ಲಿ ತಿಳಿಸಿದ್ದಾರೆ. ಅವರು ಮಾಡಿದ ಪಾಪ ಅವರ ಬೆನ್ನಿಗೆ. ನಮಗೇನು ಉಂಡುಟ್ಟು ಹೊಗಳಿಬಂದರಾಯಿತೆಂದು ತಿಳಿಯುವುದು ಯುಕ್ತವಲ್ಲವೆಂದೇ ಶ್ರೀ ಚೆನ್ನಬಸವ ದೇವರ ಸಿದ್ಧಾಂತವು.

## ಒಕ್ಕಲಿಗರ ಸಾಲ ತೀರಿಸುವ ಶಾಸನ.

ಮದ್ರಾಸ್ ಕಾಂಗ್ರೆಸ್ ಸರಕಾರವು ಅಲ್ಲಿಯ ಒಕ್ಕಲಿಗರ ಸಾಲವನ್ನು ತೀರಿಸಲು ಅನುಕೂಲವಾಗುವಂತಹ ಒಂದು ಶಾಸನವನ್ನು ಮಾಡಲು ಸಿದ್ಧವಾಗಿದೆ. ಆ ಶಾಸನದಲ್ಲಿರುವ ಮುಖ್ಯ ಐದು ಸಂಗತಿಗಳು ಈ ಕೆಳಗಿನಂತಿವೆ.

ಇವು ಆಚರಣೆಯಲ್ಲಿ ಬಂದರೆ ಮದ್ರಾಸ್ ಪ್ರಾಂತದಲ್ಲಿ ೨೦೦ ಕೋಟಿ ರೂ. ಗಳ ಸಾಲದಿಂದ ಬಳಲುತ್ತಿರುವ ಅಸಂಖ್ಯ ಬಡ ರೈತರು ಎಷ್ಟೋ ಮಟ್ಟಿಗೆ ಸಮಾಧಾನ ಹೊಂದುವರು. ಮುಂಬೈ ಪ್ರಾಂತದ ಒಕ್ಕಲಿಗರಿಗೂ ಒಂದು ನೂರು ಕೋಟಿ ರೂ. ಸಾಲವಿದೆ. ಇಲ್ಲಿಯೂ ಈ ವಿಧವಾದ ಶಾಸನ ಅಗತ್ಯವಿದೆ.

(೧) ೧೯೩೭ ನೆಯ ಇಸವಿಯ ಅಕ್ಟೋಬರ ಒಂದನೆಯ ತಾರೀಖಿನ ವರೆಗೆ ಬಾಕಿಯಾದ ಸಾಲದ ಬಡ್ಡಿಗಳನ್ನು ಕೃಷಿಕರು ಕೊಡಬೇಕಾದ ಅವಶ್ಯಕತೆಯಿಲ್ಲ. (೨) ಯಾವ ಸಾಲದ ಬಡ್ಡಿಯು ಸೇಕಡ ೯ ಕ್ಕಿಂತ ಹೆಚ್ಚಾಗಿ ಇದ್ದು ಇದು ವರೆಗೆ ಬಡ್ಡಿಯ ರೂಪದಲ್ಲಿ ತೆತ್ತ ಹಣವು ಸಾಲದ ಹಣದ ಎರಡರಷ್ಟಾಗುವುದೋ ಅಂತಹ ಸಾಲವು ಸಂದಾಯವಾಗಿದೆ ಎಂದು ಗ್ರಹಿಸಲಾಗುವುದು. (೩) ಸೇಕಡ ೯ ಕ್ಕಿಂತ ಹೆಚ್ಚು ಬಡ್ಡಿ, ಚಕ್ರಬಡ್ಡಿ, ದಂಡನೆಯ ಬಡ್ಡಿ ಮೊದಲಾದ ಬಡ್ಡಿಗಳಿರುವ ಸಾಲದ ಬಡ್ಡಿಯ ರೂಪವಾಗಿ ಎಷ್ಟು ಹಣ ಸಂದಾಯವಾಗಿದೆಯೋ ಅದಕ್ಕೂ ಸಾಲದ ಎರಡಂಶದ ಮೊಬಲಗಿಗೂ ಇರುವ ವ್ಯತ್ಯಾಸದ ಹಣವನ್ನು ಕೊಟ್ಟಲ್ಲಿ ಸಾಲವು ಪರಿಹಾರವಾಗಿದೆ ಎಂದು ಭಾವಿಸಲ್ಪಡುವುದು. ಈ ವ್ಯತ್ಯಾಸದ ಹಣವು, ಸಾಲದ ಮೊಬಲಗಿಗಿಂತ ಅಧಿಕವಾಗಿರಕೂಡದು. (೪) ಎರಡು ವರ್ಷಗಳ ಗೇಣಿ ಕೊಟ್ಟಲ್ಲಿ ಒಕ್ಕಲುಗಳ ಹಿಂದಿನ ಬಾಕಿ ಗೇಣಿಯೂ ಸಲುವಳಿಯಾಗುವುದು. (೫) ಬೇಸಾಯಗಾರರ ಸಾಲಕ್ಕೆ ಸೇಕಡ ೬ ಕ್ಕಿಂತ ಹೆಚ್ಚು ಬಡ್ಡಿ ಇರಕೂಡದು.

---

||ಜಯ ಭಾರತ ಮಾತಾ||

# ಶರಣ ಸಾಹಿತ್ಯ

(ಮಾಸ ಪತ್ರಿಕೆ.)

ಸಂಪಾದಕ— ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿ
ಹುಲಕುಂಟೆಮಠ, ತುಮಕೂರು

ಮಹಾಜನರಲ್ಲಿ ವಿಜ್ಞಾಪನೆಗಳು—

ಹಿಂದೂಧರ್ಮ, ಕನ್ನಡ ಸಾಹಿತ್ಯ, ಲಿಂಗವಂತ ಸಂಸ್ಕೃತಿಗಳ ಉನ್ನತಿಗಾಗಿ ಪ್ರಯತ್ನಿಸುವುದೇ ಈ ಪತ್ರಿಕೆಯ ಮುಖ್ಯೋದ್ದೇಶ. ಪ್ರಾಚೀನ ಕನ್ನಡ, ಹಾಗೂ ಸಂಸ್ಕೃತ ಗ್ರಂಥಗಳ ಪ್ರಕಟನೆಯನ್ನೂ "ಶರಣ ಸಾಹಿತ್ಯ ಗ್ರಂಥಮಾಲಾ" ಎಂಬ ಹೆಸರಿನಿಂದ ನಡೆಸಲಾಗುತ್ತದೆ. ಇದು ತಾ. ೨೦-೧೨-೧೯೩೭ ನೆಯ ಸೋಮವಾರ ಬೆಂಗಳೂರು ನಗರದಿಂದ ಪ್ರಾರಂಭವಾಗುತ್ತದೆ. ಕರ್ನಾಟಕದ ಸುಪ್ರಸಿದ್ಧರಾದ ಇಪ್ಪತ್ತೈದು ಮಂದಿ ವಿದ್ವಾಂಸರು ಈ ಪತ್ರಿಕೆಯ ಸಂಪಾದಕ ಮಂಡಲಿಯಲ್ಲಿ ಸೇರಿ ಇದರ ಉನ್ನತಿಗೆ ಸಹಾಯಕರಾಗಿದ್ದಾರೆ. ಇಂತಹ ಉದಾತ್ತ ಧ್ಯೇಯದಿಂದ ಹೊರಟ ಪತ್ರಿಕೆಯನ್ನು ಸಂರಕ್ಷಿಸುವ ಭಾರ ನಮ್ಮ ನಾಡಿನ ಹಾಗೂ ಸಮಾಜದ ಅಭಿಮಾನಶಾಲಿಗಳನ್ನವಲಂಬಿಸಿದೆ.

ಪೋಷಕರು— ಒಟ್ಟಾಗಿ ೧೦೦ ರೂ. ಕೊಟ್ಟವರು, ಇವರಿಗೆ ಶರಣಸಾಹಿತ್ಯ ಮಾಸಿಕವನ್ನೂ ಗ್ರಂಥಮಾಲೆಯ ಎಲ್ಲ ಗ್ರಂಥಗಳನ್ನೂ ಕೃತಜ್ಞತೆಯಿಂದ ಅರ್ಪಿಸಲಾಗುತ್ತದೆ.

ಸಹಾಯಕರು— ಒಟ್ಟಾಗಿ ೫೦ ರೂ. ಕೊಟ್ಟವರು, ಇವರಿಗೆ ಮಾಸಿಕವು ಸದಾ ಉಚಿತವಾಗಿ ಸಮರ್ಪಿಸಲ್ಪಡುತ್ತದೆ.

ಉಪಕಾರಿಗಳು— ವರ್ಷಕ್ಕೆ ೧೦ ರೂ. ಕೊಡತಕ್ಕವರು.

ಹಿತಚಿಂತಕರು— ವರ್ಷಕ್ಕೆ ೫ ರೂ. ಕೊಡತಕ್ಕವರು.

ಚಂದಾದಾರರು— ವರ್ಷಕ್ಕೆ ೩-೮-೦ ಕೊಡತಕ್ಕವರು, ಶರಣ ಸಾಹಿತ್ಯ ಗ್ರಂಥಮಾಲೆಯ ಎಲ್ಲ ಗ್ರಂಥಗಳನ್ನೂ ಸಹಾಯಕ ಮತ್ತು ಉಪಕಾರಿಗಳಿಗೆ ಅರ್ಧ ಬೆಲೆಗೂ ಹಿತಚಿಂತಕರ ಹಾಗೂ ಚಂದಾದರರಿಗೆ ಮುಕ್ಕಾಲು ಬೆಲೆಗೂ ಕೊಡಲಾಗುತ್ತದೆ.

ದೇಶ, ಧರ್ಮ, ಭಾಷೆ, ಸಮಾಜ ಇವುಗಳ ಉನ್ನತಿಯನ್ನು ಬಯಸುವವರೆಲ್ಲರೂ ಈ ಪತ್ರಿಕೆಗೆ ಪ್ರೋತ್ಸಾಹಕೊಡಬೇಕೆಂದು ವಿನಂತಿ—

ಶಿವಂಭೂಯಾತ್

| | |
|---|---|
| ತಾ|| ೨೫-೧೧-೧೯೩೭ | ಇಂತು |
| ಶರಣ ಸಾಹಿತ್ಯ ಕಾರ್ಯಾಲಯ | ಕನ್ನಡಿಗರ ಕಿಂಕರ |
| ಬೆಂಗಳೂರು ಸಿಟಿ. | ಬಿ. ಶಿವಮೂರ್ತಿ ಶಾಸ್ತ್ರಿ. |

---

## ದಲ್ಲಾಲರ ಮೇಲೆ ನಿಯಂತ್ರಣ.

ಪಂಜಾಬ ಪ್ರಾಂತಿಕ ಅಸೆಂಬ್ಲಿಯಲ್ಲಿ ಸರಕಾರದವರು ಒಂದು ಗೊತ್ತುವಳಿಯನ್ನು ತರುವವರಿದ್ದಾರೆ. ದಲ್ಲಾಲರು ಸರಕಾರದಿಂದ ಲೈಸನ್ಸ ಹೊಂದಬೇಕು. ಒಕ್ಕಲಿಗರ ಸಾಮಾನುಗಳ ಮೇಲೆ ಕ್ಲುಪ್ತವಾದ ದಲ್ಲಾಲಿಯನ್ನೇ ತೆಗೆದುಕೊಳ್ಳಬೇಕು. ಎಂದು ಆ ಗೊತ್ತುವಳಿಯಲ್ಲಿದೆ.

ಕೈ. ತಮ್ಮಪ್ಪ ಸತ್ಯಪ್ಪ ಚಿಕ್ಕೋಡಿ ಇವರ ಪುಣ್ಯತಿಥಿ.

## ಅವರ ಪುಣ್ಯ ಸ್ಮರಣ.

ದಾಟಿ:— ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು
ಎಂಬಂತೆ—

ಕಳೆ ಕಳೆದ ಹಾಗೆ ದಿನ ಹೆಚ್ಚೆಚ್ಚು ತೋರುವದು
ಕಳೆಯೆ ದೇಹವ ನೀನು ಕೇಡು ಕರ್ನಾಟಕದು
ಹುಲಿಯಂತೆ ಸಭೆಯಲ್ಲಿ ಗರ್ಜಿಸುವ ವೀರನೇ
ಕಳಕೊಂಡೆವೈ ನಿನ್ನ ದುರ್ದೈವಿಗಳು ನಾವು ||೧||

ಐವತ್ತು ವರ್ಷ ಬನಹಟ್ಟಿ ಮೊದಲಾಗಿರುವ
ಯಾವತ್ತು ಸುತ್ತಲಿನ ಊರುಗಳ ನ್ಯಾಯವನು
ತೀವಿದುತ್ಸಾಹದಿಂ ಚಾತುರ್ಯದಿಂ ಗೈದೈ
ಸೇವೆ ಮಾಡಿದೆ ಹೀಗೆ ಕೈಯಾಸೆ ಮಾಡದೆ ||೨||

ಜಮಖಂಡಿ ಸಾಂಗಲೀ ಸಂಸ್ಥಾನದಲಿ ಬೀಳೆ
ತನುವು ಕನ್ನಡ ನುಡಿಯ ವೇಲಕಿ ಮರಾಠಿಯದು
ಸಮವಿರದ ಧೈರ್ಯದಿಂ ಹೋರಾಡಿ ಸ್ಥಾಪಿಸಿದೆ
ಕನುನೀಯವಾದ ಕನ್ನಡ ನುಡಿಯ ಶಾಲೆಗಳ ||೩||

ಹಿಂದುಳಿದ ಜನರಲ್ಲಿ ಶಿಕ್ಷಣದ ರುಚಿಯನ್ನು
ಬಂಧುರನೆ ಹುಟ್ಟಿಸಿದೆ ಹಗಲಿರುಳು ಬೋಧಿಸುತೆ
ಹಿಂದಾಗದಲೆ ಕೊಟ್ಟೆ ನೀನು ನಿನಗಿದ್ದ ಮನೆ
ಯೊಂದನ್ನು ಮಾರಿ ಹಣ ಹೈಸ್ಕೂಲಿಗಂತ್ಯದಲಿ ||೪||

ಕನ್ನಡದ ನುಡಿಗಾಗಿ ಸಂತತವು ದುಡಿದವನೆ
ಕನ್ನಡದ ನಾಡಿನಾಭಿಮಾನಿಗಳ ಪ್ರಮುಖನೆ
ಕನ್ನಡಿಗರಾದರಕೆ ಪಾತ್ರನೇ ಪೂಜ್ಯನೇ
ಸನ್ನುತನೆ ಕರ್ನಾಟ ಭೂದೇವಿ ವರಸುತನೆ ||೫||

ನಮಿಸುವೆವು ನಿನ್ನ ಈ ಪುಣ್ಯತಿಥಿದಿನ ನಾವು
ಅಮಿತ ಭಕ್ತಿಯ ಭಾವದಿಂದೆ ವೇಣ್ ಪ್ರೇಮದಿಂ
ಅಮರ ನೀ ಧರೆಯಮೇಲ್ ಸತ್ಕೀರ್ತಿವಂತನೆ
ಸುಮನಸನು ಮೃದುವಾದ ಮನದ ಗುರುರಾಜನೆ ||೬||

ಚಿಕ್ಕೋಡಿಯುರ ವಂಶ ತಾವರಸ ದಿನಮಣಿಯೆ
ಮುಕ್ಕಣ್ಣ ನಂಘ್ರಿಯಲಿ ನಿಷ್ಠೆಯುಳ್ಳಾತನೆ
ಕುಕ್ಕಿಸಿದ ಕಣ್ಣುಗಳ ವಿದ್ವತ್ತಿನಿಂ ಜನರ
ಅಕ್ಕರದ ಮೂರ್ತಿಯಾಗಿರುವ ತಮ್ಮಪ್ಪನೇ ||೭||

ತು. ರ. ಕೋಪಾರ್ಡೆ

## ಶ್ರೀಮದ್ವೀರಶೈವ ತರುಣಸಂಘ ಸಲಗರ.

ಜಿಲ್ಹಾ ಗುಲಬರ್ಗಾ ತಾ||೧-೩-೧೩೪೭ ಫಸಲಿ ರೋಜ ಶನಿವಾರ ಶ್ರೀ ಶಿವರಾಯ ಹೆಡ್‌ಮಾಸ್ತರ ಇವರ ಅಧ್ಯಕ್ಷತೆಯಲ್ಲಿ ತರುಣಸಂಘ ಅನಾವರಣ ಸಮಾರಂಭವು ನೆರವೇರಿಸಲ್ಪಟ್ಟಿತು. ಆ ವೇಳೆಯಲ್ಲಿ ಮಹಾಗಾಂವ ತರುಣಸಂಘದ ಪ್ರಚಾರಕರಾದ ಶ್ರೀ ಯುತರುಗಳಾದ ಚಂದ್ರಶೇಖರ ಗೌಡರು; ಮಲಕಪ್ಪ ಶಿಡಕಿನ; ವಿರೂಪಾಕ್ಷಪ್ಪಾ ವೀರಶೆಟ್ಟಿ;ಮೊದಲಾದ ಮಹನೀಯರು ಶಿವಶರಣರ ವಚನಗಳಿಂದಲೂ ಮತ್ತು ರಸವತ್ತಾದ ಬೇರೆ ಬೇರೆ ಭಾಷಣ ಗಳಿಂದಲೂ ಎಲ್ಲ ಸಭಿಕರ ಮೇಲೆ ಒಳ್ಳೇ ಪರಿಣಾಮವನ್ನುಂಟು ಮಾಡಿದರು. ಇದು ಅಲ್ಲದೆ ಸಲಗರದ ಗುರುಪಾದಯ್ಯಾ ಸಂಗಯ್ಯಾ ಸಿದ್ರಾಮಪ್ಪಾ ಮೊದಲಾದವರೆಲ್ಲ ಬೇರೆ ಬೇರೆ ವಿಷಯಗಳಮೇಲೆ ಭಾಷಣವನ್ನು ಮಾಡಿದರು. ಅದೇ ವೇಳೆಯಲ್ಲಿ ಮುಷ್ಟಿಫಂಡ ಸ್ಥಾಪಿಸಲ್ಪಟ್ಟಿತು. ಅದರ ಜೋಳಿಗೆಯನ್ನು ಗುರಪಾದಯ್ಯನವರು ಅತ್ಯಾದರಪೂರ್ವಕ ಸ್ವೀಕರಿಸಿದರು. ಬಸವೇಶ್ವರ ಮತ್ತು ವೀರಶೈವ ಧರ್ಮ ಮೊದಲಾದ ಜಯಘೋಷದೊಡನೆ ಸಭೆಯು ಮುಗಿಸಲ್ಪಟ್ಟಿತು.

ಶೆಕ್ರೆಟರಿ
ವೀರಶೈವ ತರುಣ ಸಂಘ.

## ಲಾರ್ಡ ಲೋಥಿಯನ್‌ರಿಗೆ

### ಕಾಂಗ್ರೆಸ್ಸಿನವರ ಸತ್ಕಾರ ಸಮಾರಂಭ.

ಈ ದೇಶದಲ್ಲಿ ಹೊಸದಾಗಿ ಪ್ರಾರಂಭವಾದ ಪ್ರಾಂತಿಕ ಪ್ರಭುತ್ವದ ನಿರೀಕ್ಷಣೆಗಾಗಿ ಬಂದಿರತಕ್ಕ ಲಾರ್ಡ ಲೋಥಿಯನ್‌ರಿಗಾಗಿ ತಾ. ೪ನೆಯದಿನಸ ಮುಂಬೈಯಲ್ಲಿ ಮುಂಬೈಪ್ರಾಂತಿಕ ಕಾಂಗ್ರೆಸ್ ಕಮಿಟಿ ಅಧ್ಯಕ್ಷರೂ ಕೇಂದ್ರಶಾಸನ ಸಭೆಯ ಕಾಂಗ್ರೆಸ್ ಸಭಾಸದರ ಪ್ರಮುಖರೂ ಆದ ಶ್ರೀ. ಭುಲಾಭಾಯಿ ದೇಸಾಯಿಯವರು ತಮ್ಮ ಭವನದಲ್ಲಿ ಒಂದು ಉಪಾಹಾರ ಸಮಾರಂಭವನ್ನು ನಡೆಯಿಸಿದರು.

ಆಗ ಮುಖ್ಯಮಂತ್ರಿಗಳಾದ ಶ್ರೀ. ಖೇರರೂ ಅವರ ಸಹಕಾರಿ ಮಂತ್ರಿಗಳೂ ಸರದಾರ ವಲ್ಲಭಭಾಯಿ ಪಟೇಲರೂ ಶ್ರೀ. ಶಂಕರರಾವದೇವ, ರಿ. ಅಂಡ್ರೂಜ್. ಸರ್ ಚಿಮಣಲಾಲ ಸೆಟಲವಾಡ, ಸರ್. ಕೌಸಜಿ ಜಹಾಂಗಿರ ಶ್ರೀ. ಜಮನಾದಾಸ ಮೆಹತಾ ಮೊದಲಾದ ಬೇರಿಬೇರೆ ಪಕ್ಷಗಳ ಪ್ರಮುಖರೂ ಆಗಮಿಸಿದ್ದರು. ಹೀಗಿರಬೇಕು ಸಹಕಾರ.

## ವ್ಯಾಜ್ಯ ಹಿಂದುಗಳಂತೆ ಆಯಿತು.

ನೇವಾಸೆ ಎಂಬಲ್ಲಿ ಶ್ರೀ ಜ್ಞಾನೇಶ್ವರ ಮಹಾ ಸ್ವಾಮಿಗಳು ಯಾವ ಸ್ಥಳದಲ್ಲಿ ಕುಳಿತು ಜ್ಞಾನೇಶ್ವರೀ ಗ್ರಂಥವನ್ನು ರಚಿಸಿದರೋ ಆ ಸ್ಥಳದ ಹತ್ತರಿದ್ದ ಕಟ್ಟಡವು ಸಾರ್ವಜನಿಕ ಮಸೀದಿ ಎಂದು ಮುಸಲ್ಮಾನರು ವ್ಯಾಜ್ಯ ಹೂಡಿದ್ದರು. ಅಲ್ಲಿ ಮುಸಲ್ಮಾನರು ೧೮೭೮ ನೆಯ ಇಸವಿಯಲ್ಲಿ ಪ್ರಾರ್ಥನೆಯನ್ನು ಮಾಡಿದ್ದರಂತೆ.

ಈ ವ್ಯಾಜ್ಯವು ಕೆಳಗಿನ ಎರಡು ನ್ಯಾಯಸ್ಥಾನಗಳಲ್ಲಿಯೂ ಹಿಂದುಗಳಂತೆಯೇ ಆಗಿದ್ದಿತು. ಅನಂತರ ಬ್ಯಾರಿಸ್ಟರ್ ಜಿನ್ನಾರ ಮೂಲಕ ಹೈಕೋರ್ಟಿಗೆ ಅಪೀಲ್ ಮಾಡಲ್ಪಟ್ಟಿತು. ಅಲ್ಲಿ ಕೂಡಾ ತಾ. ೨-೧೨-೩೭ ನೆಯ ದಿವಸ ನ್ಯಾ. ಬ್ರೂಮಫಿಲ್ಡ ಮತ್ತು ನ್ಯಾ. ಸೇನ್ ಇವರಿಬ್ಬರೂ ಅದು ಹಿಂದುಗಳ ಸ್ಥಳವೆಂದೇ ಬಹು ಮಹತ್ವದ ನಿರ್ಣಯವನ್ನು ಮಾಡಿದರು. ಆ ಸ್ಥಳವು ಈಗ ಮಸೀದೆಯಂತೆ ತೋರುತ್ತಿದ್ದರೂ ಅಲ್ಲಿ ಮೊದಲು ಹಿಂದುಗಳ ದೇವಾಲಯವೇ ಇದ್ದಿತೆಂದು ಸ್ಪಷ್ಟವಾಗುವುದರಿಂದ ಅದು ಹಿಂದುಗಳ ಸ್ಥಳವೇ ಸರಿಯೆಂದು ನ್ಯಾಯಮೂರ್ತಿಗಳು ಹೇಳಿದ್ದಾರೆ.

### ಗಾಂಧೀಜಿಯವರ ಆರೋಗ್ಯ.

ಮಹಾತ್ಮಾ ಗಾಂಧಿಯವರು ದೇಹಾರೋಗ್ಯದ ನಿಮಿತ್ತವಾಗಿ ತಾ. ೭ ನೆಯ ದಿವಸ ಸಾ|| ಕಸ್ತೂರಿದೇವಿಯವರೇ ಮೊದಲಾದ ಪರಿವಾರದವರೊಂದಿಗೆ ಮುಂಬೈಗೆ ಆಗಮಿಸಿದ್ದಾರೆ. ಇವರನ್ನು ಕಂಡು ಸಂಭಾಷಿಸಲು ಯಾರಿಗೂ ಅವಕಾಶ ಕೊಡಲಾಗುವುದಿಲ್ಲ.

# ಗುರುವರ್ಗದವರ ಕರ್ತವ್ಯ.

(ಲೇಖಕರು— ಶ್ರೀ. ಶಂಕರಲಿಂಗ ಸ್ವಾಮಿಗಳು ಹಂಚಿಗಿ.)

ವೀರಶೈವರಲ್ಲಿ ವರ್ಣಭೇದ ಕಲ್ಪನೆ ವೀರಶೈವ ಗುರುವರ್ಗದವರ ಶಕ್ತಿಯನ್ನು ನಾಶಮಾಡುವ ದೊಡ್ಡದೊಂದು ಪಿಶಾಚಿಯೇ ಎಂದು ಹೇಳುವದು ದ್ವೇಷದ ಮಾತಲ್ಲ. ವೀರಶೈವರಲ್ಲಿಯ ಕೆಲವು ಪಂಗಡದವರು ಈ ವರ್ಣ ವ್ಯವಸ್ಥೆ ಘಾತಕವಾದುದೆಂದು ಹೇಳುತ್ತಾರೆ. ಆದರೆ ಪ್ರಯತ್ನ ಮಾಡುವದಿಲ್ಲ. ಯಾಕಂದರೆ ಪೂರ್ಣ ಪ್ರಸಾದ ಸಿಕ್ಕರೆ ಸಾಕು. ಮಠ ಬಿಟ್ಟು ಬೈಲಿಗೆ ಬರುವದಿಲ್ಲ. ಮಠದಲ್ಲಿಯೇ ತತ್ವಜ್ಞಾನ, ಮಠದಲ್ಲಿಯೇ ಶಿವಾನುಭವ, ಹೊರಗೆ ಹೋದರೆ ಪ್ರಸಾದದ ಜ್ಞಾನ, ಹೋದಲ್ಲಿ ಭಿಕ್ಷಾನುಭವ. ಎಂಥ ದೊಡ್ಡವರಾದರೂ ಇದೇ ಹಾಡು.

ನಾನು ಒಂದು ಸಾರೆ ಅಕ್ಕಲಕೋಟ ಸಂಸ್ಥಾನ ಪೈಕಿ ಮಂಗಳೂರ ಗ್ರಾಮಕ್ಕೆ ಹೋಗಿದ್ದೆ. ಅಲ್ಲಿ ಲಿಂಗಾಯತ ತಳವಾರಪೆಂಬ ಜಾತಿಯುಂಟು. ಅವರ ಮನೆಗಳಲ್ಲಿ ಜಂಗಮರು ಭಿಕ್ಷಾಕಾಯಕವನ್ನು ಮಾಡುತ್ತಾರೆ. ಪ್ರಸಾದ ಕಾಯಕವನ್ನು ಮಾಡುವದಿಲ್ಲ. ಮತ್ತು ಅವರ ಗುರುಗಳು ಜಂಗಮರೇ ಇದ್ದಾರೆ. ಅವರಿಗೆ ಲಿಂಗವನ್ನು ಇವರೇ ಕಟ್ಟುತ್ತಾರೆ. ಮತ್ತು ವರ್ಷಕ್ಕೊಮ್ಮೆ ಕಾಣಿಕೆಯನ್ನು ಬಿಡದೇ ತಕ್ಕೊಳ್ಳುತ್ತಾರೆ. ಇಷ್ಟಾದರೂ ಬಳಿಕೆಯಲ್ಲಿ ಅವರನ್ನು ತಕ್ಕೊಂಡಿಲ್ಲ. ಅವರಾದರೂ ವೀರಶೈವ ಗುರುವರ್ಗಕ್ಕೆ ಬಹಳೇ ಹೇಳಿಕೊಂಡರು. ಅವರ ಗುರುಗಳಾದರೂ ಪ್ರಯತ್ನ ಮಾಡುತ್ತೇವೆ ಎಂದು ಹೇಳಿದರೂ ಅದೇನೂ ಫಲಕಾರಿಯಾಗಲಿಲ್ಲ. ಗುರುಗಳ ಬಾಯಲ್ಲಿ ಬಣ್ಣದ ಮಾತೇ ಹೊರ್ತು ಕೈಯಿಂದ ಕಾರ್ಯವಿಲ್ಲ. ಮತ್ತು ವೀರಶೈವ ಗುರುವರ್ಗಕ್ಕೆ ನನ್ನ ಸವಿನಯ ವಿನಂತಿ ಏನಂದರೆ, ಅವರು ನಿಮ್ಮನ್ನು ಸಿಂಹಾಸನದ ಮೇಲೆ ಕೂಡ್ರಿಸಿ ಪಾದಪೂಜೆ ಏಕೆ ಮಾಡುತ್ತಾರೆಂಬುದು ನಿಮಗೆ ಗೊತ್ತಿಲ್ಲವೆ? ಪಾಲಿಕೆಯ ಮೇಲೆ ಕೂಡ್ರಿಸಿ ನಿಮ್ಮನ್ನು ಮೆರೆಸುವದೇಕೆ? ನಿಮ್ಮಲ್ಲಿ ಅಂಥಾದ್ದೊಂದು ಸಾಮಥ್ರ್ಯವದೆ ಎಂದು ನಿಮಗೆ ಶರಣು ಹೋಗುತ್ತಾರಲ್ಲವೆ? ಸಾಮರ್ಥ್ಯವಿದ್ದರೆ ಅದನ್ನು ಈಗ ಉಪಯೋಗ ಮಾಡುವ ಕಾಲ ಬಂದಿದೆ.

ಯಾಕಂದರೆ ನಾನು ಇದೇ ನವ್ಹಂಬರ ತಿಂಗಳಲ್ಲಿ ಲೋಣಾವಳಿಗೆ ಹೋದಾಗ್ಗೆ ಒಬ್ಬ ಮುಸಲ್ಮಾನ್ ಮುಂದಾಳು ಭಾಷಣಮಾಡಿದರು. ಏನಂದರೆ, ನನ್ನ ಶರೀರ ಇರುವವರೆಗೆ ವರ್ಷಕ್ಕೆ ಇಬ್ಬರನ್ನಾದರೂ ಹಿಂದುವನ್ನು ಮುಸಲ್ಮಾನರನ್ನಾಗಿ ಮಾಡುತ್ತೇನೆಂದು ಸಭೆಯಲ್ಲಿ ಕೂಗಿ ಹೇಳಿದರು. ನಾನಾದರೂ ಅಲ್ಲಿಯೇ ಇದ್ದೆನು. ಅದನ್ನು ಕೇಳಿ ನನಗೆ ತಾಪವಾಯಿತು. ನಮ್ಮ ಸಮಾಜದಲ್ಲಿಯೂ ಬೇರೆ ಧರ್ಮದವರನ್ನು ತಕ್ಕೊಳ್ಳುವದೊತ್ತಟ್ಟಿಗಿರಲಿ ನಮ್ಮ ಸಮಾಜದಲ್ಲಿಯ ಒಡಕುಗಳನ್ನು ತೆಗೆಯುತ್ತೇನೆಂದು ಹೇಳುವವರು ಅದರಂತೆ ಕೃತಿಯಲ್ಲಿ ತರುವವರು ಹುಟ್ಟಬಾರದೆ? ಎಂದು ನನ್ನ ಮನಸ್ಸಿಗೆ ನಾನು ಅಂದುಕೊಂಡೆನು.

ಗುರುವರ್ಗವೆ, ನೋಡಿರಿ; ಪರಧರ್ಮದವರ ಶೂರತನವನ್ನು. ಇದನ್ನು ನೋಡಿಯಾದರೂ ಸಿದ್ಧರಾಗಿರಿ. ನಿಮ್ಮ ಸಿಂಹಾಸನವು ಕಾಲು ಮೇಲಾಗಿ ಬೀಳುವ ಪ್ರಸಂಗ ಬಂದೀತು. ಬರೇ ನಿಮ್ಮ ಆಡಂಬರದ ಸ್ನಾನ, ಪೂಜೆ, ಮಡಿ, ಮೈಲಿಗೆಯ ಶೂರತನವನ್ನು ಬಿಡಿರಿ. ಸಮಾಜ ಸೇವೆಯೇ ಲಿಂಗಪೂಜೆಯೆಂದು ತಿಳಿದು ಸರ್ವ ಪಂಗಡದವರು ನಮ್ಮ ಬಂಧುಗಳೆಂದು ತಿಳಿದು ಅವರ ಸೇವೆಯನ್ನು ಮಾಡಿರಿ. ಇದೇ ನಿಮ್ಮ ಕರ್ತವ್ಯವು. ಆದ್ದರಿಂದಲೇ ನಿಮಗೆ ಉಚ್ಚ ಪೀಠದಲ್ಲಿ ಕೂಡ್ರಿಸಿ ಪೂಜಿಸುವೆವು. ಮತ್ತು ಮಠದ ಆಸ್ತಿಯನ್ನು ನಿಮ್ಮ ಪಾದಕ್ಕೆ ಅರ್ಪಿಸಿರುವೆವು.

ಇನ್ನು ಮೇಲೆ ಭಕ್ತ ಜನರಿಗೆ ವಿನಂತಿ ಏನಂದರೆ, ಯಾವ ಪಟ್ಟಕ್ಕಾದರೂ ಅಧಿಕಾರ ಮಾಡಬೇಕಾದರೆ ೪೦ ವರ್ಷಗಳ ವರೆಗೆ ಮಠದ ಆಸ್ತಿಯನ್ನು ಅವರ ಸ್ವಾಧೀನಕ್ಕೆ ಕೊಡಬೇಡಿರಿ. ಅವರಿಗೆ ಇಂದ್ರಿಯ ನಿಗ್ರಹ ಸಾಧನವನ್ನು ಮಾಡಲಿಕ್ಕೆ ಹಚ್ಚಿರಿ. ಜಗತ್ತಿನಲ್ಲಿ ಶ್ರೇಷ್ಠಸಾಧನವೆಂದರೆ ಇದೇ. ಇಂದ್ರಿಯ ನಿಗ್ರಹ ಶಕ್ತಿ ಇಲ್ಲದಿದ್ದರೆ ಸರ್ವವೂ ವ್ಯರ್ಥವೆಂದು ನನ್ನ ೧೦ ವರ್ಷದ ಅನುಭವವು.

ಆದ್ದರಿಂದಲೇ ನಾನು ಇದನ್ನು ಒತ್ತಿ ಹೇಳುತ್ತೇನೆ. ನೀವು ಅವರ ರೂಪಕ್ಕೂ ಜ್ಞಾನಕ್ಕೂ ಮರುಳಾಗಬೇಡಿರಿ. ಇಂದ್ರಿಯ ನಿಗ್ರಹ ಶಕ್ತಿ ಒಂದನ್ನೇ ನೋಡಿರಿ. ಏನಂದರೆ ನೀವು ಕುದುರೆಯ ವ್ಯಾಪಾರಕ್ಕೆ ಹೋದಾಗ್ಗೆ ಅದರ ರೂಪವನ್ನೂ ಕಣ್ಣು ಕಾಲು ಮೊದಲಾದ ಅವಯವಗಳನ್ನೂ ವಿಶೇಷ ಲಕ್ಷಗೊಟ್ಟು ನೋಡದೆ ಅದರ ಸುಳಿಯನ್ನೇ ಹೇಗೆ ಲಕ್ಷಗೊಟ್ಟು ನೋಡುವಿರೋ ಅದರಂತೆ ಇವರಲ್ಲಿಯಾದರೂ ಇಂದ್ರಿಯ ನಿಗ್ರಹ ಶಕ್ತಿಯ ಸುಳಿಯನ್ನೇ ವಿಶೇಷ ಲಕ್ಷಗೊಟ್ಟು ನೋಡಿರೆಂದು ನಾನು ನಿಮಗೆ ಅಂತಃಕರಣ ಪೂರ್ವಕವಾಗಿ ಹೇಳುತ್ತೇನೆ. ಯಾಕಂದರೆ ಸುಳಿ ಇಲ್ಲದೆ ಸುಳಿಯುವ ವ್ಯಕ್ತಿಗಳು ನನ್ನ ಕಣ್ಣಿಗೆ ಅಲ್ಲಲ್ಲಿ ತೋರುತ್ತಾರೆ. ಹೀಗಾದದ್ದು ನಮ್ಮ ಸಮಾಜದ ದುರ್ದೈವವೇ ಸರಿ. ಇನ್ನು ಮೇಲಾದರೂ ಭಕ್ತರೂ ಗುರುವರ್ಗದವರೂ ಎಚ್ಚರಾಗಿರೆಂದು ನನ್ನ ಪ್ರೀತಿಯ ಮಾತು.

---

## ನೈಜಾಮ ಪ್ರಾಂತಿಕ ವೀರಶೈವ ಪರಿಷತ್ತು
## ಲಾ ತೂ ರು.

ಲಾತೂರು ತಾ. ೫-೧೨-೩೭ ನೇ ದಿವಸ ಪಾಸೆಮನಿ ಮಠದಲ್ಲಿ ಸಭೆಸೇರಿ ಶ್ರೀಮಂತ ಶಂಕರಪ್ಪ ಉಟಗೆ ಪ್ರಭುಅಪ್ಪಾ ಜವಳೆ ಮನ್ಮಥಪ್ಪಾ ಕೆರಾಳೆ ಮನ್ಮಥಪ್ಪಾ ರಾಜೋಟೆ ಚನ್ನಪ್ಪಾ ಅಂಕಲಕೋಟೆ ಮುಂತಾದವರು ವ್ಯವಸ್ಥಾಪಕರು. ಶ್ರೀಮಂತ ತ್ರಿಂಬಕಪ್ಪಾ ಗಿರವಲಕರ, ಪ್ರಭುಅಪ್ಪಾ ನಿಗುಡಗೆ, ವೈಜನಾಥಪ್ಪಾ ಶೆಟೆ, ವೈಜನಾಥಪ್ಪಾ ಕೊರೆ ಕೋಶಾಧ್ಯಕ್ಷ ಮತ್ತು ಪ್ರಚಾರಕ ಕಾಯದೆ ಸಲ್ಲಾಗಾರರು. ಶ್ರೀ. ಮಲಕಾರ್ಜುನಪ್ಪಾ ತೋಡಕರ, ಶ್ರೀ. ಸಂಗ್ರಾಮಪ್ಪ ಶೆಟಕಾರ, ಶ್ರೀ. ನಾಗನಾಥ ಸ್ವಾಮಿ ವಕೀಲ ಸೆಕ್ರೆಟರಿ. ಶ್ರೀ. ದೇಶಿಕೇಂದ್ರ ಮಹಾರಾಜ ಇದರಂತೆ ಆರಿಸಲ್ಪಟ್ಟಿರುತ್ತಾರೆ. ಪ್ರತಿಯೊಂದು ಜಿಲ್ಲೆಯ ವೀರಶೈವ ಮುಂದಾಳು ಜನರು ಸಭಾಸದರ ಸಂಖ್ಯೆ ಬೆಳೆಯಿಸಿ ಕಾರ್ಯ ಯಶಸ್ವಿ ಮಾಡಬೇಕಾಗಿ ಕೋರಿಕೆ. ಎಲ್ಲ ಪತ್ರವ್ಯವಹಾರ ಸೆಕ್ರೆಟರಿ ಹೆಸರಿನಿಂದ ಮಾಡಬೇಕು.

ಸೆಕ್ರೆಟರಿ.

ಶ್ರೀ. ದೇಶಿಕೇಂದ್ರ ಮಹಾರಾಜ

ಲಾತೂರು.

## ಸಂತತಿ ನಿಯಮನ.

ಮುಂಬೈಯಿಯ ಶ್ರೀ ಕಾವಸಜಿ ಜಹಾಂಗಿರ ಭವನದಲ್ಲಿ ಶ್ರೀ. ಭುಲಾಭಾಯಿ ದೇಸಾಯಿ ಇವರ ಅಧ್ಯಕ್ಷತೆಯಲ್ಲಿ "ಸಂತತಿ ನಿಯಮನ" ವಿಷಯ ವಿವೇಚನೆಗಾಗಿ ಸಭೆ ಕೂಡಿದ್ದಿತು. ಹಿಂದಿ ರಾಷ್ಟ್ರೋನ್ನತಿಗಾಗಿ ಸಂತತಿ ನಿಯಮನವು ಅತ್ಯಾವಶ್ಯಕವೆಂದು ಒಂದು ನಿರ್ಣಯವಾಯಿತು. ಶ್ರೀ. ಜಮನಾದಾಸ ಮೆಹತಾ, ಶ್ರೀ. ಶಹ ಮೊದಲಾದವರು ಸಂತತಿ ನಿಯಮನವು ಅತ್ಯಗತ್ಯವಾಗಿದೆಯೆಂದು ಭಾಷಣಮಾಡಿದರು.

## ಕನ್ನಡ ಕಂದನ ಕರುಣ!

(ಹೆ. ದು. ಛ. ಅಂಕಲಗಿ ಅಥರಗಾ.)

ಆ ಮಾತೆ ಮಮಮಾತೆ|
ಚೆಲ್ವ ಚೆನ್ನೆಯಮಾತೆ|
ಸಿರಿಮಾತೆ ಪ್ರಿಯಮಾತೆ ನನ ತಾಯೀ||
ಮಾಮಾತೆ ಭೂಮಾತೆ|
ಕನ್ನಡದ ನನ ಮಾತೆ|
ಕರುಣಮಾಡಿ ತೋರೆನಗೊಮ್ಮೆ ತಾಯೀ ||೧||

ಹಿಂದೊಮ್ಮೆ ಮೆರೆದಾಡಿ|
ಇಂದೊಮ್ಮೆ ತಿರುಗಾಡಿ|
ಮುಂದೊಮ್ಮೆ ಮೆರೆಯುವ ಕಾಲವು ತಾಯೀ||
ಎಂದಿಗೂ ಹೊಣೆಯಿಲ್ಲ|
ಇಂದಿಗೂ ಗತಿಯಿಲ್ಲ|
ಮುಂದೆಂದು ಬರುವಿ ಹೇಳು ನೀ ತಾಯೀ ||೨||

ಏನು ಹೇಳಲಿ— ನಿನ್ನ|
ಆ ಮುಂಚಿನ ಸೌಂದರ್ಯ|
ಕಾರಮಿಂಚಿನ ಮೇಘದಂತೆ ತಾಯೀ||
ಇನ್ನೊಮ್ಮೆ ಆ ಚೆಲವು|
ನನಗೊಮ್ಮೆ ಅತರವು|
ಮತ್ತೊಮ್ಮೆ ತೋರಿಸವ್ವ ನನ ತಾಯೀ ||೩||

ಆ ನಾಡು ಈ ನಾಡು|
ಕರಿನಾಡು ಬೆಳೆನಾಡು|
ಮಲೆನಾಡಿನ ನಿನ ಸೊಬಗೇನ ತಾಯೀ||
ನಿನ್ನ ಕೊಡಗಿನ ಬೆಡಗು|
ನಿನ್ನ ಬಡಗಣ ಬಲವು|
ಇನ್ನೊಮ್ಮೆ ಸಡಗರದಿ ಕಾಣು ತಾಯೀ ||೪||

ನಿನ್ನ ಮೈಸೂರ ಸಿರಿ|
ನಿನ್ನ ಅರಸಿನ ದಾಸಿ|
ನಿನ್ನ ಸೇವೆಯ ಮಾಡಿ ಮಾಡಿ, ತಾಯೀ||
ನಿನ್ನ ಕರುಣವಿಲ್ಲದೆ|
ನಿನಗಾಗಿ ಹಂಬಲಿಸಿ|
ತಾನಾಗಿ ತಾ ತಿರುಗುತಿಹುದು ತಾಯೀ ||೫||

ಆ ಬನವಾಸಿಯ ವನ|
ನಿನ ತವರು ಮನೆಯಾಗಿ|
ಆನಂದದಿಂ ಕುಣಿದಾಡುವ ತಾಯೀ||
ಈ ಬಯಕೆ ಎಂದಿಂದು|
ಈಗೊಮ್ಮೆ ಅಡಿಪ್ಪೆ|
ಇಂದೇಕೆ ನಲಿಯಬಾರದೆನ ತಾಯೀ ||೬||

ನಿನ್ನ ಹಂಪೆಯ ಸೊಂಪು|
ಮುನ್ನೊಮ್ಮೆ ಹಾಳಾಗಿ|
ಇನ್ನೊಮ್ಮೆ ಏಳದಂತಾಗ ತಾಯೀ||
ನಿನ್ನ ನವ ತರುಣಂಗೆ|
ಎಚ್ಚರಿಸಿ ಬಲಕೊಟ್ಟು|
ಇನ್ನೊಮ್ಮೆ ಹುರಿದುಂಬಿಸವ್ವ ತಾಯೀ ||೭||

ನಿನ್ನ ನಾಡಿನ ನುಡಿಯು|
ನಿನ್ನ ನಾಡಿನ ನಡೆಯು|
ನಿನ್ನ ಜಾಣ್ಮೆಯ ಕೌತುಕೇನ ತಾಯೀ||
ನಿನ್ನ ನಾಡಿನ ಉಡುಪು|
ನಿನ್ನ ನಾಡಿನ ಒಡಪು|
ಇನ್ನಾವಾಗ್ಗೆ ತೋರುವೆ ನೀ ತಾಯೀ ||೮||

ಆ ಮರಾಠರ ಮಾಟ|
ಆ ತೆಲುಗರ ಕಾಟ|
ಆ ತಮಿಳರ ತಲೆ ತಾಪೇನ ತಾಯೀ||
ಆ ಮಲಿಯಾಳರಾಟ|
ಈ ಮಾಯಾಟ ನೀಗಿ|
ಈ ಮಹಾನಾಡು ನೀನಾಗು ತಾಯೀ ||೯||

ಈ ಮೊದಲಿನ ಕೀರ್ತಿಯು|
ಈ ನಡುವೆ ಬಿದ್ದಿತ್ತು|
ಇನ್ನೊಮ್ಮೆ ಹೊರಹೊರಡು ತಾಯೀ||
ಈ ಮುನ್ನಾಡ ಗುಡಿಯು|
ಇನ್ನೆಂದಿಗೇರುವದು|
ನೀನಿಂದು ದಯಮಾಡಿ ಪೇಳು ತಾಯೀ ||೧೦||

ಏಳು ಏಳಲೆ ತಾಯಿ|
ಏಳು ನಾಡಿನ ತಾಯಿ|
ಏಳು ಎದ್ದೇಳು ಹೊಡೆದೆದ್ದು ತಾಯೀ||
ಏಳು ಮುಸುಕನು ತೆರೆದು|
ಏಳು ಸುಸ್ವರಗೈದು|
ಏಳೇಳು ನೀನು ಮಲಗಿರುವ ತಾಯೀ ||೧೧||

ವಂದಿಸುವೆ ನಿನಗೊಂದು|
ಚಂದದಿಂದಲಿ ನಿಂದು|
ಮಂದ ಭಾಗ್ಯ ನಾನೆಂದು ತಿಳಿ ತಾಯೀ||
ಇಂದುಮತಿ ನೀನಿಂದು|
ಕಂದನನ ನುಡಿಗೇಳಿ|
ಅಂದದಿಂದಲಿ ಬಂದು ಕಾಯೆ ತಾಯೀ ||೧೨||

---

# ಆಯುರ್ವೇದ ಸಮ್ಮೇಲನ.

## ಸ್ವಾಗತ ಸಮಿತಿಯ ಸಾಧಾರಣ ಸಭೆ.

### ಉಪಸಮಿತಿಗಳ ಆಯ್ಕೆ.

ಇದೇ ಡಿಶಂಬರ ತಿಂಗಳ ತಾ. ೨೪, ೨೫, ೨೬ ಈ ಮೂರು ದಿನಗಳಲ್ಲಿ ಅ. ಕ. ಆ. ಸಮ್ಮೇಳನವು ರಾಯಚೂರಿನಲ್ಲಿ ನೆರವೇರುವುದು. ಈ ಸಮ್ಮೇಳನದ ಸ್ವಾಗತಾಧ್ಯಕ್ಷರು ಈ ಊರಿನ ಪ್ರಮುಖ ವಕೀಲರೂ, ಮುಂದಾಳುಗಳೂ ಆದ ಶ್ರೀ. ಪಿ. ಕೃಷ್ಣರಾಯರು. ಸಮ್ಮೇಳನದ ಅಧ್ಯಕ್ಷರು ಮೈಸೂರಿನ ಗವ್ಹರ್ನಮೆಂಟ ಆಯುರ್ವೇದಿಕ ಹಾಸ್ಪಿಟಲ್‌ನ ಸೂಪರಿಂಟೆಂಡೆಂಟರಾದ ಶ್ರೀ. ವೈ. ಲಕ್ಷ್ಮೀನರಸಿಂಹ ಶಾಸ್ತ್ರಿಗಳವರು. ತದ್ವಿದ್ಯ ಸಮ್ಮೇಳನದ ಅಧ್ಯಕ್ಷರು, ಶ್ರೀ. ಆದ್ಯ ಅನಂತಾಚಾರ್ಯರು. ಸಮ್ಮೇಳನದ ಸಮಯದಲ್ಲಿ ನಡೆಯಲಿರುವ ಪ್ರದರ್ಶನದ ಉದ್ಘಾಟನ ಸಮಾರಂಭವನ್ನು ನೆರವೇರಿಸುವವರು ಶ್ರೀ. ಆರ್. ಕೆ. ವಾಳ್ವೇಕರ B. Sc ವೈಸ್ ಪ್ರಿನ್ಸಿಪಾಲ ಪ್ರೇಮವಿದ್ಯಾಪೀಠ ತುಂಗಭದ್ರಾ ಇವರು. ಇದೇ ಸಮಯದಲ್ಲಿ ಸ್ತ್ರೀಯರಿಗಾಗಿ ಪ್ರತ್ಯೇಕವಾಗಿ ಏರ್ಪಡಿಸಿದ ಸಭೆಯ ಅಧ್ಯಕ್ಷಸ್ಥಾನವನ್ನು H. H. ಮಹಾರಾಜಾ ಆಫ್ ಸೌಂದ ಇವರ ಪುತ್ರಿಯರು ಶ್ರೀಮಂತ ರಾಜಾ ಅಮರೇಶ್ವರಾವ ಸಂಸ್ಥಾನ ಮೆದಿಕಿನಹಾಳ ಇವರ ಪತ್ನಿಯರು ಆದ ಶ್ರೀಮತಿ ರಾಜೇಶ್ವರಿದೇವಿಯವರು ವಹಿಸುವರು.

ಸ್ವಾಗತ ಸಮಿತಿಯ ಸಾಧಾರಣ ಸಭೆಯು (General) ತಾ. ೩೦-೧೧-೩೭ ನೇ ದಿನ ಸಾಯಂಕಾಲ ೫ ಗಂಟೆಗೆ ಶ್ರೀ. ಪಿ. ಕೃಷ್ಣರಾಯರ ಮನೆಯಲ್ಲಿ ಶ್ರೀಮಾನ್ ಪಿ. ಕೃಷ್ಣರಾಯರ ಅಧ್ಯಕ್ಷತೆಯಲ್ಲಿ ಕೂಡಿ ಕೆಳಗೆ ಕಾಣಿಸಿದಂತೆ ಸಮ್ಮೇಳನವು ಸುರುಳಿತವಾಗಿ ನಡೆಯಲುಬೇಕಾದ ಉಪಸಮಿತಿಗಳನ್ನು ನಿಯಮಿಸಲಾಯಿತಲ್ಲದೆ ಅನೇಕ ವಿಷಯಗಳನ್ನು ಚರ್ಚಿಸಲಾಯಿತು.

(೧) ಈ ಮೊದಲೇ ಕಾರ್ಯಕಾರಿಮಂಡಲವು ನಿಯೋಜಿಸಿದಂತೆ ಶ್ರೀ. ಪಿ ಕೃಷ್ಣರಾಯರನ್ನು ಸ್ವಾಗತಾಧ್ಯಕ್ಷರನ್ನಾಗಿ ಆರಿಸಲಾಯಿತು.

(೨) ಕಾ. ಕಾ. ಮಂಡಲವು ಗೊತ್ತುಪಡಿಸಿದ ಸಮ್ಮೇಳನದ ಕಾರ್ಯಕ್ರಮವನ್ನು ಈ ಸಭೆಯಲ್ಲಿ ಅಂಗೀಕರಿಸಲಾಯಿತು.

(೩). ಸಮ್ಮೇಳನದ ಲೆಕ್ಕಪತ್ರದ ತಪಾಸನೆಗಾಗಿ ಶ್ರೀ. ಪಿ. ಗೋವಿಂದಾಚಾರ್ಯ ಮ್ಯಾನೇಜರ್ ಶ್ರೀ ಮಹಾ ಲಕ್ಷ್ಮೀ ದಕ್ಕನ್ ಬ್ಯಾಂಕ್ ಇವರನ್ನು ಆಡಿಟರನ್ನಾಗಿ ನಿಯಮಿಸಲಾಯಿತು.

(೪) ಕಾ. ಕಾ. ಮಂಡಲದವರು ಸಿದ್ಧಪಡಿಸಿದ ಸುಮಾರು ಎರಡು ಸಾವಿರ ರೂಪಾಯಿಯ ಅಂದಾಜು ಪತ್ರಿಕೆಯನ್ನು ಮಂಜೂರ ಮಾಡಲಾಯಿತು.

(೫) ಬೇರೆ ಬೇರೆ ಕಾರ್ಯಗಳಿಗಾಗಿ ಉಪಸಮಿತಿಗಳನ್ನು ಏರ್ಪಡಿಸಿದ್ದಾಗಿದೆ.

ಡಾ|| ರಾಮಕೃಷ್ಣ.
ಕಾರ್ಯದರ್ಶಿ.

---

# ಪಡನೂರ ಗ್ರಾಮದ ಏಕೀಕರಣ.

ಶ್ರೀಮನ್ನಿರಂಜನ ಸುಕ್ಷೇತ್ರ ಬಂಥನಾಳ ಶಿವಯೋಗಿಗಳವರ ಸುಬೋಧೆಯಿಂದ ಪಡನೂರಲ್ಲಿ ವೀರಶೈವ ಏಕೀಕರಣವಾದ ವಿಷಯವು ಈ ಮೊದಲೇ ತಮ್ಮೆಲ್ಲರಿಗೂ ವಿದಿತವಾಗಿರುವದಷ್ಟೆ. ಆ ಮಹಾಸ್ವಾಮಿಗಳವರೇ ಕಡೆಯ ದಿವಸ ತಮ್ಮ ಭಾಷಣದಲ್ಲಿ ಹಿಂದೂ ಜನರ ತತ್ವಜ್ಞಾನವು ಅದ್ವೈತವೂ ಅಭೇದವೂ ಆಗಿದ್ದರೂ ಈಗ ಮಾತ್ರ ಇತರ ದೇಶದವರಿಗಿಂತ ಇತರ ಮತದವರಿಗಿಂತ ಆಚರಿಸುವದರಲ್ಲಿ ಭೇದವನ್ನೇ ದ್ವೈತವನ್ನೇ ಮುಖ್ಯವಾಗಿಟ್ಟುಕೊಂಡಿರುವದು ಅತ್ಯಂತ ಹೇಯವಾದದ್ದಾಗಿದೆ. ಪ್ರಯುಕ್ತ ಎಲ್ಲರೂ ಅಭೇದ ಬುದ್ಧಿಯನ್ನೂ ಐಕ್ಯವನ್ನೂ ಆಚರಣೆಯಲ್ಲಿ ತಂದು ಶಾಂತಿಯನ್ನು ಅನುಭವಿಸಿರೆಂದು ಪಂಡಿತ ಪಾಮರರಿಗೆಲ್ಲರಿಗೂ ಅನುಭವಕ್ಕೆ ಬರುವಂತೆ ಉಪದೇಶ ಮಾಡಿ ಮಹತ್ವದ ಕಾರ್ಯದ ಮೂಲಕ ಲಚ್ಯಾಣಕ್ಕೆ ದಯಮಾಡಿಸಿದರು. ಆ ಶಿವಯೋಗಿಯವರ ಉಪದೇಶವು ಎಲ್ಲ ಜನರಿಗೂ ಪರಿಣಾಮವಾಗಿ ತಾರೀಖು ೨೫-೧೧-೩೭ ಶುಕ್ರವಾರ ದಿವಸ ಧಾರ್ಮಿಕ ಸಾಮಾಜಿಕ ಮೊದಲಾದ ವಿಷಯಗಳ ಬಗ್ಗೆ ಮತಭೇದವಾಗಿ ಮೂರು ಪಂಗಡಗಳಾಗಿರುವ ಪಡನೂರ ಸಮಸ್ತ ಜನರು ಮಹಾಸ್ವಾಮಿಗಳ ಮುಕ್ಕಾಮಾದ ಲಚ್ಯಾಣಕ್ಕೆ ಹೋಗಿ ಮಹಾಸ್ವಾಮಿಯವರ ಅಪ್ಪಣೆಯಂತೆ ಧಾರ್ಮಿಕವಾಗಿ ಸಾಮಾಜಿಕ ಮೊದಲಾದ ಎಲ್ಲ ವಿಷಯಗಳ ತೊಡಕನ್ನು ನಿಕಾಲೆ ಮಾಡಿಕೊಂಡು ಎಲ್ಲರೂ ಒಕ್ಕಟ್ಟಾಗಿ ಪಡನೂರಿಗೆ ಬಂದರು. ಈ ಕಾರ್ಯದಲ್ಲಿ ಶ್ರೀಯುತ ಗಣಪತರಾವ ಪಾಟೀಲ, ಶ್ಯಾಮರಾವ ಬಿರಾದಾರರ, ರಾಮಗೊಂಡಪ್ಪ ಅರವತ್ತಿನ, ರೇವಣಸಿದ್ಧಪ್ಪ ಗುರಭೆಟ್ಟಿ, ಮಲ್ಲಿಕಾರ್ಜುನಪ್ಪ ಬೈರಿಜಿ ಮೊದಲಾದವರು ವಿಶೇಷ ಸಾಹಸ ಮಾಡಿದರೆಂದು ಹೇಳಲು ಅಭಿಮಾನವೆನಿಸುತ್ತದೆ.

ಪ್ರತ್ಯಕ್ಷದರ್ಶಿ.

---



---

—ಹೈದರಾಬಾದ ಸಂಸ್ಥಾನದ ನಿಜಾಮ ಸರಕಾರವು ಆ ಸಂಸ್ಥಾನದ ಪ್ರಜೆಗಳ ಅಭಿಪ್ರಾಯವನ್ನು ವಿಚಾರಿಸಿಯೇ ಫೆಡರೇಶನ್ ವಿಚಾರವಾಗಿ ತನ್ನ ಅಭಿಪ್ರಾಯವನ್ನು ನಿರ್ಧರಿಸುತ್ತದೆಂತಲೂ ಈಗ ವ್ಹಾಯಿಸ್‌ರಾಯರು ಸಂಸ್ಥಾನಕ್ಕೆ ಆಗಮಿಸುತ್ತಿರುವುದಕ್ಕೂ ಇದಕ್ಕೂ ಯಾವ ಸಂಬಂಧವಿಲ್ಲವೆಂತಲೂ ಸರಕಾರದಿಂದಲೇ ಪ್ರಕಟವಾಗಿದೆ.

—ಸೊಲ್ಲಾಪುರ ನಗರ ಕಾಂಗ್ರೆಸ್ ಕಾರ್ಯದರ್ಶಿಗಳಾದ ಶ್ರೀ. ಲುಂಜೆಯವರು ಕಾಂಗ್ರೆಸ್ ಸರಕಾರದ ವಿಚಾರವಾಗಿ ಪ್ರಕಟಿಸಿದ್ದನ್ನು ಅಲ್ಲಿಯ ಕಾಂಗ್ರೆಸ್ ಕಮಿಟಿಯು ನಿಷೇಧಿಸಿತು. ಶ್ರೀ. ಲುಂಜೆಯವರು ತಮ್ಮ ಕೆಲಸದಿಂದ ನಿವೃತ್ತರಾದರು.

—ತಾ. ೨೬ ನೆಯ ದಿವಸ ಧಾರವಾಡಕ್ಕೆ ಮುಖ್ಯಮಂತ್ರಿಗಳಾದ ಶ್ರೀ. ಖೇರರು ಮತ್ತು ಅರ್ಥಸಚಿವರಾದ ಶ್ರೀ. ಲಠ್ಠೆಯವರು ಬಂದಾಗ ಹತ್ತು ಸಾವಿರ ಒಕ್ಕಲಿಗರು ಅವರ ಕಡೆ ದೂರು ಹೇಳಿಕೊಳ್ಳಲು ಬರುವರು. ಈ ಒಕ್ಕಲಿಗರ ಮುಂದಾಳು ಧಾರವಾಡ ತಾಲೂಕ ಕಾಂಗ್ರೆಸ್ ಕಮಿಟಿ ಸೆಕ್ರೆಟರಿ ಮತ್ತು ಸೋಶಲಿಷ್ಟ ಮುಂದಾಳು ಭಾಯಿ ಶಂಕರ ಕುರ್ತಕೋಟಿ ಇವರು ಇದ್ದಾರೆ,

—ಲಂಡನ್ ಕಾಮನ್ಸ ಸಭೆಯಲ್ಲಿ ಒಂದು ಪ್ರಶ್ನೆಗೆ ಉತ್ತರವಾಗಿ ಲಾರ್ಡ ಸ್ಟನ್‌ಲೆಯವರು ಹಿಂದಿ ರಾಜ್ಯಘಟನೆಯ ಪ್ರಕಾರ ಫೆಡರೇಶನ ಪದ್ಧತಿಯೂ ಆಚರಣೆಯಲ್ಲಿ ಬರುವ ಸಿದ್ಧತೆಗಳೆಲ್ಲಾ ನಡೆದಿವೆಯೆಂದು ಹೇಳಿದರು.

—ಜಮಖಂಡಿಯಲ್ಲಿ ಕೂಡುವ ೨೨ ನೆಯ ಅಖಿಲ ಕರ್ನಾಟಕ ಸಾಹಿತ್ಯ ಪರಿಷತ್ತಿಗೆ ಶ್ರೀಮಾನ್ ವೆಂಕಟ ನಾರಣಪ್ಪನವರು ಎಂ. ಎ. ಇವರು ಅಧ್ಯಕ್ಷರಾಗಿ ಆರಿಸಲ್ಪಟ್ಟದ್ದಾರೆ. ಪರಿಷತ್ತಿಗೆ ಕನ್ನಡ ಸಾಹಿತಿಗಳೆಲ್ಲರೂ ಹೋಗಿ ಯಶಸ್ವಿಯಾಗುವಂತೆ ಮಾಡಬೇಕು,

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣಮಂದಿರದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರ, ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ!
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ‖ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೨೦ ನೆಯ ಡಿಶಂಬರ್ ೧೯೩೭. | ಸಂಚಿಕೆ೧೭

ಜನಸೇವೆಯೇ ದೇವರಸೇವೆ.

## ಚೀನದಲ್ಲಿ ನರಯಜ್ಞ!

ಜಪಾನವು ಚೀನದ ರಾಜಧಾನಿಯಾದ ನಾನಕಿಂಗ್ ಕೈವಶಮಾಡಿಕೊಂಡಿತು.
ಮೂರು ಲಕ್ಷ ಚೀನಿ ಸೈನಿಕರು ಮೃತಪಟ್ಟರು.

ಮುಂಬಯಿ ಸರಕಾರವು
ಸರಕಾರದ ಸಹಾಯ ಹೊಂದುವ ದೇವಾಲಯಗಳಲ್ಲಿ ಆದಿ ಹಿಂದುಗಳ
ಪ್ರವೇಶಕ್ಕೆ ಅವಕಾಶ ಕಲ್ಪಿಸಿಕೊಡುವುದು.

ಕರ್ನಾಟಕಕ್ಕೆ ಮುಖ್ಯ ಮಂತ್ರಿಗಳೂ ಅರ್ಥಸಚಿವರೂ
ಬರುವುದು ನಿಂತಿತು.

ಅಂದಮಾನದ ೧೧೦ ರಾಜಕೈದಿಗಳು ಹಿಂದುಸ್ಥಾನಕ್ಕೆ ಜನವರಿ
೧೯ ನೆಯ ತಾರೀಖಿನ ದಿನ ಹೊರಡುವರು.

ಲಾಹೋರದಲ್ಲಿ ಸರದಾರ ಗುರುಬಕ್ಷಸಿಂಗ ಇವರನ್ನು
ಒಬ್ಬ ಮುಸಲ್ಮಾನನು ಕೊಲೆ ಮಾಡಿದನು.

ಶ್ಯಾಮಕುಮಾರಿ ನೆಹರು - ಜಮೀಲಖಾನರ ವಿವಾಹವಾಯಿತು!

ದೇಹವೇ ದೇವಾಲಯ.



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೨೦ನೆಯ ಡಿಶಂಬರ್ ೧೯೩೭. | ಸಂಚಿಕೆ ೧೮


## ಮಹತ್ವದ ಸುದ್ದಿಗಳು.

ಗಾಂಧೀಜಿಯವರ ಪ್ರಕೃತಿಯು ಸುಧಾರಿಸತ್ತಾ ಇದೆ. ಅಂದಮಾನ ರಾಜಕೈದಿಗಳು ಅನ್ನತ್ಯಾಗ ಸತ್ಯಾಗ್ರಹವನ್ನು ಪ್ರಾರಂಭಿಸುವುದಾಗಿ ತಿಳಿಸಿದ್ದರಿಂದ ಈ ವಿಷಯವು ಇವರ ಅನಾರೋಗ್ಯಕ್ಕೆ ಕಾರಣವಾಗಬಹುದೆಂದು ಊಹಿಸಲಾಗಿದೆ.

—ಬಂಗಾಲ ಪ್ರಾಂತದ ಎಲ್ಲ ರಾಜಕೈದಿಗಳ ಬಿಡುಗಡೆ ಸಂಬಂಧವಾಗಿ ಗಾಂಧೀಜಿಯವರು ದೇಹಾರೋಗ್ಯ ಸುಧಾರಿಸಿದೊಡನೆ ಕಲಕತ್ತಾ ಪಟ್ಟಣಕ್ಕೆ ಹೋಗಿ ಅಲ್ಲಿಯ ಗವ್ಹರ್ನರರಾದ ಲಾರ್ಡ ಬ್ರೈಬರ್ನರವರನ್ನು ಕಾಣುವರೆಂದು ತಿಳಿದಿದೆ.

—ಕಲಕತ್ತಾ ಕಾರ್ಪೊರೇಶನ್ನಿನವರು (ಮುನಸಿಪಾಲ್ಟಿಯವರು) ಪ್ರಾಥಮಿಕ ಶಿಕ್ಷಣ ಹೊಂದುವ ಎಲ್ಲ ವಿದ್ಯಾರ್ಥಿಗಳಿಗೂ ಕ್ರಮಿಕ ಪುಸ್ತಕಗಳನ್ನು ಉಚಿತವಾಗಿ ಕೊಡಲು ಹತ್ತು ಸಾವಿರ ರೂ. ಗಳನ್ನು ವೆಚ್ಚಮಾಡುವವರಿದ್ದಾರೆ.

—ಜಪಾನ ದೇಶವು ೧೨ ಯುದ್ಧದ ಹಡಗಗಳನ್ನು ತೆಗೆದುಕೊಂಡು ಹಾಂಗ್ ಕಾಂಗದ ಕಡೆಗೆ ಹೊರಟು ಚೀನ ದೇಶದ ದಕ್ಷಿಣಕ್ಕೂ ದಾಳಿಯಿಡುವುದಾಗಿ ಊಹಿಸಲಾಗಿದೆ.

—ಧಾರವಾಡ ಮುನಸಿಪಾಲ್ಟಿಯ ಕಾರ್ಯ ತೃಪ್ತಿಕರವಾಗಿ ನಡೆಯದಿದ್ದರೆ ಅದನ್ನು ನಿಲ್ಲಿಸಿಬಿಡುವುದಾಗಿ ಧಾರವಾಡ ಜಿಲ್ಲಾ ಕಲೆಕ್ಟರರು ಮುನಸಿಪಾಲ್ಟಿಗೆ ತಿಳಿಸಿದ್ದಾರೆ.

—ಮಧ್ಯಪ್ರಾಂತ ಸರಕಾರವು ಮದ್ಯಶಾಖೆಯ ೨೫ ಲಕ್ಷ ರೂ. ಗಳ ಆದಾಯವನ್ನು ಗ್ರಾಮೋದ್ಯೋಗಗಳ ಅಭಿವೃದ್ಧಿಗಾಗಿ ವೆಚ್ಚಮಾಡುವದಿದೆ.

—ಮುಂಬೈ ಪ್ರಾಂತದ ಭೂಕಂದಾಯವನ್ನು ಕಡಿಮೆಮಾಡುವ ವಿಚಾರವಾಗಿ ಯೋಚಿಸಲು ಪ್ರಾಂತಿಕ ಅಸೆಂಬ್ಲಿಯ ಸಭಾಸದರ ಒಂದು ಸ್ಟ್ಯಾಂಡಿಂಗ್ ಕಮಿಟಿಯನ್ನು ಗೊತ್ತುಪಡಿಸಿದ್ದಾರೆ.

—ಸ್ವಾತಂತ್ರ್ಯ ದಿನವನ್ನಾಚರಿಸುವಾಗ ಮಾಡಲ್ಪಡುವ ಗೊತ್ತುವಳಿಯ ಮೇಲಿದ್ದ ನಿರ್ಬಂಧವನ್ನು ಮುಂಬೈ ಸರಕಾರವು ತೆಗೆದುಹಾಕಿತು.

—ಇಟಾಲಿ ಸರಕಾರವು ರಾಷ್ಟ್ರಸಂಘದಲ್ಲಿದ್ದ ತನ್ನ ಸಂಬಂಧವನ್ನು ತೆಗೆದುಹಾಕಿತು. ರಾಷ್ಟ್ರಸಂಘವು ಶಾಂತಿಸಂಘವಾಗಿರದೆ ಯುದ್ಧ ಸಿದ್ಧತೆಯುಕೂಟವೆಂದು ಮುಸೋಲಿನಿಯವರು ತಮ್ಮ ಭಾಷಣದಲ್ಲಿ ಹೇಳಿದರು.

ಮುಂಬೈ ಮೇಲೆ ಯುದ್ಧದ ವಿಮಾನಗಳು ಬಂದರೆ ಪಟ್ಟಣದ ದೀಪವನ್ನೆಲ್ಲಾ ಶಾಂತಗೊಳಿಸಿ ಹೇಗಿರಬೇಕೆಂಬುದನ್ನು ಜನವರಿ ೪ ನೆಯ ತಾರೀಖಿನ ದಿವಸ ಒಂದು ಪ್ರಯೋಗಮಾಡಿ ತೋರಿಸುವವರಿದ್ದಾರೆ.

—ಜಪಾನಿ ಸೈನ್ಯವು ಅಮೇರಿಕೆಯ ಹಡಗವನ್ನು ಮುಳುಗಿಸಿದ್ದರಿಂದ ಜಪಾನದ ಚಕ್ರವರ್ತಿಗಳು ಕ್ಷಮಾಪಣೆಯನ್ನು ಕೇಳಬೇಕಾಗಿ ಅಮೇರಿಕೆಯ ಅಧ್ಯಕ್ಷರಾದ ರುಜವೆಲ್ಟರು ಜಪಾನಕ್ಕೆ ತಿಳಿಸಿದ್ದಾರೆ.

—ಕರಾಚಿಯಲ್ಲಿ ಕಾಲೇಜಿನ ವಿದ್ಯಾರ್ಥಿಗಳಿಗೂ ಅಧ್ಯಾಪಕರಿಗೂ ಉಂಟಾದ ಭಿನ್ನಾಭಿಪ್ರಾಯದ ಕಲಹವು ಕೊನೆಗೆ ಹಿಂದು-ಮುಸಲ್ಮಾನ್ ಜಾತಿವಿಶಿಷ್ಟವಾಗಿ ಪರಿಣಮಿಸಿತು.

—ಬಾಬು ಸುಭಾಷಚಂದ್ರ ಬೋಸರಿಗೆ ಇಂಗ್ಲೆಂಡಿಗೆ ಬರಲು ಇದ್ದ ಪ್ರತಿಬಂಧವು ನಿವಾರಣೆಯಾದುದರಿಂದ ಜನವರಿ ೨ ಅಥವಾ ೩ ನೆಯ ತಾರೀಖಿಗೆ ಬೋಸರು ಲಂಡನ್ನಿಗೆ ಹೋಗುವರು. ಅವರ ಸ್ವಾಗತದ ಸಿದ್ಧತೆಯು ನಡೆದಿದೆ.

—ಮುಂಬೈ ಪ್ರಾಂತಿಕ ಅಸೆಂಬ್ಲಿಯ ಅಧಿವೇಶನವು ಜನವರಿ ೧೦ ನೆಯ ತಾರೀಖಿನ ದಿನ ಮುಂಬೈಯಲ್ಲಿ ಪ್ರಾರಂಭವಾಗುವುದು.

—ಮಧ್ಯವರ್ತಿ ಅಸೆಂಬ್ಲಿಗೆ ಶ್ರೀ. ಮಥುರಾದಾಸ ವಿಸನಜಿ ಇವರು ಸಭಾಸದರಾಗಿದ್ದರು. ಈಗ ತಮ್ಮ ಸಭಾಸದತ್ವವನ್ನು ಬಿಟ್ಟದ್ದರಿಂದ ಕಾಂಗ್ರೆಸ್ ಪಕ್ಷವು ಈ ಉಪಚುನಾವಣೆಗೆ ಶ್ರೀ. ಗೋವಿಂದಲಾಲ ಶಿವಲಾಲ ಇವರನ್ನು ಹುರಿಯಾಳಾಗಿ ನಿಲ್ಲಿಸಿದೆ.

# ಗಾಂಧೀಜಿಯವರ ಉಪದೇಶ.

### ಅಹಿಂಸೆಯ ರೀತಿ.

ಮನುಷ್ಯನಿಗೆ ಸೃಷ್ಟಿಯನ್ನುಂಟುಮಾಡುವ ಸಾಮರ್ಥ್ಯವನ್ನು ದೇವರುಕೊಟ್ಟಿಲ್ಲವಾದುದರಿಂದ ಅತ್ಯಂತ ಸೂಕ್ಷ್ಮವಾದ ಪ್ರಾಣಿಯನ್ನು ಕೊಲ್ಲಲು ಕೂಡಾ ಮನುಷ್ಯನಿಗೆ ಅಧಿಕಾರವಿಲ್ಲ.

ಅನ್ಯರಿಗೆ ಉಪದ್ರವವನ್ನು ಉಂಟುಮಾಡದಿರುವುದೇ ಅಹಿಂಸೆಯಲ್ಲ. ದುಷ್ಟನ ಮೇಲೆ ಪ್ರೇಮಮಾಡುವುದೂ ಅಹಿಂಸೆಯೇ ಆಗಿದೆ. ಹಾಗೆಂದರೆ ಆತನ ದುಷ್ಟಕಾರ್ಯಕ್ಕೆ ಸಹಾಯಮಾಡಬೇಕೆಂದಾಗಲಿ ಅಥವಾ ಅದಕ್ಕೆ ಅಧೀನವಾಗಬೇಕೆಂದಾಗಲಿ ಅಲ್ಲ. ಆತನ ಸಂಬಂಧವನ್ನೇ ಬಿಟ್ಟು ಆತನಿಗೆ ವಿರೋಧ ಮಾಡಬೇಕೆಂದೇ ಆ ನನ್ನ ಪ್ರೇಮವು ಹೇಳುತ್ತದೆ. ಆದರಿಂದ ಆತನ ದೇಹಕ್ಕೆ ಅಪಾಯವಾದರೂ ಚಿಂತೆಯಿಲ್ಲ.

ನನ್ನ ಮಗನು ದುಷ್ಟನಿದ್ದರೆ ಆತನ ಸಂಬಂಧವನ್ನೇ ನಾನು ಬಿಟ್ಟು ಬಿಡುವೆನು. ಆದರಿಂದ ಆತನಿಗೆ ಮರಣ ಬಂದರೂ ನಾನು ಚಿಂತಿಸುವುದಿಲ್ಲ ಆದರೆ ಆತನು ತನ್ನ ಕೃತಿಗಾಗಿ ಪಶ್ಚಾತ್ತಾಪಪಟ್ಟು ಬಂದದ್ದಾದರೆ ನಾನು ಆತನನ್ನು ಅಪ್ಪಿಕೊಳ್ಳುವೆನು. ನಾನು ನನ್ನ ಮಗನ ಸುಧಾರಣೆಯನ್ನಾದರೂ ಬಲಾತ್ಕಾರದಿಂದ ಮಾಡಲಾರೆನು.

—ಯಂಗ್ ಇಂಡಿಯಾ. ತಾ. ೨೫-೮-೨೦

## ಬುದ್ಧಿನಿಷ್ಠೆಯ ಯುಗಾರಂಭ!

ಶ್ರೀಯುತ ಪು. ಗ. ಸಹಸ್ರಬುದ್ಧೆ ಎಂ. ಎ. ಇವರು "ಬುದ್ಧಿನಿಷ್ಠೆ" ಎಂಬ ವಿಷಯದಲ್ಲಿ ಅತ್ಯಂತ ಮನನೀಯವಾದ ಒಂದು ಲೇಖನವನ್ನು "ಕಿರ್ಲೋಸ್ಕರ" ಪತ್ರಿಕೆಯಲ್ಲಿ ಬರೆದಿದ್ದಾರೆ. ಅದರ ಮುಖ್ಯಾಂಶ ಹೀಗಿದೆ—

"ಶಬ್ದ ಪ್ರಾಮಾಣ್ಯ ಯುಗವು ಅಸ್ತವಾಗಿ ಬುದ್ಧಿ ನಿಷ್ಠೆಯ ಯುಗವು ಈಗ ಉದಯವಾಗಿದೆ. ಎಂದರೆ ಯಾವುದೊಂದು ಕಾರ್ಯವು ಯುಕ್ತವೆ? ಅಯುಕ್ತವೆ? ನೀತಿಯೆ? ಅನೀತಿಯೆ? ಹಿತಕರವೆ? ಅಹಿತಕರವೆ? ಎಂಬುದನ್ನು ನಿರ್ಧರಿಸಬೇಕಾದರೆ ಹಿಂದಿನವರು ಗ್ರಂಥಗಳಲ್ಲಿ ಏನು ಬರೆದಿದ್ದಾರೆಂಬುದನ್ನು ನೋಡಿ ಹಿಂದಿನವರ ಶಬ್ದವನ್ನೇ ದೃಷ್ಟಾಂತವಾಗಿ ತೋರಿಸುವ ಕಾಲ ಅಸ್ತವಾಗುತ್ತಾ ಬಂದಿತು. ತಮ್ಮ ಬುದ್ಧಿಗೆ ಯಾವುದು ವಿಹಿತವೋ ಅದನ್ನೇ ಅನುಸರಿಸುವ ಕಾಲವು ಪ್ರಾಪ್ತವಾಗಿದೆ. ಈಗಲೂ ಅನೇಕರು ಗ್ರಂಥಾಧಾರವನ್ನೇ ತೋರಿಸುತ್ತಲೂ ಅದನ್ನೇ ನಂಬುತ್ತಲೂ ಇದ್ದಾರೆ. ಆದರೆ ಇಂಥವರ ಸಂಖ್ಯೆಯು ತರುಣರಲ್ಲಿ ಕಡಿಮೆಯಾಗುತ್ತಾ ಇದೆ.

ಗ್ರಂಥಾಧಾರವನ್ನೇ ಇಟ್ಟುಕೊಂಡವರು ಆಧುನಿಕ ಬುದ್ಧಿನಿಷ್ಠರನ್ನು ಕುರಿತು ಆಕ್ಷೇಪಿಸುವುದೇನೆಂದರೆ— "ವೇದಾಂತ ತತ್ವವನ್ನು ನೀವು ಅಲ್ಲಗಳೆಯುವಿರಲ್ಲಾ! ಶಂಕರಾಚಾರ್ಯರಿಗಿಂತ ನೀವು ಬುದ್ಧಿಶಾಲಿಗಳೇ? ಜನ್ಮವಿಶಿಷ್ಟವಾದ ಮೇಲು ಕೀಳುಗಳನ್ನೂ ಬ್ರಾಹ್ಮಣಾದಿ ವರ್ಣಗಳನ್ನೂ ಹೇಳಿದ ಮನುಸ್ಮೃತಿಯು ನಿಮಗೆ ಕಡ್ಡಿಗಿಂತ ಕಡೆಯಾಗಿ ಕಾಣುತ್ತದಲ್ಲವೆ? ಮನು ನಿಮಗಿಂತ ದಡ್ಡನಿದ್ದನೆ?"

ಈ ಪ್ರಕಾರ ಹಿಂದಿನ ಮಹಾ ಮಹಾ ಗ್ರಂಥಕಾರರಿಗೂ ಈಗಿನವರಿಗೂ ಹೋಲಿಸಿ ನಿಮಗಿಂತ ಅವರೇ ಬುದ್ಧಿಶಾಲಿಗಳಿದ್ದುದರಿಂದ ಅವರ ಗ್ರಂಥದಲ್ಲಿದ್ದುದೇ ಮಾನ್ಯವೆಂದು ಸನಾತನಿಗಳೆಂದು ಹೇಳಿಕೊಳ್ಳುವವರು ಪ್ರತಿಪಾದಿಸುವುದುಂಟು.

ಇವರು ಆ ಹಿಂದಿನ ಗ್ರಂಥಕಾರರನ್ನು ಈಗಿನವರಿಗೆ ಹೋಲಿಸುವುದೇಕೆ? ಹಿಂದೆ ಅವರ ಅಭಿಪ್ರಾಯವನ್ನೇ ಖಂಡಿಸಿದ ಮಹಾ ಮಹಾ ವಿದ್ವಾಂಸರಿಲ್ಲವೆ? ಶಂಕರಾಚಾರ್ಯರ ಮಾರ್ಗವನ್ನು ಖಂಡಿಸಿದ ಕುಮಾರಿಲಭಟ್ಟ, ಜೈಮಿನಿ, ಮೊದಲಾದವರಿಲ್ಲವೆ? ವಿರೋಧಾಭಿಪ್ರಾಯಕ್ಕೊಳಗಾಗದ ಒಂದು ಗ್ರಂಥವಾಗಲಿ ಅಥವಾ ಒಬ್ಬ ಮತಪ್ರವರ್ತಕನಾಗಲಿ ಇಲ್ಲವೇ ಇಲ್ಲ. ಎಲ್ಲ ಮತಸ್ಥಾಪಕರೂ ತಮ್ಮ ಹಿಂದಿನ ಮತಪ್ರವರ್ತಕರ ಆಚಾರ ವಿಚಾರಗಳನ್ನು ಖಂಡಿಸಿಯೇ ಇದ್ದಾರಷ್ಟೆ.

ಬುದ್ಧಿನಿಷ್ಠರು ತಾವೇ ಸರ್ವಜ್ಞರೆಂದು ತಿಳಿಯುವುದಿಲ್ಲ. ಮನುಷ್ಯ ಪ್ರಾಣಿಯು ಸರ್ವಜ್ಞನಲ್ಲವೆಂತಲೂ ಆತನಿಂದ ತಪ್ಪು ಸಂಭವಿಸುವುದು ಸ್ವಾಭಾವಿಕವೆಂತಲೂ ಹೇಳುತ್ತಾರೆ. ಆದರೆ ಧಾರ್ಮಿಕ ಗ್ರಂಥಕಾರರು ತಮಗೆ ದೇವರಿಂದ ಆಜ್ಞೆಯಾಗಿದೆಯೆಂದೂ ತಾವು ಹೇಳುವುದೆಲ್ಲಾ ದೇವರ ಅಪ್ಪಣೆಯೆಂದೂ ತಾವು ಬರೆದಿರುವುದು ತ್ರಿಕಾಲಾಬಾಧಿತವಾದುದೆಂದೂ ಹೇಳುತ್ತಾರೆ. ಎಂದಮೇಲೆ ಯಾರ ಮಾತನ್ನು ನಂಬುವುದು ವಿಹಿತವಾಗಿದೆ?

ಬುದ್ಧಿನಿಷ್ಠರು ಯಾವುದೊಂದು ಕೃತಿಯ ಹಿತಾಹಿತಗಳನ್ನು ಪ್ರಯೋಗದಿಂದಲೂ ಅನುಭವದಿಂದಲೂ ಅಭ್ಯಾಸದಿಂದಲೂ ಅರಿತುಕೊಳ್ಳಬೇಕೆಂದು ಹೇಳುತ್ತಾರೆ. ಈ ವರೆಗಿನ ಶೋಧದಿಂದ ಇಷ್ಟರಮಟ್ಟಿಗೆ ಗೊತ್ತಾಗಿದೆಯೆಂದೇ ಅವರು ನಿರ್ವಂಚನೆಯಿಂದ ತಿಳಿಸುತ್ತಾರೆ. ಮುಂದಿನ ಶೋಧದಿಂದ ಇಂದಿನ ತಿಳುವಳಿಕೆಯು ತಪ್ಪಾದುದಾಗಿ ಪರಿಣಮಿಸಬಹುದೆಂತಲೂ ಅವರು ಒಪ್ಪಿಕೊಳ್ಳುತ್ತಾರೆ.

ಆದರೆ ಗ್ರಂಥವಾದಿಗಳು ಇದಕ್ಕೆ ಒಪ್ಪುವುದೇ ಇಲ್ಲ. ಒಬ್ಬರು ಒಂದು ಕಾಲದಲ್ಲಿ ಹೇಳಿದ ಸಂಗತಿಗಳೇ ಎಲ್ಲರಿಗೂ ಎಲ್ಲ ಕಾಲಗಳಲ್ಲಿಯೂ ಸರಿಯಾಗಿಯೇ ಇರುತ್ತವೆಂದು ಆಗ್ರಹಪಡುತ್ತಾರೆ. ಇಂಥ ಗ್ರಂಥವಾದಿಗಳ ಸಂಖ್ಯೆಯು ಆಧುನಿಕ ಕಾಲದಲ್ಲಿ ಕಡಿಮೆಯಾಗುತ್ತಾ ಇದೆ. ಹೀಗಾಗುವುದೇ ಜನಾಂಗಕ್ಕೆ ಕ್ಷೇಮಕರವು. ವಿಜ್ಞಾನ ಶೋಧವು ಹೆಚ್ಚಿದಂತೆ ಬುದ್ಧಿನಿಷ್ಠರ ಸಂಖ್ಯೆಯು ಹೆಚ್ಚುವುದು.

ಬುದ್ಧಿನಿಷ್ಠರು ದೈವವಾದಿಗಳಲ್ಲ. ಹಣೆಬರಹದಲ್ಲಿ ಬರೆಯಲ್ಪಟ್ಟದ್ದು ಆಗೇ ಆಗುತ್ತದೆಂದು ಹೇಳುವವರಲ್ಲ. ಇವರು ಪ್ರಯತ್ನವಾದಿಗಳು. ಮನುಷ್ಯನು ಪ್ರಯತ್ನಶೀಲನಾಗಿ ತನಗೆ ಬರುವ ವಿಪತ್ತುಗಳನ್ನು ನಿವಾರಣೆ ಮಾಡಿಕೊಳ್ಳಬೇಕೆಂಬುದೇ ಇವರ ಸಿದ್ಧಾಂತ. ಹಾಗೆಂದಮಾತ್ರದಲ್ಲಿ ಮನುಷ್ಯನ ಎಲ್ಲ ಪ್ರಯತ್ನಗಳೂ ಜಯಪ್ರದವಾಗುತ್ತವೆಂದೇ ಇವರ ಅಭಿಪ್ರಾಯವಲ್ಲ. ಮಾನವ ಶಕ್ತಿಗೆ ಮೀರಿದ ಅದ್ಭುತ ಶಕ್ತಿಯು ವಿಶ್ವದಲ್ಲಿ ಸ್ವಾಭಾವಿಕವಾಗಿಯೂ ಇದ್ದೇ ಇದೆಯೆಂದು ಇವರು ತಿಳಿದಿದ್ದಾರೆ."

# ಗಾಂಧೀಜಿಯವರ ಸ್ವಾವಲಂಬಿ ಶಿಕ್ಷಣ.

## ವರ್ಧಾ ಸಮಿತಿಯ ವರದಿ.

ಕಳೆದ ಅಕ್ಟೋಬರ ೨೩ ನೆಯ ತಾರೀಖಿನ ದಿವಸ ಮಹಾತ್ಮಾ ಗಾಂಧಿಯವರ ಇಷ್ಟದಂತೆ ವರ್ಧಾದಲ್ಲಿ ಒಂದು ಶಿಕ್ಷಣ ಪರಿಷತ್ತು ಕೂಡಿದ್ದಿತಷ್ಟೆ. ಈ ದೇಶದ ಶಿಕ್ಷಣವು ಒಳ್ಳೆಯ ನಾಗರಿಕರನ್ನುಂಟುಮಾಡುವುದೂ ಸ್ವಾವಲಂಬಿಯಾದುದೂ ಆಗಬೇಕೆಂಬುದೇ ಗಾಂಧೀಜಿಯವರ ಉದ್ದೇಶವು. ಆದುದರಿಂದ ಅಂತಹ ಶಿಕ್ಷಣದ ಯೋಜನೆಯನ್ನು ಸಿದ್ಧಗೊಳಿಸಲು ಡಾ. ಜಕೀರ ಹುಸೇನ ಇವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯು ಏರ್ಪಟ್ಟಿದ್ದಿತು. ಆ ಸಮಿತಿಯಲ್ಲಿ ಈ ಕೆಳಗಿನ ಮಹಾಶಯರಿದ್ದರು—

ಶ್ರೀ. ಆರ್ಯ ನಾಯಕಂ, ಶ್ರೀ. ಖ್ವಾಜಾ ಗುಲಾಮಹುಸೇನ ಶ್ರೀ. ವಿನೋಬಾ ಭಾವೆ, ಶ್ರೀ. ಕಾಕಾಸಾಹೇಬ ಕಾಲೇಲಕರ, ಶ್ರೀ. ಕಿಶೋರಿಲಾಲ ಮಶ್ರುವಾಲಾ, ಪ್ರೊ. ಕುಮಾರಪ್ಪಾ, ಶ್ರೀ. ಕೃಷ್ಣದಾಸ ಜಾಜು, ಪ್ರೋ. ಕೆ. ಟಿ. ಶಹ, ಶ್ರೀಮತಿ ಆಶಾದೇವಿ.

ಈ ಒಂಬತ್ತು ಜನ ಸಭಾಸದರಲ್ಲಿ ಪ್ರೊ. ಶಹ ಇವರ ವಿನಾ ಎಂಟು ಜನರು ಒಪ್ಪಿದ ವರದಿಯನ್ನು ಅಧ್ಯಕ್ಷರಾದ ಡಾ. ಹುಸೇನರು ಮಹಾತ್ಮಾ ಗಾಂಧಿಯವರಿಗೆ ಈಗ ಒಪ್ಪಿಸಿದ್ದಾರೆ. ಅದರ ಮುಖ್ಯಾಂಶ ಹೀಗಿದೆ—

### ಉದ್ದೇಶ.

ಈಗಿನ ಶಿಕ್ಷಣ ಪದ್ಧತಿಯು ದೋಷಯುಕ್ತವಾದುದಾಗಿದೆ. ಅನ ರಾಷ್ಟ್ರೀಯ ಜೀವನಕ್ಕೆ ಇದು ಪೋಷಕವಾದುದಾಗಿಲ್ಲ. ಅನತ್ಯಾಚಾರದ ತತ್ವವನ್ನು ವಿದ್ಯಾರ್ಥಿಗಳ ಮನಸ್ಸಿನಲ್ಲಿ ಬಿಂಬಿಸುವುದು ಅತ್ಯಗತ್ಯವಾಗಿದೆ. ವಿದ್ಯಾರ್ಥಿಗಳು ಸಮಾಜದ ಉತ್ಪಾದಕ ಘಟಕಗಳಾಗುವುದು ಅಗತ್ಯವು. ಪಾಶ್ಚಾತ್ಯ ಪದ್ಧತಿಗಿಂತ ಇಲ್ಲಿಯ ಶಿಕ್ಷಣವು ಭಿನ್ನವಾಗಿರಬೇಕಾಗಿದೆ.

ವಿದ್ಯೆಯೊಂದಿಗೆ ಹಸ್ತ ಕೌಶಲ್ಯದ ಶಿಕ್ಷಣವೂ ವಿದ್ಯಾರ್ಥಿಗಳಿಗೆ ದೊರೆಯಬೇಕೆಂತಲೂ ಅದರಿಂದ ಶಿಕ್ಷಣವು ಸ್ವಾವಲಂಬಿಯಾಗಿ ಶಿಕ್ಷಕರ ವೇತನವು ಕೆಲಮಟ್ಟಿಗಾದರೂ ದೊರೆಯುವುದೆಂತಲೂ ಗಾಂಧೀಜಿಯವರ ಅಭಿಪ್ರಾಯವಾಗಿದೆ.

ಮಾನಸ ಶಾಸ್ತ್ರದಂತೆ ನೋಡಿದರೆ ಹುಡುಗರಿಗೆ ಶಾಸ್ತ್ರಿಕ ಶಿಕ್ಷಣಕ್ಕಿಂತ ವ್ಯಾವಸಾಯಿಕ ಶಿಕ್ಷಣವು ಹೆಚ್ಚು ಪರಿಣಾಮಕಾರಿಯೆಂದು ಗೊತ್ತಾಗುತ್ತದೆ. ಇಂತಹ ಶಿಕ್ಷಣವು ಪ್ರಾರಂಭವಾದರೆ ಬುದ್ಧಿ ಜೀವಿಗಳೂ ಶ್ರಮಜೀವಿಗಳೂ ಎಂಬ ಭೇದವು ತಪ್ಪಿ ಹೋಗಿ ಶ್ರಮಜೀವಿಗಳಿಂದ ಉತ್ಪಾದನ ಶಕ್ತಿಯು ಅಭಿವೃದ್ಧಿಯಾಗುವುದು.

ಈ ಶಿಕ್ಷಣದ ಯೋಜನೆಯು ಏಳು ವರುಷಗಳ ಅವಧಿಯಿಂದ ಕೂಡಿದ್ದಾಗಿದೆ. ಪ್ರತಿಯೊಂದು ಪ್ರಾಂತದಲ್ಲಿಯೂ ಒಂದು ಶಿಕ್ಷಣ ಮಂಡಲವನ್ನು ಏರ್ಪಡಿಸಿ ಅದರ ಮೂಲಕ ಅಭ್ಯಾಸ ಕ್ರಮವನ್ನು ಗೊತ್ತುಮಾಡಿಕೊಳ್ಳಬೇಕು.

### ಅಭ್ಯಾಸದ ವಿವರ.

ಏಳು ವರುಷಗಳ ಅಭ್ಯಾಸದ ವಿವರವು ಈ ಕೆಳಗಿನಂತೆ ಇರುತ್ತದೆ—

(೧) ನೂಲುವುದು. (೨) ನೇಯುವುದು. (೩) ಬಡಿಗತನ (೪). ಒಕ್ಕಲತನ. (೫) ತೋಟದ ಕೆಲಸ. (೬) ಚರ್ಮದ ಕೆಲಸ ಇವುಗಳಲ್ಲಿ ಯಾವುದಾದರೊಂದು ಕಸಬನ್ನು ವಿದ್ಯಾರ್ಥಿಯು ಕಲಿಯಬೇಕು. ಶಿಕ್ಷಣವನ್ನು ತಾಯಿನುಡಿಯಲ್ಲಿಯೇ ಕೊಡಬೇಕು.

ಏಳು ವರುಷಗಳಲ್ಲಿ ಓದು, ಬರಹ, ಗಣಿತ, ಇತಿಹಾಸ, ಭೂಗೋಲು, ಚಿತ್ರಕಲೆ, ಸಂಗೀತ, ಇವುಗಳ ಶಿಕ್ಷಣ ದೊರೆಯುವುದಲ್ಲದೆ ನಾಗರಿಕರ ಕರ್ತವ್ಯ, ಪ್ರಾಗತಿಕ ಧರ್ಮತತ್ವ, ಗ್ರಾಮ ಪಂಚಾಯತಿ, ಸಹಕಾರ ಮಂಡಲ, ಸ್ಥಾನಿಕ ಸಂಸ್ಥೆ ಈ ಮೊದಲಾದವುಗಳ ಸಂಗತಿಗಳೂ ತಿಳಿಸಲ್ಪಡುವವು.

ಐದನೆಯ ಇಯತ್ತೆಯ ವರೆಗೆ ಬಾಲಬಾಲಕಿಯರು ಒಂದೇ ಕಡೆ ಶಿಕ್ಷಣ ಹೊಂದಬೇಕು. ಹಿಂದುಸ್ಥಾನಿಯು ರಾಷ್ಟ್ರೀಯ ಭಾಷೆಯಾದುದರಿಂದ ಅದನ್ನು ಕಲಿಯಲೇಬೇಕು. ಐದನೆಯ ಇಯತ್ತೆನ ಬಾಲಕಿಯರಿಗೆ ಪ್ರಪಂಚ ಶಾಸ್ತ್ರದ ಸಂಗತಿಗಳನ್ನೂ ತಿಳಿಸಬೇಕು. ಈ ವಿಧವಾದ ಶಿಕ್ಷಣ ಕೊಡಲು ಯೋಗ್ಯರಾದ ಶಿಕ್ಷಕರನ್ನು ಸಿದ್ಧಗೊಳಿಸಲು ಪ್ರಯತ್ನಿಸಲಾಗುವುದು.

### ಶಿಕ್ಷಣದ ಕ್ರಮ.

ಈ ಶಿಕ್ಷಣವು ಏಳು ವರುಷಗಳಲ್ಲಿ ಪೂರ್ತಿಯಾಗುವುದಾಗಿದೆ. ಏಳನೆಯ ವರುಷದಿಂದ ೧೪ ನೆಯ ವರುಷದ ವರೆಗಿನ ಬಾಲ ಬಾಲಕಿಯರಿಗೆ ಶಿಕ್ಷಣವು ಒತ್ತಾಯವಾಗಿಯೇ ಕೊಡಲ್ಪಡುವುದು.

ಬಾಲಕಿಯರು ಮಾತ್ರ ಅವರ ಪಾಲಕರು ಅಪೇಕ್ಷಿಸಿದರೆ ೧೨ ನೆಯ ವರುಷದಲ್ಲಿ ಶಿಕ್ಷಣವನ್ನು ನಿಲ್ಲಿಸಬಹುದು.

ಪ್ರತಿನಿತ್ಯ ೫॥ ತಾಸು ಶಿಕ್ಷಣಕೊಡಲ್ಪಡುವುದು. ಈ ಅವಧಿಯಲ್ಲಿ ೩ ತಾಸು, ೨೦ ನಿಮಿಷ ಕೈಗಾರಿಕೆಯು, ೪೦ ನಿಮಿಷ ಮಾತೃಭಾಷೆ, ೪೦ ನಿಮಿಷ ಸಂಗೀತ, ೩೦ ನಿಮಿಷ ಶಾಸ್ತ್ರೀಯ ವಿಷಯ, ೧೦ ನಿಮಿಷ ಶಾರೀರಿಕ ಶಿಕ್ಷಣಗಳಿಗಾಗಿ ಉಪಯೋಗಿಸಲ್ಪಡುವುದು. ಪ್ರತಿಯೊಂದು ಶಾಲೆಗೂ ಹೊಂದಿ ಒಕ್ಕಲತನದ ಶಿಕ್ಷಣಕ್ಕಾಗಿ ಭೂಮಿಯೂ ಆಟದ ಸ್ಥಳವೂ ಇರಬೇಕು.

ಶಿಕ್ಷಕರಿಗೆ ತಿಂಗಳಿಗೆ ೨೦ ರೂ. ವೇತನವಿರಬೇಕು. ಹೆಚ್ಚಿನ ತರಗತಿಯ ಶಿಕ್ಷಕರಿಗೆ ವೇತನ ಹೆಚ್ಚಾಗಬೇಕು. ಹೆಣ್ಣುಮಕ್ಕಳು ಅಧ್ಯಾಪಿಕೆಯರಾಗಲು ಪ್ರೋತ್ಸಾಹಿಸಬೇಕು.

ಪ್ರತಿಯೊಬ್ಬ ವಿದ್ಯಾರ್ಥಿಯು ಏಳು ವರುಷಗಳಲ್ಲಿ ನೂಲುವುದರಿಂದ ೪೧-೧೩-೯ ಮತ್ತು ನೇಯುವುದರಿಂದ ೧೮-೧೫-೯ ಈ ಪ್ರಕಾರ ೬೦-೧೩-೬ ಸಂಪಾದಿಸಿ ಕೊಡುವನು. ಒಂದು ವರ್ಗದಲ್ಲಿ ೩೦ ವಿದ್ಯಾರ್ಥಿಗಳಿದ್ದರೆ. ಅವರಿಂದ ೧೮೨೫ ರೂ. ಗಳ ಆದಾಯ ಬರುವುದು. ತಿಂಗಳಿಗೆ ೨೫ ರೂ. ವೇತನದ ಒಬ್ಬ ಶಿಕ್ಷಕರಿಗೆ ೭ ವರುಷಗಳಿಗೆ ೨೧೦೦ ರೂ. ವೇತನ ಕೊಡಬೇಕಾಗುವುದು.

---

## ಅಕ್ಕಲಕೋಟೆ ಮಹಾರಾಜರ ವರ್ಧಂತಿಯ ಉತ್ಸವ.

ಅಕ್ಕಲಕೋಟೆ ಸಂಸ್ಥಾನಾಧಿಪತಿಗಳಾದ ಶ್ರೀಮಂತ ವಿಜಯಸಿಂಹರಾವ ಇವರ ೨೩ ನೆಯ ವರ್ಷ ವರ್ಧಂತಿಯು ಕಳೆದ ೧೩ ನೆಯ ತಾರೀಖಿನ ದಿವಸ ಸಂಸ್ಥಾನದಲ್ಲೆಲ್ಲಾ ಬಹು ಸಂಭ್ರಮದಿಂದ ಜರುಗಿತು.

ಈ ಸಂಸ್ಥಾನದಲ್ಲಿ ಸಾಧಾರಣ ಒಂದು ಲಕ್ಷ ಜನಸಂಖ್ಯೆ ಇದೆ. ಇದರ ವಾರ್ಷಿಕ ಉತ್ಪನ್ನ ೮ ಲಕ್ಷ ರೂ. ೫೨ ಪ್ರಾಥಮಿಕ ಶಾಲೆಗಳಿವೆ.

## ವಿಮರ್ಶಾತ್ಮಕ ಪ್ರಶ್ನೋತ್ತರ.

### ಕಾಂಗ್ರೆಸ್ ಮತ್ತು ಮೈಸೂರಿನ ದಬ್ಬಾಳಿಕೆ.

ಪ್ರಶ್ನೆ— ಮೈಸೂರು ಸರಕಾರವು ಅಲ್ಲಿಯ ಕಾಂಗ್ರೆಸ್ ಕೆಲಸಗಾರರ ಮೇಲೆ ನಡೆಸಿದ ದಬ್ಬಾಳಿಕೆಯನ್ನು ಕುರಿತು ಕಲಕತ್ತಾದಲ್ಲಿ ಕೂಡಿದ್ದ ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಮಾಡಿದ ನಿರ್ಣಯವನ್ನು ಮಹಾತ್ಮಾ ಗಾಂಧಿಯವರು ಅಲ್ಲಗಳೆದಿದ್ದಾರೆ. ಗಾಂಧೀಜಿಯವರು ಹಾಗೆ ಹೇಳಿದ್ದೇ ತಪ್ಪೆಂದು ಕಾಂಗ್ರೆಸ್ ಪಕ್ಷದ ಕೆಲವು ಪತ್ರಿಕೆಯವರು ಹೇಳುತ್ತಿದ್ದಾರೆ. ಈ ಬಗ್ಗೆ ನೀವು ನಿಮ್ಮ ಪತ್ರಿಕೆಯಲ್ಲಿ ಚರ್ಚಿಸಿದ್ದರೆ ಎಷ್ಟೋ ಅನುಕೂಲವಾಗಿರಲಿಲ್ಲವೆ ?

ಉತ್ತರ— ಗಾಂಧೀಜಿಯವರ ಅಭಿಪ್ರಾಯವೇ ನಮಗೆ ಯುಕ್ತವಾಗಿ ತೋರುತ್ತದೆ. ಪಕ್ಷಾಭಿಮಾನವನ್ನು ಬಿಟ್ಟು ನಿಜಸ್ಥಿತಿಯನ್ನೇ ತಿಳಿದುಕೊಂಡು ಆ ಪ್ರಕಾರ ಆಚರಿಸಬೇಕೆಂಬುವವರಿಗೆ ಗಾಂಧೀಜಿಯವರ ಸಲಹೆಯು ಸರಿಯಾದ ಮಾರ್ಗವನ್ನೇ ತೋರಿಸುವುದಾಗಿದೆ.

ಪ್ರಶ್ನೆ—ಕಾಂಗ್ರೆಸ್ಸಿನ ಕೆಲಸಗಾರರ ಮೇಲೆ ಮೈಸೂರು ಸರಕಾರವು ದಬ್ಬಾಳಿಕೆಯನ್ನು ನಡೆಯಿಸಿರುವುದು ಅನ್ಯಾಯವಾದುದಲ್ಲವೆ? ಈ ಅನ್ಯಾಯವನ್ನು ತಡೆಯಲು ಕಾಂಗ್ರೆಸ್ ಮುಂದೆ ಬರುವುದು ಅದರ ಕರ್ತವ್ಯವಲ್ಲವೆ ?

ಉತ್ತರ— ಸರಕಾರದ ದಬ್ಬಾಳಿಕೆಯು ನ್ಯಾಯವೆಂದು ಯಾರೂ ಹೇಳಲಾರರು. ಅನ್ಯಾಯವನ್ನು ತಡೆಯುವುದು ಕಾಂಗ್ರೆಸ್ಸಿನ ಕರ್ತವ್ಯವೆಂಬುದರಲ್ಲಿಯೂ ಭಿನ್ನಾಭಿಪ್ರಾಯವಾಗಲಾರದು. ಆದರೆ ಈ ಕಾರ್ಯಗಳೆಲ್ಲಾ ನಡೆಯತಕ್ಕ ರೀತಿ ಹೇಗಿದೆ? ಎಲ್ಲಿ ನಡೆಯುತ್ತವೆ ? ಕಾಂಗ್ರೆಸ್ಸು ಎಷ್ಟರ ಮಟ್ಟಿಗೆ ಅವುಗಳಲ್ಲಿ ಪ್ರವೇಶಿಸಲು ಅದು ಈಗ ಇಟ್ಟುಕೊಂಡಿರುವ ನಿರ್ಬಂಧನೆಗಳಿಂದ ಸಮರ್ಥವಾದುದಾಗಿದೆ. ಎಂಬಂಶಗಳನ್ನೆಲ್ಲಾ ಪರ್ಯಾಲೋಚಿಸಬಾರದೆ ? ಗಾಂಧೀಜಿಯವರ ಅಭಿಪ್ರಾಯದಲ್ಲಿ ಈ ಎಲ್ಲ ಸಂಗತಿಗಳೂ ಅಡಕವಾಗಿವೆ

ದೇಶಿ ಸಂಸ್ಥಾನಗಳೂ ಬ್ರಿಟಿಶ್ ಭಾಗಗಳಂತೆಯೇ ಸರಿಯೆಂದು ಗ್ರಹಿಸಿ ನಡೆಯುವುದು ಈಗಿನ ಸ್ಥಿತಿಯಲ್ಲಿ ಅನುಚಿತವೇ ಸರಿ. ಆದುದರಿಂದ ಮೈಸೂರು ಸಂಸ್ಥಾನದ ಕಾಂಗ್ರೆಸ್ ಕಮಿಟಿಯ ಅನೇಕ ದೇಶಭಕ್ತರೂ ಕಾಂಗ್ರೆಸ್ ವರ್ಕಿಂಗ್ ಕಮಿಟಿಯವರೂ ತುಂಬಾ ಯೋಚಿಸಿ ನಡೆಯಬೇಕಾದುದೇ ಯುಕ್ತವಾಗಿದ್ದಿತು.

ಪ್ರಶ್ನೆ—ಓಹೋ ! ಮೈಸೂರ್ ಕಾಂಗ್ರೆಸ್ ಕಮಿಟಿಯವರಲ್ಲಿ ಅನೇಕರು ಮಾಡಿದ ತಪ್ಪೇನು? ಜೈಲಿಗೆ ಹೋದದ್ದೆ ? ರಾಷ್ಟ್ರಧ್ವಜ ಮೆರೆಸುವುದಿಲ್ಲವೆಂದೂ ತಪ್ಪಾಯಿತೆಂದೂ ಹೇಳಿಕೊಂಡು ಕ್ಷಮಾಪಣೆ ಕೇಳಬೇಕಾಗಿತ್ತೆ?

ಉತ್ತರ—ಹಾಗಲ್ಲ. ಸ್ವಲ್ಪ ನಿಧಾನವಾಗಿ ಯೋಚಿಸಿರಿ. ಬ್ರಿಟಿಶ್ ಭಾಗದಲ್ಲಿರುವ ಕಾಂಗ್ರೆಸ್ಸಿನವರಂತೆಯೇ ಎಲ್ಲ ಕಾರ್ಯಗಳನ್ನೂ ಮೈಸೂರು ಪ್ರಾಂತದಲ್ಲಿರುವ ಕಾಂಗ್ರೆಸ್ಸಿನವರೂ ಆಚರಿಸಬಹುದೆಂದೇ ನಿಮ್ಮ ಅಭಿಪ್ರಾಯವೆ? ಇವುಗಳಲ್ಲಿ ವ್ಯತ್ಯಾಸವಿಲ್ಲವೆ? ಕಾಂಗ್ರೆಸ್ಸಿನ ವಿಧಾಯಕ ಕಾರ್ಯಗಳಾದ ಖಾದಿ ಪ್ರಸಾರ, ಅಸ್ಪೃಶ್ಯತಾನಿವಾರಣೆ, ಗ್ರಾಮೋದ್ಯೋಗಾಭಿವೃದ್ಧಿ ಈ ಮೊದಲಾದ ಕಾರ್ಯಗಳನ್ನು ಮೈಸೂರು ಪ್ರಾಂತದ ಕಾಂಗ್ರೆಸ್ಸಿನವರೂ ಧಾರಾಳವಾಗಿ ಮಾಡಬೇಕು.

ಈ ವಿಧಾಯಕ ಕಾರ್ಯಗಳನ್ನು ಮಾಡಬಹುದೇ ವಿನಾ ಬ್ರಿಟಿಶ್ ಭಾಗದಲ್ಲಿ ಮುನಸಿಪಾಲ್ಟಿ ಅಸೆಂಬ್ಲಿ ಸಭಾಸದರಾಗುವವರು ಹೇಗೆ ಕಾಂಗ್ರೆಸ್ ಪಕ್ಷವನ್ನು ಸೇರಿ ಅದರ ಬಲದಿಂದ ಅನ್ಯಪಕ್ಷಗಳನ್ನು ಸೋಲಿಸಿ ಅಧಿಕಾರ ಸೂತ್ರವನ್ನು ಹಿಡಿಯುತ್ತಿದ್ದಾರೆಯೋ ಹಾಗಿಯೇ ಮೈಸೂರು ದೇಶದ ಮುನಸಿಪಾಲ್ಟಿ ಮೊದಲಾದ ಲೋಕನಿಯುಕ್ತ ಆದರೆ ಸರಕಾರ ನಿಯಂತ್ರಣದ ಸಂಸ್ಥೆಗಳಲ್ಲಿ ಸೇರಲು ಈ ಕಾಂಗ್ರೆಸ್ ಪಕ್ಷದ ಮೂಲಕವಾಗಿ ಪ್ರಯತ್ನಿಸಬಹುದೆ? ಹಾಗಾದರೆ ಬ್ರಿಟಿಶ್ ಭಾಗಕ್ಕೂ ದೇಶಿ ಸಂಸ್ಥಾನಗಳಿಗೂ ವ್ಯತ್ಯಾಸವೇನಿದ್ದಂತಾಯಿತು? ಕಾಂಗ್ರೆಸ್ಸು ಸಂಸ್ಥಾನಗಳ ಒಳ ಆಡಳಿತದಲ್ಲಿ ಕೈ ಹಾಕುವುದಿಲ್ಲವೆಂದು ಮಾಡಿಕೊಂಡ ನಿಬಂಧನೆಯ ಪ್ರಯೋಜನವೇನು? ಕಾಂಗ್ರೆಸ್ಸಿಗೆ ಜನತೆಯಲ್ಲಿರುವ ಅಸಾಧಾರಣವಾದ ಆದರಾಭಿಮಾನ ಮನ್ನಣೆಗಳ ಪ್ರಯೋಜನವನ್ನು ಅಲ್ಲಿಯ ರಾಜ್ಯಭಾರ ನಡೆಯಿಸುವುದರಲ್ಲಿಯೂ ಒತ್ತಾಯಪಡಿಸುವಂತೆ ಮಾಡಿಕೊಳ್ಳಲು ಕೆಲವರು ಹೋದುದೇ ನಮಗೆ ಯುಕ್ತವಾಗಿ ತೋರುವುದಿಲ್ಲ.

ಪ್ರಶ್ನೆ—ಬ್ರಿಟಿಶ್ ಭಾಗದಲ್ಲಿರುವವರಿಗೆ ಹೇಗೆ ಸ್ವಾತಂತ್ರ್ಯ ಬೇಕೋ ಹಾಗೆಯೇ ಸಂಸ್ಥಾನಗಳಲ್ಲಿರುವವರಿಗೂ ಬೇಡವೆ? ಕಾಂಗ್ರೆಸ್ಸಿನ ಮೂಲಕವಾಗಿ ಅವರು ಹೇಗೆ ಪ್ರಯತ್ನಿಸುತ್ತಾರೆಯೋ ಹಾಗೆಯೇ ಸಂಸ್ಥಾನಗಳಲ್ಲಿರುವವರೂ ಪ್ರಯತ್ನಿಸುವುದು ಅಗತ್ಯವಾಗಿಲ್ಲವೆ?

ಉತ್ತರ—ಸ್ವಾತಂತ್ರ್ಯವು ಪ್ರತಿಯೊಂದು ವ್ಯಕ್ತಿಗೂ ಬೇಕು. ಅದಕ್ಕಾಗಿ ನ್ಯಾಯಸಮ್ಮತವಾದ ರೀತಿಯಲ್ಲಿ ಪ್ರಯತ್ನಿಸುವುದೂ ಅತ್ಯಗತ್ಯವಾಗಿದೆ. ಆದರೆ ಕಾಂಗ್ರೆಸ್ಸಿನವರು ಬ್ರಿಟಿಶ್ ಭಾಗದಲ್ಲಿ ಅದಕ್ಕೋಸ್ಕರ ಹೇಗೆ ನಡೆಯುತ್ತಿದ್ದಾರೆಯೋ ಹಾಗೆಯೇ ಸಂಸ್ಥಾನಗಳಲ್ಲಿರುವ ಕಾಂಗ್ರೆಸ್ಸಿನವರು ಮಾತ್ರ ಕಾಂಗ್ರೆಸ್ಸಿನ ಈಗಿನ ನಿಬಂಧನೆಯ ಮೇರೆಗೆ ನಡೆಯ-ಲಿಕ್ಕೆ ಬರುವುದಿಲ್ಲ.

ಕಾಂಗ್ರೆಸ್ಸಿನ ಧ್ಯೇಯವು ಸಂಪೂರ್ಣ ಸ್ವಾತಂತ್ರ್ಯವಷ್ಟೆ. ಬ್ರಿಟಿಶ್ ಭಾಗದಲ್ಲಿರುವ ಕಾಂಗ್ರೆಸ್ ಸದಸ್ಯನು ತನ್ನ ಮೇಲೆ ಬ್ರಿಟಿಶ್ ಪಾರ್ಲಮೆಂಟಿನ ಪ್ರಭುತ್ವವು ಇರಕೂಡದೆಂದೇ ಸಾರಿ ಹೇಳುತ್ತಿದ್ದಾನೆ. ಜಾರ್ಜ ಚಕ್ರವರ್ತಿಗಳ ಪ್ರಭುತ್ವವು ಕೂಡಾ ತನ್ನ ಮೇಲಿಲ್ಲದಂತೆ ಮಾಡಿಕೊಳ್ಳುವುದೇ ತನ್ನ ಗುರಿಯೆಂದು ಹೇಳುತ್ತಿದ್ದಾನೆ. ಮೈಸೂರು ಸಂಸ್ಥಾನದಲ್ಲಿರುವ ಕಾಂಗ್ರೆಸ್ ಸದಸ್ಯನೂ ಅದೇ ಪ್ರಕಾರ ಮೈಸೂರು ಮಹಾರಾಜರ ಪ್ರಭುತ್ವ ತನ್ನ ಮೇಲಿಲ್ಲದಂತೆ ಮಾಡಿಕೊಳ್ಳುವುದೇ ತನ್ನ ಧ್ಯೇಯವೆಂದು ಹೇಳುತ್ತಿದ್ದಾನೆಯೇ? ಇಲ್ಲವೇ ಇಲ್ಲ. ಈಗ ಅಲ್ಲಿ ಹೋರಾಡುತ್ತಿರುವ ಕಾಂಗ್ರೆಸ್ಸಿನ ದೇಶಭಕ್ತರೆಲ್ಲರೂ ಮಹಾರಾಜರ ವಿಷಯದಲ್ಲಿ ತಮಗೆ ದೃಢವಾದ ರಾಜನಿಷ್ಠೆಯಿದೆಯೆಂದೇ ಹೇಳುತ್ತಿದ್ದಾರಷ್ಟೆ. ಎಂದಮೇಲೆ ಬ್ರಿಟಿಶ್ ಭಾಗದಲ್ಲಿರುವ ಕಾಂಗ್ರೆಸ್ಸಿನವರ ಸ್ವಾತಂತ್ರ್ಯದ ಧ್ಯೇಯಕ್ಕೂ ಮತ್ತು ಮೈಸೂರು ದೇಶದಲ್ಲಿ ಈಗ ಹೋರಾಡುತ್ತಿರುವ ದೇಶಾಭಿಮಾನಿಗಳಾದ ಕಾಂಗ್ರೆಸ್ಸಿನವರ ಸ್ವಾತಂತ್ರ್ಯಾಪೇಕ್ಷೆಗೂ ಮಹದಂತರವಿದೆಯೆಂದು ವ್ಯಕ್ತವಾಗುವುದಿಲ್ಲವೆ?

ಬ್ರಿಟಿಶ್ ಭಾಗದ ಕಾಂಗ್ರೆಸ್ಸಿನವರಂತೆ ದೇಶಿ ಸಂಸ್ಥಾನಗಳಲ್ಲಿರುವ ಕಾಂಗ್ರೆಸ್ ಕೆಲಸಗಾರರೂ ತಮಗೆ ತಮ್ಮ ಸಂಸ್ಥಾನಾಧಿಪತಿಗಳ ಪ್ರಭುತ್ವವೂ ತಮ್ಮಮೇಲೆ ಬೇಡವೆಂದು ಹೇಳಬಹುದು. ಆಗ ಅಲ್ಲಿಯ ಅಧಿಕಾರಿಗಳು ಹಾಗೆ ಹೇಳುವುದು ರಾಜದ್ರೋಹವೆಂದು ಅವರನ್ನು ಶಿಕ್ಷಿಸಲೂ ಬಹುದು. ಆದರೆ ಅವರು ಹಾಗೆ ಕಾಂಗ್ರೆ

ಸ್ಸಿನ ಮರೆಯಲ್ಲಿದ್ದು ಹೇಳುವುದು ಕಾಂಗ್ರೆಸ್ಸಿನ ಈಗಿರುವ ನಿಬಂಧನೆಗೆ ಸಮ್ಮತವಲ್ಲ. ಕಾಂಗ್ರೆಸ್ಸಿನವರು ಅಂಥ ಚಟುವಟಿಕೆಗಾರರ ಮೇಲಾಗುವ ದಬ್ಬಾಳಿಕೆಯನ್ನು ಎದುರಿಸಲು ಮುಂದೆ ಬರುವಂತೆಯೂ ಇಲ್ಲ.

ಪ್ರಶ್ನೆ—ಬ್ರಿಟಿಶ್ ಭಾಗದ ಕಾಂಗ್ರೆಸ್ಸಿನವರು ತಮಗೆ ಸ್ವಾತಂತ್ರ್ಯ ಬೇಕೆಂದು ಹೇಳುತ್ತಾ ಹೇಗೆ ಹೋರಾಡುತ್ತಿದ್ದಾರೆಯೋ ಹಾಗೆಯೇ ದೇಶಿ ಸಂಸ್ಥಾನಗಳಲ್ಲಿರುವವರು ತಮಗೆ ಜವಾಬ್ದಾರಿ ಸರಕಾರ ಬೇಕೆಂದು ಹೇಳುತ್ತಾ ಹೋರಾಡುವುದು ನ್ಯಾಯವಾಗಿಯೂ ಅಗತ್ಯವಾಗಿಯೂ ಇಲ್ಲವೆ?

ಉತ್ತರ—ದೇಶಿ ಸಂಸ್ಥಾನಗಳಲ್ಲಿರುವವರು ತಮಗೆ "ಜವಾಬ್ದಾರಿ" ಸರಕಾರ ಬೇಕೆಂದು ಅವಶ್ಯಕವಾಗಿ ಹೋರಾಡಬೇಕು. ಆದರೆ ಅವರು ಕಾಂಗ್ರೆಸ್ಸಿನಲ್ಲಿ ಸೇರಿ ಕಾಂಗ್ರೆಸ್ಸಿನ ಮೂಲಕವಾಗಿ ಹೋರಾಡುವುದು ಯುಕ್ತವಲ್ಲ. ತಮ್ಮ ತಮ್ಮ ಸಂಸ್ಥಾನಗಳ ಸ್ಥಿತಿಗತಿಗಳನ್ನು ನೋಡಿ ಜವಾಬ್ದಾರಿ ಸರಕಾರವೆಂದರೇನೆಂಬುದನ್ನು ಸ್ಪಷ್ಟೀಕರಿಸಿ ಅದರ ಪ್ರಾಪ್ತಿಗಾಗಿ ತಮ್ಮ ಸಂಸ್ಥಾನದ ಮಟ್ಟಿಗೇನೇ ಒಂದು ವಿಶಿಷ್ಟ ಪಕ್ಷವನ್ನು ಏರ್ಪಡಿಸಿಕೊಂಡು ಆ ಮೂಲಕ ಪ್ರಯತ್ನಿಸಬೇಕು.

ಬ್ರಿಟಿಶ್ ಭಾಗದ ಕಾಂಗ್ರೆಸ್ಸಿನವರು ಸ್ಥಾಪಿಸಬೇಕೆಂಬುವ ಸ್ವಾತಂತ್ರ್ಯಕ್ಕೂ ದೇಶಿ ಸಂಸ್ಥಾನಗಳಲ್ಲಿರುವ ಪ್ರಜೆಗಳು ಸ್ಥಾಪಿಸಬೇಕೆಂಬ ಜವಾಬ್ದಾರಿ ಸರಕಾರಕ್ಕೂ ಮಹದಂತರವಿದೆಯೆಂದು ನಾವು ಈ ಮುಂಚೆಯೇ ಹೇಳಿದ್ದೇವಷ್ಟೆ. ಆದುದರಿಂದ ಈ ವಿಷಯದಲ್ಲಿ ಬ್ರಿಟಿಶ್ ಭಾಗದ ಕಾಂಗ್ರೆಸ್ಸಿನವರ ಅನುಕರಣವನ್ನೇ ದೇಶಿ ಸಂಸ್ಥಾನದಲ್ಲಿರುವ ಕಾಂಗ್ರೆಸ್ಸಿನವರೂ ಮಾಡಲಿಕ್ಕೆ ಬರುವಂತಿಲ್ಲ.

ಮೈಸೂರು ಸರಕಾರದ ದೃಷ್ಟಾಂತವನ್ನೇ ತೆಗೆದುಕೊಳ್ಳುವ. ಅಲ್ಲಿಯ ಕಾಂಗ್ರೆಸ್ಸಿನವರು ಜವಾಬ್ದಾರಿ ಸರಕಾರವನ್ನು ಸ್ಥಾಪಿಸಬೇಕೆಂದು ಹೋರಾಡುತ್ತಿರುವುದೆಂದರೇನು? ಮಹಾರಾಜರ ಕೈಯಲ್ಲಿರುವ ಅಧಿಕಾರವನ್ನು ಸೆಳೆದುಕೊಂಡು ಅದನ್ನು ಪ್ರಜಾ ಪ್ರತಿನಿಧಿಗಳ ಕಡೆಗೆ ಕೊಡುವುದೇ? ಹಾಗಲ್ಲ. ಹಾಗಾದರೆ ಮಹಾರಾಜರನ್ನೇ ತಳ್ಳಿಬಿಡಬೇಕೆಂಬ ಹೋರಾಟವಾಗಬಹುದು.

ಈಗ ಮಹಾರಾಜರವರು ದಿವಾನರ ಮತ್ತು ಮಂತ್ರಿಮಂಡಲದ ಸಲಹೆಯನ್ನು ವಿಚಾರಿಸಿ ಪ್ರಭುತ್ವವನ್ನು ನಡೆಸುತ್ತಿದ್ದಾರೆ. ದಿವಾನರಿಗೂ ಮಂತ್ರಿಮಂಡಲಕ್ಕೂ ಕೆಲವು ಮಟ್ಟಿಗೆ ಅಧಿಕಾರ ಸ್ವಾತಂತ್ರ್ಯವನ್ನೂ ಕೊಟ್ಟಿದ್ದಾರೆ. ಜವಾಬ್ದಾರಿ ಸರಕಾರವನ್ನು ಸ್ಥಾಪಿಸುವುದೆಂದರೆ ಮಹಾರಾಜರವರು ಪ್ರಜಾ ಪ್ರತಿನಿಧಿಗಳ ಸಲಹೆಯನ್ನು ತೆಗೆದುಕೊಂಡು ಪ್ರಭುತ್ವವನ್ನು ನಡೆಯಿಸುವುದು. ಪ್ರಜಾ ಪ್ರತಿನಿಧಿಗಳು ಆರಿಸಿಕೊಟ್ಟ ದಿವಾನರನ್ನೂ ಮಂತ್ರಿಗಳನ್ನೂ ಮಹಾರಾಜರು ತಮ್ಮ ಸಲಹೆಗೆ ತೆಗೆದುಕೊಳ್ಳುವುದು. ಇದಕ್ಕೇನೇ ಜವಾಬ್ದಾರಿ ಸರಕಾರವೆಂದು ಹೇಳಬೇಕಾಗಿದೆ.

ಪ್ರಶ್ನೆ—ಸರಿ. ನಮಗೆ ಬೇಕಾದುದು ಇದೇ ಜವಾಬ್ದಾರಿ ಸರಕಾರ. ಇದರ ಸ್ಥಾಪನೆಗಾಗಿ ಕಾಂಗ್ರೆಸ್ ಮುಖಾಂತರ ಪ್ರಯತ್ನಿಸುವುದು ಹೆಚ್ಚು ಪರಿಣಾಮಕಾರಿಯಲ್ಲವೆ?

ಉತ್ತರ—ಹೆಚ್ಚು ಪರಿಣಾಮಕಾರಿಯೇನೋ ಆಗಬಹುದು. ಏಕೆಂದರೆ ಕಾಂಗ್ರೆಸ್ ಎಂಬುದು ಜನತೆಯಲ್ಲಿ ಅಪೂರ್ವವಾದ ಗೌರವವನ್ನು ಹೊಂದಿದೆ. ಆದರೆ ಕಾಂಗ್ರೆಸ್ಸಿನ ನಿಬಂಧನೆಯ ಮೇರೆಗೆ ಹಾಗೆ ಅದರ ಮರೆಯಲ್ಲಿದ್ದು ಹೋರಾಡುವುದು ಯುಕ್ತವಲ್ಲ. ಇದೇ ಉದ್ದೇಶಕ್ಕಾಗಿ ಒಂದು ಸ್ವತಂತ್ರ ಪಕ್ಷವೇ ಏರ್ಪಟ್ಟು ಅದರ ಮೂಲಕ ಹೋರಾಡುವುದೇ ವಿಹಿತವು. ಕಾಂಗ್ರೆಸ್ಸಿನಲ್ಲಿ ಸೇರಿದವರೂ ಅದರಲ್ಲಿ ಇರಬಹುದು. ಕಾಂಗ್ರೆಸ್ಸಿನ ವಿಧಾಯಕ ಕಾರ್ಯಗಳನ್ನು ಮಾತ್ರವೇ ಅದರ ಹೆಸರಿನಿಂದ ಸಂಸ್ಥಾನಗಳಲ್ಲಿ ಜರುಗಿಸುವುದು ಒಳ್ಳೆಯದು.

ಪ್ರಶ್ನೆ—ಸರಕಾರವು ರಾಷ್ಟ್ರಧ್ವಜದ ಮೆರವಣಿಗೆಯನ್ನು ತಡೆಯುವುದೂ ಕಾಂಗ್ರೆಸ್ಸಿನ ಚಟುವಟಿಕೆಗಾರರನ್ನು ಹಳಿಯುವುದೂ ಅನ್ಯಾಯವಲ್ಲವೆ?

ಉತ್ತರ—ಈಗಿನ ದಬ್ಬಾಳಿಕೆಯು ತುಂಬಾ ಅನ್ಯಾಯವಾದುದು. ರಾಷ್ಟ್ರಧ್ವಜವು ಮಹರಾಜಾ ಸರಕಾರದ ವಿರುದ್ಧ ಧ್ವಜವೆಂದು ಗ್ರಹಿಸಿರುವುದು ಸರಿಯಲ್ಲ. ಜವಾಬ್ದಾರಿ ಸರಕಾರ ಸ್ಥಾಪನೆಗಾಗಿ ಹೋರಾಡುತ್ತಿರುವವರು ಉಜ್ವಲ ರಾಷ್ಟ್ರ ಭಕ್ತರು. ಅವರ ವಿಷಯದಲ್ಲಿ ದಿವಾನಸಾಹೇಬರು ಟೀಕಿಸಿದುದು ಅನುಚಿತವಾದುದು. ಇಂಥ ಟೀಕೆ ದಬ್ಬಾಳಿಕೆಗಳಿಗೆ ಅಂಜದೆ ಜವಾಬ್ದಾರಿ ಸರಕಾರ ಸ್ಥಾಪನೆಗಾಗಿ ಸ್ವತಂತ್ರ ಪಕ್ಷವನ್ನು ನಿರ್ಮಿಸಿ ದೇಶಾಭಿಮಾನಿಗಳು ಹೋರಾಡಲೇಬೇಕು.

---

## ಕಾಂಗ್ರೆಸ್ ಮತ್ತು ಸಾವರಕರರು.

ಮಧ್ಯಪ್ರಾಂತೀಯ ಹಿಂದು ಮಹಾಸಭೆಯ ಕಾರ್ಯವನ್ನು ಪೂರೈಸಿಕೊಂಡು ಸ್ವಾತಂತ್ರ್ಯವೀರ ಸಾವರಕರರು ಮಧ್ಯಪ್ರಾಂತದಲ್ಲೆಲ್ಲಾ ಸಂಚರಿಸುತ್ತಿದ್ದಾರೆ. ಇವರು ಯವತಮಾಳ ಎಂಬಲ್ಲಿಗೆ ಹೋದಾಗ ಲೋಕನಾಯಕ ಅಣೆ ಅವರ ಅಧ್ಯಕ್ಷತೆಯಲ್ಲಿ ಮಹತ್ವದ ಭಾಷಣವನ್ನು ಮಾಡಿದರು. ಆಗ ಹೀಗೆ ಹೇಳಿದರು—

### ರಾಷ್ಟ್ರೀಯ ಸಭೆ ಅರಾಷ್ಟ್ರೀಯವಾಗಿದೆ.

"ರಾಷ್ಟ್ರೀಯ ಸಭೆಯು ನಮ್ಮದೇ ಆಗಿದೆ. ಆದರೆ ಅದು ರಾಷ್ಟ್ರೀಯವಾಗಿರಬೇಕಾಗಿದ್ದಿತು. ಹಾಗೆ ಮಾತ್ರ ಅದು ಇಲ್ಲ. ಅದು ಎಂದು ಸಂಪೂರ್ಣ ರಾಷ್ಟ್ರೀಯ ಸ್ವರೂಪವನ್ನು ಹೊಂದುವುದೋ ಅಂದು ನಾನು ಅದರಲ್ಲಿ ಸೇರುತ್ತೇನೆ. ಅದಕ್ಕೆ ಹಿಂದು, ಮುಸಲ್ಮಾನ್, ಎಂಬ ಭೇದವಿರಕೂಡದು. ಒಂದು ಬೇಕಾದುದು, ಇನ್ನೊಂದು ಬೇಡಾದುದು, ಎಂದು ಅದು ತಿಳಿಯಬಾರದು. ಈಗ ಅದು ರಾಷ್ಟ್ರೀಯ ಹೆಸರಿನಿಂದ ಹಿಂದುಗಳ ಹಕ್ಕು ಬಾಧ್ಯತೆಗಳನ್ನು ಮುಸಲ್ಮಾನರಿಗೆ ಕೊಡುತ್ತಲಿದೆ.

ನಮ್ಮ ಲೋಕನಾಯಕ ಅಣೆ ಅವರೇ ಕೇಂದ್ರ ಶಾಸನ ಸಭೆಯಲ್ಲಿ "ಬೆವಾರಸದಾರ" ಮುಸಲ್ಮಾನರ ಆಸ್ತಿಯು ಮುಸಲ್ಮಾನ್ ಸಮಾಜಕ್ಕೆ ಸೇರಬೇಕೆಂದು ಬಂದ ಗೊತ್ತುವಳಿಗೆ ರಾಷ್ಟ್ರೀಯ ದೃಷ್ಟಿಯಿಂದ ವಿರೋಧಿಸಿದರಲ್ಲವೆ? ಆಗ ಕಾಂಗ್ರೆಸ್ ಪಕ್ಷವು ಅದಕ್ಕೆ ವಿರೋಧಿಸಲಿಲ್ಲ. ಇದು ಅರಾಷ್ಟ್ರೀಯವಲ್ಲವೆ? ಮುಸಲ್ಮಾನ್ "ಬೆವಾರಸದಾರ" ರ ಆಸ್ತಿಯು ಮುಸಲ್ಮಾನ್ ಸಮಾಜಕ್ಕೆ ಸೇರಬೇಕು. ಆದರೆ ಹಿಂದು "ಬೆವಾರಸದಾರ" ರ ಆಸ್ತಿಯು ಮಾತ್ರ ಸರಕಾರಕ್ಕೆ ಸೇರಬೇಕು. ಇದು ಯಾವ ನ್ಯಾಯ? ನನ್ನದಂತೂ ನನ್ನದೇ. ನಮ್ಮ ತಂದೆಯದೂ ನಿನ್ನದೂ ನನ್ನದೇ ಸರಿಯೆಂದು ಹೇಳುವ ನ್ಯಾಯದಂತೆ ಮುಸಲ್ಮಾನರ ರೀತಿಯಾಗಿದೆ. ಇದಕ್ಕೆ ರಾಷ್ಟ್ರೀಯ ಸಭೆಯವರು ಒಪ್ಪುತ್ತಿದ್ದಾರೆ. ಇದಕ್ಕೆ ರಾಷ್ಟ್ರೀಯತ್ವವೆಂದು ಹೇಳುತ್ತಾರೆಯೆ?

ರಾಷ್ಟ್ರೀಯ ಸಭೆಗೆ ಹಿಂದುಗಳ ಪರವಾಗಿ ಹೇಳುವ ಅಧಿಕಾರವೆಲ್ಲಿದೆ? ಸೋನ್ಯಾಮಾರುತಿ ಗುಡಿಯ ಸಂಬಂಧವಾಗಿ ಕಷ್ಟಪಟ್ಟವರಾರು? ಒಪ್ಪಂದಕ್ಕೆ ಹಿಂದುಗಳ ಪರವಾಗಿ ಒಪ್ಪಿಗೆ ಕೊಡಲು ಕಾಂಗ್ರೆಸ್ಸಿನವರು ಮುಂದೆ ಬಂದರಲ್ಲವೆ? ಹಿಂದುಗಳ ಹೆಸರಿನಿಂದ

ಇಂಥ ಕಾರಭಾರವನ್ನು ನಡೆಯಿಸಲು ಇವರಿಗೆ ಹೇಳಿದವರಾರು? ಇಂಥ ಸಾವಿರಾರು ಅರಾಷ್ಟ್ರೀಯ ಕಾರ್ಯಗಳನ್ನು ಕಾಂಗ್ರೆಸ್ ಮಾಡುತ್ತಲಿದೆಯೆಂದು ತೋರಿಸಬಹುದು. ಇದು ಹೀಗೆ ಅರಾಷ್ಟ್ರೀಯ ಧೋರಣವನ್ನು ವಹಿಸಿದುದರಿಂದಲೇ ಹಿಂದುಮಹಾಸಭೆಯು ರಾಜಕಾರಣದಲ್ಲಿ ಸೇರಬೇಕಾಯಿತು.

ರಾಷ್ಟ್ರೀಯ ಸಭೆಗೆ ಹಿಂದುಸ್ಥಾನದ ಪ್ರತಿಯೊಂದು ವ್ಯಕ್ತಿಯೂ ಕೇವಲ ವ್ಯಕ್ತಿಯಾಗಿಯೇ ತೋರಬೇಕೇ ವಿನಾ ಆತನ ಜಾತಿಯು ತೋರಬಾರದು. ಆ ವ್ಯಕ್ತಿಯು ಹಿಂದು ಇರಲಿ, ಮುಸಲ್ಮಾನ್ ಇರಲಿ, ಕ್ರಿಸ್ತನಿರಲಿ, ಪಾರ್ಶಿ ಇರಲಿ, ಯಾರಿದ್ದರೇನು? ಆತನ ಜಾತಿ ಅಥವಾ ಸಂಖ್ಯೆಯ ಮೇಲಿಂದ ಆತನ ಯೋಗ್ಯತೆಯನ್ನು ನಿರ್ಧರಿಸಬಾರದು. ಹಾಗೆ ನಡೆದರೇನೇ ಅದು ರಾಷ್ಟ್ರೀಯ ಸಭೆ. ಎಲ್ಲಿಯವರೆಗೂ ಅದು ಹಾಗೆ ನಡೆಯುವುದಿಲ್ಲವೋ ಅಲ್ಲಿಯವರೆಗೆ ಹಿಂದು ಮಹಾಸಭೆ, ಮುಸ್ಲಿಂಲೀಗ್ ಇದ್ದೇ ಇರುವವು.

ಇಂಥವರು ಅಲ್ಪ ಸಂಖ್ಯಾಕರೆಂಬ ಪ್ರಶ್ನೆಯೇ ರಾಷ್ಟ್ರೀಯ ಸಭೆಯ ಮುಂದೆ ಬರಕೂಡದು. ರಾಷ್ಟ್ರದ ಹಿತಕ್ಕಿಂತ ಯಾವುದೊಂದು ವ್ಯಕ್ತಿಯ ಅಥವಾ ಸಮಾಜದ ಹಿತವು ಮುಖ್ಯವಲ್ಲ. ಈ ದೃಷ್ಟಿಯು ರಾಷ್ಟ್ರೀಯ ಸಭೆಗೆ ಎಲ್ಲಿಯವರೆಗೆ ಬರುವುದಿಲ್ಲವೋ ಅಲ್ಲಿಯವರೆಗೆ ಅದು ರಾಷ್ಟ್ರೀಯ ಸಭೆಯೆಂಬುದನ್ನೇ ನಾವು ಮಾನ್ಯಮಾಡುವುದಿಲ್ಲ.

ಈ ದೇಶದಲ್ಲಿ ಹಿಂದುಗಳೇ ಬಹು ಸಂಖ್ಯಾಕರು. ಎಂದ ಮೇಲೆ ಅವರ ಸಂಸ್ಕೃತಿ, ಹಕ್ಕು, ಬಾಧ್ಯತೆಗಳು ಸಂರಕ್ಷಿಸಲ್ಪಡುವುದು ಸ್ವಾಭಾವಿಕವಲ್ಲವೆ? ಅವರ ಹಿಂದಿ ಭಾಷೆಯೇ ರಾಷ್ಟ್ರಭಾಷೆಯಾಗುವುದು ಸ್ವಾಭಾವಿಕ. ಇವುಗಳಿಗೆ ವಿರೋಧಮಾಡುವ ಯಾವ ಘಟನೆಯಿದ್ದರೂ ಅದು ತ್ಯಾಜ್ಯವೇ. ಹೀಗೆ ತಿಳಿಯುವುದೇ ನಮ್ಮ ದೃಷ್ಟಿಯಲ್ಲಿ ರಾಷ್ಟ್ರೀಯತ್ವವು.

ಜರ್ಮನಿಯಲ್ಲಿ ಜರ್ಮನ್, ಇಂಗ್ಲೆಂಡಿನಲ್ಲಿ ಇಂಗ್ಲಿಶ್, ಫ್ರಾನ್ಸಿನಲ್ಲಿ ಫ್ರೆಂಚ್, ಇಟಲಿಯಲ್ಲಿ ಇಟ್‌ಲಿಯನ್, ಜಪಾನದಲ್ಲಿ ಜಪಾನಿ ಜನರೇ ಹೇಗೆ ಆಯಾಯ ರಾಷ್ಟ್ರದ ಒಡೆಯರೋ ಹಾಗೆಯೇ ಹಿಂದುಸ್ಥಾನದಲ್ಲಿ ಹಿಂದು ಜನರೇ ಈ ರಾಷ್ಟ್ರದ ಪ್ರಮುಖರಾಗಿರುವುದು ನ್ಯಾಯವೇ ಆಗಿದೆ."

---

## ಸಾಂಗಲಿ ಪ್ರಜಾಪ್ರತಿನಿಧಿ ಸಭೆ.

ಉತ್ತರ ಕರ್ನಾಟಕದಲ್ಲಿ ಸಾಂಗಲಿ ಸಂಸ್ಥಾನವು ಒಂದು ಮುಖ್ಯವಾದುದು. ಈ ಸಂಸ್ಥಾನದ ವಾರ್ಷಿಕ ಆದಾಯ ೧೬ ಲಕ್ಷದ ವರೆಗಿದೆ. ಇಲ್ಲಿಯ ಮಹಾರಾಜರು ಪ್ರಗತಿಪರ ವಿಚಾರದವರು. ತಮ್ಮ ಸಂಸ್ಥಾನದ ಕಾರಭಾರವು ಪ್ರಜಾಭಿಪ್ರಾಯವನ್ನನುಸರಿಸಿ ನಡೆಯಬೇಕೆಂಬ ಇಚ್ಛೆವುಳ್ಳವರಾಗಿದ್ದಾರೆ. ಆದುದರಿಂದ ಲೋಕನಿಯುಕ್ತ ಒಂದು ಅಸೆಂಬ್ಲಿಯನ್ನು ಏರ್ಪಡಿಸಿ ಆ ಮೂಲಕ ಪ್ರಜೆಗಳ ಅಭಿಪ್ರಾಯವನ್ನು ತಿಳಿದುಕೊಳ್ಳುತ್ತಿದ್ದಾರೆ.

ಸಾಂಗಲಿ ಸಂಸ್ಥಾನದ ಪ್ರಜಾಪ್ರತಿನಿಧಿ ಸಭೆಯು ಏಳನೆಯ ಅಧಿವೇಶನವು ತಾ. ೧೫-೧೨-೩೭ ನೆಯ ದಿವಸ ಸಂಸ್ಥಾನದ ದಿವಾನರಾದ ಶ್ರೀ. ವೀರೇಂದ್ರನಾಥ ಡಿ. ಇವರ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು. ದಿವಾನರು ರಾಜನಿಷ್ಠೆಯ ಶಪಥವನ್ನು ಮಾಡಿದನಂತರ ಅಸೆಂಬ್ಲಿ ಸಭಾಸದರೂ ರಾಜನಿಷ್ಠೆಯ ಶಪಥವನ್ನು ಮಾಡಿದರು.

### ಕನ್ನಡದಲ್ಲಿ ಶಪಥ.

ಲೋಕನಿಯುಕ್ತ ೨೦ ಸಭಾಸದರಲ್ಲಿ ೧೬ ಸಭಾಸದರು ಪ್ರಜಾಪಕ್ಷದವರು. ಇವರು ಶುದ್ಧ ಖಾದಿಯನ್ನು ಧರಿಸಿ ಗಾಂಧಿ ಟೊಪ್ಪಿಗೆಯನ್ನು ಹಾಕಿಕೊಂಡು ಅಸೆಂಬ್ಲಿಗೆ ಬಂದಿದ್ದರು. ಇವರಲ್ಲಿ ಶ್ರೀ. ಅಶ್ವಥರಾವ ಮಹಿಷಿ, ಶ್ರೀ. ಅರಬಳ್ಳಿ ಇವರು ರಾಜನಿಷ್ಠೆಯ ಪ್ರತಿಜ್ಞಾಪತ್ರವನ್ನು ಕನ್ನಡದಲ್ಲಿ ಓದಿದರು. ಇವರ ಈ ತಾಯಿನುಡಿಯ ಅಭಿಮಾನವು ಅತ್ಯಂತ ಅಭಿನಂದನೀಯವಾದುದು. ಈ ಅಸೆಂಬ್ಲಿಯಲ್ಲಿ ಕುಮಾರಿ ಮನುತಾಯಿ ಬಿ. ಎ. ಬಿ. ಟಿ. ಇವರನ್ನು ಸಭಾಸದರನ್ನಾಗಿ ನಿಯಮಿಸಿರುವುದು ಮಹಾರಾಜರವರಿಗೆ ಸ್ತ್ರೀಸಮಾಜ ಸುಧಾರಣೆಯ ವಿಷಯದಲ್ಲಿದ್ದ ಅಭಿರುಚಿಯನ್ನು ವ್ಯಕ್ತಗೊಳಿಸುತ್ತದೆ. ಇಲ್ಲಿಯ ಮುಖಂಡರು ಪ್ರಜಾಪಕ್ಷದ ಮುಖಾಂತರ ನ್ಯಾಯಸಮ್ಮತವಾದ ರೀತಿಯಲ್ಲಿ ಹೋರಾಡಿ ಜವಾಬ್ದಾರಿ ಸರಕಾರವನ್ನು ಸ್ಥಾಪಿಸಿಕೊಳ್ಳಲೆಂದು ಹಾರೈಸುತ್ತೇವೆ.

---

## ಶಹಾಪುರ-ಶಿರಹಟ್ಟಿ ವಾದ್ಯದ ಪ್ರಶ್ನೆ.

### ಸಾಂಗಲಿ ಸರಕಾರದ ಪ್ರಕಟನೆ.

ಶಹಾಪುರ ಮತ್ತು ಶಿರಹಟ್ಟಿ ಸ್ಥಳಗಳಲ್ಲಿ ವಾದ್ಯ ಬಾರಿಸುವ ವಿಚಾರವಾಗಿ ಸಾಂಗಲಿ ಸರಕಾರದಿಂದ ಪ್ರಕಟವಾದುದನ್ನು ಅನೇಕ ಮುಸಲ್ಮಾನರು ಆಕ್ಷೇಪಿಸಿರುವುದರಿಂದ ಸಾಂಗಲಿ ಸರಕಾರದವರು ಪುನಃ ಒಂದು ಪ್ರಕಟನೆಯನ್ನು ಹೊರಡಿಸಿದ್ದಾರೆ. ಅದರಲ್ಲಿ ಹೇಳಿರುವುದೇನೆಂದರೆ—

"ಕಳೆದ ೧೬ ನೆಯ ತಾರೀಖಿನ ದಿವಸ ಶಹಾಪುರಕ್ಕೆ ದಿವಾನರು ಹೋಗಿ ಅಲ್ಲಿಯ ಹಿಂದು ಮತ್ತು ಮುಸಲ್ಮಾನ್ ಪ್ರಮುಖರನ್ನು ಕರೆಯಿಸಿ ಅವರವರ ಹೇಳಿಕೆಯನ್ನು ಕೇಳಿದರು. ಮಸೀದಿಗಳ ಮುಂದೆ ಎಲ್ಲಾ ಮೆರವಣಿಗೆಗಳಲ್ಲಿಯ ವಾದ್ಯಗಳನ್ನೂ ನಿಲ್ಲಿಸಬೇಕೆಂದು ಮುಸಲ್ಮಾನರು ಹೇಳಿದರು. ಈ ವರೆಗಿನ ರೂಢಿಯಂತೆ ಧಾರ್ಮಿಕ ಉತ್ಸವಗಳ ಕಾಲದಲ್ಲಿ ಮೆರವಣಿಗೆಗೆ ಸರಕಾರದ ಅಪ್ಪಣೆ ಹೊಂದಬೇಕಾದಕಾರಣ ಬೀಳಬಾರದೆಂದೂ ನಮಾಜ್ ನಡೆದ ಕಾಲದಲ್ಲಿ ಮೃದುವಾದ್ಯಗಳನ್ನೂ ಇತರ ಕಾಲಗಳಲ್ಲಿ ಎಲ್ಲಾ ವಾದ್ಯಗಳನ್ನೂ ಮಸೀದಿಯ ಮುಂದೆ ಬಾರಿಸಲು ತಮಗೆ ಅಧಿಕಾರವಿರಬೇಕೆಂದೂ ಹಿಂದುಗಳು ಹೇಳಿದರು. ಈ ಉಭಯ ಜಾತಿಯವರೂ ಒಪ್ಪಂದಮಾಡಿಕೊಳ್ಳಬೇಕೆಂದು ತಿಳಿಸಿದ್ದಾಯಿತು. ಹಾಗೆ ಒಪ್ಪಂದವಾಗದಿದ್ದುದು ವಿಷಾದಕರವು.

ಅಲ್ಪಸಂಖ್ಯಾಕರ ಹಕ್ಕು ಬಾಧ್ಯತೆಗಳನ್ನು ಸರಕಾರವು ರಕ್ಷಿಸಬೇಕಾದುದು ಕರ್ತವ್ಯವೇ ಆಗಿದೆ. ಹಾಗೆಂದ ಮಾತ್ರದಲ್ಲಿ ಬಹುಸಂಖ್ಯಾಕರ ಹಕ್ಕು ಬಾಧ್ಯತೆಗಳನ್ನು ಉಪೇಕ್ಷಿಸಬೇಕೆಂದಲ್ಲ. ಸಾರ್ವಜನಿಕ ಮಾರ್ಗದ ಹತ್ತಿರ ಒಂದು ಉಪಾಸನಾ ಮಂದಿರವಿದೆಯೆಂಬ ಮಾತ್ರದಿಂದ ಆ ಮಾರ್ಗದ ಉಪಯೋಗಕ್ಕೆ ಪ್ರತಿಬಂಧವುಂಟಾಗಲಾರದೆಂದೇ ಇ. ಲಾ. ರಿ. ೪೭ ಅಲಹಾಬಾದ ೧೫೧ ಮತ್ತು ೬ ಮದ್ರಾಸ್ ಇವುಗಳಲ್ಲಿ ಸ್ಪಷ್ಟವಾಗಿದೆ. ಹೀಗಿರುವಾಗ ಸಾರ್ವಜನಿಕ ಮಾರ್ಗದಲ್ಲಿ ಪ್ರತಿಬಂಧವನ್ನುಂಟುಮಾಡಬೇಕಾದರೆ ಮುಸಲ್ಮಾನರು ಅಂಥ ರೂಢಿಯಿದ್ದದ್ದನ್ನು ನ್ಯಾಯಸ್ಥಾನದಲ್ಲಿ ಸಿದ್ಧಮಾಡಿಕೊಳ್ಳಬೇಕಾದುದೇ ವಿಹಿತವು.

ಬೆಳಗಾವಿಯಲ್ಲಿ ಈ ಸಂಬಂಧವಾಗಿ ಯಾವ ನಿಯಮವಿದೆಯೋ ಅದನ್ನೇ ಎಂದರೆ ಪ್ರಾರ್ಥನೆಯ ಕಾಲಕ್ಕೆ ಮಸೀದಿಯ ಮುಂದೆ ವಾದ್ಯ ನಿಲ್ಲಿಸಿ ಬೇರೆ ಕಾಲದಲ್ಲಿ ಬಾರಿಸುವುದನ್ನೇ ಆಚರಣೆಯಲ್ಲಿ ತರಬೇಕಾಗಿ ಸರಕಾರವು ಅಪ್ಪಣೆ ಮಾಡಿದೆ."

## ಪುಂಡಾಟಿಕೆ ಮುಸಲ್ಮಾನರ ನಿಷೇಧ.

### ಮಧ್ಯಪ್ರಾಂತ ಸರಕಾರದ ನಿಷೇಧ.

ನಾಗಪುರ ಹಿಂದು ಮಹಾಸಭೆಯು ಪರವಾಗಿ ತಾ. ೮-೧೨-೩೭ ನೆಯ ದಿವಸ ನಾಗಪುರ ನಾಗರಿಕರ ಸಭೆಯು ಡಾ. ಪರಾಂಜಪೆ ಇವರ ಅಧ್ಯಕ್ಷತೆಯಲ್ಲಿ ಕೂಡಿದ್ದಿತು. ಶ್ರೀ. ಥೋರಾತ ಮತ್ತು ಶ್ರೀ. ಗಾವಡೆ ಎಂಬ ಆದಿಹಿಂದು ಪ್ರಮುಖರು ಆದಿಹಿಂದುಗಳ ಮೇಲೆ ಅನೇಕ ಪುಂಡ ಮುಸಲ್ಮಾನರಿಂದ ಆಗುತ್ತಿರುವ ಹೃದಯದ್ರಾವಕ ಅತ್ಯಾಚಾರಗಳನ್ನು ಸಭಿಕರಿಗೆ ತಿಳಿಸಿದರು. ಅನಂತರ ಈ ಕೆಳಗಿನ ಗೊತ್ತುವಳಿಯನ್ನು ಶ್ರೀ. ಕಾಕಾಭಟ್ಟ ವಕೀಲ ಇವರು ಸಭೆಯ ಮುಂದಿಟ್ಟರು.

"ಪುಂಡ ಮುಸಲ್ಮಾನರ ಅತ್ಯಾಚಾರಗಳಿಂದ ಹಿಂದು ಸ್ತ್ರೀಯರನ್ನೂ ಹಿಂದು ಸಮಾಜವನ್ನೂ ಸಂರಕ್ಷಿಸಲು ನಾಗಪುರ ಹಿಂದು ಮಹಾಸಭೆಯ ಕಾರ್ಯದರ್ಶಿಗಳಾದ ಶ್ರೀ. ಜಗನ್ನಾಥ ಪ್ರಸಾದ ವರ್ಮ ಇವರು ಪ್ರಯತ್ನಿಸುತ್ತಿರುವಾಗ ಇವರ ಕಾರ್ಯಕಲಾಪಗಳನ್ನು ಮಧ್ಯಪ್ರಾಂತ ಸರಕಾರವು ಪ್ರತಿಬಂಧಿಸಿದ್ದಕ್ಕಾಗಿ ನಾಗಪುರ ಹಿಂದು ಸಮಾಜವು ಸರಕಾರದ ಈ ಕೃತಿಯನ್ನು ನಿಷೇಧಿಸುತ್ತದೆ."

ಇದಕ್ಕೆ ೧೧ ಜನ ಕಾಂಗ್ರೆಸ್ಸಿನವರು ವಿರುದ್ಧವಾಗಿದ್ದರು. ಪ್ರಚಂಡ ಬಹುಮತದಿಂದ ಮೇಲಿನ ಗೊತ್ತುವಳಿ ಠರಾವಾಯಿತು. ಮಧ್ಯಪ್ರಾಂತದಲ್ಲಿ ಅನೇಕ ಪುಂಡ ಮುಸಲ್ಮಾನರಿಂದ ಹಿಂದು ಸಮಾಜದ ಮೇಲೆ ಆಗುತ್ತಿರುವ ಆಕ್ರಮಣವನ್ನು ಈ ಸಭೆಯಲ್ಲಿ ನಿಷೇಧಿಸಿದರು.

## ಬ್ಯಾ. ಜಿನ್ನಾರವರು ಮುಖ್ಯಮಂತ್ರಿಗಳೆ?

ಮುಂದಣ ವರುಷ ಫೆಡರೇಶನ್ ಆಚರಣೆಯಲ್ಲಿ ಬರುವುದೆಂತಲೂ ಮುಸಲ್ಮಾನರು ಇದಕ್ಕೆ ಅನುಕೂಲವಾಗುವರೆಂತಲೂ ಬ್ಯಾ. ಜಿನ್ನಾರವರು ಫೆಡರಲ್ ರಾಜ್ಯಭಾರದಲ್ಲಿ ಮುಖ್ಯಮಂತ್ರಿಗಳಾಗುವರೆಂತಲೂ ವಿಶ್ವಸನೀಯವಾದ ಸ್ಥಳದಿಂದ ತಿಳಿದಿದೆಯಾಗಿ ದಿಲ್ಲಿ ಹಿಂದು ಪತ್ರಿಕಾ ಪ್ರತಿನಿಧಿಗಳು ತಿಳಿಸಿದ್ದಾರೆ.

## ಗಂಜೋತಿಯಲ್ಲಿ ಪುಂಡಾಟಿಕೆ.

ನಿಜಾಮ ರಾಜ್ಯದ ಗಂಜೋತಿ ಎಂಬಲ್ಲಿ ಆರ್ಯ ಸಮಾಜವು ಸ್ಥಾಪನೆಯಾದನಂತರ ಅಲ್ಲಿಯ ಮುಸಲ್ಮಾನರಿಗೂ ಹಿಂದುಗಳಿಗೂ ಮನಸ್ತಾಪವುಂಟಾಯಿತು. ಅನೇಕ ಮುಸಲ್ಮಾನರ ಪುಂಡಾಟಿಕೆಯಿಂದ ಹಿಂದುಗಳಿಗೆ ತುಂಬಾ ತೊಂದರೆಯಾಗಿದೆಯೆಂದೂ ಹಿಂದು ಮುಸಲ್ಮಾನರ ಕಲಹದಿಂದ ಒಬ್ಬ ಆರ್ಯಸಮಾಜಿ ಯುವಕನು ಮೃತಪಟ್ಟನೆಂದೂ ಹಿಂದು ಪತ್ರಿಕೆಯಲ್ಲಿ ಪ್ರಕಟವಾಗಿದೆ.

## ಹಿಂದು ಮಹಾಸಭೆಯಲ್ಲಿ ಕುಸ್ತಿ.

ಅಹಮದಾಬಾದಿನಲ್ಲಿ ಈ ತಿಂಗಳ ಕೊನೆಗೆ ಸೇರುವ ಅಖಿಲ ಭಾರತ ಹಿಂದು ಮಹಾಸಭೆಯ ಕಾಲಕ್ಕೆ ಪ್ರಸಿದ್ಧ ಜಟ್ಟಿಗಳ ಕುಸ್ತಿಯಾಗುವಂತೆ ವ್ಯವಸ್ಥೆ ಮಾಡಿದ್ದಾರೆ. ಗೆದ್ದವರಿಗೆ ೫೦ ರೂ. ಒಂದು ಡಾಲು ಕೊಡಲಾಗುವದು. ಈ ಕುಸ್ತಿ ಸ್ಪರ್ಧೆಯಲ್ಲಿ ಗೆದ್ದ ಜಟ್ಟಿಯು ಜೈನಮತೀಯನಿದ್ದರೆ ಒಬ್ಬರು ೨೦೦ ರೂ. ಬಹುಮಾನ ಕೊಡುವರಂತೆ.

### ಹುಬ್ಬಳ್ಳಿ ಮುನಸಿಪಾಲ್ಟಿ ಮೇಲೆ

## ರಾಷ್ಟ್ರಧ್ವಜ.

ಕಳೆದ ೧೫ ನೆಯ ತಾರೀಖಿನ ದಿವಸ ಹುಬ್ಬಳ್ಳಿ ಮುನಸಿಪಾಲ್ಟಿಯ ಜನರಲ್ ಕಮಿಟಿ ಕೂಡಿದ್ದಿತು ಒಟ್ಟು ೩೦ ಜನ ಸಭಾಸದರಲ್ಲಿ ೧೧ ಜನರು ಮಾತ್ರ ಕಮಿಟಿ ಕಾರ್ಯದಲ್ಲ ಭಾಗವಹಿಸಿದ್ದರು. ಹತ್ತು ಜನ ಸಭಾಸದರು ಬಂದಿದ್ದರೂ ಕಮಿಟಿಯ ಕಾರ್ಯದಲ್ಲಿ ಭಾಗವಹಿಸಲಿಲ್ಲ.

ಮುನಸಿಪಾಲ್ಟಿ ಅಧ್ಯಕ್ಷರಾದ ಸರದಾರ ಮಹಾಬೂಬ ಅಲ್ಲಿಖಾನರು ಮುನಸಿಪಾಲ್ಟಿಗೆ ಬಂದಿದ್ದರೂ ಕಮಿಟಿ ಕಾರ್ಯಕ್ಕೆ ಬರಲಿಲ್ಲ. ಆಗ ಸಭಿಕರು ಶ್ರೀ. ಮಾಳಗಿ ವಕೀಲರನ್ನು ಅಧ್ಯಕ್ಷರನ್ನಾಗಿ ಮಾಡಿಕೊಂಡರು.

ಮುನಸಿಪಾಲ್ಟಿ ಮೇಲೆ ರಾಷ್ಟ್ರಧ್ವಜ ಹಚ್ಚಬೇಕೆಂಬ ಹಲವು ದಿನಗಳ ವಾದದ ವಿಷಯವು ಬಂದಿತು. ಸರ್ವಾನುಮತದಿಂದ ರಾಷ್ಟ್ರಧ್ವಜವನ್ನು ಮುಖ್ಯ ಮಂತ್ರಿಗಳಾದ ಶ್ರೀ. ಖೇರ ಇವರ ಹಸ್ತದಿಂದಲೇ ಇರಿಸಬೇಕೆಂದು ನಿರ್ಣಯವಾಯಿತು. ಮತ್ತು ಬರುವ ತಿಂಗಳಲ್ಲಿ ಇಲ್ಲಿಗೆ ಗವ್ಹರ್ನರರು ಬಂದಾಗ ಅವರಿಗೆ ಮಾನಪತ್ರವನ್ನು ಕೊಡಬೇಕೆಂತಲೂ ಗೊತ್ತಾಯಿತು.

ಸರದಾರ ಮಹಾಬೂಬ ಅಲ್ಲೀಖಾನರು ಮುನಸಿಪಾಲ್ಟಿಯ ಮೇಲೆ ರಾಷ್ಟ್ರಧ್ವಜ ಹಚ್ಚಲ್ಪಡಬಾರದೆಂದು ಎಷ್ಟೋ ಪ್ರಯತ್ನಗಳನ್ನು ಮಾಡಿದ್ದರು. ಕೊನೆಗೆ ಈ ಹನ್ನೊಂದು ಜನರ ದೃಢ ನಿಶ್ಚಯದಿಂದ ನಗರ ವಾಸಿಗಳ ಇಷ್ಟವು ಪೂರೈಸಿತು.

## ದಯಾನಂದರ ಚಿತ್ರಪಟ.

ಶ್ರೀ ಸ್ವಾಮಿ ದಯಾನಂದರ ಚಿತ್ರಪಟವನ್ನು ಸಿದ್ಧಗೊಳಿಸಿ ಆ ಮೂಲಕ ಆರ್ಯ ಸಮಾಜದ ತತ್ವಗಳನ್ನು ಪ್ರಸಾರಗೊಳಿಸಬೇಕೆಂದು ಆ ಸಮಾಜದ ಕೆಲವು ಅಭಿಮಾನಿಗಳು ಪ್ರಯತ್ನಿಸಿದ್ದಾರೆ. ಈ ಕಾರ್ಯಕ್ಕೆ ಒಬ್ಬ ಮಹಾಶಯರು ಹತ್ತು ಸಾವಿರ ರೂ. ಗಳನ್ನು ದಾನವಾಗಿಕೊಡುವರೆಂದೂ ಪ್ರಕಟವಾಗಿದೆ. ಟಿಹರಿ ಚೀಫ್ ಜಜ್ ಪಂಡಿತ ಗಂಗಾಪ್ರಸಾದ ಇವರು ಈ ಕಾರ್ಯದಲ್ಲಿ ಮುಂದಾಳುಗಳಾಗಿದ್ದಾರೆ.

ಆದರೆ ಆರ್ಯ ಸಮಾಜಾಭಿಮಾನಿಗಳು ಈ ಕಾರ್ಯಕ್ಕೆ ವಿರೋಧ ಮಾಡುತ್ತಿದ್ದಾರಂತೆ! ಹೀಗೆ ಶ್ರೀ ದಯಾನಂದರ ಚಿತ್ರಪಟವನ್ನು ಸಿದ್ಧಗೊಳಿಸಿದರೆ ಅದರಿಂದ ಮೂರ್ತಿ ಪೂಜೆಗೆ ಮನ್ನಣೆಯನ್ನೂ ಪ್ರೋತ್ಸಾಹವನ್ನೂ ಕೊಟ್ಟಂತಾಗುವುದೆಂದೇ ಅವರ ಆಕ್ಷೇಪಣೆ. ಇಂಥ ಅಸಂಗತವಾದ ಆಕ್ಷೇಪಣೆಯ ಕಡೆಗೆ ಲಕ್ಷಿಸದೆ ಶ್ರೀ ಸ್ವಾಮೀಜಿಯವರ ಚಿತ್ರಪಟವು ಹೊರಡುವುದೆಂದೇ ನಿರೀಕ್ಷಿಸಲಾಗಿದೆ.

---

—ಕೀರ್ತಿಶೇಷ ಜಗದೀಶಚಂದ್ರ ಬೋಸರವರ ಧರ್ಮಪತ್ನಿಯವರು ತಮ್ಮ ಪತಿಯು ಗೊತ್ತುಮಾಡಿದಂತೆ ೩|| ಲಕ್ಷ ರೂ. ಗಳ ದಾನವನ್ನು ಆಯಾಯ ಕಾರ್ಯಗಳಿಗಾಗಿ ಕೊಟ್ಟು ಅಭಿನಂದನೆಗಳಿಗೆ ಪಾತ್ರರಾದರು.

—ಅಹಮದಾಬಾದದ ಗುಜರಾತ ಸಭೆಯ ೩೫ ಸಾವಿರ ರೂ. ಗಳು ಶಾಸನಭಂಗದ ಕಾಲಕ್ಕೆ ಸರಕಾರಕ್ಕೆ ಸೇರಿದ್ದವು. ಈಗ ಆ ಹಣವನ್ನು ತಿರುಗಿಕೊಡಲಾಯಿತು.




ಶಾ. ಶ. ೧೮೫೯ ನೆಯ ಮಾರ್ಗಶಿರ ಬ|| ೩ ಸೋಮವಾರ.

## ಚೀನದ ಶೋಚನೀಯ ಸ್ಥಿತಿ.

ಪ್ರಪಂಚದಲ್ಲಿಯೇ ಸಂಖ್ಯಾಬಲದಿಂದ ಬಹು ದೊಡ್ಡದಾದ ಅತಿ ಪ್ರಾಚೀನ ಚೀನ ರಾಷ್ಟ್ರವು ಜಪಾನಿನ ರಾಕ್ಷಸೀ ಮಹತ್ವಾಕಾಂಕ್ಷೆಗೆ ಅದರ ಭಯಂಕರವಾದ ಯಂತ್ರ ಸನ್ನಾಹದಿಂದ ಅಲ್ಪಾವಧಿಯಲ್ಲಿಯೇ ಆಹುತಿಯಾದುದನ್ನು ನೋಡಿದರೆ ಯಾರಿಗೆ ತಾನೆ ವಿಷಾದವಾಗದು?

ಚೀನ ರಾಷ್ಟ್ರವು ಘನವಾದುದಾಗಿದ್ದರೂ ಅದರಲ್ಲಿ ಸಂಘಟನೆ ಮತ್ತು ಆಧುನಿಕ ಯುದ್ಧೋಪಕರಣಗಳ ಸನ್ನಾಹ ಇಲ್ಲದಿರುವುದನ್ನು ನೆರೆಯ ಜಪಾನ ರಾಷ್ಟ್ರವು ನೋಡಿ ಇದೇ ಸಮಯವೆಂದು ತಿಳಿದು ಮೊದಲು ಮಾಂಚುರಿಯಾ ಭಾಗವನ್ನು ನುಂಗಿ ಬಲಗೊಂಡಿತು. ಅನಂತರ ಮೊನ್ನೆ ಮೊನ್ನೆ ಪೇಕಿಂಗ್, ಶಾಂಘಾಯ ಭಾಗಗಳನ್ನೂ ಆಕ್ರಮಿಸಿಕೊಂಡು ಚೀನದ ರಾಜಧಾನಿಯಾದ ನಾನ್‌ಕಿಂಗ್ ಪಟ್ಟಣವನ್ನೂ ಕಳೆದ ೧೩ ನೆಯ ತಾರೀಖಿನ ಸಾಯಂಕಾಲ ಸ್ವಾಧೀನಪಡಿಸಿಕೊಂಡಿತು.

ಈ ವಿಜಯದಿಂದ ತಾ. ೧೪ ನೆಯ ದಿನ ಜಪಾನಿನ ರಾಜಧಾನಿಯಾದ ಟೋಕಿಓ ಪಟ್ಟಣದಲ್ಲಿ ಅಭೂತಪೂರ್ವ ಆನಂದೋತ್ಸವ ಜರುಗಿತು. ಈ ಉತ್ಸವದಲ್ಲಿ ೮ ಲಕ್ಷ ವಿದ್ಯಾರ್ಥಿಗಳು ಸೇರಿದ್ದರು. ಜಪಾನವು ತಾನು ಸ್ವಾಧೀನಪಡಿಸಿಕೊಂಡ ಭಾಗದಲ್ಲಿ ಈಗಾಗಲೇ ತನ್ನ ಪ್ರಭುತ್ವವನ್ನೂ ಪ್ರಾರಂಭಿಸಿದೆ.

ಹೀಗೆ ಜಪಾನವು ತನ್ನ ಬಲವನ್ನು ನಿರುಪದ್ರವಿಯಾದ ಚೀನದ ಮೇಲೆ ಉಪಯೋಗಿಸಿ ಅನೇಕ ಕ್ರೂರ ಕೃತ್ಯಗಳನ್ನು ನಡೆಯಿಸಿದರೂ ರಾಷ್ಟ್ರಸಂಘವು ಸುಮ್ಮನೇ ಇದೆ. ಪಾಪ! ಅದೇನು ಮಾಡುವುದು? ಹೆಸರಿಗೆ ಅದು ರಾಷ್ಟ್ರಸಂಘವಾಗಿದೆಯೇ ವಿನಾ ಜರ್ಮನಿ, ಇಟಲಿ, ಜಪಾನ ರಾಷ್ಟ್ರಗಳೆಲ್ಲಾ ಸ್ವಾರ್ಥಸಾಧನೆಗಾಗಿ ಅದರಿಂದ ದೂರಾಗಿಯೇ ಇವೆ. ಇಂಗ್ಲೆಂಡ್, ಫ್ರಾನ್ಸ ರಾಷ್ಟ್ರಗಳೂ ಸಾಮ್ರಾಜ್ಯ ರಕ್ಷಣೆಗಾಗಿಯೇ ಅದರಲ್ಲಿ ಉಳಿದುಕೊಂಡಿವೆ. ಈ ಸ್ಥಿತಿಯನ್ನು ನೋಡಿಯೇ ಜಪಾನವು ತನ್ನ ಸ್ವಾರ್ಥವನ್ನು ಸಾಧಿಸಿ ಏಶಿಯಾ ಖಂಡದಲ್ಲಿ ತನ್ನ ಪ್ರಭುತ್ವವನ್ನು ಸ್ಥಾಪಿಸಲು ಹವಣಿಸುತ್ತದೆ.

ಚೀನದ ಸೇನಾಧಿಪತಿಗಳಾದ ಚಾಂಗ್-ಕೈ-ಶೇಕ ಇವರು ತಮ್ಮ ರಾಷ್ಟ್ರಬಂಧುಗಳಿಗೆ ಒಂದು ಸಂದೇಶದ ಮೂಲಕ ನೀವು ಜಪಾನಿಗಳಿಗೆ ಶರಣುಹೋಗಬೇಡಿರೆಂದೂ ಜಯವು ನಾನ್‌ಕಿಂಗ್ ಮೊದಲಾದ ಪಟ್ಟಣಗಳಲ್ಲಿಲ್ಲ; ಚೀನದ ಹಳ್ಳಿಗಳಲ್ಲಿದೆಯೆಂದೂ ಕೊನೆಗಾದರೂ ಚೀನಕ್ಕೆ ಜಯ ದೊರೆಯುವುದೆಂದೂ ತಿಳಿಸಿದ್ದಾರೆ. ಈ ವರೆಗೆ ೩ ಲಕ್ಷ ಚೀನಿಗಳು ಮೃತಪಟ್ಟು ಅಪಾರವಾದ ಸಂಪತ್ತು ಹಾಳಾಯಿತೆಂದು ಅವರೇ ತಿಳಿಸಿದ್ದಾರೆ.

ಈ ಪ್ರಕಾರ ಜಪಾನವು ಚೀನ ದೇಶದ ಉತ್ತರ ಭಾಗವನ್ನು ಮಹದನರ್ಥಕ್ಕೆ ಗುರಿಮಾಡಿ ಅದನ್ನು ಆಕ್ರಮಿಸಿಕೊಂಡು ಈಗ ದಕ್ಷಿಣಕ್ಕೆ ಹಾಂಗಕಾಂಗದ ಹತ್ತಿರಿರುವ ಕಂತಾನ ಪಟ್ಟಣದ ಕಡೆಗೆ ೫೦ ಸಾವಿರ ಸೈನ್ಯದೊಂದಿಗೆ ದಂಡೆತ್ತಿ ಬಂದಿದೆಯಂತೆ. ಚೀನಕ್ಕೆ ಇನ್ನೆಂತಹ ಶೋಚನೀಯ ಸ್ಥಿತಿ ಬರುವುದೋ?

---

## ಯುದ್ಧದ ಬೆಂಕಿ!

ಸಾಮ್ರಾಜ್ಯ ಸ್ಥಾಪನೆ ಮತ್ತು ಸಂರಕ್ಷಣೆಗಳ ದುರಾಸೆಯು ಜಗತ್ತಿನ ಪ್ರಬಲ ರಾಷ್ಟ್ರಗಳಲ್ಲಿ ಹೆಚ್ಚುತ್ತಿರುವುದರಿಂದ ನಿರ್ಬಲ ರಾಷ್ಟ್ರಗಳು ಸ್ವಾತಂತ್ರ್ಯದಿಂದ ಪ್ರಪಂಚದಲ್ಲಿ ಬಾಳುವುದೇ ಕಷ್ಟವಾಗಿದೆ. ಯುದ್ಧದ ಬೆಂಕಿಯು ಯಾವಕಡೆ ಯಾವ ನಿಮಿಷದಲ್ಲಿ ಹೊತ್ತಿ ಎಲ್ಲೆಲ್ಲಿ ವ್ಯಾಪಿಸುತ್ತದೆಯೋ ತಿಳಿಯದು.

ಜಪಾನಿನ ಭಯಂಕರವಾದ ರಣಬೇಗೆಯ ಜಳವೇನೋ ಹಿಂದುಸ್ಥಾನಕ್ಕೆ ಹತ್ತಿರವೇ ಇದೆ. ಹಿಂದುಸ್ಥಾನದ ಮೇಲೆ ಯುದ್ಧದ ವಿಮಾನುಗಳು ಬಂದು ಪಟ್ಟಣಗಳನ್ನು ಸುಡಲು ಪ್ರಾರಂಭಿಸಿದರೆ ಆ ಅನರ್ಥದಿಂದ ಹೇಗೆ ಪಾರಾಗಬೇಕೆಂಬ ಶಿಕ್ಷಣವನ್ನು ಸರಕಾರವು ಮುಂದಾಲೋಚನೆಯಿಂದ ಈಗಲೇ ಕೊಡಲಾರಂಭಿಸಿದೆ.

ಹಿಂದುಸ್ಥಾನದ ಮೇಲೆಯೇ ಈ ವಿಪತ್ತು ಬರುವುದೆಂದಲ್ಲ; ಇಂಗ್ಲೆಂಡಿನ ಮೇಲೆಯೂ ಬರುವುದೆಂದೇ ಇಂಗ್ಲಿಷರು ತಿಳಿದುಕೊಂಡು ಈಗಾಗಲೇ ಎಷ್ಟೋ ಸಿದ್ಧತೆಗಳನ್ನು ಮಾಡಿದ್ದಾರೆ. ಕಳೆದ ಯುರೋಪದ ಮಹಾಯುದ್ಧದಲ್ಲೆಲ್ಲಾ ಇಂಗ್ಲೆಂಡಿನ ಮೇಲೆ ಬಿದ್ದಷ್ಟು ಬಾಂಬುಗಳು ಈಗ ಒಂದೇ ಒಂದು ದಿನದಲ್ಲಿ ಬೀಳುವುದು ಶಕ್ಯವಿದೆಯೆಂದೇ ಅನೇಕರ ಊಹೆ. ಒಂದೇ ಬಾಂಬು ನೂರಾರು ಕಡೆ ಬೆಂಕಿಯನ್ನು ಹೊತ್ತಿಸಬಹುದಾಗಿದೆ.

ಇಂಥ ಭಯಂಕರವಾದ ಯುದ್ಧದ ಬೆಂಕಿಯು ಪಟ್ಟಣವನ್ನು ವ್ಯಾಪಿಸದಂತೆ ಇಂಗ್ಲಿಷರು ಅನೇಕ ನೀರಿನ ಹೊಸ ಯಂತ್ರಗಳನ್ನು ಸಿದ್ಧಗೊಳಿಸಿದ್ದಾರೆ. ಈ ಆಧುನಿಕ ಭಯಂಕರ ನಾನಾ ಯುದ್ಧೋಪಕರಣಗಳ ವಿಪತ್ತಿಗೆ ಜನರು ಗುರಿಯಾಗದಂತೆ ಅವರಿಗೆ ಸರಿಯಾದ ಶಿಕ್ಷಣ ಕೊಡಲು ಈಗಾಗಲೇ ಲಕ್ಷಾಂತರ ಸ್ವಯಂಸೇವಕರು ಪ್ರಯತ್ನಿಸುತ್ತಿದ್ದಾರೆ. ವಿದ್ಯಾರ್ಥಿಗಳೂ ಹೆಣ್ಣುಮಕ್ಕಳೂ ವಿಮಾನುಗಳ ದಾಳಿಗೆ ತುತ್ತಾಗದಂತೆ ಪಾರಾಗಿ ಹೋಗಲು ಗುಪ್ತ ಮಾರ್ಗಗಳು ಏರ್ಪಡುತ್ತಲಿವೆ.

ಈ ಪ್ರಕಾರ ಇಂಗ್ಲೆಂಡಿನಲ್ಲಿ ನಾಳೆಯೇ ಯುದ್ಧ ಪ್ರಾರಂಭವಾಗುವುದೇನೋ ಎಂಬ ತಿಳುವಳಿಕೆಯಿಂದಲೇ ನಾಗರಿಕರ ಸಂರಕ್ಷಣೆಗಾಗಿ ಅನೇಕ ಉಪಕರಣಗಳನ್ನೂ ಉಪಾಯಗಳನ್ನೂ ಕಲ್ಪಿಸಿ

ಕೊಡುತ್ತಿದ್ದಾರೆ. ಸಾಮ್ರಾಜ್ಯದ ದುರಾಸೆಯು ರಾಷ್ಟ್ರಗಳಲ್ಲಿ ಎಲ್ಲಿಯವರೆಗೆ ಇರುತ್ತದೆಯೋ ಅಲ್ಲಿಯವರೆಗೂ ಆ ಆಸೆಯೇ ಈ ಬೆಂಕಿಯಾಗಿ ಪ್ರಪಂಚವನ್ನು ಸುಡುತ್ತಿರುವುದು ಸ್ವಾಭಾವಿಕ. ಹಿಂದುಸ್ಥಾನವು ಕೂಡಾ ಇಂಥ ಬೆಂಕಿಗೆ ಆಹುತಿಯಾಗುವ ಪ್ರಸಂಗ ಬಂದರೆ ಹೇಗೆ ಪಾರಾಗಬೇಕೆಂಬುದನ್ನು ಕಲಿತುಕೊಳ್ಳುವುದು ಅಗತ್ಯವೇ ಆಗಿದೆ. ಈ ವಿಷಯದಲ್ಲಿ ಸರಕಾರವೂ ಜನಾಂಗವೂ ಪರಸ್ಪರ ಸಹಕಾರದಿಂದ ನಡೆಯುವುದೇ ಕ್ಷೇಮಕರವಲ್ಲವೆ?

---

## ಶ್ರೀ. ಸುಭಾಷಚಂದ್ರರೇ ಅಧ್ಯಕ್ಷರು.

ಹರಿಪುರದಲ್ಲಿ ಕೂಡುವ ರಾಷ್ಟ್ರೀಯ ಮಹಾಸಭೆಗೆ ಯಾರು ಅಧ್ಯಕ್ಷರಾಗುವರೆಂಬುದನ್ನು ಈಗ ರಾಷ್ಟ್ರವೇ ಎದುರು ನೋಡುತ್ತಲಿದೆಯಷ್ಟೆ. ಬರುವ ತಿಂಗಳ ಮೊದಲನೆಯ ವಾರದಲ್ಲಿಯೇ ಅಧ್ಯಕ್ಷರ ಚುನಾವಣೆಯು ನಡೆಯುವದಿದೆ. ಬಾಬು ಸುಭಾಷಚಂದ್ರ ಬೋಸರವರೇ ಈ ಸಾರೆಯ ಕಾಂಗ್ರೆಸ್ಸಿಗೆ ಅಧ್ಯಕ್ಷರಾಗುವುದು ಅತ್ಯಗತ್ಯವಾಗಿದೆ.

ಶ್ರೀ. ಸುಭಾಷಚಂದ್ರರಲ್ಲಿರುವ ಉಜ್ವಲವಾದ ರಾಷ್ಟ್ರಭಕ್ತಿ ರಾಷ್ಟ್ರಸೇವೆಗಾಗಿ ಮಾಡಿರುವ ಈ ವರೆಗಿನ ಅಪೂರ್ವ ಸ್ವಾರ್ಥತ್ಯಾಗ, ಪರರಾಷ್ಟ್ರಗಳ ರಾಜಕಾರಣದಲ್ಲಿದ್ದ ಅನುಭವ, ರಾಷ್ಟ್ರೀಯ ಚಟುವಟಿಕೆಗಳನ್ನು ಕ್ರಮಬದ್ಧವಾಗಿ ನಡೆಯಿಸುವುದರಲ್ಲಿರುವ ಅವರ ಅಪ್ರತಿಮವಾದ ನೈಪುಣ್ಯತೆ ಇವುಗಳನ್ನೆಲ್ಲಾ ನೋಡಿದರೆ ಹಿಂದುಸ್ಥಾನದ ಈಗಿನ ಪರಿಸ್ಥಿತಿಯಲ್ಲಿ ಇವರಂತಹ ಸಮರ್ಥರಾದ ಅಧ್ಯಕ್ಷರು ಬೇರೆ ದೊರೆಯಲಾರರೆಂದು ಹೇಳಿದರೆ ಅದೇನೂ ಅತ್ಯುಕ್ತಿಯಾಗಲಾರದು.

ಶ್ರೀ. ಸುಭಾಷಚಂದ್ರರ ವಿಷಯದಲ್ಲಿದ್ದ ಬ್ರಿಟಿಶ್ ಮುತ್ಸದ್ದಿಗಳ ಕಲ್ಪನೆಯೂ ಈಗ ಎಷ್ಟೋ ಬೇರೆಯಾಗಿದೆ. ಇಂಗ್ಲಂಡಿಗೆ ಬರಲು ಅವಕಾಶವನ್ನು ಕೊಟ್ಟಿದ್ದಾರೆ. ಬರುವ ತಿಂಗಳ ಮೊದಲನೆಯ ವಾರದಲ್ಲಿಯೇ ಲಂಡನ್ನಿಗೆ ಶ್ರೀ. ಸುಭಾಷಚಂದ್ರರು ಹೋಗುವವರಿದ್ದಾರೆ. ಅಲ್ಲಿ ದಿವ್ಯವಾದ ಸ್ವಾಗತವನ್ನುಮಾಡುವ ಸಿದ್ಧತೆಗಳೂ ಈಗಲೇ ನಡಿದಿವೆ. ಅಲ್ಲಿಂದ ಐರ್ಲಂಡಿಗೆ ಹೋಗಿ ಡಿ ವೆಲೆರಾರವರನ್ನೂ. ಶ್ರೀ. ಸುಭಾಷಚಂದ್ರ ಬೋಸರವರು ಕಾಣುವವರಿದ್ದಾರೆ.

ಈ ಎಲ್ಲಾ ಮಹತ್ವದ ಸಂದರ್ಭಗಳೂ ಜನವರಿ ಮೊದಲನೆಯ ವಾರದಲ್ಲಿಯೇ ಜರುಗುವವು. ಹಿಂದುಸ್ಥಾನಕ್ಕೆ ಶಿರಸ್ಸಿನಂತಿರುವ ಬಂಗಾಲವು ಕೀರ್ತಿಶೇಷ ದೇಶಬಂಧು ದಾಸರ ತರುವಾಯ ಬಹು ನೊಂದು ಬೆಂದು ಹೋಗಿರುವುದರಿಂದ ಈಗ ಬಂಗಾಲದಲ್ಲಿ ಅದ್ವಿತೀಯವಾದ ಪ್ರೇಮಾದರಗಳಿಗೆ ಪಾತ್ರರಾಗಿರತಕ್ಕಂಥ ಶ್ರೀ. ಸುಭಾಷಚಂದ್ರ ಬೋಸರನ್ನೇ ಕಾಂಗ್ರೆಸ್ಸಿನ ಅಧ್ಯಕ್ಷರನ್ನಾಗಿ ಮಾಡುವುದು ಬಂಗಾಲದಲ್ಲಿ ಒಂದು ಹೊಸ ಚೈತನ್ಯವನ್ನುಂಟು ಮಾಡಲಿಕ್ಕೂ ತುಂಬಾ ಸಹಾಯವಾಗದೆ ಇರಲಾರದು.

ಈ ಎಲ್ಲ ಸನ್ನಿವೇಶಗಳನ್ನು ರಾಷ್ಟ್ರದ ಮುಂದಾಳುಗಳು ನೋಡಿಯೇ ಈ ಸಾರೆಯ ಹರಿಪುರ ಕಾಂಗ್ರೆಸ್ಸಿಗೆ ಬಾಬು ಸುಭಾಷಚಂದ್ರ ಬೋಸರವರನ್ನೇ ಅಧ್ಯಕ್ಷರನ್ನಾಗಿ ಆರಿಸುವರೆಂದು ನಾವು ದೃಢವಾಗಿ ನಂಬಿದ್ದೇವೆ. ಶ್ರೀ. ಬೋಸರವರು ತಮ್ಮ ದೇಶಬಾಂಧವರಿಂದ ಈ ಅಪೂರ್ವ ಪ್ರೇಮಾದರಗಳನ್ನು ಹೊಂದಲೆಂದೂ ಇವರ ಪರದೇಶ ಪ್ರವಾಸವು ಪರಿಣಾಮಕಾರಿಯಾಗಿ ದೃಢಾರೋಗ್ಯದಿಂದ ಜಾಗ್ರುತಿ ಮಾತೃಭೂಮಿಗೆ ಆಗಮಿಸಿ ರಾಷ್ಟ್ರಸೇವಾನಿರತರಾಗಲೆಂದೂ ನಾವು ಹಾರೈಸುತ್ತೇವೆ.

## ಅಭಿನಂದನೀಯ ಉಪಕ್ರಮ.

ವಿಶ್ವವಿದ್ಯಾಲಯಗಳ ಪದವಿದಾನ ಸಮಾರಂಭದ ಭಾಷಣವು ಇಂಗ್ಲಿಷಿನಲ್ಲಿಯೇ ಜರುಗುವ ರೂಢಿಯಿದೆಯಷ್ಟೆ. ಪರಕೀಯ ಭಾಷೆಗಿರುವ ಈ ಮಹತ್ವವನ್ನು ತೆಗೆದುಹಾಕಿ ರಾಷ್ಟ್ರಭಾಷೆಯಾದ ಹಿಂದಿಗೆ ಆ ಸ್ಥಾನವನ್ನು ಕೊಟ್ಟ ಅತ್ಯಂತ ಅಭಿನಂದನೀಯವಾದ ಉಪಕ್ರಮವು ಧರ್ಮಾತ್ಮಾ ಮಾಲವೀಜಿಯವರಿಂದ ಕಳೆದ ೧೪ ನೆಯ ತಾರೀಖಿನ ದಿವಸ ಜರುಗಿತು.

ಅಲಹಾಬಾದ ವಿಶ್ವವಿದ್ಯಾಲಯದ ಚಾನ್ಸಲರ್ ಗವ್ಹರ್ನರ್ ಸರ್. ಹಾರಿ ಹೆಗ್ ಇವರು ಅಧ್ಯಕ್ಷರಾಗಿದ್ದರು. ಪಂಡಿತ ಮಾಲವೀಜಿಯವರು ಮುಖ್ಯ ಭಾಷಣಕಾರರಾಗಿದ್ದರು. ಇವರು ಹಿಂದಿ ಭಾಷೆಯಲ್ಲಿಯೇ ಪದವಿಧರರಿಗೆ ಉಪದೇಶಪರವಾದ ಭಾಷಣವನ್ನು ಮಾಡಿದರು. ಇವರು ತಮ್ಮ ಭಾಷಣದಲ್ಲಿ ಈಗಿನ ಶಿಕ್ಷಣವು ಸದೋಷವಾದುದೆಂದೂ ಜನಜೀವನಕ್ಕೆ ಆಧಾರವಾಗಿರುವ ಕೈಗಾರಿಕೆಯ ಶಿಕ್ಷಣವು ಅಗತ್ಯವೆಂದೂ ಇಂಗ್ಲಿಷ್ ಭಾಷೆಗಿಂತ ದೇಶಭಾಷೆಯಲ್ಲಿ ಶಿಕ್ಷಣ ಕೊಡುವುದೇ ಹೆಚ್ಚು ಫಲಕಾರಿಯೆಂದೂ ವಿದ್ಯಾರ್ಥಿಗಳು ದೇಶಭಕ್ತರಾಗುವಂತೆಯೇ ಅವರಿಗೆ ಶಿಕ್ಷಣಕೊಡಬೇಕೆಂದೂ ಹೇಳಿದರು.

ಈ ಮಹಾ ಸಮಾರಂಭಕ್ಕೆ ಪಂಡಿತ ಜವಾಹರಲಾಲ ನೆಹರುರವರು, ಶ್ರೀ. ಚಿಂತಾಮಣಿಯವರು, ಸೌ|| ಸರೋಜಿನಿ ದೇವಿಯವರು ಸನ್ಮಾನ್ಯಪ್ರೇಕ್ಷಕರಾಗಿ ಬಂದಿದ್ದರು. ಪಂಡಿತ ಮಾಲವೀಜಿಯವರು ತೋರಿಸಿದ ಈ ಅಭಿನಂದನೀಯವಾದ ರೀತಿಯನ್ನೇ ಬೇರೆ ವಿಶ್ವ ವಿದ್ಯಾಪೀಠಗಳ ಪದವಿದಾನ ಸಮಾರಂಭಗಳ ಕಾಲದ ಭಾಷಣಕಾರರು ಅನುಸರಿಸುವುದು ಭೂಷಣಪ್ರದವಲ್ಲವೆ?

---

## ನೆಹರು-ಖಾನ ವಿವಾಹ!

ರಾಷ್ಟ್ರೀಯ ಸಭಾಧ್ಯಕ್ಷರಾದ ಪಂ. ಜವಾಹರಲಾಲ ನೆಹರು ಇವರ ಅಣ್ಣನ ಮಗಳು ಶ್ಯಾಮಕುಮಾರಿ ನೆಹರು ಇವರಿಗೂ ಮಿ. ಜಮೀಲಖಾನರಿಗೂ ತಾ. ೧೫-೧೨-೩೭ ನೆಯ ದಿವಸ ರಾಯಬರೇಲಿ ಎಂಬಲ್ಲಿ ರಜಿಸ್ಟರ್ ಪದ್ಧತಿಯಿಂದ ವಿವಾಹವಾಯಿತು.

ಶ್ಯಾಮಕುಮಾರಿ ನೆಹರು ಇವರು ಅಲಹಬಾದ ಹೈ ಕೋರ್ಟಿನ ವಕೀಲರಿದ್ದಾರೆ. ಮಿ. ಜಮೀಲಖಾನ ಇವರು ರಾಯಬರೇಲಿಯಲ್ಲಿ ಪೋಲಿಸ ಸುಪರಿಂಟೆಂಡೆಂಟ್‌ರಿದ್ದಾರೆ. ಈ ವಿವಾಹವು ಹಿಂದು-ಮುಸಲ್ಮಾನ್‌ರ ಐಕ್ಯದ ಒಂದು ರೀತಿಯೆ?

ಡೆಪ್ಯುಟಿ ಕಮಿಶನರ್‌ರ ಮಿ. ಲೋಬೊಪ್ರಭು ಇವರು "ಸಿವ್ಹಿಲ್ ಮ್ಯಾರೇಜ್ ಆಕ್ಟ" ಪ್ರಕಾರ ರಜಿಸ್ಟರ್ ಪದ್ಧತಿಯಿಂದ ವಿವಾಹ ಜರುಗಿಸಿದರು. ಆಗ ರಾಮಪುರದ ದಿವಾನ್ ಮಿ. ಜಲಾಲಖಾನ, ಮಿ. ಎ. ಕೆ. ನೆಹರು, ಮತ್ತು ಶಹಾಜಾದಾ ಮಸುದ ಉಜಾಕರ ಇವರು ಸಾಕ್ಷಿದಾರರಾಗಿದ್ದರು.

ಪಂಡಿತ ಜವಾಹರಲಾಲರು ಈ ಅಂತರ್ಜಾತೀಯ ವಿವಾಹಕ್ಕೇನೂ ಭಿನ್ನಾಭಿಪ್ರಾಯವುಳ್ಳವರಾಗಿಲ್ಲವಂತೆ. ಆದರೆ ಶ್ಯಾಮಕುಮಾರಿಯವರಿಗೂ ಜಮೀಲಖಾನರಿಗೂ ಗುಣ ಸ್ವಭಾವಗಳು ಸರಿಯಿಲ್ಲವೆಂದು ಈ ಲಗ್ನ ಸಂಭವಿಸಬಾರದಾಗಿ ಕುಮಾರಿಯರ ಮನಸ್ಸನ್ನು ತಿರುಗಿಸಲು ಪ್ರಯತ್ನಿಸಿದರಂತೆ. ಅದು ಸಾಧ್ಯವಾಗದೆ ವಿವಾಹವು ನಡದೇ ಹೋಯಿತು. ಇದು ವ್ಯಕ್ತಿಸ್ವಾತಂತ್ರ್ಯದ ಕಾಲವಲ್ಲವೆ?

---

# ಇಕೋ, ಇಲ್ಲಿದೆ ಕೈಲಾಸ ನೋಡಿರಿ!



## ಕಾಯಕದಲ್ಲಿ ಮೇಲುಕೀಳಿಲ್ಲ. ಆದರೆ ಅದರ ರೀತಿಯಲ್ಲಿ.

ಉದ್ಯೋಗಗಳಲ್ಲಿ ಮೇಲುಕೀಳುಗಳನ್ನು ಕಲ್ಪಿಸುವವರೇ ಹೆಚ್ಚು. ಬುದ್ಧಿಯ ವ್ಯವಸಾಯದಿಂದ ಜೀವಿಸುವವರೇ ಮೇಲೆಂದೂ ಶ್ರಮಜೀವಿಗಳೆಲ್ಲಾ ಕೀಳೆಂದೂ ಬಹು ಜನರು ಬಹುಕಾಲದಿಂದಲೂ ತಿಳಿದುಕೊಂಡು ಬಂದಿದ್ದಾರೆ. ಈಗ ಬಹು ಸುಧಾರಣೆಯ ಕಾಲವೆಂದು ತಿಳಿದಿದ್ದಾರಷ್ಟೆ. ಇಂಥ ಸಮಯದಲ್ಲಿಯೂ ಕೈಕಸಬುಗಳನ್ನು ಮಾಡಿ ಜೀವಿಸುವ ಶ್ರಮಜೀವಿಗಳ ಬಾಳು ಕೀಳೆಂದೇ ತಿಳಿದಿರುವವರು ಬಹು ಜನರು.

ಈ ತಪ್ಪು ತಿಳುವಳಿಕೆಯು ೧೨ ನೆಯ ಶತಮಾನದಲ್ಲಂತೂ ಅತ್ಯಧಿಕವಾಗಿದ್ದಿತು. ಆಗ ಬಸವಾದಿ ಪ್ರಮಥರು ಅತ್ಯದ್ಭುತವಾದ ವಿಚಾರಕ್ರಾಂತಿಯನ್ನುಂಟುಮಾಡಿ ಶ್ರಮಜೀವಿಯು ಜನಾಂಗದ ಬೆನ್ನೆಲವಿನಂತಿದ್ದಾನೆಂದು ಈಗ ಅನೇಕರು ಹೇಳುತ್ತಿದ್ದುದನ್ನೇ ಆಗ ಅವರು ಆಚರಣೆಯಲ್ಲಿ ತಂದರು. ಒಂದು ದಿನ ಶಿವಾನುಭವ ಮಂಟಪದಲ್ಲಿ ಗುರುವರೇಣ್ಯರಾದ ಶ್ರೀ ಚೆನ್ನಬಸವಣ್ಣನವರು ಈ ಕೆಳಗಿನ ವಚನವನ್ನು ನಿರೂಪಿಸಿದರು—

ಕೃಷಿಕೃತ್ಯ ಆವ ಕಾಯಕದಿಂದಾದೊಡೇನು? ತನು
ಮನ ಬಳಲಿಸಿ ಗಳಿಸಿ ತಂದು, ಗುರುಲಿಂಗಜಂಗಮಕ್ಕೆ ವೆಚ್ಚಿಸಿ
ದಾಸೋಹವ ಮಾಡುವ ಪರಮ ಸದ್ಭಕ್ತನ ಪಾದವ
ತೋರಯ್ಯಾ ಎನಗೆ. ಅದೆಂತೆಂದೊಡೆ ಆತನ ತನು ಶುದ್ಧ,
ಆತನ ಮನ ಶುದ್ಧ, ಆತನ ನಡೆ ಶುದ್ಧ, ನುಡಿ ಎಲ್ಲ
ಪಾವನವು. ಆತಂಗೆ ಉಪದೇಶವ ಮಾಡಿದಾತನೆ ಪರಮ
ಸದ್ಗುರು. ಅಂತಪ್ಪ ಸದ್ಭಕ್ತನ ಮನೆಯು ಕೈಲಾಸವೆಂದು
ಹೊಕ್ಕು ಲಿಂಗಾರ್ಚನೆಯ ಮಾಡುವ ಜಂಗಮವೇ ಜಗತ್ಪಾ
ವನ. ಇಂತಪ್ಪ ಗುರು ಶಿಷ್ಯ ಜಂಗಮಕ್ಕೆ ನಾನು ನೆರೆ ನಂಬಿ
ನಮೋ ನಮೋ ಎಂಬೆನಯ್ಯ ಕೂಡಲಚೆನ್ನಸಂಗಮದೇವಾ.

ಯಾವಾತನು ತನ್ನ ತನು ಮನಗಳನ್ನು ಸವಿಸಿ ನ್ಯಾಯವಾದ ಒಕ್ಕಲತನವೇ ಮೊದಲಾದ ಯಾವ ಕೈಕಸಬನ್ನಾದರೂ (ಕಾಯಕ) ಮಾಡಿ ಹಣವನ್ನು ಗಳಿಸಿ ಅದನ್ನು ತನ್ನ ಸುಖೋಪಭೋಗಗಳಿಗಾಗಿಯೇ ವಿನಿಯೋಗಿಸದೆ ದೇವರ ಮತ್ತು ಲೋಕೋಪಕಾರ ನಿರತರ ಸೇವೆಗೆ ಸಲ್ಲಿಸುತ್ತಾನೆಯೋ ಆತನೇ ಪರಮ ಪವಿತ್ರನು. ಆತನೇ ಶ್ರೇಷ್ಠನು. ಆತನ ಮನೆಯೇ ಕೈಲಾಸ ಆತನೇ ಪರಮ ವಂದ್ಯನು.

ಹೀಗೆ ತನು ಮನ ದಣಿಸುವ ನ್ಯಾಯವಾದ ಉದ್ಯೋಗವು ಅದು ಯಾವುದಿದ್ದರೂ ಕೀಳಲ್ಲ. ಆದುದರಿಂದಲೇ ಪಾದರಕ್ಷೆಗಳನ್ನು ಶ್ರೀ ಹರಳಯ್ಯನವರು ಮಾಡುತ್ತಿದ್ದರೂ ಶರಣವರೇಣ್ಯರೆಂದೇ ಆಗ ಪೂಜ್ಯರಾಗಿದ್ದರು. ಹೀಗೆ ಕಾಯಕ ಜೀವಿಗಳಾಗದೆ ತಮ್ಮ ಬುದ್ಧಿವಂತಿಕೆಯಿಂದಲೇ ಮೆರೆದಾಡಿ ಅನ್ಯರನ್ನು ವಂಚಿಸಿ ಇಲ್ಲವೆ ದುರ್ಮಾರ್ಗಕ್ಕೆ ತಳ್ಳಿ, ಗುರುಗಳೆಂದು ಹೇಳಿಸಿಕೊಂಡರೂ ಅದೇ ಕೀಳು.

ಬಸವಣ್ಣನು ಹೇಳಿದುದೇನು? "ದೇವ ಸಹಿತ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡೆನಾದರೆ ನಿಮ್ಮಾಣೆ" ಎಂದೇ ಅಲ್ಲವೆ? ಕಾಯಕದಲ್ಲಿ ಮೇಲುಕೀಳುಗಳಿವೆಯೆ? ಇಲ್ಲವೇ ಇಲ್ಲ.

ಕೈಕಸಬುಗಳು ಕೀಳಲ್ಲ. ಬುದ್ಧಿಯ ಉದ್ಯೋಗವೇ ಹೆಚ್ಚಿನದೇನೂ ಅಲ್ಲ. ಎಲ್ಲಾ ಕಾಯಕಗಳೂ ಸಮಾನವೇ ಆಗಿವೆ. ಆದರೆ ಅವು ತನ್ನ ತನು ಮನ ದಣಿದು ಮಾಡಲ್ಪಡತಕ್ಕವುಗಳಾಗಿರಬೇಕು. ಅವುಗಳಿಂದ ಜನಾಂಗಕ್ಕೆ ಹಿತವಾಗಬೇಕು. ಯಾರಿಗೂ ಯಾವ ವಿಧವಾದ ಹಿಂಸೆಯೂ ಸಂಭವಿಸಬಾರದು. ಅನ್ಯರಿಗೆ ಅಹಿತವಾಗುವ ಯಾವ ಉದ್ಯೋಗವಾದರೂ ಅದು ಕೀಳು. ಜನ ಜೀವನಕ್ಕೆ ಸಾಧನವಾದ ಯಾವ ಕೆಲಸವಾದರೂ ಅದು ಮೇಲು.

ಆದಕಾರಣ ಸಕಲರೂ ತಮ್ಮ ತನು ಮನಗಳನ್ನು ದಣಿಸಿ ಯಾವುದೊಂದು ಸದುದ್ಯೋಗದಲ್ಲಿಯೇ ನಿರತರಾಗಿ ಸ್ವಾವಲಂಬನೆಯಿಂದಲೇ ಜೀವಿಸಬೇಕಲ್ಲದೆ ಪರಾವಲಂಬಿಗಳಾಗಬಾರದು. ಪರಾವಲಂಬನೆಯೇ ನರಕ. ಸ್ವಾವಲಂಬನೆಯೇ ಸ್ವರ್ಗ. ಕಾಯಕದಲ್ಲಿ ಮೇಲುಕೀಳುಗಳನ್ನು ಮಾಡುವುದರಿಂದಲೇ ಬಹು ಜನರು ನಿರುದ್ಯೋಗಿಗಳಾಗಿ ಪರಾವಲಂಬನೆಯಿಂದ ಜೀವಿಸಿ ನಾನಾ ಕಷ್ಟಗಳಿಗೀಡಾಗುತ್ತಾರೆ.

## ಲಂಡನ್ನಿನಲ್ಲಿ ಹಿಂದು ದೇವಾಲಯ.

### ಉದಾರವಾದ ಧನಸಹಾಯ.

ಲಂಡನ್ನಿನಲ್ಲಿ ಸ್ಥಾಪಿಸಬೇಕೆಂದಿರುವ ಹಿಂದು ದೇವಾಲಯಕ್ಕೆ ಈ ಕೆಳಗಿಂತೆ ಉದಾರಿಗಳು ಧನಸಹಾಯ ಮಾಡಿದ್ದಾರೆ—

(೧) ಬಿಹಾರ ಬೆಟ್ಟಿಯಾಹ ಕೋರ್ಟ ಆಫ್ ವಾರ್ಡಸ್‌ದವರು ಆ ಎಸ್ಟೇಟಿನ ಮಹಾರಾಣಿಯವರಾದ ಶ್ರೀ. ಜಾನಕಿದೇವಿಯವರ ಹೆಸರಿನಿಂದ ಒಂದು ಭಾಗವನ್ನು ಕಟ್ಟಿಸಲು ೪೫೦೦೦ ರೂ. (೨) ಕೊಯಿಮತ್ತೂರವರಿಂದ ೧೨೫೫ ರೂ. (೩) ಜಯಪುರ ಮಹಾರಾಜರಿಂದ ೧೦೦೦ ರೂ. (೪) ಮದ್ರಾಸಿನ ಪೆರುಮಳ ಚೆಟ್ಟಿ ಎಂಡ್ ಸನ್ಸ್ ಇವರಿಂದ ೧೦೦೦ ರೂ. (೫) ಹಿಂದು ಪತ್ರಿಕಾ ಸಂಪಾದಕರು ಮದ್ರಾಸ ಇವರಿಂದ ೫೦೦ ರೂ. (೬) ಶ್ರೀ. ಅಲಗಪ್ಪ ಚೆಟ್ಟಿಯವರು ಮದ್ರಾಸ ೫೦೦ ರೂ. (೭) ಶ್ರೀ. ಕೃಷ್ಣಸ್ವಾಮಿ ಐಯ್ಯರವರು ೫೦೦ ರೂ.

ಈ ಪ್ರಕಾರ ಉದಾರಿಗಳು ಧನಸಹಾಯಮಾಡಿ ಲಂಡನ್ನಿನಲ್ಲಿ ಹಿಂದು ಸಂಸ್ಕೃತಿಯ ಪ್ರಸಾರಕ್ಕೋಸ್ಕರ ದೇವಾಲಯು ಮತ್ತು ಗ್ರಂಥಾಲಯಗಳನ್ನು ನಿರ್ಮಿಸುವ ಈ ಮಹತ್ಕಾರ್ಯಕ್ಕೆ ನೆರವಾಗುವರೆಂದೇ ನಾವು ನಂಬಿದ್ದೇವೆ.

---

## ರಾಯಚೂರು.

ಇದೇ ಡಿಶೆಂಬರ ತಿಂಗಳ ೨೪, ೨೫, ೨೬ ಈ ಮೂರು ದಿವಸಗಳಲ್ಲಿ ಅ. ಕ. ಆಯುರ್ವೇದ ಸಮ್ಮೇಳನವು ರಾಯಚೂರಿನಲ್ಲಿ ನಡೆಯುವದೆಂದು ಸಕಲರಿಗೂ ಈಗಾಗಲೇ ತಿಳಿದ ವಿಷಯವಾಗಿದೆ. ಈ ಸಮ್ಮೇಳನದಲ್ಲಿ ಸ್ತ್ರೀಯರಿಗಾಗಿ ಪ್ರತ್ಯೇಕ ಸಭೆಯನ್ನು ಏರ್ಪಡಿಸಿದೆ. ಈ ಸಭೆಯ ಅಧ್ಯಕ್ಷಸ್ಥಾನವನ್ನು ಶ್ರೀಮತಿ ಗಾಜೇಶ್ವರಿದೇವಿಯವರು ವಹಿಸಲು ಒಪ್ಪಿರುವರು.

ಈ ಸಮ್ಮೇಳನಕ್ಕೆ ಬರುವ ಸ್ತ್ರೀಯರು ಪ್ರತಿನಿಧಿತ್ವಕ್ಕಾಗಿ ಯಾವ ಬಗೆಯ ಫೀ ಸಹ ಬೇಕಾಗಿಲ್ಲ. ಕೇವಲ ಮಹಿಳೆಯರ ವಸತಿ ಮತ್ತು ಭೋಜನದ ವ್ಯವಸ್ಥೆಯ ಕಡೆಗೆ ಹೆಚ್ಚು ಗಮನಕೊಡಲಾಗುವುದು. ಸಭೆಯಲ್ಲಿ ಮಾತನಾಡಲು ಇಚ್ಛಿಸುವ ಮಹಿಳೆಯರು ಕೂಡಲೇ ತಮ್ಮ ಹೆಸರನ್ನು ಮತ್ತು ವಿಷಯವನ್ನು ತಿಳಿಸಬೇಕು.

ಸಕಲ ಮಹಿಳೆಯರು ಈ ಸಮ್ಮೇಳನಕ್ಕೆ ಆಗಮಿಸಿ ನಿಜಾಂ ಕರ್ನಾಟಕವನ್ನು ನೋಡಲು ತಪ್ಪಬಾರದಾಗಿ ಬೇಡಿಕೆ. ಬರಲಿಚ್ಛಿಸುವ ಮಹಿಳೆಯರು ತಾವು ಬರುವ ದಿನ ಗಾಡಿ ಮುಂಚಿತವಾಗಿಯೇ ತಿಳಿಸಿದರೆ ಸರಿಯಾದ ವ್ಯವಸ್ಥೆಮಾಡಲು ಅನುಕೂಲವಾಗುವುದು.

ಎಸ್. ಆರ್. ಕೃಷ್ಣರಾವ
ಕಾರ್ಯದರ್ಶಿ.

---

## ಹೆರಿಗೆಯಕಾಲ-ಶಿಶುಗಳ ಮರಣ.

ಹೆಣ್ಣುಮಕ್ಕಳು ಒಂದು ಕೂಸನ್ನು ಹೆತ್ತನಂತರ ಇನ್ನೊಂದು ಹೆರಿಗೆ ವರೆಗೆ ಎಷ್ಟುಕಾಲ ಹೆಚ್ಚಾಗಿದ್ದಿತೋ ಅಷ್ಟು ಶಿಶುಗಳ ಮರಣ ಸಂಖ್ಯೆ ಕಡಿಮೆ. ಈ ಹೆರಿಗೆಯಕಾಲ ಒಂದೇ ವರುಷ ಮಾತ್ರ ಇದ್ದರೆ ಸಾವಿರಕ್ಕೆ ೬೫೭, ೧॥ ವರುಷವಿದ್ದರೆ ೬೦೩, ೨ ವರುಷವಿದ್ದರೆ ೫೭೮ ೨॥ ವರುಷವಿದ್ದರೆ ೨೦೪, ೩ ವರುಷವಿದ್ದರೆ ೮೭ ರಂತೆ ಶಿಶುಗಳು ಮೃತಪಡುತ್ತವಂತೆ.

## ಲಿಂಗಧಾರಣ ದೀಕ್ಷೆ.

ಗೋಕಾಕ ತಾಲೂಕು ಪೈಕಿ ಹುಲಕುಂದ ಗ್ರಾಮದಲ್ಲಿಯ ಶ್ರೀ. ಹನುಮಂತಪ್ಪ ರಾಮಪ್ಪ ಪಾಟೀಲ ಎಂಬ ನಾಮದ ರಡ್ಡಿಯವರ ಪಂಗಡದ ವಿದ್ಯಾರ್ಥಿಗೆ ಶ್ರೀ ಮರಡಿ ಮಠದಲ್ಲಿ ಆ ಮಠಾಧ್ಯಕ್ಷರ ಹಸ್ತದಿಂದ ತಾ. ೧೩-೧೨-೩೭ ನೆಯ ಸೋಮವಾರ ದಿವಸ ಪ್ರಾತಃಕಾಲ ಲಿಂಗಧಾರಣ ದೀಕ್ಷೆಮಾಡಲ್ಪಟ್ಟಿತು. ಆ ಮೇಲೆ ಶ್ರೀ. ಹನುಮಂತಪ್ಪನವರಿಂದಲೇ ಮಹಾ ಗಣಾರಾಧನೆಗೆ ನೀಡಿಸಿ ಅವರನ್ನು ಬಳಕಿಯಲ್ಲಿ ಕೂಡಾ ತೆಗೆದುಕೊಂಡದ್ದಾಯಿತು. ಊಟದ ಸಮಾರಂಭ ಬಹು ಪ್ರಚಂಡವಾಗಿತ್ತು. ಹೀಗಿರಬೇಕು ಲಿಂಗಧಾರಣ ದೀಕ್ಷೆ.

ಓರ್ವ ಲಿಂಗಭಕ್ತ.

---

## ಶ್ರೀ. ದಿವಾಕರರು ಆರೋಗ್ಯಶಾಲಿಗಳಾಗಲಿ.

ಕರ್ನಾಟಕದ ಪ್ರಸಿದ್ಧ ಮುಂದಾಳುಗಳಾದ ಶ್ರೀ. ರಂಗನಾಥರಾವ ದಿವಾಕರರು ಅನಾರೋಗ್ಯದ ಮೂಲಕ ಹುಕ್ಕೇರಿಯಲ್ಲಿರುವ "ಕರ್ನಾಟಕ ಹೆಲ್ಥ ಇನ್ಸಿಟ್ಯೂಟ್" ದಲ್ಲಿ ಕೆಲವು ದಿನ ವಾಸವಾಗಿದ್ದರು. ಆರೋಗ್ಯಹೊಂದಿ ಧಾರವಾಡಕ್ಕೆ ಬಂದನಂತರ ಮತ್ತೆ ಅನಾರೋಗ್ಯವಾಯಿತೆಂದೂ ಅದಕ್ಕಾಗಿ ಮತ್ತೆ ಹುಕ್ಕೇರಿಗೆ ಹೋಗಬೇಕಾಯಿತೆಂದೂ ಪ್ರಕಟವಾಗಿದೆ. ಶ್ರೀ. ದಿವಾಕರರು ಜಾಗ್ರತೆ ಆರೋಗ್ಯಶಾಲಿಗಳಾಗಿ ರಾಷ್ಟ್ರಕಾರ್ಯವನ್ನು ಕೈಕೊಳ್ಳಲೆಂದು ನಾವು ಹಾರೈಸುತ್ತೇವೆ.

---

## ಸ್ತುತ್ಯ ಶುದ್ಧೀಕರಣ.

ತಾ. ೧೨-೧೨-೩೭ ನೆಯ ದಿವಸ ಪುಣೆಯಲ್ಲಿ ಸರಸ್ವತೀ ಉಂಡೆ ಎಂಬ ಕ್ರಿಸ್ತ ಮತದ ಕುಮಾರಿಯನ್ನು ಶುದ್ಧಗೊಳಿಸಿ ಹಿಂದುಧರ್ಮದಲ್ಲಿ ತೆಗೆದುಕೊಂಡರು. ಅನಂತರ ಆ ಕುಮಾರಿಯನ್ನು ಶ್ರೀ. ಗೋಪಾಳರಾವ ಪುರಂದರೆ ಎಂಬ ಬ್ರಾಹ್ಮಣ ತರುಣನು ವೈದಿಕ ಪದ್ಧತಿಯಿಂದ ವಿವಾಹವಾದನು.

# ಸ್ವಾತಂತ್ರ್ಯದ ಆದರ್ಶ.

ಕಲಕತ್ತಾ ವಿಶ್ವವಿದ್ಯಾಲಯದ ವ್ಹಾಯಿಸ್ ಚಾನ್ಸಲರರಾದ ಶ್ರೀ. ಶಾಮುಪ್ರಸಾದ್ ಮುಕರ್ಜಿಯವರು ಪಾಟ್ನಾ ವಿಶ್ವವಿದ್ಯಾಲಯದ ಪದವಿದಾನ ಸಂಭ್ರಮದಲ್ಲಿ ಮಾಡಿದ ಭಾಷಣವು ಅತಂತ್ಯ ಸ್ವಾತಂತ್ರ್ಯ ಭಾವನೆಯಿಂದ ಕೂಡಿದೆ. ಸ್ವಾತಂತ್ರ್ಯವೆಂದರೇನು-ಎಂಬುದನ್ನು ಬಹಳ ಚೆನ್ನಾಗಿ ವಿಶದಪಡಿಸಿದ್ದಾರೆ. ಸುಸಂಸ್ಕೃತನಾದ ಮನುಷ್ಯನು ಆಶಿಸಬೇಕಾದ ಅಂತ್ಯವಾದ ಗುರಿಯಾವುದು ಎಂಬುದಕ್ಕೆ ಉತ್ತರ ಹೇಳಿದ್ದಾರೆ. ಸುಸಂಸ್ಕೃತನಾದ ಮನುಷ್ಯನ ಮನಸ್ಸಿಗೆ ಬೇಕಾದುದು ಈ ಕೆಳಗಿನ ಅಂಶಗಳು. ಯಾವ ರಾಷ್ಟ್ರವೇ ಆಗಲಿ ಪರಕೀಯ ಪ್ರಭುತ್ವದಿಂದ ಬಿಡುಗಡೆ ಹೊಂದಬೇಕು. ಇದು ರಾಷ್ಟ್ರಗಳ ಮಾತಾಯಿತು. ರಾಷ್ಟ್ರಗಳಲ್ಲಿನ ಪ್ರತಿಯೊಬ್ಬ ವ್ಯಕ್ತಿಯ ವಿಷಯವನ್ನೂ ತೆಗೆದುಕೊಂಡು, ಪ್ರತಿಯೊಂದು ರಾಷ್ಟ್ರದಲ್ಲಿಯೂ ಪ್ರತಿಯೊಬ್ಬ ವ್ಯಕ್ತಿಗೂ ಆಲೋಚಿಸಲು, ತನಗೆ ಇಷ್ಟ ಬಂದ ದೇವರನ್ನು ಪೂಜಿಸಲು ತನ್ನ ಅಪೇಕ್ಷೆಯಂತೆ ಮಾತನಾಡಲು ಮತ್ತು ಆಚರಿಸಲು ಸ್ವಾತಂತ್ರ್ಯವಿರಬೇಕು. ಆದರೆ ಈ ವ್ಯಕ್ತಿ ಸ್ವಾತಂತ್ರ್ಯಕ್ಕೆ ಒಂದು ನಿಬಂಧನೆಯಿದೆ. ಒಬ್ಬ ವ್ಯಕ್ತಿಯು ತನ್ನ ಸ್ವಂತ ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳಲು ಎಷ್ಟು ಆತುರನಾಗಿರಬೇಕೋ, ಅಷ್ಟೇ ಆತುರತೆಯನ್ನು ಇತರರ ಸ್ವಾತಂತ್ರ್ಯಕಾಪಾಡಲು ತೋರಿಸಬೇಕು. ಕಾನೂನು ಸಮ್ಮತವಾದ ತನ್ನ ಸ್ವಂತ ವ್ಯವಹಾರವನ್ನು ನಡೆಸಿಕೊಂಡು ಹೋಗಲು ಎಲ್ಲ ವ್ಯಕ್ತಿಗಳಿಗೂ ಸಮಾನವಾದ ಸ್ವಾತಂತ್ರ್ಯವಿರಬೇಕು. ನಮ್ಮ ಜನರು ಅನೇಕ ವಿಧವಾದ ಗುಲಾಮಗಿರಿಗೆ ತುತ್ತಾಗುತ್ತಿದ್ದಾರೆ. ಹುಟ್ಟಿದಾಗಿನಿಂದ ಸಾಯುವವರೆಗೂ ಅವರಿಗೆ ಬಂಧನಗಳಿರುತ್ತವೆ. ಈ ಬಂಧನಗಳು ಬಡತನ, ಅತಿ ಕೆಲಸ, ಪರಿಸ್ಥಿತಿ, ಇವುಗಳಿಂದ ಉಂಟಾದವು. ಈ ತರಹದ ಬಂಧನಗಳು ವ್ಯಕ್ತಿಗಳಿಗಿರಬಾರದು. ಇಷ್ಟೇ ಅಲ್ಲದೆ ವ್ಯಕ್ತಿಯು ಪ್ರಗತಿಹೊಂದಲು ಅವಕಾಶಗಳೂ ಇರಬೇಕು. ಸ್ವಾತಂತ್ರ್ಯವು ಒಂದು ಸರಳ ಏಕಭಾವನೆಯಲ್ಲ. ಅದರಲ್ಲಿ ನಾಲ್ಕು ಒಳ ಅಂಗಗಳಿವೆ. ರಾಷ್ಟ್ರೀಯ ಸ್ವಾತಂತ್ರ್ಯ, ರಾಜಕೀಯ ಸ್ವಾತಂತ್ರ್ಯ, ವ್ಯಕ್ತಿಸ್ವಾತಂತ್ರ್ಯ ಮತ್ತು ಆರ್ಥಿಕ ಸ್ವಾತಂತ್ರ್ಯ. ಮನುಷ್ಯನು ಸಂಪೂರ್ಣವಾಗಿ ಸ್ವತಂತ್ರನಾಗಿರಬೇಕಾದರೆ ಸ್ವತಂತ್ರ ದೇಶದಲ್ಲಿರಬೇಕು, ಪ್ರಜಾ ಸತ್ತಾತ್ಮಕ ರಾಜ್ಯಪದ್ಧತಿಯಲ್ಲಿರಬೇಕು, ಯಾವ ಸಮಾಜದಲ್ಲಿ ಸರ್ವರಿಗೂ ಸಮನಾದ ಕಾನೂನುಗಳಿವೆಯೋ ಪ್ರತಿಬಂಧಕಗಳು ಆದಷ್ಟು ಕಡಿಮೆಯಿವೆಯೋ ಆ ತರಹದ ಸಮಾಜವಿರಬೇಕು. ಆರ್ಥಿಕ ಸ್ವಾತಂತ್ರ್ಯದಲ್ಲಿ ಈ ಕೆಳಗಿನ ನಿಬಂಧನೆಗಳಿರಬೇಕು. ರಾಷ್ಟ್ರದ ಆರ್ಥಿಕ ಹಿತಗಳೂ ಸುರಕ್ಷಿತವಾಗಿರಬೇಕು. ಮತ್ತು ಪ್ರತಿಯೊಬ್ಬ ನಾಗರಿಕನಿಗೂ ಸುರಕ್ಷಿತವಾದ ಜೀವನೋಪಾಯದ ಭರವಸೆಯಿರಬೇಕು. ಮತ್ತು ಪ್ರತಿಯೊಬ್ಬನೂ ತನ್ನ ಸ್ವಂತ ಯೋಗ್ಯತೆಯಿಂದ ಇನ್ನೂ ಮೇಲೆ ಮೇಲೆಯೇರಲು ಅವಕಾಶ ಸೌಲಭ್ಯಗಳಿರಬೇಕು.

ನಮ್ಮ ದೇಶದಲ್ಲಿ ಈ ರೀತಿಯಾದ ರಾಷ್ಟ್ರ ಸ್ವಾತಂತ್ರ್ಯವಾಗಲಿ, ವ್ಯಕ್ತಿ ಸ್ವಾತಂತ್ರ್ಯವಾಗಲಿ, ಸಮಾಜ ಸ್ವಾತಂತ್ರ್ಯವಾಗಲಿ, ಆರ್ಥಿಕ ಸ್ವಾತಂತ್ರ್ಯವಾಗಲಿ, ಇಲ್ಲ. ನಮ್ಮ ದೇಶದ ಜನರು ಮಾನವತೆಯ ಸಂಪೂರ್ಣ ಕಳೆಯಿಂದ ಶೋಭಿಸಬೇಕಾದರೆ ಈ ನಾಲ್ಕು ವಿಧವಾದ ಸ್ವಾತಂತ್ರ್ಯಗಳೂ ನಮ್ಮಲ್ಲಿ ಸ್ಥಾಪನೆಯಾಗಬೇಕು.

ಶ್ರೀ ಶಾಮುಪ್ರಸಾದ ಮುಕರ್ಜಿಯವರು, ಅವರ ಭಾಷಣದಲ್ಲಿ ಇನ್ನೊಂದು ಅಂಶವನ್ನು ಸ್ಪಷ್ಟಪಡಿಸಿದ್ದಾರೆ. ನಾವು ಸುಮ್ಮನೇ ನಮ್ಮ ನಾಗರಿಕತೆಯ ಹಿಂದಿನ ಭವ್ಯತೆಯನ್ನು ಹೊಗಳಕೊಳ್ಳುತ್ತಾ ಇದ್ದರೆ, ಅದರಿಂದಲೇ ನಮಗೆ ಮುಕ್ತಿಯಿಲ್ಲ. ನಮ್ಮ ದೇಶದ ಈಗಿನ ಸ್ಥಿತಿಯನ್ನು ಚೆನ್ನಾಗಿ ಅರಿತು, ಸಾರ್ವತ್ರಿಕವಾದ ಸ್ವಾತಂತ್ರ್ಯವನ್ನು ಸಾಧಿಸಲು ಸರ್ವರೂ ಸಿದ್ಧರಾಗಿರಬೇಕು.

ತಾಯಿನಾಡು.

---

# ಹಂಚಲಿ.

ಇಲ್ಲಿಯ ಆದಿ ಹಿಂದು ಕೂಸು ೩-೪ ವರ್ಷದ್ದು ಮೋಟರಕ್ಕೆ ಆಹುತಿಯಾಗುತ್ತಿತ್ತು. ಹಂಚಲಿ ಈ ಊರು ವಿಜಾಪುರದಿಂದ ತಾಳೀಕೋಟೆಗೆ ಹೋಗುವ ಮಾರ್ಗದಮೇಲಿದೆ. ಮಾರ್ಗವು ಊರಲ್ಲಿಯೇ ಹಾಯ್ದು ಹೋಗುತ್ತದೆ. ತಾ. ೧೨-೧೨-೩೭ನೆಯ ರವಿವಾರ ದಿವಸ ಒಂದು ಮೋಟರ ಸಂಜೀ ಮುಕ್ಕಾಮಿಗೆ ತಾಳೀಕೋಟೆಗೆ ಹೋಗುವಾಗ್ಗೆ ಊರಲ್ಲಿ ಸಹ ಬಹಳ ವೇಗದಿಂದ ಬಂತು. ಲೈನದ ಮೇಲಿದ್ದ ಆದಿ ಹಿಂದುಗಳ ಹುಡುಗರು ೨ ಮೋಟರ ನೋಡಿ ಓಡಿಹೋಗುವಷ್ಟರಲ್ಲಿ ಮೋಟರು ೩-೪ ವರ್ಷದ ಹುಡುಗಿಯನ್ನೇ ಮುಟ್ಟಿತು. ಡ್ರಾಯವ್ಹರನು ಸುದೈವದಿಂದ ಗಾಡಿಯು ನಿಲ್ಲಿಸಿದನು. ಕೂಸು ಜೀವದಿಂದ ಉಳಿಯಿತು. ಆದ್ದರಿಂದ ಪ್ರತಿಯೊಂದು ಮೋಟರ ಡ್ರಾಯವ್ಹರರು ಊರ ಸಮೀಪಕ್ಕೆ ಬಂದ ಕೂಡಲೇ ವೇಗ ಕಡಿಮೆಮಾಡಿ ಗಾಡಿಯು ತಮ್ಮ ಸ್ವತಂತ್ರ ಇರುವಂತೆ ನಡೆಯಬೇಕು.

ಶರಣಪ್ಪ ಬಸಪ್ಪ ಸೊನ್ನದ.

---

# “ ವಂದೇಮಾತರಂ ” ಗೀತೆ.

ವಂದೇಮಾತರಂ ಗೀತೆಯನ್ನು ಸಂಪೂರ್ಣ ಹೇಳಬಾರದಾಗಿ ಕಾಂಗ್ರೆಸ್ ವರ್ಕಿಂಗ್ ಕಮಿಟಿಯವರು ತಿಳಿಸಿದ್ದಾರೆ. ಈಗಾಗಲೇ ಅದರ ಎರಡು ನುಡಿಗಳನ್ನು ಹೇಳುವುದೂ ನಿಲ್ಲಲಾರಂಭವಾಗಿದೆ. ಸರ್. ಇಕಬಲ್ಲರ ಗೀತೆ ಮುಂದೆ ಬಂದಿತು.

ಈ ಸ್ಥಿತಿಯನ್ನು ನೋಡಿ ಬಂಗಾಲ ಮಹಾರಾಷ್ಟ್ರಗಳಲ್ಲಿ ವಂದೇಮಾತರಂ ಗೀತೆಯನ್ನು ಸಂಪೂರ್ಣ ಹೇಳಬೇಕೆಂಬ ಅಭಿಪ್ರಾಯದ ಜನರು ಹೆಚ್ಚುತ್ತಿದ್ದಾರೆ. ಕಲಕತ್ತಾದಲ್ಲಿ ಶ್ರೀ. ಬಿ. ಸಿ. ಚಟರ್ಜಿಯವರ ಅಧ್ಯಕ್ಷತೆಯಲ್ಲಿ ಸಭೆಸೇರಿ ವಂದೇಮಾತರಂ ಗೀತೆಯನ್ನು ಸಂಪೂರ್ಣವಾಗಿಯೇ ಹೇಳಬೇಕೆಂದೂ ಅದೇ ರಾಷ್ಟ್ರೀಯ ಗೀತೆಯೆಂದೂ ತೀರ್ಮಾನವಾಯಿತು.

---

# ಪರಿವರ್ತನೆಯೇ ರಕ್ಷಣೆಯು.

(ಡಾ. ಆಂಬೇಡಕರರ ಭಾಷಣ.)



ಹಿಂದು ಸಮಾಜದಲ್ಲಿಯ ಆಚಾರ ವಿಚಾರಗಳು ಪರಿವರ್ತನೆಯನ್ನು ಕಾಲಕ್ಕೆ ತಕ್ಕಂತೆ ಹೊಂದಬಾರದೆ? ಸೃಷ್ಟಿಯ ಪ್ರತಿಯೊಂದು ಪದಾರ್ಥವೂ ಪ್ರತಿಯೊಂದು ಕ್ಷಣದಲ್ಲಿ ಪರಿವರ್ತನೆಯನ್ನು ಹೊಂದುತ್ತಲಿದೆ. ಹಿಂದುಗಳು ಈಗಿನ ಸ್ಥಿತಿಗೆ ತಕ್ಕಂತೆ ತಮ್ಮ ಆಚಾರ ವಿಚಾರಗಳಲ್ಲಿ ಪರಿವರ್ತನೆಯನ್ನು ಮಾಡಿಕೊಳ್ಳದಿದ್ದರೆ ಅವರು ಬಾಳಲಾರರು. ಸುಪ್ರಸಿದ್ಧ ಗ್ರಂಥಕಾರರಾದ ಬರ್ಕ ಇವರು ಹೇಳಿರುವುದೇನೆಂದರೆ—

"ಯಾವ ರಾಜ್ಯದಲ್ಲಿ ಪರಿವರ್ತನೆಗೆ ಅವಕಾಶವೇ ಇಲ್ಲವೋ ಅಲ್ಲಿ ಅದರ ರಕ್ಷಣೆಯ ಸಾಧನವೂ ಇಲ್ಲವೆಂದೇ ತಿಳಿಯಬೇಕು."

### ಸ್ವರಾಜ್ಯ ರಕ್ಷಣೆ.

ಜಾತಿಭೇದವೇ ಹಿಂದು ಜನಾಂಗದ ಅಧೋಗತಿಗೆ ಮೂಲವಾಗಿದೆ. ಹಿಂದುಸ್ಥಾನದ ಶೋಚನೀಯ ಸ್ಥಿತಿಗೆ ಹಿಂದು ಜನಾಂಗವೇ ಕಾರಣವಾಗಿದೆ. ಜಾತಿಭೇದದ ವಿಷವನ್ನು ಹಿಂದು ಜನಾಂಗವು ಹಿಂದುಸ್ಥಾನದ ವಾತಾವರಣದಲ್ಲಿಯೇ ವ್ಯಾಪಿಸಿಬಿಟ್ಟಿದೆ. ಅದರಿಂದ ಈ ದೇಶದ ಮುಸಲ್ಮಾನ್, ಕ್ರಿಸ್ತ, ಶೀಖ ಸಮಾಜಗಳಲ್ಲಿಯೂ ಈ ಜಾತಿಭೇದದ ವಿಷವು ಅಲ್ಪ ಸ್ವಲ್ಪ ಸೇರಿದೆ.

ಜಾತಪಾತ ತೋಡಕ ಮಂಡಲವು ಈ ವಿಷವನ್ನು ತೆಗೆದು ಹಾಕುವ ಅತ್ಯಂತ ಘನವಾದ ರಾಷ್ಟ್ರೀಯ ಕಾರ್ಯವನ್ನು ಕೈಕೊಂಡಿದೆ.

ಸ್ವರಾಜ್ಯ ಸಂಪಾದನೆಗೆ ರಾಷ್ಟ್ರವೇ ಬೆಂಬಲವಾಗುತ್ತದೆ. ಆದರೆ ಈ ಕಾರ್ಯಕ್ಕೆ ರಾಷ್ಟ್ರವೇ ವಿರುದ್ಧವಾಗುತ್ತದೆ. ಸ್ವರಾಜ್ಯ ಸಂಪಾದನೆಯ ಕಾರ್ಯಕ್ಕಿಂತಲೂ ಜಾತಿಭೇದ ನಿವಾರಣೆಯ ಈ ಕಾರ್ಯ ಹೆಚ್ಚು ಕಠಿಣವೂ ಮಹತ್ವವುಳ್ಳದ್ದೂ ಆಗಿದೆ. ಸ್ವರಾಜ್ಯದಲ್ಲಿ ಹಿಂದುಗಳ ರಕ್ಷಣೆಯಾಗಬೇಕಾದರೆ ಈ ಜಾತಿ ಭೇದದ ವಿಷವು ಹೋಗಿ ಇವರು ಬಲಶಾಲಿಗಳಾಗಲೇ ಬೇಕು. ಇಲ್ಲದಿದ್ದರೆ ದೊರೆತ ಸ್ವರಾಜ್ಯವು ಕೂಡಾ ಹಿಂದುಗಳಿಗೆ ಗುಲಾಮಗಿರಿಯನ್ನೇ ತಂದುಕೊಡುವುದು.

—ಸಂಪೂರ್ಣ.—

# ಧರ್ಮಾಂಧತೆಯು ಭಯಂಕರ ವಿಷ.

ಫೆಡರಲ್ ಕೋರ್ಟಿನ ನ್ಯಾಯಾಧೀಶರಾದ ಬ್ಯಾರಿಸ್ಟರ್ ಜಯಕರರವರು ಲಖನೌ ವಿಶ್ವ ವಿದ್ಯಾಪೀಠದ ಪದವಿದಾನ ಸಮಾರಂಭದ ಕಾಲಕ್ಕೆ ಪದವಿಧರರನ್ನುದ್ದೇಶಿಸಿ ಒಂದು ಮನನೀಯವಾದ ಭಾಷಣವನ್ನು ಮಾಡಿದರು. ಆ ಭಾಷಣದಲ್ಲಿ ಹೀಗೆ ಸೂಚಿಸಿದರು—



"ನಿಮ್ಮ ವಿಶ್ವ ವಿದ್ಯಾಪೀಠದ ಉಪಾಧಿಪತಿಗಳಾದ (ವ್ಹಾಯಿಸ್ ಚಾನ್ಸಲರ್) ಡಾಕ್ಟರ್ ಪರಾಂಜಪೆಯವರು ಸ್ವಾರ್ಥತ್ಯಾಗದೊಂದಿಗೆ ನಿರಹಂಕಾರವನ್ನೂ ಪಾಂಡಿತ್ಯದೊಂದಿಗೆ ವಿನಯವನ್ನೂ ಹೊಂದಿರತಕ್ಕ ಮಹಾ ವ್ಯಕ್ತಿಗಳಲ್ಲಿ ಒಬ್ಬರಾಗಿದ್ದಾರೆ. ಇಂಥವರು ನಿಮ್ಮ ವಿದ್ಯಾಪೀಠಕ್ಕೆ ದೊರೆತಿರುವುದು ತುಂಬಾ ಸಂತೋಷದ ಸಂಗತಿಯು.

ಬ್ಯಾ. ಜಯಕರರವರು.

ವಿದ್ಯಾರ್ಥಿಯು ಸಮರ್ಥನಾದ ನಾಗರಿಕನಾಗಬೇಕೆಂಬುದೇ ಶಿಕ್ಷಣದ ಮುಖ್ಯೋದ್ದೇಶವಾಗಿದೆ. ಈ ಉದ್ದೇಶವು ಕಳೆದ ಒಂದು ನೂರು ವರುಷಗಳಿಂದಲೂ ಈ ದೇಶದಲ್ಲಿ ಕೊಡಲ್ಪಡುತ್ತಿರುವ ಶಿಕ್ಷಣದಿಂದ ನೆರವೇರಿಲ್ಲವಾದುದರಿಂದಲೇ ಈಗಿನ ಶಿಕ್ಷಣವು ದೋಷಯುಕ್ತವಾದುದೆಂದು ತಿಳಿಯಲ್ಪಟ್ಟಿದೆ.

ಅನೇಕ ಜಾತಿ ಮತ ಧರ್ಮಗಳಿಂದ ಕೂಡಿರುವ ಈ ದೇಶದಲ್ಲಿ ಪರಸ್ಪರ ಪ್ರೇಮಾದರಗಳುಂಟಾಗುವಂತಹ ಶಿಕ್ಷಣವು ಅತ್ಯಗತ್ಯವಾಗಿದೆ. ಈ ಕಾಲದಲ್ಲಿ ಜಾತಿ ಮತ ಧರ್ಮಗಳ ತಿಕ್ಕಾಟವು ವಿಶೇಷವಾಗಿ ಅದು ಶಿಕ್ಷಣ ಸಂಸ್ಥೆಗಳಲ್ಲಿಯೂ ಪ್ರವೇಶಿಸಲಾರಂಭವಾದುದು ಅತ್ಯಂತ ವಿಷಾದಕರವು. ಧರ್ಮಾಂಧತೆಯೆಂಬ ಈ ಭಯಂಕರ ವಿಷವು ವಿದ್ಯಾಲಯಗಳಲ್ಲಿ ಪ್ರವೇಶಿಸದಂತೆ ಈಗಲೇ ಬಹು ಎಚ್ಚರಿಕೆಯುಳ್ಳವರಾಗಿರಬೇಕು. ನೀವು ಮಾತೃಭೂಮಿಯ ಸೇವೆಯಲ್ಲಿ ನಿಮ್ಮ ಜೀವಿತವನ್ನು ಉಜ್ವಲಗೊಳಿಸಿರಿ.

ಶಿಕ್ಷಣ ಪದ್ಧತಿಯಲ್ಲಿ ಮಹತ್ವದ ಸುಧಾರಣೆಯನ್ನು ಮಾಡಬೇಕೆಂದು ಈಗ ಈ ದೇಶದಲ್ಲಿ ಅತ್ಯಂತ ಪ್ರಭಾವಶಾಲಿಯಾದ ಪಂಗಡವು ರಾಜ್ಯಸೂತ್ರವನ್ನು ಹಿಡಿದು ಪ್ರಯತ್ನಿಸಲಾರಂಭಿಸಿದೆ. ಅದರ ಪ್ರಯತ್ನವು ಫಲಕಾರಿಯಾಗಲಿ. ವಿದ್ಯಾರ್ಥಿಯು ಸ್ವತಂತ್ರ ವಿಚಾರಶೀಲನೂ ಪ್ರಜಾ ಪ್ರಭುತ್ವಕ್ಕೆ ಆವಶ್ಯಕವಾದ ಗುಣಶೀಲಗಳುಳ್ಳವನೂ ಪ್ರಜಾ ಪ್ರಮುಖರಿಗಿರಬೇಕಾದ ವಿಶಿಷ್ಟ ಗುಣಗಳುಳ್ಳವನೂ ಆಗಬೇಕು.

"ಜ್ಞಾನಾಸಕ್ತರಾಗಿರಿ. ಮರಣಾಂತ್ಯದ ವರೆಗೂ ಜ್ಞಾನಾರ್ಜನೆಯಲ್ಲಿಯೇ ಇರುವವರಾಗಿರಿ. ಸ್ವತಂತ್ರ ವಿಚಾರಶೀಲರಾಗಿರಿ. ಕಾರ್ಯಾಸಕ್ತರಾಗಿರುವುದೇ ಗೌರವಕ್ಕೆ ಕಾರಣವೆಂದು ತಿಳಿಯಿರಿ. ಸಕಲರಲ್ಲಿಯೂ ಸ್ನೇಹದಿಂದಿರುವುದನ್ನು ಕಲಿಯಿರಿ. ಹೀಗಿರುವವನು ಜನಾಂಗದ ಆಕಾಂಕ್ಷೆಯನ್ನು ನೆರವೇರಿಸುವ ಒಳ್ಳೆಯ ನಾಗರಿಕನಾಗುವನು. ಆತನೇ ಮನುಷ್ಯನೆಂದು ಹೇಳಿಸಿಕೊಳ್ಳಲು ಅರ್ಹನು." ಎಂದು ಒಬ್ಬ ಆಧುನಿಕ ಪ್ರಸಿದ್ಧ ಗ್ರಂಥಕಾರನು ಹೇಳಿದುದನ್ನೇ ನಾನಿಲ್ಲಿ ಹೇಳುತ್ತೇನೆ."

---

—ಅಕ್ಕಲಕೋಟೆ ಸಂಸ್ಥಾನಾಧಿಪತಿಗಳು ತಮ್ಮ ವರ್ಷ ವರ್ಧಂತಿಯ ದಿನ ಇನ್ನು ಮೇಲೆ ಹಳ್ಳಿಯ ಪ್ರಾಥಮಿಕ ಶಿಕ್ಷಣವು ಉಚಿತವಾಗಿ ಕೊಡಲ್ಪಡುವುದೆಂದು ಪ್ರಕಟಿಸಿದರು. ಬಹು ಸ್ತುತ್ಯ.

# ೨೨ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಜಮುಖಂಡಿ ನಗರದಲ್ಲಿ.

—ಶ್ರೀ—

ಶ್ರೀ. ಪಂಡಿತಪ್ಪ ರಾಯಪ್ಪ ಚಿಕ್ಕೋಡಿ ಬಿ. ಎ. ಅವರು ಸ್ವಾಗತಾಧ್ಯಕ್ಷರಾಗಿಯೂ, ಶ್ರೀ|| ಬಿ. ಆರ್. ನರಗುಂದಕರ್ ಅವರು ಕಾರ್ಯಾಧ್ಯಕ್ಷರಾಗಿಯೂ ಇದ್ದಾರೆ.

ಜಮುಖಂಡಿ ಸಂಸ್ಥಾನವು ಧಾರವಾಡ ಜಿಲ್ಲೆಯಲ್ಲಿ ನೆಲಸಿದೆ. ಅಲ್ಲಿನ ಜನಸಂಖ್ಯೆಯಲ್ಲಿ ಸುಮಾರು ೧೦೦ಕ್ಕೆ ೭೫ ಮಂದಿಯಂತೆ ಕನ್ನಡಿಗರಿದ್ದಾರೆ. ಈ ಸಲದ ಸಮ್ಮೇಳನವು ಅಲ್ಲಿ ಕೂಡುವುದು ಜಮುಖಂಡಿಯವರಿಗೆ ಮಾತ್ರವಲ್ಲದೆ ಸಮಸ್ತ ಕನ್ನಡಿಗರಿಗೂ ಹರ್ಷಾಸ್ಪದವಾದ ಸಂಗತಿ.

ಇದುವರೆಗೆ ನಡೆದ ಸಮ್ಮೇಳನಗಳೆಲ್ಲವೂ ಮೈಸೂರು ಹೈದರಾಬಾದ ಸಂಸ್ಥಾನಗಳಲ್ಲಿ ಇಲ್ಲವೆ ಬ್ರಿಟಿಷ್ ಕರ್ನಾಟಕದಲ್ಲಿ ನಡೆದವಾಗಿವೆ. ಉತ್ತರ ಕರ್ನಾಟಕ ಸಂಸ್ಥಾನಗಳ ಪ್ರಾಂತದಲ್ಲಿ ಸಮ್ಮೇಳನ ನಡೆಯುವುದು ಇದೇ ಮೊದಲು. ಕಳೆದ ಬಾರಿ ಪರಿಷತ್ಸಮ್ಮೇಳನವು ಬೊಂಬಾಯಿಯಲ್ಲಿ ನಡೆದುದು ಯಾವ ಹೆಮ್ಮೆಗೆ ಕಾರಣವೋ ಈ ಸಲದ್ದು ಜಮುಖಂಡಿಯಲ್ಲಿ ನಡೆಯತಕ್ಕದ್ದೂ ಅದೇ ಹೆಮ್ಮೆಗೆ ಕಾರಣವಾಗಿದೆ. ಅಲ್ಲದೆ ಜಮುಖಂಡಿಯ ಸಮ್ಮೇಳನವು ತನ್ನದೇ ಆದ ಒಂದು ವಿರಚನೆ ಮತ್ತು ವಿಶಿಷ್ಟತೆಯಿಂದ ಕಂಗೊಳಿಸಬೇಕೆಂಬುದು ನಮ್ಮೆಲ್ಲರ ಅಪೇಕ್ಷೆ. ಈ ಮುಂದಿನ ಸಮ್ಮೇಳನದಲ್ಲಿ ಕನ್ನಡ ಭಾಷಾಸಾಹಿತ್ಯಗಳ ಪುರೋಭಿವೃದ್ಧಿಗೂ ಕನ್ನಡಿಗರ ಒಡಗೂಡುವಿಕೆಗೂ ಸಂಬಂಧಪಟ್ಟ ಅನೇಕ ಮಹತ್ವದ ಪ್ರಶ್ನೆಗಳೂ ವಿಚಾರಕ್ಕೆ ಬರುವುವಾಗಿವೆ. ಆದ್ದರಿಂದ ಕನ್ನಡನಾಡಿನ ಎಲ್ಲ ಭಾಗಗಳಿಂದಲೂ ಅಭಿಮಾನಿಗಳು ತಂಡತಂಡವಾಗಿ ಬಂದು ಸಮ್ಮೇಳನವನ್ನು ಯಶಸ್ವಿಯಾಗಿ ಮಾಡಬೇಕೆಂದು ಪರಿಷತ್ತು ಬಹು ವಿನಯದಿಂದ ಪ್ರಾರ್ಥಿಸುತ್ತದೆ.

**ಪ್ರತಿಬಂಧ, ಭಾಷಣ, ನಿರ್ಣಯಗಳು ಇತ್ಯಾದಿ.**

ಕಳೆದ ವರ್ಷ ನಡೆಸಿದ ಸಂಶೋಧಕಗೋಷ್ಠಿ, ಕವಿಗೋಷ್ಠಿ ಎಂಬ ಪ್ರತ್ಯೇಕವಾದ ಅಂಗಗಳಲ್ಲಿ ಕವಿಗೋಷ್ಠಿಯೊಂದನ್ನು ಇಟ್ಟುಕೊಳ್ಳಲು ಅವಕಾಶವಾಗಬಹುದು. ಕನ್ನಡಭಾಷಾ ಸಾಹಿತ್ಯ ವಿಚಾರಗಳಿಗೆ ಸಂಬಂಧಪಟ್ಟ ಭಾಷಣಗಳು, ಕನ್ನಡ ಸಾಹಿತ್ಯ ವಾಚನ, ಮುಂತಾದ ಕಾರ್ಯಗಳಿಗೆ ಎಂದಿನಂತೆ ಸಂಪೂರ್ಣ ಅವಕಾಶವಿರುವುದು. ಮೇಲೆ ಕಂಡ ಕಾರ್ಯಗಳಲ್ಲಿ ಭಾಗವಹಿಸಲಿಚ್ಛಿಸುವ ಮಹನೀಯರು ತಮ್ಮ ಉದ್ದೇಶವನ್ನೂ, ತಾವು ಮಾಡಬೇಕೆಂದಿರುವ ಭಾಷಣದ ಅಥವಾ ಓದಬೇಕೆಂದಿರುವ ಸಾಹಿತ್ಯ ವಿಭಾಗದ ಹೆಸರು, ವಿಷಯ ಮುಂತಾದ ತಪಸೀಲುಗಳನ್ನೂ, ಮತ್ತು ಸಮ್ಮೇಳನದಲ್ಲಿ ನಿರ್ಣಯಗಳನ್ನು ಸೂಚಿಸಬೇಕೆಂದಿರುವವರು ಆ ನಿರ್ಣಯಗಳನ್ನೂ ಪರಿಷತ್ತಿನ ಗೌ|| ಕಾರ್ಯದರ್ಶಿಗಳಿಗಾಗಲಿ ಸ್ವಾಗತಸಮಿತಿಯ ಕಾರ್ಯದರ್ಶಿಗಳಿಗಾಗಲಿ .... .... .... .... .... .... ಬರೆಹದ ಮೂಲಕ ತಿಳಿಸಬೇಕೆಂದು ಪ್ರಾರ್ಥನೆ. ಕನ್ನಡನಾಡಿನ ವಿದ್ವಾಂಸರೂ, ಸಾಹಿತಿಗಳೂ, ಕಲಾಭಿಜ್ಞರೂ ಈ ಮೂಲಕ ಪರಿಷತ್ತು ಕೊಟ್ಟಿರುವ ಆಹ್ವಾನವನ್ನು ಸ್ವೀಕರಿಸಿ, ಸಮ್ಮೇಳನವನ್ನು ನಡಿಸಿಕೊಡಬೇಕೆಂದು ಬೇಡುತ್ತೇನೆ.

**ನಾಟಕ, ಯಕ್ಷಗಾನ, ಲಾವಣಿ.**

ಸಮ್ಮೇಳನದಲ್ಲಿ ಈ ತರಹದ ಪ್ರದರ್ಶನಗಳಿಗೂ ಅವಕಾಶ ಕೊಡಬೇಕೆಂಬ ಉದ್ದೇಶವಿದೆ. ಕನ್ನಡನಾಡಿನ ನಾಟಕ ಸಂಘಗಳವರೂ, ಯಕ್ಷಗಾನ ಮಂಡಲಿಯವರೂ, ಲಾವಣಿಕಾರರೂ ಮುಂದಾಗಿ .... .... .... .... .... .... ಪರಿಷತ್ತಿನ ಗೌ|| ಕಾರ್ಯದರ್ಶಿಗಳಿಗಾಗಲಿ ಅಥವಾ ಸ್ವಾಗತ ಮಂಡಲಿಗಾಗಲಿ ದರಖಾಸ್ತುಗಳನ್ನು ಹಾಕಿಕೊಳ್ಳಬೇಕೆಂದು ಬೇಡಿಕೆ. ಸಮ್ಮೇಳನಕ್ಕೆ ಸುಮಾರು ಒಂದು ವಾರ ಮುಂಚಿತವಾಗಿ, ಪರಿಷತ್ತು ಒಪ್ಪಿದ ದರಖಾಸ್ತುದಾರರಿಗೆ ಮಾತ್ರ ಉತ್ತರ ಬರೆಯಲಾಗುವುದು. ಹಾಗೆ ಪರಿಷತ್ತು ಒಪ್ಪಿದ ದರಖಾಸ್ತುದಾರರು ತಮ್ಮ ಪ್ರಯಾಣದ ವೆಚ್ಚ ಮುಂತಾದ ವಿಶಿಷ್ಟ ಖರ್ಚುಗಳನ್ನೂ ತಾವೇ ವಹಿಸಿಕೊಳ್ಳಲು ಸಿದ್ಧರಾಗಿರತಕ್ಕದ್ದು. ನಾಟಕ ಸಂಘದವರಾಗಲಿ ಯಕ್ಷಗಾನ ಮಂಡಲಿಯವರಾಗಲಿ ಇತರ ಬಗೆಯ ಪ್ರದರ್ಶನಕಾರರಾಗಲಿ ತಮ್ಮ ಪ್ರದರ್ಶನಗಳಿಗೆ ಸ್ವಾಗತ ಮಂಡಲಿಯ, ಅಥವಾ ಪರಿಷತ್ತಿನ ಒಪ್ಪಿಗೆ ಪಡೆದು ಪ್ರವೇಶಶುಲ್ಕವನ್ನು ಹಾಕಬಹುದು.

[ವಿಶೇಷ ಸೂಚನೆ— ಈ ಸಂಬಂಧದಲ್ಲಿ ಪರಿಷತ್ತು ಕೆಲವು ನಿಯಮಗಳನ್ನು ಮಾಡಿದೆ. ಈ ವರ್ಷ ಸಮ್ಮೇಳನ ನಿಷ್ಕರ್ಷೆಯಲ್ಲಿಯೇ ಕಾಲಾತೀತವಾದದ್ದರಿಂದ ನಿಯಮಗಳ ಉದ್ದೇಶ ಆಶಯಗಳನ್ನು ಮಾತ್ರ ಗಮನದಲ್ಲಿರಿಸಿಕೊಂಡಿದೆ; ಅವುಗಳನ್ನು ಅಕ್ಷರಶಃ ಪರಿಪಾಲಿಸುವುದು ಆಗಲಿಲ್ಲ.]

ಸಮಸ್ತ ಕರ್ನಾಟಕದ ನಾನಾ ಭಾಗಗಳಲ್ಲಿರುವ ದೇಶಭಕ್ತರೂ, ಭಾಷಾಭಿಮಾನಿಗಳೂ, ಸಾಹಿತ್ಯೋಪಾಸಕರೂ, ಕಲಾಭಿಜ್ಞರೂ ಸಮ್ಮೇಳನಕ್ಕೆ ಬರುವರೆಂದು ಜಮುಖಂಡಿಯ ಸ್ವಾಗತ ಸಮಿತಿಯು ನಿರೀಕ್ಷಿಸಿಕೊಂಡಿದೆ. ಎಲ್ಲರೂ ಬಂದು ಸಮ್ಮೇಳನ ಕಾರ್ಯಗಳಲ್ಲಿ ಭಾಗವಹಿಸಿ, ತಾಯ್ನುಡಿಯ ಏಳಿಗೆಯ ಕೆಲಸಕ್ಕೆ ತಮ್ಮ ಬೆಂಬಲ ಕೊಡಬೇಕೆಂದು ಕರ್ನಾಟಕ ಸಾಹಿತ್ಯ ಪರಿಷತ್ತು ಮತ್ತೊಮ್ಮೆ ಮನಃಪೂರ್ವಕವಾಗಿ ಪ್ರಾರ್ಥಿಸಿಕೊಳ್ಳುತ್ತದೆ.

ಸ್ವಾಗತಮಂಡಲಿಯ ಸೂಚನೆಯಂತೆ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯು ಮಾಡಿದ ಪ್ರಾರ್ಥನೆಯನ್ನು ದಯವಿಟ್ಟು ಮನ್ನಿಸಿ ಶ್ರೀಮಾನ್ ಬಿ. ವೆಂಕಟನಾರಾಯಣಪ್ಪ ಎಂ. ಎ. ಅವರು ಸಮ್ಮೇಳನದ ಅಧ್ಯಕ್ಷರಾಗಲು ಸಮ್ಮತಿಸಿರುವರೆಂಬುದನ್ನು ತಿಳಿಸಲು ಸಂತೋಷಿಸುತ್ತೇವೆ. ಶ್ರೀ. ಬಿ. ನಾರಾಯಣಪ್ಪನವರು ಬೆಂಗಳೂರ ಸೆಂಟ್ರಲ್ ಕಾಲೇಜಿನಲ್ಲಿ ಹಲವು ವರ್ಷಗಳ ಕಾಲ ಭೌತಿಕಶಾಸ್ತ್ರದ ಪ್ರೊಫೆಸರರಾಗಿದ್ದು ನಿವೃತ್ತರಾಗಿ ಈಗ ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್—ಕನ್ನಡ ನಿಘಂಟುವಿನ ಮುಖ್ಯ ಸಂಪಾದಕರಾಗಿರುತ್ತಾರೆ. ಅವರು ಪರಿಷತ್ತಿನ ಸ್ಥಾಪಕರಲ್ಲಿ ಪ್ರಮುಖರಾದವರಾಗಿ ಬಹು ವರ್ಷಗಳ ಕಾಲ ಪರಿಷತ್ತಿನ ಗೌ|| ಕಾರ್ಯದರ್ಶಿಗಳಾಗಿಯೂ ಅಥವಾ ಕೋಶಾಧಿಕಾರಿಗಳಾಗಿಯೂ ಮತ್ತು ಪರಿಷತ್ಪತ್ರಿಕೆಯ ಸಂಪಾದಕರಾಗಿಯೂ ಕೆಲಸಮಾಡಿ ಈ ಸಂಸ್ಥೆಯ ಪುರೋಭಿವೃದ್ಧಿಗಾಗಿ ಅವಿಚ್ಛಿನ್ನವಾಗಿ ದುಡಿದು ಎಲ್ಲ ಕನ್ನಡಿಗರ ಕೃತಜ್ಞತೆಗೂ ಪಾತ್ರರಾಗಿದ್ದಾರೆ. ಮತ್ತು ತಮ್ಮ ವಿದ್ವತ್ತಿನಿಂದಲೂ ಕರ್ತವ್ಯನಿಷ್ಠೆಯಿಂದಲೂ ಅವರು ಎಲ್ಲರಿಗೂ ಮಾನ್ಯರೂ ಪ್ರಿಯರೂ ಆಗಿದ್ದಾರೆ. ಶ್ರೀ. ವೆಂಕಟನಾರಾಯಣಪ್ಪನವರ ಅಧ್ಯಕ್ಷತೆಯಲ್ಲಿ ಸಮ್ಮೇಳನವು ಬಹು ಯಶಸ್ವಿಯಾಗುವುದೆಂದು ನಂಬಿದ್ದೇವೆ.

ಇದೇ ಡಿಶಂಬರ ೨೯ನೆಯ ತಾರೀಖು ಮೊದಲುಗೊಂಡು ಮೂರು ದಿನಗಳು ನಡೆಯುವಂತೆ ಸಧ್ಯಕ್ಕೆ ನಿಶ್ಚಯವಾಗಿದೆ. ಇತರ ಹೆಚ್ಚಿನ ವಿವರಗಳನ್ನು ನಿಷ್ಕರ್ಷೆಯಾದಂತೆ ಮುಂದಿನ ಸಮಾಚಾರ ಪತ್ರಿಕೆಗಳಲ್ಲಿ ತಿಳಿಸಲಾಗುವುದು.

ಎಸ್. ವಿ. ರಂಗಣ್ಣ, ಎಂ. ಎ.
ಗೌ|| ಕಾರ್ಯದರ್ಶಿ,
ಕ|| ಸಾ|| ಪರಿಷತ್ತು.

## ಕುರುಬರ ಮಹಾಸಭೆಯು.

ನಿಜಾಮ ಇಲಾಖಾ ಕೊಪ್ಪಳ ಜಿಲ್ಲೆಯ ಇಂದರಗಿ ಗ್ರಾಮದಲ್ಲಿ ನಡೆಯುವ ಅಖಿಲ ಭಾರತೀಯ ಕುರುಬರ ೪ ನೆಯ ಮಹಾಸಭೆಯು ಮುಂದರಿಸಲ್ಪಟ್ಟಿತು.

ಈ ಮೊದಲು ಪ್ರಸಿದ್ಧಪಡಿಸಿದ ಇಂದರಗಿ ಗ್ರಾಮವು ಅಗದೀ ಚಿಕ್ಕದಿದ್ದು ಏಳು ಗುಡ್ಡಗಳ ಕೇಂದ್ರಸ್ಥಾನವಾಗಿದೆ. ಇಲ್ಲಿ ನೀರಿನ ಪುರವತೆಯಾದರೂ ಸಾಕಷ್ಟಿರುವುದಿಲ್ಲ. ಮೇಲಾಗಿ ಈ ಗ್ರಾಮವು ರೇಲ್ವೆ ನಿಲ್ದಾನಗಳಿಗೆ ಸಮೀಪವೂ ಇಲ್ಲ. ಹಾಗೂ ಬರ-ಹೋಗುವ ಮೋಟಾರು ಚಕ್ಕಡಿ ಮುಂತಾದ ವಾಹನಗಳಿಗೂ ಈ ರಸ್ತೆ ಅಷ್ಟೊಂದು ಸುಲಭವಾದದ್ದೂ ಅಲ್ಲ.

ಈ ಎಲ್ಲ ಕಾರಣಗಳ ಮೂಲಕವಾಗಿ ವ್ಯವಸ್ಥಾಪಕ ಕಮೀಟಿ ಜನರ ಮನಸ್ಸಿಗೆ ಬಾರದ್ದರಿಂದಲೂ ಮತ್ತು ದೊಡ್ಡ ದೊಡ್ಡ ಅಫೀಸರುಗಳ ಹಾಗೂ ಪ್ರವಾಸಿಗಳ ಅನುಮೋದನವು ದೊರೆಯದ್ದರಿಂದಲೂ ಸ್ಥಳಾಂತರ ಮಾಡುವ ಉದ್ದಿಶ್ಯ ಸದರಿ ಮಹಾಸಭೆಯನ್ನು ಮುಂದರಿಸಿ ಇದೇ ಇಲಾಖೆಯಲ್ಲಿ ಯೋಗ್ಯ ಸ್ಥಳವನ್ನು ನಿಯೋಜಿಸುವ ಬಗ್ಗೆ ಜನರಲ್ ಕಮೀಟಿ ಕರೆಯಬೇಕೆಂದು ಗೊತ್ತಾಗಿದೆ.

ಧರ್ಮಪ್ರಕಾಶಿಗಳಾದ ಶ್ರೀಮಾನ್ ಶ್ರೀಗುರು ಶಿವಸಂಗಪ್ಪಯ್ಯನವರು (ಇಂದವಾರ) ಇವರು ಅಹೋರಾತ್ರಿ ಕಳಕಳಿಯಿಂದಲೂ ಮೆಹನತ್ತಿನಿಂದಲೂ ತಮ್ಮ ಸುಶ್ರಾವ್ಯವಾದ ಭಾಷಣದೊಂದಿಗೆ ಜನರನ್ನು ಅಗದೀ ಹುರದುಂಬಿಸಿ ಸ್ವಜಾತಿಯಲ್ಲಿ ನವಚೇತನವನ್ನುಂಟುಮಾಡಿದ್ದಾರೆ. ಇವರ ಅದ್ವಿತೀಯ ಈ ಸಾಹಸಕ್ಕೆ ಪ್ರತಿಯೊಬ್ಬರೂ ಮಹಾಸಭೆಯ ಯಶಸ್ವಿಗಾಗಿ ತನು ಮನ ಧನಗಳನ್ನು ಒಪ್ಪಿಸಲೇಬೇಕೆಂದು ಅತ್ಯಂತ ಆಗ್ರಹವುಳ್ಳವರಾಗಿದ್ದಾರೆ.

ಈಗಾಗಲೇ ಇವರು ೮-೧೦ ತಿಂಗಳದಿಂದ ನಿಜಾಮ ಇಲಾಖೆಯ ರಾಯಚೂರು ಗುಲಬರ್ಗಾ ಬೀದರ ಕೊಪ್ಪಳ ಮುಂತಾದ ಜಿಲ್ಲೆಗಳಲ್ಲಿ ತಮ್ಮ ಕಾರ್ಯಕ್ರಮಗಳನ್ನು ಯಥಾಪ್ರಕಾರ ನಡೆಸಿಯೇ ಇರುತ್ತಾರೆ. ಇದಲ್ಲದೆ ಇದೇ ಇಲಾಖೆಯ ಉಳಿದ ೧೨ ಜಿಲ್ಲೆಗಳಲ್ಲಿಯೂ ತಮ್ಮ ಕಾರ್ಯವನ್ನು ಪ್ರಾರಂಭಿಸುವ ಉದ್ದೇಶವನ್ನಿಟ್ಟುಕೊಂಡಿರುತ್ತಾರೆ. ಸಮಾಜ ಬಾಂಧವರು ಶ್ರೀಗಳವರಿಗೆ ಹೋದಹೋದಲ್ಲಿ ಆದರಾತಿಥ್ಯವನ್ನೂ ಬೆಂಬಲವನ್ನೂ ಕೊಟ್ಟು ಪ್ರೋತ್ಸಾಹಗೊಳಿಸುವದು ಶ್ರೇಯಸ್ಕರವಾಗಿದೆ.

ಈ ನಮ್ಮ ಸಮಾಜದಲ್ಲಿ ಹಿಂದಕ್ಕೆ ಆಗಿಹೋದ ರಾಜಾಧಿರಾಜರೂ, ಮಂತ್ರಿಗಳೂ, ಕಲಿಗಳೂ, ಕವಿಗಳೂ, ಪಾಳಯಗಾರರೂ ಮಹಾಮುನಿಗಳೂ ಸಾಮಾನ್ಯರೆ? ರಾಣಿ ಅಹಲ್ಯಾಬಾಯಿ ಮುಂತಾದವರು ಜನ್ಮವೆತ್ತಿದ ಈ ಸಮಾಜವು ಈಗ ಹಲಕೆಲವು ಕಾರಣಾಂತರಗಳ ಮೂಲಕ ಅಧೋಗತಿಯನ್ನು ಹೊಂದಹತ್ತಿರುತ್ತದೆ.

ಇಂಥಾ ಮಹಾ ಮಹಿಮರ ವಂಶಜರಾದ ನಾವು ಈಗ ರಣಹೇಡಿಗಳಂತೆಯೂ ದರಿದ್ರರಂತೆಯೂ ವ್ಯರ್ಥ ಕೂತುಕೊಳ್ಳುವುದು ಅಗದೀ ಕಲಂಕವನ್ನುಂಟುಮಾಡಹತ್ತಿರುತ್ತದೆ. ಈ ಇಪ್ಪತ್ತನೆಯ ಶತಮಾನದಲ್ಲಿ ಪ್ರತಿಯೊಂದು ಜನಾಂಗದವರು ನಾ ಮುಂದೆ ನೀ ಮುಂದೆ ಎಂದು ಯಾವಾಗಲೂ ಹೆಣಗಾಡುತ್ತಿರುವುದನ್ನು ನೋಡಿ ನೋಡದ ಕುರುಡರಂತೆಯೂ, ಕೇಳಿ ಕೇಳದ ಕಿವುಡರಂತೆಯೂ ನಮ್ಮ ಸಮಾಜದವರ ಬಾಳ್ವೆಯಾಗಿದೆ. ಶ್ರೀ ಪರಮಾತ್ಮನು ಇವರಲ್ಲಿ ಬೇಗನೆ ಧರ್ಮಜಾಗೃತಿಯನ್ನುಂಟುಮಾಡಲಿ.

ಹ| ಮ| ಮರಡಿಕರ

ಅಮಾಪುರ ಕೆಸ್ವಾಳ.

### ಸ್ವಾತಂತ್ರ್ಯದ ಪ್ರತಿಜ್ಞೆಯು
## ರಾಜಭಕ್ತಿಗೆ ವಿರೋಧವಾದುದು.

ಮೈಸೂರು ಚೀಫ್ ಕೋರ್ಟಿನ ನ್ಯಾಯಾಧೀಶರಾದ ಮಿ. ರ್‍ಯಾಲಿಯವರು ತಾ. ೧೦-೧೨-೩೭ ನೆಯ ದಿನ ಶ್ರೀ. ಜಿ. ಆರ್. ಸ್ವಾಮಿಯವರ ವ್ಯಾಜ್ಯದ ವಿಚಾರವಾಗಿ ಈ ಕೆಳಗಿನಂತೆ ತೀರ್ಮಾನ ಹೇಳಿದರು—

"ಶ್ರೀ. ಸ್ವಾಮಿಯವರು ಕಳೆದ ಜನವರಿ ತಿಂಗಳಲ್ಲಿ "ಸ್ವಾತಂತ್ರ್ಯ ದಿನಾಚರಣೆ" ಕಾಲಕ್ಕೆ ಮಾಡಿದ ಭಾಷಣದ ವಿಚಾರವಾಗಿ ಮೈಸೂರು ಪೊ. ರೆ ೨೦ ಮತ್ತು ೩೯ ನೆಯ ನಿಯಮಗಳ ಪ್ರಕಾರ ಬಂಧಿತರಾಗಿ ನ್ಯಾಯಾಧೀಶರಿಂದ ದಂಡನೆಗೊಳಗಾಗಿದ್ದರು. ಹಾಗೆ ಮಾಡಿದುದು ನ್ಯಾಯವಲ್ಲವೆಂದು ಶ್ರೀ. ಸ್ವಾಮಿಯವರ ಹೇಳಿಕೆ.

ಇವರ ಈ ಹೇಳಿಕೆಯು ಸರಿಯಲ್ಲ. ಆದುದರಿಂದ ಇವರ ವಾದವನ್ನು ತಳ್ಳಿಹಾಕಿದ್ದಾಗಿದೆ. ಸ್ವಾತಂತ್ರ್ಯದ ಪ್ರತಿಜ್ಞೆಯನ್ನು ಮಾಡುವುದೆಂದರೆ ಮಹಾರಾಜರ ವಿಷಯದಲ್ಲಿ ಅವಿಧೇಯತೆಯನ್ನು ತೋರಿಸಿದಂತೆಯೇ ಸರಿ."

---

## ವಚನಶಾಸ್ತ್ರ ಸಾರ.

ಅನೇಕರ ಪ್ರೋತ್ಸಾಹದಿಂದ ಶ್ರೀಮಾನ್ ಹಳಕಟ್ಟಿಯವರು ಪ್ರಕಟಿಸಲಿರುವ ವಚನಶಾಸ್ತ್ರ ಸಾರ ಗ್ರಂಥವು ಈಗ ೪೦೦ ಪುಟಗಳ ವರೆಗೆ ಅಚ್ಚಾಗಿದೆ. ಇದರಲ್ಲಿ ವೀರಶೈವ ತತ್ವ ವಿಚಾರಗಳು ವಿಶೇಷವಾಗಿ ಸೇರ್ಪಡೆಯಾದುದರಿಂದ ಗ್ರಂಥವು ನಿರೀಕ್ಷಣೆಗಿಂತ ಇಮ್ಮಡಿಯಾಯಿತು. ಇದು ಇಷ್ಟರಲ್ಲೇ ಪ್ರಕಟವಾಗುವುದು.

ಹರ್ಡೇಕರ ಮಂಜಪ್ಪ.

## ಪಾರಮಾರ್ಥಿಕ "ಡೈರಿ"

ಶ್ರೀ ಚಿದಂಬರಾಯ ನಮಃ

ಶ್ರೀಗುರು ಬಸವಲಿಂಗಾಯ ನಮಃ

(ಶಿಲ. ೧೦ ಶು. ೯ ಗುರು ೨೧-೧-೩೭.)

ಹಗಲಿರುಳು ಅವಗುಣ ಬಿಡುವ ಶಿವಗುಣ ಹಿಡಿಯುವ ಈ ಯತ್ನದಲ್ಲಿಯೇ ಇರಬೇಕಯ್ಯ!

ಶ್ರೀ:— ಸಿದ್ಧನಾಗಲ್ಕೆತಾ ಬದ್ಧಗುಣ ಬಿಡಬೇಕು|
ಮುದ್ದು ಮಾತು ಬರಿ ಆಡಿದರೆ ಫಲವೇನು?
ಸಿದ್ಧಾಂತ ದಾಸ ತಿಳಿನೀನು ||೩೨||

ಬರಿ ಮುದ್ದುಮಾತು- ಸುಳ್ಳೇ ಸವಿ ಮಾತು. ದೊಡ್ಡ ಮಾತು.

× × × × ×

ಶ್ರೀ. ಶಿವ ಚಿದಂಬರಾಯನಮಃ

ಶ್ರೀಗುರು ಬಸವಲಿಂಗಾಯ ನಮಃ

(ಶಿಲ ೧೦ ಶು. ೧೦ ಶುಕ್ರ. ೨೨-೧-೩೭.)

ಹಿಂದಕ್ಕೆ ಲಂಚಕೊಡಬೇಕಾದ ಪ್ರಸಂಗ ಬಂದಿತ್ತು. ಆಗ ಹೀಗೆ ಹೇಳಿದ್ದೆ —

ಶ್ರೀ:— ಲಂಚವನು ತಿನ್ನುವನ ಸಂಚಿತವನು ನೋಡಿ|
ಮುಂಚೆ ಮಾಡಿದ್ದು ಉಣ್ಣುತಿಹ ಈಗಿನದು|
ಮಿಂಚುವದು ಮುಂದೆ ದಾಸಾರ್ಯ ||೩೩||

ಮಿಂಚುವದು- ಹೊಳೆಯುವದು (ಅನುಭವಕ್ಕೆ ಬರುವದು)

ಹಾಗಾದರೆ ಲಂಚ ಕೊಡುವಾತನ ಹಣೇಬರಹವೇನು?

ಶ್ರೀ:— ಲಂಚವನು ಕೊಡುವಾತ ಕೆಂಚತಾನಲ್ಲೇನು?
ಲಂಚವನು ಕೊಡದೆ ಸತ್ಯಾಗ್ರಹ ಮಾಡಲು|
ಮಿಂಚುವದು ಕೀರ್ತಿ ದಾಸಾರ್ಯ ||೩೪||

ಮಿಂಚುವದು- ಹೊಳೆಯುವದು, ಹಬ್ಬುವದು
(ಅಷ್ಟೊಂದು ಧೈರ್ಯ ಸಾಹಸ ಬೇಕಲ್ಲ!)

ಆದರೂ ಈ ಮಾಯಾಮಯ ಜಗತ್ತಿನಲ್ಲಿ ರಾಮನಾಗುವ ಪ್ರಸಂಗವೂ ಉಂಟು. ಕೃಷ್ಣನಾಗುವ ಪ್ರಸಂಗವೂ ಉಂಟು. ತಾತ್ಪರ್ಯ— ಗುರಿ ತಪ್ಪಬಾರದು.

ಶ್ರೀ:— ಸುಮ್ಮನಿರಿಸಿದ ರಾಮ ಸುಮ್ಮನಿರಗೊಡ ಕೃಷ್ಣ|
ಮರ್ಮ ತಿಳಕೊಂಡು ನಡೆಯುವದು ಸಮಯವನು|
ತಮ್ಮದದು ನೋಡಿ ದಾಸಾರ್ಯ ||೩೫||

ರಾಮಾವತಾರದಲ್ಲಿ ಕೈಕೆಯಿಯ ಅನ್ಯಾಯ ಕಂಡರೂ ಆ ಬಗ್ಗೆ ಚಕಾರ ಶಬ್ದವಿಲ್ಲ. ಕೃಷ್ಣಾವತಾರದಲ್ಲಿ ಚಿಕ್ಕಂದಿನಲ್ಲಿಯೇ ದಂಗೆ ಹಾಕಲಿಕ್ಕೆ ಆರಂಭ!

× × ×

ಶ್ರೀ. ಶಿವ ಚಿದಂಬರಾಯ ನಮಃ

ಶ್ರೀಗುರು ಬಸವಲಿಂಗಾಯ ನಮಃ

(ಶಿಲ. ೧೦ ಶು. ೧೨ ಶನಿ. ೨೩-೧-೩೭.)

ಎನ್ನಯ ಜೀವನ ಇಷ್ಟಲಿಂಗದ ಪೂಜಯೊಳ್ ಭಕ್ತಿರಸ ತುಂಬಿರಲಿ. ನಂತರ ಪ್ರಾಣಲಿಂಗದ ಪೂಜೆ ಗುಣ ಸಂಗ್ರಹ ರೂಪದಿಂ ಯತ್ನದಿಂ (ಶಾಂತಿ ಮುಂತಾದ ಗುಣಗಳನ್ನು ದೃಢ ನಿಶ್ಚಯದಿಂದ ಹಿಡಿಯುತ್ತ) ಸಾಗಲಿ! ಮುಂದೆ ಭಾವಲಿಂಗಪೂಜೆಗೆದು ಘಟಿಸಬೇಕಾಗಿ!! ಎಂತನೆ ಸತಿ ಸರ್ವಾಂಗ ಸೌಂದರ್ಯವತಿಯಾಗೆ ಪುರುಷ ತಾನಿದ್ದೆಡೆಯೊಳ್ ಪ್ರಾಪ್ತಮಕ್ಕುಂ

ಶ್ರೀ:— ಪ್ರಾಣಲಿಂಗದಪೂಜೆ ಜಾಣತನದಲಿ ಮಾಡಿ|
ಮಾಣದೇ ಚಿತ್ತಶುದ್ಧಿಯನು ಗೈಯುತ್ತ|
ತಾಣಪಡಿ ಭಾವ ದಾಸಾರ್ಯ ||೩೬||

× × ×

---

## ನಿಪ್ಪಾಣಿ ಮುನಸಿಪಾಲ್ಟಿ ಅಧ್ಯಕ್ಷರು.

ಕಳೆದ ೧೧ನೆಯ ತಾರೀಖಿನ ದಿವಸ ನಿಪ್ಪಾಣಿ ಮುನಸಿಪಾಲ್ಟಿ ಅಧ್ಯಕ್ಷರ ಚುನಾವಣೆಯಾಯಿತು. ಕಾಂಗ್ರೆಸ್ ಪಕ್ಷದ ಶೇಟ್ ದೇವಿಚಂದ ಛಗನಲಾಲ ಶಹಾ ಇವರೇ ವಿರೋಧವಿಲ್ಲದೆ ಪುನಃ ಆರಿಸಿಬಂದರು.

ಶೇಟ್ ದೇವಿಚಂದರು ಕೇವಲ ೨೫ ವರ್ಷಗಳ ತರುಣರು. ಇವರು ಇಲ್ಲಿಯ ಜನರಿಗೆ ಬಹು ಪ್ರಿಯರಾಗಿದ್ದಾರೆ. ಇವರು ಅಧ್ಯಕ್ಷರಾಗಿ ಆರಿಸಲ್ಪಟ್ಟನಂತರ ಗಾಂಧಿ ಚೌಕಿನಲ್ಲಿ ಪ್ರಚಂಡ ಸಭೆಸೇರಿ ನಾಗರಿಕರು ಇವರನ್ನು ಅಭಿನಂದಿಸಿದರು.

---

## ಆನಂದಭವನದಲ್ಲಿ ಗುಪ್ತಚರ್ಚೆ.

ಸಂಯುಕ್ತ ಪ್ರಾಂತದ ಕಾಂಗ್ರೆಸ್ ಪಕ್ಷಕ್ಕೂ ಕಾಂಗ್ರೆಸ್ ಮಂತ್ರಿಮಂಡಲಕ್ಕೂ ಭಿನ್ನಾಭಿಪ್ರಾಯವುಂಟಾಗಿದೆ. ಇವುಗಳಲ್ಲಿರುವ ಭಿನ್ನಾಭಿಪ್ರಾಯವನ್ನು ತೆಗೆದುಹಾಕಲು ಕಾಂಗ್ರೆಸ್ ಅಧ್ಯಕ್ಷರಾದ ಪಂ. ನೆಹರುರವರು ಅಲಹಾಬಾದಿನ ಆನಂದಭವನದಲ್ಲಿ ತಾ. ೧೫-೧೨-೩೭ ನೆಯ ದಿನ ಗುಪ್ತವಾಗಿ ಮಹತ್ವದ ಚರ್ಚೆಯನ್ನು ನಡೆಯಿಸಿದರು.

ಈ ಚರ್ಚೆಯು ಸಭೆಗೆ ಮುಖ್ಯಮಂತ್ರಿಗಳಾದ ಶ್ರೀ. ಗೋವಿಂದ ವಲ್ಲಭಪಂತರೂ ಮತ್ತು ಇತರ ಮಂತ್ರಿಗಳೂ ಬಂದಿದ್ದರು. ಅಸೆಂಬ್ಲಿಯ ಅಧ್ಯಕ್ಷರಾದ ಶ್ರೀ. ಪುರುಷೋತ್ತಮದಾಸ ಠಂಡನ ಇವರೂ ಕಾಂಗ್ರೆಸ್ ಪಕ್ಷದ ಪ್ರಮುಖರೂ ಈ ಸಭೆಯಲ್ಲಿದ್ದರು.

---

—ಮದ್ರಾಸ ಸರಕಾರವು ಶಿಕ್ಷಣ ಪದ್ಧತಿಯಲ್ಲಿ ಮಹತ್ವದ ಸುಧಾರಣೆಯನ್ನು ಮಾಡುವದಿದೆಯೆಂದು ತಿಳಿದಿದೆ.

—ಡ್ಯೂಕ್ ಆಫ್ ವಿಂಡಸರ್ ಇವರು ಹಿಂದುಸ್ಥಾನದ ವ್ಹಾಯಿಸ್‌ರಾಯರಾಗಿ ಬರುವರೆಂದು ಸುದ್ದಿ.

—ರಾಣಿಬೆನ್ನೂರಿನ ರಾ| ಬ| ಬಣಗಾರ ಸಿದ್ಧಪ್ಪನವರು ರಾವಬಹದ್ದೂರ್ ಪದವಿಯನ್ನು ಬಿಟ್ಟು ಕಾಂಗ್ರೆಸ್ಸಿನ ಭಕ್ತರಾದರು. ಅಲ್ಲಿಯ ಮುನಸಿಪಾಲ್ಟಿಗೆ ಇವರೇ ಇನ್ನು ಮೂರುವರುಷ ಅಧ್ಯಕ್ಷರಾಗಿರಬೇಕೆಂದು ಗೊತ್ತಾಯಿತು.

—ಶ್ರೀ. ದೊಡ್ಡಮೇಟಿ ಅಂದಾನಪ್ಪನವರು ಎಂ. ಎಲ್. ಎ. ಇವರು ಬಳ್ಳಾರಿ ಜಿಲ್ಲೆಯ ಅನೇಕ ಸ್ಥಳಗಳಲ್ಲಿ ಸಂಚರಿಸಿ ಕಾಂಗ್ರೆಸ್ ಸಂದೇಶದ ಪ್ರಚಾರಮಾಡಿದರು.

—ಶ್ರೀಯುತ ಪಾಟೀಲ ವೀರನಗೌಡರು ಮತ್ತು ಸೌ|| ಪಾಟೀಲ ನಾಗಮ್ಮನವರು ಎಂ. ಎಲ್. ಎ. ಇವರು ಈ ವಾರ ಇಳಕಲ್ಲ, ಹುನಗುಂದ, ಬಾಗಲಕೋಟೆ, ಗುಳೇದಗುಡ್ಡ ಮೊದಲಾದ ಸ್ಥಳಗಳಲ್ಲಿ ಸಂಚರಿಸಿ ಕಾಂಗ್ರೆಸ್ ಸಂದೇಶವನ್ನು ಪ್ರಚಾರಗೊಳಿಸಿದರು.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣಮಂದಿರದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

## The Sharana Sandesh.

ನ್ಯಾಯನಿಷ್ಠುರ, ದಾಕ್ಷಿಣ್ಯಪರನಾನಲ್ಲ, ಲೋಕವಿರೋಧಿ, ಶರಣನಾರಾಂಗೂ ಅಂಜುವವನಲ್ಲ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ — ಶ್ರೀ ಬಸವಣ್ಣನವರು.


ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೨೭ ನೆಯ ಡಿಶಂಬರ್ ೧೯೩೭. | ಸಂಚಿಕೆ ೧೮ |
|---|---|---|


ಜನಸೇವೆಯೇ ದೇವರಸೇವೆ.

# ಜಪಾನಿನ ಮತ್ತೊಂದು ವಿಜಯ!

ಜಪಾನಿ ಸೈನ್ಯವು ತಾ. ೨೪-೧೨-೧೯೩೭ ನೆಯ ದಿನ
ಹ್ಯಾಂಗಚಾ ಪಟ್ಟಣವನ್ನು ಕೈವಶಮಾಡಿಕೊಂಡಿತು.

## ಚೀನ-ದಿನಾಚರಣೆ.

ಬರುವ ೯ ನೆಯ ತಾರೀಖು ಚೀನ-ದಿನ ಎಂದು ಆಚರಿಸಬೇಕಾಗಿ
ರಾಷ್ಟ್ರೀಯ ಸಭಾಧ್ಯಕ್ಷರಾದ ಪಂಡಿತ ಜವಾಹರಲಾಲರು
ಪ್ರಕಟಗೊಳಿಸಿದ್ದಾರೆ.

## ಬಿಹಾರ ಮಂತ್ರಿಗಳಿಗೆ ಅಪಘಾತ!

ಬಿಹಾರ ಪ್ರಾಂತದ ಅರ್ಥಸಚಿವರಾದ ಶ್ರೀ ಅನುಗ್ರಹ ನಾರಾಯಣಸಿಂಗ ಇವರು
ಸಂಚಾರದಲ್ಲಿದ್ದಾಗ ಮೋಟಾರಿಗೆ ಅಪಘಾತವಾಗಲು ಮಂತ್ರಿಗಳು
ಗಾಯಹೊಂದಿ ವೈದ್ಯಾಲಯಕ್ಕೆ ಸಾಗಿಸಲ್ಪಟ್ಟರು.

## ಕಾಂಗ್ರೆಸ್ಸಿನ ಮೇಲೆ ಟೀಕೆ!

ಪುಣೆಯಲ್ಲಿ ಕೂಡಿದ ಮುಂಬೈ ಪ್ರಾಂತಿಕ ವಿದ್ಯಾರ್ಥಿ ಪರಿಷತ್ತಿನ ಅಧ್ಯಕ್ಷರಾದ
ಬ್ಯಾರಿಸ್ಟರ್ ಸೈಯ್ಯದ ಜಹೀರ ಇವರು ಕಾಂಗ್ರೆಸ್ ಮಂತ್ರಿಮಂಡಲವು
ಸ್ವಾತಂತ್ರ್ಯದ ಚಟುವಟಿಕೆಯನ್ನು ತಡೆಯುತ್ತದೆಂದು ಹೇಳಿದರು.

ದೇಹವೇ ದೇವಾಲಯ.

ಅಖಿಲ ಕರ್ನಾಟಕದಲ್ಲಿ ಪ್ರಸಿದ್ಧವಾದ

ರಾಷ್ಟ್ರೀಯ ಕಂಪನಿಯೆಂದರೆ

## ಇದೊಂದೇ.

## ದಿ ಸ್ವರಾಜ್ಯ ಬ್ಯಾಂಕಿಂಗ ಮತ್ತು ಇನ್ಸುರನ್ಸ ಕಂ. ಲಿ.

# ಧಾರವಾಡ.

| ಚೇರಮನ್ | ವ್ಹಾಯಿಸ್ ಚೇರಮನ್ |
| --- | --- |
| ದೇಶಭಕ್ತ ಶ್ರೀಯುತ ಎಸ್. ಕೆ. ಹೊಸಮನಿ | ಶ್ರೀಯುತ ವ್ಹಿ. ಬಿ. ಹಾಲಭಾವಿ |
| B. A. LL. B. M. L. A. | B. A. LL. B. ರಿಟಾಯರ್ಡ |
| ಪ್ರೆಸಿಡೆಂಟ ಕೆ. ಪಿ. ಸಿ. ಸಿ. | ಫರ್ಸ್ಟ ಕ್ಲಾಸ್ ಸಬ್ ಜಜ್ಜ ಧಾರವಾಡ. |

ಭವಿಷತ್ಕಾಲದ ಜೀವಿತದ ನಿರ್ವಾಹಕ್ಕೆ | ಈ ಕಂಪನಿಯನ್ನು ಕೇವಲ ರಾಷ್ಟ್ರೋನ್ನತಿಗಾಗಿ ಸ್ಥಾಪಿಸಿರುವರು. | ತೊಂದರೆಯಿಲ್ಲದ ಒತ್ತಾಯದ ಉಳಿತಾಯ

## ರೂ. ೫೦೦ ರಿಂದ ರೂ. ೫೦೦೦ ಗಳ ವರೆಗೆ ಜೀವ ವಿಮಾ ಪಾಲಿಸಿಗಳು.

**ಉದಾರ ಶರ್ತಿನ ಪಾಲಿಸಿಗಳು ! ಮಿತವ್ಯಯದ ಆಡಳಿತ ! ! ಸುಲಭವಾದ ಕಂತಗಳು ! ! !**

ಈ ಕಂಪನಿಯವರು ಕಾರ್ಯ ಕುಶಲತೆಯಿಂದ ನಾನಾ ಎಂಬುವ ಕಂಪನಿಗಳಿಗೂ ಮುಂದೆ ಇದ್ದಾರೆ. ಸ್ಥಾಪಿಸಿದ ಎರಡೇ ವರ್ಷಗಳಲ್ಲಿ ಇಷ್ಟು ಪ್ರಗತಿಯನ್ನು ಮಾಡಿ ತೋರಿಸಲಿಕ್ಕೆ ಉಜ್ವಲ ದೇಶಭಕ್ತರೂ, ಸುಪ್ರಸಿದ್ಧರೂ, ಲೋಕಪ್ರಿಯರೂ, ವಿಮೆಯ ವ್ಯವಹಾರದಲ್ಲಿ ನುರಿತ ಪರಿಪಕ್ವ ಬುದ್ಧಿಯುಳ್ಳವರೂ ಇರುವ ಬೋರ್ಡಿನ ಡಾಯರೆಕ್ಟರರ ಆಡಳಿತವೇ ಕಾರಣ. ಗೌರವದ ಕನ್ನಡಿಗ ವಿಮೇಚ್ಛುಗಳು ತಮ್ಮ ಹಿತವನ್ನೊಳಗೊಂಡ ಕರ್ನಾಟಕ ಮಾತೆಯ ಈ ತರಹದ ಸೇವೆಗಾಗಿ ತಮ್ಮ ಬೆಂಬಲವನ್ನೀಯುವರೆಂದು ತುಂಬಾ ನಂಬಿರುವೆವು.

**ಎಲ್ಲ ಕಡೆಯಲ್ಲಿಯೂ ಕುಶಲ ಏಜಂಟರು ಬೇಕು.**

The Manager.

---

ಮುದ್ದಾದ ಅಕ್ಷರ! ಸುಲಭ ದರ!

### ಶ್ರೀ ರಂಗನಾಥ ಟೈಪ್ ಫೌಂಡರಿ

ಬೆಂಗಳೂರು.

ಕನ್ನಡ ಮತ್ತು ಇಂಗ್ಲಿಷ, ಎಲ್ಲಾ ತರದ ಟೈಪುಗಳೂ ಒಳ್ಳೊಳ್ಳೇ ಬಾರ್ಡರಗಳೂ ನಮ್ಮ ಫೌಂಡರಿಯಲ್ಲಿ ತಯಾರಾಗುತ್ತವೆ.

ಒಳ್ಳೇ ಮೆಟಲ್. ಬಹು ಅಂದವಾದ ಅಕ್ಷರಗಳು. ಬಲು ಸುಲಭ ದರ. ಕ್ಯಾಟಲಾಗ ತರಿಸಿಕೊಳ್ಳಿರಿ. ಒಮ್ಮೆ ಟೈಪುಗಳನ್ನು ತರಿಸಿಕೊಂಡು ಅನುಭವ ಹೊಂದಿರಿ. ಹಳೆ ಟೈಪುಗಳಿದ್ದರೆ ಸುಲಭ ಚಾರ್ಜಿಗೆ ಹೊಸದಾಗಿ ಹೊಯಿದು ಕೊಡುತ್ತೇವೆ.

ಪ್ರೊಪ್ರೈಟರ,
ಶ್ರೀ ರಂಗನಾಥ ಟೈಪ್ ಫೌಂಡರಿ
೨೭ ಕುಬೇರ ಸಾಹುಜಿ ಲೈನ್
ಚಿಕ್ಕಪೇಟೆ, ಬೆಂಗಳೂರು ಸಿಟಿ.

---

**ಲೋಕ**ಮತ ದಿನ ಪತ್ರಿಕೆಯನ್ನು ಪ್ರತಿ ದಿನವೂ ತಪ್ಪದೇ ಓದಿ ಎಲ್ಲ ವಿಷಯಗಳನ್ನೂ ತಿಳಿದುಕೊಳ್ಳಿರಿ.

ವಿಳಾಸ— ಮ್ಯಾನೇಜರ್ "ಲೋಕಮತ"
ಹುಬ್ಬಳ್ಳಿ

---

**ನಿ**ಜಾಮ ಪ್ರಾಂತದ ಕನ್ನಡಿಗರಿಗೆ ಕನ್ನಡ ನಾಡಿನ ಎಲ್ಲ ಪ್ರಸಿದ್ಧ ಲೇಖಕರ ಪುಸ್ತಕಗಳೂ ನಮ್ಮಲ್ಲಿ ಯೋಗ್ಯ ಬೆಲೆಗೆ ದೊರೆಯುವವು.

ವಿಳಾಸ— ಎಸ್. ಸಿ. ಶಿವಲಿಂಗಣ್ಣ
ಕಲ್ಯಾಣ ಕರ್ನಾಟಕ ಬುಕ್ಕಡಿಪೊ ಗುಲಬರ್ಗಾ

---

**ವೀರ**ವಾಣಿ. ಇದು ವೀರಶೈವ ಮತದ ನಿಜ ತತ್ವವನ್ನು ತಿಳಿಸುವ ಮಾಸ ಪತ್ರಿಕೆ.

ವಾರ್ಷಿಕ ಚಂದಾ ರೂ. ೧-೮-೦
ಸಂಪಾದಕರು— ಗಂಗಾಧರಪ್ಪ ಹೊದ್ಲೂರು ಹುಬ್ಬಳ್ಳಿ



# ಶರಣ ಸಂದೇಶ

THE SHARANA SANDESHA.



## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು೨೭ನೆಯ ಡಿಶಂಬರ್ ೧೯೩೭. | ಸಂಚಿಕೆ ೧೮

## ಮಹತ್ವದ ಸುದ್ದಿಗಳು.

—ಹರಿಪುರ ಕಾಂಗ್ರೆಸ್ಸಿಗೆ ಮುಂಬೈಯಿಂದ ಪ್ರತಿನಿಧಿಗಳನ್ನು ಆರಿಸುವುದಕ್ಕಾಗಿ ಮುಂಬೈ ಪ್ರಾಂತಿಕ ಕಾಂಗ್ರೆಸ್ ಕಮಿಟಿಯಿಂದ ನಡೆದ ಚುನಾವಣೆಯಲ್ಲಿ ಗಿರಗಾಂವ ವಾರ್ಡಿನಿಂದ ವೀರ ನರಿಮಾನರು ೮೩೮೭ ಮತಗಳನ್ನು ಹೊಂದಿ ಒಂದನೆಯವರಾಗಿ ಆರಿಸಲ್ಪಟ್ಟರು.

—ಮುಂಬೈ ಸರಕಾರದ ಗೃಹ ಮಂತ್ರಿಗಳಾದ ಶ್ರೀ ಮುನಸಿಯವರ ಶಾಖೆಯ ಕಾರ್ಯದರ್ಶಿಗಳಾದ ಮಿ. ಆಯರ್ವಿನ್ ಇವರ ರುಜು ಹಾಕಲ್ಪಟ್ಟ ಒಂದು ಗುಪ್ತ ಆಜ್ಞಾಪತ್ರವು ಅನೇಕರ ಕಡೆ ಹೋಗಿದೆಯೆಂದೂ ಅದರಲ್ಲಿ ಅನೇಕ ಮರಾಠಿ ಪತ್ರಗಳು ಅತ್ಯಾಚಾರಕ್ಕೆ ಪ್ರೋತ್ಸಾಹಿಸುವುದರಿಂದ ಅವುಗಳಿಗೆ ಸಹಾಯಮಾಡದೆ ಲೋಕಶಕ್ತಿ (ಮಹಾರಾಷ್ಟ್ರ ಪ್ರಾಂತಿಕ ಕಾಂಗ್ರೆಸ್ ಕಮಿಟಿ ಅಧ್ಯಕ್ಷರಾದ ಶ್ರೀ. ದೇವ ಇವರ) ಪತ್ರಿಕೆಗೆ ಮಾತ್ರ ಪ್ರಕಟನೆಗಳನ್ನು ಕೊಡಬೇಕೆಂದೂ ಇದೆಯಂತೆ. ಕಾಂಗ್ರೆಸ್ ಮಂತ್ರಿಮಂಡಲವು ಇಂಥ ಅನ್ಯಾಯ ಮಾಡಿದೆಯೆಂದು ಅನೇಕ ಪತ್ರಿಕೆಗಳು ಬಹು ತೀಕ್ಷ್ಣವಾಗಿ ಖಂಡಿಸಿವೆ. ಈ ವಿಷಯ ಅಸೆಂಬ್ಲಿಯಲ್ಲಿ ಬರುವುದಿದೆಯಂತೆ.

—ಸಂಯುಕ್ತ ಪ್ರಾಂತದ ನಾಲ್ಕು ಉಪಚುನಾವಣೆಗಳಲ್ಲಿ ಬಿಜನೂರದ ವಿನಾ ಮೂರು ಚುನಾವಣೆಗಳಲ್ಲಿ ಮುಸ್ಲಿಂಲೀಗ್ ಕಾಂಗ್ರೆಸ್ ಪಕ್ಷವನ್ನು ಸೋಲಿಸಿತು.

—ಮದ್ರಾಸ ಸರಕಾರವು ೧೦೦ ಹೈಸ್ಕೂಲುಗಳನ್ನು ಮುಚ್ಚುವುದಿದೆಯಂತೆ. ಇದರಿಂದ ಆ ಭಾಗದ ಶಿಕ್ಷಕರಲ್ಲಿ ಬಹು ಅಸಂತೋಷವುಂಟಾಗಿದೆ.

—ಕಳೆದ ೨೦ ನೆಯ ತಾರೀಖಿನ ದಿವಸ ಲಾರ್ಡ ಲೋಥಿಯನ್‌ರು ಅಲಾಹಾಬಾದಿನ ಆನಂದ ಭವನಕ್ಕೆ ಬಂದು ರಾಷ್ಟ್ರೀಯ ಸಭಾಧ್ಯಕ್ಷರಾದ ಪಂ. ಜವಾಹರಲಾಲರನ್ನು ಕಂಡು ೩|| ತಾಸುಗಳ ವರೆಗೆ ಸಂಭಾಷಣೆ ನಡೆಸಿದರು. ಫೆಡರೇಶನ್ನಿನ ವಿಚಾರವಾಗಿಯೇ ಸಂಭಾಷಣೆ ನಡೆದಿರಬೇಕೆಂದು ಊಹಿಸಲಾಗಿದೆ.

—ಮದ್ರಾಸ ಅಸೆಂಬ್ಲಿಯಲ್ಲಿ ವಂದೇಮಾತರಂ ಗೀತ ನಡೆದಾಗ ಮುಸಲ್ಮಾನ್ ಸಭಾಸದರು ಏಳಲಿಲ್ಲ. ಅಲ್ಲಿ ಮತ್ತೆ ಈ ವಾದ ಪ್ರಾರಂಭವಾಗಿದೆ.

—ಗಜೇಂದ್ರಗಡದಲ್ಲಿ ತಾ. ೩೦-೧೨-೩೭ ನೆಯ ದಿನ ಶ್ರೀ. ವಿಶ್ವನಾಥರಾವ ಜೋಗ ಎಂ. ಎಲ್. ಎ. ಇವರ ಅಧ್ಯಕ್ಷತೆಯಲ್ಲಿ ರೈತರ ಮತ್ತು ನೇಕಾರರ ಪರಿಷತ್ತು ಕೂಡುವುದಿದೆ.

—ಸಿಲ್ಹಟ ಎಂಬಲ್ಲಿ ಕುಮಾರಿ ಸ್ನೇಹಲತಾದೇವಿ ಮತ್ತು ಖಾ. ಬ. ಮಫಿಜೂರ ರಹಮಾನ ಎಂ. ಎಲ್. ಎ. ಇವರ ಪುತ್ರ ಮಿ. ನುರುಲ ಇವರಿಗೂ ವಿವಾಹವಾಯಿತು. ಕುಮಾರಿ ಸ್ನೇಹಲತಾ ಅಧ್ಯಾಪಿಕೆಯಾಗಿದ್ದಾರೆ. ಇದು ಮತ್ತೊಂದು ಹಿಂದು-ಮುಸಲ್ಮಾನ್ ವಿವಾಹ.

—ಲಂಡನ್ನಿನಲ್ಲಿ ಹಿಂದುಗಳ ಒಂದು ಮಿಶ್ರ ವಿವಾಹ ಜರುಗಿತು. ಕಾಯಸ್ಥ ವಂಶದ ವಧೂ ಕಾಸ್ಮೀರದೇವಿ. ವರ ರಜಪುತ ಕುಲದ ಜಯಪುರ ರಾಜರ ಬಂಧುಗಳಾದ ಪ್ರಿನ್ಸ್ ಯಶವಂತಸಿಂಗ.

—ಬಂಗಾಲ ಮಂತ್ರಿಮಂಡಲದ ಸತ್ಕಾರ ಸಭೆಯಲ್ಲಿ ಮುಖ್ಯ ಮಂತ್ರಿಗಳಾದ ನಾ. ಹಕ್ ಇವರ ಮಾತಿನಿಂದ ಹೊಡೆದಾಟ ನಡೆದು ಮಿ. ಅಬ್ದುಲ್ ವಹಾದ ಎಂಬುವವರ ತಲೆ ಒಡೆಯಿತು.

—ಮುಂಬೈ ಸರಕಾರವು ಶಾರೀರಿಕ ಶಿಕ್ಷಣದ ವಿಚಾರವಾಗಿ ಯೋಚಿಸಿ ವರದಿಮಾಡಲು ಶ್ರೀ. ಸ್ವಾಮಿ ಕುವಲಯಾನಂದರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ಏರ್ಪಡಿಸಿದ್ದಿತು. ಆ ಸಮಿತಿಯವರು ವಿದ್ಯಾರ್ಥಿಗಳಿಗೆ ಶಾರೀರಿಕ ಶಿಕ್ಷಣವು ಇತರ ಅಭ್ಯಾಸಗಳಂತೆಯೇ ಒಂದು ಅಗತ್ಯವಾದ ವಿಷಯವೇ ಆಗಬೇಕೆಂತಲೂ ಪುಣೆಯಲ್ಲಿ ಈ ಸಂಬಂಧವಾದ ಶಿಕ್ಷಕರನ್ನು ಉಂಟುಮಾಡಲು ಒಂದು ಕಾಲೇಜನ್ನು ಏರ್ಪಡಿಸಬೇಕೆಂತಲೂ ತಿಳಿಸಿದ್ದಾರೆ.

—ಸೋನ್ಯಾ ಮಾರುತಿ ಉತ್ಸವದ ಸಂಬಂಧವಾಗಿ ನಡೆದ ಹಿಂದು-ಮುಸಲ್ಮಾನರ ದೊಂಬಿಯಲ್ಲಿ ಶಿಕ್ಷೆ ಹೊಂದಿದ್ದ ೨೨ ಜನರನ್ನು ಸರಕಾರವು ಈಗ ಬಿಡುಗಡೆಮಾಡಿದೆ.

# ಮಹಾರಾಷ್ಟ್ರ ಹಿಂದು ಧರ್ಮ ಪರಿಷತ್ತು.

## ಕೊಲ್ಲಾಪುರ ಮಹಾರಾಜರ ಮಹತ್ವದ ಸಂದೇಶ.

### ಅಧ್ಯಕ್ಷ ಧರ್ಮವೀರ ಡಾ. ಮುಂಜೆಯವರ ಸ್ಫೂರ್ತಿದಾಯಕ ಭಾಷಣ.

ಈ ಮುಂಚೆ ಗೊತ್ತಾದಮೇರೆಗೆ ತಾರೀಖು ೧೮-೧೨-೩೭ ನೇ ದಿವಸ ಕೊಲ್ಲಾಪುರದಲ್ಲಿ ಮಹಾರಾಷ್ಟ್ರ ಹಿಂದು ಧರ್ಮ ಪರಿಷತ್ತು ಧರ್ಮವೀರ ಡಾ. ಮುಂಜೆಯವರ ಅಧ್ಯಕ್ಷತೆಯಲ್ಲಿ ಬಹು ಉತ್ಸಾಹದಿಂದ ಪ್ರಾರಂಭವಾಯಿತು.

ಆ ದಿನ ಪ್ರಾತಃಕಾಲ ಅಧ್ಯಕ್ಷ ಡಾ. ಮುಂಜೆಯವರ ಮೆರವಣಿಗೆಯು ಪಟ್ಟಣದ ಮುಖ್ಯ ಮುಖ್ಯ ಮಾರ್ಗಗಳಲ್ಲಿ ಮಾಡಲ್ಪಟ್ಟಿತು. ಈ ಮೆರವಣಿಗೆಯಲ್ಲಿ ಸಾವಿರಾರು ನಾಗರಿಕರು ಸೇರಿದ್ದರು. ಡಾ. ಮುಂಜೆಯ್ಯವರು ದಿವಂಗತ ರಾಜ ಋಷಿ ಶಾಹು ಮಹಾರಾಜರ ಮೂರ್ತಿಗೆ ಪುಷ್ಪಹಾರವನ್ನು ಅರ್ಪಿಸಿ ಭಕ್ತಿ ಭಾವದಿಂದ ಚರಣಕ್ಕೆ ನಮಸ್ಕರಿಸಿದರು.

ಅಧ್ಯಕ್ಷರ ಸ್ವಾಗತಾರ್ಥ ಮಹಾರಾಜರ ಆಪ್ತ ಕಾರ್ಯದರ್ಶಿಗಳಾದ ರಾ| ಬ| ಪೊವಾರ ಇವರು ಆಗಮಿಸಿದ್ದರು. ಈ ಪ್ರಚಂಡ ಮೆರವಣಿಗೆಯು ಸಭೆಯ ಭವ್ಯ ಮಂಟಪದ ಹತ್ತಿರ ಬರಲು ಶ್ರೀ ಕ್ಷಾತ್ರ ಜಗದ್ಗುರುಗಳು ಅಧ್ಯಕ್ಷರನ್ನು ಬರಮಾಡಿಕೊಂಡರು. ಅನಂತರ ಕೆಂಪು ಧ್ವಜವು ಅಧ್ಯಕ್ಷರ ಹಸ್ತದಿಂದ ನಿಲ್ಲಿಸಲ್ಪಡುವ ಸಮಾರಂಭವು ಜರುಗಿತು.

**ಮಹಾರಾಜರ ಮಹತ್ವದ ಸಂದೇಶ.**

ಕೊಲ್ಲಾಪುರದ ಶ್ರೀಮತ್ ಛತ್ರಪತಿ ರಾಜಾರಾಮ ಮಹಾರಾಜರವರು ಹಿಂದು ಧರ್ಮ ಪರಿಷತ್ತಿಗೆ ಒಂದು ಸಂದೇಶವನ್ನು ಕಳುಹಿಸಿದ್ದರು. ಅದರ ಮುಖ್ಯಾಂಶವು ಹೀಗಿದ್ದಿತು—

“ ನಮ್ಮ ರಾಜಧಾನಿಯಲ್ಲಿ ಹಿಂದು ಧರ್ಮ ಪರಿಷತ್ತು ಜರುಗುತ್ತಿರುವುದು ನಮಗೆ ಅತ್ಯಂತ ಸಂತೋಷಕರವಾದುದು. ಹಿಂದು ಧರ್ಮ ರಕ್ಷಣೆಗಾಗಿ ನಮ್ಮ ಛತ್ರಪತಿ ರಾಜವಂಶದವರು ಎಷ್ಟು ಕಷ್ಟ ವಹಿಸಿದ್ದಾರೆಂಬುದೂ ಆತ್ಮಯಜ್ಞಮಾಡಿದ್ದಾರೆಂಬುದೂ ಸರ್ವಶ್ರುತವಾದ ಸಂಗತಿಯಾಗಿದೆ. ಈ ವಿಷಯದಲ್ಲಿ ನಮ್ಮ ಅಭಿಪ್ರಾಯವೇನೆಂದರೆ—

“ಹಿಂದು ಧರ್ಮ ರಕ್ಷಣೆಯ ಪವಿತ್ರವಾದ ಅಡಿಗಲ್ಲಿನ ಮೇಲೆಯೇ ಮರಾಠಿ ರಾಜ್ಯವು ಸ್ಥಾಪಿಸಲ್ಪಟ್ಟಿದೆ. ಅಂತೆಯೇ ನಮ್ಮ ಪರಮಪೂಜ್ಯ ಕೀರ್ತಿಶೇಷ ಶಾಹು ಮಹಾರಾಜರವರು ಈ ಕಾಲಕ್ಕೆ ತಕ್ಕಂತೆ ಹಿಂದು ಧರ್ಮದಲ್ಲಿ ಸುಧಾರಣೆಯನ್ನು ಮಾಡಲು ದೀರ್ಘ ಪ್ರಯತ್ನಮಾಡಿ ಜಯಶಾಲಿಗಳಾದರು.”

ನಾವಾದರೋ ನಮ್ಮ ಪೂಜ್ಯ ಹಿರಿಯರು ತೋರಿಸಿದ ಮಾರ್ಗದಲ್ಲಿಯೇ ನಡೆಯಲು ನಿರ್ಧರಿಸಿದ್ದೇವೆ. ಈ ನಮ್ಮ ಪ್ರಯತ್ನವು ಫಲಕಾರಿಯಾಗಿ ಹಿಂದು ಸಮಾಜದಲ್ಲಿ ನಿಜವಾದ ಸಂಘಟನೆಯಾಗಬೇಕಾದರೆ ಹಿಂದು ಸಮಾಜದಲ್ಲಿರುವ ಜಾತಿಭೇದವು ನಿವಾರಣೆಯಾಗಲೇಬೇಕೆಂಬುದನ್ನು ನೀವು ಲಕ್ಷಿಸಿರಿ. ನಮ್ಮ ರಾಜ್ಯದಲ್ಲಿರುವ ಸರ್ವ ಧರ್ಮಗಳೂ ನಮಗೆ ಸಮಾನವಾಗಿಯೇ ಇವೆ. ಅವೆಲ್ಲವುಗಳನ್ನೂ ರಕ್ಷಿಸುವುದು ನಮ್ಮ ಕರ್ತವ್ಯವೇ ಆಗಿದೆ. ನಿಮ್ಮ ಪರಿಷತ್ತು ಜಯಪ್ರದವಾಗಲಿ. ”

ಈ ಪರಿಷತ್ತು ಜಯಪ್ರದವಾಗಿ ಜರುಗಲೆಂದು ಶ್ರೀ. ಸರ್ ಸಯಾಜಿರಾವ ಗಾಯಕವಾಡ ಮಹಾರಾಜರು ಜಮಖಂಡಿ ರಾಜೇಸಾಹೇಬರು ಕಾಗಲ ಜಹಾಗೀರದಾರರು ಶ್ರೀ. ನ. ಚಿ. ಕೇಳಕರರು ಮೊದಲಾದ ಪ್ರಮುಖರಿಂದ ಬಂದ ಸಂದೇಶಗಳನ್ನು ಓದಿದನಂತರ ಕ್ಷಾತ್ರ ಜಗದ್ಗುರುಗಳ ಹಸ್ತದಿಂದ ಧರ್ಮವೀರ ಡಾ. ಮುಂಜೆಯವರಿಗೆ ಪುಷ್ಪಹಾರವು ಹಾಕಲ್ಪಡಲು ಅಧ್ಯಕ್ಷಸ್ಥಾನವನ್ನು ವಹಿಸಿ ಅತ್ಯಂತ ಮಹತ್ವದ ಭಾಷಣವನ್ನು ಮಾಡಿದರು. ಇವರ ಭಾಷಣವು ಇಂಗ್ಲಿಷಿನಲ್ಲಿ ಅಚ್ಚಾಗಿದ್ದರೂ ಇವರು ಮರಾಠಿಯಲ್ಲಿಯೇ ಭಾಷಣಮಾಡಿದರು.

**ಅಧ್ಯಕ್ಷರ ಭಾಷಣ.**

ನಾನು ದಿವಂಗತ ಶಾಹು ಛತ್ರಪತಿ ಮಹಾರಾಜರ ಚರಣಕ್ಕೆ ಶಿರಬಾಗದೆ ನನ್ನ ಭಾಷಣವನ್ನೇ ಪ್ರಾರಂಭಿಸಲಾರೆನು.



ಡಾ. ಮುಂಜೆಯವರು.

ಹಿಂದುಧರ್ಮ ಸಂಘಟನೆಗಾಗಿ ಆ ಮಹಾರಾಜರು ಮಾಡಿದ ಕಾರ್ಯವು ಅತ್ಯಂತ ಮಹತ್ವದ್ದಾಗಿದೆ. ಹಿಂದು ಸಮಾಜದಲ್ಲಿಯ ಜಾತಿಭೇದ ನಿವಾರಣೆಮಾಡುವುದನ್ನು ಅವರು ತಮ್ಮ ಕೃತಿಯಿಂದಲೇ ತೋರಿಸಿ ಚಿರಸ್ಮರಣೀಯರಾಗಿದ್ದಾರೆ. ಅಂತೆಯೇ ನಾನು ಭಕ್ತಿಭಾವದಿಂದ ಅವರಿಗೆ ಅಭಿನಂದಿಸುತ್ತೇನೆ. ನಾನು ಜನ್ಮದಿಂದ ಬ್ರಾಹ್ಮಣನಿದ್ದರೂ ಪ್ರವೃತ್ತಿಯಿಂದ ಕ್ಷತ್ರಿಯನಾಗಿದ್ದೇನೆ. ಹಿಂದುಸ್ಥಾನವು ಹಿಂದುಗಳದ್ದಾಗಿರಬೇಕು. ಹಿಂದುತ್ವದಮೇಲೆ ಗಂಡಾಂತರ ಬರುತ್ತಲಿರುವುದು ನಿವಾರಣೆಯಾಗಬೇಕು. ಎಂಬುದೇ ನನ್ನ ಮುಖ್ಯೋದ್ದೇಶವು.

ಹಿಂದು ಧರ್ಮವು ಮುಸಲ್ಮಾನ್ ಮತ್ತು ಕ್ರಿಶ್ಚಿಯನ್ ಮತಗಳಂತೆ ಒಂದು ಪಂಥವಲ್ಲ. ಅವು ಒಬ್ಬ ವ್ಯಕ್ತಿಯ ಅಭಿಪ್ರಾಯದಮೇಲೆ ನಿಂತ ಪಂಥ ಅಥವಾ ಮತಗಳು. ಅವು ಧರ್ಮ ಎಂಬ ಶಬ್ದಕ್ಕೆ ಅರ್ಹವಾಗಿಲ್ಲ. ಇಹದಲ್ಲಿ ಅಭ್ಯುದಯ ಪರದಲ್ಲಿ ನಿಶ್ರೇಯ ಇವು ದೊರೆಯುವಂತಹ ಆಚಾರ ವಿಚಾರಗಳಿಂದ ಕೂಡಿದುದೇ ಹಿಂದು ಧರ್ಮವು. ನಮ್ಮ ಈಗಿನ ಆಚಾರ ವಿಚಾರಗಳಿಂದ ಅಭ್ಯುದಯವಾಗದೆ ಅಧೋಗತಿಯೇ ಪ್ರಾಪ್ತವಾಗುತ್ತಿದ್ದರೆ ಅದಕ್ಕೆ ಧರ್ಮಾಚಾರವೆಂದು ಹೇಳಬಹುದೆ?

ಈಗಿನ ಕಾಲದಲ್ಲಿ ಬ್ರಾಹ್ಮಣಾದಿ ನಾಲ್ಕು ವರ್ಣಗಳನ್ನೂ ಹಿಂದುಗಳಲ್ಲಿಯ ಜಾತಿ ವ್ಯವಸ್ಥೆಯನ್ನೂ ನಾವು ನಮ್ಮ ಸಮಾಜದಲ್ಲಿ ಇಡಗೊಡುವುದು ಶಕ್ಯವೆ? ಮುಸಲ್ಮಾನರು ಮತ್ತು ಕ್ರಿಸ್ತರು ನಮ್ಮ ಧರ್ಮದಮೇಲೆ ಆಕ್ರಮಣ ನಡೆಸಿದ್ದಾರೆ. ಹಿಂದು ಧರ್ಮವೆಂಬ ಮೇಣಬತ್ತಿಗೆ ಕೆಳಗಿನಿಂದ ಕ್ರೈಸ್ತರೂ ಮೇಲಿನಿಂದ ಮುಸಲ್ಮಾನರೂ ಬೆಂಕಿ ಹಚ್ಚಿದ್ದಾರೆ. ಎಂದಮೇಲೆ ಇದು ಹೇಗೆ ರಕ್ಷಣೆಯಾಗುವುದು?

ಕಳೆದ ೯೦೦ ವರುಷಗಳಲ್ಲಿ ಅಫಗಾಣಿಸ್ಥಾನ, ಕಾಶ್ಮೀರ, ಪಂಜಾಬ, ಸಿಂಧ, ಬಂಗಾಲ ಈ ಭಾಗಗಳೆಲ್ಲಾ ಮುಸಲ್ಮಾನರ ಪ್ರಾಬಲ್ಯಕ್ಕೆ ಒಳಗಾದವು. ನಾವು ಹೀಗೆ ಕುಳಿತರೆ ನಾವು ಈ ದೇಶದಲ್ಲಿ ನಾಮಶೇಷರಾಗುವೆವು. ಹಿಂದುಗಳು ತಮ್ಮಲ್ಲಿರುವ ಜಾತಿಭೇದವನ್ನು ತೆಗೆದುಹಾಕಿ ಸಂಘಟಿತರಾಗಬೇಕು. ಸ್ವ ಸಂರಕ್ಷಣೆಗಾಗಿ ಶೂರರಾಗಬೇಕು. ಕ್ಷಾತ್ರ ತೇಜ ನಮ್ಮಲ್ಲಿ ಪ್ರಜ್ವಲಿಸುವಂತೆ ಪ್ರಯತ್ನಿಸಿರಿ. ಹಿಂದುಗಳೆಲ್ಲಾ ಒಂದೇ ವರ್ಣದವರಾಗಬೇಕು. ಇದೇ ಹಿಂದು ಮಹಾಸಭೆಯ ಸಂದೇಶ."

### ಕೆಲವು ಮಹತ್ವದ ನಿರ್ಣಯಗಳು.

ಈ ಹಿಂದು ಧರ್ಮ ಪರಿಷತ್ತಿನಲ್ಲಿ ಅನೇಕ ಮಹತ್ವದ ನಿರ್ಣಯಗಳಾದವು. ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಡಲಾಗಿದೆ—

(೧) ಹಿಂದು ಧರ್ಮದಲ್ಲಿಯ ಬೇರೆ ಬೇರೆ ವರ್ಣದವರಲ್ಲಿ ಪರಸ್ಪರ ಶರೀರ ಸಂಬಂಧವಾದರೆ ಅವರನ್ನು ಬಹಿಷ್ಕರಿಸಬಾರದು. ಈ ಗೊತ್ತುವಳಿಯನ್ನು ಶ್ರೀ. ಬಿ. ಟಿ. ಕುಲಕರ್ಣಿ ಎಂಬುವವರು ತಂದಿದ್ದರು.

(೨) ಕುಮಾರಿ ಶ್ಯಾಮಲಾ ನೆಹರು ಮತ್ತು ಮುಸಲ್ಮಾನ್ ಇವರ ವಿವಾಹವನ್ನು ಈ ಪರಿಷತ್ತು ನಿಷೇಧಿಸುತ್ತದೆ. ಇಂಥ ಅಂತರ್ಜಾತೀಯ ವಿವಾಹವಾಗಕೂಡದು. ಈ ಗೊತ್ತುವಳಿಯನ್ನು ಅಧ್ಯಕ್ಷರು ಸಭೆಯ ಮುಂದಿಟ್ಟರು.

(೩) ಹಿಂದು ಸ್ತ್ರೀಯರು ಸ್ವ ಸಂರಕ್ಷಣೆಗಾಗಿ ಬಲಶಾಲಿಗಳಾಗಬೇಕು. ಮತ್ತು ಕಠಾರಿ, ಜಂಬಿ ಈ ಶಸ್ತ್ರಗಳನ್ನು ತಮ್ಮ ಹತ್ತಿರ ಇಟ್ಟುಕೊಳ್ಳುವುದು ಭೂಷಣಪ್ರದವೆಂದು ತಿಳಿಯಬೇಕು. ಈ ಗೊತ್ತುವಳಿಯನ್ನು ಸೌ|| ಲೀಲಾತಾಯಿ ಉಪಳೇಕರ ಇವರು ತಂದರು.

(೪) ಅಲ್ಲಲ್ಲಿ ಅನಾಥ ಮಹಿಳಾಶ್ರಮಗಳನ್ನು ಸ್ಥಾಪಿಸಬೇಕು. ಈಗ ಇರತಕ್ಕ ಮಹಿಳಾಶ್ರಮಗಳಿಗೆ ಧನಸಹಾಯ ಮಾಡಬೇಕು. ಈ ಗೊತ್ತುವಳಿಯು ಸೌ|| ಇಂದಿರಾದೇವಿ ಪಂಡಿತ ಇವರಿಂದ ಇಡಲ್ಪಟ್ಟಿತು.

(೫) ವಿಧವಾ ಸ್ತ್ರೀಯರು ಕುಂಕುಮವನ್ನು ಹಚ್ಚಿಕೊಳ್ಳಬೇಕು. ಮತ್ತು ತಮ್ಮ ಶೀಲವನ್ನು ಸಂರಕ್ಷಿಸಿಕೊಳ್ಳಬೇಕು. ಈ ಗೊತ್ತುವಳಿಯನ್ನು ಸೌ|| ಲೀಲಾತಾಯಿ ಉಪಳೇಕರ ಇವರು ತಂದರು. ಇದಕ್ಕೆ ಅನುಮೋದನ ಕೊಡುವಾಗ ಪಂಡಿತ ಮಹದೇವ ಶಾಸ್ತ್ರಿ ದಿವೇಕರ ಇವರು ಹೀಗೆ ಹೇಳಿದರು—

"ಸ್ತ್ರೀಯರು ವಿಧವೆಯರಾದರೆ ಅದರಲ್ಲಿ ಅವರ ದೋಷವೇನಿದೆ? ಗಂಡ ತೀರಿದರೆ ಹೆಂಡತಿ ಅಶುಭವನ್ನುಂಟುಮಾಡುವವಳಾದರೆ ಹೆಂಡತಿ ತೀರಿದ ಗಂಡನೂ ಹಾಗೇ ಆಗಬೇಡವೆ? ಕುಂಕುಮವನ್ನು ಧರಿಸಿದವಳ ಕಡೆಗೆ ಕೆಟ್ಟ ದೃಷ್ಟಿಯಿಂದ ನೋಡುವ ಧೈರ್ಯವಾಗುವುದಿಲ್ಲ. ಕುಂಕುಮವಿಲ್ಲದಿದ್ದರೆ ವಿಧವೆಯೆಂದು ಅವಳ ಕಡೆಗೆ ದುಷ್ಟ ಭಾವನೆಯಿಂದ ನೋಡಬಹುದು. ಲಗ್ನಕ್ಕೂ ಕುಂಕುಮಕ್ಕೂ ಯಾವ ಸಂಬಂಧವೂ ಇಲ್ಲ. ಲಗ್ನವಾಗದ ಮುಂಜಿಯೂ ಬಾಲಕಿಯರು ಕುಂಕುಮವನ್ನು ಹಚ್ಚಿಕೊಳ್ಳುವುದಿಲ್ಲವೆ! ಆದುದರಿಂದ ವಿಧವೆಯರೂ ಕುಂಕುಮವನ್ನು ಧರಿಸಿಕೊಳ್ಳಲು ಅಡ್ಡಿಯಿಲ್ಲ."

(೬) ಪಠಾಣರು ನಡೆಸಿರುವ ಸಾವಕಾರಿ ವ್ಯವಹಾರದ ಮೇಲೆ ನಿಯಂತ್ರಣವಾಗಬೇಕು. ಮತ್ತು ಕಾಬೂಲಿ ಜನಂಗೆ ಕ್ರಿಮಿನಲ್ ಟ್ರಾಯಿಬ್ಸ ಆಕ್ಟ್ ಹಚ್ಚಬೇಕು. ಈ ಗೊತ್ತುವಳಿಯನ್ನು ಶ್ರೀ. ರಾಜಾಜ್ಞೆ ಎಂಬುವವರು ತಂದರು.

(೭) ಹಿಂದು ತರುಣರು ಅನ್ಯ ಧರ್ಮದವರ ವಶವಾಗಿರತಕ್ಕ ಉದ್ಯೋಗಗಳನ್ನು ಕೈವಶಮಾಡಿಕೊಳ್ಳಬೇಕು. ಮಾಂಸಾಹಾರಿಗಳು ಪಶುಹತ್ಯಕ್ಕಾಗಿ ಮುಸಲ್ಮಾನ್ ಕಟಕರಮೇಲೆಯೇ ಅವಲಂಬಿಸಿರಬಾರದು. ಇದನ್ನು ಅಧ್ಯಕ್ಷರು ಸಭೆಯ ಮುಂದಿಟ್ಟರು.

(೮) ಹಿಂದು ಧರ್ಮರಕ್ಷಣೆಗೂ ಹಿಂದು ಸಮಾಜ ಸಂಘಟನೆಗೂ ಹಿಂದು ಸಂಸ್ಥಾನಾಧಿಪತಿಗಳು ಧನಸಹಾಯಮಾಡಬೇಕು. ಈ ಗೊತ್ತುವಳಿಯನ್ನು ಧುಳೆಯ ಶ್ರೀ. ಪಟವರ್ಧನ ಇವರು ಸಭೆಯ ಮುಂದಿಟ್ಟರು. ಆಗ ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಬ್ರಿಟಿಶ್ ಸರಕಾರವು ಕ್ರಿಸ್ತಿ ಪಾದ್ರಿಗಳಿಗೆ ಧರ್ಮ ಪ್ರಸಾರಕ್ಕಾಗಿ ಧನ ಸಹಾಯಮಾಡುತ್ತದೆ. ನಿಜಾಮ ಸಾಹೇಬರೂ ಡಾಕಾ ನಬಾಬರೂ ತಮ್ಮ ಧರ್ಮ ಪ್ರಸಾರಕ್ಕಾಗಿ ಧನಸಹಾಯಮಾಡುತ್ತಿದ್ದಾರೆ. ಎಂದಮೇಲೆ ಹಿಂದು ರಾಜರು ತಮ್ಮ ಧರ್ಮಸಂರಕ್ಷಣೆಗೆ ಏಕೆ ಧನ ಸಹಾಯಮಾಡಬಾರದು?"

### ಹಿಂದು ಧರ್ಮ ಪರಿಷತ್ತಿನ ಸಂದೇಶ.

ಅಧ್ಯಕ್ಷರಾದ ಧರ್ಮವೀರ ಡಾ. ಮುಂಜೆಯವರು ಉಪಸಂಹಾರಾತ್ಮಕ ಭಾಷಣದಲ್ಲಿ ಈ ಹಿಂದು ಧರ್ಮ ಪರಿಷತ್ತಿನ ಸಂದೇಶವು ಈ ಪ್ರಕಾರ ಇದೆಯೆಂದು ಸಾರಿದರು—

"ಇನ್ನು ಮೇಲೆ ಹಿಂದು ಸಮಾಜವು ಸ್ವ ಸಂರಕ್ಷಣೆಗಾಗಿ ಅನ್ಯರ ಕಡೆ ನೋಡದೆ ತಾನೇ ಸಿದ್ಧವಾಗಬೇಕೆಂಬುದೇ ಈ ಪರಿಷತ್ತಿನ ಸಂದೇಶವಾಗಿದೆ."

---

## ದೊಂಬೆಗಾರತಿಯಾದ ಆಸಾಮದ ವೀರ ತರುಣಿ.

ರಾಷ್ಟ್ರೀಯ ಸಭಾಧ್ಯಕ್ಷರಾದ ಪಂಡಿತ ಜವಾಹರಲಾಲ ನೆಹರುರವರು ಆಸಾಮ ಪ್ರಾಂತದ ತಮ್ಮ ನೊನ್ನಿನ ಪ್ರವಾಸದಲ್ಲಿ ತಿಳಿದುಬಂದ ಮಹತ್ವದ ಸಂಗತಿಯನ್ನು ಪ್ರಕಟಿಸಿದ್ದಾರೆ. ಅದರ ಮುಖ್ಯಾಂಶ ಹೀಗಿದೆ—

"ಸಿಲ್ಹೆಟ ಎಂಬಲ್ಲಿ ನಾಗಜಾತಿಯ ಜನರು ನನ್ನನ್ನು ಕಾಣಲಿಕ್ಕೆ ಬಂದಿದ್ದರು. ಅವರಿಂದ ನನಗೆ ಈ ಕೆಳಗಿನ ಸಂಗತಿಯು ತಿಳಿಯಿತು. ಈ ಜಾತಿಯ ಪೂಜಾರಿಗಳ ಮನೆತನದ ಒಬ್ಬ ೧೯ ವರ್ಷಗಳ ಶೂರ ತರುಣಿಯು ಕಳೆದ ಶಾಸನಭಂಗದ ಕಾಲದಲ್ಲಿ ರಾಜ್ಯ ಕ್ರಾಂತಿಯ ದೊಂಬೆಯನ್ನು ಹೂಡಿದಳು. ಆ ತರುಣಿಯ ಹೆಸರು ಗಿದಾಲೊ ಎಂಬುದಾಗಿದೆ.

ಈ ವೀರ ತರುಣಿಯು ಗಾಂಧೀಜಿಯವರ ಮತ್ತು ಕಾಂಗ್ರೆಸ್ಸಿನ ಮಹತ್ಕಾರ್ಯ ಕೇಳಿ ಭಾವನಾವಶಳಾಗಿ ಇಂಗ್ಲಿಷರ ರಾಜ್ಯ ಲೋಪವಾಗುವುದೆಂದು ದೊಂಬೆಯನ್ನು ಹೂಡಿ ತನ್ನ ದೊಂಬೆಗೆ ಎಲ್ಲರೂ ನೆರವಾಗಬೇಕೆಂದು ಪ್ರಯತ್ನಿಸಿದಳು.

ಇವಳನ್ನು ಹಿಡಿದು ಸರಕಾರವು ದ್ವೀಪಾಂತರ ಶಿಕ್ಷೆಯನ್ನು ವಿಧಿಸಿತು. ಕಳೆದ ೬ ವರುಷಗಳಿಂದ ಆ ವೀರ ತರುಣಿಯು

ಆಸಾಮುದ ಯಾವುದಾದರೊಂದು ಕಾರಾಗೃಹದಲ್ಲಿ ಬಳಲುತ್ತಿರಬಹುದು. ಇಂಥ ಶೂರರ ಹೆಸರು ಕೂಡಾ ರಾಷ್ಟ್ರಕ್ಕೆ ಈ ವರೆಗೂ ಗೊತ್ತಾಗಿಲ್ಲ. ಭಾವನಾವಶಳಾಗಿ ಮಾಡಿದ ಇವಳ ಸಾಹಸವು ಪ್ರವಾಸದಲ್ಲಿ ಆಗಾಗ್ಗೆ ನನ್ನ ಸ್ಮರಣೆಗೆ ಬಂದು ಗಿದಲೊ ಇವಳ ನೆನಪಾಗುತ್ತಿತ್ತು. ಅವಳು ಈಗ ಜೈಲಿನಲ್ಲಿ ಯಾವ ದುಃಖವನ್ನನುಭವಿಸುತ್ತಿರುವಳೋ?

---

# ಗಾಂಧೀಜಿಯವರ ಉಪದೇಶ.

ವಂದೇಮಾತರಂ

ಜನಸೇವೆಯೇ — ದೇವರಸೇವೆ.



ದೇಹವೇ — ದೇವಾಲಯ.

ದುಷ್ಟ ಜನರು ತಮ್ಮ ರಾಕ್ಷಸೀ ಕೃತ್ಯದ ನಿಜಸ್ವರೂಪವು ಹೊರಗೆ ತೋರಬಾರದೆಂದು ನೈತಿಕ ಸಾಧನಗಳ ಮತ್ತು ಧರ್ಮಗ್ರಂಥದಲ್ಲಿಯ ವಚನಗಳ ಉಪಯೋಗವನ್ನು ಹೆಚ್ಚಾಗಿ ಮಾಡಿಕೊಳ್ಳುತ್ತಾರೆ.

—ಯಂಗ್ ಇಂಡಿಯಾ. ತಾ. ೬-೧೦-೨೦

"ಈಗ ಯುರೋಪಖಂಡವು ದೇವರ ಅಥವಾ ಕ್ರಿಸ್ತ ಮತದ ವಾಕ್ಯಗಳನ್ನು ಪಾಲಿಸದೆ ಸೈತಾನದ ಮಾತಿನಂತೆ ನಡೆಯುತ್ತಲಿದೆ. ಸೈತಾನನು ದೇವರ ವೇಷವನ್ನು ಹಾಕಿಕೊಂಡಾಗ ಆತನ ಕಾರ್ಯ ಬಹು ಚೆನ್ನಾಗಿ ಸಾಗುತ್ತದೆ. ಯುರೋಪವು ಹೆಸರಿಗೆ ಮಾತ್ರ ಕ್ರಿಸ್ತಮತದ್ದೆಂದು ಹೇಳುತ್ತದೆ. ಅದು ಈಗ ಧನವನ್ನೇ ದೇವರೆಂದು ತಿಳಿದಿದೆ."

—ಯಂಗ್ ಇಂಡಿಯಾ. ತಾ. ೮-೯-೨೦

—ಬೇಲಾಪುರ ಸಕ್ಕರೆ ಕಾರ್ಯಾಲಯದಲ್ಲಿಯ ೨೦೦೦ ಕೂಲಿಕಾರರು ಕಟ್ಟುಮಾಡಿದ್ದರು. ಇವರ ದಿನ ಕೂಲಿಯಲ್ಲಿ ಅರ್ಧ ಆಣೆ ಹೆಚ್ಚುಮಾಡಿ ಅನೇಕ ಅನುಕೂಲಪಡಿಸಿದ್ದರಿಂದ ಕಟ್ಟು ಮುಂದು ಕೆಲಸಕ್ಕೆ ಹೋದರು.

# ಸತ್ಯ ಮತ್ತು ಅಹಿಂಸೆಗಳ ವಿಮರ್ಶೆ.

(ಶ್ರೀ. ಭೋಪಟಕರರ ಭಾಷಣ.)

ಕೊಲ್ಹಾಪುರದಲ್ಲಿ ಕೂಡಿದ್ದ ಮಹಾರಾಷ್ಟ್ರ ಹಿಂದು ಧರ್ಮ ಪರಿಷತ್ತಿನಲ್ಲಿ ಮಹಾರಾಷ್ಟ್ರದ ಒಬ್ಬ ಪ್ರಮುಖ ಮುಂದಾಳುಗಳಾದ ಶ್ರೀ. ಲ. ಬ. ಭೋಪಟಕರರು ಶಸ್ತ್ರ ಪ್ರತಿಬಂಧದ ಶಾಸನವನ್ನು ತೆಗೆದುಹಾಕಲು ಒಂದು ಗೊತ್ತುವಳಿಯನ್ನು ತಂದರು. ಆಗ ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಮನುಷ್ಯ ಜಾತಿಯ ಎಲ್ಲ ಕಾರ್ಯಗಳೂ ಸತ್ಯ ಮತ್ತು ಅಹಿಂಸೆಯ ತತ್ವಗಳನ್ನು ಅನುಸರಿಸಿಯೇ ನಡೆಯಬೇಕಾಗಿದ್ದರೂ ಕೆಲವು ಪ್ರಸಂಗಗಳಲ್ಲಿ ಅಸತ್ಯ ಮತ್ತು ಹಿಂಸೆಗಳನ್ನು ಅನುಸರಿಸಲೇಬೇಕಾಗುತ್ತದೆ. ಸದ್ಗುಣಗಳ ಮತ್ತು ಸಜ್ಜನರ ಸಂರಕ್ಷಣೆಗಾಗಿ ದುರ್ಗುಣ ಮತ್ತು ದುರ್ಜನರ ಸಂಹಾರವು ಅವಶ್ಯಕವಾಗಿ ಪರಿಣಮಿಸುತ್ತದೆ. ಹಿಂದಕ್ಕೆ ರಾಜಾರಾಮ ಮಹಾರಾಜರು ವೇಷಾಂತರದಿಂದ ಬಂದುದನ್ನು ತಿಳಿದು ಖಾನನು ಸೈನ್ಯದೊಂದಿಗೆ ಬಂದನು. ಆಗ ಖಂಡೋಬಲ್ಲಾಳನು ಸತ್ಯವನ್ನು ಅನುಸರಿಸಿ ನಿಜಸ್ಥಿತಿಯನ್ನು ಹೇಳಿದ್ದರೆ ಘಾತವೇ ಆಗುತ್ತಿರಲಿಲ್ಲವೆ? ಆತನು ಆಗ ಅಸತ್ಯವನ್ನು ಆಶ್ರಯಿಸಿಯೇ ಮಹಾರಾಷ್ಟ್ರವನ್ನು ರಕ್ಷಿಸಿದನು. ಆತನು ಆಗ ಸತ್ಯವನ್ನು ಹೇಳಿದ್ದರೆ ಮಹಾರಾಷ್ಟ್ರದ ಚರಿತ್ರೆಯು ಹೇಗಿರುತ್ತಿದ್ದಿತು?

ನಾನು ಮನೆಯಲ್ಲಿ ಮಲಗಿದ್ದೇನೆ. ನನ್ನ ಕೊಲೆ ಮಾಡಲು ನನ್ನ ವೈರಿಯು ಬಂದಾಗ ನನ್ನ ಮಗನನ್ನು ಆತನು ವಿಚಾರಿಸಿದರೆ ಆತನು ಸತ್ಯ ಮತ್ತು ಅಹಿಂಸೆಯ ತತ್ವವನ್ನು ಅನುಸರಿಸಿ ನಿಜಸ್ಥಿತಿಯನ್ನು ಹೇಳಿದರೆ ಹೇಗಾಗಬಹುದು? ಆದಕಾರಣ ಅಸತ್ಯ ಮತ್ತು ಹಿಂಸೆ ಇವು ಕೆಲವು ಪ್ರಸಂಗಗಳಲ್ಲಿ ಸದ್ಗುಣಗಳೇ ಆಗಿವೆ.

## ಈಗಿನ ದೇಶ ಸ್ಥಿತಿ.

ಸತ್ಯ ಮತ್ತು ಅಹಿಂಸೆಗಳ ಅತಿರೇಕದಿಂದಲೇ ಈಗ ಹಿಂದುಸ್ಥಾನವು ನಾನಾ ದುಃಖಗಳಿಗೀಡಾಗಿದೆ. ಜಗತ್ತಿನಲ್ಲಿ ಮಹಾಯುದ್ಧದ ಮೋಡಗಳು ಕೂಡುತ್ತಲಿವೆ. ಈ ಸಮಯದಲ್ಲಿ ಹಿಂದುಸ್ಥಾನವು ಸ್ವಸಂರಕ್ಷಣೆಗಾಗಿ ತನ್ನಲ್ಲಿರುವ ಪ್ರತಿಕಾರ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಬೇಕು.

ಮಹಾರಾಷ್ಟ್ರೀಯರಲ್ಲಿ ಶಿವಾಜಿ ಮಹಾರಾಜರ ಶಿಕ್ಷಣವು ಬೇರೂರಿದೆ. ಮುಸಲ್ಮಾನರ ಮತ್ತು ಕ್ರಿಸ್ತರ ಸಹಾಯದ ವಿನಾ ನಮ್ಮದೇನೂ ನಡೆಯುವುದಿಲ್ಲವೆಂದು ಯಾರು ತಿಳಿದಿದ್ದಾರೆಯೋ ಅವರ ಅಂತಃಕರಣ ಮೃತಪಟ್ಟಿದೆಯೆಂದೇ ತಿಳಿಯಬೇಕು. ನನಗೇನೂ ಹಾಗೆ ತೋರುವುದಿಲ್ಲ. ನನ್ನ ಚರಿತ್ರೆಯು ಹಾಗೆ ನನಗೆ ಹೇಳುವುದಿಲ್ಲ. ನನ್ನ ಮಹಾರಾಷ್ಟ್ರ ಪ್ರಭುತ್ವದ ಇತಿಹಾಸವು ಮತ್ತು ಅದರ ಅವಶೇಷವಾದ ಈ ಕೊಲ್ಹಾಪುರ ಸಂಸ್ಥಾನವು ಎಲ್ಲಿಯ ವರೆಗೂ ಇವೆಯೋ ಅಲ್ಲಿಯ ವರೆಗೆ ಮಹಾರಾಷ್ಟ್ರದ ದೇಹ ಪರತಂತ್ರವಿದ್ದರೂ ಅದರ ಅಂತಃಕರಣ ಸ್ವಾತಂತ್ರ್ಯಯುಕ್ತವಾದುದಾಗಿಯೇ ಇರುವುದು.

ಶಿವಾಜಿ ಮಹಾರಾಜರು ಯಾವಾಗಲೂ ಸತ್ಯ ಮತ್ತು ಅಹಿಂಸೆಗಳನ್ನೇ ಅನುಸರಿಸಿದರೆ? ಸತ್ಯ ಮತ್ತು ಅಹಿಂಸೆಗಳಿಂದಲೇ ರಾಜ್ಯವನ್ನು ಸಂಪಾದಿಸಿ ಸಂರಕ್ಷಿಸಲಾಗುವುದೆ? ದುರ್ದೈವದಿಂದ ಪ್ರಸಂಗವು ಆಗ ವಿಪರೀತವಾಗದೆ ಇದ್ದಿದ್ದರೆ ಸಾತಾರಾ ಮತ್ತು ಕೊಲ್ಹಾಪುರಗಳ ಛತ್ರಪತಿಗಳು ಈಗ ದಿಲ್ಲಿ ಸಿಂಹಾಸನದಲ್ಲಿ ಶೋಭಿ

ಸುತ್ತಿದ್ದರು. ನಾವು ಸ್ವರಾಜ್ಯವನ್ನು ಸಂಪಾದಿಸಿ ಅದನ್ನು ಸಂರಕ್ಷಿಸಬೇಕಾಗಿದೆ. ಆದುದರಿಂದ ಶಸ್ತ್ರನಿರ್ಬಂಧದ ಈಗಿನ ಶಾಸನವು ನಿವಾರಣೆಯಾಗಲೇಬೇಕಾದುದು ಅತ್ಯಗತ್ಯವಾಗಿದೆ."

---

## ಧರ್ಮದಲ್ಲಿ ಜಾತಿಭೇದದ ವಿಷ.

### ರಾ| ಬ| ಪವಾರ ಇವರ ಮಹತ್ವದ ಭಾಷಣ.

ಕೊಲ್ಲಾಪುರದಲ್ಲಿ ಕೂಡಿದ್ದ ಮಹಾರಾಷ್ಟ್ರ ಹಿಂದು ಧರ್ಮ ಪರಿಷತ್ತಿನಲ್ಲಿ ಸ್ವಾಗತಾಧ್ಯಕ್ಷರಾದ ರಾ| ಬ| ಪವಾರ ಇವರು ಹಿಂದು ಧರ್ಮದಲ್ಲಿರುವ ಜಾತಿಭೇದವನ್ನು ನಿವಾರಣೆ ಮಾಡುವ ಒಂದು ಗೊತ್ತುವಳಿಯನ್ನು ತಂದರು. ಆಗ ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಈಗ ನಮ್ಮ ಮುಂದಿರತಕ್ಕ ಹಿಂದು ಧರ್ಮವು ನಿಜವಾದ ಹಿಂದು ಧರ್ಮವಲ್ಲ. ಇದು ಧರ್ಮತತ್ವಕ್ಕೆ ವಿರೋಧವಾದ ರೀತಿಯಲ್ಲಿದೆ. ವೇದಕಾಲದ ಧರ್ಮದಲ್ಲಿ ಜಾತಿಭೇದವಿರಲಿಲ್ಲ. ಅನಂತರ ಪೌರಾಣಿಕ ಕಾಲದ ಧರ್ಮದಲ್ಲಿ ಜಾತಿಭೇದವೆಂಬ ವಿಷವನ್ನು ಕೂಡಿಸಿದರು. "ಚಾತುರ್ವರ್ಣ್ಯಂ ಮಯಾಸೃಷ್ಟಂ" ಎಂಬ ಶ್ರೀ. ಭಗವಾನ್ ಕೃಷ್ಣನ ವಚನದ ಕಡೆಗೆ ಬೆರಳುಮಾಡಿ ಚತುರ್ವರ್ಣಗಳು ಪರಮಾತ್ಮನಿಂದ ಉಂಟಾಗಿವೆಯೆಂದು ಹೇಳುತ್ತಾರೆ. ಆ ವಾಕ್ಯದಲ್ಲಿರುವ 'ಮಯಾ' ಎಂಬ ಶಬ್ದವು ಪರಮಾತ್ಮನಿಗೆ ಸಂಬಂಧಿಸಿದ್ದಲ್ಲ. ಅದು ಜೀವನಿಗೆ ಸಂಬಂಧಿಸಿದ್ದೆಂದೇ ತಿಳಿಯಬೇಕು.

ಈ ಜಾತಿಭೇದವು ಲೋಭ ಮತ್ತು ಸ್ವಾರ್ಥಗಳಿಂದಲೇ ಉಂಟಾದುದು. ಒಂದು ಜಾತಿಯವರು ಸ್ವಾರ್ಥಕ್ಕಾಗಿ ಇನ್ನೊಂದು ಜಾತಿಯವರನ್ನು ಹೀನವಾಗಿ ಕಂಡದ್ದರಿಂದಲೇ ಈ ಜಾತಿಭೇದ ವುಂಟಾಯಿತು. ಈ ಜಾತಿಭೇದದಿಂದಲೇ ಹಿಂದು ಸಮಾಜವು ಶಿಥಿಲವಾಗಿದೆ. ಹಿಂದು ಸಮಾಜವು ಸಂಘಟಿತ ಮತ್ತು ಸಾಮರ್ಥ್ಯಯುಕ್ತವಾದುದಾಗಬೇಕಾಗಿದ್ದರೆ ಜಾತಿಭೇದ ಕೂಡಲೇ ನಿರ್ಮೂಲವಾಗಿ ನಾವೆಲ್ಲರೂ ಹಿಂದುಗಳು ಎಂಬ ಒಂದೇ ಒಂದು ಭಾವನೆ ಯುಂಟಾಗಬೇಕು."

---

## ಕ್ಷಾತ್ರ ಜಗದ್ಗುರುಗಳ ದಿವ್ಯ ಭಾಷಣ.

### ಧರ್ಮ ಧ್ಯೇಯ: ಸ್ವರಾಜ್ಯ ಸಾಧನ.

ಕೊಲ್ಲಾಪುರದಲ್ಲಿ ತಾ. ೧೮-೧೨-೩೭ ನೆಯ ದಿನ ಕೂಡಿದ ಮಹಾರಾಷ್ಟ್ರ ಹಿಂದು ಧರ್ಮಪರಿಷತ್ತಿನ ಉದ್ಘಾಟನದ ಕಾಲಕ್ಕೆ ಶ್ರೀ ಕ್ಷಾತ್ರ ಜಗದ್ಗುರುಗಳವರು ದಿವ್ಯತರವಾದ ಭಾಷಣವನ್ನು ಮಾಡಿದರು. ಅದರ ಮುಖ್ಯಾಂಶ ಹೀಗಿದ್ದಿತು—

### ಹಿಂದುಸ್ಥಾನದ ಧ್ಯೇಯ.

ಜೀವನ ಕಲಹದಲ್ಲಿ ಪ್ರಪಂಚದ ನಾನಾ ರಾಷ್ಟ್ರಗಳು ಈಗ ಹೋರಾಡುತ್ತಿದ್ದರೂ ಅವೆಲ್ಲವುಗಳ ಧ್ಯೇಯ ಒಂದೇ ರೀತಿಯಾಗಿಲ್ಲ. ತನ್ನ ಸಾಮ್ರಾಜ್ಯವನ್ನು ಆದಷ್ಟು ವಿಸ್ತಾರಗೊಳಿಸಬೇಕೆಂಬುದೇ ಇಂಗ್ಲೆಂಡಿನ ಧ್ಯೇಯವಾಗಿದೆ. ಜಗತ್ತಿನಲ್ಲಿರುವ ಸಂಪತ್ತನ್ನೆಲ್ಲಾ ತನ್ನ ಕಡೆಗೆ ಸೆಳೆದುಕೊಳ್ಳಬೇಕೆಂಬುದೇ ಅಮೇರಿಕೆಯ ಅಂತಿಮ ಧ್ಯೇಯವಾಗಿದೆ. ಶಕ್ಯವಿದ್ದಷ್ಟು ಹೆಚ್ಚು ಸೌಖ್ಯವನ್ನು ಅನುಭವಿಸಬೇಕೆಂಬುದೇ ಫ್ರೆಂಚ್ ಜನಗಳ ಮುಖ್ಯೋದ್ದೇಶ ಮಾದರಿಯ ಸಮಾಜವನ್ನು ರಚಿಸಬೇಕೆಂಬುದೇ ರಶಿಯಾ ದೇಶದ ಧ್ಯೇಯ ಈ ಪ್ರಕಾರ ನಮ್ಮ ಹಿಂದು ರಾಷ್ಟ್ರದ ಧ್ಯೇಯವಾದರೂ ಒಂದು ಇರಲೇಬೇಕಷ್ಟೆ. ಜಗತ್ತಿಗೆ ಧರ್ಮಜ್ಞಾನವನ್ನು ಬೋಧಿಸುವುದೇ ಹಿಂದುಸ್ಥಾನದ ಧ್ಯೇಯವಾಗಿದೆ.

ಈಗ ಜಗತ್ತಿನಲ್ಲಿ ನಾಲ್ಕು ಮುಖ್ಯ ಧರ್ಮಗಳಿವೆ. ಅವುಗಳಲ್ಲಿ ಒಂದು ಅತಿ ಪ್ರಾಚೀನವಾದುದು ಮತ್ತು ಆಧ್ಯಾತ್ಮಿಕ ದೃಷ್ಟಿಯಿಂದ ಶ್ರೇಷ್ಠವಾದುದು ಹಿಂದು ಧರ್ಮವು. ಇನ್ನೊಂದು ಸಂಖ್ಯಾಬಲದಿಂದ ಹೆಚ್ಚಿನದೂ ನೀತಿಪ್ರಾಧಾನ್ಯವಾದುದೂ ಬೌದ್ಧ ಧರ್ಮ. ಈ ಎರಡೂ ಧರ್ಮಗಳ ಮಾತೃಸ್ಥಾನವು ಈ ನಮ್ಮ ಹಿಂದುಸ್ಥಾನವೇ ಆಗಿದೆ.

ಅಂತೆಯೇ ಚೀನ, ಜಪಾನ, ಸೀಯಾಮ, ಬ್ರಹ್ಮದೇಶ ಈ ರಾಷ್ಟ್ರಗಳಲ್ಲಿಯ ಜನರು ಹಿಂದುಸ್ಥಾನವನ್ನು "ಧರ್ಮ ಜನನಿ" ಎಂದು ಕರೆಯುತ್ತಿದ್ದಾರೆ. ಈ ನಮ್ಮ ಭರತಖಂಡವು ಬೋಧಿಸಿದ ಧರ್ಮವನ್ನೇ ಜಗತ್ತಿನ ಜನಸಂಖ್ಯೆಯಲ್ಲಿ ಅರ್ಧಕ್ಕಿಂತ ಹೆಚ್ಚು ಜನರು ಅನುಸರಿಸುತ್ತಿದ್ದಾರೆ.

ಒಂದು ರಾಷ್ಟ್ರದ ಅದ್ವಿತೀಯ ಮುಂದಾಳು ಆ ರಾಷ್ಟ್ರದ ಅಂತಿಮಧ್ಯೇಯದ ಮೂರ್ತಿಯಾಗಿಯೇ ಇರುತ್ತಾನೆ. ಶಕಕರ್ತನಾದ ಶಿವಾಜಿ ಮಹಾರಾಜನು ಸ್ವ ಧರ್ಮ ಮತ್ತು ಸ್ವದೇಶಗಳಿಗಾಗಿ ಮಾಡಿದ ಅದ್ವಿತೀಯ ಪ್ರಯತ್ನವು ಜಗತ್ತಿನಲ್ಲಿ ಬೆಳಗಿದ ಒಂದು ಅದ್ಭುತ ದೈವಿಶಕ್ತಿಯ ಪ್ರಕಾಶವೆಂದೇ ಹೇಳಬೇಕು.

### ಧರ್ಮ ವೃಕ್ಷದ ಮೇಲಿನ ಬಂದರಕಿ.

ಹಿಂದು ಧರ್ಮವು ಅತ್ಯಂತ ಪ್ರಾಚೀವಾದುದಾಗಿರುವುದರಿಂದ ಈ ಧರ್ಮ ವೃಕ್ಷದ ಮೇಲೆ ರೂಢಿಯ ಅನೇಕ ಬಂದರಕಿ ಗಿಡಗಳು ಹುಟ್ಟಿವೆ. ಅದರಿಂದ ನಿಜವಾದ ಗಿಡವೇ ಯಾವುದೆಂಬುದು ಜನಸಾಮಾನ್ಯಕ್ಕೆ ತಿಳಿಯದಂತಾಗಿದೆ. ಅಂತೆಯೇ ಅಸಂಖ್ಯ ಅನರ್ಥಕರವಾದ ರೂಢಿಗಳಿಗೆಲ್ಲಾ ಸಾಮಾನ್ಯ ಜನರು ಧರ್ಮ, ಧರ್ಮ ಎಂದು ಹೇಳುತ್ತಿದ್ದಾರೆ ಆದುದರಿಂದ ನಿಜವಾದ ಧರ್ಮವು ಯಾವುದು? ಅದರ ಧ್ಯೇಯವೇನು? ಆ ಧ್ಯೇಯವನ್ನು ಸಾಧಿಸುವ ಸಾಧನವು ಯಾವುದು? ರೂಢಿಯಲ್ಲಿರತಕ್ಕ ಅನರ್ಥಕರವಾದ ಸಂಗತಿಗಳಾವುವು? ಅವುಗಳನ್ನು ಹೇಗೆ ನಿವಾರಣೆಮಾಡಬೇಕು? ಇವುಗಳನ್ನೆಲ್ಲಾ ಈ ಪರಿಷತ್ತು ಚೆನ್ನಾಗಿ ಯೋಚಿಸದೆ ಮುಕ್ತಾಯವಾದರೆ ಮದುಮಗನಿಲ್ಲದೆ ಮದುವೆಯನ್ನು ಮಾಡಿದಂತಾಗುವುದು.

### ಧರ್ಮವೆಂದರೇನು?

ಸಮಾಜದ ಉನ್ನತಿಗೂ ಆ ಸಮಾಜದ ವ್ಯಕ್ತಿಗಳ ಆತ್ಮವಿಕಾಸಕ್ಕೂ ಸಮಾಜವೇ ತನ್ನ ಮೇಲೆ ತಾನು ಹಾಕಿಕೊಂಡ ನಿರ್ಬಂಧಗಳ ಸಮೂಹಕ್ಕೆ ಧರ್ಮವೆಂದು ಹೇಳಬೇಕು. ಯಾವುದರಿಂದ ಸಮಾಜದ ಅಭ್ಯುದಯವು ಮತ್ತು ಸರ್ವ ಶ್ರೇಷ್ಠವಾದ ಸೌಖ್ಯ ಅಥವಾ ನಿಃಶ್ರೇಯವು ಲಭಿಸುತ್ತದೆಯೋ ಅದಕ್ಕೇನೇ ಧರ್ಮವೆಂದು ಹೇಳಬೇಕಾಗಿ ಕಣಾದ ಋಷಿಗಳು ವೈಶೇಷಿಕ ದರ್ಶನದಲ್ಲಿ ಹೇಳಿದ್ದಾರೆ.

### ಉಪನಿಷತ್ತುಗಳಲ್ಲಿ ಅಜ್ಞೇಯ ವಾದ.

ದೇವರು ನನಗೆ ಸಾಕ್ಷಾತ್ಕಾರನಾದನು, ಆತನು ನನ್ನ ಕಿವಿಯಲ್ಲಿ ಬಂದು ಹೀಗೆ ಬೋಧಮಾಡಿದನು, ಆತನ ಮಗನು ನಾನು, ಆತನ ದೂತನು ನಾನು, ಆತನು ಬೋಧಿಸಿದ ಧರ್ಮವನ್ನು ನಿಮಗೆ ನಾನು ಹೇಳುತ್ತೇನೆ, ಹೀಗೆಂದು ನಮ್ಮ ಋಷಿಮುನಿಗಳು ಹೇಳಿಲ್ಲ. ಅವರಿಗೆ ಯಾವುದು ಅನೇಕ ಕಾಲಗಳ ಅನುಭವದಿಂದ ಸತ್ಯವೂ ಗ್ರಾಹ್ಯವೂ ಆಗಿತೋರಿತೋ ಅದನ್ನೇ ಅವರು ಮುಚ್ಚುಮರೆಯಿಲ್ಲದೆ ಹೇಳಬಿಟ್ಟರು.

"ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾಸಹ" "ನ ತತ್ರ ಚಕ್ಷುರ್ಗಚ್ಛತಿ ನ ವಾಗ್ಗಚ್ಛತಿ" "ತೇನೋ ಮನೋ ನ ವಿಪ್ರೋ" ಮೊದಲಾದ ವಚನಗಳಿಂದ ದೇವರು ಅತೀಂದ್ರಿಯ ವಿಷಯನಾಗಿದ್ದಾನೆಂದು ಸ್ಪಷ್ಟವಾಗಿ ಹೇಳಿ ಅವರು ದೇವರ ಸಂಬಂಧವಾಗಿ ಅಜ್ಞೇಯ ವಾದವನ್ನೇ ಅನ.ಸರಿಸಿದ್ದಾರೆ. ವಿಶ್ವದಲ್ಲಿ ನಡೆದಿರುವ ಅನಂತ ಕಾರ್ಯಗಳ ಮೇಲಿಂದ ಅತ್ಯದ್ಭುತವಾದ ಒಂದು ದೈವಿಶಕ್ತಿಯಿದೆಯೆಂದೂ ಅದೇ ಮನುಷ್ಯನ ಹೃದಯದಲ್ಲಿಯೂ ಆತ್ಮರೂಪದಿಂದ ವಾಸವಾಗಿದೆಯೆಂದೂ ಅವರು ತಿಳಿಸಿದ್ದಾರೆ.

"ಗುಹ್ಯಂ ಬ್ರಹ್ಮತದಿದಂ ತೊ ಬ್ರವಿಮಿ | ನ ಮನುಷ್ಯಾತ್ ಶ್ರೇಷ್ಠತರ ಮಿಹ ಕಿಂಚಿತ್" ಈ ಜಗತ್ತಿನಲ್ಲಿ ಮಾನವಪ್ರೇಮ (Humanity) ಕ್ಕಿಂತ ಅಧಿಕ ಶ್ರೇಷ್ಠವಾದುದು ಬೇರೊಂದಿಲ್ಲವೆಂದೇ ಅವರು ಬೋಧಿಸಿದ್ದಾರೆ.

ಆತ್ಮನು ಪರಮಾತ್ಮನ ಅಂಶನಾಗಿರುವುದರಿಂದ ಬೀಜರೂಪದಲ್ಲಿರುವ ದೈವಿಗುಣಗಳನ್ನು ವಿಕಾಸಗೊಳಿಸಿಕೊಳ್ಳುವುದೇ ಮನುಷ್ಯ ಪ್ರಾಣಿಯ ಧ್ಯೇಯವಾಗಿದೆ. ಈ ಆತ್ಮ ವಿಕಾಸಕ್ಕೇನೇ ಆತ್ಮ ಪ್ರಾಪ್ತಿ (Self-realisation) ಎಂದು ಹೇಳಿದ್ದಾರೆ. ಮನುಷ್ಯನು ಪರಮಾತ್ಮ ಮತ್ತು ಪಶುಗಳ ಮಧ್ಯದ ಪ್ರಾಣಿಯು. ದಯೆ, ಕ್ಷಮೆ, ತ್ಯಾಗ, ಪರೋಪಕಾರ ಮೊದಲಾದ ದೈವಿಗುಣಗಳೂ ಆತನಲ್ಲಿವೆ. ಮತ್ತು ಕಾಮ, ಕ್ರೋಧ, ಲೋಭ ಮೊದಲಾದ ಪಶುಗುಣಗಳೂ ಇವೆ. ಪಾಶವಿವೃತ್ತಿಯನ್ನು ಕಳೆದು ದೈವಿಗುಣಗಳನ್ನು ಬೆಳೆಯಿಸಿಕೊಳ್ಳುವುದೇ ಧರ್ಮದ ಮುಖ್ಯ ಕಾರ್ಯವು

### ಮನುಷ್ಯನೊ? ಜಾಣ ಸೈತಾನನೊ?

ಕಳೆದ ಶತಮಾನದಲ್ಲಿ ಮನುಷ್ಯನು ಭೌತಿಕ ಶಾಸ್ತ್ರಗಳಲ್ಲಿ ಕಲ್ಪನಾತೀತವಾದ ಸುಧಾರಣೆಯನ್ನು ಮಾಡಿದ್ದಾನೆ. ಆದರೆ ಈ ವಿಜ್ಞಾನ ಶಾಸ್ತ್ರದೊಂದಿಗೆ ಧರ್ಮಜ್ಞಾನ ಮತ್ತು ನೈತಿಕ ಶಾಸ್ತ್ರಗಳ ಅಭಿವೃದ್ಧಿಯನ್ನು ಮಾಡಿಕೊಳ್ಳದೆ ಇದ್ದುದರಿಂದ ಈಗ ಭೌತಿಕ ಶಾಸ್ತ್ರವು ಮನುಷ್ಯನ ಸಂಹಾರಕ್ಕೋಸ್ಕರ ಉಪಯೋಗಿಸಲ್ಪಡುತ್ತಾ ಇದೆ. ಆದುದರಿಂದ ಮನುಷ್ಯನು ಈಗ ಜಾಣನಾದ ಸೈತಾನನಾಗಿದ್ದಾನೆ. ಈತನು ಇನ್ನುಮೇಲೆ ಜಾಣನಾದ ದೇವರಾಗಬೇಕಾಗಿದ್ದರೆ ನಿಜವಾದ ಧರ್ಮವನ್ನೇ ಆಶ್ರಯಿಸಬೇಕು.

### ಧರ್ಮವು ಅಫು ಆಗಿದೆಯೋ? ಔಷಧಿಯೊ?

ಧರ್ಮವು ಸ್ಮೃತಿಯನ್ನು ತಪ್ಪಿಸತಕ್ಕ ಒಂದು ಅಫು ಆಗಿದೆಯೆಂದು ಕೆಲವರು ಹೇಳುತ್ತಿದ್ದಾರೆ. ಕಾರ್ಲಮಾರ್ಕ್ಸನಿಂದ ಈ ವಾಕ್ಯವನ್ನು ಕದ್ದುಕೊಂಡಿದ್ದಾರೆ. ಕಾರ್ಲಮಾರ್ಕ್ಸನ ವಿಕೃತ ಧರ್ಮವು ಸ್ಮೃತಿಯನ್ನು ತಪ್ಪಿಸುವ ಅಫು ಆಗಿದ್ದರೂ ಆಗಿರಬಹುದು. ಜಡವಾದದ ಅಜೀರ್ಣದಿಂದ ಒಂದು ರಾಷ್ಟ್ರಕ್ಕೆ ಸ್ವಾರ್ಥಂಧತೆಯ ಮತ್ತು ಸೈತಾನಿವೃತ್ತಿಯ ಜುಲಾಬುಹತ್ತಿದ್ದರೆ ಅದನ್ನು ನಿಲ್ಲಿಸಲು ಧರ್ಮವೆಂಬ ಅಫು ಬೇಕಾಗಿಲ್ಲವೆ? ಅದೇ ಇದಕ್ಕೆ ರಾಮಬಾಣದಂತಹ ಔಷಧಿಯು.

ಸಮಾಜೋನ್ನತಿ ಮತ್ತು ಆತ್ಮವಿಕಾಸ ಇವೇ ಧರ್ಮದ ಧ್ಯೇಯವಾಗಿವೆ. ಇವುಗಳನ್ನು ಹೊಂದಲು ಜ್ಞಾನವೊಂದೇ ಆಗಲಿ ಅಥವಾ ಭಕ್ತಿಯೊಂದೇ ಆಗಲಿ ಸಾಲದು. ಜ್ಞಾನ ಮತ್ತು ಭಕ್ತಿಯುಕ್ತ ಕರ್ಮಯೋಗವೇ ಅಗತ್ಯವಾದುದು. ಭಗವದ್ಗೀತೆಯಲ್ಲಿ ಇದನ್ನೇ ಹೇಳಿದೆ. ಇದೇ ತತ್ವವನ್ನು ವ್ಯಾವಹಾರಿಕವಾಗಿ ಹೇಳಬೇಕೆಂದರೆ ಮಾನವಪ್ರೇಮವೇ ಉಬ್ಬಿ ನಿರಂತರ ಜನಹಿತಕಾರ್ಯದಲ್ಲಿ ರೂಪಾಂತರ ಹೊಂದುವುದೇ ಧರ್ಮದ ಧ್ಯೇಯವನ್ನು ಸಾಧಿಸುವ ರೀತಿಯು.

ಮನುಷ್ಯನಲ್ಲಿರುವ ಆತ್ಮವು ಪರಮಾತ್ಮನ ಅಂಶವು. ಎಂದ ಮೇಲೆ ಪ್ರತಿಯೊಬ್ಬ ಮನುಷ್ಯನೂ ಪರಸ್ಪರ ಬಂಧುವಾಗಿದ್ದಾನೆ. ಈ ಬಂಧುಭಾವವನ್ನರಿತು ಪ್ರತಿಯೊಬ್ಬನೂ ಅನ್ಯರ ಹಿತಕ್ಕಾಗಿ ಪ್ರಯತ್ನಿಸಬೇಕೆಂದೇ ಹಿಂದು ಧರ್ಮವು ಬೋಧಿಸುತ್ತದೆ. ಇದೇ ಹಿಂದು ಧರ್ಮದ ನೀತಿಯು. ಇದನ್ನೇ ವ್ಯಾಸ ಋಷಿಗಳು ಒಂದೇ ವಾಕ್ಯದಲ್ಲಿ ಹೀಗೆ ಹೇಳಿದ್ದಾರೆ— "ಪರೋಪಕಾರಃ ಪುಣ್ಯಾಯ | ಪಾಪಾಯ ಪರ ಪೀಡನಂ" ಪರೋಪಕಾರವೇ ಪುಣ್ಯ. ಪರ ಪೀಡೆಯೇ ಪಾಪ. ಸ್ವರ್ಗವೆಂದರೆ ಹಗಲಿರುಳೂ ರಂಭಾದಿ ಸ್ತ್ರೀಯರ ನಾಟ್ಯ ನಡೆದಿರುವ ಒಂದು ಭವ್ಯ ನಾಟಕ ಶಾಲೆಯೆಂದೇನೂ ಹಿಂದು ಧರ್ಮವು ಹೇಳುವುದಿಲ್ಲ.

ಮೋಕ್ಷಸ್ಯ ನಹಿ ವಾಸೋಽಸ್ತಿ ನ ಗ್ರಾಮಾಂತರ ಮೇವವಾ||
ಅಜ್ಞಾನ ಹೃದಯ ಗ್ರಂಥೀ ನಾಶೀ ಮೋಕ್ಷ ಇತಿಸ್ಮೃತಃ||

ಅಜ್ಞಾನ ನಿವಾರಣೆಯೇ ಮೋಕ್ಷವೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಧರ್ಮವೆಂಬುದೇನೋ ಒಂದು ಪ್ರತ್ಯೇಕವಾದ ಶಾಖೆಯಲ್ಲ. ಸ್ನಾನ ಮಾಡಿದಾಗ ದೇವರ ಮನೆಯಲ್ಲಿ ಮಾತ್ರ ಆ ಶಾಖೆಯ ಗಂಟನ್ನು ಬಿಚ್ಚಿ ಅಲ್ಲಿ ಓದಿ ಬರೆದು ಬಂದುಬಿಟ್ಟರೆ ಧರ್ಮದ ಕೆಲಸ ಮುಗಿಯಿತೆಂದು ತಿಳಿಯಬಾರದು. ಅಷ್ಟು ಮಾಡಿ ಬಂದನಂತರ ನಾವು ವ್ಯವಹಾರದಲ್ಲಿ ಹೇಗೆ ನಡೆದರೇನೆಂದು ಅನೇಕರು ತಿಳಿದಿದ್ದಾರೆ. ಇದು ಶುದ್ಧ ತಪ್ಪು. ನಮ್ಮ ಪ್ರತಿನಿಮಿಷದ ವ್ಯವಹಾರಕ್ಕೂ ಧರ್ಮವು ಅಂಟಿಕೊಂಡೇ ಇದೆ. ಅನ್ನವನ್ನೂ ಅದರ ರುಚಿಯನ್ನೂ ಹೇಗೆ ಬೇರೆ ಮಾಡಲಿಕ್ಕೆ ಬರುವುದಿಲ್ಲವೋ ಹಾಗೆಯೇ ಧರ್ಮ ಮತ್ತು ವ್ಯವಹಾರಗಳನ್ನು ಬೇರೆ ಮಾಡಲು ಬರುವುದಿಲ್ಲ. ನಮ್ಮಲ್ಲಿರುವ ದೈವಿ ಗುಣಗಳು ವಿಕಾಸಹೊಂದಿ ಸಮಾಜೋನ್ನತಿಗೆ ಸಾಧನವಾಗುವಂತೆ ಅವು ಪ್ರತಿಯೊಂದು ವ್ಯವಹಾರದಲ್ಲಿಯೂ ಉಪಯೋಗಿಸಲ್ಪಡುತ್ತಿರುವುದೇ ಧರ್ಮಾಚರಣೆಯು.

### ಹಿಂದು ಸಂಘಟನೆ.

ಭಿನ್ನವಿಚ್ಛಿನ್ನವಾಗಿರತಕ್ಕ ಹಿಂದು ಸಮಾಜದಲ್ಲಿ ಅದು ಉನ್ನತಿಯಾಗಬೇಕಾದರೆ ಸಂಘಟನೆಯು ಅತ್ಯಗತ್ಯವಾಗಿದೆ. ಜನ್ಮವಿಶಿಷ್ಟ ಜಾತಿಭೇದವೇ ಹಿಂದು ಸಂಘಟನೆಗೆ ದೊಡ್ಡದಾದ ವಿಘ್ನವು. ಜಾತಿಭೇದವನ್ನಿಟ್ಟು ಹಿಂದು ಸಂಘಟನೆಯನ್ನು ಮಾಡುವುದೆಂದರೆ ಉಸುಕಿನ ಮೂರ್ತಿಯನ್ನು ಮಾಡುವಂತೆಯೇ ಹಾಸ್ಯಾಸ್ಪದವಾದುದು. ಆದಕಾರಣ ಜಾತಿಭೇದವನ್ನು ತೆಗೆದುಹಾಕುವುದು ಪ್ರತಿಯೊಬ್ಬ ಹಿಂದುವಿನ ಕರ್ತವ್ಯವು.

ಜಾತಿಭೇದವನ್ನು ನಿವಾರಣೆ ಮಾಡುವ ಕಾರ್ಯವು ಮೂರು ಅಂತಸ್ತುಗಳುಳ್ಳದ್ದಾಗಿದೆ. ಮೊದಲನೆಯದು ಪರಸ್ಪರ ಮುಟ್ಟುವಿಕೆ. ಎರಡನೆಯದು ಊಟೋಪಚಾರ. ಮೂರನೆಯದು ಶರೀರಸಂಬಂಧ. ಈಗ ಮೊದಲಿನ ಎರಡು ಕಾರ್ಯಗಳು ಪ್ರಾರಂಭವಾಗಿವೆ. ಮೂರನೆಯದು ಇನ್ನುಮೇಲೆ ನಡೆಯಬೇಕು. ಅಸ್ಪೃಶ್ಯತಾ ನಿವಾರಣೆಗೆ ವಿರೋಧಿಸುವ ಸನಾತನಿಗಳು ಇನ್ನೂ ಅನೇಕರಿದ್ದಾರೆ. ನೀನು ತಪ್ಪುಮಾಡದಿದ್ದರೆ ನಿಮ್ಮಪ್ಪ ಮಾಡಿರಬೇಕೆಂದು ಇಸೋಫನ ಕಥೆಯಲ್ಲಿ ಹೇಳಿರುವಂತೆಯೇ ಈ ಸನಾತನಿಗಳ ಮಾತಾಗಿದೆ.

ಹಿಂದು ಸಮಾಜದಲ್ಲಿಯ ಸ್ತ್ರೀಯರ ಉನ್ನತಿಯಾಗಬೇಕು. ಅವರಿಗೆ ಅನೇಕ ಸಾಮಾಜಿಕ ಪ್ರತಿಬಂಧಗಳಿವೆ. ಆತ್ಮ ವಿಕಾಸಕ್ಕೆ ಸ್ತ್ರೀಯರಿಗೂ ಸಂಪೂರ್ಣ ಸ್ವಾತಂತ್ರ್ಯವಿರಬೇಕು. ಅದಿಲ್ಲದಿದ್ದುದರಿಂದ ಹಿಂದು ಸಮಾಜಕ್ಕೆ ಅರ್ಧಾಂಗವಾಯುವಿನ ಬೇನೆ ಬಂದಂತಾಗಿದೆ.

### ಪ್ರಾರ್ಥನೆ.

ಸಮಾನೀವ ಆಕೂತಿಃ ಸಮಾನಾ ಹೃದಯಾ ನಿವಃ||
ಸಮಾನ ಮಸ್ತುಃವೊ ಮನೊ ಯಥಾ ವಃ ಸುಸಹಾಸತಿ||

ನೀವೆಲ್ಲರೂ ಒಂದೇ ಅಭಿಪ್ರಾಯದವರೂ ಒಂದೇ ವಿಧವಾದ ಮನಸ್ಸಿನವರೂ ನೀವೆಲ್ಲರೂ ಪರಸ್ಪರ ಸಹಕಾರಿಗಳೂ ಆಗಿ ನಿಮ್ಮ ಸಂಘವು ಬಲಶಾಲಿಯಾಗಲೆಂದು ಪ್ರಾರ್ಥಿಸಿ ಈ ಪರಿಷತ್ತು ಉದ್ಘಾಟಿಸಲ್ಪಟ್ಟಿತೆಂದು ನಾನು ಸಾರುತ್ತೇನೆ.

## ಧರ್ಮ ಪರಿಷತ್ತಿನ ಮಹತ್ವದ ಗೊತ್ತುವಳಿ.

ಕಳೆದ ೧೮-೧೯ ನೆಯ ತಾರೀಖುಗಳಲ್ಲಿ ಧರ್ಮವೀರ ಡಾ. ಮುಂಜೆಯವರ ಅಧ್ಯಕ್ಷತೆಯಲ್ಲಿ ಮಹಾರಾಷ್ಟ್ರ ಹಿಂದು ಧರ್ಮ ಪರಿಷತ್ತು ಕೊಲ್ಹಾಪುರದಲ್ಲಿ ಕೂಡಿದ್ದಿತಷ್ಟೆ. ಆ ಪರಿಷತ್ತಿನಲ್ಲಿ ಅನೇಕ ಮಹತ್ವದ ಗೊತ್ತುವಳಿಗಳಾದವು ಅವುಗಳಲ್ಲಿ ಮುಖ್ಯವಾದ ಕೆಲವು ಗೊತ್ತುವಳಿಗಳನ್ನು ಇಲ್ಲಿ ಕೊಟ್ಟದೆ—

### ಶಸ್ತ್ರ ಪ್ರತಿಬಂಧ ದೂರಾಗಬೇಕು.

(ಅ) ಇತ್ತೀಚಿಗೆ ಸತ್ಯ ಮತ್ತು ಅಹಿಂಸೆಗಳ ಪ್ರತಿಪಾದನೆ ಹೆಚ್ಚಾಗುತ್ತಲಿದೆ. ಪ್ರಾಚೀನ ಕಾಲದ ಕ್ಷತ್ರಿಯರಂತೆ ಯೋಗ್ಯ ಸ್ಥಳದಲ್ಲಿ ಯೋಗ್ಯಕಾಲಕ್ಕೆ ಶಸ್ತ್ರಗಳ ಉಪಯೋಗವಾದ ವಿನಾ ಅಹಿಂಸಾವ್ರತವನ್ನು ಆಚರಿಸುವುದು ಶಕ್ಯವಿಲ್ಲ. ಈ ದೃಷ್ಟಿಯಿಂದ ನೋಡಿದರೆ ಈಗ ಹಿಂದುಸ್ಥಾನದಲ್ಲಿರುವ ಶಸ್ತ್ರ ಪ್ರತಿಬಂಧದ ಶಾಸನದಂಥ ಆಧುನಿಕ ಅತ್ಯಾಚಾರವು ಬೇರೊಂದಿಲ್ಲ. ಶಸ್ತ್ರ ಹೀನ ಹಿಂದು ರಾಷ್ಟ್ರವೆಂದೇ ಇದರ ಪ್ರಸಿದ್ಧಿಯು ಜಗತ್ತಿನಲ್ಲಿರುವುದರಿಂದ ಬೇಕಾದವರು ಹಿಂದು ಹೆಣ್ಣುಮಕ್ಕಳ ಮತ್ತು ಹುಡುಗರ ಮೇಲೆ ಕೈ ಮಾಡಬಹುದೆಂಬ ತಿಳುವಳಿಕೆಯುಂಟಾಗಿದೆ. ಶಸ್ತ್ರವಿಲ್ಲದ್ದರಿಂದ ಹಿಂದುಗಳ ಆತ್ಮರಕ್ಷಣೆಯಾಗದೆ ಅನ್ಯರ ನ್ಯಾಯಬುದ್ಧಿಯು ಕೂಡಾ ಶಿಥಿಲವಾಗಲಾರಂಭಿಸಿದೆ. ಆದುದರಿಂದ ಧರ್ಮತತ್ವಜ್ಞಾನ, ಮತ್ತು ಮನುಷ್ಯತ್ವ ಈ ಮೂರು ದೃಷ್ಟಿಗಳಿಂದ ಈಗಿರುವ ಶಸ್ತ್ರ ಪ್ರತಿಬಂಧದ ಶಾಸನವು ನಿವಾರಣೆಯಾಗಬೇಕೆಂದು ಈ ಪರಿಷತ್ತು ಕೇಳಿಕೊಳ್ಳುತ್ತದೆ.

(ಬ) ಜನರಲ್ಲಿ ವೀರವೃತ್ತಿಯುಂಟಾಗಿ ರಾಷ್ಟ್ರವು ಸ್ವಸಂರಕ್ಷಣೆಗೆ ಸಮರ್ಥವಾಗುವುದಕ್ಕೋಸ್ಕರ ಪ್ರಾಂತಿಕ ಮತ್ತು ಮಧ್ಯವರ್ತಿ ಸರಕಾರಗಳೂ, ದೇಶಿ ಸಂಸ್ಥಾನಗಳೂ, ಸೈನ್ಯ ಶಿಕ್ಷಣಕ್ಕಾಗಿ ಅಲ್ಲಲ್ಲಿ ಸೈನ್ಯ ಶಿಕ್ಷಣಾಲಯಗಳನ್ನು ಸ್ಥಾಪಿಸಬೇಕೆಂದೂ ಜನರು ಅಲ್ಲಲ್ಲಿ ಗನ್ ಮತ್ತು ರಾಯಫಲ್ ಕ್ಲಬ್ ಸ್ಥಾಪಿಸಬೇಕೆಂದೂ ಈ ಪರಿಷತ್ತಿನ ಅಭಿಪ್ರಾಯವು.

### ಜಾತಿಭೇದ ದೂರಾಗಬೇಕು.

(ಅ) ಈಗಿನ ಹಿಂದು ಸಮಾಜವು ಜಾತಿಬದ್ಧವಾದದ್ದಾಗಿದೆ ಜಾತಿ ಮತ್ತು ಜನ್ಮ ಇವುಗಳ ಮೇಲೆಯೇ ಹಿಂದು ಸಮಾಜವು ಏರ್ಪಟ್ಟಿದೆ. ಜನ್ಮ ವಿಶಿಷ್ಟ ಮೇಲು ಕೀಳು ಮತ್ತು ಅಸ್ಪೃಶ್ಯತೆ ಈ ದೋಷಗಳು ಹಿಂದು ಸಮಾಜದ ಎಲ್ಲೆಡೆಯಲ್ಲಿಯೂ ಇವೆ. ಈ ತ್ರಿದೋಷಗಳಿಂದ ಹಿಂದು ಸಮಾಜ ದುರ್ಬಲ, ಅಸಂಘಟಿತ ಛಿನ್ನವಿಚ್ಛಿನ್ನವಾಗಿದೆ. ಆದುದರಿಂದ ಈ ಪರಿಷತ್ತು ಸಾರುವುದೇನೆಂದರೆ— ಹಿಂದು ಸಮಾಜದಲ್ಲಿಯ ಎಲ್ಲ ಜಾತಿಗಳೂ ಆಯಾಯ ಜಾತಿಗಳಲ್ಲಿಯ ಎಲ್ಲ ಸ್ತ್ರೀ ಪುರುಷರೂ ಧಾರ್ಮಿಕ ಮತ್ತು ಸಾಮಾಜಿಕ ದೃಷ್ಟಿಯಿಂದ ಸಮಾನ ಯೋಗ್ಯತೆಯವರೇ ಇದ್ದಾರೆ. ಎಂದರೆ ಜನ್ಮದಿಂದ ಯಾವ ಜಾತಿ ಅಥವಾ ವ್ಯಕ್ತಿ ಮೇಲು ಅಥವಾ ಕೀಳು ಸ್ಪೃಶ್ಯ ಅಥವಾ ಅಸ್ಪೃಶ್ಯ ಅಲ್ಲ. ಮನುಷ್ಯನ ಯೋಗ್ಯತೆಯು ಜನ್ಮದ ಮೇಲೆ ಅವಲಂಬಿಸಿರದೆ ಆತನ ವಿದ್ಯೆ, ಕರ್ತವ್ಯ, ಶೀಲ, ತ್ಯಾಗ ಮೊದಲಾದ ಗುಣಗಳ ಮೇಲೆಯೇ ಅವಲಂಬಿಸಿದೆಯೆಂದು ಈ ಪರಿಷತ್ತಿನ ದೃಢವಾದ ಅಭಿಪ್ರಾಯವು.

(ಬ) ಈಗಿನ ಜಾತಿಬದ್ಧ ಹಿಂದು ಸಮಾಜದಲ್ಲಿ ಅನೇಕ ಉಪಜಾತಿಗಳು ದೇಶ, ಆಚಾರ, ಆಹಾರ, ವ್ಯವಸಾಯ, ಕ್ರಾಂತಿ, ಉತ್ಕ್ರಾಂತಿ ಮೊದಲಾದ ನಾನಾ ಭೇದಗಳಿಂದ ಉಂಟಾದವುಗಳಾಗಿವೆ. ಈ ಉಪಜಾತಿಗಳನ್ನು ನಿರ್ಮೂಲ ಮಾಡುವುದಕ್ಕಾಗಿ ಪ್ರತಿಯೊಬ್ಬ ಹಿಂದು ಸ್ತ್ರೀ ಪುರುಷನು ತಾನು ಹಿಂದು ಸಮಾಜದ ಒಂದು ಘಟಕವಾಗಿದ್ದೇನೆಂದೇ ಮಾತ್ರ ತಿಳಿಯಬೇಕು. ಕೋರ್ಟು, ಕಚೇರಿ, ಶಾಲೆ, ಜನಸಂಗಣನೆ ಮತ್ತು ಇತರ ಪ್ರಸಂಗಗಳಲ್ಲಿ ಹಿಂದುಗಳು ತಮ್ಮ ಜಾತಿಯನ್ನು ಬರೆಸುವ ಪದ್ಧತಿಯುಂಟಷ್ಟೆ. ಇದನ್ನು ಬಿಟ್ಟುಬಿಡಬೇಕು. ತಮ್ಮ ಹೆಸರಿನ ಮುಂದೆ ಬ್ರಾಹ್ಮಣ, ಮರಾಠಾ ಅಕ್ಕಸಾಲಿಗ ಮಾದಿಗ ಮೊದಲಾದ ಜಾತಿಯ ಹೆಸರನ್ನು ಬರೆಯದೆ ಧರ್ಮ "ಹಿಂದು" ಎಂಬುದೊಂದನ್ನೇ ಬರೆಯಬೇಕು. ಜಾತಿವಿಶಿಷ್ಟ ಅಡ್ಡ ಹೆಸರನ್ನು ಬರೆಯಬಾರದು.

### ಅಸ್ಪೃಶ್ಯತೆಯು ದೂರಾಗಬೇಕು.

(೧) ಬೃಹನ್ಮಹಾರಾಷ್ಟ್ರದಲ್ಲಿಯ ಎಲ್ಲ ಬ್ರಿಟಿಶ್ ಸರಕಾರ ಸಂಸ್ಥಾನಿಕ, ಜಹಾಗಿರದಾರ ಸ್ಥಾನಿಕ ಸ್ವರಾಜ್ಯ ಸಂಸ್ಥೆ ಇವುಗಳಿಗೆಲ್ಲ ಈ ಪರಿಷತ್ತು ಪ್ರಾರ್ಥಿಸಿಕೊಳ್ಳುವುದೇನೆಂದರೆ— (ಅ) ಸರಕಾರಿ ನೌಕರಿಯಲ್ಲಿ ಸೇರಿಸಿಕೊಳ್ಳುವಾಗ ಶಿಕ್ಷಕ, ಕಾರಕೂನ, ಮೊದಲಾದ ನೌಕರಿಗಳಲ್ಲಿ ಆದಿ ಹಿಂದುಗಳ ಉನ್ನತಿಗಾಗಿ ನೂರಕ್ಕೆ ೨೫ ರಂತೆ ಸ್ಥಳಗಳನ್ನು ಅವರಿಗೆ ಕೊಡಬೇಕು. (ಬ) ಫಲಾಹಾರ, ಭೋಜನ, ಸೋಡಾವಾಟರ್, ಕೂದಲು ಕತ್ತರಿಸುವ, ಬಟ್ಟೆ ತೊಳೆಯುವ, ಅಂಗಡಿಗಳಲ್ಲಿ ಪ್ರವೇಶಿಸಲು ಆದಿ ಹಿಂದುಗಳಿಗೆ ಪ್ರತಿಬಂಧವಿರಕೂಡದು. ಪ್ರತಿಬಂಧಗೊಳಿಸುವವರಿಗೆ ವ್ಯಾಪಾರಕ್ಕೆ ಅಪ್ಪಣೆಯನ್ನು ಕೊಡಕೂಡದು.

(೨) ಬ್ರಿಟಿಶ್ ಸರಕಾರ, ಸಂಸ್ಥಾನಿಕ, ಸ್ಥಾನಿಕ ಸ್ವರಾಜ್ಯ ಸಂಸ್ಥೆ ಮತ್ತು ಮುಂದಾಳುಗಳಿಗೆ ಈ ಪರಿಷತ್ತು ಆಗ್ರಹದಿಂದ ವಿಜ್ಞಾಪಿಸಿಕೊಳ್ಳುವುದೇನೆಂದರೆ— ಸ್ಪೃಶ್ಯ ಹಿಂದುಗಳ ನೆರೆಯಲ್ಲಿಯೇ ಆದಿ ಹಿಂದುಗಳಿಗೂ ವಾಸವಾಗಿರಲು ಅನುಕೂಲವಾಗುವಂತೆ ವ್ಯವಸ್ಥೆಮಾಡಿಕೊಡಬೇಕು. ಹೀಗಾದರೆ ಅಸ್ಪೃಶ್ಯತೆಯು ಜಾಗ್ರತೆ ನಿವಾರಣೆಯಾಗುವುದೆಂದು ಈ ಪರಿಷತ್ತಿನ ಅಭಿಪ್ರಾಯವಾಗಿದೆ.

(೩) ಅಖಿಲ ಹಿಂದುಗಳ ಸರ್ವದೇವಾಲಯ, ಜಲಾಶಯ, ಧರ್ಮಶಾಲೆ, ಸ್ಮಶಾನ ಪವಿತ್ರ ಸ್ಥಳ ಮೊದಲಾದವುಗಳಲ್ಲಿ ಆದಿ ಹಿಂದುಗಳು ಪ್ರವೇಶಿಸಲು ಅನುಕೂಲವಾಗುವಂತೆ ಸಂಸ್ಥಾನಿಕರೂ ಬ್ರಿಟಿಶ್ ಸರಕಾರದವರೂ ಶಾಸನದಿಂದಲೇ ಒಪ್ಪಿಗೆಯನ್ನು ಕೊಡಬೇಕು. ಇಂಥ ಶಾಸನವಿದ್ದರೂ ಎಲ್ಲಿ ಸ್ಪೃಶ್ಯ ಹಿಂದುಗಳು ಅಸ್ಪೃಶ್ಯರಿಗೆ ತೊಂದರೆಪಡಿಸುತ್ತಿದ್ದಾರೆಯೋ ಅಲ್ಲಿ ಆ ತೊಂದರೆಯನ್ನು ಕೂಡಲೆ ನಿವಾರಣೆಮಾಡಬೇಕು.

### ಸಾಮುದಾಯಿಕ ಪ್ರಾರ್ಥನೆ.

ಹಿಂದು ಸಮಾಜದಲ್ಲಿ ಸಮಷ್ಟಿ ಧರ್ಮವುಂಟಾಗಬೇಕೆಂದೂ ಎಲ್ಲರ ದೇವರೂ ಒಬ್ಬನೇ ಆಗಿರುವುದರಿಂದ ಹಿಂದುಗಳಾದ ನಾವೆಲ್ಲರೂ ಆತನ ಮಕ್ಕಳಾಗಿದ್ದೇವೆಂದೂ ಅಂತೆಯೇ ನಮ್ಮೆಲ್ಲರಲ್ಲಿ ಬಂಧುತ್ವವು ವೃದ್ಧಿಯಾಗಬೇಕೆಂದೂ ಎಲ್ಲ ಹಿಂದುಗಳೂ ಸೇರಿ ಪ್ರತಿ ಏಕಾದಶಿ ದಿವಸ ಸಾಮೂಹಿಕವಾದ ಪ್ರಾರ್ಥನೆಯನ್ನು ಆಚರಣೆಯಲ್ಲಿ ತರಬೇಕು ಸ್ಥಾನಿಕ ಹಿಂದು ಮಹಾಸಭೆಯವರು ಈ ಸಂದರ್ಭವನ್ನು ಒದಗಿಸಿಕೊಡಬೇಕು.

### ಸಹಭೋಜನ ಮತ್ತು ಉತ್ಸವ.

ಹಿಂದು ಸಮಾಜದಲ್ಲಿ ಸಂಘಟನೆಯುಂಟಾಗಲು ಯುಗಾದಿ, ವಿಜಯ ದಶಮಿ, ಸಂಕ್ರಾಂತಿ ಮೊದಲಾದ ಹಬ್ಬಗಳನ್ನು ಸಾಮುದಾಯಿಕವಾಗಿ ಆಚರಿಸಬೇಕು. ಮಹಾಪುರುಷರ ಜಯಂತಿ ಅಥವಾ ಪುಣ್ಯ ತಿಥಿಯನ್ನು ಉತ್ಸವದೊಡನೆ ಸಾಮುದಾಯಿಕವಾಗಿ ನಡೆಯಿಸಿ ಆ ದಿನ ಸಹಭೋಜನ ನಡೆಯುವಂತೆಯೂ ಏರ್ಪಾಟು ಮಾಡಬೇಕು.

ಭಗವದ್ಗೀತೆಯು ಎಲ್ಲ ಹಿಂದುಗಳ ತತ್ವಜ್ಞಾನ ಗ್ರಂಥವೆಂದು ತಿಳಿಯಬೇಕು.




ಶಾ. ಶ. ೧೮೫೯ ನೆಯ ಮಾರ್ಗಶಿರ ಬ|| ೧೦ ಸೋಮವಾರ.

## ಹಿಂದುಸ್ಥಾನದಲ್ಲಿ ನೂತನ ಯುಗಾರಂಭ!

ಹಿಂದುಗಳು ಕೃತಯುಗಾದಿ ನಾಲ್ಕು ಯುಗಗಳನ್ನು ಕಲ್ಪಿಸಿ ಈಗ ಕಲಿಯುಗ ನಡೆದಿದೆಯೆಂದೂ, ಇದು ಮುಗಿದೊಡನೆ ಪುನಃ ಕೃತಯುಗ ಬರುವುದೆಂದೂ, ಆಗ ಜನಾಂಗಕ್ಕೆ ಎಲ್ಲ ಸುಖ ಸೌಲಭ್ಯಗಳುಂಟಾಗುವುವೆಂದೂ, ಹೇಳುವುದುಂಟಷ್ಟೆ. ಆ ಲೆಕ್ಕದಂತೆ ಕಲಿಯುಗವು ಮುಗಿದು ಕೃತಯುಗವು ಎಂದು ಬರುವುದೋ ಬರಲಿ. ನಮಗಂತೂ ಹಿಂದುಸ್ಥಾನದಲ್ಲಿ ಕಲಿಯುಗವು ಅಸ್ತವಾಗುತ್ತಾ ಕೃತಯುಗದ ಉಷಃಕಾಲವು ಕಳೆದ ೧೮ ನೆಯ ತಾರೀಖಿನಿಂದಲೇ ಪ್ರಾರಂಭವಾಯಿತೆಂದು ತೋರುತ್ತದೆ.

ಕಳೆದ ೧೮ ನೆಯ ತಾರೀಖಿನ ದಿವಸ ಕೊಲ್ಲಾಪುರದಲ್ಲಿ ಮಹಾರಾಷ್ಟ್ರ ಹಿಂದುಧರ್ಮ ಪರಿಷತ್ತು ಧರ್ಮವೀರ ಡಾ॰ ಮುಂಜೆಯವರ ಅಧ್ಯಕ್ಷತೆಯಲ್ಲಿ ಬಹು ಯಶಸ್ವಿಯಾಗಿ ಜರುಗಿದ ಸಂಗತಿಯನ್ನು ನಾವು ಇದೇ ಪತ್ರಿಕೆಯ ಬೇರೊಂದು ಕಡೆ ವಿವರವಾಗಿ ಕೊಟ್ಟಿದ್ದೇವೆ. ಅವುಗಳನ್ನು ಓದಿದ ನಿಷ್ಪಕ್ಷಪಾತಿಗಳಾದ ವಾಚಕರಿಗೆ ಈ ಧರ್ಮ ಪರಿಷತ್ತು ಹಿಂದುಸ್ಥಾನದಲ್ಲಿ ನೂತನ ಯುಗಾರಂಭವಾಯಿತೆಂಬ ಮಂಗಲ ವಾರ್ತೆಯನ್ನು ಗೊತ್ತುವಳಿಯ ಮೂಲಕ ಸಾರಿತೆಂದೇ ತೋರದಿರಲಾರದು. ಈ ಹಿಂದುಧರ್ಮ ಪರಿಷತ್ತಿನಲ್ಲಾದ ಹಿಂದು ಜಾತಿಭೇದ ನಿವಾರಣೆಯ ಭಾಷಣಗಳು ನೂತನ ಯುಗಾರಂಭದ ಆ ಪ್ರಭಾತ ಸಮಯದಲ್ಲಿ ಪಕ್ಷಿಗಳು ನುಡಿದ ಮಂಜುಳ ಧ್ವನಿಯಂತೆ ಸತ್ಯಪ್ರಿಯರಿಗೆ ಪರಿಣಮಿಸಿ ಅತ್ಯಂತ ಸಂತೋಷವನ್ನೂ ಉತ್ಸಾಹವನ್ನೂ ಉಂಟುಮಾಡದೆ ಇರಲಾರವು. ಹಿಂದು ಜಾತಿಯ ಚರಿತ್ರೆಯಲ್ಲಿಯೇ ಅತ್ಯಂತ ಮಹತ್ವದ್ದಾದ ಆ ಗೊತ್ತುವಳಿಯ ಮುಖ್ಯಾಭಿಪ್ರಾಯ ಹೀಗಿದೆ—

"ಹಿಂದು ಸಮಾಜವು ಈಗ ಜನ್ಮವಿಶಿಷ್ಟ ಜಾತಿಗಳಿಂದ ಕೂಡಿದ್ದಾಗಿದೆ. ಈ ಜಾತಿಗಳು ಜನ್ಮದಿಂದಲೇ ವ್ಯಕ್ತಿಯು ಮೇಲು ಕೀಳೆಂದು ಹೇಳುತ್ತವೆ. ಈ ಜಾತಿ ಮತ್ತು ಜನ್ಮವಿಶಿಷ್ಟ ಮೇಲು ಕೀಳುಗಳು ನಿವಾರಣೆಯಾಗಬೇಕು. ಜನ್ಮದಿಂದಲೇ ಯಾರೂ ಮೇಲಲ್ಲ. ಅಥವಾ ಕೀಳಲ್ಲ. ಹಿಂದು ಸಮಾಜದಲ್ಲಿ ಬ್ರಾಹ್ಮಣಾದಿ ವರ್ಣಗಳಾಗಲಿ ಉದ್ಯೋಗಾದಿಗಳಿಂದ ಬಂದ ಬೇರೆ ಹೆಸರುಗಳಾಗಲಿ ಜಾತಿಗಳಲ್ಲವಾದುದರಿಂದ ಯಾರೂ ಅವುಗಳನ್ನು ಹೇಳಿಕೊಳ್ಳದೆ ಎಲ್ಲರೂ ತಾವು "ಹಿಂದು" ಧರ್ಮದವರೆಂದೇ ಹೇಳಿಕೊಳ್ಳಬೇಕು."

ಈ ಪತ್ರಿಕೆಯ ೯ ನೆಯ ಪುಟದಲ್ಲಿ "ಜಾತಿ ಭೇದ ದೂರಾಗಬೇಕು" ಎಂಬುದರ ಕೆಳಗಿರುವ ಈ ಸಂಬಂಧವಾದ ಸಮಗ್ರ ಗೊತ್ತುವಳಿಯನ್ನು ಓದಿದರೆ ಅದು ಹಿಂದು ಜಾತಿಯ ಈ ವರೆಗಿನ ಚರಿತ್ರೆಯಲ್ಲಿಯೇ ಎಷ್ಟು ಮಹತ್ವವಾದುದೆಂಬುದು ವಾಚಕರಿಗೆ ಸ್ಪಷ್ಟ ಗೊತ್ತಾಗಬಹುದು. ಈ ಗೊತ್ತುವಳಿಯು ಲಾಹೋರದ "ಜಾತಪಾತ ತೋಡಕ" ಮಂಡಲದವರಂತೆ ಒಂದೇ ವಿಚಾರದ ಕೆಲವರು ಕೂಡಿ ಮಾಡಿದಂತಹದಲ್ಲ. ಅಥವಾ ಮುಸಲ್ಮಾನರ ಆಕ್ರಮಣದ ಇಕ್ಕಟ್ಟಿನ ಸ್ಥಳದಲ್ಲಾದುದಲ್ಲ. ಇಲ್ಲವೇ ಡಾ॰ ಆಂಬೇಡಕರರ ಅಧ್ಯಕ್ಷತೆಯಲ್ಲಿ ಆದುದೂ ಅಲ್ಲ. ಜನ್ಮದಿಂದ ನಾವು ಬ್ರಾಹ್ಮಣರೆಂದು ಹೇಳಿಕೊಳ್ಳುವ ಡಾ. ಮುಂಜೆಯವರ ಅಧ್ಯಕ್ಷತೆಯಲ್ಲಿ; ಗೋಬ್ರಾಹ್ಮಣ ಪರಿಪಾಲಕರೆಂದು ಬಿರುದನ್ನು ಧರಿಸಿದ್ದರೂ ವೇದೋಕ್ತ ಪಟ್ಟಾಭಿಷೇಕಕ್ಕು ಕೂಡಾ ಅನರ್ಹರೆಂದು ಕೆಲವರಿಂದ ತಿಳಿಯಲ್ಪಟ್ಟ ಶಿವಾಜಿ ಮಹಾರಾಜರ ವಂಶಜರ ರಾಜಧಾನಿಯಲ್ಲಿ; ಬೌದ್ಧಿಕ ಹೋರಾಟದಲ್ಲಿ ತನಗಿಂತ ಬಲ್ಲಿದರಿಲ್ಲವೆಂಬ ಹೆಮ್ಮೆಯುಳ್ಳ ಮಹಾರಾಷ್ಟ್ರದ ಕ್ರಮಬದ್ಧವಾದ ಸಾವಿರಾರು ವಿದ್ವಾಂಸರುಳ್ಳ ಹಿಂದು ಧಾರ್ಮಿಕ ಪರಿಷತ್ತಿನಲ್ಲಿ; ಈ ಗೊತ್ತುವಳಿಯಾಗಿದೆಯೆಂಬುದನ್ನು ಲಕ್ಷ್ಯಕ್ಕೆ ತಂದರೆ ಇದು ಕಲಿಯುಗದ ಕತ್ತಲೆ ಹೋಗಿ, ಕೃತಯುಗದ ಬೆಳಕು ಬರುವ ಲಕ್ಷಣವೇ ಸರಿಯೆಂಬುದು ವಿಚಾರಪರರಿಗೆ ಹೊಳೆಯದೆ ಇರಲಾರದು.

### ಇದರಲ್ಲೇನಿದೆ ಮಹತ್ವ ?

ಈ ಗೊತ್ತುವಳಿಯಲ್ಲಿ ಅಂಥ ಮಹತ್ವವೇನಿದೆಯೆಂದು ಕೆಲವರು ಕೇಳಬಹುದು. ಹಿಂದು ಸಮಾಜದಲ್ಲಿ ಸಾವಿರಗಟ್ಟಲೆ ಜಾತಿ! ಇವೆಲ್ಲವೂ ಪರಸ್ಪರ ಮೇಲು ಕೀಳುಗಳನ್ನೇ ಹೇಳಿಕೊಳ್ಳುತ್ತಾ ಎಲ್ಲವೂ ಹೀನಾವಸ್ಥೆಗೀಡಾಗಿವೆ. ತಮ್ಮ ಜಾತಿ ದೇವರಿಂದ ಬಂದುದೆಂದೇ ಎಲ್ಲರೂ ಹೇಳುವುದು! ಆದಕಾರಣ ಜಾತಿಗಳೆಲ್ಲಾ ಇರಬೇಕೆಂದೇ ಹೇಳುವ ಜನಸಾಮಾನ್ಯರು ಅತ್ಯಧಿಕ. ಕೆಲವು ಪಂಡಿತರು ಹಿಂದುಗಳಲ್ಲಿ ಈಗಿರುವಷ್ಟು ಜಾತಿಗಳು ಬೇಡ; ಕೆಲವು ಮುಖ್ಯ ಮುಖ್ಯ ಜಾತಿಗಳಿದ್ದರೆ ಸಾಕು. ಉಪಜಾತಿಗಳನ್ನೆಲ್ಲಾ ತೆಗೆದುಹಾಕಬೇಕೆಂದು ಹೇಳುವರು. ಇವರಿಗಿಂತ ಸ್ವಲ್ಪ ಉದಾರ ವಿಚಾರಿಗಳು ಬ್ರಾಹ್ಮಣಾದಿ ನಾಲ್ಕು ವರ್ಣಗಳು ಮಾತ್ರ ಇದ್ದರೆ ಸಾಕು. ಇವು ಜನ್ಮವಿಶಿಷ್ಟವಾದವುಗಳು. ಈ ವರ್ಣಗಳೇ ಹಿಂದು ಧರ್ಮದ ಪ್ರಾಣ. ಎಂದು ಹೇಳುತ್ತಿದ್ದಾರೆ. ಇವರಿಗಿಂತ ತಾವು ಹೆಚ್ಚಾದ ವೇದಜ್ಞರೆಂದು ಹೆಮ್ಮೆಪಡುವ ಆರ್ಯ ಸಮಾಜದವರು ಬ್ರಾಹ್ಮಣಾದಿ ನಾಲ್ಕು ವರ್ಣಗಳೇನೋ ದೇವರಿಂದಲೇ ಉಂಟಾದವುಗಳಾದಕಾರಣ ಇವು ಇರಲೇಬೇಕು. ಆದರೆ ಇವು ಗುಣಕರ್ಮವಿಶಿಷ್ಟವಾದವುಗಳೇ ವಿನಾ ಜನ್ಮವಿಶಿಷ್ಟವಾದವುಗಳಲ್ಲ. ಎಂದು ವಾದಿಸುತ್ತಿದ್ದಾರೆ.

೩೫ ಕೋಟಿ ಜನಸಂಖ್ಯೆಯಿಂದಲೂ ಸಾವಿರಾರು ಜಾತಿಗಳಿಂದಲೂ ಕೂಡಿದ ಹಿಂದು ಸಮಾಜದಲ್ಲಿ ಗುಣಕರ್ಮಗಳಿಂದ ಬ್ರಾಹ್ಮಣಾದಿ ನಾಲ್ಕು ವರ್ಣಗಳನ್ನು ಪ್ರತಿಪಾದಿಸುವ ಸಮಾಜ ಅಥವಾ ಸಂಘವೇ ಬಹು ಉದಾರ ವಿಚಾರದ್ದೆಂದು ಈಗ ತಿಳಿಯುವ ರೂಢಿ! ರಾಜಕೀಯ ಸ್ವಾತಂತ್ರ್ಯಕ್ಕಾಗಿ ಎಷ್ಟೋ ಸಾರೆ ಕಾರಾಗೃಹದ ಎಂಥ ಭಯಂಕರ ಶಿಕ್ಷೆಯನ್ನನುಭವಿಸಿದ ಸ್ವಾತಂತ್ರ್ಯ

ವೀರರಾದ ಅನೇಕ ಹಿಂದುಗಳಿಗು ಕೂಡಾ ಹಿಂದು ಸಮಾಜದಲ್ಲಿಯ ಈ ಬ್ರಾಹ್ಮಣಾದಿ ವರ್ಣಗಳನ್ನು ತೆಗೆದುಹಾಕುವುದೆಂದರೆ ಕೇವಲ ಬ್ರಿಟಿಶ್ ಸಾಮ್ರಾಜ್ಯದಲ್ಲಿಯೇ ಅಲ್ಲ; ಬ್ರಿಟಿಶ್ ಮತ್ತು ಜಪಾನ ಸಾಮ್ರಾಜ್ಯಗಳಲ್ಲಿ ಸಿಕ್ಕಿಕೊಂಡಿರುವುದಕ್ಕಿಂತಲೂ ಹೆಚ್ಚಿನ ಅನರ್ಥಕರವಾದುದೆಂದೇ ತೋರುತ್ತದೆ! ಇಷ್ಟೇ ಅಲ್ಲ; ಇದು ಮಂಗಳ ಗ್ರಹದ ಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸುವುದಕ್ಕಿಂತ ಹೆಚ್ಚಿನ ಅಶಕ್ಯವಾದುದಾಗಿ ತೋರುತ್ತದೆ !! ಪುಣೆಯ ಸುಪ್ರಸಿದ್ಧ ಕೇಸರೀ ಪತ್ರಿಕೆಯು ಅಗ್ರಲೇಖದಲ್ಲಿ ಈ ವಿಚಾರವಾಗಿ ವ್ಯಕ್ತಗೊಳಿಸಿದ ಅಭಿಪ್ರಾಯವು ನಮ್ಮ ಮೇಲಣ ವಿವರಣೆಗೆ ಒಂದು ಮಾದರಿಯೆಂದೇ ಹೇಳಬಹುದು.

ಇಂತಹ ಕತ್ತಲೆಯ ಕಾಲದಲ್ಲಿ ಹಿಂದು ಧರ್ಮ ಪರಿಷತ್ತು ಮಾಡಿದ ಮೇಲಣ ಗೊತ್ತುವಳಿಯು ದಿವ್ಯ ಪ್ರಕಾಶವಾಗಿಲ್ಲವೆ? ಹಿಂದು ಸಮಾಜದಲ್ಲಿ ಈ ಜಾತಿಯ ಕೊಳೆಯು ಸಾವಿರಾರು ವರುಷಗಳಿಂದಲೂ ಕೂಡಿಕೊಳ್ಳುತ್ತಾ ಬಂದಿದೆ. ವರ್ಣದ ಅಹಂಕಾರವಂತೂ ಹತ್ತಾರುಸಾವಿರ ವರುಷಗಳಿಂದ ಬೇರೂರಿದೆ. ಹಿಂದುಗಳಲ್ಲಿಯ ವರ್ಣಗಳನ್ನು ತೆಗೆದುಹಾಕಬೇಕೆಂದು ಹೇಳಿದವರೆಲ್ಲ ಅವೈದಿಕರೂ, ನಾಸ್ತಿಕರೂ, ಶೂದ್ರರೂ ಎಂದು ಹೀಯಾಳಿಸಿಕೊಳ್ಳಬೇಕಾಯಿತು. ಹಿಂದು ಜಾತಿಯ ಬಹುಭಾಗವನ್ನು ಅನಿರ್ವಚನೀಯ ದುಃಖಗಳಿಗೀಡುಮಾಡಿದ ಈ ವರ್ಣ ಮತ್ತು ಜಾತಿಗಳು ಹೇಳ ಹೆಸರಿಲ್ಲದಂತಾಗಬೇಕೆಂದು ಕೊಲ್ಹಾಪುರದ ಈ ಹಿಂದು ಧರ್ಮ ಪರಿಷತ್ತು ಈಗ ಸಾರಿದ್ದನ್ನು ನೋಡಿದರೆ ವರ್ಣಯುಗವಾದ ಕಲಿಯು ಅಸ್ತವಾಗಿ ಅತಿವರ್ಣಿಯಾದ ಕೃತಯುಗವು ಉದಯವಾಗುವ ಕಾಲ ಬಂದಿತೆಂದು ಗೊತ್ತಾಗುವುದಿಲ್ಲವೆ? ಆರಂಭದಲ್ಲಿ ವರ್ಣಗಳೇ ಇರಲಿಲ್ಲವೆಂದು ಮಹಾಭಾರತದಲ್ಲಿ ಹೀಗೆ ಸ್ಪಷ್ಟವಾಗಿ ಹೇಳಿದೆ—

ಏಕವರ್ಣ ಮಿದಂ ಪೂರ್ವಂ ವಿಶ್ವಮಾಸೀದ್ ಯುಧಿಷ್ಠಿರ|
ಕರ್ಮಕ್ರಿಯಾ ವಿಭೇದೇನ ಚಾತುರ್ವರ್ಣ್ಯಂ ಪ್ರತಿಷ್ಠಿತಂ||
ವನಪರ್ವ. ಅ. ೧೮೦.

ಯುಧಿಷ್ಠಿರನೇ, ಪ್ರಾಚೀನ ಕಾಲದಲ್ಲಿ ಒಂದೇ ಒಂದು ವರ್ಣವಿತ್ತು. ಅನಂತರ ಗುಣಕರ್ಮಗಳಿಂದಲೇ ನಾಲ್ಕು ವರ್ಣಗಳಾದವು. ಎಂದು ಹೇಳಿರುವ ಮೇಲಣ ವಾಕ್ಯದಿಂದ ಮೊದಲು ವರ್ಣಗಳಿರಲಿಲ್ಲವೆಂದೇ ಸ್ಪಷ್ಟವಾಗುತ್ತದಷ್ಟೆ. ಅದೇ ಕಾಲವನ್ನು ಪುನಃ ಉಂಟುಮಾಡಲು ಬ್ರಾಹ್ಮಣಾದಿ ವರ್ಣಗಳನ್ನಾಗಲಿ, ಇನ್ನಾವ ಜಾತಿಗಳನ್ನಾಗಲಿ, ನೀವು ಇನ್ನುಮೇಲೆ ಹೇಳದೆ ಹಿಂದು ಎಂಬ ಒಂದೇ ಹೆಸರನ್ನು ಹೇಳಿರೆಂದು ಹಿಂದುಗಳಿಗೆ ಈ ಹಿಂದು ಧರ್ಮಪರಿಷತ್ತು ಸೂಚಿಸಿತಲ್ಲವೆ?

## ಯಾವುದು ನಿಜಸ್ವಾತಂತ್ರ್ಯ?

ಹಿಂದುಸ್ಥಾನಕ್ಕೆ ಈಗ ರಾಜಕೀಯ ಸ್ವಾತಂತ್ರ್ಯ ದೊರೆಯಬೇಕಾಗಿ ಪ್ರಚಂಡ ಪ್ರಯತ್ನ ನಡೆದಿದೆಯಷ್ಟೆ. ಇದು ದೊರೆತ ಮಾತ್ರದಿಂದ ಹಿಂದುಸ್ಥಾನಕ್ಕೆ ನಿಜವಾದ ಸ್ವಾತಂತ್ರ್ಯ ದೊರೆತಂತಾಗಲಿಲ್ಲ. ಕೆಲವು ಉಜ್ವಲ ರಾಷ್ಟ್ರಭಕ್ತರ ತಿಳುವಳಿಕೆಯಂತೆ ಇಂಗ್ಲಿಷರು ಈ ದೇಶವನ್ನು ಆಳುವ ಮುಂಚೆ ಎಂದರೆ ೧೫೦ ವರುಷಗಳ ಹಿಂದೆ ಈ ದೇಶಕ್ಕೆ ಸ್ವಾತಂತ್ರ್ಯವಿತ್ತಷ್ಟೆ. ಆದರೆ ಅದು ನಿಜವಾದ ಸ್ವಾತಂತ್ರ್ಯವೆ? ಬಹು ಸಂಖ್ಯಾಕರಾದ ಹಿಂದುಗಳನ್ನು ಸಾಮಾಜಿಕ ಗುಲಾಮಗಿರಿಯಲ್ಲಿಟ್ಟು ಅವರು ನಾನಾ ವಿಪತ್ತುಗಳನ್ನನುಭವಿಸುತ್ತಿದ್ದಾಗ ಇದ್ದ ರಾಜಕೀಯ ಸ್ವಾತಂತ್ರ್ಯವು ಕೆಲವರ ಸ್ವಾತಂತ್ರ್ಯವೇ ಆಗಿರಲಿಲ್ಲವೆ? ಕೆಲವು ಸ್ವಾತಂತ್ರ್ಯವೀರರು ಹೇಳುವಂತೆ ಮುಸಲ್ಮಾನರು ಈ ದೇಶಕ್ಕೆ ಬರುವ ಮುಂಚೆಯೂ ರಾಜಕೀಯ ಸ್ವಾತಂತ್ರ್ಯವಿತ್ತಷ್ಟೆ. ಆಗ ಈ ಹಿಂದು ಜನಸಾಮಾನ್ಯವು ಸಾಮಾಜಿಕ ದಾಸ್ಯತ್ವದಲ್ಲಿಯೇ ಬಳಲುತ್ತಿರಲಿಲ್ಲವೆ?

ಹಿಂದುಸ್ಥಾನಕ್ಕೆ ನಿಜವಾದ ಸ್ವಾತಂತ್ರ್ಯವು ಆರ್ಯರ ವರ್ಣಗಳು ಈ ದೇಶದಲ್ಲುಂಟಾಗದ ಮುಂಚೆಯೇ ಇದ್ದಿತು. ಅಂಥ ನಿಜವಾದ ಸ್ವಾತಂತ್ರ್ಯವೇ ಈ ದೇಶಕ್ಕೆ ಇನ್ನು ಮೇಲೆ ಬೇಕಾಗಿದೆಯೆಂದೇ ಕೊಲ್ಹಾಪುರದ ಹಿಂದುಧರ್ಮ ಪರಿಷತ್ತು ಸಾರಿದೆ. ಈಗ ಬೇಕಾಗಿರುವ ರಾಜಕೀಯ ಸ್ವಾತಂತ್ರ್ಯವು ದೊರೆತ ಮಾತ್ರದಿಂದಲೇ ಹಿಂದು ಜನಸಾಮಾನ್ಯದ ಸಾಮಾಜಿಕ ಗುಲಾಮಗಿರಿಯು ಹೋಗುವಂತಿಲ್ಲ. ಅದು ಹೋದ ವಿನಾ ಹಿಂದುಸ್ಥಾನಕ್ಕೆ ನಿಜವಾದ ಸ್ವಾತಂತ್ರ್ಯವಿಲ್ಲ. ಅಂತೆಯೇ ಕಳೆದ ೧೮ನೆಯ ತಾರೀಖು ಅಂಥ ಸ್ವಾತಂತ್ರ್ಯ ಸೂರ್ಯೋದಯದ ಸುಪ್ರಭಾತ ಸಮಯವೆಂದು ಹೇಳಲು ಅಡ್ಡಿಯಿಲ್ಲ. ಈಗಿನ ಪಾರತಂತ್ರ್ಯದ ಕತ್ತಲೆ ಜಾಗ್ರತೆ ನಿವಾರಣೆಯಾಗಿ ನಿಜ ಸ್ವಾತಂತ್ರ್ಯದ ಬೆಳಕು ಬರಲೆಂದೇ ಸ್ವಾತಂತ್ರ್ಯಪ್ರಿಯರು ಹಾರೈಸಲಿಕ್ಕಿಲ್ಲವೆ ?

---

## ಅಹಿಂಸೆಯಮೇಲೆ ಆಕ್ಷೇಪಣೆ.

ಕೊಲ್ಹಾಪುರದಲ್ಲಿ ಸೇರಿದ್ದ ಮಹಾರಾಷ್ಟ್ರ ಹಿಂದುಧರ್ಮ ಪರಿಷತ್ತಿನ ಅಧ್ಯಕ್ಷರಾದ ಧರ್ಮವೀರ ಮುಂಜೆಯವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿಯೂ ಶ್ರೀ. ಭೋಪಟಕರರು ಶಸ್ತ್ರ ಪ್ರತಿಬಂಧ ಶಾಸನ ನಿವಾರಣೆಯ ಗೊತ್ತುವಳಿಯನ್ನು ಕುರಿತು ಮಾಡಿದ ಭಾಷಣದಲ್ಲಿಯೂ ಅಹಿಂಸಾ ತತ್ವದಮೇಲೆ ಆಕ್ಷೇಪಣೆಮಾಡಿರುತ್ತಾರೆ. ಡಾ. ಮುಂಜೆಯವರು ಬೌದ್ಧ ಮತ ಪ್ರಸಾರದಿಂದ ನಮ್ಮಲ್ಲಿ ಅಹಿಂಸೆಯ ತತ್ವವು ಅತಿರೇಕವಾಗಿ ಮುಸಲ್ಮಾನರ ದಾಳಿಯನ್ನು ಎದುರಿಸಲಾಗಲಿಲ್ಲವೆಂದು ಹೇಳಿದ್ದಾರೆ. ಶ್ರೀ. ಭೋಪಟಕರರಾದರೋ ಈಗ ಕಾಂಗ್ರೆಸ್ ಪಕ್ಷವು ರಾಜಕಾರಣದಲ್ಲಿ ಅಹಿಂಸಾ ತತ್ವಪ್ರಸಾರ ಮಾಡುತ್ತಿದ್ದುದನ್ನೇ ಉದ್ದೇಶಿಸಿ ಆಕ್ಷೇಪಿಸಿದ್ದಾರೆ.

ಈ ಉಭಯ ಆಕ್ಷೇಪಣೆಗಳೂ ಯುಕ್ತವಾದವುಗಳೆಂದು ನಮಗೆ ತೋರುವುದಿಲ್ಲ. ಮುಸಲ್ಮಾನರು ಈ ದೇಶಕ್ಕೆ ದಂಡೆತ್ತಿ ಬರುವುದರೊಳಗಾಗಿಯೇ ವೈದಿಕ ಮತೀಯರು ಬೌದ್ಧಮತವನ್ನು ಈ ದೇಶದಿಂದ ಓಡಿಸಿಬಿಟ್ಟಿದ್ದರು. ಎಲ್ಲೆಲ್ಲಿಯೂ ವೈದಿಕರ ವರ್ಣಾಶ್ರಮ ಧರ್ಮವೇ ಪ್ರಸಾರವಾಗಿತ್ತು. ಸಂಪೂರ್ಣ ಬೌದ್ಧಮತವನ್ನೇ ಅನುಸರಿಸಿದ ಜಪಾನ ಚೀನ ದೇಶಗಳು ಶೂರ ರಾಷ್ಟ್ರಗಳಾಗಿದ್ದುದೇಕೆ? ಅಲ್ಪ ಸ್ವಲ್ಪ ಬೌದ್ಧರಿಂದ ಕೂಡಿದ್ದ ಹಿಂದುಸ್ಥಾನವು ನಿರ್ಬಲವಾದುದೇಕೆ? ಹಿಂದುಗಳಲ್ಲಿ ಅನೇಕ ಸಾವಿರ ವರುಷಗಳಿಂದ ರೂಢಿಯಲ್ಲಿದ್ದ ವರ್ಣಗಳ ವಿಷಮ ಪದ್ಧತಿಯೇ ಹಿಂದುಗಳು ನಿರ್ವೀರ್ಯರಾಗಲು ಮುಖ್ಯ ಕಾರಣವು.

ಕ್ಷತ್ರಿಯರ ವಿನಾ ಸಮಾಜದ ಮುಕ್ಕಾಲು ಪಾಲೆಲ್ಲಾ ಎಂದೂ ಕತ್ತಿಯನ್ನೇ ಕಂಡಿರಲಿಲ್ಲ. ಅನ್ಯರಿಗೆ ಅದು ಅಧರ್ಮವೇ ಆಗಿತ್ತು. ಸಮಾಜದ ಬಹು ಭಾಗವೆಲ್ಲಾ ಹೀಗೆ ನಿರ್ವೀರ್ಯವಾದಾಗ ಮತ್ತು ಕ್ಷತ್ರಿಯರು ತಮ್ಮ ತಮ್ಮಲ್ಲಿಯೇ ಹೊಡೆದಾಡಿ ಹಣ್ಣಾದಾಗ ಬಲಶಾಲಿಗಳಾದ ಮುಸಲ್ಮಾನರನ್ನು ಎದುರಿಸುವುದು ಹೇಗೆ ಶಕ್ಯ?

ಕಾಂಗ್ರೆಸ್ ಸರಕಾರದಲ್ಲಿ ಈಗ ಪೊಲಿಸ್, ದಂಡು, ಮೊದಲಾದವುಗಳು ಉಪಯೋಗಿಸಲ್ಪಡುತ್ತಲಿವೆಯಷ್ಟೆ. ಆದುದರಿಂದ ಅತ್ಯಾಚಾರಗಳನ್ನು ನಿಲ್ಲಿಸಲು ಅಗತ್ಯ ತೋರಿದಾಗ ಗುಂಡು ಹಾರಿಸದೆ ಅದು ಬಿಡುವುದೇ ಇಲ್ಲ. ಸೈನ್ಯ ಶಿಕ್ಷಣವು ಜನಾಂಗಕ್ಕೆ ಅನಾವಶ್ಯಕವೆಂದು ಕಾಂಗ್ರೆಸ್ ಪಕ್ಷವು ಎಲ್ಲಿಯೂ ಹೇಳಿಲ್ಲ. ಆದುದರಿಂದ ಈ ವಿಧವಾದ ಆಕ್ಷೇಪಣೆ ಅನುಚಿತವಲ್ಲವೆ ?

# ಲಿಂಗಾಂಗಿಗಳಲ್ಲಿಯ ಸಹಭೋಜನ.



ಲಿಂಗಾಯತರು ಒಕ್ಕಲತನ ಮೊದಲಾದ ಯಾವ ಉದ್ಯೋಗವನ್ನೇ ಮಾಡಲಿ. ಜನ ಜೀವನಕ್ಕೆ ಆಧಾರವಾಗಿರತಕ್ಕ ಆ ಯಾವ ಕಾಯಕಗಳಾದರೂ ಕೀಳಲ್ಲ. ಅವುಗಳನ್ನು ಮಾಡುವುದರಿಂದ ಲಿಂಗಾಂಗಿಗಳಲ್ಲಿ ಬೇರೆ ಬೇರೆ ಕುಲಗಳುಂಟಾಗುವವೆಂದು ತಿಳಿಯಬಾರದು. ಹಾಗೆ ತಿಳಿದು ಲಿಂಗಾಯತರಲ್ಲಿ ಮೇಲುಕೀಳುಗಳನ್ನು ಕಲ್ಪಿಸಿದರೆ ಅದೇ ಅನಾಚಾರ.

ಶ್ರೀ ಬಸವಾದಿ ಪ್ರಮಥರು ೧೨ ನೆಯ ಶತಮಾನದಲ್ಲಿ ಅದ್ಭುತವಾದ ಧಾರ್ಮಿಕ ಕ್ರಾಂತಿಯನ್ನುಂಟುಮಾಡಿ ಸಮಾಜದಲ್ಲಿ ಸಮಾನತೆಯ ಶ್ರೇಷ್ಠ ತತ್ವವನ್ನು ಆಚರಣೆಯಲ್ಲಿ ತಂದರು. ಆಗ ಅನೇಕರಿಗೆ ಕುಲಾಭಿಮಾನವು ಇನ್ನೂ ಅಂಟಿಕೊಂಡಿತ್ತು. ಲಿಂಗಾಂಗಿಗಳಾದರೂ ತಮ್ಮ ಪೂರ್ವಕುಲದ ದುರಭಿಮಾನದಿಂದ ಲಿಂಗಾಂಗಿಗಳಲ್ಲಿ ಪರಸ್ಪರ ಊಟೋಪಚಾರ ನಡೆಯಿಸಲು ಹಿಂಜರಿಯುತ್ತಿದ್ದರು. ಇಂಥ ಅನೇಕ ಭಕ್ತರನ್ನು ಕುರಿತು ಶ್ರೀ ಚೆನ್ನಬಸವಣ್ಣನವರು ಶಿವಾನುಭವ ಮಂಟಪದಲ್ಲಿ ಒಂದು ದಿನ ಹೀಗೆ ಬೋಧಿಸಿದರು—

ಭವಿಯ ಮನೆಯಲ್ಲಿ ಭವಿಯ ಹಸ್ತದಲ್ಲಿ ಭವಿಪಾಕವಲ್ಲದೆ, ಭಕ್ತರ ಮನೆಯಲ್ಲಿ ಭಕ್ತರ ಹಸ್ತದಲ್ಲಿ ಭವಿಪಾಕ ಉಂಟೆ? ಇಲ್ಲವಯ್ಯಾ. ಸುಡಲಿ. ಇವರ ಯುಕ್ತಿ ಎಂತಹುದೋ ? ಭಕ್ತಿ ಎಂತಹುದೋ ? ಮುಕ್ತಿ ಎಂತಹುದೋ ? ಆ ಪರಮ ಸದ್ಭಕ್ತನ ಹಸ್ತದಿಂದೆ ಬಂದ ಸಕಲ ಪದಾರ್ಥಂಗಳೆಲ್ಲ ಲಿಂಗ ಪ್ರಸನ್ನತ್ವದಿಂದೆ ಬಂದುದಾಗಿ ಆ ಪದಾರ್ಥವನು ಶುದ್ಧತೆಯಿಂದ ಲಿಂಗಕ್ಕೆ ಕೊಟ್ಟು ಕೊಂಬುವುದೇ ದೇವಭಕ್ತರ ನಡೆ. ಅವರೊಕ್ಕುದೆ ಮಹಾ ಪ್ರಸಾದವಯ್ಯಾ ಕೂಡಲ ಚೆನ್ನಸಂಗಮದೇವಾ.

ಭಕ್ತರ ಮನೆಯನರಸಿಕೊಂಡು ಹೋಗಿ, ಭಕ್ತ ದೇಹಿಕ ದೇವನೆಂಬ ಶ್ರುತಿ ವಚನವ ಕೇಳಿ, ಭಕ್ತನೆ ದೇವನೆಂದರಿಂದು ಮತ್ತೆಯು ಮುಕ್ತಿಯನರಸುವ ಪಾತಕರ ವಿಧಿ ಎಂತೋ ? ಭಕ್ತರ ಮಠಕ್ಕೆ ಹೋಗಿ ಅದು ಇದು ಎಂಬ ಸಂದೇಹಿ ಪಾತಕಿ ನೀ ಕೇಳು. ಆ ಭಕ್ತರ ಮಠದೊಳಗೆ ಭಕ್ತಿರತಿಯ ಬೆಳಸು, ಲಿಂಗದ ಕಳೆಯು, ಪ್ರಸಾದದ ರಾಸಿ, ಇಂತಪ್ಪ ಪ್ರಸಾದವಿದ್ದಲ್ಲಿಗೆ ಹೋಗಿ ಸೂತಕವನರಸುವ ಪಾತಕರ ಮೆಚ್ಚುವನೆ ನಮ್ಮ ಕೂಡಲ ಚೆನ್ನಸಂಗಮದೇವಾ?

ಶಿವಭಕ್ತರಾದ ಸದಾಚಾರಶೀಲ ಲಿಂಗಾಂಗಿಗಳ ಮನೆಯಲ್ಲಿ ತಾನು ಊಟಮಾಡುವುದಿಲ್ಲವೆಂದು ಯಾವ ಲಿಂಗಾಂಗಿಯೂ ಹೇಳಕೂಡದು. ತಾನೇ ಹೆಚ್ಚಿನ ಕುಲದವನೆಂದಾಗಲಿ ಅಥವಾ ಹೆಚ್ಚಿನ ಆಚಾರದವನೆಂದಾಗಲಿ ಅವರನ್ನು ಕೀಳಾಗಿ ಕಾಣಬಾರದು. ಹಾಗೆ ಮಾಡಿದರೆ ಅದು ಶಿವಾಚಾರಕ್ಕೆ ದ್ರೋಹವನ್ನೇ ಮಾಡಿದಂತಾಗುತ್ತದೆ. ಆ ಲಿಂಗಾಂಗಿಯ ಮನೆಯಲ್ಲಿ ಆತನು ಪ್ರೇಮಾದರಗಳಿಂದ ನೀಡಿದುದನ್ನೇ ಹೆಚ್ಚಿನದೆಂದು ತಿಳಿದು ಲಿಂಗಕ್ಕರ್ಪಿಸಿ ಸೇವಿಸಬೇಕು.

ಇತ್ತೀಚಿಗೆ ಕೆಲವು ಗುರುಗಳು ತಮ್ಮ ಶಿಷ್ಯರ ಮನೆಗೆ ಬಂದಾಗ ಅವರಲ್ಲಿ ಮೊದಲಿನಂತೆ ಬಳಿಕೆ ಮಾಡಬಾರದೆಂಬ ದುರುದ್ದೇಶದಿಂದ ಏನೇನೋ ಉಪಾಯಮಾಡಿ ಪ್ರತ್ಯೇಕವಾಗಿಯೇ ಅಡಿಗೆ ಮಾಡಿಕೊಂಡು ಕಾಣಿಕೆ ಮಾತ್ರ ಎತ್ತಿಕೊಂಡುಹೋಗುವ ಪದ್ಧತಿಯನ್ನು ಪ್ರಾರಂಭಿಸಿದ್ದಾರೆ. ಇಂಥ ಕುಟಿಲತನವನ್ನು ಶ್ರೀ ಚೆನ್ನಬಸವಣ್ಣನವರ ಮೇಲಣ ವಚನದಿಂದ ಖಂಡು ತುಂಡಾಗಿ ನಿಷೇಧಿಸಬೇಕು.

ಈಗ ಹುಟ್ಟಿದ ಗುರುವರ್ಗದ ಚಟುವಟಿಕೆ ಎಂಬದರಲ್ಲಿ ಸೇರಿದ ಕೆಲವರು ಶಿಷ್ಯರ ಜಾತಿಯು ಬೇರೆಯೆಂದೂ ಅದು ಕೀಳೆಂದೂ ಅವರಲ್ಲಿ ತಾವು ಊಟಮಾಡಿದರೆ ತಮ್ಮ ಕುಲ ಕೆಟ್ಟಿತೆಂದೂ ತಿಳಿದು ಅವರಲ್ಲಿಯ ಹಣವನ್ನು ಮಾತ್ರ ಎತ್ತಿಕೊಂಡು ಹೋಗಲು ಬರುತ್ತಿದ್ದಾರೆ. ಅಂಥವರಿಗೆ ಶ್ರೀ. ಚೆನ್ನಬಸವಣ್ಣನವರ ಮೇಲಣ ದಿವ್ಯ ವಚನವನ್ನು ಬೋಧಿಸಿ ಅವರು ಅನಾಚಾರವನ್ನು ಬಿಟ್ಟು ತಮ್ಮಲ್ಲಿ ಮೊದಲಿನಂತೆಯೇ ಸಹಭೋಜನ ಮಾಡಿದರೇನೇ ಅವರನ್ನು ಗುರುಗಳೆಂದು ತಿಳಿದು ಮನ್ನಿಸಬೇಕು. ಇಲ್ಲವಾದರೆ ನಿಮ್ಮ ಜಾತಿಯೇ ಬೇರೆಯೆಂದೂ ನೀವು ನಮಗೆ ಗುರುಗಳೇ ಅಲ್ಲವೆಂದೂ ಅವರನ್ನು ಹಾಗೇ ಕಳಿಸುವುದೇ ಲಿಂಗಾಂಗಿಯ ಕರ್ತವ್ಯವು.

## ಹುತಾತ್ಮಾ

# ಶ್ರೀ ಸ್ವಾಮಿ ಶ್ರದ್ಧಾನಂದ ದಿನ.

ಸ್ವಾಮಿ ಶ್ರದ್ಧಾನಂದರು ಹಿಂದು ಶುದ್ಧಿ ಸಭೆಯ ಉತ್ಪಾದಕರಾಗಿದ್ದರು. ಸಾವಿರಾರು ಮುಸಲ್ಮಾನರನ್ನು ಇವರು ಶುದ್ಧಗೊಳಿಸಿ ಹಿಂದು ಧರ್ಮದಲ್ಲಿ ತೆಗೆದುಕೊಂಡರು. ಇದನ್ನು ನೋಡಿ ಧರ್ಮಾಂಧನಾದ ಅಬ್ದುಲ್ ರಸೀದ ಎಂಬ ತಲೆತಿರುಕನು ಶ್ರೀ ಸ್ವಾಮಿಗಳಿಗೆ ತಾ. ೨೩-೧೨-೧೯೨೬ ನೆಯ ದಿನ ಪಿಸ್ತೂಲಿನಿಂದ ಹೊಡೆದು ಕೊಂದನು. ಅಂದಿನಿಂದ ಹಿಂದುಸ್ಥಾನದ ನಾನಾ ಭಾಗಗಳಲ್ಲಿ ಹಿಂದು ಜಾತಿನಿಷ್ಠರು ಶ್ರದ್ಧಾನಂದ ದಿನವೆಂದು ಡಿಶಂಬರ್ ೨೩ ನೆಯ ದಿನವನ್ನು ಆಚರಿಸುತ್ತಿದ್ದಾರೆ. ಈ ವರುಷ ಕೂಡಾ ಕಳೆದ ೨೩ ನೆಯ ತಾರೀಖಿನ ದಿನ ಸ್ವಾಮಿ ಶ್ರದ್ಧಾನಂದರ ೧೧ ನೆಯ ವಾರ್ಷಿಕ ದಿನವನ್ನು ಅನೇಕ ಕಡೆ ಆಚರಿಸಿದರು. ಕಳೆದ ೧೧ ವರುಷಗಳಲ್ಲಿ ಧರ್ಮಾಂಧರಾದ ಮುಸಲ್ಮಾನ್ ತಲೆ ತಿರುಕರು ಮಾಡಿದ ಇಂಥ ಕೆಲವು ಘೋರ ಕೃತ್ಯಗಳನ್ನು ಇಲ್ಲಿ ಕೊಡಲಾಗಿದೆ.

ಶ್ರೀ. ಬದ್ರಿಶಹಾ—ಇವರು ಜರವಲ ಜಿಲ್ಲಾ ಬಹರಾಯಿ ಎಂಬ ಗ್ರಾಮದವರು. ಹಿಂದು ಶುದ್ಧಿ ಸಂಘಟನೆಗಾಗಿ ಪ್ರಯತ್ನಿಸುತ್ತಿದ್ದರು. ಕೆಲವು ಮುಸಲ್ಮಾನರು ೧೯೨೭ ನೆಯ ಜುಲೈ ತಿಂಗಳಲ್ಲಿ ಇವರನ್ನೂ ಇವರ ಆಳನ್ನೂ ಕೊಂದು ಓಡಿಹೋದರು.

ಶ್ರೀ. ಬಹಾದ್ದೂರ ಶಹಾ—ರಾಯಬಹದ್ದೂರ ಬಾಬು ಬಹದ್ದೂರ ಶಹಾ ಇವರನ್ನು ತಾ. ೨೯-೮-೧೯೨೭ ನೆಯ ದಿವಸ ಒಬ್ಬ ಮುಸಲ್ಮಾನನು ಬಂದೂಕಿನಿಂದ ಹೊಡೆದು ಕೊಂದನು. ಕೊಲೆಗಾರನು ಅಲ್ಲಿಯೇ ಹಿಡಿಯಲ್ಪಟ್ಟನು.

ಶ್ರೀ. ಭೈರೋಸಿಂಹ— ಇವರು ಅಜಮೇರ ನಿವಾಸಿಗಳು. ಇವರನ್ನು ಮೊಹಜಂಅಲ್ಲಿ ಎಂಬ ಮುಸಲ್ಮಾನನು ತಾ. ೧೫-೬-೨೭ ನೆಯ ದಿವಸ ಪಿಸ್ತೂಲಿನಿಂದ ಹೊಡೆದು ಕೊಂದನು. ಈ ಕೊಲೆಗಾರನಿಗೆ ದ್ವೀಪಾಂತರದ ಶಿಕ್ಷೆಯಾಯಿತು.

ಶ್ರೀ. ನಾನಕಚಂದ— ಇವರು ದಿಲ್ಲಿಯ ಪ್ರಸಿದ್ಧ ಜಟ್ಟಿಗಳು. ತಾ. ೨೩-೮-೧೯೨೭ ನೆಯ ದಿವಸ ರಾತ್ರಿ ದಿಲ್ಲಿಯಿಂದ ಮಥುರಾಕ್ಕೆ ಹೋಗುವಾಗ ಗಾಡಿಯಲ್ಲಿ ಒಬ್ಬ ಮುಸಲ್ಮಾನನು ಇವರನ್ನು ಕೊಂದನು. ಕೊಲೆಗಾರನು ತಪ್ಪಿಸಿಕೊಂಡನು.

ಶ್ರೀ ಹೊಶಿಯಾರಸಿಂಗ—ಇವರು ಗಾಜಿಯಾಬಾದ ಜಿಲ್ಲಾ ಮೆರಟವಾಸಿಗಳು. ಇವರನ್ನು ಕೆಲವು ಮುಸಲ್ಮಾನರು ತಾ. ೧೭-೮-೨೭ ನೆಯ ದಿನ ಹಗಲು ೧೧ ಘಂಟೆಯಲ್ಲಿ ಕೊಲೆಮಾಡಿದರು. ಕೊಲೆಗಾರರು ಆಗಲೇ ಹಿಡಿಯಲ್ಪಟ್ಟರು.

ಶ್ರೀ. ಬಾಬು ಮಾನಿಕಚಂದ— ಇವರು ಲಾಹೋರ ನಿವಾಸಿಗಳು. ಇವರನ್ನು ತಾ. ೧೦-೮-೨೭ ನೆಯ ರಾತ್ರಿ ಫೈಜುದ್ದೀನ ಎಂಬ ಮುಸಲ್ಮಾನನು ಚೂರಿಯಿಂದ ತಿವಿದು ಕೊಂದನು. ಈ ಕೊಲೆಗಾರನಿಗೆ ಫಾಶಿ ಶಿಕ್ಷೆಯಾಯಿತು.

ಲಾಲಾ ಬನವರಿಲಾಲ—ಇವರು ಮುರಾಬಾದದ ನಿವಾಸಿಗಳು. ಆಸಫಪುರ ಸ್ಟೇಶನ್ನಿನಲ್ಲಿ ಕೆಲವು ಮುಸಲ್ಮಾನರು ಇವರನ್ನು ಹೊಡೆದು ಕೊಂದರು. ಅವರಲ್ಲಿ ೫ ಜನರಿಗೆ ಫಾಶಿ ಶಿಕ್ಷೆಯಾಯಿತು.

ಶ್ರೀ. ರಾಜಪಾಲ—ಇವರು ಲಾಹೋರ ನಿವಾಸಿಗಳು. ಇವರು ರಂಗೀಲಾ ರಸೂಲ ಎಂಬ ಪುಸ್ತಕವನ್ನು ಬರೆದು ಪ್ರಕಟಿಸಿದರು. ಇದರಿಂದ ತಾ. ೨೬-೯ ೧೯೨೭ ನೆಯ ದಿವಸ ಖುದಾ ಬಕ್ಷ ಎಂಬ ಮುಸಲ್ಮಾನನು ಕೊಲೆ ಮಾಡಲು ಪ್ರಯತ್ನಿಸಿದನು. ಆತನನ್ನು ಹಿಡಿದರು. ಆತನಿಗೆ ಶಿಕ್ಷೆಯಾಯಿತು. ಆಮೇಲೆ ಇವರನ್ನು ಇಲ್ಮದೀನ್ ಎಂಬ ಮುಸಲ್ಮಾನನು ಕೊಲೆ ಮಾಡಿದನು. ಆತನಿಗೆ ಫಾಶಿ ಶಿಕ್ಷೆಯಾಯಿತು.

ಶ್ರೀ ನಥುರಾಮ— ಇವರು ಸಿಂಧ ನಿವಾಸಿಗಳು. ಇವರನ್ನು ಕಯೂಮ ಎಂಬ ಮುಸಲ್ಮಾನನು ಕೊಲೆ ಮಾಡಿದನು. ಆತನಿಗೆ ಫಾಶಿ ಶಿಕ್ಷೆಯಾಯಿತು.

ಶ್ರೀ. ಚರಣದಾಸ—ಇವರನ್ನು ಮಹಮ್ಮದನೆಂಬ ಮುಸಲ್ಮಾನನು ತಾ. ೧೭-೫-೧೯೩೭ ನೆಯ ದಿನ ಕೊಲೆಮಾಡಿದನು.

---

## ಎರಗಲ್ಲಲ್ಲಿ ಐಕ್ಯತೆ.

ಚಿತಾಪುರದ ತಾಲೂಕಿಗೆ ಸೇರಿದ ಎರಗಲ್ಲ ಗ್ರಾಮದಲ್ಲಿ ಬಹು ದಿವಸದಿಂದಲೂ ಗಣಂಗಳ ಸಂಬಂಧ ಕಲಹವಿದ್ದು ಅದನ್ನು ತೀರಿಸಲು ಯಾರಿಂದಲೂ ಸಾಧ್ಯವಾಗಿದ್ದಿಲ್ಲ. ಅದನ್ನು ಕಂಡು ಅಲ್ಲಿಯ ಪ್ರಮುಖರಾದ ಶ್ರೀಯುತ ಬಸವನಗೌಡ ಪಾಟೀಲ ಭೀಮರಾವ ಕುಲಕರ್ಣಿ ಇವರೇ ಮೊದಲಾದವರು ತಮ್ಮ ಗ್ರಾಮದಲ್ಲಿ ಕಲಹವು ಶಾಂತವಾಗಿ ಸೌಖ್ಯ ದೊರೆಯಬೇಕೆಂದುದ್ದೇಶಿಸಿ ಕೋಡಂಗಲ್ಲ ಶ್ರೀಗಳು ಮಲಕೂಡ ಶ್ರೀಗಳು ಚಿತಾಪುರ ಶ್ರೀಗಳು ಮುಗುಳನಾಗಾವಿ ಶ್ರೀಗಳು ಅಳ್ಳಳ್ಳಿ ಶ್ರೀಗಳು ಇವರೇ ಮೊದಲಾದ ಮಹನೀಯರನ್ನು ಮತ್ತು ಶ್ರೀ ಸಿದ್ಧರಾಮಪ್ಪಣ್ಣ ರೇಷ್ಮಿ ಚಿತಾಪುರ ಇವರೇ ಮೊದಲಾದ ಸಭಾಸದರನ್ನು ಬಿನ್ನಹ ಮಾಡಿಕೊಂಡು ಕರೆಯಿಸಿದರು. ಸದರಿಯವರು ತಾ. ೧೫-೧೨-೩೭ ನೇ ದಿವಸ ಅದೇ ಗ್ರಾಮದ ಹಿರೇಮಠದಲ್ಲಿ ಎಲ್ಲ ಜನರನ್ನು ಸೇರಿಸಿದರು. ನಂತರ ಶ್ರೀ|| ಗುರುಶಾಂತ ಶಾಸ್ತ್ರಿಗಳು . ಅಳ್ಳಗಿ ಹಿರೇಮಠದ ಚಂದ್ರಶೇಖರ ಶಾಲಾಧ್ಯಾಪಕ ಚಿತಾಪುರ ಇವರು ಶಾಂತಿ ಮತ್ತು ಒಕ್ಕಟ್ಟು ಈ ವಿಷಯಗಳ ಮೇಲೆ ಎಲ್ಲರ ಮನಾನಂದವಾಗುವಂತೆ ಉಪದೇಶಿಸಿದರು.

ಆ ಮೇಲೆ ಶ್ರೀಗಳು ಯುಕ್ತಿಪ್ರಯುಕ್ತಿಗಳಿಂದ ಗ್ರಾಮದ ಕಲಹದ ಕಾರಣವನ್ನು ಕಂಡುಹಿಡಿದು ಹಿರೇಮಠ ಚಿಕ್ಕಮಠ ಮಠಪತ್ತಿ ಮೊದಲಾದವರಿಗೆ ಅವರವರ ಯೋಗ್ಯತೆಗನುಸರಿಸಿ ಗದ್ದಿಗೆ ಹಕ್ಕು ಬಾಬು ವಗೈರೆ ನಿಯಮಿಸಿ ಯಾರ ಮನಸ್ಸಿನಲ್ಲಿಯೂ ಕಲಹಂಶ ಇಲ್ಲದಂತೆ ಮಾಡಿದರು. ಈ ಮುಂಚೆ ಈ ಕಾರ್ಯಕ್ಕಾಗಿ ಸರಕಾರದಲ್ಲಿ ೨-೩ ಸಾವಿರ ರೂಪಾಯಿ ವೆಚ್ಚವಾಗಿ ತೀರ್ಮಾನವಾಗಿದ್ದರೂ ಗ್ರಾಮದ ಅನೈಕ್ಯತೆ ಮೂಲಕ ಕಾರ್ಯರೂಪದಲ್ಲಿ ಬಂದಿದ್ದಿಲ್ಲ. ಈ ರೀತಿ ಅಸಾಧ್ಯವಾದ ಕಾರ್ಯವು ಸರಳ ಸ್ವರೂಪದಲ್ಲಿ ಬರಬೇಕಾದರೆ ಎಲ್ಲ ಮಹನೀಯರ ಕೃಪಾಬಲವಲ್ಲದೇ ಬೇರೊಂದಲ್ಲವು.

ಶ್ರೀಗಳು ಹಿರೇಮಠ ಚಿಕ್ಕಮಠ ಮಠಪತ್ತಿ ಮುಂತಾದ ಮಂಡಲಿಗೆ ಯಥಾ ಸ್ಥಿತಿ ಇರಲಿಕ್ಕೆ ಬೋಧಿಸುವದಲ್ಲದೆ ಮೇಲ್ವಿಚಾರಣೆಯ ಅಧಿಕಾರವನ್ನು ಶ್ರೀ ಚಂದ್ರಶೇಖರ ಸ್ವಾಮಿಗಳು ಹಿರೇಮಠ ಚಿತಾಪುರ ಇವರ ನೇತೃತ್ವದಲ್ಲಿಟ್ಟರು. ಇದು ಸ್ತುತ್ಯವೇ ಸರಿ. ಎಲ್ಲ ಮಠಾಧಿಕಾರಿಗಳು ಈ ಪ್ರಕಾರ ಸಮಾಜ ಕಳಕಳಿಯುಳ್ಳವರಾಗಿದ್ದಾದರೆ ನಮ್ಮ ಸಮಾಜವು ಅಭಿವೃದ್ಧಿಹೊಂದುವದೆಂದು ಹೇಳಲಿಕ್ಕೆ ಯಾವ ತರದ ಸಂದೇಹವಿಲ್ಲವು. ಸದರಿ ಕಾರ್ಯಕ್ಕೆ ದಯಮಾಡಿಸಿದ ಎಲ್ಲ ಶ್ರೀಗಳಿಗೂ ಮತ್ತು ಶ್ರೀ. ಸಿದ್ಧರಾಮಪ್ಪಣ್ಣ ರೇಷ್ಮಿ ಇವರೇ ಮೊದಲಾದ ಸಭಾಸದರಿಗೂ ಚಿರಾಯುಷ್ಯವನ್ನು ಕೊಟ್ಟು ಉದ್ಧರಿಸಲೆಂದು ಪರಮಾತ್ಮನನ್ನು ಪ್ರಾರ್ಥಿಸುತ್ತೇನೆ.

ಓರ್ವ ಪ್ರತ್ಯಕ್ಷದರ್ಶಿ.

# ಶ್ರೀ ಸಿದ್ಧೇಶ್ವರ ಸಂಸ್ಥೆ ವಿಜಾಪುರ

## ಇವರ ಕಡೆಯಿಂದ

### ಶ್ರೀ ಸಿದ್ಧರಾಮೇಶ್ವರ ಜಾತ್ರೆಯ ಕಾರ್ಯಕ್ರಮ.

ತಾರೀಖು ೧೨-೧-೩೮ ರಿಂದ ತಾ. ೧೫-೧-೩೮ ರ ವರೆಗೆ ನಂದೀ ಧ್ವಜದ ಉತ್ಸವಾದಿ ಕಾರ್ಯಗಳು ಜರುಗುವವು.

ತಾರೀಖು ೧೬-೧-೩೮ ಇಸ್ವಿ ಮಿತಿ ಪು|| ಶು||೧೫ ರವಿವಾರ ದಿವಸ ಒಕ್ಕಲತನ ವ ಔದ್ಯೋಗಿಕ ಮತ್ತು ದನಗಳ ಮುಂತಾದ ಪ್ರದರ್ಶನ ಹಾಗೂ ಬಕ್ಷಿಸ ಸಮಾರಂಭ.

ತಾರೀಖು ೧೭-೧-೩೮ ಇಸ್ವಿ ಮಿತಿ ಪು|| ವ|| ೧ ಸೋಮವಾರ ದಿವಸ ಮುಂಜಾನೆ ೮ ಘಂಟೆಯಿಂದ ೧೧ ಘಂಟೆಯ ವರೆಗೆ ವೀರ ಶೈವರಲ್ಲಿ ಯಾರಾದರೂ ಏನಾದರೂ ಕಾರಣದಿಂದ ಬಹಿಷ್ಕೃತರಾಗಿದ್ದರೆ ಅವರು ಈ ಬಗ್ಗೆ ತಾ. ೧೬-೧-೩೮ ನೇ ದಿವಸ ಸಂಜೆಯ ಒಳಗಾಗಿ ತಮ್ಮ ಪುರಗ್ರಾಮಸ್ಥರ ಅಥವಾ ಶೆಟ್ಟಿ ಮಹಾ ಜನರ ಕಡೆಯಿಂದ ಸಕಾರಣ ಬರೆಯಿಸಿಕೊಂಡು ಬಂದಲ್ಲಿ ಮತ್ತು ಅದು ಶುದ್ಧೀಕರಣ ಕಮಿಟಿಯವರಿಗೆ ಯುಕ್ತ ಕಂಡಲ್ಲಿ ಅವರಿಗೆ ಶಿವದೀಕ್ಷೆಯನ್ನು ಕೊಟ್ಟು ಶಿವಾಚಾರ ಸಂಪನ್ನರಾಗಿ ಮಾಡುವದು ನಡೆಯುತ್ತದೆ. ಆ ಮೇಲೆ ೧೧ ಘಂಟೆಯಿಂದ ೫ ಘಂಟೆಯ ವರೆಗೆ ಮಹಾಗಣಾರಾಧನೆ ಹಾಗೂ ಸುಪ್ರಸಿದ್ಧ ಕುಸ್ತಿಗಳು ಆಗುತ್ತವೆ.

### ಶ್ರೀ ಸಿದ್ಧೇಶ್ವರ ಜಾತ್ರೆಯ ಪ್ರದರ್ಶನವು.

(೧) ಹಳ್ಳಿಗಳ ಉದ್ಯೋಗಗಳು ಪುನರುಜ್ಜೀವನ ಹೊಂದಿ ಹಳ್ಳಿಗರು ಮಾಡಿದ ಸಾಮಾನುಗಳಿಗೆ ತಕ್ಕ ಬೆಲೆ ದೊರೆಯಿತು ಹಳ್ಳಿಗರ ಕೈಗಾರಿಕೆ ಕೌಶಲ್ಯಗಳು ಮತ್ತು ಅವರ ಸಾಂಪತ್ತಿಕ ಸ್ಥಿತಿಯು ಸುಧಾರಿಸುವುದು ಅತ್ಯಂತ ಮಹತ್ವದ ಕೆಲಸವಾಗಿದೆ. ಆದಕಾರಣ ಈ ವರ್ಷ ಪ್ರಾಮುಖ್ಯವಾಗಿ ಹಳ್ಳಿಯವರಿಂದಲೇ ಮಾಡಲ್ಪಟ್ಟ ನಾನಾತರದ ಅವಶ್ಯಕ ಹಾಗೂ ಉಪಯುಕ್ತ ಸಾಮಾನುಗಳು ಮತ್ತು ಧಾನ್ಯ, ಹಣ್ಣು, ಬೇಳೆ, ಕಾಯಿಪಲ್ಲೆ ಮುಂತಾದವುಗಳ ಮತ್ತು ಹಳ್ಳಿಯವರಿಗೆ ಉಪಯುಕ್ತವಿದ್ದು ಅವರು ಕಲಿಯತಕ್ಕಂಥ ವಿಶೇಷತರದ ಸ್ವದೇಶಿ ಸಾಮಾನುಗಳು ಮತ್ತು ದನಗಳು ಇವುಗಳ ಪ್ರದರ್ಶನ ಮಾಡುವದನ್ನು ಗೊತ್ತುಪಡಿಸಿರುತ್ತದೆ.

(೨) ಇದನ್ನು ಪೂರ್ಣ ಲಕ್ಷಕ್ಕೆ ತಂದು ಒಕ್ಕಲಿಗರು ಮತ್ತು ಕಾರಾಗಿರ ಜನರು ತಾವು ಸ್ವತಃ ಬೆಳೆದಂಥ ವ ಮಾಡಿದಂಥ ಸಾಮಾನುಗಳನ್ನು ಹಾಗೂ ಸ್ವತಃ ಸಾಕಿ ಬೆಳೆಸಿದ ದನಗಳನ್ನು ಪ್ರದರ್ಶನಕ್ಕೆ ಅವಶ್ಯವಾಗಿ ಕಳಿಸಿ ಅವುಗಳ ಉಪಯುಕ್ತತೆಯನ್ನೂ, ಶ್ರಮವನ್ನೂ, ಕೌಶಲ್ಯವನ್ನೂ ಜನರಲ್ಲಿ ಪ್ರಸಿದ್ಧಪಡಿಸುವದಲ್ಲದೆ ಸಂಸ್ಥೆಯಿಂದ ಇನಾಮು ಮತ್ತು ಸರ್ಟಿಫಿಕೇಟುಗಳನ್ನು ಪಡೆಯಬೇಕೆಂದು ಇಚ್ಛಿಸುತ್ತೇವೆ.

(೩) ಹಳ್ಳಿಗರಿಗೆ ಅವಶ್ಯಕವಾದ ಒಕ್ಕಲತನದ ಮತ್ತು ಕೈಗಾರಿಕೆಯ ಸುಧಾರಿಸಿದ ಸ್ವದೇಶಿ ಸಾಮಾನುಗಳನ್ನು ಬೇರೆ ಯಾರಾದರೂ ಪ್ರದರ್ಶನಕ್ಕೆ ಕಳಿಸಿ ಇನಾಮು ಸರ್ಟಿಫಿಕೇಟುಗಳನ್ನು ಪಡೆಯಬಹುದು.

(೪) ಅರಳೆ ಮತ್ತು ಉಣ್ಣೆ ಹಿಂಜುವದು ಹಂಜಿ ಮಾಡುವದು ನೂಲುವದು ಇವುಗಳ ಸ್ಪರ್ಧೆ (ಶರ್ಯತ್ತು) ಜರುಗಿಸತಕ್ಕದ್ದಿದೆ. ಸ್ಪರ್ಧೆಯಲ್ಲಿ ಭಾಗತಕ್ಕೊಳ್ಳುವವರು ಜಾನೇವರಿ ೫ ನೆಯ ತಾರೀಖಿನೊಳಗಾಗಿ ತಮ್ಮ ಪೂರ್ಣ ಹೆಸರು ಪತ್ತೆಗಳನ್ನು ಸಂಸ್ಥೆಗೆ ತಿಳುಹಿಸಬೇಕು. ಶಕ್ಯವಿದ್ದವರು ಹಿಂಜುವ ಪಿಂಜಣೆ ಮತ್ತು ನೂಲುವ ರಾಟೆಗಳನ್ನು ಸಂಗಡ ತರತಕ್ಕದ್ದು. ಸ್ವಲ್ಪ ವೇಳೆಯಲ್ಲಿ ಜಿನಗು ಮತ್ತು ಹುರಿ ಸರಸಾದ ನೂಲು ಹೆಚ್ಚಿಗೆ ತೆಗೆಯುವವರಿಗೆ ಇನಾಮು ಕೊಡುವದರಲ್ಲಿ ಬರುವದು. ಕುರುಬ ಬಂಧುಗಳು ಅವಶ್ಯ ಬರಬೇಕೆಂದು ಬಿನ್ನಹ.

(೫) ಹಳ್ಳಿಗರ ಶಿಕ್ಷಣ ಆರೋಗ್ಯ ಸಹಕಾರ ಒಕ್ಕಲತನದ ಸುಧಾರಣೆ ಮುಂತಾದ ವಿಷಯಗಳ ಬಗ್ಗೆ ಬಲ್ಲ (ತಜ್ಞ) ಜನರಿಂದ ವ್ಯಾಖ್ಯಾನಗಳು ಜರುಗಿಸಲ್ಪಡುವವು.

(೬) ಸಾಮಾನುಗಳನ್ನು ಕಳುಹಿಸತಕ್ಕವರು ಜಾನೇವರಿ ೮ನೇ ತಾರೀಖಿನೊಳಗಾಗಿ ವ ಬೆಳೆ, ಮತ್ತು ಹಣ್ಣು ಪಲ್ಲೆ ಮುಂತಾದ ಹಸಿ (ಕಚ್ಚಾ) ಪದಾರ್ಥಗಳನ್ನು ಜಾನೇವರಿ ೧೨ ನೆಯ ತಾರೀಖಿಗೆ ಮುಟ್ಟುವಂತೆ ಕಳಿಸಬೇಕು.

(೭) ಈ ವರ್ಷ ಮುನ್ಸಿಪಾಲ್ಟಿಯವರು ಜಾತ್ರೆಗೆ ಬಂದ ದನಗಳಿಗೆ ಮತ್ತು ಇತರ ಸಾಮಾನುಗಳನ್ನು ಮಾರಾಟಕ್ಕೆ ತಂದವರಿಗೆ ಫೀ ತೆಗೆದುಕೊಳ್ಳುವದಿಲ್ಲ.

### ಸೂಚನೆ.

(೧) ಸ್ವತಂತ್ರ ಸ್ಥಳವು (ಸ್ಟಾಲ) ಬೇಕಾಗಿದ್ದರೆ ತಾ. ೫-೧-೩೮ ರ ಒಳಗಾಗಿ ತಿಳಿಸಬೇಕು. (೨) ಪ್ರದರ್ಶನದ ಬಗ್ಗೆ ತಿಳಿದವರು ಎಲ್ಲ ಒಕ್ಕಲಿಗ, ತೋಟಿಗ, ಕಾರಾಗಿರ ಜನರಿಗೆ ತಿಳಿಸಬೇಕೆಂದು ವಿನಂತಿಯಿದೆ.

(೧) ಮೇಲಿನ ಆರು ದಿವಸಗಳಲ್ಲಿ ಮುಂಜಾನೆ, ಮಧ್ಯಾನ್ಹ ಸಾಯಂಕಾಲ ಮತ್ತು ರಾತ್ರೆ ಭಜನೆಯ ಮೇಳಗಳು ಪ್ರಸಿದ್ಧ ಕೀರ್ತನಗಳು ನಾನಾತರದ ವಾದ್ಯಗಳು ಮತ್ತು ಹೊಸ ತರದ ಲಾವಣಿ ಪದಗಳು ಮತ್ತು ಪ್ರಸಿದ್ಧ ಆಟಗಳು ಕುಸ್ತಿಗಳು ಆಗುವವು. ಅವರಿಗೆ ಕಮಿಟಿಯವರ ಸಮ್ಮತಿ ಪ್ರಕಾರ ಯೋಗ್ಯ ಬಕ್ಷಿಸು ಕೊಡುವದರಲ್ಲಿ ಬರುವದು.

(೨) ಸಧ್ಯದ ದೇಶ ಸುಧಾರಣೆಗನುಸರಿಸಿ ಔದ್ಯೋಗಿಕ, ಸಾಮಾಜಿಕ ಮೊದಲಾದ ರಾಷ್ಟ್ರೀಯ ಕೀರ್ತನ ರಾಷ್ಟ್ರೀಯ ಹಾಡುಗಳು ರಾಷ್ಟ್ರೀಯ ಆಟಗಳನ್ನು ರಚಿಸಿ ಮಾಡಿತೋರಿಸುವವರಿಗೆ ವಿಶೇಷ ಮಹತ್ವಕೊಡಲ್ಪಡುವುದು. ಉಪಯುಕ್ತವಲ್ಲದ ವಿಷಯಗಳಲ್ಲಿ ವೇಳೆ ಶ್ರಮ ಮತ್ತು ಹಣ ನಿರರ್ಥಕವಾಗಬಾರದು.

(೩) ಕುಸ್ತಿಯ ಹೊರ್ತಾಗಿ ಬೇರೆ ಬೇರೆ ತರದ ಕಸರತ್ತು ಮತ್ತು ಆಸನ, ಲೇಜಿಮ್, ಪಟಿ (ಲಾಠಿ) ತಿರುವುವದು ಮುಂತಾದ ಉಪಯುಕ್ತ ಶಾರೀರಕ ಸಾಧನಗಳನ್ನು ಮಾಡಿ ತೋರಿಸುವವರು ಜಾನೇವರಿ ೫ ನೆಯ ತಾರೀಖಿನೊಳಗಾಗಿ ತಮ್ಮ ಪೂರ್ಣ ಹೆಸರು ವಿಳಾಸಗಳನ್ನು ಸಂಸ್ಥೆಗೆ ತಿಳಿಸಬೇಕು.

(೪) ಶ್ರೀ ಸಿದ್ಧರಾಮೇಶ್ವರ ಕೃಪೆಯಿಂದ ಹವೆಯು ಚೆನ್ನಾಗಿದೆ. ರೋಗಾದಿಗಳೇನೂ ಇಲ್ಲ.

ವಿಜಾಪುರ
ತಾ. ೧೦-೧೨-೩೭.

ವ್ಯವಸ್ಥಾಪಕರು
ಶ್ರೀ ಸಿದ್ಧೇಶ್ವರ ಸಂಸ್ಥೆ ವಿಜಾಪುರ

---

—ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಜನವರಿ ೨ ನೆಯ ತಾರೀಖಿನ ದಿವಸ ಮುಂಬೈಯಲ್ಲಿ ಶ್ರೀ. ಭುಲಾಭಾಯಿ ದೇಸಾಯಿ ಇವರ ಭವನದಲ್ಲಿ ಕೂಡುವುದು.

—ಸಂಯುಕ್ತ ಪ್ರಾಂತದ ಸಹರಾಣಪುರ ಭಾಗದ ಉಪ ಚುನಾವಣೆಯಲ್ಲಿ ಮುಸ್ಲಿಂ ಲೀಗಿನ ಹುರಿಯಾಳಿಗೆ ೩೧೫೧ ಮತಗಳೂ ಕಾಂಗ್ರೆಸ್ ಪಕ್ಷದ ಮುಸಲ್ಮಾನ್ ಹುರಿಯಾಳಿಗೆ ೨೧೭೭ ಮತಗಳೂ ದೊರೆತು ಕಾಂಗ್ರೆಸ್ ಹುರಿಯಾಳು ಸೋತಿತು.

## ಪಾರಮಾರ್ಥಿಕ "ಡೈರಿ"

ಶ್ರೀ ಚಿದಂಬರಾಯ ನಮಃ

ಶ್ರೀಗುರು ಬಸವಲಿಂಗಾಯ ನಮಃ

(ಶಿಲ. ೧೦ ಶು. ೯ ಗುರು ೨೧-೧-೩೭.)

೫ ನೆಯದಾದ ಶರಣ ಸ್ಥಳದಲ್ಲಿ ಸರ್ವಾರ್ಪಣವಾಗಿ ಶಿವನಿಗೆ ಶರಣಾಗತನಾಗಿರಲಿಕ್ಕೆ ಬೇಕು.

ತ್ರಿ:— ಶರಣರಾ ಸ್ಥಳವನ್ನು ದೊರಕಿಸಿಕೊಳ್ಳಯ್ಯಾ|
ಶರಣಾಗತನಿರೆ ಹರನ ಪಾದಕ್ಕೆ ನೀವ್|
ತಿರುಗಿ ಪುಟ್ಟುವರೆ ದಾಸಾರ್ಯ ||೩೮||

× × ×

ಶ್ರೀ. ಶಿವ ಚಿದಂಬರಾಯನಮಃ

ಶ್ರೀಗುರು ಬಸವಲಿಂಗಾಯ ನಮಃ

(ಶಿಲ ೧೦ ಶು. ೧೧ ಶುಕ್ರ. ೨೨-೧-೩೭.)

ಮಹಾತ್ಮಾ ಬಸವಣ್ಣನವರ ವಚನವೇ ಇಂತಿರಲ್!

"ಅಯ್ಯಾ ನೀ ಕೊಂದಲ್ಲಿ ಸಾಯದೆ ನೀ ಪುಟ್ಟಿಸಿದಲ್ಲಿ ಪುಟ್ಟದೆ ಇರ್ಪುದು ನನ್ನ ಅಳವೇನಯ್ಯಾ! ಕೂಡಲಸಂಗಮ ದೇವಯ್ಯ ಆದುದರಿಂದ ಶ್ರೀ ತುಕಾರಾಮೋಕ್ತಿಯಂತೆ— "ತರೀಚ ಜನ್ಮಯಾವೆ ದಾಸ ಈಶ್ವರಾಚೆ" ಷಟಸ್ಥಲದ ಅಂತ್ಯಭಾಗದ ಯೋಗ್ಯತೆ ಪಡೆಯುವುದಕ್ಕಾಗಿ ಮುನ್ನ ಸ್ವಾಮಿಯ ದಾಸನಾಗಲ್ ನಡಕಟ್ಟೆ ನಿಲ್ಲುವದೆ ಮೇಲು!

ಕಂದ— ಶರೀರ ಧಾರಿಗಳೆಲ್ಲಾ|
ನಿರಾಕಾರೇಶನಿಚ್ಛೆಗೊಳಗಾಗಿರಲು|
ಶರೀರಿರುವ ಪರ್ಯಂತಂ|
ನಿರಾಕಾರನ ದಾಸರಾಗಿ ಬಾಳ್ವುದೇ ಮೇಲು ||೩೯||

ತ್ರಿ:—ಸಾಕಾರ ಗುರುಗಳಂ ನೀ ಕೇಳಿನಡೆ ಮನವೆ|
ಬೇಕಾದ ಹಾಗೆ ನಡೆಯಲ್ ನಿರಾಕಾರ|
ಲೋಕೇಶನೊಪ್ಪ ದಾಸಾರ್ಯ ||೪೦||

ತ್ರಿ:—ವೇಳೆಯ ಮಹತ್ವವ ತಿಳಕೊಂಡು ನಡೆಯಯ್ಯಾ|
ನಾಳೆನ್ನಬೇಡ ಕರ್ತವ್ಯ ಕರ್ಮಕ್ಕೆ|
ಗೋಳುಂಟು ಮುಂದೆ ದಾಸಾರ್ಯ ||೪೧||

ಕಂದ—ಕಂದನ ಕಾಯುವ ದೇವರೆ|
ಮಂದಮತಿ ಮೂರ್ಖಪತಿತ ಪಾಮರನಿರುವೆ|
ಇಂದಿಗೆ ಮುಗಿಯಲಿ ಈ ತರ|
ಮುಂದಿನ ರೀತಿ ಸುದಾಸ ತಾನಾಗಲಿಗುರುವೆ||೪೨||

ತ್ರಿಕರಣ ಶುದ್ಧಿಯು ಎಂದಾಗುವದಯ್ಯಾ?

ತ್ರಿ— ಮನವನ್ನ ಶಿವನಲ್ಲಿ ತನುವನ್ನು ಸೇವೆಯಲಿ|
ಅನುದಿನದಿ ವಾಣಿ ಸತ್ಯದಲಿ ಜಪದಲ್ಲಿ|
ಮಣಿಸಬೇಕೆಂದ ದಾಸಾರ್ಯ ||೪೩||

× × × × ×

## ಚಿ ತಾ ಪು ರ .

ನಿಜಾಮ ಇಲಾಖಾ ಪೈಕಿ ಚಿತಾಪುರ ಗ್ರಾಮದಲ್ಲಿ ತಾ. ೧೭-೧೨-೩೭ ನೇ ದಿವಸ ಶ್ರೀಯುತ ಸಿದ್ಧರಾಮಪ್ಪಣ್ಣನವರು ರೇಷ್ಮಿ ಇವರ ಮನೆಯ ಮುಂಭಾಗದ ಪಟಾಂಗಣದಲ್ಲಿ ಧಾರ್ಮಿಕ ಸಭೆ ಸೇರಿತ್ತು ಸಭೆಗೆ ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ ವಿರೂಪಾಕ್ಷ ಶ್ರೀಗಳವರು ವಿರಕ್ತಮಠ ಕೋಡಂಗಲ್ಲ, ಶ್ರೀ ಸೋಮಶೇಖರ ಸ್ವಾಮಿಗಳು ಹಿರೇಮಠ ಮಲಕೊಡ, ಶ್ರೀ ಬಸವಲಿಂಗ ಸ್ವಾಮಿಗಳು ಸಾವಿರ ದೇವ ಅಳ್ಳಳ್ಳಿ, ಶ್ರೀ ಸಿದ್ಧರಾಮ ಸ್ವಾಮಿಗಳು ಹಿರೇಮಠ ಮುಗುಳುನಾಗಾವಿ, ಇದೇ ಗ್ರಾಮದ ಹಿರೇಮಠಾಧ್ಯಕ್ಷರಾದ ಚಂದ್ರಶೇಖರ ಸ್ವಾಮಿಗಳು ಇವರೇ ಮೊದಲಾದ ಮಹಾನುಭಾವಿಗಳು ದಯಮಾಡಿಸಿದ್ದರು.

ಸಭೆಯು ಸಾಯಂಕಾಲ ೬ ರಿಂದ ಪ್ರಾರಂಭವಾಗಿ ೯ ರ ಪರ್ಯಂತರವಾಗಿ ನಡೆಯಿತು. ಕಾರ್ಯಕ್ರಮ ಮೊದಲು ಈಶಸ್ತವನವಾದಮೇಲೆ ಶ್ರೀ ಗುರುಶಾಂತ ಶಾಸ್ತ್ರಿಗಳವರು ಅಳ್ಳಗಿ ಹಿರೇಮಠ ಚಂದ್ರಶೇಖರ ಶಾಲಾಧ್ಯಾಪಕ ಇವರು ಈ ಸಭೆಗೆ ಶ್ರೀ ಮಲಕೊಡ ಶ್ರೀಗಳನ್ನು ಅಧ್ಯಕ್ಷರನ್ನಾಗಿ ಮಾಡಬೇಕೆಂದು ತಿಳಿಸಿದರು. ಅದಕ್ಕೆ ಸಭಿಕರ ವತಿಯಿಂದ ಶ್ರೀ ಮಲ್ಲೇಶಪ್ಪ ಮಾಸ್ತರ ಇವರು ಅನುಮೋದನವನ್ನು ಕೊಟ್ಟರು. ಅಧ್ಯಕ್ಷರು ಸ್ಥಾನವನ್ನು ಸ್ವೀಕರಿಸಿದಮೇಲೆ ಸಂಸ್ಕೃತದಲ್ಲಿಯೂ ಆಂಧ್ರದಲ್ಲಿಯೂ ಅದ್ವಿತೀಯ ಪಾಂಡಿತ್ಯವನ್ನು ಸಂಪಾದಿಸಿದ ಕೋಡಂಗಲ್ಲ ಶ್ರೀಗಳವರು ತಾವು ಸ್ವತಃ ವಿರಕ್ತರಾಗಿದ್ದರೂ ಯಾವತರದ ಪಕ್ಷಾಂಧತೆಯಲ್ಲ ಬೀಳದೆ ಷಟಸ್ಥಲ ಸಿದ್ಧಾಂತ ಮತ್ತು ಬಸವ ತತ್ವ ಇವೇ ಮೊದಲಾದ ವಿಷಯಗಳಮೇಲೆ ತಮ್ಮ ಅಮೃತವಾಣಿಯಿಂದ ಶ್ರೋತೃಯರ ಮನಾನಂದವಾಗುವಂತೆ ಚೆನ್ನಾಗಿ ಬೋಧಿಸಿದರು. ಅಧ್ಯಕ್ಷರ ಉಪಸಂಹಾರ ಭಾಷಣವಾದಮೇಲೆ ಸದರಿ ಶಾಸ್ತ್ರಿಗಳು ಸಭಿಕರವತಿಯಿಂದ ಮೇಲುಕ್ತರಾದ ಮಹನೀಯರ ಆಭಾರವನ್ನು ಮನ್ನಿಸಿ ಈಶ ಮಂಗಲದೊಡನೆ ಸಭೆಯ ಕಾರ್ಯವನ್ನು ವಿಸರ್ಜಿಸಿದರು.

ಪ್ರತ್ಯಕ್ಷದರ್ಶಿ.

## ಕರ್ನಾಟಕ ಆಯುರ್ವೇದ ವಿದ್ಯಾಲಯ.

(ಮಲ್ಲೂರ ತಾ|| ಕರ್ಜಗಿ ಜಿ. ಧಾರವಾಡ.)

ಇಲ್ಲಿಯ ಹಿರೇಮಠದ ಆಯುರ್ವೇದ ವಿದ್ವಾನ್ ಬ್ರ. ಶ್ರೀ. ಸಿ ಗುರುಪಾದ ಸ್ವಾಮಿಗಳವರು ಇಲ್ಲಿ ಒಂದು ಆಯುರ್ವೇದ ವಿದ್ಯಾಲಯವನ್ನು ಸ್ಥಾಪಿಸಿರುವುದು ಸರ್ವಶ್ರುತವಷ್ಟೆ. ಈಗ ವಿದ್ಯಾಲಯದಲ್ಲಿ ಕೆಲವು ವಿದ್ಯಾರ್ಥಿಗಳು ಬಂದಿದ್ದು ಸ್ವಾಮಿಗಳವರು ಕೇವಲ ಬಡವರಿದ್ದರೂ ಅವರಿಂದ ಏನೊಂದೂ ಫೀ ತೆಗೆದುಕೊಳ್ಳುವದಿಲ್ಲ. ಇಷ್ಟೇ ಅಲ್ಲ; ಅವರ ಭೋಜನ ವಸತಿಗಳ ವ್ಯವಸ್ಥೆಯನ್ನು ಸಹ ತಾವೇ ಹೊತ್ತುಕೊಂಡು ಪಾಠಹೇಳುತ್ತಿರುವರು. ಜನೋಪಕಾರಿಯಾದ ಇಂಥ ಅಮೌಲ್ಯ ವಿದ್ಯಾದಾನವನ್ನು ಏನೊಂದೂ ಪ್ರತಿಫಲಾಪೇಕ್ಷೆಯಿಲ್ಲದೆ ಮಾಡುವದು ಸ್ವಾಮಿಗಳವರಿಗಷ್ಟೇ ಅಲ್ಲ; ವೀರಶೈವ ಸಮಾಜಕ್ಕೇ ಭೂಷಣಪ್ರದವೆಂದು ಹೇಳಿದರೆ ತಪ್ಪಾಗದು

ಇನ್ನು ಮುಂದೆ ಕಾಂಗ್ರೆಸ್ ಸರಕಾರದವರು ಅಲ್ಲಲ್ಲಿ ಆಯುರ್ವೇದ ಔಷಧಾಲಯಗಳನ್ನು ತೆರೆಯಲಿರುವದರಿಂದ ಬಡವರಾದ ನಿರುದ್ಯೋಗಿಗಳಾದ ವಿದ್ಯಾರ್ಥಿಗಳಿಗೆ ಸಹಾಯದೊರೆಯುವುದೆಂಬದರಲ್ಲಿ ಸಂಶಯವಿಲ್ಲ.

ಈ ಸಾರೆ ಕೇವಲ ೧೧ ಜನ ವಿದ್ಯಾರ್ಥಿಗಳಿಗೆ ಮಾತ್ರ ಮೇಲಿನಂತೆ ಅನುಕೂಲಮಾಡಿಕೊಡುವದನ್ನೂ ಮುಲ್ಕೀ ಪರೀಕ್ಷೆ ಇಲ್ಲವೆ ಇಂಗ್ಲಿಷ ೫ ನೇ ಇಯತ್ತೆಯ ವಿದ್ಯಾರ್ಥಿಗಳನ್ನು ಮಾತ್ರ ತಕ್ಕೊಳ್ಳುವ ಬಗ್ಗೆ ನಿಶ್ಚಯಿಸಿರುವುದರಿಂದಲೂ ವಿದ್ಯಾರ್ಥಿಗಳು ತ್ವರೆ ಮಾಡಬೇಕು. ವಿದ್ಯಾಲಯದಲ್ಲಿ ಆಯುರ್ವೇದ ಭಿಷಕ್ ಪರೀಕ್ಷೆಯ ಅಭ್ಯಾಸವು ಹೇಳಲ್ಪಡುವುದು. ಓರ್ವ ಗ್ರಾಮನಿವಾಸಿ.

## ಹಿಂದು ತರುಣ ಸಂಘ ಹಾವೇರಿ.

ಸಂಘದ ಸಭೆಯು ತಾ. ೬-೧೨-೩೭ ನೇ ದಿವಸ ರಾತ್ರಿ ೧೦ ಘಂಟೆಗೆ ಸಿದ್ಧಲಿಂಗೇಶ್ವರ ಲಾಯಬ್ರರಿಯಲ್ಲಿ ಕೂಡಿ ಕೆಳಗೆ ಬರೆದ ಪ್ರಕಾರ ಗೊತ್ತುವಳಿಗಳಾದವು —

(೧) ಸಂಘದ ಅಧ್ಯಕ್ಷ ಶ್ರೀ. ರಾಮಕೃಷ್ಣ ಗಣಪುಲೆ ಇವರು ಸಂಘದ ನೇಮಕ್ಕೆ ಸರಿಯಾಗಿ ನಡೆಯದ್ದರಿಂದ ತಾ. ೫-೧೧-೩೭ ನೇ ದಿವಸದ ಸಭೆಯಲ್ಲಿ ಅವರನ್ನು ಅಧ್ಯಕ್ಷಸ್ಥಾನದಿಂದ ವಜಾ ಮಾಡಿದ್ದರಿಂದ ಈ ದಿವಸ ಉಪಚುನಾವಣೆಮಾಡಿ ಶ್ರೀ. ಚನ ಬಸಪ್ಪ ಹಂಚಿಗೇರಿ ಇವರನ್ನು ಸಂಘದ ಅಧ್ಯಕ್ಷರನ್ನಾಗಿ ಆರಿಸಿತು.

(೨) ಗೌರವ ಕಾರ್ಯದರ್ಶಿ ಶ್ರೀ. ಶಾಂತಾರಾಮ ಅವಘಾನ ಇವರು ಸಂಘದ ನಿಯಮದಂತೆ ನಡೆಯದ್ದರಿಂದ ಅವರನ್ನು ಆ ಸ್ಥಾನದಿಂದ ವಜಾಮಾಡಿ ಬರಿದಾದ ಸ್ಥಾನದ ಉಪಚುನಾವಣೆ ಯಲ್ಲಿ ಶ್ರೀ. ಗುರುಲಿಂಗಪ್ಪ ಅಂಕಲಕೋಟ ಇವರನ್ನು ಗೌ|| ಕಾ|| ದರ್ಶಿಯನ್ನಾಗಿ ಆರಿಸಿತು.

(೩) ಸಂಘದ ಕಾರ್ಯಕಾರಿ ಸಭೆಯ ಸದಸ್ಯರಾದ ಶ್ರೀ. ವಿರೂಪಾಕ್ಷಪ್ಪ ಶಿರಹಟ್ಟಿ ಇವರು ತಮ್ಮ ವ್ಯವಹಾರ ಅಡಚಣೆ ಯ ಸಲುವಾಗಿ ಕಾರ್ಯಕಾರಿ ಸಭೆಯ ಕಾರ್ಯಮಾಡಲು ಆಗು ವದಿಲ್ಲವೆಂದು ರಾಜಿನಾಮೆಕೊಟ್ಟಿದ್ದನ್ನು ವಿಚಾರಿಸಿ ಮಂಜೂರ ಮಾಡಿ ಅವರ ಸ್ಥಾನಕ್ಕೆ ಶ್ರೀ. ಚನ್ನಪ್ಪ ಸವನೂರು ಇವರನ್ನು ಮತ್ತು ಕಾರ್ಯಕಾರಿ ಸಭೆಯ ಸದಸ್ಯರಾಗಿದ್ದ ಶ್ರೀ. ಗುರುಲಿಂ ಗಪ್ಪ ಅಂಕಲಕೋಟ ಇವರನ್ನು ಕಾರ್ಯದರ್ಶಿಗಳನ್ನಾಗಿ ಮಾಡಿ ದ್ದರಿಂದ ಅವರ ಸ್ಥಾನಕ್ಕೆ ಶ್ರೀ. ಫಕೀರಪ್ಪ ಹಂಚಿನಮನಿ ಇವರ ನ್ನು ಕಾರ್ಯಕಾರಿ ಸಭೆಯ ಸದಸ್ಯರನ್ನಾಗಿ ಆರಿಸಿತು.

(೪) ಸಂಘಕ್ಕೆ ಧರ್ಮಾರ್ಥವಾಗಿ ಶ್ರೀ. ಮುರಿಗೆಯ್ಯನವರು ನಡವಿನಮಠ ಹಾವೇರಿ ಇವರು ತಮ್ಮ ತಮ್ಮಂದಿರ ಲಗ್ನದ ಕಾ ಲಕ್ಕೆ ನಾಲ್ಕು ಆಣೆಯನ್ನು ಶ್ರೀ. ಚನಬಸಪ್ಪನವರು ಮಹಂತಿನ ಮಠ ಆಲೂರು ಇವರು ಎರಡು ಆಣೆ ಮತ್ತು ಶ್ರೀ. ಚನಬಸಪ್ಪ ನವರು ಹಾನಗಲ್ಲ ಸಾ|| ಹಾವೇರಿ ಇವರು ಚಿ|| ನ ಲಗ್ನದ ಕಾ ಲಕ್ಕೆ ನಾಲ್ಕು ಆಣೆ ಹಾಗೂ ಶ್ರೀ. ರಾಚಪ್ಪನವರು ಕೋರಿ ಸಾ|| ನೆಸ್ವಿ ಇವರು ಎರಡು ಆಣೆಯನ್ನು ಮತ್ತು ಶ್ರೀ. ಚನಬಸಪ್ಪ ನವರು ಹೊಸಮನಿ ಸಾ|| ಹಾವೇರಿ ಇವರ ಧರ್ಮಪತ್ನಿಯವರು ಲಿಂಗೈಕ್ಯರಾದಾಗ್ಗೆ ಒಂದು ರೂಪಾಯಿ ಐದು ಆಣೆಗಳನ್ನು ಕೊ ಟ್ಟಿದ್ದನ್ನು ಸಂಘವು ಅತ್ಯಂತ ಕೃತಜ್ಞತೆಯಿಂದ ಸ್ವೀಕರಿಸಿ ಅವ ರಿಗೆ ಧನ್ಯವಾದಗಳನ್ನು ಅರ್ಪಿಸುತ್ತದೆ.

(೫) ತಾ. ೧೩-೧೨-೩೭ ನೇ ದಿವಸ ಕಾರ್ಯಕಾರಿ ಸಭೆ ಯಲ್ಲಿ ಗೋವಾಲಾಟ್ರಿಯವರು ಲಾಟ್ರಿಯಿಂದ ಬಂದ ಉತ್ಪನ್ನದ ಹಣದಿಂದ ಕ್ರಿಶ್ಚಿಯನ್ ಧರ್ಮಪ್ರಸಾರದ ಕಾರ್ಯಮಾಡುತ್ತಾ ರೆಂದು ಕಂಡುಬಂದಿರುವುದರಿಂದ ಹಿಂದುಗಳಾದ ನಾವು ಅವರ ಟಿಕೀಟುಗಳನ್ನು ಕೊಂಡು ಅವರಿಗೆ ಹಣ ಕೊಡುವುದರಿಂದ ನಾವೇ ಹಿಂದೂ ಧರ್ಮದವರನ್ನು ಕ್ರಿಶ್ಚಿಯನ್ನರಾಗಿರೆಂದು ಪ್ರೋತ್ಸಾಹ ಕೊಟ್ಟಂತಾಗುವುದರಿಂದ ಯಾವತ್ತು ಹಿಂದುಗಳು ಅದರಲ್ಲಿ ಮು ಖ್ಯವಾಗಿ ಈ ಹಿಂದು ತರುಣ ಸಂಘದ ಸದಸ್ಯರು ಗೋವಾ ಲಾಟ್ರಿ ಟಿಕೀಟುಗಳನ್ನು ತೆಗೆದುಕೊಳ್ಳಬಾರದೆಂದು ಈ ಸಭೆಯು ವಿನಂತಿಮಾಡಿಕೊಳ್ಳುತ್ತದೆಂಬ ಠರಾವು ಸರ್ವಾನುಮತದಿಂದ ತೀ ರ್ಮಾನವಾಯಿತು.

ಗುರುಲಿಂಗಪ್ಪ ಅಂಕಲಕೋಟ
ಕಾರ್ಯದರ್ಶಿ
ಹಿಂದು ತರುಣ ಸಂಘ ಹಾವೇರಿ.

## ಮೈಸೂರ ಕಾಂಗ್ರೆಸ್ ಸಮ್ಮೇಳನ.

ಚಿತ್ರದುರ್ಗ ಮೈಸೂರು ಕಾಂಗ್ರೆಸ್ಸಿನ ದ್ವಿತೀಯ ಸಮ್ಮೇಳ ನವನ್ನು ಜನವರಿ ತಿಂಗಳ ಎರಡನೆಯ ವಾರದಲ್ಲಿ ಚಿತ್ರದುರ್ಗ ದಲ್ಲಿ ನಡೆಯಿಸಬೇಕೆಂದು ಗೊತ್ತು ಮಾಡಲಾಗಿದೆ. ಈ ವರ್ಷ ಸಂಸ್ಥಾನದಲ್ಲಿ ಹೆಚ್ಚು ಕಾಂಗ್ರೆಸ್ ಸದಸ್ಯರಾಗಿರುವದರಿಂದಲೂ ಮತ್ತು ಈ ಅಧಿವೇಶನದಲ್ಲಿ ಚರ್ಚಿಸಲ್ಪಡಲಿರುವ ಮಹತ್ವದ ವಿಷಯಗಳ ಕಾರಣದಿಂದಲೂ ಸಾಧಾರಣ ೩೦೦ ಜನ ಕಾಂಗ್ರೆಸ್ ಕೆಲಸಗಾರರು ಮತ್ತು ನಾಯಕರು ಈ ಸಮ್ಮೇಳನದಲ್ಲಿ ಭಾಗವಹಿ ಸುವರು.

ಈ ಸಮ್ಮೇಳನದ ಕಾರ್ಯವನ್ನು ಸುಸಂಘಟಿತವಾಗಿ ಮತ್ತು ಯಶಸ್ವಿಯಾಗಿ ನೆರವೇರಿಸಲು ಮತ್ತು ಜಿಲ್ಲೆಯಲ್ಲಿ ರಚನಾತ್ಮಕ ಕಾರ್ಯಕ್ರಮಗಳನ್ನು ಕೈಕೊಳ್ಳಲು ಸುಶಿಕ್ಷಿತ ಕೆಲಸಗಾರರ ಒಂದು ಶಿಕ್ಷಣ ಶಿಬಿರವನ್ನು ತೆರೆಯಲು ನಿಶ್ಚಯಿಸಲಾಗಿದೆ.

ಆದುದರಿಂದ ದೇಶಾಭಿಮಾನಿಗಳು ಅದರಲ್ಲಿಯ ಚಿತ್ರದುರ್ಗ ಜಿಲ್ಲೆಯವರು ಸಮ್ಮೇಳನದ ಸ್ವಾಗತ ಸಮಿತಿಯ ಸದಸ್ಯ ರಾಗಿ ಯಥಾಶಕ್ತಿ ಸಹಾಯ ಮಾಡಬೇಕೆಂದು ಸ್ವಾಗತ ಸಮಿ ತಿಯ ಅಧ್ಯಕ್ಷರಾದ ಶ್ರೀ|| ಎಸ್. ನಿಜಲಿಂಗಪ್ಪನವರು ಪ್ರಕಟಿ ಸಿದ್ದಾರೆ.

## ಸ್ತುತ್ಯ ವೀರಶೈವರ ದೀಕ್ಷೆ.

ಕುಮಾರಿ ಗೌರವ್ವಾ ತಂದಿ ಚನ್ನಪ್ಪ ಲಗಳಿ ಸಾ|| ಧಾರವಾಡ ಕಮಲವ್ವ ತಂದಿ ಬಸಪ್ಪ ಕಾಡಣ್ಣವರ ಬ್ಯಾಡಗಿ ಈ ಉಭಯ ಸ್ತ್ರೀಯರು ಮೊದಲು ಲಿಂಗಾಯತರಿದ್ದು ಇವರ ಪಾಲಕರು ಕ್ರಿಶ್ಚ ನ್‌ರಾಗಿದ್ದರು. ಆದರೆ ಇವರಿಗೆ ಈಗ ಕ್ರಿಶ್ಚನ್ ಧರ್ಮದಲ್ಲಿ ಉಳಿ ಯಲು ಮನಸ್ಸು ಒಪ್ಪದೇ ಪೂರ್ವಜರ ಧರ್ಮದಲ್ಲಿಯೇ ಇರಬೇ ಕೆಂದು ಬಯಸಿ ತಮ್ಮನ್ನು ವೀರಶೈವ ಧರ್ಮದಲ್ಲಿ ತೆಗೆದುಕೊಳ್ಳಬೇ ಕೆಂದು ಇಲ್ಲಿಯ ವೀರಶೈವ ತರುಣಸಂಘದವರಿಗೆ ವಿನಂತಿ ಅರ್ಜಿ ಮಾಡಿಕೊಂಡಿದ್ದರು. ಇವರ ಈ ವಿನಂತಿ ಮೇರೆಗೆ ತಾ. ೧೨-೧೨-೩೭ ನೇ ದಿವಸ ಇಲ್ಲಿಯ ಶ್ರೀ ಬಸವೇಶ್ವರ ದೇವಸ್ಥಾನದಲ್ಲಿ ವೀರಶೈವ ತರುಣಸಂಘದವರು ಇಲ್ಲಿ ಎಲ್ಲ ಧರ್ಮಾಭಿಮಾನಿಗಳ ಒಪ್ಪಿಗೆಯಂತೆ ವಿಧಿಪೂರ್ವಕವಾಗಿ ಅವರಿಗೆ ವೀರಶೈವ ಧರ್ಮ ದೀಕ್ಷೆಯನ್ನು ಕೊ ಡಲಾಯಿತು. ಈ ದೀಕ್ಷಾ ಸಮಾರಂಭಕ್ಕೆ ಶ್ರೀ. ಅನ್ನದಾನಯ್ಯನ ವರು ಹಿರೇಮಠ ಶ್ರೀ. ಸಂಗಯ್ಯನವರು ಹಿರೇಮಠ ಶ್ರೀ ವೀರಪ್ಪ ಯ್ಯನವರು ಹಿರೇಮಠ ಮೊದಲಾದವರು ಹಾಗೂ ಎಲ್ಲ ಪ್ರತಿಷ್ಠಿತ ವೀರಶೈವರೂ ಬಂದಿದ್ದರು. ಶ್ರೀ ಅನ್ನದಾನಯ್ಯನವರು ಹಿರೇಮಠ ಇವರ ಹಸ್ತದಿಂದ ಶಿವದೀಕ್ಷೆಯನ್ನು ಹೊಂದಿ ಲಿಂಗಧಾರಣೆಯೂ ಮಾಡಲ್ಪಟ್ಟಿತು. ಆಮೇಲೆ ಎಲ್ಲರೂ ಕೂಡಿ ಸಹಭೋಜನವಾಗಿ ಶ್ರೀ ಬಸವೇಶ್ವರ ಜಯಜಯಕಾರದೊಂದಿಗೆ ದೀಕ್ಷಾಕಾರ್ಯವು ಮುಗಿಸಲ್ಪಟ್ಟಿತು.

ಓರ್ವ ಲಿಂಗಭಕ್ತ.

## ಹಂಜಗಿ ಗ್ರಾಮದ ಏಕೀಕರಣ.

ಶ್ರೀ. ಶಂಕರಲಿಂಗ ಸ್ವಾಮಿಗಳ ಪ್ರೇರಣೆಯಿಂದ ದಿನಾಲು ಎರಡು ವೇಳೆ ಭಕ್ತಿಜ್ಞಾನಪರ ವೇದಾಂತ ಶಾಸ್ತ್ರವು ನಡೆದಿದೆ. ಊರಲ್ಲಿಯ ಪ್ರಮುಖ ಜನರು ದಿನಾಲು ಕೇಳಲಿಕ್ಕೆ ಬರುತ್ತಾರೆ. ಶ್ರೀಗಳ ಉಪದೇಶದಿಂದ ವೀರಶೈವರಲ್ಲಿದ್ದ ಪಂಗಡವು ಒಕ್ಕಟ್ಟಾ ಗಿ ಎಲ್ಲರೂ ಪ್ರೇಮಭಾವದಿಂದ ಇದ್ದಾರೆಂದು ತಿಳಿಸಲು ಸಂತೋ ಷವೆನಿಸುತ್ತದೆ.

ಪ್ರತ್ಯಕ್ಷದರ್ಶಿ.

# ನಡೆದು ನುಡಿದರೆ ಜಯುವಾಗುವದು.

—ಶ್ರೀ—

( ಲೇ— ಶ್ರೀ. ಶಂಕರಲಿಂಗ ಸ್ವಾಮಿಗಳು ಹಂಚಿಗಿ. )

ವೀರಶೈವರಲ್ಲಿಯ ಜಾತಿಬೇಧಗಳು ಗುಣಕರ್ಮಗಳಿಗನುಸರಿಸಿ ನಿರ್ಣಯಿಸಲ್ಪಡದೆ ರೂಢಿಯಿಂದ ಜನ್ಮಸಿದ್ಧಗಳಾದವು. ಜಾತಿ ಜಾತಿಗೆ ಜಾತಿ ಧರ್ಮಗಳು ಬೇರೆ ಬೇರೆ ಯಾದವು ಆದರೆ ಸರ್ವಸಾಧಾರಣ ವೀರಶೈವ ಜನಸಮಾಜವು ಅಜ್ಞಾನ, ಮತ್ತು ಹೇಡಿತನದ ಕಾಡಿನಲ್ಲಿ ಕಣ್ಣುಕಾಣದ ಹಾಗಾಗಿದೆ. ಸತ್ಯ ಧರ್ಮದ ಸಾತ್ವಿಕ ತೇಜವು ಅವಿಚಾರಿಯಾದ ಜಾತಿಭೇದಗಳಲ್ಲಿ ಸಿಕ್ಕು ಮುಚ್ಚಿಹೋಗಿದೆ. ವೀರಶೈವ ಧರ್ಮದ ಶ್ರೇಷ್ಠತ್ವವು ಹೀನ ಪರಂಪರೆಯ ಜಾತಿ ಭೇದಗಳ ಅಧೀನವಾಗಿ ಮಾತುಮಾತಿಗೂ ಕೃತ್ರಿಮ ಬಂಧನಗಳಿಂದ ಬಿಗಿಯಲ್ಪಟ್ಟಿದೆ. ಗುರು ವರ್ಗದವರು ಈ ಜಾತಿಭೇದಗಳನ್ನು ತೆಗೆದೊಗೆಯಲು ಅವಕಾಶವೇ ಇಲ್ಲ. ಹಾಗೆ ಮಾಡಿದರೆ ನಮ್ಮ ಶ್ರೇಷ್ಠತ್ವವು ನಾಶವಾಗುವುದೆಂದೇ ಅವರ ದೃಢ ಅಭಿಪ್ರಾಯವು ಮತ್ತು ನಮ್ಮ ಪೂಜ್ಯತ್ವವು ಹೋದ ಮೇಲೆ ನಮ್ಮನ್ನು ಕೇಳುವರಾರು ? ಎಂಬ ಸಂಶಯವೂ ಇವರನ್ನು ಬಾಧಿಸಹತ್ತಿದೆ. ಆದ್ದರಿಂದಲೇ ಇವರು ಉದಾಸೀನರಾಗಿ ಕುಳಿತಿದ್ದಾರೆಂದು ನಾನು ದೃಢವಾಗಿ ಹೇಳಬಲ್ಲೆ.

ನನ್ನ ಪ್ರಿಯ ಗುರುಗಳೇ ಕಾಂಗ್ರೆಸ್ಸು ಇಷ್ಟು ಪ್ರಬಲವಾದದ್ದಕ್ಕೆ ಕಾರಣವೇನು ? ಹಳ್ಳಿಗಳಲ್ಲಿಯೂ ಪಟ್ಟಣಗಳಲ್ಲಿಯೂ ಕಾಂಗ್ರೆಸ್ಸಿನ ಸುದ್ದಿಯನ್ನು ತೆಗೆದರೆ ಗಂಡಸರೂ, ಹೆಂಗಸರೂ, ಸಣ್ಣ ಹುಡುಗರೂ ಸಹಿತ ಹಿರಿ ಹಿರಿ ಹಿಗ್ಗುವರೇಕೆ ? ನೋಡಿರಿ ಜಗದ್ವಂದ್ಯರಾದ ಗಾಂಧೀಜಿಯವರೂ ಅವರ ಅನುಯಾಯಿಗಳೂ ತಮ್ಮ ಸರ್ವ ಶಕ್ತಿಯನ್ನೂ ಉಪಯೋಗಿಸಿದ್ದಲ್ಲದೆ ಎಂಥ ಕಷ್ಟ ಬಂದರೂ ಪ್ರೀತಿಯಿಂದ ಅನುಭೋಗಿಸಲಿಲ್ಲವೆ ? ಮನೆಮಾರುಗಳ ಆಶೆಯನ್ನು ಬಿಟ್ಟು ಕಾರಾಗೃಹವಾಸಮಾಡಲಿಲ್ಲವೆ? ಅಂದಮೇಲೆ ಅವರಿಗೆ ಪೂಜ್ಯತ್ವವು ಹೋಗಿರುವುದೇನು ? ಅವರಾದರೂ ಜಾತಿಯ ಅಭಿಮಾನಿಗಳಾಗಿದ್ದರೆ ಇಷ್ಟು ಕ್ರಾಂತಿ ಆಗುತ್ತಿತ್ತೆ ? ಕಾಂಗ್ರೆಸ್ಸು ಎಲ್ಲರಿಗೂ ಬೇಕು. ಅದಂತಿರಲಿ. ಈಗಿನ ವೀರಶೈವ ಸಮಾಜವು ತನ್ನ ಶಕ್ತಿಯನ್ನು ಕಳೆದುಕೊಂಡು ನೆರಳುವ ಪ್ರಸಂಗ ಬಂದಿದೆ ಎಂಬುದನ್ನು ಕಣ್ಣಾರೆ ಕಂಡೂ ಸುಮ್ಮನೇ ಕೂಡ್ರುವುದು ನಿಮ್ಮ ಧರ್ಮವಲ್ಲ. ನೀವಾದರೂ ನಿಮ್ಮ ಶಕ್ತಿಯನ್ನು ಜಾತಿ ಸಂಗಡಗಳ ಏಕೀಕರಣಕ್ಕೆ ಉಪಯೋಗಮಾಡಿದರೆ ನಿಮ್ಮ ಪೂಜ್ಯತ್ವಕ್ಕೆ ಮತ್ತಿಷ್ಟು ಕಳೆ ಬರುವುದು. ಮಠದಲ್ಲೇ ಕುಳಿತು ಏಕೀಕರಣದ ಮಾತು ಮಾತಾಡಿದರೆ ಅದರಂತೆ ಲೇಖವನ್ನು ಬರೆದು ಕಳಿಸಿದರೆ ಅದನ್ನು ಓದಿ ಬಿಡುವರೇ ಹೊರ್ತು ಅದರಂತೆ ನಡೆಯುವದಿಲ್ಲ. ಲೇಖದಿಂದ ಉಪಯೋಗವಾದರೂ ಹಳ್ಳಿಗಳಲ್ಲಿ ಅಕ್ಷರ ಜ್ಞಾನವಿಲ್ಲದವರು ಬಹಳ. ಇವರ ಸಲುವಾಗಿ ಪ್ರಯತ್ನಮಾಡುವದೇ ಮುಖ್ಯ ಕರ್ತವ್ಯ. ಮುಖ್ಯವಾಗಿ ಹಳ್ಳಿಗಳಲ್ಲಿಯೇ ಜಾತಿ ಭೇದಗಳ ಗೊಂದಲವೇ ಗೊಂದಲವು. ಆದ್ದರಿಂದಲೇ ಗಾಂಧೀಜಿಯವರು ಹಳ್ಳಿಯ ಕಡೆಗೆ ವಿಶೇಷ ಲಕ್ಷ್ಯಕೊಡುತ್ತಾರೆ. ಹಳ್ಳಿಯೇ ಅವರ ಮನೆ. ಹಳ್ಳಿಯೇ ಅವರ ವಿಶ್ರಾಂತಿ ಸ್ಥಾನ.

ನೀವಾದರೂ ಯಾವ ಹಳ್ಳಿಯಲ್ಲಿ ಏಕೀಕರಣವಿಲ್ಲವೋ ಅಲ್ಲಿಯೇ ನೀವೇ ಮುದ್ದಾಮ ಹೋಗಿ ವೀರಶೈವರ ವೇದವೆನಿಸಿದ ವಚನಶಾಸ್ತ್ರಾನುಸಾರವಾಗಿ ಎಲ್ಲರಿಗೂ ತಿಳಿಯವಂತೆ ಬೋಧಮಾಡಿರಿ. ನೀವೂ ಅದರಂತೆ ನಡೆದು ತೋರಿಸಿರಿ. ಹಳ್ಳಿಯ ಜನರು ನುಡಿಯನ್ನು ನೋಡದಿದ್ದರೂ ನಡತೆಯನ್ನು ನೋಡುವುದು ಬಹಳ. ನೀವು ನಡೆದು ತೋರಿಸಿದ ಮೇಲೆ ಅವರು ಹಿಂಬಾಲಿಸುವರು. ಹ್ಯಾಗೆ ಮಹಾತ್ಮಾಜಿಯವರು ಇಡೀ ಹಿಂದುಸ್ಥಾನದ ಏಕೀಕರಣಕ್ಕೆ ತಮ್ಮ ಜ್ಞಾನಶಕ್ತಿಯನ್ನು ನೀಡಿದ್ದಲ್ಲದೆ ಅದರಂತೆ ನಡೆದು ತೋರಿಸಿದ್ದರಿಂದಲೇ ಇಡೀ ಹಿಂದುಸ್ಥಾನವು ಅವರ ಅಂಗೈಯಲ್ಲಿ ಕುಳಿತಿದೆ. ಒಟ್ಟಿನಮೇಲೆ ವೀರಶೈವ ಏಕೀಕರಣವನ್ನು ಮಾಡುವದು ನಿಮ್ಮನ್ನೇ ಅವಲಂಬಿಸಿರುವುದು. ಬಹಳ ಹೇಳುವುದೇನು ? ವೀರಶೈವರಲ್ಲಿಯ ಹಿಂದುಳಿದವರನ್ನು ಮುಂದಕ್ಕೆ ತರುವ ಮಂತ್ರವನ್ನೇ ಪಠಣಮಾಡಿರೆಂದು ಪ್ರೇಮಪೂರ್ವಕ ಬೇಡಿಕೊಳ್ಳುವೆನು.

---

## ವೀರಶೈವ ಹಡಪದವರ
# ದೀಕ್ಷಾ ಸಮಾರಂಭವು.

ಇದೇ ಈಶ್ವರನಾಮ ಸಂ. ಮಾರ್ಗಶಿರ ಶುದ್ಧ ೯ ರವಿವಾರ ದೇವರಹಿಪ್ಪರಗಿ ಗ್ರಾಮದಲ್ಲಿ ಕೈ|| ವಾ|| ಚೆನ್ನಪ್ಪಾ ಮಸಬಿನಾಳ ಸರಕಲ್ ಇನಸ್ಪೆಕ್ಟರ್ ಇವರ ಮನೆಯಲ್ಲಿ ಅತ್ಯಂತ ಶೋಭಾಯಮಾನವಾಗಿ ಶೃಂಗರಿಸಿದ ಮಂಟಪದೊಳಗೆ ವಿಜಾಪುರ ಗಚ್ಚಿನ ಮಠದ ಅಧ್ಯಕ್ಷರಾದ ಶ್ರೀ ಗುರು ರುದ್ರಮುನಿ ಶಿವಾಚಾರ್ಯರ ನೇತೃತ್ವದಲ್ಲಿ ಶ್ರೀ. ರಾಜಶೇಖರ ಶಾಸ್ತ್ರಿಗಳ ಪೌರೋಹಿತ್ಯದಿಂದ ವಿಧಿಪ್ರಕಾರ ೧೦-೧೨ ಹಡಪದವರ ಕುಟುಂಬುಗಳಿಗೆ ಒಳ್ಳೇ ವೈಭವದಿಂದ ದೀಕ್ಷಾ ಕಾರ್ಯವು ಸಾಂಗವಾಗಿ ಜರಿಗಿಸಲ್ಪಟ್ಟಿತು. ಈ ದೀಕ್ಷಾ ಸಮಾರಂಭ ಕಾರ್ಯಕ್ಕೆ ಸುತ್ತುಮುತ್ತಲಿನ ಗ್ರಾಮದ ಮಠಾಧಿಕಾರಿಗಳಲ್ಲದೆ ವಿಜಾಪುರದ ಸುಪ್ರಸಿದ್ಧ ವರ್ತಕರಾದ ಶ್ರೀ. ಶಂಕರಪ್ಪಾ ಧನಶೆಟ್ಟಿ ಇವರು ಆಗಮಿಸಿದ್ದರು. ಸೋಮವಾರ ಮುಂಜಾನೆ ಅದೇ ಮನೆಯಲ್ಲಿ ೧೦ ಘಂಟೆಗೆ ರಾ|| ರಾ|| ಷಣ್ಮುಖಪ್ಪ ಮಸಬಿನಾಳ ಇವರ ಸು| ಪು| ಲಕ್ಷ್ಮೀಬಾಯಿಯನ್ನು ರಾ| ರಾ| ಬಸಪ್ಪ ಕಂದಕೂರ ಇವರ ಸುಪುತ್ರರಾದ ಚನಬಸಪ್ಪ ಹಡಪದ ಮಾಸ್ತರ ಮುಕ್ಕಾಂ ಗದಗ ಇವರ ಸಂಗಡ ಒಳ್ಳೇ ವೈಭವದಿಂದ ಲಗ್ನ ಕಾರ್ಯವು ಸಾಗಿತು. ಸ್ಥಳ ಪರಸ್ಥಳದ ಯಾವತ್ತೂ ಮಹಾಶಯರಿಗೂ ಸಹಪಂಕ್ತಿಯಿಂದ ಮಿಷ್ಟಾನ್ನ ಭೋಜನ ದಕ್ಷಿಣೆ ತಾಂಬೂಲಾದಿಗಳಿಂದ ಸಂತೃಪ್ತಿಪಡಿಸಿದನಂತರ ಸಾಯಂಕಾಲದಲ್ಲಿ ಮೆರವಣಿಗೆಯ ಉತ್ಸವ ಕಾರ್ಯವು ಅತ್ಯಂತ ವೈಭವದೊಡನೆ ಜರುಗಿತು. ಈ ಘನ ಕಾರ್ಯಭಾಗದಲ್ಲಿ ಮಲ್ಲಪ್ಪ ಬಾವುರ ಡಾಕ್ಟರರು ಕೊಲ್ಹಾಪುರದ ಬಸವನ ಬಳಗದ ಕಾರ್ಯದರ್ಶಿಗಳಾದ ಬಿ. ಎಮ್. ಎಳಕೋಟೆಯವರೂ ಮತ್ತು ಕೆಲವು ವ್ಯಾಪಾರಸ್ಥರೂ ಶ್ರಮವಹಿಸಿ ಸರ್ವರ ಮೆಚ್ಚುಗೆಗೆ ಪಾತ್ರರಾಗಿದ್ದರು.

ಈ ಮಹತ್ಕಾರ್ಯ ಜರುಗಿದ ಸಂತೋಷ ಸಮಾರಂಭದಲ್ಲಿ ಶ್ರೀಯುತ ಚನಬಸಪ್ಪಾ ಹಡಪದ ಮಾಸ್ತರರು ಶ್ರೀಯುತ ಷಣ್ಮುಖಪ್ಪ ಮಸಬಿನಾಳ ಇವರು ವೀರಶೈವ ಹಡಪದ ಸಂಘಕ್ಕೆ ೫ ರೂ. ಗಳನ್ನು ಒಪ್ಪಿಸಿದ್ದನ್ನು ಆದರಪೂರ್ವಕವಾಗಿ ಸ್ವೀಕರಿಸುತ್ತೇನೆ. ವಧುವರರಿಗೂ ಮತ್ತು ಅವರ ಕುಟುಂಬದವರಿಗೂ ಶ್ರೀ ಗುರು ಬಸವೇಶ್ವರನು ಆಯುರಾರೋಗ್ಯವನ್ನೂ ಐಶ್ವರ್ಯಾಭಿವೃದ್ಧಿಯನ್ನೂ ಉಂಟುಮಾಡಲೆಂದು ಪ್ರಾರ್ಥಿಸುತ್ತೇನೆ—

ಕೇ. ಎ. ಹಡಪದ

ಕಾರ್ಯದರ್ಶಿ ವೀ. ಹ. ಸಂಘ

ಮುಕ್ಕಾಂ ಅಥಣಿ.

## ಶೋಚನೀಯ ನಿಧನ.

ನಿಜಾಮು ಇಲಾಖಾ ಬೀದರ ಜಿಲ್ಲಾ ಉದ್ಗಿರಿಯಲ್ಲಿ ತಾ. ೧೫-೧೨-೩೭ ನೆಯ ದಿವಸ ಇಲ್ಲಿಯ ವೀರಶೈವ ಸಮಾಜದ ಒಬ್ಬ ಪ್ರಮುಖರೂ ಮತ್ತು ಸಮಾಜ ಕಾರ್ಯಗಳಲ್ಲಿ ಬಹು ಮುಂದಾಳುಗಳೂ ಆಗಿದ್ದ ಶ್ರೀಮಂತ ಶಂಕರರಾವಜಿ ನೆಲ್ಲೆ ವಕೀಲ ಇವರು ಲಿಂಗೈಕ್ಯರಾದರೆಂದು ತಿಳಿಸಲು ಅತ್ಯಂತ ದುಃಖವಾಗುತ್ತದೆ. ಇವರ ನಿಧನದಿಂದ ಈ ಭಾಗದ ವೀರಶೈವ ಸಮಾಜ ಕಾರ್ಯಕ್ಕೆ ಬಹಳೇ ನಷ್ಟವಾದಂತಾಗಿದೆ. ಈ ಮಹನೀಯರು ನಿಧನದ ಕಾಲಕ್ಕೆ ೩೦ ವರುಷದವರು ಮಾತ್ರ ಇದ್ದರು. ಈ ಉತ್ಸಾಹದ ವಯಸ್ಸಿನಲ್ಲಿಯೇ ಇವರು ನಿಧನಹೊಂದಿದ್ದು ಇವರ ಕುಟುಂಬದವರಿಗೆ ಮಾತ್ರವೇ ಅಲ್ಲ; ಈ ಭಾಗದ ವೀರಶೈವರಿಗೇ ಅಪಾರವಾದ ದುಃಖವಾಗಿದೆ.

ಇವರು ಸಮಾಜಕಾರ್ಯಕ್ಕೆ ಧನಸಹಾಯವನ್ನು ಮಾಡುತ್ತಿದ್ದರು. ತಮ್ಮ ವಿದ್ವತ್ತಿನ ಉಪಯೋಗವು ಸಮಾಜಕ್ಕೆ ವಿಶೇಷವಾಗಿ ಆಗುವಂತೆ ಪ್ರಯತ್ನಿಸುತ್ತಿದ್ದರು. ತಾ. ೧೭ ನೆಯ ದಿವಸ ಇಲ್ಲಿಯ ನಾಗರಿಕರು ಪ್ರಚಂಡ ಸಭೆ ಸೇರಿ ಶ್ರೀ. ಶಂಕರರಾವಜಿಯವರ ವಿಷಯದಲ್ಲಿದ್ದ ತಮ್ಮ ಪ್ರೇಮಾದರಗಳನ್ನು ವ್ಯಕ್ತಗೊಳಿಸಿದರು. ಇವರ ಕುಟುಂಬದವರಿಗಾದ ದುಃಖದಲ್ಲಿ ಇಲ್ಲಿಯ ನಾಗರಿಕರೂ ಭಾಗಿಗಳಾಗಿದ್ದಾರೆ. ಓರ್ವನಾಗರಿಕ.

## ಸಿಂಧಖೇಡ.

ಪ್ರತಿ ವರುಷದಂತೆ ಮಾರ್ಗಶಿರ ಶ.ದ್ಧ ೧೨ ದಿವಸ ಶ್ರೀಮಂತ ಕರಬಸಪ್ಪ ಹತ್ತಿ ಇವರ ೧೩ ನೆಯ ಪುಣ್ಯತಿಥಿಯು ನಡೆಯಿತು. ಲಾತೂರ ಶ್ರೀ ದೇಸಿಕೇಂದ್ರ ಮಹಾರಾಜರು ಅಧ್ಯಕ್ಷರಾಗಿದ್ದರು. ಶ್ರೀ. ಸದಾನಂದರ ಕೀರ್ತನೆ ಶ್ರೀ. ಸಿದ್ಧರಾಮಪ್ಪ ಸೇಟಿ ವಕೀಲ ನಿಲಂಗಾ ಶ್ರೀ. ಬಾಬುರಾವ ಮಾಸ್ತರ ಮಲ್ಲಿಕಾರ್ಜುನ, ವೀರಭದ್ರ ಅಬ್ದುಲ್ ಮಾಸ್ತರ ಮೊದಲಾದವರು ವಿದ್ಯಾಪ್ರಸಾರದ ಬಗ್ಗೆ ಭಾಷಣಮಾಡಿದರು. ಈ ಪುಣ್ಯ ತಿಥಿ ಕಾಲಕ್ಕೆ ಜನಜಾಗೃತಿ ಕಾರ್ಯ ಮಾಡುವ ಈ ರೀತಿಯನ್ನು ಎಲ್ಲರೂ ಅಭಿನಂದಿಸಿದರು.

ಓರ್ವ ಪ್ರತ್ಯಕ್ಷದರ್ಶಿ.

## ಸ್ಪಷ್ಟೀಕರಣ.

ರಾ| ರಾ| ಮಲ್ಲಿಕಾರ್ಜುನಪ್ಪ ಎಸ್. ಕೋರಿ ಸೋಲಾಪುರ ಇವರು ಉಮರಾವತಿಯಲ್ಲಿ ಪ್ರಸಿದ್ಧವಾಗಿರುವ ತಾ ೧೫-೧೧-೧೯೩೭ ರ ಪಾಕ್ಷಿಕ ವೀರಶೈವ ಸಂಜೀವಿನಿಯಲ್ಲಿ ರಾ| ರಾ| ಮಲ್ಲಿಕಾರ್ಜುನಪ್ಪ ಅಪ್ಪಾರಾವ ಪಾಟೀಲ ಸೋಲಾಪುರ ಇವರ ಅಲ್ಪ ಪರಿಚಯವೆಂದು ಯಾವ ಲೇಖವು ಪ್ರಸಿದ್ಧ ಸಲ್ಪಟ್ಟಿತು. ಅದರಲ್ಲಿಯೂ "ಸೋಲಾಪುರದಲ್ಲಿಯ ಶ್ರೀ. ಸಿದ್ಧೇಶ್ವರ ದೇವಾಲಯದಲ್ಲಿ ಮಂಟಪವನ್ನು ಕಟ್ಟಿಸುವುದು ಅಶಕ್ಯವಾಗಿದ್ದಿತು. ಆದರೆ ಈ ಕೆಲಸ ರಾ| ರಾ| ಪಾಟೀಲರ ಪ್ರಯತ್ನದಿಂದಲೇ ಯಶಸ್ವಿಯಾಯಿತು. ಮತ್ತು ಇಲ್ಲಿಯ ಸಂಕ್ರಾಂತಿಯ ಯಾತ್ರೆಯಲ್ಲಿಯ ಸುಧಾರಣೆಯು ಪಂಚರಿಗೆ ಸ್ವಕರ್ತವ್ಯದ ಜ್ಞಾನಮಾಡಿಕೊಡುವುದು, ಮತ್ತು ಶ್ರೀ ಸಿದ್ಧೇಶ್ವರ ಕೆರೆಯ ಪ್ರಕರಣ, ಹಂಭಾಯಿ ದೇವಕರಣ ಹಾಯಸ್ಕೂಲದ ಹೋಮ್ ಗ್ರೌಂಡದ ಕಳೆದುಕೊಂಡ ಜಾಗಾವನ್ನು ತಿರುಗಿ ದೇವಸ್ಥಾನದ ಕಡೆಗೆ ದೊರಕಿಸಿಕೊಡುವ ಇವುಗಳ ಶ್ರೇಯಸ್ಸು ಪಾಟೀಲರ ಕಡೆಗೇನೇ ಇರುತ್ತದೆ." ಮೊದಲಾದ ಯಾವ ವಿಷಯವು ಉಲ್ಲೇಖಿಸಲ್ಪಟ್ಟಿರುತ್ತದೆ. ಅದು ಅಗದೀ ವಸ್ತು ಸ್ಥಿತಿಯನ್ನು ಬಿಟ್ಟದ್ದು ದೇವಸ್ಥಾನದ ಕಮಿಟಿಗೆ ನ್ಯೂನತ್ವವನ್ನು ತರುವದಿದೆ. ಅದ್ದರಿಂದ ಆ ವಿಷಯವನ್ನು ದೇವಸ್ಥಾನ ಕಮಿಟಿಯು ತೀವ್ರ ನಿಷೇಧಿಸುತ್ತದೆ. ಮೇಲಿನ ವಿಷಯವನ್ನು ತಮ್ಮ ಪತ್ರದಲ್ಲಿ ತೀವ್ರ ಮುದ್ರಣಗೊಳಿಸಿ ಪ್ರಸಿದ್ಧಗೊಳಿಸಬೇಕೆಂದು ವಿನಂತಿ ಅದೆ.

ಸೆಕ್ರೆಟರಿ
ಶ್ರೀ ಸಿದ್ಧೇಶ್ವರ ದೇವಸ್ಥಾನ ಸೋಲಾಪುರ

## ಹೊನಿಗ್ಯಾನ ಹಿಡಿದರು.

ರಾಯಚೂರ ಜಿಲ್ಲಾ ಗಂಗಾವತಿಯಲ್ಲಿ ಮಾಲಕಹಶೀಲದ ದಫೇದಾರ ಶ್ರೀ. ವೀರಪ್ಪ ಇವರು ಶಿಕಾರಿಗೆ ಹೋದಾಗ ಒಂದು ಹೊನಿಗ್ಯಾ ಮರಿಯನ್ನು ಹಿಡಿದುಕೊಂಡುಬಂದು ಸಾಕಿದ್ದಾರೆ. ಬೇಕಾದವರು ಬಂದು ಇದನ್ನು ಕೊಂಡುಕೊಂಡು ಹೋಗಬಹುದು.

ಓರ್ವ ಸ್ಥಳಿಕ.

## ಗುರುವಿನ ಹಳ್ಳಿ

ಇದೇ ಮಾರ್ಗಶಿರ ಬ| ೧೩ ಗುರುವಾರ ದಿನ ಇಲ್ಲಿಯ ಮಠದ ಶ್ರೀ. ದೊಡ್ಡ ಮಲ್ಲಾರಾಧ್ಯರ ಜಯಂತಿಯು ಜರಗುತ್ತದೆ. ಗಂಕಿಹಳ್ಳಿ ಶ್ರೀ. ಬಸವಾರಾಧ್ಯ ಸ್ವಾಮಿಗಳ ಭಾಷಣವಾಗುತ್ತದೆ. ತಾರೀಖು ೩೦-೧೨-೩೭ ನೆಯ ದಿನ ಸಕಲರೂ ಆಗಮಿಸಬೇಕಾಗಿ ಪ್ರಾರ್ಥನೆ.

ಜಿ. ಆರ್. ಗುರುದೇವಾರಾಧ್ಯ.
ಸ್ವಾಗತ ಸಂಘಾಧ್ಯಕ್ಷ.


ನಮ್ಮಲ್ಲಿ ಫೋಟೋ,
ಲೈನ್ ಬ್ಲಾಕುಗಳು,
ಹಿತ್ತಾಳೆ ಮತ್ತು ಸೀಸದ
ಬ್ಲಾಕುಗಳು ಅರಗಿನ
ಸೀಲು, ಜವಾನರ ಬಿಲ್ಲೆಗ
ಳು, ದೇವರ ತ್ರಿವರ್ಣದ
ಪತಾಕೆಗಳು, ಕ್ಯಾಲೆಂಡರು
ಗಳು, ನಿಮ್ಮ ಮನ
ಒಪ್ಪುವಂತೆ ತಯಾರಾ
ಗುತ್ತವೆ.
ಯೂಜರ್ವೊ ಅಂಡ್ ಕಂ.
ಚಿಕ್ಕಪೇಟೆ.
ಬೆಂಗಳೂರು ಸಿಟಿ

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣಮಂದಿರದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

The
Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ !
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ವರ್ಗಣಿ:- ಅಂಚೆಯ ವೆಚ್ಚ ಸೇರಿ ೩ ರೂ

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೩ ನೆಯ ಜನವರಿ ೧೯೩೮. | ಸಂಚಿಕೆ ೯೧

ಜನಸೇವೆಯೇ ದೇವರಸೇವೆ.

# ಹಿಂದು ಮಹಾಸಭೆಯ
## ಅಪೂರ್ವ ಅಧಿವೇಶನ.

ಸ್ವಾತಂತ್ರ್ಯವೀರ ಸಾವರಕರರ
ಉಜ್ವಲ ಮತ್ತು ಮನನೀಯ ಭಾಷಣ.
"ಹಿಂದುತ್ವದ ಸಂರಕ್ಷಣೆ ಮತ್ತು ಹಿಂದುಸ್ಥಾನದ ಸ್ವಾತಂತ್ರ್ಯ
ಇವುಗಳಿಗಾಗಿ ಹೋರಾಡುವುದೇ
ಹಿಂದು ಮಹಾ ಸಭೆಯ ಮುಖ್ಯ ಕಾರ್ಯಗಳು."

## ಮುಂಬೈಯಲ್ಲಿ ವರ್ಕಿಂಗ್ ಕಮಿಟಿ.

ತಾ. ೨-೧-೩೮ ನೆಯ ದಿವಸ ಮುಂಬೈಯಲ್ಲಿ ಆಲ್ ಇಂಡಿಯಾ
ಕಾಂಗ್ರೆಸ್ ವರ್ಕಿಂಗ್ ಕಮಿಟಿಯು
ಪ್ರಾರಂಭವಾಯಿತು.
ಪ್ರಾಂತಿಕ ಕಾಂಗ್ರೆಸ್ ಮಂತ್ರಿಮಂಡಲಗಳ ಕಾರ್ಯ ಪರಿಶೋಧನೆ
ಹರಿಪುರ ಕಾಂಗ್ರೆಸ್ಸಿನಲ್ಲಿ ಚರ್ಚಿಸುವ ವಿಷಯಗಳ
ಆಲೋಚನೆ ನಡೆದವು.

ದೇಹವೇ ದೇವಾಲಯ.



# ಶರಣ ಸಂದೇಶ

THE SHARANA SANDESHA.



## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೩ ನೆಯ ಜನವರಿ ೧೯೩೮. | ಸಂಚಿಕೆ ೧೯

## ಮಹತ್ವದ ಸುದ್ದಿಗಳು.

—ಶ್ರೀ—

—ಬೆಳಗಾವ ಬಾರ್ ಅಸೋಶಿಏಶನ್ನಿನವರು ಅಸೆಂಬ್ಲಿ ಡೆಪ್ಯುಟ ಸ್ಪೀಕರ್ ಶ್ರೀ. ವಕೀಲ ನಾರಾಯಣರಾವ ಜೋಶಿ ಇವರ ಅಧ್ಯಕ್ಷತೆಯಲ್ಲಿ ಕೂಡಿ ನ್ಯಾಯ ಮತ್ತು ಅಧಿಕಾರ ನಡೆಸುವ ಶಾಖೆಗಳು ಬೇರೆಯಾಗಬೇಕೆಂದೂ ಆನ್‍ರರಿ ಮ್ಯಾಜಿಸ್ಟ್ರೇಟರು ವಿಶ್ವವಿದ್ಯಾಲಯದ ಪದವಿಧರರಿರಬೇಕೆಂದೂ ನಿರ್ಣಯ ಮಾಡಿದರು.

—ಲಾಹೋರಿನಲ್ಲಿ ಶಾಹೀದಗಂಜದ ಹೋರಾಟ ಮತ್ತೆ ಪ್ರಾರಂಭವಾಗಿದೆ. ಮುಸಲ್ಮಾನರು ತಂಡು ಕಟ್ಟಿಕೊಂಡು ಸತ್ಯಾಗ್ರಹ ಮಾಡುತ್ತಿದ್ದಾರೆ. ಇವರಲ್ಲಿಯೇ ಇದಕ್ಕೆ ಕೆಲವರು ವಿರೋಧ ಮಾಡಿದ್ದರಿಂದ ಉಭಯ ಪಕ್ಷಗಳಲ್ಲಿ ಹೊಡೆದಾಟವಾಗಿ ಮೂರ್ರು ಜನರಿಗೆ ಗಾಯವಾಯಿತು.

—ಅಖಿಲ ಭಾರತ ಪ್ರಾಗತಿಕರ ೧೯ ನೆಯ ಪರಿಷತ್ತು, ಕಲಕತ್ತಾದಲ್ಲಿ ಕೂಡಿದಾಗ ಡಾ. ರವೀಂದ್ರನಾಥರ "ಜಯ ಜಯ ಭಾರತ" ಎಂಬ ಗೀತೆಯನ್ನು ೩೦ ಜನ ಬಾಲಕಿಯರು ಕೂಡಿ ಹಾಡಿದರು.

—ಮದ್ರಾಸಿನಲ್ಲಿ ಅಖಿಲ ಭಾರತ ವರ್ಣಾಶ್ರಮ ಪರಿಷತ್ತಿನ ಹತ್ತನೆಯ ಅಧಿವೇಶನವು ಕಳೆದ ೨೯ ನೆಯ ತಾರೀಖಿನ ದಿವಸ ಮುಂಬೈಯಿಯ ಶ್ರೀ. ದೇವದಾಸ ಮಾಧವಜಿ ಎಂಬವರ ಅಧ್ಯಕ್ಷತೆಯಲ್ಲಿ ಜರುಗಿತು.

—ರಾಜಮಹೇಂದ್ರಿಯಲ್ಲಿ ಒಂದು ಲಗ್ನದ ಮೆರವಣಿಗೆ ಹೊರಟಾಗ ಅದರ ಮುಂದೆ ಹಚ್ಚುತ್ತಿದ್ದ ಮದ್ದು ಹಾರಿ ಎಂಟು ಜನರು ಮೃತಪಟ್ಟರು.

—ಸಂಯುಕ್ತ ಪ್ರಾಂತದ ಕಾಂಗ್ರೆಸ್ ಸರಕಾರವು ಹರದೋಯಿ ಎಂಬಲ್ಲಿ ನಡೆದ ಕಾಂಗ್ರೆಸ್ ಪಕ್ಷದ ಸಭೆಯನ್ನು ೧೪೪ ನೆಯ ಶಸ್ತ್ರದಿಂದ ನಿಲ್ಲಿಸಿತು. ಆ ಸಭೆಯು ಜಮೀನದಾರರಿಗೂ ರೈತರಿಗೂ ಪರಸ್ಪರ ಅಸಂತೋಷವನ್ನುಂಟುಮಾಡುವಂತೆ ಪ್ರಯತ್ನಿಸುತ್ತಿದ್ದಿತಂತೆ.

—ಚೀನ ಸರಕಾರವು ೩೦ ಸಾವಿರ ವೈಮಾನಿಕರಿಗೆ ಶಿಕ್ಷಣ ಕೊಟ್ಟು ಜಪಾನಿನ ಮೇಲೆ ದಾಳಿಯಿಡುವದಿದೆಯಂತೆ.

—ಮುಂಬೈ ಸರಕಾರದ ಪಾರ್ಲಮೆಂಟರಿ ಸೆಕ್ರೆಟರಿಗಳಾದ ಶ್ರೀ. ಎಂ. ಪಿ. ಪಾಟೀಲರು ಗೋಕಾಕದ ಪ್ರಚಂಡ ಸಭೆಯಲ್ಲಿ ಸಾರ್ವಜನಿಕರ ಹಿತವೇ ಕಾಂಗ್ರೆಸ್ಸಿನ ಗುರಿಯಾಗಿದೆಯೆಂದು ತಮ್ಮ ಭಾಷಣದಲ್ಲಿ ಹೇಳಿದರು.

—ಸರದಾರ ವಲ್ಲಭ ಭಾಯಿ ಪಟೇಲರು ಮದ್ರಾಸದ ತಮ್ಮ ಭಾಷಣದಲ್ಲಿ ಈಗಿನ ಮಂತ್ರಿಮಂಡಲದವರ ಕಾರ್ಯಕ್ಕೂ ಹಿಂದಿನವರ ಆಡಳಿತೆಗೂ ಸರಿಹಚ್ಚಿ ಯಾರದು ಒಳ್ಳೆಯದೆಂಬುದನ್ನು ನಿರ್ಧರಿಸಿರೆಂದು ತಿಳಿಸಿದರು.

—ಅಹಮದಾಬಾದದ ಹಿಂದು ಮಹಾಸಭೆಗೆ ಜಗದ್ಗುರು ಶ್ರೀ. ಶಂಕರಾಚಾರ್ಯರು ಡಾ. ಕುರ್ತಕೋಟಿಯವರು ಒಂದು ಸಂದೇಶವನ್ನು ಕಳಿಸಿ ಹಿಂದುಸಂಘಟನೆಗಾಗಿ ಹೆಚ್ಚು ಪರಿಶ್ರಮ ಪಡಲು ತಿಳಿಸಿದ್ದಾರೆ.

—ಚೀನಿ ಸೇನಾಪತಿಗಳು ಪಂ. ಜವಾಹರಲಾಲ ನೆಹರುರವರಿಗೆ ಬರೆದ ಒಂದು ಪತ್ರದಲ್ಲಿ ತಾವು ಸೋಲುವುದಿಲ್ಲವೆಂದೂ ಈಗ ತಾನೆ ನಮ್ಮ ಯುದ್ಧ ಪ್ರಾರಂಭವಾಗಿದೆಯೆಂದೂ ಜಪಾನಿನ ಮಾತಿಗೆ ಮೋಸಹೋಗದೆ ಶಕ್ಯವಿರುವ ಎಲ್ಲ ಸಹಾಯಗಳನ್ನೂ ನಮಗೆ ಮಾಡಿರೆಂದೂ ತಿಳಿಸಿದ್ದಾರೆ.

—ಹಸ್ಮತ ಮತ್ತು ಚಂದನಸಿಂಗ ಎಂಬ ಇಬ್ಬರು ವೈಮಾನಿಕರು ಜಬಲಪುರದ ಕಡೆ ಹೋಗುವಾಗ ಅವರ ವಿಮಾನು ಕೆಳಗೆ ಬಿದ್ದು ಹಸ್ಮತರು ಮೃತಪಟ್ಟರು. ಸಿಂಗರು ತುಂಬಾ ಗಾಯಹೊಂದಿದ್ದಾರೆ.

—ಪಂಡಿತ ಜವಾಹರಲಾಲರು ಲಾರ್ಡ ಲೊಥಿಯನ್‍ರ ಸಂಗಡ ಸಂಭಾಷಿಸಿದಾಗ ಫೆಡರೇಶನ್ನಿಗೆ ತಮ್ಮ ಒಪ್ಪಿಗೆ ತೋರಿಸಿದರೆಂದು "ನವ ಸೌರಾಷ್ಟ್ರ" ಪತ್ರಿಕೆ ಪ್ರಕಟಿಸಿದೆಯಂತೆ.

—ಇದೇ ೧೦ ನೆಯ ತಾರೀಖಿಗೆ ವರ್ಧಾದಲ್ಲಿ ಹಿಂದಿ ಲಘು ಲೇಖಕರ ಪರಿಷತ್ತು ಕೂಡುವುದು.

## ವಿಮರ್ಶಾತ್ಮಕ ಪ್ರಶ್ನೋತ್ತರ.

### ಜಾತಿವಾದ ಮತ್ತು ಕಾಂಗ್ರೆಸ್.

ಪ್ರಶ್ನೆ— ಜಾತಿವಾದವು ರಾಷ್ಟ್ರಕ್ಕೆ ಅನರ್ಥಕರವಾಗಿದೆ. ಆದ್ದರಿಂದಲೇ ಕಾಂಗ್ರೆಸ್ಸಿನವರು ಅದನ್ನು ತಮ್ಮ ಹತ್ತಿರ ಕೂಡಾ ಬರದಂತೆ ಮಾಡಿದ್ದಾರೆ. ರಾಷ್ಟ್ರ ಭಕ್ತರು ಹೀಗೆ ಮಾಡುವುದೇ ಯುಕ್ತವಾಗಿದೆ. ಇದೇ ವಿಶಾಲ ದೃಷ್ಟಿ. ಹೀಗೆ ನಡೆಯುವವರೇ ನಿಷ್ಪಕ್ಷಪಾತಿಗಳು. ಇಂಥವರೇ ಈಗ ಎಲ್ಲರಿಂದ ಮನ್ನಣೆ ಹೊಂದುತ್ತಾರೆ. ಜಾತಿವಾದಿಗಳು ಪಕ್ಷಪಾತಿಗಳೂ ಸಂಕುಚಿತ ದೃಷ್ಟಿಯವರೂ ಆಗುತ್ತಾರೆ. ನೀವಾದರೂ ನಿಮ್ಮ ಪತ್ರಿಕೆಯಿಂದ ಜಾತಿವಾದವನ್ನು ತೆಗೆದುಹಾಕುವುದು ವಿಹಿತವಾಗಿಲ್ಲವೆ?

ಉತ್ತರ— ನೀವು "ಜಾತಿವಾದ" ಎಂದು ಯಾವುದಕ್ಕೆ ಹೇಳುವಿರೆಂಬುದನ್ನು ವಿವರವಾಗಿ ತಿಳಿಸಿದರೆ ಅದರಿಂದ ರಾಷ್ಟ್ರಕ್ಕೆ ಅನರ್ಥವಾಗುತ್ತದೆಯೋ? ಇಲ್ಲವೋ? ಎಂಬುದನ್ನು ಯೋಚಿಸಲಿಕ್ಕೂ ಕಾಂಗ್ರೆಸ್ಸಿನವರು ಬಿಟ್ಟಿದ್ದಾರೆಯೋ? ಇಲ್ಲವೋ? ಎಂಬುದನ್ನು ತಿಳಿದುಕೊಳ್ಳಲಿಕ್ಕೂ ಅನುಕೂಲವಾಗುತ್ತದೆ.

ಪ್ರಶ್ನೆ— ಜಾತಿವಾದ ಎಂದರೆ ನಾವು ಹಿಂದುಗಳು, ಅವರು ಮುಸಲ್ಮಾನರು, ಇವರು ಕ್ರಿಸ್ತರು, ಎಂದು ಹೇಳಿಕೊಳ್ಳುತ್ತಾ ಆಯಾಯ ಜಾತಿಯವರಲ್ಲಿ ಸ್ವಜಾತಿಯ ಬಗ್ಗೆ ಅಭಿಮಾನ ಹುಟ್ಟಿಸುವದು. ಇದರಿಂದ ರಾಷ್ಟ್ರಾಭಿಮಾನ ಇಲ್ಲದಂತಾಗುತ್ತದೆ. ಆದುದರಿಂದ ನಾನು ಹಿಂದು, ಅವ ಮುಸಲ್ಮಾನ್, ಇವ ಕ್ರಿಸ್ತಿಯನ್ ಎಂಬ ಜಾತಿಕಲ್ಪನೆ ಬರದಂತೆ ನಾವೆಲ್ಲರೂ ಹಿಂದಿ ಜನರು ಎಂಬುದನ್ನೇ ಅವರಲ್ಲಿ ಹುಟ್ಟಿಸಬೇಕು. ಹಿಂದಿ ಎಂಬುದೇ ಎಲ್ಲರ ಜಾತಿ. ಈ ದೇಶದಲ್ಲಿ ಈಗಿರುವ ಹಿಂದು, ಮುಸಲ್ಮಾನ್, ಕ್ರಿಸ್ತ ಎಂಬ ಜಾತಿಕಲ್ಪನೆ ಅಳಿಯುವಂತೆ ಮಾಡುವದೇ ರಾಷ್ಟ್ರವಾದ. ಆಯಾಯ ಜಾತಿಕಲ್ಪನೆ ಬೇರೂರುವಂತೆ ಮಾಡುವದೇ ಜಾತಿವಾದ. ಈ ಜಾತಿವಾದವು ರಾಷ್ಟ್ರಕ್ಕೆ ಅನರ್ಥಕರವಲ್ಲವೆ?

ಉತ್ತರ— ಹಿಂದುಸ್ಥಾನದ ನಿವಾಸಿಗಳು ಅವರು ಯಾವ ಜಾತಿ ಧರ್ಮ ಮತ ಪಂಥದವರಾಗಿದ್ದರೂ ಅವರೆಲ್ಲರೂ ನೀವು ಹೇಳುವಂತೆ 'ಹಿಂದಿ' ಜನರೇ ಸರಿ. ಹಿಂದಿ ಎಂಬುದು ಹಿಂದುಸ್ಥಾನದ ನಿವಾಸಿ ಎಂಬುದನ್ನೇ ಸೂಚಿಸುತ್ತದೆ. ಹೇಗೆ "ಜಪಾನಿ" ಎಂದರೆ ಜಪಾನ ದೇಶದವನೆಂದು ತೋರಿಸುತ್ತದೆಯೋ ಹಾಗೆ ಹಿಂದುಸ್ಥಾನದಲ್ಲಿ ಒಂದೇ ಜಾತಿಯವರು ಎಂದರೆ ನೀವು ಹೇಳುವಂತೆ ಹಿಂದು ಅಥವಾ ಮುಸಲ್ಮಾನ್ ಇಲ್ಲವೆ ಕ್ರಿಸ್ತರು ಇದ್ದಿದ್ದರೆ ಜಾತಿವಾದದ ಪ್ರಶ್ನೆಯೇ ಇರುತ್ತಿರಲಿಲ್ಲ. ಆದರೆ ಅಂಥ ಸ್ಥಿತಿಯು ಮಾತ್ರ ಈಗ ಇಲ್ಲವಷ್ಟೆ. ಎಂದಮೇಲೆ ಜಾತಿಯ ವಿಷಯ ಬಂದಾಗ ಹಿಂದು ಅಥವಾ ಮುಸಲ್ಮಾನ್ ಇಲ್ಲವೆ ಕ್ರಿಸ್ತ ಎಂದು ಹೇಳಲೇಬೇಕಾಗುತ್ತದೆ. ಮತ್ತು ಆಯಾಯ ಜಾತಿಯವರು ತಮ್ಮ ತಮ್ಮ ಹಕ್ಕು ಬಾಧ್ಯತೆಗಳ ರಕ್ಷಣೆಗಾಗಿ ಪ್ರಯತ್ನಿಸಲೇ ಬೇಕಾಗುತ್ತದೆ. ದೇಶದ ಸಂಗತಿ ಬಂದಾಗ ಎಲ್ಲರೂ "ಹಿಂದಿ" ಎಂದೇ ಹೇಳಿಕೊಂಡು ಆ ಪ್ರಕಾರ ನಡೆಯುವುದೇ ವಿಹಿತವು.

ಹೀಗೆ ಮಾಡಿದರೆ ರಾಷ್ಟ್ರಕ್ಕೆ ಅನರ್ಥವೇನಾಗುತ್ತದೋ ನಮಗೆ ತಿಳಿಯದು. ಕಾಂಗ್ರೆಸ್ಸಿನವರು ಹೀಗೆ ಹೇಳದೆ ನೀವು ಯಾವ ಜಾತಿಯವರೆಂದು ಕೇಳಿದರೆ "ಹಿಂದಿ" ಜಾತಿಯವರೆಂಬುದಾಗಿಯೂ ಯಾವ ರಾಷ್ಟ್ರದವರೆಂದು ಕೇಳಿದರೆ "ಹಿಂದಿ" ರಾಷ್ಟ್ರದವರೆಂಬುದಾಗಿಯೂ ಹೇಳುತ್ತಿದ್ದಾರೆಯೋ ಏನೋ ನಮಗೆ ಗೊತ್ತಿಲ್ಲ.

ಕಾಂಗ್ರೆಸ್ಸಿನವರು ಜಾತಿವಾದ ತಮ್ಮ ಹತ್ತಿರ ಕೂಡಾ ಬರದಂತೆ ಮಾಡಿದ್ದಾರೆಂದೂ ಇನ್ನೂ ಏನೇನೋ ಈಗ ಹೇಳಿದಿರಷ್ಟೆ. ಅದು ನಿಮ್ಮ ತಪ್ಪು ಗ್ರಹಿಕೆ. ಅವರು ಜಾತಿ ಕಲ್ಪನೆಯನ್ನೇ ಅಳಿದಿದ್ದಾರೆಂದೂ ಅವರಿಗೆ ರಾಷ್ಟ್ರದ ಕಲ್ಪನೆಯ ವಿನಾ ಬೇರೆ ಇಲ್ಲವೇ ಇಲ್ಲವೆಂದೂ ಅನೇಕರು ನಿಮ್ಮಂತೆಯೇ ತಿಳಿದುಕೊಂಡು ಹೇಳುತ್ತಿರುವುದುಂಟು. ತಮ್ಮ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳಲಿಕ್ಕೊ, ಅಥವಾ ಸ್ವಾರ್ಥ ಸಾಧಿಸಿಕೊಳ್ಳಲಿಕ್ಕೊ, ಅನ್ಯರು ಜಾತಿವಾದಿಗಳೆಂದು ಅವರನ್ನು ದೂರುವವರೂ ಅನೇಕರಿದ್ದಾರೆ. ಈಗ ಕಾಂಗ್ರೆಸ್ಸಿನಲ್ಲಿ ಸೇರಿ ಅದರ ಮೂಲಕ ಏನನ್ನು ಹೇಳಿದರೂ ನಡೆಯುತ್ತದೆಂದೇ ಅವರ ಗ್ರಹಿಕೆ. ವಿಚಾರಪರರು ಅವರ ಮಾತಿಗೆ ಬೆಲೆ ಕೊಡುವುದಿಲ್ಲ. ನೀವಾದರೂ ಸರಿಯಾಗಿ ಯೋಚಿಸಿದರೆ ಕಾಂಗ್ರೆಸ್ ಜಾತಿಯನ್ನು ಅಳಿದಿದೆಯೆಂದಾಗಲಿ ಅಥವಾ ಅಳಿಯಬೇಕೆಂದಾಗಲಿ ಹೇಳಿಲ್ಲವೆಂಬುದೇ ಸ್ಪಷ್ಟವಾಗುವುದು.

ಪ್ರಶ್ನೆ— ಕಾಂಗ್ರೆಸ್ಸಿಗೆ ಜಾತಿ ಕಲ್ಪನೆ ಆದೆಯೆ? ಅದು ಜಾತಿ ಕಲ್ಪನೆ ತೆಗೆದುಹಾಕಿರೆಂದು ಹೇಳುವುದಿಲ್ಲವೆ? ನಮ್ಮ ತಿಳುವಳಿಕೆ ತಪ್ಪೆ? ಸರಿ. ಸರಿ. ನಿಮ್ಮ ವಿಚಾರ ಬಹಳ ಸರಿಯಾಗಿದೆ. ಹೀಗೇ ಜನರಿಗೆ ಹೇಳಿರಿ.

ಉತ್ತರ— ತಾಳಿರಿ. ಸಿಟ್ಟಾಗಬೇಡಿರಿ. ನೀವು ಧ್ವಜವಂದನೆಗೆ ಅನೇಕ ಸಾರೆ ಹೋಗಿದ್ದೀರಷ್ಟೆ. ಅದು ಕಾಂಗ್ರೆಸ್ ಧ್ವಜವಷ್ಟೆ. ಅದು ರಾಷ್ಟ್ರೀಯ ಧ್ವಜವೆಂದೂ ಮಾನ್ಯವಾಗಿದೆಯಲ್ಲವೆ? ಕಾಂಗ್ರೆಸ್ಸಿನವರಿಗಂತೂ ಅದು ಪ್ರಾಣ ಸ್ವರೂಪವಾಗಿದೆಯಲ್ಲವೆ? ಎಂದಮೇಲೆ ಅದರಲ್ಲಿ ಅಡಕವಾಗಿರುವ ತತ್ವಗಳು ಕಾಂಗ್ರೆಸ್ಸಿನವರಿಗೆ ಮಾನ್ಯವಾಗಿವೆಯೆಂದೇ ಒಪ್ಪಲೇಬೇಕಲ್ಲವೆ? ಅದರಲ್ಲಿರುವ ಕೆಂಪು, ಹಸರು, ಬಿಳಿ, ಈ ಮೂರು ಬಣ್ಣಗಳು ಏನನ್ನು ಸೂಚಿಸುತ್ತವೆ? ಹೀಗೆ ಮೂರು ಬಣ್ಣಗಳನ್ನು ಏಕೆ ಇಟ್ಟಿದ್ದಾರೆ? ಯಾವುದಾದರೂ ಒಂದು ಬಣ್ಣವನ್ನಿಟ್ಟಿದ್ದರೆ ಬರುತ್ತಿರಲಿಲ್ಲವೆ? ಅಥವಾ ಬಣ್ಣಗಳನ್ನೇ ತೆಗೆದು ರಾಟಿ ಒಂದನ್ನೇ ಇಟ್ಟಿದ್ದರೆ ಬರುತ್ತಿರಲಿಲ್ಲವೆ? ಈ ಎಲ್ಲಾ ಸಂಗತಿಗಳನ್ನು ಶಾಂತಚಿತ್ತದಿಂದ ಯೋಚಿಸಿರಿ. ಆಮೇಲೆ ಯಾರದು ತಪ್ಪು ಗ್ರಹಿಕೆಯೆಂಬುದು ನಿಮಗೇನೇ ಗೊತ್ತಾಗುವುದು.

ಈ ಮೂರು ಬಣ್ಣಗಳಲ್ಲಿ ಕೆಂಪು ಹಿಂದು ಜಾತಿಯ, ಹಸರು ಮುಸಲ್ಮಾನ್ ಜಾತಿಯ, ಬಿಳಿದು ಇತರ ಎಲ್ಲ ಜಾತಿಗಳ ಸೂಚಕವೆಂದೇ ರಾಷ್ಟ್ರಧ್ವಜದಲ್ಲಿರುವ ಬಣ್ಣಗಳ ವ್ಯಾಖ್ಯೆಯನ್ನು ಕಾಂಗ್ರೆಸ್ಸಿನವರೇ ಹೇಳುವುದು ನಿಮಗೆ ಗೊತ್ತಿದ್ದಂತೆ ತೋರುವುದಿಲ್ಲ. ನೀವು ವಂದಿಸುವ ಧ್ವಜಕ್ಕೇನೇ ಹಿಂದು, ಮುಸಲ್ಮಾನ್, ಕ್ರಿಸ್ತ ಮೊದಲಾದ ಜಾತಿಗಳು ಅಂಟಿಕೊಂಡಿವೆ. ಹೀಗಿರುವಾಗ ಕಾಂಗ್ರೆಸ್ ಜಾತಿಯ ಕಲ್ಪನೆಯನ್ನೇ ಅಳಿದಿದೆಯೆಂದು ಜನರಿಗೆ ಹೇಳುವುದು ತಪ್ಪು ಗ್ರಹಿಕೆಯೋ? ಅಥವಾ ಮೋಸಗಾರಿಕೆಯೋ?

ಕಾಂಗ್ರೆಸ್ ಜಾತಿ ಕಲ್ಪನೆಯನ್ನು ಅಳಿದಿಲ್ಲ. ಅಳಿದುಬಿಡಿರೆಂದು ಬೋಧಿಸುತ್ತಲೂ ಇಲ್ಲ. ಹಾಗಾಗಿದ್ದರೆ ಬಣ್ಣಗಳ ಮೂಲಕ ಜಾತಿಯನ್ನು ಪ್ರತ್ಯೇಕಿಸಿದ ಈ ಧ್ವಜವನ್ನೇಕೆ ತನ್ನ ಮುಖ್ಯ ಚಿನ್ಹವನ್ನಾಗಿ ಮಾಡಿಕೊಳ್ಳುತ್ತಿದ್ದಿತು? ಹಿಂದುಸ್ಥಾನದಲ್ಲಿರುವವರೆಲ್ಲರೂ ಜಾತಿ ಕಲ್ಪನೆಯನ್ನೇ ತೆಗೆದುಹಾಕಿ ಕೇವಲ ಹೊಟ್ಟೆ ಬಟ್ಟೆಗಳ ಕಲ್ಪನೆಗಳನ್ನು ಮಾತ್ರವೇ ಇಟ್ಟುಕೊಳ್ಳಬೇಕೆಂಬುದೇ

ಕಾಂಗ್ರೆಸ್ಸಿನ ಹೇಳಿಕೆಯಾಗಿದ್ದರೆ ರಾಷ್ಟ್ರಧ್ವಜದಲ್ಲಿ ಮೇಟಿ, ರಾಟಗಳ ಗುರುತುಗಳನ್ನೇ ಮಾತ್ರ ಯಾವುದಾದರೊಂದು ಬಣ್ಣದಲ್ಲಿ ಹಾಕಿ ಬಿಡುತ್ತಿದ್ದರು. ಮತ್ತು ಆ ಬಣ್ಣಕ್ಕೆ ಹೀಗೆ ಜಾತಿಯ ಚಿನ್ಹವೆಂದು ಹೇಳುತ್ತಿರಲಿಲ್ಲ.

ಮುಂದೆ ಕಾಂಗ್ರೆಸ್ಸು ಸಮತಾವಾದಿಗಳ ಅಧೀನವಾದಾಗ ಈ ರಾಷ್ಟ್ರೀಯ ಧ್ವಜವೇ ಬೇರೆಯಾಗಬಹುದು. ಅಥವಾ ಈಗಿನ ವ್ಯಾಖ್ಯೆಯಾದರೂ ಬೇರೆಯಾಗಬಹುದು. ಏಕೆಂದರೆ ಜಾತಿ, ಧರ್ಮ, ಮತಗಳ ಕಲ್ಪನೆಯನ್ನು ತೆಗೆದುಹಾಕುವುದೇ ಅದರ ಕಾರ್ಯಗಳಲ್ಲಿ ಒಂದು ಮುಖ್ಯವಾದದ್ದಾಗಿದೆ. ಆ ಪ್ರಕಾರ ಕಾಂಗ್ರೆಸ್ಸು ಈಗೇನೂ ಜಾತಿಗಳನ್ನು ಅಳಿಯಲು ಪ್ರಯತ್ನಿಸುತ್ತಾ ಇಲ್ಲ. ಇಷ್ಟೇ ಅಲ್ಲ; ಅವುಗಳ ರಕ್ಷಣೆಯ ಹೊಣೆಗಾರಿಕೆಯನ್ನೇ ಅದು ಹೊತ್ತುಕೊಂಡಿದೆ. ಈ ದೇಶದ ಭಿನ್ನ ಭಿನ್ನ ಜಾತಿಗಳಲ್ಲಿ ಎಷ್ಟೇ ಅಲ್ಪ ಸಂಖ್ಯಾಕವಾದ ಜಾತಿಯಿದ್ದರೂ ಅದರ ಹಕ್ಕು ಬಾಧ್ಯತೆಗಳನ್ನು ಸಂರಕ್ಷಿಸುವುದು ತನ್ನ ಕರ್ತವ್ಯವೆಂದೇ ಕರಾಚಿಯಲ್ಲಿ ಕೂಡಿದಾಗ ಅದು ಸಾರಿ ಹೇಳಿದೆ.

ಆದಕಾರಣ ಕಾಂಗ್ರೆಸ್ಸು ನೀವು ಹೇಳಿದಂತೆ ಜಾತಿವಾದದಿಂದ ನಿರ್ಲಿಪ್ತವಾಗಿಲ್ಲ. ಜಾತಿಪಿಶಿಷ್ಟವಾಗಿಯೇ ಇದೆ. ಇದಕ್ಕೆ ಅದು ಇಟ್ಟುಕೊಂಡಿರುವ ಮೂರು ಬಣ್ಣದ ಧ್ವಜವೇ ಬಲವಾದದೃಷ್ಟಾಂತ. ಹಿಂದುಗಳು ಕೇವಲ ಕೆಂಪು (ಕಾವಿ) ಬಣ್ಣದ ಧ್ವಜವನ್ನು ಇಟ್ಟುಕೊಂಡಿದ್ದಾರೆ. ಮುಸಲ್ಮಾನರು ಕೇವಲ ಹಸರು ಬಣ್ಣದ ಧ್ವಜವನ್ನಿಟ್ಟುಕೊಂಡಿದ್ದಾರೆ. ಕಾಂಗ್ರೆಸ್ಸಿನಲ್ಲಿ ಈ ಎರಡೂ ಧರ್ಮದವರಿರುವುದರಿಂದ ಅವರವರ ಧ್ವಜ ವರ್ಣವನ್ನು ಕೂಡಿಸಿ ಕಾಂಗ್ರೆಸ್ಸಿನವರು ಈ ರಾಷ್ಟ್ರೀಯ ಧ್ವಜದಲ್ಲಿಟ್ಟಿದ್ದಾರೆ.

ಪ್ರಶ್ನೆ— ಹಾಗಾದರೆ ಕಾಂಗ್ರೆಸ್ಸಿಗೂ, ಹಿಂದು ಮಹಾ ಸಭೆಗೂ, ಮುಸ್ಲಿಂಲೀಗಿಗೂ, ಏನೂ ವ್ಯತ್ಯಾಸವಿಲ್ಲವೆಂದು ನೀವು ಹೇಳುವಿರೋ?

ಉತ್ತರ— ವ್ಯತ್ಯಾಸವೇಕಿಲ್ಲ? ಉಂಟೇ ಉಂಟು.

( ಸಶೇಷ. )

---

## ಪ್ರಾಚೀನ ವಸ್ತು ಪರಿಶೋಧನ ಪರಿಷತ್ತು.

ಹಿಂದುಸ್ಥಾನದಲ್ಲಿರುವ ಪ್ರಾಚೀನ ವಸ್ತುಗಳನ್ನು ಪರಿಶೋಧಿಸಿ ಮನುಷ್ಯ ಜಾತಿಯ ಜ್ಞಾನವನ್ನು ಅಭಿವೃದ್ಧಿಗೊಳಿಸಲಿಕ್ಕಾಗಿ ಅಖಿಲ ಭಾರತ ಪ್ರಾಚ್ಯ ವಿದ್ಯಾ ಪರಿಷತ್ತು ಕೂಡುತ್ತಿರುತ್ತದೆ. ಈ ಪರಿಷತ್ತಿನ ೯ ನೆಯ ಅಧಿವೇಶನವು ತ್ರಿವೇಂದ್ರಂ ಪಟ್ಟಣದಲ್ಲಿ ಕಳೆದ ೨೦ ನೆಯ ತಾರೀಖಿನ ದಿವಸ ಕೂಡಿದ್ದಿತು. ಆಕ್ಸ ಫರ್ಡ ವಿದ್ಯಾಪೀಠದ ಪ್ರಾಚ್ಯ ವಿದ್ಯಾ ವಿಶಾರದರಾದ ಡಾ. ಟಾಮಸ್ ಇವರು ಅಧ್ಯಕ್ಷರಾಗಿದ್ದರು.

ದಕ್ಷಿಣ ಹಿಂದುಸ್ಥಾನದಲ್ಲಿ ಪ್ರಾಚೀನ ವಸ್ತು ಸಂಶೋಧನೆಯಾಗುವುದು ಅತ್ಯಗತ್ಯವೆಂದೂ ಇದರಿಂದ ಕೇವಲ ಹಿಂದುಸ್ಥಾನದ ಪ್ರಾಚೀನ ಸ್ಥಿತಿಯಮೇಲೆ ಬೆಳಕು ಬೀಳುವುದಲ್ಲದೆ ಮನುಷ್ಯ ಜಾತಿಯ ಪ್ರಾಚೀನ ಚರಿತ್ರೆಯ ಮೇಲೆಯೂ ಪ್ರಕಾಶ ಬೀಳುವುದೆಂದೂ ಅನೇಕ ವಿದ್ವಾಂಸರು ಅಭಿಪ್ರಾಯಪಟ್ಟರು.

ಹಿಂದುಸ್ಥಾನ ಸರಕಾರದ ಪ್ರಾಚೀನ ವಸ್ತು ಸಂಶೋಧನ ಶಾಖೆಯ ಮುಖ್ಯಾಧಿಕಾರಿಗಳಾದ ಶ್ರೀ. ಕಾಶೀನಾಥ ಪಂತ ದೀಕ್ಷಿತ ಇವರು "ಸಿಂಧುನದ ಪ್ರದೇಶದಲ್ಲಿಯ ಪ್ರಾಚೀನ ಸಂಸ್ಕೃತಿ" ಎಂಬ ಅತ್ಯಂತ ಮಹತ್ವದ ಸಚಿತ್ರ ನಿಬಂಧವನ್ನು ಓದಿದರು.

ಹಿಂದುಸ್ಥಾನದ ಈಗಿನ ರಾಜಕೀಯ, ಸಾಮಾಜಿಕ, ಧಾರ್ಮಿಕ, ಸುಧಾರಣೆಗಳ ದೃಷ್ಟಿಯಿಂದ ಕೂಡಾ ಪ್ರಾಚೀನ ಸ್ಥಿತಿಯ ಶೋಧವಾಗುವುದು ಹಿತಕರವೆಂದೇ ಅಲ್ಲಿ ನಡೆದ ಸಂಗತಿಗಳಿಂದ ತೋರುತ್ತದೆ.

---

## ಶರಣ ಸಾಹಿತ್ಯ.

ಶರಣ ಸಾಹಿತ್ಯ ಎಂಬ ಮಾಸಪತ್ರಿಕೆಯ ಮೊದಲನೆಯ ಸಂಚಿಕೆಯು ನಮ್ಮ ಕಡೆ ಬಂದಿದೆ. ಕರ್ನಾಟಕದ ಪ್ರಸಿದ್ಧ ಕೀರ್ತನಕಾರರಾದ ಕೀರ್ತನ ಕೇಸರೀ ಶ್ರೀ. ಶಿವಮೂರ್ತಿ ಶಾಸ್ತ್ರಿಗಳವರು ಇದರ ಸಂಪಾದಕರು. ಡೆಮ್ಮಿ ಎಂಟನೆಯ ಒಂದು ಭಾಗದ ಆಕಾರದಲ್ಲಿ ೬೮ ಪುಟಗಳುಳ್ಳ ಪತ್ರಿಕೆ. ಮುದ್ದಾದ ಮುದ್ರಣ. ಬೆಂಗಳೂರು "ಮಾಡಲ್ ಮುದ್ರಾಕ್ಷರ ಶಾಲೆ"ಯಲ್ಲಿ ಅಚ್ಚಾಗಿ ಅಲ್ಲಿಂದಲೇ ಪ್ರಕಟವಾಗುತ್ತದೆ. ವಾರ್ಷಿಕ ಚಂದಾ ೩-೮-೦

ಈ ಮಾಸ ಪತ್ರಿಕೆಯ 'ಉದ್ದೇಶವನ್ನು ಕುರಿತು ಸಂಪಾದಕ ಮಹಾಶಯರು ಬರೆದ ಆತ್ಮನಿವೇದನೆ ಎಂಬ ಲೇಖನದಲ್ಲಿ ಹೀಗೆ ಹೇಳಿದ್ದಾರೆ—

"ಹಿಂದೂಧರ್ಮ, ಹಿಂದೂಸಂಸ್ಕೃತಿ, ಕನ್ನಡ ದೇಶ, ಭಾಷೆ, ಸಾಹಿತ್ಯ, ಲಲಿತ ಕಲೆ, ವೀರಶೈವ ಸಮಾಜ ಮತ್ತು ವಾಙ್ಮಯದ ಸೇವೆಯನ್ನು ಮಾಡುವುದೇ ಈ ಪತ್ರಿಕೆಯ ಮುಖ್ಯೋದ್ದೇಶವಾಗಿದೆ. ಕನ್ನಡ ಮತ್ತು ಸಂಸ್ಕೃತ ಪ್ರಾಚೀನ ಗ್ರಂಥಗಳನ್ನು ಶುದ್ಧವಾಗಿಯೂ, ಸುಂದರವಾಗಿಯೂ ಪ್ರಕಟಿಸುವುದು ಹಾಗೂ ಮೇಲೆ ನಿರೂಪಿಸಿದ ತತ್ವಗಳನ್ನು ಪ್ರತಿಪಾದಿಸುವ ನವೀನ ಗ್ರಂಥಗಳನ್ನು ಬರೆಸಿ ಪ್ರಕಟಿಸುವುದು ಈ ಪತ್ರಿಕೆಯ ಮತ್ತೊಂದು ಮುಖ್ಯೋದ್ದೇಶವಾಗಿದೆ."

ಈ ವಿವರಣೆಯಿಂದ ಪತ್ರಿಕೆಯ ಉದ್ದೇಶವು ಸ್ಪಷ್ಟ ಗೊತ್ತಾಗುತ್ತದೆ. ಇಂತಹ ಉದಾತ್ತ ಉದ್ದೇಶಗಳನ್ನು ನೆರವೇರಿಸಲು ಸಮರ್ಥರೂ ವಿದ್ವಾಂಸರೂ ಆದ ಶ್ರೀ. ಶಿವಮೂರ್ತಿ ಶಾಸ್ತ್ರಿಗಳವರ ಸಂಪಾದಕತ್ವದಲ್ಲಿ ಇದು ಪ್ರಕಟವಾದುದು ಕನ್ನಡಿಗರಿಗೆ ತುಂಬಾ ಸಂತೋಷದ ಸಂಗತಿಯೇ ಸರಿ.

ಈ ಮೊದಲನೆಯ ಸಂಚಿಕೆಯಲ್ಲಿ ಪತ್ರಿಕೆಯ ಉದ್ದೇಶದಂತೆ ಸಂಪಾದಕ ಮಹಾಶಯರು ಬರೆದಿರುವ ಶ್ರೀ ನಿಜಗುಣ ಶಿವಯೋಗಿ, ಧರ್ಮವೀರ ಕೈ. ಯಜಮಾನ ವೀರಸಂಗಪ್ಪನವರು ಎಂಬ ಎರಡು ಸಚಿತ್ರ ಲೇಖನಗಳು ಸಂಶೋಧಾತ್ಮಕವಾದವುಗಳೂ, ಮಹತ್ವದವುಗಳೂ ಆಗಿವೆ.

ಶ್ರೀಯುತ ಟಿ. ಎನ್. ಚೆನ್ನಪ್ಪನವರು ಸಂಪಾದಕ "ಸ್ಥಳೀಯ ಸಂಸ್ಥೆಗಳ ಪತ್ರಿಕೆ" ಬೆಂಗಳೂರು. ಇವರು ಬರೆದ "ಶಿವಾನುಭವ ಮಾಸಿಕವೂ ಅದರ ಮಹತ್ವವೂ" ಎಂಬ ಲೇಖನವು, ಶ್ರೀಯುತ ಯುಗಟಿ ವೀರಪ್ಪನವರು ಬಿ. ಎ. ಎಲ್. ಎಲ್. ಬಿ ವಕೀಲ ಹಾವೇರಿ ಇವರು ಬರೆದ "ಶರಣಸತಿ ಲಿಂಗಪತಿ" ಎಂಬ ಲೇಖನವು ವಿಚಾರ ಪರಿಪ್ಲುತವಾಗಿವೆ.

ಈ ಪತ್ರಿಕೆಯನ್ನು ಕನ್ನಡಿಗರೆಲ್ಲರೂ ಮುಖ್ಯವಾಗಿ ವೀರಶೈವರಂತೂ ಅಗತ್ಯವಾಗಿ ಸಂಗ್ರಹಿಸಬೇಕು. ಇದು ಕನ್ನಡಿಗರಿಂದ ತುಂಬಾ ಪ್ರೋತ್ಸಾಹಿಸಲ್ಪಟ್ಟು ತನ್ನ ಉದ್ದೇಶದಂತೆ ಧರ್ಮದ ಮತ್ತು ನಾಡಿನ ಸೇವೆಯನ್ನು ನಿರಂತರ ಮಾಡುತ್ತಿರಲೆಂದು ನಾವು ಹಾರೈಸುತ್ತೇವೆ.

# ಹಿಂದೀ ತರುಣರು
## ಹಿಂದುಸ್ಥಾನದ ಸೈನಿಕರಾಗಬೇಕು.

ಧರ್ಮಾತ್ಮಾ ಮಾಲವೀಜಿಯವರ ೭೭ ನೆಯ ವರ್ಷ ವರ್ಧಂತಿಯು ಕಾಶಿ ಹಿಂದು ವಿಶ್ವವಿದ್ಯಾಲಯದಲ್ಲಿ ತಾ. ೨೫-೧೨-೩೭ನೆಯ ದಿವಸ ಸಂಭ್ರಮದಿಂದ ಜರುಗಿತು. ಆ ದಿನ ಧರ್ಮಾತ್ಮರ ದೀರ್ಘಾಯುರಾರೋಗ್ಯಗಳ ಚಿಂತನೆಯ ಅನೇಕ ತಂತಿಗಳು ದೇಶ ವಿದೇಶಗಳಿಂದ ಬಂದಿದ್ದವು



ಪಂ. ಮಾಲವೀಜಿಯವರು

ಆ ದಿನವೇ ಹಿಂದು ವಿಶ್ವವಿದ್ಯಾಪೀಠದ ಶ್ರೀ ಶಿವಾಜಿ ಭವನದ ಮೇಲೆ ರಾಷ್ಟ್ರಧ್ವಜವನ್ನು ಮಾಲವೀಜಿಯವರ ಹಸ್ತದಿಂದ ಇರಿಸುವ ಮಂಗಲಕಾರ್ಯವು ವೈಭವದಿಂದ ಜರುಗಿತು. ಆಗ ಮಾಲವೀಜಿಯವರು ತಮ್ಮ ಭಾಷಣದಲ್ಲಿ ಹಿಂದುಸ್ಥಾನದ ತರುಣರನ್ನು ಕುರಿತು ಈ ಕೆಳಗಿನಂತೆ ಬೋಧಿಸಿದರು—

"ತರುಣರೇ, ನೀವು ಈ ರಾಷ್ಟ್ರ ಧ್ವಜದಡಿಯಲ್ಲಿ ಸೇರಿ ಐಕಮತ್ಯದಿಂದ ಹೋರಾಡಿರಿ. ನೀವು ದೇಶಭಕ್ತರೂ ಪ್ರಗತಿಪರರೂ ಆಗಿರಿ. ಜಪಾನಿಗಳ ಈಗಿನ ಯುದ್ಧದಿಂದ ಅವರು ಕ್ರೂರರಾಗಿ ತೋರುತ್ತಿರಬಹುದು. ಆದರೆ ಅವರ ರಾಷ್ಟ್ರಭಕ್ತಿ ಮತ್ತು ಪ್ರಗತಿಪರ ಪ್ರವೃತ್ತಿ ಇವು ಅನುಕರಣೀಯವಾಗಿವೆ. ಹಿಂದೀ ತರುಣರೆಲ್ಲರೂ ಹಿಂದುಸ್ಥಾನದ ರಕ್ಷಣೆಗಾಗಿ ಶೂರ ಸೈನಿಕರಾಗಬೇಕು."

---

## ಮುಸ್ಲಿಂ ವಿದ್ಯಾರ್ಥಿಗಳ ಆದರ್ಶ !

ಕಳೆದ ೨೭ ನೆಯ ತಾರೀಖಿನ ದಿವಸ ಕಲಕತ್ತಾದಲ್ಲಿ ಅಖಿಲ ಭಾರತ ಮುಸ್ಲಿಂ ವಿದ್ಯಾರ್ಥಿಗಳ ಪರಿಷತ್ತು ಕೂಡಿತ್ತು. ದಿಲ್ಲಿ, ಅಲಿಗಡ, ಲಾಹೋರ, ದಕ್ಷಿಣ ಹೈದರಾಬಾದ, ಲಖನೌ ಮೊದಲಾದ ಅನೇಕ ಸ್ಥಳಗಳಿಂದ ಮುಸ್ಲಿಂ ವಿದ್ಯಾರ್ಥಿಗಳು ಬಂದಿದ್ದರು.

ಈ ಪರಿಷತ್ತಿಗೆ ಪ್ರೊಫೆಸರ್ ಹುಮಾಯೂನ ಕಬಿರ ಇವರು ಅಧ್ಯಕ್ಷರಾಗಿದ್ದರು. ಮುಸ್ಲಿಂ ವಿದ್ಯಾರ್ಥಿಗಳು ಜಾತಿವಿಶಿಷ್ಟವಾಗಿಯೇ ತಮ್ಮಲ್ಲಿ ಸಂಘಟನೆಯನ್ನುಂಟುಮಾಡಿಕೊಳ್ಳಬೇಕೆಂದು ಈ ಪರಿಷತ್ತಿನಲ್ಲಿ ಠರಾವಾಯಿತು. ಹೇಗಿದೆ ಮುಸ್ಲಿಂ ವಿದ್ಯಾರ್ಥಿಗಳ ಆದರ್ಶ ?

ಪಂಡಿತ ಮಾಲವೀಜಿಯವರು ಹಿಂದು ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ಮುಂದೆ ಭಾಷಣಮಾಡಿ ಹಿಂದಿ ತರುಣರೆಲ್ಲರೂ ರಾಷ್ಟ್ರೀಯ ಧ್ವಜದಡಿಯಲ್ಲಿ ಸೇರಿ ಐಕಮತ್ಯದಿಂದ ಹೋರಾಡುತ್ತಾ ಹಿಂದುಸ್ಥಾನವನ್ನು ರಕ್ಷಿಸುವ ಸೈನಿಕರಾಗಿರೆಂದು ಹೇಳಿದರು. ಅವರು ವಿದ್ಯಾರ್ಥಿಗಳ ಮುಂದಿಟ್ಟ ಆದರ್ಶ ಹೇಗೆ ? ಈ ಮುಸ್ಲಿಂ ವಿದ್ಯಾರ್ಥಿ ಪರಿಷತ್ತಿನಲ್ಲಿ ಇವರ ಮುಂದಿಟ್ಟ ಆದರ್ಶ ಹೇಗೆ ? ಇದೇ ಹಿಂದು ಮತ್ತು ಮುಸಲ್ಮಾನ್ ಅನೇಕ ಮುಂದಾಳುಗಳಲ್ಲಿರತಕ್ಕ ಮಹತ್ವದ ವ್ಯತ್ಯಾಸ.

## ಗಾಂಧೀಜಿಯವರ ಉಪದೇಶ.

ಧಾರ್ಮಿಕ ಹುಚ್ಚುತನವನ್ನು ತೆಗೆದು ಹಾಕುವುದು ಎಷ್ಟು ಅಗತ್ಯವಾಗಿದೆಯೋ ಅಷ್ಟೇ ದುಡ್ಡಿಗಾಗಿ ಧರ್ಮದ ವೇಷಹಾಕಿಕೊಂಡ ಮೋಸಗಾರರ ನಡತೆಯನ್ನು ಬೈಲಿಗೆ ತರುವುದೂ ಅಗತ್ಯವಾಗಿದೆ.

ಅಜ್ಞರ ಧಾರ್ಮಿಕ ಹುಚ್ಚುತನವನ್ನು ತೆಗೆದು ಹಾಕುವುದು ಧರ್ಮಲಂಡರ ಮೋಸಗಾರಿಕೆಯನ್ನು ನಿವಾರಣೆ ಮಾಡುವುದಕ್ಕಿಂತ ಎಷ್ಟೋ ಸುಲಭ.

ನಾವು ಆರ್ಥಿಕ ಗುಲಾಮಗಿರಿಯನ್ನು ತೆಗೆದು ಹಾಕಬೇಕಾಗಿದ್ದರೆ ನಮಗೆ ಬೇಕಾಗುವ ಬಟ್ಟೆಯನ್ನು ನಾವೇ ಒದಗಿಸಿಕೊಳ್ಳಬೇಕು. ಕೈ ನೂಲಿನಿಂದ ಕೈ ಮಗ್ಗಗಳಲ್ಲಿ ನೇಯಿದ ಬಟ್ಟೆಯನ್ನೇ ಉಪಯೋಗಿಸಬೇಕು.

—ಯಂಗ್ ಇಂಡಿಯಾ. ತಾ. ೮-೯-೧೯೨೦

---

## ಹಿಂದುಗಳು
## ಸೈನ್ಯಶಾಖೆಯಲ್ಲಿ ಕಡಿಮೆಯೇಕೆ ?

"ಈಗ ಹಿಂದುಸ್ಥಾನದ ಸೈನ್ಯಶಾಖೆಯಲ್ಲಿ ಹಿಂದುಸ್ಥಾನದವರು ಸಾಧಾರಣ ೧॥ ಲಕ್ಷ ಸೈನಿಕರಿದ್ದಾರೆ. ಇವರಲ್ಲಿ ಪಂಜಾಬ ಪ್ರಾಂತದವರು ೮೬ ಸಾವಿರ, ಗಡಿನಾಡಿನವರು ೬ ಸಾವಿರ, ಮುಂಬೈ ಪ್ರಾಂತದವರು ೭ ಸಾವಿರ, ಮದ್ರಾಸ್ ಪ್ರಾಂತದವರು ೪ ಸಾವಿರ ಈ ಪ್ರಕಾರ ಇದ್ದಾರೆ.

ಈ ಸೈನಿಕರಲ್ಲಿ ಯಾವ ಯಾವ ಜಾತಿಯವರು ಎಷ್ಟೆಷ್ಟಿದ್ದಾರೆಂಬುದು ತಿಳಿಯುವಂತಿಲ್ಲದಿದ್ದರೂ ಆಯಾಯ ಪ್ರಾಂತಗಳ ಮೇಲಿಂದ ಮುಸಲ್ಮಾನರ ಸಂಖ್ಯೆಯೇ ಇದರಲ್ಲಿ ಹೆಚ್ಚಾಗಿದೆಯೆಂಬುದು ಸ್ಪಷ್ಟವಾಗುತ್ತದೆ." ಎಂದು ಕೇಸರೀ ಪತ್ರಿಕಾಕರ್ತರು ತಾ. ೨೮-೧೨-೩೭ ನೆಯ ತಾರೀಖಿನ ಅಗ್ರಲೇಖನದಲ್ಲಿ ಹೇಳಿದ್ದಾರೆ.

ಹೀಗೆ ಹಿಂದುಗಳ ಸಂಖ್ಯೆಯೇ ಸೈನ್ಯಶಾಖೆಯಲ್ಲಿ ಕಡಿಮೆಯಾಗಿರುವುದೇಕೆ ? ಸೈನ್ಯದಲ್ಲಿ ಸೇರಲು ಬೇಕಾದ ಬಲ, ಶೌರ್ಯಾದಿ ಗುಣಗಳುಳ್ಳವರ ಸಂಖ್ಯೆ ಹಿಂದುಗಳಲ್ಲಿ ಮುಸಲ್ಮಾನರ ಪ್ರಮಾಣದ ಮೇಲಿಂದ ಕಡಿಮೆಯೆಂದೇ ಹೇಳುವುದರಲ್ಲಿ ಸತ್ಯಾಂಶವಿಲ್ಲವೆ ? ಮುಸಲ್ಮಾನರಿಗಿಂತ ಶೀಖರಲ್ಲಿ ಈ ಪ್ರಮಾಣ ಹೆಚ್ಚಿಗಿದೆಯೆಂಬುದು ನಿರ್ವಿವಾದವಷ್ಟೆ. ನರ್ಮದೆಯ ಉತ್ತರ ಭಾಗದ ಪ್ರಾಂತದವರಲ್ಲಿ ಸೈನಿಕರ ಸಂಖ್ಯೆ ಹೆಚ್ಚೇಕೆ ? ಅದರ ದಕ್ಷಿಣ ಭಾಗದವರಲ್ಲಿ ಸೈನಿಕರ ಸಂಖ್ಯೆ ಕಡಿಮೆಯೇಕೆ ? ಮುಂಬೈ ಪ್ರಾಂತದಷ್ಟು ಮದ್ರಾಸ್ ಪ್ರಾಂತದಲ್ಲಿ ಸೈನ್ಯಶಾಖೆಗೆ ಸೇರಲು ಅರ್ಹತೆಯುಳ್ಳವರ ಸಂಖ್ಯೆ ಕಡಿಮೆಯಾಗಿರುವುದೇಕೆ ? ಈ ಎಲ್ಲ ಸಂಗತಿಗಳನ್ನು ಯೋಚಿಸುವುದು ಅಗತ್ಯವಲ್ಲವೆ ?

ಹಿಂದುಗಳಲ್ಲಿ ಸೈನ್ಯಶಾಖೆಗೆ ಅರ್ಹರಾದವರು ದೊರೆಯುವುದು ಕಡಿಮೆಯೆಂದೇ ಸರಕಾರದವರು ನಿರ್ಧರಿಸಿದ್ದಾರೆ. ಹೀಗೆ ಹೇಳುವುದರಲ್ಲಿ ಸತ್ಯಾಂಶವಿಲ್ಲವೆಂದು ಹೇಳಲಿಕ್ಕಾಗುವುದಿಲ್ಲ. ಪಂಜಾಬ ಪ್ರಾಂತಕ್ಕೂ ಮದ್ರಾಸ್ ಪ್ರಾಂತಕ್ಕೂ ಹವೆ, ಆಹಾರ, ಮೊದಲಾದವುಗಳ ವ್ಯತ್ಯಾಸ ವಿಶೇಷ. ಇದರಿಂದ ದೇಹಬಲದಲ್ಲಿ ಹೆಚ್ಚು ಕಡಿಮೆಯಿರುವುದೇನೋ ನಿಜ. ಆದರೆ ಒಂದೇ ಪ್ರಾಂತದಲ್ಲಿಯೇ ಹಿಂದುಗಳಿಗೂ ಮುಸಲ್ಮಾನರಿಗೂ ವ್ಯತ್ಯಾಸವೇಕೆ? ಹಿಂದುಗಳಲ್ಲಿಯೇ ಮರಾಠಾ, ಆದಿ ಹಿಂದುಗಳಷ್ಟು ಇನ್ನಿತರಲ್ಲಿ ಸೈನ್ಯಶಾಖೆಗೆ ಅರ್ಹರಾದವರು ದೊರೆಯದಿರುವುದೇಕೆ?

ಈ ಎಲ್ಲ ಸಂಗತಿಗಳನ್ನು ನಿಷ್ಪಕ್ಷಪಾತ ದೃಷ್ಟಿಯಿಂದ ಯೋಚಿಸಿದ್ದಾದರೆ ಹಿಂದುಗಳಲ್ಲಿ ವೀರವೃತ್ತಿಯು ಬಹುಸಂಖ್ಯಾಕವಾಗಿ ಇಲ್ಲದೆ ಇರುವುದಕ್ಕೆ ಸಾವಿರಾರು ವರುಷಗಳಿಂದ ಹಿಂದುಗಳಲ್ಲಿದ್ದ ವರ್ಣವಿಭಾಗವೇ ಮುಖ್ಯ ಕಾರಣವೆಂದು ಗೊತ್ತಾಗುವುದು. ಯುದ್ಧವು ಹಿಂದುಗಳಲ್ಲಿ ಕ್ಷತ್ರಿಯ ವರ್ಣದವರಿಗೆ ಮಾತ್ರ ಸಂಬಂಧಪಟ್ಟ ಕಾರ್ಯವಾಗಿ ಪರಿಣಮಿಸಿದೆ. ಅವರಲ್ಲಿ ಮಾತ್ರ ಕ್ಷಾತ್ರತೇಜ ಹುಟ್ಟಲು ಅವಕಾಶವನ್ನು ಮಾಡಿ ಇನ್ನುಳಿದ ಮೂರು ವರ್ಣದವರಲ್ಲಿ ಅದು ತಲೆ ಎತ್ತದಂತೆ ವರ್ಣಗಳ ಕಟ್ಟಿನಿಂದ ಬಿಗಿದು ಬಿಟ್ಟಿದ್ದಾರೆ.

ಸಾವಿರಾರು ವರುಷಗಳಿಂದ ಯಾವ ಜನರ ವಂಶಜರು ಕತ್ತಿಯನ್ನೇ ಹಿಡಿದಿಲ್ಲವೋ ಅವರಲ್ಲಿ ಕ್ಷಾತ್ರತೇಜವಿಲ್ಲದಿರುವುದು ಸ್ವಾಭಾವಿಕ. ಕ್ಷತ್ರಿಯರು ಗೆದ್ದರೆ ಇತರ ವರ್ಣದವರಿಗೆ ಸ್ವತಂತ್ರ. ಅವರು ಸೋತರೆ ಪರತಂತ್ರ! ನಮ್ಮ ದೇಶದಲ್ಲಿ ಸಾವಿರಾರು ವರುಷಗಳಿಂದ ನಡೆದುಕೊಂಡುಬಂದ ರೀತಿ ನೀತಿಗಳೇ ಇವು. ಅಂತೆಯೇ ವರ್ಣಗಳಕಟ್ಟಿಲ್ಲದ ಮುಸಲ್ಮಾನ್, ಶೀಖ ಸಮಾಜದವರಂತೆ ವರ್ಣವಾದಿಗಳಾದ ಹಿಂದುಗಳಲ್ಲಿ ಕ್ಷಾತ್ರತೇಜವು ಹೆಚ್ಚು ಪ್ರಮಾಣದಲ್ಲಿಲ್ಲ. ಸೈನ್ಯಶಾಖೆಗೆ ಅರ್ಹತೆಯು ಹಿಂದುಗಳಲ್ಲಿದ್ದರೂ ಅದು ಹೆಚ್ಚಾಗಿ ರಜಪುತ, ಮರಾಠಾ, ಆದಿ ಹಿಂದು ಈ ಜನರಲ್ಲಿಯೇ ಸರಿ. ಎಂದಮೇಲೆ ಇನ್ನಿತರ ಬಹು ಸಂಖ್ಯಾಕರಲ್ಲಿ ಕ್ಷಾತ್ರತೇಜವಿಲ್ಲದಿರುವುದಕ್ಕೆ ಸಾವಿರಾರು ವರುಷಗಳಿಂದ ಬಂದ ಜನ್ಮವಿಶಿಷ್ಟ ವರ್ಣವಿಭಾಗವೇ ಮುಖ್ಯ ಕಾರಣವಲ್ಲವೆ? ಈ ದೋಷವು ನಿವಾರಣೆಯಾಗಬೇಕಾದರೆ ಜನಾಂಗಕ್ಕೆ ಘಾತಕವಾದ ಈಗಿನ ವರ್ಣಗಳು ಲೋಪವಾಗಬೇಕು. ಎಲ್ಲ ಹಿಂದುಗಳೂ ಬ್ಯಾ. ಸಾವರಕರ್, ಡಾ. ಮುಂಜೆಯವರು ಹೇಳುವಂತೆ ಈಗಲಾದರೂ ಸೈನ್ಯ ಶಿಕ್ಷಣದ ಕಡೆಗೆ ಲಕ್ಷಿಸಬೇಕು. ಎಂದರೆ ಈ ಜನಾಂಗದಲ್ಲಿ ಕ್ಷಾತ್ರ ವೃತ್ತಿ ಹೆಚ್ಚಲು ಸಹಾಯವಾಗುವುದು.

---

## ಕಾಂಗ್ರೆಸ್ಸು ನಮ್ಮ ದಾರಿಗೆ ಬಂತು!

ಕಲಕತ್ತಾದಲ್ಲಿ ಕಳೆದ ೨೯ ನೆಯ ತಾರೀಖಿನ ದಿವಸ ಅಖಿಲ ಭಾರತ ಪ್ರಾಗತಿಕರ ೧೯ ನೆಯ ಪರಿಷತ್ತು ಸರ್. ಚಿಮಣಲಾಲ ಸೆಟಲವಾಡ ಇವರ ಅಧ್ಯಕ್ಷತೆಯಲ್ಲಿ ಜರುಗಿತು. ಅಧ್ಯಕ್ಷರು ತಮ್ಮ ಸುದೀರ್ಘವಾದ ಭಾಷಣದಲ್ಲಿ ಈಗಿನ ರಾಜಕಾರಣಕ್ಕೆ ಸಂಬಂಧಪಟ್ಟ ಎಲ್ಲ ಸಂಗತಿಗಳನ್ನೂ ವಿವೇಚಿಸಿ ಈ ಕೆಳಗಿನಂತೆ ಹೇಳಿದರು-

"ಕಾಂಗ್ರೆಸ್ಸು ಈಗ ಧ್ಯೇಯವಾದವನ್ನು ಬಿಟ್ಟು ವ್ಯಾವಹಾರಿಕ ದಾರಿಗೆ ಬಂದು ಪ್ರಾಂತಿಕ ಸೂತ್ರವನ್ನು ಹಿಡಿದು ಶಾಸನಬದ್ಧ ರೀತಿಯಲ್ಲಿ ನಡೆಯುತ್ತಿರುವುದು ನಮ್ಮ ತತ್ವದ ವಿಜಯವೇ ಸರಿ."

---

## ೨೨ ನೆಯ ಕರ್ನಾಟಕ ಸಾಹಿತ್ಯ ಪರಿಷತ್ತು ಜಮಖಂಡಿ.

ಈ ಮುಂಚೆಯೇ ಗೊತ್ತಾದ ಮೇರೆಗೆ ತಾ. ೨೯-೧೨-೩೭ ನೆಯ ದಿವಸ ಜಮಖಂಡಿಯಲ್ಲಿ ೨೨ ನೆಯ ಕರ್ನಾಟಕ ಸಾಹಿತ್ಯ ಪರಿಷತ್ತು ಪ್ರಾರಂಭವಾಯಿತು. ಪರಿಷತ್ತಿನ ಆರಂಭದಲ್ಲಿ ಜಮಖಂಡಿ ಸಂಸ್ಥಾನಾಧಿಪತಿಗಳಿಂದ ಪರಿಷತ್ತಿಗೆ ಬಂದ ಸಂದೇಶವು ಓದಲ್ಪಟ್ಟಿತು. ಅಧಿಪತಿಗಳು ತಮ್ಮ ಸಂದೇಶದಲ್ಲಿ ತಾವು ತಮ್ಮ ಸಂಸ್ಥಾನದ ಎಲ್ಲಾ ಭಾಷೆಗಳನ್ನೂ ಸಮನಾಗಿಯೇ ನೋಡುವೆವೆಂದು ಆಶ್ವಾಸನವನ್ನು ಕೊಟ್ಟಿದ್ದಾರೆ.

ಅನಂತರ ಸ್ವಾಗತಾಧ್ಯಕ್ಷರಾದ ಶ್ರೀಯುತ ಚಿಕ್ಕೋಡಿ ಪಂಡಿತಪ್ಪನವರು ಶ್ರೀಯುತ ದೇಶಪಾಂಡೆ ಗಂಗಾಧರರಾಯರು ಈ ವರೆಗೆ ಮಾಡಿದ ರಾಷ್ಟ್ರಸೇವೆಯನ್ನು ಶ್ಲಾಘಿಸಿ ಪರಿಷತ್ತಿನ ಉದ್ಘಾಟನಮಾಡಬೇಕಾಗಿ ಅವರನ್ನು ಪ್ರಾರ್ಥಿಸಿಕೊಂಡರು—



ದೇ. ಗಂಗಾಧರರಾಯರು.

ಶ್ರೀ. ಗಂಗಾಧರರಾಯರು ಕನ್ನಡದಲ್ಲಿ ಬಹು ಸ್ಫೂರ್ತಿದಾಯಕವಾದ ಭಾಷಣವನ್ನು ಮಾಡಿ ಪರಿಷತ್ತಿನ ಉದ್ಘಾಟನ ಸಮಾರಂಭವನ್ನು ನೆರವೇರಿಸಿದರು. ಇವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಹಿಂದಕ್ಕೆ ಲೋಕಮಾನ್ಯ ಟಿಳಕರು ಬೈಲಹೊಂಗಲಕ್ಕೆ ಬಂದಾಗ ನನಗೆ ಕನ್ನಡದಲ್ಲಿಯೇ ಭಾಷಣಮಾಡಲು ಹೇಳಿದ್ದರು. ನಾನು ಕನ್ನಡದಲ್ಲಿ ಭಾಷಣಮಾಡಿದ್ದು ಅಂದೇ. ಜನತೆಯ ಸೇವಕರಿಗೆ ಅವರ ಭಾಷೆಯು ಗೊತ್ತಿರಲಿಕ್ಕೇಬೇಕೆಂದು ಆಗ ಅವರು ನನಗೆ ತಿಳಿಸಿದ್ದರು.

ಮರಾಠಿಗರು ಕನ್ನಡಿಗರನ್ನು "ಕಾನಡಿ ಅಪ್ಪಾ" ಎಂದು ಹೀಯಾಳಿಸಬಾರದು. ಅವರು ಕನ್ನಡಿಗರ ಆಶೆ ಆಕಾಂಕ್ಷೆಗಳಲ್ಲಿ ಬೆರೆತವರಾಗಿರಬೇಕು. ಎಂದು ಮರಾಠಿಗರಿಗೆ ಬುದ್ಧಿವಾದ ಹೇಳಿದರು. ಜಮಖಂಡಿ ಸಂಸ್ಥಾನಾಧಿಪತಿಗಳ ಸಂದೇಶದ ವಿಚಾರವಾಗಿ ಅವರನ್ನು ಅಭಿನಂದಿಸಿ ಕನ್ನಡದ ವಿಷಯದಲ್ಲಿ ಅವರು ಕೊಟ್ಟ ಆಶ್ವಾಸನದಿಂದಲೇ ನನಗೇನೂ ಸಮಾಧಾನವಾಗಿಲ್ಲವೆಂದೂ ಕನ್ನಡಕ್ಕೆ ಇಲ್ಲಿ ಇನ್ನೂ ಹೆಚ್ಚಾದ ಪ್ರಾಶಸ್ತ್ಯ ದೊರೆಯಬೇಕೆಂದೂ ಸೂಚಿಸಿದರು.

# ಹಿಂದು ರಾಷ್ಟ್ರ ಮತ್ತು ಹಿಂದು ಸಂಸ್ಕೃತಿ.

[ ಶ್ರೀ. ಶ. ೧೯೨೫ ರಲ್ಲಿ ಪಂಜಾಬ ಕೇಸರೀ ರಾಷ್ಟ್ರವೀರ ದಿವಂಗತ ಲಾಲಾ ಲಜಪತರಾಯರು ಮೊದಲನೆಯ ಪಂಜಾಬ ಹಿಂದು ಸಮ್ಮೇಲನದ ಕಾಲಕ್ಕೆ ಹೀಗೆ ಹೇಳಿದ್ದರು— ಸಂ. ]

**ಹಿಂದುಗಳ ನಿರ್ಬಲತೆಯು ಹಿಂದುಸ್ಥಾನದ ನಿರ್ಬಲತೆಯಾಗಿದೆ.**

**ಹಿಂದು ಜಾತಿಯು ಶಕ್ತಿ ಶಾಲಿಯಾಗುವುದೇ ಹಿಂದು - ಮುಸಲ್ಮಾನ್ ಐಕ್ಯತೆಗೆ ಮುಖ್ಯೋಪಾಯ.**

**ಪರದೇಶದವರ ಸಂಗಡ ಹೋರಾಡುವಾಗ ನಾನು ಮೊದಲು ಹಿಂದಿ. ಆಮೇಲೆ ಹಿಂದು. ಈ ದೇಶದ ಜಾತಿ ಹೋರಾಟದಲ್ಲಿ ನಾನು ಮೊದಲು ಹಿಂದು. ಆಮೇಲೆ ಹಿಂದಿ.**



( ದಿವಂಗತ ಲಾಲಾ ಲಜಪತರಾಯರು. )

### ಹಿಂದು- ಮುಸಲ್ಮಾನರ ಐಕಮತ್ಯ.

ಹಿಂದು ಮುಸಲ್ಮಾನರ ಐಕಮತ್ಯದ ಸರ್ವೋತ್ತಮ ಸಾಧನವೆಂದರೆ ಹಿಂದು ಜಾತಿಯನ್ನು ಅನ್ಯರಾರೂ ಕೆಟ್ಟ ಕಣ್ಣಿನಿಂದ ನೋಡದಷ್ಟು ಅದು ಶಕ್ತಿಯುತವಾಗುವಂತೆ ಮಾಡುವುದು. ಸಂಘಟಿತರಾದ ಹಿಂದುಗಳು ತಮ್ಮ ದೇಶ ಬಾಂಧವರಾದ ಮುಸಲ್ಮಾನರ ಸಂಗಡ ನ್ಯಾಯದಿಂದ ನಡೆಯುವರೆಂದೇ ಅಲ್ಲ; ಎಲ್ಲ ರೀತಿಯ ಸಂರಕ್ಷಣೆಗಳಿಗೂ ಸಹಾಯಕರಾಗುವರು.

ಹಿಂದು ಜಾತಿಯ ವಿನಾಶವು ಹಿಂದು-ಮುಸಲ್ಮಾನ್ ಐಕಮತ್ಯವನ್ನು ಸಾಧಿಸಲು ಒಂದು ಕಡ್ಡಿಯಷ್ಟು ಕೂಡಾ ಸಹಾಯ ಮಾಡಲಾರದು. ಹಿಂದುಗಳು ಹಿಂದುತ್ವವನ್ನು ತ್ಯಾಗ ಮಾಡಬಹುದು. ಆದರೆ ಮುಸಲ್ಮಾನರು ಮಾತ್ರ ಮುಸಲ್ಮಾನರಾಗಿಯೇ ಇರುವರು. ಆದಕಾರಣ ರಾಷ್ಟ್ರೀಯ ವಿಕಾಸ ಕಾರ್ಯವು ಫಲಕಾರಿಯಾಗಬೇಕಾದರೆ ಸಾಂಪ್ರದಾಯಿಕ ಶಕ್ತಿಯು ಸುರಕ್ಷಿತವಾದುದಾಗಿರಲೇ ಬೇಕು.

ಎಲ್ಲಿಯವರೆಗೆ ಹಿಂದುಗಳು ನಿರ್ಬಲರು, ಅಸಂಘಟಿತರು, ಪರಸ್ಪರ ಕಲಹ ಮಾಡುವವರು ಆಗಿದ್ದಾರೆಯೋ ಅಲ್ಲಿಯವರೆಗೆ ಹಿಂದು-ಮುಸಲ್ಮಾನರ ಐಕ್ಯದ ಸಂಬಂಧವಾಗಿ ಕಂಡಕಂಡಾಗ ಹಾಡುವ ರಾಗಗಳೆಲ್ಲಾ ಅಪಸ್ವರಗಳೆಂದೇ ತಿಳಿಯಬೇಕು.

ಹಿಂದುಗಳೆಲ್ಲಾ ಒಂದೇ ಕಾಲಕ್ಕೆ ಸತ್ತುಹೋಗುವಂತಿಲ್ಲ. ಅಥವಾ ದೇಶತ್ಯಾಗಮಾಡುವಂತಿಲ್ಲ. ಇಲ್ಲವೆ ಹೊರಗಿನ ಯಾರ ಸಹಾಯವೂ ಇವರಿಗೆ ದೊರೆಯುವಂತಿಲ್ಲ. ಆದಕಾರಣ ಈ ಹಿಂದುಗಳ ನಿರ್ಬಲತೆಯು ಹಿಂದುಸ್ಥಾನದ ಸ್ಥಿರತರವಾದ ನಿರ್ಬಲತೆಯಾಗಿದೆ.

ಹಿಂದುಸ್ಥಾನದಲ್ಲಿಯ ಜಾತಿಗಳ ಹೋರಾಟದಲ್ಲಿ ನಾನು ಮೊದಲು ಹಿಂದು ಎಂದೇ ಹೇಳಿಕೊಳ್ಳುವವನು. ಆ ಮೇಲೆ ಹಿಂದಿ (ಹಿಂದುಸ್ಥಾನದವನು.) ಆದರೆ ಹಿಂದುಸ್ಥಾನದ ಹೊರಗೆ ಇಲ್ಲವೆ ಹಿಂದುಸ್ಥಾನದಲ್ಲಿಯೇ ಅನ್ಯ ದೇಶದವರೊಂದಿಗೆ ಹೋರಾಡುವಾಗ ಮೊದಲು ನಾನು ಹಿಂದಿ. ಅನಂತರ ಹಿಂದು.

ವಯಂ ಪಂಚ ವಯಂ ಪಂಚ ವಯಂ ಪಂಚ ಶತಂ ಚ ತೆ।
ಅನ್ಯೈಃ ಸಹ ವಿವಾದೇಷು ವಯಂ ಪಂಚ ಶತಂ ಚ ವೈ॥

(ಕೌರವರ ಸಂಗಡ ಇರುವಾಗ ಪಾಂಡವರಾದ ನಾವು ಐವರೆಂದೇ ಹೇಳಿಕೊಳ್ಳುವೆವು ಆದರೆ ಅನ್ಯರ ಸಂಗಡ ವ್ಯವಹರಿಸುವಾಗ ನಾವು ೧೦೫ ಜನರೆಂದು ಹೇಳಿಕೊಳ್ಳುವೆವು.)

### ಹಿಂದು ಸಂಘಟನೆ.

ಈಗಿನ ವಿಚಿತ್ರ ರಾಜಕಾರಣದ ಪರಿಸ್ಥಿತಿಯಲ್ಲಿ ನಾವು ಹಿಂದುಗಳೆಂದು ಹೇಳಿಕೊಳ್ಳಲು ಕೂಡಾ ಹಿಂಜರಿಯಬಹುದು. ಆದರೆ ಹಿಂದು ಧ್ವಜದಡಿಯಲ್ಲಿ ಬರಲು ಸಮ್ಮೇಲನದ ಅಧ್ಯಕ್ಷರು ಸೂಚಿಸಿದರೆ ಆ ಕೂಡಲೇ ಬರಲು ಸಿದ್ಧ. ಕೆಲವರು ತಾವು ಹಿಂದುಗಳೆಂದು ಹೇಳಿಕೊಳ್ಳಲು ನಾಚುತ್ತಾರೆ. ನಾನೇನೂ ಹಾಗೆ ನಾಚುವವನಲ್ಲ. ನಾಚಬೇಕಾದಂತಹ ಪ್ರಸಂಗವೂ ಏನೂ ಇಲ್ಲ. ಯಾವ ನಿಮಿಷದಲ್ಲಿ ನಾವು ಹಿಂದು ಸಂಸ್ಕೃತಿಯಿಂದ ಚ್ಯುತರಾಗುತ್ತೇವೆಯೋ, ಆಗ ಮಾತ್ರ ಹಿಂದು ಎಂದು ಹೇಳಿಕೊಳ್ಳಲು ನಾಚಬೇಕು. ಹಿಂದು ಸಂಸ್ಕೃತಿಯೇ ನಮ್ಮ ಜಾತಿಯನ್ನು ಯಾವಾಗಲೂ ರಕ್ಷಿಸಿದೆ. ಮತ್ತು ಇನ್ನು ಮುಂದೆಯೂ ರಕ್ಷಿಸುವುದು. ಹಿಂದು ಇತಿಹಾಸ, ಹಿಂದು ಸಾಹಿತ್ಯ, ಹಿಂದು ದರ್ಶನ ಇವೇ ಹಿಂದು ಸಂಸ್ಕೃತಿಯ ಮುಖ್ಯಾಂಗಗಳು.

ಹಿಂದು ಸಂಘಟನೆಯು ಹಿಂದುಸ್ಥಾನದ ಐಕ್ಯಕ್ಕೆ ಮೂಲವಾಗಿದೆ. ಪವಿತ್ರ ಭಾವನೆಯಿಂದ ಹಿಂದು-ಮುಸಲ್ಮಾನರ ಐಕಮತ್ಯಕ್ಕಾಗಿ ಪ್ರಯತ್ನಗಳು ನಡೆದಿಲ್ಲವಾದುದರಿಂದಲೇ ಈ ವರೆಗೂ ಅದು ಸಾಧಿಸಿಲ್ಲ. ಮುಸಲ್ಮಾನರಿಂದಲೇ ಮೊದಲು ಈ ದೇಶದಲ್ಲಿ ಅನೈಕಮತ್ಯವುಂಟಾಗಿದೆ. ಅವರು ತಮ್ಮ ಸಂಘಟನೆಯಿಂದ ಶಕ್ತಿಶಾಲಿಗಳಾಗಿದ್ದಾರೆ. ಹಿಂದುಗಳು ಮೊದಲಿನಿಂದಲೂ ಅವರಿಗೆ ಸೋತವರಾಗಿಯೇ ಇದ್ದಾರೆ. ಆದಕಾರಣ ಹಿಂದುಗಳ ಮೊದಲನೆಯ ಕಾರ್ಯವೆಂದರೆ ಅವರು ತಮ್ಮಷ್ಟೆ ಸಂಘಟಿತರಾಗಬೇಕಾದುದು."

---

## ಕಾಂಗ್ರೆಸ್ ಮತ್ತು ಮುಸಲ್ಮಾನರು.

ಮುಸಲ್ಮಾನರ ಮನಸ್ಸನ್ನು ಸಂತೋಷಪಡಿಸಿ ಅವರನ್ನು ಕಾಂಗ್ರೆಸ್ಸಿನಲ್ಲಿ ಸೇರಿಸಿಕೊಳ್ಳಬೇಕೆಂದು ಕಾಂಗ್ರೆಸ್ಸಿನ ಅನೇಕ ಸಲ್ಲದ ಪ್ರಯತ್ನಗಳು ಆಗಾಗ್ಗೆ ನಡೆಯುತ್ತಲೇ ಇರುತ್ತವಷ್ಟೆ. ಇವುಗಳ ಸಂಬಂಧವಾಗಿ ದಿಲ್ಲಿಯ "ಹಿಂದು" ಪತ್ರಿಕಾಕರ್ತರು ಈ ಕೆಳಗಿನ ಎರಡು ಹೊಸ ಸಂಗತಿಗಳನ್ನು ದೃಷ್ಟಾಂತವಾಗಿ ಕೊಟ್ಟಿದ್ದಾರೆ.

### ವಂದೇಮಾತರಂ ಮತ್ತು ಖುರಾನ.

ಕಾಂಗ್ರೆಸ್ ಸರಕಾರವು ವಂದೇಮಾತರಂ ಗೀತೆಗಿಂತ ಖುರಾನ ಗ್ರಂಥಕ್ಕೆ ಹೆಚ್ಚಿನ ಘನತೆಯನ್ನು ಕೊನೆಗೆ ಕೊಟ್ಟೇ ಕೊಟ್ಟಿತು! ಮದ್ರಾಸ್ ಸರಕಾರದ ಅಸೆಂಬ್ಲಿಯಲ್ಲಿ ತಾ. ೨೧-೧೨-೩೭ ನೆಯ ದಿವಸ ಅಸೆಂಬ್ಲಿ ಅಧಿವೇಶನ ಪ್ರಾರಂಭವಾಗುವ ಮುಂಚೆ ಅಧ್ಯಕ್ಷರ ಅಪ್ಪಣೆ ಪ್ರಕಾರ ಮಿ. ವಶೀರ ಅಹಮ್ಮದ ಇವರು ಎರಡು ನಿಮಿಷ ಖುರಾನವನ್ನು ಓದಿದರು. ಅನಂತರ ವಂದೇಮಾತರಂ ಗೀತೆಯು ಹೇಳಲ್ಪಟ್ಟಿತು. ಹೀಗಾದರೂ ವಂದೇಮಾತರಂ ಗೀತೆ ನಡೆವಾಗ ಮುಸಲ್ಮಾನ್ ಸಭಾಸದರು ಕುಳಿತೇ ಇದ್ದರು. ರಾಷ್ಟ್ರಭಕ್ತಿಯ ಗೀತೆಗೆ ಮುಸಲ್ಮಾನರು ಆಕ್ಷೇಪಿಸಬಹುದು. ಆದರೆ ಮುಸಲ್ಮಾನೇತರರೆಲ್ಲಾ "ಕಾಫೀರ" ಮತ್ತು "ನೀಚ" ಎಂದು ಹೇಳುವ ಖುರಾನಿನ ಪಠಣದ ಕಾಲಕ್ಕೆ ಹಿಂದುಗಳು ಮಾತ್ರ ಸುಮ್ಮನಿರಬೇಕು. ಇದಕ್ಕಿಂತ ಸ್ವಾಭಿಮಾನ ಶೂನ್ಯತೆಯ ದೃಷ್ಟಾಂತ ಬೇರೆಯಾವುದು ಬೇಕು?

ಕಾಂಗ್ರೆಸ್ ಹೇಗೆ ಮುಸಲ್ಮಾನರ ಪಕ್ಷ ಹಿಡಿದಿದೆಯೆಂಬುದು ಮತ್ತು ಮುಸಲ್ಮಾನರ ಪ್ರಭಾವ ದೇಶದ ಮೇಲೆ ಹೇಗೆ ಹೆಚ್ಚಾಗುತ್ತಿದೆಯೆಂಬುದು ಇದರಿಂದ ಗೊತ್ತಾಗುತ್ತಿದೆ. ಈ ಪ್ರಸಂಗದಲ್ಲಿ ಶಾಂತಚಿತ್ತದಿಂದ ಆಲೋಚಿಸಿದರೆ ನಾವು ಹೇಗೆ ನಮ್ಮ ದೇಶದಲ್ಲಿಯೇ ವಿದೇಶಿಯರ ಸಂಸ್ಕೃತಿಗೆ ಆಹುತಿಯಾಗುತ್ತಾ ಇದ್ದೇವೆಂಬುದು ಗೊತ್ತಾಗುವುದಿಲ್ಲವೆ?

### ಸಂಯುಕ್ತ ಪ್ರಾಂತದ ಸರ್ಕ್ಯುಲರ್.

ಸಂಯುಕ್ತ ಪ್ರಾಂತದ ಕಾಂಗ್ರೆಸ್ ಕಮಿಟಿಯವರು ಒಂದು ಪ್ರಕಟನೆಯ ಮೂಲಕ ಬರುವ ಕಾಂಗ್ರೆಸ್ಸಿಗೆ ಆದಷ್ಟು ಮುಸಲ್ಮಾನ್ ಪ್ರತಿನಿಧಿಗಳನ್ನೇ ಹೆಚ್ಚಾಗಿ ಆರಿಸಿ ಕಳಿಸಿರೆಂದು ತಿಳಿಸಿದ್ದಾರೆ.

ಸಂಯುಕ್ತ ಪ್ರಾತಿನಿಧ್ಯ ಬಂದರೆ ನಾವು ಮುಸಲ್ಮಾನರ ಸಂಗಡ ಎಷ್ಟು ಉದಾರ ಬುದ್ಧಿಯಿಂದ ನಡೆದುಕೊಳ್ಳುತ್ತೇವೆಂಬುದನ್ನು ಕಾಂಗ್ರೆಸ್ಸಿನವರು ಮುಸಲ್ಮಾನರಿಗೆ ತೋರಿಸಲಿಕ್ಕಾಗಿ ಈ ಪ್ರಕಾರ ಮಾಡಿರಬಹುದು. ಈ ಪ್ರಾಂತದಲ್ಲಿ ೫ ಉಪಚುನಾವಣೆಗಳು ನಡೆದವು. ಇವುಗಳಲ್ಲಿ ೪ ಉಪಚುನಾವಣೆಗಳಲ್ಲಿಯೂ ಕಾಂಗ್ರೆಸ್ ಮುಸ್ಲಿಂ ಹುರಿಯಾಳು ಸೋತು ಮುಸ್ಲಿಂ ಹುರಿಯಾಳು ಗೆದ್ದುದನ್ನು ನೋಡಿಯಾದರೂ ಮುಸಲ್ಮಾನರು ಕಾಂಗ್ರೆಸ್ಸಿನ ಕಡೆಗೆ ಎಷ್ಟರಮಟ್ಟಿಗಿದ್ದಾರೆಂಬುದು ಇವರಿಗೆ ತಿಳಿಯಬಾರದೆ?

ಈಗ ಹೀಗೆ ಮುಸಲ್ಮಾನ್ ಪ್ರತಿನಿಧಿಗಳನ್ನೇ ಕಾಂಗ್ರೆಸ್ಸಿಗೆ ಹೆಚ್ಚಾಗಿ ಕಳಿಸಿ ಹಿಂದು ಪ್ರತಿನಿಧಿಗಳನ್ನು ಯಜ್ಞದ ಪಶುಗಳನ್ನಾಗಿ ಮಾಡಿ ಜನರ ಕಣ್ಣಲ್ಲಿ ಮಣ್ಣು ತೂರಿ ಮುಸಲ್ಮಾನರು ಹೆಚ್ಚು ಬಂದಿದ್ದಾರೆಂದು ಹೇಳಲಿಕ್ಕೊ?

ಜಾತಿಕಲ್ಪನೆಯಿಲ್ಲದೆ ಕಾರ್ಯದ ಮೇಲಿಂದ ಕಾಂಗ್ರೆಸ್ ಸಭಾಸದರು ಮುಸಲ್ಮಾನರನ್ನೇ ಹೆಚ್ಚಾಗಿ ಆರಿಸಿದರೆ ಆಗ ಅದರಲ್ಲಿ ಪ್ರಯೋಜನವಿದೆ. ಹಾಗಲ್ಲದೆ ಮುಸಲ್ಮಾನರೆಂಬುದರಿಂದಲೇ ಅವರನ್ನು ಹೆಚ್ಚಾಗಿ ಕಳಿಸಿದರೆ ಕಾಂಗ್ರೆಸ್ಸಿನಲ್ಲಿಯೂ ಅವರ ಜಾತಿತ್ವವೇ ಪ್ರಬಲವಾಗುವುದು. ತ್ಯಾಗದ ವಿನಾ ಅಧಿಕಾರ ದೊರೆತರೆ ಅದರ ಸದುಪಯೋಗವು ಖಂಡಿತವಾಗಿ ಆಗಲಾರದು.

---

## ಅಖಿಲ ಭಾರತ ಹಿಂದು ಮಹಾಸಭೆ.

ಅಖಿಲ ಭಾರತ ಹಿಂದು ಮಹಾಸಭೆಯು ೧೯ ನೆಯ ಅಧಿವೇಶನವು ಸ್ವಾತಂತ್ರ್ಯ ವೀರ ಬ್ಯಾ. ಸಾವರಕರರ ಅಧ್ಯಕ್ಷತೆಯಲ್ಲಿ ತಾ. ೩೦-೧೨-೩೭ ನೆಯ ದಿವಸ ಅತ್ಯಂತ ವೈಭವದಿಂದ ಅಹಮದಾಬಾದಿನಲ್ಲಿ ಪ್ರಾರಂಭವಾಯಿತು. ಅಧ್ಯಕ್ಷರು ಅತ್ಯಂತ ಮಹತ್ವದ ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

### ಹಿಂದುರಾಷ್ಟ್ರಭವನದ ಅಡಿಗಲ್ಲು.

ಹಿಂದು ರಾಷ್ಟ್ರ ಭವನಕ್ಕೆ ಹಿಂದು ಸಮಾಜವೇ ಅಡಿಗಲ್ಲು. ಆದಕಾರಣ ಹಿಂದುತ್ವ, ಹಿಂದುಧರ್ಮ, ಹಿಂದು ಸಂಸ್ಕೃತಿಗಳನ್ನು ಮಾರಿ ಸ್ವರಾಜ್ಯವನ್ನು ಕೊಂಡುಕೊಳ್ಳಲು ನಾವು ಸಿದ್ಧರಿಲ್ಲ.

ಕಾಂಗ್ರೆಸ್ಸಿಗಿಂತ ಹಿಂದು ಮಹಾಸಭೆಯೇ ಅಧಿಕ ರಾಷ್ಟ್ರೀಯವಾದುದು. ಜಾತಿ, ಧರ್ಮ, ವಂಶಗಳನ್ನು ಲೆಕ್ಕಿಸದೆ ಎಲ್ಲರಿಗೂ ಸಮಾನವಾದ ಮತದಾರ ಪದ್ಧತಿಯಿರಬೇಕೆಂದೇ ಮಹಾ ಸಭೆಯು ಹೇಳುತ್ತದೆ. ಹಿಂದುಗಳಿಗಾಗಿ ಯಾವ ಹೆಚ್ಚಿನ ಸೌಕರ್ಯಗಳೂ ಬೇಕಿಲ್ಲ. ಹೀಗೆ ಮುಸಲ್ಮಾನರು ಹೇಳಿ ನಡೆಯಲು ಸಿದ್ಧರಿದ್ದಾರೆಯೆ?



ಶಾ. ಶ. ೧೮೫೯ ನೆಯ ಪುಷ್ಯ ಶು|| ೨ ಸೋಮವಾರ.

# ಕನ್ನಡ ಭಗನಿಯರ ಜಾಗೃತಿ.

ಕಳೆದ ೨೪ ನೆಯ ತಾರೀಖಿನ ದಿವಸ ಹುಬ್ಬಳ್ಳಿಯಲ್ಲಿ ಕರ್ನಾಟಕ ಭಗಿನಿ ಮಂಡಲದ ೭ ನೆಯ ಅಧಿವೇಶನವು ಸೌ|| ಸಿದ್ಧಮ್ಮ ಬಳ್ಳಾರಿ ಇವರ ಅಧ್ಯಕ್ಷತೆಯಲ್ಲಿ ಬಹು ಸಂಭ್ರಮದಿಂದ ಜರುಗಿತು. ನಾಡಿನ ತಾಯಿಯವರಾದ ನಮ್ಮ ಅಕ್ಕ ತಂಗಿಯರು ಈ ಪ್ರಕಾರ ಒಟ್ಟುಗೂಡಿ ತಮ್ಮ ಏಳಿಗೆಗಾಗಿ ಸಾಹಸಪಟ್ಟಿದ್ದು ಅತ್ಯಂತ ಅಭಿನಂದನೀಯವಾದುದು.

ಸ್ವಾಗತ ಸಂಘಾಧ್ಯಕ್ಷರಾದ ಸೌ|| ಕೃಷ್ಣಾಬಾಯಿಯವರ್‍ಯ ಪಂಜಿಕರ ಇವರು ತಮ್ಮ ಭಾಷಣದಲ್ಲಿ ಸ್ತ್ರೀ ಸಂಸ್ಥೆಗಳ ಅವಶ್ಯಕತೆ, ಶಾರೀರಕ ಸಂಪತ್ತು, ಕರ್ನಾಟಕ ಏಕೀಕರಣ, ನಿಜವಾದ ಧಾರ್ಮಿಕ ತಿಳುವಳಿಕೆ ಮೊದಲಾದ ಸಂಗತಿಗಳನ್ನು ಬಹು ಚೆನ್ನಾಗಿ ವಿವೇಚಿಸಿದರು. ಪರಿಷತ್ತಿನ ಅಧ್ಯಕ್ಷರಾದ ಸೌ|| ಸಿದ್ಧಮ್ಮನವರು ಭಗಿನಿ ಮಂಡಲಗಳ ಕಾರ್ಯಕಲಾಪ, ಅಸ್ಪೃಶ್ಯತಾ ನಿವಾರಣೆ, ಗ್ರಾಮೋದ್ಯೋಗ, ಸ್ವದೇಶಿ ಪ್ರಚಾರ ಮೊದಲಾದ ಸಂಗತಿಗಳನ್ನು ಬಹು ಸ್ವಾರಸ್ಯವಾಗಿ ತಿಳಿಸಿದರು. ಇವರ ಭಾಷಣವು ವಿಚಾರ ಪರಿಪೂರ್ಣತವಾದುದಾಗಿದ್ದಿತು. ಪರಿಷತ್ತಿನ ಕಾರ್ಯ ಮುಗಿದನಂತರ ಇವರು ಬೇರೆ ಕಡೆಗೂ ಹೋಗಿ ಭಗಿನಿಯರಲ್ಲಿ ಜಾಗೃತಿಯನ್ನುಂಟುಮಾಡಿದುದು ಶ್ಲಾಘ್ಯವಾದುದು.

ನಮ್ಮ ನಾಡಿನಲ್ಲಿ ಉಂಟಾಗಿರುವ ನಮ್ಮ ಭಗಿನಿಯರ ಈ ಜಾಗೃತಿಯು ದಿನೆ ದಿನೆ ಹೆಚ್ಚಲೆಂದೇ ನಾವು ಹಾರೈಸುತ್ತೇವೆ. ಇವರ ಜಾಗೃತಿಯಿಂದ ನಾಡಿನ ನಿಜವಾದ ಏಳಿಗೆಗೆ ತುಂಬಾ ಸಹಾಯವಾಗುತ್ತದೆ. ಆದುದರಿಂದ ಭಗಿನಿ ಮಂಡಲದ ಚಾಲಕರೂ ಪ್ರಚಾರಕರೂ ಆದ ನಮ್ಮ ಭಗಿನಿಯರನ್ನು ನಾವು ಹೃದಯಪೂರ್ವಕ ಅಭಿನಂದಿಸುತ್ತೇವೆ.

ಇದೇ ಸಮಯದಲ್ಲಿ ನಾವು ಕೆಲವು ಸಂಗತಿಗಳನ್ನು ನಮ್ಮ ಭಗಿನಿಯರಿಗೆ ತಿಳಿಸದಿರಲಾರೆವು. ಸನ್ಮಾನೀಯರಾದ ಮೇಲಣ ಉಭಯ ಅಧ್ಯಕ್ಷರ ಭಾಷಣಗಳಲ್ಲಿಯೂ ದೇಶದ ಪ್ರಚಲಿತ ವಿಷಯಗಳೇ ಮುಖ್ಯವಾಗಿ ವಿವೇಚಿಸಲ್ಪಟ್ಟವಿಯೇ ವಿನಾ ನಮ್ಮ ನಾಡಿನ ಸ್ತ್ರೀಯರಿಗೇನೇ ಸಂಬಂಧಪಟ್ಟ ಈ ಕಾಲದಲ್ಲಿ ಅತ್ಯವಶ್ಯಕವಾಗಿರುವ ಸಂಗತಿಗಳು ತಿಳಿಸಲ್ಪಟ್ಟಿಲ್ಲ. ಇದೊಂದು ದೊಡ್ಡ ಕೊರತೆಯೇ ಸರಿ. ಸ್ತ್ರೀಯರಿಗೇನೇ ಸಂಬಂಧಿಸಿರುವ ಅನೇಕ ಮಹತ್ವದ ಪ್ರಶ್ನೆಗಳ ಕಡೆಗೆ ಅವರೇ ಲಕ್ಷಿಸದಿದ್ದರೆ ಹೀಗೆ ಪ್ರತ್ಯೇಕವಾಗಿ ಸೇರುವುದರಿಂದಲಾದರೂ ಹೆಚ್ಚಾದ ಪ್ರಯೋಜನವೇನಾಗುವುದು ?

ದೇಶದ ಪರಿಸ್ಥಿತಿಯು ದಿನೆ ದಿನೆ ಬಹು ವ್ಯತ್ಯಾಸವಾಗುತಲಿದೆ. ಹೆಣ್ಣುಮಕ್ಕಳಾದರೋ ಹೆಚ್ಚಾಗಿ ಯಾವುದೋ ಕಾಲದ ಆಚಾರ ವಿಚಾರಗಳನ್ನೇ ಅನುಸರಿಸುವವರಿದ್ದಾರೆ. ಎಂದಮೇಲೆ ಕಾಲಕ್ಕೆ ತಕ್ಕಂತೆ ಅವರಲ್ಲಿ ಪರಿವರ್ತನೆಯಾಗಬೇಕಾದ ಸಂಗತಿಗಳು ವಿಶೇಷವಾಗಿರುತ್ತವೆ. ಅವುಗಳೇ ಇಂಥ ಪರಿಷತ್ತುಗಳಲ್ಲಿ ಮುಖ್ಯವಾಗಿ ಚರ್ಚೆಯಾಗಬೇಕು. ಉದಾಹರಣೆಗಾಗಿ- ವಿಷಮ ವಿವಾಹ, ವರದಕ್ಷಿಣೆಯ ಹಾವಳಿ, ವಿಧವಾ ವಿವಾಹ, ಒಂದೇ ಮತದ ಭಿನ್ನ ಪಂಗಡಗಳಲ್ಲಿಯ ವಿವಾಹ, ಪುಂಡರ ಆಕ್ರಮಣ, ಧರ್ಮಾಂತರದ ಪಿಡುಗು ಈ ಮೊದಲಾದ ಹೆಣ್ಣುಮಕ್ಕಳಿಗೆ ಹೆಚ್ಚು ಸಂಬಂಧಪಟ್ಟಿರುವ ಸಂಗತಿಗಳ ಕಡೆಗೆ ಇವರೇ ಲಕ್ಷಿಸದಿರುವುದು ವಿಹಿತವೆ ?

ವಿಷಮ ವಿವಾಹದಿಂದಾಗುವ ನಷ್ಟ ಕಷ್ಟಗಳನ್ನೂ ವಿಧವಾ ವಿವಾಹಕ್ಕೆ ಅವಕಾಶವಿಲ್ಲದಿರುವುದರಿಂದ ಆಗುತ್ತಿರುವ ಭಯಂಕರ ಅನರ್ಥಗಳನ್ನೂ ವರದಕ್ಷಿಣೆಯ ಹಾವಳಿಯಿಂದಲೂ ಧಾರ್ಮಿಕ ಮೂಢ ಕಲ್ಪನೆಯಿಂದ ಒಂದೇ ಮತದ ಭಿನ್ನ ಪಂಗಡದವರಲ್ಲಿ ವಿವಾಹಕ್ಕೆ ಅವಕಾಶವಿಲ್ಲದ್ದರಿಂದಲೂ ಅಸಂಖ್ಯ ತಂಗಿಯರು ಹುಟ್ಟಿದ ಮನೆಯಲ್ಲಿಯೇ ನಿಟ್ಟುಸುರು ಬಿಡುತ್ತ ಕೊರಗುತ್ತಿರುವುದನ್ನೂ ಪುಂಡರೂ ಮೋಸಗಾರರೂ ನಾನಾ ರೀತಿಗಳಿಂದ ಅಜ್ಞ ಮತ್ತು ಅನಾಥ ಭಗಿನಿಯರ ಅಪಹಾರ ನಡೆಸಿರುವುದನ್ನೂ ನಮ್ಮ ಸುಶಿಕ್ಷಿತ ಅಕ್ಕ ತಂಗಿಯರೇ ನೋಡಿ ಅವರ ಕಳ್ಳು ಕರಗಿ ತಮ್ಮ ಸ್ತ್ರೀ ಜಾತಿಯ ವಿಪತ್ತನ್ನು ಜನಾಂಗದ ಮುಂದಿಡದಿದ್ದರೆ ನಮ್ಮ ಭಗಿನಿಯರ ಶೋಚನೀಯ ಸ್ಥಿತಿಯು ನಿವಾರಣೆಯಾಗುವದೆಂದು ?

ಇದರಿಂದ ನಮ್ಮ ಭಗಿನಿಯರು ರಾಜಕೀಯ ಮೊದಲಾದ ಪ್ರಚಲಿತ ವಿಷಯಗಳಲ್ಲಿ ಪ್ರವೇಶಿಸಬಾರದೆಂದು ನಮ್ಮ ಅಭಿಪ್ರಾಯವಿದೆಯೆಂದೇನೂ ಯಾರೂ ಗ್ರಹಿಸಬಾರದು. ದೇಶಕ್ಕೆ ಅವಶ್ಯಕವಾಗಿರತಕ್ಕ ಸಂಗತಿಗಳಲ್ಲಿ ಪುರುಷರ ಅಡಿಯಲ್ಲಿ ಅಡಿ ಇಡುತ್ತ ಇವರೂ ಹೋಗಲೇಬೇಕಾದುದು ಅತ್ಯಗತ್ಯ. ಆದರೆ ತಮಗೇನೇ ಹೆಚ್ಚಾಗಿ ಸಂಬಂಧಿಸಿರತಕ್ಕ ಸಂಗತಿಗಳನ್ನು ಮಾತ್ರ ಇವರು ಬಿಡಕೂಡದು. ಏಕೆಂದರೆ ಮುಖ್ಯವಾಗಿ ಅವುಗಳ ಸುಧಾರಣೆಗೇನೇ ಭಗಿನಿಯರ ಇಂಥ ಪ್ರತ್ಯೇಕ ಪರಿಷತ್ತುಗಳು ಏರ್ಪಡುತ್ತವೆ. ಆದುದರಿಂದ ಈ ಕಾಲದಲ್ಲಿ ನಮ್ಮ ಅಕ್ಕ ತಂಗಿಯರಿಗೆ ಬಹು ಪ್ರಾಮುಖ್ಯವಾಗಿರತಕ್ಕ ಈ ಸಂಗತಿಗಳ ಕಡೆಗೂ ಇವರು ತುಂಬಾ ಲಕ್ಷಿಸಿ ಸ್ತ್ರೀ ಪುರುಷರಲ್ಲಿ ವಿಶೇಷ ಜಾಗೃತಿಯನ್ನುಂಟು ಮಾಡುವರೆಂದು ನಾವು ನಂಬಿದ್ದೇವೆ.

—ನಾಗಪುರದಲ್ಲಿ ಅಖಿಲ ಭಾರತ ಮಹಿಳಾ ಪರಿಷತ್ತಿನ ೧೨ ನೆಯ ಅಧಿವೇಶನವು ರಾಜಕುಮಾರಿ ಅಮೃತಕುವರ ಇವರ ಅಧ್ಯಕ್ಷತೆಯಲ್ಲಿ ಜರುಗಿತು. ಹಿಂದುಸ್ಥಾನದ ಬೇರೆ ಬೇರೆ ಭಾಗಗಳಿಂದ ೪೦೦ ಪ್ರತಿನಿಧಿಗಳು ಬಂದಿದ್ದರು. ಸಾಮಾಜಿಕ ಸುಧಾರಣೆಯ ಕಡೆಗೆ ನಾವು ವಿಶೇಷ ಲಕ್ಷಿಸಬೇಕೆಂದೂ ಮದ್ಯಪಾನ ನಿರೋಧಕ್ಕೆ ಮಹಿಳೆಯರಾದ ನಾವೇ ಹೆಚ್ಚು ಪ್ರಯತ್ನಿಸಬೇಕೆಂದೂ ಅಧ್ಯಕ್ಷರು ತಮ್ಮ ಭಾಷಣದಲ್ಲಿ ತಿಳಿಸಿದರು.

## ಬಾಗಲಕೋಟೆಯಿಂದ

# ಹರಿಪುರ ಕಾಂಗ್ರೆಸ್ ಪ್ರತಿನಿಧಿ ಚುನಾವಣೆ.

ಮೊದಲು ಪ್ರಸಿದ್ಧಮಾಡಿದ ಪ್ರಕಾರ ಮೇಲ್ಕಾಣಿಸಿದ ಚುನಾವಣೆಯು ತಾ. ೨೬ ನೇ ದಿವಸ ಶಾಂತ ರೀತಿಯಿಂದ ಕೊನೆಗಂಡಿತು. ಬಾಗಲಕೋಟೆ ತಾಲೂಕು ವತಿಯಿಂದ ಶ್ರೀಯುತ ಜೋರಾಪುರ ಗುರುರಾಯರು, ಬೀಳಗಿ ಪೇಟಾವತಿಯಿಂದ ಶ್ರೀ. ನೀರಲಕೇರಿ ಶ್ರೀನಿವಾಸರಾಯರು ಅವಿರೋಧವಾಗಿ ಆರಿಸಿಬಂದರು. ಬಾಗಲಕೋಟೆ ನಗರ ವತಿಯಿಂದ ಶ್ರೀಯುತರುಗಳಾದ ಕೌಜಲಗಿ ಹನುಮಂತರಾಯರು ಮತ್ತು ಕುಪಸ್ತ ಶಿವಸಂಗಪ್ಪನವರು ಹುರಿಯಾಳುಗಳಾಗಿದ್ದರು. ಈ ಉರ್ವರಲ್ಲಿ ಶ್ರೀಯುತ ಕುಪಸ್ತ ಶಿವಸಂಗಪ್ಪನವರಿಗೆ ೩೦೪ ಮತಗಳೂ ಶ್ರೀಯುತ ಕೌಜಲಗಿಯವರಿಗೆ ೮ ಮತಗಳೂ ಬಿದ್ದು ಶ್ರೀಯುತ ಕುಪಸ್ತ ಇವರು ವಿಜಯಿಗಳಾದರು.

ಈ ಚುನಾವಣೆಯ ಬಗ್ಗೆ ನಮ್ಮ ತಾಲೂಕು ಕಾಂಗ್ರೆಸ್ ಕಾರ್ಯಕರ್ತರು ಯಾವ ಯಾವ ಅಡ್ಡಿ ಆತಂಕಗಳನ್ನು ತಂದೊಡ್ಡಿದರೆಂಬುದನ್ನು ನಗರ ಹಿತದೃಷ್ಟಿಯಿಂದ ಮತ್ತು ಬೇರೆ ಕಡೆ ಇಂಥ ದೋಷಗಳಿದ್ದರೆ ಸುಧಾರಿಸಲೆಂಬ ಉದ್ದೇಶದಿಂದ ಸ್ಪಷ್ಟೀಕರಿಸುವದು ಅವಶ್ಯವಡೆ. ನಗರ ವತಿಯಿಂದ ಅಜಮಾಸ ೭೪೦ ಜನರು ಸಭಾಸದರಿದ್ದಾರೆ. ಇವರಲ್ಲಿ ಹಿಂದುಳಿದ ಸಮಾಜದವರಾದ ಲಿಂಗಾಯತ, ಮರಾಠಾ, ಕ್ಷತ್ರಿಯ ಮಾರವಾಡಿ, ಮತ್ತು ಗುಜರಾತಿಗಳ ಪೈಕಿ ೪೬೦ ಸಭಾಸದರೂ ಉಳಿದ ೨೮೦ ಜನರು ಮುಂದರಿದ ಸಮಾಜದ ಪೈಕಿ ಬ್ರಾಹ್ಮಣ ಸಭಾಸದರೂ ಇರುತ್ತಾರೆ. ಮತದಾರ ಪತ್ರಿಕೆಯಲ್ಲಿ ಬ್ರಾಹ್ಮಣ ಸಭಾಸದರ ಸಂಪೂರ್ಣ ಹೆಸರುಗಳು ಅಂದರೆ ಹೆಸರು, ತಂದೆ ಹೆಸರು ಮತ್ತು ಅಡ್ಡ ಹೆಸರು ಸ್ತ್ರೀ ಸಭಾಸದರಿದ್ದಲ್ಲಿ ಹೆಸರು, ಗಂಡನ ಹೆಸರು ಮತ್ತು ಅಡ್ಡ ಹೆಸರು ಈ ಪ್ರಕಾರ ಪೂರ್ಣ ರೀತಿಯಲ್ಲಿ ಪ್ರಸಿದ್ಧಿಸಲ್ಪಟ್ಟಿರುತ್ತವೆ. ಆದರೆ ಹಿಂದುಳಿದ ಸಭಾಸದರ ಹೆಸರುಗಳು ಇದಕ್ಕೆ ತೀರ ಅಪವಾದ. ಹೆಸರು, ಅಡ್ಡ ಹೆಸರುಗಳಿದ್ದರೆ ತಂದೆ ಹೆಸರಿಲ್ಲ. ತಂದೆ ಹೆಸರು ಇದ್ದರೆ ಅಡ್ಡ ಹೆಸರು ಇಲ್ಲ. ತಂದೆ ಹೆಸರು ಅಡ್ಡಹೆಸರುಗಳಿಲ್ಲದೆ ಬರೆ ಮುರ್ಗೆಪ್ಪಾ, ದ್ಯಾಮಣ್ಣಾ ಅಂತ ಎಷ್ಟೋ ಹೆಸರುಗಳು ಈ ಪ್ರಕಾರ ಪ್ರಸಿದ್ಧಿಸಲ್ಪಟ್ಟಿರುತ್ತವೆ.

ಚುನಾವಣೆಯು ೨-೩ ದಿವಸಗಳು ಇರಲಿಕ್ಕಾಗಿ ಈ ವಿಷಯಕ್ಕೆ ಇಲ್ಲಿಯ ಸಹಾಯ ಕಾರ್ಯದರ್ಶಿಗಳಾದ ಶ್ರೀ ಲಿಂಗಯ್ಯ ಜೆಂಗಿನ ಇವರನ್ನು ವಿಚಾರಿಸಲಾಗಿ ಅವರು ಮತದಾರರ ಪತ್ರಿಕೆಯನ್ನು ತಾವು ತಯಾರಮಾಡಿಲ್ಲ; ಕಾರ್ಯದರ್ಶಿ ಶ್ರೀ. ನೀರಲಕೇರಿಯವರು ತಯಾರಿಸಿರುತ್ತಾರೆ. ಪೂರ್ಣ ಹೆಸರುಗಳನ್ನು ತಿಳಕೊಳ್ಳಲಿಕ್ಕೆ ಮೂಲ ಪಾವತಿ ಬುಕ್ಕುಗಳನ್ನು ನೋಡಿದರೆ ಸಾಧ್ಯವಿದೆ ಎಂದು ಹೇಳಿದರು. ಅಧ್ಯಕ್ಷ ಶ್ರೀ. ಜೋರಾಪುರ ಮತ್ತು ಕಾರ್ಯದರ್ಶಿ ಶ್ರೀ. ನೀರಲಕೇರಿ ಈ ಉಭಯತರು ನೇಕಾರ ಪರಿಷತ್ತಿನ ಪೂರ್ವಸಿದ್ಧತೆಗಾಗಿ ಗುಳೇದಗುಡ್ಡದಲ್ಲಿ ಬಿಡಾರಹಾಕಿದ್ದರು. ಪಾವತಿ ಬುಕ್ಕುಗಳ ವಿಚಾರದ ಸಲುವಾಗಿ ಶ್ರೀ. ಲಿಂಗಯ್ಯ ಜೆಂಗಿನ ಇವರು ಗುಳೇದಗುಡ್ಡಕ್ಕೆ ಹೋಗಿ ಸದರಿಯವರನ್ನು ವಿಚಾರಿಸಲಾಗಿ ಕೆಲಸ ಬಾಹುಲ್ಯದ ಮೂಲಕ ತಮಗೆ ಬಾಗಲಕೋಟೆಗೆ ಬರಲಿಕ್ಕಾಗುವದಿಲ್ಲ. ಪಾವತಿ ಬುಕ್ಕುಗಳು ನಿಮಗೆ ಸಿಗುವಂತೆ ಶ್ರೀ. ಅನವಟ್ಟಿಯವರಿಗೆ ಪತ್ರ ಬರೆದುಕೊಡುತ್ತೇವೆ ಅಂತಾ ತಿಳಿಸಿ ಪತ್ರ ಕೊಟ್ಟು ಕಳಿಸಿದರು. ಆದರೆ ಆ ಪತ್ರದ ಉಪಯೋಗವೇನೂ ಆಗಲಿಲ್ಲ. ಶ್ರೀ. ಅನವಟ್ಟಿಯವರಿಗೆ ಪತ್ರ ತೋರಿಸಲಾಗಿ ಪಾವತಿ ಬುಕ್ಕುಗಳ ವಿಷಯಕ್ಕೆ ತಮಗೆ ಏನೂ ಗೊತ್ತಿಲ್ಲವೆಂದು ಸ್ಪಷ್ಟ ಹೇಳಿದರು. ಈ ಬಗ್ಗೆ ಅವರಿಂದ ಲೇಖಿ ಕೇಳಲಾಗಿ ಆ ಪ್ರಕಾರ ಅವರು ಬರೆದುಕೊಟ್ಟರು.

ಚುನಾವಣೆ ತಾರೀಖು ಫಕ್ತ ಒಂದೇ ದಿವಸ ಉಳಿದದ್ದರಿಂದ ಹಿಂದುಳಿದ ಸಮಾಜಗಳ ಸಭಾಸದರು ತಮ್ಮ ತಮ್ಮ ಮತದಾನದ ವಿಷಯಕ್ಕೆ ಎಚ್ಚತ್ತವರಾಗಿ ತಮ್ಮಲ್ಲಿಯ ಪ್ರಮುಖ ಜನರನ್ನು ಕೂಡಿಸಿ ಒಂದು ಶಿಷ್ಟ ಮಂಡಳವು ಇಲ್ಲಿಯ ಪ್ರಸಿದ್ಧ ವ್ಯಾಪಾರಸ್ಥರಾದ ಮತ್ತು ಮೊದಲಿನಿಂದಲೂ ಕಾಂಗ್ರೆಸ್ ಸಭೆಯ ಸಭಾಸದರಾಗಿ ಕಳಕಳಿಯಿಂದ ಅದರ ಸೇವೆಯನ್ನು ಮಾಡುತ್ತ ಬಂದವರಾದ ಶ್ರೀ. ತೋಕರಸಿ ಭಾಯಿಯವರ ಮುಖಂಡತ್ವದಲ್ಲಿ ಗುಳೇದಗುಡ್ಡಕ್ಕೆ ಶ್ರೀ. ಜೋರಾಪುರ ಇವರ ಕಡೆಗೆ ಕಳಿಸಲ್ಪಟ್ಟಿತು. ಅಲ್ಲಿ ತಾಸೆರಡು ತಾಸು ದೀರ್ಘ ಚರ್ಚೆ ನಡೆಯಿತು. ಚರ್ಚೆಯಲ್ಲಿ ಉಭಯರಲ್ಲಿ ಹೊರಟ ಉದ್ಗಾರಗಳು ವಿಷಯಾಂತರವಾಗುವದೆಂದು ತಿಳಿಸುವ ಅವಶ್ಯಕತೆ ಇಲ್ಲ. ಮುಂದೆ ಪಾವತಿ ಬುಕ್ಕುಗಳನ್ನು ಕೊಡಲಿಕ್ಕೆ ಶ್ರೀ. ಜೋರಾಪುರ ಇವರು ತಮ್ಮ 'ಹಿರಿಯ ಬಂಧುಗಳಾದ ಶ್ರೀ. ಕೃಷ್ಣರಾಯರನ್ನು ಕಳಿಸಿಕೊಟ್ಟರು. ಚುನಾವಣೆ ಮುನ್ನಾದಿವಸ ಸಂಜೆಯ ೮ ಗಂಟೆಯ ಸುಮಾರಕ್ಕೆ ಪಾವತಿ ಬುಕ್ಕುಗಳು ದೊರೆತವು. ಪಾವತಿ ಬುಕ್ಕುಗಳು ಸಿಕ್ಕನಂತರ ಇಡೀ ರಾತ್ರಿ ಅಪೂರ್ತಿ ಇದ್ದ ಮತದಾರರ ಹೆಸರುಗಳನ್ನು ಗೊತ್ತುಹಚ್ಚಿ ಮತದಾರರ ಯಾದಿಯನ್ನು ಬರೆಯಲಾಯಿತು. ಮರುದಿವಸ ಚುನಾವಣೆ ಕೆಲಸವು ಯಥಾಪ್ರಕಾರ ಪೂರ್ತಿಯಾಯಿತು.

ಈ ಪ್ರಕಾರ ಬಹು ಸಂಖ್ಯಾಕರಾದ ಹಿಂದುಳಿದ ಸಮಾಜದ ಸಭಾಸದರ ಹೆಸರುಗಳನ್ನು ಅಪೂರ್ಣ ನೊಂದಾಯಿಸಿ ಮತ ಪತ್ರಿಕೆ ಪ್ರಸಿದ್ಧಪಡಿಸಿದ್ದನ್ನು ನೋಡಲಾಗಿ ಮತ್ತು ಪೂರ್ಣ ಹೆಸರುಗಳನ್ನು ಗೊತ್ತುಹಚ್ಚಲಿಕ್ಕೆ ಪಾವತಿ ಬುಕ್ಕುಗಳನ್ನು ಕೊಡಲಿಕ್ಕೆ ವಿನಾಕಾರಣ ಕಾಲವಿಲಂಬ ಮಾಡಿದ್ದು ನೋಡಲಾಗಿ ನಮ್ಮ ಈ ಕಾಂಗ್ರೆಸ್ ಕಾರ್ಯಕರ್ತರ ಗುಟ್ಟು ಏನಿರಬೇಕೆಂಬುದನ್ನೂ ಮತ್ತು ಹಿಂದುಳಿದ ಸಮಾಜದವರ ವಿಷಯಕ್ಕೆ ಅವರ ಅಂತಃಕರಣಗಳಲ್ಲಿ ಎಷ್ಟು ಕಳಕಳಿ ಹೊರಚಿಮ್ಮುತ್ತಿತ್ತೆಂಬುದನ್ನೂ ನಮ್ಮ ವಾಚಕರೇ ಸೋಸಿ ನೋಡಲಿ.

ಈ ತಾಲೂಕಿಗೆ ಇದ್ದ ಮೂರು ಸ್ಥಳಗಳಲ್ಲಿ ಎರಡು ಸ್ಥಳಗಳನ್ನು ನಮ್ಮ ಮುಂದರಿದ ಸಮಾಜದವರೇ ಪಡಕೊಂಡಿದ್ದರೂ ಇನ್ನುಳಿದ ಒಂದು ಸ್ಥಳಕ್ಕೆ ಹಿಂದುಳಿದ ಸಮಾಜದ ಪೈಕಿ ಒಬ್ಬರು ಪ್ರಯತ್ನಪಟ್ಟರೆ ಅವರ ಮಾರ್ಗದಲ್ಲಿ ಅನೇಕ ಎಡರುಗಳನ್ನು ತಂದೊಡ್ಡುವದು ಕಾಂಗ್ರೆಸ್ ನೆರಳಿನಲ್ಲಿ ದುಡಿದು ದುಃಖಪಟ್ಟು ಅದರ ಯಶಕ್ಕೆ ಹೆಣಗಾಡುವ ನಮ್ಮ ಕಾಂಗ್ರೆಸ್ ಕಾರ್ಯಕರ್ತರಿಗೆ ಹೇಗೆ ಭೂಷಣಾಸ್ಪದವೋ ಅವರೇ ತಮ್ಮ ಸದಸದ್ವಿವೇಕ ಬುದ್ಧಿಯಿಂದ ವಿಚಾರ ಮಾಡಲಿ.

ಈ ಮೊದಲು ಎಷ್ಟೋ ಪ್ರಸಂಗಗಳಲ್ಲಿ ಕಾಂಗ್ರೆಸ್ಸೇತರ ಹುರಿಯಾಳುಗಳು ಯಾವವೇ ಚುನಾವಣೆಗಳಿಗೆ ಹೋರಾಟ ನಡೆಸಿದ ಸಂದರ್ಭಗಳಲ್ಲಿ ನಮ್ಮ ಈ ಕಳಕಳಿಯ ಕಾರ್ಯಕರ್ತರು ಸಾ

ಪ್ರಾಪ್ಯಶಾಹಿ ಬಗಲಬಚ್ಚಾಗಳಿಗೆ ಮತ ಹಾಕಬೇಡಿರಿ. ಅಂಥ ಮತದಾರರಿಗೆ ಪ್ರೋತ್ಸಾಹಿಸಿ ಅವರಿಂದ ಚುನಾವಣೆಗಳಿಗೆ ಬಹಿಷ್ಕಾರ ಹಾಕಿಸಿದ್ದುಂಟು. ಆದರೆ ಈ ಪ್ರಸಂಗದಲ್ಲಿ ತಮ್ಮ ಪೈಕಿ ಒಬ್ಬ ಹುರಿಯಾಳು ಆರಿಸಿಬರುವ ಸಂಭವ ಇಲ್ಲದ್ದನ್ನು ಕಂಡು ಹಿಂದುಳಿದ ಸಮಾಜದ ಪೈಕಿ ಓರ್ವರು ಕಾಂಗ್ರೆಸ್ ಪತಿಯಿಂದ ಹುರಿಯಾಳಾಗಿ ನಿಂತಿದ್ದರೂ ನಮ್ಮ ಮುಂದರಿದ ಸಮಾಜದ ಪೈಕಿ ಯಾರೂ ತಮ್ಮ ಇಷ್ಟ ಕಂಡಂತೆ ಉಭಯ ಹುರಿಯಾಳುಗಳ ಪೈಕಿ ಯಾರಿಗೇ ಆಗಲಿ ಮತದಾನ ಮಾಡಲಿಕ್ಕೆ ಸಿದ್ಧರಾಗಿ ಬಾರದೇ ಇದ್ದದ್ದನ್ನು ನೋಡಿದರೆ ಅವರು ಕಾಂಗ್ರೆಸ್ ಸಂಸ್ಥೆಗೇನೇ ಒಂದು ತರಹದ ಬಹಿಷ್ಕಾರ ಹಾಕಿದಂತೆ ಆಗುತ್ತದೆಂದು ವಿಷಾದದಿಂದ ಹೇಳಬೇಕಾಗುತ್ತದೆ.

ಇನ್ನಾದರೂ ಜಾತಿಯ ಬಲೆಗೆ ಬೀಳದೆ ಮತ್ತು ಪಕ್ಷಪಂಗಡಗಳೆಂಬ ಭಾವನೆಗಳಿಗೆ ವಶರಾಗದೆ ಕಾಂಗ್ರೆಸ್ ತತ್ವಗಳ ತಪಶ್ಚರ್ಯ ಮಾಡಿದ ನಮ್ಮ ಮುಂದರಿದ ಸಮಾಜವು ಹಿಂದುಳಿದ ಸಮಾಜಕ್ಕೆ ಅದು ರಾಷ್ಟ್ರ ಕಾರ್ಯಕ್ಕೋಸ್ಕರ ಹೆಣಗಾಡುವ ಸಾಹಸಗಳಲ್ಲಿ ಎಲ್ಲ ರೀತಿಯಿಂದಲೂ ಮನಮುಟ್ಟಿ ಸಹಾಯ ಮಾಡುವದೆಂದು ಪೂರ್ಣ ನಂಬಿದ್ದೇನೆ.

| | |
|---|---|
| ಬಾಗಲಕೋಟೆ.<br>ತಾ. ೧-೧-೩೮. | ತಮ್ಮ,<br>ಓರ್ವ ಕಾಂಗ್ರೆಸ್ ಸಭಾಸದ. |

[ಈ ಲೇಖನಕ್ಕೆ ಉತ್ತರವಾಗಿ ಯಾರಾದರೂ ಬರೆದು ಕಳುಹಿಸಿದರೂ ಅದನ್ನು ನಾವು ಪ್ರಕಟಿಸುವೆವು. ಸಂಪಾದಕ.]

---

### ಗುಳೇದಗುಡ್ಡದಲ್ಲಿ
## ಗುರುಸ್ಥಳದ ಶ್ರೀ ಗುರುಸಿದ್ಧೇಶ್ವರ ಮಠದ
# ಅಪೂರ್ವ ಪಟ್ಟಾಭಿಷೇಕ ಮಹೋತ್ಸವ.

ಈ ಮುಂಚೆ ಗೊತ್ತಾದಮೇರೆಗೆ ತಾರೀಖು ೨೭-೧೨-೧೯೩೭ ನೆಯ ದಿವಸ ಇಲ್ಲಿಯ ಗುರುಸ್ಥಳದ ಶ್ರೀ ಗುರುಸಿದ್ಧೇಶ್ವರ ಮಠಕ್ಕೆ ಅಧಿಕಾರಿಗಳನ್ನು ನಿಯಮಿಸುವ ಮಹಾ ಸಮಾರಂಭವು ಜರುಗಿತು.

ಈ ಮಠದ ಅಧಿಕಾರಿಗಳಾದ ಪಂಡಿತ ಶ್ರೀ ಗುರುಸಿದ್ಧಸ್ವಾಮಿ ಉರ್ಫ ವಿಶ್ವನಾಥ ಶಿವಾಚಾರ್ಯ ಇವರು ಮೊದಲು ವಳಸಂಗ ಗ್ರಾಮದವರಿದ್ದು ಸೊಲ್ಲಾಪುರ, ಕಂಪಲಿ, ಹುಬ್ಬಳ್ಳಿ ಗುಳೇದಗುಡ್ಡದ ಶ್ರೀ ಹುಚ್ಚೇಶ್ವರ ಈ ಸಂಸ್ಕೃತ ಪಾಠಶಾಲೆಗಳಲ್ಲಿ ಕಲಿತು ಆಮೇಲೆ ಕಾಶಿಯ ಗವ್ಹರ್ನಮೆಂಟ್ ಸಂಸ್ಕೃತ ಕಾಲೇಜಿನಲ್ಲಿ ೧೬ ವರುಷ ಶಾಸ್ತ್ರಾಧ್ಯಯನ ಮಾಡಿ ವೇದಾಂತ ಮತ್ತು ವ್ಯಾಕರಣ ಶಾಸ್ತ್ರಗಳಲ್ಲಿ ಪದವೀಧರರಾಗಿ ವೈಯಾಕರಣ ಕೇಸರೀ ಎಂಬ ಬಿರುದು ಹೊಂದಿದವರಾಗಿದ್ದಾರೆ.

ಈ ಸಮಾರಂಭಕ್ಕೆ ಶ್ರೀ ಜಗದ್ಗುರು ಮೂರು ಸಾವಿರಮಠ ಹುಬ್ಬಳ್ಳಿ ಮಹಾಸ್ವಾಮಿಗಳವರು ಒಬ್ಬ ಪಟ್ಟಾಧ್ಯಕ್ಷರನ್ನೂ ಶಾಸ್ತ್ರಿಗಳವರನ್ನೂ ಕಳುಹಿಸಿದ್ದರಲ್ಲದೆ ತಮ್ಮ ಸಂಸ್ಥಾನದಿಂದ ಮೆರವಣಿಗೆಗಾಗಿ ಆನೆಯನ್ನೂ ಕಳುಹಿಸಿಕೊಟ್ಟಿದ್ದರು. ಶ್ರೀ ಘನಲಿಂಗ ಚಕ್ರವರ್ತಿ ಬೆಟ್ಟಸೂರು ಪಟ್ಟಾಧಿಕಾರಿಗಳೂ ದ್ಯಾವಂತಿಗಿ (ಕಲಬುರ್ಗಿ ಜಿಲ್ಲಾ) ಶ್ರೀ ಪಟ್ಟಾಧ್ಯಕ್ಷರೂ ಆಲ್ದಿ, ಗೋಕಾಕ, ಬನಹಟ್ಟಿ, ವಾಗ್ದರಿ, ಮೈದರಗಿ ಈ ಸ್ಥಳಗಳ ಶ್ರೀ ಪಟ್ಟಾಧಿಕಾರಿಗಳೂ ಆಗಮಿಸಿದ್ದರು.

ಈ ಸಮಾರಂಭದ ಕಾಲದಲ್ಲಿ ವಿದ್ವಾಂಸರ ಉಪನ್ಯಾಸಗಳೂ ಜರುಗಿದವು. ಹುಬ್ಬಳ್ಳಿಯ ಶ್ರೀ. ಪಾವಟೆ ವಕೀಲರು ವೀರಶೈವ ಧರ್ಮದ ಮೂಲ ತತ್ವ ಎಂಬ ವಿಷಯವಾಗಿಯೂ ಶ್ರೀ. ಬಿಳೆಅಂಗಡಿ ವಕೀಲರು ವೀರಶೈವ ಏಕೀಕರಣದ ಸಂಬಂಧವಾಗಿಯೂ ತಾ. ೨೮ ನೆಯ ದಿನ ಭಾಷಣಮಾಡಿದರು. ಮರುದಿನ ಈ ಉಭಯ ವಿದ್ವಾಂಸರೂ ಬಸವಾದಿ ಪ್ರಮಥರ ವಚನ ವಾಙ್ಮಯ ಎಂಬ ವಿಷಯವಾಗಿ ಭಾಷಣ ಮಾಡಿದರು. ಶ್ರೀ. ಬೆಟ್ಟಸೂರು ಪಟ್ಟಾಧ್ಯಕ್ಷರವರು ಮತ್ತು ಶ್ರೀ. ಶಂಕರಯ್ಯ ಸ್ವಾಮಿ ಇಳಕಲ್ಲ ಇವರು ಶ್ರೀ. ಶಿವಶರಣ ಸ್ವಾಮಿ ಅಂಕಲಕೋಟೆ ಇವರು ಧರ್ಮ ಸಂಬಂಧವಾಗಿ ಭಾಷಣಗಳನ್ನು ಮಾಡಿದರು.

ತಾರೀಖು ೨೭ ನೆಯ ದಿವಸ ಪ್ರಾತಃಕಾಲ ದ್ಯಾವಂತಗಿ ಶ್ರೀ ಘನಲಿಂಗ ಚಕ್ರವರ್ತಿಗಳಿಂದ ಶ್ರೀ ಗುರುಸಿದ್ಧೇಶ್ವರ ಸ್ವಾಮಿಗಳಿಗೆ ವಿಧಿಯುಕ್ತವಾಗಿ ಅಧಿಕಾರಾನುಗ್ರಹಮಾಡಿಸಲ್ಪಟ್ಟಿತು. ಶ್ರೀ ಜಗದ್ಗುರುಗಳಿಂದ ಬಂದ ಶಾಸ್ತ್ರಿಗಳು ವಿಧಾನವನ್ನು ಮಾಡಿಸಿದರು. ಅನಂತರ ಮಹಾ ಮಂಟಪದಲ್ಲಿ ಸಕಲ ಪಟ್ಟಾಧಿಕಾರಿಗಳಿಗೂ ಶಾಸ್ತ್ರಿಮಂಡಲಿಗೂ ಘನವಾದ ಉಡುಗರೆ ಕಾಣಿಕೆಗಳು ಸಲ್ಲಿಸಿದ ತರುವಾಯ ಅಡ್ಡಪಲ್ಲಕ್ಕಿಮಹೋತ್ಸವವು ಬಿರುದಾವಳಿ ಸಹಿತ ಹೊರಟಿತು. ಎಲ್ಲಾ ಪಟ್ಟಾಧ್ಯಕ್ಷರೂ ಶೃಂಗರಿಸಿದ ಮೋಟಾರಿನಲ್ಲಿ ಕುಳಿತಿದ್ದರು.

ಮೆರವಣಿಗೆಯಲ್ಲಿ ಈ ಸಮಾರಂಭಕ್ಕಾಗಿ ಅಹಮ್ಮದನಗರ, ಫಲಟಣ, ಬೆಳಗಾವ, ಬಳ್ಳಾರಿ, ಪುಣೆ, ಸೊಲ್ಲಾಪುರ, ಗುಲಬರ್ಗಾ, ಅಕ್ಕಲಕೋಟೆ, ಆಳಂದ, ಹುಬ್ಬಳ್ಳಿ, ಕಂಪಲಿ, ಲಕ್ಷ್ಮೇಶ್ವರ. ಬಂಕಾಪುರ, ವಿಜಾಪುರ, ಬಾಗಲಕೋಟೆ, ಗೋಕಾಕ, ಜಮಖಂಡಿ ಮೊದಲಾದ ಸ್ಥಳಗಳಿಂದ ಆಗಮಿಸಿದ ನೂರಾರು ಪ್ರಮುಖರೂ ಸುತ್ತಲಿನ ಗ್ರಾಮಗಳ ಹತ್ತಾರು ಸಾವಿರ ಜನರೂ ಇದ್ದರು. ಆಗ ಇಲ್ಲಿ ವಿಜಾಪುರ ಜಿಲ್ಲಾ ನೇಕಾರರ ಪರಿಷತ್ತು ಇದ್ದಮೂಲಕ ಈ ಪ್ರಚಂಡ ಮೆರವಣಿಗೆಯಲ್ಲಿ ಒಟ್ಟಿಗೆ ೧೦-೧೨ ಸಾವಿರ ಜನರು ಸೇರಿದ್ದರು.

ಮೆರವಣಿಗೆಯಲ್ಲಿ ಇಲ್ಲಿಯ ದತ್ತಾತ್ರೆಯ ವ್ಯಾಯಾಮ ಮಂದಿರದ ಸ್ವಯಂಸೇವಕರು ೧೧. ಭಜನಿಮೇಳ, ೧೨ ಕರಡಿಮೇಳ, ೩ ಹಲಗಿಮೇಳ, ಶಿವನಾಮ ಘೋಷಮಾಡುತ್ತಿದ್ದ ಸಾವಿರಾರು ಸ್ತ್ರೀಯರು ಪಂಚಾರತಿ ಹಿಡಿದ ೩೦೦ ಜನ ಮುತ್ತೈದೆಯರು ಬ್ಯಾಂಡ ಮತ್ತು ನಾನಾ ವಾದ್ಯಗಳೂ ಛತ್ರಚಾಮರಗಳೂ ಮುಂಭಾಗದಲ್ಲಿ ಶೃಂಗರಿಸಲ್ಪಟ್ಟ ಆನೆಯು ಇದ್ದುದರಿಂದ ಈ ಪ್ರಚಂಡ ಮೆರವಣಿಗೆ ಬಹು ಶೋಭಾಯಮಾನವಾಗಿದ್ದಿತು. ಈ ಮೆರವಣಿಗೆಯು ನಗರದ ಎಲ್ಲ ಮುಖ್ಯ ಬೀದಿಗಳಲ್ಲಿಯೂ ಹೋಗಿ ಬರಲು ೭-೮ ತಾಸುಗಳು ಹತ್ತಿದವು. ಹೊಸಪೇಟೆ ಶ್ರೀ ಸಾಲೇಶ್ವರ ದೇವಾಲಯದಲ್ಲಿಯು ಮತ್ತು ಹೊಸಪೇಟೆ ಶ್ರೀ ಮುರಘಾ ಸ್ವಾಮಿಮಠದಲ್ಲಿಯೂ ಮಂಗಳಾರತಿಗಳು ಜರುಗಿದವು. ಅಲ್ಲಲ್ಲಿ ಸಕಲ ಮತದವರೂ ಶ್ರೀಗಳವರಿಗೆ ಫಲಪುಷ್ಪಗಳನ್ನು ಅರ್ಪಿಸಿ ತಮ್ಮ ಭಕ್ತಿವಿಶ್ವಾಸಗಳನ್ನು ವ್ಯಕ್ತಗೊಳಿಸಿದರು. ಈ ಸಮಾರಂಭದ ಕಾಲಕ್ಕೆ ಮೂರು ದಿವಸ ಮಹಾ ಗಣಾರಾಧನೆಯೂ ಜರುಗಿ ನಾಲ್ಕಾರು ಸಾವಿರ ಬಡ ಜನರಿಗೆ ಊಟವೂ ನಡೆಯಿತು.

ಓರ್ವ ಪ್ರೇಕ್ಷಕ.

---

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣಮಂದಿರದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

# ಅಖಿಲ ಭಾರತ ಹಿಂದು ಮಹಾಸಭೆ.

## ಅಧ್ಯಕ್ಷ ಸ್ವಾತಂತ್ರ್ಯ ವೀರ ಸಾವರಕರರ

### ಪ್ರಚಂಡ ಮೆರವಣಿಗೆ. ಮನಸೀಯ ಭಾಷಣ.

ಈ ಮುಂಚೆ ಗೊತ್ತಾದ ಪ್ರಕಾರ ತಾ. ೩೦-೧೨-೩೭ ನೆಯ ದಿವಸ ಅಹಮದಾಬಾದಿನಲ್ಲಿ ಅಖಿಲ ಭಾರತ ಹಿಂದು ಮಹಾಸಭೆಯ ೧೯ ನೆಯ ಅಧಿವೇಶನವು ಸ್ವಾತಂತ್ರ್ಯ ವೀರ ಬ್ಯಾ. ಸಾವರಕರರ ಅಧ್ಯಕ್ಷತೆಯಲ್ಲಿ ಬಹು ವೈಭವದಿಂದ ಪ್ರಾರಂಭವಾಯಿತು.

ಆ ದಿನ ಪ್ರಾತಃಕಾಲಕ್ಕೆ ಅಧ್ಯಕ್ಷ ಬ್ಯಾ. ಸಾವರಕರ, ಭಾಯಿ ಪರಮಾನಂದ ಮೊದಲಾದ ಹಿಂದು ಮಹಾಸಭೆಯ ಪ್ರಮುಖರೂ ಅನೇಕ ಪ್ರತಿನಿಧಿಗಳೂ ಅಹಮದಾಬಾದಿಗೆ ಬರಲು ಸ್ಟೇಶನ್ನಿನಲ್ಲಿ ಸ್ವಾಗತ ಸಂಘದವರು ಬಹು ಪ್ರೇಮಾದರಗಳಿಂದ ಅಧ್ಯಕ್ಷರ ಸ್ವಾಗತ ಮಾಡಿದರು. ಬೇರೆ ಬೇರೆ ಸಂಸ್ಥೆಯವರೂ ಪ್ರಮುಖರೂ ಅಧ್ಯಕ್ಷರಿಗೆ ಸಾಧಾರಣ ೪೦೦ ಪುಷ್ಪಹಾರಗಳನ್ನು ಅರ್ಪಿಸಿ ಹಿಂದುತ್ವದ ವಿಷಯದಲ್ಲಿದ್ದ ತಮ್ಮ ಅಪೂರ್ವ ಭಕ್ತಿವಿಶ್ವಾಸಗಳನ್ನು ವ್ಯಕ್ತಗೊಳಿಸಿದರು.

ಅನಂತರ ಅಧ್ಯಕ್ಷರ ಪ್ರಚಂಡ ಮೆರವಣಿಗೆಯು ಹೊರಟಿತು. ಅಧ್ಯಕ್ಷರು ನಾಲ್ಕು ಕುದುರೆಗಳ ಸುಂದರವಾದ ರಥದಲ್ಲಿ ಕುಳಿತಿದ್ದರು. ಹಿಂದುಧರ್ಮದ ಕಾವಿ ನಿಶಾನೆಯೂ ಮೂರು ಬಣ್ಣಗಳ ರಾಷ್ಟ್ರಧ್ವಜವೂ ಈ ಮೆರವಣಿಗೆಯಲ್ಲಿ ಶೋಭಿಸುತ್ತಿದ್ದವು. ಮೆರವಣಿಗೆಯಲ್ಲಿ ಸಾಧಾರಣ ೨೦ ಸಾವಿರ ಜನರು ಸೇರಿದ್ದರು. ಅಲ್ಲಲ್ಲಿಗೆ ಪುಷ್ಪಹಾರಗಳನ್ನು ಅಧ್ಯಕ್ಷರಿಗೆ ಅರ್ಪಿಸಿ ತಮ್ಮ ಪ್ರೇಮಾದರಗಳನ್ನು ವ್ಯಕ್ತಗೊಳಿಸುತ್ತಿದ್ದರು. ಮಧ್ಯಾಹ್ನ ೨ ಗಂಟೆಗೆ ಸಭೆಯ ಕಾರ್ಯ ಪ್ರಾರಂಭವಾಯಿತು.

ಅಧ್ಯಕ್ಷರಾದ ಬ್ಯಾ. ಸಾವರಕರರು ಸುದೀರ್ಘವಾದ ಭಾಷಣವನ್ನು ಮಾಡಿದರು. ಹಿಂದು ಶಬ್ದದ ವ್ಯಾಖ್ಯೆ, ಹಿಂದು ರಾಷ್ಟ್ರದ ಮಹತ್ವ, ಹಿಂದು ಮಹಾಸಭೆಯ ಧೋರಣ, ಸ್ವಾತಂತ್ರ್ಯ ಪ್ರಾಪ್ತಿಗಾಗಿ ಹಿಂದುಗಳು ನಡೆಸಿದ ಹೋರಾಟ ಮೊದಲಾದ ಅನೇಕ ಮಹತ್ವದ ವಿಷಯಗಳನ್ನು ತಮ್ಮ ಭಾಷಣದಲ್ಲಿ ವಿಸ್ತಾರವಾಗಿ ತಿಳಿಸಿದ್ದಾರೆ. ಹಿಂದು ಮಹಾಸಭೆಯ ವಿಷಯದಲ್ಲಿ ಸಹಾನುಭೂತಿವುಳ್ಳವರೂ ವಿಪರೀತ ತಿಳಿದುಕೊಂಡವರೂ ಹೀಗೆ ಎಲ್ಲರೂ ಅವಶ್ಯಕವಾಗಿ ಓದಿ ಮನನಮಾಡುವಂತೆ ಈ ಭಾಷಣವಿದೆ. ಮುಂದಿನ ಸಂಚಿಕೆಯಲ್ಲಿ ಆದಷ್ಟು ವಿವರವಾಗಿ ಆ ಭಾಷಣವನ್ನು ಕೊಡುವೆವು. ಈ ಸಂಚಿಕೆಯಲ್ಲಿ ಅವರ ಕೆಲವು ಮುಖ್ಯ ವಿಚಾರಗಳನ್ನು ಬೇರೆ ಬೇರೆ ಕಡೆ ಕೊಟ್ಟಿದ್ದೇವೆ.

---

## ಮುಸ್ಲಿಂಲೀಗಿನ ಬೆಂಕಿ ಆಟ!

ಮುಸ್ಲಿಂಲೀಗಿನ ಪ್ರಮುಖರು ಇತ್ತೀಚಿಗೆ ಜಾತಿದ್ವೇಷದ ಬೆಂಕಿಯನ್ನು ತಮ್ಮ ಅಜ್ಞ ಧರ್ಮಬಾಂಧವರ ಮೂಲಕ ಹೆಚ್ಚಾಗಿ ಪ್ರಸಾರಗೊಳಿಸಲು ಪ್ರಯತ್ನಿಸುತ್ತಿರುವುದು ಅತ್ಯಂತ ಶೋಚನೀಯವಾದ ಸಂಗತಿಯು.

### ಸಾವಿರ ಜವಾಹರಲಾಲರು?

ಬಂಗಾಲದ ಮುಖ್ಯ ಮಂತ್ರಿಗಳಾದ ಮಿ. ಹಕ್ಕರು ದೌಡಕಂಡಿ ಎಂಬಲ್ಲಿ ಭಾಷಣಮಾಡುವಾಗ "ಸಾವಿರ ಜವಾಹರಲಾಲರು ನನ್ನ ಜೇಬಿನಲ್ಲಿದ್ದಾರೆ; ೨೭ ಕೋಟಿ ಹಿಂದುಗಳಿಗೆ ನಾನೊಬ್ಬನೇ ಎದುರಿಸುವೆನು. ಎಂದು ಅಬ್ಬರದ ಮಾತುಗಳನ್ನಾಡಿ ಹಿಂದುಗಳ ಮತ್ತು ಕಾಂಗ್ರೆಸ್ ಮುಖಂಡರ ವಿಷಯವಾಗಿ ಮುಸಲ್ಮಾನ್ ಜನ ಸಾಮಾನ್ಯದಲ್ಲಿ ದ್ವೇಷಾಗ್ನಿ ಪ್ರಜ್ವಲಿಸುವಂತೆ ಮಾಡಿದರು. ಇದೇ ಮಂತ್ರಿಗಳು ಕಲಕತ್ತಾದ ಒಂದು ಭಾಷಣದಲ್ಲಿ ಹೀಗೆ ಹೇಳಿದರು—

"ಮುಸಲ್ಮಾನರು ನಿಜವಾದ ಮುಸಲ್ಮಾನಿ ರಕ್ತದವರೇ ಇದ್ದದ್ದಾಗಿದ್ದರೆ ಅವರು ಆಕ್ರಮಣ ಮತ್ತು ಹೊಡೆದಾಟಗಳ ಮೂಲಕವಾಗಿಯಾದರೂ ತಮ್ಮ ವಿರುದ್ಧವಾಗಿ ನಡೆದಿರುವ ಚಟುವಟಿಕೆಗಳನ್ನು ನಿಲ್ಲಿಸುವರು." ಬಂಗಾಲದಲ್ಲಿ ಇಂಥ ಹೊಣೆಗಾರಿಕೆಯುಳ್ಳವರೇ ಜಾತಿದ್ವೇಷದ ಬೆಂಕಿಯನ್ನು ಈ ಪ್ರಕಾರ ಪ್ರಸಾರಗೊಳಿಸುತ್ತಿರುವುದು ಅನರ್ಥಕರವಲ್ಲವೆ?

### ಯುದ್ಧಕ್ಕೆ ಮುಸಲ್ಮಾನರು ಸಿದ್ಧರಿದ್ದಾರೆ!

ಅಲಹಾಬಾದಿನಲ್ಲಿ ತಾ. ೨೭ ನೆಯ ದಿನ ಮುಸ್ಲಿಂಲೀಗಿನ ಸ್ವತಂತ್ರ ಧ್ವಜವನ್ನು ಮೆರೆಸುವ ಸಮಾರಂಭ ಜರುಗಿತು. ಆ ದಿನ ಮೊದಲು ಜುಮ್ಮಾ ಮಸೀದಿಯಲ್ಲಿ ಪ್ರಾರ್ಥನೆ ಮಾಡಿ ಖುರಾನ್‌ದಲ್ಲಿಯ ವಾಕ್ಯಗಳನ್ನು ಮಾರ್ಗದಲ್ಲಿ ಹೇಳುತ್ತಾ ಪ್ರಚಂಡ ಜನಸಮೂಹವು ಗಂಭೀರ ಮುದ್ರೆಯಲ್ಲಿ "ಮಹಮ್ಮದ ಅಲ್ಲಿ ಪಾರ್ಕ" ಸ್ಥಳಕ್ಕೆ ಬಂದಿತು. ಅಂಥ ಸಭೆಯಲ್ಲಿ ಮೌ. ಶೌಕತ್ ಅಲ್ಲಿಯವರು ಹೀಗೆ ಹೇಳಿದರು—

"ಮುಸಲ್ಮಾನರು ಈ ದೇಶದಲ್ಲಿ ಒಂದು ಸಾವಿರ ವರುಷ ರಾಜ್ಯವಾಳಿದ್ದಾರೆ. ಕಾಂಗ್ರೆಸ್ ಬೇರೆ ಯಾರ ಸಂಗಡವಾದರೂ ಯುದ್ಧಮಾಡಲಿ. ಅದು ಮುಸಲ್ಮಾನರನ್ನು ಮಾತ್ರ ತಡವಕೂಡದು. ನಾನು ಇಂಥ ವಯಸ್ಸಿನಲ್ಲಿಯೂ ಧರ್ಮಕ್ಕಾಗಿ ಯುದ್ಧಮಾಡಲು ಸಿದ್ಧನಾಗಿದ್ದೇನೆ. ಮುಸಲ್ಮಾನರಿಗೆ ಧಾರ್ಮಿಕ ಅವಮಾನವು ಎಂದೂ ಸಹನವಾಗುವುದಿಲ್ಲವಾದುದರಿಂದ ಅವರು ಯಾವಾಗಲೂ ಯಾರಸಂಗಡಲಾದರೂ ಯುದ್ಧಕ್ಕೆ ಸಿದ್ಧರೇ ಆಗಿದ್ದಾರೆ.

ಕಾಂಗ್ರೆಸ್ ಈಗ ನಡೆಸಿರುವ ಕಾರ್ಯವು ಹೊಡೆದಾಟದಲ್ಲಿ ಕೊನೆಗೆ ಪೂರ್ತಿಯಾಗುವುದು. ಕೊಲ್ಲುವೆ, ಕೊಲ್ಲಲ್ಪಡುವೆ ಎಂಬಂತಹ ಪ್ರಸಂಗವೇ ಈಗ ಬಂದಿದೆ. ಮುಸಲ್ಮಾನರು ಸತ್ತರೆ ಅಫಗಾಣಿಸ್ಥಾನ, ತುರ್ಕಸ್ಥಾನ, ಇರಾಣ, ಇರಾಕ ಮೊದಲಾದ ದೇಶಗಳಲ್ಲಾದರೂ ಮುಸಲ್ಮಾನ್ ಧರ್ಮವು ಬದುಕಿರುವದು. ಹಿಂದುಗಳು ಸತ್ತರೆ ಮಾತ್ರ ಜಗತ್ತಿನಲ್ಲಿ ಅವರ ಧರ್ಮವೇ ಲಯವಾಗಿ ಹೋಗುವುದು."

# ಶೋಚನೀಯ ನಿಧನ.

ರಾ|| ಸಾ|| ಶಿದ್ಧರಾಮಪ್ಪ ಲಕ್ಷ್ಮೇಶ್ವರ ರಿಟಾಯರ್ಡ ಪೋಲೀಸ ಇನಸ್ಪೆಕ್ಟರ ಇವರು ವಿಜಾಪುರದಲ್ಲಿ ಇದೇ ಶನಿವಾರ ೨೫ ನೇ ತಾರೀಖಿನ ದಿವಸ ಶಿವೈಕ್ಯರಾದದ್ದಕ್ಕೆ ನಾವು ಬಹಳ ವಿಷಾದಿಸುತ್ತೇವೆ. ಹೋದ ೨೦ ವರುಷಗಳಿಂದ ಅವರು ವಿಜಾಪುರ ಪಟ್ಟಣದಲ್ಲಿ ವಾಸವಾಗಿದ್ದು ಅವರು ಈ ಕಾಲದಲ್ಲಿ ಅನೇಕ ಸಾರ್ವಜನಿಕ ಕಾರ್ಯಗಳನ್ನು ಮಾಡಿ ಬಹಳ ಲೋಕಪ್ರಿಯರಾದರು. ಅವರು ಅತ್ಯಂತ ಶಿಕ್ಷಣಾಭಿಮಾನಿಗಳಾಗಿದ್ದರು. ಶ್ರೀ. ಸಿದ್ಧೇಶ್ವರ ಹೈಸ್ಕೂಲಿನ ಕಟ್ಟಡವನ್ನು ಕಟ್ಟುವಲ್ಲಿ ಅವರು ಬಹು ಪರಿಶ್ರಮವನ್ನು ಪಟ್ಟರು. ಈ ಸುಂದರವಾದ ಇಮಾರತಿಯು ಆದದ್ದು ಅವರಿಂದಲೇ ಇರುತ್ತದೆ. ಅದಕ್ಕೋಸ್ಕರ ಬೇಕಾಗುವ ಹಣವನ್ನು ಶೇಖರಿಸಲಿಕ್ಕೆ ಅವರು ಅವಿಶ್ರಾಂತ ದುಡಿದರು. ಇದಕ್ಕೋಸ್ಕರ ಈ ಸಂಸ್ಥೆಯವರು ಅವರಿಗೆ ನಿರಂತರ ಋಣಿಯಾಗಿರುವರು. ಶಾಲೆಯ ಶಿಕ್ಷಣದ ಕಾರ್ಯಗಳು ಅಚ್ಚುಕಟ್ಟಾಗಿ ನೆರವೇರಲು ಅವರು ಯಾವಾಗಲೂ ಬಹಳ ಉತ್ಸುಕತೆಯನ್ನು ತಾಳಿದವರಾಗಿದ್ದರು. ಅವರು ಮೊದಲು ವಿಜಾಪುರ ಜಿಲ್ಲೆಗೆ ಪೋಲೀಸ ಇನಸ್ಪೆಕ್ಟರರಾಗಿ ಬಂದರು. ಅವರು ಇಲ್ಲಿಗೆ ಬಂದ ಬಳಿಕ ಗುನ್ನೆಗಾರ ಜಾತಿಯವರನ್ನು ಸುಧಾರಿಸಬೇಕೆಂಬ ಪ್ರಯತ್ನಗಳು ನಡೆದಿದ್ದವು. ಈ ಕಾರ್ಯಕ್ಕೋಸ್ಕರ ಮೆ|| ಸ್ಟಾರ್ಟ ಸಾಹೇಬರು ಸರಕಾರದವರಿಂದ ನಿಯಮಿಸಲ್ಪಟ್ಟವರಾಗಿದ್ದರು. ಅವರು ಈ ಬಿಕ್ಕಟ್ಟಿನ ಕಾರ್ಯದಲ್ಲಿ ತಮ್ಮ ಸಹಾಯಕ್ಕೋಸ್ಕರ ರಾ|| ಸಾ|| ಸಿದ್ಧರಾಮಪ್ಪನವರನ್ನೇ ನಿಯಮಿಸಿಕೊಂಡರು. ಇದರಿಂದ ಮೇಲಿನ ಅಧಿಕಾರಸ್ಥರು ತತ್ಪರತೆಯ ಬಗ್ಗೆ ಎಷ್ಟು ವಿಶ್ವಾಸವುಳ್ಳವರಾಗಿದ್ದರೆಂಬುದು ವ್ಯಕ್ತವಾಗುತ್ತದೆ. ಹಾಗೆಯೇ ರಾ|| ಸಾ|| ಸಿದ್ಧರಾಮಪ್ಪನವರಾದರೂ ತಮ್ಮ ಈ ಕಾರ್ಯದಲ್ಲಿ ಯಶಸ್ಸನ್ನು ಸಂಪಾದಿಸಿದರು. ವಿಜಾಪುರ ಜಿಲ್ಲೆಯಲ್ಲಿ ಆಗ ಈ ಕಾರ್ಯವು ಯಶಸ್ಸನ್ನು ಹೊಂದದೆ ಹೋಗಿದ್ದರೆ ಇಲಾಖೆಯಲ್ಲಿ ಈಗ ನಡೆದ ಈ ಮಹತ್ವದ ಕಾರ್ಯವು ಅಲ್ಲಿಯೇ ನಿಂತು ಹೋಗುತ್ತಿತ್ತು. ಮೆ|| ಸ್ಟಾರ್ಟ ಸಾಹೇಬರು ಈ ಕಾರ್ಯವು ಸಿದ್ಧಿಗೆ ಹೋದದ್ದರ ಶ್ರೇಯಸ್ಸು ತಮಗಿರದೆ ರಾ|| ಸಾ|| ಶಿದ್ರಾಮಪ್ಪನವರದಿರುತ್ತದೆಂದು ಸಾರ್ವಜನಿಕ ಸಭೆಗಳಲ್ಲಿ ಅನೇಕ ಸಾರೆ ಹೇಳುತ್ತಿದ್ದರು. ಅವರು ಮಾಡಿದ ಈ ಮಹತ್ವದ ಕೆಲಸಕ್ಕೋಸ್ಕರ ಸರಕಾರದವರು ಅವರಿಗೆ ಸೊಲ್ಲಾಪುರ ಜಿಲ್ಲೆಯಲ್ಲಿ ಒಂದು ಉತ್ತಮ ಕರದ ಜಮಿನನ್ನು ಇನಾಮಾಗಿ ಹಾಕಿಕೊಟ್ಟಿರುತ್ತಾರೆ. ರಾ|| ಸಾ|| ಶಿದ್ದರಾಮಪ್ಪನವರು ನಿವೃತ್ತರಾದ ಬಳಿಕ ಪಟ್ಟಣದಲ್ಲಿ ನಿಂತು ಅನೇಕ ಸಾರ್ವಜನಿಕ ಕಾರ್ಯಗಳನ್ನು ಮಾಡುತ್ತಾ ಬಂದರು. ಅವರು ಈಚೆಗೆ ಬಹಳ ಅಶಕ್ತರಾಗಿದ್ದರು. ಮತ್ತು ಅವರು ಅತ್ಯಂದಲ್ಲಿ ಶ್ರಮಪಡದೆ ಶಾಂತರೀತಿಯಿಂದ ದೇಹಾವಸಾನವನ್ನು ಹೊಂದಿದರು. ಅವರ ಆತ್ಮಕ್ಕೆ ದೇವರು ಶಾಂತಿಯನ್ನು ಕೊಡಲಿ.

ಅವರು ಒಂದು ಮರಣ ಶಾಸನವನ್ನು ಬರೆದಿಟ್ಟಿರುವರು. ಅದರಿಂದ ವಿಜಾಪುರ ಮತ್ತು ಸೊಲ್ಲಾಪುರ ಜಿಲ್ಹೆಯಲ್ಲಿಯ ಅವರ ಕೆಲವು ಆಸ್ತಿಯು ಇದ್ದು ಅದು ಅವರ ವಿಧವೆಯು ಉಪಯೋಗಿಸಿದನಂತರ ಶ್ರೀ ಶಿದ್ಧೇಶ್ವರ ಶಾಲೆಗೆ ಬರಬೇಕೆಂತಲೂ ಬೇರೊಂದು ವಸತಿಗೃಹವಿದ್ದು ಅದನ್ನು ಅವರ ಸೊಸೆಯು ಉಪಯೋಗಿಸಿದನಂತರ ಅದೇ ಶಾಲೆಗೆ ಬರಬೇಕೆಂತಲೂ ಗೊತ್ತುಪಡಿಸಿರುವರೆಂದು ತಿಳಿಯುತ್ತದೆ.

ಅವರು ಮರಣ ಹೊಂದಿದ್ದು ತಿಳಿದ ಕೂಡಲೆ ಪಟ್ಟಣದಲ್ಲಿಯ ಬಹುಜನರು ನೆರೆದು ಅವರ ಅಂತ್ಯ ಸಂಸ್ಕಾರವನ್ನು ನೆರವೇರಿಸಿದರು. ಮತ್ತು ಮರುದಿವಸ ಶ್ರೀ ಸಿದ್ಧೇಶ್ವರ ಹಾಯಸ್ಕೂಲಿನಲ್ಲಿ ಸಾರ್ವಜನಿಕ ಸಭೆಯು ರಾ|| ಸಾ|| ಹಳಕಟ್ಟಿ ಇವರ ಅಧ್ಯಕ್ಷತೆಯಲ್ಲಿ ಸೇರಿ ದುಃಖ ಪ್ರದರ್ಶಕ ನಿರ್ಣಯವು ಮಾಡಲ್ಪಟ್ಟಿತು.

"ನವಕರ್ನಾಟಕ."

[ ಶ್ರೀ. ಸಿದ್ಧರಾಮಪ್ಪನವರು ಮಾಡಿದ ಸಾರ್ವಜನಿಕ ಕಾರ್ಯಗಳು ಆದರ್ಶಪ್ರಾಯವಾಗಿವೆ. ಸರಕಾರಿ ಅಧಿಕಾರದಿಂದ ನಿವೃತ್ತರಾದನಂತರ ಕೂಡಾ ಜನಸೇವೆಯ ಎಷ್ಟೋ ಕಾರ್ಯಗಳನ್ನು ಮಾಡಲು ಹೇಗೆ ಶಕ್ಯವೆಂಬುದನ್ನು ಶ್ರೀ. ಸಿದ್ಧರಾಮಪ್ಪನವರು ಮಾಡಿತೋರಿಸಿದ್ದಾರೆ. ಇವರು ಮಾಡಿರುವ ದಾನ ಪದ್ಧತಿಯು ಕೂಡಾ ಇವರ ಸಾರ್ವಜನಿಕ ಕಾರ್ಯಾಸಕ್ತತೆಗೆ ಶೋಭಿಸುವಂತೆಯೇ ಇದೆ. ಇಂಥ ಸಾರ್ವಜನಿಕ ಕಾರ್ಯಾಸಕ್ತರ ನಿಧನವು ಸಕಲರಿಗೂ ವಿಷಾದವನ್ನುಂಟುಮಾಡದೆ ಇರಲಾರದು. ನಾವೂ ಅದರಲ್ಲಿ ಭಾಗಿಗಳಾಗಿದ್ದೇವೆ. ಈ ಮಹಾಶಯರ ಆತ್ಮಕ್ಕೆ ಚಿರಶಾಂತಿ ದೊರೆಯಲೆಂದು ಹಾರೈಸುತ್ತೇವೆ. ಸಂಪಾದಕ.]

# ಹಿಮಾಲಯದ ಮೇಲೆ ಹಿಂದು ಧ್ವಜ!

ಸ್ವಾತಂತ್ರ್ಯವೀರ ಸಾವರಕರರು ಹಿಂದು ಮಹಾ ಸಭೆಯ ಅಧ್ಯಕ್ಷರಾಗಿ ಮಾಡಿದ ಮಹತ್ವದ ಭಾಷಣದಲ್ಲಿ ಹೀಗೆ ಹೇಳಿದರು-

## ಯಾವುದು ರಾಷ್ಟ್ರೀಯ?

"ಹಿಂದಿ ರಾಷ್ಟ್ರಘಟನೆಯು ಶುದ್ಧ ರಾಷ್ಟ್ರೀಯವಾದುದಿರಬೇಕು. ಅದರಲ್ಲಿ ಜಾತಿ, ಧರ್ಮ, ವಂಶಗಳಿಂದ ಹೆಚ್ಚು ಕಡಿಮೆ ಮಾಡಬೇಡಿರಿ. ಅಧಿಕಾರ, ಮತದಾನ, ಕಂದಾಯ ಮೊದಲಾದವುಗಳಲ್ಲಿ ಜಾತಿ ಧರ್ಮಗಳನ್ನು ಎಣಿಸಬೇಡಿರೆಂದೇ ಹಿಂದು ಮಹಾಸಭೆಯು ಸಾರಿ ಹೇಳುತ್ತದೆ. ಇದು ರಾಷ್ಟ್ರೀಯವಲ್ಲವೆ?

ಇಂಗ್ಲೆಂಡ್, ಅಮೇರಿಕಾ ಮೊದಲಾದ ದೇಶಗಳಂತೆ ಇಲ್ಲಿಯು ಕೂಡಾ ಬಹು ಸಂಖ್ಯಾಕರ ಭಾಷೆಯೇ ರಾಷ್ಟ್ರ ಭಾಷೆ. ಅವರ ಲಿಪಿಯೇ ರಾಷ್ಟ್ರಲಿಪಿ, ಎಂದು ತಿಳಿಯುವುದು ನ್ಯಾಯವಲ್ಲವೆ? ಇದಕ್ಕಿಂತ ಸರಿಯಾದ ರಾಷ್ಟ್ರೀಯ ವೃತ್ತಿಯು ಯಾವುದೆಂಬುದನ್ನು ತೋರಿಸಿಕೊಡಿರಿ.

ಅಂತೆಯೇ ಕಾಂಗ್ರೆಸ್ಸಿಗಿಂತ ಹಿಂದು ಮಹಾಸಭೆಯ ಧೋರಣವು ಹೆಚ್ಚು ರಾಷ್ಟ್ರೀಯವಾದುದೆಂದು ನಾನು ಸಾರಿ ಹೇಳುತ್ತೇನೆ. ಹಿಂದುಗಳಿಗಾಗಿ ಯಾವ ಹೆಚ್ಚಿನ ಸೌಕರ್ಯವೂ ಬೇಕಾಗಿಲ್ಲ. ಯಾವ ಹೆಚ್ಚಿನ ಸೌಲಭ್ಯವನ್ನು ಕೇಳದೆ ಮುಸಲ್ಮಾನರು ರಾಷ್ಟ್ರಘಟನೆಯಲ್ಲಿ ಸೇರಲು ಸಿದ್ಧರಾಗಿದ್ದಾರೆಯೆ?

## ಹಿಂದುತ್ವದ ವಿಜಯ.

ಹಿಂದು ಸಮಾಜವೇ ಹಿಂದುಸ್ಥಾನಕ್ಕೆ ಆಧಾರವಾಗಿದೆ. ಸಾವಿರಾರು ವರುಷಗಳನಂತರ ಏನಾದರೂ ಆಗಲಿ. ಈಗ ಮಾತ್ರ ಧಾರ್ಮಿಕ ಭಾವನೆಯು ಹಿಂದುಸ್ಥಾನದಲ್ಲಿ ವಿಶೇಷವಾಗಿದೆ. ಮುಸಲ್ಮಾನರ ಧಾರ್ಮಿಕ ನಿಷ್ಠೆಯಂತೂ ಧರ್ಮಾಂಧತೆಯ ಸ್ವರೂಪವನ್ನು ಹೊಂದಿದೆ. ಅವರಿಗೆ ಹಿಂದುಸ್ಥಾನಕ್ಕಿಂತ ಪ್ರಿಯವಾದ ಬೇರೆ ಸಂಗತಿಗಳಿವೆ.

ಈ ಅಧಿವೇಶನದ ಭಾವಿ ಅಧ್ಯಕ್ಷರು ಹಿಂದು ಧ್ವಜವು ಹಿಮಾಲಯದ ಮೇಲೆ ಬಹು ಸಂಭ್ರಮದಿಂದ ಹಾರಾಡುತ್ತಲಿದೆಯೆಂದೂ, ಹಿಂದುಸ್ಥಾನವು ಸ್ವತಂತ್ರವಾಗಿದ್ದು ಹಿಂದುತ್ವದ ವಿಜಯವಾಗಿದೆಯೆಂದೂ, ಸಾರಿ ಹೇಳುವ ಕಾಲವು ಒಂದು ದಿನ ಬಂದೇ ಬರುವುದೆಂಬುದನ್ನು ನೀವು ದೃಢವಾಗಿ ನಂಬಿರಿ.

# ಹಿಂದುಸ್ಥಾನದ ರಕ್ಷಕರು ಯಾರು?

( ಶ್ರೀ. ಭಾಯಿ ಪರಮಾನಂದರ ಲೇಖ. )

ಭಾಯಿ ಪರಮಾನಂದರು "ಹಿಂದು" ಪತ್ರಿಕೆಯಲ್ಲಿ ಈ ಪ್ರಕಾರ ಬರೆದಿದ್ದಾರೆ—

"ಹಿಂದುಸ್ಥಾನವನ್ನು ಇಂಗ್ಲಿಷರು ಬಿಟ್ಟು ಹೋಗುವಂತಹ ಪ್ರಸಂಗವು ಬಂದಿತೆಂದು ತಿಳಿಯೋಣ. ಹಿಂದಕ್ಕೆ ಮಹಾಯುದ್ಧದ ಪ್ರಸಂಗದಲ್ಲಿ ಇಂಗ್ಲಿಷರು ಸೋತರೆಂದೂ ಜರ್ಮನರು ಗೆದ್ದರೆಂದೂ ತುರ್ಕರು ಹಿಂದುಸ್ಥಾನವನ್ನು ತೆಗೆದುಕೊಳ್ಳಲು ದಂಡೆತ್ತಿ ಬಂದಿದ್ದಾರೆಂದೂ ಸುದ್ದಿ ಹುಟ್ಟಿಸಿ ಪಂಜಾಬದ ಮುಲತಾನ ಜಿಲ್ಲೆಯಲ್ಲಿ ಅನೇಕ ಮುಸಲ್ಮಾನರು ಸುಲಿಗೆಯನ್ನು ನಡೆಸಿದ್ದರು. ಅನೇಕ ಹೆಣ್ಣುಮಕ್ಕಳನ್ನು ಎತ್ತಿಕೊಂಡು ಹೋಗಿದ್ದರು. ಹಿಂದು ಮಹಾಸಭೆಯು ಆ ವಿಷಯದಲ್ಲಿ ಪ್ರಯತ್ನಿಸಿ ಅನೇಕರಿಗೆ ಶಿಕ್ಷೆಯಾಗುವಂತೆ ಮಾಡಿತು.

ಈಗ ನಿಜವಾಗಿಯೇ ಇಂಗ್ಲೆಂಡಿನ ಮೇಲೆ ವಿಪತ್ತು ಬಂದು ಆದರ ಕೈಯಿಂದ ಹಿಂದುಸ್ಥಾನ ತಪ್ಪಿ ಬೇರೆಯವರ ಕೈಯಿಗೆ ಹೋಗುವ ಪ್ರಸಂಗ ಬಂದರೆ ಹಿಂದುಸ್ಥಾನವನ್ನು ರಕ್ಷಿಸುವವರು ಯಾರು ? ಈ ಪ್ರಶ್ನೆಗೆ ಗಾಂಧೀಜಿಯವರು ಮತ್ತು ಪಂಡಿತಜಿಯವರು ಹೀಗೆ ಉತ್ತರ ಹೇಳುತ್ತಾರೆ—

ಪ್ರೇಮವೆಂಬ ಅಸ್ತ್ರದಿಂದ ನಾವು ಹಿಂದುಸ್ಥಾನವನ್ನು ರಕ್ಷಿಸುತ್ತೇವೆಂದು ಮಹಾತ್ಮಾ ಗಾಂಧಿಯವರು ಹೇಳುತ್ತಾರೆ. ಪಂಡಿತ ಜವಾಹರಲಾಲರಾದರೋ ನಮಗೆ ಜಗತ್ತಿನಲ್ಲಿ ಯಾರೂ ಶತ್ರುಗಳೇ ಇಲ್ಲವೆಂತಲೂ ಇಂಗ್ಲಿಷರೇ ನಮಗೆ ಶತ್ರುಗಳನ್ನು ಉಂಟುಮಾಡಿದ್ದಾರೆಂತಲೂ ಅವರೇ ಈ ದೇಶವನ್ನು ಬಿಟ್ಟು ಹೋದ ಮೇಲೆ ನಾವು ಸುರಕ್ಷಿತವಾಗಿ ಇರುತ್ತೇವೆಂದೂ ಹೇಳುತ್ತಾರೆ.

ಈ ಅಭಿಪ್ರಾಯಗಳಿಗೆ ಹಿಂದುಸ್ಥಾನದ ಹಿಂದಿನ ಇತಿಹಾಸವೇನಾದರೂ ಒಪ್ಪಿಗೆಯನ್ನು ಕೊಡುತ್ತದೆಯೆ ? ಬೌದ್ಧರು ಅಹಿಂಸಾವಾದಿಗಳಾಗಿ ಎಷ್ಟೋ ಪ್ರಯತ್ನಿಸಿದರೂ ಹೂಣ ಮೊದಲಾದವರು ದಂಡೆತ್ತಿ ಬಂದು ಆವರನ್ನು ಕೊಂದೇ ಹಾಕಿದರು. ಅನಂತರ ಮುಸಲ್ಮಾನರು ದಂಡೆತ್ತಿ ಬಂದು ಈ ದೇಶವನ್ನು ಆಕ್ರಮಿಸಿಕೊಂಡರು. ಆಗ ನಮಗೆ ಶತ್ರುಗಳನ್ನು ಉಂಟುಮಾಡಲು ಇಂಗ್ಲಿಷರೇನೂ ಇರಲಿಲ್ಲವಷ್ಟೆ. ಎಂದಮೇಲೆ ಈ ಉಭಯರ ಅಭಿಪ್ರಾಯಗಳನ್ನು ಒಪ್ಪುವುದು ಹೇಗೆ ?

ಈ ಉತ್ತರಗಳು ಯಾರಿಗೆ ಹೇಗಾದರೂ ತೋರಲಿ. ಹಿಂದುಗಳು ಮಾತ್ರ ಈಗ ಅನ್ಯರು ದಂಡೆತ್ತಿ ಬಂದರೆ ತಮ್ಮ ರಕ್ಷಣೆಯನ್ನು ಮಾಡಿಕೊಳ್ಳುವಷ್ಟು ಬಲಶಾಲಿಗಳಿಲ್ಲವೆಂಬುದೇನೋ ನಿಜ. ಮತ್ತು ಯಾವ ಸ್ವಾತಂತ್ರ್ಯಕ್ಕಾಗಿ ಈಗ ಇಷ್ಟು ತಳಮಳಪಡುತ್ತಿದ್ದಾರೆಯೋ ಅದನ್ನು ರಕ್ಷಿಸಿಕೊಳ್ಳುವ ಬಲವೇನೂ ಈಗ ಇವರಲ್ಲಿಲ್ಲವೆಂಬುದೂ ನಿರ್ವಿವಾದವಾದ ಸಂಗತಿಯು. ಇದು ಇಪ್ಪತ್ತನೆಯ ಶತಮಾನ. ಮುಂಚಿನಂತೆ ದೇಶವನ್ನು ಆಕ್ರಮಿಸಿಕೊಳ್ಳಲು ಯಾರು ಬರುತ್ತಿದ್ದಾರೆಂದು ಕೆಲವು ರಾಜನೀತಿಜ್ಞರು ಹೇಳುತ್ತಿದ್ದಾರೆ. ಅವರಿಗೆ ಇಟಾಲಿ ಮತ್ತು ಜಪಾನ ಇವುಗಳ ಕೃತಿಯೇ ಉತ್ತರವಾಗಿದೆ. ಇಪ್ಪತ್ತನೆಯ ಶತಮಾನವಾಗಲಿ, ಇಪ್ಪತ್ತೆರಡನೆಯ ಶತಮಾನವಾಗಲಿ, ನಿರ್ಬಲರ ಮೇಲೆ ಬಲಶಾಲಿಗಳು ಆಕ್ರಮಣ ಮಾಡುವುದೇನೂ ನಿಲ್ಲುವುದಿಲ್ಲವೆಂದು ಖಂಡಿತವಾಗಿ ತಿಳಿಯಿರಿ.

### ಆಕ್ರಮಣವು ಮನುಷ್ಯನ ಸ್ವಭಾವ.

ಕಾರ್ಲಾಯಿಲ್‌ನು ಮನುಷ್ಯ ಸ್ವಭಾವವನ್ನು ಕುರಿತು ಬಹು ಸಮಂಜಸವಾಗಿ ಹೀಗೆ ಹೇಳಿದ್ದಾನೆ—

"ಜಗತ್ತಿನಲ್ಲಿ ಇಬ್ಬರೇ ಇದ್ದರೂ ಅವರಲ್ಲಿ ಒಬ್ಬನು ಇನ್ನೊಬ್ಬನಿಗೆ ನೀನು ನನಗೆ ಹೊಡೆಯದಿದ್ದರೂ ನಾನು ನಿನಗೆ ಹೊಡೆಯದೆ ಮಾತ್ರ ಬಿಡುವುದಿಲ್ಲವೆಂದೇ ಹೇಳುವನು."

ಹಿಂದುಗಳು ಈಗಿನಂತೆಯೇ ನಿರ್ಬಲರಾಗಿದ್ದರೆ ಯಾವ ಬಲಶಾಲಿ ರಾಷ್ಟ್ರವಾದರೂ ಇದನ್ನು ಸ್ವಾಧೀನಮಾಡಿಕೊಳ್ಳದೆ ಬಿಡುವುದಿಲ್ಲ. ನಾವು ಕೇವಲ ತತ್ವವಾದಿಗಳಾಗಿ ಬೆಕ್ಕಿನ ಮುಂದೆ ಪಾರಿವಾಳ ಕಣ್ಣು ಮುಚ್ಚಿಕೊಂಡು ಕುಳಿತಂತೆ ಇದ್ದರೆ ಪರಾಧೀನರಾಗುವುದು ಖಂಡಿತ. ಈಗ ಆರು ಪ್ರಾಂತಗಳಲ್ಲಿ ಕಾಂಗ್ರೆಸ್ ಅಧಿಕಾರವನ್ನು ವಹಿಸಿರುವುದರಿಂದ ಅದು ನಮ್ಮ ರಕ್ಷಣೆಮಾಡುವುದಿಲ್ಲವೆ ? ಎಂದು ನನಗೆ ಪ್ರಶ್ನೆಮಾಡಬಹುದು.

ಕಾಂಗ್ರೆಸ್ ಮಂತ್ರಿಮಂಡಲವು ಈಗ ಇಂಗ್ಲಿಷ್ ಶಕ್ತಿಯಿಂದಲೇ ನಡೆದಿದೆಯೆಂಬುದನ್ನು ಮರೆಯಬೇಡಿರಿ. ಅದು ಈಗ ಹಿಂದುಗಳ ಶಕ್ತಿಯಿಂದ ಈ ರಾಜ್ಯವನ್ನು ನಡೆಸುತ್ತಾ ಇಲ್ಲ. ಗಡಿನಾಡು, ಪಂಜಾಬ, ಸಿಂಧ, ಬಂಗಾಲ ಪ್ರಾಂತಗಳಲ್ಲಿ ಹಿಂದುಗಳ ಮೇಲೆ ವಿಪತ್ತು ಬಂದರೆ ಕಾಂಗ್ರೆಸ್ ಯಾವ ಸಹಾಯವನ್ನೂ ಮಾಡುವಂತಿಲ್ಲ.

### ಐಕಮತ್ಯ ಯಾರಲ್ಲಿ ಶಕ್ಯ?

ನಿರ್ಬಲರಿಗೂ ಬಲಶಾಲಿಗಳಿಗೂ ಮಿತ್ರತ್ವವು ಎಂದೂ ಇರುವುದಿಲ್ಲವೆಂಬುದೇ ನನ್ನ ಸಿದ್ಧಾಂತವು. ಹಿಂದುಗಳು ನಿರ್ಬಲರಾಗಿದ್ದಾರೆ. ಮುಸಲ್ಮಾನರು ಬಲಶಾಲಿಗಳಾಗಿದ್ದಾರೆ. ಎಂದಮೇಲೆ ಈ ಉಭಯರಲ್ಲಿ ಪ್ರೇಮ ಉಂಟಾಗುವುದು ಹೇಗೆ ? ಪ್ರೇಮವಿಲ್ಲದೆ ಐಕಮತ್ಯ ಶಕ್ಯವೆ ?

ಹಿಂದುಗಳಲ್ಲಿ ಬಲವಿಲ್ಲವೆಂದು ನಾನು ಹೇಳುತ್ತೇನೆ. ಮಿ. ಜಿನ್ನಾರವರು ಮುಸಲ್ಮಾನರಲ್ಲಿ ಬಲವಿಲ್ಲ. ಹಿಂದುಗಳೇ ಬಲಶಾಲಿಗಳೆಂದು ಹೇಳುತ್ತಿದ್ದಾರೆ. ಇದರ ನಿಜಸ್ಥಿತಿಯು ಹೇಗೇ ಇರಲಿ. ಅಂತೂ ಉಭಯರೂ ಪ್ರೇಮದಿಂದಿರುವಹಾಗಿಲ್ಲವೆಂಬುದೇನೋ ಸಿದ್ಧವಷ್ಟೆ.

ಹಿಂದುಗಳಲ್ಲಿ ನಾನಾ ಜಾತಿಭೇದ, ಪ್ರಾಂತಭೇದ, ಮೊದಲಾದವುಗಳಿಂದ ಸಂಘಟನೆಯಿಲ್ಲದೆ ನಿರ್ಬಲತೆಯುಂಟಾಗಿದೆ. ಇದು ಹೋಗಬೇಕು. ಹಿಂದುಗಳಲ್ಲಿ ಯಾವ ಜಾತಿ ಮತಪಂಥ ಪ್ರಾಂತದವರಿದ್ದರೂ ನಾವೆಲ್ಲರೂ ಹಿಂದುಗಳೆಂಬ ಭಾವನೆಯುಂಟಾಗಬೇಕು. ಈ ಹಿಂದುಸಂಘಟನೆಯಿಂದಲೇ ಬಲವಾದ ಶಕ್ತಿಯುಂಟಾಗುತ್ತದೆ. ಆ ಸಂಘಟನಶಕ್ತಿಯೇ ಹಿಂದುಸ್ಥಾನವನ್ನು ಎಲ್ಲ ವಿಪತ್ತುಗಳಿಂದಲೂ ರಕ್ಷಿಸುವುದು."

---

## ನಿಜಾಮ ಪ್ರಾಂತದ ಚಂದಾದಾರರಿಗೆ ವಿಜ್ಞಾಪನೆ.

ಶರಣ ಸಂದೇಶ ಪತ್ರಿಕೆಯ ನಿಜಾಮ ಪ್ರಾಂತದ ಚಂದಾದಾರರು ತಮ್ಮ ಚಂದಾಹಣವನ್ನು ಗುಲಬರ್ಗಾ ಕಲ್ಯಾಣ ಕರ್ನಾಟಕ ಪ್ರೆಸ್ ಮ್ಯಾನೇಜರರ ಕಡೆಗೆ ಕಳಿಸಬೇಕೆಂದು ಈ ಮುಂಚೆ ತಿಳಿಸಿದ್ದಿತಷ್ಟೆ.

ಇನ್ನುಮೇಲೆ ಅಲ್ಲಿಗೆ ಚಂದಾ ಹಣವನ್ನು ಯಾರೂ ಕಳಿಸದೆ ಕೆಳಗಿನ ವಿಳಾಸಕ್ಕೇನೇ ಕಳಿಸಬೇಕು. ಅಲ್ಲಿಗೆ ಇನ್ನು ಮೇಲೆ ಕಳಿಸಿದರೆ ಅದಕ್ಕೆ ನಾವು ಹೊಣೆಗಾರರಲ್ಲ.

ಮ್ಯಾನೇಜರ್— "ಶರಣಸಂದೇಶ."

ಪೋ. ಆಲಮಟ್ಟಿ. ಜಿ. ವಿಜಾಪುರ

## ಸ್ಪಷ್ಟೀಕರಣ.

ಶ್ರೀ. ಪ್ರಸಿಡೆಂಟ ಶ್ರೀ ಸಿದ್ಧೇಶ್ವರ ದೇವಸ್ಥಾನ ಕಮೀಟಿ ಸೊಲ್ಲಾಪುರ ಇವರಿಗೆ ಸಾ. ನ. ವಿ. ವಿ.—

ತಾ. ೯-೧೨-೩೭ ನೆಯ ದಿವಸ ತಮ್ಮ ದೇವಸ್ಥಾನ ಕಮೀಟಿ ಜನರಲ್ ಸಭೆಯಲ್ಲಿ ಅಮರಾವತಿಯ ತಾ. ೧೫-೧೧-೩೭ ನೆಯ "ವೀರಶೈವ ಸಂಜೀವನಿ" ಯಲ್ಲಿ ನಾನು ಶ್ರೀ. ಮಲ್ಲಿಕಾರ್ಜುನಪ್ಪ ಅಪ್ಪಾರಾವ ಪಾಟೀಲ ಇವರ ೭೦ ನೆಯ ವರ್ಷ ವರ್ಧಂತಿಯ ಸಂಬಂಧವಾಗಿ ಬರೆದ ಅಲ್ಪ ಚರಿತ್ರೆಯ ಚರ್ಚೆಯಾಗಿ ಅದರಲ್ಲಿದ್ದ ಕೆಲವು ವಾಕ್ಯಗಳ ಸಂಬಂಧ ಆ ಲೇಖನವನ್ನು ನಿಷೇಧಿಸಿದ್ದೀರಿ.

ನಾನು ಇದೇ ಸೊಲ್ಲಾಪುರ ನಿವಾಸಿಯಾಗಿರುವುದರಿಂದ ಆ ಲೇಖದ ವಿಚಾರವಾಗಿ ಯಾವ ಸ್ಪಷ್ಟೀಕರಣವನ್ನಾದರೂ ನನ್ನಿಂದ ಕೇಳಿಕೊಳ್ಳದೆ ಅಥವಾ ನನ್ನ ಅಭಿಪ್ರಾಯವನ್ನು ಕಮಿಟಿಯಲ್ಲಿ ತಿಳಿಸಲು ಅವಕಾಶ ಕೊಡುವ ಶಿಷ್ಟಾಚಾರಕ್ಕು ಕೂಡಾ ಆಸ್ಪದ ಕೊಡದೆ ಹೀಗೆ ನಿಷೇಧಮಾಡಿದುದನ್ನು ನೋಡಿ ನನಗೆ ಬಹು ಆಶ್ಚರ್ಯವಾಗುತ್ತದೆ. ಶ್ರೀ. ಮಲ್ಲಿಕಾರ್ಜುನ ಅಪ್ಪಾರಾವ ಪಾಟೀಲ ಇವರು ನಮ್ಮ ಸಮಾಜದಲ್ಲಿ ಒಬ್ಬ ವಯೋವೃದ್ಧ ಕಳಕಳಿಯ ನಿಜವಾದ ಕಾರ್ಯಕರ್ತರಿದ್ದು ಈಗ ಅನೇಕ ವರ್ಷಗಳಿಂದ ಶ್ರೀ ಸಿದ್ಧೇಶ್ವರ ದೇವಸ್ಥಾನ ಕಮಿಟಿಯ ಒಬ್ಬ ಸನ್ಮಾನನೀಯ ಸಭಾಸದರು ಎಂದರೆ ದೇವಸ್ಥಾನ ಕಮಿಟಿಯ ಒಬ್ಬ ಸನ್ಮಾನನೀಯ ಪಂಚರು ಇದ್ದಾರೆ. ಇವರ ಗೌರವಾರ್ಥ ಬರೆಯುವದೆಂದರೆ ಪರ್ಯಾಯದಿಂದ ಶ್ರೀ ಸಿದ್ಧೇಶ್ವರ ಪಂಚ ಕಮೀಟಿಯ ಗೌರವವೇ ಅದಲ್ಲವೆ ?

ಶ್ರೀ. ಪಾಟೀಲರು ಸಮಾಜಕಾರ್ಯ ಮಾಡಿದ್ದರ ಗೌರವವನ್ನು ಮಾಡುವುದೇ ನಿಜವಾಗಿ ಆ ಲೇಖದ ಉದ್ದೇಶವಾಗಿದೆಯೇ ಹೊರತು ಶ್ರೀ ಸಿದ್ಧೇಶ್ವರ ಕಮಿಟಿ ಅಥವಾ ಅನ್ಯ ಸಂಸ್ಥೆ ಇಲ್ಲವೆ ವ್ಯಕ್ತಿಗಳ ಅಗೌರವ ಮಾಡುವ ಅಥವಾ ಅವರನ್ನು ಕಡಿಮೆ ಮಾಡುವ ಉದ್ದೇಶವೇನೂ ಇಲ್ಲವೆಂಬುದು ಆ ಲೇಖನವನ್ನು ಓದುವವರಿಗೆ ಸ್ಪಷ್ಟವಾಗಿ ಗೊತ್ತಾಗುವಂತಿದೆ. ಹೀಗಿರುವಾಗ ಆ ಲೇಖದಲ್ಲಿ ಕೆಲವು ಸಂಗತಿಗಳ ಸಂಬಂಧವಾಗಿ ಕಮಿಟಿಯಲ್ಲಿ ಚರ್ಚೆಯಾಗುವಷ್ಟು ಮಹತ್ವ ಪ್ರಾಪ್ತವಾದುದನ್ನು ಅನ್ಯರು ನೋಡಿದರೆ ನಿಮ್ಮ ಕಮಿಟಿಯ ಸಭಾಸದರಲ್ಲಿ ಪರಸ್ಪರ ಸಹಾನುಭೂತಿ ಪ್ರೇಮಾದರಗಳಿಲ್ಲವೆಂದೇ ತಿಳಿಯಲಾರರೆ? ಈ ಸಭಾಸದರಲ್ಲಿ ಪರಸ್ಪರ ಕಲುಷಿತ ಮನಸ್ಸಿದೆಯೆಂಬುದಕ್ಕೆ ಈ ನಿಷೇಧದ ಠರಾವೇ ದೃಷ್ಟಾಂತವೆಂದು ಊಹಿಸಲಾರರೆ?

ನನಗೆ ಗೊತ್ತಾದ ಸಂಗತಿಗಳ ಮೇಲಿಂದ ಮತ್ತು ಸಿದ್ಧೇಶ್ವರ ದೇವಸ್ಥಾನದ ಸಂಬಂಧ ಪತ್ರಿಕೆಗಳಲ್ಲಿಯೂ ಅಧಿಕಾರಯುಕ್ತವಾಗಿ ಪ್ರಸಿದ್ಧವಾದ ವಾಙ್ಮಯದಲ್ಲಿಯೂ ದೊರೆತ ಸಂಗತಿಗಳ ಮೇಲಿಂದ ನಾನು ಆ ಲೇಖನವನ್ನು ಬರೆದಿದ್ದೇನೆ. ಶ್ರೀ ಸಿದ್ಧೇಶ್ವರ ದೇವಾಲಯದಲ್ಲಿಯ ಮಂಟಪ, ಸಂಕ್ರಾಂತಿ ಯಾತ್ರೆಯಲ್ಲಿಯ ಸುಧಾರಣೆ, ೧೯೧೮ ನೆಯ ಇಸವಿ ಕೆರೆಯ ಪ್ರಕರಣ ಹರಿಭಾಯಿ ದೇವಕರಣ ಹೈಸ್ಕೂಲ್ ಹೋಮಗ್ರೌಂಡ ಪ್ರಕರಣ, ಮೊದಲಾದ ಸಂಗತಿಗಳಲ್ಲಿ ಶ್ರೀ. ಪಾಟೀಲರೇ ಪಂಚರಾಗಿದ್ದೇ ಪ್ರಶಂಸನೀಯ ಕಾರ್ಯಗಳನ್ನು ಮಾಡಿದ್ದಾರೆಂದು ನನಗೆ ಚನ್ನಾಗಿಯೇ ಗೊತ್ತಿದೆ. ಆದರೆ ತಮ್ಮ ನಿಷೇಧದ ಠರಾವಿನಲ್ಲಿ ವಸ್ತುಸ್ಥಿತಿಗೆ ಬಿಟ್ಟು ಈ ಸಂಗತಿಗಳಿವೆಯೆಂದು ಹೇಳಿದೆ. ಆದರೆ ವಸ್ತುಸ್ಥಿತಿ ಏನಿದೆಯೆಂಬುದನ್ನು ಮಾತ್ರ ಸ್ಪಷ್ಟ ತಿಳಿಸಲಿಲ್ಲ. ಮೇಲಿನ ವಿಷಯಗಳಲ್ಲಿ ಶ್ರೀ. ಪಾಟೀಲರು ಏನನ್ನೂ ಮಾಡಿಲ್ಲವೆಂದೇ ನಿಮ್ಮ ಅಭಿಪ್ರಾಯವಿದೆಯೆ?

ಶ್ರೀ. ಪಾಟೀಲರ ವಿನಾ ಬೇರೆಯವರು ಈ ಎಲ್ಲ ಕಾರ್ಯಗಳನ್ನು ಮಾಡಿದ ವಿಚಾರವಾಗಿ ದೇವಸ್ಥಾನ ಕಮೀಟಿಯವರು ಪ್ರಸಿದ್ಧಿಸುವರೆ? ವಸ್ತುಸ್ಥಿತಿಯು ಇರುವುದಾದರೂ ಏನು? ಶ್ರೀ. ಪಾಟೀಲರ ಸಂಬಂಧವು ಈ ಕಾರ್ಯಗಳಲ್ಲಿ ಇಲ್ಲವೇ ಇಲ್ಲೆಂದಾಗಲೀ ಅವರು ದೇವಸ್ಥಾನ ಕಮಿಟಿಯಲ್ಲಿ ಯಾವ ಕಾರ್ಯವನ್ನು ಮಾಡೇ ಇಲ್ಲೆಂದಾಗಲೀ ಕಮಿಟಿಯವರು ಪ್ರಸಿದ್ಧಿಸಿ ಹಾಗೆ ಸಿದ್ಧಮಾಡಿಕೊಟ್ಟರೆ ನಾನು ನನ್ನ ಬರವಣಿಗೆ ತಪ್ಪೆಂದು ಒಪ್ಪಿಕೊಳ್ಳಲು ಸಿದ್ಧನಿದ್ದೇನೆ. ಹೀಗೆ ಮಾಡಿದರೇನೇ ನಿಮ್ಮ ನಿಷೇಧದ ಠರಾವು ಸಾರ್ಥಕವಾಗುತ್ತದೆ.

ಹೀಗೆ ಮಾಡದೆ ನನ್ನ ಸ್ಪಷ್ಟೀಕರಣಕ್ಕೆ ಕಮಿಟಿಯಲ್ಲಿ ಅವಕಾಶವನ್ನೂ ಕೊಡದೆ ನಿಷೇಧವನ್ನು ಮಾತ್ರ, ಮಾಡಿದರೆ ಅದು ಲೇಖಕನ ನಿಷೇಧವೋ ಅಥವಾ ಹಾಗೆ ಮಾಡಿದವರ ನಿಷೇಧವೋ ತಾವೇ ಯೋಚಿಸಿರಿ. ಈ ನಿಷೇಧದಿಂದ ಒಬ್ಬ ಸನ್ಮಾನನೀಯ ಪಂಚರ ನಿಷೇಧವನ್ನು ಇತರ ಪಂಚರೇ ಮಾಡಿದಂತಾಗುವುದು. ಮತ್ತು ಕಮೀಟಿಯಲ್ಲಿಯ ಪಂಚರ ಪರಸ್ಪರ ಮನೋವೃತ್ತಿ ಗೊತ್ತಾಗುವುದು. ನೀವು ಪತ್ರಿಕೆಗಳಲ್ಲಿ ನಿಮ್ಮ ಠರಾವನ್ನು ಪ್ರಕಟಿಸಿದ್ದರಿಂದ ನಾನೂ ನನ್ನ ಹೇಳಿಕೆಯನ್ನು ಪತ್ರಿಕೆಗಳಲ್ಲಿ ಈ ಪ್ರಕಾರ ಪ್ರಕಟಿಸಬೇಕಾಯಿತು.

ಮಲ್ಲಿಕಾರ್ಜುನ ಎಸ್. ಕೋರೆ.

---

## ಪಾರಮಾರ್ಥಿಕ "ಡೈರಿ"

—ಶ್ರೀ—

ಶ್ರೀ ಚಿದಂಬರಾಯ ನಮಃ

ಶ್ರೀಗುರು ಬಸವಲಿಂಗಾಯ ನಮಃ

(೫೮. ೧೦ ಶು. ೯ ಗುರು ೨೧-೧-೩೮.)

ಪ್ರ— ನಿಜವಾದ ಭಾಗ್ಯ ಆವುದಯ್ಯಾ !

ಉ. ತ್ರಿ— ಶಿವನಲ್ಲಿ ಮನತಾನು ಅವನತವಾಗಿರಲು|
ಸವಿಯಾದ ವಿಷಯ ನಿಸ್ಸಾರ ತೋರಲು|
ಅವಿರಳ ಭಾಗ್ಯ ದಾಸಾರ್ಯ ||೪೪||

ಅವನತ- ಬಾಗು ಅವಿರಳ- ಅಖಂಡ, ಘನವಾದ.

ತ್ರಿ— ತನ್ನ ಕರ್ತವ್ಯವಷ್ಟನ್ನು ತಾ ಮಾಳ್ಪುದು|
ಉನ್ನತರೆಂದು ತಿಳಿದ ಜಂಗಮರಲ್ಲಿ|
ಮನ್ನಣೆ ಇರಲಿ ದಾಸಾರ್ಯ ||೪೫||

ಕಂದ— ಜಗದೋಳ್ ಬಹು ಕೌತುಕದ|
ಬಗೆ ಬಗೆ ದೃಶ್ಯಂಗಳ ನೋಲಿ ಮನದೋಳ್ ನೀನು!
ತಗೆ ಬಗೆಗೊಳ್ಳದೆ ಕರ್ತಗೆ|
ಸೊಗಸೇವುಂಟೆಂದು ದಾಸ ಬಾಗಿರು ಕಂಡ್ಯಾ ||೪೬||

ತ್ರಿ— ಶಿವಪೂಜೆಮಾಡುತ್ತ ಅವಗುಣವ ಕೀಳುತ್ತ|
ಶಿವನಾಮ ಸದಾ ಜಪಿಸುತಿರೆ|
ಶಿವನೇಕೆ ತೋರ ದಾಸಾರ್ಯ ||೪೭||

× × × × ×

ಶ್ರೀ. ಶಿವ ಚಿದಂಬರಾಯ ನಮಃ

ಶ್ರೀಗುರು ಬಸವಲಿಂಗಾಯ ನಮಃ

(೫೮. ೧೦ ಶು. ೧೩ ಶನಿ. ೨೨-೧-೩೮)

ತ್ರಿ— ಲೋಕ ರಂಜನೆಗಾಗಿ ಲೋಕೇಶನ ಮರೆಯುವಿ!
ಏಕೆ ಶಿವಬೇಕು ಬೇಗ ತಿಳಿದುನೋಡು|
ಸಾಕು ಭವಮಾಲೆ ದಾಸಾರ್ಯ ||೪೮||

ಉನ್ಮನ ಮನವಾಗದೆ ಜನ್ಮ ತಾ ನಿಲ್ಲುವದೆ|
ಉನ್ಮನವಾಗಲ್ ಶಿವನೊಲಿಮೆಯದು ದೊರಿಯೆ|
ತನ್ಮಯವೆ ಬೇಕು ದಾಸಾರ್ಯ |೪೯|

ಶಿವನ ಒಲಿಮೆ ದೊರೆಯಬೇಕಾದರೆ ತನ್ಮಯ ಅಂದರೆ ಶಿವನಲ್ಲಿ ಮಗ್ನನಾಗಲೇಬೇಕು.

ಕಂದ— ಚಿನ್ಮಯ ತಾನಿರುತಿರೆ ತನ್ಮಯ ಬಿಡದಾಗುತೆ|
ಸನ್ಮುನಿಯ ನಡೆಯ ನಡೆದು ಧನ್ಯನಾಗಿ|
ಕಣ್ಮರೆಯಾಗೊ ದಾಸಾರ್ಯ ||೫೦||

ಕಣ್ಮರೆಯಾಗು- ದೇಹ ಬಿಡು

ಮುನಿಗಳಿರುವಾ ರೀತಿ ಮೌನವಾಗಿರ್ಪುದು|
ಮನದಲ್ಲಿ ಶಿವನ ನೆನೆಯುತ್ತ ಜಗದಲ್ಲಿ|
ತನಯುವ ಹಾಗಿರು ದಾಸಾರ್ಯ ||೫೧||

ಇನ್ನು ಮೌನದಿಂದ ಇರಬೇಕೆಂಬ ನಿರ್ಧಾರ, ಮಹಾತ್ಮಾ ಗಾಂಧಿಯವರು ಸಹ ವಾರದಲ್ಲಿ ೧ ದಿವಸ ಮೌನವ್ರತದಲ್ಲಿರುವರು.

× × ×

---

## ಮುಸಲ್ಮಾನರ ಬಂಧುಪ್ರೇಮ.

ಕಾನಪುರದಲ್ಲಿ ಕಳೆದ ೨೬ ನೆಯ ತಾರೀಖಿನ ದಿವಸ ಅಖಿಲ ಭಾರತೀಯ ಶಿಯಾ ಪರಿಷತ್ತು ಕೂಡಿತ್ತು. ಮಹಮುದಾಬಾದದ ರಾಜೇಸಾಹೇಬರು ಅಧ್ಯಕ್ಷರಾಗಿದ್ದರು. ಇವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಮುಸಲ್ಮಾನರು ಮುಸಲ್ಮಾನರ ಪದಾರ್ಥಗಳನ್ನೇ ಕೊಂಡುಕೊಳ್ಳಬೇಕು."

---

## ಬ್ಯಾ. ಜಿನ್ನಾರವರ ಅಪೇಕ್ಷೆ!

ಕಳೆದ ೨೬ ನೆಯ ತಾರೀಖಿನ ದಿವಸ ಕಲಕತ್ತಾದಲ್ಲಿ ಮುಖ್ಯ ಮಂತ್ರಿಗಳಾದ ನಾ. ಹಕ್ಕ ಸಾಹೇಬರ ಅಧ್ಯಕ್ಷತೆಯಲ್ಲಿ ಬ್ಯಾ. ಜಿನ್ನಾ ಸಾಹೇಬರು ಒಂದು ಮಹತ್ವದ ಭಾಷಣವನ್ನು ಮಾಡಿದರು. ಅದರಲ್ಲಿ ಹೀಗೆ ಹೇಳಿದರು—

"ಮುಸಲ್ಮಾನರ ಧರ್ಮ, ಸಂಸ್ಕೃತಿ, ಭಾಷೆ ಮತ್ತು ರಾಜಕೀಯ ಹಕ್ಕುಗಳನ್ನು ಹೇಗೆ ಸಂರಕ್ಷಿಸುವರೆಂಬುದನ್ನು ತಿಳಿಸಲು ಪಂ. ಜವಾಹರಲಾಲ ನೆಹರುರವರು ನನ್ನನ್ನು ಕಾಣಲಿ."

---



---

—ಹಿಂದು ವಿದ್ಯಾಪೀಠದ ಫಾರಸಿ ಭಾಷಾ ಬೋಧಕರಾದ ಶ್ರೀ ಮಹೇಶ ಪ್ರಸಾದ ಇವರಿಗೆ ಭಗವದ್ಗೀತೆಯು ಫಾರಸಿ ಭಾಷೆಯಲ್ಲಿ ಭಾಷಾಂತರಿಸಲ್ಪಟ್ಟದು ದೊರೆತಿದೆ. ಹದಿನೆಂಟನೆ ಶತಮಾನದಲ್ಲಿದ್ದ ಶಹ ವೆಲ್ಲಿ ದಸ್ತಗಿರ ಎಂಬ ಪಂಡಿತನು ಈ ಭಾಷಾಂತರಕಾರನು. ಈ ಗ್ರಂಥವು ಸಂಪೂರ್ಣ ಇನ್ನೂ ದೊರೆತಿಲ್ಲ.

# ಕರ್ನಾಟಕದಲ್ಲಿ

## ಹಿಂದೂ ಸಭೆಯ ಅವಶ್ಯಕತೆ.

ಹಿಂದುಸಭೆಯ ಕಾರ್ಯಕಲಾಪಗಳು ಹಿಂದುಸ್ಥಾನದ ಎಲ್ಲ ಭಾಗಗಳಲ್ಲಿ ಒಳ್ಳೇ ಹುರುಪಿನಿಂದ ನಡೆದಿದ್ದು ಕರ್ನಾಟಕದಲ್ಲಿ ಮಾತ್ರ. ಈ ಚಳವಳಿಯ ಗದ್ದಲವೇ ಇಲ್ಲದಿರುವುದು ಹಿಂದೂ ಜನರ ಉನ್ನತಿಯ ದೃಷ್ಟಿಯಿಂದ ಬಲು ಘಾತಕವು.

ಇಂದು ಎಲ್ಲ ಬಗೆಯಿಂದಲೂ ಹಿಂದೂ ಜನರ ಅವನತಿಯಾಗುತ್ತಿದೆ. ದೇಹದಿಂದ, ಬುದ್ಧಿಯಿಂದ ಸಂಸ್ಕೃತಿಯಿಂದ, ಅಭಿಮಾನದಿಂದ, ಸಂಖ್ಯೆಯಿಂದ ಹಿಂದೂ ಜನರು ಕೆಳಕೆಳಗೆ ಇಳಿಯುತ್ತಿದ್ದಾರೆ. ಹಿಂದುಗಳಲ್ಲಿಯು ಬೇರೆ ಬೇರೆ ಮತದವರಲ್ಲಿ ಹಿಂದೂ ಜಾತಿಯ ಸುಸ್ಥಿತಿಯ ಮಟ್ಟಿಗೆ ಸಹಕಾರವಿರಬೇಕೆಂಬ ವಿಚಾರವೇ ಇಲ್ಲದಂತಾಗಿ ತಮ್ಮ ತಮ್ಮೊಳಗೆ ಇನ್ನೂ ಬಡಿದಾಡುತ್ತಿದ್ದಾರೆ. ನಾವೆಲ್ಲರೂ ಭಿನ್ನರಾದರೂ ಒಂದೇ ಅಂಗದ ಅವಯವಗಳೆಂಬೀ ವಿಚಾರವು ಬಹು ಸಂಖ್ಯಾಕರಲ್ಲಿಲ್ಲದ್ದರಿಂದ ಹಿಂದುತ್ವದ ವಿಚಾರ ಮಾಡುವುದೆಂದರೆ ಇನ್ನೊಬ್ಬರ ಗೊಡವೆಗೆ ಹೋಗುವ ಉಪದ್ವ್ಯಾಪವೆಂದು ಕರೆಯುವ ಜಾಣರು ನಮ್ಮಲ್ಲಿ ಉಂಟು.

ಈ ಮೇರೆಗೆ ಹಿಂದೂ ಸಮಾಜದಲ್ಲಿ ಪರ ಜಾತಿಯವರು ಎಷ್ಟು ಗದ್ದಲ ನಡೆಸುತ್ತಿರುವರೆಂಬುವ ಕಲ್ಪನೆಯು ನಮ್ಮ ಜನರಿಗೆ ಬರದಂತಾಗಿದೆ. ಇದರಿಂದ ಪರಮತದವರಿಗೆ ನಮ್ಮ ಮನೆಯಲ್ಲಿ ಕಾಲು ಚಾಚಲಿಕ್ಕೆ ಆಸ್ಪದ ದೊರೆಯುತ್ತಿದೆ. ಇನ್ನೂ ಬಹು ದಿನ ನಾವು ಹೀಗೇ ಹಿಂದೂತ್ವವನ್ನು ಕಣ್ಮರೆಮಾಡುತ್ತ ಕುಳಿತರೆ, ಆಕ್ರಮಣಶೀಲರಾದ ಕ್ರಿಶ್ಚನ್ ಮತ್ತು ಮುಸಲ್ಮಾನರು ನಮ್ಮ ಜನರನ್ನು ತಮ್ಮಲ್ಲಿ ಎಳೆದುಕೊಳ್ಳುವರು.

ಕರ್ನಾಟಕದಲ್ಲಿ ಈ ತರದ ಗೊಂದಲ ಎಷ್ಟರ ಮಟ್ಟಿಗೆ ನಡೆದಿದೆ? ಕಳೆದ ೫೦ ವರುಷಗಳಲ್ಲಿ ಕರ್ನಾಟಕದಲ್ಲಿಯ ಹಿಂದೂ ಜನರ ಸಂಖ್ಯೆ ಎಷ್ಟರಮಟ್ಟಿಗೆ ಕಡಿಮೆಯಾಗಿದೆಂಬುವ ಲೆಖ್ಖವನ್ನು ನೋಡುವದೀಗ ಅವಶ್ಯವಿದೆ. ಕನ್ನಡಿಗರಾದ ನಾವು ಒಂದು ಕಡೆಗೆ ಮನಸೋತರೆ ತೀರಿತು. ಇನ್ನೊಂದೆಡೆಯಲ್ಲಿ ಏನು ನಡೆದಿದೆ ಎಂಬುದನ್ನು ನಾವು ಲಕ್ಷಿಸುವುದಿಲ್ಲ. ಇವುಗಳಿಂದ ಪರರಿಗೆ ತಮ್ಮ ಸಂಖ್ಯೆ ಬೆಳೆಯಿಸಲು ಬಹಳ ಆಸ್ಪದವಾಗಿದೆ.

ಮೇಲ್ಕಂಡ ವಿಷಯಗಳಲ್ಲದೆ ಹಿಂದುಗಳ ಏಳಿಗೆಯನ್ನು ಸಾಧಿಸುವದೊಂದು ಹಿಂದೂ ಸಭೆಯ ಮುಖ್ಯ ಕರ್ತವ್ಯವಾಗಿದೆ. ಹಿಂದೂ ಜನರ ಆಚಾರ ವಿಚಾರ, ಕೆಲ ಸಾಂಪ್ರದಾಯ ಮುಂತಾದವು ಸಾಮಾನ್ಯವಿರುವುದರಿಂದ ಕರ್ನಾಟಕದಲ್ಲಿಯ ಬ್ರಾಹ್ಮಣರು, ವೀರಶೈವರು, ಮರಾಠರು ಬೇರೆ ಜಾತಿಯವರು ಕೂಡಿಕೊಂಡು ತಮ್ಮ ಏಳಿಗೆಯ ವಿಚಾರಮಾಡಲು ಬೇಕಾದಷ್ಟು ಅವಕಾಶವಿದೆ. ಹಿಂದಕ್ಕೆ ೮-೯ ವರ್ಷಗಳಾಚೆ ಸ್ವಾಮಿ ಶ್ರದ್ಧಾನಂದರು ತೀರಿಕೊಂಡ ಕಾಲಕ್ಕೆ ಈ ವಿಷಯಕ್ಕೆ ಜನರಲ್ಲಿ ಜಾಗೃತಿ ಹುಟ್ಟಿದಂತಾಗಿತ್ತು. ಆದರೆ ಇತ್ತೀಚೆ ರಾಜಕೀಯ ಚಳವಳಿಯ ಗೊಂದಲದೊಳಗೆ ಅದರ ಸುಳುವು ಅಡಗಿತು. ಕರ್ನಾಟಕರು ಈಗಿನಿಂದಲೇ ಹಿಂದುತ್ವದ ವಿಚಾರದಲ್ಲಿ ಎಚ್ಚರಾಗದಿದ್ದರೆ ಪಶ್ಚಾತ್ತಾಪ ಪಡುವ ಪ್ರಸಂಗ ಬರದಿರದು.

ವಿಶಾಲ ಕರ್ನಾಟಕ.

# ಮಾತೃ ಭಾಷೆಯಲ್ಲಿ ಶಿಕ್ಷಣ.

ಡಿಶಂಬರ ೧೮ ನೆಯ ತಾರೀಖಿನ ದಿನ ಬೆಂಗಳೂರಿನಲ್ಲಿರುವ ದೇಶಿಯ ವಿದ್ಯಾಶಾಲೆಯ ವಾರ್ಷಿಕೋತ್ಸವವು ನಡೆಯಿತು. ಮೈಸೂರು ಶ್ರೇಷ್ಠ ನ್ಯಾಯಸ್ಥಾನದ ಶ್ರೇಷ್ಠ ನ್ಯಾಯಾಧೀಶರಾದ ಶ್ರೀ. ಹೆಚ್. ಡಿ. ಸಿ. ರೇಲೆಯವರು ಅಧ್ಯಕ್ಷತೆ ವಹಿಸಿದ್ದರು. ಅಧ್ಯಕ್ಷಪೀಠದಿಂದ ಶ್ರೀ. ರೇಲೆಯವರು ಒಂದು ಅಮೋಘವಾದ ಭಾಷಣ ಮಾಡಿದರು. ದೇಶೀಯ ವಿದ್ಯಾಶಾಲೆಯ 'ಶಿಕ್ಷಣ ವೈಲಕ್ಷಣ' ಮತ್ತು ಅಧ್ಯಾಪಕರ 'ಸೇವಾದೀಕ್ಷೆ' ಇವುಗಳನ್ನು ಪ್ರಶಂಸಿಸಿ,

"ರಾಷ್ಟ್ರೀಯ ಸಂಪ್ರದಾಯಕ್ಕೆ ಉಚಿತವಾದ ಮನೋಧರ್ಮದಿಂದ ಸಾಧನೋಪಾಯಗಳಿಂದ ಶಿಕ್ಷಣ ವ್ಯವಸ್ಥೆಯನ್ನು ಅನುಗೊಳಿಸಿ ಮಕ್ಕಳಿಗೆ ಶಿಕ್ಷಣ ಕೊಡುವುದೇ ನ್ಯಾಯವಾದುದು. ಸಹಜವಾದುದು, ಅದೇ ರಾಜಮಾರ್ಗ. ನಾನು ಭರತಖಂಡಕ್ಕೆ ಮೊದಲು ಬಂದಾಗ ಇಲ್ಲಿನ ಪಾಠ ಪ್ರವಚನಗಳೆಲ್ಲ ಪರಭಾಷೆಯ ಮೂಲಕವೇ (ಇಂಗ್ಲಿಷ್) ನಡೆಯುತ್ತಿದ್ದುದನ್ನು ಕಂಡು ನನಗೆ ಆಶ್ಚರ್ಯವಾಯಿತು. ಈ ಬಗೆಯ ವ್ಯಾಪಾರವು ಸಹಜ ವಿರುದ್ಧವಾದುದು. ಹಾಗೆ ಮಾಡುವುದರಿಂದ ಮಕ್ಕಳು ಮೊದಲು ಪರಭಾಷೆಯನ್ನು ಕಲಿಯಬೇಕು. ಅನಂತರ ಹೇಳಿದ ವಿಷಯವನ್ನು ಗ್ರಹಿಸಬೇಕು. ಇದರಿಂದ ಮಕ್ಕಳ ಮನಸ್ಸಿಗೆ ಬಹಳ ಗಾಸಿಯುಂಟಾಗುವುದು. ನೋವುಂಟಾಗುತ್ತದೆ." ಎಂಬುದಾಗಿ ಅಪ್ಪಣೆ ಕೊಡಿಸಿದರು.

ದೇಶೀಯ ವಿದ್ಯಾಶಾಲೆಯಲ್ಲಿ ಕನ್ನಡದ ಮೂಲಕವೇ ಶಿಕ್ಷಣವನ್ನು ಕೊಡುತ್ತಿರುವುದಕ್ಕಾಗಿ ಆ ಶಾಖೆಯ ಅಧಿಕಾರ ವರ್ಗದವರನ್ನೂ ಅಧ್ಯಾಪಕ ವರ್ಗದವರನ್ನೂ ಅಭಿನಂದಿಸಿ ಶ್ರೀ. ರೇಲೆಯವರು; "ಬಹುಬೇಗ ಸಂಸ್ಥಾನದಲ್ಲೆಲ್ಲಾ ದೇಶಭಾಷೆಯ ಮೂಲಕವೇ ಸಂಪೂರ್ಣವಾಗಿ ಪಾಠ ನಡೆಯುವಂತಾಗಲಿ. ನಮ್ಮ ಭಾಷೆಯ ಮೂಲಕ ಪಾಠ ಪ್ರವಚನಗಳನ್ನು ಕಲಿಯುವುದಕ್ಕೆ ನಾವು ಹೆಮ್ಮೆಪಡಬೇಕು.' ಎಂಬುದಾಗಿ ನುಡಿದರು "ವಿಶ್ವಕರ್ನಾಟಕ."

---

—ಡಿಸೆಂಬರ ೬ ನೇ ತಾರೀಖು ೬॥ ಘಂಟೆಯಲ್ಲಿ ನರಸಿಂಹರಾಜಪುರದ ಶ್ರೀ. ಉಮಾ ಮಹೇಶ್ವರ ದೇವಸ್ಥಾನದಲ್ಲಿ 'ಹಿಂದೂ ವಿಧವಾ ವಿವಾಹ' ಮಸೂದೆಯ ಮೇಲೆ ಚರ್ಚೆ ನಡೆಯಿತು. ಶ್ರೀ ಹೊಸಕೆರೆ ಮಲ್ಲಪ್ಪಯ್ಯನವರು ಅಧ್ಯಕ್ಷತೆ ವಹಿಸಿದ್ದರು. ಮಸೂದೆಯ ಪರವಾಗಿಯೂ ವಿರೋಧವಾಗಿಯೂ ಚರ್ಚೆಯಾಗಿ ಕೊನೆಗೆ ಮಸೂದೆಯು ಹಿಂದೂ ಧರ್ಮ ಶಾಸ್ತ್ರಕ್ಕೆ ವಿರುದ್ಧವಾದುದೆಂದೂ ಅದು ಕೂಡದೆಂದೂ ತೀರ್ಮಾನವಾಯಿತು. ಹೇಗಿದೆ ಸ್ತ್ರೀ ಸ್ವಾತಂತ್ರ್ಯ?

—ಪುಣೆಯಲ್ಲಿ ಕೂಡಿದ್ದ ಮುಂಬೈ ಪ್ರಾಂತಿಕ ವಿದ್ಯಾರ್ಥಿ ಪರಿಷತ್ತಿನಲ್ಲಿ ಗಾಂಧೀಜಿಯವರ ಶಿಕ್ಷಣಯೋಜನೆ ಜಾತಿನಿಷ್ಠ ಸಂಘಗಳ ಕಾರ್ಯ, ಆರನೆಯ ಜಾರ್ಜ ಚಕ್ರವರ್ತಿಗಳ ಹಿಂದುಸ್ಥಾನದ ಆಗಮನ ಇವು ನಿಷೇಧಿಸಲ್ಪಟ್ಟವು.

—ಗಾಂಧೀಜಿಯವರು ಹರಿಪುರ ಕಾಂಗ್ರೆಸ್ ಕಾರ್ಯವನ್ನು ಪೂರೈಸಿಕೊಂಡು ಗಡಿನಾಡಿಗೆ ಹೋಗುವವರಿದ್ದಾರೆ,

—ನಿಜಾಮ ರಾಜ್ಯವು ಫೆಡರೇಶನ್‌ದಲ್ಲಿ ಸೇರಿದರೆ ಅಲ್ಲಿಯ ಪೋಸ್ಟ ಮತ್ತು ಟೆಲಿಗ್ರಾಫ್ ಶಾಖೆಯ ಏರ್ಪಾಟು ಹೇಗಾಗಬೇಕೆಂಬುದನ್ನು ಕುರಿತು ವಿಚಾರ ವಿನಿಮಯ ಮಾಡಲು ಹೈದರಾಬಾದಕ್ಕೆ ಹಿಂದುಸ್ಥಾನ ಸರಕಾರದ ಪೋಸ್ಟ್ ಶಾಖಾ ಮುಖ್ಯಾಧಿಕಾರಿಗಳಾದ ಶ್ರೀ ಬೇವೂರು ಇವರು ಹೋಗಿದ್ದಾರೆಂದು ತಿಳಿಯಲಾಗಿದೆ.

# ಬಸವ ನಿಂದಕರಾದ
## ಗುರು ವರ್ಗದ ಮಹನೀಯರಿಗೆ ವಿನಂತಿ.

(ಲೇಖಕರು— ಚರಪಟ್ಟಾಧ್ಯಕ್ಷ ಶ್ರೀ ಶಿದ್ಧಮಲ್ಲ ಶಿವ ಯೋಗಿಗಳು ಕಲ್ಲಮಠ ಚಿಂಚನಸೂರು.)

ದೇಶದ ಸ್ಥಿತಿಯು ದಿನೇ ದಿನೆ ಬದಲಿಸುತ್ತಿದೆ. ಜನರಲ್ಲಿ ಮೂಢ ತರದ ಭಕ್ತಿ ವಿಶ್ವಾಸಗಳು ಲೋಪವಾಗಿ ನಿಜವಾದ ವಿಚಾರ ಕ್ರಾಂತಿಯು ತಲೆದೋರಹತ್ತಿದೆ. ಇಂಥ ಪ್ರಸಂಗದಲ್ಲಿ ನೀವು ಮಾಡುವುದೇನು? ಗುರುವರ್ಗದ ಮಹಾಶಯರೆ, ಏಳಿರಿ. ಎಚ್ಚರರಾಗಿರಿ. ಜಾಣತನದಿಂದ ಇಹಪರಗಳೆರಡರಲ್ಲಿಯೂ ಸೌಖ್ಯವಾಗುವಂತೆ ನಡೆದು ಕೀರ್ತಿಶಾಲಿಗಳಾಗಿರಿ. ನೀವು ಇಲ್ಲಿಯ ವರೆಗೂ ಬಸವ ಮಹಾನುಭಾವನ ವಿಷಯವಾಗಿ ಅಪೂಜ್ಯ ಬುದ್ಧಿಯನ್ನು ಬೆಳೆಸುತ್ತ ಬಂದಿರಿ. ನಿಮ್ಮಲ್ಲಿಯ ವಿದ್ಯದ ಮದದಿಂದ ಅನೇಕ ರೀತಿಯಿಂದ ನಿಂದೆಯನ್ನು ಗೈದು ಪುಸ್ತಕಗಳನ್ನು ಪ್ರಕಟಿಸಿದಿರಿ. ಮತ್ತು ಜನರಿಗೆ ಆ ಬಸವನು ನಿಮ್ಮಂತೆಯೇ ಭಕ್ತನು. ಅವನ ನಾಮಸ್ಮರಣೆ ನೀವೇಕೆ ಮಾಡುವುದು? ಎಂದು ಪರಿ ಪರಿಯಿಂದ ದುರ್ಬೋಧೆಯನ್ನು ಬೀರಿದಿರಿ. ಆದರೂ ಶುದ್ಧವಾದ ಬಂಗಾರವು ಎಷ್ಟು ಕಾಸಿದರೂ ತನ್ನ ಸ್ವರೂಪವು ನಾಶಗೊಡದಂತೆ ಆತನ ಘನತೆಗೇನೂ ಕುಂದುಬಾರದೆ ನಿಮ್ಮ ಮೂರ್ಖತನವು ಮಾತ್ರ ಹೊರಚೆಲ್ಲಿತು. ನೋಡಿರಿ; ಹೇಗಿದೆ ಆ ಮಹಾನುಭಾವನ ಸತ್ವಪ್ರಕಾಶ? ಇನ್ನುಮೇಲಾದರೂ ಆತನಲ್ಲಿರತಕ್ಕ ಅಪೂಜ್ಯ ಬುದ್ಧಿಯನ್ನು ಕಿತ್ತೊಗೆದು ಪೂಜ್ಯ ಬುದ್ಧಿಯುಳ್ಳವರಾಗಿರಿ. ಅಂದರೆ, 'ಜಾಣ ಜಾರಿ ಬಿದ್ದರೆ ಕಾಣದ ಹಾಗೆ ಎದ್ದ" ನೆಂಬ ಗಾದಿಯ ಮಾತಿನಂತೆ ನಿಮ್ಮ ಸ್ಥಿತಿಯಾಗಿ ನಿಮಗೆ ಸೌಖ್ಯವಾಗುವುದು. ಹಾಗೆ ಮಾಡದೆ ಆತನು ಭಕ್ತನು, ನಾವು ಜಂಗಮರು. ನಾವೇಕೆ ಆತನ ಹೆಸರನ್ನು ಎತ್ತುವುದು? ಎಂದು ಹಾಳು ರಗಳೆಯನ್ನು ಓದುತ್ತ ಕೂಡ್ರುವುದು ತರವಲ್ಲ.

ಯಾವನೊಬ್ಬ ಭಕ್ತನು ಬಿನ್ನಹಮಾಡಿ ಜಗ್ಗಿ ತುಪ್ಪವನ್ನು ಸುರಿವಿ ಹೋಳಿಗಿ ಊಟವನ್ನು ಮಾಡಿಸಿ, ಒಂದು ರೂಪಾಯಿ ಬದಲು ಹತ್ತು ರೂಪಾಯಿಗಳನ್ನು ಕೊಟ್ಟರೆ, ನೀವು ಹಿಗ್ಗುತ್ತ ಅಹಹ! ಆತನು ಎಂತಹ ಉದಾರ ಹೃದಯದವನಪ್ಪಾ! ಇಷ್ಟು ರೂಪಾಯಿಗಳನ್ನು ಕೊಟ್ಟನು! ಈ ಪರಿ ಊಟಮಾಡಿಸಿದನು ಎಂದು ನಿಮ್ಮ ಜನ್ಮ ಪರ್ಯಂತ ನೀವು ಅವನನ್ನು ಹೊಗಳುವುದಿಲ್ಲವೆ? ಅವನು ಭಕ್ತನಲ್ಲವೆ! ಇಂಥ ಭಕ್ತನನ್ನು ಕೊಂಡಾಡಲಿಕ್ಕೆ ನಿಮ್ಮ ನಾಲಿಗೆಯು ಏಳುತ್ತದೆಯೇ ವಿನಃ ಪರಮ ಪೂಜ್ಯನೂ, ಧರ್ಮೋದ್ಧಾರಕನೂ, ಶಂಭುವಿನ ಅವತಾರಿಯೂ ಆದ ಆ ಬಸವ ಭಕ್ತನನ್ನು ಹೊಗಳುವುದು ನಿಮ್ಮಿಂದ ಹೇಗಾದೀತು? ಪೂರ್ವದಲ್ಲಿ ಪರಮತಗಳು ಪ್ರಬಲವಾಗಿ ವೀರಶೈವ ಮತವು ಹೇಳಹೆಸರಿಲ್ಲದಂತಾಗಿ ಹೋಗುವ ಕಾಲದಲ್ಲಿ, ಆತನು ಹುಟ್ಟಿ ಅನೇಕ ಬಗೆಯಿಂದ ಲಿಂಗಾಯತ ಧರ್ಮವನ್ನು ವೃದ್ಧಿಗೊಳಿಸಿದನಷ್ಟೆ. ಇಲ್ಲದಿದ್ದರೆ ಈಗ ನಿಮಗೆ ಹೋಳಿಗೆ, ಕಾಣಿಕೆ, ಅರ್ಪಿಸುವ ಭಕ್ತರು ಒಬ್ಬರಾದರೂ ದೊರೆಯುತ್ತಿದ್ದರೆ? ಇದೆಲ್ಲವನ್ನರಿತಾದರೂ ಆತನ ನಾಮಸ್ಮರಣೆಯನ್ನು ನೀವು ಮಾಡಲೇಬೇಕು. ಮತ್ತು ನಿಮ್ಮ ಕರ್ತವ್ಯ ಕರ್ಮವನ್ನಂತೂ ಮರೆತುಬಿಟ್ಟಿರುವಿರಿ. ನಮಗೇನು ನಮ್ಮ ಮಠಕ್ಕೆ ಎರಡು ಸಾವಿರ ಮೂರು ಸಾವಿರ ಶಿಷ್ಯರ ಮನೆಗಳಿವೆ. ವರುಷಾ ಇಂತಿಷ್ಟು ಉತ್ಪನ್ನವಿದೆ. ಎನ್ನುತ್ತ ಶಿಷ್ಯರ ಮನೆಗಳನ್ನು ತಿರುಗುತ್ತ ಶಿಷ್ಯರಿಗೆ ಜ್ಞಾನಾಮೃತವನ್ನು ಪಾನಮಾಡಿಸಿ ಧನ್ಯರನ್ನಾಗಿಮಾಡದೆ ಅಷ್ಟು ಕೊಡು, ಇಷ್ಟು ಕೊಡು, ಇಲ್ಲದಿದ್ದರೆ ನೋಡು ನಿನಗೆ ಶಾಪವನ್ನು ಕೊಡುತ್ತೇವೆ. ಎಂದ ಗರ್ಜಿಸಿಯಾಗಲೀ ಇಲ್ಲವೆ ಪುರಾಣ ಹಚ್ಚುತ್ತೇವೆ, ಕಾಂಡಮಾಡುತ್ತೇವೆ, ಎಂದು ಅವರನ್ನು ಉಬ್ಬಿಸಿಯಾಗಲಿ: ಮೋಸದಿಂದ ಧನವನ್ನು ಸೆಳೆದು ತಂದು ಅದನ್ನು ಸತ್ಕಾರ್ಯಗಳಲ್ಲಿ ಉಪಯೋಗಿಸದೆ ವ್ಯರ್ಥ ಖರ್ಚುಮಾಡುತ್ತಿರುವಿರಿ. ಇದೆಯೋ ನಿಮ್ಮ ಕರ್ತವ್ಯ? ಈ ನಿಮ್ಮ ಸೋಗನ್ನು ನೋಡಿದವರು ನಿಮ್ಮನ್ನು ವೇಷಧಾರಿಯಾದ ಜಂಗಮರೂಪಿ ಜಾತಗಾರರೆನ್ನದೆ ಬಿಡುವರೆ?

ಛೆ! ಇನ್ನುಮೇಲಾದರೂ ಇಂಥ ಬಾಹ್ಯಾಡಂಬರದ ಸ್ನಾನ ಶಿವಪೂಜೆಯನ್ನೂ ಮೋಸಗಾರಿಕೆತನವನ್ನೂ ಬಿಟ್ಟುಬಿಡಿರಿ. ಯಾವಾಗಲೂ ತ್ರಿಕರಣ ಶುದ್ಧಿಯಿಂದ ಸಮಾಜೋದ್ಧಾರ ಕಾರ್ಯದಲ್ಲಿ ತೊಡಗಿರಿ. ನೀವು ಗಳಸಿದ ದ್ರವ್ಯವು ಸಾರ್ಥಕವಾಗುವಂತೆ ಖರ್ಚುಮಾಡಿರಿ. ಸುಮ್ಮನೆ ಪುರಾಣ ಪುರಾಣವೆಂದು ಪುರಾಣ ಹಚ್ಚಿ ಊರೂರಿಗೆ ಪಟ್ಟಿಯನ್ನು ಮಾಡಿದಂಥ ಧನವನ್ನು ವ್ಯರ್ಥ ಕಳೆಯಬೇಡಿರಿ. ಅದರಿಂದ ನಿಮಗೆ ಬರುವ ಪುಣ್ಯಕ್ಕಿಂತಲೂ ಪಾಪವೇ ಅಧಿಕವಾಗುವುದು. ನೀವು ನಿಜವಾಗಿ ಈ ಮಾನವ ಜನ್ಮ ಸಾರ್ಥಕಮಾಡಿಕೊಳ್ಳಲಪೇಕ್ಷಿಸಿದ್ದರೆ ಈ ಕೆಳಗಿನ ನಿಯಮಗಳನ್ನು ತಪ್ಪದೆ ಅನುಸರಿಸಿ ನಡೆಯಿರಿ.

(೧) ನೀವು ಇಂದಿನಿಂದ ಖಾದಿ ಬಟ್ಟೆಯನ್ನೇ ಧರಿಸಿರಿ. ಇದರಲ್ಲಿ ಇಂಥ ಮಹತ್ವವಿದೆಯೆಂದು ಬೇರೆ ಒಡೆದು ಹೇಳುವ ಕಾರಣವೇನೂ ಇಲ್ಲ. (೨) ನಾವು ಹೆಚ್ಚು. ವಿರಕ್ತರು ಕಡಿಮೆ. ಎಂಬ ಭೇದ ಬುದ್ಧಿಯನ್ನು ತೆಗೆಯಿರಿ. ಯಾಕೆಂದರೆ ನಾವು ಹೆಚ್ಚು ವಿರಕ್ತರು ಕಡಿಮೆ ಎಂದು ನೀವು ಕುಣಿಯುತ್ತ ಹೋದ ಹಾಗೆ ನಿಮ್ಮ ಬೆಲೆಯೇ ಕಡಿಮೆಯಾಗುತ್ತಾ ಹೊರಟಿದೆ. (೩) ಬಸವ ಮಹಾತ್ಮನ ನಿಂದೆಯನ್ನು ಮಾಡಬೇಡಿರಿ. ಇನ್ನು ಆತನಲ್ಲಿ ಪೂಜ್ಯಬುದ್ಧಿಯನ್ನಿಟ್ಟು ನಡೆಯಿರಿ. ಇದರಿಂದ ನಿಮ್ಮ ಗೌರವವು ಹೆಚ್ಚೀತೇ ವಿನಃ ಕಡಿಮೆಯಾಗುವುದಿಲ್ಲ. (೪) ವೀರಶೈವ ಧರ್ಮಕ್ಕನುಸರಿಸಿ ಹುಟ್ಟಿದಾಗಲೇ ಲಿಂಗಧಾರಿಗಳಾಗಿ ಸದಾಚಾರ ಸಂಪನ್ನರಾದ ಲಿಂಗಾಯತ ಹಡಪದವರು, ಅಗಸರು, ತಳವಾರರು, ಸಮ್ಮಗಾರರು ಮೊದಲಾದ ಎಲ್ಲ ಜನರನ್ನು ಬಳಿಕೆಯಲ್ಲಿ ತೆಗೆದುಕೊಳ್ಳಿರಿ. ಇದೇ ನಿಮ್ಮ ಆದ್ಯ ಕರ್ತವ್ಯ (೫) ಯಾವಾಗಲೂ ಹಸಿದು ಬಂದ ಅತಿಥಿಗಳಿಗೆ ತಪ್ಪದೆ ಅನ್ನದಾನವನ್ನು ಮಾಡಿರಿ. ಇದರಿಂದ ನಿಮ್ಮ ಜನ್ಮವು ಸಾರ್ಥಕವಾಗುವುದು (೬) ಪರಧರ್ಮದವರು ತಮ್ಮ ಧರ್ಮೋತ್ತೇಜನೆಗಾಗಿ ಎಷ್ಟುಪರಿ ಕಷ್ಟಬಡುತ್ತಿರುವರೆಂಬುದನ್ನು ನೀವು ಬಲ್ಲಿರಷ್ಟೆ. ಅದರಂತೆ ನೀವಾದರೂ ನಿಮ್ಮ ಧರ್ಮದ ಊರ್ಜಿತಾವಸ್ಥೆಗಾಗಿ ಈ ದೇಹವನ್ನು ಸವಿಸಿರಿ. ದೇಶಸೇವೆಯೇ ಈಶ ಸೇವೆಯೆಂಬುದನ್ನು ಮರೆಯಬೇಡಿರಿ (೭) ಈ ಎಲ್ಲ ಮೇಲಿನ ನಿಯಮಗಳಲ್ಲಿ ನಿಮ್ಮ ಮನಸ್ಸು ಸ್ಥಿರವಾಗಿ ನಿಂತು ಶಾಂತವೃತ್ತಿಯುಳ್ಳವರಾಗಬೇಕಾದರೆ ನೀವು ಮೊದಲು ಇಂದ್ರಿಯ ನಿಗ್ರಹ ಶಕ್ತಿಯೊಂದನ್ನು ಕೂಡಲೆ ಬೆಳೆಸಿರಿ. ಇದರಲ್ಲಿಯೇ ಅಧಿಕವಾದ ಮಹತ್ವವಿದೆ.

---

—ಸಾಂಗಲಿ ಸಂಸ್ಥಾನದಲ್ಲಿದ್ದ ಮುದ್ರಣ ಸ್ವಾತಂತ್ರ್ಯ ಪ್ರತಿಬಂಧ ಶಾಸನವನ್ನು ಈಗ ಆ ಸಂಸ್ಥಾನದವರು ತೆಗೆದುಹಾಕಿದುದು ಸ್ತುತ್ಯ.

—ತಾ. ೨೪-೧೨-೩೭ ನೆಯ ದಿವಸ ಗಾಂಧೀಜಿಯವರ ಬಳಿಯಲ್ಲಿ ಸುಪ್ರಸಿದ್ಧ "ಸಂತ ತುಕಾರಾಮ" ಚಿತ್ರಪಟದಲ್ಲಿಯ ತುಕಾರಾಮ ಪಾತ್ರವನ್ನು ವಹಿಸುವ ಶ್ರೀ. ವಿಷ್ಣುಪಂತ ಪಾಗನೀಸ ಇವರು ಕೆಲವು "ಅಭಂಗ" ಗಳನ್ನು ಅರ್ಧತಾಸು ಹಾಡಿದರು. ಗಾಂಧೀಜಿಯವರಿಗೆ ಈ ಸಂಗೀತ ಶ್ರವಣದಿಂದ ಎಷ್ಟೋ ಸಮಾಧಾನವಾಯಿತು.

# ಕರ್ನಾಟಕ ಸಮಾಚಾರ.

**ಗುಳೇದಗುಡ್ಡ**— ವಿಜಾಪುರ ಜಿಲ್ಲಾ ನೇಕಾರರ ಪರಿಷತ್ತು ತಾ. ೨೬-೧೨-೩೭ ನೆಯ ದಿವಸ ಡಾ. ರಾವ ಇವರ ಅಧ್ಯಕ್ಷತೆಯಲ್ಲಿ ಬಹು ಸಂಭ್ರಮದಿಂದ ಜರುಗಿತು. ಈ ಪರಿಷತ್ತಿನಲ್ಲಿ ನೇಕಾರರ ಉನ್ನತಿಯ ಅನೇಕ ಗೊತ್ತುವಳಿಗಳಾದವು. ಮುಂಬೈ ಸರಕಾರದ ಪಾರ್ಲಮೆಂಟರಿ ಸೆಕ್ರೆಟರಿಗಳಾದ ಶ್ರೀ. ಎಂ. ಪಿ. ಪಾಟೀಲರು ಈ ಪರಿಷತ್ತಿಗೆ ಬಂದಿದ್ದರು.

### ಹುಬ್ಬಳ್ಳಿ.

—ತಾ. ೩೦-೧೨-೩೭ ನೆಯ ದಿವಸ ಹುಬ್ಬಳ್ಳಿ ಮುನಸಿಪಾಲ್ಟಿ ಜನರಲ್ ಕಮಿಟಿ ಸೇರಿದ್ದಿತು. ಅಧ್ಯಕ್ಷರಾದ ಸರದಾರ ಮಹಬೂಬ ಅಲ್ಲಿಖಾನರು ಮೂರು ಬಣ್ಣಗಳ ನಿಶಾನೆಯು ರಾಷ್ಟ್ರ ಧ್ವಜವಲ್ಲವೆಂದೂ ಅದು ಕಾಂಗ್ರೆಸ್ ಧ್ವಜವೆಂದೂ ಅದನ್ನು ಕಾಂಗ್ರೆಸ್ ಧ್ವಜವೆಂದು ಮುನಸಿಪಾಲ್ಟಿ ಕಟ್ಟಡದ ಮೇಲೆ ಇರಿಸಬಹುದೆಂದೂ ಒಂದು ಗೊತ್ತುವಳಿ ತಂದರು. ಆ ಪ್ರಕಾರ ಅದು ಠರಾವಿನಂತೆ ತೀರ್ಮಾನವಾಯಿತು.

—ಡಾ. ಹರ್ಡಿಕರರಿಂದ ಸ್ಥಾಪಿಸಲ್ಪಟ್ಟ "ಹಿಂದುಸ್ಥಾನಿ ಸೇವಾದಲವು" ಪುನಃ ತಾ. ೧-೧-೩೮ ನೆಯ ದಿನ ಶ್ರೀ. ರಾ. ವೆ. ಕರಗುದರಿ ಇವರ ನೇತೃತ್ವದಲ್ಲಿ ಪ್ರಾರಂಭವಾಯಿತು.

### ರಾಯಚೂರು.

—ಇಲ್ಲಿ ಅಖಿಲ ಕರ್ನಾಟಕ ಆಯುರ್ವೇದ ಸಮ್ಮೇಲನ ಸಂಭ್ರಮದಿಂದ ಜರುಗಿತು. ಪಂಡಿತ ತಾರಾನಾಥರವರಿಗೆ ೩ ದಿನಗಳ ಮಟ್ಟಿಗೆ ಸಮ್ಮೇಲನಕ್ಕೆ ಬರಲು ನಿಜಾಮ ಸರಕಾರದ ಅಪ್ಪಣೆ ದೊರೆತಿತ್ತು. ಆ ಪ್ರಕಾರ ತಾ. ೨೮ ಕ್ಕೆ ಇವರು ಬರಲು ಜನರು ಬಹು ಆದರದಿಂದ ಬರಮಾಡಿಕೊಂಡರು. ಆದರೆ ಮೆರವಣಿಗೆ ಮಾಡಲಿಕ್ಕೆ ಅಪ್ಪಣೆ ಇರಲಿಲ್ಲ.

—ಈ ಸಮ್ಮೇಲನದ ಕಾಲಕ್ಕೆ ಮಹಿಳಾ ಸಭೆಯನ್ನೂ ಕೂಡಿಸಿದ್ದರು. ಶ್ರೀಮತಿ ರಾಜೇಶ್ವರಿದೇವಿಯವರು ಅಧ್ಯಕ್ಷರಾಗಿದ್ದರು. ಅಧ್ಯಕ್ಷರ ವಿನಾ ಇನ್ನಿತರರಿಗೆ ಸಭೆಯಲ್ಲಿ ಭಾಷಣಮಾಡಲು ಪೋಲಿಸರ ಅಪ್ಪಣೆಯಿರಲಿಲ್ಲ. ಅದಕ್ಕಾಗಿ ಭಾಷಣ ಬರೆದುಕೊಂಡು ಬಂದಿದ್ದ ಅನೇಕ ಮಹಿಳೆಯರು ನಿರಾಶರಾದರು.

**ಬಾಗಲಕೋಟೆ**— ಇಲ್ಲಿಯ ನ್ಯೂ ಇಂಗ್ಲಿಷ್ ಸ್ಕೂಲಿನಲ್ಲಿ ಏಳು ತರಗತಿಗಳ ವರೆಗೂ ಪಾಠವನ್ನು ನಡೆಯಿಸಬಹುದೆಂದು ಶಿಕ್ಷಣ ಶಾಖೆಯವರಿಂದ ಒಪ್ಪಿಗೆ ದೊರೆತು ಆ ಪ್ರಕಾರ ಈ ಶಾಲೆಯ ಚಾಲಕರಿಗೆ ಸರಕಾರದಿಂದ ಅಪ್ಪಣೆಯಾಗಿದೆ.

**ಮೈಸೂರು**— ಬೆಂಗಳೂರು ವಿದ್ಯಾರ್ಥಿಗಳಿಗೆ ಸಹಾನುಭೂತಿ ತೋರಿಸಲು ಹರತಾಳವನ್ನು ಆಚರಿಸಿದ ಮೈಸೂರು ಕಾಲೇಜಿನ ೯ ವಿದ್ಯಾರ್ಥಿಗಳಿಗೆ ೫ ರಿಂದ ೧೫ ರೂಪಾಯಿಗಳ ವರೆಗೆ ದಂಡವನ್ನು ವಿಧಿಸಿದ್ದಾರೆ. ಆ ವಿದ್ಯಾರ್ಥಿಗಳು ದಂಡದ ಹಣಕ್ಕಾಗಿ ಯಾಚನೆ ಮಾಡಿದರು.

**ಯಲಗಚ್ಚ**— ಧಾರವಾಡ ಜಿಲ್ಲಾ ಯಲಗಚ್ಚಿನಲ್ಲಿ ದೇವರ ಹೆಸರಿನಿಂದಾಗುತ್ತಿದ್ದ ಪ್ರಾಣಿವಧೆಯನ್ನು ನಿಲ್ಲಿಸಬೇಕೆಂದು ಗಾಂಧಿ ಆಶ್ರಮದ ಶ್ರೀ. ಪವಾರ ಮಾಸ್ತರರು ೯ ದಿನಗಳ ಉಪವಾಸಮಾಡಿದರು. ಶ್ರೀ. ಕಳ್ಳಿ ತಿಪ್ಪಣ್ಣ ಶಾಸ್ತ್ರಿಗಳು ಎರಡು ದಿವಸ ಕೀರ್ತನ ಮಾಡಿದರು. ಆದರೂ ಪ್ರಾಣಿವಧೆಯು ನಿಲ್ಲಲಿಲ್ಲ.

**ರಾಣೆಬೆನ್ನೂರ**— ಇದೇ ತಿಂಗಳು ೧೬ ನೆಯ ತಾರೀಖಿನ ದಿವಸ ಇಲ್ಲಿ ಕರ್ನಾಟಕ ಪ್ರಾಂತಿಕ ರಾಜಕೀಯ ಪರಿಷತ್ತು ಕೂಡುವದಿದೆ. ಆ ಕಾಲಕ್ಕೆ ಕೆಲಸಮಾಡುವ ಸ್ವಯಂ ಸೇವಕರ ಶಿಕ್ಷಣಕ್ಕಾಗಿ ಒಂದು ತಾತ್ಕಾಲಿಕ ಶಿಬಿರವು ಇಲ್ಲಿ ಏರ್ಪಡುವದು ಗೊತ್ತಾಗಿದೆ.

**ಮಂಗಳೂರು**— ದಕ್ಷಿಣ ಕನ್ನಡ ಜಿಲ್ಲೆಯ ೮ ನೆಯ ರಾಜಕೀಯ ಪರಿಷತ್ತು ಮುಲ್ಕಿ ಎಂಬ ಸ್ಥಳದಲ್ಲಿ ಕಳೆದ ೨೮ ನೆಯ ತಾರೀಖಿನ ದಿನ ಜರುಗಿತು. ಈ ಜಿಲ್ಲಾ ಸಭೆಗೆ ಶ್ರೀ. ರಾಮಲಿಂಗಂ ಚೆಟ್ಟಿಯಾರ್ ಇವರು ಅಧ್ಯಕ್ಷರಾಗಿದ್ದರು. ಮದ್ರಾಸ ಸರಕಾರದ ಮಂತ್ರಿಗಳಾದ ಶ್ರೀ. ರಾಮನ್ ಮೆನನ್‌ರವರು ಉದ್ಘಾಟನ ಸಮಾರಂಭವನ್ನು ಜರುಗಿಸಿದರು.

**ಬೆಳಗಾವ**— ರಾ| ಬ| ಅಂಗಡಿಯವರು ತಮ್ಮ ಪದವಿಯನ್ನು ಬಿಟ್ಟು ಕಾಂಗ್ರೆಸ್ಸಿಗೆ ಕೂಡಲು ನಿರ್ಧರಿಸಿದ್ದಾರೆ. ಶ್ರೀ. ಚಿಕ್ಕೋಡಿ ಪಂಡಿತಪ್ಪನವರು ತಮ್ಮ ಪಕ್ಷದೊಂದಿಗೆ ಕಾಂಗ್ರೆಸ್ಸಿನಲ್ಲಿ ಕೂಡುವರೆಂದು ತಿಳಿದಿದೆ.

---

# ಜಾಹೀರ ವಿನಂತಿ.

ಈ ಮೂಲಕ ಸರ್ವರಿಗೂ ತಿಳಿಸುವುದೇನಂದರೆ—

ಗುಲಬರ್ಗಾದಲ್ಲಿಯ ಪ್ರಸಿದ್ಧ ವ್ಯಾಪಾರಿಗಳಾದ ಶ್ರೀ. ತೋಟಪ್ಪನವರು ಭೂಮರಡ್ಡಿ, ಶ್ರೀ. ಎಸ್. ಡಿ. ಅಕ್ಕಿ, ಶ್ರೀ. ಮಹಂತಪ್ಪನವರು ಅಲ್ಲದ, ಶ್ರೀ. ಸಂಗಪ್ಪನವರು ನಂದ್ಯಾಡ, ಮತ್ತು ಶ್ರೀ. ಅಣ್ಣಪ್ಪನವರು ನಮೋಶಿ, ಇವರು ನನ್ನ ಮತ್ತು ಶ್ರೀ. ರುದ್ರಪ್ಪ ಶಾಸ್ತ್ರಿಗಳವರು ಮಹಗಾವ ಇವರ ಸಮಕ್ಷಮ ಇಲ್ಲಿಯ "ಕಲ್ಯಾಣ ಕರ್ನಾಟಕ ಪ್ರೆಸ್ಸಿ"ನ ಲೆಕ್ಕವನ್ನು ನೋಡಿ ಕಲ್ಯಾಣ ಕರ್ನಾಟಕ ಪ್ರೆಸ್ಸಿನಲ್ಲಿ ನನ್ನ ಹೆಸರಿನಿಂದ ಜಮಾ ಇರತಕ್ಕ ರೂಪಾಯಿಗಳನ್ನು ಶ್ರೀ. ರುದ್ರಪ್ಪ ಶಾಸ್ತ್ರಿಗಳು ಮಹಗಾವ ಇವರು ನನಗೆ ಆರು ತಿಂಗಳಿಗೆ ಐದುನೂರು ರೂ. (ಕಲ್ದಾರ) ದಂತೆ ಒಂದೂವರೆ ವರುಷದಲ್ಲಿ ಹದಿನೈದು ನೂರು ರೂಪಾಯಿ (ಕಲ್ದಾರ ೧೫೦೦ ರೂ) ಕೊಡಬೇಕೆಂದು ನಮ್ಮಿಬ್ಬರ ಒಪ್ಪಿಗೆ ಪ್ರಕಾರ ತೀರ್ಮಾನಿಸಿದರು.

ಈ ಬಗ್ಗೆ ಸದರಿ ಶಾಸ್ತ್ರಿಗಳವರು ನನಗೆ ತಾ. ೨೫ ದಯ್ ೧೩೪೭ ನೆಯ ಫಸಲಿ ದಿವಸ ಯೋಗ್ಯ ಕಾಗದ ಪತ್ರ ಮಾಡಿಕೊಟ್ಟನಂತರ ನಾನು ಕಲ್ಯಾಣ ಕರ್ನಾಟಕ ಪ್ರೆಸ್ಸಿನಲ್ಲಿದ್ದ ನನ್ನ ಸಂಬಂಧವನ್ನು ಬಿಟ್ಟು ಕೊಟ್ಟಿದ್ದೇನೆ. ಸದರಿ ಶಾಸ್ತ್ರಿಗಳವರಿಂದ ಪಂಚರ ಸಮಕ್ಷಮ ಗೊತ್ತಾದಂತೆ ಹಣ ಮತ್ತು ಕಾಗದ ಪತ್ರಗಳು ನನಗೆ ಬರತಕ್ಕವುಗಳಿವೆಯೇ ಹೊರತು ಸದರಿ ಪ್ರೆಸ್ಸಿಗೆ ನನ್ನ ಯಾವ ಸಂಬಂಧವೂ ಇಲ್ಲ.

ಕಲ್ಯಾಣ ಕರ್ನಾಟಕ ಪ್ರೆಸ್ಸಿನ ಈ ಮೊದಲಿನ ಯಾವುದೇ ಕೊಡಕೊಳ್ಳುವ ವ್ಯವಹಾರಕ್ಕೂ, ಇನ್ನುಮುಂದಿನ ಆದಾಯ ನಷ್ಟಗಳಿಗೂ, ಯಾವದೇ ರೀತಿಯಿಂದಲೂ ನಾನು ಜವಾಬ್ದಾರನಿರುವದಿಲ್ಲವೆಂದು ಈ ಮೂಲಕ ಸರ್ವರಿಗೂ ತಿಳಿಯಪಡಿಸಲಿಚ್ಛಿಸುತ್ತೇನೆ.

ಕಳೆದ ಮೂರು ವರುಷಗಳಿಂದ ನನಗೆ ಸಕಲ ರೀತಿಗಳಿಂದಲೂ ಪ್ರೇಮಪೂರ್ವಕ ಸಹಾಯಮಾಡಿದ ಗುಲಬರ್ಗಾ, ಬೀದರ, ಭಾಲ್ಕಿ, ಉದ್ಗಿರ, ಮೊದಲಾದ ಸ್ಥಳಗಳ ವ್ಯಾಪಾರಸ್ಥರಿಗೆ ನನ್ನ ಹೃತ್ಪೂರ್ವಕವಾದ ವಂದನೆಗಳನ್ನರ್ಪಿಸುತ್ತೇನೆ.

ಗುಲಬರ್ಗಾ
ತಾ. ೩೦-೧೨-೩೭.

ತಮ್ಮ ವಿಧೇಯ,
ಎಸ್. ಸಿ. ಶಿವಲಿಂಗಣ್ಣ.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

## The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾಂಗೂ ಅಂಜುವನಲ್ಲ ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.


ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೧೦ ನೆಯ ಜನವರಿ ೧೯೩೮. | ಸಂಚಿಕೆ೨೦


ಜನಸೇವೆಯೇ — ದೇವರಸೇವೆ.

# ಹಿಂದು ಮಹಾಸಭಾಧ್ಯಕ್ಷರು

## ಹೀಗೆ ಸಾರಿದರು.

ಜಾತಿಯನ್ನು
ಮುಂಗೆ ಮಾಡದೆ
ಮುಸಲ್ಮಾನರು
ಹಿಂದಿ ರಾಜ್ಯ
ನಿರ್ಮಾಣಕ್ಕೆ
ಮುಂದೆ ಬರಲಿ.

—೦—



ಅಧ್ಯಕ್ಷ- ಶ್ರೀ ಸಾವರಕರರು.

ಹಿಂದುಗಳು
ಹಿಂದುತ್ವವನ್ನು
ಮಾರಿ
ಸ್ವರಾಜ್ಯವನ್ನು
ಕೊಂಡುಕೊಳ್ಳಲು
ಸಿದ್ಧರಿಲ್ಲ.

—೦—

ದೇಹವೇ — ದೇವಾಲಯ.



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೧೦ ನೆಯ ಜನವರಿ ೧೯೩೮. | ಸಂಚಿಕೆ ೨೦

## ಮಹತ್ವದ ಸುದ್ದಿಗಳು.

—ತಾ. ೭ ನೆಯ ದಿನ ಗಾಂಧೀಜಿಯವರು ಸೇವಗಾವಕ್ಕೆ ಪರಿವಾರದೊಂದಿಗೆ ಜುಹೂದಿಂದ ಹೊರಟು ಹೋದರು.

—ಕಲಕತ್ತಾದಲ್ಲಿ ಹೊರಡುತ್ತಿರುವ "ಹಿಂದುಸ್ಥಾನ ಸ್ಟ್ಯಾಂಡರ್ಡ" ಎಂಬ ಇಂಗ್ಲಿಷ್ ದಿನ ಪತ್ರಿಕೆಯ ಸಂಪಾದಕರಾದ ಡಾ. ಧೀರೇಂದ್ರನಾಥ ಸೇನ ಇವರ ಮೇಲೆ ರಾಜದ್ರೋಹದ ವ್ಯಾಜ್ಯವನ್ನು ಬಂಗಾಲ ಸರಕಾರವು ಹೂಡಿದೆ. ಮಿ. ಫಜಲೂಲ್ ಹಕ್ಕರ ಆಳ್ವಿಕೆಯಲ್ಲಿ ಇದೊಂದು ರಾಜದ್ರೋಹದ ವ್ಯಾಜ್ಯ.

—ಲಾರ್ಡ ಲೊಥಿಯನ್‌ರು ತಾ. ೬ ನೆಯ ದಿನ ಬೆಂಗಳೂರಿಗೆ ಬಂದು ಮಹಾರಾಜಾ ಸರಕಾರದ ಅತಿಥಿಗಳಾಗಿ ಎರಡು ದಿನ ಇದ್ದು ಹೈದರಾಬಾದಕ್ಕೆ ಹೋದರು. ಅಲ್ಲಿಂದ ಮುಂಬೈಗೆ ಹೋಗುವರು. ಇವರು ಗಾಂಧೀಜಿಯವರನ್ನು ಸೇವಗಾವದಲ್ಲಿ ಕಾಣುವವರಿದ್ದಾರೆ.

—ಪ್ರಾಥಮಿಕ ಶಿಕ್ಷಣ ಪ್ರಸಾರಕ್ಕಾಗಿ ಹೆಚ್ಚಾದ ಧನ ಸಹಾಯಮಾಡಿರೆಂದು ನಾ. ಹಕ್ ಇವರು ಬಂಗಾಲ ಪ್ರಾಂತದವರನ್ನು ಕೇಳಿಕೊಂಡಿದ್ದಾರೆ.

—ಹರಿಪುರ ಕಾಂಗ್ರೆಸ್ಸಿನಲ್ಲಿ ಫೇಡರೇಶನ್ ವಿರೋಧವಾಗಿ ಪ್ರಚಂಡವಾದ ಪ್ರಯತ್ನಮಾಡಬೇಕೆಂದು ಡಾ. ಪಟ್ಟಾಭಿಯವರು ಸೂಚಿಸಿದ್ದಾರೆ.

—ಸರದಾರ ಪಟೇಲರು ಹರಿಪುರಕ್ಕೆ ಕಾಂಗ್ರೆಸ್ ಕಾರ್ಯದ ಸಿದ್ಧತೆಗಾಗಿ ಹೋದರು.

—ಬಂಗಾಲ ರಾಜಕೈದಿಗಳನ್ನು ಬಿಡುವ ವಿಚಾರವಾಗಿ ಗಾಂಧೀಜಿಯವರು ಶ್ರೀ. ಶರಶ್ಚಂದ್ರ ಬೋಸ ಮೊದಲಾದವರೊಂದಿಗೆ ವಿಚಾರ ವಿನಿಮಯಮಾಡಿದರು. ಗಾಂಧೀಜಿಯವರು ಈ ವಿಷಯದಲ್ಲಿ ತುಂಬಾ ಯೋಚನೆಯುಳ್ಳವರಾಗಿದ್ದಾರೆ.

### ಶ್ರೀ. ಬೋಸರೇ ಅಧ್ಯಕ್ಷರು.

ಹರಿಪುರ ಕಾಂಗ್ರೆಸ್ಸಿಗೆ ಶ್ರೀ. ಸುಭಾಷಚಂದ್ರ ಬೋಸರೇ ಅಧ್ಯಕ್ಷರಾಗುವರು. ಏಕೆಂದರೆ ಮೌ. ಅಬ್ದುಲ್ ಕಲಂ ಆಜದ ಪಂಡಿತ ಜವಾಹರಲಾಲ ನೆಹರು, ಖಾನ ಅಬ್ದುಲ್ ಗಫಾರಖಾನ ಇವರಾರೂ ಈಗ ಅಧ್ಯಕ್ಷ ಪದಕ್ಕೆ ಹುರಿಯಾಳುಗಳಾಗಿಲ್ಲ. ಶ್ರೀ. ಬೋಸರೇ ಅವಿರೋಧದಿಂದ ಅಧ್ಯಕ್ಷರಾಗುವರು. ಇವರು ತಾ. ೧೦ ಕ್ಕೆ ಲಂಡನ್ನಿಗೆ ಹೋಗಿ ೩೦ ಕ್ಕೆ ವಿಮಾನದಿಂದ ಈ ದೇಶಕ್ಕೆ ಬರುವರು.

—ಶಾಹಿದಗಂಜ ಸತ್ಯಾಗ್ರಹವು ಅಖಂಡವಾಗಿ ನಡೆದಿದೆ. ಈ ವರೆಗೆ (ತಾ. ೬-೧-೩೮) ಲಕ್ಷ ಮುಸಲ್ಮಾನರು ಸತ್ಯಾಗ್ರಹವನ್ನು ಮಾಡಿ ಸರಕಾರದವರಿಂದ ಬಂಧಿತರಾಗಿದ್ದಾರೆ. ೧೦ ಸತ್ಯಾಗ್ರಹಿಗಳು ಹೊಣೆಯನ್ನು ಕೊಡದೆ ಆರು ತಿಂಗಳ ಶಿಕ್ಷೆಯನ್ನು ಹೊಂದಿದರು.

—ಪಂಡಿತ ಜವಾಹರಲಾಲರು ಮುಸಲ್ಮಾನರನ್ನು ಒಪ್ಪಂದಕ್ಕೆ ಕರೆದಿದ್ದಾರೆ. ಮೌ. ಅಹಮ್ಮದ ಸೈಯದ ಇವರು ಬ್ಯಾ. ಜಿನ್ನಾರವರಿಗೆ ಎಲ್ಲ ಮುಸಲ್ಮಾನ ಪ್ರಮುಖರ ಸಭೆ ಕೂಡಿಸಿ ಪಂಡಿದ ಜವಾಹರಲಾಲರ ಪ್ರಶ್ನೆಗೆ ಉತ್ತರಕೊಡಬೇಕಾಗಿ ತಿಳಿಸಿದ್ದಾರೆ.

—ಕಳೆದ ಶಾಸನ ಭಂಗದ ಚಟುವಟಿಕೆಯ ಕಾಲಕ್ಕೆ ಕೆಲಸದಿಂದ ತೆಗೆದುಹಾಕಲ್ಪಟ್ಟ ಹಳ್ಳಿಯ ಅಧಿಕಾರಿಗಳಿಗೆ ಪುನಃ ಅಧಿಕಾರವನ್ನು ಕೊಡುವುದಾಗಿ ಮದ್ರಾಸ್ ಸರಕಾರವು ಪ್ರಕಟಿಸಿದೆ.

—ವರ್ಹಾಡ ಪ್ರಾಂತಿಕ ಪರಿಷತ್ತು ಶೆಂದುರಜನ ಎಂಬಲ್ಲಿ ಈ ತಿಂಗಳು ೨೨-೨೩ ನೆಯ ತಾರೀಖುಗಳಲ್ಲಿ ಕೂಡುವುದು. ಇದಕ್ಕೆ ಶ್ರೀ. ಗಂಗಾಧರರಾವ ದೇಶಪಾಂಡೆ ಇವರು ಅಧ್ಯಕ್ಷರಾಗಿದ್ದಾರೆ.

—ನಾಶಿಕ ಜಿಲ್ಲಾ ಲೋಕಶಾಹಿ ಸ್ವರಾಜ್ಯ ಪಕ್ಷದ ಪರಿಷತ್ತು ಈ ತಿಂಗಳು ೨೯-೩೦ ನೆಯ ತಾರೀಖುಗಳಲ್ಲಿ ಬ್ಯಾ. ಜಮುನಾದಾಸ ಮೆಹತಾರವರ ಅಧ್ಯಕ್ಷತೆಯಲ್ಲಿ ಜರುಗುವುದು.

## ವಿಮರ್ಶಾತ್ಮಕ ಪ್ರಶ್ನೋತ್ತರ.

### ಜಾತಿವಾದ ಮತ್ತು ಕಾಂಗ್ರೆಸ್.

(ಲೇಖಾಂಕ ೨)

ಪ್ರಶ್ನೆ— ಕಾಂಗ್ರೆಸ್ಸು ಜಾತಿಯಿಂದೇನೂ ಬಿಡುಗಡೆ ಹೊಂದಿಲ್ಲವೆಂದು ನೀವು ಹೇಳಿದಿರಿ. ಅದೂ ಜಾತಿಗಳಿಂದ ಕೂಡಿದ್ದಾಗಿದ್ದ ಮೇಲೆ ಹಿಂದು ಮಹಾ ಸಭೆ, ಮುಸ್ಲಿಂ ಲೀಗ್, ಈ ಜಾತಿ ಸಂಸ್ಥೆಗಳಿಗೂ ಕಾಂಗ್ರೆಸ್ಸಿಗೂ ವ್ಯತ್ಯಾಸವೇನಿದ್ದಂತಾಯಿತು ?

ಉತ್ತರ— ನೀವು ಕಾಂಗ್ರೆಸ್ ಸದಸ್ಯರಾಗಿದ್ದೀರಷ್ಟೆ. ಸದಸ್ಯರಾಗಬೇಕಾದರೆ ಬರೆದು ಕೊಟ್ಟ ಪ್ರತಿಜ್ಞಾಪತ್ರದಲ್ಲಿ ಸತ್ಯ ಮತ್ತು ಅಹಿಂಸಾ ವ್ರತಗಳಿಂದ ನಡೆಯುತ್ತೇನೆಂದು ಹೇಳಿದಂತೆ ನಾನು ನನ್ನ ಜಾತಿಯನ್ನು ಬಿಟ್ಟಿದ್ದೇನೆಂದು ಹೇಳಿದ್ದೀರಾ ? ಹಿಂದು ಮುಸಲ್ಮಾನ್ ಮೊದಲಾದ ಜಾತಿಯವರು ಕಾಂಗ್ರೆಸ್ ಸದಸ್ಯರಾಗಬೇಕಾದರೆ ತಮ್ಮ ತಮ್ಮ ಜಾತಿ ಕಲ್ಪನೆಗಳನ್ನು ಬಿಡಬೇಕೆಂದು ಕಾಂಗ್ರೆಸ್ಸಿನ ಕಟ್ಟಳೆಯುಂಟೆ ? ಇಲ್ಲವೇ ಇಲ್ಲ. ಅಂದ ಮೇಲೆ ಯಾರು ಯಾವ ಜಾತಿಯವರಿದ್ದರೂ ಕಾಂಗ್ರೆಸ್ಸಿನ ಸದಸ್ಯರಾಗಲಿಕ್ಕೆ ಬರುತ್ತದೆ. ಹಿಂದು ಮಹಾಸಭೆ ಅಥವಾ ಮುಸ್ಲಿಂ ಲೀಗ್ ಸಂಸ್ಥೆಗಳ ಸಂಗತಿ ಹೀಗಿಲ್ಲ. ಆಯಾಯ ಸಭೆಗಳ ಸದಸ್ಯರಾಗಬೇಕಾದರೆ ಆಯಾಯ ಜಾತಿಯವರೇ ಇರಬೇಕು. ಹಿಂದುಗಳು ಮುಸ್ಲಿಂ ಲೀಗಿನ ಸದಸ್ಯರಾಗಲು ಬರುವುದಿಲ್ಲ. ಮುಸಲ್ಮಾನರು ಹಿಂದು ಮಹಾಸಭೆಯ ಸದಸ್ಯರಾಗಲು ಬರುವುದಿಲ್ಲ. ಆದರೆ ಇವರಿಬ್ಬರೂ ಕಾಂಗ್ರೆಸ್ಸಿನ ಮೆಂಬರರಾಗಲು ಬರುತ್ತದೆ.

ಪ್ರಶ್ನೆ— ಕಾಂಗ್ರೆಸ್ಸಿನಲ್ಲಿ ಎಲ್ಲಾ ಜಾತಿಯವರೂ ಕೂಡಿ ಮಾಡುವ ಕಾರ್ಯವನ್ನೇ ಆಯಾಯ ಜಾತಿಯವರು ಬೇರೆ ಬೇರೆ ಮಾಡುತ್ತಿದ್ದರೆ ಇದೇನು ಅಷ್ಟು ದೊಡ್ಡ ವ್ಯತ್ಯಾಸವಾಯಿತು ?

ಉತ್ತರ— ಕಾಂಗ್ರೆಸ್ಸಿನ ಮುಖ್ಯ ಉದ್ದೇಶವು ಹಿಂದುಸ್ಥಾನಕ್ಕೆ ಸ್ವಾತಂತ್ರ್ಯವನ್ನು ಸಂಪಾದಿಸಬೇಕೆಂಬುದೊಂದೇ ಇದೆ. ಆದಕಾರಣ ಅದರಲ್ಲಿ ಸೇರಿದವರು ತಾವು ಹಿಂದು ಮುಸಲ್ಮಾನ್ ಮೊದಲಾದ ಯಾವ ಜಾತಿಯವರಿದ್ದರೂ ಮೊದಲು ತಾವು ಹಿಂದಿ, ಎಂದೇ ತಿಳಿದುಕೊಂಡು ಹೋರಾಡಬೇಕಾಗುತ್ತದೆ. ಯಾಕೆಂದರೆ ಅವರು ದೊರಕಿಸುವ ರಾಜಕೀಯ ಸ್ವಾತಂತ್ರ್ಯವು ಯಾವುದೋ ಒಂದು ಜಾತಿಯವರಿಗೆ ಮಾತ್ರ ಸಂಬಂಧಪಟ್ಟಿಲ್ಲ. ಎಲ್ಲ ಜಾತಿಯವರಿಗೂ ಸೇರಿದ್ದಾದುದರಿಂದಲೂ ಎಲ್ಲರೂ ಹಿಂದುಸ್ಥಾನವನ್ನೇ ಮಾತೃಭೂಮಿಯೆಂದು ತಿಳಿಯುವುದರಿಂದಲೂ ತಾವು ಹಿಂದಿಗಳೆಂದು ಹೋರಾಡಬೇಕಾಗುತ್ತದೆ.

ಹಿಂದು ಮಹಾಸಭೆ ಅಥವಾ ಮುಸ್ಲಿಂಲೀಗಿನವರು ಹಾಗಲ್ಲ ಅವರು ಮೊದಲು ತಾವು ಹಿಂದು ಅಥವಾ ಮುಸಲ್ಮಾನರೆಂದು ತಿಳಿದು ತಮ್ಮ ತಮ್ಮ ಜಾತಿಗಳ ಅಸ್ತಿತ್ವ, ಅಭಿವೃದ್ಧಿಗಳಿಗಾಗಿ ಪ್ರಯತ್ನಿಸಬೇಕಾಗುತ್ತದೆ. ಅವರೂ ಹಿಂದುಸ್ಥಾನಕ್ಕೆ ಸ್ವಾತಂತ್ರ್ಯ ಬೇಕೆಂದೇ ಪ್ರಯತ್ನಿಸುತ್ತಾರೆ. ಆದರೆ ಕಾಂಗ್ರೆಸ್ಸಿನವರಂತೆ ಇವರಿಗೆ ಅದೊಂದೇ ಉದ್ದೇಶವಿಲ್ಲ. ತಮ್ಮ ತಮ್ಮ ಜಾತಿಯ ಉನ್ನತಿ ಮತ್ತು ದೇಶ ಸ್ವಾತಂತ್ರ್ಯ ಇವೆರಡೂ ಬೇಕಾಗಿವೆ. ಆದಕಾರಣ ಇವರಿಗೆ ತಮ್ಮ ಜಾತಿಯ ಪ್ರಶ್ನೆ ಮೊದಲು ಬರುತ್ತದೆ. ಕಾಂಗ್ರೆಸ್ಸಿನವರಿಗೆ ದೇಶದ ಪ್ರಶ್ನೆ ಮಾತ್ರ ಇದೆ.

ಪ್ರಶ್ನೆ— ಅದಕ್ಕೇ ನಾನು ಮೊದಲು ಹೇಳಿದ್ದೆ; ಈ ಜಾತಿ ಪ್ರಶ್ನೆಯೇ ಬರದಂಥ ಕಾಂಗ್ರೆಸ್ಸಿನ ಸಂಗತಿ ಮಾತ್ರ ನಿಮ್ಮ ಪತ್ರಿಕೆಯಲ್ಲಿ ಬರೆಯಿರೆಂದು. ಹಾಗಾದರೆ ಹಿಂದಿ ಎಂದು ಹೇಳುವ ಪ್ರಸಂಗ ಬರುತ್ತದೇ ಹೊರತು ಹಿಂದು, ಮುಸಲ್ಮಾನ್, ಕ್ರಿಸ್ತ ಎಂದು ಹೇಳುವ ಪ್ರಸಂಗವೇ ಬರುವದಿಲ್ಲ. ಅಂಥ ವಿಚಾರಗಳೇ ಪತ್ರಿಕೆಯಲ್ಲಿ ಬರದಿದ್ದ ಮೇಲೆ ಜಾತಿಯ ಅಭಿಮಾನವೂ ತಾನಾಗಿಯೇ ಹೋಗಿಬಿಡುತ್ತದೆ. ಹೀಗೆ ಮಾಡುವುದೇ ಯೋಗ್ಯವೆಂದು ಈಗಾದರೂ ನಿಮಗೆ ಅನಿಸುವುದಿಲ್ಲವೆ ?

ಉತ್ತರ— ಕಾಂಗ್ರೆಸ್ಸಿಗೆ ಜಾತಿಯ ಕಲ್ಪನೆಯೇ ಇಲ್ಲವೆಂದು ನೀವು ಮೊದಲು ತಿಳಿದುಕೊಂಡದ್ದು ತಪ್ಪೆಂದು ಈಗಲಾದರೂ ನಿಮಗೆ ಸ್ಪಷ್ಟವಾಯಿತಷ್ಟೆ. ಅದಕ್ಕೆ ಹಿಂದು ಮಹಾಸಭೆಯಂತೆ ಹಿಂದುಜಾತಿಯೊಂದೇ ಇಲ್ಲ. ಮುಸ್ಲಿಂಲೀಗಿನಂತೆ ಮುಸಲ್ಮಾನ್ ಜಾತಿಯೊಂದೇ ಇಲ್ಲ. ಆದರೆ ಎಲ್ಲಾ ಜಾತಿಗಳೂ ಅದಕ್ಕೆ ಇದ್ದೇ ಇವೆ. ಅದು ಯಾವುದೊಂದು ಜಾತಿಯ ಧಾರ್ಮಿಕ ಸಾಮಾಜಿಕ ಮೊದಲಾದ ಸಂಗತಿಗಳನ್ನು ಅಭಿವೃದ್ಧಿಮಾಡುವುದಕ್ಕಾಗಿ ಹುಟ್ಟಿಲ್ಲ. ಆದಕಾರಣ ಅದು ಎಲ್ಲ ಜಾತಿಯವರಿಗೂ ಸಂಬಂಧಿಸಿದ ರಾಜಕೀಯ ವಿಷಯವೊಂದನ್ನೇ ಮುಖ್ಯವಾಗಿಟ್ಟುಕೊಂಡಿದೆ.

ಹೀಗಿದ್ದ ಮಾತ್ರದಲ್ಲಿ ಅದು ಜಾತಿಕಲ್ಪನೆಯಿಂದ ನಿರ್ಲಿಪ್ತವಾಗಿದೆಯೆಂದು ತಿಳಿಯಬಾರದು. ಮದ್ರಾಸ್ ಅಸೆಂಬ್ಲಿಯಲ್ಲಿ ಮೊನ್ನೆ ಮೊದಲು ಖುರಾನ ಪಠಣವಾದ ಮೇಲೆ ರಾಷ್ಟ್ರಗೀತೆ ಹೇಳಲ್ಪಟ್ಟಿತಂತೆ ! ಅಂದಮೇಲೆ ಕಾಂಗ್ರೆಸ್ ಜಾತಿ ಧರ್ಮಗಳಾವವೂ ತನ್ನ ಹತ್ತಿರ ಬರದಂತೆ ಮಾಡಿದೆಯೆಂದು ತಿಳಿದುಕೊಳ್ಳುವುದು ತಪ್ಪಲ್ಲವೆ ?

ಕಾಂಗ್ರೆಸ್ಸಿನ ಸಂಗತಿಗಳನ್ನು ಮಾತ್ರ ಬರೆಯುತ್ತ ಹೋದರೆ ಜಾತಿ ಕಲ್ಪನೆ ಅಳಿದು ಹೋಗುತ್ತದೆಂಬ ನಿಮ್ಮ ಹೇಳಿಕೆ ಸರಿಯಾಗಿಲ್ಲ. ಪಂಚಾಂಗದಲ್ಲಿ ಈ ದಿನ ಇಂಥ ನಕ್ಷತ್ರ ಇದೆಯೆಂಬುದನ್ನು ಜೋಯಿಸರು ಬರೆಯದೆ ಬಿಟ್ಟರೆ ಆ ನಕ್ಷತ್ರವೇನೂ ಆ ದಿನ ಇಲ್ಲದಂತಾಗುವುದೆ ? ಹಿಂದು ಜಾತಿಯ ಪ್ರಶ್ನೆ ಬಂದಾಗ ಅದನ್ನು ಬರೆಯದೆ ಬಿಟ್ಟ ಮಾತ್ರದಿಂದ ಆ ಜಾತಿಗೆ ಸಂಭವಿಸತಕ್ಕ ಹಿತಾಹಿತಗಳೇನಾದರೂ ನಿಲ್ಲುತ್ತವೆಯೆ ? ಕಾಂಗ್ರೆಸ್ಸಿನಲ್ಲಿ ಸೇರಿದ ಮಾತ್ರದಿಂದ ಅದರಲ್ಲಿರುವ ಬೇರೆ ಬೇರೆ ಜಾತಿಯವರೆಲ್ಲರೂ ತಮ್ಮ ತಮ್ಮ ಜಾತಿಯ ಕಲ್ಪನೆಯನ್ನೇ ಮರೆತು ಬಿಟ್ಟಿದ್ದಾರೆಂದು ನೀವು ತಿಳಿದಿರುವಿರಾ ?—ಇವೆಲ್ಲಾ ತಪ್ಪು ವಿಚಾರಗಳು.

ನಾವು ನಮ್ಮ ರಾಷ್ಟ್ರ, ಜಾತಿ, ಇವೆರಡರ ಉನ್ನತಿಯನ್ನೂ ಕಣ್ಣು ಮುಂದಿಟ್ಟುಕೊಂಡೇ ನಡೆಯಬೇಕಾದುದೇ ವಿಹಿತವೂ ಕ್ಷೇಮಕರವೂ ಆಗಿದೆಯೇ ವಿನಾ ಇವುಗಳಲ್ಲಿ ಯಾವುದೊಂದನ್ನು ಉಪೇಕ್ಷಿಸುವುದಾದರೂ ಅನರ್ಥಕರವೇ ಸರಿ. ಮನುಷ್ಯನಿಗೆ ದೇಹ ಮತ್ತು ಪ್ರಾಣ ಹೇಗೆ ಅಗತ್ಯವಾಗಿವೆಯೋ ಹಾಗೆಯೇ ಹಿಂದುಗಳಾದ ನಮಗೆ ಹಿಂದು ರಾಷ್ಟ್ರ ಮತ್ತು ಹಿಂದು ಸಂಸ್ಕೃತಿ ಇವೆರಡೂ ಅವಶ್ಯವಾಗಿವೆ. ಕಾಂಗ್ರೆಸ್ ರಾಷ್ಟ್ರದ ಕಡೆಗೇ ಲಕ್ಷಿಸಿದೆ. ಹಿಂದು ಮಹಾ ಸಭೆ ಹಿಂದು ಸಂಸ್ಕೃತಿಯ ಕಡೆಗೇ ಹೆಚ್ಚು ಲಕ್ಷಿಸಿದೆ. ಇವೆರಡರ ಕಡೆಗೂ ಸಕಲ ಹಿಂದುಗಳೂ ಲಕ್ಷಿಸುವಂತೆ ಪ್ರಯತ್ನಿಸುವುದೇ ನಮ್ಮ ಉದ್ದೇಶವಾಗಿರುವುದರಿಂದ ಅದೇ ಪ್ರಕಾರ ನಾವು ನಮ್ಮ ಪತ್ರಿಕೆಯಲ್ಲಿ ಬರೆಯುತ್ತಿದ್ದೇವೆ.

ಪ್ರಶ್ನೆ— ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ಹೋರಾಡುವವರು ತಮ್ಮ ಜಾತಿಯ ಕಡೆಗೆ ಹೀಗೆ ಲಕ್ಷಿಸಿದರೆ ಅವರ ದೃಷ್ಟಿಯು ಸಂ

ಕುಚಿತವಾಗದೆ ನಿಜವಾದ ರಾಷ್ಟ್ರಭಕ್ತರಿಂದ ನಡೆಯಬೇಕಾದಂಥ ಸಾಹಸದ ಕಾರ್ಯ ನಡೆಯುವುದು ಶಕ್ಯವೆ?

ಉತ್ತರ— ಜಾತಿಯ ಹಿತದ ಕಾರ್ಯ ಮತ್ತು ರಾಷ್ಟ್ರ ಹಿತದ ಕಾರ್ಯ ಇವು ಪರಸ್ಪರ ಕತ್ತಲೆ ಬೆಳಕುಗಳಂತೆ ವಿರುದ್ಧ ವಾದವುಗಳೇಂದೇ ನಿಮ್ಮ ಗ್ರಹಿಕೆ ಇದ್ದಂತೆ ಕಾಣುತ್ತದೆ. ಈ ಉಭಯಕಾರ್ಯಗಳೂ ಒಂದೇ ವ್ಯಕ್ತಿಯಲ್ಲಿ ಕೂಡಿರುವುದು ಅಶಕ್ಯವೆಂದು ನೀವು ಯೋಚಿಸಿರಬೇಕು. ನಮಗೆ ಹಾಗೇನೂ ತೋರುವುದಿಲ್ಲ. ಉಜ್ವಲವಾದ ರಾಷ್ಟ್ರ ಭಕ್ತರು ಉಜ್ವಲವಾದ ಸ್ವಜಾತಿ ಹಿತರಕ್ಷಕರೂ ಇರುವುದು ಶಕ್ಯವಿದೆ.

ಪ್ರಶ್ನೆ— ಇಂಥ ವ್ಯಕ್ತಿಗಳು ಇದ್ದದ್ದುಂಟೋ? ಇದೊಂದು ತತ್ವವೋ?

ಉತ್ತರ— ನಾವು ಹೇಳುವುದು ಆಚರಣೆಯಲ್ಲಿ ಬರಲು ಅಶಕ್ಯವಾದ ಒಂದು ತತ್ವವೇನೂ ಅಲ್ಲ. ಲೋಕಮಾನ್ಯ ಟಿಳಕರು ಪಂಜಾಬದ ಸಿಂಹ ಲಜಪತರಾಯರು, ಉಜ್ವಲ ರಾಷ್ಟ್ರಭಕ್ತರೆಂದೇ ಕಾಂಗ್ರೆಸ್ಸಿನವರು ಹೇಳುತ್ತಿದ್ದಾರಲ್ಲವೆ? ಅವರಲ್ಲಿ ಹಿಂದುಜಾತಿಯ ಹಿತಾರ್ಥವಾಗಿ ಎಂಥ ಉಜ್ವಲ ಅಭಿಮಾನವಿತ್ತು? ಅದಕ್ಕಾಗಿ ಅವರು ಎಷ್ಟು ಪ್ರಯತ್ನಿಸಿದರು? ಅವರು ಎರಡೂ ಕಾರ್ಯಗಳನ್ನು ಸಮಯ ಸಂದರ್ಭಗಳಿಗೆ ತಕ್ಕಂತೆ ಬಹು ಪರಿಣಾಮಕಾರಿಯಾಗಿ ಮಾಡಿ ಹಿಂದು ರಾಷ್ಟ್ರದಲ್ಲಿ ನಿಜವಾದ ಚೈತನ್ಯವನ್ನು ಉಂಟುಮಾಡಿದರು.

ಪ್ರಶ್ನೆ—ಅವರೆಲ್ಲಾ ಹಿಂದಿನ ಕಾಲದವರು. ಆಗ ಇಷ್ಟು ರಾಷ್ಟ್ರ ಜಾಗೃತಿಯೂ ಇರಲಿಲ್ಲ. ಈಗ ಸ್ವಜಾತಿಯ ಹಿತ ಮತ್ತು ಸ್ವಾತಂತ್ರ್ಯಗಳಿಗಾಗಿ ಹೋರಾಡುತ್ತಿದ್ದೇವೆಂದು ಹೇಳುವ ಭಾಯಿ ಪರಮಾನಂದ ಮತ್ತು ಬ್ಯಾ. ಜಿನ್ನಾರವರ ರೀತಿ ಹೇಗಿದೆ ನೋಡಿರಿ. ಎಷ್ಟು ಅಲ್ಪ ದೃಷ್ಟಿ. ಇವರ ಜಾತಿವಾದವು ರಾಷ್ಟ್ರದ್ರೋಹಕರವಾಗಿಯೇ ಇಲ್ಲವೆ? ಟಿಳಕ, ಲಜಪತರಾಯರಂತೆ ಈಗ ಯಾರಾದರೂ ಇರುವದು ಶಕ್ಯವೆ?

ಉತ್ತರ— ಭಾಯಿ ಪರಮಾನಂದರು ಹಿಂದು ಜಾತಿಯ ಹಿತಾರ್ಥವಾಗಿ ಪ್ರಯತ್ನಿಸುವ ಧುರೀಣರೇನೋ ನಿಜ. ಆದರೆ ಅವರು ಬ್ಯಾ. ಜಿನ್ನಾರವರ ಸಾಲಿನಲ್ಲಿರುವವರಲ್ಲ. ನೀವು ಅವರಿಬ್ಬರನ್ನೂ ಕೂಡಿಸುವುದೇ ತಪ್ಪು. ಭಾಯಿ ಪರಮಾನಂದರು ಜಾತಿಯನ್ನು ಮುಂದಿಟ್ಟುಕೊಂಡು ಹೋರಾಡುವವರು. ಹಾಗೆಂದ ಮಾತ್ರದಲ್ಲಿ ಅವರು ರಾಷ್ಟ್ರದ್ರೋಹಿಗಳೆಂದು ತಿಳಿಯುವುದು ತಪ್ಪು. ಪಂ. ಜವಾಹರಲಾಲರು ರಾಷ್ಟ್ರವನ್ನು ಮುಂದಿಟ್ಟುಕೊಂಡು ಹೋರಾಡುವವರು. ಇವರು ಸ್ವಜಾತಿ ದ್ರೋಹಿಗಳೆಂದು ಹೇಳಬಹುದೆ? ಅದೂ ಸರಿಯಲ್ಲ. ಹೀಗಿರುವುದು ಅವರವರ ಬುದ್ಧಿ ಮತ್ತು ಪ್ರವೃತ್ತಿಗಳ ವ್ಯತ್ಯಾಸ. ಬ್ಯಾ. ಜಿನ್ನಾರವರು ಹಿಡಿದ ಮಾರ್ಗ ಜಾತಿವಾದವಲ್ಲ. ಅದು ಜಾತೀಯ ದುರ್ವಾದ. ಲೋಕಮಾನ್ಯ ಟಿಳಕ ಮತ್ತು ಲಜಪತರಾಯರಂತೆ ಈಗಲೂ ಪಂಡಿತ ಮಾಲವೀಜಿ, ಲೋಕನಾಯಕ ಅಣೆ ಮೊದಲಾದ ರಾಷ್ಟ್ರಭಕ್ತರು ಕಾರ್ಯಮಾಡುತ್ತಾ ಇದ್ದಾರೆ.

ಪ್ರಶ್ನೆ— ಭಾಯಿ ಪರಮಾನಂದರೂ ಬ್ಯಾ. ಜಿನ್ನಾರವರೂ ಏಕೆ ಒಂದೇ ಅಲ್ಲ?

ಉತ್ತರ— ಜಾತಿಯ ಹೆಸರಿನಿಂದ ರಾಜಕಾರಣದಲ್ಲಿ ಯಾವ ಸೌಲಭ್ಯವಾಗಲಿ ಅಥವಾ ಭಿನ್ನತ್ವವಾಗಲಿ ಏರ್ಪಟ್ಟರೆ ಅದು ರಾಷ್ಟ್ರೀಯತ್ವಕ್ಕೆ ವಿಘಾತಕವಾದುದು. ಆದಕಾರಣ ಜಾತಿಯಿಂದ ರಾಜಕಾರಣದಲ್ಲಿ ವಿಭಾಗಮಾಡಬೇಕೆಂದು ಭಾಯಿ ಪರಮಾನಂದರು ಹೇಳುವುದಿಲ್ಲ. ಬ್ಯಾ. ಜಿನ್ನಾರವರಾದರೋ ಹಿಂದುಸ್ಥಾನದ ರಾಜಕಾರಣವು ಜಾತಿವಿಶಿಷ್ಟವಾದುದಾಗಿರಬೇಕೆಂದೇ ಪ್ರತ್ಯೇಕ ಪ್ರಾತಿನಿಧ್ಯವನ್ನು ವಾದಿಸುವವರಾಗಿದ್ದಾರೆ. ಆದಕಾರಣ ಇವರಿಬ್ಬರ ಮಾರ್ಗಗಳೂ ಭಿನ್ನವಾಗಿವೆ.

ಪ್ರಶ್ನೆ— ಹಿಂದು ಮಹಾಸಭೆಗೂ ಕಾಂಗ್ರೆಸ್ಸಿಗೂ ವ್ಯತ್ಯಾಸ ಇಲ್ಲವೆ?

ಉತ್ತರ— ರಾಜಕೀಯ ವಿಷಯದಲ್ಲಿ ಇವೆರಡೂ ಒಂದೇ ಆಗಿವೆ. ಕಾಂಗ್ರೆಸ್ಸಿನಂತೆಯೇ ಹಿಂದು ಮಹಾಸಭೆಯೂ ಸಂಪೂರ್ಣ ಸ್ವಾತಂತ್ರ್ಯವನ್ನೇ ಸಾಧಿಸುವುದಾಗಿದೆ. ಮತ್ತು ಜಾತಿ ವಿಶಿಷ್ಟವಾಗಿ ರಾಜಕಾರಣದಲ್ಲಿ ಯಾವ ಭಿನ್ನ ಭೇದಗಳನ್ನೂ ಮಾಡಬಾರದೆಂದೇ ಹೇಳುವುದಾಗಿದೆ. ಇಷ್ಟೇ ಅಲ್ಲ; ಜಾತಿ ನಿರ್ಣಯದ ಅರಾಷ್ಟ್ರೀಯ ಮಾರ್ಗವನ್ನು ಕಾಂಗ್ರೆಸ್ಸಿಗಿಂತಲೂ ಹಿಂದು ಮಹಾಸಭೆಯೇ ತೀಕ್ಷ್ಣವಾಗಿ ಖಂಡಿಸುವುದಾಗಿದೆ. ಆದಕಾರಣ ಹಿಂದು ಮಹಾಸಭೆಯು ರಾಜಕೀಯ ತತ್ವಗಳಲ್ಲಿ ಕಾಂಗ್ರೆಸ್ಸಿಗಿಂತ ಒಂದು ಅಂಗುಲದಷ್ಟಾದರೂ ಹಿಂದಿಲ್ಲ. ಮುಂದೇ ಇದೆಯೆಂದು ಹೇಳಬಹುದು. ಹಿಂದು ಜಾತಿಯ ಸಂಬಂಧವಾದ ಸಾಮಾಜಿಕ ಮತ್ತು ಧಾರ್ಮಿಕ ವಿಷಯಗಳ ಸುಧಾರಣೆಯನ್ನೂ ಹಿಂದು ಮಹಾಸಭೆಯು ಇಟ್ಟುಕೊಂಡಿದೆ. ಕಾಂಗ್ರೆಸ್ಸಿನಲ್ಲಿ ಅಸ್ಪೃಶ್ಯತಾನಿವಾರಣೆಯ ಹೊರತು ಬೇರೆ ವಿಷಯಗಳೇನೂ ಇಲ್ಲದಿರುವುದು ಯುಕ್ತವಾಗಿಯೂ ಇದೆ.

ಮುಸ್ಲಿಂಲೀಗು ಕಾಂಗ್ರೆಸ್ಸಿನ ಧ್ವಜವನ್ನು ಆಕ್ಷೇಪಿಸಿತು. ಅದು ರಾಷ್ಟ್ರೀಯ ಧ್ವಜವಲ್ಲವೆಂದೂ ಹೇಳುತ್ತದೆ. ಹಿಂದುಮಹಾಸಭೆಯು ಹಾಗೇನಾದರೂ ತನ್ನ ಕಾವಿ ನಿಶಾನೆಯೊಂದನ್ನೇ ಗೌರವಿಸುತ್ತದೆಯೇ? ಇಲ್ಲವೇ ಇಲ್ಲ ಮೊನ್ನೆ ಅಹಮದಾಬಾದಿನಲ್ಲಿ ನಡೆದ ಹಿಂದು ಮಹಾಸಭೆಯ ಅಧ್ಯಕ್ಷರ ಪ್ರಚಂಡ ಮೆರವಣಿಗೆಯಲ್ಲಿ ಮೂರು ಬಣ್ಣಗಳ ರಾಷ್ಟ್ರೀಯ ಧ್ವಜವೂ ಮೆರೆದಿತು.

ಈ ಎಲ್ಲ ಸಂಗತಿಗಳನ್ನು ನಿಷ್ಪಕ್ಷಪಾತದಿಂದ ನೋಡಿದರೆ ಹಿಂದು ಮಹಾಸಭೆಯು ಕಾಂಗ್ರೆಸ್ಸಿಗೆ ಯಾವ ವಿಷಯದಲ್ಲಿಯೂ ವಿರೋಧವಾಗಿಲ್ಲವೆಂದೇ ಗೊತ್ತಾಗುತ್ತದೆ.

ಪ್ರಶ್ನೆ— ಹಾಗಾದರೆ ಕಾಂಗ್ರೆಸ್ಸಿನಲ್ಲಿರುವ ಹಿಂದುಗಳು ಹಿಂದು ಮಹಾ ಸಭೆಯ ಮೆಂಬರರೂ ಆಗಬಹುದೆಂದೇ ನಿಮ್ಮ ಅಭಿಪ್ರಾಯವೆ?

ಉತ್ತರ— ನಿರಾತಂಕವಾಗಿ ಆಗಬಹುದು, ಆದರಿಂದ ಕಾಂಗ್ರೆಸ್ಸಿನ ಯಾವ ನಿಯಮಗಳನ್ನೂ ಮೀರಿ ನಡೆದಂತಾಗುವುದಿಲ್ಲ. ಹಿಂದು ಜಾತಿಯ ಒಂದೇ ವ್ಯಕ್ತಿಯು ಕಾಂಗ್ರೆಸ್ಸಿನ ಮತ್ತು ಹಿಂದು ಮಹಾಸಭೆಯ ಉದ್ದೇಶಗಳನ್ನು ಪರಸ್ಪರ ವಿರೋಧವಿಲ್ಲದಂತೆ ಧಾರಾಳವಾಗಿ ಸಾಧಿಸಲು ಪ್ರಯತ್ನಿಸಬಹುದು. ಹಾಗೆ ಮಾಡುವುದೇ ಉತ್ತಮವಾದ ರೀತಿಯು.

## ಭಯಂಕರ ಕ್ರಾಂತಿಯಾಗಬಹುದು!

ಕರಾಚಿಯ ಭಾಷಣದಲ್ಲಿ ಮುಂಬೈ ಸರಕಾರದ ಗೃಹಮಂತ್ರಿಗಳಾದ ಶ್ರೀ. ಮುನಸಿಯವರು ಹೀಗೆ ಹೇಳಿದರು—

"ಮಂತ್ರಿಗಳಾಗಿ ಕೆಲಸಮಾಡುವುದು ಹೂವಿನ ಹಾಸಿಗೆಯ ಮೇಲೆ ಮಲಗುವಂತಲ್ಲ. ರಾಜ್ಯಭಾರದಲ್ಲಿ ಒಂದು ನಿಮಿಷಕ್ಕೆ ವ್ಯತ್ಯಾಸಮಾಡಲು ಬರುವುದೂ ಇಲ್ಲ. ನಮಗೆ ದೊರೆತಿರುವ ಅಧಿಕಾರದಲ್ಲಿಯೇ ದೇಶಕ್ಕೆ ಎಷ್ಟೋ ಹಿತಮಾಡುವುದು ಶಕ್ಯವಿದೆಯೆಂದೇ ನನ್ನ ಅನುಭವಕ್ಕೆ ಬಂದಿದೆ. ನಾವು ಅಧಿಕಾರ ತ್ಯಾಗಮಾಡಿ ಬಂದದ್ದಾದರೆ ಮುಂದೆ ಯಾವ ಪರಿಸ್ಥಿತಿಯುಂಟಾಗಬಹುದೆಂಬುದನ್ನು ಜ್ಞಾಪಿಸಿಕೊಂಡರೆ ಭಯದಿಂದ ನನ್ನ ಮೈಕೂದಲು ನೆಟ್ಟಗಾಗುತ್ತವೆ. ಭಯಂಕರ ಕ್ರಾಂತಿಯಾಗುವ ಸಂಭವವಿದೆ."

# ಸ್ವಾಗತ ಸಂಘಾಧ್ಯಕ್ಷರ

## ಮನನೀಯ ಭಾಷಣ.

ಅಹಮದಾಬಾದಿನಲ್ಲಿ ಕೂಡಿದ ೧೯ ನೆಯ ಹಿಂದು ಮಹಾಸಭೆಯ ಸ್ವಾಗತ ಸಂಘಾಧ್ಯಕ್ಷರಾದ ಶ್ರೀ. ಕೆ. ಕೆ. ಠಾಕೋರ ಇವರು ತಾ. ೩೦-೧೨-೩೭ ನೆಯ ದಿವಸ ಮಾಡಿದ ಭಾಷಣದಲ್ಲಿ ಹೀಗೆ ಹೇಳಿದರು—

### ದೇಶಭಕ್ತರು ಧರ್ಮವನ್ನು ಬಿಡಬೇಕೇ ?

“ ಹಿಂದು ಮಹಾಸಭೆಯು ಜಾತಿ ಸಂಸ್ಥೆಯಾದುದರಿಂದ ಇದರ ಕಾರ್ಯಗಳು ಕಾಂಗ್ರೆಸ್ಸಿಗೆ ವಿರುದ್ಧವಾಗಿವೆಯೆಂದೂ ಇದರಲ್ಲಿ ಸೇರಬಾರದೆಂದೂ ಅನೇಕರು ಜನರಲ್ಲಿ ತಪ್ಪು ವಿಚಾರಗಳನ್ನು ಪ್ರಸಾರಮಾಡುತ್ತಿದ್ದಾರೆ. ದೇಶಭಕ್ತರಾಗಬೇಕಾದರೆ ಅವರು ತಮ್ಮ ಧರ್ಮವನ್ನು ಬಿಡಬೇಕಾಗುತ್ತದೆಂದೇ ನನಗೇನೂ ತೋರುವದಿಲ್ಲ. ನಿಜವಾದ ರಾಷ್ಟ್ರ ಸೇವಕನಾಗುವುದೂ ಮತ್ತು ತನ್ನ ಕುಟುಂಬ, ಜಾತಿ, ಧರ್ಮಗಳ ಸಂರಕ್ಷಣೆ ಮಾಡುವುದೂ ಇವು ಪರಸ್ಪರ ವಿರುದ್ಧವೆಂದು ನನಗೆ ತೋರುವುದಿಲ್ಲ. ಹಾಗಾಗಿದ್ದರೆ ಪಂ. ಮದನ ಮೋಹನ ಮಾಲವೀಯವರು, ಲಾಲಾ ಲಜಪತರಾಯರು ಮೊದಲಾದ ಮಹಾನ್ ರಾಷ್ಟ್ರಭಕ್ತರು ಹಿಂದಕ್ಕೆ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದವರು ಹಿಂದು ಮಹಾ ಸಭೆಯಲ್ಲಿ ತಮ್ಮ ಸಂಬಂಧವನ್ನು ಇಟ್ಟುಕೊಳ್ಳುತ್ತಲೇ ಇರಲಿಲ್ಲ.

### ಜಾತಿ ನಿರ್ಣಯದ ದೋಷ.

ಹಿಂದು ಮತ್ತು ಮುಸಲ್ಮಾನರಲ್ಲಿ ಅನೈಕ ಮತ್ಯವನ್ನುಂಟುಮಾಡುವ ಬಂಗಾಲ ವಿಭಾಗವು ೧೯೦೫ ನೆಯ ಇಸವಿಯಲ್ಲಿ ಏರ್ಪಟ್ಟಮೇಲೆ ಡಾಕಾನಬಾಬರ ನೇತೃತ್ವದಲ್ಲಿ ಮುಸ್ಲಿಂಲೀಗ್ ಸ್ಥಾಪನೆಯಾಯಿತು. ಮುಸಲ್ಮಾನರಿಗಾಗಿಯೇ ಹೆಚ್ಚಿನ ಹಕ್ಕು ಬಾಧ್ಯತೆಗಳನ್ನು ಈ ಸಂಘವು ದೊರಕಿಸಲು ಪ್ರಾರಂಭಿಸಿತು. ಇದರಿಂದ ಹಿಂದುಗಳ ಹಕ್ಕು ಬಾಧ್ಯತೆಗಳಿಗೆ ಕೊರತೆಯುಂಟಾಗುವುದನ್ನು ನೋಡಿ ೧೯೦೭ ರಲ್ಲಿ ಹಿಂದು ಮಹಾಸಭೆಯನ್ನು ಲಾಹೋರಿನಲ್ಲಿ ಹಿಂದು ಮುಖಂಡರು ಕೂಡಿಸಿದರು. ಸರಕಾರದವರು ಮುಸಲ್ಮಾನರನ್ನು ಒಳಗೆ ಮಾಡಿಕೊಳ್ಳಲು ಪ್ರಾರಂಭಿಸಿದರು. ಮುಸಲ್ಮಾನರು ತಮ್ಮ ಜಾತಿಯ ಹಿತಕ್ಕಾಗಿ ಸರಕಾರದ ಕಡೆಗೆ ಹೋದರು. ರಾಷ್ಟ್ರೀಯ ಚಟುವಟಿಕೆಯಿಂದ ಹಿಂದುಗಳು ಮಾತ್ರ ಸರಕಾರದ ಕೋಪಕ್ಕೆ ಪಾತ್ರರಾದರು.

ಅಲ್ಪ ಸಂಖ್ಯಾಕರ ಪ್ರಶ್ನೆಯು ನಮ್ಮ ದೇಶದಲ್ಲಿಯೇ ಇದೆಯೆಂದು ತಿಳಿಯಬೇಡಿರಿ. ಮಹಾಯುದ್ಧದ ಮುಂಚೆ ಯುರೋಪದ ದೇಶಗಳಲ್ಲಿಯೂ ಈ ಪ್ರಶ್ನೆಯು ಇದ್ದೇ ಇತ್ತು. ಪೋಲಂಡದಲ್ಲಿ ಜರ್ಮನ್‌ರು ಅಲ್ಪ ಸಂಖ್ಯಾಕರು. ಗ್ರೀಸ ದೇಶದಲ್ಲಿ ತುರ್ಕರು ಅಲ್ಪ ಸಂಖ್ಯಾಕರು. ಆ ಅಲ್ಪ ಸಂಖ್ಯಾಕರ ಧರ್ಮ, ಜಾತಿ, ಭಾಷೆ ಸಂಸ್ಕೃತಿಗಳ ಸಂರಕ್ಷಣೆಗಾಗಿ ರಾಷ್ಟ್ರಸಂಘದ ನಿಯಮವನ್ನೇ ಆ ದೇಶಗಳಲ್ಲಿ ಅನುಸರಿಸಲಾಯಿತು. ಆದರೆ ಯುರೋಪಖಂಡದಲ್ಲಿ ಯಾವುದು ಅಮೃತವೋ ಅದು ಹಿಂದುಸ್ಥಾನದಲ್ಲಿ ಮಾತ್ರ ವಿಷವಾಯಿತು! ಅಲ್ಲಿ ಅಲ್ಪ ಸಂಖ್ಯಾಕರರಿಗಾಗಿ ಯಾವ ರೀತಿ ನೀತಿಗಳಿವೆಯೋ ಅವುಗಳನ್ನೇ ಹಿಂದುಸ್ಥಾನದಲ್ಲಿಯೂ ಅನುಸರಿಸಲಿಲ್ಲ. ಇಲ್ಲಿ ರಾಷ್ಟ್ರಕ್ಕೆ ಅನರ್ಥಕರವಾದ ಜಾತಿ ನಿರ್ಣಯವು ಏರ್ಪಟ್ಟಿತು.

೧೯೩೧ ರಲ್ಲಿ ರಾಮ್ಸೆ ಮೆಕಡೊನೆಲ್ಡರು ಕಾಮನ್ಸ್ ಸಭೆಯಲ್ಲಿ ಹೀಗೆ ಹೇಳಿದ್ದರು— “ ಪ್ರತಿಯೊಂದು ಮತದಾರರ ಸಂಘಕ್ಕೂ ಜಾತಿಯ ತಲೆ ಚೀಟಿಯನ್ನು ಹಚ್ಚುತ್ತ ಹೋದರೆ ಅದು ರಾಜಕೀಯ ಸಂಸ್ಥೆಯೇ ಆಗಲಾರದು. ಜಾತಿವಾದಿಗಳು ತಮಗೆ ಹೆಚ್ಚಿಗೆ ಸ್ಥಳ ಬೇಕೆಂದು ಕೇಳುತ್ತಿದ್ದಾರೆ. ಆ ಸ್ಥಳಗಳೇನು ಆಕಾಶದಿಂದ ಬೀಳುತ್ತವೆಯೆ? ಅನ್ಯರ ಸ್ಥಳಗಳನ್ನೇ ಕಡಿಮೆ ಮಾಡಿ ಅವರಿಗೆ ಕೊಡಬೇಕಾಗುತ್ತದೆಂಬುದು ಆ ಜಾತಿವಾದಿಗಳಿಗೇಕೆ ತಿಳಿಯುವುದಿಲ್ಲ? ” ಹೀಗೆ ಹೇಳಿದ ಮುಖ್ಯಮಂತ್ರಿಗಳೇ ೧೯೩೩ ರಲ್ಲಿ ಜಾತಿ ನಿರ್ಣಯವನ್ನು ಮಾಡಿದರು!

### ಮುಂದಣ ವಿಪತ್ತು.

ಸಮಾಜ ಶಾಸ್ತ್ರಜ್ಞರಾದ ಡಾ. ಕುನ್ನಿಕಾನನ್ ಎಂಬುವರು “ಎ ಸಿವ್ಹಿಲಿಜೇಶನ್ ಅಟ್ ಬೆ ” ಎಂಬ ಮಹತ್ವದ ಗ್ರಂಥದಲ್ಲಿ ಹೀಗೆ ಬರೆದಿದ್ದಾರೆ— “ ಮುಸಲ್ಮಾನರು ತಾವು ಅಲ್ಪಸಂಖ್ಯಾಕರಾಗಿದ್ದ ಪ್ರಾಂತದಲ್ಲಿ ಹೆಚ್ಚಿನ ಸಂರಕ್ಷಣೆಯನ್ನು ಕೇಳುತ್ತಿರುವಂತೆಯೇ ಹಿಂದುಗಳು ಅಲ್ಪ ಸಂಖ್ಯಾಕರಾಗಿರುವ ಪ್ರಾಂತದಲ್ಲಿ ಅವರಿಗೆ ಅದೇ ವಿಧವಾದ ಸಂರಕ್ಷಣೆಯನ್ನು ಕೊಡಲು ಮಾತ್ರ ಒಪ್ಪುವುದಿಲ್ಲ! ಮುಸಲ್ಮಾನರ ಪರರಾಷ್ಟ್ರಗಳಿಗೆ ಹೊಂದಿರುವ ಹಿಂದುಸ್ಥಾನದ ಪ್ರಾಂತಗಳಲ್ಲಿ ತಮ್ಮ ವರ್ಚಸ್ಸು ಇರಬೇಕೆಂದೇ ಮುಸಲ್ಮಾನರ ಉದ್ದೇಶವಿದ್ದಂತೆ ತೋರುತ್ತದೆ. ಇದರಿಂದ ಮುಸಲ್ಮಾನ್ ಧರ್ಮ ಪ್ರಸಾರಮಾಡಿ ತಮ್ಮ ಬಲವನ್ನು ಹೆಚ್ಚಿಸಿಕೊಂಡು ಹಿಂದುಗಳನ್ನು ರಾಜಕೀಯ ದೃಷ್ಟಿಯಿಂದ ನಿರ್ಬಲರನ್ನು ಮಾಡಿ ಹಿಂದುಸ್ಥಾನದ ಐಕ್ಯಕ್ಕೂ ಅಖಂಡತ್ವಕ್ಕೂ ವ್ಯತ್ಯಯವನ್ನೂ ತರಬಹುದು. ”

### ವಿಧಾಯಕ ಕಾರ್ಯಗಳು.

(೧) ಹಿಂದು ಸ್ತ್ರೀಯರ ಮೇಲೆ ಪುಂಡರಿಂದಾಗುತ್ತಿರುವ ಅತ್ಯಾಚಾರವನ್ನು ತಡೆಯಲು ಪ್ರಯತ್ನಿಸಬೇಕು. (೨) ಬಡೋದೆಯ ಆರ್ಯ ಕನ್ಯಾ ಮಹಾ ವಿದ್ಯಾಲಯದಂತೆ ಹಿಂದು ಸ್ತ್ರೀಯರ ಶಿಕ್ಷಣ ಮತ್ತು ರಕ್ಷಣೆಗಳಿಗಾಗಿ ಅಲ್ಲಲ್ಲಿ ಮಹಿಳಾ ವಿದ್ಯಾಲಯಗಳನ್ನು ಏರ್ಪಡಿಸಬೇಕು. (೩) ಪ್ರತಿವಾರಕ್ಕೆ ಎರಡು ಸಾವಿರ ಹಿಂದುಗಳು ಕ್ರಿಸ್ತ ಧರ್ಮದಲ್ಲಿ ಸೇರುತ್ತಿದ್ದಾರೆ. ಈ ಧರ್ಮಾಂತರವು ಬಡತನದಿಂದಲೂ ಆದಿಹಿಂದುಗಳಿಗೆ ಸವರ್ಣಿಯ ಹಿಂದುಗಳು ಸಮಾನವಾಗಿ ನಡೆಯಿಸಿಕೊಳ್ಳದಿರುವುದರಿಂದಲೂ ಸಂಭವಿಸುತ್ತದೆ. ಆದಕಾರಣ ಮಹಾಸಭೆಯು ಜಿಲ್ಲೆ ಜಿಲ್ಲೆಗೂ ಶಾಖೆಯನ್ನು ಸ್ಥಾಪಿಸಿ ಈ ಅನರ್ಥವನ್ನು ತಡೆಯಬೇಕು. (೪) ಮಠ ಮತ್ತು ದೇವಾಲಯಗಳ ಚಾಲಕರು ಹೊಟ್ಟೆಗಾಗಿ ಧರ್ಮಾಂತರ ಹೊಂದುತ್ತಿರುವವರ ಸ್ಥಿತಿಯನ್ನು ತಿಳಿದುಕೊಂಡು ಅವರು ಹಾಗೆ ಮಾಡದಂತೆ ಅವರಿಗೆ ಅನುಕೂಲತೆಗಳನ್ನು ಕಲ್ಪಿಸಿಕೊಡಬೇಕು. ”

---

## ಮಹಿಳೆಯರ ಅಡಿ ಮುಂದೆ.

ಅಖಿಲ ಭಾರತೀಯ ಮಹಿಳೆಯರ ಪರಿಷತ್ತು ಈ ಸಾರಿ ನಾಗಪುರದಲ್ಲಿ ಕೂಡಿತ್ತು. ಈ ಪರಿಷತ್ತು ೧೯೨೭ ರಲ್ಲಿ ಮೊದಲು ಏರ್ಪಟ್ಟಿತು. ಈಗಾಗಲೇ ಇದರ ೧೫೮ ಶಾಖೆಗಳು ಬೇರೆ ಬೇರೆ ಕಡೆ ಸ್ಥಾಪನೆಯಾಗಿವೆ. ಹೀಗೆ ವ್ಯಾಪಕವಾದ ಪರಿಷತ್ತು ಈ ಕೆಳಗಿನ ಗೊತ್ತುವಳಿಗಳನ್ನು ಮಾಡಿ ಇವು ಶಾಸನವಾಗುವಂತೆ ಪ್ರಯತ್ನಿಸಬೇಕೆಂದು ಎಲ್ಲ ಪ್ರಾಂತಿಕ ಸರಕಾರಗಳಿಗೆ ಕೇಳಿಕೊಂಡಿದೆ.

(೧) ಒಬ್ಬ ಪುರುಷನು ಒಬ್ಬಳನ್ನೇ ಮದುವೆಯಾಗಬೇಕು
(೨) ೧೬ ವರುಷಗಳೊಳಗಿನ ತರುಣಿಯು ಲಗ್ನವಾಗಕೂಡದು
(೩) ಗಂಡನು ಹುಚ್ಚ, ಕ್ರೂರ, ವ್ಯಭಿಚಾರಿ, ಕುಡುಕ, ಮಹಾರೋಗಿ, ಇದ್ದರೆ ಆತನನ್ನು ಬಿಟ್ಟುಬಿಡಲು ಹಿಂದು ಶಾಸನದಲ್ಲಿ ಸ್ತ್ರೀಯಳಿಗೆ ಅಧಿಕಾರವಿರಬೇಕು.

# ಹಿಂದು ಮಹಾಸಭೆಯ ಮಹತ್ವದ ನಿರ್ಣಯ.




ಅಹಮದಾಬಾದಿನಲ್ಲಿ ಕೂಡಿದ್ದ ೧೯ ನೆಯ ಹಿಂದು ಮಹಾ ಸಭೆಯಲ್ಲಾದ ಕೆಲವು ಮುಖ್ಯ ನಿರ್ಣಯಗಳು ಈ ಕೆಳಗಿನಂತಿವೆ.

(೧) ದೇವಾಲಯಗಳಲ್ಲಿ ಆದಿ ಹಿಂದುಗಳ ಪ್ರವೇಶಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟದ್ದರಿಂದ ತ್ರಾವಣಕೋರ, ಕೊಲ್ಲಾಪುರ ಮೊದಲಾದ ಸಂಸ್ಥಾನಾಧಿಪತಿಗಳ ಅಭಿನಂದನೆ.

(೨) ಲಾಹೋರಿನಲ್ಲಿ ಗೋವಧಾಲಯ ಕಟ್ಟಲ್ಪಡದಂತೆ ಹಿಂದುಗಳು ಚಟುವಟಿಕೆಯನ್ನು ನಡೆಯಿಸಿದ್ದರಿಂದ ಹಿಂದು ಸಮಾಜದ ಅಭಿನಂದನ.

(೩) ಗೋವಧೆಯು ಸಂಪೂರ್ಣ ನಿಲ್ಲುವುದಕ್ಕಾಗಿ ಕೂಡಲೆ ಶಾಸನವನ್ನು ಸರಕಾರವು ಮಾಡಬೇಕು. ಸಕಲ ಹಿಂದುಗಳೂ ಗೋವುಗಳನ್ನು ಸಾಕಬೇಕು. ಮಥುರಾದಲ್ಲಿರುವ ಗೋವಧಾಲಯವನ್ನು ತೆಗೆದುಹಾಕದಿದ್ದರೆ ಅದಕ್ಕಾಗಿ ಸತ್ಯಾಗ್ರಹವನ್ನು ಹೂಡಬೇಕು.

(೪) ಹಿಂದು ಮಹಾಸಭೆಯ ಘಟನೆಯಲ್ಲಿ "ಹಿಂದು ರಾಷ್ಟ್ರದ ವೈಭವವನ್ನು ಹೆಚ್ಚಿಸಲು ಪೂರ್ಣ ಸ್ವರಾಜ್ಯವನ್ನು ಯೋಗ್ಯ ಮಾರ್ಗಗಳಿಂದ ಸಂಪಾದಿಸಬೇಕು." ಎಂಬ ಶಬ್ದಗಳನ್ನು ಪ್ರಯೋಗಿಸಬೇಕು.

(೫) ಇಂಗ್ಲೆಂಡಿನಂತೆ ಇಲ್ಲಿಯೂ ಶಸ್ತ್ರಗಳ ಶಾಸನವನ್ನು ಏರ್ಪಡಿಸಬೇಕು. ಸೈನ್ಯ ಶಾಖೆಯಲ್ಲಿ ಹಿಂದುಗಳನ್ನು ಯೋಗ್ಯ ಪ್ರಮಾಣದಿಂದ ತೆಗೆದುಕೊಳ್ಳಬೇಕು. ಸೈನ್ಯ ಶಿಕ್ಷಣಾಲಯಗಳನ್ನು ಹೆಚ್ಚಿಸಬೇಕು.

(೬) ಫೆಡರೇಶನ್ ಅಸಮಾಧಾನಕರವಾಗಿದೆ. ಆದರೂ ಅದನ್ನು ತ್ಯಾಜ್ಯಮಾಡದೆ ನಡೆಯಿಸಬೇಕು. ಜಾತಿನಿರ್ಣಯವು ನಿಷೇಧಾರ್ಹವಾದುದು.

(೭) ಅಧಿಕಾರವನ್ನು ಸ್ವೀಕರಿಸಿದ್ದಕ್ಕಾಗಿ ಕಾಂಗ್ರೆಸ್ಸಿನ ಅಭಿನಂದನೆ. ಘಟನೆಯ ಭಂಗವಾಗದಂತೆ ತಾತ್ಕಾಲಿಕವಾಗಿ ಮಂತ್ರಿಮಂಡಲವನ್ನು ಏರ್ಪಡಿಸಿಕೊಂಡದ್ದರ ಅಭಿನಂದನೆ.

(೮) ನಿಜಾಮ ಹೈದರಾಬಾದಿನಲ್ಲಿ ಶ್ರೀ. ವೇದಪ್ರಕಾಶ ಎಂಬವರ ಕೊಲೆಯಾದುದನ್ನು ನಿಷೇಧಿಸುವುದಲ್ಲದೆ ಭೋಪಾಳ, ಅಲವಾರ, ಸಂಸ್ಥಾನಗಳಲ್ಲಿ ನಡೆದಿರುವ ಹಿಂದುಗಳ ಹಿಂಸೆಯನ್ನೂ ನಿಷೇಧಿಸುತ್ತದೆ.

(೯) ಸಂಸ್ಥಾನಿಕರು ಜವಾಬ್ದಾರಿ ಸರಕಾರವನ್ನು ತಮ್ಮ ತಮ್ಮ ಸಂಸ್ಥಾನಗಳಲ್ಲಿ ಪ್ರಾರಂಭಿಸಬೇಕು.

(೧೦) ಮಹಾಸಭೆಯ ಜತೆಯಲ್ಲಿ ಹಿಂದು ಮಹಿಳಾ ಪರಿಷತ್ತನ್ನೂ ಯುವಕ ಪರಿಷತ್ತನ್ನೂ ಕೂಡಿಸಬೇಕು.

(೧೧) ಬೇವಾರಸ್ ಹಿಂದುಗಳ ಆಸ್ತಿಯು ಹಿಂದು ಸಮಾಜಕ್ಕೆ ದೊರೆಯಬೇಕು.

(೧೨) ಮಹಾಸಭೆಯ ಸಮಿತಿಯವರು ಹಿಂದು ಧಾರ್ಮಿಕ ಸಂಸ್ಥೆಗಳ ಲೆಕ್ಕವನ್ನು ನೋಡಿ ಅವುಗಳಲ್ಲಿಯ ಕೆಲವು ಭಾಗವು ಹಿಂದುಗಳ ಉನ್ನತಿಗೆ ವೆಚ್ಚವಾಗುವಂತೆ ಮಾಡಬೇಕೆಂದು ಸರಕಾರದವರು ವ್ಯವಸ್ಥೆ ಮಾಡಬೇಕು.

(೧೩) ರಾಷ್ಟ್ರೀಯ ಸ್ವಯಂಸೇವಕ ಸಂಘದ ಪ್ರಸಾರಗೊಳಿಸಬೇಕು.

(೧೪) ಸಂಸ್ಕೃತ ವಿಶಿಷ್ಟ ಹಿಂದಿಭಾಷೆಯೇ ಹಿಂದುಸ್ಥಾನದ ರಾಷ್ಟ್ರಭಾಷೆಯು. ದೇವನಾಗರ ಲಿಪಿಯೇ ರಾಷ್ಟ್ರಲಿಪಿಯು. ವರ್ಧಾ ಶಿಕ್ಷಣ ಪರಿಷತ್ತು ಉರ್ದು ಭಾಷೆಯನ್ನು ಅಭ್ಯಾಸ ಕ್ರಮದಲ್ಲಿ ಸೇರಿಸಿದುದಕ್ಕಾಗಿ ಈ ಸಭೆಯು ಅದನ್ನು ನಿಷೇಧಿಸುತ್ತದೆ.

(೧೫) ಬಂಗಾಲ ಸರಕಾರವು ಜಾತಿನಿಷ್ಠ ಧೋರಣ ಸ್ವೀಕರಿಸಿದ್ದನ್ನು ಈ ಸಭೆಯು ನಿಷೇಧಿಸುತ್ತದೆ.

(೧೬) ರಾಜಕೈದಿಗಳನ್ನು ಸರಕಾರವು ಯಾವ ಕಟ್ಟು ಹಾಕದೆ ಬಿಟ್ಟುಬಿಡಬೇಕು.

(೧೭) ಆಸಾಮ ಸರಕಾರವು ಮುಸಲ್ಮಾನರ ಅನಿರ್ಬಂಧ ಪ್ರವೇಶಕ್ಕೆ ಅವಕಾಶಕೊಟ್ಟುದನ್ನೂ ಗಡಿನಾಡಿನಲ್ಲಿ ಹಿಂದುಗಳ ಮೇಲಾಗುತ್ತಿರುವ ಅತ್ಯಾಚಾರವನ್ನೂ ಈ ಸಭೆಯು ನಿಷೇಧಿಸುತ್ತದೆ.

(೧೮) ಕಾನಪುರ ಮೊದಲಾದ ದೊಂಬೆಗಳಲ್ಲಿಯ ಹಿಂದು ಕೈದಿಗಳನ್ನು ಬಿಡಬೇಕು.

# ಹಿಂದು ಮಹಾಸಭೆಯ ಅಧ್ಯಕ್ಷ

## ಸ್ವಾತಂತ್ರ್ಯವೀರ ಸಾವರಕರರ ಮನನೀಯ ಭಾಷಣ.

ಅಹಮದಾಬಾದಿನಲ್ಲಿ ಕಳೆದ ತಿಂಗಳ ೩೦ ನೆಯ ತಾರೀಖಿನ ದಿವಸ ಕೂಡಿದ ೧೯ ನೆಯ ಅಖಿಲ ಭಾರತ ಹಿಂದು ಮಹಾಸಭೆಯ ಅಧ್ಯಕ್ಷರಾಗಿ ಬ್ಯಾ. ಸಾವರಕರರು ಮಾಡಿದ ಮನನೀಯವಾದ ಭಾಷಣದಲ್ಲಿ ಹೀಗೆ ಹೇಳಿದರು—

### ಯಾರು ಹಿಂದುಗಳು?

ಸಿಂಧು ನದಿಯಿಂದ ದಕ್ಷಿಣ ಸಮುದ್ರದ ವರೆಗಿನ ಈ ಹಿಂದುಸ್ಥಾನವು ಯಾವ ಜನರಿಗೆ ಅವರ ವಂಶಜರ ಮತ್ತು ಅವರು ಅನುಸರಿಸುವ ಮತವನ್ನು ಬೋಧಿಸಿದವರ ಜನ್ಮಭೂಮಿಯಾಗಿದೆಯೋ ಅವರೇ ಹಿಂದುಗಳು. ಅಂಥ ಹಿಂದುಗಳಿಗೇನೇ ಹಿಂದುಸ್ಥಾನವು ಪಿತೃಭೂಮಿಯಾಗಿಯೂ ಪುಣ್ಯಭೂಮಿಯಾಗಿಯೂ ಇದೆ. ಈ ದೇಶದ ಮುಸಲ್ಮಾನ್, ಕ್ರಿಸ್ತ, ಪಾರ್ಶಿ ಜ್ಯು ಮೊದಲಾದ ಜನರಿಗೆ ಈ ದೇಶವೇನೋ ಪಿತೃಭೂಮಿಯಾಗುವುದು. ಎಂದರೆ ಇವರ ವಂಶಜರು ಇದೇ ದೇಶದಲ್ಲಿ ಜನ್ಮಿಸಿದ್ದಾರೆ. ಆದರೆ ಇವರು ಅನುಸರಿಸುವ ಮತಗಳ ಪ್ರವರ್ತಕರು ಮಾತ್ರ ಅನ್ಯ ದೇಶದವರು. ಆದಕಾರಣ ಆ ಜನರಿಗೆ ಹಿಂದುಸ್ಥಾನವು ಪುಣ್ಯಭೂಮಿಯಾಗುವುದಿಲ್ಲ. ಅಂತೆಯೇ ಅವರ ಲಕ್ಷ್ಯವು ಬೇರೆ ದೇಶದ ಕಡೆಗೂ ಪೋಗುವುದು.

ಹಿಂದುಗಳಿಗಾದರೋ ಈ ದೇಶದ ವಿನಾ ಜಗತ್ತಿನಲ್ಲಿ ಇನ್ನಾವುದೂ ಇಷ್ಟು ಪ್ರಿಯವಾದುದೂ ಪುಣ್ಯವಾದುದೂ ಬೇರೊಂದು ಸ್ಥಳವೇ ಇಲ್ಲ. ಆದಕಾರಣ ಹಿಂದುಸ್ಥಾನದಲ್ಲಿ ನಿಜವಾದ ರಾಜಕೀಯ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಲಿಕ್ಕೆ ಹಿಂದು ಸಮಾಜವೇ ಆಧಾರಭೂತವಾಗಿದೆ.

ಮುಸಲ್ಮಾನರ ವಿಷಯ ಹೀಗಿಲ್ಲ. ಅವರಿಗೆ ಪರದೇಶಗಳ ಕಡೆಗೂ ಲಕ್ಷ್ಯವಿದೆ. ರಾಷ್ಟ್ರೀಯ ದೃಷ್ಟಿಯಿಂದ ಹಿಂದುಸ್ಥಾನದ ಕಡೆಗೆ ಅವರು ಲಕ್ಷಿಸುವುದಕ್ಕಿಂತ ಪ್ಯಾಲಿಸ್ಟಾಯಿನ್ ಕಡೆಗೆ ಅವರು ಧಾರ್ಮಿಕ ದೃಷ್ಟಿಯಿಂದ ಹೆಚ್ಚು ಲಕ್ಷಿಸುತ್ತಿದ್ದಾರೆ. ತಮ್ಮ ದೇಶಬಾಂಧವರ ಕಷ್ಟಕ್ಕಿಂತಲೂ ಅವರಿಗೆ ಅರಬರ ಚಿಂತೆ ಹೆಚ್ಚು! ಈ ದೇಶದಲ್ಲಿ ಮುಸಲ್ಮಾನರ ಪ್ರಭುತ್ವ ಸ್ಥಾಪನೆಯಾಗುವುದಾದರೆ ಸಾವಿರಾರು ಮುಸಲ್ಮಾನರು ಪರದೇಶಗಳಿಂದ ಈ ದೇಶದ ಮೇಲೆ ದಂಡೆತ್ತಿ ಬರುವುದು ಶಕ್ಯವಿದೆ. ಆದರೆ ಹಿಂದುಗಳಿಗೆ ಅಂಥ ಸ್ಥಿತಿಯಿದೆಯೆ? ಹಿಂದುಗಳಿಗೆ ಈ ದೇಶದ ವಿನಾ ಬೇರೆ ಗತಿಯೇ ಇಲ್ಲ. ಅಂತೆಯೇ ಇಂಗ್ಲಿಷರ ಪ್ರಭುತ್ವವನ್ನು ತೆಗೆದುಹಾಕಲು ಹಿಂದುಗಳೇ ವಿಶೇಷವಾಗಿ ಪ್ರಯತ್ನಿಸುತ್ತಾ ಹೆಚ್ಚಾದ ಸ್ವಾರ್ಥತ್ಯಾಗವನ್ನು ಮಾಡುತ್ತಿದ್ದಾರೆ.

### ಸ್ವರಾಜ್ಯ ಅಥವಾ ಸ್ವಾತಂತ್ರ್ಯ ಎಂದರೇನು?

ಹಿಂದುಸ್ಥಾನಕ್ಕೆ ಸ್ವರಾಜ್ಯ ಅಥವಾ ಸ್ವಾತಂತ್ರ್ಯ ಬೇಕೆಂದು ನಾವು ಹೇಳುತ್ತಿದ್ದೇವೆ. ಹಾಗೆಂದರೇನು? ಭೌಗೋಲಿಕ ದೃಷ್ಟಿಯಿಂದ ಇದಕ್ಕೆ ಸ್ವಾತಂತ್ರ್ಯವೆ? ಹಾಗಾದರೆ ಅಲ್ಲಾಉದ್ದೀನ ಅಥವಾ ಔರಂಗಜೇಬನ ಕಾಲದಲ್ಲಿ ಈ ದೇಶಕ್ಕೆ ಸ್ವಾತಂತ್ರ್ಯವಿದ್ದಿತೆಂದೇ ಹೇಳಬೇಕಾಗುವುದು. ಆಗ ಅದು ಸ್ವತಂತ್ರವಾಗಿರದೆ ಹಿಂದು ರಾಷ್ಟ್ರಕ್ಕೆ ಮೃತ್ಯು ಬಂದೊದಗಿತ್ತೆಂದೇ ತಿಳಿಯುವುದು ನ್ಯಾಯವು. ಅಹಿಂದುಗಳಿಂದಲೇ ಈ ದೇಶವೂ ಇಲ್ಲಿಯ ರಾಜ್ಯವೂ ಆಗ ಆಕ್ರಮಿಸಿಕೊಳ್ಳಲ್ಪಟ್ಟಿತ್ತು. ಅಂತೆಯೇ ರಾಣಾ ಪ್ರತಾಪಸಿಂಹ, ಗುರು ಗೋವಿಂದಸಿಂಹ, ವೀರಬಂದಾ, ಶಿವಾಜಿ, ಬಾಜೀರಾವ ಮೊದಲಾದ ವೀರರು ಮಾತೃಭೂಮಿಯ ಸ್ವಾತಂತ್ರ್ಯಕ್ಕಾಗಿ ಹೋರಾಡಿ ರಜಪೂತ, ಶೀಖ, ಮರಾಠಾ, ಗುರ್ಖಾ ಜನರ ಅಧೀನದಲ್ಲಿ ಈ ರಾಷ್ಟ್ರವು ಬರುವಂತೆ ಮಾಡಿದರು. ಅಹಿಂದುಗಳ ಹಿಡಿವಿನಲ್ಲಿದ್ದ ದೇಶವನ್ನು ಬಿಡಿಸಿ ಹಿಂದು ಸಾಮ್ರಾಜ್ಯವನ್ನು ಸ್ಥಾಪಿಸಿದರು.

ಇದರಿಂದ ಹಿಂದುಸ್ಥಾನವ ಸ್ವಾತಂತ್ರ್ಯವೆಂದರೇನೆಂಬುದು ಸ್ಪಷ್ಟ ಗೊತ್ತಾಗುತ್ತದೆ. ಹಿಂದುಗಳಾದ ನಮ್ಮ ಜನರ, ನಮ್ಮ ಜಾತಿಯ, ನಮ್ಮ ಸಂಸ್ಕೃತಿಯ ನಮ್ಮ ರಾಷ್ಟ್ರದ ಉತ್ಕರ್ಷಕ್ಕೂ ವಿಕಾಸಕ್ಕೂ ಸಂಪೂರ್ಣ ಅವಕಾಶವೂ ಸಾಮರ್ಥ್ಯವೂ ಇರಲೇಬೇಕಾದುದು. ಇವುಗಳಲ್ಲಿ ಲೋಪವಾಗುತ್ತಿದ್ದರೆ ಅದಕ್ಕೆ ಸ್ವರಾಜ್ಯ ಅಥವಾ ಸ್ವಾತಂತ್ರ್ಯವೆಂದು ಹೇಳಕೂಡದು.

ಈ ದೃಷ್ಟಿಯಿಂದ ನೋಡಿದರೆ ಹಿಂದು ಮಹಾ ಸಭೆಯು ಕಾಂಗ್ರೆಸ್ಸಿಗಿಂತ ಹೆಚ್ಚು ರಾಷ್ಟ್ರೀಯವಾಗಿದೆ. ಏಕೆಂದರೆ, ಇದು ಒಬ್ಬ ಮನುಷ್ಯನಿಗೆ ಒಂದು ಮತ (ಹೋಟು) ಇರಬೇಕೆಂದೂ ರಾಜಕಾರಣದ ಯಾವ ಕಾರ್ಯಕಲಾಪಗಳಲ್ಲಾಗಲಿ, ಅಧಿಕಾರ ಮೊದಲಾದವುಗಳಲ್ಲಾಗಲಿ ಜಾತಿ, ಧರ್ಮ, ಸಂಖ್ಯೆ ಮೊದಲಾದವುಗಳನ್ನೇನೂ ಎಣಿಸಕೂಡದೆಂದೂ ಹಿಂದು ಮಹಾಸಭೆಯು ಹೇಳುತ್ತದೆ. ಇಂಗ್ಲೆಂಡ್, ಅಮೇರಿಕಾ, ಮೊದಲಾದ ಸುಧಾರಿಸಿದ ರಾಷ್ಟ್ರಗಳಲ್ಲಿ ಯಾವ ಪ್ರಕಾರ ಸಂಯುಕ್ತ ರಾಜ್ಯಪದ್ಧತಿಯುಂಟೋ ಅದೇ ಪ್ರಕಾರ ಇಲ್ಲಿಯೂ ಇರಬೇಕೇ ವಿನಾ ಜಾತಿ, ಮತ, ಧರ್ಮಗಳನ್ನು ತಂದೊಡ್ಡಬಾರದಾಗಿ ಹೇಳುತ್ತದೆ. ಎಂದಮೇಲೆ ಇದಕ್ಕಿಂತ ಹೆಚ್ಚಿನ ರಾಷ್ಟ್ರೀಯ ತತ್ವ ಯಾವುದು?

### ಮುಸಲ್ಮಾನರ ಅರಾಷ್ಟ್ರೀಯತೆ.

ಹಿಂದುಗಳ ಸುದೈವದಿಂದ ಮುಸ್ಲಿಂಲೀಗಿನ ಅಧ್ಯಕ್ಷರಾದ ಜಿನ್ನಾರವರು ತಮ್ಮ ಅರಾಷ್ಟ್ರೀಯ ಧೋರಣವನ್ನು ಲಖನೌದಲ್ಲಿ ಸ್ಪಷ್ಟ ಹೇಳಿ ತೋರಿಸಿದರು. ನಾವು ಅವರು ಅರಾಷ್ಟ್ರೀಯರಿದ್ದಾರೆಂದು ಸಿದ್ಧಮಾಡಿಕೊಡತಕ್ಕ ಪ್ರಸಂಗವೇ ಉಳಿಯಲಿಲ್ಲ. ಎರಡು ಕೋಟಿ ಜನ ಮುಸಲ್ಮಾನರ ಮಾತೃಭಾಷೆಯಾಗಿರುವ ಉರ್ದು ಭಾಷೆಯು ೨೫ ಕೋಟಿ ಜನರ ಮಾತೃಭಾಷೆಯಾಗಬೇಕಂತೆ. ೨೦ ಕೋಟಿ ಜನರಿಗೆ ತಿಳಿಯುವ ಹಿಂದಿ ಭಾಷೆ ಆಗಬಾರದಂತೆ. ಉರ್ದು ಭಾಷೆಗೆ ಮೂಲವಾದ ಅರಬಿ ಭಾಷೆಯನ್ನು ತುರ್ಕಸ್ಥಾನದಲ್ಲಿಯೇ ತೆಗೆದೊಗೆದಾಗ ಇಲ್ಲಿ ರಾಷ್ಟ್ರಭಾಷೆ ಮಾಡಬೇಕೆಂದಿದ್ದಾರೆ.

ಇದೇ ಪ್ರಕಾರ ದೇವನಾಗರಿ ಲಿಪಿಯು ರಾಷ್ಟ್ರೀಯಲಿಪಿಯಾಗುವಂತಿರುವಾಗ ಉರ್ದು ಲಿಪಿ ರಾಷ್ಟ್ರೀಯ ಲಿಪಿಯಾಗಬೇಕೆಂದು ಅಪೇಕ್ಷಿಸುತ್ತಿದ್ದಾರೆ. ವಂದೇಮಾತರಂ ಗೀತೆಯು ಅವರ ಧರ್ಮ ಭಾವನೆಯನ್ನು ನೋಯಿಸುತ್ತದಂತೆ. ಅವರು ಹೀಗೆಂದಕೂಡಲೆ ನಮ್ಮವರು ಅರ್ಧ ಗೀತೆಯನ್ನೇ ಹೇಳಬೇಕೆಂದರು. ಅಷ್ಟೇ ಹೇಳಿದರೂ ಅವರಿಗೆ ಸಮಾಧಾನವಿಲ್ಲ. "ವಂದೇ ಮಾತರಂ" ಎಂದು

ಇಷ್ಟೇ ಹೇಳಿದರು ಕೂಡಾ ಮುಸಲ್ಮಾನರು ಅದು ತಮ್ಮ ಧಾರ್ಮಿಕ ಭಾವನೆಯನ್ನು ನೋಯಿಸುವುದೆಂದೇ ಹೇಳುವರು.

ಏಕೆಂದರೆ, ಅವರಿಗೆ "ಪಾಕಿಸ್ಥಾನದ" ಅಭಿಮಾನವುಂಟಾಗಿದೆ. ಎರಡು ಭಿನ್ನ ಸಂಸ್ಕೃತಿಗಳ ಹೋರಾಟವೇ ಇದಕ್ಕೆ ಕಾರಣವು. ಭಾಷೆ, ಲಿಪಿ, ಗೀತೆ ಇವುಗಳೆಲ್ಲಾ ನೋಡಲು ಸಣ್ಣ ಸಂಗತಿಗಳಾಗಿ ತೋರುತ್ತವೆ. ಆದರೆ ಅವುಗಳ ಮೂಲ ಉದ್ದೇಶವು ಬೇರೆಯಾಗಿದೆ. ಹಿಂದುಸ್ಥಾನದ ಮೇಲೆ ಮುಸ್ಲಿಂ ಮುದ್ರೆಯನ್ನು ಒತ್ತಬೇಕೆಂದೇ ಅವರ ಮುಖ್ಯೋದ್ದೇಶವು. ಈ ಕಾರ್ಯವನ್ನು ನಾವೆಂದೂ ಮಾಡಕೊಡಲು ಒಪ್ಪುವುದಿಲ್ಲ. ನಾ. ಹಕ್ಕರು ಹಿಂದು ಜನರ ಸ್ವಾರ್ಥತ್ಯಾಗದಿಂದ ಈಗ ಮಂತ್ರಿಗಳಾಗಿ ಬಂಗಾಲದ ಹಿಂದುಗಳನ್ನು ತೊಂದರೆಪಡಿಸುವುದಾಗಿ ಸ್ಪಷ್ಟ ಹೇಳಿದ್ದಾರೆ. ಅವರ ಮುಸ್ಲಿಂ ಉದ್ದೇಶಕ್ಕೆ ಬಂಗಾಲದ ಹಿಂದುಗಳು ವಿರೋಧಿಸಬಾರದಂತೆ. ಬಂಗಾಲದ ಹಿಂದುಗಳೇನೂ ಹೇಡಿಗಳಲ್ಲ. ಬ್ರಿಟಿಶ್ ಸರಕಾರವನ್ನೂ ಲಾರ್ಡಕರ್ಜನ್ನರನ್ನೂ ಬಗ್ಗಿಸಿದವರು ಹಕ್ಕರಿಗೇನೂ ಮಣಿಯುವುದಿಲ್ಲ.

### ಪಾಕಿಸ್ಥಾನದ ಕಲ್ಪನೆ.

ನಾ. ಹಕ್ಕರು ಬಂಗಾಲದಲ್ಲಿಯ ಹಿಂದುಗಳನ್ನು ತೊಂದರೆಪಡಿಸಿದರೆ ಮಹಾರಾಷ್ಟ್ರ ಮೊದಲಾದ ಭಾಗಗಳಲ್ಲಿಯ ಅವರ ಜಾತಿ ಬಂಧುಗಳಿಗೂ ಅದೇ ಗತಿಯನ್ನು ನಾವು ತರುತ್ತೇವೆ. ಇದು ಅವರ ಲಕ್ಷದಲ್ಲಿರಲಿ. ಕಾಶ್ಮೀರ, ಪಂಜಾಬ, ಪೇಶಾವರ, ಸಿಂಧ, ಈ ಭಾಗಗಳನ್ನು ಕೂಡಿಸಿ ಪಾಕಿಸ್ಥಾನ ಎಂಬ ಒಂದು ಮುಸ್ಲಿಂ ರಾಜ್ಯವನ್ನು ಈ ದೇಶದಲ್ಲಿ ಸ್ಥಾಪಿಸಬೇಕೆಂದೇ ಮುಸ್ಲಿಂಲೀಗಿನ ಮುಖ್ಯೋದ್ದೇಶ. ಅಂತೆಯೇ ಮುಸ್ಲಿಂಲೀಗಿನಲ್ಲಿ ಈ ಸಂಬಂಧವಾದ ಚರ್ಚೆ ನಡೆದುದನ್ನು ಹಿಂದುಗಳು ನೆನಪಿನಲ್ಲಿಡಲಿ.

ಹಿಂದುಸ್ಥಾನದಲ್ಲಿ ಮುಸಲ್ಮಾನ್ ದೇಶವನ್ನು ಉಂಟುಮಾಡಬೇಕೆಂದು ಹಿಂದಕ್ಕೆ ಪ್ರಯತ್ನ ನಡೆದಿತ್ತು. ಮುಸಲ್ಮಾನರ ಪ್ರಭುತ್ವವು ಈ ದೇಶದಲ್ಲಿದ್ದಾಗ ಅದು ಸಾಧ್ಯವಾಗಲಿಲ್ಲ. ಅನೇಕ 'ಔರಂಗಜೇ' ಬರಿಗೆ ಯಾವುದು ಶಕ್ಯವಾಗಲಿಲ್ಲವೋ ಅದನ್ನು ಈಗ ಜಿನ್ನಾ-ಹಕ್ಕ ಇವರು ಸಾಧಿಸಲು ಪ್ರಯತ್ನಿಸುತ್ತಿದ್ದಾರೆ.

### ಹಿಂದು-ಮುಸಲ್ಮಾನರ ಐಕ್ಯ.

ಹಿಂದು-ಮುಸಲ್ಮಾನರ ಐಕಮತ್ಯಕ್ಕಾಗಿ ಅನೇಕ ಸಾರೆ ಅನೇಕ ಪ್ರಯತ್ನಗಳು ನಡೆದಿವೆ. ಆದರೂ ಅದು ನೆರವೇರಲಿಲ್ಲ. ಈ ದೇಶದ ಪ್ರಚಂಡ ಮತ್ತು ಬಹುಸಂಖ್ಯಾಕ ಹಿಂದು ಜನಾಂಗವು ತನ್ನ ವಿರೋಧದ ಅಲ್ಪಸಂಖ್ಯಾಕವಾದ ಮುಸಲ್ಮಾನ್ ಸಮಾಜದ ಮುಂದೆ ದೀನ ವಾಣಿಯಿಂದ ಕೈಮುಗಿದು ಐಕಮತ್ಯಕ್ಕೆ ಬರಬೇಕೆಂದು ಎಲ್ಲಿಯ ವರೆಗೂ ಪ್ರಾರ್ಥಿಸಿಕೊಳ್ಳುತ್ತಿರುತ್ತದೆಯೋ ಅಲ್ಲಿಯ ವರೆಗೂ ಐಕಮತ್ಯವು ಶಕ್ಯವೇ ಇಲ್ಲ. ಮುಸಲ್ಮಾನರು ನಮ್ಮ ಉಪಕಾರಕ್ಕಾಗಿ ನಮ್ಮ ಸಂಗಡ ಐಕಮತ್ಯದಿಂದಿರಬೇಕಾದುದಿಲ್ಲ. ಅವರಿಗೆ ಹಿಂದುಗಳ ಸಂಗಡ ಐಕಮತ್ಯದಿಂದಿರುವುದೇ ಹಿತಕರವೆಂದು ತಿಳಿದಾಗಲೇ ಅವರು ಒಪ್ಪಂದಕ್ಕೆ ಬರುವರು. ಅವರ ಅರಾಷ್ಟ್ರೀಯ ಕೇಳಿಕೆಗಳನ್ನೆಲ್ಲಾ ನಾವು ನಿರ್ಲಕ್ಷಿಸಿದಾಗಲೇ ಅವರಿಗೆ ತಮ್ಮ ಹಿತದ ಅರುವುಂಟಾಗುವುದು. ಅವರಿಗೆ ನೀವು ಹೀಗೆ ಸ್ಪಷ್ಟ ಹೇಳಬೇಕು.

"ಮಿತ್ರರೆ? ನಮಗೆ ಎಂಥ ಐಕಮತ್ಯ ಬೇಕೆಂಬುವನ್ನು ಬಲ್ಲಿರಾ? ಜಾತಿ, ಮತ, ವಂಶ, ಧರ್ಮಗಳನ್ನು ಎಣಿಸದೆ ಹಿಂದುಸ್ಥಾನದ ಸಕಲ ನಾಗರಿಕರಲ್ಲಿ "ಒಂದು ವ್ಯಕ್ತಿಗೆ ಒಂದು ಓಟು" ಎಂಬ ತತ್ವವನ್ನನುಸರಿಸಿ ಸಮಾನವಾದ ರೀತಿಯಲ್ಲಿ ಹಿಂದಿ ರಾಜ್ಯವನ್ನು ನಿರ್ಮಾಣಮಾಡುವ ಐಕಮತ್ಯ ಬೇಕು."

ಹೀಗೆ ಮುಸಲ್ಮಾನರಿಗೆ ತಿಳಿಸದೆ ನಿಮ್ಮ ಇಷ್ಟದಂತೆ ನಾವು ನಡೆಯಲು ಸಿದ್ಧರಿದ್ದೇವೆಂದು "ಬರೆ ಕಾಗದ" ಅವರ ಕಡೆ ಕೊಟ್ಟು ಬೇಕಾದುದನ್ನು ಬರೆದುಕೊಂಡರೂ ನಾವು ಒಪ್ಪಿಕೊಳ್ಳುವೆವೆಂದು ನಾವು ಹೇಳಲು ಈಗ ಸಿದ್ಧರಿಲ್ಲ. ಇಂಥ ರೀತಿಯಿಂದ ನಿಜವಾದ ಐಕಮತ್ಯವು ಆಗುವದಿಲ್ಲ.

### ಈ ಯಜಮಾನ ಬೇಡ; ಮತ್ತೊಬ್ಬನ ಬೇಕು!

ನಮ್ಮನ್ನು ಈಗ ಇಂಗ್ಲಿಷರು ಆಳುತ್ತಿದ್ದಾರೆ. ಈ ಯಜಮಾನನು ಹೋಗಿ ಇನ್ನೊಬ್ಬ ಯಜಮಾನನು ನಮ್ಮ ಮೇಲೆ ಆಳಲು ಬರಬೇಕೆಂಬುದಕ್ಕಾಗಿ ನಾವು ಈ ಸ್ವಾತಂತ್ರ್ಯದ ಹೋರಾಟವನ್ನು ಪ್ರಾರಂಭಿಸಿಲ್ಲ. ನಮ್ಮ ರಾಷ್ಟ್ರಕ್ಕೆ ನಾವೇ ಯಜಮಾನರಾಗಬೇಕೆಂದೇ ಈ ಹೋರಾಟವನ್ನು ನಡೆಸಿದ್ದೇವೆ. ನಮ್ಮ ಮನೆಯ ಯಜಮಾನಿಕೆಯನ್ನು ನಾವು ಬೇರೆಯವರಿಗೆ ಕೊಡಲು ಸಿದ್ಧರಿಲ್ಲ. ಇದೇ ಹಿಂದುಗಳಾದ ನಮ್ಮ ಸ್ವರಾಜ್ಯದ ಹೋರಾಟದಲ್ಲಿರುವ ತಿರುಳು. ನಮ್ಮದು ಎಂಬುದೇ ಹೋದಮೇಲೆ ಆ ಸ್ವರಾಜ್ಯವು ಯಾರದು? 'ಸ್ವ' ಇದ್ದರೆ 'ಸ್ವರಾಜ್ಯ' ಅಲ್ಲವೆ? ಆದಕಾರಣ ನಾವು ಶರಣಾಗತರಾಗಿ ನಮ್ಮ ಹಿಂದುತ್ವವನ್ನು ಮಾರಿ ಸ್ವರಾಜ್ಯ ಹೊಂದಲು ನಾವು ಸಿದ್ಧರಿಲ್ಲ. ಅದು ನಮಗೆ ಆತ್ಮಹತ್ಯ ಪ್ರಾಯವಾದುದು.

ಹಿಂದುಸ್ಥಾನಕ್ಕೆ ಸ್ವರಾಜ್ಯ ದೊರೆಯದೆ ಪರತಂತ್ರದಲ್ಲಿ ಇದ್ದದ್ದಾದರೆ ಮುಸಲ್ಮಾನರಿಗೂ ಗುಲಾಮಗಿರಿಯು ಬಿಟ್ಟದ್ದಲ್ಲ. ಆದರಿಂದ ಅವರು ಪಾರಾಗಬೇಕಾದರೆ ಹಿಂದುಗಳ ಸಂಗಡ ಐಕಮತ್ಯದಿಂದ ನಡೆಯಬೇಕಾದುದು ಅವರಿಗೆ ಅಗತ್ಯವೇ ಇದೆ. ಮುಸಲ್ಮಾನರ ವಿನಾ ಈ ದೇಶದಲ್ಲಿರುವ ಕ್ರಿಸ್ತ, ಪಾರ್ಶಿ, ಜ್ಯು ಮೊದಲಾದ ಜಾತಿಯವರೇನೂ ರಾಜಕಾರಣದಲ್ಲಿ ವಿರೋಧವಾಗಿ ವರ್ತಿಸುತ್ತಾ ಇಲ್ಲ. ಮುಸಲ್ಮಾನರ ಧರ್ಮಾಂಧತೆಯೇ ರಾಜಕಾರಣದಲ್ಲಿ ಸೇರಿ ವಿರೋಧವನ್ನುಂಟುಮಾಡುತ್ತಾ ಇದೆ.

### ಹಿಂದುಗಳೆಂದು ಮುಂದೆ ಬನ್ನಿರಿ.

ನೀವು ಹಿಂದುಗಳೆಂದು ಹೇಳಿಕೊಳ್ಳಲು ನಾಚುವುದೇಕೆ? ನೀವು ಹಿಂದುಗಳೆಂದೇ ಧಾರಾಳವಾಗಿ ಹೇಳುತ್ತಾ ಮುಂದೆ ಬನ್ನಿರಿ ಹಿಂದುತ್ವದ ಹಿತಾರ್ಥವಾಗಿ ಪ್ರಯತ್ನಿಸುವ ಮೆಂಬರರಿಗೇನೇ ನಿಮ್ಮ ಮತವನ್ನು ಕೊಡಿರಿ. ರಾಮ, ಕೃಷ್ಣ, ಶಿವಾಜಿ, ಪ್ರತಾಪಸಿಂಹ, ಗೋವಿಂದ ಸಿಂಹ ಇವರ ವಂಶಜರು ನಾವೆಂದು ಹೇಳಿಕೊಂಡರೆ ನಿಮಗೆ ಕಲಂಕವೆಂದು ತಿಳಿದಿರುವಿರಾ? ಈ ಮನೋದೌರ್ಬಲ್ಯವನ್ನು ತೆಗೆದು ಹಾಕಿರಿ. ಹಿಂದುಗಳ ಮತವನ್ನೇ ತೆಗೆದುಕೊಂಡ. ಹಿಂದುತ್ವಕ್ಕೆ ವಿರೋಧವಾಗಿ ನಡೆಯುವಂಥ ಯಾವ ಮೆಂಬರರಿಗೂ ಮತ ಕೊಡಬೇಡಿರಿ. ಹಿಂದುತ್ವವನ್ನು ಸಂರಕ್ಷಿಸುವ ಎಲ್ಲ ಸಂಗಡಗಳೂ ಕೂಡಿ ಸಂಯುಕ್ತ ಹಿಂದು ಪಕ್ಷ ನಿರ್ಮಾಣವಾಗುವಂತೆ ಮಾಡಿರಿ.

ಹಿಂದುಗಳು ಶುದ್ಧಿ ಚಟುವಟಿಕೆಯನ್ನು ಪ್ರಚಂಡವಾಗಿಯೇ ಸಾಗಿಸಬೇಕು. ಶುದ್ಧಿ ಚಟುವಟಿಕೆಯು ಕೇವಲ ಧಾರ್ಮಿಕ ದೃಷ್ಟಿಯಿಂದಲೇ ಮುಖ್ಯವಾದುದಲ್ಲ. ರಾಜಕೀಯ ದೃಷ್ಟಿಯಿಂದಲೂ ಮಹತ್ವದ್ದಾಗಿದೆ ಹಿಂದು ಸಂಘಟನೆ ಮತ್ತು ಶುದ್ಧಿ ಇವು ಅತ್ಯಂತ ಮಹತ್ವದ ಕಾರ್ಯಗಳಾಗಿವೆ.

ಹಿಂದು ಜಾತಿಯ ಮೇಲೆ ಶಿಕಂದರ ಬಾದಶಹನ ಕಾಲದಿಂದಲೂ ಆಕ್ರಮಣ ನಡೆಯುತ್ತಾ ಬಂದರೂ ಆಯಾಯ ಕಾಲದಲ್ಲಿ ಇದು ತನ್ನ ಪಿಸತ್ವವನ್ನು ಶೌರ್ಯದಿಂದ ನೀಗಿ ಈಗಲೂ ಜೀವಿಸಿದೆ. ಇನ್ನು ಮುಂದೆ ಹಿಂದುಸ್ಥಾನವು ಸ್ವತಂತ್ರವಾಗಿ ಹಿಮಾಲಯದ ಮೇಲೆ ಹಿಂದು ಧ್ವಜವನ್ನು ಒಂದು ದಿನ ಸ್ಥಾಪಿಸುವ ಸುದಿನ ಬಂದೇ ಬರುವುದೆಂದು ದೃಢವಾಗಿ ನಂಬಿರಿ.




ಶಾ. ಶ. ೧೮೫೯ ನೆಯ ಪುಷ್ಯ ಶು|| ೯ ಸೋಮವಾರ.

# ಹಿಂದು ಮಹಾಸಭೆಯ ಕಾರ್ಯ.

ಅಹಮದಾಬಾದಿನಲ್ಲಿ ಕೂಡಿದ್ದ ೧೯ ನೆಯ ಅಖಿಲ ಭಾರತ ಹಿಂದು ಮಹಾಸಭೆಯಲ್ಲಾದ ಕಾರ್ಯಕಲಾಪಗಳ ಮುಖ್ಯಾಂಶಗಳನ್ನು ನಾವು ಇದೇ ಸಂಚಿಕೆಯ ಬೇರೊಂದು ಕಡೆ ಕೊಟ್ಟಿದ್ದೇವೆ. ಸ್ವಾಗತ ಸಂಘಾಧ್ಯಕ್ಷರ ಮತ್ತು ಮಹಾ ಸಭೆಯ ಅಧ್ಯಕ್ಷರ ಭಾಷಣಗಳನ್ನು ಓದಿದ ನಿಷ್ಪಕ್ಷಪಾತಿಗಳಿಗೆ ಹಿಂದು ಮಹಾಸಭೆಯು ಹೇಗೆ ರಾಷ್ಟ್ರೀಯ ದೃಷ್ಟಿಯಿಂದ ಮಹತ್ಕಾರ್ಯ ಮಾಡಲು ಅಸ್ತಿತ್ವದಲ್ಲಿದೆಯೆಂಬುದು ಸ್ಪಷ್ಟ ಗೊತ್ತಾಗುವುದು.

ಸ್ವಾಗತ ಸಂಘಾಧ್ಯಕ್ಷರಾದ ಶ್ರೀ. ಠಾಕೋರರವರು ಹಿಂದು ಮಹಾಸಭೆಯ ಮೇಲೆ ತಪ್ಪು ತಿಳುವಳಿಕೆಯಿಂದಲೋ ಅಥವಾ ದುರಭಿಪ್ರಾಯದಿಂದಲೋ ಮಾಡುತ್ತಿರುವ ಆಕ್ಷೇಪಣೆಗಳಿಗೆ ಬಹು ಸಮಂಜಸವಾದ ಉತ್ತರಗಳನ್ನು ಹೇಳಿದ್ದಾರೆ. ಜಾತಿ ನಿರ್ಣಯದ ಸಂಬಂಧವಾಗಿ ಇಂಗ್ಲಿಷ್ ಸರಕಾರವು ಮತ್ತು ಮುಸಲ್ಮಾನರು ಅನುಸರಿಸಿರುವ ಧೋರಣಗಳು ಹೇಗೆ ಅರಾಷ್ಟ್ರೀಯವಾದವುಗಳಾಗಿಯೂ ಘಾತಕವಾದವುಗಳಾಗಿಯೂ ಇವೆಯೆಂಬುದನ್ನು ಸ್ಪಷ್ಟೀಕರಿಸಿದ್ದಾರೆ. ಹಿಂದುಗಳು ಈ ವಿಚಾರದಲ್ಲಿ ಕಣ್ಣುಮುಚ್ಚಿಕೊಂಡು ಕುಳಿತು ಮುಸಲ್ಮಾನರ ಇಷ್ಟದಂತೆ ನಡೆದದ್ದಾದರೆ ಹಿಂದುಸ್ಥಾನದಲ್ಲಿ "ಮುಸಲ್ಮಾನ್ ಸ್ಥಾನ" ಎಂಬ ಒಂದು ದೇಶ ನಿರ್ಮಾಣವಾಗುವುದನ್ನೂ ಶ್ರೀ. ಠಾಕೋರರವರು ಅನ್ಯರ ಅಭಿಪ್ರಾಯದಿಂದಲೂ ಸ್ಪಷ್ಟಗೊಳಿಸಿ ಹಿಂದುಗಳು ತಮ್ಮಲ್ಲಿರುವ ದೋಷಗಳನ್ನು ನಿವಾರಣೆಮಾಡಿಕೊಳ್ಳಲು ಕೆಲವು ವಿಧಾಯಕ ಉಪಾಯಗಳನ್ನೂ ಸೂಚಿಸಿದ್ದಾರೆ. ಈ ಪ್ರಕಾರ ಸಕಲ ರೀತಿಗಳಿಂದಲೂ ಇವರ ಭಾಷಣವು ಬಹು ಸಮಂಜಸವಾದುದಾಗಿದೆ.

ಅಧ್ಯಕ್ಷರಾದ ಸ್ವಾತಂತ್ರ್ಯ ವೀರ ಸಾವರಕರರ ಭಾಷಣವಾದರೋ ಹಿಂದುತ್ವ, ರಾಷ್ಟ್ರೀಯತ್ವ ಮತ್ತು ಸ್ವಾತಂತ್ರ್ಯ ಇವುಗಳ ಸಂಬಂಧವಾಗಿ ಶಾಸ್ತ್ರೀಯ ದೃಷ್ಟಿಯಿಂದ ವಿವೇಚಿಸಲ್ಪಟ್ಟ ಮನನೀಯ ಸಿದ್ಧಾಂತೋಕ್ತಿಯಾಗಿಯೇ ಇದೆ. ವಿಚಾರಪರರಾದ ಕಾಂಗ್ರೆಸ್ಸಿನವರಾಗಲಿ ಅಥವಾ ಮುಸಲ್ಮಾನರಾಗಲಿ ಇವರು ಪ್ರತಿಪಾದಿಸಿರುವ ರಾಷ್ಟ್ರೀಯತ್ವ ಮತ್ತು ಸ್ವಾತಂತ್ರ್ಯಗಳ ವಿವೇಚನೆಯನ್ನು ಸಮ್ಮತಿಸದೆ ಇರಲಾರರು. ಹಿಂದು ಸಮಾಜವು ತನ್ನಲ್ಲಿರುವ ಯಾವ ಯಾವ ದೋಷಗಳನ್ನು ಹೇಗೆ ಹೇಗೆ ನಿವಾರಣೆಮಾಡಿಕೊಳ್ಳಬೇಕೆಂಬ ವಿಚಾರವಾಗಿ ಮಾತ್ರ ಅಧ್ಯಕ್ಷರು ತಮ್ಮ ಭಾಷಣದಲ್ಲಿ ಸೂಚಿಸದಿದ್ದುದು ಇವರ ಮಹತ್ವದ ಭಾಷಣದಲ್ಲಿ ಒಂದು ಮುಖ್ಯ ಕೊರತೆಯೆಂದೇ ನಮಗೆ ತೋರುತ್ತದೆ.

## ಮಹಾಸಭೆಯ ನಿರ್ಣಯಗಳು.

ಹಿಂದು ಮಹಾಸಭೆಯಲ್ಲಾದ ನಿರ್ಣಯಗಳು ಕಾಲೋಚಿತವಾದವುಗಳೇ ಇವೆ. ಮಹಾಸಭೆಯ ಘಟನೆಯಲ್ಲಿ ಪೂರ್ಣ ಸ್ವರಾಜ್ಯ ಪ್ರಾಪ್ತಿಯ ಧ್ಯೇಯವನ್ನು ಈ ಸಾರೆ ಉಲ್ಲೇಖಿಸಿದ್ದು ಬಹು ಯುಕ್ತವಾಗಿದೆ. ಇದರಿಂದ ಹಿಂದು ಮಹಾಸಭೆಯು ರಾಜಕಾರಣದಲ್ಲಿಯೂ ಕೊನೆಯ ಧ್ಯೇಯವನ್ನೇ ಇಟ್ಟುಕೊಂಡಿದೆಯೆಂಬುದು ಸ್ಪಷ್ಟವಾಗುವುದು.

ಹೀಗೆ ನಿರ್ಣಯಗಳಾದ ಮಾತ್ರದಲ್ಲಿಯೇ ಮಹಾಸಭೆಯಿಂದಾಗಬೇಕಾದ ಕಾರ್ಯಗಳು ಮುಗಿದಂತಾಗಲಿಲ್ಲ. ಮಹಾತ್ಮಾ ಗಾಂಧಿಯವರು ಕಾಂಗ್ರೆಸ್ಸಿನಲ್ಲಿ ಪ್ರವೇಶಿಸದ ಮುಂಚೆ ಕಾಂಗ್ರೆಸ್ಸಿನ ನಿರ್ಣಯಗಳು ಎಷ್ಟರಮಟ್ಟಿಗೆ ಕಾರ್ಯ ರೂಪದಲ್ಲಿ ಬರುತ್ತಿದ್ದವೋ ಅಷ್ಟೇ ಮಟ್ಟಿಗೆ ಹಿಂದು ಮಹಾಸಭೆಯ ನಿರ್ಣಯಗಳು ಈಗ ಆಚರಣೆಯಲ್ಲಿ ಬರುತ್ತಲಿವೆ. ಗಾಂಧೀಜಿಯವರು ಕಾಂಗ್ರೆಸ್ ಮೂಲಕ ತೋರಿಸಿಕೊಟ್ಟುದನ್ನು ಹಿಂದು ಮಹಾಸಭೆಯವರು ಈಗಲಾದರೂ ಅನುಸರಿಸಬೇಕಾಗಿರಲಿಲ್ಲವೆ? ಒಂದೆರಡು ವಿಧಾಯಕ ಕಾರ್ಯಗಳನ್ನಾದರೂ ಸಮಾಜದ ಮುಂದಿಟ್ಟು ಎಲ್ಲರ ಲಕ್ಷ್ಯವೂ ಅತ್ತ ತಿರುಗುವಂತೆ ಮಾಡಿ ಹಿಂದು ಸಮಾಜದಲ್ಲಿ ಪ್ರಚಂಡ ಜಾಗೃತಿಯುಂಟಾಗುವಂತೆ ಮಾಡಬೇಕಾಗಿದ್ದಿತು. ಅಂತಹ ಯಾವ ಏರ್ಪಾಟೂ ಆಗದಿದ್ದುದು ಒಂದು ಕೊರತೆಯೇ ಸರಿ. ಈ ಸಾರೆ ಹಿಂದುತ್ವ ಮತ್ತು ಸ್ವಾತಂತ್ರ್ಯಗಳ ಎರಕ ಹೊಯಿದು ಮಾಡಲ್ಪಟ್ಟ ಮೂರ್ತಿಯಂತಿರುವ ಶ್ರೀ. ಸಾವರಕರರು ಅಧ್ಯಕ್ಷರಾಗಿರುವುದರಿಂದ ಹಿಂದು ಮಹಾ ಸಭೆಯು ರಾಷ್ಟ್ರಕ್ಕೆ ಬಹು ಮಹತ್ವದ ಸೇವೆಯನ್ನು ಇನ್ನುಮೇಲೆ ಸಲ್ಲಿಸುವುದೆಂದೇ ನಾವು ದೃಢವಾಗಿ ನಂಬಿದ್ದೇವೆ.

---

# ಶ್ರೀ. ಸಾವರಕರರ ಎಚ್ಚರಿಕೆ.

ಈಗ ಈ ದೇಶದಲ್ಲಿ ಕಾಂಗ್ರೆಸ್ಸಿನ ವಿನಾ ಮಹತ್ವದ ಸಂಸ್ಥೆಗಳೆಂದರೆ ಹಿಂದು ಮಹಾಸಭೆ ಮತ್ತು ಮುಸ್ಲಿಂಲೀಗ್ ಇವೆರಡೇ ಸರಿ. ರಾಜಕೀಯ ವಿಷಯದಲ್ಲಿ ಕಾಂಗ್ರೆಸ್ಸಿನ ಸಂಗಡ ಹೋರಾಡಲು ಇವುಗಳಷ್ಟು ಮಹತ್ವದ ಸಂಸ್ಥೆಗಳು ಬೇರೆ ಯಾವವೂ ಉಳಿದಿಲ್ಲ. ಇವೆರಡೂ ಸಂಸ್ಥೆಗಳು ಕಾಂಗ್ರೆಸ್ಸಿನ ಧೋರಣವನ್ನು ಒಪ್ಪಿದ್ದಾದರೆ ರಾಷ್ಟ್ರದಲ್ಲಿ ಪ್ರಚಂಡವಾದ ಶಕ್ತಿಯುಂಟಾಗಲು ಅಭ್ಯಂತರವೇ ಇಲ್ಲ.

ಹಿಂದು ಮಹಾ ಸಭೆಯ ಧೋರಣವು ಕಾಂಗ್ರೆಸ್ಸಿನ ಧ್ಯೇಯ ಸಾಧನೆಗೆ ಸಾಧಕವಾಗಿಯೇ ಇದೆ. ರಾಷ್ಟ್ರೀಯ ದೃಷ್ಟಿಯಲ್ಲಿ ಅದು ಎಳ್ಳಷ್ಟಾದರೂ ಬೇರೆಯಿಲ್ಲ. ಮುಸ್ಲಿಂಲೀಗ್ ಮಾತ್ರ ದಿನೆ ದಿನೆ ಅರಾಷ್ಟ್ರೀಯ ಮಾರ್ಗದ ಕಡೆ ಹೋಗಲಾರಂಭಿಸಿದೆ. ಮೊನ್ನೆ ಲಖನೌದಲ್ಲಿ ಕೂಡಿದಾಗ ಮುಸ್ಲಿಂಲೀಗ್ ವ್ಯಕ್ತಪಡಿಸಿದ ಅಭಿಪ್ರಾಯಗಳು ಕೇವಲ ಅರಾಷ್ಟ್ರೀಯವಾದವುಗಳೇ ಅಲ್ಲ; ಮುಸ್ಲಿಂ

ರಾಜ್ಯ ಸ್ಥಾಪಿಸತಕ್ಕವುಗಳೇ ಆಗಿವೆ. ಹೀಗಿರುವಾಗ ಬ್ಯಾ. ಜಿನ್ನಾರವರ ಸಂಗಡ ಒಪ್ಪಂದಮಾಡಿಕೊಳ್ಳಲು ಕಾಂಗ್ರೆಸ್ಸಿನವರು ಈಗಲೂ ಸಿದ್ಧರಾಗಿದ್ದೇವೆಂದು ಹೇಳುತ್ತಿದ್ದುದನ್ನು ನೋಡಿದರೆ ಕಾಂಗ್ರೆಸ್ಸಿನವರ ಉದಾರ ವೃತ್ತಿಯು ಮುಸ್ಲಿಂಲೀಗಿನ ಜಾತ್ಯಂಧತೆಯು ಸ್ಪಷ್ಟ ಗೊತ್ತಾಗುತ್ತವೆ.

### ಕಾಂಗ್ರೆಸ್ಸಿಗೆ ಅಧಿಕಾರವಿಲ್ಲ.

ಕಾಂಗ್ರೆಸ್ಸಿನ ಅಧ್ಯಕ್ಷರಾದ ಪಂಡಿತ ಜವಾಹರಲಾಲರು ಹಿಂದು-ಮುಸಲ್ಮಾನ್ ಒಪ್ಪಂದಕ್ಕೋಸ್ಕರ ಕಾಂಗ್ರೆಸ್ ಸಿದ್ಧವಿದೆಯೆಂದು ಮೊನ್ನೆ ವರ್ಕಿಂಗ್ ಕಮಿಟಿಯ ಒಪ್ಪಿಗೆಯಿಂದಲೇ ಪ್ರಕಟಿಸಿದ ರೀತಿಯನ್ನು ನೋಡಿದರೆ ಕಾಂಗ್ರೆಸ್ ಹಿಂದುಗಳ ಪರವಾಗಿ ಮುಸಲ್ಮಾನರ ಸಂಗಡ ಒಪ್ಪಂದ ಮಾಡಿಕೊಳ್ಳಲು ಹೋಗುವುದು ಅನುಚಿತವೂ ಅನರ್ಥಕರವೂ ಆಗಿದೆಯೆಂದೇ ತೋರುತ್ತದೆ.

ಪಂಡಿತ ಜವಹರಲಾಲರ ವಿಚಾರಸರಣಿಯನ್ನೂ ಕಾರ್ಯಪದ್ಧತಿಯನ್ನೂ ಹಿಂದು ಮಹಾ ಸಭಾಧ್ಯಕ್ಷರಾದ ಶ್ರೀ. ಸಾವರಕರರು ಖಂಡಿಸಿದುದು ಸಮಂಜಸವಾಗಿದೆ. ಶ್ರೀ. ಸಾವರಕರರು ಮುಸಲ್ಮಾನ್ ಮುಂದಾಳುಗಳಿಗೂ ಸರಕಾರಕ್ಕೂ ಕಾಂಗ್ರೆಸ್ಸಿಗೂ ಕೊಟ್ಟ ಎಚ್ಚರಿಕೆಯು ಮಹತ್ವದ್ದಾಗಿಯೂ ನ್ಯಾಯವಾದದ್ದಾಗಿಯೂ ಇದೆ. ಹಿಂದು ಮಹಾಸಭೆಯೇ ಹಿಂದುಗಳ ಏಕಮೇವ ಪ್ರಾತಿನಿಧಿಕ ಸಭೆಯು. ಹಿಂದುಗಳ ಪರವಾಗಿ ಮಾತನಾಡಲು ಅದಕ್ಕೇನೇ ಅಧಿಕಾರವಿದೆ. ಕಾಂಗ್ರೆಸ್ ಎಲ್ಲ ಜಾತಿಗಳ ಸಂಸ್ಥೆಯಾಗಿದೆ. ಹೀಗಿರುವಾಗ ಅದು ತಾನು ಈಗ ಹಿಂದು ಎಂದ್ರು ಮುಂದೆ ಬರುವುದು ಅನುಚಿತವಾದುದು. ಹಿಂದು ಮಹಾಸಭೆಯ ಅಭಿಪ್ರಾಯವಿಲ್ಲದೆ ಕಾಂಗ್ರೆಸ್ ಹಿಂದು-ಮುಸಲ್ಮಾನ್ ಐಕಮತ್ಯದ ವಿಷಯದಲ್ಲಿ ಯಾವ ಏರ್ಪಾಟನ್ನು ಮಾಡಿದರೂ ಅದು ವ್ಯರ್ಥವಾಗುವದು.

### ಜಿನ್ನಾರವರು ಸಾವರಕರರ ಕಡೆ ಹೋಗಲಿ.

ಹಿಂದು-ಮುಸಲ್ಮಾನರ ಐಕಮತ್ಯದ ಕಾರ್ಯವು ಕಾಂಗ್ರೆಸ್ಸಿನಿಂದ ಶಕ್ಯವಿಲ್ಲ. ಮಹಾತ್ಮಾ ಗಾಂಧಿಯವರು ಮುಸಲ್ಮಾನರಿಗೆ "ಬರೆ ಕಾಗದ" ರುಜುಮಾಡಿಕೊಡಲು ಸಿದ್ಧರಾಗಿದ್ದರು. ಅಷ್ಟು ಇನ್ನಾರಿಂದ ಅನುಕೂಲ ಕಲ್ಪಿಸಿ ಕೊಡುವುದು ಶಕ್ಯ? ಬಾಬು ರಾಜೇಂದ್ರರು ಎಷ್ಟೋ ಪ್ರಯತ್ನಿಸಿದರು. ಅದೂ ವ್ಯರ್ಥವಾಯಿತು. ಪಂಡಿತಜಿಯವರು ತಾವೂ ಇದೊಂದು ಸಾರೆ ನೋಡಿಬಿಡೋಣವೆಂದು ಮುಂದೆ ಬಂದಂತೆ ಕಾಣುತ್ತದೆ. ಹೀಗೆ ತಾವು ಬರುವುದಕ್ಕಿಂತ ಬ್ಯಾ. ಜಿನ್ನಾರವರಿಗೆ ನೀವು ಬ್ಯಾ. ಸಾವರಕರರ ಕಡೆಗೆ ಹೋಗಿರೆಂದೇ ಹೇಳುವುದು ಯುಕ್ತವಾಗಿತ್ತು.

ಮುಸಲ್ಮಾನರ ಜಾತ್ಯಂಧತೆಯನ್ನು ಕುರಿತು ಶ್ರೀ. ಚಿಂತಾಮಣಿಯವರು ಮೊನ್ನೆ ಕಲಕತ್ತಾದಲ್ಲಿ ಹೀಗೆ ಹೇಳಿದರು— "ನಾನು ೩೯ ವರ್ಷಗಳಿಂದ ರಾಜಕಾರಣದಲ್ಲಿದ್ದೇನೆ. ಆಗ ಮುಸಲ್ಮಾನರ ಜಾತಿ ಪ್ರಶ್ನೆಯು ಎಲ್ಲಿತ್ತೋ ಅಲ್ಲೇ ಈಗಲೂ ಇದೆ. ನಾವು ಅವರನ್ನು ಸನ್ಮಾನಿಸುತ್ತ ಹೋದಂತೆ ಅವರು ಅಸಂತುಷ್ಟರಾಗುತ್ತಾ ಬಂದಿದ್ದಾರೆ."

ಈ ದೇಶದ ಈ ವರೆಗಿನ ಹಿಂದು-ಮುಸಲ್ಮಾನರ ಐಕಮತ್ಯದ ಚರಿತ್ರೆಯನ್ನು ಅರಿತವರು ಶ್ರೀ. ಚಿಂತಾಮಣಿಯವರ ಅಭಿಪ್ರಾಯ ಯಥಾರ್ಥವಾದುದೆಂದೇ ಹೇಳದೆ ಇರಲಾರರು. ಆದಕಾರಣ ಮುಸ್ಲಿಂಲೀಗಿನ ಅರಾಷ್ಟ್ರೀಯ ಕೇಳಿಕೆಗಳ ಕಡೆಗೆ ಲಕ್ಷಿಸದೆ ಕಾಂಗ್ರೆಸ್ ರಾಷ್ಟ್ರೀಯ ದೃಷ್ಟಿಯಿಂದ ನಡೆಯುತ್ತಾ ಈ ಜಾತಿಯ ಪ್ರಶ್ನೆಯನ್ನು ಹಿಂದು ಮಹಾಸಭೆಯ ಕಡೆಗೆ ಬಿಟ್ಟು ಬಿಡುವುದೇ ವಿಹಿತವೂ ಕ್ಷೇಮಕರವೂ ಆಗಿದೆ.

# ಸ್ವಾತಂತ್ರ್ಯವೀರ ಸಾವರಕರರ ಮಹತ್ವದ ಪ್ರಕಟನೆ.

ಹಿಂದು-ಮುಸಲ್ಮಾನರ ಐಕಮತ್ಯದ ವಿಚಾರವಾಗಿ ಕಾಂಗ್ರೆಸ್ಸಿನ ಅಧ್ಯಕ್ಷರಾದ ಪಂಡಿತ ಜವಾಹರಲಾಲ ನೆಹರುರವರು ಮೊನ್ನೆ ತಾನೇ ಒಂದು ಪ್ರಕಟನೆಯನ್ನು ಹೊರಡಿಸಿದ್ದಾರಷ್ಟೆ. ಅದಕ್ಕೆ ಉತ್ತರವಾಗಿ ಹಿಂದು ಮಹಾಸಭೆಯ ಅಧ್ಯಕ್ಷರಾದ ಬ್ಯಾ. ಸಾವರಕರರು ತಾ. ೭-೧-೩೮ ನೆಯ ದಿವಸ ಮುಂಬೈಯಿಂದ ಒಂದು ಮಹತ್ವದ ಪ್ರಕಟನೆಯನ್ನು ಹೊರಡಿಸಿದ್ದಾರೆ. ಅದರಲ್ಲಿ ಹೀಗೆ ಸೂಚಿಸಿದ್ದಾರೆ—

"ಕಾಂಗ್ರೆಸ್ ಸಂಸ್ಥೆಯು ಹಿಂದುಗಳ ಪ್ರತಿನಿಧಿಗಳಿಂದ ಕೂಡಿದ ಸಂಸ್ಥೆಯಲ್ಲ. ಅಖಿಲ ಭಾರತ ಹಿಂದು ಮಹಾಸಭೆಯೇ ಹಿಂದುಗಳ ಏಕಮೇವ ಪ್ರಾತಿನಿಧಿಕ ಸಂಸ್ಥೆಯು. ಆದಕಾರಣ ಹಿಂದು-ಮುಸಲ್ಮಾನರ ಐಕಮತ್ಯದ ಸಂಬಂಧವಾದ ವಿಚಾರವಿನಿಮಯವು ಹಿಂದು ಮಹಾಸಭೆಯ ಮೂಲಕವೇ ನಡೆಯಬೇಕಾದುದು ನ್ಯಾಯವಾಗಿದೆ.

### ಪಂಡಿತಜಿಯವರ ಅಧೈರ್ಯ.

ಹಿಂದು-ಮುಸಲ್ಮಾನ್ ಐಕಮತ್ಯದ ಯಾವ ಒಪ್ಪಂದವನ್ನಾದರೂ ಹಿಂದು ಮಹಾಸಭೆಯು ಒಪ್ಪಿದ ವಿನಾ ಹಿಂದು ಸಮಾಜವು ಮಾನ್ಯಮಾಡಲಾರದೆಂಬುದನ್ನು ಸರಕಾರವು ಮತ್ತು ಮುಸಲ್ಮಾನ್ ಪ್ರಮುಖರು ಲಕ್ಷ್ಯದಲ್ಲಿಡತಕ್ಕದ್ದು. ಪಂಡಿತ ಜವಾಹರಲಾಲರು ಹೊರಡಿಸಿದ ಪ್ರಕಟನೆಯಲ್ಲಿ ಅನೇಕ ಅಸಂಗತ ವಿಧಾನಗಳಿವೆ. ಅದರಲ್ಲಿ ಪಂಡಿತಜಿಯವರ ಅಧೈರ್ಯವು ಸ್ಪಷ್ಟ ಕಾಣುತ್ತಿದೆ. ಮುಸಲ್ಮಾನರಿಗೆ ಯೋಗ್ಯ ಪಾಲುಗಾರಿಕೆಗಿಂತ ಸಮಾನತೆಯ ತತ್ವದಂತೆ ಹೆಚ್ಚಿಗೆ ಕೊಡಲು ಕಾಂಗ್ರೆಸ್ಸಿಗೆ ಯಾವ ಅಧಿಕಾರವೂ ಇಲ್ಲ. ಮುಸಲ್ಮಾನರಿಗೆ ಹೆಚ್ಚಿಗೆ ಕೊಡಬೇಕಾದರೆ ಅದನ್ನು ಹಿಂದುಗಳಿಂದಲೇ ಸೆಳೆದುಕೊಳ್ಳಬೇಕಾಗುವುದು. ಜಾತಿ ನಿರ್ಣಯದ ವಿಷಯದಲ್ಲಿ ಕಾಂಗ್ರೆಸ್ಸಿನ ವೃತ್ತಿಯು ಅರಾಷ್ಟ್ರೀಯವೂ ಆತ್ಮಘಾತಕವಾದುದೂ ಇದೆ. ಹಿಂದು ಮಹಾಸಭೆಯ ಹೇಳಿಕೆಯು ನ್ಯಾಯಸಮ್ಮತವಾದುದಾಗಿದೆಯೇ ವಿನಾ ಹೇಡಿತನದ ಅರಾಷ್ಟ್ರೀಯ ವಚನಗಳಿಂದ ಅನ್ಯರನ್ನು ಸಂತೋಷಗೊಳಿಸುವ ಧೋರಣವು ಅದರಲ್ಲಿಲ್ಲ."

---

## ವಿಶೇಷ ಸಮಾಚಾರ.

—ಮೈಸೂರು ಪ್ರಾಂತದಲ್ಲಿ ಕಾಂಗ್ರೆಸ್ಸಿನ ಮೇಲೆ ಸರಕಾರವು ನಡೆಸಿದ ದಬ್ಬಾಳಿಕೆಯನ್ನು ನಾಗರಿಕ ಸ್ವಾತಂತ್ರ್ಯ ಸಂರಕ್ಷಕ ಸಂಘದ ಅಧ್ಯಕ್ಷರಾದ ರವೀಂದ್ರನಾಥ ಟಾಗೋರರು ಒಂದು ಪ್ರಕಟನೆ ಹೊರಡಿಸಿ ನಿಷೇಧಿಸಿದ್ದಾರೆ.

—ಬಿಹಾರ ಪ್ರಾಂತಿಕ ಕಾಂಗ್ರೆಸ್ ಕಮಿಟಿಯು ಜಮೀನದಾರರ ಕಡೆಗಾಗಿ ಒಕ್ಕಲಿಗರ ಅನ್ಯಾಯವನ್ನು ನಿರ್ಲಕ್ಷಿಸಿತೆಂದು ಆ ಪ್ರಾಂತದ ಅನೇಕ ಪ್ರಮುಖ ಕಾಂಗ್ರೆಸ್ ಕೆಲಸಗಾರರು ಕಾಂಗ್ರೆಸ್ ಸಂಸ್ಥೆಯನ್ನು ಬಿಟ್ಟರು.

—ಮುಂಬೈ ಸರಕಾರವು ಪುಣೆಯ ಲೋಕಶಕ್ತಿ ಪತ್ರಿಕೆಗೇನೇ ಸಹಾಯ ಮಾಡಬೇಕೆಂದು ಹೊರಡಿಸಿದ ಗುಪ್ತ ಪತ್ರವನ್ನು ಬ್ಯಾ. ಜಮನಾದಾಸ, ವೀರ ನರಿಮಾನ, ಶ್ರೀ. ನ. ಚಿ. ಕೇಳಕರ ಶ್ರೀ. ಜೋಸಿ ಮೊದಲಾದ ಎಲ್ಲ ಪಕ್ಷಗಳ ಪ್ರಮುಖರೂ ನಿಷೇಧಿಸಿದ್ದಾರೆ.

# ಮಹಾತ್ಮರು ಯಾರು?

(ಲೇ:— ಶ್ರೀ ಮಲ್ಲಿಕಾರ್ಜುನ ಸ್ವಾಮಿ ವಿರಕ್ತಮಠ
ನಿಡಗುಂದಿ ಮು ಅಥಣಿ.)

ಮಹಾತ್ಮಾ ಶಬ್ದಾರ್ಥವು ಮಹಾನ್ ಆತ್ಮಾಯಸ್ಯ ಅಂದರೆ— ಸಕಲ ಪ್ರಾಣಿಗಳಲ್ಲಿರುವ ಆತ್ಮವೇ ಯಾವನಿಗೆ ಆತ್ಮವಾಗಿರುವದೋ ಅವನೇ ಮಹಾತ್ಮಾ ಅಥವಾ ಮಹಾಪುರುಷನೆಂದೆನ್ನಬಹುದು. ಎಲ್ಲ ಪ್ರಾಣಿಗಳ ಆತ್ಮವೇ ತಾನಾಗಿರುವದರಿಂದ ಈ ಶಬ್ದಾರ್ಥವು ವಿಶೇಷವಾಗಿ ಪರಮಾತ್ಮನಿಗೆ ಶೋಭಿಸುವದು. ಭಗವದ್ಗೀತೆಯಲ್ಲಿ "ಅಹಮಾತ್ಮಾ ಗುಡಾಕೇಶ ಸರ್ವ ಭೂತಾಶಿಶಯ ಸ್ಥಿತಃ" ಎಲೋ ಅರ್ಜುನನೆ ಸಮಸ್ತ ಪ್ರಾಣಿಗಳ ಹೃದಯದ ಆತ್ಮವೆ ನಾನಾಗಿರುವೆನು. ಈ ವಿಷಯದಲ್ಲಿ ವಚನ ಶಾಸ್ತ್ರಕಾರರ ಅಭಿಪ್ರಾಯವೇನೆಂದರೆ— ||ವಚನ|| ಮಣಿಗಳ ಸೂತ್ರದಂತೆ ತ್ರಿನಯನ ನೀನಿಪ್ಪೆಯಯ್ಯಾ ಎಣಿಸುವಡೆ ತನು ಭಿನ್ನ ಆತ್ಮನೊಬ್ಬನೆ ಅಣುರೇಣು ಮಧ್ಯದಲ್ಲಿ ಗುಣಭರಿತ ನೀನೆಂದು ವಣಿಯುತಿರ್ಪೆನಯ್ಯಾ ರಾಮನಾಥಾ|| ಮತ್ತು ಯಾರು ಭಗವಂತನ ತತ್ವವನ್ನು ತಿಳಿದು ಅವನನ್ನು ಹೊಂದಲಿಚ್ಛಿಸುವರೋ ಅವರಾದರೂ ಮಹಾತ್ಮರೆ. ಇಂಥ ಮಹಾತ್ಮರನ್ನು ಕಾಣುವದು ದುರ್ಲಭ. ||ಗೀತಾ|| ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿಸಿದ್ಧಯೆ| ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂವೇತ್ತಿ ತತ್ವತಃ|| ಈ ಪ್ರಪಂಚದಲ್ಲಿ ಎಷ್ಟೋ ಜನರು ನನ್ನನ್ನು ಹೊಂದಲಿಚ್ಛಿಸುವರು. ಆದರೆ ಅವರಲ್ಲಿ ಸ್ಥಿರಚಿತ್ತರಾಗಿ ತನ್ನಂತೆ ಸಕಲ ಪ್ರಾಣಿಗಳನ್ನು ತಿಳಿದು ಆಚರಿಸುವ ಯೋಗಿಗೆ ಮಾತ್ರ ತತ್ವಜ್ಞಾನವಾಗುವದು. ಹೀಗಿದ್ದರೂ ಈಗಿನ ಕಾಲದಲ್ಲಿ ಹಲಕೆಲವರು ಸಭೆಯವರು ಬೆರಗಾಗುವಂತೆ ಮಾತಿನ ಸುರಿಮಳೆಯನ್ನು ಸುರಿಸಿ ಮಂತ್ರ ತಂತ್ರ ಔಷಧಿಗಳನ್ನು ಹೇಳಿ ಬಾಯಿಯಲ್ಲಿ ವೈರಾಗ್ಯವನ್ನೂ ಕೃತಿಯಲ್ಲಿ ವಿಷಯಾಸಕ್ತಿಯನ್ನೂ ತೋರಿಸುವ ಜನರಿಗೂ ಮಹಾತ್ಮರೆಂದು ಹೇಳಿ ಈ ಶಬ್ದವನ್ನು ದುರುಪಯೋಗಮಾಡುತ್ತಾರೆ ಇಂಥವರಿಗೆ ಪರಮಾತ್ಮನು ಮೆಚ್ಚುವದಿಲ್ಲವೆಂದು ವಚನ ಶಾಸ್ತ್ರಕಾರರು ಹೇಳಿರುವುದೇನೆಂದರೆ—

||ವಚನ|| ಅಂತರಂಗ ಶುದ್ಧವಿಲ್ಲದವರು ಬಹಿರಂಗದಲ್ಲಿ ಸದಾಚಾರ ಸತ್ಕ್ರಿಯೆಯು ಸರ್ವ ಜನ ಮೆಚ್ಚು ಮಾಡುತ್ತಿದ್ದರೇನು ಅದು ಲೋಕದ ರಂಜನೆಯಲ್ಲದೆ ಶಿವಮೆಚ್ಚ ಶಿವಶರಣರು ಮೆಚ್ಚರು. ಬಿತ್ತಿದ ಬೆಳೆಯ ನುಂಬಂತೆ ಮಾಡಿದ ಸತ್ಕರ್ಮ ಫಲವನುಂಬ ಕೈ ಕೂಲಿಕಾರಂಗೆ ಮುಕ್ತಿಯುಂಟೆ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ|| ಯಾರಲ್ಲಿ ಮಹಾತ್ಮರ ಆಚರಣೆ ಮತ್ತು ಲಕ್ಷಣಗಳಿರುವವೋ ಅವರೇ ಪೂಜ್ಯರು. ಅಂಥ ವಿಭೂತಿಗಳು ದೊರೆಯುವದು ವಿರಳ |ನಾರದ ಭಕ್ತಿ ಸೂತ್ರ| ಮಹತ್ಸಂಗಸ್ತು ದುರ್ಲಭೋ ಗಮ್ಯೋ ಮೋಕ್ಷಶ್ಚ|| ಸಾಧಾರಣವಾಗಿ ಅವರನ್ನು ನಾವು ಗುರ್ತಿಸಬೇಕಾದರೆ ಈಶ್ವರ ಧ್ಯಾನ, ಸತ್ಯ ಸದಾಚಾರ ಸ್ವಕ್ಛಂದನ ವನಿತಾದಿ ವಿಷಯಗಳಲ್ಲಿ ವೈರಾಗ್ಯ ಮುಂತಾದ ಸದ್ಗುಣಗಳಿಂದ ಕೂಡಿದವರಾಗಿದ್ದು ಅವರ ಸಂದರ್ಶನ ಸಂಭಾಷಣೆಗಳಿಂದ ಸದಾಚಾರ ಸಂಪನ್ನರು ಉನ್ನತಿಯನ್ನು ಹೊಂದುವರಲ್ಲದೆ ದುರಾಚಾರಿಗಳೂ ಕೂಡ ಅವರ ಕೃಪಾದೃಷ್ಟಿಯಿಂದ ಧನ್ಯರಾಗಿ ಇಹಪರ ಸುಖವನ್ನು ಹೊಂದುವರು. ಅವರ ಅಂತಃಕರಣವು ಪವಿತ್ರವಾಗಿರುವದರಿಂದ ಕಾಮಕ್ರೋಧಾದಿ ಅರಿಷಡ್ವರ್ಗಗಳು ಅಂಟಲಾರವು. ಯಾವಾಗಲೂ ಪ್ರೇಮಸಾಗರದಲ್ಲಿ ಮಗ್ನರಾಗಿ ಶಾಂತಚಿತ್ತದವರಾಗಿರುವದರಿಂದ ಪ್ರಾಣಿಗಳ ಹಿತವನ್ನೇ ಬಯಸುತ್ತಿರುವರು. ಸತ್ಯಸ್ವರೂಪದವರಾದ್ದರಿಂದ ಕಪಟ ದುರಾಚಾರಗಳು ಇರುವದಿಲ್ಲ. ಇವರ ಆಚರಣೆಯು ಜಗತ್ತಿನ ಜನರಿಗೆ ಹಿತಕಾರಿಯಾಗಿರುವದರಿಂದ ಜನರು ಇವರ ಆಚರಣೆಯನ್ನು ಅನುಸರಿಸುತ್ತಾರೆ.

||ಗೀತಾ|| ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ| ಸ ಯತ್ಪ್ರಮಾಣಂ ಕುರುತೆ ಲೋಕಸ್ತದನುವರ್ತತೆ|| ಈ ಮಹಾತ್ಮರೂ ಕಾಯಕದಿಂದಲೂ ವಾಚಕದಿಂದಲೂ ಮಾನಸಿಕದಿಂದಲೂ ಅನ್ಯರಿಗೆ ಅಹಿತವನ್ನು ಬಯಸದವರಾದ್ದರಿಂದ ಜನರು ಇವರ ಆಚರಣೆಯನ್ನು ಅನುಸರಿಸುವರು. ಇವರು ಸತ್ಯವಾದಿಗಳಾದುದರಿಂದ ಪ್ರಸಂಗದಲ್ಲಿ ಕೆಲ ಜನರು ನಿಷ್ಠುರವಾದಿಗಳೆಂದು ತಿಳಿದುಸಿಟ್ಟಾದರೂ ವಿಚಾರ ದೃಷ್ಟಿಯಿಂದ ನೋಡಿದರೆ ಕಡೆಗೆ ಅದು ಕಲ್ಯಾಣಕರವೇ ಆಗುವದು. ಇದೇ ಇವರನ್ನು ಗುರ್ತಿಸುವ ಲಕ್ಷಣ,

ಮಹಾತ್ಮರ ಮಹಿಮೆ— ಮಹಾ ಪುರುಷರ ಮಹಿಮೆಯು ತಿಳಿಯಲಸಾಧ್ಯ. ಶ್ರುತಿ, ಸ್ಮೃತಿ, ಪುರಾಣ. ಇತಿಹಾಸ, ಸತ್ಪುರುಷರ ವಚನ ಮುಂತಾದವುಗಳು ಮಹಾತ್ಮರ ಮಹಿಮೆಯಿಂದಲೇ ತುಂಬಿ ತುಳುಕುತ್ತಿರುವವು. ಇವರು ಜನಿಸಿದ ವಂಶವೇ ಉದ್ಧಾರವಾಗುವದು. ಇವರು ವಾಸಿಸಿದ ಸ್ಥಳವೇ ಪುಣ್ಯಮಯವಾದ ಕ್ಷೇತ್ರವೆನಿಸುವದು. ಇವರ ಸಂಚಾರ ಪ್ರಭಾವದಿಂದ ತೀರ್ಥಗಳು ಪವಿತ್ರವಾಗುವವು. ಇಂಥ ಪೂಜ್ಯರ ಸಮೀಪದಲ್ಲಿ ಪೂಜ್ಯ ಬುದ್ಧಿಯಿಂದಲೂ ಭಯಭಕ್ತಿಯಿಂದಲೂ ನಡೆದುಕೊಂಡು ಅವರ ಆಜ್ಞೆಯನ್ನು ಪಾಲಿಸಿ ನಡೆದರೆ ಅವರು ಸಂತುಷ್ಟರಾಗಿ ನಿಜವಾದ ಮಂಗಲವನ್ನೇ ಆಶೀರ್ವದಿಸುವರು.

ಪೂಜ್ಯರ ವಿಷಯದಲ್ಲಿ ನಾವು ಅನಾದರವನ್ನು ತೋರಿಸಿದರೆ ಅದರಿಂದ ಅವರು ಅಸಂತುಷ್ಟರಾಗಿ ನಮಗೆ ಅಶ್ರೇಯಸ್ಸನ್ನು ಬಯಸದೆ ಇದ್ದರೂ ದೇವರು ನಮಗೆ ತಕ್ಕ ಶಾಸನವನ್ನು ಮಾಡುವನು ಯಾಕೆಂದರೆ ಎಲ್ಲಿ ಪೂಜ್ಯತ್ವವಿದೆಯೋ ಅಲ್ಲಿ ದೇವತ್ವವೂ ಇದೆ. ದೇವತಾಂಶವಿಲ್ಲದೆ ಪೂಜ್ಯತ್ವ ಬರುವುದಿಲ್ಲ. ದೇವತಾಂಶಕ್ಕೆ ಅಪಮಾನವನ್ನು ಮಾಡಿದರೆ ದೇವರು ಕ್ರುದ್ಧನಾಗುವನು. ದೇವತಾ ಕ್ರೋಧವು ಬಹಳ ಹಾನಿಕರವು. ಆದ್ದರಿಂದ ಮನುಷ್ಯರು ಪೂಜ್ಯತೆಯನ್ನು ಗೌರವಿಸಬೇಕೆಂದೇ ವೇದವು ಉಪದೇಶಮಾಡಿರುವದು.

ಮಹಾತ್ಮರಾಗಲಿಕ್ಕೆ ಉಪಾಯ— ಪರಮಾತ್ಮನನ್ನು ಅನನ್ಯಭಾವದಿಂದ ಶರಣುಹೋಗುವದೇ ಮುಖ್ಯೋಪಾಯ. ಒಮ್ಮೆ ಶರಣೆಂದರೆ ಸಾಕು. ಅಂಥ ಸಮಸ್ತರಿಗೂ ಅಭಯವನ್ನು ಕೊಡುವೆನೆಂದು ಭಗವಂತನು ಗೀತೆಯಲ್ಲಿ ||ಸಕೃದೇವ ಪ್ರಪನ್ನಾಯ ತವಾಸ್ಮೀತಿಚಯಾಚತೆ| ಅಭಯಂ ಸರ್ವ ಭೂತೇಭ್ಯೋ ದದಾಮ್ಯೇತದ್ವ್ರತಂಮಮ|| ಈ ಪ್ರಕಾರವಾಗಿ ಹೇಳಿರುವನು. ಶರಣೆಂಬ ಮಾತು ಅಷ್ಟು ಮನೋಹರವಾಗಿರುವದು. ಈ ಶರಣೆಂಬ ಮಾತು ಮನುಷ್ಯನ ಹೃದಯದಿಂದ ಹೊರಡಬೇಕಾದರೆ ಆ ಹೃದಯದ ಮೇಲೆ ಎಷ್ಟೋ ಉತ್ತಮ ಸಂಸ್ಕಾರಗಳು ಬೇಕಾಗುತ್ತವೆ. ಸಂಸ್ಕಾರಗಳಾಗಬೇಕಾದರೆ ಸತ್ಪುರುಷರ ಸಹವಾಸವು ಅವಶ್ಯವಾಗಿಬೇಕು. ಸತ್ಪುರುಷರ ಸಹವಾಸವು ದೊರೆಯಬೇಕಾದರೆ ಪರಮಾತ್ಮನ ಕೃಪೆಯಿಂದಲ್ಲದೆ ಅನ್ಯಥಾ ಆಗಲಾರದು. ಅಂತೆಯೇ ಮಹಾ ಶಿವಯೋಗಿಗಳು ಶಿವಶರಣರು ಸಾಧುಗಳು ಸಂತರು ಪರಮಾತ್ಮನನ್ನು ಅನನ್ಯಭಾವದಿಂದ ಶರಣುಹೋಗಿ ಮುಕ್ತರಾದರು. ಮತ್ತು|| ಆತ್ಮವತ್ ಸರ್ವಭೂತಾನಿ ಯಃ ಪಶ್ಯತಿ ಸೋಪಿ ಮಹಾತ್ಮಾ|| ಅಂದರೆ ತನ್ನಂತೆ ಸಕಲ ಪ್ರಾಣಿಗಳನ್ನು ತಿಳಿದು ಆತ್ಮಪ್ರತಿಷ್ಠೆಗೆ ತಿಲಾಂಜಲಿಯನ್ನೆರೆದು ನಿರಭಿಮಾನಿಯಾಗಿ ಜಗತ್ತಿನ ಕಲ್ಯಾಣದದೆಶೆಯಿಂದ ಹಗಲಿರುಳು ತ್ರಿಕರಣಪೂರ್ವಕವಾಗಿ ಯಾವನು ಯತ್ನಿಸುವನೊ ಅವನೇ ಮಹಾತ್ಮ ಅವನೆಜಗನ್ಮಾನ್ಯ. ಈ ರೀತಿಯಾಗಿ ತನುಮನಧನದಿಂದ ಜಗತ್ತಿನ ಕಲ್ಯಾಣವೆ ಧ್ಯೇಯವೆಂದು ಭಾವಿಸಿ ಯತ್ನಿಸುತ್ತಿರುವ ಗಾಂಧಿ ನೆಹರು ಈ ಮಹಾತ್ಮರ ಮಾಲಿಕೆಯಲ್ಲಿ ಶೋಭಿಸುತ್ತಿರುವದು ಸರ್ವಶ್ರುತವಾಗಿದೆ. ವಾಚಕರೇ ಅಂಥ ಮಹಾತ್ಮರ ಆಚರಣೆಯನ್ನು ಅನುಸರಿಸಿ ನಿಜವಾದ ಸುಖವನ್ನು ಹೊಂದುವಿರೆಂದು ನಂಬಿದ್ದೇನೆ.

## ಹಿಂದು ಜಾತಿಗೆ ಇದ್ದ ದೊಡ್ಡ ರೋಗ ಯಾವುದು?

### ಘನಪಂಡಿತರ ಅಭಿಪ್ರಾಯ.

**ಮಹಾತ್ಮಾ ಬುದ್ಧ—** ಗಂಗಾ, ಯಮುನಾ ಮೊದಲಾದ ದೊಡ್ಡ ದೊಡ್ಡ ನದಿಗಳು ಬೇರೆ ಬೇರೆ ಉನ್ನತ ಸ್ಥಳಗಳಲ್ಲಿ ಹುಟ್ಟಿ ಕಡೆಗೆ ಸಮುದ್ರದಲ್ಲಿ ಕೂಡಿ ಹೇಗೆ ತಮ್ಮ ಅಸ್ತಿತ್ವವನ್ನು ನಾಶಮಾಡಿಕೊಳ್ಳುತ್ತವೆಯೋ ಹಾಗೆಯೇ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮೊದಲಾದ ಜಾತಿಗಳು ನಿಜವಾದ ಧರ್ಮವನ್ನು ಸ್ವೀಕರಿಸಿದನಂತರ ತಮ್ಮ ತಮ್ಮ ಗೋತ್ರ ಸೂತ್ರಗಳನ್ನು ಬಿಟ್ಟು ಐಕ್ಯವಾಗುತ್ತವೆ. ಜನ್ಮದಿಂದಲೇ ಬ್ರಾಹ್ಮಣ ಅಥವಾ ಚಾಂಡಾಲನಾಗುವುದಿಲ್ಲ. ಕರ್ಮಗಳ ಮೇಲಿಂದ ಬ್ರಾಹ್ಮಣ ಮತ್ತು ಕ್ಷತ್ರಿಯ ಎಂಬ ಹೆಸರು ಬರುತ್ತವೆ.

**ಮಹಾತ್ಮಾ ಕಬೀರ—** ಮಹಾ ಪುರುಷನಿಗೆ ನೀನು ಯಾವ ಜಾತಿಯವನೆಂದು ನೀನು ಎಂದೂ ಕೇಳಬೇಡ. ಯಾಕೆಂದರೆ ದೇವರ ರಾಜ್ಯದಲ್ಲಿ ಜಾತಿಯ ನಿರ್ಬಂಧವಿಲ್ಲ.

**ಗೋರಕನಾಥ—** ನಾನು ನಿಜವಾಗಿ ಹೇಳುವುದೇನೆಂದರೆ ದೇವರ (ಧರ್ಮ) ರಾಜ್ಯದಲ್ಲಿ ಜಾತಿ ಮತ್ತು ಜನ್ಮಗಳನ್ನು ಎಣಿಸುವುದಿಲ್ಲ. ಅವನ ಕರ್ಮಗಳ ಮೇಲಿಂದ ಜಾತಿ ಮತ್ತು ಯೋಗ್ಯತೆಗಳು ಅವಲಂಬಿಸಿರುತ್ತವೆ.

**ಡಾ. ರವೀಂದ್ರನಾಥ ಟಾಗೋರ—** ನಾನು ಹಿಂದುಗಳಿಗೆ ತಿಳಿಸುವುದೇನೆಂದರೆ— ನೀವು ಧರ್ಮದಲ್ಲಿ ಜಾತಿಯನ್ನು ಸೇರಿಸಿರುವುದರಿಂದ ಧರ್ಮದ ನಿಜತತ್ವವೇ ನಿಮಗೆ ತಿಳಿಯದಂತಾಗಿದೆ.

**ಶ್ರೀ ಸ್ವಾಮಿ ರಾಮತೀರ್ಥರು—** ಮನುವಿನ ಕಾಲದಿಂದ ಇಲ್ಲಿಯವರೆಗೆ ಎಷ್ಟೋ ಬದಲಾವಣೆಗಳಾಗಿವೆ. ಆದರೆ ಭಾರತದ ಧಾರ್ಮಿಕ ಜನರು ಇಲ್ಲಿಯವರೆಗೂ ಆ ಕಾಲದ ಅವನ ಹೇಳಿಕೆಗಳಿಗೆ ಗುಲಾಮರಾಗಿದ್ದಾರೆ. ಮನು ಮೊದಲು ತನ್ನ ಕಾಲದ ಜನರಿಗಾಗಿ ಆ ಕಟ್ಟಳೆಗಳನ್ನು ನಿರ್ಮಿಸಿದ್ದನು. ನವ ವೀರ ತರುಣರೇ, ದೇಶವು ಈಗ ನಿಮ್ಮಿಂದ ಅಪೇಕ್ಷಿಸುವುದೇನೆಂದರೆ— ಜಾತಿಯ ಕಟ್ಟನ್ನು ಬಿಚ್ಚೊಗೆದು ಬನ್ನಿರಿ.

**ಶ್ರೀ. ಮೋತಿಲಾಲ ನೆಹರು—** ಹಿಂದುಸ್ಥಾನವು ತನ್ನಲ್ಲಿರುವ ಜಾತಿಗಳನ್ನು ಎಲ್ಲಿಯ ವರೆಗೆ ತೆಗೆದುಹಾಕುವುದಿಲ್ಲವೋ ಅಲ್ಲಿಯವರೆಗೆ ಜಗತ್ತಿನ ಶ್ರೇಷ್ಠ ರಾಷ್ಟ್ರಗಳಲ್ಲಿ ಸೇರಲು ಇದು ಸಮರ್ಥವಾಗುವುದಿಲ್ಲ.

"ಕ್ರಾಂತಿ"

---

## ಬ್ಯಾ. ಜಿನ್ನಾರವರ ದರ್ಪಿನ ಮಾತು.

ಬ್ಯಾ. ಜಿನ್ನಾರವರು ಗಯಾದಲ್ಲಿ ಮುಸಲ್ಮಾನ್ ವಿದ್ಯಾರ್ಥಿಗಳ ವಿಜ್ಞಾಪನಾ ಪತ್ರಿಕೆಗೆ ಉತ್ತರವಾಗಿ ಹೀಗೆ ಹೇಳಿದರು—

"ಇಸ್ಲಾಂ ಧರ್ಮವು ಸಮಾನತೆ, ಸ್ವಾತಂತ್ರ್ಯತೆ ಮತ್ತು ಬಂಧುತ್ವಗಳಿಗಾಗಿಯೇ ಇದೆ. ಕಾಂಗ್ರೆಸ್ ಕಣ್ಣು ತೆರೆಯುವಂತೆಯೂ ಅದು ತಣ್ಣಗಾಗುವಂತೆಯೂ ಒಂಬತ್ತು ಕೋಟಿ ಮುಸಲ್ಮಾನರು ಒಟ್ಟುಗೂಡಿ ಪ್ರಯತ್ನಿಸಬೇಕು."

ಪ್ರಬಲವಾದ ಬ್ರಿಟಿಶ್ ಸರಕಾರವು ಕೂಡಾ ಕಾಂಗ್ರೆಸ್ಸಿಗೆ ವನ್ನತೆಕೊಡಬೇಕಾದ ಪ್ರಸಂಗ ಬಂದಿತೆಂಬುದನ್ನು ಜಿನ್ನಾಸಾಹೇಬರು ಮರೆತು ವಿದ್ಯಾರ್ಥಿಗಳ ಬಿಸಿರಕ್ತದಲ್ಲಿ ಅರಾಷ್ಟ್ರೀಯ ಮತ್ತು ಜಾತ್ಯಂಧತೆಯ ವಿಷವನ್ನು ಕೂಡಿಸಲು ಪ್ರಯತ್ನಿಸುತ್ತಿದ್ದಾರೆ.

---

## ಸ್ಪೇನದಲ್ಲಿ ನರಯಜ್ಞ !

ಸ್ಪೇನದಲ್ಲಿ ನಡೆದಿರುವ ಘನಘೋರ ಯುದ್ಧವು ಕಳೆದವಾರ ಉಗ್ರ ಸ್ವರೂಪವನ್ನು ಹೊಂದಿತು. ಟೆರೂಲದ ಸುತ್ತಲೂ ದೊಂಬೆಗಾರರ ಸೈನ್ಯಕ್ಕೂ ಸರಕಾರದ ಸೈನ್ಯಕ್ಕೂ ಭಯಂಕರ ಯುದ್ಧವಾಯಿತು. ಈ ಯುದ್ಧದಲ್ಲಿ ೧ ಲಕ್ಷ ೮೦ ಸಾವಿರ ಸೈನ್ಯ ಸೇರಿದ್ದಿತು. ಸ್ಪೇನದಲ್ಲಿ ನಡೆದ ಈ ವರೆಗಿನ ಯುದ್ಧದಲ್ಲಿ ಇದೇ ಬಹು ದೊಡ್ಡದು. ಜನರಲ್ ಫ್ರಾಂಕೊ ತನ್ನ ಎಲ್ಲ ಸೈನ್ಯವನ್ನೂ ಇಲ್ಲಿ ಕೂಡಿ ಹಾಕಿದ್ದನು.

---

## ೫೦ ಲಕ್ಷ ಕಾಂಗ್ರೆಸ್ ಮೆಂಬರರನ್ನು ಒಂದೇ ದಿನದಲ್ಲಿ ಮಾಡಬಹುದು.

ಪಂಡಿತ ಜವಾಹರಲಾಲರು ಮುಂಬೈಯಲ್ಲಿ ಒಂದು ಭಾಷಣವನ್ನು ಮಾಡಿದರು. ಆಗ ಹೀಗೆ ಹೇಳಿದರು—

"ಕಾಂಗ್ರೆಸ್ಸಿಗೆ ಮೆಂಬರರ ಸಂಖ್ಯೆಯನ್ನು ಹೆಚ್ಚು ಮಾಡುವುದರಲ್ಲಿಯೇ ಪ್ರಯೋಜನವೇನೂ ಇಲ್ಲ. ನಾನು ಒಂದೇ ದಿನದಲ್ಲಿ ೫೦ ಲಕ್ಷ ಜನರನ್ನು ಕಾಂಗ್ರೆಸ್ ಮೆಂಬರರನ್ನಾಗಿ ಮಾಡಬಹುದು. ಇಂಥ ಮೆಂಬರರಿಂದ ಪ್ರಯೋಜನವಿಲ್ಲ. ಕಾಂಗ್ರೆಸ್ಸಿನ ರೀತಿ ನೀತಿಗಳನ್ನು ತಿಳಿದುಕೊಂಡು ಅವರು ತಮ್ಮ ಶಕ್ತಿಯನ್ನು ಕಾಂಗ್ರೆಸ್ಸಿಗೆ ಉಪಯೋಗಿಸುವವರಾಗಿರಬೇಕು. ಹಾಗೆ ಮಾಡದೆ ಇದ್ದವರಿಂದ ಕಾಂಗ್ರೆಸ್ಸಿನ ಕಾರ್ಯಕ್ಕೆ ಪ್ರತಿಬಂಧವೇ ಆಗಬಹುದು. ಆದಕಾರಣ ಈ ವಿಷಯದಲ್ಲಿ ಎಚ್ಚರಿರಲಿ. ಕಾಂಗ್ರೆಸ್ ಕಾರ್ಯ ನಿರ್ವಾಹಕರು ಕಾಂಗ್ರೆಸ್ಸಿನ ರೀತಿ ನೀತಿಗಳಿಗೆ ವಿರೋಧವಾಗಿ ನಡೆದು ಅದರ ಪವಿತ್ರತೆಯನ್ನು ಭ್ರಷ್ಟಗೊಳಿಸಕೂಡದು.

ಕಾಂಗ್ರೆಸ್ ಅಧಿಕಾರವನ್ನು ಹಿಡಿದು ಅದು ಸ್ವಾತಂತ್ರ್ಯದ ಹೋರಾಟವನ್ನೇ ಈಗ ನಡೆಸಿದೆ. ಇದೊಂದು ವಿಧವಾದ ಹೋರಾಟ. ಕಾಂಗ್ರೆಸ್ ಮಂತ್ರಿಮಂಡಲಕ್ಕೆ ಸಹಾಯ ಮಾಡುವುದು ಈ ಹೋರಾಟಕ್ಕೆ ಸಹಾಯ ಮಾಡಿದಂತೆಯೇ ಸರಿ.

---

## ಜಪಾನಿಗಳ ಉತ್ಸಾಹ.

ಜಪಾನವು ಚೀನ ದೇಶವನ್ನು ನುಂಗುತ್ತಲೇ ಇದೆ. ಚೀನ ದೇಶದ ಧರ್ಮ ಸ್ಥಾಪಕನೆಂದು ಹೆಸರು ಹೊಂದಿರುವ ಕನ್ಫ್ಯೂಸಿಯಸ್‌ನ ಜನ್ಮಸ್ಥಳವಾದ ಚುಫು ನಗರವನ್ನು ಜಪಾನಿಗಳು ಆಕ್ರಮಿಸಿಕೊಂಡದ್ದರಿಂದ ಅವರಲ್ಲಿ ಈಗ ಹೆಚ್ಚು ಉತ್ಸಾಹಬಂದಿದೆ.

ಚೀನದ ಸಂಗಡ ಮಾಡುವ ಈಗಿನ ಯುದ್ಧದ ಕಾಲವು ಇನ್ನೂ ಮುಂದರಿಯುವಂತಿದೆ. ಆದಕಾರಣ ಜಪಾನಿಗಳು ಹಣದಿಂದಲೂ ಉತ್ಸಾಹದಿಂದಲೂ ಸರಕಾರಕ್ಕೆ ಹೆಚ್ಚಾದ ಸಹಾಯ ಮಾಡಬೇಕೆಂದು ಜಪಾನಿ ಮಂತ್ರಿಗಳು ತಮ್ಮ ದೇಶದವರಿಗೆ ತಿಳಿಸಿದ್ದಾರೆ.

## ಕುಲ ಕೆಡಿಸುವ ನಿಂದ್ಯ ರೀತಿ.

ಅನೇಕ ಮುಸಲ್ಮಾನರು ಹಿಂದುಗಳಲ್ಲಿಯ ನಾನಾ ಪಂಗಡಗಳ ಅಜ್ಞ ಜನರನ್ನು ಕುಲ ಕೆಡಿಸಲು ವಿಚಿತ್ರ ಪ್ರಯತ್ನಗಳನ್ನು ಮಾಡುತ್ತಿದ್ದಾರೆ. ಹಿಂದಕ್ಕೆ ಶಿದ್ದೀಕ ಸಾಹೇಬರು ಚೆನ್ನಬಸವಣ್ಣನ ಅವತಾರವೆಂದು ಕರ್ನಾಟಕದ ನಾನಾ ಭಾಗಗಳಲ್ಲಿ ಸುಳಿದಾಡಿ ಕೊನೆಗೆ ನೈಜಾಮು ರಾಜ್ಯದಲ್ಲಿ ಸೇರಿಕೊಳ್ಳಬೇಕಾಯಿತಷ್ಟೆ.

ಸೊಲ್ಲಾಪುರದಲ್ಲಿ ಹೊರಡುವ "ವೈದಿಕ ಸಂದೇಶ" ಎಂಬ ಪತ್ರಿಕೆಯ ತಾ. ೨೭-೧೨-೩೮ ನೆಯ ಸಂಚಿಕೆಯಲ್ಲಿ ಹೀಗೆ ಪ್ರಕಟವಾಗಿದೆ—

"ಮೌಲಾನಾ ಗುಲಾಮು ಅಹಮ್ಮದುಲ್ಲಾ ಸಾಹೇಬ ದೆಹಲವಿ ಇವರು ಪೇಶವಾ ಮಾಸಿಕ ದೆಹಲಿ ರಸೂಲ ನಂಬರದಲ್ಲಿ ಬಸವೇಶ್ವರನು ಮರಣ ಕಾಲದಲ್ಲಿ ಕಲಮಾ ಓದಿದನು. ಲಿಂಗಾಯತರ ಧರ್ಮ ಪುಸ್ತಕವಾದ ಶರಣ ಲೀಲಾಮೃತದ ೩೧೯ ನೆಯ ಪುಟದಲ್ಲಿದೆ."

ಈಗ ಇರತಕ್ಕ ನಾ. ಆಗಾಖಾನರು ಕೃಷ್ಣನ ಅವತಾರಿಗಳೆಂದು ಬರೆಯುವಂಥವರಿಗೆ ಹಿಂದಕ್ಕೆ ಆಗಿಹೋದ ಬಸವಣ್ಣನವರು ಕಲಮಾ ಓದಿದ್ದರೆಂದು ಬರೆಯುವುದೇನು ಕಷ್ಟ?

ಹಿಂದು ಧರ್ಮದವರನ್ನು ತಮ್ಮ ಮತಕ್ಕೆ ಎಳೆದುಕೊಳ್ಳಲು ಮಾಡುತ್ತಿರುವ ನಿಂದ್ಯ ಪ್ರಯತ್ನಗಳಲ್ಲಿ ಇಂಥ ಸುಳ್ಳು ಸಂಗತಿಗಳನ್ನು ಬರೆದು ಜನರಿಗೆ ಮೋಸಗೊಳಿಸುವುದೂ ಒಂದು.

ಇದರಿಂದ ಹಿಂದುಗಳು ಜಾಗೃತರಾಗಿ ತಮ್ಮ ಕುಲ ಕೆಡಿಸಲು ಯಾರು ಎಂತೆಂತಹ ನೀಚ ಕೃತ್ಯಗಳನ್ನು ಕೂಡಾ ಮಾಡುತ್ತಿದ್ದಾರೆಂಬುದನ್ನು ಲಕ್ಷಿಸಬೇಕು. ಇಂಥ ಹೇಯವಾದ ಪ್ರಯತ್ನಗಳು ನಿಲ್ಲಲಿಕ್ಕೆ ಹಿಂದು ಸಂಘಟನೆಯೇ ಮುಖ್ಯೋಪಾಯವು. ಹಿಂದು ಧರ್ಮದ ಯಾವ ಮತ ಪಂಗಡಗಳ ವಿಭೂತಿಯ ವಿಷಯದಲ್ಲಾದರೂ ಸಕಲ ಹಿಂದುಗಳಿಗೂ ಆದರಾಭಿಮಾನಗಳಿದ್ದುದೇ ಆದರೆ ಅನ್ಯ ಮತಗಳ ಇಂಥ ಮೋಸಗಾರರ ಪ್ರಯತ್ನಕ್ಕೆ ಅವಕಾಶವೇ ದೊರೆಯುವುದಿಲ್ಲ. ನಮ್ಮಲ್ಲಿಯ ವಿಘಟನೆಯೇ ಅನ್ಯರ ಆಕ್ರಮಣಕ್ಕೆ ಆವೇಶವನ್ನು ಉಂಟು ಮಾಡುವುದಾಗಿದೆ.

## ಡಾ. ಆಂಬೇಡಕರರ ಪ್ರಶ್ನೆ.

ಪಂಢರಪುರದಲ್ಲಿ ಸೊಲ್ಲಾಪುರ ಜಿಲ್ಲಾ ಹೊಲೆಯರ ರಾಜಕೀಯ ಪರಿಷತ್ತು ಡಾ. ಆಂಬೇಡಕರರ ಅಧ್ಯಕ್ಷತೆಯಲ್ಲಿ ಕಳೆದ ೩೧ ನೆಯ ತಾರೀಖಿನ ದಿವಸ ಕೂಡಿದ್ದಿತು. ಆಗ ಇವರು ತಮ್ಮ ಭಾಷಣದಲ್ಲಿ ತಮ್ಮ ಜನರನ್ನು ಕುರಿತು ಹೀಗೆ ಪ್ರಶ್ನೆಮಾಡಿದರು—

"ನಮ್ಮ ಪೂರ್ವಜರು ಮತ್ತು ನಾವು ಹಿಂದುಧರ್ಮಕ್ಕೆ ಹೊಂದಿದವರೆಂದು ತಿಳಿದುಕೊಳ್ಳುತ್ತಾಬಂದರೂ ಆ ಧರ್ಮದ ಇತರ ಜನರು ನಮ್ಮನ್ನು ಮನುಷ್ಯರಂತೆ ಆದರೂ ಕಾಣುತ್ತಿದ್ದಾರೆಯೆ? ದನಗಳಿಗೆ ಯಾವ ದಯೆ ಮತ್ತು ಸಹಾನುಭೂತಿಗಳನ್ನು ತೋರಿಸುತ್ತಿದ್ದಾರೆಯೋ ಅವುಗಳನ್ನಾದರೂ ನಮಗೆ ತೋರಿಸುತ್ತಿದ್ದಾರೆಯೆ? ಇಂಥ ಧರ್ಮದಲ್ಲಿ ಇರಬೇಕೋ, ಬೇಡವೋ, ಎಂಬುದೇ ಮುಖ್ಯ ಪ್ರಶ್ನೆ.

ಈ ವಿಷಯವು ನಮ್ಮ ಆರ್ಥಿಕ ಮತ್ತು ಆತ್ಮೋದ್ಧಾರಗಳಿಗೂ ಸಂಬಂಧಪಟ್ಟಿದೆ."

## ಮೈಸೂರು ನ್ಯಾಷನಲಿಸ್ಟ್ ಪಕ್ಷ.

ಈ ಪಕ್ಷದ ಕೆಲಸ ಕಾರ್ಯಗಳನ್ನು ನೋಡಿಕೊಳ್ಳಲು ಈ ಕೆಳಗೆ ಸೂಚಿಸಲ್ಪಟ್ಟಿರುವ ಮಹನೀಯರನ್ನೊಳಗೊಂಡ ಒಂದು ಸಮಿತಿಯ ರಚನೆಯಾಯಿತು.

ಶ್ರೀಯುತರುಗಳಾದ ೧) ಜಿ. ಶಾಂತವೀರಪ್ಪ (ಕಾರ್ಯದರ್ಶಿ) (೨) ಬಿ. ಎಸ್. ಶಂಕರಪ್ಪ ಶೆಟ್ಟಿ. (೩) ಐ. ಕೆ. ಪುರುಷೋತ್ತಮ ನಾಯಿಡು (ಖಜಾಂಜಿ) (೪) ಡಾ|| ರಾಯನ್ (೫) ಎಂ. ಸಿ. ಲಿಂಗೇಗೌಡ. (೬) ಖಾನ್ ಬಹಾದ್ದೂರ್ ಮಹಮದ್ ಅಬ್ಬಾಸ್ ಖಾನ್ (೭) ಬಿ. ಎನ್. ವಿಜಯದೇವ. (೮) ಕೆ. ನಾರಾಯಣ ಅಯ್ಯಂಗಾರ್ (ಜಂಟಿ ಕಾರ್ಯದರ್ಶಿ. (೯) ಎಂ. ಶಂಕರಲಿಂಗೇಗೌಡ.

ಮೈಸೂರಿನಲ್ಲಿ ಶ್ರೀ, ಆಂಬಳೆ ಸುಬ್ರಹ್ಮಣ್ಯ ಅಯ್ಯರ್‌ರವರ ಅಧ್ಯಕ್ಷತೆಯಲ್ಲಿ ಒಂದು ಪಕ್ಷವನ್ನು ಸ್ಥಾಪಿಸಿರುವುದನ್ನು ಶ್ಲಾಘಿಸಿ ಎರಡು ಪಕ್ಷಗಳ ಉದ್ದೇಶವೂ ಒಂದೇ ಆಗಿರುವುದರಿಂದ ಅವೆರಡೂ ಸಹಕರಿಸಿ ಕೆಲಸಮಾಡಬೇಕೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಲಾಯಿತು.

## ಸ್ವಾತಂತ್ರ್ಯವೀರರು ಹೀಗೆ ಸಾರಿದರು.

ಹಿಂದು ಮಹಾಸಭೆಯ ಅಧ್ಯಕ್ಷರಾದ ಬ್ಯಾ. ಸಾವರಕರರು ಮಹಾಸಭೆಯ ಉಪಸಂಹಾರಾತ್ಮಕ ಭಾಷಣದಲ್ಲಿ ಹೀಗೆ ಹೇಳಿದರು—

"ಈ ಮಹಾಸಭೆಯ ಕಾರ್ಯವು ಜಯಪ್ರದವಾಗಿ ನಡೆಯುವಂತೆ ಪ್ರಯತ್ನಪಟ್ಟ ಸ್ವಾಗತಸಂಘದವರಿಗೂ ಸಕಲ ಪ್ರತಿನಿಧಿಗಳಿಗೂ ನಾನು ಹೃದಯಪೂರ್ವಕ ಅಭಿನಂದಿಸುತ್ತೇನೆ. ನೀವು ಹಿಂದು ಧರ್ಮ ಮತ್ತು ಸಂಸ್ಕೃತಿಗಳ ಸಂರಕ್ಷಣೆಗೆ ಪ್ರಾಣವನ್ನು ಕೂಡಾ ಅರ್ಪಿಸಲು ಸಿದ್ಧರಿದ್ದೀರೆಂದೇ ನಾನು ತಿಳಿದಿದ್ದೇನೆ.

ಕಾಂಗ್ರೆಸ್ಸಿನ ವಿಷಯದಲ್ಲಿ ಗಾಂಧೀಜಿ ಮತ್ತು ನೆಹರು ಇವರಿಗೆ ಎಷ್ಟು ಆದರಾಭಿಮಾನಗಳಿವೆಯೋ ಅಷ್ಟೇ ನನಗಾದರೂ ಇವೆ. ಆದರೆ ಕಾಂಗ್ರೆಸ್ಸಿನ ಧೋರಣದ ಕೆಲವು ಅಂಶಗಳಲ್ಲಿ ನಮಗೆ ಮತಭೇದವಿದೆ. ಸಾರ್ವತ್ರಿಕವಾದ ಕಾಂಗ್ರೆಸ್ಸಿನ ಎಲ್ಲ ಕಾರ್ಯಗಳಿಗೂ ನಮ್ಮ ಸಹಾನುಭೂತಿಯು ಇದ್ದೇ ಇದೆ.

ಆದರೆ ಕಾಂಗ್ರೆಸ್ಸು ಹಿಂದುಗಳ ಹಕ್ಕು ಬಾಧ್ಯತೆಗಳಿಗೆ ಪ್ರತಿಬಂಧವನ್ನು ತರುವುದಾದರೆ ನಾವು ಅದನ್ನು ಎದುರಿಸದೆ ಬಿಡುವುದಿಲ್ಲ. ಹಿಂದುಧರ್ಮ ಸಂಸ್ಕೃತಿಗಳನ್ನು ಸಂರಕ್ಷಿಸುವ ಭಾರವು ಹಿಂದು ಜನಸಾಮಾನ್ಯದ ಮೇಲೆಯೇ ಇದೆ. ಹಿಂದು ಹಕ್ಕುಬಾಧ್ಯತೆಗಳ ರಕ್ಷಣೆಯಲ್ಲಿ ಶ್ರದ್ಧೆಯುಳ್ಳವರನ್ನೇ ನೀವು ಅಸೆಂಬ್ಲಿ, ಕೌನ್ಸಿಲ್ಲುಗಳಿಗೆ ಆರಿಸಿ ಕೊಡಿರಿ. ಹಾಗೆ ಮಾಡಿದರೆ ನಿಮಗೆ ಭಯವಿಲ್ಲ."

—ಲಾಹೋರದಿಂದ ೧೫ ಮೈಲು ದೂರದಲ್ಲಿರುವ ಅತ್ತಾರೀಸರೋಪಾ ಎಂಬ ಗ್ರಾಮದಲ್ಲಿ ಶೀಖ-ಮುಸಲ್ಮಾನರಿಗೆ ಹೊಡೆದಾಟವಾಗಿ ಒಬ್ಬ ಮುಸಲ್ಮಾನನು ಮೃತಪಟ್ಟನು. ಏಳು ಜನರು ಗಾಯ ಹೊಂದಿದರು.

—ಜಪಾನಿನಲ್ಲಿ ಒಂದು ಸೀನೇಮಾಗೃಹಕ್ಕೆ ಬೆಂಕಿಹತ್ತಿ ೭೮ ಜನರು ಮೃತಪಟ್ಟರು. ೬೬ ಜನಗಳಿಗೆ ಗಾಯವಾಯಿತು.

# ವರ್ಕಿಂಗ್ ಕಮಿಟಿಯ ಕಾರ್ಯಕಲಾಪ.




### ಮೈಸೂರು ಸರಕಾರದ ದಬ್ಬಾಳಿಕೆ.

ಮುಂಬೈಯಲ್ಲಿ ತಾ. ೨-೧-೩೮ ನೆಯ ದಿವಸ ಶ್ರೀ. ಭುಲಾಭಾಯಿಯವರ ಭವನದಲ್ಲಿ ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಕಾರ್ಯ ಪ್ರಾರಂಭವಾಯಿತು. ಶ್ರೀ. ಸುಭಾಷಚಂದ್ರ ಬೋಸ್ ಖಾನ ಅಬ್ದುಲ್ ಗಫಾರಖಾನರ ವಿನಾ ಎಲ್ಲಾ ಸದಸ್ಯರೂ ಕಮಿಟಿಗೆ ಬಂದಿದ್ದರು.

ಬ್ಯಾ. ಜಿನ್ನಾರವರು ಕಲಕತ್ತಾದಲ್ಲಿಯ ತಮ್ಮ ಭಾಷಣದಲ್ಲಿ ಸೂಚಿಸಿದಂತೆ ಮುಸಲ್ಮಾನರ ಹಕ್ಕುಬಾಧ್ಯತೆಗಳ ಸಂರಕ್ಷಣೆ ಸಂಬಂಧವಾಗಿ ಕಾಂಗ್ರೆಸ್ ಆಲೋಚಿಸಲು ಸಿದ್ಧವಾಗಿದೆಯೆಂದೂ ಈ ಮುಂಚೆಯೇ ಅದು ತನ್ನ ಧೋರಣವನ್ನು ಸ್ಪಷ್ಟಪಡಿಸಿದೆಯೆಂದೂ ಕಾಂಗ್ರೆಸ್ಸಿನ ಅಧ್ಯಕ್ಷರಾದ ಪಂಡಿತ ನೆಹರುರವರು ಪ್ರಕಟಿಸಿದ್ದಾರೆ.

ಹಿಂದು-ಮುಸಲ್ಮಾನರ ಐಕಮತ್ಯದ ವಿಚಾರವಾಗಿ ಪುನಃ ಪ್ರಯತ್ನಿಸಲು ಪಂಡಿತ ನೆಹರುರವರು ಉದ್ಯುಕ್ತರಾಗಿ ಮಹಾತ್ಮಾ ಗಾಂಧಿಯವರ ಕಡೆ ಹೋಗಿ ಒಂದು ತಾಸು ಸಂಭಾಷಿಸಿದರು. ಬ್ಯಾ. ಜಿನ್ನಾರವರು ಈಗಲಾದರೂ ಇವರ ಪ್ರಯತ್ನ ಫಲಕಾರಿಯಾಗುವಂತೆ ಮಾಡುವರೋ ?

ಕಲಕತ್ತಾದಲ್ಲಿ ಕಾಂಗ್ರೆಸ್ ಕಮಿಟಿಯು ಕೂಡಿದಾಗ ಮೈಸೂರು ಸರಕಾರವು ಕಾಂಗ್ರೆಸ್ಸಿನ ಮೇಲೆ ನಡೆಸಿದ ದಬ್ಬಾಳಿಕೆಯ ಕುರಿತು ನಿರ್ಣಯವನ್ನು ಮಾಡಿದ್ದಿತಷ್ಟೆ. ಆ ವಿಚಾರವಾಗಿ ಗಾಂಧೀಜಿಯವರು ತಮ್ಮ ಅಭಿಪ್ರಾಯವನ್ನು ತಿಳಿಸಿದನಂತರ ವರ್ಕಿಂಗ್ ಕಮಿಟಿಯ ಸಭಾಸದರ ಕಡೆಗೆ ರಾಷ್ಟ್ರೀಯ ಸಭಾಧ್ಯಕ್ಷರು ಗಾಂಧೀಜಿಯವರ ಭಿನ್ನಾಭಿಪ್ರಾಯಗಳನ್ನು ಸೂಚಿಸಿದರು.

ಆಮೇಲೆ ವರ್ಕಿಂಗ್ ಕಮಿಟಿಯ ಬಹು ಜನ ಸಭಾಸದರು ಗಾಂಧೀಜಿಯವರ ಸೂಚನೆಯೇ ಯೋಗ್ಯವಾದುದೆಂದು ಒಪ್ಪಿಕೊಂಡದ್ದರಿಂದ ಕಲಕತ್ತಾ ಕಾಂಗ್ರೆಸ್ ಕಮಿಟಿಯಲ್ಲಾದ ನಿರ್ಣಯವು ಆಚರಣೆಯಲ್ಲಿ ಬರದೆ ಅದು ಬರವಣಿಗೆಯಲ್ಲಿಯೇ ಉಳಿಯಬೇಕೆಂದು ಗೊತ್ತಾದುದನ್ನು ಶ್ರೀ. ಕೃಪಲಾನಿಯವರು ತಿಳಿಸಿದರು.

ದೇಶಿ ಸಂಸ್ಥಾನಗಳ ಕಾರಭಾರದಲ್ಲಿ ಕಾಂಗ್ರೆಸ್ ಕೈ ಹಾಕಲಿಕ್ಕೆ ಈಗಿನ ನಿಯಮಗಳಂತೆ ಬರುವುದಿಲ್ಲ. ಹರಿಪುರ ಕಾಂಗ್ರೆಸ್ಸಿನಲ್ಲಿ ಈ ವಿಚಾರ ನಡೆದು ಅಲ್ಲಿ ತಿದ್ದುಪಡೆಯಾದರೆ ಮಾತ್ರ ಕಲಕತ್ತಾ ಕಾಂಗ್ರೆಸ್ ಕಮಿಟಿಯ ನಿರ್ಣಯ ಆಚರಣೆಯಲ್ಲಿ ಬರುವದು

ಹಿಂದು-ಮುಸಲ್ಮಾನರ ಐಕಮತ್ಯದ ವಿಷಯಕ್ಕೆ ವರ್ಕಿಂಗ್ ಕಮಿಟಿಯಲ್ಲಿ ತುಂಬಾ ಚರ್ಚೆಯಾಯಿತು. ಹರಿಪುರ ಕಾಂಗ್ರೆಸ್ಸಿನಲ್ಲಿ ಈ ವಿಚಾರವು ಒಂದು ತೀರ್ಮಾನಕ್ಕೆ ಬರುವಂತೆ ತೋರುತ್ತದೆ.

## ಮತ್ತೆ ನೆಹರು-ಜಿನ್ನಾರವರ ವಾದ !

ಒಪ್ಪಂದಕ್ಕೆ ನಿರ್ವಿಕಾರ ಮನಸ್ಸಿನಿಂದ ಬನ್ನಿರೆಂದು ಪಂಡಿತಜಿಯವರು ಸೂಚಿಸಿದ್ದಾರೆ.


ಪಂ. ನೆಹರುರವರು.


ಬ್ಯಾ ಜಿನ್ನಾರವರು.

### ಮಂತ್ರಿಗಳಿಗೆ ಗುಪ್ತ ಪತ್ರ.

ಕಾಂಗ್ರೆಸ್ ಪಾರ್ಲಮೆಂಟರಿ ಬೋರ್ಡಿನವರಾದ ಸರದಾರ ಪಟೇಲ, ಶ್ರೀ. ರಾಜೇಂದ್ರ ಬಾಬು, ಶ್ರೀ. ಭುಲಾಭಾಯಿ ದೇಸಾಯಿ, ಮತ್ತು ಮೌ. ಅಜದ್ ಇವರು ಕಾಂಗ್ರೆಸ್ ಪಕ್ಷದ ಮುಖ್ಯ ಮಂತ್ರಿಗಳಿಗೆ ಕೆಲವು ಸೂಚನೆಗಳನ್ನು ಮಾಡಿದ್ದಾರೆ. ಅವು ಗುಪ್ತವಾಗಿರಬೇಕೆಂದು ಪ್ರಕಟಗೊಳಿಸಿಲ್ಲ. ಇಂಥ ಸೂಚನೆಗಳ ಗುಪ್ತ ಪತ್ರವು ವರ್ಕಿಂಗ್ ಕಮಿಟಿಯು ಒಪ್ಪಿಗೆಯನ್ನು ಹೊಂದಿತು.

ಮದ್ರಾಸ್ ಸರಕಾರದ ಮುಖ್ಯ ಮಂತ್ರಿಗಳಾದ ಶ್ರೀ. ರಾಜಗೋಪಾಲಾಚಾರ್ಯರು ಭಾಯಿ ಬಾಟಲಿವಾಲಾರವರ ಮೇಲೆ ಏಕೆ ವ್ಯಾಜ್ಯಮಾಡಬೇಕಾಯಿತೆಂಬುದನ್ನೂ ಸಮತಾವಾದಿಗಳ ವಿಚಾರದಲ್ಲಿ ತಮ್ಮ ಧೋರಣ ಹೇಗಿದೆಯೆಂಬುದನ್ನೂ ವರ್ಕಿಂಗ್ ಕಮಿಟಿಯಲ್ಲಿ ಸ್ಪಷ್ಟೀಕರಿಸಿದರು.

## ವಿನಂತಿ ಪತ್ರ.

ವಿಜಾಪುರ ಜಿಲ್ಲಾ ಒಕ್ಕಲಿಗರ ಸಂಘದ ೧೯೩೪ ನೆ ವರ್ಷದ ವಾರ್ಷಿಕ ಸರ್ವ ಸಾಧಾರಣ ಸಭೆಯು ವಿಜಾಪುರದಲ್ಲಿ ಶ್ರೀ ಸಿದ್ಧೇಶ್ವರ ಗುಡಿಯ ಆವಾರದಲ್ಲಿ ತಾ. ೧೫-೧-೩೪ ನೇ ದಿವಸ ಮಧ್ಯಾನ್ನದ ೩ ಗಂಟೆಗೆ ಕೂಡತಕ್ಕದ್ದದೆ. ಅದಕ್ಕೋಸುಗ ಜಿಲ್ಲೆಯೊಳಗಿನ ಎಲ್ಲ ಒಕ್ಕಲಿಗ ಬಾಂಧವರು ಸದರಿ ಸಭೆಗೆ ಬಂದು ಅದನ್ನು ಯಶಸ್ವಿಯನ್ನಾಗಿ ಮಾಡಬೇಕಾಗಿ ಆಗ್ರಹದ ವಿನಂತಿ ಅದೆ.

ಈ ವರ್ಷದ ಭೀಕರವಾದ ಬರದ ಬಗ್ಗೆ ಎಲ್ಲರೂ ಸಾಮೂಹಿಕ ರೀತಿಯಿಂದ ವಿಚಾರಮಾಡಿ ಯೋಗ್ಯವಾದುದನ್ನು ಹಚ್ಚುವದು ಮುಖ್ಯ ಕರ್ತವ್ಯವದೆ. ಈ ಮೊದಲೇ ತಿಳಿಸಿದ ಮೇರೆಗೆ ಪ್ರತಿಯೊಂದು ಹಳ್ಳಿಯ ಜನರು ನೆರೆದು ತಮ್ಮಲ್ಲಿಯ ಪರಿಸ್ಥಿತಿಯ ಬಗ್ಗೆ ವಿಚಾರ ಮಾಡಿ ಠರಾವುಗಳನ್ನು ಪಾಸುಮಾಡಿ ನೇ. ನಾ. ಗವ್ಹರ್ನರರು ಮುಂಬೈ ನಾ. ಕಂದಾಯದ ಮಂತ್ರಿ ಮುಂಬೈ ಮೆ|| ಕಮಿಶನರ್ ಸಾ|| ಬೆಳಗಾಂವ ಮೆ|| ಕಲೇಕ್ಟರ ಸಾ|| ವಿಜಾಪೂರ ಮೆ|| ಪ್ರೆಸಿಡೆಂಟ ಜಿಲ್ಲಾ ಕಾಂಗ್ರೆಸ್ ಕಮಿಟ ವಿಜಾಪೂರ ಮತ್ತು ನಮ್ಮ ಕಡೆಗೆ ತೀವ್ರ ಕಳಿಸಿಕೊಡಬೇಕು.

ಮೇಲೆ ವಿವರಿಸಿದ ಸಭೆಯಲ್ಲಿ ಚರ್ಚಿಸತಕ್ಕ ವಿಷಯುಗಳು—

(೧) ೧೯೩೪ ನೇ ವರ್ಷದ ಸಂಘದ ಅಮಲದಾರರನ್ನು ಮತ್ತು ವ್ಯವಸ್ಥಾಪಕರನ್ನು ಆರಿಸುವದು.

(೨) ಸಂಘದ ಕಳೆದ ೨ ವರ್ಷಗಳ ವರದಿಯನ್ನು ಓದುವದು ಮತ್ತು ಲೆಖ್ಖ ತಪಾಸಣೆ ವರದಿಯನ್ನು ಓದಿ ಅದನ್ನು ಮಂಜೂರಮಾಡುವದು.

(೩) ಜಿಲ್ಹೆಯಲ್ಲಿ ಬಿದ್ದ ಭಯಂಕರ ಬರದ ಬಗ್ಗೆ ವಿಚಾರಮಾಡುವದು. ಮತ್ತು ಆಗ್ಗೆ ಯೋಗ್ಯ ಯೋಜನೆಯನ್ನು ಕೈಕೊಳ್ಳುವ ಕುರಿತು ಸರಕಾರದವರಿಗೆ ಮತ್ತು ಇತರ ಸಂಸ್ಥೆಗಳಿಗೆ ಬೇಡಿಕೊಳ್ಳುವದು.

(೪) ಒಕ್ಕಲತನದ ಉತ್ಪನ್ನದ ಮೇಲೆ ಸರಕಾರದವರು ಹೇರಬಯಸುವ ಕರದ ಬಗ್ಗೆ ವಿಚಾರಮಾಡುವದು.

(೫) ಜಿಲ್ಹೆಯಲ್ಲಿ ಲ್ಯಾಂಡಮಾರ್ಗೆಜ ಬ್ಯಾಂಕ ಸ್ಥಾಪಿಸುವ ಬಗ್ಗೆ ದಾದು ಹಚ್ಚುವದು.

(೬) ನೇಕನಾಮದಾರ ಗವ್ಹರ್ನರ ಸಾ|| ವಿಜಾಪುರಕ್ಕೆ ಬಂದಾಗ ಅವರಿಗೆ ಮಾನಪತ್ರಕೊಡುವದು ಮತ್ತು ಅವರ ಕಡೆಗೆ ಶಿಷ್ಟ ಮಂಡಳವನ್ನು ಕಳಿಸುವದು.

ಅಧ್ಯಕ್ಷರ ಅಪ್ಪಣೆಯಿಂದ ಇತರ ವಿಷಯಗಳ ವಿಚಾರ.

೩-೧-೩೪ ಗು. ಸಿ. ಸಜ್ಜನ.

ಅಧ್ಯಕ್ಷ ಜಿಲ್ಲಾ ಒಕ್ಕಲಿಗರ ಸಂಘ ವಿಜಾಪುರ.

## ಶಂಕರ ಕಾಲೇಜಿನ ಅವ್ಯವಸ್ಥೆ.

—ಶ್ರೀ—

(ಲೇ. ಹತ್ತೂರು ಮಾಲಿ ಪಾಟೀಲ ಪೊಂಪನಗೌಡರು ಬಿ. ಎ.)

ಸಮಾಜ.ಬಾಂಧವರಿಗೆ ಸೂಚಿಸುವದೇನಂದರೆ— ನೈಜಾಮದಲ್ಲಿರುವ ವೀರಶೈವರಲ್ಲಿ ಅಗ್ರಗಣ್ಯರಾದ ಸಮಾಜೋದ್ಧಾರಕ ಧರ್ಮವೀರ ಶಂಕರಣ್ಣನವರು ಯಾದಗಿರಿಯಲ್ಲಿ ಸ್ಥಾಪನಮಾಡಿರುವ ಕಾಲೇಜು ಪೂರ್ವದಲ್ಲಿ ಅಂದರೆ ಸ್ಥಾಪಿಸಿದ ೫-೬ ವರುಷಗಳ ವರೆಗೆ ಬಹು ಚೆನ್ನಾಗಿ ನಡೆಯಿತು. ಆದರೆ ಸದ್ಯದಲ್ಲಿರುವ ಸ್ಥಿತಿಗೂ ವಿಚಾರದೃಷ್ಟಿಯಿಂದ ನೋಡಿದರೆ ರೂಪಾಯಿಯಲ್ಲಿ ಒಂದು ಆಣೆ ಭಾಗ ಕೂಡ ಇಲ್ಲವೆಂದು ಹೇಳುವದಕ್ಕೆ ಯಾವ ಅಭ್ಯಂತರವಿಲ್ಲ.

ಆ ಮಹನೀಯರು ಸ್ಥಾಪಿಸಿರುವ ಕಾಲೇಜನ್ನು ಅಭಿವೃದ್ಧಿಗೆ ತರತಕ್ಕದ್ದು ಕಾಲೇಜಿನ ಮೆಂಬರ ಜನರ ಕರ್ತವ್ಯವೆಂದು ಹೇಳುವದಕ್ಕೆ ತಿಲಾಂಶವಾದರೂ ಸಂಶಯವಿಲ್ಲ. ಕಾಲೇಜಿನ ಪ್ರಿನ್ಸಿಪಾಲರೇ ಇಲ್ಲೆಂದಮೇಲೆ ಕಾಲೇಜನ್ನುವ ಶಬ್ದವು ಕೂಡಾ ಉಳಿಯಲಿಲ್ಲ. ಅಂದಮೇಲೆ ಎಂಥ ಹೀನಸ್ಥಿತಿಗೆ ಬಂದಿರುವದೆಂಬುದನ್ನು ತಾವೇ ತರ್ಕಿಸತಕ್ಕದ್ದು. ಇದು ಅಲ್ಲದೆ ಹುಬ್ಬಳ್ಳಿ ಗಂಗಾಧರ ಕಾಲೇಜಿನ ಪ್ರಿನ್ಸಪಾಲರಾದ ವೇ|| ಚಂದ್ರಶೇಖರ ಶಾಸ್ತ್ರಿಗಳು ವ್ಯಾಕರಣತೀರ್ಥ ಇವರು ಇರುವ ಕಾಲದಲ್ಲಿ ೯೫ ಜನ ವಿದ್ಯಾರ್ಥಿಗಳು ಈ ಕಾಲದಲ್ಲಿರುವ ವಿದ್ಯಾರ್ಥಿಗಳು ೨೦ ಅಂದಮೇಲೆ ಎಷ್ಟು ಹೀನಸ್ಥಿತಿಯಲ್ಲಿರುವದೆಂದು ಸ್ಪಷ್ಟವಾಗಿ ತೋರುತ್ತದೆ.

ಈ ಜಗತ್ತಿನಲ್ಲಿ ಜೀವವು ಅಸ್ಥಿರವಾದದ್ದು ಧನಯೌವನ ಹೆಂಡರು ಮಕ್ಕಳು ಎಲ್ಲವೂ ಅಸ್ಥಿರವಾದವುಗಳು, ಆದರೆ ಸ್ಥಿರವಾದಂಥಾದ್ದು ಧರ್ಮವು ಎಂದು ತಿಳಿದೆ ಆ ದಂಪತಿಗಳು ಒಂದೂವರೆ ಲಕ್ಷ ರೂಪಾಯಿಗಳನ್ನು ಸಮಾಜಕ್ಕರ್ಪಿಸಿ ಸದಾ ಒಳ್ಳೇ ರೀತಿಯಿಂದ ನಡೆಯಿಸಬೇಕೆಂದು ಹೇಳಿ ಸ್ವರ್ಗಸ್ಥರಾದರು. ಆದರೆ ಈ ಕಾಲದಲ್ಲಿ ಇಂಥ ಹೀನಸ್ಥಿತಿಗೆ ಬಂದಿರುವದೆಂದಮೇಲೆ ಆ ದಂಪತಿಗಳ ಆತ್ಮಕ್ಕೆ ವ್ಯಥೆಯಾಗುತ್ತದೆಂದು ಹೇಳಲು ಯಾವ ಅಡ್ಡಿಯಿಲ್ಲ. ಆದ ಪ್ರಯುಕ್ತ ಕಾಲೇಜಿನ ವ್ಯವಸ್ಥಾಪಕರಿಗೆ ಯಾಚಿಸಿಕೊಳ್ಳುವದೇನೆಂದರೆ ಇನ್ನಾದರೂ ಮನಸ್ಸಿನ ಮೇಲೆ ತಕ್ಕೊಂಡು ಸದಾ ಸುವ್ಯವಸ್ಥೆಯಿಂದ ನಡೆಯಿಸಿಕೊಟ್ಟಂಥ ಧರ್ಮವೀರರ ಆತ್ಮಕ್ಕೆ ಸಮಾಧಾನವನ್ನುಂಟು ಮಾಡಬೇಕೆಂದು ಬೇಡುತ್ತೇನೆ.

# ಕರ್ನಾಟಕ ಒಕ್ಕಲತನದ ಪ್ರದರ್ಶನವು.

## ಬೆಳಗಾವಿ ಬೇರೆ ಬೇರೆ ವಿಭಾಗಗಳ ಪೂರ್ವ ಸಿದ್ಧತೆಯು. ಆಟನೋಟಗಳ ಹಾಗು ಮನರಂಜನೆಯ

## ವಿವಿಧ ಕಾರ್ಯಗಳು.

(ಪ್ರದರ್ಶನ ಪ್ರಕಟನಾ ಶಾಖೆಯಿಂದ.)

ಕರ್ನಾಟಕ ಒಕ್ಕಲತನದ ಪ್ರದರ್ಶನದ ಅನಾವರಣ ಸಮಾರಂಭಕ್ಕೆ ಈಗ ಕೇವಲ ಒಂದು ವಾರ ಉಳಿದಿರುವುದರಿಂದ ಪ್ರದರ್ಶನದ ಸ್ಥಳದ ಮೇಲೆ ಹೇರಿ ಬೇರೆ ವಿಭಾಗಗಳ ಪೂರ್ವ ತಯಾರಿಯು ಒಳ್ಳೇ ಜೋರಿನಿಂದ ಸಾಗಿದೆ. ಮೇಲಾಗಿ ಅಲ್ಲಿ ಪ್ರದರ್ಶನದ ಚಾಲಕರೂ ಬೇರೆ ಬೇರೆ ವಿಭಾಗದ ಕಾರ್ಯದರ್ಶಿಗಳೂ ಸ್ಟಾಲುಗಳನ್ನು ಹಿಡಿದವರೂ ಕೂಲಿಕಾರರೂ ಕಂತ್ರಾಟದಾರರೂ ಈ ಪ್ರದರ್ಶನವನ್ನು ಒಳ್ಳೆ ಯಶಸ್ವಿತೆಯಿಂದ ಕೊನೆಗಾಣಿಸಲು ಹಗಲಿರುಳು ದುಡಿಯುತ್ತಿದ್ದಾರೆ. ಅವರ ಕೆಲಸಕ್ಕೆ ತೊಂದರೆಯಾಗಬಾರದೆಂಬ ಉದ್ದೇಶದಿಂದ ಪ್ರದರ್ಶನದ ಸ್ಥಳವು ಸಾರ್ವಜನಿಕರಿಗೆ ಬಂದುಮಾಡಲ್ಪಟ್ಟಿದೆ, ಮತ್ತು ಜನವರಿ ೧೭ ನೇ ತಾರೀಖಿನ ದಿವಸ ಮುಂಬಯಿಯ ಗವ್ಹರ್ನರರಿಂದ ಪ್ರದರ್ಶನವು ತೆರೆಯಲ್ಪಟ್ಟಬಳಿಕ ಹತ್ತು ದಿವಸಗಳ ವರೆಗೆ ಸಾರ್ವಜನಿಕರಿಗೆ ತೆರೆದಿಡಲಾಗುವದು.

ಈ ಪ್ರದರ್ಶನವು ಅತ್ಯಂತ ವಿಶಾಲ ಹಾಗೂ ವಿಸ್ತೃತ ಪ್ರಮಾಣದ ಮೇಲೆ ಜರುಗಲಿರುವುದರಿಂದ ಏನಿಲ್ಲೆಂದರೂ ಎರಡು ಲಕ್ಷ ಜನರು ಈ ಪ್ರದರ್ಶನಕ್ಕೆ ಬರುವರೆಂಬ ಅಂದಾಜವಿದೆ. ಅದೇ ಕಾಲಕ್ಕೆ ಜಿ. ಆಯ್. ಪಿ. ಮತ್ತು ಎಂ. ಎಸ್. ಎಂ. ರೇಲ್ವೆ ಕಂಪನಿಯವರು ಅಗ್ಗದರದ ತಿರುಗಿಬರುವ ತಿಕೀಟುಗಳನ್ನು ಇಟ್ಟಿರುವದರಿಂದ ಸಾವಿರಾರು ಪ್ರೇಕ್ಷಕರು ಬರುವದರಲ್ಲಿ ಸಂದೇಹವಿಲ್ಲ

ಈ ಪ್ರದರ್ಶನಕ್ಕಾಗಿ "ರಾಣೀ ಬಗೀಚಾ" ಎಂಬ ೪೨ ಎಕರೆಯುಳ್ಳ ವಿಸ್ತೃತ ಭೂಮಿಯನ್ನು ಲಷ್ಕರೀ ಅಧಿಕಾರಸ್ಥರಿಂದ ದೊರಕಿಸುವದರಲ್ಲಿ ಬಂದಿದ್ದು ಅಲ್ಲಿ ಅನೇಕ ಬೆಳೆಗಳನ್ನು ಬೆಳೆದಿರುವರು. ಬೇರೆ ಬೇರೆ ಜಾತಿಯ ಆರೇಳುತರದ ಕಬ್ಬು, ಅಲ್ಲ, ಅರಿಷಿಣ, ಅನಾನಸ, ದಾಳಂಬಿ, ಸೂರಣ ಗೋವಿನ ಜೋಳ ಮುಂತಾದವುಗಳು ಬಿತ್ತಲ್ಪಟ್ಟಿದ್ದು ಬೆಳೆಗಳು ಚೆನ್ನಾಗಿವೆ. ಈ ಹಂಗಾಮಿನಲ್ಲಿ ಬಿತ್ತಬೇಕಾದ ಇನ್ನಿತರ ಬೆಳೆಗಳ ಬೀಜಗಳನ್ನೂ. ಅವಕ್ಕೆ ಬೇಕಾಗುವ ಭೂಮಿಯು ಹದವನ್ನೂ ಕಾದಿಡಲಾಗಿದೆ. ಉತ್ತಮೋತ್ತಮವಾದ ಬೆಳೆ. ಧಾನ್ಯ ಮತ್ತು ಇನ್ನಿತರ ಭೂಮಿಯ ಮಹಸೂಲಿನ ಮಾದರಿಗಳನ್ನು ಈ ಪ್ರದರ್ಶನದಲ್ಲಿ ಇಡಲಾಗುವದಲ್ಲದೆ ಬೀಜದ ಹೋರಿಗಳೂ ಮಾದರಿಯ ದನಕರುಗಳೂ ಕುರಿ ಕೋಳಿಗಳೂ ಪ್ರದರ್ಶಿಸಲ್ಪಡುವವು.

ಪ್ರದರ್ಶನದ ಜಾಗೆಯ ಮೇಲೆ ಬೇರೆ ಬೇರೆ ವಿಭಾಗಗಳಿಗಾಗಿ ೭೦ ಸಾವಿರ ಚದರು ಫೂಟದಷ್ಟು ಸ್ಥಳವು ಸ್ಟಾಲುಗಳಿಗಾಗಿ ಕಾದಿಡಲಾಗಿದೆ. ಅಲ್ಲಿ ಈ ವರೆಗೆ ಅನೇಕ ಸ್ಟಾಲುಗಳನ್ನು ಕಟ್ಟಿಸಿದ್ದಾರೆ. ಎಷ್ಟೋಜನ ಪ್ರಸಿದ್ಧ ಕಾರಖಾನೆದಾರರೂ ಅಂಗಡಿಕಾರರೂ ತಮ್ಮ ವಸ್ತುಗಳನ್ನು ಪ್ರದರ್ಶನಕ್ಕಾಗಿಯಾಗಲೀ ವಿಕ್ರಿಗಾಗಿಯಾಗಲೀ ಇಡುವದಕ್ಕಾಗಿ ಅನೇಕ ಸ್ಟಾಲುಗಳನ್ನು ಕಟ್ಟಿಸಿಕೊಂಡಿದ್ದಾರೆ.

ಈ ಪ್ರದರ್ಶನವು ಅತ್ಯಂತ ಬೋಧಪ್ರದವೂ ಚಿತ್ತಾಕರ್ಷಕವೂ ಮನೋರಂಜಕವೂ ಆಗಬೇಕೆಂದು ಪ್ರದರ್ಶನ ಸಮಿತಿಯ ಸಭಾಸದರು ಉತ್ಸಾಹದಿಂದ ಕೆಲಸ ನಡೆಸಿದ್ದಾರೆ. ತಮ್ಮ ಒಕ್ಕಲಿಗ ಬಂಧುಗಳಿಗೆ ಒಕ್ಕಲತನದ ಸುಧಾರಣೆಯ ಬಗ್ಗೆ ಕಬ್ಬು, ಹತ್ತಿ ಗೋದಿ, ಜೋಳ ಮುಂತಾದ ಬೆಳೆಗಳ ಬಿತ್ತಿಗೆಯಿಂದ ಬೆಳೆಗಳ ವಿಕ್ರಿಯವರೆಗೆ ಯಾವತ್ತೂ ಕ್ರಮಗಳ ಆಧುನಿಕ ಶಾಸ್ತ್ರೀಯ ಜ್ಞಾನವಾಗಬೇಕು. ಮತ್ತು ಅವುಗಳ ಪ್ರಯೋಗಗಳು ನೋಡಲು ಸಿಗಬೇಕು ಎಂಬುದೇ ಈ ಪ್ರದರ್ಶನದ ಮುಖ್ಯ ಉದ್ದೇಶವಾಗಿದೆ. ಇದಲ್ಲದೆ ಕೋಳಿ ಬಾತುಗಳ ಸಾಕುವಿಕೆ ಉತ್ತಮ ಜಾತಿಯ ದನಕರುಗಳ ಹುಟ್ಟುವಿಕೆ, ಗ್ರಾಮೋದ್ಯೋಗಗಳ ಬೆಳವಣಿಗೆ ಮೊದಲಾದ ಒಕ್ಕಲತನಕ್ಕೆ ಸಂಬಂಧಿಸಿದ್ದ ಉಪಧಂದೆಗಳ ಜ್ಞಾನವಾಗಬೇಕು. ಮತ್ತು ಅವುಗಳ ಪ್ರಯೋಗಗಳು ನೋಡಲು ಸಿಗಬೇಕೆಂಬ ಉದ್ದೇಶವು ಸಹ ಇರುವದು. ಆದುದರಿಂದ ಬೇರೆ ಬೇರೆ ಬೀಜಗಳ ಹಾಗೂ ಬೆಳೆಗಳ ನಮೂನೆಗಳೂ ಗ್ರಾಮೋದ್ಯೋಗಗಳ ಪ್ರತ್ಯಕ್ಷಿಕೆಗಳೂ ಒಕ್ಕಲತನದ ಬೇಸಾಯದ ಬಗ್ಗೆ ಬೇರೆ ಬೇರೆ ಪ್ರಯೋಗಗಳೂ ಒಕ್ಕಲಿಗರಿಗೆ ಸುಲಭ ಭಾಷೆಯಿಂದ ತಿಳಿಸಲ್ಪಡುವದು ಮತ್ತು ಮ್ಯಾಜಿಕ್ ಲ್ಯಾಂಟರ್ನದ ಸಹಾಯದಿಂದ ಒಕ್ಕಲತನದ ಸುಧಾರಣೆಯ ಬಗ್ಗೆ ಬೇರೆ ವಿಷಯಗಳ ಮೇಲೆ ಬೇರೆ ಬೇರೆ ತಜ್ಞರಿಂದ ವ್ಯಾಖ್ಯಾನಗಳನ್ನು ಕೊಡಿಸುವ ವ್ಯವಸ್ಥೆಯಾಗಿದೆ.

ಈ ಪ್ರದರ್ಶನದ ಕೆಲಸದಲ್ಲಿ ಕಾಂಗ್ರೆಸ್ಸಿನ ಸಕ್ರಿಯ ಸಹಾಯ ದೊರೆತಿದ್ದು ಅದನ್ನು ಯಶಸ್ವಿಯಾಗಿ ಮಾಡಲು ಕಾಂಗ್ರೆಸ್ ಕೆಲಸಗಾರರ ಪ್ರಯತ್ನಗಳು ನಡೆದಿವೆ. ಈ ಪ್ರದರ್ಶನಕ್ಕಾಗಿ ಕಾಂಗ್ರೆಸ್ ಮಂತ್ರಿಮಂಡಲದ ಒಕ್ಕಲತನದ ಖಾತೆಯ ಮಂತ್ರಿಗಳಾದ ನಾ. ಮುರಾರಜಿ ದೇಸಾಯಿ ಇವರು ಉಪಾಧ್ಯಕ್ಷರಾಗಿರುವದಲ್ಲದೆ ಕಾರ್ಯಕಾರೀ ಮಂಡಲದಲ್ಲಿ ಶ್ರೀ. ಗಂಗಾಧರರಾವ ದೇಶಪಾಂಡೆ ಭೀಮರಾವ ಪೋತದಾರ ಕೆ. ಎಸ್. ಪಾಟೀಲ ಎನ್ ಎಸ್. ಕೇಶವಾಯನ ಮೊದಲಾದ ಕಾಂಗ್ರೆಸ್ ಮುಂದಾಳುಗಳು ಇರುವರು. ಕರ್ನಾಟಕ ಚರಖ ಸಂಘದ ಕಾರ್ಯದರ್ಶಿಗಳಾದ ಶ್ರೀ. ಹಣಮಂತರಾವ ಕೌಜಲಗಿಯವರು ಈ ಪ್ರದರ್ಶನದಲ್ಲಿ ಖಾದಿ ಮತ್ತು ಗ್ರಾಮೋದ್ಯೋಗಗಳ ವಿಭಾಗದ ವ್ಯವಸ್ಥೆಯನ್ನು ನೋಡುತ್ತಿದ್ದಾರೆ. ಅದರಂತೆ ಈ ಪ್ರದರ್ಶನದ ಕಾಲಕ್ಕೆ ಪ್ರೇಕ್ಷಕರ ಮನರಂಜನೆಗಾಗಿ ಗಾಯನ ವಾದ್ಯದ ವಿವಿಧ ಕಾರ್ಯಗಳು ನಿಶ್ಚಿತವಾಗಿರುವದಲ್ಲದೆ ಬೇರೆ ಬೇರೆ ಆಟನೋಟಗಳ ಕಾರ್ಯಕ್ರಮಗಳಾದರೂ ಜರುಗಲಿರುವವು. ಇಲ್ಲಿಯ ಕಾಂಗ್ರೆಸ್ ಕೆಲಸಗಾರರಾದ ಶ್ರೀ. ಬಾಬುರಾವ ಠಾಕೂರ ಇವರು ಆಟಪಾಟಗಳ ವ್ಯವಸ್ಥೆಯನ್ನು ನೋಡುತ್ತಿದ್ದು ಕೊಲ್ಹಾಪುರದಿಂದ ಹಾಗೂ ಬೇರೆ ಬೇರೆ ಸ್ಥಳಗಳಿಂದ ಪ್ರಸಿದ್ಧ ಮಲ್ಲರನ್ನು ಕರೆಸಿಕೊಂಡು ಪ್ರೇಕ್ಷಣೀಯವಾದ ಕುಸ್ತಿಗಳನ್ನು ಮಾಡಿಸುವವರಿದ್ದಾರೆ.

---

# ಕರ್ನಾಟಕ ಸಮಾಚಾರ.

—ರಾಣೆಬೆನ್ನೂರಲ್ಲಿ ಈ ತಿಂಗಳು ೧೬-೧೭ ನೆಯ ತಾರೀಖು ಗಳಲ್ಲಿ ಕರ್ನಾಟಕ ಪ್ರಾಂತದ ೯ ನೆಯ ರಾಜಕೀಯ ಪರಿಷತ್ತು ಕೂಡುವುದು. ಇದಕ್ಕೆ ಶ್ರೀ. ಕೌಜಲಗಿ ಹನುಮಂತರಾಯರು ಅಧ್ಯಕ್ಷರಾಗುವ ಸಂಭವವಿದೆ.

—ರಾಣೆಬೆನ್ನೂರಲ್ಲಿ ಪ್ರಾಂತಿಕ ರಾಜಕೀಯ ಪರಿಷತ್ತಿನ ಕಾಲಕ್ಕೆ ಕರ್ನಾಟಕ ಯುವಕ ಪರಿಷತ್ತು ಶ್ರೀ. ಮೆಹರ ಅಲ್ಲಿಯವರ ಅಧ್ಯಕ್ಷತೆಯಲ್ಲಿ ಜರುಗುವದು. ಖಾದಿ ಪ್ರದರ್ಶನ, ಕನ್ನಡ ಪತ್ರಿಕಾಕರ್ತರ ಸಮ್ಮೇಲನ ಇವೂ ಆ ಕಾಲದಲ್ಲಿ ನಡೆಯತಕ್ಕವುಗಳಿವೆ.

—ಬೆಳಗಾವಿಯಲ್ಲಿ ಇದೇ ತಿಂಗಳು ೧೭ ನೆಯ ತಾರೀಖಿನ ಸಾಯಂಕಾಲ ಕರ್ನಾಟಕ ಒಕ್ಕಲತನದ ಪ್ರದರ್ಶನವು ಮುಂಬೈ ಗವ್ಹರ್ನರರಾದ ಸರ್. ಲುಮ್ಲೆಯವರಿಂದ ತೆರೆಯಲ್ಪಡುವುದು.

—ಕೋಳಿವಾಡ ಸಾಲೆಯ ಮೇಲೆ ಶ್ರೀ. ಶಿವಶಂಕರಪ್ಪ ದೇವಪುರ ಇವರ ಹಸ್ತದಿಂದ ರಾಷ್ಟ್ರಧ್ವಜ ಮತ್ತು ಶಾಲೆಯಲ್ಲಿ ಶ್ರೀಮತಿ ಇಂದಿರಾದೇವಿ ಹರಪನಹಳ್ಳಿ ಇವರ ಹಸ್ತದಿಂದ ಗಾಂಧಿಯವರ ಭಾವಚಿತ್ರ ಇಡಿಸುವ ಸಮಾರಂಭ ಜರುಗಿತು.

—ಇದೇ ೧೭ ನೆಯ ತಾರೀಖಿನ ದಿನ ಬೆಳಗಾವಿಯಲ್ಲಿ ಗವ್ಹರ್ನರರಿಂದ ತೆರೆಯಲ್ಪಡುವ ಒಕ್ಕಲತನದ ಪ್ರದರ್ಶನದಲ್ಲಿ ಬಹುಮಾನ ಹೊಂದುವವರಿಗೆ ಕೊಡಲ್ಪಡುವ ಪದಕಗಳ ಒಂದು ಮಗ್ಗಲಿಗೆ ಈಗ ತಾನೆ ಹುಟ್ಟುವ ಸೂರ್ಯ ಮತ್ತು ನೇಗಿಲು ಇವುಗಳ ಚಿತ್ರವು ಇನ್ನೊಂದು ಮಗ್ಗಲಿಗೆ ಪ್ರದರ್ಶನದ ಹೆಸರು ಕೊರೆಯಲ್ಪಟ್ಟಿವೆ.

—ವಂಟಮುರಿಯಲ್ಲಿ ಶ್ರೀ. ಪಟ್ಟೇದ ಬಸವಪ್ಪನವರು ತಮ್ಮ ಚಿರಂಜೀವಿಗಳ ಲಗ್ನದಕಾಲಕ್ಕೆ ವಧೂವರರಿಗೆ ವಿಧಿವತ್ತಾಗಿ ದೀಕ್ಷೆಯನ್ನು ಮಾಡಿಸಿ ಸುರಗಿ ಸುತ್ತುವದು, ಮೆರವಣಿಗೆ, ನಾಗೋಲಿ, ಮೊದಲಾದ ಅನವಶ್ಯಕ ಕಾರ್ಯಗಳನ್ನೆಲ್ಲಾ ತೆಗೆದುಹಾಕಿ ಮಾದರಿಯ ಪದ್ಧತಿಗಳನ್ನು ತೋರಿಸಿಕೊಟ್ಟರು.

—ಹೊನ್ನುಟಗಿ ಗ್ರಾಮದಲ್ಲಿ ಈ ಸಾರೆ ಸರಿಯಾಗಿ ಬೆಳೆ ಬಾರದೆ ಬಹು ಜನರು ತುಂಬಾ ಕಷ್ಟದಲ್ಲಿದ್ದಾರೆ. ಕುಡಿಯುವ ನೀರಿಗೂ ಬಹು ಕೊರತೆ. ಸರಕಾರವು ಈ ಕಷ್ಟಕಾಲದಲ್ಲಿ ತಮಗೆ ಸಹಾಯ ಮಾಡಬೇಕೆಂದು ಬಹಳವಾಗಿ ಸರಕಾರಕ್ಕೆ ಮೊರೆಯಿಟ್ಟಿದ್ದಾರೆ.

—ರಾಕ್ಷಸತಂಗಡಗಿಯಲ್ಲಿ ಶ್ರೀ. ಜಿ. ಜಿ. ಪಾಟೀಲ ಬಿ. ಎ. ಇವರ ಅಧ್ಯಕ್ಷತೆಯಲ್ಲಿ ಸಭೆ ಕೂಡಿ ಒಂದು ಮಿತ್ರಮಂಡಲಿಯು ಏರ್ಪಟ್ಟಿತು. ಇದಕ್ಕೆ ಶ್ರೀ. ಎಸ್. ವ್ಹಿ. ಹುಬ್ಬಳ ಇವರು ಅಧ್ಯಕ್ಷರಾಗಿಯೂ ಶ್ರೀ. ಎಂ. ಎಸ್. ಕುಲಕರ್ಣಿ ಇವರು ಕಾರ್ಯದರ್ಶಿಗಳಾಗಿಯೂ ಗೊತ್ತುಮಾಡಲ್ಪಟ್ಟಿದ್ದಾರೆ.

—ಶ್ರೀ. ಜೋಗರಾಯರು ಎಂ. ಎಲ್. ಎ. ಇವರು ಗದಗಿನ ಪ್ರಾಂತದಲ್ಲಿಯ ತಮ್ಮ ಮಹತ್ವದ ಭಾಷಣದಲ್ಲಿ ರೈತರು ಕ್ರಾಂತಿ ಮಾಡುವ ಮುಂಚೆಯೇ ಜಹಗೀರದಾರರು ಸುಧಾರಿಸಿಕೊಳ್ಳಬೇಕೆಂದು ಸೂಚಿಸಿದರು.

—ಮೈಸೂರಿನ ಒಬ್ಬ ಪ್ರಮುಖ ಕಾಂಗ್ರೆಸ್ ಕೆಲಸಗಾರರಾದ ಶ್ರೀ. ಶ್ರೀನಿವಾಸ ರಾಯರ ಮೇಲೆ ರಾಜದ್ರೋಹದ ಭಾಷಣ ಮಾಡಿದರೆಂದು ವ್ಯಾಜ್ಯ ಹೂಡಿದ್ದರು. ನ್ಯಾಯಾಧೀಶರು ೫೦೦ ರೂಗಳ ಜೂಮೀನು ಕೊಡಲು ಅಪ್ಪಣೆಮಾಡಿದರು. ಅದಕ್ಕೆ ಶ್ರೀನಿವಾಸರಾಯರು ಒಪ್ಪಲಿಲ್ಲವಾದುದರಿಂದ ಒಂದು ವರ್ಷದ ಸಾದಾ ಶಿಕ್ಷೆಯನ್ನು ವಿಧಿಸಲು ಅದನ್ನು ಸಂತೋಷದಿಂದ ಒಪ್ಪಿಕೊಂಡರು.

—ದೇವಿಹೊಸೂರಲ್ಲಿ ಒಕ್ಕಲತನ ಶಾಲೆಯ ಸಮಾರಂಭವು ಮತ್ತು ಲಿಂಗರಾಜರ ಜನ್ಮೋತ್ಸವವು ತಾ. ೧೦-೧-೩೮ ನೆಯ ದಿವಸ ಶ್ರೀ. ಹಲವಡಿ ಎಂ. ಎಲ್. ಎ. ಇವರ ಅಧ್ಯಕ್ಷತೆಯಲ್ಲಿ ಜರುಗುವವು.

—ಬೆಳಗಾವ ಜಿಲ್ಲಾ ಗ್ರಾಮ ಪಂಚಾಯತಿ ಪರಿಷತ್ತಿನ ಮೊದಲನೆಯ ಅಧಿವೇಶನವು ಬೆಳವಡಿಯಲ್ಲಿ ಶ್ರೀ. ಅಂಗಡಿಯವರ ಅಧ್ಯಕ್ಷತೆಯಲ್ಲಿ ಬಹು ಪರಿಣಾಮಕಾರಿಯಾಗಿ ಜರುಗಿತು.

—ಈ ತಿಂಗಳು ೧೪-೧೫ ನೆಯ ತಾರೀಖುಗಳಲ್ಲಿ ಮೈಸೂರು ಕಾಂಗ್ರೆಸ್ಸಿನ ಪರಿಷತ್ತು ಚಿತ್ರದುರ್ಗದಲ್ಲಿ ಕೂಡುವುದು. ಇದು ಆ ಪ್ರಾಂತದ ಕಾಂಗ್ರೆಸ್ ಸದಸ್ಯರ ಎರಡನೆಯ ವಾರ್ಷಿಕ ಸಭೆ. ಇದಕ್ಕೆ ಶ್ರೀ. ಚೆಂಗಲರಾಯ ರೆಡ್ಡಿಯವರು ಅಧ್ಯಕ್ಷರಾಗಿ ಆರಿಸಲ್ಪಟ್ಟಿದ್ದಾರೆ.

—ವಿಜಾಪುರ ಜಿಲ್ಲೆಯಿಂದ ಹರಿಪುರ ಕಾಂಗ್ರೆಸ್ಸಿಗೆ ಈ ಕೆಳಗಿನ ಪ್ರತಿನಿಧಿಗಳು ಆರಿಸಲ್ಪಟ್ಟಿದ್ದಾರೆ. ಶ್ರೀಯುತರುಗಳಾದ ಶಂಕರರಾವ ಪಾಟೀಲ, ಚನ್ನಬಸಪ್ಪ ಅಂಬಲಿ, ಎಸ್. ಸಿ. ಮಿರ್ಜಿ, ಮರುಳಾರಾಧ್ಯ ಶಾಸ್ತ್ರಿ, ಗುರುರಾವ ಜೋರಾಪುರ, ಶ್ರೀನಿವಾಸರಾವ ನೀರಲಕೇರಿ, ರಾಜಾರಾಮ ದುಬೆ, ಶಿವಶಂಕರಪ್ಪ ಸಕ್ರಿ, ಶಿವಬಸವ ದೇವರು.

### ಸಾದರ ಸ್ವೀಕಾರ.

ಶ್ರೀಯುತ ಬಸವಪ್ಪ ಚೆನ್ನಪ್ಪ ಪಟ್ಟೇದ ವಂಟಮೂರಿ ಇವರು ತಮ್ಮ ಮನೆಯಲ್ಲಿ ಮಾರ್ಗಶೀರ್ಷ ಬ|| ೧೦ ಸೋಮವಾರ ದಿವಸ ತಮ್ಮ ತಮ್ಮನವರಾದ ಶ್ರೀ. ಮಲ್ಲಿಕಾರ್ಜುನಪ್ಪನವರ ಮಗ ಚಿ|| ಬಸವಲಿಂಗಪ್ಪನಿಗು ಮತ್ತು ತಮ್ಮ ಚಿ|| ಶಿವಬಸವಪ್ಪನಿಗು ಅನುಕ್ರಮವಾಗಿ ದಡ್ಡಿಯ ಶ್ರೀ. ರಗಶೆಟ್ಟಿ ದುಂಡಪ್ಪನವರ ಪುತ್ರಿ ಸೌ|| ರತ್ನವ್ವನನ್ನು ಮತ್ತು ಗಡಹಿಂಗ್ಲಜ ಶ್ರೀ. ಪಾಲಿ ಸಾತಪ್ಪನವರ ಪುತ್ರಿ ಸೌ|| ಅನ್ನಪೂರ್ಣೆಯನ್ನು ವಧೂಗಳನ್ನಾಗಿ ಸ್ವೀಕರಿಸಿ ವಿವಾಹ ಜರುಗಿಸಿದ ಶುಭ ಪ್ರಸಂಗದಲ್ಲಿ ಶರಣ ಸಂದೇಶ ಪತ್ರಿಕೆಯ ಸಹಾಯಾರ್ಥವಾಗಿ ತೆಗೆದ ೫ ರೂ. ಗಳನ್ನು ಕಳುಹಿಸಿದ್ದಾರೆ. ಇವುಗಳನ್ನು ಕೃತಜ್ಞತಾ ಪೂರ್ವಕ ಸ್ವೀಕರಿಸಿದ್ದೇವೆ.

—ಮ್ಯಾನೇಜರ್ "ಶರಣಸಂದೇಶ"




**ಸ್ಥಳೀಯ** ಸಂಸ್ಥೆಗಳ ಪತ್ರಿಕೆ— ಮುನಸಿಪಾಲ್ಟಿ ಲೋಕಲ್ ಬೋರ್ಡ ಮೊದಲಾದ ಸ್ಥಾನಿಕ ಸ್ವರಾಜ್ಯದ ಸಂಗತಿಗಳನ್ನು ತಿಳಿದುಕೊಳ್ಳಬೇಕೆಂಬುವವರು ಈ ಪಕ್ಷ ಪತ್ರಿಕೆಯನ್ನು ತರಿಸಿಕೊಳ್ಳಿರಿ.

ವಾರ್ಷಿಕ ಚಂದಾ ೩ ರೂ.

ವಿಳಾಸ— ಟಿ. ಎನ್. ಚೆನ್ನಪ್ಪ
ಗಾಂಧಿ ನಗರ ಬೆಂಗಳೂರು ಸಿಟಿ.

---

**ಅರವಿಂದ** ಗ್ರಂಥಮಾಲೆಯಲ್ಲಿ ವರ್ಷಕ್ಕೆ ಆರು ಒಳ್ಳೊಳ್ಳೇ ಗ್ರಂಥ ಕುಸುಮಗಳು ಅರಳುತ್ತವೆ.

ಸಂಪಾದಕರು— ಮಧುರ ಚೆನ್ನರು.

ವಾರ್ಷಿಕ ಚಂದಾ ೨-೮-೦ (ಅಂಚೆ ವೆಚ್ಚ ಸೇರಿ)

ವಿಳಾಸ— ಅರವಿಂದ ಗ್ರಂಥಮಾಲಾ ಕಾರ್ಯಾಲಯ.
ಪೋ. ಹಲಸಂಗಿ. ಜಿ. ವಿಜಾಪುರ

---

# ಎಲ್ಲರೂ ಓದಲೇಬೇಕಾದ ಪುಸ್ತಕಗಳು.

## ಇಕೋ, ಇಲ್ಲಿವೆ.

### ಹರ್ಡೇಕರ ಮಂಜಪ್ಪನವರು ಬರೆದ ಪುಸ್ತಕಗಳು.

| | |
|---|---|
| ಬುದ್ಧಿಯ ಮಾತು | ೦-೨-೦ |
| ವೀರಶೈವ ಮತಬೋಧೆ | ೦-೩-೦ |
| ವೀರಶೈವ ಮತತತ್ವ | ೦-೪-೦ |
| ಕಾಯಕವೆ ಕೈಲಾಸ | ೦-೨-೦ |
| ಶ್ರೀ. ಲಿಂಗರಾಜರ ಚರಿತ್ರೆ | ೦-೬-೦ |
| ಪ್ರಭುದೇವರ ಕಥೆ | ೦-೧-೬ |
| ಏಕಲವ್ಯನ ಕಥೆ | ೦-೧-೬ |
| ಛಜಪತರಾಯರ ಚರಿತ್ರೆ | ೦-೧-೬ |
| ಆದಿಜನ ಸುಧಾರಣೆ | ೦-೩-೦ |
| ಬಸವ ಬೋಧಾಮೃತ | ೦-೬-೦ |
| ಭಜನಾವಳಿ | ೦-೧-೬ |
| ಜಾತಿಯ ವಾದ ವಿಮರ್ಶೆ | ೦-೧-೦ |
| ವಚನಕಾರರ ಸಮಾಜರಚನೆ | ೦-೩-೦ |
| ವೀರಶೈವ ಏಕೀಕರಣ | ೦-೦-೨ |
| ಪುಲಿಕೇಶಿಯ ಚರಿತ್ರೆ | ೦-೧-೬ |
| ಕಚದೇವನ ಕಥೆ | ೦-೧-೬ |
| ಸ್ವಾಮಿ ವಿವೇಕಾನಂದರ ಚರಿತ್ರೆ | ೦-೧-೬ |
| ಸುಕಲಾದೇವಿಯ ಕಥೆ | ೦-೧-೬ |
| ಸ್ತ್ರೀನೀತಿ ಸಂಗ್ರಹ | ೦-೪-೦ |
| ದಾಂಪತ್ಯ ಧರ್ಮ | ೦-೨-೦ |
| ದೇವಯಾನಿಯ ಕಥೆ | ೦-೧-೬ |
| ವಿಜಯವಾಣಿ | ೦-೩-೦ |
| ರಾಷ್ಟ್ರಗೀತೆ | ೦-೦-೬ |
| ಜೀವನ ರಹಸ್ಯ (ಅನ್ನದಾನೀಶ್ವರ ಕೃತ.) | ೦-೧-೦ |
| ಶುದ್ಧಿ ಮತ್ತು ಸಂಘಟನೆ | ೦-೪-೦ |
| ಸ್ಮಾರಕ ಚಂದ್ರಿಕೆ | ೧-೦-೦ |
| ಪ್ರಮಥಾಚಾರ ದೀಪಿಕೆ | ೦-೨-೦ |
| ೬೩ ಪುರಾತನರ ಚರಿತ್ರೆ (ಮಠದ ಕೃತಿ) | ೩-೦-೦ |

ವಿಳಾಸಃ- ಜ್ಞಾನೋದಯ ಗ್ರಂಥ ಭಾಂಡಾರ ಆಲಮಟ್ಟಿ. ಪೋ. ಆಲಮಟ್ಟಿ ಜಿ. ವಿಜಾಪುರ.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೧೭ ನೆಯ ಜನವರಿ ೧೯೩೮. | ಸಂಚಿಕೆ೨೧ |
|---|---|---|

ಜನಸೇವೆಯೇ ದೇವರಸೇವೆ.

## ಬಾಬು ಸುಭಾಷಚಂದ್ರ ಬೋಸರ ಅಪೂರ್ವ ಸನ್ಮಾನ.



ಲಂಡನ್ನಿನಲ್ಲಿ
ತಾ. ೧೦-೧-೩೮ ನೆಯ ದಿವಸ
ಬಾಬು ಸುಭಾಷಚಂದ್ರ
ಬೋಸರವರ
ಅಪೂರ್ವ ಸನ್ಮಾನ
ಮತ್ತು
ಮಹತ್ವದ ಭಾಷಣಗಳು
ಜರುಗಿದವು.

ಹರಿಪುರ ಕಾಂಗ್ರೆಸ್ಸಿಗೆ ಬಾಬು ಸುಭಾಷಚಂದ್ರ ಬೋಸರವರೇ ಅಧ್ಯಕ್ಷರಾಗಿ ಆರಿಸಲ್ಪಟ್ಟರು.

ದೇಹವೇ ದೇವಾಲಯ.

## ಅಖಿಲ ಕರ್ನಾಟಕದಲ್ಲಿ ಪ್ರಸಿದ್ಧವಾದ

### ರಾಷ್ಟ್ರೀಯ ಕಂಪನಿಯೆಂದರೆ

## ಇದೊಂದೇ.

# ದಿ ಸ್ವರಾಜ್ಯ ಬ್ಯಾಂಕಿಂಗ ಮತ್ತು ಇನ್ಸುರನ್ಸ ಕಂ. ಲಿ.

# ಧಾರವಾಡ.

ಚೇರಮನ್
ದೇಶಭಕ್ತ ಶ್ರೀಯುತ ಎಸ್. ಕೆ. ಹೊಸಮನಿ
B. A. LL. B. M. L. A.
ಪ್ರೆಸಿಡೆಂಟ ಕೆ. ಪಿ. ಸಿ. ಸಿ.

ವ್ಹಾಯಿಸ್ ಚೇರಮನ್
ಶ್ರೀಯುತ ವ್ಹಿ. ಬಿ. ಹಾಲಭಾವಿ
B. A. LL. B. ರಿಟಾಯರ್ಡ
ಫರ್ಸ್ಟ ಕ್ಲಾಸ್ ಸಬ್ ಜಜ್ಜ ಧಾರವಾಡ.

ಭವಿಷತ್ಕಾಲದ ಜೀವಿತದ ನಿರ್ವಾಹಕ್ಕೆ

ಈ ಕಂಪನಿಯನ್ನು ಕೇವಲ ರಾಷ್ಟ್ರೋನ್ನತಿಗಾಗಿ ಸ್ಥಾಪಿಸಿರುವರು.

ತೊಂದರೆಯಿಲ್ಲದ ಒತ್ತಾಯದ ಉಳಿತಾಯ

### ರೂ. ೫೦೦ ರಿಂದ ರೂ. ೫೦೦೦ ಗಳ ವರೆಗೆ ಜೀವ ವಿಮಾ ಪಾಲಿಸಿಗಳು.

**ಉದಾರ ಶರ್ತಿನ ಪಾಲಿಸಿಗಳು! ಮಿತವ್ಯಯದ ಆಡಳಿತ!! ಸುಲಭವಾದ ಕಂತಗಳು!!!**

ಈ ಕಂಪನಿಯವರು ಕಾರ್ಯ ಕುಶಲತೆಯಿಂದ ನಾನಾ ಎಂಬುವ ಕಂಪನಿಗಳಿಗೂ ಮುಂದೆ ಇದ್ದಾರೆ. ಸ್ಥಾಪಿಸಿ ಎರಡೇ ವರ್ಷಗಳಲ್ಲಿ ಇಷ್ಟು ಪ್ರಗತಿಯನ್ನು ಮಾಡಿ ತೋರಿಸಲಿಕ್ಕೆ ಉಜ್ವಲ ದೇಶಭಕ್ತರೂ, ಸುಪ್ರಸಿದ್ಧರೂ, ಲೋಕಪ್ರಿಯರೂ, ವಿಮೆಯ ವ್ಯವಹಾರದಲ್ಲಿ ನುರಿತ ಪರಿಪಕ್ವ ಬುದ್ಧಿಯುಳ್ಳವರೂ ಇರುವ ಬೋರ್ಡಿನ ಡಾಯರೆಕ್ಟರರ ಆಡಳಿತೆಯೇ ಕಾರಣ. ಗೌರವದ ಕನ್ನಡಿಗ ವಿಮೇಚ್ಛುಗಳು ತಮ್ಮ ಹಿತವನ್ನೊಳಗೊಂಡ ಕರ್ನಾಟಕ ಮಾತೆಯ. ಈ ತರಹದ ಸೇವೆಗಾಗಿ ತಮ್ಮ ಬೆಂಬಲವನ್ನೀಯುವರೆಂದು ತುಂಬಾ ನಂಬಿರುವೆವು.

### ಎಲ್ಲ ಕಡೆಯಲ್ಲಿಯೂ ಕುಶಲ ಏಜಂಟರು ಬೇಕು.

The Manager.

ಮುದ್ದಾದ ಅಕ್ಷರ! ಸುಲಭ ದರ!

### ಶ್ರೀ ರಂಗನಾಥ ಟೈಪ್ ಫೌಂಡರಿ

ಬೆಂಗಳೂರು.

ಕನ್ನಡ ಮತ್ತು ಇಂಗ್ಲಿಷ, ಎಲ್ಲಾ ತರದ ಟೈಪುಗಳೂ ಒಳ್ಳೊಳ್ಳೇ ಬಾರ್ಡರಗಳೂ ನಮ್ಮ ಫೌಂಡರಿಯಲ್ಲಿ ತಯಾರಾಗುತ್ತವೆ.

ಒಳ್ಳೇ ಮೆಟಲ್. ಬಹು ಅಂದವಾದ ಅಕ್ಷರಗಳು. ಬಲು ಸುಲಭ ದರ. ಕ್ಯಾಟಲಾಗ ತರಿಸಿಕೊಳ್ಳಿರಿ. ಒಮ್ಮೆ ಟೈಪುಗಳನ್ನು ತರಿಸಿಕೊಂಡು ಅನುಭವ ಹೊಂದಿರಿ. ಹಳೆ ಟೈಪುಗಳಿದ್ದರೆ ಸುಲಭ ಚಾರ್ಜಿಗೆ ಹೊಸದಾಗಿ ಹೊಯಿದು ಕೊಡುತ್ತೇವೆ.

ಪ್ರೊಪ್ರೈಟರ,
ಶ್ರೀ ರಂಗನಾಥ ಟೈಪ್ ಫೌಂಡರಿ
೬೭ ಕುಬೇರ ಸಾಹುಜಿ ಲೈನ್
ಚಿಕ್ಕಪೇಟೆ, ಬೆಂಗಳೂರು ಸಿಟಿ.

**ಲೋಕ**ಮತ ದಿನ ಪತ್ರಿಕೆಯನ್ನು ಪ್ರತಿ ದಿನವೂ ತಪ್ಪದೇ ಓದಿ ಎಲ್ಲ ವಿಷಯಗಳನ್ನೂ ತಿಳಿದುಕೊಳ್ಳಿರಿ.

ವಿಳಾಸ— ಮ್ಯಾನೇಜರ್ "ಲೋಕಮತ"
ಹುಬ್ಬಳ್ಳಿ.

**ನಿ**ಜಾಮ ಪ್ರಾಂತದ ಕನ್ನಡಿಗರಿಗೆ ಕನ್ನಡ ನಾಡಿನ ಎಲ್ಲ ಪ್ರಸಿದ್ಧ ಲೇಖಕರ ಪುಸ್ತಕಗಳೂ ನಮ್ಮಲ್ಲಿ ಯೋಗ್ಯ ಬೆಲೆಗೆ ದೊರೆಯುವವು.

ವಿಳಾಸ— ಎಸ್. ಸಿ. ಶಿವಲಿಂಗಣ್ಣ
ಕಲ್ಯಾಣ ಕರ್ನಾಟಕ ಬುಕ್ಕಡಿಪೋ ಗುಲಬರ್ಗಾ

**ವೀರ**ವಾಣಿ. ಇದು ವೀರಶೈವ ಮತದ ನಿಜ ತತ್ವವನ್ನು ತಿಳಿಸುವ ಮಾಸ ಪತ್ರಿಕೆ.

ವಾರ್ಷಿಕ ಚಂದಾ ರೂ. ೧-೮-೦
ಸಂಪಾದಕರು— ಗಂಗಾಧರಪ್ಪ ಹೊದ್ಲೂರು ಹುಬ್ಬಳ್ಳಿ.



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೧೭ ನೆಯ ಜನವರಿ ೧೯೩೮. | ಸಂಚಿಕೆ ೨೧

## ಮಹತ್ವದ ಸುದ್ದಿಗಳು.

—ಅಹಮದಾಬಾದ ಮತ್ತು ಸುರತ ಈ ಪ್ರಕಾರ ಮುಂಬೈ ಪ್ರಾಂತದ ೩ ಸ್ಥಳಗಳಲ್ಲಿ ವಿಮಾನ ಗೃಹಗಳು ಕಟ್ಟಲ್ಪಡುತ್ತವೆ.

—ಪಂಡಿತ ಜವಾಹರಲಾಲರು ಮತ್ತು ಲಾರ್ಡ ಸಮ್ಯುಅಲ್ ಇವರು ತಾ. ೧೩ ನೆಯ ದಿನ ಅಲಾಹಾಬಾದ ಆನಂದ ಭವನದಲ್ಲಿ ಹಿಂದುಸ್ಥಾನದ ರಾಜಕಾರಣವನ್ನು ಕುರಿತು ವಿಚಾರ ವಿನಿಮಯ ನಡೆಸಿದರು.

—ತಾ. ೧೪ ನೆಯ ದಿವಸ ಲಾರ್ಡ ಲೊಥಿಯನ್‌ರು ಪುಣೆಯಲ್ಲಿ ಕಾಂಗ್ರೆಸ್ ಪಕ್ಷದ ಮತ್ತು ಪ್ರಾಗತಿಕ ಹಾಗು ಲೋಕಶಾಹಿ ಸ್ವರಾಜ್ಯ ಪಕ್ಷದ ಪ್ರಮುಖರೊಂದಿಗೆ ಈಗಿನ ಹಿಂದುಸ್ಥಾನದ ರಾಜಕಾರಣವನ್ನು ಕುರಿತು ವಿಚಾರವಿನಿಮಯಮಾಡಿದರು.

—ಪಂಜಾಬದ ತುರಂಗಗಳಲ್ಲಿರುವ ೧೫ ರಾಜಕೈದಿಗಳು ಅನ್ನತ್ಯಾಗ ಸತ್ಯಾಗ್ರಹವನ್ನು ಪ್ರಾರಂಭಿಸಿದ್ದಾರೆ.

—ಪ್ರೊ. ರಾವ ಇವರು ಲಾಹೋರಿನಲ್ಲಿ ತಮ್ಮ ಯೋಗ ವಿದ್ಯೆಯ ಮಹತ್ವವನ್ನು ತೋರಿಸಿದರು. ಇವರು ಮೂರು ತಾಸು ಒಂದು ಕುಣಿಯಲ್ಲಿ ಹುಗಿಸಿಕೊಂಡಿದ್ದರು. ಆ ಮೇಲೆ ಅದರಿಂದ ಹೊರಗೆ ಬಂದು ತಿರುಗಾಡಲು ಜನರು ಅತ್ಯಾಶ್ಚರ್ಯಪಟ್ಟರು.

—ಪಂಜಾಬ ಪ್ರಾಂತದ ದೇವಲಪುರ ಎಂಬಲ್ಲಿ ಕುರಾನವನ್ನು ಸುಟ್ಟಿದ್ದರಿಂದ ೩೪ ಹಿಂದುಗಳ ಮೇಲೆ ಮತ್ತು ಗ್ರಂಥಸಾಹೇಬವನ್ನು ಸುಟ್ಟಿದ್ದರಿಂದ ೩೩ ಜನ ಮುಸಲ್ಮಾನರ ಮೇಲೆ ವ್ಯಾಜ್ಯ ನಡೆದಿದೆ.

—ಮಧ್ಯಪ್ರಾಂತ ಸರಕಾರದವರು ಚಿತ್ರಪಟಗಳ ಮೂಲಕ ಶಿಕ್ಷಣ ಪ್ರಸಾರ ಮಾಡುವ ಒಂದು ಯೋಜನೆಯನ್ನು ಸಿದ್ಧಗೊಳಿಸುತ್ತಿದ್ದಾರೆ.

—ರಶಿಯಾದಲ್ಲಿ ೨೧ ಜನ ಧರ್ಮ ಗುರುಗಳನ್ನು ಕೈಸೆರೆ ಮಾಡಿದ್ದಾರೆ.

—ಶ್ರೀ. ಸಿ. ಎಸ್. ಲೆಡ್ಲಿ ಎಂಬ ಸಂಯುಕ್ತಪ್ರಾಂತದ ಜೈಲ್ ಸುಪರಿಂಟೆಂಡೆಂಟರು ಶ್ರೀಮತಿ ಹೆನ್ರಿ ಎಂಬ ಬನಾರಸ್ ಜೈಲಿನ ಅಧಿಕಾರವಹಿಸಿರುವವರು ಆರ್ಯ ಸಮಾಜವನ್ನು ಲಖನೌದಲ್ಲಿ ಸ್ವೀಕರಿಸಿ ಹಿಂದು ಪದ್ಧತಿಪ್ರಕಾರ ಲಗ್ನವಾದರು. ಇವರು ಕ್ರಿಸ್ತ ಮತೀಯರು. ಈಗ ಇವರಿಗೆ ಚಂದ್ರಶೇಖರ ಮತ್ತು ಇಂದಿರಾದೇವಿ ಎಂಬ ಹೆಸರನ್ನಿಟ್ಟಿದ್ದಾರೆ.

—ತಾ. ೧೭ ನೆಯ ದಿನ ಮುಂಬೈಯಲ್ಲಿ ಬ್ಯಾ. ಸಾವರಕರರಿಗೆ ಯಂಗ್ ಮೆನ್ಸ್ ಹಿಂದು ಅಸೋಶಿಏಶನ್ನಿನಪರವಾಗಿ ಔತಣವು ಕೊಡಲ್ಪಟ್ಟಿತು.

—ಶ್ರೀ. ಸುಭಾಷ ಬಾಬುಗಳು ಲಂಡನ್ನಿನಲ್ಲಿರುವ ಶೀಖಜನರಿಗೆ ನೀವು ಹಿಂದುಸ್ಥಾನದಲ್ಲಿರುವ ನಿಮ್ಮ ಬಂಧುಗಳ ಕಡೆಗೆ ಲಕ್ಷಿಸಿರೆಂದು ಒಂದು ಭಾಷಣದಲ್ಲಿ ಸೂಚಿಸಿದರು.

—ತುರ್ಕಿ ಸರಕಾರವು ತನ್ನ ವಿಮಾನದಳವನ್ನು ಹೆಚ್ಚಿಸಲು ೧೫ ಲಕ್ಷ ಪೌಂಡುಗಳನ್ನು ವೆಚ್ಚಮಾಡುವುದಾಗಿ ಗೊತ್ತುಮಾಡಿದೆ.

—ಹರಿಪುರ ಕಾಂಗ್ರೆಸ್ಸಿಗೆ ೩ ಲಕ್ಷ ಜನರು ಕೂಡಬಹುದೆಂದು ನಿರೀಕ್ಷಿಸಲಾಗಿದೆ. ವಿಠ್ಠಲ ನಗರವು ೫೦೦ ಎಕರೆ ವಿಸ್ತಾರವಾದುದಾಗಿದೆ.

—ಮುಂಬೈ ಪ್ರಾಂತಿಕ ಅಸೆಂಬ್ಲಿ ಅಧಿವೇಶನವು ಕಳೆದ ೧೦ ನೆಯ ತಾರೀಖಿನ ದಿವಸ ಮುಂಬೈಯಲ್ಲಿ ಪ್ರಾರಂಭವಾಯಿತು. ಲೋಕಶಕ್ತಿ ಎಂಬ ಪುಣೆಯ ಪತ್ರಿಕೆಗೇನೇ ಸರಕಾರದ ಪ್ರಕಟನೆ ಮೊದಲಾದವುಗಳು ಕೊಡಲ್ಪಡಬೇಕೆಂದು ಸರಕಾರದಿಂದ ಹೊರಟ ಗುಪ್ತ ಪತ್ರದ ನಿಷೇಧಾರ್ಥವಾಗಿ ಬ್ಯಾ. ಜಮನಾದಾಸರು ನಿಲುವಳಿ ಸೂಚನೆಯನ್ನು ತರುವುದಾಗಿ ಸೂಚಿಸಿದರು.

—ಮುಂಬೈ ಅಸೆಂಬ್ಲಿ ಅಧಿವೇಶನದ ಕಾಲಕ್ಕೆ ಹತ್ತು ಸಾವಿರ ಕೂಲಿಕಾರರ ಮತ್ತು ಒಕ್ಕಲಿಗರ ಪ್ರಚಂಡ ಮೆರವಣಿಗೆಯು ಅಸೆಂಬ್ಲಿ ಭವನಕ್ಕೆ ಹೋಗಿದ್ದಿತು. ಡಾ. ಅಂಬೇಡಕರ ಭಾಯಿ ಪರೂಳೆಕರ ಮೊದಲಾದ ಪ್ರಮುಖರು ಈ ಮೆರವಣಿಗೆಯಲ್ಲಿದ್ದರು.

## ವಿಮರ್ಶಾತ್ಮಕ ಪ್ರಶ್ನೋತ್ತರ.

### ಕಾಂಗ್ರೆಸ್ಸಿನಲ್ಲಿ ಹೊಸದಾಗಿ ಕೂಡಿದವರನ್ನು ಹೇಗೆ ಕಾಣಬೇಕು?

ಪ್ರಶ್ನೆ—ಕಾಂಗ್ರೆಸ್ಸಿಗೆ ಮೊದಲಿನಿಂದಲೂ ವಿರೋಧವಾಗಿದ್ದ ಬ್ರಾಹ್ಮಣೇತರ ಪಕ್ಷದ ಅನೇಕ ಪ್ರಮುಖರು ಈಗ ಕರ್ನಾಟಕದಲ್ಲಿ ಕಾಂಗ್ರೆಸ್ಸಿಗೆ ಬಂದು ಕೂಡುತ್ತಿದ್ದಾರೆ. ಇವರನ್ನು ನಾವು ಹೇಗೆ ಕಾಣಬೇಕು?

ಉತ್ತರ— ಅವರು ಯಾವ ಪಕ್ಷದಲ್ಲಿದ್ದರೆಂಬುದನ್ನು ಈಗ ನೋಡಬೇಕಾದುದಿಲ್ಲ. ಕಾಂಗ್ರೆಸ್ಸಿನಲ್ಲಿ ಬಂದು ಕೂಡಿದನಂತರ ಅವರು ಕಾಂಗ್ರೆಸ್ಸಿನವರೆಂದೇ ತಿಳಿಯಲ್ಪಡಬೇಕು. ಕಳೆದ ವರುಷ ಇದೇ ಕಾಲದಲ್ಲಿ ಚುನಾವಣೆ ಪ್ರಚಾರ ನಡೆದಾಗ ನೀವು ಹೀಗೇ ಹೇಳಿದ್ದಿರಿ. ಕಾಂಗ್ರೆಸ್ಸಿನ ಶುದ್ಧೀ ಕಾರ್ಯ ನಡೆದಿದೆ. ಬೇರೆ ಮತದವರನ್ನು ನಾವು ನಮ್ಮ ಮತಕ್ಕೆ ಬಂದರೆ ಶುದ್ಧಗೊಳಿಸಿ ನಮ್ಮ ಮತದಲ್ಲಿ ಸೇರಿಸಿಕೊಳ್ಳುತ್ತೇವೆಂದೇ ಹೇಳಿದ್ದಿರಿ. ಅದೇ ಪ್ರಕಾರ ಸೇರಿಸಿಕೊಂಡಿರಿ. "ಪಟ್ಟವ ಕಟ್ಟಿದಬಳಿಕ ಲಕ್ಷಣವನರಸುವರೆ?" ಎಂಬಂತೆ ಕಾಂಗ್ರೆಸ್ಸಿನಲ್ಲಿ ಸೇರಿದಮೇಲೆ ಅವರ ಹಿಂದಿನ ಮತವನ್ನು ಎಣಿಸುವದೇಕೆ?

ಪ್ರಶ್ನೆ—ನೀವು ಹೇಳುವದೇನೋ ತತ್ವ. ಆದರೆ ಅದು ವ್ಯವಹಾರದಲ್ಲಿ ಬರುವದು ಹೇಗೆ? ಈಗ ಬರುವವರೆಲ್ಲಾ ಕಾಂಗ್ರೆಸ್ಸಿನ ತತ್ವಕ್ಕೆ ಒಪ್ಪಿ ಅದರಂತೆಯೇ ಇದರಲ್ಲಿದ್ದೇ ದೇಶಸೇವೆ ಮಾಡಬೇಕೆಂದೇ ಬರುತ್ತಿದ್ದಾರೆಂದು ನಂಬುವದು ಹೇಗೆ? ಇವರಿಗೆ ಮೊದಲೇನೂ ಈ ಸಂಗತಿ ತಿಳಿದಿರಲಿಲ್ಲವೆ? ಆಗಲೇ ತಮ್ಮ ಪಕ್ಷವನ್ನು ಬಿಟ್ಟು ಜೈಲಿಗೆ ಹೋಗಲಿಕ್ಕೂ ಬಂದಿದ್ದರೆ ಈಗ ನಮಗೆ ಈ ಸಂದೇಹವಾದರೂ ಎಲ್ಲಿ ಬರುತ್ತಿತ್ತು? ಈಗ ಎಲ್ಲಾ ಕಡೆ ಕಾಂಗ್ರೆಸ್ಸಿಗೇ ಪ್ರಚಂಡ ಜಯ. ಅಧಿಕಾರವನ್ನೂ ಅದು ಹಿಡಿಯಿತು. ಇನ್ನು ನಾವು ಕಾಂಗ್ರೆಸ್ಸಿನಲ್ಲಿ ಸೇರದಿದ್ದರೆ ಈಗಿರತಕ್ಕ ನಮ್ಮ ಸ್ಥಾನ, ಮಾನಗಳೆಲ್ಲಾ ಕೈಬಿಡಬಹುದೆಂದೇ ಕಾಂಗ್ರೆಸ್ಸಿನಲ್ಲಿ ಬಂದು ಯಾಕೆ ಕೂಡಿರಲಿಕ್ಕಿಲ್ಲ? ಅದಕ್ಕಾಗಿ ಇಂಥವರ ಕಡೆಗೆ ಕಾಂಗ್ರೆಸ್ಸಿನ ಜವಾಬ್ದಾರಿ ಕೆಲಸ ಕೊಡಬಹುದೆ?

ಉತ್ತರ—ನಾವೇ ಹೀಗೆ ತತ್ವವನ್ನು ಹೇಳಿದೆವೆಂದು ನೀವು ತಿಳಿಯಬೇಡಿರಿ. ಮೊನ್ನೆ ಡಾ. ಪಟ್ಟಾಭಿ ಸೀತಾರಾಮಯ್ಯನವರು ಮೈಸೂರು ಪ್ರವಾಸಕ್ಕೆ ಬಂದಾಗ ಅವರೂ ಹೀಗೆಯೇ ಹೇಳಿದ್ದಾರೆ. ಕರ್ನಾಟಕದಲ್ಲಿ ಬ್ರಾಹ್ಮಣೇತರ ಪಕ್ಷದವರೂ ಕಾಂಗ್ರೆಸ್ಸಿಗೆ ಕೂಡಿದರು. ಅವರಲ್ಲಿ ಯಾವ ಭಿನ್ನಭೇದಗಳನ್ನೂ ಎಣಿಸದೆ ಕೂಡಿ ನಡೆಯಬೇಕಾದುದೇ ಕಾಂಗ್ರೆಸ್ಸಿನವರ ಕರ್ತವ್ಯವೆಂದು ಅವರೂ ಹೇಳಿದ್ದಾರೆ. ಇದು ತತ್ವವೇ ಅಲ್ಲ. ವ್ಯಾವಹಾರಿಕವಾಗಿಯೂ ಇರಬೇಕಾದುದು.

ನೀವು ಸಂಶಯಪಡುವುದು ಸರಿಯಲ್ಲವೆಂದೇನೂ ನಮ್ಮ ಅಭಿಪ್ರಾಯವಲ್ಲ. ನೀವು ಹೇಳುವಂತೆಯೇ ಕೆಲವರು ಅನಿವಾರ್ಯದಿಂದ ಈಗ ಕಾಂಗ್ರೆಸ್ಸಿನಲ್ಲಿ ಬಂದು ಕೂಡಿರಬಹುದು. ದೇಶಸೇವೆಗೆ ಈ ಕಾಲಕ್ಕೆ ಕಾಂಗ್ರೆಸ್ಸಿನಲ್ಲಿ ಸೇರಿದರೇನೇ ಹೆಚ್ಚು ಅವಕಾಶವಿದೆಯೆಂಬ ತಿಳುವಳಿಕೆಯಿಂದಲೂ ಕೆಲವರು ಬಂದಿರಬಹುದು. ಅಂಥ ಸದಭಿಪ್ರಾಯದಿಂದ ಬಂದ ಕಾರ್ಯದಕ್ಷರಿಗೆ ಜವಾಬ್ದಾರಿ ಕೆಲಸ ವಹಿಸಿದರೆ ಕಾಂಗ್ರೆಸ್ಸಿನ ಕಾರ್ಯ ಹೆಚ್ಚು ಪರಿಣಾಮಕಾರಿಯಾಗಬಹುದು. ಆದುದರಿಂದ ಈಗ ಬಂದವರೆಲ್ಲಾ ಜವಾಬ್ದಾರಿ ಕೆಲಸಕ್ಕೆ ಇನ್ನೂ ಅನರ್ಹರೆಂದೂ ಮೊದಲಿದ್ದವರೇ ಅರ್ಹರೆಂದೂ ತಿಳಿಯುವುದು ಸರಿಯಾಗಲಾರದು.

ನಾವು ಈ ವರೆಗೆ ನಾನಾ ಕಷ್ಟಗಳನ್ನು ಅನುಭವಿಸಿದ್ದೇವೆ. ಈಗ ಕಾಂಗ್ರೆಸ್ ಅಧಿಕಾರವನ್ನು ಸ್ವೀಕರಿಸಿದೆ. ಇನ್ನುಮೇಲೆ ನಮಗೂ ಜವಾಬ್ದಾರಿ ಕೆಲಸಗಳು ದೊರೆಯತಕ್ಕವುಗಳಿವೆ. ಇಂಥ ಸಮಯದಲ್ಲಿ ಇವರು ಬಂದರಲ್ಲಾ! ಇವರು ಮೊದಲೂ ಬೇಕಾದ ಸ್ಥಾನ ಮಾನಗಳನ್ನು ಹೊಂದಿದರು. ನಾವು ಆಗಲೂ ಏನೂ ಹೊಂದಲಿಲ್ಲ. ಈಗ ಮತ್ತೆ ಇವರೇ ಮುಂದೆ ಬಂದುಬಿಟ್ಟರೆ ನಮಗೆ ಯಾವಾಗಲೂ ಇದೇ ಸ್ಥಿತಿಯಾಯಿತಲ್ಲಾ! ಎಂದೇ ನೊಂದುಕೊಂಡು ನೀವು ನಮ್ಮ ವಿಷಯದಲ್ಲಿ ಇಲ್ಲದ ಸಂಶಯವನ್ನು ತೆಗೆದುಕೊಳ್ಳುತ್ತಿದ್ದೀರೆಂದು ಹೊಸದಾಗಿ ಬಂದವರು ನಿಮಗೆ ಹೇಳಿದರೂ ಹೇಳಬಹುದು.

ಆದಕಾರಣ ಹೊಸದಾಗಿ ಬಂದವರೆಲ್ಲಾ ಮೊದಲಿನಿಂದಲೂ ಇದ್ದವರಿಗಿಂತ ಕಡಿಮೆ ಅಥವಾ ಜವಾಬ್ದಾರಿ ಕೆಲಸಕ್ಕೆ ಈಗಲೇ ಪಾತ್ರರಲ್ಲ, ಎಂದು ಹೇಳುವದು ಸರಿಯಲ್ಲ. ಇದು ನಿಜವಾದ ಶುದ್ಧೀಕಾರ್ಯವಲ್ಲ. ಹಿಂದುಗಳು ತಮ್ಮಲ್ಲಿ ಸಾವಿರಾರು ಜಾತಿಗಳನ್ನು ಇಟ್ಟುಕೊಂಡು ಶುದ್ಧೀ ಕಾರ್ಯ ನಡೆಸಿದಂತೆಯೇ ಸರಿ. ಮುಸಲ್ಮಾನರು ಹೇಗೆ ಸಾಮರಸ್ಯದ ಶುದ್ಧೀಕಾರ್ಯ ಮಾಡುತ್ತಾರೋ ಹಾಗೆಯೇ ಕಾಂಗ್ರೆಸ್ಸಿನ ಶುದ್ಧೀಕಾರ್ಯವಿರಬೇಕು.

ಪ್ರಶ್ನೆ—ಮತ್ತೂ ನೀವು ತತ್ವವನ್ನೇ ಹೇಳುತ್ತೀರಿ. ಈವರೆಗೆ ಕಾಂಗ್ರೆಸ್ಸಿಗೆ ವಿರೋಧಮಾಡಿ, ಬ್ರಾಹ್ಮಣ ಮತ್ತು ಲಿಂಗಾಯತ ಸಮಾಜಗಳಲ್ಲಿ ಪರಸ್ಪರ ಎಷ್ಟೋ ಅಪ್ರೀತಿ ಹೆಚ್ಚಲು ಕಾರಣರಾಗಿ ಈ ದಿವಸ ಕಾಂಗ್ರೆಸ್ಸಿಗೆ ಬಂದಕೂಡಲೇ ಆ ಹಿಂದಿನ ವಿಚಾರಗಳೆಲ್ಲಾ ಹೋಗಿಬಿಡುತ್ತವೆಂದು ತಿಳಿಯುವದು ವ್ಯಾವಹಾರಿಕರೀತಿಯಲ್ಲ. ಮೊದಲಿನ ಟೊಪ್ಪಿಗೆ ತೆಗೆದು ಗಾಂಧಿ ಟೊಪ್ಪಿಗೆ ಹಾಕಿಕೊಳ್ಳುವದು ಎಷ್ಟು ಸುಲಭವೋ ಅಷ್ಟು ಮೊದಲಿನ ವಿಚಾರಗಳೆಲ್ಲಾ ಹೋಗಿ ಕಾಂಗ್ರೆಸ್ಸಿನ ವಿಚಾರಗಳೇ ಬರುವದು ಸುಲಭವಲ್ಲ. ಹೀಗೆ ತಿಳಿಯುವದೇ ವ್ಯವಹಾರ ಜ್ಞಾನ. ಆದ್ದರಿಂದ ಈ ಬಗ್ಗೆ ಲಕ್ಷಿಸುವದು ಅಗತ್ಯವಲ್ಲವೆ?

ಉತ್ತರ—ಬಟ್ಟೆಯನ್ನು ತೆಗೆದುಹಾಕುವಷ್ಟು ಮತವನ್ನು ತೆಗೆದುಹಾಕುವದು ಸುಲಭವಲ್ಲವೆಂಬ ನಿಮ್ಮ ಹೇಳಿಕೆ ಸರಿಯಾಗಿದೆ. ಈ ನಿಯಮವು ಈಗ ಕಾಂಗ್ರೆಸ್ಸಿನಲ್ಲಿ ಸೇರುವವರಿಗೇನೇ ಸಂಬಂಧಪಡತಕ್ಕದ್ದಲ್ಲವಷ್ಟೆ. ಮೊದಲು ಕಾಂಗ್ರೆಸ್ಸಿನಲ್ಲಿರುವವರಿಗೂ ಇದು ಸಂಬಂಧಪಡತಕ್ಕದ್ದೇ ಆಗಿದೆ. ಮೊದಲಿನಿಂದ ಕಾಂಗ್ರೆಸ್ಸಿನಲ್ಲಿದ್ದ ಅನೇಕರು ಕಾಂಗ್ರೆಸ್ಸಿನ ತತ್ವಕ್ಕೆ ವಿರೋಧವಾಗಿ ನಡೆದ ಸಂಗತಿಗಳು ಎಷ್ಟೋ ಬೈಲಿಗೆ ಬಂದಿಲ್ಲವೆ? ಕಾಂಗ್ರೆಸ್ಸಿಗೆ ಕೂಡಿದೊಡನೆ ಅದರ ತತ್ವದಂತೆಯೇ ನಡೆದವರೂ ಅನೇಕರಿದ್ದಾರೆ.

ಬ್ರಾಹ್ಮಣೇತರ ಪಕ್ಷದವರಲ್ಲಿ ಮತ್ತೆ ಬೇರೆ ಬೇರೆ ವ್ಯಕ್ತಿಗಳ ಪಕ್ಷದವರೂ ಇದ್ದಾರೆ. ಇವರೆಲ್ಲರೂ ಕಾಂಗ್ರೆಸ್ಸಿನಲ್ಲಿ ಬಂದಾಗ ಮತ್ತೆ ತಮ್ಮ ತಮ್ಮ ವ್ಯಕ್ತಿಗಳ ಪಕ್ಷವನ್ನೇ ಹಿಡಿದು ಮುಂದೆಬರಲು ಪ್ರಯತ್ನಿಸಬಹುದು. ಟೊಪ್ಪಿಗೆಯನ್ನು ಹಾಕಿಕೊಳ್ಳುವಷ್ಟು ತಮ್ಮ ಮೊದಲಿನ ಪಕ್ಷಾಭಿಮಾನವನ್ನು ಬಿಡುವದೇನೂ ಸುಲಭವಲ್ಲವೆಂದು ನೀವೇ ಹೇಳಿದ್ದೀರಷ್ಟೆ.

ಆದಕಾರಣ ಇವೆಲ್ಲಾ ಜನಸಾಮಾನ್ಯದಲ್ಲಿ ಹೆಚ್ಚು ಕಡಿಮೆಯಾಗಿ ಇರತಕ್ಕವುಗಳೇ. ಅಂತೆಯೇ ನಮ್ಮ ಅಭಿಪ್ರಾಯವೇನಂದರೆ, ಜವಾಬ್ದಾರಿ ಕೆಲಸವನ್ನು ಅವರವರ ಶಕ್ತಿ, ಸಾಹಸ, ಕಾಂಗ್ರೆಸ್ಸಿನ ಶೀಲಗಳನ್ನು ನೋಡಿಯೇ ವಹಿಸಬೇಕೇ ವಿನಾ ಮೊದಲಿನವರು, ಈಗಿನವರು, ಜೈಲಿಗೆ ಹೋದವರು, ಹೋಗದಿದ್ದವರು, ಬ್ರಾಹ್ಮಣರು, ಬ್ರಾಹ್ಮಣೇತರರು, ಕಂಬಳಿಯವರ ಪಕ್ಷದವರು, ಹುಲಕೋಟಿಯವರ ಪಕ್ಷದವರು, ಎಂಬವುಗಳನ್ನೇನೂ ಕಾಂಗ್ರೆಸ್ಸಿನಲ್ಲಿ ಬಂದನಂತರ ಎಣಿಸಬಾರದು.

---

# ಹಿಂದು ಸಮಾಜದಲ್ಲಿ
## ಸ್ತ್ರೀಯರ ಸ್ಥಾನ.

ಲೇಖಕಿ:— ಮದ್ರಾಸಿನ ಕ್ವೀನ್ ಮೇರಿಸ್ ಕಾಲೇಜಿನ ಕರ್ನಾಟಕ ಅಧ್ಯಾಪಿಕೆಯರಾದ ವಿದ್ವಾನ್ ಶ್ರೀಮತಿ ಮಂದಾಕಿನೀ ದೇವಿಯವರು.

ಸ್ತ್ರೀಯರಿಗಿರುವ ಸ್ಥಾನವಾವುದು? ಪ್ರಾಚೀನ ಕಾಲದಿಂದಲೂ ಸ್ತ್ರೀಯರಿಗೆ ನಮ್ಮಲ್ಲಿ ಉತ್ತಮ ಸ್ಥಾನವಿತ್ತು. ಗೌರವವಿತ್ತು. ಆದರವಿತ್ತು. 'ಯತ್ರನಾರ್ಯಸ್ತು ಪೂಜ್ಯಂತೆ ರಮಂತೇ ತತ್ರದೇವತಾಃ' ಎಂಬುದಕ್ಕೆ ಸರಿಯಾಗಿ ಸ್ತ್ರೀಯರ ಸ್ಥಾನ ಮಾನಗಳು ಸುರಕ್ಷಿತವಾಗಿದ್ದವರೆಗೂ ಭಾರತವು ಉನ್ನತಿಯ ಉಚ್ಚ ಶಿಖರವನ್ನೇರಿತ್ತು. ಆದರೆ ಕಾಲಚಕ್ರದ ಮಹಿಮೆಯಿಂದ ಪುರುಷರು ಸ್ತ್ರೀಯರನ್ನು ಪಂಜರಬದ್ಧ ಪಕ್ಷಿಗಳ ಅವಸ್ಥೆಗೆ ತಂದು ಗೃಹರೂಪೀ ಕಾರಾಗೃಹದಲ್ಲಿ ನಿರಕ್ಷರರನ್ನಾಗಿ ಬಂಧಿಸಿದರು. ಅವರನ್ನು ಅವರ ಉಚ್ಚ ಆದರ್ಶದಿಂದ ಕೆಳಗೆಳೆದರು.

ಪ್ರಾಚೀನ ಇತಿಹಾಸ ಗ್ರಂಥಗಳನ್ನು ನೋಡಿದರೆ ನಮ್ಮ ಉನ್ನತಿಯು ಎಷ್ಟರವರೆಗೆ ಮುಂದುವರಿದಿತ್ತೆಂಬುದು ಜ್ಞಾಪಕವಾಗುತ್ತದೆ. ಇಂದು ಪರಮ ಸನಾತನಿಗಳ ಗೃಹದಲ್ಲಿ ದೇವರಿಗಿರುವ ಸ್ಥಾನವು ಅಂದಿನ ಸ್ತ್ರೀಯರಿಗಿತ್ತು. ಇದನ್ನು ಮೇಲಿನ ಶ್ಲೋಕಾರ್ಥವು ಪುಷ್ಟೀಕರಿಸುತ್ತದೆಂಬುದರಲ್ಲಿ ಸಂದೇಹವೇ ಇಲ್ಲ. ಸಮಾಜದಲ್ಲಿ, ಸಭ್ಯತೆಯಲ್ಲಿ ಇಂದು ಪುರುಷರಿಗಿರುವ ಸ್ಥಾನವೇ ಅಂದಿನ ಸ್ತ್ರೀಯರಿಗೆ ಸಲ್ಲುತ್ತಿತ್ತು. ಆದರೆ ಈಗ........

ಮಹಾಭಾರತದ ಅನಂತರ ಹಿಂದೂ ಸಭ್ಯತೆಯ ಸೌಭಾಗ್ಯ ಸೂರ್ಯನೊಂದಿಗೆ ಹಿಂದೂ ಗೌರವ ಸೂರ್ಯನು ಮುಳುಗಿದನು. ಆದರೂ ವಿಕ್ರಮಾದಿತ್ಯ ಚಂದ್ರಗುಪ್ತರ ಕಾಲದಲ್ಲಿ ಅಲ್ಪ ಸ್ವಲ್ಪ ಆದರ್ಶಗಳು ಅಲ್ಲಲ್ಲಿ ಕಂಡುಬರುತ್ತಿದ್ದವು. ಟಾಡ್ ಸಾಹೇಬರ ಹೇಳಿಕೆಯಿಂದ ರಜಪೂತ ಸ್ತ್ರೀಯರ ಆದರ್ಶವು ಅನುಕರಣೀಯವಾಗಿತ್ತೆಂದು ತಿಳಿದುಬರುತ್ತದೆ. ಮುಸಲ್ಮಾನ ರಾಜ್ಯಭಾರದಲ್ಲಿ ಹಿಂದೂ ರಾಜರ ಸ್ವಾತಂತ್ರ್ಯವು ನಾಶವಾದಂತೆಯೇ ನಮ್ಮ ಆದರ್ಶವೂ ನಾಮಾವಶೇಷವಾಯಿತು. ತತ್ಕಾಲೀನ ಸಾಹಿತ್ಯಕಾರರು ತಮ್ಮ ಪಾಂಡಿತ್ಯವನ್ನು ಮೆರೆಯಿಸುವ ಭರದಲ್ಲಿ ಸಮಯ ಒದಗಿದಾಗಲೆಲ್ಲಾ ಸ್ತ್ರೀಯರನ್ನು ನಿಂದಿಸುವುದಕ್ಕೆ ಹಿಂಜರಿಯಲಿಲ್ಲ. ಆಗಲೇ ತಮಗೆ ಅನುಕೂಲವಾಗುವ ಅನುಕೂಲ ಸಿಂಧುಗಳ ನಿರ್ಮಾಣವೂ ನಡೆಯಿತು. ಅಬಲೆಯರೆಂಬ ಹೆಸರು ಇದರಿಂದ ಸಾರ್ಥಕವಾಯಿತು. ಇದರ ಪರಿಣಾಮದ ಫಲವಾಗಿಯೇ ನಾಗರಿಕತೆಗೆ ತೌರುಮನೆಯಾಗಿದ್ದ ಈ ಭಾರತವು ಈಗ ಕಾಲಡಿಯ ಕಸವಾಗಿದೆ. ಹುಟ್ಟಿದಂದಿನಿಂದ ಸಾಯುವವರೆಗೂ ಸ್ವಾರ್ಥವನ್ನು ಬದಿಗಿಟ್ಟು ಪರಾರ್ಥಕ್ಕಾಗಿ ಸರ್ವಸ್ವವನ್ನೂ ಒಪ್ಪಿಸಿ ತ್ಯಾಗ, ಧರ್ಮ, ದಯೆ, ಸಹನೆಗಳ ಪ್ರತ್ಯಕ್ಷ ಮೂರ್ತಿಯಂತಿರುವ ಸ್ತ್ರೀಯರನ್ನು ಕೇವಲ ಕ್ರೀಡಾ ದಾಸಿಯರನ್ನಾಗಿ ಅವನತಿಯ ಅಧೋಗತಿಗಿಳಿಸಿದ ಫಲವೇ ಈಗಿನ ಗುಲಾಮಗಿರಿಗೆ ಕಾರಣವಾಗಿರಬಹುದೆಂದೆಣಿಸಿದರೆ ತಪ್ಪಾಗಲಾರದು.

ವರ್ತಮಾನ ಪರಿಸ್ಥಿತಿಯು ಕೊಂಚ ಪರಿವರ್ತನವಾದಂತೆ ಕಾಣುತ್ತಿದೆ. ಇದು ಒಂದು ವೇಳೆ ಪಾಶ್ಚಾತ್ಯರ ಪ್ರಭಾವದಿಂದಲಾದರೂ ಆಗಿರಬಹುದು. ಆದರೆ ಅನುಕರಣದಿಂದ ಹೆಚ್ಚಿನ ಲಾಭವಿಲ್ಲ. ಅದು ಚಿರಸ್ಥಾಯಿಯೂ ಅಲ್ಲ. ಅಬಲೆಯರೆಂದೆಣಿಸಿಕೊಳ್ಳುವ ನಾವೇ ನಮ್ಮಲ್ಲಿ ಅಡಗಿರುವ ವ್ಯಕ್ತಿತ್ವದ ಅಸ್ತಿತ್ವದ ಜನಸಾಮಾನ್ಯಕ್ಕೆ ಪರಿಚಯಮಾಡಿಸಿ ಭಾರತದ ಆಧುನಿಕ ಇತಿಹಾಸದಲ್ಲಿ ಆದರ್ಶವನ್ನು ಸ್ವರ್ಣಾಕ್ಷರದಲ್ಲಿ ಕೆತ್ತಬೇಕೆಂಬ ಉದ್ದೇಶವನ್ನು ಇಟ್ಟುಕೊಂಡಿರಬೇಕು. ಅಂಥ ಸಮಾಜದಲ್ಲಿ ನಮಗೆ ಯೋಗ್ಯ ಸ್ಥಾನವಿಲ್ಲದಿದ್ದರೂ ಹಿರಿಯರು ಸ್ತ್ರೀಯರಿಗಿಟ್ಟಿರುವ ಗೌರವ ಸ್ಥಾನವನ್ನು ಯಾರೂ ಅಲ್ಲಗಳೆಯುವಂತಿಲ್ಲ. ಏಕೆಂದರೆ ಹಿಂದುಗಳಾದ ನಾವು ಪ್ರತಿವರ್ಷವೂ ಆಶ್ವೀಜ ಶುಕ್ಲ ಪ್ರತಿಪದೆಯಿಂದ ಮನೆ ಮನೆಯಲ್ಲಿಯೂ ಬಹು ಸಂಭ್ರಮದಿಂದ ಪೂಜಿಸುತ್ತಿರುವುದು ಯಾರನ್ನು? ಶಕ್ತಿ ಸ್ವರೂಪಿಣಿಯಾದ ದುರ್ಗೆಯನ್ನಲ್ಲವೆ? ದೀಪಾವಳಿಯಲ್ಲಿ ದರಿದ್ರ ಧನಾಢ್ಯ ಎಂಬ ಭೇದವಿಲ್ಲದೆ ದೀಪಮಾಲಿಕೆಗಳಿಂದ ಗೃಹವನ್ನಲಂಕರಿಸಿ ಸುಸ್ವಾಗತವನ್ನಿತ್ತು ಅತ್ಯಂತ ಸಂಭ್ರಮದಿಂದ ಪೂಜಿಸುವುದಾರನ್ನು? ಸಂಪತ್ಸ್ವರೂಪಿಣಿಯಾದ ಲಕ್ಷ್ಮಿಯನ್ನಲ್ಲವೆ? ನಮ್ಮ ಬುದ್ಧಿ ಭಾಂಡಾರ ಶಬ್ದ ಭಾಂಡಾರ ಜ್ಞಾನಭಾಂಡಾರವನ್ನು ಯಾರ ಶಕ್ತಿ ಸಾಮರ್ಥ್ಯದಿಂದ ಹೆಚ್ಚಿಸುವುದು? ಶುಭ್ರಾಂಬರ ಧಾರಿಣಿಯಾದ ಶಾರದೆಯಿಂದಲ್ಲವೆ? ಸ್ತ್ರೀಯರ ಗೌರವವೆಂಬ ಪ್ರಕಾಶಮಯವಾದ ಉಜ್ವಲ ಪ್ರವಾಹವು ಭಾರತೀಯ ಕಂಠಹಾರವಾಗಿ ನಿರ್ಮಲ ಧಾರೆಯಿಂದ ಪ್ರವಹಿಸುತ್ತಿರುವವರೆಗೂ ಭಾರತವು ಉನ್ನತಿಯ ಚರಮ ಸೀಮೆಯನ್ನು ಮುಟ್ಟಿತು. ಅದನ್ನು ಮರೆತಂದಿನಿಂದ ದಾಸ್ಯವು ಅನಿವಾರ್ಯವಾಯಿತು. ಮಾತೆಯಾದವಳಿಗೊಂದು ಆದರ್ಶ, ಒಂದು ಉದ್ದೇಶವಿಲ್ಲದ ಮೇಲೆ ಅವಳಿಂದುತ್ಪನ್ನವಾದ ಸಂತಾನವು ಎಷ್ಟರ ಮಟ್ಟಿಗೆ ಆದರ್ಶ ಸಂತಾನವಾಗುವುದು? ಈ ಸಂಸಾರದಲ್ಲಿ ಸಮಾಜದಲ್ಲಿ ಎಷ್ಟರಮಟ್ಟಿಗೆ ಉತ್ತಮ ಸ್ಥಾನಮಾನಗಳು ದೊರೆತಾವು? ಪ್ರಕಾಶವಿಲ್ಲದ ಕಡೆ ಸನ್ಮಾರ್ಗವೆಂತು ತಿಳಿಯುವುದು? "ಸಾಧಿಸಿದರೆ ಸಪಳ ನುಂಗಬಹುದು" ಎಂಬ ಗಾದೆಯಂತೆ ನಾವಿಷ್ಟಪಟ್ಟು ನಮ್ಮ ಆದರ್ಶವನ್ನು ಯಥಾಸ್ಥಿತಿಯಲ್ಲಿರಿಸಿಕೊಳ್ಳಲು ಬಯಸಿದರೆ ಇನ್ನಾದರೂ ನಿದ್ರೆಯಿಂದೆದ್ದು ಪ್ರಯತ್ನಿಸಬಹುದು. ಸರ್ವಜನಾದರಣೆಗೆ ಪಾತ್ರರಾಗಬಹುದು. ಎಲ್ಲರೂ ಇತರರನ್ನು ನಂಬಿಕೊಂಡಿರದೆ ಅನುಕೂಲವಿದ್ದವರೆಲ್ಲಾ ತಮ್ಮ ಸಮಯದಲ್ಲಿ ಬಹು ಸ್ವಲ್ಪಾಂಶವನ್ನು ಸ್ತ್ರೀಯರ ಏಳಿಗೆಗಾಗಿ ಅರ್ಪಿಸಿ ಅತಿ ಶೀಘ್ರದಲ್ಲಿಯೇ ನಮ್ಮ ಪೂರ್ವ ಸ್ಥಾನವನ್ನು ಪಡೆಯಲು ಪ್ರಯತ್ನಿಸಬಹುದು.

ಭಾರತೀಯ ಗೃಹಗಳಲ್ಲಿ ಸ್ತ್ರೀಯರ ಆದರ್ಶವನ್ನು ಪುನಃ ಸ್ಥಾಪಿಸುವುದಕ್ಕೆ ಅನುಭವಶಾಲಿನಿಯರಾದ ಸ್ತ್ರೀಯರೂ ವಿದ್ಯಾವತಿಯರಾದ ಸ್ತ್ರೀಯರೂ ಸ್ತ್ರೀ ವಿದ್ಯಾಪ್ರಚಾರವೂ ಅತ್ಯಂತ ಅವಶ್ಯಕವೆಂದು ಮಹಾ ಕವಿ ರವೀಂದ್ರನಾಥರು ಒಂದು ಸಲ ಹೇಳಿದ್ದರು. ಅದು ಅಕ್ಷರಶಃ ಸತ್ಯವು. ಸ್ತ್ರೀಯರು ಸುಶಿಕ್ಷಿತರಾಗಿ ತಮ್ಮ ಜವಾಬ್ದಾರಿಯನ್ನು ತಿಳಿದುಕೊಳ್ಳುವ ದಿನವೇ ನಮ್ಮ ಭಾರತಕ್ಕೆ ಸುದಿನವು. ॥ಶಾಸ್ತ್ರಬಂಧು॥

---

# ಕಾಂಗ್ರೆಸ್ಸಿಗೆ ಅಧಿಕಾರವಿಲ್ಲ.

ಹಿಂದು-ಮುಸಲ್ಮಾನರ ಐಕಮತ್ಯದ ವಿಚಾರವಾಗಿ ರಾಷ್ಟ್ರೀಯ ಸಭಾಧ್ಯಕ್ಷರಾದ ಪಂಡಿತ ಜವಾಹರಲಾಲ ನೆಹರುರವರು ಬ್ಯಾ. ಜಿನ್ನಾರವರನ್ನುದ್ದೇಶಿಸಿ ಒಂದು ಪ್ರಕಟನೆಯನ್ನು ಹೊರಡಿಸಿದ್ದಾರಷ್ಟೆ. ಅದಕ್ಕೆ ಉತ್ತರವಾಗಿ ಭಾಯಿ ಪರಮಾನಂದರು ಒಂದು ಪ್ರಕಟನೆಯನ್ನು ಹೊರಡಿಸಿದ್ದಾರೆ. ಅದರಲ್ಲಿ ಈ ಪ್ರಕಾರ ತಿಳಿಸಿದ್ದಾರೆ—

### ಪಂಡಿತಜಿಯವರು ಹೋಅರರಾದರು !

"ಪಂಡಿತ ಜವಾಹರಲಾಲರು ಹಿಂದು-ಮುಸಲ್ಮಾನ್ ಐಕಮತ್ಯದ ವಿಚಾರವಾಗಿ ಪ್ರಕಟಿಸಿದ್ದನ್ನು ನೋಡಿದರೆ ಕಾಂಗ್ರೆಸ್ಸು ಮತ್ತೆ ತನ್ನ ಹಿಂದಿನ ಮಾರ್ಗಕ್ಕೇನೇ ಬಂದಿತೆಂದು ಸ್ಪಷ್ಟವಾಗುತ್ತದೆ. ಪಂಡಿತ ಜವಾಹರಲಾಲರು ಜಾತಿನಿರ್ಣಯದ ವಿಚಾರವಾಗಿ ತವ್ಮ ಅಭಿಪ್ರಾಯವನ್ನು ಮತ್ತೆ ವ್ಯತ್ಯಾಸಮಾಡಿದ್ದಾರೆ. ಇವರು ಸರ್. ಸೆಮ್ಯುಅಲ್ ಹೋಅರರಂತೆ ಹೀಗೆ ಹೇಳಿದ್ದಾರೆ— 'ಹಿಂದು-ಮುಸಲ್ಮಾನರಲ್ಲಿ ಸರ್ವ ಸಮ್ಮತವಾದ ಒಪ್ಪಂದವಾದ ವಿನಾ ಜಾತಿನಿರ್ಣಯವೇನೂ ನಿವಾರಣೆಯಾಗುವುದಿಲ್ಲ." ಈ ಪ್ರಕಾರ ಪಂಡಿತಜಿಯವರು ಹೇಳಿ ಜಾತಿನಿರ್ಣಯವನ್ನು ಒಂದು ರೀತಿಯಲ್ಲಿ ಒಪ್ಪಿಕೊಂಡಿದ್ದಾರೆ.

ಮುಸಲ್ಮಾನರನ್ನು ಕಾಂಗ್ರೆಸ್ಸಿನಲ್ಲಿ ಸೇರಿಸಿಕೊಳ್ಳಬೇಕೆಂದು ಪಂ. ಜವಾಹರಲಾಲರು ಮೊನ್ನೆ ಚಟುವಟಿಕೆಯನ್ನ ಪ್ರಾರಂಭಿಸಿದ್ದಾಗ ಕಾಂಗ್ರೆಸ್ಸು ಇನ್ನೇನೂ ಒಪ್ಪಂದದ ವಿಚಾರವಾಗಿ ಪ್ರಸ್ತಾಪಿಸಲು ಸಿದ್ಧವಿಲ್ಲವೆಂದು ಹೇಳಿದ್ದರು. ಆದರೆ ಈಗ ಕಾಂಗ್ರೆಸ್ ಮತ್ತೆ ಒಪ್ಪಂದಕ್ಕೆ ಮುಂದೆ ಬಂದಿದೆ. ಇದರಿಂದ ಕಾಂಗ್ರೆಸ್ಸು ತಾನು ಮುಸಲ್ಮಾನರನ್ನು ಸೇರಿಸಿಕೊಳ್ಳುವುದರಲ್ಲಿ ವಿಜಯವನ್ನು ಹೊಂದಲಿಲ್ಲವೆಂದೇ ಸ್ಪಷ್ಟವಾಗುತ್ತದೆ. ಅಂತೆಯೇ ಜಾತ್ಯಂಧರ ಸಂಗಡ ಮತ್ತೆ ಒಪ್ಪಂದಕ್ಕೆ ಬಂದಿತು.

### ಕಾಂಗ್ರೆಸ್ಸಿಗೆ ಅಧಿಕಾರವೆಲ್ಲಿದೆ ?

ಹಿಂದು-ಮುಸಲ್ಮಾನರಲ್ಲಿ ಒಪ್ಪಂದವಾಡಲು ಕಾಂಗ್ರೆಸ್ಸಿಗೆ ಅಧಿಕಾರವಿಲ್ಲ. ಕಾಂಗ್ರೆಸ್ಸಿನವರು ಹೇಳುತ್ತಿದ್ದುದೇನು? ನಾವು ಯಾವ ಜಾತಿಗೂ ಸಂಬಂಧಪಟ್ಟವರಲ್ಲ. ಕಾಂಗ್ರೆಸ್ಸು ಜಾತಿವಿಶಿಷ್ಟ ಸಂಸ್ಥೆಯೂ ಅಲ್ಲ. ಎಂದೇ ಅಲ್ಲವೆ? ಎಂದವೇಲೆ ಈ ಜಾತಿಯ ಒಪ್ಪಂದದಲ್ಲಿ ತಾನು ಬಾರದೆ ಇರಬೇಕಾದುದೇ ಯುಕ್ತವಾಗಿಯೂ ನ್ಯಾಯವಾಗಿಯೂ ಇದೆ.

### ಕಾಂಗ್ರೆಸ್ಸಿನ ಮುಂದಾಳುಗಳಿಗೆ ಬೇಕಾದುದೇನು?

ನಾನು ಕಾಂಗ್ರೆಸ್ ಮುಂದಾಳುಗಳಿಗೆ ಹೀಗೆ ಕೇಳುತ್ತಿದ್ದೇನೆ. ನಿಮ್ಮ ಇಷ್ಟವಾದರೂ ಏನಿದೆ?

(೧) ಹಿಂದು ಮತ್ತು ಮುಸಲ್ಮಾನರನ್ನು ಕೂಡಿಸಿ ಒಂದು ಹೊಸ ಜಾತಿ (Nation) ಯನ್ನು ನಿರ್ಮಾಣ ಮಾಡಬೇಕೆಂದಿರುವಿರಾ? ಹಾಗಾಗಿದ್ದರೆ ಹಿಂದುಗಳಾಗಲಿ ಅಥವಾ ಮುಸಲ್ಮಾನರಾಗಲಿ ಇದಕ್ಕೆ ಒಪ್ಪುವುದಿಲ್ಲ. (೨) ಇಂಗ್ಲಿಷರ ಸಂಗಡ ಹೋರಾಡಲು ಮುಸಲ್ಮಾನರನ್ನು ನಿಮ್ಮಲ್ಲಿ ಕೂಡಿಸಿಕೊಳ್ಳಬೇಕೆಂದಿರುವಿರಾ? ಇದು ನಿಮ್ಮಿಂದ ಎಂದೂ ಸಾಧ್ಯವಾಗುವುದಿಲ್ಲ, ಇದೊಂದು ರಾಜಕಾರಣದ ಮಹಾ ಅಪರಾಧವಾಗಿಯೇ ಪರಿಣಮಿಸುವುದು. (೩) ಜಾತಿಯ ಜಗಳವನ್ನು ನಿವಾರಣೆ ಮಾಡಬೇಕೆಂದು ನೀವು ಇಚ್ಛಿಸಿರುವಿರಾ? ಹಾಗಿದ್ದರೆ ಮುಸ್ಲಿಂ ರಾಜನೀತಿಯಲ್ಲಿ ನೀವು ಪ್ರವೇಶಿಸಬೇಡಿರಿ.

(೪) ನೀವು ಧಾರ್ಮಿಕ ಮತಭೇದಗಳನ್ನು ನಿವಾರಣೆಮಾಡಬೇಕೆಂದಿರುವಿರಾ? ಮಸೀದಿಯ ಮುಂದೆ ವಾದ್ಯ ಬಾರಿಸುವುದು, ಗೋಹತ್ಯ, ಮಂದಿರಗಳಲ್ಲಿ ಆರತಿ, ಶಾಹಿದಗಂಜ ಚಟುವಟಿಕೆ ಈ ಮುಂತಾದ ಧಾರ್ಮಿಕ ವಿಷಯುಗಳನ್ನು ಸರಿಪಡಿಸಬೇಕೆಂದಿದ್ದರೆ ಪ್ರತ್ಯೇಕ ವ್ಯಕ್ತಿಯೂ ಈ ಸಂಗತಿಗಳಲ್ಲಿ ಭಿನ್ನ ಭಿನ್ನ ಅಭಿಪ್ರಾಯವನ್ನು ತಿಳಿಸಬಹುದು.

### ಈ ಜಗಳವಾದರೂ ಏಕೆ ?

ಕಾಂಗ್ರೆಸ್ಸಿನ ಸಂಗಡ ಹಿಂದು ಮಹಾಸಭೆಯು ಹೀಗೆ ಜಗಳ ಹೂಡುವುದೇಕೆ? ಎಂದು ಕೆಲವರು ಕೇಳಬಹುದು. ಕಾಂಗ್ರೆಸ್ಸಿನ ರಾಜಕೀಯ ಧ್ಯೇಯದ ವಿಚಾರವಾಗಿಯಾಗಲಿ ಅದರ ಆ ಸಂಬಂಧವಾದ ಕಾರ್ಯಗಳ ಸಂಬಂಧವಾಗಿಯಾಗಲಿ ಮಹಾಸಭೆಯೇನೂ ವಿರೋಧಿಸುವುದಿಲ್ಲ. ಆದರೆ ಕಾಂಗ್ರೆಸ್ ತಾನು ಜಾತಿಸಂಸ್ಥೆಯಲ್ಲವೆಂದು ಹೇಳಿಕೊಳ್ಳುತ್ತಾ ಇದ್ದರೂ ಜಾತಿಯ ಪ್ರಶ್ನೆ ಬಂದೊಡನೆ ತಾನು ಹಿಂದು ಎಂದು ಮುಂದೆ ಬಂದು, ಹಿಂದು ಜಾತಿಯನ್ನು ಯಜ್ಞಪಶುವನ್ನಾಗಿ ಮಾಡಲು ಸಿದ್ಧವಾಗುವುದರಿಂದ ನಾವು ಅದರ ವಿರುದ್ಧವಾಗಿ ಹೋರಾಡಲು ಸಿದ್ಧರಾಗಬೇಕಾಗುತ್ತದೆ.

ಕಾಂಗ್ರೆಸ್ ಲಖನೌ ಒಪ್ಪಂದವನ್ನು ಮಾಡಿತು. ಅದನ್ನು ಮುಸಲ್ಮಾನರು ಒಪ್ಪಲಿಲ್ಲ. ಆಮೇಲೆ ಕಾಂಗ್ರೆಸ್ ನೆಹರು ವರದಿಯನ್ನು ಸಿದ್ಧಗೊಳಿಸಿತು. ಅದನ್ನು ಮಿ. ಜಿನ್ನಾರವರು ಮನ್ನಿಸಲಿಲ್ಲ. ಆಮೇಲೆ ಬರೇ ಕಾಗದವನ್ನು ರುಜುಮಾಡಿ ಕೊಡಲು ಕಾಂಗ್ರೆಸ್ ಸಿದ್ಧವಾಯಿತು. ಅದನ್ನೂ ಯಾವ ಮುಸಲ್ಮಾನರೂ ಪುರಸ್ಕರಿಸಲಿಲ್ಲ. ಜಾತಿ ನಿರ್ಣಯವನ್ನು ಕಾಂಗ್ರೆಸ್ ಕಿತ್ತೊಗೆಯಲು ಸಿದ್ಧವಾಗಿಲ್ಲ. ಆದಕಾರಣ ನಾನು ಕಾಂಗ್ರೆಸ್ಸಿಗೂ, ಮುಸಲ್ಮಾನರಿಗೂ, ಸರಕಾರಕ್ಕೂ ಈ ಮೂಲಕ ಸ್ಪಷ್ಟ ಸೂಚಿಸವುದೇನೆಂದರೆ, ಕಾಂಗ್ರೆಸ್ ಮತ್ತು ಮುಸಲ್ಮಾನರ ಮಧ್ಯದಲ್ಲಿ ಆಗುವ ಒಪ್ಪಂದಕ್ಕೆ ಹಿಂದು ಜನತೆಯು ಒಪ್ಪಿಗೆಯೇನೂ ಇಲ್ಲವೆಂದೇ ತಿಳಿಯಬೇಕು."

---

# ಶ್ರೀ. ಸಾವರಕರರಿಗೆ ಎರಡು ಪ್ರಶ್ನೆ.

ಹಿಂದು ಮಹಾಸಭಾಧ್ಯಕ್ಷರಾದ ಶ್ರೀ. ಸಾವರಕರರಿಗೆ ಅಹಮದಾಬಾದಿನಲ್ಲಿ ಮಹಾರಾಷ್ಟ್ರ ಸಮಾಜದವರು ಒಂದು ಔತಣವನ್ನು ಕೊಟ್ಟರು. ಆ ಕಾಲಕ್ಕೆ ಈ ಕೆಳಗಿನ ಎರಡು ಪ್ರಶ್ನೆಗಳನ್ನು ಮಾಡಿದರು—

(೧) ನೀವು ಪ್ರಾಂತಿಕ ಅಭಿಮಾನಿಗಳಾಗಿರುವುದೇಕೆ? (೨) ನೀವು ಹಿಂದುತ್ವದ ಅಭಿಮಾನವನ್ನು ಬಿಟ್ಟು ಕಾಂಗ್ರೆಸ್ಸಿನಲ್ಲಿ ಸೇರಿದ್ದರೆ ಅದರ ಅಧ್ಯಕ್ಷರು ಕೂಡಾ ಆಗುತ್ತಿರಲಿಲ್ಲವೆ?

### ಪ್ರಾಂತಾಭಿಮಾನ ಹೇಗಿರಬೇಕು?

(೧) ನಾನು ಸಂಕುಚಿತವಾದ ಪ್ರಾಂತಾಭಿಮಾನವುಳ್ಳವನೆಂದು ನಿಮಗೆ ತೋರಿದೆ. ದೇಶಾಭಿಮಾನಕ್ಕೆ ಬಾಧಕವಿಲ್ಲದ ಪ್ರಾಂತಾಭಿಮಾನವನ್ನು ಹೊಂದಲು ನನಗೆ ಎಳ್ಳಷ್ಟೂ ಅಸಮಾಧಾನವಿಲ್ಲ. ನಾನಾರಾಯನ ದೊಂಬೆಯಿಂದ ಲೋಕಮಾನ್ಯ ಟಿಳಕರ ಸ್ವರಾಜ್ಯ ಚಟುವಟಿಕೆಯ ವರೆಗೆ ಯಾವ ವೀರ ಮಹಾರಾಷ್ಟ್ರೀಯರಿಂದ ಸ್ವಾತಂತ್ರ್ಯದ ಹೋರಾಟ ನಡೆಯುತ್ತಾ ಬಂದಿದೆಯೋ ಅಂಥ ಸ್ವಾತಂತ್ರ್ಯವೀರರ ಭೂಮಿಯಾದ ಮಹಾರಾಷ್ಟ್ರವು ನನ್ನ ಪ್ರಾಂತವೆಂದು ಹೇಳಿಕೊಳ್ಳಲಿಕ್ಕೆ ನನಗೆ ಅಭಿಮಾನ ಬರದೆ ಇರುವುದೆ?

ಬ್ರಹ್ಮನು ಹಿಂದುಸ್ಥಾನದ ಮಹತ್ವವನ್ನು ವರ್ಣಿಸಿ ನೀನು ಈ ದೇಶದ ಯಾವ ಭಾಗದಲ್ಲಿ ಹುಟ್ಟಲು ಅಪೇಕ್ಷಿಸುವಿಯೆಂದು ಕೇಳಿದರೆ ನಾನು ಮಹಾರಾಷ್ಟ್ರದಲ್ಲಿಯೇ ಹುಟ್ಟುವೆನೆಂದು ಅಭಿಮಾನಪೂರ್ವಕವಾಗಿ ಹೇಳುವೆನು. ಆದರೆ ಈ ನನ್ನ ಪ್ರಾಂತಾಭಿಮಾನವು ಅನ್ಯ ಪ್ರಾಂತಗಳನ್ನು ಹೀಯಾಳಿಸುವುದಿಲ್ಲ. ಅಥವಾ ಅನ್ಯ ಪ್ರಾಂತಗಳಿಗೆ ಅನ್ಯಾಯಮಾಡುವುದಿಲ್ಲವೆಂಬುದನ್ನು ಮಾತ್ರ ನೀವು ನೆನಪಿನಲ್ಲಿಡಬೇಕಾದುದು.

## ಯಾವುದು ವೀರರ ಲಕ್ಷಣ?

(೨) ನೀವು ಮಾಡಿರುವ ಎರಡನೆಯ ಪ್ರಶ್ನೆಯಲ್ಲಿ ನಾನು ಹಿಂದುತ್ವವನ್ನು ಬಿಟ್ಟು ಕಾಂಗ್ರೆಸ್ಸಿನಲ್ಲಿ ಸೇರಬೇಕಾಗಿತ್ತೆಂದೂ ಅದರಿಂದ ಕಾಂಗ್ರೆಸ್ಸಿನ ಅಧ್ಯಕ್ಷಸ್ಥಾನವು ಕೂಡಾ ನನಗೆ ದೊರೆಯುತ್ತಿತ್ತೆಂದೂ ಹೇಳಲಾಗಿದೆ. ಹಿಂದುತ್ವದ ಯೋಗ್ಯ ಅಭಿಮಾನವನ್ನು ಬಿಟ್ಟು ಶುಷ್ಕ ರಾಷ್ಟ್ರೀಯತ್ವದ ಬೆನ್ನು ಹತ್ತುವುದು ನನಗೆ ಎಳ್ಳಷ್ಟೂ ಮಾನ್ಯವಿಲ್ಲ. ವಾಯವ್ಯ ಪ್ರಾಂತದಲ್ಲಿ ಹಿಂದು ಬಾಲಿಕೆಯರ ಮೇಲಾಗುತ್ತಿರುವ ಅತ್ಯಾಚಾರವನ್ನು ನಿಮ್ಮ ಕಣ್ಣ ಮುಂದೆ ತಂದುಕೊಳ್ಳಿರಿ. ನಿಮ್ಮ ತಂಗಿ ಅಥವಾ ಮಗಳನ್ನೇ ಹಾಗೆ ಓಡಿಸಿಕೊಂಡು ಹೋಗಿ ಅತ್ಯಾಚಾರ ನಡೆಸಿದ್ದಾರೆಂಬುದನ್ನು ನೆನೆಸಿಕೊಳ್ಳಿರಿ. ಆಗ ಆ ಅತ್ಯಾಚಾರಗಳ ವಿರುದ್ಧವಾಗಿ ಏನನ್ನೂ ಮಾತನಾಡದೆ ಮೌನವಾಗಿದ್ದು ಅದಕ್ಕೆ ಒಂದು ವಿಧವಾದ ಒಪ್ಪಿಗೆಯನ್ನು ತೋರಿಸುತ್ತಿರುವವರ ಸಾಲಿನಲ್ಲಿಯೇ ನಾನೂ ನಿಲ್ಲಬೇಕೆಂದು ನಿಮಗೆ ಅನಿಸಿದರೆ ಅದೇನು ನಿಮ್ಮ ವೀರವೃತ್ತಿಯ ಲಕ್ಷಣವೆ?

ಕೌಲ ಎತ್ತಿನಂತೆ ತಲೆ ಹಾಕುವುದರಿಂದ ಬರುವ ಮನ್ನಣೆಯು ನನಗೇನೂ ಬೇಕಿಲ್ಲ. ನಾನು ಅಮೇರಿಕೆಗೆ ಹೋಗಿ ಅಲ್ಲಿಯೇ ವಾಸವಾಗಿದ್ದರೆ ಅಲ್ಲಿಯ ಪ್ರೆಸಿಡೆಂಟನೂ ಆಗಬಹುದೆಂದು ಯೋಚಿಸಿ ಅಮೇರಿಕೆಗೆ ನಾನು ಹೋಗುವುದು ವೀರತನದ ಲಕ್ಷಣವೆ? ಅದೇ ಪ್ರಕಾರ ನನ್ನ ಪ್ರಾಮಾಣಿಕ ವಿಚಾರವನ್ನು ಮೂಲೆಗೊತ್ತಿ ಕೇವಲ ಕಾಂಗ್ರೆಸ್ಸಿನಲ್ಲಿ ಒಂದು ಹೆಚ್ಚಿನ ಮನ್ನಣೆಯ ಸ್ಥಾನವನ್ನು ಹೊಂದುವುದಕ್ಕಾಗಿ ಅದರ ಸೂತ್ರಧಾರಿಗಳಿಗೆ ತಲೆಬಾಗಿ ನಡೆದರೆ ಅದು ವೀರರ ಲಕ್ಷಣವೆ? ಹೀಗೆ ನಡೆಯುವುದಾಗಿದ್ದರೆ ನಾನು ಮೊದಲು ಟಿಳಕರ ಕಡೆಗೆ ಹೋಗದೆ ಗೋಖಲೆಯವರ ಕಡೆಗೆ ಹೋಗುತ್ತಿದ್ದೆನು. ನನ್ನ ವಿಚಾರಗಳು ಆಗ ಟಿಳಕರಿಗೆ ಹಗಲು ಸರಿತೋರುತ್ತಿರಲಿಲ್ಲ. ಮಧ್ಯ ರಾತ್ರಿಯಲ್ಲಿ ನನ್ನ ಮಾತಿಗೆ ಕಿವಿಗೊಡುತ್ತಿದ್ದರು. ಈಗ ಈ ದಾರಿ ಬೇಡವೆಂದೇ ಅವರು ಹೇಳುತ್ತಿದ್ದರು.

ಗುಲಾಮಗಿರಿಯ ರಾಷ್ಟ್ರದಲ್ಲಿರುವ ಜನರು ಸಗಣಿಯಲ್ಲಿರುವ ಹುಳಗಳಂತೆಯೇ ಸರಿ. ಕಾಂಗ್ರೆಸ್ಸಿನ ಅಧ್ಯಕ್ಷರಾದರೂ ಆ ಹುಳಗಳಲ್ಲಿಯ ಮೇಲಿನ ಹುಳ. ಪ್ರತ್ಯಕ್ಷ ಹೋರಾಟ ಪ್ರಾರಂಭವಾದಾಗ ನಾನು ಹಿಂದೆ ನಿಂತಿಲ್ಲವೆಂಬುದು ನಿಮಗೆ ಆಗ ಗೊತ್ತಾಗಬಹುದು. ಎಲ್ಲ ವ್ಯಕ್ತಿಗಳಿಗೂ ಸಮಾನ ಅಧಿಕಾರವಿರಬೇಕಾದುದೇ ರಾಷ್ಟ್ರೀಯತ್ವವು. ಹಿಂದು ಮಹಾಸಭೆಯು ಹಿಂದುಗಳಿಗಾಗಿಯೇ ಹೆಚ್ಚಿನ ಅಧಿಕಾರವನ್ನೇನೂ ಕೇಳುವುದಿಲ್ಲ. ಎಂದ ಮೇಲೆ ಇದೇ ನಿಜವಾದ ರಾಷ್ಟ್ರೀಯ ವೃತ್ತಿಯಲ್ಲವೆ? ನೀನು ಕ್ರಿಸ್ತನಾಗಿರುವುದರಿಂದ ಇಕೋ ಈ ಹೆಚ್ಚಿನ ಅಧಿಕಾರ. ನೀನು ಮುಸಲ್ಮಾನನಾದುದರಿಂದ ಅಕೋ ಆ ಹೆಚ್ಚು ಸ್ಥಾನಗಳು. ಎಂಬ ಭಿನ್ನಭೇದಗಳನ್ನು ಹೇಳುವುದೇ ಅರಾಷ್ಟ್ರೀಯವು. ಕಾಂಗ್ರೆಸ್ ಯಾವ ಕ್ಷಣದಲ್ಲಿ ಅದು ನಿಜವಾದ ರಾಷ್ಟ್ರೀಯ ವೃತ್ತಿಯನ್ನು ತಾಳುವುದೋ ಅದೇ ಕ್ಷಣದಲ್ಲಿ ನಾನೂ ಕಾಂಗ್ರೆಸ್ಸಿನಲ್ಲಿ ಸೇರುವೆನೆಂಬುದನ್ನು ನೀವು ನೆನಪಿನಲ್ಲಿಡಿರಿ.

## ಅಸೆಂಬ್ಲಿಗಳಲ್ಲಿ ಪ್ರಾರ್ಥನೆಯ ಮುಕ್ತಾಯ!

ಕಾಂಗ್ರೆಸ್ ಪಕ್ಷವು ಅಧಿಕಾರವನ್ನು ಸ್ವೀಕರಿಸಿದೊಡನೆ ಮದ್ರಾಸ್ ಮೊದಲಾದ ಅಸೆಂಬ್ಲಿಗಳಲ್ಲಿ ರಾಷ್ಟ್ರ ಗೀತೆಯನ್ನು ಹೇಳುವುದು ಪ್ರಾರಂಭವಾಗಿದ್ದಿತಷ್ಟೆ. ಮದ್ರಾಸ್ ಅಸೆಂಬ್ಲಿಯಲ್ಲಿ ಮುಸಲ್ಮಾನರು ವಂದೇಮಾತರಂ ಗೀತೆಗೆ ವಿರೋಧಮಾಡಲು ಅದೊಂದು ದೊಡ್ಡ ಪ್ರಶ್ನೆಯಾಗಿಯೇ ಪರಿಣಮಿಸಿ ಗೀತೆಯ ಅರ್ಧಭಾಗ ಮಾತ್ರ ಮಾನ್ಯವಾಯಿತಲ್ಲವೆ? ದಿಲ್ಲಿ ಕೇಂದ್ರಶಾಸನ ಮಂಡಲದ ಅಧ್ಯಕ್ಷರಾದ ಸರ್. ಅಬ್ದುರ ರಹಿಮ ಇವರ ಅಧ್ಯಕ್ಷತೆಯಲ್ಲಿ ಎಲ್ಲ ಪ್ರಾಂತಿಕ ಶಾಸನಮಂಡಲಗಳ ಅಧ್ಯಕ್ಷರ ಪರಿಷತ್ತು ದಿಲ್ಲಿಯಲ್ಲಿ ಕೂಡಿತ್ತು. ಅಲ್ಲಿ ಈ ವಿಷಯವು ಪ್ರಸ್ತಾಪಿಸಲ್ಪಟ್ಟು ಅಸೆಂಬ್ಲಿಗಳಲ್ಲಿ ಯಾವ ಪ್ರಾರ್ಥನೆಯನ್ನೂ ಮಾಡಕೂಡದೆಂದು ತೀರ್ಮಾನವಾಯಿತು.

## ಬ್ಯಾ. ಜಿನ್ನಾರವರ ಉತ್ತರ.

ರಾಷ್ಟ್ರೀಯ ಸಭಾಧ್ಯಕ್ಷರಾದ ಪಂಡಿತ ಜವಾಹರಲಾಲ ನೆಹರುರವರು ಬ್ಯಾ. ಜಿನ್ನಾರವರನ್ನು ಉದ್ದೇಶಿಸಿ ಹಿಂದು-ಮುಸಲ್ಮಾನ್ ಐಕಮತ್ಯಕ್ಕೋಸ್ಕರ ಒಂದು ಪ್ರಕಟನೆಯನ್ನು ಮೊನ್ನೆ ಹೊರಡಿಸಿದ್ದಾರಷ್ಟೆ. ಅದಕ್ಕೆ ಉತ್ತರವಾಗಿ ಬ್ಯಾ. ಜಿನ್ನಾರವರು ಒಂದು ಪ್ರಕಟನೆಯನ್ನು ಹೊರಡಿಸಿದ್ದಾರೆ. ಅದರಲ್ಲಿ ಹೀಗೆ ಹೇಳಿದ್ದಾರೆ—



ಬ್ಯಾ. ಜಿನ್ನಾರವರು.

"ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಒಪ್ಪಿಗೆಯ ಮೇರೆಗೆ ಪಂ ಜವಾಹರಲಾಲರು ಪ್ರಕಟಿಸಿರುವ ಸಂಗತಿಗಳನ್ನು ನಾನು ಮತ್ತು ಮುಸ್ಲಿಂಲೀಗಿನ ವರ್ಕಿಂಗ್ ಕಮಿಟಿಯವರು ಯೋಚಿಸುವೆವು. ಇವರ ಪ್ರಕಟನೆಯಲ್ಲಿ ಹೋರಾಟದ ಧೋರಣವೇನೋ ಇದ್ದೇ ಇದೆ. ಆದರೆ ಅದರಲ್ಲಿ ಪ್ರಯೋಗಿಸಿರುವ ಶಬ್ದ ಮತ್ತು ಅವುಗಳ ದಾಟಿಗಳನ್ನು ನೋಡಿದರೆ ಎಷ್ಟೋ ಸಹಾನುಭೂತಿಯ ಪ್ರವೃತ್ತಿಯೂ ಇದ್ದಂತೆ ಕಾಣುತ್ತದೆ.

ಕಳೆದ ಕೆಲವು ತಿಂಗಳುಗಳಿಂದ ನಡೆದ ಪ್ರಸಂಗಗಳು ಮುಸ್ಲಿಂ ಲೀಗಿಗೆ ಸಮಾನತೆಯ ಮಾನ ಮನ್ನಣೆಗಳನ್ನು ಕೊಡಬೇಕೆಂದೇ ಕಾಂಗ್ರೆಸ್ ಪಕ್ಷದ ಮುಖಂಡರಿಗೆ ಮನವರಿಕೆಮಾಡಿಕೊಟ್ಟವೆಂದು ತೋರುತ್ತದೆ. ನಮಗೆ ಧಾರ್ಮಿಕ, ಸಾಂಸ್ಕೃತಿಕ, ಭಾಷಾವಿಷಯಕ, ಹಕ್ಕು ಬಾಧ್ಯತೆಗಳನ್ನು ಮಾತ್ರವೇ ಅಲ್ಲದೆ ದೇಶದ ರಾಜ್ಯ ಕಾರಭಾರದಲ್ಲಿಯೂ ನಮ್ಮ ರಾಜಕೀಯ ಹಕ್ಕುಗಳ ಸಂರಕ್ಷಣೆಯನ್ನೂ ಕೊಡುವುದಕ್ಕಾಗಿ ಯೋಗ್ಯ ಹೊಣೆಗಾರಿಗೆ ಬೇಕು. ಕೇವಲ ಸದಭಿಪ್ರಾಯದ ಪತ್ರಿಕೆಗಳಿಂದಲೇ ಈ ಪ್ರಶ್ನೆಯು ಬಿಡಿಸಲ್ಪಡುವುದಿಲ್ಲ. ಕಾಂಗ್ರೆಸ್ಸಿನವರಿಗೆ ನಿಜವಾಗಿಯೂ ಈ ಪ್ರಶ್ನೆಯನ್ನು ಸಹಾನುಭೂತಿಪೂರ್ವಕವಾಗಿ ಬಿಡಿಸಬೇಕೆಂಬ ಇಷ್ಟವಿದ್ದರೆ ಹೀಗೆ ಪತ್ರಿಕೆಗಳಲ್ಲಿ ವಾದವಿವಾದಗಳನ್ನು ಮಾಡುವುದೇನೂ ಸರಿಯಾದ ಮಾರ್ಗವಲ್ಲ."

### ಈ ಪ್ರಕಟನೆಯ ಮುಂಚೆ.

ಬ್ಯಾ. ಜಿನ್ನಾರವರು ಈ ಪ್ರಕಟನೆಯನ್ನು ಹೊರಡಿಸುವ ಮುಂಚೆ ಮೌಲಾನಾ ಅಬ್ದುಲ್ ಕಲಂ ಅಜಾದ್‌ರು ಇವರ ಕಡೆಗೆ

ಹೋಗಿ ಹಿಂದು ಮುಸಲ್ಮಾನರ ಐಕಮತ್ಯದ ವಿಚಾರವಾಗಿ ಪ್ರಸ್ತಾಪಿಸಿದ್ದರು. ಮೌ. ಅಜಾದರೂ ಗಾಂಧೀಜಿಯವರೂ ಈ ವಿಷಯವನ್ನು ಪ್ರಸ್ತಾಪಿಸಿದನಂತರವೇ ಮೌಲಾನರು ಬ್ಯಾ. ಜಿನ್ನಾರವರ ಕಡೆಗೆ ಹೋಗಿದ್ದರು.

ವರ್ಕಿಂಗ್ ಕಮಿಟಿಯವರು ತಮ್ಮ ಅಭಿಪ್ರಾಯವೇನೆಂಬುದನ್ನು ಸ್ಪಷ್ಟವಾಗಿ ಮುಂದಿಡಬೇಕೆಂದೂ ಗಾಂಧೀಜಿಯವರು ತಮ್ಮ ಯೋಜನೆಯನ್ನು ಸಿದ್ಧಗೊಳಿಸಿ ನಮ್ಮ ಮುಂದೆ ಚರ್ಚೆಗಿಡುವುದು ಉತ್ತಮವೆಂದೂ ಬ್ಯಾ. ಜಿನ್ನಾರವರು ಮೌಲಾನಾರವರಲ್ಲಿ ತಿಳಿಸಿದರು. ಬ್ಯಾ. ಜಿನ್ನಾರವರ ವಿಚಾರಗಳನ್ನು ಗಾಂಧೀಜಿಯವರಿಗೆ ತಿಳಿಸುವುದಾಗಿ ಮೌಲಾನಾರವರು ಹೇಳಿದ್ದಾರೆ.

ಬ್ಯಾ. ಜಿನ್ನಾರವರು ಹೇಳಿದ ಈ ರೀತಿ ಆ ಮೇಲೆ ಪ್ರಕಟಮಾಡಿದ ಪದ್ಧತಿ ಇವೆರಡೂ ಹೊಸ ತರಹದವುಗಳೇನೂ ಅಲ್ಲ ಯಾವಾಗಲೂ ಇವರು ಕಾಂಗ್ರೆಸ್ಸಿನವರಿಂದಲೇ ಅವರ ಹೇಳಿಕೆಗಳನ್ನು ತಿಳಿದುಕೊಳ್ಳುತ್ತಾ ಅವುಗಳಿಗೆ ತಕ್ಕಂತೆ ತಮ್ಮ ಧೋರಣವನ್ನು ಬೇರೆ ಮಾಡಿಕೊಳ್ಳುತ್ತಲೇ ಬಂದಿದ್ದಾರೆ. ಹೆಚ್ಚಿನ ಹಕ್ಕು ಬಾಧ್ಯತೆಗಳು ದೊರೆಯುತ್ತಲೇ ಇರಬೇಕು. ಒಪ್ಪಂದ ಮಾತ್ರ ಎಂದೂ ಮುಗಿದಿರಬಾರದು. ಅತ್ತಲಾಗಿ ಸರಕಾರದಿಂದ, ಇತ್ತಲಾಗಿ ಕಾಂಗ್ರೆಸ್ಸಿನಿಂದ ಶಕ್ಯವಿರುವಷ್ಟು ಸೌಲಭ್ಯಗಳನ್ನು ಹೊಂದುತ್ತಾ ಇರುವುದೇ ಇವರ ಒಪ್ಪಂದದ ರೀತಿ. ಈ ಸಾರೆಯಾದರೂ ಹಾಗೆ ಆಗದಿರಲಿ.

# ಶೋಚನೀಯ ನಿಧನ.

ರಾಷ್ಟ್ರ ಸಭಾಧ್ಯಕ್ಷರಾದ ಪಂಡಿತ ಜವಾಹರಲಾಲ ನೆಹರುರವರ ತಾಯಿಯವರೂ ಕೀರ್ತಿಶೇಷ ಮೋತಿಲಾಲ ನೆಹರುರವರ ಪತ್ನಿಯವರೂ ಆದ ಶ್ರೀಮತಿ ಸ್ವರೂಪರಾಣಿಯವರು ಅಲಹಾಬಾದಿನ ತಮ್ಮ ಆನಂದ ಭವನದಲ್ಲಿ ತಾ. ೧೦-೧-೩೮ ನೆಯ ಉಷಃ ಕಾಲದಲ್ಲಿ ನಿಧನ ಹೊಂದಿದರೆಂದು ತಿಳಿಸಲು ಅತ್ಯಂತ ವಿಷಾದವಾಗುತ್ತದೆ. ಇವರಿಗೆ ಆ ದಿನ ಪಕ್ಷಾಘಾತದ ಬೇನೆಯುಂಟಾಗಿ ಕೊನೆಗೆ ಅದರಲ್ಲಿಯೇ ಮೃತಪಟ್ಟರು.

### ನಿಧನ ವಾರ್ತೆಯಿಂದ ನಿಧನ !

ಶ್ರೀಮತಿ ಸ್ವರೂಪರಾಣಿಯವರ ನಿಧನ ಹೊಂದಿದ ಸಮಾಚಾರ ತಿಳಿದೊಡನೆ ಇವರ ಭಗಿನಿಯರಾದ ಶ್ರೀಮತಿ ಕೌಲ ಎಂಬುವವರು ಮೂರ್ಛೆಹೋದರು. ಅದೇ ಮೂರ್ಛೆಯಿಂದ ತಾ. ೧೧-೧-೩೮ ನೆಯ ಉಷಃಕಾಲದಲ್ಲಿ ಅವರೂ ನಿಧನಹೊಂದಿದರು. ಇವರಿಗೆ ೭೭ ವರುಷಗಳಾಗಿದ್ದವು. ನೆಹರು ಮನೆತನದಲ್ಲಿ ಅನೇಕ ಅಪೂರ್ವ ಸಂಗತಿಗಳು ಜರುಗುತ್ತಿರುವಂತೆ ಈ ಮರಣವೂ ಅಪೂರ್ವವಾದುದಾಗಿಯೇ ಸಂಭವಿಸಿತು.

### ಆದರ್ಶ ಪತ್ನಿ ಮತ್ತು ಆದರ್ಶ ಮಾತೆ.

ಶ್ರೀಮತಿ ಸ್ವರೂಪರಾಣಿಯವರ ಅಂತ್ಯ ಸಂಸ್ಕಾರದ ಕಾಲಕ್ಕೆ ಸಾಧಾರಣ ೫೦ ಸಾವಿರ ಜನರು ಸೇರಿದ್ದರು. ಪಂಡಿತ ಜವಾಹರಲಾಲರ ಮೇಲೆ ಬಂದ ಈ ಮಾತೃವಿಯೋಗದ ದುಃಖದಲ್ಲಿ ನಾವೂ ಭಾಗಿಗಳಾಗಿದ್ದೇವೆಂದು ರಾಷ್ಟ್ರದ ಸಾವಿರಾರು ಪ್ರಮುಖರಿಂದ ತಂತಿಗಳು ಬಂದವು. ಮಹಾತ್ಮಾ ಗಾಂಧಿಯವರು ತಂತಿಯ ಮೂಲಕ ಶ್ರೀಮತಿ ಸ್ವ ರೂ ಪ ರಾ ಣಿ ಯ ವ ರು ಆದರ್ಶ ಪತ್ನಿಯವರೂ ಆದರ್ಶ ಮಾತೆಯವರೂ ಆಗಿದ್ದರೆಂದು ತಿಳಿಸಿದ್ದಾರೆ. ಹಿಂದುಸ್ಥಾನದ ಮಹಿಳಾ ಪ್ರಪಂಚಕ್ಕೆ ಶ್ರೀಮತಿ ಸ್ವರೂಪ ರಾಣಿಯವರ ಆಚರಣೆಯು ಆದರ್ಶಪ್ರಾಯವಾದುದು.

ಶ್ರೀಮತಿಯವರು ಪೂರ್ವ ವಯಸ್ಸಿನಲ್ಲಿ ಬಹು ವೈಭವದಿಂದಲೇ ಕಾಲವನ್ನು ಕಳೆದಿದ್ದರು. ನಿಜವಾಗಿಯೂ ಅವರು ರಾಣಿಯ ವರಂತೆಯೇ ಇದ್ದರು. ಪಂಡಿತ ಮೋತಿಲಾಲರು ರಾಜರಂತೆಯೇ ವೈಭವಶಾಲಿಗಳು. ಮಹಾತ್ಮಾ ಗಾಂಧಿಯವರು ಅಸಹಕಾರದ ಚಟುವಟಿಕೆಯನ್ನು ಪ್ರಾರಂಭಿಸಲು ನೆಹರು ಮನೆತನವೂ ಆ ಮಹಾರಾಷ್ಟ್ರ ಕಾರ್ಯದಲ್ಲಿ ಸೇರಿತು. ಮೋತಿಲಾಲಜಿಯವರು ತಮ್ಮ ರಾಜವೈಭವವನ್ನು ರಾಷ್ಟ್ರಹಿತಕ್ಕಾಗಿ ತ್ಯಾಗಮಾಡಿ ಸಾಮಾನ್ಯ ನಾಗರಿಕರಂತೆ ಇರಲಾರಂಭಿಸಿದರು. ಆಗ ಶ್ರೀಮತಿ ಸ್ವರೂಪರಾಣಿಯವರೂ ತಮ್ಮ ಪತಿಯ ಮಾರ್ಗವನ್ನೇ ಅನುಸರಿಸಿ ಆದರ್ಶ ಪತ್ನಿಯರಾದರು.

ಶಾಸನಭಂಗದ ವೀರ ಚಟುವಟಿಕೆಯಲ್ಲಿಯೂ ಶ್ರೀಮತಿಯವರು ಸೇರಿ ಅಲಹಾಬಾದಿನ ಪುರುಷೋತ್ತಮದಾಸ ಉದ್ಯಾನದಲ್ಲಿಯ ಪ್ರಚಂಡ ಸಭೆಗೆ ಅಧ್ಯಕ್ಷರಾಗಿ ಪೋಲಿಸರ ದಬ್ಬಾಳಿಕೆಗೆ ಎದೆಕೊಟ್ಟು ಶೂರನಾರೀಮಣಿಯೆಂದು ಪ್ರಸಿದ್ಧಿಯನ್ನು ಹೊಂದಿದರು. ಪೋಲಿಸರ ಆಗಿನ ದಬ್ಬಾಳಿಕೆಯಿಂದ ರಾಣಿಯವರಿಗೆ ಬಲವಾದ ಪೆಟ್ಟಾಯಿತು.

### ತ್ಯಾಗವೃತ್ತಿಯ ವೀರಮಾತೆ.

ರಾಜವೈಭವವನ್ನು ಬಿಟ್ಟು, ಪತಿಯ ವಿಯೋಗದ ದುಃಖವನ್ನನುಭವಿಸುತ್ತಿರುವಾಗ ಲೋಕಪ್ರಸಿದ್ಧ ಪುತ್ರ ಪಂಡಿತ ಜವಾಹರಲಾಲರ ಮೇಲೆ ಆಗಾಗ್ಗೆ ಬರುತ್ತಿದ್ದ ಕಾರಾಗೃಹವಾಸದ ದುಃಖವನ್ನೂ ಸಹಿಸಿಕೊಂಡಿರುವಾಗಲೇ ಸೊಸೆಯ ಮರಣದ ಶೋಕವನ್ನೂ ಹೊಂದಬೇಕಾಯಿತು. ಹೀಗೆ ಉತ್ತರ ವಯಸ್ಸಿನಲ್ಲಿ ಒಂದರ ಮೇಲೊಂದು ವಿಪತ್ತುಗಳು ಬಂದರೂ ಅವುಗಳಿಗಾಗಿ ಕುಗ್ಗದೆ ವೀರ ಮಾತೆಯೆಂದೇ ಹಿಂದಿಯರು ಯಾವಾಗಲೂ ಸ್ಮರಿಸುತ್ತಿರುವಂತೆ ತ್ಯಾಗವೃತ್ತಿಯುಳ್ಳವರಾಗಿದ್ದರು. ಮರಣ ಸಮಯದಲ್ಲಿ ಇವರಿಗೆ ೭೦ ವರುಷಗಳಾಗಿದ್ದವು.

ಈ ವೀರಮಾತೆಯ ಆತ್ಮಕ್ಕೆ ಚಿರಶಾಂತಿ ದೊರೆಯಲೆಂದೂ ಇಂಥ ಮಾತೆಯ ವಿಯೋಗವು ಪಂಡಿತಜಿಯವರಿಗೆ ವಿಶೇಷ ದುಃಖವನ್ನುಂಟುಮಾಡುವುದು ಸ್ವಾಭಾವಿಕವಾಗಿದ್ದರೂ ಅದರಲ್ಲಿ ರಾಷ್ಟ್ರವೇ ಭಾಗಿಯಾಗಿರುವುದರಿಂದ ಇವರು ಅದನ್ನು ಸಹಿಸಿಕೊಳ್ಳಲೆಂದೂ ಹಾರೈಸುತ್ತೇವೆ.

# ಹುತಾತ್ಮರ ದಿನ.

ಸೊಲ್ಲಾಪುರದಲ್ಲಿ ಸೈನ್ಯಶಾಹಿಯ ರಾಜ್ಯ ನಡೆದಾಗ ಮರಣ ದಂಡನೆಗೆ ಗುರಿಯಾದ ಹುತಾತ್ಮಾ ಶ್ರೀ. ಮಲ್ಲಪ್ಪ ಧನಶೆಟ್ಟಿ, ಶ್ರೀ ಸಾರದಾ, ಶ್ರೀ. ಸಿಂದೆ, ಶ್ರೀ. ಕುರ್ಬಾನ ಹುಸೇನ ಈ ನಾಲ್ಕು ಜನ ವೀರರ ಸ್ಮಾರಕ ದಿನವು ಸೊಲ್ಲಾಪುರ, ಪುಣೆ, ಹುಬ್ಬಳ್ಳಿ ಮೊದಲಾದ ಅನೇಕ ಸ್ಥಳಗಳಲ್ಲಿ ಆಚರಿಸಲ್ಪಟ್ಟಿತು.

ಸೊಲ್ಲಾಪುರದಲ್ಲಿ ತಾ. ೧೩ ನೆಯ ದಿನ ಈ ಹುತಾತ್ಮರ ದಿನದ ನಿಮಿತ್ತವಾಗಿ ಹರತಾಳವು ಆಚರಿಸಲ್ಪಟ್ಟಿತು. ಶ್ರೀ ಜಾಜು ಶೇಟಜಿಯವರ ಅಧ್ಯಕ್ಷತೆಯಲ್ಲಿ ಸಭೆ ಸೇರಿದ್ದಿತು. ಈ ನಾಲ್ಕು ಜನ ಹುತಾತ್ಮರ ಪ್ರತಿಮೆಯನ್ನು ಮಾಡಿ ಸೊಲ್ಲಾಪುರದ ಮುಖ್ಯ ಸ್ಥಳದಲ್ಲಿ ಇರಿಸಬೇಕೆಂದು ಗೊತ್ತಾಯಿತು.

ಪುಣೆಯ ಸಭೆಯಲ್ಲಿ ಹು ತಾ ತ್ಮ ರ ಸಂಬಂಧವಾಗಿ ಅನೇಕ ಭಾಯಿಗಳು ಭಾಷಣಮಾಡಿದರು. ಕಾಂಗ್ರೆಸ್ಸಿನ ಮಂತ್ರಿಮಂಡಲದ ಧೋರಣವನ್ನು ಟೀಕಿಸಿದರು. ಶ್ರೀ. ಕೇಶವರಾವ ಜೇಧೆಯವರು ಕಾಂಗ್ರೆಸ್ ಈಗ ಕೂಲಿಕಾರರ ಮತ್ತು ಒಕ್ಕಲಿಗರ ಪಕ್ಷವನ್ನು ಬಿಟ್ಟು ಧನಿಕರ ಪಕ್ಷ ಹಿಡಿದಿದೆಯೆಂದು ಟೀಕಿಸಿದರು.

# ಲಂಡನ್ನಿನಲ್ಲಿ ಶ್ರೀ. ಸುಭಾಷಚಂದ್ರರ ಅಪೂರ್ವ ಸ್ವಾಗತ.

ಈ ಮುಂಚೆ ಗೊತ್ತಾದ ಪ್ರಕಾರ ಬಾಬು ಸುಭಾಷಚಂದ್ರ ಬೋಸರು ತಾ. ೧೦-೧-೩೮ ನೆಯ ದಿವಸ ಲಂಡನ್ನಿನ ವ್ಹಿಕ್ಟೋರಿಯಾ ಸ್ಟೇಶನ್ನಿನಲ್ಲಿ ಇಳಿದೊಡನೆ "ಸುಭಾಷ ಬಾಬು ಝಿಂದಾಬಾದ" ಎಂಬ ಜಯಧ್ವನಿಯಾಯಿತು. ಅನೇಕ ಸಂಸ್ಥೆಯವರು ಪುಷ್ಪಹಾರಗಳನ್ನು ಅರ್ಪಿಸಿ ಸ್ವಾಗತಿಸಿದರು. ಡಾ. ಭಟ್ಟಾಚಾರಜಿ ಮತ್ತು ಅವರ ಪತ್ನಿಯವರು ಸುಭಾಷ ಬಾಬುಗಳಿಗೆ ಪುಷ್ಪಹಾರಗಳನ್ನು ಅರ್ಪಿಸಿದರು.



ಸುಭಾಷಚಂದ್ರ ಬೋಸರು.

ಶ್ರೀ. ಸುಭಾಷಚಂದ್ರರ ಸ್ವಾಗತದ ಸಮಾರಂಭದಲ್ಲಿ ಲಾರ್ಡ ಕಿನೋಲ ಇವರೂ ಇದ್ದರು. ಡಾರ್ಚೆಸ್ಟರ್ ಭವನದಲ್ಲಿ ಬಾಬೂಜಿಯವರ ಸತ್ಕಾರ ನಡೆಯಿತು. ಆಗ ಬ್ರಿಟಿಶ್ ಪತ್ರಿಕಾಪ್ರತಿನಿಧಿಗಳು ಶ್ರೀ. ಸುಭಾಷಚಂದ್ರರಿಗೆ ಅನೇಕ ಮಹತ್ವದ ಪ್ರಶ್ನೆಗಳನ್ನು ಮಾಡಿದರು. ಅವುಗಳಿಗೆಲ್ಲಾ ಬಹು ಸಮಾಧಾನದಿಂದಲೂ ಆಸಕ್ತಿಯಿಂದಲೂ ಉತ್ತರಕೊಟ್ಟರು. ಆ ಪ್ರಶ್ನೋತ್ತರಗಳು ಹೀಗಿದ್ದವು—

ಪ್ರಶ್ನೆ—ಕಾಂಗ್ರೆಸ್ಸಿನ ಮಂತ್ರಿಮಂಡಲದ ಸಂಗಡ ಸಿವ್ಹಿಲಿಯನ್ ಅಧಿಕಾರಿಗಳು ಹೇಗೆ ನಡೆದುಕೊಳ್ಳುತ್ತಿದ್ದಾರೆ?

ಉತ್ತರ—ಇಂಡಿಯನ್ ಸಿವ್ಹಿಲ್ ಸರ್ವ್ಹಿಸಿನವರು ಕಾಂಗ್ರೆಸ್ ಪಕ್ಷದ ಸಂಗಡ ಸಾಮಾನ್ಯವಾಗಿ ಒಳ್ಳೆಯ ರೀತಿಯಿಂದಲೇ ನಡೆದುಕೊಳ್ಳುತ್ತಿದ್ದಾರೆ.

ಪ್ರಶ್ನೆ—ಸಿವ್ಹಿಲ್ ಸರ್ವ್ಹಿಸಿನವರು ಉದ್ದೇಶಪೂರ್ವಕವಾಗಿ ಏನಾದರೊಂದು ತೊಂದರೆಯನ್ನು ಮಾಡಿದ್ದುಂಟೆ?

ಉತ್ತರ—ಹೀಗೆ ತೊಂದರೆಮಾಡುತ್ತಾರೆಂದು ನಾನೆಂದೂ ಯೋಚಿಸಿಲ್ಲ. ಈಗಿನ ಶಾಸನವು ಸಃಧಾರಣೆಯಾದ ವಿನಾ ಕಾಂಗ್ರೆಸ್ ಪಕ್ಷದಿಂದ ಹೆಚ್ಚಿನ ದೇಶಸೇವೆಯಾಗುವ ಸಂಭವವಿಲ್ಲ. ಕಾಂಗ್ರೆಸ್ ಪಕ್ಷವು ಫೆಡರೇಶನ್ನಿಗೆ ತೀಕ್ಷ್ಣವಿರೋಧವನ್ನು ಮಾಡುವುದು. ಸಂಸ್ಥಾನಿಕರು ಸುಧಾರಣಪ್ರಿಯರಿಲ್ಲವೆಂಬುದು ಕಾಂಗ್ರೆಸ್ಸಿಗೆ ಗೊತ್ತಿದೆ.

ಪ್ರಶ್ನೆ—ಅಂತರ ರಾಷ್ಟ್ರೀಯ ಸ್ಥಿತಿ ಮತ್ತು ಬ್ರಿಟಿಶ್ ಸೈನ್ಯದಿಂದ ಹಿಂದುಸ್ಥಾನದ ಸಂರಕ್ಷಣೆ ಈ ವಿಷಯಗಳಲ್ಲಿ ನಿಮ್ಮ ಅಭಿಪ್ರಾಯವೇನು?

ಉತ್ತರ—ಕಾಂಗ್ರೆಸ್ಸಿಗೆ ಜನಾಧಿಕಾರದ ಪ್ರಭುತ್ವ ಮತ್ತು ಸ್ವಾತಂತ್ರ್ಯಗಳೇ ಪ್ರಿಯವಾಗಿವೆ. ಕಾಂಗ್ರೆಸ್ ಚೀನ ದೇಶದ ವಿಷಯದಲ್ಲಿ ಸಹಾನುಭೂತಿಯನ್ನು ವ್ಯಕ್ತಗೊಳಿಸಿ ಜಪಾನಿನ ಕೃತಿಯನ್ನು ನಿಷೇಧಿಸಿದೆ. ಹಿಂದುಸ್ಥಾನವು ಈಗ ಬಹು ನಿರ್ಬಲವಾಗಿದೆ; ಈ ಸ್ಥಿತಿಯನ್ನು ಸುಧಾರಿಸಲು ಕಾಂಗ್ರೆಸ್ ಏನು ಮಾಡುವುದೋ ನಾನರಿಯೆ.

ಪ್ರಶ್ನೆ—ನೀವು ಇಂಗ್ಲೆಂಡಿಗೆ ಬಂದುದೇಕೆ? ನಿಮ್ಮ ಪ್ರವಾಸವು ರಾಜಕೀಯ ಉದ್ದೇಶವುಳ್ಳದ್ದಾಗಿದೆಯೆ? ಮುಸೋಲಿನಿ ಅಥವಾ ಹಿಟಲರರನ್ನು ಕಾಣುವಿರಾ?

ಉತ್ತರ— ನಾನು ಈ ಪ್ರವಾಸವನ್ನು ನನ್ನ ದೇಹಾರೋಗ್ಯಕ್ಕಾಗಿಯೇ ಪ್ರಾರಂಭಿಸಿದೆನು. ಈಗ ನನ್ನ ದೇಹಾರೋಗ್ಯ ಎಷ್ಟೋ ಸುಧಾರಿಸಿದೆ. ಹಿಂದುಸ್ಥಾನದ ವಿಷಯದಲ್ಲಿ ಬಹು ಕಳವಳಪಡುತ್ತಿರುವ ನನ್ನ ಕೆಲವು ಮಿತ್ರರನ್ನು ಕಾಣಲಿಕ್ಕಾಗಿಯೇ ನಾನು ಇಲ್ಲಿಗೆ ಬಂದಿದ್ದೇನೆ. ನಾನು ಹಿಟ್ಲರ್ ಅಥವಾ ಮುಸೋಲಿನಿಯರನ್ನು ಕಾಣುವುದಿಲ್ಲ. ಮುಂದಿನ ವಾರವೇ ನಾನು ವಿಮಾನ ಮೂಲಕ ನನ್ನ ದೇಶಕ್ಕೆ ಹೋಗುತ್ತೇನೆ.

## ಸುಭಾಷ ಬಾಬುಗಳ ಮಹತ್ವದ ಭಾಷಣ.

ಲಂಡನ್ನಿನ ಸೆಂಟ್ ಪ್ರಾಂಕನೌ ಟಾವುನ್ ಹಾಲಿನಲ್ಲಿ ಬಾಬು ಸುಭಾಷಚಂದ್ರ ಬೋಸರ ಸನ್ಮಾನಾರ್ಥವಾಗಿ ಘನವಾದ ಸಭೆ ಸೇರಿದ್ದಿತು. ಹಿಂದುಸ್ಥಾನದ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವ ಒಬ್ಬ ಮಹಾನ್ ವೀರ ರಾಷ್ಟ್ರಭಕ್ತರ ಸನ್ಮಾನಾರ್ಥವಾಗಿ ನಾವು ಇಲ್ಲಿ ಕೂಡಿದ್ದೇವೆಂದು ಡಾ. ದತ್ತ ಇವರು ಮೊದಲು ಹೇಳಿದರು.

ಆ ಮೇಲೆ ಬಾಬೂಜಿಯವರು ತಮಗೆ ಮಾಡಿದ ಪ್ರೇಮದ ಸ್ವಾಗತವನ್ನು ಕುರಿತು ಪ್ರಸ್ತಾಪಿಸುವಾಗ ಅವರ ಮುಖದಿಂದ ಶಬ್ದಗಳು ಹೊರಡದಂತಾದವು. ಹಿಂದುಸ್ಥಾನದ ರಾಜಕಾರಣವನ್ನು ಕುರಿತು ಹೀಗೆ ಹೇಳಿದರು—

"ಚೀನ, ಜಪಾನ, ಸ್ಪೇನ್, ಅಬಸೀನಿಯಾ ಮೊದಲಾದ ರಾಷ್ಟ್ರಗಳಲ್ಲಿ ನಡೆದ ಹೋರಾಟದಂತೆಯೇ ಹಿಂದುಸ್ಥಾನದಲ್ಲಿ ನಡೆದಿರುವ ಸ್ವಾತಂತ್ರ್ಯ ಮತ್ತು ಸಮತಾವಾದದ ಹೋರಾಟಗಳು ಕೂಡಾ ಜಗತ್ತಿಗೆ ಸಂಬಂಧಪಟ್ಟವುಗಳೇ ಆಗಿವೆ. ಹಿಂದುಸ್ಥಾನವು ಈಗ ಜಗತ್ತಿನ ರಾಜಕಾರಣದಿಂದ ಬೇರೆಯಾಗಿರುವುದು ಶಕ್ಯವಿಲ್ಲವೆಂಬುದು ಕಾಂಗ್ರೆಸ್ಸಿಗೆ ಚೆನ್ನಾಗಿ ಗೊತ್ತಿದೆ.

ಕಾಂಗ್ರೆಸ್ ಅಧಿಕಾರವನ್ನು ಈಗ ಒಂದು ಪ್ರಯೋಗಕ್ಕಾಗಿಯೇ ಹಿಡಿದಿದೆ. ಅದು ಈಗ ಬಹು ಸರಿಯಾಗಿ ಕೆಲಸವನ್ನು ಮಾಡುತ್ತಿದೆ. ವರ್ಕಿಂಗ್ ಕಮಿಟಿಯು ಮಂತ್ರಿಮಂಡಲಗಳ ಕಾರ್ಯಗಳನ್ನು ಪರಿಶೀಲಿಸುತ್ತಿದೆ. ಅದಕ್ಕೆ ಯಾವಾಗ ಅಧಿಕಾರದಲ್ಲಿರುವುದು ಅನರ್ಥಕರವೆಂದು ತೋರುವದೋ ಆ ಕೂಡಲೆ ಅಧಿಕಾರ ತ್ಯಾಗಮಾಡಿ ಹೊರಗೆ ಬರಲು ಅಪ್ಪಣೆಮಾಡುವುದು.

ಹಿಂದುಸ್ಥಾನದ ಸ್ವಾತಂತ್ರ್ಯಕ್ಕಾಗಿ ಇನ್ನೊಮ್ಮೆ ಅದ್ಭುತವಾದ ಚಟುವಟಿಕೆಯನ್ನು ಪ್ರಾರಂಭಿಸಬೇಕಾಗಬಹುದು. ಕಾಂಗ್ರೆಸ್ ಅದರ ಸಿದ್ಧತೆಯಲ್ಲಿಯೂ ಇದೆ. ಆ ಚಟುವಟಿಕೆಯು ಫಲಕಾರಿಯಾಗದಿದ್ದರೆ ಆಗ ಹಿಂದುಸ್ಥಾನದಲ್ಲಿ ಹೆಚ್ಚು ಸಮರ್ಥರಾದ ಮುಂದಾಳುಗಳು ಮುಂದೆ ಬರುವರು. ಕಾಂಗ್ರೆಸ್ ಫೆಡರೇಶನ್ನಿಗೆ ಬಲವಾದ ವಿರೋಧವನ್ನು ಮಾಡುವುದು. ಪ್ರಾಂತಿಕ ಪ್ರಭುತ್ವದಲ್ಲಿ ಜನರಿಗೆ ಸ್ವಲ್ಪಾದರೂ ಅಧಿಕಾರವಿದೆ. ಫೆಡರೇಶನ್ನಿನಲ್ಲಿ ಏನೇನೂ ಹುರುಳಿಲ್ಲ."

## ಇಂಡಿಯಾ ಲೀಗಿನ ಸನ್ಮಾನ.

ಸುಭಾಷ ಬಾಬುಗಳು ತಾ. ೧೨ ನೆಯ ದಿನ ಪಾರ್ಲಮೆಂಟ ಸಭಾಸದರಾದ ಮೇಜರ್, ಅಟಲಿ, ಲಾರ್ಡ ಸ್ನೇಲ, ಲಾರ್ಡ ಕಿನೋಲ ಇವರೊಂದಿಗೆ ವಿಚಾರವಿನಿಮಯಮಾಡಿದರು. ಆ ಮೇಲೆ ಇಂಡಿಯಾ ಲೀಗಿನ ಪರವಾದ ಸಭೆಯಲ್ಲಿ ಹೀಗೆ ಹೇಳಿದರು—

"ಇಂಗ್ಲೆಂಡಿನ ಯಾವುದಾದರೊಂದು ಪಕ್ಷದ ಮೇಲೆ ವಿಶ್ವಾಸವನ್ನು ಇಡುವ ಕಾಲ ಈಗಿಲ್ಲ. ಅದು ಹೋಗಿ ಬಹು ದಿನಗಳಾದವು. ಹಿಂದುಸ್ಥಾನವು ಜಗತ್ತಿನ ರಾಜಕಾರಣದಿಂದ ಬೇರೆಯಾಗಿದ್ದುದೇ ಅದರ ರಾಜಕೀಯ ಅಧೋಗತಿಗೆ ಮುಖ್ಯ ಕಾರಣ. ಇನ್ನು ಮುಂದೆ ಅದು ಹಾಗೆ ಎಂದೂ ಇರಲಾರದು."




ಶಾ. ಶ. ೧೮೫೯ ನೆಯ ಪುಷ್ಯ ಬ|| ೧ ಸೋಮವಾರ.

# ಹೊಸ ಟೀಕಾಸ್ತ್ರ!

ಕಾಂಗ್ರೆಸ್ಸಿನ ಕಾರ್ಯಕಲಾಪ ಮತ್ತು ಧೋರಣಗಳ ಸಂಬಂಧವಾಗಿ ಕಾಂಗ್ರೆಸ್ಸಿನಲ್ಲಿ ಸೇರದಿದ್ದ ಬೇರೆ ಪಕ್ಷದವರು ಈ ವರೆಗೂ ಕಾಂಗ್ರೆಸ್ಸಿನಮೇಲೆ ಅನೇಕ ಟೀಕಾಸ್ತ್ರಗಳನ್ನು ಬಿಡುತ್ತಿದ್ದರಷ್ಟೆ. ಆಗ ಸ್ವಪಕ್ಷಾಭಿಮಾನದಿಂದಲೋ ಅಥವಾ ಕಾಂಗ್ರೆಸ್ಸಿನ ವಿರೋಧದಿಂದಲೋ ಹೀಗೆ ಟೀಕಿಸುತ್ತಿದ್ದಾರೆಂದು ಹೇಳಲು ಕೆಲವರಿಗೆ ಅವಕಾಶವಿತ್ತು. ಆದರೆ ಈಗ ಕಾಂಗ್ರೆಸ್ ಪಕ್ಷದಲ್ಲಿಯೇ ಕಾಂಗ್ರೆಸ್ ಮಂತ್ರಿಮಂಡಲಗಳ ಕಾರ್ಯ ಪದ್ಧತಿ ಮತ್ತು ಧೋರಣಗಳ ಸಂಬಂಧವಾಗಿ ಬಲವಾದ ಹೊಸ ಟೀಕಾಸ್ತ್ರಗಳನ್ನು ಕಾಂಗ್ರೆಸ್ ಮಂತ್ರಿಗಳ ಮೇಲೆ ಬಿಡುವವರು ಉದಯವಾದುದು ಅತ್ಯಂತ ವಿಷಾದಕರವಾದ ಸಂಗತಿಯಲ್ಲವೆ?

### ಒಂದು ವರುಷದ ಹಿಂದೆ ಹೇಗಿದ್ದಿತು?

ಪ್ರಾಂತಿಕ ಅಸೆಂಬ್ಲಿ ಚುನಾವಣೆಯ ಕಾಲಕ್ಕೆ ಕಳೆದವರುಷ ಕಾಂಗ್ರೆಸ್ ಪಕ್ಷದಲ್ಲಿ ಯಾವ ಐಕಮತ್ಯವಿದ್ದಿತೋ ಅದು ಈಗ ತೋರುವುದಿಲ್ಲ. ಕಾಂಗ್ರೆಸ್ ಪಕ್ಷದ ಕೈಯಲ್ಲಿ ಅಧಿಕಾರ ಸೂತ್ರ ಬಂದರೆ ತಮಗೆ ಯಾವ ಹಿತವಾಗಬಹುದೆಂದು ಅನೇಕರು ಯೋಚಿಸಿದ್ದರೋ ಅವರು ಈಗ ನಿರಾಶರಾಗಿದ್ದಾರೆ.

ಕಾಂಗ್ರೆಸ್ ಪಕ್ಷದ ಕೈಯಲ್ಲಿ ಅಧಿಕಾರ ಬಂದು ಆರು ತಿಂಗಳುಗಳಾಗುವುದರೊಳಗಾಗಿಯೇ ಅನೇಕ ಹೊಸ ಟೀಕಾಕಾರರು ಕಾಂಗ್ರೆಸ್ ಪಕ್ಷದಲ್ಲಿಯೇ ಉಂಟಾದರು. ಕಳೆದ ಶಾಸನಭಂಗದ ಕಾಲಕ್ಕೆ ಈ ಟೀಕಾಕಾರರೇನೂ ಈಗ ಅಧಿಕಾರ ಹಿಡಿದವರಿಗಿಂತ ಕಡಿಮೆ ಸ್ವಾರ್ಥತ್ಯಾಗ ಮಾಡಿರಲಿಲ್ಲ. ಅನೇಕರು ಅವರಿಗಿಂತ ಹೆಚ್ಚುಸಾರೆ ಜೈಲಿನಲ್ಲಿ ಹೋದವರಿದ್ದಾರೆ. ತನುಮನಧನದಿಂದ ರಾಷ್ಟ್ರಸೇವೆಗೆ ಅವರಿಗಿಂತ ಹೆಚ್ಚಾಗಿ ದುಡಿದವರೂ ಇದ್ದಾರೆ. ಆದಕಾರಣ ಈ ಹೊಸ ಟೀಕಾಕಾರರ ಉಜ್ವಲ ರಾಷ್ಟ್ರಭಕ್ತಿಯ ವಿಷಯದಲ್ಲಿ ಅಧಿಕಾರವನ್ನು ಹಿಡಿದವರಾಗಲಿ ಅಥವಾ ಅವರ ಎಲ್ಲ ಕೃತಿಗಳನ್ನೂ ಉಧೋ! ಉಧೋ! ಎಂದು ಹೊಗಳುತ್ತಾ ಇರುವವರಾಗಲಿ ಸ್ವಲ್ಪಾದರೂ ಸಂಶಯ ತೆಗೆದುಕೊಳ್ಳುವಂತಿಲ್ಲ. ಅಂತೆಯೇ ಈ ಹೊಸ ಟೀಕಾಸ್ತ್ರಗಳ ಕಡೆಗೆ ಕಾಂಗ್ರೆಸ್ ಪಕ್ಷದವರಾದರೂ ಚೆನ್ನಾಗಿ ಲಕ್ಷಿಸಬೇಕಾದುದು ಅತ್ಯಗತ್ಯ. ಇಲ್ಲದಿದ್ದರೆ ಅವರೇ ಮುಂದರಿದು ಇವರನ್ನು ಹಿಂದೆ ತಳ್ಳದಿರಲಾರರು.

### ಒಕ್ಕಲಿಗರು ಮತ್ತು ಕೂಲಿಕಾರರು.

ಕಾಂಗ್ರೆಸ್ ಪಕ್ಷವು ತಾನೇ ಒಕ್ಕಲಿಗರ ಮತ್ತು ಕೂಲಿಕಾರರ ಹಿತಾರ್ಥವಾಗಿ ಪ್ರಯತ್ನಿಸುವ ಪಕ್ಷವೆಂದು ಈ ವರೆಗೂ ಹೇಳಿಕೊಳ್ಳುತ್ತಾ ಇದೆಯಷ್ಟೆ. ಬೇರೆ ಪಕ್ಷಗಳಿಗಿಂತ ಈ ಪಕ್ಷವೇ ಒಕ್ಕಲಿಗರ ಮತ್ತು ಕೂಲಿಕಾರರ ವಿಷಯದಲ್ಲಿ ಹೆಚ್ಚಾಗಿ ಪ್ರಯತ್ನಿಸುವುದೇನೋ ನಿಜ. ಆದರೆ ಇದು ತನ್ನ ಉದ್ದೇಶದಂತೆ ಎಷ್ಟು ಪ್ರಯತ್ನಿಸಬೇಕಾಗಿದೆಯೋ ಅಷ್ಟು ಪ್ರಯತ್ನಿಸುತ್ತಾ ಇಲ್ಲವೆಂದೇ ಅನೇಕರ ಟೀಕೆ.

ಕೂಲಿಕಾರರ ಕಡೆಗೆ ನಿರ್ಲಕ್ಷಿಸಿ ಕಾರ್ಖಾನೆಯವರ ಪಕ್ಷವನ್ನೂ ಒಕ್ಕಲಿಗರನ್ನು ಉಪೇಕ್ಷಿಸಿ ಜಮೀನದಾರರ ಪಂಗಡವನ್ನೂ ಕಾಂಗ್ರೆಸ್ ಮಂತ್ರಿಮಂಡಲಗಳು ವಹಿಸಿವೆಯೆಂದೇ ಈಗ ಕಾಂಗ್ರೆಸ್ಸಿನ ಮೇಲೆ ಟೀಕಾಸ್ತ್ರಗಳನ್ನು ಬಿಡುತ್ತಿದ್ದಾರೆ. ಸಂಯುಕ್ತ ಪ್ರಾಂತದ ಮುಖ್ಯ ಮಂತ್ರಿಗಳು ಕೂಲಿಕಾರರ ಕೃತಿಗಳನ್ನೂ ಕಂದಾಯ ಮಂತ್ರಿಗಳು ಒಕ್ಕಲಿಗರ ಕೃತಿಗಳನ್ನೂ ಖಂಡಿಸುತ್ತಿದ್ದಾರೆ. ಬಿಹಾರ ಪ್ರಾಂತದಲ್ಲಂತೂ ಬಾಬುರಾಜೇಂದ್ರ ಪ್ರಸಾದರು ಒಕ್ಕಲಿಗರ ನಡತೆಗಳನ್ನು ಬಹು ತೀಕ್ಷ್ಣವಾಗಿ ನಿಷೇಧಿಸುತ್ತಿದ್ದಾರೆ.

ಈ ಎರಡು ಪ್ರಾಂತಗಳಲ್ಲಂತೂ ಕಾಂಗ್ರೆಸ್ ಮಂತ್ರಿಮಂಡಲಗಳಿಗೂ ಕೂಲಿಕಾರರ ಮತ್ತು ಒಕ್ಕಲಿಗರ ಮುಂದಾಳುಗಳಾದ ಕಾಂಗ್ರೆಸ್ ಪಕ್ಷದವರಿಗೂ ವಿರೋಧವು ಹೆಚ್ಚುತ್ತಾ ಇದೆ. ಮುಂಬೈ ಪ್ರಾಂತದಲ್ಲಿಯೂ ಈ ವಿಧವಾದ ವಿರೋಧವು ತಲೆ ಎತ್ತುವಂತೆ ಕಾಣುತ್ತದೆ. ಹೀಗೆ ನಡೆದಿದ್ದರೂ ವರ್ಕಿಂಗ್ ಕಮಿಟಿಯು ಮಂತ್ರಿಮಂಡಲಗಳ ಕಾರ್ಯಗಳನ್ನು ಬೈಲಿಗೆಳೆಯಲಿಲ್ಲವಲ್ಲಾ! ಸಮತಾವಾದದ ಪ್ರಚಾರ ಮಾಡುತ್ತಿದ್ದ ರಾಷ್ಟ್ರ ಸಭಾಧ್ಯಕ್ಷರಾದ ಪಂ. ಜವಾಹರಲಾಲರು ಲಖನೌ ಕಾಂಗ್ರೆಸ್ ಕಾಲದಲ್ಲಿದ್ದ ತಮ್ಮ ಧೋರಣದಿಂದ ಈಗ ದೂರಾಗಿ ಕೂಲಿಕಾರರ ಮತ್ತು ಒಕ್ಕಲಿಗರ ಮೇಲಾಗುತ್ತಿರುವ ಅನ್ಯಾಯಗಳನ್ನು ಕಣ್ಣಾರೆ ನೋಡುತ್ತಾ ಸುಮ್ಮನಿದ್ದಾರಲ್ಲಾ! ಎಂದು ಅನೇಕರು ಆಕ್ಷೇಪಿಸುತ್ತಿದ್ದಾರೆ.

### ಯಾವುದು ಕ್ಷೇಮಕರ?

ಹೀಗೆ ಕಾಂಗ್ರೆಸ್ ಮಂತ್ರಿಮಂಡಲಗಳ ಮೇಲೆ ನಮ್ಮ ಅನೇಕ "ಭಾಯಿ" ಯವರು ಟೀಕಾಸ್ತ್ರಗಳನ್ನು ಬಿಡುತ್ತಿರುವುದೇನೋ ನಿಜ. ಈ ಸಂದರ್ಭದಲ್ಲಿ ಮಂತ್ರಿಮಂಡಲಕ್ಕಿರುವ ಅಧಿಕಾರ ಮತ್ತು ಅದರ ಕೈಯಲ್ಲಿರುವ ಸಾಂಪತ್ತಿಕ ಶಕ್ತಿ ಇವುಗಳನ್ನು ನೋಡಬೇಕಾದುದು ಅತ್ಯಗತ್ಯವಲ್ಲವೆ? ಕಾಂಗ್ರೆಸ್ ಮಂತ್ರಿಮಂಡಲವು ಶಕ್ಯವಿರುವಷ್ಟೆಲ್ಲಾ ಹಿತವನ್ನು ಖಂಡಿತವಾಗಿಯೂ ಮಾಡುತ್ತದೆಂದೇ ತಿಳಿಯುವುದು ನ್ಯಾಯವಾಗಿದೆ. ಅಧಿಕಾರದ ಆಸೆಗಾಗಿಯೋ ಅಥವಾ ಇನ್ನಾವ ಸ್ವಾರ್ಥಕ್ಕಾಗಿಯೋ ತನ್ನ ಕಾರ್ಯವನ್ನು ಸಂಯಾಗಿ ಮಾಡುವುದಿಲ್ಲವೆಂದು ಯೋಚಿಸುವುದು ಅನ್ಯಾಯವು.

ಕೂಲಿಕಾರರಿಗೂ, ಒಕ್ಕಲಿಗರಿಗೂ ಅನೇಕ ಭೀಕರವಾದ ಕಷ್ಟನಷ್ಟಗಳಿರುವುದೇನೋ ನಿಜ. ಆದರೆ ಅವುಗಳನ್ನೆಲ್ಲಾ ಒಮ್ಮೆಲೇ ಇಷ್ಟೇ ಅಧಿಕಾರದಿಂದ ನಿವಾರಣೆಮಾಡುವುದು ಶಕ್ಯವಿಲ್ಲ.

ಆದಕಾರಣ ಕಾಂಗ್ರೆಸ್ ಮಂತ್ರಿಮಂಡಲಗಳ ಉದ್ದೇಶದ ವಿಷಯದಲ್ಲಿ ಬೇರೆ ಯೋಚಿಸಿ ಆ ದೃಷ್ಟಿಯಿಂದ ಟೀಕಿಸುವುದು ದೇಶಕ್ಕೆ ಕ್ಷೇಮಕರವಲ್ಲ. ಇದರಿಂದ ಕಾಂಗ್ರೆಸ್ಸಿನ ಶಕ್ತಿಯು ಕಡಿಮೆಯಾಗಲು ಕಾರಣವಾಗುವುದು. ತಮ್ಮ ಕೈಯಲ್ಲಿ ಅಧಿಕಾರಬೇಕೆಂದೇ ಹೀಗೆ ಇವರು ಮಾಡುತ್ತಿದ್ದಾರೆಂದು ಆಕ್ಷೇಪಿಸಲೂ ಅವಕಾಶವಾಗಬಹುದು.

ಕಾಂಗ್ರೆಸ್ ಮಂತ್ರಿಮಂಡಲಗಳು ಈಗ ಯಾವ ತಪ್ಪನ್ನೂ ಮಾಡುವುದಿಲ್ಲವೆಂದು ಮಾತ್ರ ಯಾರೂ ತಿಳಿಯಕೂಡದು. ಅವುಗಳ ಕೃತಿಗಳನ್ನೆಲ್ಲಾ ಹೊಗಳುತ್ತಿರಲೂ ಬಾರದು. ತಪ್ಪುಗಳನ್ನು ಖಂಡುತುಂಡಾಗಿ ಟೀಕಿಸಲೇಬೇಕು. ಹಾಗೆ ಮಾಡಿದರೇನೇ ಕಾಂಗ್ರೆಸ್ ಪಕ್ಷದಿಂದ ರಾಷ್ಟ್ರಕ್ಕೆ ಹೆಚ್ಚು ಲಾಭವಾಗಿ ಕಾಂಗ್ರೆಸ್ಸಿನ ಶಕ್ತಿಯೂ ಹೆಚ್ಚುತ್ತದೆ. ಭಾಯಿ ಝಾಬವಾಲಾರವರು ಕೂಲಿಕಾರ ಸಂಘದ ಮಾನ್ಯತೆಯ ವಿಷಯವಾಗಿ ಮೊನ್ನೆ ಅಸೆಂಬ್ಲಿಯಲ್ಲಿತಂದ ಗೊತ್ತುವಳಿಯನ್ನು ಕುರಿತು ಮತ್ತು ಹತ್ತು ಸಾವಿರ ಬಡಜನರು ಅಸೆಂಬ್ಲಿ ಕಾರ್ಯ ನಡೆದ ಕಾಲಕ್ಕೆ ಬಂದಾಗ ಮಂತ್ರಿಗಳು ಹೊರಗೆ ಬಂದು ತೋರಿಸಬೇಕಾದ ಸಹಾನುಭೂತಿಯ ಕುರಿತು ನಡೆಸಿದ ಮಂತ್ರಿಮಂಡಲದ ಕೃತಿಗಳು ತುಂಬಾ ಅಸಮಾಧಾನಕರವಾದವುಗಳೇ ಸರಿ. ಇಂಥವುಗಳನ್ನು ಸರಿಯಾಗಿಯೇ ಟೀಕಿಸಿ ಅವರ ಕರ್ತವ್ಯದ ಎಚ್ಚರಿಕೆಯನ್ನು ಉಂಟುಮಾಡಿಕೊಡಲೇಬೇಕು. ಹೀಗೆ ಹೊಸ ಟೀಕಾಸ್ತ್ರಗಳು ಬಿಡಲ್ಪಟ್ಟರೆ ರಾಷ್ಟ್ರಕ್ಕೆ ಕ್ಷೇಮವಾಗುವುದಿಲ್ಲವೆ ?

## ಪಂಡಿತಜಿಯವರು ಶರಣುಹೋದರು!

### ಡಾ. ಮುಂಜೆಯವರ ಪ್ರಕಟನೆ.

ಕಾಂಗ್ರೆಸ್ಸಿನ ಕಿವಿ ಹಿಡಿದು ಅದು ಮುಸ್ಲಿಂಲೀಗಿನ ಅಧ್ಯಕ್ಷರ ಕಾಲಿಗೆ ಮಣಿಯುವಂತೆ ಮಾಡಿಸಬೇಕೆಂದೇ ಮಿ. ಜಿನ್ನಾರವರ ಉದ್ದೇಶ. ಅದಕ್ಕಾಗಿಯೇ ಅವರು ಕಾಂಗ್ರೆಸ್ಸನ್ನು ಯಥೇಚ್ಛವಾಗಿ ನಿಂದಿಸುತ್ತಾ ಗಾಂಧೀಜಿಯವರೇ ಕಾಂಗ್ರೆಸ್ ಸಂಸ್ಥೆಯೆಂಬ ಉದ್ಧಾಮತನದ ಮಾತುಗಳನ್ನು ಕೂಡಾ ಆಡುತ್ತಿದ್ದಾರೆ. ಅವರು ಹೆದರಿಸುವ ಗರ್ವೋಕ್ತಿಗಳನ್ನು ಕೇಳಿ ಕಾಂಗ್ರೆಸ್ಸಿನ ಅಧ್ಯಕ್ಷರಾದ ಪಂ. ಜವಾಹರಲಾಲರು ನಮ್ಮ ಕಾಂಗ್ರೆಸ್ಸು ಹೀಗಿದೆಯೆಂದು ಅಂಜುಬುರುಕತನದಿಂದ



ಡಾ. ಮುಂಜೆ.

ಜಿನ್ನಾರವರಲ್ಲಿ ಹೇಳಿಕೊಳ್ಳುತ್ತಿದ್ದಾರೆ.

ಹಿಂದು ಮಹಾಸಭೆಯನ್ನು ನಾಶಮಾಡಬೇಕೆಂದು ಗರ್ಜಿಸುವ ಪಂಡಿತಜಿಯವರ ಪೌರುಷವೆತ್ತ? ಮುಸ್ಲಿಂಲೀಗಿಗೆ ಶರಣುಹೋಗುವ ಪಂಡಿತಜಿಯವರ ಅಂಜುಬುರುಕುತನವೆತ್ತ?

ಮಹಾತ್ಮಾ ಗಾಂಧಿಯವರಂತಹ ಮಹಾ ವಿಭೂತಿಗಳು ನಮ್ಮ ಕಡೆಗಿಲ್ಲದಿದ್ದರೂ ಸತ್ಯವು ನಮ್ಮಕಡೆಗಿದೆಯೆಂಬ ದೃಢವಿಶ್ವಾಸವು ನಮ್ಮಲ್ಲಿದೆ. ಗರ್ವ, ಸ್ವಾರ್ಥ, ಅಕ್ರಮಣಗಳಿಗೆ ಸತ್ಯ ಮತ್ತು ಅಹಿಂಸೆಗಳೇ ಪ್ರತಿಯಾಗಿ ಕೊಡಲ್ಪಡತಕ್ಕವುಗಳೆಂದು ಗಾಂಧೀಜಿಯವರು ಹೇಳುತ್ತಿದ್ದಾರೆ. ಹಿಂದು ಮಹಾಸಭೆಯು ಸತ್ಯವಾದ ರಾಷ್ಟ್ರೀಯ ತತ್ವವನ್ನೇ ಅನುಸರಿಸುವುದಾಗಿದೆ.

ಕಾಂಗ್ರೆಸ್ಸಿನಲ್ಲಿ ೩೦ ಲಕ್ಷ ಹಿಂದುಗಳು ಮತ್ತು ಒಂದು ಲಕ್ಷ ಮುಸಲ್ಮಾನರು ಇದ್ದರು ಕೂಡಾ ಅದೇನು ಜಾತಿವಿಶಿಷ್ಟ ಸಂಸ್ಥೆಯಲ್ಲವೆಂಬುದನ್ನು ಪಂಡಿತ ಜವಾಹರಲಾಲರು ಚೆನ್ನಾಗಿ ನೆನಪಿನಲ್ಲಿಡಲಿ.

ಮುಸಲ್ಮಾನರನ್ನು ಕಾಂಗ್ರೆಸ್ಸಿನಲ್ಲಿ ಕೂಡಿಸಿಕೊಳ್ಳುವ ಪ್ರಯತ್ನವು ವಿಫಲವಾಯಿತೆಂದು ಪಂಡಿತಜಿಯವರು ಜಿನ್ನಾರನ್ನು ಸಂತೋಷಗೊಳಿಸಲು ಹಿಂದುಗಳ ಹಿತವನ್ನು ಆಹುತಿಕೊಡಲು ಸಿದ್ಧರಾದರೆ ಹಿಂದು ಮಹಾಸಭೆಯು ತನ್ನ ಕೊನೆಯದಾದ ವಿರೋಧವನ್ನು ಮಾಡಲು ಸಿದ್ಧವಾಗದೆ ಇರಲಾರದು.

ಮಿ. ಜಿನ್ನಾರವರ ಸಂಗಡ ಮಾಡುವ ಒಪ್ಪಂದವು ವ್ಯಕ್ತಿಗತವಾದುದಲ್ಲ. ಮುಸ್ಲಿಂಲೀಗ್ ಹೇಗೆ ಮುಸಲ್ಮಾನರ ಪ್ರಾತಿನಿಧಿಕ ಸಂಸ್ಥೆಯೋ ಹಾಗೆಯೇ ಹಿಂದುಮಹಾಸಭೆಯು ಹಿಂದುಗಳ ಪ್ರಾತಿನಿಧಿಕ ಸಂಸ್ಥೆಯು. ಅದರ ಒಪ್ಪಿಗೆಯಿಲ್ಲದೆ ಹಿಂದುಗಳ ಪರವಾಗಿ ಮುಸ್ಲಿಂ ಲೀಗಿನ ಸಂಗಡ ಒಪ್ಪಂದ ನಡೆಸಲು ಪಂಡಿತಜಿಯವರಿಗೆ ಯಾವ ಅಧಿಕಾರವೂ ಇಲ್ಲವೆಂಬುದನ್ನು ಅವರು ಚೆನ್ನಾಗಿ ಲಕ್ಷಿಸಲಿ.

ಪಂಡಿತಜಿಯವರು ಮುಸ್ಲಿಂಲೀಗಿಗೆ ಶರಣು ಹೋಗಿ ಜಾತಿ ನಿರ್ಣಯವನ್ನು ಒಪ್ಪಿಕೊಂಡಿದ್ದಾರೆ. ಬ್ರಿಟಿಶ್ ಸಾಮ್ರಾಜ್ಯದ ವಿರುದ್ಧವಾಗಿ ಗರ್ಜಿಸುವ ಪಂಡಿತಜಿಯವರು ಆ ಸಾಮ್ರಾಜ್ಯದ ನಿರ್ಣಯವಾದ ಜಾತಿ ನಿರ್ಣಯಕ್ಕೆ ಒಪ್ಪಿಕೊಂಡುದು ದುರ್ದೈವವಲ್ಲವೆ ? ಇದಕ್ಕಿಂತ ಇವರ ಅಂಜುಬುರುಕುತನಕ್ಕೆ ಬೇರೆ ದೃಷ್ಟಾಂತಬೇಕೆ ? ಗಾಂಧೀಜಿಯವರು ಹಿಂದು ಮಹಾ ಸಭೆಯ ಅಭಿಪ್ರಾಯ ತಿಳಿದುಕೊಳ್ಳದೆ ಈ ವಿಚಾರದಲ್ಲಿ ಯಾವ ನಿರ್ಣಯವನ್ನೂ ಮಾಡಲಾರರೆಂದೇ ದೃಢನಂಬಿಕೆ.

## ವಿಶೇಷ ಸಮಾಚಾರ.

### ಫೆಡರೇಶನ್ನಿನಲ್ಲಿ ತಿದ್ದುಪಾಟು?

ಲಂಡನ್ನಿನಲ್ಲಿ ಮಿ. ಜಾರ್ಜ ಲಾನ್ಸಬರಿಯವರ ಅಧ್ಯಕ್ಷತೆಯಲ್ಲಿ ಬಾಬು ಸುಭಾಷಚಂದ್ರ ಬೋಸರ ಮಹತ್ವದ ಭಾಷಣವಾಯಿತು. ಫೆಡರೇಶನ್ನನ್ನು ಖಂಡುತುಂಡಾಗಿ ನಿಷೇಧಿಸಿದರು. ಲಾರ್ಡ ಆಯರ್ವಿನ್ನರು (ಹಿಂದಿನ ವ್ಹಾಯಿಸ್‌ರಾಯರು) ಶ್ರೀ ಸುಭಾಷಚಂದ್ರ ಬೋಸರನ್ನು ಕಂಡು ಮಾತನಾಡುವರು. ಫೆಡರೇಶನ್ನಿನಲ್ಲಿ ತಿದ್ದುಪಾಟಾದರೆ ಕಾಂಗ್ರೆಸ್ಸಿನ ವಿರೋಧ ಕಡಿಮೆಯಾಗಬಹುದೆಂದು ಲಂಡನ್ನಿನಲ್ಲಿ ಅನೇಕರ ಅಭಿಪ್ರಾಯ

### "ವಂದೇಮಾತರಂ" ಗೀತೆಗೆ ವಿರೋಧ.

ಮದ್ರಾಸಿನ ತಾತ್ಕಾಲಿಕ ಮಂತ್ರಿಗಳಾದ ಖಾನಬಹಾದ್ದೂರ ಖಲೀಫ್ ಉಲ್ಲಾ ಇವರು ಮದ್ರಾಸಿನ ಮುಸಲ್ಮಾನರ ಸಭೆಯಲ್ಲಿ ಭಾಷಣಮಾಡುವಾಗ ಹೀಗೆ ಹೇಳಿದರು.--

"ವಂದೇಮಾತರಂ ಗೀತೆಯನ್ನು ಬಿಟ್ಟುಬಿಡಬೇಕಾಗಿ ನಾನು ಕಾಂಗ್ರೆಸ್ಸಿಗೂ ಅದರ ಮುಖಂಡರಿಗೂ ವಿನಂತಿ ಮಾಡಿಕೊಳ್ಳುತ್ತೇನೆ. ಈ ಗೀತೆಯಲ್ಲಿಯ ತತ್ವವು ಮುಸಲ್ಮಾನರನ್ನು ಓಡಿಸಿಬಿಡಬೇಕೆಂದೇ ಇದೆ. ಕಾಂಗ್ರೆಸ್ಸಿಗೆ ಮುಸಲ್ಮಾನರ ಸಂಗಡ ಸ್ನೇಹದಿಂದಿರಬೇಕೆಂದಿದ್ದರೆ ಈ ಗೀತೆಯನ್ನು ಅವರು ಕೂಡಲೇ ಬಿಟ್ಟುಬಿಡಬೇಕು. ಇದೇ ಉತ್ತಮ."

---

—ಕಲಕತ್ತಾದಲ್ಲಿ ವಸಂತಕುಮಾರ ಜೋಶಿ ಮೊದಲಾದ ಕಮ್ಯುನಿಷ್ಟರ ಮೇಲೆ ನಡೆದ ವ್ಯಾಜ್ಯದಲ್ಲಿ ಆರು ತಿಂಗಳ ಕಠಿಣ ಶಿಕ್ಷೆ ವಿಧಿಸಲಾಯಿತು.

—ಪಂಜಾಬಿನ ರಾಜಕೈದಿಗಳು ಪ್ರಾರಂಭಿಸಿದ ಅನ್ನತ್ಯಾಗ ಸತ್ಯಾಗ್ರಹವನ್ನು ನಿಲ್ಲಿಸಬೇಕಾಗಿ ಗಾಂಧೀಜಿಯವರು ಅವರಿಗೆ ತಿಳಿಸಿದ್ದಾರೆ.

## ಸಂಘಟನೆಯೇ ಮುಖ್ಯೋಪಾಯು.

ನಾಗಪುರದಲ್ಲಿ ಡಾ. ಹೆಡಗೇವಾರ ಇವರ ಚಾಲಕತ್ವದಿಂದ ಕಳೆದ ೧೨ ವರುಷ ನಡೆದಿರುವ ಹಿಂದು ರಾಷ್ಟ್ರೀಯ ಸೇವಕ ಸಂಘದವರು ಔಂಧದಲ್ಲಿ ಒಂದು ಶಿಬಿರವನ್ನು ಕಳೆದ ೧೯ ನೆಯ ತಾರೀಖಿನ ದಿವಸ ಏರ್ಪಡಿಸಿದ್ದರು. ಅದರ ಉಪಕ್ರಮ ಸಮಾರಂಭವು ಪ್ರಗತಿಪ್ರಿಯರಾದ ಸುಪ್ರಸಿದ್ಧ ಔಂಧ ಸಂಸ್ಥಾನಾಧಿಪತಿ ಶ್ರೀಮಂತ ಬಾಳಾಸಾಹೇಬ ಪಂತ ಪ್ರತಿನಿಧಿ ಇವರ ಹಸ್ತದಿಂದ ಜರುಗಿತು. ಆಗ ಡಾ. ಹೆಡಗೇವಾರ ಇವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು.

"ಈಗ ಜಗತ್ತಿನಲ್ಲಿ ನಡೆದಿರುವ ಎಲ್ಲ ಸಮಾಜಗಳ ಸ್ಪರ್ಧೆಯಲ್ಲಿ ಹಿಂದು ಸಮಾಜವು ಬಹು ಹಿಂದೆ ಬಿದ್ದಿದೆಯೆಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಆದರೆ ಇದೇ ಸಮಾಜವು ಜಗತ್ತಿನಲ್ಲಿ ಹಿಂದಕ್ಕೊಮ್ಮೆ ಎಲ್ಲ ಸಮಾಜಗಳ ಮುಂದಿದಿತು. ಅನಂತರ ದಿನೆ ದಿನೆ ಹಿಂದೆ ಬೀಳುತ್ತ ಇದು ನಡೆಯದಂಥ ಸ್ಥಿತಿಗೆ ಬಂದಿದೆ. ಇದು ಮುಂದರಿಯಬೇಕಾದರೆ ಸಂಘಟನೆಯೆಂಬ ಶಕ್ತಿಯೇ ಅತ್ಯವಶ್ಯಕವಾಗಿ ಬೇಕು. ಬಲಹೀನವಾದ ಹಿಂದು ಸಮಾಜವು ಸಾಮರ್ಥ್ಯವಾನ್ ಸಮಾಜವಾಗಬೇಕೆಂಬ ಒಂದೇ ಒಂದು ಉದ್ದೇಶದಿಂದ ಈ ಸಂಘವು ಹಿಂದು ಸಂಘಟನೆಯನ್ನುಂಟುಮಾಡಲು ಸ್ಥಾಪನೆಯಾಗಿದೆ.

ಈ ಸಂಘವು ಅಖಿಲ ಹಿಂದುಸ್ಥಾನದಲ್ಲಿ ತನ್ನ ಶಾಖೆಗಳಿಂದ ಹಿಂದು ಸಂಘಟನೆಗಾಗಿ ಪ್ರಯತ್ನಿಸುತ್ತಿದ್ದರೂ ಅನ್ಯ ಸಮಾಜಗಳ ವಿಷಯದಲ್ಲೇನೂ ಇದು ಅನಾದರವನ್ನಾಗಲಿ ಮತ್ಸರವನ್ನಾಗಲಿ ಹೊಂದತಕ್ಕದ್ದಲ್ಲ. ಏಕೆಂದರೆ ಈ ಸಂಸ್ಥೆಯು ಯಾವ ಸಂಸ್ಕೃತಿಗಾಗಿಯೇ ಇದೆಯೋ ಆ ಹಿಂದು ಸಂಸ್ಕೃತಿಗೆ "ಆತ್ಮವತ್ ಸರ್ವ ಭೂತೇಷು" ಎಂಬುದೇ ಮೂಲವಾಗಿದೆ. ಅನ್ಯರನ್ನು ತನ್ನಂತೆ ಪ್ರೇಮಮಾಡಬೇಕಾದರೆ ತಾನು ಬದುಕಿರಬೇಕಲ್ಲವೆ? ಆದಕಾರಣ ಹಿಂದು ಸಮಾಜವು ಬದುಕಿರಲೆಂದೇ ಇದು ಪ್ರಯತ್ನಿಸುವುದಾಗಿದೆ."

### ಹೃದಯುಸ್ಫುರಣ ದೃಶ್ಯ.

ಅನಂತರ ಔಂಧ ಸಂಸ್ಥಾನಾಧಿಪತಿಗಳು ಹೀಗೆ ಹೇಳಿದರು—

"ನಾವು ಈ ಸ್ವಯಂ ಸೇವಕರ ಈವರೆಗಿನ ಕಾರ್ಯಕಲಾಪಗಳ ಹೃದಯುಸ್ಫುರಣ ದೃಶ್ಯವನ್ನು ನೋಡಿದೆವಷ್ಟೆ. ನಮಗೆ ಶಿವಾಜಿ ಮಹಾರಾಜರ ಕಾಲವು ಜ್ಞಾಪಕಕ್ಕೆ ಬಂದಿತು. ಅವರು ಆಗ ನಿರ್ಮಾಣಮಾಡಿದ್ದ ತೇಜೋಮಯ ವಾತಾವರಣದ ಸ್ಮರಣೆಯಾಗುತ್ತದೆ. ಹಿಂದುಗಳೆಲ್ಲಾ ನಾವು ಒಂದೇ ಒಂದೆಂಬ ವಿಚಾರಸರಣಿಯನ್ನೇ ಆಗ ಅವರು ನಿರ್ಮಾಣಮಾಡಿದ್ದರು. ಈಗಲು ಕೂಡಾ ಅಂಥ ಸ್ಥಿತಿಯನ್ನೇ ಉಂಟುಮಾಡುವುದು ಅತ್ಯಗತ್ಯವಾಗಿದೆ.

### ಮಹಾರಾಜರ ವೀರವಾಣಿ.

ಔರಂಗಜೇಬನ ಗಡ್ಡದೊಳಗಿಂದ ಹಿಂದುಧರ್ಮವನ್ನು ಬಿಡಿಸಲಿಕ್ಕೋಸ್ಕರ ಸಂತಾಜಿ ಘೋರಪಡೆ ಮೊದಲಾದ ಪಂಚ ವೀರರು ಆಗಿನ ಯುಗವನ್ನು ಉಂಟುಮಾಡಿದ್ದರು. ಶಿವಾಜಿ ಕಾಲದ ವ್ಯಾಪಕ ದೃಷ್ಟಿಯು ಲೋಪಹೊಂದಿ 'ನಾವು' ಎಂಬುದಕ್ಕೆ ಪ್ರತಿಯಾಗಿ 'ನಾನು' ಎಂಬ ಸಂಕುಚಿತ ದೃಷ್ಟಿಯು ಉಂಟಾದ ದಿನವೇ ನಮ್ಮ ಅಧೋಗತಿಯು ಪ್ರಾರಂಭವಾಯಿತು. ಆ ನಮ್ಮ ಸ್ವಾರ್ಥ ವೃತ್ತಿಯೇ ಹಿಂದು ಸಮಾಜದ ಹೀನಾವಸ್ಥೆಗೆ ಕಾರಣವಾಗಿದೆ. ನಿಜವಾದ ಹಿಂದುವಿನ ಹೃದಯವನ್ನು ಸ್ಫುರಣಗೊಳಿಸುವಂತೆಯೇ ಈ ಸಂಘದ ಕಾರ್ಯಗಳಿವೆ.

ವೇದದ "ಸಂಗಚ್ಛಧ್ವಂ" ಮಂತ್ರದಲ್ಲಿ ಹೇಳಿರುವಂತೆ ನಮ್ಮೆಲ್ಲರ ನುಡಿ, ನಡೆ, ಮನ, ವಿಚಾರಗಳು ಒಂದಾಗಬೇಕು. ಈ ಪ್ರಚಂಡವಾದ ಹಿಂದು ಸಮಾಜದಲ್ಲಿ ಸಂಘಟನೆಯುಂಟಾಗಬೇಕು. ಪ್ರತಿಯೊಂದು ಹಳ್ಳಿ ಮತ್ತು ಪಟ್ಟಣಗಳಲ್ಲಿ ಈ ಧ್ವಜವು ಇರಬೇಕು. ಶಕ್ಯವಿರುವ ಎಲ್ಲ ಸಹಾಯಗಳನ್ನೂ ಈ ಸಂಘಕ್ಕೆ ಮಾಡಲು "ಮಹಾರಾಷ್ಟ್ರದ ಪ್ರತಿನಿಧಿ" ಎಂದು ನಾವು ಸಿದ್ಧರೇ ಇದ್ದೇವೆ. ನಿಮ್ಮೆಲ್ಲರ ಕಲ್ಯಾಣಕ್ಕಾಗಿ ನಮ್ಮನ್ನು ಉಪಯೋಗಿಸಿಕೊಳ್ಳಲು ನಿಮಗೆ ಅಧಿಕಾರವೇ ಇದೆ. ತನು ಮನ ಧನಗಳಿಂದಲೇ ಅಲ್ಲ. ಪ್ರಾಣದಿಂದಲೂ ನಿಮ್ಮ ಕಲ್ಯಾಣಕ್ಕೆ ಪ್ರಯತ್ನಿಸಲು ನಮ್ಮ ಸಿದ್ಧತೆಯಿದೆ ಎಂಬುದನ್ನು ನೀವು ಲಕ್ಷ್ಯದಲ್ಲಿಡಿರಿ.

### ಸಂಘಟನೆಯೇ ಮುಖ್ಯೋಪಾಯು.

ನಮ್ಮ ಉದ್ಧಾರಕ್ಕೆ ಸಂಘಟನೆಯನ್ನು ಆಶ್ರಯಿಸುವುದೊಂದೇ ಮುಖ್ಯೋಪಾಯವು. ಸಕಲ ತರುಣರೂ ಈ ಸಂಘದಲ್ಲಿ ಸೇರಬೇಕೆಂಬುದೇ ನಮ್ಮ ಅಭಿಪ್ರಾಯ. ಈಗ ಈ ಜಗತ್ತಿನಲ್ಲಿ ಕೇವಲ ಸಂಖ್ಯಾಬಲಕ್ಕಾಗಲಿ ಅಥವಾ ಉದಾತ್ತ ತತ್ವಗಳಿಗಾಗಲಿ ಮಹತ್ವವಿಲ್ಲ. ನಮ್ಮ ಕಣ್ಣಮುಂದೆಯೇ ೪೫ ಕೋಟಿ ಜನಸಂಖ್ಯೆಯ ಚೀನ ದೇಶವು ಯಾಗ ಗತಿಗೀಡಾಗುತ್ತ ಬಂದಿದೆಯೆಂಬುದು ಇದೆ. ಇದನ್ನು ಕಣ್ಣಾರೆ ಕಂಡು ನಾವು ಸುಮ್ಮನಿದ್ದರೆ ಡಾ. ಹೆಡಗೇವಾರರು ಹೇಳಿದಂತೆ ಹಿಂದುಸ್ಥಾನದ ಗತಿಯಾದರೂ ಜಗತ್ತಿನ ಸ್ಪರ್ಧೆಯಲ್ಲಿ ಹಿಂದೇ ಇರಬೇಕಾಗುವುದು. ಹಿಂದು ರಾಷ್ಟ್ರವು ಭಾಗ್ಯಶಾಲಿ ರಾಷ್ಟ್ರವಾಗಬೇಕೆಂದು ಇಚ್ಛಿಸುವ ಪ್ರತಿಯೊಂದು ವ್ಯಕ್ತಿಯೂ ಈ ರಾಷ್ಟ್ರೀಯ ಸ್ವಯಂ ಸೇವಕ ಸಂಘದಲ್ಲಿ ಸೇರಲೇಬೇಕು."

---

## ಸ್ವಾತಂತ್ರ್ಯ ದಿನ.

ಇದೇ ತಿಂಗಳ ೨೬ ನೆಯ ತಾರೀಖು ಸ್ವಾತಂತ್ರ್ಯ ದಿನವೆಂದು ಆಚರಿಸಲ್ಪಡುತ್ತಲಿದೆಯಷ್ಟೆ. ಆ ದಿನ ಮುಂಬೈ ಸರಕಾರದವರು ಕೋರ್ಟು ಕಚೇರಿ ಮೊದಲಾದವುಗಳಿಗೆ ಬಿಡುವು ಕೊಡಬೇಕೆಂದು ಯೋಚಿಸಿದ್ದಾರೆ. ಕಾಂಗ್ರೆಸ್ಸಿನ ಅಧ್ಯಕ್ಷರು ಎಲ್ಲ ಕಾಂಗ್ರೆಸ್ ಮಂತ್ರಿಮಂಡಲಗಳೂ ಆ ದಿನ ಬಿಡುವು ಕೊಡಬೇಕೆಂದೇ ತಿಳಿಸಿದ್ದಾರೆ. ಆದರೆ ಈ ವಿಷಯದಲ್ಲಿ ಗವ್ಹರ್ನರರಿಗೂ ಮಂತ್ರಿಗಳಿಗೂ ಭಿನ್ನಾಭಿಪ್ರಾಯ ಬರಬಹುದೆಂದು ಅನೇಕರು ಊಹಿಸಿದ್ದಾರೆ. ಇಷ್ಟರಲ್ಲೇ ಈ ವಿಷಯವು ತೀರ್ಮಾನವಾಗತಕ್ಕದ್ದಿದೆ.

---

## ಅಸೆಂಬ್ಲಿಯಲ್ಲಿ ಪ್ರಾರ್ಥನೆ ನಿಂತಿಲ್ಲ.

ದಿಲ್ಲಿಯಲ್ಲಿ ಕೂಡಿದ್ದ ಅಸೆಂಬ್ಲಿ ಅಧ್ಯಕ್ಷರ ಸಭೆಯ ಸಂಬಂಧವಾಗಿ ಮದ್ರಾಸ್ ಅಸೆಂಬ್ಲಿ ಅಧ್ಯಕ್ಷರು ಹೀಗೆ ಹೇಳಿದರು—

"ದಿಲ್ಲಿ ಸಭೆಯು ಅಸೆಂಬ್ಲಿಗಳಲ್ಲಿ ಪ್ರಾರ್ಥನೆ ಇರಕೂಡದೆಂದು ಗೊತ್ತುಮಾಡಿರುವುದಾಗಿ ಕೆಲವು ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಇದು ನಿಜಸಂಗತಿಯಲ್ಲ. ಆ ವಿಷಯ ಇನ್ನೂ ತೀರ್ಮಾನವಾಗಿಲ್ಲ. ನಾನು ಇದೇ ತಿಂಗಳು ೨೬ ನೆಯ ತಾರೀಖಿನ ದಿನ ಈ ವಿಚಾರವಾಗಿ ಒಂದು ಕಮಿಟಿಯನ್ನು ಕೂಡಿಸಿ ನಮ್ಮ ಅಸೆಂಬ್ಲಿ ಮಟ್ಟಿಗೆ ಒಂದು ನಿರ್ಣಯ ಮಾಡಬೇಕೆಂದು ಗೊತ್ತುಮಾಡಿದ್ದೇನೆ."

## ಅಭಿನಂದನೀಯ ವಿವಾಹ.

ನಿಜಾಮು ಇಲಾಖಾ ಹಳಖೇಡದಲ್ಲಿ ವೀರಶೈವ ಒಳಪಂಗಡಗಳ ಏಕೀಕರಣದ ಒಂದು ವಿವಾಹವು ಬಹು ಸಂಭ್ರಮದಿಂದ ನಡೆಯಿತು. ಇಲ್ಲಿಯ ತರುಣ ಸಂಘದವರ ಪ್ರಯತ್ನದಿಂದ ಈ ವಿವಾಹವು ಯಶಸ್ವಿಯಾಗಿ ನಡೆಯಿತು. ವರನು ಕುಡುಒಕ್ಕಲಿಗರ ಒಳಪಂಗಡಕ್ಕೂ ಕನ್ಯೆಯು ಹೂಗಾರ ಒಳಪಂಗಡಕ್ಕೂ ಸೇರಿದವರು. ಇದೇ ಮಾರ್ಗಶಿರ ಬಹುಳ ೫ ದಿವಸ ಇಬ್ಬರಿಗೂ ವಿಧಿವತ್ತಾಗಿ ದೀಕ್ಷೆಯಾಗಿ ಲಗ್ನವು ಬಹು ಉತ್ಸಾಹದಿಂದ ನಡೆಯಿತು.

ಈ ಕಾರ್ಯಕ್ಕೆ ಹುಲಸೂರ ಚರಮೂರ್ತಿಗಳಾದ ಶ್ರೀ ಗುರು ಬಸವ ಸ್ವಾಮಿಗಳೂ ಗೌರ ಚಿಂಚೋಳಿ ಕೀಕಳಗಿ ಮಠದ ದೇಶಿಕರೂ ಸಮಾಜ ಸುಧಾರಕರಾದ ಶ್ರೀ ರೇವಣಸಿದ್ಧಯ್ಯನವರು ನಂದಿಮಠ ಬ್ರಹ್ಮಪುರ ಗುಲಬರ್ಗಾ ಶ್ರೀ. ರೇವಪ್ಪಯ್ಯನವರು ಸಂಸ್ಥಾನ ಶ್ರೀ ಕ್ಷೇತ್ರ ನಾವದಿಗಿ ಮೊದಲಾದ ಮಹನೀಯರು ಬಹಳ ಸಹಾಯಮಾಡಿದರು. ಧಾರ್ಮಿಕ ಇಂಥ ಮಹತ್ವದ ಕಾರ್ಯಕ್ಕೆ ಹೀಗೆ ಗುರುಗಳು ಮುಂದೆ ಬಂದದ್ದು ಅವರಿಗೆ ಬಹಳೇ ಭೂಷಣ. ಇಲ್ಲಿಯ ವೀರಶೈವ ಸಮಾಜದವರೂ ಇದಕ್ಕೆ ಸಹಾನುಭೂತಿ ತೋರಿಸಿದರು. ದೀಕ್ಷೆ, ಲಗ್ನ, ಸಹಭೋಜನ ಈ ಎಲ್ಲಾ ಕಾರ್ಯಗಳು ಯಶಸ್ವಿಯಾಗಿ ನಡೆದವು. ಇದೇ ಪ್ರಕಾರ ಎಲ್ಲ ಕಡೆಗೂ ವೀರಶೈವ ಒಳಪಂಗಡಗಳಲ್ಲಿ ಪರಸ್ಪರ ವಿವಾಹವಾಗಲು ಪ್ರಾರಂಭವಾಗಬೇಕು. ಇದೇ ವೀರಶೈವರ ನಿಜವಾದ ಏಕೀಕರಣ.

ಓರ್ವ ವೀರಶೈವಾಭಿಮಾನಿ.

---

## ಲಿಂಗಸುಗೂರು ಶೋಚನೀಯ ಸ್ಥಿತಿ.

ರಾಯಚೂರು ಜಿಲ್ಲೆಯು ಬರಗಾಲದ ಉಗಮಸ್ಥಾನವೆಂದರೆ ಅತಿಶಯೋಕ್ತಿಯೆನಿಸಲಾರದು. ಈ ಜಿಲ್ಲೆಯ ತಾಲೂಕು ಲಿಂಗಸುಗೂರು ಬರಗಾಲದ ಮುಖ್ಯಸ್ಥಳ. ಎಂಟು ಹತ್ತು ವರ್ಷಗಳಿಂದಲೂ ಸಕಾಲಕ್ಕೆ ಮಳೆಯಾಗದಿದ್ದುದರಿಂದ ನಾಲ್ಕಾಣೆ ಭಾಗಗಳಿಂದಲೂ ಬೆಳೆ ಬಾರದೆ ರೈತರು ಆರ್ಥಿಕ ದುಃಸ್ಥಿತಿಗೀಡಾಗಿರುತ್ತಾರೆ. ಬಿತ್ತಿದ ಮೇಲೆ ಮಳೆಯಾಗದಿದ್ದುದರಿಂದ ಈ ವರ್ಷದ ಮುಂಗಾರಿ ಹಿಂಗಾರಿ ಬೆಳೆಗಳು ಕೆಟ್ಟು ಬಿತ್ತಿದ ಬೀಜ ಸಹ ಬರುವಂತಿಲ್ಲ. ಇಂಥ ಸ್ಥಿತಿಯಲ್ಲಿ ಸರಕಾರದವರು ಈ ಸಾರೆ ಕರಮ ಸುನಾವಣೆಯ ಕಾಲಕ್ಕೆ ನೂರಕ್ಕೆ ಇಪ್ಪತ್ತೈದು ರೂ. ತೆರಿಗೆ ಹೆಚ್ಚು ಮಾಡಿರುತ್ತಾರೆ. ದನಗಳಿಗೆ ಮೇವು ಇಲ್ಲದ್ದಕ್ಕೆ ನೂರು ರೂಪಾಯಿಗಳ ದನಗಳು ೧೦ ರೂಪಾಯಿಗಳಿಗೆ ಸಹ ತೆಗೆದುಕೊಳ್ಳುವವರಿಲ್ಲ. ಹೊಟ್ಟೆ ಹೊರೆದುಕೊಳ್ಳಲಿಕ್ಕೆ ಅನೇಕ ಜನರು ಹುಬ್ಬಳ್ಳಿ ಮುಂಬೈ ಕಡೆಗೆ ಹೋಗಿರುತ್ತಾರೆ. ತೆರಿಗೆ ಒರಾಯಿಯಿಂದ ಆಗಬೇಕೆಂದು ರೈತರು ಸ್ಥಳಿಕ ಅಧಿಕಾರಿಗಳಿಗೂ ಮೇಲಿನ ಅಧಿಕಾರಿಗಳಿಗೂ ಅರ್ಜಿ ಮೂಲಕ ವಿನಂತಿಮಾಡಿಕೊಂಡಿದ್ದರೂ ಏನೂ ವಿಚಾರಿಸದೆ ತೆರಿಗೆಯ ವಸೂಲಿ ನಡೆಸಿರುತ್ತಾರೆ. ಬೆಳೆಗಳ ತನಖಿ ಮಾಡುವದಕ್ಕಾಗಿ ತಹಸೀಲದಾರ ಸಾಹೇಬರು ಬಂದು ಒಂದೆರಡು ಹೊಲಗಳ ನಾಲಿನಲ್ಲಿಯ ಬೆಳೆಯನ್ನು ನೋಡಿ ನೆಟ್ಟಗಿವೆಯೆಂದು ಹೇಳಿಹೋದರು. ವರಿಷ್ಠ ಅಧಿಕಾರಿಗಳು ತಪ್ಪು ಅಣೇವಾರಿ ಮಾಡಿದವರನ್ನು ಶಿಕ್ಷಿಸಿ ತೆರಿಗೆಯನ್ನು ಬರಾಯಿಂದಾ ಮಾಡಿ ಮಳೆಯ ಅಭಾವದಿಂದೊದಗಿದ ರೈತರ ಭೀಕರ ಸ್ಥಿತಿಯ ನಿವಾರಣೋಪಾಯವನ್ನು ತೀವ್ರ ಕೈಕೊಳ್ಳುವದೇ ಮೇಲಾದ ಉಪಾಯವು.

ಬಸಲಿಂಗಯ್ಯನವರು ಪ್ರೆಸಿಡೆಂಟ

ವೀರಶೈವ ವಾಚನಾಲಯ ಲಿಂಗಸುಗೂರು

---



## ಪ್ರ ಕ ಟ ನೆ .

ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ವಾಙ್ಮಯ ಶಾಖೆಯವರು ಪ್ರಕಟಗೊಳಿಸಿದ ಚೆನ್ನಬಸವ ಪುರಾಣದ ಬೆಲೆಯನ್ನು ಒಂದು ರೂಪಾಯಿಯಿಂದ ಇಳಿಸಿದೆ. ಅಂದರೆ ಈ ಮೊದಲು ೬ ರೂ. ಗಳಿಗೆ ಸಿಗುತ್ತಿದ್ದ ನುಣುಪು ಕಾಗದದ ಪ್ರತಿಯನ್ನು ೫ ರೂ. ಗಳಿಗೂ ೬॥ ರೂಪಾಯಿಗಳಿಗೆ ದೊರೆಯುತ್ತಿದ್ದ ಬೆಂಡ ಕಾಗದದ ಪ್ರತಿಯನ್ನು ೫॥ ರೂ. ಗಳಿಗೂ ಮಾರಬೇಕೆಂದು ಗೊತ್ತುಪಡಿಸಿದೆ. ಅಲ್ಲದೆ ಪುಸ್ತಕ ವ್ಯಾಪಾರಿಗಳಿಗೆ ಯೋಗ್ಯ ಕಮಿಶನ್ ಕೊಡಲಾಗುವದು. ಈ ಲಾಭವನ್ನು ಸರ್ವರೂ ಹೊಂದಬೇಕಾಗಿ ವಿನಂತಿಯಿದೆ.

ತಮ್ಮ,

V. R. Koppal.

Librarian.

---

—ಲಾರ್ಡ ಲೊಥಿಯನ್‌ರು ಈ ವಾರ ಗಾಂಧೀಜಿಯವರನ್ನು ಕಂಡು ಅಲಿಗಡ, ದಿಲ್ಲಿಗಳಿಗೆ ಹೋಗಿ ಅನಂತರ ವಿಮಾನದಿಂದ ಲಂಡನ್ನಿಗೆ ಹೋಗುವರು.

# ಕರ್ನಾಟಕ ಒಕ್ಕಲತನದ ಪ್ರದರ್ಶನವು.

## ಉತ್ತಮ ದನಕರುಗಳ ಪ್ರದರ್ಶನವೂ ಧಾನ್ಯ ಮತ್ತು ಅವುಗಳಿಂದ ತಯಾರಾದ ಪದಾರ್ಥಗಳ ಮೇಲಾಟವೂ.

( ಪ್ರದರ್ಶನ ಪ್ರಕಟನಾ ಶಾಖೆಯಿಂದ. )

ಬೆಳಗಾವಿಯಲ್ಲಿ ಜನವರಿ ೧೭ ನೇ ತಾರೀಖಿನ ದಿವಸ ಮುಂಬೈ ಇಲಾಖೆಯ ಗವ್ಹರ್ನರರಾದ ಸರ್. ರೋಜರ ಲಮ್ಲೆಯವರ ಹಸ್ತದಿಂದ ಕರ್ನಾಟಕ ಒಕ್ಕಲತನದ ಪ್ರದರ್ಶನವು ತೆರೆಯಲ್ಪಡುವದು. ಈ ಪ್ರದರ್ಶನವು ಹತ್ತು ದಿವಸಗಳ ವರೆಗೆ ನಡೆಯುವದು.

ಈ ಪ್ರದರ್ಶನವು ಬಹಳ ದೊಡ್ಡ ಪ್ರಮಾಣದಲ್ಲಿ ಏರ್ಪಾಡುಮಾಡಲ್ಪಟ್ಟಿದ್ದು ಎರಡು ಲಕ್ಷಕ್ಕಿಂತ ಹೆಚ್ಚು ಜನರು ಇದನ್ನು ನೋಡಲಿಕ್ಕೆ ಬರಬಹುದು. ಈ ಪ್ರದರ್ಶನಕ್ಕೆ ರೈತರಿಗೆ ಬರುವದಕ್ಕೆ ಅನುಕೂಲವಾಗಬೇಕೆಂದು ಮದ್ರಾಸ ಸದರ್ನ ಮಾರಾಠಾ ರೇಲ್ವೆಯವರು ಸೋಯಿ ದರದ ರಿಟರ್ನ ಟಿಕೀಟುಗಳನ್ನು ಇಟ್ಟಿರುವರು. ಅದರಂತೆ ಹೊರಗಿನಿಂದ ಪ್ರದರ್ಶನದ ಸಲುವಾಗಿ ವಸ್ತು ಒಡವೆಗಳನ್ನು ತರುವದಕ್ಕೆ ಸಹ ಸವಲತ್ತಿನ ದರದ ಟಿಕೀಟುಗಳನ್ನು ಇಟ್ಟಿದ್ದಾರೆ. ಸ್ಟೇಶನ್ ಮಾಸ್ತರರ ಕಡೆಗೆ ಅಗ್ಗ ದರದ ಟಿಕೀಟುಗಳ ಬಗ್ಗೆ ಸವಿಸ್ತಾರ ಮಾಹಿತಿಯು ದೊರೆಯುವದು.

### ಶೇತಕಿ ಖಾತೆಯ ಮಹತ್ಕಾರ್ಯಗಳು.

ಈ ಪ್ರದರ್ಶನವು ಬೋಧಪ್ರದವೂ, ಚಿತ್ತಾಕರ್ಷಕವೂ ಮತ್ತು ಮನೋರಂಜಕವೂ ಆಗಬೇಕೆಂದು ಪ್ರದರ್ಶನದ ಚಾಲಕರು ಪ್ರಯತ್ನಿಸುತ್ತಿದ್ದಾರೆ. ಶೇತಕಿ ಖಾತೆಯವರು ಬೇರೆ ಬೇರೆ ಬೆಳೆಗಳ ವಿಷಯವಾಗಿ ಈ ವರೆಗೆ ಮಾಡಿದ ಸಂಶೋಧನೆಗಳನ್ನು ತಿಳಿಸಿ ಹೇಳುವದಲ್ಲದೆ ಆ ಬಗ್ಗೆ ರೈತರ ಕಲ್ಯಾಣಕ್ಕಾಗಿ ಶೇತಕಿ ಖಾತೆಯವರೂ ಸರಕಾರದ ಬೇರೆ ಖಾತೆಯವರೂ ಈ ವರೆಗೆ ಮಾಡಿದ ಮಹತ್ಕಾರ್ಯಗಳನ್ನು ತಿಳಿಸಿ ಹೇಳಿ ಪ್ರಾತ್ಯಕ್ಷಿಕೆಗಳನ್ನು ಸಹ ತೋರಿಸುವರು.

ಅನೇಕ ಒಕ್ಕಲಿಗರು ತಮ್ಮ ಹೊಲ ಮತ್ತು ತೋಟಗಳಲ್ಲಿ ಬೆಳೆಯುವ ವಸ್ತುಗಳ ನಮೂನೆಗಳನ್ನು ದನ, ಕೋಳಿ, ನುಂತ ನಾಯಿ, ಕುರಿ, ಆಡು ಹೂ ಮುಂತಾದವುಗಳನ್ನು ಪ್ರದರ್ಶನಕ್ಕೆ ಕಳಿಸಿರುವರು. ಉತ್ತಮ ತರಗತಿಯ ವಸ್ತುಗಳಿಗೆ ಬಹುಮಾನಗಳನ್ನು ಕೊಡುವರು.

### ರೈತರ ಸುಧಾರಣೆಯೇ ಈ ಪ್ರದರ್ಶನದ ಗುರಿ.

ಕರ್ನಾಟಕದಲ್ಲಿ ಈ ವರೆಗೆ ಇಷ್ಟು ದೊಡ್ಡ ಪ್ರಮಾಣದ ಮೇಲೆ ಒಕ್ಕಲತನದ ಪ್ರದರ್ಶನವು ಕೂಡಿರಲಿಲ್ಲ. ರೈತರ ಸಾಂಪತ್ತಿಕ ಸ್ಥಿತಿಯನ್ನು ಸುಧಾರಿಸಬೇಕೆಂಬುದೇ ಈ ಪ್ರದರ್ಶನದ ಗುರಿಯು. ಅವರಿಗೆ ಒಕ್ಕಲತನದ ಸುಧಾರಣೆಯ ಬಗ್ಗೆ ಕಬ್ಬು, ಹತ್ತಿ ಗೋದಿ, ಜೋಳ ಮುಂತಾದ ಬೆಳೆಗಳ ಬಿತ್ತಿಗೆಯಿಂದ ವಿಕ್ರಿಯದ ವರೆಗೆ ಯಾವತ್ತು ಕ್ರಮಗಳ ಆಧುನಿಕ ಶಾಸ್ತ್ರೀಯ ಜ್ಞಾನವಾಗಬೇಕು. ಮತ್ತು ಅವುಗಳ ಪ್ರಯೋಗಗಳನ್ನು ನೋಡಲು ಸಿಗಬೇಕು. ಎಂಬುದೇ ಈ ಪ್ರದರ್ಶನದ ಮುಖ್ಯ ಉದ್ದೇಶವು.

### ಉತ್ತಮ ಜಾತಿಯ ದನಗಳ ಪ್ರದರ್ಶನವು.

ಈ ಪ್ರದರ್ಶನದಲ್ಲಿ ಅಮೃತಮಹಾಲ, ಖಿಲಾರಿ ಮತ್ತು ಹೊಳೆಸಾಲ ಜಾತಿಯ ಉತ್ತಮ ದನಗಳು ನೋಡಲಿಕ್ಕೆ ಸಿಗುವವು. ಈ ವಿಭಾಗದಲ್ಲಿ ಎತ್ತು, ಎಮ್ಮೆ, ಆಡು, ಕುರಿ, ಮತ್ತು ಕೋಳಿಗಳ ಸಮಾವೇಶವಾಗುತ್ತದೆ. ಬೀಜದ ಹೋರಿಗಳು, ಆಕಳುಗಳು, ಹಿಂಡುವ ದನಗಳು ಹೂಡುವ ಎತ್ತುಗಳ ಜೋಡಿ ಮೊದಲಾದ ಪ್ರೇಕ್ಷಣೀಯ ದನಗಳು ಇರುವವು. ಅತ್ಯುತ್ತಮ ದನಗಳನ್ನು ಇಟ್ಟ ರೈತರಿಗೆ ರೋಖು ಇನಾಮುಗಳನ್ನು ಅಥವಾ ಪದಕಗಳನ್ನು ಕೊಡುವದರಲ್ಲಿ ಬರುವದು.

### ಹೊಲಗಳಲ್ಲಿ ಬೆಳೆಯುವ ಧಾನ್ಯ ಮತ್ತು ಪಧಾರ್ಥಗಳು.

ಈ ಮೇಲಾಟದಲ್ಲಿ ಒಕ್ಕಲಿಗರು ತಮ್ಮ ಹೊಲಗಳಲ್ಲಿ ಬೆಳೆಯತಕ್ಕ ಯಾವತ್ತು ತರದ ಧಾನ್ಯ ಹಾಗೂ ಇತರ ಪ್ರದರ್ಶನೀಯ ವಸ್ತುಗಳ ನಮೂನೆಗಳನ್ನು ತಂದಿಟ್ಟು ವೈಯಕ್ತಿಕ ಹಾಗೂ ಸಂಘದ ರೀತಿಗಳಿಂದ ಪಾರಿತೋಷಕಗಳನ್ನು ಪಡೆಯಲು ಪ್ರಯತ್ನಿಸುತ್ತಿರುವರು. ಕರ್ನಾಟಕದಲ್ಲಿ ಬೇರೆ ಬೇರೆ ಭಾಗಗಳಿಂದ ಸುಮಾರು ಎರಡು ಸಾವಿರ ಬೆಳೆಗಳ ನಮೂನೆಗಳು ಬಂದಿದ್ದು ಅವನ್ನು ವ್ಯವಸ್ಥಿತವಾಗಿ ಪ್ರದರ್ಶಿಸಲ್ಪಡುವವು. ಗೋದಿಯ ಹಾಗು ಹತ್ತಿಯ ಅನೇಕ ನಮೂನೆಗಳೂ, ಭತ್ತದ ಸುಧಾರಿಸಿದ ನಮೂನೆಗಳೂ ಭೈಮೂಗ, ತಂಬಾಕ, ಬೆಲ್ಲ, ಸಕ್ಕರೆ ಕಬ್ಬು, ಕಾಯಿಪಲ್ಲೆ ಹಣ್ಣುಹಂಪಲ ಮೊದಲಾದವುಗಳ ಅನೇಕ ನಮೂನೆಗಳೂ ಪ್ರೇಕ್ಷಣೀಯವಾಗಿರುವವು. ಈ ವಿಭಾಗವು ಅತ್ಯಂತ ಮಹತ್ವದ್ದು ಹಾಗೂ ಉಪಯುಕ್ತವಿದ್ದು ಅಲ್ಲಿ ಪ್ರದರ್ಶಿಸಲ್ಪಟ್ಟ ನಮೂನೆಗಳ ಮೇರೆಗೆ ಬೆಳೆಗಳನ್ನು ತೆಗೆಯಬೇಕೆಂದು ರೈತರು ನಿರ್ಧರಿಸಿದರೆ ಕರ್ನಾಟಕವು ಧನಧಾನ್ಯ ಸಮೃದ್ಧಿಯಾಗುವದೆಂಬದರಲ್ಲಿ ಸಂದೇಹವಿಲ್ಲ. ಆದುದರಿಂದ ರೈತಬಾಂಧವರು ಈ ಪ್ರದರ್ಶನದಲ್ಲಿ ಮನಸ್ಸುಹಾಕಿದರೆ ಅವರಿಗೆ ತಮ್ಮ ಹೊಲಗಳಿಂದ ಹೆಚ್ಚು ಲಾಭಪಡೆಯುಲು ಸ್ಫೂರ್ತಿಯುಂಟಾಗುವದು.

### ಖಾದಿ ಗ್ರಾಮೋದ್ಯೋಗ ವಿಭಾಗ.

ಈ ವಿಭಾಗದಲ್ಲಿ ತರತರದ ಖಾದಿ ಮತ್ತು ಗ್ರಾಮೋದ್ಯೋಗದ ಸಾಮಾನುಗಳು ಇಡಲ್ಪಡುವವು. ಕಾಗದದ ಮೇಲೆ ಉಗುರಿನಿಂದ ಕೊರೆದ ಚಿತ್ರಗಳು, ಖಾದಿಯ ಮೇಲೆ ಬೆಂಗಳೂರಿನ ರೇಶಿಮೆಯಿಂದ ತಯಾರಿಸಿದ ಕಸೂತಿ ಕೆಲಸ, ಕಾಗದದಮೇಲೆ ಕೈಯಿಂದ ತೆಗೆದ ಚಿತ್ರ, ಫೋಟೋ ಮೊದಲಾದವುಗಳು, ಜಾಳಿಗೆಯ ಕೆಲಸ, ಕಾಗದ, ಖಾದಿ, ಬೆಂಡು ಮೊದಲಾದವುಗಳಿಂದ ತಯಾರಿಸಿದ ತರತರದ ಹೂವುಗಳು ಹೊರ್ತಾಗಿ ಕಟ್ಟಿಗೆಯ ಕೆತ್ತಿಗೆಯ ಕೆಲಸಗಳು, ಮಣ್ಣು, ಕಬ್ಬಿಣ ಮೊದಲಾದವುಗಳಿಂದ ತಯಾರಿಸಿದ ನಕ್ಷಿಯ ಸಾಮಾನುಗಳು ಮೊದಲಾದವುಗಳನ್ನು ಪ್ರದರ್ಶನದಲ್ಲಿ ಇಡುವದರಲ್ಲಿ ಬರುವದು.

### ಪ್ರದರ್ಶನಕ್ಕೆ ಮುಂದಾಳುಗಳ ಆಗಮನ.

ಈ ಪ್ರದರ್ಶನಕ್ಕೆ ಮುಂಬೈ ಸರಕಾರದ ಒಕ್ಕಲತನ ಖಾತೆಯ ಕಾಂಗ್ರೆಸ್ ಮಂತ್ರಿಗಳಾದ ನಾ. ಮುರಾರಜಿ ದೇಸಾಯಿ, ಕೊಲ್ಹಾಪುರದ ಮಹಾರಾಜರು, ಶ್ರೀಮಂತ ಮಿರಜಕರ, ಬುಧಗಾವಕರ ಮತ್ತು ಇತರ ಸಂಸ್ಥಾನಿಕರು ಬರತಕ್ಕವರಿದ್ದಾರೆ. ಕಾಂಗ್ರೆಸ್‌ದ ಪ್ರಸಿದ್ಧ ಮುಂದಾಳುಗಳೂ ಈ ಪ್ರದರ್ಶನಕ್ಕೆ ಆಗಮಿಸುವರು. ಈ ಪ್ರದರ್ಶನವನ್ನು ಯಶಸ್ವಿಯನ್ನಾಗಿ ಮಾಡಲು ಸರಕಾರಿ ಅಧಿಕಾರಸ್ಥರೂ, ಕಾಂಗ್ರೆಸ್ ಮುಂದಾಳುಗಳೂ ಕೂಡಿ ಒಳ್ಳೇ ಸಹಕಾರದಿಂದ ಪ್ರಯತ್ನಪಡುತ್ತಿದ್ದಾರೆ. ಆದ್ದರಿಂದ ಒಕ್ಕಲಿಗರು ಈ ಸುಸಂಧಿಯ ಲಾಭವನ್ನು ಪಡೆದು, ಪ್ರದರ್ಶನಕ್ಕೆ ಭೆಟ್ಟಿಯನ್ನು ಕೊಟ್ಟು, ಧನ್ಯರಾಗಬೇಕೆಂದು ಪ್ರದರ್ಶನ ಕಮಿಟಿಯ ಬಿನ್ನಹವಿದೆ.

## ಶ್ರೀ ಶಿವಯೋಗೀಶ್ವರ ಧರ್ಮಾರ್ಥ ಸಂಸ್ಕೃತ ಪಾಠಶಾಲಾ

—ಶ್ರೀ—

ಸ್ಥಾಪನ ಶ್ರೀ ಕ್ಷೇತ್ರ ಬಾಲಕುಂದ ಕಲ್ಯಾಣ ನೈಜಾಮ ಸ್ಟೇಟ

ಇದೇ ಮಾರ್ಗಶಿರ ಶು|| ೧೫ ಶುಭ ದಿವಸದಲ್ಲಿ ಮೇಲ್ಕಂಡ ಪವಿತ್ರ ನಾಮಕ ಧರ್ಮಾರ್ಥ ಸಂಸ್ಕೃತ ಪಾಠಶಾಲೆಯೊಂದನ್ನು ಸ್ಥಾಪಿಸಿದ್ದಲ್ಲದೆ ಮಹಾ ಗಣಾರಾಧನೆಯೊಂದನ್ನು ನಡೆಯಿಸಿ ೫ ಸಾವಿರ ಜಂಗಮರ ಸಂತೃಪ್ತಿಯನ್ನು ಮಾಡಿಸಿದರು. ಮತ್ತು ಈ ಪಾಠಶಾಲಾನುವರ್ತಿಯಾಗಿ "ಜಗದಾರಾಧ್ಯ ಚೈತನ್ಯ ವಿಲಾಸ ಲೈಬ್ರರಿ, ಶ್ರೀ ಶಿವಯೋಗೀಶ್ವರ ಭಜನಾ ಸಂಘ, ಶ್ರೀ ಶರಣ ಬಸವರಾಜ ಫ್ರೀ ಬೋರ್ಡಿಂಗ್ ಇವೇ ಮೊದಲಾದವುಗಳನ್ನು ಸ್ಥಾಪಿಸಿದರು. ಈ ಮಂಗಲ ಕಾರ್ಯಕ್ಕೆ ಶೀಲವಂತರ ಅಂಬಲಿಗಿ ಸ್ಥಿರ ಪಟ್ಟಾಧ್ಯಕ್ಷ ಶ್ರೀ ಚೆನ್ನಬಸವ ಮಹಾಸ್ವಾಮಿಗಳು ಮುಚಳಂಬಿ ಪಂಚಾಚಾರ್ಯ ಭಜನಾಸಂಘದವರು ಆಗಮಿಸಿದ್ದರು. ಅಲ್ಲದೆ ಈ ಮಹಾಕಾರ್ಯದಲ್ಲಿ ಬಾಲ್ಕುಂದ ಕ್ಷೇತ್ರ ನಿವಾಸಿಗಳಾದ ವೇ|| ರಾಚಯ್ಯ ಸ್ವಾಮಿ, ವೇ|| ಶಿವಲಿಂಗಯ್ಯ ಸ್ವಾಮಿ ವೇ|| ನಾಗಯ್ಯ ಸ್ವಾಮಿ, ಮಾಣಿಕರಾವ್ ವಕೀಲರು, ಭೋಜನಗೌಡ ಪೋ|| ಪಾಟೀಲ, ಮಾಣಿಕರಾವ್ ಮಾಲೀಪಾಟೀಲ, ಚನ್ನಯ್ಯ ಶಾಸ್ತ್ರಿ ಪೂಜಾರಿ ಇವರೇ ಮೊದಲಾದ ಪ್ರಮುಖರು ಭಾಗವಹಿಸಿದ್ದರಲ್ಲದೆ ಬೇಲೂರು, ಖಂಡಾಳ, ಗೌರ, ಶಿರ್ಶಿ, ಯದಲಾಪುರ, ನಾರಾಯಣಪುರ ಮೊದಲಾದ ಗ್ರಾಮಗಳ ಪ್ರಮುಖ ಮಹಾ ಜನರು ಆಗಮಿಸಿದ್ದರು. ಪ್ರಾತಃಕಾಲ ೬ ಘಂಟೆಯಿಂದ ೧೦ ಘಂಟೆ ಪರ್ಯಂತರ ನಂದೀಶ್ವರನಿಗೆ ಮಹಾರುದ್ರಾಭಿಷೇಕ ನಂತರ ಮಹಾಸ್ವಾಮಿ ಪಾದ ಪೂಜೆ ಪ್ರಸಾದಸೇವನೆಗಳು, ನಡೆದು ಸಾಯಂಕಾಲ ೪ ಗಂಟೆಗೆ ಸಭೆಯು ಪ್ರಾರಂಭವಾಯಿತು.

ಪ್ರಥಮ ಮುಚಳಂಬಿ ಭಜನಾ ಸಂಘದವರು ಸುಶ್ರಾವ್ಯ ಪೂರ್ವಕ ಜಗದಾರಾಧ್ಯರ ಭಜನಾಮಾಡಿದನಂತರ ಚನ್ನಯ್ಯ ಶಾಸ್ತ್ರಿಗಳು ಪ್ರಸ್ತಾವನಾ ಭಾಷಣವನ್ನು ಮಾಡಿದರು. ಆ ಮೇಲೆ ಪಾಠಶಾಲಾಧ್ಯಕ್ಷರಾದ ಪಂ. ಶ್ರೀ ಶಿವಯೋಗಿ ಶಿವಾಚಾರ್ಯ ಮಹಾಸ್ವಾಮಿಗಳು ತಮ್ಮ ಗಂಭೀರ ವಾಣಿಯಿಂದ ವೀರಶೈವ ಧರ್ಮೋದ್ಧಾರದಲ್ಲಿ "ತರುಣರ ಕರ್ತವ್ಯ" ಎಂಬ ವಿಷಯದಮೇಲೆ ೨ ಘಂಟೆ ಪರ್ಯಂತರ ಭಾಷಣಮಾಡಿದರು. ನಂತರ ಅಂಬಲಗಿ ಪಟ್ಟಾಧ್ಯಕ್ಷರು ಈ ವಿದ್ಯಾ ಸಂಸ್ಥೆಗೆ ಪ್ರತಿವರುಷ ೫೧ ರೂ. ಗಳನ್ನು ಕೊಡುತ್ತೇವೆಂದು ವಾಗ್ದಾನಮಾಡಿದರು. ಮತ್ತು ಸದರಿ ಗ್ರಾಮದ ವೇ|| ಶಿವಲಿಂಗಯ್ಯನವರು ೧೦೧ ರೂ. ಗಳನ್ನು ಕೊಡುವುದಾಗಿ ವಾಗ್ದಾನಮಾಡಿರುವರು. ಆ ಮೇಲೆ ವಿಶ್ವಪ್ರೇಮಿ ಬಸವೇಶ್ವರ ಜಯಘೋಷದೊಡನೆ ಸಭೆಯು ಬರಖಾಸ್ತಾಯಿತು.

ಅಲ್ಲದೆ ಈ ಪಾಠಶಾಲಾದಲ್ಲಿ ಸಂಸ್ಕೃತ, ಕನ್ನಡ, ಜ್ಯೋತಿಷ್ಯ ವೈದಿಕ ಸಂಗೀತ ಈ ೫ ಪಾಠಗಳು ನಡೆಯುತ್ತವೆ. ಪ್ರಯುಕ್ತ ೧೨ ವರ್ಷಕ್ಕಿಂತ ಹೆಚ್ಚು ವಯಸ್ಸುಳ್ಳ ವಿದ್ಯಾರ್ಥಿಗಳು ೧ ತಿಂಗಳೊಳಗಾಗಿ ಬಂದು ಸೇರಬೇಕು. ಈ ಪಾಠಶಾಲೆಯಲ್ಲಿ ಅನ್ಯ ಮತೀಯರು ಕೂಡಾ ವಿದ್ಯಾಭ್ಯಾಸಮಾಡಬಹುದು. ಮತಭೇದವಿರುವದಿಲ್ಲ. ಈಗಾಗಲೇ ೧೦-೧೨ ಜನ ವಿದ್ಯಾರ್ಥಿಗಳು ಕೂಡಿರುತ್ತಾರೆ. ಇದರೊಳಗೆ ಬ್ರಾಹ್ಮಣರು ಅಕ್ಕಸಾಲಿಗ ಮೊದಲಾದ ಎಲ್ಲಾ ಮತೀಯರು ಇರುತ್ತಾರೆ. ಪ್ರಯುಕ್ತ ವಿದ್ಯಾಭಿಮಾನಿಗಳಾದ ಕರ್ನಾಟಕದ ಮಹಾಜನಗಳು ಇತ್ತಕಡೆಗೆ ದಯಾದೃಷ್ಟಿಯಿಂದವಲೋಕಿಸಿ ಸಹಾಯ ಪ್ರೋತ್ಸಾಹಗಳನ್ನು ಮಾಡಬೇಕಾಗಿ ಪ್ರಾರ್ಥಿಸುತ್ತೇವೆ.

ಶ್ರೀ ಶಿವಯೋಗೀಶ್ವರ ಶಾಲಾ ಸೆಕ್ರೆಟರಿ
ಕೆ. ಎಂ. ಗುರುಬಸಯ್ಯನವರು.

## ಕೋಟಿ ವಿದ್ಯ ಮೇಟಿಯ ಕೆಳಗೆ.

ಪ್ರಪಂಚದಲ್ಲಿ ಯಾವ ಉದ್ಯೋಗವನ್ನು ಕೈಕೊಂಡರೂ ಮಳೆ ಬೆಳೆಗಳು ಸಮೃದ್ಧಿಯಾಗಿ ಒಕ್ಕಲಿಗನು ಸಂಪತ್ತಿನಲ್ಲಿದ್ದರೆ ಜಗತ್ತೇ ಸುಖದಿಂದಿರುವದು. ಆ ಒಕ್ಕಲತನಕ್ಕೆ ಆಧಾರ ಸ್ತಂಭವೆಂದರೆ ಆಕಳು. ಪ್ರತಿಯೊಬ್ಬ ಒಕ್ಕಲಿಗನು ತನ್ನ ಯೋಗ್ಯತೆಗನುಸಾರವಾಗಿ ಆಕಳನ್ನು ಸಾಕಬೇಕು. ನಾವು ಎಷ್ಟು ಮಾಡಿದರೂ ಗೋಮಾತೆಯ ಉಪಕಾರ ತೀರದು. ನಮಗೆ ಹಾಲು, ಮೊಸರು ತುಪ್ಪಗಳನ್ನು ಕೊಡುವದು. ಮತ್ತೂ ಭೂಮಿ ಸಾಗುವಳಿಯನ್ನು ಮಾಡುವ ಹೋರಿಗಳನ್ನು ಕೊಡುವದು. ಇದರ ಮೇಲೆ ನಮ್ಮ ಒಕ್ಕಲತನವೇ ಗೋಮಾತೆಯಿಂದ ನಡೆದಂತಲ್ಲವೆ ?

ಇದಕ್ಕಾಗಿಯೇ ನಮ್ಮ ಪೂರ್ವಜರು "ಆಕಳ ಹೊಟ್ಟೆಯಲ್ಲಿ ಅಚ್ಚೇರ ಬಂಗಾರ" ಉಂಟೆಂದು ಅಂದಿರುವರು. ಈ ಮಾತು ಸಣ್ಣ ದೊಡ್ಡವರಿಗೂ ಸಹ ತಿಳಿದಿರಲಿಕ್ಕಾಗಿ ನಮ್ಮ ಪ್ರಪಂಚವನ್ನೇ ಸಾಗಿಸುವ ಗೋವನ್ನು ಕಟುಕರಿಗೆ ಕೊಡುವವರೇ ಕಟುಕರಲ್ಲವೆ ? ಮೃತಪಟ್ಟ ಮೇಲೆ ಸಹ ತನ್ನ ಚರ್ಮವನ್ನು ಪಾದರಕ್ಷೆ ಒಕ್ಕಲತನದ ಸಾಮಾನುಗಳಿಗಾಗಿಯೂ ಅಸ್ಥಿಯು ನಮ್ಮ ಬೆಳೆಗಳನ್ನು ಕಾಯುವ ಬೆಚ್ಚವಾಗಿಯೂ ನಮ್ಮ ಪ್ರಪಂಚವನ್ನು ಕಾಪಾಡುವ ಗೋವನ್ನು ಕಟುಕರಿಗೆ ಕೊಡುವ ಮೂರ್ಖರೇ ಚಾಂಡಾಲರಲ್ಲವೆ ? ಪ್ರಪಂಚವೇ ಗೋವಿನಿಂದ ಸಾಗುವದೆಂದೇ ಕಾಮಧೇನುವೆಂದು ಅಂದಿರುವರಲ್ಲವೆ ? ರೋಗಿಗೂ ಭೋಗಿಗೂ ಯೋಗಿಗೂ ಕೂಡಾ ಗೋವಿನ ಹೈನದುಪಯೋಗವುಂಟಲ್ಲದೆ ದೇವತಾರ್ಚನಕ್ಕೆ ಶ್ರೇಷ್ಠವೆಂದೆನಿಸಿದ ಅಭಿಷೇಕವು ಗೋವಿನದಲ್ಲವೆ ? ಅದರ ಶಗಣಿಯೂ ಕೂಡಾ ಭಸ್ಮವಾಗಿ, ಭಸ್ಮ ಧೂಳನದಿಂದ ಜನ್ಮ ಪಾವನವೆಂದು ಅನ್ನುವದಿಲ್ಲವೆ? ಈ ರೀತಿಯಿಂದ ಜೀವದಿಂದಿದ್ದರೂ ಮೃತಪಟ್ಟರೂ ನಮಗೆ ಉಪಯೋಗಕ್ಕೆ ಬೀಳುವ ಗೋಮಾತೆಯ ಉಪಕಾರವು ಮನುಷ್ಯನಿಗೆ ತಾಯಿಯ ಉಪಕಾರಕ್ಕಿಂತಲೂ ಮೇಲಾದದ್ದೆಂದು ತಿಳಿದು ಪ್ರತಿಯೊಬ್ಬರು ಆಕಳ ಸಂರಕ್ಷಣೆಯನ್ನು ಮಾಡಬೇಕು.

ಶರಣಪ್ಪ ಬಸಪ್ಪ ಸೊನ್ನದ
ಹಂಚಲಿ.

## ವೀರಶೈವ ಮಹಿಳಾ ಸಭಾ.

**ಹಾ. ಅ. ಮಠ (ಗದಗ.)**

ಗದಗ ಶಹಾಪೂರ ಪೇಟೆಯಲ್ಲಿರುವ ಹಾಲಕೆರೆ ಶ್ರೀ ಗುರು ಅನ್ನದಾನೀಶ್ವರ ಸ್ವಾಮಿ ಮಠದಲ್ಲಿ ತಾ. ೯-೧-೩೪ ನೆಯ ರವಿವಾರ ವೀ. ಮ. ಸಭೆ ಕೂಡಿತ್ತು. ಈ ಸಭೆಗೆ ಬಹಳ ಮಂದಿ ನೆರೆದಿದ್ದರು. ಈ ಸಭೆಯ ಪ್ರಮುಖರಾದ ಶ್ರೀಮತಿ ಪಾರವ್ವಾ ಕಿಣಿಗಿ ಬಾಗಲಕೋಟೆ ಇವರು ಅಧ್ಯಕ್ಷತೆಯನ್ನು ವಹಿಸಿದ್ದರು.

ಈ ಸಭೆಗೆ ಆಗಮಿಸಿದ್ದ ಕರ್ನಾಟಕ ಬಂಧು ಗೌರವ್ವಾ ಹಿರೇಮಠ ಇವರು 'ಹೆಣ್ಣುಮಕ್ಕಳ ಕರ್ತವ್ಯ' ಎಂಬ ವಿಷಯದ ಮೇಲೆ ರಸಪೂರಿತವಾಗಿ ಭಾಷಣಮಾಡಿದರು. ಅದರ ಸ್ವಲ್ಪ ಸ್ವಾರಸ್ಯವನ್ನು ಇದರಡಿ ಕೊಡಲಾಗಿದೆ.—

ಹೆಣ್ಣುಮಕ್ಕಳೆಂದರೆ ಯಂತ್ರದ ಸಾಮುಗ್ರಿಗಳು. ಯಾವ ರೀತಿಯಾಗಿ ಡ್ರೈವ್ಹರನು ಯಂತ್ರದ ಸಾಮುಗ್ರಿಗಳನ್ನು ಸರಿಯಾಗಿ ಜೋಡಿಸಿ ತಿರುಗಿಸಲು ಪ್ರಾರಂಭಮಾಡಿದರೆ ಅದು ಇನ್ನು ಡ್ರೈವ್ಹರನು ನಿಲ್ಲಿಸುವವರೆಗೂ ಒಂದೇ ಸಮನಾಗಿ ತಿರುಗುತ್ತಾ ಇರುತ್ತದಯೋ ಅದೇ ರೀತಿಯಾಗಿ ಸಂಸಾರವೆಂಬ ಯಂತ್ರದಲ್ಲಿ ಸಾಮುಗ್ರಿಗಳೆಂಬ ಹೆಣ್ಣುಮಕ್ಕಳು ಹುಟ್ಟಿದಂದಿನಿಂದ ಸಾಯುವವರೆಗೂ ಕೆಲಸದಲ್ಲಿ ತಿರುಗುತ್ತಲಿಪ್ಪಾರೆ. ತಮ್ಮ ಜೀವನದಲ್ಲಿ ಎರಡು ಯಾತ್ರೆಗಳನ್ನು ಅನುಭವಿಸಬೇಕಾಗಿದೆ. ಒಂದು ಅಮ್ಮನ ಮನೆಯ ಯಾತ್ರೆ, ಇನ್ನೊಂದು ಅತ್ತೆಯ ಮನೆಯ ಯಾತ್ರೆ. ಆದುದರಿಂದ ಹೆಣ್ಣುಮಕ್ಕಳಿಗೆ ಬಿಡುವು ಸಿಕ್ಕುವುದಿಲ್ಲ. ಬಿಡುವು ಸಿಕ್ಕಿದರೂ ಸ್ವಾತಂತ್ರ್ಯ ಸಿಕ್ಕುವುದಿಲ್ಲ. ಸ್ವಾತಂತ್ರ್ಯ ಸಿಕ್ಕಿದರೂ ಕೂಡ ವಿರಾಮ ಕಾಲವನ್ನು ಉಪಯೋಗವಿಲ್ಲದಂತಹ ಕಸೂತಿ ತಾಟು ಇತ್ಯಾದಿ ಸಾಮಾನುಗಳನ್ನು ಹೆಣೆಯುವದಕ್ಕೆ ಉಪಯೋಗಿಸುತ್ತಾರೆ. ಇದು ಹೆಣ್ಣುಮಕ್ಕಳ ಲಾಭ ಜೀವನದ ಕರ್ತವ್ಯವಲ್ಲ. ನಮಗೆ ಅತ್ಯಾವಶ್ಯಕವಾಗಿ ಬೇಕಾಗುವ ದಾರ, ಅರಿವೆ, ಟೊಪ್ಪಿಗೆ, ಅಂಗಿ ಇನ್ನೂ ಗೃಹಕೃತ್ಯ ಸಾಮಾನುಗಳನ್ನು ನಮ್ಮ ಸ್ವಂತ ಕೈಯಿಂದಲೇ ಹೆಣೆದು ನಮ್ಮ ದುಡ್ಡು ನಮ್ಮಲ್ಲಿಯೇ ಉಳಿಯುವ ಹಾಗೆ ಪ್ರಯತ್ನ ಮಾಡಬೇಕು.

ಇರಾಣಿ ಸ್ತ್ರೀಯರಂತೆ ಸ್ವಾರ್ಥ-ತ್ಯಾಗಿಗಳೂ ದೇಶಪ್ರೇಮಿಗಳೂ ಅನಾಥರ ಮೇಲೆ ದಯೆಯುಳ್ಳವರೂ ಆಗಬೇಕ. ಇಂಗ್ಲಿಷರು ಈಗ ನಮ್ಮ ಭಾರತಮಾತೆಯನ್ನು ಬಂಧನದಲ್ಲಿಟ್ಟಿದ್ದಾರೆ. ಆ ಬಂಧನವನ್ನು ಪರಿಹರಿಸಲು ಕಾಂಗ್ರೆಸ್ಸಿನವರು ಶಕ್ತಿಪೂರ್ವಕ ಪ್ರಯತ್ನಮಾಡುತ್ತಲಿರುತ್ತಾರೆ. ಅದಕ್ಕಾಗಿ ಹೆಣ್ಣುಮಕ್ಕಳಾದ ನಾವು ಶಕ್ತಿ ಇದ್ದಷ್ಟು ಬೆಂಬಲಕೊಡಬೇಕೆಂದು ಇನ್ನೂ ಕೆಲವು ವಿಷಯಗಳನ್ನು ಹೇಳಿ ಮುಕ್ತಾಯಮಾಡಿದರು.

ಆ ಮೇಲೆ ಶ್ರೀಮತಿ ಬಕ್ಕಾನಳ್ಳಿ ಪಾರ್ವತವ್ವ ಇವರು "ವೀರಶೈವ ದೀಕ್ಷಾ" ಎಂಬ ವಿಷಯದಮೇಲೆ ಎಲ್ಲರಿಗೂ ಮನನವಾಗುವಂತೆ ಹೇಳಿದರು. ಇದರ ತಾತ್ಪರ್ಯ ವಿಷಯಗಳನ್ನು ಸ್ವಲ್ಪ ಕೊಡಲಾಗಿದೆ. ಮೊದಲನೆಯದಾಗಿ ದೀಕ್ಷೆಯೆಂದರೆ ಗುರು ಶಿಷ್ಯನಲ್ಲಿರುವ ತಾನು ಮನುಷ್ಯ ಎಂಬ ಭಾವಕ್ಕೆ ಸಂಬಂಧಪಟ್ಟ ಆಣವಮಲ ಮಾಯಾಮಲ ಕಾರ್ಮಿಕಮಲ ಇವುಗಳನ್ನು ದೂರಮಾಡಿ ತಾನು ಶಿವ ಎಂಬ ಜ್ಞಾನವನ್ನು ಕೂಡಿಸಿ ಶಿವಾನುಭವಕ್ಕೆ ಅಣಿಮಾಡಿಸುವುದೇ ದೀಕ್ಷೆಯು" ವ.ತ್ತು "ದೀಯತೇ ಚ ಶಿವಜ್ಞಾನಂ ಕ್ಷೀಯತೇ ಪಾಶಬಂಧನಂ| ಯಸ್ಮಾದತಃ ಸಮಾಖ್ಯಾತಾ ದೀಕ್ಷೇತೀಯಂ ವಿಚಕ್ಷಣೈಃ ||" ಅಂದರೆ ಶಿವಜ್ಞಾನವನ್ನು ಕೊಟ್ಟು ಮಾಯಾರೂಪವಾದ ಪಾಶಬಂಧನವನ್ನು ಛೇದಿಸುವದೇ ದೀಕ್ಷೆಯು.

ಈ ದೀಕ್ಷಾ ಸಂಸ್ಕಾರವು ವೀರಶೈವರ ಷೋಡಶ ಸಂಸ್ಕಾರಗಳಲ್ಲಿ ಅತಿ ಶ್ರೇಷ್ಠವಾದದ್ದು. ಗೃಹಸ್ಥಾಶ್ರಮಿಗಳಿಗೆ ಅತಿ ಮುಖ್ಯವಾದುದಾಗಿದೆ. ಗೃಹಸ್ಥಾಶ್ರಮದಲ್ಲಿಯೂ ಕೂಡ ಕೇವಲ ಪುರುಷರಿಗೂ ಅಲ್ಲದೆ ಸ್ತ್ರೀಯರಿಗೂ ಕೂಡ ಅತ್ಯವಶ್ಯಕವಾಗಿಬೇಕು ಯಾಕೆಂದರೆ ಸ್ತ್ರೀಯರು ಪುರುಷರ ಅರ್ಧಾಂಗಿನಿಯರು. ಅರ್ಧ ಶರೀರ ಯೆನಿಸಿಕೊಂಡ ಪುರುಷರಿಗೆ ದೀಕ್ಷೆಕೊಟ್ಟು ಇನ್ನುಳಿದ ಅರ್ಧ ಶರೀರವಾದ ಸ್ತ್ರೀಯರಿಗೆ ದೀಕ್ಷೆಕೊಡದಿದ್ದರೆ ಒಂಟಿ ಕಾಲಿನಿಂದ ತನ್ನ ಸ್ಥಾನವನ್ನು ಸೇರಬೇಕೆಂಬುವವನ ಪಾಡಾಗುತ್ತದೆ. ಆದುದರಿಂದ ಸ್ತ್ರೀಯರಿಗೆ ದೀಕ್ಷೆಯು ಅತ್ಯವಶ್ಯಕವಾಗಿ ಬೇಕೇಬೇಕು 'ದೀಕ್ಷೆಯಿಂದಲೇ ಮೋಕ್ಷ' ದೀಕ್ಷೆಯಿಲ್ಲದೆ ಲಿಂಗವನ್ನು ಧರಿಸಿದರೆ ಹೆಣಕ್ಕೆ ಧರಿಸಿದ ಹಾಗೆ ಆಗುತ್ತದೆ. ಆದುದರಿಂದ ದೀಕ್ಷಾಸಂಸ್ಕಾರವನ್ನು ಹೊಂದಿ ಎಲ್ಲರೂ ಮೋಕ್ಷದಾರಿಯಲ್ಲಿರುವ ಶಿವಕೈಲಾಸವನ್ನು ಪ್ರವೇಶಿಸಿ ಸುಖಶಾಂತಿಗಳುಳ್ಳವರಾಗಬೇಕೆಂದು ಇನ್ನೂ ಇತ್ಯಾದಿ ವಿಷಯಗಳನ್ನು ಎಲ್ಲರಿಗೂ ಮನನವಾಗುವಂತೆ ಹೇಳಿ ಮುಗಿಸಿದರು.

ಅಧ್ಯಕ್ಷರು ಭಾಷಣಮಾಡಿದವರಿಗೆ ವಿನಯದಿಂದ ಅಭಿವಂದಿಸಿ ತಾವೂ ಕೂಡ ಅವೇ ವಿಷಯಗಳನ್ನು ದೀರ್ಘಮಾಡಿ ಎಲ್ಲರಿಗೂ ಮನರಂಜನವಾಗುವಂತೆ ಸುಲಭ ಶೈಲಿಯಲ್ಲಿ ಭಾಷಣಮಾಡಿದರು. ಆ ಮೇಲೆ ಎಲ್ಲರೂ ನಿಂತುಕೊಂಡು ಶಿವಮಂಗಲವನ್ನು ಪ್ರಾರ್ಥನೆ ಮಾಡಿದನಂತರ ಸಭೆಯು ಮುಕ್ತಾಯವಾಯಿತು.

---

## ತರುಣ ಜನ ವೀರಶೈವ ಸಮಾಜ ತುರುವೇಕೆರೆ.

ಮೇಲ್ಕಂಡ ಸಮಾಜದವರು ತುರುವೇಕೆರೆ ಮುರುಘಾ ಮಠದ ಶ್ರೀಮನ್ನಿರಂಜನ ಶಾಂತದೇವ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ತಾ॥ ೧-೧-೧೯೩೪ ನೇ ಶನಿವಾರ ದಿವಸ ಸಭೆಸೇರಿ ಸಮಾಜದಲ್ಲಿ ಏಕಮತ್ಯವನ್ನೂ ಅಭಿವೃದ್ಧಿಯನ್ನೂ ಉಂಟುಮಾಡುವಂತಹ ಕೆಲವು ನಿಯಮಗಳನ್ನು ನಿರ್ಣಯಿಸಿ ಕ್ರಮವಾಗಿ ಸರ್ವಾನುಮತದಿಂದ ಒಪ್ಪಿ ಠರಾವು ಮಾಡಿರುತ್ತಾರೆ. ಅಲ್ಲದೆ ಕ್ರಮವಾದ ಚುನಾವಣೆಯನ್ನು ಮಾಡಿ ಒಂಬತ್ತು ಜನರ ಒಂದು ಕಮಿಟಿಯನ್ನು ಏರ್ಪಡಿಸಿ ತನ್ಮೂಲಕ ಸಮಾಜದ ಯಾವತ್ತೂ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಡೆಯುವಂತೆ ಏರ್ಪಡಿಸಿರುತ್ತಾರೆ. ಈ ಸಮಾಜದ ಮೊದಲನೆಯ ಕಾರ್ಯಕ್ರಮವಾಗಿ ತಾ. ೩-೧-೧೯೩೪ ನೆಯ ಭಾನುವಾರ ಬೆಳಿಗ್ಗೆ ಒಂದು ಹೊಸದಾಗಿ (Y. M. V. A.) ರೀಡಿಂಗ್ ರೂಮ್ ವಾಚನಾಲಯವನ್ನು ಶ್ರೀ ಶಾಂತದೇವ ಸ್ವಾಮಿಗಳವರ ಅಮೃತ ಹಸ್ತದಿಂದ ಸ್ಥಾಪಿಸಿರುತ್ತಾರೆ. ಈ ಸ್ಥಾಪನಾ ಕಾರ್ಯಕ್ಕೆ ಪುರ ಪ್ರಮುಖರನೇಕರು ಸೇರಿ ಉತ್ತೇಜನಕೊಟ್ಟದ್ದು ಬಹಳ ಸ್ತುತ್ಯಾರ್ಹವಾದ ವಿಷಯವಾಗಿದೆ. ಈ ತರುಣ ಜನ ವೀರಶೈವ ಸಮಾಜವನ್ನು ಇನ್ನು ಮುಂದೆ ಯಶಸ್ವಿಯಾಗಿ ನಡೆಯಿಸಿಕೊಂಡು ಬರಲು ಕಮಿಟಿಯವರಿಗೆ ಭಗವಂತನು ಸರ್ವಶಕ್ತಿ ಮತ್ತು ಚೈತನ್ಯವನ್ನು ದಯಪಾಲಿಸಲೆಂದು ಬೇಡುವ,

**ಓರ್ವ ಉತ್ತೇಜಕ.**

---

—ಇದೇ ತಿಂಗಳು ೩೦ ನೇ ತಾರೀಖಿಗೆ ಶ್ರೀ ಜಗದ್ಗುರು ಶಂಕರಾಚಾರ್ಯ ಡಾ. ಕುರ್ತಕೋಟಿಯವರು ಸಾಂಗಲಿಗೆ ಆಗಮಿಸುವರು.

—ಭಾಯಿ ವಾಂಗೆ ಇವರು ಸೋಲಾಪುರದಲ್ಲಿ ದಿವ್ಯಶಕ್ತಿ ಎಂಬ ದಿನ ಪತ್ರಿಕೆಯನ್ನು ಹೊರಡಿಸುವವರಿದ್ದಾರೆ.

# ಕಮಲಾಪುರದಲ್ಲಿಯ ಶುದ್ಧಿಯು

## ಅನುಕರಣೀಯವಾಗಿಲ್ಲವೆ ?

ಗುಲಬರ್ಗಾ ಜಿಲ್ಲಾ ಕಮಲಾಪುರದಲ್ಲಿ ಶುಕ್ರವಾರ ತಾ. ೩೧-೧೨-೩೭ ನೆಯ ದಿವಸ ಹಿಂದಕ್ಕೆ ಎಷ್ಟೋ ಕಾಲದಿಂದ ಲಿಂಗಧಾರಿಗಳಾಗಿದ್ದ ಮಡಿವಾಳ ವಂಶಜರಾದ ಗುರುಬಸಪ್ಪನವರ ಕುಟುಂಬಕ್ಕೆ ಕಂತಿಮಠದಲ್ಲಿ ಶ್ರೀ ಷಡಾಕ್ಷರಿ ಮಹಾಸ್ವಾಮಿ ಮಹಾಂತಪುರ ಇವರ ಹಸ್ತದಿಂದ ವೀರಶೈವ ಧರ್ಮಪದ್ಧತಿಪ್ರಕಾರ ಶಿವದೀಕ್ಷಾ ಸಮಾರಂಭಮಾಡಲ್ಪಟ್ಟಿತು. ಈ ಸಮಾರಂಭಕ್ಕೆ ಇಲ್ಲಿಯ ಸ್ಥಳಿಕ ಯಾವತ್ತು ಸಕಲ ವೀರಶೈವ ಬಾಂಧವರು ಗುಲಬರ್ಗಾ ತರುಣಸಂಘದಿಂದ ಬಂದ ಶ್ರೀ. ಶಂಭುಲಿಂಗ ಶಾಸ್ತ್ರಿ ಶ್ರೀ. ಶರಣಕವಿ ಮಹಾಗಾವ ಶ್ರೀ ಶರಣಪ್ಪನವರು ಶ್ರೀ. ಕರಬಸಪ್ಪನವರು ಓಕಳಿಯ ತರುಣ ಸಂಘದಿಂದ ಶ್ರೀ. ಭೀಮರಾವ ಪೋ|| ಪಾಟೀಲ, ಶ್ರೀ ಚೆನ್ನಬಸವ ಸ್ವಾಮಿಗಳು ಮೊದಲಾದವರೆಲ್ಲರೂ ಸಂಪೂರ್ಣ ಒಪ್ಪಿಗೆ ಕೊಟ್ಟು ಬಳಿಕ ಭೋಜನದಲ್ಲಿ ಭಾಗವಹಿಸಿದರು. ಕಾರಣ ಸಕಲ ವೀರಶೈವ ಬಂಧುಗಳು ಇವರೊಡನೆ ಯಾವ ಸಂಕೋಚವಿಲ್ಲದೆ ಬಳಿಕ ಭೋಜನ ಮಾಡಬೇಕೆಂದು ವಿನಂತಿ—

ಈ ಕಾರ್ಯಕ್ಕೆ ಶ್ರೀ ಶಂಕರಶೆಟ್ಟಿ ಪೋಲೀಸ ಪಾಟೀಲ ಇವರು ಬಹು ಶ್ರಮಪಟ್ಟರಲ್ಲದೆ ಶೆಟ್ಟಿಗಾರ ಶ್ರೀ. ಶಿವಲಿಂಗಪ್ಪನವರು ತಪಣರಿಗೆ ಕಾರ್ಯಕ್ಕೆ ಹಿಂಜರಿಸದೆ ಧೈರ್ಯದಿಂದ ಕಾರ್ಯದಲ್ಲಿ ಸಂಪೂರ್ಣ ಯಾವತ್ತು ಜವಾಬ್ದಾರಿಯ ಭರದಲ್ಲಿ ಭಾಗವಹಿಸಿ ನಿರ್ವಿಘ್ನವಾಗಿ ಒಳ್ಳೇ ಯಶಸ್ವಿಯಿಂದ ಕಾರ್ಯ ಜರುಗಿಸಿ ಯಾವತ್ತು ತರುಣರ ಪ್ರೇಮಕ್ಕೆ ಪಾತ್ರರಾದರು. ಈ ಪ್ರಕಾರ ಇವರ ಕಾರ್ಯ ಮತ್ತು ಈ ಶುದ್ಧಿಯು ಅನುಕರಣೀಯವಲ್ಲವೆ ?

ಸೆಕ್ರೆಟರಿ ವಿ. ತ. ಸಂ. ಕಮಲಾಪುರ.
ಎಸ್. ಜಿ. ಬಮ್ಮಣಿ.

## ಕ ಮ ಲಾ ಪು ರ.

ಗುರುವಾರ ತಾ. ೩೦-೧೨-೩೭ ನೆಯ ದಿವಸ ಗುಲಬರ್ಗಾ ಕಾಲೇಜಿನ ವಿದ್ಯಾರ್ಥಿಗಳಾದ ಎಡ್ರಾಮಿ ಶರಣಗೌಡರು ಅಗಮಿಸಿ ಶ್ರೀ. ಸಿದ್ಧಲಿಂಗ ಮಹಾಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ವೀರಶೈವ ಒಳಪಂಗಡಗಳ ನಿವಾರಣೆ ಮುಟ್ಟುತಟ್ಟೆಯಭೂತ ನಿವಾರಣೆ, ಪ್ರತಿಯೊಬ್ಬ ವೀರಶೈವನು ಸುಶಿಕ್ಷಿತನಾಗಬೇಕು. ಮೇಲಃಕೀಳುಗಳ ಕಲ್ಪನೆಯು ಘಾತಕವಾದದ್ದು. ಮುಂತಾದವುಗಳನ್ನು ವಿವರಿಸುತ್ತ ನಾನು ಬಂದದ್ದು ವಿಧರ್ಮಿಗಳು ಮಾಡುತ್ತಿದ್ದ ನಮ್ಮ ವೀರಶೈವರ ಮೇಲಿನ ಅತ್ಯಾಚಾರದ ಆಕ್ರಮಣದ ಸುದ್ದಿಯ ಕೇಳಿ ಇದಕ್ಕೆ ನಮ್ಮ ನಿಮ್ಮ ಹೇಡಿತನವೇ ಸಾಕ್ಷಿ. ಎಲ್ಲರೂ ಒಕ್ಕಟ್ಟಾಗಿರಿ, ಧೈರ್ಯಶಾಲಿಗಳಾಗಿರಿ, ಅತ್ಯಾಚಾರವನ್ನು ತಡೆಯಲು ಪ್ರಾಣವನ್ನರ್ಪಿಸಿರಿ. ದೇಹವು ಜನರ ಸೇವೆಯ ಸಲುವಾಗಿ ಬಂದಿವೆ. ವೀರಶೈವರೇ ಕಣ್ಣು ತೆರೆಯಿರಿ. ನೆರೆ ನೋಡಿ ಮನೆ ಮಾಡಿರಿ ಜಗತ್ತಿನಲ್ಲಿ ಎಲ್ಲರೂ ತಮ್ಮ ತಮ್ಮಲ್ಲಿ ಹೊಂದುತ್ತಿರುವ ಸಂಘಟನೆಯನ್ನಾದರೂ ನೋಡಿ ಇಂಥಾ ದುರ್ಘಟ ಪ್ರಸಂಗದಲ್ಲಿ ಪ್ರತಿಯೊಬ್ಬ ವೀರಶೈವನು ಸಂಘಟಿತನಾಗುವದು ಎಷ್ಟು ಅವಶ್ಯ ಮತ್ತು ಹಿತಕರ ಎಂಬದು ಬೇರೆ ಹೇಳಬೇಕಾಗಿಲ್ಲ. ಎಂದು ಒಳ್ಳೇ ಸ್ಫೂರ್ತಿ ಮತ್ತು ವೀರಾವೇಶದ ಭಾಷಣಮಾಡಿದರು.

ಅಧ್ಯಕ್ಷರು ಒಬ್ಬ ಮಹಾ ಶಿವಶರಣರ ದೃಢ ನಂಬಿಕೆಯ ಸಂಬಂಧದ ಅವರ ಚರಿತ್ರವನ್ನು ಒಳ್ಳೇ ರಸಭರಿತವಾಗಿ ಹೇಳಿದ ನಂತರ ಜಯಘೋಷದೊಡನೆ ಸಭೆಯು ಮುಗಿಸಲಾಯಿತು.

ಸೆಕ್ರೆಟರಿ ವಿ. ತ. ಸ. ಕಮಲಾಪುರ.
ಎಸ್. ಜಿ. ಬಮ್ಮಣಿ.

---

## ದಿನಸಿಯ ಜನರು ಆಚರಿಸಿದ ಅಹಿಂಸಾವ್ರತವು ಆದರ್ಶವಾಗಿಲ್ಲವೆ ?

ಶನಿವಾರ ತಾ. ೨೫-೧೨-೩೭ ನೇ ದಿವಸ ಕಮಲಾಪುರ ಗ್ರಾಮಕ್ಕೆ ಒಳಪಟ್ಟ ಸಮೀಪದಲ್ಲಿರುವ ದಿನಸಿ ಎಂಬ ಹಳ್ಳಿಯಲ್ಲಿ ಸಾರ್ವಜನಿಕ ಚಂದಾ ಹಣದಿಂದ ಪ್ರತಿ ವರ್ಷ ಆಗುತ್ತಿದ್ದ ಕಾರ್ಯ (ಕೋಣ ಮತ್ತು ಕುರಿಗಳನ್ನು ದೇವತೆ ಮುಂದೆ ಸಂಹಾರಮಾಡುವದು) ಕೊಲೆಯ ಕೃತ್ಯ ಆಗುವದೆಂದು ಸುದ್ದಿ ಕೇಳಿದ ಕೂಡಲೆ ಕಮಲಾಪುರದ ತ. ಸಂ. ದವರು ಹಾಗೂ ಆರ್ಯ ಸಮಾಜಿಗಳು ಮತ್ತು ಓಕಳಿಯ ತರುಣ ಸಂಘದವರು ಕೂಡಿ ರಾತ್ರಿ ೯ ಗಂಟೆಗೆ ಹೋಗಿ ಅಲ್ಲಿಯ ಗೌಡರ ಮನೆಯಲ್ಲಿ ಎಲ್ಲ ಜನರನ್ನು ಕರೆಯಿಸಿ ಅಹಿಂಸಾ ವಿಷಯದ ಮೇಲೆ ಭಗವಾನ್ ಬಸವಣ್ಣನವರು ಸಾರಿದ ವಚನಗಳ ಮೂಲಕ ಒಳ್ಳೇ ಪರಿಣಾಮಕಾರಿಯಾದ ಭಾಷಣ ಮತ್ತು ಅವರ ಕುಶಂಕೆಯ ನಿರಸನ ಮಾಡಿದೆವು ಈ ಕೃತ್ಯವು ನಿಲ್ಲದಿದ್ದರೆ ಅನ್ನತ್ಯಾಗಮಾಡಿ ಸತ್ಯಾಗ್ರಹ ಸಹ ಮಾಡಲು ಸಿದ್ಧರೇ ಇದ್ದೇವೆಂದು ನಿಶ್ಚಯಪೂರ್ವಕ ಹೇಳಿದೆವು. ಆಗ ಅಲ್ಲಿಯ ವೀರಶೈವ ಪ್ರಮುಖರಾದ ಶ್ರೀ. ಸಂಗಪ್ಪ ಪೋಲೀಸ ಪಾಟೀಲ, ಶ್ರೀ ಗುರುಪಾದಪ್ಪ ಮಾಲಿಪಾಟೀಲ ಮತ್ತು ಚೆನ್ನಪ್ಪ ಹಿಪ್ಪರಗಿ ಇವರು ಮತ್ತು ಅಲ್ಲಿಯ ಹಿಂದು ಜಾತಿಗೆ ಒಳಪಟ್ಟ ಬಹು ಜನ ರಡ್ಡಿಯವರು ಬೋಧಿಸಿದ ಅಹಿಂಸಾ ತತ್ವಕ್ಕೆ ಮನಸಾಪೂರ್ವಕ ಒಪ್ಪಿ ಹಿಂಸಾಕಾರ್ಯವನ್ನು ನಿಲ್ಲಿಸಲು ಅಭಿವಚನ ಕೊಟ್ಟದ್ದಲ್ಲದೆ ನುಡಿದಂತೆ ನಡೆದು ತೋರಿಸಿದ್ದು ದಿನಸಿಯವರಿಗೆ ಮತ್ತು ಹೇಳಲಿಕ್ಕೆ ಹೋದವರಿಗು ಭೂಷಣವೇ ಸರಿ. ಹೀಗೆ ದಿನಸಿಯವರು ಅನೇಕ ದಿವಸದಿಂದಲು ನಡೆಯುತ್ತ ಬಂದು ಮೈ ಉಂಡು ಹೋಗಿದ್ದು ಒಂದೇ ಒಂದು ಸಾರೆ ಬೋಧಿಸಿದ್ದ ಮಾತ್ರವೇ ನಡೆದು ತೋರಿಸಿದ್ದು ತಿಳಿಸಲು ಆನಂದವೆನಿಸುತ್ತದೆ.

ಇವತ್ತಿನ ವರೆಗೂ ನಮ್ಮ ಹಿಂದುಗಳಿಂದ ಹಿಂಸಾಕಾರ್ಯವು ಆಗುತ್ತಿದ್ದದ್ದಕ್ಕೆ ನಾವು ಅವರಿಗೆ ಅಹಿಂಸಾ ತತ್ವವನ್ನು ತಿಳಿಸದಿದ್ದುದೇ ಕಾರಣ. ಆದ್ದರಿಂದ ಸಮಾಜದೇಳಿಗೆಯ ಸಲುವಾಗಿ ಪ್ರಚಾರಕರ ಆವಶ್ಯಕತೆ ಎಷ್ಟಿದೆ ಎಂಬುದನ್ನಾದರೂ ಅರಿತು ವೀರಶೈವ ಧರ್ಮ ಪ್ರಚಾರಕರಾದ ಜಂಗಮ ಮಹಾಸ್ವಾಮಿಗಳು ಇತ್ತಕಡೆ ಲಕ್ಷ್ಯಕೊಡುವರೆ ? ದಿನಸಿಯ ಜನರು ಅಹಿಂಸಾ ತತ್ವಕ್ಕೆ ಒಪ್ಪಿ ಬರೇ ನುಡಿಯಿಂದಲ್ಲದೆ ನಡೆದು ತೋರಿಸಿದ್ದು ಅಖಿಲ ಹಿಂದುಗಳಿಗೆ ಆದರ್ಶವಾಗಿಲ್ಲವೆ ?

ಸೆಕ್ರೆಟರಿ ವಿ. ತ. ಸ. ಕಮಲಾಪುರ.
ಎಸ್. ಜಿ. ಬಮ್ಮಣಿ.

---

—ಕಳೆದ ೯ ನೆಯ ತಾರೀಖಿನ ದಿವಸ ಚೀನ ದಿನವೆಂದು ಹಿಂದುಸ್ಥಾನದ ಅಸಂಖ್ಯ ಸ್ಥಳಗಳಲ್ಲಿ ಆಚರಿಸಲ್ಪಟ್ಟಿತು. ಜಪಾನಿಗಳ ರಾಕ್ಷಸೀ ಕೃತ್ಯವನ್ನು ನಿಷೇಧಿಸಿ ಚೀನ ರಾಷ್ಟ್ರಕ್ಕೆ ಧನಸಹಾಯಮಾಡಲಾಯಿತು. ಡಾ. ರವೀಂದ್ರನಾಥ ಟಾಗೋರರವರು ಈ ಚೀನ ನಿಧಿಗೆ ೫೦೦ ರೂ. ಗಳನ್ನು ಕೊಟ್ಟಿದ್ದಾರೆ.

## ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿ
### (ಪ್ರಕಟನೆ ನಂ. ೩೯)
## ಕಾರ್ಯಕಾರೀ ಮಂಡಲದ ಸಭೆ.

ಅಧ್ಯಕ್ಷರು— ಶ್ರೀ. ಹೊಸಮನಿ ಸಿದ್ಧಪ್ಪನವರು.

ಹಾಜರಿದ್ದ ಸದಸ್ಯರ ಸಂಖ್ಯೆ— ೮. ಹೋದಸಲದ ಪ್ರಾಂತಿಕ ಕಾಂಗ್ರೆಸ್ ಕ. ಯ ಕಾರ್ಯಕಾರೀ ಮಂಡಲದ ವರದಿಯು ಓದಿ ಸ್ವೀಕೃತವಾದನಂತರ ಕೆಳಗಿನ ವಿಷಯಗಳ ಚರ್ಚೆಯಾಗಿ ನಿರ್ಣಯಗಳಾದವು.

(೧) ಪ್ರಾಂತಿಕ ಪರಿಷತ್ತಿಗೆ ಅಧ್ಯಕ್ಷರು— ಈ ವಿಷಯವಾಗಿ ಜಿಲ್ಲಾ ಕಾಂಗ್ರೆಸ್ ಕಮಿಟಿಗಳಿಂದ ಬಂದ ಪತ್ರಗಳನ್ನೆಲ್ಲ ಓದಿ ಶ್ರೀ. ಹನುಮಂತರಾವ ಕೌಜಲಗಿಯವರೇ ೯ ನೇ ಕರ್ನಾಟಕ ಪ್ರಾಂತಿಕ ರಾಜಕೀಯ ಪರಿಷತ್ತಿಗೆ ಅಧ್ಯಕ್ಷರಾಗಬೇಕೆಂದು ಸರ್ವಾನುಮತದಿಂದ ನಿರ್ಣಯವಾಯಿತು.

(೨) ಬಾಗಲಕೋಟಿ ಕಾಂಗ್ರೆಸ್ ಕಮಿಟಿಗಳ ತಕರಾರು— ಈ ವಿಷಯವಾಗಿ ಬಂದ ತಕರಾರುಗಳನ್ನೆಲ್ಲ ವಿಚಾರಮಾಡಿ ವಿಜಾಪುರ ಜಿ. ಕಾಂ. ಕಮಿಟಿಯ ಅಧ್ಯಕ್ಷರ ಹಾಗೂ ಬಾಗಲಕೋಟಿ ತಾ. ಕಾ. ಕಮಿಟಿಯ ಅಧ್ಯಕ್ಷರ ಹೇಳಿಕೆಯನ್ನು ಕೇಳಿಕೊಂಡದ್ದಾಯಿತು. ಈ ವಿಷಯಗಳ ಬಗ್ಗೆ ಎಲ್ಲ ಸಂಗತಿಗಳನ್ನೂ ತಿಳಿದುಕೊಂಡು ಇವತ್ತಿನಿಂದ ಒಂದು ತಿಂಗಳ ಒಳಗಾಗಿ ತಮ್ಮ ಕೊನೆಯ ನಿರ್ಣಯವನ್ನು ಕೊಡಲು ಈ ಕಮಿಟಿಯು ಶ್ರೀ. ವೀರನಗೌಡ ಪಾಟೀಲ ಮತ್ತು ಶ್ರೀ. ರಂಗರಾವ ದಿವಾಕರ ಇವರನ್ನು ನೇಮಿಸುತ್ತದೆ. ಅಲ್ಲಿಯ ವರೆಗೆ ಹೋದ ವರುಷದ ತಾಲೂಕು ಕಾಂಗ್ರೆಸ್ ಕಮಿಟಿಯೇ ಅಧಿಕಾರದಲ್ಲಿದ್ದು ಕೆಲಸಮಾಡಬೇಕು. ಮತ್ತು ಹೊಸ ಜಿಲ್ಲಾ ಕಾಂಗ್ರೆಸ್ ಕಮಿಟಿಗೆ ಈ ತಾಲೂಕಿನಿಂದ ಹೋದ ವರುಷ ಇದ್ದ ಜಿಲ್ಲಾ ಪ್ರತಿನಿಧಿಗಳೇ ಹೋಗಬೇಕು. ಶ್ರೀ. ದಿವಾಕರ ಮತ್ತು ವೀರನಗೌಡರ ಕೊನೆಯ ನಿರ್ಣಯವು ಹೊರಬೀಳುವ ವರೆಗೆ ಹೋದ ವರುಷದ ಜಿಲ್ಲಾ ಪ್ರತಿನಿಧಿಗಳೇ ಸದಸ್ಯರಾಗಿ ಉಳಿಯಬೇಕು.

(೩) ವಿಜಾಪುರ ಜಿಲ್ಲೆಯ ಹರಿಪುರದ ಪ್ರತಿನಿಧಿಗಳ ಚುನಾವಣೆಯ ತಕರಾರು— ಕಚೇರಿಗೆ ಬಂದ ತಕರಾರುಗಳನ್ನೂ ಅವುಗಳ ಮೇಲೆ ಜಿ. ಕಾಂ. ಕಮಿಟಿಯ ಅಧ್ಯಕ್ಷ ಶ್ರೀ. ಮರುಳಾರಾಧ್ಯ ಶಾಸ್ತ್ರಿಗಳ ಹೇಳಿಕೆಯನ್ನು ಕೇಳಿ ಸಮಾಲೋಚಿಸಿದನಂತರ ವಿಜಾಪುರ ಜಿಲ್ಲೆಯ ಹರಿಪುರ ಕಾಂಗ್ರೆಸ್ ಪ್ರತಿನಿಧಿಗಳ ಯಾವತ್ತೂ ಚುನಾವಣೆಗಳನ್ನು ಕಟ್ಟುಮಾಡಬೇಕೆಂದು ನಿರ್ಣಯವಾಯಿತು. ಈ ಮುಂದೆ ಕೂಡಲೇ ಕ್ರಮಬದ್ಧವಾಗಿ ಚುನಾವಣೆಯನ್ನು ಮಾಡಲು ಶ್ರೀ. ವೀರನಗೌಡ ಪಾಟೀಲ ಮತ್ತು ಡಾ. ಎನ್. ಎಸ್. ಹರ್ಡೀಕರ ಇವರನ್ನು ನೇಮಿಸಲಾಯಿತು. ಡಾ. ಹರ್ಡೀಕರರು ರಿಟರ್ನಿಂಗ ಆಫೀಸರರಾಗಿಯೂ ಕೆಲಸಮಾಡಬೇಕು.

(೪) ಮಂಗಳೂರು ಮತ್ತು ಬೆಳಗಾವಿ ಜಿಲ್ಲೆಗಳ ಹರಿಪುರ ಕಾಂಗ್ರೆಸ್ ಪ್ರತಿನಿಧಿಗಳ ಚುನಾವಣೆ— ಇವುಗಳ ಬಗ್ಗೆ ಬಂದ ತಕರಾರೀ ಅರ್ಜಿ ಹಾಗೂ ಪುರಾವೆಗಳನ್ನು ಓದಿದ ಮೇಲೆ ಈ ವಿಷಯಗಳ ಬಗ್ಗೆ ತಮ್ಮ ಕೊನೆಯ ನಿರ್ಣಯವನ್ನು ಕೊಡಲು ಮಂಗಳೂರ ಜಿಲ್ಲೆಗೆ ಶ್ರೀ. ಸಿದ್ಧಪ್ಪ ಹೊಸಮನಿ ಮತ್ತು ಡಾ. ಹರ್ಡೀಕರ ಇವರನ್ನೂ ಬೆಳಗಾವಿ ಜಿಲ್ಲೆಗೆ ಶ್ರೀ. ರಂಗರಾವ ದಿವಾಕರ ಇವರನ್ನೂ ನೇಮಿಸಲಾಯಿತು. ಇವರು ತಮ್ಮ ನಿರ್ಣಯವನ್ನು ಕೊಡುವವರೆಗೆ ಪ್ರಾಂತಿಕ ಕಮಿಟಿಯವರು ಜಾಹೀರಮಾಡಿದವರೇ ಪ್ರತಿನಿಧಿಗಳಾಗಿ ಉಳಿಯುವರು.

ಧಾರವಾಡ
ತಾ. ೧೦-೧-೩೮.

ಶ್ರೀ. ಹುಕ್ಕೇರಿಕರ.
ಗೌ|| ಕಾರ್ಯದರ್ಶಿ.

## ಕರ್ನಾಟಕ ಸಮಾಚಾರ.

—ಧಾರವಾಡ ಜಿಲ್ಲಾ ಕಾಂಗ್ರೆಸ್ ಕಮಿಟಿಗೆ ಶ್ರೀ. ಎಸ್. ಬಿ. ಹಿರೇಮಠ ವಕೀಲ ಹಾವೇರಿ ಇವರು ಅಧ್ಯಕ್ಷರಾಗಿ ಆರಿಸಲ್ಪಟ್ಟಿದ್ದಾರೆ.

—ಇಳಕಲ್ಲಿನ ಕಾಂಗ್ರೆಸ್ ಕೆಲಸಗಾರರಾದ ಶ್ರೀ. ಬೆಳ್ಳುಳ್ಳಿ ವೀರಪ್ಪನವರು ಚಿಕ್ಕಕೊಡಲಿಗೆ ಹೋಗಿ ಕಾಂಗ್ರೆಸ್ಸಿನ ಪ್ರಚಾರ ಮತ್ತು ಮಂತ್ರಿಮಂಡಲದ ಕಾರ್ಯಕಲಾಪಗಳ ಸಂಬಂಧವಾಗಿ ಪರಿಣಾಮಕಾರಿ ಭಾಷಣಮಾಡಿದರು.

—ಕಳೆದ ೭ ನೆಯ ತಾರೀಖಿನ ದಿವಸ ಸೌ|| ನಾಗಮ್ಮ ಪಾಟೀಲ ಎಂ. ಎಲ್. ಎ. ಇವರು ಮುಳಗುಂದದ ಬಾಲಬಾಲಕಿಯರ ಸಾಲೆಗಳಲ್ಲಿ ರಾಷ್ಟ್ರಧ್ವಜ ಮತ್ತು ಗಾಂಧೀಜಿಯವರ ಭಾವಚಿತ್ರ ಸ್ಥಾಪಿಸುವ ಸಮಾರಂಭ ಜರುಗಿಸಿದರು.

—ದೇವಿಹೊಸೂರಲ್ಲಿ ಶ್ರೀ. ಲಿಂಗರಾಜರ ಜಯಂತಿಯ ಉತ್ಸವವು ಶ್ರೀ. ನಲವಡಿ ಎಂ. ಎಲ್. ಎ. ಇವರ ಅಧ್ಯಕ್ಷತೆಯಲ್ಲಿ ಜರುಗಿತು. ಇವರು ಸಂಪೂರ್ಣ ಶುದ್ಧ ಖಾದಿಯನ್ನು ಧರಿಸಿಕೊಂಡಿದ್ದರು.

—ಸೌ|| ಸಿದ್ಧಮ್ಮ ಬಳ್ಳಾರಿ ಇವರ ಹಸ್ತದಿಂದ ದೇವಿಹೊಸೂರ ಬಾಲಿಕಾ ಶಾಲೆಯಲ್ಲಿ ರಾಷ್ಟ್ರಧ್ವಜ ಮತ್ತು ಗಾಂಧೀಜಿಯವರ ಚಿತ್ರ ಇರಿಸುವ ಸಮಾರಂಭ ಜರುಗಿತು.

—ಇಳಕಲ್ಲಿನ ಮನೋಹರ ಉಪಾಹಾರ ಗೃಹದಲ್ಲಿ ಆದಿಹಿಂದುಗಳಿಗೂ ಸವರ್ಣೀಯ ಹಿಂದುಗಳಂತೆ ಕೂಡಿಕೊಂಡು ಉಪಾಹಾರ ತೆಗೆದುಕೊಳ್ಳಲು ಅವಕಾಶವನ್ನುಂಟುಮಾಡಿದ್ದಾರೆ.

—ಹೊಸರಿತ್ತಿಯ ಜಾತ್ರೆಯು ಈ ಸಾರೆ ರಾಷ್ಟ್ರೀಯ ಸ್ವರೂಪವನ್ನು ಹೊಂದುವುದು. ರಾಷ್ಟ್ರಧ್ವಜದ ಮೆರವಣಿಗೆ ಹೊರಡುವದು. ಬೆಂಗಳೂರಿಂದ ಪ್ರೊ. ಬಸವರಾಜ ಇವರು ಬಂದು ವ್ಯಾಯಾಮವನ್ನು ಪ್ರದರ್ಶಿಸುವರು.

—ಎಲ್ಲಮ್ಮನ ಜಾತ್ರೆಯಲ್ಲಿ ಆಗುವ ಜೂಜಾಟವನ್ನು ತಾಲೂಕು ಮಾಮಲೇದಾರರಾದ ಶ್ರೀ. ಅಂಬೇಡಕರರು ನಿಲ್ಲಿಸಿದ್ದರಿಂದ ಎಷ್ಟೋ ಬಡ ಜನರ ದುಡ್ಡು ಹಾಳಾಗುವುದು ನಿಂತಿತು.

—ಹುಬ್ಬಳ್ಳಿಯಲ್ಲಿ ನಡೆದ ಪಂದ್ಯಾಟಗಳಲ್ಲಿ ಬಸವೇಶ್ವರ ವ್ಯಾಯಾಮಶಾಲೆಯ ಶ್ರೀ ಪಾಂಡುರಂಗ ವಾಳವೇಕರ ಇವರು ಪೋಲ್‌ಜಂಪ್ ವ್ಯಾಯಾಮದಲ್ಲಿ ಮೊದಲನೆಯವರಾಗಿ ಬೆಳ್ಳಿ ಬಟ್ಟಲನ್ನು ಬಹುಮಾನವಾಗಿ ಹೊಂದಿದರು.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೨೪ ನೆಯ ಜನವರಿ ೧೯೩೮. | ಸಂಚಿಕೆ ೨೨ |
|---|---|---|

ಜನಸೇವೆಯೇ ದೇವರಸೇವೆ.

## ಬಾಬೂಜಿಯವರ ಶುಭಾಗಮನ.

ಬಾಬು ಸುಭಾಷಚಂದ್ರ ಬೋಸರು ಲಂಡನ್ನಿನಲ್ಲಿ ಭಾರತ ಮಂತ್ರಿಗಳಾದ ಲಾರ್ಡ ಝುಟಲಂಡರನ್ನು ಕಂಡು ತಾ. ೨೩ ಕ್ಕೆ ವಿಮಾನದಿಂದ ಕರಾಚಿಗೆ ಬಂದು ತಾ. ೨೪ ಕ್ಕೆ ಕಲಕತ್ತಾಕ್ಕೆ ಹೋಗಿ ತಾ. ೨-೨-೩೮ ನೆಯ ದಿನ ಗಾಂಧೀಜಿಯವರ ಕಡೆ ಸೇಗಾವಕ್ಕೆ ಬರುವರು.

## ಮುಸ್ಲಿಂ ಲೀಗಿನವರು ಎದ್ದು ಹೋದರು.

ಮುಂಬೈ ಅಸೆಂಬ್ಲಿಯಲ್ಲಿ ಸ್ಥಾನಿಕ ಸ್ವರಾಜ್ಯ ಸಂಸ್ಥೆಯ ಶಾಸನ ತಿದ್ದುಪಾಟಿನ ಗೊತ್ತುವಳಿ ಬಂದಾಗ ಮುಸ್ಲಿಂ ಲೀಗಿನ ೨೦ ಸಭಾಸದರು ಹೊರಗೆ ಹೋದರು.

## ಡಾ. ಆಂಬೇಡಕರರೂ ಹೊರಗೆ ಹೋದರು.

“ ಹರಿಜನ ” ಶಬ್ದ ಬೇಕಿಲ್ಲವೆಂದು ನಿಷೇಧಿಸಿ ಡಾ. ಆಂಬೇಡಕರರು ತಮ್ಮ ಪಕ್ಷದ ೧೦ ಸಭಾಸದರೊಂದಿಗೆ ಅಸೆಂಬ್ಲಿಯಿಂದ ಹೊರಗೆ ಹೋದರು.

ಇದೇ ೨೬ ನೆಯ ತಾರೀಖು ಸ್ವಾತಂತ್ರ್ಯದ ದಿನವೆಂದು ಎಲ್ಲ ಕಡೆಗೂ ಆಚರಿಸಲ್ಪಡಲಿ.

ದೇಹವೇ ದೇವಾಲಯ



# ಶರಣ ಸಂದೇಶ

THE SHARANA SANDESHA.




ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೨೪ ನೆಯ ಜನವರಿ ೧೯೩೮. | ಸಂಚಿಕೆ ೨೨


## ಮಹತ್ವದ ಸುದ್ದಿಗಳು.

—ಮಹಾತ್ಮಾ ಗಾಂಧಿಯವರನ್ನು ಕಂಡು ಈಗಿನ ರಾಜಕಾರಣದ ವಿಚಾರವಾಗಿ ಪ್ರಸ್ತಾಪಿಸಲು ಲಾರ್ಡ ಲೊಥಿಯನ್‌ರು ಸೇಗಾವ ಹಳ್ಳಿಗೆ ಹೋಗಿದ್ದರು. ಅಲ್ಲಿಯ ಆಶ್ರಮ ಪದ್ಧತಿಯಂತೆಯೇ ವಾಸವಾಗಿದ್ದು ಗಾಂಧೀಜಿಯವರ ಪ್ರಕೃತಿಗೆ ಅನಾನುಕೂಲವಾಗದಂತೆ ಬೇರೆ ಬೇರೆ ಸಮಯಗಳಲ್ಲಿ ಸಂಭಾಷಣೆ ನಡೆಯಿಸಿದರು.

—ಶ್ರೀ. ಸುಭಾಷಚಂದ್ರ ಬೋಸರು ಮತ್ತು ಹಿಂದಿನ ವ್ಹಾಯಿಸ್‌ರಾಯರಾದ ಲಾರ್ಡ ಐರ್ವಿನ್‌ರು ಎರಡು ತಾಸು ಲಂಡನ್ನಿನಲ್ಲಿ ಹಿಂದುಸ್ಥಾನದ ರಾಜಕಾರಣವನ್ನು ಕುರಿತು ಸಂಭಾಷಣೆ ನಡೆಯಿಸಿದರು. ತಾರೀಖು ೧೯ ನೆಯ ಬೆಳಗ್ಗೆ ೭ ಗಂಟೆಗೆ ವಿಮಾನಿನಿಂದ ಶ್ರೀ. ಸುಭಾಷಚಂದ್ರರು ಹಿಂದುಸ್ತಾನಕ್ಕೆ ಹೊರಟರು.

—ಭಾಯಿ ಮಾನವೇಂದ್ರರಾಯರು ತಾ. ೨೦ ನೆಯ ದಿನ ಕಲಕತ್ತಾ ಪಟ್ಟಣಕ್ಕೆ ಹೋಗಲು ಬಹು ಪ್ರಚಂಡವಾದ ಸ್ವಾಗತ ಮಾಡಲ್ಪಟ್ಟಿತು. ಸೀಮಾಂತರ ಹೊಂದಿ ೩೫ ವರುಷಗಳಾದನಂತರ ಇದೇ ಇವರು ತಮ್ಮ ಪ್ರಾಂತಕ್ಕೆ ಮೊದಲು ಹೋದದ್ದು.

—ಬ್ಯಾ. ಸಾವರಕರರ ಅಧ್ಯಕ್ಷತೆಯಲ್ಲಿ ಮರಾಠಿ ಸಾಹಿತ್ಯ ಪರಿಷತ್ತು ಈ ತಿಂಗಳು ೨೨-೨೩ ನೆಯ ತಾರೀಖುಗಳಲ್ಲಿ ಬಡೋದೆಯಲ್ಲಿ ಕೂಡಿದ್ದಿತು.

—ಮಹಾರಾಷ್ಟ್ರ ಪ್ರಾಂತಿಕ ಕಾಂಗ್ರೆಸ್ ಕಮಿಟಿಗೆ ಶ್ರೀ. ಜೇಧೆ ಎಂಬುವವರು ಅಧ್ಯಕ್ಷರಾಗಿ ಆರಿಸಲ್ಪಟ್ಟರು.

—ನಿಜಾಮ ಸಾಹೇಬರು ತಮ್ಮಲ್ಲಿಗೆ ವ್ಹಾಯಿಸ್‌ರಾಯರು ತಾ. ೧೮ ನೆಯ ದಿನ ಬರಲು ಹೈದರಾಬಾದಿನಲ್ಲಿ ಸಂಭ್ರಮದ ಸ್ವಾಗತವನ್ನು ಮಾಡಿದರು. ಪ್ರಜೆಗಳ ಅಭಿಪ್ರಾಯವನ್ನು ತಿಳಿದು ತಾವು ಫೆಡರೇಶನ್ನಿನಲ್ಲಿ ಸೇರುವ ಸಂಬಂಧವಾಗಿ ಗೊತ್ತುಮಾಡುವೆವೆಂದು ಹೇಳಿದರು.

—ಶ್ರೀ. ಸುಭಾಷಚಂದ್ರ ಬೋಸರು ಲಂಡನ್ನಿನ "ನ್ಯೂಜ್ ಕ್ರಾನಿಕಲ್" ಪತ್ರಿಕೆಯಲ್ಲಿ ಒಂದು ಲೇಖನವನ್ನು ಬರೆದು ಘಟನಾ ಸಮಿತಿಯನ್ನು ಹಿಂದುಸ್ಥಾನವು ಏರ್ಪಡಿಸಿಕೊಳ್ಳಲು ಬ್ರಿಟಿಶ್ ಸರಕಾರವು ಒಪ್ಪಿಗೆಯನ್ನು ಕೊಟ್ಟು ಆ ಸಮಿತಿಯ ಅಭಿಪ್ರಾಯವನ್ನು ಮಾನ್ಯಮಾಡುವುದೇ ಈಗಿನ ರಾಜಕೀಯ ಅಸಂತೋಷ ನಿವಾರಣೆಗೆ ಮುಖ್ಯೋಪಾಯವೆಂದು ಸೂಚಿಸಿದ್ದಾರೆ.

—ಭಾಯಿ ಜಯಪ್ರಕಾಶ ನಾರಾಯಣ ಇವರು ಬಾಬು ರಾಜೇಂದ್ರರ ಅಭಿಪ್ರಾಯವನ್ನು ಖಂಡಿಸಿ ಒಂದು ಪ್ರಕಟನೆಯನ್ನು ಹೊರಡಿಸಿದ್ದಾರೆ.

—ಬಾಬು ರಾಜೇಂದ್ರ ಪ್ರಸಾದರ ದೇಹಾರೋಗ್ಯವು ಅಕಸ್ಮಾತ್ತಾಗಿ ವಿಶೇಷ ಚಿಂತಾಜನಕವಾಗಿದೆ. ಅವರ ಆಹಾರದಲ್ಲಿ ವಿಷ ಬೆರೆತಿತ್ತೆಂದು ಊಹಿಸಲಾಗಿದೆ.

—ಮುಂಬೈ ಹತ್ತಿರ ಕಲ್ಯಾಣದ ರೇಲ್ವೆ ಪೋಲಿಸರು ಒಬ್ಬ ಹಿಂದು ಹುಡುಗಿಯನ್ನು ಓಡಿಸಿಕೊಂಡು ಹೋಗುತ್ತಿದ್ದನೆಂಬ ಅಪರಾಧದಿಂದ ಬದ್ರುದ್ದಿನ ಎಂಬ ಮುಸಲ್ಮಾನನನ್ನು ಹಿಡಿದಿದ್ದಾರೆ.

—ಅಸೆಂಬ್ಲಿಯ ಅಧ್ಯಕ್ಷರು ಯಾವ ರಾಜಕೀಯ ಪಕ್ಷಕ್ಕೂ ಸೇರಿದವರಾಗಿರಕೂಡದೆಂದು ಸಂಯುಕ್ತ ಪ್ರಾಂತದ ಅಸೆಂಬ್ಲಿಯಲ್ಲಿ ಬರಲಿದ್ದ ಗೊತ್ತುವಳಿಗೆ ಅಧ್ಯಕ್ಷರು ಒಪ್ಪಿಗೆಯನ್ನು ಕೊಡಲಿಲ್ಲ. ನನ್ನ ವಿಷಯದಲ್ಲಿ ವಿಶ್ವಾಸವಿಲ್ಲವೆಂದು ಅಸೆಂಬ್ಲಿಯ ಬಹು ಸಂಖ್ಯಾಕರು ನನಗೆ ತಿಳಿಸಿದರೆ ನಾನು ಅಧ್ಯಕ್ಷಸ್ಥಾನವನ್ನು ತ್ಯಾಜ್ಯಮಾಡುವೆನೆಂದು ಅಧ್ಯಕ್ಷರಾದ ಶ್ರೀ. ಪುರುಷೋತ್ತಮದಾಸ ಠಂಡನ ಇವರು ಹೇಳಿದರು.

—ಸಂಯುಕ್ತ ಪ್ರಾಂತದ ಅಸೆಂಬ್ಲಿಯಲ್ಲಿಯೂ ಸರಕಾರದಿಂದ ಪದವಿಗಳನ್ನು ಕೊಡುವುದು ನಿಲ್ಲಿಸಲ್ಪಡಬೇಕಾದ ಗೊತ್ತುವಳಿಯಾಯಿತು.

—ಭಾಯಿ ಪರಮಾನಂದರು ಪಂಜಾಬ ಅಸೆಂಬ್ಲಿಯಲ್ಲಿರುವ ಹಿಂದು ಸಭಾಸದರನ್ನೆಲ್ಲಾ ಕೂಡಿಸಿ ತಮ್ಮಲ್ಲಿ ಒಂದು ಸಂಘಟನೆಯನ್ನು ಉಂಟುಮಾಡಲು ಪ್ರಯತ್ನಿಸಿದ್ದಾರೆ.

## ವಿಮರ್ಶಾತ್ಮಕ ಪ್ರಶ್ನೋತ್ತರ.

### ಕನ್ನಡದ ಅಭಿಮಾನ ಮತ್ತು ಜಾತಿನಿಷ್ಠೆ.

ಪ್ರಶ್ನೆ—ಇತ್ತೀಚಿಗೆ ಅನೇಕರಲ್ಲಿ ಕನ್ನಡದ ಅಭಿಮಾನ ಹೆಚ್ಚುತ್ತ ನಡೆದಿದೆ. ಕನ್ನಡ ಭಾಷೆ, ಕನ್ನಡ ನಾಡು, ಕನ್ನಡ ಏಕೀಕರಣ ಎಂಬ ಚಟುವಟಿಕೆ ಹೆಚ್ಚು. ಇವೆಲ್ಲಾ ಇರಬೇಕಾದ್ದೆ. ಆದರೆ ಮಿತಿ ಇರಬೇಕು. ಕನ್ನಡ ಅಭಿಮಾನಕ್ಕಾಗಿ ಹಿಂದಿಯನ್ನು ವಿರೋಧಿಸುತ್ತಾರೆ. ಕನ್ನಡ ನಾಡಿನ ಏಕೀಕರಣಕ್ಕಾಗಿ ಕಾಂಗ್ರೆಸ್ ಮಂತ್ರಿಮಂಡಲವನ್ನು ನಿಷೇಧಿಸಲಿಕ್ಕೂ ಸಿದ್ಧ. ಹೀಗೆ ಪ್ರಾಂತಾಭಿಮಾನದಿಂದ ರಾಷ್ಟ್ರ ಕಾರ್ಯಕ್ಕೆ ಅಡ್ಡಬರುವುದು ಯೋಗ್ಯವೆ?

ಉತ್ತರ—ಕನ್ನಡ ಭಾಷೆ, ಕನ್ನಡ ನಾಡು, ಇವುಗಳ ಅಭಿಮಾನದಲ್ಲಿ ಮಿತಿಯಿರಬೇಕೆಂದು ನಿಮ್ಮ ಅಪೇಕ್ಷೆ. ಅದರಂತೆಯೇ ರಾಷ್ಟ್ರಾಭಿಮಾನದಲ್ಲಿಯೂ ಮಿತಿಯಿರಬೇಕೆಂದು ನಿಮಗೆ ಅನಿಸುವದಿಲ್ಲವೆ? ಕನ್ನಡ ನಾಡು ನಮ್ಮ ತಾಯಿ. ಹಿಂದು ಭೂಮಿ ನಮ್ಮ ಅಜ್ಜಿ. ಇವರಿಬ್ಬರ ವಿಷಯದಲ್ಲಿಯೂ ನಾವು ಆದರಾಭಿಮಾನಗಳುಳ್ಳವರೇ ಇರಬೇಕು. ಮೊಮ್ಮಗನೆಂದು ಅಜ್ಜಿಯ ವಿಷಯದಲ್ಲಿ ತೋರಿಸಬೇಕಾದ ಭಕ್ತಿ ವಿಶ್ವಾಸಗಳೂ ಇವೆ. ಮಗನೆಂದು ತಾಯಿಯ ವಿಷಯವಾಗಿ ಮಾಡಬೇಕಾದ ಕರ್ತವ್ಯಗಳೂ ಇವೆ. ಇವುಗಳಲ್ಲಿ ಯಾವುದನ್ನು ಬಿಡುವುದೂ ವಿಹಿತವಲ್ಲ. ಆದರೆ ಸಮಯ ಸಂದರ್ಭಗಳನ್ನು ತಿಳಿದುಕೊಂಡು ಮಾತ್ರ ನಡೆಯಬೇಕು.

ಪ್ರಶ್ನೆ—ಇದೇನೋ ತತ್ವವಾಯಿತು. ವ್ಯವಹಾರದಲ್ಲಿ ಹೇಗೆ ಬರಬೇಕು? ಹಿಂದಿ ಪ್ರಚಾರಕ್ಕೆ ಸಹಾಯ ಮಾಡಬೇಕೆ ಬೇಡವೆ? ಕರ್ನಾಟಕ ಏಕೀಕರಣದ ಪ್ರಶ್ನೆಗಾಗಿ ಹಿಂದುಸ್ಥಾನದ ಸ್ವಾತಂತ್ರ್ಯದ ಹೋರಾಟಕ್ಕೆ ಅಡ್ಡಿ ಮಾಡಬೇಕೇ ಹೇಗೆ?

ಉತ್ತರ—ರಾಷ್ಟ್ರಕಾರ್ಯಕ್ಕೆ ವಿರೋಧವಾಗದಂಥ ಪ್ರಾಂತಾಭಿಮಾನವು ಇದ್ದೇ ಇರಬೇಕು. ಅದಿಲ್ಲವಿದ್ದರೆ ಒಂದು ದೊಡ್ಡ ದೋಷವೇ ಸರಿ. ಆದಕಾರಣ ಕನ್ನಡ ಭಾಷೆಯ ಏಳಿಗೆಗೆ ಕುಂದು ಬರುವಂತೆ ಹಿಂದಿ ಪ್ರಚಾರ ಮಾಡಕೂಡದು. ಬೇರೆ ಪ್ರಾಂತಗಳ ಸಂಬಂಧಕ್ಕೆ ಎಷ್ಟು ಅಗತ್ಯವೋ ಅಷ್ಟರಮಟ್ಟಿಗೇನೇ ಹಿಂದಿ ಪ್ರಚಾರವಾಗುವುದು ವಿಹಿತ. ಅನ್ಯ ಪ್ರಾಂತದವರೊಂದಿಗೆ ಆದೊಂದು ಬಳಿಕೆ ಭಾಷೆಯಾಗುವ ಮಟ್ಟಿಗೆ ಇಲ್ಲಿ ಅದರ ಶಿಕ್ಷಣ ದೊರೆಯಬೇಕೇ ವಿನಾ ನಮಗೆ ಆದೊಂದು ಸಾಹಿತ್ಯವಾಗುವ ದೃಷ್ಟಿಯಲ್ಲಿ ಶಿಕ್ಷಣ ಕೊಡಲ್ಪಡಕೂಡದು.

ಕರ್ನಾಟಕ ಏಕೀಕರಣಕ್ಕಾಗಿ ಕನ್ನಡಿಗರಾದ ನಾವು ಕಾಂಗ್ರೆಸ್ ಮಂತ್ರಿಮಂಡಲಕ್ಕೆ ಒತ್ತಾಯಪಡಿಸಿದರೆ ಸ್ವಾತಂತ್ರ್ಯದ ಹೋರಾಟಕ್ಕೆ ಹೇಗೆ ಅಡ್ಡಿ ಮಾಡಿದಂತಾಗುತ್ತದೋ ನಮಗೆ ತಿಳಿಯದು. ಕರ್ನಾಟಕ ಏಕೀಕರಣವು ಮುಖ್ಯವಾಗಿ ಮುಂಬೈ ಮತ್ತು ಮದ್ರಾಸ ಸರಕಾರಗಳಿಗೆ ಸಂಬಂಧಪಟ್ಟ ಪ್ರಶ್ನೆಯು. ಎರಡೂ ಕಡೆ ಕಾಂಗ್ರೆಸ್ಸಿನ ಮಂತ್ರಿಮಂಡಲವಿದೆ. ಕಾಂಗ್ರೆಸ್ಸಿಗೆ ಈ ತತ್ವವು ಯಾವಾಗಲೋ ಮಾನ್ಯವಾದುದೇ ಇದೆ. ಹೀಗಿರುವಾಗ ಅದನ್ನು ಆಚರಣೆಯಲ್ಲಿ ತರಲು ನಾವು ಬಲವಾದ ಪ್ರಯತ್ನವನ್ನು ಮಾಡದಿದ್ದರೆ ಅದು ನಮ್ಮ ಹೇಡಿತನವೇ ಸರಿ. ಅದು ರಾಷ್ಟ್ರಾಭಿಮಾನವಲ್ಲ. ತಾವೇನೋ ಹೆಚ್ಚಿನ ರಾಷ್ಟ್ರಭಕ್ತರೆಂದು ಹೇಳಿಸಿಕೊಳ್ಳಲು ಇದು ಸಂಕುಚಿತವಾದ ಪ್ರಾಂತಾಭಿಮಾನವೆಂದು ಕೆಲವರು ಹೇಳಬಹುದು. ಆದರೆ ಅದು ಅನುಚಿತ.

ಪ್ರಶ್ನೆ— ಕರ್ನಾಟಕ ಏಕೀಕರಣಕ್ಕೆ ನಮ್ಮ ಶಕ್ತಿಯನ್ನು ಈಗ ಕಳೆಯುವುದಕ್ಕಿಂತ ಅದನ್ನೇ ಸ್ವಾತಂತ್ರ್ಯಕ್ಕಾಗಿ ಉಪಯೋಗಿಸಿ ಜಾಗ್ರತೆ ಸ್ವತಂತ್ರ ದೊರೆಯುವಂತೆ ಮಾಡಬಾರದೆ? ಸ್ವತಂತ್ರ ದೊರೆತರೆ ಕರ್ನಾಟಕ ಏಕೀಕರಣವು ತಾನೇ ಆಗುತ್ತದೆ.

ಉತ್ತರ— ಈಗ ಹಿಂದುಸ್ಥಾನಕ್ಕೆ ದೊರೆಯಬೇಕಾಗಿರುವ ಸ್ವಾತಂತ್ರ್ಯಕ್ಕೆ ಕನ್ನಡಿಗರ ಸ್ವಲ್ಪ ಶಕ್ತಿ ಕಡಿಮೆ ಬಿದ್ದಿದೆಯೆಂದು ನಿಮ್ಮ ತಿಳುವಳಿಕೆಯೆ? ನೀವು ತಿಳಿದುಕೊಂಡಂತೆ ಸ್ವತಂತ್ರವು ಅಷ್ಟು ಸುಲಭವಾಗಿ ದೊರೆಯತಕ್ಕದ್ದಲ್ಲ. ಕರ್ನಾಟಕ ಏಕೀಕರಣಕ್ಕಾಗಿ ಕಳೆಯುವ ನಮ್ಮ ಶಕ್ತಿಯನ್ನು ಕೂಡಿಟ್ಟು ಅದನ್ನು ಸ್ವಾತಂತ್ರ್ಯ ಸಮರಕ್ಕೆ ವೆಚ್ಚಮಾಡಿದ ಮಾತ್ರದಲ್ಲಿ ಸ್ವತಂತ್ರ ದೊರೆಯುವುದೆ? ಕರ್ನಾಟಕ ಏಕೀಕರಣದ ಹೊರತು ಕನ್ನಡ ನಾಡಿನ ಉನ್ನತಿಯು ಶಕ್ಯವೇ ಇಲ್ಲ. ಕನ್ನಡಿಗರ ಅಸ್ತಿತ್ವವೇ ಕರ್ನಾಟಕ ಏಕೀಕರಣದ ಮೇಲೆ ಅವಲಂಬಿಸಿದೆ. ಈಗ ಕಾಂಗ್ರೆಸ್ಸಿನವರು ನಮಗಾಗಿ ಒಂದು ಪ್ರಾಂತವನ್ನು ಮಾಡಿಕೊಟ್ಟದ್ದಾರೆಯೇ ಹೊರತು ನಾವೇ ನಮ್ಮ ಶಕ್ತಿಯಿಂದ ನಮ್ಮ ಪ್ರಾಂತವನ್ನೇನೂ ಬೇರೆಯಾಗಿ ಇಟ್ಟುಕೊಂಡಿಲ್ಲ. ಇಂತಹ ಅನುಕೂಲ ಕಾಲದಲ್ಲಿ ನಾವು ಪ್ರಚಂಡ ಚಟುವಟಿಕೆಯನ್ನು ಹೂಡಿ ಕರ್ನಾಟಕವನ್ನು ಒಟ್ಟುಗೂಡಿಸಿದರೆ ಆಗ ನಾವು ನಮ್ಮ ನಾಡನ್ನು ಉಂಟುಮಾಡಿಕೊಂಡಂತೆ. ನಮ್ಮಲ್ಲಿ ಶಕ್ತಿಯಿದೆಯೆಂದು ಆಗ ಅನ್ಯರಿಗೆ ಸ್ಪಷ್ಟ ತೋರುವುದು. ಇದು ಸ್ವಾತಂತ್ರ್ಯ ಸಂಪಾದನೆಗೆ ಅನುಕೂಲವೇ ಹೊರತು ಪ್ರತಿಕೂಲವಲ್ಲ. ಆದಕಾರಣ ಕರ್ನಾಟಕ ಏಕೀಕರಣಕ್ಕೋಸ್ಕರ ಈಗ ಎಷ್ಟು ನ್ಯಾಯ ಸಮ್ಮತ ಚಟುವಟಿಕೆ ನಡೆದರೂ ಕಡಿಮೆಯೇ ಸರಿ. ಮಂತ್ರಿಮಂಡಲಗಳ ಮೇಲೆ ಕೂಡಾ ವಿಹಿತವಾದ ಎಷ್ಟು ಒತ್ತಾಯವನ್ನಾದರೂ ಮಾಡಲೇಬೇಕು.

ಪ್ರಶ್ನೆ— ನಿಮ್ಮ ಈ ಕನ್ನಡ ಅಭಿಮಾನವೇನೋ ಯೋಗ್ಯವಾದುದೇ ಸರಿ. ಇದಕ್ಕಾಗಿಯೇ ನೀವು ಪ್ರಯತ್ನಿಸದೆ ಹಿಂದು ಜಾತಿನಿಷ್ಠೆಯ ಸಂಗತಿಯನ್ನೇಕೆ ಚರ್ಚಿಸುತ್ತಿದ್ದೀರಿ?

ಉತ್ತರ— ನಮ್ಮ ಹಿಂದು ಜಾತಿನಿಷ್ಠೆಯ ಪ್ರಶ್ನೆಯು ನಿಮ್ಮ ಅಭಿಮಾನದ ಕನ್ನಡಕ್ಕೆ ಅನುಕೂಲವಾದುದೇ ಹೊರತು ಪ್ರತಿಕೂಲವಾದುದಲ್ಲ. ನೀವೇ ಕನ್ನಡ ಭಾಷೆ, ಕನ್ನಡ ಸಂಸ್ಕೃತಿಗಳ ಸರಿಯಾದ ಸಂರಕ್ಷಣೆ ಮತ್ತು ಸಂವರ್ಧನೆಗಳ ಕಡೆಗೆ ಲಕ್ಷಿಸಿಲ್ಲ. ಹಿಂದು ಜಾತಿನಿಷ್ಠೆಯ ಚಟುವಟಿಕೆಯು ನಿಮಗೆ ಪ್ರತಿಕೂಲವೆಂದೇ ತಪ್ಪು ತಿಳಿದುಕೊಂಡಿರುವಿರಿ.

ಪ್ರಶ್ನೆ— ನಮ್ಮ ಕನ್ನಡದ ಚಟುವಟಿಕೆ ರಾಷ್ಟ್ರೀಯವಾದುದು. ನಿಮ್ಮ ಜಾತಿಯ ಚಟುವಟಿಕೆ ಸಂಕುಚಿತವಾದುದು. ಆದರಿಂದ ನಮ್ಮ ಕನ್ನಡದ ಏಳಿಗೆ ಹೇಗಾಗುವುದು?

ಉತ್ತರ— ಕನ್ನಡ ನಾಡಿನಲ್ಲಿರುವವರು ಮರಾಠಿಯಲ್ಲಿಯೋ ಅಥವಾ ತೆಲುಗಿನಲ್ಲಿಯೋ ಭಾಷಣಮಾಡಿದರೆ ನಿಮ್ಮ ಕಣ್ಣು ಕೆಂಪಾಗುತ್ತವೆ. ಬೆಳಗಾವಿಯಲ್ಲಿ ಮರಾಠಿ ಪ್ರಕಟನೆಯು, ಬಳ್ಳಾರಿಯಲ್ಲಿ ತೆಲುಗು ಪ್ರಕಟನೆಯು, ಹೊರಟರೆ ನಿಮ್ಮ ರಕ್ತ ಕಾಯುತ್ತದೆ. ನಿಪ್ಪಾಣಿ ಸಂಗತಿಯು. ಮಹಾರಾಷ್ಟ್ರದ ಕಾರ್ಯಕ್ರಮದಲ್ಲಿ ಸೇರಿತೆಂದರೆ ಮರಾಠಿಗರು ಕರ್ನಾಟಕವನ್ನು ನುಂಗಿದರೆಂದೇ ನಿಮಗೆ

ಸಂತಾಪವುಂಟಾಗುತ್ತದೆ. ಒಬ್ಬರ ಭಾಷಣ ಅಥವಾ ಲೇಖನದಿಂದ ಕನ್ನಡ ನುಡಿಯನ್ನಾಡುವವರೇನೂ ಕಡಿಮೆಯಾಗದಿದ್ದರೂ ಕನ್ನಡದ ವರ್ಚಸ್ಸು ಕಡಿಮೆಯಾದೀತಲ್ಲಾ ಎಂದೇ ನಿಮಗೆ ಆ ನಾಡಿನ ಅಭಿಮಾನವು ಇಷ್ಟು ತಾಪಗಳನ್ನು ಉಂಟುಮಾಡುತ್ತದಷ್ಟೆ.

ಕನ್ನಡ ನಾಡಿನಲ್ಲಿ ಹಿಂದುಗಳು ಮುಸಲ್ಮಾನ್ ಧರ್ಮವನ್ನು ಸ್ವೀಕರಿಸಿದರೆ ಹೇಗಾಗುತ್ತದೆಂಬುದನ್ನು ಸ್ವಲ್ಪ ಯೋಚಿಸಿರಿ. ಇತ್ತೀಚಿಗೆ ನಮ್ಮ ನಾಡಿನಲ್ಲಿಯೂ ಕುಲಗೆಡುವುದು ಅಲ್ಲಲ್ಲಿ ನಡೆದಿದೆಯಷ್ಟೆ. ಕನ್ನಡ ಮಾತನಾಡುವ ಒಂದು ಹಿಂದು ಕುಟುಂಬವು ಈ ದಿನ ಮುಸಲ್ಮಾನ್ ಧರ್ಮದಲ್ಲಿ ಸೇರಿದರೆ ನಾಳೆಯಿಂದಲೇ ಕನ್ನಡ ವಾಗ್ದೇವಿಯನ್ನು ಮನೆಯಿಂದ ತಳ್ಳಿಬಿಡುತ್ತಾರೆ. ಮುಸಲ್ಮಾನಿ ಮಾತು ಮನೆ ಮಾಡಿಕೊಂಡಿತು. ಕನ್ನಡ ನಾಡಿನ ಸಂಸ್ಕೃತಿಯು ಅವರ ಕಣ್ಣುಮರೆಯಾಗಲಾರಂಭಿಸಿ ಅರಬಸ್ಥಾನದ ನೋಟ ಕಾಣಲಾರಂಭವಾಯಿತು. ಕನ್ನಡ ನಾಡಿನ ಹಿಂದಿನ ವೀರ ಪುರುಷರ, ಧರ್ಮೋದ್ಧಾರಕರ, ಹೆಸರುಗಳು ಮರೆತು ಅರಬಸ್ಥಾನದ ವೀರ ಪುರುಷರ, ಧರ್ಮೋದ್ಧಾರಕರ ನಾಮಸ್ಮರಣೆ ಪ್ರಾರಂಭ.

ಕನ್ನಡಕ್ಕೆ ಪ್ರತಿಯಾಗಿ ಮರಾಠಿ ಅಥವಾ ತೆಲಗು ಮಾತು ಆಡಲ್ಪಟ್ಟರೆ ಇಷ್ಟೆಲ್ಲಾ ಪರಿವರ್ತನೆಗಳೇನೂ ಆಗುವುದಿಲ್ಲವಷ್ಟೆ. ಎಂದಮೇಲೆ ಹಿಂದು ಶುದ್ಧಿ ಮತ್ತು ಸಂಘಟನೆಯ ಪ್ರಯತ್ನಗಳು ನಿಮ್ಮ ಭಾಷೆ, ಸಂಸ್ಕೃತಿ, ಮತ್ತು ನಾಡಿನ ವೈಶಿಷ್ಟ್ಯಗಳ ಉನ್ನತಿಗೆ ಅನುಕೂಲವಾದುದೊ? ಪ್ರತಿಕೂಲವಾದುದೊ? ನೀವೇ ಯೋಚಿಸಿರಿ. ಕನ್ನಡ ನಾಡಿನಲ್ಲಿ ಮರಾಠಿ ಅಥವಾ ತೆಲಗು ಮಾತು ಕೇಳಿದರೆ ಕುದಿಯುವ ನಿಮ್ಮ ರಕ್ತವು ಕನ್ನಡ ನಾಡಿನ ಹಿಂದು ಮನುಷ್ಯನು ಮುಸಲ್ಮಾನನಾದರೆ ಮಾತ್ರ ಸಮಾಧಾನವಾಗಿರುವುದು ಸೋಜಿಗವಲ್ಲವೆ? ಹಿಂದು ಜಾತಿನಿಷ್ಠೆಯು ಕನ್ನಡದ ಎಲ್ಲ ಉನ್ನತಿಗಳಿಗೂ ತುಂಬಾ ಸಹಾಯವಾದುದಾಗಿದೆ. ಹಿಂದು ಜಾತ್ಯಾಭಿಮಾನ ಶೂನ್ಯತೆಯು ಕನ್ನಡದ ಹೀನಾವಸ್ಥೆಗೆ ಕಾರಣವಾಗಿದೆ. ಆದಕಾರಣ ನೀವು ಹಿಂದು ಶುದ್ಧಿ ಮತ್ತು ಸಂಘಟನೆಗಳಲ್ಲಿಯೂ ಸಹಾನುಭೂತಿಯುಳ್ಳವರಾಗಿರಬೇಕಾದುದೇ ಅತ್ಯಗತ್ಯ.

---

# ದೇವರ ಇಚ್ಛೆಯೇ ನನ್ನ ಜೀವಿತ !

### ಗಾಂಧೀಜಿಯವರ ಸಂಭಾಷಣೆ.

ಮಹಾತ್ಮಾ ಗಾಂಧಿಯವರು ಈಗ ಸೇಗಾಂವದಲ್ಲಿ ವಾಸವಾಗಿದ್ದಾರೆ. ಇವರ ದೇಹಾರೋಗ್ಯವು ಮೊದಲಿನಂತೆ ಇನ್ನೂ ಸರಿಯಾಗಿಲ್ಲ. ಆದರೂ ಇವರು ಪ್ರಕೃತಿಯ ಕಡೆಗೆ ಲಕ್ಷಿಸದೆ ರಾಜಕೈದಿಗಳ ಬಿಡುಗಡೆಯ ಸಂಬಂಧವಾಗಿ ತುಂಬಾ ಯೋಚನೆಯಲ್ಲಿದ್ದಾರೆ. ಕಳೆದ ೧೫ ನೆಯ ತಾರೀಖಿನ ಹರಿಜನ ಪತ್ರಿಕೆಯಲ್ಲಿ ಶ್ರೀ. ಮಹದೇವ ದೇಸಾಯಿಯವರು ಗಾಂಧೀಜಿಯವರಿಗೂ ಶ್ರೀ. ರಾಜಗೋಪಾಲಾಚಾರ್ಯರಿಗೂ ನಡೆದ ಒಂದು ಮಹತ್ವದ ಸಂಭಾಷಣೆಯನ್ನು ಕೊಟ್ಟಿದ್ದಾರೆ. ಅದರ ಮುಖ್ಯಾಂಶ ಹೀಗಿದೆ—

ಜೀವದಮೇಲೆ ಪ್ರಸಂಗ ಬಂದರೂ ಕೆಲವು ಸಂಗತಿಗಳ ವಿಚಾರವನ್ನು. ಬಿಡದಂತಹ ಸಂದರ್ಭಗಳು ಆಯುಷ್ಯದಲ್ಲಿ ಬರುವುದುಂಟಷ್ಟೆ. ಅಂದಮಾನದ ರಾಜಕೈದಿಗಳ ಬಿಡುಗಡೆಯ ಸಂದರ್ಭವು ನನಗೆ ಅದೇ ರೀತಿಯಲ್ಲಿದೆಯೆಂದು ಗಾಂಧೀಜಿಯವರು ಶ್ರೀ. ಆಚಾರ್ಯರ ಪ್ರಶ್ನೆಗೆ ಉತ್ತರವಾಗಿ ಹೇಳಿದರು.

ನೀವು ನಿಮ್ಮ ಮಾತಿನಲ್ಲಿ ಇಷ್ಟು ಏಕನಿಷ್ಠೆಯನ್ನು ಅದೇಕೆ ಇಟ್ಟುಕೊಳ್ಳುತ್ತೀರೆಂದು ಶ್ರೀ. ಆಚಾರ್ಯರು ಕೇಳಲು ಗಾಂಧೀಜಿಯವರು ನಗುತ್ತಾ ಹೀಗೆ ಹೇಳಿದರು— ಭಗವದ್ಗೀತೆಯಲ್ಲಿ ಹೇಳಲ್ಪಟ್ಟಂತಹ ಏಕಾಗ್ರತೆಯ ಅಭ್ಯಾಸವನ್ನು ಇನ್ನೂ ಮಾಡಲೇಬೇಕೆಂದು ನನಗೆ ತೋರುತ್ತದೆ. ನಾನು ಯಾರ ಸಂಗಡ ಮಾತನಾಡಬೇಕಾದರೂ ಅದು ನೂರಕ್ಕೆ ನೂರು ಪಾಲು ಸತ್ಯವೇ ಇರಬೇಕೆಂಬುದೇ ನನ್ನ ಪ್ರವೃತ್ತಿಯಾಗಿದೆ.

ಬಂಗಾಲದ ಸ್ಥಾನಬದ್ಧ ರಾಜಕೈದಿಗಳ ಮತ್ತು ಅಂದಮಾನದ ರಾಜಕೈದಿಗಳ ಪ್ರಶ್ನೆಯೇ ನನ್ನ ಮುಂದಿವೆ.

ಶ್ರೀ ಆಚಾರ್ಯರು— ಜನರು ತಮ್ಮ ತಮ್ಮ ಕಾರ್ಯಗಳ ಕಡೆಗೇ ಲಕ್ಷಿಸಬೇಕು. ಬೇರೆಯವರ ಕಾರ್ಯಗಳನ್ನು ನೋಡುವ ಕಾರಣವಿಲ್ಲವೆಂದು ತಾವು ಹೇಳುವುದೇಕೆ? ಅಂತೂ ತಮ್ಮ ಸ್ವಭಾವದಮೇಲೆ ನನಗೆ ನಿಯಂತ್ರಣಮಾಡಲು ಸಾಧ್ಯವಾಗಲಿಲ್ಲವೆಂಬುದೇನೋ ನಿಜ.

ಮಹಾತ್ಮಾ ಗಾಂಧಿಯವರು— ನನ್ನ ಸ್ವಭಾವದಂತೆ ನಾನು ಕಾರ್ಯವನ್ನು ಮಾಡಲೇಬೇಕಾಗಿದೆ.

ಶ್ರೀ. ಆಚಾರ್ಯರು—ಅದು ಹೇಗೇ ಇರಲಿ. ಅಂತೂ ತಾವು ಹೆಚ್ಚು ಪರಿಶ್ರಮಪಡುವುದು ಯುಕ್ತವಲ್ಲ.

ಶ್ರೀ. ಜಮನಾಲಾಲರು— ತಾವು ಹೆಚ್ಚು ಪರಿಶ್ರಮಪಡುವುದರಿಂದ ದೇಹಾರೋಗ್ಯ ಕೆಡುತ್ತದೆ. ಆಗ ಸೇಗಾವದ ಹವೆಯು ತಮಗೆ ಸರಿಬರುವುದಿಲ್ಲವೆಂದು ಗ್ರಹಿಸುವಹಾಗಾಗುತ್ತದೆ. ತಾವು ಇದಕ್ಕೇಕೆ ಅವಕಾಶ ಕೊಡಬೇಕು?

ಮಹಾತ್ಮಾ ಗಾಂಧಿಯವರು— ನನ್ನ ದೇಹಾರೋಗ್ಯ ಸುಧಾರಿಸಲಿ, ಅಥವಾ ಕೆಡಲಿ ನಾನೇನೂ ಹಾಗೆ ಹೇಳುವುದಿಲ್ಲ. ಏನಾದರೂ ನಾನು ಮಾತ್ರ ಸೇಗಾವ ಸ್ಥಳವನ್ನು ಬಿಡುವುದಿಲ್ಲವೆಂದು ನಾನು ಹೇಳುತ್ತಿದ್ದೇನಷ್ಟೆ. ಹಾಗೆಂದರೆ ಡಾಕ್ಟರರಿಗೆ ಆಗಾಗ್ಗೆ ಇಲ್ಲಿಗೆ ಬರುವ ಶ್ರಮ ತಪ್ಪಬೇಕೆಂದೂ ನೀವೆಲ್ಲರೂ ನನಗೆ ಸಹಕರಿಸಬೇಕೆಂದೂ ನನ್ನ ಅಭಿಪ್ರಾಯ.

ಶ್ರೀ. ಜಮನಾಲಾಲರು— ಆಯುಷ್ಯವನ್ನು ಯೋಗ್ಯರೀತಿಯಲ್ಲಿ ಕಳೆಯುವ ಪ್ರಯತ್ನವನ್ನೇ ಮಾಡುತ್ತಿರುತ್ತೇನೆಂದು ತಾವು ಹೇಳುವುದುಂಟಷ್ಟೆ.

ಮಹಾತ್ಮಾ ಗಾಂಧಿಯವರು— ಯಮರಾಜನ ಬರುವಿಕೆಯನ್ನು ತಪ್ಪಿಸುವುದಕ್ಕಾಗಿ ನೀವು ವರ್ಷದ ವರೆಗೂ ಹಿಮಾಲಯದ ಯಾವುದಾದರೊಂದು ಸ್ಥಳದಲ್ಲಿ ಹೋಗಿ ವಾಸಿಸಿರೆಂದು ನನಗೆ ಯಾರಾದರೂ ಹೇಳಿದರೆ ನಾನು ಅವರ ಮಾತನ್ನೇನೂ ಕೇಳುವವನಲ್ಲ. ಎಷ್ಟೇ ಪ್ರಯತ್ನಿಸಿದರೂ ಮರಣವು ಮಾತ್ರ ಬಿಟ್ಟಿದ್ದಲ್ಲ. ಸಾರ್ವಜನಿಕ ಕಾರ್ಯವನ್ನು ಈ ದೇಶದಲ್ಲಿ ಮಾಡುತ್ತಿರುವ ಕೆಲವು ಜನರು ಮಾತ್ರ ತಮ್ಮ ದೇಹಾರೋಗ್ಯದ ಕಡೆಗೆ ಹೆಚ್ಚು ಲಕ್ಷಿಸುತ್ತಿದ್ದಾರಷ್ಟೆ. ಅವರಲ್ಲಿಯೇ ನಾನೂ ಒಬ್ಬನೆಂಬುದು ನಿಮಗೆ ಗೊತ್ತೇ ಇದೆ. ದೇವರು ನನ್ನಿಂದ ಯಾವ ಕಾರ್ಯವನ್ನು ಮಾಡಿಸುತ್ತಾನೆಯೋ ಯಾರಿಗೆ ಗೊತ್ತು? ಆತನಿಗೆ ತನ್ನ ಕಾರ್ಯ ಮಾಡಲು ನಾನು ಎಲ್ಲಿಯವರೆಗೆ ಇರಬೇಕೆಂದು ತೋರುವದೋ ಅಲ್ಲಿಯವರೆಗೇನೇ ನನ್ನನ್ನು ಇರಿಸುತ್ತಾನೆ. ಅನಂತರ ನನ್ನನ್ನು ಆತನು ಎಂದೂ ಜೀವದಿಂದಿರಗೊಡುವುದಿಲ್ಲ.

ಗಾಂಧೀಜಿಯವರ ದೇಹಾರೋಗ್ಯವು ಹೇಗಿರಬೇಕೋ ಹಾಗೆ ಇನ್ನೂ ಇಲ್ಲ. ಅವರು ಪ್ರತಿನಿತ್ಯದ ತಮ್ಮ ಎಲ್ಲ ಕೆಲಸಗಳನ್ನು ಮಾಡಲು ಇನ್ನೂ ಸಮರ್ಥರಾಗಿಲ್ಲ.

---

# ಜಿನ್ನಾ-ಜವಾಹರಲಾಲ ವಿವಾದ.

### ಭಾಯಿ ಪರಮಾನಂದರ ವಿಚಾರ

ಭಾಯಿ ಪರಮಾನಂದರು ಬ್ಯಾ. ಜಿನ್ನಾ ಮತ್ತು ಪಂಡಿತ ಜವಾಹರಲಾಲರ ಹಿಂದು-ಮುಸಲ್ಮಾನ್ ಏಕಮತ್ಯದ ಸಂಬಂಧವಾಗಿ ನಡೆದ ವಾದ ವಿವಾದಗಳನ್ನು ಕುರಿತು ತಾ. ೧೭-೧-೩೮ ನೆಯ ಹಿಂದು ಪತ್ರಿಕೆಯಲ್ಲಿ ಹೀಗೆ ಬರೆದಿದ್ದಾರೆ—

"ಪಂ. ಜವಾಹರಲಾಲರು ಕಾಂಗ್ರೆಸ್ಸಿನ ಅಧ್ಯಕ್ಷರಾದಾಗ ಹೀಗೆ ಹೇಳಿದ್ದರು— "ಜಾತಿನಿರ್ಣಯದ ವಿಷಯದಲ್ಲಿ ನನಗೇನೂ ವಿಶ್ವಾಸವಿಲ್ಲ. ಮುಸಲ್ಮಾನ್ ಪ್ರಮುಖರನ್ನು ಬಿಟ್ಟು ನಾವು ಮುಸಲ್ಮಾನ್ ಜನಸಾಮಾನ್ಯವನ್ನು ನಮ್ಮಲ್ಲಿ ಕೂಡಿಸಿಕೊಂಡುಬಿಡುವೆವು."

ಇವರು ಈ ತಮ್ಮ ಹೇಳಿಕೆಯ ಪ್ರಕಾರ ತಮ್ಮ ಸಂಯುಕ್ತ ಪ್ರಾಂತದಲ್ಲಿ ಮುಸಲ್ಮಾನ್ ಜನಸಾಮಾನ್ಯವನ್ನು ಕಾಂಗ್ರೆಸ್ಸಿನಲ್ಲಿ ಸೇರಿಸಿಕೊಳ್ಳುವ ಪ್ರಯತ್ನ ಮಾಡಿದರು. ಬಿಜನೂರು ಉಪಚುನಾವಣೆಯಲ್ಲಿ ಕಾಂಗ್ರೆಸ್ಸಿಗೆ ಜಯವಾದುದನ್ನು ನೋಡಿ ಕಾಂಗ್ರೆಸ್ ಪಕ್ಷದ ಪತ್ರಿಕೆಗಳಿಗೆ ಹರ್ಷಾತಿರೇಕವಾಯಿತು. ಆಗಲೇ ನಾನು ಒಂದು ಪ್ರಕಟನೆಯಲ್ಲಿ ಹೀಗೆ ಹೇಳಿದೆನು—

"ಈ ಜಯವು ಕಾಂಗ್ರೆಸ್ಸಿನ ಬಲದ ಲಕ್ಷಣವಲ್ಲ, ಕಾಂಗ್ರೆಸ್ ಪಕ್ಷದಿಂದ ನಿಂತ ಹುರಿಯಾಳುಗಳು ಮಂತ್ರಿಗಳಾಗಿದ್ದಾರೆ. ಅವರ ಆ ಮಂತ್ರಿತ್ವದ ಬಲವೇ ಸರಿ." ಅನಂತರ ಮೂರು ಉಪಚುನಾವಣೆಗಳಾದವು, ಅವೆಲ್ಲವುಗಳಲ್ಲಿಯೂ ಕಾಂಗ್ರೆಸ್ ಸೋತಿತು.

ಈ ಸ್ಥಿತಿಯನ್ನು ನೋಡಿಯೇ ಪಂಡಿತಜಿಯವರು ಜಿನ್ನಾರವರಿಗೆ ಶರಣುಹೋಗಿ "ಜಿನ್ನಾ-ರಾಜೇಂದ್ರರ ಒಪ್ಪಂದ ನನಗೆ ಮಾನ್ಯವಿದೆ. ಇಷ್ಟೇ ಅಲ್ಲ; ಜಾತಿನಿರ್ಣಯವೂ ನನಗೆ ಮಾನ್ಯ. ನಿಮಗೆ ಇನ್ನೇನು ಬೇಕು ಹೇಳಿರಿ?" ಎಂದು ತಮ್ಮ ಮೊನ್ನಿನ ಪ್ರಕಟನೆಯಲ್ಲಿ ಕೇಳಿದ್ದಾರೆ.

### ಬ್ಯಾ. ಜಿನ್ನಾರವರಿಗೆ ಇದು ಬೇಕು.

ಬ್ಯಾ. ಜಿನ್ನಾರವರು ತಮಗೆ ಏನು ಬೇಕೆಂಬುದನ್ನು ಅವರು ತಮ್ಮ ಉತ್ತರದಲ್ಲಿ ಅಸ್ಪಷ್ಟವಾಗಿ ತಿಳಿಸಿದ್ದಾರೆ. ಅವರು ಬೇರೆ ಕಡೆ ಹೇಳಿದ ಸಂಗತಿಗಳನ್ನು ತಿಳಿದುಕೊಂಡರೆ ಅವರಿಗೆ ಏನು ಬೇಕಾಗಿದೆಯೆಂಬುದು ಸ್ಪಷ್ಟ ಗೊತ್ತಾಗುತ್ತದೆ. ಬ್ಯಾ. ಜಿನ್ನಾರವರು ಒಂದು ಕಡೆ ಹೀಗೆ ಹೇಳಿದ್ದಾರೆ—

"ನಾನು ತರುಣನಿದ್ದಾಗ ಜಾತಿವಾದವನ್ನು ನಿಷೇಧಿಸುತ್ತಿದ್ದೆನು. ಆತನು ಹಿಂದು ಈತನು ಮುಸಲ್ಮಾನ್ ಎಂದು ಪ್ರತಿಪಾದಿಸುವುದು ನನಗೆ ಸೇರುತ್ತಿರಲಿಲ್ಲ. ಆದರೆ ಈ ವರಿಗಿನ ಅನುಭವದ ಮೇಲಿಂದ ನನ್ನ ಆ ಮೊದಲಿನ ತಿಳುವಳಿಕೆ ಬೇರೆಯಾಗಿದೆ. ಭಾರತೀಯ ರಾಷ್ಟ್ರ (Indian Nation) ಎಂಬುದು ನಿರರ್ಥಕವಾದುದೇ ಸರಿ."

ಜಿನ್ನಾರವರು ಹಿಂದು ರಾಜ್ಯದಲ್ಲಿರಲು ಸಿದ್ಧರಿಲ್ಲ. ಮುಸಲ್ಮಾನರ ಒಂದು ಸ್ವತಂತ್ರ ರಾಜ್ಯವೇ ಹಿಂದುಸ್ಥಾನದಲ್ಲಿ ನಿರ್ಮಾಣವಾಗಬೇಕು. ಜಿನ್ನಾರವರಿಗೆ ಬೇಕಾದುದು ಇದೆ. ಮುಸಲ್ಮಾನರಿಗೆ ರಾಜಕೀಯ ದೃಷ್ಟಿಯಿಂದಲೂ ಒಂದು ಸ್ವತಂತ್ರ ಅಸ್ತಿತ್ವವು ಬೇಕಾಗಿದೆ. ಅದೇ ಇದು.

ಈ ಮೊನ್ನಿನ ಪ್ರಕಟನೆಯಲ್ಲಿ ಬ್ಯಾ. ಜಿನ್ನಾರವರು ಈ ಅಭಿಪ್ರಾಯವನ್ನು ರಾಜಕಾರಣದ ಶಬ್ದಗಳಿಂದ ಸ್ಪಷ್ಟವಾಗಿಯೇ ತಿಳಿಸಿದ್ದಾರೆ. ಮುಸ್ಲಿಂ ಸಂಸ್ಕೃತಿ, ಧರ್ಮ ಮತ್ತು ಭಾಷೆಗಳ ಸಂರಕ್ಷಣೆಗಳೇ ನಮಗೆ ಸಾಲದು. ಮುಸಲ್ಮಾನರಿಗೆ ರಾಜಕೀಯ ಅಧಿಕಾರದ ಪ್ರತ್ಯೇಕ ಸಂರಕ್ಷಣೆಯೂ ಅವಶ್ಯಕವಾಗಿದೆ. ಎಂದು ಜಿನ್ನಾರವರು ಸ್ಪಷ್ಟ ತಿಳಿಸಿದ್ದಾರೆ. ಏಕೆಂದರೆ ಆ ರಾಜಕೀಯ ಅಧಿಕಾರದ ಬಲದಿಂದಲೇ ತಾವು ತಮ್ಮ ಸಂಸ್ಕೃತಿ, ಧರ್ಮ, ಭಾಷೆಗಳನ್ನು ಸಂರಕ್ಷಿಸಿಕೊಳ್ಳುವವರಾಗಿದ್ದಾರಂತೆ.

ಇದರ ಅರ್ಥವನ್ನು ನಮ್ಮ ರಾಜಕಾರಣ ಪಟುಗಳು ಈಗಲಾದರೂ ಗ್ರಹಿಸುವರೇ? ಇದಕ್ಕೆ ರಾಜ್ಯಾಂತರ್ಗತ ರಾಜ್ಯವೆಂದು ಹೇಳುತ್ತಾರೆ. (State within State) ಜಿನ್ನಾರವರಿಗೆ ಏನು ಬೇಕು? ಹಿಂದುಸ್ಥಾನದಲ್ಲಿ ಪಾಕಿಸ್ಥಾನವನ್ನು ನಿರ್ಮಿಸುವುದು ಬೇಕು. ಅವರಿಗೆ ಬೇಕಾದುದೇ ಇದು. ಬ್ರಿಟಿಶ್ ಸರಕಾರವು ಜಾತಿನಿರ್ಣಯವನ್ನು ಈಗ ಕೊಟ್ಟದ್ದೂ ಇದಕ್ಕಾಗಿಯೆ. ನಾನು ಹನ್ನೆರಡು ವರುಷಗಳ ಹಿಂದೆಯೇ ಒಂದು ದೊಡ್ಡ ವರ್ತುಲದಲ್ಲಿ ಸಣ್ಣ ವರ್ತುಲವನ್ನು ತೆಗೆದು ಅದು ದಿನೆ ದಿನೆ ವಿಸ್ತಾರವಾಗುತ್ತಾ ದೊಡ್ಡ ವರ್ತುಲವನ್ನು ಒಡೆದಂತೆ ಮುಸಲ್ಮಾನರ ಚಟುವಟಿಕೆಯು ದೆಯೆಂದು ಚಿತ್ರಿಸಿದ್ದೆನು.

ಬ್ಯಾ. ಜಿನ್ನಾರವರೇ ಈ ವಿಚಾರದವರಿದ್ದಾರೆಂದು ತಿಳಿಯಬೇಡಿರಿ. ಕಾಂಗ್ರೆಸ್ಸಿನಲ್ಲಿ ಸೇರಿರತಕ್ಕ ಅನೇಕ ಮುಸಲ್ಮಾನರೂ ಇದೇ ವಿಚಾರದವರು. ಮೌ. ಅಬ್ದುಲ್ ಕಲಮ್ ಅಜದ ಇವರು ಬಹು ಸಜ್ಜನರು. ಇವರು ಕೂಡಾ ಕೆಲವು ವರುಷಗಳ ಹಿಂದೆ ದೇಶಬಂಧು ದಾಸರ ಸಂಗಡ ಗುಪ್ತವಾಗಿಯೇ ಒಂದು ಒಪ್ಪಂದವನ್ನು ಮಾಡಿದ್ದರು. ಕಾಂಗ್ರೆಸ್ಸಿನವರು ಕೂಡಾ ಆ ವಿಚಾರವಾಗಿ ಯೋಚಿಸದಷ್ಟು ಅದು ಅನರ್ಥಕರವಾದುದಿದ್ದಿತು.

ಮಿ. ಅಸಫ ಅಲ್ಲಿಯವರ ಪ್ರಶ್ನೆಗೆ ಜಿನ್ನಾರವರು ಮೊನ್ನೆ ಕೊಟ್ಟ ಉತ್ತರದಲ್ಲಿ ನಮ್ಮ ಅಭಿಪ್ರಾಯವನ್ನು ಈಗ ಸರ್ವಸಾಧಾರಣವಾಗಿ ಪ್ರಕಟಿಸುವುದರಲ್ಲಿ ಅರ್ಥವಿಲ್ಲವೆಂದೂ ಕಾಂಗ್ರೆಸ್ ಮುಸಲ್ಮಾನರಿಗೆ ಯಾವ ರಾಜಕೀಯ ಅಧಿಕಾರ ಕೊಡಲು ಸಿದ್ಧವಾಗಿದೆಯೆಂಬುದನ್ನು ಅದು ಮೊದಲು ಹೇಳಲೆಂದೂ ತಿಳಿಸಿದ್ದಾರೆ. ಇದರಿಂದ ಗೊತ್ತಾಗುವುದೇನು? ವಂದೇ ಮಾತರಂ ಗೀತೆ ಬೇಡ. ರಾಷ್ಟ್ರೀಯ ಧ್ವಜದ ಮೇಲೆ ಚಂದ್ರನ ಚಿನ್ಹವಿರಬೇಕೆಂದು ಲಖನೌ ಪತ್ರಿಕೆಯು ಹೇಳುತ್ತಿದೆ. ಇವೆಲ್ಲವುಗಳೂ ಜಿನ್ನಾರಿಗೆ ಏನು ಬೇಕೆಂಬುದನ್ನೇ ತಿಳಿಸುತ್ತವೆ.

# ರಾಜಕೀಯ ಪರಿಷತ್ತು.

ತಾ. ೧೭-೧-೩೮ ನೆಯ ದಿವಸ ಕರ್ನಾಟಕ ರಾಜಕೀಯ ಪರಿಷತ್ತಿನ ೯ ನೆಯ ಅಧಿವೇಶನವು ರಾಣೆಬೆನ್ನೂರಲ್ಲಿ ಶ್ರೀ. ಕೌಜಲಗಿ ಹನುಮಂತರಾಯರ ಅಧ್ಯಕ್ಷತೆಯಲ್ಲಿ ಜರುಗಿತು. ಸ್ವಾಗತ ಸಂಘಾಧ್ಯಕ್ಷರಾದ ಶ್ರೀ. ಶಿವಮೂರ್ತಿ ಸ್ವಾಮಿ ಹಿರೇಮಠ ಇವರು ತಮ್ಮ ಭಾಷಣದಲ್ಲಿ ಕಾಂಗ್ರೆಸ್ಸಿನ ಘನತೆಯನ್ನೂ ಅದರಲ್ಲಿ ಎಲ್ಲರೂ ಸೇರಿ ಶಿಸ್ತಿನಿಂದ ಕೆಲಸಮಾಡಬೇಕಾದ ಅಗತ್ಯವನ್ನೂ ಸೂಚಿಸಿ ಕರ್ನಾಟಕ ಏಕೀಕರಣಕ್ಕಾಗಿ ತುಂಬಾ ಪ್ರಯತ್ನಿಸಬೇಕೆಂದೂ ಈ ವಿಷಯದಲ್ಲಿ ಕಾಂಗ್ರೆಸ್ ಮಂತ್ರಿಮಂಡಲವು ಲಕ್ಷಿಸುತ್ತಾ ಇಲ್ಲವೆಂಬ ಆಕ್ಷೇಪಣೆ ಸರಿಯಲ್ಲವೆಂದೂ ತಿಳಿಸಿದರು.

ಅಧ್ಯಕ್ಷರು ತಮ್ಮ ಭಾಷಣದಲ್ಲಿ ಕಾಂಗ್ರೆಸ್ಸಿನ ಕಾರ್ಯಕಲಾಪಗಳನ್ನೆಲ್ಲಾ ವಿವರಿಸಿ ಫೆಡರೇಶನ್ ನಿಷೇಧಾರ್ಹವಾದುದೆಂದು ಪ್ರತಿಪಾದಿಸಿ ಸಂಸ್ಥಾನಗಳ ಪ್ರಜೆಗಳು ಶಾಸನಭಂಗದಂತಹ ಉಗ್ರ ಮಾರ್ಗವನ್ನು ಸ್ವೀಕರಿಸಬಾರದಾಗಿ ಸೂಚಿಸಿ ಕರ್ನಾಟಕ ಏಕೀಕರಣಕ್ಕಾಗಿ ಪ್ರಯತ್ನಿಸಬೇಕೆಂದೂ ಮಂತ್ರಿಮಂಡಲಗಳ ಮೇಲೆ ಇದಕ್ಕೆ ಒತ್ತಾಯಮಾಡಬೇಕೆಂದೂ ಹೇಳಿದರು.

# ಬ್ರಾಹ್ಮಣರ ಏಕೀಕರಣ.

ಹಿಂದುಗಳಲ್ಲಿ ಮೇಲು ಕೀಳುಗಳೆಂಬ ತಪ್ಪು ತಿಳುವಳಿಕೆಯಿಂದ ಸಾವಿರಾರು ಜಾತಿಗಳು ಏರ್ಪಟ್ಟು ಈ ಸಮಾಜವು ಛಿನ್ನ ವಿಚ್ಛಿನ್ನವಾಗಿ ಹೋಗಿದೆಯಷ್ಟೆ. ಈ ಎಲ್ಲ ಜಾತಿಗಳನ್ನು ನಾಲ್ಕು ವರ್ಣಗಳಲ್ಲಿ ಕೂಡಿಸಿಬಿಡಬೇಕೆಂದು ಅನೇಕರು ಪ್ರಯತ್ನಿಸುತ್ತಿದ್ದಾರೆ. ಆದುದರಿಂದ ಒಂದೊಂದು ವರ್ಣಗಳಲ್ಲಿರುವ ಒಳಭೇದಗಳು ಮೊದಲು ಕೂಡುವುದು ಅಗತ್ಯವಷ್ಟೆ. ಈ ಕಾರ್ಯವನ್ನು ಧರ್ಮಾತ್ಮಾ ಮಾಲವೀಜಿಯವರು ಪ್ರಾರಂಭಿಸಿದ್ದಾರೆ. ಇದಕ್ಕೋಸ್ಕರವಾಗಿಯೇ ಅಖಿಲ ಭಾರತ ಬ್ರಾಹ್ಮಣರ ಒಂದು ಪರಿಷತ್ತನ್ನು ಮಾಲವೀಜಿಯವರು ಕಳೆದ ೩೦ನೆಯ ತಾರೀಖಿನ ದಿವಸ ಕಾಶಿ ಹಿಂದು ವಿಶ್ವ ವಿದ್ಯಾಲಯದಲ್ಲಿ ಕೂಡಿಸಿದ್ದರು. ಮದ್ರಾಸ, ಕಾಶ್ಮೀರ, ಮುಂಬೈ, ಲಾಹೋರ, ಅಜಮೀರ ಮೊದಲಾದ ಹಿಂದುಸ್ಥಾನದ ಬೇರೆ ಬೇರೆ ವಿಭಾಗಗಳಿಂದ ವಿದ್ವಾಂಸರಾದ ೧೦೦ ಪ್ರತಿನಿಧಿಗಳು ಈ ಪರಿಷತ್ತಿಗೆ ಬಂದಿದ್ದರು.



ಪಂ. ಮಾಲವೀಜಿಯವರು.

ಬ್ರಾಹ್ಮಣರೆಲ್ಲರೂ ಒಂದೇ ವರ್ಣದವರಾಗಿರುವುದರಿಂದ ಇವರಲ್ಲಿ ಪರಸ್ಪರ ಶರೀರಸಂಬಂಧವಾಗಲು ಶಾಸ್ತ್ರದಿಂದ ಯಾವ ಪ್ರತಿಬಂಧವೂ ಇಲ್ಲ. ಹೀಗಿದ್ದರೂ "ಶಾಸ್ತ್ರಾದ್ರೂಢಿರ್ಬಲೀಯಸೀ" ಎಂಬಂತೆ ಶಾಸ್ತ್ರಕ್ಕಿಂತಲೂ ರೂಢಿಯೇ ಹೆಚ್ಚಿನದಾಗಿ ಬ್ರಾಹ್ಮಣರ ಒಳಪಂಗಡಗಳಲ್ಲಿ ಶರೀರಸಂಬಂಧವಾಗುತ್ತಾ ಇಲ್ಲ. ಇದರಿಂದ ಅನೇಕ ಒಳಪಂಗಡಗಳ ಬ್ರಾಹ್ಮಣ ತರುಣ ತರುಣಿಯರ ವಿವಾಹವು ಸರಿಯಾದ ಸ್ಥಿತಿಯಲ್ಲಿ ಆಗದೆ ಸಮಾಜಕ್ಕೆ ಅನರ್ಥ ಸಂಭವಿಸುತ್ತಾ ಇದೆ. ಈ ಶೋಚನೀಯ ಸ್ಥಿತಿಯನ್ನು ಕಳೆಯಲು ಈ ಪರಿಷತ್ತು ಕೂಡಿತ್ತು.

ಪಂಡಿತ ಮಾಲವೀಜಿಯವರು ಆರಂಭದಲ್ಲಿ ಭಗವಾನ್ ವಿಶ್ವನಾಥನನ್ನು ಸ್ತುತಿಸಿ ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಪ್ರಾಚೀನ ಋಷಿಪ್ರಣೀತ ಧರ್ಮವನ್ನೇ ನಾವು ಅನುಸರಿಸುವವರಾಗಿದ್ದೇವೆ. ಕಾಲಮಾನಕ್ಕೆ ತಕ್ಕಂತೆ ಆಚಾರ ವಿಚಾರಗಳು ವ್ಯತ್ಯಸ್ತವಾಗುತ್ತಿದ್ದರೂ ನಮ್ಮಲ್ಲಿ ನಾಲ್ಕು ವರ್ಣಗಳು ಇದ್ದೇ ಇವೆ. ಬ್ರಾಹ್ಮಣರು ಈ ವಿಶಾಲವಾದ ದೇಶದಲ್ಲಿ ಬೇರೆ ಬೇರೆ ಕಡೆ ಇರುವುದರಿಂದ ದೇಶಭೇದ, ಆಚಾರ ಭೇದಗಳಿಂದ ಬೇರೆಯಾಗಿ ತೋರುತ್ತಿದ್ದರೂ ಎಲ್ಲರೂ ಒಂದೇ ವರ್ಣದವರಾಗಿದ್ದಾರೆ. ಗೌಡ, ಸಾರಸ್ವತ, ಕನ್ಯಾಕುಬ್ಜ, ಸರಯೂಪಾರಿ, ಮೈಥಿಲ, ಉತ್ಕಲ, ಮಹಾರಾಷ್ಟ್ರ, ಗುರ್ಜರ, ತೈಲಂಗ ಎಂಬ ದೇಶವಿಶಿಷ್ಟ ಹೆಸರುಗಳಿಂದ ಬ್ರಾಹ್ಮಣರು ದಶವಿಧ ಎಂಬುದಾಗಿ ತಿಳಿಯಲ್ಪಟ್ಟರು. ಇವುಗಳಲ್ಲಿ ನೂರಾರು ಒಳಭೇದಗಳುಂಟಾದವು. ವರ್ಣಾಶ್ರಮ ಧರ್ಮ ಕಟ್ಟಳೆಗಳೆಲ್ಲಾ ಶಿಥಿಲವಾದವು. ವಿದೇಶಿ ಸಂಸ್ಕೃತಿಯು ಹಳ್ಳಿಯ ಗುಡಿಸಿಲಿನಲ್ಲಿಯೂ ಸೇರಿತು. ಸಂಸ್ಕಾರಗಳೆಲ್ಲಾ ಲೋಪವಾಗುತ್ತಾ ಬಂದವು. ಸಂಸ್ಕಾರವೆಂಬ ಬೆಂಕಿಯಲ್ಲಿ ಮನುಷ್ಯನು ಬೆಂದ ವಿನಾ ಆತನ ತೇಜವು ಹೊರಬೀಳುವುದಿಲ್ಲ. ನಾನು ನಾಲ್ಕು ವರ್ಣ ಮತ್ತು ನಾಲ್ಕು ಆಶ್ರಮಗಳನ್ನು ಹೃದಯಪೂರ್ವಕ ಮಾನ್ಯಮಾಡುವವನಾಗಿದ್ದೇನೆ. ಇವುಗಳಿಂದ ಕೇವಲ ಹಿಂದುಸ್ಥಾನದ ಹಿತವೇ ಅಲ್ಲ. ಜಗತ್ತಿನಲ್ಲಿಯೂ ಶಾಂತಿಯುಂಟಾಗುವುದು. ಬ್ರಾಹ್ಮಣರಲ್ಲಿರುವ ನಾನಾ ಒಳಭೇದಗಳೆಲ್ಲಾ ಹೋಗಬೇಕು. ಒಳಪಂಗಡಗಳೆಲ್ಲಾ ಒಂದಾಗಬೇಕು. ವರದಕ್ಷಿಣೆಯ ದುಷ್ಟಪದ್ಧತಿ ಹೋಗಬೇಕು. ಬಂಗಾಲದಲ್ಲಿ ಸ್ನೇಹಲತೆಯು ಆತ್ಮಾರ್ಪಣ ಮಾಡಿದನಂತರ ಎಷ್ಟೋ ಕುಮರಿಯರು ಪ್ರಾಣಾರ್ಪಣ ಮಾಡಬೇಕಾಯಿತು. ಬ್ರಾಹ್ಮಣರಲ್ಲಿಯ ಒಳಭೇದಗಳು ಹೋಗಿ ಪರಸ್ಪರ ಶರೀರಸಂಬಂಧವಾದ ವಿನಾ ಈ ವರ್ಣದ ಅನೇಕ ವಿಪತ್ತುಗಳು ದೂರಾಗುವುದಿಲ್ಲ. ನಾನು ಕಳೆದ ೧೦ ವರುಷಗಳಿಂದ ಈ ವಿಷಯವನ್ನು ಆಲೋಚಿಸುತ್ತಾ ಇದ್ದೇನೆ. ೧ ಕೋಟಿ ೭೦ ಲಕ್ಷ ಬ್ರಾಹ್ಮಣರು ಸಂಘಟಿತರಾದರೆ ಉನ್ನತಿಗೆ ಸಹಾಯಮಾಡಿದಂತಾಗುವುದು."

## ಶಾಲಿಗ್ರಾಮದ ಸಂಗಡ ಲಗ್ನ!

ಪಂಡಿತ ರಾಮಯತ್ನ ಓಝೂ ಇವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ನಮ್ಮ ಪೂರ್ವಜರು ಮೊದಲು ಮೈಥಿಲಿ ಬ್ರಾಹ್ಮಣರು. ಈಗ ನಾವು ಸರಯೂಪಾರಿ ಬ್ರಾಹ್ಮಣರಾಗಿದ್ದೇವೆ. ಹೀಗೆಯೇ ಮೊದಲು ಮಹಾರಾಷ್ಟ್ರೀಯ ಬ್ರಾಹ್ಮಣ ವಂಶಜರು ಈಗ ಸರಯೂಪಾರಿ ಬ್ರಾಹ್ಮಣರಾಗಿದ್ದಾರೆ. ಬ್ರಾಹ್ಮಣರಲ್ಲಿಯ ಒಳಭೇದಗಳನ್ನು ತೆಗೆದುಹಾಕಬೇಕು. ಈಗ ಅನೇಕ ಬ್ರಾಹ್ಮಣರಿಗೆ ಸರಿಯಾದ ವಧೂವರರು ದೊರೆಯದೆ ತುಂಬಾ ತೊಂದರೆಪಡುತ್ತಿದ್ದಾರೆ. ಕೆಲವು ಮನೆತನಗಳಲ್ಲಿಯ ಕನ್ಯೆಯರು ಮರಣಾಂತ್ಯದ ವರೆಗೆ ಅವಿವಾಹಿತರಾಗಿರಬೇಕಾಗುತ್ತದೆ. ಇಲ್ಲವೆ ಶಾಲಿಗ್ರಾಮದ ಸಂಗಡ ಲಗ್ನವಾಗಿ ತಮ್ಮ ಕುಮಾರಿತ್ವವನ್ನು ಕಳೆದುಕೊಳ್ಳಬೇಕಾಗುತ್ತದೆ! ಕೆಲವರು ಅಸವರ್ಣ ವಿವಾಹಕ್ಕೆ ಪ್ರವೃತ್ತರಾಗುತ್ತಿದ್ದಾರೆ. ಪ್ರಾಂತಿಕ ಶಿಕ್ಷಣ ಮಂತ್ರಿ ಶ್ರೀ. ಪ್ಯಾರೆಲಾಲ ಶರ್ಮ ಇವರು ಒಳಭೇದಗಳನ್ನು ತೆಗೆದುಹಾಕಲು ಪರಸ್ಪರ ಶರೀರಸಂಬಂಧ ಬೆಳೆಸಬೇಕೆಂದು ಹೇಳಿದರು."

## ಕನ್ಯೆಯ ಕೊರತೆ.

ಎರಡನೆಯ ದಿನದ ಸಭೆಯಲ್ಲಿ ಪಂಡಿತ ರಮಾಕಾಂತ ಮಾಲವೀಜಿಯವರು ಮಥುರೆಯಲ್ಲಿಯ ಬ್ರಾಹ್ಮಣರ ಸ್ಥಿತಿಯನ್ನು ಹೀಗೆ ತಿಳಿಸಿದರು— "ಒಂದು ಮನೆಯಲ್ಲಿ ಅನೇಕ ಹುಡುಗರು ಒಬ್ಬ ಹುಡುಗಿ ಇದ್ದರೆ ಒಬ್ಬ ಹುಡುಗನ ಲಗ್ನ ಮಾತ್ರ ಆಗುತ್ತದೆ. ಆ ಮನೆಯಲ್ಲಿಯ ಇತರ ಹುಡುಗರು ಅವಿವಾಹಿತರೇ ಇರಬೇಕಾಗುತ್ತದೆ. ಒಂದು ಮನೆಯಿಂದ ಒಂದು ಕನ್ಯೆಯನ್ನು ಕೊಟ್ಟರೆ ಆ ಮನೆಗೆ ಬೇರೆಯವರು ಒಂದೇ ಕನ್ಯೆಯನ್ನು ಕೊಡುತ್ತಾರೆ. ಹೆಚ್ಚ ಹುಡುಗರಿದ್ದ ಮನೆಯಲ್ಲಿ ಒಬ್ಬನ ಲಗ್ನವಾದನಂತರ ಆತನಿಗೆ ಹೆಣ್ಣು ಹುಟ್ಟದರೆ ಆ ಹುಡುಗಿಯನ್ನು ಬೇರೆಯವರಿಗೆ ಕೊಟ್ಟ ಮೇಲೆಯೇ ಆತನ ತಮ್ಮಗೆ ಕನ್ಯೆ ದೊರೆಯುತ್ತದೆ! ಕನ್ಯೆಗಳ ಕೊರತೆಯಿಂದ ಅವರಲ್ಲಿ ಇಂಥ ಸ್ಥಿತಿ ಇದೆ. ಈ ಶೋಚನೀಯ ಸ್ಥಿತಿಯು ನಿವಾರಣೆಯಾಗಬೇಕಾದರೆ ಬ್ರಾಹ್ಮಣರಲ್ಲಿಯ ಒಳಭೇದಗಳು ನಿವಾರಣೆಯಾಗಲೇಬೇಕು."

ಹಿಂದು ವಿಶ್ವವಿದ್ಯಾಲಯದ ಮಹಿಳಾ ಕಾಲೇಜಿನ ಅಧ್ಯಾಪಿಕೆ ಶ್ರೀಮತಿ ಯಮುನಾದೇವಿ ಪಾಠಕ ಇವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು— "ನಾಲ್ಕು ವರ್ಣಗಳಲ್ಲಿ ಬ್ರಾಹ್ಮಣ ವರ್ಣವೇ ಮುಖ್ಯವಾದುದು. ಈ ವರ್ಣದವರು ತಮ್ಮಲ್ಲಿ ಸುಧಾರಣೆಯನ್ನು ಮಾಡಿಕೊಂಡರೆ ಇದನ್ನು ನೋಡಿ ಬೇರೆ ವರ್ಣದವರೂ ತಮ್ಮಲ್ಲಿ ಸುಧಾರಣೆಯನ್ನು ಮಾಡಿಕೊಳ್ಳುವರು." ಅನಂತರ ಮಹಾಮಹೋಪಾಧ್ಯಾಯ ಪಂಡಿತ ಪ್ರಮಥನಾಥ ತರ್ಕಭೂಷಣ ಇವರು ಈ ಕೆಳಗಿನ ಗೊತ್ತುವಳಿಯನ್ನು ಸಭೆಯ ಮುಂದಿಟ್ಟರು. ಇದು ಸರ್ವಾನುಮತದಿಂದ ಒಪ್ಪಿಗೆಯಾಯಿತು.

"ಬ್ರಾಹ್ಮಣರ ಈ ಸಭೆಯು ಸವರ್ಣ ಉಪಜಾತಿಗಳ ವಿವಾಹವನ್ನು ಮಾನ್ಯಮಾಡುತ್ತದೆ. ಮತ್ತು ಪರಂಪರಾಗತ ಜ್ಞಾನ ಕುಲಶೀಲಾಚಾರ ಸಂಪನ್ನ ಬ್ರಾಹ್ಮಣರಲ್ಲಿಯು ಬೇರೆ ಬೇರೆ ಜಾತಿಯವರು ಪರಸ್ಪರ ವಿವಾಹ ಜರುಗಿಸುವುದು ಶಾಸ್ತ್ರಸಮ್ಮತವಾದುದಾಗಿದೆಯೆಂದು ಸಾರುತ್ತದೆ."

ಅನಂತರ ಈ ಗೊತ್ತುವಳಿಯ ಪ್ರಕಾರ ಕಾರ್ಯ ನಡೆಯಲು ಪ್ರಯುಕ್ತಿಸಬೇಕೆಂದು ಗೊತ್ತಾಯಿತು. ಪಂಡಿತ ರಾಧೇಶ್ಯಾಮ ಚತುರ್ವೇದಿ ಇವರು ಈ ಕಾರ್ಯ ನಿರ್ವಾಹಕ್ಕೆ ೫೦೦ ರೂ. ಗಳನ್ನು ಕೊಟ್ಟರು.

### ಸವರ್ಣಿಯರು ಎಚ್ಚರಾಗುವರೆ?

ಇನ್ನಾದರೂ ಬೇರೆ ವರ್ಣಗಳ ಹಿಂದುಗಳು ತಮ್ಮ ತಮ್ಮಲ್ಲಿಯ ಒಳಭೇದಗಳನ್ನು ತೆಗೆದು ಹಾಕಲು ಇನ್ನಾದರೂ ಪ್ರಯತ್ನಿಸುವರೆ? ಬ್ರಾಹ್ಮಣರ ಆಚಾರವಿಚಾರಗಳು ಇತರ ವರ್ಣದವರಿಗೆ ಮಾರ್ಗ ತೋರಿಸತಕ್ಕವುಗಳಲ್ಲವೆ? ವೀರಶೈವರಲ್ಲಿ ಕೆಲವರು ಇತ್ತೀಚಿಗೆ ತಾವೂ ಬ್ರಾಹ್ಮಣರಾಗಬೇಕೆಂದು ವೇಷಹಾಕಿಕೊಳ್ಳುತ್ತಿದ್ದಾರಷ್ಟೆ. ಇವರಾದರೂ ಪರಂಪರಾಗತ ಬ್ರಾಹ್ಮಣರ ಗೊತ್ತುವಳಿಯನ್ನು ನೋಡಿ ನಾಚುವರೇ? ವೀರಶೈವರಲ್ಲಿ ವರ್ಣಗಳವೆಯೆಂಬ ಭ್ರಮೆಯನ್ನು ಅನೇಕರಿಗುಂಟುಮಾಡಿ ಒಳಪಂಗಡಗಳ ಏಕೀಕರಣಕ್ಕೆ ವಿರೋಧಿಸುವವರು ಬ್ರಾಹ್ಮಣರ ರೀತಿನೀತಿಗಳನ್ನಾದರೂ ನೋಡಿ ವಿಘಾತಕವಾದ ತಮ್ಮ ಮಾರ್ಗವನ್ನು ಬಿಡುವರೇ? ಪಂಡಿತ ಮಾಲವೀಜಿಯವರ ವರ್ಣ ವಿಚಾರವು ನಮಗೆ ಮಾನ್ಯವಿಲ್ಲದಿದ್ದರೂ ಒಂದೊಂದು ವರ್ಣಗಳಲ್ಲಿಯ ಉಪಜಾತಿಗಳ ಏಕೀಕರಣಕ್ಕಾಗಿ ಇವರು ಪ್ರಯತ್ನಿಸಿದ್ದು ಎಷ್ಟೋ ಅಭಿನಂದನೀಯವಾದುದೇ ಸರಿಯೆಂದು ಹೇಳಲು ಅಭ್ಯಂತರವಿಲ್ಲ.

---

## ಮುಂಬೈ ಸರಕಾರದ ವಿಷಾದ.

ಮುಂಬೈ ಸರಕಾರದ ಹೋಮ ಡಿಪಾರ್ಟಮೆಂಟನಿಂದ ತಾರೀಖು ೩೦-೧೧-೩೭ ನೆಯ ದಿವಸ "ಲೋಕ ಶಕ್ತಿ" ಎಂಬ ಪುಣೆಯ ಮರಾಠಿ ಪತ್ರಿಕೆಗೇನೇ ಸರಕಾರದ ಪ್ರಕಟನೆಗಳು ಕೊಡಲ್ಪಡಬೇಕೆಂದು ಇತರ ಪತ್ರಿಕೆಗಳನ್ನು ಆಕ್ಷೇಪಿಸಿ ಒಂದು ಗುಪ್ತ "ಸರ್ಕ್ಯೂಲರ" ಹೊರಟಿತ್ತು. ಅದನ್ನು ವಿವಿಧವೃತ್ತ ಪತ್ರಿಕಾ ಲೇಖಕರು ಬೈಲಿಗೆಳೆದರು. ಕಾಂಗ್ರೆಸ್ ಮಂತ್ರಿಮಂಡಲವು ಹಿಂದಿನ ಆಳರಸರು ಕೂಡಾ ಮಾಡದಿದ್ದಂಥ ಅನ್ಯಾಯ ಮತ್ತು ಪಕ್ಷಪಾತಗಳನ್ನು ಈ ವಿಚಾರದಲ್ಲಿ ಮಾಡಿದುದು ಅಕ್ಷಮ್ಯ ಅಪರಾಧವೆಂದು ವೀರ ನರಿಮನ್ನರು ಸಹಿತ ಎಲ್ಲ ಪಕ್ಷಗಳ ನ್ಯಾಯಪ್ರಿಯ ಮುಖಂಡರು ಸರಕಾರದ ಈ ಕೃತಿಯನ್ನು ತೀಕ್ಷ್ಣವಾಗಿ ಖಂಡಿಸಿದರು. ಶ್ರೀ. ಜಮನಾದಾಸರು ಈ ವಿಚಾರವಾಗಿ ಅಸೆಂಬ್ಲಿಯಲ್ಲಿ ಒಂದು ನಿಲುವಳಿ ಸೂಚನೆಯನ್ನೂ ತರುವುದಾಗಿ ತಿಳಿಸಿದರು.

ಈ ವಿಷಯವು ಇಷ್ಟು ವಿಕೋಪ ಸ್ಥಿತಿಗೆ ಬಂದುದನ್ನು ನೋಡಿ ಮುಖ್ಯ ಮಂತ್ರಿಗಳಾದ ಶ್ರೀ. ಖೇರರು ತಾ. ೧೯ ನೆಯ ದಿವಸ ಅಸೆಂಬ್ಲಿಯಲ್ಲಿ ಈ ಸರ್ಕ್ಯೂಲರ ಸಂಬಂಧವಾಗಿ ವಿಷಾದವನ್ನು ವ್ಯಕ್ತಪಡಿಸಿದ್ದು ವಿಹಿತವೇ ಆಗಿದೆ. ಮಂತ್ರಿಗಳು ಈ ವಿಷಾದ ಪ್ರದರ್ಶನದ ಕಾಲಕ್ಕೆ ಹೀಗೆ ಹೇಳಿದರು— "ಎಲ್ಲ ಮರಾಠಿ ಪತ್ರಿಕೆಗಳನ್ನು ಆಕ್ಷೇಪಿಸುವ ಅಥವಾ ಲೋಕ ಶಕ್ತಿ ಪತ್ರಿಕೆಯೊಂದೇ ಇದಕ್ಕೆ ಅಪವಾದವೆಂದು ಹೇಳುವ ಉದ್ದೇಶವೇನೂ ಸರಕಾರದಲ್ಲಿಲ್ಲ. ಹೀಗಿದ್ದರೂ ಆ ಸರ್ಕ್ಯೂಲರ ಈ ಪ್ರಕಾರ ಅರ್ಥ ಮಾಡಲ್ಪಡುತ್ತಿರುವುದರಿಂದ ಸರಕಾರಕ್ಕೆ ವಿಷಾದವೆನಿಸುತ್ತದೆ."

## ಪದವಿಗಳಿಗೆ ಬಹಿಷ್ಕಾರ!

ಮುಂಬೈ ಪ್ರಾಂತಿಕ ಅಸೆಂಬ್ಲಿಯಲ್ಲಿ ಮುಖ್ಯ ಮಂತ್ರಿಗಳಾದ ಶ್ರೀ. ಖೇರರು ಒಂದು ಗೊತ್ತುವಳಿಯನ್ನು ತಂದರು. ಚಕ್ರವರ್ತಿಗಳಾಗಲಿ ಅಥವಾ ವ್ಹಾಯಿಸ್‌ರಾಯರಾಗಲಿ ಮುಂಬೈ ಪ್ರಾಂತದಲ್ಲಿ ಯಾರಿಗೂ ಮುಂಚಿನಂತೆ ಇನ್ನು ಮೇಲೆ ಪದವಿಗಳನ್ನು ಕೊಡಕೂಡದು. ಈ ಗೊತ್ತುವಳಿಯು ತೀರ್ಮಾನವಾಯಿತು. ಆ ಕಾಲಕ್ಕೆ ಶ್ರೀ. ಜಮನಾದಾಸ ಮೆಹತಾರವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಸರಕಾರದಿಂದ ಪದವಿಗಳು ದೊರೆಯುವುದು ವಿಶೇಷವಾಗಿ ಸರಕಾರದ ಪಕ್ಷದವರಿಗೇ ಸರಿ. ಆದರೆ ನಿಜವಾದ ದೇಶ ಹಿತಚಿಂತಕರು ಪದವಿವಿಶಿಷ್ಟರಾಗಿರುವುದೇ ಇಲ್ಲವೆಂದಲ್ಲ. ಸರ್. ಮೆಥಾ, ಸರ್. ಜಗದೀಶಚಂದ್ರ ಬೋಸ್ ಇವರೆಲ್ಲ ದೇಶಭಕ್ತರಾಗಿರಲಿಲ್ಲವೆ? ಪದವಿಗಳು ಜನರಿಂದಲೂ ಅವರವರ ಗುಣಗಳಿಂದ ದೊರೆಯುತ್ತವೆ. ಶ್ರೀ. ವಲ್ಲಭಭಾಯಿಯವರು ಬಾರ್ಡೋಲಿಯಲ್ಲಿ ಮಾಡಿದ ಮಹತ್ಕಾರ್ಯದಿಂದ ಮುಂಬೈಯಿಯ ಸಭೆಯಲ್ಲಿ ಶ್ರೀ. ನರಿಮಾನರು 'ಸರದಾರ' ಎಂಬ ಪದವಿ ಕೊಟ್ಟರು. ಈ ವರೆಗೂ ಅದು ಇದ್ದೇ ಇದೆ. ಈಗ ಸರದಾರ ಎಂಬುದನ್ನು ಹೇಳದೆ ಹಾಗೇ ವಲ್ಲಭಭಾಯಿಯವರೆಂದು ಹೇಳಿದರೆ ಹೇಗಾಗುವುದು? ನರಿಮಾನರು ಮೊನ್ನಿನವರೆಗೆ "ವೀರ" ನರಿಮಾನರಾಗಿದ್ದರು. ಇಗ ಹಿಂದಿನ ವೀರ ನರಿಮಾನರೆಂದು ಹೇಳುತ್ತಾರೆ.

ಇಂಗ್ಲೆಂಡಿನಲ್ಲಿಯೂ ಪದವಿಗಳ ಕಥೆ ಇಲ್ಲಿಯಂತೆಯೇ ಇದೆ. ಸರಕಾರದ ಪಕ್ಷದವರಿಗೇನೇ ಕೊಡುವ ರೂಢಿ. ಲೇಡಿ ಸಾಯಕ್ಸ್ ಇವರು ಒಮ್ಮೆ ಒಬ್ಬ ಪದವಿಧರರಿಗೆ ನೀವು 'ಬೋನರ್‌ಲಾ'ರನ್ನು ಬಲ್ಲಿರಾ? ಎಂದು ಕೇಳಿದರು. ಆಗ ಅವರು ನನಗೆ ಹಿಂದು ಲಾ ಮಹಮಡನ್ ಲಾ ಗೊತ್ತೇ ಹೊರತು ಬೋನರಲಾ ಗೊತ್ತಿಲ್ಲವೆಂದು ಹೇಳಿದ್ದರು. ಶ್ರೀ. ವಿಠ್ಠಲಭಾಯಿ ಪಟೇಲರು ತಮ್ಮಲ್ಲಿಯ "ಪಟ್ಟೇವಾಲ" ನಿಗೆ ಖಾನಸಾಹೇಬ ಬಿರುದುಕೊಡಲು ತಿಳಿಸಿದ್ದರು. ಆಗ ಅವರು ಆ ವಿಚಾರವಾಗಿ ಹೀಗೆ ಹೇಳಿದ್ದರು. ಪಟ್ಟೇವಾಲನು ಖಾನಸಾಹೇಬನಾಗಲು ಯೋಗ್ಯನಾಗಿದ್ದಾನೆಂದು ತೋರಿಸಿಕೊಡುವುದು ನನ್ನ ಮುಖ್ಯ ಉದ್ದೇಶವಾಗಿರಲಿಲ್ಲ. ಆದರೆ ಖಾನಸಾಹೇಬರು ಪಟ್ಟೇವಾಲರಾಗಿರಲು ಯೋಗ್ಯರಿರುತ್ತಾರೆಂದು ತೋರಿಸಿಕೊಡುವುದೇ ಆಗಿದ್ದಿತು. ಈಗ ಪದವಿಗಳ ಮಹತ್ವವೇ ಇಲ್ಲ. ಆದಕಾರಣ ಅವುಗಳನ್ನು ನಿಲ್ಲಿಸುವುದು ಅತ್ಯಗತ್ಯವಾಗಿದೆ. ಆದರೆ ಯೋಗ್ಯ ಜನರ ಸನ್ಮಾನಾರ್ಥವಾಗಿ ಅವರನ್ನು ಗೌರವಿಸುವುದೂ ಅಗತ್ಯವು."

---

## ಕಾಂಗ್ರೆಸ್ಸಿನಿಂದ ಹೊರಗೆ?

ಕಾಂಗ್ರೆಸ್ ಸಮತಾವಾದಿ ಪಕ್ಷದ ಮುಖ್ಯ ಕಾರ್ಯದರ್ಶಿಗಳಾದ ಭಾಯಿ ಜಯಪ್ರಕಾಶ ನಾರಾಯಣ ಇವರು ಸ್ವಾಮಿ ಸಹಜಾನಂದರ ಸನ್ಮಾನಾರ್ಥವಾಗಿ ನೆರೆದ ಸಭೆಯಲ್ಲಿ ಹೀಗೆ ಹೇಳಿದರು-

"ಲೋಕಮಾನ್ಯ ಟಿಳಕರು ಹೇಗೆ ಕಾಂಗ್ರೆಸ್ಸಿನ ಹಿತಕ್ಕಾಗಿಯೇ ಅದರಿಂದ ಹೊರಗೆ ಹೋದರೋ ಹಾಗೆಯೇ ನಾನಾದರೂ ಕಾಂಗ್ರೆಸ್ಸಿನ ಅನುಕೂಲಕ್ಕಾಗಿಯೇ ಅದರಿಂದ ಹೊರಗೆ ಹೋಗುವ ಪ್ರಸಂಗ ಬರಬಹುದು. ಗಾಂಧೀಜಿಯವರ ತತ್ವಗಳು ಈಗ ಹಳೆಯವುಗಳಾದವು."

# ಗವ್ಹರ್ನರರ ಅಜ್ಞಾನವೋ ? ಉದಾಸೀನತೆಯೋ?

### ಶ್ರೀ. ಗಂಗಾಧರರಾಯರ ಪ್ರಕಟಣೆ.

ಕರ್ನಾಟಕ ಪ್ರಾಂತಿಕ ಕಾಂ॥ ಕಮಿಟಿಯ ಅಧ್ಯಕ್ಷರಾದ ಶ್ರೀ. ಗಂಗಾಧರರಾವ ದೇಶಪಾಂಡೆಯವರು ಬೆಳಗಾವಿಯಲ್ಲಿ ಗವ್ಹರ್ನರರು ಕರ್ನಾಟಕ ಏಕೀಕರಣದ ಬಗ್ಗೆ ಉದಾಸೀನತೆಯಿಂದಲೂ ಅಜ್ಞಾನದಿಂದಲೂ ಮಾತನಾಡಿದ್ದರಿಂದ ಅವನ್ನು ಖಂಡಿಸಲು ಕೆಳಗಿನ ಪ್ರಕಟನೆಯನ್ನು ತೆಗೆದಿದ್ದಾರೆ.

ಭಾಷಾವಾರ ಸ್ವತಂತ್ರ ಕರ್ನಾಟಕ ಪ್ರಾಂತ ನಿರ್ಮಾಣವು ಅವ್ಯವಹಾರ್ಯವೂ ಮುಂಬೈ ಇಲಾಖೆಯಲ್ಲಿ ಮೂರು ಪ್ರಾಂತಗಳಾದರೆ ಹೆಚ್ಚು ಖರ್ಚು ಹಿಡಿಯುತ್ತದೆಂದೂ ಕರ್ನಾಟಕವು ಉಪೇಕ್ಷಿಸಲ್ಪಟ್ಟದ್ದರೆ ಅಸೆಂಬ್ಲಿಯಲ್ಲಿಯ ಕರ್ನಾಟಕ ಮೆಂಬರರು ಉತ್ತಮ ರೀತಿಯಿಂದ ತಮ್ಮ ಬೇಡಿಕೆಗಳನ್ನು ಮಂಡಿಸುವರಾಗಬೇಕೆಂದೂ ಇತ್ಯಾದಿಯಾಗಿ ಗವ್ಹರ್ನರ ಸಾಹೇಬರು ಉದ್ಗಾರ ತೆಗೆದಿದ್ದಾರೆ. ಕರ್ನಾಟಕ ಪ್ರಾಂತದ ನಿರಂತರ ಮತ್ತು ಏಕಾಭಿಪ್ರಾಯದ ಅತ್ಯಂತ ದೊಡ್ಡ ಬೇಡಿಕೆಯಾದ ಸ್ವತಂತ್ರ ಪ್ರಾಂತ ನಿರ್ಮಾಣ ಪ್ರಶ್ನೆಯು ಮುಂಬೈ ಇಲಾಖೆಯಂಥ ದೊಡ್ಡ ಇಲಾಖೆಯ ಮುಖ್ಯಾಧಿಕಾರಿಗಳಿಂದ ಉದಾಸೀನ ಮಾಡಲ್ಪಡುವುದೆಂದರೆ ನಿರಾಶಾಜನಕವೂ, ಸಹಾನುಭೂತಿಪೂರ್ವಕವಾದ ವಿಚಾರಶೂನ್ಯವೂ ಆಗಿರುವದೆಂದು ಖಂಡಿತವಾಗಿ ಹೇಳಬಹುದು. ಹೊಸದಾಗಿ ಆಡಳಿತ ಸೂತ್ರಗಳನ್ನು ವಹಿಸಿರುವುದರಿಂದ ಅಜ್ಞಾನದಿಂದ ಗವ್ಹರ್ನರರು ಹೀಗೆ ಅಂದಿರುವರೆಂಬುದು ಸ್ಪಷ್ಟವಿದೆ. ಸ್ವತಂತ್ರ ಭಾಷಾವಾರದ ಪ್ರಾಂತ ನಿರ್ಮಾಣ ಪ್ರಶ್ನೆಯು ಮಾಂಟೆಗ್ ಚೇಮ್ಸ ಫರ್ಡ ರಿಪೋರ್ಟನಂಥ ವರದಿಗಳಲ್ಲಿ ಸ್ವೀಕರಿಸಲ್ಪಟ್ಟದೆಯಲ್ಲದೇ ಇತ್ತೀಚಿಗೆ ಬಿಹಾರ, ಓರಿಸಾ, ಸಿಂಧ ಪ್ರಾಂತಗಳು ಸ್ವತಂತ್ರವಾಗಿವೆ. ಮುಂಬೈ ಇಲಾಖೆಯ ನಾಲ್ಕು ಜಿಲ್ಲೆಗಳಲ್ಲದೆ ಮಂಗಳೂರು, ಬಳ್ಳಾರಿ, ಕುರ್ಗಗಳನ್ನು ಕರ್ನಾಟಕವು ಒಳಗೊಂಡಿದೆಯೆಂಬುದನ್ನು ಗವ್ಹರ್ನರರು ಮರೆಯದಿರಲಿ. ಅದರ ಜನಸಂಖ್ಯೆಯು ೬೫ ಲಕ್ಷಕ್ಕಿಂತ ಹೆಚ್ಚಾಗಿರುವದೆಂದೂ, ಒಟ್ಟು ಆದಾಯವು ಸಾಧಾರಣ ೩ ಕೋಟಿ ರೂ. ಗಳಾಗುವವೆಂದೂ ಗವ್ಹರ್ನರರು ತಿಳಿದುಕೊಳ್ಳಲಿ. ಕರ್ನಾಟಕಕ್ಕೆ ಉತ್ತಮ ಲಕ್ಷಪೂರೈಸಲ್ಪಡುವದಿಲ್ಲವೆಂದೂ ಅಥವಾ ಅದು ಉಪೇಕ್ಷಿಸಲ್ಪಟ್ಟದೆಯೆಂದೂ ಕನ್ನಡಿಗರು ತಮ್ಮ ಬೇಡಿಕೆಯನ್ನು ಈಗ ಮುಂದುವರಿಸಿಲ್ಲ.

ಸ್ವತಂತ್ರ ಕರ್ನಾಟಕ ಪ್ರಾಂತವೇ ತನ್ನ ಸರ್ವಾಂಗ ಸುಂದರ ಉನ್ನತಿಯನ್ನು ಮಾಡಿಕೊಳ್ಳುವದಲ್ಲದೇ ಭಾರತದ ಅಭಿವೃದ್ಧಿಗೂ ಸಹಾಯವಾಗಬಲ್ಲದು. ಕಾಂಗ್ರೆಸ್ ಆಡಳಿತದಲ್ಲಿ ಕರ್ನಾಟಕವು ಸ್ವತಂತ್ರಪ್ರಾಂತವೆಂದು ಗಣಿಸಲ್ಪಟ್ಟಂದಿನಿಂದ ಅದರ ಭಾಷೆ ಕಲೆ, ಉದ್ಯೋಗ, ವ್ಯಾಪಾರ ಇತಿಹಾಸ ಮುಂತಾದ ಸಂಗತಿಗಳಲ್ಲಿ ಸಾಮೂಹಿಕ ಜಾಗೃತಿ ಮತ್ತು ಪ್ರಗತಿಗಳಾಗುತ್ತ ಬಂದಿವೆ. ಭಾಷೆ, ಸಾಹಿತ್ಯ, ವ್ಯಾಪಾರ, ಆಯುರ್ವೇದ ಮುಂತಾದ ವಿವಿಧ ಕ್ಷೇತ್ರಗಳಲ್ಲಿ ಇಡೀ ಕರ್ನಾಟಕಕ್ಕೆ ಸಾಮಾನ್ಯವಾದ ಅನೇಕ ಸಂಸ್ಥೆಗಳು ಇಂದು ಕಂಗೊಳಿಸುತ್ತವೆ, ಆದಕಾರಣ ತಾತ್ವಿಕ ದೃಷ್ಟ್ಯಾ ಮತ್ತು ಕರ್ನಾಟಕ ದೃಷ್ಟ್ಯಾ ಕರ್ನಾಟಕದ ಬೇಡಿಕೆಯು ಯೋಗ್ಯವಿದ್ದು ಸಹಾನುಭೂತಿಪೂರ್ವಕವಾಗಿ ವಿಚಾರಿಸಲ್ಪಟ್ಟರೆ ಮಾನ್ಯವಾಗುವದರಲ್ಲಿ ಸಂಶಯವಿಲ್ಲ. ಈ ಮಹಾ ಕಾರ್ಯಕ್ಕೆ ಸಕಲರೂ ಶ್ರಮಿಸಬೇಕೆಂದು ನಾನು ವಿಜ್ಞಾಪಿಸುತ್ತೇನೆ.

---

# ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳಲ್ಲಿ ಸುಧಾರಣೆ.

ಮುಂಬೈ ಅಸೆಂಬ್ಲಿಯಲ್ಲಿ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳ ಮಂತ್ರಿಗಳಾದ ಶ್ರೀ. ಪಾಟೀಲರು ಒಂದು ಗೊತ್ತುವಳಿಯನ್ನು ತಂದಿದ್ದಾರೆ. ಅದರ ಮುಖ್ಯಾಂಶ ಹೀಗಿದೆ—

"ಸರಕಾರದಿಂದ ಸಭಾಸದರನ್ನು ನಿಯಮಿಸುವ ಪದ್ಧತಿಯು ನಿಂತುಹೋಗಬೇಕು. ಮತ್ತು ಆದಿಹಿಂದು, ಸ್ತ್ರೀಯರು ಮೊದಲಾದವರಿಗೆ ಸಂಯುಕ್ತ ಪ್ರಾತಿನಿಧ್ಯದ ಪ್ರಕಾರ ಸ್ಥಳಗಳನ್ನು ಕಾದಿಡಬೇಕು."

ಡಾ. ಆಂಬೇಡಕರರು ಈ ಗೊತ್ತುವಳಿಯ ಸಂಬಂಧವಾಗಿ ಹೀಗೆ ಮಾತನಾಡಿದರು— "ಇದರಿಂದ ಸ್ವಲ್ಪಮಟ್ಟಿಗೇನೋ ಹಿತವಾಗಬಹುದು. ಆದರೆ ಹಿಂದು ಮುಸಲ್ಮಾನರ ಐಕಮತ್ಯಕ್ಕೆ ಇದೇನೂ ಕಾರಣವಾಗುವುದಿಲ್ಲ. ಮತವನ್ನು ಕೊಡುವಾಗ ಇಬ್ಬರೂ ಕೂಡಿ ಹೋಗಬಹುದು. ಆ ಮೇಲೆ ಅವರಿಬ್ಬರೂ ಎಲ್ಲಾ ಸಂಗತಿಗಳಲ್ಲಿಯೂ ಭಿನ್ನವಾಗಿಯೇ ಇರುವರು. ಸಹಭೋಜನ ಮತ್ತು ಶರೀರಸಂಬಂಧಗಳ ವಿನಾ ಹಿಂದುಗಳಲ್ಲಿಯ ಜಾತಿಭೇದವು ನಿವಾರಣೆಯಾಗುವುದಿಲ್ಲ."

ಮುಸಲ್ಮಾನರಿಗೆ ಈಗಿರತಕ್ಕ ಪ್ರತ್ಯೇಕ ಪ್ರಾತಿನಿಧ್ಯವು ಇದರಿಂದ ಹೋಗುವುದು. ಅವರಿಗಾಗಿ ಸ್ಥಳಗಳನ್ನು ಕಾದಿಟ್ಟು ಸಂಯುಕ್ತ ಪ್ರಾತಿನಿಧ್ಯದ ಪದ್ಧತಿಯನ್ನು ಅನುಸರಿಸಬೇಕಾಗಬಹುದು. ಎಂಬುದಾಗಿ ಮುಸಲ್ಮಾನ್ ಸಭಾಸದರು ಈ ಗೊತ್ತುವಳಿಗೆ ವಿರೋಧಾಭಿಪ್ರಾಯವನ್ನು ಸೂಚಿಸಿದರು.

# ಆಶ್ಚರ್ಯಕರ ಚಿಕಿತ್ಸೆ !

ಕಲಕತ್ತಾ ಪಟ್ಟಣದಲ್ಲಿ ೧೭೨ ವರುಷಗಳ ಒಬ್ಬ ಯೋಗಿಗಳಿದ್ದಾರೆ. ಇವರು ಪ್ರಾಕೃತಿಕ ಚಿಕಿತ್ಸೆಯಿಂದ ವೃದ್ಧರನ್ನು ತರುಣರನ್ನಾಗಿ ಮಾಡಬಲ್ಲರು. ಪಂಡಿತ ಮದನ ಮೋಹನ ಮಾಲವೀಜಿಯವರು ಈಗ ಅಲ್ಲಿಗೆ ಅವರಲ್ಲಿ ಚಿಕಿತ್ಸೆ ಹೊಂದಲು ಹೋಗಿದ್ದಾರೆ. ಈ ಚಿಕಿತ್ಸೆಯು ಪರಿಣಾಮಕಾರಿಯಾದರೆ ಈಗ ಇವರು ೭೭ ವರ್ಷದವರಾಗಿದ್ದರೂ ೫೭ ವರ್ಷದವರಂತೆ ದೇಹಬಲ, ಉತ್ಸಾಹಗಳುಳ್ಳವರಾಗುವರಂತೆ. ಈಗ ಆ ಯೋಗಿಗಳಿಗೆ ೧೭೨ ವರುಷಗಳಾಗಿದ್ದರೂ ೪೦ ವರುಷದವರಂತೆ ತೋರುತ್ತಿದ್ದಾರೆ! ಕಲಕತ್ತಾ ಪಟ್ಟಣದ "ಸ್ಟೇಸಿಮನ್" ಪತ್ರಿಕೆಯ ಸುದ್ದಿಗಾರರು ಈ ಸಂಗತಿಯನ್ನು ಪ್ರಕಟಿಸಿದ್ದಾರೆ.

---

# ಭಯಸೂಚಕ ಭವಿಷ್ಯ !

ಕರಾಚಿಯ ಪ್ರಸಿದ್ಧ ಜ್ಯೋತಿಷಜ್ಞರಾದ ಪಂಡಿತ ಶರ್ಮ ಎಂಬುವವರು ೧೯೩೮ ನೆಯ ಇಸವಿ ಭವಿಷ್ಯವನ್ನು ಹೇಳಿದ್ದಾರೆ. ಈ ವರುಷ ಜಗತ್ತಿನಲ್ಲಿ ಭಯಂಕರ ಕೋಲಾಹಲವು ನಡೆಯುವದಂತೆ. ಅಬಿಸೀನಿಯಾ ದೇಶವನ್ನು ಇಟಲಿ ಬಿಡಬೇಕಾಗುವುದು. ಯುರೋಪ ಖಂಡದಲ್ಲಿ ಯುದ್ಧದ ಭೀತಿಯಿದೆ. ಹಿಂದುಸ್ಥಾನದಲ್ಲಿಯೂ ಅನೇಕ ಅನಾಹುತಗಳೂ ರಾಜಕೀಯ ಚಟುವಟಿಕೆಗಳೂ ನಡೆಯುವವು. ಕಾಂಗ್ರೆಸ್ ಮಂತ್ರಿಮಂಡಲವು ಕೆಲಸವನ್ನು ಬಿಟ್ಟು ಹೊರಗೆ ಬರುವುದು. ಕೂಲಿಕಾರರ ಕೈಯಲ್ಲಿ ಬ್ರಿಟಿಶ್ ಪ್ರಭುತ್ವ ಬರುವುದು. ಹಿಂದುಸ್ಥಾನದ ರಾಜಕಾರಣವನ್ನು ಸಮಾಧಾನಗೊಳಿಸಲು ಕಾಂಗ್ರೆಸ್ ಪ್ರತಿನಿಧಿಗಳನ್ನು ಬ್ರಿಟಿಶ್ ಪಾರ್ಲಮೆಂಟ್ ಕರೆಸುವದು,




ಶಾ. ಶ. ೧೮೫೯ ನೆಯ ಪುಷ್ಯ ಬ|| ೯ ಸೋಮವಾರ.

# ಗವ್ಹರ್ನರರ ತಪ್ಪು ತಿಳುವಳಿಕೆ.

ಮುಂಬೈ ಪ್ರಾಂತದ ಗವ್ಹರ್ನರರಾದ ಸರ್. ಲುಮ್ಲೆಯುವರು ತಾ. ೧೭ ನೆಯ ದಿವಸ ಬೆಳಗಾವ ಜಿಲ್ಲಾ ಲೋಕಲ್ ಬೋರ್ಡಿನ ಮಾನಪತ್ರಕ್ಕೆ ಉತ್ತರ ಹೇಳುವಾಗ ಕರ್ನಾಟಕ ಏಕೀಕರಣವು ಅವ್ಯವಹಾರ್ಯವಾದುದೆಂದು ತಿಳಿಸಿದುದು ತುಂಬಾ ವಿಷಾದಕರವಾದ ಸಂಗತಿಯು. ಭಾಷಾನುಗುಣ್ಯವಾಗಿ ಪ್ರಾಂತರಚನೆಯಾಗಬೇಕೆಂಬ ಸರ್ವಸಮ್ಮತವಾದ ತತ್ವವನ್ನೂ, ಕರ್ನಾಟಕದ ಜನಸಂಖ್ಯೆ, ಆದಾಯ, ಪ್ರಾಕೃತಿಕ ಸೌಲಭ್ಯಗಳ ಇರುವಿಕೆಯನ್ನೂ, ಇದರ ಇತಿಹಾಸ, ಸಾಹಿತ್ಯ, ಸಂಸ್ಕೃತಿಗಳ ಮಹತ್ವವನ್ನೂ ಗವ್ಹರ್ನರ್ ಸಾಹೇಬರು ಚೆನ್ನಾಗಿ ಅರಿತುಕೊಂಡು ಕನ್ನಡಿಗರಿಗೆ ಬಹು ದಿನಗಳಿಂದಲೂ ಪ್ರಾಣಸ್ವರೂಪವಾದ ಈ ವಿಷಯದ ಕಡೆಗೆ ಸಹಾನುಭೂತಿಯಿಂದ ಲಕ್ಷಿಸಿದ್ದರೆ ಹೀಗೆ ಇದು ಅವ್ಯವಹಾರ್ಯವಾದ ವಿಷಯುವೆಂದು ತಟ್ಟನೆ ಹೇಳಿಬಿಡುತ್ತಿರಲಿಲ್ಲ. ಇವರ ಈ ತಪ್ಪು ತಿಳುವಳಿಕೆಯು ನಿವಾರಣೆಯಾಗಬೇಕಾದರೆ ಕನ್ನಡ ನಾಡಿನವರು ಈ ಸಂಬಂಧವಾಗಿ ಪ್ರಚಂಡವಾದ ಚಟುವಟಿಕೆಯನ್ನು ಕೂಡಲೆ ಪ್ರಾರಂಭಿಸಬೇಕು,

ಕನ್ನಡ ನಾಡಿನಿಂದ ಮುಂಬೈ, ಮದ್ರಾಸ್ ಅಸೆಂಬ್ಲಿಗಳಲ್ಲಿರತಕ್ಕ ಎಲ್ಲ ಪಕ್ಷಗಳ ಸಭಾಸದರೂ ಈ ವಿಷಯದಲ್ಲಿ ಏಕಾಭಿಪ್ರಾಯದಿಂದ ಪರಿಣಾಮಕಾರಿಯಾದ ಹೋರಾಟವನ್ನು ಪ್ರಾರಂಭಿಸಬೇಕು. ಕಾಂಗ್ರೆಸ್ ಪಕ್ಷವು ಭಾಷಾನುಗುಣ್ಯವಾದ ಯಾವ ನ್ಯಾಯ ತತ್ವವನ್ನು ಮಾನ್ಯಮಾಡಿದೆಯೋ ಅದನ್ನು ಕರ್ನಾಟಕದ ವಿಷಯದಲ್ಲಿ ಆಚರಣೆಗೆ ತರುವುದಕ್ಕೋಸ್ಕರ ಕಾಂಗ್ರೆಸ್ ಮಂತ್ರಿಮಂಡಲಗಳು ಪ್ರಯತ್ನಿಸಲೇಬೇಕೆಂದು ಅವುಗಳ ಮೇಲೆ ತಕ್ಕವಿರುವ ಎಲ್ಲ ಒತ್ತಾಯಗಳನ್ನೂ ಕನ್ನಡಿಗರು ಮಾಡಲೇಬೇಕು.

ಕನ್ನಡಿಗರು ಈ ಕಾಲದಲ್ಲಿ ಈ ಸಂಬಂಧವಾಗಿ ಮಾಡತಕ್ಕ ಚಟುವಟಿಕೆಯ ಮೇಲಿಂದಲೇ ಇವರಿಗೆ ಈ ವಿಷಯವು ಎಷ್ಟು ಮಹತ್ವದ್ದಾಗಿದೆಯೆಂಬುದು ಗವ್ಹರ್ನರರ ಲಕ್ಷಕ್ಕೆ ಬರುವುದು. ಅಲ್ಲಲ್ಲಿಯ ಸಭೆಗಳಲ್ಲಿ ಕೇವಲ ನಿರ್ಣಯಗಳು ಮಾತ್ರ ಆದರೆ ಗವ್ಹರ್ನರರ ಈ ತಪ್ಪು ತಿಳುವಳಿಕೆಯು ಹೋಗಲಾರದು. ಬ್ರಿಟಿಶ್ ಕರ್ನಾಟಕವು ಸಾಧಾರಣ ೮೦ ಲಕ್ಷ ಜನಸಂಖ್ಯೆಯುಳ್ಳದ್ದಾಗಿಯೂ ೨|| ಕೋಟಿ ರೂ. ವಾರ್ಷಿಕಾದಾಯವುಳ್ಳದ್ದಾಗಿಯೂ ಇರುವಾಗ ಇದೇಕೆ ಪ್ರತ್ಯೇಕ ಪ್ರಾಂತವಾಗಬಾರದು? ೭೫ ಲಕ್ಷ ಜನಸಂಖ್ಯೆಯುಳ್ಳ ಆಸಾಮು, ೩೨ ಲಕ್ಷ ಜನಸಂಖ್ಯೆಯುಳ್ಳ ಸಿಂಧ, ಇವೇಕೆ ಪ್ರತ್ಯೇಕ ಪ್ರಾಂತಗಳಾದವು? ಈ ಎಲ್ಲ ಸಂಗತಿಗಳ ಕಡೆಗೆ ಗವ್ಹರ್ನರ್ ಸಾಹೇಬರು ಲಕ್ಷಿಸಬೇಕಾದರೆ ಕನ್ನಡಿಗರ ಚಟುವಟಿಕೆಯು ಪ್ರಚಂಡ ಸ್ವರೂಪವನ್ನು ಈ ಕಾಲದಲ್ಲಿ ಹೊಂದಲೇಬೇಕು.

ಕೇವಲ ಅಸೆಂಬ್ಲಿ ಸಭಾಸದರ ಕಡೆಗೇನೇ ವಹಿಸಿ, ಅಥವಾ ಮಂತ್ರಿಮಂಡಲವನ್ನೇ ನಂಬಿ, ಕನ್ನಡ ಜನಸಾಮಾನ್ಯವು ಈಗ ಸುಮ್ಮನಿರಕೂಡದು. ಬಂಗಾಲದ ವಿಭಾಗದ ಕಾಲಕ್ಕೆ ಹೇಗೆ ಪ್ರಚಂಡ ಚಟುವಟಿಕೆಯನ್ನು ಬಂಗಾಲಿಗಳು ಹೂಡಿದ್ದರೋ ಹಾಗೆಯೇ ಈಗ ನ್ಯಾಯಸಮ್ಮತವಾದ ಎಲ್ಲ ರೀತಿಗಳಿಂದಲೂ ಕನ್ನಡಿಗರು ಕರ್ನಾಟಕ ಏಕೀಕರಣದ ವಿಷಯವನ್ನು ಕುರಿತು ಪ್ರಯತ್ನಿಸಬೇಕು. ಹಾಗೆ ಮಾಡಿದರೇನೇ ಅಸೆಂಬ್ಲಿಯ ಸಭಾಸದರಿಗೂ ಮಂತ್ರಿಮಂಡಲಕ್ಕೂ ಈ ವಿಷಯದ ಕಡೆಗೆ ಕೂಡಲೇ ಲಕ್ಷಿಸಿ ಪ್ರಯತ್ನಿಸಲು ಬಲ ಬರುತ್ತದೆ. ಗವ್ಹರ್ನರ ಸಾಹೇಬರು ಆಗ ಈ ವಿಷಯವನ್ನು ಲಕ್ಷಿಸಲೇಬೇಕಾಗುವುದು. ಕರ್ನಾಟಕ ಏಕೀಕರಣ ಸಂಘದವರು ಈ ವಿಷಯದಲ್ಲಿ ಜಾಗ್ರತೆ ಯೋಚಿಸಿ, ಪರಿಣಾಮಕಾರಿಯಾದ ಕಾರ್ಯಕ್ರಮಗಳನ್ನು ಗೊತ್ತುಪಡಿಸಿ, ಪ್ರಚಂಡವಾದ ಹೋರಾಟವು ಕನ್ನಡ ನಾಡಿನಲ್ಲಿ ಪ್ರಾರಂಭವಾಗುವಂತೆ ಈಗಲಾದರೂ ಪ್ರಯತ್ನಿಸುವರೆಂದೇ ನಾವು ನಂಬಿದ್ದೇವೆ.

# ಶ್ರೀ. ದಿವಾಕರರ ಪ್ರಾರ್ಥನೆ.

ಕರ್ನಾಟಕದ ಒಬ್ಬ ಪ್ರಮುಖ ಮುಂದಾಳುಗಳಾದ ಶ್ರೀ. ದಿವಾಕರ ರಂಗನಾಥರಾಯರು ಮೊನ್ನೆ ರಾಣೆಬೆನ್ನೂರಲ್ಲಿ ನಡೆದ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಅಧಿಕಾರಿ ವರ್ಗ ಮತ್ತು ಕಾರ್ಯಕಾರಿ ಮಂಡಲಗಳ ಆರಿಸುವಿಕೆಯ ವಿಷಯದಲ್ಲಿ ನಡೆದ ಕಾರ್ಯಕಲಾಪಗಳನ್ನು ಕುರಿತು ಹೊರಡಿಸಿದ ಪ್ರಕಟನೆಯನ್ನು ನೋಡಿದರೆ ಸಕಲರಿಗೂ ತುಂಬಾ ವಿಷಾದವುಂಟಾಗದೆ ಇರಲಾರದು. ಆ ಪ್ರಕಟನೆಯಲ್ಲಿ ತತ್ವನಿಷ್ಠರಾದ ಶ್ರೀ. ದಿವಾಕರರಂತಹ ಮುಂದಾಳುಗಳು ಈ ಕೆಳಗಿನಂತೆ ಹೇಳುವ ಪ್ರಸಂಗ ಬಂದುದು ಕರ್ನಾಟಕಕ್ಕೇನೇ ಕಲಂಕವೆಂದು ನಾವು ಅತ್ಯಂತ ವಿಷಾದದಿಂದ ಹೇಳಬೇಕಾಗಿದೆ.

"ಈಗ ಹದಿನೆಂಟು ವರುಷಗಳಲ್ಲಿ ನಾನು ನೋಡುತ್ತ ಬಂದಂತೆ ಈ ಬಗೆಯ ವಿಷಯುಕ್ತ ಸಂಶಯ ವಾತಾವರಣವನ್ನು ನಾನು ಎಂದಿಗೂ ಕಂಡಿದ್ದಿಲ್ಲ. ಈಗ ಆದ ಪಕ್ಷಪಂಗಡಗಳು ತತ್ವಗಳನ್ನವಲಂಬಿಸಿಲ್ಲ. ಆದರೆ ವ್ಯಕ್ತಿಗಳನ್ನು ಪೂರ್ವ ಗ್ರಹಗಳನ್ನು ಹಾಗೂ ಪ್ರಚಾರವನ್ನು ಅವಲಂಬಿಸಿವೆ ಎಂದು ನನ್ನ ಸ್ಪಷ್ಟ ಮತವಿರುವದು."

ಇಂಥ ಸ್ಥಿತಿಗೆ ತಾವೇ ಹೊಣೆಗಾರರೆಂದು ಹೇಳಿದುದು ಇವರ ಸೌಜನ್ಯದ್ಯೋತಕವೇ ವಿನಾ ನಿಜಸ್ಥಿತಿಯಲ್ಲ. ಆದುದರಿಂದ ಈ ಕ ಮ ರ್ ವಿ ೀ ರ ರ ಇಷ್ಟದಂತೆ ಇದೇ ೨೭ ನೆಯ ತಾರೀಖಿಗೆ ಕಾಂಗ್ರೆಸ್ ಕಾರ್ಯಕರ್ತರಲ್ಲಿ ಪರಸ್ಪರ ಪ್ರೇಮವಿಶ್ವಾಸಗಳುಂಟಾ

ಗುವಂತೆ ರಾಷ್ಟ್ರ ಸೇವಕರಾದ ಸಕಲ ಮಹಾಶಯರೂ ಅಂತಃಕರಣ ಪೂರ್ವಕ ಪ್ರಯತ್ನಿಸಬೇಕೆಂದು ನಾವೂ ಶ್ರೀ. ದಿವಾಕರರಂತೆ ಪ್ರಾರ್ಥಿಸಿಕೊಳ್ಳುತ್ತೇವೆ.

## ಕರ್ನಾಟಕದ ಸ್ವತಂತ್ರ ಪ್ರಾಂತ.

ಮುಂಬೈ ಗವ್ಹರ್ನರರಾದ ಸರ್ ಲುಮ್ಲೀಯವರು ಕರ್ನಾಟಕವನ್ನು ಸ್ವತಂತ್ರ ಪ್ರಾಂತವನ್ನಾಗಿ ಮಾಡುವುದು ವ್ಯಾವಹಾರಿಕ ರಾಜಕಾರಣವಲ್ಲವೆಂದು ಬೆಳಗಾವಿಯಲ್ಲಿ ತಾ. ೧೭ ನೆಯ ದಿವಸ ಹೇಳಿದ್ದರಿಂದ ಪುಣೆಯ "ಜ್ಞಾನ ಪ್ರಕಾಶ" ಎಂಬ ಸುಪ್ರಸಿದ್ಧ ದಿನ ಪತ್ರಿಕೆಯ ತಾರೀಖು ೧೮ ನೆಯ ಸಂಚಿಕೆಯಲ್ಲಿ ಸಂಪಾದಕ ಮಹಾಶಯರು "ಕರ್ನಾಟಕದ ಸ್ವತಂತ್ರ ಪ್ರಾಂತ" ಎಂಬ ಅಗ್ರ ಲೇಖನವನ್ನು ಬರೆದು ಈ ಪ್ರಕಾರ ತಿಳಿಸಿದ್ದಾರೆ—

"ಕರ್ನಾಟಕವನ್ನು ಒಂದು ಪ್ರತ್ಯೇಕ ಪ್ರಾಂತವನ್ನಾಗಿ ಮಾಡಬೇಕೆಂದು ಕರ್ನಾಟಕದ ಬ್ರಾಹ್ಮಣ, ಬ್ರಾಹ್ಮಣೇತರ, ಲಿಂಗಾಯತ ಮೊದಲಾದ ಎಲ್ಲ ವರ್ಗಗಳ ಪ್ರಮುಖರೂ ಏಕಾಭಿಪ್ರಾಯವುಳ್ಳವರಾಗಿದ್ದಾರೆ. ಕರ್ನಾಟಕವನ್ನು ಸ್ವತಂತ್ರ ಪ್ರಾಂತವನ್ನಾಗಿ ಮಾಡಲು ಕಾಂಗ್ರೆಸ್ ಪಕ್ಷವು ಒಪ್ಪಿಗೆಯನ್ನು ಕೊಟ್ಟು ಯೋಗ್ಯ ಸಮಯ ಬಂದಾಗ ಅದನ್ನು ಕಾರ್ಯರೂಪದಲ್ಲಿ ತರಲು ಆಶ್ವಾಸನವನ್ನೂ ಕೊಟ್ಟಿದೆ. ನೆಹರು ವರದಿಯಲ್ಲಿಯು ಕೂಡಾ ಇದು ಮಾನ್ಯಮಾಡಲ್ಪಟ್ಟಿದೆ.

ಸಾಯಮನ್ ಕಮಿಶನ್ನಿನ ಮೇಲೆ ಕಾಂಗ್ರೆಸ್ ಮತ್ತು ಇತರ ಸಂಸ್ಥೆಗಳು ಬಹಿಷ್ಕಾರ ಹಾಕದೆ ಇದ್ದಿದ್ದರೆ ಅದರ ಮುಂದೆಯೂ ಕರ್ನಾಟಕ ಏಕೀಕರಣವು ಅಧಿಕೃತವಾಗಿಯೇ ಇಡಲ್ಪಡುತ್ತಿತ್ತು. ಸಿಂಧ ಮತ್ತು ಓರಿಸಾ ಪ್ರಾಂತಗಳಂತೆ ಪ್ರಾಯಶಃ ಕರ್ನಾಟಕ ಏಕೀಕರಣಕ್ಕೂ ಸಾಯಮನ್ ಕಮಿಶನ್ ಒಪ್ಪಿಗೆ ಕೊಡುವ ಸಂಭವವಿತ್ತು. ಆದರೆ ಕಾಂಗ್ರೆಸ್ಸಿನ ಬಹಿಷ್ಕಾರದಿಂದಲೂ ಕೆಲವು ಕರ್ನಾಟಕದ ಮುಂದಾಳುಗಳ ಔದಾಸೀನ್ಯದಿಂದಲೂ ಈ ವಿಷಯವು ಪರಿಣಾಮಕಾರಿಯಾಗಲಿಲ್ಲ.

ಇಂಥ ಮಹತ್ವದ ವಿಷಯಕ್ಕೆ ಗವ್ಹರ್ನರರು ಹೀಗೆ ಉತ್ತರವನ್ನು ಹೇಳುವರೆಂದು ಯಾರೂ ನಿರೀಕ್ಷಿಸಿರಲಿಲ್ಲ. ಗವ್ಹರ್ನರರ ಈ ಉತ್ತರವು ಮುಂದಾಲೋಚನೆಯಿಲ್ಲದ ಮತ್ತು ಮುತ್ಸದ್ದಿಗಳಿಗೆ ಒಪ್ಪದಂಥಾದ್ದಾಗಿದೆ. ಈಗ ಕರ್ನಾಟಕವು ಹರಿದು ಹಂಚಲ್ಪಟ್ಟಿದ್ದರಿಂದ ಕನ್ನಡ ಸಾಂಸ್ಕೃತಿಕ ಮತ್ತು ರಾಜಕೀಯ ಏಕೀಕರಣಕ್ಕೆ ಬಾಧಕವುಂಟಾಗಿದೆ. ಮದ್ರಾಸ್ ಅಥವಾ ಮುಂಬೈ ಶಾಸನ ಮಂಡಲಗಳಲ್ಲಿ ಕನ್ನಡ ಸಭಾಸದರ ಪ್ರಬಲ ಬಹುಮತವಿಲ್ಲದ್ದರಿಂದ ಶಾಸನಮಂಡಲಗಳೂ ಕರ್ನಾಟಕದ ವಿಷಯವನ್ನು ಉಪೇಕ್ಷಿಸುವುದು ಅಪರಿಹಾರ್ಯವಾಗಿದೆ. ಓರಿಸಾ ಮತ್ತು ಸಿಂಧ ಪ್ರಾಂತಗಳಿಗಿಂತ ಕರ್ನಾಟಕ ಪ್ರಾಂತವು ಆದಾಯ ವೆಚ್ಚಗಳ ವಿಷಯದಲ್ಲಿ ಹೆಚ್ಚು ಸ್ವಾವಲಂಬಿಯಾಗುವುದೆಂದು ತಜ್ಞರು ಹೇಳುತ್ತಿದ್ದಾರೆ. ಆದಕಾರಣ ಸರಕಾರವು ಕನ್ನಡಿಗರ ಆಕಾಂಕ್ಷೆಯನ್ನು ತೃಪ್ತಿಪಡಿಸಲು ಅವಕಾಶಕೊಡಬೇಕು. ನಾ. ಲುಮ್ಲೀಯವರ ಅಭಿಪ್ರಾಯವೇ ಕೊನೆಯದೆಂದು ತಿಳಿಯದೆ ಕನ್ನಡಿಗರು ಪ್ರಯತ್ನಿಸಬೇಕು. ಮಹಾರಾಷ್ಟ್ರವು ಕನ್ನಡಿಗರ ಆಕಾಂಕ್ಷೆಗೆ ವ್ಯತ್ಯಯವನ್ನು ಉಂಟುಮಾಡಲು ಇಚ್ಛಿಸುವುದಿಲ್ಲ."

## ಗವ್ಹರ್ನರರು ಅನ್ಯಾಯ ಮಾಡಿದರು.

### ಶ್ರೀ ಬಳವಂತರಾಯರ ಪ್ರಕಟನೆ.

ಗವ್ಹರ್ನರರ ಅನ್ಯಾಯದ ಮಾತುಗಳನ್ನು ಖಂಡಿಸಲು ಮತ್ತು ಕನ್ನಡಿಗರು ನಿರಾಶರಾಗದೆ ಹೋರಾಡಲು ಅಖಿಲ ಕರ್ನಾಟಕ ಏಕೀಕರಣ ಸಂಘದ ಚೇರಮನ್ನರಾದ ಶ್ರೀ. ದಾತಾರ ಬಳವಂತರಾಯರು ಒಂದು ಪ್ರಕಟನೆಯನ್ನು ಕಳಿಸಿದ್ದು ಅದರ ಸಾರಾಂಶವನ್ನು ಇಲ್ಲಿ ಕೊಡಲಾಗಿದೆ.

### ಪ್ರಕಟನೆ.

"ಗವ್ಹರ್ನರರು ನಿರಂಕುಶ ಪ್ರಭುತ್ವದ ರೀತಿಯಲ್ಲಿ ಕರ್ನಾಟಕ ಏಕೀಕರಣದ ಬಗ್ಗೆ ಮಾತನಾಡುವದನ್ನು ನೋಡಿದರೆ ಅತ್ಯಂತ ವಿಷಾದವೆನಿಸುತ್ತದೆ.

ಗವ್ಹರ್ನರರು ಮಂತ್ರಿಗಳನ್ನು ವಿಚಾರಿಸಿ ಅಥವಾ ಮಂತ್ರಿಗಳಿಗೆ ಬಿನ್ನವಿಸಿರೆಂದು ಹೇಳದೆ ಹೀಗೆ ಮಾತನಾಡುವದೆಂದರೆ ಸದ್ಯದ ಹೊಸ ಆಡಳಿತಕ್ಕೆ ವಿಘಾತಕವು. ಧಾರವಾಡದಲ್ಲಿ ಗವ್ಹರ್ನರರ ಧ್ವನಿಯು ಎಷ್ಟೋ ಕುಗ್ಗಿ ಹೋಗಿರುವದು.

ಬಂಗಾಲ, ಆಸಾಮ, ಬಿಹಾರ, ಓರಿಸಾ, ಮತ್ತು ಸಿಂಧ ಪ್ರಾಂತಗಳು ಸ್ವತಂತ್ರವಾಗಿಲ್ಲವೆ? ವಂಗಭಂಗವು ತಡೆಯಲಿಲ್ಲವೆ? ಆರ್ಥಿಕ ದೃಷ್ಟಿಯಿಂದ ಕರ್ನಾಟಕವು ಸ್ವತಂತ್ರವಾಗಲು ಅರ್ಹವಿಲ್ಲವೆಂದು ಸಿದ್ಧಮಾಡಲು ಶಕ್ಯವೆ? ಸ್ವತಂತ್ರ ಪ್ರಾಂತ ನಿರ್ಮಾಣದ ಕೂಗು ಕರ್ನಾಟಕದಲ್ಲಿ ವ್ಯಾಪಿಸಿಲ್ಲವೆ? ಮುಂಬೈ ಕನ್ನಡ ಭಾಗಗಳಲ್ಲದೆ ಮದ್ರಾಸ ಮತ್ತು ಕರ್ನಾಟಕದ ಬಹು ಭಾಗಗಳು ಭಾವೀ ಕರ್ನಾಟಕ ಪ್ರಾಂತದಲ್ಲಿ ಸಮಾವೇಶವಾಗುತ್ತವೆಂಬುದನ್ನು ಗವ್ಹರ್ನರ ಸಾಹೇಬರು ಮರೆತಂತೆ ಕಾಣುತ್ತದೆ. ಈ ಪ್ರಾಂತದ ವಿಸ್ತಾರವು ೩೫ ಸಾವಿರ ಚೌರಸ ಮೈಲುಗಳು. ೭೦ ಲಕ್ಷ ಜನಸಂಖ್ಯೆ. ೩ ಕೋಟಿ ರೂ. ಉತ್ಪನ್ನ ಫೆಡರೇಶನ್ ಯಶಸ್ವಿಯಾಗಬೇಕಾದರೆ ಸಣ್ಣ ಸಣ್ಣ ಪ್ರಾಂತಗಳು ಅಗತ್ಯವಿಲ್ಲವೆ? ೧೨ ಕೋಟಿ ಜನಸಂಖ್ಯೆಯುಳ್ಳ ಅಮೇರಿಕೆಯ ಸಂಯುಕ್ತ ಸಂಸ್ಥಾನದಲ್ಲಿ ೪೭ ಪ್ರಾಂತಗಳಿದ್ದು, ೨೮ ಕೋಟಿ ಜನಸಂಖ್ಯೆಯುಳ್ಳ ಬ್ರಿಟಿಷ್ ಇಂಡಿಯಾದಲ್ಲಿ ೨೦ ಪ್ರಾಂತಗಳಾದರೂ ಆಗಬಾರದೆ?

ಮುಂಬೈ, ಮದ್ರಾಸ ಪ್ರಾಂತಗಳಲ್ಲಿ ಸ್ವತಂತ್ರ ಪ್ರಾಂತ ನಿರ್ಮಾಣ ಪ್ರಶ್ನೆಯಲ್ಲಿ ಉದಾಸೀನ ಮಾಡಲ್ಪಟ್ಟಿರುವದು. ಕರ್ನಾಟಕದ ಘನತೆ ಅಭಿವೃದ್ಧಿಗಳು ಸ್ವತಂತ್ರ ಪ್ರಾಂತದಿಂದಲೂ ಹೆಚ್ಚುವವು.

ಕರ್ನಾಟಕವು ೧|೫ ಕಂದಾಯ ಕೊಡುತ್ತಿದ್ದರೂ ಮುಂಬೈ ಅಸೆಂಬ್ಲಿಯಲ್ಲಿ ತಕ್ಕ ಪ್ರಾತಿನಿಧ್ಯವಿಲ್ಲ. ಕೆಳಮನೆಯಲ್ಲಿ ೧೭೫ ಕ್ಕೆ ೨೮ ಮತ್ತು ಮೇಲ್ಮನೆಯಲ್ಲಿ ೪ ನಮಗೆ ತಕ್ಕ ಪ್ರಾತಿನಿಧ್ಯವಲ್ಲ. ಗವ್ಹರ್ನರರು ಚನ್ನಾಗಿ ಅಭ್ಯಾಸ ಮಾಡಿದರೆ ತಾವು ಮಾಡಿದ ಅನ್ಯಾಯ ಅವರಿಗೆ ಗೊತ್ತಾಗುವದು.

ಕನ್ನಡಿಗರೆ ನಿರಾಶರಾಗದೇ ಹೋರಾಡೋಣ. ಕಾಂಗ್ರೆಸ್ ಮಂತ್ರಿಗಳ ಬೆಂಬಲವು ನಮಗಿದೆ. ಮಹಾತ್ಮಾ ಗಾಂಧಿ ಜವಾಹರರ ಆಶೀರ್ವಾದ ನಮಗಿದೆ. ದೀರ್ಘ ಪ್ರಯತ್ನವನ್ನು ಮಾಡಿ ವಿಘ್ನಗಳನ್ನು ಕಾಲಿಂದೊದೆದು ಸಿದ್ಧಿ ಹೊಂದೋಣ."

—ಲಾರ್ಡ ಲೋಥಿಯನ್ನರು ಗಾಂಧೀಜಿಯವರ ಬಳಿಯಲ್ಲಿ ತಾವು ಅತ್ಯಾನಂದದಿಂದ ಕಾಲಕಳೆದೆವೆಂದು ಹೇಳಿ ವರ್ಧಾದಲ್ಲಿ ಖಾದಿ ಬಟ್ಟೆಗಳನ್ನೂ ಕೈಯಿಂದ ಮಾಡಿದ ಕೆಲವು ಚರ್ಮದ ಸಾಮಾನುಗಳನ್ನೂ ಕೊಂಡುಕೊಂಡರು.

# ಚಿತಾಪುರದಲ್ಲಿಯ ವೀರಶೈವರ ಒಳಪಂಗಡಗಳ ಏಕೀಕರಣ.

ಮಹಾಶಯರೆ, ನಿಜಾಮು ಇಲಾಖಾ ಪೈಕಿ ಗುಲಬರ್ಗಾ ಜಿಲ್ಲೆಗೆ ಸೇರಿದ ಚಿತಾಪುರ ಗ್ರಾಮದಲ್ಲಿ ವೀರಶೈವರ ಒಳಪಂಗಡಗಳು ಬಹು ದಿವಸಗಳಿಂದಲೂ ಇದ್ದು ಅದನ್ನು ಕಳೆಯಲು ಒಂದೆರಡು ವೇಳೆ ಪ್ರಯತ್ನಮಾಡಿದರೂ ಸಾಧ್ಯವಾಗಿದ್ದಿಲ್ಲ. ಅದೇ ಕಾರ್ಯವು ಈಗ ಈಶ್ವರೇಚ್ಛೆಯಿಂದಲೋ ಅಥವಾ ಸಮಾಜ ಪುರುಷನ ಸುದೈವದಿಂದಲೋ ಯಶಸ್ವಿಯಾಯಿತೆಂದು ತಿಳಿಸಲು ತುಂಬಾ ಆನಂದವೆನಿಸುತ್ತದೆ.

ವೀರಶೈವರಲ್ಲಿಯ ಒಳಪಂಗಡಗಳು ಅಶಾಸ್ತ್ರೀಯವಾದವುಗಳೆಂತಲೂ ಅವುಗಳಿಂದ ಸಮಾಜದ ಕಾರ್ಯಗಳಿಗೆ ನಾನಾ ವಿಧ ವಿಘ್ನಗಳು ಬರುವವೆಂತಲೂ ಇಲ್ಲಿ ಈ ಮುಂಚೆಯೇ ಶ್ರೀಯುತ ಹರ್ಡೆಕರ ಮಂಜಪ್ಪನವರಿಂದ ಸ್ಥಾಪಿತವಾದ ವೀರಶೈವ ತರುಣಸಂಘದವರು ಮತ್ತು ಶ್ರೀಯುತ ಶಂಕರಪ್ಪಣ್ಣನವರು ಫೋಟೋಗ್ರಾಫರ್ ಗುರುಮಠಕಲ್ಲ ಇವರು ೧೫ ದಿವಸಗಳಿಂದಲೂ ತಮ್ಮ ಉದ್ಯೋಗಗಳನ್ನು ಬದಿಗೊತ್ತಿ ಪ್ರತಿಯೊಬ್ಬ ವೀರಶೈವರ ಮನೆಗಳಿಗೂ ದುಕಾನಗಳಿಗೂ ಹೋಗಿ ಅವರು ಬೈದರೂ ಏನೇ ಅಂದರೂ ಅತ್ತಕಡೆಗೆ ಲಕ್ಷ್ಯಸದೆ ಸಮಾಜ ಸೇವಾ ದೃಷ್ಟಿಯಿಂದ ಸದರಿ ಕಾರ್ಯವನ್ನು ಸ್ವರೂಪದಲ್ಲಿ ತಂದರು. ನಂತರ ಇದೇ ಸಂಕ್ರಮಣ ದಿವಸ ಅಂದರೆ ತಾ. ೧೪-೧-೩೮ ನೆಯ ಉದಯ ೭ ಗಂಟೆಗೆ ಸಮಾಜಕ್ಕೆ ಅಂಟಕೊಂಡಿರುವ ಅನೈಕ್ಯರೂಪವಾದ ಪೀಡೆಯನ್ನು. ಕಳೆಯಲುದ್ದಿಶ್ಯ ಶ್ರೀ. ಶಿವಶಂಕರಪ್ಪನವರ ಮಠದಲ್ಲಿ ಶೀಲವಂತ ದೀಕ್ಷಾಬಳಿಕೆ ಪಂಚಮಸಾಲಿ ರಡ್ಡಿ ಹಟಗಾರ ಕುಂಬಾರ ಜೀರ ಮೊದಲಾದ ಎಲ್ಲ ಪಂಗಡಗಳ ಮುಖ್ಯಸ್ಥರನ್ನು ಕರಿಸಿ ಶ್ರೀ. ಶಂಕರಪ್ಪಣ್ಣನವರು ವೀರಶೈವರಲ್ಲಿರುವ ಒಳಪಂಗಡಗಳು ಅಶಾಸ್ತ್ರೀಯವಾದವುಗಳೆಂತಲೂ ಸಮಾಜ ವಿರುದ್ಧವಾದವುಗಳೆಂತಲೂ ಅವರವರ ಉದ್ಯೋಗ ಕಸಬು ಇವುಗಳ ಮೇಲಿಂದ ಬಂದಿರುವವೆಂತಲೂ ಇವುಗಳನ್ನು ತೆಗೆದೊಗೆದರೆ ಯಾವ ತರದ ದೋಷಗಳೂ ಬರುವದಿಲ್ಲವೆಂತಲೂ ಚನ್ನಾಗಿ ಬೋಧಿಸಿದರು. ಎಲ್ಲರೂ ಒಪ್ಪಿಗೆಯನ್ನು ಕೊಡುವಷ್ಟರಲ್ಲಿ ೧೦ ಗಂಟೆಯಾದ ಮೂಲಕ ಪುನಃ ಮಧ್ಯಾನ್ಹದಮೇಲೆ ಎಲ್ಲರೂ ಸೇರಿ ವಿಷಯ ನಿರ್ಧರಿಸಬೇಕೆಂದು ತಮ್ಮ ತಮ್ಮ ಮನೆಗಳಿಗೆ ಹೋದರು. ಮತ್ತೆ ಮಧ್ಯಾನ್ಹ ೨ ಗಂಟೆಗೆ ಸಭೆ ಸೇರಿತು. ವಿಶೇಷವೇನೆಂದರೆ-

ಇಲ್ಲಿಯ ಸಾರ್ವಜನಿಕ ಹಿಂದು ಲೈಬ್ರರಿಯವರುಮತ್ತು ವೀರಶೈವ ತರುಣಸಂಘದವರು ಪರಸ್ಪರ ಸಹಾನುಭೂತಿ ಇರುವವಮೂಲಕ ಎರಡು ವಿಷಯುಗಳನ್ನು ಅಲ್ಲಿಯೇ ನಡೆಸಿದರು. ಮೊದಲು ವಾಚನಾಲಯ ಸೆಕ್ರೆಟರಿಗಳಾದ ರಾಮಚಂದ್ರಜಿ ಇವರು ಈ ಸಭೆಗೆ ಶ್ರೀ. ಗುರುಶಾಂತ ಶಾಸ್ತ್ರಿಗಳು ಅಳ್ಳಗಿ ಹಿರೇಮಠ ಚಂದ್ರಶೇಖರ ಶಾಲಾಧ್ಯಾಪಕ ಚಿತಾಪುರ ಇವರೇ ಅಧ್ಯಕ್ಷರಾಗಬೇಕೆಂದು ಸೂಚಿಸಿದರು. ಸಭೆಯ ಅನುಮತಿ ಮೇರೆಗೆ ಅಧ್ಯಕ್ಷರು ಸ್ಥಾನವನ್ನು ಸ್ವೀಕರಿಸಿದಮೇಲೆ ಶ್ರೀ. ಶಂಕರರಾವ ಮೊದಲಾದವರು ವಾಚನಾಲಯದ ಅವಶ್ಯಕತೆ ಹಿಂದು ಸಂಘಟನೆ ಬ್ರಹ್ಮಚರ್ಯ ಇವೇ ಮೊದಲಾದ ವಿಷಯಗಳ ಮೇಲೆ ಮಾತನಾಡಿದರು.

ನಂತರ ಅಧ್ಯಕ್ಷ ಮಹಾಶಯರು ಸದರಿ ವಿಷಯಗಳನ್ನೇ ಪುಷ್ಟೀಕರಿಸಿ ಶ್ರೋತೃಯರ ಮನಾನಂದವಾಗುವಂತೆ ತಮ್ಮ ಅಸ್ಖಲಿತವಾಣಿಯಿಂದ ಬೋಧಿಸಿದರು. ಜಯಘೋಷದೊಡನೆಯೇ ವಾಚನಾಲಯದ ಕಾರ್ಯಕ್ರಮಗಳು ಮುಗಿದವೇಲೆ ಪುನಃ ಉದಯದಲ್ಲಿ ಮಾತನಾಡಿದ ಪ್ರಕಾರ ಚರ್ಚೆಗೆ ಪ್ರಾರಂಭವಾಗಿ ಎಲ್ಲ ಪಂಗಡದವರು ವೀರಶೈವರಲ್ಲಿ ಎಲ್ಲಿಯ ವರೆಗೆ ಗಣಂಗಳ ಪ್ರವೇಶವಿರುವದೋ ಅಲ್ಲಿಯ ವರೆಗೂ ಸಹಪಂಕ್ತಿಯನ್ನು ಮಾಡಲೊಪ್ಪಿದರು. ಒಬ್ಬಿಬ್ಬ ಹಳಬರು ಮಾತ್ರ ಒಪ್ಪಿಗೆಯನ್ನು ಕೊಡಲಿಲ್ಲ. ಆದರೂ ಕಾರ್ಯವೇನೂ ಭಂಗವಾಗಲಿಲ್ಲ. ಮೊಟ್ಟ ಮೊದಲು ಶ್ರೀ. ಕಲ್ಲಪ್ಪಣ್ಣನವರು ರೇಷ್ಮಿ ಇವರು ಸ್ವತಃ ತಾವು ಆಚಾರಸ್ಥರು ತ್ರಿಕಾಲ ಲಿಂಗಪೂಜಾ ತತ್ಪರರಿದ್ದರೂ ಈ ಕಾರ್ಯವು ಶಾಸ್ತ್ರೀಯ ದೃಷ್ಟಿಯಿಂದಲೂ ಧಾರ್ಮಿಕ ದೃಷ್ಟಿಯಿಂದಲೂ ನಿರ್ದೋಷವಿರುವ ಮೂಲಕ ಎಲ್ಲಿಯ ವರೆಗೂ ಅಷ್ಟಾವರಣದ ವ್ಯವಸ್ಥೆಯಿರುವದೋ ಅಲ್ಲಿಯ ವರೆಗೂ ಪ್ರವೇಶಿಸಲು ತಯಾರಿದ್ದೇನೆಂದು ತಿಳಿಸಿದ ಕೂಡಲೇ ಎಲ್ಲರೂ ಸಹಿ ಮೂಲಕ ತಮ್ಮ ತಮ್ಮ ಅನುಮತಿಯನ್ನು ವ್ಯಕ್ತಗೊಳಿಸಿದರು. ಇದು ಬರೇ ಮಾತನಾಡುವ ಕಾಲಲ್ಲವು. ಆಡಿದ್ದನ್ನು ಮಾಡುವ ಕಾಲವೆಂದು ಪುನಃ ತಾ. ೧೬-೧-೩೮ ನೇ ದಿವಸ ಶ್ರೀ. ಅಣೆಪ್ಪ ಮತ್ತು ಚನ್ನಬಸಪ್ಪ ಚಳ್ಳ (ಹಟಗಾರ) ಇವರು ಶುದ್ಧಾಚರಣೆಯುಳ್ಳವರಿದ್ದು ಸದರಿಯವರ ಮನೆಗೆ ಇಲ್ಲಿಯ ಹಿರೇಮಠಾಧ್ಯಕ್ಷರಾದ ಶ್ರೀ. ಚಂದ್ರಶೇಖರ ಸ್ವಾಮಿಗಳವರು ದಯಮಾಡಿಸುತ್ತಿರುತ್ತಾರೆ.

ಇವರ ಮನೆಯಲ್ಲಿಯೇ ಶೀಲವಂತ, ದೀಕ್ಷಾಬಳಿಕೆ, ಪಂಚಮಸಾಲಿ, ರಡ್ಡಿ, ಜೀರ, ಸಿಂಪಿಗೇರ ಮೊದಲಾದ ಒಳಪಂಗಡದವರ ಸಹಪಂಕ್ತಿಯು ಒಳ್ಳೇ ವಿಜೃಂಭಣೆಯಿಂದ ನಡೆಯಿತು. ಭೋಜನೋತ್ತರ ಎಲ್ಲರೂ ಬಸವೇಶ್ವರನ ಜಯಘೋಷವನ್ನು ಮಾಡಿದರು. ಇದರ ಮೇಲಿಂದ ಶ್ರೀ. ಬಸವಣ್ಣನವರ ಕಾಲದಲ್ಲಿ ಇದೇ ರೀತಿಯಿಂದ ನಡೆಯುತ್ತಿತ್ತೆಂದು ನೋಡುವವರಿಗೆ ಭಾಸವಾಗುತ್ತಿತ್ತು. ಉಳಿದ ಎಲ್ಲ ವೀರಶೈವರು ಇವರ ಕಿತ್ತಿಯನ್ನೇ ತೀಡಲಿಕ್ಕೇ ಬೇಕು.

ಸದರಿ ಮಹಾಕಾರ್ಯಕ್ಕೆ ತರುಣಸಂಘದವರು ಮತ್ತು ಶ್ರೀ ಶಂಕರಪ್ಪಣ್ಣನವರು ಗುರುಮಠಕಲ್ ಇವರು ಶ್ರೀ ಕಲ್ಲಪ್ಪಣ್ಣನವರು ರೇಷ್ಮಿ ಶ್ರೀ ರೇವಣಸಿದ್ಧಪ್ಪಣ್ಣನವರು ಕಂಥ ಶ್ರೀ ಬಸವಪ್ಪಣ್ಣನವರು ಕಶೆಟ್ಟಿ ಶ್ರೀ ಬಸವಪ್ಪಣ್ಣನವರು ಬೊಮ್ಮನಹಳ್ಳಿ, ಶ್ರೀ ಶಿವರಡ್ಡಿ ಪಾಟೀಲ, ಶ್ರೀ ಶಿವಲಿಂಗಪ್ಪಣ್ಣನವರು ವಾರದ, ಶ್ರೀ ಶಿವಲಿಂಗಪ್ಪಣ್ಣನವರು ಶೆಟ್ಟಿ, ಶ್ರೀ ಅಣೆಪ್ಪಣ್ಣನವರು ರೇಷ್ಮಿ, ಶ್ರೀ ಬಸಪ್ಪಣ್ಣನವರು ಸಜ್ಜನಶೆಟ್ಟಿ ಶ್ರೀ ವೀರಭದ್ರಪ್ಪಣ್ಣನವರು ಖೂಬಾ, ಶ್ರೀ ನಾಗಪ್ಪಣ್ಣನವರು ಗುಪಸೇನ ಇವರೇ ಮೊದಲಾದವರು ಮನಸಾಪೂರ್ವಕ ಸಹಾಯಮಾಡಿದರು. ಶ್ರೀ ಫೋಟೋಗ್ರಾಫರ್ ಇವರು ಈ ಗ್ರಾಮದವರು ತಾವಾಗದಿದ್ದರೂ ಸಮಾಜ ಕಲ್ಯಾಣವಾಗಬೇಕೆಂದು ಈ ರೀತಿ ಪ್ರಯತ್ನಿಸಿದರು. ಈ ಎಲ್ಲ ಮಹಾಶಯರಿಗೆ ಆಯುರಾರೋಗ್ಯವನ್ನು ಕೊಟ್ಟು ಉದ್ಧರಿಸಲೆಂದು ಪರಮಾತ್ಮನನ್ನು ಹಾರೈಸುತ್ತೇನೆ.

ಓರ್ವ
ಪ್ರತ್ಯಕ್ಷದರ್ಶಿ.

---

—ಶ್ರೀ. ಸುಭಾಷಚಂದ್ರ ಬೋಸರು ಲಂಡನ್ನಿನಲ್ಲಿ ಐರ್ಲೆಂಡಿನ ಪ್ರಮುಖರಾದ ಡಿ. ವ್ಯಾಲೆರಾ ಇವರ ಸಂಗಡ ೨ ತಾಸು ಸಂಭಾಷಣೆ ನಡೆಸಿದರು.

—ರಶಿಯಾ ದೇಶದಲ್ಲಿಯೂ ಪಾರ್ಲಮೆಂಟ್ ಏರ್ಪಟ್ಟಿತು. ಚೀನ ಗಡಿನಾಡಿನ ಸಂರಕ್ಷಣೆಗಾಗಿ ಸೈನ್ಯದ ಉಪಯೋಗಮಾಡಲು ಅಧ್ಯಕ್ಷರಿಗೆ ಅಧಿಕಾರವನ್ನು ಕೊಟ್ಟಿತು.

—ಪ್ಯಾಲಿಸ್ಟಾಯಿನ್‌ದಲ್ಲಿಯ ಯಹುದಿ ಜನರ ಶಿಷ್ಟ ಮಂಡಲವು ಹಿಂದುಸ್ಥಾನದಲ್ಲಿ ತಮ್ಮ ಅಭಿಪ್ರಾಯವನ್ನು ಪ್ರಚಾರಗೊಳಿಸಲು ಇಷ್ಟರಲ್ಲೇ ಬರುವುದಿದೆ.

## ಜಮುಖಂಡಿಯ ಕನ್ನಡ ಸಾಹಿತ್ಯ ಸಮ್ಮೇಲನದಲ್ಲಿ ಪ್ರಶಸ್ತಿ ಪತ್ರಿಕೆಯನ್ನು ಪಡೆದ

# ಕನ್ನಡ ಜಟ್ಟಿ.



( ಶ್ರೀ. ಬಸವರಾಜ. )

### ಯೋಗ್ಯತಾ ಪತ್ರಿಕೆ.

ಜಮುಖಂಡಿಯಲ್ಲಿ ನೆರವೇರಿದ ೨೨ ನೇ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಲನದ ಕಾಲಕ್ಕೆ ಬೆಂಗಳೂರು ಸಪ್ಪಣ್ಣ ಸ್ವಾಮಿ ಮಠದ ಶ್ರೀ. ಮ. ನಿ. ಪ್ರ. ಶ್ರೀ ಮಹಾದೇವ ಸ್ವಾಮಿಗಳ ಆಶೀರ್ವಾದ ಬಲದಿಂದ ಜಯಮಾರುತಿ ವ್ಯಾಯಾಮ ಶಾಲೆಯಲ್ಲಿ ತರಬೇತರಾದ ಕರ್ನಾಟಕ ಜಟ್ಟಿ ಶ್ರೀ. ಬಸವರಾಜ ಸಂಸಿ ಇವರು ಮಾಡಿ ತೋರಿಸಿದ ಶರೀರ ಶಕ್ತಿ ಪ್ರಯೋಗಗಳನ್ನು ಕಣ್ಣಾರೆ ಕಂಡು ನನಗೆ ಪರಮಸಂತೋಷವಾಯಿತು. ಕಬ್ಬಿಣ ಪಟ್ಟಿಗಳನ್ನು ಕೈಗೆ ಸುತ್ತಿಕೊಳ್ಳುವದು, ಜೋಡು ಸಳಿಗಳನ್ನು ಕುತ್ತಿಗೆಯಿಂದ ಮಣಿಸುವುದು, ೧೫೦ ಪೌಂಡು ಜಡವುಳ್ಳ ಮನುಷ್ಯನನ್ನು ಹಲ್ಲಿನಿಂದ ಮೇಲಕ್ಕೆತ್ತುವುದು, ಮತ್ತು ಬಹು ಭಾರವಾದ ಅಡಿಗಲ್ಲನ್ನು ಎದೆಯಮೇಲೆ ಇಡಿಸಿಕೊಂಡು ಅದರಮೇಲೆ ಕಬ್ಬಿಣದ ಸಳಿಯನ್ನಿಡಿಸಿ ಅದನ್ನು ಚಾಣದಿಂದ ಕತ್ತರಿಸುವದು ಇವೇ ಮೊದಲಾದ ಭೀಮ ಸಾಹಸಗಳು ಇವರ ದೇಹ ದಾರ್ಢ್ಯಕ್ಕೂ ಸ್ನಾಯು ಬಲಕ್ಕೂ ನಿದರ್ಶನವಾಗಿವೆ. ಇವರಿಗೆ ಎಲ್ಲರಿಂದ ಎಲ್ಲತರದ ಬೆಂಬಲವು ದೊರೆಯಲೆಂದೂ ಉತ್ತರೋತ್ತರ ಅಭಿವೃದ್ಧಿಯಾಗಲೆಂದೂ ನಾನು ಕೋರುತ್ತೇನೆ.

ತಾ. ೧-೧-೩೮ ಬೆಳ್ಳಾವೆ ವೆಂಕಟನಾರಾಯಣಪ್ಪ
ಅಧ್ಯಕ್ಷ
ಜಮಖಂಡಿ. ಪಂಡಿತಪ್ಪ ಚಿಕ್ಕೋಡಿ

### ಮೆರವಣಿಗೆಯ ರಥ.

—ಹರಿಪುರ ಕಾಂಗ್ರೆಸ್ಸಿನ ಅಧ್ಯಕ್ಷರಾದ ಬಾಬು ಸುಭಾಷ ಚಂದ್ರರ ಮೆರವಣಿಗೆಯು ಬಾಂಸಡಾ ಎಂಬ ಸಂಸ್ಥಾನದ ಅಧಿಪತಿಗಳಲ್ಲಿರುವ ೮೦ ವರುಷಗಳ ಹಿಂದಿನ ಒಂದು ಅಪೂರ್ವವಾದ ರಥದಲ್ಲಿ ಜರುಗುವಂತೆ ಸ್ವಾಗತ ಸಂಘದವರು ವ್ಯವಸ್ಥೆ ಮಾಡಿದ್ದಾರೆ.

## ಹಿಂದುಸ್ಥಾನದ ಭೀಕರ ದಾರಿದ್ರ್ಯ!

ಮುಂಬೈ ಪ್ರಾಂತಿಕ ಕೌನ್ಸಿಲ್ಲಿನಲ್ಲಿ ಅಡ್ವೊಕೇಟ ಎಸ್. ಸಿ. ಜೋಶಿ ಇವರು ಈ ಕಾಲದ ನಿರುದ್ಯೋಗ ನಿವಾರಣೆಯನ್ನು ಕುರಿತು ಒಂದು ಸಮಿತಿಯನ್ನು ನಿಯಮಿಸಬೇಕೆಂದು ಗೊತ್ತುವಳಿ ತಂದರು. ಆಗ ಹೀಗೆ ಹೇಳಿದರು.—

"ಹಿಂದುಸ್ಥಾನದಲ್ಲಿ ಮಧ್ಯಮ ವರ್ಗದವರ ಸ್ಥಿತಿಯು ಬಹು ಶೋಚನೀಯವಾಗಿದೆ. ಕಳೆದ ೧೦-೧೨ ವರುಷಗಳಿಂದ ನಿರುದ್ಯೋಗಿಗಳ ಸಂಖ್ಯೆಯು ವಿಪರೀತವಾಗಿ ಹೆಚ್ಚುತ್ತಾ ಇದೆ. ನಿರುದ್ಯೋಗನಿವಾರಣೆಯು ಪ್ರತಿಯೊಂದು ರಾಷ್ಟ್ರದ ಮುಖ್ಯ ಕರ್ತವ್ಯವೇ ಆಗಿದೆ. ಮುಂಬೈ ಸರಕಾರವು ಈ ವಿಚಾರವಾಗಿ ಯೋಚಿಸಿ ಯೋಗ್ಯ ಸಾಧನೋಪಾಯಗಳನ್ನು ಕಂಡುಹಿಡಿಯಲು ಒಂದು ಸಮಿತಿಯನ್ನು ನಿಯಮಿಸಬೇಕು. ಕನಿಷ್ಟ ವರ್ಗದ ಸ್ಥಿತಿಯಂತೂ ಬಹು ಶೋಚನೀಯವಾಗಿದೆ.

ಪಾಶ್ಚಾತ್ಯ ರಾಷ್ಟ್ರಗಳಲ್ಲಿ ನಿರುದ್ಯೋಗಿಗಳ ಸಂಖ್ಯೆಯನ್ನು ಗೊತ್ತುಹಚ್ಚಿ ಪ್ರಕಟಿಸುವ ಪದ್ಧತಿಯಿದೆ. ನಮ್ಮ ದೇಶದಲ್ಲಿ ಈ ಪದ್ಧತಿಯೇ ಇಲ್ಲ. ಸರ್. ವಿಶ್ವೇಶ್ವರಯ್ಯನವರ ಊಹೆಯಂತೆ ಹಿಂದುಸ್ಥಾನದಲ್ಲಿ ನಿರುದ್ಯೋಗಿಗಳ ಸಂಖ್ಯೆ ಸಾಧಾರಣ ನಾಲ್ಕು ಕೋಟಿ! ಅರೆಹೊಟ್ಟೆ ಊಟಮಾಡಿ ಜೀವಿಸುವವರು ಈ ದೇಶದಲ್ಲಿ ಸಾಧಾರಣ ಹತ್ತು ಕೋಟಿ ಜನರು!! ಹಿಂದುಸ್ಥಾನದ ಒಕ್ಕಲತನದ ಕೆಲಸದಲ್ಲಿ ೧೦೦ ಕ್ಕೆ ೭೩ ಜನರಿದ್ದಾರೆ. ಇವರು ವರುಷದಲ್ಲಿ ೭-೮ ತಿಂಗಳು ಹೊಲದ ಕೆಲಸಮಾಡಿ ಮಿಕ್ಕ ಕಾಲದಲ್ಲಿ ನಿರುದ್ಯೋಗಿಗಳಾಗಿರುತ್ತಾರೆ."

## ಮೈಸೂರು ರಾಷ್ಟ್ರೀಯ ಸಮ್ಮೇಲನ.

ಈ ಮುಂಚೆ ಗೊತ್ತಾದ ಮೇರೆಗೆ ಚಿತ್ರದುರ್ಗದಲ್ಲಿ ಮೈಸೂರು ಪ್ರಾಂತದ ರಾಷ್ಟ್ರೀಯ ಸಮ್ಮೇಲನವು ಕಳೆದ ೧೪ ನೆಯ ತಾರೀಖಿನ ದಿವಸ ಶ್ರೀ. ಚಂಗಲರಾಯ ರೆಡ್ಡಿಯವರ ಅಧ್ಯಕ್ಷತೆಯಲ್ಲಿ ಜರುಗಿತು. ಈ ಸಮ್ಮೇಲನದ ಸ್ವಾಗತಾಧ್ಯಕ್ಷರಾದ ಶ್ರೀ. ಎಸ್. ನಿಜಲಿಂಗಪ್ಪನವರು ತಮ್ಮ ಭಾಷಣದಲ್ಲಿ ಪೂರ್ವದ ನಾಯಕರ ಸ್ವಾತಂತ್ರ್ಯಪ್ರೇಮ ಕಾರ್ಯ ಸಾಹಸಗಳಿಗೆ ಚಿತ್ರದುರ್ಗದ ಕೋಟೆಗಳೇ ದೃಷ್ಟಾಂತಗಳಾಗಿವೆಯೆಂದೂ ನಾವು ಕೂಡಾ ಈಗ ಸ್ವಾತಂತ್ರ್ಯಪ್ರೇಮ ಮತ್ತು ವೀರವೃತ್ತಿಗಳುಳ್ಳವರಾಗಬೇಕೆಂದೂ ಕಾಂಗ್ರೆಸ್ ಪಕ್ಷವು ಬ್ರಿಟಿಶ್ ಇಂಡಿಯಾದಲ್ಲಿ ತನ್ನ ಘನತೆಯನ್ನು ಸ್ಥಾಪಿಸಿರುವುದು ನಮಗು ಕೂಡಾ ಪ್ರೋತ್ಸಾಹಕರವಾಗಿದೆಯೆಂದೂ ಮೈಸೂರಲ್ಲಿ ಜವಾಬ್ದಾರಿ ಸರಕಾರ ಏರ್ಪಡುವಂತೆ ನಾವುಗಳೆಲ್ಲಾ ಪ್ರಯತ್ನಿಸಬೇಕೆಂದೂ ಬಹು ಸಮಂಜಸವಾಗಿ ತಿಳಿಸಿದರು.

ಅನಂತರ ಅಧ್ಯಕ್ಷರಾದ ಶ್ರೀ. ಚಂಗಲರಾಯ ರೆಡ್ಡಿಯವರು ತಮ್ಮ ಭಾಷಣದಲ್ಲಿ ಕಾಂಗ್ರೆಸ್ಸಿನ ಘನತೆಯನ್ನು ವಿವರಿಸಿ ಅದು ಸಂಸ್ಥಾನಗಳ ಪ್ರಜೆಗಳಿಗೂ ಮಾರ್ಗದರ್ಶಿಯಿದೆಯೆಂದೂ ಈಗ ಮೈಸೂರು ಸಂಸ್ಥಾನದಲ್ಲಿ ಕಾಂಗ್ರೆಸ್ಸಿನ ಚಟುವಟಿಕೆ ಹೆಚ್ಚಾಗಿ ಪ್ರಸಾರವಾಗುತ್ತಾಯಿದೆಯೆಂದೂ ಸರಕಾರದ ದಬ್ಬಾಳಿಕೆಯು ಬಹು ಅನ್ಯಾಯವಾದುದೆಂದೂ ಬಹು ವಿಸ್ತಾರವಾಗಿ ತಿಳಿಸಿದರು.

ಈಗ ಬರಲಿರುವ ಫೆಡರೇಶನ್ ತುಂಬಾ ತ್ಯಾಜ್ಯವಾದುದೆಂದು ಸೂಚಿಸಿದರು. ಕಾಂಗ್ರೆಸ್ ಕಮಿಟಿಯು ಮೈಸೂರಿನ ದಬ್ಬಾಳಿಕೆ ವಿಚಾರವಾಗಿ ಮಾಡಿದ ತೀರ್ಮಾನವನ್ನೂ ಆ ಸಂಬಂಧವಾಗಿ ಗಾಂಧೀಜಿಯವರು ಪಟ್ಟ ಅಭಿಪ್ರಾಯವನ್ನೂ ಆ ಮೇಲೆ ವರ್ಕಿಂಗ್ ಕಮಿಟಿಯವರು ಸೂಚಿಸಿದುದನ್ನೂ ಅಧ್ಯಕ್ಷರು ತಮ್ಮ ಭಾಷಣದಲ್ಲಿ ಚರ್ಚಿಸಿ ಕಾಂಗ್ರೆಸ್ಸಿನ ರೀತಿ ನೀತಿಗಳು ಪರಸ್ಪರ ವಿರೋಧವಾಗಿವೆಯೆಂದೂ ಟೀಕಿಸಿದರು.

ಸಂಸ್ಥಾನದ ಪ್ರಜೆಗಳು ತಮ್ಮ ಕಾಲಮೇಲೆ ತಾವು ನಿಲ್ಲಬೇಕೆಂದು ಹೇಳುವುದರಲ್ಲಿಯೂ ಅವರಿಗೆ ಸಹಾನುಭೂತಿ, ಬೆಂಬಲಗಳನ್ನು ಕೊಡಬೇಕೆಂಬುದರಲ್ಲಿಯೂ ಪರಸ್ಪರ ವಿರೋಧವೆಂಬುದೇ ಇವರ ಅಭಿಪ್ರಾಯ. ಹರಿಪುರ ಕಾಂಗ್ರೆಸ್ಸಿನಲ್ಲಿ ಈ ವಿಷಯವು ತೀರ್ಮಾನವಾಗುವುದೆಂದು ಅಧ್ಯಕ್ಷರು ನಿರೀಕ್ಷಿಸಿದ್ದಾರೆ.

ಈ ಸಮ್ಮೇಲನದಲ್ಲಿ ಸರಕಾರದ ಅನ್ಯಾಯವಾದ ಶಾಸನವನ್ನು ವಿರೋಧಿಸಬೇಕೆಂದು ಒಂದು ಗೊತ್ತುವಳಿಯು ಬಹು ಉಗ್ರವಾದ ಚರ್ಚೆಯನಂತರ ತೀರ್ಮಾನವಾಯಿತು. ಈ ವಿರೋಧದ ಮಾರ್ಗವು ಶಾಸನಭಂಗವೋ? ಬೇರೆ ರೀತಿಯೋ? ಹರಿಪುರ ಕಾಂಗ್ರೆಸ್ಸಿನನಂತರವೇ ಈ ವಿಷಯವು ಸ್ಪಷ್ಟವಾಗಿ ಆಚರಣೆಯಲ್ಲಿ ಬರುವಂತೆ ತೋರುತ್ತದೆ.

## ಬೆಳಗಾವಿ ಸಮಾರಂಭ.

ಬಹು ದಿನಗಳ ಸಿದ್ಧತೆಯಿಂದ ಏರ್ಪಟ್ಟ ಕರ್ನಾಟಕ ಒಕ್ಕಲತನದ ಪ್ರದರ್ಶನವು ಮುಂಬೈ ಗವ್ಹರ್ನರರಾದ ಸರ್. ಲುಮ್ಲೆಯವರ ಹಸ್ತದಿಂದ ತಾ. ೧೭-೧-೧೯೩೮ ನೆಯ ದಿವಸ ತೆರೆಯಲ್ಪಟ್ಟಿತು. ಆ ಮುಂಚೆ ಸ್ವಾಗತಪರವಾದ ಭಾಷಣವನ್ನು ಕಂದಾಯ ಮಂತ್ರಿಗಳಾದ ಶ್ರೀ. ಮುರಾರಜಿ ದೇಸಾಯಿಯವರು ಮಾಡಿ ಗವ್ಹರ್ನರರಿಗೆ ಪ್ರದರ್ಶನವನ್ನು ತೆರೆಯಲು ವಿನಂತಿ ಮಾಡಿಕೊಂಡರು.

ಮಂತ್ರಿಗಳು ತಮ್ಮ ಭಾಷಣದಲ್ಲಿ ಒಕ್ಕಲತನದ ಮಹತ್ವವನ್ನೂ ಈಗ ಸರಕಾರವು ಹಳ್ಳಿಗಳ ಕಡೆಗೇನೇ ಹೆಚ್ಚು ಲಕ್ಷಿಸಿದೆಯೆಂಬುದನ್ನೂ ಹಳ್ಳಿಗಳ ಉನ್ನತಿಯೇ ಒಕ್ಕಲಿಗರ ಮತ್ತು ಕೈಗಾರಿಕೆಯವರ ಉನ್ನತಿಯೆಂಬುದನ್ನೂ ವಿವರಿಸಿ ಹೇಳಿದರು. ಅನಂತರ ಗವ್ಹರ್ನರ ಸಾಹೇಬರು ತಮ್ಮ ಭಾಷಣದಲ್ಲಿ ಒಕ್ಕಲತನದ ಮಹತ್ವ, ಇಂಥ ಪ್ರದರ್ಶನಗಳ ಉಪಯುಕ್ತತೆ, ಇದರಿಂದ ರೈತರು ತಿಳಿದುಕೊಳ್ಳಬೇಕಾದ ಸಂಗತಿ ಮೊದಲಾದವುಗಳನ್ನು ವಿವರಿಸಿ ಕೊಲ್ಹಾಪುರದ ಮಹಾರಾಜರೇ ಮೊದಲಾದ ಅನೇಕ ಸಂಸ್ಥಾನಿಕರು ಈ ಪ್ರದರ್ಶನದ ಕಾರ್ಯಕ್ಕೆ ಹಣವಿನಿಂದಲೂ ಇತರ ರೀತಿಗಳಿಂದಲೂ ಸಹಾಯಮಾಡಿದುದಕ್ಕಾಗಿ ತಮ್ಮ ಕೃತಜ್ಞತೆಯನ್ನು ವ್ಯಕ್ತಗೊಳಿಸಿದರು.

### ಕರ್ನಾಟಕ ಏಕೀಕರಣಕ್ಕೆ
## ಗವ್ಹರ್ನರರ ಒಪ್ಪಿಗೆ ಇಲ್ಲ!

ಈ ಮುಂಚೆ ಗೊತ್ತಾದ ಮೇರೆಗೆ ಮುಂಬೈ ಗವ್ಹರ್ನರರಾದ ಸರ್. ಲುಮ್ಲೆ ಇವರು ತಾ. ೧೭ ನೆಯ ಬೆಳಿಗ್ಗೆ ಬೆಳಗಾವಿಗೆ ಬಂದರು. ಮೊದಲು ಮುನಸಿಪಾಲ್ಟಿಯಿಂದ ಮಾನಪತ್ರ ಕೊಡಲ್ಪಟ್ಟಿತು. ಅದಕ್ಕೆ ಉತ್ತರವಾಗಿ ಗವ್ಹರ್ನರ್ ಸಾಹೇಬರು ನಗರಕ್ಕೆ ನೀರನ್ನು ಒದಗಿಸಿಕೊಡಲು ಬೇಕಾಗುವ ಹಣವು ಸರಕಾರದಲ್ಲಿ ಇಲ್ಲವೆಂದೂ ಕಾಂಗ್ರೆಸ್ ಮಂತ್ರಿಮಂಡಲವು ನಿಮ್ಮದೇ ಇರುವುದರಿಂದ ಅದನ್ನೇ ವಿಚಾರಿಸಿರೆಂದೂ ತಿಳಿಸಿದರು. ಆ ಬಳಿಕ ಲೋಕಲ್ ಬೋರ್ಡಿನ ಮಾನಪತ್ರವನ್ನು ಸ್ವೀಕರಿಸಿದರು. ಅದರಲ್ಲಿ ಕರ್ನಾಟಕ ಏಕೀಕರಣದ ಪ್ರಶ್ನೆಯಿದ್ದಿತು. ಅದನ್ನು ಕುರಿತು ಗವ್ಹರ್ನರ್ ಸಾಹೇಬರು ಹೀಗೆ ಹೇಳಿದರು—

"ಕರ್ನಾಟಕ ಏಕೀಕರಣವು ಈಗ ಶಕ್ಯವಿಲ್ಲ. ಭಾಷೆಯ ದೃಷ್ಟಿಯಿಂದ ಮುಂಬೈ ಪ್ರಾಂತದಲ್ಲಿ ಮೂರು ತುಂಡುಗಳನ್ನು ಮಾಡಬೇಕಾಗಬಹುದು. ನೀವು ಮುಂಚೆಯೇ ಇದಕ್ಕಾಗಿ ಪ್ರಯತ್ನಿಸಬೇಕಾಗಿತ್ತು."

# ಪಾರಿತೋಷ.

(ಲೇಖಕ— ದ. ಮಾ. ಕುಲಕರ್ಣಿ ಶಹಾಪುರ.)

ಆರಿವಳು ಈ ಪರಿಯು ಶೋಕಿಸಳು ವನದಲ್ಲಿ ।
ಹರಿಯುವವು ಕಂಬನಿಗಳಿರೆ ನೋಟದಲ್ಲಿ ॥
ವಾರಿಗೆಯ ಬಾಲೆಯರು ಅಲೆಯುತಿರೆ ವನದಲ್ಲಿ ।
ಮೋರೆಯನು ಕೆಳಗಿಕ್ಕಿ ಕುಳಿತಿರುವಳೇಕಿಲ್ಲಿ ॥೧॥

ಹಿಮ್ಮುಡಿಯು ನೋಡಿದರೆ ಕಡು ಶೋಭೆ ಬೀರುತಿದೆ ।
ಮುಮ್ಮುಡಿಯು ನೋಡಿದರೆ ದುಃಖ ಝರಿಯೊಡೆಯುತಿದೆ ॥
ಹೆಮ್ಮೆಯುಳ್ಳವಳೆಂದು ಮುಖ ತಾನು ಸಾರುತಿದೆ ।
ಒಮ್ಮೆಯಾದರೂ ಪ್ರಶ್ನೆಮಾಡತಿದೆ ಆದರುತಿದೆ ॥೨॥

ನೀ ನಾರು, ಏ ತಾಯೆ, ಏಕೆ ಶೋಕಿಸೆಯೆ ? ।
ಮಾನಿನೆಯೆ ಕೆಳದಿಯರು ವನ ಸೊಬಗು ಸವಿಯುತಿರೆ ॥
ಮನ ನೊಂದುಕೊಂಡಿರಲು ಕಾರಣವದೇನು ? ।
ಅನುನಯದಿ ಪೇಳೆನಗೆ ಪೂರ್ತಿಸುವೆ ಗಡನೆ ॥೩॥

ಒಡೆವೆ ಇದ್ದರೆ ತಾನೆ ಮಡದಿಯರು ಬಲು ಸೊಗಸು ।
ಒಡವೆ ಇಲ್ಲದ ಹೇಡಿ ಬಡ ಸತಿಯು ನಾನಿಹೆನು ॥
ಅಡಿಗಳಡೆ ತಡೆಯುತಿಹೆ ಕೆಳದಿಯರ ಸಂಗದಲಿ ।
ಕಡು ದುಃಖದಿಂ ಬೆಂದು ದೂಡುತಿಹೆದುಗುಡವನು ॥೪॥

ಕೆಳದಿಯರು ತಾವೆಲ್ಲ ಸಿರಿವಂತರಿಹರು ।
ಥಳಿಪ ವಸ್ತುಗಳಿಂದ ಶೋಭಿಸುತಲಿಹರು ॥
ಕಳೆಹೀನ ಸಿರಿಹೀನ ಬಡ ಸತಿಯು ನಾನು ।
ಪೇಳೆನಗೆ ಅವರೊಡನೆ ಪೋಗುವದದೆಂತು ॥೫॥

ಒಡವೆಗೋಸುಗ ನೀನು ಈ ಪರಿಯು ಶೋಕಿಪುದು ।
ಬಿಡು ದುಃಖವನು ನೀನು ನೋಡಿಲ್ಲಿ ಸರವನು ॥
ಕಡುಕಷ್ಟಗಳ ಪಟ್ಟು ಪಡೆದಿಹೆನು ಹರಳುಗಳ ।
ಒಡನೆ ಕೊರಳೊಳು ಹಾಕಿ ಗೈಯುವೆನು ಸೇವೆಯನು ॥೬॥

ಇದು ನೋಡು ನಡು ಹರಳು ಬೇಂದ್ರೆ ಎಂಬುದು ಜನವು ।
ಪಡೆದು ಬಹು ಕಷ್ಟಗಳ ದೊರಕಿಸಿಹೆ ನಿದನು ॥
ಇದು ನೋಡು ಶ್ರೀಕಂಠ ಕಂಠಿಗಿದು ಬಲು ಶೋಭೆ ।
ಕದಿದು ತಂದಿಹೆನಿದನು ಮುದದಿ ಮೈಸೂರಿನಿಂ ॥೭॥

ನೋಡಿದನು ಬೆನಕನೆಂದಿದರ ಹೆಸರಿಹುದು ।
ತೋಡಿ ತಂದಿಹೆನಿದನು ಪುಣೆಯೊಳಿಹ ಕಣಿಹಿಂ ॥
ಕಾಡಿ ಬೇಡಿದನು ನಾಂ ಗಳಿಸಿಹೆನು ರತ್ನಮಂ ।
ನೋಡಿದರೆ ಹೆಸರಿಹುದು ರಾಜರತ್ನಂ ॥೮॥

ಧಾರವಾಡದಿ ಇದನು ಹೇರಳವ ಹಣಕೊಟ್ಟು ।
ಹರಳಿದನು ಹರುಷದಲಿ ಕೊಂಡಿಹೆನು ನೋಡು ॥
ಕಿರಣದಲಿ ಹೊಳೆಸಿಹುದು ರಘುರಾಮ ಚರಿತೆಯನು ।
ಪರಮ ಶ್ರೇಷ್ಠತೆ ಪಡೆದ ರಾಮ ಮಣಿ ಇದು ಕಾಣು ॥೯॥

ಪುಟ್ಟ ಹರಳಿಹುದೆಂದು ಸಿಟ್ಟನಿಂ ಹಳಿಯದಿರು ।
ಕಷ್ಟದಿಂ ಕಡಿದಿಹೆನು ಮಲೆನಾಡ ಗಿರಿಗಳನು ॥
ಶ್ರೇಷ್ಠತಮವೆನಿಸಿದೀ ಹರಳ ಪದಕವ ಧರಿಸಿ ।
ಇಷ್ಟೆಯಿಂ ನಲಿದಾಡಿ ಸಲೆ ಸುಖವ ನೀಡು ॥೧೦॥

—ಹೈದರಾಬಾದಿನ ಹೊಸರೇಲ್ವೆ ಸ್ಟೇಶನ್ನಿನ ಉದ್ಘಾಟನ ಸಮಾರಂಭವು ನಿಜಾಮರ ಹಸ್ತದಿಂದ ಜರುಗಿತು. ಅದಕ್ಕೆ ೨॥ ಲಕ್ಷ ರೂ. ಗಳು ವೆಚ್ಚವಾಗಿವೆ.

# ಯುವಕರಿಗೆ ಉಪದೇಶ.

ಕರ್ನಾಟಕ ಯುವಕ ಪರಿಷತ್ತಿನಲ್ಲಿ ಭಾಯಿ ಮೇಹರಅಲ್ಲಿ ಯವರು ಯುವಕರಿಗೆ ಈ ಕೆಳಗಿನ ಹತ್ತು ಸಂಗತಿಗಳನ್ನು ತಿಳಿಸಿದ್ದಾರೆ.—

"(೧) ೧೮ ವರ್ಷದ ಮೇಲ್ಪಟ್ಟ ಸ್ತ್ರೀ ಪುರುಷರೆಲ್ಲರೂ ಕಾಂಗ್ರೆಸ್ ಸದಸ್ಯರಾಗತಕ್ಕದ್ದು. ಕಾಂಗ್ರೆಸ್ಸು ಬಲಿಷ್ಠವಾದರೆ ನಮಗೆ ಗೌರವ; ಕಾಂಗ್ರೆಸ್ಸು ನಿರ್ಬಲವಾದರೆ ನಮಗೆ ನಾಚಿಕೆಗೇಡು.

(೨) ಬೇರೆಯವರೆನ್ನೆಲ್ಲಾ ಕಾಂಗ್ರೆಸ್ ಸದಸ್ಯರನ್ನಾಗಿ ಮಾಡಿರಿ.

(೩) ಹಿಂದುಸ್ಥಾನೀ ಸೇವಾದಳವನ್ನು ಸುಸಂಘಟಿತಗೊಳಿಸಿರಿ. ಕಳೆದ ೧೫ ವರ್ಷಗಳಿಂದಲೂ ಡಾ॥ ಹರ್ಡಿಕರರು ಹಿಂದುಸ್ಥಾನೀ ಸೇವಾದಲದ ಬಗ್ಗೆ ಪರಿಶ್ರಮಿಸಿದ್ದಾರೆ. ಅವರ ಶಕ್ತಿಯು ಜನತೆಗಿಂತಲೂ ಸರಕಾರಕ್ಕೇ ಹೆಚ್ಚು ಗೊತ್ತಿದೆ. ಆದ್ದರಿಂದಲೇ ಸರಕಾರವು ಸೇವಾದಲವನ್ನು ಮೇಲಿಂದಮೇಲೆ ಕಟ್ಟಳೆಗಟ್ಟದ್ದನ್ನಾಗಿ ಮಾಡಿತು. ಹಳ್ಳಿ ಹಳ್ಳಿಗೆ ಹಿಂದುಸ್ಥಾನೀ ಸೇವಾದಲವು ಸ್ಥಾಪಿತವಾಗಲಿ.

(೪) ಜಾತೀಯ ಭೇದವನ್ನು ಬೇರುಸಹಿತ ಕಿತ್ತೊಗೆಯಿರಿ. ನಾವು ಹಿಂದುಗಳು ನಾವು ಮುಸಲ್ಮಾನರು ನಾವು ಬ್ರಾಹ್ಮಣರು ನಾವು ಬ್ರಾಹ್ಮಣೇತರರು ಎಂಬ ಯಾವ ಭೇದವೂ ನಮ್ಮಲ್ಲಿ ಉಂಟಾಗದಿರಲಿ.

(೫) ಸ್ವದೇಶಿ ವಸ್ತುಗಳನ್ನೇ ಉಪಯೋಗಿಸಿರಿ. ನಮ್ಮ ರಾಷ್ಟ್ರೀಯ ಉಡುಪಾದ ಖಾದಿಯನ್ನೇ ಉಪಯೋಗಿಸಿರಿ.

(೬) ಅಭ್ಯಾಸ ಮಂಡಲಗಳನ್ನು ಅಲ್ಲಲ್ಲಿ ಸ್ಥಾಪಿಸಿರಿ. ಜಗತ್ತಿನಲ್ಲಿ ಸದ್ಯಕ್ಕೆ ಯಾವ ಸಮಸ್ಯೆಗಳು ಚರ್ಚಿತವಾಗುತ್ತಲಿವೆಯೋ ಅವುಗಳನ್ನು ನೀವು ಅಭ್ಯಾಸಮಾಡಿರಿ. ಹಿಂದುಸ್ಥಾನದ ಸಂಬಂಧಿ ಯಾವುದೊಂದು ವಿಷಯವನ್ನು ಆರಿಸಿಕೊಂಡು ಅದನ್ನು ಚನ್ನಾಗಿ ಅಧ್ಯಯನ ಮಾಡಿರಿ.

(೭) ಒಕ್ಕಲಿಗರ ಋಣಪರಿಹಾರಕ ಸಮಸ್ಯೆಯನ್ನು ಕುರಿತು ಚನ್ನಾಗಿ ಪರಿಶೀಲನ ಮಾಡಿರಿ.

(೮) ಹಿಂದುಸ್ಥಾನದ ಸೈನ್ಯ ಖಾತೆ ಅದರ ಸಂರಕ್ಷಣೆಯನ್ನು ಕುರಿತು ಅಭ್ಯಾಸಮಾಡಿರಿ.

(೯) ಸಮಾಜ ಸತ್ತಾವಾದವನ್ನು ಚನ್ನಾಗಿ ಅಭ್ಯಾಸ ಮಾಡಿರಿ. ಪಂ॥ ನೆಹರು, ಕಮಲಾದೇವಿ ಚಟ್ಟೋಪಾಧ್ಯಾಯ, ಬಾಬು ಸುಭಾಷಚಂದ್ರ ಬೋಸ ಮೊದಲಾದವರು ಸಮಾಜ ಸತ್ತಾವಾದಿಗಳೇ ಆಗಿದ್ದಾರೆಂದಮೇಲೆ ಅದರಲ್ಲಿ ಅಂಥ ಘನವಾದದ್ದೇನು ಇರುವದು ಎಂಬುದನ್ನು ಅಭ್ಯಾಸ ಮಾಡಿರಿ.

(೧೦) ಹಾಗು ಕೊನೆಯಲ್ಲಿ ನಮ್ಮ ಕರ್ನಾಟಕದ ತರುಣರು ಎಲ್ಲಾ ಕಡೆಗೆ ಯುವಕ ಸಂಘಗಳನ್ನು ಸ್ಥಾಪಿಸಿ ಹಿಂದುಸ್ಥಾನದ, ಅದೇಕೆ ಜಗತ್ತಿನ ಯುವಕ ಸಂಘ (ಯುಥ್ ಲೀಗ) ದಲ್ಲಿ ಒಂದು ಅಂಗವಾಗುವಂತೆ ಮಾಡಲಿ ಎಂದು ನಾನು ವಿನಂತಿ ಮಾಡಿಕೊಂಡು ನನ್ನ ಭಾಷಣ ಮುಗಿಸುತ್ತೇನೆ."

—ಮೈಸೂರು ದಿವಾನರಾದ ಸರ್. ಮಿರ್ಜಾರವರಿಗೆ ಬೆಂಗಳೂರ ಸಂಸ್ಕೃತ ಕಾಲೇಜಿನಲ್ಲಿ ಶಾಸ್ತ್ರಿಮಂಡಲಿಯು ಮಾನಪತ್ರವನ್ನು ಕೊಟ್ಟಿತು.

## ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಅಧಿಕಾರ ಮಂಡಲ.

ರಾಣೇಬೆನ್ನೂರಲ್ಲಿ ಕೂಡಿದ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಸಭೆಯಲ್ಲಿ ಹೊಸ ವರ್ಷದ ಅಧಿಕಾರಿ ಮಂಡಲದ ಆಯ್ಕೆಯಾಗಿ ಕೆಳಗಿನ ಜನರು ಆರಿಸಿಬಂದರು:

ಅಧ್ಯಕ್ಷರು— ಶ್ರೀ. ಗಂಗಾಧರರಾವ ದೇಶಪಾಂಡೆ.

ಉಪಾಧ್ಯಕರು— ಶ್ರೀ. ಸಿದ್ಧಪ್ಪ ಹೊಸಮನಿ ಶ್ರೀ. ನಾರಾಯಣರಾವ ಜೋಶಿ.

ಕಾರ್ಯದರ್ಶಿಗಳು— ಶ್ರೀ. ಗುದ್ಲೆಪ್ಪ ಹಳ್ಳಿಕೇರಿ. ಶ್ರೀ. ಜೀವಣರಾವ ಯಾಳಗಿ.

ಕೋಶಾಧ್ಯಕ್ಷರು— ಶ್ರೀ. ಹುಕ್ಕೇರಿಕರ.

### ಕಾರ್ಯಕಾರಿ ಮಂಡಲ.

ಶ್ರೀ. ಚಂಗಲರಾಯ ರೆಡ್ಡಿ.
ಡಾ. ಹರ್ಡಿಕರ.
ಶ್ರೀ. ಎಮ್. ಟಿ. ಹೆಗಡೆ.
ಶ್ರೀ. ಕೆ. ಎಸ್. ಪಾಟೀಲ.
ಶ್ರೀ. ಭೋಜರಾವ ದೋಲಾರ.
ಶ್ರೀ. ರಾಘವೇಂದ್ರರಾವ ಮತ್ತಿಹಳ್ಳಿ.
ಶ್ರೀ. ಚನಬಸಪ್ಪ ಅಂಬಲಿ.
ಶ್ರೀ. ಮೋನಪ್ಪ ನಾಯಕ.
ಶ್ರೀ. ವ್ಹಿ. ವ್ಹಿ. ಪಾಟೀಲ.

### ಅ. ಭಾ. ಕಾಂಗ್ರೆಸ್ ಕಮಿಟಿಗೆ ಆರಿಸಿಬಂದ ಸದಸ್ಯರು.

(೧) ಶ್ರೀ. ಚಂಗಲರಾಯ ರೆಡ್ಡಿ.
(೨) ಶ್ರೀ. ಕಮಲಾದೇವಿ ಚಟ್ಟೋಪಾಧ್ಯಾಯ.
(೩) ಶ್ರೀ. ಗಂಗಾಧರರಾವ ದೇಶಪಾಂಡೆ.
(೪) ಶ್ರೀ. ಸಿ. ಎಮ್. ಪೂಣಚ್ಚ.
(೫) ಶ್ರೀ. ಸುಬ್ಬಾರಾವ ಹಳದಿಪುರಕರ.
(೬) ಶ್ರೀ. ಕೆ. ಎಫ್. ಪಾಟೀಲ.
(೭) ಶ್ರೀ. ಶ್ರೀಶೈಲಪ್ಪಾ ಕಾಗತಿಕರ.
(೮) ಶ್ರೀ. ಟಿ. ಎಮ್. ಹೆಗಡೆ.
(೯) ಶ್ರೀ. ನಾರಾಯಣರಾವ ಜೋಶಿ
(೧೦) ಶ್ರೀ. ಭೋಪಾಳಮ್ ಚಂದ್ರಶೇಖರಯ್ಯ
(೧೧) ಶ್ರೀ. ಎಸ್. ಬಿ. ಹಿರೇಮಠ.
(೧೨) ಶ್ರೀ. ಶ್ರೀನಿವಾಸ ಮಲ್ಯ
(೧೩) ಶ್ರೀ. ಟಿ ಸುಬ್ರಹ್ಮಣ್ಯ.
(೧೪) ಶ್ರೀ. ಶಿವಶಂಕರಪ್ಪ ಸಕ್ರಿ
(೧೫) ಬಳವಂತರಾವ ದಾತಾರ
(೧೬) ಶ್ರೀ. ಪಾರ್ಥನಾರಾಯಣ ಪಂಡಿತ
(೧೭) ವ್ಹಿ. ವ್ಹಿ ಪಾಟೀಲ
(೧೮) ಕೆ. ಎಸ್. ಪಾಟೀಲ
(೧೯) ಭೋಜರಾವ ದೋಲಾರ
(೨೦) ಶ್ರೀ. ರಾಜಗೋಪಾಲ ಆಯಂಗಾರ

## ರಾಣೆಬೆನ್ನೂರಿನಲ್ಲಿ ರಾಷ್ಟ್ರೀಯ ಸಮ್ಮೇಲನಗಳು.

### ಪತ್ರಿಕೋದ್ಯಮಿಗಳ ಪರಿಷತ್ತು.

ಈ ಮುಂಚೆ ಗೊತ್ತಾದ ಮೇರೆಗೆ ರಾಣೆಬೆನ್ನೂರಿನಲ್ಲಿ ತಾ. ೧೫-೧-೩೪ ನೆಯ ದಿವಸ ಕರ್ನಾಟಕ ಪತ್ರಿಕೋದ್ಯಮಿಗಳ ಮೂರನೆಯ ಪರಿಷತ್ತು ಕೂಡಿದ್ದಿತು. ಜನವಾಣಿ ಪತ್ರಿಕಾ ಸಂಪಾದಕರಾಗಿದ್ದ ಶ್ರೀ. ಕೆ. ಚಂಗಲರಾಯ ರೆಡ್ಡಿಯವರು ಅಧ್ಯಕ್ಷರಾಗಿದ್ದರು. ಕರ್ನಾಟಕದ ಪ್ರಮುಖ ಪತ್ರಿಕೆಗಳ ಅನೇಕ ಸಂಪಾದಕರೂ ಪ್ರತಿನಿಧಿಗಳೂ ಪರಿಷತ್ತಿಗೆ ಬಂದಿದ್ದರಲ್ಲದೆ ಸಾವಿರಾರು ಪ್ರೇಕ್ಷಕರೂ ಇದ್ದರು: ಸ್ವಾಗತ ಸಂಘಾಧ್ಯಕ್ಷರಾದ ಶ್ರೀ. ಮುದವೀಡು ಕೃಷ್ಣರಾಯರು ಕನ್ನಡ ನಾಡಿನ ಪತ್ರಿಕಾ ವ್ಯವಸಾಯವನ್ನೂ ಅದರಲ್ಲಾಗಬೇಕಾದ ಸುಧಾರಣೆಗಳನ್ನೂ ಅದಕ್ಕಿರುವ ನಾನಾ ಕೊರತೆಗಳನ್ನೂ ಕುರಿತು ಬಹು ಸ್ವಾರಸ್ಯವಾದ ಭಾಷಣವನ್ನು ಮಾಡಿದರು.

ಅಧ್ಯಕ್ಷರಾದ ಶ್ರೀ. ಚಂಗಲರಾಯ ರೆಡ್ಡಿಯವರು ಪತ್ರಿಕೆಗಳ ಮಹತ್ವವನ್ನು ತಿಳಿಸಿದರು. ಸರಕಾರವೇನೋ ಪತ್ರಿಕೆಗಳ ಪರಿಣಾಮವನ್ನು ತಿಳಿದುಕೊಂಡಿದ್ದರೂ ಜನಗಳೇ ಇನ್ನೂ ಅವುಗಳ ಮಹತ್ವವನ್ನು ತಿಳಿದುಕೊಂಡಿಲ್ಲವೆಂದೂ ಅದರಿಂದಲೇ ದೊರೆಯಬೇಕಾದ ಪ್ರೋತ್ಸಾಹಗಳು ದೊರೆಯುತ್ತಾ ಇಲ್ಲವೆಂದೂ ಕನ್ನಡ ಪತ್ರಿಕೆಗಳು ಬಹು ಕಷ್ಟ ಸ್ಥಿತಿಯಲ್ಲಿವೆಯೆಂದೂ ತಿಳಿಸಿದರು. ಆ ಮೇಲೆ ಕರ್ನಾಟಕ ಏಕೀಕರಣ ಮೊದಲಾದವುಗಳ ಸಂಬಂಧವಾಗಿ ಗೊತ್ತುವಳಿಗಳಾದವು.

### ಕರ್ನಾಟಕ ಯುವಕ ಪರಿಷತ್ತು.

ತಾ, ೧೬-೧-೩೪ ನೆಯ ದಿವಸ ಕರ್ನಾಟಕ ಯುವಕ ಪರಿಷತ್ತಿನ ಮೊದಲನೆಯ ಅಧಿವೇಶನವು ಭಾಯಿ ಮೆಹರ ಅಲ್ಲಿಯವರ ಅಧ್ಯಕ್ಷತೆಯಲ್ಲಿ ಕೂಡಿತು. ಈ ಪರಿಷತ್ತಿನ ಸ್ವಾಗತಾಧ್ಯಕ್ಷರಾದ ಶ್ರೀ. ಎಚ್. ಸಿ. ದಾನಪ್ಪನವರು ಯುವಕರಿಗೆ ಬೋಧಪರವಾದ ಭಾಷಣಮಾಡಿದರು. ಯುವಕರೇ ರಾಷ್ಟ್ರದ ಮುಂದಣ ಆಧಾರ ಸ್ತಂಭವಾಗಿರುವ ಕಾರಣ ಇವರು ರಾಷ್ಟ್ರಸೇವೆಯ ದೀಕ್ಷೆಯನ್ನು ಹೊಂದಬೇಕೆಂದೂ ಮಹಾತ್ಮಾ ಗಾಂಧಿ ಪಂಡಿತ ಜವಾಹರಲಾಲರ ಚಾರಿತ್ರ್ಯಗಳನ್ನು ಆದರ್ಶವಾಗಿಟ್ಟುಕೊಳ್ಳಬೇಕೆಂದೂ ತಮ್ಮ ಜೀವಿತವನ್ನು ಮಣ್ಣುಹೆಂಟೆಯನ್ನಾಗಿ ಮಾಡಿಕೊಳ್ಳದೆ ಪ್ರಕಾಶ ಬೀರುವ ಪ್ರಣತಿಯಂತೆ ಮಾಡಿಕೊಳ್ಳಬೇಕೆಂದೂ ಸೂಚಿಸಿ ಮೈಸೂರು ಸರಕಾರದ ದಬ್ಬಾಳಿಕೆಯನ್ನು ನಿಷೇಧಿಸಿದರು ಫೆಡರೇಶನ್ನಿಗೆ ತುಂಬಾ ವಿರೋಧಿಸಬೇಕೆಂದೂ ತಿಳಿಸಿದರು.

ಅಧ್ಯಕ್ಷರಾದ ಮೆಹರ ಅಲ್ಲಿಯವರು ತಮ್ಮ ಉಜ್ವಲ ಭಾಷಣದಲ್ಲಿ ತಾವು ಕರ್ನಾಟಕದ ಕಲಾ ಕೌಶಲ್ಯಗಳ ವಿಷಯವಾಗಿ ಮೊದಲು ಕನ್ನಡ ನಾಡಿನ ಕಡೆಗೆ ಲಕ್ಷಿಸಿ ವಿಜಯನಗರ ಮೊದಲಾದ ಐತಿಹಾಸಿಕ ಪ್ರಸಿದ್ಧ ಸ್ಥಳಗಳನ್ನು ನೋಡಿದೆವೆಂದೂ ಕಳೆದ ಸತ್ಯಾಗ್ರಹದ ಕಾಲಕ್ಕೆ ಹಿಂಡಲಗಿ ಕಾರಾಗೃಹದಲ್ಲಿ ಕರ್ನಾಟಕದ ಅನೇಕರ ಪರಿಚಯವಾಯಿತೆಂದೂ ಕಾರಾಗೃಹವು ನಿಜವಾದ ಶಿಕ್ಷಣಾಲಯವೆಂದೂ ಹೇಳಿ ಯುವಕರು ರಾಷ್ಟ್ರಸೇವೆಗೆ ರಶಿಯಾ, ತುರ್ಕಿ ಈಜಿಪ್ತಗಳ ಯುವಕರಂತೆ ಸಾಹಸಪಡಬೇಕೆಂದು ಬೋಧಿಸಿದರು.

# ಭಾರತ ಚಕ್ರವರ್ತಿಯ

## ವೀರ ಕುಮಾರಿ.

By— 'Master'

ಬೌದ್ಧ ಮತವನ್ನು ಸ್ಥಾಪಿಸಿದವನು ಬುದ್ಧನಾದರೂ, ಅದಕ್ಕೆ ಜೀವಕಳೆ ತಂದು, ಅದು ಅಳಿಯದಂತೆ ಉಳಿಸಿದವನು, ಅಶೋಕ ನೆಂದು ಧೈರ್ಯವಾಗಿ ಹೇಳಬಹುದು. ಅಂತಹ ಅಶೋಕನ ಪ್ರಚಾರದ ವಿಚಾರವು ಇಂದಿಗೂ ಬೌದ್ಧ ಧರ್ಮಿಯರಿಂದ ಆಚರಿಸಲ್ಪಡುತ್ತದೆ. ಅನ್ಯ ಧರ್ಮಗಳ ಅಧಿಕತಮವಾದ ನುಗ್ಗಾಟಕ್ಕೆ ಸಿಕ್ಕು ಬೌದ್ಧ ಧರ್ಮವು ಹಿಂದೂ ದೇಶದಲ್ಲಿ ಬೂದಿ ಮುಚ್ಚಿದ ಕೆಂಡದಂತೆ ಇರತೊಡಗಿತಾದರೂ ಸಿಂಹಳ (ಲಂಕಾ) ದ್ವೀಪದಲ್ಲಿ ಅದು ಇಂದಿಗೂ ಪ್ರಕಾಶಿಸುತ್ತಿದೆ.

ಅಶೋಕನ ಮಗಳು ತನ್ನ ಪಿತನ ಕಾರ್ಯದಲ್ಲಿ ಸಹಕಾರಿಯಾದಷ್ಟು ಇನ್ನಾರೂ ಆಗಿಲ್ಲ. ಭರತಖಂಡದಲ್ಲಿ ಆರ್ಯ ಧರ್ಮಿಯರ ಚರಿತ್ರೆಯಲ್ಲೇ ಸ್ತ್ರೀಯರು ಧರ್ಮ ಪ್ರಚಾರಕ್ಕೆ ಮುಂದಾದುದು ಇವಳ ಹೊರತು ಇನ್ನಾರೂ ಇಲ್ಲ. ಆಕೆಯ ನಿಜವಾದ ಹೆಸರು ಆದಾವುದೆಂದು ಚರಿತ್ರೆಯಿಂದ ಕಂಡುಬರುತ್ತಿಲ್ಲವಾದರೂ ಬೌದ್ಧ ಧರ್ಮಗ್ರಂಥಗಳಿಂದ ಆಕೆಯ ಹೆಸರು "ಸಂಘಮಿತ್ರ" (ಬೌದ್ಧ ಸಹೋದರ ಸಂಘದ ಮಿತ್ರಳು) ಎಂದು ತಿಳಿದು ಬರುತ್ತದೆ.

ಉಜ್ಜೈನಿ ಪ್ರದೇಶದಲ್ಲಿನ ಸಾಹುಕಾರನ ಮಗಳೊಬ್ಬಳಲ್ಲಿ ಆಶೋಕನಿಗ ಈಕೆ ಜನಿಸಿದಳು. ಆಕೆಯು ಹುಟ್ಟಿದ ಊರು ಗ್ವಾಲಿಯರ್ ಸಂಸ್ಥಾನದ ವೆದಿಸಾ ಎಂಬ ಹಳ್ಳಿ. ಇದು ಇಂದು ಹಾಳೂರಾಗಿ ಉಳಿದರೂ ಅಲ್ಲಿ ಜನಿಸಿದ ಅಶೋಕನ ಮಗಳ ಹೆಸರೂ ಕೀರ್ತಿಯೂ ಬೌದ್ಧ ಜಗತ್ತಿನಲ್ಲೆಲ್ಲಾ ಅಚ್ಚಳಿಯದೆ ಉಳಿದಿದೆ. ಆಕೆಯು ತನ್ನ ಜನ್ಮದೇಶಕ್ಕೆ ಅಷ್ಟೊಂದು ಕೀರ್ತಿಯನ್ನು ತಾರದಿದ್ದರೂ ಆಕೆಯ ಕರ್ತವ್ಯದ ಕುರುಹು ಲಂಕಾ ದ್ವೀಪದಲ್ಲಿ ಇಂದಿಗೂ ಕಾಣಬರುತ್ತದೆ.

ಆಕೆಯು ಇನ್ನೂ ತರುಣಿಯಾಗಿರುವಾಗಲೇ, ಆಕೆಗೆ ವಿವಾಹವಾಯಿತು. ಅದರಿಂದ ಸುಮನ ಎಂಬ ಗಂಡು ಮಗುವನ್ನೂ ಹೆತ್ತಳು. ಅಷ್ಟರಲ್ಲಿ ಅಶೋಕನ ಬೌದ್ಧ-ಧರ್ಮ ಪ್ರೇಮವು ಹೆಚ್ಚಿತು. ಧರ್ಮ ಪ್ರಚಾರ ಕಾರ್ಯದ ನಿಮಿತ್ತ, ಆತನು ತನ್ನ ಮಂದಿಯನ್ನು ಬೇರೆ ಬೇರೆ ಪ್ರಾಂತಗಳಿಗೆ ಕಳುಹಿಸತೊಡಗಿದನು. ಹಾಗೆಯೇ, ಒಂದು ಗುಂಪು ತಮ್ಮ ಪ್ರಚಾರ ಕಾರ್ಯಕ್ಕಾಗಿ, ಸುಮಾರು ಕ್ರಿಸ್ತ ಪೂರ್ವ ೩ ನೇ ಶತಮಾನದ ಮಧ್ಯದಲ್ಲಿ ಲಂಕಾದ್ವೀಪಕ್ಕೂ ಬಂದಿತ್ತು.

ಭಾರತ ಚಕ್ರಾಧಿಪತಿಯ ಮಗನಾದ ಮಹಿಂದನೇ, ಇಲ್ಲಿಗೆ ಪ್ರಚಾರಕಾರ್ಯಕ್ಕಾಗಿ ಬಂದವನು. ಅತಿ ಅಲ್ಪ ಕಾಲದಲ್ಲೇ ಸಹಸ್ರಾರು ಮಂದಿ ಆತನ ಮತವನ್ನು ಸ್ವೀಕರಿಸಿ, ಆತನ ಅನುಯಾಯಿಗಳಾದರು. ಆ ಕಾಲದ ಲಂಕಾಧಿಪತಿಯಾದ ಟಿಸ್ಸಾ, ಭಾರತ ಚಕ್ರಾಧಿಪತಿಯ ಸ್ನೇಹವನ್ನು ಗಳಿಸುವ ಇಚ್ಛೆಯಿಂದ, ಆತನಿಗೆ ಸಹಕಾರಿಯಾದನು. ಅರಮನೆಯಲ್ಲಿ ಕೂಡ, ಮಹಿಂದನು ತನ್ನ ಧರ್ಮ ಪ್ರಭೆಯನ್ನು ಬೀರಿದನು. ಇದರಿಂದ ಟಿಸ್ಸಾ ರಾಜನ ಸಹೋದರನ ಮಡದಿಯಾದ ಅನುಲಾ,— ತನ್ನನ್ನೂ ಪ್ರಚಾರಕಳನ್ನಾಗಿ ಸೇರಿಸಿಕೊಳ್ಳಬೇಕೆಂದು ಕೇಳಿಕೊಂಡಳು. ಆದರೆ, ಸ್ತ್ರೀಯರನ್ನು ಸ್ತ್ರೀಯರ ಮೂಲಕವೇ ಪ್ರಚಾರಕರನ್ನಾಗಿ ಮಾಡಬೇಕಾದ್ದರಿಂದ ಮಹಿಂದನು ಈ ವಿಚಾರವನ್ನು ತನ್ನ ತಂದೆಯಾದ ಅಶೋಕನಿಗೆ ತಿಳಿಸಿದನು. ಅಲ್ಲದೆ ತನ್ನ ಸಹೋದರಿಯನ್ನು ಲಂಕೆಗೆ ಕಳುಹಿಸಿಕೊಡಬೇಕಾಗಿ ಕೇಳಿಕೊಂಡನು.

ತನ್ನ ಒಬ್ಬಳೇ ಮಗಳಾದ ಸಂಗನಮಿತ್ರೆಯನ್ನೂ, ಆಕೆಯ ಪತಿ ಮತ್ತು ಪುತ್ರರನ್ನೂ ಬೌದ್ಧ ಧರ್ಮಕ್ಕೆ ಸೇರಿಸಿಕೊಳ್ಳಲಾಗಿತ್ತು. ಅಶೋಕನಿಗೆ ತನ್ನೊಬ್ಬಳೇ ಆದ ಪ್ರೀತಿಯ ಕುವರಿಯನ್ನು ಕಳುಹಿಸುವ ಮನಸ್ಸಿರಲಿಲ್ಲ. ಆದರೂ ಸಿಂಹದ ಕರೆಗೆ ಸುಮ್ಮನಿರಲಾಗದವನಾದುದರಿಂದ ಆಗ ಪುಷ್ಪಪುರ (ಪುಷ್ಪಪುರ—ಈಗಿನ ಪಾಟ್ನ) ದಲ್ಲಿದ್ದ ಆಕೆಗೆ ಈ ವಿಚಾರವನ್ನು ತಿಳಿಸಿದನು. ಅಲ್ಲದೆ, ಬೋಧಿ ವೃಕ್ಷದ ಕೊಂಬೆಯೊಂದನ್ನು ತರುವಂತೆಯೂ ಮಹಿಂದನು ತಿಳಿಸಿದ್ದನು.

ಅಶೋಕನ ತನ್ನಲ್ಲಿನ ಪ್ರೇಮವು, ತನ್ನನ್ನು ಲಂಕೆಗೆ ಕಳುಹಿಸದೆಂದು ಸಂಗನಮಿತ್ರೆಗೆ ತಿಳಿದಿತ್ತು. ಆದರಿಂದ ಆಕೆಯು— 'ನನ್ನ ಸಹೋದರನ ಆಜ್ಞೆ ಹಾಗೂ ಇಚ್ಛೆಯು ಶ್ರೇಷ್ಠವಾದುದು. ಅನೇಕರು ಬೌದ್ಧಧರ್ಮಾನುಸಾರರಾಗಬೇಕಾಗಿದೆ. ಅದರಿಂದ ನನಗೆ ಅಪ್ಪಣೆಯನ್ನು ಕೊಡು—' ಎಂದು ತಂದೆಯಿಂದ ಅನುಮತಿಯನ್ನ ಪಡೆದು ಲಂಕೆಗೆ ನಡೆದಳು.

ಆಕೆಯ ಮೊತ್ತಮೊದಲಿನ ಕೆಲಸವು ಬೌದ್ಧ- ಮತ ಪ್ರಚಾರಕಿಯರ ಸ್ಥಾಪನೆ. ರಾಣಿ ಅನುಲಾ ಮತ್ತು ಅರಮನೆಯ ಇತರ ಅನೇಕ ಸ್ತ್ರೀಯರನ್ನು ಈಕೆ ಪ್ರಚಾರಕಿಯರನ್ನಾಗಿ ಸೇರಿಸಿಕೊಂಡಳು. ಅದೇ, ಅಂದಿನ ಆಕೆಯ ಕರ್ತವ್ಯದ ಫಲವಾಗಿ ಇಂದಿಗೂ ಸ್ತ್ರೀಯರು ಸಿಂಹಳದಲ್ಲಿ ಅಧಿಕವಾಗಿ, ಧರ್ಮದ ವಿಚಾರದಲ್ಲಿ ಕೆಲಸಮಾಡುತ್ತಿದ್ದಾರೆ. ಸಂಗನಮಿತ್ರೆಯು ತನ್ನ ಅನುಯಾಯಿಗಳ ಕಾರ್ಯದಲ್ಲಿ ಸಹಕಾರಿಯಾಗಿ, ತನ್ನ ಜೀವನವನ್ನು ಸಿಂಹಳದಲ್ಲೇ ಕಳೆದಳು. ತನ್ನ ೫೯ ನೇ ವರ್ಷ ಪ್ರಾಯದ ವರೆಗೆ, ಅಧಿಕ ಕಾರ್ಯಗಳನ್ನು ಮಾಡಿ, ಕ್ರಿಸ್ತ ಪೂರ್ವ ೧೯೮ ರ ಸುಮಾರಿಗೆ, ಬೌದ್ಧ ಸನ್ನಿಧಿಯನ್ನು ಸೇರಿದಳು. ಆಕೆಯ ಭಸ್ಮದ ಮೇಲೆ ಒಂದು ಸ್ತೂಪವೂ, ಮಹಾರಾಜನಿಂದ ಕಟ್ಟಿಸಲ್ಪಟ್ಟಿತು.

ಸಂಗನಮಿತ್ರೆಯಿಂದ ತರಲ್ಪಟ್ಟು ಲಂಕಾದ್ವೀಪದಲ್ಲಿ ನೆಡಲ್ಪಟ್ಟ ಬೋಧಿ ವೃಕ್ಷವು, ಇಂದಿಗೂ ಅಚ್ಚಳಿಯದೆ ನಿಂತು ಜಗತ್ತಿನ ಅತೀ ಪ್ರಾಚೀನ ಮರ- ಎಂಬ ಬಿರುದಿಗೆ ತಕ್ಕದಾಗಿದೆ. ಆಕೆಯ 'ಪ್ರಚಾರಕಿ' ಯ ಗುಂಪು, ಇಂದಿಗೆ ಅಳಿದರೂ ಕೂಡ ಆಕೆಯ ನೆನಪಿಗಾಗಿ ಪ್ರತಿ ವರುಷವೂ ಡಿಶಂಬರ ತಿಂಗಳ ೧೭ಕೆ ಅಂದರೆ, 'ಉಂದುವಪ್' ತಿಂಗಳಲ್ಲಿ, ಒಂದು ಸ್ಮಾರಕೋತ್ಸವ ಬಹಳ ವಿಜೃಂಭಣೆಯಿಂದ ಜರುಗುತ್ತದೆ. ಸಹಸ್ರಾರು ಮಂದಿ ಸ್ತ್ರೀಯರು ಬಿಳೀ ಬಟ್ಟೆಯನ್ನುಟ್ಟುಕೊಂಡು ಸುಗಂಧ ಪುಷ್ಪಗಳನ್ನು ಹಿಡಿದುಕೊಂಡು, 'ಸಾಧು— ಸಾಧು— ಸಾಧು' ಎಂದು ಜಪಿಸುತ್ತಾ, ಸಂಗನಮಿತ್ರೆಯ ಚಿತ್ರವನ್ನು ಹೊತ್ತುಕೊಂಡು, ಮೆರವಣಿಗೆ ಹೊರಡುವರು. ಆಕೆಯ ಆದ್ಯ ಕರ್ತವ್ಯಗಳನ್ನು ಅನನ್ಯಭಕ್ತಿಯಿಂದ ಸ್ಮರಿಸುವರು.

-ಕಂಠೀರವ.

---

## ಶ್ರೀ ವಿದ್ಯಾರಣ್ಯ ಸಮಿತಿ ಬೆಳಗಾವ.

### ಶ್ರೀ ವಿದ್ಯಾರಣ್ಯ ಗ್ರಂಥಮಾಲಾ ಬೆಳಗಾವ.

೧ ನೇ ಹೂವು ಚುರಮುರಿ ಶಾಕುಂತಲ ನಾಟಕವು

೨ ನೇ ಹೂವು ಪುನರ್ಜನ್ಮ ಎರಡೂ ಅರಳಿವೆ.

೩ ನೇ ಹೂವು "ತಾಯಿ" ಅಚ್ಚಿನಲ್ಲಿದೆ. ಡಿಶಂಬರ ತಿಂಗಳ ಕೊನೆಯಲ್ಲಿ ಅರಳುವದು.

ವಾ. ಚ. ಅ. ವೆ. ಸೇರಿ ೩-೦-೦ ರೂ. ಗಳು

ಸಂಪಾದಕರು— ವಿ. ರಾ. ನಗರ.

## ಹೊನ್ನಾಳಿ ಶ್ರೀ ಚೆನ್ನಪ್ಪ ಸ್ವಾಮಿಗಳವರ ರಥೋತ್ಸವ ಮತ್ತು ಜಾನುವಾರುಗಳ ಪರಿಷೆ (ಜಾತ್ರೆಯ)

### ಪ್ರಸಿದ್ಧ ಪತ್ರಿಕೆ.

ತಾ. 2-2-38 ರಿಂದ ತಾ. 12-2-38 ರ ವರೆಗೆ

ಶ್ರೀ ಗಿರಿರಾಜ ಸೂರ್ಯ ಸಿಂಹಾಸನ ಹೊನ್ನಾಳಿ ಸಂಸ್ಥಾನ
ಹಿರೇ ಕಲ್ಮಠದ ಸ್ಥಿರಪಟ್ಟಾಧ್ಯಕ್ಷ ಚನ್ನರಾಜ ದೇಶಿ
ಕೇಂದ್ರ ಮೃತ್ಯುಂಜಯ ಮಹಾ ಸ್ವಾಮಿಗಳ
ಅಧಿಕಾರ ಸ್ಥಾನದಿಂದ.

ಮೈಸೂರು, ಧಾರವಾಡ, ಕಾರವಾರ, ಬಿಜಾಪೂರ, ಬೆಳಗಾವ, ಸಾಂಗ್ಲಿ, ಮಿರ್ಜಿ, ಬಳ್ಳಾರಿ ಇನ್ನೂ ಮುಂತಾದ ದೇಶದ ಮಹಾಜನಗಳಿಗೆ ಈ ಮೂಲಕ ತಿಳಿಸುವುದೇನೆಂದರೆ—

ಈ ನಮ್ಮ ಹೊನ್ನಾಳಿ ಸೀಮೆಯು ಶ್ರೇಷ್ಠವಾದ ಜಾತಿವಾರು ಎತ್ತು, ಹೋರಿ ಆಕಳು ಮುಂತಾದ ಜಾನುವಾರುಗಳನ್ನು ಬೆಳೆಸುವುದರಲ್ಲಿ ಪ್ರಸಿದ್ಧಿ ಪಡೆದಿರುವುದು ಸರಿಯಷ್ಟೆ. ದೂರ ದೇಶಗಳಿಗೆ ಹೋಗಿ ಜಾನುವಾರುಗಳನ್ನು ಕೊಂಡುಕೊಳ್ಳುವ ವ್ಯವಹಾರದಾರರ ಅನುಕೂಲತೆಗಾಗಿ ಘನಹೊಂದಿದ ನಮ್ಮ ಮೈಸೂರು ಸರಕಾರದವರು ಮತ್ತು ಶಿವಮೊಗ್ಗ ಡಿಸ್ಟ್ರಿಕ್ಟ್ ಬೋರ್ಡಿನವರು ಮುಖ್ಯ ಸ್ಥಳವಾದ ಹೊನ್ನಾಳಿ ಟೌನ್ ತುಂಗಭದ್ರಾ ತೀರದಲ್ಲಿ ಇದೇ ಮಾಘ ಶುದ್ಧ ೨ ಅಂದರೆ (ತಾ. ೨-೨-೩೮) ನೇ ಬುಧವಾರ ರಥೋತ್ಸವ ಮತ್ತು ಆ ಲಾಗಾಯ್ತು ಅಂದರೆ ತಾ. ೨-೨-೩೮ ರಿಂದ ತಾ. ೧೨-೨-೩೮ ರ ವರೆವಿಗೆ ದನಗಳ ಜಾತ್ರೆಯನ್ನು ಸೇರಿಸಲು ಏರ್ಪಾಡು ಮಾಡಿರುತ್ತಾರೆ.

ಪ್ರತಿದಿವಸ ಸಾಯಂಕಾಲ ಶ್ರೀಗಳವರ ಉತ್ಸವ ಶಿವಭಜನೆ ಶಿವಕೀರ್ತನೆ, ಸಂಗೀತ ಮುಂತಾದವು ನಡೆಯುತ್ತವೆ. ಶ್ರೇಷ್ಠವಾದ ದನಗಳಿಗೆ ಬಹುಮಾನವನ್ನು ಕೊಡಲು ಸಹ ಏರ್ಪಡಿಸಿರುತ್ತೆ. ಪ್ರಯುಕ್ತ ಜಾತ್ರೆಗೆ ಬರತಕ್ಕ ಜನರಿಗೆ ಊಟಕ್ಕಾಗಿ ದಾಸೋಹ ಸಹ ಇಡಲ್ಪಟ್ಟಿದೆ. ಆಸ್ತಿಕ ಮಹಾಶಯರೂ ವ್ಯವಹಾರದಾರರೂ ಈ ಸುಸಮಯವನ್ನು ಕಳೆದುಕೊಳ್ಳದೆ ಮೇಲ್ಕಂಡ ಮಿತಿಗೆ ಬಂದು ತಮ್ಮ ತಮ್ಮ ಮನದಿಷ್ಟಗಳನ್ನು ಪೂರ್ತಿಮಾಡಿಕೊಳ್ಳುವಿರಾಗಿ ಕೃತಪಡಿಸಿದೆ.

ಸೂಚನೆ— ಹೊನ್ನಾಳಿಯು ಹರಿಹರ ರೈಲ್ವೆ ಸ್ಟೇಶನ್ನಿಗೂ ಮತ್ತು ಶಿವಮೊಗ್ಗ ರೈಲ್ವೆ ಸ್ಟೇಶನ್ನಿಗೂ ೨೪ ಮೈಲು ಇದೆ. ಪ್ರಯಾಣಿಕರಿಗೆ ಮೋಟಾರು ಬಸ್ಸುಗಳು ಸಿಕ್ಕುತ್ತವೆ.

ಏಜಂಟರು,
ಕೆ. ಎಂ. ಮಡಿವಾಳಯ್ಯ
ಹೆಚ್. ಎಂ. ಹಾಲಸಿದ್ಧಯ್ಯ

---

### ಗಡವಂತಿ.

ನಿಜಾಂ ರಾಜ್ಯದ ಗಡವಂತಿಯಲ್ಲಿ ಶ್ರೀ. ಬಸವೇಶ್ವರ ರಥೋತ್ಸವವು ಸಂಭ್ರಮದಿಂದ ನಡೆಯಿತು. ಆ ಕಾಲಕ್ಕೆ ಶ್ರೀ. ಸಿದ್ಧರಾಮಯ್ಯನವರು ಭಂಗಿ ಹುಮನಾಬಾದ ಇವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಅನೇಕರು ಧಾರ್ಮಿಕ ವ್ಯಾಖ್ಯಾನಗಳನ್ನು ಮಾಡಿದರು. ಇಲ್ಲಿ ವೀರಶೈವ ಸಮಾಜ ಸ್ಥಾಪನೆ ಆಗಿದ್ದು ಧರ್ಮ ಜಾಗೃತಿಯ ಕಾರ್ಯ ನಡೆದಿವೆ. ಭಜನಾ ಸಂಘವೂ ಏರ್ಪಟ್ಟಿದೆ. ಆ ದಿನ ನಂದೀ ಧ್ವಜದ ಮೆರವಣಿಗೆ ಆಯಿತು.

ಓರ್ವ ಭಕ್ತ.

# ಕರ್ನಾಟಕ ಸಮಾಚಾರ.

—ಬಾಗಲಕೋಟೆಯಲ್ಲಿರುವ ಸೇವಾದಲದ ಕಟ್ಟಡವನ್ನು ಸರಿಪಡಿಸಲು ಸರಕಾರವು ೩೦೭ ರೂ. ಗಳನ್ನು ಕೊಡುವುದಾಗಿ ತಿಳಿಸಿದೆ. ಡಾ. ಹರ್ಡೀಕರರು ಈ ತಿಂಗಳ ೨೬ ನೆಯ ತಾರೀಖಿನ ದಿವಸ ಇದನ್ನು ಸ್ವಾಧೀನ ತೆಗೆದುಕೊಳ್ಳುವರು.

—ತಾ. ೧೬ ನೆಯ ದಿನ ಬೈಲಹೊಂಗಲದಲ್ಲಿ ಕಂದಾಯ ಮಂತ್ರಿಗಳಾದ ಶ್ರೀ. ದೇಸಾಯಿಯವರ ಹಸ್ತದಿಂದ ಮುನಸಿಪಾಲ್ಟಿ ಕಟ್ಟಡದ ಮೇಲೆ ರಾಷ್ಟ್ರಧ್ವಜವನ್ನು ಇರಿಸಲಾಯಿತು.

—೫೨ ನೆಯ ರಾಷ್ಟ್ರೀಯ ಸಭೆ ಕರ್ನಾಟಕದಲ್ಲಿ ಕೂಡಬೇಕೆಂದು ಹರಿಪುರ ಕಾಂಗ್ರೆಸ್ಸಿನಲ್ಲಿ ಕರ್ನಾಟಕವು ಆಮಂತ್ರಣವನ್ನು ಕೊಡುವುದು.

—ರಾಣೆಬೆನ್ನೂರಲ್ಲಿ ತಾ. ೧೭ ನೆಯ ದಿನ ಪ್ರಚಂಡ ಸಭೆ ಕೂಡಿತ್ತು. ೨-೩ ಸಾವಿರ ಸ್ತ್ರೀಯರು ಸಭೆಯಲ್ಲಿದ್ದರು. ೨-೩ ನೂರು ಸ್ತ್ರೀಯರು ರಾಟೆಯನ್ನಿಟ್ಟುಕೊಂಡು ನೂಲುತ್ತಿದ್ದರು. ಈ ಅಪೂರ್ವ ದೃಶ್ಯವನ್ನು ಭಾಯಿ ಮೆಹರ ಅಲ್ಲಿಯವರು ನೋಡಿ ನಾನು ಹಿಮಾಲಯದಿಂದ ಕನ್ಯಾಕುಮಾರಿಯ ವರೆಗೆ ಎಲ್ಲಿಯೂ ಇಂಥ ದೃಶ್ಯವನ್ನು ನೋಡಿರಲಿಲ್ಲವೆಂದು ಹೇಳಿದರು.

—ಕರ್ನಾಟಕ ಪ್ರಾಂತದ ೧೦ ನೆಯ ರಾಜಕೀಯ ಪರಿಷತ್ತು ಕೊಡಗಿನಲ್ಲಿ ಮುಂದೆ ಕೂಡುವುದು.

—ರಾಣೆಬೆನ್ನೂರಲ್ಲಿ ಕೂಡಿದ್ದ ಕರ್ನಾಟಕ ಪ್ರಾಂತಿಕ ರಾಜಕೀಯ ಪರಿಷತ್ತು ಸೌ|| ಲೀಲಾವತಿ ಮುನಸಿ ಇವರ ಹಸ್ತದಿಂದ ತೆರೆಯಲ್ಪಟ್ಟಿತು.

—ರಾಣೆಬೆನ್ನೂರು ಮುನಸಿಪಾಲ್ಟಿಮೇಲೆ ರಾಷ್ಟ್ರಧ್ವಜವನ್ನು ಇರಿಸಲು ಅಲ್ಲಿಯ ಮುನಸಿಪಾಲ್ಟಿಯವರು ಗೊತ್ತುಮಾಡಿದ ೧೫ ರೂ. ಗಳನ್ನು ವಿನಿಯೋಗಿಸಲು ಕಲೆಕ್ಟರರು ಒಪ್ಪಿಗೆ ಕೊಡಲಿಲ್ಲವಂತೆ.

—ಕಂದಾಯದ ಮಂತ್ರಿಗಳಾದ ಶ್ರೀ. ಮುರಾರಜಿ ದೇಸಾಯಿಯವರು ತಾ. ೧೭ ನೆಯ ದಿನ ಮುಂಜಾನೆ ಮುನವಳ್ಳಿಗೆ ಆಗಮಿಸಿದರು. ಆಗ ಅಲ್ಲಿಯ ಮತ್ತು ಸುತ್ತಲಿನ ಗ್ರಾಮಗಳ ಮಾನಪತ್ರವನ್ನು ಶ್ರೀ. ಮಲ್ಲೇಶಪ್ಪ ನವಲಗುಂದ ಇವರು ಓದಿ ಹೇಳಿದರು.

—ವಿಜಾಪುರದಲ್ಲಿಯ ಶ್ರೀ ಸಿದ್ಧೇಶ್ವರ ಜಾತ್ರೆಯ ಕಾರ್ಯಕ್ರಮ ಈ ಸಾರೆ ಬಹು ಸಂಭ್ರಮದಿಂದ ಜರುಗಿತು. ದನಗಳ ಪ್ರದರ್ಶನಕ್ಕೆ ೪-೫ ಸಾವಿರ ದನಗಳು ಸೇರಿದ್ದವು. ಜಾತ್ರೆಗೆ ೨೫-೩೦ ಸಾವಿರ ಜನರು ಸೇರಿದ್ದರು.

—ತಾ. ೨೦ ನೆಯ ದಿವಸ ಹುಬ್ಬಳ್ಳಿ ಮುನಸಿಪಾಲ್ಟಿಯು ಮುಂಬೈ ಗವ್ಹರ್ನರರಾದ ಸರ್. ಲುಮ್ಲೆಯವರಿಗೆ ಮಾನಪತ್ರವನ್ನು ಅರ್ಪಿಸಿತು.

—ಗೋಕಾಕದಲ್ಲಿ ಮತ್ತೆ ಗಿರಣಿ ಕೆಲಸಗಾರರ ಕಟ್ಟು ಪ್ರಾರಂಭವಾಗುವ ಲಕ್ಷಣ ತೋರಲಾರಂಭವಾಗಿದೆ.

### ಅಲಮಟ್ಟಿ.

—ಇಲ್ಲಿಯ ಶ್ರೀ. ಗುಡಗುಂಟೆ ರಾಚಯ್ಯನವರು ತಮ್ಮ ವ್ಯಾಜ್ಯ ಯಶಸ್ವಿಯಾದುದಕ್ಕೆ ತಾ. ೧೭-೧-೩೮ ನೆಯ ದಿನ ಶ್ರೀ. ಅಂದಾನಿಸ್ವಾಮಿ ಗದ್ದಿಗೆಗೆ ಹಣ್ಣು ಕಾಯಿ ಮಾಡಿಸಿ ಸಕ್ಕರಿ ಹಂಚಿದರು.

ಓರ್ವ ಶರಣ.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೩೧ ನೆಯ ಜನವರಿ ೧೯೩೮. | ಸಂಚಿಕೆ ೨೩

ಜನಸೇವೆಯೇ ದೇವರಸೇವೆ.

## ಬಿಹಾರದಲ್ಲಿ ಭೂಕಂಪನೆ!

ಬಿಹಾರ ಪ್ರಾಂತದ ದರಭಂಗಾ ಮೊದಲಾದ ಸ್ಥಳಗಳಲ್ಲಿ ತಾ. ೨೯-೧-೩೮ ನೆಯ ಪ್ರಾತಃಕಾಲ ೯॥ ಗಂಟೆ ಸಮಯದಲ್ಲಿ ಭೂಮಿಯು ನಡುಗಿತು. ಆದರೆ ಅನರ್ಥ ಸಂಭವಿಸಲಿಲ್ಲ.

## ಕಾಂಗ್ರೆಸ್ ವರ್ಕಿಂಗ್ ಕಮಿಟಿ.

ಫೆಬ್ರವರಿ ೩ ನೆಯ ತಾರೀಖಿನಿಂದ ನಾಲ್ಕು ದಿವಸ ವರ್ಧಾದಲ್ಲಿ ಕಾಂಗ್ರೆಸ್ ವರ್ಕಿಂಗ್ ಕಮಿಟಿ ಕೂಡಿ ಹರಿಪುರ ಕಾಂಗ್ರೆಸ್‌ದಲ್ಲಿಡುವ ಗೊತ್ತುವಳಿಗಳನ್ನು ಸಿದ್ಧಗೊಳಿಸುವುದು.

## ಫೆಡರೇಶನ್ ಮೂರು ವರುಷ ಇಲ್ಲ?

ಇನ್ನೂ ಮೂರು ವರುಷ ಫೆಡರೇಶನ್ ಏರ್ಪಡುವುದಿಲ್ಲವೆಂದೂ ಇದೇ ನವ್ಹಂಬರ್ ತಿಂಗಳಲ್ಲಿ ಕೇಂದ್ರ ಶಾಸನ ಸಭೆಯ ಚುನಾವಣೆ ಪ್ರಾರಂಭವಾಗುವದೆಂದೂ ದಿಲ್ಲಿ "ಹಿಂದು" ಪತ್ರಿಕಾ ಸುದ್ದಿಗಾರರು ತಿಳಿಸಿದ್ದಾರೆ.

ದೇಹವೇ ದೇವಾಲಯ.

## ಅಖಿಲ ಕರ್ನಾಟಕದಲ್ಲಿ ಪ್ರಸಿದ್ಧವಾದ

### ರಾಷ್ಟ್ರೀಯ ಕಂಪನಿಯೆಂದರೆ

## ಇದೊಂದೇ.

# ದಿ ಸ್ವರಾಜ್ಯ ಬ್ಯಾಂಕಿಂಗ ಮತ್ತು ಇನ್ಸುರನ್ಸ ಕಂ. ಲಿ.

# ಧಾರವಾಡ.

| ಚೇರಮನ್ | ವ್ಹಾಯಿಸ್ ಚೇರಮನ್ |
|---|---|
| ದೇಶಭಕ್ತ ಶ್ರೀಯುತ ಎಸ್. ಕೆ. ಹೊಸಮನಿ | ಶ್ರೀಯುತ ವ್ಹಿ. ಬಿ. ಹಾಲಭಾವಿ |
| B. A. LL. B. M. L. A. | B. A. LL. B. ರಿಟಾಯರ್ಡ |
| ಪ್ರೆಸಿಡೆಂಟ ಕೆ. ಪಿ. ಸಿ. ಸಿ. | ಫರ್ಸ್ಟ ಕ್ಲಾಸ್ ಸಬ್ ಜಡ್ಜ ಧಾರವಾಡ. |

ಭವಿಷತ್ಕಾಲದ ಜೀವಿತದ ನಿರ್ವಾಹಕ್ಕೆ | ಈ ಕಂಪನಿಯನ್ನು ಕೇವಲ ರಾಷ್ಟ್ರೋನ್ನತಿಗಾಗಿ ಸ್ಥಾಪಿಸಿರುವರು. | ತೊಂದರೆಯಿಲ್ಲದ ಒತ್ತಾಯದ ಉಳಿತಾಯ

### ರೂ. ೫೦೦ ರಿಂದ ರೂ. ೫೦೦೦ ಗಳ ವರೆಗೆ ಜೀವ ವಿಮಾ ಪಾಲಿಸಿಗಳು.

**ಉದಾರ ಶರ್ತಿನ ಪಾಲಿಸಿಗಳು ! ಮಿತವ್ಯಯದ ಆಡಳಿತ ! ! ಸುಲಭವಾದ ಕಂತಗಳು ! ! !**

ಈ ಕಂಪನಿಯವರು ಕಾರ್ಯ ಕುಶಲತೆಯಿಂದ ನಾನಾ ಎಂಬುವ ಕಂಪನಿಗಳಿಗೂ ಮುಂದೆ ಇದ್ದಾರೆ. ಸ್ಥಾಪಿಸಿದ ಎರಡೇ ವರ್ಷಗಳಲ್ಲಿ ಇಷ್ಟು ಪ್ರಗತಿಯನ್ನು ಮಾಡಿ ತೋರಿಸಲಿಕ್ಕೆ ಉಜ್ವಲ ದೇಶಭಕ್ತರೂ, ಸುಪ್ರಸಿದ್ಧರೂ, ಲೋಕಪ್ರಿಯರೂ, ವಿಮೆಯ ವ್ಯವಹಾರದಲ್ಲಿ ನುರಿತ ಪರಿಪಕ್ವ ಬುದ್ಧಿಯುಳ್ಳವರೂ ಇರುವ ಬೋರ್ಡಿನ ಡಾಯರೆಕ್ಟರರ ಆಡಳಿತೆಯೇ ಕಾರಣ. ಗೌರವದ ಕನ್ನಡಿಗ ವಿಮೇಚ್ಛುಗಳು ತಮ್ಮ ಹಿತವನ್ನೊಳಗೊಂಡ ಕರ್ನಾಟಕ ಮಾತೆಯ ಈ ತರಹದ ಸೇವೆಗಾಗಿ ತಮ್ಮ ಬೆಂಬಲವನ್ನೀಯುವರೆಂದು ತುಂಬಾ ನಂಬಿರುವೆವು.

### ಎಲ್ಲ ಕಡೆಯಲ್ಲಿಯೂ ಕುಶಲ ಏಜಂಟರು ಬೇಕು.

The Manager.

---

ಮುದ್ದಾದ ಅಕ್ಷರ! ಸುಲಭ ದರ!

## ಶ್ರೀ ರಂಗನಾಥ ಟೈಪ್ ಫೌಂಡರಿ

ಬೆಂಗಳೂರು.

ಕನ್ನಡ ಮತ್ತು ಇಂಗ್ಲಿಷ, ಎಲ್ಲಾ ತರದ ಟೈಪುಗಳೂ ಒಳ್ಳೊಳ್ಳೇ ಬಾರ್ಡರಗಳೂ ನಮ್ಮ ಫೌಂಡರಿಯಲ್ಲಿ ತಯಾರಾಗುತ್ತವೆ.

ಒಳ್ಳೇ ಮೆಟಲ್. ಬಹು ಅಂದವಾದ ಅಕ್ಷರಗಳು. ಬಲು ಸುಲಭ ದರ. ಕ್ಯಾಟಲಾಗ ತರಿಸಿಕೊಳ್ಳಿರಿ. ಒಮ್ಮೆ ಟೈಪುಗಳನ್ನು ತರಿಸಿಕೊಂಡು ಅನುಭವ ಹೊಂದಿರಿ. ಹಳೆ ಟೈಪುಗಳಿದ್ದರೆ ಸುಲಭ ಚಾರ್ಜಿಗೆ ಹೊಸದಾಗಿ ಹೊಯಿದು ಕೊಡುತ್ತೇವೆ.

ಪ್ರೊಪ್ರೈಟರ,
ಶ್ರೀ ರಂಗನಾಥ ಟೈಪ್ ಫೌಂಡರಿ
೬೭ ಕುಬೇರ ಸಾಹುಜಿ ಲೈನ್
ಚಿಕ್ಕಪೇಟೆ, ಬೆಂಗಳೂರು ಸಿಟಿ.

---

**ಲೋಕ**ಮತ ದಿನ ಪತ್ರಿಕೆಯನ್ನು ಪ್ರತಿ ದಿನವೂ ತಪ್ಪದೇ ಓದಿ ಎಲ್ಲ ವಿಷಯಗಳನ್ನೂ ತಿಳಿದುಕೊಳ್ಳಿರಿ.

ವಿಳಾಸ— ಮ್ಯಾನೇಜರ್ "ಲೋಕಮತ"
ಹುಬ್ಬಳ್ಳಿ.

---

**ನಿ**ಜಾಮ ಪ್ರಾಂತದ ಕನ್ನಡಿಗರಿಗೆ ಕನ್ನಡ ನಾಡಿನ ಎಲ್ಲ ಪ್ರಸಿದ್ಧ ಲೇಖಕರ ಪುಸ್ತಕಗಳೂ ನಮ್ಮಲ್ಲಿ ಯೋಗ್ಯ ಬೆಲೆಗೆ ದೊರೆಯುವವು.

ವಿಳಾಸ— ಎಸ್. ಸಿ. ಶಿವಲಿಂಗಣ್ಣ
ಕಲ್ಯಾಣ ಕರ್ನಾಟಕ ಬುಕ್ಕಡಿಪೊ ಗುಲಬರ್ಗಾ

---

**ವೀರ**ವಾಣಿ. ಇದು ವೀರಶೈವ ಮತದ ನಿಜ ತತ್ವವನ್ನು ತಿಳಿಸುವ ಮಾಸ ಪತ್ರಿಕೆ.

ವಾರ್ಷಿಕ ಚಂದಾ ರೂ. ೧-೮-೦
ಸಂಪಾದಕರು— ಗಂಗಾಧರಪ್ಪ ಹೊದ್ಲೂರು ಹುಬ್ಬಳ್ಳಿ.



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೩೧ ನೆಯ ಜನವರಿ ೧೯೩೮. | ಸಂಚಿಕೆ ೨೩

## ಮಹತ್ವದ ಸುದ್ದಿಗಳು.

—ಮದ್ರಾಸಿನ ಮೇಅರರಾದ ಆದಿ ಹಿಂದು ಪ್ರಮುಖ ಶ್ರೀ. ಶಿವಷಣ್ಮುಗಂ ಇವರು ತಾ. ೨೬ ನೆಯ ದಿನ ಮದ್ರಾಸ್ ಕಾರ್ಪೊರೇಶನ್ನಿನ ಮೇಲೆ ರಾಷ್ಟ್ರಧ್ವಜವನ್ನು ಇರಿಸಿದರು. ಆಗ ರಾಟೆಯು ಆದಿ ದ್ರಾವಿಡರ ವೈಶಿಷ್ಟ್ಯ ಚಿನ್ಹವೆಂದು ಸಾರಿದರು.

—ಹರಿಪುರ ಕಾಂಗ್ರೆಸ್ಸಿನ ಅಧ್ಯಕ್ಷರಾದ ಶ್ರೀ. ಸುಭಾಷ ಚಂದ್ರ ಬೋಸರು ಕಲಕತ್ತಾ ಪಟ್ಟಣದಲ್ಲಿ ತಾ. ೨೬ ನೆಯ ದಿನ ೨೦ ಸಾವಿರ ಜನಗಳ ನಡುವೆ ಸ್ವಾತಂತ್ರ್ಯದ ಪ್ರತಿಜ್ಞೆಯನ್ನು ಓದಿ ಹೇಳಿದರು.

—ಬಂಗಾಲದಲ್ಲಿ ಈ ವರೆಗೆ ೨೮೦೭ ರಾಜಕೈದಿಗಳನ್ನು ಬಿಡುಗಡೆ ಮಾಡಿದ್ದಾಗಿದೆ. ಇವರಲ್ಲಿ ಅನೇಕರು ಕ್ರಾಂತಿಕಾರಕರೂ ಇದ್ದಾರೆ.

—ತಾ. ೨೬ ನೆಯ ದಿನ ಉಷಃಕಾಲದಲ್ಲಿ ಉತ್ತರ ಧ್ರುವ ಪ್ರದೇಶದ ಕಡೆಗೆ ಒಂದು ಮಹಾ ಪ್ರಕಾಶವು ಆಕಾಶದಲ್ಲಿ ಯುರೋಪ ಖಂಡದವರಿಗೆ ತೋರಿತು. ಇಂಥ ಪ್ರಕಾಶವನ್ನು ಆ ಖಂಡದವರು ಎಂದೂ ನೋಡಿರಲಿಲ್ಲವಂತೆ. ಪ್ಯಾರೀಸಿನಿಂದ ಲಂಡನ್ನಿಗೆ ಹೋಗುವ ವೈಮಾನಿಕರೂ ಈ ಝುಗಝುಗಿಸುವ ಪ್ರಕಾಶವನ್ನು ನೋಡಿದರು.

—ಪುಣೆಯಲ್ಲಿ ೨೬ ನೆಯ ತಾರೀಖಿನ ದಿವಸ ಲೋಕಶಾಹಿ ಸ್ವರಾಜ್ಯ ಪಕ್ಷದವರು ಪ್ರತ್ಯೇಕವಾಗಿ ಸಭೆಸೇರಿ ಪ್ರತ್ಯೇಕವಾದ ಸ್ವಾತಂತ್ರ್ಯದ ಪ್ರತಿಜ್ಞೆಯನ್ನು ಸಾರಿದರು.

—ಪಂಜಾಬ ಅಸೆಂಬ್ಲಿಯ ಕಾಂಗ್ರೆಸ್ ಪಕ್ಷದ ಸಭಾಸದರಾದ ದಿವಾನ ಚಮನಲಾಲರು ಅಧ್ಯಕ್ಷರ ಅಪ್ಪಣೆಯನ್ನು ಪಾಲಿಸದಿದ್ದುದರಿಂದ ಆ ದಿನ ಅಸೆಂಬ್ಲಿಯಿಂದ ಹೊರಗಿರುವ ಶಿಕ್ಷೆಗೆ ಗುರಿಯಾದರು.

—ಪಂಜಾಬ ಅಸೆಂಬ್ಲಿಯ ಹಿಂದು ಸಭಾಸದರನ್ನು ಭಾಯಿ ಪರಮಾನಂದರು ಬರಮಾಡಿಕೊಂಡು ಹಿಂದು ಸಭಾಸದರ ಒಂದು ಪಕ್ಷವನ್ನು ಏರ್ಪಡಿಸಿದರು. ಅದರಲ್ಲಿ ೧೫ ಸಭಾಸದರಿದ್ದಾರೆ. ಜಾತಿ ನಿರ್ಣಯವು ಇರುವವರೆಗೂ ನಾವು ಹಿಂದು ಪಕ್ಷವನ್ನು ಇಟ್ಟುಕೊಳ್ಳಬೇಕಾಗಿದೆಯೆಂದು ಈ ಪಕ್ಷವು ಸಾರಿತು.

—ಲೋಕಶಾಹಿ ಸ್ವರಾಜ್ಯ ಪಕ್ಷಕ್ಕೆ ಜನದ್ರೋಹದ ಎರಡನೆ ತರಗತಿಯ ಪಕ್ಷವೆಂಬ ಪದವಿಯನ್ನು ತಾ. ೨೬ ನೆಯ ದಿವಸ ಕಾಂಗ್ರೆಸ್ ಪಕ್ಷದ ಪ್ರಮುಖರಾದ ಕಾಕಾಸಾಹೇಬ ಗಾಡಗೀಳ ಎಂಬುವವರು ಪುಣೆಯಲ್ಲಿ ಕೊಟ್ಟರು!

—ತಾ. ೨೬ ನೆಯ ದಿನ ಮುಂಬೈಯಲ್ಲಿ ಸ್ವಾತಂತ್ರ್ಯ ದಿನದ ಮೆರವಣಿಗೆ ಹೊರಟಾಗ ತುಂಟ ಮುಸಲ್ಮಾನರು ಕಲ್ಲು ಎಸೆದರು. ೩ ಪೋಲಿಸರಿಗೂ ೧೨ ಜನರಿಗೂ ಗಾಯಗಳಾದವು. ಚೌಪಾಟಿ ಬೈಲಲ್ಲಿ ಪ್ರಚಂಡ ಸಭೆ ಸೇರಿದಾಗ ಅಲ್ಲಿಯೂ ಕಲ್ಲುಗಳು ಬಿದ್ದವು. ಸಭೆಯಲ್ಲಿ ಗೊಂದಲವಾಯಿತು. ಪೋಲಿಸರು ಬಡಗಿ ಹೊಡತ ಕೊಟ್ಟರು. ಇಬ್ಬರನ್ನು ಹಿಡಿದಿದ್ದಾರೆ.

—ಲಾರ್ಡ ಲೋಥಿಯನ್‌ರು ಈ ದೇಶವನ್ನು ಬಿಡುವ ಮುಂಚೆ ಗಾಂಧೀಜಿಯವರು ತಮಗೆ ತೋರಿಸಿದ ಸತ್ಕಾರ ಮತ್ತು ತಮ್ಮ ಸಂಗಡ ಮಾಡಿದ ಸಂಭಾಷಣೆಗಳಿಗಾಗಿ ತುಂಬಾ ವಂದಿಸಿ ಕಾಂಗ್ರೆಸ್ ಪಕ್ಷ ಮತ್ತು ಸರಕಾರ ಪಕ್ಷ ಸಹಕರಿಸಿ ರಾಜ್ಯಭಾರ ನಡೆಸುತ್ತಿದ್ದುದನ್ನು ಅಭಿನಂದಿಸಿದ್ದಾರೆ.

—ಹಿಂದು ಮಹಾಸಭೆಯು ಜಪಾನದ ಆಕ್ರಮಣವನ್ನು ಅಭಿನಂದಿಸಿದೆಯೆಂದು ಹುಟ್ಟಿಸಿದ ಸುದ್ದಿ ಸುಳ್ಳೆಂತಲೂ ಮಹಾಸಭೆಯು ಚೀನ-ಜಪಾನಗಳ ಯುದ್ಧದ ವಿಷಯವಾಗಿ ಯಾವ ಠರಾವನ್ನೂ ಮಾಡಿಲ್ಲವೆಂತಲೂ ಮಹಾಸಭೆಯ ಕಾರ್ಯನಿರ್ವಾಹಕರು ತಿಳಿಸಿದ್ದಾರೆ.

—ಮುಂಬೈ ಮೇಯರರು ಗಾಯ ಹೊಂದಿದ ಚೀನಿ ಸೈನಿಕರ ಉಪಚಾರಕ್ಕಾಗಿ ೩೦ ಸಾವಿರ ರೂ. ಗಳನ್ನು ಚೀನ ದೇಶಕ್ಕೆ ಕಳಿಸಿಕೊಟ್ಟಿದ್ದಾರೆ.

# "ಹರಿಜನ" ಎಂಬ ಹೆಸರು

## ಮತ್ತು

## ಕಾಂಗ್ರೆಸ್ ಪಕ್ಷದ ಕರ್ತವ್ಯ.

### ಡಾ. ಆಂಬೇಡಕರರ ನಿಷೇಧ.

ಕಳೆದ ೨೨ ನೆಯ ತಾರೀಖಿನ ದಿವಸ ಮುಂಬೈ ಅಸೆಂಬ್ಲಿಯಲ್ಲಿ ಸ್ಥಾನಿಕ ಸ್ವರಾಜ್ಯ ಸಂಸ್ಥೆಯ ಶಾಸನ ತಿದ್ದುಪಾಟನ ಗೊತ್ತುವಳಿಯು ಚರ್ಚೆಗೆ ಬಂದಿದ್ದಿತಷ್ಟೆ. ಅದು ಕಾಂಗ್ರೆಸ್ ಪಕ್ಷದ ಸರಕಾರದಿಂದಲೇ ತರಲ್ಪಟ್ಟದ್ದಾಗಿದ್ದಿತು. ಅದರಲ್ಲಿ ಆದಿ ಹಿಂದುಗಳನ್ನುದ್ದೇಶಿಸಿ "ಹರಿಜನ" ಎಂದು ಹೇಳಲಾಗಿತ್ತು. ಈ ಶಬ್ದವು ತಮಗೆ ಅನಿಷ್ಟಕರವಾದುದೆಂಬುದನ್ನು ಕಾಂಗ್ರೆಸ್ ಪಕ್ಷಕ್ಕೆ ಸ್ಪಷ್ಟ ತಿಳಿಸುವುದಕ್ಕಾಗಿ ಡಾ. ಆಂಬೇಡಕರರು ತಮ್ಮ ಪಕ್ಷದ ಸಭಾಸದರೊಂದಿಗೆ ಅಸೆಂಬ್ಲಿಯನ್ನು ಬಿಟ್ಟು ಹೊರಗೆ ಹೋದರು. ಈಗಲಾದರೂ ಕಾಂಗ್ರೆಸ್ ಪಕ್ಷವು ಈ ಶಬ್ದದ ಕಡೆಗೆ ಲಕ್ಷಿಸಿ ತನ್ನ ಕರ್ತವ್ಯವೇನೆಂಬುದನ್ನು ಯೋಚಿಸುವುದು ನ್ಯಾಯವೂ ಅಗತ್ಯವೂ ಆಗಿಲ್ಲವೆ ?

ಅನೇಕ ಆದಿ ಹಿಂದುಗಳು ತಮಗೆ "ಹರಿಜನ" ಎಂದು ಅನ್ಯರಿಂದ ಹೇಳಲ್ಪಡುತ್ತಿರುವುದು ಅವಮಾನಕರವೆಂದೇ ತಿಳಿಯುತ್ತಿದ್ದಾರೆ. ಗಾಂಧೀಜಿಯವರು ಈ ಹೆಸರನ್ನು ಇಟ್ಟನಂತರ ಆಗಲೇ ಅನೇಕರು ಇದು ಸರಿಯಲ್ಲವೆಂದು ತಿಳಿಸಿದರು. ಧರ್ಮಾತ್ಮಾ ಮಾಲವೀಜಿ, ಮೊದಲಾದ ಅನೇಕ ಹಿಂದು ಮುಖಂಡರು ಕೂಡಾ ಈ ಹೆಸರು ಯುಕ್ತವಲ್ಲವೆಂದೇ ಹೇಳುತ್ತಿದ್ದಾರೆ. ಸವರ್ಣೀಯ ಹಿಂದುಗಳಲ್ಲಿಯೇ ಅನೇಕರು ಹೀಗೆ ಹೇಳುತ್ತಿದ್ದಾರೆಂದಲ್ಲ; ಆದಿ ಹಿಂದುಗಳೇ ಅನೇಕ ಸಭೆಗಳಲ್ಲಿ ಈ ಹೆಸರನ್ನು ನಿಷೇಧಿಸಿದರು. ಆಗಲಾದರೂ ಕಾಂಗ್ರೆಸ್ ಪಕ್ಷದವರು ಈ ವಿಷಯದ ಕಡೆಗೆ ಲಕ್ಷಿಸಬೇಕಾಗಿದ್ದಿತು.

ಶ್ರೀ. ಭಾಗ್ಯರೆಡ್ಡಿಯವರಂತೂ ಈ ಸಂಬಂಧವಾಗಿ ವಿಸ್ತಾರವಾದ ವಿವೇಚನೆಯನ್ನು ಮಾಡಿ "ಹರಿಜನ" ಎಂಬುದು ದೇವದಾಸಿಯರ ಸಂತತಿಗೆ ಸಲ್ಲುವ ಹೆಸರೆಂದೂ ಇದು ತಮಗೆ ಬಹು ಅವಮಾನಕರವೆಂದೂ ಸ್ಪಷ್ಟೀಕರಿಸಿದ್ದಾರೆ. ಇಷ್ಟೇ ಅಲ್ಲ; ತಮಗೆ "ಆದಿ ಹಿಂದು" ಗಳೆಂಬುದಾಗಿಯೇ ಕರೆಯಬೇಕೆಂದೂ ತಿಳಿಸಿದ್ದಾರೆ. ಹೀಗಿರುವಾಗ "ಹರಿಜನ" ಎಂದೇ ಅವರಿಗೆ ಹೇಳುವುದು ಯಾವ ನ್ಯಾಯವೋ ನಮಗೆ ತಿಳಿಯದು.

### ಇದು ನ್ಯಾಯವೇ ?

ಗಾಂಧೀಜಿಯವರ ಮಾತಿನಲ್ಲಿ ಅತ್ಯದ್ಭುತವಾದ ಶಕ್ತಿಯಿದೆ. ಆ ಮಾತನ್ನು ಈಗ ದೇಶದಲ್ಲಿ ಪ್ರಚಂಡವಾಗಿರುವ ಕಾಂಗ್ರೆಸ್ ಪಕ್ಷವು ಎತ್ತಿ ಹಿಡಿಯಿತೆಂದರೆ ಅದನ್ನು ಎದುರಿಸುವುದು ಹಿಂದುಗಳಲ್ಲಿ ಯಾವ ಪಕ್ಷದವರಿಗೂ ಸಾಧ್ಯವಿಲ್ಲ. ಹೀಗಿದ್ದ ಮಾತ್ರದಲ್ಲಿ ಆ ಮಾತು ನ್ಯಾಯವಾದುದೇ ಇದೆಯೆಂದು ಮಾತ್ರ ತಿಳಿಯಲಾಗದು. ಒಂದು ವ್ಯಕ್ತಿಗೆ ನಾವಿಟ್ಟ ಹೆಸರು ಆ ವ್ಯಕ್ತಿಗೂ ಒಪ್ಪಿಗೆಯಾಗಿರಬೇಕು. ಹಾಗಿಲ್ಲದೆ ಆ ವ್ಯಕ್ತಿಗೆ ನಾವು ಕರೆಯುವ ಹೆಸರಿನಿಂದ ಮಾನಹಾನಿಯಾಗಲಿ ಅಥವಾ ಅಸಮಾಧಾನವಾಗಲಿ ಆಗುತ್ತಿದ್ದರೆ ಆಗ ನಾವು ಆ ಹೆಸರನ್ನು ಬಿಡಬೇಕಾದುದೇ ನ್ಯಾಯವು. ನಮ್ಮ ನಾಲಿಗೆ ನಮ್ಮ ಸ್ವಾಧೀನವೆಂದು ನಮ್ಮ ಇಷ್ಟದಂತೆಯೇ ಕರೆದರೆ ಅದು ಸಭ್ಯಾಚಾರವೂ ಅಲ್ಲ. ಅಥವಾ ಆ ವ್ಯಕ್ತಿಯು ತನಗೆ ಕರೆಯಲ್ಪಡಬೇಕೆಂದು ಇಚ್ಛಿಸುವಂತಹ ಹೆಸರಿನಿಂದಲೇ ನಾವು ಕರೆದರೆ ನಮಗೆ ಅವಮಾನವಾಗುತ್ತಿದ್ದರೆ ಹಾಗೆ ಕರೆಯುವುದು ನಮ್ಮ ಕರ್ತವ್ಯವೂ ಅಲ್ಲ. ಎಂದಮೇಲೆ ಒಂದು ಹೆಸರು ಕರೆಯಲ್ಪಡುವವರಿಗೂ ಕರೆಯಿಸಿಕೊಳ್ಳಲ್ಪಡುವವರಿಗೂ ಒಪ್ಪಿಗೆಯಾದುದಾಗಿಯೇ ಇರಬೇಕಾದುದು ನ್ಯಾಯವು.

"ಹರಿಜನ" ಎಂದು ಕರೆಯಲ್ಪಡುವುದು ತಮಗೆ ಅವಮಾನಕರವೆಂಬುದನ್ನೇನೋ ಆದಿಹಿಂದುಗಳು ಅನೇಕಸಾರೆ ಸಾರಿ ಹೇಳಿದ್ದಾರೆ. ಕಾಂಗ್ರೆಸ್. ಪಕ್ಷದವರು ಮಾತ್ರ "ಆದಿ ಹಿಂದು" ಎಂಬ ಹೆಸರನ್ನು ತಾವು ಏಕೆ ಹೇಳುವುದಿಲ್ಲವೆಂಬುದನ್ನೇನೂ ತಿಳಿಸಿಲ್ಲ. ಮತ್ತು ಹರಿಜನ ಎಂದು ಹೇಳುವುದನ್ನೂ ಬಿಟ್ಟಿಲ್ಲ. ಹೀಗೆ ಮಾಡುವುದು ನ್ಯಾಯವೆ?

### ಹೆಸರಿನಲ್ಲೇನಿದೆ ?

ಹೆಸರಿಗಾಗಿ ಇಷ್ಟೇಕೆ ಹೋರಾಟ? ಹೆಸರಿನಲ್ಲೇನಿದೆ? ಇದರಿಂದ ಅವರ ಕಷ್ಟನಷ್ಟಗಳೇನಾದರೂ ದೂರಾಗುತ್ತವೆಯೇ? ಎಂತಹ ದಡ್ಡತನ! ಎಂದು ಅನೇಕರು ಹೇಳಬಹುದು. ಅಂಥ ಮಹಾಶಯರು ಜಾಣರಷ್ಟೆ. ಅವರು ಆದಿಹಿಂದು ಎಂದು ಕರೆದುಬಿಟ್ಟರೆ ಹೋರಾಟವೆಲ್ಲಿ? ಹೆಸರಿನಲ್ಲೇನಿದೆ? ಹಾಗೆ ಕರೆದರೆ ಇವರಿಗೇನಾದರೂ ನಷ್ಟ ಕಷ್ಟಗಳು ಸಂಭವಿಸುತ್ತವೆಯೇ? ಇದಕ್ಕಾಗಿ ಇಷ್ಟು ಹಟವಾದರೂ ಏಕೆ? ಅವರಿಗೆ ಬೇಡಾದ ಹೆಸರಿನಿಂದಲೇ ಕರೆಯುವುದರಲ್ಲಿ ಯಾವ ಮಾನ, ಮನ್ನಣೆ, ಫಲ, ಪ್ರಯೋಜನಗಳಿವೆ?

### "ವಂದೇಮಾತರಂ" ಮತ್ತು "ಹರಿಜನ."

ವಂದೇಮಾತರಂ ರಾಷ್ಟ್ರಗೀತೆಯೆಂದು ಕಳೆದ ೩೨ ವರುಷಗಳಿಂದ ರಾಷ್ಟ್ರವೇ ಒಪ್ಪಿಕೊಂಡು ಅದನ್ನು ರಾಷ್ಟ್ರೀಯ ಕಾರ್ಯಗಳಲ್ಲಿ ಹೇಳುತ್ತಾ ಬಂದಿದ್ದರೂ ಈಗ ಕೆಲವು ಮುಸಲ್ಮಾನರು ಅದನ್ನು ವಿರೋಧಿಸಿದೊಡನೆ ಕಾಂಗ್ರೆಸ್ ಪಕ್ಷವು ಅತ್ತ ಕಡೆಗೆ ಲಕ್ಷಿಸಿತು. ಇಷ್ಟೇ ಅಲ್ಲ, ವಂದೇಮಾತರಂ ರಾಷ್ಟ್ರ ಗೀತೆಯನ್ನು ಸಂಪೂರ್ಣ ಹೇಳಬಾರದಾಗಿಯೂ ಸಾರಿತು. ಏಕೆಂದರೆ ಅದರಿಂದ ಮುಸಲ್ಮಾನರಿಗೆ ಅಸಮಾಧಾನವಾಗುತ್ತದಂತೆ. ಆ ಪದ್ಯವನ್ನು ಸಂಪೂರ್ಣ ಹೇಳದೆ ಬಿಟ್ಟರೆ ಯಾವ ಹಿಂದುಗಳಿಗೂ ಅಸಮಾಧಾನವೇನೂ ಆಗುವುದಿಲ್ಲವೆ? ಕಾಂಗ್ರೆಸ್ ಪಕ್ಷವು ಮುಸಲ್ಮಾನರ ಅಸಂತೋಷದ ಕಡೆಗೆ ಲಕ್ಷಿಸುವಷ್ಟು ಹಿಂದುಗಳ ಅಸಂತೋಷವನ್ನು ಎಲ್ಲಿ ಲಕ್ಷಿಸುತ್ತದೆ? ಅಥವಾ ಹಿಂದುಗಳಲ್ಲಾದರೂ ಅಸಂತೋಷವು ಹಾಗೆಲ್ಲಿ ವ್ಯಕ್ತವಾಗುತ್ತದೆ?

ಮುಸಲ್ಮಾನರಿಗೆ ಅಸಮಾಧಾನವಾಗುತ್ತದೆಂದು ೩೨ ವರುಷಗಳಿಂದಲೂ ಕೋಟ್ಯಾಂತರ ಜನರು ಹೇಳುತ್ತ ಬಂದ ಗೀತೆಯ ಭಾಗವನ್ನು ಕಾಂಗ್ರೆಸ್ ಪಕ್ಷವು ಈಗ ಬಿಡಲು ಸಿದ್ಧವಾಯಿತು. ಆದರೆ ಆದಿಹಿಂದುಗಳಿಗೆ "ಹರಿಜನ" ಎಂದು ಕರೆದರೆ ತಮಗೆ ಅವಮಾನವಾಗುತ್ತದೆಂದು ಆರಂಭದಿಂದಲೂ ಮೊರೆಯಿಡುತ್ತಾ ಬಂದರೂ ಕಾಂಗ್ರೆಸ್ ಪಕ್ಷವು ಅತ್ತ ಲಕ್ಷಿಸುವುದಿಲ್ಲ. ಏಕೆ? ಮುಸಲ್ಮಾನರ ಅಸಂತೋಷದಷ್ಟು ಆದಿಹಿಂದುಗಳ ಅಸಂತೋಷ ಪ್ರಖರವಾದುದಾಗಲಿ, ಪರಿಣಾಮಕಾರಿಯಾದುದಾಗಲಿ ಇಲ್ಲವೆಂಬುದು ಅದಕ್ಕೆ ಗೊತ್ತು. ಮುಸಲ್ಮಾನರು ಸಂಖ್ಯೆಯಲ್ಲಿ ೭ ಕೋಟಿ ಇದ್ದಂತೆಯೇ ಆದಿ ಹಿಂದುಗಳೂ ೭ ಕೋಟಿ ಜನರಿದ್ದಾರೆ. ಆದರೆ ಮುಸಲ್ಮಾನರು ಈ ದೇಶವನ್ನು ಸಾವಿರ ವರುಷ ಆಳಿದ್ದೇವೆಂದು ಹೇಳಿ ಈಗಲೂ ಆಳುವ ಬಲವನ್ನು ತೋರಿಸುವವರಾಗಿದ್ದಾರೆ. ಆದರೆ ಆದಿಹಿಂದುಗಳು ಅನೇಕ ಸಾವಿರ ವರುಷಗಳಿಂದ ಮೂಕ ಪ್ರಾಣಿಗಳಿಗಿಂತಲೂ ಕೀಳಾಗಿ ಈ ದೇಶದಲ್ಲಿ ಅನ್ಯರಿಂದ ಆಳಲ್ಪಟ್ಟು ಈಗಲೂ ಕಲ್ಪನಾತೀತ ಹೀನಾವಸ್ಥೆಯಲ್ಲಿದ್ದಾರೆ. ಎಂದಮೇಲೆ ಮುಸಲ್ಮಾನರ ಅಸಮಾಧಾನದ ಕಡೆ ಲಕ್ಷಿಸುವಂತೆ ಕಾಂಗ್ರೆಸ್ ಪಕ್ಷವು ಆದಿಹಿಂದುಗಳ ಅಸಮಾಧಾನದ ಕಡೆಗೇಕೆ ಲಕ್ಷಿಸುವುದು?

### ಕಾಂಗ್ರೆಸ್ ಪಕ್ಷದ ಕರ್ತವ್ಯ.

ಡಾ. ಆಂಬೇಡಕರರು ತಮ್ಮ ಅಸಮಾಧಾನ ವ್ಯಕ್ತಗೊಳಿಸಲು ಅಸೆಂಬ್ಲಿಯಿಂದ ಹೊರಗೆ ಹೋದುದನ್ನು ನಾವು ಹೃದಯಪೂರ್ವಕ ಅಭಿನಂದಿಸುತ್ತೇವೆ. ಕಾಂಗ್ರೆಸ್ ಪಕ್ಷವು ತಾನು ಆದಿ ಹಿಂದುಗಳ ವಿಷಯದಲ್ಲಿ ನ್ಯಾಯದಿಂದ ವರ್ತಿಸುತ್ತೇನೆಂಬುದನ್ನು ಅವರಿಗೆ ಮನವರಿಕೆ ಮಾಡಿಕೊಡಬೇಕಾದರೆ ಮೊದಲು ಈ ಹೆಸರನ್ನಾದರೂ ಅದು ಕೂಡಲೇ ಬಿಟ್ಟು ಅವರ ಇಷ್ಟದಂತೆ ಕರೆಯಬೇಕು. ಅಥವಾ ಅವರ ಒಪ್ಪಿಗೆಯಿಂದ ಬೇರೆ ಹೆಸರನ್ನಾದರೂ ಇಡಬೇಕು. ನಮಗೆ ಬೇಡಾದ ಹೆಸರನ್ನು ಕೂಡಾ ಬಿಡಲು ಸಿದ್ಧರಿಲ್ಲದ ಕಾಂಗ್ರೆಸ್ ಪಕ್ಷದವರು ನಮಗಾಗಿ ಯಾವ ಸುಖ ಸೌಲಭ್ಯಗಳನ್ನು ಒದಗಿಸಿ ಕೊಡಬಹುದು? ಎಂದು ಅವರು ಯೋಚಿಸಿದರೆ ಅದು ತಪ್ಪಾಗಲಾರದು, ಮುಸಲ್ಮಾನರಂತೆ ಅವರಲ್ಲಿ ಸಂಘಟನೆಯ ಬಲವಿಲ್ಲವೆಂದು ಹೀಗೆ ಅವರ ಅಸಮಾಧಾನವನ್ನು ಉಪೇಕ್ಷಿಸಿ ಅದೇ ಹೆಸರಿನಿಂದ ಅವರನ್ನು ಕರೆಯುತ್ತಿರುವುದು ನ್ಯಾಯವಲ್ಲ. ಆದಕಾರಣ ಈಗಲಾದರೂ ಈ ಪಕ್ಷವು ಇತ್ತ ಲಕ್ಷಿಸುವುದೆ?

---

## "ಹರಿಜನ" ಹೆಸರಿನ ಚರ್ಚೆ.

ಮುಂಬೈ ಅಸೆಂಬ್ಲಿಯಲ್ಲಿ ತಾ. ೨೨ ನೆಯ ದಿವಸ 'ಹರಿಜನ' ಎಂಬ ಹೆಸರಿನ ನಿರೋಧವಾಗಿ ನಾಶಿಕದ ಆದಿಹಿಂದು ಮುಂದಾಳುಗಳಾದ ಶ್ರೀ. ಬಾಪುರಾವ ಗಾಯಕವಾಡ ಇವರು ಹೀಗೆ ಹೇಳಿದರು—

"ಹರಿಜನ ಎಂದು ನಮಗೆ ಹೇಳಕೂಡದೆಂದೇ ನನ್ನ ಉದ್ದೇಶ. ಈ ವರೆಗೂ ನೀವು ಹೇಳುತ್ತಿದ್ದುದು ಸ್ವಂತ ಮಾತಾಗಿತ್ತು. ಈಗ ಅದು ಸರಕಾರಿ ಶಾಸನದಲ್ಲಿ ಸೇರುವುದು. ಹೀಗೆ ಹರಿಜನ ಎಂಬ ಹೆಸರು ನಮಗೆ ಸ್ಥಿರವಾಗುವುದು ನಮಗೆ ಒಪ್ಪಿಗೆಯಿಲ್ಲ. ಈ ಶಬ್ದದ ಉತ್ಪತ್ತಿಯಿಂದಲೂ ನಮಗೆ ಅದು ಒಪ್ಪಿಗೆಯಿಲ್ಲ. ಇದರ ಅರ್ಥವನ್ನು ನೀವು ಹೀಗೆ ಹೇಳುತ್ತಿದ್ದೀರಿ— ಹರಿ ಎಂದರೆ ಪರಮಾತ್ಮ, ಜನ ಎಂದರೆ ಜನತಾ. ನಾವು ಪರಮಾತ್ಮನ ಜನರಂತೆ, ಇಂಥ ಬಣ್ಣದ ಮಾತೇನೂ ನಮಗೆ ಬೇಕಾಗಿಲ್ಲ. ನಾವು ಹರಿಜನರಾದರೆ ನೀವೇನು ಅರಿಜನರೆ?"

ಡಾ. ಆಂಬೇಡಕರರು ಈ ಶಬ್ದದ ವಿಷಯವಾಗಿ ತಮ್ಮ ವಿರೋಧವನ್ನು ಸೂಚಿಸಿ ತಾವು ಅಸೆಂಬ್ಲಿ ಬಿಟ್ಟುಹೋಗುವುದಾಗಿ ಹೇಳಿದರು. ಆಗ ಮುಖ್ಯಮಂತ್ರಿಗಳಾದ ಶ್ರೀ. ಖೇರರು ಹೀಗೆ ಹೇಳಿದರು— "ಸುಪ್ರಸಿದ್ಧ ಗುರ್ಜರ ಕವಿ ನರಸಿ ಮೆಹತಾ ಇವರು ಕೂಡಾ ಯಾರು ಜಪತಪ ಮಾಡುತ್ತಾರೋ, ಕಷ್ಟಪಡುತ್ತಾರೋ ಅವರು ಹರಿಜನ ಎಂದು ಹೇಳಿದ್ದಾರೆ. ಬೇರೆ ಶಬ್ದವನ್ನು ಸೂಚಿಸಿದರೆ ಆ ಪ್ರಕಾರ ಉಪಯೋಗಿಸುವೆವು."

ಆಗ ಡಾ. ಆಂಬೇಡಕರರು ಹೀಗೆ ಹೇಳಿದರು- "ಮಂತ್ರಿಗಳು ಹರಿಜನ ಎಂಬುದರ ಸಂಬಂಧವಾಗಿ ವಿವೇಚಿಸಿದುದು ಸಮಾಧಾನಕರವಾಗಿಲ್ಲ. ಯಾವ ಹೆಸರನ್ನು ಉಪಯೋಗಿಸಬೇಕೆಂದು ನಾನು ಸೂಚಿಸಲು ಇದು ಸ್ಥಳವಲ್ಲ. ಅಂತೆಯೇ ಇದರ ನಿಷೇಧಕ್ಕಾಗಿ ನಾನು ನನ್ನ ಪಕ್ಷದೊಂದಿಗೆ ಹೊರಟುಹೋಗುತ್ತೇನೆ."

---

—ಬಾಬು ಸುಭಾಷಚಂದ್ರ ಬೋಸರ ಜೀವನ ಚರಿತ್ರೆಯ ಕೆಲವು ಭಾಗ ಮಾತ್ರ ಈಗ ಪರದೇಶದಲ್ಲಿ ಅಚ್ಚಾಗುತ್ತಲಿದೆ. ಉಳಿದ ಭಾಗವನ್ನು ಬಾಬೂಜಿಯವರು ತಮಗೆ ಅವಕಾಶ ದೊರೆತಾಗ ಬರೆದು ಕಳುಹಿಸಿ ಅದನ್ನು ಪೂರ್ತಿಗೊಳಿಸುವುದಾಗಿ ಪತ್ರಿಕಾ ಪ್ರತಿನಿಧಿಗಳಲ್ಲಿ ತಿಳಿಸಿದರು.

# ಮುಸ್ಲಿಂ ಲೀಗಿನ ಉದ್ದೇಶ.

### ಅಸೆಂಬ್ಲಿಯಿಂದ ಹೋದುದೇಕೆ ?

ಕಳೆದ ೨೨ ನೆಯ ತಾರೀಖಿನ ದಿವಸ ಮುಂಬೈ ಅಸೆಂಬ್ಲಿಯಲ್ಲಿ ಸ್ಥಾನಿಕ ಸ್ವರಾಜ್ಯ ಶಾಸನದ ತಿದ್ದುಪಾಟಿನ ಗೊತ್ತುವಳಿ ಬಂದಾಗ ಮುಸ್ಲಿಂ ಲೀಗಿನ ಸಭಾಸದರೆಲ್ಲರೂ ಅಸೆಂಬ್ಲಿಯನ್ನು ಬಿಟ್ಟು ಹೊರಗೆ ಹೋದರು. ಹೀಗೆ ಬಿಟ್ಟು ಹೋದುದನ್ನು ನೋಡಿ ಅನೇಕರು ಆಶ್ಚರ್ಯಪಟ್ಟಿದ್ದಾರೆ. ಇವರು ಹೀಗೇಕೆ ಮಾಡಿದರೆಂದು ಕೆಲವರು ಕೇಳುತ್ತಿದ್ದಾರೆ. ಮುಸ್ಲಿಂಲೀಗಿನ ಕಾರ್ಯಕಲಾಪಗಳನ್ನು ಯಾರು ತಿಳಿದುಕೊಂಡಿದ್ದಾರೆಯೋ ಮತ್ತು ಅಸೆಂಬ್ಲಿಯಿಂದ ಹೊರಗೆ ಹೋಗುವಾಗ ಈ ಪಕ್ಷದ ಪ್ರಮುಖರಾದ ಸರ್. ಅಲ್ಲಿ ಮಹಮ್ಮದಖಾನ ದೆಹಲವಿಯವರು ಹೇಳಿದುದನ್ನು ಅವರ ಉದ್ದೇಶಕ್ಕೆ ಸರಿ ಹಚ್ಚಿ ಯಾರು ಗ್ರಹಿಸಿದ್ದಾರೆಯೋ ಅವರು ಆಶ್ಚರ್ಯ ಪಡಲಾರರು. ಸರ್. ಅಲ್ಲಿ ಮಹಮ್ಮದಖಾನ ದೆಹಲಿಯವರು ಹೀಗೆ ಹೇಳಿದರು—

"ಕಾಂಗ್ರೆಸ್ ಪಕ್ಷವು ತನ್ನ ಬಲದಿಂದ ಅಲ್ಪ ಸಂಖ್ಯಾಕರ ಹಿತವನ್ನು ನಾಶಮಾಡಲು ಪ್ರಾರಂಭಿಸಿತು. ಅಂತೆಯೇ ಈ ಗೊತ್ತುವಳಿಯ ವಿರೋಧಕ್ಕಾಗಿ ನಾವು ಹೊರಟು ಹೋಗುತ್ತೇವೆ."

ಮುಖ್ಯ ಮಂತ್ರಿಗಳಾದ ಶ್ರೀ. ಖೇರರು ಇವರು ಹೋದನಂತರ ಹೀಗೆ ಹೇಳಿದರು— "ಈ ಗೊತ್ತುವಳಿಯನ್ನು ನಾವು ತಂದ ಉದ್ದೇಶವು ಸಾರ್ವಜನಿಕ ಸಂಸ್ಥೆಗಳಲ್ಲಿ ಜಾತ್ಯಂಧತೆಯು ನಿವಾರಣೆಯಾಗಿ ರಾಷ್ಟ್ರೀಯ ದೃಷ್ಟಿಯು ಹೆಚ್ಚಬೇಕೆಂಬುದೇ ಆಗಿದೆ."

ಮುಸ್ಲಿಂ ಲೀಗಿಗೆ ಜಾತ್ಯಂಧತೆಯನ್ನು ಹೆಚ್ಚಿಸಿ ಹಿಂದುಗಳಿಂದ ಆದಷ್ಟು ಮುಸಲ್ಮಾನರನ್ನು ಬೇರೆ ಇಡುವುದೇ ಬೇಕಾಗಿದೆ. ಇದಕ್ಕೆ ಈ ಶಾಸನವು ಅಡ್ಡಿಯಾಗಿದೆಯೆಂದು ಬೇರೆ ಹೇಳಬೇಕಾದುವೇ ಇಲ್ಲ. ಮುಖ್ಯ ಮಂತ್ರಿಗಳೇ ಈ ಶಾಸನದ ಉದ್ದೇಶವನ್ನು ಸ್ಪಷ್ಟಗೊಳಿಸಿದ್ದಾರೆ. ಲೋಕಲ್ ಬೋರ್ಡನಂಥ ಸ್ಥಳಿಯ ಸ್ವರಾಜ್ಯ ಸಂಸ್ಥೆಯಲ್ಲಿಯು ಕೂಡಾ ಮುಸಲ್ಮಾನರು ಹಿಂದುಗಳೇ ಮೊದಲಾದ ಬೇರೆಯವರಲ್ಲಿ ಕೂಡಿರಲು ಸಿದ್ಧರಿಲ್ಲ. ಸಂಯುಕ್ತ ಮತದಾರ ಪದ್ಧತಿಯು ಅಲ್ಲಿಯು ಕೂಡಾ ಅವರಿಗೆ ಬೇಕಿಲ್ಲ. ಐಚ್ಛಿಕವಾಗಿಯಾದರೂ ಸಂಯುಕ್ತ ಮತದಾರ ಪದ್ಧತಿಯು ಮುಸಲ್ಮಾನ್ ವ್ಯಕ್ತಿಯಲ್ಲಿ ಸೇರಬಾರದೆಂದೇ ಇವರ ಧೋರಣ. ಎಂದ ಮೇಲೆ ಹಿಂದು-ಮುಸಲ್ಮಾನ್ ಐಕಮತ್ಯವನ್ನು ಕುರಿತು ಎಷ್ಟು ಗೊಳ್ಳು ಮಾತುಗಳನ್ನು ಈ ಪಕ್ಷದ ಪ್ರಮುಖರು ಹೇಳಿದರೇನು? ಅವುಗಳನ್ನು ನಂಬಬಹುದೆ ?

---

## ಮೌ. ಶೌಕತ ಅಲ್ಲಿಯವರ ಇಚ್ಛೆ.

ಮೌ. ಶೌಕತ್ ಅಲ್ಲಿಯವರು ಮುಂಬೈಯಲ್ಲಿ ಪತ್ರಿಕಾ ಪ್ರತಿನಿಧಿಗಳ ಪ್ರಶ್ನೆಗೆ ಉತ್ತರವಾಗಿ ಹೀಗೆ ಹೇಳಿದರು—

"ನನಗೆ ಹಿಂದು-ಮುಸಲ್ಮಾನರ ಐಕಮತ್ಯವೇ ಬೇಕಾಗಿದೆ. ಇದೇ ನನ್ನ ಇಚ್ಛೆ. ಈಗ ನನಗೆ ೬೫ ವರುಷ. ನನ್ನ ಆಯುಷ್ಯದಲ್ಲಿಯೇ ಇದನ್ನು ಕಾಣಬೇಕಾಗಿದೆ. ಆದಕಾರಣ ಪಂಡಿತ ಜವಾಹರಲಾಲರು ಮಿ. ಜಿನ್ನಾರವರನ್ನು ಕಂಡು ಮಾತನಾಡಿ ಅಂಥ ಪ್ರಸಂಗವನ್ನು ಉಂಟುಮಾಡಿಕೊಡಬೇಕು. ಹಿಂದು-ಮುಸಲ್ಮಾನರ ಐಕಮತ್ಯಕ್ಕೋಸ್ಕರ ಮೊದಲು ೧೦ ವರುಷಗಳ ಒಂದು ಒಪ್ಪಂದವನ್ನು ಮಾಡಿಕೊಳ್ಳೋಣ. ಮುಸ್ಲಿಂ ಲೀಗ್ ಕಾಂಗ್ರೆಸ್ಸಿನಲ್ಲಿ ಎಂದೂ ಕೂಡುವುದಿಲ್ಲ. ಆದರೆ ಅದಕ್ಕೆ ಸಹಕರಿಸುತ್ತದೆ." ಹೇಗಿದೆ ಐಕಮತ್ಯದ ರೀತಿ ?

# ಜಾತಿ ನಿರ್ಣಯದ ವಿಷಯದಲ್ಲಿ

## ಕಾಂಗ್ರೆಸ್ಸಿನ ಮತಾಂತರ !

ಜಾತಿನಿರ್ಣಯವು ಜನಿಸಿ ಈ ರಾಷ್ಟ್ರದಲ್ಲಿ ಜಾತಿಯ ವೈರ ಭಾವವನ್ನು ಬೆಳೆಸಲು ಪ್ರಾರಂಭಿಸಿದಂದಿನಿಂದ ಕಾಂಗ್ರೆಸ್ ಪಕ್ಷವು ತನ್ನ ಅಭಿಪ್ರಾಯವನ್ನು ಹೇಗೆ ಹೇಗೆ ವ್ಯತ್ಯಾಸಮಾಡುತ್ತಾ ಬಂದಿದೆಯೆಂಬುದು ಈ ಕೆಳಗಿನ ಸಂಗತಿಗಳಿಂದ ಗೊತ್ತಾಗುವುದು.

(೧) ತಾ. ೩-೫-೧೯೩೪ ನೆಯ ದಿವಸ ರಾಂಚಿಯಲ್ಲಿ ಆದ ಗೊತ್ತುವಳಿ— "ಜಾತಿನಿರ್ಣಯದಲ್ಲಿ ಯಾರಿಗೆ ಎಷ್ಟು ಪ್ರಾತಿನಿಧ್ಯವಿರಬೇಕು ? ಅದನ್ನು ಒಪ್ಪುವ ಅಥವಾ ವಿರೋಧಿಸುವ ಪದ್ಧತಿಯಾವುದು ? ಇವುಗಳನ್ನು ಈಗ ಚರ್ಚಿಸಬಾರದೆಂದೂ ಘಟನಾ ಸಮಿತಿಯ ಪ್ರಶ್ನೆ ಬಂದಾಗ ಯೋಚಿಸಬೇಕೆಂದೂ ಸ್ವರಾಜ್ಯ ಪಕ್ಷದ ಈ ಪರಿಷತ್ತು ತನ್ನ ಅಭಿಪ್ರಾಯವನ್ನು ವ್ಯಕ್ತಗೊಳಿಸುತ್ತದೆ."

(೨) ತಾ. ೨೧-೫-೩೪ ನೆಯ ದಿವಸ ಡಾ. ಅನ್ಸಾರಿಯವರು ಪಾಟನಾದಲ್ಲಿಯ ಆಲ್ ಇಂಡಿಯಾ ಕಾಂಗ್ರೆಸ್ ಕಮಿಟಿಯ ಸಂಬಂಧವಾಗಿ ಹೀಗೆ ಪ್ರಕಟಿಸಿದರು— "ಜಾತಿಯ ನಿರ್ಣಯಕ್ಕೆ ಬಹುಸಂಖ್ಯಾಕರಾದ ಹಿಂದುಗಳು ಮತ್ತು ಶೀಖರು ವಿರೋಧವಾಗಿದ್ದಾರೆಂಬುದು ಕಾಂಗ್ರೆಸ್ಸಿಗೆ ಗೊತ್ತಿದೆ. ಸರ್ವಸಮ್ಮತವಾದ ಬೇರೆ ಮಾರ್ಗ ದೊರೆಯುವವರೆಗೂ ಮುಸಲ್ಮಾನ್, ಹರಿಜನ, ಕ್ರಿಸ್ತ ಇವರು ಅದನ್ನು ಸ್ವೀಕರಿಸಿದ್ದಾರೆಂದೂ ಕಾಂಗ್ರೆಸ್ಸಿಗೆ ಗೊತ್ತಿದೆ. ಘಟನಾ ಸಮಿತಿಯಿಂದ ರಾಷ್ಟ್ರೀಯ ಘಟನೆಯಾಗುವವರೆಗೂ ಈ ಪ್ರಶ್ನೆಯು ಬಿಡಿಸಲ್ಪಡುವುದಿಲ್ಲ. ಆದುದರಿಂದ ಜಾತಿಯ ನಿರ್ಣಯವನ್ನು ಸ್ವೀಕರಿಸಬೇಕೋ ? ಅಥವಾ ಬೇಡವೋ ? ಎಂಬ ಪ್ರಶ್ನೆಯೇ ಆ ವರೆಗೆ ಉತ್ಪನ್ನವಾಗುವುದಿಲ್ಲ."

(೩) ತಾ. ೧೭-೬-೩೪ ರಲ್ಲಿ ಮುಂಬೈಯಲ್ಲಿ ಕೂಡಿದ ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಈ ಕೆಳಗಿನ ಅಭಿಪ್ರಾಯದ ಗೊತ್ತುವಳಿಯನ್ನು ಮಾಡಿತು.

"ರಾಷ್ಟ್ರೀಯತ್ವದ ದೃಷ್ಟಿಯಿಂದ ಜಾತಿನಿರ್ಣಯ ಅಸಮಾಧಾನಕರವಾದುದು. ಆದರೆ ಜಾತೀಯ ಪ್ರಶ್ನೆಯ ವಿಚಾರವಾಗಿ ಬೇರೆ ಬೇರೆ ಜಾತಿಯವರಲ್ಲಿ ಭಿನ್ನಾಭಿಪ್ರಾಯಗಳಿವೆ. ಕಾಂಗ್ರೆಸ್ ಎಲ್ಲ ಜಾತಿಗಳ ಪ್ರಾತಿನಿಧಿಕ ಸಂಸ್ಥೆಯು. ಆದಕಾರಣ ಜಾತಿನಿರ್ಣಯದ ವಿಷಯಕ್ಕೆ ಎಲ್ಲಿಯ ವರೆಗೆ ಭಿನ್ನಾಭಿಪ್ರಾಯವಿರುತ್ತದೆಯೋ ಅಲ್ಲಿಯ ವರೆಗೆ ಕಾಂಗ್ರೆಸ್ಸು ಜಾತಿನಿರ್ಣಯವನ್ನು ಮಾನ್ಯಮಾಡುವುದಿಲ್ಲ. ಅಮಾನ್ಯವನ್ನೂ ಮಾಡುವುದಿಲ್ಲ"

(೪) ಶ್ರೀ. ಭುಲಾಭಾಯಿ ದೇಸಾಯಿಯವರು ದಿಲ್ಲಿ ಕೇಂದ್ರ ಶಾಸನ ಸಭೆಯಲ್ಲಿ ಪಾರ್ಲಮೆಂಟರಿ ಕಮಿಟಿಯ ವರದಿ ಸಂಬಂಧವಾಗಿ ಬಂದ ಗೊತ್ತುವಳಿಯನ್ನು ಕುರಿತು ಹೀಗೆ ಹೇಳಿದರು—

"ದೇಶದಲ್ಲಿ ಪರಸ್ಪರ ಪ್ರೇಮಾದರಗಳುಂಟಾಗಿ ಸಮ್ಮಿಂದಲೇ ಈ ಪ್ರಶ್ನೆಯು ಬಿಡಿಸಲ್ಪಡಬೇಕೆಂದು ಜಾತಿನಿರ್ಣಯವನ್ನು ಸ್ವೀಕರಿಸಬೇಕೋ ? ಅಥವಾ ಬೇಡವೋ ? ಎಂಬ ವಿಷಯದಲ್ಲಿ ಕಾಂಗ್ರೆಸ್ ತನ್ನ ಅಭಿಪ್ರಾಯವನ್ನೇ ಕೊಡಲು ಇಚ್ಛಿಸುವುದಿಲ್ಲ.

(೫) ಪಂಡಿತ ಜವಾಹರಲಾಲರು ಲಂಡನ್ನಿನಲ್ಲಿ ಅಮೃತ ಬಜಾರ ಪತ್ರಿಕಾ ಪ್ರತಿನಿಧಿಗಳಲ್ಲಿ ಈ ವಿಷಯವಾಗಿ ಹೀಗೆ ಹೇಳಿದ್ದರು.—

ಕಾಂಗ್ರೆಸ್ಸು ಜಾತಿ ನಿರ್ಣಯದ ಸಂಬಂಧವಾಗಿ ಅನುಸರಿಸಿದ ಧೋರಣವು ಮುತ್ಸದ್ದಿತನದ್ದಾಗಿಯೇ ಇದೆ. ಆದರೆ ಬಂಗಾಲದ ಹಿಂದುಗಳು ಈ ವಿಷಯದಲ್ಲಿ ಅನುಸರಿಸಿದ ರೀತಿಯು ವಿರುದ್ಧವಾಗಿ ನಾನೇನೂ ಹೇಳಲಾರೆನು."

ಪಂಡಿತಜಿಯವರು ೧೯೩೬ ನೆಯ ಇಸವಿಯ ಒಂದು ಪ್ರಕಟನೆಯಲ್ಲಿ ಹೀಗೆ ಹೇಳಿದ್ದಾರೆ—

"ಜಾತಿನಿರ್ಣಯಕ್ಕೆ ನಾನು ಎಂದಿಗೂ ಒಪ್ಪಿಗೆಯನ್ನು ಕೊಡಲಾರೆನು. ಏಕೆಂದರೆ ಅದರಿಂದ ಸಾಮಾಜಿಕ, ರಾಜಕೀಯ ಸ್ವಾತಂತ್ರ್ಯಗಳೆನ್ನೂ ಪ್ರಜಾ ಪ್ರಭುತ್ವದ ರೀತಿಯನ್ನೂ ಬಿಟ್ಟಂತಾಗುವುದು."

(೬) ಜಿನ್ನಾ-ರಾಜೇಂದ್ರರ ಒಡಂಬಡಿಕೆಯಲ್ಲಿ ಹೀಗಿದೆಯಂತೆ-

"ಪಂಜಾಬ ಪ್ರಾಂತದಲ್ಲಿ ಜಾತಿನಿರ್ಣಯದಂತೆ ಗೊತ್ತಾಗಿರುವ ಸ್ಥಳಗಳನ್ನು ತೆಗೆದುಕೊಳ್ಳಲು ಮೊದಲು ಶೀಖರು ಆಮೇಲೆ ಹಿಂದುಗಳು ಮತದಾರ ಸಂಘಗಳನ್ನು ಏರ್ಪಡಿಸಿಕೊಳ್ಳಬೇಕು. ಉಳಿದವುಗಳೆಲ್ಲ ಮುಸಲ್ಮಾನರ ಸ್ಥಳಗಳು. ಬಂಗಾಲದಲ್ಲಿ ಯುರೋಪಿಯನ್‌ರ ಸ್ಥಳಗಳು ಕಡಿಮೆ ಮಾಡಲ್ಪಟ್ಟರೆ ಅವುಗಳನ್ನು ಹಿಂದು ಮುಸಲ್ಮಾನರು ಸರಿಯಾಗಿ ಹಂಚಿಕೊಳ್ಳಬೇಕು. ಇತರ ಪ್ರಾಂತಗಳಲ್ಲಿಯೂ ಮಧ್ಯವರ್ತಿ ಮಂಡಲದಲ್ಲಿಯೂ ಈಗ ಇದ್ದಷ್ಟೇ ಸ್ಥಳಗಳು ಮುಸಲ್ಮಾನರಿಗೆ ಇರಬೇಕು. ಇದು ಒಪ್ಪಿಗೆಯಿದ್ದರೆ ಎಲ್ಲ ಪ್ರಾಂತಿಕ ಮತ್ತು ಮಧ್ಯವರ್ತಿ ಮಂಡಲಗಳಲ್ಲ ಸಂಯುಕ್ತ ಮತದಾರ ಸಂಘ ನಿರ್ಮಾಣವಾಗಬೇಕು."

(೭) ಪಂ. ಜವಾಹರಲಾಲರು ಮೊನ್ನೆ ಜಿನ್ನಾರವರ ಪ್ರಶ್ನೆಗೆ ಉತ್ತರವಾಗಿ ಹೀಗೆ ಆಶ್ವಾಸನ ಕೊಟ್ಟರು—

"ಜಾತಿ ನಿರ್ಣಯವು ಈಗ ಹೇಗಿದೆಯೋ ಹಾಗೆಯೇ ಅದು ಇರತಕ್ಕದ್ದಾಗಿದೆ. ಇದು ಯಾರಿಗೆ ಬಾಧಕವಾದುದಾಗಿದೆಯೋ ಅವರು ಅದನ್ನು ತೆಗೆದುಹಾಕುವವರೆಗೆ ನಾವೇನೂ ಅದರಲ್ಲಿ ವ್ಯತ್ಯಸ್ತಮಾಡಲು ಇಚ್ಛಿಸುವುದಿಲ್ಲ."

---

# ಜಿನ್ನಾ - ರಾಜೇಂದ್ರರ

## ಒಪ್ಪಂದದ ನಿಷೇಧ.

ಹಿಂದು-ಮುಸಲ್ಮಾನರ ಐಕಮತ್ಯಕ್ಕೋಸ್ಕರ ಬ್ಯಾ. ಜಿನ್ನಾ ಮತ್ತು ಬಾಬು ರಾಜೇಂದ್ರ ಪ್ರಸಾದರಲ್ಲಿ ಒಂದು ಒಪ್ಪಂದವಾಗಿದೆಯೆಂದು ಹೇಳಲ್ಪಡುತ್ತಾ ಇದೆಯಷ್ಟೆ. ಅದು ಇನ್ನೂ ಆಚರಣೆಯಲ್ಲೇನೂ ಬಂದಿಲ್ಲ. ಹರಿಪುರ ಕಾಂಗ್ರೆಸ್ಸಿನಲ್ಲಿ ಅದು ಮುಂದೆ ಬರುವುದೆಂದು ಅನೇಕರ ಊಹೆ. ಅದರಿಂದ ಹಿಂದುಗಳಿಗೆ ಪಂಬಾ ಅನ್ಯಾಯವಾಗುವ ಕಾರಣ ಕಲಕತ್ತಾ ಪಟ್ಟಣದ ಹಿಂದುಗಳು ಈ ಜಿನ್ನಾ-ರಾಜೇಂದ್ರರ ಒಪ್ಪಂದವನ್ನು ನಿಷೇಧಿಸಿದರು.

ಅಧ್ಯಕ್ಷರಾದ ಶ್ರೀ. ರಾಮಾನಂದ ಚತರ್ಜಿಯವರು ಇದನ್ನು ಖಂಡುತುಂಡಾಗಿ ನಿಷೇಧಿಸಿದರು. ಕಾಂಗ್ರೆಸ್ ಪಕ್ಷದಲ್ಲಿ ಹಿಂದುಗಳು ಒಂದು ಭಾಗವಾಗಿದ್ದಾರೆಯೇ ವಿನಾ ಕಾಂಗ್ರೆಸ್ ಎಂದರೆ ಹಿಂದುಗಳ ಸಂಸ್ಥೆಯೇ ಅಲ್ಲ. ಆದಕಾರಣ ಅದಕ್ಕೆ ಹಿಂದುಗಳ ಪರವಾಗಿ ಮುಸಲ್ಮಾನರ ಸಂಗಡ ಒಪ್ಪಂದಮಾಡಿಕೊಳ್ಳಲು ಅಧಿಕಾರವೇ ಇಲ್ಲವೆಂದು ಶ್ರೀ. ಚತರ್ಜಿಯವರು ಹೇಳಿದರು.

ಕಾಂಗ್ರೆಸ್, ಪಕ್ಷವು ಕೂಡಾ ಮೊದಲು ಹೀಗೆಯೇ ಹೇಳಿದೆ. ಇದರಲ್ಲಿ ಎಲ್ಲ ಜಾತಿಯವರೂ ಇರುವುದರಿಂದ ಒಂದೇ ಜಾತಿಯ ಪರವಾಗಿ ಇದು ಅಭಿಪ್ರಾಯವನ್ನು ವ್ಯಕ್ತಮಾಡುವುದಿಲ್ಲವೆಂದು ತಿಳಿಸಿದೆ. ಈಗಲಾದರೂ ಹಾಗೆಯೇ ಇರಬೇಕಾದುದು ವಿಹಿತ.

# ವಿಮರ್ಶಾತ್ಮಕ ಪ್ರಶ್ನೋತ್ತರ.

## ನಿಜಾಮ ಪ್ರಾಂತದ ವೀರಶೈವ ಸಮಾಜ ಮತ್ತು ಆರ್ಯ ಸಮಾಜ.

ಪ್ರಶ್ನೆ— ನಮ್ಮ ನಿಜಾಮ ಪ್ರಾಂತದ ಉದ್ಗಿರಿಯಲ್ಲಿ ಹಿಂದಕ್ಕೆ ಒಬ್ಬ ಲಿಂಗಾಯತನು ಆರ್ಯ ಸಮಾಜದಲ್ಲಿ ಕೂಡಿದ್ದರಿಂದ ಎಷ್ಟೋ ಗದ್ದಲ ಮಾಡಿದ್ದಿರಿ. ಅನೇಕ ಲಿಂಗಾಯತರು ಇಲ್ಲಿ ಮುಸಲ್ಮಾನರಾಗುತ್ತಿದ್ದಾರೆ. ನಿಮ್ಮ ಗದ್ದಲ ಯಾಕಿಲ್ಲ?

ಉತ್ತರ— ಉದ್ಗಿರಿಯಲ್ಲಿ ಆರ್ಯ ಸಮಾಜದವರು ತಮ್ಮ ಮತ ಪ್ರಸಾರಮಾಡಿದ ರೀತಿ ಅನುಚಿತವಾಗಿತ್ತು. ಅದು ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಎಂದಮೇಲೆ ಆ ವಿಚಾರವಾಗಿ ಬರೆಯಬೇಕಾದುದು ನಮ್ಮ ಕರ್ತವ್ಯವೇ ಆಗಿತ್ತು. ಆ ಪ್ರಕಾರ ಮುಸಲ್ಮಾನರು ಯಾವ ಲಿಂಗಾಯತರನ್ನು ತಮ್ಮ ಮತಕ್ಕೆ ಹೇಗೆ ಸೇರಿಸಿಕೊಂಡರೆಂಬುದನ್ನು ಸಪ್ರಮಾಣವಾಗಿ ತಿಳಿಸಿರಿ. ಆಗ ಆ ಸಂಬಂಧವಾಗಿಯೂ ಜನ ಜಾಗೃತಿಯನ್ನು ಮಾಡುವುದು ನಮ್ಮ ಕೆಲಸವೇ ಆಗಿದೆ.

ಪ್ರಶ್ನೆ— ಆರ್ಯ ಸಮಾಜದವರಂತೆ ಮುಸಲ್ಮಾನರೇನೂ ಮತ ಪ್ರಚಾರಮಾಡಿ ಅಥವಾ ಲಿಂಗಾಯತ ಮತಖಂಡನೆ ಮಾಡಿ ತಮ್ಮ ಮತದಲ್ಲಿ ಸೇರಿಸಿಕೊಂಡಿಲ್ಲ. ಹಾಗೇ ಅಂತಿಂಥ ಜನರನ್ನು ಅನೇಕ ರೀತಿಗಳಿಂದ ಕೂಡಿಸಿಕೊಳ್ಳುತ್ತಾರೆ. ಏನೇನೋ ಆಸೆಗಾಗಿ ಅನೇಕ ಮೂಢರು ಆ ಮತದಲ್ಲಿ ಸೇರುತ್ತಿದ್ದಾರೆ. ಇದನ್ನು ತಪ್ಪಿಸುವುದು ಅಗತ್ಯವಾಗಿಲ್ಲವೆ?

ಉತ್ತರ— ಇಂಥ ಸ್ಥಿತಿಯಲ್ಲಿ ಕ್ರಮಬದ್ಧವಾದ ಜಾಗೃತಿಯನ್ನು ನಿಮ್ಮ ಭಾಗದಲ್ಲಿ ನೀವೇ ಮಾಡಿಕೊಳ್ಳಬೇಕಾಗುವುದೇ ವಿನಾ ಪತ್ರಿಕೆಯ ಮೂಲಕ ನಾವು ಮಾಡುವುದು ಸಾಧ್ಯವಲ್ಲ. ಪತ್ರಿಕೆಯಲ್ಲಿ ಚರ್ಚಿಸಬೇಕಾದರೆ ನಿಶ್ಚಯಾತ್ಮಕವಾದ ಎಲ್ಲ ಸಂಗತಿಗಳೂ ಗೊತ್ತಿರಬೇಕಾಗುತ್ತದೆ. ನಿಮ್ಮ ಭಾಗದಲ್ಲಿ ಹೀಗೆ ಮತಾಂತರವಾಗುತ್ತಿರುವ ಕಾರಣವೇನೆಂಬುದನ್ನು ನೀವು ತಿಳಿದುಕೊಂಡು ಅದರ ನಿವಾರಣೆಗಾಗಿ ಸುಸಂಘಟಿತ ಪ್ರಯತ್ನಮಾಡಬೇಕು.

ಪ್ರಶ್ನೆ— ಆರ್ಯ ಸಮಾಜದವರು ನಮ್ಮ ಪ್ರಾಂತದಲ್ಲಿ ತಮ್ಮ ಪ್ರಚಾರ ಕಾರ್ಯ ನಡೆಸಿದಂತೆ ವೀರಶೈವ ಮಹಾಸಭೆಯವರು ಯಾಕೆ ನಡೆಸಬಾರದು?

ಉತ್ತರ— ಅಗತ್ಯವಾಗಿ ನಡೆಸಬೇಕು. ವೀರಶೈವ ಮಹಾಸಭೆಗೆ ತಾನು ಎಂಥ ಮಹತ್ವದ ಕಾರ್ಯ ಮಾಡಬಹುದೆಂಬ ಕಲ್ಪನೆಯೇ ಇಲ್ಲ. ಅದು ನಿಮ್ಮ ಭಾಗದಲ್ಲಿ ಒಮ್ಮೆ ಕೂಡಿದನಂತರವಾದರೂ ಅದಕ್ಕೆ ನಿಮ್ಮಲ್ಲಿಯ ದುರವಸ್ಥೆ ಗೊತ್ತಾಗಿ ಸ್ವಲ್ಪಾದರೂ ಕಾರ್ಯ ಮಾಡಬಹುದೆಂದೇ ನೀವು ನಿರೀಕ್ಷಿಸಿದ್ದಿರಿ. ಆದರೆ ನೀವು ಈಗ ನಿರಾಶರಾಗಿರುವುದೇನೂ ಅನುಚಿತವಲ್ಲ. ಬ್ರಿಟಿಶ್ ಭಾಗದ ವೀರಶೈವ ಪ್ರಮುಖರಿಗೆ ಈಗ ರಾಜಕೀಯ ವಿಷಯದ ಹೊರತು ಬೇರೆ ಸಂಗತಿಯೇ ಅವರ ಕಣ್ಣಿಗೆ ಕಾಣುವಂತಿಲ್ಲ. ಆದುದರಿಂದ ನಿಮ್ಮ ಭಾಗದ ಪ್ರಮುಖರೇ ಶಕ್ಯವಿದ್ದಷ್ಟು ಪ್ರಯತ್ನಿಸಬೇಕು.

ಪ್ರಶ್ನೆ— ನಮ್ಮ ಭಾಗದಲ್ಲಿ ೮-೯ ಲಕ್ಷ ವೀರಶೈವರಿದ್ದಾರೆ. ಆದರೆ ಅವರಲ್ಲಿ ನಿಮ್ಮ ಭಾಗದಷ್ಟು ವಿದ್ಯಾ ಪ್ರಸಾರವಿಲ್ಲ. ಇಲ್ಲಿ ನಮ್ಮ ಸಮಾಜ ಬಹು ಹಿಂದುಳಿದದೆ. ಜಮೀನುದಾರರೂ ವರ್ತಕರೂ ಗುರುಗಳೂ ಕಡಿಮೆಯಿಲ್ಲ. ಆದರೆ ಮಾಡುವುದೇನು? ಸಮಾಜದ ಕಡೆಗೆ ನೋಡುವದೇ ಗೊತ್ತಿಲ್ಲ. ವರ್ಷ ವರ್ಷಕ್ಕೆ ನಮ್ಮವರ ಸಂಖ್ಯೆ ಭಯಂಕರ ಕಡಿಮೆ ಆಗುತ್ತಾ ಅದೆ. ಒಳ್ಳೊಳ್ಳೆ ಮನೆತನಗಳು ಕೂಡಾ ಮುಸಲ್ಮಾನ್ ಸಮಾಜದ ಪಾಲಾಗುತ್ತವೆ. ಆರ್ಯ ಸಮಾಜದವರು ನಮ್ಮ ಕಡೆಗೆ ಎಷ್ಟು ಲಕ್ಷಿಸುತ್ತಾರೋ ಅಷ್ಟು ಕೂಡಾ ಬ್ರಿಟಿಶ್ ಭಾಗದವರಾದ ನಮ್ಮ ಸಮಾಜದ ನೀವು ನಮ್ಮನ್ನು ಲಕ್ಷಿಸುವದಿಲ್ಲ. ನೀವು ಸುಧಾರಿಸಿದವರಾದದ್ದರಿಂದ ನಮಗೆ ಬಂದದ್ದೇನು? ಇಲ್ಲಿ ನಾವು ಆರ್ಯಸಮಾಜದಲ್ಲಿ ಕೂಡಿದವರಾದರೂ ಹಿಂದುಗಳಾಗಿರಲು ನಮಗೆ ಬಲ ಬರುತ್ತದೆ. ಇಲ್ಲದಿದ್ದರೆ ನಮ್ಮ ಸ್ಥಿತಿ ಬಹಳ ಕೇಡು. ಬ್ರಿಟಿಶ್ ಕರ್ನಾಟಕದ ವೀರಶೈವ ಮುಂದಾಳುಗಳಿಗೆ ನಮ್ಮ ದುರವಸ್ಥೆಯ ಕಲ್ಪನೆಯೇ ಇಲ್ಲ. ಈ ಭಾಗದ ತರುಣರಾದ ನಮಗೆ ಲಿಂಗಾಯತರಾಗಿದ್ದು ಮಾನಹಾನಿ ಹೊಂದುವುದಕ್ಕಿಂತ ಆರ್ಯ ಸಮಾಜದವರಾಗಿ ಮಾನದಿಂದ ಬಾಳುವುದು ಒಳ್ಳೇದೆಂದು ತೋರುತ್ತದೆ. ಅದಕ್ಕಾಗಿ ನಮ್ಮ ಒಲವು ಆರ್ಯ ಸಮಾಜದ ಕಡೆಗೆ ಹೆಚ್ಚಾಗಿದೆ.

ಉತ್ತರ— ನೀವು ಹೇಳುವುದು ನಿಜ. ನಮಗಾದರೂ ಕಳೆದ ೧೫ ವರುಷಗಳಿಂದ ನಿಮ್ಮ ಭಾಗದ ಸ್ವಲ್ಪ ಅನುಭವವಿದೆ. ನಿಮ್ಮ ಭಾಗದಲ್ಲಿ ವಿದ್ಯಾ ಪ್ರಸಾರ ಮತ್ತು ಮತಪ್ರಚಾರ ಈ ಎರಡು ಕಾರ್ಯಗಳಾಗುವುದು ಬಹಳ ಅಗತ್ಯವಿದೆ. ಮಹಾಸಭೆಯ ಮೂಲಕ ಈ ಕಾರ್ಯ ನಡೆಯುವಂತೆ ಆಗಬೇಕೆಂದು ನಮಗೆ ಬಹು ದಿನಗಳಿಂದಲೂ ತೋರುತ್ತಾ ಇದೆ. ಆದರೆ ಮಹಾಸಭೆಯು ಈಗ ಹೆಸರಿಗೆ ಮಾತ್ರ ಇರುವದಾಗಿದೆಯೇ ಹೊರತು ಅದರಿಂದ ಕಡ್ಡಿಯಷ್ಟು ಕೆಲಸವಾಗುವುದಿಲ್ಲ. ಈ ಭಾಗದ ಪ್ರಮುಖರಿಗೆ ಅದರ ಅಗತ್ಯವು ಕೂಡಾ ತೋರುವದಿಲ್ಲ. ಅಗತ್ಯವಿದೆಯೆಂದು ತೋರುವ ಜನರ ಕೈಯಲ್ಲಿ ಮಹಾ ಸಭೆ ಬರುವಂತಿಲ್ಲ. ಏಕೆಂದರೆ ಸಮಾಜದಲ್ಲಿ ಅವರು ಅಷ್ಟು ಗಣ್ಯರಲ್ಲ. ಇಲ್ಲಿ ರಾಜಕಾರಣವೇ ಮುಖ್ಯ ವಿಷಯ. ಕೆಲವರಿಗೆ ಗುರುವರ್ಗ-ವಿರಕ್ತ ವರ್ಗಗಳ ಹೋರಾಟದ ಕಡೆಗೆ ಲಕ್ಷ್ಯ.

ಪ್ರಶ್ನೆ— ಆರ್ಯ ಸಮಾಜದವರು ತಮ್ಮ ಮತ ಪ್ರಚಾರವನ್ನು ಹೇಗೆ ಮಾಡುತ್ತಿದ್ದಾರೆಂಬುದರ ಕಲ್ಪನೆ ನಿಮಗೆ ಬರಲೆಂದು ಶ್ರೀ. ಗಂಗಾಪ್ರಸಾದ ಉಪಾಧ್ಯಾಯ ಎಂ. ಎ. ಇವರು ಬರೆದ ಚಿಕ್ಕ ಚಿಕ್ಕ "ಪ್ರೆಕ್ಟ" ಪುಸ್ತಕಗಳ ೫೬ ನಮೂನೆಗಳನ್ನು ನಿಮ್ಮ ಕಡೆ ಕಳಿಸಿದ್ದೇವೆ. ಈ ವರೆಗೆ ಅವು ೧೫-೨೦ ಲಕ್ಷ ಪ್ರತಿ ಪ್ರಸಾರವಾಗಿವೆ. ನಮ್ಮ ಮತ ತತ್ವಗಳನ್ನು ಹೀಗೇಕೆ ಚಿಕ್ಕ ಚಿಕ್ಕ ಪುಸ್ತಕ ಮಾಡಿ ಮಹಾಸಭೆಯವರು ಪ್ರಸಾರಮಾಡಬಾರದು? ನಿಮ್ಮ ಭಾಗದಲ್ಲಿ ಎಷ್ಟೋ ಪ್ರಸಿದ್ಧ ಸ್ವಾಮಿಗಳಿದ್ದಾರೆ. ಅವರು ಅಲ್ಲೇ ಗೌರವ ಪ್ರತಿಷ್ಠೆಗಾಗಿ ಸಮಾಜ ಕಾರ್ಯ ಮಾಡುತ್ತಾರೇ ಹೊರತು ನಮ್ಮ ಭಾಗದ ಕಡೆಗೆ ಯಾಕೆ ಬರಬಾರದು? ಮತ್ತು ಆರ್ಯಸಮಾಜದವರ ಹಾಗೆ ಯಾಕೆ ಇಂಥ ಪುಸ್ತಕ ಪ್ರಚಾರಕ್ಕೆ ಫಂಡು ಸ್ಥಾಪಿಸಿ ಎಲ್ಲ ಭಾಗಗಳ ವೀರಶೈವರ ಹಿತದ ಕಾರ್ಯ ಮಾಡಬಾರದು?

ಉತ್ತರ— ನೀವು ಕಳಿಸಿದ ಪುಸ್ತಕಗಳೆಲ್ಲಾ ಆರ್ಯ ಸಮಾಜ ತತ್ವ ಪ್ರಸಾರಕ್ಕೆ ಬಹು ಯೋಗ್ಯವಾಗಿವೆ. ಇದರಿಂದ ಅವರ ಅದ್ಭುತ ಕಾರ್ಯ ಪದ್ಧತಿಯೂ ಗೊತ್ತಾಗುತ್ತದೆ. ನೀವು ಅಪೇಕ್ಷಿಸುವಂತೆ ನಮ್ಮ ಮತಪ್ರಚಾರಕ್ಕಾಗಿ ಇಂಥ ಪುಸ್ತಕಗಳಾಗುವುದು

ಅಗತ್ಯ. ನಮಗೆ ಶಕ್ಯವಿದ್ದಷ್ಟು ಈ ವರೆಗೆ ಸಾಧಾರಣ ೨ ಲಕ್ಷ ಪ್ರತಿ ಪ್ರಸಾರಮಾಡಿದ್ದೇವೆ. ಆದರೆ ನೀವು ಹೇಳುವಂತೆ ಒಂದು ಫಂಡು ಏರ್ಪಟ್ಟು ಆಗುವದೇ ಯೋಗ್ಯ. ಆದರಿಂದಲೇ ಹೆಚ್ಚು ಕಾರ್ಯವಾಗುತ್ತದೆ. ಇಂಥ ಕಾರ್ಯಕ್ಕೆ ಈ ಭಾಗದ ಸುಶಿಕ್ಷಿತರು ಲಕ್ಷಿಸುವುದು ಶಕ್ಯವೇ ಇಲ್ಲ. ಒಂದು ಮುನಸಿಪಾಲ್ಟಿ ಅಥವಾ ಲೋಕಲ್ ಬೋರ್ಡ, ಇಲ್ಲವೆ ಕೌನ್ಸಿಲ್ ಸ್ಥಳವು ತಮ್ಮ ಪಕ್ಷಕ್ಕೆ ದೊರಿಯಬೇಕೆಂದು ಸಾವಿರಗಟ್ಟಲೆ ರೂ. ಸೂರೆ ಮಾಡಲು ಹಿಂದೆ ಮುಂದೆ ನೋಡದವರು ನಮ್ಮಲ್ಲಿದ್ದಾರೆ. ಆದರೆ ಈ ದಿನ ನೂರು ಲಿಂಗಾಯತರು ಮುಸಲ್ಮಾನರೋ ಅಥವಾ ಕ್ರಿಸ್ತರೋ ಆಗುತ್ತಾ ರೆಂದರೂ ಆ ಕಡೆಗೆ ಲಕ್ಷಿಸುವುದು ಕೂಡಾ ಅವರಿಗೆ ಬೇಕಿಲ್ಲ.

ಅನೇಕರ ದಾನಪದ್ಧತಿ, ಮಠಸೇವೆ, ಸಮಾಜಕಾರ್ಯಗಳೆಂದರೆ ಪುರಾಣ ಸಮಾರಂಭ, ಆರಾಧನೆ, ಮಂಟಪಪೂಜೆ ಮೊದಲಾದ ಹಿಂದಿನ ರೀತಿಗಳು. ಈ ಕಾಲಕ್ಕೆ ತಕ್ಕಂತೆ ಆರ್ಯ ಸಮಾಜದವರ ಹಾಗೆ ಕಾರ್ಯಗಳಿಲ್ಲ. ಅನೇಕ ಸ್ವಾಮಿಗಳಾದರೂ ಅಖಿಲ ಸಮಾಜದ ಕಡೆಗೆ ಲಕ್ಷಿಸಿ ಈ ಕಾಲಕ್ಕೆ ತಕ್ಕಂಥ ಕಾರ್ಯಗಳನ್ನು ಮಾಡುವದು ಕಡಿಮೆ. ಆದಕಾರಣ ನಿಮ್ಮ ಇಷ್ಟದಂತೆ ಆರ್ಯ ಸಮಾಜದವರ ಹಾಗೆ ಮತರಕ್ಷಣೆ ಮತ್ತು ಪ್ರಸಾರಗಳ ಕಾರ್ಯ ಲಿಂಗಾಯತರಿಂದ ಆಗುವಹಾಗಿಲ್ಲ.

ಪ್ರಶ್ನೆ— ನಮ್ಮ ಮತತತ್ವಗಳೇನೂ ಆರ್ಯ ಸಮಾಜದವರಿಗಿಂತ ಕಡಿಮೆಯಿಲ್ಲ. ವರ್ಣ ಮೊದಲಾದ ಗೊಂದಲ ಇಲ್ಲದೆ ಸಮಾಜ ಸಂಘಟನೆಗೆ ಅನುಕೂಲ. ಹೀಗಿದ್ದರೂ ನಮ್ಮಲ್ಲಿ ಮತ್ತೆ ನೂರೆಂಟು ಒಳಪಂಗಡ. ಅದಕ್ಕಾಗಿ ಆರ್ಯಸಮಾಜದವರಂತೆ ನಮ್ಮಲ್ಲಿ ಒಕ್ಕಟ್ಟಿಲ್ಲ. ಅವರಲ್ಲಿ ಎಷ್ಟು ಒಕ್ಕಟ್ಟು! ಎಷ್ಟು ಧೈರ್ಯ! ಸಾಹಸ ಎಷ್ಟು! ಆರ್ಯ ಸಮಾಜದವರೆಂದರೆ ಮುಸಲ್ಮಾನರು ತಮ್ಮ ಬಲೆಯಲ್ಲಿ ಹಾಕಿಕೊಳ್ಳಲು ಅಂಜುತ್ತಾರೆ. ಲಿಂಗಾಯತ ನೆಂದರೆ ಅವರಿಗೆ ಕೋಳಿ ಮರಿಯನ್ನು ತೆಗೆದುಕೊಂಡು ಹೋಗುವಷ್ಟು ಸುಲಭ. ಯಾರೂ ಕೇಳುವರೇ ಇಲ್ಲ. ಹೋಯಿತು ಪೀಡೆ. ಒಳ್ಳೇದಾಯಿತು. ಎಂದೇ ಹೇಳುವರು. ಆದಕಾರಣ ಹೀಗಾಗಿ ಮುಸಲ್ಮಾನರ ಬಲೆಯಲ್ಲಿ ಬೀಳುವದಕ್ಕಿಂತ ನಾವು ಆರ್ಯ ಸಮಾಜದವರಾಗಬೇಕೆಂದೇ ತೋರುತ್ತದೆ. ಇದಕ್ಕೆ ನಿಮ್ಮ ಅಭಿಪ್ರಾಯವೇನು?

ಉತ್ತರ— ನೀವು ಹೇಳುವದು ನಿಜ. ಕೇವಲ ಲಿಂಗಾಯತರಲ್ಲಿಯೇ ಇಂತಹ ಸ್ವಮತಾಭಿಮಾನ ಶೂನ್ಯತೆಯಿದೆಯೆಂದಲ್ಲ. ಮೇಲು ಕೀಳಿನ ದುಷ್ಟ ಪದ್ಧತಿ ಮನೆಮಾಡಿಕೊಂಡಿದೆಯೆಂದಲ್ಲ. ಹಿಂದುಗಳಲ್ಲಿಯೇ ಈ ಶೋಚನೀಯ ಸ್ಥಿತಿ. ಇದಕ್ಕೆ ಸಿಖ ಮತ್ತು ಆರ್ಯ ಸಮಾಜದವರೇ ಅಪವಾದ ಆರ್ಯಸಮಾಜದವರ ಐಕ್ಯ ಮತ್ತು ಧೈರ್ಯ ಸಾಹಸಗಳು ಇತರ ಹಿಂದುಗಳಿಗೇನೇ ಆದರ್ಶವಾಗಿವೆ. ಅಂತೆಯೇ ಅವರ ಮತಪ್ರಸಾರವಾಗುತ್ತಾ ಇದೆ.

ಮದ್ರಾಸದಲ್ಲಿರುವ ಒಬ್ಬ ಮಹಮ್ಮದೀಯನಿಗೆ ಲಾಹೋರಿನ ತನ್ನ ಮತ ಬಾಂಧವರ ಬೆಂಬಲವೂ ಇದೆಯೆಂದು ಹೇಗೆ ವಿಶ್ವಾಸವಿದೆಯೋ ಹಾಗೆಯೇ ನಿಜಾಮು ಭಾಗದಲ್ಲಿರುವ ಆರ್ಯಸಮಾಜದ ವ್ಯಕ್ತಿಗೂ ಲಾಹೋರಿನ ಆರ್ಯಸಮಾಜವು ತನ್ನ ಕಡೆಗಿದೆಯೆಂಬ ವಿಶ್ವಾಸವಿದೆ. ಅವರು ಅಷ್ಟು ಐಕಮತ್ಯವುಳ್ಳವರಾಗಿದ್ದಾರೆ. ನಮ್ಮವರಲ್ಲಿ ಅಷ್ಟು ದೂರಿನ ಬೆಂಬಲ ಬರುವುದು ಹಾಗಿರಲಿ. ನೆರೆಮನೆಯವರ ಬೆಂಬಲವಿಲ್ಲ. ಅಂತೆಯೇ ನಮ್ಮ ಸ್ಥಿತಿ ಇಷ್ಟು ಶೋಚನೀಯವಾಗಿದೆ. ನೀವು ಮುಸಲ್ಮಾನರ ಬಲೆಯಲ್ಲಿ ಹೋಗುವುದಕ್ಕಿಂತ ಆರ್ಯಸಮಾಜದವರಾಗುವುದು ಸಾವಿರ ಪಾಲಿಗೆ ಮೇಲು.

ಪ್ರಶ್ನೆ— ನಾವು ನಿಮ್ಮ ಶರಣ ಸಂದೇಶವನ್ನು ಮೊದಲು ಬಹು ಉತ್ಸಾಹದಿಂದ ಓದುತ್ತಿದ್ದೆವು. ಇಲ್ಲಿ ಪ್ರಸಾರ ಮಾಡುತ್ತಿದ್ದೆವು. ನಿಮ್ಮ ಭಾಗದ ಪತ್ರಿಕೆಗಳಲ್ಲಿ ಇದೇ ನಮಗೆ ಪ್ರಿಯವಾಗಿತ್ತು. ಇದರಲ್ಲಿ ಮತ ಸಂಬಂಧ ಮತ್ತು ಹಿಂದು ಸಂಘಟನೆ ಸಂಗತಿಗಳು ಹೆಚ್ಚಿರುತ್ತಿದ್ದವು. ಈಗ ಕಾಂಗ್ರೆಸ್ ಸಂಗತಿ ಹೆಚ್ಚು ಬರೆಯುತ್ತೀರಿ. ಕಾಂಗ್ರೆಸ್ಸಿನ ಸಂಗತಿ ನಮಗೆ ನಿರುಪಯೋಗವಾದದ್ದು. ಆದಕ್ಕಾಗಿ ನಿಮ್ಮ ಪತ್ರಿಕೆಯನ್ನು ಈಗ ಕೆಲವರು ಬಿಚ್ಚುವದೇ ಇಲ್ಲ. ಅವರಿಗೆ ವೈದಿಕ ಸಂದೇಶ ಬಹು ಪ್ರಿಯವಾಗಿದೆ. ಅದು ಮೊನ್ನೆ ಮೊನ್ನೆ ಸೊಲ್ಲಾಪುರದಲ್ಲಿ ಪ್ರಕಟವಾಗುತ್ತದೆ. ನಿಮ್ಮ ಕಡೆ ಕೆಲವು ಅಂಕ ಕಳಿಸಿದ್ದೇವೆ. ನೋಡಿರಿ. ಅದರಲ್ಲಿ ಆರ್ಯಸಮಾಜದವರು ಹೇಗೆ ಬರೆಯುತ್ತಾರೆ. ನಿಜಾಮು ರಾಜ್ಯದ ಸಂಗತಿ ಹೇಗಿರುತ್ತದೆ. ನಿಮ್ಮ ಪತ್ರಿಕೆ ಬಹಳ ಸಪ್ಪಗೆ, ಅದರ ತೇಜ ನೋಡಿರಿ.

ಉತ್ತರ— ಈಗ ನಾವು ೨೦ ನೇ ಶತಮಾನದಲ್ಲಿದ್ದರೂ ನಿಜಾಮದವರಾದ ನೀವು ೧೮ ನೆಯ ಶತಮಾನದಲ್ಲಿದ್ದೀರೆಂಬುದು ನಮಗೆ ಗೊತ್ತಿದೆ. ನಿಮ್ಮ ಕೊರತೆ ಆಕಾಂಕ್ಷೆಗಳೇನೆಂಬುದೂ ನಮಗೆ ಗೊತ್ತು. ನಿಮ್ಮ ಪ್ರಾಂತದವರಿಗಾಗಿಯೇ ಒಂದು ಬೇರೆ ಪತ್ರಿಕೆ ಬೇಕು. ವೈದಿಕ ಸಂದೇಶ ನಿಮಗೆ ಸರಿಯಾದುದೇ ಸರಿ. ಆದರೆ ಅದು ಇಲ್ಲಿ ಅಷ್ಟು ಉಪಯೋಗವಿಲ್ಲ. ನೀವು ನಿಮ್ಮ ಭಾಗದಲ್ಲಿ ಅದನ್ನೇ ಹೆಚ್ಚು ಪ್ರಸಾರ ಮಾಡಿರಿ. ಈಗಲೇ ಶರಣ ಸಂದೇಶ ಇಲ್ಲಿ ನಮ್ಮ ಸಮಾಜದ ಅನೇಕರಿಗೆ ಜಾತಿವಾದದ ಮತ್ತು ರಾಷ್ಟ್ರದ್ರೋಹದ ಪತ್ರಿಕೆಯಾಗಿ ತೋರುತ್ತದೆ. ನಿಮ್ಮ ಇಷ್ಟದಂತೆ ಬರೆದರೆ ಹೇಗಾಗಬಹುದು? ನೀವು ಸಂಸ್ಥಾನದಲ್ಲಿದ್ದರೂ ನಮ್ಮ ಮತ ಬಾಂಧವರೆಂದು ಇಲ್ಲಿಯವರು ತಿಳಿದು ನಿಮ್ಮ ದುಃಖದ ಕಡೆಗೆ ಲಕ್ಷಿಸದಿದ್ದುದು ಹೇಗೆ ತಪ್ಪೋ ಹಾಗೆಯೇ ಕಾಂಗ್ರೆಸ್ಸಿನ ಸಂಗತಿಗಳು ನಿರುಪಯೋಗವೆಂದು ಸಂಸ್ಥಾನದಲ್ಲಿರುವ ನೀವು ತಿಳಿಯುವುದೂ ತಪ್ಪು. ನಿಮ್ಮ ಉನ್ನತಿಗೆ ನೀವು ಕಾಂಗ್ರೆಸ್ಸಿನ ಸಂಗತಿಗಳನ್ನೂ ತಿಳಿದುಕೊಂಡು ನಿಮ್ಮಲ್ಲಿ ಕಾಂಗ್ರೆಸ್ಸಿನ ವಿಧಾಯಕ ಕಾರ್ಯಗಳನ್ನು ಮಾಡುವುದು ಒಳ್ಳೆಯದು.

ಪ್ರಶ್ನೆ— ಈಗೇ ನಾವು ಹೀಗಿದ್ದರೂ ನಮ್ಮ ದೇವಾಲಯದ ಮೇಲೆ ಕಳಶ ಹಚ್ಚಲು ಪರವಾನಗಿ ದೊರೆಯುವದಿಲ್ಲ. ಮಠದ ಸುತ್ತಲು ನಮ್ಮ ಜಾಗಾದಲ್ಲಿ ನಾವು ಗೋಡೆ ಕಟ್ಟಿಕೊಳ್ಳಲು ಪರವಾನಗಿ ದೊರೆಯುವದಿಲ್ಲ. ಇಷ್ಟು ನಮಗೆ ಸ್ವತಂತ್ರ! ಇನ್ನು ಕಾಂಗ್ರೆಸ್ ಚಳವಳಿ ಮಾಡಿದರಂತೂ ತೀರೇ ಹೋಯಿತು. ಅದರ ಹೆಸರು ಕೂಡಾ ನಮಗೆ ಬೇಕಾಗಿಲ್ಲ.

ಉತ್ತರ— ನಿಮಗೆ ಸ್ವಾತಂತ್ರ್ಯ ಎಷ್ಟಿದೆಯೆಂಬುದು ನಮಗೆ ಗೊತ್ತಿದೆ. ನಿಮ್ಮಲ್ಲಿ ಮತ್ತೆ ಪಾಯಗಾದಲ್ಲಿರುವವರಿದ್ದಾರೆ ಇಂಥ ಕಗ್ಗತ್ತಲೆಯಲ್ಲಿ ಸ್ವಲ್ಪವಾದರೂ ಬೆಳಕು ಬೀಳಬೇಕಾದರೆ ಕಾಂಗ್ರೆಸ್ ಚಟುವಟಿಕೆಯಿಂದಲೇ ಸರಿ. ಕಾಂಗ್ರೆಸ್ಸಿನ ಅತ್ಯಲ್ಪ ಕೆಲಸಕ್ಕೆ ಪ್ರತಿಬಂಧವಾದರೂ ದೇಶವೆಲ್ಲಾ ನಿಮ್ಮ ಕಡೆ ತಿರುಗಿ ನಿಮಗೆ ಎಷ್ಟು ಸ್ವತಂತ್ರವಿದೆಯೆಂಬುದನ್ನು ನೋಡುತ್ತದೆ. ಅದನ್ನು ಬಿಟ್ಟು ಮತ ಸಂಬಂಧವಾದ ನಿಮ್ಮ ಸ್ವಾತಂತ್ರ್ಯ ಎಷ್ಟು ಹರಣವಾಗುತ್ತಿದ್ದರೂ ಸ್ವಾತಂತ್ರ್ಯಪ್ರೇಮಿಗಳಾದ ಕಾಂಗ್ರೆಸ್ಸಿನವರು ನಿಮ್ಮ ಕಡೆ ಲಕ್ಷಿಸುವುದಿಲ್ಲ. ಇದಕ್ಕೆ ಈಗ ಮೈಸೂರು ದೇಶದ ಕಡೆಗೆ ಅವರು ಲಕ್ಷಿಸಿರುವುದೂ ನಿಮ್ಮ ಹೆಸರನ್ನು ಸ್ಪಷ್ಟದಲ್ಲಿ ಕೂಡಾ ತೆಗೆಯದಿದ್ದದ್ದೂ ದೃಷ್ಟಾಂತವಾಗಿಲ್ಲವೆ?

ಧಾರ್ಮಿಕವಾಗಲಿ ಅಥವಾ ರಾಜಕೀಯವಾಗಲಿ ಯಾವ ಸ್ವಾತಂತ್ರ್ಯವಾದರೂ ದೊರೆಯಬೇಕಾದರೆ ಅದಕ್ಕೆ ಆತ್ಮಯಜ್ಞದ ಕಾಣಿ

ಕೆ ಕೊಡಬೇಕಾಗುತ್ತದೆ. ತನು ಮನ ಧನ ಸೂರೆಮಾಡದೆ ಯಾವ ಸ್ವಾತಂತ್ರ್ಯವೂ ದೊರೆಯುವುದಿಲ್ಲ. ನೀವು ಅನ್ಯರ ಮೇಲೆ ಅವಲಂಬಿಸಿದರೆ ನಿಮ್ಮ ದುಃಖಗಳು ನಿವಾರಣೆಯಾಗುವುದು ಶಕ್ಯವಿಲ್ಲ. ನೀವೇ ಶಕ್ಯವಿದ್ದಷ್ಟು ಸಂಘಟಿತರಾಗಿ ಅಹಿಂಸಾ ಮಾರ್ಗದಿಂದ ಎಲ್ಲ ಸ್ವಾತಂತ್ರ್ಯಗಳಿಗಾಗಿ ಪ್ರಯತ್ನಿಸಿ ಅನೇಕ ವಿಪತ್ತುಗಳಿಗೆ ಎದೆ ಕೊಡಲು ಸಿದ್ಧರಾಗಬೇಕು.

## ವಂದೇಮಾತರಂ ಗೀತೆಯ ನಿಷೇಧ.

### ಮುಸಲ್ಮಾನರ ಬಹಿರ್ಗಮನ.

ತಾ. ೨೭ ನೆಯ ದಿನ ಮದ್ರಾಸ್ ಅಸೆಂಬ್ಲಿ ಕಾರ್ಯವು ಶ್ರೀ. ಸಾಂಬಮೂರ್ತಿಯವರ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು. ಆರಂಭದಲ್ಲಿ ರಾಷ್ಟ್ರಗೀತೆ ಹೇಳಲ್ಪಡುವುದೆಂದು ಅಧ್ಯಕ್ಷರು ಸೂಚಿಸಿದರು. ಆಗ ಮಿ. ಅಬ್ದುಲ್ ಹಮೀದ ಖಾನ ಇವರು ವಂದೇಮಾತರಂ ಗೀತೆಯು ಹೇಳಲ್ಪಡಕೂಡದೆಂದು ಅಧ್ಯಕ್ಷರಿಗೆ ತಿಳಿಸಿದರು. ಅದನ್ನು ಅಧ್ಯಕ್ಷರು ಒಪ್ಪಲಿಲ್ಲ. ಆಗ ಮುಸ್ಲಿಂ ಲೀಗಿನ ಆ ಸಭಾಸದರು ಅಸೆಂಬ್ಲಿಯನ್ನು ಬಿಟ್ಟು ಹೊರಗೆ ಹೋದರು. ಆ ಮೇಲೆ ವಂದೇಮಾತರಂ ಗೀತೆಯು ಹೇಳಲ್ಪಟ್ಟಿತು.

ಅನಂತರ ಅಧ್ಯಕ್ಷರು ಇಂಗ್ಲಿಷ್ ಭಾಷೆಯಲ್ಲಿ ಒಂದು ಪ್ರಾರ್ಥನೆಯನ್ನು ಮಾಡಿದರು. ಅವರ ಅಭಿಪ್ರಾಯ ಹೀಗಿದ್ದಿತು—

"ಪರಮಾತ್ಮನೇ, ನಮ್ಮನ್ನು ರಾಗದ್ವೇಷಾದಿಗಳಿಂದ ದೂರ ಮಾಡು. ನಮ್ಮಲ್ಲಿ ದಯೆ ಶಾಂತಿಗಳನ್ನು ಉಂಟುಮಾಡು. ನಮಗೆ ಶಕ್ತಿಯನ್ನೂ ಸುಖ ಸಂಪತ್ತುಗಳನ್ನೂ ಅನುಗ್ರಹಿಸು. ಭಾರತ ಮಾತೆಯ ಸೇವೆಗಾಗಿ ನಮಗೆ ಶಕ್ತಿಯನ್ನೂ ದೃಢ ಭಕ್ತಿಯನ್ನೂ ಕೊಡು. ನಮ್ಮ ಎಲ್ಲ ಶಕ್ತಿಗಳೂ ಸ್ವಾತಂತ್ರ್ಯ, ಸುಖ, ಶಾಂತಿಗಳ ಪ್ರಾಪ್ತಿಗಾಗಿ ಏಕೀಭವಿಸುವಂತೆ ಮಾಡು."

ಈ ಎರಡೂ ಪ್ರಾರ್ಥನೆಗಳಾದನಂತರ ಮುಸಲ್ಮಾನ್ ಸಭಾಸದರು ಬಂದು ಅಸೆಂಬ್ಲಿಯಲ್ಲಿ ಭಾಗವಹಿಸಿದರು.

## ಶಾಹೀದಗಂಜ ವ್ಯಾಜ್ಯ.

### ಶೀಖರಿಗೆ ಜಯ.

ಶಾಹೀದಗಂಜ ವ್ಯಾಜ್ಯವು ಲಾಹೋರ ಹೈಕೋರ್ಟಿನಲ್ಲಿ ನ್ಯಾಯಾಧೀಶರ ಮುಂದೆ ನಡೆದಿತ್ತು. ಇಬ್ಬರು ನ್ಯಾಯಾಧೀಶರು ಮುಸಲ್ಮಾನರ ಹೇಳಿಕೆಯನ್ನು ನಿರಾಕರಿಸಿ ಅಲ್ಲಿ ಮುಸಲ್ಮಾನರಿಗೆ ಪ್ರಾರ್ಥನೆ ಮಾಡಲು ಅಧಿಕಾರವಿಲ್ಲವೆಂದು ತಾ. ೨೬ ನೆಯ ದಿನ ತೀರ್ಮಾನ ಹೇಳಿದರು. ಇನ್ನೊಬ್ಬ ನ್ಯಾಯಾಧೀಶರಾದ ದೀನ ಮಹಮ್ಮದ ಇವರು ಮಾತ್ರ ಮುಸಲ್ಮಾನರಿಗೆ ಆ ಸ್ಥಳದಲ್ಲಿ ನಮಾಜ ಮಾಡಲು ಅಧಿಕಾರವಿದೆಯೆಂದು ಅಭಿಪ್ರಾಯಪಟ್ಟರು.

### ಪ್ರಚಂಡ ಹರತಾಳ.

ಶಾಹೀದಗಂಜ ತೀರ್ಮಾನದ ನಿಷೇಧಾರ್ಥವಾಗಿ ಲಾಹೋರಿನಲ್ಲಿ ತಾ. ೨೭ ನೆಯ ದಿನ ಮುಸಲ್ಮಾನರು ಪ್ರಚಂಡವಾದ ಹರತಾಳವನ್ನು ಆಚರಿಸಿದರು. ೫೦೦೦೦ ಜನ ಮುಸಲ್ಮಾನರು ಹರತಾಳದ ಪ್ರಚಾರಕ್ಕಾಗಿ ಪಟ್ಟಣದಲ್ಲಿ ತಿರುಗಾಡಿದರು. ಶಾಹಿದಗಂಜ ವ್ಯಾಜ್ಯದಲ್ಲಿ ಜಯವನ್ನು ಹೊಂದುವುದಕ್ಕಾಗಿ ಎಲ್ಲ ಮುಸಲ್ಮಾನರ ಒಂದು ಸಂಘಟಿತ ಪ್ರಯತ್ನ ನಡೆಯಬೇಕೆಂದು ಗೊತ್ತುಮಾಡಿದ್ದಾರೆ. ಈ ಸಂಬಂಧವಾಗಿ ಮುಖ್ಯಮಂತ್ರಿಗಳಾದ ಶಿಕಂದರ ಹಯಾತಖಾನರ ಕಡೆಗೆ ಒಂದು ಶಿಷ್ಟಮಂಡಲವು ಹೋಗಿ ಸರಕಾರದ ಧೋರಣವನ್ನು ತಿಳಿದುಕೊಳ್ಳುವುದಿದೆ.

### ಪ್ರಿವ್ಹಿ ಕೌನ್ಸಿಲ್ಲಿಗೆ ಹೋಗುವರು.

ಮುಸಲ್ಮಾನರು ಪ್ರಿವ್ಹಿ ಕೌನ್ಸಿಲ್ಲಿಗೆ ಈ ವ್ಯಾಜ್ಯವನ್ನು ತೆಗೆದುಕೊಂಡು ಹೋಗುವವರಿದ್ದಾರೆಂದೂ ಶೀಖರು ಮಂದಿರವನ್ನು ವ್ಯತ್ಯಸ್ತ ಗೊಳಿಸಬಾರದೆಂದೂ ಮುಸಲ್ಮಾನರ ಪರವಾಗಿದ್ದ ವಕೀಲ ಮಿ. ಅಲ್ಲಿಯವರು ಕೋರ್ಟಿಗೆ ತಿಳಿಸಿದರು.

## ಬಾಬೂಜಿಯವರ ಅಭಿಪ್ರಾಯ.

ಹರಿಪುರ ಕಾಂಗ್ರೆಸ್ಸಿನ ಅಧ್ಯಕ್ಷರಾದ ಶ್ರೀ. ಬಾಬು ಸುಭಾಷಚಂದ್ರ ಬೋಸರವರು ತಾ. ೨೬ ನೆಯ ದಿನ ಕಲಕತ್ತಾ ಪಟ್ಟಣದ ಪ್ರಚಂಡವಾದ ಸಭೆಯಲ್ಲಿ ಸ್ವಾತಂತ್ರ್ಯದ ಪ್ರತಿಜ್ಞೆಯನ್ನು ಓದಿ ಹೇಳುವ ಮುಂಚೆ ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಕಾಂಗ್ರೆಸ್ಸಿನಲ್ಲಿ ಮುಸಲ್ಮಾನರನ್ನೂ ಆದಿ ಹಿಂದುಗಳನ್ನೂ ಸೇರಿಸಿಕೊಳ್ಳಿರಿ. ಅವರಲ್ಲಿ ಬಹು ಸಂಖ್ಯಾಕರು ಇನ್ನೂ ಕಾಂಗ್ರೆಸ್ಸಿನ ಹೊರಗೇ ಇದ್ದಾರೆ. ಅವರನ್ನು ಸೇರಿಸಿಕೊಳ್ಳಲು ಕೆಲವು ಸ್ಥಾನಗಳನ್ನು ಅವರಿಗಾಗಿ ಬಿಟ್ಟುಕೊಟ್ಟರೂ ಅಡ್ಡಿಯಿಲ್ಲ. ಇಂಗ್ಲಿಷ್ ಸಾಮ್ರಾಜ್ಯವು ನೀವು ತಿಳಿದಂತೆ ಬಲಶಾಲಿಯಾಗಿಲ್ಲ. ಸಾಮ್ರಾಜ್ಯವಾದವು ಇಂಗ್ಲೆಂಡಿನ ತರುಣರಿಗೂ ಬೇಡವಾಗಿದೆ. ಆದಕಾರಣ ನಾವು ಒಂದಾಗಿ ಕಾಂಗ್ರೆಸ್ಸಿನ ಚಟುವಟಿಕೆಯನ್ನು ನಡೆಸಿದರೆ ಇಂಗ್ಲಿಷರು ತಮ್ಮ ಹಿತಕ್ಕಾಗಿಯೇ ನಮಗೆ ಸ್ವರಾಜ್ಯವನ್ನು ಕೊಡಬೇಕಾಗುವುದು."

ಮುಸಲ್ಮಾನ ಜನಸಾಮಾನ್ಯ ಕಾಂಗ್ರೆಸ್ಸಿನ ಕಡೆಗಿದೆಯೆಂದೂ ಯಾರೋ ಕೆಲವು ಪ್ರತಿಷ್ಠಿತ ಜನರು ಕಾಂಗ್ರೆಸ್ಸಿನ ಹೊರಗಿದ್ದಾರೆಂದೂ ಪಂಡಿತ ಜವಾಹರಲಾಲರು ಹೇಳಿದ್ದರಷ್ಟೆ. ಅದು ತಪ್ಪು ಅಭಿಪ್ರಾಯವೆಂದು ಬಾಬೂಜಿಯವರ ಈ ಮಾತಿನಿಂದಾದರೂ ಗೊತ್ತಾಗುವುದಿಲ್ಲವೆ ?

## ಅಸೆಂಬ್ಲಿಯಲ್ಲಿ ಕುರಾನ ಪಠಣ.

ತಾ. ೨೮-೧-೩೮ ನೆಯ ದಿವಸ ಮದ್ರಾಸ್ ಅಸೆಂಬ್ಲಿಯಲ್ಲಿ ಮೊದಲು ಮಲಬಾರ ಪ್ರಾಂತದ ಮುಸಲ್ಮಾನ್ ಸಭಾಸದರು ಕುರಾನದಲ್ಲಿಯ ಪ್ರಾರ್ಥನೆಯನ್ನು ಮಾಡಿದರು. ಅನಂತರ ಅಧ್ಯಕ್ಷರಾದ ಶ್ರೀ. ಸಾಂಬಮೂರ್ತಿಗಳು ಇಂಗ್ಲಿಷಿನಲ್ಲಿ ಪ್ರಾರ್ಥನೆಯನ್ನು ಓದಿ ಹೇಳಿದರು.

## ಬೈಲಹೊಂಗಲ ನಗರ ಸಭೆ.

ಬೈಲಹೊಂಗಲ ನಗರ ಸಭೆ (ಮುನಸಿಪಾಲ್ಟಿ) ಅಧ್ಯಕ್ಷರ ಚುನಾವಣೆ ತಾ. ೨೭ ನೆಯ ದಿನ ಜರುಗಿತು. ಕಾಂಗ್ರೆಸ್ ಪಕ್ಷದ ಸದಸ್ಯರೆಲ್ಲಾ ಖಾದಿಯ ಒಂದೇ ತರದ ಉಡುಪು ಹಾಕಿಕೊಂಡು ಮೆರವಣಿಗೆಯಿಂದ ನಗರ ಸಭೆಗೆ ಹೋದರು. ಶ್ರೀ. ಮೆಟಗುಡ್ಡ ವಕೀಲರನ್ನು ಅಧ್ಯಕ್ಷರನ್ನಾಗಿ ಆರಿಸಿದರು. ಆ ಮೇಲೆ ವಂದೇ ಮಾತರಂ ಗೀತೆ ಹೇಳಲ್ಪಟ್ಟಿತು. ಆಗ ನಾಲ್ಕು ಜನ ಸಭಾಸದರು ಸಭೆಯನ್ನು ಬಿಟ್ಟು ಹೋದರು.

ಅಗತ್ಯ. ನಮಗೆ ಶಕ್ಯವಿದ್ದಷ್ಟು ಈ ವರೆಗೆ ಸಾಧಾರಣ ೨ ಲಕ್ಷ
ಪ್ರತಿ ಪ್ರಸಾರಮಾಡಿದ್ದೇವೆ. ಆದರೆ ನೀವು ಹೇಳುವಂತೆ ಒಂದು
ಫಂಡು ಏರ್ಪಟ್ಟು ಆಗುವದೇ ಯೋಗ್ಯ. ಆದರಿಂದಲೇ ಹೆಚ್ಚು
ಕಾರ್ಯವಾಗುತ್ತದೆ. ಇಂಥ ಕಾರ್ಯಕ್ಕೆ ಈ ಭಾಗದ ಸುಶಿಕ್ಷಿತರು
ಲಕ್ಷಿಸುವುದು ಶಕ್ಯವೇ ಇಲ್ಲ. ಒಂದು ಮುನಸಿಪಾಲ್ಟಿ ಅಥವಾ
ಲೋಕಲ್ ಬೋರ್ಡ್, ಇಲ್ಲವೆ ಕೌನ್ಸಿಲ್ ಸ್ಥಳವು ತಮ್ಮ ಪಕ್ಷಕ್ಕೆ
ದೊರೆಯಬೇಕೆಂದು ಸಾವಿರಗಟ್ಲೆ ರೂ. ಸೂರೆ ಮಾಡಲು ಹಿಂದೆ
ಮುಂದೆ ನೋಡದವರು ನಮ್ಮಲ್ಲಿದ್ದಾರೆ. ಆದರೆ ಈ ದಿನ ನೂರು
ಲಿಂಗಾಯತರು ಮುಸಲ್ಮಾನರೋ ಅಥವಾ ಕ್ರಿಸ್ತರೋ ಆಗುತ್ತಾ
ರೆಂದರೂ ಆ ಕಡೆಗೆ ಲಕ್ಷಿಸುವುದು ಕೂಡಾ ಅವರಿಗೆ ಬೇಕಿಲ್ಲ.

ಅನೇಕರ ದಾನಪದ್ಧತಿ, ಮತಸೇವೆ, ಸಮಾಜಕಾರ್ಯಗಳೆಂ
ದರೆ ಪುರಾಣ ಸಮಾರಂಭ, ಆರಾಧನೆ, ಮಂಟಪಪೂಜೆ ಮೊದಲಾ
ದ ಹಿಂದಿನ ರೀತಿಗಳು. ಈ ಕಾಲಕ್ಕೆ ತಕ್ಕಂತೆ ಆರ್ಯ ಸಮಾಜ
ದವರ ಹಾಗೆ ಕಾರ್ಯಗಳಿಲ್ಲ. ಅನೇಕ ಸ್ವಾಮಿಗಳಾದರೂ ಅಖಿಲ
ಸಮಾಜದ ಕಡೆಗೆ ಲಕ್ಷಿಸಿ ಈ ಕಾಲಕ್ಕೆ ತಕ್ಕಂಥ ಕಾರ್ಯಗಳನ್ನು
ಮಾಡುವದು ಕಡಿಮೆ. ಆದಕಾರಣ ನಿಮ್ಮ ಇಷ್ಟದಂತೆ ಆರ್ಯ
ಸಮಾಜದವರ ಹಾಗೆ ಮತರಕ್ಷಣೆ ಮತ್ತು ಪ್ರಸಾರಗಳ ಕಾರ್ಯ
ಲಿಂಗಾಯತರಿಂದ ಆಗುವಹಾಗಿಲ್ಲ.

ಪ್ರಶ್ನೆ— ನಮ್ಮ ಮತತತ್ವಗಳೇನೂ ಆರ್ಯ ಸಮಾಜದವ
ರಿಗಿಂತ ಕಡಿಮೆಯಿಲ್ಲ. ವರ್ಣ ಮೊದಲಾದ ಗೊಂದಲ ಇಲ್ಲದೆ ಸ
ಮಾಜ ಸಂಘಟನೆಗೆ ಅನುಕೂಲ. ಹೀಗಿದ್ದರೂ ನಮ್ಮಲ್ಲಿ ಮತ್ತೆ
ನೂರೆಂಟು ಒಳಪಂಗಡ. ಅದಕ್ಕಾಗಿ ಆರ್ಯಸಮಾಜದವರಂತೆ
ನಮ್ಮಲ್ಲಿ ಒಕ್ಕಟ್ಟಿಲ್ಲ. ಅವರಲ್ಲಿ ಎಷ್ಟು ಒಕ್ಕಟ್ಟು! ಎಷ್ಟು ಧೈರ್ಯ!
ಸಾಹಸ ಎಷ್ಟು! ಆರ್ಯ ಸಮಾಜದವರೆಂದರೆ ಮುಸಲ್ಮಾನರು
ತಮ್ಮ ಬಲೆಯಲ್ಲಿ ಹಾಕಿಕೊಳ್ಳಲು ಅಂಜುತ್ತಾರೆ. ಲಿಂಗಾಯತ
ನೆಂದರೆ ಅವರಿಗೆ ಕೋಳಿ ಮರಿಯನ್ನು ತೆಗೆದುಕೊಂಡು ಹೋಗು
ವಷ್ಟು ಸುಲಭ. ಯಾರೂ ಕೇಳುವರೇ ಇಲ್ಲ. ಹೋಯಿತು ಪೀಡ.
ಒಳ್ಳೇದಾಯಿತು. ಎಂದೇ ಹೇಳುವರು. ಆದಕಾರಣ ಹೀಗಾಗಿ
ಮುಸಲ್ಮಾನರ ಬಲೆಯಲ್ಲಿ ಬೀಳುವದಕ್ಕಿಂತ ನಾವು ಆರ್ಯ ಸಮಾ
ಜದವರಾಗಬೇಕೆಂದೇ ತೋರುತ್ತದೆ. ಇದಕ್ಕೆ ನಿಮ್ಮ ಅಭಿಪ್ರಾ
ಯವೇನು?

ಉತ್ತರ— ನೀವು ಹೇಳುವದು ನಿಜ. ಕೇವಲ ಲಿಂಗಾಯ
ತರಲ್ಲಿಯೇ ಇಂತಹ ಸ್ವಮತಾಭಿಮಾನ ಶೂನ್ಯತೆಯಿದೆಯೆಂದಲ್ಲ.
ಮೇಲು ಕೀಳಿನ ದುಷ್ಟ ಪದ್ಧತಿ ಮನೆಮಾಡಿಕೊಂಡಿದೆಯೆಂದಲ್ಲ.
ಹಿಂದುಗಳಲ್ಲಿಯೇ ಈ ಶೋಚನೀಯ ಸ್ಥಿತಿ. ಇದಕ್ಕೆ ಶೀಖ ಮತ್ತು
ಆರ್ಯ ಸಮಾಜದವರೇ ಅಪವಾದ ಆರ್ಯಸಮಾಜದವರ ಐಕ
ಮತ್ಯ ಧೈರ್ಯ ಸಾಹಸಗಳು ಇತರ ಹಿಂದುಗಳಿಗೇನೇ ಆದರ್ಶವಾ
ಗಿವೆ. ಅಂತೆಯೇ ಅವರ ಮತಪ್ರಸಾರವಾಗುತ್ತಾ ಇದೆ.

ಮದ್ರಾಸದಲ್ಲಿರುವ ಒಬ್ಬ ಮಹಮ್ಮದೀಯನಿಗೆ ಲಾಹೋರಿನ
ತನ್ನ ಮತ ಬಾಂಧವರ ಬೆಂಬಲವೂ ಇದೆಯೆಂದು ಹೇಗೆ ವಿಶ್ವಾ
ಸವಿದೆಯೋ ಹಾಗೆಯೇ ನಿಜಾಮ ಭಾಗದಲ್ಲಿರುವ ಆರ್ಯಸಮಾ
ಜದ ವ್ಯಕ್ತಿಗೂ ಲಾಹೋರಿನ ಆರ್ಯಸಮಾಜವು ತನ್ನ ಕಡೆಗಿದೆ
ಯೆಂಬ ವಿಶ್ವಾಸವಿದೆ. ಅವರು ಅಷ್ಟು ಐಕಮತ್ಯವುಳ್ಳವರಾಗಿ
ದ್ದಾರೆ. ನಮ್ಮವರಲ್ಲಿ ಅಷ್ಟು ದೂರಿನ ಬೆಂಬಲ ಬರುವುದು ಹಾಗಿ
ರಲಿ. ನೆರೆಮನೆಯವರ ಬೆಂಬಲವಿಲ್ಲ. ಅಂತೆಯೇ ನಮ್ಮ ಸ್ಥಿತಿ
ಇಷ್ಟು ಶೋಚನೀಯವಾಗಿದೆ. ನೀವು ಮುಸಲ್ಮಾನರ ಬಲೆಯಲ್ಲಿ
ಹೋಗುವುದಕ್ಕಿಂತ ಆರ್ಯಸಮಾಜದವರಾಗುವುದು ಸಾವಿರ ಪಾ
ಲಿಗೆ ಮೇಲು.

ಪ್ರಶ್ನೆ— ನಾವು ನಿಮ್ಮ ಶರಣ ಸಂದೇಶವನ್ನು ಮೊದಲು
ಬಹು ಉತ್ಸಾಹದಿಂದ ಓದುತ್ತಿದ್ದೆವು. ಇಲ್ಲಿ ಪ್ರಸಾರ ಮಾಡುತ್ತಿ
ದ್ದೆವು. ನಿಮ್ಮ ಭಾಗದ ಪತ್ರಿಕೆಗಳಲ್ಲಿ ಇದೇ ನಮಗೆ ಪ್ರಿಯವಾ
ಗಿತ್ತು. ಇದರಲ್ಲಿ ಮತ ಸಂಬಂಧ ಮತ್ತು ಹಿಂದು ಸಂಘಟನೆ
ಸಂಗತಿಗಳು ಹೆಚ್ಚಿರುತ್ತಿದ್ದವು. ಈಗ ಕಾಂಗ್ರೆಸ್ ಸಂಗತಿ ಹೆಚ್ಚು
ಬರೆಯುತ್ತೀರಿ. ಕಾಂಗ್ರೆಸ್ಸಿನ ಸಂಗತಿ ನಮಗೆ ನಿರುಪಯೋಗವಾದ
ದ್ದು. ಅದಕ್ಕಾಗಿ ನಿಮ್ಮ ಪತ್ರಿಕೆಯನ್ನು ಈಗ ಕೆಲವ
ರು ಬಿಚ್ಚುವದೇ ಇಲ್ಲ. ಅವರಿಗೆ ವೈದಿಕ ಸಂದೇಶ ಬಹು ಪ್ರಿಯ
ವಾಗಿದೆ. ಅದು ಮೊನ್ನೆ ಮೊನ್ನೆ ಸೊಲ್ಲಾಪುರದಲ್ಲಿ ಪ್ರಕಟವಾಗುತ್ತ
ದೆ. ನಿಮ್ಮ ಕಡೆ ಕೆಲವು ಅಂಕ ಕಳಿಸಿದ್ದೇವೆ. ನೋಡಿರಿ. ಅದರಲ್ಲಿ
ಆರ್ಯಸಮಾಜದವರು ಹೇಗೆ ಬರೆಯುತ್ತಾರೆ. ನಿಜಾಮ ರಾಜ್ಯದ
ಸಂಗತಿ ಹೇಗಿರುತ್ತದೆ. ನಿಮ್ಮ ಪತ್ರಿಕೆ ಬಹಳ ಸಪ್ಪಗೆ. ಅದರ ತೇಜ
ನೋಡಿರಿ.

ಉತ್ತರ— ಈಗ ನಾವು ೨೦ ನೇ ಶತಮಾನದಲ್ಲಿದ್ದರೂ ನಿಜಾ
ಮದವರಾದ ನೀವು ೧೮ ನೆಯ ಶತಮಾನದಲ್ಲಿದ್ದೀರೆಂಬುದು ನಮಗೆ
ಗೊತ್ತಿದೆ. ನಿಮ್ಮ ಕೊರತೆ ಆಕಾಂಕ್ಷೆಗಳೇನೆಂಬುದೂ ನಮಗೆ
ಗೊತ್ತು. ನಿಮ್ಮ ಪ್ರಾಂತದವರಿಗಾಗಿಯೇ ಒಂದು ಬೇರೆ ಪತ್ರಿಕೆ
ಬೇಕು. ವೈದಿಕ ಸಂದೇಶ ನಿಮಗೆ ಸರಿಯಾದುದೇ ಸರಿ. ಆದರೆ
ಅದು ಇಲ್ಲಿ ಅಷ್ಟು ಉಪಯೋಗವಿಲ್ಲ. ನೀವು ನಿಮ್ಮ ಭಾಗದಲ್ಲಿ
ಅದನ್ನೇ ಹೆಚ್ಚು ಪ್ರಸಾರ ಮಾಡಿರಿ. ಈಗಲೇ ಶರಣ ಸಂದೇಶ ಇಲ್ಲಿ
ನಮ್ಮ ಸಮಾಜದ ಅನೇಕರಿಗೆ ಜಾತಿವಾದದ ಮತ್ತು ರಾಷ್ಟ್ರದ್ರೋ
ಹದ ಪತ್ರಿಕೆಯಾಗಿ ತೋರುತ್ತದೆ. ನಿಮ್ಮ ಇಷ್ಟದಂತೆ ಬರೆದರೆ
ಹೇಗಾಗಬಹುದು? ನೀವು ಸಂಸ್ಥಾನದಲ್ಲಿದ್ದರೂ ನಮ್ಮ ಮತ ಬಾಂ
ಧವರೆಂದು ಇಲ್ಲಿಯವರು ತಿಳಿದು ನಿಮ್ಮ ದುಃಖದ ಕಡೆಗೆ ಲಕ್ಷಿಸ
ದಿದ್ದುದು ಹೇಗೆ ತಪ್ಪೋ ಹಾಗೆಯೇ ಕಾಂಗ್ರೆಸ್ಸಿನ ಸಂಗತಿಗಳು ನಿರು
ಪಯೋಗವೆಂದು ಸಂಸ್ಥಾನದಲ್ಲಿರುವ ನೀವು ತಿಳಿಯುವುದೂ ತಪ್ಪು.
ನಿಮ್ಮ ಉನ್ನತಿಗೆ ನೀವು ಕಾಂಗ್ರೆಸ್ಸಿನ ಸಂಗತಿಗಳನ್ನೂ ತಿಳಿದುಕೊಂ
ಡು ನಿಮ್ಮಲ್ಲಿ ಕಾಂಗ್ರೆಸ್ಸಿನ ವಿಧಾಯಕ ಕಾರ್ಯಗಳನ್ನು ಮಾಡುವು
ದು ಒಳ್ಳೆಯದು.

ಪ್ರಶ್ನೆ— ಈಗೇ ನಾವು ಹೀಗಿದ್ದರೂ ನಮ್ಮ ದೇವಾಲಯದ
ಮೇಲೆ ಕಳಶ ಹಚ್ಚಲು ಪರವಾನಗಿ ದೊರೆಯುವದಿಲ್ಲ. ಮಠದ
ಸುತ್ತಲು ನಮ್ಮ ಜಾಗಾದಲ್ಲಿ ನಾವು ಗೋಡೆ ಕಟ್ಟಿಕೊಳ್ಳಲು ಪರವಾ
ನಗಿ ದೊರೆಯುವದಿಲ್ಲ. ಇಷ್ಟು ನಮಗೆ ಸ್ವತಂತ್ರ! ಇನ್ನು ಕಾಂ
ಗ್ರೆಸ್ ಚಳವಳಿ ಮಾಡಿದರಂತೂ ತೀರೇ ಹೋಯಿತು. ಅದರ
ಹೆಸರು ಕೂಡಾ ನಮಗೆ ಬೇಕಾಗಿಲ್ಲ.

ಉತ್ತರ— ನಿಮಗೆ ಸ್ವಾತಂತ್ರ್ಯ ಎಷ್ಟಿದೆಯೆಂಬುದು ನಮಗೆ
ಗೊತ್ತಿದೆ. ನಿಮ್ಮಲ್ಲಿ ಮತ್ತೆ ಪಾಯಗಾದಲ್ಲಿರುವವರಿದ್ದಾರೆ ಇಂಥ
ಕಗ್ಗತ್ತಲೆಯಲ್ಲಿ ಸ್ವಲ್ಪಾದರೂ ಬೆಳಕು ಬೀಳಬೇಕಾದರೆ ಕಾಂಗ್ರೆಸ್
ಚಟುವಟಿಕೆಯಿಂದಲೇ ಸರಿ. ಕಾಂಗ್ರೆಸ್ಸಿನ ಅತ್ಯಲ್ಪ ಕೆಲಸಕ್ಕೆ ಪ್ರತಿ
ಬಂಧವಾದರೂ ದೇಶವೆಲ್ಲಾ ನಿಮ್ಮ ಕಡೆ ತಿರುಗಿ ನಿಮಗೆ ಎಷ್ಟು
ಸ್ವತಂತ್ರವಿದೆಯೆಂಬುದನ್ನು ನೋಡುತ್ತದೆ. ಅದನ್ನು ಬಿಟ್ಟು ಮತ
ಸಂಬಂಧವಾದ ನಿಮ್ಮ ಸ್ವಾತಂತ್ರ್ಯ ಎಷ್ಟು ಹರಣವಾಗುತ್ತಿದ್ದರೂ
ಸ್ವಾತಂತ್ರ್ಯಪ್ರೇಮಿಗಳಾದ ಕಾಂಗ್ರೆಸ್ಸಿನವರು ನಿಮ್ಮ ಕಡೆ ಲಕ್ಷಿಸು
ವುದಿಲ್ಲ. ಇದಕ್ಕೆ ಈಗ ಮೈಸೂರು ದೇಶದ ಕಡೆಗೆ ಅವರು ಲಕ್ಷಿಸಿರು
ವುದೂ ನಿಮ್ಮ ಹೆಸರನ್ನು ಸ್ವಪ್ನದಲ್ಲಿ ಕೂಡಾ ತೆಗೆಯದಿದ್ದದೂ ದೃ
ಷ್ಟಾಂತವಾಗಿಲ್ಲವೆ?

ಧಾರ್ಮಿಕವಾಗಲಿ ಅಥವಾ ರಾಜಕೀಯವಾಗಲಿ ಯಾವ ಸ್ವಾ
ತಂತ್ರ್ಯವಾದರೂ ದೊರೆಯಬೇಕಾದರೆ ಅದಕ್ಕೆ ಆತ್ಮಯಜ್ಞದ ಕಾಣಿ

ಕೆ ಕೊಡಬೇಕಾಗುತ್ತದೆ. ತನು ಮನ ಧನ ಸೂರೆಮಾಡದೆ ಯಾವ ಸ್ವಾತಂತ್ರ್ಯವೂ ದೊರೆಯುವುದಿಲ್ಲ. ನೀವು ಅನ್ಯರ ಮೇಲೆ ಅವಲಂಬಿಸಿದರೆ ನಿಮ್ಮ ದುಃಖಗಳು ನಿವಾರಣೆಯಾಗುವುದು ಶಕ್ಯವಿಲ್ಲ. ನೀವೇ ಶಕ್ಯವಿದ್ದಷ್ಟು ಸಂಘಟಿತರಾಗಿ ಅಹಿಂಸಾ ಮಾರ್ಗದಿಂದ ಎಲ್ಲ ಸ್ವಾತಂತ್ರ್ಯಗಳಿಗಾಗಿ ಪ್ರಯತ್ನಿಸಿ ಅನೇಕ ವಿಪತ್ತುಗಳಿಗೆ ಎದೆ ಕೊಡಲು ಸಿದ್ಧರಾಗಬೇಕು.

---

## ವಂದೇಮಾತರಂ ಗೀತೆಯ ನಿಷೇಧ.

### ಮುಸಲ್ಮಾನರ ಬಹಿರ್ಗಮನ.

ತಾ. ೨೭ ನೆಯ ದಿನ ಮದ್ರಾಸ್ ಅಸೆಂಬ್ಲಿ ಕಾರ್ಯವು ಶ್ರೀ. ಸಾಂಬಮೂರ್ತಿಯವರ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು. ಆರಂಭದಲ್ಲಿ ರಾಷ್ಟ್ರಗೀತೆ ಹೇಳಲ್ಪಡುವುದೆಂದು ಅಧ್ಯಕ್ಷರು ಸೂಚಿಸಿದರು. ಆಗ ಮಿ. ಅಬ್ದುಲ್ ಹಮೀದ ಖಾನ ಇವರು ವಂದೇಮಾತರಂ ಗೀತೆಯು ಹೇಳಲ್ಪಡಕೂಡದೆಂದು ಅಧ್ಯಕ್ಷರಿಗೆ ತಿಳಿಸಿದರು. ಅದನ್ನು ಅಧ್ಯಕ್ಷರು ಒಪ್ಪಲಿಲ್ಲ. ಆಗ ಮುಸ್ಲಿಂ ಲೀಗಿನ ೮ ಸಭಾಸದರು ಅಸೆಂಬ್ಲಿಯನ್ನು ಬಿಟ್ಟು ಹೊರಗೆ ಹೋದರು. ಆ ಮೇಲೆ ವಂದೇಮಾತರಂ ಗೀತೆಯು ಹೇಳಲ್ಪಟ್ಟಿತು.

ಅನಂತರ ಅಧ್ಯಕ್ಷರು ಇಂಗ್ಲಿಷ್ ಭಾಷೆಯಲ್ಲಿ ಒಂದು ಪ್ರಾರ್ಥನೆಯನ್ನು ಮಾಡಿದರು. ಅವರ ಅಭಿಪ್ರಾಯ ಹೀಗಿದ್ದಿತು—

"ಪರಮಾತ್ಮನೇ, ನಮ್ಮನ್ನು ರಾಗದ್ವೇಷಾದಿಗಳಿಂದ ದೂರ ಮಾಡು. ನಮ್ಮಲ್ಲಿ ದಯೆ ಶಾಂತಿಗಳನ್ನು ಉಂಟುಮಾಡು. ನಮಗೆ ಶಕ್ತಿಯನ್ನೂ ಸುಖ ಸಂಪತ್ತುಗಳನ್ನೂ ಅನುಗ್ರಹಿಸು. ಭಾರತ ಮಾತೆಯ ಸೇವೆಗಾಗಿ ನಮಗೆ ಶಕ್ತಿಯನ್ನೂ ದೃಢ ಭಕ್ತಿಯನ್ನೂ ಕೊಡು. ನಮ್ಮ ಎಲ್ಲ ಶಕ್ತಿಗಳೂ ಸ್ವಾತಂತ್ರ್ಯ, ಸುಖ, ಶಾಂತಿಗಳ ಪ್ರಾಪ್ತಿಗಾಗಿ ಏಕೀಭವಿಸುವಂತೆ ಮಾಡು."

ಈ ಎರಡೂ ಪ್ರಾರ್ಥನೆಗಳಾದನಂತರ ಮುಸಲ್ಮಾನ್ ಸಭಾಸದರು ಬಂದು ಅಸೆಂಬ್ಲಿಯಲ್ಲಿ ಭಾಗವಹಿಸಿದರು.

---

## ಶಾಹೀದಗಂಜ ವ್ಯಾಜ್ಯ.

### ಶೀಖರಿಗೆ ಜಯ.

ಶಾಹೀದಗಂಜ ವ್ಯಾಜ್ಯವು ಲಾಹೋರ ಹೈಕೋರ್ಟಿನಲ್ಲಿ ನ್ಯಾಯಾಧೀಶರ ಮುಂದೆ ನಡೆದಿತ್ತು. ಇಬ್ಬರು ನ್ಯಾಯಾಧೀಶರು ಮುಸಲ್ಮಾನರ ಹೇಳಿಕೆಯನ್ನು ನಿರಾಕರಿಸಿ ಅಲ್ಲಿ ಮುಸಲ್ಮಾನರಿಗೆ ಪ್ರಾರ್ಥನೆ ಮಾಡಲು ಅಧಿಕಾರವಿಲ್ಲವೆಂದು ತಾ. ೨೬ ನೆಯ ದಿನ ತೀರ್ಮಾನ ಹೇಳಿದರು. ಇನ್ನೊಬ್ಬ ನ್ಯಾಯಾಧೀಶರಾದ ದೀನ ಮಹಮ್ಮದ ಇವರು ಮಾತ್ರ ಮುಸಲ್ಮಾನರಿಗೆ ಆ ಸ್ಥಳದಲ್ಲಿ ನಮಾಜ ಮಾಡಲು ಅಧಿಕಾರವಿದೆಯೆಂದು ಅಭಿಪ್ರಾಯಪಟ್ಟರು.

### ಪ್ರಚಂಡ ಹರತಾಳ.

ಶಾಹೀದಗಂಜ ತೀರ್ಮಾನದ ನಿಷೇಧಾರ್ಥವಾಗಿ ಲಾಹೋರಿನಲ್ಲಿ ತಾ. ೨೭ ನೆಯ ದಿನ ಮುಸಲ್ಮಾನರು ಪ್ರಚಂಡವಾದ ಹರತಾಳವನ್ನು ಆಚರಿಸಿದರು. ೫೦೦೦೦ ಜನ ಮುಸಲ್ಮಾನರು ಹರತಾಳದ ಪ್ರಚಾರಕ್ಕಾಗಿ ಪಟ್ಟಣದಲ್ಲಿ ತಿರುಗಾಡಿದರು. ಶಾಹಿದಗಂಜ ವ್ಯಾಜ್ಯದಲ್ಲಿ ಜಯವನ್ನು ಹೊಂದುವುದಕ್ಕಾಗಿ ಎಲ್ಲ ಮುಸಲ್ಮಾನರ ಒಂದು ಸಂಘಟಿತ ಪ್ರಯತ್ನ ನಡೆಯಬೇಕೆಂದು ಗೊತ್ತುಮಾಡಿದ್ದಾರೆ. ಈ ಸಂಬಂಧವಾಗಿ ಮುಖ್ಯಮಂತ್ರಿಗಳಾದ ಶಿಕಂದರ ಹಯಾತಖಾನರ ಕಡೆಗೆ ಒಂದು ಶಿಷ್ಟಮಂಡಲವು ಹೋಗಿ ಸರಕಾರದ ಧೋರಣವನ್ನು ತಿಳಿದುಕೊಳ್ಳುವುದಿದೆ.

### ಪ್ರಿವ್ಹಿ ಕೌನ್ಸಿಲ್ಲಿಗೆ ಹೋಗುವರು.

ಮುಸಲ್ಮಾನರು ಪ್ರಿವ್ಹಿ ಕೌನ್ಸಿಲ್ಲಿಗೆ ಈ ವ್ಯಾಜ್ಯವನ್ನು ತೆಗೆದುಕೊಂಡು ಹೋಗುವವರಿದ್ದಾರೆಂದೂ ಶೀಖರು ಮಂದಿರವನ್ನು ವ್ಯತ್ಯಸ್ತ ಗೊಳಿಸಬಾರದೆಂದೂ ಮುಸಲ್ಮಾನರ ಪರವಾಗಿದ್ದ ವಕೀಲ ಮಿ. ಅಲ್ಲಿಯವರು ಕೋರ್ಟಿಗೆ ತಿಳಿಸಿದರು.

---

## ಬಾಬೂಜಿಯವರ ಅಭಿಪ್ರಾಯ.

ಹರಿಪುರ ಕಾಂಗ್ರೆಸ್ಸಿನ ಅಧ್ಯಕ್ಷರಾದ ಶ್ರೀ. ಬಾಬು ಸುಭಾಷ ಚಂದ್ರ ಬೋಸರವರು ತಾ. ೨೬ ನೆಯ ದಿನ ಕಲಕತ್ತಾ ಪಟ್ಟಣದ ಪ್ರಚಂಡವಾದ ಸಭೆಯಲ್ಲಿ ಸ್ವಾತಂತ್ರ್ಯದ ಪ್ರತಿಜ್ಞೆಯನ್ನು ಓದಿ ಹೇಳುವ ಮುಂಚೆ ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಕಾಂಗ್ರೆಸ್ಸಿನಲ್ಲಿ ಮುಸಲ್ಮಾನರನ್ನೂ ಆದಿ ಹಿಂದುಗಳನ್ನೂ ಸೇರಿಸಿಕೊಳ್ಳಿರಿ. ಅವರಲ್ಲಿ ಬಹು ಸಂಖ್ಯಾಕರು ಇನ್ನೂ ಕಾಂಗ್ರೆಸ್ಸಿನ ಹೊರಗೇ ಇದ್ದಾರೆ. ಅವರನ್ನು ಸೇರಿಸಿಕೊಳ್ಳಲು ಕೆಲವು ಸ್ಥಾನಗಳನ್ನು ಅವರಿಗಾಗಿ ಬಿಟ್ಟುಕೊಟ್ಟರೂ ಅಡ್ಡಿಯಿಲ್ಲ. ಇಂಗ್ಲಿಷ್ ಸಾಮ್ರಾಜ್ಯವು ನೀವು ತಿಳಿದಂತೆ ಬಲಶಾಲಿಯಾಗಿಲ್ಲ. ಸಾಮ್ರಾಜ್ಯವಾದವು ಇಂಗ್ಲೆಂಡಿನ ತರುಣರಿಗೂ ಬೇಡವಾಗಿದೆ. ಆದಕಾರಣ ನಾವು ಒಂದಾಗಿ ಕಾಂಗ್ರೆಸ್ಸಿನ ಚಟುವಟಿಕೆಯನ್ನು ನಡೆಸಿದರೆ ಇಂಗ್ಲಿಷರು ತಮ್ಮ ಹಿತಕ್ಕಾಗಿಯೇ ನಮಗೆ ಸ್ವರಾಜ್ಯವನ್ನು ಕೊಡಬೇಕಾಗುವುದು."

ಮುಸಲ್ಮಾನ ಜನಸಾಮಾನ್ಯ ಕಾಂಗ್ರೆಸ್ಸಿನ ಕಡೆಗಿದೆಯೆಂದೂ ಯಾರೋ ಕೆಲವು ಪ್ರತಿಷ್ಠಿತ ಜನರು ಕಾಂಗ್ರೆಸ್ಸಿನ ಹೊರಗಿದ್ದಾರೆಂದೂ ಪಂಡಿತ ಜವಾಹರಲಾಲರು ಹೇಳಿದ್ದರಷ್ಟೆ. ಅದು ತಪ್ಪು ಅಭಿಪ್ರಾಯವೆಂದು ಬಾಬೂಜಿಯವರ ಈ ಮಾತಿನಿಂದಾದರೂ ಗೊತ್ತಾಗುವುದಿಲ್ಲವೆ?

---

## ಅಸೆಂಬ್ಲಿಯಲ್ಲಿ ಕುರಾನ ಪಠಣ.

ತಾ. ೨೮-೧-೩೮ ನೆಯ ದಿವಸ ಮದ್ರಾಸ್ ಅಸೆಂಬ್ಲಿಯಲ್ಲಿ ಮೊದಲು ಮಲಬಾರ ಪ್ರಾಂತದ ಮುಸಲ್ಮಾನ್ ಸಭಾಸದರು ಕುರಾನದಲ್ಲಿಯ ಪ್ರಾರ್ಥನೆಯನ್ನು ಮಾಡಿದರು. ಅನಂತರ ಅಧ್ಯಕ್ಷರಾದ ಶ್ರೀ. ಸಾಂಬಮೂರ್ತಿಗಳು ಇಂಗ್ಲಿಷಿನಲ್ಲಿ ಪ್ರಾರ್ಥನೆಯನ್ನು ಓದಿ ಹೇಳಿದರು.

---

## ಬೈಲಹೊಂಗಲ ನಗರ ಸಭೆ.

ಬೈಲಹೊಂಗಲ ನಗರ ಸಭೆ (ಮುನಸಿಪಾಲ್ಟಿ) ಅಧ್ಯಕ್ಷರ ಚುನಾವಣೆ ತಾ. ೨೭ ನೆಯ ದಿನ ಜರುಗಿತು. ಕಾಂಗ್ರೆಸ್ ಪಕ್ಷದ ಸದಸ್ಯರೆಲ್ಲಾ ಖಾದಿಯ ಒಂದೇ ತರದ ಉಡುಪು ಹಾಕಿಕೊಂಡು ಮೆರವಣಿಗೆಯಿಂದ ನಗರ ಸಭೆಗೆ ಹೋದರು. ಶ್ರೀ. ಮೆಟಗುಡ್ಡ ವಕೀಲರನ್ನು ಅಧ್ಯಕ್ಷರನ್ನಾಗಿ ಆರಿಸಿದರು. ಆ ಮೇಲೆ ವಂದೇ ಮಾತರಂ ಗೀತೆ ಹೇಳಲ್ಪಟ್ಟಿತು. ಆಗ ನಾಲ್ಕು ಜನ ಸಭಾಸದರು ಸಭೆಯನ್ನು ಬಿಟ್ಟು ಹೋದರು.



ಶಾ. ಶ. ೧೮೫೯ ನೆಯ ಪುಷ್ಯ ಬ|| ೩೦ ಸೋಮವಾರ.

## ಕಾಂಗ್ರೆಸ್ ಸರಕಾರ ಮತ್ತು ಸೈನ್ಯ ಶಿಕ್ಷಣ.

ಹಿಂದುಸ್ಥಾನವು ಒಂದು ಸ್ವತಂತ್ರ ರಾಷ್ಟ್ರವಾಗಿ ಜೀವಿಸಬೇಕೆಂಬುದೇ ಈ ದೇಶದ ಎಲ್ಲ ರಾಜಕೀಯ ಪಕ್ಷಗಳ ಮುಖ್ಯೋದ್ದೇಶವು. ಇವು ಪ್ರಯತ್ನಿಸುತ್ತಿರುವ ರೀತಿ ನೀತಿಗಳು ಭಿನ್ನವಾಗಿದ್ದರೂ ಉದ್ದೇಶ ಮಾತ್ರ ಒಂದೇ ಆಗಿದೆ. ಜಗತ್ತಿನಲ್ಲಾದರೋ ದುರ್ಬಲರನ್ನು ಪ್ರಬಲರು ಅಧೀನದಲ್ಲಿಟ್ಟುಕೊಳ್ಳುವ ಪ್ರವೃತ್ತಿಯು ಹೆಚ್ಚುತ್ತಲೇ ಇದೆ. ಎಂದಮೇಲೆ ಹಿಂದುಸ್ಥಾನವು ಸ್ವತಂತ್ರ ರಾಷ್ಟ್ರವಾಗಿರಬೇಕಾದರೆ ಇದು ಆತ್ಮರಕ್ಷಣೆಗಾದರೂ ಅತ್ಯಾವಶ್ಯಕವಾಗಿರುವಷ್ಟು ಸೈನ್ಯ ಬಲವುಳ್ಳದ್ದಾಗಿರಬೇಕು. ಹಿಂದುಗಳು ಈ ಕಾಲಕ್ಕೆ ಅಗತ್ಯವಾಗಿರತಕ್ಕ ಎಲ್ಲ ಯುದ್ಧ ವಿದ್ಯೆಗಳಲ್ಲಿಯೂ ಪ್ರವೀಣರಾಗಿರಲೇ ಬೇಕು. ನಮ್ಮ ಇಂತಹ ಕ್ಷಾತ್ರಬಲವೇ ನಮ್ಮ ಸ್ವತಂತ್ರತೆಯನ್ನು ರಕ್ಷಿಸುವುದೆಂಬುದರಲ್ಲಿ ಸಂದೇಹವೇ ಇಲ್ಲ.

ಎಂದಮೇಲೆ ನಿರಾಯುಧದಿಂದ ನಿರ್ವೀರ್ಯವಾಗಿರುವ ಹಿಂದಿ ರಾಷ್ಟ್ರವನ್ನು ಸೈನ್ಯ ಶಿಕ್ಷಣದಿಂದ ಇನ್ನುಮೇಲಾದರೂ ಪೌರುಷಯುಕ್ತವಾದುದನ್ನಾಗಿ ಮಾಡುವುದು ಅಗತ್ಯವಾಗಿದೆಯೋ ಅಥವಾ ಇಲ್ಲವೆ? ಈ ವಿಧವಾದ ಕ್ಷಾತ್ರತೇಜವನ್ನು ಹೆಚ್ಚಿಸುವುದಕ್ಕಿಂತ ಜನಾಂಗದಲ್ಲಿ ಆತ್ಮ ಬಲವನ್ನು ಹೆಚ್ಚಿಸಿದರೆ ನಮ್ಮ ಸ್ವಾತಂತ್ರ್ಯ ಸಂರಕ್ಷಿಸಲ್ಪಡಬಹುದೆ? ಪರ ರಾಷ್ಟ್ರಗಳ ಆಕ್ರಮಣವನ್ನು ತಡೆಯುವಂತಹ ಆತ್ಮ ಬಲವು ರಾಷ್ಟ್ರದ ಜನಸಾಮಾನ್ಯದಲ್ಲಿಯೂ ಉಂಟಾಗಬಹುದೆ? ಎಂಬ ಪ್ರಶ್ನೆಗಳು ಈಗ ನಮ್ಮ ಮುಂದಿಲ್ಲವೆ?

### ಕಾಂಗ್ರೆಸ್ಸಿನ ರೀತಿ ಮತ್ತು ಸೈನ್ಯ ಶಿಕ್ಷಣ.

ಸೈನ್ಯ ಶಿಕ್ಷಣವು ಹಿಂಸೆಗೆ ಪ್ರೋತ್ಸಾಹಕರವಾದುದರಿಂದ ಕಾಂಗ್ರೆಸ್ಸಿನ ನೀತಿಗೆ ಅದು ವಿರೋಧವಾಗಿದೆಯೆಂದೂ ಕಾಂಗ್ರೆಸ್ ಸರಕಾರವು ಸೈನ್ಯ ಶಿಕ್ಷಣಕ್ಕೆ ಪ್ರೋತ್ಸಾಹಿಸಲಾರದೆಂದೂ ಕೆಲವರು ತಿಳಿದುಕೊಂಡಿರುವುದುಂಟು. ಅಹಿಂಸೆಯಿಂದಲೇ ಸ್ವಾತಂತ್ರ್ಯವನ್ನು ನಾವು ಸಂಪಾದಿಸುವವರಾಗಿರುವುದರಿಂದ ಅದರ ರಕ್ಷಣೆಯನ್ನಾದರೂ ಅಹಿಂಸೆಯಿಂದಲೇ ಮಾಡುವುದು ಯುಕ್ತವಾಗಿಯೂ ಶಕ್ಯವಾಗಿಯೂ ಕೆಲವರಿಗೆ ತೋರುತ್ತಿದೆ. ಆದರೆ ಕಾಂಗ್ರೆಸ್ಸಿನ ರೀತಿ ನೀತಿಗಳನ್ನು ಸರಿಯಾಗಿ ತಿಳಿದುಕೊಂಡವರು ಹೀಗೆಂದೂ ಅಭಿಪ್ರಾಯಪಡಲಾರರೆಂದು ನಮಗೆ ತೋರುತ್ತದೆ.

ಈಗ ಅಬಸೀನಿಯಾ ರಾಷ್ಟ್ರಕ್ಕಾದ ಗತಿಯನ್ನೂ ಚೀನ ದೇಶಕ್ಕೆ ಬಂದ ವಿಪತ್ತನ್ನೂ ನಾವು ಕಣ್ಣಾರೆ ಕಂಡು ಕ್ಷಾತ್ರ ಬಲವಿಲ್ಲದೆ ಸ್ವಾತಂತ್ರ್ಯವನ್ನು ರಕ್ಷಿಸಿಕೊಳ್ಳುತ್ತೇವೆಂದು ನಂಬುವುದು ತುಂಬಾ ಅನುಚಿತವಾದುದೇ ಸರಿ. ರಾಷ್ಟ್ರವನ್ನು ರಕ್ಷಿಸುವುದು ರಾಷ್ಟ್ರದ ರಾಜ್ಯ ಸೂತ್ರವನ್ನು ಹಿಡಿದವರ ಪ್ರಥಮ ಕರ್ತವ್ಯವಾಗಿದೆ. ಆ ತಮ್ಮ ಕರ್ತವ್ಯವನ್ನು ಮಾಡುವಾಗ ಅವರು ಅಗತ್ಯ ತೋರಿದರೆ ಕ್ಷಾತ್ರತೇಜವನ್ನು ಉಪಯೋಗಿಸಲೇ ಬೇಕು. ಆಗ ಸಂಭವಿಸುವ ಹಿಂಸೆಗೆ ಅವರು ಕಾರಣರಲ್ಲ. ಅನ್ಯಾಯದಿಂದ ಆಕ್ರಮಣಮಾಡಿದವರೇ ಕಾರಣರು. ಅಂತೆಯೇ ರಾಜ್ಯ ಸೂತ್ರ ಹಿಡಿದವರು ರಾಷ್ಟ್ರದಲ್ಲಿ ಕ್ಷಾತ್ರತೇಜವುಂಟಾಗುವಂತೆ ಪ್ರಯತ್ನಿಸುವುದೂ ಕರ್ತವ್ಯವೇ ಆಗಿದೆ. ಈ ಕರ್ತವ್ಯವು ಯಾರಿಗೆ ಸಮ್ಮತವಿಲ್ಲವೋ ಅವರು ರಾಜ್ಯಸೂತ್ರವನ್ನು ಬಿಟ್ಟು ಬಿಡುವುದೇ ವಿಹಿತವು.

### ಶ್ರೀ. ಸುಭಾಷಚಂದ್ರ ಬೋಸರವರು.

ಇತ್ತೀಚಿಗೆ ಹಿಂದುಸ್ಥಾನದಲ್ಲಿ ಸೈನ್ಯ ಶಿಕ್ಷಣದ ಕಡೆಗೆ ವಿಶ್ವವಿದ್ಯಾಲಯಗಳೂ ಲಕ್ಷಿಸಲಾರಂಭಿಸಿವೆಯಷ್ಟೆ. ಕಲಕತ್ತಾ ವಿಶ್ವವಿದ್ಯಾಪೀಠವು ಈ ವಿಷಯದಲ್ಲಿ ಅನ್ಯ ವಿದ್ಯಾಪೀಠಗಳಿಗೆ ಮಾರ್ಗದರ್ಶಿಯಾಗಿದೆ. ಕಳೆದ ೨೮ ನೆಯ ತಾರೀಖಿನ ದಿವಸ ಕಲಕತ್ತಾ ಕಾರ್ಪೋರೇಶನ್ನಿನವರು ತಮ್ಮ ನಾಗರಿಕರಿಗೆ ಸೈನ್ಯ ಶಿಕ್ಷಣ ಕೊಡಬೇಕೆಂದು ಹಿಂದುಸ್ಥಾನ ಸರಕಾರದವರನ್ನು ಕೇಳಿಕೊಂಡರು. ಕಾರ್ಪೋರೇಶನ್ನಿನ ಈ ಗೊತ್ತುವಳಿಯನ್ನು ಹರಿಪುರ ಕಾಂಗ್ರೆಸ್ಸಿನ ನಿಯೋಜಿತ ಅಧ್ಯಕ್ಷರಾದ ಶ್ರೀ. ಸುಭಾಷಚಂದ್ರ ಬೋಸರು ಅನುಮೋದಿಸಿದರು. ಇಷ್ಟೇ ಅಲ್ಲ; ಸರಕಾರವು ಈ ನಮ್ಮ ಕೋರಿಕೆಯನ್ನು ಲಕ್ಷಿಸಿ ಸೈನ್ಯ ಶಿಕ್ಷಣ ಕೊಡದಿದ್ದರೆ ನಮಗೆ ಮಾತ್ರವೇ ವಿಪತ್ತು ಬರುತ್ತದೆಂದಲ್ಲ. ಗ್ರೇಟಬ್ರಿಟನ್ನಿಕ್ಕೂ ಅನರ್ಥ ಸಂಭವಿಸುತ್ತದೆಂದು ಹೇಳಿದರು. ಇದರ ಮೇಲಿಂದ ಕಾಂಗ್ರೆಸ್ ನೀತಿಗೆ ಸೈನ್ಯ ಶಿಕ್ಷಣವು ವಿರೋಧವಾದುದೆಂದು ತಿಳಿಯುವುದು ಸರಿಯಲ್ಲವೆಂದೇ ಗೊತ್ತಾಗುವುದಿಲ್ಲವೆ?

### ಗಾಂಧೀಜಿಯವರ ಅಭಿಪ್ರಾಯ.

ಕಾಂಗ್ರೆಸ್ಸಿನ ಈ ಅಹಿಂಸಾ ನೀತಿಯ ಪ್ರವರ್ತಕರಾದ ಮ. ಗಾಂಧಿಯವರು ಈ ವಿಷಯದಲ್ಲಿ ಯಾವ ಅಭಿಪ್ರಾಯವುಳ್ಳವರಾಗಿದ್ದಾರೆಂಬುದನ್ನು ಈ ಕೆಳಗಿನ ಸಂಗತಿಯ ಮೇಲಿಂದ ತಿಳಿದುಕೊಳ್ಳಬಹುದಾಗಿದೆ.

ಗಾಂಧೀಜಿಯವರು ಮುಸಲ್ಮಾನರ ಖಿಲಾಫತ್ ಚಳುವಳಿಯನ್ನು ಎತ್ತಿ ಹಿಡಿದಾಗ "ಶಸ್ತ್ರ ಬಲದಿಂದ ಇಸ್ಲಾಂ ಧರ್ಮವನ್ನು ರಕ್ಷಿಸುವವರಿಗೆ ಅಹಿಂಸಾವಾದಿಗಳಾದ ಗಾಂಧೀಜಿಯವರು ಸಹಾಯಮಾಡುವುದು ಸರಿಯಾಗಿದೆಯೆ?" ಎಂದು ಒಬ್ಬರು ಆಕ್ಷೇಪಿಸಿದ್ದರು. ಅದಕ್ಕೆ ಉತ್ತರವಾಗಿ ಗಾಂಧೀಜಿಯವರು ತಾ. ೧-೬-೧೯೨೧ ನೆಯ "ಯಂಗ್ ಇಂಡಿಯಾ" ಪತ್ರಿಕೆಯಲ್ಲಿ ಬರೆದ ಲೇಖನದಲ್ಲಿ ಹೀಗೆ ಹೇಳಿದ್ದಾರೆ—

"ಇವರ ಅಭಿಪ್ರಾಯವನ್ನು ಮಾನ್ಯಮಾಡುವುದಾದರೆ ನಾವು ಸ್ವರಾಜ್ಯ ಸಂಪಾದನೆಗೂ ಪ್ರಯತ್ನಿಸಬಾರದಾಯಿತು. ಏಕೆಂದರೆ

ಸ್ವರಾಜ್ಯ ಸಂಪಾದನೆಯನಂತರ ಸೈನ್ಯ ಮತ್ತು ಪೋಲಿಸ್ ಅತ್ಯವಶ್ಯಕವಾಗಿ ನಾವು ಇಡಲೇಬೇಕಾಗುವುದು."

ಇದರ ಮೇಲಿಂದ ಕ್ಷಾತ್ರ ಬಲವಿಲ್ಲದೆ ಆತ್ಮ ಬಲದಿಂದಲೇ ರಾಷ್ಟ್ರದ ಸ್ವಾತಂತ್ರ್ಯ ಸಂರಕ್ಷಣೆಯಾಗಬೇಕೆಂದು ಗಾಂಧೀಜಿಯವರು ಕೂಡಾ ಹೇಳುವುದಿಲ್ಲವೆಂದೇ ಸ್ಪಷ್ಟ ಗೊತ್ತಾಗುತ್ತದೆ. ಆದ ಕಾರಣ ಕಾಂಗ್ರೆಸ್ ಸರಕಾರವು ರಾಷ್ಟ್ರದ ಕ್ಷಾತ್ರ ಬಲವನ್ನು ಹೆಚ್ಚಿಸಲು ಸೈನ್ಯ ಶಿಕ್ಷಣಕ್ಕೂ ಪ್ರೋತ್ಸಾಹಿಸುವುದೆಂದೇ ನಾವು ನಂಬಿದ್ದೇವೆ.

## ಮೂರು ಮಂತ್ರಿಗಳ ಎರಡು ಮಾರ್ಗ!

ವಿದ್ಯಾರ್ಥಿಗಳು ರಾಜಕಾರಣದಲ್ಲಿ ಪ್ರತ್ಯಕ್ಷ ಭಾಗವಹಿಸಬೇಕೋ, ಅಥವಾ ಬೇಡವೋ? ಎಂಬುದೊಂದು ವಿವಾದಾಸ್ಪದವಾದ ಸಂಗತಿಯಾಗಿದೆಯಷ್ಟೆ. ಕಾಂಗ್ರೆಸ್ ಪಕ್ಷದ ಮುಖ್ಯ ಮಂತ್ರಿಗಳಾದ ಶ್ರೀ. ರಾಜಗೋಪಾಲಾಚಾರ್ಯರೂ ಶ್ರೀ. ಗೋವಿಂದ ವಲ್ಲಭ ಪಂತರವರೂ ವಿದ್ಯಾರ್ಥಿಗಳು ರಾಜಕಾರಣವನ್ನು ತಿಳಿದುಕೊಳ್ಳಬೇಕೇ ವಿನಾ ಅದರ ಕಾರ್ಯಕಲಾಪಗಳಲ್ಲಿ ಸೇರಬಾರದೆಂಬ ಅಭಿಪ್ರಾಯದವರು. ಮೊನ್ನೆ ದಿಲ್ಲಿಯ ಸಭೆಯಲ್ಲಿ ಈ ಉಭಯ ಮಂತ್ರಿಗಳು ಇದೇ ಅಭಿಪ್ರಾಯವನ್ನು ವ್ಯಕ್ತಗೊಳಿಸಿದರು. ವಿದ್ಯಾರ್ಥಿಗಳು ಬೀಜದಂತಿದ್ದಾರೆ. ಬೀಜದಿಂದ ಧಾನ್ಯವಾಗುವುದು. ಮಹಾ ವೃಕ್ಷವೂ ನಿರ್ಮಾಣವಾಗುವುದು. ಆದಕಾರಣ ಬೀಜವನ್ನು ಕೆಡಿಸಿಕೊಳ್ಳಬಾರದು. ಎಂದು ಶ್ರೀ. ಆಚಾರ್ಯರು ಹೇಳಿದುದನ್ನು ನೋಡಿದರೆ ವಿದ್ಯಾರ್ಥಿಗಳು ರಾಜಕಾರಣದಲ್ಲಿ ಕಾರ್ಯವಹಿಸಬಾರದೆಂದೇ ಅವರ ಅಭಿಪ್ರಾಯವೆಂದು ತೋರುತ್ತದೆ.

ಮುಂಬೈ ಸರಕಾರದ ಮುಖ್ಯ ಮಂತ್ರಿಗಳಾದ ಶ್ರೀ. ಖೇರರವರಾದರೋ ಬೇರೆ ಅಭಿಪ್ರಾಯದವರು. ಕಳೆದ ೨೭ ನೆಯ ತಾರೀಖಿನ ದಿವಸ ಮುಂಬೈ ಸರಕಾರದ ಶಿಕ್ಷಣ ಶಾಖೆಯವರು ವಿದ್ಯಾರ್ಥಿಗಳ ಸ್ವಾತಂತ್ರ್ಯದ ವಿಚಾರವಾಗಿ ಪ್ರಕಟಿಸಿದ ನಿಯಮಗಳಲ್ಲಿ ಈ ಕೆಳಗಿನ ಸಂಗತಿಗಳಿವೆ—

(೧) ೧೮ ವರುಷಗಳಿಗಿಂತ ಹೆಚ್ಚು ವಯಸ್ಸಿನ ವಿದ್ಯಾರ್ಥಿ ಮತ್ತು ಅಧ್ಯಾಪಕರು ಅತ್ಯಾಚಾರವಿರಹಿತ ಯಾವ ಸಂಸ್ಥೆಯಲ್ಲಾದರೂ ಸೇರಿ ಸಭಾಸದರಾಗಿ ಪ್ರತ್ಯಕ್ಷ ಕಾರ್ಯಮಾಡಲು ಅಭ್ಯಂತರವಿಲ್ಲ.

(೨) ಯಾವ ರಾಜಕೀಯ ಅಥವಾ ಧಾರ್ಮಿಕ ಸಂಸ್ಥೆ ಚಟುವಟಿಕೆಗಳ ಪರ್ಯವಸಾನವು ಜಾತಿವಿಷಯಕ ವೈರಭಾವದಲ್ಲಾಗುವ ಸಂಭವವಿದೆಯೋ ಅಂಥ ಸಂಸ್ಥೆ ಮತ್ತು ಕಾರ್ಯಕ್ರಮಗಳಲ್ಲಿ ಮಾತ್ರ ವಿದ್ಯಾರ್ಥಿಗಳು ಭಾಗವಹಿಸಕೂಡದು.

(೩) ಜಾತಿವಿಷಯಕ ವೈರಭಾವವನ್ನು ಒಂದು ಸಂಸ್ಥೆಯು ಹುಟ್ಟಿಸತಕ್ಕದ್ದಾಗಿದೆಯೋ ಅಥವಾ ಇಲ್ಲವೋ ಎಂಬುದನ್ನು ನಿರ್ಣಯಿಸುವುದು ಶಾಲೆಯ ಮುಖ್ಯೋಪಾಧ್ಯಾಯರಿಗೆ ಸಂಬಂಧಿಸಿದ್ದಾಗಿದೆ. ಅವರ ನಿರ್ಣಯವೇ ಕೊನೆಯದೆಂದು ತಿಳಿಯಬೇಕು.

ಮುಂಬೈ ಸರಕಾರದ ಈ ನಿಯಮಗಳಿಂದ ಪ್ರೌಢ ವಿದ್ಯಾರ್ಥಿಗಳು ರಾಜಕಾರಣದಲ್ಲಿ ಪ್ರತ್ಯಕ್ಷ ಕಾರ್ಯ ಮಾಡಬಹುದೆಂದೇ ಸ್ಪಷ್ಟವಾಗುತ್ತದೆ. ಇದು ಯುಕ್ತವಾದುದಾಗಿಯೂ ಇದೆ. ಮದ್ರಾಸ್ ಮತ್ತು ಸಂಯುಕ್ತ ಪ್ರಾಂತಗಳ ಮುಖ್ಯ ಮಂತ್ರಿಗಳಿಗೆ ಮಾತ್ರ ಈ ಅಭಿಪ್ರಾಯ ಮಾನ್ಯವಿದ್ದಂತೆ ತೋರುವುದಿಲ್ಲ. ಎಲ್ಲರೂ ಕಾಂಗ್ರೆಸ್ ಪಕ್ಷದ ಮಂತ್ರಿಗಳಾಗಿದ್ದರೂ ಈ ಪ್ರಕಾರ ಭಿನ್ನಾಭಿಪ್ರಾಯವಿರುವುದು ಸಹಜ. ಅವು ಆವರವರ ವೈಯಕ್ತಿಕ ಮತಗಳು. ಮದ್ರಾಸ್ ಅಥವಾ ಸಂಯುಕ್ತ ಪ್ರಾಂತಗಳ ಮಂತ್ರಿಗಳು ಪ್ರೌಢ ವಿದ್ಯಾರ್ಥಿಗಳು ರಾಜಕಾರಣದಲ್ಲಿ ಸೇರಬಾರದಾಗಿ ಸರಕಾರಿ ಅಪ್ಪಣೆಮಾಡಿದಾಗ ಮಾತ್ರ ಅದು ನಿಷೇಧಾರ್ಹವಾದುದಾಗುವುದು. ಈ ವಿಚಾರದಲ್ಲಿ ಪ್ರೌಢ ವಿದ್ಯಾರ್ಥಿಗಳಿಗೆ ಸ್ವಾತಂತ್ರ್ಯವನ್ನು ಕೊಟ್ಟದ್ದರಿಂದ ಖೇರ ಮಂತ್ರಿಮಂಡಲವನ್ನು ನಾವು ಅಭಿನಂದಿಸುತ್ತೇವೆ.

ಹಿಂದಿನ ಅರಸರಿಗೆ ಹೇಗೆ ಎಲ್ಲೆಲ್ಲಿಯೂ ರಾಜದ್ರೋಹವು ಕಾಣುತ್ತಿದ್ದಿತೋ ಹಾಗೆ ಇವರಿಗೆ ಜಾತಿಯ ಭೂತ ಹುಟ್ಟಬಹುದೆಂಬ ಅಂಜಿಕೆ ತೋರುತ್ತಿರುವುದು ಮಾತ್ರ ವಿಹಿತವಲ್ಲ. ತಮ್ಮ ಕಾಂಗ್ರೆಸ್ ಪದ್ಧತಿಯೇ ವಿದ್ಯಾರ್ಥಿಗಳಲ್ಲಿಯೂ ಪ್ರಚಾರವಾಗಬೇಕೆಂಬ ಧೋರಣವು ಇವರಲ್ಲಿದ್ದಂತೆ ಈ ನಿಯಮಗಳಿಂದ ತೋರುತ್ತದೆ. ಜಾತಿನಿಷ್ಠರಾದ ಪ್ರೌಢ ವಿದ್ಯಾರ್ಥಿಗಳು ಇಂಥ ಅಂಜಿಕೆಗಳಿಗೆ ಹಿಂಜರಿದು ಜಾತ್ಯಾಭಿಮಾನಶೂನ್ಯರಾಗಲಿಕ್ಕಿಲ್ಲ. ಮತ್ತು ಜಾತ್ಯಂಧರ ಚಟುವಟಿಕೆಗಳಿಗೆ ಅವಕಾಶವನ್ನೂ ಕೊಡಲಿಕ್ಕಿಲ್ಲವೆಂದೇ ನಾವು ನಂಬಿದ್ದೇವೆ.

## ಮಾದರಿಯ ವಿದ್ಯಾಲಯ.

ಮಧ್ಯಪ್ರಾಂತ ಶಿಕ್ಷಣ ಶಾಖೆಯವರು ವಿದ್ಯಾಲಯದ ಒಂದು ಯೋಜನೆಯನ್ನು ಗೊತ್ತುಮಾಡಿದ್ದಾರೆ. ಅದೊಂದು ಮಾದರಿಯ ವಿದ್ಯಾಲಯವಾಗುವಂತಿದೆ. ಹಳ್ಳಿಗಳಲ್ಲಿ ಈ ವಿದ್ಯಾಲಯವು ಏರ್ಪಡುವುದು. ೪೦ ವಿದ್ಯಾರ್ಥಿಗಳು ದೊರೆತರೆ ಸಾಕು. ಅವರಿಗೆ ತಾಯಿನುಡಿಯಲ್ಲಿಯೇ ವಿದ್ಯೆಯನ್ನು ಹೊಸ ಪದ್ಧತಿಯಂತೆ ಕಲಿಸಲಾಗುವುದು. ಅದೇ ಒಂದು ವಿದ್ಯಾಲಯ.

ಅಲ್ಲಿಯ ಅಧ್ಯಾಪಕ ಮಾಧ್ಯಮಿಕ ಶಿಕ್ಷಣವನ್ನು ಪೂರೈಸಿರಬೇಕು. ತಿಂಗಳಿಗೆ ೧೫ ರೂ. ಗಳಿಗಿಂತ ಕಡಿಮೆ ವೇತನ ಇಲ್ಲ. ಒಂದು ವಿದ್ಯಾಲಯಕ್ಕೆ ಒಬ್ಬರೇ ಅಧ್ಯಾಪಕರು. ಅವರ ವೇತನ ಜನರು ಕೊಡುವ ಚಂದಾ, ಧನ ಧಾನ್ಯಗಳಿಂದಲೇ ಸಾಗಬೇಕು. ಭೂಮಿಯನ್ನು ಸರಕಾರದವರು ಕೊಡುವರು. ೨೫ ವರುಷ ಈ ಉದ್ಯೋಗದಲ್ಲಿರಲು ಅಧ್ಯಾಪಕರು ಸಿದ್ಧರಿರಬೇಕು. ೫೦೦ ರೂ. ಗಳಿಗೆ ಅವರು ಜೀವವಿಮೆಯನ್ನು ಇಡಿಸಬೇಕು.

ವಿದ್ಯಾರ್ಥಿಗಳು ಹಳ್ಳಿಯ ಜೀವನದಲ್ಲಿ ಬೆರೆತೇ ಶಿಕ್ಷಣಪಡೆಯಬೇಕು. ಅಧ್ಯಾಪಕರೂ ಅವರೊಂದಿಗೆ ಬೆರೆತು ಶಿಕ್ಷಣಕೊಡಬೇಕು. ಹಳ್ಳಿಯ ಎಲ್ಲ ಉಪಯುಕ್ತ ಚಟುವಟಿಕೆಗಳಿಗೂ ಅದು ಮುಖ್ಯಸ್ಥಳವಾಗಬೇಕು. ಗಾಂಧೀಜಿಯವರ ರಾಟೆ ಕೈಗಾರಿಕೆಯೂ ಇವರಲ್ಲಿ ಸೇರುವುದು.

## ಸನಾತನಿಗಳ ಶಿಷ್ಟಮಂಡಲ.

ಆದಿಹಿಂದುಗಳಿಗೆ ದೇವಾಲಯ ಪ್ರವೇಶಕ್ಕೆ ಅವಕಾಶವಾಗುವ ಶಾಸನವನ್ನು ಮಾಡಬೇಡಿರೆಂದು ಹೇಳಿಕೊಳ್ಳಲು ಕೆಲವು ಸನಾತನಿಗಳು ಮುಂಬೈ ಸರಕಾರದ ಮುಖ್ಯಮಂತ್ರಿಗಳಾದ ಶ್ರೀ. ಖೇರರ ಕಡೆಗೆ ಹೋಗಿದ್ದರು. ಆದಿಹಿಂದುಗಳು ದೇವಾಲಯವನ್ನು ಪ್ರವೇಶಿಸಿದರೆ ಹಿಂದು ಧರ್ಮ ತತ್ವಗಳಿಗೇನೂ ಲೋಪವುಂಟಾಗುವುದಿಲ್ಲವೆಂದೂ ನೀವು ಈ ಶಾಸನವನ್ನು ವಿರೋಧಿಸದೆ ಒಪ್ಪಿರೆಂದೂ ಮಂತ್ರಿಗಳು ಬುದ್ಧಿವಾದವನ್ನು ಹೇಳಿದರು.

## ಪಂಡಿತಜಿಯವರ ವಚನಭಂಗ.

ಪಂಡಿತ ಜವಾಹರಲಾಲ ನೆಹರುರವರು ಬ್ಯಾ. ಜಿನ್ನಾರವರಿಗೆ ಉತ್ತರವಾಗಿ ಮೊನ್ನೆ ತಿಳಿಸಿದ್ದನ್ನು ನಿಷೇಧಿಸಲು ಬಂಗಾಲ ಕಾಂಗ್ರೆಸ್ ನ್ಯಾಶನಲಿಸ್ಟ ಪಕ್ಷದ ಕಾರ್ಯದರ್ಶಿಗಳಾದ ಶ್ರೀ ಧೀರೇಶ ಚಕ್ರವರ್ತಿ ಎಂಬುವವರು ಒಂದು ಪ್ರಕಟನೆಯನ್ನು ಹೊರಡಿಸಿದ್ದಾರೆ. ಅದರ ಮುಖ್ಯಾಂಶ ಹೀಗಿದೆ—

"ಬ್ಯಾ. ಜಿನ್ನಾರವರು ಕಲಕತ್ತಾದಲ್ಲಿ ಮಾಡಿದ ಭಾಷಣವನ್ನು ಕುರಿತು ಪಂ. ಜವಾಹರಲಾಲರು ಹೊರಡಿಸಿದ ಪ್ರಕಟನೆಯು ನಮಗೆ ತುಂಬಾ ಸಖೇದಾಶ್ಚರ್ಯಗಳನ್ನುಂಟುಮಾಡಿತು. ಜಿನ್ನಾರವರ ಸಂತಪ್ತವಾದ ಆತ್ಮಕ್ಕೆ ಪಂಡಿತಜಿಯವರು ಗಂಧಲೇಪನಮಾಡಿ ಶಾಂತಗೊಳಿಸಲು ಪ್ರಯತ್ನಿಸಿದ್ದಾರೆ. ಎರಡೂ ಜಾತಿಯವರು ಕೂಡಿ ಜಾತಿನಿರ್ಣಯ ಬೇಡವೆಂದು ಹೇಳುವ ವರೆಗೂ ಅದು ಇದ್ದೇ ಇರುತ್ತದೆಂದು ರಾಷ್ಟ್ರೀಯ ಸಭಾಧ್ಯಕ್ಷರು ಈಗ ಬ್ಯಾ. ಜಿನ್ನಾರವರಿಗೆ ಆಶ್ವಾಸನ ಕೊಟ್ಟದು ಅವರನ್ನು ಶಾಂತಗೊಳಿಸಲಿಕ್ಕಾಗಿಯೇ ಸರಿ.

ಪಂಡಿತಜಿಯವರು ಜಾತಿನಿರ್ಣಯದ ಸಂಬಂಧವಾಗಿ ಈ ವರೆಗೆ ಅನೇಕಸಾರೆ ನಾಲಿಗೆ ಹೊರಳಿಸಿದ್ದಾರೆ. ಅವುಗಳಲ್ಲಿ ಇದು ಅದ್ವಿತೀಯವಾದುದು. ಅಸೆಂಬ್ಲಿ ಚುನಾವಣೆಯ ಕಾಲಕ್ಕೆ ಕಾಂಗ್ರೆಸ್ ಪಕ್ಷವು ಹೊರಡಿಸಿದ ಪ್ರಕಟನೆಯಲ್ಲಿ ಜಾತಿನಿರ್ಣಯವನ್ನು ಅದು ನಿಷೇಧಿಸಿದೆ. ಆಗ ಈ ಸಂಬಂಧವಾಗಿ ಚಟುವಟಿಕೆ ನಡೆಯಿಸಲು ಹೇಳಿದವರೂ ಪಂಡಿತಜಿಯವರೆ. ಈಗ ಜಾತಿ ನಿರ್ಣಯದ ವಿಚಾರವಾಗಿ ಹೀಗೆ ಹೇಳಿದವರೂ ಅದೇ ಪಂಡಿತಜಿಯವರು! ಆದುದರಿಂದ ಜಾತಿನಿರ್ಣಯದ ವಿಷಯದಲ್ಲಿ ಇವರು ವಚನಭಂಗಮಾಡಿದ್ದಾರೆ. ಚುನಾವಣೆಯ ಕಾಲದಲ್ಲಿ ರಾಷ್ಟ್ರೀಯ ಪಕ್ಷದ ವಿರೋಧ ಹೆಚ್ಚಾಗಬಾರದೆಂದು ಆಗ ಹಾಗೆ ಹೇಳಿದ್ದರೇನು?

ಜಾತಿನಿರ್ಣಯದಿಂದ ಬಂಗಾಲಿ ಹಿಂದುಗಳಿಗೆ ವಿಶೇಷ ನಷ್ಟವಾಗಿದೆಯೆಂದೂ ಅದರಿಂದ ತಮಗೆ ಅಪಾರ ದುಃಖವಾಗುತ್ತದೆಂದೂ ಲಖನೌ ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ಮಾಡಿದ ಭಾಷಣದಲ್ಲಿ ಪಂಡಿತಜಿಯವರೇ ಹೇಳಿಲ್ಲವೆ? ಈಗ ಬ್ರಿಟಿಶ್ ಸಾಮ್ರಾಜ್ಯವಾದಿಗಳಂತೆ ಎರಡೂ ಜಾತಿಯವರ ಒಪ್ಪಿಗೆ ವಿನಾ ಜಾತಿನಿರ್ಣಯ ಹೋಗುವುದಿಲ್ಲವೆಂದು ಅದೇ ಪಂಡಿತಜಿಯವರು ಹೇಳಬಹುದೆ?

ಜಿನ್ನಾ-ರಾಜೇಂದ್ರರ ಒಡಂಬಡಿಕೆಯೆಂಬ ಮೃತ ಶಿಶುವಿಗೆ ಪುನರ್ಜನ್ಮ ಕೊಡುವ ಸಾಹಸವನ್ನೂ ಪಂಡಿತಜಿಯವರು ಮಾಡಿದ್ದಾರೆ. ನನಗೆ ಯಾವ ವಿಧವಾದ ಜಾತಿವಿಶಿಷ್ಟ ಒಪ್ಪಂದಗಳೂ ಬೇಕಾಗಿಲ್ಲವೆಂದು ಇದೇ ಪಂಡಿತಜಿಯವರು ಎಷ್ಟು ಸಾರೆ ಹೇಳಿಲ್ಲ? ಹೀಗಿರುವಾಗ ಹಿಂದಿನ ರಾಷ್ಟ್ರೀಯ ಸಭೆಯ ದುರ್ಬಲ ಧೋರಣನ್ನು ಈಗ ಮತ್ತೆ ಮುಂದೆ ಮಾಡಿರುವುದೇಕೆ? ಜಾತಿನಿರ್ಣಯದಿಂದ ಯಾವ ಪ್ರಾಂತದ ಹಿಂದುಗಳಿಗೆ ವಿಶೇಷ ದುಃಖವಾಗಿದೆಯೋ ಅವರು ಜಿನ್ನಾ-ರಾಜೇಂದ್ರರ ಒಡಂಬಡಿಕೆಯನ್ನು ಆಗಲೇ ನಿಷೇಧಿಸಿದ್ದು ಪಂಡಿತಜಿಯವರಿಗೆ ಗೊತ್ತಿಲ್ಲವೆ? ಜಾತಿನಿರ್ಣಯಕ್ಕಿಂತಲೂ ಜಿನ್ನಾ-ರಾಜೇಂದ್ರರ ಒಡಂಬಡಿಕೆ ಘಾತಕವಾದುದಾಗಿದೆ. ಅದಕಾರಣ ಇಂಥ ಪ್ರಯತ್ನವನ್ನು ಮಾಡದಿರಲಿ."

---

—ಬೋರ್ಡೋಲ ಗ್ರಾಮದ ೫೦೦ ಆದಿ ಹಿಂದುಗಳು ಕ್ರಿಸ್ತ ಮತದಲ್ಲಿ ಸೇರಿದರು. ಅವರಿಗೆ ಸವರ್ಣಿಗಳು ಬುದ್ಧಿವಾದ ಹೇಳಿದರೆ ಕೇಳಲಿಲ್ಲ.

## ಶೇತಕೀ ಸಹಕಾರ ಪ್ರಚಾರಕ ಗಾಡಿ.

ಸದ್ಯಕ್ಕೆ ಬೆಳಗಾವಿಯಲ್ಲಿ ನಡೆದಿರುವ ಕರ್ನಾಟಕ ಒಕ್ಕಲತನದ ಪ್ರದರ್ಶನದಲ್ಲಿ ಸಹಕಾರ ಸಂಬಂಧವಾದ ಶಾಖೆಯೊಂದಿದೆ. ಅದು ಕೃಷಿ, ವ್ಯಾಪಾರ ಕೈಗಾರಿಕೆ ಮೊದಲಾದವುಗಳ ಸಂಬಂಧ ವಿಶೇಷ ಜ್ಞಾನವನ್ನೀಯುವ ಪ್ರದರ್ಶನ ವಸ್ತುಗಳಿಂದ ಅಲಂಕೃತವಾಗಿದೆ. ಈ ಶಾಖೆಯಲ್ಲಿದ್ದ ಶೇತಕಿ ಸಹಕಾರ ಪ್ರಚಾರಕ ಗಾಡಿಯು ಒಳ್ಳೇ ಹೊಸ ಮಾದರಿಯಾಗಿದೆ.

(೧) "ರೈತನ ಜೀವನದಲ್ಲಿ ಬೆಳಕಿದೆ."

(೨) "ಕೂಳಿಲ್ಲದೆ ಯಾರ ಕರುಳೂ ಮರುಗಬಾರದೆಂಬ ಅಪೇಕ್ಷೆಯಿದ್ದರೆ ಖಾದಿಯು ಧರಿಸು"

ಈ ಮುಂತಾದ ಧಾರ್ಮಿಕ ಬೋಧಪ್ರದ ಮತ್ತು ಸ್ಫೂರ್ತಿದಾಯಕ ವಾಕ್ಯಗಳಿವೆ. ಸಧ್ಯದಲ್ಲಿ ಈ ತರಹದ ಪ್ರಚಾರ ಕಾರ್ಯವು ಅತ್ಯವಶ್ಯವಿದೆ. "ವಿಜಾಪುರ ಜಿಲ್ಲಾ ಕೋ ಇನ್‌ಸ್ಟಿಟ್ಯೂಟ ಬಾಗಲಕೋಟ" ಈ ಸಂಸ್ಥೆಯು ಇದನ್ನು ತಯಾರಮಾಡಿಸಿರುವುದು ಸ್ತುತ್ಯ ಸಂಗತಿಯು.

---

## ಮುಸಲ್ಮಾನರ ಶಿಷ್ಟಮಂಡಲ.

ಮುಂಬೈ ಪ್ರಾಂತದ ಲೋಕಲ್ ಬೋರ್ಡ ಶಾಸನ ತಿದ್ದುಪಾಟಿನ ಗೊತ್ತುವಳಿಯಲ್ಲಿ ಐಚ್ಛಿಕವಾಗಿರುವ ಸಂಯುಕ್ತ ಮತ ಪದ್ಧತಿಗೆ ಗವ್ಹರ್ನರರು ಒಪ್ಪಿಗೆ ಕೊಡಬಾರದಾಗಿ ಹೇಳಿಕೊಳ್ಳಲು ಮುಸ್ಲಿಂಲೀಗಿನ ಪ್ರಮುಖರು ಗವ್ಹರ್ನರ್ ಸಾಹೇಬರ ಕಡೆಗೆ ಹೋಗಿದ್ದರು. ಆಗ ಗವ್ಹರ್ನರರು ಹಾಗೆ ಮಾಡಲು ಒಪ್ಪಲಿಲ್ಲ. ಸಂಯುಕ್ತ ಮತ ಪದ್ಧತಿಯನ್ನು ಸ್ವಸಂತೋಷದಿಂದಲೇ ಒಬ್ಬ ಮುಸಲ್ಮಾನ್ ಗೃಹಸ್ಥನು ಒಪ್ಪಿದರೆ ಅದಕ್ಕೆ ಪ್ರತಿಬಂಧವೇಕೆ? ಹಾಗೆ ಪ್ರತಿಬಂಧ ಮಾಡುವುದು ಸರಿಯಲ್ಲ. ಒತ್ತಾಯವಾಗಿ ಸಂಯುಕ್ತ ಪದ್ಧತಿಯನ್ನು ಆಚರಣೆಯಲ್ಲಿ ತಂದದ್ದಾದರೆ ಆಗ ಅಲ್ಪಸಂಖ್ಯಾಕರ ಹಿತರಕ್ಷಣೆಯ ದೃಷ್ಟಿಯಿಂದ ಅದನ್ನು ತಾವು ತಡೆಯುವುದಾಗಿ ಶಿಷ್ಟಮಂಡಲಕ್ಕೆ ತಿಳಿಸಿದರು.

---

## ಮೈಸೂರಲ್ಲಿ ಕೈಸೆರೆ.

ತಾ. ೨೬ ನೆಯ ದಿನ ಮೈಸೂರಿನಲ್ಲಿ ಸ್ವಾತಂತ್ರ್ಯ ದಿನಾಚರಣೆಯನ್ನು ಸಭೆ ಸೇರಿ ಆಚರಿಸಿದರು. ಶ್ರೀ. ಆರ್. ರಂಗಯ್ಯನವರು ರಾಷ್ಟ್ರಧ್ವಜದೊಂದಿಗೆ ಸಭೆಗೆ ಬಂದು ಸ್ವಾತಂತ್ರ್ಯದ ಪ್ರತಿಜ್ಞೆಯನ್ನು ಓದಿದರು. ಪೋಲೀಸರು ಇವರನ್ನು ಕೈಸೆರೆಮಾಡಿದ್ದಾರೆ.

---

—ಪಂಡಿತ ಜವಾಹರಲಾಲರು ಈಗ ಎಷ್ಟೋ ಮೆತ್ತಗಾಗಿ ಕಾಂಗ್ರೆಸ್ ಪಕ್ಷದ ಮಂತ್ರಿಗಳಿಂದ ತೃಪ್ತಿಕರವಾದ ಕೆಲಸವಾಗಲೆಂದು ಪ್ರಯತ್ನಿಸುತ್ತಿದ್ದಾರಾಗಿ ಲಂಡನ್ ಟಾಯಿಮ್ಸ ಪತ್ರಿಕೆಯು ಹೇಳಿದೆ.

—ಆಸಾಮ ಮತ್ತು ಮಲಬಾರ ಪ್ರಾಂತಗಳಲ್ಲಿ ಮುಸಲ್ಮಾನರು ಉಚ್ಚ ಕುಲದ ಹಿಂದು ಸ್ತ್ರೀಯಳ ಕೈಹಿಡಿದಿದ್ದಾದರೆ ಅವಳು ಕೆಟ್ಟಳೆಂದು ಮನೆಯವರು ಅವಳನ್ನು ಬಿಟ್ಟುಬಿಡುವ ಪದ್ಧತಿಯಿತ್ತು. ಇದರಿಂದ ಮುಸಲ್ಮಾನರ ಸಂಖ್ಯೆ ಬೆಳೆಯಲು ಕಾರಣವಾಯಿತು.

# ಇದೊಂದು ಹೊಸ ಪ್ರಶ್ನೆ.

## ಭಾಯಿ ಪರಮಾನಂದರ ವಿಚಾರ.

ಭಾಯಿ ಪರಮಾನಂದರು ತಾ. ೨೪ ನೆಯ ಹಿಂದು ಪತ್ರಿಕೆಯಲ್ಲಿ ನಮ್ಮ ಹೆಣ್ಣುಮಕ್ಕಳ ಈಗಿನ ರೀತಿನೀತಿಗಳ ಸಂಬಂಧವಾಗಿ ಒಂದು ಲೇಖನವನ್ನು ಬರೆದಿದ್ದಾರೆ. ಅದರಲ್ಲಿಯ ಮುಖ್ಯಾಂಶ ಹೀಗಿದೆ—

### ಯಾವುದು ವಿಹಿತ?

(೧) ಹೆಣ್ಣುಮಕ್ಕಳೆಂದರೆ ಮನೆಯ ಹೂವು. ಅವರು ಮನೆಯಲ್ಲಿ ಮಕ್ಕಳ ಜೋಪಾನಮಾಡಿ, ಅವರಿಗೆ ಒಳ್ಳೇ ರೀತಿನೀತಿಗಳನ್ನು ಕಲಿಸಿ, ಮನೆತನದ ಕೆಲಸಗಳನ್ನು ಮಾಡುತ್ತ ಮನೆಯನ್ನು ರಕ್ಷಿಸುವವರಾಗಬೇಕು. ಎಂದರೆ ಒಳ್ಳೆಯ ತಾಯಿಯಾಗುವುದೇ ಅವರ ಮುಂದಿರುವ ಧ್ಯೇಯ. ಹೆಣ್ಣುಮಕ್ಕಳು ಮನೆಯಲ್ಲಿ ಮುಖ್ಯವಾಗಿ ಯಜಮಾನರು. ಗಂಡಸರು ಹೊರಗಡೆಯ ಕಾರ್ಯಗಳಲ್ಲಿ ಮುಖ್ಯಸ್ಥರು. ಎಂದು ಕೆಲವರು ಹೇಳುತ್ತಾರೆ.

(೨) ಇದು ಸರಿಯಲ್ಲ. ಸ್ತ್ರೀಯರು, ಪುರುಷರು ಇಬ್ಬರೂ ಸಮಾನರು. ಪ್ರಕೃತಿಯೇನೂ ಇವರಲ್ಲಿ ಹೆಚ್ಚು ಕಡಿಮೆ ಮಾಡಿಲ್ಲ. ಪುರುಷನೇ ಸ್ತ್ರೀಯರನ್ನು ತನ್ನ ಅಧೀನದಲ್ಲಿಟ್ಟುಕೊಂಡು ಹೀನಸ್ಥಿತಿಗೆ ತಂದಿದ್ದಾನೆ. ಪುರುಷನಂತೆಯೇ ಸ್ತ್ರೀಯಳೂ ಮನೆ ಹೊರಗಿನ ಸರಕಾರಿ ಅಧಿಕಾರ, ಅಸೆಂಬ್ಲಿ ಕೆಲಸ, ಮಂತ್ರಿ ಕೆಲಸ ಮೊದಲಾದ ಪುರುಷರು ಮಾಡುವ ಕೆಲಸಗಳನ್ನೆಲ್ಲಾ ಮಾಡಲು ಅರ್ಹರು. ಮತ್ತು ಹಾಗೆ ಮಾಡಲು ಅವರಿಗೆ ಪೂರ್ಣ ಅಧಿಕಾರ ಮತ್ತು ಅನುಕೂಲಗಳಿರಬೇಕು. ಎಂಬುದಾಗಿ ಕೆಲವರು ಹೇಳುತ್ತಿದ್ದಾರೆ.

ಮೊದಲಿನ ರೀತಿಯು ಹಿಂದುಸ್ಥಾನದ ಸ್ತ್ರೀ ಧರ್ಮಕ್ಕೆ ಸಂಬಂಧಿಸಿದ್ದಾಗಿದೆ. ಎರಡನೆಯದು ಪಾಶ್ಚಾತ್ಯ ಸ್ತ್ರೀನೀತಿಯಾಗಿದೆ. ನಮ್ಮ ದೇಶದಲ್ಲಿ ಹಿಂದು, ಮುಸಲ್ಮಾನ್, ಕ್ರಿಸ್ತ ಈ ಪ್ರಕಾರ ಮೂರು ಜಾತಿಯವರು ವಾಸವಾಗಿದ್ದಾರೆ. ಇವರಲ್ಲಿ ಕ್ರಿಸ್ತರಷ್ಟು ಹಿಂದುಗಳು ತಮ್ಮ ಹೆಣ್ಣುಮಕ್ಕಳಿಗೆ ಸ್ವಾತಂತ್ರ್ಯ ಕೊಟ್ಟಿಲ್ಲ. ಹಿಂದುಗಳಷ್ಟು ಮುಸಲ್ಮಾನರು ತಮ್ಮ ಹೆಣ್ಣುಮಕ್ಕಳಿಗೆ ಸ್ವಾತಂತ್ರ್ಯ ಕೊಟ್ಟಿಲ್ಲ. ಪರದಾ ಪದ್ಧತಿಯಿಂದ ಮುಸಲ್ಮಾನರು ತಮ್ಮ ಹೆಣ್ಣುಮಕ್ಕಳನ್ನು ಮುಚ್ಚಿಟ್ಟಿದ್ದಾರೆ.

### ಹಿಂದುಗಳಲ್ಲಿಯ ಸುಧಾರಣೆ.

ಈ ದೇಶದಲ್ಲಿ ಮುಸಲ್ಮಾನರ ರಾಜ್ಯ ಸ್ಥಾಪನೆಯಾದನಂತರ ೫-೬ ನೂರು ವರುಷಗಳ ಮೇಲೆ ಅನೇಕ ಹಿಂದುಗಳು ಅವರಲ್ಲಿ ನೌಕರರಾಗಿರಲು ಫಾರ್ಶಿ ಭಾಷೆಯನ್ನು ಕಲಿತು ಅವರ ಅನೇಕ ನಡವಳಿಕೆಗಳನ್ನು ಅನುಸರಿಸಿದರು. ಎಷ್ಟೋ ಜನ ಹಿಂದುಗಳು ತಮ್ಮ ಯಜಮಾನನ ಸಂತೋಷಕ್ಕಾಗಿ ನಮಾಜ ಕೂಡಾ ಮಾಡುತ್ತಿದ್ದರು. ಗಂಡಸರು ಹೀಗೆ ನಡೆಯುತ್ತಿದ್ದರೂ ಆಗಿನ ಹೆಣ್ಣುಮಕ್ಕಳು ತಮ್ಮ ಮತದ ಆಚಾರ ವಿಚಾರಗಳನ್ನು ಬಿಡದೆ ಅವುಗಳನ್ನು ರಕ್ಷಿಸಿಕೊಂಡು ಬಂದರು.

ಆದರೆ ಈಗಿನ ಸ್ಥಿತಿ ಬೇರೆಯಾಗಿದೆ. ಹಿಂದು ಹೆಣ್ಣುಮಕ್ಕಳು ಕಾಲೇಜಿನ ಶಿಕ್ಷಣಕ್ಕಾಗಿ ಹೋಗುತ್ತಿರುವುದು ಹೆಚ್ಚಿದೆ. ಅವರಿಗೆ ಮನೆ ಕೆಲಸಗಳಿಂತ ಶಿಕ್ಷಣ ಮೊದಲಾದ ಹೊರಗಿನ ಕೆಲಸಗಳ ಕಡೆಗೆ ಲಕ್ಷ್ಯ ಹೆಚ್ಚು. ಶಿಕ್ಷಿತರಾದ ಹೆಣ್ಣುಮಕ್ಕಳು ಮನೆಯಲ್ಲಿ ನೀರು ತರುವುದು, ಒಗೆಯುವುದು, ತಿಕ್ಕುವುದು, ಬೀಸುವುದು, ಮೊದಲಾದ ಕೆಲಸಗಳನ್ನು ಮಾಡಲು ಇಷ್ಟಪಡುವುದಿಲ್ಲ. ಮನೆಯಲ್ಲಿ ಅಡಿಗೆ ಮಾಡುವವರೂ ಕೆಲಸಮಾಡುವವರೂ ಅವರ ಕೈಯಲ್ಲಿ ಬೇಕಾಗಿದೆ.

ಇಂಥ ಸ್ಥಿತಿ ಬಂದಮೇಲೆ ಅವರ ವಿವಾಹ ಸಾಮಾನ್ಯ ಮನೆತನದಲ್ಲಿ ಜರುಗುವುದು ಹೇಗೆ ಶಕ್ಯ? ಅಷ್ಟೆಲ್ಲಾ ಸಾಂಪತ್ತಿಕ ಅನುಕೂಲಗಳಿದ್ದ ಮನೆತನವೇ ಬೇಕಲ್ಲವೆ? ಹಾಗೆ ತಮಗೆ ಅನುಕೂಲವಾದ ವರನು ದೊರೆಯದಿದ್ದರೆ ಅವರು ಧರ್ಮಾಂತರವಾಗಿ ತಮ್ಮ ಇಷ್ಟಬಂದವರನ್ನು ಲಗ್ನವಾಗಲು ಕೂಡಾ ಹಿಂಜರಿಯದವರು ಅಲ್ಲಲ್ಲಿ ಮುಂದೆ ಬರುತ್ತಿದ್ದಾರೆ.

### ಹಿಂದು ವಿಧವೆಯರ ಗೋಳು.

ಕಾಲಮಾನಕ್ಕೆ ತಕ್ಕಂತೆ ಆಚಾರವಿಚಾರಗಳಲ್ಲಿ ವ್ಯತ್ಯಾಸವಾಗಬೇಕು. ಹಿಂದಕ್ಕೆ ಬಂಗಾಲದಲ್ಲಿ ಹಿಂದು ವಿಧವೆಯರ ಲಗ್ನಕ್ಕೆ ಅವಕಾಶವೇ ಇರಲಿಲ್ಲ. ಒಬ್ಬ ಹುಡುಗಿಯ ಗಂಡ ಸತ್ತನಂತರ ಅವಳ ತಲೆ ಬೋಳಿಸಿ ನದಿ ದಾಟಿಸಿ ಬಿಟ್ಟು ಬಿಡುತ್ತಿದ್ದ ಪದ್ಧತಿಯೂ ಕೆಲವರಲ್ಲಿತ್ತು. ಇಂಥ ಬೇಟೆಯನ್ನು ಮುಸಲ್ಮಾನರು ನೋಡಿಕೊಂಡೇ ಕುಳಿತಿರುತ್ತಿದ್ದರು. ಆಗ ಆ ಹುಡುಗಿಯನ್ನು ತೆಗೆದುಕೊಂಡು ಹೋಗಿ ಲಗ್ನಮಾಡಿಕೊಳ್ಳುತ್ತಿದ್ದರು. ಮುಸಲ್ಮಾನರ ಸಂಖ್ಯೆ ಹೆಚ್ಚಿ ಹಿಂದುಗಳ ಸಂಖ್ಯೆ ಕಡಿಮೆಯಾಗಲು ಅಲ್ಲಿ ಇದೂ ಒಂದು ಮುಖ್ಯ ಕಾರಣ.

ಸಂಯುಕ್ತ ಪ್ರಾಂತ ಮತ್ತು ಬಿಹಾರಗಳಲ್ಲಿ ಕೂಡಾ ವಿಧವೆಯರನ್ನು ಕ್ಷೇತ್ರ ಸ್ಥಳಗಳಲ್ಲಿ ಬಿಟ್ಟು ಬರುವ ಪದ್ಧತಿಯಿದ್ದಿತು. ಅವರನ್ನು ಮುಸಲ್ಮಾನರು ತೆಗೆದುಕೊಂಡು ಹೋಗಿ ಲಗ್ನವಾಗುತ್ತಿದ್ದರು. ಇತ್ತೀಚಿಗೆ ವಿಧವೆಯರ ಈ ಗೋಳು ನಿವಾರಣೆಯಾಗಿದೆ. ಕೆಲವರು ಲಗ್ನವಾಗುತ್ತಿದ್ದಾರೆ.

ಭೋಪಾಳ ಸರಕಾರದಲ್ಲಿ ಹಿಂದು ಸ್ತ್ರೀಯರ ಸಂಬಂಧವಾಗಿ ಒಂದು ಶಾಸನವಾಗಿದೆ. ಯಾವ ಮುಸಲ್ಮಾನನಾದರೂ ಒಬ್ಬ ಹಿಂದು ಹೆಣ್ಣುಮಗಳನ್ನು ತನ್ನ ಮನೆಯಲ್ಲಿ ಒಂದೆರಡು ದಿನ ಇಟ್ಟುಕೊಂಡನಂತರ ಅವಳು ತನ್ನ ಮನೆಯಲ್ಲಿ ಸೇರಬೇಕಾದರೆ ಹಿಂದು ಪಂಚರ ಒಪ್ಪಿಗೆ ಬೇಕು. ಹಿಂದು ಪಂಚರು ಮುಸಲ್ಮಾನರ ಮನೆಯಲ್ಲಿದ್ದ ಹಿಂದು ಹೆಣ್ಣುಮಕ್ಕಳಿಗೆ ತನ್ನ ಮನೆಯಲ್ಲಿರಲು ಒಪ್ಪಿಗೆ ಕೊಡುವುದಿಲ್ಲ. ಆದರಿಂದ ಆ ಮೇಲೆ ಅವಳು ಮುಸಲ್ಮಾನ್ ಮತದಲ್ಲಿ ಸೇರಿಬಿಡುತ್ತಾಳೆ!

### ಶಕ್ತಿವರ್ಧಕ ಪಾಕವೇಕೆ?

ಇದೇ ಸಮಯದಲ್ಲಿ ಇನ್ನೊಂದು ಸಂಗತಿಯನ್ನೂ ತಿಳಿಸಬೇಕಾಗಿದೆ. ಅದೇನೆಂದರೆ, ಹಿಂದುಗಳ ಆಹಾರವು ಪೌಷ್ಟಿಕವಾದುದಾಗಿರುವುದಿಲ್ಲ. ದೊಡ್ಡ ಮನೆತನಗಳಲ್ಲಿ ಪೌಷ್ಟಿಕ ಆಹಾರ ಸೇವನೆಯ ಕಡೆಗೆ ಲಕ್ಷ್ಯ ಕಡಿಮೆ. ತಿಂಡಿಗಳೇ ಹೆಚ್ಚು. ಇದರಿಂದ ಶ್ರೀಮಂತರೂ ತರುಣರೂ ಪೌಷ್ಟಿವರ್ಧಕ ಲೇಹವನ್ನು ಈಗ ಬಯಸುವುದು ಹೆಚ್ಚಾಗಿದೆ. ಈಗಿನ "ಜಾಹಿರಾತು" ಗಳಲ್ಲಿ ಶಕ್ತಿವರ್ಧಕ ಔಷಧಿಗಳ ಸಂಬಂಧವಾದವುಗಳೇ ವಿಶೇಷ. ಶಕ್ತಿಯು ಪೌಷ್ಟಿಕ ಆಹಾರ ಮತ್ತು ಬ್ರಹ್ಮಚರ್ಯಗಳ ಮೇಲೆ ಹೆಚ್ಚಾಗಿ ಅವಲಂಬಿಸಿರುತ್ತದೆಂಬುದು ಇವರಿಗೆ ತಿಳಿಯದು.

ಇವರ ನಿರ್ಬಲತೆಯಿಂದ ಅನೇಕ ಧನಿಕರ ಮನೆಯ ಹೆಣ್ಣುಮಕ್ಕಳು ತಪ್ಪು ದಾರಿಗೆ ಹೋಗುತ್ತಾರೆ. ಇಷ್ಟೇ ಅಲ್ಲ, ಧರ್ಮಾಂತರ ಕೂಡಾ ಆಗುತ್ತಿದ್ದಾರೆ. ಒಬ್ಬ ಹಿಂದು ಧನಿಕನ ಮನೆಯಲ್ಲಿದ್ದ ಒಬ್ಬ ಮುಸಲ್ಮಾನ ನೌಕರನು ಹಿಂದು-ಮುಸಲ್ಮಾನ್ ದೊಂಬಿ ಕಾಲದಲ್ಲಿ ಹಿಡಿಯಲ್ಪಟ್ಟನು. ಆತನು ತನ್ನ ಧನಿಗೆ ವಿರುದ್ಧವಾಗಿ ನಡೆದಿದ್ದನು. ಹಾಗಿದ್ದರೂ ಆ ಧನಿಕನೇ ನ್ಯಾಯಸ್ಥಾನಕ್ಕೆ ಬಂದು ತಾನೇ ಹೊಣೆಗಾರನಾಗಿ ಆತನನ್ನು ಬಿಡಿಸಿದನು. ಏಕೆಂದರೆ ಆತನ ಕುಟುಂಬಕ್ಕೆ ಆ ನೌಕರನು ಅಷ್ಟು ಪ್ರಿಯನಾಗಿದ್ದನು.

# ವೀರಶೈವ ಮಹಿಳಾ ಸಭಾ.

(ಹಾ. ಅ. ಮಠ ಗದಗ.)

ಗದಗಿನ ಶಾಪೂರ ಪೇಟೆಯಲ್ಲಿರುವ ಹಾಲಕೆರೆ ಶ್ರೀ ಗುರು ಅನ್ನದಾನೀಶ್ವರ ಸ್ವಾಮಿಯವರ ಮಠದಲ್ಲಿ ವೀ. ಮ. ಸಭೆಯು ತಾ. ೨೨-೧-೩೪ ನೇ ಆದಿತ್ಯವಾರ ಕೂಡಿತ್ತು. ಈ ಸಭೆಗೆ ನೂರಾರು ಮಂದಿ ಮಹಿಳೆಯರು ನೆರೆದಿದ್ದರು. ಸಭೆಯ ಕಾರ್ಯವನ್ನು ಸಾಂಗೋಪಾಂಗವಾಗಿ ನೆರವೇರಿಸುವುದಕ್ಕಾಗಿ ಸಂಸ್ಕೃತ ಪಂಡಿತರಾದ ವೇ|| ನಾಗಭೂಷಣ ಶಾಸ್ತ್ರಿಜಿ ಸಂಗನಹಾಳು ಶಾಸ್ತ್ರಿಮಠ ಇವರ ಧರ್ಮಪತ್ನಿ ಶಿವಗಂಗವ್ವ ಇವರು ಅಧ್ಯಕ್ಷತೆಯನ್ನು ವಹಿಸಿದ್ದರು. ಈ ಸಭೆಯ ಆದಿಯಲ್ಲಿ ಶ್ರೀಮತಿಯರಾದ ಕರ್ಜಗಿ ಗುರುಸಿದ್ಧವ್ವ ಮತ್ತು ಮುಂಗೆವ್ವ ಇವರು ರಾಷ್ಟ್ರೀಯ ಮಂಗಲ ಗೀತೆಯನ್ನು ಹಾಡಿದರು. ಆ ಮೇಲೆ ಸಭೆಯ ಕಾರ್ಯವು ಪ್ರಾರಂಭವಾಯಿತು.

ಈ ಸಭೆಗೆ ಆಗಮಿಸಿದ್ದ ಶ್ರೀಮತಿ ಗುರುಸಿದ್ಧವ್ವ ಕರ್ಜಗಿ ಇವರು "ಶಕ್ತಿಯಿಂದಲೇ ಮುಕ್ತಿ" ಎಂಬ ವಿಷಯದ ಮೇಲೆ ರಸಭರಿತವಾಗಿ ಭಾಷಣಮಾಡಿದರು. ಅದರ ಸ್ವಲ್ಪ ಮುಖ್ಯಾಂಶವನ್ನು ಇದರಡಿ ಕೊಡಲಾಗಿದೆ.

ಮೊದಲನೆದಾಗಿ ಶಕ್ತಿಯೆಂದರೆ ಜೀವ ವಸ್ತುವಿನೊಡನೆ ಅವಿನಾಭಾವದಿಂದ ಕೂಡಿಕೊಂಡಿರುವ ವಿಮರ್ಶವು. (ತನ್ನರಿವು) ಶಕ್ತಿಯಲ್ಲಿ ಸಾಮಾನ್ಯವಾಗಿ ಎರಡು ವಿಧ. ಒಂದನೇದು ಬುದ್ಧಿಶಕ್ತಿ ಎರಡನೇದು ಶಾರೀರಿಕ ಶಕ್ತಿ. ಈ ಎರಡು ಶಕ್ತಿಗಳು ಪ್ರತಿಯೊಂದು ಜೀವ ವ್ಯಕ್ತಿಗೂ ಅತ್ಯಾವಶ್ಯಕವಾಗಿ ಬೇಕು. ಪ್ರತಿಯೊಂದು ಜೀವವು ತನ್ನ ತನ್ನ ಸಂಸಾರ ಯಾತ್ರೆಯನ್ನು ಸುರಕ್ಷಿತವಾಗಿ ಸಾಗಿಸುವುದಕ್ಕಾಗಿ ಈ ಎರಡು ಶಕ್ತಿಗಳು ಬೇಕು. ಅವು ಇಲ್ಲದಿದ್ದರೆ ಆ ಸಂಸಾರವು ಒಂದು ನಿರ್ಜೀವದ ಸಂಸಾರ ಯಾತ್ರೆಯಾಗುತ್ತದೆ. ಅದರಲ್ಲು ಈ ಪ್ರಪಂಚದಲ್ಲಿ ವಾಸಿಸುವ ಜೀವಿಗಳಲ್ಲಿ ಮಾನವ ಜೀವಿಯು ಅತಿ ಶ್ರೇಷ್ಠನೆಂದು ಎಲ್ಲರಿಗೂ ತಿಳಿದ ಮಾತಾಗಿದೆ. ಅಂದಮೇಲೆ ಶಕ್ತಿಗಳೂ ಕೂಡ ಅತಿ ಶ್ರೇಷ್ಠವಾಗಿರಲೇಬೇಕು. ಆ ಶಕ್ತಿಗಳನ್ನು ಕೆಲಸದ ದುಡಿಮೆಯಿಂದಲೂ ವ್ಯಾಯಾಮದಿಂದಲೂ ಮತ್ತು ಆಟಪಾಟಗಳಿಂದಲೂ ಸಂಪಾದಿಸಿಕೊಳ್ಳುತ್ತಾರೆ. ಆ ಶಕ್ತಿಗಳನ್ನು ಒಬ್ಬನ ಕೊಲ್ಲುವುದಕ್ಕೂ, ಕಳ್ಳತನದರೋಡೆಮಾಡುವುದಕ್ಕೂ ಅಪಕಾರ ಇತ್ಯಾದಿ ಕೆಟ್ಟ ಕೃತ್ಯಗಳಿಗೆ ಉಪಯೋಗಿಸುತ್ತಾರೆ. ಅವೇ ಶಕ್ತಿಗಳನ್ನು ದೇಹ ಪೋಷಣೆಗೂ ಪರೋಪಕಾರಕ್ಕೂ, ಧರ್ಮೋದ್ಧಾರಕ್ಕೂ ಮುಕ್ತಿಯ ಸಾಧನೆಗೂ ಉಪಯೋಗಿಸುತ್ತಾರೆ. ಶಕ್ತಿಯಲ್ಲಿ ಪರಮಾತ್ಮನ ಅರಿವು ಕೂಡಿಕೊಂಡಿದೆ. ಅಂಥ ಪರಮಾತ್ಮನ ಸ್ವರೂಪ ಅರಿವಿನಿಂದ ಕೂಡಿಕೊಂಡಿರುವ ಶಕ್ತಿಯನ್ನು ಕೆಟ್ಟ ಕೃತ್ಯಗಳಿಗೆ ಉಪಯೋಗಿಸಿದರೆ ಅಂಥವನು ಪಶುವಿಗಿಂತಲೂ ಕಡೆಯಾಗುತ್ತಾನೆ. ಪರಮಾತ್ಮನಿಗೆ ಪ್ರಿಯವಾಗುವುದಿಲ್ಲ. ಅವನಿಗೆ ಅತಿ ನೀಚ ಮಾನವಿಗಳಿಂದಲೂ ಕೂಡ ಗೌರವ ಪೂಜ್ಯತೆ ಸಿಕ್ಕುವುದಿಲ್ಲ.

ಆದ್ದರಿಂದ ತಮ್ಮ ಶಕ್ತಿಗಳನ್ನು ತಮ್ಮ ಸಂಸಾರಯಾತ್ರೆ ಸುರಕ್ಷಿತವಾಗಿ ನಡೆಯುವುದಕ್ಕೂ ಪರೋಪಕಾರ, ಧರ್ಮೋದ್ಧಾರ, ಮುಕ್ತಿಸಾಧನಕ್ಕೂ ಉಪಯೋಗಿಸಿದರೆ ಆಗ ಪರಮಾತ್ಮನಿಗೆ ಪ್ರಿಯವಾಗುತ್ತದೆ. ಹೃದಯದಲ್ಲಿರುವ ಪರಮಾತ್ಮನೂ ಕೂಡ ಸಂತೋಷಪಡುತ್ತಾನೆ. ಭಕ್ತಿಯು ಮುಕ್ತಿಗೆ ಯಾವ ರೀತಿಯಾಗಿ ಮೂಲ ಮಾರ್ಗವಾಗಿದೆಯೋ ಅದೇ ರೀತಿಯಾಗಿ ಶಕ್ತಿಯೂ ಕೂಡ ಮುಕ್ತಿಗೆ ಒಂದು ಮಾರ್ಗವಾಗಿದೆ. ಆದುದರಿಂದ ಭಕ್ತಿಸ್ವರೂಪವಾದಂಥ ಶಕ್ತಿಗಳನ್ನು ಒಳ್ಳೇ ಕಾರ್ಯಗಳಿಗೆ ಉಪಯೋಗಿಸಿ ಎಲ್ಲರೂ ಮುಕ್ತಿಯನ್ನು ಹೊಂದಬೇಕೆಂದು ಹೇಳಿ ತಮ್ಮ ಭಾಷಣವನ್ನು ಮುಗಿಸಿದರು.

ಆ ಮೇಲೆ ೧೨ ವರುಷದ ಕುಮಾರ ಸಂಗಪ್ಪ ಕರ್ಜಗಿ ಇವರು "ಭಕ್ತಿ" ಎಂಬ ವಿಷಯದ ಮೇಲೆ ಸುಲಭ ರೀತಿಯಲ್ಲಿ ಭಾಷಣಮಾಡಿದರು. ಭಕ್ತಿ ಎಂಬುದು ಹೇಳುವುದಕ್ಕೆ ಎಷ್ಟು ಸುಲಭವೋ ಅಷ್ಟು ಕೃತಿಯಿಂದ ತೋರಿಸುವುದಕ್ಕೆ ಕಠಿಣವಾಗಿದೆ. ಬಾಹ್ಯಾಡಂಬರಗಳೇ ಭಕ್ತಿಯ ನಿದರ್ಶನವಲ್ಲ. ಭಕ್ತಿಯೆಂಬುದು ಪ್ರದರ್ಶನದಲ್ಲಿನ ಒಂದು ವಸ್ತುವಲ್ಲ. ಅದು ಹೃದಯದೊಳಗಿನ ಒಂದು ಗೂಢ ನಿಧಿ. ಅದು ಎಷ್ಟು ಗುಪ್ತವಾಗಿರುವದೋ ಅಷ್ಟಷ್ಟು ಅಮೂಲ್ಯವೆಂದು ತಿಳಿಯಬೇಕು. ಆ ಗೂಢ ನಿಧಿಯನ್ನು ತಿಳಿದುಕೊಂಡವನೇ ಭಕ್ತ. ಮೊದಲು ನಾನಾರೆಂದು ವಿಚಾರಿಸಬೇಕು. ನಾನು ಎಂಬ ವ್ಯಕ್ತಿಗೆ ಎಷ್ಟು ಪ್ರೇಮ ತೋರಿಸುತ್ತದೆಯೋ ಅಷ್ಟು ಪ್ರೇಮವನ್ನು ಪರರಿಗೆ ತೋರಿಸಬೇಕು. ಅದೇ ಶುದ್ಧವಾದ ಭಕ್ತಿ. ಆ ಭಕ್ತಿಯು ಹೃದಯಾತ್ಮನಲ್ಲಿ ಗೂಢನಿಧಿಯಾಗಿರಬೇಕಾದರೆ ಹೃದಯದಲ್ಲಿ ಅಡಗಿರುವ ಕಾಮ ಕ್ರೋಧಾದಿ ಅರಿಷಡ್ವರ್ಗಗಳನ್ನೂ ತ್ರಿಕರಣಗಳನ್ನೂ ನಾಶಮಾಡಬೇಕು. ಮತ್ತು ಇನ್ನು ಬಾಕಿ ಕಲ್ಮಿಷವಿಕಾರ ಬುದ್ಧಿಗಳನ್ನು ಹಳಿಸಿ ಮನಸ್ಸನ್ನು ಶುದ್ಧಮಾಡಬೇಕು. ಆ ಶುದ್ಧ ವಸ್ತುವೇ ಭಕ್ತಿ ಅಂಥ ಕರ್ತಾರನೇ ಭಕ್ತ. ಭಕ್ತಿಯು ಮುಕ್ತಿಯ ಸ್ಥಾನಕ್ಕೆ ಮೊದಲನೆಯ ಮೆಟ್ಟಿಲು. ಆದುದರಿಂದ ಎಲ್ಲರೂ ತಮ್ಮ ತಮ್ಮ ಹೃದಯದಲ್ಲಿ ಗೂಢ ನಿಧಿ ಎಂಬ ಭಕ್ತಿಯನ್ನು ಬೆಳೆಸಿ ಮುಕ್ತಿಯ ಸ್ಥಾನವಾದ ಕೈಲಾಸಪುರಿಯನ್ನು ಸೇರಬೇಕೆಂದು ಹೇಳಿ ತಮ್ಮ ಭಾಷಣವನ್ನು ಮುಗಿಸಿದರು.

ನಂತರ ಕರ್ನಾಟಕ ಬಂಧು ಗೌರವ್ವ ಹಿರೇಮಠ ಇವರು ಹಿಂದಿನ ವಾರ ಸಭೆಯಲ್ಲಿ ಭಾಷಣಮಾಡಿದ "ಹೆಣ್ಣುಮಕ್ಕಳ ಕರ್ತವ್ಯ" ಎಂಬ ವಿಷಯವನ್ನು ಮುಂದುವರಿಸಿಕೊಂಡು ಅರ್ಧ ತಾಸಿನವರೆಗೂ ಎಲ್ಲರಿಗೂ ತಿಳಿಯುವ ಹಾಗೆ ಭಾಷಣಮಾಡಿದರು.

ತರುವಾಯ ಬಳ್ಳನಾಳು ಪಾರ್ವತೆವ್ವ ಇವರು "ಸಭೆಯ ಸಿಸ್ತು ಮತ್ತು ನಿಯಮ" ಇವುಗಳನ್ನು ಕುರಿತು ಉದಾಹರಣೆಯ ಮೂಲಕ ಎಲ್ಲರಿಗೂ ದೀರ್ಘಕಾಲ ಮನದಟ್ಟುವಾಗುವಂತೆ ಬೋಧನೆ ಮಾಡಿದರು.

ಆ ಮೇಲೆ ಅಧ್ಯಕ್ಷರಾದ ಶಿವಗಂಗವ್ವ ಇವರು ಭಾಷಣಕಾರರಿಗೆ ವಂದನೆಗಳನ್ನು ಅರ್ಪಿಸಿ ತಾವೂ ಕೂಡ ಅವೇ ವಿಷಯಗಳನ್ನ ದೀರ್ಘಮಾಡಿ ಎಲ್ಲರಿಗೂ ಮನರಂಜನವಾಗುವಂತೆ ಭಾಷಣಮಾಡಿದರು. ತದನಂತರ ಈ ಸಭೆಯ ಪ್ರಮುಖರಾದ ಶ್ರೀಮತಿ ಪರವ್ವ ಕಿಣಗಿ ಬಾಗಲಕೋಟಿ ಇವರು ಅಧ್ಯಕ್ಷರ ಗುಣಗಳನ್ನು ಎಲ್ಲರಿಗೂ ತಿಳಿಸಿ ಹೂವಿನ ಮಾಲೆಯನ್ನು ಅಧ್ಯಕ್ಷರಿಗೆ ಅರ್ಪಿಸಿದರು. ಈ ಸಭೆಯು ಹಿಂದಿನ ಸಭೆಗಳಿಗಿಂತ ಬಹು ವೈಭವದಿಂದ ಜರುಗಿತು. ಬ|| ಪಾರ್ವತೆವ್ವ ಇವರು ಎಲ್ಲರಿಗೂ ಕಿವಿಗಿಂಪಾಗುವಂತೆ ದೇವರ ಪ್ರಾರ್ಥನೆಯನ್ನು ಮಾಡಿದರು. ಎಲ್ಲರೂ ಧ್ಯಾನಚಿತ್ತರಾಗಿ ನಿಂತುಕೊಂಡು ಕೇಳಿದನಂತರ ಸಭೆಯು ಸಮಾಪ್ತಿಯಾಯಿತು.

---

—ಶ್ರೀ. ಸುಭಾಷಚಂದ್ರ ಬೋಸರು ಭಾಯಿ ಮಾನವೇಂದ್ರ ರಾಯರನ್ನು ತಮ್ಮ ಮನೆಗೆ ಊಟಕ್ಕೆ ಕರೆದಿದ್ದರು. ಇಬ್ಬರೂ ಈಗಿನ ರಾಜಕಾರಣದ ಸಂಬಂಧವಾಗಿ ಬಹು ಕಾಲ ಸಂಭಾಷಣೆ ನಡೆಯಿಸಿದರು.

—ಪಂಡಿತ ಜವಾಹರಲಾಲರಿಗೆ ಗಡಿನಾಡಿನಲ್ಲಿ ಅಪೂರ್ವ ಸನ್ಮಾನವಾಯಿತು.

## ಫೆಡರೇಶನ್ ತ್ಯಾಜ್ಯವಲ್ಲ.

ಲಾರ್ಡ ಲೋಥಿಯನ್‌ರು ಹಿಂದುಸ್ಥಾನದ ಪ್ರವಾಸವನ್ನು ಮಾಡಿ ಎಲ್ಲ ಪಕ್ಷಗಳ ಪ್ರಮುಖರ ಸಂಗಡ ಫೆಡರೇಶನ್ ವಿಚಾರವಾಗಿ ಮಾತನಾಡಿ ತಮ್ಮ ದೇಶಕ್ಕೆ ಹೋಗುವ ಮುಂಚೆ ಅಲಿಗಡ ವಿಶ್ವವಿದ್ಯಾಲಯದ ಪದವಿದಾನ ಸಮಾರಂಭವನ್ನು ಕಳೆದ ೨೩ ನೇ ತಾರೀಖಿನ ದಿವಸ ಸಾಗಿಸಿದರು. ಆ ಕಾಲಕ್ಕೆ ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಇಷ್ಟರಲ್ಲೇ ಬರಲಿರುವ ಫೆಡರೇಶನ್ ನಿಮಗೆ ಅತೃಪ್ತಿಕರವಾಗಿರಬಹುದು. ಅದರಲ್ಲಿ ತಿದ್ದುಪಾಟಿನ ಅವಶ್ಯಕತೆ ಇರಬಹುದು. ಹಾಗಿದ್ದ ಮಾತ್ರದಿಂದ ಅದನ್ನು ಬಹಿಷ್ಕರಿಸಬೇಡಿರಿ. ಹಿಂದುಸ್ಥಾನವು ಒಂದು ರಾಷ್ಟ್ರವಾಗಿ ಬಾಳಬೇಕಾಗಿದೆ. ಹಾಗಾದರೇನೇ ಈ ಪ್ರಚಂಡ ರಾಷ್ಟ್ರಕ್ಕೆ ಕ್ಷೇಮ. ಯುರೋಪಖಂಡದಲ್ಲಿ ಇಂಥ ಸೌಲಭ್ಯವಿಲ್ಲ ಯುರೋಪಖಂಡದ ರಶಿಯಾ ದೇಶವೊಂದನ್ನು ಬಿಟ್ಟರೆ ಇನ್ನುಳಿದ ೨೫ ರಾಷ್ಟ್ರಗಳಷ್ಟು ಈ ದೇಶವು ದೊಡ್ಡದಾದುದು. ಇದರಲ್ಲಿ ಸಂಘಟನೆಯಿರುವುದು ಅಗತ್ಯವಲ್ಲವೆ? ಸಂಯುಕ್ತ ರಾಜ್ಯವೇ ರಾಷ್ಟ್ರದ ಏಳಿಗೆಗೆ ಮುಖ್ಯ ಕಾರಣ. ಯುರೋಪ ಖಂಡದಲ್ಲಿ ಅಂಥ ಸಂಯುಕ್ತ ಪ್ರಭುತ್ವವಿಲ್ಲ. ಅಲ್ಲಿ ೨೬ ರಾಷ್ಟ್ರಗಳಿವೆ. ಪರಸ್ಪರ ಹೋರಾಟ ಹೆಚ್ಚು. ಆದರಿಂದ ಕೊನೆಗೆ ಯುದ್ಧವೇ ಅವರ ಮುಂದೆ ಬಂದು ನಿಲ್ಲುತ್ತದೆ.

ನಿಮ್ಮ ದೇಶದಲ್ಲಿ ೪೭ ಕೋಟಿ ರೂ. ಗಳು ಸೈನ್ಯಶಾಖೆಗೆ ವೆಚ್ಚವಾಗುತ್ತಿದ್ದರೆ ಅಲ್ಲಿ ೨೦೦ ಕೋಟಿ ರೂ. ಗಳು ವೆಚ್ಚವಾಗುತ್ತವೆ. ನಿಮ್ಮಲ್ಲಿ ೨ ಲಕ್ಷ ಸೈನ್ಯವಿದ್ದರೆ. ಅಲ್ಲಿ ೭೦ ಲಕ್ಷ ಸೈನ್ಯ. ಈ ಅನರ್ಥಗಳೆಲ್ಲಾ ಸಂಯುಕ್ತ ರಾಜ್ಯ ಘಟನೆಯಿಲ್ಲದ್ದರಿಂದಲೇ ಸರಿ. ನಿಮ್ಮಲ್ಲಿಯೂ ಫೆಡರೇಶನ್ ಇಲ್ಲವಾದರೆ ಅಲ್ಲಿಗಿಂತಲೂ ಹೀನಾವಸ್ಥೆಯುಂಟಾಗುವುದು.

ಈಗ ನಿಮ್ಮಲ್ಲಿ ಜಾತಿ, ಮತ, ಭಾಷೆಗಳ ವೈಮನಸ್ಸು ಕಡಿಮೆಯಾಗುತ್ತಾ ಇದೆ. ಫೆಡರೇಶನ್ ಏರ್ಪಟ್ಟರೆ ರಾಷ್ಟ್ರಕ್ಕೆ ಹೆಚ್ಚು ಕ್ಷೇಮ. ಆದಕಾರಣ ನೀವು ಅದನ್ನು ಬಹಿಷ್ಕರಿಸಬೇಡಿರಿ."

### ಪ್ರಾಗತಿಕರರ ವಿಚಾರ.

ಮುಂಬೈಯಲ್ಲಿ ಸರ್. ಚಿಮಣಲಾಲ ಸೆಟಲವಾಡ ಇವರು ಫೆಡರೇಶನ್ ವಿಚಾರವಾಗಿ ಒಂದು ಭಾಷಣಮಾಡಿದರು. ಇವರು ಕೂಡಾ ಮುಂದೆ ಬರಲಿರುವ ಫೆಡರೇಶನ್ ಬಹಿಷ್ಕರಿಸಬಾರದಾಗಿಯೇ ಸೂಚಿಸಿದರು. ಕಾಂಗ್ರೆಸ್ ಪಕ್ಷವು ಸಾಮುದಾಯಿಕ ಶಾಸನ ಭಂಗವನ್ನು ಮತ್ತೆ ಪ್ರಾರಂಭಿಸುವುದಾಗಿ ಕೆಲವರು ಹೇಳುತ್ತಿದ್ದಾರೆ. ಇದು ಸರಿಯಲ್ಲ. ಹಾಗೆ ಮಾಡಿದರೆ ದೇಶಕ್ಕೆ ಕೇಡೇ ಆಗುತ್ತದೆ. ಆದಕಾರಣ ಫೆಡರೇಶನ್ ಬಹಿಷ್ಕರಿಸಲ್ಪಡಬಾರದೆಂದು ಪ್ರಾಗತಿಕ ಪಕ್ಷದ ಪ್ರಮುಖರಾದ ಇವರು ಹೇಳಿದರು.

---

## ಪರದೇಶಗಳಲ್ಲಿ " ವಂದೇ ಮಾತರಂ "

### ಮುಸಲ್ಮಾನರ ಪ್ರೇಮ.

ಈ ದೇಶದಲ್ಲಿ ಮುಸಲ್ಮಾನರು ವಂದೇ ಮಾತರಂ ಪದ್ಯವನ್ನು ನಿಷೇಧಿಸುತ್ತಿದ್ದಾರಷ್ಟೆ. ಆದರೆ ಪರದೇಶಗಳಿಗೆ ಹೋದ ಹಿಂದಿ ಮುಸಲ್ಮಾನರಿಗೆ ಅದೆಷ್ಟು ಪ್ರಿಯವಾಗಿದೆಯೆಂಬುದನ್ನು ಜಗ ಪ್ರವಾಸಿ ಶ್ರೀ. ರಾಮನಾಥ ವಿಶ್ವಾಸ ಎಂಬುವವರು ಕಂಡು "ಹಿಂದುಸ್ಥಾನ್ ಎಂಬ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಅದು ಸರಸ್ವತೀ ಎಂಬ ಹಿಂದಿ ಮಾಸಿಕದಲ್ಲಿ ಉದಾಹರಿಸಲ್ಪಟ್ಟಿದೆ. ಅದರ ಮುಖ್ಯಾಂಶ ಹೀಗಿದೆ.—

### ಇರಾಣಿ, ತುರ್ಕಿ, ಅರಬರ ವಿರೋಧ.

"ತೆಹಾರಾನದಲ್ಲಿ ಲಖನೌ ಪಟ್ಟಣದ ಒಬ್ಬ ಶಿಯಾ ಪಂಥದ ಮುಸಲ್ಮಾನ ವ್ಯಾಪಾರಿಯಿದ್ದನು. ನಾನು ಒಂದು ದಿನ ಅತನಲ್ಲಿ ಉಳಿದಿದ್ದೆ. ಆ ದಿನ ಅಲ್ಲಿ ಒಂದು ದೊಡ್ಡ ಮೆರವಣಿಗೆ ಹೊರಟಿತ್ತು. ಆ ಮೆರವಣಿಗೆಯವರು ತಮ್ಮ ರಾಷ್ಟ್ರೀಯ ಗೀತೆಯನ್ನು ಹಾಡುತ್ತಿದ್ದರು. ಅದನ್ನು ಈ ಲಖನೌ ಮುಸಲ್ಮಾನ ವ್ಯಾಪಾರಿಯು ಕೇಳಿ "ವಂದೇ ಮಾತರಂ" ಎಂದು ಗಟ್ಟಿಯಾಗಿ ಕೂಗಿದನು. ನಾನು ಹೀಗೇಕೆ ಹೇಳಿದರೆಂದು ಆತನನ್ನು ಕೇಳಲು ಆ ವ್ಯಾಪಾರಿಯು ಹೀಗೆ ಹೇಳಿದನು—

"ಇಲ್ಲಿ ಇರಾಣಿ, ತುರ್ಕಿ, ಅರಬಿ ಜನರು ಹಿಂದುಸ್ಥಾನದವರಾದ ನಮ್ಮನ್ನು ಬಹು ದ್ವೇಷಿಸುತ್ತಾರೆ. ಅವರಿಗೆ ನಾನು ಹಿಂದುಸ್ಥಾನದವನಿದ್ದೇನೆಂದು ತೋರಿಸಿಕೊಡಲು ನನ್ನಲ್ಲಿ "ವಂದೇ ಮಾತರಂ" ಎಂಬುದರ ಹೊರತು ಇನ್ನೇನಿದೆ? ಅದಕ್ಕೆ ನಾನು ಹಾಗೆ ಹೇಳುತ್ತೇನೆ"

### ಮಸೀದೆಯ ಮೇಲೆ ರಾಷ್ಟ್ರಧ್ವಜ.

ಬಗದಾದ ಪಟ್ಟಣದಲ್ಲಿ ನಾನು ಹೋಗುತ್ತಿದ್ದಾಗ ಒಬ್ಬ ಬೆಣ್ಣೆಯ ವ್ಯಾಪಾರಿಯು ನನ್ನನ್ನು ಕಂಡು "ಬಾಬು ಇಧರ ಆವೊ" ಎಂದು ಕರೆದನು. ನಾನು ಹೋಗಲು ನೀವು ಸ್ವಲ್ಪ ಬೆಣ್ಣೆಯನ್ನು ಸೇವಿಸುವಿರಾ? ಎಂದು ಆದರದಿಂದ ಕೇಳಿದನು. ತೆಗೆದುಕೊಳ್ಳಲು ಅಡ್ಡಿಯಿಲ್ಲ. ಇದರ ಕ್ರಯವೆಷ್ಟು ತಿಳಿಸಿರೆಂದು ಕೇಳಲು ಆತನು ಸಂತೋಷದಿಂದ "ವಂದೇ ಮಾತರಂ" ವಂದೇ ಮಾತರಂ ಹೇಳುತ್ತಾ ನೀವು ಕ್ರಯ ಕೊಡಬೇಡಿರಿ. ಅರಬ ವ್ಯಾಪಾರಿಗಳು ನನ್ನ ಮೇಲೆ ಬಹಿಷ್ಕಾರಹಾಕಿದ್ದಾರೆ. ನೀವು ಹಿಂದುಸ್ಥಾನದವರು, ನಾನೂ ಹಿಂದುಸ್ಥಾನದವನು. ನಿಮಗೆ ಸತ್ಕಾರಮಾಡುವುದರಿಂದ ನನಗೆ ಸಂತೋಷವಾಗುತ್ತದೆ. ನೀವು ಕ್ರಯ ಕೊಡಬೇಡಿರಿ. ಎಂದು ಹೇಳಿ ಬೆಣ್ಣೆ ಕೊಟ್ಟನು. ನಾನು ಹೊರಟು ಬರುವಾಗ "ಸಲಾಂ ಅಲೇಕಂ" ಎಂದು ಹೇಳದೆ ವಂದೇ ಮಾತರಂ ಎಂದು ಹೇಳಿದನು.

ತುರ್ಕಸ್ಥಾನದ ಅದಾನಿ ಪಟ್ಟಣದಲ್ಲಿ ಸಾಧಾರಣ ೫೦ ಹಿಂದಿ ಮುಸಲ್ಮಾನರಿದ್ದಾರೆ ಅವರು ಒಂದು ಮಸೀದಿಯನ್ನು ಕಟ್ಟಿಸಿದ್ದಾರೆ. ಅದರ ಮೇಲೆ ತುರ್ಕಿ ಭಾಷೆಯಲ್ಲಿ ವಂದೇ ಮಾತರಂ ಎಂದು ಬರೆದಿದ್ದಾರೆ. ಮತ್ತು ರಾಷ್ಟ್ರೀಯ ಧ್ವಜವನ್ನು ನಿಲ್ಲಿಸಿದ್ದಾರೆ.

ವ್ಹಿಯನ್ನಾದಲ್ಲಿ ನಾನು ಒಂದು ವ್ಯಾಖ್ಯಾನ ಮಾಡಿದೆನು. ಆ ಕಾಲಕ್ಕೆ ಕೂಡಿದ್ದ ಅಮೇರಿಕನ್ ಜನರು "ಹಿಪ್ಪ ಹಿಪ್ಪ ಹುರ್ರೋ" ಎಂದು ಹೇಳಿದರು. ಹಿಂದುಸ್ಥಾನದವರು "ವಂದೇ ಮಾತರಂ" ಎಂದು ಹೇಳಿದರು.

ಚೀನ ದೇಶದ ಅನಾತಂಗ ಎಂಬ ಪಟ್ಟಣದಲ್ಲಿ ಒಬ್ಬ ವೃದ್ಧ ಮುಸಲ್ಮಾನನನ್ನು ಕಂಡೆನು ಅತನು ಹಿಂದುಸ್ಥಾನದವನು. ಅತನು ಗದರ ಪಕ್ಷದಲ್ಲಿ ಸೇರಿದವನಾಗಿರುವುದರಿಂದ ಸ್ವದೇಶಕ್ಕೆ ಬರುವಂತಿಲ್ಲ. ಅತನಿಗೇನೋ ಈ ದೇಶಕ್ಕೆ ಬರಬೇಕೆಂಬ ಇಚ್ಛೆ ಬಹಳ. ಆ ದೇಶದ ರಾಷ್ಟ್ರೀಯ ಗೀತೆಯನ್ನು ಕೇಳಿದಾಗಲೆಲ್ಲಾ ಈ ಮುದುಕನು ವಂದೇಮಾತರಂ ಎಂದು ಹೇಳುತ್ತಿರುತ್ತಾನೆ. ನನ್ನ ದೇಶದ ಸ್ಮರಣೆಗೆ ಇಲ್ಲಿ ಇದೇ ಒಂದು ಮಂತ್ರವಿದೆಯೆಂದು ಅತನು ಹೇಳಿದನು."

ಇಂಥ ಹಿಂದಿಯರ ಪ್ರೇಮದ ಜಗದ್ವ್ಯಾಪಿ ವಂದೇ ಮಾತರಂ ಗೀತೆಯನ್ನು ಬಿಡುವುದು ಮುಸಲ್ಮಾನರಿಗಾದರೂ ಘಾತಕವಲ್ಲವೆ?

# ಮತ ಪ್ರಚಾರಕರು ಹಿಂಜರಿಯಬಾರದು.



## ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣ.

ಯಾವ ಕಾಲದಲ್ಲಿ ಯಾವ ಮತವನ್ನು ಎಂತಹ ಮಹಾ ವಿಭೂತಿಯು ಬೋಧಿಸಿದರೂ ಅದನ್ನು ಕೇಳಿದವರೆಲ್ಲರೂ, ಅನುಸರಿಸಿದವರೆಲ್ಲರೂ ಅದೇ ಪ್ರಕಾರ ನಡೆಯುತ್ತಾರೆಂದು ತಿಳಿಯಬಾರದು. ಹಾಗೆ ಜನರು ನಡೆಯುವುದಿಲ್ಲವಲ್ಲಾ ಎಂದು ಮತಪ್ರಚಾರಕರು ತಮ್ಮ ಮತಪ್ರಚಾರದ ಪವಿತ್ರ ಕಾರ್ಯವನ್ನು ಬಿಟ್ಟು ಬಿಡಬಾರದು.

ಹಿಂದಕ್ಕೆ ಭಗವಾನ್ ಬುದ್ಧದೇವನ ಕಾಲದಲ್ಲಾಗಲಿ ಅಥವಾ ಮಹಾನುಭಾವರಾದ ಬಸವಣ್ಣನವರ ಕಾಲದಲ್ಲಾಗಲಿ ಇಲ್ಲವೆ ಈಗ ಮಹಾತ್ಮಾ ಗಾಂಧಿಯವರ ಕಾಲದಲ್ಲಾಗಲಿ ವಿಚಾರಕ್ರಾಂತಿಯನ್ನುಂಟುಮಾಡಲು ಮತಪ್ರಚಾರಕಾರ್ಯ ನಡೆದುದು ಸರಿಯಷ್ಟೆ. ಈ ಅದ್ಭುತ ಕಾರ್ಯ ನಡೆದಾಗ ಎಲ್ಲರೂ ಆಯಾಯ ತತ್ವಗಳನ್ನು ಸಂಪೂರ್ಣವಾಗಿ ಅನುಸರಿಸುವವರು ದೊರೆಯುವುದು ಅಶಕ್ಯ. ಆ ತತ್ವಗಳು ಧ್ಯೇಯವಾಗಿರತಕ್ಕವುಗಳು. ಅವುಗಳನ್ನು ತಮ್ಮ ದೃಷ್ಟಿಯಮುಂದಿಟ್ಟುಕೊಂಡು ಪ್ರತಿಯೊಂದು ವ್ಯಕ್ತಿಯೂ ತನ್ನ ಮನ, ಬುದ್ಧಿ, ಶಕ್ತಿಗಳಂತೆ ಅನುಸರಿಸುತ್ತ ಹೋಗಬೇಕಾಗುತ್ತದೆ. ವ್ಯಕ್ತಿಗಳೆಲ್ಲಾ ಭಿನ್ನ ಭಿನ್ನ ಮನ, ಬುದ್ಧಿ, ಶಕ್ತಿಗಳ ಅಂತಸ್ತುಗಳುಳ್ಳವರಾಗಿರುವುದರಿಂದ ಎಲ್ಲರಿಗೂ ಒಂದೇ ಕಾಲದಲ್ಲಿ ಒಂದೇ ವಿಧವಾದ ನಡವಳಿಕೆಯು ಸಾಧಿಸಲಾರದು. ಹಾಗೆ ಸಾಧಿಸದಿದ್ದ ಮಾತ್ರದಿಂದ ಮತಪ್ರಚಾರವು ವ್ಯರ್ಥವಾಯಿತೆಂದು ತಿಳಿಯಬಾರದು. ಹನ್ನೆರಡನೆಯ ಶತಮಾನದಲ್ಲಿ ಶ್ರೀ. ಬಸವಾದಿ ಶರಣರು ಅತ್ಯದ್ಭುತವಾದ ಧಾರ್ಮಿಕ ಕ್ರಾಂತಿಯನ್ನುಂಟುಮಾಡಿದ್ದರಷ್ಟೆ. ಆಗ ಈ ಪ್ರಶ್ನೆಯು ಅವರ ಮುಂದೆ ಬಂದಿರಬೇಕು. ಅಂತೆಯೇ ಶಿವಾನುಭವ ಮಂಟಪದಲ್ಲಿ ಶ್ರೀ ಚೆನ್ನಬಸವಣ್ಣನವರು ಈ ಕೆಳಗಿನ ವಚನದ ಮೂಲಕ ಜನರ ಸ್ಥಿತಿಯನ್ನು ತಿಳಿಸಿದ್ದಾರೆ.

ಬಟ್ಟಬಯಲೆಲ್ಲ ಗಟ್ಟಿಗೊಂಡಡೆ, ಸ್ವರ್ಗ ಮರ್ತ್ಯ ಪಾತಾಳಕ್ಕೆ ತಾವಿನ್ನೆಲ್ಲಿಹದೊ ? ಮೇಘ ಜಲವೆಲ್ಲ ಮುತ್ತಾದಡೆ ಸಪ್ತಸಾಗರಂಗಳಿಗೆ ಉದಕವಿನ್ನೆಲ್ಲಿಹದೊ? ಕಷ್ಟ ಜೀವ ಮನುಜರೆಲ್ಲ ನೆಟ್ಟನೆ ಶಿವಜ್ಞಾನಿಗಳಾದೊಡೆ, ಮುಂದೆ ಭವದ ಬಳ್ಳಿಗೆ ಬೀಜವಿನ್ನೆಲ್ಲಿಹದೊ? ನಮ್ಮ ಕೂಡಲ ಚನ್ನಸಂಗಯ್ಯನಲ್ಲಿ ಸಾವಿರಕೊಬ್ಬ ಸತ್ಯ, ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣ.

ಆಕಾಶವು ಗಟ್ಟಿಯಾಗಿಬಿಟ್ಟರೆ ಲೋಕಾಂತರಗಳೆಲ್ಲಿ ? ಎಲ್ಲ ಮಳೆಗಳ ನೀರೆಲ್ಲಾ ಮುತ್ತಾದರೆ ಸಮುದ್ರಗಳಿಗೆ ನೀರೆಲ್ಲಿ ? ನಾನಾ ಕಷ್ಟಗಳನ್ನನುಭವಿಸುತ್ತಿರುವ ಜನರೆಲ್ಲರೂ ಈ ಮತದ ತತ್ವಗಳಂತೆಯೇ ನಡೆದು ಶಿವಜ್ಞಾನಿಗಳಾದರೆ ಮುಂದೆ ಹುಟ್ಟುವವರಾರು ? ಆದಕಾರಣ ಇವೆಲ್ಲಾ ಅಶಕ್ಯ. ನಮ್ಮ ಮತಾಚಾರಗಳಂತೆ ಸತ್ಯವಾಗಿ ನಡೆಯುವವರು ಸಾವಿರಕ್ಕೊಬ್ಬರು. ನಿಜವಾದ ಶಿವಭಕ್ತನು ಲಕ್ಷ ಜನರಲ್ಲಿ ಒಬ್ಬನು ದೊರೆಯುವನು. ಶರಣನಂತೂ ಕೋಟಿ ಜನಗಳಲ್ಲಿ ಒಬ್ಬನು.

ಹೀಗೆ ನಿಜವಾದ ಭಕ್ತ ಮತ್ತು ಶರಣರು ಅಪೂರ್ವವೆಂದು ಮತಪ್ರಚಾರವನ್ನೇನಾದರೂ ಬಿಡಬಹುದೆ? ಸತ್ಯ ಸಂಧರು ಯಾರಿದ್ದಾರೆಂದು ಸತ್ಯದ ವಿಷಯದಲ್ಲಿ ನಿಷ್ಠೆಯುಳ್ಳವರಾಗಿರಬೇಕಾದುದು ಅಗತ್ಯವೆಂದು ಹೇಳಬಾರದೆ? ಅಂಥ ಮಹಾ ಶಿವಶರಣರ ಕಾಲದಲ್ಲಿ ಅವರು ಮತಪ್ರಚಾರ ಮಾಡುತ್ತಿದ್ದಾಗಲು ಕೂಡಾ ನಿಜ ಭಕ್ತರು ಅಷ್ಟು ಅಪೂರ್ವವಾಗಿದ್ದರು. ಎಂದಮೇಲೆ ಈಗಲಾದರೂ ಹಾಗೆಯೇ ಇರುವುದು ಸ್ವಾಭಾವಿಕ.

ಜನಾಂಗದಲ್ಲಿರತಕ್ಕ ಈ ಸ್ಥಿತಿಯನ್ನು ತಿಳಿದುಕೊಂಡೇ ಯಾವ ಕಾಲದಲ್ಲಾದರೂ ಎಲ್ಲಾ ಮತಪ್ರಚಾರಕರು ತಮ್ಮ ತಮ್ಮ ತತ್ವಗಳನ್ನು ಪ್ರಚಾರಗೊಳಿಸುತ್ತಲೇ ಇರಬೇಕು. ನಿಜವಾದ ತತ್ವನಿಷ್ಠರೆಲ್ಲಿದ್ದಾರೆಂದೂ ನಮ್ಮ ಪ್ರಚಾರವು ವ್ಯರ್ಥವಾಗುವುವೆಂದೂ ತಿಳಿದು ಹಿಂಜರಿಯಬಾರದು. ನ್ಯಾಯವಾದ ರೀತಿಯಲ್ಲಿ ಮಾಡುತ್ತಿರುವ ಕ್ಷೇಮಕರವಾದ ತತ್ವಗಳ ಪ್ರಚಾರವು ಜನಾಂಗದ ನಾಗರಿಕತೆಯನ್ನು ಅತ್ಯಲ್ಪ ಪ್ರಮಾಣದಿಂದಲಾದರೂ ಹೆಚ್ಚಿಸುತ್ತಲೇ ಹೋಗುವುದು.

## ಶ್ರೀ ಸೂಗೂರು ಶಾಸ್ತ್ರಿಗಳ ನಿಧನ.

ಕಲ್ಲೂರು ಸೂಗೂರು ಶಾಸ್ತ್ರಿಗಳು ಇದೇ ಪುಷ್ಯ ಬ|| ೫ ಗುರುವಾರ ಸಾಯಂಕಾಲ (ರಾಯಚೂರಲ್ಲಿ) ಸ್ವರ್ಗಸ್ಥರಾದರೆಂದು ತಿಳಿಸಲು ಅತ್ಯಂತ ವಿಷಾದವೆನಿಸುತ್ತದೆ. ಇವರು ಸಂಸ್ಕೃತದಲ್ಲಿ ಚನ್ನಾಗಿ ಪರಿಶ್ರಮವುಳ್ಳವರಿದ್ದು ಯಾವಾಗಲು ಸಮಾಜ ಕಾರ್ಯಗಳಲ್ಲಿ ತನು ಮನದಿಂದ ದುಡಿಯುತ್ತಿದ್ದರು. ಸಮಾಜದ ಏಳ್ಗೆಯ ಕಾರ್ಯಗಳನ್ನು ಮಾಡಲು ಹಳ್ಳಿಗಳ ಪ್ರಮುಖರಿಗೆ ಪ್ರೋತ್ಸಾಹವನ್ನು ಕೊಡುತ್ತಿದ್ದರು. ರಾಯಚೂರಿನಲ್ಲಿ ಜರುಗಿದ ೧೨ ನೇ ವೀರಶೈವ ಮಹಾ ಸಭೆಯಲ್ಲಿ ಪ್ರತಿ ಒಂದು ಕಾರ್ಯದಲ್ಲಿಯೂ ಭಾಗವಹಿಸಿ ದುಡಿದದ್ದನ್ನು ನೋಡಿದರೆ ರಾಯಚೂರು ಜಿಲ್ಲೆಯ ವೀರಶೈವರು ಇವರನ್ನು ಮರೆಯುವಂತಿಲ್ಲ. ಶ್ರೀ ಪರಮೇಶ್ವರನು ಮೃತರ ಆತ್ಮಕ್ಕೆ ಶಾಂತಿಯನ್ನೀಯಲೆಂದು ನಾನು ಪ್ರಾರ್ಥಿಸುತ್ತೇನೆ.

ವಿರೂಪಾಕ್ಷಗೌಡ ವಕೀಲ ಹೈಕೋರ್ಟ
ರಾಯಚೂರು.

## ಶುದ್ಧೀ ಸಮಾರಂಭ.

ನಿಜಾಮ ಇಲಾಖಾ ಪಾಯಗಾ ಹುಡಗಿ ಗ್ರಾಮದಲ್ಲಿ ಶ್ರೀ. ನಾಗಪ್ಪಾ ನೇಮಾಜಿ ಇವರ ಸಂಗಡ ಬಹು ಕಾಲದಿಂದ ಪಂಕ್ತಿ ವ್ಯವಹಾರ ಇಲ್ಲದ್ದರಿಂದ ಪುಷ್ಯ ಬ|| ೫ ದಿವಸದಲ್ಲಿ ಅವಂಗೆ ಶ್ರೀಮಾನ್ ಪೂಜ್ಯ ಮಡಿವಾಳ ಸ್ವಾಮಿಗಳವರಿಂದ ದೀಕ್ಷಾಸಂಸ್ಕಾರವನ್ನು ಮಾಡಿಸಿ ಶ್ರೀ ಮದ್ವೀರಶೈವ ತರುಣ ಸಂಘವು ಯಾವ ತರದ ಭೇದಭಾವವಿಲ್ಲದೆ ಸಹಭೋಜನ ಸಮಾರಂಭ ಜರುಗಿಸಿತು. ಪ್ರಮುಖ ಜನರ ಪೈಕಿ ಶ್ರೀಮಾನ್ ಶಿವಶಂಕರ ಪಾಟೀಲ ಕರಬಸಪ್ಪಾ ಮುಗಳಿ, ಗುರುಪಾದಪ್ಪಾ ಶಿವರಡ್ಡಿ, ಮಾಣಿಕಪ್ಪಾ ದಾನಪ್ಪ, ಜನ್ನಮಲ್ಲಪ್ಪ, ಮಲಶೆಟ್ಟಿ, ಅಡಿವೆಪ್ಪಾ ಸಿಧಣ ಕರಿಯಪ್ಪಾ ಭಾಗೀರಥಿ ಇವರಲ್ಲದೆ ಅನೇಕ ಪ್ರಮುಖರು ಕೂಡಿದ್ದರು.

ಸೆಕ್ರೆಟರಿ
ಕರಬಸಪ್ಪ ಮುಗಳಿ.

## ಭೋಸಲಾ ಮಿಲಟರಿ ಸ್ಕೂಲಿನ ಅಪೂರ್ವ ಪ್ರಗತಿ.

ಹಿಂದು ಸಮಾಜವು ಈಗ ದುರ್ಬಲ ಮತ್ತು ಪ್ರತಿಕಾರ ಶೂನ್ಯವಾದುದಾಗಿರುವುದರಿಂದ ಇದರಲ್ಲಿ ತನ್ನ ಅಸ್ತಿತ್ವಕ್ಕಾಗಿಯಾದರೂ ಬೇಕಾಗುವಷ್ಟು ಬಲ ಸಾಹಸ ಶೌರ್ಯಗಳನ್ನುಂಟುಮಾಡಲು ಪ್ರಯತ್ನಿಸುವ ಹಿಂದುಸ್ಥಾನದ ಪ್ರಮುಖರಲ್ಲಿ ಡಾ. ಮುಂಜೆಯವರು ಅಗ್ರಗಣ್ಯರೆಂದು ಹೇಳಬಹುದು. ಇವರು ಹಿಂದು ಸಮಾಜದಲ್ಲಿ ನಿಜವಾದ ಶೌರ್ಯೋತ್ಸಾಹಗಳನ್ನು ಉಂಟುಮಾಡಲು ನಾಶಿಕದಲ್ಲಿ "ಭೋಸಲಾ ಮಿಲಟರಿ ಸ್ಕೂಲ್" ಎಂಬ ಒಂದು ಯುದ್ಧ ವಿದ್ಯಾಲಯವನ್ನು ಸ್ಥಾಪಿಸಿದ್ದಾರೆ. ಈ ಮಹತ್ಕಾರ್ಯಕ್ಕೆ ಶ್ರೀಮಂತ ದಾನಶೂರ ಪ್ರತಾಪ ಶೇಟಜಿಯವರು ಒಂದು ಲಕ್ಷ ರೂ. ಗಳನ್ನು ಕೊಟ್ಟು ದಾನಶೂರರಿಗೆ ಮಾರ್ಗದರ್ಶಿಗಳಾಗಿದ್ದಾರೆ.

ಈ ವಿದ್ಯಾಲಯವು ಸ್ಥಾಪನೆಯಾಗಿ ಆರು ತಿಂಗಳುಗಳಾದವು. ಇಷ್ಟರಲ್ಲೇ ಇದರ ಪ್ರಗತಿಯು ಅತ್ಯಂತ ಉತ್ಸಾಹಜನಕವಾದುದಾಗಿದೆ. ಹಿಂದುಸ್ಥಾನದ ನಾನಾ ಭಾಗಗಳಿಂದ ಶಿಕ್ಷಣಕ್ಕಾಗಿ ವಿದ್ಯಾರ್ಥಿಗಳು ಹೆಚ್ಚಾಗಿ ಬರಲಾರಂಭಿಸಿದ್ದಾರೆ. ವಿದ್ಯಾಲಯದಲ್ಲಿ ಶಿಕ್ಷಣಕ್ಕೆ ಅವಕಾಶವಿಲ್ಲದ್ದರಿಂದ ಅನೇಕರು ನಿರಾಶರಾಗಿ ಹೋಗುತ್ತಿದ್ದಾರೆ. ಈಗಿರತಕ್ಕ ವಿದ್ಯಾರ್ಥಿಗಳಲ್ಲಿ ಪಂಜಾಬ, ರಂಗೂನ, ರತ್ನಾಗಿರಿ, ಮದ್ರಾಸ್ ಈ ಭಾಗಗಳ ವಿದ್ಯಾರ್ಥಿಗಳು ಕೂಡಾ ಇದ್ದಾರೆ. ಈ ಪ್ರಕಾರ ಇದು ಅಖಿಲ ಹಿಂದುಸ್ಥಾನದ ವಿದ್ಯಾಲಯವೇ ಆಗಿದೆ.

ಈಗ ಈ ವಿದ್ಯಾಲಯಕ್ಕೆ ೭೫ ಎಕರೆ ಜಾಗವಿದೆ. ಇನ್ನೂ ಒಂದನೂರು ಎಕರೆ ಜಾಗವನ್ನು ಸಂಸ್ಥೆಯವರು ತೆಗದುಕೊಳ್ಳಬೇಕೆಂಬ ಇಷ್ಟವುಳ್ಳವರಾಗಿದ್ದಾರೆ. ಬಹು ಸೊಗಸಾದ ನೀರು ವಿಪುಲವಾಗಿರತಕ್ಕ ಒಂದು ಬಾವಿಯುಳ್ಳ ಸ್ಥಳವು ವಿದ್ಯಾಲಯಕ್ಕೆ ದೊರಿತುದರಿಂದ ನೀರಿನ ಅನಾನುಕೂಲವೇ ಇಲ್ಲದಂತಾಗಿದೆ ಬಾವಿಗೆ ಆಯಿಲ್ ಇಂಜನ್ ಹಚ್ಚಿ ನಲ್ಲಿಗಳಿಂದ ಎಲ್ಲಾ ಕಡೆಗೂ ನೀರಿನ ಸೌಲಭ್ಯವನ್ನು ಉಂಟುಮಾಡಿದ್ದಾರೆ.

ಈ ವಿದ್ಯಾಲಯದ ಮಧ್ಯ ಭಾಗದಲ್ಲಿ ಬಹು ಉನ್ನತವಾದ ಕಾವಿ ನಿಶಾನೆಯು ಶೋಭಿಸುತ್ತಾ ಇದೆ. ಇಲ್ಲಿ ಈಗ ೯೦ ವಿದ್ಯಾರ್ಥಿಗಳಿದ್ದಾರೆ. ಇವರು ೯ ವರುಷಗಳಿಂದ ೧೬ ವರುಷಗಳೊಳಗಿನವರು. ದೊಡ್ಡ ವಿದ್ಯಾರ್ಥಿಗಳಿಗೆ ತಿಂಗಳಿಗೆ ೩೦ ರೂ. ಸಣ್ಣ ವಿದ್ಯಾರ್ಥಿಗಳಿಗೆ ತಿಂಗಳಿಗೆ ೨೫ ರೂ. ಪ್ರಕಾರ ತಿಂಗಳ ವೆಚ್ಚ ಕೊಡಬೇಕಾಗುತ್ತದೆ. ಇದರಲ್ಲಿಯೇ ಊಟ, ಬಟ್ಟೆ, ಪುಸ್ತಕ ಉಪಕರಣ ಮೊದಲಾದವುಗಳ ವೆಚ್ಚ ನಡೆಯುತ್ತದೆ.

ಮೇಜರ್ ಜಾಧವ ಸುಭೇದಾರ ಎಂಬುವವರೇ ಸೈನ್ಯ ಶಿಕ್ಷಕರಲ್ಲಿ ಮುಖ್ಯರು. ಇವರು ಸೈನ್ಯ ಶಾಖೆಯಲ್ಲಿ ಅಧಿಕಾರಿಗಳಾಗಿದ್ದರು. ಬೌದ್ಧಿಕ ಮತ್ತು ಶಾರೀರಿಕ ಶಿಕ್ಷಣವೂ ಸರಿಯಾದ ರೀತಿಯಲ್ಲಿ ಕೊಡಲಾಗುತ್ತದೆ. ಹಿಂದಿ ಭಾಷೆಯೇ ಮುಖ್ಯ ಭಾಷೆಯು. ಒಟ್ಟು ೧೧ ಜನ ಶಿಕ್ಷಕರಿದ್ದಾರೆ. ಧನ ಸಹಾಯದ ಅಗತ್ಯ ವಿಶೇಷವಾಗಿದೆ. ಹಿಂದು ಧನಿಕರು ಇತ್ತ ಲಕ್ಷಿಸಿ ಸಹಾಯಮಾಡಿದ್ದಾದರೆ ೩೦೦ ವಿದ್ಯಾರ್ಥಿಗಳು ಸ್ವಲ್ಪ ಕಾಲದಲ್ಲಿಯೇ ಕೂಡಬಹುದು. ಅಷ್ಟು ಸೌಲಭ್ಯ ಮತ್ತು ಸಿದ್ಧತೆಗಳಿವೆ ಶ್ರೀ. ಪ್ರತಾಪ ಶೇಟಜಿಯವರು ಈ ವಿದ್ಯಾಲಯದ ಹತ್ತಿರವೇ ಬಂದು ವಾಸವಾಗುವವರಿದ್ದಾರೆ.

## ಶಾಸನಭಂಗದ ಕಾಲಕ್ಕೆ

ಸರಕಾರಕ್ಕೆ ಸೇರಿದ್ದ ಜಮೀನು ಮೊದಲಾದವುಗಳ ಬಿಡುಗಡೆಯ ವಿವರ.

### ಕರ್ನಾಟಕ.

ಅಂಕೋಲಾ ಶಾಂತತಾ ದೇವಿಯ ಮಂದಿರದ ರೂ. ೯೪-೬-೫ ಶಿರಸಿ ಮಾರಿದೇವಿ ಮಂದಿರದ ರೂ. ೨೪ ರೂಪಾಯಿಗಳು ಮತ್ತು ಸಿದ್ದಾಪುರದ ಗಣೇಶಮಂದಿರದ ರೂ. ೪೦-೦-೦ ಇವು ಪುನಃ ಕೊಡಲ್ಪಡಬೇಕು.

ಬದಾಮಿಯ ಶ್ರೀ ಬಂಡಭಟ್ಟ ಜೋಶಿ ಇವರ ಉಂಬಳಿ ಬಾಗಲಕೋಟೆಯ ಶ್ರೀ ಹನುಮಂತ ಭಿಕಾಜಿ ಕುಲಕರ್ಣಿ ಇವರ ವತನು, ಚಿಕ್ಕೋಡಿ ಶ್ರೀ ದಾದಾರಾಮಚವ್ಹಾಣ ಇವರ ಸನದಿ ಮತ್ತು ಕೋಡದ ಶ್ರೀ ಲಿಂಗನಗೌಡ ಬಸನಗೌಡ ಪಾಟೀಲ ಇವರ ಪಾಟೀಲಿ ವತನ ಪುನಃ ಕೊಡಲ್ಪಡಬೇಕು.

# ಕರ್ನಾಟಕ ಸಮಾಚಾರ.

—ಹುಬ್ಬಳ್ಳಿ ಮುನಸಿಪಾಲ್ಟಿಯ ಮೇಲೆ ತಾ. ೨೬-೧-೩೮ ನೆಯ ರಾತ್ರಿ ೮ ಗಂಟೆಗೆ ರಾಷ್ಟ್ರಧ್ವಜ ನಿಲ್ಲಿಸಲಾಯಿತು. ಆದರೆ ಅದರ ಸದ್ದು ಮಾತ್ರ ಯಾರಿಗೂ ಕೇಳಬರಲಿಲ್ಲ.

—ತಾ. ೨೬ ನೆಯ ದಿನ ಕರ್ನಾಟಕದ ಅನೇಕ ಪ್ರಮುಖ ಸ್ಥಳಗಳಲ್ಲಿ ಸ್ವಾತಂತ್ರ್ಯದಿನವು ಆಚರಿಸಲ್ಪಟ್ಟಿತು.

—ತಾ. ೨೬ ನೆಯ ದಿನ ಡಾ. ಹರ್ಡೀಕರರು ಬಾಗಲಕೋಟೆಯ ಸೇವಾದಲದ ಕಟ್ಟಡವನ್ನು ಸ್ವಾಧೀನಪಡಿಸಿಕೊಂಡು ರಾಟೆ ಸಂಘದ ಕಾರ್ಯಕ್ಕೆ ಶ್ರೀ. ಕೌಜಲಗಿ ಹನುಮಂತರಾಯರ ಕಡೆಗೆ ತಾತ್ಕಾಲಿಕವಾಗಿ ಕೊಟ್ಟಿದ್ದಾರೆ.

—ತಾ. ೩೦ ನೆಯ ದಿವಸ ಅಮರಗೋಳದಲ್ಲಿ ರಾಜಕೀಯ ಪರಿಷತ್ತು ಕೂಡಿತ್ತು.

—ಕಳೆದ ೨೫ ನೆಯ ತಾರೀಖಿನ ದಿವಸ ಮೈಸೂರಿನ ಶ್ರೀ. ಹೆಚ್. ಸಿ. ದಾಸಪ್ಪನವರನ್ನು ರಾಜದ್ರೋಹದ ಆಪಾದನೆಯ ಮೇಲೆ ಕೈಸೆರೆ ಮಾಡಿದರು. ಇವರು ಕಾಂಗ್ರೆಸ್ ನಾಯಕರ ಅಡಿಯಲ್ಲಿಯೇ ಅಡಿಯಿಟ್ಟು ಮುಂದೆ ಹೋಗಬೇಕಾಗಿ ಹೇಳಿದರು. ದೇಶವೇ ನಮ್ಮ ದೇವರಾದುದರಿಂದ ಅದರ ಸೇವೆ ಮಾಡಲು ತರುಣರಿಗೆ ಸಂದೇಶಕೊಟ್ಟರು.

—ಮೈಸೂರು ಮಹಾರಾಜಾ ಕಾಲೇಜಿನ ನಿಶಾನೆ ಕಟ್ಟೆಯ ಮೇಲೆ ತಾ. ೨೬ ನೆಯ ದಿನ ಪ್ರಾತಃಕಾಲ ಯಾರೋ ರಾಷ್ಟ್ರಧ್ವಜವನ್ನು ನಿಲ್ಲಿಸಿದ್ದರು. ಅನಂತರ ೯ ಗಂಟೆಯ ಸಮಯದಲ್ಲಿ ಅಧ್ಯಾಪಕರು ಅದನ್ನು ತೆಗೆದರು.

—ಹುಬ್ಬಳ್ಳಿ ಇಲೆಕ್ಟ್ರಿಕ್ ಕಂಪನಿ ವ್ಯಾಜ್ಯವು ಶ್ರೀ. ಅಮಟೆಯವರಂತೆ ಹೈಕೋರ್ಟಿನಲ್ಲಿ ತೀರ್ಮಾನವಾಯಿತು.

—ವಿಜಾಪುರ ಜಿಲ್ಲಾ ಕಾಂಗ್ರೆಸ್ ಮೆಂಬರರ ಚುನಾವಣೆ ನಿರ್ಣಯವನ್ನು ಶ್ರೀ. ವ್ಹಿ. ವ್ಹಿ. ಪಾಟೀಲ ಶ್ರೀ. ವ್ಹಿ. ಜಿ. ಹಿರೇಮಠ ಮತ್ತು ಶ್ರೀ. ಮತ್ತಿಹಳ್ಳಿ ರಾಘವೇಂದ್ರರಾವ ಈ ಮೂವರು ಮಾಡಬೇಕೆಂದು ಪ್ರಾಂತಿಕ ಕಮಿಟಿಯವರು ಗೊತ್ತುಪಡಿಸಿದ್ದಾರೆ.

—ಹೊಸರಿತ್ತಿ ಜಾತ್ರೆಯಲ್ಲಿ ರಾಷ್ಟ್ರಧ್ವಜವಂದನೆ ಕಾಂಗ್ರೆಸ್ ಕೇಸಗಾರರ ವ್ಯಾಖ್ಯಾನ ಮೊದಲಾದ ರಾಷ್ಟ್ರೀಯ ಕಾರ್ಯಗಳು ಜರುಗಿದವು.

## ಮುಸಲ್ಮಾನರ ತಂಡು

### ಶಾಸನ ಮಂಡಲದ ಕಡೆಗೆ ಬಂದಿತು !

ಸ್ಥಾನಿಕ ಸ್ವರಾಜ್ಯ ಶಾಸನದ ತಿದ್ದುಪಾಟಿನ ಗೊತ್ತುವಳಿಯು ಅ ಸೆಂ ಬ್ಲಿ ಯ ಲ್ಲಿ ನಿರ್ಣಯವಾದಂತೆ ಕೌನ್ಸಿಲ್ಲಿನಲ್ಲಿಯೂ ತಾ. ೨೫-೧-೩೮ ನೆಯ ದಿನ ತರಲ್ಪಟ್ಟಿತು. ಅದರಲ್ಲಿದ್ದ "ಸಂಯುಕ್ತ ಮತದಾರ ಸಂಘ" ಎಂಬುದನ್ನು ತೆಗೆದುಹಾಕಬೇಕಾಗಿ ಸರ್ ಕರೀಮಭಾಯಿ ಇಬ್ರಾಹಿಮ್ ಇವರು ಉಪ ಸೂಚನೆಯನ್ನು ತಂದರು. ಆದರೆ ಅದು ಬಹುಮತವಿಲ್ಲದೆ ಬಿದ್ದುಹೋಯಿತು. ಮುಸ್ಲಿಂ ಸಭಾಸದರು ಕೌನ್ಸಿಲ್ಲನ್ನು ಬಿಟ್ಟು ಹೊರಗೆ ಹೋದರು.

ತಾ. ೨೫-೧-೩೮ ನೆಯ ಸಾಯಂಕಾಲ ೩ ಗಂಟೆಗೆ ೫೦೦ ಮುಸಲ್ಮಾನರ ತಂಡವು ಶಾಸನ ಮಂಡಲದ ಕಡೆಗೆ ಬಂದಿತು. ಸಭಾಗೃಹದ ಮುಂದೆ ನಿಂತು "ಸಂಯುಕ್ತ ಮತದಾರ ಸಂಘಕ್ಕೆ ಧಿಕ್ಕಾರವಿರಲಿ." "ಕಾಂಗ್ರೆಸ್ ಮಂತ್ರಿಮಂಡಲಕ್ಕೆ ಧಿಕ್ಕಾರವಿರಲಿ." "ಮುಸ್ಲಿಂಲೀಗಿಗೆ ಸೇರಿರಿ." ಎಂದು ಕೂಗಿದರು.

ಅಖಿಲ ಭಾರತ ವಸ್ತು ಪ್ರದರ್ಶನದಲ್ಲಿ
ಸುವರ್ಣ ಪದಕಗಳನ್ನು ಮತ್ತು ಸರ್ಟೀಫಿಕೇಟುಗಳನ್ನು ಪಡೆದು ಹೆಸರಾದ
ಇಂಡಿಯಾ ಸರಕಾರದಲ್ಲಿ ರಜಿಸ್ಟರ್ ಆದ

# ಸಿದ್ಧೇಶ್ವರ ಟ್ರೇಝುರಿ ಕಂಪನಿ, ಹುಬ್ಬಳ್ಳಿ.










ನಮ್ಮ "ಸಿದ್ಧೇಶ್ವರ ಟ್ರೇಝುರಿ" ಗಳನ್ನು ಈ ವರಿಗೆ ಕೈಗಾರಿಕೆಯ ಕೆಲಸಗಳಲ್ಲಿ ಹೆಸರಾದ ಯುರೋಪ, ಅಮೇರಿಕಾ ವಗೈರಿ ಪರರಾಷ್ಟ್ರಗಳಲ್ಲಿ ತಯಾರಾಗುವ ಟ್ರೇಝುರಿಗಳ ಪದ್ಧತಿಯ ಮೇರೆಗೆ ಹೊಸ ಉಕ್ಕಿನ ಅಖಂಡ ಒಂದೇ ತಗಡಿನಲ್ಲಿ ೧೨ ಮೂಲೆಗಳನ್ನು ೩೫೦ ಟನ್ ಪ್ರೇಷರ ಕೊಡುವ ಮಶಿನ್ನಿನಿಂದ ಬಗ್ಗಿಸಿ, ರಿವ್ಹಿಟ್ಸ ಮೊದಲಾದ ವುಗಳಿಂದ ಜಾಯಿಂಟ ಮಾಡದೆ ಇಲೆಕ್ಟ್ರಿಸಿಟಿಯಿಂದ ಬೆಸೆದು ತಯಾರಿಸುತ್ತೇವೆ.

ಈ ಹೊಸ ಸುಧಾರಣೆಯಿಂದ ಮಾಡಿದ ತಿಜೋರಿಗಳಿಗೂ ಮತ್ತು ಯಾವದೇ ನಮ್ಮ ಸಾಮಾನಕ್ಕೂ ಯಾವ ತರದ ಭಯವಿಲ್ಲ. ಮತ್ತು ಅವು ಒಳ್ಳೇ ಮಜಬೂತವಾಗಿಯೂ ಸುಂದರವಾಗಿಯೂ ಆಗುತ್ತವೆ. ನಾವು ನಮ್ಮ ತಿಜೋರಿಗಳಿಗೂ ಮತ್ತು ನಮ್ಮಲ್ಲಿ ತಯಾರಾಗುವ ಉಕ್ಕಿನ ಕಪಾಟು, ಕ್ಯಾಶಬಾಕ್ಸ, ಸ್ಟ್ರಾಂಗರೂಮ ಡೋರ್ರುಗಳಿಗೂ ನಮ್ಮ ಕಾರಖಾನೆಯಲ್ಲಿಯೇ ತಯಾರಾಗುವ ಉತ್ತಮವಾದ ಮತ್ತು ಮಜಬೂತವಾದ ಕೀಲಿಗಳನ್ನು ಹಚ್ಚುತ್ತೇವೆ. ಮತ್ತು ಇದಲ್ಲದೆ ನಮ್ಮಲ್ಲಿ ಹೊಸ ಪದ್ಧತಿಯ ಮೇರೆಗೆ ತಯಾರಾಗುವ ಕಾಂಬಿನೇಶನ್ ಕೀ ಲೆಸ್ಸಾ ಲಾಕ್ಸು (ನಂಬರ ಕೀಲಿ) ಗಳನ್ನು ತಿಜೋರಿಗಳಿಗೆ ಹಚ್ಚಿಸಿದರೆ ಆ ತಿಜೋರಿಗಳನ್ನು ಯಾರೂ ತೆಗೆಯಲು ಸಾಧ್ಯವಿಲ್ಲ. ಯಾರಾದರೂ ತೆಗೆದರೆ ಅವರಿಗೆ

**೧೦೦೦ ರೂ. ಬಹುಮಾನ ಕೊಡುವೆವು.**

ನಮ್ಮ ಫಾಯರ ಪ್ರೂಫ್ ತಿಜೋರಿಗಳು ತುಂಬಾ ಖಾತ್ರಿಯಾದವುಗಳಿರುತ್ತವೆ.

**ಈ ಬಗ್ಗೆ ಅನೇಕ ವಸ್ತು ಪ್ರದರ್ಶನಗಳಲ್ಲಿ ಒಳಗೆ ನೋಟು ವಗೈರೆ ಸಾಮಾನುಗಳನ್ನು ಇಟ್ಟು ಕೆಂಪಗೆ ಕಾಸಿದನಂತರ ಒಳಗಿಟ್ಟ ಸಾಮಾನುಗಳು ಸುಡದೆ ಇದ್ದದ್ದನ್ನು ಖಾತ್ರಿ ಮಾಡಿಕೊಟ್ಟಿದ್ದೇವೆ.**

ಧಾರಣೆಗಳ ಬಗ್ಗೆ ನಮ್ಮ ಸಚಿತ್ರ ಕ್ಯಾಟಲಾಗುಗಳಿಗೆ ಬರೆಯಿರಿ.
ಅಥವಾ
ಸಮಕ್ಷಮ ಬಂದಲ್ಲಿ ತಿಳಿಯುವದು.

ತಮ್ಮ ಕಲಾಭಿಮಾನಿ,
ಸಿದ್ಧೇಶ್ವರ ಮತ್ತು ಕಂಪನಿ
ಟ್ರೇಝುರಿ ಮೇಕರ್ಸ
ಹುಬ್ಬಳ್ಳಿ.

ಫ್ಯಾಕ್ಟರಿ ಮತ್ತು ಹೆಡ್ ಆಫೀಸ್-
ಹುಬ್ಬಳ್ಳಿ.

ಬ್ರ್ಯಾಂಚ ಆಫೀಸುಗಳು-
ಹೈದರಾಬಾದ (ಡೆಕ್ಕನ) ಮತ್ತು ಕೊಲ್ಹಾಪುರ (ಲಕ್ಷ್ಮೀಪುರಿ)

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891

# ಶರಣ ಸಂದೇಶ

## The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಿಗಂಜುವವನಲ್ಲ ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೭ ನೆಯ ಫೆಬ್ರವರಿ ೧೯೩೮. | ಸಂಚಿಕೆ೨೪

ಜನಸೇವೆಯೇ ದೇವರಸೇವೆ.

## ಮುಸ್ಲಿಂಲೀಗಿಗೆ ಆಮಂತ್ರಣ.

ಗಾಂಧೀಜಿ ಮತ್ತು ಪಂಡಿತಜಿಯವರು ಬ್ಯಾ. ಜಿನ್ನಾರವರಿಗೆ ಕಾಂಗ್ರೆಸ್ಸಿನಲ್ಲಿ ಸೇರಲು ಮುಸ್ಲಿಂಲೀಗಿನ ಅಭಿಪ್ರಾಯವೇನೆಂಬುದನ್ನು ಸ್ಪಷ್ಟ ತಿಳಿಸಬೇಕಾಗಿ ಪತ್ರ ಬರೆಯುವರು.

### ವಿಜಾಪುರ ಜಿಲ್ಲೆಗೆ ಸಹಾಯ.

ವಿಜಾಪುರ ಜಿಲ್ಲೆಯಲ್ಲಿ ಒಟ್ಟು ೯೨೬ ಹಳ್ಳಿಗಳು ಬರಗಾಲಕ್ಕೆ ತುತ್ತಾಗಿವೆಯೆಂದು ಸರಕಾರವು ಸಾರಿತು. ಬರಗಾಲದ ಕೆಲಸಗಾರರಿಗಾಗಿ ೪೮೭೬೬೩ರೂ. ಸಹಾಯ ಮಾಡುವುದು.

---

### ಪಂಡಿತ ಮಾಲವೀಜಿಯವರು

"ಕಾಯಕಲ್ಪ" ವ್ರತವನ್ನಾಚರಿಸಿ ಮುಪ್ಪಿನ ನಿರ್ಬಲತೆಯನ್ನು ಕಳೆದುಕೊಂಡರು!

---

### ಆಸಾಮ ಪ್ರಾಂತದ ಮಂತ್ರಿಮಂಡಲವು

ರಾಜ್ಯಭಾರವನ್ನು ಪರಿತ್ಯಾಗ ಮಾಡಿದ್ದರಿಂದ ಮುಖ್ಯಮಂತ್ರಿಗಳಾಗಿದ್ದ ಸರ್. ಸಾದುಲ್ಲಾ ಖಾನರೇ ಬೇರೊಂದು ಮಂತ್ರಿಮಂಡಲವನ್ನು ಏರ್ಪಡಿಸಿಕೊಂಡರು.

---

ದೇಹವೇ ದೇವಾಲಯ



# ಶರಣ ಸಂದೇಶ

THE SHARANA SANDESHA.




## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೭ ನೆಯ ಫೆಬ್ರವರಿ ೧೯೩೮. | ಸಂಚಿಕೆ ೨೪


## ಮಹತ್ವದ ಸುದ್ದಿಗಳು.

—ಮಹಾತ್ಮಾ ಗಾಂಧಿಯವರ ಪ್ರಕೃತಿ ಚೆನ್ನಾಗಿ ಸುಧಾರಿಸಿದೆ. ಇದೇ ೯ ನೆಯ ತಾರೀಖಿಗೆ ಹರಿಪುರಕ್ಕೆ ಹೋಗುವರು. ತಾ. ೧೦ ನೆಯ ದಿನ ಖಾದಿ ಪ್ರದರ್ಶನವನ್ನು ತೆರೆಯುವರು.

—ಬ್ಯಾ. ಜಿನ್ನಾರವರಿಗೆ ಅಲಿಗಡದಲ್ಲಿ ಮುಸಲ್ಮಾನ್ ಸಮಾಜದಿಂದ ತಾ. ೬ ನೆಯ ದಿನ ಮಾನಪತ್ರ ಕೊಡಲ್ಪಟ್ಟಿತು.

—ಜಿನ್ನಾ-ರಾಜೇಂದ್ರರ ಒಪ್ಪಂದದಂತೆ ಮುಸ್ಲಿಂ ಲೀಗ್ ಒಪ್ಪುವುದಾದರೆ ಪಂಡಿತ ಜವಾಹರಲಾಲರ ಮೊನ್ನಿನ ಪ್ರಕಟನೆಯ ಪ್ರಕಾರ ಕಾಂಗ್ರೆಸ್ ಮುಸಲ್ಮಾನರೊಂದಿಗೆ ಒಪ್ಪಂದಮಾಡಿಕೊಳ್ಳುವುದೆಂದು ಅನೇಕರ ಊಹೆ.

—ಡಾಕಾದಲ್ಲಿ ಪ್ರಾರಂಭವಾಗಿದ್ದ ರಾಜಕೈದಿಗಳ ಅನ್ನತ್ಯಾಗ ಸತ್ಯಾಗ್ರಹವು ಈಗ ನಿಲ್ಲಿಸಲ್ಪಟ್ಟಿದೆ. ಶ್ರಿ ಮುನಸಿ ಎಂಬವರು ಮಾತ್ರ ಈ ಸತ್ಯಾಗ್ರಹದಿಂದ ಮೃತಪಟ್ಟರು.

—ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಫೆಡರೇಶನ್ನನ್ನು ಸಂಪೂರ್ಣವಾಗಿ ನಿಷೇಧಿಸಿತು. ಆದರಲ್ಲಿ ತೃಪ್ತಿಕರವಾದ ಸುಧಾರಣೆಯಾದರೆ ಸ್ವೀಕರಿಸುವುದಾಗಿ ಅಭಿಪ್ರಾಯಪಟ್ಟಿತು.

—ದಕ್ಷಿಣ ಮಹಾರಾಷ್ಟ್ರ ದಿಗಂಬರ ಜೈನ ಸಮಾಜದವರ ಸಭೆಯು ಸಾಂಗಲಿಯಲ್ಲಿ ಸೇರಿ ತಾವು ಹಿಂದುಗಳಲ್ಲವೆಂದು ಠರಾವು ಮಾಡಿದರು.

—ಲಾತೂರಲ್ಲಿ (ನೈಜಾಮರಾಜ್ಯ) ಅನೇಕ ಪುಂಡ ಮುಸಲ್ಮಾನರು ಅತ್ಯಾಚಾರ ನಡೆಸಿದ್ದಾರಂತೆ. ಕಳೆದ ೧ ನೆಯ ತಾರೀಖಿನ ದಿನ ಇಬ್ಬರು ಹಿಂದುಗಳಿಗೆ ಗಾಯಗೊಳಿಸಿದ್ದರಿಂದ ಅಲ್ಲಿ ಹಿಂದುಗಳು ಅಂಗಡಿಯನ್ನು ಆ ದಿನ ಮುಚ್ಚಿದ್ದರು.

—೧೯೩೬-೩೭ ನೆಯ ವರುಷದಲ್ಲಿ ಹಿಂದುಸ್ಥಾನದ ಪೋಸ್ಟ ಶಾಖೆಯವರಿಗೆ ೧೪॥ ಲಕ್ಷ ರೂ. ಆದಾಯವಾಗಿದೆ. ಈಗಲಾದರೂ ಕಾರ್ಡಿನ ಬೆಲೆ ಕಡಿಮೆ ಮಾಡುವರೆ?

—ಇಂಗ್ಲಿಷ್ ಸರಕಾರದ ಒಪ್ಪಿಗೆಯಿಲ್ಲದೆ ಸಂಸ್ಥಾನಗಳಲ್ಲಿ ಜವಾಬ್ದಾರಿ ಸರಕಾರವನ್ನು ಸ್ಥಾಪಿಸಲಿಕ್ಕೆ ಬರುವುದಿಲ್ಲವೆಂದು ತ್ರಾವಣಕೋರ ಸಂಸ್ಥಾನದ ಮಂತ್ರಿಗಳಾದ ಸರ್. ಸಿ. ಪಿ. ರಾಮಸ್ವಾಮಿ ಅಯ್ಯರವರು ತಿಳಿಸಿದ್ದಾರೆ.

—ನಾನಕಿಂಗದಲ್ಲಿ ಜಪಾನವು ಒಂದು ತಿಂಗಳೊಳಗಾಗಿ ತನ್ನ ಸರಕಾರವನ್ನು ಸ್ಥಾಪಿಸುವುದಂತೆ.

—ಹುಬ್ಬಳ್ಳಿಯ ದಿವಂಗತ ಪ್ರೊ. ಗೋಖಲೆ ಇವರ ತಮ್ಮಂದಿರಾದ ಡಾ. ಟಿ. ಕೆ ಗೋಖಲೆ ಎಂ. ಬಿ. ಬಿ. ಎಸ್. ಇವರು ಕುಮಾರಿ ವಿಮಲಾ ತಿರ್ಕೆ ಎಂಬ ಕನ್ಯೆಯನ್ನು ಮುಂಬೈಯಲ್ಲಿ ಕಳೆದ ೩೦ ನೆಯ ತಾರೀಖಿನ ದಿವಸ ವಿವಾಹವಾದರು. ಆ ಮುಂಚೆ ಆ ಕನ್ಯೆಯು ಕ್ರಿಸ್ತ ಮತದವಳಿದ್ದಳು. ಶುದ್ಧೀಕರಿಸಿ ಹಿಂದು ಧರ್ಮದಲ್ಲಿ ತೆಗೆದುಕೊಂಡು ಈ ಸ್ತುತ್ಯ ವಿವಾಹವನ್ನು ಜರುಗಿಸಿದರು.

—ನಿಜಾಮ ರಾಜ್ಯದಲ್ಲಿ ತಮ್ಮ ಜನರಿಗಾಗುತ್ತಿರುವ ಅಧಿಕಾರಿಗಳ ಹಿಂಸೆಯನ್ನು ನಿಷೇಧಿಸಿ ಆ ವಿಷಯದ ಕಡೆಗೆ ಸರಕಾರವು ಲಕ್ಷಿಸಬೇಕೆಂದು ಮುಂಬೈಯಲ್ಲಿ ಪದ್ಮಸಾಲಿ ಸಮಾಜದವರ ಸಭೆಯು ಕಳೆದ ೯ ನೆಯ ತಾರೀಖಿನ ದಿನ ಕೂಡಿದ್ದಿತು. ನಿಜಾಮಾಬಾದ ಮತ್ತು ಕರೀಮನಗರ ಈ ಜಿಲ್ಲೆಯ ಪದ್ಮಸಾಲಿ ಜನರಿಗೆ ಸ್ಥಳೀಯ ಅಧಿಕಾರಿಗಳಿಂದ ಬಹು ತೊಂದರೆಗಳಾಗುತ್ತವಂತೆ.

—ಶಾಹಿದಗಂಜ ಪ್ರಕರಣದಲ್ಲಿ ಮುಂದೆ ಮುಸಲ್ಮಾನರು ಯಾವ ಪ್ರಕಾರ ಪ್ರಯತ್ನಿಸಬೇಕೆಂಬುದನ್ನು ಯೋಚಿಸಲು ಮುಸ್ಲಿಂ ಲೀಗಿನ ವಿಶೇಷ ಪರಿಷತ್ತನ್ನು ಕೂಡಿಸಬೇಕೆಂದು ಲೀಗಿನವರು ಗೊತ್ತುಮಾಡಿದ್ದಾರೆ.

—ಅಲಿಗಡ ಮುಸ್ಲಿಂ ವಿಶ್ವವಿದ್ಯಾಲಯಕ್ಕೆ ನಿಜಾಮ ಸಾಹೇಬರು ಒಂದು ಲಕ್ಷ ರೂ. ಗಳನ್ನೂ ನಾ. ಆಗಾಖಾನರು ೧ ಲಕ್ಷ ರೂ. ಗಳನ್ನೂ ಕೊಟ್ಟರು. ಈ ವಿದ್ಯಾಪೀಠದ ಉನ್ನತಿಗಾಗಿ ಒಂದು ಕೋಟಿ ರೂ. ಗಳನ್ನು ಕೂಡಿಸುವ ಯೋಚನೆಮಾಡಿದ್ದಾರೆ.

—ಮದ್ರಾಸ ಅಸೆಂಬ್ಲಿಯಲ್ಲಿ ಒಕ್ಕಲಿಗರ ಋಣಮುಕ್ತ ಶಾಸನವು [illegible]

# ಸಮಾಜ ಸುಧಾರಣೆಗೆ ದೇವ ಧರ್ಮಾದಿಗಳು ಬೇಡವೆ ?

( ಲೇಖಕರು— ಶ್ರೀ ಶಿವಯೋಗಿಗಳು ಬಂಥನಾಳ. )

ಸದ್ಯದ ಕಾಲವು ವಿಚಾರ ಸ್ವಾತಂತ್ರ್ಯದ ಕಾಲವು. ಯಾರು ಬೇಕಾದವರು ಬೇಕಾದ ವಿಚಾರಗಳನ್ನು ಬೇಕಾದ ರೀತಿಯಲ್ಲಿ ಪ್ರಚಾರಮಾಡಿದರೂ ಕೂಡಾ ಅದಕ್ಕೆ ಯಾವ ರೀತಿಯ ಅಡಚಣೆಯು ಇರುವುದಿಲ್ಲ, ಹೀಗಿರುವುದೂ ಕೂಡ ಹಿಂದು ತತ್ವದ ಜ್ಞಾನದ ದೃಷ್ಟಿಯಿಂದ ಯೋಗ್ಯವೇ ಆಗಿದೆ. ಯಾಕೆಂದರೆ ಹಿಂದು ತತ್ವಜ್ಞಾನದ ಮುಖ್ಯ ಧ್ಯೇಯವು ಮೋಕ್ಷವಾಗಿರುವದು. ಮೋಕ್ಷವೆಂದರೆ ಸ್ವಾತಂತ್ರ್ಯ ಗಿಯ ಅತ್ಯುಚ್ಚ ಶಿಖರವಲ್ಲವೆ? ಹೀಗಿದ್ದರೂ ಸಹ ಯಾವ ಸ್ವತಂತ್ರ ವಿಚಾರವೇ ಆಗಲಿ, ತನ್ನ ವ ತನ್ನ ಸಮಾಜದ ಹಾಗು ತನ್ನ ದೇಶದ ಅತ ಏವ ಇಡೀ ಜಗತ್ತಿನ ಉನ್ನತಿಗೆ ಕಾರಣವಾಗದೆ ಅವನತಿಗೆ ಕಾರಣವಾಗುತ್ತಿದ್ದರೆ ಅದನ್ನು ತಡೆಗಟ್ಟದೆ ಹಾಗೆ ಬಿಡುವುದು ಯೋಗ್ಯವಾಗಬಹುದೆ? ಯಾವ ಕಾಲದಲ್ಲಿಯೇ ಆಗಲಿ ಸಮಾಜ ವ ರಾಷ್ಟ್ರದ ಬಾಳಿಕೆಗೆ ಉಪಯುಕ್ತವಾದ ಯಾವ ವಿಚಾರಗಳೇನುಂಟೋ ಅವುಗಳನ್ನು ದೃಢವಾಗಿ ನಿಲ್ಲಿಸಲು ಪ್ರಯತ್ನಿಸುವುದು ಸಮಾಜ ಮುಂದಾಳುಗಳ ಮುಖ್ಯ ಕರ್ತವ್ಯವಾಗಿದೆ.

ಸಾಂಪ್ರತ ನಮ್ಮ ದೇಶದಲ್ಲಿ ರಶಿಯಾ ದೇಶದ ವಿಚಾರಗಳ ಪ್ರಚಾರವು ವಿಶೇಷವಾಗಿ ಆಗಲಿಕ್ಕೆ ಪ್ರಾರಂಭಿಸಿದೆ. ಪ್ರಯೋಗಾವಸ್ಥೆಯಲ್ಲಿರುವ ರಶಿಯಾ ದೇಶದಲ್ಲಿಯ ಅಪಕ್ವ ವಿಚಾರಗಳಿಂದ ಕೂಡಿ ಕೆಲವರು ಹೀಗೆ ಬಡಬಡಿಸಲಿಕ್ಕೆ ಹತ್ತಿರುವರಲ್ಲಾ— ದೇವ, ಧರ್ಮ, ನೀತಿ, ಸಂಸ್ಕೃತಿ ಮೊದಲಾದವುಗಳು ಸಂಪೂರ್ಣ ಸುಳ್ಳಿರುತ್ತವೆ. ಇವುಗಳ ವಿಚಾರಗಳಿಂದ ಏನೇನೂ ಪ್ರಯೋಜನವಿಲ್ಲ. ಇವು ಆಯಾಸವಿಲ್ಲದೆ ಆಹಾರ ಸಿಗಬೇಕೆಂಬ ವಿಚಾರವುಳ್ಳ ಪಾರಮಾರ್ಥ ಜೀವಿಗಳ ಕಟ್ಟು ಕಲ್ಪನೆಗಳಾಗಿವೆ. ಇವುಗಳ ಬೆನ್ನುಹತ್ತುವುದೆಂದರೆ ಗಾಳಿಯ ಗುದ್ದಿ ಮೈ ನೋವು ಮಾಡಿಕೊಂಡಂತೆಯೇ ಸರಿ. ಈ ಮೊದಲಾದ ಕುವಿಚಾರಗಳೆಂಬ ಧೂಳಿಯನ್ನೆಬ್ಬಿಸಹತ್ತಿದ್ದರಿಂದ ಸತ್ಯಶೋಧಕರ, ನೀತಿವಂತರ, ಧರ್ಮಜಿಜ್ಞಾಸುಗಳ ದೃಷ್ಟಿಯು ಮಂದವಾಗುವ ಸಂಭವವಿರುವುದರಿಂದ ಈ ವಿಷಯವಾಗಿ ಸಂಕ್ಷಿಪ್ತ ರೀತಿಯಲ್ಲಿ ಈ ಲೇಖವನ್ನು ಬರೆಯಲಾಗಿದೆ.

(ಯಃ ಚರಾಚರಂ ಜಗತ್ ದ್ಯೋತಯತಿ ಸದೇವಃ)

ದೇವರೆಂದರೆ ಯಾರು? ಅದು ಯಾವ ಶಕ್ತಿ? ಅದು ಹೇಗೆ ಅದೆ? ಎಂಬುದನ್ನು ಶುದ್ಧ ಬುದ್ಧಿಯಿಂದ ತಿಳಿಯಲು ಪ್ರಯತ್ನಪಡದೆ ಒಮ್ಮೆಲೆ ಈ ಇಪ್ಪತ್ತನೆಯ ಶತಮಾನದಲ್ಲಿ ದೇವರು ಸತ್ತನೆಂದು ಹೇಳುವ ಅನೇಕ ವಾಗ್ವೀರರು ಈಗ ಹೊರಟಿದ್ದಾರೆ. ಆದರೆ ಯಾರು ದೇವರು ಸತ್ತನೆಂದು ಹೇಳಲೂ ವಾಗಾಡಂಬರವನ್ನು ಶೂರಮಾಡಹತ್ತಿರುವರೋ ಅವರೇ ಸಾಯುತ್ತಿರುವರಲ್ಲದೆ ಆ ಪರಮಾತ್ಮನು ಮಾತ್ರ ಜಗತ್ತಿನಲ್ಲಿ ಸ್ಥಿರವಾಗಿಯೇ ಇರತಕ್ಕವನಾಗಿದ್ದಾನೆ. ಇದರ ಕಾರಣವೇನೆಂದರೆ ನಾವು ಪ್ರಪಂಚದ ಸ್ವರೂಪವನ್ನು ಚನ್ನಾಗಿ ನಿರೀಕ್ಷಣೆಮಾಡಿದ್ದಾದರೆ ಹಾಗು ಈ ಪ್ರಪಂಚದ ರಚನೆಯ ಕಾರ್ಯಕಾರಣಭಾವವನ್ನು ಹುಡುಕುತ್ತ ಹೋದರೆ ಅದು ನಮ್ಮನ್ನು ದೇವರ ಅಸ್ತಿತ್ವದ ಕಡೆಗೆಯೇ ಒಯ್ಯುತ್ತದೆ. ದೇವರ ಅಸ್ತಿತ್ವವನ್ನು ಮಾನ್ಯಮಾಡುವ ಹೊರತು ನಮಗೆ ನಿಲ್ಲಲಿಕ್ಕೆ ನೆಲೆಯೇ ಇಲ್ಲದಂತಾಗುತ್ತದೆ. ಜಗತ್ತಿನ ಸ್ವಭಾವವನ್ನು ನೋಡಿದರೆ ಸರ್ವ ವ್ಯವಹಾರಗಳು ಸುಸಂಬದ್ಧ ಸುಸಂಗತ ಕಾರ್ಯಕಾರಣಯುಕ್ತ ಸುಯಂತ್ರಿತವಾಗಿ ನಡೆದಂತೆ ತೋರುತ್ತವೆ.

ಈ ಪ್ರಕಾರ ನಿಯಮದಿಂದ ನಡೆಯುವ ಜಗತ್ತಿಗೆ ನಿಯಾಮಕನೊಬ್ಬನಿರಲೇಬೇಕಲ್ಲವೆ? ಹೀಗೆ ನಿಯಾಮಕವಾಗಿರುವ ಶಕ್ತಿಗೆಯೇ ಈಶನೆಂದೂ ದೇವರೆಂದೂ ಹೇಳಲಾಗಿದೆ. ತರ್ಕದೃಷ್ಟಿಯಿಂದಲೂ ಕೂಡಾ ನೋಡಿದರೆ ಭೌತಿಕ ಶಾಸ್ತ್ರಜ್ಞರು ಸಹ ಈ ಜಗತ್ತಿಗೆ ಆಧಾರಭೂತವಾದ ಒಂದು ತತ್ವ (ಶಕ್ತಿ) ಇರುವುದೆಂದೂ ಅದು ಪ್ರತ್ಯೇಕ ಅಣುರೇಣುಗಳಲ್ಲಿಯೂ ತುಂಬಿದ್ದಾಗಿದೆಂದೂ ಪ್ರತ್ಯಕ್ಷ ಪ್ರಯೋಗದಿಂದ ಕಂಡುಹಿಡಿದವರಾಗಿದ್ದಾರೆ. ಈ ಚರಾಚರ ಜಗತ್ತಿಗೆ ಆಧಾರಭೂತವಾದ ಯಾವ ಶಕ್ತಿಯುಂಟೋ ಅದನ್ನೇ ಲಕ್ಷಿಸಿ ವೇದಾಂತಿಯು ಬ್ರಹ್ಮನೆಂದನು. ಶೈವನು ಶಿವನೆಂದನು. ಲಿಂಗಾಯತನು ಲಿಂಗವೆಂದನು. ವೈಷ್ಣವನು ವಿಷ್ಣುವೆಂದನು. ಬೌದ್ಧರು ಬುದ್ಧನೆಂದರು. ಕ್ರೈಸ್ತರು ಆಕಾಶದ ತಂದೆಯೆಂದರು. ಮುಸ್ಲಿಮರು ಅಲ್ಲಾ ಎಂದರು. ವಿವಿಧ ಸಾಂಪ್ರದಾಯಿಕ ಧರ್ಮಾಭಿಮಾನಿಗಳು ಆ ಶಕ್ತಿಗೆಯೇ ಅನೇಕ ಹೆಸರುಗಳನ್ನು ಕೊಡುತ್ತಾರೆ. ನಾಮದಲ್ಲಿ ಧರ್ಮದಲ್ಲಿ ಪಂಥದಲ್ಲಿ ತಿಳುವಳಿಕೆಯಲ್ಲಿ ಬಹು ವಿಧ ಭೇದಗಳಿದ್ದರೂ ಅವುಗಳಿಗೆಲ್ಲ ಆಧಾರವಾದ ಆ ದಿವ್ಯ ಶಕ್ತಿಯು ಮಾತ್ರ ಒಂದೇ ಇರುವುದು. ಅದು ಸರ್ವವ್ಯಾಪಿಯಾಗಿಯೂ ಸರ್ವಾಂತರ್ಯಾಮಿಯಾಗಿಯೂ ಜಗತ್ತಿನ ಅಧಿಷ್ಠಾನವಾಗಿರುವುದು. ಈ ಅಧಿಷ್ಠಾನವನ್ನು ಕುರಿತೇ ದೇವರೆಂದು ಈಶನೆಂದು ಪರಮಾತ್ಮನೆಂದು ಜ್ಞಾನಿಗಳು ಹೇಳುವರು.

ದೇವರು ಜ್ಞಾನಸ್ವರೂಪನಿದ್ದಾನೆ. ದೇವರ ಶುದ್ಧ ಸ್ವರೂಪದ ಅನುಭವವು ಜ್ಞಾನದ ಬೆಳವಣಿಗೆಯಿಂದಲೇ ಆಗಬೇಕಾಗಿದೆ. ಮನುಷ್ಯ ಪ್ರಾಣಿಯು ಜ್ಞಾನಶೀಲವುಳ್ಳದ್ದಾಗಿದೆ. ಈ ಕಾರಣದಿಂದ ಎಲ್ಲಿಯತನಕ ತನಗಿಂತಲೂ ಶ್ರೇಷ್ಠವಾದ ಜ್ಞಾನಮಯ ಶಕ್ತಿಯುಂಟೆಂದು ಅನಿಸುತ್ತದೆಯೋ ಅಲ್ಲಿಯ ತನಕ ಆ ಹೆಚ್ಚಿನ ಜ್ಞಾನ ಶಕ್ತಿ (ದೇವರ) ಯ ಮುಂದೆ ತನ್ನ ತಲೆಯನ್ನು ಮಣಿಸಲೇಬೇಕಾಗುತ್ತದೆ. ಈ ವಿಷಯವಾಗಿ ಶ್ರೀ. ಶಂಕರಾಚಾರ್ಯರ. ಮತ್ತು ಮಂಡನಮಿಶ್ರ ಇವರದೊಂದು ಆಖ್ಯಾಯಿಕೆ ಇದೆ. ಶಂಕರಾಚಾರ್ಯರು ತಮ್ಮ ವಿದ್ವತ್ತಿನಿಂದಲೂ ಬುದ್ಧಿ ಕೌಶಲ್ಯದಿಂದಲೂ ಮಂಡನಮಿಶ್ರನನ್ನು ಸೋಲಿಸಿದ ಮೇಲೆ ಮೊದಲೇ ನಿಶ್ಚಯಮಾಡಿದಂತೆ ಮಂಡನಮಿಶ್ರನು ಸನ್ಯಾಸಿಯಾಗಿ ಶಂಕರಾಚಾರ್ಯರ ಶಿಷ್ಯನಾದನು. ಒಮ್ಮೆ ಉಭಯರು ಸಮುದ್ರ ತೀರದಲ್ಲಿ ಕುಳಿತಾಗ್ಗೆ ಮಂಡನಮಿಶ್ರನು ಸ್ವಾಮಿ ತಮ್ಮ ವಿದ್ವತ್ತು ಅಪರಂಪಾರವಾದದ್ದು. ಅದರಂತೆ ಬುದ್ಧಿಯು ಕೂಡ ಅಗಾಧವಾದದ್ದು. ಜ್ಞಾನವು ಅಗಮ್ಯವಾದದ್ದೆಂದು ಅವರನ್ನು ಸ್ತೋತ್ರ ಮಾಡಲಿಕ್ಕೆ ಪ್ರಾರಂಭಿಸಿದನು. ಆಗ ಆಚಾರ್ಯರು ತಮ್ಮ ಕೈಯೊಳಗಿನ ದಂಡವನ್ನು ಸಮುದ್ರದಲ್ಲಿ ಮುಳಗಿಸಿ ಕಡೆಗೆ ತೆಗೆದು ಇಕೋ ನೋಡು; ಈ ದಂಡಕ್ಕೆ ಸಮುದ್ರದಲ್ಲಿಯ ನೀರು ಎಷ್ಟು ಹತ್ತಿರುವದೋ ಅಷ್ಟೇ ಜ್ಞಾನವು. ವಿದ್ಯೆ ಎಂಬ ಸಮುದ್ರದಿಂದ ನನ್ನ ಅಂತಃಕರಣಕ್ಕೆ ಹತ್ತಿರುವದೆಂದು ಹೇಳಿದರಂತೆ. ತಾತ್ಪರ್ಯವಿಷ್ಟೇ. ಜ್ಞಾನವು ಅನಂತವಿದೆ. ಆ ಜ್ಞಾನದ ಅನುಭವವು ಎಲ್ಲಿಯ ವರೆಗೂ ಪೂರ್ಣವಾಗಿ ಆಗುವುದಿಲ್ಲವೋ ಅಲ್ಲಿಯ ವರೆಗೂ ಜ್ಞಾನಮಯ ದೇವರ ಅಸ್ತಿತ್ವವು ಜಗತ್ತಿನಲ್ಲಿ ಇರುವುದು ಅನಿವಾರ್ಯವಾಗಿದೆ.

ಈ ತ್ರಿಗುಣಾತ್ಮಕವಾದ ಜಗತ್ತಿನಲ್ಲಿ ಎಲ್ಲರೂ ಪೂರ್ಣಜ್ಞಾನಿಗಳಾಗುವುದು ಅಸಂಭವವಿರುವ ಕಾರಣ ಜಗತ್ತು ಇರುವವರೆಗೂ ದೇವರು ಇರುವುದು ಸಹಜವಾಗಿದೆ. ಇಂಥ ಜ್ಞಾನ ಸ್ವರೂಪ

ದೇವನನ್ನು ಆದರ್ಶವಾಗಿಟ್ಟುಕೊಂಡು ನಡೆದು ಪ್ರತ್ಯೇಕ ವ್ಯಕ್ತಿಯು ತನ್ನ ಆತ್ಮೋನ್ನತಿಯನ್ನೂ ಸಮಾಜೋನ್ನತಿಯನ್ನೂ ಹಾಗೆಯೇ ರಾಷ್ಟ್ರೋನ್ನತಿಯನ್ನೂ ಕೂಡಾ ಮಾಡಿಕೊಂಡು ಸುಖ ಶಾಂತಿಯಿಂದ ಬಾಳಲೆಂಬ ಮನೀಷೆ.

### ಧಾರಣಾದ್ಧರ್ಮಃ ಇತ್ಯಾಹುಃ.

ಸಮಾಜಕ್ಕೆ ದೇವರ ಅಗತ್ಯವಿದ್ದಂತೆ ಧರ್ಮದ ಅವಶ್ಯಕತೆಯೂ ಕೂಡಾ ಇರುವುದು. ಧರ್ಮವು ಸಮಾಜದ ಅಭ್ಯುದಯದ ಸಲುವಾಗಿಯೇ ಇದೆ. ಧರ್ಮದಿಂದ ಸಮಾಜದ ಧಾರಣ ಹಾಗು ಪೋಷಣವಾಗುವುದೇ ಮುಖ್ಯವಾಗಿದೆ. ಮನುಷ್ಯನು ಸಮಾಜಶೀಲನಾಗಿದ್ದಾನೆ. ಸಮಾಜದಲ್ಲಿ ವ್ಯಕ್ತಿಗೆ ಸ್ಥಾನವಿದೆ. ಆದರೆ ಸಮಾಜ ಸ್ವಾಸ್ಥ್ಯದ ಸಲುವಾಗಿ ವ್ಯಕ್ತಿಯು ಸ್ವಕೀಯ ಸ್ವಾತಂತ್ರ್ಯವನ್ನು ಮರ್ಯಾದಿತವಾಗಿ ಮಾಡಬೇಕಾಗುತ್ತದೆ. ಆ ಮರ್ಯಾದಿತವಾಗಿ ಮಾಡುವ ನಿಯಮವೇ ಧರ್ಮವೆಂದು ಕರೆಯಲ್ಪಡುತ್ತಿದೆ. ವ್ಯಕ್ತಿಯ ಹಾಗು ಸಮಾಜದ ಮನೋವೃತ್ತಿಗಳು ಪರಸ್ಪರ ಪೋಷಕವಾಗಿ ಉಭಯರ ಉತ್ಕರ್ಷ ಸಾಧ್ಯಮಾಡಿಕೊಡುವ ಯಾವ ನಿಯಮವುಂಟೋ ಅದಕ್ಕೆಯೇ ಧರ್ಮವೆನ್ನುತ್ತಾರೆ. ಬಹಳ ಹೇಳುವುದೇನು ? ಧರ್ಮವೆಂದರೆ ಆತ್ಮ ವಿಶ್ವಾಸವು ಮತ್ತು ವ್ಯಕ್ತಿಯ ಬೆಳವಣಿಗೆಯು ಹಾಗು ಸ್ನೇಹವರ್ಧನವು. ಮನುಷ್ಯನಿಗೆ ಧಾರಣೆ, ವೃದ್ಧಿ, ಸಂಗ್ರಹ, ಸತ್ತಾ ಇವು ಯಾವಾಗಲು ಬೇಕೆನಿಸುತ್ತವೆ. ಇವುಗಳಿಗೆಯೇ ಶಾಸ್ತ್ರಕಾರರು ಧರ್ಮ, ಅರ್ಥ, ಕಾಮ ಮೋಕ್ಷಗಳೆಂದು ಹೇಳಿದ್ದಾರೆ. ಇಂಥ ಪುರುಷಾರ್ಥಯುಕ್ತ ಧರ್ಮಕ್ಕೆ ಕೆಲವರು ಅಫುವಿನ ಗುಳಿಗೆಯೆಂದು ಹೇಳುವದು ಸ್ವತಃ ಅಫುವಿನ ಅಮಲಿನಲ್ಲಿಯೇ ಹೀಗೆ ಹೇಳುತ್ತಿರುವರೆನ್ನುವದು ಮೇಲಿನ ಧರ್ಮ ಶಬ್ದದ ವಿವರಣೆಯಿಂದ ಪ್ರತಿಯೊಬ್ಬರಿಗೆ ಗೊತ್ತಾಗದಿರದು. ಧರ್ಮವು ತತ್ವಜ್ಞಾನ ನೀತಿ ಆಚಾರವೆಂದು ತ್ರಿವಿಧಾಂಗಗಳಿಂದ ಕೂಡಿದೆ. ಆತ್ಮ, ಈಶ್ವರ, ಕರ್ಮ ಇವು ತತ್ವಜ್ಞಾನದಲ್ಲಿ ಬರುತ್ತವೆ. ಅಹಿಂಸಾ, ಸತ್ಯ, ಅಸ್ತೇಯಾದಿಗಳು ನೀತಿಯಲ್ಲಿ ಬರುತ್ತವೆ. ನಡೆ, ನುಡಿ, ರೀತಿ, ಕರ್ತವ್ಯ, ರೂಢಿ ಮೊದಲಾದವುಗಳು ಆಚಾರದಲ್ಲಿ ಬರುತ್ತವೆ.

ಆಚಾರ ಧರ್ಮವು ಕಾಲಮಾನಪರಿಸ್ಥಿತಿಗನುಸರಿಸಿ ಪರಿವರ್ತನ ಶೀಲವುಳ್ಳದ್ದಾಗಿದೆ ಅದು ಮೇಲಿಂದ ಮೇಲೆ ಹವಾಮಾನಕ್ಕನುಸರಿಸಿ ಆಹಾರ ಉಡುಪುಗಳನ್ನು ಬದಲಾಯಿಸುವಂತೆ ಬದಲಾವಣೆಯಾಗಬೇಕಾದದ್ದೇ ಸರಿ. ನೀತಿ ತತ್ವವು ಕೂಡ ಅಪವಾದಾತ್ಮಕವಾಗಿ ಬದಲಾವಣೆಯಾಗಬೇಕಾದುದು ಸಹಜವು. ಆದರೆ ತತ್ವಜ್ಞಾನವು ಮಾತ್ರ ಸ್ಥಿರವಾಗಿರುವದಾಗಿದೆ. ಇಂಥ ಸೋಜ್ವಲವಾದ ಧರ್ಮಕ್ಕೆ ಭ್ರಮೆಯೆಂದೆನ್ನುವವರು ಸ್ವತಃ ಭ್ರಮಿಷ್ಠರಿರಲೇಬೇಕೆಂದೆನಿಸುತ್ತದೆ. ರಶಿಯಾದಲ್ಲಿಯ ಧರ್ಮವು ನಷ್ಟವಾಗಿರುವದೆಂದ. ಕೆಲವರು ಅನ್ನುವುದುಂಟು. ಆದರೆ ರಶಿಯಾದಲ್ಲಿದ್ದ ಧರ್ಮವು ಉಚ್ಚ ಧರ್ಮವಾಗಿರದೆ ಹುಚ್ಚರ ಧರ್ಮವಾಗಿರುವುದರಿಂದ ನಷ್ಟವಾಗಿರಬಹುದು. ಅದರಂತೆ ನಮ್ಮ ಧರ್ಮದಲ್ಲಿಯೂ ಸೇರಿರುವ ಶಕುನ, ಕೂಲಿ, ಸೂತಕ ಜನ್ಮತಃ ಅಸ್ಪೃಶ್ಯತೆ ಮತ್ತು ಉಚ್ಚ ನೀಚತೆ ಈ ಮೊದಲಾದ ಹುಚ್ಚ ಧರ್ಮದ ಕಲ್ಪನೆಗಳು ನಷ್ಟವಾಗಲೇಬೇಕು. ಹುಚ್ಚರ ಧರ್ಮ ಧರ್ಮದ ಹುಚ್ಚು ಇವುಗಳನ್ನು ನಷ್ಟಮಾಡಿ ಶುದ್ಧ ಸಾತ್ವಿಕ ಧರ್ಮವನ್ನು ಜನರಲ್ಲಿ ಪ್ರಸಾರಮಾಡಬೇಕು ಧರ್ಮದಿಂದ ಜನರು ಕರ್ತವ್ಯಶೀಲರಾಗದೆ ಹತಪ್ರಜ್ಞರಾಗುತ್ತಾರೆನ್ನುವ ಬೊಬ್ಬಾಟವು ಶುದ್ಧ ಸುಳ್ಳಾಗಿದೆ. ಧರ್ಮದ ಸುಳ್ಳು ಕಲ್ಪನೆಗಳಿಂದ ಹೀಗಾಗುತ್ತಿರುತ್ತದೆ. ಕಾರಣ ಧರ್ಮದ ಹುಚ್ಚು ಕಲ್ಪನೆಗಳನ್ನು ತೆಗೆದುಹಾಕಲು ಸಮಾಜ ಸುಧಾರಕರು ಮೊದಲು ಪ್ರಯತ್ನಮಾಡಬೇಕು ಹಾಗೆ ಮಾಡದೆ ಸಂಪೂರ್ಣ ಧರ್ಮವನ್ನೇ ಕಿತ್ತೊಗೆಯಬೇಕೆನ್ನುವದು ಕೆಮ್ಮಿಸುವದೆಂಬ ಕಾರಣದಿಂದ ಗಂಟಲವನ್ನೇ ಕೊಯಿದುಕೊಂಡವನಂತಾಗುವುದಿಲ್ಲವೆ? ಇದನ್ನು ಲಕ್ಷಕ್ಕೆ ತಂದು ಸಮಾಜ ಸುಧಾರಕರು ಧರ್ಮ ತತ್ವವನ್ನು ಚೆನ್ನಾಗಿ ವಿಚಾರಮಾಡಿ ಪರಿಸ್ಥಿತಿಗನುಸರಿಸಿ ಬಿಡುವ ಭಾಗ ಯಾವುದು ಹಿಡಿಯುವ ಭಾಗ ಯಾವದೆಂಬುದನ್ನು ನಿಶ್ಚಯಿಸಿ ಅದರಂತೆ ತಾವು ನಡೆದು ಜನರಲ್ಲಿ ನುಡಿದು ಸಮಾಜವನ್ನು ಉನ್ನತಿ ಪಥಕ್ಕೆ ಒಯ್ಯಬೇಕೆಂಬ ಅಪೇಕ್ಷೆಯು.

ದೇವ ಧರ್ಮಗಳ ವಿವೇಚನೆಮಾಡಿದನಂತರ ಸಮಾಜಕ್ಕೆ ನೈತಿಕ ಬಂಧನದ ಕಾರಣವೇನೆಂದು ವಿಚಾರಮಾಡುವುದೇ ತಪ್ಪಾಗುವದು. ಮನುಷ್ಯನು ಬದುಕಿರುವದಕ್ಕೆ ಅನ್ನ ನೀರು ಹವೆಗಳ ಅವಶ್ಯಕತೆ ಹ್ಯಾಗಿರುವದೋ ಹಾಗೆಯೇ ನೈತಿಕಾಚರಣೆಯ ಅವಶ್ಯಕತೆ ಇರುತ್ತದೆ. ಕೊಲೆ, ಕಳವು, ಸುಳ್ಳು, ವ್ಯಭಿಚಾರ, ಮದ್ಯಪಾನಾದಿಗಳು ಪಂಚಮಹಾಪಾತಕಗಳಾಗಿರುವವೆಂದು ಶಾಸ್ತ್ರಗಳು ಹೇಳುವದು ಸಮಾಜಸ್ವಾಸ್ಥ್ಯಕ್ಕಾಗಿಯೇ ಸರಿ. ಧರ್ಮ ಮತ್ತು ನೀತಿಯ ಸಂಸ್ಕಾರವು ಸಾವಿರಾರು ವರುಷಗಳಿಂದ ನಡೆಯುತ್ತ ಬಂದಿದೆ. ಆದ್ದರಿಂದಲೇ ಮನುಷ್ಯರು ಸಾರ್ವತ್ರಿಕವಾಗಿ ಕೊಲೆ ಕಳವು ಮೊದಲಾದವುಗಳನ್ನು ಮಾಡುತ್ತಿರುವದಿಲ್ಲ. ಕೇವಲ ರಾಜಸತ್ತೆಯಿಂದಲೇ ಮೇಲಿನ ರಾಕ್ಷಸವೃತ್ತಿಗಳನ್ನು ಪ್ರತಿಬಂಧಿಸಲು ಶಕ್ಯವಿಲ್ಲ. ಈ ಮಾರ್ಗವು ಯೋಗ್ಯವಾಗಿದೆ. ಇದನ್ನೆಯೇ ಆಚಂಸಬೇಕು. ಇದರಿಂದಲೇ ಸದ್ಗತಿ ದೊರೆಯುತ್ತದೆ. ಈ ರೀತಿಯ ವಿಚಾರಗಳಿಂದಲೇ ಮನುಷ್ಯನು ಮನಃಪೂರ್ವಕವಾಗಿ ರಾಕ್ಷಸವೃತ್ತಿಗಳಿಂದ ದೂರಾಗುತ್ತಾನೆ. ತಾನು ಅಪರಾಧಿಯೆನಿಸದೆ ಅಂದರೆ ಕಾಯಿದೆಯ ಕಲಮುಗಳು ತನಗೆ ಹತ್ತದಂತೆ ಕೊಲೆ ಕಳವು ವ್ಯಭಿಚಾರಾದಿಗಳನ್ನು ಮಾಡಲು ಶಕ್ಯವಿದೆ. ಈ ಕಾರಣದಿಂದಲೇ ರಾಜಸತ್ತೆಯಿಂದ ಸಮಾಜ ಸ್ವಾಸ್ಥ್ಯವು ಉಳಿಯಲು ಶಕ್ಯವಿಲ್ಲ. ಎರಡನೆಯವರನ್ನು ಯಾವ ಯುಕ್ತಿಯಿಂದ ಕೊಲ್ಲಬೇಕು, ಪರಸ್ತ್ರಿಯರನ್ನು ಯಾವ ಹಂಚಿಕೆಯಿಂದ ಓಡಿಸಬೇಕು, ಈ ವಿಚಾರದವನು ತನ್ನ ಮೇಲೆಯೇ ಅಂಥ ಪ್ರಸಂಗ ಬಂದರೆ ಹೇಗಾಗುವುದು ? ಇದನ್ನಾದರೂ ಆತನು ನೋಡಬೇಕಲ್ಲವೆ ? ಈ ಎಲ್ಲ ಕಾರಣಗಳಿಂದಲೇ ಪ್ರತಿಯೊಬ್ಬನಿಗೆ ನೈತಿಕಾಚರಣೆಯು ಅನ್ನ, ನೀರು ಹವೆಗಳಷ್ಟೇ ಮಹತ್ವದ್ದೆನಿಸದೆ ಇರಲಾರದು.

### ಸರ್ವಂ ಬಲವತಾಂ ಪಥ್ಯ.

ಸಮಾಜ ಸುಧಾರಕ ಮಹಾಶಯರೇ, ಒಟ್ಟಿನ ಮೇಲೆ ತಮಗೆ ಹೇಳುವುದೇನೆಂದರೆ— ನಮ್ಮ ದೇಶವು ಪಾರತಂತ್ರ್ಯದಲ್ಲಿದೆ. ಈ ಗುಲಾಮಗಿರಿ ರಾಷ್ಟ್ರವು ಸ್ವತಂತ್ರವಾಗಲಿಕ್ಕೆ ಯಾವ ಉದ್ಯೋಗ ಹಾಗು ಯಾವ ಚಳವಳಿಯನ್ನನುಸರಿಸಬೇಕಾಗಿರುವದೋ ಅದನ್ನು ಜನಾಂಗಕ್ಕೆ ಮೊದಲು ಉಪದೇಶಮಾಡಿರಿ. ಈಗ ಯಾವ ಯಾವ ದೇಶಗಳು ಸ್ವಾತಂತ್ರ್ಯವುಳ್ಳವುಗಳಾಗಿರುವವೋ ಆ ಆ ದೇಶಗಳಲ್ಲಿರುವ ಎಷ್ಟೋ ವಿಚಾರಗಳು ನಮಗೆ ಒಳ್ಳೇ ಮೋಹಕವಾಗಿಯೂ ಆಕರ್ಷಕವಾಗಿಯೂ ತೋರುತ್ತಿರಬಹುದು ಆದರೆ ಸ್ವತಂತ್ರರಾಷ್ಟ್ರಗಳ ಮಾತೇ ಬೇರೆ. ಅಡಕೋತಿನಲ್ಲಿ ಸಿಕ್ಕ ಅಡಕಿಯಂತೆ ವಿಧರ್ಮಿ ವಿದೇಶಿಯರ ಅಧಿಕಾರದಲ್ಲಿ ಸಿಕ್ಕಿರುವ ನಮ್ಮ ದೇಶದ ಮಾತೇ ಬೇರೆ. "ಸರ್ವಂ ಬಲವತಾಂ ಪಥ್ಯಂ" ಎಂಬಂತೆ. ಬಲವಾನನಿಗೆ ಸರ್ವವು ಪಥ್ಯಕರವೇ ಸರಿ. ಆತನಿಗೆ ಯಾವದರಿಂದಲೂ ಬಾಧೆಯಿಲ್ಲ. ಆದರೆ ರೋಗಿಯು ನಿರೋಗಿಯಂತೆ ಏನು ಬೇಕೋ ಅದನ್ನು ತಿನ್ನಲಿಕ್ಕೆ ಪ್ರಾರಂಭಿಸಿದನೆಂದರೆ ಪ್ರಕೃತಿಗೆ ಅಪಾಯವಾಗಿ ಆತನು ನಿಶ್ಚಯಪೂರ್ವಕವಾಗಿ ಮರಣಾಧೀನನಾಗುವನೆಂದು ಹೇಳಲಿಕ್ಕೆ ಅಭ್ಯಂತರವೇನಿದೆ ? ಶ್ರೀಮಂತನು ಚೈನಿಮಾಡುವುದನ್ನು ನೋಡಿ ಬಡವನು ಚೈನಿಮಾಡಲಿಕ್ಕೆಹತ್ತಿದರೆ ಸ್ವಲ್ಪ ಕಾಲದಲ್ಲಿಯೇ ಜೋಳಿಗೆ

ಹಾಕಬೇಕಾಗುವದಿಲ್ಲವೆ ? ನವಿಲು ಕುಣಿಯುವದನ್ನು ಕಂಡು ಕಾಗಿಯು ಕುಣಿಯಲಿಕ್ಕೆ ಹತ್ತಿದರೆ ಅದು ಹಾಸ್ಯಾಸ್ಪದವಾಗಲಾರದೆ ? ಬಲವಂತರ ರೀತಿ ಬೇರೆ. ದುರ್ಬಲರ ರೀತಿ ಬೇರೆಯೇ ಇರುವದು. ಇದೆಲ್ಲ ಹೇಳಲಿಕ್ಕೆ ಕಾರಣವೇನೆಂದರೆ— ಈಗ ರಶಿಯಾ ದೇಶದಲ್ಲಿ ಹಾಗಿದೆ. ಜಪಾನ ದೇಶದಲ್ಲಿ ಹೀಗಿದೆ. ಜರ್ಮನಿಯು ಆ ಕಾರಣದಿಂದ ಮುಂದೆ ಬಂದಿದೆ. ಇಟಾಲಿಯು ಈ ಕಾರಣದಿಂದ ಮುಂದೆ ಬಂದಿದೆ. ಮಾರ್ಕ್ಸ್ ಹಾಗೆ ಹೇಳುತ್ತಾನೆ. ರಸೇಲ್ ಹೀಗೆ ಹೇಳುತ್ತಾನೆ. ಲೇನಿನ್ನನ ತತ್ವವು ಹೀಗಿದೆಯೆಂದು ಈ ಪ್ರಕಾರವಾಗಿ ಹೇಳುತ್ತಾ ದೇವ ಧರ್ಮ, ನೀತಿ, ಸಂಸ್ಕೃತಿ ಮೊದಲಾದವುಗಳ ವಿಷಯವಾಗಿ ದುರಭಿಪ್ರಾಯವನ್ನೂ ಸ್ವೈರಾಚಾರವನ್ನೂ ಜನಾಂಗದಲ್ಲಿ ಪ್ರಸಾರಮಾಡವದು ಇತ್ತಿತ್ತ ವಿಶೇಷವಾಗಿ ಪ್ರಾರಂಭವಾಗಿದೆ. ಅದು ಪರತಂತ್ರವಾದ ನಮ್ಮ ದೇಶಕ್ಕೆ ಅತ್ಯಂತ ಹಾನಿಕಾರಕವಿದೆ. ಆದ್ದರಿಂದಲೇ ಇತ್ತ ತಾವು ಲಕ್ಷಿಸಲೆಂದೂ ಹಿಂದು ಸಂಸ್ಕೃತಿಯು ಅಚ್ಚಳಿಯದೆ ಉಳಿಯಲೆಂದೂ ಹಾರೈಸಿ ಈ ವಿವೇಚನೆಯನ್ನು ತಮ್ಮ ಮುಂದಿರಿಸಿದ್ದಾಗಿದೆ.

---

## ಆರ್ಯರ ಮುಂಚಿನ ಜನಾಂಗ.

### ರೆವ್ಹರೆಂಡ ಎಚ್ ಹೆರಾಸರ ಭಾಷಣ.

(ಮುಂಬೈ ಸೆಂಟ ಝೆವಿಯರ್ಸ ಕಾಲೇಜದಲ್ಲಿ ರೆವ್ಹರೆಂಡ ಎಚ್ ಹೆರಾಸರು ತಾ. ೨೫-೧-೩೮ನೇ ದಿವಸ ಮಾಡಿದ ಭಾಷಣದ ಸಾರಾಂಶ.— )

ಹಿಂದುಸ್ಥಾನದ ಅತಿ ಪ್ರಾಚೀನದ ಹೆಸರು 'ಸಿದ" ಎಂಬುದೆಂದು ತೋರುತ್ತದೆ. ಸಿದ ಎಂದರೆ ಹರಿಯೋಣ ಈ 'ಸಿದು' ಶಬ್ದದ ಮೇಲಿಂದಲೇ ಸಿಂಧ ಮತ್ತು ಸಿಂಧು ಈ ಶಬ್ದಗಳು ಪ್ರಚಾರದಲ್ಲಿ ಬಂದಿರಬೇಕು. ನದಿಯ ಉಭಯ ದಂಡೆಗಳ ಮೇಲೆ ವ್ಯಾಪಿಸಿರುವ ಪ್ರದೇಶಕ್ಕೆ ನದಿಯ ಹೆಸರನ್ನು ಕೊಟ್ಟರಲಿಕ್ಕೆ ಸಾಕು. ಆರ್ಯರು ಈ ಸಿಂಧೂ ದೇಶದಲ್ಲಿ ಪರಿಶ್ರಮ ಮಾಡಿ ಅಲ್ಲಿದ್ದ ಜನಾಂಗದವರನ್ನು ದೇಶದಿಂದ ಹೊರಗೆ ಅಟ್ಟಿದರು.

ಮೊಹೆಂಜೊದಾರೋದಲ್ಲಿ ಉಪಲಬ್ಧವಾಗುವ ಲೇಖಗಳ ಮೇಲಿಂದ ನಾಲ್ಕು ಬೇರೆ ಬೇರೆ ಪ್ರಾಂತಗಳ ಉಲ್ಲೇಖವನ್ನು ಮಾಡಿದ್ದುದು ಕಂಡುಬರುತ್ತದೆ. ಅದರಲ್ಲಿ ಮೀನ ಜನಾಂಗದವರ 'ಮೀನಾದ' ಎಂಬುವದೊಂದು ದೊಡ್ಡ ಮತ್ತು ಮಹತ್ವದ ಪ್ರಾಂತವಿದ್ದಿತು. ಮೀನಾಡಿನಲ್ಲಿ ನಂದೂರ ( ಈಗಿರುವ ಮೊಹೆಂಜೊಂದಾರೊ ) ಮತ್ತು ಉದ್ಬೈಯೂರ ಇವೆರಡು ದೊಡ್ಡ ಪಟ್ಟಣಗಳಾಗಿದ್ದವು. ಉದ್ಬೈಯೂರ ಈ ಪಟ್ಟಣವು ಮೊದಲು ಬಿಲವರ ವಶದಲ್ಲಿ ಇದ್ದಿತು. ಮುಂದೆ ಬಿಲವರು ಮೂನೂರು (ಸಂಸ್ಕೃತ ತ್ರಿಪುರ) ಎಂಬುವ ಪಟ್ಟಣವನ್ನು ಗೆದ್ದುಕೊಂಡರು. ಆದರೆ ಕೆಲ ಕಾಲದನಂತರ ಮೀನರು ಮತ್ತು ಬಿಲವರು ಒಪ್ಪಂದ ಮಾಡಿಕೊಂಡರು. ಈ ಒಪ್ಪಂದದ ಕುರುಹು ಎಂದರೆ ಮೀನರ ಎರಡು ಮೊಸಳೀ ಚಿನ್ಹವಿರುವದು. ಈ ಒಪ್ಪಂದವು ಬಿಲವರಲ್ಲಿ ಇದ್ದ ಎರುವರ ಮಧ್ಯಸ್ಥಿಕೆಯಿಂದಾಗಿರಬೇಕೆಂದು ಉಲ್ಲೇಖವಿದೆ. ಎರುವರು ಬಂಗಾರದ ಖಣಿಗಳಲ್ಲಿ ತೊಡಗಿದ್ದರೆಂದು ಸ್ಪಷ್ಟವಾಗಿ ಉಲ್ಲೇಖಿಸಿದೆ. ಇವರಿಗೆ ಗ್ರೀಕ ಐತಿಹಾಸಿಕರು ಮತ್ತು ಭೂಗೋಲಿಕರು "Gold-digging anto" ಎಂದು ಅನ್ನುತ್ತಾರೆ. ಈ ಹೊರ್ತು ಇನ್ನೊಂದು ಎಕ್ಕಲಿಷ ಎಂಬುವ ಎರಡನೇ ಜನಾಂಗದವರು ಬಿಲವರ ಸ್ನೇಹದಲ್ಲಿದ್ದು ಮುಂದೆ ಅವರು ಬಿಲವರಲ್ಲಿ ಕೂಡಿಕೊಂಡರು. ಈ ಹೊರ್ತು ಕವಲರು ಮತ್ತು ಕಲಕಿಲರು ಮೀನರ ದ್ವೇಷವನ್ನು ಮಾಡುತ್ತಿದ್ದರು. ಆದರೆ ಮುಂದೆ ಅವರು ಮೀನರಿಗೆ ಅಂಕಿತರಾದರು. ಇದೇ ಕವಲರು ಈಗ ಉತ್ತರ ಹಿಂದುಸ್ಥಾನದಲ್ಲಿದ್ದ ಇದೇ ಹೆಸರಿನಿಂದ ಪ್ರಸಿದ್ಧವಿದ್ದ ತಡಗರ ತಂಡಿಗಳ ಪೂರ್ವಜರು. ಇವರು ಬಹುಶಃ ಆಸ್ಟ್ರಿಕ ವಂಶದವರಿದ್ದು ಇವರ ಧರ್ಮವಾದರೂ ಮೀನರ ಧರ್ಮಕ್ಕಿಂತಲೂ ಬೇರೆ ಸ್ವರೂಪದ್ದಿದ್ದಿತು. ದಕ್ಷಿಣ ಹಿಂದುಸ್ಥಾನದಲ್ಲಿ ಮೀನರ ಇನ್ನೊಂದು ಶಾಖೆಯಿತ್ತು. ಈ ಶಾಖೆಯವರ ರಾಜಧಾನಿಯು ವೆಲೂರಿದ್ದಿತು. ಕವಲರು ಮತ್ತು ಇರಲರರು ಇವರ ಅಂಕಿತರಾಗಿದ್ದರು. ಕಣ್ಣನೀರರು ಮತ್ತು ಕುಡುಗರ ಇವರು ಸಹ ಮೀನರ ಯುದ್ಧವು ನಡೆದಾಗ ಈ ಎರಡೂ ಜನಾಂಗದವರು ಮೀನರಿಗೆ ಸಹಾಯವನ್ನ ಮಾಡಿದರೆಂದು ಉಲ್ಲೇಖವಿದೆ. ಮೀನರಲ್ಲಿ ಇನ್ನೊಂದು ದೊಡ್ಡ ಜನಾಂಗವೆಂದರೆ ಪರವರು. ಸೋಮ ಮತ್ತು 'ಸೂರ್ಯ' ವಂಶದವರೆಂದು ಇವರಲ್ಲಿ ಎರಡು ಭಾಗಗಳಾಗಿದ್ದವು. ಇವರ ರಾಜನಿಗೆ 'ಮೀನವನ್' ಎಂದು ಕರೆಯುತ್ತಿದ್ದರು. ಅವನ ಧ್ವಜದಮೇಲೆ 'ಎರಡು ಮೊಸಳೀ'ಗಳ ಚಿನ್ಹವಿರುತ್ತಿತ್ತು. ಅವರ ರಾಜ್ಯದಲ್ಲಿ ಕಾಲುವೆಗಳ ಸಮೃದ್ಧಿಯಾದರೂ ಇದ್ದಿತು. ಅವರ ಪಟ್ಟಣದ ಹೆಸರು ಪರವೀರಪಲ್ಲಿ ಎಂದಿರುವದೆಂದು ಲೇಖನಗಳಲ್ಲಿ ನಿರ್ದಿಷ್ಟ ಮಾಡಿದೆ.

"ಮರಂಕೊಟನಾಡ" ಎಂಬುವ ಇನ್ನೊಂದು ಪ್ರಾಂತದ ಹೆಸರು. ಇದು ಸಾಧಾರಣತಃ ಗುಡ್ಡಗಾಡ ಪ್ರದೇಶವುಳ್ಳದ್ದಿರಬಹುದೆಂದು ತೋರುತ್ತದೆ. ಇಲ್ಲಿಯ ಪರ್ವತದ ಶಿಖರಗಳು ಬರ್ಫಾಚ್ಛಾದಿತವಾಗಿರಬೇಕೆಂದು ತೋರುತ್ತದೆ. 'ವೆಲಾಲರು' ಈ ದೇಶದಲ್ಲಿ ವಾಸ ಮಾಡುತ್ತಿರಬಹುದು. ಸಪಾಟ ಪ್ರದೇಶದಲ್ಲಿ ಇವರು ಬಹಳ ಕಾಲುವೆಗಳನ್ನು ಕಟ್ಟಿಸಿದ್ದರು. ಇವರ ದೇವರ ಹೆಸರು 'ಮೂರುಗಣ' (ಸುಬ್ರಹ್ಮಣ್ಯ) ವೆಂದಿರಬೇಕೆಂಬುವ ಸಂಗತಿಯು ಒಂದು ಧ್ವನ್ಯರ್ಥ ಸೂಚಕ ಚಿಹ್ನದ ಮೇಲಿಂದ ಕಂಡುಬರುತ್ತದೆ.

ಎಲ್ನಡೆಂಬುವ ಇನ್ನೊಂದು ಭಾಗದ ಹೆಸರು. ಈ ಹೊರ್ತು ಇತರ ಬೇರೆ ಬೇರೆ ಜನಾಂಗದವರ ಮತ್ತು ಪಟ್ಟಣಗಳ ನಿರ್ದೇಶವನ್ನು ಮಾಡಿದ್ದು ಮೊಹೆಂಜೊದಾರೊದ ಲೇಖಗಳಲ್ಲಿ ಕಂಡು ಬರುತ್ತದೆ. ವೇದದಲ್ಲಿ ನಮೂದ ಮಾಡಿದ ದಾಶರಾಜ್ಞ ಯುದ್ಧದಲ್ಲಿ ಸುದಾಸನ ವಿರುದ್ಧ ಹೋರಾಡುವ 'ಅಲೀನ' ರನ್ನಾದರೂ ಈ ಲೇಖಗಳಲ್ಲಿ ಉಲ್ಲೇಖ ಮಾಡಿದ್ದುದು ಕಂಡು ಬರುತ್ತದೆ. ಈಗ ಎಲ್ಲ ಹಿಂದುಸ್ಥಾನದಲ್ಲಿ ಹಬ್ಬಿರುವಂಥ ಕೋಳೀ ಜನಾಂಗದವರ ನಿರ್ದೇಶವನ್ನಾದರೂ ಮಾಡಲ್ಪಟ್ಟಿದೆ. ಈ ಹೊರ್ತು ಈಗ ಅಸ್ತಿತ್ವದಲ್ಲಿದ್ದ ಆರೂರ, ಇರೂರ, ನಲೂರ, ಐಯೂರ, ಮುನದಲ್ಲಿಯು ಮುಂತಾದ ಊರಿನ ಹೆಸರುಗಳಾದರೂ ಮೊಹೆಂಜೊದಾರೊದ ಲೇಖಗಳಲ್ಲಿ ಸಿಗುತ್ತದೆ.

-ಸಂಯುಕ್ತ ಕರ್ನಾಟಕ.

---

## ಬ್ಯಾ. ಸಾವರಕರರ ಸತ್ಕಾರ.

ಕಳೆದ ೩೦ ನೆಯ ತಾರೀಖಿನ ದಿವಸ ಹಿಂದುಮಹಾಸಭಾಧ್ಯಕ್ಷರಾದ ಬ್ಯಾ. ಸಾವರಕರರು ಪನವೇಲ ಸ್ಥಳಕ್ಕೆ ಆಗಮಿಸಲು ಬಹು ಸಂಭ್ರಮದಿಂದ ಸ್ವಾಗತಿಸಿದರು. ನಗರ ಸಭೆಯವರು ಮಾನಪತ್ರವನ್ನರ್ಪಿಸಿದರು. ೫೦೦೦ ಜನರ ಪ್ರಚಂಡ ಸಭೆ ಸೇರಿತ್ತು. ೧೦೧ ರೂ. ಗಳನ್ನೂ ಬೆಳ್ಳಿಯ ಒಂದು ಕಠಾರಿಯನ್ನೂ ನಾಗರಿಕರು ಸ್ವಾತಂತ್ರ್ಯವೀರರಿಗೆ ಕಾಣಿಕೆಯಾಗಿ ಕೊಟ್ಟರು.

---

—ಜರ್ಮನ್ ಸರಕಾರವು ಪೋರ್ತಗೀಜರ ವಶದಲ್ಲಿರುವ ಹಿಂದುಸ್ಥಾನದ ದೀವ ಎಂಬ ಬಂದರವನ್ನು ಕೊಂಡುಕೊಳ್ಳುವದೆಂದು ಸುದ್ದಿ.

# ಹಿಂದುಸ್ಥಾನವನ್ನು ಹಂಚಿಕೊಡಿರಿ!
## ಪಾಕಿಸ್ಥಾನದವರ ಪ್ರಾರ್ಥನೆ.

ಮುಂದೆ ಬರಲಿರುವ ಫೆಡರೇಶನ್ನಿಗೆ ಮುಸಲ್ಮಾನರು ತೀಕ್ಷ್ಣವಾದ ವಿರೋಧವನ್ನು ಮಾಡುತ್ತಿದ್ದಾರಷ್ಟೆ. ಮುಸ್ಲಿಂ ಲೀಗಿನವರಂತೂ ಕಾಂಗ್ರೆಸ್ಸಿನವರಿಗಿಂತ ಈ ವಿಷಯದಲ್ಲಿ ಬಹು ಉಗ್ರಗಾಮಿಗಳಾಗಿದ್ದಾರೆ. ಫೆಡರೇಶನ್ನಿಗೆ ಈಗಲೇ ಹೀಗೆ ವಿರೋಧಮಾಡುತ್ತಾರೆಂದಲ್ಲ. ಆರಂಭದಿಂದಲೂ ಪಾಕಿಸ್ಥಾನದ ಚಟುವಟಿಕೆಗಾರರು ಹಿಂದುಸ್ಥಾನದ ಫೆಡರೇಶನ್ನಿಗೆ ಪ್ರಬಲವಾದ ವಿರೋಧವನ್ನೇ ಮಾಡುತ್ತಾ ಬಂದಿದ್ದಾರೆ. ಏಕೆಂಬುದು ಕೆಳಗಿನ ಸಂಗತಿಗಳಿಂದ ಗೊತ್ತಾಗಬಹುದು.

೧೯೩೫ ನೆಯ ಇಸವಿ ಹೊಸ ರಾಜಕೀಯ ಸುಧಾರಣೆಯಾಗುವ ಕಾಲಕ್ಕೆ ಪಾಕಿಸ್ಥಾನದ ಚಟುವಟಿಕೆಗಾರರಾದ ಮುಸಲ್ಮಾನರು ಲಂಡನ್ನಿನಲ್ಲಿ ತಾ. ೮-೭-೧೯೩೫ ನೆಯ ದಿವಸ ಒಂದು ಸಚಿತ್ರ ಪ್ರಕಟನೆಯನ್ನು ಬ್ರಿಟಿಶ್ ಜನಗಳಲ್ಲಿ ಮುಖ್ಯವಾಗಿ ಪಾರ್ಲಮೆಂಟ ಮೆಂಬರರಲ್ಲಿ ಹಂಚಿದ್ದಾರೆ. ಆ ಮೂಲ ಪ್ರತಿಯು ಹಿಂದು ಮಹಾಸಭೆಯ ಕಾರ್ಯನಿರ್ವಾಹಕರಲ್ಲಿದೆ. ಅದು ತಾ. ೩೧-೧-೩೮ ನೆಯ ಹಿಂದು ಪತ್ರಿಕೆಯಲ್ಲಿ ಪ್ರಕಟವಾಗಿದೆ. ಅದರ ಮುಖ್ಯಾಂಶವನ್ನು ಕೆಳಗೆ ಕೊಟ್ಟಿದ್ದಾಗಿದೆ. ಪಾಕಿಸ್ಥಾನ ರಾಷ್ಟ್ರೀಯ ಆಂದೋಲನ ಸಂಘದ ಅಧ್ಯಕ್ಷರಾದ ಮಿ. ಸಿ. ರಹಮತ ಅಲ್ಲಿ ಇವರು ತಮ್ಮ ಹೆಸರಿನಿಂದ ಲಂಡನ್ನಿನಲ್ಲಿ ಪ್ರಸಿದ್ಧಗೊಳಿಸಿದ್ದಾರೆ.

"ಇಂಡಿಯನ್ ಫೆಡರೇಶನ್ ರಚನೆಯ ಮೂಲಕ ಬ್ರಿಟಿಶ್ ಸರಕಾರವು ಪಾಕಿಸ್ಥಾನದ ಜನತೆಗೆ ಮಾಡುತ್ತಿರುವ ಅನ್ಯಾಯವನ್ನು ಸೂಚಿಸುವುದೇ ಈ ಪ್ರಕಟನೆಯ ಮುಖ್ಯೋದ್ದೇಶವು. ಇಂಡಿಯನ್ ಫೆಡರಲ್ ಯೋಜನೆಯು ಪಾಕಿಸ್ಥಾನದ ಜನತೆಯ ರಾಷ್ಟ್ರೀಯ ಜೀವನದಲ್ಲದೇ ಒಂದು ಮಹತ್ವದ ಕ್ರಾಂತಿಯನ್ನುಂಟುಮಾಡುವುದಾಗಿದೆ. ಪಾಕಿಸ್ಥಾನದವರ ಬಾಳುವೆ ಅಥವಾ ಸಾವು ಈ ಫೆಡರಲ್ ಯೋಜನೆಯನ್ನೇ ಅವಲಂಬಿಸಿರುವುದರಿಂದ ನಮಗೆ ಪ್ರಾಣಸ್ವರೂಪವಾದ ಈ ವಿಷಯವನ್ನು ನಿಮ್ಮ ಮುಂದೆ ಸ್ಪಷ್ಟವಾಗಿ ಇಡಲು ಸಿದ್ಧರಾಗಿದ್ದೇವೆ.

### ಇಂಡೊ-ಪಾಕಿಸ್ಥಾನ ಸಮಸ್ಯ.

ಪಾಕಿಸ್ಥಾನವು ಹಿಂದುಸ್ಥಾನಕ್ಕೆ ಯಾವ ವಿಧದಿಂದಲೂ ಸಂಬಂಧವಿಲ್ಲ. ಅದು ಸ್ವತಂತ್ರ ಒಂದು ರಾಷ್ಟ್ರವು. ಪ್ರಾಚೀನ ಕಾಲದಿಂದಲೂ ಅದು ಬೇರೆಯಾಗಿಯೇ ಇದ್ದುದು. ಐತಿಹಾಸಿಕ ಆಧಾರಗಳಿಂದಲೂ ಅದು ಸ್ವತಂತ್ರ ರಾಷ್ಟ್ರವಾಗಿಯೇ ಇದೆಯೆಂಬುದು ಸಿದ್ಧಾಂತವಾದ ಸಂಗತಿಯು. ನಮ್ಮ ರಾಷ್ಟ್ರೀಯ ವೈಶಿಷ್ಟ್ಯ, ಸಂಸ್ಕೃತಿ, ಭಾಷೆ, ಸಾಹಿತ್ಯ, ಕಲಾ, ತತ್ವಜ್ಞಾನ ಮೊದಲಾದವುಗಳೆಲ್ಲಾ ಹಿಂದುಸ್ಥಾನಕ್ಕಿಂತ ಭಿನ್ನವಾದವುಗಳು. ಅದುದರಿಂದ ರಾಷ್ಟ್ರೀಯ ಅಸ್ತಿತ್ವದ ನ್ಯಾಯ ಮತ್ತು ಸಮಾನತೆಯ ತತ್ವಗಳಂತೆ ತಾವು ನಮ್ಮ ಈ ಪ್ರಾರ್ಥನೆಯನ್ನು ಒಪ್ಪುವಿರೆಂದು ನಮ್ಮ ದೃಢವಾದ ನಂಬಿಕೆ.

ಬ್ರಿಟಿಶ್ ಸರಕಾರಕ್ಕೂ ಬ್ರಿಟಿಶ್ ಜನತೆಗೂ ಇಂಡೋ-ಪಾಕಿಸ್ಥಾನ ಸಮಸ್ಯದಲ್ಲಿ ಬ್ರಿಟಿಶ್ ಸಾಮ್ರಾಜ್ಯದ ಎರಡು ತುಂಡುಗಳಾದ ಹಿಂದುಸ್ಥಾನ ಮತ್ತು ಪಾಕಿಸ್ಥಾನಗಳ ಮಹತ್ವವು ಎಷ್ಟಿದೆ ಎಂಬುದನ್ನೂ ಈ ಎರಡು ಹೇಗೆ ಭಿನ್ನ ರಾಷ್ಟ್ರಗಳಾಗಿವೆಯೆಂಬುದನ್ನೂ ತಿಳಿಯಬಯಸುತ್ತೇವೆ. ಈ ಸಂಗತಿಯು ಸ್ಪಷ್ಟ ಗೊತ್ತಾದ ವಿನಾ ಭೌಗೋಲಿಕ ದೃಷ್ಟಿಯಿಂದಲೂ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಮತ್ತು ಐತಿಹಾಸಿಕ ಆಧಾರಗಳಿಂದಲೂ ಪಾಕಿಸ್ಥಾನವು ಹಿಂದುಸ್ಥಾನ ಫೆಡರಲ್‌ದಿಂದ ಏಕೆ ಭಿನ್ನವಾಗಿರಬೇಕೆಂಬ ನಮ್ಮ ಉದ್ದೇಶವು ತಮಗೆ ತಿಳಿಯಲಾರದು.

ಪಾಕಿಸ್ಥಾನವು ಹಿಂದುಗಳ ಭೂಮಿಯಲ್ಲ. ಅಲ್ಲಿಯ ನಿವಾಸಿಗಳೂ ಹಿಂದುಗಳಲ್ಲ. ಆ ಭಾಗವು ತನ್ನ ಬೇರೆಯಾದ ಐತಿಹಾಸಿಕ ಆಧ್ಯಾತ್ಮಿಕ ಪ್ರಾದೇಶಿಕ ಮತ್ತು ರಾಷ್ಟ್ರೀಯ ವೈಶಿಷ್ಟ್ಯಗಳಿಂದ ಕೂಡಿದ್ದಾಗಿದೆ. ಐತಿಹಾಸಿಕ ಪ್ರಭಾತ ಕಾಲದಿಂದಲೂ ಇದು ನಮ್ಮ ರಾಷ್ಟ್ರವಾಗಿಯೇ ಇದೆ. ಪ್ರಾಚೀನ ಕಾಲದಿಂದಲೂ ಇದೇ ನಮ್ಮ ಸಂಸ್ಕೃತಿಯ ಮಾತೃಸ್ಥಾನವಾಗಿದೆ. ಭೂತಕಾಲದಲ್ಲಿ ಇದು ನಮ್ಮ ರಾಷ್ಟ್ರವಾಗಿದ್ದುದರಿಂದ ಭವಿಷ್ಯಕಾಲದ ಎಲ್ಲ ನಮ್ಮ ಆಶೆಗಳೂ ಇದೇ ರಾಷ್ಟ್ರದಲ್ಲಿ ಏಕೀಕರಿಸಿವೆ.

ಯಾವ ಕಾರಣದಿಂದ ಹಿಂದುಸ್ಥಾನಿಗಳು ಹಿಂದುಸ್ಥಾನವು ತಮ್ಮ ಮಾತೃ ಭೂಮಿಯೆಂದು ಹೇಳುತ್ತಿದ್ದಾರೆಯೋ ಅದೇ ಕಾರಣದಿಂದ ನಾವು ಕೂಡಾ ಪಾಕಿಸ್ಥಾನವು ನಮ್ಮ ಪಿತೃಭೂಮಿಯೆಂದು ಹೇಳುವ ಅಧಿಕಾರವುಳ್ಳವರಾಗಿದ್ದೇವೆ. ಜನಸಂಖ್ಯೆಯ ಮೂರನೆಯ ಭಾಗವು ಹಿಂದುಗಳುಳ್ಳದ್ದಾಗಿರುವುದರಿಂದ ಹಿಂದುಸ್ಥಾನವು ಹೇಗೆ ಹಿಂದುಗಳ ದೇಶವಾಗಿದೆಯೋ ಹಾಗೆಯೇ ಐದರಲ್ಲಿ ನಾಲ್ಕು ಭಾಗ ಪಾಕಿಸ್ಥಾನದಲ್ಲಿ ನಾವು ಇರುವುದರಿಂದ ಪಾಕಿಸ್ಥಾನವು ನಮ್ಮ ದೇಶವಾಗಿದೆ. ಪ್ರಾಚೀನ ಕಾಲದಿಂದಲೂ ಪಾಕಿಸ್ಥಾನವು ನಮ್ಮದೇ ಸರಿ.

ಹಿಂದುಸ್ಥಾನದವರಿಗೂ ನಮಗೂ ಯಾವ ವಿಷಯದಲ್ಲಿಯೂ ಸಂಬಂಧವಿಲ್ಲ. ನಮ್ಮ ರಾಷ್ಟ್ರೀಯ ಜೀವನೇ ಅವರಿಂದ ತೀರ ಭಿನ್ನವಾಗಿದೆ. ಆದಕಾರಣ ಹಿಂದುಗಳ ಉನ್ನತಿಗೆ ಯಾವ ಯಾವ ಸಂಗತಿಗಳು ಅಗತ್ಯವಾಗಿವೆಯೋ ಅವೆಲ್ಲವುಗಳೂ ಅವರಿಗೆ ತೀರ ಭಿನ್ನವಾಗಿರತಕ್ಕ ನಮಗೂ ಅಗತ್ಯವಾಗಿವೆ. ಪ್ರಾಚೀನ ಕಾಲದಿಂದಲೂ ಹಿಂದುಗಳಿಗೂ ನಮಗೂ ಆಚಾರ, ವಿಚಾರ, ಪಂಚಾಂಗ, ಊಟ, ಉಡುಗೆ, ತೊಡಿಗೆ, ಭಾಷೆ ಮೊದಲಾದ ಎಲ್ಲ ವಿಷಯಗಳಲ್ಲಿಯೂ ತೀರ ಭಿನ್ನವಿದೆ. ಅವರಿಗೂ ನಮಗೂ ಶರೀರಸಂಬಂಧವಿಲ್ಲ. ಊಟೋಪಚಾರಗಳೂ ಇಲ್ಲ. ನಾವೂ ಅವರೂ ಭಿನ್ನವೆಂಬುದನ್ನು ದೇವರೇ ಭೌಗೋಲಿಕ ದೃಷ್ಟಿಯಿಂದಲೂ ತೋರಿಸಿದ್ದಾನೆ. ಇಂತಹ ಮೂಲಭೂತ ಭಿನ್ನತ್ವದ ಕಡೆಗೆ ಕೇವಲ ಬ್ರಿಟಿಶ್ ಸರಕಾರ ಅಥವಾ ಹಿಂದುಸ್ಥಾನ ಲಕ್ಷಿಸಬೇಕೆಂದಲ್ಲ; ಅಖಿಲ ಪ್ರಪಂಚವೇ ಲಕ್ಷಿಸಬೇಕೆಂದು ನಾವು ಇಚ್ಛಿಸುತ್ತೇವೆ.

### ಜಾಯಿಂಟ್ ಸಿಲೆಕ್ಟ ಕಮಿಟಿಯ ಒಪ್ಪಿಗೆ.

ಈ ನಮ್ಮ ಹೇಳಿಕೆಯನ್ನು "ಇಂಡಿಯನ್ ಕಾನ್ಸಿಟ್ಯೂಶನಲ್ ರಿಫಾರ್ಮ ಜಾಯಿಂಟ್ ಸಿಲೆಕ್ಟ ಕಮಿಟಿಯು" ಒಪ್ಪಿಕೊಂಡಿದೆ. ಅದು ತನ್ನ ವರದಿಯಲ್ಲಿ ಹೀಗೆ ಹೇಳಿದೆ—

"ಯುರೋಪದಲ್ಲಿ ಭಿನ್ನ ಭಿನ್ನ ರಾಷ್ಟ್ರಗಳು ಹೇಗೆ ಉತ್ಪತ್ತಿ, ಪರಂಪರೆ, ಜೀವನಗಳಿಂದ ಭಿನ್ನ ಭಿನ್ನವಾಗಿವೆಯೋ ಹಾಗೆಯೇ ಹಿಂದುಸ್ಥಾನದಲ್ಲಿಯೂ ಕೆಲವು ಭಿನ್ನ ಜಾತಿಗಳಿವೆ. ಹಿಂದುಸ್ಥಾನದಲ್ಲಿರುವ ೭ ಕೋಟಿ ೭೦ ಲಕ್ಷ ಮುಸಲ್ಮಾನರು ಹಿಂದುಗಳಿಂದ ಕೇವಲ ಧಾರ್ಮಿಕ ವಿಷಯದಲ್ಲಿಯೇ ಭಿನ್ನವಾಗಿಲ್ಲ; ಸಾಂಸ್ಕೃತಿಕ ಮತ್ತು ಸಮಾಜ ಶಾಸನಗಳಿಂದಲೂ ಭಿನ್ನವಾಗಿದ್ದಾರೆ. ಹಿಂದುಗಳ ಸಮಾಜರಚನೆಯು ಮುಖ್ಯವಾಗಿ ಚತುರ್ವರ್ಣಗಳ ಮೇಲೆಯೇ ಅವಲಂಬಿಸಿದೆ. ಇಸ್ಲಾಮ ಧರ್ಮದ ಮೂಲ ಸಿದ್ಧಾಂತ ಪರಸ್ಪರ ಸಮಾನತೆಯಾಗಿದೆ."

ಭೌಗೋಲಿಕ ದೃಷ್ಟಿಯಿಂದಲೂ ಪಾಕಿಸ್ಥಾನವು ಹಿಂದುಸ್ಥಾನಕ್ಕಿಂತ ಭಿನ್ನವಾದುದು. ಯಮುನಾ ನದಿಯೇ ಪಾಕಿಸ್ಥಾನವನ್ನು

ಹಿಂದುಸ್ಥಾನದಿಂದ ಬೇರೆ ಮಾಡಿದೆ. ಪಾಕಿಸ್ಥಾನವು ಹಿಂದುಸ್ಥಾನಕ್ಕೆ ಕೂಡಲು ಪಾನಿಪತ್ತು ಕಾರಣವಾಯಿತು.

ಪಾಕಿಸ್ಥಾನವು ಹಿಂದುಸ್ಥಾನದಿಂದ ಯಾವಾಗಲೂ ಭಿನ್ನವಾಗಿಯೇ ಇದ್ದಿತು. ಇನ್ನು ಮೇಲೆಯೂ ಭಿನ್ನವಾಗಿಯೇ ಇರುವುದು. ಇದು ನೈಸರ್ಗಿಕವಾದ ಭಿನ್ನತ್ವವು. ಆದುದರಿಂದ ಧರ್ಮ ಮತ್ತು ಪಿತೃಭೂಮಿಯ ಮೂಲಕ ನಮಗೆ ದೊರೆತ ರಾಷ್ಟ್ರೀಯ ಸಂಪತ್ತೇ ಇದು. ಇದನ್ನು ನಾವು ರಕ್ಷಣೆಮಾಡಿಯೇ ತೀರುವೆವೆಂದು ದೃಢವಿಶ್ವಾಸವುಳ್ಳವರಾಗಿದ್ದೇವೆ.

### ಈ ಆಂದೋಲನದ ಮಹತ್ವ.

ಪಾಕಿಸ್ಥಾನ ರಾಷ್ಟ್ರೀಯ ಆಂದೋಲನವು ಮೇಲೆ ವಿವರಿಸಿದ ಅಭೇದ್ಯ ತತ್ವಗಳಿಂದ ಕೂಡಿದ್ದಾಗಿದೆ. ಆಂತೆಯೇ ಬ್ರಿಟಿಶ್ ಸರಕಾರದಲ್ಲಿಯೂ ರಾಷ್ಟ್ರ ಸಂಘದಲ್ಲಿಯೂ ಹಿಂದುಸ್ತಾನದಂತೆಯೇ ಪಾಕಿಸ್ಥಾನಕ್ಕೂ ಸಮಾನವಾದ ಮನ್ನಣೆಯಿರಬೇಕೆಂದು ಅದು ಅಪೇಕ್ಷಿಸುತ್ತದೆ. ಹಿಂದುಸ್ಥಾನದ ಫೆಡರೇಶನ್ನಿನಲ್ಲಿ ನಮ್ಮನ್ನು ಕೂಡಿಸಿದರೆ ನಮ್ಮ ವಿಕಾಸವಾಗುವುದು ಶಕ್ಯವೇ ಇಲ್ಲ. ಅದಕ್ಕಾಗಿ ಪಾಕಿಸ್ಥಾನವನ್ನು ಹಿಂದುಸ್ಥಾನದ ಫೆಡರೇಶನ್ನಿನಲ್ಲಿ ಕೂಡಿಸಕೂಡದು. ಸರಕಾರದಿಂದ ಆರಿಸಿ ಬಂದವರು ಮಂಡಲಾಕಾರ ಪರಿಷತ್ತಿನಲ್ಲಿ ಫೆಡರೇಶನ್ನನ್ನು ಒಪ್ಪಿ ನಮ್ಮ ರಾಷ್ಟ್ರೀಯ ಜೀವನದ ಕೊಲೆಮಾಡಿದ್ದಾರೆ. ಅವರು ನಮ್ಮ ಪ್ರತಿನಿಧಿಗಳಲ್ಲ. ಅವರ ಹೇಳಿಕೆ ನಮಗೆ ಮಾನ್ಯವಿಲ್ಲ.

ನಾವು ಪಾಕಿಸ್ಥಾನದ ಚಟುವಟಿಕೆಯನ್ನು ಯಾರ ವಿರುದ್ಧವಾಗಿಯೂ ನಡೆಯಿಸಿಲ್ಲ. ನಮ್ಮ ಪಿತೃಭೂಮಿಯ ರಕ್ಷಣೆಗಾಗಿ ಕೇವಲ ಆತ್ಮರಕ್ಷಣೆಗಾಗಿ ಪ್ರಾರಂಭಿಸಿದ್ದೇವೆ. ಹಿಂದುಸ್ಥಾನದ ಫೆಡರೇಶನ್ನಿನಲ್ಲಿ ಪಾಕಿಸ್ಥಾನವನ್ನು ಕೂಡಿಸುವುದು ಕೇವಲ ಅಶಕ್ಯ. ಇಷ್ಟೇ ಅಲ್ಲ; ಅವಿಚಾರದ್ದೂ ಆಗಿದೆ. ಬ್ರಿಟಿಶ್ ಸರಕಾರವು ಈ ಇಂಡೋ-ಪಾಕಿಸ್ಥಾನದ ಜಟಿಲ ಸಮಸ್ಯೆವನ್ನು ತಿಳಿದಿದ್ದರೂ ಬೇರೆ ಮಾಡದೆ ಇದ್ದುದು ದುರ್ದೈವದ ಸಂಗತಿಯು. ಇದು ಅಂತರ್ಜಾತೀಯ (Inter Communal) ಪ್ರಶ್ನೆಯಲ್ಲ ಅಂತರ ರಾಷ್ಟ್ರೀಯ (Inter national) ಪ್ರಶ್ನೆಯಾಗಿದೆ. ಈ ಮಹತ್ವದ ವಿಷಯದಲ್ಲಿ ಉಪೇಕ್ಷೆಮಾಡಿದ್ದಾದರೆ ಪಾಕಿಸ್ಥಾನದ ಅಹಿತವಂತೂ ಆಗೇ ಆಗುತ್ತದೆ. ಅದರ ಜತೆಯಲ್ಲಿ ಹಿಂದುಸ್ಥಾನದ ಮತ್ತು ಇಂಗ್ಲಂಡಿನ ಅಹಿತವೂ ಆಗುವುದು.

ಬ್ರಹ್ಮ ದೇಶವನ್ನು ಹಿಂದುಸ್ಥಾನದಿಂದ ಬೇರೆಮಾಡಿದಂತೆಯೇ ಪಾಕಿಸ್ಥಾನವನ್ನೂ ಹಿಂದುಸ್ಥಾನದಿಂದ ಬೇರೆಮಾಡವವರೆಗೂ ನಮಗೆ ನಿದ್ದೆ ಬರುವುದಿಲ್ಲ. ಶಾಂತಿ ದೊರೆಯುವುದಿಲ್ಲ. ಪಾಕಿಸ್ಥಾನ ಚಟುವಟಿಕೆಯ ಪ್ರವರ್ತಕನೆಂದು ಈ ಸಂಗತಿಯನ್ನು ಸ್ಪಷ್ಟ ತಿಳಿಸಬೇಕಾಗಿದೆ.

ಪಾಕಿಸ್ಥಾನದ ನ್ಯಾಯ ಬೇಡಿಕೆಯನ್ನು ಒಪ್ಪದಿದ್ದುದರಿಂದ ದೇಶದಲ್ಲಿ ಅಸಂತೋಷವುಂಟಾಗಿದೆ. ನಮ್ಮನ್ನು ನಿರಂತರ ಗುಲಾಮಗಿರಿಯಲ್ಲಿ ಹಾಕಿದಂತಾಗುವುದು. ಹಿಂದುಸ್ಥಾನದ ಫೆಡರೇಶನ್ನಿನಲ್ಲಿ ಪಾಕಿಸ್ಥಾನವನ್ನು ಕೂಡಿಸಿ ಶಾಸನಮಾಡಿದರೆ ನಡೆಯಬಹುದೆಂದು ನೀವು ತಿಳಿದಿರಬಹುದು. ಅದೆಂದಿಗೂ ಶಕ್ಯವಿಲ್ಲ. ಅಂಥ ಗುಲಾಮಗಿರಿಯನ್ನು ನಾವೆಂದಿಗೂ ಸಹಿಸುವವರಲ್ಲ. ನಮ್ಮ ಪೂರ್ವಜರು ಆತ್ಮಾಹುತಿಮಾಡಿ ಸಂಪಾದಿಸಿದ ಪಿತೃಭೂಮಿಯನ್ನು ನಾವೆಂದಿಗೂ ಬಿಡುವವರಲ್ಲ. ಬಲಿದಾನ ಮಾಡಿ ಗಳಿಸಿ ಕೊಟ್ಟುದನ್ನು ನಾವು ಶರಣಾಗತರಾಗಿ ಕೊಡತಕ್ಕವರಲ್ಲ. ನಮ್ಮ ಸರ್ವಸ್ವವನ್ನೂ ಆಹುತಿ ಕೊಡಲು ಸಿದ್ಧರಾಗಿದ್ದೇವೆ. ಇಂಗ್ಲಿಷರಿಗೂ ಹಿಂದುಗಳಿಗೂ ಸಂತೋಷಗೊಳಿಸಲು ನಾವು ಈ ಫೆಡರೇಶನ್ನಿಗೆ ಒಪ್ಪಿ ನಮ್ಮ ಶಿರಸ್ಸನ್ನು ನಾವೇ ಛೇದಿಸಿಕೊಳ್ಳಲಾರೆವು. ಹಿಂದುಸ್ಥಾನದ ಅಧಿಕಾರದಲ್ಲಿ ಸೇರಿ ಪಾಕಿಸ್ಥಾನವು ಒಂದು ತುಂಡಾಗಿದ್ದುಕೊಂಡು ಅದು ಗುಲಾಮ ವೃತ್ತಿಯನ್ನು ಅನುಸರಿಸಲಾರದು. ಆದುದರಿಂದ ನಮ್ಮ ರಕ್ಷಣೆಗಾಗಿ ನಾವು ನ್ಯಾಯ ಸಮ್ಮತವಾದ ಎಲ್ಲ ಪ್ರಯತ್ನಗಳನ್ನೂ ಮಾಡಲು ದೃಢನಿಶ್ಚಯವುಳ್ಳವರಾಗಿದ್ದೇವೆ.

ಈ ನಮ್ಮ ಪಿತೃ ಭೂಮಿಯ ಭವಿಷ್ಯವು ಸುನಿಶ್ಚಿತವಾದುದೆಂದು ನಾವು ದೃಢವಾಗಿ ತಿಳಿದಿದ್ದೇವೆ. ಅಂತೆಯೇ ನ್ಯಾಯವಾದ ಈ ರಾಷ್ಟ್ರೀಯ ಆಂದೋಲನವನ್ನು ಪ್ರಾರಂಭಿಸಿದ್ದೇವೆ. ಇದಕ್ಕಾಗಿ ಎಷ್ಟು ಕಾಲ ಎಷ್ಟು ತ್ಯಾಗ ಹಿಡಿದರೂ ನಾವು ಬಿಡುವವರಲ್ಲ. ಪಿತೃಭೂಮಿಯ ಈ ಮಹತ್ವದ ಕಾರ್ಯದಲ್ಲಿ ದೇವರು ನಮಗೆ ಸಹಾಯ ಮಾಡುವನೆಂದೇ ನಾವು ದೃಢವಾಗಿ ನಂಬಿದ್ದೇವೆ."

### ಪಾಕಿಸ್ಥಾನವು ಯಾವುದು ?

ಪಾಕಿಸ್ಥಾನವೆಂದು ಮೇಲೆ ಹೇಳಲ್ಪಟ್ಟ ರಾಷ್ಟ್ರವು ಯಾವುದೆಂಬುದು ಅನೇಕ ವಾಚಕರಿಗೆ ಗೊತ್ತಾಗುವ ಸಂಭವವಿಲ್ಲ. ಈ ಹೆಸರನ್ನು ಹೊಸದಾಗಿ ಉಂಟುಮಾಡಿದ್ದಾರೆ. ಇದರಲ್ಲಿ ಈ ಕೆಳಗಿನ ಐದು ಪ್ರಾಂತಗಳು ಕೂಡಿವೆ. ಅವುಗಳ ಹೆಸರಿನ ಆರಂಭದ ಅಕ್ಷರಗಳನ್ನು ತೆಗೆದುಕೊಂಡು ಈ ಹೆಸರನ್ನು ನಿರ್ಮಿಸಿದ್ದಾರಂತೆ.

ಪಂಜಾಬ, ಕಾಶ್ಮೀರ, ಸಿಂಧ, ಗಡಿನಾಡು, ಬಲುಚಿಸ್ಥಾನ ಕೂಡಿ ಪಾಕಿಸ್ಥಾನ. ಇವುಗಳ ಒಟ್ಟು ಜನಸಂಖ್ಯೆ ಸಾಧಾರಣ ೩|| ಕೋಟಿ ಇಂಥ ಒಂದು ಸ್ವತಂತ್ರ ಇಸ್ಲಾಮಿ ರಾಷ್ಟ್ರವು ಹಿಂದುಸ್ತಾನವ ತುಂಡು ಮಾಡಿ ಉತ್ತರ ಭಾಗದಲ್ಲಿ ನಿರ್ಮಾಣಮಾಡಲ್ಪಡಬೇಕೆಂದೇ ಈ ಚಟುವಟಿಕೆ ನಡೆದಿದೆ.

---

## ಭಾಯೀಜಿಯವರ ದೊಡ್ಡ ಮನಸ್ಸು !

ಭಾಯಿ ಮಾನವೇಂದ್ರರಾಯರು ಕಲಕತ್ತಾದಲ್ಲಿಯ ಮುಸಲ್ಮಾನ್ ವಿದ್ಯಾರ್ಥಿಗಳ ಮುಂದೆ ತಾ. ೨೭-೧-೪೮ ನೆಯ ದಿನ ಒಂದು ಭಾಷಣವನ್ನು ಮಾಡಿದರು. ಕಾಂಗ್ರೆಸ್ಸಿನಲ್ಲಿ ಮುಸಲ್ಮಾನರು ಸೇರಬೇಕೆಂದೂ ಅಂತಃಕರಣಪೂರ್ವಕ ಈಗ ಅವರು ಅದರಲ್ಲಿ ಸೇರಲಿಕ್ಕೆ ಬರುವಂತಿಲ್ಲವೆಂಬುದು ತಮಗೆ ಮಾನ್ಯವೆಂದೂ ಹೆಚ್ಚಾಗಿ ಸೇರಿದರೆ ಅವರ ಕೊರತೆ ನಿವಾರಣೆಯಾಗುವುದೆಂದೂ ಭಾಯೀಜಿಯವರು ಸೂಚಿಸಿ ಕೊನೆಗೆ ಹೀಗೆ ಹೇಳಿದರು—

"ನನ್ನ ಕೈಯಲ್ಲಿ ಕಾಂಗ್ರೆಸ್ ಇದ್ದಿದ್ದರೆ ಮುಸಲ್ಮಾನರು ಕೇಳುವುದನ್ನೆಲ್ಲಾ ಕೊಟ್ಟುಬಿಡುತ್ತಿದ್ದೆ." ಇದರಿಂದ ಭಾಯೀಜಿಯವರ ಮನಸ್ಸು ಎಷ್ಟು ದೊಡ್ಡದೆಂಬುದು ಗೊತ್ತಾಗುವುದಿಲ್ಲವೆ ? ಈ ದೇಶದಲ್ಲಿ ಮಿ. ಹಕ್ಕರಂತಹ ಮುಸಲ್ಮಾನ್ ಮುಂದಾಳುಗಳಿರುವಾಗ ಕಾಂಗ್ರೆಸ್ ತಾನು ಇಂಥ ದೊಡ್ಡ ಮನಸ್ಸಿನವರ ಕೈಯಲ್ಲಿ ಹೋಗಬಾರದೆಂದೇ ಬಿಟ್ಟಂತೆ ತೋರುತ್ತದೆ! ಹಿಂದಕ್ಕೆ ಇವರಿಗಿಂತ ದೊಡ್ಡ ಮನಸ್ಸಿನವರು ಹಿಂದುಸ್ಥಾನವನ್ನೇ ಮುಸಲ್ಮಾನರಿಗೆ ಕೊಟ್ಟಿರಲಿಲ್ಲವೆ ?

ಭಾಯೀಜಿಯವರ ಭಾಷಣದನಂತರ ಬಂಗಾಲದ ಮುಖ್ಯ ಮಂತ್ರಿಗಳಾದ ಮಿ. ಹಕ್ಕರು ಹೀಗೆ ಹೇಳಿದರು—"ಮುಸಲ್ಮಾನರೂ ಅನ್ಯರಂತೆಯೇ ರಾಷ್ಟ್ರೀಯರಾಗಿದ್ದಾರೆ. ನಾನು ತರುಣನಾಗಿದ್ದಾಗ ಕಾಂಗ್ರೆಸ್ಸಿನ ಕೆಲಸ ಮಾಡಿದ್ದೇನೆ. ಕಾಂಗ್ರೆಸ್ ಆಗಿನಂತೆ ಈಗಿಲ್ಲ. ಲೋ. ಟಿಳಕ, ಗೋಖಲೆ, ಸುರೇಂದ್ರನಾಥರಂಥ ಮುಂದಾಳುಗಳಿದ್ದಿದ್ದರೆ ನಾನೂ ಕಾಂಗ್ರೆಸ್ಸಿನಲ್ಲಿ ಸೇರುತ್ತಿದ್ದೆ." ನೋಡಿರಿ ಮಿ. ಹಕ್ಕರ ಹೇಳಿಕೆ ಹೇಗಿದೆ? ಭಾಯೀಜಿಯವರ ಮನಸ್ಸು ಹೇಗಿದೆ ?

# ಶ್ರೀ ಜಗದ್ಗುರು ಶಂಕರಾಚಾರ್ಯರ ಮಹತ್ವದ ಉಪದೇಶ.

ಕಳೆದ ೩೦ ನೆಯ ತಾರೀಖಿನ ದಿವಸ ಶ್ರೀ. ಜಗದ್ಗುರು ಶಂಕರಾಚಾರ್ಯ ಡಾ. ಕುರ್ತಕೋಟಿಯುವರಿಗೆ ಸಾಂಗಲಿ ಹಿಂದು ನಾಗರಿಕರು ಮಾನಪತ್ರವನ್ನು ಅರ್ಪಿಸಿದರು. ಸವರ್ಣ ಮತ್ತು ಆದಿ ಹಿಂದುಗಳು ಅನೇಕ ಪುಷ್ಪಮಾಲೆಗಳನ್ನು ಶ್ರೀಗಳಿಗೆ ಅರ್ಪಿಸಿದರು. ಪ್ರಚಂಡವಾದ ಸಭೆಯಲ್ಲಿ ಶ್ರೀಗಳಿಗೆ ಅವರು ಮಾಡುತ್ತಿರುವ ಅದ್ವಿತೀಯವಾದ ಹಿಂದು ಜನಸೇವೆಯನ್ನು ಶ್ಲಾಘಿಸಿ ಒಂದು ಮಾನಪತ್ರವನ್ನು ಅರ್ಪಿಸಿದನಂತರ ಜಗದ್ಗುರುಗಳು ಈ ಪ್ರಕಾರ ಭಾಷಣಮಾಡಿದರು—

### ನಾನು ಹಿಂದುಸಮಾಜ ಸೇವಕನು.

ನಾನು ಜಗದ್ಗುರುವಾಗಿ ಹಿಂದುಧರ್ಮದ ಸೇವೆಯನ್ನು ಬಹು ತೃಪ್ತಿಕರವಾಗಿ ಮಾಡುತ್ತಿದ್ದೇನೆಂದು ನೀವು ಹೇಳಿದಿರಿ. ಆದರೆ ನಾನು ಹಿಂದುಧರ್ಮ ಸೇವೆಯನ್ನು ಸರಿಯಾಗಿ ಮಾಡುತ್ತಾ ಇಲ್ಲವೆಂದೇ ನನಗೆ ತೋರುತ್ತದೆ ಏಕೆಂದರೆ ಪರದೇಶಗಳಿಂದ ಇನ್ನೂ ಪಾದ್ರಿಗಳು ಇಲ್ಲಿಗೆ ಬರುವುದು ನಿಂತಿಲ್ಲ. ಇಂಥ ಸ್ಥಿತಿಯಲ್ಲಿ ಜಗದ್ಗುರುವೆಂದು ಹೇಳಿಸಿಕೊಳ್ಳಲು ನಾನು ನಾಚುತ್ತಿದ್ದೇನೆಂದೇ ನಿಮಗೆ ಸ್ಪಷ್ಟ ತಿಳಿಸುತ್ತೇನೆ. ನಾವು ಎಲ್ಲಿಯ ವರೆಗೆ ಕರ್ತವ್ಯಹೀನರಾಗಿದ್ದೇವೆಯೋ ಅಲ್ಲಿಯ ವರೆಗೆ ಇಂಥ ಮಾನಪತ್ರಗಳಿಗೆ ನಾವು ಅರ್ಹರಲ್ಲ. ನನಗೆ ಇಂಥ ಆಡಂಬರ ಸೇರುವುದಿಲ್ಲ. ಕೇವಲ ನಿಮ್ಮ ಪ್ರೇಮಕ್ಕಾಗಿ ಒಪ್ಪಿದ್ದೇನೆ. ನಾನೊಬ್ಬ ಹಿಂದು ಸಮಾಜ ಸೇವಕನು.

ಮೊದಲು ಈ ದೇಶದಲ್ಲಿ ಮುಸಲ್ಮಾನರ ಸಂಖ್ಯೆ ೧|| ಲಕ್ಷ ಮಾತ್ರ ಇತ್ತು. ಈಗ ಏಳು ಕೋಟಿ ಮುಸಲ್ಮಾನರಿದ್ದಾರೆ. ಇಂಥ ಪ್ರಚಂಡ ಸಮಾಜದ ಕಡೆಗೆ ನಿರ್ಲಕ್ಷಿಸಿ ಕಾಂಗ್ರೆಸ್ ಪಕ್ಷವು ಅಖಿಲ ಹಿಂದುಸ್ಥಾನದ ಯಾವ ರಾಜಕಾರಣವನ್ನೂ ನಡೆಯಿಸಲಾರದು. ಆದಕಾರಣ ಕಾಂಗ್ರೆಸ್ಸಿನಲ್ಲಿ ಮುಸಲ್ಮಾನರ ಸೇರ್ಪಡೆಯಾಗುವುದು ಅತ್ಯಗತ್ಯವಿದೆ. ಅಖಿಲ ಭಾರತದ ರಾಜಕಾರಣಕ್ಕಾಗಿ ಕಾಂಗ್ರೆಸ್ ಸಂಸ್ಥೆಯು ಬೇಕೇ ಬೇಕು. ಅದೇ ಪ್ರಕಾರ ಹಿಂದುಗಳ ಹಿತರಕ್ಷಣೆಗಾಗಿ ಹಿಂದು ಮಹಾ ಸಭೆಯೂ ಬೇಕು. ಶಕ್ಯವಿದ್ದಷ್ಟು ಮಟ್ಟಿಗೆ ರಾಜಕಾರಣ ಮತ್ತು ಧಾರ್ಮಿಕ ಸಂಗತಿಗಳು ಬೇರೆಯಾಗಿ ನಡೆಯುವುದೇ ವಿಹಿತ.

ಅನ್ಯ ಜನರಿಂದ ಅತ್ಯಾಚಾರ ನಡೆಯುತ್ತವೆಂದು ಹಿಂದು ಸಮಾಜವು ದೂರಿಕೊಳ್ಳುವುದಕ್ಕಿಂತ ಅಂಥ ಅತ್ಯಾಚಾರಗಳು ನಡೆಯದಂತೆ ಎಚ್ಚರಿಕೆಯಿಂದಿರುವುದೇ ಉತ್ತಮವು. ನಾವು ಸಂಘಟನೆಯಿಂದ ನಮ್ಮಲ್ಲಿ ಶಕ್ತಿಯನ್ನುಂಟುಮಾಡಿಕೊಂಡರೆ ಈ ಪ್ರಕಾರ ನರಳುವ ಪ್ರಸಂಗವೇ ಬರುವುದಿಲ್ಲ. ಈಗ ಹಿಂದು ಸಮಾಜವು ಹಿಂದುತ್ವದ ವಿನಾ ಬೇರೆ ವಿಷಯದ ಕಡೆಗೆ ಲಕ್ಷಿಸಲೇಕೂಡದು. ನಾನು ಇಂಗ್ಲೆಂಡಿನಲ್ಲಿರುವಾಗ ೨೦-೨೫ ಜನರಿಗೆ ಹಿಂದು ಧರ್ಮ ದೀಕ್ಷೆಯನ್ನು ಕೊಟ್ಟಿದ್ದೆನು. ಹಿಂದು ಧರ್ಮ ಪ್ರಚಾರಕ್ಕೆ ತುಂಬಾ ಅವಕಾಶವಿದೆ. ಈಗ ಯೇಸು ಇದ್ದಿದ್ದರೆ ನಾನು ಆತನಿಗೂ ಹಿಂದುಧರ್ಮದ ದೀಕ್ಷೆಯನ್ನು ಕೊಡುತ್ತಿದ್ದೆನು.

### ತಪ್ಪು ತಿಳುವಳಿಕೆ ಹೋಗಲಿ.

ಯಾರೋ ಮುಟ್ಟಿದ ನೀರನ್ನು ಕುಡಿದದ್ದರಿಂದ ಆತನ ಜಾತಿ ಕೆಟ್ಟಿತೆಂದು ಕುಲದ ಹೊರಗೆ ಹಾಕುವ ತಪ್ಪು ತಿಳುವಳಿಕೆ ಈಗಲಾದರೂ ಹೋಗಬೇಕು. ಕಾಗಿಯ ಮಲವು ನೀರಲ್ಲಿ ಬಿದ್ದಿತೆಂದು ಆ ನೀರನ್ನು ಕುಡಿದವರು ಕಾಗಿಯಾಗುತ್ತಾರೆಯೇ? ತಲೆಯಮೇಲೆ ನೀರು ಹಾಕಿದ ಮಾತ್ರಕ್ಕೆ ಹಿಂದು ಕ್ರಿಸ್ತ ಮತದವರಾಗುವುದಾದರೆ ಆ ನೀರು ಒಣಗಿದ ಕೂಡಲೆ ಆತನೇಕೆ ಹಿಂದು ಧರ್ಮದವನಾಗುವುದಿಲ್ಲ? ನಮ್ಮ ಪೂರ್ವಜರು ಅನಾರ್ಯರನ್ನು ಆರ್ಯರನ್ನಾಗಿ ಮಾಡದೆ ಇದ್ದಿದ್ದರೆ ಹಿಂದು ಸಮಾಜವು ಈಗ ಇಷ್ಟು ಪ್ರಚಂಡವಾದುದಾಗಿರುತ್ತಿರಲಿಲ್ಲ. ಆಗಿನ ವಿಶಾಲ ದೃಷ್ಟಿಯು ಈಗ ಅಳಿದು ಹೋಗಿದೆ.

ಅಬ್ದುಲ್ ಕರೀಮಖಾನನು ಗಣಪತಿ ದೇವಾಲಯದಲ್ಲಿ ಬಂದು ಸಂಗೀತ ಹೇಳಿದರೆ ಆಗಬಹುದು. ಆದರೆ ಆದಿ ಹಿಂದು ಸಾಳುಂಖೆಯವರು ಮಾತ್ರ ಬರಕೂಡದು. ಇದೆಲ್ಲ ಎಲ್ಲಿಯಧರ್ಮ! ಇಂಥ ತಪ್ಪು ವಿಚಾರಗಳನ್ನು ತೆಗೆದುಹಾಕಿರಿ.

ಈಗ ಕಾಂಗ್ರೆಸ್ಸಿನ ೩೨ ಲಕ್ಷ ಸದಸ್ಯರಲ್ಲಿ ೧ ಲಕ್ಷ ಮಾತ್ರ ಮುಸಲ್ಮಾನರಿದ್ದಾರಂತೆ. ಹಿಂದುಗಳು ತಾವು ಶಕ್ತಿಶಾಲಿಗಳಾದರೆ ಅನ್ಯರಿಗೆ ಅಳುಕುವದೇಕೆ? ಒಬ್ಬ ಹಿಂದುವಿನ ಧ್ವನಿಯು ಒಂದು ಲಕ್ಷ ಹಿಂದುಗಳ ಧ್ವನಿಯಾಗಿ ಪರಿಣಮಿಸಬೇಕು. ಹಾಗಾದ ವಿನಾ ಹಿಂದು ಧರ್ಮರಕ್ಷಣೆಯಾಗುವುದಿಲ್ಲ."

---

# ಬ್ಯಾ. ಜಿನ್ನಾರವರ ಸ್ಪಷ್ಟೋಕ್ತಿ.

ಮುಂಬೈ ಪ್ರಾಂತದ ಲೋಕಲ್ ಬೋರ್ಡ ಶಾಸನ ತಿದ್ದುಪಾಟನಲ್ಲಿ ಸಂಯುಕ್ತ ಮತದಾರ ಪದ್ಧತಿಯು ಐಚ್ಛಿಕವಾಗಿಯಾದರೂ ಇರಲು ಅವಕಾಶ ಕೊಟ್ಟಿದ್ದೂ ಅದಕ್ಕು ಕೂಡಾ ಮುಸ್ಲಿಂಲೀಗಿನವರು ವಿರೋಧಿಸಿದುದೂ ಸರ್ವಶ್ರುತವಷ್ಟೆ. ಅನಂತರ ಮುಂಬೈಯಲ್ಲಿ ಬ್ಯಾ. ಜಿನ್ನಾರವರು ಮುಸಲ್ಮಾನ ಸಮಾಜದ ಮುಂದೆ ಮಾಡಿದ ಎರಡು ಭಾಷಣಗಳಲ್ಲಿಯೂ ಸಂಯುಕ್ತ ಮತದಾರ ಪದ್ಧತಿಯನ್ನು ನಿಷೇಧಿಸಿದರು. ಮುಸಲ್ಮಾನರು ಇದಕ್ಕೆ ಒಪ್ಪಿದರೆ ಅವರು ನಿರಂತರ ಹಿಂದುಗಳ ಗುಲಾಮರಾಗಿರಬೇಕಾಗುವುದೆಂದೂ ತಿಳಿಸಿದರು. ನಾಗದೇವಿ ಮಾರ್ಗದ ಮುಂದೆ ಮಾಡಿದ ಭಾಷಣದಲ್ಲಿ ಇವರು ಹೀಗೆ ಸ್ಪಷ್ಟ ಹೇಳಿದರು—



ಬ್ಯಾ. ಜಿನ್ನಾರವರು.

"ಧರ್ಮ, ಸಂಸ್ಕೃತಿ, ಉಡುಪು, ಊಟ ಇವುಗಳಲ್ಲೆಲ್ಲ ಹಿಂದುಗಳಿಗಿಂತ ತೀರ ಭಿನ್ನವಾಗಿರತಕ್ಕ ನಮ್ಮ ಮೇಲೆ ಸಂಯುಕ್ತ ಮತದಾರ ಪದ್ಧತಿಯನ್ನು ಹೇರುವುದೇಕೆ?

ಬ್ಯಾ. ಜಿನ್ನಾರವರ ಈ ವಿಚಾರಸರಣಿಯು ಪಾಕಿಸ್ಥಾನ ನಿರ್ಮಾಣಕರಂತೆಯೇ ಇದೆಯೆಂದು ಈಗಲಾದರೂ ಸ್ಪಷ್ಟ ಗೊತ್ತಾಗುವುದಿಲ್ಲವೆ? ಫೆಡರೇಶನ್ನಿನ ಪ್ರಶ್ನೆ ಹತ್ತಿರ ಬಂದಂತೆ ಇವರು ಇನ್ನೂ ವಿವರವಾಗಿ ಹೇಳದೆ ಬಿಡುವುದಿಲ್ಲ. ಇಂಥವರು ಸಂಯುಕ್ತ ಮತದಾರ ಪದ್ಧತಿಗೆ ಒಪ್ಪಿ ಜಾತಿನಿರ್ಣಯವನ್ನು ತೆಗೆದುಹಾಕಿರೆಂದು ಹೇಳುವರೆ? ಪಂಡಿತ ಜವಾಹರಲಾಲರು ಜಿನ್ನಾರವರ ಒಪ್ಪಿಗೆ ಬಂದಾಗ ಜಾತಿನಿರ್ಣಯ ಹೋಗಲೆಂದು ಹೇಳಿದುದು ಅದನ್ನೇ ಒಪ್ಪಿಕೊಂಡ ಬೇರೊಂದು ರೀತಿಯಲ್ಲವೆ?

---

—ಬಂಗಾಲ ಶಾಸನಮಂಡಲದವರು ಬಂಗಾಲಿಗಳಿಗೆ ಸೈನ್ಯ ಶಿಕ್ಷಣ ಕೊಡಲು ಹಿಂದುಸ್ಥಾನ ಸರಕಾರಕ್ಕೆ ತಿಳಿಸಬೇಕೆಂದು ಪ್ರಾಂತಿಕ ಸರಕಾರವನ್ನು ಕೇಳಿಕೊಂಡರು.






ಶಾ. ಶ. ೧೮೫೯ ನೆಯ ಮಾಘ ಶು|| ೭ ಸೋಮವಾರ.

## ಹರಿಪುರದ ಕಡೆಗೆ ರಾಷ್ಟ್ರ ತಿರುಗಿತು.

ಬಾಬು ಸುಭಾಷಚಂದ್ರ ಬೋಸರ ಅಧ್ಯಕ್ಷತೆಯಲ್ಲಿ ೫೧ ನೆಯ ರಾಷ್ಟ್ರೀಯ ಸಭೆಯು ಹರಿಪುರದಲ್ಲಿ ಕೂಡುವುದಷ್ಟೆ. ಇದು ಯಾವ ಮಾರ್ಗವನ್ನು ರಾಷ್ಟ್ರಕ್ಕೆ ತೋರಿಸುವುದೋ ಎಂದು ರಾಷ್ಟ್ರವೇ ಈಗ ಹರಿಪುರದ ಕಡೆಗೆ ತಿರುಗಿದೆ. ಏಕೆಂದರೆ, ರಾಷ್ಟ್ರದ ಮುಂದೆ ಈಗ ಅಂತಹ ಬಿಕ್ಕಟ್ಟಿನ ಪ್ರಸಂಗಗಳೇ ಬಂದಿವೆ.

ಹಿಂದಿ ರಾಷ್ಟ್ರಕ್ಕೆ ತುಂಬಾ ಅಪ್ರಿಯವಾದ ಸಂಯುಕ್ತ ರಾಜ್ಯಘಟನೆಯನ್ನು (ಫೆಡರೇಶನ್) ಬ್ರಿಟಿಶ್ ಸರಕಾರವು ಹಿಂದಿಗಳ ಮೇಲೆ ಹೇರಲು ಈಗಾಗಲೇ ಎಲ್ಲ ಸಿದ್ಧತೆಗಳನ್ನು ಮಾಡುತ್ತಾ ಇದೆ. ಇದನ್ನು ತಳ್ಳಿ ಹಾಕುವುದು ಪ್ರತಿಯೊಬ್ಬ ಹಿಂದಿ ಮನುಷ್ಯನ ಕರ್ತವ್ಯವಾಗಿದೆ. ಈಗ ಇದ್ದ ರೀತಿಯಲ್ಲಿಯೇ ಸಂಯುಕ್ತ ರಾಜ್ಯ ಘಟನೆಯು ನಮ್ಮ ಮೇಲೆ ಬಂದಪಕ್ಷದಲ್ಲಿ ಹಿಂದುಸ್ಥಾನವು ಅನೇಕ ವಿಪತ್ತುಗಳಿಗೆ ಗುರಿಯಾಗುವುದು.

ಇದನ್ನು ತಳ್ಳಿಹಾಕಿ ರಾಷ್ಟ್ರದ ಇಷ್ಟದಂತೆ ಸಂಯುಕ್ತ ಘಟನೆಯನ್ನು ಸಿದ್ಧಗೊಳಿಸಿಕೊಳ್ಳಬೇಕಾದರೆ ರಾಷ್ಟ್ರದಲ್ಲಿ ಮತ್ತೈಕ್ಯವಿರಬೇಕಾದುದು ಅತ್ಯಗತ್ಯ. ನಮ್ಮ ನಮ್ಮಲ್ಲಿ ಅನೈಕ ಮತ್ಯವುಂಟಾದದ್ದಾದರೆ ರಾಷ್ಟ್ರದ ಬಲ ಕುಗ್ಗಿ ನಮಗೆ ಅಹಿತಕರವಾದ ರಾಜ್ಯಘಟನೆ ಬರುವ ಸಂಭವವಿದೆ. ಅಂತೆಯೇ ಹರಿಪುರವು ರಾಷ್ಟ್ರದಲ್ಲಿ ಮತ್ತೈಕ್ಯ ದೃಢಪಟ್ಟು ಬಲವು ಹೆಚ್ಚುವಂತೆ ಯಾವ ಮಾರ್ಗವನ್ನು ಸೂಚಿಸುವುದೋ ಎಂದು ರಾಷ್ಟ್ರವು ಅತ್ತ ನೋಡುತ್ತಲಿದೆ.

### ಈಗಿರತಕ್ಕ ಅನೈಕ ಮತ್ಯ.

ಮೂವತ್ತು ವರುಷಗಳ ಹಿಂದೆ ಕಾಂಗ್ರೆಸ್ಸಿನಲ್ಲಿ ಸೌಮ್ಯ ಮತ್ತು ಉಗ್ರ ಪಕ್ಷಗಳ ಅನೈಕ ಮತ್ಯವು ವಿಕೋಪ ಸ್ಥಿತಿಗೆ ಹೋಗಿದ್ದಂತೆ ಈಗಲೂ ಕಾಂಗ್ರೆಸ್ಸಿನಲ್ಲಿ ಅನೈಕಮತ್ಯ ಹೆಚ್ಚುವ ಅಶುಭ ಲಕ್ಷಣಗಳು ತೋರುತ್ತಲಿವೆ. ಇವು ಕೂಡಲೇ ಅಡಗಬೇಕು. ಕಳೆದ ವರುಷ ಫೈಜಪುರಕ್ಕೆ ಹೋಗುವಾಗ ಯಾವ ಮತ್ತೈಕ್ಯವಿದ್ದಿತೋ ಅದು ಈಗ ಹರಿಪುರಕ್ಕೆ ಹೋಗುತ್ತಿದ್ದಾಗ ಕಾಂಗ್ರೆಸ್ ಪಕ್ಷದಲ್ಲಿಲ್ಲದಿದ್ದುದು ವಿಷಾದದ ಸಂಗತಿಯು.

ಕಾಂಗ್ರೆಸ್ ಸಮತಾವಾದಿಗಳು ಉಗ್ರಗಾಮಿಗಳಾಗಿದ್ದಾರೆ. ಅಧಿಕಾರವನ್ನು ವಹಿಸಿರುವ ಕಾಂಗ್ರೆಸ್ ಪಕ್ಷವು ಅವರ ದೃಷ್ಟಿಗೆ ಈಗ ಸೌಮ್ಯವಾದಂತೆ ತೋರುತ್ತದೆ. ಬಿಹಾರ ಮತ್ತು ಸಂಯುಕ್ತ ಪ್ರಾಂತಗಳಲ್ಲಿಯ ಸಮತಾವಾದಿಗಳು ಕಾಂಗ್ರೆಸ್ ಪಕ್ಷವನ್ನು ತೀಕ್ಷ್ಣವಾಗಿ ಟೀಕಿಸಲಾರಂಭಿಸಿದ್ದಾರೆ. ಗಾಂಧೀಜಿಯವರ ಸಾಧನಗಳು ಈಗಾಗಲೇ ಅನೇಕರಿಗೆ ಹಳೆಯದಾಗಿ ತೋರಿ ಹೊಸ ಶಸ್ತ್ರಾಸ್ತ್ರಗಳನ್ನು ಧರಿಸುವ ಉತ್ಸಾಹ ಬಂದಿದೆ. ಕಾಂಗ್ರೆಸ್ಸಿನಿಂದ ಹೊರಗೆ ಬರಲು ಕೂಡಾ ಕೆಲವರು ಇಚ್ಛಿಸುತ್ತಿದ್ದಾರೆ. ಇವರ ಅತ್ಯುಜ್ವಲವಾದ ರಾಷ್ಟ್ರಭಕ್ತಿಯ ವಿಷಯದಲ್ಲಿ ಯಾರಿಗೂ ಎಳ್ಳಷ್ಟಾದರೂ ಸಂಶಯವಿಲ್ಲ. ಆದರೆ ಅವರ ಮಾರ್ಗವನ್ನು ಅನುಸರಿಸಲು ರಾಷ್ಟ್ರವು ಮಾತ್ರ ಇನ್ನೂ ಸಮರ್ಥವಾದುದಾಗಿಲ್ಲ. ಮತ್ತು ಅದು ಕ್ಷೇಮಕರವಾದುದೂ ಅಲ್ಲ. ಆದುದರಿಂದ ಸಮತಾವಾದಿಗಳು ಕಾಂಗ್ರೆಸ್ಸಿನಿಂದ ಹೊರಬೀಳದೆ ಅದರಲ್ಲಿದ್ದೇ ಅದರ ಶಕ್ತಿಯನ್ನು ಹೆಚ್ಚಿಸುವುದು ಕ್ಷೇಮಕರ. ರಾಷ್ಟ್ರದ ಈಗಿನ ಸ್ಥಿತಿಯನ್ನು ನೋಡಿ ಅವರು ಹಾಗೇ ಮಾಡುವರೆಂದು ನಾವು ನಂಬಿದ್ದೇವೆ.

ಹಿಂದು-ಮುಸಲ್ಮಾನರ ಅನೈಕಮತ್ಯವು ಕೂಡಾ ಕಳೆದ ವರುಷಕ್ಕಿಂತ ಈ ವರುಷ ಹೆಚ್ಚಿದೆ. ಮುಸ್ಲಿಂಲೀಗಿನವರು ಅರಾಷ್ಟ್ರೀಯವಾದ ಧೋರಣವನ್ನು ಬಹು ಬಿಗಿಯಾಗಿ ಹಿಡಿದುಕೊಂಡಿದ್ದಾರೆ. ಬ್ಯಾ. ಜಿನ್ನಾರವರ ವಿಚಾರಸರಣಿಯನ್ನು ನೋಡಿದರೆ ಪಾಕಿಸ್ಥಾನದ ಪ್ರವರ್ತಕರಲ್ಲಿ ಇವರೂ ಅಗ್ರಗಣ್ಯರೋ, ಏನೋ ಎಂಬಂತೆ ತೋರುತ್ತದೆ. ಕಾಂಗ್ರೆಸ್ಸಿನವರೇನೋ ಹಿಂದು-ಮುಸಲ್ಮಾನರ ಐಕಮತ್ಯಕ್ಕೆ ಬಹು ಆತುರರಾಗಿದ್ದಾರೆ. ಇದೇ ಪ್ರಕಾರ ಮುಸ್ಲಿಂಲೀಗಿನವರೂ ಇದ್ದರೇನೇ ಇದು ಸಾಧ್ಯವು. ಹಿಂದು ಮಹಾ ಸಭೆಯ ಅಭಿಪ್ರಾಯವನ್ನು ತಿಳಿದುಕೊಳ್ಳದೆ ಕಾಂಗ್ರೆಸ್ ಪಕ್ಷವು ಮುಸ್ಲಿಂಲೀಗಿನೊಡನೆ ಒಪ್ಪಂದಮಾಡಿಕೊಂಡರೆ ಅದು ಫಲಕಾರಿಯಾಗುವ ಸಂಭವವಿಲ್ಲ. ಆದುದರಿಂದ ಹರಿಪುರವು ಈ ವಿಷಯದಲ್ಲಿ ಯಾವ ಮಾರ್ಗವನ್ನು ಸೂಚಿಸುವುದೋ ಎಂದು ರಾಷ್ಟ್ರವು ಅತ್ತ ತಿರುಗಿದೆ.

---

### ಒಂದೇ ದಿನದಲ್ಲಿ ೨೩ ವಿಧವಾ ವಿವಾಹ !

ಕಾಲಸಿ ಸಂಸ್ಥಾನಾಧಿಪತಿಗಳು ವಿಧವಾ ವಿವಾಹಕ್ಕೆ ಪ್ರೋತ್ಸಾಹಿಸಲು ವಿವಾಹದ ವೆಚ್ಚವನ್ನು ತಾವೇ ವಹಿಸುವುದಲ್ಲದೆ ವಧೂವರರಿಗೆ ಇನಾಮನ್ನೂ ಕೊಡುತ್ತಾರೆ. ಕಳೆದ ೩೦ ನೆಯ ತಾರೀಖಿನ ದಿನ ೨೩ ಬಾಲ ವಿಧವೆಯರ ವಿವಾಹವಾಯಿತು.

—ಸೊಲ್ಲಾಪುರದಲ್ಲಿ ಬ್ಯಾ. ಸಾವರಕರರ ಸ್ವಾಗತದ ಕಾಲಕ್ಕೆ ಅತ್ಯಾಚಾರ ನಡೆಸಿದ ಸಂಬಂಧವಾಗಿ ನಡೆದ ವ್ಯಾಜ್ಯದಲ್ಲಿ ಎಲ್ಲರ ಮೇಲೆ ಇ. ಪಿ. ಕೊ. ೧೪೩-೧೪೭ ನೆಯ ನಿಯಮಗಳ ಪ್ರಕಾರ ಮ್ಯಾಜಿಸ್ಟ್ರೇಟರಾದ ಶ್ರೀ. ಫಡಕೆಯವರು ಅಪರಾಧವನ್ನು ಹೊರಿಸಿದರು.

—ತಾ. ೩೧-೧ ನೆಯ ದಿನ ಕಾಶಿರಾಜರು ಮತ್ತು ಪಂಡಿತ ಹೃದಯನಾಥ ಕುಂಜರು ಮಾಲವೀಜಿಯವರನ್ನು ನೋಡಲಿಕ್ಕೆ ಹೋಗಿದ್ದರು. ೨೦ ವರುಷಗಳ ಹಿಂದೆ ನೀಟಾಗಿ ನೀವು ನಡೆಯುತ್ತಿದ್ದಂತೆ ಈಗ ನಡೆಯಬಹುದೆಂದು ಇವರು ಅಭಿಪ್ರಾಯಪಟ್ಟರು.

# ವರ್ಕಿಂಗ್ ಕಮಿಟಿಯ ಕಾರ್ಯಕಲಾಪ.

## ಸಂಯುಕ್ತ ರಾಜ್ಯಘಟನೆಯ ನಿರಾಕರಣೆ.

ವರ್ಧಾದಲ್ಲಿ ೩ ನೆಯ ತಾರೀಖಿನ ದಿವಸ ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಕೂಡುವುದಿದ್ದುದರಿಂದ ೨ ನೆಯ ತಾರೀಖಿನ ದಿನವೇ ಹರಿಪುರ ಕಾಂಗ್ರೆಸ್ಸಿನ ನಿಯೋಜಿತ ಅಧ್ಯಕ್ಷರಾದ ಶ್ರೀ. ಸುಭಾಷಚಂದ್ರ ಬೋಸರು ವರ್ಧಾಕ್ಕೆ ಆಗಮಿಸಿದರು. ಆಗ ರಾಷ್ಟ್ರೀಯ ಸಭಾಧ್ಯಕ್ಷರಾದ ಪಂಡಿತ ಜವಾಹರಲಾಲ ನೆಹರುರವರು ಮೊದಲು ಬಾಬು ಸುಭಾಷಚಂದ್ರರಿಗೆ ಪುಷ್ಪ ಮಾಲೆಯನ್ನರ್ಪಿಸಿ ಸ್ವಾಗತಿಸಿದರು. ಅನಂತರ ಬಾಬೂಜಿಯವರು ಸೇಗಾವಕ್ಕೆ ಹೋಗಿ ಗಾಂಧೀಜಿಯವರನ್ನು ಸಂದರ್ಶಿಸಿ ಬಂಗಾಲದ ರಾಜಕೈದಿಗಳ ಸ್ಥಿತಿಯನ್ನೂ ತಮ್ಮ ಅಧ್ಯಕ್ಷೀಯ ಭಾಷಣದ ವಿಚಾರಸರಣಿಯನ್ನೂ ತಿಳಿಸಿದರು.



ಶ್ರೀ ಸುಭಾಷಚಂದ್ರ ಬೋಸ.

## ಮೂರು ಮುಖ್ಯ ವಿಷಯ.

ತಾ. ೩ ನೆಯ ದಿವಸ ಪಂಡಿತ ಜವಾಹರಲಾಲ ನೆಹರುರವರ ಅಧ್ಯಕ್ಷತೆಯಲ್ಲಿ ವರ್ಕಿಂಗ್ ಕಮಿಟಿಯ ಕಾರ್ಯ ಪ್ರಾರಂಭವಾಯಿತು. ಬಂಗಾಲ ಪ್ರಾಂತದ ರಾಜಕೀಯ ಕೈದಿಗಳ ಬಿಡುಗಡೆ, ಸಂಯುಕ್ತ ರಾಜ್ಯಘಟನೆಯ ನಿರಾಕರಣೆ, ಮತ್ತು ಹಿಂದು ಮುಸಲ್ಮಾನರ ಐಕಮತ್ಯದ ಯೋಜನೆ ಇವೇ ವರ್ಕಿಂಗ್ ಕಮಿಟಿಯಲ್ಲಿ ಚರ್ಚಿಸಲ್ಪಟ್ಟ ಮೂರು ಮುಖ್ಯ ವಿಷಯಗಳು.

(೧) ಬಂಗಾಲ ಸರಕಾರವು ರಾಜ ಕೈದಿಗಳ ವಿಷಯದಲ್ಲಿ ನಿರ್ದಯವಾಗಿರುವುದು ಅನ್ಯಾಯವೆಂದು ವರ್ಕಿಂಗ ಕಮಿಟಿಯು ತನ್ನ ಅಭಿಪ್ರಾಯವನ್ನು ತಿಳಿಸಿದ್ದಲ್ಲದೆ ಕೂಡಲೆ ಈ ವಿಷಯದ ಕಡೆಗೆ ಸರಕಾರವು ಲಕ್ಷಿಸಬೇಕೆಂತಲೂ ಸೂಚಿಸಿತು. ಮತ್ತು ರಾಜಕೀಯ ಕೈದಿಗಳು ಅನ್ನತ್ಯಾಗ ಸತ್ಯಾಗ್ರಹವನ್ನು ಈಗ ಪ್ರಾರಂಭಿಸಿರುವುದು ಅಸಂಗತವೆಂದೂ ಕೂಡಲೇ ಸತ್ಯಾಗ್ರಹವನ್ನು ನಿಲ್ಲಿಸಬೇಕೆಂದೂ ತಿಳಿಸಿತು.

(೨) ಸಂಯುಕ್ತ ರಾಜ್ಯಘಟನೆಯು (ಫೆಡರೇಶನ್) ತುಂಬಾ ನಿಷೇಧಾರ್ಹವಾದುದೆಂದು ವರ್ಕಿಂಗ್ ಕಮಿಟಿಯು ಅಭಿಪ್ರಾಯ ಪಟ್ಟಿದ್ದಲ್ಲದೆ ಇದು ನಮ್ಮ ಮೇಲೆ ಹೇರಲ್ಪಡದಂತೆ ಎಲ್ಲ ಕಾಂಗ್ರೆಸ್ ಕಮಿಟಿಗಳೂ ಕಾಂಗ್ರೆಸ್ ಮಂತ್ರಿಮಂಡಲಗಳೂ ಇತರ ಜನರೂ ತುಂಬಾ ಮತೈಕ್ಯದಿಂದ ಹೋರಾಡಬೇಕೆಂತಲೂ ಸೂಚಿಸಿತು. ಸಂಯುಕ್ತ ರಾಜ್ಯಘಟನೆಯೇನೋ ನಮಗೆ ಬೇಕೇಬೇಕು. ಆದರೆ ಅದು ಈಗಿದ್ದಂತೆ ಇರಕೂಡದು. ಸಂಸ್ಥಾನಗಳಿಂದ ಬರುವ ಪ್ರತಿನಿಧಿಗಳು ಜನರಿಂದ ಆರಿಸಲ್ಪಟ್ಟವರೇ ಇರಬೇಕು. ಒಂದು ಪ್ರಾಂತಕ್ಕೆ ಎಷ್ಟು ಸ್ವಾತಂತ್ರ್ಯವಿದೆಯೋ ಅಷ್ಟೇ ಒಂದು ಸಂಸ್ಥಾನಕ್ಕೂ ಇರಬೇಕು. ಇವೇ ಮೊದಲಾದ ಅನೇಕ ತಿದ್ದುಪಾಟಾದಾಗ ಇದು ಗ್ರಾಹ್ಯವಾಗುವುದು.

(೩) ಹಿಂದು-ಮುಸಲ್ಮಾನರ ಐಕಮತ್ಯದ ಯೋಜನೆಯನ್ನೂ ನಿರ್ಧರವಾಗಿಲ್ಲ. ಬ್ಯಾ. ಜಿನ್ನಾರವರಿಗೆ ಪಂಡಿತ ಜವಾಹರಲಾಲರು ಮುಸ್ಲಿಂ ಲೀಗಿನ ಅಭಿಪ್ರಾಯ ತಿಳಿಸಲು ಪತ್ರ ಬರೆಯಬೇಕೆಂದು ಗೊತ್ತಾಗಿದೆ.

---

—ಸಂಯುಕ್ತ ಪ್ರಾಂತ ಸರಕಾರವು ೩ ಲಕ್ಷ ರೂ. ಖಾದಿ ಕೊಳ್ಳುವದಂತೆ.

# ಧರ್ಮಾತ್ಮಾ ಮಾಲವೀಜಿಯವರ "ಕಾಯಕಲ್ಪ" ವ್ರತ ಸಮಾಪ್ತಿ.

## ಆಯುರ್ವೇದದ ಅದ್ಭುತ ಸಾಮರ್ಥ್ಯ.

ಪಂಡಿತ ಮದನ ಮೋಹನ ಮಾಲವೀಜಿಯವರಿಗೆ ಈಗ ೭೭ ವರುಷಗಳು. ಇವರು ಆಯುರ್ವೇದದಲ್ಲಿ ಹೇಳಲ್ಪಟ್ಟ "ಕಾಯಕಲ್ಪ" ವ್ರತವನ್ನು ಆಚರಿಸಿ ವೃದ್ಧಾಪ್ಯದ ನಿರ್ಬಲತೆಯನ್ನು ಹೋಗಲಾಡಿಸಿಕೊಂಡುದು ಪರಮ ಸಂತೋಷದ ಸಂಗತಿಯು. ಇದೊಂದು ಆಯುರ್ವೇದದ ದಿಗ್ವಿಜಯ.



.ಪಂ ಮಾಲವೀಯವರು

ಈ ಕಾಯಕಲ್ಪ ಪ್ರಯೋಗವನ್ನು ಶ್ರೀ. ಸ್ವಾಮಿ ವಿಶನದಾಸಜಿ ತಪಸ್ವೀ ಇವರು ಪಂಡಿತಜಿಯವರ ಮೇಲೆ ಮಾಡಿ ತೋರಿಸಿದರು. ಈ ತಪಸ್ವಿಗಳು ಈಗ ೧೬೨ ವರುಷದವರಂತೆ. ಇವರು ಈ ವರೆಗೆ ೩ ಸಾರೆ ಈ ಮಹಾ ವ್ರತವನ್ನು ಆಚರಿಸಿದ್ದಾರಂತೆ. ಈಗ ಇವರು ಸಾಧಾರಣವಾಗಿ ೫೦ ವರ್ಷದವರಂತೆ ತೋರುತ್ತಿದ್ದಾರೆ. ಪಂಡಿತ ಮಾಲವೀಜಿಯವರ ಸಂಗಡ ರಾಜಗುರು ವೇದತೀರ್ಥ ಶ್ರೀ. ಹರದತ್ತಜಿಯವರು ಕೂಡಾ ಕಾಯಕಲ್ಪ ವ್ರತವನ್ನಾಚರಿಸಿದರು.

## ವ್ರತದ ನಿಯಮ.

ಈ ಕಾಯಕಲ್ಪ ವ್ರತವನ್ನು ಉತ್ತರಾಯಣದಲ್ಲಿ ಪ್ರಾರಂಭಿಸಬೇಕಾದುದು. ಆದಕಾರಣ ಕಳೆದ ೧೬ ನೆಯ ತಾರೀಖಿನ ದಿವಸ (ಪುಷ್ಯ ಶು|| ೧೫ ರವಿವಾರ) ದಿವಸ ಧರ್ಮಾತ್ಮಾ ಮಾಲವೀಜಿಯವರು ತಮ್ಮ ಧಾರ್ಮಿಕ ಅನುಷ್ಠಾನಗಳನ್ನು ತೀರಿಸಿಕೊಂಡು ಗಂಗಾ ತೀರದ ರಾಮಬಾಗ ಎಂಬ ಗುಹೆಯಲ್ಲಿ ಕಾಯಕಲ್ಪ ವ್ರತವನ್ನು ಆ ಮಹಾ ತಪಸ್ವಿಗಳ ನೇತೃತ್ವದಲ್ಲಿ ಪ್ರಾರಂಭಿಸಿದರು. ಆ ಗುಹೆಯು ಸೂರ್ಯ ಪ್ರಕಾಶ, ಗಾಳಿ, ಧೂಳಗಳ ಪ್ರವೇಶಕ್ಕೆ ಅವಕಾಶವಿಲ್ಲದಂತೆ ನಿರ್ಮಿಸಲ್ಪಟ್ಟಿದ್ದಿತು. ಅಲ್ಲಿಂದ ೩೦ ಮೈಲುಗಳ ದೂರದಲ್ಲಿದ್ದ ಶಂಕರಗಢ ಎಂಬ ಅಡವಿಯಿಂದ ತಪಸ್ವಿಗಳ ಮುಖ್ಯ ಶಿಷ್ಯರಾದ ಶ್ರೀ. ಕೃಷ್ಣದಾಸಜಿಯವರೂ ಶ್ರೀ ಆನಂದ ಸ್ವಾಮಿಗಳೂ ಪ್ರತಿನಿತ್ಯ ಔಷಧಿಯನ್ನು ತರುತ್ತಿದ್ದರು. ದಿವಸದಲ್ಲಿ ಎರಡು ಸಾರಿ ಔಷಧಿಯನ್ನು ಸೇವಿಸಬೇಕಾಗಿದ್ದಿತು. ಆಹಾರವು ಕೇವಲ ಆಕಳ ಹಾಲು.

## ದೇಹದಲ್ಲಾದ ಪರಿವರ್ತನೆ.

ಪಂಡಿತಜಿಯವರು ೧೭ ದಿವಸ ಈ ಕಾಯಕಲ್ಪ ವ್ರತವನ್ನಾಚರಿಸಿ ತಾ. ೨-೨-೩೮ ನೆಯ ಸಾಯಂಕಾಲ ೩ ಗಂಟೆಗೆ ಹೊರಗೆ ಬಂದರು. ಅವರು ಸಾಧಾರಣ ೫೫ ವರುಷದವರಂತೆ ತೋರಿದರು. ಇವರು ಮೊದಲು ಬಾಗಿ ನಡೆಯುತ್ತಿದ್ದರು. ಈಗ ನೀಟಾಗಿ ನಡೆಯುತ್ತಿದ್ದಾರೆ. ದೇಹದಲ್ಲಿ ಹೊಸ ಉತ್ಸಾಹ ಬಂದಿದೆ. ಕಣ್ಣು ಮಂದವಾಗಿದ್ದುದು ಕಾಣುತ್ತದೆ. ಸ್ಮರಣಶಕ್ತಿಯುಂಟಾಗಿದೆ ಮರೆತು ಹೋಗಿದ್ದ ಎಷ್ಟೋ ಶ್ಲೋಕಗಳನ್ನು ಈಗ ಹೇಳುತ್ತಿದ್ದಾರೆ. ಇವರ ಪಚನ ಶಕ್ತಿಯು ತೀಕ್ಷ್ಣವಾಗಿದೆ. ನಿದ್ರೆಯು ಸರಿಯಾಗಿ ಬರುತ್ತಿದೆ. ಈ ಎಲ್ಲ ಸಂಗತಿಗಳನ್ನು ಇವರ ಚಿರಂಜೀವಿಗಳಾದ ಪಂಡಿತ ಮುಕುಂದ ಮಾಲವೀಜಿಯವರೇ ಹೇಳಿದ್ದಾರೆ.

## ಮಹತ್ವದ ಶುದ್ಧೀಕರಣ.

ಏಳು ವರುಷಗಳ ಹಿಂದೆ ಮುಸಲ್ಮಾನ್ ಮತದಲ್ಲಿ ಸೇರಿದ ಬೆಳಗಾವ ಜಿಲ್ಲಾ ಕಾರದಗಾ ಎಂಬಲ್ಲಿ ೧೫೫ ಜನ ಆದಿ ಹಿಂದುಗಳನ್ನು ಕೊಲ್ಹಾಪುರದಲ್ಲಿ ಹಿಂದು ಸಭೆಯವರು ಶ್ರೀ. ಕ್ಷಾತ್ರ ಜಗದ್ಗುರುಗಳ ನೇತೃತ್ವದಲ್ಲಿ ಶುದ್ಧೀಕರಿಸಿ ಹಿಂದು ಧರ್ಮದಲ್ಲಿ ತೆಗೆದು ಕೊಂಡರು. ಆ ಕಾಲಕ್ಕೆ ಶ್ರೀ. ಜಗದ್ಗುರುಗಳು ಈ ಕೆಳಗಿನಂತೆ ಭಾಷಣವನ್ನು ಮಾಡಿದರು.

### ಶ್ರೀ. ಜಗದ್ಗುರುಗಳ ಸದುಪದೇಶ.

"ಪರಮತಗಳಲ್ಲಿ ಹೋದ ಆದಿ ಹಿಂದುಗಳನ್ನು ಸ್ವಧರ್ಮದಲ್ಲಿ ತೆಗೆದುಕೊಳ್ಳುವುದು ಸುಲಭ. ಆದರೆ ಅವರು ನಮ್ಮ ಧರ್ಮದಲ್ಲಿಯೇ ನಿರಂತರ ಇರುವಂತೆ ಅವರನ್ನು ಇಟ್ಟುಕೊಳ್ಳುವುದು ಕಷ್ಟ. ಈ ಕಷ್ಟದ ಕಾರ್ಯವೆಂದರೆ ಹಿಂದು ಧರ್ಮವನ್ನು ಶುದ್ಧೀಕರಿಸುವುದು. ಅನೇಕ ದುಷ್ಟ ರೂಢಿ, ದುರಾಚಾರಗಳನ್ನು ತೆಗೆದುಹಾಕಿ ನಾವು ಹಿಂದುಧರ್ಮವನ್ನೇ ಈಗ ಶುದ್ಧೀಕರಿಸಬೇಕಾಗಿದೆ. ಹಿಂದು ಧರ್ಮದ ನಿಜತತ್ವಗಳನ್ನು ನೋಡಿದರೆ ಅಸ್ಪೃಶ್ಯತೆಯನ್ನು ಆಚರಿಸುವುದು ಪಾಪವೆಂದೇ ತೋರುತ್ತದೆ. ಏಕೆಂದರೆ "ಪಾಪಾಯ ಪರಪೀಡನಂ" ಎಂಬುದೇ ನಮ್ಮ ಮುಖ್ಯಸಿದ್ಧಾಂತ.

ಆದಿ ಹಿಂದುಗಳಮೇಲೆ ನಾವು ಮಾಡುತ್ತಿರುವ ಅಮಾನುಷ ಅನ್ಯಾಯಗಳನ್ನು ನೋಡಿದರೆ ಅವರು ಪರಮತಗಳಲ್ಲಿ ಸೇರುವುದು ನನಗೇನೂ ಆಶ್ಚರ್ಯಕರವಾಗಿ ತೋರುವುದಿಲ್ಲ. ಆದರೆ ಪುನಃ ಅವರು ನಮ್ಮ ಧರ್ಮದಲ್ಲಿ ಬರುತ್ತಿರುವುದೇ ಆಶ್ಚರ್ಯಕರವಾಗಿ ತೋರುತ್ತದೆ."

## ಜಾಹೀರ ನೋಟೀಸು.

### ಶ್ರೀ ಭೂ ಸುಕ್ಷೇತ್ರ ಉಳವಿ ಚನ್ನಬಸವೇಶ್ವರ ಯಾತ್ರಾ ಮಹೋತ್ಸವ ಪತ್ರಿಕೆ.

ಶಕೆ ೧೮೫೯ ನೇ ಮಾಘ ಶುದ್ಧ (೭) ಸೋಮವಾರದಿಂದ ಮಹಾ ರಥೋತ್ಸವವು ತೀರುವ ವರೆಗೂ ಪ್ರತಿನಿತ್ಯ ದೇವಸ್ಥಾನದಲ್ಲಿ ಪಲ್ಲಕ್ಕಿ ಉತ್ಸವಗಳು ಜರುಗುವವು. ಮತ್ತು ಇದೇ ಮಾಘ ಶುದ್ಧ (೧೦) ರಿಂದ ಪ್ರತಿನಿತ್ಯ ರಥೋತ್ಸವಗಳು ನಡೆಯುವವು. ಕಟ್ಟಕಡೆಗೆ ಮಹಾ ರಥೋತ್ಸವವು ತಾ. ೧೫-೨-೩೮ ನೆಯ ಮಂಗಳವಾರ ಮಧ್ಯಾಹ್ನ ಮೇಲೆ ಜರುಗುವದು. ಮೇಲ್ಕಂಡ ದಿವಸಗಳಲ್ಲಿ ಪ್ರತಿನಿತ್ಯ ಭಜನೆ ಕೀರ್ತನ ಉಪನ್ಯಾಸ ಆಟನೋಟ ಮೊದಲಾದವುಗಳೂ ಜರುಗುವವು. ಈ ಸುಸಂಧಿಯನ್ನು ಯಾರೂ ಕಳೆದುಕೊಳ್ಳದೆ ಬಂದು ಸ್ವಾಮಿಯವರ ದರ್ಶನ ಆಶೀರ್ವಾದಗಳನ್ನು ಹೊಂದಿ ಪುಣ್ಯಭಾಗಿಗಳಾಗಬೇಕೆಂದು ಅಪೇಕ್ಷಿಸುತ್ತೇನೆ.

ಮಹಾಬಳೇಶ್ವರಪ್ಪ ಗುರಪ್ಪ ಪಾಟೀಲ
ಉಳವಿಯ ಮುಖ್ಯ ಮುಕ್ತೇಸರ.

---

—ಸೂರತ್ ಪಟ್ಟಣದ "ಸ್ತ್ರೀ-ಶಕ್ತಿ" ಎಂಬ ಗುಜರಾತಿ ಸಾಪ್ತಾಹಿಕವು ಗುಜರಾಥಿ ಭಗಿನಿಯರು ಬಾಳುವರೆ? ಎಂಬ ಒಂದು ಮಹತ್ವದ ಲೇಖನ ಪ್ರಕಟಿಸಿದೆಯಂತೆ

## ಹರಿಪುರ ಕಾಂಗ್ರೆಸ್ಸಿನ ಅಪೂರ್ವ ಸಿದ್ಧತೆ.

### ಮಹತ್ವದ ಸಮಾಚಾರ ಕೇಳಿರಿ.

ಹರಿಪುರದಲ್ಲಿ ಕೂಡುವ ಕಾಂಗ್ರೆಸ್ಸಿನ ವಿಠ್ಠಲ ನಗರಕ್ಕೆ ೫೧ ಮಹಾದ್ವಾರಗಳು. ಪ್ರದರ್ಶನ ಮಂದಿರದ ಮಹಾದ್ವಾರಕ್ಕೆ ಗಾಂಧಿ ಪ್ರವೇಶದ್ವಾರವೆಂಬ ಹೆಸರು. ಇದೇ ಪ್ರಕಾರ ನೆಹರು ಪ್ರವೇಶದ್ವಾರ, ಸುಭಾಷ ಪ್ರವೇಶದ್ವಾರ, ಸರದಾರ ಪ್ರವೇಶದ್ವಾರ, ಸರೋಜಿನಿ ಪ್ರವೇಶದ್ವಾರಗಳೆಂಬ ಕಾಂಗ್ರೆಸ್ ಅಧ್ಯಕ್ಷರ ಹೆಸರುಗಳುಳ್ಳ ೫೧ ಮಹಾದ್ವಾರಗಳಿವೆ. ಭೋಜನಾಲಯಕ್ಕೆ ಕಮಲಾ ಪ್ರವೇಶದ್ವಾರವೆಂಬ ಹೆಸರಿದೆ.

### ಊಟದ ವ್ಯವಸ್ಥೆ.

ಕೈ ಕೆಲಸದಿಂದಾದ ಧಾನ್ಯ ಹಿಟ್ಟುಗಳಿಂದಲೇ ಆಹಾರಸಿದ್ಧತೆ. ಆಕಳ ಹಾಲು ತೃಪ್ತಿಕರವಾಗಿ ದೊರೆಯುವುದು. ಸಾಲಾಗಿ ೭ ಭೋಜನಾಲಯಗಳಿವೆ. ಒಂದೊಂದರಲ್ಲಿ ನಾಲ್ಕು ಪಂಗ್ತಿಗಳು ಕುಳಿತುಕೊಳ್ಳುವ ಏರ್ಪಾಟು. ಒಂದು ಪಂಗ್ತಿಯಲ್ಲಿ ೧೨೫ ಜನರು ಕುಳಿತುಕೊಳ್ಳುವರು. ಹೀಗೆ ೩|| ಸಾವಿರ ಜನರು ಒಂದು ಸಾರೆ ಊಟಕ್ಕೆ ಕುಳಿತುಕೊಳ್ಳಬಹುದು. ಮದ್ರಾಸ ಮತ್ತು ಪಂಜಾಬದವರಿಗೆ ಆಯಾಯ ಪದ್ಧತಿಯ ಪ್ರಕಾರ ಪ್ರತ್ಯೇಕ ಊಟದ ಏರ್ಪಾಟು ಮಾಡಲಾಗಿದೆ.

### ಸಕುಟುಂಬ ಪರಿವಾರದವರಿಗೆ.

ಕುಟುಂಬ ಸಹಿತವಾಗಿ ಬರುವವರಿಗೆ ಪ್ರತ್ಯೇಕ ಕುಟೀರಗಳು ಸಿದ್ಧವಾಗಿವೆ. ಒಂದರಲ್ಲಿ ೬-೭ ಜನರಿರಬಹುದು. ಇಂಥ ಏಳು ಕುಟೀರಗಳ ಒಂದೊಂದು ಸಾಲು. ಇಂಥ ೧೪ ಸಾಲುಗಳಿವೆ. ಒಂದು ಕುಟೀರಕ್ಕೆ ೧೦೦ ರೂ. ಭಾಡಿಗೆ ಕೊಡಬೇಕಾಗುವುದು.

### ಬೇರೆ ಬೇರೆ ಮಂಟಪಗಳು.

ತಾಪಿ ನದಿಯ ದಂಡೆಯ ಮೇಲೆ ಮಹಾತ್ಮಾ ಗಾಂಧಿ ಪಂ. ಜವಾಹರಲಾಲ ಶ್ರೀ. ಸುಭಾಷಚಂದ್ರ ಬೋಸ ಮೊದಲಾದ ಪ್ರಮುಖರಿಗೆ ಬೇರೆ ಬೇರೆ ಕುಟೀರಗಳು ಏರ್ಪಟ್ಟಿವೆ. ಇವು ಜನರ ಗದ್ದಲದಿಂದ ದೂರದಲ್ಲಿವೆ. ಇವುಗಳ ಹತ್ತಿರವೇ ೩೦೦ ಅಡಿ ಚದುರಾಗಿರತಕ್ಕ ಒಂದು ಮಂಟಪವಿದೆ. ಅಲ್ಲಿಯೇ ವಿಷಯ ನಿಯಾಮಕ ಸಮಿತಿಯು ಕೂಡುವುದು. ಇದರ ಹತ್ತಿರವೇ ಸ್ವಯಂಸೇವಕರ ಶಿಬಿರವೂ ಇದೆ.

ವಿಠ್ಠಲ ನಗರದಲ್ಲಿ ಎಲ್ಲ ಕಡೆಗೂ ನೀರು ಯಥೇಚ್ಛವಾಗಿ ದೊರೆಯುವಂತೆ ನಳ್ಳಿಗಳಿವೆ. ೧೫೦ ಅಡಿ ಎತ್ತರದ ಮೇಲೆ ಭವ್ಯವಾದ ಜಲಸಂಗ್ರಹ ಯಂತ್ರವಿದೆ. ಒಟ್ಟು ೩೦ ಸಾವಿರ ಜನರ ಊಟದ ವ್ಯವಸ್ಥೆ ಮಾಡಿದ್ದಾರೆ. ಈಗ ಪ್ರತಿನಿತ್ಯ ೧೫೦೦ ಜನರು ಇಲ್ಲಿ ಕೆಲಸ ಮಾಡುವವರು ಊಟಮಾಡುತ್ತಿದ್ದಾರೆ.

ಪೋಸ್ಟ ಮತ್ತು ಟೆಲಿಗ್ರಾಫ್ ಆಫೀಸುಗಳು ಏರ್ಪಟ್ಟಿವೆ. ಕಾಂಗ್ರೆಸ್ಸಿನ ಕಾಲಕ್ಕೆ ೨೫ ಜನರು ತಂತೀ ಕೊಡುವುದಕ್ಕಾಗಿಯೇ ನಿಯಮಿಸಲ್ಪಡುವರು.

ಹರಿಪುರ ಗ್ರಾಮವು ಬಿ. ಬಿ. ಸಿ. ಆಯ್. ರೇಲ್ವೆಯ ಮಢಿ ಸ್ಟೇಶನ್ನಿನಿಂದ ೧೦ ಮೈಲುಗಳ ದೂರದಲ್ಲಿದೆ. ಸೂರತ್ ಪಟ್ಟಣದಿಂದ ಮಢಿ ಸ್ಟೇಶನ್ನಿನ ವರೆಗೆ ಹೊಸದಾಗಿ ೫ ಸ್ಟೇಶನ್ನುಗಳನ್ನು ಮಾಡಿದ್ದಾರೆ. ಕಾಂಗ್ರೆಸ್ಸಿನ ಕಾಲಕ್ಕೆ ಸೂರತ್ ಪಟ್ಟಣದಿಂದ ಪ್ರತಿನಿತ್ಯ ೧೪ ಗಾಡಿಗಳನ್ನು ಬಿಡುವ ವ್ಯವಸ್ಥೆಯಾಗಿದೆ. ಮಢಿ ಸ್ಟೇಶನ್ನಿನಿಂದ ವಿಠ್ಠಲನಗರದ ವರೆಗೆ ಡಾಂಬರ ಮಾರ್ಗವು ಮಾಡಲ್ಪಟ್ಟಿದೆ.

# ಸ್ವಾತಂತ್ರ್ಯದ ಮಹತ್ವ.

### ಇಪಿ ಫಕೀರರ ಪತ್ರ.

ಗಡಿನಾಡಿನ ದೊಂಬೆಗೆ ಇಪಿ ಫಕೀರರೇ ಕಾರಣರೆಂದು ತಿಳಿಯಲ್ಪಡುತ್ತಾ ಇದೆಯಷ್ಟೆ. ಇವರು ಪಂಡಿತ ಜವಾಹರಲಾಲರಿಗೆ ಒಂದು ಪತ್ರ ಬರೆದಿದ್ದಾರೆ. ಅದರಲ್ಲಿ ಅವರು ಹೇಳಿರುವುದೇನೆಂದರೆ—

"ಸ್ವಾತಂತ್ರ್ಯವೀರರೇ, ನಮ್ಮ ವಿರುದ್ಧವಾಗಿ ಬ್ರಿಟಿಶ್‌ರು ಅಪ ಪ್ರಚಾರ ಮಾಡುತ್ತಿರುವುದನ್ನು ತಿಳಿದು ವಿಷಾದವೆನಿಸುತ್ತದೆ. ನಮ್ಮ ಸ್ವಾತಂತ್ರ್ಯ ಪ್ರೇಮವೇ ಬ್ರಿಟಿಷರಿಂದ ಅಪ ಪ್ರಚಾರ ಮಾಡಹತ್ತಿದೆಯೇ ವಿನಾ ಬೇರೆ ಕಾರಣವಿಲ್ಲ. ಸ್ವಾತಂತ್ರ್ಯ ಯುದ್ಧದಲ್ಲಿ ನಾವು ನಾಶವಾಗಬೇಕು. ಇಲ್ಲವೆ ವೈರಿಗಳನ್ನು ಹೊಡೆದೋಡಿಸಬೇಕು. ಆಗ ಶಾಂತಿಯಾಗುವುದು ಶಕ್ಯವಿದೆ. ಸಾವಿರಾರು ವರುಷಗಳ ದಾಸ್ಯಕ್ಕಿಂತಲೂ ಒಂದು ನಿಮಿಷದ ಸ್ವಾತಂತ್ರ್ಯವೇ ಲೇಸು.

ನಾವು ದರೋಡಕಾರರಲ್ಲ. ಮಕ್ಕಳನ್ನು ಅಪಹರಿಸುತ್ತಿರುವವರಲ್ಲ. ಜಗತ್ತಿನ ಶಾಂತಿ ಸ್ಥಾಪನೆಯಾಗಬೇಕೆಂಬುದೇ ಇಸ್ಲಾಮದ ತತ್ವ ದಬ್ಬಾಳಿಕೆಗೆ ಬಗ್ಗಬಾರದೆಂದು ಮುಸ್ಲಿಂ ಧರ್ಮವು ಹೇಳುತ್ತಿದೆ. ಕ್ರೂರರನ್ನು ಎದುರಿಸದಿರುವುದೆಂದರೆ ಹೇಡಿತನವು ಬ್ರಿಟಿಷರಿಂದ ಸ್ವಾತಂತ್ರ್ಯಕ್ಕೆ ಗದಾಪ್ರಹಾರವಾಗಿದೆ. ಧರ್ಮದ ದುರಭಿಮಾನವು ನಮ್ಮಲ್ಲಿಲ್ಲ. ಮನುಷ್ಯನಿಗೆ ಧರ್ಮ ಸ್ವಾತಂತ್ರ್ಯವಿದೆ. ಅವನು ಬೇಕಾದ ಧರ್ಮವನ್ನು ಸ್ವೀಕರಿಸಬಹುದು.

ವಜೀರಿಸ್ಥಾನದಲ್ಲಿಯ ಸ್ಥಿತಿಗೆ ಬ್ರಿಟಿಷರ ದಬ್ಬಾಳಿಕೆಯೇ ಮೂಲ ಕಾರಣವು. ನಾವು ದಾಸ್ಯಕ್ಕೆ ಎಂದೂ ಶರಣಾಗತರಾಗತಕ್ಕವರಲ್ಲ. ನಮ್ಮ ಸ್ವಾತಂತ್ರ್ಯ ನಮ್ಮ ದೇಶದ ಸ್ವಾತಂತ್ರ್ಯವನ್ನು ಪಡೆಯಲು ಪರಮಾತ್ಮನು ಶಕ್ತಿಯನ್ನು ಕೊಡಲಿ."

---

—ಮಂದಿರ ಪ್ರವೇಶದ ಗೊತ್ತುವಳಿಯ ನಿಷೇಧಕ್ಕಾಗಿ ಮುಂಬೈಯಲ್ಲಿ ಸನಾತನಿಗಳು ಒಂದು ಮೆರವಣಿಗೆಯನ್ನು ಹೊರಡಿಸಿದ್ದರು.

—ನಾಗಪುರ ವಿದ್ಯಾಪೀಠದವರು ಕಾಲೇಜ ವಿದ್ಯಾರ್ಥಿಗಳಿಗೆ ಸೈನ್ಯ ಶಿಕ್ಷಣ ಕೊಡಬೇಕೆಂದು ಠರಾವು ಮಾಡಿದರು.

---



# ಬಳ್ಳಾರಿ ಜಿಲ್ಲಾ ಕಾಂಗ್ರೆಸ್ಸ ಕಮಿಟಿಯ ಚುನಾವಣೆ.

[ಬಳ್ಳಾರಿ ಜಿಲ್ಲಾ ಕಾಂಗ್ರೆಸ್ ಕಮಿಟಿಯ ಚುನಾವಣೆಯ ಕಾರ್ಯದಲ್ಲಿ ತುಂಬಾ ಮತಭೇದವಾಗಿ ವಿರೋಧವುಂಟಾಗಿದೆಯೆಂಬುದು ಐದು ಜನ ಮಹಾಶಯರು ಈ ಸಂಬಂಧವಾಗಿ ಒಂದು ಪ್ರಕಟನೆಯನ್ನು ಹೊರಡಿಸಿದ್ದರಲ್ಲಿರುವ ಈ ಕೆಳಗಿನ ಸಂಗತಿಯಿಂದಲೇ ಸ್ಪಷ್ಟವಾಗುತ್ತದೆ. ಹೀಗೆ ಕಾಂಗ್ರೆಸ್ ಕಾರ್ಯನಿರ್ವಾಹಕರ ಮತಭೇದವು ವಿರೋಧದಲ್ಲಿ ಪರಿಸಮಾಪ್ತಿಯಾಗುತ್ತಿರುವುದು ಅತ್ಯಂತ ದುಃಖದ ಸಂಗತಿಯು. —ಸಂಪಾದಕ.]

ತಾ. ೩೦-೧-೩೮ ನೆಯ ಭಾನುವಾರ ಹಡಗಲಿಯಲ್ಲಿ ಕೂಡಿದ ಜಿ. ಕಾಂಗ್ರೆಸ್ ಕಮಿಟಿಯಲ್ಲಿ ನಡೆದ ಚುನಾವಣೆಯ ತಥ್ಯಾಂಶಗಳನ್ನು ಮುಚ್ಚಿ ಒಬ್ಬ ಸದಸ್ಯರನ್ನು ಅಪಮಾನಪಡಿಸುವ ತಾವು ಸರ್ವಾನುಮತಿಯಿಂದ ಗೆದ್ದೆವೆಂಬ ಅಹಂಕಾರ ಹೆಮ್ಮೆಯನ್ನು ಸೂಚಿಸುವ ಒಂದು ತಾರಿನ ಸುದ್ದಿಯು ಹೊಸಪೇಟೆಯ ಸುದ್ದಿಗಾರರಿಂದ (ಜಿ. ಕಾ. ಅಧ್ಯಕ್ಷ ಶ್ರೀ. ರಾಘವೇಂದ್ರರಾಯರೇ ಸುದ್ದಿಗಾರರು) "ಸಂಯುಕ್ತ ಕರ್ನಾಟಕ ತಾ. ೧-೨-೧೯೩೮ ನೆಯ ಮಂಗಳವಾರದ ದಿನ ಪ್ರಕಟವಾಗಿದೆ. ಈ ಸಮಾಚಾರವು ಸರ್ವಥಾ ಸುಳ್ಳಿದ್ದು ಕಾಂಗ್ರೆಸ್ ಕಾರ್ಯಕರ್ತರಲ್ಲಿ ವೈಮನಸ್ಸವನ್ನೂ ಜಿಲ್ಲಾ ಕಾಂಗ್ರೆಸ್ ಕಾರ್ಯಕಲಾಪಗಳಲ್ಲಿ ಕಲಂಕಗಳನ್ನೂ ಹಬ್ಬಿಸುವದಾದ್ದರಿಂದ ಈ ಕೆಳಗೆ ಸಹಿಮಾಡಿದ ಜಿಲ್ಲಾ ಕಾಂಗ್ರೆಸ್ ಕಮೀಟಿ ಸಭ್ಯರಾದ ನಾವು ನಿಜಾಂಶಗಳನ್ನು ಪ್ರಕಟಿಸಿರುತ್ತೇವೆ. ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರಾದ ರಾಘವೇಂದ್ರರಾಯರೇ ನಮ್ಮನ್ನು ಬಡೆದು ಕೆರಳಿಸಿ ಎಬ್ಬಿಸಿರುವದರಿಂದ ಜನರಿಗೆ ನಿಜಾಂಶಗಳು ತಿಳಿಯದಿದ್ದರೆ ಹಾನಿಯಾಗುವ ಕಾರಣ ಇದರ ಸಂಪೂರ್ಣ ದೋಷವೂ ಜಿ. ಕಾ. ಅಧ್ಯಕ್ಷರನ್ನೇ ಅವಲಂಬಿಸಿದೆ.

ಗುಡದೂರು ತಿಮ್ಮಣ್ಣ ತಾಲೂಕ ಕಾ. ಅಧ್ಯಕ್ಷ ಬಳ್ಳಾರಿ
ಕೆ. ಶಿವರುದ್ರಪ್ಪ :ಉಪಾಧ್ಯಕ್ಷ ಜಿಲ್ಲಾ ಕಾ. ಬಳ್ಳಾರಿ.
ಸತ್ರಸಾಲ ಭದ್ರಪ್ಪ ಶೆಟ್ಟಿ ಟ್ರೆಜರರ್ ಜಿ. ಕಾಂಗ್ರೆಸ್
ನಾ. ಮರಿಬಸನಗೌಡ ಕುರುಗೋಡು. ಟಿ. ಬಿ. ಕೇಶವರಾವ

---

# ಅಧ್ಯಕ್ಷರ ಆಯ್ಕೆ.

ರಾಣೆಬೆನ್ನೂರಿನ ಇನ್ನೊಂದು ಸ್ವಾರಸ್ಯವಾದ ಸಮಾಚಾರಾ ಅಂದ್ರೆ ಅಧ್ಯಕ್ಷರ ಆಯ್ಕೆ. ಆ ದಿವಸದ ದೃಶ್ಯಗಳೆಲ್ಲಾ ಒಂದೊಂದಾಗಿ ನೋಡೋಹಾಗಿದ್ದವು, ಸ್ವಾಮಿ. ಅಲಾ ಎಷ್ಟು ಹೊಡೆದಾಟ ಎಷ್ಟು ಬಡಿದಾಟ, ಏನು ಗಲಭೆ, ಮಾರಾ ಮಾರಿ, ಆಗಬಾರದೆಲ್ಲಾ ಆಗಿಹೋಯಿತು ಅನ್ನಿ. ಆದರೆ ಇದೆಲ್ಲಾ ನಮ್ಮಂಥ ಜನರ ಮೇಲೆ ಎಂಥ ಪರಿಣಾಮ ಮಾಡಿತೂ ಅಂಬೋದು ಈ ದೊಡ್ಡ ಜನಗಳಿಗೆ ತಿಳೀಬೇಕು. ಅಲ್ಲಾ, ಸರ್ವೀಸ ಆದೋರೆಲ್ಲಾ ಹೀಗೆ ಸಣ್ಣಮಕ್ಕಳ ಹಾಗೆ ಮಾಡಿಬಿಟ್ರೆ ಮುಂದೆ ಹೇಗೆ ಅಂತ! ಅಧ್ಯಕ್ಷರ ಆಯ್ಕೆ ವಿಷಯದಲ್ಲಿ ಎರಡು ಪಂಗಡಾ! ಒಂದು ದೇಶಪಾಂಡೆ ಪಂಗಡಾ, ಇನ್ನೊಂದು ದಿವಾಕರ ಪಂಗಡಾ! ಒಬ್ಬರು ನಗೋರು, ಇನ್ನೊಬ್ಬರು ಅಳೋರು! ಈ ವಿಚಾರದಲ್ಲಿ ಯಾರದು ತಪ್ಪೋ, ಒಪ್ಪೋ ಆ ತೀರ್ಪ ನಾನು ಹೇಳೋಕೆ ಹೋಗೋಲ್ಲ. ಆದ್ರೆ ಇಷ್ಟುಮಾತ್ರ ಹೇಳಬಲ್ಲೆ ಕರ್ನಾಟಕದೊಳಗಿನ ಕಾಂಗ್ರೆಸ್ ಜನಗಳು ಹದಿನೈದಾಣೆ ಹನ್ನೊಂದು ಕಾಸು 'ರಿಪೇರಿ'ಗೆ ಬಂದಿದಾರೆ ತೀವ್ರವಾಗಿ 'ಕ್ಲೀನ್' ಮಾಡಿಸಬೇಕಾದ್ದು ಅಗತ್ಯ; ಇಲ್ದಾದ್ರೆ ಬಹು ದಿವಸ ಬಾಳೋಲ್ಲ.

"ಕರ್ನಾಟಕ ಬಂಧು"

## ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿ.

ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯು ರಾಣೇಬೆನ್ನೂರಲ್ಲಿ ಹೊಸ ವರ್ಷದ ಬಗ್ಗೆ ಅಧಿಕಾರಿಗಳನ್ನು ಆರಿಸಿತಷ್ಟೆ. ಆದರೆ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಅಧಿಕಾರಿಗಳ ಚುನಾವಣೆ ದಕ್ಷಿಣ ಕನ್ನಡ ಜಿಲ್ಲೆಗೂ ಮೈಸೂರಿನವರಿಗೂ ಸಮಾಧಾನಕರವಾಗಿಲ್ಲೆಂದು ಒಟ್ಟಿನ ಮೇಲೆ ಸರ್ವಸಮ್ಮತವಾದ ಒಂದು ಅಧಿಕಾರಮಂಡಲವು ನೇಮಿಸಲ್ಪಡಲು ವಾತಾವರಣವು ಅನುಕೂಲವಿದ್ದಿಲ್ಲೆಂದೂ ತಿಳಿಯುತ್ತದೆ. ಶ್ರೀ. ಗಂಗಾಧರರಾವ ದೇಶಪಾಂಡೆಯವರು ಅಧ್ಯಕ್ಷ ಸ್ಥಾನಕ್ಕೆ ಈ ಸಲ ಆರಿಸಲ್ಪಟ್ಟರುವರು. ಶ್ರೀ. ದೇಶಪಾಂಡೆಯವರು ಅಧ್ಯಕ್ಷ ಸ್ಥಾನಕ್ಕಾಗಿ ಪ್ರತಿನಿಧಿಗಳ ಒಲಿಮೆಯನ್ನು ಸಂಪಾದಿಸಲು ಪ್ರಯತ್ನಿಸಿದ್ದರೆಂದೂ ಅವರ ಮೇಲೆ ಹಲವರ ಆರೋಪ ಶ್ರೀ. ರಂಗನಾಥ ದಿವಾಕರರಿಗೆ ಅಸ್ವಾಸ್ಥ್ಯದ ಮೂಲಕವಾಗಲಿ ಯಾ ಇನ್ನಿತರ ಒಳಕಾರಣಗಳ ಮೂಲಕವಾಗಲಿ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷ ಸ್ಥಾನವು ತಪ್ಪಿದ ಮಾತ್ರಕ್ಕೆ ಶ್ರೀ. ದಿವಾಕರರ ಯೋಗ್ಯತೆಯಾಗಲಿ ಕರ್ನಾಟಕದಲ್ಲಿ ಎಲ್ಲ ಪಕ್ಷ ಪಂಗಡಗಳಿಗೆ ಅವರಲ್ಲಿರುವ ಆದರ ಬುದ್ಧಿಯಾಗಲಿ ಕಿಂಚಿತ್ತಾದರೂ ಕಡಿಮೆಯಾಗಲಾರದೆಂಬುದು ನಿರ್ವಿವಾದವು. ಆದರೂ ವಿಧಾಯಕ ಕಾರ್ಯಕ್ರಮದ ಈ ಸಮಯದಲ್ಲಿ ಕಾಂಗ್ರೆಸ್ ತತ್ವಾನುಯಾಯಿಗಳು ಗಾಂಧಿ ಭಕ್ತರೆಂದು ಮೆರೆಯಲು ಮುಂದೆ ಬರಲು ಹಾತೊರೆಯುವ ಮುಖಂಡರ ತತ್ವಾನುಸರಣೆಗಿಂತಲೂ ಆತ್ಮಪ್ರತಿಷ್ಠೆ ಗೌರವಕ್ಕಾಗಿ ಸಾಹಸಪಡುವದು ತೀರಾ ನಿಂದ್ಯವಲ್ಲವೆ? ಶ್ರೀ. ದೇಶಪಾಂಡೆಯವರಲ್ಲಿ ಮುತ್ಸದ್ದಿತನವು ಹೆಚ್ಚಿರಬಹುದು. ಕಾಂಗ್ರೆಸ್ಸಿನಲ್ಲಿ ವಶೀಲಿಯೂ ಹೆಚ್ಚು ಇರಬಹುದು. ಆದರೆ ಹೆಚ್ಚಿನ ಸ್ಥಾನಕ್ಕಾಗಿ ಹಾತೊರೆಯುವ ತಾಂತ್ರಿಕ ಬುದ್ಧಿಯು ಮುಖಂಡತನದ ಲಕ್ಷಣವಲ್ಲ. ಅಂತಹ ಸ್ಥಾನವು ಒಮ್ಮೆ ಸಿಕ್ಕರೂ ಅವರ ವರ್ತನವು ಜನತೆಯಲ್ಲಿ ಸದೋಷವಾಗಿಯೇ ಉಳಿಯುವುದು. ಇನ್ನು ಕೆಳ ಅಧಿಕಾರಿಗಳು ಹೆಚ್ಚಿನ ಅಧಿಕಾರಿಗಳ ಸಾತ್ವಿಕ ವೃತ್ತಿಯನ್ನು ದುರುಪಯೋಗ ಮಾಡಿಕೊಂಡು ತಮ್ಮ ಸ್ವೈರವೃತ್ತಿಯಿಂದ ಆಚರಿಸಿದ್ದು ಅನುಭವ ಸಿದ್ಧವಾದರೆ ಅಂಥವರನ್ನೇ ಅಧಿಕಾರಮಂಡಲದಿಂದ ಹೊರತಳ್ಳಬೇಕಾಗಿದ್ದಿತು.

ಶ್ರೀ. ದಿವಾಕರರು ತಮ್ಮ ಅಂತಃಶುದ್ಧಿಯೇ ಸಾಕಷ್ಟು ಆಗಲಿಲ್ಲೆಂದೂ ಇದರ ಪರಿಣಾಮವೇ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ವಾತಾವರಣದಲ್ಲಿ ವಿಚಿತ್ರ ಅಸಮಾಧಾನಕಾರಕ ಪರಿಣಾಮವನ್ನುಂಟುಮಾಡಿತೆಂದೂ ಪ್ರಕಟನೆ ಹೊರಡಿಸಿದ್ದಾರೆ. ಒಟ್ಟಿನ ಮೇಲೆ ಗಾಂಧಿ ತತ್ವಾನುಯಾಯಿಗಳೂ ಕಾಂಗ್ರೆಸ್ ತತ್ವನಿಷ್ಠರೂ ಅಧ್ಯಾತ್ಮಾನುಭವಕ್ಕಾಗಿ ಹಾತೊರೆಯುತ್ತಿರುವವರೂ ಲೋಕ ಧುರೀಣವರ್ಗದಿಂದ ದೂರಾಗುತ್ತಿರುವರು. ಇಲ್ಲವೆ ಅಂಥವರಿಗೆ ಅಸಮಾಧಾನವಾಗುವ ವಾತಾವರಣವುಂಟಾಗುವುದು. ಇದೆಲ್ಲವೂ ಬಿಸಿರಕ್ತದ ರಾಜಕೀಯ ಮುತ್ಸದ್ದಿತನದ ಕಾಂಗ್ರೆಸ್ ಕಾರ್ಯಕರ್ತರ ಬುದ್ಧಿ ಬಲದ ಪರಿಣಾಮವೇ ಸರಿ. ಆದರೂ ಭಾರತದ ಸ್ವಾತಂತ್ರ್ಯಸಿರಿಯ ಅರಮನೆಯ ಹೆಬ್ಬಾಗಿಲು ಸುಗಮವಾಗಿ ತೆರೆಯಲ್ಪಡಲು ಅಧ್ಯಾತ್ಮ ವಿದ್ಯಾ ಸಂಸ್ಕೃತಿಯ ಬಲವೇ ಬೇಕೆಂಬುದನ್ನು ಹಿಂದಿನ ಇತಿಹಾಸವೂ ಇಂದಿನ ಇತಿಹಾಸವೂ ಹೇಳುವದೆಂದೇ ನಮ್ಮ ಅಭಿಪ್ರಾಯ. ಬರೀ ಮುತ್ಸದ್ದಿತನದ ಪರಿಣಾಮವು ಗಾಂಧಿತತ್ವದ ಬಲವನ್ನೂ ಕುಗ್ಗಿಸದಿರಲಾರದೆಂದು ಸ್ಪಷ್ಟವಾಗಿ ನಾವೆನ್ನುತ್ತೇವೆ. ಮುಖಂಡರು ಮತಭೇದಗಳಿಟ್ಟಿದ್ದರೂ ಶಿಸ್ತಿನಿಂದ ಕಾರ್ಯಪ್ರವೃತ್ತರಾಗುವರೆಂದು ನಂಬುತ್ತೇವೆ. ಶ್ರೀ. ದೇಶಪಾಂಡೆಯವರ ಅಧ್ಯಕ್ಷಸ್ಥಾನವೂ ಸರ್ವಸಮ್ಮತವಾಗಿ ಕಾರ್ಯ ಕ್ಷೇತ್ರದಲ್ಲಿಯುವುದೆಂದೂ ಹಾರೈಸುತ್ತೇವೆ.

"ನಂದಿನೀ"

## ಕರ್ನಾಟಕ ಪ್ರಾಂತಾಧ್ಯಕ್ಷರು.

ಶ್ರೀ. ಗಂಗಾಧರರಾವ ದೇಶಪಾಂಡೆಯವರು ಕರ್ನಾಟಕದ ಪ್ರಾಂತೀಯ ರಾ. ಸಭಾಧ್ಯಕ್ಷರಾಗಿ ಆರಿಸಲ್ಪಟ್ಟುದುದರಿಂದ ಪತ್ರಿಕೆಗಳಿಗೆ ಸ್ವಲ್ಪ ಕೆಲಸ ದೊರೆತಹಾಗಾಗಿದೆ. ಶ್ರೀ. ದೇಶಪಾಂಡೆಯವರು ಕುತಂತ್ರ ನಡೆಸಿ ಅಧ್ಯಕ್ಷಪದವಿಯನ್ನೇರಿದರೆಂದು ಒಂದು ಪಕ್ಷದವರು ಆರೋಪಿಸುವಲ್ಲ, ಅವರನ್ನು ಹೊರಗಿರಿಸುವುದಕ್ಕೆ ಪ್ರಯತ್ನಗಳಾದುವೆಂದು ಇನ್ನೊಂದು ಪಕ್ಷದವರ ಪ್ರತ್ಯಾರೋಪಣೆ. ಅಂತೂ ಕರ್ನಾಟಕದಲ್ಲಿ ಪಕ್ಷ ಕಲಹವು ಪ್ರಬಲವಾಗಿದೆ ಎಂಬುದರಲ್ಲಿ ಸಂದೇಹವಿಲ್ಲ. ಕಳೆದ ಚುನಾವಣೆಯ ಕಾಲದಲ್ಲಿಯೇ ಇದರ ಅಶುಭ ಚಿನ್ಹೆಗಳು ಧಾರಾಳವಾಗಿ ಕಂಡುಬಂದವು. ಅದೇ ಕಲಹವೀಗ ಪ್ರಜ್ವಲಿತವಾಗಿದೆ. ಇದನ್ನು ಕನಲಿಸುವುದಕ್ಕೆ ಕೆಲವರು ಪ್ರಯತ್ನಿಸುತ್ತಿರುವುದು ವ್ಯಸನಾಸ್ಪದವಾಗಿದೆ.

ಅಧ್ಯಕ್ಷತನಕ್ಕೆ ಸ್ಪರ್ಧಕರಾಗಿ ನಿಂತಿದ್ದ ಇಬ್ಬರು ಮಹನೀಯರು ಆ ಸ್ಥಾನಕ್ಕೆ ಅರ್ಹತೆಪಡೆದವರಾಗಿ ಇದ್ದರೆಂಬುವದರಲ್ಲಿ ಸಂದೇಹವೇ ಇಲ್ಲ. ಅವರೇ ಇತ್ಯರ್ಥಮಾಡಿ ಒಬ್ಬರನ್ನು ಗದ್ದುಗೆಗೇರಿಸುವುದೆಂದು ನಿರ್ಧರಿಸಿದ ಮೇಲೆ ಅದಕ್ಕೆ ರಾ. ಸಭಾಸದಸ್ಯರ ಪ್ರತಿನಿಧಿಗಳೆನಿಸಿಹೋಗಿದ್ದ ಕರ್ನಾಟಕ ಪ್ರಾಂತಿಕ ರಾ. ಸಭಾಸಮಿತಿಯ ಮಹಾ ಮಹನೀಯ ಸದಸ್ಯರು "ತಥಾಸ್ತು" ಎಂದಮೇಲೆ ಆರಿಸಲ್ಪಟ್ಟವರನ್ನಾಗಲಿ, ಆರಿಕೆಗೆ ಹಿಂಜರಿದು ನಿಂತವರನ್ನಾಗಲಿ ಟೀಕಿಸುವುದರಲ್ಲಿ ಅರ್ಥವೇ ಇಲ್ಲ. ಪ್ರಾಂತ ಪ್ರತಿನಿಧಿಗಳು ತಮ್ಮ ಸ್ವತಂತ್ರ ವಿಚಾರಗಳನ್ನು ಮೂಲೆಗೆ ಒತ್ತಿದುದೇಕೆ? ತಮ್ಮ ಹೃದಯದ ಬೀಗದ ಕೈಯನ್ನು ಈ ಇಬ್ಬರು ಮಹನೀಯರ ಕೈಯಲ್ಲಿ ಕೊಟ್ಟು ಕುಳಿತುದೇಕೆ? ಕರ್ನಾಟಕ ಪ್ರಾಂತದಲ್ಲಿ ಅಧ್ಯಕ್ಷರಾಗುವ ಅರ್ಹತೆಯುಳ್ಳ ಮಹನೀಯರು ಇನ್ನೊಬ್ಬರಾರೂ ಇಲ್ಲ. ಶ್ರೀ. ದೇಶಪಾಂಡೆ ಶ್ರೀ. ದಿವಾಕರ ಇವರಿಬ್ಬರೇ ಸಮರ್ಥರಾದವರು. ಎಂಬಂತೆ ಇವರು ವರ್ತಿಸಿದುದೇಕೆ ? ಇವರಿಬ್ಬರೇ ನಾಯಕ ಶಕ್ತಿಯುಳ್ಳವರೆಂದು ಒಪ್ಪಿಕೊಂಡಮೇಲೆ ಇವರಿಬ್ಬರ ಒಪ್ಪಂದದ ಫಲವನ್ನು ಹಳಿಯುವುದರಲ್ಲಿ ಅರ್ಥವೂ ಇಲ್ಲ; ನ್ಯಾಯವೂ ಇಲ್ಲ; ಶ್ರೇಯಸ್ಸೂ ಇಲ್ಲ.

ಈಗಿನ ರಾ. ಸಭೆಯ ವಾತಾವರಣವೆ ಹಾಗೆ. ಸ್ಪರ್ಧೆಯಿಲ್ಲದೆ ಯಾವ ಚುನಾವಣೆಯೂ ಆಗುವುದಿಲ್ಲ. ನಮ್ಮ ಜಿಲ್ಲೆಗೂ ಅದರ ಅನುಭವ ಸಾಕಷ್ಟಿದೆ. ತತ್ವಕ್ಕಾಗಿ ಸ್ಪರ್ಧಿಸುವುದು ತಪ್ಪೆಂದೂ ಹೇಳಬರುವುದಿಲ್ಲ. ಆದರೆ ಜಯಾಪಜಯಗಳ ನಿಷ್ಕರ್ಷೆಯಾದ ಮೇಲೆ ಪರಸ್ಪರವಾಗಿ ಮಣ್ಣೆರಚುವ ಪ್ರಯತ್ನವನ್ನು ಯಾರೂ ಕೈಕೊಳ್ಳಬಾರದು. ಶ್ರೀ. ದೇಶಪಾಂಡೆಯವರು ಕರ್ನಾಟಕ ಪ್ರಾಂತೀಯ ಸಭಾಧ್ಯಕ್ಷರಾಗಲು ಯಾರೋ ಹಿಂದಿನಿಂದ ಸೂತ್ರಚಾಲನ ಮಾಡಿದಿರಬಹುದೆಂಬುದನ್ನು ಒಪ್ಪಿಕೊಳ್ಳೋಣ. ಅವರಿಗೆ ಆ ಕಿರೀಟವನ್ನು ಕೊಟ್ಟವರು ಕರ್ನಾಟಕದ ಪ್ರಾಂತೀಯ ಸದಸ್ಯರು– ಖಾಲಿ ಹುಂಡಿಯನ್ನು ಇಬ್ಬರ ಕೈಯಲ್ಲಿ ಕೊಟ್ಟು "ನೀವು ಖುಶಿ ಬಂದಂತೆ ಬರೆದುಕೊಳ್ಳಿ" ಎಂದು ಮೌನಧಾರಣ ಮಾಡಿದವರು. ಎಂದಮೇಲೆ ನಿಂದಾರ್ಹರಾದವರು ಶ್ರೀ. ದೇಶಪಾಂಡೆಯವರಲ್ಲ; ಅವರಿಗೆ ಪೂಜ್ಯತೆಯನ್ನು ಕೊಟ್ಟವರೆಂದಾಯಿತು. ಶ್ರೀ. ದೇಶಪಾಂಡೆಯವರ ಮಟ್ಟಿಗೆ ಒಂದು ಮಾತನ್ನು ಸ್ಪಷ್ಟವಾಗಿ ಹೇಳಬಹುದು. ಅವರು ಕಾರ್ಯಸಮರ್ಥರು. ರಾ. ಸಭೆಯ ತತ್ವವನ್ನು ಚೆನ್ನಾಗಿ ತಿಳಿದವರು. ಸಮಯ ಸಂದರ್ಭಗಳಲ್ಲಿ ಹಿಂಜರಿಯುವವರಲ್ಲ. ದಯಾದಾಕ್ಷಿಣ್ಯಗಳಿಗೆ ಬಲಿಬೀಳುವವರಲ್ಲ. ಇಂತಹವರ ನಾಯಕತ್ವದಲ್ಲಿ ಕರ್ನಾಟಕ ಪ್ರಾಂತೀಯ ರಾ. ಸಮಿತಿಯು ಇನ್ನಷ್ಟು ಹೆಚ್ಚು ದಕ್ಷತೆಯಿಂದ ಕೆಲಸಮಾಡಬಹುದೆಂಬ ಭರವಸೆ ನಮಗಿದೆ.

"ರಾಷ್ಟ್ರಬಂಧು"

## ಲಂಡನ್ನಿನಲ್ಲಿ ಹಿಂದಿ ಸ್ವಾತಂತ್ರ್ಯ ದಿನ.

### ಎರಡು ಮೈಲು ಉದ್ದ ಮೆರವಣಿಗೆ!

ಕಳೆದ ೩೦ ನೆಯ ತಾರೀಖಿನ ದಿವಸ ಲಂಡನ್ನಿನಲ್ಲಿರುವ ಇಂಡಿಯಾಲೀಗಿನ ಪರವಾಗಿ ಹಿಂದುಸ್ಥಾನದ ಸ್ವಾತಂತ್ರ್ಯದಿನವನ್ನು ಬಹು ಪ್ರಚಂಡವಾಗಿ ನಡೆಯಿಸಿದರು. ಈ ಉತ್ಸವಕ್ಕಾಗಿ ಇಂಗ್ಲೆಂಡಿನ ಬೇರೆ ಬೇರೆ ಭಾಗಗಳಿಂದ ಹಿಂದಿ ಪ್ರತಿನಿಧಿಗಳು ಬಂದಿದ್ದರು.

ಮೆರವಣಿಗೆಯ ಮುಂಭಾಗದಲ್ಲಿ ದೇಶ ಸೇವಿಕೆಯರ ಉಡುಪನ್ನು ಧರಿಸಿದ್ದ ಹಿಂದಿ ಸ್ತ್ರೀಯರಿದ್ದರು. ಇವರು ಕೈಯಲ್ಲಿ ರಾಷ್ಟ್ರಧ್ವಜವನ್ನು ಹಿಡಿದಿದ್ದರು. ಶ್ರೀ. ಕೃಷ್ಣಮೆನನ್, ಡಾ. ಸೋನಿ ಮೊದಲಾದ ಅನೇಕ ಹಿಂದಿ ಪ್ರಮುಖರು ರಾಷ್ಟ್ರ ಧ್ವಜವನ್ನು ಹಿಡಿದುಕೊಂಡು ಮೆರವಣಿಗೆಯ ಮಧ್ಯದಲ್ಲಿದ್ದರು. ಹಿಂದಿ ವಿದ್ಯಾರ್ಥಿಗಳೆಲ್ಲರೂ ಗಾಂಧೀ ಟೊಪ್ಪಿಗೆಯನ್ನು ಧರಿಸಿದ್ದರು.

ಈ ಮಹತ್ವದ ಮೆರವಣಿಗೆಯಲ್ಲಿ ಸಿವ್ಹಿಲ್ ಲಿಬರ್ಟಿ ಕಾನ್ಸಿಲ್ಲಿನ ಮಿ. ಡೊನಾಲ್ಡ ಮೊದಲಾದ ಪ್ರಮುಖ ಇಂಗ್ಲಿಷ್ ಜನರು ಕೂಡಾ ಸೇರಿದ್ದರು. ಈ ಮೆರವಣಿಗೆಯು ಎರಡು ಮೈಲು ಉದ್ದವಾಗಿದ್ದಿತು. ಮಹಾತ್ಮಾ ಗಾಂಧಿ ಝಿಂದಾಬಾದ, ಸುಭಾಷ ಬೋಸ ಝಿಂದಾಬಾದ, ಜವಾಹರಲಾಲ ಝಿಂದಾಬಾದ ಎಂಬ ಜಯಧ್ವನಿ ಮತ್ತು ವಂದೇಮಾತರಂ ಜಯಘೋಷ ಆಗಾಗ್ಗೆ ಆಗುತ್ತಿದ್ದವು. ಮಹಾತ್ಮಾ ಗಾಂಧಿ, ಕವೀಂದ್ರ ಟಾಗೋರ, ಪಂ. ಜವಾಹರಲಾಲ ಮೊದಲಾದ ಹಿಂದಿ ಮುಖಂಡರ ಭಾವಚಿತ್ರಗಳನ್ನು ಅನೇಕರು ಹಿಡಿದುಕೊಂಡು ಮೆರವಣಿಗೆಯ ಸಂಗಡ ಹೊರಟಿದ್ದರು.

ಹಿಂದುಸ್ಥಾನದ ಸ್ವಾತಂತ್ರ್ಯಸಂಗ್ರಾಮ, ಸಾಮ್ರಾಜ್ಯ ಪ್ರಭುತ್ವಕ್ಕೆ ಧಿಕ್ಕಾರವಿರಲಿ, ಎಂಬುದಾಗಿಯೂ ಅನೇಕರು ಗರ್ಜಿಸುತ್ತಿದ್ದರು. ಕಮ್ಯುನಿಷ್ಟ ಪಕ್ಷದ ಅನೇಕ ಬ್ರಿಟಿಶ್ ಜನರು ಈ ಮೆರವಣಿಗೆಯಲ್ಲಿ ಸೇರಿದ್ದರು. ಅಬಿಸೀನಿಯಾ, ಸ್ಪೇನ್, ಚೀನಗಳ ಕಡೆ ನೋಡಿರಿ. ಶಾಂತತೆ, ಪ್ರಜಾಪ್ರಭುತ್ವ, ಸ್ವಾತಂತ್ರ್ಯಗಳಿಗಾಗಿ ಒಂದಾಗಿರಿ. ಎಂಬ ವಾಕ್ಯಗಳ ಪಟಗಳೂ ಮೆರವಣಿಗೆಯಲ್ಲಿದ್ದವು. ಈ ಪ್ರಚಂಡ ಮೆರವಣಿಗೆಯು ಸಾಯಂಕಾಲ ೪ ಗಂಟೆ ಸಮಯಕ್ಕೆ ಗೊತ್ತಾದ ಸ್ಥಳಕ್ಕೆ ಮುಟ್ಟಲು ಅಲ್ಲಿ ಮಿ. ಗರೋ ಜೇಮ್ಸ. ಸೋರೆನ್ಸ, ರಾಬರ್ಟ್ಸ್ ಮೊದಲಾದ ಪಾರ್ಲಮೆಂಟ ಮೆಂಬರರು ಈ ಮೆರವಣಿಗೆಯನ್ನು ಸ್ವಾಗತಿಸಿದರು.

ಅನಂತರ ಸ್ವಾತಂತ್ರ್ಯ ದಿನಾಚರಣೆಯ ಗೊತ್ತುವಳಿಯು ಓದಲ್ಪಟ್ಟಿತು. ಮೆರವಣಿಗೆಯ ಸಮಾಪ್ತಿಯ ಕಾಲಕ್ಕೆ ವಂದೇಮಾತರಂ ಗೀತೆಯು ಹೇಳಲ್ಪಟ್ಟಿತು.

---

## ಮಹಿಳೆಯರ ಕೋರಿಕೆ.

ಅಖಿಲಭಾರತ ಹಿಂದು ಮಹಿಳೆಯರ ಎರಡನೆಯ ಪರಿಷತ್ತು ಹಿಂದು ಮಹಾಸಭೆಯ ಕಾಲಕ್ಕೆ ಅಹಮದಾಬಾದಿನಲ್ಲಿ ಕೂಡಿದ್ದಿತು. ಭಗಿನಿ ಪದ್ಮಾವತಿ ದೇಸಾಯಿ ಇವರು ಅಧ್ಯಕ್ಷರಾಗಿದ್ದರು. ಇವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

“ಹಿಂದುಗಳ ಉನ್ನತಿಗೆ ಹಿಂದು ಧರ್ಮವೇ ಮೂಲವಾಗಿದೆ. ಹಿಂದು ಧರ್ಮದಂತೆ ನಾವು ನಡೆದಾಗಲೇ ನಮ್ಮ ರಾಜಕೀಯ, ಆರ್ಥಿಕ, ಸಾಮಾಜಿಕ ಉನ್ನತಿಗಳಾಗುವವು. ಹಿಂದುಗಳು ಜನ್ಮದಿಂದ ಮರಣದ ವರೆಗೆ ಧಾರ್ಮಿಕ ನಿಯಮ ನಿಬಂಧನೆಗಳಿಂದಲೇ ಕೂಡಿದವರಾಗಿದ್ದಾರೆ. ನಿಜವಾದ ಹಿಂದು ಧರ್ಮದ ತಿಳುವಳಿಕೆಯೂ ಅದರಲ್ಲಿ ಶ್ರದ್ಧೆಯೂ ಇಲ್ಲದ್ದರಿಂದಲೇ ಹಿಂದು ಜನಾಂಗಕ್ಕೆ ಅನೇಕ ವಿಪತ್ತುಗಳು ಬಂದಿವೆ.

ನನ್ನ ಪ್ರಿಯ ಬಂಧುಭಗಿನಿಯರಾದ ಹಿಂದುಗಳೇ! ನೀವು ಹಿಂದುಗಳೆಂದು ಹೇಳಿಕೊಳ್ಳಲು ನಾಚುವದೇಕೆ? ನಾವು ಹಿಂದುಗಳೆಂದೇ ಮುಂದೆ ಬಂದು ಸಾರಿರಿ. ನಮ್ಮ ಪೂರ್ವಜರ ಹಿಂದು ರಕ್ತವೇ ನಮ್ಮಲ್ಲಿಲ್ಲವೆ? ನೀವೆಲ್ಲ ಹಿಂದುಗಳೆಂದು ಮುಂದೆ ಬಂದು ಹಿಂದು ಜಾತಿಯ ಉನ್ನತಿಗಾಗಿ ಪ್ರಯತ್ನಿಸಬೇಕೆಂದೇ ನನ್ನ ಕೋರಿಕೆ. ನಮ್ಮ ಹಿಂದು ಸಂಸ್ಕೃತಿಯು ಶ್ರೇಷ್ಠವಾದುದಾಗಿದೆ. ಇದನ್ನು ರಕ್ಷಿಸಲು ಪ್ರಯತ್ನಿಸಿರಿ. ಹಿಂದು ಸ್ತ್ರೀಯರನ್ನು ಪುಂಡರಿಂದ ಸಂರಕ್ಷಿಸಿರಿ. ಹಿಂದು ಸ್ತ್ರೀಯರು ಶಾರೀರಕ ಬಲವನ್ನು ಹೊಂದಿ ಪುಂಡರ ಅತ್ಯಾಚಾರಗಳಿಂದ ಪಾರಾಗಬೇಕಾಗಿದೆ.”

### ಮಹತ್ವದ ನಿರ್ಣಯಗಳು.

(೧) ನಮ್ಮ ದೇಶದಲ್ಲಿ ಈಗ ಮಹಿಳೆಯರ ಅಪಹಾರದ ದುಷ್ಟಕಾರ್ಯವು ಹೆಚ್ಚುತ್ತಾ ಇದೆ. ಈ ನೀಚ ಕಾರ್ಯವು ನಿಲ್ಲುವುದಕ್ಕಾಗಿ ದೊಡ್ಡ ಅಧಿಕಾರಿಯಿಂದ ಪೋಲಿಸ್ ಶಿಪಾಯಿಯ ವರೆಗಿನ ಎಲ್ಲ ಅಧಿಕಾರಿಗಳೂ ಇತರ ನಾಗರಿಕರೂ ತುಂಬಾ ಪ್ರಯತ್ನಿಸಬೇಕು. ಮತ್ತು ಸ್ತ್ರೀಯರನ್ನು ಅಪಹರಿಸಿಕೊಂಡು ಹೋಗುವ ನೀಚರಿಗೆ ಬಲವಾದ ಶಿಕ್ಷೆಯನ್ನು ವಿಧಿಸಬೇಕು.

(೨) ಸ್ತ್ರೀಯರಿಗೆ ಶಾರೀರಕ ಶಿಕ್ಷಣವನ್ನು ಕೊಟ್ಟು ಅವರು ಬಲಶಾಲಿಗಳಾಗುವಂತೆ ಮಾಡಬೇಕು. ಇದಕ್ಕಾಗಿ ಅಲ್ಲಲ್ಲಿ ಸ್ತ್ರೀ ವ್ಯಾಯಾಮ ಮಂದಿರಗಳು ಏರ್ಪಡಬೇಕು. ಅವುಗಳ ಮೇಲ್ವಿಚಾರಕರೂ ಸ್ತ್ರೀಯರೇ ಇರಬೇಕು.

(೩) ಒಬ್ಬ ಹೆಂಡತಿ ಇರುವಾಗ ಪುರುಷನು ಇನ್ನೊಬ್ಬಳನ್ನು ಲಗ್ನವಾಗಕೂಡದು. ಹಾಗ್ಗೆ ಲಗ್ನವಾಗುತ್ತಿದ್ದರೆ ಮೊದಲನೆಯವಳನ್ನು ಪರಿತ್ಯಾಗಮಾಡಬೇಕು.

(೪) ಪರಧರ್ಮಕ್ಕೆ ಹೋದ ಸ್ತ್ರೀಯರು ಸ್ವಧರ್ಮದಲ್ಲಿ ಬರುತ್ತಿದ್ದರೆ ಅವರನ್ನು ತೆಗೆದುಕೊಳ್ಳಿರಿ. ಅನಾಥ ಸ್ತ್ರೀರಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿರಿ.

(೫) ಅನೇಕ ಸ್ತ್ರೀಯರು ಧರ್ಮಜ್ಞಾನವಿಲ್ಲದೆ ಪರಧರ್ಮಗಳಿಗೆ ಹೋಗುತ್ತಿದ್ದಾರೆ. ಅವರಲ್ಲಿ ಸ್ವಧರ್ಮದ ಜ್ಞಾನವುಂಟಾಗುವಂತೆ ಸುಲಭವಾದ ದೇಶಭಾಷೆಯಲ್ಲಿ ಧಾರ್ಮಿಕ ಪುಸ್ತಕಗಳನ್ನು ಪ್ರಚಾರಗೊಳಿಸಿರಿ. ಮತ್ತು ಕೀರ್ತನ ಉಪನ್ಯಾಸ, ಪ್ರವಚನಗಳ ಮೂಲಕ ಸ್ತ್ರೀಯರಲ್ಲಿ ನಿಜವಾದ ಧಾರ್ಮಿಕ ಜಾಗೃತಿಯುಂಟಾಗುವಂತೆ ಮಾಡಿರಿ.

---

—ಮುಂಬೈ ದಾದರ ಹಿಂದು ಸಭೆಯವರು ಕಳೆದ ೨೨. ನೆಯ ತಾರೀಖಿನ ದಿವಸ ಮುಸಲ್ಮಾನ್ ಮತದಲ್ಲಿ ಸೇರಿದ್ದ ಒಬ್ಬ ಹಿಂದು ಹೆಣ್ಣುಮಗಳನ್ನು ಶುದ್ಧಗೊಳಿಸಿ ಹಿಂದು ಧರ್ಮದಲ್ಲಿ ತೆಗೆದುಕೊಂಡರು. ಆ ಹೆಣ್ಣುಮಗಳು ರತ್ನಾಗಿರಿ ಜಿಲ್ಲೆಯ ಶಿರಸಿ ಗ್ರಾಮದವಳು. ಒಬ್ಬ ಮುಸಲ್ಮಾನ ಗೃಹಸ್ಥನ ಕಡೆಗೆ ಕೂಲಿ ಕೆಲಸಕ್ಕೆ ಹೋದಾಗ ಅವಳ ಕುಲ ಕೆಡಿಸುವ ಪ್ರಯತ್ನ ನಡೆಯಿತು. ಅದಕ್ಕೆ ಅವಳು ವಿರೋಧಿಸಿದಳು. ಆದರೂ ಅವಳು ಕುಲಗೆಟ್ಟಳೆಂದೇ ಮುಸಲ್ಮಾನರು ಸುದ್ದಿಯನ್ನು ಹುಟ್ಟಿಸಿದರು. ಆಗ ಆ ಹೆಣ್ಣುಮಗಳ ಸಂಬಂಧಿಕರು ಅವಳನ್ನು ಕುಲದ ಹೊರಗೆ ಹಾಕಿದರು. ಆಗ ಆ ಹೆಣ್ಣುಮಗಳಿಗೆ ಮುಸಲ್ಮಾನರು ತೊಂದರೆ ಕೊಟ್ಟರು. ಇದನ್ನು ನೋಡಿ ಅಲ್ಲಿಯ ಸಾರ್ವಜನಿಕ ಕಾರ್ಯ ನಿ ವಾ ರ ಹ ಕ ರು ಈ ಹೆಣ್ಣುಮಗಳನ್ನು ಮುಂಬೈಗೆ ಕರೆದುಕೊಂಡು ಬಂದರು. ಈಗ ಶ್ರದ್ಧಾನಂದ ಮಹಿಳಾಶ್ರಮದಲ್ಲಿ ಆ ಹೆಣ್ಣುಮಗಳಿದ್ದಾಳೆ.

# ಬಿಲ್ವ ವೃಕ್ಷ ಮತ್ತು ಅದರ ಪ್ರಯೋಜನ.

(ಆಶುತೋಷ.)

ಹಿಂದೂ ದೇಶದಲ್ಲಿ ಬಿಲ್ವ ವೃಕ್ಷಗಳು ಎಲ್ಲೆಲ್ಲಿಯೂ ಬೆಳೆಯುತ್ತವೆ. ಒಂದು ಗಿಡವನ್ನು ಹಚ್ಚಿದರೆ ಅದರ ಬೇರುಗಳಿಂದ ಅನೇಕ ಹೊಸ ಗಿಡಗಳು ಹುಟ್ಟುತ್ತವೆ. ದಕ್ಷಿಣ ಹಿಮಾಲಯ, ಬರ್ಮಾ ದೇಶ ಇವುಗಳ ಸುತ್ತುಮುತ್ತಲಿನ ಕಾಡುಗಳಲ್ಲಿ ಬಿಲ್ವದ ಗಿಡಗಳು ತಮ್ಮಿಂದ ತಾವೇ ಬೆಳೆಯುತ್ತವೆ. ಇದರ ಕೊಂಬೆಗಳಲ್ಲಿ ಮುಳ್ಳುಗಳಿವೆ. ಇದರ ಎಲೆಯಲ್ಲಿ ಸ್ವಾಭಾವಿಕವಾಗಿ ಮೂರು ದಳಗಳಿರುತ್ತವೆ. ಎಲೆಯ ಬಣ್ಣವು ತಿಳಿ ಹಸರು.

ಜಾಲಿಯ ಗಿಡದಲ್ಲಿ ಅಂಟು ಹೊರಡುವಂತೆ ಈ ಗಿಡದಲ್ಲಿಯೂ ಅಂಟು ಹೊರಡುತ್ತದೆ. ಬೀಜದಿಂದ ಒಂದು ಜಾತಿಯ ಥಳ ಥಳ ಹೊಳೆಯುವ ಜಿಗಟು ಪದಾರ್ಥವು ಹೊರಡುತ್ತದೆ. ಅದು ಹಣ್ಣುಗಳ ಒಳಭಾಗಕ್ಕೆ ಅಂಟಿಕೊಂಡಿರುತ್ತದೆ. ಇದು ಒಂದು ರೀತಿಯ ಅಂಟೇ ಇರುವದು. ಈ ಅಂಟಿಗೆ ರುಚಿ ಇರುವದಿಲ್ಲ. ಈ ಹಳದಿ ಬಣ್ಣದ ಅಂಟಿನ ವಿಷಯು ಎಲ್ಲರಿಗೂ ಗೊತ್ತಿರುವುದಿಲ್ಲ. ಈ ಅಂಟನ್ನು ಜನರು ತಿಳಲು ಎಂದು ಕರೆಯುತ್ತಿದ್ದಾರೆ. ಇದರ ಪರೀಕ್ಷೆಯನ್ನು ರಾಕ್ಸಬರ್ಗ್ ಸಾಹೇಬನೆಂಬೊಬ್ಬನು ಮಾಡಿರುವನು. ಬಿಲ್ವದ ಅಂಟಿನಿಂದ ಒಂದು ತರದ ಸಿ ಮೆ ೦ ಟ ನ್ನು ತಯಾರಿಸುತ್ತಾರೆ.

ಇದರ ಹಣ್ಣುಗಳು ಬೇಲದ ಹಣ್ಣುಗಳಂತೆ ಇ ರು ತ್ತ ವೆ. ಬರ್ಮಾ ದೇಶದಲ್ಲಿಯ ಬಿಲ್ವದ ಹಣ್ಣುಗಳು ಉದ್ದವಾಗಿರುತ್ತವೆ. ಆದುದರಿಂದ ಆ ಗಿಡಗಳು ಬಿಲ್ವ ವೃಕ್ಷದ ಒಳಭೇದಗಳೆಂದು ಕೆಲವರ ಅಭಿಪ್ರಾಯವುಂಟು. ಸರಿಯಾಗಿ ವಿಚಾರಿಸಿ ನೋಡಿದರೆ ಈ ಹೆಚ್ಚುಕಡಿಮೆಯು ಹವೆಯಿಂದ ಆಗಿರುತ್ತದೆಂದು ತಿಳಿದುಬರುತ್ತದೆ. ಬಿಲ್ವದ ಹಣ್ಣುಗಳ ಕವಚವು ಬಹಳ ಗಟ್ಟಿ. ಈ ಹಣ್ಣುಗಳು ಪಕ್ವವಾದ ಮೇಲೆ ಹಳದೀ ಬಣ್ಣವಾಗುತ್ತವೆ. ಇದರ ಹಣ್ಣಿನ ಕವಚದಿಂದ ಉತ್ತಮ ಬಣ್ಣ ತಯಾರಾಗುತ್ತದೆ.

ಬಿಲ್ವದ ಹಣ್ಣುಗಳ ಕವಚದಲ್ಲಿ ಅಳಲೇಕಾಯಿ ಕೂಡಿಸಿ ಬಣ್ಣ ತಯಾರು ಮಾಡುತ್ತಾರೆ. ಅದು ಬಹಳ ಒಳ್ಳೆಯ ಬಣ್ಣವಾಗಿರುತ್ತದೆ. ಬಿಸಿಲಿಗೆ ಈ ಬಣ್ಣವು ಹಾರಿ ಹೋಗುವುದಿಲ್ಲ. ಹಸಿ ಕಾಯಿಗಳ ಕವಚಗಳಿಂದಲೂ ಬಟ್ಟೆಗಳಿಗೆ ಬಣ್ಣ ಹಾಕಬಹುದು.

ಬಿಲ್ವದ ಹಣ್ಣಿನ ಪ್ರಯೋಜನವನ್ನು ತಿಳಿಯದವರು ಈ ಹಿಂದೂ ದೇಶದಲ್ಲಿ ಕಡಿಮೆ. ಇಂಗ್ಲಿಷರಿಗೆ ಇದರ ಜ್ಞಾನವು ಹೆಚ್ಚಾಗಿ ತಿಳಿದಿರುವುದಿಲ್ಲ.

ಇದರ ಹಸಿ ಕಾಯಿಗಳಲ್ಲಿ ಆಕರ್ಷಕ ಧರ್ಮವಿದೆ. ಪಕ್ವವಾದ ಹಣ್ಣುಗಳೊಳಗಿನ ತಾಜಾ ತಿಳಿಲು ತಿಂದರೆ ಶೌಚವು ಸರಿಯಾಗಿ ಆಗುತ್ತದೆ. ಒಣಗಿದ ತಿಳಲು ತೀರ ಸೌಮ್ಯ ಆಕರ್ಷಕವಿರುವುದು.

ಹಿಂದೂ ದೇಶದಲ್ಲಿ ಅತಿಸಾರ ಹಾಗೂ ಆಮಾಂಶ ಈ ವಿಕಾರದ ಮೇಲೆ ಬಿಲ್ವದ ಹಣ್ಣು ಕೊಡುತ್ತಾರೆ. ಇದು ಇಲ್ಲಿಗೂ ಗೊತ್ತುಂಟು.

ಬಿಲ್ವದ ಹಸಿ ಕಾಯಿಗಳನ್ನು ಅಥವಾ ಅದರ ಹೋಳುಗಳನ್ನು ಬಿಸಿಲಿನಲ್ಲಿ ಒಣಗಿಸಿ ಮಾರುತ್ತಾರೆ. ಇದು ಒಳ್ಳೇ ಪಾಚಕವಿದೆ. ಯಾವ ಔಷಧದಿಂದಲೂ ಗುಣವಾಗದ ಬಹು ಕಷ್ಟಸಾಧ್ಯವಾದ ಅತಿಸಾರ ಹಾಗೂ ಆಮಾಂಶ ವಿಕಾರಗಳಿಗೆ ಈ ಬಿಲ್ವಪತ್ರಿಯ ಕಾಯಿಗಳನ್ನು ಉಪಯೋಗಿಸುತ್ತಾರೆ.

ಪಕ್ವವಾದ ಹಣ್ಣುಗಳು ಸವಿಯಾಗಿಯೂ, ತಂಪಾಗಿಯೂ, ಸುಗಂಧಮಯವಾಗಿಯೂ ಇರುವವು. ಅದರ ಶರಬತ್ತು ಮಾಡಿ ಬಿಸಲುಗಾಲದಲ್ಲಿ ಕುಡಿಯುತ್ತಾರೆ. ಈ ಶರಬತ್ತಿನಿಂದ ಮಲಶುದ್ಧಿಯಾಗಿ ಮಲವು ಸರಾಗವಾಗಿ ಹೋಗುತ್ತದೆ. ಈ ಶರಬತ್ತನ್ನು ಸಾಧಾರಣ ಜ್ವರಕ್ಕೆ ಕೊಡುತ್ತಾರೆ. ಒಣಗಿದ ತಿಳಲನ್ನು ಆಮಾಂಶದ ಮೇಲೆ ಕೊಡುತ್ತಾರೆ.

ಈ ಗಿಡದ ತೊಗಟೆಯ ಕಷಾಯವನ್ನು ನಿಂತು ನಿಂತು ಬರುವ ಜ್ವರಕ್ಕೆ ಕೊಡುತ್ತಾರೆ. ಇದರ ಬೇರು ದಶಮೂಲಗಳಲ್ಲಿ ಒಂದಾಗಿದೆ. ಇದರ ಬೇರನ್ನು ಪಿತ್ತೋನ್ಮಾದ ಹಾಗೂ ಹೃದಯವಿಕಾರಕ್ಕೆ ಉಪಯೋಗಿಸುತ್ತಾರೆ.

ಎಲೆಗಳ ಪೋಲ್ಟೀಸು ಮಾಡುತ್ತಾರೆ. ಕಣ್ಣುಬೇನೆ ಬಂದರೆ ಈ ಪೋಲ್ಟೀಸಿನಿಂದ ಕಾಯಿಸುತ್ತಾರೆ. ಎಲೆಯ ರಸವು ಒಗರು, ಖಾರ ಹಾಗೂ ಸ್ವಲ್ಪ ಕಹಿಯಾಗಿ ಇರುತ್ತದೆ. ಇದರ ರಸದಲ್ಲಿ ಸೀರು ಹಾಕಿ ನೆಗಡಿಯಾದಾಗ ಕುಡಿಯಲಿಕ್ಕೆ ಕೊಡುತ್ತಾರೆ.

ಪಕ್ವವಾದ ಹಣ್ಣುಗಳು ಬಣ್ಣಗಳನ್ನು ಮಾಡಲಿಕ್ಕಾಗುತ್ತವೆ. ಹಣ್ಣುಗಳನ್ನು ಕೆಲಕೆಲವು ಔಷಧಗಳಲ್ಲಿಯೂ ಉಪಯೋಗಿಸುತ್ತಾರೆ.

ಹೂಗಳು ಸುಗಂಧದ್ರವ್ಯಗಳಲ್ಲಿ ಎಣಿಸಲ್ಪಡುತ್ತವೆ. ಅಂಗಡಿಕಾರರು ಬಿಲ್ವದ ಹಸಿ ಕಾಯಿಗಳನ್ನು ಹೋಳು ಮಾಡಿ ಮಾರುತ್ತಾರೆ. ಇವುಗಳ ಹಾಗೂ ಪಕ್ವವಾದ ಹಣ್ಣುಗಳ ಭೇದವು ಬೇಗನೆ ಲಕ್ಷ್ಯದಲ್ಲಿ ಬರುವುದಿಲ್ಲ. ಹಸಿ ಕಾಯಗಳ ಹೋಳುಗಳು ಯುರೋಪಿಗೆ ಹೆಚ್ಚಾಗಿ ಹೋಗುತ್ತಿದೆ. ಹಣ್ಣುಗಳ ತಿಳಲು ಕಿತ್ತಳೆಯ ಬಣ್ಣದ್ದಿದ್ದು ಒಳ್ಳೇ ರುಚಿಕರವಿರುತ್ತದೆ. ಅದನ್ನು ನೀರಿನಲ್ಲಿ ಕಲಿಸಿದರೆ ಕಿತ್ತಳೆಯ ಬಣ್ಣದ ರುಚಿಯಾದ ಶರಬತ್ತು ತಯಾರಾಗುತ್ತದೆ. ಹಸಿ ಕಾಯಿಗಳ ಒಣಗಿದ ತಿಳಲನ್ನು ನೀರಿನಲ್ಲಿ ಕಲಿಸಿದರೆ ನಸುಗೆಂಪು ಬಣ್ಣವಾಗುತ್ತದೆ. ಅದು ಹುಳಿಯಾಗಿರುತ್ತದೆ. ಅದಕ್ಕೆ ಸುಗಂಧ ವಾಸನೆಯು ಇರುವದಿಲ್ಲ. ಬಿಲ್ವವನ್ನು ರಸಾಯನ ವಿಧದಿಂದ ಶೋಧಮಾಡಿದರೆ ಅದರಲ್ಲಿ 'ಟಾನಿಕ್ ಆಸಿಡ್' ಹೊರಡುವ ಎಣ್ಣೆ ಹಾಗೂ 'ಬಾಲ ಸಾಮ್ ಅಫ್ ಪೇರೂ' ವಿನಂತಹ ಒಂದು ಪದಾರ್ಥ ಸಿಗುತ್ತದೆ.

ಬಿಲ್ವದ ಅರ್ಕ:— ಇದನ್ನು ಹಸಿ ಕಾಯಿಗಳಿಂದ ತೆಗೆಯುತ್ತಾರೆ. ಇದನ್ನು ದಿವಸಕ್ಕೆ ಎರಡು ಮೂರು ಸಲ ಆಮಾಂಶದ ಮೇಲೆ ಕೊಡುತ್ತಾರೆ.

ಒಣಗಿದ ತಿಳಲನ್ನು ಪುಡಿ ಮಾಡಿ ವಸ್ತ್ರದಲ್ಲಿ ಸೋಸಿ ಸೀಸೆಯಲ್ಲಿ ಗಟ್ಟಿಯಾಗಿ ಕಾರ್ಕ ಹಾಕಿ ತುಂಬಿ ಇಡಬೇಕು. ಅರ್ಕಕ್ಕಿಂತ ಈ ಚೂರ್ಣವನ್ನು ಕೊಡುವುದು ಬಹು ಯೋಗ್ಯವೆಂದು ಒಬ್ಬ ಡಾಕ್ಟರರು ಹೇಳಿದ್ದಾರೆ. ಪುಷ್ಟಿಯಾಗಲಿಕ್ಕೆ ದಿನಾಲೂ ಆರು ಗುಂಜಿಯಿಂದ ಏಳು ಗುಂಜಿಯ ವರೆಗೆ ಇದನ್ನು ತಕ್ಕೊಳ್ಳಬೇಕು. ಜ್ವರ, ಆಮಾಂಶ ಮೊದಲಾದ ರೋಗಗಳಿಗೆ ಎಂಟು ಗುಂಜಿಯಿಂದ ಹತ್ತು ಗುಂಜಿಯ ವರೆಗೆ ಇದರ ಚೂರ್ಣವನ್ನು ಕೊಡುತ್ತಾರೆ.

ಬಿಲ್ವ ಪತ್ರಿಯ ಹಸಿ ಕಾಯಿಯ ತಿಳಲು ಎಂಟು ದಿವಸಗಳ ವರೆಗೆ ಎಳ್ಳೆಣ್ಣೆಯಲ್ಲಿ ಹಾಕಿಡಬೇಕು. ಅಂಗಾಲು ಅಂಗೈಗಳು ಉರಿಯುತ್ತಿದ್ದರೆ ಆ ಎಣ್ಣೆಯನ್ನು ಹಾಕಿ ತಿಕ್ಕಬೇಕು. ಹಸಿ ಕಾಯಿಗಳನ್ನು ಕಠಿಣವಾದ ಅತಿಸಾರ ಹಾಗೂ ನೆಗಡಿಗೆ ಕೊಡುತ್ತಾರೆ. ಆಮಾಂಶದ ಮೇಲೆ ಉಪಯೋಗವಾಗುವುದಿಲ್ಲವೆಂದು ಒಬ್ಬ

ಡಾಕ್ಟರರು ಹೇಳುವರು. ಹಸಿ ಕಾಯಿಗಳ ತಿಳಲು ತೆಗೆದು ಸಕ್ಕರೆ ಅಥವಾ ಬೆಲ್ಲ ಹಾಕಿ ಅತಿಸಾರ ಹಾಗೂ ಆಮಾಂಶದ ಮೇಲೆ ತಕ್ಕೊಳ್ಳಬೇಕು. ಪಕ್ವವಾದ ಹಣ್ಣುಗಳ ಶರಬತ್ತು ಮಧುರವಾಗಿಯೂ ತಂಪಾಗಿಯೂ ರುಚಿಕರವಾಗಿಯೂ ಇರುತ್ತದೆ. ಅರಬಸ್ಥಾನದಲ್ಲಿ ಬಿಲ್ವದ ಹಣ್ಣುಗಳ ಉಪ್ಪಿನಕಾಯಿ ಹಾಕುತ್ತಾರೆ. ಆಮಾಂಶವಾದಾಗ್ಗೆ ಇದನ್ನು ತಿನ್ನುತ್ತಾರೆ.

ಹಸಿ ಕಾಯಿಗಳ ಮುರಬ್ಬಾ ಹಾಗೂ ಉಪ್ಪಿನಕಾಯಿಗಳು ಬಹಳ ಉತ್ತಮವಾಗುತ್ತವೆ. ಅಗ್ನಿಮಾಂದ್ಯ ಅಥವಾ ಅವಷ್ಟಂಭದ ಮೇಲೆ ಬಿಲ್ವಪತ್ರಿಯ ಹಣ್ಣುಗಳ ಶರಬತ್ತು ಒಳ್ಳೇ ಸುಖಕರವಾಗಿರುವುದು. ಕಾಲುಸೇರು ಶರಬತ್ತು ತಕ್ಕೊಂಡರೆ ಸೌಮ್ಯವಾದ ಒಂದೆರಡು ಜುಲಾಬು ಆಗಿ ಪ್ರಕೃತಿಗೆ ಆರಾಮವಾಗುತ್ತದೆ.

ಎಲೆಗಳನ್ನು ನೀರು ಹಾಕದೆ ಅರೆದು ಹುಣ್ಣುಗಳಿಗೆ ಹಚ್ಚಿದರೆ ಅವು ಬೇಗ ಮಾಯುತ್ತವೆ. ನೆಗಡಿಗೆ ತಾಜಾ ಎಲೆಗಳ ರಸವನ್ನು ಕುಡಿಯಬೇಕು. ಜ್ವರಕ್ಕೆ ಎಲೆಗಳ ಕಷಾಯ ತಕ್ಕೊಳ್ಳಬೇಕು.

ಹಾವು ಕಚ್ಚಿದರೆ ಬೇರು ಅರೆದು ರಸವನ್ನು ಕುಡಿಸುತ್ತಾರೆ. ಹಣ್ಣುಗಳನ್ನು ಎಷ್ಟೋ ಜನರು ಪ್ರೀತಿಯಿಂದ ತಿನ್ನುವರು. ಪಕ್ವವಾದ ಹಣ್ಣಿನ ತಿಳಲು ನೀರು ನಿಂಬೆಯ ಹುಳಿ ಅಥವಾ ಹುಣಿಸೆಯ ಹುಳಿ ಮತ್ತು ಬೆಲ್ಲ ಅಥವಾ ಸಕ್ಕರೆ ಹಾಕಿ ಪಾನ ಮಾಡುತ್ತಾರೆ. ಇದು ಬಹಳ ರುಚಿಕರವಿರುತ್ತದೆ.

ಈ ಬಿಲ್ವಪತ್ರಿಯ ಗಿಡವನ್ನು ಹಿಂದೂ ಜನರು ಬಹಳ ಪೂಜ್ಯವೆಂದು ತಿಳಿಯುತ್ತಾರೆ. ಬಿಲ್ವಪತ್ರಿಯು ಮಹಾದೇವರ ಪೂಜೆಗೆ ಅಗತ್ಯವಾಗಿ ಬೇಕು. ಗಿಡವನ್ನು ಶ್ರೀಫಲವೃಕ್ಷವೆಂತಲೂ ಹಣ್ಣನ್ನು ಶ್ರೀಫಲವೆಂತಲೂ ಕರೆಯುವ ವಾಡಿಕೆಯಿದೆ. ಬಿಲ್ವದ ಹೂಗಳು ಬಹು ಸುಗಂಧಮಯವಾಗಿರುವವು. ಇವುಗಳ ಎಲೆಗಳಲ್ಲಿ ಕ್ರಿಮಿನಾಶಕ ಗುಣವುಂಟು. ಆದುದರಿಂದ ಮನೆಗಳ ಹಾಗೂ ಜಂಗಲೆಗಳ ಸುತ್ತುಮುತ್ತು ಈ ಗಿಡಗಳನ್ನು ಬೆಳೆಸುವುದು ಬಹು ಆರೋಗ್ಯಕರವು.

"ಕಂಠೀರವ."

---

# "ವಂದೇಮಾತರಂ" ಗೀತೆಗೆ ಮತ್ತೊಂದು ವಿರೋಧ.

ವಂದೇಮಾತರಂ ಗೀತೆಯು ಮದ್ರಾಸ ಅಸೆಂಬ್ಲಿಯಲ್ಲಿ ಪ್ರಾರಂಭವಾದೊಡನೆ ಮುಸ್ಲಿಂ ಲೀಗಿನ ಪ್ರತಿನಿಧಿಗಳು ಎದ್ದು ಹೋಗಿ ಅನಂತರ ಬರುತ್ತಿದ್ದಾರೆ. ಪ್ರಾರ್ಥನೆಯ ಶಾಂತ ವಾತಾವರಣವನ್ನು ಹೀಗೆ ಅಸಭ್ಯರೀತಿಯಿಂದ ಅಶಾಂತಗೊಳಿಸುವುದು ಯುಕ್ತವಲ್ಲವಷ್ಟೆ. ಆದಕ್ಕಾಗಿ ಅಧ್ಯಕ್ಷರಾದ ಶ್ರೀ. ಸಾಂಬಮೂರ್ತಿಗಳು ಇದು ಮುಸ್ಲಿಂಲೀಗಿನವರ ಒರಟುತನವೆಂದೂ ತಮಗೆ ಇಷ್ಟವಿಲ್ಲದಿದ್ದರೆ ಪ್ರಾರ್ಥನೆಯಾಗುವವರೆಗೆ ಮೊದಲೇ ಹೊರಗಿದ್ದು ಅನಂತರ ಬರುವದು ಯುಕ್ತವೆಂದೂ ತಿಳಿಸಿದರು. ನಾವು ಹೀಗೆ ವಿರೋಧಿಸುವವರೇ ಸರಿಯೆಂದು ಒಬ್ಬ ಸಭಾಸದರು ಹೇಳಿದರು. ಇವರು ಹೊರಗೆ ಹೋದಾಗ ಬಾಗಿಲು ಮುಚ್ಚಲ್ಪಡಬೇಕೆಂದು ಒಬ್ಬರು ಸೂಚಿಸಿದರು. ಹಾಗೆ ಮಾಡುವುದು ಸರಿಯಲ್ಲವೆಂದು ಮುಖ್ಯ ಮಂತ್ರಿಗಳು ಹೇಳಿದರು. ಇದು ಮದ್ರಾಸ ಅಸೆಂಬ್ಲಿಯಲ್ಲಿ ನಡೆದ ಸಮಾಚಾರ.

ಮುಂಬೈ ಅಸೆಂಬ್ಲಿಯಲ್ಲಿ ಮಿ. ಚುಂದ್ರೀಗಾರ ಮತ್ತು ಮಿ. ಫೈಜ ಮಹಮ್ಮದಖಾನ ಇವರು ತಾ. ೩೧-೧-೩೮ ನೆಯ ದಿವಸ ಒಂದು ನಿಲುವಳಿ ಸೂಚನೆಯನ್ನು ತಂದಿದ್ದರು. ಅಹಮದಾಬಾದ ಜಿಲ್ಲಾ ಬೋರ್ಡಿನವರು ತಮ್ಮ ಅಧೀನದಲ್ಲಿರುವ ಎಲ್ಲ ಶಾಲೆಗಳಲ್ಲಿಯೂ ಪಾಠ ಪ್ರಾರಂಭದ ಕಾಲದಲ್ಲಿ ವಂದೇಮಾತರಂ ಗೀತೆಯ ಮೊದಲಿನ ಎರಡು ನುಡಿಗಳನ್ನು ಹೇಳಬೇಕೆಂದು ಅಪ್ಪಣೆ ಮಾಡಿದ್ದಾರೆ. ಇದನ್ನು ನಿಷೇಧಿಸುವುದೇ ಈ ನಿಲುವಳಿ ಸೂಚನೆಯ ಉದ್ದೇಶವಾಗಿದ್ದಿತು. ಆದುದರಿಂದ ಅಸೆಂಬ್ಲಿ ಅಧ್ಯಕ್ಷರಾದ ಶ್ರೀ· ಮಾಳವಣಕರ ಇವರು ಈ ಪ್ರಕಾರ ಸ್ಪಷ್ಟೀಕರಿಸಿದರು—

"ಲೋಕಲ್ ಬೋರ್ಡ ಸಂಸ್ಥೆಯು ಸ್ವತಂತ್ರವಾದುದು. ಅದು ಮಾಡಿರತಕ್ಕ ನಿಯಮಗಳಲ್ಲಿ ಮಂತ್ರಿಮಂಡಲವು ಪ್ರವೇಶಿಸಲಿಕ್ಕೆ ಬರುವುದಿಲ್ಲ. ಪ್ರಾಂತಿಕ ಅಧಿಕಾರಕ್ಕೊಳಪಟ್ಟ ವಿಷಯಗಳಲ್ಲಿ ಪಾರ್ಲಮೆಂಟಿನಲ್ಲಿ ಹೇಗೆ ಪ್ರಶ್ನೋತ್ತರಗಳು ನಡೆಯುವುದಿಲ್ಲವೋ ಹಾಗೆಯೇ ಲೋಕಲ್ ಬೋರ್ಡಿನ ಅಧಿಕಾರಕ್ಕೊಳಪಟ್ಟ ವಿಷಯದಲ್ಲಿ ಅಸೆಂಬ್ಲಿಯಲ್ಲಿ ಪ್ರಶ್ನೋತ್ತರಗಳು ನಡೆಯುವುದು ಅನುಚಿತವು. ಆದಕಾರಣ ನಿಯಮ ಬಾಹ್ಯವಾದ ಈ ವಿಷಯವನ್ನು ಇಲ್ಲಿ ಚರ್ಚಿಸಲು ಅವಕಾಶಕೊಡಲಾಗುವುದಿಲ್ಲ."

ಮುಸ್ಲಿಂಲೀಗಿನವರು ವಂದೇಮಾತರಂ ಗೀತೆಗೂ ರಾಷ್ಟ್ರಧ್ವಜಕ್ಕೂ ಎಲ್ಲ ಕಡೆಗೂ ಶಕ್ಯವಿರುವ ಎಲ್ಲ ವಿರೋಧಗಳನ್ನೂ ಮಾಡುತ್ತಿದ್ದಾರೆ. ಹೀಗೆ ಮಾಡುತ್ತ ಹಿಂದು-ಮುಸಲ್ಮಾನ್ ಐಕಮತ್ಯವನ್ನುಂಟುಮಾಡುವುದೇ ತಮ್ಮ ಮುಖ್ಯ ಗುರಿಯೆಂತಲೂ ಈ ಲೀಗಿನ ಅನೇಕ ಪ್ರಮುಖರು ಹೇಳುತ್ತಿದ್ದಾರೆ. ಇವೆರಡೂ ಹೇಗೆ ಶಕ್ಯವೋ ಅವರಿಗೇ ಗೊತ್ತು. ಅವರನ್ನು ನಂಬಿದವರಿಗೂ ಗೊತ್ತು.

---

# ಮುಸಲ್ಮಾನರೊಡನೆ ಜಪಾನಿಗಳ ಸ್ನೇಹ.

ಜಪಾನ ಪಾರ್ಲಮೆಂಟಿನಲ್ಲಿ ಕಳೆದ ವಾರ ಒಂದು ಮಹತ್ವದ ಪ್ರಶ್ನೋತ್ತರ ನಡೆಯಿತು. ಅದರಿಂದ ಏಶಿಯಾ ಖಂಡದ ಭಾವೀ ಸಂಘಟನೆಯು ಯಾವ ಪ್ರಕಾರ ನಡೆಯಬಹುದೆಂಬುದನ್ನು ಊಹಿಸಬಹುದಾಗಿದೆ. ಪಾರ್ಲಮೆಂಟಿನಲ್ಲಿ ಒಬ್ಬ ಸಭಾಸದರು ಹೀಗೆ ಕೇಳಿದರು—

ಪ್ರಶ್ನೆ— ಮುಸಲ್ಮಾನರು ಭೌಗೋಲಿಕ ದೃಷ್ಟಿಯಿಂದ ಜಗತ್ತಿನ ಆಯಕಟ್ಟಿನ ಪ್ರದೇಶಗಳಲ್ಲಿ ವಾಸವಾಗಿದ್ದಾರೆ. ಕಮ್ಯುನಿಜಂ ಎದುರಿಸಲು ಇವರಿಂದ ಬಹು ಸಹಾಯವಾಗಬಹುದು. ಆದುದರಿಂದ ಸರಕಾರವು ಇವರೊಂದಿಗೆ ಸ್ನೇಹವನ್ನು ಬೆಳೆಸಿದೆಯೆ?

ಉತ್ತರ— ಮುಸಲ್ಮಾನರೊಡನೆ ಸಹಕರಿಸುವ ವಿಷಯದಲ್ಲಿ ಸರಕಾರವು ಆಲೋಚಿಸುತ್ತಲೇ ಇದೆ. ಇರಾಣದಲ್ಲಿ ಜಪಾನಿ ರಾಯಭಾರಿಯನ್ನು ನಿಯಮಿಸುವ ಪ್ರಯತ್ನ ನಡೆದಿದೆ. ಮುಸಲ್ಮಾನ್ ಧರ್ಮಾವಲಂಬಿತ ಜಪಾನಿ ವಿದ್ಯಾರ್ಥಿಗಳೊಡನೆಯೂ ಸರಕಾರವು ವಿಚಾರ ವಿನಿಮಯ ಮಾಡುತ್ತಲಿದೆ.

---

## ಕನ್ನಡ ಬಾವುಟ, ಎತ್ತಿಹಿಡಿಯಿರಿ !

ಕನ್ನಡ ನುಡಿಯ ಕುಲಗುರುಗಳಾದ ಶ್ರೀ. ಬಿ. ಎಂ. ಶ್ರೀಕಂಠಯ್ಯನವರು ಕನ್ನಡಿಗರಿಗೆ ಕನ್ನಡ ಬಾವುಟ ಎತ್ತಿಹಿಡಿಯಿರೆಂದು ಹೀಗೆ ಹೇಳಿದರು—

"ಕನ್ನಡ ಬಾವುಟ ಹೊಸದಲ್ಲ, ೯ ನೆಯ ಶತಮಾನದಲ್ಲಿ ನೃಪತುಂಗನೇ ಕವಿರಾಜ ಮಾರ್ಗದಲ್ಲಿ ಹಾರಿಸಿದ್ದಾನೆ. ಕದಂಬರು, ಗಂಗರು, ಚಾಲುಕ್ಯರು, ರಾಷ್ಟ್ರಕೂಟರು ಹೊಯ್ಸಲರು, ವಿಜಯನಗರದವರು ಪರಂಪರೆಯಾಗಿ ಸಾಮ್ರಾಜ್ಯವನ್ನು ಕಟ್ಟಿ ಕನ್ನಡ ಬಾವುಟವನ್ನು ಮೆರೆಸಿದರು. ಇಂದು ನಾವೂ ಆ ನೂತನ ಪ್ರಭಾಮಯ ಬಾವುಟವನ್ನು ಬೀಳಗೊಡದೆ ಹಾರಿಸೋಣ.

ಕನ್ನಡ ನುಡಿ, ಕನ್ನಡ ನಯ, ಕನ್ನಡ ಜನ, ಒಂದಾಗಬೇಕಾಗಿದೆ. ಮುಂದಾಗಬೇಕಾಗಿದೆ. ಕನ್ನಡ ನಾಡು ಕೂಡಬೇಕಾಗಿದೆ. ಕನ್ನಡ ತಾಯಿ ಕೂಗುತ್ತಿದ್ದಾಳೆ. ಕನ್ನಡಿಗರೇ ಓಡಿ ಬನ್ನಿ. ಕೂಡಿ ಬನ್ನಿ. ನೆರವಾಗಿ."

**ಶ್ರೀ. ಗಂಗಾಧರರಾಯರು ಬಾವುಟ ಎತ್ತಿದರು.**

ಕರ್ನಾಟಕದ ಪ್ರಸಿದ್ಧ ಮುಖಂಡರೂ ಜಮಖಂಡಿಯಲ್ಲಿ ಮೊನ್ನೆ ಕೂಡಿದ್ದ ಕರ್ನಾಟಕ ಸಮ್ಮೇಲನದ ಉದ್ಘಾಟನ ಸಮಾರಂಭವನ್ನು ಜರುಗಿಸಿದವರೂ ಕರ್ನಾಟಕ ಏಕೀಕರಣಕ್ಕೋಸ್ಕರ ಗವ್ಹರ್ನರರ ಅಭಿಪ್ರಾಯವನ್ನು ಖಂಡು ತುಂಡಾಗಿ ಟೀಕಿಸಿದವರೂ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರಾದವರೂ ಆದ ಶ್ರೀ. ದೇಶಪಾಂಡೆ ಗಂಗಾಧರರಾಯರು ಬೆಳಗಾವಿಯಲ್ಲಿ ಮೊನ್ನೆ ಸ್ವಾತಂತ್ರ್ಯದಿನಾಚರಣೆಯ ಕಾಲಕ್ಕೆ ಮತ್ತು ಒಕ್ಕಲತನದ ಪ್ರದರ್ಶನವು ಪರಿಸಮಾಪ್ತಿಯಾದ ಕಾಲಕ್ಕೆ ಮರಾಠಿಯಲ್ಲಿ ಭಾಷಣಮಾಡಿ ಬೆಳಗಾವಿಯಲ್ಲಿ ಮರಾಠಿ ಬಾವುಟ ಎತ್ತಿ ಹಿಡಿದರು. ಶ್ರೀ. ರಾಯರ ಎರಡೂ ಕೈಗಳಲ್ಲಿ ಕನ್ನಡ ಮತ್ತು ಮರಾಠಿ ಬಾವುಟುಗಳಿವೆ. ಅವರ ಇಷ್ಟದಂತೆ ಯಾವ ಬಾವುಟವನ್ನಾದರೂ ಕರ್ನಾಟಕದಲ್ಲಿ ಅವರು ಎತ್ತಿ ಹಿಡಿಯಲು ಸಮರ್ಥರಿದ್ದಾರೆ. ಏಕೆಂದರೆ ಅವರ ಕೈಕಟ್ಟುವವರಾರು ಕರ್ನಾಟಕದಲ್ಲಿ ?

ಕಾಂಗ್ರೆಸ್ಸಿನ ಮುಖ್ಯ ಕಾರ್ಯನಿರ್ವಾಹಕರು ಖಾದಿಯನ್ನೇ ಧರಿಸಬೇಕೆಂಬ ಕಟ್ಟು ಇದ್ದಂತೆ ಕನ್ನಡ ನಾಡಿನ ಕಾಂಗ್ರೆಸ್ ಪ್ರಮುಖರು ಕನ್ನಡ ನಾಡಿನಲ್ಲಿ ಕನ್ನಡದಿಂದಲೇ ಸಾರ್ವಜನಿಕ ಭಾಷಣಮಾಡಬೇಕೆಂಬ ಕಟ್ಟೇನಾದರೂ ಇದ್ದಿದ್ದರೆ ಕನ್ನಡ ನುಡಿ ಕುಲಗುರುಗಳು ಹೇಳುವಂತೆ ಕನ್ನಡ ತಾಯಿಯ ಕೂಗಿಗೆ ಇಂಥ ಕನ್ನಡ ನಾಡಿನ ಹಿರೇಮಣಿಗಳು ಕಿವಿಕೊಡುತ್ತಿದ್ದರಲ್ಲವೆ ? ಕರ್ನಾಟಕ ಏಕೀಕರಣಕ್ಕೆ ಹೋರಾಡುವ ಕನ್ನಡ ಪ್ರಾಂತಿಕ ಕಾಂಗ್ರೆಸ್ ಕಮಿಟಿಗೆ ಇಂಥ ಒಂದು ಕಟ್ಟನ್ನು ಮಾಡುವುದು ಕಷ್ಟವೆ ?

---

## ಕರ್ನಾಟಕ ಸಮಾಚಾರ.

—ಮೈಸೂರು ಪ್ರಾಂತದ ಪ್ರಮುಖ ಕಾಂಗ್ರೆಸ್ ಕಾರ್ಯನಿರ್ವಾಹಕರಾದ ಶ್ರೀ. ಚಂಗಲರಾಯ ರೆಡ್ಡಿಯವರಿಗೂ ಮೈಸೂರು ದಿವಾನರಿಗೂ ಅಲ್ಲಿಯ ರಾಜಕಾರಣದ ಸಂಬಂಧವಾಗಿ ಸಂಭಾಷಣೆ ಜರುಗಿತು. ಆ ಸಂಭಾಷಣೆ ಇನ್ನೂ ಗುಪ್ತವಾಗಿಯೇ ಇಡಲ್ಪಟ್ಟಿದೆ. ಫಲಿತಾಂಶವೇನೂ ಸಮಾಧಾನಕರವಿಲ್ಲವೆಂದು ಊಹೆ.

—ಸರ್. ಎಂ. ವಿಶ್ವೇಶ್ವರಯ್ಯನವರು ಮುಂಬೈ ಕರ್ನಾಟಕದಲ್ಲಿ ನೀರಾವರಿಯ ವ್ಯವಸಾಯಕ್ಕೆ ಯೋಗ್ಯವಾಗುವಂತೆ ಕಾಲುವೆಗಳನ್ನು ಏರ್ಪಡಿಸುವ ವಿಷಯದಲ್ಲಿಯೂ ಈ ಭಾಗದ ನೀರಿನ ಸಮೃದ್ಧಿಗಾಗಿ ಮಾಡಬೇಕಾದ ಏರ್ಪಾಟುಗಳ ಸಂಬಂಧವಾಗಿಯೂ ಪರ್ಯಾಲೋಚಿಸುತ್ತಿದ್ದಾರೆ.

—ಬೆಳಗಾವಿಯಲ್ಲಿ ಲಿಂಗಾಯತ ಅಥವಾ ವೀರಶೈವ ಧರ್ಮತತ್ವ ವಿದ್ಯಾಪೀಠವು ಸರದಾರ ವೀರಭದ್ರಪ್ಪನವರು ದೇಸಾಯಿಯವರು ಚಚಡಿ ಇವರ ಅಧ್ಯಕ್ಷತೆಯಲ್ಲಿ ಏರ್ಪಟ್ಟಿದೆ.

—ಮೈಸೂರಲ್ಲಿ ಆಯುರ್ವೇದ ಮತ್ತು ಯುನಾನಿ ಪಂಡಿತರ ಸಮ್ಮೇಲನವು ಈ ತಿಂಗಳ ಮೂರನೇ ವಾರದಲ್ಲಿ ಕೂಡುವುದಿದೆ.

— ಬೆಳಗಾವ ಜಿಲ್ಲಾ ಕಾಂಗ್ರೆಸ್ ಕಮಿಟಿಯು ಫೆಬ್ರವರಿ ೧೩ ನೆಯ ತಾರೀಖಿಗೆ ಕೂಡುವುದು.

—ಮಾನ್ವಿಯಲ್ಲಿ ಶ್ರೀ ಜಗನ್ನಾಥ ದಾಸರ ರಥೋತ್ಸವವೂ ಶ್ರೀ. ಪುರಂದರ ದಾಸರ ಪುಣ್ಯತಿಥಿಯೂ ಬಹು ಸಂಭ್ರಮದಿಂದ ಜರುಗಿದವು. ಬ್ರಾಹ್ಮಣ ಅನ್ನಸಂತರ್ಪಣೆಯೂ ಈ ಸಾರೆ ಹೆಚ್ಚಾಗಿಯೇ ನಡೆಯಿತು

—ಧಾರವಾಡ ಕಲೆಕ್ಟರರ ಸ್ಥಳಕ್ಕೆ ಶ್ರೀ. ಡಿ. ಎಸ್. ಬಖಲೆ ಐ. ಸಿ. ಎಸ್. ಇವರನ್ನು ನಿಯಮಿಸಲಾಗಿದೆ. ಎಪ್ರೆಲ್ ೧ ನೆಯ ತಾರೀಖಿನ ದಿನ ಇವರು ಈ ಕೆಲಸವನ್ನು ಕೈಕೊಳ್ಳುವರು.

—ಬೆಳಗಾವ ಜಿಲ್ಲಾ ಕಾಂಗ್ರೆಸ್ ಕಮಿಟಿಯವರು ಹರಿಪುರ ಕಾಂಗ್ರೆಸ್ಸಿಗೆ ಪ್ರತಿನಿಧಿಗಳನ್ನು ಆರಿಸುವಾಗ ಪಕ್ಷಪಾತಮಾಡಿದ್ದಾರೆಂದು ಆ ಜಿಲ್ಲೆಯ ೩೦೦ ಜನ ರುಜುಮಾಡಿ ಹರಿಪುರ ಕಾಂಗ್ರೆಸ್ ನಿಯೋಜಿತ ಅಧ್ಯಕ್ಷ ಶ್ರೀ. ಸುಭಾಷಚಂದ್ರ ಬೋಸರ ಕಡೆ ಕಳಿಸಿದ್ದಾರಂತೆ.

—ವಿಜಾಪುರ ಜಿಲ್ಲಾ ಸಿಂದಿಗಿ ತಾಲೂಕಿನಿಂದ ಬರಗಾಲದ ಕಷ್ಟ ತಾಳದೆ ೧೦ ಸಾವಿರ ಜನರು ಬೇರೆ ಕಡೆ ಹೋಗುವರಂತೆ.

---

ಅಖಿಲ ಭಾರತ ವಸ್ತು ಪ್ರದರ್ಶನದಲ್ಲಿ
ಸುವರ್ಣ ಪದಕಗಳನ್ನು ಮತ್ತು ಸರ್ಟೀಫಿಕೇಟುಗಳನ್ನು ಪಡೆದು ಹೆಸರಾದ
ಇಂಡಿಯಾ ಸರಕಾರದಲ್ಲಿ ರಜಿಸ್ಟರ್ ಆದ

# ಸಿದ್ಧೇಶ್ವರ ಟ್ರೇಝುರಿ ಕಂಪನಿ, ಹುಬ್ಬಳ್ಳಿ.










ನಮ್ಮ "ಸಿದ್ಧೇಶ್ವರ ಟ್ರೇಝುರಿ" ಗಳನ್ನು ಈ ವರೆಗೆ ಕೈಗಾರಿಕೆಯ ಕೆಲಸಗಳಲ್ಲಿ ಹೆಸರಾದ ಯುರೋಪ, ಅಮೇರಿಕಾ ವಗೈರಿ ಪರರಾಷ್ಟ್ರಗಳಲ್ಲಿ ತಯಾರಾಗುವ ಟ್ರೇಝುರಿಗಳ ಪದ್ಧತಿಯ ಮೇರೆಗೆ ಹೊಸ ಉಕ್ಕಿನ ಅಖಂಡ ಒಂದೇ ತಗಡಿನಲ್ಲಿ ೧೨ ಮೂಲೆಗಳನ್ನು ೩೫೦ ಟನ್ ಪ್ರೇಷರ ಕೊಡುವ ಮಶಿನ್ನಿನಿಂದ ಬಗ್ಗಿಸಿ, ರಿವ್ಹಿಟ್ಸ ಮೊದಲಾದವುಗಳಿಂದ ಜಾಯಿಂಟ ಮಾಡದೆ ಇಲೆಕ್ಟ್ರಿಸಿಟಿಯಿಂದ ಬೆಸೆದು ತಯಾರಿಸುತ್ತೇವೆ.

ಈ ಹೊಸ ಸುಧಾರಣೆಯಿಂದ ಮಾಡಿದ ತಿಜೋರಿಗಳಿಗೂ ಮತ್ತು ಯಾವದೇ ನಮ್ಮ ಸಾಮಾನಕ್ಕೂ ಯಾವ ತರದ ಭಯವಿಲ್ಲ. ಮತ್ತು ಅವು ಒಳ್ಳೇ ಮಜಬೂತವಾಗಿಯೂ ಸುಂದರವಾಗಿಯೂ ಆಗುತ್ತವೆ. ನಾವು ನಮ್ಮ ತಿಜೋರಿಗಳಿಗೂ ಮತ್ತು ನಮ್ಮಲ್ಲಿ ತಯಾರಾಗುವ ಉಕ್ಕಿನ ಕಪಾಟು, ಕ್ಯಾಶಬಾಕ್ಸ, ಸ್ಟ್ರಾಂಗರೂಮ ಡೋರ್ಸು ಗಳಿಗೂ ನಮ್ಮ ಕಾರಖಾನೆಯಲ್ಲಿಯೇ ತಯಾರಾಗುವ ಉತ್ತಮವಾದ ಮತ್ತು ಮಜಬೂತವಾದ ಕೀಲಿಗಳನ್ನು ಹಚ್ಚುತ್ತೇವೆ. ಮತ್ತು ಇದಲ್ಲದೆ ನಮ್ಮಲ್ಲಿ ಹೊಸ ಪದ್ಧತಿಯ ಮೇರೆಗೆ ತಯಾರಾಗುವ ಕಾಂಬಿನೇಶನ್ ಕೀ ಲೆಸ್ಸಾ ಲಾಕ್ಸು ( ನಂಬರ ಕೀಲಿ ) ಗಳನ್ನು ತಿಜೋರಿಗಳಿಗೆ ಹಚ್ಚಿಸಿದರೆ ಆ ತಿಜೋರಿಗಳನ್ನು ಯಾರೂ ತೆಗೆಯಲು ಸಾಧ್ಯವಿಲ್ಲ. ಯಾರಾದರೂ ತೆಗೆದರೆ ಅವರಿಗೆ

**೧೦೦೦ ರೂ. ಬಹುಮಾನ ಕೊಡುವೆವು.**

ನಮ್ಮ ಫಾಯರ ಪ್ರೂಫ್ ತಿಜೋರಿಗಳು ತುಂಬಾ ಖಾತ್ರಿಯಾದವುಗಳಿರುತ್ತವೆ.

**ಈ ಬಗ್ಗೆ ಅನೇಕ ವಸ್ತು ಪ್ರದರ್ಶನಗಳಲ್ಲಿ ಒಳಗೆ ನೋಟು ವಗೈರೆ ಸಾಮಾನು ಗಳನ್ನು ಇಟ್ಟು ಕೆಂಪಗೆ ಕಾಸಿದನಂತರ ಒಳಗಿಟ್ಟ ಸಾಮಾನುಗಳು ಸುಡದೆ ಇದ್ದದ್ದನ್ನು ಖಾತ್ರಿ ಮಾಡಿಕೊಟ್ಟಿದ್ದೇವೆ.**

ಧಾರಣೆಗಳ ಬಗ್ಗೆ ನಮ್ಮ ಸಚಿತ್ರ ಕ್ಯಾಟಲಾಗುಗಳಿಗೆ ಬರೆಯಿರಿ.
ಅ ಥ ವಾ
ಸಮಕ್ಷಮ ಬಂದಲ್ಲಿ ತಿಳಿಯುವದು.

ತಮ್ಮ ಆಲಾಭಿಮಾನಿ,
ಸಿದ್ಧೇಶ್ವರ ಮತ್ತು ಕಂಪನಿ
ಟ್ರೇಝುರಿ ಮೇಕರ್ಸ
ಹುಬ್ಬಳ್ಳಿ.

ಫ್ಯಾಕ್ಟರಿ ಮತ್ತು ಹೆಡ್ ಆಫೀಸ್-
ಹುಬ್ಬಳ್ಳಿ.

ಬ್ರ್ಯಾಂಚ ಆಫೀಸುಗಳು-
ಹೈದರಾಬಾದ (ಡೆಕ್ಕನ) ಮತ್ತು ಕೊಲ್ಹಾಪುರ (ಲಕ್ಷ್ಮೀಪುರಿ)

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ !
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ‖ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೧೪ ನೆಯ ಫೆಬ್ರವರಿ ೧೯೩೮. | ಸಂಚಿಕೆ ೨೫

ಜನಸೇವೆಯೇ ದೇವರಸೇವೆ.

## ಮೈಸೂರು ರಾಜಕೈದಿಗಳ ಬಿಡುಗಡೆ.

ಮೈಸೂರು ಸರಕಾರದವರು ಎಲ್ಲ ರಾಜಕೀಯ ಕೈದಿಗಳನ್ನು ಬಿಟ್ಟು ಬಿಡುವುದಾಗಿಯೂ
ಈಗಿರುವ ರಾಜಕೀಯ ವ್ಯಾಜ್ಯಗಳನ್ನು ತೆಗೆದು ಹಾಕುವುದಾಗಿಯೂ
ಪ್ರಕಟಿಸಿದ್ದಾರೆ.

## ಹಿಂದು-ಮುಸಲ್ಮಾನರ ದೊಂಬಿ.

ದಿಲ್ಲಿಯಿಂದ ೧೦೦ ಮೈಲು ದೂರದಲ್ಲಿರುವ ಹಿಸ್ಸಾರ ಎಂಬಲ್ಲಿ
ಗೋವಧೆಯನ್ನು ಮಾಡಿದ್ದರಿಂದ ಹಿಂದು-ಮುಸಲ್ಮಾನರಲ್ಲಿ
ದೊಂಬಿಯಾಗಿ ಇಬ್ಬರು ಹಿಂದುಗಳು, ಒಬ್ಬ ಮುಸಲ್ಮಾನನು, ಸತ್ತರು.

## ೫೦ ಲಕ್ಷ ರೂ. ಕಡಿಮೆ.

ಮುಂಬೈ ಸರಕಾರದ ಮುಂದಿನ ವರುಷದ ಆಯವ್ಯಯಗಳಲ್ಲಿ
೫೦ ಲಕ್ಷ ರೂ. ಕಡಿಮೆ ಬೀಳುವುದಂತೆ. ಇದಕ್ಕಾಗಿ
ಹೊಸ ತೆರಿಗೆ ಬೀಳುವುದಂತೆ. ೪೦೦ ಮದ್ಯದ
ಅಂಗಡಿಗಳು ಮುಚ್ಚಲ್ಪಡುವವು

## ಗಾಂಧೀಜಿ ಕುಟೀರದಲ್ಲಿ ಲಗ್ನ.

ಗಾಂಧೀಜಿಯವರು ಇರತಕ್ಕ ವಿಠ್ಠಲನಗರದ ಪರ್ಣಕುಟೀರದಲ್ಲಿ ಹಿಂದುಗಳಲ್ಲಿಯ
ಭಿನ್ನ ಜಾತಿಯ ಕುಮಾರಿ ಆನಂದಿ ಶ್ರೀ. ಪುರಾತನ ಎಂಬ ಈ ವಧೂವರರ ವಿವಾಹವಾಯಿತು.

ದೇಹವೇ ದೇವಾಲಯ



# ಶರಣ ಸಂದೇಶ
THE SHARANA SANDESHA.



## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೧೪ ನೆಯ ಫೆಬ್ರವರಿ ೧೯೩೮. | ಸಂಚಿಕೆ ೨೫

## ಮಹತ್ವದ ಸುದ್ದಿಗಳು.

— ಮಹಾತ್ಮಾ ಗಾಂಧಿಯವರು ತಾ ೧೦ ನೆಯ ದಿವಸ ಪ್ರಾತಃಕಾಲ ೯ ಗಂಟೆಗೆ ಹರಿಪುರದಲ್ಲಿ ಖಾದಿ ಮತ್ತು ಗ್ರಾಮೋದ್ಯೋಗಗಳ ಪ್ರದರ್ಶನವನ್ನು ತೆರೆದರು.

— ಫೆಡರೇಶನ್ನಿನ ವಿರೋಧಕ್ಕೋಸ್ಕರ ಅಗತ್ಯ ಕಂಡರೆ ಶಾಸನಭಂಗದ ಚಟುವಟಿಕೆಯನ್ನಾದರೂ ಪ್ರಾರಂಭಿಸಬೇಕಾಗಬಹುದೆಂದು ಪಂಡಿತ ಜವಾಹರಲಾಲರು ಹಮೀರಪುರ ಜಿಲ್ಲಾ ರಾಜಕೀಯ ಪರಿಷತ್ತಿನ ಅಧ್ಯಕ್ಷೀಯ ಭಾಷಣದಲ್ಲಿ ಹೇಳಿದರು.

— ಫೆಡರಲ್ ಸರಕಾರದ ಅಧಿಕಾರದಲ್ಲಿ ಏನಾದರೂ ವ್ಯತ್ಯಾಸಮಾಡುವ ಯೋಚನೆಯನ್ನು ಸರಕಾರವು ಮಾಡಿದೆಯೋ ? ಎಂದು ಪಾರ್ಲಮೆಂಟಿನಲ್ಲಿ ಕೇಳಿದ ಪ್ರಶ್ನೆಗೆ ಮಿ. ಚೆಂಬರಲೆನ್‌ರವರು ಅಂಥ ಯೋಚನೆಯನ್ನೇನೂ ಮಾಡಿಲ್ಲವಾಗಿ ಹೇಳಿದರು.

— ಜಾರ್ಜ ಚಕ್ರವರ್ತಿಗಳು ಪ್ರಪಂಚದಲ್ಲಿ ಸುಸ್ಥಿತಿಯುಂಟಾದನಂತರ ಹಿಂದುಸ್ಥಾನಕ್ಕೆ ಬರುವರಂತೆ. ಮುಂದಣ ವರುಷವೇನೂ ಬರುವುದಿಲ್ಲ.

— ಪಂಜಾಬ ಪ್ರಾಂತದ ಜಿಲ್ಲಾ ಅಮೃತಸರದಲ್ಲಿ ಸಾರ್ವಜನಿಕ ಸಭೆಕೂಡಿದಾಗ ಹೊಡೆದಾಟವಾದುದರಿಂದ ೧೨ ಜನ ಕಾಂಗ್ರೆಸ್ಸಿನವರನ್ನು ಪೋಲಿಸರು ಹಿಡಿದಿದ್ದಾರೆ.

— ಕೋಚೀನ ಸಂಸ್ಥಾನದಲ್ಲಿ ಆದಿ ಹಿಂದುಗಳಿಗೆ ದೇವಾಲಯ ಪ್ರವೇಶಕ್ಕೆ ಅವಕಾಶ ದೊರೆಯಬೇಕೆಂದು ಅಲ್ಲಿ ಚುಟವಟಿಕೆ ನಡೆದಿದೆ.

—ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಸಂಸ್ಥಾನಗಳಲ್ಲಿ ಕಾಂಗ್ರೆಸ್ ಚಟುವಟಿಕೆ ನಡೆಯುವದರ ಸಂಬಂಧವಾಗಿ ಮಾಡಿದ ಠೀರ್ಮಾನವನ್ನು ಸಾಂಗಲಿಯಲ್ಲಿ ಅಲ್ಲಿಯ ನಾಗರಿಕರು ನಿಷೇಧಿಸಿದರು.

—ಕಳೆದ ೩೦ ನೆಯ ತಾರೀಖಿನ ದಿವಸ ಕುಮಾರಿ ವಿಮಲ ತಿಡಕೆ ಎಂಬ ೨೨ ವರುಷ ಪ್ರಾಯದ ಕ್ರಿಸ್ತಮತದ ಹೆಣ್ಣುಮಗಳು ಪುಣೆಯಲ್ಲಿ ಹಿಂದುಧರ್ಮದ ದೀಕ್ಷೆಯನ್ನು ಹೊಂದಿದಳು.

—ಜಗತ್ತಿನಲ್ಲಿ ಯುದ್ಧದ ಬೆಂಕಿ ಹತ್ತುವ ಸಂಭವವಿರುವ ಕಾರಣ ಮದ್ದು ಗುಂಡುಗಳನ್ನು ಹೆಚ್ಚಾಗಿ ಸಂಗ್ರಹಿಸಬೇಕೆಂದು ಜಪಾನ ಸರಕಾರವು ಯೋಚಿಸಿದೆ.

—ಗುಜರಾಣವಾಲಾ ರಾಜಕೀಯ ಪರಿಷತ್ತಿನಲ್ಲಿ ೧೧ ಜನ ಕಾಂಗ್ರೆಸ್ ಸದಸ್ಯರನ್ನು ಪೋಲಿಸರು ಸೆರೆ ಹಿಡಿದಿದ್ದಾರೆ.

—ಸಿಂಧ ಪ್ರಾಂತದ ಮೊಹೆಂಜೋದಾರೊ ಸ್ಥಳದಲ್ಲಿ ದೊರೆತ ವಸ್ತುಗಳಿಂದ ಹಿಂದು ಸಂಸ್ಕೃತಿಯು ೧೪ ಸಾವಿರ ವರುಷಗಳಿಂದ ಬಂದುದಾಗಿದೆಯೆಂದು ಶ್ರೀ. ಸ್ವಾಮಿ ನಿತ್ಯಾನಂದರವರು ಅಭಿಪ್ರಾಯಪಟ್ಟಿದ್ದಾರೆ.

—ಸ್ಪೇನದ ಬಾರ್ಶಿಲೋನ್ ಎಂಬ ಪಟ್ಟಣದ ಮೇಲೆ ದೊಂಬೆಗಾರರು ೨೫ ಸಾರೆ ಒಟ್ಟಿಗೆ ೫೦೦ ಬಾಂಬುಗಳನ್ನು ಹಾಕಿ ೮೦೪ ಮನೆಗಳನ್ನೂ ೩೪೬೭ ಜನರನ್ನೂ ನಾಶಮಾಡಿದರಂತೆ!

—ಒಬ್ಬ ಅಲ್ಪವಯಸ್ಸಿನ ಮರಾಠಾ ಹುಡುಗಿಯನ್ನು ಓಡಿಸಿಕೊಂಡು ಹೋದ ಅಪರಾಧಕ್ಕಾಗಿ ಬದ್ರುದ್ದೀನ ಜಾನ ಮಹಮ್ಮದ ಎಂಬುವವನಿಗೆ ಕಲ್ಯಾಣದ ಮ್ಯಾಜಿಸ್ಟ್ರೇಟರು ೫ ತಿಂಗಳ ಶಿಕ್ಷೆ ಮತ್ತು ೧೫ ರೂ. ದಂಡವನ್ನು ವಿಧಿಸಿದರು.

—ನಾಗಪುರ ವಿಶ್ವವಿದ್ಯಾಲಯದ ಪದವಿದಾನ ಸಮಾರಂಭದ ಕಾಲಕ್ಕೆ ಮಹಾತ್ಮಾ ಗಾಂಧಿಯವರು ಪದವೀಧರರಿಗೆ ಉಪದೇಶ ಮಾಡುವವರಿದ್ದಾರೆ.

—ಚೀನ ರಾಷ್ಟ್ರಕ್ಕೆ ರಶಿಯಾ ದೇಶವು ಶಸ್ತ್ರಾಸ್ತ್ರಗಳನ್ನು ಒದಗಿಸಿಕೊಡುತ್ತದೆಂದೂ ಅದಕ್ಕಾಗಿ ಜಪಾನವು ತಾನು ಇನ್ನೂ ಹೆಚ್ಚು ಬಲಶಾಲಿಯಾಗಬೇಕೆಂದು ನಿರ್ಧರಿಸಿದೆಯೆಂದೂ ಗೊತ್ತಾಗಿದೆ.

# ಮೊಹೆಂಜೊದಾರೋದ ಜನಾಂಗದವರ ರೀತಿ ನಡತೆಗಳು.

ರೆವ್ಹರೆಂಡ ಎಚ್. ಹೆರಾಸರವರ ಭಾಷಣ.

(ಅನುವಾದಕರು— ಅ. ಪ. ಕರಮರಕರ ಎಂ. ಎ. ಎಲೆಲ್. ಬಿ. ವಕೀಲ ಧಾರವಾಡ)

ರೆವ್ಹರೆಂಡ ಎಚ್. ಹೆರಾಸರು ತಾ. ೨೬-೧-೧೯೩೮ ನೆಯ ದಿವಸ ಮುಂಬೈ ಸೆಂಟರೋ ಝಿಯರ್ಸ ಕಾಲೇಜದಲ್ಲಿ ಡಾ. ಆಯ್. ಜೆ. ಎಸ್. ತಾರಾಪೂರವಾಲಾ, ಪ್ರಿನ್ಸಿಪಾಲ ಕಾಮಾ ಅಥಾರ್ನನ ಇನ್ಸಿಟ್ಯೂಟ ಅಂದೇರೀ ಇವರ ಅಧ್ಯಕ್ಷತೆಯಲ್ಲಿ ಮಾಡಿದ ಭಾಷಣದ ಸಾರಾಂಶ—

ಮೊಹೆಂಜೊದಾರೊದಲ್ಲಿಯ ಜನಾಂಗದವರ ಧರ್ಮವಿಷಯಕ ವಿಚಾರಗಳೆಂದರೆ ಏಕಸಮಯಾವಚ್ಛೇದವಾಗಿ ಬಾಳುತ್ತಿರುವ ಅನ್. ಅನಿಲ ಮತ್ತು ಅಮಾ ಎಂಬುವ ದೇವತಾತ್ರಯವೆ ಸರಿ ಎಂದು ಅಲ್ಲಿ ಉಪಲಬ್ಧವಾದ ಒಂದು ಲೇಖದಲ್ಲಿ ಕಾಣಿಸಿದೆ. ಈ ಮೂರೂ ದೇವತೆಗಳ ಹೆಸರುಗಳು ಇತರ ಲೇಖಗಳಲ್ಲಿಯೂ ಮೇಲಿಂದ ಮೇಲೆ ಉಲ್ಲೇಖಿಸಲ್ಪಟ್ಟಿರುವುದು.

ಅನ್. ಇವನು ಅತಿ ಶ್ರೇಷ್ಠನಾದ ಒಡೆಯನು. ರಥಗಳಲ್ಲಿ ಹೊಲಗಳಲ್ಲಿ ಅಥವಾ ಗುಡಿಗಳಲ್ಲಿರುವ ದೇವತೆಗಳಿಗಿಂತಲೂ ಆತನು ಶ್ರೇಷ್ಠನಿರುವನು. ಅಂದರೆ ಅನ್. ಈ ದೇವತೆಯು ಯುದ್ಧ ಅಥವಾ ಶಾಂತತೆ ಅರ್ಥಾತ್ ಉತ್ಪತ್ತಿ ಮತ್ತು ಲಯ ಇವೆರಡು ಕಾರ್ಯಗಳಿಗೆ ಕಾರಣೀಭೂತನಾಗಿರುವನು. ಈ ದೇವನಿಗೆ ಮೂರು ಕಣ್ಣುಗಳಿದ್ದು ಅವು ಮೀನದಂತೆ ಇರುವವು. ಅವನಿಗೆ 'ವಿದುಕಣ್' ಎಂದರೆ ಕಣ್ಣು 'ತೆರೆದವನೆಂದು 'ಸಂಬೋಧಿಸುತ್ತಿದ್ದರು. ಸ್ವಲ್ಪದರಲ್ಲಿಯೇ ಹೇಳುವದೆಂದರೆ ಶಿವನಿಗೆ ಸಂಬೋಧಿಸುವ ಎಲ್ಲ ಗುಣಧರ್ಮಗಳು ಆತನಲ್ಲಿ ಇದ್ದದ್ದು ಬಣ್ಣಿಸಿದ್ದಿದ್ದು ಕಂಡುಬರುತ್ತದೆ. ಈ ಹೊರತು ಕಾಲಿದಾಸನ ನಾಟಕದಲ್ಲಿ ಮತ್ತು ಪುರಾಣಗಳಲ್ಲಿ [illegible]ಗಳಿಕೊಂಡಂತಹ ಅಷ್ಟಮೂರ್ತಿ ಶಿವನ ಅಷ್ಟಸ್ವರೂಪಗಳಾದರೂ, ಈ ಲೇಖಗಳಲ್ಲಿ ವರ್ಣಿಸಲ್ಪಟ್ಟವೆ. ಒಂದು ಕಡೆಗೆ ಅನ್‌ನು 'ಸೂರ್ಯನೆ' ಇರುವನೆಂದು ಭಾವಿಸಿದ್ದು ಕಂಡುಬರುತ್ತದೆ. ಆದರೆ ಅನ್‌ನ ಈ ಅಷ್ಟ ಪ್ರಕೃತಿಗಳೆಂದರೆ ಆವಾಗಿನ ಜನರ ಕಲ್ಪನೆಯ ಪ್ರಕಾರ ಸೂರ್ಯನು ವರುಷದಲ್ಲಿ ಅಷ್ಟರಾಶಿ ಚಕ್ರದಲ್ಲಿ ಮಾಡುವ ಪರಿಭ್ರಮಣವೇ ಸರಿ (ಮೊಹೆಂಜೊದಾರೊದ ಕಾಲದಲ್ಲಿ ಮೇಷ-ವೃಷಭಾದಿಗಳ ೧೨ ರಾಶಿಗಳ ಚಕ್ರವೆಂದು ಗಣನೆ ಮಾಡುತ್ತಿರಲಿಲ್ಲ. ಈ ರಾಶಿ ಚಕ್ರದಲ್ಲಿ ಎಂಟು ರಾಶಿಗಳ ಸಮಾವೇಶವೇ ಆಗುತ್ತಿತ್ತೆಂದು ಹೇಳಬಹುದು.) ಅನ್‌ನ ಈ ಬೇರೆ ಬೇರೆ ಸ್ವರೂಪದ ವರ್ಣನೆ ಅಲ್ಲಿ ಇಲ್ಲಿ ಮಾಡಿದ್ದುದು ಕಂಡುಬರುತ್ತದೆ. ನಂದೂರದ ದೇವತೆ ಅಂದರೆ ಮೇಷ ಮತ್ತು ಮೀನ ಈ ಇಮ್ಮಡಿ ಸ್ವರೂಪಯುಕ್ತವಾದ ದೇವತೆಯಿದ್ದಿತು.

ಅನಿಲ್‌ನು ಅನ್‌ನ ಮಗನೆಂದು ಭಾವಿಸುತ್ತಿದ್ದರು. ಅನ್ ದೇವತೆಗೆ ನಾವು ಶಿವನೆಂದು ಸಂಬೋಧಿಸಿದರೆ ಅನಿಲ್‌ನಿಗೆ ಶಿವನ ಜ್ಯೇಷ್ಠ ಮಗನಾದ ಗಣಪತಿ ಎಂದು ಸಂಬೋಧಿಸಬಹುದು. ಅಂದರೆ ಗಣಪತಿಯು ಅನ್‌ನ ಮಗನು. ಅಥವಾ '[illegible]ನೆಯ' ಮಗನಾದರೂ ಆಗಿದ್ದನೆಂದು ನಾವು ಹೇಳಬಹುದು. ಅರ್ಥಾತ್ ತದನಂತರದ ಕಾಲದಲ್ಲಿ ಗಣಪತಿಗೆ ಆನೆಯ ಸ್ವರೂಪವು ಕೊಡಲ್ಪಟ್ಟಿತೆಂಬುವ ಸಂಗತಿಯು ಹೆಚ್ಚು ಸುಸಂಗತ ಮತ್ತು ಸ್ಪಷ್ಟವಾಗುವದು. ಮತ್ತು ಈ ಸ್ಪಷ್ಟೀಕರಣದಿಂದ ಗಣಪತಿಯು ಮೊಟ್ಟಮೊದಲು ಯಕ್ಷನಿದ್ದನೆಂಬುವ ಈಗಿನ ಪುರಾಣ ಶಾಸ್ತ್ರಜ್ಞರ ಕಲ್ಪನೆಯು ಹೇಗೆ ನಿರರ್ಥಕರವಿರುವುದೆಂದು ತಿಳಿಯುವದು.

ಅಮಾ ಈ ದೇವತೆ ಶಾಕ್ತರೊಳಗೆ ಪ್ರಸಿದ್ಧವಿರುವ ಮೂಲ ಪ್ರಕೃತಿ ಜೀವಿಯಂತೆ ಇರುವಳು. ಅರ್ಧನಾರೀ ನಟೇಶ್ವರನ ಕಲ್ಪನೆಯಂತೆ ಅನ್ ಮತ್ತು ಅಮಾ ಇವೆರಡು ದೇವತೆಗಳ ಏಕೀಭೂತ ಸ್ವರೂಪದ ಆಕೃತಿಯನ್ನಾದರಸಿ ಲಿಪಿಗಳಲ್ಲಿ ಕೊರೆದದ್ದನ್ನು ನೋಡಿ ಯಾರಾದರೂ ಆಶ್ಚರ್ಯಪಡಬಹುದು.

ಮೊಹೆಂಜೊದಾರೊದಲ್ಲಿ ಎರಡು ಬೇರೆ ಬೇರೆ ಉಪಾಸನೆಗಳು ಅಸ್ತಿತ್ವದಲ್ಲಿ ಇದ್ದವು. (೧) ವೃಕ್ಷ ಪೂಜೆ. (೨) ನರಮೇಧ. ವೃಕ್ಷಪೂಜೆಯಲ್ಲಿ ವಿಶೇಷತಃ ಅಶ್ವತ್ಥ ಪೂಜೆಯು ಹೆಚ್ಚು ಮಾನ್ಯತೆ ಹೊಂದಿತ್ತೆಂದು ತೋರುತ್ತದೆ. ಅನ್‌ನ ಫಲೋತ್ಪಾದಕ ಶಕ್ತಿ ನಿದರ್ಶಕ ಚಿನ್ಹವೆಂದು ಮರಗಳ ಉಪಾಸನೆ ಅಸ್ತಿತ್ವದಲ್ಲಿ ಬಂದಿರಬಹುದು. ಈ ಮೊದಲು ಆವಾಗಿನ ಕಾಲವೆಲ್ಲ ನರಮೇಧವು ಪ್ರಚಾರದಲ್ಲಿದ್ದಿತು. ಏಳರ ಸಾಮಾನ್ಯ ಭಾಜ್ಯ ಸಂಖ್ಯೆಯ ಜನರಲ್ಲಿ ಏಳು ಏಳು ಜನರ ಗುಂಪಿಗೆ ಒಮ್ಮೆಲೆ ಆಹುತಿಯನ್ನು ಕೊಡುವ ಪರಂಪರೆ ಇದ್ದಿತು. ಈಗ ಆಹುತಿಯನ್ನು ಗಿಡಗಳ ಕೆಳಗೆ ಕೊಡುತ್ತಿರುವದರ ಸಲುವಾಗಿ ಕದಾಚಿತ್ ಈ ಗಿಡಗಳಿಗೆ ಪೂಜನೀಯ ಸ್ವರೂಪವು ಬಂದಿರಬಹುದು ಒಮ್ಮೆ ಏಳು ದಿವ್ಯ ಪುರುಷರು ಎರಡು ಮರಗಳ ಕೆಳಗೆ ಮೃತ್ಯು ದೇವತೆಯನ್ನು ಕಂಡರೆಂದು ಒಂದು ಲೇಖದಲ್ಲಿ ಉಲ್ಲೇಖ ಬಂದಿರುತ್ತದೆ.

ಮೊಹೆಂಜೆದಾರೊದ ಕಾಲದಲ್ಲಿ ಯೋಗದ ಕಲ್ಪನೆಯಾದರೂ ಪ್ರಚಾರದಲ್ಲಿದ್ದಿತು. ಈ ಯೋಗಿಗಳು ವಿದ್ವಾಂಸರಿದ್ದು ಗುಹೆಗಳಲ್ಲಿ ವಾಸಮಾಡುತ್ತಿದ್ದರು.

ಮರಣದನಂತರ ಜೀವದ ಪರಿಭ್ರಮಣ ನಡೆಯುತ್ತದೆಂಬುವ ಕಲ್ಪನೆ ಆ ಕಾಲದಲ್ಲಿ ಅಸ್ತಿತ್ವದಲ್ಲಿದ್ದಿತು. ಮರಣವೆಂದರೆ ಅನ್, ಸೂರ್ಯ ಅಥವಾ ಆಕಾಶದ ಸನ್ನಿಧಿಯಲ್ಲಿ ಹೋಗುವದೆಂಬ ಕಲ್ಪನೆ ವಿಜೃಂಭಿತಮಾಡಿದ್ದಾರೆ. ಅಂದರೆ ಅವಿನಾಶಿಯಾದ ಈ ದೇಹವು ಸುಟ್ಟು ಅಥವಾ ಹುಗಿದು ಬಿಟ್ಟಿಟ್ಟರೂ ಕೂಡ ಜೀವಯಾತ್ರೆ ಬೇರೆ ಸ್ವರೂಪದ್ದಿರುವದೆಂಬ ಕಲ್ಪನೆ ಇದ್ದಿತೆಂದು ತೋರುತ್ತದೆ.

ದೇವರೇ ನಮ್ಮ ಎಲ್ಲ ಕರ್ಮಗಳಿಗೆ ಸಾಕ್ಷಿಯಾಗಿರುವನು. ಮರಣವಾದನಂತರ ನಾವು ಸುಖಿ ಅಥವಾ ದುಃಖಿ ಎಂಬ ಸಂಗತಿಯನ್ನು ನಿರ್ಣಯಿಸುವನು. ಮೃತ್ಯುವಿನ ದಿವಸವೆಂದರೆ ದೇವರ ದಿವಸವೆಂದು ಸಂಬೋಧಿಸುತ್ತಿದ್ದರು. ಈ ಹೊರತು ಇನ್ನೊಂದು ಕಲ್ಪನೆ ಅಸ್ತಿತ್ವದಲ್ಲಿದ್ದಿತು. ಮೀನಗಣ್ಣಿನವರೇ ಆಕಾಶಕ್ಕೆ ಹೋದವೇಲೆ ಸುಖಿಯಾಗಿರುವರೆಂದು ಆವಾಗಿನ ಜನರ ಭಾವನೆ. ಹೀಗೆ ಹೇಳುವುದರಲ್ಲಿ ಎಷ್ಟು ಗೂಢಾರ್ಥವಿದೆ. ನೋಡಿ! ದೇವರು ಯಾವ ಸರ್ವವ್ಯಾಪಕ ಕಣ್ಣಿನಿಂದ ನೋಡುವನೋ ಆ ದೇವರ ಕಣ್ಣಿನಿಂದ ಅಂದರೆ ಅರ್ಥಾತ್ ಅಷ್ಟು ಸರ್ವವ್ಯಾಪಕತೆಯಿಂದ ಬೇಡಿದರೆ ನಾವಾದರೂ ಸುಖಿಯಾಗಲಾರೆವೆ! ಗೌತಮ ಬುದ್ಧನು ಹೇಳಿದ್ದೇನೆಂದರೆ 'ಈ ಜಗತ್ತಿನಲ್ಲಿ ಎಲ್ಲ ದುಃಖದ ಕಾರಣವೆಂದರೆ ಅಜ್ಞಾನವಿರುವದು.' ಆದರೆ ದೇವರ ಕಣ್ಣಿನಿಂದ ನಾವು ನೋಡಿದರೆ ನಾವು ಯಾವ ಪಾಪಕರ್ಮಗಳನ್ನಾಚರಿಸಲಿಕ್ಕಿಲ್ಲ.

ಮೊಹೆಂಜೊದಾರೊದಲ್ಲಿಯ ಹಿಂದು ಲೇಖದಲ್ಲಿ ಧಾರ್ಮಿಕ ವಿಷಯವನ್ನು ಕುರಿತು ಒಂದು ಭಯಂಕರ ಹಾಗೂ ಹೃದಯದ್ರಾವಕ ಸಂಗತಿಯ ವರ್ಣನೆಮಾಡಲಾಗಿದೆ. ಮೊಹೆಂಜೊದಾರೊದಲ್ಲಿ ಆಳುವ ಒಬ್ಬ ಅರಸನು ಕಾವಲ ಜನಾಂಗದವರು ಮಾಡಬೇಕೆಂದು ಹುಕುಮುಮಾಡಿದನು. ಆದರೆ ಅಲ್ಲಿಯ ವಿದ್ವಾಂಸರು ಅವನನ್ನು ಪದಚ್ಯುತಮಾಡಿ ಕೈದುಮಾಡಿದರು. ಮುಂದೆ ಅವನ ಕೊಲೆ

ಯನ್ನಾದರೂ ಮಾಡಿರಬಹುದೆಂದು ತೋರುತ್ತದೆ. ಆದರೆ ಕೆಲ ಕಾಲದನಂತರ ಅವನ ವಿಷಯವಾಗಿ ಒಂದು ಬೇರೆ ಭಾವನೆಯು ನ್ನಾದರೂ ವ್ಯಕ್ತಪಡಿಸಿದರೆಂದು ತೋರುತ್ತದೆ. ಏಕೆಂದರೆ ಬಹು ತೀಕವಾಗಿ ಅವನ ಗೋರಿಯ ಮೇಲೆ ಮುದ್ರಿಸಿದಂಥ ಒಂದು ಲೇಖದಲ್ಲಿ ಅವನಿಗೆ ದೇವನೆಂದು ಸಂಬೋಧಿಸಿರುವರು.

ಸಂಯುಕ್ತ ಕರ್ನಾಟಕ.

---

## ಶ್ರೀ ಜಗದ್ಗುರುಗಳ ಮಹತ್ವದ ಭಾಷಣ.

### ಹಿಂದುಸ್ಥಾನವು ಧರ್ಮಶಾಲೆಯಲ್ಲ.

ಶ್ರೀ ಜಗದ್ಗುರು ಶಂಕರಾಚಾರ್ಯ ಡಾ. ಕುರ್ತಕೋಟಿಯವರು ಕಳೆದ ೩೦ ನೆಯ ತಾರೀಖಿನ ದಿವಸ ಸಾಂಗಲಿಯ ಪ್ರಚಂಡ ಸಭೆಯಲ್ಲಿ ಮಹತ್ವದ ಭಾಷಣವನ್ನು ಮಾಡಿದರು. ಅದರ ಮುಖ್ಯಾಂಶವನ್ನು ಇಲ್ಲಿ ಕೊಡಲಾಗಿದೆ—



ಶ್ರೀ. ಶಂಕರಾಚಾರ್ಯ ಡಾ. ಕುರ್ತಕೋಟಿಯವರು

"ತರುಣರಿಗೆ ನಾಲ್ಕು ಉಪದೇಶಪರವಾದ ಮಾತುಗಳನ್ನು ಹೇಳಬೇಕಾಗಿ ನನಗೆ ತಿಳಿಸಿದ್ದಾರೆ. ನಾನು ಅವರಿಗೆ ಹೆಚ್ಚಿಗೆ ಹೇಳುವುದೇನಿದೆ? ಈಗಿನವರಾದ ನಾವು ಯಾವುದನ್ನು ಕಳೆದುಕೊಂಡಿದ್ದೇವೆಯೋ ಅದನ್ನು ನೀವು ಗಳಿಸಿರಿ. ನಾವು ಏನನ್ನಾದರೂ ಗಳಿಸಿದ್ದೇವೆಂದು ನಿಮಗೆ ತೋರಿದರೆ ಅದನ್ನು ಸಂರಕ್ಷಿಸಿರಿ. ಇಷ್ಟೇ ನಾನು ಹೇಳುವೆನು. ಧರ್ಮರಾಜನಿಗೆ ವ್ಯಾಸಋಷಿಯು ವನವಾಸದಲ್ಲಿ ಹೇಳಿದುದೇನು? "ಪ್ರಕರ್ಷ ತಂತ್ರಾಹಿ ಜಯಶ್ರೀ" ಎಂದೇ ಅಲ್ಲವೆ? ನೀವು ಕೂಡಾ ಅದೇ ಉಪದೇಶದಂತೆ ಮುಂದಣ ವಿಜಯಕ್ಕಾಗಿ ಸಾಧನಗಳನ್ನು ಸಂಗ್ರಹಿಸಿರಿ.

ಈಗ ಜಗತ್ತಿನ ಎಲ್ಲಾ ಭಾಗಗಳಲ್ಲಿಯೂ ವಿಷಾದದ ಛಾಯೆಯು ವ್ಯಾಪಿಸಿದೆ. ಇಂಥ ಸ್ಥಿತಿಯಲ್ಲಿ ಹಿಂದುಗಳಾದ ನಮ್ಮ ಹತ್ತಿರ ಇರತಕ್ಕದ್ದೇನು? ಹಿಂದು ಸಂಸ್ಕೃತಿಯೇ ನಮಗೆ ಒಂದು ಅಸಾಧಾರಣವಾದ ಸಂಪತ್ತು. ನಾವು ಈ ವಿಷಯದಲ್ಲಿ ಪಾಶ್ಚಾತ್ಯರಿಗಿಂತ ಅಣುಮಾತ್ರದಲ್ಲಿಯೂ ಕಡಿಮೆಯಾಗಿಲ್ಲ. ನಮ್ಮ ಸಂಸ್ಕೃತಿಯು ಸುಖದಿಂದ ಹೇಗೆ ಕಾಲ ಕಳೆಯಬೇಕೆಂಬುದನ್ನು ನಮಗೆ ಕಲಿಸಿದೆ. ಇಷ್ಟೇ ಅಲ್ಲ. ಸುಖದಿಂದ ಮರಣಹೊಂದುವುದನ್ನೂ ಕಲಿಸಿದೆ. ನಮ್ಮಂತಹ ದುರವಸ್ಥೆಯು ಪಾಶ್ಚಾತ್ಯರಿಗೆ ಬಂದಿದ್ದರೆ ಅವರು ಮನುಷ್ಯರನ್ನೇ ತಿಂದುಬಿಡುತ್ತಿದ್ದರು.

ಅನ್ಯ ರಾಷ್ಟ್ರದವರು ಯಾವ ಮಾರ್ಗದಿಂದ ಉನ್ನತಿಯನ್ನು ಹೊಂದುತ್ತಿದ್ದಾರೆಯೋ ಅದೇ ಮಾರ್ಗದಿಂದಲೇ ಹಿಂದುಸ್ಥಾನದವರೂ ಅಭಿವೃದ್ಧಿಯನ್ನು ಹೊಂದಬೇಕಾದುದಿಲ್ಲ. ರಶಿಯಾದಲ್ಲಿ ರೂಢವಾಗಿರುವ ವಿಚಾರವನ್ನೇ ತೆಗೆದುಕೊಳ್ಳಿರಿ. ಇದೇನೂ ಹೊಸದಲ್ಲ. ಭಗವದ್ಗೀತೆಯಲ್ಲಿ ಈ ತತ್ವವು ಮುಂಚೆಯೇ ಹೇಳಲ್ಪಟ್ಟಿದೆ. "ಸಮತ್ವಂ ಯೋಗ ಉಚ್ಯತೆ" ಎಂಬ ಸಿದ್ಧಾಂತವು ಸಮಭಾವದಿಂದ ದೇವರ ಸೇವೆಯು ಸಂಭವಿಸುತ್ತದೆಂದೇ ಸೂಚಿಸುತ್ತದೆ. ನೆರೆಯವರನ್ನು ನಿನ್ನಂತೆಯೇ ಕಾಣೆಂದು ಬೈಬಲ್ ಗ್ರಂಥ ಹೇಳುತ್ತದೆ. ಆದರೆ ಹಾಗೇಕೆ ನೋಡಬೇಕೆಂಬ ಕಾರಣವನ್ನೇನೂ ಅದು ತಿಳಿಸಿಲ್ಲ. ಅದು ತಿಳಿಯಬೇಕಾದರೆ ಉಪನಿಷತ್ತುಗಳ ಕಡೆಗೇನೇ ಹೋಗಬೇಕಾಗುವುದು.

### ಹಿಂದುಸ್ಥಾನದಲ್ಲಿರುವುದೇನು?

ಜಗತ್ತಿಗೇನೇ ಮಾರ್ಗವನ್ನು ತೋರಿಸುವ ರೀತಿನೀತಿಗಳು ಹಿಂದುಸ್ಥಾನದಲ್ಲಿವೆ. ಆದಕಾರಣ ರಶಿಯಾ, ಜಪಾನ, ಇಂಗ್ಲೆಂಡಗಳ ಅನುಕರಣಮಾಡಬೇಕಾದುದೇನೂ ಇಲ್ಲವೆಂಬುದನ್ನು ತರುಣರು ಲಕ್ಷ್ಯದಲ್ಲಿಡಬೇಕು.

ತಂದೆಯನ್ನು ಗೌರವಿಸಬೇಡ, ಗಂಡನನ್ನು ಗೌರವಿಸಬೇಡ, ದೇವರನ್ನು ನಂಬಬೇಡ, ಎಂಬ ಸಂಗತಿಗಳನ್ನು ಇಂಗ್ಲಿಷ್ ಶಿಕ್ಷಣವು ಕಲಿಸಿತು. ಇಷ್ಟೇ ಅಲ್ಲ; ಕೊನೆಗೆ ರಾಜನನ್ನೂ ಮನ್ನಿಸಬೇಡವೆಂದೂ ಹೇಳಿಕೊಟ್ಟಿತು. ಆದರೆ ಹಿಂದುಸ್ಥಾನವು ಅನ್ಯರನ್ನು ನಾಶಮಾಡಬೇಕೆಂದು ಹೇಳುವುದಿಲ್ಲ. ಜೀವನಾರ್ಥ ಕಲಹವೆಂಬುದು ( Struggle for Existence ) ಹಿಂದುಸ್ಥಾನಕ್ಕೆ ಇಂಗ್ಲಿಷರಿಂದಲೇ ಬಂದುದು. ತಾನು ನಾಶವಾಗಿ ಅನ್ಯರನ್ನು ಸಂರಕ್ಷಿಸುವುದು ಹಿಂದುಸ್ಥಾನದ ಸಂಸ್ಕೃತಿಯ ವೈಶಿಷ್ಟ್ಯವು.

ಅನೇಕ ದಿನಗಳಿಂದ ಹೊಟ್ಟೆಗಿಲ್ಲದ ಒಂದು ಕುಟುಂಬಕ್ಕೆ ಆಹಾರ ದೊರೆತಕಾಲದಲ್ಲಿಯೇ ಅತಿಥಿ ಬರಲು ಆ ಆಹಾರವನ್ನೂ ಅತಿಥಿಗೆ ಅರ್ಪಿಸಿ ಮರಣವನ್ನು ಬರಮಾಡಿಕೊಂಡ ಒಂದು ಕಥೆಯು ಮಹಾಭಾರತದಲ್ಲಿದೆ. ನಮ್ಮ ಪ್ರಾಚೀನರ ಮನೋವೃತ್ತಿಯು ಈ ವಿಧವಾದುದಾಗಿದ್ದಿತು.

### ನೀವು ಯಾವುದನ್ನು ಕಳೆದುಕೊಳ್ಳಬಾರದು?

ನಾವು ನಿರ್ವೀರ್ಯರೆಂದು ತಿಳಿದುಕೊಳ್ಳುವಷ್ಟು ನಿರ್ಬಲತೆಯು ಬೇರೊಂದಲ್ಲ. ನೀವು ಸತ್ವಶಾಲಿಗಳು. ನಿಮ್ಮ ಸಂಸ್ಕೃತಿಯು ಸತ್ವಯುಕ್ತವಾದುದು. ನಾವು ಸೋತವರೆಂದು ನಿರಾಶರಾಗಬೇಡಿರಿ. ನಮ್ಮಲ್ಲಿ ನಮ್ಮ ಪ್ರಾಚೀನರ ಸತ್ವವಿದೆಯೆಂಬ ದೃಢ ವಿಶ್ವಾಸವುಳ್ಳವರಾಗಿರಿ. ಅದೇ ನಿಮ್ಮನ್ನು ಉನ್ನತ ಸ್ಥಿತಿಗೆ ತರುವುದು. ಈ ದೃಢ ವಿಶ್ವಾಸವೇ ಇಲ್ಲದಿದ್ದರೆ ನೀವು ಏನನ್ನೂ ಸಂಪಾದನೆ ಮಾಡಲಾರಿರಿ. ಸ್ವರಾಜ್ಯವನ್ನು ಸಂಪಾದಿಸುವುದಕ್ಕಿಂತಲೂ ಸತ್ವವನ್ನು ಸಂರಕ್ಷಿಸಿಕೊಂಡಿರುವುದು ಮಹತ್ವದ್ದಾಗಿದೆ. ಏಕೆಂದರೆ ಅದೇ ಮುಂದಣ ಎಲ್ಲ ಅಭಿವೃದ್ಧಿಗಳಿಗೆ ಮೂಲವು. ದ್ರೌಪದಿಯ ಥಾಲಿಗೆ ಸ್ವಲ್ಪೇ ಎಲಿ ಹತ್ತಿತ್ತೆಂದೇ ಅದರಿಂದ ಶ್ರೀಕೃಷ್ಣನು ಬಹು ಜನರಿಗೆ ಆಹಾರವನ್ನು ಸಿದ್ಧಗೊಳಿಸಿದನು. ಅದೇ

ಇಲ್ಲದಿದ್ದರೆ ಆತನಾದರೂ ಏನು ಮಾಡುತ್ತಿದ್ದನು? ಆದಕಾರಣ ಆತ್ಮವಿಶ್ವಾಸವು ಇರುವವರೆಗೂ ಅದರಿಂದ ಮುಂದೆ ಬೇಕಾದುದನ್ನು ಸಾಧಿಸಬಹುದು. ಅದೇ ಇಲ್ಲದಿದ್ದರೆ ಮುಂದೇನು ಗತಿ?

### ಸದ್ಗುಣದ ಉಪಯೋಗಕ್ಕೂ ಮೇರೆ ಇರಬೇಕು.

ನಾಗಪುರದಲ್ಲಿ ಹಿಂದು-ಮುಸಲ್ಮಾನರ ದೊಂಬಿಯಾಯಿತು. ಅಲ್ಲಿಯ ನೇಕಾರ ಜನರು ಬಹು ಶೂರರು. ಅವರಲ್ಲಿಯ ಉದಯರಾಮ ಎಂಬಾತನು ಬಹು ಪರಾಕ್ರಮಿಯು. ತನ್ನ ನಾಲ್ಕಾರು ಜನ ಜತೆಗಾರರೊಂದಿಗೆ ಗರಡಿ ಮನೆಯ ಹತ್ತಿರ ಕುಳಿತಿದ್ದನು. ಅಷ್ಟರಲ್ಲಿ ೪-೫ ನೂರು ಮುಸಲ್ಮಾನರು ದೊಂಬಿ ಮಾಡುತ್ತಾ ಬಂದರು. ಉದಯರಾಮನು ಬಡಗಿ ತಿರುಗಿಸುತ್ತ ಅವರನ್ನೆಲ್ಲ ಹಿಂದಕ್ಕೆ ತಳ್ಳಿದನು. ಅಷ್ಟರಲ್ಲಿ ಒಬ್ಬ ಮುಸಲ್ಮಾನನ ಕೈಯಲ್ಲಿಯ ಕತ್ತಿಯು ಕೆಳಗೆ ಬಿದ್ದು ಆತನೂ ನೆಲಕ್ಕೆ ಉರುಳಿದನು. ಆಗ ಅದನ್ನು ಉದಯರಾಮನ ಸಂಗಡಿಗನು ತೆಗೆದುಕೊಂಡು ಆ ಮುಸಲ್ಮಾನನಿಗೆ ಹೊಡೆಯ ಹೋದನು. ಉದಯರಾಮನು ಹೀಗೆ ಹೇಳಿದನು— "ಬಿದ್ದವನನ್ನು ಹೊಡೆಯುವುದು ನಮ್ಮ ಧರ್ಮವಲ್ಲ" ಹೀಗೆ ಹೇಳಿ ಹೊಡೆಯುವುದನ್ನು ಬಿಡಿಸಿದನು. ಇಕೋ, ಇದೇ ನಮ್ಮ ಸಂಸ್ಕೃತಿಯ ದ್ಯೋತಕವು. ನಮ್ಮ ಜನಸಾಮಾನ್ಯದಲ್ಲಿ ಕೂಡಾ ಇಂಥ ಗುಣವಿದೆ. ಈ ಸದ್ಗುಣದ ಅತಿರೇಕದಿಂದಲೇ ನಮಗೆ ಈಗ ಇಂಥ ಸ್ಥಿತಿಯು ಬಂದಿದೆ. ಸದ್ಗುಣವನ್ನಾದರೂ ಉಪಯೋಗಿಸಬೇಕಾದರೆ ಅದಕ್ಕೆ ಮೇರೆ ಇರಲೆಂದು ಹೇಳುವ ಪ್ರಸಂಗ ಬಂದಿದೆ.

### ಸಂಘಟನೆಯ ಆವಶ್ಯಕತೆ.

ನಾವು ಈಗ ಸಂಘಟಿತರಾಗುವುದು ಅತ್ಯಗತ್ಯವಾಗಿದೆ. ಸಂಘಟನಾ ಶಕ್ತಿಯಿಂದ ನಾವು ಒಂದಾಗಿದ್ದೇವೆಂಬುದು ಗೊತ್ತಾದರೆ ನಮ್ಮ ಕಡೆ ಕೆಟ್ಟ ಕಣ್ಣಿನಿಂದ ನೋಡಲು ಯಾರಿಗೂ ಧೈರ್ಯವಾಗುವುದಿಲ್ಲ. ಹಿಂದು ಧರ್ಮವೇ ಧರ್ಮ. ಇನ್ನಿತರವುಗಳೆಲ್ಲಾ ಮತಗಳು. ದೇವರನ್ನು ನೀವು ನಂಬಲಿಕ್ಕೂ ನಂಬದಿರುವುದಕ್ಕೂ ಹಿಂದು ಧರ್ಮವು ಸಂಪೂರ್ಣವಾದ ವ್ಯಕ್ತಿ ಸ್ವಾತಂತ್ರ್ಯವನ್ನು ಕೊಟ್ಟಿದೆ. ಪತಿವ್ರತೆಯರು ದೇವರನ್ನು ಲಕ್ಷಿಸದಿದ್ದಾಗ ದೇವರೇ ಅವರ ಕಡೆಗೆ ಬಂದಿಲ್ಲವೆ? ಪುಂಡಲೀಕನ ಪಿತೃ ಸೇವೆಯು ಪೂರೈಸುವವರೆಗೆ ದೇವರು ಕಾದುಕೊಂಡು ಕುಳಿತಿರಲಿಲ್ಲವೆ? ಹಿಂದು ಧರ್ಮದಲ್ಲಿ ಯಾವುದನ್ನು ಮಾಡಬೇಕೆಂಬುದು ಮುಖ್ಯವಲ್ಲ. ಆದರೆ ಹೇಗೆ ಮಾಡಬೇಕೆಂಬುದೇ ಮುಖ್ಯವಾದುದು.

ನೀವು ನಮ್ಮ ದೇಶಕ್ಕೆ "ಇಂಡಿಯಾ" ಎಂದು ಹೇಳಬೇಡಿರಿ. "ಹಿಂದುಸ್ಥಾನ" ಎಂಬುದಾಗಿಯೇ ಹೇಳಿರಿ. ಈ ದೇಶವು ಹಿಂದುಗಳ ದೇಶವಾಗಿದೆ. ಇತರ ಜನರು ಅತಿಥಿಗಳಾಗಿದ್ದಾರೆ. ಅವರಿಗೆ ಆದರ ಸತ್ಕಾರ ಮಾಡಿರಿ. ಆದರೆ ಈ ದೇಶವು ಹಿಂದುಗಳದ್ದೆಂಬುದನ್ನು ಮಾತ್ರ ಮರೆಯಬೇಡಿರಿ. ಇದೇನೂ ಬೇಕಾದವರು ಬಂದು ಇಳಿದುಕೊಂಡು ಹೋಗುವ ಧರ್ಮಶಾಲೆಯಲ್ಲ. ಇನ್ನು ಮೇಲೆ ನೀವು ಮಿಸ್ಟರ್, ಮಿಸೆಸ್, ಎಂದು ಅನ್ಯರಿಗೆ ಹೇಳಬೇಡಿರಿ. ಈ ಶಬ್ದಗಳ ಅರ್ಥದ ದೇಶಿ ಶಬ್ದಗಳನ್ನೇ ಉಪಯೋಗಿಸಿರಿ. ಹಿಟ್ಲರನಿಗೆ ಯಾರಾದರೂ ಮಿಸ್ಟರ್ ಎಂದರೆ ಕೂಡಲೇ ಆತನ ಶಿರಚ್ಛೇದ ಮಾಡದೆ ಬಿಡನು. ಮುಸೋಲಿನಿಗೆ ಮಿಸ್ಟರ್ ಎಂದರೆ ಸುಮ್ಮನಿರುವನೆ? ಆದರೆ ನಮ್ಮಲ್ಲಿ ಅನೇಕ ಸತಿ ಪತಿಗಳು ಮಿಸ್ಟರ್, ಮಿಸೆಸ್ ಎಂದು ಹೇಳಿಕೊಳ್ಳುತ್ತಿದ್ದಾರೆ! ಪರಭಾಷೆಯ ಶಬ್ದ ಪ್ರಯೋಗವು ಗುಲಾಮಗಿರಿಯ ದ್ಯೋತಕವಾದುದು. ಸ್ವಧರ್ಮ, ಸ್ವದೇಶ ಸ್ವಭಾಷೆಗಳನ್ನು ಶುದ್ಧವಾಗಿಟ್ಟು ರಕ್ಷಿಸುವುದು ಅತ್ಯಗತ್ಯವಾದ ಕರ್ತವ್ಯವು.

### ಮುಸಲ್ಮಾನರ ವೃತ್ತಿ ನನಗೆ ಒಪ್ಪಿಗೆ!

ನನ್ನ ಪರಿಚಯದ ಒಬ್ಬ ಪೋಲಿಸ್ ಅಧಿಕಾರಿಗಳು ಹಿಂದುಗಳಿಗಿಂತ ಮುಸಲ್ಮಾನರ ವೃತ್ತಿಯೇ ನನಗೆ ಬಹು ಒಪ್ಪಿಗೆಯೆಂದು ಹೇಳುತ್ತಿದ್ದಾರೆ. ಏಕೆಂದು ಕೇಳಿದರೆ ಅವರು ಹೀಗೆ ಹೇಳುತ್ತಾರೆ— "ಹೆಂಡತಿಯನ್ನು ಓಡಿಸಿಕೊಂಡು ಹೋದರೆಂದು ಅವರಲ್ಲಿ ಒಬ್ಬರಾದರೂ ನನ್ನ ಕಡೆಗೆ ವ್ಯಾಜ್ಯ ತಂದಿಲ್ಲ. ಹೆಂಡತಿಯನ್ನು ಓಡಿಸಿಕೊಂಡು ಹೋದಾತನೇ ವ್ಯಾಜ್ಯ ಹೂಡುವಂತೆ ಅವರು ಮಾಡುತ್ತಾರೆ" ತನ್ನ ಹೆಂಡತಿಯನ್ನು ಸಂರಕ್ಷಿಸುವ ಅಧಿಕಾರವು ಗಂಡನಿಗೆ ಇದ್ದೇ ಇದೆ. ಹೀಗಿರುವಾಗ ಪೋಲಿಸರ ಕಡೆ ಹೇಳಿಕೊಳ್ಳಲು ಹೋಗುವಂತಹ ಸ್ಥಿತಿಯು ಹಿಂದುಗಳ ಮೇಲೆ ಬಂದುದು ಹಿಂದು ಸಮಾಜಕ್ಕೆ ಬಹು ಅವಮಾನಕರವಾದುದು. ವಿದ್ಯಾರ್ಥಿಗಳೂ ತರುಣರೂ ಶಾರೀರಕ ಬಲವರ್ಧನೆಗಾಗಿ ಪ್ರಯತ್ನಿಸದೆ ಇರುವುದು ಒಂದು ದೊಡ್ಡ ದೋಷವು. ಇದು ಬಹು ಅನರ್ಥಕರವಾದುದು. ಆದುದರಿಂದ ದೇಹ ಬಲವರ್ಧನೆಗೆ ತರುಣರು ಅಗತ್ಯವಾಗಿ ಲಕ್ಷಿಸಬೇಕು."

---

## ಸಂಸ್ಥಾನಗಳಲ್ಲಿ ಕಾಂಗ್ರೆಸ್ ಚಟುವಟಿಕೆ.

### ವರ್ಕಿಂಗ್ ಕಮಿಟಿಯ ನಿರ್ಣಯ.

ವರ್ಧಾದಲ್ಲಿ ಕೂಡಿದ್ದ ಕಾಂಗ್ರೆಸ್ ಕಮಿಟಿಯು ಹರಿಪುರ ಕಾಂಗ್ರೆಸ್ಸಿನಲ್ಲಿ ಸಂಸ್ಥಾನಗಳ ಸಂಬಂಧವಾಗಿ ಒಂದು ಗೊತ್ತುವಳಿಯನ್ನಿಡಲು ನಿರ್ಧರಿಸಿತು. ಅದರ ಮುಖ್ಯಾಭಿಪ್ರಾಯವು ಹೀಗಿದೆ—

### ಸ್ವಾತಂತ್ರ್ಯದ ವ್ಯಾಪ್ತಿ.

ಹಿಂದುಸ್ಥಾನಕ್ಕೆ ಸಂಪೂರ್ಣ ಸ್ವಾತಂತ್ರ್ಯವನ್ನು ಸಂಪಾದಿಸುವುದೇ ಕಾಂಗ್ರೆಸ್ಸಿನ ಧ್ಯೇಯವಾಗಿದೆ. ಈ ಸ್ವಾತಂತ್ರ್ಯವು ಬ್ರಿಟಿಶ್ ಹಿಂದುಸ್ಥಾನದ ಮಟ್ಟಿಗೇನೇ ಎಂದು ಕಾಂಗ್ರೆಸ್ ಯೋಚಿಸಿಲ್ಲ. ಹಿಂದಿ ಸಂಸ್ಥಾನಗಳಲ್ಲಿಯೂ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಸ್ವಾತಂತ್ರ್ಯಗಳುಂಟಾಗುವಂತೆ ಮಾಡಲು ಕಾಂಗ್ರೆಸ್ ಒಪ್ಪಿದೆ. ಹಿಂದಿ ಸಂಸ್ಥಾನಗಳು ಹಿಂದುಸ್ಥಾನದಿಂದ ಹೊರಗಿದ್ದವುಗಳೆಂದು ಅದೇನೂ ತಿಳಿಯುವುದಿಲ್ಲ. ಹಿಂದು ಸಂಸ್ಥಾನಗಳಿಂದ ಕೂಡಿದ ಸಂಯುಕ್ತ ಹಿಂದುಸ್ಥಾನಕ್ಕೆ ಸ್ವಾತಂತ್ರ್ಯವನ್ನು ಸಂಪಾದಿಸುವುದೇ ಕಾಂಗ್ರೆಸ್ಸಿನ ಧ್ಯೇಯವು. ಆದಕಾರಣ ಈಗ ಅನೇಕ ಸಂಸ್ಥಾನಗಳಲ್ಲಿ ಪ್ರಜಾಪ್ರಭುತ್ವವಿಲ್ಲದ್ದರಿಂದಲೂ ನಾಗರಿಕರಿಗಿರಬೇಕಾದ ಸ್ವಾತಂತ್ರ್ಯವಿಲ್ಲದ್ದರಿಂದಲೂ ಕಾಂಗ್ರೆಸ್ಸು ಅವುಗಳ ಧೋರಣವನ್ನು ಒಪ್ಪುವುದಿಲ್ಲ.

ಕಾಂಗ್ರೆಸ್ಸು ಸಂಸ್ಥಾನದ ಪ್ರಜೆಗಳ ವಿಷಯದಲ್ಲಿ ಈ ವಿಧವಾದ ಅಭಿಪ್ರಾಯವುಳ್ಳದ್ದಾಗಿದ್ದರೂ ಅದನ್ನೇ ಅಲ್ಲಿಯ ಜನರು ನಂಬಿಕೊಂಡಿರಕೂಡದು. ಕಾಂಗ್ರೆಸ್ಸಿನ ಹೆಸರು ಅದಕ್ಕಿರುವ ಪ್ರತಿಷ್ಠೆಗಳನ್ನು ನೋಡಿ ಕಾಂಗ್ರೆಸ್ಸನ್ನೇ ಅನೇಕರು ನಂಬಿಕೊಂಡಿರುವರು. ಅವರ ಇಚ್ಛೆಯು ಪೂರ್ಣವಾಗುವ ಸಂಭವವಿಲ್ಲ. ಆದಕಾರಣ ಅವರು ಕಾಂಗ್ರೆಸ್ಸನ್ನು ನಂಬಿಕೊಂಡಿರದೆ ತಮ್ಮಲ್ಲಿಯ ಸ್ವಾತಂತ್ರ್ಯಕ್ಕಾಗಿ ತಾವೇ ಪ್ರಯತ್ನಶಾಲಿಗಳಾಗಬೇಕು. ಅವರು ತಮ್ಮ ಶಕ್ತಿಯನ್ನು ಸಂಸ್ಥಾನದ ಪ್ರಜೆಗಳಿಂದಲೇ ಹೊಂದಬೇಕು. ಹೀಗೆ ಮಾಡಿದರೇನೇ ಅಲ್ಲಿಯ ಜನರಲ್ಲಿ ನಿಜವಾದ ಶಕ್ತಿಯು ಬೆಳೆಯುವುದು. ಈಗ ಕಾಂಗ್ರೆಸ್ಸು ಸಂಸ್ಥಾನಗಳಲ್ಲಿಯ ಚಟುವಟಿಕೆಗಳಿಗೆ ಕೇವಲ ನೈತಿಕ ಬೆಂಬಲ ಮತ್ತು ಸಹಾನುಭೂತಿಗಳನ್ನು ಮಾತ್ರ ತೋರಿಸುವುದು. ಕಾಂಗ್ರೆಸ್ಸಿನ ಜನರು ವೈಯಕ್ತಿಕವಾಗಿ ಅವರಿಗೆ ಬೇಕಾದ ಸಹಾಯಗಳನ್ನು ಮಾಡಬಹುದು.

### ಕಾಂಗ್ರೆಸ್ ಸಂಸ್ಥೆಗಳು ಬೇಡ.

ಈಗಿನ ಸ್ಥಿತಿಯಲ್ಲಿ ಕಾಂಗ್ರೆಸ್ ಕಮಿಟಿಗಳು ಸಂಸ್ಥಾನಗಳಲ್ಲಿ ಸ್ಥಾಪಿಸಲ್ಪಡತಕ್ಕದ್ದಲ್ಲವೆಂದೇ ತಿಳಿಯಬೇಕು. ಮತ್ತು ಸಂಸ್ಥಾನಗಳಲ್ಲಿಯ ಆಂತರೀಕ ಹೋರಾಟಗಳು, ಕಾಂಗ್ರೆಸ್ಸಿನ ಹೆಸರಿನಿಂದ ನಡೆಯತಕ್ಕದ್ದಲ್ಲವೆಂದೂ ಆಜ್ಞಾಪಿಸುತ್ತದೆ.

ಸಂಸ್ಥಾನಗಳಲ್ಲಿಯ ಪ್ರಜೆಗಳು ಕಾಂಗ್ರೆಸ್ಸಿನ ಮೆಂಬರರಾಗಬಹುದು. ಆದರೆ ಅವರು ಯಾವ ಸ್ಥಳದ ಕಮಿಟಿಯ ಮೆಂಬರರಾಗುತ್ತಾರೆಯೋ ಆ ಸ್ಥಳವು ಸಂಸ್ಥಾನದ ಹೊರಗಿದ್ದುದಾಗಿರಬೇಕು.

ಸಂಸ್ಥಾನದ ಪ್ರಜೆಗಳು ತಮ್ಮಲ್ಲಿಯ ಹೋರಾಟಕ್ಕಾಗಿ ಸ್ವತಂತ್ರ ಸಂಸ್ಥೆಯನ್ನು ಸ್ಥಾಪಿಸಿಕೊಳ್ಳಬೇಕು. ಇಲ್ಲವೆ ಈಗ ಅವು ಇದ್ದಿದ್ದೇ ಆಗಿದ್ದರೆ ಅವುಗಳನ್ನು ಮುಂದೆ ಸಾಗಿಸಿಕೊಂಡು ಹೋಗಬೇಕು. ಸಂಸ್ಥಾನಗಳಲ್ಲಿಯ ಪ್ರಜೆಗಳ ಬಂಧ ವಿಮೋಚನೆಯ ಕಾಲವೇನೂ ಬಹು ದೂರವಿಲ್ಲವೆಂದೇ ಕಾಂಗ್ರೆಸ್ ನಂಬಿದೆ."

[ನಾವು ಇದೇ ಪ್ರಕಾರ ತಾ. ೨೦-೧೨-೩೭ ನೆಯ ಪತ್ರಿಕೆಯಲ್ಲಿ ಮೈಸೂರು ಪ್ರಾಂತದ ಕಾಂಗ್ರೆಸ್ಸಿನ ಚಟುವಟಿಕೆಯ ಸಂಬಂಧವಾಗಿ ಸ್ಪಷ್ಟ ಹೇಳಿದುದನ್ನು ಕೆಲವು ಕಾಂಗ್ರೆಸ್ಸಿನ ಉಜ್ವಲ ಭಕ್ತರು ಆಕ್ಷೇಪಿಸಿದ್ದರು. ಈಗ ಕಾಂಗ್ರೆಸ್ಸಿನವರು ಹೇಳಿದುದನ್ನೇ ಆ ನಮ್ಮ ಅಭಿಪ್ರಾಯಕ್ಕೆ ಸರಿ ಹಚ್ಚಿ ನೋಡಲಿ. ಎಷ್ಟು ಬಿಗಿಯಾಗಿದೆಯೆಂಬುದು ಗೊತ್ತಾಗುವುದು.

—ಸಂಪಾದಕ.]

---

## ವೀರ ಬಾಲಕನ ಆದರ್ಶ ಬಾಲ ಸಮಾಜ.

ಲಾಹೋರಿನಲ್ಲಿ ಕಳೆದ ವಸಂತಪಂಚಮಿಯ ದಿವಸ (ತಾ. ೫-೨-೩೮) ಭಾಯಿಪರಮಾನಂದರ ನೇತೃತ್ವದಲ್ಲಿ ವೀರ ಬಾಲ ಹಕಿಕತ ಎಂಬನ ಸ್ಮರಣಾರ್ಥವಾಗಿ "ಆದರ್ಶ ಬಾಲ ಸಮಾಜ" ಎಂಬ ಸಂಘವು ಸ್ಥಾಪಿಸಲ್ಪಟ್ಟಿತು. ಅದರ ಉದ್ದೇಶ ಮತ್ತು ನಿಯಮಗಳು ಈ ಕೆಳಗಿನಂತಿವೆ—

### ಉದ್ದೇಶ

(೧) ಬಾಲಕರ ಶಾರೀರಿಕ, ಮಾನಸಿಕ ಮತ್ತು ಆತ್ಮೀಯ ಉನ್ನತಿಗಳಿಗಾಗಿ ಪ್ರಯತ್ನಿಸುವುದು. (೨) ಬಾಲಕರ ಧಾರ್ಮಿಕ ಭಾವನೆಯನ್ನು ಜಾಗೃತಗೊಳಿಸುವುದು (೩) ತನ್ನ ಜಾತಿ, ಭಾಷೆ, ಉಡುಪು, ಸಂಸ್ಕೃತಿಗಳ ಸಂರಕ್ಷಣೆಯ ಮೂಲಕ ರಾಷ್ಟ್ರಗೌರವವನ್ನು ಸ್ಥಾಪಿಸುವುದು. (೪) ರಾಷ್ಟ್ರದ ಬಾಲ ಸಮಾಜದಲ್ಲಿ ಪರಸ್ಪರ ಪ್ರೇಮ ಮತ್ತು ಬಂಧು ಭಾವವನ್ನು ಅಭಿವೃದ್ಧಿಗೊಳಿಸುವುದು. (೫) ಬಾಲಕರಲ್ಲಿ ಲೇಖನ ಕಲೆ ಮತ್ತು ವಿದ್ಯಾಭಿರುಚಿಯನ್ನು ಹೆಚ್ಚಿಸುವುದು.

### ನಿಯಮ.

ಈ ಉದ್ದೇಶಗಳ ಸಂಸ್ಥೆಗೆ "ಆದರ್ಶ ಬಾಲ ಸಮಾಜ" ಎಂಬ ಹೆಸರು. ಈ ಸಮಾಜಕ್ಕೆ ೧೮ ವರುಷಗಳೊಳಗಿನ ಬಾಲ ಬಾಲಕಿಯರು ಸದಸ್ಯರಾಗಬೇಕು. ಅವರು ವರುಷಕ್ಕೆ ನಾಲ್ಕಾಣೆ ಚಂದಾ ಕೊಡಬೇಕು. ಈ ಬಾಲ ಸಮಾಜದ ಮುಖ್ಯ ಕಾರ್ಯಾಲಯ ಹೊಸದಿಲ್ಲಿ ಹಿಂದು ಕಾರ್ಯಾಲಯದಲ್ಲಿದೆ.

### ವೀರ ಬಾಲಕನು ಯಾರು ?

ಪರಮಾನಂದರು ಯಾವ ವೀರ ಬಾಲಕನ ಸ್ಮರಣಾರ್ಥವಾಗಿ ಈ ಆದರ್ಶ ಬಾಲ ಸಮಾಜವನ್ನು ಸ್ಥಾಪಿಸಿದ್ದಾರೆಯೋ ಆ ಹಕಿಕತ ಎಂಬ ಬಾಲಕನ ಸಂಬಂಧವಾಗಿ ಭಾಯೀಜಿಯವರು ಈ ಕೆಳಗಿನಂತೆ ಒಂದು ಲೇಖನವನ್ನು ಬರೆದಿದ್ದಾರೆ.

ಪಂಜಾಬದಲ್ಲಿ ಸ್ಯಾಲಕೋಟ ಎಂಬ ಒಂದು ಜಿಲ್ಲೆಯ ಮುಖ್ಯ ಪಟ್ಟಣವಿದೆ. ಅಲ್ಲಿ ಪುರಿ ಎಂಬ ಜಾತಿಯ ಕ್ಷತ್ರಿಯರಿದ್ದಾರೆ. ಅವರಲ್ಲಿ ೧೮ ನೆಯ ಶತಮಾನದ ಮಧ್ಯ ಕಾಲದಲ್ಲಿ ಹಕಿಕತರಾಯನೆಂಬ ಒಬ್ಬ ವೀರ ಬಾಲಕನಿದ್ದನು. ಆಗ ಪಂಜಾಬದಲ್ಲಿ ಮುಸಲ್ಮಾನರ ರಾಜ್ಯವಿದ್ದಿತು. ಈಗ ಹೇಗೆ ಕ್ರಿಸ್ತ ಶಾಲೆಗೆ ಹಿಂದು ಹುಡುಗರು ಹೋಗಿ ಕಲಿಯುತ್ತಿದ್ದಾರೆಯೋ ಹಾಗೆಯೇ ಆಗ ಮುಸಲ್ಮಾನರ ಮಸೀದಿಗೆ ಹಿಂದು ಹುಡುಗರು ಹೋಗಿ ವಿದ್ಯಾಭ್ಯಾಸಮಾಡುತ್ತಿದ್ದರು. ಹಕೀಕತನೂ ಅಂಥ ಶಾಲೆಗೆ ಹೋಗುತ್ತಿದ್ದನು.

ಒಂದು ದಿನ ಮುಸಲ್ಮಾನ್ ವಿದ್ಯಾರ್ಥಿಗಳು ದುರ್ಗಾದೇವಿಯ ನಿಂದೆಮಾಡಿದರು. ಆಗ ಆ ಹಕೀಕತನೂ ಸಿಟ್ಟಿನಿಂದ ಹಜರತರ ಮಗಳ ನಿಂದೆಮಾಡಿದನು,

ಕಾಜಿಗಳು ಆಗ ಶಾಲೆಯಲ್ಲಿರಲಿಲ್ಲ. ಅವರು ಬಂದೊಡನೆ ಮುಸಲ್ಮಾನ್ ವಿದ್ಯಾರ್ಥಿಗಳು ಹಕೀಕತನು ನಿಂದೆಮಾಡಿದ ಸಂಗತಿಯನ್ನು ತಿಳಿಸಿದರು. ಆಗ ಕಾಜಿಗಳು ಈತನು ಮುಸಲ್ಮಾನೇತರನಿರುವುದರಿಂದ ಈ ಅಪರಾಧಕ್ಕೋಸ್ಕರ ಇವನಿಗೆ ಮರಣದಂಡನೆಯನ್ನು ವಿಧಿಸಬೇಕೆಂದು ತೀರ್ಮಾನಮಾಡಿದರು.

ಕಾಜಿಗಳ ಈ ಅಪ್ಪಣೆಯನ್ನು ಅಲ್ಲಿಯ ಮುಸಲ್ಮಾನ್ ಅಧಿಕಾರಿಗಳು ಒಪ್ಪಿಕೊಂಡರು. ಆಗ ಅಲ್ಲಿಂದ ಅನೇಕ ಹಿಂದುಗಳು ೧೦೦ ಮೈಲು ದೂರದಲ್ಲಿದ್ದ ಲಾಹೋರ ಪಟ್ಟಣಕ್ಕೆ ಬಂದು ಅಲ್ಲಿಯ ಮುಖ್ಯಾಧಿಕಾರಿಗಳಾದ ನಾಜೀಮ (ಗವ್ಹರ್ನರ) ರಿಗೆ ೧೩-೧೪ ವರುಷಗಳ ಈ ಬಾಲಕನ ಅಪರಾಧವನ್ನು ಕ್ಷಮಿಸಬೇಕೆಂದು ಹೇಳಿಕೊಂಡರು. ಆಗ ನಾಜಿಮರು ಕಾಜಿಗಳನ್ನು ಕರೆಯಿಸಿ ಕೇಳಲು ಆ ಹುಡುಗನು ಮುಸಲ್ಮಾನನಾದರೆ ಆತನ ಅಪರಾಧವನ್ನು ಕ್ಷಮಿಸಲಾಗುವುದಾಗಿ ಹೇಳಿದರು.

### ಆದರ್ಶ ವೀರ ವೃತ್ತಿ.

ಆಗ ನಾಜಿಮರು ಹಕೀಕತನಿಗೆ ನೀನು ಮುಸಲ್ಮಾನನಾದರೆ ಸಂತೋಷದಿಂದ ಕಾಲಕಳೆಯಬಹುದು. ಆದಕಾರಣ ಈಗ ಸಾಯದೆ ಮುಸಲ್ಮಾನನಾಗೆಂದು ಹೇಳಿದರು. ಆಗ ಆ ವೀರ ಬಾಲಕನು "ಏನು ನಾನು ನನ್ನ ಧರ್ಮವನ್ನು ಬಿಟ್ಟರೆ ಸಾಯುವದೇ ಇಲ್ಲವೋ ? ನಾನು ಎಂದಾದರೂ ಒಂದು ದಿನ ಸಾಯುವವನು. ಎಂದಮೇಲೆ ಧರ್ಮವನ್ನು ಬಿಟ್ಟು ನಾನು ಸಾಯುವವನಲ್ಲ." ಎಂದು ಹೇಳಿದನು.

ವೀರ ಬಾಲಕನ ಸಂಗಡ ತಾಯಿ ತಂದೆಗಳೂ ಇದ್ದರು. ಇವರೇ ಅಲ್ಲ; ಆಗ ಹಿಂದುಗಳಲ್ಲಿ ಬಾಲ್ಯವಿವಾಹವು ಪ್ರಚಾರವಾಗಿದ್ದಿತು. ಆದಕಾರಣ ಹಕೀಕತನ ಧರ್ಮಪತ್ನಿಯೂ ಬಂದಿದ್ದಳು. ತಾಯಿ ತಂದೆಗಳು ಮಗನೇ, ನೀನು ಮುಸಲ್ಮಾನನಾಗಬಿಡು. ನಾವು ನಿನ್ನನ್ನು ಕಣ್ಣುಗಳಿಂದಲಾದರೂ ನೋಡುತ್ತಾ ಇರುತ್ತೇವೆ ಎಂದು ಬಹು ಪರಿಯಾಗಿ ಬೇಳಿದರು. ಅವರಿಗು ಕೂಡಾ ಹಾಗೆಯೇ ಆ ವೀರ ಬಾಲಕನು ನಾನು ನನ್ನ ಧರ್ಮವನ್ನು ಬಿಡುವವನಲ್ಲವೆಂದೇ ಹೇಳಿದನು.

### ಹುತಾತ್ಮಾ ಹಕಿಕತ.

ಲಾಹೋರಿನಿಂದ ೩ ಮೈಲುಗಳ ದೂರದಲ್ಲಿ ಗಲ್ಲಿಗೇರಿಸುವ ಸ್ಥಳವಿದ್ದಿತು. ಆ ಸ್ಥಳದಲ್ಲಿ ಆ ವೀರ ಬಾಲಕನ ಶಿರಚ್ಛೇದ ಮಾಡಿದರು. ಆದರೆ ಆ ವೀರನು [illegible]ತಪಟ್ಟನೆ? ಆತನ ವಯಸ್ಸಿಷ

ಲಕ್ಷಾಂತರ ಬಾಲಕರು ಹಿಂದುಸ್ಥಾನದಲ್ಲಿ ಮೃತಪಡುತ್ತಿದ್ದಾರೆ. ಆದರೆ ಆ ಹುತಾತ್ಮನ ಹೆಸರು ಈಗಲೂ ಇದೆ. ಆತನ ಬಲಿದಾನದಿಂದ ಈಗಲೂ ಲಕ್ಷಾಂತರ ಬಾಲಕರ ಆತ್ಮೋನ್ನತಿಯಾಗುತ್ತಲಿದೆ. ಆ ವೀರನು ತನ್ನ ಶಿರಸ್ಸನ್ನು ಕೊಟ್ಟು ಅಮರನಾದನು. ಆತನ ಆತ್ಮಾಹುತಿಯಾದ ಸ್ಥಳದಲ್ಲಿ ಈಗಲೂ ಆತನ ಸಮಾಧಿಯಿದೆ. ವಸಂತ ಪಂಚಮಿಯ ದಿನ ವೀರ ಬಾಲಕನ ಜಾತ್ರೆಯಾಗುತ್ತಲಿದೆ. ಲಾಹೋರಿನಿಂದ ಸಹಸ್ರಾವಧಿ ಬಾಲಕರು ವಸಂತ ಪಂಚಮಿಯ ದಿನ ಅಲ್ಲಿಗೆ ಹೋಗಿ ಆ ಸಮಾಧಿಗೆ ಪುಷ್ಪವನ್ನು ಅರ್ಪಿಸಿ ಬರುತ್ತಿದ್ದಾರೆ.

ಹಿಂದು ಬಾಲಕರೇ? ನೀವಾದರೂ ಆ ವೀರ ಬಾಲಕನ ಜೀವನವನ್ನೇ ಆದರ್ಶವಾಗಿಟ್ಟುಕೊಳ್ಳಿರಿ. ನೀವು ಧರ್ಮಕ್ಕೋಸ್ಕರವಾಗಿಯೇ ಜೀವಿಸುವೆವೆಂದೂ, ಧರ್ಮಕ್ಕೋಸ್ಕರವಾಗಿಯೇ ಮರಣಹೊಂದುವೆವೆಂದೂ ಪ್ರತಿಜ್ಞೆಮಾಡಿರಿ. ಏಕೆಂದರೆ ಅದೇ ನಿಜವಾದ ಜೀವನವು.

---

## ಹಿಂದು-ಮುಸಲ್ಮಾನರ ಐಕಮತ್ಯದ ಈ ವರೆಗಿನ ಪ್ರಯತ್ನ.

### ಭಾಯಿ ಪರಮಾನಂದರ ವಿಚಾರ.

ಭಾಯಿ ಪರಮಾನಂದರು "ಈ ಕಾಲದ ದಮನಕ ಕಟಕ" ಎಂಬ ಒಂದು ಲೇಖನವನ್ನು ಹಿಂದು ಮುಸಲ್ಮಾನರ ಐಕಮತ್ಯದ ಸಂಬಂಧವಾಗಿ ಬರೆದಿದ್ದಾರೆ. ಅದರಲ್ಲಿಯ ಮುಖ್ಯಾಂಶ ಹೀಗಿದೆ-

### ದೇಶಬಂಧುಗಳೂ ಅಜಾದರು.

ಕೋಕೋನಾಡದ ಕಾಂಗ್ರೆಸ್ ಮುಗಿದನಂತರ ಸ್ವರ್ಗವಾಸಿ ದೇಶಬಂಧು ದಾಸರಿಗೆ ಹಿಂದು-ಮುಸಲ್ಮಾನರ ಐಕಮತ್ಯದ ಚಿಂತೆ ಹೆಚ್ಚಾಯಿತು. ಅವರಿಗೂ ಮೌ. ಅಬ್ದುಲ ಕಲಾಮ ಅಜಾದರಿಗೂ ಒಂದು ಗುಪ್ತ ಒಡಂಬಡಿಕೆಯಾಯಿತು. ಅದರಲ್ಲಿ ಹೀಗಿದ್ದಿತು-

"ಈ ಕಾಲದಲ್ಲಿ ಮುಸಲ್ಮಾನರು ಕಾಂಗ್ರೆಸ್ಸಿನಲ್ಲಿ ಸೇರಿದರೆ ಸ್ವರಾಜ್ಯ ದೊರೆಯುತ್ತಿದೆ. ಬಂಗಾಲದಲ್ಲಿ ನೂರಕ್ಕೆ ೮೦ ರಂತೆ ಅಧಿಕಾರ ಸ್ಥಾನಗಳನ್ನು ಮುಸಲ್ಮಾನರಿಗೆ ಕೊಡಬೇಕು. ಮತ್ತು ಗೋ ಸಂಹಾರಕ್ಕೂ ಅಧಿಕಾರ ಕೊಡಲ್ಪಡಬೇಕು."

ಈ ಉಭಯರಲ್ಲಾದ ಈ ಒಡಂಬಡಿಕೆಯು ಹೊರಬಿದ್ದ ಕೂಡಲೇ ಹಿಂದುಗಳು ಇದಕ್ಕೆ ಬಹು ವಿರೋಧಮಾಡಿದರು. ಆಗ ಅದು ಗರ್ಭಾವಸ್ಥೆಯಲ್ಲಿಯೇ ಮೃತಪಟ್ಟಿತು.

### ಮಾಲವೀಜಿಯವರು-ಅಜಾದರು.

ಆ ಮೇಲೆ ಹತ್ತು ವರುಷ ಕಳೆದವು. ಪ್ರಯಾಗದಲ್ಲಿ ಪಂಡಿತ ಮಾಲವೀಜಿಯವರೂ ಮೌಲಾನಾ ಅಬ್ದುಲ ಕಲಾಮ ಅಜಾದರೂ ಹಿಂದು-ಮುಸಲ್ಮಾನರ ಐಕಮತ್ಯಕ್ಕಾಗಿ ಮತ್ತೆ ಪ್ರಯತ್ನಿಸಿದರು. ಎರಡು ತಿಂಗಳು ಈ ಪ್ರಯತ್ನ ನಡೆಯಿತು. ಅಲವಾರದ ಮಹಾರಾಜರೂ ಆಗಮಿಸಿದ್ದರು. ನಾನೂ (ಭಾಯಿ ಪರಮಾನಂದರು) ಎರಡು ದಿನ ಸಮ್ಮೇಲನದಲ್ಲಿದ್ದೆನು. ಮೌ. ಅಜಾದರು ಆಗ ಮಾಡಿದ ವ್ಯಾಖ್ಯಾನವನ್ನು ನಾನೆಂದಿಗೂ ಮರೆಯುವಂತಿಲ್ಲ. ಅವರು ಹೀಗೆ ಹೇಳಿದರು—

"ರಾಷ್ಟ್ರೀಯ ದೃಷ್ಟಿಯಿಂದ ಹಿಂದುಗಳ ಹೇಳಿಕೆ ಸತ್ಯವಾದುದಾಗಿದೆ. ಹಿಂದುಸ್ಥಾನದಲ್ಲಿ ನಿಜವಾದ ಸ್ವಾತಂತ್ರ್ಯವುಂಟಾಗಬೇಕಾದರೆ ಜಾತಿ ವಿಶಿಷ್ಟ ಮತವಾರ ಸಂಘ ಇರಲೇಕೂಡದೆಂದು ನನ್ನ ದೃಢವಾದ ತಿಳುವಳಿಕೆ. ಆದರೆ ಮುಸಲ್ಮಾನರು ತುಂಬಾ ಒರಟು. ಅವರಿಗೆ ಈ ಶ್ರೇಷ್ಠವಾದ ತತ್ವವು ತಿಳಿಯುವುದಿಲ್ಲ. ಅವರ ಸಹಾಯವಿಲ್ಲದೆ ಸ್ವಾತಂತ್ರ್ಯ ದೊರೆಯುವುದಿಲ್ಲ. ಆದುದರಿಂದ ಹಿಂದು ಭಾಯಿಯವರಿಗೆ ನಾನು ಹೇಳಿಕೊಳ್ಳುವುದೇನೆಂದರೆ ಮುಸಲ್ಮಾನರು ಎಷ್ಟೇ ಅನುಚಿತವಾದ ಕೇಳಿಕೆಗಳನ್ನೇ ಕೇಳಲಿ ಅವರಿಗೆ ಕೊಟ್ಟುಬಿಡಿರಿ. ಹಿಂದುಗಳು ಹೇಗಾದರೂ ದೇಶವನ್ನು ಸ್ವತಂತ್ರ ಮಾಡಬೇಕಾಗಿದೆಯಷ್ಟೆ. ಆ ಸ್ವಾತಂತ್ರ್ಯಕ್ಕಾಗಿ ಮುಸಲ್ಮಾನರ ಕೇಳಿಕೆಗಳನ್ನು ಕೊಟ್ಟುಬಿಡಿರಿ."

ಇಂಥ ಮಾತಿಗೆ ದೊಡ್ಡ ದೊಡ್ಡ ಮುಂದಾಳುಗಳೂ ಮೋಸಹೋಗುತ್ತಿದ್ದಾರೆಂದು ನಾನು ಅನೇಕ ಸಾರೆ ತೋರಿಸಿಕೊಟ್ಟಿದ್ದೇನೆ. ಪಂಡಿತ ಮಾಲವೀಜಿಯವರು ಪುಣೆಯ ಒಪ್ಪಂದದನಂತರ ಲಾಹೋರಿಗೆ ಬಂದಿದ್ದರು. ಆಗ ರಾಜಾ ನರೇಂದ್ರನಾಥರ ಮನೆಯಲ್ಲಿ ನಾವೆಲ್ಲರೂ ಪಂಡಿತಜಿಯವರಿಗೆ ಪಂಜಾಬದ ಸ್ಥಿತಿಯನ್ನು ತಿಳಿಸಿದೆವು. ಆಗ ಪಂಡಿತಜಿಯವರು ಎಲ್ಲರಿಗೂ ಕೈಮುಗಿದು "ಪುಣೆ ಒಪ್ಪಂದದಲ್ಲಿ ನಾನು ಪ್ರವೇಶಿಸಿ ಪಂಜಾಬದ ಹಿಂದುಗಳಿಗೆ ಭಯಂಕರವಾದ ಅನ್ಯಾಯವನ್ನು ಮಾಡಿದೆನು. ಈ ಅಪರಾಧಕ್ಕಾಗಿ ಯಾವ ಶಿಕ್ಷೆಯನ್ನಾದರೂ ನಾನು ಅನುಭವಿಸಲು ಸಿದ್ಧನಿದ್ದೇನೆ." ಎಂದು ಹೇಳಿದರು.

### ಜಿನ್ನಾರವರಿಗೆ ಬೇಕಾದುದೇನು?

ಈಗ ಪಂಡಿತ ಜವಾಹರಲಾಲರು ಹಿಂದು-ಮುಸಲ್ಮಾನರಲ್ಲಿ ಐಕಮತ್ಯವನ್ನುಂಟುಮಾಡಬೇಕೆಂದು ಹೊತ್ತಿಗೊಂದು ಮಾತನಾಡುತ್ತಾ ಪ್ರಯತ್ನಿಸುತ್ತಿದ್ದಾರೆ. ಜಿನ್ನಾರವರಿಗೆ ಏನು ಬೇಕೆಂದು ಕೇಳುತ್ತಿದ್ದಾರೆ. ಮಿ. ಆಸಫ ಅಲ್ಲಿಯವರೂ ಹಾಗೆಯೇ ಕೇಳಿ ಕಾಂಗ್ರೆಸ್ಸಿನಿಂದ ನಿಮಗೆ ಬೇಕಾದುದನ್ನು ಕೊಡಿಸುತ್ತೇನೆಂದು ಹೇಳುತ್ತಾರೆ. ಮಿ. ಜಿನ್ನಾರವರಿಗೆ ಮಾತ್ರವೇ ಅಲ್ಲ; ಮೌ. ಅಜಾದ ಮಿ. ಆಸಫ ಅಲ್ಲಿ ಇವರೆಲ್ಲರಿಗೂ ಹಿಂದುಸ್ಥಾನದಲ್ಲಿ ಮುಸ್ಲಿಂ ಸ್ವಾತಂತ್ರ್ಯ ಎಂಬುದೊಂದು ಪ್ರತ್ಯೇಕ ಬೇಕು. ಅವರು ಹಿಂದುಗಳಲ್ಲಿ ಸೇರಿ ಸ್ವಾತಂತ್ರ್ಯ ಸಂಪಾದಿಸಲು ಸಿದ್ಧರಿಲ್ಲ.

---

## ಹಿಂದು-ಮುಸ್ಲಿಂ ಹೊಸ ನಿಶಾನೆ!

### ಶ್ರೀ. ಶಾಸ್ತ್ರಿಗಳು ಎತ್ತಿಹಿಡಿದರು.

ಹಿಂದು-ಮುಸಲ್ಮಾನರ ಐಕಮತ್ಯದ ವಿಷಯದಲ್ಲಿ ಹಿಂದುಗಳಿಗೆ ಬಹು ಚಿಂತೆ. ಇಷ್ಟು ಚಿಂತೆ ಮುಸಲ್ಮಾನರಿಗೂ ಇದ್ದಿದ್ದರೆ ಎಂದೋ ಐಕಮತ್ಯವುಂಟಾಗುತ್ತಿದ್ದಿತು.



ಶ್ರೀನಿವಾಸ ಶಾಸ್ತ್ರಿಗಳು.

ಕಾಂಗ್ರೆಸ್ ಪಕ್ಷದವರಿಗೇ ಈ ಚಿಂತೆ ಹೆಚ್ಚಾಗಿದೆಯೆಂದಲ್ಲ., ಹಿಂದುಸ್ಥಾನದ ರಾಜಕಾರಣದಲ್ಲಿಯೇ ಆಯುಷ್ಯವನ್ನು ಕಳೆಯುತ್ತಲಿರುವ ಮಾನ್ಯರಾದ ಶ್ರೀ. ಶ್ರೀನಿವಾಸ ಶಾಸ್ತ್ರಿಗಳಿಗೂ ಹಿಂದು-ಮುಸಲ್ಮಾನರ ಐಕಮತ್ಯವು ಎಂದು ಯಾರಿಂದ ಆದೀತೆಂಬ ಚಿಂತೆ ಬಹಳ. ತಂಜಾವರ ಪ್ರಾಂತದ ತಿರುಕಟ್ಟುಪಲ್ಲಿ ಎಂಬಲ್ಲಿ ಶಿವಸ್ವಾಮಿ ಅಯ್ಯರ ಹೈಸ್ಕೂಲಿನ ಸಮಾರಂಭದ ಕಾಲಕ್ಕೆ ಶ್ರೀ ಶಾಸ್ತ್ರಿಗಳು ಒಂದು ಹೊಸ ನಿಶಾನೆಯನ್ನು ಎತ್ತಿಹಿಡಿದರು.

ಈ ನಿಶಾನೆಯು ಒಂದು ಕಡೆ ಅರ್ಧ ಚಂದ್ರ (ಮುಸಲ್ಮಾನ) ಇನ್ನೊಂದುಕಡೆ ಪೂರ್ಣ ಸೂರ್ಯ (ಹಿಂದು) ಮಧ್ಯದಲ್ಲಿ ಹಿಂದುಸ್ಥಾನದ ಚಿತ್ರಗಳಿವೆ. ಈ ನಿಶಾನೆಯು ಹಿಂದು-ಮುಸಲ್ಮಾನರಿಬ್ಬರಿಗೂ ಪ್ರೇಮವನ್ನಾಗಿಯೇ ಪರಿಣಮಿಸಿ ಹಿಂದು-ಮುಸಲ್ಮಾನರು ಇದರಡಿಯಲ್ಲಿ ಒಂದಾಗಿ ನಿಲ್ಲಲೆಂದೇ ಶಾಸ್ತ್ರಿಗಳವರ ಇಚ್ಛೆ.

ಹಿಂದು ಮುಸಲ್ಮಾನರಲ್ಲಿ ಐಕಮತ್ಯವನ್ನು ಮಾಡುವ ವ್ಯಕ್ತಿಗಳೇ ಹಿಂದುಸ್ಥಾನದಲ್ಲಿಲ್ಲವೆಂದೂ ಬೇರೆ ದೇಶದವರನ್ನು ಈ ಕೆಲಸಕ್ಕೆ ಕರೆಯುವುದು ರಾಷ್ಟ್ರಕ್ಕೆ ಅವಮಾನವೆಂದೂ ಶಾಸ್ತ್ರಿಗಳು ತಮ್ಮ ಭಾಷಣದಲ್ಲಿ ಬಹಳವಾಗಿ ಮರುಗಿದರು. ಗಾಂಧೀಜಿಯವರ ಮಾತನ್ನು ಕೂಡಾ ಹಿಂದುಗಳೆಲ್ಲರೂ ಕೇಳುವುದಿಲ್ಲವೆಂದೂ ಮುಸಲ್ಮಾನರ ಪರವಾಗಿ ಒಂದು ವ್ಯಕ್ತಿಯಾದರೂ ಇಲ್ಲವೇ ಇಲ್ಲವೆಂದೂ ಶಾಸ್ತ್ರಿಗಳು ವಿಷಾದಿಸಿದರು " ಈ ಹೊಸ ನಿಶಾನೆಯಲ್ಲ ಸೂರ್ಯನಿದ್ದುದರಿಂದ ಮುಸಲ್ಮಾನರು ಅದಕ್ಕೆ ತಲೆಬಾಗಲಾರರು. ಹಿಂದುಸ್ಥಾನದ ಚಿತ್ರ ಮೂರ್ತಿಯಾಗಿ ಅವರಿಗೆ ತೋರಬಹುದು. ಹಿಂದುಗಳಿಗೇನೂ ಎಲ್ಲವೂ ದೇವರೇ ಸರಿಯಷ್ಟೆ.

---

# ಸ್ವಾತಂತ್ರ್ಯ ವೀರ ಸಾವರಕರರು ಹೀಗೆ ಸಾರಿದರು.

ಹಿಂದು ಮಹಾಸಭೆಯ ಅಧ್ಯಕ್ಷರಾದ ಸ್ವಾತಂತ್ರ್ಯ ವೀರ ವಿನಾಯಕರಾವ ಸಾವರಕರರು ಉತ್ತರ ಹಿಂದುಸ್ಥಾನದ ಪ್ರವಾಸದಲ್ಲಿದ್ದಾರೆ. ಇವರು ಬಡೋದೆಯಲ್ಲಿ ಮಾಡಿದ ಅತ್ಯಂತ ಮಹತ್ವದ ಭಾಷಣವನ್ನು ಈ ಕೆಳಗೆ ಕೊಟ್ಟಿದೆ. ಅಲ್ಲಿಂದ ದಿಲ್ಲಿಗೆ ಹೋಗಲು ಅಲ್ಲಿ ಪ್ರಚಂಡವಾದ ಸಭೆಸೇರಿ ಸ್ವಾತಂತ್ರ್ಯ ವೀರರಿಗೆ ಮಾನಪತ್ರವನ್ನು ಅರ್ಪಿಸಿದ್ದಲ್ಲದೆ ೨೦೦೦ ರೂಪಾಯಿಗಳನ್ನು ಹಿಂದುತ್ವದ ಕಾರ್ಯಕ್ಕೆ ಕಾಣಿಕೆಯಾಗಿ ಕೊಟ್ಟರು. ಆ ಸಭೆಯಲ್ಲಿ ಸ್ವಾತಂತ್ರ್ಯ ವೀರ ಸಾವರಕರರು ಹೀಗೆ ಸಾರಿದರು—



ಸ್ವಾ. ಸಾವರಕರರು.

"ಜಾತಿವಿಶಿಷ್ಟವಾಗಿ ಮಾಡಲ್ಪಡುವ ಹಿಂದು-ಮುಸಲ್ಮಾನರ ಯಾವ ಒಡಂಬಡಿಕೆಯೂ ಹಿಂದುಗಳಿಗೆ ಮಾನ್ಯವಾಗುವುದಿಲ್ಲ. ಸಂಪೂರ್ಣ ಸ್ವಾತಂತ್ರ್ಯಕ್ಕಾಗಿಯೇ ಹಿಂದು ಮಹಾಸಭೆಯು ಹೋರಾಡುತ್ತದೆ."

ದಿಲ್ಲಿಯಲ್ಲಿ ಶ್ರೀ. ಸಾವರಕರರ ಅಧ್ಯಕ್ಷತೆಯಲ್ಲಿ ಕೂಡಿದ ಹಿಂದು ಮಹಾ ಸಭೆಯ ಕಾರ್ಯನಿರ್ವಾಹಕ ಮಂಡಲವು ಈ ಕೆಳಗಿನಂತೆ ಸಾರಿತು.

"ಜಾತಿವಿಷಯಕವಾದ ಪ್ರಶ್ನೆಯಲ್ಲಿ ಹಿಂದು ಮಹಾಸಭೆಯನ್ನು ವಿಚಾರಿಸದೆ ಕಾಂಗ್ರೆಸ್ ಯಾರಿಗೂ ಯಾವ ಆಶ್ವಾಸನವನ್ನು ಕೊಡಲಿಕ್ಕೂ ಅಧಿಕಾರವುಳ್ಳದ್ದಾಗಿಲ್ಲ. ಮುಸಲ್ಮಾನರ ಹಿತಸಂಬಂಧವು ಹೇಗೆ ಮುಸ್ಲಿಂಲೀಗಿಗೆ ಸೇರಿದ್ದಾಗಿದೆಯೋ ಹಾಗೆಯೇ ಹಿಂದುಗಳ ಹಿತ ಸಂಬಂಧವು ಹಿಂದು ಮಹಾಸಭೆಗೇನೇ ಸೇರಿದ್ದಾಗಿದೆ."

## ಹಿಂದು ಸಂಘಟನೆಯ ಮಹತ್ವ.

ಶ್ರೀ. ಸಾವರಕರರು ಬಡೋದೆಯಲ್ಲಿ ಹಿಂದುಸಂಘಟನೆಯನ್ನು ಕುರಿತು ಪ್ರಚಂಡ ಸಭೆಯಲ್ಲಿ ಹೀಗೆ ಹೇಳಿದರು—

"ಹಿಂದು ಮಹಾಸಭೆಯು ರಾಷ್ಟ್ರವಿರೋಧಿಯೆಂದು ಅನೇಕರು ಪಾಪದ ಕಲ್ಪನೆಯನ್ನಿಟ್ಟುಕೊಂಡಿದ್ದಾರೆ. ಅವರು ತಮ್ಮ ಆ ದೋಷವನ್ನು ತೆಗೆದುಹಾಕಬೇಕು. ಹಿಂದು ಮಹಾಸಭೆಯಲ್ಲಿ ರಾಷ್ಟ್ರವಿರೋಧವಾದ ಒಂದು ಸಂಗತಿಯಾದರೂ ಇದ್ದರೆ ತೋರಿಸಿಕೊಡಲಿ.

ಹಿಂದುಸ್ಥಾನವು ಹಿಂದುಗಳ ದೇಶವು. ಇಲ್ಲಿ ೨೮ ಕೋಟಿ ಹಿಂದುಗಳಿದ್ದಾರೆ. ಇವರು ತಮ್ಮ ದೇಶಕ್ಕೆ ತಾವು ಒಡೆಯರಾಗುವುದು ಅರಾಷ್ಟ್ರೀಯವೆ? ರಾಷ್ಟ್ರದ್ರೋಹವೆ? ಹಿಂದುಸ್ಥಾನಕ್ಕೆ ಹಿಂದುಗಳು ನಿಜವಾದ ಹಕ್ಕುದಾರರು. ಹಿಂದುಸ್ಥಾನದ ವಿಷಯವಾಗಿ ಹಿಂದುಗಳನ್ನು ಕುರಿತು ನಾನೇ ಹೀಗೆ ಹೇಳುತ್ತೇನೆಂದು ನೀವು ತಿಳಿಯಬೇಡಿರಿ. ಜಗತ್ತಿನ ಬೇಕಾದ ದೇಶದ ಚರಿತ್ರೆ ಮತ್ತು ರಾಜ್ಯಪದ್ಧತಿಯನ್ನು ನೀವು ನೋಡಿರಿ. ಆ ದೇಶದ ಬಹು ಸಂಖ್ಯಾಕರೇ ಅದರ ಹಕ್ಕುದಾರರಾಗಿರುತ್ತಾರೆಯೋ ಅಥವಾ ಇಲ್ಲವೊ? ಯಾವ ದೇಶದ ಪಾರ್ಲಮೆಂಟಿನ ಘಟನೆಯನ್ನಾದರೂ ನೀವು ನೋಡಿರಿ. ಅಲ್ಲಿಯ ರಾಜ್ಯಸೂತ್ರ ಯಾವ ಜನರ ಕೈಯಲ್ಲಿರುತ್ತದೆಂಬುದು ನಿಮಗೇ ಗೊತ್ತಾಗುವುದು.

ಹಿಂದುಸ್ಥಾನದವರು ಇಂಗ್ಲೆಂಡ ಅಮೇರಿಕೆಗಳಲ್ಲಿದ್ದಾರಷ್ಟೆ. ಆದರೆ, ಅಲ್ಲಿಯ ರಾಜ್ಯಸೂತ್ರವೇನಾದರೂ ಅವರ ಕೈಯಲ್ಲಿ ಬರುವುದೆ? ಆಯಾಯ ದೇಶಗಳ ನಾಗರಿಕರ ಹಕ್ಕು ಅವರಿಗೆ ದೊರೆಯುವುದು. ಆದರೆ ಬಹು ಸಂಖ್ಯಾಕರಾದ ಆ ದೇಶದವರ ಕೈಯಲ್ಲಿಯೇ ರಾಜ್ಯಸೂತ್ರ ಇರುವುದಿಲ್ಲವೆ?

ಬೇರೆ ರಾಷ್ಟ್ರಗಳು ಹೇಗೆ ಹಿಂದಿ ರಾಷ್ಟ್ರವನ್ನು ತಮ್ಮಲ್ಲಿ ಸೇರಿಸಿಕೊಳ್ಳುವುದಿಲ್ಲವೋ ಹಾಗೆಯೇ ಹಿಂದಿ ರಾಷ್ಟ್ರವು ಕೂಡಾ ಬೇರೆ ರಾಷ್ಟ್ರಗಳನ್ನು ತನ್ನಲ್ಲಿ ಕೂಡಿಸಿಕೊಳ್ಳುವುದಿಲ್ಲ. ಹಿಂದುಸ್ಥಾನದಲ್ಲಿಯೇ ಮುಸಲ್ಮಾನರ ಪಾಕಿಸ್ಥಾನವನ್ನು ಉಂಟುಮಾಡಿಕೊಡಲು ಒಪ್ಪುವುದು ರಾಷ್ಟ್ರೀಯವಾದದ್ದೋ?

## ಇದು ಕಳ್ಳತನವೇನು?

ಹಿಂದು ಎಂದು ಹೇಳಿಕೊಳ್ಳಲು ಅನೇಕರು ಅಂಜುತ್ತಿದ್ದಾರೆ. ಅರಾಷ್ಟ್ರೀಯವೆಂದು ತಿಳಿಯುತ್ತಿದ್ದಾರೆ. ಹಿಂದು ಎಂದು ಹೇಳಿಕೊಂಡರೆ ಕಳ್ಳತನ ಮಾಡಿದಂತಾಯಿತೆ? ಹಿಂದುಗಳ ತಾಯಿ ತಂದೆಗಳಲ್ಲಿ ಹುಟ್ಟುವುದು ಕಳ್ಳತನವೆ? ಈ ಹೇಡಿತನದ ವಿಚಾರಗಳನ್ನು ತೆಗೆದುಹಾಕಿರಿ. ನಾನು ವಶಿಷ್ಠ ಗೋತ್ರದವನು. ನನ್ನ ಜನ್ಮಭೂಮಿ ಮಹಾರಾಷ್ಟ್ರ. ಹೀಗಿದ್ದ ಮಾತ್ರದಲ್ಲಿ ನಾನು ಪಂಜಾಬವನ್ನು ಮರೆಯಬಹುದೆ? ಪಂಜಾಬ ಪ್ರಾಂತವು ನನ್ನ ಪೂರ್ವಜರಿದ್ದ ಪವಿತ್ರ ಭೂಮಿ. ಅದು ಅನ್ಯರ ಪಾಲಾಗುವ ಹೊತ್ತು ಬಂದರೆ ನಾನು ಅಲ್ಲಿ ಪ್ರಾಣಕೊಡಲು ಮೊದಲನೆಯವನಾಗುವೆನು-ಹಿಂದುಸ್ಥಾನದಲ್ಲಿ ಹಿಂದುತ್ವವು ಪರಮ ಪವಿತ್ರವಾದ ಶುದ್ಧ ರಾಷ್ಟ್ರೀಯವಾದುದು. ಈ ದೇಶದಲ್ಲಿರುವ ಅತಿ ಅಲ್ಪ ಸಂಖ್ಯಾಕವಾದ ಜಾತಿಯ ಮೇಲಾದರೂ ಅನ್ಯಾಯಮಾಡದಿರುವುದೇ ಹಿಂದುಗಳ ನಿಜವಾದ ರಾಷ್ಟ್ರೀಯತ್ವವು."

---






ತಾ. ಶ. ೧೮೫೯ ನೆಯ ಮಾಘ ಶು|| ೧೫ ಸೋಮವಾರ.

# ಇದು ಅಂಜಿದ ಲಕ್ಷಣ.

ಕಾಂಗ್ರೆಸ್ಸಿಗೆ ಈಗ ೩೦ ಲಕ್ಷ ಜನ ಸದಸ್ಯರಿದ್ದಾರೆ. ಜಗತ್ತಿನ ಯಾವ ಸಂಸ್ಥೆಗೂ ಇಷ್ಟು ಸದಸ್ಯರಿಲ್ಲ. ಈ ಪ್ರಚಂಡ ಸಂಸ್ಥೆಯು ಪ್ರಬಲವಾಗಿರುವ ಬ್ರಿಟಿಶ್ ಸಾಮ್ರಾಜ್ಯವನ್ನು ಕೂಡಾ ಎಷ್ಟೋ ಮೆಟ್ಟಿಗೆ ಮಣಿಸಿ ಏಳು ಪ್ರಾಂತಗಳಲ್ಲಿ ತನ್ನ ಪ್ರಭುತ್ವವನ್ನು ಈಗ ಸ್ಥಾಪಿಸಿದೆ. ಇಂಥ ಸಂಸ್ಥೆಯು ಹಿಂದಿ ಸಂಸ್ಥಾನಗಳ ವಿಷಯವಾಗಿ ಮೊನ್ನೆ ವರ್ಧಾದಲ್ಲಿ ಕೂಡಿದಾಗ ಅನುಸರಿಸಿದ ರೀತಿ ನೀತಿಗಳನ್ನು ನೋಡಿದರೆ ಸಂಸ್ಥಾನಗಳಿಗೆ ಇದು ಅಂಜಿ ಹಿಂದಡಿ ಇಟ್ಟಿತೆಂದೇ ವ್ಯಕ್ತವಾಗುತ್ತದೆ. ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಸಂಸ್ಥಾನಗಳ ವಿಷಯವಾಗಿ ಮಾಡಿದ ತೀರ್ಮಾನದಲ್ಲಿ ಈ ಕೆಳಗಿನ ಮೂರು ಮುಖ್ಯ ಸಂಗತಿಗಳಿವೆ.

(೧) ಕಾಂಗ್ರೆಸ್ಸಿನ ಹೆಸರಿನಿಂದ ಸಂಸ್ಥಾನಗಳ ಒಳ ಆಡಳಿತದಲ್ಲಿ ಚಟುವಟಿಕೆಯನ್ನು ನಡೆಯಿಸಕೂಡದು. (೨) ತಮಗೆ ಬೇಕಾಗಿರುವ ಜವಾಬ್ದಾರಿ ಸರಕಾರವನ್ನು ಏರ್ಪಡಿಸಿಕೊಳ್ಳಲು ಪ್ರತ್ಯೇಕ ಸಂಸ್ಥೆಯ ಮೂಲಕ ಸಂಸ್ಥಾನದ ಪ್ರಜೆಗಳು ಪ್ರಯತ್ನಿಸಬೇಕು. ಆ ಪ್ರಯತ್ನದಲ್ಲಿ ಕಾಂಗ್ರೆಸ್ಸಿನವರು ವೈಯಕ್ತಿಕವಾಗಿ ಸೇರಬಹುದು. (೩) ಸಂಸ್ಥಾನಗಳಲ್ಲಿ ಕಾಂಗ್ರೆಸ್ ಕಮಿಟಿಗಳೇ ಸ್ಥಾಪನೆಯಾಗಬಾರದು. ಅಲ್ಲಿಯ ಪ್ರಜೆಗಳು ಬ್ರಿಟಿಶ್ ಹಿಂದುಸ್ಥಾನದಲ್ಲಿಯ ಕಾಂಗ್ರೆಸ್ ಕಮಿಟಿಗೆ ಸದಸ್ಯರಾಗಬಹುದು.

ಈ ಮೂರು ವಿಷಯಗಳಲ್ಲಿ ಮೊದಲಿನ ಎರಡು ರೀತಿಗಳೇನೋ ವಿಹಿತವೆಂದೇ ಹೇಳಬೇಕು. ಏಕೆಂದರೆ, ಸಂಸ್ಥಾನದ ಒಳ ಆಡಳಿತದಲ್ಲಿಯೂ ಕಾಂಗ್ರೆಸ್ಸು ಪ್ರವೇಶಿಸಿದ್ದಾದರೆ ಬ್ರಿಟಿಶ್ ಹಿಂದುಸ್ಥಾನಕ್ಕೂ ಹಿಂದಿ ಸಂಸ್ಥಾನಕ್ಕೂ ಪ್ರಭುತ್ವದಲ್ಲೇನೂ ವ್ಯತ್ಯಾಸವೇ ಇಲ್ಲವೆಂದು ಹೇಳಿದಂತಾದೀತು. ಆದಕಾರಣ ನಾನಾ ಪ್ರಕಾರದ ಪ್ರಭುತ್ವಗಳಿಗೊಳಪಟ್ಟ ಹಿಂದಿ ಸಂಸ್ಥಾನಗಳ ಒಳ ಆಡಳಿತದಲ್ಲಿ ಏಕ ಮುಖವಾಗಿ ನಡೆಯುವ ಕಾಂಗ್ರೆಸ್ ಸಂಸ್ಥೆಯು ಪ್ರವೇಶಿಸದಿರುವುದು ವಿಹಿತವಾಗಿಯೂ ಕ್ಷೇಮಕರವಾಗಿಯೂ ಇದೆ.

ಆದರೆ ದೇಶಿ ಸಂಸ್ಥಾನಗಳಲ್ಲಿ ಕಾಂಗ್ರೆಸ್ ಕಮಿಟಿಯೇ ಸ್ಥಾಪನೆಯಾಗಬಾರದೆಂದು ಹೇಳಿದುದೇಕೋ ತಿಳಿಯದು. ಸ್ವತಂತ್ರವಾಗಿರತಕ್ಕ ಇಂಗ್ಲಂಡ್ ಮೊದಲಾದ ಪರದೇಶಗಳಲ್ಲಿ ಕೂಡಾ ಕಾಂಗ್ರೆಸ್ ಕಮಿಟಿಯನ್ನು ಸ್ಥಾಪಿಸಬಹುದು, ಆದರೆ ಸ್ವದೇಶದಲ್ಲಿರುವ ಈ ಪರತಂತ್ರ ಸಂಸ್ಥಾನಗಳಲ್ಲಿ ಮಾತ್ರ ಸ್ವಾತಂತ್ರ್ಯದ ಜ್ಯೋತಿಯನ್ನು ತೋರಿಸುವ ಕಾಂಗ್ರೆಸ್ ಸಂಸ್ಥೆಯು ಇರಬಾರದೆ? ಎಂದಮೇಲೆ ನಿಮ್ಮ ಸ್ವಾತಂತ್ರ್ಯದ ಚಟುವಟಿಕೆಗೆ ನಮ್ಮ "ನೈತಿಕ ಬೆಂಬಲ" ಇದೆ ಎಂಬ ಮಾತಿನಲ್ಲಿ ಏನು ತಿರುಳಿದ್ದಂತಾಯಿತು? ಹರಿಪುರ ಕಾಂಗ್ರೆಸ್ ಹೀಗೆ ತೀರ್ಮಾನಮಾಡಬೇಕೆಂದು ಹೇಳುವುದೆಂದರೆ ಮೈಸೂರಿನ ದಬ್ಬಾಳಿಕೆಗೆ ಅಂಜಿ ಹಿಂದಡಿಯನ್ನಿಡಲು ಹೇಳಿದಂತೆಯೇ ಸರಿ.

ಸಂಸ್ಥಾನಗಳಲ್ಲಿ ಕೂಡಾ ಕಾಂಗ್ರೆಸ್ ಕಮಿಟಿಗಳು ಏರ್ಪಡಬೇಕಾದುದು ಅತ್ಯಗತ್ಯ. ಅಲ್ಲಿಯ ಪ್ರಜೆಗಳೇನೂ ಹಿಂದುಸ್ಥಾನದ ಹೊರಗಿನವರಲ್ಲ. ಆದರೆ ಅವರು ಕಾಂಗ್ರೆಸ್ಸಿನ ವಿಧಾಯಕ ಕಾರ್ಯಗಳಾದ ಖಾದಿ ಪ್ರಸಾರ, ಅಸ್ಪೃಶ್ಯತಾ ನಿವಾರಣೆ, ಗ್ರಾಮೋದ್ಯೋಗ ಅಭಿವೃದ್ಧಿ ಮೊದಲಾದ ಕಾರ್ಯಗಳನ್ನೇ ಮಾಡಬೇಕೆಂದೂ ಸಂಸ್ಥಾನದ ರಾಜಕಾರಣದಲ್ಲಿ ಮಾತ್ರ ಕಾಂಗ್ರೆಸ್ಸಿನ ಹೆಸರಿನಿಂದ ಆ ಕಮಿಟಿಯವರು ಕಾರ್ಯ ನಡೆಯಿಸಕೂಡದೆಂದೂ ಕಟ್ಟುಮಾಡಬಹುದು.

ಇದರಿಂದ ಸಂಸ್ಥಾನದ ಪ್ರಜೆಗಳಲ್ಲಿಯೂ ದೇಶಸೇವೆಯ ರೀತಿ ನೀತಿಗಳು ಹೆಚ್ಚಿ ಆ ಮೂಲಕ ಅಲ್ಲಿಯ ರಾಜಕಾರಣದ ಪ್ರಯತ್ನಕ್ಕೂ ಅವರು ಜನಾನುರಾಗದ ಬಲವನ್ನು ಹೊಂದಲವಕಾಶವಾಗುವುದು. ಆದಕಾರಣ ಹರಿಪುರ ಕಾಂಗ್ರೆಸ್ಸಿನಲ್ಲಿ ಈ ತಿದ್ದುಪಾಟಾಗುವುದು ಅತ್ಯವಶ್ಯಕವು. ಹಾಗಾದರೇನೇ ಕಾಂಗ್ರೆಸ್ಸಿಗೆ ಗೌರವ. ಸಂಸ್ಥಾನದ ದಬ್ಬಾಳಿಕೆಗೂ ಎಷ್ಟೋ ತಡೆ. ಇಲ್ಲದಿದ್ದರೆ ಸಂಸ್ಥಾನಗಳ ದಬ್ಬಾಳಿಕೆಗೆ ಕಾಂಗ್ರೆಸ್ಸೇ ಒಂದು ರೀತಿಯಿಂದ ಒಪ್ಪಿಗೆ ಕೊಟ್ಟ ಕಲಂಕವು ಇದಕ್ಕೆ ಬರದೆ ಇರಲಾರದು.

ಈ ಸಂದರ್ಭದಲ್ಲಿ ರಾಷ್ಟ್ರಧ್ವಜದ ಪ್ರಶ್ನೆಯೂ ಒಂದು ಮುಂದೆ ಬಂದಿದೆ. ಬ್ರಿಟಿಶ್ ಹಿಂದುಸ್ಥಾನದಲ್ಲಿ "ಯುನಿಯನ್ ಜಾಕ್" ಇದ್ದೂ ರಾಷ್ಟ್ರಧ್ವಜವು ಮೆರೆಯುವುದಿಲ್ಲವೆ? ಮೊನ್ನೆ ತಾ. ೭ ನೆಯ ದಿನ ದಿಲ್ಲಿ ಕೇಂದ್ರ ಶಾಸನ ಸಭೆಯಲ್ಲಿ ಶ್ರೀ ಅವಿನಾಶಲಿಂಗಂಚೆಟ್ಟಿಯವರು ಸೈನ್ಯ ಪ್ರದೇಶದಲ್ಲಿ ರಾಷ್ಟ್ರಧ್ವಜವನ್ನು ಇರಿಸುವ ಸಂಬಂಧವಾಗಿ ಮಾಡಿದ ಪ್ರಶ್ನೆಗೆ ಸೈನ್ಯ ಶಾಖೆಯ ಸೆಕ್ರೆಟರಿಗಳೇ ಹೀಗೆ ಹೇಳಿದರು—

"ಯುನಿಯನ್ ಜಾಕದ ಪ್ರತಿಯಾಗಿ ಹಿಂದುಸ್ಥಾನದ ನಿಶಾನೆಯು ಇದೇ ಸರಿಯೆಂದು (ರಾಷ್ಟ್ರಧ್ವಜ) ಸ್ಥಾಪಿಸುವಂತಹ ಸಮಾರಂಭವು ಮಾತ್ರ ಸೈನ್ಯ ಪ್ರದೇಶದಲ್ಲಿ ನಡೆಯಕೂಡದು. ಹಾಗೇ ರಾಷ್ಟ್ರೀಯ ನಿಶಾನೆಯನ್ನು ಎಲ್ಲಿಯಾದರೂ ಮೆರೆಯಿಸಲು ಅಡ್ಡಿಯಿಲ್ಲ."

ಆದಕಾರಣ ಮೈಸೂರು ಮೊದಲಾದ ಹಿಂದಿ ಸಂಸ್ಥಾನಗಳಲ್ಲಿಯೂ ರಾಷ್ಟ್ರಧ್ವಜವನ್ನು ಬೇಕಾದ ಹಾಗೆ ಮೆರೆಯಿಸಬೇಕು. ಆದರೆ ಅಲ್ಲಿಯ ರಾಜರ ನಿಶಾನೆಯನ್ನೇನೂ ತೆಗೆದುಹಾಕಿ ಇದನ್ನೇ ಸ್ಥಾಪಿಸುವುದಿಲ್ಲವಷ್ಟೆ.

ಹರಿಪುರ ಕಾಂಗ್ರೆಸ್ಸಿನ ಪ್ರತಿನಿಧಿಗಳು ಈ ಎಲ್ಲ ಸಂಗತಿಗಳನ್ನು ಯೋಚಿಸಿ ಸಂಸ್ಥಾನಗಳಲ್ಲಿಯೂ ಕಾಂಗ್ರೆಸ್ ಕಮಿಟಿಗಳು ಏರ್ಪಡುವಂತೆ ಮಾಡುವರೆಂದು ನಾವು ನಂಬಿದ್ದೇವೆ.

# ರಾಟೆಯಿಂದ

## ಮುಕ್ತಿ ಮತ್ತು ಸ್ವಾತಂತ್ರ್ಯ.

### ಗಾಂಧೀಜಿಯವರ ಉಪದೇಶ.

ಹರಿಪುರದ ವಿಠ್ಠಲ ನಗರದಲ್ಲಿ ಏರ್ಪಡಿಸಲ್ಪಟ್ಟದ್ದ ಖಾದಿ ಮತ್ತು ಗ್ರಾಮೋದ್ಯೋಗಗಳ ಪ್ರದರ್ಶನವು ತಾ. ೧೦-೨ ೩೮ ನೇ ದಿವಸ ಪ್ರಾತಃಕಾಲ ೯ ಗಂಟೆಗೆ ಮಹಾತ್ಮಾ ಗಾಂಧಿಯವರ ಹಸ್ತ ದಿಂದ ತೆರೆಯಲ್ಪಟ್ಟಿತು.

ಸುತ್ತಲಿನ ಪ್ರದೇಶದಿಂದ ಸಹಸ್ರಾವಧಿ ಹಳ್ಳಿಯ ಜನರು ಬಂದಿದ್ದರು. ಗಾಂಧೀಜಿಯವರು ಗುಜರಾತಿ ಭಾಷೆಯಲ್ಲಿ ಪ್ರದ ರ್ಶನದ ಮತ್ತು ಖಾದಿಯ ವಿಚಾರವಾಗಿ ಹಳ್ಳಿಯವರಿಗೆ ಹೀಗೆ ಬೋಧಿಸಿದರು—

“ಹಳ್ಳಿಯ ಜನರು ತಮ್ಮಲ್ಲಿಯೇ ಯಾವ ಯಾವ ವಸ್ತು ಗಳನ್ನು ಮಾಡಬಹುದೆಂಬುದು ಈ ಪ್ರದರ್ಶನದಿಂದ ಗೊತ್ತಾಗು ತ್ತದೆ. ಹಳ್ಳಿಯ ಜನರು ಇವುಗಳನ್ನು ನೋಡಿ ತಮಗೆ ಶಕ್ಯವಿ ರುವ ವಸ್ತುಗಳನ್ನೆ ತಾವೇ ಮಾಡಿಕೊಳ್ಳಬೇಕು. ಇದೇ ಪ್ರದ ರ್ಶನದ ಮುಖ್ಯ ಉದ್ದೇಶ.

ಹಳ್ಳಿಯ ಜನರ ಜೀವನವು ಸ್ವಾವಲಂಬಿಯಾಗಬೇಕು. ಅದ ಕ್ಕಾಗಿಯೇ ಇಂಥ ಪ್ರದರ್ಶನವನ್ನು ಏರ್ಪಡಿಸಿದ್ದಾರೆ. ಹಳ್ಳಿಯ ಜನರು ಇದರ ಉಪಯೋಗಮಾಡಿಕೊಳ್ಳಬೇಕು. ಹಿಂದುಸ್ಥಾನದ ಏಳು ಲಕ್ಷ ಹಳ್ಳಿಗಳು ಸ್ವಾವಲಂಬಿಯಾಗಬೇಕಾದರೆ ಹಳ್ಳಿಯ ಕೈಗಾರಿ ಕೆಗಳು ಬದುಕಬೇಕು.

ಖಾದಿಯು ಹಳ್ಳಿಯವರಾದ ನಿಮ್ಮ ಮುಖ್ಯ ಉದ್ಯೋಗ. ಇದನ್ನು ಬಿಡಬೇಡಿರಿ. ಇಕೋ ಸೂರ್ಯನಾರಾಯಣನ ಸಾಕ್ಷಿಯಾ ಗಿ ಖಾದಿಯನ್ನೇ ಧರಿಸುವೆವೆಂದು ಆಣೆಮಾಡಿರಿ. ರಾಟೆಯಿಂದ ಲೇ ನಮಗೆ ಮುಕ್ತಿ ಮತ್ತು ಸ್ವಾತಂತ್ರ್ಯ ದೊರೆಯುತ್ತವೆ. ರಾಟೆ ಯು ನನ್ನ ಪ್ರಾಣ. ಇದೇ ನನ್ನ ಉಸುರು.”

ಹೀಗೆ ಭಾಷಣಮಾಡುತ್ತಿರುವಾಗ ಧ್ವನಿವಾಹಕ ಯಂತ್ರವು ಕೆಟ್ಟಿತು. ಆಗ ಗಾಂಧೀಜಿಯವರು ನಕ್ಕು, ನನ್ನ ಭಾಷಣ ಇಷ್ಟ ಕ್ಕೇ ಸಾಕೆಂದು ಅದು ಸೂಚಿಸಿತೆಂಬುದಾಗಿ ಹೇಳಿದರು. ಅಷ್ಟ ರಲ್ಲಿ ಒಬ್ಬ ಮುತ್ತೈದೆಯು ತಂದ ತುಪ್ಪದ ನೀರಾಂಜನಕ್ಕೆ ದೀಪ ವನ್ನು ಹಚ್ಚಿದರು ಆ ಮೇಲೆ ವಂದೇ ಮಾತರಂ ಗೀತೆಯು ಕಾಫೀ ರಾಗದಲ್ಲಿ ಹೇಳಲ್ಪಟ್ಟಿತು.

### ಹರಿಪುರದಲ್ಲಿ ನೋಡುವುದೇನು ?

ಹರಿಪುರವು ಹಳ್ಳಿಯ ಜೀವನವು ಹೇಗೆ ಸಾಗಿಸಲ್ಪಡಬೇಕೆಂ ಬುದನ್ನು ಲಕ್ಷಾಂತರ ಜನಗಳಿಗೆ ಈಗ ಕಲಿಸುವ ವಿದ್ಯಾಪೀಠ ವಾಗಿದೆ. ಇಷ್ಟೇ ಅಲ್ಲ; ಪಾಶ್ಚಾತ್ಯ ಸುಧಾರಣೆಯ ಅತ್ಯುನ್ನತ ಸೌಲಭ್ಯಗಳಲ್ಲಿ ಒಂದಾದ ಆಕಾಶವಾಣಿಯ ಸೌಕರ್ಯವನ್ನೂ ಈ ಸಾರೆ ಹರಿಪುರ ಕಾಂಗ್ರೆಸ್ಸಿನಲ್ಲಿ ಕಾಣಬಹುದು. ತಾ. ೧೯ ಮತ್ತು ೨೦ ಈ ಎರಡು ದಿವಸ ಜರುಗುವ ಕಾಂಗ್ರೆಸ್ಸಿನ ಕಾರ್ಯಕಲಾ ಪಗಳ ಮುಖ್ಯಾಂಶವನ್ನು ಆಕಾಶವಾಣಿಯ ಮೂಲಕ ಜಗತ್ತಿಗೇನೇ ತಿಳಿಸುವ ಏರ್ಪಾಟಾಗಿದೆ. ಹೀಗೆ ಪೂರ್ವಪಶ್ಚಿಮಗಳ ಸಮ್ಮೇಲನ.

ರಾಷ್ಟ್ರೀಯ ಸಭಾಧ್ಯಕ್ಷರಾದ ಬಾಬು ಸುಭಾಷಚಂದ್ರರ ಮೆರವಣಿಗೆಯಾದರೋ ೫೧ ಎತ್ತುಗಳನ್ನು ಕಟ್ಟಿದ ಪೂರ್ವಕಾಲ ದ ಒಂದು ರಥದಲ್ಲಿ ಜರುಗಿತು. ಇದು ೫೧ ನೆಯ ರಾಷ್ಟ್ರೀ ಯ ಸಭೆ ಎಂಬುದು ಹಳ್ಳಿಯವರಿಗೆ ಕೂಡಾ ಗೊತ್ತಾಗಲು ೫೧ ಎತ್ತುಗಳನ್ನು ಹೂಡಿದ್ದರು. ಹೆಣ್ಣುಮಕ್ಕಳಿಗು ಕೂಡಾ ತಿಳಿ ಯಲು ೫೧ ರಾಷ್ಟ್ರ ಪದ್ಯಗಳನ್ನು ಮೆರವಣಿಗೆಯಲ್ಲಿ ಹೇಳುವ ವ್ಯವಸ್ಥೆ ನಡೆದಿತ್ತು.

ಎತ್ತುಗಳನ್ನು ಹೂಡಿ ಬೀಸುವ ವ್ಯವಸ್ಥೆ, ಆಕಳ ಹಾಲನ್ನೆ ಉಪಯೋಗಿಸುವ ಏರ್ಪಾಟು; ಭಂಗಿ ಕೆಲಸವನ್ನು ಮಾಡುವ ಸ್ವ ಯಂಸೇವಕರ ನಿಷ್ಠೆ, ಇವೆಲ್ಲಾ ಅಭೂತಪೂರ್ವವಾದವುಗಳು.

### ಒಂದು ಲಕ್ಷ ರೂ. ಬೆಲೆಯ ಸಿಂಹಾಸನ.

ವಿಠ್ಠಲ ನಗರದಲ್ಲಿ ಒಟ್ಟು ೨೦೦ ಅಂಗಡಿಗಳಿವೆ. ಪ್ರದ ರ್ಶನದಲ್ಲಿ ಅನೇಕ ಸೋಜಿಗದ ವಸ್ತುಗಳಿವೆ. ಮೈಸೂರಿನಿಂದ ಆನೆದಂತದ ಒಂದು ಸಿಂಹಾಸನವು ಅಲ್ಲಿಗೆ ಹೋಗಿದೆ. ಅದನ್ನು ಮಾಡಲು ೨೦ ವರುಷಗಳು ಹಿಡಿದಿವೆ. ಅದರಲ್ಲಿ ರಾಮಾಯಣ ಮಹಾಭಾರತಗಳಲ್ಲಿಯ ಅನೇಕ ಕಥೆಗಳನ್ನು ಚಿತ್ರಿಸಲಾಗಿದೆ. ಅದ ರ ಕ್ರಯ ಒಂದು ಲಕ್ಷ ರೂ. ಗಳೆಂದು ಹೇಳುವುದಾಗಿದೆ.

ಒಂದು ಉಂಗರದಲ್ಲಿ ಹಾಯ್ದು ಬರುವಷ್ಟು ಜಿನುಗಾದ ಶಾ ಲು ಕೂಡಾ ಇಲ್ಲಿ ಇದೆ.

ಶ್ರೀ. ನಂದಲಾಲ ಬೋಸರಿಂದ ಚಿತ್ರಿಸಲ್ಪಟ್ಟ ಅನೇಕ ಚಿ ತ್ರಗಳು ಬಹು ಮನೋಹರವಾಗಿವೆ. ಅತಿ ಪ್ರಾಚೀನ ಕಾಲದಿಂ ದ ಈ ವರೆಗಿನ ಚಿತ್ರಕಲೆಯಲ್ಲಿಯ ಎಲ್ಲ ಸುಧಾರಣೆಗಳನ್ನೂ ಇಲ್ಲಿ ಕಾಣಬಹುದು.

### ದಿವಂಗತ ವಿಠ್ಠಲಭಾಯಿ

ದಿವಂಗತ ವಿಠ್ಠಲಭಾಯಿ ಪಟೇಲರ ದಿವ್ಯ ಪ್ರತಿಮೆಯನ್ನು ಸುಪ್ರಸಿದ್ಧ ಶಿಲ್ಪಿಗಾರರಾದ ಶ್ರೀ. ಕರಮರಕರ ಇವರು ಸಿಮೆಂಟಿ ನಿಂದ ಸಿದ್ಧಗೊಳಿಸಿದ್ದಾರೆ. ಇದರ ಅನಾವರಣ ಸಮಾರಂಭವು ಈ ದಿನ (ತಾ. ೧೪) ರಾಷ್ಟ್ರಾಧಿಪತಿ ಬಾಬು ಸುಭಾಷಚಂದ್ರ ಬೋ ಸರ ಹಸ್ತದಿಂದ ಜರುಗುವುದು.

### ನಿಮ್ಮ ಸೇವೆ ಸಾಮಾನ್ಯವಾದುದೆ ?

ಹರಿಪುರ ಹಳ್ಳಿಯಿಂದ ಕಾಂಗ್ರೆಸ್ ಕೂಡುವ ವಿಠ್ಠಲ ನಗ ರವು ೨॥ ಮೈಲು ದೂರದಲ್ಲಿದೆ. ಆ ಹಳ್ಳಿಯಿಂದ ಕಾಂಗ್ರೆಸ್ ಕೂಡುವ ಸ್ಥಳದ ಸುತ್ತಲಿನ ಪ್ರದೇಶದ ವರೆಗೆ ಎಲ್ಲ ಕಡೆಗೂ ಸ್ವಚ್ಛತೆಯನ್ನಿಡಲು ೧೨೦೦ ಜನ ಸ್ವಯಂಸೇವಕರುಳ್ಳ ಒಂದು ಆರೋಗ್ಯ ಶಾಖೆಯೇ ಏರ್ಪಟ್ಟಿದೆ. ಈ ಶಾಖೆಯವರಿಗೆ ಗಾಂಧೀ ಜಿಯವರು ಈ ಪ್ರಕಾರ ಉಪದೇಶಪರವಾದ ಮಾತುಗಳನ್ನು ಹೇ ಳಿದರು—

“ನೀವು ಭಂಗಿ ಕೆಲಸವನ್ನು ಮಾಡಬೇಕಾಗಿದೆ. ಇದು ಕೀಳು ಕೆಲಸವಲ್ಲ. ರಾಷ್ಟ್ರಾಧಿಪತಿಗಳಾದ ನೆಹರು ಮತ್ತು ಸುಭಾಷ ಚಂದ್ರರ ಸೇವೆಗಿಂತ ನಿಮ್ಮ ಸೇವೆಯೇನೂ ಸಣ್ಣದಲ್ಲ. ನಾನೂ ಭಂಗಿ ಕೆಲಸಮಾಡಿದ್ದೇನೆ. ಇದು ಶ್ರೇಷ್ಠತರವಾದ ಸೇವೆಯು. ಮನುಷ್ಯನು ತಾನೂ ತನ್ನ ನೆರೆಯ ಸ್ಥಳವೂ ಪರಿಶುದ್ಧವಾಗಿರು ವಂತೆ ಪ್ರಯತ್ನಿಸುವುದು ಆತನ ಪ್ರಥಮ ಕರ್ತವ್ಯವೇ ಆಗಿದೆ.

ಭಂಗಿಯ ಕೆಲಸವು ಕೀಳಾದರೆ ತಾಯಿಯ ಕೆಲಸವೂ ಕೀ ಳೆಂದೇ ಹೇಳಬೇಕಾದೀತು. ತಾಯಿಯು ತನ್ನ ಮಕ್ಕಳ ಮಲ ಮೂತ್ರಗಳನ್ನು ತೆಗೆಯುವುದಿಲ್ಲವೆ ? ಅವಳಲ್ಲಾದರೂ ಒಂದು ಸ್ವಾರ್ಥವಿದೆ. ನೀವಾದರೋ ಕೇವಲ ಸೇವಾ ಭಾವನೆಯಿಂದಲೇ ಈ ಕೆಲಸ ಮಾಡುವವರಾಗಿದ್ದೀರಿ. ಲಕ್ಷಾಂತರ ಜನಗಳು ಬರುತ್ತಿ ದ್ದಾರೆ. ಇಲ್ಲಿಯ ರೀತಿನೀತಿ ಗೊತ್ತಿಲ್ಲದೆ ಅನೇಕರು ತಪ್ಪು ಮಾಡ ಬಹುದು. ಆಗ ಅವರಿಗೆ ಬಿರು ನುಡಿಗಳನ್ನು ಕೂಡಾ ಆಡದೆ ಅವ ರಿಗೆ ವಿನಯದಿಂದ ರೀತಿನೀತಿಗಳನ್ನು ಹೇಳಿರಿ. ಯಾರಿಂದಲೂ ಯಾ ವ ಆಕ್ಷೇಪಣೆಯು ಬಾರದಂತೆ ಮಾಡುವ ಭಾರ ನಿಮ್ಮ ಮೇಲಿದೆ.”

## ಇಸಿ ಫಕೀರರನ್ನು ಅಟ್ಟಿಬಿಡಿರಿ.

### ಹಿಂದುಸ್ಥಾನ ಸರಕಾರದವರ ಅಪ್ಪಣೆ.

ಗಡಿನಾಡಿನ ಶಾಂತತೆಯ ಭಂಗಕ್ಕೆ ಕಾರಣರಾದ ಇಸಿ ಫಕೀರರು ಈಗ ಗಡಿನಾಡಿನ ಆಚೆ ತೋಚಿ ನದಿಯ ದಂಡೆಯಲ್ಲಿರುವ ಮದ್ದಾಖೇಲ ಗುಂಪಿನಲ್ಲಿದ್ದಾರೆ. ಇವರು ಈ ಚಳಿಗಾಲ ಹೋಗಿ ಬೇಸಿಗೆಕಾಲ ಬಂದೊಡನೆ ಆ ಗುಂಪಿನವರಿಂದ ದೊಂಬಿ ಎಬ್ಬಿಸುವ ಸಂಭವವಿದೆ. ಆದಕಾರಣ ಗಡಿನಾಡಿನ ಶಾಂತತೆಗಾಗಿ ಹಿಂದುಸ್ಥಾನ ಸರಕಾರದವರು ಹೀಗೆ ಅಪ್ಪಣೆಮಾಡಿದ್ದಾರೆ—

"ಮದ್ದಾಖೇಲ ಗುಂಪಿನ ಅಧಿಕಾರಿಗಳು ಇಸಿ ಫಕೀರರನ್ನು ಕೂಡಲೇ ಹೊರಗೆ ಅಟ್ಟಿಬಿಡಬೇಕು. ಅಲ್ಲಿಯೇ ಇರುವುದಾದರೆ ಒಳ್ಳೆಯ ನಡತೆಯಿಂದಿರುವುದಕ್ಕೋಸ್ಕರ ಹೊಣೆಗಾರಿಕೆಯನ್ನು ಕೊಡಬೇಕು. ಈ ಅಪ್ಪಣೆಯು ನಡವಳಿಕೆಯಲ್ಲಿ ಬರುವುದಕ್ಕಾಗಿ ೧೦ ದಿನಗಳ ಅವಧಿ ಕೊಡಲಾಗಿದೆ."

ಇಸಿ ಫಕೀರರು ಪಂ. ಜವಾಹರಲಾಲರಿಗೆ ಒಂದು ಪತ್ರ ಬರೆದಿದ್ದಾರೆಂದು ಪ್ರಕಟವಾಗಿದ್ದಿತಷ್ಟೆ. ಇನ್ನು ಅದರ ಅಭಿಪ್ರಾಯ ಹೇಗೆ ನಡವಳಿಕೆಯಲ್ಲಿ ಬರುತ್ತದೋ ನೋಡಬೇಕು.

---

## ಪರದೆಯ ಹಿಂದಿನ ಹಿಂದು-ಮುಸಲ್ಮಾನರ ಐಕ್ಯದ ಚಿತ್ರ!

### ಮುಸ್ಲಿಂಲೀಗಿನ ಅಪೇಕ್ಷೆ.

ಪಂಡಿತ ಜವಾಹರಲಾಲರು ಬ್ಯಾ. ಜಿನ್ನಾರವರಿಗೆ ಮುಸ್ಲಿಂಲೀಗಿನ ಅಭಿಪ್ರಾಯವೇನೆಂಬುದನ್ನು ತಿಳಿಸಲು ಹಿಂದಕ್ಕೆ ಒಮ್ಮೆ ಪತ್ರ ಬರೆದಿದ್ದರಂತೆ. ಆಗ ಇವರಿಗೆ ಅಧಿಕಾರವೇನಾದರೂ ಇದೆಯೇ ಎಂಬುದನ್ನು ಯೋಚಿಸಿ ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಕೇಳಿದರೆ ಹೇಳಬೇಕೆಂದು ಮುಸ್ಲಿಂಲೀಗಿನವರು ನಿರ್ಧರಿಸಿದರು. ಮೊನ್ನೆ ದಿಲ್ಲಿಯಲ್ಲಿ ಮುಸ್ಲಿಂಲೀಗ್ ಕೂಡಿದಾಗ ಸಾಂಪ್ರತ ಕಾಂಗ್ರೆಸ್ ಈ ಕೆಳಗಿನ ನಾಲ್ಕು ನಿಯಮಗಳಿಗೆ ಒಪ್ಪಿದರೆ ಆಮೇಲೆ ಒಪ್ಪಂದದ ನಿಯಮಗಳನ್ನು ತಿಳಿಸಬೇಕೆಂದು ಗೊತ್ತಾಯಿತಂತೆ.

(೧) ಮುಸಲ್ಮಾನ್ ಜನರನ್ನು ಕಾಂಗ್ರೆಸ್ಸಿನಲ್ಲಿ ಸೇರಿಸಿಕೊಳ್ಳುವ ಚಟುವಟಿಕೆಯನ್ನು ಕಾಂಗ್ರೆಸ್ ನಿಲ್ಲಿಸಬೇಕು.

(೨) ವಂದೇಮಾತರಂ ಗೀತೆಯನ್ನು ಬಿಡಬೇಕು.

(೩) ಹಿಂದಿಯನ್ನು ರಾಷ್ಟ್ರಭಾಷೆಯನ್ನಾಗಿ ಮಾಡುತ್ತಿರುವ ಚಟುವಟಿಕೆಯನ್ನು ನಿಲ್ಲಿಸಬೇಕು.

(೪) ಸ್ಥಾನಿಕ ಸಂಸ್ಥೆ (ಲೋಕಲ್ ಬೋರ್ಡ) ಗಳಲ್ಲಿ ಸಂಯುಕ್ತಮತದಾರ ಪದ್ಧತಿ ಪ್ರಾರಂಭಿಸುವುದನ್ನು ನಿಲ್ಲಿಸಬೇಕು.

ಇದು ನಿಜವಿದ್ದರೆ ಈಗ ವರ್ಕಿಂಗ್ ಕಮಿಟಿಯು ಮೂಲಕ ಬರೆಯುವ ಪತ್ರಕ್ಕೆ ಇದೇ ಉತ್ತರ ಬರಬಹುದಲ್ಲವೆ?

---

—ತಾ. ೨-೨-೩೮ ನೆಯ ದಿವಸ ಪುಣೆಯಲ್ಲಿ ಜನ್ಮದಿಂದಲೆ ಮುಸಲ್ಮಾನನಾಗಿದ್ದ ಒಬ್ಬ ತರುಣನಿಗೆ ಶ್ರೀ. ಆಚಾರ್ಯ ಶಾಸ್ತ್ರಿಗಳು ವಿಧಿಪೂರ್ವಕ ಹಿಂದುಧರ್ಮದ ದೀಕ್ಷೆಯನ್ನು ಕೊಟ್ಟರು. ಆ ಕಾಲಕ್ಕೆ ಶ್ರೀ. ಮಸೂರಕರ ಮಹಾಸ್ವಾಮಿಗಳು ಆಶೀರ್ವಾದಪರ ಭಾಷಣ ಮಾಡಿದರು.

## ಹಿಂದು ಜಾತಿಗೆ ಇದ್ದ ದೊಡ್ಡ ರೋಗ ಯಾವುದು?

( ೨೦ ನೆಯ ಸಂಚಿಕೆಯಿಂದ ಮುಂದರಿದುದು. )

ಶ್ರೀ ಮುನ್ಸಿ ಈಶ್ವರ ಶರಣ— ಶುದ್ಧಿ ಮತ್ತು ಜಾತಿಭೇದ ಇವೆರಡು ಬೇರೆ ಬೇರೆ. ಇವೆರಡೂ ಕೂಡಿ ಎಂದೂ ನಡೆಯುವದಿಲ್ಲ. ನಾವು ಶುದ್ಧಿಮಾಡುವುದನ್ನು ಬಿಡಬೇಕು. ಇಲ್ಲವೆ ಜಾತಿಗಳನ್ನು ತೆಗೆದುಹಾಕಬೇಕು. ಎಲ್ಲಿಯ ವರೆಗೆ ಜಾತಿಗಳನ್ನು ತೆಗೆದುಹಾಕುವದಿಲ್ಲವೋ ಅಲ್ಲಿಯ ವರೆಗೆ ಶುದ್ಧಿಮಾಡುವುದೆಂದರೆ ಅದೊಂದು ತಮಾಷೆಯೇ ಸರಿ.

ಶ್ರೀಮತಿ ಸೀತಾಬಾಯಿ ಎಂ. ಎ.— ಪೂರ್ವದಲ್ಲಿ ಜಾತಿಗಳು ಯಾವುದೇ ಕಾರಣದಿಂದ ಉಂಟಾಗಿದ್ದರೂ ಅವು ಪೂರ್ವದಲ್ಲಿ ಎಷ್ಟೇ ಉಪಯೋಗವಾಗಿದ್ದರೂ ಸದ್ಯದಲ್ಲಿ ಮಾತ್ರ ಅವುಗಳನ್ನು ನಾಶಮಾಡಲೇಬೇಕಾಗಿದೆ. ಎಷ್ಟು ತೀವ್ರ ಇವು ನಾಶವಾಗುತ್ತವೆಯೋ ಅಷ್ಟೇ ತೀವ್ರ ನಾವು ಸ್ವಾತಂತ್ರ್ಯ ಸಮರದಲ್ಲಿ ಜಯಶೀಲರಾಗುತ್ತೇವೆ.

ಶ್ರೀ ಲಾಲಾ ಲಜಪತರಾಯರು— ಹಿಂದು ಧರ್ಮಕ್ಕೆ ಜಾತಿಭೇದವು ಒಂದು ಕಲಂಕವಾಗಿದೆ. ಬ್ರಾಹ್ಮಣ, ಅಬ್ರಾಹ್ಮಣ ಮೇಲು ಕೀಳು ಎಂಬ ಭಾವನೆಗಳು ನೆಲೆಗೊಂಡಿವೆ. ಇವುಗಳೇ ಅಸ್ಪೃಶ್ಯತೆಯನ್ನು ಉಂಟುಮಾಡಿದವು. ಎಲ್ಲಿಯ ವರೆಗೆ ಹಿಂದುಗಳು ಜಾತಿಯ ಬೇಡಿಯಿಂದ ಬಿಡುಗಡೆಹೊಂದುವುದಿಲ್ಲವೋ ಅಲ್ಲಿಯ ವರೆಗೆ ಇವರು ಸುಧಾರಿಸಿದವರೆಂದು ಎಣಿಸಿಕೊಳ್ಳಲಾರರು.

ಪಂ. ಜವಾಹರಲಾಲರು— ಹಿಂದಕ್ಕೆ ಜಾತಿಯು ಎಷ್ಟೇ ವಿಹಿತವುಳ್ಳದ್ದಾಗಿದ್ದರೂ ಅದು ಈಗ ನಮ್ಮ ಏಳ್ಗೆಗೆ ತೊಂದರೆಯನ್ನುಂಟು ಮಾಡುವುದಾಗಿದೆ. ಅದಕ್ಕೆ ಯಾವ ರೀತಿಯಿಂದಲೂ ಆಸ್ಪದ ಕೊಡದೆ ಅದರ ಬೇರು ಸಹಿತವಾಗಿ ಕಿತ್ತೊಗೆಯಬೇಕು. ಇದಕ್ಕಾಗಿ ಜಾತಪಾತ ತೋಡಕಮಂಡಲದವರು ಪ್ರಯತ್ನಿಸುತ್ತಿದ್ದಾರೆ. ಅವರ ಪ್ರಯತ್ನವು ಸಫಲವಾಗಲೆಂದೇ ನಾನು ಹಾರೈಸುತ್ತೇನೆ.

ಮಹಾತ್ಮಾ ಗಾಂಧಿಯವರು— ಹಿಂದುಗಳಲ್ಲಿಯ ಜಾತಿಗಳನ್ನು ತೆಗೆದುಹಾಕಲು ಯಾವ ಅಡ್ಡಿಯೂ ಇಲ್ಲ. ಶೂದ್ರ ಪುರುಷನು ಬ್ರಾಹ್ಮಣ ಸ್ತ್ರೀಯಳನ್ನು ಲಗ್ನವಾಗಬಹುದು.

ಸ್ವಾಮಿ ಸತ್ಯದೇವ ಪರಿವ್ರಾಜಕರು— ಜಾತಿಪಾತಿಗಳ ಗೋಡೆಗಳನ್ನು ಕೆಡವಿಬಿಡಿರಿ. ಒಡಕುಗಳನ್ನು ತೆಗೆದುಹಾಕಿರಿ. ಅಂದೇ ನಿಜವಾದ ಸಂಘಟನೆಯುಂಟಾಗುವದು.

ಬಾಬು ಸುಭಾಷಚಂದ್ರ ಬೋಸರು— ಜಾತಿಪಾತಿಗಳನ್ನು ತೆಗೆದುಹಾಕುವುದರಲ್ಲಿ ನನಗೆ ಸಂಪೂರ್ಣ ವಿಶ್ವಾಸವಿದೆ. ಮತ್ತು ನಾನು ನನ್ನ ದೃಷ್ಟಿಯಿಂದ ಪ್ರಚಾರವನ್ನು ಮಾಡುತ್ತಿದ್ದೇನೆ. ಪರಸ್ಪರ ಭಿನ್ನ ರಕ್ತ ಸಂಬಂಧದಿಂದ ಉಂಟಾಗುವ ಸಂತಾನವು ಬಹು ಉತ್ಸಾಹವುಳ್ಳದ್ದೂ ಮತ್ತು ಚಟುವಟಿಕೆಯುಳ್ಳದ್ದೂ ಆಗುತ್ತದೆ. ಆದುದರಿಂದ ಈ ಎಲ್ಲ ದೃಷ್ಟಿಯಿಂದ ಜಾತಿಪಾತಿಗಳನ್ನು ತೆಗೆದುಹಾಕುವುದು ಬಹಳ ಅಗತ್ಯವಾಗಿದೆ. ಆದಕಾರಣ ಜಾತಪಾತ ತೋಡಕಮಂಡಲದವರ ಪ್ರಯತ್ನವನ್ನು ನಾನು ಮನಃಪೂರ್ವಕ ಅಭಿನಂದಿಸುತ್ತೇನೆ.

ಡಾ. ಮುಂಜೆಯವರು— ಹಿಂದುಗಳಲ್ಲಿಯ ಅಂತರ್ಜಾತೀಯ ವಿವಾಹದಿಂದಲೇ ನಾವು ಜಾತಿಪಾತಿಗಳನ್ನು ತೆಗೆದುಹಾಕುವೆವು.

"ಕ್ರಾಂತಿ"

# ದೇವರು ನಮಗೇಕೆ ಕಾಣಿಸುವದಿಲ್ಲ?

(ಕು. ಪಾರ್ವತೆವ್ವ ತಂದಿ ಗುರುಸಿದ್ಧಪ್ಪ ಬಳ್ಳಾರಿ ಗದಗ ಇವರು ಬೆಂಗಳೂರ ಶ್ರೀ ಶಿವಯೋಗಿ ಸರ್ಪಭೂಷಣ ಮಠದ ಪರಮಪೂಜ್ಯ ಶ್ರೀ ಮ. ನಿ. ಮಹದೇವಸ್ವಾಮಿಗಳು ಗದಿಗಿಗೆ "ಅಕ್ಕನ ಬಳಗ" ದ ಉದ್ಘಾಟನ ಸಮಾರಂಭಕ್ಕೆ ಆಗಮಿಸಿದ ಕಾಲದಲ್ಲಿ ಓದಿದ ನಿಬಂಧವು.)

ಪೂಜ್ಯ ಪಾದರ ಪಾದ ಕಮಲಗಳಿಗೆ ವಂದಿಸಿ, ನಮ್ಮಗಳ ಅಭಿಮಾನ ಮತ್ತು ಆರಾಧ್ಯ ದೇವತಿಯಾದ ಅಕ್ಕಮಹದೇವಿಯನ್ನು ಅನನ್ಯ ಭಕ್ತಿಯಿಂದ ಬೇಡಿಕೊಂಡು ಇಲ್ಲಿ ನೆರೆದ ಹಿರಿಯರಾದ ತಂದೆ-ತಾಯಿಗಳಿಗೆ ಶಿರಬಾಗಿ "ದೇವರು ನಮಗೇಕೆ ಕಾಣಿಸುವುದಿಲ್ಲ ?" ಎಂಬ ವಿಷಯುವಾಗಿ ನನ್ನ ಅಲ್ಪ ಮತಿಗೆ ತಿಳಿದದ್ದನ್ನು ಹೇಳುವೆನು. ಇದರಲ್ಲಿಯ ಒಪ್ಪನ್ನಾರಿಸಿಕೊಂಡು ತಪ್ಪನ್ನು ಕ್ಷಮಿಸಬೇಕಾಗಿ ಬೇಡುವೆನು.

ಬಸವಣ್ಣನವರು ದೇವರು ಎಲ್ಲಿ ಇದ್ದಾನೆ, ಹೇಗಿದ್ದಾನೆ ಎಂಬದನ್ನು ಈ ವಚನದಲ್ಲಿ ಹೇಳಿದ್ದಾರೆ. "ಎತ್ತೆತ್ತ ನೋಡಿದತ್ತ ನೀನೇ ದೇವಾ, ಸಕಲವಿಸ್ತಾರದರೂಹು ನೀನೇ ದೇವಾ, ವಿಶ್ವತೋಚಕ್ಷು ನೀನೇ ದೇವಾ, ವಿಶ್ವತೋ ಮುಖ ನೀನೇ ದೇವಾ, ವಿಶ್ವತೋ ಬಾಹು ನೀನೇ ದೇವಾ, ವಿಶ್ವತೋ ಪಾದ ನೀನೇ ದೇವಾ, ಕೂಡಲ ಸಂಗಮ ದೇವಾ." ಹೀಗೆ ದೇವರು ಎಲ್ಲ ಕಡೆಯಲ್ಲಿಯೂ ಎಲ್ಲ ರೂಪದಲ್ಲಿಯೂ, ಎಲ್ಲ ಪ್ರಾಣಿಗಳಲ್ಲಿಯೂ ತುಂಬಿಕೊಂಡಿದ್ದಾನೆ. ಅಂತೇ ನಮ್ಮ ಶರಣರ ಕಾಲಕ್ಕೆ ದೇವರು ಅವರು ನೆನೆದಲ್ಲಿ ಕರೆದಲ್ಲಿ, ಕುಳಿತಲ್ಲಿ, ನಿಂತಲ್ಲಿ, ಬಂದಲ್ಲಿ, ಹೋದಲ್ಲಿ ಕಾಣಿಸುತ್ತಿದ್ದನೆಂದು ಅವರೂ ಹೇಳಿದ್ದಾರೆ. ನಾವೂ ಕೇಳಿದ್ದೇವೆ ಹಾಗಾದರೆ ಈಗ ನಮಗೇಕೆ ಕಾಣಿಸುವುದಿಲ್ಲ ? ಬಸವಣ್ಣನವರು ೧೨ನೇ ಶತಮಾನದಲ್ಲಿದ್ದರು. ನಾವು ೨೦ ನೆಯ ಶತಮಾನದಲ್ಲಿದ್ದೇವೆ. ಆ ಕಾಲ ಬೇರೆ, ಈ ಕಾಲ ಬೇರೆ ಎಂದು ಹೇಳಬೇಕೆ ? ಇಂಥಾ ಕಾಲದಲ್ಲಿದ್ದವರಿಗೇನೇ ನಾನು ಒಲಿಯುತ್ತೇನೆಂದು ದೇವರು ಎಲ್ಲಿಯಾದರೂ ಹಾಗೆ ಹೇಳಿರುವನೆ ? ಹಾಗಿದ್ದರೆ ದೇವರು ಅದನ್ನಾದರೂ ಸ್ಪಷ್ಟ ಹೇಳಿ ಬಿಡಲಿ. ಅಂದರೆ ಈ ದೇವರ ಮೇಲಿನ ಆಶೆಯನ್ನಾದರೂ ಬಿಡಲಿಕ್ಕೆ ಬರುತ್ತದೆ. ವ್ಯರ್ಥ ಈ ದೇವರ ದೆಶೆಯಿಂದ ಕಷ್ಟಪಡುವುದಾದರೂ ತಪ್ಪುತ್ತದೆ. ದೇವರ ಹೆಸರಿನಿಂದ ಹೊಳೆಯಾಗಿ ಹರಿಯುವ ಹಣವಾದರೂ ಉಳಿಯುತ್ತದೆ.

ಬಸವಣ್ಣನವರ ಕಾಲಕ್ಕೊಬ್ಬ ದೇವರು ಬೇರೆಯಿದ್ದರು ಈಗೊಬ್ಬ ಬೇರೆ ಇರುತ್ತಾನೆ. ಹೀಗೇನಾದರೂ ಇರುತ್ತದೆಯೇ ? ಅವರು ಹುಟ್ಟಿದ ಭೂಮಿ ಬೇರೆ, ನಾವು ಹುಟ್ಟಿದ ಭೂಮಿ ಬೇರೆ, ಅವರ ಧರ್ಮ ಬೇರೆ, ನಮ್ಮ ಧರ್ಮ ಬೇರೆ, ಅವರ ಸಂಸ್ಕಾರ ಬೇರೆ, ನಮ್ಮ ಸಂಸ್ಕಾರ ಬೇರೆ, ಅವರ ಅಷ್ಟಾವರಣ ಬೇರೆ ನಮ್ಮ ಅಷ್ಟಾವರಣ ಬೇರೆ. ಇದರಲ್ಲೇನಾದರೂ ಹೆಚ್ಚು ಕಡಿಮೆ ಇದೆಯೆನ್ನಬೇಕೆ ? ಸೃಷ್ಟಿಯ ನಿಯಮದಲ್ಲೇನಾದರೂ ಬದಲಾವಣೆಯಾಗಿದೆಯೆನ್ನಬೇಕೇ ? ಏನೂ ಇಲ್ಲ. ಅದೇ ದೇವರು, ಅದೇ ಭೂಮಿ, ಅದೇ ಆಕಾಶ, ಅದೇ ಸೂರ್ಯ ಚಂದ್ರರು, ಅದೇ ಗಾಳಿ, ಅದೇ ನೀರು, ಅದೇ ಆಹಾರ, ಅದೇ ದೇಶ, ಅದೇ ಧರ್ಮ, ಅದೇ ಸಂಸ್ಕಾರ, ಅದೇ ಅಷ್ಟಾವರಣ ಎಲ್ಲವೂ ಅದೇ. ಹೀಗೆ ಎಲ್ಲಾ ಅಭೇದವಿದ್ದಮೇಲೆ ಬಸವಣ್ಣನವರಿಗೆ, ಅವರ ಕಾಲದಲ್ಲಿದ್ದವರಿಗೆ ದೇವರು ಯಾಕೆ ಒಲಿಯಬೇಕು ? ಅದೇ ಅವರ ಅನುಯಾಯಿಗಳಾದ ನಮಗೇಕೆ ದೇವರು ಒಲಿಯಬಾರದು ? ನಿಮಗಷ್ಟೇ ದೇವರು ಒಲಿಯುತ್ತೇನೆಂದು ದೇವರೇನಾದರೂ ಅವರ ಕೂಡ ಕರಾರು ಮಾಡಿಕೊಂಡಿದ್ದನೇ ಹೇಗೆ ?

ಹಿಂದಿನ ಕಾಲದವರು ದೇವರ ಪೂಜೆಯಲ್ಲಿ ಒಳ್ಳೇ ಧುರೀಣರಿದ್ದರು. ದೇವರು ಬೇಡಿದ್ದನ್ನು ಕೊಡುತ್ತಿದ್ದರು. ಎಂದರೆ ಇಂದಿನವರು ಪೂಜೆಮಾಡುವದರಲ್ಲೇನು ಕಡಿಮೆ ಇದ್ದಾರೆಯೆ? ದಿನಕ್ಕೆ ಮೂರು ಸಾರೆ ಜಳಕ ಮಾಡುವವರು ನಮ್ಮಲ್ಲೆಷ್ಟು ಮಂದಿ ಇಲ್ಲ ? ವರುಷಕ್ಕೆ ಈ ಪೂಜಾ ದೆಶೆಯಿಂದ ಎಷ್ಟು ವಿಭೂತಿಗಟ್ಟಿಗಳು ಎಷ್ಟು ಗಿಡಬಳ್ಳಿಗಳ ಪತ್ರಿಪುಷ್ಪಗಳು ವಿನಿಯೋಗವಾಗಿ ಹೋಗುತ್ತವೆಂಬುದನ್ನು ನೋಡಿದರೆ ಯಾರು ಹೆಚ್ಚು ಪೂಜೆಮಾಡುತ್ತಾರೆನ್ನುವದು ಮತ್ತೊಬ್ಬರು ಹೇಳುವುದೇ ಬೇಡ. ತಾನೇ ಗೊತ್ತಾಗುತ್ತದೆ. ಸಮಾಜಕ್ಕಾಗಿ, ದೇಶಕ್ಕಾಗಿ ಒಂದು ಕಾಸು ಬೇಡಿದರೆ ಇಲ್ಲೆನ್ನುವರು. ಬೆಂದೊಡಲಿಗೆ, ತೆರೆದ ಮೈಯಿಗೆ ಒಂದು ತುಣುಕು ರೊಟ್ಟಿ, ಒಂದು ಗೇಣು ಬಟ್ಟೆ ಕೈಯತ್ತಿ ಕೊಡದವರು ಈ ಸ್ಥಾವರ ಗುಡಿ ಗುಂಡಾರಗಳನ್ನು ಕಟ್ಟಿಸುವದರ ದೆಶೆಯಿಂದ ಇವುಗಳ ಜಾತ್ರೆ ದೆಶೆಯಿಂದ ಇವುಗಳ ಪೂಜೆ ಪುನಸ್ಕಾರಗಳು ಅವಿಚ್ಛಿನ್ನವಾಗಿ ನಡೆಯುವ ದೆಶೆಯಿಂದ ಈ ದೇವರುಗಳಿಗಾಗಿ ಹೊತ್ತ ಹರಕೆ ದೆಶೆಯಿಂದ ಹೀಗೆ ಅನೇಕ ವಿಧವಾಗಿ ನಮ್ಮವರು ಧನವನ್ನು ಸೂರೆ ಮಾಡುತ್ತಿರುವದು ಸಾಮಾನ್ಯವಾಗಿ ಪ್ರತಿನಿತ್ಯ ಎಲ್ಲರೂ ನೋಡುತ್ತಿರುವಾಗ ಇವುಗಳನ್ನು ಕಣ್ಣು ಮುಚ್ಚಿ ತೆಗೆದುಕೊಳ್ಳುತ್ತಿರುವ ಆ ದೇವರಿಗೆ ನಮ್ಮವರ ಭಕ್ತಿಯು ಗೊತ್ತಿಲ್ಲವೆಂದು ಅದು ಹೇಗೆ ಹೇಳುವುದು ? ಒಂದು ವೇಳೆ ಇನ್ನೂ ತನಗೇನಾದರೂ ಕಡಿಮೆ ಬಿದ್ದಿದ್ದರೆ ಬೇಕಾಗಿದ್ದರೆ ಅದನ್ನು ಬಾಯಿಬಿಚ್ಚಿ ಕೇಳಿದರೆ ನಮ್ಮವರೇನು ಕೊಡದಂತಿರುವರೆ ? ಕೇಳುವದಕ್ಕೆ ಅಭಿಮಾನಪಟ್ಟು ತಾನು ಹೊರಗೆ ಬಂದು ಕಾಣಿಸಿಕೊಳ್ಳದಿದ್ದರೆ ಅದರಲ್ಲಿ ನಮ್ಮವರದೇನು ತಪ್ಪು ?

ಮೋರೆ ನೋಡಿ ಮಣೆ ಹಾಕುವುದು ಮನುಜರ ಸ್ವಭಾವ. ದೇವರೂ ಹೀಗಿದ್ದಾನೆನ್ನುವುದು ಯಾರಿಗೆ ಗೊತ್ತು ? ಅಂಬಿನಿಂದೆಚ್ಚ ನರರಿಗೊಲಿದ ಈ ದೇವರು. ಬಾಣಾಸುರನ ಮನೆಯ ಬಾಗಿಲ ಕಾಯ್ದ ನೀದೇವರು, ಕಲ್ಲಿನಿಂದಿಟ್ಟ ಸಾಂಖ್ಯತೊಂಡನಿಗೆ ಮೆಚ್ಚಿ ವೈದೋರಿದನೀ ದೇವರು, ಪಿಟ್ಟವ್ವೆಯ ಮನೆಯ ಬಿಟ್ಟಿಗೆ ಲಸ ಮಾಡಿದನೀ ದೇವರು, ಹೀಗೆ ತನ್ನನ್ನು ಕಾಡಿ ಬೇಡಿ ಬಲತ್ಕರಿಸಿ ತೊಂದರೆ ಕೊಟ್ಟವರಿಗೆ ಅಧೀನನಾಗಿ ಆಳಾಗಿ ಅವರು ಬೇಡಿದ್ದನ್ನು ಕೊಟ್ಟನೀ ದೇವರು, ಅದೇ ನಮ್ಮವರು ಈ ದೇವನಿಗೆ ಕರ್ಪೂರ ಹಚ್ಚಿ. ಕಾಯಿ ಒಡೆದು, ಹಣ್ಣುಹಂಪಲ ಕೊಟ್ಟು ತರತರದ ಪಂಚಪಕ್ವಾನ್ನಗಳನ್ನು ಮಾಡಿ, ನೀಡಿ ಅಷ್ಟವಿಧಾರ್ಚನೆ ಷೋಡಶೋಪಚಾರಗಳಿಂದ ಪೂಜಿಸಿ ಕಾಲುಬಿದ್ದು ಕೈಮುಗಿದು ಬೇಡಿಕೊಂಡರೆ ಬೇಕೆನ್ನನು, ಸಾಕೆನ್ನನು, ಕರೆದರೆ 'ಓ' ಎನ್ನನು ಕಂಡಿಹನೆಂದರೆ ಕಾಣಿಸನು. ಈ ಪರಿ ನಮ್ಮವರನ್ನು ಮಾತ್ರ ಈ ದೇವರು ಕಾಡುತ್ತಿರುವನು ಇದರ ಮೇಲಿಂದ ಅಂಜುವವರಿಗೆ, ಅಳುಕುವವರಿಗೆ ಸುಮ್ಮನಿರುವವರಿಗೆ ದೇವರೂ ಕೇಳುವುದಿಲ್ಲ. ಬಲಿಷ್ಠರಿಗಷ್ಟೇ ದೇವರು ಬಾಯ್ದೆರೆಯುವನೆಂದಂತಾಯಿತು.

ಛೀ ! ದೇವರಿಗೆ ಹೀಗೆ ಹೆಸರಿಡಬಹುದೆ ? ದೇವರು ಭಕ್ತಾಭಿಮಾನಿಯು. ಭಕ್ತಾಧೀನನು. ಶ್ವೇತನಂಥ ಕಡು ಪಾಪಿಗೆ ಕರುಣಿಸಿದ ದೇವರು. ಮಾದಾರ ಚನ್ನಯ್ಯನ ಅಂಬಲಿಯನ್ನು ಅಮೃತದಂತೆ ಸುಂದ ದೇವರು ಇಂಥ ದಯಾನಿಧಿ ದೇವರಿಗೆ ನಮ್ಮವರು ವಾಣಿಯಿಂದ ತನುವಿನಿಂದ ಧನದಿಂದ ಮಾಡುತ್ತಿರುವ ಸೇವೆಯು ದೇವರವರಿಗೆ ಮುಟ್ಟಲ್ಲವೆಂದಾದರೂ ಹೇಗೆ ಹೇಳುವದು ? ಸುಧಾರಿಸಿದ ಈ ೨೦ ನೇ ಶತಮಾನದ ವಿಜ್ಞಾನ ಯುಗದಲ್ಲಿಯೂ ದೇವರು ನಮ್ಮವರಿಗೆ ಕಾಣದಿರಬೇಕಾದರೆ ಅದಕ್ಕೇನಾದರೊಂದು ಕಾರಣವಿದ್ದಿರಬೇಕು ಇದಕ್ಕೆ ಅನೇಕರು ಅನೇಕ ಕಾರಣ ಹೇ[illegible]ದ್ದರೂ ಹೇಳುತ್ತಿದ್ದರೂ ಈ ಬಗ್ಗೆ ಮಹಾತ್ಮರಾದ ಮೈಲಾ[illegible]

ಬಸವಪ್ಪನವರು ಒಂದು ಕಾರಣ ಹೇಳಿದ್ದು ಅದು ವಿಚಾರವಾಡುವಂಥಾದ್ದಿರುತ್ತದೆ. ಅದೇನೆಂದರೆ—

ಶಿವನು ಕೈಲಾಸದಿಂದ ಬಸವಣ್ಣನವರನ್ನೂ ಅವರ ಸಹಾಯಕ್ಕೆ ಉಳಿದ ಶರಣರನ್ನೂ ಭೂತಲದಲ್ಲಿ ತನ್ನ ಧರ್ಮ ಬೆಳೆಯಿಸಿ ಬರಲು ಹೇಳಿ ಕಳುಹಿಸಿ ಕೊಟ್ಟನು. ಅದರಂತೆ ಬಸವಣ್ಣನವರು ಬಂದು ಈ ಧರ್ಮವನ್ನಷ್ಟೇ ಬೆಳೆಯಿಸಿ ಬಿಡಲಿಲ್ಲ. ಈ ಭೂಮಿಯನ್ನೇ ಭೂಕೈಲಾಸ ಮಾಡಿಬಿಟ್ಟರು. ಇವರ ಪರಿಣಾಮವೇನಾಯಿತೆಂದರೆ ಶಿವನನ್ನು ಕಾಣಬೇಕು ಶಿವನ ಕೈಲಾಸಕ್ಕೆ ಹೋಗಬೇಕು, ಎಂದು ಮೊದಲಿಗೆ ನಮ್ಮವರಲ್ಲಿ ಏನು ಭ್ರಾಂತಿಯಿತ್ತೋ ಅದೆಲ್ಲ ಹಾರಿ ಹೋಗಿ ಬಿಟ್ಟಿತು. ಬಸವಣ್ಣನವರ ಕಾಲದಲ್ಲಿ ಶಿವನಿದ್ದಲ್ಲಿ ಇವರು ಹೋಗುವುದರ ಬದಲು ಶಿವನೇ ಇವರಿದ್ದಲ್ಲಿಗೆ ಬರಬೇಕಾಯಿತು ಒಮ್ಮೆ ಶಿವನು ಬಸವಣ್ಣನವರಿದ್ದಲ್ಲಿಗೆ ಬಂದು ನಿನಗೇನು ಬೇಕು ಎಂದು ಕೇಳಲಾಗಿ ನನಗೇನೂ ಬೇಡ, ಇಲ್ಲಿಗಿಂತ ನಿಮ್ಮ ಕೈಲಾಸದಲ್ಲೇನು ಹೆಚ್ಚಿಗಿದೆ? ಇಲ್ಲಿ ಗುರು ಲಿಂಗ ಜಂಗಮದಾಸೋಹದಲ್ಲಿಯೇ ಸಕಲ ಪಡಿ ಪದಾರ್ಥಗಳಿವೆ. ಬಂದದ್ದಕ್ಕೆ ನೀವೇನಾದರೂ ಅನುಗ್ರಹಿಸಬೇಕೆಂದಿದ್ದರೆ ನಿಮ್ಮ ಶರಣರ ಪಾದಸೇವೆಯನ್ನು ಇದಕ್ಕೂ ಹೆಚ್ಚಾಗಿ ಮಾಡುವ ಸಾಮರ್ಥ್ಯವನ್ನು ದಯಪಾಲಿಸಿರೆಂದು ಬೇಡಿಕೊಂಡರು.

ಮತ್ತೊಮ್ಮೆ ಶಿವನು ಬಂದು ಬಸವಣ್ಣ ನಿನ್ನ ಬಿಟ್ಟು ನಾನಿರಲಾರೆ. ಇಲ್ಲಿಗೆ ನೀ ಬಂದ ಕೆಲಸವಾಯಿತು ನಡೆ ಹೋಗೋಣ ಕೈಲಾಸಕ್ಕೆ ಎಂದು ಕರೆದದ್ದಕ್ಕೆ ಬಸವಣ್ಣನವರು ದೇವಾ, ದೇವ ಲೋಕ ಮರ್ತ್ಯಲೋಕವೆಂಬುದು ಬೇರೆ ಮತ್ತುಂಟೆ? ಶಿವಭಕ್ತನಿದ್ದ ತಾವೇ ದೇವ ಲೋಕ, ಭಕ್ತನಂಗಣವೇ ವಾರಣಾಸಿ, ಕಾಯವೇ ಕೈಲಾಸವೆಂದು ಹೇಳಿ ಕಳುಹಿಸಿದರಂತೆ. ಇದರಿಂದ ಶಿವನಿಗೆ ದೊಡ್ಡ ಆಲೋಚನೆಬಿತ್ತಂತೆ. ಇದಕ್ಕೇನುಪಾಯಮಾಡಬೇಕೆಂದು ಕೈಲಾಸದಲ್ಲಿ ಒಂದು ಆಲೋಚನೆ ಸಭೆಕರೆದನಂತೆ. ಸಭೆಯ ಮುಂದೆ ಬಂದ ಅನೇಕ ಸೂಚನೆ ಉಪಸೂಚನೆಗಳ ವಿಚಾರವಾಗಿ ಕಡೆಗೆ ಪ್ರಮಥರು ಮಂಡಿಸಿದ "ನಮ್ಮ ಕೈಲಾಸವನ್ನೂ ಬಸವಣ್ಣನ ಕರ್ಮಭೂಮಿಯನ್ನೂ ಧರ್ಮಚಿಂತಾಲಿನಿಂದ ತೂಗಿ ನೋಡಿ ತೂಕದಲ್ಲಿ ಯಾರ ಭಾರ ಹೆಚ್ಚಾಗುತ್ತದೆಯೋ ಅವರೇ ಗೆದ್ದಂತೆ." ಎಂಬ ಸೂಚನೆಯು ಸರ್ವಾನುಮತದಿಂದ ಪಾಸಾಯಿತಂತೆ.

ಅದರಂತೆ ಮೊದಲಿಗೆ ಕೈಲಾಸವನ್ನೂ ಶರಣನಿರುವ ಈ ಭೂಮಿಯನ್ನೂ ತೂಕಮಾಡಿ ನೋಡಿದರಂತೆ. ಕೈಲಾಸವು ಮೇಲಕ್ಕೆ ಹೋಯಿತಂತೆ. ಈ ಭೂಮಿಯು ನೆಲಬಿಟ್ಟು ಏಳಲಿಲ್ಲವಂತೆ. ಇದರಿಂದ ದೇವರಿಗೆ ದಿಗಿಲು ಬಿದ್ದು ತಾನು ಸೃಷ್ಟಿಯನ್ನು ಹುಟ್ಟಿಸಿದಂದಿನಿಂದ ಹಿಡಿದು ಶರಣರ ಕಾಲದ ವರೆಗೆ ಕೈಲಾಸಕ್ಕೆ ಹೋದವರನ್ನೆಲ್ಲಾ ಒಬ್ಬೊಬ್ಬರನ್ನಾಗಿ ತಂದು ತನ್ನ ಪರಡಿಯಲ್ಲಿ ಕೂಡ್ರಿಸಿದರೂ ಮಿಟ್ಟುಮಿಸಗಲಿಲ್ಲವಂತೆ ನಮ್ಮ ಶರಣರು ಕುಳಿತ ಭೂಮಿಯ ಪರಡಿ. ಶಿವನು ಹೇಗಾದರೂ ಮಾಡಿ ಈ ಪಣದಲ್ಲಿ ಗೆದ್ದೇತೀರಬೇಕೆಂದು ಸಾನಂದ ಗಣರು ೨೮ ಕೋಟಿ ನಾಯಕನರಕಿಗಳನ್ನೆಲ್ಲ ಯಮಪುರಿಯಿಂದ ಉದ್ಧಾರಮಾಡಿ ಕೈಲಾಸಕ್ಕೆ ಕರತಂದಿದ್ದವರನ್ನೆಲ್ಲಾ ಒಮ್ಮಿಗಲೇ ತಂದು ಕೂಡ್ರಿಸಿ ತೂಕನೋಡಿದರೂ ಅದಕ್ಕೂ ಸಂಬರಲಿಲ್ಲವಂತೆ. ಕಡೆಗೆ ಶಿರಿಯಾಳಶೆಟ್ಟಿ ಸಹಿತ ಅವನ ಕಂಚಿಪುರವನ್ನೂ ಅದರಂತೆ ತಂದ ಎಷ್ಟೋ ರಾಜರ ದೇಶವನ್ನೂ ತಂದು ತಂದು ತನ್ನ ಕಡೆಗಿದ್ದ ಪರಡಿಯಲ್ಲಿ ಒಟ್ಟಿದರೂ ಅದಕ್ಕೂ ಸಂಬಾರದಿರಲು ಶರಣನಿರತಕ್ಕ ಈ ಭೂಮಿಗೆ ತನ್ನ ಕೈಲಾಸವು ಸಂಬರಲಿಲ್ಲವೆಂಬ ಚಿಂತೆಯಿಂದ ಅಂದಿನಿಂದ ಇಂದಿನ ವರೆಗೆ ಈ ನಮ್ಮ ದೇಶದವರಿಗೆ ಶಿವನು ಮೋರೆ ತೋರಿಸದೆ ಹೋದನಂತೆ. ಇದೇ ದೇವರು ಕಾಣಿಸದಿರಲಿಕ್ಕೆ ಅವರು ಹೇಳಿದ ಕಾರಣವು. ಇಷ್ಟು ಹೇಳಿ ಪುನಃ ತಮ್ಮೆಲ್ಲರಿಗೆ ವಂದಿಸಿ ಮುಗಿಸುವೆನು.

# ಬ್ಯಾ. ಜಿನ್ನಾರವರ ಭಯಸೂಚಕ ಗಂಟೆ!

ಬ್ಯಾ. ಜಿನ್ನಾರವರಿಗೆ ಕಳೆದ ೨೦ ನೆಯ ತಾರೀಖಿನ ದಿವಸ ದಿಲ್ಲಿಯಲ್ಲಿ ಮುಸಲ್ಮಾನರು ಮುಸಲ್ಮಾನರ ಪ್ರಚಂಡ ಸಭೆ ಸೇರಿಸಿ ಒಂದು ಮಾನಪತ್ರವನ್ನು ಅರ್ಪಿಸಿದರು. ಆಗ ಅದಕ್ಕೆ ಉತ್ತರವಾಗಿ ಬ್ಯಾ. ಜಿನ್ನಾರವರು ಹೀಗೆ ಹೇಳಿದರು—

"ಗಡಿನಾಡಿನಲ್ಲಿ ನೂರಕ್ಕೆ ೯೫ ಜನರು ಮುಸಲ್ಮಾನರಿದ್ದಾರೆ. ಅಲ್ಲಿ ಕಾಂಗ್ರೆಸ್ಸಿನ ರಾಜ್ಯವಿದ್ದುದರಿಂದ ವರ್ಧಾದಲ್ಲಿಯ ಅಪ್ಪಣೆಯಂತೆ ಅವರು ನಡೆಯುತ್ತಿದ್ದಾರೆ. ಇದು ನಮ್ಮ ಅಧೋಗತಿಯ ಲಕ್ಷಣ. ಉಳಿದ ಆರು ಪ್ರಾಂತಗಳಲ್ಲಿ ಹಿಂದುಗಳ ಬಹುಮತವಿರುವುದರಿಂದ ಅಲ್ಲಿ ಹಿಂದುಗಳ ರಾಜ್ಯವೇ ಇದೆ. ಹಿಂದುಗಳು ತಮಗೆ ಬೇಕಾದುದನ್ನು ಅಲ್ಲಿ ಅವರು ಮಾಡಿಕೊಳ್ಳುತ್ತಿದ್ದಾರೆ. ನಮ್ಮ ಕುತ್ತಿಗೆಯು ಕಾಂಗ್ರೆಸ್ಸಿನ ಕೈಯಲ್ಲಿ ಸುರಕ್ಷಿತವಾಗಿರುವಂತಿಲ್ಲ.

### ಭಯಸೂಚಕ ಗಂಟೆ!

ವಂದೇಮಾತರಂ ಗೀತೆಯನ್ನು ಹೇಳುವುದು, ಹಿಂದಿ ರಾಷ್ಟ್ರಭಾಷೆಯಾಗಲು ಪ್ರಯತ್ನಿಸುತ್ತಿರುವುದು ಬೆಂಕಿ ಹತ್ತಿದ ಲಕ್ಷಣ. ಅಂತೆಯೇ ಮುಸಲ್ಮಾನರೇ, ಜಾಗೃತರಾಗಿರೆಂದು ನಾನು ಭಯಸೂಚಕ ಈ ಗಂಟೆಯನ್ನು ಬಾರಿಸುತ್ತಿದ್ದೇನೆ.

೧೯೨೧ ರಲ್ಲಿ ಮುಸಲ್ಮಾನರು ಅಸಹಕಾರದಲ್ಲಿ ಧುಮಿಕಿದರು ಅಲಿಗಡ ವಿಶ್ವವಿದ್ಯಾಲಯವನ್ನೂ ನಿಲ್ಲಿಸಬೇಕಾಯಿತು. ಆದರೆ ಬನಾರಸ ಹಿಂದು ವಿಶ್ವವಿದ್ಯಾಲಯದ ಒಬ್ಬ ವಿದ್ಯಾರ್ಥಿಯಾದರೂ ಹೊರಗೆ ಬಂದಿದ್ದನೆ? ನೀವು ಹೀಗೆ ಮಾಡಿದುದಕ್ಕೆ ಎಲ್ಲ ಮುಸಲ್ಮಾನರೂ ತಿರಸ್ಕರಿಸುವ ನೆಹರು ವರದಿಯು ನಿಮ್ಮ ಕೈಯಲ್ಲಿ ಬಂದಿತು.

ಎಲ್ಲ ಮುಸಲ್ಮಾನರೂ ಕಾಂಗ್ರೆಸ್ಸಿನಲ್ಲಿ ಕೂಡಿದರೂ ನೀವು ಅಲ್ಲಿ ಅಲ್ಪಸಂಖ್ಯಾಕರಾಗಿಯೇ ಇರುವಿರಿ. ಅಂತೆಯೇ ಮುಸಲ್ಮಾನರ ಸಂರಕ್ಷಣೆಯ ಸ್ಥಳವೆಂದರೆ ಮುಸ್ಲಿಂಲೀಗಿನ ಧ್ವಜದಡಿಯು."

### ಬ್ಯಾ. ಜಿನ್ನಾರವರಿಗೆ ಉತ್ತರ.

ಬ್ಯಾ. ಜಿನ್ನಾರವರ ಅರಾಷ್ಟ್ರೀಯವಾದ ಈ ಭಾಷಣಕ್ಕೆ ಉತ್ತರವಾಗಿ ಗಡಿನಾಡಿನ ಅಸೆಂಬ್ಲಿ ಕಾಂಗ್ರೆಸ್ ಸಭಾಸದರಾದ ಮಿ. ಅಬ್ದುಲ್ ಕ್ವಯಾಮಖಾನರವರು ಹೀಗೆ ಪ್ರಕಟಿಸಿದ್ದಾರೆ-

"ಗಡಿನಾಡಿನಲ್ಲಿ ಭಯಂಕರ ದಬ್ಬಾಳಿಕೆ ನಡೆದಾಗ ಬ್ಯಾ. ಜಿನ್ನಾರವರಾಗಲಿ ಮುಸ್ಲಿಂಲೀಗಿನವರಾಗಲಿ ಎಲ್ಲಿದ್ದರು? ನಮಗೆ ಆಗ ಸಹಾಯಮಾಡಿದವರು ಕಾಂಗ್ರೆಸ್ಸಿನವರಲ್ಲವೆ? ಅಂತೆಯೇ ಕೃತಜ್ಞತೆಯನ್ನು ತೋರಿಸಲು ಕಾಂಗ್ರೆಸ್ಸಿನ ಧ್ವಜದಡಿಯಲ್ಲಿ ನಿಂತಿದ್ದೇವೆ.

ಕಾಂಗ್ರೆಸ್ಸಿನಿಂದ ಪ್ರತ್ಯೇಕವಾಗಿರಬೇಕೆಂಬ ಇಚ್ಛೆಯು ಪಂಜಾಬ ಮತ್ತು ಬಂಗಾಲಗಳ ಮುಸಲ್ಮಾನರಿಗಿರಬಹುದು. ಆದರೆ ಗಡಿನಾಡಿನವರಾದ ನಮಗೆ ಮಾತ್ರ ಕಾಂಗ್ರೆಸ್ ಧ್ವಜದಡಿಯಲ್ಲಿದ್ದೇ ಸ್ವಾತಂತ್ರ್ಯ ಸಂಪಾದಿಸುವುದು ಬೇಕಾಗಿದೆ ಆದುದರಿಂದ ಬ್ಯಾ. ಜಿನ್ನಾರವರ ಉಪದೇಶ ನಮಗೇನೂ ಬೇಕಾಗಿಲ್ಲ."

## ಭಯಂಕರವಾದ ವ್ಯಾಜ್ಯ!

### ಓರಿಸಾ ಸರಕಾರದ ನಿರ್ಣಯ.

ಓರಿಸಾ ಪ್ರಾಂತದಲ್ಲಿ ಪೋಲಿಸ ಅಧಿಕಾರಿ, ನ್ಯಾಯಾಧೀಶ ಮತ್ತು ಜಮೀನದಾರ ಕೂಡಿ ಮಾಡಿದ ಭಯಂಕರವಾದ ಅನ್ಯಾಯವನ್ನು ಕುರಿತು ಓರಿಸಾ ಪ್ರಾಂತಿಕ ಅಸೆಂಬ್ಲಿಯಲ್ಲಿ ಒಂದು ನಿಲುವಳಿ ಸೂಚನೆಯು ಬಂದಿತು. ಆ ವ್ಯಾಜ್ಯದ ರೀತಿ ಹೀಗಿದೆ—

ಕಟಕ ಎಂಬಲ್ಲಿಯ ಜಮೀನದಾರ ವಜ್ರ ಸುಂದರ ದೇವ ಅಥವಾ ಓಲದರಾಜ ಎಂಬುವವರು ತಮ್ಮ ಒಕ್ಕಲಿನ ಕನಕದೇವಿ ಎಂಬ ೧೩ ವರುಷಗಳ ಒಂದು ಹುಡುಗಿಯನ್ನು ೫೦೦ ರೂಪಾಯಿಗಳಿಗೆ ಕೊಂಡುಕೊಂಡರು. ಆ ಹುಡುಗಿಯು ಆ ಜಮೀನದಾರನ ಅಂತಃಪುರದಲ್ಲಿ ಒಂದು ತಿಂಗಳೊಳಗಾಗಿ ಮೃತಪಟ್ಟಳು! ಆ ಹುಡುಗಿಯ ಕರಣ ಜಾತಿಯ ಜನರಿಗೆ ಅದೇನೂ ಮಹತ್ವದ್ದಾಗಿ ತೋರಲಿಲ್ಲ. ಆದರೆ ಶ್ರೀ. ವಾಮದೇವ ಮತ್ತು ಶ್ರೀ. ನಿಶಾಮಣಿದಾಸ ಎಂಬ ಇಬ್ಬರು ತರುಣರು ಜಮೀನದಾರನು ಹುಡುಗಿಯನ್ನು ಕೊಂಡುಕೊಂಡು ಅವಳ ಇಚ್ಛೆಯ ವಿರುದ್ಧವಾಗಿ ಎಳೆದುಕೊಂಡು ಹೋದ ಸಂಬಂಧವಾಗಿ ನ್ಯಾಯಾಧೀಶರಲ್ಲಿ ವ್ಯಾಜ್ಯವನ್ನು ಹೂಡಿದರು.

ಜಮೀನದಾರನಿಂದ ಲಂಚದ ಆಶೆಗಾಗಿ ಪೋಲಿಸರು ಹೆಚ್ಚಿಗೆ ವಿಚಾರಣೆ ಮಾಡಲಿಲ್ಲ. ನ್ಯಾಯಾಧೀಶರೂ ಅಂಜಿ ಜಮೀನದಾರನು ನಿರ್ದೋಷಿಯೆಂದು ಬಿಟ್ಟುಬಿಟ್ಟರು! ಆಗ ಆ ಇಬ್ಬರು ತರುಣರಮೇಲೆ ಜಮೀನದಾರನು ತನ್ನ ನಷ್ಟಕ್ಕಾಗಿ ವ್ಯಾಜ್ಯ ಹೂಡಲು ಜಮೀನದಾರನಂತೆಯೇ ತೀರ್ಮಾನವಾಯಿತು. ಆ ಬಳಿಕ ಆ ಉಭಯ ತರುಣರು ಪಾಟಣಾ ಹೈಕೋರ್ಟಿನಲ್ಲಿ "ಅಪೀಲ" ಮಾಡಿದರು.

ಹೈಕೋರ್ಟಿನ ನ್ಯಾಯಮೂರ್ತಿಗಳು ಹಿಂದಿನ ಎಲ್ಲಾ ಕಾಗದಪತ್ರಗಳನ್ನೂ ತರಿಸಿಕೊಂಡು ಆ ತರುಣರ ಪರವಾಗಿ ತೀರ್ಮಾನ ಮಾಡಿ ಜಮೀನದಾರನ ಮತ್ತು ಅಧಿಕಾರಿಗಳ ಕೃತಿಯನ್ನು ನಿಷೇಧಿಸಿದರು. ಇಂಥ ಅನ್ಯಾಯಗಳು ನಡೆಯುವದೆಂದರೆ ನ್ಯಾಯದೇವತೆಯ ಮುಖಕ್ಕೆ ಕಪ್ಪು ಹಚ್ಚುವಂತಹದೇ ಸರಿಯೆಂದೂ ಈ ವ್ಯಾಜ್ಯವನ್ನು ನಡೆಸಿದ ಮ್ಯಾಜಿಸ್ಟ್ರೇಟ ಮತ್ತು ಸಬ ಜಜ್ಜ ಇವರು ನ್ಯಾಯಸ್ಥಳದಲ್ಲಿ ಒಂದು ನಿಮಿಷ ಕೂಡಾ ಇರಲು ಯೋಗ್ಯರಲ್ಲವೆಂದೂ ಪೋಲಿಸರು ಲಂಚಗೂಳಿಗಳಿದ್ದಾರೆಂದೂ ನ್ಯಾಯಮೂರ್ತಿಗಳು ಸ್ಪಷ್ಟವಾಗಿ ತಮ್ಮ ತೀರ್ಮಾನದಲ್ಲಿ ಬರೆದಿದ್ದಾರೆ.

ಇಂಥ ಭಯಂಕರ ವ್ಯಾಜ್ಯದ ಸಂಬಂಧವಾಗಿ ಅಸೆಂಬ್ಲಿಯಲ್ಲಿ ನಿಲುವಳಿ ಸೂಚನೆ ಬಂದುದು ಯುಕ್ತವಾದುದಾಗಿಯೇ ಇದ್ದಿತು. ಆಗ ಮುಖ್ಯ ಮಂತ್ರಿಗಳು ಈ ಎಲ್ಲಾ ಅಧಿಕಾರಿಗಳ ವಿಚಾರಣೆಮಾಡಿ ಅವರಿಗೆ ಸರಿಯಾದ ಶಿಕ್ಷೆಯನ್ನು ವಿಧಿಸುವುದರಲ್ಲಿ ಮಂತ್ರಿಮಂಡಲವು ಸ್ವಲ್ಪಾದರೂ ಉದಾಸೀನ ಮಾಡುವುದಿಲ್ಲವೆಂದು ಅಭಿವಚನ ಕೊಟ್ಟರು. ಇದು ಸ್ತುತ್ಯವಾದುದೇ ಸರಿ. ನ್ಯಾಯಸ್ಥಾನದಲ್ಲಿರುವವರಲ್ಲಿ ಅನೇಕರು ಹೇಗೆ ಅನ್ಯಾಯವಾಗಿ ನಡೆಯುತ್ತಿದ್ದಾರೆಂಬುದಕ್ಕೂ ಜನರ ರಕ್ಷಣೆಗಾಗಿದ್ದ ಪೋಲಿಸರಲ್ಲಿ ಅನೇಕರು ಹೇಗೆ ದುಷ್ಟರಿಗೆ ನೆರವಾಗುತ್ತಿದ್ದಾರೆಂಬುದಕ್ಕೂ ಇದೊಂದು ಹೊಸ ದೃಷ್ಟಾಂತ. ಅನೇಕ ಕಡೆ ಕತ್ತಲಲ್ಲಿ ಇಂಥ ಅಧಮ ಕಾರ್ಯಗಳು ನಡೆಯುತ್ತ ಇರುತ್ತವೆ. ಅವುಗಳನ್ನು ಬೆಳಕಿಗೆ ತರುವ ಅಂತಹ ತರುಣರನ್ನು ನ್ಯಾಯಪ್ರಿಯರಾದ ಸಕಲರೂ ಅಭಿನಂದಿಸದೆ ಇರಲಾರರು.

---

ಮಂತ್ರಿಗಳಿಗೂ ಗವ್ಹರ್ನರರಿಗೂ ಭಿನ್ನಾಭಿಪ್ರಾಯ ಬಂದರೆ ಮಂತ್ರಿಗಳು ಕೆಲಸದಿಂದ ನಿವೃತ್ತರಾಗದೆ ಆ ಪ್ರಶ್ನೆಯು ಅಸೆಂಬ್ಲಿಗೆ ಅಂಟಿಕೊಳ್ಳುವಂತೆ ಮಾಡಬೇಕೆಂದು ಪಂಡಿತ ಜವಾಹರಲಾಲರು ತಮ್ಮ ಅಭಿಪ್ರಾಯ ತಿಳಿಸಿದ್ದಾರೆ.

## ಪಂಡಿತಜಿಯವರ ಬುದ್ಧಿವಾದ.

### ಅಂಧ ಭಕ್ತರಾಗಬೇಡಿರಿ.

ಪಂಡಿತ ಜವಾಹರಲಾಲ ನೆಹರುರವರು ಕಳೆದ ವಾರ ತಿಳಿಸಿದ ಈ ಕೆಳಗಿನ ಅಭಿಪ್ರಾಯಗಳು ಮನನೀಯವಾಗಿವೆ. ಕಾಂಗ್ರೆಸ್ಸಿನ ಕಾರ್ಯಕಲಾಪಗಳನ್ನೆಲ್ಲಾ ಉಘೋ! ಉಘೋ! ಎಂದು ಹೇಳುತ್ತಿರುವವರಂತೂ ತುಂಬಾ ಲಕ್ಷಿಸಬೇಕು.

ವರ್ಹಾಡ ಪ್ರಾಂತಿಕ ಪರಿಷತ್ತು ಸೆಂದುಜನೆ ಎಂಬಲ್ಲಿ ಕಳೆದ ೬ ನೆಯ ತಾರೀಖಿನ ದಿವಸ ಶ್ರೀ. ದೇಶಪಾಂಡೆ ಗಂಗಾಧರರಾಯರ ಅಧ್ಯಕ್ಷತೆಯಲ್ಲಿ ಜರುಗಿತು. ಆ ಕಾಲಕ್ಕೆ ಪಂಡಿತ ಜವಾಹರಲಾಲರೂ ಅಲ್ಲಿಗೆ ಹೋಗಿದ್ದರು. ಅಲ್ಲಿ ೧೫ ಸಾವಿರ ಜನರ ಪ್ರಚಂಡ ಸಭೆ ಕೂಡಿತ್ತು. ಆ ಸಭೆಯಲ್ಲಿ ಭಾಷಣಮಾಡುವಾಗ ಪಂಡಿತಜಿಯವರು ಹೀಗೆ ಹೇಳಿದರು—

"ಕಾಂಗ್ರೆಸ್ಸಿನ ಅಂಧಭಕ್ತರಾಗಬೇಡಿರಿ. ಕಾಂಗ್ರೆಸ್ಸಿನ ಧೋರಣವೇನೆಂಬುದನ್ನು ಚನ್ನಾಗಿ ತಿಳಿದುಕೊಳ್ಳಿರಿ. ಏಕೆಂದರೆ ಹಿಂದುಸ್ಥಾನದಲ್ಲಿ ಜನಾಭಿಪ್ರಾಯದ ರಾಜ್ಯವನ್ನು ಸ್ಥಾಪಿಸುವುದೇ ಕಾಂಗ್ರೆಸ್ಸಿನ ಉದ್ದೇಶವಾಗಿದೆ. ಈ ಉದ್ದೇಶವು ನೆರವೇರಬೇಕಾದರೆ ಜನ ಸಾಮಾನ್ಯದಲ್ಲಿ ನಿಜವಾದ ವಿಚಾರಕ್ರಾಂತಿಯಾಗಬೇಕಾಗಿದೆ

ಅಂಧ ಭಕ್ತರಿಗೆ ಬುದ್ಧಿವಾದವನ್ನು ಹೇಳಿದಂತೆಯೇ ಉಗ್ರಗಾಮಿಗಳಿಗೂ ಯೋಗ್ಯ ಸಲಹೆಯನ್ನೇ ಕೊಟ್ಟರು. "ತಮ್ಮ ಅಭಿಪ್ರಾಯದಂತೆ ಕಾಂಗ್ರೆಸ್ ನಡೆಯಲಿಲ್ಲವೆಂದು ಕಾಂಗ್ರೆಸ್ಸಿನಿಂದ ಹೊರಗೆ ಹೋಗಬೇಡಿರಿ. ನನ್ನ ಸಲಹೆಯನ್ನು ಕೂಡಾ ಅನೇಕ ಸಾರೆ ಕಾಂಗ್ರೆಸ್ ಕೇಳಲಿಲ್ಲ. ಅಷ್ಟರಿಂದ ನಾನೇನೂ ಕಾಂಗ್ರೆಸ್ ಬಿಟ್ಟು ಹೊರಗೆ ಬರಲಿಲ್ಲ. ಅದರಲ್ಲಿದ್ದೇ ಅದರ ಶಕ್ತಿಯನ್ನು ಹೆಚ್ಚಿಸಿರಿ." ಎಂದು ತಿಳಿಸಿದರು.

---

## ಬಿನ್ನಹ.

ಕನ್ನಡ ನುಡಿ, ಕನ್ನಡ ನಯ, ಕನ್ನಡ ಜನ ಒಂದಾಗಬೇಕಾಗಿದೆ, ಮುಂದಾಗಬೇಕಾಗಿದೆ. ಕನ್ನಡ ನಾಡು ಕೂಡಬೇಕಾಗಿದೆ. ಕನ್ನಡ ತಾಯಿ ಕರೆಯುತ್ತಿದ್ದಾಳೆ. ಕನ್ನಡಿಗರಾ ಓಡಿ ಬನ್ನಿ, ಕೂಡಿ ಬನ್ನಿ, ನೆರವಾಗಿ.

ಆಳುವವರು, ಹಿರಿಯವರು, ಕಿರಿಯವರು, ಎಲ್ಲ ಕನ್ನಡನಾಡಿಗರೂ ಸೇರಿ ಒಂದು ಕೇಂದ್ರಸ್ಥಾನವನ್ನು ಕಟ್ಟಿದರು. ಕನ್ನಡ ತಾಯ ಗುಡಿಯಾಗಿ. ಅದು ಪರಿಷತ್ತು. ಕನ್ನಡ ಬಾವುಟವನ್ನು ನನ್ನ ಹಿರಿಯರು ಎತ್ತಿಹಿಡಿದು, ಈಗ ನನ್ನ ಕೈಗೆ ಕೊಟ್ಟಿರುವರು. ಮೈಸೂರಿನಲ್ಲಿಯೂ, ಎಲ್ಲ ಕನ್ನಡ ನಾಡಿನಲ್ಲಿಯೂ ನನ್ನಲ್ಲಿ ಅಕ್ಕರೆ ಮತ್ತು ನಂಬಿಕೆಯುಳ್ಳವರು,— ಶಿಷ್ಯರು, ಮಿತ್ರರು, ಸಹೋದ್ಯೋಗಿಗಳು ಹಿತೈಷಿಗಳು— ನನಗೆ ಬೆಂಬಲವಾಗಬೇಕೆಂದು ಬೇಡುತ್ತೇನೆ. ಯಾವ ಕಾರಣದಿಂದಲಾದರೂ ನಾನು ಯಾರಿಗಾದರೂ ಬೇಡದವನಾಗಿದ್ದರೆ ನಮ್ಮ ತಾಯ ಭಕ್ತಿಯಲ್ಲಿ ಅದನ್ನು ಮರೆತು ನನ್ನೊಡನೆ ಕೈಂಕರ್ಯಕ್ಕೆ ನಿಲ್ಲಬೇಕೆಂದು ಬೇಡಿಕೊಳ್ಳುತ್ತೇನೆ.

ಕನ್ನಡ ಕನ್ನಡ ಮಕ್ಕಳೆಲ್ಲರ ಕನ್ನಡ ನಾಡೆಲ್ಲದರ ಏಳಿಗೆಗೆ ಹಿರಿಯ ಬಾಳಿಕೆಗೆ, ನಲಿವಿಗೆ, ಗೆಲವಿಗೆ, ಬನ್ನಿ. ಕನ್ನಡದ ಕಾಣಿಕೆಯನ್ನು ತನ್ನಿ. ಜನ, ಮನ, ಧನ ಕೂಡಿಕೊಳ್ಳಿ. ತಾಯನ್ನು ಕಾಪಾಡಿಕೊಳ್ಳಿ, ಮತ್ತೆ ದೊಡ್ಡವಳನ್ನಾಗಿ ಮಾಡಿ ಭಾರತಮಾತೆಗೆ ಆಕೆ ಹಿರಿಯ ಮಗಳಾಗಿ ಸೇವೆಗೊದಗುವಂತೆ ಮಾಡಿ.

ಸಿರಿಗನ್ನಡಗೆಲ್ಗೆ! ಕನ್ನಡ ತಾಯ್ ಬಾಳ್ಗೆ!!

ಬಿ. ಎಂ. ಶ್ರೀಕಂಠಯ್ಯಾ. ಉಪಾಧ್ಯಕ್ಷ.

# ಲಿಂಗಾಯತ ಅಥವಾ ವೀರಶೈವ ಧರ್ಮತತ್ವ ವಿದ್ಯಾಪೀಠ.

ಬೆಳಗಾಂವಿ

ವಿದ್ಯಾಪೀಠದ ಉದ್ದೇಶಗಳು ಕೆಳಗಿನಂತಿವೆ.

(೧) ಲಿಂಗಾಯತರ ಧಾರ್ಮಿಕ ಸಾಮಾಜಿಕ, ಐತಿಹಾಸಿಕ ವಾಙ್ಮಯದಿಂದ ಕೂಡಿದ ತಾಡವೋಲೆಯ ಗ್ರಂಥಗಳನ್ನೂ ತಾಮ್ರ ಪಟಗಳನ್ನೂ, ಬೇರೆ ಕೈಬರಹದ ಗ್ರಂಥಗಳನ್ನೂ ಸಂಗ್ರಹಿಸಿ ಮದ್ರಾಸ ಓರಿಯಂಟಲ್ ಲೈಬ್ರರಿಯವರು ತಯಾರಿಸಿದ ಮಾದರಿಯ ಮೇರೆಗೆ ಅವುಗಳ ಪಟ್ಟಿಯೊಂದನ್ನು ತಯಾರಿಸುವುದು.

(೨) ಸಂಗ್ರಹಿಸಿದ ಗ್ರಂಥಗಳನ್ನು ಸಂಶೋಧಿಸಿ ಎಲ್ಲರಿಗೂ ತಿಳಿಯುವಂತೆ ಪ್ರಕಾಶಗೊಳಿಸುವುದು.

(೩) ಇಂಥ ಸಂಶೋಧನ ಕಾರ್ಯಕ್ಕೆ ಉದ್ಯುಕ್ತರಾದ ವಿದ್ವಜ್ಜನರಿಗೂ ವಿದ್ಯಾರ್ಥಿಗಳಿಗೂ ವೇತನರೂಪದಿಂದಲೂ ಪಾರಿತೋಷಕರೂಪದಿಂದಲೂ ಪ್ರೋತ್ಸಾಹ ಕೊಡುವುದು.

(೪) ಸಂಶೋಧಿಸಿದ ಗ್ರಂಥಗಳನ್ನು ಪ್ರಕಟಿಸುವುದು.

(೫) ಗ್ರಂಥ ಸಂಶೋಧನೆಗೆ ಸಹಾಯಕವಾದ ಇತರ ಗ್ರಂಥಗಳನ್ನೂ ಬೇರೆ ಸಾಮುಗ್ರಿಗಳನ್ನೂ ಸಂಗ್ರಹಿಸುವುದು.

(೬) ಗ್ರಂಥ ಸಂಶೋಧನಕ್ಕಾಗಿಯೂ ಪ್ರಕಟನೆಗಾಗಿಯೂ ಗ್ರಂಥ ಮಂದಿರ ಹಾಗು ಮುದ್ರಣಾಯಗಳನ್ನು ಏರ್ಪಡಿಸುವುದು

(೭) ವೀರಶೈವ ಧರ್ಮವನ್ನೂ ಇತರ ಧರ್ಮಗಳನ್ನೂ ತಾರತಮ್ಯ ದೃಷ್ಟಿಯಿಂದ ಅಭ್ಯಾಸಮಾಡಿ ನಿಜ ತತ್ವಗಳನ್ನು ತಿಳಿದುಕೊಳ್ಳಲಿಚ್ಛಿಸುವ ವಿದ್ಯಾರ್ಥಿಗಳಿಗೆ ಒಂದು ವಿದ್ಯಾಲಯವನ್ನು ಸ್ಥಾಪಿಸುವುದು.

ಇಂತೀ ಉದ್ದೇಶಗಳನ್ನಿಟ್ಟುಕೊಂಡು ಸ್ಥಾಪನೆಯಾಗಲಿರುವ ಸಂಸ್ಥೆಯ ಕಾರ್ಯಕ್ರಮವನ್ನು ಜರುಗಿಸುವುದಕ್ಕಾಗಿ ಕೆಳಗೆ ಕಾಣಿಸಿದ ಸದ್ಗೃಹಸ್ಥರ ವ್ಯವಸ್ಥಾಪಕಮಂಡಲವೊಂದನ್ನು ಹಂತಕ್ಕೆ ನಿಯಮಿಸಲಾಗಿದೆ.

(೧) ಸರದಾರ ವೀರಭದ್ರಪ್ಪಾ ಗುಣಪ್ಪಾ ನಾಯಿಕ ಬಹಾದ್ದೂರ ದೇಸಾಯಿಯವರು ಚಚಡಿ (ಅಧ್ಯಕ್ಷರು)

(೨) ವೈ. ನಾಗೇಶ ಶಾಸ್ತ್ರಿಗಳು, ಸರ್ವದರ್ಶನ ತೀರ್ಥ ಕಲ್ಕತ್ತಾ ಯುನಿವರ್ಸಿಟಿ ವಿದ್ವಾನ್ ಓರಿಯಂಟಲ್, (ಮದ್ರಾಸ ಯುನಿವರ್ಸಿಟಿ)

(೩) ಶ್ರೀಮಾನ್ ಎಂ. ಪಿ. ವಾಲಿ ಎಂ. ಎ. ಚೀಫ್ ಆಫೀಸರ್ ಡಿ ಎಲ್. ಬಿ. ಬೆಳಗಾಂವ.

(೪) ಎಸ್. ಎಸ್. ಬಸವನಾಳ ಪ್ರೊಫೆಸರ ಲಿಂಗರಾಜ ಕಾಲೇಜ.

(೫) ಶ್ರೀಮಾನ್ ಎಸ್. ವ್ಹಿ. ಅಥಣಿ ಬಿ. ಎ. ಎಲ್‌ಎಲ್. ಬಿ. ವಕೀಲ ಬೆಳಗಾಂವ.

(೬) ಶ್ರೀಮಾನ್ ಬಿ. ಬಿ. ಮಮದಾಪುರ ಬಿ. ಎ. ಹೆಡ್ ಮಾಸ್ತರ ಗಿಲಗಂಚಿ ಅರ್ಟಾಳ ಹೈಸ್ಕೂಲ ಬೆಳಗಾಂವ.

(೭) ಶ್ರೀಮಾನ್ ಎಂ. ಆರ್. ಸಾಖರೆ ಎ. ಎ. ಟಿ. ಡಿ. ಪ್ರಿನ್ಸಿಪಾಲ ಗಿಲಗಂಚಿ ಅರ್ಟಾಳ ಹೈಸ್ಕೂಲ ಬೆಳಗಾಂವ.

ಈ ವ್ಯವಸ್ಥಾಪಕ ಮಂಡಲಕ್ಕೆ ಶ್ರೀಯುತ ಲಕ್ಷ್ಮಣಪ್ಪಾ ಟೊಣ್ಣೆಣ್ಣವರ ಇವರನ್ನು ಕಾರ್ಯದರ್ಶಿಗಳನ್ನಾಗಿ ನಿರ್ಮಿಸಲಾಗಿದೆ.

ಸಂಸ್ಥೆಯ ಕಾರ್ಯವನ್ನು ನೆರವೇರಿಸುವದಕ್ಕಾಗಿಯೂ ಅದಕ್ಕೆ ಬೇಕಾಗುವ ಧನ ಸಂಗ್ರಹವನ್ನು ಮಾಡುವದಕ್ಕಾಗಿಯೂ ಶ್ರೀ ಸಂಪಗಾವಿ ಚರಮೂರ್ತಿ ಸ್ವಾಮಿಗಳವರು ಸಂತೋಷದಿಂದ ಸಿದ್ಧರಾಗಿದ್ದಾರೆ. ಆದುದರಿಂದ ಅವರು ಸಂಸ್ಥೆಯ ಪ್ರಚಾರಕರು.

ಈ ಪ್ರಕಾರ ಕೈಕೊಂಡ ಕಾರ್ಯವೇನೋ ಕಷ್ಟಕರವಾಗಿದೆ. ಆದರೆ ಧರ್ಮಾಭಿಮಾನಿಗಳೂ ಉದಾರ ಹೃದಯಿಗಳೂ ಈ ಕಾರ್ಯಕ್ಕೆ ಮೂರ್ತಸ್ವರೂಪವನ್ನು ಕೊಡಲಿಕ್ಕೆ ಬೇಕಾಗುವ ನೆರವನ್ನು ನೀಡಿದರೆ ಇದಕ್ಕಿಂತಲೂ ಹೆಚ್ಚಿನ ಕಾರ್ಯಗಳು ಸಾಧ್ಯವಾಗದೆ ಹೋಗಲಿಕ್ಕಿಲ್ಲ. ಆದುದರಿಂದ ಈ ವೀರಶೈವ ಧರ್ಮತತ್ವ ವಿದ್ಯಾಪೀಠವನ್ನು ಸರಿಯಾಗಿ ನಡೆಯಿಸಿ ಅದು ನಿಜವಾಗಿಯೂ ಪ್ರಯೋಜನಕಾರಿಯಾಗುವಂತೆ ಮಾಡುವ ಹೊರೆಯೂ ಹೊಣೆಯೂ ಸಮಾಜ ಬಾಂಧವರ ಮೇಲಿವೆ.

ಈ ಸಂಸ್ಥೆಯ ವಿಸ್ತೃತವಾದ ನಿಯಮಗಳನ್ನು ವ್ಯವಸ್ಥಾಪಕ ಮಂಡಲದವರು ಕ್ರಮದಿಂದ ನಿರ್ಣಯಿಸಿ ಪ್ರಕಟಗೊಳಿಸುವರು. ಸದ್ಯಕ್ಕೆ ವೀರಶೈವ ಬಾಂಧವರು ತಮ್ಮ ಶಕ್ತಿಗೆ ತಕ್ಕಂತೆ ವಾರ್ಷಿಕ ವರ್ಗಣಿಯನ್ನು ಕೊಟ್ಟು ಪ್ರೋತ್ಸಾಹಿಸಬೇಕೆಂದು ಸಂಸ್ಥೆಯು ಬೇಡಿಕೊಳ್ಳುತ್ತದೆ.

ಧರ್ಮಾಭಿಮಾನಿಗಳು ವರುಷಕ್ಕೆ ಕನಿಷ್ಠ ಪಕ್ಷಕ್ಕೆ ಒಂದು ರೂಪಾಯಿಯನ್ನೋ, ಎಂಟಾಣೆಯನ್ನೋ ವರ್ಗಣಿಯನ್ನಾಗಿ ಕೊಟ್ಟು ಸಹಾಯಮಾಡಬೇಕಾಗಿ ವ್ಯವಸ್ಥಾಪಕ ಮಂಡಳದವರ ಬೇಡಿಕೆ.

---

ಶ್ರೀ ಚಿದಂಬರಾಯ ನಮಃ

ಬೆಳಗಾಂವಿ.

ಶ್ರೀಮನ್ನಿರಂಜನ ಜಗದ್ಗುರುಗಳಿಗೆ ಲಿಂಗರಾಜ ಕಾಲೇಜದಲ್ಲಿ ಮಾನಪತ್ರ ಕೊಡುವ ಸಮಯದಲ್ಲಿ ಬಸವದಾಸನು ಹಾಡಿದ

## ಪದ್ಯ ಪಂಚಕ.

ತ್ರಿಪದಿ|| ಜಯದೇವ ಜಯದೇವ ಜಯ ಜಗದ್ಗುರುವೇ|
ಜಯತು ಶ್ರೀ ಮುರಘ ರಾಜೇಂದ್ರ ಗುರುವೆ|
ಜಯಜಯತು ದೃಶ್ಯ ಬಸವೇಶ ||೧||

,, ಬಸವದಾಸನು ಗುರುವೆ ವಸುಧೆಯೊಳ್ ಮೆರೆಯುವಾ|
ಎಸೆವ ಶ್ರೀ ಪದಕೆ ಸಾಷ್ಟಾಂಗ ನಮನವಾ|
ಬಸವನೆಂದನು ಗೈಯುವಂ ||೨||

,, ಸದಯ ಮೂರ್ತಿಯು ನೀನು ಮುದದಿಂದ ಲೋಕದೊಳ್|
ವಿಧವಿಧದ ಸಂಸ್ಥೆಗಳಿಗೆಲ್ಲ ಆಶ್ರಯವ|
ನದಿಯಂತೆ ಕೊಡುವಿ ಗುರುರಾಯ ||೩||

,, ವೀರಶೈವಾಚಾರ ಮೀರಿ ತೋರುತ ಗುರುವೆ|
ಮಾರಹರ ಶಿವನ ಕೃಪೆಯ ಪಡೆಯುವ ಮಾರ್ಗ|
ತೋರಿ ಕೊಡುತಲಿಹೆ ಬಸವೇಶ ||೪||

,, ಧನ್ಯ ಶ್ರೀಗುರುರಾಯ ಮಾನ್ಯನೀ ಜಗದಲ್ಲಿ|
ಅನ್ಯ ಮತದವರು ಸಹ ಬಾಗುವರು ಪದಕೆ|
ಬಿನ್ನಪವ ಕೇಳು ಗುರುರಾಯ ||೫||

# ಹುಮನಾಬಾದಿಯಲ್ಲಿ ಮುಸಲ್ಮಾನರ ಅತ್ಯಾಚಾರ.

### ನೈಜಾಮು ವೀರಶೈವ ತರುಣಸಂಘಗಳ ಸಾಹಸ.

ನೈಜಾಮು ಸ್ಟೇಟ ಜಿಲ್ಲಾ ಗುಲಬರ್ಗಾಕ್ಕೆ ಸಂಬಂಧಪಟ್ಟ ಹುಮನಾಬಾದ ಎಂಬ ಗ್ರಾಮದಲ್ಲಿ ಶ್ರೀ ವೀರಭದ್ರ ದೇವರ ಜಾತ್ರೆಯು ತಾ. ೨೫-೧-೩೮ ಕ್ಕೆ ಪ್ರತಿ ವರುಷ ಸಾಗುತ್ತಿರುವದು ಸರ್ವಶ್ರುತವಷ್ಟೆ. ಈ ಜಾತ್ರೆ ಮಹೋತ್ಸವಕ್ಕಾಗಿ ಎಲ್ಲಾ ಕಡೆಗಳಿಂದಲೂ ಸಾವಿರಾರು ಸ್ತ್ರೀ ಪುರುಷರು ಆಗಮಿಸುತ್ತಾರೆ. ಇದೇ ಸಮಯದಲ್ಲಿ ಅಲ್ಲಿಯ ಕೆಲವು ತುಂಟ ಮುಸಲ್ಮಾನರು ಸ್ತ್ರೀಯರ ಮೇಲೂ ಹಳ್ಳಿ ಜನಗಳ ಮೇಲೂ, ಅತ್ಯಾಚಾರ ಮಾಡುವದು ತಮ್ಮ ಜನ್ಮಸಿದ್ಧವಾದ ಹಕ್ಕೆಂದು ತಿಳಿದುಕೊಂಡಿದ್ದಾರೆಂದು ಹೇಳಿದರೂ ಅಡ್ಡಿಯಿಲ್ಲ. ಈ ಅತ್ಯಾಚಾರವನ್ನು ತಡೆಯಲು ಗುಲಬರ್ಗಾ ತರುಣಸಂಘದ ಸೆಕ್ರೆಟರಿಗಳು ಅಲ್ಲಿಯ ವ್ಯವಸ್ಥೆಗಾಗಿ ಹೋಗಲು ನಿಶ್ಚಯಿಸಿ ಎಲ್ಲಾ ತರುಣಸಂಘಗಳಿಗೂ ಹುಮನಾಬಾದಿಗೆ ಹೊರಡಲು ಆಜ್ಞಾಪತ್ರವನ್ನು ಕಳಿಸಿದರು. ಮತ್ತು ಹುಮನಾಬಾದಿಯ ಪ್ರಮುಖ ಜನಗಳಿಗೆ ಸ್ವಯಂ ಸೇವಕರಿಗೆ ಊಟದ ವ್ಯವಸ್ಥೆಯನ್ನು ಮಾಡಲು ಅರ್ಜಿ ಮಾಡಿಕೊಂಡರು. ಮೊದಲು ಗ್ರಾಮದ ಜನಗಳು ತ ರು ಣ ಸಂ ಘ ದ ವ ರು ಬಂದರೆ ತಮಗೆಲ್ಲಿ ತೊಂದರೆ ಉಂಟಾಗಬಹುದೋ ಎಂದು ತಿಳಿದು "ನೀವು ಬಂದರೆ ಸರ್ವ ವ್ಯ ವ ಸ್ಥೆ ಯ ನ್ನು ನೀವೇ ನೋಡಿಕೊಳ್ಳಬೇಕಾಗುವುದು. ನಮ್ಮಿಂದ ಸರ್ವಥಾ ಆಗುವುದಿಲ್ಲ"ವೆಂದು ಪತ್ರ ಬರೆದರು. ವೀರಶೈವ ತರುಣರು ನಿರುತ್ಸಾಹಗೊಳ್ಳದೆ ಉಪವಾಸ ಬಿದ್ದಾದರೂ ಧರ್ಮ ಸೇವೆಯನ್ನು ಮಾಡುವೆವು ಎಂಬ ಪ್ರತಿಜ್ಞೆಯಿಂದ ವೀರಶೈವ ಧರ್ಮದ ಜಯ ಜಯಕಾರದೊಡನೆ ಹುಮನಾಬಾದಿಗೆ ಬಂದಿಳಿದರು.

ಇವರ ಆಗಮನವು ತುಂಟ ಮುಸಲ್ಮಾನರಿಗೆ ಸರಿಬೀಳದ್ದರಿಂದ ಜಗಳದ ಸಾಮುಗ್ರಿಯನ್ನು ಸಿದ್ಧಮಾಡಿಕೊಂಡರು. ತಾ. ೨೫-೧-೩೮ ನೆಯ ದಿವಸ ಸಾಯಂಕಾಲ ವೀರಭದ್ರದೇವರ ಅಗ್ನಿ ತುಳಿಯಲು ಮೆರವಣಿಗೆಯು ಹೊರಟಿತು. ಮೆರವಣಿಗೆಯ ಸಂಗಡ ತರುಣಸಂಘದ ಸೈನಿಕರು ವೀರಶೈವ ಧರ್ಮದ ಪದ್ಯಗಳನ್ನು ಹೇಳುತ್ತ ಜಯಜಯಕಾರದೊಂದಿಗೆ ಸಾಲಾಗಿ ಸಾಗಿದ್ದರು. ಮೆರವಣಿಗೆಯು ಮುಸಲ್ಮಾನರ ಓಣಿಯಲ್ಲಿ ಬಂದೊಡನೆಯೇ ಒಂದೆರಡು ಕಲ್ಲುಗಳು ತುಂಟರ ಕಡೆಯಿಂದ ಬಿದ್ದವು. ಅದಕ್ಕೆ ಲಕ್ಷಗೊಡದೆ ಮೆರವಣಿಗೆಯು ಹಾಗೆಯೇ ಸಾಗಿ ಕಾರ್ಯಗಳನ್ನು ಮುಗಿಸಿಕೊಂಡು ತಿರುಗಿ ಹೊರಟಿತು.

ಪುನಃ ಅದೇ ಹಾದಿಗೆ ಬಂದಕೂಡಲೇ ಓರ್ವ ತುಂಟ ಮುಸಲ್ಮಾನನು ಬಂದು "ನೀವು ಪದ್ಯಗಳನ್ನು ಹೇಳಬೇಡಿರಿ. ಜಯಜಯಕಾರವನ್ನು ಮಾಡಬೇಡಿರಿ. ಲಾಠಿಯನ್ನು ಹಿಡಿಯಬೇಡಿರಿ ಡ್ರೆಸ್ಸುಗಳನ್ನೇಕೆ ಹಾಕುವಿರಿ? ಎಂದು ಆತಂಕಪಡಿಸಿದನು. ಆದಕ್ಕೆ ಸ್ವಯಂ ಸೇವಕರು "ಇಲ್ಲಿ ಮಸೀದೆಯಿರದಿದ್ದರೂ ಪದ್ಯಗಳನ್ನೇಕೆ ಹಾಡಬಾರದು? ನಮ್ಮ ಪ್ರಾಣ ಹೋದರೂ ಚಿಂತೆಯಿಲ್ಲ. ನಾವೇನೂ ನಮ್ಮ ಧರ್ಮದ ಜಯಜಯಕಾರವನ್ನೂ ಪದ್ಯಗಳನ್ನೂ ಹೇಳುವದು ಬಿಡುವದಿಲ್ಲವೆಂದು ಸ್ಪಷ್ಟವಾಗಿ ಹೇಳಿದರು." ಕೂಡಲೇ ಕಲ್ಲುಗಳ ಸುರಿಮಳೆಯೂ ಲಾಠಿ ಪ್ರಹಾರವೂ ನಡೆಯಿತು. ಜನಗಳು ದಿಕ್ಕಾಪಾಲಾಗಿ ಓಡತೊಡಗಿದರು. ಸರಕಾರದವರ ವ್ಯವಸ್ಥೆಯು ನಿಂತಿತು. ಸ್ವಯಂ ಸೇವಕರು ಮಾತ್ರ ಧೈರ್ಯೋತ್ಸಾಹಗಳೊಂದಿಗೆ ಜಯಜಯಕಾರವನ್ನು ಮಾಡುತ್ತ ತುಂಟರ ಅತ್ಯಾಚಾರವನ್ನು ಶಾಂತದಿಂದ ಎದುರಿಸಹತ್ತಿದರು. ಕೆಲವು ಸ್ವಯಂಸೇವಕರಿಗೆ ಗಾಯಗಳಾದವು. ಆದರೂ ಬಸವ ಭೂಮಿಯ ವೀರ ತರುಣರು ಮಾತ್ರ ತಮ್ಮ ಸತ್ಯವಾದ ವ್ರತವನ್ನು ಬಿಡದೆ ಪದ್ಯಗಳನ್ನು ಹೇಳುತ್ತ ಅಲ್ಲಿಯೇ ನಿಂತು ಕಲ್ಲುಗಳು ನಿಂತನಂತರ ಮುಂದಕ್ಕೆ ಸಾಗಿದರು.

ಈ ಸಂಗತಿಯು ಸುತ್ತುಮುತ್ತಲಿನ ಎಲ್ಲ ತರುಣಸಂಘಗಳಿಗೂ ಮುಟ್ಟಿತು. ಮಾರನೆಯ ದಿವಸ ರಥೋತ್ಸವವಿರುವದರಿಂದ ಇದಕ್ಕೂ ಹೆಚ್ಚು ಅತ್ಯಾಚಾರ ನಡೆಯುವದೆಂದು ತಿಳಿದು ಗುಲಬರ್ಗಾ ಕಮಲಾಪೂರ, ಮಹಾಗಾಂವ, ಕುರಕೋಟಿ, ದಸ್ತಾಪೂರ, ಕಲ್ಯಾಣ, ಓರಳ್ಳಿ, ಮುರಗುತ್ತಿ, ಹೊನ್ನಳ್ಳಿ, ಮುಂತಾದ ಗ್ರಾಮಗಳಿಂದ ಒಟ್ಟು ೩೦೦ ಜನ ಸ್ವಯಂ ಸೇವಕರು ಜೀವದ ಹಂಗು ತೊರೆದು ಬಂದಿಳಿದರು.

ಇತ್ತ ಸರಕಾರದವರು ಚಿಂತಿಸತೊಡಗಿದರು. ಆಗಿಂದಾಗಲೆ ಫೌಜದಾರರು ಮತ್ತು ಸರಕಲ್ ಇನಸ್‌ಪೆಕ್ಟರರು ಸ್ವಯಂಸೇವಕರ ಅಧಿಕಾರಿಗಳನ್ನು ಕರೆಯಿಸಿ ನಿಮ್ಮ ಸಲುವಾಗಿ ಯೋಗ್ಯ ವ್ಯವಸ್ಥೆಯನ್ನು ಮಾಡುತ್ತೇವೆ ಗಡಬಡಮಾಡದೆ ಶಾಂತದಿಂದಿರಬೇಕೆಂದು ಹೇಳತೊಡಗಿದರು. "ನಮಗೆ ಉಪದೇಶ ಮಾಡುವದಕ್ಕಿಂತಲೂ ತುಂಟರ ವ್ಯವಸ್ಥೆಯನ್ನು ಮಾಡಿರಿ. ನಾವು ಯಾವಾಗಲೂ ಶಾಂತದಿಂದಿರುತ್ತೇವೆ"ಎಂದು ಹೇಳಿದರು. ರಥೋತ್ಸವದ ಮೆರವಣಿಗೆಯು ರಾತ್ರಿ ಹತ್ತು ಗಂಟೆಗೆ ಹೊರಟಿತು. ೨೦೦-೩೦೦ ಜನ ಸ್ವಯಂಸೇವಕರು ಮೆರವಣಿಗೆಯ ಮುಂದೆ ಪದ್ಯಗಳನ್ನು ಹೇಳುತ್ತ ಜಯಜಯಕಾರದೊಂದಿಗೆ ಹೊರಟರು. ತುಂಟರ ತಂಡಗಳು ಅಲ್ಲಲ್ಲಿ ನಿಂತು ನೋಡುತ್ತಿದ್ದವು. ಜಗಳ ತೆಗೆಯಲಿಲ್ಲ. ಅಂತೂ ಮೆರವಣಿಗೆಯು ಶಾಂತದಿಂದ ಮುಟ್ಟಿ ಹಿಂತಿರುಗಿ ಸ್ವಲ್ಪ ದೂರ ಬಂದಮೇಲೆ ಪುನಃ ಎರಡು ಮೂರು ಕಲ್ಲುಗಳು ಎಲ್ಲಿಂದಲೋ ಸರಕಲ್ ಇನಸ್‌ಪೆಕ್ಟರರ ಮುಂದೆಯೇ ಬಿದ್ದು ಕಲ್ಯಾಣ ತರುಣ ಸಂಘದ ಸೆಕ್ರೆಟರಿಗಳಾದ ವಿಶ್ವನಾಥರಾವ ಮೆಹತ್ರೆ ಇವರಿಗೆ ತಾಕಿ ೧೦ ಮಿನಿಟ ಮೂರ್ಛೆಗೊಳಿಸಿದವು.

ಸ್ವಯಂ ಸೇವಕರು ರೊಚ್ಚಿಗೆದ್ದರು. ಸೇನಾನಾಯಕನು ಎಲ್ಲರನ್ನು ಶಾಂತಗೊಳಿಸಿ ಜಯಜಯಕಾರವನ್ನು ಮಾಡುತ್ತ ಮೆರವಣಿಗೆಯೊಂದಿಗೆ ಸಾಗಿದರು. ಅಂತೂ ಮೆರವಣಿಗೆಯು ಯಶಸ್ವಿಯಾಗಿ ದೇವಾಲಯಕ್ಕೆ ಮುಟ್ಟಿತು. ದೇವಾಲಯದಲ್ಲಿ ಹುಮನಾಬಾದ ಗ್ರಾಮದವರ ವತಿಯಿಂದ ಸರಕಾರಿ ಅಧಿಕಾರಿಗಳಿಗೂ ತರುಣ ಸಂಘದ ಸೆಕ್ರೆಟರಿಗಳಿಗೂ ಪೆಟ್ಟು ತಾಕಿದ ವಿಶ್ವನಾಥರಾವ ಮೆಹತ್ರೆ ಇವರಿಗೂ ಪುಷ್ಪಹಾರ ಮೊದಲಾದವುಗಳನ್ನು ಹಾಕಿ ಧನ್ಯವಾದಗಳನ್ನು ಅರ್ಪಿಸಿದರು.

ಓರ್ವ ಪ್ರತ್ಯಕ್ಷದರ್ಶಿ

---

# ಕರ್ನಾಟಕ ಸಮಾಚಾರ.

—ವಿಜಾಪುರದ ಸುಪ್ರಸಿದ್ಧ ವಕೀಲರಾದ ಶ್ರೀ. ಅಂಗಡಿ ಅಂದಾನಪ್ಪನವರು ಕಾಂಗ್ರೆಸ್ಸಿನಲ್ಲಿ ಕಳೆದ ೮ ನೆಯ ತಾರೀಖಿನ ದಿವಸ ಸೇರಿದರೆಂದು ಪ್ರಕಟವಾಗಿದೆ.

—ವಿಜಾಪುರ ಜಿಲ್ಹಾ ಕಾಂಗ್ರೆಸ್ ಕಮಿಟಿಗೆ ಶ್ರೀ. ಮರುಳಾರಾಧ್ಯ ಶಾಸ್ತ್ರಿಗಳು ಅಧ್ಯಕ್ಷರಾಗಿ ಆರಿಸಲ್ಪಟ್ಟರು.

—ಹರಿಪುರ ಕಾಂಗ್ರೆಸ್ಸಿಗೆ ಪ್ರತಿನಿಧಿಗಳನ್ನು ಆರಿಸುವಲ್ಲಿ ಉಂಟಾದ ವ್ಯಾಜ್ಯದ ನಿಮಿತ್ತವಾಗಿ ಬೆಳಗಾವ ಜಿಲ್ಹಾ ಗೋಕಾಕದ ಶ್ರೀ. ದುಂಡಪ್ಪ ಸಂಶುದ್ಧಿಯವರು ಶ್ರೀ. ಕಾಡಸಿದ್ಧೇಶ್ವರ ದೇವಾಲಯದಲ್ಲಿ ೫ ದಿನ ಉಪವಾಸ ವ್ರತವನ್ನಾಚರಿಸಿದರು.

—ಮೈಸೂರು ಸರಕಾರವು ದಬ್ಬಾಳಿಕೆಯನ್ನು ಹೆಚ್ಚಿಸಿತು. ಕಾನಕಾನಹಳ್ಳಿಯ ಶ್ರೀ. ರಾಮಯ್ಯನವರಿಗೆ ಒಂದು ತಿಂಗಳ ಶಿಕ್ಷೆಯಾಯಿತು. ಅಲ್ಲಲ್ಲಿ ಶಾಸನಭಂಗವೂ ಪ್ರಾರಂಭವಾಗಿದೆ.

—ಅಥಣಿಯಲ್ಲಿ ಅಭ್ಯಾಸಮಂಡಲದವರ ಸಭೆ ಸೇರಿ ಬಳ್ಳಾರಿಯನ್ನು ಆಂಧ್ರ ದೇಶಕ್ಕೆ ಸೇರಿಸಿಕೊಳ್ಳುವ ಆಂಧ್ರರ ಪ್ರಯತ್ನವು ನಿಷೇಧಿಸಲ್ಪಟ್ಟಿತು.

—ದೊಡ್ಡ ಬಳ್ಳಾಪುರದ ಶ್ರೀ. ತಿಮ್ಮರೆಡ್ಡಿಯವರಿಗೆ ರಾಜದ್ರೋಹದ ಭಾಷಣಮಾಡಿದರೆಂದು ೧೮ ತಿಂಗಳ ಶಿಕ್ಷೆಯನ್ನು ಬೆಂಗಳೂರು ಮ್ಯಾಜಿಸ್ಟ್ರೇಟರು ವಿಧಿಸಿದ್ದರು. ಮೈಸೂರು ಹೈಕೋರ್ಟಿನವರು ಈ ಶಿಕ್ಷೆಯನ್ನು ತೆಗೆದುಹಾಕಿ ಶ್ರೀ. ರೆಡ್ಡಿಯವರ ಬಿಡುಗಡೆಮಾಡಿದರು. ಅಧಿಕಾರಿಗಳ ಮೇಲೆ ಮಾಡುವ ಉಗ್ರ ಟೀಕೆಯು ರಾಜದ್ರೋಹವಲ್ಲವೆಂದು ನ್ಯಾಯಮೂರ್ತಿಗಳು ತೀರ್ಮಾನ ಮಾಡಿದರು.



# ಶ್ರೀ ಜಗದ್ಗುರುಗಳ ಮೈಸೂರಿನ ದಿವ್ಯ ಪ್ರಯಾಣ.

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳವರು ಮೈಸೂರಲ್ಲಿ ಕಟ್ಟಲಿರುವ "ಪೆಥಾಲಾಜಿಕಲ್ ಲ್ಯಾಬರೇಟರಿ" ಕಟ್ಟಡಕ್ಕೆ ಮಹಾಸಂಸ್ಥಾನದಿಂದ ೪೦೦೦೦ ರೂಪಾಯಿಗಳನ್ನು ಕೊಟ್ಟಿರುವದು ಸರಿಯಷ್ಟೆ. ಆ ಕಟ್ಟಡದ ಶಂಕು ಸ್ಥಾಪನಾ ಮಹೋತ್ಸವವು ಇದೇ ತಿಂಗಳು ತಾ. ೨೪-೨-೩೮ ನೆಯ ದಿವಸ ಮಹಾಸನ್ನಿಧಿಯ ಸಮಕ್ಷಮ ಶ್ರೀ ಮನ್ಮಹಾರಾಜರವರ ಅಮೃತ ಹಸ್ತದಿಂದ ನೆರವೇರುವುದು ನಿಶ್ಚಿತವಾಗಿದೆ.

ಆದಕಾರಣ ಈ ಮಹಾ ಸಮಾರಂಭಕ್ಕೆ ಆಗಮಿಸುವುದಕ್ಕೋಸ್ಕರ ಮೈಸೂರು ಸರಕಾರದಿಂದ ಮಹಾಸನ್ನಿಧಿಗೆ ಆಮಂತ್ರಣವು ಬಂದಿರುತ್ತದೆ. ತಾ. ೨೩-೨-೩೮ ನೆಯ ಬುಧವಾರ ಪ್ರಾತಃಕಾಲ ಮೈಸೂರು ರಾಜಧಾನಿಯಲ್ಲಿ ಮೈಸೂರು ಸರಕಾರದ ರಹದಾರಿ ಪ್ರಕಾರ ಸಮಸ್ತ ಬಿರುದಾವಳಿಗಳೊಡನೆ ಶ್ರೀ ಜಗದ್ಗುರುಗಳವರ ರಜತಾಂದೋಲನ ಮಹೋತ್ಸವವು ಬಹು ಸಂಭ್ರಮದಿಂದ ನಡೆಯುವದಿದೆ.

ಶ್ರೀ ಜಗದ್ಗುರುಗಳವರು ತಾ. ೧೪-೨-೩೮ ನೆಯ ದಿವಸ ಶ್ರೀ ಉಳವಿ ಕ್ಷೇತ್ರದಲ್ಲಿಯ ರಥೋತ್ಸವವನ್ನು ಪೂರ್ತಿಗೊಳಿಸಿ ತಾ. ೧೫ ನೆಯ ಮಂಗಳವಾರ ಗದಗಿಗೆ ಶ್ರೀ ತುಪ್ಪದ ಅಡಿವೆಪ್ಪನವರ ಪ್ರಾರ್ಥನೆಯ ಪ್ರಕಾರ ಅಲ್ಲಿಗೆ ಆಗಮಿಸಿ ಅಲ್ಲಿಂದ ತಾ. ೧೬ ಕ್ಕೆ ದಾವಣಗೆರೆಗೂ ತಾ. ೧೭ಕ್ಕೆ ಚಿತ್ರದುರ್ಗದ ಬೃಹನ್ಮಠಕ್ಕೂ ಚಿತ್ತೈಸುವರು.

ಮೈಸೂರು ಭಾಗದ ವೀರಶೈವ ಮಹಾ ಜನರು ಮಹಾಸ್ವಾಮಿಗಳವರ ದಿವ್ಯಾಗಮನವನ್ನೇ ನಿರೀಕ್ಷಿಸುತ್ತಿದ್ದಾರೆ. ಈಗಾಗಲೇ ಒಂದು ಸ್ವಾಗತ ಸಮಿತಿಯೂ ಏರ್ಪಟ್ಟಿದೆ. ಶ್ರೀ ಜಗದ್ಗುರುಗಳ ಈ ಮೈಸೂರು ಪ್ರಯಾಣವು ಒಂದು ಐತಿಹಾಸಿಕ ಸುಪ್ರಸಂಗವಾಗಿಯೇ ಇರುವುದರಿಂದ ವೀರಶೈವ ಸಮಾಜಕ್ಕೂ ಮೈಸೂರು ಪ್ರಾಂತಕ್ಕೂ ಬಹು ಮಹತ್ವದ್ದಾಗಿ ತುಂಬಾ ಸಂತೋಷವನ್ನೇ ಉಂಟುಮಾಡಿದೆ.

ಓರ್ವ ವೀರಶೈವ.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೨೮ ನೆಯ ಫೆಬ್ರವರಿ ೧೯೩೮. | ಸಂಚಿಕೆ೨೭ |
|---|---|---|

ಜನಸೇವೆಯೇ ದೇವರಸೇವೆ.

## ಮಂತ್ರಿಗಳಿಗೂ ಗವ್ಹರ್ನರರಿಗೂ ಒಪ್ಪಂದ.

ಬಿಹಾರ ಮತ್ತು ಸಂಯುಕ್ತ ಪ್ರಾಂತಗಳ ಗವ್ಹರ್ನರರು
ರಾಜಕೈದಿಗಳನ್ನು ಮಂತ್ರಿಗಳ ಹೊಣೆಗಾರಿಕೆಯ ಮೇಲೆ
ಬಿಡಲೊಪ್ಪಿ ಉಭಯರೂ ಒಪ್ಪಂದ ಮಾಡಿಕೊಂಡರು.
ಮಂತ್ರಿಗಳು ಪುನಃ ಅಧಿಕಾರವನ್ನು
ಸ್ವೀಕರಿಸಿದರು.

## ಹಿಂದುಸ್ಥಾನ ಸರಕಾರದ

### ೧೯೩೮-೩೯ ನೆಯ ವರುಷದ ಮುಂಗಡ ಪತ್ರಿಕೆ.

| | | |
|---|---|---|
| ಆದಾಯ. | ೮೫೯೨೦೦೦೦೦ | ರೂ. |
| ವೆಚ್ಚ. | ೮೫೮೩೦೦೦೦೦ | ರೂ. |
| ಉಳಿತಾಯ. | ೯೦೦೦೦೦ | ರೂ. |

## ಮುಂಬೈಯಿಯ ಪ್ರಚಂಡ ಸಭೆಯಲ್ಲಿ

ರಾಷ್ಟ್ರಾಧಿಪತಿಗಳಾದ ಬಾಬು ಸುಭಾಷಚಂದ್ರ ಬೋಸರು
"ಪೂರ್ಣ ಸ್ವಾತಂತ್ರ್ಯವೇ ನಮ್ಮ ಗುರಿ; ಐಕಮತ್ಯದಿಂದಲೇ
ಕಾಂಗ್ರೆಸ್ಸಿನ ಮೂಲಕ ಅದನ್ನು ಹೊಂದಬೇಕು." ಎಂದು ಸಾರಿದರು.

ದೇಹವೇ ದೇವಾಲಯ.



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ-ಸೋಮವಾರ ತಾರೀಖು ೨೮ ನೆಯ ಫೆಬ್ರವರಿ ೧೯೩೮. | ಸಂಚಿಕೆ ೨೭


## ಅರ್ಥಸಚಿವರಾದ ಶ್ರೀ. ಲಠ್ಠೆಯವರ ಭಾಷಣ.

ತಾ. ೨೫ ನೆಯ ದಿನ ಅಸೆಂಬ್ಲಿಯಲ್ಲಿ ಮುಂಗಡ ಪತ್ರಿಕೆಯನ್ನಿಡುವಾಗ ಹೀಗೆ ಹೇಳಿದರು—

"ನಿರ್ಗತಿಕರಾದ ನಮ್ಮ ಜನರಿಗೆ ಶಕ್ಯವಿದ್ದಷ್ಟು ಪರಿಹಾರವನ್ನು ಕೊಟ್ಟು ಅವರು ತಮ್ಮ ಸ್ವಂತ ಬಲದಿಂದಲೇ ಮುಂದೆ ಬರುವಂತೆ ಮಾಡಬೇಕು. ನಿರಕ್ಷರಸ್ಥರನ್ನೂ ಹಿಂದುಳಿದವರನ್ನೂ ವಿದ್ಯಾವಂತರನ್ನಾಗಿ ಮಾಡಿ ಮುಂದೆ ತರಬೇಕು. ಯಾವ ಕಾರಣಗಳಿಂದ ಅವರು ಪಾರಾಗಲು ಶಕ್ಯವಿಲ್ಲವೋ ಅಂತಹ ಕಾರಣಗಳಿಂದ ಅವರು ದುಃಖಪಡುವದನ್ನು ತಪ್ಪಿಸಬೇಕು. ಮತ್ತು ಅವರಲ್ಲಿ ಎಲ್ಲಕ್ಕಿಂತಲೂ ಹೆಚ್ಚಾಗಿ ಆತ್ಮ ವಿಶ್ವಾಸವು ಬೆಳೆಯುವಂತೆ ಮಾಡಬೇಕು. ಎಂಬುದೇ ಕಾಂಗ್ರೆಸ್ಸಿನ ಮತ್ತು ಹಿಂದುಸ್ಥಾನದ ಎಲ್ಲ ನಿಜವಾದ ರಾಷ್ಟ್ರೀಯ ಜನರ ಧ್ಯೇಯವು. ಈ ಮುಂಗಡ ಪತ್ರಿಕೆಯಲ್ಲಿ ವ್ಯಕ್ತಮಾಡಿರುವ ಸೂಚನೆಗಳ ಉದ್ದೇಶವಾದರೂ ಇದೇ ಇರುವದು." ಎಂದು ಅರ್ಥಸಚಿವರು ಹೇಳಿದರು.

ಆಮೇಲೆ ಅವರು ಹೇಳಿದ್ದೇನೆಂದರೆ—

"ಇಲ್ಲಿರುವ ಸೂಚನೆಗಳು ಅವು ಗ್ರಾಮಪಂಚಾಯತಿಗೆ ಸಂಬಂಧಿಸಿರಲಿ ಅಥವಾ ನಾಡಿನ ಶಾಸನಗಳಿರಲಿ, ಶಿಕ್ಷಣಪ್ರಸಾರವಿರಲಿ ಮದ್ಯಪಾನ ಪ್ರತಿಬಂಧವಿರಲಿ ಅಥವಾ ತಂಬಾಕದ ಕರವಿರಲಿ ನಮ್ಮ ದೇಶದಲ್ಲಿರುವ ಅಶಕ್ತರನ್ನು ಸುಧಾರಿಸಿ ಅವರ ಜೀವನವನ್ನು ಉತ್ತಮಪಡಿಸುವದಕ್ಕಾಗಿಯೇ ಮಾಡಲಾಗಿವೆಯೆಂಬುದನ್ನು ಮರೆಯಬೇಡಿರಿ.

ಹೊಸದಾಗಿ ರೂಪಾಯಿಗಳನ್ನು ಮಾಡಲು ಅಥವಾ ಕರೆನ್ಸಿ ನೋಟುಗಳನ್ನು ಮುದ್ರಿಸಲು ಶಕ್ಯವಿಲ್ಲ. ಪುನರ್ವ್ಯವಸ್ಥೆ ಮತ್ತು ಕರ ಕೊಡಬಲ್ಲವರ ಮೇಲೆ ಕರಗಳನ್ನು ಹೇರುವುದರಿಂದ ಮಾತ್ರ ನಮಗೆ ಹಣ ಸಿಗುವದು.

ಈ ವರ್ಷ ೮ ಲಕ್ಷ ರೂ. ಉತ್ಪನ್ನವು (ವಿದ್ಯುಚ್ಛಕ್ತಿಯ ಹೊಸ ಕರದಿಂದ ೫ ಲಕ್ಷ ರೂ. ಮತ್ತು ಸ್ಟಾಂಪ ಕರದಿಂದ ೩ ಲಕ್ಷ ರೂ.) ಹೊಸದಾಗಿ ಸಿಗುವದು.

"ವೆಸ್ಟರ್ನ ಇಂಡಿಯಾ ಟರ್ಫ ಕ್ಲಬ್ಬಿನ" ಮೇಲೆ ಪುನಃ ಕರ ಹೇರುವದನ್ನು ಸರಕಾರದವರು ವಿಚಾರಿಸುತ್ತಿದ್ದಾರೆ. ವಿಚಾರಣೆಯು ಇನ್ನೂ ಮುಗಿದಿಲ್ಲವಾದರೂ ಈ ಬಾಬಿನಿಂದ ೩ ಲಕ್ಷ ರೂ. ಉತ್ಪನ್ನ ಬರಬಹುದೆಂದು ಅಂದಾಜು ಮಾಡಲಾಗಿದೆ.

ತಂಬಾಕದ ಮೇಲಿನ ಕರದಿಂದ ೧ ಲಕ್ಷ ರೂ. ಬರಬಹುದು. ಅಂತೂ ಒಟ್ಟು ಈ ವರುಷ ೧೨ ಲಕ್ಷ ರೂ. ಹೆಚ್ಚು ಉತ್ಪನ್ನ ಬರಬಹುದು. ಅದನ್ನು ಕೆಳಗೆ ಕಂಡ ರೀತಿಯಲ್ಲಿ ಖರ್ಚುಮಾಡಲಾಗುವುದು. ಶಿಕ್ಷಣ ೮.೯೨ ಲಕ್ಷ ರೂ. ಮದ್ಯ ಪ್ರತಿಬಂಧ ೧.೫೦ ಲಕ್ಷ ರೂ. ಒಕ್ಕಲತನ ಮತ್ತು ಸರಕಾರ ಖಾತೆ ೧.೮೦ ಲಕ್ಷ ರೂ. ಔದ್ಯೋಗಿಕ ಖಾತೆ ೦.೨೦ ಲಕ್ಷ ರೂ. ಆಯುರ್ವೇದ ಮತ್ತು ಯುನಾನಿ ಶಿಕ್ಷಣ ೦.೨೦ ಲಕ್ಷ ರೂ.

---

## ಶರಣ ಸಂದೇಶವು

**ಪದ್ಧತಿ ಪ್ರಕಾರ ಬರುವ ವಾರ ಪ್ರಕಟವಾಗದೆ ತಾ. ೧೪-೩-೧೯೩೮ ನೆಯ ದಿವಸ ಪ್ರಕಟವಾಗುವುದು.**

—ಮ್ಯಾನೇಜರ್.

---

### ವರ್ಕಿಂಗ್ ಕಮಿಟಿಯಲ್ಲಿ ಕರ್ನಾಟಕ.

ಕಾಂಗ್ರೆಸ್ ವರ್ಕಿಂಗ್ ಕಮಿಟಿಯಲ್ಲಿ ಶ್ರೀ. ದೇಶಪಾಂಡೆ ಗಂಗಾಧರರಾಯರನ್ನು ರಾಷ್ಟ್ರಪತಿಗಳಾದ ಶ್ರೀ. ಸುಭಾಷಚಂದ್ರ ಬೋಸರವರು ತೆಗೆದುಕೊಳ್ಳುವರೆಂದು ಪ್ರಕಟವಾಗಿದೆ. ಕರ್ನಾಟಕಕ್ಕೆ ಹೀಗೆ ಸ್ಥಾನ ದೊರೆಯಬೇಕಾದುದು ಅಗತ್ಯವಾಗಿತ್ತು.

# ಅನೈಕ್ಯದಿಂದಾಗುವ ಅನರ್ಥ.

ಜಗತ್ತಿನಲ್ಲಿ ಪ್ರತಿಯೊಂದು ದೇಶವಾಗಲಿ ಸಮಾಜವಾಗಲಿ ಅಥವಾ ಧರ್ಮವಾಗಲಿ ಸುಧಾರಿಸಬೇಕಾದರೆ ಅಸೂಯಾದ್ವೇಷ ಅನೈಕ್ಯ ಇವೇ ಮೊದಲಾದ ಕ್ಷುದ್ರ ಗುಣಗಳು ಹೋಗಲೇಬೇಕು. ಸರ್ವ ದೇಶಗಳಲ್ಲಿ ಅತಿ ಶ್ರೇಷ್ಠವಾದ ನಮ್ಮ ಹಿಂದುಸ್ಥಾನವು ಪರ ದಾಸ್ಯದಲ್ಲಿ ಬೀಳಬೇಕಾದರೆ ಮೇಲುಕ್ತವಾದ ಗುಣಗಳಿಂದಲ್ಲದೇ ಬೇರೊಂದಲ್ಲವು. ಆದ್ದರಿಂದ ನನ್ನ ವೀರಶೈವ ಬಂಧುಗಳಿರಾ, ನಿಮ್ಮೆಲ್ಲರಿಗೆ ಪರಮ ಸುಖವಾಗಬೇಕಾಗಿದ್ದರೆ ನಿಮ್ಮ ನಿಮ್ಮಲ್ಲಿರುವ ಅನೈಕ್ಯ ದ್ವೇಷಾಸೂಯೆಗಳನ್ನು ಬಿಟ್ಟುಬಿಡಿರಿ. ನಾವು ಶೀಲವಂತರು, ನಾವು ದೀಕ್ಷವಂತರು, ಅವರು ಪಂಚಮರು, ಇವರು ರಡ್ಡೇರು, ಗಾಣಿಗೇರು, ಹಟಗಾರು, ಕುಂಬಾರು ನಮ್ಮ ಕುಲವೇ ಶ್ರೇಷ್ಠವಾದದ್ದು. ನಾವು ಮಾಡುವ ಕಾಯಕವೇ ಅತ್ಯುತ್ತಮವಾದದ್ದು. ಅವರು ಕಡಿಮೇ ಕುಲದವರು. ಮತ್ತು ಅವರು ಮಾಡುವ ಕಾಯಕವಾದರೂ ಅತೀ ಕೀಳಾದದ್ದು. ಎಂಬ ದುರಭಿಮಾನವನ್ನು ತಾಳಿ ಸಮಾಜದಲ್ಲಿ ಕಲಹವನ್ನು ಬೆಳಸಬೇಡಿರಿ.

ಈ ಕಲಹದಿಂದಲೇ ನಮ್ಮ ಸಮಾಜವು ಹೀನದೆಶೆಯನ್ನು ಹೊಂದುತ್ತಲಿದೆ. ಈ ಕಲಹದಿಂದಲೇ ನಮ್ಮ ದೇಶವು ಪಾರತಂತ್ರ್ಯದಲ್ಲಿ ಬೀಳುತ್ತಿರುತ್ತದೆಂಬುದನ್ನು ಮಾತ್ರ ಯಾರೂ ಮರೆಯಬಾರದು. ಬಂಧುಗಳಿರಾ, ಸಧ್ಯ ಜಗತ್ತಿನಲ್ಲಿ ಏನು ನಡೆದಿದೆ? ನಾವೇನು ಮಾಡುತ್ತೇವೆಂಬುದನ್ನು ಸ್ವಲ್ಪ ವಿಚಾರಪೂರ್ವಕ ನೋಡಿರಿ. ಇಡೀ ವಿಶ್ವವನ್ನೇ ಒಂದು ಕುಟುಂಬವನ್ನಾಗಿ ಮಾಡಬೇಕೆಂದು ಜಗತ್ತಿನ ಅನೇಕ ಮಹಾ ವಿಭೂತಿಗಳು ದೇಶದಲ್ಲಿಯ ದ್ವೇಷಾಸೂಯೆಗಳನ್ನು ಬದಿಗಿಟ್ಟು ಹಗಲಿರುಳೆನ್ನದೆ ಪ್ರಯತ್ನಪಡುತ್ತಿರುವ ಸಮಯದಲ್ಲಿ ವೀರಶೈವರಾದ ನಾವು ವೀರಶೈವರಲ್ಲಿಯೇ ನಾನು ಹೆಚ್ಚು, ನೀನು ಹೆಚ್ಚೆಂಬ ಮೇಲುಕೀಳುಗಳನ್ನು ಕಲ್ಪಿಸಿ ಕೆಲಸಮಾಡುವದು ತರವಲ್ಲ. ವೀರಶೈವರಲ್ಲಿ ಉಳಿದ ಹಿಂದುಗಳಂತೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ವರ್ಣಗಳು ಇಲ್ಲವೇ ಇಲ್ಲ. ಅಷ್ಟಾವರಣ ಪಂಚಾಚಾರ ಷಟಸ್ಥಲ ಸಂಪನ್ನನಾದವನೇ ವೀರಶೈವನೆಂದು ಧರ್ಮಗ್ರಂಥಗಳು ಹೇಳುತ್ತಲಿರುವವು. ಅಂದರೆ ಗುರು ಲಿಂಗ ಜಂಗಮ ಪಾದೋದಕ ಪ್ರಸಾದ ವಿಭೂತಿ ರುದ್ರಾಕ್ಷಿ ಮಂತ್ರ ಎಂಬ ಚಿನ್ಹಗಳು ಯಾವ ವೀರಶೈವರ ಮನೆಯಲ್ಲಿ ನೆಲೆಗೊಂಡಿರುತ್ತವೆಯೋ ಮತ್ತು ಯಾರು ಅವುಗಳನ್ನು ಎಡಬಿಡದೆ ಪೂಜಿಸುತ್ತಾರೆಯೋ ಅವರು ಯಾವ ಕುಲದವರಾಗಿರಲಿ ಮತ್ತು ಯಾವ ಕಾಯಕವನ್ನೇ ಮಾಡುತ್ತಿರಲಿ ಅವರೆಲ್ಲರು ಸಂಸಮಾನರೇ ಸರಿ.

ಅಂಥವರ ಮನೆಯಲ್ಲಿ ಊಟೋಪಚಾರಗಳನ್ನಾಗಲಿ ಕೊಡಕೊಳ್ಳುವ ವ್ಯವಹಾರವನ್ನಾಗಲಿ ಮಾಡಲಿಕ್ಕೇಬೇಕೆಂದು ನಮ್ಮ ಸಮಾಜಕ್ಕೆ ಅತಿ ಪೂಜ್ಯರಾದ ಶ್ರೀ ಬಸವಣ್ಣನವರು ಹೀಗೆ ಹೇಳಿದ್ದಾರೆ—

ಶ್ವಪಚನಾದರೇನು ಲಿಂಗಭಕ್ತನೇ ಕುಲಜನು. ನಂಬಿ ನಂಬದಿದ್ದರೆ ಸಂದೇಹ ನೋಡಾ, ಕಟ್ಟಿದರೇನು, ಬಿಟ್ಟರೇನು ಪೂ ಜಿ ಸಿ ದ ರೇ ನು ಮ ನ ಮುಟ್ಟದನ್ನಕ್ಕ. ಭಾವ ಶುದ್ಧಿ ಇಲ್ಲದವಂಗೆ ಭಕ್ತಿ ನೆಲೆಗೊಳ್ಳದು ಕೂಡಲ ಸಂಗಯ್ಯ ನೊಲವಿಂಗಲ್ಲದೆ.

ಅಂತ್ಯಜ ಕುಲದಲ್ಲಿ ಹುಟ್ಟಿದರೂ ಚಿಂತೆ ಇಲ್ಲ. ಆತನು ಲಿಂಗದೇವನಲ್ಲಿ ದೃಢತರವಾದ ಭಕ್ತಿಯುಳ್ಳವನಾಗಿದ್ದರೆ ಆತನೇ ಶ್ರೇಷ್ಠ ಕುಲದವನೆಂದು ತಿಳಿಯಬೇಕು. ಹೀಗಿದ್ದು ಅವರಲ್ಲಿ ಯಾರು ಸಮಭಾವವನ್ನು ತಿಳಿಯುವದಿಲ್ಲವೋ ಅವರೆಲ್ಲರು ಶಿವದ್ರೋಹಿಗಳೆಂದು ಹೇಳಿದಂತಾಯಿತು. ಅಂಥವರು ಲಿಂಗವನ್ನು ಕಟ್ಟಿದರೂ ಮಜ್ಜನಕ್ಕೆರೆದರೂ ಎಷ್ಟೇ ಪತ್ರಿ ಪುಷ್ಪಗಳನ್ನು ಧರಿಸಿದರೂ ವ್ಯರ್ಥವೇ ಸರಿ. ಇದಲ್ಲದೆ

ಹೊಲೆಗಂಡಲ್ಲದೆ ಪಿಂಡದನೆಲೆಗಾಶ್ರಯವಿಲ್ಲ. ಜಲ ಬಿಂದುವಿನ ವ್ಯವಹಾರವೊಂದೇ. ಆಶೆಯಾಮಿಷ ಹರುಷ ವಿಷಯಾದಿಗಳೆಲ್ಲವೊಂದೇ. ಏನನೋದಿ, ಏನ ಕೇಳಿ, ಏನು ಫಲ? ಕುಲಜನೆಂಬುವದಕ್ಕೆ ಆವುದು ದೃಷ್ಟ? ಸಪ್ತ ಧಾತು ಸಮಂ ಪಿಂಡಂ ಸಮಯೋನಿ ಸಮುದ್ಭವಂ ಆತ್ಮ ಜೀವ ಸಮಾಯುಕ್ತಂ ವರ್ಣಾನಾಂ ಕಿಂ ಪ್ರಯೋಜನಂ. ಎಂಬುದಾಗಿ

ಕಾಸಿ ಕಮ್ಮಾರನಾದ ಬೀಸಿ ಮಡಿವಾಳನಾದ ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ, ಕರ್ಣದಲ್ಲಿ ಜನಿಸಿದವರುಂಟೇ ಜಗದೊಳಗೆ ಇದು ಕಾರಣ ಕೂಡಲ ಸಂಗಮದೇವಾ ಲಿಂಗಸ್ಥಲವನರಿದವನೇ ಕುಲಜನು.

ಅಂದರೆ ಜನ್ಮದಿಂದಲೇ ಶ್ರೇಷ್ಠ ಕನಿಷ್ಠವೆಂಬ ವರ್ಣ ಕಲ್ಪನೆಯು ಅನ್ಯಾಯವಾದದ್ದೂ ಅನರ್ಥಕಾರಿಯಾದದ್ದೂ ಆಗಿರುವುದು.

ಆದಕಾರಣ ಮೇಲು ಕೀಳುಗಳೆಂಬ ಭಾವನೆಯು ಅಸಮಂಜಸವಾಗಿಯೂ ಅನಾವಶ್ಯಕವಾಗಿಯೂ ಇದೆಯೆಂಬುದು ಸ್ಪಷ್ಟವಾಗುತ್ತದೆ. ಎಲ್ಲರೂ ಶುಕ್ಲಶೋಣಿಗಳಿಂದ ಕೂಡಿದವರಾಗಿ ಒಂಬತ್ತು ತಿಂಗಳು ತಾಯಿ ಗರ್ಭದಲ್ಲಿದ್ದು ಆಶೆ ಕೋಪ ಸಂತೋಷಾದಿ ಮನೋವಿಕಾರಗಳುಳ್ಳವರಾಗಿ ಯೋನಿ ಮುಖದಿಂದ ಹುಟ್ಟುತ್ತಾರಲ್ಲದೆ ಇದಕ್ಕೆ ವಿರುದ್ಧವಾಗಿ ಕಿವಿ ಮೂಗು ಬಾಯಿಗಳಲ್ಲಿ ಜನಿಸಿದವರು ಈ ಜಗತ್ತಿನಲ್ಲಿ ಇಲ್ಲವೇ ಇಲ್ಲ. ಹೀಗಿದ್ದು ನಾವು ಶ್ರೇಷ್ಠರೆಂದು ಹೇಳಿಕೊಳ್ಳುವದು ಯಾತರ ಮೇಲಿಂದ? ನೀವು ಧರಿಸಿರುವ ರುದ್ರಾಕ್ಷಿ ಭಸ್ಮಗಳೂ ಪಠಿಸುವ ಮಂತ್ರವೂ ಬೇರೆ ಇರುವದೇ ಹೇಗೆ? ನೀವು ಯಾವ ಗುರುಗಳಿಗೆ ನಡೆದುಕೊಳ್ಳುವಿರೋ ಉಳಿದವರೂ ಕೂಡಾ ಅದೇ ಗುರುಗಳಿಗೇ ನಡೆದುಕೊಳ್ಳುತ್ತಾರೆ.

ನಿಮ್ಮ ಮನೆಗಳಲ್ಲಿ ಯಾವ ಜಂಗಮಮೂರ್ತಿಯು ಪ್ರಸಾದವನ್ನು ಸೇವಿಸುವನೋ ಅದೇ ಮೂರ್ತಿಯೇ ಎಲ್ಲ ಲಿಂಗವಂತರ ಕಡೆಗೂ ಹೋಗುವನು. ಎಂದಮೇಲೆ ಶೀಲವಂತ ಮೊದಲಾದ ಒಳಪಂಗಡಗಳನ್ನು ಹೇಳಿಕೊಳ್ಳುವದು ವ್ಯರ್ಥವಲ್ಲವೆ? ಇಂಥ ನಿಷ್ಪ್ರಯೋಜಕಗಳಾದ ಮೇಲುಕೀಳುಗಳನ್ನು ಎಲ್ಲಿಯ ವರೆಗೂ ನಿರಾಧಾರವಾದವುಗಳೆಂದು ತಿಳಿಯುವದಿಲ್ಲವೋ ಅಲ್ಲಿಯ ವರೆಗೂ ನಾವು ಎಷ್ಟು ಶಾಸ್ತ್ರ ಪುರಾಣ ಪುಣ್ಯ ಕಥೆಗಳನ್ನು ಕೇಳಿದರೂ ಫಲವೇನು? ನಮ್ಮಲ್ಲಿರುವ ಒಳಪಂಗಡಗಳು ಉದ್ಯೋಗಗಳಮೇಲಿಂದ ಬಂದಿರುವವು.

ಯಾವಾತನು ಲಿಂಗಾಂಗ ಸಾಮರಸ್ಯವನ್ನು ತಿಳಿದಿದ್ದಾನೆಯೋ ಆತನೇ ಶ್ರೇಷ್ಠನು. ಕಬ್ಬಿಣವನ್ನು ಕಾಸಿ ಬಡಿವಾತನೇ ಕಮ್ಮಾರನೆಂತಲೂ ಬಟ್ಟೆಗಳನ್ನು ತೊಳೆಯುವಾತನೇ ಮಡಿವಾಳನೆಂತಲೂ ಬಟ್ಟೆ ನೇಯುವದರಿಂದ ನೇಕಾರನೆಂತಲೂ ಹೇಗೆ ಕರೆಯುವರೋ ಇವಾದರೂ ಹಾಗೆಯೇ ಸರಿ.

ಮಹಾಶಯರೇ, ವೀರಶೈವರಲ್ಲಿ ಕಾಯಕವು ಒಂದು ಮಹತ್ವವಾದ ವಿಷಯವಾಗಿದೆ. ಇಷ್ಟರಮೇಲಿಂದಲೇ ಮೇಲುಕೀಳುಗಳೆಂದು ಹೇಳಲಿಕ್ಕೆ ಬರುವಂತಿಲ್ಲ. ವೀರಶೈವ ಮತದಲ್ಲಿ ಬೇಕಾದವರು ಶಿವಭಕ್ತಿಮೊದಲಾದ ಶ್ರೇಷ್ಠ ಗುಣಗಳಿಂದ ಶ್ರೇಷ್ಠ ಪದವಿಯನ್ನು ಹೊಂದಲು ಹೇಗೆ ಸ್ವಾತಂತ್ರ್ಯವುಂಟೋ ಹಾಗೆಯೇ ಉದ್ಯೋ

ಗ ಸ್ವತಂತ್ರವಾದರೂ ಈ ಮತದವರಿಗೆ ಇದ್ದೇ ಇದೆ. ಆದುದರಿಂದಲೇ ಮೋಳಿಗೆ ಮಾರಯ್ಯನವರು ಸ್ವತಃ ತಾವು ಅರಸರಾಗಿದ್ದರೂ ಕಟ್ಟಿಗೆ ಹೊರೆಯನ್ನು ಮಾರುತ್ತಿದ್ದರು. ನೂಲಿಯ ಚಂದಯ್ಯನವರು ಹಗ್ಗಗಳನ್ನು ಮಾಡುತ್ತಿದ್ದರು. ಹಡಪದಪ್ಪಣ್ಣನವರು ಕ್ಷೌರವನ್ನು ಮಾಡುತ್ತಿದ್ದರು. ಇನ್ನು ಮಡಿವಾಳ ಮಾಚಿರಸ ಶಿವನಾಗಮಯ್ಯ, ಕುಂಬಾರ 'ಗುಂಡಯ್ಯ ಇವರೇ ಮೊದಲಾದವರು ತಮ್ಮ ತಮ್ಮ ಕಾಯಕಗಳನ್ನು ಮಾಡುತ್ತಿದ್ದರೂ ಬಸವಣ್ಣನವರು ಇವರೆಲ್ಲರೂ ಸರಿಸಮಾನ ಪೂಜ್ಯರೆಂದೇ ಕೊಂಡಾಡಿದ್ದಾರೆ. ಇದರ ಮೇಲಿಂದ ಇವರು ಕಡಿಮೇ ಕುಲದವರೆಂದು ಯಾರೂ ತಿಳಿಯಕೂಡದು. ಬುಟ್ಟಿಯನ್ನು ಹೆಣೆಯುವದರಿಂದ ಮೇದಾರನೆಂತಲೂ ಪಾದರಕ್ಷೆಗಳನ್ನು ಹೊಲಿಯೋಣದರಿಂದ ಸಮಗಾರನೆಂತಲೂ ಆ ವರವರ ಉದ್ಯೋಗಗಳ ಮೇಲಿಂದಲೇ ಮೇಲು ಕೀಳುಗಳು ಬಂದಿರುವದಲ್ಲದೇ ಜನ್ಮದಿಂದಲ್ಲ. ಲಿಂಗಧಾರಿಗಳಲ್ಲಿ ಮೇಲುಕೀಳೆಂಬ ಭಾವನೆಯನ್ನು ಮಾಡಕೂಡದೆಂಬುವ ಬಗ್ಗೆ

> ದೇವ ಸಹಿತ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡೆನಾದರೆ, ನಿಮ್ಮಾಣೆ, ನಿಮ್ಮ ಪುರಾತನರಾಣೆ. ತಲೆದಂಡ ತಲೆದಂಡ ಕೂಡಲ ಸಂಗಮದೇವಾ ಭಕ್ತರಲ್ಲಿ ಕುಲವನಾರಿಸಿದರೆ ನಿಮ್ಮ ರಾಣೀವಾಸದಾಣೆ

ಇಷ್ಟ ಲಿಂಗವನ್ನು ಧರಿಸಿದ ಶಿವಭಕ್ತನು ಮನೆಗೆ ಬಂದರೆ ಅವನ ಕಾಯಕ ಮೊದಲಾದವುಗಳನ್ನು ಕೇಳಿದ್ದಾದರೆ ಹೇ ಸಂಗಮನಾಥನೆ, ನಿಮ್ಮಾಣೆಯಾಗಿಯೂ ನಿಮ್ಮ ಪುರಾತನರಾಣೆಯಾಗಿಯೂ ನಾನು ಕೇಳುವದಿಲ್ಲ. ಹಾಗೆ ಕೇಳಿದ್ದಾದರೆ ನನ್ನ ತಲೆಯು ಒಡೆದು ಹೋಗಲಿ. ಶಿವಭಕ್ತರಲ್ಲಿ ಕುಲವನಾರಿಸಿದರೆ ನನಗೆ ಮಾತೃದ್ರೋಹದ ಪಾಪವು ಬರಲಿ. ಶಿವದೀಕ್ಷೆಯನ್ನು ಹೊಂದಿ ಇಷ್ಟಲಿಂಗವನ್ನು ಧರಿಸಿ ಅಷ್ಟಾವರಣಾದಿ ಸದ್ಗುಣಗಳಿಂದ ಕೂಡಿದವರಲ್ಲಿ ಶ್ರೇಷ್ಠ ಕನಿಷ್ಠಗಳೆಂಬ ಕುಲಗಳನ್ನು ಕಲ್ಪಿಸಿ ಅವರಲ್ಲಿ ಊಟೋಪಚಾರಾದಿಗಳನ್ನು ಮಾಡುವದು ವೀರಶೈವ ಮತಕ್ಕೆ ವಿರೋಧವೆಂದು ದುರಭಿಮಾನಿಗಳಾದ ಕೆಲವು ಹಳಬರು ತಿಳಿದುಕೊಂಡಿದ್ದಾರಷ್ಟೆ. ಇದು ಬಹಳ ಅನ್ಯಾಯುವಾದದ್ದೂ ಅನರ್ಥಕರವಾದದ್ದಾಗಿದೆ. ಇದರಿಂದ ನಮ್ಮ ಸಮಾಜವಾಗಲಿ ಮತ್ತು ನಮ್ಮ ದೇಶವಾಗಲಿ ಮುಂದೆ ಬರಲಾರದು.

ಪ್ರತಿಯೊಂದು ಗ್ರಾಮದ ವೀರಶೈವ ಬಂಧುಗಳು ತಮ್ಮಲ್ಲಿದ್ದ ಈ ಒಳಪಂಗಡಗಳೆಂಬ ವಿಷ ಬೇರನ್ನು ಕಿತ್ತೊಗೆದು ಎಲ್ಲರೂ ಸಂಘಟಿತರಾಗಿ ಒಂದೇ ಮನೆಯವರೆಂದು ಒಂದೇ ಕುಟುಂಬದವರೆಂದು ತಿಳಿದು ಪರಸ್ಪರ ಪ್ರೇಮಾದರಗಳಿಂದ ನಡೆದುಕೊಳ್ಳಬೇಕೆಂದು ನಾನು ಪುನಃ ತಮೆಲ್ಲರಿಗೆ ಕೈಮುಗಿದು ಬೇಡಿಕೊಂಡು ಈ ಲೇಖನವನ್ನು ಮುಗಿಸುತ್ತೇನೆ.

ತರುಣ ಸಂಘ ಚಿತಾಪುರ<br>ತಾ. ೧೭-೨-೩೮ } ಶಂಕರಪ್ಪ ಫೋಟೋ ಆರ್ಟಿಸ್ಟ<br>ಗುರುಮಠಕಲ್ಲ.

## ಬ್ಯಾಟ್ ಬೇಡ. ಬಂದೂಕು ಬೇಕು.

ಹಿಂದು ಮಹಾಸಭೆಯ ಅಧ್ಯಕ್ಷರಾದ ಬ್ಯಾ. ಸಾವರಕರರು ಅಹಮದನಗರದಲ್ಲಿ ಕಳೆದ ೧೪ ನೆಯ ತಾರೀಖಿನ ದಿನ ಮಾಡಿದ ಭಾಷಣದಲ್ಲಿ ಹೀಗೆ ಹೇಳಿದರು—

"ಹಿಂದು ರಾಷ್ಟ್ರವು ಬಲಶಾಲಿಯಾಗಬೇಕಾಗಿದೆ. ನಿರ್ಬಲವಾದ ರಾಷ್ಟ್ರದ ಅಸ್ತಿತ್ವವಿರುವುದು ಶಕ್ಯವೇ ಇಲ್ಲವೆಂಬುದಕ್ಕೆ ಅಬಸೀನಿಯಾ ಚೀನಗಳ ಸ್ಥಿತಿಯೇ ನಮ್ಮ ಮುಂದಿದೆ. ಪ್ರತೀಕಾರ ಬಲವು ನಮ್ಮಲ್ಲಿಲ್ಲದಿದ್ದರೆ ನಾವು ಬದುಕಲಾರೆವು. ಆದಕಾರಣ ಪ್ರತಿಯೊಂದು ಸ್ಥಳದಲ್ಲಿಯೂ "ರೈಫಲ್ ಕ್ಲಬ್" ಸ್ಥಾಪನೆಯಾಗಬೇಕು. ಟೆನಿಸ್ ಆಡಲು ತರುಣರು ಬ್ಯಾಟ್ ಬೇಕೆಂದು ಕೇಳದೆ ಗುರಿ ಕಲಿಯಲು ರೈಫಲ್ ಬೇಕೆಂದು ಹೇಳಬೇಕು."

## ಬಾಬು ಸುಭಾಷಚಂದ್ರರ ನೂತನ ಮಂತ್ರಿಮಂಡಲ.

ರಾಷ್ಟ್ರಾಧಿಪತಿಗಳಾದ ಬಾಬು ಸುಭಾಷಚಂದ್ರರು ಹೊಸ ಮಂತ್ರಿಮಂಡಲವನ್ನು (ವರ್ಕಿಂಗ್ ಕಮಿಟಿ) ಈ ಕೆಳಗಿನಂತೆ ಗೊತ್ತುಮಾಡಿಕೊಂಡಿದ್ದಾರೆ. ಕಳೆದ ವರುಷ ಮಹಾರಾಷ್ಟ್ರ ಪ್ರಾಂತದ ಶ್ರೀ. ದೇವ ಇವರು ಈ ಮಂಡಲದಲ್ಲಿ ಇದ್ದರು. ಈ ಸಾರೆ ಮಹಾರಾಷ್ಟ್ರದವರೂ ಇಲ್ಲ. ಕರ್ನಾಟಕವಂತೂ ಇಲ್ಲೇ ಇಲ್ಲ.

ಅಧ್ಯಕ್ಷ ಸುಭಾಷಚಂದ್ರ ಬೋಸರು ಹೊಸ ವರ್ಕಿಂಗ್ ಕಮಿಟಿಯ ಸದಸ್ಯರ ಹೆಸರುಗಳನ್ನು ತಿಳಿಪಡಿಸಿದರು. ಆಗ್ಗೆ ಅವರು "ವರ್ಕಿಂಗ್ ಕಮಿಟಿಯ ರಚನೆಯ ಕೆಲಸವು ಸುಲಭವಲ್ಲವೆಂಬುದನ್ನು ನೀವು ಬಲ್ಲಿರಿ. ಪೂರ್ವಾಪರ ಧೋರಣಕ್ಕೆ ವ್ಯತ್ಯಯ ಬರಕೂಡದು. ಹಾಗು ಒಮ್ಮನಸ್ಸಿನಿಂದ ಕಾರ್ಯವು ನಡೆಯಬೇಕು. ಈ ಎರಡು ತತ್ವಗಳನ್ನು ಲಕ್ಷದಲ್ಲಿಟ್ಟುಕೊಂಡು ನಾನು ವರ್ಕಿಂಗ್ ಕಮಿಟಿಯ ರಚನೆಯನ್ನು ಮಾಡಿದ್ದೇನೆ. ೬ ವರುಷಗಳ ನಂತರ ನಾನು ಇಲ್ಲಿಗೆ (ಹಿಂದುಸ್ಥಾನಕ್ಕೆ) ಬಂದಿದ್ದೇನೆ. ಮೊದಲಿನ ಧೋರಣಕ್ಕೆ ವ್ಯತ್ಯಯ ಬರಕೂಡದೆಂದು ನಾನು ಆತುರನಾಗಿರುವೆನು. ಆದುದರಿಂದ ಹಳೆಯ ವರ್ಕಿಂಗ್ ಕಮಿಟಿಯನ್ನು ಅಲ್ಪ ಸ್ವಲ್ಪ ಹೆಚ್ಚು ಕಡಿಮೆ ಮಾಡಿ ಮುಂದರಿಸಬೇಕೆಂದು ಬಯಸುತ್ತೇನೆ. ಮೊದಲಿನ ಕಮಿಟಿಯಲ್ಲಿದ್ದ ಶ್ರೀ. ನರೇಂದ್ರದೇವ ಹಾಗೂ ಶ್ರೀ. ಅಚ್ಯುತ ಪಟವರ್ಧನ ಇವರಿಬ್ಬರು ಹೊಸ ಕಮಿಟಿಯಲ್ಲಿ ಸೇರಲು ಕೆಲವು ಕಾರಣಗಳ ಮೂಲಕ ಒಪ್ಪಲಿಲ್ಲ. ಇದಕ್ಕೆ ನನಗೆ ವಿಷಾದವೆನಿಸುತ್ತದೆ. ಆದರೆ ವರ್ಕಿಂಗ್ ಕಮಿಟಿಯಲ್ಲಿಲ್ಲದಿದ್ದರೂ ಅವರು ಹೊಸ ಕಮಿಟಿಗೆ ಸಂಪೂರ್ಣ ಬೆಂಬಲವನ್ನು ಕೊಡುವರೆಂದು ಹೇಳಲು ನನಗೆ ಆನಂದವೆನಿಸುತ್ತದೆ.

ಈ ಇಬ್ಬರು ಕಡಿಮೆಯಾದುದರಿಂದ ಆ ಎರಡು ಸ್ಥಳಗಳನ್ನು ತುಂಬುವದು ಸಾಧ್ಯವಾಗಲಿಲ್ಲ. ಒಂದು ಸ್ಥಳವನ್ನು ತುಂಬಲಾಗಿದೆ. ಯೋಗ್ಯ ವಿಚಾರ ಮಾಡಿ ಇನ್ನೊಂದನ್ನು ತುಂಬಲಾಗುವುದು.

### ಹೊಸ ವರ್ಕಿಂಗ್ ಕಮಿಟಿ ಸದಸ್ಯರು.

(೧) ಶ್ರೀ. ಸುಭಾಷಚಂದ್ರ ಬೋಸ.
(೨) ಶ್ರೀ. ಪಂಡಿತ ಜವಾಹರಲಾಲ ನೆಹರು.
(೩) ಶ್ರೀ. ವಲ್ಲಭಭಾಯಿ ಪಟೇಲ.
(೪) ಶ್ರೀ. ಮೌ. ಅಬ್ದುಲ್ ಕಲಂ ಅಜಾದ.
(೫) ಶ್ರೀ. ಬಾಬು ರಾಜೇಂದ್ರ ಪ್ರಸಾದ.
(೬) ಶ್ರೀ. ಖಾನ ಅಬ್ದುಲ್ ಗಫಾರಖಾನ.
(೭) ಶ್ರೀಮತಿ ಸರೋಜಿನಿ ನಾಯಡು.
(೮) ಶ್ರೀ. ಜಮನಾಲಾಲ ಬಜಾಜ.
(೯) ಶ್ರೀ. ಭುಲಾಭಾಯಿ ದೇಸಾಯಿ.
(೧೦) ಶ್ರೀ. ಡಾ. ಪಟ್ಟಾಭಿ ಸೀತಾರಾಮಯ್ಯ.
(೧೧) ಶ್ರೀ. ಶರಶ್ಚಂದ್ರ ಬೋಸ.
(೧೨) ಶ್ರೀ. ಜಯರಾಮದಾಸ ದೌಲತರಾಮ.
(೧೩) ಶ್ರೀ ಆಚಾರ್ಯ ಕೃಪಾಲಾಣಿ.

ಜನರಲ್ ಸೆಕ್ರೆಟರಿಗಳು.

(೧೪) ಶ್ರೀ. ಹರಿಕೃಷ್ಣ ಮೆಹತಾಬ.

# ಹಿಂದು ಜಾತಿಯ ದೊಡ್ಡ ರೋಗ ಯಾವುದು?

(೨೫ ನೆಯ ಸಂಚಿಕೆಯಿಂದ ಮುಂದೆ ಸಾಗಿದೆ.)

ಶ್ರೀ. ಪಿ. ಸಿ. ರಾಯ— ಎಲ್ಲಿಯವರೆಗೆ ಜನ್ಮದಿಂದ ಜಾತಿಯನ್ನು ಎಣಿಸುವದು ನಾಶವಾಗಿ ಗುಣ ಕರ್ಮಗಳ ಮೇಲಿಂದ ಜಾತಿಗಳನ್ನು ಎಣಿಸುವುದಿಲ್ಲವೋ ಅಲ್ಲಿಯವರೆಗೆ ನಮ್ಮ ದೇಶವು ಸ್ವಾತಂತ್ರ್ಯವುಳ್ಳದ್ದಾಗುವುದಿಲ್ಲ. ಜಾತಿಗಳ ತೊಡಕು ದೇಶದ ಉನ್ನತಿಗೆ ಪ್ರತಿಬಂಧವನ್ನುಂಟುಮಾಡುವುದಾಗಿದೆ. ಆದುದರಿಂದ ತೀವ್ರವಾಗಿ ಇವುಗಳನ್ನು ತೆಗೆದುಹಾಕಬೇಕಾಗಿದೆ.

ಡಾ. ಆಂಬೇಡಕರ್— ಜಾತಿಪಾತಿಗಳ ತೊಡಕನ್ನು ಹರಿದುಹಾಕುವುದೇ ನಿಜವಾದ ಹಿಂದು ಸಂಘಟನೆಯು. ಇಂಥ ಸಂಘಟನೆಯು ಉಂಟಾದಾಗ ಶುದ್ಧಿಯ ಅಗತ್ಯವೇ ಉಳಿಯುವದಿಲ್ಲ. ಸಂಘಟನೆಯನ್ನು ಆಚರಣೆಯಲ್ಲಿ ತಂದದ್ದೇ ಆದರೆ ಒಂದು ತರಹದ ಶಕ್ತಿಯನ್ನು ಸಂಪಾದಿಸಿದಂತಾಗುವುದು. ಜಾತಿಪಾತಿಗಳನ್ನು ಇಟ್ಟುಕೊಂಡು ಹೀಗಾಗುವುದೆಂದರೆ ಅಶಕ್ಯವೇ ಸರಿ. ಜಾತಿಗಳು ಹಿಂದು ಸಮಾಜವನ್ನು ನಾಶಮಾಡುತ್ತವೆಂದು ತಿಳಿಯುವ ಸಮಯವು ಇಷ್ಟರಲ್ಲೇ ಬಾರದೇ ಇರಲಾರದು.

ಶ್ರೀ. ರಾಮಾನಂದ ಚಟರ್ಜಿ— (ಸಂ. ಮಾಡರ್ನ ರಿವ್ಹ್ಯೂ) ಜಾತಿಗಳನ್ನು ನಿವಾರಣೆ ಮಾಡುವುದರಿಂದ ಹಿಂದು ಸಮಾಜದ ಅಸ್ತಿತ್ವವು ಉಳಿಯಲಾರದೆಂದು ಕೆಲವರ ಅಭಿಪ್ರಾಯವಿದೆ. ಈ ವಿಚಾರವು ಸರಿಯಾದುದಲ್ಲವಾಗಿದೆ. ಬೌದ್ಧ, ಕ್ರಿಸ್ತ, ಮತ್ತು ಮುಸಲ್ಮಾನ್ ಧರ್ಮಗಳಲ್ಲಿ ಹಿಂದುಗಳಂತೆ ಯಾವ ತರಹದ ಜಾತಿಪಾತಿಗಳಿಲ್ಲ. ಆದರೂ ಅವು ಪ್ರಬಲವಾಗಿವೆ. ಎಂದಮೇಲೆ ಹಿಂದುಗಳಲ್ಲಿಯ ಜಾತಿಪಾತಿಗಳು ಹೋದರೆ ಹಿಂದು ಸಮಾಜದ ಅಸ್ತಿತ್ವವು ಏಕೆ ಉಳಿಯುವುದಿಲ್ಲ? ಜಾತಿಗಳು ನಿವಾರಣೆಯಾಗುವುದರಿಂದ ಪ್ರತಿಯೊಬ್ಬ ಹಿಂದುವು ತಾನು ಹಿಂದು ಎಂದು ಅಭಿಮಾನವುಳ್ಳವನಾಗುವನೆಂದೇ ನಾನು ತಿಳಿಯುವೆನು. ಮತ್ತು ಅದರಿಂದ ಹಿಂದುಗಳ ಸಂಘಟನೆಯು ಹೆಚ್ಚುವದು.

ಡಾ. ಸರ್. ಗೋಕಲ್ ಚಂದ— ಜಾತಿಪಾತಿಗಳು ಹಿಂದು ಸಂಘಟನೆ ಮತ್ತು ಹಿಂದು ಸಮಾಜದ ಏಳ್ಗೆಗೆ ಅಡ್ಡಿಯನ್ನು ಉಂಟುಮಾಡುವವೆಂದು ನಾನು ತಿಳಿದಿದ್ದೇನೆ. ಜಾತಿಪಾತಿಗಳನ್ನು ನಾಶಮಾಡದೆ ಹಿಂದುಗಳು ಎಂದೂ ಉನ್ನತಿಯನ್ನು ಹೊಂದಲಾರರು.

ಎಡ್ವೋಕೇಟ್ ದುನಿಚಂದ— ಜಾತಿಪಾತಿಗಳ ರೋಗವು ಹಿಂದುಸ್ಥಾನದ ಬಲ ಮತ್ತು ಸಂಘಟನೆಗಳನ್ನು ಕ್ಷೀಣಗೊಳಿಸಿದೆ. ಒಂದೇ ಜಾತಿಯಲ್ಲಿ ವಿವಾಹವಾಗಬೇಕೆಂಬ ಪ್ರತಿಬಂಧ ಇರುವದೆಂದರೆ ಒಂದು ಕೆರೆಗೆ ಶುದ್ಧ ಮತ್ತು ಆರೋಗ್ಯಕರವಾದ ನೀರು ಬಾರದಂತೆ ಅಡ್ಡಿ ಮಾಡುವುದೇ ಆಗಿದೆ. ಒಂದುವೇಳೆ ಹಿಂದುಸ್ಥಾನದಲ್ಲಿ ಜಾತಿಪಾತಿಗಳ ವಿಚಾರವೇ ಅಳಿದು ಹೋದರೆ ಮುಂದಿನ ಪೀಳಿಗೆಯು ಅತಿ ಬಲಶಾಲಿಯಾಗುತ್ತದೆ. ಈ ಬಲವಾದ ರೋಗವನ್ನು ಶೀಘ್ರದಲ್ಲಿಯೇ ನಾಶಮಾಡಬೇಕಾಗಿದೆ. ಇಲ್ಲವಾದರೆ ಅದು ಹಿಂದು ಜಾತಿಯ ಶಕ್ತಿಯನ್ನು ಕ್ಷೀಣಗೊಳಿಸುತ್ತದೆ.

ಶ್ರೀ. ಎಂ. ಸಿ. ರಾಜ— ಜಾತಿಭೇದವು ಉನ್ನತಿಗೆ ಅಡ್ಡಿ ಮಾಡಿದೆ. ಜನ್ಮದಿಂದಲೇ ಜಾತಿಯನ್ನು ಎಣಿಸುವ ಭಯಂಕರವಾದ ದೋಷವನ್ನು ಬೇರು ಸಹಿತ ತೆಗೆಯಬೇಕು. ಎಲ್ಲಿಯವರೆಗೆ ಹೀಗೆ ಮಾಡುವುದಿಲ್ಲವೋ ಅಲ್ಲಿಯವರೆಗೆ ನಮ್ಮ ದೇಶವು ಉದ್ಧಾರವಾಗುವುದಿಲ್ಲ.

ಶ್ರೀ. ಸ್ವಾಮಿ ಸತ್ಯಾನಂದ— ಜಾತಿಬಂಧನವು ಹಿಂದುಗಳನ್ನು ಬಂಧನದಲ್ಲಿ ಇಟ್ಟಿದೆ. ಹಿಂದುಗಳನ್ನು ಅಧೋಗತಿಗೂ ದಾಸ್ಯತ್ವಕ್ಕೂ ಗುರಿಮಾಡಿದೆ. ಆದುದರಿಂದ ಹಿಂದುಗಳು ಪ್ರಪಂಚದಲ್ಲಿಯೇ ಕೀಳಾಗಿದ್ದಾರೆ. ಪ್ರತಿಯೊಬ್ಬ ಹಿಂದು ಕ್ರಾಂತಿಯನ್ನು ಉಂಟುಮಾಡಿ ಜಾತಿಗಳನ್ನು ನಷ್ಟಗೊಳಿಸದಿದ್ದರೆ ಅದೇ ಜಾತಿಯ ಪಾಪವು ಅವರನ್ನು ನಾಶಮಾಡುವುದು. "ಕ್ರಾಂತಿ."

---

# ವಿಠ್ಠಲ ನಗರದಲ್ಲಿ ನಡೆದ ಕೆಲವು ಕೇಳುವ ಸಂಗತಿಗಳು.

(೧) ೫೧ ನೆಯ ಕಾಂಗ್ರೆಸ್ ಕೂಡಿದ್ದ ವಿಠ್ಠಲ ನಗರಕ್ಕೆ ೫೧ ಮಹಾದ್ವಾರಗಳು. ಅಧ್ಯಕ್ಷರ ಮೆರವಣಿಗೆಯ ೮೦ ವರುಷಗಳ ಹಿಂದಿನ ಬಂಗಾರದ ರಥಕ್ಕೆ ೫೧ ಎತ್ತುಗಳನ್ನು ಹೂಡಿದ್ದರು. ಅಧ್ಯಕ್ಷರಿಗೆ ಮಾತ್ರ ನಾಲ್ವತ್ತೇ ವರುಷ ವಯಸ್ಸು.

(೨) ಕಾಂಗ್ರೆಸ್ಸಿಗೆ ಮೂರು ಲಕ್ಷದ ವರೆಗೆ ಜನರು ಕೂಡಿದ್ದರು. ಇಷ್ಟು ಜನರು ಈ ವರೆಗಿನ ಯಾವ ಕಾಂಗ್ರೆಸ್ಸಿಗೂ ಕೂಡಿರಲಿಲ್ಲ. ಇಲ್ಲಿಯಷ್ಟು ಸ್ವಯಂಸೇವಕ ಮತ್ತು ಸೇವಕಿಯರ ಶಿಸ್ತು, ವಿನಯ, ಸೇವೆ, ಬೇರೆಕಡೆಗಿರಲಿಲ್ಲ. ಇಷ್ಟು ಆಕಳ ಹಾಲು ಈ ವಿಧವಾದ ಕೈದುಡಿತದಿಂದಾದ ಆಹಾರಗಳ ಊಟ, ಇನ್ನೆಲ್ಲಿಯೂ ದೊರೆತಿರಲಿಲ್ಲ. ಗಾಳಿ, ದೂಳಗಳ ಪ್ರಚಂಡ ಕೋಲಾಹಲವೂ ಇಷ್ಟು ಬೇರೆ ಕಡೆಗಿರಲಿಲ್ಲ.

(೩) ಕಾಂಗ್ರೆಸ್ ಅಧಿವೇಶನದ ಕಾಲಕ್ಕೆ ಇಲ್ಲಿ ಎರಡು ಲಗ್ನಗಳಾದವು. ಒಬ್ಬ ಹೆಣ್ಣುಮಗಳು ಒಂದು ಹೆಣ್ಣು ಕೂಸನ್ನು ಹೆತ್ತಳು. ಇಬ್ಬರು ಸ್ವಯಂಸೇವಕರು ಮೃತಪಟ್ಟರು. ಪುಣೆಯ ಶ್ರೀ. ಲಕ್ಷ್ಮೀಬಾಯಿ ಠುಸೆ ಎಂ. ಎಲ್. ಎ. ಇವರು ಮೋಟಾರ ಅಪಘಾತಕ್ಕೊಳಗಾಗಿ ಕಾಂಗ್ರೆಸ್ ವೈದ್ಯಾಲಯದಲ್ಲಿ ಉಪಚಾರ ಹೊಂದಿದರು.

(೪) ರಾಷ್ಟ್ರಾಧಿಪತಿಗಳಾದ ಬಾಬು ಸುಭಾಷಚಂದ್ರ ಬೋಸರ ೭೫ ವರುಷಗಳ ಮುಪ್ಪಿನ ತಾಯಿಯವರು ಮಗನು ಅನಭಿಷಿಕ್ತ ಭಾರತ ಸಾಮ್ರಾಟನಾಗಿ ಶೋಭಿಸುತ್ತಿದ್ದುದನ್ನು ಕಣ್ಣಾರೆ ಕಂಡು ಸಂತೋಷಿಸಿದರು.

(೫) ಇಂಗ್ಲಂಡ್, ಮಾರಿಶಸ್, ಸಿಲೋನ, ಪೂರ್ವಆಫ್ರಿಕಾ ಮೊದಲಾದ ಪರದೇಶಗಳಿಂದ ಕಾಂಗ್ರೆಸ್ಸಿಗೆ ಪ್ರತಿನಿಧಿಗಳು ಬಂದಿದ್ದರು. ೪೮ ಪರರಾಷ್ಟ್ರಗಳಿಂದ ಕಾಂಗ್ರೆಸ್ಸಿಗೆ ಸಂದೇಶಗಳು ಬಂದಿದ್ದವು.

(೬) ವಿಷಯನಿಯಾಮಕ ಮಂಡಲದಲ್ಲಿಯ ಮತ್ತು ಕಾಂಗ್ರೆಸ್ಸಿನಲ್ಲಿಯ ಭಾಷಣಗಳು ಗಾಂಧೀಜಿಯವರಿಗೆ ತಮ್ಮ ಕುಟೀರದಲ್ಲಿಯೇ ಕುಳಿತಲ್ಲಿ ಕೇಳುವಂತೆ ಧ್ವನಿವಾಹಕ ಯಂತ್ರದ ವ್ಯವಸ್ಥೆ ಮಾಡಲಾಗಿದ್ದಿತು.

(೭) ಹಾವುಗಳ ಗಲಾಟೆ ಹೆಚ್ಚಾಗಿತ್ತು. ಸೌ|| ಸರೋಜಿನಿ ದೇವಿಯವರ ಮನೆಗೂ ಅವರನ್ನು ಕಾಣಲು ಒಂದು ಹಾವು ಬಂದಿತ್ತು! ಕಿಸೆ ಕತ್ತರಿಸುವ ಕಳ್ಳರ ಸುಳಿದಾಟವಂತೂ ಹೆಚ್ಚು. ಕಾಂಗ್ರೆಸ್ ಸ್ವಾಗತ ಸಂಘವು ಇವರನ್ನು ಹಿಡಿಯಲು ಗುಪ್ತ ಪೋಲಿಸರನ್ನೂ ನಿಯಮಿಸಿತ್ತು!

(೮) ವಿಠ್ಠಲ ನಗರದಲ್ಲಿಯ ಯಾವ ಮಹಾದ್ವಾರಕ್ಕಾಗಲಿ ಇಲ್ಲವೆ ಮಂಟಪಕ್ಕಾಗಲಿ ಲೋ. ಟಿಳಕರ ಹೆಸರನ್ನು ಇಡದೆ ಇದ್ದುದರಿಂದ ಮಹಾರಾಷ್ಟ್ರದ ಕೆಲವು ಜನರು ಚಳವಳಮಾಡಿದರು. ಸ್ವಾಗತ ಸಂಘದವರೇನೂ ಅದಕ್ಕೆ ಲಕ್ಷಿಸಲಿಲ್ಲ.

# ವ್ಹಾಯಿಸ್‌ರಾಯರ ಪ್ರಕಟನೆ.

### ತತ್ವ ಮಾನ್ಯ. ಆದರೆ ತಾರತಮ್ಯ ಬೇರೆ !

ಬಿಹಾರ ಮತ್ತು ಸಂಯುಕ್ತ ಪ್ರಾಂತಗಳ ಕಾಂಗ್ರೆಸ್ ಮಂತ್ರಿಮಂಡಲಗಳು ರಾಜಕೀಯ ಕೈದಿಗಳ ಬಿಡುಗಡೆ ವಿಚಾರವಾಗಿ ವ್ಹಾಯಿಸ್‌ರಾಯರಿಗೂ ತಮಗೂ ಭಿನ್ನಾಭಿಪ್ರಾಯ ಬಂದುದರಿಂದ ರಾಜ್ಯಭಾರವನ್ನು ಪರಿತ್ಯಾಗ ಮಾಡಿವೆಯಷ್ಟೆ. ಈ ಸಂಬಂಧವಾಗಿ ತಾ. ೨೨-೨-೩೮ ನೆಯ ದಿವಸ ಹೊಸದಿಲ್ಲಿಯಿಂದ ವ್ಹಾಯಿಸ್‌ರಾಯರಾದ ಲಾರ್ಡ ಲಿನ್ ಲಿಥಗೋರವರು ತಮ್ಮ ಹೇಳಿಕೆಯನ್ನು ಪ್ರಕಟಿಸಿದ್ದಾರೆ. ಅದರಲ್ಲಿ ಇವರು ಹೇಳಿರುವುದೇನೆಂದರೆ—



( ಲಾರ್ಡ ಲಿನ್ ಲಿಥಗೋರವರು. )

"ಬಿಹಾರ ಮತ್ತು ಸಂಯುಕ್ತ ಪ್ರಾಂತಗಳಲ್ಲಿಯ ರಾಜಕೀಯ ಕೈದಿಗಳನ್ನು ಬಿಡುಗಡೆ ಮಾಡುವ ವಿಚಾರವಾಗಿ ಆಯಾಯ ಪ್ರಾಂತಗಳ ಮಂತ್ರಿಮಂಡಲಗಳಿಗೂ ಗವ್ಹರ್ನರರಿಗೂ ವಿಚಾರವಿನಿಮಯವು ಅನೇಕ ದಿನಗಳಿಂದ ಆಗುತ್ತಲೇ ಇದ್ದಿತು. ಕೈದಿಗಳ ವೈಯಕ್ತಿಕ ಸ್ಥಿತಿಯನ್ನು ಪರ್ಯಾಲೋಚಿಸಿಯೇ ಅವರನ್ನು ಬಿಡಬೇಕೆಂದು ಗವ್ಹರ್ನರರು ಮೊದಲಿನಿಂದಲೂ ಹೇಳುತ್ತ ಬಂದಿದ್ದಾರೆ. ಈ ತತ್ವವು ಗಾಂಧೀಜಿಯವರಿಗೂ ಒಪ್ಪಿಗೆಯಿದ್ದೇ ಬಂಗಾಲ ಸರಕಾರದ ಸಂಗಡಲೂ ಅವರು ವಿಚಾರ ವಿನಿಮಯ ನಡೆಸಿದ್ದರು. ಈ ಉಭಯ ಪ್ರಾಂತಗಳ ಗವ್ಹರ್ನರರಾದರೂ ಈ ತತ್ವದ ವಿನಾ ಬೇರೊಂದು ಮಾರ್ಗವನ್ನೇನೂ ಅನುಸರಿಸಿರಲಿಲ್ಲ. ಹೀಗೆ ವಿಚಾರ ವಿನಿಮಯ ನಡೆದಾಗ ತಾ. ೧೫-೨-೩೮ ನೆಯ ದಿನ ಬಿಹಾರ ಮತ್ತು ಸಂಯುಕ್ತ ಪ್ರಾಂತಗಳ ಮಂತ್ರಿಮಂಡಲಗಳು ಎಲ್ಲ ರಾಜಕೀಯ ಕೈದಿಗಳನ್ನೂ ಒಮ್ಮೆಲೇ ಬಿಟ್ಟುಬಿಡಬೇಕೆಂದು ಹೇಳಿದರು. ಬಿಹಾರ ಮಂತ್ರಿಮಂಡಲವು ರಾಜಕೈದಿಗಳ ವೈಯಕ್ತಿಕ ಪರೀಕ್ಷೆಯು ತನಗೇನೂ ಮಾನ್ಯವಿಲ್ಲವೆಂದು ತಿಳಿಸಿತು. ಸಂಯುಕ್ತ ಪ್ರಾಂತದ ಮಂತ್ರಿಮಂಡಲವು ದಿನ ಕ್ರಮೇಣ ರಾಜಕೈದಿಗಳನ್ನು ಬಿಡುವ ಯೋಚನೆ ತನಗೆ ಒಪ್ಪಿಗೆಯಿಲ್ಲವೆಂದು ಹೇಳಿತು.

ಈ ಎರಡೂ ಪ್ರಾಂತಗಳ ರಾಜಕೀಯ ಕೈದಿಗಳ ಚರಿತ್ರೆಯನ್ನು ಗವ್ಹರ್ನರರು ಸ್ಪಷ್ಟ ತಿಳಿಸಿದ್ದಾರೆ. ಅತ್ಯಾಚಾರದ ಪ್ರಯತ್ನಕ್ಕೋಸ್ಕರವಾಗಿಯೇ ಶಿಕ್ಷೆ ಹೊಂದಿದ ಈ ಕೈದಿಗಳ ವೈಯಕ್ತಿಕ ಪರೀಕ್ಷೆ ಮಾಡದೆ ಒಮ್ಮೆಲೇ ಅವರನ್ನು ಬಿಟ್ಟುಬಿಡುವುದು ಸಾರ್ವಜನಿಕ ಶಾಂತತೆಗೆ ಭಂಗವನ್ನುಂಟುಮಾಡುವುದಾಗಿದೆ. ಇಷ್ಟೇ ಅಲ್ಲ; ನ್ಯಾಯಸ್ಥಾನಗಳ ಘನತೆಯನ್ನೂ ಶಾಸನ ಪ್ರತಿಬಂಧವನ್ನೂ ಅಲ್ಲಗಳೆದಂತಾಗುವುದು. ಅಂತೆಯೇ ತಮ್ಮ ಮೇಲಿರುವ ಹೊಣೆಗಾರಿಕೆಯನ್ನು ಆಯಾಯ ಪ್ರಾಂತಗಳ ಗವ್ಹರ್ನರರು ತಿಳಿದುಕೊಂಡು ನನ್ನ ಅಭಿಪ್ರಾಯವನ್ನು ಕೇಳಿದರು.

ಭಯಂಕರ ಅಪರಾಧಕ್ಕಾಗಿ ಶಿಕ್ಷೆ ಹೊಂದಿದ ಇಂಥ ಕೈದಿಗಳ ವೈಯಕ್ತಿಕ ಪರೀಕ್ಷೆ ಮಾಡದೆ ಬಿಟ್ಟುಬಿಡುವುದು ಬಂಗಾಲದ ಕ್ರಾಂತಿಕಾರಕರಿಗೆ ಒಂದು ವಿಧವಾದ ಉತ್ತೇಜನವಾಗಿಯೇ ಪರಿಣಮಿಸಬಹುದೆಂದು ನಾನು ಯೋಚಿಸಿ ೧೨೬ ನೆಯ ನಿಯಮವನ್ನು ಉಪಯೋಗಿಸಿದೆನು.

ಕಳೆದ ೭ ತಿಂಗಳುಗಳಿಂದಲೂ ನಾನು ಉಭಯ ಪ್ರಾಂತಗಳ ಸಂಗಡ ಸಂಪೂರ್ಣ ಸಹಾನುಭೂತಿಯಿಂದಲೇ ನಡೆದುಕೊಳ್ಳುತ್ತಾ ಬಂದಿದ್ದೇನೆ. ಒಂದಾದರೂ ವಿರುದ್ಧ ಪ್ರಸಂಗ ಸಂಭವಿಸಿಲ್ಲ. ಕೈದಿಗಳ ವೈಯಕ್ತಿಕ ಪರೀಕ್ಷೆಯಿಲ್ಲದೆ ಬಿಡುಗಡೆ ಮಾಡಲ್ಪಡುವುದು ಅನರ್ಥಕರವೆಂದೇ ನನ್ನ ದೃಢವಾದ ತಿಳುವಳಿಕೆ. ಈಗಲಾದರೂ ಆಯಾಯ ಪ್ರಾಂತಗಳ ಗವ್ಹರ್ನರರು ವೈಯಕ್ತಿಕ ಪರೀಕ್ಷೆ ಮಾಡಿ ನಿರ್ಣಯ ಕೊಡಲು ಸಿದ್ಧರಾಗಿಯೇ ಇದ್ದಾರೆ.

ಪ್ರಾಂತದ ಶಾಂತತಾ ರಕ್ಷಣೆಯು ಮಂತ್ರಿಮಂಡಲದ ಮೇಲೆಯೇ ಇದೆಯೆಂದರೂ ಗವ್ಹರ್ನರರು ಆ ಪ್ರಾಂತದ ಶಾಂತತೆಗೂ ಗವ್ಹರ್ನರ್ ಜನರಲ್‌ರು ಸಮಗ್ರ ದೇಶದ ಶಾಂತತೆಗೂ ಹೊಸ ಶಾಸನದಂತೆ ಹೊಣೆಗಾರರೂ ಇದ್ದಾರೆ.

ಕಾಂಗ್ರೆಸ್ ಮಂತ್ರಿಮಂಡಲದ ಘನತೆಯನ್ನು ಕಡಿಮೆಮಾಡಬೇಕೆಂದು ನಾನು ಹೀಗೆ ಮಾಡಿರುವುದಾಗಿ ತಿಳಿಯುವುದು ವಿಹಿತವಲ್ಲ. ಕಳೆದ ಏಳು ತಿಂಗಳುಗಳ ನನ್ನ ಸಹಾನುಭೂತಿಯೇ ಇದಕ್ಕೆ ಸಾಕ್ಷಿಯಾಗಿದೆ. ಈಗ ಬಂದಿರುವ ತೊಡಕನ್ನು ವಿಸ್ತೃತಗೊಳಿಸಬಾರದೆಂಬ ಧೋರಣವನ್ನಿಟ್ಟುಕೊಂಡುದು ತುಂಬಾ ಸಂತೋಷಕರವಾಗಿದೆ.

ಈ ಎರಡು ಪ್ರಾಂತಗಳ ಈ ತೊಡಕು ಕೂಡಾ ಜಾಗ್ರತೆ ನಿವಾರಣೆಯಾಗಿ ಮೊದಲಿನಂತೆ ಪ್ರಭುತ್ವ ಸಾಗುವುದೆಂದೇ ನನ್ನ ನಂಬಿಕೆ. ಬಿಹಾರ ಮತ್ತು ಸಂಯುಕ್ತ ಪ್ರಾಂತಗಳ ಗವ್ಹರ್ನರರ ಸಂಗಡ ವಿಚಾರ ವಿನಿಮಯ ನಡೆಯಿಸಿದರೆ ಈಗ ಉಂಟಾಗಿರುವ ತೊಡಕು ನಿವಾರಣೆಯಾಗುವುದು."

---

# ವಿಠ್ಠಲ ನಗರದಲ್ಲಿದ್ದ ಗ್ರಾಮೋದ್ಯೋಗ ಪ್ರದರ್ಶನ.

### ಹೋಗಿ ನೋಡದಿದ್ದರೂ ಓದಿ ನೋಡಿರಿ!

ವಿಠ್ಠಲ ನಗರದಲ್ಲಿ ಬಹು ಮಹತ್ವದ ಸ್ವದೇಶಿ ವಸ್ತು ಪ್ರದರ್ಶನವು ಏರ್ಪಟ್ಟದ್ದಿತು. ಅಲ್ಲಿದ್ದ ವಸ್ತುಗಳಲ್ಲಿ ಗ್ರಾಮೋದ್ಯೋಗದ ಪದಾರ್ಥಗಳಿಗೇನೇ ವಿಶೇಷ ಮನ್ನಣೆ. ಮಹಾತ್ಮಾ ಗಾಂಧಿಯವರು ಇದನ್ನು ಉಪಕ್ರಮಮಾಡಿದನಂತರ ಒಂದೇ ದಿನದಲ್ಲಿ ೫೦ ಸಾವಿರ ಜನರು ಈ ಪ್ರದರ್ಶನವನ್ನು ನೋಡಿದರು.

ಎಣ್ಣೆ ತೆಗೆಯುವ ಗಾಣ, ಬೀಸುವ ಯಂತ್ರ, ಕಾಗದ, ಸಕ್ಕರೆ, ಬೆಲ್ಲವನ್ನು ಮಾಡುವ ರೀತಿ ಮೊದಲಾದ ಅನೇಕ ಗ್ರಾಮೋದ್ಯೋಗಗಳ ಸಂಬಂಧವಾದ ಉಪಯುಕ್ತ ಸಂಗತಿಗಳು ಅಲ್ಲಿ ಪ್ರತ್ಯಕ್ಷ ಜರುಗಿದ್ದವು. ಆಯಾಯ ಉದ್ಯೋಗಗಳನ್ನು ಕುರಿತು ವಿವರವಾಗಿ ತಿಳಿಸುವ ಪಟಗಳನ್ನು ಕೂಡಾ ಬರೆದಿಟ್ಟದ್ದರು. ಗಾಂಧೀಜಿಯವರು ಈ ಎಲ್ಲ ಸಂಗತಿಗಳನ್ನು ಒಟ್ಟುಗೂಡಿಸಿ ಪುಸ್ತಕ ರೂಪದಲ್ಲಿ ಪ್ರಕಟಿಸಿದರೆ ಬಹು ಒಳ್ಳೆಯದೆಂದು ತಿಳಿಸಿದರು. ಆ ಪ್ರಕಾರ ಮಾಡಲ್ಪಡುವುದಿದೆ.

### ಲೇಲೆಯವರ ಮೇಣದ ಚಿತ್ರಗಳು.

ಶ್ರೀ. ಲೇಲೆಯವರು ಮೇಣದಿಂದ ನಾನಾ ತರದ ಚಿತ್ರಗಳನ್ನು ಮಾಡಿದ್ದರು. ಇವುಗಳನ್ನು ನೋಡಲು ಬಹು ಜನರು ಕೂಡುತ್ತಿದ್ದರು. ಮಹಾತ್ಮಾ ಗಾಂಧಿಯವರಿಗೆ ಕರಳು ರೋಗವಾದಾಗ ಶಸ್ತ್ರಕ್ರಿಯೆ ನಡೆದುದನ್ನು ಕೂಡಾ ಇವರು ಮೇಣದ ಚಿತ್ರಗಳಿಂದ ತೋರಿಸಿದ್ದರು. ಇವನ್ನು ಪ್ರೇಕ್ಷಕರು ಬಹು ಹೊಗಳುತ್ತಿದ್ದರು.

ಗರ್ಭವತಿ ಸ್ತ್ರೀಯಳು ಪ್ರಸನ್ನಚಿತ್ತಳಾಗಿರುವುದರಿಂದಾಗತಕ್ಕ ಪ್ರಯೋಜನ ಮತ್ತು ಖಿನ್ನಮನಸ್ಕಳಾಗಿರುವುದರಿಂದಾಗತಕ್ಕ ಅಹಿತಗಳನ್ನು ಚಿತ್ರಗಳಲ್ಲಿ ಚೆನ್ನಾಗಿ ತೋರಿಸಿದ್ದರು. ಹೆಂಡಕುಡುಕರಿಂದಾಗುವ ಮನೆತನದ ನಾನಾ ದುಃಖಗಳನ್ನೂ ಸುಶಿಕ್ಷಿತ ನಿರುದ್ಯೋಗಿಗಳು ಪಡುತ್ತಿರುವ ಯಾತನೆಗಳನ್ನೂ ಚಿತ್ರಗಳ ಮೂಲಕ ತೋರಿಸಿದ್ದರು.

### ಬೆಲ್ಲದ ಪ್ರಯೋಜನ

ನಾನಾ ರೀತಿಯ ಬೆಲ್ಲವನ್ನೂ ಬೆಲ್ಲ ಮಾಡುವ ಬೇರೆ ಬೇರೆ ಪ್ರಕಾರಗಳನ್ನೂ ಈ ಪ್ರದರ್ಶನದಲ್ಲಿ ಕಾಣಬಹುದಾಗಿತ್ತು. ಈ ಚಲರಸದಿಂದ ಬೆಲ್ಲ ಮಾಡುವ ವಿಧಾನಗಳನ್ನೂ ತೋರಿಸುತ್ತಿದ್ದರು. ಸಕ್ಕರಿಗಿಂತ ಬೆಲ್ಲವೇ ಹೆಚ್ಚು ಉಪಯುಕ್ತವಾದುದೆಂದು ಅನೇಕ ಕಾರಣಗಳಿಂದ ಪ್ರೇಕ್ಷಕರಿಗೆ ಮನವರಿಕೆ ಮಾಡಿಕೊಡುತ್ತಿದ್ದರು. ಅಂಥ ಬರವಣಿಗೆಯುಳ್ಳ ಪಟಗಳನ್ನೂ ಹಚ್ಚಿದ್ದರು.

ಬೆಲ್ಲವು ಜಾಗೃತೆ ಪಚನಕ್ರಿಯೆಯನ್ನು ನಡೆಯಿಸುತ್ತದೆ. ಬೆಲ್ಲವನ್ನು ಸೇವಿಸುವುದರಿಂದ ದಣವು ಕಡಿಮೆಯಾಗುತ್ತದೆ. "ಗುಡತೋ ಘಟಕಾಬ್ಯದ ಹೈ. ಸದಾರಖಿಯೆ ಪಾಸ| ಭೂಕ ಬಡೆ ಭೋಜನ ಪಚ್ಯೆ ರೋಗ ನ ಘಟಕೆಪಾಸ" ಎಂಬ ಹಿಂದಿ ನಾಣ್ಣುಡಿಯನ್ನು ಬರೆದಿಟ್ಟಿದ್ದರು.

### ಕೈಯಿಂದ ಬೀಸಿದ ಹಿಟ್ಟು.

ಕೈಯಿಂದ ಬೀಸಿದ ಹಿಟ್ಟಿಗೂ ಯಂತ್ರದಲ್ಲಿ ಬೀಸಿದ ಹಿಟ್ಟಿಗೂ ಇರತಕ್ಕ ವ್ಯತ್ಯಾಸವನ್ನು ಇಲ್ಲಿ ಚೆನ್ನಾಗಿ ತಿಳಿದುಕೊಳ್ಳಬಹುದಾಗಿತ್ತು. ಕೈಯಿಂದ ಬೀಸಿದ ಹಿಟ್ಟು ಹೆಚ್ಚು ಪೌಷ್ಟಿಕವಾದುದೂ ರುಚಿಕರವಾದುದೂ ಇರುತ್ತದಲ್ಲದೆ ದೇಶದ ದುಡ್ಡು ದೇಶದಲ್ಲಿಯೇ ಉಳಿಯುವಂತೆ ಮಾಡುತ್ತದೆ.

ಕುರುಡರು, ಕುಂಟರು, ಮೂಕರು, ಮುದುಕರು, ವಿಧವೆಯರು ಮೊದಲಾದ ಅನೇಕ ಜನರಿಗೆ ಉದ್ಯೋಗವನ್ನು ಕಲ್ಪಿಸಿಕೊಟ್ಟು ಅವರಿಗೂ ಒಂದು ತುತ್ತು ಅನ್ನವನ್ನು ಹಾಕಿದ ಪುಣ್ಯವು ಕೈಯಿಂದ ಬೀಸಿದ ಹಿಟ್ಟನ್ನೇ ಉಪಯೋಗಿಸುವುದರಿಂದ ದೊರೆಯುತ್ತದೆಂದು ಬರೆದು ತಿಳಿಸಿದ್ದಾರೆ.

### ಯಂತ್ರದ ಹಿಟ್ಟಿನಿಂದ ಕೇಡು.

ಯಂತ್ರದಲ್ಲಿ ಬೀಸಿದ ಹಿಟ್ಟನ್ನು ಉಪಯೋಗಿಸಿದರೆ ನಿರುದ್ಯೋಗತೆಯೇ ಹೆಚ್ಚುತ್ತದೆ. ಈ ಹಿಟ್ಟು ರೋಗಕಾರಿಯು. ಅದುದರಿಂದ ಯಂತ್ರದ ಹಿಟ್ಟನ್ನು ಬಿಟ್ಟು ಕೈಯಿಂದ ಬೀಸಿದ ಹಿಟ್ಟನ್ನೇ ಎಲ್ಲರೂ ಉಪಯೋಗಿಸಬೇಕು. ಹಿಟ್ಟಿನಲ್ಲಿ ಬರುವ ತೌಡನ್ನು ತೆಗೆದು ಹಾಕದೆ ಅದರೊಂದಿಗೇನೇ ರೊಟ್ಟಿಮಾಡುವುದು ಹಿತಕರ. ಆ ತೌಡಿನಲ್ಲಿಯೇ ನಿಜವಾದ ಸತ್ವವಿರುತ್ತದೆ.

### ೧೫ ಲಕ್ಷ ಜನರಿಗೆ ಕೂಲಿ.

ಅನೇಕ ಜಾತಿಯ ಅಕ್ಕಿಗಳನ್ನು ಇಟ್ಟಿದ್ದರು. ಜಗತ್ತಿನ ಮನುಷ್ಯರಲ್ಲಿ ಅರ್ಧದಷ್ಟು ಮನುಷ್ಯರು ಅಕ್ಕಿಯಿಂದಲೇ ಜೀವಿಸುವವರಾಗಿದ್ದಾರೆ. ಇಷ್ಟು ಮನುಷ್ಯ ಜಾತಿಗೆ ಸಂಬಂಧಿಸಿರುವ ಅಕ್ಕಿಯನ್ನು ಕೈಯಿಂದ ಕುಟ್ಟಿ ಅದನ್ನೇ ಉಪಯೋಗಿಸುವುದು ಹಿತಕರ. ಪ್ರತಿನಿತ್ಯ ನೂರು ಚೀಲ ಅಕ್ಕಿಯನ್ನು ಮಾಡುವ ಯಂತ್ರವು ನಿಜವಾಗಿಯೂ ರಾಕ್ಷಸೀ ಶಕ್ತಿಯೇ ಸರಿ. ಆದರಿಂದ ಒಂದು ಸಾವಿರ ಜನರಿಗೆ ಕೂಲಿಯಿಲ್ಲದಂತಾಗುತ್ತದೆ.

ಹಿಂದುಸ್ಥಾನಕ್ಕೆ ಬೇಕಾಗಿರುವ ಅಕ್ಕಿಯನ್ನು ಕೈಯಿಂದಲೇ ಕುಟ್ಟಿದ್ದಾದರೆ ೧೫ ಲಕ್ಷ ಜನರಿಗೆ ಉದ್ಯೋಗ ದೊರೆಯುವುದೆಂದು ಒಂದು ಲೆಕ್ಕದ ಪಟ್ಟಿಯನ್ನೇ ಇಲ್ಲಿ ಇಟ್ಟಿದ್ದರು.

### ಗಾಣದ ಎಣ್ಣೆಯೇ ಒಳ್ಳೆಯದು.

ಗಿರಣಿ ಎಣ್ಣೆಗೆ ಬಹಿಷ್ಕಾರ ಹಾಕಿ ಗಾಣದ ಎಣ್ಣೆಯನ್ನೇ ಉಪಯೋಗಿಸಿರೆಂದು ಇಲ್ಲಿ ಸೂಚಿಸಿದ್ದರು. ಸನಾತನಿ ಸಬಕಾರ ಎಂಬ ಹೆಸರಿನ ಸಬಕಾರವನ್ನು ಇಲ್ಲಿ ಮಾಡಿ ತೋರಿಸುತ್ತಿದ್ದರು. ಅದರಲ್ಲಿ ಯಾವ ವಿಧವಾದ ನಿಷಿದ್ಧ ಪದಾರ್ಥಗಳೂ ಇಲ್ಲದಿದ್ದುದರಿಂದ ಅದಕ್ಕೆ ಈ ಹೆಸರನ್ನು ಕೊಟ್ಟಿದ್ದಾರೆ.

### ಗೋಸೇವಾ ಚರ್ಮಾಲಯ.

ಮಹಾತ್ಮಾ ಗಾಂಧಿಯವರ ಮೇಲ್ವಿಚಾರಣೆಯಲ್ಲಿ ನಾಲವಾಡಿ (ವರ್ಧಾ) ಯಲ್ಲಿ ಮಾಡಲ್ಪಡುತ್ತಿರುವ ಚರ್ಮದ ನಾನಾ ವಸ್ತುಗಳನ್ನು ಇಲ್ಲಿ ಇಟ್ಟಿದ್ದರು. ಮತ್ತು ಅವುಗಳನ್ನು ಪ್ರತ್ಯಕ್ಷ ಮಾಡಿ ತೋರಿಸುತ್ತಿದ್ದರು. ಬೇರೆ ಬೇರೆ ಪ್ರಾಣಿಗಳ ಚರ್ಮದಿಂದ ಪಾದರಕ್ಷೆ, ಕೈಚೀಲ, ಪಟ್ಟಿ ಮೊದಲಾದ ಅನೇಕವಸ್ತುಗಳನ್ನು ಮಾಡಿ ಇಲ್ಲಿ ಇಟ್ಟಿದ್ದರು. ಪ್ರತಿ ವರುಷ ೧೫ ಸಾವಿರ ರೂ. ಗಳ ವಸ್ತುಗಳು ನಾಲವಾಡದಲ್ಲಿ ವಿಕ್ರಯವಾಗುತ್ತವೆ.

### ಒಕ್ಕಲತನವೇ ಹಿಂದುಸ್ಥಾನದ ಪ್ರಾಣ.

ಒಕ್ಕಲತನದ ವಿಭಾಗವು ಬಹು ಉಪಯುಕ್ತವಾದುದಾಗಿದ್ದಿತು. ಬಾಂಸಡಾ ಸಂಸ್ಥಾನಾಧಿಪತಿಗಳು ಒಕ್ಕಲತನದ ಅನೇಕ ಉಪಯುಕ್ತ ಸಂಗತಿಗಳನ್ನು ಅಲ್ಲಿ ತಿಳಿಸುವ ವ್ಯವಸ್ಥೆಮಾಡಿದ್ದರು. ನಾನಾ ಜಾತಿಯ ಹಣ್ಣುಗಳನ್ನು ಸುಗ್ಗಿಯಲ್ಲಿ ಕೂಡಿಹಾಕಿ ಅವು ಕೆಡದಂತೆ ಹೇಗೆ ಕಾಪಾಡಬೇಕೆಂಬ ಸೂಚನೆಯು ವ್ಯಾಪಾರಿಗಳಿಗೆ ಬಹು ಪ್ರಯೋಜನಕಾರಿಯಾಗಿದ್ದಿತು. ಬಡೋದಾ, ಮುಂಬೈ, ಸಂಯುಕ್ತ ಪ್ರಾಂತಗಳ ಸರಕಾರದವರು ಕೂಡಾ ಅನೇಕ ವಸ್ತುಗಳನ್ನು ಇಲ್ಲಿಗೆ ಕಳಿಸಿದ್ದರು.

### ಗಾಂಧೀಜಿಯವರ ವಸ್ತ್ರ.

ಮಹಾತ್ಮಾ ಗಾಂಧಿಯವರು, ಶ್ರೀ. ಶಂಕರಲಾಲ ಬ್ಯಾಂಕರ್ ಇವರು ತಮ್ಮ ಕೈಯಿಂದ ಮಾಡಿದ ಬಟ್ಟೆಗಳನ್ನು ಇಲ್ಲಿ ಇಟ್ಟಿದ್ದರು. ಗಾಂಧೀಜಿಯವರು ತಾವು ತೆಗೆದ ನೂಲಿನ ಒಂದು ಅಂಗವಸ್ತ್ರವನ್ನು ನೆಯಿದಿದ್ದಾರೆ. ಶ್ರೀ. ಬ್ಯಾಂಕರರವರು ಒಂದು ಧೋತರವನ್ನು ನೆಯಿದಿದ್ದಾರೆ. ಶ್ರೀಮತಿ ಅನಂದಿಬಾಯಿ ಫಡಕೆ ಬಡೋದೆ ಇವರು ಸಿದ್ಧಗೊಳಿಸಿದ್ದ ಒಂದು ಸೀರೆಯನ್ನೂ ಇಟ್ಟಿದ್ದರು.

### ಆದಿ ಹಿಂದು ಸೇವಾಸಂಘ.

ಆದಿಹಿಂದುಗಳ ಉನ್ನತಿಯು ರಾಷ್ಟ್ರಕ್ಕೆ ಎಷ್ಟು ಸಹಾಯವಾಗಿದೆಯೆಂಬುದನ್ನು ಇಲ್ಲಿ ಚಿತ್ರಗಳಿಂದ ಮನವರಿಕೆಯಾಗುವಂತೆ ಮಾಡಿದ್ದರು. ಹಂದಿ, ನಾಯಿಗಳಿಗಿಂತ ಸವರ್ಣೀಯ ಹಿಂದುಗಳು ಆದಿ ಹಿಂದುಗಳನ್ನು ಹೇಗೆ ಕೀಳಾಗಿ ಕಾಣುತ್ತಿದ್ದಾರೆಂಬುದನ್ನು ಇಲ್ಲಿ ಹೃದಯದ್ರಾವಕ ರೀತಿಯಲ್ಲಿ ಚಿತ್ರಿಸಿದ್ದರು. ದೇವಾಲಯದಲ್ಲಿ ಕತ್ತೆ ಹೋದರೂ ಆಗಬಹುದು. ಆದರೆ ಆದಿ ಹಿಂದುಗಳು ಮಾತ್ರ ಹೋಗಬಾರದೆಂಬ ಒಂದು ಚಿತ್ರವು ಸನಾತನಿಗಳು ತಲೆಬಾಗುವಂತೆ ಮಾಡಿದ್ದಿತು.

ಅಹಮದಾಬಾದ ಆದಿ ಹಿಂದು ಸೇವಾ ಸಂಘದವರು ೧೨ ಸಾವಿರ ರೂ. ಗಳನ್ನು ವೆಚ್ಚ ಮಾಡಿ ೫೦ ಬಾವಿಗಳನ್ನು ಆದಿ ಹಿಂದುಗಳಿಗಾಗಿಯೇ ಮಾಡಿಸಿದ್ದಾರೆ. ಕಾಂಕ್ರೀಟ್ ಮೂಲಕ ಬಾವಿ

ಗಳನ್ನು ಹೇಗೆ ಭದ್ರಗೊಳಿಸುತ್ತಿದ್ದಾರೆಂಬುವು ಇಲ್ಲಿ ಸರಿಯಾಗಿ ತೋರಿಸಲ್ಪಡುತ್ತಿದ್ದಿತು.

### ಗೋ ಸಂವರ್ಧನೆ.

ಮಕ್ಕಳ ಜೋಪಾನದ ನಾನಾ ಪ್ರಕಾರಗಳನ್ನು ಇಲ್ಲಿ ತೋರಿಸಿದ್ದರು. ಹುಡುಗರೇ ರಾಷ್ಟ್ರದ ಸಂಪತ್ತು ಎಂಬುದನ್ನು ಇಲ್ಲಿ ಮನವರಿಕೆಯಾಗುವಂತೆ ತಿಳಿಸಲಾಗಿತ್ತು. ಮಾದರಿಯ ಹಳ್ಳಿಯಲ್ಲಿ ಶಿಕ್ಷಣ, ಸ್ವಚ್ಛತೆ, ಕೈಕಸಬು, ಒಕ್ಕಲತನ ಮೊದಲಾದವುಗಳೆಲ್ಲಾ ಹೇಗಿರಬೇಕೆಂಬುದನ್ನೂ ತೋರಿಸಿದ್ದರು.

ಗೋವುಗಳಿಂದಾಗುವ ಪ್ರಯೋಜನವನ್ನು ಕುರಿತು ಬರೆಯಲ್ಪಟ್ಟ ಅನೇಕ ಗ್ರಂಥಗಳನ್ನು ಇಲ್ಲಿ ಇಟ್ಟಿದ್ದರು. ಕಾಂಗ್ರೆಸ್ಸಿನ ರಾಜ್ಯದಲ್ಲಾದರೂ ಗೋವಧೆಯು ನಿಲ್ಲಲೆಂದು ಸೂಚಿಸುವ ಪಟಗಳು ಹಚ್ಚಲ್ಪಟ್ಟಿದ್ದವು. ಈ ಪ್ರಕಾರ ಈ ಗ್ರಾಮೋದ್ಯೋಗ ಪ್ರದರ್ಶನವು ಉದ್ಯೋಗಪ್ರಿಯರಿಗೆ ಬಹು ಉಪಯುಕ್ತವಾದುದಾಗಿದ್ದಿತು.

---

# ಗಾಂಧೀಜಿಯವರ ಉತ್ತರ.

### ಇದು ಅಧಿಕಾರದ ದುರುಪಯೋಗ.

ಬಿಹಾರ ಮತ್ತು ಸಂಯುಕ್ತ ಪ್ರಾಂತಗಳ ಮಂತ್ರಿಮಂಡಲಗಳು ರಾಜ್ಯಭಾರವನ್ನು ಪರಿತ್ಯಾಗ ಮಾಡಿದ ಸಂಬಂಧವಾಗಿ ವ್ಹಾಯಿಸ್‌ರಾಯರು ಹೊರಡಿಸಿದ ಪ್ರಕಟನೆಗೆ ಮಹಾತ್ಮಾ ಗಾಂಧಿಯವರು ಉತ್ತರವಾಗಿ ಒಂದು ಪ್ರಕಟನೆಯನ್ನು ಹೊರಡಿಸಿದ್ದಾರೆ. ಅದರಲ್ಲಿ ಗಾಂಧೀಜಿಯವರು ಹೀಗೆ ಸ್ಪಷ್ಟ ತಿಳಿಸಿದ್ದಾರೆ—



"ಗವ್ಹರ್ನರ್ ಜನರಲ್‌ರ ಪ್ರಕಟನೆಯನ್ನು ನಾನು ಆದರದಿಂದ ತುಂಬಾ ಲಕ್ಷಿಸಿ ಓದಿದೆನು. ನನಗೇನೂ ಅವರ ಹೇಳಿಕೆಯು ಸಮಾಧಾನಕರವಾಗಿ ತೋರಲಿಲ್ಲ. ಇಷ್ಟೇ ಅಲ್ಲ; ಇಂಥ ದೊಡ್ಡ ಅಧಿಕಾರಿಗಳಿಗೆ ಇದು ಶೋಭಿಸತಕ್ಕ ಸ್ಪಷ್ಟೀಕರಣ ಅಲ್ಲವೆಂತಲೂ ನನಗೆ ಅನಿಸಿತು.

ಪ್ರಾಂತಿಕ ಸ್ವಾತಂತ್ರ್ಯವನ್ನು ಉಪಭೋಗಿಸುವ ಪ್ರಾಂತದಲ್ಲಿಯ ಗವ್ಹರ್ನರರಿಗೆ, ಇಂಥ ವಿಷಯದಲ್ಲಿ ಪ್ರವೇಶಿಸುವ ಅವಶ್ಯಕತೆಯು ಉಂಟೆ? ಅಥವಾ ಇಲ್ಲವೆ? ಎಂಬುದೇ ಈಗ ಮುಖ್ಯ ಪ್ರಶ್ನೆಯೇ ವಿನಾ ರಾಜಕೈದಿಯ ವೈಯಕ್ತಿಕ ಯೋಗ್ಯಾಯೋಗ್ಯತೆಗಳನ್ನು ಪರೀಕ್ಷಿಸಬೇಕೆ ? ಅಥವಾ ಪರೀಕ್ಷಿಸಬಾರದೆ? ಎಂಬುದಲ್ಲ.

"ಗವ್ಹರ್ನಮೆಂಟ್ ಆಫ್ ಇಂಡಿಯಾ" ಶಾಸನದಂತೆ ಈ ವಿಷಯದಲ್ಲಿ ಮಂತ್ರಿಮಂಡಲಕ್ಕೇನೇ ತುಂಬಾ ಹೊಣೆಗಾರಿಕೆಯಿದೆಯೆಂದು ನಾನು ತಿಳಿದಿದ್ದೇನೆ. ಗವ್ಹರ್ನರರಿಗಾದರೊ ಇಂಥ ಪ್ರಸಂಗದಲ್ಲಿ ಮಂತ್ರಿಮಂಡಲಕ್ಕೆ ಸಲಹೆ ಕೊಡುವ ಮತ್ತು ಎಚ್ಚರಿಕೆ ಕೊಡುವ ಅಧಿಕಾರ ಮಾತ್ರ ಇದೆ. ಆ ಪ್ರಕಾರ ಅವರು ಮಾಡಿ ಅದರ ಹೊಣೆಗಾರಿಕೆಯನ್ನು ಮಂತ್ರಿಮಂಡಲದ ಕಡೆಗೇ ಬಿಡುವುದು ವಿಹಿತವಾದುದು. ಹಾಗೆ ಮಾಡದಿದ್ದರೆ "ಹೊಣೆಗಾರಿಕೆ" ಎಂಬುದಕ್ಕೆ ಅರ್ಥವೇ ಇಲ್ಲದಂತಾಗುವುದು. ಜನರಿಂದ ಆರಿಸಿಬಂದ ಮಂತ್ರಿಗಳು ಗವ್ಹರ್ನರರ ಇಷ್ಟದಂತೆ ತಮ್ಮ ದೈನಿಕ ಕಾರ್ಯಗಳನ್ನು ನಡೆಯಿಸುವ ಪ್ರಸಂಗ ಬಂದರೆ ಅದು ಮಂತ್ರಿಗಳಿಗೆ ಅವಮಾನಕರವಾದುದಾಗಿಯೇ ಪರಿಣಮಿಸದಿರಲಾರದು.

### ನನ್ನ ಪ್ರಯತ್ನ ಭೂತದಯೆಯುಳ್ಳದ್ದು.

ಬಂಗಾಲದಲ್ಲಿಯ ನನ್ನ ಪ್ರಯತ್ನವನ್ನು ವ್ಹಾಯಿಸ್‌ರಾಯರು ಪ್ರಸ್ತಾಪಿಸಿದ್ದು ಒಳ್ಳೆಯದಾಗಿದೆ. ನಾನು ಭೂತದಯೆಯ ದೃಷ್ಟಿಯಿಂದಲೇ ಈ ವಿಷಯದಲ್ಲಿ ಪ್ರಯತ್ನಿಸುತ್ತಲಿದ್ದೇನೆ. ಬಂಗಾಲದ ಮಂತ್ರಿಮಂಡಲವು ರಾಜಕೈದಿಗಳನ್ನು ಬಿಡಲು ಕಾಂಗ್ರೆಸ್ಸಿನ ಮಂತ್ರಿಮಂಡಲಗಳಂತೆ ಪ್ರತಿಜ್ಞಾಬದ್ಧವಾಗಿಲ್ಲ. ಹಾಗಿದ್ದರೂ ನನ್ನ ಭೂತದಯೆಯ ಪ್ರಯತ್ನಕ್ಕೆ ಬಂಗಾಲ ಮಂತ್ರಿಮಂಡಲವೇನೂ ಕಳ್ಳೆದೆಯುಳ್ಳದ್ದಾಗಿ ವಿರೋಧಿಸಿಲ್ಲವೆಂದು ತಿಳಿಸಲು ನನಗೆ ತುಂಬಾ ಸಂತೋಷವಾಗುತ್ತದೆ.

ಬಿಹಾರ ಮತ್ತು ಸಂಯುಕ್ತ ಪ್ರಾಂತಗಳ ಮಂತ್ರಿಮಂಡಲಗಳು ರಾಜಕೈದಿಗಳನ್ನು ಬಿಡುವ ಪ್ರತಿಜ್ಞೆಯ ಮೇಲಿಂದಲೇ ಆರಿಸಿಬಂದು ಅಧಿಕಾರವನ್ನು ವಹಿಸಿದವುಗಳಾಗಿವೆ. ಅದುದರಿಂದ ಅವು ತಮ್ಮ ಪ್ರತಿಜ್ಞೆಯ ಪ್ರಕಾರ ಕಾರ್ಯ ಮಾಡುವುದು ಸ್ವಾಭಾವಿಕವು. ಈ ತಮ್ಮ ಕಾರ್ಯಮಾಡುವಾಗ ತಮ್ಮ ಮೇಲೆ ಬೀಳುವ ಹೊಣೆಗಾರಿಕೆಯನ್ನೂ ಅವು ಪರ್ಯಾಲೋಚಿಸಿಯೇ ಪ್ರಾಂತದ ಶಾಂತತೆಯ ರಕ್ಷಣೆಗಾಗಿ ರಾಜಕೈದಿಗಳಿಂದ ಆಶ್ವಾಸನವನ್ನೂ ತೆಗೆದುಕೊಂಡಿವೆ.

ಮಂತ್ರಿಗಳಿಗೂ ಗವ್ಹರ್ನರರಿಗೂ ಪರಸ್ಪರ ವಿಚಾರವಿನಿಮಯಮಾಡಲು ಅವಕಾಶವನ್ನಿಟ್ಟಿರುವುದು ಸಂತೋಷದ ಸಂಗತಿಯು. ಮಂತ್ರಿಮಂಡಲದ ಕಡೆಗೇ ಇದರ ಹೊಣೆಗಾರಿಕೆಯನ್ನು ವಹಿಸಲು ಗವ್ಹರ್ನರರು ಸಿದ್ಧರಾದರೆ ಈ ತೊಡುಕು ನಿವಾರಣೆಯಾಗುವುದು. ವ್ಹಾಯಿಸ್‌ರಾಯರು ೧೨೬ ನೆಯ ನಿಯಮವನ್ನು ಈ ಪ್ರಸಂಗದಲ್ಲಿ ಉಪಯೋಗಿಸಿದುದು ಅದರ ದುರುಪಯೋಗವೇ ಸರಿಯೆಂದು ಆ ನಿಯಮವನ್ನು ಓದಿದನಂತರ ನನಗೆ ಅನಿಸಿದೆ. ವಕೀಲರೇ ಇದರ ನಿಜ ಸ್ಥಿತಿಯನ್ನು ಹೇಳಲಿ. ಮುಖ್ಯವಾಗಿ ಈಗಿನ ತೊಡಕು ನಿವಾರಣೆಯಾಗಲೆಂಬುದೇ ಈ ನನ್ನ ಪ್ರಕಟನೆಯ ಮುಖ್ಯೋದ್ದೇಶವು."

---

## ತಂಬಾಕದ ಶಾಸನದಲ್ಲಿ ತಿದ್ದುಪಡಿ.

ಈಗಿನ ತಂಬಾಕದ ಶಾಸನದ ತಿದ್ದುಪಡಿ ಮಾಡುವದನ್ನು ಕುರಿತು ಒಂದು ಗೊತ್ತುವಳಿಯನ್ನು ಮುಂಬಯಿ ಸರಕಾರದವರು ತರತಕ್ಕವರಿದ್ದು ಅದನ್ನು ಪ್ರಸಿದ್ಧಮಾಡಿದ್ದಾರೆ.

ಈಗಿದ್ದ ಒಂದು ರೂಪಾಯಿ ಫೀಯನ್ನು ೨೫ ಅಥವಾ ೫೦ ರೂಪಾಯಿಗಳ ವರೆಗೆ ತಂಬಾಕವಿದ್ದಂತೆ ಹೆಚ್ಚಿಸಬೇಕೆಂದು ಈ ಗೊತ್ತುವಳಿಯಲ್ಲಿ ಹೇಳಿದೆ.

ತಂಬಾಕದ ಈ ಶಾಸನವನ್ನು ಶಾಶ್ವತ ಮಾಡಬೇಕೆಂದು ಗೊತ್ತುಮಾಡಿದೆ. ಈ ವರ್ಷದ ಕೊನೆಗೆ ಈಗಿನ ಅವಧಿಯು ಮುಗಿಯುತ್ತದೆ.

ಕೆಲವು ನಗರಗಳಲ್ಲಿ ತಂಬಾಕದ ಮೇಲೆ ೧೦೦ ಕ್ಕೆ ೫೦ ರಂತೆ ಕರವನ್ನು ಕೂಡ ಹೇರಬೇಕೆಂಬ ವಿಚಾರವಿದ್ದು ಯಾರಿಗೂ ಕರ ತಪ್ಪಿಸಗೊಡದಂತೆ ವ್ಯವಸ್ಥೆ ಮಾಡಿದ ಮೇಲೆ ಈ ಕರವು ಹೇರಲ್ಪಡುವದು. ಪ್ರಯೋಗಕ್ಕಾಗಿ ಈ ಗೊತ್ತುವಳಿ ಮೊದಲು ವಿಚಾರದಲ್ಲಿ ತರಲ್ಪಡುವುದು.



ಶಾ. ಶ. ೧೮೫೯ ನೆಯ ಮಾಘ ಬ|| ೧೩ ಸೋಮವಾರ.

## ಹರಿಪುರ ಕಾಂಗ್ರೆಸ್ಸಿನ ಸಂದೇಶ.

ಹರಿಪುರ ಕಾಂಗ್ರೆಸ್ಸಿನ ಕಡೆಗೇನೇ ರಾಷ್ಟ್ರವು ನೋಡುತ್ತಲಿದೆಯೆಂದು ನಾವು ತಾ. ೭-೨-೩೮ ನೆಯ ಸಂಚಿಕೆಯಲ್ಲಿ ವಿವರಿಸಿದ್ದೆವಷ್ಟೆ. ಆ ಪ್ರಕಾರ ಹರಿಪುರ ಕಾಂಗ್ರೆಸ್ಸಿನ ಮುಂಚೆ ರಾಷ್ಟ್ರದಲ್ಲಿ ಮಹತ್ವದ ಸಂಗತಿಗಳುಂಟಾಗಿ ಅವುಗಳ ಸಮಾಧಾನಕರವಾದ ತೀರ್ಮಾನವು ಹೇಗಾಗುವುದೋ ಎಂದು ರಾಷ್ಟ್ರವು ಯೋಚಿಸುತ್ತಿದ್ದಾಗ ಬಿಹಾರ ಮತ್ತು ಸಂಯುಕ್ತ ಪ್ರಾಂತಗಳ ಮಂತ್ರಿಮಂಡಲಗಳು ರಾಜ್ಯಭಾರ ಪರಿತ್ಯಾಗ ಮಾಡುವ ಮತ್ತೊಂದು ಬಿಕ್ಕಟ್ಟಿನ ಸಂದರ್ಭವೊದಗಿ ಹರಿಪುರದ ಕಾಂಗ್ರೆಸ್ಸಿನ ಕಾಲದಲ್ಲಿ ರಾಷ್ಟ್ರಮುಖಂಡರ ಮೇಲಣ ಹೊಣೆಗಾರಿಕೆಯು ಮತ್ತಿಷ್ಟು ಹೆಚ್ಚಾಯಿತು. ಅನೇಕರು ಕಾರಾಗೃಹವನ್ನು ಜ್ಞಾಪಿಸಿಕೊಳ್ಳಲಾರಂಭಿಸಿದರು. ರಾಷ್ಟ್ರದಲ್ಲಿ ಮತ್ತೆ ಶಾಸನಭಂಗದ ಹೋರಾಟ ಪ್ರಾರಂಭವಾಗಬಹುದೆಂದೂ ಕೆಲವರಿಗೆ ತೋರಿತು.

ಆದರೆ ಮಹಾತ್ಮಾ ಗಾಂಧಿಯವರ ಸಮಯೋಚಿತ ಸಲಹೆಯಿಂದಲೂ ವರ್ಕಿಂಗ್ ಕಮಿಟಿಯ ವಿಚಕ್ಷಣತೆಯಿಂದಲೂ ಆಗ ತೋರುತ್ತಿದ್ದ ಅನೇಕ ತೊಂದರೆಗಳೆಲ್ಲಾ ನಿವಾರಣೆಯಾಗಿ ಹರಿಪುರ ಕಾಂಗ್ರೆಸ್ಸು ರಾಷ್ಟ್ರಕ್ಕೆ ಕ್ಷೇಮಕರವಾದ ಸಂದೇಶವನ್ನೇ ಕೊಟ್ಟಿತು.

### ಮುಖ್ಯ ಸಂಗತಿಗಳು.

(೧) " ಸಂಯುಕ್ತ ರಾಜ್ಯಘಟನೆಯು ಈಗಿರುವ ಸ್ಥಿತಿಯಲ್ಲಿಯೇ ಆಚರಣೆಗೆ ಬರಕೂಡದು. ಬಂದದ್ದಾದರೆ ಪ್ರಾಂತಿಕ ಸರಕಾರಗಳು ಮತ್ತು ಮಂತ್ರಿಮಂಡಲಗಳು ಅದರೊಂದಿಗೆ ಸಹಕರಿಸಕೂಡದು. ಮತ್ತು ರಾಷ್ಟ್ರವು ಆಗ ಅನುಸರಿಸಬೇಕಾದ ಮಾರ್ಗವನ್ನು ನಿರ್ಧರಿಸಲು "ಆಲ್ ಇಂಡಿಯಾ ಕಾಂಗ್ರೆಸ್ ಕಮಿಟಿಗೆ" ಅಧಿಕಾರವಿದೆ." ಎಂದು ಸಂಯುಕ್ತ ರಾಜ್ಯಘಟನೆಯ ಸಂಬಂಧವಾಗಿ ಹರಿಪುರ ಕಾಂಗ್ರೆಸ್ಸು ಗೊತ್ತುಮಾಡಿದುದು ಬಹು ಯುಕ್ತವಾಗಿದೆ.

(೨) ಕಾಂಗ್ರೆಸ್ಸಿನಲ್ಲಿರುವ ಸಮತಾವಾದಿಗಳ ಪ್ರಯತ್ನ ವಿಶೇಷದಿಂದ ಒಕ್ಕಲಿಗರ (ಕಿಸಾನ) ಸಂಘಗಳು ಅಲ್ಲಲ್ಲಿ ಹೆಚ್ಚಾಗಿ ಸ್ಥಾಪಿಸಲ್ಪಡುತ್ತಲಿವೆಯಷ್ಟೆ. ಇವುಗಳನ್ನು ಹರಿಪುರ ಕಾಂಗ್ರೆಸ್ ಮಾನ್ಯಮಾಡಿದುದು ವಿಹಿತವೇ ಸರಿ. ಆದರೆ ಅವು ಕಾಂಗ್ರೆಸ್ಸಿನ ಮುಖ್ಯ ಧೋರಣಕ್ಕೆ ವಿರೋಧವಾಗುವ ರೀತಿಯಲ್ಲಿ ಚಟುವಟಿಕೆ ನಡೆಯಿಸಕೂಡದೆಂದು ಕಟ್ಟು ಹಾಕಿರುವುದು ಕೆಲವು ಸಮತಾವಾದಿಗಳಿಗೆ ಒಪ್ಪಿಗೆಯಾಗಿಲ್ಲ. ಕಾಂಗ್ರೆಸ್ಸಿನ ಏಕಮುಖವಾದ ಕಾರ್ಯಪದ್ಧತಿಗೆ ವ್ಯತ್ಯಯ ಬರಬಾರದೆಂದು ಹೀಗೆ ಕ್ರಮಗೊಳಿಸಿದುದು ನಮಗೆ ವಿಹಿತವಾಗಿಯೇ ತೋರುತ್ತದೆ.

(೩) ಸಂಸ್ಥಾನಗಳಲ್ಲಿ ಕಾಂಗ್ರೆಸ್ ಕಮಿಟಿಗಳನ್ನು ಸ್ಥಾಪಿಸಿಕೊಂಡು ವರ್ಕಿಂಗ್ ಕಮಿಟಿಯ ಮೇಲ್ವಿಚಾರಣೆಯಲ್ಲಿ ಕಾರ್ಯ ನಡೆಯಿಸಬೇಕೆಂದು ಹರಿಪುರ ಕಾಂಗ್ರೆಸ್ಸು ತೀರ್ಮಾನಿಸಿದುದು ಒಳ್ಳೆಯದೇ ಆಯಿತು. ನಾವು ತಾ. ೧೪-೨-೩೮ ನೆಯ ಸಂಚಿಕೆಯಲ್ಲಿ ಹಾರೈಸಿದಂತೆ ಸಂಸ್ಥಾನಗಳಲ್ಲಿ ಕಾಂಗ್ರೆಸ್ ಕಮಿಟಿಗಳು ಏರ್ಪಡಲು ಅವಕಾಶ ದೊರೆತುದು ರಾಷ್ಟ್ರಕ್ಕೆ ಕ್ಷೇಮಕರವಾಗಿದೆ.

ಕೆಲವು ಸಮತಾವಾದಿಗಳಿಗೆ ಹರಿಪುರ ಕಾಂಗ್ರೆಸ್ಸು ಬಹು ಸಪ್ಪೆಯಾಗಿ ತೋರಿದರೂ ಅದರಿಂದ ಹೊರಬೀಳದೆ ಕಾಂಗ್ರೆಸ್ಸಿನಲ್ಲಿ ಐಕಮತ್ಯವನ್ನು ಸ್ಥಿರಗೊಳಿಸಿದ್ದಕ್ಕಾಗಿ ಉಗ್ರ ಸಮತಾವಾದಿಗಳು ಖಂಡಿತವಾಗಿಯೂ ಅಭಿನಂದನೆಗೆ ಪಾತ್ರರಾಗಿದ್ದಾರೆ. ಇಂಥ ಐಕಮತ್ಯದ ಬಲದಿಂದಲೇ ರಾಷ್ಟ್ರವು ಮುಂದರಿಯಬೇಕೆಂಬ ಹರಿಪುರ ಕಾಂಗ್ರೆಸ್ಸಿನ ಮುಖ್ಯ ಸಂದೇಶವು ಈ ಕಾಲದಲ್ಲಿ ಅಗತ್ಯವಾಗಿರಲಿಲ್ಲವೆ ?

## ಮುಸುಕಿದ ಮೋಡವು ಬಯಲಾಯಿತು.

ಬಿಹಾರ ಮತ್ತು ಸಂಯುಕ್ತ ಪ್ರಾಂತಗಳ ಮಂತ್ರಿಮಂಡಲಗಳು ರಾಜ್ಯಭಾರ ಪರಿತ್ಯಾಗ ಮಾಡುವಂತಹ ಪ್ರಸಂಗವು ಗವರ್ನರರುಗಳಿಂದ ಸಂಭವಿಸಿ ಈ ದೇಶದ ರಾಜಕೀಯ ಆಕಾಶದಲ್ಲಿ ಅಸಂತೋಷದ ಮೋಡವು ಮುಸುಕಿದ್ದಿತಷ್ಟೆ. ಅದು ಕಳೆದ ೨೫ ನೆಯ ತಾರೀಖಿನ ದಿವಸ ಬಯಲಾಗಿ ಮೊದಲಿನಂತೆ ಸಂಯುಕ್ತ ಪ್ರಾಂತದ ಮಂತ್ರಿಮಂಡಲವು ಅಧಿಕಾರವನ್ನು ವಹಿಸಿದುದು ಸಂತೋಷದ ಸಂಗತಿಯು.

ಇದೊಂದು ಕಾಂಗ್ರೆಸ್ಸಿನ ವಿಜಯವೇ ಸರಿ. ಕಾಂಗ್ರೆಸ್ ಪಕ್ಷವು ಅಧಿಕಾರದ ಆಸೆಗಾಗಿ ರಾಜ್ಯಸೂತ್ರವನ್ನು ಹಿಡಿದಿರದೆ ದೇಶ ಸೇವೆಗಾಗಿಯೇ ಹಿಡಿದಿದೆಯೆಂಬುದು ಇದರಿಂದ ಯಾರಿಗಾದರೂ ತಿಳಿಯುವಂತಾಯಿತು. ರಾಷ್ಟ್ರಕ್ಕೆ ವಿರೋಧವಾದ ಸಂಯುಕ್ತ ರಾಜ್ಯಘಟನೆ ಒತ್ತಾಯದಿಂದ ಬಂದರೆ ಕಾಂಗ್ರೆಸ್ ಪಕ್ಷವು ಏನು ಮಾಡಬಹುದೆಂಬುದನ್ನು ಸರಕಾರವು ಇದರಿಂದ ತಿಳಿದುಕೊಳ್ಳಬಹುದಲ್ಲವೆ ?

ಮುಂಬೈ ಸರಕಾರದ ೧೯೩೮-೩೯ ನೆಯ ಇಸವಿ

ಮುಂಗಡ ಪತ್ರಿಕೆ.

| | | |
|---|---|---|
| ಆದಾಯ. | ೧೨೯೩೩೦೦೦ | ರೂ. |
| ವೆಚ್ಚ. | ೧೩೪೮೪೦೦೦ | ರೂ. |
| ಕೊರತೆ. | ೫೫೧೦೦೦ | ರೂ. |

# ಶ್ರೀ ಜಗದ್ಗುರು ಮುರುಘರಾಜೇಂದ್ರ ಮಹಾಸ್ವಾಮಿಗಳ
# ಮೈಸೂರಿನ ಮಹೋತ್ಸವ.



## ಅಭೂತಪೂರ್ವ ರಾಜಸನ್ಮಾನ.

**೧೧ ತೋಪುಗಳು ಹಾರಿಸಲ್ಪಟ್ಟವು.**

**ಅಂಜುಮೂನ್ ಇಸ್ಲಾಂ ಸಂಸ್ಥೆಯವರೂ, ಜೈನ ಮಂಡಲಿಯವರೂ, ಆಂಧ್ರ ಕ್ಷತ್ರಿಯ ಸಮಾಜದವರೂ, ಜಗದ್ಗುರುಗಳವರಿಗೆ ವಿಜ್ಞಾಪನಾ ಪತ್ರಿಕೆಗಳನ್ನು ಅರ್ಪಿಸಿದರು.**

## ಮಹಾರಾಜರ ಮನನೀಯ ಭಾಷಣ.



### ಮಹೋತ್ಸವ.

ಈ ಮುಂಚೆ ಪ್ರಕಟವಾದ ಪ್ರಕಾರ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರಘರಾಜೇಂದ್ರ ಮಹಾಸ್ವಾಮಿಗಳವರು ತಾ. ೨೩-೨-೩೮ ನೆಯ ದಿನ ಪ್ರಾತಃಕಾಲ ಮೈಸೂರಿಗೆ ಆಗಮಿಸಿದರು. ಈ ಮಹೋತ್ಸವಕ್ಕೋಸ್ಕರ ಎರಡು ಸ್ಪೆಶಲ್ ಟ್ರೇನುಗಳ ಮೂಲಕ ಮಹಾಜನರು ಬಂದಿದ್ದರು. ಪಟ್ಟಣವು ತಳಿರು, ತೋರಣ, ಚಪ್ಪರಗಳಿಂದ ಶೃಂಗರಿಸಲ್ಪಟ್ಟದ್ದಿತು. ಹನ್ನೊಂದು ಕಡೆ ಹಸರುವಾಣಿ ಮಂಟಪಗಳು ನಿರ್ಮಿಸಲ್ಪಟ್ಟದ್ದವು.

ಪುರಪ್ರವೇಶದ ಆರಂಭದಲ್ಲಿ ನಗರ ಸಭಾಧ್ಯಕ್ಷರಾದ ಶ್ರೀ. ಶ್ರೀನಿವಾಸನ್‌ರವರು, ಮಹಾರಾಜರ ಪ್ರಾಯವ್ಹೇಟ್ ಸೆಕ್ರೆಟರಿಗಳಾದ ಶ್ರೀ. ಎಂ. ರಾಮರಾವ, ದರ್ಬಾರಭಕ್ಷಿ ಶ್ರೀ. ಹೆಚ್. ಎಲ್. ದೇವರಾಜ ಅರಸರು, ಜಿಲ್ಹಾಧಿಕಾರಿಗಳು, ಆಪ್ತ ಕಾರ್ಯದರ್ಶಿಗಳು ಅಸಿಸ್ಟೆಂಟ್ ಸುಪರಿಂಟೆಂಡೆಂಟರಾದ ಶ್ರೀ. ಚಾಂಡಿಯವರು, ಎಕ್ಸೈಜ್ ಕಮಿಶನರು, ಟ್ರಜರಿ ಅಸಿಸ್ಟಂಟರು ಮೊದಲಾದ ಅಧಿಕಾರಿಗಳು ಶ್ರೀ. ಬಿ ಎಸ್. ಪುಟ್ಟಸ್ವಾಮಿ, ಶ್ರೀ. ಪಿ. ಎನ್. ಸಂಗಪ್ಪ ಶ್ರೀ. ಟಿ. ಎಸ್. ಸಿದ್ಧಪ್ಪ ಮೊದಲಾದ ಪಟ್ಟಣದ ಪ್ರಮುಖರು ಮಹಾಸ್ವಾಮಿಗಳನ್ನು ಎದುರುಗೊಂಡು ಸ್ವಾಗತಿಸಿದರು.

ಮಹಾಸ್ವಾಮಿಗಳವರ ಆಂದೋಲಿಕೋತ್ಸವವು ಸಕಲ ಬಿರುದಾವಳಿಗಳೊಡನೆ ರಾಜಧಾನಿಯ ಮುಖ್ಯ ಮಾರ್ಗಗಳಲ್ಲಿ ಸಾಗಿ ಬರುವಾಗ ಹತ್ತಾರು ಸಾವಿರ ಜನರು ಫಲ ಪುಷ್ಪಾದಿಗಳನ್ನು ಮಹಾಸ್ವಾಮಿಗಳವರಿಗೆ ಅರ್ಪಿಸಿ ತಮ್ಮ ಆದರಾಭಿಮಾನಗಳನ್ನು ವ್ಯಕ್ತಗೊಳಿಸಿದರು. ಮೆರವಣಿಗೆಯು ದೊಡ್ಡ ಗಡಿಯಾರದ ಹತ್ತಿರ ಬಂದೊಡನೆ ಗೌರವಾರ್ಥವಾಗಿ ೧೧ ತೋಪುಗಳು ಹಾರಿಸಲ್ಪಟ್ಟವು.

### ಮಹಾರಾಜರ ಭಾಷಣ.

“ಪ್ರಾಚೀನ ಮಠಗಳಲ್ಲೊಂದರ ಪೀಠಾಧಿಪತಿಗಳಾದ ಶ್ರೀ ಜಯದೇವ ಮುರುಘಾರಾಜೇಂದ್ರ, ಸ್ವಾಮಿಗಳವರು ಮಾನವ ವರ್ಗದ ಕ್ಲೇಶಹಾರಕವಾದ ಆಧುನಿಕ ಸಾಧನವಾಗಿ ದಿನ ದಿನವೂ ವೃದ್ಧಿ ಹೊಂದುತ್ತಿರುವ ಈ ರೋಗ ನಿದಾನ ಶಾಸ್ತ್ರದ ಪ್ರಯೋಗ ಪರೀಕ್ಷಾ ಶಾಲೆಯ ನಿರ್ಮಾಣಕ್ಕಾಗಿ ಧನ ಸಹಾಯಮಾಡಿರುವುದು ಯುಕ್ತವೇ ಆಗಿದೆ. ಶ್ರೀ ಮುರುಘರಾಜೇಂದ್ರ ಮಠವು ಸರ್ವಭಾವಗಳಿಂದಲೂ ಗೌರವಕ್ಕೆ ಪಾತ್ರವಾಗಿದೆ. ಶ್ರೀ ಮಠದಿಂದ ಧರ್ಮಾರ್ಥವಾಗಿ ಸ್ಥಾಪಿತವಾಗಿರುವ ಸಂಸ್ಥೆಗಳು ಅನೇಕ ವರ್ಗಗಳಿಂದಲೂ ಸುಪ್ರಸಿದ್ಧವಾಗಿರುವವಲ್ಲದೆ ನಮ್ಮ ಸಂಸ್ಥಾನದಲ್ಲಿ ನಾಲ್ಕು ಡಿಸ್ಟ್ರಿಕ್ಟುಗಳಿಗೆ ಕಡಿಮೆಯಿಲ್ಲದ ಸುವಿಸ್ತರವಾದಪ್ರದೇಶದಲ್ಲಿರುವ ನಾನಾ ಸ್ಥಳಗಳಲ್ಲಿಯೂ ವ್ಯವಸ್ಥಿತವಾಗಿವೆ. ಈ ಕಾರ್ಯಗಳಿಗಾಗಿ ಶ್ರೀ ಮಠದಿಂದ ವಿನಿಯೋಗವಾಗಿರುವ ಧನವು ಹದಿನೆಂಟು ಲಕ್ಷ ರೂಪಾಯಿಗಳೆಂದು ನಮ್ಮ ಅವಗಾಹನೆಗೆ ಬಂದಿದೆ. ಧರ್ಮಕಾರ್ಯಗಳಿಗಾಗಿ ವಿನಿಯೋಗವಾಗಿರುವ ಬಹು ಭಾಗದ ಮೊತ್ತಗಳು, ಮುಖ್ಯವಾಗಿ ವೀರಶೈವ ಪಂಗಡದ ವಿದ್ಯಾರ್ಥಿಗಳಿಗೆ ಭೋಜನ ವಸತಿಗಳನ್ನೊದಗಿಸುವ ವಿದ್ಯಾರ್ಥಿನಿಲಯಗಳನ್ನು ನಿರ್ಮಿಸುವುದೇ ಮುಂತಾದ ವಿದ್ಯಾಭ್ಯಾಸ ಸಂಬಂಧದ ಸೌಕರ್ಯಗಳನ್ನು ಕಲ್ಪಿಸುವುದಕ್ಕಾಗಿಯೇ ವ್ಯಯವಾಗಿದೆ. ಈಗ ಶ್ರೀಗಳವರು ಸಾಮಾನ್ಯತಃ ವೈದ್ಯ ವಿದ್ಯಾಭ್ಯಾಸಮಾಡತಕ್ಕವರಿಗೂ ಪ್ರಯೋಜನಕರವಾಗಿರುವ ಮಹತ್ತರವಾದ ಈ ಕಾರ್ಯಕ್ಕಾಗಿ ಉದಾರವಾದ ಧರ್ಮದ್ರವ್ಯವನ್ನಿತ್ತು ಉಪಕರಿಸಿದ್ದಾರೆ.”

ವಸ್ತು ವಿಜ್ಞಾನಶಾಸ್ತ್ರ, ಪ್ರಾಣಿಶಾಸ್ತ್ರ, ಮುಂತಾದವುಗಳೆಲ್ಲ ಚೆನ್ನಾಗಿ ಬೆಳವಣಿಗೆ ಹೊಂದಿ ಅನುಭವದಿಂದ ವಿಸ್ತಾರವಾಗಿವೆ. ಶಸ್ತ್ರ ಕ್ರಿಯೆಯು ಅದ್ಭುತವಾದ ಸಾಹಸವನ್ನು ಮಾಡಿದೆ. ಮೊದಲು ಇವು ಸ್ವಪ್ನದಲ್ಲಿಯೂ ಎಣಿಸಿದ್ದಲ್ಲ. ಅಂತೂ ವೈಜ್ಞಾನಿಕ ರಹಸ್ಯವು ಮಹತ್ತಾದ ಕೆಲಸವನ್ನು ಮಾಡಿದೆ. ಆರೋಗ್ಯ ಶಾಖೆಯ ಶುಚಿಯ ಪದ್ಧತಿಯು ಎಷ್ಟೋ ರೋಗಗಳನ್ನು ಅಂಕೆಗೆ ತಂದಿದೆ. ರೋಗ ನಿಧಾನ ತಂತ್ರವು ಬಹಳ ಮುಂದೆ ಸಾಗಿದೆ. ಎಂದು ಮೈಸೂರು ಮಹಾರಾಜರು ಜಯದೇವ ಮುರಘರಾಜೇಂದ್ರ ಪ್ಯಾಥೋಲೋಜಿಕಲ್ ಲ್ಯಾಬೋರೇಟರಿಯ ಶಂಕುಸ್ಥಾಪನೆಯ ಕಾಲದಲ್ಲಿ ಭಾಷಣಮಾಡಿದರು. ತಮ್ಮ ಭಾಷಣವನ್ನು ಮುಂದೆ ಸಾಗಿಸುತ್ತ ರೋಗನಿಧಾನ ತಂತ್ರವು ಪ್ರಬಲವಾಗಿ ಬೆಳೆದು ಗುಣವಾಗದ ರೋಗವೇ ಇಲ್ಲವೆಂಬ ಪರಿಸ್ಥಿತಿ ಸದ್ಯಕ್ಕೆ ಬರುವದೆಂದೂ ಮುಂತಾಗಿ ತಿಳಿಸಿದರು.

(೧೮ ನೆಯ ಪುಟಕ್ಕೆ ಮುಂದೆ ಸಾಗಿದೆ.)

## ಅಥರಗಾ.

ತಾ. ೨೦-೨-೩೮ ನೆಯ ದಿವಸ ಇಲ್ಲಿಯ ಗ್ರುಪ್ ಕಾಂಗ್ರೆಸ್ ಕಮಿಟಿಯ ಪರವಾಗಿ ಸಭೆಯು ಕೂಡಿಸಲ್ಪಟ್ಟಿದ್ದಿತು. ೫ ಗಂಟೆಯ ಸುಮಾರಕ್ಕೆ ಒಂದೇ ಉಡುಪಿನಲ್ಲಿದ್ದ ೨೫-೩೦ ಜನ ಸ್ವಯಂ ಸೇವಕರು ರಾಷ್ಟ್ರಪತಿಗಳಾದ ಶೂರ ಸುಭಾಷಚಂದ್ರ ಬೋಸರ ಭಾವಚಿತ್ರವನ್ನು ಮೆರೆಯಿಸುತ್ತ ಶ್ರೀ. ರೇವಣಸಿದ್ಧೇಶ್ವರ ಮಠದಿಂದ ಹೊರಟು ರಾಷ್ಟ್ರೀಯ ಪದಗಳನ್ನು ಹಾಡುತ್ತ ಊರೊಳಗಿಂದ ಹಾಯ್ದು ಗಾಂಧಿ ಚೌಕಿಗೆ ಬಂದರು. ಗಾಂಧಿ ಚೌಕಿನಲ್ಲಿ ಮೊದಲೇ ಜನರು ಸೇರಿದ್ದರು.

ಮೊದಲು ಶ್ರೀ. ಎಸ್. ಸಿ. ಶಿವಲಿಂಗಣ್ಣ ಇವರು ಧ್ವಜವಂದನೆ ಮಾಡಿ ರಾಷ್ಟ್ರಪತಿಗಳಾದ ಶೂರ ಸುಭಾಷಚಂದ್ರ ಬೋಸರವರು ಹರಿಪುರ ಅಧಿವೇಶನದ ರಾಷ್ಟ್ರಧ್ವಜವಂದನೆಯ ಕಾಲಕ್ಕೆ ಕೊಟ್ಟ ವೀರ ಪ್ರತಿಜ್ಞೆಯನ್ನು ಓದಿ ಹೇಳಿದರು. ಅನಂತರ ಶ್ರೀ. ಗದಿಗೆಪ್ಪ ಲೋಣಿ ಇವರು ಶೂರ ಸುಭಾಷಚಂದ್ರರ ಜೀವನ ಚರಿತ್ರೆಯನ್ನು ವಿವರಿಸಿ ಹೇಳಿದನಂತರ ಇಲ್ಲಿಯ ಗ್ರುಪ್ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರಾದ ಶ್ರೀ. ಅಂಕಲಗಿ ದುಂಡಪ್ಪನವರು ರಾಷ್ಟ್ರಪತಿಗಳ ಅಧ್ಯಕ್ಷೀಯ ಭಾಷಣವನ್ನು ಓದಿಹೇಳಿದರು. ಅನಂತರ ಶ್ರೀ. ಕಲ್ಲಯ್ಯ ಡೋಣೂರು ಇವರು ಈ ವರೆಗೆ ಕಾಂಗ್ರೆಸ್ಸಿನವರು ಮಾಡಿದ ಜನಹಿತ ಕಾರ್ಯಗಳನ್ನು ವಿವರಿಸಿ ಈ ಕೆಳಗಿನ ಗೊತ್ತುವಳಿಗಳನ್ನು ಸಭೆಯ ಮುಂದಿಟ್ಟರು. ಅವು ಸರ್ವಾನುಮತದಿಂದ ತೀರ್ಮಾನಿಸಲ್ಪಟ್ಟವು.

೧ ಈ ಸಭೆಯು ಕಾಂಗ್ರೆಸ್ ಮತ್ತು ಕಾಂಗ್ರೆಸ್ ಮಂತ್ರಿಗಳಲ್ಲಿ ತನ್ನ ಸಂಪೂರ್ಣವಾದ ವಿಶ್ವಾಸವನ್ನು ವ್ಯಕ್ತಮಾಡುವುದಲ್ಲದೆ ಹೃತ್ಪೂರ್ವಕವಾದ ಬೆಂಬಲವನ್ನು ಕೊಡುತ್ತದೆ.

೨ ಬಿಹಾರ ಮತ್ತು ಸಂಯುಕ್ತ ಪ್ರಾಂತಗಳಲ್ಲಿಯ ಕಾಂಗ್ರೆಸ್ ಮಂತ್ರಿಗಳ ಕಾರ್ಯಕ್ರಮಗಳಲ್ಲಿ ಗವ್ಹರ್ನರರು ಕೈ ಹಾಕಿದುದನ್ನು ಈ ಸಭೆಯು ನಿಷೇಧಿಸುತ್ತದೆ. ಬಿಹಾರ ಮತ್ತು ಸಂಯುಕ್ತ ಪ್ರಾಂತಗಳಲ್ಲಿಯ ಮಂತ್ರಿಗಳು ರಾಜಿನಾಮೆ ಕೊಟ್ಟು ಕಾಂಗ್ರೆಸ್ಸಿನ ಪ್ರತಿಷ್ಠೆಯನ್ನು ಹೆಚ್ಚಿಸಿದ್ದುದಕ್ಕಾಗಿ ಈ ಸಭೆಯು ಅವರನ್ನು ತುಂಬಾ ಅಭಿನಂದಿಸುತ್ತದೆ.

ಅನಂತರ ಕುಮಾರಿ ಗಂಗವ್ವನು ಗಾಂಧಿಯವರ ಸಂಬಂಧವಾದ ಪದವನ್ನು ಹಾಡಿದನಂತರ ವಂದೇಮಾತರಂ ಗೀತೆಯು ಹೇಳಲ್ಪಟ್ಟು ಜಯಜಯಕಾರದೊಡನೆ ಸಭೆಯು ವಿಸರ್ಜಿಸಲ್ಪಟ್ಟಿತು.

ಬಸವರಾಜ ಸೊಡ್ಡಿಗಿ.

## ಬನವಾಸಿ.

ಕಾಂಗ್ರೆಸ್ಸಿನ ಆಜ್ಞೆಯ ಪ್ರಕಾರ ಇಲ್ಲಿ ಕಾಂಗ್ರೆಸ್ ದಿನಾಚರಣೆಯು ವಿಜೃಂಭಣೆಯಿಂದ ಸಾಗಿತು. ಸಾಯಂಕಾಲ ಮೊದಲು ಧ್ವಜವಂದನೆಯಾಗಿ ಶ್ರೀ. ಸಿ. ಎಂ. ಭಾಶಿ ಇವರ ಅಧ್ಯಕ್ಷತೆಯಲ್ಲಿ ಸಭೆಯ ಕಾರ್ಯ ಪ್ರಾರಂಭವಾಯಿತು. ಶ್ರೀ. ಚೆನ್ನಪ್ಪ ಮುಳಗುಂದ ಇವರು ಸಭೆಯ ಉದ್ದೇಶವನ್ನು ತಿಳಿಸಿದರು. ಶ್ರೀ. ರಾಮಕೃಷ್ಣ ಶಾಸ್ತ್ರಿಗಳು ಕಾಂಗ್ರೆಸ್ಸಿನ ಮಹತ್ವವನ್ನು ಕುರಿತು ವ್ಯಾಖ್ಯಾನ ಮಾಡಿದರು.

ಆ ಮೇಲೆ ಶ್ರೀ. ಬಸವರಾಜ ಸೊಂದಾ ಇವರು ಹರಿಪುರ ಕಾಂಗ್ರೆಸ್ಸಿನ ಅಧ್ಯಕ್ಷರ ಭಾಷಣವನ್ನು ಓದಿಹೇಳಿದರು. ಆ ಬಳಿಕ ಶ್ರೀ. ಮುಳಗುಂದ ಇವರು ನಮ್ಮ ಈಗಿನ ರಾಜಕೀಯ ಸ್ಥಿತಿಯನ್ನು ಕುರಿತು ಭಾಷಣಮಾಡಲು ಕಾಂಗ್ರೆಸ್ಸಿನಲ್ಲಿ ನಮ್ಮ ವಿಶ್ವಾಸವಿದೆ, ಮೊದಲಾದ ನಿರ್ಣಯಗಳಾದವು.

ಓರ್ವ ಸಭಿಕ.

## ತಾಳೀಕೋಟೆ.

ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಆಜ್ಞೆ ಪ್ರಕಾರ ಇಲ್ಲಿ ತಾ. ೨೦-೨-೩೮ ನೆಯ ದಿನ ಕಾಂಗ್ರೆಸ್ ದಿನಾಚರಣೆಯನ್ನು ತಾಲೂಕ ಕಾಂಗ್ರೆಸ್ ಕಮಿಟಿ ಪರವಾಗಿ ಆಚರಿಸಿದ್ದಾಯಿತು. ಪರಮಪೂಜ್ಯ ಶ್ರೀ. ಅಗ್ನಿಮಠದ ಚರಪಟ್ಟಾಧ್ಯಕ್ಷರು ಸಭೆಯ ಅಗ್ರಾಸನವನ್ನು ವಹಿಸಿದ್ದರು. ಶ್ರೀ. ಬಸಯ್ಯನವರು ಮಠಪತ್ರಿ ಇವರ ಹಸ್ತದಿಂದ ಧ್ವಜವಂದನೆ ಜರುಗಿದಮೇಲೆ ತಾಲೂಕ ಕಾಂಗ್ರೆಸ್ ಕಮಿಟಿ ಅಧ್ಯಕ್ಷರಾದ ಶ್ರೀ. ಸಿದ್ಧಬಸವದೇವರು ಕಾಂಗ್ರೆಸ್ಸಿನ ಮಹತ್ವವನ್ನು ಕುರಿತು ಸವಿಸ್ತಾರವಾಗಿ ಭಾಷಣಮಾಡಿ ಸಕಲರೂ ಒಮ್ಮನಸ್ಸಿನಿಂದ ಕಾಂಗ್ರೆಸ್ ಕಾರ್ಯಕ್ಕೆ ನೆರವಾಗಬೇಕೆಂದು ತಿಳಿಸಿದರು.

ಆಮೇಲೆ ಹರಿಪುರ ಕಾಂಗ್ರೆಸ್ಸಿನ ಅಧ್ಯಕ್ಷರಾದ ಶ್ರೀ. ಸುಭಾಷಚಂದ್ರ ಬೋಸರವರ ಉಜ್ವಲ ಚರಿತ್ರೆಯನ್ನು ಶ್ರೀ. ಮಸಳಿ ಶ್ರೀಶೈಲಪ್ಪನವರು ಓದಿಹೇಳಿದರು. ಆ ಬಳಿಕ ಶ್ರೀ. ಡೆಗಿನಾಳ ವಿರೂಪಾಕ್ಷಪ್ಪನವರು ರಾಷ್ಟ್ರಾಧಿಪತಿಗಳ ಭಾಷಣವನ್ನು ಓದಿ ಹೇಳಿದ ತರುವಾಯ ಝಂಜೀಬಾರ ಲವಂಗಕ್ಕೆ ಬಹಿಷ್ಕಾರ ಹಾಕುವ ಮತ್ತು ಕಾಂಗ್ರೆಸ್ಸಿಗೆ ನೆರವಾಗುವ ಗೊತ್ತುವಳಿಗಳಾಗಿ ಜಯಜಯಕಾರದೊಡನೆ ಸಭೆಯ ಕಾರ್ಯ ಪೂರೈಸಿತು.

ಓರ್ವ ಸಭಿಕ.

## ಬಾಗಲಕೋಟೆ.

ಶ್ರೀಮನ್ನಿರಂಜನ ಹಾನಗಲ್ಲ ಕುಮಾರ ಮಹಾಸ್ವಾಮಿಗಳವರ ಪುಣ್ಯತಿಥಿಯು ಶ್ರೀ ಶಿವಾನಂದ ಜೀನ ಪ್ರೆಸ್ ಆಫೀಸಿನಲ್ಲಿ ಶ್ರೀಗಳವರ ದಿನಾಚರಣೆಯು ವರ್ಷ ಪದ್ಧತಿಯಂತೆ ನಡೆಸಲ್ಪಟ್ಟಿತು. ಶ್ರೀಗಳವರ ದೊಡ್ಡ ಫೋಟೋವನ್ನು ಸಿಂಹಾಸನದ ಮೇಲಿರಿಸಿ ಹೂಮಾಲೆಗಳಿಂದಲಂಕರಿಸಲ್ಪಟ್ಟು ಯಥಾ ಸಾಂಗವಾಗಿ ಪೂಜಾ ಮಂಗಳಾರತಿಯನ್ನು ಬಹು ಸಂಭ್ರಮದಿಂದ ನೆರವೇರಿಸಲ್ಪಟ್ಟಿತು. ಮೊದಲು ಶ್ರೀ ಬಸವೇಶ್ವರ ಸಂಘದ ವೀರಶೈವ ಸಂಸ್ಕೃತ ಪಾಠಶಾಲೆಯ ವಿದ್ಯಾರ್ಥಿಗಳಾದ ಶಿವಯ್ಯನವರು ರೋಣದ ಇವರು ಶ್ರೀಗಳವರ ಗುಣಕಥನವನ್ನು ಮಾಡಿದರು.

ಶ್ರೀ. ಜಂಗಿನ ಮುರಿಗೆಯ್ಯನವರು ಶ್ರೀ ಮಹಾಸ್ವಾಮಿಗಳು ವೀರಶೈವ ಸಮಾಜದ ಹಾಗು ದೇಶದ ಉನ್ನತಿಗೆ ಅವಶ್ಯವಾದ ಶಿವಯೋಗಮಂದಿರವನ್ನು ಸ್ಥಾಪಿಸಿದ್ದು ಈಗ ಅದರ ಅಂತರವ್ಯವಸ್ಥೆಯಲ್ಲಿರುವ ಕುಂದುಕೊರತೆಗಳನ್ನು ಈಗಿದ್ದ ಟ್ರಸ್ಟ ಕಮಿಟಿಯು ಚೆನ್ನಾಗಿ ವಿಚಾರಮಾಡಿ ತಮ್ಮ ಅಂತರ ಮತ್ತು ವೈಯಕ್ತಿಕ ಅಸಮಾಧಾನಗಳನ್ನು ಬಿಟ್ಟು ಸಂಸ್ಥೆಯ ಯಾವ ಕೆಲಸಕ್ಕೂ ಬಾಧೆ ಬರದಂತೆ ಒಮ್ಮನಸ್ಸಿನಿಂದ ನಡೆಯಿಸಿಕೊಂಡು ಹೋಗಬೇಕೆಂದೂ ಆ ರೀತಿ ತಮ್ಮಿಂದಾಗದಿದ್ದಲ್ಲಿ ಎಲ್ಲ ಟ್ರಸ್ಟಿಗಳು ಸುಮ್ಮನೆ ರಾಜಿನಾಮೆ ಕೊಟ್ಟು ತಾವು ವ್ಯಕ್ತಿಗತವಾಗಿ ತಮ್ಮಿಂದ ಶಕ್ಯವಿದ್ದಷ್ಟು ಮಂದಿರದ ಹಿತದ ಕಡೆಗೆ ಚೆನ್ನಾಗಿ ನೋಡಿಕೊಂಡು ಹೋಗಬೇಕೆಂದೂ ಇದೊಂದು ಮಾದರೀ ಸಂಸ್ಥೆಯಾಗುವಂತೆ ಮಾಡಲು ಪ್ರಯತ್ನಮಾಡಬೇಕೆಂದೂ ವಗೈರೆ ಹೇಳಿ ತಮ್ಮ ಭಾಷಣವನ್ನು ಮುಗಿಸಿದರು. ಎಲ್ಲರಿಗೂ ಫಲಾಶೀರ್ವಾದ ಕೊಟ್ಟಮೇಲೆ ಸಭೆಯ ಕಾರ್ಯವು ಮುಗಿಸಲ್ಪಟ್ಟಿತು.

ಶುದ್ಧಿಗಾರ.

# ವೀರಶೈವರ ಪುಣ್ಯ ಜ್ಯೋತಿಯ
## ಸಮಾರಂಭ, ಹಾನಗಲ್ಲ.

ಶ್ರೀಮನ್ನಿರಂಜನ ಕುಮಾರ ಮಹಾಸ್ವಾಮಿಗಳವರ ಮಠದಲ್ಲಿ ಶ್ರೀ ಶಿವಯೋಗಮಂದಿರ ಮಹಾ ಸಂಸ್ಥೆಯು ಅದಾವ ಕಾರಣಿಕ ಮಹಾ ಪುರುಷನ ಸಂದೇಶ ಸಂಕಲ್ಪದಿಂದಾದುದೋ ಯಾವ ನಿರಂಜನ ಪ್ರಭುವಿನ ಜ್ಞಾನಜ್ಯೋತಿಯಿಂದ ಬೆಳಗಿದುದೋ ಯಾವ ಯತಿ ಕುಲತಿಲಕನ ಔದಾರ್ಯದ ಹೊಲಬಿನಿಂದ ಗುರು ಜಂಗಮ ಸಿರಿಸೌಭಾಗ್ಯದ ಜನ್ಮಭೂಮಿಯಾದುದೋ ಯಾವ ಮಹಾನುಭಾವನ ನಿಶ್ಶೀಮ ಪ್ರೇಮಾದರ ಶಿಕ್ಷಣದ ಲವಲವಿಕೆಯಿಂದ ತಕ್ಕ ಆಹಾರವಿಹಾರಗಳಿಂದ ಕಟ್ಟುಕಟ್ಟಳೆಗಳಿಂದ ವಟುಕುಲ ಪೋಷಣೆಯ ಮಾತೃ ಸ್ಥಾನವೆನಿಸಿ ಭಕ್ತಿಜ್ಞಾನ ಕ್ರಿಯಾಸಾಧನ ಸಾಹಿತ್ಯ ಸಂಗ್ರಹದ ಸಜ್ಜವನೆಯಾದುದೋ ಯಾವ ತಪೋನಿಧಿಯ ಸಹಜ ಶಿವಾನುಭವದ ನೆರವಿನಿಂದ ಶರಣಗಣ ಮನೋಮಂದಿರವಾದುದೋ ಅಂಥ ಮಹಾ ಶಿವಯೋಗಿ ಶ್ರೀಮನ್ನಿರಂಜನ ಸದಾಶಿವ ಕುಮಾರ ಮಹಾ ಸ್ವಾಮಿಗಳವರ ಪುಣ್ಯ ತಿಥಿಯನ್ನು ಇಲ್ಲಿಯ ಭಕ್ತಮಾಹೇಶ್ವರರು ಒಕ್ಕಟ್ಟಿನಿಂದಲೂ ಒಳ್ಳೆಯ ಉತ್ಸಾಹದಿಂದಲೂ ಇದೇ ಮಾಘ ಬ|| ೭ ಸೋಮವಾರ ದಿವಸ ಬಹು ವಿಜೃಂಭಣೆಯಿಂದ ನೆರವೇರಿಸಿದರು.

ಬೆಳಗಿನ ೮ ಘಂಟೆಯಿಂದ ೧೧ ಘಂಟೆಯ ವರೆಗೆ ಸದರೀ ಮಠದ ಮಹಾ ಸ್ವಾಮಿಗಳವರ ಅನುಷ್ಠಾನ ತೀರಿದನಂತರ ಮಹಾ ಪಾದಪೂಜಾ ಪ್ರಾರಂಭವಾಯಿತು. ಇಷ್ಟರಲ್ಲಿಯೇ ಸ್ಥಳ ಪರಸ್ಥಳಗಳಿಂದ ಆಗಮಿಸಿದ್ದ ವೀರಶೈವ ಭಕ್ತ ಮಾಹೇಶ್ವರರೂ ಮತ್ತು ಹೆಣ್ಣುಮಕ್ಕಳೂ ಸಹ ಮಡಿಯಿಂದ ಬಂದು ಅನನ್ಯಭಕ್ತಿಯಿಂದ ಮಹಾಸ್ವಾಮಿಯ ಸ್ತೋತ್ರಮಾಡಿದರಲ್ಲದೆ ಮಹಾ ಪೂಜೆಯ ಆನಂದವನ್ನು ಹೊಂದಿದ ನಂತರ ೧೨ ಘಂಟೆಗೆ ಮಹಾ ಗಣಾರಾಧನೆಯು ಪ್ರಾರಂಭವಾಗಿ ಸಾಯಂಕಾಲ ೫ ಘಂಟೆಗೆ ಅನ್ನಸಂತರ್ಪಣೆಯ ಕಾರ್ಯವನ್ನು ಮುಕ್ತಾಯಗೊಳಿಸಿ ೫ ಘಂಟೆಯ ಮೇಲೆ ಸದರೀ ಮಠದ ಶ್ರೀಗಳವರ ಅಧ್ಯಕ್ಷತೆಯಲ್ಲಿ ಸಭೆಯು ಪ್ರಾರಂಭವಾಯಿತು. ಆರಂಭದಲ್ಲಿ ಹಾವೇರಿ ಮಠದ ಶ್ರೀ ಜಯದೇವ ಗವಾಯಿಗಳು ಶಿವಶರಣರ ವಚನಗಳನ್ನು ಸಂಗೀತದಲ್ಲಿ ಅತ್ಯುತ್ತಮವಾಗಿ ಜನರಂಜನವಾಗುವಂತೆ ಹಾಡಿದರು. ಆ ಮೇಲೆ ಶ್ರೀ ಹಾಲಯ್ಯ ಶಾಸ್ತ್ರಿಗಳು ಮಹಾತ್ಮರ ಚರಿತ್ರವನ್ನು ಅರ್ಧ ಘಂಟೆಯ ವರೆಗೆ ಒಳ್ಳೇ ಕಳಕಳಿಯಿಂದ ಆನಂದೋತ್ಸಾಹವಾಗುವಂತೆ ವ್ಯಾಖ್ಯಾನ ರೂಪದಿಂದ ತಿಳಿಸಿದರು.

ಅನಂತರ ಮುಲಗುಂದ ಹಿರೇಮಠದ ಶ್ರೀ ಕಲ್ಯಾಣ ಶಾಸ್ತ್ರಿಯವರು ಗುರು ಲಿಂಗ ಜಂಗಮದ ಮಹತ್ವದ ವಿಷಯಕ್ಕೆ ಕೀರ್ತನಮಾಡಿದರು. ಇಷ್ಟಾದ ಮೇಲೆ ರಾತ್ರಿ ೮ ಘಂಟೆಯಿಂದ ೯ ಘಂಟೆಯ ವರೆಗೆ ಅಧ್ಯಕ್ಷ ಮಹಾ ಸ್ವಾಮಿಗಳವರು ಸಮಸ್ತ ಭಕ್ತಮಾಹೇಶ್ವರರಿಗೂ ಸ್ತ್ರೀಯರಿಗೂ ಸಹ ತಿಳಿಯುವಂತೆ ಅಷ್ಟಾವರಣ ಮಹತ್ವವನ್ನು ಧಾರ್ಮಿಕ ದೃಷ್ಟಿಯಿಂದಲೂ ನೈತಿಕ ದೃಷ್ಟಿಯಿಂದಲೂ ಸಾಮಾಜಿಕ ದೃಷ್ಟಿಯಿಂದಲೂ ವಿವೇಚಿಸಿ ತಮ್ಮ ಪ್ರಸಾದ ವಾಣಿಯಿಂದ ಅಪ್ಪಣೆಕೊಡಿಸಿದರು.

ಆ ಬಳಿಕ ಹಾನಗಲ್ಲ ತಾಲೂಕು ಮೆ|| ಹಿರೇಮಠ ಮಾಮಲೇದಾರರವರ ಧರ್ಮಪತ್ನಿಯವರು ಸ್ತ್ರೀಯರ ಧರ್ಮ ನೀತಿ ಸಮಾಜ ಸೇವೆಯಲ್ಲಿ ಸ್ತ್ರೀಯರ ಕರ್ತವ್ಯದ ವಿಷಯಕ್ಕೆ ಸರ್ವರ ಮನಸ್ಸಿನ ಮೇಲೆ ಪರಿಣಾಮವಾಗುವಂತೆ ೨೦ ನಿಮಿಷಗಳ ವರೆಗೆ ಭಾಷಣಮಾಡಿದರು. ಈ ಮಹಾ ಕಾರ್ಯದಲ್ಲಿ ಶ್ರೀಯುತ ಮಹಾರಾಜಪೇಟೆ ವೀರಬಸಪ್ಪನವರು ತಮ್ಮ ಪತ್ನಿಪುತ್ರರೊಡಗೊಂಡು ತ್ರಿಕರ್ಣಪೂರ್ವಕ ಸೇವೆಮಾಡಿದುದಲ್ಲದೆ ತಮ್ಮ ಸ್ವಂತ ಖರ್ಚಿನಿಂದ ಅನ್ನಸಂತರ್ಪಣೆಯ ಕಾರ್ಯವನ್ನು ನೆರವೇರಿಸಿದ್ದಕ್ಕಾಗಿಯೂ ಸದರೀ ಗ್ರಾಮದ ಭಕ್ತಮಾಹೇಶ್ವರರೆಲ್ಲರೂ ಸಭೆಯ ಕಾರ್ಯವನ್ನು ಸುವ್ಯವಸ್ಥೆಯಿಂದ ನೆರವೇರಿಸಿದ್ದಕ್ಕಾಗಿಯೂ ಸರ್ವರಿಗೂ ಮಹಾ ತಪೋನಿಧಿಯಾದ ಶ್ರೀಗುರು ಕುಮಾರೇಶ್ವರನು ಸಕಲ ಸಂಪತ್ತನ್ನೂ ಚಿರಾಯುರಾರೋಗ್ಯವನ್ನೂ ದಯಪಾಲಿಸಲೆಂದು ಪ್ರಾರ್ಥಿಸುತ್ತೇನೆ.

ಓರ್ವ ಸಮಾಜ ಸೇವಕ.

---

# ಶ್ರೀ ಸಿದ್ಧಲಿಂಗೇಶ್ವರ ರಥೋತ್ಸವಾಹ್ವಾನ ಪತ್ರಿಕಾ.

ಶ್ರೀಮತ್ಸಚ್ಚಿದಾನಂದ ನಿತ್ಯಪರಿಪೂರ್ಣಾವಿರಳ
ಪರಂಜ್ಯೋತಿ ಪರಬ್ರಹ್ಮ ಪರಶಿವ ಲೀಲಾವತಾರ ಪ್ರಭುದೇವ
ಪರಂಪರಾಗತ ಶ್ರೀ ಸಿದ್ಧಗಂಗಾಮಹಾಕ್ಷೇತ್ರಾಧ್ಯಕ್ಷ
ಶ್ರೀಮನ್ನಿರಂಜನ ಉದ್ದಾನಸ್ವಾಮಿಭಿಃ

ಇದೇ ಶಾಲಿವಾಹನ ಶಕಗತಾಬ್ದಾಃ ೧೮೫೯ ಕ್ಕೆ ಸರಿಯಾದ ಶ್ರೀಮದೀಶ್ವರನಾಮ ಸಂವತ್ಸರದ ಮಾಘ ಬ|| ೧೪ ತಾ. ೧-೩-೩೮ ನೇ ಮಂಗಳವಾರ ರಥಪ್ರತಿಷ್ಠೆ ಮತ್ತು ರಥಾಂಗಹೋಮ ರಥೋತ್ಸವ. ತಾ. ೨-೩-೩೮ ನೇ ಬುಧವಾರ ಸಿಂಹವಾಹನ ಮತ್ತು ನವರಂಗಪಾಲಕಿ ಉತ್ಸವ. ಫಾಲ್ಗುಣ ಶುದ್ಧ ೧ ತಾ. ೩ ನೇ ಗುರುವಾರ ನವಿಲುವಾಹನ ಕಿಟ್ಟೆಹಳ್ಳಿ ಮ|| ರಾ|| ರುದ್ರಪ್ಪನವರ ಭಕ್ತಿ. ತಾ. ೪ ನೆಯ ಶುಕ್ರವಾರ ಬೆಳ್ಳಿ ಪಾಲಕಿ ಉತ್ಸವ. ತಾ. ೫ ನೇ ಶನಿವಾರ ಬಿಲ್ವ ವೃಕ್ಷವಾಹನ ಮತ್ತು ತುಮಕೂರು ಡಿಸ್ಟ್ರಿಕ್ಟ ಡೆಪ್ಯುಟಿ ಕಮಿಷನರ್ ಸಾಹೇಬರವರಾದ ಮ|| ರಾ|| ಶ್ರೀ|| ವಿ. ವೇದ ವ್ಯಾಸಾಚಾರ್ಯ, ಬಿ. ಎ. ಇವರ ಅಧ್ಯಕ್ಷತೆಯಲ್ಲಿ ದನಗಳ ಪ್ರದರ್ಶನವೂ

ಫಾಲ್ಗುಣ ಶುದ್ಧ ೪ ತಾ. ೬ ನೇ ಭಾನುವಾರ ಗಜವಾಹನವೂ ತಾ. ೭ ನೇ ಸೋಮವಾರ ತೆಪ್ಪೋತ್ಸವವೂ ತಾ. ೮ ನೇ ಮಂಗಳವಾರ ಪಂಚಬ್ರಹ್ಮೋತ್ಸವಗಳೂ ನಡೆಯುತ್ತವೆ.

ಅಗ್ಗಿ ಮಾಮೂಲಿನಂತೆ ಎತ್ತಿನ ಪರಿಷೆಯೂ ನಡೆಯುತ್ತದೆ.

ಆದುದರಿಂದ ಸರ್ವರೂ ಆ ಕಾಲಕ್ಕೆ ಬಂದು ಈ ಮಹತ್ಕಾರ್ಯವನ್ನು ನೆರವೇರಿಸಿ ನಮ್ಮ ಮನಸ್ಸಂತೋಷಪಡಿಸದೇ ಇರಲಾರಿರೆಂದು ನಂಬಿದ್ದೇವೆ.

ಶ್ರೀಮನ್ನಿರಂಜನ ಉದ್ದಾನಸ್ವಾಮಿಗಳು.

---

# ಶ್ರೀ ವಿದ್ಯಾರಣ್ಯ ಸಮಿತಿ ಬೆಳಗಾವ.

**ಶ್ರೀ ವಿದ್ಯಾರಣ್ಯ ಗ್ರಂಥಮಾಲಾ ಬೆಳಗಾವ.**

೧ ನೇ ಹೂವು ಚುರಮುರಿ ಶಾಕುಂತಲ ನಾಟಕವು
೨ ನೇ ಹೂವು ಪುನರ್ಜನ್ಮ ಎರಡೂ ಅರಳಿವೆ.
೩ ನೇ ಹೂವು "ತಾಯಿ" ಅಚ್ಚಿನಲ್ಲಿದೆ. ಡಿಸೆಂಬರ ತಿಂಗಳ ಕೊನೆಯಲ್ಲಿ ಅರಳುವದು.

ವಾ. ಚ. ಅ. ವೆ. ಸೇರಿ ೩-೦-೦ ರೂ. ಗಳು
ಸಂಪಾದಕರು— ವಿ. ರಾ. ನಗರ.

## ಶ್ರೀ ಶಿವಯೋಗಮಂದಿರದ ಯಾತ್ರಾ ಮಹೋತ್ಸವವು.

ಸಾರ ಸಜ್ಜನರ ಸಂಗ ಲೇಸು ಕಂಡಯ್ಯ?
ದುರ್ಜನರ ಸಂಗವದು ಭಂಗವಯ್ಯ?
ಸಂಗವೆರಡುಂಟು ಒಂದು ಬಿಡುವದು.
ಹಿಡಿ ಮಂಗಲಮೂರ್ತಿ ನಮ್ಮ ಕೂಡಲ ಸಂಗನ ಶರಣರ.

ಸಮಸ್ತ ವೀರಶೈವ ಬಾಂಧವರಿಗೆ ವಿನಯಪೂರ್ವಕ ತಿಳಿಸುವದೇನಂದರೆ:—

(೧)ಮಹಾಶಿವರಾತ್ರಿಯ ನಿಮಿತ್ತವಾಗಿ ಶ್ರೀಶೈಲ, ಗೋಕರ್ಣ ಕಾಶಿ, ಮೊದಲಾದ ಪುಣ್ಯಕ್ಷೇತ್ರಗಳಿಗೆ ಭಾವಿಕಜನರು ಭಕ್ತಿಯಿಂದ ಹೋಗುತ್ತಿರುವರಷ್ಟೆ? ಅದೇ ಪ್ರಕಾರವಾಗಿ ಶ್ರೀ ಶಿವಯೋಗಮಂದಿರ ಪುಣ್ಯಕ್ಷೇತ್ರ ಯಾತ್ರೆಗಾದರೂ ಜನರು ಬರುತ್ತಾರೆ. ಇದು ವೀರಶೈವ ಧರ್ಮತತ್ವಕ್ಕನುಸರಿಸಿ ನಿಜಮೋಕ್ಷವನ್ನೀಯುವ ಸಾಧನಗಳುಳ್ಳದ್ದಾಗಿಯೂ, ಅಖಿಲ ವೀರಶೈವ ಸಮಾಜಕ್ಕೆ ಆದರ್ಶಭೂತವಾಗಿಯೂ, ಇರುವ ಸಂಸ್ಥೆಯಾಗಿದೆ.

(೨) ಶ್ರೀ ಶಿವಯೋಗಮಂದಿರ ಸ್ಥಾನವು ದಕ್ಷಿಣ ಕಾಶಿಯೆಂದು ಪ್ರಸಿದ್ಧಿಯನ್ನೈದಿದ ಮಹಾಕೂಟ ಕ್ಷೇತ್ರದ ಸಮೀಪಸ್ಥವಾಗಿ ಮಲಾಪಹಾರಿ ನದಿಯ ತೀರದಲ್ಲಿರುತ್ತದೆ. ಇದರ ಸಮೀಪದಲ್ಲಿ ಪುರಾಣ ಪ್ರಸಿದ್ಧವಾದ ಶ್ರೀ ಬನಶಂಕರಿ ದೇವಸ್ಥಾನವಿದ್ದು ಪಟ್ಟದಕಲ್ಲು, ಐಹೊಳ್ಳಿ, ಮೊದಲಾದ ಐತಿಹಾಸಿಕ ಪ್ರಸಿದ್ಧ ಪುಣ್ಯಸ್ಥಳಗಳೂ ಸಹ ಇರುತ್ತವೆ. ಕಾರಣ ಈ ಯಾತ್ರೆಗೆ (ಮಹಾಶಿವರಾತ್ರಿಗೆ) ಬರುವದರಿಂದ ಕ್ಷೇತ್ರ ದರ್ಶನಲಾಭವೂ, ಮಲಾಪಹಾರಿ ನದಿಯಲ್ಲಿರುವ ಶ್ರೀ ಯಕ್ಷೇಶ್ವರ ಲಿಂಗದಡಿಯ ಸ್ನಾನಲಾಭವೂ, ಮಂದಿರದಲ್ಲಿದ್ದಂಥ, ಇತರ ಸ್ಥಳಗಳಿಂದ ಆಗಮಿಸಿದಂಥ ಶಿವಯೋಗಿಗಳ ಮತ್ತು ಮಹಾಸ್ವಾಮಿಗಳ ದರ್ಶನಾಶೀರ್ವಾದ ಪ್ರಾಪ್ತಿಯೂ ಆಗುವದು.

(೩) ಈ ಯಾತ್ರಾ ಮಹೋತ್ಸವದ ಸಲುವಾಗಿ ಅನೇಕ ಸ್ಥಳಗಳಿಂದ ಶಾಸ್ತ್ರಿಗಳು, ಕೀರ್ತನಕಾರರು, ಮತ್ತು ಪ್ರಸಿದ್ಧ ವ್ಯಾಖ್ಯಾನಕಾರರು ಬರುತ್ತಾರೆ. ಗಾಯನ, ಕೀರ್ತನ ಪ್ರವಚನ, ವ್ಯಾಖ್ಯಾನ, ಧಾರ್ಮಿಕಸಭೆ ಮತ್ತು ಮಹಿಳಾ ಪರಿಷತ್ತು ಸಹ ಜರಗುವ ವ್ಯವಸ್ಥೆಯು ಮಾಡಲ್ಪಟ್ಟಿದೆ. ಈ ಸಾರೆ ಕೀರ್ತನ ಕಲಾವಿಚಕ್ಷಣ, ವೀರೇಶ ಶಾಸ್ತ್ರಿಗಳು, ಕೀರ್ತನ ಕೇಸರಿ ಬಿ. ಶಿವಮೂರ್ತಿಶಾಸ್ತ್ರಿಗಳು ತುಮಕೂರ, ಮೊದಲಾದ ಸುಪ್ರಸಿದ್ಧ ಕೀರ್ತನಕಾರರು ಬರತಕ್ಕವರಿದ್ದಾರೆ. ಇದಲ್ಲದೆ ದನಗಳ ಪ್ರದರ್ಶನವೂ, ಲಾವಣಿ ಹಾಡುವವರ ಮೇಲಾಟವೂ, ಹಲಿಗಿಯ ಮಜಲೂ ಮತ್ತು ರಥೋತ್ಸವದ ಸಮಾರಂಭಗಳೂ ಜರಗುತ್ತವೆ. ಈ ಯಾವತ್ತು ಸುಸಂಧಿಯ ಲಾಭವನ್ನು ಸರ್ವರೂ ಹೊಂದಬೇಕು. ಈ ಸಂಗತಿಯನ್ನು ತಮ್ಮ ಇಷ್ಟಮಿತ್ರರಿಂಗೂ ಸಹ ತಿಳಿಸಿ ಪ್ರಸಿದ್ಧ ಮಾಡಬೇಕು.

—(ಕಾರ್ಯಕ್ರಮಗಳು.)—

(೧) ಮಾಘ ಬ. ೧೩. ಸೋಮವಾರ ತಾ|| ೨೮-೨-೩೮ ಮಹಾಶಿವರಾತ್ರಿ ಸಾಯಂಕಾಲದಲ್ಲಿ ಸಮಸ್ತ ಭಕ್ತಮಹೇಶ್ವರರ ಇಷ್ಟಲಿಂಗ ಪೂಜಾದಿ ಕಾರ್ಯವು ಯಥಾಶಾಸ್ತ್ರೋಕ್ತವಾಗಿ ಜರಗುವದು. ಬಳಿಕ ಶಿವಭಜನಾ ಶಿವಕೀರ್ತನಾದಿಗಳು ನಡೆಯುವವು.

(೨) ಮಾಘ ಬ. ೧೪ ಮಂಗಳವಾರ ತಾ|| ೧-೩-೩೮ ದಿನ ಪ್ರಾತಃಕಾಲ ಎಂಟು ಘಂಟೆಗೆ ಶ್ರೀ ಶಿವಯೋಗ ಸಾಧಕರಿಂದ ಪ್ರವಚನ. ಮಧ್ಯಾಹ್ನ ೩ ಘಂಟೆಗೆ ವಕ್ತೃತ್ವಕಲೆಯುಳ್ಳ ಶ್ರೀ ಶಿವಯೋಗ ಸಾಧಕರ ಮತ್ತ ಇತರ ವಿದ್ವಾಂಸರ ವ್ಯಾಖ್ಯಾನಗಳಾಗಿ ಬಳಿಕ ಕೀರ್ತನಗಳು ಜರಗುವವು. ರಾತ್ರಿ ಲಾವಣಿ ಪದಗಳನ್ನು ಹಾಡಿಸುವ ವ್ಯವಸ್ಥೆಯು ಸಹ ಮಾಡಲ್ಪಟ್ಟಿದೆ.

(೩) ಮಾಘ ಬ. ೩೦ ಬುಧವಾರ ತಾ|| ೨-೩-೩೮ ದಿವಸ ಮುಂಜಾನೆ ೮ ಘಂಟೆಯಿಂದ ೧೦ರ ವರೆಗೆ ಶ್ರೀ ಶಿವಯೋಗಿಗಳವರಿಂದ ಶಿವಾನುಭವವು ಜರುಗಿ ಮಧ್ಯಾಹ್ನ ೩ ಘಂಟೆಗೆ ವ್ಯಾಖ್ಯಾನಗಳೂ, ಮಹಿಳಾ ಪರಿಷತ್ತು, ರಥೋತ್ಸವವು, ದನಗಳ ಪ್ರದರ್ಶನ ವಗೈರೆ ಕಾರ್ಯಕ್ರಮಗಳು ನಡೆಯುವವು. ವ್ಯವಸ್ಥಾಪಕ.

## ಪಾರ್ಲಮೆಂಟರಿ ಬೋರ್ಡ.

ತಾ. ೨೨-೨-೩೮ ನೆಯ ದಿನ ವಿಠ್ಠಲ ನಗರದಲ್ಲಿ ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಕೂಡಿ ಮೊದಲಿನ ಪಾರ್ಲಮೆಂಟರಿ ಬೋರ್ಡನ್ನೇ ಪುನಃ ಗೊತ್ತುಮಾಡಿತು. ಸರದಾರ ವಲ್ಲಭ ಭಾಯಿ ಪಟೇಲರು ಈ ಬೋರ್ಡಿನ ಅಧ್ಯಕ್ಷರು. ಶ್ರೀ. ರಾಜೇಂದ್ರ ಪ್ರಸಾದರು ಮತ್ತು ಮೌ. ಅಬ್ದುಲ್ ಕಲಂ ಅಜಾದರು ಸಭಾಸದರು.

ಪಂಜಾಬ ಪ್ರಾಂತಿಕ ಕಾಂಗ್ರೆಸ್ ಪಕ್ಷದಲ್ಲುಂಟಾಗಿರುವ ಅನೈಕಮತ್ಯವನ್ನು ನಿವಾರಣೆಮಾಡಲು ಮೌ. ಅಜಾದರನ್ನ ಪಂಜಾಬಕ್ಕೆ ಕಳುಹಿಸಬೇಕೆಂದೂ ಮೈಸೂರು ಕಾಂಗ್ರೆಸ್ ಕಮಿಟಿಯು ಮೊದಲಿನಂತೆ ಪಾರ್ಲಮೆಂಟರಿ ಕಾರ್ಯಕ್ರಮ ನಡೆಯಿಸಬೇಕೆಂದೂ ನಿರ್ಣಯವಾಯಿತು.



—ಮುಂದಿನ ವರುಷ ಕಾಂಗ್ರೆಸ್ಸು ಮಹಾಕೋಶಲ (ಹಿಂದಿ ಮಧ್ಯಪ್ರಾಂತ) ಪ್ರಾಂತದಲ್ಲಿ ಕೂಡುವುದು.

# ಆಶ್ರಮಗಳ ಉದ್ದೇಶ.

ಗದಗಿನ ಶ್ರೀ ಹಾಲಕೆರೆ ಅನ್ನದಾನೀಶ್ವರ ಆನಂದಾಶ್ರಮದ ತ್ರೈವಾರ್ಷಿಕ ವರ್ಧಂತಿಯ ಮಹಾ ಸಮಾರಂಭವು ಕಳೆದ ತಾ. ೪-೨-೩೮ ನೆಯದಿವಸ ಬೆಂಗಳೂರು ಶ್ರೀ. ಸರ್ಪಭೂಷಣ ಶಿವಯೋಗೀಶ್ವರ ಮಠದ ಅಧಿಪತಿಗಳಾದ ಶ್ರೀಮನ್ನಿರಂಜನ್ನ ಶ್ರೀ ಮಹಾದೇವ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಜರುಗಿತು. ಆಗ ಮಹಾ ಸ್ವಾಮಿಗಳವರು ತಮ್ಮ ಭಾಷಣದಲ್ಲಿ ಈ ಪ್ರಕಾರ ಹೇಳಿದರು—



ಶ್ರೀ ಮಹಾದೇವಸ್ವಾಮಿಗಳು.

ಮಹಾಸ್ವಾಮಿಗಳು "ಆಶ್ರಮಗಳ ಉದ್ದೇಶ" ಎಂಬ ವಿಷಯದ ಮೇಲೆ ತಮ್ಮ ಪ್ರಸಾದ ವಾಣಿ ಸುಲಭ ಶೈಲಿಯಲ್ಲಿ ಸರ್ವರಿಗೂ ಮನನವಾಗುವಂತೆ ಹೀಗೆ ತಿಳಿಸಿ ಹೇಳಿದರು.

"ಮೊದಲನೆಯದಾಗಿ ಆಶ್ರಮವೆಂದರೆ ಮನುಷ್ಯ ಭಾವವನ್ನು ಶಿವಭಾವವನ್ನಾಗಿ ಅವರ ಮತತತ್ವಕ್ಕೆ ಅನುಸರಿಸಿ ಬದಲಾಯಿಸುವ ಪರಿಶ್ರಮವುಳ್ಳವುಗಳಿಗೆ ಆಶ್ರಮವೆಂದು ಹೇಳುತ್ತಾರೆ. ಬ್ರಾಹ್ಮಣೀಯ, ಮಹಮ್ಮದೀಯ, ಕ್ರಿಸ್ತಿಯ ಇತ್ಯಾದಿ ಮತಗಳಲ್ಲಿ ಆಶ್ರಮಗಳಿರುವಂತೆ ನಮ್ಮ ಮತದಲ್ಲಿಯು ಕೂಡ ಆಶ್ರಮಗಳು ಮಠಗಳು ಇವೆ. ಬಾಕಿ ಮತಗಳ ಆಶ್ರಮಗಳಂತೆ ಮಧ್ಯಕಾಲದಲ್ಲಿ ನಮ್ಮ ವೀರಶೈವ ಆಶ್ರಮಗಳು ಸ್ಥಾಪಿಸಲ್ಪಟ್ಟಿಲ್ಲ. ಈ ಮತದ ಆಶ್ರಮಗಳು ವೀರಶೈವ ಮತವು ಉತ್ಪತ್ತಿಯಾದಾಗಲೇ ಸೃಜಿಸಲ್ಪಟ್ಟವು. ಮಾನವ ಆಯುಷ್ಯವನ್ನು ಸುಖವಾಗಿ ಜೀವನ ರಥದಲ್ಲಿ ಸಾಗಿಸುವುದಕ್ಕಾಗಿ ನಾಲ್ಕು ಭಾಗದ ಆಶ್ರಮಗಳಿವೆಯೆಂದು ಆರ್ಯರ ಇತಿಹಾಸ ಗ್ರಂಥಗಳಿಂದಲೂ ಬುದ್ಧನ ಗ್ರಂಥಗಳಿಂದಲೂ ವೀರಶೈವ ಗ್ರಂಥಗಳಿಂದಲೂ ಗೊತ್ತಾಗುತ್ತದೆ. ನಾಲ್ಕು ಆಶ್ರಮಗಳಾದ ವಾನಪ್ರಸ್ತಾಶ್ರಮ, ಗೃಹಸ್ಥಾಶ್ರಮ, ಬ್ರಹ್ಮಚರ್ಯಾಶ್ರಮ ಸನ್ಯಾಸಾಶ್ರಮಗಳಲ್ಲಿ ಲೌಕಿಕಾರ್ಥದ ಆಯುಷ್ಯ ಪಾರಮಾರ್ಥಿಕ ಆಯುಷ್ಯಗಳು ಒಳಗೊಂಡಿದ್ದರೂ ಕೂಡ ಅವರ ಮತತತ್ವಕ್ಕನುಸರಿಸಿ ಮನಃಪೂರ್ವಕವಾಗಿ ನೀತಿ ಸದಾಚಾರ ಶೀಲನೆಯಿಂದ ನಡೆದರೆ ಮುಕ್ತಿಯ ಸ್ಥಾನವು ಸಿಕ್ಕುವದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲವು. ಮಾನವ ಜೀವನ ರಥಕ್ಕೆ ಬೇಕಾಗುವ ಉಪಕರಣಗಳಾದ ವಿದ್ಯೆ ಬುದ್ಧಿ, ಜ್ಞಾನ, ನೀತಿ, ದಯೆ, ಧರ್ಮ ಶಾಂತಿ ಸಮತಾ ಭಾವ ಲಿಂಗಾಂಗ ಸಾಮರಸ್ಯ ಇತ್ಯಾದಿ ನೈತಿಕ ವಿಷಯಗಳನ್ನು ಗಳಿಸಬೇಕಾದರೆ ಆಶ್ರಮ ಮಠಗಳೇ ಹೊರತು ಸಿಕ್ಕಿದ್ದ ಕಡೆ ಸಿಕ್ಕುವ ಸಾಮುಗ್ರಿಗಳಲ್ಲ. ಹೇಗೆ ಬಂಗಾರದ ಅಂಗಡಿಯಲ್ಲಿ ಬಂಗಾರವೂ ಕಬ್ಬಿಣದ ಅಂಗಡಿಯಲ್ಲಿ ಕಬ್ಬಿಣವೂ ಜವಳಿ ಅಂಗಡಿಯಲ್ಲಿ ಜವಳಿಯೂ ಸಿಕ್ಕುವ ಹಾಗೆ ಧಾರ್ಮಿಕ ನೈತಿಕ, ತಾತ್ವಿಕ ಇತ್ಯಾದಿ ವಿಷಯ ವಸ್ತುಗಳು ಸಿಕ್ಕಬೇಕಾದರೆ ಆಶ್ರಮ ಮಠಗಳು ಇರುತ್ತವೆ. ಬಂಗಾರದಂತೆ, ಜವಳಿಯಂತೆ, ಅರಿವೆಯಂತೆ, ದುಡ್ಡಿಗೆ ಸಿಕ್ಕುವ ಬೆಲೆಯುಳ್ಳ ವಸ್ತುಗಳಲ್ಲ. ಮಠಗಳಲ್ಲಿ ದೊರಕುವಂಥ ನೈತಿಕ ವಿಷಯ ವಸ್ತುಗಳು ಬೆಲೆಯಿಲ್ಲದವು. ಜಗತ್ತಿನ ಮಾನ್ಯ ವಸ್ತುಗಳು ಅಂಗಡಿಗಳಲ್ಲಿ ಸಿಕ್ಕುವ ವಸ್ತುಗಳು. ಅಲ್ಪ ಕಾಲದ ಸೌಂದರ್ಯದ ವಸ್ತುಗಳು. ಮಠಗಳಲ್ಲಿ ದೊರೆಯುವಂಥ ನೈತಿಕ ವಿಷಯ ವಸ್ತುಗಳು ಚಿರಕಾಲಾತ್ಮಕ ಹೃದಯದಲ್ಲಿ ಇದ್ದು ಬೆಳಗುವಂತಹ ವಸ್ತುಗಳು.

ಅದಕ್ಕೋಸ್ಕರವೇ ಭಗವಾನ್ ಬಸವಣ್ಣನವರು ಕಲ್ಯಾಣ ಪಟ್ಟಣದಲ್ಲಿ ಶಿವಾನುಭವ ಮಂಟಪಗಳನ್ನು ಸ್ಥಾಪಿಸಿ ಅದರ ಮೂಲಕ ಅಲ್ಲಲ್ಲಿ ಮಠವಿಹಾರಗಳನ್ನು ಸ್ಥಾಪಿಸಿ ಮತತತ್ವಗಳನ್ನು ಎಲ್ಲಾ ಕಡೆಗೆ ಹರಿಸಿ ಚಿರಕಾಲ ಇರುವಂತೆ ಮಾಡಿದರು. ಹಿಂದಿನ ಕಾಲದಲ್ಲಿ ಈ ಮತದ ಆಶ್ರಮ ಮಠಗಳು ಎಷ್ಟು ಉಚ್ಚ ಸ್ಥಿತಿಯಲ್ಲಿದ್ದು ಮೆರೆಯುತ್ತಾ ಇದ್ದವೋ ಅಷ್ಟು ನೀಚ ಸ್ಥಿತಿಯಲ್ಲಿ ಈಗ ಇರುವದಕ್ಕೆ ಹತ್ತಿವೆ. ಆದ್ದರಿಂದ ಸಮಾಜ ಬಾಂಧವರು ಇತ್ತ ಕಡೆಗೆ ಹೆಚ್ಚು ಗಮನಕೊಡಬೇಕಾಗಿದೆ. ವೀರಶೈವ ಮಾನವನಿಗೆ ಮನೆ ವಾಸಕ್ಕಿಂತಲೂ ಮಠವಾಸವೇ ಅತಿ ಶ್ರೇಷ್ಠ ಸ್ಥಾನವೆಂದು ಪೂರ್ವಕಾಲದ ಶಿವಶರಣರ ಜೀವನದ ಮಾರ್ಗದಿಂದ ಗೊತ್ತಾಗುತ್ತದೆ. ಹಿಂದಿನ ಮಹನೀಯರು ಆಶ್ರಮ ಮಠಗಳ ಸಹಾಯದಿಂದಲೇ ತಾತ್ವಿಕ, ಧಾರ್ಮಿಕ, ವಿದ್ಯಾ ಜ್ಞಾನ ಇತ್ಯಾದಿ ವಿಷಯಗಳನ್ನು ಗಳಿಸಿ ನೀತಿ ಪುರುಷರಾಗಿಯೂ ಜ್ಞಾನಿಗಳೂ ಪಂಡಿತರೂ ಆಗಿ ಲೋಕಕಲ್ಯಾಣವನ್ನು ಏಕನಿಷ್ಠೆಯಿಂದ ಮಾಡುತ್ತಿದ್ದರು. ಆದುದರಿಂದ ಇಲ್ಲಿ ನೆರೆದಿರುವ ಸ್ತ್ರೀಪುರುಷರೂ ಕೂಡ ಇಂಥಾ ಆಶ್ರಮಗಳಿಗೆ ಆಗಾಗ್ಗೆ ಬಂದು ಜನನ ಮರಣ ಇವುಗಳ ನಡುವೆ ಇರುವ ಆಯುಷ್ಯ ಕಾಲವನ್ನು ಯಾವ ರೀತಿಯಲ್ಲಿ ಸುಖದಿಂದ ಸಾಗಿಸಬೇಕು. ಎಂಬ ಮಾರ್ಗವನ್ನು ಸರ್ವರಿಗೂ ಚಿರಕಾಲ ಮನದಟ್ಟುವಾಗುವಂತೆ ತಮ್ಮ ದಿವ್ಯ ವಾಣಿಯಿಂದ ಹೇಳಿ ತಮ್ಮ ಮಧುರ ಭಾಷಣವನ್ನು ಸಮಾಪ್ತಿಮಾಡಿದರು."

ತರುವಾಯ ಪಂಡಿತ ನಾಗಭೂಷಣ ಶಾಸ್ತ್ರಿಗಳವರು ಮೊದಲನೇ ದಿವಸ ಮಹಾಸ್ವಾಮಿಗಳು ಮಾಡಿದ "ದಿವ್ಯ ದರ್ಶನ" ಎಂಬ ವಿಷಯವನ್ನು ಸಭಿಕರ ಮುಂದೆ ಹಿಮಾಲಯದಲ್ಲಿ ಹುಟ್ಟಿದ ಗಂಗಾ ನದಿಯ ಶಾಂತ ಪ್ರವಾಹದಂತೆ ತಮ್ಮೆಲ್ಲರ ಮುಂದೆ ಸ್ಪಷ್ಟ ಗೋಚರವಾಗುವಂತೆ ಹರಿಸಿದ್ದಾರೆ. ಎರಡನೇ ದಿವಸ "ವಚನ ಸಾಹಿತ್ಯ" ಎಂಬ ವಿಷಯವನ್ನು ನಮ್ಮೆಲ್ಲರ ಮುಂದೆ ಸಕ್ಕರೆಯ ಹಿಮಾಲಯ ಪರ್ವತವನ್ನು ಸ್ಥಾಪಿಸಿದ್ದಾರೆ. ಮೂರನೇ ದಿವಸ ಇವೆರಡರ ಮಿಶ್ರಣದ ಸವಿಯನ್ನು ಆಶ್ರಮಗಳ ಉದ್ದೇಶ ವಿಷಯಕ್ಕೆ ಅನುಸರಿಸಿ ಎಲ್ಲರಿಗೂ ಅದರ ಮಿಶ್ರಣದ ಸವಿ ಪಾನವನ್ನು ನಮ್ಮ ಮುಂದೆ ಇಟ್ಟಿದ್ದಾರೆ. ಅದನ್ನು ಸೇವಿಸುವುದು ನಮ್ಮ ಕರ್ತವ್ಯವಾಗಿದೆ. ನಾವು ಮಿಶ್ರಣ ಪಾನವನ್ನು ಒಂದುವೇಳೆ ಸೇವಿಸಬಹುದು. ಆದರೆ ಅದರ ಮಿಶ್ರಣ ನೀತಿ ಮಾರ್ಗವನ್ನು ಕಲಿಯುವುದು ನಮ್ಮೆಲ್ಲರ ಪ್ರಥಮ ಕರ್ತವ್ಯವಾಗಿದೆ. ಇವರು ಕಾಶಿಯಲ್ಲಿ ೧೦-೧೨ ವರುಷಗಳ ವರೆಗೆ ಇದ್ದು ತುಂಬಾ ಜ್ಞಾನಿಗಳಾಗಿದ್ದಾರೆ. ಇವರು ನಮ್ಮ ಮತ ಗ್ರಂಥಗಳನ್ನು ಓದುವುದರಲ್ಲಿ ಆಶಕ್ತಿಯುಳ್ಳವರಾಗಿದ್ದಾರೆ. ಇವರು ಸಮಾಜೋದ್ಧಾರವೇ ಆತ್ಮೋದ್ಧಾರ ಎಂದು ತಿಳಿದು ತಮ್ಮ ಆಯುಃಷ್ಯವನ್ನು ಈ ಕಾರ್ಯಕ್ಕೆ ಸವಿಸುತ್ತಲಿದ್ದಾರೆ. ಇವರು ಬೆಂಗಳೂರು ಪ್ರಾಂತದಲ್ಲಿ ಶ್ರಮಪಟ್ಟು ನಮ್ಮ ಸಮಾಜವನ್ನು ಬೆಳೆಯಿಸಿ ಉದ್ಧಾರಮಾಡಿರುವದನ್ನು ನೋಡಿದರೆ ಬಸವಣ್ಣನವರ ಗೋಚರವೇ ಇವರ ಗೋಚರವಾಗಿದೆಯೆಂದು ಹೇಳಬಹುದು. ಎಂದು ಹೇಳಿ ಸ್ವಾಮಿಗಳವರಿಗೆ ಆಭಾರವಂದನೆಗಳನ್ನು ಸಭೆಯ ವತಿಯಿಂದ ಅರ್ಪಿಸಿದರು. ಮರುದಿವಸ ಈ ಸ್ವಾಮಿಗಳವರ ಪರಮ ಶಿಷ್ಯರಾದ ಪ್ರೊ. ಬಸವರಾಜರು ತಮ್ಮ ಶಕ್ತಿ ಪ್ರದರ್ಶನಗಳನ್ನು ಮಾಡಿತೋರಿಸಲು ಆಶ್ರಮದ ಪೂಜ್ಯಪಾದರು ಗದಗಿನ ಪ್ರಸಿದ್ಧ ವರ್ತಕರಾದ ಶ್ರೀ ಬಳ್ಳಾರಿ ಬಸವಪ್ಪನವರು ಪಾರಿತೋಷಕವನ್ನು ಹಂಚಿದರು.

ಓರ್ವ ವೀರಶೈವಾಭಿಮಾನಿ.

## ಕಮಲಾಪುರ.

ಗುಲಬರ್ಗಾ ಜಿಲ್ಲಾ ಕಮಲಾಪುರದಲ್ಲಿ ತಾರೀಖು ೧೯-೪-೪೭ ನೆಯ ದಿವಸ ಶಂತಿ ಮಠದಲ್ಲಿ ಸಾಯಂಕಾಲ ಪ್ರಚಂಡ ಸಭೆ ಕೂಡಿತ್ತು. ಸಭೆಯಲ್ಲಿ ಒಂದು ಸಾವಿರದ ವರೆಗೆ ಜನರು ಕೂಡಿದ್ದರು. ಗುಲಬರ್ಗಾದ ಪ್ರಸಿದ್ಧ ವಕೀಲ ಶ್ರೀ. ಹಣಮಂತರಾವ ಹಾಗರಗಿಕರ್ ಇವರು ಅಧ್ಯಕ್ಷರಾಗಿದ್ದರು. ಶ್ರೀ. ಮಲ್ಲಪ್ಪ ಇಟಗಿ ಶ್ರೀ. ರಾಮಸ್ವಾಮಿ, ಶ್ರೀ ಶರಣಗೌಡರು ಇವರ ಭಾಷಣಗಳಾದಮೇಲೆ ಅಧ್ಯಕ್ಷರು ವೀರಶೈವ ಸಮಾಜದ ಈಗಿನ ಸ್ಥಿತಿ, ವಿದ್ಯಾ ಪ್ರಸಾರ ಶ್ರೀ ಬಸವಣ್ಣನವರ ಉದಾರ ತತ್ವ, ವೀರಶೈವ ಶುದ್ಧಿ ಮತ್ತು ಸಂಘಟನೆ, ಈಗಿನ ಗುರುವರ್ಗದವರು ಮಾಡುತ್ತಿರುವ ನಿಂದ್ಯ ಕೃತ್ಯಗಳ ನಿಷೇಧ ಮೊದಲಾದ ವಿಷಯಗಳನ್ನು ಬಹು ಪರಿಣಾಮಕಾರಿಯಾಗಿ ಹೇಳಿದರು.

ತಾರೀಖು ೧೦ ಮತ್ತು ೧೧-೫-೪೭ ನೆಯ ದಿನ ಶಂತಿ ಮಠದಲ್ಲಿ ಮಠಾಧಿಕಾರಿಗಳಾದ ಶ್ರೀ. ಸಿದ್ಧಲಿಂಗ ಮಹಾ ಸ್ವಾಮಿಗಳ ಅಧ್ಯಕ್ಷತೆಯಲ್ಲಿ ದೊಡ್ಡ ಸಭೆ ಕೂಡಿತ್ತು. ಮೈದರಗಿ ಪಂಡಿತ ಹಿರೇಮಠಾಧ್ಯಕ್ಷರು ವೀರಶೈವ ಶುದ್ಧಿ ಮತ್ತು ಸಂಘಟನೆ ವಿಷಯಕ್ಕೂ ಮೇದಾರ ಕೇತಯ್ಯನವರ ವಿಷಯಕ್ಕೂ ಮಹತ್ವದ ಭಾಷಣ ಮಾಡಿದರು. ಹೀಗೆ ಇಲ್ಲಿಯ ತರುಣಸಂಘದಿಂದ ಸಮಾಜ ಸೇವೆಯ ಕಾರ್ಯ ಆಗುತ್ತಿರುವದನ್ನೂ ದಿನಸಿ ಗ್ರಾಮಕ್ಕೆ ಈ ಸಂಘದವರು ಹೋಗಿ ಅಹಿಂಸಾ ತತ್ವವು ಆಚರಣೆಯಲ್ಲಿ ಬರುವಂತೆ ಮಾಡಿರುವದನ್ನೂ ನೋಡಿ ಶ್ರೀಮತಿ ರತ್ನಾಬಾಯಿ ಬೀದರಕರ ಇವರು ಸಂಘವನ್ನು ಅಭಿನಂದಿಸಿ ಒಂದು ಪತ್ರ ಬರೆದಿದ್ದಾರೆ. ಇದಕ್ಕಾಗಿ ಸಂಘವು ಅವರಿಗೆ ಕೃತಜ್ಞವಾಗಿದೆ. ನಮ್ಮ ಸಮಾಜದ ಮಹಿಳೆಯರೂ ಹೀಗೆ ಮುಂದರಿದು ಸಮಾಜ ಕಾರ್ಯದ ಕಡೆಗೆ ಲಕ್ಷಿಸಬೇಕಾಗಿ ಕೋರಿಕೆ.

ಎಸ್ ಜಿ. ಬಮ್ಮಣ.<br>
ಕಮಲಾಪುರ ಸೆಕ್ರೆಟರಿ<br>
೧೫-೫-೪೭. ವೀರಶೈವ ತರುಣ ಸಂಘ.

## ಜಾಹೀರ ನೋಟೀಸ.

### ಶ್ರೀ ಸೀತಾರಾಮ ಆಯುರ್ವೇದಿಕ ಸ್ಕಾಲರಸಿಪ್

### ಬ್ರಾಹ್ಮಣರಿಗೆ ಮಾತ್ರ.

೧೯೪೮ ನೇ ಇಸ್ವಿ ಜೂನ ತಿಂಗಳ ೧ ನೆಯ ತಾರೀಖಿನಿಂದ ಒಬ್ಬ ಬ್ರಾಹ್ಮಣ ವಿದ್ಯಾರ್ಥಿಗೆ ಪ್ರತಿ ತಿಂಗಳು ೮ ರೂಪಾಯಿಗಳಂತೆ ೨ ವರುಷಗಳ ವರೆಗೆ ಕೊಡುವುದು ಠರಾಯಿಸಿರುತ್ತದೆ. ಅದನ್ನು ಪಡೆಯುವ ಅಪೇಕ್ಷೆಯುಳ್ಳವರು ಕೆಳಗಿನ ವಿಳಾಸಕ್ಕೆ ಬರೆದು ಅರ್ಜಿಯನ್ನು ೧೯೪೮ ಇಸ್ವಿ ಮೇ ತಿಂಗಳ ೮ ನೇ ತಾರೀಖಿನೊಳಗಾಗಿ ನಮಗೆ ಮುಟ್ಟುವಂತೆ ಕಳುಹಿಸಿಕೊಡತಕ್ಕದ್ದು. ಹಿಂದಿನಿಂದ ಬಂದ ಅರ್ಜಿಗಳನ್ನು ವಿಚಾರಮಾಡಲಾಗದು. ಸ್ಕಾಲರ್‌ಸಿಪ್ಪು ಕೇವಲ ವಿಜಾಪುರ, ಧಾರವಾಡ, ಕಾರವಾರ ಮತ್ತು ಬೆಳಗಾಂವ ಈ ನಾಲ್ಕು ಜಿಲ್ಲೆಗಳ ಉಮೇದ್ವಾರರಿಗಷ್ಟೇ ಸಿಗುವದು.

ಪಿ. ಎಸ್. ಕುಲಕರ್ಣಿ.<br>
ಪೋಸ್ಟಲ್ ಡಿಪಾರ್ಟಮೆಂಟ<br>
ಗುಳೇದಗುಡ್ಡ.<br>
ಜಿ. ವಿಜಾಪುರ

## ಆದರ್ಶಪ್ರಾಯವಾದ ಲಿಂಗದೀಕ್ಷೆ.

### ಮತ್ತು

### ವಿವಾಹ ಸಮಾರಂಭ.

ಗುಲಬರ್ಗಾ ತಾಲೂಕ ಪೈಕಿ ಮಿಣಜಗಿ ಎಂಬ ಗ್ರಾಮದಲ್ಲಿ ಹುಸೇನಬಿ ಎಂಬ ಓರ್ವ ಮುಸಲ್ಮಾನ್ ತರುಣಿಯು ತಮ್ಮಲ್ಲಿ ರೂಢವಾಗಿದ್ದ ಮದ್ಯಮಾಂಸ ಸೇವನೆಯನ್ನು ಸಹಿಸಲಾರದೆ ಪವಿತ್ರ ಮತ್ತು ಸಮಾನತೆಯುಳ್ಳ ವೀರಶೈವ ಮತದಲ್ಲಿ ಬರಲು ಅಪೇಕ್ಷಿಸಿ ಇಲ್ಲಿಯ ವೀರಶೈವ ತರುಣ ಸಂಘಕ್ಕೆ ತಾ. ೧೫-೨-೪೮ ನೇ ದಿವಸ ಅರ್ಜಿಮಾಡಿಕೊಂಡಳು. ಮತ್ತು ಅದೇ ಗ್ರಾಮದಲ್ಲಿದ್ದ ಶ್ರೀ. ಬಸವಂತರಾವ ಎಂಬ ಓರ್ವ ವೀರಶೈವ ತರುಣನು ಸದರಿ ತರುಣಿಯು ವೀರಶೈವ ಮತಕ್ಕೆ ಬಂದರೆ ಅವಳನ್ನು ಲಗ್ನವಾಗುವುದಾಗಿಯೂ ಅರ್ಜಿಮಾಡಿಕೊಂಡನು. ಈ ಇಬ್ಬರ ಅರ್ಜಿಗಳನ್ನು ಅವರ ಸಮಕ್ಷಮ ಪರಿಶೀಲಿಸಿ ಸಂಘದವರು ಅವರಿಬ್ಬರ ಅಭಿಪ್ರಾಯಗಳನ್ನು ತಿಳಿದುಕೊಂಡು ಇಬ್ಬರ ಒಪ್ಪಿಗೆಯ ಲೇಖಿ ಜವಾಬುಗಳನ್ನು ತೆಗೆದುಕೊಂಡು ತಾ. ೧೭-೨-೪೮ ನೆಯ ದಿವಸ ಕುಮಾರಿ ಹುಸೇನಬಿಗೆ ಲಿಂಗದೀಕ್ಷೆಯನ್ನು ಕೊಟ್ಟು ಮಹಾದೇವಿ ಎಂಬ ಹೆಸರನ್ನಿಡಲಾಯಿತು. ಮತ್ತು ಅದೇ ದಿನ ಕುಮಾರಿ ಮಹಾದೇವಿಗೂ ಕುಮಾರ ಬಸವಂತರಾಯನಿಗೂ ವೀರಶೈವ ಮತದ ಪ್ರಕಾರ ಲಗ್ನವನ್ನೂ ಮಾಡಿದ್ದಾಯಿತು.

ಆ ದಿನ ಈ ಸಮಾರಂಭಕ್ಕೆ ಸಂಘದವರು ಮತ್ತು ಇನ್ನಿತರ ಜನರು ಸೇರಿ ಅಂದಾಜು ಇನ್ನೂರು ಜನರು ಬಂದಿದ್ದರು. ಈ ನವ ದಂಪತಿಗಳೊಂದಿಗೆ ಸಹಭೋಜನ ಸಮಾರಂಭವೂ ನಡೆಯಿತು. ವೀರಶೈವರಿಗೆ ಭವಿ ಮತ್ತು ಭಕ್ತ ಎಂಬ ಎರಡೇ ಕುಲಗಳಲ್ಲದೆ ಬೇರೆ ನೂರೆಂಟು ಕುಲಗಳಿಲ್ಲವೆಂಬ ಬಸವಾದಿ ಪ್ರಮಥರ ತತ್ವವನ್ನು ಹೀಗೆ ಅಲ್ಲಲ್ಲಿ ಧೈರ್ಯದಿಂದ ಆಚರಿಸಿ ತೋರಿಸಿದ್ದಾದರೇನೇ ನಮ್ಮ ತತ್ವದ ಉದಾರತ್ವವು ಗೊತ್ತಾಗುವುದು. ಬರೇ ಗ್ರಂಥದಲ್ಲಿ ಬರೆದಿಟ್ಟು ಉಪನ್ಯಾಸದಲ್ಲಿ ಹೇಳಿದರೆ ಸಾಲದು. ಆದ್ದರಿಂದ ಎಲ್ಲ ಕಡೆಗೂ ನುಡಿಯಂತೆ ಹೀಗೆ ನಡೆಯು ಬರಲೆಂದು ಪ್ರಾರ್ಥನೆ.

## ವೀರಶೈವ ಶುದ್ಧೀಕರಣ.

ರಾಯಚೂರು ಲಕ್ಷ್ಮಮ್ಮ ಎಂಬ ಹೆಣ್ಣುಮಗಳು ಜನ್ಮದಿಂದ ವೀರಶೈವಳು. ಏನೋ ಕಾರಣದಿಂದ ಈ ಮತಕ್ಕೆ ದೂರಾಗಿದ್ದಳು. ಈಗ ಈ ಮತದಲ್ಲಿ ಬರಬೇಕೆಂದು ಇಚ್ಛಿಸಿ ಸಂಘಕ್ಕೆ ಅರ್ಜಿಮಾಡಿಕೊಂಡಳು. ಆ ಅರ್ಜಿ ಪ್ರಕಾರ ಹೆಣ್ಣುಮಗಳ ಆಚಾರ ವಿಚಾರಗಳನ್ನೆಲ್ಲಾ ತಿಳಿದುಕೊಂಡು ರಾಯಚೂರಿನ ಕೆಲವು ಭಕ್ತ ಮಾಹೇಶ್ವರರಿಗೂ ಬರೆದು ಅವರ ಅಭಿಪ್ರಾಯವನ್ನು ತರಿಸಿಕೊಂಡು ಸಂಘದವರು ವೀರಶೈವ ಮತದ ಪ್ರಕಾರ ತಾ. ೧೮-೨-೪೮ ನೆಯ ದಿನ ಶುದ್ಧೀಕರಿಸಿ ಪಂಕ್ತಿಪಾವನಮಾಡಿದರು. ಸದರಿ ಲಕ್ಷ್ಮಮ್ಮನಂತೆ ನಮ್ಮ ಮತದಲ್ಲಿ ಬರಲಿಚ್ಛಿಸುವವರನ್ನು ನಿರ್ಲಕ್ಷಿಸದೆ ವೀರಶೈವ ಮತದಲ್ಲಿ ತೆಗೆದುಕೊಳ್ಳಬೇಕಾಗಿ ಪ್ರಾರ್ಥನೆ.

ತಮ್ಮ ವಿಧೇಯ<br>
ಕರಬಸಪ್ಪ ದೀವಾಣ<br>
ಸೆಕ್ರೆಟರಿ<br>
ವೀರಶೈವ ತರುಣ ಸಂಘ ಗುಲಬರ್ಗಾ

# 'ನಂದಿನೀ' ವಿಶೇಷ ಸಂಚಿಕೆ.

ಶಿರಸಿಯಲ್ಲಿ ಹೊರಡುತ್ತಿರುವ 'ನಂದಿನೀ' ವಾರ ಪತ್ರಿಕೆಯ ವಿಶೇಷ ಸಂಚಿಕೆಯು ಅದರ ಹುಟ್ಟುಹಬ್ಬದ ನಿಮಿತ್ತವಾಗಿ ಕಳೆದ ೧೫ ನೆಯ ತಾರೀಖಿನ ದಿವಸ ಪ್ರಕಟವಾದುದು ನಮ್ಮ ಕಡೆ ಬಂದಿದೆ. ಇದನ್ನು ನಾವು ಕೃತಜ್ಞತಾಪೂರ್ವಕ ಸ್ವೀಕರಿಸಿ ಸಂಪಾದಕ ಮಹಾಶಯರು ಅನೇಕ ವಿದ್ವಾಂಸರ ಲೇಖನಗಳಿಂದಲೂ ಸೊಗಸಾದ ಮುದ್ರಣದಿಂದಲೂ ಬಹು ಉಪಯುಕ್ತವಾದುದನ್ನಾಗಿ ಮಾಡಿದುದರಿಂದ ಅವರನ್ನು ಹೃದಯಪೂರ್ವಕ ಅಭಿನಂದಿಸುತ್ತೇವೆ.

ಇದು ೪೦ ಪುಟಗಳುಳ್ಳ ವಿಶೇಷ ಸಂಚಿಕೆಯು. ಇದರಲ್ಲಿ ಪಂಡಿತ ತಾರಾನಾಥರು, ಡಾ. ಹರ್ಡಿಕರರು ಮೊದಲಾದ ಅನೇಕ ವಿದ್ವಾಂಸರ ಲೇಖನಗಳಿವೆ. ಡಾ. ವ್ಹಿ. ಎಂ. ಕಾಯಕಿಣಿ ಇವರು ಬರೆದ "ಉತ್ತರ ಕನ್ನಡ ಜಿಲ್ಲೆಯ ಸಾಮಾಜಿಕ ಸಮಸ್ಯೆ" ಎಂಬ ಲೇಖನವು ಆ ಜಿಲ್ಲೆಯವರನ್ನಷ್ಟೇ ಅಲ್ಲ; ಕನ್ನಡಿಗರನ್ನೇ ಎಚ್ಚರಗೊಳಿಸುವುದಾಗಿದೆ. ಐದುನೂರು ವರುಷಗಳ ಹಿಂದೆ ನಮ್ಮ ಸಾಂಪತ್ತಿಕ ಸ್ಥಿತಿಯು ಹೇಗಿತ್ತೆಂಬುದನ್ನು ಇವರ ಐತಿಹಾಸಿಕ ಆಧಾರಯುಕ್ತ ಲೇಖನದಲ್ಲಿ ಚೆನ್ನಾಗಿ ಕಾಣಬಹುದು. ಬಾಲ ವಿಧವೆಯರ ಹೃದಯದ್ರಾವಕ ಸ್ಥಿತಿಯನ್ನು ಈ ಮಹಾಶಯರ ಲೇಖನದಲ್ಲಿ ಕಂಡು ಕರ್ನಾಟಕದಲ್ಲಿ ಹಿಂದು ಸಮಾಜ ಸುಧಾರಣೆಯ ಅನೇಕ ಕಾರ್ಯಗಳನ್ನು ರಾಷ್ಟ್ರಸೇವಕರು ಮಾಡುವುದು ಬಹು ಅಗತ್ಯವಾಗಿದೆಯೆಂದೂ ತೋರಬಹುದು.

ಸಂಪಾದಕ ಮಹಾಶಯರು ತಮ್ಮ ಲೇಖನದಲ್ಲಿ "ಉಜ್ವಲ ರಾಷ್ಟ್ರೀಯತೆಯ ಪರಿಭಾಷೆ" ಸಂಬಂಧವಾಗಿ ಹೇಳಿದ ಈ ಕೆಳಗಿನ ಸಂಗತಿಯು ಮನನೀಯವಾಗಿದೆ. ಮತ್ತು ಶ್ರೀಯುತ ಎಸ್. ವ್ಹಿ. ಕಾಮತ ಬಿ. ಎ. ಇವರು "ಸಂಪಾದಕರ ಪಕ್ಷಾಂಧತೆ" ಎಂಬ ಲೇಖನದಲ್ಲಿ ತಿಳಿಸಿದ ಈ ಕೆಳಗಿನ ಸಂಗತಿಯೂ ವಿಚಾರಾರ್ಹವಾಗಿವೆ. ಪತ್ರಿಕಾಕರ್ತರ ಕೈಯಲ್ಲಿಯೇ ಜನಾಂಗವನ್ನು ತಿರುಗಿಸುವ ಸಾಮರ್ಥ್ಯವಿದೆಯೆಂದು ಅವರು ನಿರಂಕುಶರಾಗಿ ವರ್ತಿಸಿದರೆ ರಾಷ್ಟ್ರಕ್ಕೆ ಅದೊಂದು ವಿಪತ್ತೇ ಸರಿ. ಆದಕಾರಣ ವಾಚಕವೃಂದವು ಪಕ್ಷಾಂಧವಾಗದೆ ವಿಮರ್ಶಾತ್ಮಕ ಬುದ್ಧಿಯೆಂಬ ಅಂಕುಶದಿಂದ ಸಂಪಾದಕರನ್ನು ಎಚ್ಚರಿಸಿ ಸಕಲರೂ ಸತ್ಯ ಮಾರ್ಗಾವಲಂಬಿಗಳಾಗುವಂತೆಯೇ ಮಾಡಬೇಕು. ಇದೇ ಕ್ಷೇಮಕರ.

## ರಾಷ್ಟ್ರೀಯ ಪತ್ರಿಕೆಗಳ ಸಾಲಿನಲ್ಲಿ "ನಂದಿನಿ" ಗೆ ಸ್ಥಾನವುಂಟೇ?

ಕರ್ನಾಟಕದಲ್ಲಿ, ಕರ್ನಾಟಕದ ಹೊರಗೆ ಕೂಡ ಎಷ್ಟೋ ಕನ್ನಡ ಪತ್ರಿಕೆಗಳಿವೆ. ಅವುಗಳಲ್ಲಿ ಉಜ್ವಲ ರಾಷ್ಟ್ರೀಯ ಪತ್ರಿಕೆಗಳು ಕೆಲವು. ಪ್ರಮುಖ ರಾಷ್ಟ್ರೀಯ ಪತ್ರಿಕೆಗಳು ಒಂದಿಷ್ಟು. ಬರೀ ರಾಷ್ಟ್ರೀಯ ಪತ್ರಿಕೆ (ಇವುಗಳಿಗಿನ್ನೂ ಉಜ್ವಲ, ಪ್ರಮುಖ ಎಂದು ಸೇರಿಸಿಕೊಳ್ಳುವ ಧೈರ್ಯ ಬಂದಿಲ್ಲ.) ಗಳು ಹಲವು ಇವೆ. ನಿಜವಾಗಿ ನೋಡಿದರೆ ಆ ವಿಶೇಷಣಗಳುಳ್ಳ ಪತ್ರಿಕೆಗಳ ಸಾಲಿನಲ್ಲಿ ನಮ್ಮ 'ನಂದಿನಿ' ಗೆ ಸ್ಥಾನವುಂಟೆಂದು ಹೇಳಲು ಸಬಲ ಸಾಮಗ್ರಿಯಿಲ್ಲ. ಈ ಮೂರರಲ್ಲಿ ಒಂದು ವಿಶೇಷಣ ಕೂಡ ನಮ್ಮ "ನಂದಿನಿ" ಗೆ ಇರುವುದಿಲ್ಲ!

## ಉಜ್ವಲ ರಾಷ್ಟ್ರೀಯತೆಯ ಪರಿಭಾಷೆ!

ತಮ್ಮ ಸುತ್ತುಮುತ್ತಲಿನ ಪ್ರಾಂತದ ಹಳ್ಳಿಗಳ ಸುಖದುಃಖದ ಅರಿವು ಲಕ್ಷ್ಯವಿಲ್ಲದಿದ್ದರೂ ಸಮಗ್ರ ಭಾರತದ ಯೋಗ ಕ್ಷೇಮಗಳನ್ನು ವಿಚಾರಿಸುವ ವಿಶಾಲ ಹೃದಯ ದೃಷ್ಟಿಗಳುಳ್ಳ ಪತ್ರಿಕೆಗಳೇ ಹಲವು. ಹಿಂದೆ ಕಾಂಗ್ರೆಸ್, ಅಧಿಕಾರ ಸ್ವೀಕರಿಸಬೇಕೋ ಬೇಡವೋ ಎಂಬ ಸಮಸ್ಯೆ ಕಾಂಗ್ರೆಸ್ಸಿನ ಎದುರಿಗಿದ್ದಾಗ ಶ್ರೀ. ಸತ್ಯಮೂರ್ತಿಯವರು ಮಂತ್ರಿಪದ ಸ್ವೀಕಾರವೇ ಎಲ್ಲ ದೃಷ್ಟಿಯಿಂದಲೂ ಶ್ರೇಯಸ್ಕರವೆಂದು ಕೆಲವು ಕಡೆ ಭಾಷಣ ಮಾಡಿದ್ದಕ್ಕೆ ಶ್ರೀ. ಸತ್ಯಮೂರ್ತಿಯವರಿಗೆ ಮಂತ್ರಿಪದವಿಯ ದುರಾಶೆ ಹುಟ್ಟಿದೆಯೆಂದು ಗುಲ್ಲೆಬ್ಬಿಸಿ ಸತ್ಯಮೂರ್ತಿಯವರ ವ್ಯಂಗಚಿತ್ರವನ್ನು ಸಹ ಪ್ರಕಟಿಸಿ ತಮ್ಮ "ಉಜ್ವಲ ರಾಷ್ಟ್ರೀಯತೆಯನ್ನು" ಸಹ ಹಲವು ಪತ್ರಿಕೆಗಳು ತೋರಿಸಿಯೇಬಿಟ್ಟವು. ಆದರೆ ಗಾಂಧಿಯವರ ಸಲಹೆಯಂತೆ ಕಾಂಗ್ರೆಸ್ಸು ಅಧಿಕಾರ ಸ್ವೀಕರಿಸಿದಾಗ ಯಾವ ಪತ್ರಿಕೆಯೂ ಉಸುರೆತ್ತಲಿಲ್ಲ. ಹೌದು ಉಜ್ವಲ ರಾಷ್ಟ್ರೀಯವಾಗಿರುವುದೆಂದರೆ ಹೀಗೆ! ಕಲಕತ್ತಾ ವರ್ಕಿಂಗ್ ಕಮಿಟಿಯಲ್ಲಿ ಮೈಸೂರಿಗೆ ಸಹಾನುಭೂತಿ ತೋರಿಸಬೇಕೆನ್ನುವ ಠರಾವು ಪ್ರಚಂಡ ಬಹುಮತದಿಂದ ಪಾಸಾಗಿ ಹೋಯಿತು. ಮತ್ತೆ ಹರಿಜನದಲ್ಲಿ ಗಾಂಧೀಜಿಯವರ ಟೀಕೆಯೂ ಅದರ ಮೇಲೆ ಬಂತು. ಈ ಸಮಯದಲ್ಲಿ ಈ ಉಜ್ವಲ ರಾಷ್ಟ್ರೀಯ ಪತ್ರಿಕೆಗಳ ಪೀಕಲಾಟ ನೋಡುವಂತಿತ್ತು. ಅತ್ತ ಕಾಂಗ್ರೆಸ್ಸಿನ ಠರಾವನ್ನು ಸಮರ್ಥಿಸಹೋದರೆ ಗಾಂಧಿಯವರ ಅಭಿಪ್ರಾಯ ವಿರೋಧಿಸಿದಂತಾಗುವುದು. ಇತ್ತ ಗಾಂಧಿಯವರ ಲೇಖವನ್ನು ಸಮರ್ಥಿಸಿದರೆ ಕಾಂಗ್ರೆಸ್ಸನ್ನು ವಿರೋಧಿಸದಂತಾಗುವುದು. ಈ ಸಮಯ ಹೇಗೋ ಹೇಗೋ ತಮ್ಮ ಉಜ್ವಲ ರಾಷ್ಟ್ರೀಯತೆಯನ್ನು ಉಳಿಸಿಕೊಳ್ಳಬೇಕಾದರೆ ಪತ್ರಿಕೆಗಳಿಗೆ ಬಹಳ ಆಯಾಸವಾಯಿತು!

## ಸಂಪಾದಕರ ಪಕ್ಷಾಂಧತೆ.

ಒಬ್ಬೊಬ್ಬ ಸಂಪಾದಕರು ಒಂದೊಂದು ಕೂಟದವರು ಕೆಲವರು ಕಾಂಗ್ರೆಸ್ ಕೂಟದವರು, ಕೆಲವರು ಲಿಬರಲ್ ಪಕ್ಷದವರು, ಕೆಲವರು ಕಮ್ಯುನಿಷ್ಟ ಪಕ್ಷದವರು, ಕೆಲವರು ಜಿನ್ನಾ ಪಕ್ಷದವರಾದರೆ ಹಲವರು ಗಾಂಧೀ ಪಕ್ಷದವರು ಮತ್ತು ಜವಾಹರಲಾಲ ಪಕ್ಷದವರು. "ಸತ್ಯ" ದ ಪಕ್ಷದವರು ತೀರ ಕಡಿಮೆ. ಇಡೀ ಹಿಂದುಸ್ಥಾನದಲ್ಲಿ ಶ್ರೀ. ನಟರಾಜನ್, ಬಾಬು ರಾಮಾನಂದ ಚತರ್ಜಿ ಇವರಂಥ ಐದಾರು ಸಂಪಾದಕರು ಸತ್ಯದ ಪಕ್ಷದವರೂ ಇರಬಹುದು. ಉಳಿದವರೆಲ್ಲರೂ ಪಕ್ಷಪಾತಿಗಳು. ನಿಜವಾಗಿ ದೇಶಕಾರ್ಯ ಮಾಡುವ ಸಂಪಾದಕರು ಪಕ್ಷಪಾತಿಗಳಾಗಿರಬಾರದು. ಪಕ್ಷಪಾತದಿಂದ ದೇಶಕ್ಕೆಂದೂ ಹಿತವಾಗಲಾರದು. ಯಾವದೇ ಪಕ್ಷವಿರಲಿ, ಯಾವದೇ ಕೂಟವಿರಲಿ, ಯಾವದೇ ತಂಡವಿರಲಿ, ಅವರಲ್ಲಿದ್ದ ಒಳ್ಳೇ ತತ್ವಗಳನ್ನು ಸಮರ್ಥಿಸಿ ಕೆಟ್ಟ ಚಟಗಳನ್ನು ಖಂಡಿಸುವುದು ಪ್ರತಿಯೊಬ್ಬ ಸಂಪಾದಕನ ಕರ್ತವ್ಯ. ಸಂಪಾದಕರು ಪಕ್ಷಪಾತಿಗಳಾದರೆ ದೇಶವು ಕಂಗೆಡುವುದೆಂಬುದಕ್ಕೆ ಸಂದೇಹವಿಲ್ಲ. ದೇಶದ ನಿಜವಾದ ಸ್ಥಿತಿಯನ್ನು ಬೈಲಿಗೆಳೆಯುವದು ಸಂಪಾದಕನ ಕರ್ತವ್ಯ. ಹೀಗೆ ಮಾಡದೇ ತಮ್ಮದೇ ಕೂಟವನ್ನು ಏರ್ಪಡಿಸಿಕೊಂಡು ಅದರಲ್ಲಿಯೂ ಕುಂದುಗಳನ್ನು ಅಡಗಿಸಿ ಬೇರೆ ಪಕ್ಷದವರಿಗೆ ಹಳಿಯುವುದು ದೇಶ ಹಿತವಲ್ಲ. ಇದು ದೇಶದ್ರೋಹ.

ಸಂಪಾದಕರಿಗೆ ಪಕ್ಷಾಂಧತೆಯೇಕೆ? ಸಂಪಾದಕರು ದೇಶಕ್ಕೆ ದಾರಿ ತೋರಿಸುವ ದೀವಟಿಗೆಗಳು! ಪಕ್ಷಪಾತಕ್ಕೆ "ಶರಣು" ಹೊಡೆದು ಸತ್ಯದ ದಾರಿಯನ್ನು ಹಿಡಿಯದಿದ್ದರೆ ಅವರಿಗೆ ಸಂಪಾದಕರೆನ್ನಬೇಕೆ? ದೇಶ ವಿಘಾತಕರೆನ್ನಬೇಕೆ? ಎಂದು ಜನರೇ ಹೇಳಲಿ. ನಾನು ಹೇಳಲಾರೆ.

---

—ಮಾರ್ಚ ೭ ನೆಯ ತಾರೀಖಿನ ದಿವಸ ಮುಧೋಳ ಸಂಸ್ಥಾನದ ಬಾಲರಾಜರ ರಾಜ್ಯಾರೋಹಣ ಸಮಾರಂಭ ಜರುಗುವುದು.

—ಸಿಂಧ ಹೈದರಾಬಾದಿನಲ್ಲಿ ಕುರಾನಿನ ಅಪಮಾನ ಮಾಡಿದರೆಂದು ಇಬ್ಬರಿಗೆ ನಾಲ್ಕು ತಿಂಗಳ ಶಿಕ್ಷೆ ವಿಧಿಸಲಾಯಿತು.

(೧೧ ನೆಯ ಪುಟದಿಂದ ಮುಂದೆ ಸಾಗಿದುದು.)

ಕೊನೆಗೆ ಲ್ಯಾಬೋರೇಟರಿಯ ವಿಷಯಕವಾಗಿ ಮಾತನಾಡು ತ್ತ ಇದರ ಉಪಯೋಗವನ್ನು ಪಡೆದು ವಿದ್ಯಾರ್ಥಿಗಳು ಮೈಸೂರ ಮೆಡಿಕಲ್ ಕಾಲೇಜದ ಘನತೆಯನ್ನು ಭಾರತದಲ್ಲಿ ಹೆಚ್ಚಿಸಿ ಮಾನವ ಹಿತಕ್ಕೆ ಅನುಕೂಲವಾಗುವಂತೆ ಸಂಶೋಧನಾ ವಿಭಾಗದಲ್ಲಿ ಮಹ ತ್ವದ ಸ್ಥಾನವನ್ನು ಕಟ್ಟಿಸಿಕೊಡಬೇಕೆಂದೂ ಮುಂತಾಗಿ ವಿಚಾರ ಪರಿಪೂರ್ಣ ಭಾಷಣ ಮಾಡಿದರು."

# ಪಂತ-ಗವ್ಹರ್ನರರ ಒಪ್ಪಂದ.

ಸಂಯುಕ್ತ ಪ್ರಾಂತದ ಮುಖ್ಯ ಗವ್ಹರ್ನರರಾದ ಸರ್. ಹ್ಯಾರಿಹೇಗರೂ ಮತ್ತು ಮುಖ್ಯ ಮಂತ್ರಿಗಳಾದ ಪಂತರೂ ಒಟ್ಟಿಗೆ ಈ ರೀತಿ ಒಂದು ಪ್ರಕಟನೆಯನ್ನು ಹೊರಡಿಸಿದ್ದಾರೆ.

"ಸದ್ಯದ ರಾಜಕೀಯ ಪರಿಸ್ಥಿತಿಯನ್ನು ಕುರಿತು ಮತ್ತು ಈ ಸಂಬಂಧವಾಗಿ ಇತ್ತೀಚೆಗೆ ನಡೆದಿರುವ ಘಟನೆಯನ್ನು ಕುರಿತು ನಾವಿಬ್ಬರೂ ದೀರ್ಘಕಾಲ ಚರ್ಚೆಮಾಡಿದೆವು. ಮತ್ತು ಒಂದು ನಿ ರ್ಣಯಕ್ಕೆ ಬಂದೆವು. ಆ ಪ್ರಕಾರ ಮಂತ್ರಿಗಳು ತಮ್ಮ ಕೆಲಸಕ್ಕೆ ಹಿಂತಿರುಗುವರು.

"ರಾಜಕೀಯ ಕೈದಿಗಳು" ಎನ್ನುವ ಕೈದಿಗಳನ್ನು ಈಗ ವೈ ಯಕ್ತಿಕವಾಗಿ ವಿಚಾರಣೆಮಾಡಲಾಗಿದೆ. ಮತ್ತು ಇವರು ಇನ್ನೂ ಅನುಭವಿಸಬೇಕಾಗಿರುವ ಶಿಕ್ಷೆಯನ್ನು ರದ್ದುಮಾಡಿ ಬಿಡುಗಡೆಮಾ ಡುವದಕ್ಕಾಗಿ ಕ್ರಿ. ಪ್ರೊ. ೪೦೧ ನೇ ಕಲಮಿನನ್ವಯ ಗವ್ಹರ್ನರರು ಇನ್ನು ಕೆಲವು ದಿನಗಳಲ್ಲಿಯೇ ಅಪ್ಪಣೆ ಹೊರಡಿಸಲಿದ್ದಾರೆ. ಉಳಿ ದ ಕೈದಿಗಳನ್ನು ಮಂತ್ರಿಗಳೇ ವೈಯಕ್ತಿಕ ವಿಚಾರಣೆ ನಡಿಯಿಸಿ ಅವಶ್ಯಕಂಡ ಅಪ್ಪಣೆ ಹೊರಡಿಸುವರು.

ಗವ್ಹರ್ನರ ಮತ್ತು ಮಂತ್ರಿಗಳ ಪರಸ್ಪರ ಸಂಬಂಧವನ್ನು ಕುರಿತೂ ನಾವು ಮಾತುಕಥೆ ನಡೆಸಿದೆವು. ವ್ಹಾಯಿಸ್‌ರಾಯರು ಇತ್ತೀಚೆಗೆ ಹೊರಡಿಸಿರುವ ಹೇಳಿಕೆ ಇದರ ಬಗ್ಗೆ ಮಹಾತ್ಮಾ ಗಾಂಧಿಯವರ ಅಭಿಪ್ರಾಯ, ಮಂತ್ರಿಮಂಡಲಗಳ ತೊಡಕನ್ನು ಕುರಿತು ಹರಿಪುರದಲ್ಲಿ ಆದ ನಿರ್ಣಯ ಮತ್ತು ವ್ಹಾಯಿಸ್‌ರಾಯ ರು ಜೂನ ತಿಂಗಳಲ್ಲಿ ಹೊರಡಿಸಿದ ಪ್ರಕಟನೆಗಳನ್ನೆಲ್ಲ ಕುರಿತು ನಾವು ಚರ್ಚೆಮಾಡಿದೆವು. ಹೊಣೆಗಾರ ಮಂತ್ರಿಗಳು ಪ್ರತಿನಿತ್ಯದ ಆಡಳಿತ ಕಾರ್ಯದಲ್ಲಿ ತಡೆಯುಂಟಾಗುತ್ತಿರುವದೆಂದು ಅಂಜಲು ಯಾವ ಕಾರಣವೂ ಇಲ್ಲ. ನಾವಿಬ್ಬರೂ ನ್ಯಾಯವಾದ ರೂಢಿ ಸಂ ಪ್ರದಾಯಗಳಂತೆ ನಡೆದುಕೊಳ್ಳಬೇಕೆಂದು ನಿರ್ಧರಿಸಿದ್ದೇವೆ. ನಮ್ಮಿ ಬ್ಬರಲ್ಲಿಯ ಪರಸ್ಪರ ಸ್ನೇಹ ಸಂಹಾರ್ದದಿಂದ ಅದರಲ್ಲಿ ಯಶಸ್ವಿ ಯಾಗುವೆವೆಂದು ಆಶಿಸುವೆವು."

# ಸಂಸ್ಥಾನಗಳಲ್ಲಿ ಕಾಂಗ್ರೆಸ್ ಕಾರ್ಯ.

ಹಿಂದುಸ್ಥಾನದ ೬೦೦ ಸಂಸ್ಥಾನಗಳಲ್ಲಿ ೧೫ ಸಂಸ್ಥಾನಗಳ ಪ್ರಜೆಗಳು ಮಾತ್ರ ತಮ್ಮಲ್ಲಿ ಕಾಂಗ್ರೆಸ್ ಕಮಿಟಿಯನ್ನು ಸ್ಥಾಪಿಸಿ ಕೊಂಡಿದ್ದಾರೆ! ಇವರಲ್ಲಿ ಮೈಸೂರು ಸಂಸ್ಥಾನದ ಪ್ರಜೆಗಳು ಮಾತ್ರ ಕಾಂಗ್ರೆಸ್ ಕಮಿಟಿಯ ಮೂಲಕ ಬಹು ಪರಿಣಾಮಕಾ ರಿಯಾದ ಕಾರ್ಯಗಳನ್ನು ಮಾಡಿದ್ದಾರೆ. ಇವರಂತೆಯೇ ನಿಜಾಮ, ಬಡೋದಾ, ಕೊಲ್ಲಾಪುರ, ಕಾಶ್ಮೀರ ಮೊದಲಾದ ಪ್ರಮುಖ ಸಂಸ್ಥಾನಗಳಲ್ಲಿಯ ಪ್ರಜೆಗಳೂ ಕಾಂಗ್ರೆಸ್ ಕಮಿಟಿಯ ಮೂಲಕ ತಮ್ಮಲ್ಲಿ ಜನಜಾಗೃತಿಯನ್ನು ಮಾಡಿಕೊಂಡಿದ್ದರೆ ಎಷ್ಟೋ ಒಳಿತಾಗಿರಲಿಲ್ಲವೆ?

ಸಂಸ್ಥಾನಗಳಲ್ಲಿ ಕಾಂಗ್ರೆಸ್ ಕಮಿಟಿಗಳನ್ನು ಸ್ಥಾಪಿಸಿಕೊ ಳ್ಳಲು ಹರಿಪುರ ಕಾಂಗ್ರೆಸ್ಸಿನಲ್ಲಿ ಒಪ್ಪಿಗೆ ದೊರೆತುದು ಬಹು ಯುಕ್ತವಾಗಿಯೇ ಇದೆ. ಇಷ್ಟಾದರೂ ಅವಕಾಶವಿರದಿದ್ದರೆ ಸಂಸ್ಥಾ ನಗಳ ದಬ್ಬಾಳಿಕೆಯು ಅಲ್ಲಿಯ ಪ್ರಜೆಗಳಮೇಲೆ ಇನಷ್ಟು ಹೆಚ್ಚಾ ಗುತ್ತಿದ್ದಿತು. ಮೈಸೂರಿನ ಸ್ವಾತಂತ್ರ್ಯಪ್ರಿಯರಾದ ದೇಶಭಕ್ತರ ಕಾರ್ಯಗಳನ್ನೇ ಬೇರೆ ಸಂಸ್ಥಾನದ ಪ್ರಜಾಪ್ರಮುಖರು ಈಗಲಾ ದರೂ ಆದರ್ಶವಾಗಿಟ್ಟುಕೊಂಡು ತಮ್ಮ ಉನ್ನತಿಗಾಗಿ ಕಾಂಗ್ರೆಸ್ ಕಮಿಟಿಗಳನ್ನು ಸ್ಥಾಪಿಸಿಕೊಂಡು ಇನ್ನು ಮೇಲಾದರೂ ಪ್ರಯ ತ್ನಿಸುವುದು ಅಗತ್ಯವಲ್ಲವೆ? ತಮ್ಮ ಮೇಲೆ ಎರಡು ಸರಕಾರಗ ಳಿವೆ ಎಂಬುದನ್ನು ಈಗಲಾದರೂ ತಿಳಿದುಕೊಂಡು ಈ ಬಂಧನ ಗಳಿಂದ ಬಿಡುಗಡೆ ಹೊಂದಲು ಹೋರಾಡಬಾರದೆ?

# ಮುಂಬೈ ಸರಕಾರವು ಯೋಚಿಸಿದ ಕೆಲವು ಹೊಸ ಕೆಲಸಗಳು.

### ಹಳ್ಳಿಯ ಸುತ್ತಲು ವಿಶಾಲ ಪ್ರದೇಶ.

ಗೊಬ್ಬರದ ಗುಂಡಿ ಆಟದ ಮೈದಾನ ಇವುಗಳ ಸಲುವಾ ಗಿ ಹಳ್ಳಿಗಳ ಸುತ್ತಲಿನ ಪ್ರದೇಶವನ್ನು ವಶಪಡಿಸಿಕೊಳ್ಳುವದಕ್ಕಾಗಿ ೧೦೦೦೦೦ ರೂ. ಮಂಜೂರ ಮಾಡಲಾಗಿದೆ. ಹಳ್ಳಿಗಳಲ್ಲಿ ವಿಶಾಲ ಪ್ರದೇಶಗಳಿಲ್ಲದೆ ಜನರ ಆರೋಗ್ಯವು ಕೆಡುತ್ತಿರುವದರಿಂದ ಪ್ರತಿ ಯೊಂದು ಹಳ್ಳಿಯ ಮುಂದೆಯೂ ಮೇಲೆ ಹೇಳಿದ ಗೊಬ್ಬರದ ಗುಂಡಿ ಮುಂತಾದವುಗಳಿಗಾಗಿ ಒಂದು ಲಕ್ಷ ರೂ. ಖರ್ಚುಮಾಡ ಬೇಕೆಂದು ಸರಕಾರದ ಅಭಿಪ್ರಾಯ.

### ಮದ್ಯಪಾನ ಪ್ರತಿಬಂಧ.

ಅಹಮ್ಮದನಗರ ಜಿಲ್ಲೆಯ ನೆವಾಸಾ, ಸೇಗಾಂವ, ಪಥರಡಿ ಪಂಚಮಹಾಲ ಜಿಲ್ಲೆಯ ಜಂಬುಸರ ಮತ್ತು ವಾಗ್ರಾ ಮತ್ತು ಕಾರವಾರ ಜಿಲ್ಲೆಯ ಕುಮಟಾ ಮತ್ತು ಅಂಕೋಲಾ ತಾಲೂಕು ಗಳಲ್ಲಿ ಮದ್ಯಪಾನ ಪ್ರತಿಬಂಧ ಮಾಡುವದಕ್ಕಾಗಿ ಈ ವರ್ಷ ೪೦೦೦೦ ರೂ. ತೆಗೆದಿಡಲಾಗಿದೆ.

ಕಳ್ಳತನದಿಂದ ಭಟ್ಟಿಸರಾಯಿ ತೆಗೆಯುವದನ್ನು ಕಂಡುಹಿಡಿ ಯುವದಕ್ಕಾಗಿ ಬೆಳಗಾವ ನಗರ ಮತ್ತು ಕಾಂಟೋನಮೆಂಟ ಮತ್ತು ಅಹಮ್ಮದ ನಗರ ಜಿಲ್ಲೆಗಳಲ್ಲಿರುವ ಅಬಕಾರಿ ಕಚೇರಿಗಳಲ್ಲಿ ಜನ ರನ್ನು ಹೆಚ್ಚಿಸಲು ೪೯೫೮ ರೂ. ಕೊಡಲಾಗಿದೆ.

### ಧರ್ಮಾ ಕಾಲುವೆ.

ಧರ್ಮಾ ನದಿಗೆ ಒಂದು ಅಣೆ ಕಟ್ಟನ್ನು ಕಟ್ಟುವದಕ್ಕಾಗಿ ಸರ್ವೆ ಮತ್ತು ಅಂದಾಜ ಪತ್ರಿಕೆಯನ್ನು ತಯಾರಿಸುವ ಸಲುವಾಗಿ ೧೦೦೦೦ ರೂ. ಮಂಜೂರಾಗಿದೆ.

ವಿಜಾಪುರ ಜಿಲ್ಲೆಯಲ್ಲಿ ನೀರಾವರಿಯ ಅನುಕೂಲ ಬಹಳ ಕಡಿಮೆ. ಆದ್ದರಿಂದ ಬದಾಮಿ ತಾಲೂಕಿನ ಶಿವಯೋಗಮಂದಿರ ದ ಬಳಿಯಲ್ಲಿ ಮಲಪ್ರಭಾ ನದಿಯಿಂದ, ಅಲ್ಲಲ್ಲಿ ಹೊಲಗಳಿಗೆ ನೀರು ಹಾಯಿಸುವ ವ್ಯವಸ್ಥೆ (ಪಿಕ್ ಅಪ್ ವೇರ್) ಯ ಸರ್ವೆ ಮಾಡು ವದಕ್ಕಾಗಿ ೬೪೧೮ ರೂ. ಮಂಜೂರಾಗಿರುವದು.

ಘಟಪ್ರಭಾ ನದಿಯಿಂದಲೂ ಮೇಲೆ ಹೇಳಿದ ರೀತಿಯಲ್ಲಿ ವ್ಯವಸ್ಥೆಮಾಡಲು ಸರ್ವೆಮಾಡುವದಕ್ಕಾಗಿ ೪೭೫೭ ರೂ. ಮಂಜೂ ರಾಗಿರುವದು.

ಅಖಿಲ ಭಾರತ ವಸ್ತು ಪ್ರದರ್ಶನದಲ್ಲಿ
ಸುವರ್ಣ ಪದಕಗಳನ್ನು ಮತ್ತು ಸರ್ಟಿಫಿಕೇಟುಗಳನ್ನು ಪಡೆದು ಹೆಸರಾದ
ಇಂಡಿಯಾ ಸರಕಾರದಲ್ಲಿ ರಜಿಸ್ಟರ್ ಆದ

# ಸಿದ್ಧೇಶ್ವರ ಟ್ರೇಝರಿ ಕಂಪನಿ, ಹುಬ್ಬಳ್ಳಿ.










ನಮ್ಮ "ಸಿದ್ಧೇಶ್ವರ ಟ್ರೇಝರಿ" ಗಳನ್ನು ಈ ವರೆಗೆ ಕೈಗಾರಿಕೆಯ ಕೆಲಸಗಳಲ್ಲಿ ಹೆಸರಾದ ಯುರೋಪ, ಅಮೇರಿಕಾ ವಗೈರೆ ಪರರಾಷ್ಟ್ರಗಳಲ್ಲಿ ತಯಾರಾಗುವ ಟ್ರೇಝರಿಗಳ ಪದ್ಧತಿಯ ಮೇರೆಗೆ ಹೊಸ ಉಕ್ಕಿನ ಅಖಂಡ ಒಂದೇ ತಗಡಿನಲ್ಲಿ ೧೨ ಮೂಲೆಗಳನ್ನು ೩೫೦ ಟನ್ ಪ್ರೇಷರ ಕೊಡುವ ಮಶಿನ್ನಿನಿಂದ ಬಗ್ಗಿಸಿ, ರಿವ್ಹಿಟ್ಸ ಮೊದಲಾದವುಗಳಿಂದ ಜಾಯಿಂಟ ಮಾಡದೆ ಇಲೆಕ್ಟ್ರಿಸಿಟಿಯಿಂದ ಬೆಸೆದು ತಯಾರಿಸುತ್ತೇವೆ.

ಈ ಹೊಸ ಸುಧಾರಣೆಯಿಂದ ಮಾಡಿದ ತಿಜೋರಿಗಳಿಗೂ ಮತ್ತು ಯಾವದೇ ನಮ್ಮ ಸಾಮಾನಕ್ಕೂ ಯಾವ ತರದ ಭಯವಿಲ್ಲ. ಮತ್ತು ಅವು ಒಳ್ಳೇ ಮಜಬೂತವಾಗಿಯೂ ಸುಂದರವಾಗಿಯೂ ಆಗುತ್ತವೆ. ನಾವು ನಮ್ಮ ತಿಜೋರಿಗಳಿಗೂ ಮತ್ತು ನಮ್ಮಲ್ಲಿ ತಯಾರಾಗುವ ಉಕ್ಕಿನ ಕಪಾಟು, ಕ್ಯಾಶಬಾಕ್ಸ, ಸ್ಟ್ರಾಂಗರೂಮ ಡೋರ್ಸು ಗಳಿಗೂ ನಮ್ಮ ಕಾರಖಾನೆಯಲ್ಲಿಯೇ ತಯಾರಾಗುವ ಉತ್ತಮವಾದ ಮತ್ತು ಮಜಬೂತವಾದ ಕೀಲಿಗಳನ್ನು ಹಚ್ಚುತ್ತೇವೆ. ಮತ್ತು ಇದಲ್ಲದೆ ನಮ್ಮಲ್ಲಿ ಹೊಸ ಪದ್ಧತಿಯ ಮೇರೆಗೆ ತಯಾರಾಗುವ ಕಾಂಬಿನೇಶನ್ ಕೀ ಲೆಸ್ಸಾ ಲಾಕ್ಸು (ನಂಬರ ಕೀಲಿ) ಗಳನ್ನು ತಿಜೋರಿಗಳಿಗೆ ಹಚ್ಚಿಸಿದರೆ ಆ ತಿಜೋರಿಗಳನ್ನು ಯಾರೂ ತೆಗೆಯಲು ಸಾಧ್ಯವಿಲ್ಲ. ಯಾರಾದರೂ ತೆಗೆದರೆ ಅವರಿಗೆ

**೧೦೦೦ ರೂ. ಬಹುಮಾನ ಕೊಡುವೆವು.**

ನಮ್ಮ ಫಾಯರ ಪ್ರೂಫ್ ತಿಜೋರಿಗಳು ತುಂಬಾ ಖಾತ್ರಿಯಾದವುಗಳಿರುತ್ತವೆ.

**ಈ ಬಗ್ಗೆ ಅನೇಕ ವಸ್ತು ಪ್ರದರ್ಶನಗಳಲ್ಲಿ ಒಳಗೆ ನೋಟು ವಗೈರೆ ಸಾಮಾನುಗಳನ್ನು ಇಟ್ಟು ಕೆಂಪಗೆ ಕಾಸಿದನಂತರ ಒಳಗಿಟ್ಟ ಸಾಮಾನುಗಳು ಸುಡದೆ ಇದ್ದದ್ದನ್ನು ಖಾತ್ರಿ ಮಾಡಿಕೊಟ್ಟಿದ್ದೇವೆ.**

ಧಾರಣೆಗಳ ಬಗ್ಗೆ ನಮ್ಮ ಸಚಿತ್ರ ಕ್ಯಾಟಲಾಗುಗಳಿಗೆ ಬರೆಯಿರಿ.
ಅಥವಾ
ಸಮಕ್ಷಮ ಬಂದಲ್ಲಿ ತಿಳಿಯುವದು.

ತಮ್ಮ ಕೆಲಾಭಿಮಾನಿ,
ಸಿದ್ಧೇಶ್ವರ ಮತ್ತು ಕಂಪನಿ
ಟ್ರೇಝರಿ ಮೇಕರ್ಸ
ಹುಬ್ಬಳ್ಳಿ.

ಫ್ಯಾಕ್ಟರಿ ಮತ್ತು ಹೆಡ್ ಆಫೀಸ್-
ಹುಬ್ಬಳ್ಳಿ.

ಬ್ರ್ಯಾಂಚ ಆಫೀಸುಗಳು-
ಹೈದರಾಬಾದ (ಡೆಕ್ಕನ) ಮತ್ತು ಕೊಲ್ಹಾಪುರ (ಲಕ್ಷ್ಮೀಪುರಿ)

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. R. 2891.

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ !
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ‖ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೧೪ ನೆಯ ಮಾರ್ಚ ೧೯೩೮. | ಸಂಚಿಕೆ೨೮

ಜನಸೇವೆಯೇ ದೇವರಸೇವೆ.

## ಮಧ್ಯಯುರೋಪದಲ್ಲಿ ಯುದ್ಧ ?

### ಆಸ್ಟ್ರಿಯಾದ ಮೇಲೆ ಜರ್ಮನಿಯ ಆಕ್ರಮಣ !

ಆಸ್ಟ್ರಿಯಾದ ಸರ್ವಾಧಿಕಾರಿಯ ಕೈಸೆರೆ !

ಆಸ್ಟ್ರಿಯಾದಲ್ಲಿ ಹಿಟ್ಲರನ ಇಷ್ಟದಂತೆ ಪಾರ್ಲಮೆಂಟ್
ಏರ್ಪಡಬೇಕಂತೆ. ಆದಕ್ಕಾಗಿ ಜರ್ಮನಿಯ ೫ ಸಾವಿರ ಸೈನ್ಯ
ಆಸ್ಟ್ರಿಯಾದಲ್ಲಿ ಪ್ರವೇಶಿಸಿದೆ.
ಹಿಟ್ಲಲರನು ತಾ. ೧೨ ನೆಯ ದಿನ
ಆಸ್ಟ್ರಿಯಾಕ್ಕೆ ಹೋಗಿದ್ದಾನೆ.

ಈ ಜರ್ಮನ್-ಆಸ್ಟ್ರಿಯಾಗಳ ಘರ್ಷಣ ಜ್ವಾಲೆ
ಎಲ್ಲೆಲ್ಲಿ ವ್ಯಾಪಿಸುವುದೋ !

---

### ೨೦ ಸ್ಥಳಗಳಲ್ಲಿ ೧೪೪ ನೆಯ ಬಾಣ !

ಸಂಯುಕ್ತ ಪ್ರಾಂತದಲ್ಲಿ ಹಿಂದು-ಮುಸಲ್ಮಾನರು
ಹೋಳಿ-ಮೊಹರಂ ಹಬ್ಬಗಳಲ್ಲಿ ದೊಂಬಿ ಮಾಡಬಹುದೆಂದು
೨೦ ಸ್ಥಳಗಳಲ್ಲಿ ೧೪೪ ನೆಯ ನಿಯಮದ
ಬಾಣ ಪ್ರಯೋಗವಾಯಿತು !

---

ದೇಹವೇ ದೇವಾಲಯ.

## ಅಖಿಲ ಕರ್ನಾಟಕದಲ್ಲಿ ಪ್ರಸಿದ್ಧವಾದ
### ರಾಷ್ಟ್ರೀಯ ಕಂಪನಿಯೆಂದರೆ
## ಇದೊಂದೇ.
# ದಿ ಸ್ವರಾಜ್ಯ ಬ್ಯಾಂಕಿಂಗ ಮತ್ತು ಇನ್ಸುರನ್ಸ ಕಂ. ಲಿ.
# ಧಾರವಾಡ.

| ಚೇರಮನ್ | ವ್ಹಾಯಿಸ್ ಚೇರಮನ್ |
|---|---|
| ದೇಶಭಕ್ತ ಶ್ರೀಯುತ ಎಸ್. ಕೆ. ಹೊಸಮನಿ | ಶ್ರೀಯುತ ವ್ಹಿ. ಬಿ. ಹಾಲಭಾವಿ |
| B. A. L. L. B. M. L. A. | B. A. LL. B. ರಿಟಾಯರ್ಡ |
| ಪ್ರೆಸಿಡೆಂಟ ಕೆ. ಪಿ. ಸಿ. ಸಿ. | ಫರ್ಸ್ಟ ಕ್ಲಾಸ್ ಸಬ್ ಜಜ್ಜ ಧಾರವಾಡ. |

ಭವಿಷತ್ಕಾಲದ ಜೀವಿತದ ನಿರ್ವಾಹಕ್ಕೆ | ಈ ಕಂಪನಿಯನ್ನು ಕೇವಲ ರಾಷ್ಟ್ರೋನ್ನತಿಗಾಗಿ ಸ್ಥಾಪಿಸಿರುವರು. | ತೊಂದರೆಯಿಲ್ಲದ ಒತ್ತಾಯದ ಉಳಿತಾಯ

### ರೂ. ೫೦೦ ರಿಂದ ರೂ. ೫೦೦೦ ಗಳ ವರೆಗೆ ಜೀವ ವಿಮಾ ಪಾಲಿಸಿಗಳು.

**ಉದಾರ ಶರ್ತಿನ ಪಾಲಿಸಿಗಳು ! ಮಿತವ್ಯಯದ ಆಡಳಿತ !! ಸುಲಭವಾದ ಕಂತಗಳು !!!**

ಈ ಕಂಪನಿಯವರು ಕಾರ್ಯ ಕುಶಲತೆಯಿಂದ ನಾನಾ ಎಂಬುವ ಕಂಪನಿಗಳಿಗೂ ಮುಂದೆ ಇದ್ದಾರೆ. ಸ್ಥಾಪಿಸಿದ ಎರಡೇ ವರ್ಷಗಳಲ್ಲಿ ಇಷ್ಟು ಪ್ರಗತಿಯನ್ನು ಮಾಡಿ ತೋರಿಸಲಿಕ್ಕೆ ಉಜ್ವಲ ದೇಶಭಕ್ತರೂ, ಸುಪ್ರಸಿದ್ಧರೂ, ಲೋಕಪ್ರಿಯರೂ, ವಿಮೆಯ ವ್ಯವಹಾರದಲ್ಲಿ ನುರಿತ ಪರಿಪಕ್ವ ಬುದ್ಧಿಯುಳ್ಳವರೂ ಇರುವ ಬೋರ್ಡಿನ ಡಾಯರೆಕ್ಟರರ ಆಡಳಿತವೇ ಕಾರಣ. ಗೌರವದ ಕನ್ನಡಿಗ ವಿಮೇಚ್ಛುಗಳು ತಮ್ಮ ಹಿತವನ್ನೊಳಗೊಂಡ ಕರ್ನಾಟಕ ಮಾತೆಯ ಈ ತರಹದ ಸೇವೆಗಾಗಿ ತಮ್ಮ ಬೆಂಬಲವನ್ನೀಯುವರೆಂದು ತುಂಬಾ ನಂಬಿರುವೆವು.

### ಎಲ್ಲ ಕಡೆಯಲ್ಲಿಯೂ ಕುಶಲ ಏಜಂಟರು ಬೇಕು.

The Manager.

---

ಮುದ್ದಾದ ಅಕ್ಷರ! ಸುಲಭ ದರ!

### ಶ್ರೀ ರಂಗನಾಥ ಟೈಪ್ ಫೌಂಡರಿ
ಬೆಂಗಳೂರು.

ಕನ್ನಡ ಮತ್ತು ಇಂಗ್ಲಿಷ, ಎಲ್ಲಾ ತರದ ಟೈಪುಗಳೂ ಒಳ್ಳೊಳ್ಳೇ ಬಾರ್ಡರಗಳೂ ನಮ್ಮ ಫೌಂಡರಿಯಲ್ಲಿ ತಯಾರಾಗುತ್ತವೆ.

ಒಳ್ಳೇ ಮೆಟಲ್. ಬಹು ಅಂದವಾದ ಅಕ್ಷರಗಳು. ಬಲು ಸುಲಭ ದರ. ಕ್ಯಾಟಲಾಗ ತರಿಸಿಕೊಳ್ಳಿರಿ. ಒಮ್ಮೆ ಟೈಪುಗಳನ್ನು ತರಿಸಿಕೊಂಡು ಅನುಭವ ಹೊಂದಿರಿ. ಹಳೆ ಟೈಪುಗಳಿದ್ದರೆ ಸುಲಭ ಚಾರ್ಜಿಗೆ ಹೊಸದಾಗಿ ಹೊಯಿದು ಕೊಡುತ್ತೇವೆ.

ಪ್ರೊಪ್ರೈಟರ,
ಶ್ರೀ ರಂಗನಾಥ ಟೈಪ್ ಫೌಂಡರಿ
೨೭ ಕುಬೇರ ಸಾಹುಜಿ ಲೈನ್
ಚಿಕ್ಕಪೇಟೆ, ಬೆಂಗಳೂರು ಸಿಟಿ.

---

**ಲೋಕ**ಮತ ದಿನ ಪತ್ರಿಕೆಯನ್ನು ಪ್ರತಿ ದಿನವೂ ತಪ್ಪದೇ ಓದಿ ಎಲ್ಲ ವಿಷಯಗಳನ್ನೂ ತಿಳಿದುಕೊಳ್ಳಿರಿ.

ವಿಳಾಸ— ಮ್ಯಾನೇಜರ್ "ಲೋಕಮತ"
ಹುಬ್ಬಳ್ಳಿ.

---

**ನಿ**ಜಾಮ ಪ್ರಾಂತದ ಕನ್ನಡಿಗರಿಗೆ ಕನ್ನಡ ನಾಡಿನ ಎಲ್ಲ ಪ್ರಸಿದ್ಧ ಲೇಖಕರ ಪುಸ್ತಕಗಳೂ ನಮ್ಮಲ್ಲಿ ಯೋಗ್ಯ ಬೆಲೆಗೆ ದೊರೆಯುವವು.

ವಿಳಾಸ— ಎಸ್. ಸಿ. ಶಿವಲಿಂಗಣ್ಣ
ಕಲ್ಯಾಣ ಕರ್ನಾಟಕ ಬುಕ್ಕಡಿಪೊ ಗುಲಬರ್ಗಾ

---

**ವೀರ**ವಾಣಿ. ಇದು ವೀರಶೈವ ಮತದ ನಿಜ ತತ್ವವನ್ನು ತಿಳಿಸುವ ಮಾಸ ಪತ್ರಿಕೆ.

ವಾರ್ಷಿಕ ಚಂದಾ ರೂ. ೧-೮-೦
ಸಂಪಾದಕರು— ಗಂಗಾಧರಪ್ಪ ಹೊದ್ಲೂರು ಹುಬ್ಬಳ್ಳಿ.



# ಶರಣ ಸಂದೇಶ

THE SHARANA SANDESHA.




ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ-ಸೋಮವಾರ ತಾರೀಖು ೧೪ ನೆಯ ಮಾರ್ಚ ೧೯೩೮. | ಸಂಚಿಕೆ ೨೮


## ಮಹತ್ವದ ಸುದ್ದಿಗಳು.

-ಮಹಾತ್ಮಾ ಗಾಂಧಿಯವರು ತಾ. ೧೫ ನೆಯ ದಿವಸ ವರ್ಧಾ ದಿಂದ ಕಲಕತ್ತಾ ಪಟ್ಟಣಕ್ಕೆ ಹೋಗುವರು. ಅಲ್ಲಿ ತಾ. ೨೩ ರರ ವರೆಗೆ ಇರುವರು. ಮೊದಲು ರಾಜಕೈದಿಗಳ ಬಿಡುಗಡೆ ವಿಚಾರ ವಾಗಿ ಮಂತ್ರಿಮಂಡಲದ ಸಂಗಡ ವಿಚಾರ ವಿನಿಮಯ ಮಾಡಿ ಅನಂತರ ಗವ್ಹರ್ನರರಾದ ಲಾರ್ಡ ಬ್ರೆಬಾರ್ನರನ್ನು ಕಾಣುವರು.

—ರಾಷ್ಟ್ರಪತಿ ಸುಭಾಷಚಂದ್ರ ಬೋಸರವರ ಸಲಹೆ ಪ್ರಕಾರ ಲೋಕಶಾಹಿ ಸ್ವರಾಜ್ಯ ಪಕ್ಷವು ಕಾಂಗ್ರೆಸ್ಸಿನಲ್ಲಿ ಕೂಡಬೇಕೆಂದು ಆ ಪಕ್ಷದ ಕೆಲವರು ಪ್ರಯತ್ನಿಸುತ್ತಿದ್ದಾರೆ.

—ಬರುವ ಚಳಿಗಾಲದಲ್ಲಿ ಹಿಂದು ಮಹಾಸಭೆಯ ಅಧಿವೇಶನವು ನಾಗಪುರದಲ್ಲಿ ಕೂಡಬೇಕೆಂದು ದಿಲ್ಲಿಯಲ್ಲಿ ಕೂಡಿದ್ದ ಹಿಂದು ಮಹಾಸಭೆಯ ಕಾರ್ಯಕಾರಿ ಮಂಡಲವು ನಿರ್ಧರಿಸಿತು.

—ಬ್ಯಾ. ಜಿನ್ನಾರವರ ದೇಹಾರೋಗ್ಯವು ಕೆಟ್ಟದ್ದರಿಂದ ೧೫ ದಿನ ಹಾಸಿಗೆ ಹಿಡಿದಿದ್ದರು. ಈಗ ಪೂರ್ಣ ಗುಣಹೊಂದಿರುವ ಸಂತೋಷದ ಸಂಗತಿಯು ಪ್ರಕಟವಾಗಿದೆ.

—ಇಂದೂರು ಸಂಸ್ಥಾನದಲ್ಲಿ ಆದಿ ಹಿಂದುಗಳಿಗೆ ದೇವಾಲಯ ಪ್ರವೇಶಕ್ಕೆ ಪೂರ್ಣ ಅವಕಾಶ ದೊರೆಯುವಂತೆ ರಾಜಶಾಸನವಾಗಿದೆ. ಇಂದೂರಿನ ಮುಖ್ಯ ದೇವಾಲಯವಾದ ಗೋಪಾಲಮಂದಿರದಲ್ಲಿ ಆದಿ ಹಿಂದುಗಳು ಉತ್ಸವದೊಡನೆ ಕಳೆದ ೧೦ ನೆಯ ತಾರೀಖಿನ ದಿವಸ ಪ್ರವೇಶಮಾಡಿದರು.

—ರಾಷ್ಟ್ರಪತಿಗಳಾದ ಬಾಬು ಸುಭಾಷಚಂದ್ರ ಬೋಸರು ತಾ. ೧೦ ನೆಯ ದಿನ ಕಲಕತ್ತಾ ಪಟ್ಟಣಕ್ಕೆ ಹೋಗಲು ಪ್ರಚಂಡ ಮೆರವಣಿಗೆಯಿಂದ ನಾಗರಿಕರು ಸ್ವಾಗತಿಸಿದರು.

### ಬಾಗಲಕೋಟೆಯಲ್ಲಿ ಗಿರಣಿ.

ಸೊಲ್ಲಾಪುರದ ಶ್ರೀ ಪಾಟೀಲ ಮಲ್ಲಿಕಾರ್ಜುನಪ್ಪನವರ ಪ್ರಯತ್ನ ವಿಶೇಷದಿಂದ ಬಾಗಲಕೋಟೆಯಲ್ಲಿ "ದಿ ಕರ್ನಾಟಕ ಭಾಗ್ಯೋದಯ ಮ್ಯಾನುಫ್ಯಾಕ್ಚರಿಂಗ್ ಕಂಪನಿ" ಯ ಹೆಸರಿನಿಂದ ಒಂದು ಬಟ್ಟೆಯ ಗಿರಣಿಯು ಇಷ್ಟರಲ್ಲಿಯೇ ಏರ್ಪಡುವುದಿದೆ.

—ರಾಷ್ಟ್ರಪತಿಗಳಾದ ಬಾಬು ಸುಭಾಷಚಂದ್ರ ಬೋಸರವರ ತಂದೆಯವರು ಕಟಕದಲ್ಲಿ ಲಕ್ಷಾಂತರ ರೂ. ವೆಚ್ಚಮಾಡಿ ಕಟ್ಟಿಸಿದ್ದ ಭವ್ಯ ಭವನವನ್ನು ಈ ಬೋಸ ಬಂಧುಗಳು ರಾಷ್ಟ್ರಕ್ಕೆ ಅರ್ಪಿಸಿದರು.

### ಕಣ್ಮರೆಯಾದ ಶಿವಯೋಗಿ.

ಅಥಣಿ ಶ್ರೀ ಗಚ್ಚಿನಮಠದ ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ ಶ್ರೀ ಸಿದ್ಧಲಿಂಗ ಶಿವಯೋಗಿಗಳವರು ಕಳೆದ ೩ ನೆಯ ತಾರೀಖಿನ ದಿವಸ ಲಿಂಗೈಕ್ಯರಾದರು. ಈ ಮಹನೀಯರು ಮಹಾದಯಾಶಾಲಿಗಳೂ ಶಿವಾಚಾರ ಶೀಲರೂ ಪರಮ ವಿರಕ್ತರೂ ಆಗಿದ್ದರು. ಲಿಂಗೈಕ್ಯರಾದಾಗ ಇವರಿಗೆ ೯೦ ವರುಷಗಳಾಗಿದ್ದವು.

### ಶೋಚನೀಯ ನಿಧನ.

ಆಲಮಟ್ಟಿ ಶ್ರೀ. ಗುಡಗುಂಟಿ ರಾಚಯ್ಯನವರು ಕಳೆದ ೧೦ ನೆಯ ತಾರೀಖಿನ ದಿನ ಬಾಗಲಕೋಟೆಯಲ್ಲಿ ವಿಷಮ ಜ್ವರದಿಂದ ಶಿವಾಧೀನರಾದರೆಂದು ತಿಳಿಸಲು ವಿಷಾದಿಸುತ್ತೇವೆ. ಇವರು ಇಲ್ಲಿಯ ವೀರಶೈವ ವಿದ್ಯಾಲಯಕ್ಕೆ ತಮ್ಮ ಸ್ಥಳವನ್ನು ದಾನವಾಗಿ ಕೊಟ್ಟು ತುಂಬಾ ಸಹಾಯಮಾಡಿದ್ದರು. ಮೃತರ ಆತ್ಮಕ್ಕೆ ಶಾಂತಿ ದೊರೆಯಲೆಂದು ಹಾರೈಸುತ್ತೇವೆ.

### ಜೂಜಾಟದ ಸ್ತುತ್ಯ ಪ್ರತಿಬಂಧ.

ಆಲಮಟ್ಟಿ ಹತ್ತಿರ ಇರತಕ್ಕ ಚಂದ್ರಗಿರಿ (ಮೇಮಟ್ಟಿ) ಗ್ರಾಮದಲ್ಲಿ ಪದ್ಧತಿ ಪ್ರಕಾರ ತಾ. ೧೦ ನೆಯ ದಿನ ಜಾತ್ರೆ ಕೂಡಿದ್ದಿತು. ಈ ಜಾತ್ರೆಯಲ್ಲಿ ಜೂಜಾಡುತ್ತಿದ್ದುದು ಹೆಚ್ಚು. ಆದರಿಂದ ಅನೇಕ ಬಡವರ ಹಣ ಹೋಗಿ ಕಷ್ಟಕ್ಕೊಳಗಾಗುತ್ತಿದ್ದರು. ಈ ಸಾರೆ ನಿಡಗುಂದಿ ಪೋಲಿಸ್ ಹವಾಲದಾರರಾದ ಶ್ರೀ. ಮುರಿಗೆಪ್ಪ ಸಂಗಪ್ಪ ಸಜ್ಜನ ಇವರು ಈ ಜೂಜಾಟದವರಿಗೆ ಅಪ್ಪಣೆ ಕೊಡದೆ ಅದನ್ನು ನಿಲ್ಲಿಸಿದ್ದು ಅತ್ಯಂತ ಅಭಿನಂದನೀಯವಾದುದು. ಇದರಿಂದ ಅನೇಕ ಬಡವರು ಕಷ್ಟಕ್ಕೊಳಗಾಗುತ್ತಿದ್ದುದು ತಪ್ಪಿತು. ಶ್ರೀ. ಮುರಿಗೆಪ್ಪನವರ ಸ್ತುತ್ಯ ಮಾರ್ಗವನ್ನೇ ಎಲ್ಲ ಪೋಲಿಸ್ ಅಧಿಕಾರಿಗಳೂ ಅನುಸರಿಸಬಾರದೇ?

ಓರ್ವ ಹಿತಚಿಂತಕ.

# ಹಿಂದು ಜಾತಿ ಸಂಘಟನೆಯು ಅಪರಾಧವೆ?

ಪೂರ್ವಖಾನ ದೇಶದ ಜಳಗಾಂವ ಎಂಬಲ್ಲಿ ರಾಷ್ಟ್ರೀಯ ಸ್ವಯಂಸೇವಕ ಸಂಘದ ಪರವಾಗಿ ನಾಶಿಕದ ಶ್ರೀ. ಶ್ರೀರಾಮಗೋಸಾವಿ ಎಂಬ ವೀರ ರಾಷ್ಟ್ರಭಕ್ತರು ಮಾಘ ಶುದ್ಧ ೧೨ ದಿವಸ ಹಿಂದು ಜಾತಿಯ ಸಂಘಟನೆಯ ಸಂಬಂಧವಾಗಿ ಮಹತ್ವದ ಭಾಷಣವನ್ನು ಮಾಡಿದರು. ಅದರ ಮುಖ್ಯಾಂಶ ಹೀಗಿದ್ದಿತು—

**ಈ ಕಾಲದ ಹೊಸ ಬೈಗಳ !**

"ಈಗಿನ ಅನೇಕ ರಾಷ್ಟ್ರಭಕ್ತರು ಒಂದು ಹೊಸ ಬೈಗಳವನ್ನು ಗೊತ್ತುಮಾಡಿದ್ದಾರೆ! "ಜಾತಿವಾದ" ಎಂಬುದೇ ಆ ಹೊಸ ಬೈಗಳ. ಆದುದರಿಂದ ಈ ರಾಷ್ಟ್ರಭಕ್ತರ ಈ ಮಾತಿನಲ್ಲಿರುವ ಅರ್ಥವನ್ನು ಸ್ವಲ್ಪ ಮೊದಲು ನೋಡೋಣ.

ಹಿಂದುಸ್ಥಾನದಲ್ಲಿ ಹಿಂದು ಜಾತಿಯೊಂದೇ ಇಲ್ಲವ ಷ್ಟೆ. ಮುಸಲ್ಮಾನ್, ಕ್ರಿಸ್ತ, ಪಾರ್ಶಿ, ಮೊದಲಾದ ಬೇರೆ ಜಾತಿಗಳೂ ಕೆಲವು ಇದ್ದೇ ಇವೆ. ಅವು ತಮ್ಮ ಸಂಘಟನೆಗಾಗಿ ಬೇರೆ ಬೇರೆ ಸಂಘ ಅಥವಾ ಸಂಸ್ಥೆಗಳನ್ನೂ ಏರ್ಪಡಿಸಿಕೊಂಡು ಪ್ರಯತ್ನಿಸುತ್ತಲೂ ಇವೆ. ಅವುಗಳೆಲ್ಲಾ ಸ್ವಜಾತಿ ನಿವಾರಣೆಗಾಗಿ ಹೋರಾಡುತ್ತಲಿವೆಯೇ? ಇಲ್ಲವೇ ಇಲ್ಲ. ಸ್ವಜಾತಿಯ ಸಂರಕ್ಷಣೆಗಾಗಿಯೇ ಪ್ರಯತ್ನಿಸುತ್ತಲಿವೆ. ಎಂದಮೇಲೆ ಹಿಂದುಗಳೂ ಅದೇ ಕಾರ್ಯವನ್ನು ಮಾಡಿದರೆ ಅವರು ಮಾಡಿದ ಅಪರಾಧವೇನು? ಅವರೇಕೆ ನಿಂದೆಗೆ ಪಾತ್ರರು?

ಕಾಂಗ್ರೆಸ್ಸಿನವರೇನು ಜಾತಿಯನ್ನು ಮರೆತುಬಿಟ್ಟಿದ್ದಾರೆಯೆ? ಅಲ್ಪಸಂಖ್ಯಾಕ ಜಾತಿಗಳನ್ನು ಇವರು ಹಗಲಿರುಳೂ ಸ್ಮರಣೆಯಲ್ಲಿಟ್ಟುಕೊಂಡಿಲ್ಲವೆ? ಅಲ್ಪ ಸಂಖ್ಯಾಕ ಜಾತಿಗಳ ಧರ್ಮ, ಸಂಸ್ಕೃತಿ, ಮತ್ತು ಭಾಷೆಗಳನ್ನು ಸಂರಕ್ಷಿಸುವುದು ತಮ್ಮ ಕರ್ತವ್ಯವೇ ಆಗಿದೆಯೆಂದು ಕಾಂಗ್ರೆಸ್ ಸಂಸ್ಥೆಯು ಆಗಾಗ್ಗೆ ಘಂಟಾಘೋಷವಾಗಿ ಹೇಳುತ್ತಾ ಇಲ್ಲವೆ?

ಅಲ್ಪಸಂಖ್ಯಾಕವಾದ ಮುಸಲ್ಮಾನ್, ಕ್ರಿಸ್ತ, ಪಾರ್ಶಿ ಜಾತಿಗಳ ಸಂರಕ್ಷಣೆಯ ಭಾರವನ್ನು ಮಾತ್ರ ಕಾಂಗ್ರೆಸ್ ವಹಿಸಿಕೊಂಡಿದೆಯೆಂದರೆ ಬಹು ಸಂಖ್ಯಾಕವಾದ ಹಿಂದು ಜಾತಿಯ ನಾಶವನ್ನು ನಿರ್ಲಕ್ಷಿಸುತ್ತದೆಂದು ಅರ್ಥವೆ? ಅಲ್ಪ ಸಂಖ್ಯಾಕರಿಗೆ ತಮ್ಮ ಜಾತಿ, ಸಂಸ್ಕೃತಿ, ಧರ್ಮ, ಭಾಷೆಗಳನ್ನು ಮಾತ್ರ ಸಂರಕ್ಷಿಸಿಕೊಳ್ಳಲು ಕಾಂಗ್ರೆಸ್ ಅವಕಾಶ ಕೊಡುತ್ತದೆಯೇ ವಿನಾ ಬಹು ಸಂಖ್ಯಾಕರಾದ ಹಿಂದುಗಳಿಗೆ ಮಾತ್ರ ಆ ಅಧಿಕಾರವನ್ನು ಕೊಡುವುದಿಲ್ಲವೆಂಬೇ ಈ ನಿಂದಕರ ಅಭಿಪ್ರಾಯವೆ? ಅಲ್ಪ ಸಂಖ್ಯಾಕರಾದ ಮುಸಲ್ಮಾನ್, ಕ್ರಿಸ್ತ, ಪಾರ್ಶಿಗಳ ಧರ್ಮಗಳು ಮಾತ್ರ ಈ ದೇಶದಲ್ಲಿ ನಿರಾತಂಕವಾಗಿರಬೇಕೆಂದೂ ಬಹು ಸಂಖ್ಯಾಕರಾದ ಹಿಂದುಗಳ ಧರ್ಮವು ಮಾತ್ರ ಅಳಿದುಹೋದರೂ ಅಡ್ಡಿಯಿಲ್ಲವೆಂದೂ ಈ ನಿಂದಕರಾದ ರಾಷ್ಟ್ರಭಕ್ತರು ತಿಳಿದಿದ್ದಾರೆಯೆ?

ಹಿಂದು ಮಹಾಸಭೆಯ ಮೇಲೆ ಮಾಡುತ್ತಿರುವ ಈ ರಾಷ್ಟ್ರಭಕ್ತರ ಆಕ್ಷೇಪಗಳನ್ನು ನೋಡಿದರೆ ಹಿಂದು ಧರ್ಮ, ಸಂಸ್ಕೃತಿ, ಭಾಷೆಗಳು ಅಳಿದುಹೋದರೂ ಅಡ್ಡಿಯಿಲ್ಲವೆಂದೇ ಇವರ ಉದ್ದೇಶವಿದ್ದಂತೆ ತೋರುತ್ತದೆ, ಕೊಡಲಿಯ ಕಾವು ಕುಲಕ್ಕೆ ಮೃತ್ಯು ಎಂಬ ಗಾದೆಯು ಇಂಥವರಿಗೆ ಸಲ್ಲತಕ್ಕದ್ದಾಗಿಯೇ ಇದೆ.

**ಅನ್ಯರಿಗೆ ಅಹಿತ ಮಾಡುವ ಜಾತಿವಾದವು ನಿಂದ್ಯವಾದುದು.**

ಯಾರು ಅಲ್ಪಸಂಖ್ಯಾಕ ಜಾತಿಗಳ ಸಂರಕ್ಷಣೆಯ ಭಾರವನ್ನು ಹೊತ್ತುಕೊಳ್ಳುತ್ತಾರೆಯೋ ಅವರು ಬಹು ಸಂಖ್ಯಾಕ ಜಾತಿಯ ನಾಶವನ್ನು ಚಿಂತಿಸದೆ ಅದರ ಉನ್ನತಿಗೇನೇ ನೆರವಾಗಬೇಕು. ಹಾಗಾದರೇನೇ ಅಲ್ಪ ಸಂಖ್ಯಾಕ ಜಾತಿಗಳು ಸಂರಕ್ಷಿಸಲ್ಪಡುತ್ತವೆ. ಆದರೆ ಬಹು ಸಂಖ್ಯಾಕ ಜಾತಿಯು ಅಲ್ಪ ಸಂಖ್ಯಾಕ ಜಾತಿಗಳಿಗೆ ಅನ್ಯಾಯ ಮಾಡದಂತೆ ಮಾತ್ರ ನೋಡಿಕೊಳ್ಳಬೇಕು. ಅನ್ಯರಿಗೆ ಅಹಿತವನ್ನು ಮಾಡುವ ಜಾತಿವಾದವು ಯಾವಾಗಲೂ ಬಹು ನಿಂದ್ಯವಾದುದೇ ಸರಿ. ಹಿಂದು ಸಂಘಟನೆಯಿಂದ ಬಹು ಸಂಖ್ಯಾಕವಾದ ಹಿಂದು ಜಾತಿಯು ಅನ್ಯ ಜಾತಿಗಳ ಮೇಲೆ ಅತ್ಯಾಚಾರ ನಡೆಯಿಸಬಹುದೆಂದು ಈ ಪಾಪ ಭೀರುಗಳಾದ ರಾಷ್ಟ್ರಭಕ್ತರು ಯೋಚಿಸಿರುವರೇನು? ಅವರು ಹಾಗೆ ತಿಳಿದಿದ್ದರೆ ಅದು ಸಂಪೂರ್ಣ ಸುಳ್ಳು. ನಾನು ಬಹು ವಿನಯದಿಂದ ಈ ರಾಷ್ಟ್ರಭಕ್ತರಿಗೆ ಕೇಳುವುದೇನೆಂದರೆ,

ಈ ವರೆಗೆ ಎಷ್ಟು ಮಸೀದಿಗಳನ್ನು ಹಿಂದುಗಳು ಹಾಳುಮಾಡಿದ್ದಾರೆ? ಎಷ್ಟು ಚರ್ಚುಗಳನ್ನು ಕೆಡಿಸಿದ್ದಾರೆ? ಎಷ್ಟು ಮುಸಲ್ಮಾನ್ ಸ್ತ್ರೀಯರನ್ನು ಮೋಸದಿಂದಲೋ ಬಲಾತ್ಕಾರದಿಂದಲೋ ಹಿಂದುಗಳು ಓಡಿಸಿಕೊಂಡು ಹೋಗಿದ್ದಾರೆ? ಮುಸಲ್ಮಾನ್ ಮತ್ತು ಕ್ರಿಸ್ತಿ ಜನರನ್ನು ಹಿಂದುಗಳು ನಾನಾ ರೀತಿಗಳಿಂದ ಕುಲಗೆಡಿಸಿರುವುದೆಷ್ಟು? ನನಗೆ ತಿಳಿಸಲು ಬಹು ನಾಚಿಕೆಯೆಂದರೆ ಭ್ರಷ್ಟಗೊಳಿಸಲ್ಪಟ್ಟದ್ದರೆ ಹಿಂದು ದೇವಾಲಯಗಳು, ಓಡಿಸಿಕೊಂಡು ಹೋಗಲ್ಪಟ್ಟದ್ದರೆ ಹಿಂದು ಹೆಣ್ಣುಮಕ್ಕಳು, ಕುಲ ಕೆಡಿಸಲ್ಪಟ್ಟದ್ದರೆ ಹಿಂದು ಜನರು, ಈ ಪ್ರಕಾರ ಬಹು ಸಂಖ್ಯಾಕರಾದ ಹಿಂದುಗಳೇ ಅಲ್ಪ ಸಂಖ್ಯಾಕರಿಂದ ಈಗ ಹೆಚ್ಚಾದ ಅನರ್ಥಗಳಿಗೆ ಗುರಿಯಾಗಿದ್ದಾರೆ.

ಹೀಗಿದ್ದರೂ ನಮ್ಮ ದೇಶಭಕ್ತರು ಹಿಂದು ಸಂಘಟನೆಗೆ ವಿರೋಧಿಸುತ್ತಿದ್ದಾರಲ್ಲಾ! ನಾವು ಸ್ವ ಸಂರಕ್ಷಣೆಗು ಕೂಡಾ ಸಮರ್ಥರಾಗಲೇಬಾರದೆಂದು ಇವರ ಇಚ್ಛೆ! ದೇವರು ಇಂಥ ದೇಶಭಕ್ತರಿಂದ ಹಿಂದು ಜಾತಿಯನ್ನು ಸಂರಕ್ಷಿಸಲಿ!

**ಸಮರ್ಥರಾದ ಹಿಂದುಗಳ ಪ್ರಯತ್ನ.**

ಅಲ್ಪ ಸಂಖ್ಯಾಕ ಜಾತಿಗಳ ಸಂರಕ್ಷಣೆಯ ಚಿಂತೆಯಲ್ಲಿರುವ ನಮ್ಮ ರಾಷ್ಟ್ರಭಕ್ತರು ಬಹು ಸಂಖ್ಯಾಕವಾದ ಹಿಂದು ಜಾತಿಯು ಬಲಶಾಲಿಯಾಗದೆ ಅವರ ಇಷ್ಟವು ಪೂರೈಸುವುದಿಲ್ಲವೆಂದು ನಾನು ಅವರಿಗೆ ಸ್ಪಷ್ಟವಾಗಿ ತಿಳಿಸುತ್ತೇನೆ. ಈ ವರೆಗೆ ಸ್ವಾತಂತ್ರ್ಯದ ಹೋರಾಟವನ್ನು ನಡೆಯಿಸಿದವರು ಯಾರು ? ಹಿಂದುಗಳಲ್ಲವೆ ? ಅದರ ಪ್ರಯೋಜನವು ಅಲ್ಪ ಸಂಖ್ಯಾಕರಿಗೇನೇ ಈಗ ಹೆಚ್ಚಾಗಿ ದೊರೆತಿಲ್ಲವೆ? ಮುಂದೆ ಪೂರ್ಣ ಸ್ವಾತಂತ್ರ್ಯ ದೊರೆತಾಗ ಕೂಡಾ ಅದರ ಪ್ರಯೋಜನವು ಅಲ್ಪ ಸಂಖ್ಯಾಕರಿಗೇನೇ ಹೆಚ್ಚಾಗಿ ದೊರೆಯುವುದು.

ಏಕೆಂದರೆ, ಅನ್ಯರ ರಕ್ಷಣೆಗಾಗಿಯೇ ತನ್ನ ಪ್ರಾಣವನ್ನು ಮುಡುಪಾಗಿಟ್ಟ ರಘುವಂಶದ ದಿಲೀಪನ ಸಂಸ್ಕೃತಿಯೇ ಹಿಂದು ಸಂಸ್ಕೃತಿಯು. ಅಪಹರಿಸಿ ತಂದುಕೊಟ್ಟ ತರುಣಿಯನ್ನು ತಾಯಿಯಂತೆ ತಿಳಿದ ಶಿವಛತ್ರಪತಿಯ ಸಂಸ್ಕೃತಿಯೇ ಹಿಂದು ಸಂಸ್ಕೃತಿಯು. ಆದುದರಿಂದ ಹಿಂದು ಸಂಸ್ಕೃತಿಯು ಸಂರಕ್ಷಿಸಲ್ಪಟ್ಟು ಅದು ಬಲಶಾಲಿಯಾದರೆ ಯಾವ ವಿಪತ್ತು ಉಂಟಾಗಬಹುದೋ ಎಂದು ನಮ್ಮ ಆಕ್ಷೇಪಕರು ಚಿಂತಿಸಬೇಕಾದುದಿಲ್ಲ. ಆದುದರಿಂದ ಹಿಂದು ಜಾತಿ ಸಂಘಟನೆಯ ಕಾರ್ಯವು ಅನರ್ಥಕರವಾದುದೆಂದು ಯಾರೂ ತಿಳಿಯಬೇಕಾದುದಿಲ್ಲ. ಇಷ್ಟೇ ಅಲ್ಲ; ಇದು ಪವಿತ್ರವಾದ ಮತ್ತು ಅತ್ಯವಶ್ಯಕವಾದ ರಾಷ್ಟ್ರೀಯ ಕಾರ್ಯವೇ ಆಗಿದೆಯೆಂದು ತಿಳಿದು ಸಕಲ ಹಿಂದುಗಳೂ ಈ ಮಹತ್ಕಾರ್ಯವನ್ನು ಮಾಡಲೇಬೇಕು. ಹಿಂದು ಸಂಸ್ಕೃತಿಯಂತಹ ಉದಾರ ಮತ್ತು ಪರಹಿತ ಸಂಸ್ಕೃತಿಯು ಜಗತ್ತಿನಲ್ಲಿ ಬೇರೊಂದಿಲ್ಲ. "

# ಮೊಹೆಂಜೋದಾರೊದಲ್ಲಿಯ

## ಆರ್ಯಪೂರ್ವಕಾಲಿನ ದ್ರಾವಿಡ ಸಂಸ್ಕೃತಿಯ ಪ್ರಸಾರ.

### ರೆವ್ಹರೆಂಡ ಎಚ್. ಹೆರಾಸರ ಭಾಷಣ.

(ಅನುವಾದಕರು:— ಕರಮರಕರ ಅನಂತರಾಯರು ಎಂ. ಎ. ಎಲ್‌ಎಲ್. ಬಿ. ವಕೀಲ ಧಾರವಾಡ.)

(ಮುಂಬಯಿಯಲ್ಲಿ ಸೆಂಟ ಝೇವಿಯರ್ಸ ಕಾಲೇಜದ ಸಭಾ ಮಂಟಪದಲ್ಲಿ ತಾ. ೨೯-೧-೩೮ ನೇ ದಿವಸ ಆ ನ ರೇ ಬ ಲ್ ಮಿ. ಜಸ್ಟಿಸ ಬೀ. ಜಿ ವಾಡಿಯಾ ಹಾಯಕೋರ್ಟ ಮುಂಬಯಿ ಇವರ ಅಧ್ಯಕ್ಷತೆಯಲ್ಲಿ ರೆವ್ಹರೆಂಡ ಎಚ್. ಹೆರಾಸರು ತಮ್ಮ ವ್ಯಾಖ್ಯಾನ ಮಾಲೆಯ ಕಟ್ಟಕಡೆಯ ಸಮಾರೋಪದ ಭಾಷಣ ಮಾಡಿದರು. ಆ ಭಾಷಣದ ಸಾರಾಂಶ ರೂಪದಿಂದ ಅನುವಾದ)

ನಿನ್ನಿನದಿವಸ ತಾ. ೨೮-೧-೩೮ ನೇ ದಿವಸದ ವ್ಯಾಖ್ಯಾನದಲ್ಲಿ ಮೊಹೆಂಜೊದಾರೊದ ಕಾಲಗಣನೆ (೫೬೦೦ ಬಿ. ಸಿ.) ಕುರಿತು ನಾವು ವಿಚಾರ ಮಾಡಿದ್ದಾಯಿತು. ಅದು ಸುಮೇರಾದ ಪ್ರಾಚೀನ ಸಂಸ್ಕೃತಿಗಿಂತಲೂ ಪ್ರಾಕ್ಕಾಲೀನವಾದುದೆಂದೂ ಸಹಜವಾಗಿ ತಿಳಿಯುವುದು. ಈ ವಿಧಾನಕ್ಕೆ ಬೇರೆ ಆಧಾರಗಳಾದರೂ ಇರುವವು. ಸುಮೇರುದಲ್ಲಾದರೂ ದೇವತಾಕ್ರಮದ ಅಸ್ತಿತ್ವವೇ ಇದ್ದುದು ಕಂಡುಬರುತ್ತದೆ. ಆನ್. ಎನ್ಲಿಲ್ ಮತ್ತು ಆಯಾ ಎಂಬುವ ಈ ದೇವತೆಗಳ ಹೆಸರು. ಆದರೆ ಸುಮೇರದಲ್ಲಿ ಎನ್ಲಿಲನೆ ಶ್ರೇಷ್ಠತರದ ದೇವನಾಗಿದ್ದನು. ಮತ್ತು ಆತನಿಗೆ ಈ ಇತಿಹಾಸದ ಕಾಲದಲ್ಲಿ ಸ್ಮೃತಿ ಮಾತ್ರ ಮಹತ್ವವು ಉಳಿದಿತ್ತು. ಈ ಸಂಗತಿ ಮೇಲಿಂದಾದರೂ ಮೊಹೆಂಜೊದಾರೊದಲ್ಲಿಯ ಸಂಸ್ಕೃತಿಯ ಇತಿಹಾಸದ ಪೂರ್ವಕಾಲಿನತ್ವವೇ ಸಿದ್ಧವಾಗುತ್ತದೆ.

ಸುಮೇರುದಲ್ಲಿ ಅಲ್ಲಿಯ ಶ್ರೇಷ್ಠತರ ದೇವತೆಗೆ ತಲೆಯಮೇಲೆ ಎರಡು ಬಾಜುವಿಗೆ ಎರಡು ಜುಟ್ಟುಗಳು ಇದ್ದುದು ಕಂಡುಬರುತ್ತದೆ. ಆದರೆ ಮೊಹೆಂಜೊದಾರೊದಲ್ಲಿ ಆತನಿಗೆ ಒಂದೇ ಜುಟ್ಟ ಲವಿದ್ದು ಆವನು ನಗ್ನವಿದ್ದದ್ದನ್ನು ಚಿತ್ರಿಸಿದೆ. ಹಾಗು ಸುಮೇರು ಮತ್ತು ಮೊಹೆಂಜೊದಾರೊ ಈ ಎರಡೂ ಸ್ಥಳಗಳಲ್ಲಿ ಶ್ರೇಷ್ಠ ದೇವರ ತಲೆಯ ಮೇಲೆ ತ್ರಿಶೂಲ ಇರುವದೆಂದು ಕಂಡುಬರುತ್ತದೆ. ಹಾಗೂ ಮೊಹೆಂಜೊದಾರೋದ ರಾಶೀ ಚಕ್ರದಲ್ಲಿ ಎಂಟು ರಾಶಿಗಳೇ ಇರುವವು. ಆದರೆ ಸುಮೇರದಲ್ಲಿ ಹನ್ನೆರಡು ರಾಶಿಗಳ ಚಕ್ರವಿದ್ದಿತು. ಈ ಹೊರ್ತು ಓಎನ್ನೆಸ್ ಮತ್ತು ಓದಕೋಣ ಇವ ಸಹ ಬರೋಜಸ್‌ವವರು ಎಲ್ಲರೂ ಅರ್ಧಮೀನಾಕೃತಿಯುಳ್ಳ ರಾಕ್ಷಸರೆಂದು ಬಣ್ಣಿಸಿದ್ದಾರೆ. ಆದರೆ ಇವರು ಇತಿಹಾಸದ ಕಾಲದಲ್ಲಿ ಬರೆ. ಸ್ಮೃತಿ ಮಾತ್ರ ಅಸ್ತಿತ್ವವನ್ನು ಹೊಂದಿದ ಇತಿಹಾಸ ಪೂರ್ವ ಕಾಲೀನದ ಮೀನಜನಾಂಗದವರೆ ಅಲ್ಲವೆ? ಬಾಯಬಲ್‌ದೊಳಗಾದರೂ ಸುಮೇರಿಯನರು ಪೂರ್ವ ದಿಕ್ಕಿನಿಂದ ಬಂದರೆಂದು ಉಲ್ಲೇಖಮಾಡಲಾಗಿದೆ. ಈ ಮಾತಿನ ಮೇಲಿಂದಾದರೂ ಸುಮೇರಿಯನರು ಮೊಟ್ಟಮೊದಲು ಹಿಂದುಸ್ಥಾನದಿಂದ ಬಂದಿರಬೇಕೆನ್ನುವ ಸಂಗತಿಯು ಸ್ಪಷ್ಟವಾಗುತ್ತದೆ.

ಇನ್ನು ಮೇಲೆ ಇಜಿಪ್ತ ದೇಶದ ಸಂಬಂಧದಲ್ಲಿ ಹೇಳುವದೇನೆಂದರೆ ಇಜಿಪ್ತದ ಮೊಟ್ಟಮೊದಲಿನ ಅರಸನಾದ "ಮರಮೇರ" ಇವನಾದರೂ ದ್ರಾವಿಡ ಅರಸನೇ ಇರುವನೆಂದು ನಾವು ಊಹೆ ಮಾಡಿದರೆ ಅದು ತಪ್ಪಾಗಲಾರದು. ಅಲ್ಲಿಯ ಒಂದು ಕೆತ್ತನೆ ಕೆಲಸದಮೇಲೆ ಅವನ ಜೊತೆಯಲ್ಲಿ ತಮ್ಮ ಜನಾಂಗದ ಚಿನ್ಹಗಳನ್ನು ಧರಿಸಿದಂಥ ನಾಲ್ಕು ಜನರಾದರೂ ಇದ್ದುದು ಕಂಡುಬರುತ್ತದೆ. ಇದೇ ಮಾದರಿಯ ಚಿತ್ರಗಳಾದರೂ ಮೊಹೆಂಜೊದಾರೊದಲ್ಲಿ ಉಪಲಬ್ಧವಾಗಿರುತ್ತವೆ. ಇಜಿಪ್ತದ ಇತಿಹಾಸ ಪೂರ್ವಕಾಲೀನ ಹಡಗಗಳ ಸ್ತಂಭದ ಮೇಲೆ ಕೊರೆದದ್ದು ಕಂಡುಬರುತ್ತದೆ. ಈ ಹೊರತು ಇಜಿಪ್ತದಲ್ಲಿ ಉಪಲಬ್ಧವಾದ ಚಿತ್ರಲಿಪಿ. ಅನ: ಎಂಬ ಸ್ಥಳದಲ್ಲಿ ಪೂಜಿಸುತ್ತಿರುವ 'ರಾ' ಎಂಬುವ ಸೂರ್ಯದೇವತೆಯ ಅಸ್ತಿತ್ವ ಲಿಂಗಪೂಜೆ ಶ್ರೇಷ್ಠತರವಾದಂಥ ದೇವತಾ ಕಾರ್ಯವು, ದೇವರ ಅಷ್ಟ ಪ್ರಕೃತಿಗಳು ಪುರುಷ ಮತ್ತು ಪ್ರಕೃತಿಗಳ ಏಕೀಭೂತವಾದಂಥ ಆಕೃತಿಯ ಚಿತ್ರಗಳು (ಅರ್ಧನಾರೀ ನಟೇಶ್ವರನ ಕಲ್ಪನೆಯಂತೆ) ಮುಂತಾದವುಗಳ ಅಸ್ತಿತ್ವವನ್ನು ನೋಡಿ ಭಾರತದಿಂದ ಇಲ್ಲಿಯ ಸಂಸ್ಕೃತಿಯು ಇಜಿಪ್ತಕ್ಕೆ ಹೇಗೆ ಮಾರ್ಗ ಆಕ್ರಮಣ ಮಾಡಿರಬಹುದೆಂದು ಸಹಜವಾಗಿ ಸಿದ್ಧವಾಗುತ್ತದೆ.

ಮಿನೋವಾ ಮತ್ತು ಮೊಹೆಂಜೊದಾರೊ ಈ ಸ್ಥಳಗಳಲ್ಲಿ ಉಪಲಬ್ಧವಾದ ಲಿಪಿಗಳಲ್ಲಿ ಸಾಮ್ಯವಿದ್ದದ್ದನ್ನು ಬೇರೆ ಬೇರೆ ಬರಹಗಾರರು ಸೂಚಿಸಿರುವರು. ಮಿನೊವಾದಲ್ಲಿಯ ಲೇಖಗಳನ್ನು ಮೊಹೆಂಜೊದಾರೋದ ಲೇಖಗಳಂತೆ ದ್ರಾವಿಡೀ ಭಾಷೆಯಲ್ಲಿಯೇ ಓದಬಹುದು. ಮಿನೋಸ ಎಂಬುವ ಪ್ರಸಿದ್ಧ ಅರಸನ್ನು ಮಿಲನ್ (ತೇಜಸ್ವಿ) ಎಂಬುವ ಅರಸನೆ ಇರಬಹುದು. ಏಕೆಂದರೆ 'ಮೀನ' ಎಂಬ ಹೆಸರುಳ್ಳ ಅರಸರು ಮೊಹೆಂಜೊದಾರೊದಲ್ಲಿ ಇದ್ದರು. ಕಿಂಬಹಾನಾ ಗ್ರೀಕ ಇತಿಹಾಸಕರೂ ವರ್ಣಿಸಿದ ಮೀನೊ ಪೌರಸ ಎಂಬುವ ಅರ್ಧ ವೃಷಭ ಮನುಷ್ಯ ಕೃತಿಯುಳ್ಳ ರಾಕ್ಷಸನಾದರೂ ಅಲ್ಲಿಯ ಹೊಸ ರಾಶೀಚಕ್ರದಲ್ಲಿ ಉದ್ದೀರಿತ ಮಾಡಿದಂಥ ದೇವರ ಎರಡು ಪ್ರಕೃತಿಗಳ ಪ್ರದರ್ಶನವೇ ಸರಿ. ಮೊಹೆಂಜೊದಾರೊದಲ್ಲಾದರೂ ಅರ್ಧ ಮೀನ ಮೇಷಗಳ ಆಕೃತಿಯ ಒಂದು ಚಿತ್ರವು ಇದ್ದದ್ದನ್ನು ನಾನು ಮೇಲೆ ಹೇಳಿದ್ದೇನೆ. ಹಾಗು ಅಥೆನ್ಸದಿಂದ ಮೀನೊ-ಪೌರಸನಿಗೆ ಆಹಾರವೆಂದು ಪ್ರತಿ ಒಂಬತ್ತು ವರುಷಗಳ ನಂತರ ಏಳು ಬಾಲಕರನ್ನೂ ಮತ್ತು ಕುಮಾರಿಕೆಯರನ್ನೂ ಕಳುಹಿಸುವ ಪ್ರಘಾತವಿದ್ದಿತೆಂದು ಹೇಳುತ್ತಾರೆ. ಆದರೆ ಮೊಹೆಂಜೊದಾರೊದಲ್ಲಿದ್ದ ನರಮೇಧದ ಕಲ್ಪನೆಯಂತೆ ಅಲ್ಲಿಯಾದರೂ ವೃಂಗೆ ಆಹುತಿ ಕೊಡುವ ಪದ್ಧತಿ ಇರಬಹುದಲ್ಲವೆ? ಮೊಹೆಂಜೊದಾರೊದಲ್ಲಿ ಚಿತ್ರಿಸಿದ ಎರಡು ಬಗೆಯ ಕೊಡ್ಡಿ ಎಂದರೆ 'ಕೂಡು' ಈ ಅರ್ಥನಿದರ್ಶಕ ಚಿನ್ಹವಾಗುತ್ತದೆ. ಕರ್ನಾಟಕದಲ್ಲಿ ಲಿಂಗಾಯತರ ಮನೆಗಳಲ್ಲಿ ಈಗಾದರೂ ಈ ಚಿನ್ಹವು ಇದ್ದುದು ಕಂಡುಬರುತ್ತದೆ. ಕ್ರಿಟದೇಶದಲ್ಲಿ ಈ ಪೂಜನೀಯ ಸ್ತಂಭಗಳ ಮೇಲೆ ಕೊರೆದದ್ದು ಕಂಡುಬರುತ್ತದೆ. ಪುರುಷ ಮತ್ತು ಪ್ರಕೃತಿ ಇವುಗಳ ಐಕ್ಯವನ್ನು ನಿದರ್ಶಿಸುವ ಇವೆ ಚಿನ್ಹಗಳಿರುವವು.

ಫಿನಿಸಿಯನರೇ ಮೆಡಿಟರೇನಿಯನ್ ಸಮುದ್ರದ ದಂಡೆಗುಂಟ ಇರುವ ಪ್ರದೇಶಗಳಲ್ಲಿ ಸಾಂಸ್ಕೃತಿಕ ಮತ್ತು ಲಿಪಿಯ ಪ್ರಸಾರ ಮಾಡಿದರೆಂಬುವ ಕಲ್ಪನೆ ಈ ವರೆಗೆ ಪ್ರಚಾರದಲ್ಲಿದ್ದಿತು. ಮತ್ತು ಅವರು ಎರಿಥ್ರಿಅನ್ (ಅರಬೀ) ಸಮುದ್ರದಾಚೆಯಿಂದ ಬಂದಿರುವರೆಂದು ಹೆರೊಡೊಟಸ ಈತನು ಹೇಳುತ್ತಾನೆ. ಆದರೆ ನಾಮಸಾದೃಶ್ಯದ ಮೇಲಿಂದ ನೋಡಲಾಗಿ ವೇದದಲ್ಲಿ 'ಪಣಿ' ಎಂದು ವರ್ಣಿಸಲ್ಪಟ್ಟಿರುವರು. ಮತ್ತು ಫಿನೀಶಿಯನ್‌ರು ಇವರು ಬೇರೆ ಬೇರೆ ಜನಾಂಗದವರಿರಬಹುದೆಂದು ನಮಗೆ ತೋರುವದಿಲ್ಲ. ಹಾಗು ಗ್ರೀಕ ಭಾಷೆಯೊಳಗಿನ 'ಪಿನಿಕ್ಸ' ಮತ್ತು ದ್ರಾವಿಡ ಭಾಷೆಯಲ್ಲಿಯ 'ಪಣಿ' ಇವೆರಡೂ ಶಬ್ದಗಳ ಅರ್ಥವೆಂದರೆ "ತಾಳವೃಕ್ಷ" ವೆಂದು

ಇರುವದು. ಫಿನಿಶಿಅನರು ವ್ಯಾಪಾರದಲ್ಲಿ ಮತ್ತು ಸಮುದ್ರ ಯಾನ ಕಲೆಯಲ್ಲಿ ನಿಪುಣರು. ಇದೇ ಸಂಗತಿಯು ವೇದ ಪೂರ್ವಕಾಲೀನ ಪಣಿಗಳ ವಿಷಯವಾಗಿ ಎಂದರೆ ಮೀನರು, ಪರವರು, ತಿರಯರರು ಮುಂತಾದ ಜನಾಂಗಗಳ ವಿಷಯವಾಗಿ ನಿಜವಿರುವದೆಂದು ನಾನು ಹೇಳಬಹುದು. ಹಾಗೂ ಫಿನಿಶಿಅನ್ನರ ವಿಷಯವಾಗಿ ಆದ ಹೊಸ ಶೋಧನೆಯೊಳಗೆ ಗಾಥದ ಮೂಲ ಹೆಸರು ಅಲೊಯನ್ (ಸಮುದ್ರದ ಒಂದು ತೆರೆ) ಎಂದು ಇರುವದು. ಮತ್ತು ಇವರು ತಾಯಮ್ಮನವರ ಉಪಾಸನೆಯನ್ನಾದರೂ ಪ್ರಸಾರಮಾಡಿದ್ದರಿಂದ ಆರ್ಯ ಪೂರ್ವಕಾಲೀನ ಭಾರತ ದೇಶದ ಸಹ ಪರಸ್ಪರ ಸಂಬಂಧ ಇದ್ದಿತೆಂದು ನಾನು ಊಹೆಮಾಡಿದರೆ ಅದು ತಪ್ಪಾಗಲಾರದು.

ಹಾಗೂ ಇಟಲಿ ಮತ್ತು ಸ್ಪೇನ ಈ ದೇಶಗಳ ವಿಷಯವಾಗಿ ಹೇಳುವದೇನೆಂದರೆ ಅಲ್ಲಿಯ ಎಟ್ರುಸ್ಕನ ಮತ್ತು ಆಯಬೇರಿಯನ್‌ರು ಮೆಡಿಟರೇನಿಯನ್ ಸಮುದ್ರದ ಪೂರ್ವ ದಿಕ್ಕಿನಿಂದ ಅಥವಾ ಉತ್ತರ ಆಫ್ರಿಕಾ ಕಡೆಯಿಂದ ಬಂದಿರಬೇಕೆಂದು ಇತಿಹಾಸಕಾರರು ಮತ್ತು ವಂಶ ವಿಜ್ಞಾನ ಶಾಸ್ತ್ರಜ್ಞರು ಹೇಳುತ್ತಾರೆ. ಆದರೆ ಅವರು ಈ ಪ್ರದೇಶಗಳಲ್ಲಿ ಅಗದೀ ಕಟ್ಟಕಡೆಗೆ ಸ್ಥಾನಾಂತರಿತ ಆಗಿ ಇಲ್ಲಿಯೇ ಉಳಿದುಕೊಂಡರೆಂದು ನಾವು ಊಹಿಸಬಹುದು. ಇವರ ಲಿಪಿಯಾದರೂ ಅಕ್ಷರವುಳ್ಳದ್ದಾಗಿದ್ದರೂ ಅದು ಆರ್ಯಪೂರ್ವಕಾಲೀನ ಲಿಪಿಯಿಂದ ವಿಕಾಸಹೊಂದಿರುವದೆಂದು ಸ್ಪಷ್ಟವಾಗಿ ಕಂಡುಬರಬಹುದು. ಹಾಗೂ ಈ ದೇಶಗಳಲ್ಲಿ ಉಪಲಬ್ಧವಾಗುವ ಸಂಸ್ಕಾರಾವಶೇಷಗಳಾದರೂ ಮೇಲ್ಕಂಡ ವಿಧಾನಕ್ಕೆ ಮುಂಜೊರಿಸುತ್ತ ಅವೆ ಎಂಬುದನ್ನು ಸಹಜವಾಗಿ ತಿಳಿಯುವುದು. ಹೇಗೆಂದರೆ ಅಲ್ಲಿ ಉಪಲಬ್ಧವಾದ ಚಿತಾಭಸ್ಮ ಪಾತ್ರಿಗಳು ಭಂಡಿಗಲ್ಲಿನ ಶವಾಗಾರಗಳು ಅಥವಾ ತಾಯಮ್ಮನವರ ಕೊರೆದ ಚಿತ್ರಗಳು ಮುಂತಾದವುಗಳು ನಮ್ಮ ವಿಧಾನಕ್ಕೆ ಬಲವತ್ತರವಾದ ಪುರಾವೆಗಳಾಗಿರುವವು. ಈ ಹೊತ್ತು ಮೊಹೆಂಜೊದಾರೊದಲ್ಲಿಯ ಕೆತ್ತನೆ ಕೆಲಸಗಳ ಮೇಲೆ ಮತ್ತು ಕ್ರೀಟದೊಳಗಿನ ರಂಗಚಿತ್ರಗಳಲ್ಲಿ ಹೋರಿಗಳ ಹೋರಾಟವನ್ನು ದಿಗ್ದರ್ಶನೆ ಮಾಡಿದ್ದು ಕಂಡುಬರಬಹುದು. ದಕ್ಷಿಣ ಹಿಂದುಸ್ಥಾನದಲ್ಲಿ ಹಾಗೂ ಸ್ಪೇನದಲ್ಲಿ ಈ ಹೋರಾಟದ ಅಸ್ತಿತ್ವವು ಇದ್ದದ್ದು ಈಗಾದರೂ ಕಂಡುಬರಬಹುದು. ಹಾಗೂ ಬಾಸ್ಕ ಜನಾಂಗದವರ ಈಗಿನ ಭಾಷೆಯ ಮೇಲಿಂದ ಅದು ಮೂಲತಃ ಮೊಹೆಂಜೊದಾರೋದ ಭಾಷೆಯದಿಂದಲೇ ವಿಕಾಸವನ್ನು ಹೊಂದಿದೆ ಎಂಬುವ ಸಂಗತಿಯು ತೌಲನಿಕ ಅಭ್ಯಾಸದಿಂದ ಸಿದ್ಧವಾಗುತ್ತದೆ.

ಈ ಪ್ರಕಾರ ನೋಡಲಾಗಿ ಮೆಡಿಟರೇನಿಯನ ವಂಶದವರು ಪೂರ್ವ ದಿಕ್ಕಿನಿಂದ ಪಶ್ಚಿಮ ದಿಕ್ಕಿಗೆ ಹೇಗೆ ಹೋದರೆಂಬುವದು ಕಂಡುಬರಬಹುದು. ಈ ವರೆಗೆ ಮೆಡಿಟರೇನಿಯನ್ ವಂಶದವರು ಪಶ್ಚಿಮ ದಿಕ್ಕಿನಿಂದ ಮಾರ್ಗ ಆಕ್ರಮಿಸುತ್ತಾ ಪೂರ್ವದ ಕಡೆಗೆ ಬಂದರೆಂದು ಭಾವನೆಯಿದ್ದಿತು. 'ಅದು ಎಷ್ಟು ನಿರಾಧಾರವಿರುವದೆಂದು ಮೇಲ್ಕಂಡ ಸಂಗತಿಗಳ ಮೇಲಿಂದ ಸಿದ್ಧವಾಗುವದು. ಈ ಪರಿಭ್ರಮಣದ ಮಾರ್ಗವಾದರೂ ಸಿಲೋನದಿಂದ ಆಯರ್ಲಂಡದ ವರೆಗೆ ಉಪಲಬ್ಧವಾಗುವ ಶವಾಗಾರಗಳ ಮೇಲಿಂದ ನಿಶ್ಚಿತವಾಡಲಿಕ್ಕೆ ಬರುತ್ತದೆ. ಆಯರ್ಲಂಡದ ಮೂಲ ಜನಾಂಗದವರು ಅಯಬೇರಿಯಾ ಪ್ರದೇಶದಿಂದ ಬಂದರೆಂದು ದಂತಕಥೆಯಿದೆ. ಹೀಗೆ ಅಖಿಲ ಪ್ರಾಚೀನ ಜಗತ್ತಿನ ಸಂಸ್ಕೃತಿಯ ಐಕ್ಯವು ಇದ್ದದ್ದು ಕಂಡುಬರುತ್ತದೆ. ಸುಮೇರಿಅನ್ ಪೂರ್ವಜರಾದ ಹಾಮಿಟಿಕ ವಂಶದವರಿಗಾದರೂ ಇದೇ ಸಾಂಸ್ಕೃತಿಕ ಪರಂಪರೆ ಇರುವದೆಂದು ನಾವು ಹೇಳಬಹುದು.

"ಸಂಯುಕ್ತ ಕರ್ನಾಟಕ."

---

## ಸಂಸ್ಥಾನ ಕಿತ್ತೂರ.

### ಶ್ರೀಗುರುಸಿದ್ಧೇಶ್ವರ ಸ್ವಾಮಿಯ ಶಿವರಾತ್ರಿಯ ಯಾತ್ರಾ ಮಹೋತ್ಸವವು.

ಪ್ರತಿ ವರುಷದಂತೆ ಈ ವರುಷ ಕಿತ್ತೂರಲ್ಲಿ ಶಿವರಾತ್ರಿಯ ಮಹೋತ್ಸವವು ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಮಹಾ ಸ್ವಾಮಿಗಳ ನೇತೃತ್ವದಲ್ಲಿ ಬಹು ವಿಜೃಂಭಣೆಯಿಂದ ಸಮಾರೋಪಣೆಯಾಯಿತು. ಶಿವಯೋಗದ ಸಮಯಕ್ಕೆ ಶ್ರೀ. ಮ. ನಿ. ದುರುದುಂಡೇಶ್ವರ ಮಹಾಂತ ಸ್ವಾಮಿಗಳು ಅರಭಾವಿ ಶ್ರೀ. ಮ. ನಿ. ಸಿದ್ಧರಾಮ ಸ್ವಾಮಿಗಳು ಯಕ್ಕುಂಡಿ ಶ್ರೀಮದ್ಘನಲಿಂಗ ಚಕ್ರವರ್ತಿಗಳಾದ ತೊರಗಲ್ ಪಟ್ಟದ್ದೇವರು ಮತ್ತು ಹೊಂಗಲ ಪಟ್ಟದ್ದೇವರು ಶ್ರೀಮಂತ ಹೂಲಿಕೇರಿ ಇನಾಮದಾರರು ಶ್ರೀಯುತ ಯಕ್ಕುಂಡಿ ಗುರುಪಾದಪ್ಪನವರು ಮತ್ತು ಮಹಾನ್ಮಹಾ ವಿದ್ವನ್ಮಣಿಗಳಾದ ಗಾಯನಕಾರರೂ ಹಲಿಗೆ ಕರಡಿ ವಾದ್ಯದ ಮಜಲುಗಾರರೂ ಬಂದು ಜಾತ್ರೆಯ ವೈಭವವನ್ನು ವಿಶೇಷ ಸೊಬಗಿನಿಂದ ಹೆಚ್ಚಿಸಿದರು. ಈ ಜಾತ್ರೆಯ ಕಾರ್ಯಕ್ರಮಗಳು ೫ ದಿವಸ ಪೂರ್ವದಲ್ಲಿ ಕೆಳಗೆ ಕಾಣಿಸಿದ ಪ್ರಕಾರ ಆದ ವಿವರ.

ಮೊದಲನೇ ದಿವಸ ಕಲ್ಮಠದ ಪಂ. ಚಂದ್ರಶೇಖರ ಶಾಸ್ತ್ರಿಗಳ ವಚನ ಪ್ರವಚನ. ಎರಡನೇ ದಿವಸ ಯಕ್ಕುಂಡಿ ಶ್ರೀಗಳವರ ವಚನ ಪ್ರವಚನ. ಮೂರನೇ ದಿವಸ ಗುರುಪಾದಪ್ಪನವರ ವಚನ ಪ್ರವಚನ, ೪ ನೇ ದಿವಸ ಅರಭಾವಿ ಶ್ರೀಗಳವರ ಅಧ್ಯಕ್ಷತೆಯಲ್ಲಿ ಶಿವರಾತ್ರಿಯ ಮಹಾತ್ಮೆಯ ಬಗ್ಗೆ ಸದರೀ ಗುರುಪಾದಪ್ಪನವರ ಕೀರ್ತನೆಯಾದನಂತರ ಯಕ್ಕುಂಡಿ ಶ್ರೀಗಳವರ ಮತ್ತು ತೊರಗಲ್ಲ ಪಟ್ಟದ್ದೇವರ ಭಾಷಣಗಳಾಗಿ ಶಿವರಾತ್ರಿಯ ನಾಮವನ್ನು ಸಾರ್ಥಕಗೊಳಿಸಿದರು. ಮರುದಿವಸ ಮುಂಜಾನೆ ಶ್ರೀಮಂತ ಹೂಲೀಕೇರಿ ಇನಾಮದಾರರ ಅಧ್ಯಕ್ಷತೆಯಲ್ಲಿ ಹೊಂಗಲದ ಗವಾಯರಾದ ಚಿನ್ನಪ್ಪನವರ ಮಂಜುಳ ಗಾಯನವಾಯಿತು. ಮತ್ತು ಹಲಿಗೆ ಕರಡಿ ವಾದ್ಯಗಳ ಮೋಜಲುಗಳಾದವು, ನಂತರ ಮಹಾಗಣಾರಾಧನೆಯೂ ಸಾಯಂಕಾಲ ಮಹಾಸ್ವಾಮಿಯ ರಥೋತ್ಸವವು ಪ್ರಾರಂಭವಾಯಿತು ಊರ ಯಾವತ್ತು ಭಕ್ತಜನರು ಸ್ವಾಮಿಯ ರಥವನ್ನು ಆದರದಿಂದ ಬರಮಾಡಿಕೊಂಡು ತಮ್ಮ ಕಾಣಿಕೆಗಳನ್ನು ಅರ್ಪಿಸುತ್ತಿದ್ದರು. ಸ್ವಾಮಿಯ ರಥವು ಭಕ್ತರ ಕಾಣಿಕೆಗಳನ್ನು ಸ್ವೀಕರಿಸುತ್ತ ಎರಡೂ ಪೇಟೆಗಳಲ್ಲಿ ಸಂಚರಿಸಿ ತಿರುಗಿ ಚೌಕಿ ಮಠದ ಪಾದಗಟ್ಟೆಗೆ ಮುಟ್ಟಿತು. ಸಾವಿರಾರು ಹಳ್ಳಿಯ ಜನರು ಕೂಡಾ ತಂಡೋಪತಂಡವಾಗಿ ಉತ್ಸವಕ್ಕೆ ಸೇರಿದು ಕಾರ್ಯಕ್ರಮವನ್ನು ಸಮಾಪ್ತಿಸಿದರು.

ಮತ್ತೊಂದು ವಿಶೇಷ ಮಹತ್ವದ ಸಂಗತಿಯೇನೆಂದರೆ ಇದೇ ವರುಷ ಇದೇ ನಮ್ಮ ಚೌಕಿಮಠದಲ್ಲಿ ವೈರಾಗ್ಯಮೂರ್ತಿಗಳಾದ ಶ್ರೀ. ಚೆನ್ನವೀರದೇವರವರು ಅತ್ಯಂತ ಶ್ರಮ ವಹಿಸಿ ದಾಸೋಹದ ಕಾರ್ಯವನ್ನು ಕೈಕೊಂಡದ್ದಕ್ಕಾಗಿ ನಾವೆಲ್ಲರೂ ತುಂಬಾ ಋಣಿಯಾಗಿದ್ದೇವೆ.

ವ್ಯವಸ್ಥಾಪಕ ಮಂಡಳಿ.

---

—ಹಿಂದು ಜಿಮಖಾನದವರು ಈ ವರ್ಷದ ಸರ್ವೋತ್ಕೃಷ್ಟ ಕ್ರಿಕೆಟ್ ಆಟಗಾರರೆಂದು ಪ್ರಸಿದ್ಧರಾದ ಮೇಜರ ನಾಯಡುರವರಿಗೆ ಎಲ್. ಆರ್. ತೇರ್ಸಿಯವರ ಬಂಗಾರ ಪದಕವನ್ನು ಕೊಡಬೇಕೆಂದು ನಿರ್ಧರಿಸಿದ್ದಾರೆ.

—ಕರಾಚಿಯಲ್ಲಿ ಬಾಂಬು ನಿರೋಧಕ ಮನೆಗಳನ್ನು ಕಟ್ಟುವ ಬಗ್ಗೆ ವಿಚಾರ ನಡೆದಿದೆ.

# ವಿಜಾಪುರ ಜಿಲ್ಲೆಯ
## ಕಾಂಗ್ರೆಸ್ಸಿನಲ್ಲಿ ಜಾತಿಯ ಭೂತ!

(ಬರೆದವ— ಮಧುಕರ.)

ಕಾಂಗ್ರೆಸ್ಸೆಂದರೆ ಸಾಮಾನ್ಯವಾಗಿ ಜಾತಿ ಜಗಳವನ್ನು ಅಲಿಪ್ತ
ವಾಗಿಟ್ಟ ಸಂಸ್ಥೆ. ಯಾವ ಜಾತಿಯವನಾದರೂ ಕಾಂಗ್ರೆಸ್ಸಿನ
ಧ್ವಜದಡಿಯಲ್ಲಿ ಎಲ್ಲರೂ ಸರಿಸಮಾನರೇ. ಜಾತಿಯಿಂದ ನಾನು
ಹೆಚ್ಚು ಅವನು ಹೆಚ್ಚು ಎಂಬುದಕ್ಕೆ ಅಲ್ಲಿ ಅಸ್ಪದವೇ ಇಲ್ಲ. ಅದ
ಕ್ಕಾಗಿಯೇ ಇಂದು ಕಾಂಗ್ರೆಸ್ಸು ಭಾರತೀಯರ ಏಕಮೇವ ರಾಷ್ಟ್ರೀ
ಯ ಸಂಸ್ಥೆಯಾಗಿದೆ. ಕಾಂಗ್ರೆಸ್ಸೆಂದರೆ ಬಡತನದಲ್ಲಿ ಬೆಂದು ಬೆಂ
ಡಾದ ಹಳ್ಳಿಯ ರೈತನಿಗೂ ತುಂಬಾ ಪ್ರೇಮ. ಬಡಜನಗಳನ್ನು
ಮನಬಂದಂತೆ ಸುಲಿಯುತ್ತಿರುವ ಬಂಡವಾಲಗಾರರಿಗೆ ಭಯ!
ಇಷ್ಟೇ ಏಕೆ? ಜಗತ್ತನ್ನೇ ಬುಡಮೇಲು ಮಾಡಲು ಶಕ್ತಿಯುಳ್ಳ
ಇಂಗ್ಲಿಷ್ ಸರಕಾರಕ್ಕೂ ಕಾಂಗ್ರೆಸ್ಸೆಂದರೆ ದಿಗಿಲು! ಇಷ್ಟೆಲ್ಲ ಗೌ
ರವ ಪ್ರತಿಷ್ಠೆಗಳು ಕಾಂಗ್ರೆಸ್ಸಿಗೆ ಪ್ರಾಪ್ತವಾಗಲು ಕಾಂಗ್ರೆಸ್ಸಿನಲ್ಲಿ
ಕಳೆದ ಅರ್ಧ ಶತಮಾನದಿಂದಲೂ ಅನುಪಮವಾದ ಸ್ವಾರ್ಥತ್ಯಾಗ,
ಉಜ್ವಲವಾದ ದೇಶಭಕ್ತಿ, ಭಾರತೀಯರನ್ನು ರಸಾತಳಕ್ಕೆ ತುಳಿದ
ಜಾತಿ ಭೂತದಿಂದ ನಿರ್ಲಿಪ್ತರಾಗಿ ದುಡಿದು ಮಡಿದ ಸಾವಿರಾರು
ಜನಗಳು ಕಾರಣರಾಗಿದ್ದಾರೆ. ಕಾಂಗ್ರೆಸ್ಸಿನಲ್ಲಿ ಪಕ್ಷ ಭೇದಗಳಿದ್ದರೂ
ಜಾತಿ ಭೇದದ ಗಂಧವೂ ಇಲ್ಲದಿದ್ದುದರಿಂದಲೇ ಇಂದು ಕಾಂಗ್ರೆ
ಸ್ಸಿನಲ್ಲಿ ಹಿಂದು, ಮುಸಲ್ಮಾನ್, ಜೈನ, ಶೀಖ, ಕ್ರಿಸ್ತ ಮೊದಲಾದ
ಎಲ್ಲ ಮತ ಸಂಘದವರೂ ಒಮ್ಮನಸ್ಸಿನಿಂದ ದುಡಿಯುತ್ತಿದ್ದಾರೆ.

ಜಾತ್ಯಾಭಿಮಾನದಿಂದ ನಿರ್ಲಿಪ್ತವಾದ ಕಾಂಗ್ರೆಸ್ಸಿನಲ್ಲಿಯೂ
ಈಗ ನಮ್ಮ ಜಿಲ್ಲೆಯಲ್ಲಿ ಜಾತಿ ಭೂತವು ಸಾವಕಾಶವಾಗಿ ಬಂದು
ಸೇರುತ್ತಿತ್ತು ಇದೆಯೆಂದು ತೋರುತ್ತದೆ. ಈ ವರೆಗೆ ಮುಂದೆ ಬಂದು
ಮುಂದಾಳುಗಳೆಂದು ಮೆರೆದ ಕೆಲವು ಕಾಂಗ್ರೆಸ್ ಭಕ್ತರು ತಮ್ಮ
ಗುಣಕ್ಕೆ ಸರಿಯಾಗಿಯೇ, ಇಲ್ಲವೋ ಮತ್ತಾವ ಕಾರಣದಿಂದಲೋ
ತಮಗೆ ನಿರಾಯಾಸವಾಗಿ ದೊರೆಯುತಕ್ಕ ಮಾನ ಮರ್ಯಾದೆ ಸ್ಥಾನ
ಗಳು ತಪ್ಪಿದೊಡನೆಯೇ ತಮ್ಮ ಹಿಂದಿನ ನಿರಂಕುಶ ಆಳ್ವಿಕೆಯನ್ನು
ನೆನೆಯಿಸಿಕೊಂಡು ಕಾಂಗ್ರೆಸ್ಸಿನ ವಾತಾವರಣವನ್ನು ದೂಷಿತಗೊಳಿ
ಸುತ್ತಿದ್ದಾರೆ. ಮೊದಲಿನಂತೆ ಕಾಂಗ್ರೆಸ್ಸಿನಲ್ಲಿಯೂ ಬ್ರಾಹ್ಮಣ, ಬ್ರಾ
ಹ್ಮಣೇತರ ಲಿಂಗಾಯತ ಬ್ರಾಹ್ಮಣ ವಾದವನ್ನು ಹುಟ್ಟಿಸುವಂತೆ
ತಮ್ಮ ಮನೋವೃತ್ತಿಯಿಂದ ಸಿದ್ಧಮಾಡಿಕೊಡುತ್ತಿದ್ದಾರೆ. ಇಷ್ಟಿ
ದ್ದರೂ ಕಾಂಗ್ರೆಸ್ಸಿನಲ್ಲಿ ಬ್ರಾಹ್ಮಣ ಲಿಂಗಾಯತ ವಾದವನ್ನು ಹೆಚ್ಚಿ
ಸಲು ಲಿಂಗಾಯತರೇ ಕಾರಣರೆಂದು ಮುಂದಾಳುಗಳೆಂದು ಮೆರೆದ
ಕೆಲವರು ಗುಲ್ಲನ್ನೆಬ್ಬಿಸಿರುವರು. ಜಾತಿ ಭೂತದಿಂದ ನಿರ್ಲಿಪ್ತ
ವಾದ ಕಾಂಗ್ರೆಸ್ಸಿನಲ್ಲಿಯೂ ಜಾತಿ ಭೂತವು ಉದಯವಾಗಲು ಯಾ
ರು ಕಾರಣರೆಂಬುದು ಸರ್ವರಿಗೂ ತಿಳಿಯುವುದು ಅವಶ್ಯಕವಾಗಿದೆ.

ಕಾಂಗ್ರೆಸ್ಸಿನವರು ಅಸೆಂಬ್ಲಿ ಇಲೆಕ್ಷನ್ನಿನಲ್ಲಿ ಪ್ರವೇಶಿಸುವುದ
ಕ್ಕಿಂತಲೂ ಪೂರ್ವದಲ್ಲಿ ಸರ್ವ ಸಾಧಾರಣವಾಗಿ ಜಾತಿ ಭೂತವು
ಕಾಂಗ್ರೆಸ್ಸನ್ನು ಆವರಿಸಿರಲಿಲ್ಲ. ಕೆಲವು ಜನ ಮುಂದಾಳುಗಳು
ಕಾಂಗ್ರೆಸ್ ಭಕ್ತರು ತಮ್ಮ ಜಾತಿಯನ್ನೇ ಮುಂದುಮಾಡಿ ಜಾತ್ಯಾ
ಭಿಮಾನದಿಂದ ವರ್ತಿಸುತ್ತಿದ್ದರೂ ಇತರರು ತಮ್ಮಲ್ಲಿ ಎದುರಿಸುವ
ಷ್ಟು ಸಾಕಷ್ಟು ಶಕ್ತಿಯಿಲ್ಲವೆಂದೋ ಅಥವಾ ಕಾಂಗ್ರೆಸ್ಸಿನ ಮೇಲಿನ
ಪ್ರೇಮದಿಂದಲೋ ಅದನ್ನು ಸಹಿಸುತ್ತಲೇ ಬಂದಿದ್ದರು. ಆದರೆ
ಕಳೆದ ಇಲೆಕ್ಷನ್ನಿನ ಕಾಲದಲ್ಲಿ ಹೊರಬಿದ್ದ ಜಾತಿ ಜಗಳದ ಜ್ವಾಲೆ
ಯು ಈ ವರೆಗೂ ನೊಂದದೆ ಹೆಚ್ಚಾಗುತ್ತಲೇ ಇರುವುದು ತುಂಬಾ
ದುರ್ದೈವದ ಸಂಗತಿಯು.

ಮತದಾರರ ಒಲವು, ನಿಷ್ಠೆ, ವಿಶ್ವಾಸ ಮೊದಲಾದವುಗಳನ್ನು
ನೋಡಿ ಅಂಥ ಕಾಂಗ್ರೆಸ್ ಭಕ್ತರನ್ನೇ ಕಾಂಗ್ರೆಸ್ಸು ಎಲ್ಲಾ ಕಡೆಗೂ
ಹುರಿಯಾಳುಗಳನ್ನಾಗಿ ನಿಲ್ಲಿಸಿತು. ಮತದಾರರ ಬೆಂಬಲವಿದೆಯೆಂ
ದು ಕಂಡುಬಂದ ಕಾಂಗ್ರೆಸ್ಸಿನಲ್ಲಿ ಸೇರದೆ ಇದ್ದವರನ್ನು ಒತ್ತಾಯ
ದಿಂದ ಅವರ ಪ್ರೇಮ ಸಂಪಾದಿಸಿ ಕಾಂಗ್ರೆಸ್ಸಿನ ಪರವಾಗಿ ಅವ
ರನ್ನು ಹುರಿಯಾಳುಗಳನ್ನಾಗಿ ಅನೇಕರನ್ನು ನಿಲ್ಲಿಸಿದುದೂ ಉಂಟು.
ಜನಗಳ ಮತದಾರರ ಬೆಂಬಲವನ್ನು ಅರಿತು ಅನುಕೂಲರಾದ ಜನ
ಗಳನ್ನು ಕಾಂಗ್ರೆಸ್ಸಿನವರು ಇಲೆಕ್ಷನ್ನಿನಲ್ಲಿ ನಿಲ್ಲಿಸಿದ್ದುದರಿಂದಲೇ
ಹಿಂದುಸ್ಥಾನದ ೭ ಪ್ರಾಂತಗಳಲ್ಲಿಯೂ ಕಾಂಗ್ರೆಸ್ಸು ಪ್ರಚಂಡವಾದ
ಬಹುಮತವನ್ನು ಪಡೆಯುವಂತಾಯಿತೆಂಬುದು ನಿರ್ವಿವಾದದ ಮಾತು.

ವಿಜಾಪುರ ಜಿಲ್ಲೆಯ ದಕ್ಷಿಣ ಭಾಗಕ್ಕೆ ೨ ಸ್ಥಳಗಳ ಪೈಕಿ
ಒಂದು ಸ್ಥಳಕ್ಕೆ ಒಬ್ಬರು ಹುರಿಯಾಳಾಗಿ ನಿಂತರು. ಇವರನ್ನು
ನಿಲ್ಲಿಸುವಾಗ ಏನೇ ಗೊಂದಲವಾಗಿದ್ದರೂ ಕಾಂಗ್ರೆಸ್ಸಿನ ಪರವಾಗಿ
ನಿಂತರೆಂದರೆ ಇವರನ್ನು ಆರಿಸಿತರುವುದು ಆ ಭಾಗದ ಮತದಾರರ
ಕರ್ತವ್ಯವಾಗಿತ್ತು. ನಿಂತವರ ಸ್ವಾರ್ಥತ್ಯಾಗ, ಧೈರ್ಯ, ಸ್ಥೈರ್ಯ
ಈ ವರೆಗೆ ಮಾಡಿದ ದೇಶಸೇವೆ ಅನುಭವಿಸಿದ ಕಷ್ಟ ನಷ್ಟ ಎಲ್ಲವು
ಗಳೂ ನಿಜವಾಗಿಯೂ ಹೊಗಳತಕ್ಕಂಥವುಗಳೇ. ಹೀಗಿದ್ದರೂ
ಇವರು ಇಲೆಕ್ಷನ್ನಿನಲ್ಲಿ ಆರಿಸಿಬರದಿದ್ದುದು ತುಂಬಾ ದುರ್ದೈವದ
ಸಂಗತಿಯಾಗಿದೆಯಲ್ಲದೆ ವಿಚಾರಮಾಡತಕ್ಕ ಮಾತೂ ಆಗಿದೆ.
ಈ ವಿಷಯದಲ್ಲಿ ಸಂಪೂರ್ಣ ಮತದಾರರೇ ತಪ್ಪುಗಾರರೆಂದು
ಹೇಳಲು ಬರುವಂತಿಲ್ಲ. ಅಲ್ಲಿಯ ಮತದಾರರು ಜಾತ್ಯಾಭಿಮಾನ
ವನ್ನು ಮುಂದೆ ಮಾಡಿದರೆಂದೂ ಅನ್ನುವಂತಿಲ್ಲ. ಇಲೆಕ್ಷನ್ನಿನ
ಕಾಲಕ್ಕೆ ಕೆಲವರು ಮಾಡಿದ ಅಪ ಪ್ರಚಾರ, ಮೋಸ ದಕ್ಷಿಣ ಭಾಗ
ಕ್ಕೇನೇ ಕೇಂದ್ರವಾದ ಬಾಗಲಕೋಟೆಯಲ್ಲಿ ಜಾತಿ ಜಾತಿಗಳಲ್ಲಿ ವೈ
ಮನಸ್ಸುಂಟುಮಾಡುವ ಪ್ರಕಟನೆ, ಪ್ರಚಾರ, ಮೊದಲಾದವುಗಳಿಂ
ದಲೇ ಅಲ್ಲಿಯ ಸ್ಥಿತಿಯು ಹಾಗಾಯಿತೆಂಬುದು ಸರ್ವರಿಗೂ ಸ್ಪಷ್ಟ
ಹೊಳೆದ ಸಂಗತಿಯಾಗಿದೆ.

ಇಷ್ಟರಿಂದಲೇ ಇದು ಶಾಂತವಾಗಿದ್ದರೆ ಚೆನ್ನಾಗಿತ್ತು. ಪು
ನಃ ಹರಿಪುರ ಅಧಿವೇಶನದ ಪ್ರತಿನಿಧಿಗಳ ಆಯ್ಕೆಯಲ್ಲಿಯೂ ಇದೇ
ಹಾಡು. ಪದ್ಧತಿಯಂತೆ ವಿಜಾಪುರ ಜಿಲ್ಲೆಯ ೧೪ ಪ್ರತಿನಿಧಿಗಳ
ಆಯ್ಕೆಯೂ ಆಯಿತು. ಕೆಲವರು ಅವಿರೋಧವಾಗಿಯೂ ಕೆಲ
ವರು ಇಲೆಕ್ಷನ್ನಿನಲ್ಲಿ ಬಹುಮತದಿಂದಲೂ ಆರಿಸಿ ಬಂದರು. ಆ
ರಿಸಿಬಂದವರ ಎಲ್ಲ ಹೆಸರುಗಳನ್ನು ಪ್ರಾಂತಿಕ ಕಮಿಟಿಯವರು
ಮಂಜೂರುಮಾಡಿ ಪ್ರಕಟಿಸಿದ್ದರೆ ಯಾವ ತೊಂದರೆಯೂ ಇರು
ತ್ತಿರಲಿಲ್ಲ. ತಮ್ಮ ಪೈಕಿ ಒಬ್ಬರು ಆರಿಸಿ ಬರದಿದ್ದುದಕ್ಕೆ ಕೆಲವರ
ಹೆಸರನ್ನಷ್ಟೇ ಪ್ರಕಟಿಸಿ ಕೆಲವರ ಪ್ರತಿನಿಧಿತ್ವದ ಬಗ್ಗೆ ತಕರಾರು
ಮುಂದೆಮಾಡಿ ತಕರಾರುಗಳನ್ನು ವಿಚಾರಿಸಿ ಯೋಗ್ಯ ನಿರ್ಣಯ
ಕೊಡಲು ಪ್ರಾಂತಿಕ ಕಮಿಟಿಯವರೇ ೩ ಜನಗಳದ್ದೊಂದು ಕಮಿ
ಟಿ ನಿಯಮಿಸಿದರು. ಆದರೇನು? ಹರಿಪುರ ಕಾಂಗ್ರೆಸ್ಸಾಗಿಹೋ
ದರೂ ಕಮಿಟಿಯವರ ನಿರ್ಣಯ ಹೊರಬೀಳಲೇ ಇಲ್ಲ. ಒಬ್ಬರೇ
ಒಬ್ಬರು ಆರಿಸಿ ಬರದಿದ್ದುದಕ್ಕೆ ಇಷ್ಟೆಲ್ಲ ತೊಂದರೆ ಏಕೋ ತಿಳಿ
ಯದಾಗಿದೆ. ಇದರಿಂದ ಜನಗಳಲ್ಲಿ ಮುಂದಾಳುಗಳ ಬಗ್ಗೆ ತಪ್ಪು
ತಿಳುವಳಿಕೆಯಾಗುವುದರಲ್ಲಿ ಸಂದೇಹವೇನು?

ಹರಿಪುರ ಅಧಿವೇಶನದ ಪ್ರತಿನಿಧಿಗಳ ತಕರಾರುಗಳ ನಿರ್ಣ
ಯವು ಹರಿಪುರ ಕಾಂಗ್ರೆಸ್ ಆಗಿಹೋದರೂ ತಿಳಿಯದಿದ್ದುದಕ್ಕಾ
ಗಿ ಆರಿಸಿಬಂದು ತಕರಾರುಗಳ ಬಲೆಯಲ್ಲಿ ಸಿಕ್ಕವರು ನೊಂದು
ಮೊದಲಿನ ಸರಕಾರದಲ್ಲಿ ತೀರ್ಮಾನವಾದರೂ ಸಿಗುತ್ತಿತ್ತು. ಆದ
ರೆ ಕಾಂಗ್ರೆಸ್ಸಿನ ಇವರ ರಾಜ್ಯದಲ್ಲಿ ಅದು ಕೂಡಾ ಇಲ್ಲ. ಜಾತ್ಯಾ
ಭಿಮಾನಿಗಳ ಪ್ರಾಬಲ್ಯವೇ ಪ್ರಾಬಲ್ಯ. ಅವರು ಮಾಡಿದುದೇ ನ್ಯಾ
ಯ ಎಂದು ಹೇಳಿದರೆ ತಪ್ಪೆ?

ಈ ಜಿಲ್ಲೆಯಲ್ಲಿಯೇ ಇಷ್ಟೊಂದು ಗಲಾಟೆ ಏಕೆಂದು ಎಲ್ಲರೂ ವಿಚಾರಿಸತಕ್ಕ ಮಾತಾಗಿದೆ. ಮುಂದಾಳುಗಳಾಗಿ ಕೆಲಸ ಮಾಡುವ ಕೆಲವರ ಸ್ವಾರ್ಥಸಾಧನೆ ಜಾತ್ಯಾಭಿಮಾನ ಮೊದಲಾದವುಗಳೇ ಕಾರಣವೆಂದು ತಿಳಿಯುವುದರಲ್ಲಿ ಜನಗಳ ತಪ್ಪೇನು?

ಈ ಬೆಂಕಿಯು ಇಷ್ಟರಿಂದಲೇ ನಿಂದಲಿಲ್ಲ. ಮುಂದೆ ಜಿಲ್ಹಾ ಕಾಂಗ್ರೆಸ್ ಕಮಿಟಿಯ ಆಯ್ಕೆಯಲ್ಲಿಯೂ ತನ್ನ ಪ್ರಭಾವವನ್ನು ತೋರಿಸಿತು. ಜಾತಿ ಜಾತಿಗಳಲ್ಲಿ ಜಗಳ ಹಚ್ಚಿ ತಮ್ಮ ಬೇಳೆ ಬೇಯಿಸಿಕೊಳ್ಳಲು ಕೂಡಾ ಕೆಲವರು ಹಿಂದುಮುಂದೆ ನೋಡಲಿಲ್ಲ. ತಮ್ಮ ಗುಣಕ್ಕೆ ತಕ್ಕಂತೆ ಅವರಿಗೆ ಪ್ರತಿಫಲ ದೊರೆಯದಿದ್ದುದರಿಂದ ಈಗಿನ ಕಾಂಗ್ರೆಸ್ ಅಧಿಕಾರಿ ವರ್ಗದ ಮೇಲೆ ಮನಬಂದಂತೆ ಟೀಕಿಸುತ್ತಿರುವುದು ನ್ಯಾಯವೆ? ಇವರು ಮೊದಲು ತಮ್ಮ ಮನೆ ಸುಧಾರಿಸಿಕೊಂಡು ಎರಡನೆಯವರ ಮನೆ ಸುಧಾರಿಸಲು ಹೊರಡಬೇಕೆಂದೇ ನನ್ನ ಪ್ರಾರ್ಥನೆ.

---




ಶಾ. ಶ. ೧೮೬೦ ನೆಯ ಫಾಲ್ಗುಣ ಶು|| ೧೩. ಸೋಮವಾರ.

## ಕಾಂಗ್ರೆಸ್ ಮತ್ತು ಹಿಂದು ಮಹಾಸಭೆ.

ಹಿಂದುಸ್ಥಾನದ ರಾಜಕೀಯ ಸ್ವಾತಂತ್ರ್ಯಕ್ಕೋಸ್ಕರ ನ್ಯಾಯಸಮ್ಮತವಾದ ಶಾಂತತೆಯ ರೀತಿನೀತಿಗಳನ್ನನುಸರಿಸಿ ಪ್ರಯತ್ನಿಸುವವರೆಲ್ಲರೂ ಕಾಂಗ್ರೆಸ್ಸಿನಲ್ಲಿ ಸೇರುವುದೇ ಶ್ರೇಯಸ್ಕರವು. ಕಾಂಗ್ರೆಸ್ಸಿನ ಹೊರಗಿದ್ದು ಪಕ್ಷವನ್ನು ಕಟ್ಟಿ ಹೋರಾಡುವುದು ಪಾರತಂತ್ರ್ಯದಲ್ಲಿರುವ ಇಂಥ ರಾಷ್ಟ್ರಕ್ಕೆ ಹಿತಕರವಲ್ಲ. ಅಂತೆಯೇ ರಾಷ್ಟ್ರಾಧಿಪತಿಗಳಾದ ಬಾಬು ಸುಭಾಷಚಂದ್ರ ಬೋಸರವರು ಲೋಕಶಾಹಿ ಸ್ವರಾಜ್ಯ ಪಕ್ಷವೂ ಕಾಂಗ್ರೆಸ್ಸಿನಲ್ಲಿ ಸೇರುವುದು ಅಗತ್ಯವೆಂದೇ ಸೂಚಿಸಿದ್ದಾರೆ.

ಹಿಂದು ಮಹಾಸಭೆಯ ಧ್ಯೇಯವು ಕೂಡಾ ರಾಜಕೀಯ ವಿಷಯದಲ್ಲಿ ಕಾಂಗ್ರೆಸ್ಸಿನಂತೆಯೇ ಇರುವುದರಿಂದ ಅದು ಕಾಂಗ್ರೆಸ್ಸಿನಲ್ಲಿ ಸೇರಿ ರಾಜಕಾರಣದ ಕಾರ್ಯಕಲಾಪಗಳನ್ನೆಲ್ಲಾ ಅದರಲ್ಲಿ ಕೂಡಿಕೊಂಡೇ ನಡೆಯಿಸುವುದು ಅನುಕೂಲವೂ ಶ್ರೇಯಸ್ಕರವೂ ಆಗಿದೆಯಷ್ಟೆ. ಅಂತೆಯೇ ಹಿಂದು ಮಹಾಸಭಾಧ್ಯಕ್ಷರಾದ ಸ್ವಾತಂತ್ರ್ಯವೀರ ಸಾವರಕರರು ಕಾಂಗ್ರೆಸ್ಸಿನಲ್ಲಿ ಸೇರುವ ಸಂಬಂಧವಾಗಿ ಸೇನಾಪತಿ ಬಾಪಟ ಇವರು ಪ್ರಸ್ತಾಪಿಸಿದ್ದಾರೆ. ಅದಕ್ಕೆ ಬ್ಯಾ. ಸಾವರಕರರು ವ್ಯಕ್ತಗೊಳಿಸಿದ ಅಭಿಪ್ರಾಯಗಳು ತುಂಬಾ ವಿಚಾರಣೀಯವಾಗಿವೆ.

### ಶ್ರೀ ಸಾವರಕರರ ಅಭಿಪ್ರಾಯ.

"ರಾಷ್ಟ್ರೀಯ ಸಭಾಧ್ಯಕ್ಷರು ಒಂದು ಪ್ರಕಟನೆಯನ್ನು ಹೊರಡಿಸಿ ಕಾಂಗ್ರೆಸ್ಸಿನ ಜಿಲ್ಲಾ ಕಮಿಟಿ ಅಥವಾ ಬೇರೆ ಕಮಿಟಿಯ ಅಧಿಕಾರಿಯು ಹಿಂದು ಮಹಾಸಭೆಯಲ್ಲಿ ಅಥವಾ ಅದರ ಕಾರ್ಯದಲ್ಲಿ ಸೇರಕೂಡದೆಂದು ಅಪ್ಪಣೆ ಮಾಡಿದ್ದಾರೆ. ಆದರೆ ಮುಸ್ಲಿಂ ಲೀಗಿನಲ್ಲಿ ಸೇರಿದವರಿಗೆ ಮಾತ್ರ ಈ ನಿಯಮವಿಲ್ಲ. ಮುಸ್ಲಿಂಲೀಗಿನ ಸಭಾಸದರು ಕಾಂಗ್ರೆಸ್ಸಿನ ಮಂತ್ರಿಗಳಾದರೂ ಅಡ್ಡಿಯಿಲ್ಲ. ಈ ಪಕ್ಷಪಾತವು ಹೋಗಬೇಕು.

ಹಿಂದುತ್ವವು ನನ್ನ ಪ್ರಾಣವಾಗಿದೆ. ಕಾಂಗ್ರೆಸ್ ಇದರ ಮೇಲೆ ಬಹಿಷ್ಕಾರ ಹಾಕಿದ್ದರಿಂದ ನಾನು ಕಾಂಗ್ರೆಸ್ಸಿನಲ್ಲಿ ಸೇರುವುದು ಶಕ್ಯವೇ ಇಲ್ಲ. ಹಿಂದುಗಳನ್ನು ವಿರೋಧಿಸುತ್ತ ಅನುಚಿತವಾದ ಸೌಕರ್ಯಗಳನ್ನು ಅಪೇಕ್ಷಿಸುತ್ತಿರುವ ಮುಸಲ್ಮಾನರಿಗೆ ಕಾಂಗ್ರೆಸ್ಸಿನಲ್ಲಿ ಸೇರಲು ಅವಕಾಶವಿದ್ದುದು ಆಶ್ಚರ್ಯಕರವಲ್ಲವೆ?

ಕಾಂಗ್ರೆಸ್ಸಿನಲ್ಲಿ ಸೇರಲು ಹಿಂದು ಮಹಾಸಭೆಯೇನೂ ಯಾವ ಹಿಂದುವಿಗೂ ಪ್ರತಿಬಂಧಗೊಳಿಸಿಲ್ಲ. ಅದೇ ನೀತಿಯನ್ನು ಕಾಂಗ್ರೆಸ್ ಸಂಸ್ಥೆಯೂ ಅನುಸರಿಸಬೇಕು. ಹಿಂದುತ್ವದ ರಕ್ಷಣೆಗಾಗಿಯೂ ಶುದ್ಧಿ ಮತ್ತು ಸಂಘಟನೆಯ ಕಾರ್ಯಗಳಿಗಾಗಿಯೂ ರಾಷ್ಟ್ರೀಯ ದೃಷ್ಟಿಯಿಂದಲೇ ಪ್ರಯತ್ನಿಸಲು ಕಾಂಗ್ರೆಸ್ ಅವಕಾಶ ಕೊಟ್ಟರೆ ನಾನು ನಿಮ್ಮ ಸೂಚನೆಯನ್ನು ಸ್ವಾಗತಿಸುವೆನು. ಸಾಮ್ರಾಜ್ಯಶಾಹಿಯ ವಿರುದ್ಧವಾಗಿ ನಾನು ಯಾವ ಪಕ್ಷದಲ್ಲಾದರೂ ಸೇರಲು ಸಿದ್ಧನಾಗಿದ್ದೇನೆ. ಆರ್ಥಿಕ ವಿಷಯದಲ್ಲಿ ನಾನು ಸಮತಾವಾದಿಗಳ ಸಂಗಡ ಕೂಡಾ ಸೇರಿ ಕೆಲಸ ಮಾಡಲು ಅಡ್ಡಿಯಿಲ್ಲ. ಆದರೆ ಹಿಂದುತ್ವದ ರಕ್ಷಣೆಯ ನನ್ನ ಕಾರ್ಯಗಳಿಗೆ ಮಾತ್ರ ಪ್ರತಿಬಂಧವಿರಕೂಡದು. ಒಂದು ವ್ಯಕ್ತಿಯು ಕಾಂಗ್ರೆಸ್ಸಿನ ಹೊರಗಿದ್ದರೂ ದೇಶಸೇವೆಯನ್ನು ಮಾಡಲು ಬರುತ್ತದೆಂದೇ ನಾನು ತಿಳಿದಿದ್ದೇನೆ."

### ಈ ನಿರ್ಬಂಧ ದೂರಾಗಬೇಕು.

ಸ್ವಾತಂತ್ರ್ಯವೀರ ಸಾವರಕರರು ಹೇಳಿದ ಮೇಲಿನ ಅಭಿಪ್ರಾಯಗಳು ಯುಕ್ತವಾಗಿವೆಯೆಂದೇ ನಿಷ್ಪಕ್ಷಪಾತಿಗಳಿಗೆ ತೋರದೆ ಇರಲಾರದು. ಆರ್ಥಿಕ ಸುಧಾರಣೆಯ ವಿಷಯದಲ್ಲಿ ಭಿನ್ನಾಭಿಪ್ರಾಯವುಳ್ಳ ಸಮತಾವಾದಿಗಳು ಕಾಂಗ್ರೆಸ್ಸಿನಲ್ಲಿ ಸೇರಲು ಅವಕಾಶವಿರುವಂತೆಯೇ ಸಾಮಾಜಿಕ ಸುಧಾರಣೆಯ ವಿಷಯದಲ್ಲಿ ಭಿನ್ನಾಭಿಪ್ರಾಯವುಳ್ಳವರೂ ಅದೇಕೆ ಕಾಂಗ್ರೆಸ್ಸಿನಲ್ಲಿ ಸೇರಲು ಅವಕಾಶವಿರಕೂಡದು? ಮುಸ್ಲಿಂಲೀಗಿನಲ್ಲಿರುವವರು ಕಾಂಗ್ರೆಸ್ಸಿನಲ್ಲಿದ್ದ ಮೇಲೆ ಹಿಂದು ಮಹಾಸಭೆಯವರೂ ಅದೇಕೆ ಇರಕೂಡದು?

ಹಿಂದುತ್ವದ ರಕ್ಷಣೆಯ ಕಾರ್ಯವು ಕಾಂಗ್ರೆಸ್ಸಿಗೆ ಇಷ್ಟು ತ್ಯಾಜ್ಯವಾದುದಾಗಿ ತೋರಿದ ಮೇಲೆ ಅದೇ ಪ್ರಾಣವಾಗಿರುವವರು ಕಾಂಗ್ರೆಸ್ಸಿನಲ್ಲಿ ಸೇರುವುದು ಶಕ್ಯವೆ? ಪಂಡಿತ ಜವಾಹರಲಾಲ ನೆಹರುರವರು ರಾಷ್ಟ್ರಾಧಿಪತಿಗಳಾಗಿದ್ದಾಗ ಮಾಡಿದ ಈ ನಿರ್ಬಂಧವನ್ನು ಈಗಿನ ರಾಷ್ಟ್ರಾಧಿಪತಿ ಬಾಬು ಸುಭಾಷಚಂದ್ರ ಬೋಸರವರು ತೆಗೆದು ಹಾಕಿ ಹಿಂದು ಮಹಾಸಭೆಯ ಕಾರ್ಯನಿರ್ವಾಹಕರೂ ಕಾಂಗ್ರೆಸ್ಸಿನಲ್ಲಿ ಸೇರಲು ಅವಕಾಶವನ್ನುಂಟುಮಾಡಿಕೊಡುವುದು ನ್ಯಾಯವೂ ಹಿತಕರವೂ ಆಗಿಲ್ಲವೆ?

# ಫಲಜ್ಯೋತಿಷ್ಯದ ಅತ್ಯಾಶ್ಚರ್ಯಕರವಾದ ಗ್ರಂಥ.

### ದಾವಣಗೆರೆ.

ಇಲ್ಲಿಗೆ ಬೆಂಗಳೂರ ಕಡೆಯಿಂದ ಮ| ರಾ| ಎಂ. ಕೆ. ಕುಮಾರ ಸ್ವಾಮಿ ಮೊದಲಿಯರ ಎಂಬುವವರು ತಾರೀಖು ೭-೩-೩೮ ನೆಯ ದಿನ ಬಂದಿದ್ದಾರೆ. ಇವರು ತಮಿಳು ನಾಡಿನ ಆರ್ಕೋಣಂ ದ ಹತ್ತಿರ ಇರುವ ಮನವೂರು ಗ್ರಾಮದವರು. ಇವರಲ್ಲಿ "ನಂದಿನಾಡಿ" ಎಂಬ ತಮಿಳು ಭಾಷೆಯ ಓಲೆಗರಿ ಗ್ರಂಥವಿದೆ. ಆ ಗ್ರಂಥದ ೧೭೫೦ ಭಾಗಗಳಿವೆಯಂತೆ, ಹಿಂದುಸ್ಥಾನದ ಬೇರೆ ಬೇರೆ ನಾಡುಗಳಲ್ಲಿ ಹುಟ್ಟುವವರ ಸಂಬಂಧವಾಗಿ ಈ ನಂದಿನಾಡಿ ಗ್ರಂಥದ ಬೇರೆ ಬೇರೆ ಭಾಗಗಳಲ್ಲಿ ವಿವೇಚಿಸಲ್ಪಟ್ಟಿದೆ. ತುಂಗಭದ್ರಾ ನದಿಯ ದಕ್ಷಿಣ ಪ್ರದೇಶಕ್ಕೆ ಕೊಂಗನಾಡು ಎಂದೂ ಅದರ ಉತ್ತರ ಭಾಗಕ್ಕೆ ಉತ್ತರ ನಾಡು ಎಂದೂ ಆ ಗ್ರಂಥದಲ್ಲಿ ಹೇಳಿದೆ. ಇವರು ಈಗ ಕನ್ನಡ ನಾಡಿನ ಎಲ್ಲ ಭಾಗಗಳ ಗ್ರಂಥಗಳನ್ನು ತೆಗೆದುಕೊಂಡು ಇಲ್ಲಿಗೆ ಬಂದಿದ್ದಾರೆ.

ತಾ. ೮-೩-೩೮ ನೆಯ ದಿನದಿಂದ ಮೂರು ದಿವಸ ಮೂರು ಜನರ ಜಾತಕವನ್ನು ಆ ಗ್ರಂಥದಲ್ಲಿ ಓದುವಾಗ ನಾನಿದ್ದೆನು. ಅದರಲ್ಲಿ ಆಯಾಯ ಜಾತಕನ ಸಂಬಂಧವಾಗಿ ಬರೆದಿರುವುದನ್ನು ನೋಡಿದರೆ ಅತ್ಯಾಶ್ಚರ್ಯವಾಗುತ್ತದೆ. ಈ ಜ್ಯೋತಿಷಜ್ಞರ ಕಡೆಗೆ ಮೊದಲು ಜಾತಕವನ್ನು ಕೊಡಬೇಕು. ಆಗ ಈ ಜಾತಕದ ವ್ಯಕ್ತಿಯು ತುಂಗಭದ್ರೆಯ ದಕ್ಷಿಣ ಪ್ರದೇಶದಲ್ಲಿ ಹುಟ್ಟಿದಾತನೇ ಅಥವಾ ಉತ್ತರ ಪ್ರದೇಶದವನೇ ಎಂದು ಕೇಳುತ್ತಾರೆ. ಆ ನಂದಿನಾಡಿ ಗ್ರಂಥ ಭಾಗದಲ್ಲಿರುವ ಆತನ ಜಾತಕವನ್ನು ಹುಡುಕಲು ತಮಗೆ ಶ್ರಮವಾಗಬಾರದೆಂದೇ ಹಾಗೆ ಕೇಳಿ ಅನಂತರ ದಕ್ಷಿಣ ಭಾಗವಾಗಿದ್ದರೆ ಕೊಂಗನಾಡಿನ ಗ್ರಂಥವನ್ನೂ ಉತ್ತರ ಭಾಗವಾಗಿದ್ದರೆ ಉತ್ತರ ನಾಡಿನ ಗ್ರಂಥವನ್ನೂ ತೆಗೆದು ಆ ಜಾತಕವು ತಮ್ಮ ಗ್ರಂಥದಲ್ಲಿ ಇದೆಯೋ ಇಲ್ಲವೋ ಎಂಬುದನ್ನು ನೋಡುತ್ತಾರೆ.

ಇದ್ದ ಪಕ್ಷದಲ್ಲಿ ಅವರ ಕಡೆಗೆ ಕೊಟ್ಟ ಜಾತಕವನ್ನು ತಿರುಗಿ ಅವರು ಕೊಟ್ಟುಬಿಟ್ಟು ಆ ಗ್ರಂಥದಲ್ಲಿರುವುದನ್ನು ಓದಲು ಪ್ರಾರಂಭಿಸುತ್ತಾರೆ. ಇವರಿಗೆ ಈಗ ೬೯ ವರುಷ. ಮುಪ್ಪಾಗಿದ್ದಾರೆ. ಕಣ್ಣು ಸ್ಪಷ್ಟ ಕಾಣುವುದಿಲ್ಲ. ಓಲೆಗರಿಯಲ್ಲಿ ಬಹು ಸೂಕ್ಷ್ಮವಾಗಿ ಬರೆಯಲ್ಪಟ್ಟಿರುವುದನ್ನು ಕನ್ನಡಕದ ಸಹಾಯದಿಂದ ಓದಲು ಪ್ರಾರಂಭಿಸುತ್ತಾರೆ, ತಮಿಳು ತಿಳಿಯದವರಿಗೆ ತೆಲುಗಿನಲ್ಲಿ ಅದರ ಅರ್ಥವನ್ನು ತಿಳಿಸುತ್ತಾರೆ. ಇವರಿಗೆ ಇವೆರಡೇ ಭಾಷೆಗಳು ಬರುತ್ತವೆ.

### ಆಶ್ಚರ್ಯಕರ ಸಂಗತಿ.

ಮೂರು ಜಾತಕಗಳನ್ನು ಓದುವಾಗಲೂ ನಾನಿದ್ದೆನು. ಜಾತಕನ ಹೆಸರನ್ನು ಕೂಡಾ ಓದಿಹೇಳುತ್ತಾರೆ. ಫಲಜ್ಯೋತಿಷ್ಯ ಶಾಸ್ತ್ರರೀತ್ಯಾ ಆ ಜಾತಕದಲ್ಲಿರುವ ಗ್ರಹಗಳ ಸ್ಥಾನ, ಫಲ, ಭುಕ್ತಿ, ಮೊದಲಾದ ಎಲ್ಲ ಸಂಗತಿಗಳನ್ನೂ ಬಹು ವಿಸ್ತಾರವಾಗಿ ಓದುತ್ತಾರೆ. ಆಗ ನಾವು ಮೊದಲು ಅವರಿಗೆ ತೋರಿಸಿದ ಜಾತಕವು ಕೂಡಾ ಅವರ ಹತ್ತಿರ ಇರುವುದಿಲ್ಲ. ಇದನ್ನು ಓದುವಾಗ ಎಷ್ಟು ಜನರಿದ್ದಾರೆಂಬುದನ್ನೂ ಅವರಲ್ಲಿ ಕೆಲವರ ಹೆಸರನ್ನೂ ಓದಿಹೇಳಿದರು! ಜಾತಕದವನ ಬಲಾಬಲಗಳನ್ನು ಬಹು ವಿವರವಾಗಿ ಓದುತ್ತಾ ಹೋಗುತ್ತಾರೆ. ಮೂರು ಜನರ ಜಾತಕ ಓದಿದಾಗ ಅವರು ತಮ್ಮ ಸ್ಥಿತಿಗಳನ್ನೆಲ್ಲಾ ಅಷ್ಟು ವಿವರವಾಗಿ ಹೇಳಿದುದನ್ನು ಕೇಳಿ ಬೆರಗಾದರು.

ಒಂದು ಜಾತಕವು ಇಂಗ್ಲೆಂಡಿಗೆ ಹೋದವರದ್ದಾಗಿದ್ದಿತು. ಆ ಗ್ರಂಥದಲ್ಲಿ ಅವರ ಸಂಬಂಧವಾಗಿ ಹೇಳುವಾಗ ಗಂಧರ್ವ ದೇಶಕ್ಕೆ ಹೋಗಿ ೧೫ ಸಾವಿರ ಹಣ ವೆಚ್ಚಮಾಡಿ ಬಂದು ಈಗ ೧೫೦ ಹಣವನ್ನು ತಿಂಗಳಿಗೆ ಹೊಂದುತ್ತಿದ್ದಾರೆಂದು ಅವರ ಹೆಸರು ಸಹಿತ ಓದಿ ಹೇಳಿದರು. ಇಂಗ್ಲೆಂಡಿಗೆ ಆ ಗ್ರಂಥದಲ್ಲಿ ಗಂಧರ್ವದೇಶ, ಭೋಗದೇಶ ಎಂದು ಹೇಳಿದೆ. ಇನ್ನೊಬ್ಬರ ಜಾತಕವನ್ನು ಓದುವಾಗ ಅವರ ಹೆಸರು ಅವರ ಅನಂತ ಸ್ನೇಹಿತರಲ್ಲಿ ಪರಮ ಸ್ನೇಹಿತರಾದವರ ಹೆಸರು ಅವರು ಯಾವ ಸ್ಥಳದಲ್ಲಿ ಈಗ ಕುಳಿತು ಈ ಜಾತಕದ ಫಲವನ್ನು ಕೇಳುತ್ತಿದ್ದಾರೆಂದು ಸಹ ಓದಿ ಹೇಳಿದರು! ಅಂದಮೇಲೆ ಆ ಜಾತಕದವರ ಸ್ಥಿತಿಗತಿಗಳನ್ನೆಲ್ಲಾ ಎಷ್ಟು ಸೂಕ್ಷ್ಮವಾಗಿ ಅದರಲ್ಲಿ ಬರೆದಿದ್ದಾರೆಂಬುದನ್ನು ಹೇಳಬೇಕಾದುದೇ ಇಲ್ಲ.

ಪ್ರತಿಯೊಂದು ಜಾತಕಕ್ಕೂ ಪೀಠಿಕಾಪ್ರಕರಣವಿದ್ದು ಆ ಮೇಲೆ ೧೨ ಪ್ರಕರಣಗಳಿರುತ್ತವೆ. ಪೀಠಿಕಾಪ್ರಕರಣವನ್ನು ಓದಿ ಅದರ ಅರ್ಥ ಹೇಳಲು ಸಾಮಾನ್ಯವಾಗಿ ೨ ತಾಸು ಬೇಕಾಗುತ್ತದೆ. ಮುಂದಿನ ೧೨ ಪ್ರಕರಣಗಳನ್ನೂ ಓದುವುದಾದರೆ ೨-೩ ದಿನಗಳಾದರೂ ಬೇಕಾಗಬಹುದು. ಎಷ್ಟು ಪ್ರಕರಣಗಳನ್ನು ಓದಬೇಕೆಂದು ಅಪೇಕ್ಷಿಸುತ್ತಾರೋ ಅಷ್ಟು ಓದಿಹೇಳುತ್ತಾರೆ. ಹಾಗೆ ಓದಿ ಹೇಳಲು ಹತ್ತೆಂಟು ರೂ. ಗಳಿಂದ ನೂರಾರು ರೂ. ಗಳ ವರೆಗೂ ಅವರಿಗೆ ಕೊಡಬೇಕಾಗುತ್ತದೆ. ಪೀಠಿಕಾಪ್ರಕರಣ ಒಂದರಿಂದಲೇ ಜಾತಕನ ಎಲ್ಲ ಮುಖ್ಯಾಂಶಗಳೂ ಗೊತ್ತಾಗಿಬಿಡುತ್ತವೆ. ಹೆಚ್ಚಿನ ವಿವರ ಬೇಕಾಗಿದ್ದರೆ ಮುಂದಿನ ಪ್ರಕರಣಗಳನ್ನು ಓದಿಸಬೇಕಾಗುತ್ತದೆ. ಇವರು ಇಲ್ಲಿಯೇ ಒಂದು ತಿಂಗಳವರೆಗಾದರೂ ಇರುವರು.

ಓರ್ವ ಶ್ರೋತೃ.

## ನಮ್ಮ ಪ್ರಾಚೀನರ ಅತ್ಯದ್ಭುತವಾದ ಶೋಧ.

[ಶ್ರೀ. ಕುಮಾರ ಸ್ವಾಮಿ ಮೊದಲಿಯರ ಇವರಲ್ಲಿರುವ ನಂದಿನಾಡಿ ಎಂಬ ಫಲಜ್ಯೋತಿಷ್ಯ ಗ್ರಂಥದ ಸಂಬಂಧವಾಗಿ ಮೇಲೆ ಬರೆದ ಸಂಗತಿಗಳೆಲ್ಲ ನಿಜವಾಗಿವೆ. ನಾವು ಒಬ್ಬರ ಜಾತಕವನ್ನು ಓದುವಾಗ ಇದ್ದೆವು. ನಮ್ಮ ಜಾತಕವನ್ನೂ ಕೊಟ್ಟು ಅದು ಆ ಗ್ರಂಥದಲ್ಲಿದ್ದುದರಿಂದ ಅದನ್ನು ಓದಿಸಿದೆವು. ಅದರಲ್ಲಿರುವ ಸಂಗತಿಗಳ ಸಂಬಂಧವಾಗಿ ನಮಗೆ ಓದಿ ಹೇಳಿದುದು ಎಷ್ಟು ವಿವರವಾಗಿಯೂ ನಿಜವಾಗಿಯೂ ಇದ್ದಿತೆಂಬುದನ್ನು ನಾವು ಅನ್ಯರಿಗೆ ಹೇಳಿದರೆ ಅದನ್ನು ಯಾರೂ ನಂಬಲಾರರು. ಅವರವರೇ ಪ್ರತ್ಯಕ್ಷ ಅವರಲ್ಲಿ ಹೋಗಿ ಮನವರಿಕೆಮಾಡಿಕೊಂಡಾಗಲೇ ಸಂಶಯನಿವಾರಣೆ. ಜಿಜ್ಞಾಸುಗಳು ಅಗತ್ಯವಾಗಿ ಅವರಲ್ಲಿ ಹೋಗಿ ನಮ್ಮ ಪ್ರಾಚೀನರು ಎಂಥ ಅತ್ಯದ್ಭುತವಾದ ಶೋಧಮಾಡಿದ್ದಾರೆಂಬುದನ್ನು ನೋಡಬೇಕಾದುದು ಅಗತ್ಯ.

ಶ್ರೀ ಮೊದಲಿಯರರು ಈ ಸಂಬಂಧವಾಗಿ ನಾವು ಮಾಡುವ ಯಾವ ಪ್ರಶ್ನೆಗಳಿಗೂ ಉತ್ತರವನ್ನೇನೂ ಹೇಳುವವರಲ್ಲ. ಅವರಿಗೆ ಈ ಗ್ರಂಥಗಳು ದೊರೆತು ೨೯ ವರುಷಗಳಾದವಂತೆ. ಅವುಗಳನ್ನು ಯಾರು ಎಂದು ಬರೆದರೆಂಬುದೇನೂ ಅವರಿಗೆ ಗೊತ್ತಿಲ್ಲ. ಹತ್ತಾರು ವರುಷ ಒಬ್ಬ ಸನ್ಯಾಸಿಗಳ ಸೇವೆಯಲ್ಲಿದ್ದೆವೆಂದೂ ಅವರು ದೇಹ ಬಿಡುವಾಗ ತಮಗೆ ಇವುಗಳನ್ನು ಕೊಟ್ಟರೆಂದೂ ಹೇಳುತ್ತಾರೆ. ಯಾರ ಜಾತಕವು ತಮ್ಮ ಗ್ರಂಥದಲ್ಲಿದೆಯೋ ಅದನ್ನು ಓದಿ ಹೇಳುತ್ತಾರೆ. ಇಲ್ಲದೆ ಇದ್ದರೆ ನಮ್ಮ ಗ್ರಂಥದಲ್ಲಿ ಈ ಜಾತಕವಿಲ್ಲವೆಂದು ತಿಳಿಸಿಬಿಡುತ್ತಾರೆ. ಹೀಗೆ ಅನೇಕ ಜಾತಕಗಳು ತಮ್ಮ ಗ್ರಂಥದಲ್ಲಿ ಇಲ್ಲವೆಂದು ಹೇಳಿದ್ದಾರಂತೆ.

ಈ ಗ್ರಂಥವು ಸಂವಾದ ರೂಪದಲ್ಲಿ ಬರೆಯಲ್ಪಟ್ಟಿದೆ. ನಂದಿಯೇ ಮುಖ್ಯ ಪಾತ್ರ. ಪ್ರೌಢವಾದ ರೀತಿಯಲ್ಲಿ ಬಹು ಸ್ವಾರಸ್ಯ

(೧೩ ನೆಯ ಪುಟಕ್ಕೆ ಮುಂದೆ ಸಾಗಿದೆ.)

### ರಾಜಧಾನಿಯಲ್ಲಿ ನಡೆದ ಆನಂದೋತ್ಸವ.

ಮೈಸೂರು ನಗರದ ಶ್ರೀಕೃಷ್ಣ ರಾಜೇಂದ್ರ ಆಸ್ಪತ್ರೆಯ ಆವರಣದೊಳಗೆ ಕಳೆದ ಗುರುವಾರ (ತಾ ೨೪) ಅಪರಾಹ್ನ ನಡೆದ ಶಂಕುಸ್ಥಾಪನಾ ಮಹೋತ್ಸವವು ನಮ್ಮ ಸಂಸ್ಥಾನದ ಪಾಶ್ಚಾತ್ಯ ವೈದ್ಯ ವಿದ್ಯಾಶಾಲೆಯ ಕೀರ್ತಿಯನ್ನು ಶಾಶ್ವತಪಡಿಸುವುದಾಗಿದೆ. ಇಲ್ಲಿ ಈ ಅಸ್ತಿ ಭಾರಶಿಲೆಯ ಮೇಲೆ ರಚನೆಯಾಗುವ ಕಟ್ಟಡಕ್ಕೆ ಮಹೌದಾರ್ಯದಾತರು ಚಿತ್ರದುರ್ಗದ ಜಗದ್ಗುರು ಶ್ರೀ ಜಯದೇವ ಮುರುಘಾರಾಜೇಂದ್ರ ಮಹಾಸ್ವಾಮಿಗಳು. ನಮ್ಮ ಶ್ರೀಮನ್ಮಹಾರಾಜರವರು ಶ್ರೀ ಸ್ವಾಮಿಗಳವರ ನೇತೃತ್ವದಲ್ಲಿ ಕೃಪೆಯಿಟ್ಟು ಈ ಅಸ್ತಿಭಾರ ಶಿಲಾಪ್ರತಿಷ್ಠೆಯನ್ನು ಸ್ವಹಸ್ತ ನೆರವೇರಿಸಿದರು. ಈ ಉತ್ಸವದ ನಿಮಿತ್ತ ಆ ಸ್ಥಳದಲ್ಲಿ ವಿಸ್ತಾರವಾದ ನಾನಾ ಫಲ ಪುಷ್ಪಾದಿಗಳಿಂದ ಅಲಂಕೃತವಾದ ಹಸರು ವಾಣೀ ಮಂಟಪವು ನಿರ್ಮಾಣವಾಗಿದ್ದಿತು. ಮಂಟಪದೊಳಗೆ ಒಂದು ಸಾವಿರಕ್ಕೆ ಕಡಿಮೆಯಿಲ್ಲದೆ ಸಮಸ್ತ ಕೋಮುಗಳ ಗಣ್ಯ ಪ್ರಜೆಗಳು ಯುರೋಪಿಯನ್ ಅಧಿಕಾರವರ್ಗದವರು, ರಾಜಪಿಂಡೆಯವರು, ವೈದ್ಯಶಾಲೆಯವರು, ಮಹಿಳೆಯರೂ ಕಿಕ್ಕಿರಿದು ದರ್ಬಾರ್ ಉಡುಪಿನಲ್ಲಿ ನೆರೆದ್ದರು. ಶ್ರೀ ಮನ್ಮಹಾರಾಜರವರು ಅರಮನೆಯಿಂದ ಕುದುರೆಯ ತೆರೆದ ಸಾರೋಟಿನಲ್ಲಿ ಮ. ಎ. ವಿ. ಸುಬ್ರಹ್ಮಣ್ಯರಾಜೆ ಅರಸಿನವರು ಮತ್ತು ದಳವಾಯಿ ಶ್ರೀಕಂಠ ಲಕ್ಷ್ಮೀಕಾಂತರಾಜೆ ಅರಸಿನವರನ್ನು ಎದುರಿಗೆ ಕೂಡ್ರಿಸಿಕೊಂಡು ಅಂಗರಕ್ಷಕ ಸವಾರರ ಸಮೇತ ರಾಜಬೀದಿಯಲ್ಲಿ ಮೆರವಣಿಗೆಮಾಡಿಕೊಂಡು ಬಂದಾಗ ಡಾ. ಎಂ. ಅಣ್ಣಾಜಪ್ಪನವರು ತಮ್ಮ ವೈದ್ಯಶಾಲಾ ಬಳಿಯ ಚೌಕದಲ್ಲಿ ಲತಪುಷ್ಪಶಾಖಾದಿಗಳಿಂದ ನೇತ್ರಾನಂದಕರವಾಗಿ ಶೃಂಗಾರ ಮಾಡಿಸಿದ್ದ ಹಸರುವಾಣಿ ಚಪ್ಪರದಲ್ಲಿ ಪ್ರಭುಗಳವರಿಗೆ ಪುಷ್ಪಮಾಲಿಕೆಯನ್ನರ್ಪಿಸಿದರು. ಮಹಾಸ್ವಾಮಿಯವರು ಆದರದಿಂದ ಅವುಗಳನ್ನು ಸ್ವೀಕರಿಸಿ ತಮ್ಮ ಸಂತೋಷವನ್ನು ವಾಚಾ ವ್ಯಕ್ತಪಡಿಸಿ ಮುಂತೆರಳಿ ಮಂಟಪದ ದ್ವಾರದ ಬಳಿಗೆ ಚಿತ್ತೈಸುವಾಗ ದಿವಾನರವರು ಸರ್. ಚಾರ್ಲಸ್ ಟಾಡ್ಹಂಟರವರು ಡಾ. ರಾಬರ್ಟ್ಸರವರೇ ಮೊದಲಾದವರು ಕಾದಿದ್ದು ಸತ್ಕರಿಸಿ ಶ್ರೀಪೀಠಾಸನದ ಬಳಿಗೆ ಕರೆದೊಯ್ದರು.

ಸಭಿಕರೆಲ್ಲಾ ಎದ್ದು ಪ್ರಭುಗಳಿಗೆ ಮುಜುರೆಮಾಡುವಲ್ಲಿ ಅವರು ಪ್ರತಿವಂದನೆಯನ್ನು ಸಲ್ಲಿಸಿ ಅಗ್ರಪೀಠವನ್ನಲಂಕರಿಸಿದರು. ಸಭಿಕರು ಕುಳಿತ ಬಳಿಕ ಡಾ. ರಾಬಿನ್‌ಸನ್‌ರವರು ಶ್ರೀಮನ್ಮಹಾರಾಜರವರ ಸಮ್ಮುಖಕ್ಕೆ ಬಂದು ಮುಜುರೆಮಾಡಿ ರೋಗಪರಿಹಾರಕ್ಕಾಗಿ ನಮ್ಮ ದಿವಾನರವರು ರಾಜಧಾನಿಯಲ್ಲೂ ಸಂಸ್ಥಾನಾದ್ಯಂತ ಮಳೆಯೂ ಮಾಡುತ್ತಿರುವ ಉತ್ಸಾಹಪೂರ್ವಕವಾದ ಮಹೋಪಕಾರಗಳನ್ನು ವಿವರಿಸಿ ಕೃತಜ್ಞತೆಯನ್ನು ಸಲ್ಲಿಸಿ ಪ್ರಸಕ್ತ ಕಟ್ಟಡದ ಆವಶ್ಯಕತೆಯನ್ನೂ ಅದರಲ್ಲಿ ನಡೆಯುವ ಅಮೂಲ್ಯ ಶೋಧನಾ ಕಾರ್ಯಗಳನ್ನೂ ನಿವೇದಿಸಿದರು. ಬಳಿಕ ಗಮಕಿ ಮ|| ಮಾಯಿಗೌಡರು ಮ|| ಎಂ. ಎಸ್. ಬಸವಲಿಂಗಯ್ಯನವರಿಂದ ರಚಿತವಾಗಿದ್ದ ಸುಲಲಿತವಾದ ಅಭಿನಂದನ ಪದ್ಯ ಮಾಲಿಕೆಯನ್ನು ಸಭಿಕರಿಗೆ ಹರ್ಷಾನಂದಗಳುಂಟಾಗುವಂತೆ ಪಠಣಮಾಡಿ ಪ್ರಭುಗಳಿಗೆ ಒಪ್ಪಿಸಿದರು. ಆ ಮಾಲಿಕೆಯ ಒಂದು ಪದ್ಯವಿದು.

ಯೋಗಹಸ್ತದಿನಿಂದು ಭೂಭುಜ ಯೋಗಿಮಣಿ ನೀಂ ಸ್ಥಾಪಿಸುವಶಿಲೆ|
ಯೋಗಿವರ ಜಯದೇವ ಮುರುಘೇಂದ್ರಾರ್ಯರಂಕಿತದ ||
ರೋಗಲಕ್ಷಣ ಶೋಧನಾಲಯ ವೇಗಳುಂ ಮಾನವನ ಸಂತತಿ |
ಗೀಗೆ ಪರಮಾರೋಗ್ಯಭಾಗ್ಯವ ನಂಬಿ ಕಾದಯುದೆ ||

ಈ ಮಧ್ಯೆ ಶ್ರೀ ಮುರುಘಾರಾಜೇಂದ್ರ ಸ್ವಾಮಿಗಳವರು ಬಿಡಾರದಿಂದ ಪರಿವಾರ ಸಮೇತ ಮಂಟಪಕ್ಕೆ ದಯಮಾಡಿ ಪ್ರಭುಗಳ ಪೀಠದಿಂದ ೧೫ ಗಜ ದೂರದಲ್ಲಿ ರಚನೆಯಾಗಿದ್ದ ಸುಖಾ

## ಮೈಸೂ...
## ಶ್ರೀ ಮುರಘಾರಾಜೇಂದ್ರ ರೋಗ...



ಶ್ರೀ ಜಗದ್ಗುರು ಜಯದೇವ ಮುರಘರಾಜೇಂದ್ರ ಮ... ರಾಜಧಾನಿಯನ್ನು ಪ್ರವೇ...

ಸನದಲ್ಲಿ ಮಂಡಿಸುವಲ್ಲ ಶ್ರೀಮನ್ಮಹಾರಾಜರವರು ತಮ್ಮ ಪೀಠದಿಂದೆದ್ದು ನಿಂತು ಮರ್ಯಾದೆಮಾಡುವಾಗ ಸಭಿಕರೆಲ್ಲಾ ತದ್ವತ್ತು ಸನ್ಮಾನಿಸಿದರು. ಡಾ. ರಾಬರ್ಟ್ಸರವರು ಬಿನ್ನವತ್ತಳೆಯನ್ನು ಚಿತ್ರ ಕೆಲಸಮಾಡಿದ ಘಮಘಮಿಸುವ ಶ್ರೀಗಂಧದ ಕರಂಡಕದಲ್ಲಿಟ್ಟು ಹಾರತುರಾಯಿಗಳ ಸಮೇತ ಶ್ರೀಮನ್ಮಹಾರಾಜರವರಿಗೆ ಸಮರ್ಪಿಸಿದರು.

### ಶ್ರೀಮನ್ಮಹಾರಾಜರವರ ಭಾಷಣ.

ಮಹಾ ಪ್ರಭುಗಳು ಸಭಿಕರನ್ನು ಸಂಬೋಧಿಸಿ ಅಪ್ಪಣೆ ಕೊಡಿಸಿದ ಭಾಷಣವೇನೆಂದರೆ—

"ಡಾಕ್ಟರ್ ರಾಬಿನ್‌ಸನ್‌ರವರೆ, ಮಹಿಳೆಯರೆ, ಮತ್ತು ಮಹಾಶಯರೇ,— ನಮ್ಮೆಲ್ಲರ ಪ್ರೀತಿಗೂ ಪಾತ್ರವಾದ ನಮ್ಮ ಮೈಸೂರು ಸಂಸ್ಥಾನದ ಅಭ್ಯುದಯ ಸಾಧನೆಗಾಗಿ ನಾವು ಅನೇಕ ಮುಖವಾದ ಅಭಿಲಾಷೆಗಳಿಂದ ಕೂಡಿ ವಿಧವಿಧವಾದ ಕಾರ್ಯಕ್ರಮಗಳನ್ನು ಗಮನದಲ್ಲಿಟ್ಟುಕೊಂಡು ಪ್ರವರ್ತಿಸುತ್ತಿರುವದು ನಿಮ್ಮೆಲ್ಲರಿಗೂ ವಿದಿತವಾಗಿರುವ ಅಂಶವಾಗಿದೆ. ನಮ್ಮ ಸಂಸ್ಥಾನವು ಭರತಖಂಡದ ಮತ್ತಾವ ಪ್ರಾಂತಕ್ಕೂ ಕನಿಷ್ಠವೆನಿಸದಷ್ಟು ಮಟ್ಟಿನ ಆರೋಗ್ಯಕರವಾದ ಪ್ರದೇಶವಾಗಿ ಪರಿಣಮಿಸಲು ಸಾಧಕವಾದ ವ್ಯವಸ್ಥೆಯನ್ನೇರ್ಪಡಿಸಿ ಆಚರಣೆಗೆ ತರುವುದೂ ಅವುಗಳಲ್ಲೊಂದು ಕಾರ್ಯಕ್ರಮ. ತತ್ಸಾಧನೆಗಾಗಿ ನೆರವೇರಬೇಕಾದ ಅನೇಕ ಕಾರ್ಯಕಲಾಪಗಳಲ್ಲಿ ವೈದ್ಯ ವಿದ್ಯಾ ಪಾರಂಗತರಾದ ಅಧ್ಯಾಪಕವರ್ಗದವರಿಂದ ಕೂಡಿ ಸಮಸ್ತ ಸಾಧನೆಗಳಿಂದಲೂ ಸುಸಜ್ಜಿತವಾದ ವೈದ್ಯ ಮಹಾಪಾಠಶಾಲೆಯ ಸುವ್ಯವಸ್ಥೆಯೂ ಅಂಗಭೂತವೆನಿಸಿ ಅತ್ಯಾವಶ್ಯಕವಾಗಿರುತ್ತದೆ. ಈ ವೈದ್ಯ ಮಹಾ ಪಾಠಶಾಲೆಯ ಅತ್ಯಂತ ಮುಖ್ಯವಾದಶಾಖೆಗಳಲ್ಲೊಂದೆನಿಸಿ ಇಲ್ಲಿ ನಿರ್ಮಿತವಾಗುವುದಾಗಿರುವ ರೋಗನಿದಾನ ಶಾಸ್ತ್ರೀಯ ಪ್ರಯೋಗ ಪರೀಕ್ಷಾ ಶಾಲೆಯ ಅಸ್ತಿಭಾರ ಶಿಲೆಯನ್ನು ಪ್ರತಿಷ್ಠಿಸುವುದಕ್ಕಾಗಿ ನಾವು ಈ ದಿನ ಇಲ್ಲಿಗೆ ಆಗಮಿಸಿರುವೆವು.

ಈ ಪಾಶ್ಚಾತ್ಯ ರೋಗನಿದಾನ ಶಾಸ್ತ್ರವು ತೀರ ಅಧುನಿಕವಾದುದಾಗಿಯೂ ಮತ್ತು ಅತ್ಯದ್ಭುತ ರೀತಿಯಲ್ಲಿ ವೃದ್ಧಿಹೊಂದಿ

# ...ಸೂರಲ್ಲಿ, ...ೋಗನಿದಾನ ಪ್ರಯೋಗ ಪರೀಕ್ಷೆ ಶಾಲೆ.




...ಮಹಾಸ್ವಾಮಿಗಳವರು ತಾ. ೨೩-೨-೩೮ ನೆಯ ದಿನ ...ಪ್ರವೇಶಿಸಿದ ಮಹೋತ್ಸವ.

...ರುವುದಾಗಿಯೂ ಇರುವುದಲ್ಲದೆ ಚಿಕಿತ್ಸಾ ಕಲೆಯ ಉಪಯುಕ್ತ ಸಾಧನವಾಗಿಯೂ ಇದೆಯೆಂಬ ಅಂಶವನ್ನು ನಿಮ್ಮ ಸ್ಮೃತಿ ಪಥಕ್ಕೆ ತರಲಿಚ್ಛಿಸುವೆವು. ರೋಗನಿದಾನ ಶಾಸ್ತ್ರೀಯ ಸಂಶೋಧನಗಳಿಂದ ಲಭಿಸಿ ವೃದ್ಧಿಹೊಂದಿರುವ ನಾನಾ ಕಾರ್ಯ ಸಿದ್ಧಿಗಳೂ ಅತಿಮಾನುಷ ಕ್ರಿಯೆಗಳೆಂದೇ ಈಗಿನವರಿಗೆ ತೋರುವ ಮಟ್ಟಿಗೆ ಅತ್ಯದ್ಭುತಗಳಾಗಿವೆ. ಭೌತ ಶಾಸ್ತ್ರವೂ ಜೀವಶಾಸ್ತ್ರವೂ ರಸಾಯನ ಶಾಸ್ತ್ರವೂ ಮತ್ತು ಔಷಧ ತತ್ತ್ವ ಶಾಸ್ತ್ರವೂ ವಿಸ್ಮಯಜನಕವಾದ ರೀತಿಯಲ್ಲಿ ಅಭಿವೃದ್ಧಿ ಹೊಂದಿವೆ. ಪ್ರಾಚೀನ ಕಾಲದಲ್ಲಿ ಸ್ವಪ್ನದಲ್ಲಿಯೂ ಸಾಧ್ಯವಿಲ್ಲದಿದ್ದಷ್ಟು ಅದ್ಭುತವಾದ ಚಿಕಿತ್ಸಾ ಕಾರ್ಯಗಳು, ವ್ರಣಗಳು ವಿಷಮಿಸದಂತೆ ಮಾಡುವ ವಿಷಕ್ರಿಮಿನಾಶಕಗಳಾದ ಔಷಧ ಪ್ರಯೋಗಗಳ ದೆಶೆಯಿಂದಲೂ ಮತ್ತು ಶಸ್ತ್ರಚಿಕಿತ್ಸೆಯು ನಡೆಯುವಾಗ ಯಾತನಾನುಭವವನ್ನು ತಪ್ಪಿಸುವ ಸಾಧನಗಳ ದೆಸೆಯಿಂದಲೂ ಆಧುನಿಕ ಕಾಲದಲ್ಲಿ ಅತಿ ಸುಲಭವಾಗಿ ಪರಿಣಮಿಸಿವೆ. ಆಧುನಿಕ ರೀತಿಯ ನೈರ್ಮಲ್ಯ ರಕ್ಷಣ ವಿಧಾನಗಳ ಪ್ರಭಾವದಿಂದ ಅನೇಕಾನೇಕ ರೋಗಗಳ ನಿವಾರಣವು ಸಾಧ್ಯವಾಗಿದೆ. ಆಧುನಿಕ ರೋಗನಿದಾನ ಶಾಸ್ತ್ರದ ಸಾಧನೆಗಳು ಪ್ರಾಯಶಃ ಇವೆಲ್ಲಕ್ಕಿಂತಲೂ ಅದ್ಭುತವಾದ ರೀತಿಯಲ್ಲಿ ಅಭಿವೃದ್ಧಿಹೊಂದಿವೆಯೆಂದು ಹೇಳಬಹುದು.

"ಪಾಶ್ಚಾತ್ಯ ರೋಗನಿದಾನ ಶಾಸ್ತ್ರವು ಮನುಷ್ಯ ದೇಹದ ನಾನಾ ಭಾಗಗಳು ಕೆಲಸಮಾಡುವ ರೀತಿಗಳನ್ನೂ ಅವು ಕ್ರಮ ತಪ್ಪಿದಾಗ್ಗೆ ನಮ್ಮಿಂದ ರೋಗವೆಂಬ ನಾಮವನ್ನು ಪಡೆಯುವ ವಿಪರೀತ ಸ್ಥಿತಿಯನ್ನು ನಿವಾರಿಸುವ ಮತ್ತು ಪರಿಹರಿಸುವ ವಿಧಾನಗಳನ್ನೂ ವಿಚಾರ ಮಾಡುವ ನಾನಾ ಶಾಖೆಗಳಿಂದ ಕೂಡಿದೆ. ಕಳೆದ ಅರವತ್ತು ಅಥವಾ ಎಪ್ಪತ್ತು ವರ್ಷಗಳ ಅವಧಿಯಲ್ಲಿ ಈ ಶಾಸ್ತ್ರವು ಮೇಲಿಂದಮೇಲೆ ವೃದ್ಧಿ ಹೊಂದಿ ಅದ್ಭುತವಾದ ನೂತನ ವಿಚಾರಗಳು ಏಕಪ್ರಕಾರವಾಗಿ ಗೋಚರಿಸುತ್ತ ಬಂದಿದೆ. ರೋಗನಿದಾನ ಶಾಸ್ತ್ರದ ಸಹಾಯದಿಂದ ವೈಜ್ಞಾನಿಕ ಸಂಶೋಧಕರು ಶ್ವಾಸನಾಳ ಸಂಬಂಧವಾದ 'ಡಿಫ್ತೀರಿಯಾ' ರೋಗ, ಧನುರ್ವಾಯು, ಸರ್ಪದಂಶ— ಇವುಗಳ ವಿಷಹಾರಕ ವಸ್ತುಗಳನ್ನು ರಚಿಸಿದ್ದಾರೆ. ಅಲ್ಲದೆ ಸಿಡುಬು, ವಿಷೂಚಿಕಾ ವ್ಯಾಧಿ, 'ಪ್ಲೇಗ್' ರೋಗ, ವಿಷಮಶೀತ ಜ್ವರ ಉನ್ಮತ್ತ ಪ್ರಾಣಿದಂಶ ವ್ಯಾಧಿ ಮುಂತಾದವುಗಳೇ ಸಂಭವಿಸದಂತೆ ನಿವಾರಿಸುವುದಕ್ಕಾಗಿ 'ಇನಾಕ್ಯುಲೇಷನ್' ಎಂಬ ಸೂಚೀಮುಖ ಚಿಕಿತ್ಸಾ ವಿಧಾನವನ್ನು ಕಲ್ಪಿಸಿದ್ದಾರೆ. ನವೀನ ಸಂಶೋಧನಗಳ ಪರಿಣಾಮವಾಗಿ ಲಭಿಸಿರುವ ಆಶ್ಚರ್ಯಕರವಾದ ಅಸಂಖ್ಯಾತ ಸತ್ಫಲಗಳಲ್ಲಿ ಈಗ ಉದಾಹರಣೆಗಾಗಿ ಸೂಚಿತವಾದವುಗಳು ಕೇವಲ ಕೆಲವು ಮಾತ್ರವೇ. ಆದಕಾರಣ ಈಗ ಲಭಿಸಿರುವ ಆ ಅಸಂಖ್ಯಾತ ಸತ್ಫಲಗಳನ್ನೂ ಪರಿಗಣಿಸಿದರೆ ಅಪರಿಹಾರ್ಯವೆನಿಸುವ ರೋಗವೇ ಇಲ್ಲದಂತಾಗುವ ಕಾಲವೂ ಬರುವುದೆಂಬ ಪ್ರತ್ಯಾಶೆಯನ್ನಿಟ್ಟುಕೊಂಡರೂ ಯುಕ್ತವೆನಿಸುವಷ್ಟು ಮಟ್ಟಿಗೆ ಅವು ಅದ್ಭುತವಾಗಿವೆ.

ಪ್ರಾಚೀನ ಮಠಗಳಲ್ಲೊಂದರ ಪೀಠಾಧಿಪತಿಗಳಾದ ಶ್ರೀ ಜಯದೇವ ಮುರುಘರಾಜೇಂದ್ರ ಸ್ವಾಮಿಗಳವರು ಮಾನವ ವರ್ಗದ ಕ್ಲೇಶಹಾರಕವಾದ ಆಧುನಿಕ ಸಾಧನವಾಗಿ ದಿನ ದಿನವೂ ವೃದ್ಧಿಹೊಂದುತ್ತಿರುವ ಈ ರೋಗನಿದಾನ ಶಾಸ್ತ್ರದ ಪ್ರಯೋಗ ಪರೀಕ್ಷಾಶಾಲೆಯ ನಿರ್ಮಾಣಕ್ಕಾಗಿ ಧನಸಹಾಯ ಮಾಡಿರುವುದು ಯುಕ್ತವೇ ಆಗಿದೆ. ಶ್ರೀ ಮುರಘರಾಜೇಂದ್ರ ಮಠವು ಸರ್ವಭಾವಗಳಿಂದಲೂ ಗೌರವಕ್ಕೆ ಪಾತ್ರವಾಗಿದೆ. ಶ್ರೀ ಮಠದಿಂದ ಧರ್ಮಾರ್ಥವಾಗಿ ಸ್ಥಾಪಿತವಾಗಿರುವ ಸಂಸ್ಥೆಗಳು ಅನೇಕ ವರ್ಷಗಳಿಂದಲೂ ಸುಪ್ರಸಿದ್ಧವಾಗಿರುವುವಲ್ಲದೆ ನಮ್ಮ ಸಂಸ್ಥಾನದಲ್ಲಿ ನಾಲ್ಕು ಡಿಸ್ಟ್ರಿಕ್ಟುಗಳಿಗೆ ಕಡಿಮೆಯಿಲ್ಲದ ಸುವಿಸ್ತಾರವಾದ ಪ್ರದೇಶದಲ್ಲಿರುವ ನಾನಾ ಸ್ಥಳಗಳಲ್ಲಿಯೂ ವ್ಯವಸ್ಥಿತವಾಗಿವೆ. ಈ ಧರ್ಮ ಕಾರ್ಯಗಳಿಗಾಗಿ ಶ್ರೀ ಮಠದಿಂದ ವಿನಿಯೋಗವಾಗಿರುವ ಧನವು ೧೮ ಲಕ್ಷ ರೂಪಾಯಿಗಳೆಂದು ನಮ್ಮ ಅವಗಾಹನೆಗೆ ಬಂದಿದೆ. ಧರ್ಮ ಕಾರ್ಯಗಳಿಗಾಗಿ ವಿನಿಯೋಗವಾಗಿರುವ ಆ ಧನದಲ್ಲಿ ಬಹುಭಾಗದ ಮೊತ್ತಗಳು ಮುಖ್ಯವಾಗಿ ವೀರಶೈವ ಪಂಗಡದ ವಿದ್ಯಾರ್ಥಿಗಳಿಗೆ ಭೋಜನ ವಸತಿಗಳನ್ನೊದಗಿಸುವ ವಿದ್ಯಾರ್ಥಿ ನಿಲಯಗಳನ್ನು ನಿರ್ಮಿಸುವುವೇ ಮುಂತಾದ ವಿದ್ಯಾಭ್ಯಾಸ ಸಂಬಂಧವ ಸೌಕರ್ಯಗಳನ್ನು ಕಲ್ಪಿಸುವುದಕ್ಕಾಗಿಯೇ ವ್ಯಯವಾಗಿವೆ. ಈಗ ಶ್ರೀ ಶ್ರೀಗಳವರು ಸಾಮಾನ್ಯಶಃ ವೈದ್ಯ ವಿದ್ಯಾಭ್ಯಾಸ ಮಾಡತಕ್ಕವರಿಗೂ ಪರಿಣಾಮದಲ್ಲಿ ಮಹಾಜನರಿಗೂ ಪ್ರಯೋಜನಕರವಾಗಿರುವ ಮಹತ್ತರವಾದ ಈ ಕಾರ್ಯಕ್ಕಾಗಿ ಉದಾರವಾದ ಧರ್ಮ ದ್ರವ್ಯವನ್ನಿತ್ತು ಉಪಕರಿಸಿದ್ದಾರೆ.

ಧರ್ಮಾರ್ಥವಾದ ಈ ಸಹಾಯದಿಂದ ಪ್ರಯೋಜನ ಪಡೆದು ಇಲ್ಲಿ ನಿರ್ಮಿತವಾಗುವುದಾಗಿರುವ ರೋಗನಿದಾನ ಶಾಸ್ತ್ರೀಯ ಪ್ರಯೋಗ ಪರೀಕ್ಷಾ ಶಾಲೆಯಲ್ಲಿ ವ್ಯಾಸಂಗಮಾಡುವ ವಿದ್ಯಾರ್ಥಿ ವಿದ್ಯಾರ್ಥಿನಿಯರೆಲ್ಲರೂ ನಿರ್ವಹಿಸಬೇಕಾದ ಗುರುತರವಾದ ಕರ್ತವ್ಯವನ್ನು ಕುರಿತು ಸೂಚಿಸಲಿಚ್ಛಿಸುವೆವು. ಅವರುಗಳೆಲ್ಲರೂ ಮೈಸೂರು ಸಂಸ್ಥಾನದ ಈ ವೈದ್ಯ ಮಹಾ ಪಾಠಶಾಲೆಯು ಭರತಖಂಡದ ಇತರ ಪ್ರದೇಶಗಳಲ್ಲಿರುವ ವೈದ್ಯ ಮಹಾಪಾಠಶಾಲೆಗಳಲ್ಲಿ ಉತ್ತಮೋತ್ತಮವಾದವುಗಳ ವರ್ಗಕ್ಕೆ ಸೇರಲನುಕೂಲಿಸುವಂತೆ ಶ್ರದ್ಧೆಯಿಂದ ವರ್ತಿಸುವುದು ಮಾತ್ರವೇ ಅಲ್ಲದೆ, ಮಾನವ ವರ್ಗಕ್ಕೆ ಮಂಗಳಕರವಾಗಿ ಪರಿಣಮಿಸುವ ನೂತನ ವಿಚಾರಗಳನ್ನು ಕಂಡುಹಿಡಿಯಲು ಅಪರಿಮಿತವಾದ ಅವಕಾಶವಿರುವ ಈ ರೋಗನಿದಾನ ಶಾಸ್ತ್ರದ ವ್ಯಾಸಂಗವೂ ಸಂಶೋಧನಗಳೂ ಕೂಲಂಕಷವಾಗಿ ನಡೆಯುವ ವಿದ್ಯಾಸಂಸ್ಥೆಯೆಂಬ ಖ್ಯಾತಿಯನ್ನು ಗಳಿಸುವಂತೆಯೂ ಮಾಡಬೇಕೆಂಬುದು ನಮ್ಮ ಆಂತರವಾದ ಅಭಿಲಾಷೆ.

"ಮಹಿಳೆಯರೇ, ಮತ್ತು ಮಹಾಶಯರೇ, ಶ್ರೀ ಜಯದೇವ ಮುರುಘರಾಜೇಂದ್ರ ಸ್ವಾಮಿಗಳವರ ನಾಮಾಂಕಿತದಲ್ಲಿ ಇಲ್ಲಿ

ನಿರ್ಮಿತವಾಗುವ ರೋಗನಿದಾನ ಶಾಸ್ತ್ರೀಯ ಪ್ರಯೋಗ ಪರೀಕ್ಷಾಶಾಲೆಯ ಅಸ್ತಿಭಾರ ಶಿಲೆಯನ್ನು ಪ್ರತಿಷ್ಠಿಸಲು ನಾವು ವಿಶೇಷವಾಗಿ ಹರ್ಷಿಸುವೆವು.

ಬಳಿಕ ಪ್ರಭುಗಳು ಶ್ರೀ ಸ್ವಾಮಿಗಳ ಸಮೇತ ದಯಮಾಡಿ ಕಟ್ಟಡದ ಶಿಲಾಪ್ರತಿಷ್ಠೆಯನ್ನು ಸ್ವಹಸ್ತ ಬೆಳಸಿ ಸಭೆಯನ್ನು ಉಪಸಂಹರಿಸಿ ಸಾರೋಟಿನಲ್ಲಿ ಮಂಡಿಸಿ ಜಯಘೋಷವಾಗುತ್ತಿರುವಲ್ಲಿ ಅರಮನೆಗೆ ಚಿತ್ತೈಸಿದರು. ಪ್ರಭುಗಳ ದರ್ಶನಾಪೇಕ್ಷೆಯಿಂದ ಸಹಸ್ರಾರು ಮಂದಿ ಪ್ರಜೆಗಳು ರಸ್ತೆಗಳ ಇಕ್ಕಡೆಗಳಲ್ಲೂ ಸೇರಿದ್ದರು. ಶ್ರೀ ಸ್ವಾಮಿಗಳವರು ಶಂಕುಸ್ಥಾಪನೆಯ ಉತ್ಸವವನ್ನು ಪೂರೈಸಿಕೊಂಡು ಸಯ್ಯಾಜಿರಾವ ರಸ್ತೆಯ ಮೂಲಕ ದಯಮಾಡಿಸಿ ಮೇಲ್ಕಂಡ ಡಾ. ಎಂ. ಅಣ್ಣಾಜಪ್ಪನವರ ಹೆಸರುವಾಣಿ ಚಪ್ಪರದಲ್ಲಿ ಡಾಕ್ಟರರವರು ಅರ್ಪಿಸಿದ ಫಲಪುಷ್ಪಾದಿಗಳನ್ನು ಸ್ವೀಕರಿಸಿ ಅನಂತರ ಡಾಕ್ಟರರವರ ಕೊರಳಿಗೆ ಸ್ವಹಸ್ತ ಪುಷ್ಪಮಾಲಿಕೆಯನ್ನು ಹಾಕಿಸಿ ಆಶೀರ್ವದಿಸಿ ದಯಮಾಡಿಸಿದರು. ಡಾಕ್ಟರರವರ ರಾಜಭಕ್ತಿಯನ್ನೂ ಗುರುಭಕ್ತಿಯನ್ನೂ ಸಹಸ್ರಾರು ಪ್ರಜೆಗಳು ನೋಡಿ ಸಂತೋಷಪಟ್ಟರು. "ವೃತ್ತಾಂತ ಪತ್ರಿಕೆ."

---

# ರಾಜಧಾನಿಗೆ ಶ್ರೀ ಜಗದ್ಗುರು ಜಯದೇವ ಮುರಘರಾಜೇಂದ್ರ ಮಹಾ ಸ್ವಾಮಿಗಳ ಆಗಮನ.

### ಈ ವರೆಗಿನ ಮುಖ್ಯ ಸಂಗತಿಗಳು.

ತಾ. ೨೩-೨-೩೮.— ಈ ದಿನ ಮುಂಚೆಯೇ ಗೊತ್ತಾದ ಪ್ರಕಾರ ಶ್ರೀ ಜಗದ್ಗುರು ಮುರುಘರಾಜೇಂದ್ರ ಮಹಾಸ್ವಾಮಿಗಳು ಮೈಸೂರು ರಾಜಧಾನಿಗೆ ಆಗಮಿಸಿದರು. ದಾವಣಗೆರೆಯಿಂದಲೂ, ಬೆಂಗಳೂರಿನಿಂದಲೂ, "ಶ್ರೀ ಜಗದ್ಗುರು ಜಯದೇವ" ಸ್ಪೆಶಲ್ ಟ್ರೇನುಗಳ ಮೂಲಕ ಸಹಸ್ರಾವಧಿ ವೀರಶೈವರು ರಾಜಧಾನಿಗೆ ಬಂದರು. ಮಹಾಸ್ವಾಮಿಗಳ ಸಕಲ ಬಿರುದಾವಳಿಗಳಿಂದಲೂ ರಾಜಬಿರುದಾವಳಿಗಳಿಂದಲೂ ಅತ್ಯಂತ ವೈಭವದ ಮೆರವಣಿಗೆ ನಡೆಯಿತು. ಮಹಾರಾಜಾ ಸರಕಾರದಿಂದ ಮಹಾಸ್ವಾಮಿಗಳ ಆಗಮನದ ಸನ್ಮಾನಾರ್ಥವಾಗಿ ೧೧ ತೋಪುಗಳು ಹಾರಿಸಲ್ಪಟ್ಟವು.

ಮಹಾತ್ಮಾ ಗಾಂಧಿಯವರೇ ಮೊದಲಾದ ವಿಭೂತಿಗಳ ವಸತಿಯಾಗಿದ್ದ "ಶೇಷಾದ್ರಿ ಹೌಸ್" ಎಂಬ ಮಹಾರಾಜಾ ಸರಕಾರದ ಭವ್ಯಭವನದಲ್ಲಿ ಮಹಾಸ್ವಾಮಿಗಳ ವಸತಿಯಾಯಿತು ಇಲ್ಲಿಯ ಶ್ರೀ. ನಂಜುಂಡಪ್ಪನವರೇ ಮೊದಲಾದ ಪ್ರಮುಖ ವೀರಶೈವ ಉದಾರಿಗಳಿಂದ ಬಂದ ಮಹಾ ಜನಗಳಿಗೆ ಇಲ್ಲಿ ಸಂಭ್ರಮದ ಊಟೋಪಚಾರ ಜರುಗಿದುದು. ತಾ. ೨೪-೨-೩೮ ಶ್ರೀ ಜಯದೇವ ಮುರಘರಾಜೇಂದ್ರ ರೋಗನಿದಾನ ಪ್ರಯೋಗ ಪರೀಕ್ಷಾ ಭವನದ ಶಂಕುಸ್ಥಾಪನೆಯ ಮಹೋತ್ಸವವು ಶ್ರೀ ಮಹಾಸ್ವಾಮಿಗಳವರ ನೇತೃತ್ವದಲ್ಲಿ ಶ್ರೀಕೃಷ್ಣರಾಜೇಂದ್ರ ಮಹಾ ಪ್ರಭುಗಳವರ ಅಮೃತ ಹಸ್ತದಿಂದ ನೆರವೇರಿತು.

ತಾ. ೨೫-೨-೩೮ ಶ್ರೀ ಜಗದ್ಗುರುಗಳ ದರ್ಶನಾರ್ಥವಾಗಿ ಪರಸ್ಥಳಗಳಿಂದ ಬಂದಿದ್ದ ಹತ್ತಾರು ಸಾವಿರ ಜನಗಳ ನೋಟಕ್ಕಾಗಿಯೇ ಅರಮನೆಗೂ ಶ್ರೀಕೃಷ್ಣರಾಜ ಸಾಗರಕ್ಕೂ ಝಗಝಗಿಸುವ ಅತ್ಯಂತ ಮನೋಹರವಾದ ವಿದ್ಯುದ್ದೀಪಗಳು ಮಹಾರಾಜಾ ಸರಕಾರದಿಂದ ಹಚ್ಚಿಸಲ್ಪಟ್ಟವು.

ತಾ. ೨೬-೨-೩೮ ಶ್ರೀ ಮಹಾಸ್ವಾಮಿಗಳವರ ದರ್ಶನಾರ್ಥಿಗಳಾಗಿ ಬಂದಿದ್ದ ಪರಸ್ಥಳಗಳ ಹತ್ತಾರು ಸಾವಿರ ಜನಗಳಿಗೆ ಅನುಬಂಧವಾಗಿ ಅರಮನೆಯನ್ನು ನೋಡಲು ಸರಕಾರದವರು ಅವಕಾಶವನ್ನು ಕಲ್ಪಿಸಿಕೊಟ್ಟದು.

ತಾ. ೨೭-೨-೩೮— ಶ್ರೀ ಜಗದ್ಗುರುಗಳವರು ಈ ದಿನ ಪ್ರಾತಃಕಾಲ ೭ ಗಂಟೆಗೆ ಪಲ್ಲಕ್ಕಿ ಉತ್ಸವದೊಡನೆ ಸಕಲ ರಾಜಮರ್ಯಾದೆಗಳಿಂದ ರಾಜಧಾನಿಗೆ ತೆರಳಿ ಮಹಾರಾಜರವರಿಗೂ ರಾಜಕುಟುಂಬದವರಿಗೂ ದರ್ಶನವಿತ್ತುದು. ಶ್ರೀ. ಮಹಾರಾಜರವರೂ ಶ್ರೀ ಜಯ ಚಾಮರಾಜರವರೂ ರಾಜಕುಟುಂಬದವರೂ ಮಹಾಸ್ವಾಮಿಗಳ ದರ್ಶನ ಹೊಂದಿ ಕಾಣಿಕೆ, ಫಲಾದಿಗಳನ್ನು ಅರ್ಪಿಸಿದುದು. ಶ್ರೀ. ಮಹಾಸ್ವಾಮಿಗಳು ಫಲ, ಮಂತ್ರಾಕ್ಷತೆಗಳನ್ನು ಆಶೀರ್ವದಿಸಿದುದು. ಮಹಾ ಸ್ವಾಮಿಗಳು ಮಹಾ ರಾಜರೊಂದಿಗೆ ಅರಮನೆಯನ್ನು ಅವಲೋಕಿಸಿ ಹತ್ತು ಗಂಟೆಯ ಸಮಯದಲ್ಲಿ ತಮ್ಮ ವಸತಿಗೆ ಆಗಮಿಸಿದುದು.

ಈ ದಿನ ೧೫೦೦ ಜನಗಳಿಗೆ ಮಿಷ್ಟಾನ್ನ ಭೋಜನವು ಮಹಾಸ್ವಾಮಿಗಳ ವಸತಿ ಭವನದಲ್ಲಿ ಮಹಾರಾಜರವರಿಂದ ನೆರವೇರಿಸಲ್ಪಟ್ಟದು.

ತಾ. ೨೮-೨-೩೮ ಶಿವರಾತ್ರಿಯ ಪೂಜಾ ನಿಮಿತ್ತವಾಗಿ ಮಹಾರಾಜರವರಿಂದ ಮಹಾಸ್ವಾಮಿಗಳ ಕಡೆಗೆ ಪೂಜಾದ್ರವ್ಯವೂ ಕಾಣಿಕೆಯೂ ಕಳುಹಿಸಲ್ಪಟ್ಟದು. ಆ ದಿನ ಶಿವಪೂಜಾ ಸಮಾರಂಭವು ಮಹಾಸ್ವಾಮಿಗಳವರ ವಸತಿಯಲ್ಲಿ ಬಹು ವೈಭವದಿಂದ ಜರುಗಿದುದು.

ತಾ. ೩-೩-೩೮ ಮಹಾಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಘನವಾದ ಸಭೆಸೇರಿದುದು. ಮಹಾಶಿವಾನುಭವಿಗಳೂ ಘನ ವಿದ್ವಾಂಸರೂ ಆದ ಬೆಂಗಳೂರು ಶ್ರೀ ಸರ್ಪಭೂಷಣ ಶಿವಯೋಗಿ ಮಠಾಧಿಪತಿ ಶ್ರೀಮನ್ನಿರಂಜನ ಶ್ರೀ ಮಹಾದೇವಸ್ವಾಮಿಗಳವರು 'ಸರ್ವಧರ್ಮ ಸಮನ್ವಯ' ಎಂಬ ವಿಷಯದ ಮೇಲೆ ಮಹತ್ವದ ಭಾಷಣಮಾಡಿದರು. ದಿವಾನ ಸಾಹೇಬರಾದ ಸರ್. ಮಿರ್ಜಾ ಇಸ್ಮಾಯಿಲ್‌ರವರೂ ಅನೇಕ ಸರಕಾರಿ ಪ್ರಮುಖ ಅಧಿಕಾರಿಗಳೂ ಸಭೆಗೆ ಆಗಮಿಸಿದ್ದರು. ದಿವಾನ ಸಾಹೇಬರವರೂ ಭಾಷಣಮಾಡಿ ಮಹಾಸ್ವಾಮಿಗಳು ಆಗಾಗ್ಗೆ ಈ ಭಾಗಕ್ಕೆ ಆಗಮಿಸಿ ಜನರ ಧರ್ಮನೀತಿಗಳ ಉನ್ನತಿಯ ಮಹತ್ಕಾರ್ಯ ನೆರವೇರಿಸಲು ವಿಜ್ಞಾಪಿಸಿಕೊಂಡರು.

### ಹಿತೋಪದೇಶದ ಕಾರ್ಯಕ್ರಮ.

| ವಿಷಯ | ಭಾಷಣಕಾರರು. |
|---|---|
| ತಾ. ೪ ಭಕ್ತಿಯೋಗ— | ವೇ॥ ಪ್ರ. ವಿದ್ವಾನ್ ಗುರಲಿಂಗದೇವರು ನ್ಯಾಯಾಚಾರ್ಯ |
| ತಾ. ೫ ಹಂಹರಕವಿ— | ಶ್ರೀಮಾನ್ ಪ್ರೊ. ಟಿ. ಎಸ್ ವೆಂಕಣ್ಣಯ್ಯ ಎಂ. ಎ. ಅವರು |
| ,, ಅರ್ಪಣಯೋಗ— | ಶ್ರೀಮಾನ್ ಹರ್ಡೇಕರ ಮಂಜಪ್ಪನವರು |
| ತಾ. ೬ ಮೋಕ್ಷೋಪಾಯ— | ಆಸ್ಥಾನ ಮಹಾವಿದ್ವಾನ್ ಸಾಹಿತ್ಯ ರತ್ನ ವೇ॥ ವೆಂಕಟರಾಮ ಶಾಸ್ತ್ರಿಗಳು |
| ತಾ. ೭ ವಚನಶಾಸ್ತ್ರ— | ಶ್ರೀಮನ್ನಿರಂಜನ ಪ್ರಣವಸ್ವರೂಪಿ ಪಂ. ಮಹಾದೇವ ಸ್ವಾಮಿಗಳು |
| ತಾ. ೮ ಭಾರತೀಯ ತತ್ವಶಾಸ್ತ್ರ— | ಶ್ರೀಮಾನ್ ಪ್ರೊ. ಎಚ್. ಎಸ್. ರಾಘವೇಂದ್ರಾಚಾರ್ಯ ಎಂ. ಎ. ಅವರು |
| ತಾ. ೯ ವೀರಶೈವ ತತ್ವಜ್ಞಾನ— | ಕೀರ್ತನಕೇಸರಿ ವೇ॥ ಶಿವಮೂರ್ತಿ ಶಾಸ್ತ್ರಿಗಳು |
| ತಾ. ೧೦ ಭಕ್ತಿವಿಜಯ ಕೀರ್ತನ— | ವೇ॥ ಬಿ. ಶಿವಮೂರ್ತಿ ಶಾಸ್ತ್ರಿಗಳು |

ಓರ್ವ ನಾಗರಿಕ.

(೯ ನೆಯ ಪುಟದಿಂದ ಮುಂದೆ ಸಾಗಿದೆ.)

ವಾಗಿ ಈ ಶಾಸ್ತ್ರದ ಚರ್ಚೆ ಮತ್ತು ನಿರ್ಣಯಗಳು ಮಾಡಲ್ಪಟ್ಟವೆ. ಇಂಗ್ಲೆಂಡ್ ದೇಶದ ಹೆಸರು ಬೇರೆ ರೀತಿಯಲ್ಲಿ ಹೇಳಲ್ಪಟ್ಟರುವುದರಿಂದ ೧೬ ನೆಯ ಶತಮಾನದ ಹಿಂದೆಯೇ ಈ ಗ್ರಂಥದ ರಚನೆಯಾಗಿರಬಹುದು. ನಮ್ಮ ಪ್ರಾಚೀನರು ಈ ಜ್ಯೋತಿಷ್ಯ ಶಾಸ್ತ್ರವನ್ನು ಎಷ್ಟರಮಟ್ಟಿಗೆ ಶೋಧಿಸಿದ್ದಾರೆಂಬುದು ಈ ನಂದಿ ನಾಡಿ ಗ್ರಂಥದಿಂದ ಸ್ಪಷ್ಟ ಗೊತ್ತಾಗಿ ಅತ್ಯಾಶ್ಚರ್ಯವು ಮತ್ತು ಇದಕ್ಕೆ ಸಂಬಂಧವಾದ ಅವರವರ ಬುದ್ಧಿ ಮತ್ತು ಭಾವನೆಗಳಲ್ಲಿ ವಿಶೇಷವಾದ ಕ್ರಾಂತಿಯು ಉಂಟಾಗದಿರಲಾರವು. ತಮಿಳು ಲಿಪಿಯನ್ನು ಬಲ್ಲವರು ತಾವೇ ಅದನ್ನು ಓದಿ ನೋಡಿದರೆ ಕೂಡಲೆ ಸಂಶಯ ನಿವಾರಣೆಯಾಗುವುದು. ಆದಕಾರಣ ಜಿಜ್ಞಾಸುಗಳೂ ಜ್ಯೋತಿಷಜ್ಞರೂ ತಮ್ಮ ಭವಿಷ್ಯ ತಿಳಿದುಕೊಳ್ಳಬೇಕೆಂಬುವವರೂ ಶ್ರೀ. ಮೊದಲಿಯರರಲ್ಲಿರುವ ಗ್ರಂಥದ ಪ್ರಯೋಜನವನ್ನು ಅಗತ್ಯವಾಗಿ ಹೊಂದಲೆಂದೇ ನಾವು ಈ ವಿಷಯವಾಗಿ ಈ ಪ್ರಕಾರ ಪ್ರಸ್ತಾಪಿಸಿದ್ದೇವೆ. —ಸಂಪಾದಕ.]

---

## ದೀಕ್ಷೆಗೆ ಇದೇ ಶಿಕ್ಷೆಯೆ?

### ಉಡಚಾಣ.

ಶ್ರೀಮದುಜ್ಜಯನಿ ಸಿಂಹಾಸನಾಧೀಶ್ವರರು ನಮ್ಮೂರಿಗೆ ಬಂದಾಗ್ಗೆ ನಮ್ಮ ವೀರಶೈವ ಸದ್ಭಕ್ತಮಂಡಲಿಯೆಲ್ಲವೂ ಸೇರಿ ಶಿವ ಜೀವೈಕ್ಯಾಪೇಕ್ಷೆಯುಳ್ಳ ಹಲ ಕೆಲವರಿಗೆ ವೀರಶೈವ ದೀಕ್ಷಾ ಸಂಸ್ಕಾರಗಳನ್ನು ಮಾಡಿ ಪಂಙ್ತಿಪಾವನ ಮಾಡಿಸಿರುವದು ಸರ್ವರಿಗೂ ವಿದಿತವಿದೆಯಷ್ಟೆ.

ಇದರಂತೆಯೇ ನಮ್ಮ ನೆರೆ ಊರ "ಶಿವುರ" ದವರೂ ಸಹ ನಮ್ಮ ಪಟ್ಟಾಧ್ಯಕ್ಷರಿಂದ ಲಿಂಗಾಯತ ಗೌಳಿಗರಿಗೆ ವಿಧ್ಯುಕ್ತ ಶಿವ ದೀಕ್ಷಾ ಸಂಸ್ಕಾರವನ್ನು ಮಾಡಿಸಿ ಪಂಙ್ತಿಪಾವನ ಮಾಡಿರುವರು. ಈ ಪವಿತ್ರ ಕಾರ್ಯ ಮಾಡಿರುವುದಕ್ಕೆ ಮರವಿಯ ತವರುಮನೆಯಾಗಿರುವ ಹಿರೇಮಣ್ಣೂರದಲ್ಲಿರುವ ಕೆಲವು ಶೆಟ್ಟರ ಮಂಡಳಿಯು ಸೇರಿ ಈ ಕೆಳಗಣ ಪ್ರಕಾರ ಬಹಿಷ್ಕಾರ ಪತ್ರಗಳನ್ನು ಊರೂರಿಗೆ ಸಹಿ ಮಾಡಿಸಿಕೊಂಡು ಬರುವದರ ಸಲುವಾಗಿ ಕಳಿಸಿರುವರು.

"ಉಡಚ್ಯಾಣ, ಶಿವುರ, ಈ ಗ್ರಾಮಸ್ಥರು ಹೀನ ಕುಲದವರಲ್ಲಿ ಸಹಪಂಙ್ತಿ ಭೋಜನಾದಿಗಳನ್ನು ಮಾಡಿರುವರಾದಕಾರಣ ಅವರಿಗೆ ನಾವು ಬಹಿಷ್ಕರಿಸಿರುವೆವು. ನಿಮ್ಮ ಗ್ರಾಮಸ್ಥರೆಲ್ಲರೂ ಅವರ ಸಂಗಡ ಬಳಿಕೆ ಭೋಜನ ಹೆಣ್ಣು ಕರೆಯುವುದು ಕಳುಹುವದು ಕೊಡುವುದು ತರುವುದು ಈ ವಿಧವಾದ ಯಾವ ಕಾರ್ಯವನ್ನೂ ಮಾಡಬಾರದು. ಇದಕ್ಕೆ ನಿಮ್ಮೆಲ್ಲರ ಸಹಿ ಕೊಡಿರಿ. ಅಲ್ಲದೆ ಅವರು ನಿಮ್ಮೂರಿಗೆ ಬಂದಾಗ್ಗೆ ಯಾವ ಮುರವತ್ತು ಇಡದೆ ಅವರಿಗೆ ಅನ್ನ ನೀರುಗಳನ್ನು ಎತ್ತಿಹಾಕಿರಿ. ಇದಕ್ಕೆ ಅಲಕ್ಷ ಮಾಡಬಾರದು. ಇತ್ಯಾದಿ. ಹಿರೇಮಣೂರ ಪೈವಮಂಡಳಿ ಎಂದಿದೆ.

ದೀಕ್ಷೆಗೆ ಇದೇ ಶಿಕ್ಷೆಯೇ? ವೀರಶೈವ ಮಹಾಶಯರೇ ಕೇಳಿದಿರೊ? ಈ ಮಂಡಳಿಯವರು ಗುರುಗಳ ಗುರುವಾಗಿಯೂ ಜಗದ್ಗುರುವಿನ ಗುರುವಾಗಿಯೂ ಪರಿಣಮಿಸಿರುವರಲ್ಲವೆ? ಈ ಅಧಿಕಾರವು ಇವರಿಗೆ ಹೇಗೆ ಬಂತೆಂಬುದು ತಿಳಿಯದು. ಪರಾರ್ಜಿತವೆನ್ನೋಣವೇ ಆಧಾರವಿಲ್ಲ. ಸ್ವಯಾರ್ಜಿತವೆಂದರೆ ಈ ಅಧಿಕಾರವು ಇನ್ನುಳಿದವರಿಗೆ ಏಕೆ ಬರಬಾರದು? ಹಾಗಾದರೆ ಇವರೇಕೆ ಬಹಿಷ್ಕೃತರಾಗಲಾರರು? ಇದಕ್ಕೆ ಉತ್ತರವನ್ನು ಕೇಳಿದರೆ ಪುಕ್ಕುಕಟ್ಟರವಿಲ್ಲ. ವಾದಕ್ಕೆ ಪಂಡಿತರನ್ನು ಕರೆಯಿಸುವರಂತೆ. ಮೂರು ನಾಲ್ಕು ತಿಂಗಳುಗಳಾದರೂ ಮೌನವೇಕೊ? ಇವರ ಪಂಡಿತರು ಜಾಗ್ರತೆ ಬರಲಿ. ತಮ್ಮ ಸಾವುಕಾರಿಕೆಯಲ್ಲಿ ಪಂಡಿತರ ಖರ್ಚನ್ನು ಕೊಡಲಾಗದಿದ್ದರೆ ನಾವು ಕೊಡುವೆವು. ತ್ವರಿತ ಬರಮಾಡಲಿ. ಮೌನವಾಗಿ ಕುಳಿತರೆ ತಮ್ಮ ಹುಳುಕುಗಳೆಲ್ಲವೂ ಹೊರಬೀಳುವವೆಂಬುದು ಮರೆಯಲಾಗದು

ವೀರಶೈವರ ಏಕೀಕರಣಕ್ಕಾಗಿ ಪ್ರಯತ್ನಿಸುವ ನನ್ನ ಬಂಧುಗಳೇ! ನಮ್ಮ ಉಭಯ ಮಂಡಳಿಯವರು ಮಾಡಿರುವ ಕಾರ್ಯಗಳಲ್ಲಿ ಯಾರಿಗೆ ಬಹಿಷ್ಕಾರ ಹಾಕುವಿರಿ ಹೇಳಿ. ಇಲ್ಲದಿದ್ದರೆ ಇಂಥವರಿಗೆ ಬುದ್ಧಿ ಬರುವಹಾಗೆ ಲೇಖನಗಳನ್ನು ಕೊಟ್ಟು ಸಮಾಧಾನಗೊಳಿಸುವಿರೆಂದು ನಂಬಿಹ, ಸತ್ಪಕ್ಷದಭಿಮಾನಿಗಳಾದ;

ವೀರಶೈವ ಏಕೀಕರಣದ ಮಂಡಳಿ

ಉಡಚ್ಯಾಣ.

[ಮೇಲಿನ ಹೇಳಿಕೆಯಂತೆ ಹಿರೇಮಣ್ಣೂರು ಗ್ರಾಮದ ಕೆಲವು ವೀರಶೈವ ಮಹಾಜನರು ಬಹಿಷ್ಕಾರದ ಪ್ರಯತ್ನ ನಡೆಸಿದ್ದರೆ ಅದು ಅತ್ಯಂತ ಅನುಚಿತವಾದುದು. ವಿಚಾರಪರರಾದ ವೀರಶೈವರಾರೂ ಇವರ ಅಧರ್ಮದ ದಬ್ಬಾಳಿಕೆಗೆ ಸಹಕಾರಿಗಳಾಗಲಾರರು. ವೀರಶೈವ ಮತತತ್ವಗಳ ನಿಜಜ್ಞಾನವಿಲ್ಲದ ಇಂಥ ಜನರಿಂದಲೇ ಎಲ್ಲ ಕಡೆಗೂ ವೀರಶೈವರಲ್ಲಿ ಮೇಲು ಕೀಳುಗಳ ಕೊಳೆ ಹೆಚ್ಚುತ್ತಾ ಇದೆ. ಒಳಪಂಗಡಗಳ ತಿಕ್ಕಾಟ ಹೆಚ್ಚಿ ಸಮಾಜವು ಹೀನಸ್ಥಿತಿಗೆ ಬರುತ್ತಾ ಇದೆ. ಹಿರೇಮಣ್ಣೂರು ಗ್ರಾಮದ ಈ ವೀರಶೈವ ಮಹಾಜನರು ಈಗಲಾದರೂ ತಮ್ಮ ಈ ಘಾತಕವಾದ ಅನಾಚಾರವನ್ನು ಬಿಟ್ಟು ಶಿವದೀಕ್ಷೆಯಾಗಿರುವ ಆ ನಮ್ಮ ಧರ್ಮಬಂಧುಗಳೊಡನೆ ಬಳಕೆಮಾಡಿ ನಿಜವಾದ ವೀರಶೈವಾಚಾರಪರರಾಗುವರೆಂದು ನಂಬಿದ್ದೇವೆ. —ಸಂಪಾದಕ.]

---

## ವೀರಶೈವ ವರನು ಬೇಕು.

ವೀರಶೈವರಲ್ಲಿಯ ಲೋಕಬಳಕಿ ಪಂಗಡಕ್ಕೆ ಸೇರಿದ ಒಂದು ಸುಶೀಲ, ಸುಲಕ್ಷಣ, ಸುಶಿಕ್ಷಿತ ಪ್ರೌಢ ಕನ್ಯೆ ಇದೆ. ಇದೇ ಪಂಗಡದ ತಕ್ಕಷ್ಟು ಆದಾಯವುಳ್ಳ ಯೋಗ್ಯ ವರನು ಬೇಕಾಗಿದ್ದಾನೆ. ಅಂಥವರು ಈ ಕೆಳಗಿನ ವಿಳಾಸಕ್ಕೆ ಬರೆದು ತಿಳಿಸಬೇಕು. ವಿಹಿತ ತೋರಿದರೆ ಸಾಲಂಕೃತ ಕನ್ಯಾದಾನಮಾಡಿಕೊಡಲ್ಪಡುವದು.

"ಶರಣ ಸಂದೇಶ" ಆಫೀಸ್
ಪೋ. ಆಲಮಟ್ಟಿ
ಜಿ. ವಿಜಾಪುರ.

---

### ಆಶ್ಚರ್ಯಕರ ಸುದ್ದಿ.

—ಬಡೋದಾ ರಾಜ್ಯದ ನವಸಾರಿ ಗ್ರಾಮದ ಹತ್ತಿರ ನೇಲಾದ ಎಂಬ ಊರಲ್ಲಿ ೧೫ ದಿನಗಳ ಕೂಸಿಗೆ ಹಲ್ಲುಗಳು ಬಂದಿವೆಯೆಂದೂ ಆ ಕೂಸು ತೊದಲು ಮಾತುಗಳನ್ನು ಆಡುತ್ತದೆಂದೂ ಆ ಭಾಗದ ಪತ್ರಿಕೆಯಲ್ಲಿ ಪ್ರಕಟವಾಗಿದೆ.

—ಸಾರಾಣ ಜಿಲ್ಲೆಯ ಬಾವಖಾಜೌತಿ ಎಂಬಲ್ಲಿ ಕಳೆದ ೫ ನೆಯ ತಾರೀಖಿನ ದಿವಸ ರಕ್ತದ ಮಳೆ ಬಂದಿತೆಂತಲೂ ಆಗ ಮಾಂಸದ ವಾಸನೆಯಂತಹ ಪದಾರ್ಥ ಬಿದ್ದಿತೆಂತಲೂ ಅದನ್ನು ಅಲ್ಲಿಯ ಪೋಲೀಸರು ತೆಗೆದಿಟ್ಟಿದ್ದಾರೆಂತಲೂ ಪ್ರಕಟವಾಗಿದೆ.

## ರಾಷ್ಟ್ರಧ್ವಜ ವಂದನೆಯ ಪದ್ಯ.

ರಾಗ— ಸಾರಂಗ (ನವಹಿಂದಿ ರಾಷ್ಟ್ರ ಝೆಂಡಾ) ಎಂಬಂತೆ.

(ಶ್ರೀ ಬಂಥನಾಳ ಶಿವಯೋಗಿ ವಿರಚಿತ.)

ನವ ಹಿಂದಿ ರಾಷ್ಟ್ರಧ್ವಜಕೆ| ನಾವು ವಂದನೆಗೈಯುವೆವಿದಕೆ |ಪ|| ಹಿಂದಿ ಜನರ ಬಂಧನ ಬಿಡಿಸಲು| ವಂದೇ ಮಾಡ್ವಧ್ವಜಕೆ ||೧|| ಸತ್ಯ ಅಹಿಂಸೆಯ ನೆತ್ತಿ ಹಿಡಿಯುವ ಸ್ತುತ್ಯ ರಾಷ್ಟ್ರ ಧ್ವಜಕೆ ||೨|| ಜಾತಿ ಭೇದದ ಘಾತಕತನವ| ನೀಗಿ ನಿಂತ ಧ್ವಜಕೆ ||೩|| ಭಾರತ ದೇಶದ ಬಾಪೂಜಿಯೆನಿಸಿದ| ಧೀರ ಗಾಂಧಿ ಧ್ವಜಕೆ ||೪|| ಕರಿಯನಾಡಿನ ಹಿರಿಯ ಬಸವನ| ಮರ್ಮ ಬೀರ್ವ ಧ್ವಜಕೆ ||೫||

---

## ವೀರಶೈವ ದೀಕ್ಷಾ ಸಮಾರಂಭ.

ಜಿಲ್ಲಾ ಗುಲಬರ್ಗಾ ಪೈಕಿ ನಾಗನಹಳ್ಳಿ ಎಂಬ ಗ್ರಾಮದಲ್ಲಿ ಹರಳಯ್ಯನ ಅನುಯಾಯಿಗಳಾದ ಮಲ್ಲಪ್ಪ ಮತ್ತು ಇವರ ಕುಟುಂಬ ಸಹಿತ ೫ ಜನ ೧೦-೧೨ ವರುಷಗಳಿಂದಲೂ ಅನ್ಯಾಚಾರಗಳನ್ನು ತ್ಯಜಿಸಿ ಸದಾಚಾರ ಮತ್ತು ವೀರಶೈವ ಧರ್ಮ ತತ್ವಗಳನುಸಾರವಾಗಿ ನಡೆದುಕೊಂಡು ಬಂದಿದ್ದಾರೆ. ಆದ್ದರಿಂದ ಲಿಂಗಧಾರಣೆಯನ್ನು ಮಾಡಲು ಅರ್ಜಿ ಮಾಡಿಕೊಂಡಂತೆ ಗ್ರಾಮದ ಪೋಲೀಸಗೌಡ, ಶರಣಯ್ಯ ಸ್ವಾಮಿ ಮತ್ತು ತರುಣಸಂಘದವರು ಕೂಡಿ ಶಿವರಾತ್ರಿಯ ದಿವಸ ಲಿಂಗಧಾರಣೆಯನ್ನು ಮಾಡಿರುತ್ತದೆ. ಗ್ರಾಮದ ಜನರು ಸಹಕಾರ ಮಾಡಲು ಸಹಾನುಭೂತಿಯನ್ನು ತೋರಿಸಿ ಕೃತಿಯಲ್ಲಿ ತಂದಿದ್ದಾರೆ.

ಭೀಮಣ್ಣಾ, ನರಸಪ್ಪ ಮತ್ತು ವೆಂಕಣ್ಣಾ ಯಾದಗಿರಿ ವ ಹಲಕರಪಿ ಇವರು ವೇಶ್ಯ ಕುಲದಲ್ಲಿ ಹುಟ್ಟಿದವರು. ಈಗ ಆ ವೃತ್ತಿಯನ್ನು ಮನಃಪೂರ್ವಕವಾಗಿ ತ್ಯಜಿಸಿ ಬಸವಾದಿ ಪ್ರಮಥರ ವಚನಗಳ ವೀರಶೈವ ಧರ್ಮತತ್ವದ ಸವಿರಸವನ್ನು ಮನಗಂಡು ಲಿಂಗ ಧಾರಣೆಯನ್ನು ಮಾಡಲು ತರುಣ ಸಂಘಕ್ಕೆ ಅರ್ಜಿ ಮಾಡಿಕೊಂಡಂತೆ ತಾ. ೮-೩-೩೪ ಮಂಗಳವಾರ ತರುಣ ಸಂಘದ ಹಾಲಿನಲ್ಲಿ ಲಿಂಗಧಾರಣೆಯನ್ನು ಮಾಡಿ ಸಹಭೋಜನ ಮಾಡಲ್ಪಟ್ಟಿತು.

ಕರಬಸಪ್ಪ ದಿವಾಣ

ಸೆಕ್ರೆಟರಿ ವೀ. ತ. ಸ. ಗುಲಬರ್ಗಾ.

---

## ಮುಟಿಮುರಿಯಲ್ಲಿ ಶಿವಯೋಗ ಸಂಭ್ರಮ.

ಈ ಊರ ವೀರಭದ್ರ ದೇವಾಲಯದಲ್ಲಿ ಶಿವಯೋಗ ಸಂಭ್ರಮವು ಒಳ್ಳೇ ವಿಜೃಂಭಣೆಯಿಂದ ನಡೆಯಿತು. ಸುಮಾರು ರಾತ್ರಿ ೯ ಕ್ಕೆ ರುದ್ರಾಭಿಷೇಕವು ಮುಗಿದು ಧೂಪಾರತಿ ಮಂಗಳಾರತಿಗಳು ಜರುಗಿದವು. ಅನಂತರ ಪಂ. ತಾರಾನಾಥರಿಂದ ಸ್ಥಾಪಿತವಾದ "ಪ್ರೇಮ ಚಿಕಿತ್ಸಾ ಸೇವೆ" ಯ ಮುಟಿಮುರಿ ಶಾಖೆಯ ಚಾಲಕರಾದ ಆಯುರ್ವೇದ ಚೂಡಾಮಣಿ ಸ್ವಾಮಿ ರಾಯಾಚಾರ್ಯ ಲೆಕ್ಚರರ್ ಪ್ರೇಮ ಮೆಡಿಕಲ್ ಕಾಲೇಜ ತುಂಗಭದ್ರಾ ಇವರು "ನಂದೀ ಪುರಾಣ"ವನ್ನು ಆರಂಭಿಸಿದರು. ಹಿಂದುಸ್ಥಾನದಲ್ಲಿ ನಂದಿಯ ಪ್ರಾಶಸ್ತ್ಯವನ್ನೂ ಪ್ರಾಮುಖ್ಯವನ್ನೂ, ಮತ್ತು ಇಂದು ನಂದಿಗೊದುತ್ತಲಿರುವ ಹೀನದೆಶೆಯನ್ನೂ ವ್ಯಾಖ್ಯಾನ ರೂಪವಾಗಿ ವಿವರಿಸಿದರು. ಒಂದೊಂದು ಗಿರಣಿಯು ನಡೆಯಬೇಕಾದರೆ ನೂರಾರು ಅದೇಕೆ ಸಾವಿರಾರು ಗೋ ವೃಷಭಗಳು ಹೇಗೆ ಕೊಲ್ಲಲ್ಪಡುತ್ತಲಿವೆ ಯೆಂಬುದನ್ನು ಸ್ಪಷ್ಟವಾಗಿ ತೋರಿಸಿದರು. ಇಂದಿನ ಗೋ ವೃಷಭ ಹತ್ಯಕ್ಕೆ ಮಾಂಸಾಹಾರಿಗಳಾದ ಮುಸಲ್ಮಾನಾದಿ ಇತರ ಜನರು ಅಗ್ರಕಾರಣರಾಗಿರದೆ ಕೇವಲ ಈ ಗಿರಣಿ ಬಟ್ಟೆಗಳನ್ನು ಧರಿಸುತ್ತಲಿರುವ ಬ್ರಾಹ್ಮಣ ಲಿಂಗಾಯತಾದಿ ಹಿಂದೀ ಜನರೇ ಹೇಗೆ ಮುಖ್ಯಕಾರಣರಾಗಿರುತ್ತಾರೆಂಬುದನ್ನು ವಿಶದಪಡಿಸಿದರು. ಹೀಗೆ ವ್ಯಾಖ್ಯಾನ ಮೂಲಕವಾಗಿ ಪುರಾಣದ ಪೀಠಿಕೆ ಮುಗಿದ ನಂತರ ಶ್ರೀಮಾನ್ ನೂರಂದಯ್ಯನವರು ಸರಾಗವಾಗಿ ಪುರಾಣವನ್ನೋದಲುಪಕ್ರಮಿಸಿದರು. ಸದರೀ ಸ್ವಾಮಿ ರಾಯಾಚಾರ್ಯರೇ ಜನರಂಜನೆಯಾಗುವಂತೆ ಆ ಪುರಾಣದ ಅರ್ಥವನ್ನು ಹೇಳಿದರು.

ಪುರಾಣ ಮುಗಿಯುವ ಮುನ್ನ ಶ್ರೀ ಚೆನ್ನಬಸವನಗೌಡಾ ಮಾಲೀ ಪಾಟೀಲರು ಎದ್ದು ನಿಂತು "ವೀರಶೈವರಿಂದ ಬಸವಣ್ಣನ ಹತ್ಯೆಯಾಗುತ್ತಿರುವ ಸಂಗತಿ ಹೃದಯದ್ರಾವಕವಾಗಿದೆ. ನಾವೆಲ್ಲರೂ ಇಂದು ಈ ಗೋವೃಷಭಹತ್ಯದ ಪಾಪವನ್ನು ಪರಿಹರಿಸಿಕೊಳ್ಳಲೇಬೇಕು. ಅದಕ್ಕಾಗಿ ನಾವು ಈಗ ಇಂದಿನ ಶಿವರಾತ್ರಿಯ ಮಹೋತ್ಸವದಲ್ಲಿ ಶ್ರೀ ವೀರಭದ್ರದೇವರೆದುರೂ ನಮ್ಮ ಡಾ. ರರೂ, ಪುರಾಣಿಕರೂ ಆಗಿರುವ ಶ್ರೀ ಸ್ವಾಮಿ ರಾಮಾಚಾರ್ಯರೆದುರೂ ಮತ್ತು ನಮ್ಮ ಮಠಾಧೀಶರಾದ ಇಲ್ಲಿ ಆಸ್ಥಾನಾ ಅಧ್ಯಕ್ಷರಾಗಿರುವ ಶ್ರೀ. ಸಾನಂದಪ್ಪನವರ ಸಮಕ್ಷಮದಲ್ಲಿಯೂ ನಾವೆಲ್ಲರೂ ಕೈರಾಟೆಯ ನೂಲನ್ನೇ ಉಪಯೋಗಿಸುತ್ತೇವೆಂತಲೂ ಖಾದಿಯನ್ನೇ ಧರಿಸುತ್ತೇವೆಂತಲೂ ಪ್ರತಿಜ್ಞೆಮಾಡಬೇಕೆಂದು ಹೇಳಿದರು.

ಅವರ ಈ ಯೋಗ್ಯ ಪ್ರತಿಜ್ಞೆಯನ್ನೇ ಇಲ್ಲಿಯ ಕೆಲ ವೀರಶೈವ ಬಂಧುಗಳು ಅನುಮೋದಿಸಿದರು. ಅನಂತರ ನಂದೀ ಪುರಾಣ ಮುಗಿದು ಜಾಗರಣೆಯಾರಂಭವಾಗಿ ಅತ್ಯಂತ ಹುರುಪಿನಿಂದ ಶಿವಯೋಗ ಸಮಾರಂಭವು ಖಾದಿಯ ಆರಂಭದಲ್ಲಿ ಕೊನೆಗಂಡಿತು. ಈ ಹೊಸ ಮಾದರಿಯ ನಂದೀ ಪುರಾಣವು ಈ ಊರ ವೀರಶೈವ ಸಂಘದ ಮುಂದಾಳುಗಳಾದ ಶ್ರೀ ಮಾಲೀ ಪಾಟೀಲ ಚೆನ್ನಬಸವಗೌಡರ ಬಳಿಯಲ್ಲಿರುವದು. ಅದನ್ನು ಅಚ್ಚುಹಾಕಿಸಿ ಅಥವಾ ಪ್ರಕಟಿಸಬೇಕೆಂದು ಬಯಸುವ ವೀರಶೈವಾಭಿಮಾನಿಗಳು ಅವರೊಡನೆ ಪತ್ರವ್ಯವಹಾರ ನಡೆಸಬೇಕು.

ಶರಣಪ್ಪ ಲಿಂಗಮ್ಮನವರ.

---

## ಪುನರುದ್ಧಾರ ಅಥವ ಶಿವಯೋಗಿಗಳ ಮಹಾತ್ಮೆ.

ನೈಜಾಮ ಸ್ಟೇಟ ಗುಲಬರ್ಗಾ ಜಿಲ್ಲಾ ಕಲ್ಯಾಣ ತಾಲೂಕಾಂತರ್ಗತ ಬೇಟ ಬಾಲಕುಂದ ಕ್ಷೇತ್ರ ನಿವಾಸಿಗಳಾದ ಶ್ರೀ ಶಿದ್ಧಶಿವಯೋಗಿ ಶರಣಬಸವಣ್ಣಪ್ಪನವರು ಕೋಳವಿ ತಾ|| ಗೋಕಾಕ ಜಿಲ್ಲಾ ಬೆಳಗಾವ ಇವರು ತಮ್ಮ ಶಿಷ್ಯಂದಿರಾದ ಮ|| ರಾ|| ಶ್ರೀ ನಾರಾಯಣರಾವ ಬಿರಾದಾರ ಶ್ರೀ ಮಾರುತಿರಾವ ಪೋ|| ಪಾ|| ಇವರನ್ನಲ್ಲದೆ ಬಾಲಕುಂದ ಕ್ಷೇತ್ರ ನಿವಾಸಿಗಳಾದ ವೇ|| ಶಿವಲಿಂಗಯ್ಯನವರು ವೇ|| ನಾಗಯ್ಯನವರು ಮ|| ರಾ|| ಮಾಧವರಾವ ಕುಲಕರ್ಣಿ ಮಾಣಿಕರಾವ ಪೋ|| ಪಾ|| ಭೋಜನಗೌಡ ಮಾ|| ಪಾ|| ಇವರೇ ಮೊದಲಾದ ಸನ್ಮಾನ್ಯ ಪ್ರಮುಖ ಮುಖಂಡರೊಡನೆ ಗುಂಜೋಟಿ ಜಿಲ್ಲಾ ಪರ್ವತಾಪುರ ತಾಲೂಕಾಂತರ್ಗತ ಕಲಕೋಟೆ ವಾಡಿ ಸಮಸ್ತ ಮತೀಯ ಸದ್ಭಕ್ತರ ಆಮಂತ್ರಣದ ಮೇರೆಗೆ ಸದರಿ ಗ್ರಾಮಕ್ಕೆ ತಾ. ೫-೨-೩೮ ನೇ ದಿವಸ ಆಗಮಿಸಿದರು. ವಾಡಿ ಗ್ರಾಮ ನಿವಾಸಿಗಳಾದ ಬಿಜಲಿಗೆ ಡಾ. ಪೋ. ಪಾ. ನಿಜಾಮುಗೌಡ ಮಾ. ಪಾ. ನರಸಪ್ಪ ಜಮಾದಾರ, ರಾಜೇಸಾಹೇಬ ಬಿರಾದಾರ, ರತ್ನಪ್ಪ ಯಕ್ರಮೂರ, ಮ. ರಾ. ಮಲ್ಲಪ್ಪ ಯಲಮೂರ ಇವರೇ ಮೊದಲಾದ ಮುಖಂಡರು ಶ್ರೀ ಶರಣರನ್ನು ಮಹಾ ಸಂಭ್ರಮದಿಂದೆದುರ್ಗೊಂಡು ಸನ್ಮಾನಿಸಿದರು. ಆ ವೇಳೆ ಮಾಧವರಾವ ಕುಲಕರ್ಣಿ ವೇ|| ಯಜಮಾನ ಶಿವಲಿಂಗಯ್ಯನವರು ಬಾಲಕುಂದ ಈ ಉಭಯ ಮಹಾಶಯರ ಸದ್ಬೋಧಪರ ಭಾಷಣಗಳಾದನಂತರ ಶ್ರೀ ವಿಶ್ವಪ್ರೇಮಿ ಬಸವೇಶ್ವರ ಜಯಘೋಷದೊಡನೆ ಸಭೆಯು ವಿಸರ್ಜನವಾಯಿತು. ನಂತರ ಶ್ರೀ ಶರಣರ ಅಪ್ಪಣೆ ಮೇರೆಗೆ ಭಜನಾ ಸಪ್ತಾಹವು ಜರುಗಿ ಸಪ್ತಾಹ ಸಮಾಪ್ತಿ ಕಾಲಕ್ಕೆ ದೊಡ್ಡ ಸಮಾರಾಧನೆಯೊಂದು ಜರುಗಿ ಅನೇಕ ಶಿವಜಂಗಮರ ಸಂತೃಪ್ತಿಯಾಯಿತು. ಈ ಸಪ್ತಾಹ ಮಹೋತ್ಸವಕ್ಕೆ ನೀಲಗಿ, ಕಾಸಾರ, ಬಾಲಕುಂದ, ಮುಗುಳಿ ಮಾಳೆಗಾಂವ ಇವೇ ಮೊದಲಾದ ಗ್ರಾಮಗಳ ಪ್ರಮುಖ ಮಹಾಜನಗಳೂ ಸರಕಾರಿ ಅಧಿಕಾರಿಗಳೂ ಆಗಮಿಸಿದ್ದರು. ಅಲ್ಲದೆ ಈ ಕಲಕೋಟೆ ವಾಡಿ ಗ್ರಾಮವು ಈಗ ಸುಮಾರು ೬೦ ವರುಷಗಳ ಪೂರ್ವದಲ್ಲಿಯೇ ಹಾಳಾದದ್ದಿದ್ದು ಸರ್ವಭೂತಗಳಿಗಾವಾಸವಾಗಿತ್ತೆಂದರೂ ಅತಿಶಯೋಕ್ತಿಯೆನಿಸಲಿಕ್ಕಿಲ್ಲ. ಯಾಕೆಂದರೆ ಇಲ್ಲಿಯ ಜನರು ಹಗಲು ಕೂಡಾ ಈ ಪ್ರದೇಶದ ಕಡೆಗೆ ಹಾಯದಿರುವದಲ್ಲದೆ ಕಣ್ಣೆತ್ತಿ ಸಹ ನೋಡುತ್ತಿದ್ದಿಲ್ಲ. ಇಂಥ ಭೀಕರಾಕಾರವಾದ ಸ್ಥಲವು ಈಗ ತಪೋನಿರತರಾದ ಶ್ರೀ ಶಿವಯೋಗಿ ಸ್ವಾಮಿಗಳು ಕಾಡಕುಂದಿ ಹಿರೇಮಠ ಸಾ|| ಬೆಂಗಳೂರ ನಗರ ಈ ಮಹಾಸ್ವಾಮಿಗಳಿಂದನುಗೃಹೀತರಾದ ಶ್ರೀ ಶರಣರ ಮಹಿಮೆಯಿಂದ ನಿರ್ಜನವಾದ ಪ್ರದೇಶವು ಈಗ ಸಜ್ಜನರಿಗಾಗಿ ವಾಸವಾಗಿರುವದಲ್ಲದೆ ವಾಡೀ ಜನರು ಮನೆಗಳನ್ನು ಕಟ್ಟಲಿಕ್ಕೂ ಆರಂಭಿಸಿದ್ದಾರೆ. ಇಲ್ಲಿ ಪುರಾತನ ಕಾಲದ್ದೊಂದು ಕೋಟೆಯು ಇದ್ದು ಇದರಲ್ಲಿ ಶ್ರೀ ಕರಿಬಸವೇಶ್ವರರೆಂಬ ಮಹಿಮಾಶಾಲಿಗಳ ಗದ್ದಿಗೆಯೂ ಇರುತ್ತದೆ. ಇಲ್ಲಿಯೆ ಶರಣರು ವಾಸಮಾಡಿರುವರಲ್ಲದೆ ದಾಸೋಹವನ್ನು ಕೂಡ ನಡೆಯಿಸಿರುವರು. ಅಲ್ಲದೆ ಈ ಮಹತ್ಕಾರ್ಯದಲ್ಲಿ ತತ್ಪರರಾದ ಮ. ರಾ. ನಾರಾಯಣರಾವ ಬಿರಾದ್ದಾರ ಮ. ರಾ. ಮಾರುತಿರಾವ ಪೊ. ಪಾಟೀಲ ಬೇಟ ಬಾಲಕುಂದ ಈ ಉಭಯರು ಮಾಡುತ್ತಿರುವ ಸಹಾಯ ಪ್ರೋತ್ಸಾಹಗಳಂತೂ ವರ್ಣನೀಯವಾಗಿವೆ.

ಶ್ರೀ ಶರಣರು ನಮ್ಮ ನಿಜಾಂ ಪ್ರಾಂತಕ್ಕಾಗಮಿಸಿ ಒಂದು ವರುಷವಾಗಿದ್ದರೂ ಮೇಲ್ಕಂಡ ಮಹಾಶಯರಿಬ್ಬರು ಶ್ರೀ ಶರಣರ ಪ್ರತಿಯೊಂದು ಕಾರ್ಯದಲ್ಲಿ ತಮ್ಮ ತನು ಮನ ಧನಗಳಿಂದ ಸಹಾಯ ಮಾಡುತ್ತಲೂ ಅನ್ಯರಿಂದ ಮಾಡಿಸುತ್ತಲೂ ಇರುವರು ಧನ್ಯ ಧನ್ಯ! ಇಂಥಾ ಗುರುಭಕ್ತರ ಪವಿತ್ರ ಜನ್ಮವೇ ಧನ್ಯವಾದದ್ದು ಇವರಂತೆಯೇ ವಾಡೀ ಗ್ರಾಮದ ಸಮಸ್ತ ಮತೀಯರು ಶ್ರೀ ಶರಣರೆಸಗುವ ಪ್ರತಿಯೊಂದು ಕಾರ್ಯಕ್ಕೆ ತಮ್ಮಗಳ ತನುಮನ ಧನಗಳಿಂದ ಸಹಾಯಮಾಡುತ್ತಲೂ ಅನ್ಯರಿಂದ ಮಾಡಿಸುತ್ತಲೂ ಇರುವರು. ಈ ಮೇಲ್ಕಂಡ ಮಹಾಶಯರಿಗೆಲ್ಲ ಶ್ರೀ ವಿಶ್ವಪ್ರೇಮಿ ಬಸವೇಶನು ಕಲ್ಯಾಣ ಪರಂಪರೆಯನ್ನೀಯಲೆಂದು ಹಾರೈಸುವ,

ಓರ್ವ ಪ್ರತ್ಯಕ್ಷದರ್ಶಿ

---

## ಬಂಥನಾಳ ಜಾತ್ರೆಯ ಸಮಾಚಾರ.

ಮೊದಲೇ ಪ್ರಸಿದ್ಧಪಡಿಸಿದಂತೆ ತಾ. ೨-೩-೩೮ ನೇ ದಿವಸ ಉತ್ಸವವು ಪ್ರಾರಂಭವಾಯಿತು. ಉತ್ಸವಕ್ಕೆ ಹತ್ತು ಸಾವಿರಕ್ಕಿಂತ ಹೆಚ್ಚು ಜನರು ಕೂಡಿದ್ದರು. ಅಗ್ನಿ ಮಹೋತ್ಸವ ಅಗ್ನಿ ಶಮನ ಅನ್ನ ಸಂತರ್ಪಣ ಮೊದಲಾದ ಕಾರ್ಯಗಳು ಯಥಾ ರೀತಿ ಸಾಂಗವಾದವು. ೪ ವಟುಗಳ ಅಯ್ಯಾಚಾರವೂ ಇಬ್ಬರ ದೀಕ್ಷೆಯೂ ಧರ್ಮಾರ್ಥವಾಗಿ ಮಾಡಲ್ಪಟ್ಟಿತು.

### ರಾಷ್ಟ್ರಧ್ವಜ ವಂದನೆಯ ಸಮಾರಂಭವು.

ತಾರೀಖು ೩ ನೇ ದಿವಸ ಮುಂಜಾನೆ ೭ ಘಂಟೆಗೆ ಧ್ವಜ ವಂದನೆಯ ಕಾರ್ಯವು ಪ್ರಾರಂಭವಾಯಿತು. ಪಂ. ಮರುಳಾರಾಧ್ಯ ಶಾಸ್ತ್ರಿ ಅಂಬಲಿ, ದುಭೆ, ಕೆ. ರಾಮಕೃಷ್ಣರಾವ ವಕೀಲ, ದೇಶಭಕ್ತ ಕೌಜಲಗಿ ಹಣಮಂತರಾಯರೇ ಮೊದಲಾದ ಪ್ರಮುಖ ಮಂಡಳಿ ಭಾಗವಹಿಸಿದ್ದಿತು. ರಾಷ್ಟ್ರಗೀತೆಯಾದನಂತರ ಶ್ರೀ ಶಿವಯೋಗಿಗಳವರಿಂದ ಧ್ವಜವಂದನೆಯ ಕಾರ್ಯ ಪೂರೈಸಿದಮೇಲೆ ಶಿವಯೋಗಿಗಳವರು ರಾಷ್ಟ್ರಧ್ವಜದ ಮಹತ್ವವನ್ನು ತಿಳಿಸಿದ ನಂತರ ಪುನಃ ವಂದೇಮಾತರಂ ಗೀತೆಯಾಗಿ ಧ್ವಜವಂದನೆಯ ಕಾರ್ಯ ಒಳ್ಳೇ ಗಂಭೀರವಾಗಿ ಪೂರೈಸಿತು.

### ಇಂಡಿ ತಾಲೂಕಾ ರೈತ ಪರಿಷತ್ತು.

ತಾ. ೩ ನೇ ದಿವಸ ಜನರ ಗಲಾಟೆಯಿಂದ ಬೇರೆಯಾಗಿರುವ ಮಂಟಪದಲ್ಲಿ ಸಂಜೆಯ ೫ ಘಂಟೆಗೆ ರೈತ ಪರಿಷತ್ತು ಕೂಡಿದ್ದಾಯಿತು. ೨-೩ ಸಾವಿರ ಜನರು ಕೂಡಿದ್ದರು. ಸ್ವಾಗತಾಧ್ಯಕ್ಷರಾದ ಮಗನಲಾಲ ಶಹಾರು ರೈತ ಪರಿಷತ್ತಿನ ಅವಶ್ಯಕತೆಯನ್ನು ತಿಳಿಸಿದನಂತರ ನಿಯೋಜಿತ ಅಧ್ಯಕ್ಷರಾದ ಕೆ. ರಾಮಕೃಷ್ಣರಾವ ಇವರ ಪ್ರಸ್ತಾವಿಕ ಭಾಷಣವಾಯಿತು. ಮೊದಲೇ ಆಲೋಚಿಸಿ ಗೊತ್ತುಮಾಡಿದ ರೈತರ ಹಿತದ ಸಂಬಂಧವಾದ ೩೦ ಠರಾವುಗಳನ್ನು ರಾ|| ಅಂಬಲಿ ರಾ|| ವ್ಹಿ. ಬಿ. ನಾಯಕರು ಅಥರ್ಗಾದ ದುಂಡಪ್ಪನವರು ಓದಿ ಹೇಳಿದನಂತರ ಶ್ರೀ ಶಿವಯೋಗಿಗಳು ಹಳ್ಳಿಯವರ ಆರೋಗ್ಯದ ವಿಷಯವಾಗಿಯೂ, ದೇಶಭಕ್ತ ಕೌಜಲಗಿ ಹಣಮಂತರಾಯರು ಕಾಂಗ್ರೆಸ್ ಹಾಗೂ ಮಹಾತ್ಮಾ ಗಾಂಧಿಯವರ ಸಂದೇಶದ ವಿಷಯವಾಗಿಯೂ ಒಳ್ಳೇ ಪರಿಣಾಮಕಾರಕವಾಗಿ ಉಪದೇಶಮಾಡಿ ನಂತರ ಅಧ್ಯಕ್ಷರ ಸಮಾರೋಪಣ ಭಾಷಣವಾಗಿ ಯೋಗ್ಯ ದನಗಳಿಗೆ ಇನಾಮು ಹಂಚಲ್ಪಟ್ಟ ಮೇಲೆ ರೈತ ಪರಿಷತ್ತಿನಲ್ಲಾದ ಠರಾವುಗಳನ್ನು ಮುಖ್ಯ ಪ್ರಧಾನರಿಗೆ ಕಳಿಸುವ ಅಧಿಕಾರ ಅಧ್ಯಕ್ಷರಿಗೆ ಕೊಟ್ಟು ವಂದೇಮಾತರಂ ರಾಷ್ಟ್ರಗೀತೆಯಾದನಂತರ ಭಾರತಮಾತೆಯ ಜಯಜಯಕಾರದೊಡನೆ ಸಭೆಯು ಮುಕ್ತಾಯವಾಯಿತು. ಈ ವರ್ಷದ ಬಂಥನಾಳ ಜಾತ್ರೆಯು ಆದರ್ಶ ಪ್ರಿಯವಾದ ಜಾತ್ರೆಯಾಯಿತೆಂದು ಹೇಳಲು ಸಂತೋಷವೆನಿಸುತ್ತದೆ.

ಓರ್ವ ಪ್ರತ್ಯಕ್ಷದರ್ಶಿ.

# ವೀರಶೈವ ಸಮಾಜವು ಬಾಳಿ ಬೆಳೆಯಬೇಕಾದರೆ ಅದರೊಳಗೆ ಬೆಳೆದ ಅಂತಃಕಲಹಗಳನ್ನು ಕಿತ್ತು ಕಳೆಯಬೇಕು.

(ಬರೆದವರು— ಬಸವರಾಜ ಅಕ್ಕಿ ತುಂಗಭದ್ರಾ)

ಸಮಾಜ ಮಾನವ ವಿಕಾಸಕ್ಕಾಗಿ ಹುಟ್ಟಿರುವದಲ್ಲದೆ ವಿನಾಶಕ್ಕಾಗಿಯಲ್ಲ. ಪ್ರಗತಿಯ ಕಡೆಗೆ ಕಣ್ಣಿಟ್ಟು ಮುಂದರಿಯುವಾಗ ಕೈಗೆ ಕೈಗೊಟ್ಟು ಐಕ್ಯ ಮುಖಿಯಾಗಿ ಸಾಗುವುದೇ ಸಮಾಜದ ಮುಖ್ಯ ಗುರಿಯು. ಅದನ್ನು ಬಿಟ್ಟು ವ್ಯಕ್ತಿಯು ಒಬ್ಬೊಬ್ಬನ ಅಥವಾ ತನ್ನನ್ನು ಬಳಸಿರುವ ಹಲವರ ಹಿತವನ್ನಾಗಲೀ, ಸುಖವನ್ನಾಗಲೀ, ವಿಕಾಸವನ್ನಾಗಲೀ ಸಾಧಿಸುವುದಕ್ಕಾಗಿ ತನ್ನನ್ನು ಹೊತ್ತ ಪ್ರಗಲ್ಭ ಸಮಾಜದಲ್ಲಿ ಒಳತಂಡವನ್ನು ಹೂಡುವುದು ದೌಷ್ಟ್ಯವೂ ದೌರ್ಬಲ್ಯವೂ ಆಗಿದೆ. ತಾನು ಬೆಳೆಯಬೇಕು; ತನ್ನ ಸಮಾಜವನ್ನು ಬೆಳಗಿಸಬೇಕು. ತಾನು ತನ್ನ ಸಮಾಜದಲ್ಲಿ ಲೀನನಾಗಿ ಅದರ ಗತಿ ತಪ್ಪದೆ ಗುರಿ ಮುಟ್ಟುವುದೇ ಸಾಮಾಜಿಕನ ಕರ್ತವ್ಯ. ಈ ದೃಷ್ಟಿಯಿಂದ ನಮ್ಮ ವೀರಶೈವ ಸಮಾಜವು ಯಾವ ತರದ ಹೆಜ್ಜೆ ಹಾಕುತ್ತಿದೆಯೆಂಬುದನ್ನು ನೋಡೋಣ.

ಸಮಾಜವೇನೋ ವಿಶಾಲವಾದುದು, ವೈಶಿಷ್ಟ್ಯವಾದುದು, ಗಂಭೀರವಾದುದು. ಅಷ್ಟೇ ಅಲ್ಲ; ಅಖಿಲ ಕರ್ನಾಟಕದಲ್ಲಿ ಅನನ್ಯ ಸದ್ಭಾವದ ಔನ್ನತ್ಯವನ್ನು ಹೊಂದಿದುದೂ ಹೀಗೆಂಬುದನ್ನು ಎಲ್ಲರೂ ಒಪ್ಪುವರು. ಆದರೆ ಅಷ್ಟರಿಂದಲೇ ಕಳಂಕ ರಹಿತವೂ ಅಂತಃಕಲಹ ರಹಿತವೂ ತತ್ವಪರಿಪಾಲಕವೂ ಆಗಿರುತ್ತದೆಂದು ಹೇಳಬರುವುದಿಲ್ಲ. ಇಂದು ಇಷ್ಟು ಪ್ರಬಲವಾದ ಸಮಾಜವು ಬೂದಿ ಮುಚ್ಚಿದ ಕೆಂಡದಂತೆ ಕಾಂತಿ ಹೀನವಾಗಿ ಕಂಗೊಳಿಸದಿರುವದಕ್ಕೆ ಈ ವಿಧದ ಕೊರತೆಗಳೇ ಕಾರಣವಾಗಿವೆ. ಬಿಚ್ಚಿ ಹೇಳುವುದಿದ್ದರೆ ವೀರಶೈವ ಸಮಾಜದ ಬುನಾದಿಯು ಜಾತಿಭೇದ ವ್ಯಕ್ತಿಭೇದ ಇವುಗಳಿಗೆ ಎಡೆಕೊಡದೆ ಅಖಂಡ ಮಾನವ ಕೋಟಿಯನ್ನು ಒಂದುಗೂಡಿಸಿ ಮಾನವ್ಯದ ಗುರಿಯನ್ನು ಸಮಾನತೆಯಿಂದ ನೆರೆಸುವ ವಿಶಿಷ್ಟ ಧ್ಯೇಯದಲ್ಲಿತ್ತು.

ಈ ಸಮಾಜದ ಪ್ರತಿಷ್ಠಾಪನಾಚಾರ್ಯನು ಆತನ ಮಹತ್ವದ ಧ್ಯೇಯವನ್ನು ಎಷ್ಟು ಪ್ರಕಾಶವಾಗಿ ಪ್ರಚಾರಗೊಳಿಸಿದ್ದಾನೆ? ಪ್ರತಿಯೊಬ್ಬನ ಕೈಗನ್ನಡಿಯಾಗಿ ಹೇಗೆ ಕೊಟ್ಟಿದ್ದಾನೆಂಬುದು ಎಲ್ಲರಿಗೂ ತಿಳಿದ ವಿಚಾರ. ಹೀಗಿರುವಾಗ ಇಂದು ಮಾತ್ರ ಈ ಸಮಾಜದ ಒಳಗೆ ತಲೆ ಎತ್ತಿರವ ಪಂಗಡಗಳೆಷ್ಟು? ಜಾತಿ ಕಟ್ಟುಗಳ ಕೊಳಕುಗಳೆಷ್ಟು? ಭೇದಭಾವಗಳೆಷ್ಟು? ಇಂದು ಈ ಸಮಾಜದ ಧರ್ಮಗುರುಗಳಾಗಿ ಕುಳಿತಿರುವ ಹೆಚ್ಚಾದ ಸ್ವಾಮಿಗಳೇ ಮೂಲ ಧರ್ಮಕ್ಕೆ ವಿರುದ್ಧವಾದ ಈ ಕಟ್ಟು ಭೇದಗಳಿಗೆ ನೀರೆರೆಯುತ್ತಿದ್ದಾರೆ. ಎಂದರೆ ಎಷ್ಟು ವ್ಯಸನಕರವಲ್ಲ.

ವೀರಶೈವರಲ್ಲಿ ಜಾತಿಭೇದದ ಒಳ ಹೊಲಸುಗಳು ತಲೆದೋರುವದಕ್ಕೆ ಕಾರಣವೇನು? ಜಾತಿಮತಗಳ ಮೂಲವನ್ನೇ ಕೀಳುವ ಉದ್ದೇಶ ಮೂಲವಾಗಿ ಹುಟ್ಟಿದ ಸಮಾಜದಲ್ಲಿ ಅದೇ ಕಳಂಕವು ಪ್ರತಿಕೃತಿಯಾಗಿ ಹೇಗೆ ಹುಟ್ಟಿತು? ಇದನ್ನೆಲ್ಲಾ ಯೋಚಿಸಿದರೆ ಸಮಾಜಪುರುಷನ ಪುರೋವೃದ್ಧಿಗಾಗಿ ಅದರೊಳಗಿನ ವ್ಯಕ್ತಿಗಳು ಕೈಕೊಂಡ ವ್ಯಕ್ತಿ ಪ್ರವೃತ್ತಿಗಳೇ ಕಾರಣವೆಂಬುದು ಎಲ್ಲರಿಗೂ ತಿಳಿಯಬಹುದಾದ ವಿಷಯ.

ಒಂದೊಂದು ಕಸಬುಕೈಗಾರಿಕೆಯನ್ನು ಕೈಕೊಂಡವನ ಸಂತತಿಯು ಅದೇ ಕಸಬನ್ನು ಪ್ರವೃತ್ತಿಯಾಗಿ ಹಿಡಿದು ಮುಂದುವರಿಯಿತು. ಅದು ಒಂದು ಕುಟುಂಬದ ವೃತ್ತಿಯೇ ಆಯಿತು. ಇದೊಂದು ಪಂಗಡವಾಗಿ ಬೆಳೆಯಿತು. ಉದಾಹರಣೆಗಾಗಿ ಗಡಿಗೆ ಮಾಡುತ್ತಿದ್ದ ಒಬ್ಬನಿಂದ ಹೊರತ ವರ್ಗವು ಅದೇ ವೃತ್ತಿಯಲ್ಲಿ ಮುಂದರಿದು ಕುಂಬಾರರಾದರೆನ್ನೋಣ. ಕ್ಷೌರವೃತ್ತಿಯನ್ನು ಹಿಡಿದವರು ಕ್ಷೌರಿಕರಾದರು. ಹೀಗೆ ವೃತ್ತಿಯನ್ನು ಅನುಸರಿಸಿ ಆ ಕುಟುಂಬ ಅರ್ಥಾತ್ ತಂಡಕ್ಕೆ ಆ ವೃತ್ತಿಯನಾಮವೇ ಅಂಕಿತವಾಗಿ ಹೋಯಿತು. ಕೊನೆಗೆ ಇದೇ ಜಾತಿಯ ಮಾಟಕ್ಕೆ ಮೂಲವೂ ಆಯಿತು. ಕೊನೆಗೆ ಪ್ರಚಲಿತ ಕಾಲದಲ್ಲಿ ಈ ಜಾತಿ ಪಂಗಡಗಳೇ ಸಮಾಜದ ವೃತ್ತಿಯನ್ನು ತೂಗುವಮಾನಗಳಾಗಿಯೂ ಬಿಟ್ಟಿದೆ. ಕ್ಷೌರಿಕನೆಂದರೆ ಕೀಳು, ಬಣಜಿಗನೆಂದರೆ ಮೇಲು. ಹೀಗೆಂಬ ಭಾವವೇ ಬಲವಾಯಿತು. ಇದು ಸಾಮಾನ್ಯರಲ್ಲಿ ಮಾತ್ರ ಮೂಡಿ ಬೆಳೆದ ಭಾವವಲ್ಲ. ಸಮಾಜದ ಸುಧಾರಕರೆಂಬ ಸ್ವಾಮಿಗಳ ತಲೆಯನ್ನೂ ಕೊಳೆಯ ಬೆಳೆದ ಭಾವಗಳಾಗಿ ಬಿಟ್ಟಿವೆ. ಅವರೇ ಈಗ ಈ ಘಾತುಕವಾದ ನೀತಿಗೆ ನೀರೆರೆಯುತ್ತಿದ್ದಾರೆಂದರೆ ಹೆಚ್ಚಲ್ಲ. ಕ್ಷೌರಿಕನ ಮನೆಯ ಮದುವೆಯಲ್ಲಿ ಬಣಜಿಗನು ಸಮಾನ ಭಾಗವಹಿಸಬಾರದು. ಉಣ್ಣಬಾರದು. ಒಂದು ವೇಳೆ ಈ ಕ್ಷುದ್ರ ನೀತಿಯನ್ನು ಖಂಡಿಸಿ ಒಬ್ಬನು ಮುಂದರಿದನೆಂದರೆ ಅವನಿಗೆ ಬಹಿಷ್ಕಾರ ಹಾಕುವದಕ್ಕೂ ಹಿಂಜರಿಯುವುದಿಲ್ಲ. ಎಂದರೆ ನಮ್ಮ ಮಹಾ ವೀರಶೈವ ಸಮಾಜದ ಮೂಲ ಪುರುಷನಾದ ಮಹಾತ್ಮಾ ಬಸವಣ್ಣನ ಪವಿತ್ರ ಧ್ಯೇಯವೆಲ್ಲಾಯಿತು? ಈಗ ಗಾದಿಯನ್ನೇರಿದ ಕೆಲವು ಸ್ವಾಮಿಗಳ ಹೇಯವೆಲ್ಲಾಯಿತು?

ಆಹಾ ಮಾನವ ಕೋಟಿಯ ಸಮಾನ ಸಿದ್ಧಿಗಾಗಿ ಹುಟ್ಟಿದ ಪಾವನ ಸಮಾಜದಲ್ಲಿಯೂ ಈ ತೆರದ ಹಾವಳಿಯು ತುಂಬಿತೆ? ಸನಾತನಿಗಳಲ್ಲಿ ರೂಢವಾಗಿದ್ದ ಜಾತಿಕಟ್ಟುಗಳನ್ನು ಕಿತ್ತು ಕಳೆದು ಮಾನವನನ್ನು ಎತ್ತಿ ಬೆಳೆಸುವದಕ್ಕಾಗಿ ಹುಟ್ಟಿದ ಸಮಾಜದಲ್ಲಿಯೂ ಈ ರೀತಿಯ ವಿನಾಶಕಾರಕ ಅನೀತಿಗಳು ಬೆಳೆದುವೆ? ಹೀಗಾದ ಮೇಲೆ ಇನ್ನೆಲ್ಲಿ ಇದಕ್ಕೆ ಶ್ರೇಯಸ್ಸು ಬೇಕು?

ಇರಲಿ. ವೀರಶೈವ ಸಾಧುಗಳೂ, ಸಜ್ಜನರೂ ಸದ್ಗೃಹಸ್ಥರೂ ಇನ್ನಾದರೂ ಒಂದಿಷ್ಟು ಈ ಕಡೆಗೆ ಕಣ್ಣು ತೆರೆಯಲಿ. ನಮ್ಮ ಸಮಾಜ ಪುರುಷನನ್ನು ಕ್ಷೀಣಿಸುತ್ತಿರುವ ಈ ಮಹಾ ರೋಗವನ್ನು ಕಳೆಯುವುದರಲ್ಲಿ ಬದ್ಧಕಂಕಣರಾಗಲಿ. ಸಮಾಜವು ಎಂದಾದ ಮೇಲೆ ಅದು ಸರ್ವರಿಗೂ ಸಮಾನವಾದ ಶ್ರೇಯ ಸಾಧಕವಾಗಿರಬೇಡವೆ? ಒಂದು ಕಡೆ ಒಬ್ಬನು ನೀಚನೆಂದು ಪರಿಗಣಿಸಲ್ಪಟ್ಟು ಇತರರಿಂದ ಒದ್ದಲ್ಪಟ್ಟು ರಸಾತಳಕ್ಕೆ ಸೇರುವುದು. ಇನ್ನೊಂದೆಡೆ ಉಚ್ಚನೆಂಬುವನು ಸ್ವರ್ಗ ಎತ್ತಲ್ಪಡುತ್ತಿರುವುದೂ ಸಾಮಾಜಿಕ ದೃಷ್ಟಿಯಿಂದ ತೀರಾ ಘಾತುಕವಾಗಿದೆ. ಸಾಮಾನ್ಯ ದೃಷ್ಟಿಯಿಂದ ಕ್ಷೌರವೃತ್ತಿ ಹೀನ, ವ್ಯಾಪಾರ ವೃತ್ತಿಯು ಮಾನ್ಯವೆಂದು ತೋರಿದರೂ ಸಮಾಜದ ಶ್ರೇಯಸ್ಸಿಗೆ ಬೆಳಕಿಗೆ ಇವೆರಡೂ ಸಮಾನವಾಗಿ ಅವಶ್ಯವಾದವುಗಳೇ. ಆದ್ದರಿಂದ ಸಮಾಜದೊಳಗೆ ವೃತ್ತಿಯು. ಸರ್ವವೂ ಸಮಾನವೇ ಅದರಿಂದ ವ್ಯಕ್ತಿಯ ಮಾನವನ್ನು ಮಾಡಲಾಗುವುದೆ?

ಸಮಾಜವು ಸರ್ವಾಂಗ ಸಮೃದ್ಧವಾಗಿದ್ದರೇ ವೃದ್ಧಿ. ಇಲ್ಲದಿದ್ದರೆ ಪಕ್ಷಾಘಾತವಾದ ಮನುಷ್ಯನಂತೆ. ಬಿದ್ದಲ್ಲಿಯೇ ವೃದ್ಧಿ. ಆದ್ದರಿಂದ ನಮ್ಮ ಸಮಾಜ ಬಂಧುಗಳು ಈ ಒಳ ಕಲಹದ ಹೊಲನನ್ನು ಕಿತ್ತು ಅಖಂಡ ಸಮಾಜವು ಸರ್ವಾಂಗ ಪರಿಪುಷ್ಟಿಯಿಂದ ಸಮಗ್ರ ಭಾರತಕ್ಕೆ ಮಾರ್ಗದರ್ಶಕವಾಗುವಂತೆ ಮಾಡಲೆಂದು ಹಾರೈಸುತ್ತೇನೆ.

## ಹಿಂದುಗಳು "ಉರ್ಸು" ಮಾಡಲಿಲ್ಲ.

ಸಾಂಗಲಿ ಸಂಸ್ಥಾನದ ದುಧೋಂಡಿ ಗ್ರಾಮದಲ್ಲಿ ಗೋರಿ ಸಾಹೇಬರ ಉರ್ಸು ಪ್ರತಿವರ್ಷ ನಡೆಯುತ್ತದೆ. ಅದರಲ್ಲಿ ಹಿಂದುಗಳೇ ಬಹು ಭಾಗವಾಗಿ ಸೇರುತ್ತಿದ್ದರು. ಉರ್ಸಿನ ಕಾಲಕ್ಕೆ ಕಂದೂರಿ ಕೊಟ್ಟು ಕಾಜಿಗಳಿಗೆ ಅನ್ನದಾನಮಾಡದೆ ಬಹು ಜನ ಹಿಂದುಗಳು ಊಟಮಾಡುತ್ತಿರಲಿಲ್ಲ. ಪ್ರತಿವರ್ಷ ೭-೮ ನೂರು ಕುರಿ ಕೋಳಿಗಳು ಉರ್ಸಿಗಾಗಿ ಕೊಲ್ಲಲ್ಪಡುತ್ತಿದ್ದವು. ಪರಸ್ಥಳಗಳಿಂದ ಬರುವ ಫಕೀರರನ್ನು ಮನೆಗೆ ಕರೆದುಕೊಂಡು ಹೋಗಿ ಮನ್ನಣೆ ಮಾಡದಿದ್ದರೆ ಹಿಂದುಗಳಿಗೆ ಸಮಾಧಾನವಾಗುತ್ತಿರಲಿಲ್ಲ. ಹಿಂದುಗಳು ಹೀಗೆ ಉರ್ಸು ಮಾಡುತ್ತಿದ್ದುದು ಈ ವರ್ಷ ನಿಂತು ಹೋಯಿತು. ಇದಕ್ಕೆ ಮುಸಲ್ಮಾನರೇ ಕಾರಣರು.

ಇಲ್ಲಿ ದಸರೆ ದಿವಸ ಪಲ್ಲಕ್ಕಿ ಹೊರಡುವಾಗ ಪೋಲಿಸ್ ಪಾಟೀಲರು ತೆಂಗಿನ ಕಾಯನ್ನು ಕೊಟ್ಟನಂತರವೇ ಪಲ್ಲಕ್ಕಿಯನ್ನು ಎತ್ತುವ ರೂಢಿಯಿದೆ. ಈ ಸಾರೆ ಸರ್ತಿ ಪ್ರಕಾರ ಪಾಟೀಲಕಿ ಒಬ್ಬ ಮುಸಲ್ಮಾನ್ ಗೃಹಸ್ಥರ ಕಡೆಗೆ ಬಂದಿದ್ದಿತು. ಅವರು ಕಾಫೀರರ ದೇವರಿಗೆ ನಾನೇನೂ ತೆಂಗಿನಕಾಯಿಯನ್ನು ಕೊಡುವುದಿಲ್ಲವೆಂದು ಸ್ಪಷ್ಟವಾಗಿ ಹೇಳಿದರು.

ಹಾಗಾದಮೇಲೆ ಮುಸಲ್ಮಾನರ ಉರ್ಸನ್ನು ಹಿಂದುಗಳೇಕೆ ಆಚರಿಸಬೇಕೆಂಬ ವಿಚಾರ ಜಾಗೃತಿಯಾಗಿ ಈ ಸಾರೆ ಹಿಂದುಗಳು ಉರ್ಸನ್ನು ಆಚರಿಸಲಿಲ್ಲ. ಉರ್ಸಿಗೆ ಶ್ರೀ. ದೇಶಮುಖರು ಕೊಡಬೇಕಾಗಿದ್ದ "ಗಲೀಫಾ" ಈ ಸಾರೆ ಕೊಡಲಿಲ್ಲ. ಉರ್ಸಿನ ಕಾಲಕ್ಕೆ ಹಿಂದುಗಳು ನಗರ ಕೀರ್ತನೆ ಮತ್ತು ಅಹಿಂಸೆ, ಅಸ್ಪೃಶ್ಯತಾ ನಿವಾರಣೆ ಹಿಂದು ಸಂಘಟನೆ ಮೊದಲಾದ ವಿಷಯಗಳಲ್ಲಿ ವ್ಯಾಖ್ಯಾನಗಳನ್ನು ನಡೆಯಿಸಿದರು.

---

## ರಾಷ್ಟ್ರೀಯ ಸ್ವಯಂಸೇವಕ ಸಂಘ.

### ಹೊಟ್ಟೆಗಾಗಿ ಸಂಸ್ಕೃತಿಯ ಮಾರುವುದಿಲ್ಲ.

ಕಾನಪುರದಲ್ಲಿ ರಾಷ್ಟ್ರೀಯ ಸ್ವಯಂಸೇವಕ ಸಂಘದ ಶಾಖೆಯು ಸ್ಥಾಪನೆಯಾಗಿದೆ. ಅದನ್ನು ನೋಡಲು ಹಿಂದು ಮಹಾಸಭೆಯ ಕಾರ್ಯನಿರ್ವಾಹಕ ಸಂಘದ ಸದಸ್ಯರಾದ ಬಾಬು ಪದ್ಮರಾಜ ಜೈನ ಇವರು ಹೋಗಿದ್ದರು. ಆಗ ಅಲ್ಲಿಯ ಶ್ರೀ ದಾದಾರಾವ ಪರಮಾರ್ಥ ಇವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ನಾಗಪುರದಲ್ಲಿ ಡಾ. ಹೆಡಿಗೆವಾರ ಇವರು ಸ್ಥಾಪಿಸಿದ ರಾಷ್ಟ್ರೀಯ ಸ್ವಯಂಸೇವಕ ಸಂಘದ ಶಾಖೆಯು ಇಲ್ಲಿಯೂ ಸ್ಥಾಪನೆಯಾಗಿದೆ. ಹಿಂದುಸ್ಥಾನದಲ್ಲಿ ಹಿಂದುಗಳೇ ಮುಖ್ಯ ಜನಾಂಗದವರು. ಅಂತೆಯೇ ಹಿಂದುಸ್ಥಾನವು ಹಿಂದುಗಳ ದೇಶವು. ಮೌಕತ್ ಅಲ್ಲಿಯವರು ಹೇಳುವುದೇನೆಂದರೆ- ಮುಸಲ್ಮಾನರಿಗೆ ಹಿಂದುಸ್ಥಾನದ ವಿನಾ ಬೇರೆ ದೇಶಗಳಿವೆ. ಆದರೆ ಹಿಂದುಗಳಿಗೆ ಮಾತ್ರ ಹಿಂದುಸ್ಥಾನವನ್ನು ಬಿಟ್ಟರೆ ಬೇರೆ ದೇಶವೇ ಇಲ್ಲ. ಇದು ನಿಜವಾದ ಸಂಗತಿಯು. ಅಂತೆಯೇ ಹಿಂದುಗಳು ಹಿಂದುಸ್ಥಾನವನ್ನು ಸಂರಕ್ಷಿಸಿಕೊಂಡರೇನೇ ಅವರ ಅಸ್ತಿತ್ವಕ್ಕೆ ಅವಕಾಶವುಂಟು. ಹಾಗೆ ರಕ್ಷಿಸಿಕೊಳ್ಳುವ ಕಾರ್ಯಕ್ಕಾಗಿಯೇ ಈ ಸಂಘವು ಏರ್ಪಟ್ಟಿದೆ. ಅಂತೆಯೇ ಇದಕ್ಕೆ ರಾಷ್ಟ್ರೀಯ ಸ್ವಯಂ ಸೇವಕ ಸಂಘವೆಂಬ ಹೆಸರನ್ನು ಕೊಟ್ಟಿದೆ.

ಕಳೆದ ೧೨ ವರುಷಗಳಲ್ಲಿ ಹಿಂದುಸ್ಥಾನದ ಬೇರೆ ಬೇರೆ ಭಾಗಗಳಲ್ಲಿ ೩೦೦ ಶಾಖೆಗಳು ಏರ್ಪಟ್ಟು ೩೫ ಸಾವಿರ ಸ್ವಯಂಸೇವಕರು ಈ ಸಂಘದಲ್ಲಿ ಸೇರಿದ್ದಾರೆ. ನಾವು ಹಿಂದುಸ್ಥಾನದವರ ಹೊಟ್ಟೆ ಬಟ್ಟೆಯ ಪ್ರಶ್ನೆಯನ್ನು ಬಿಡಿಸಲು ಸಿದ್ಧರಾಗಿಯೇ ಇದ್ದೇವೆ. ಆದರೆ ಹೊಟ್ಟೆಗಾಗಿ ನಮ್ಮ ಹಿಂದು ಸಂಸ್ಕೃತಿಯನ್ನು ಮಾರಿಕೊಳ್ಳಲು ಮಾತ್ರ ನಾವು ಸಿದ್ಧರಿಲ್ಲ."

### ಬಾಬೂಜಿಯವರ ಭಾಷಣ.

ಬಾಬು ಪದ್ಮನಾಭ ಜೈನ ಇವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು— "ಹಿಂದುಸ್ಥಾನವು ನಮ್ಮ ದೇಶವೆಂದು ಹೇಳಲು ಹಿಂದುಗಳು ಹಿಂಜರಿಯುತ್ತಿರುವುದು ಬಹು ನಾಚಿಕೆಯ ಸಂಗತಿಯು. ನಮ್ಮ ಪೂರ್ವಜರು ನಮ್ಮ ಧರ್ಮ ಮತ್ತು ಸಂಸ್ಕೃತಿಗಳ ಸಂರಕ್ಷಣೆಗಾಗಿ ಯಾವ ಭೂಮಿಯಲ್ಲಿ ರಕ್ತವನ್ನು ಸುರಿಸಿದ್ದಾರೆಯೋ ಆ ಭೂಮಿಯು ನಮ್ಮದೆಂದು ಹೇಳಲು ಹೆದರುವುದೇಕೆ? ಹೀಗೆ ಅಂಜುವವರು ಹತ್ತಾರು ಸಾವಿರ ವರುಷಗಳಿಂದ ಬಂದ ನಮ್ಮ ಸಂಸ್ಕೃತಿಯನ್ನು ಸಂರಕ್ಷಿಸಲಾರರು. ಈಗಿನ ಮನೋವೃತ್ತಿಯೇ ಸ್ಥಿರಗೊಂಡಿದ್ದಾದರೆ ಹಿಂದುಗಳಲ್ಲಿ ತಾವು ಹಿಂದುಗಳೆಂಬ ಭಾವನೆಯು ಕೂಡಾ ಇಲ್ಲದಂತಾಗಬಹುದು. ಆದಕಾರಣ ಈಗಲೇ ಜಾಗೃತರಾಗಿ ಹಿಂದುತ್ವವು ನಿಮ್ಮ ಅಂತಃಕರಣದಲ್ಲಿ ಯಾವಾಗಲೂ ಇರುವಂತೆ ಮಾಡಿರಿ. ನಾನು ಕೂಡಾ ಈ ಸಂಘದ ಸ್ವಯಂಸೇವಕನಾಗಿದ್ದೇನೆ. ನಾನು ನನ್ನ ಜೀವಿತದಲ್ಲಿಯೇ ಈ ಸಂಘದ ಉದ್ದೇಶ ನೆರವೇರಿದ್ದನ್ನು ನೋಡುವೆನೆಂದು ದೃಢವಾಗಿ ನಂಬಿದ್ದೇನೆ."

---



---

ಬನಾರಸ್ಸಿನಲ್ಲಿ ನಡೆದ

## ಹಾನಗಲ್ಲ ಶ್ರೀಗಳ ಪುಣ್ಯತಿಥಿಯ

ಸಮಾರಂಭದಲ್ಲಿ

### ಶ್ರೀ. ಸ. ಹಾ. ಶಿವಮೂರ್ತಿಗಳ ಭಾಷಣ.

ಸಭಾಸದರೇ, ಐಹಿಕ ಸುಖ ಶಾಂತಿಗಳಿಗೆ ಯುರೋಪಖಂಡ ಹೇಗ ಎನಿತು ಆವಾಸವಾಗಿದೆಯೋ, ಅನಿತೇ ನಮ್ಮ ಭರತಖಂಡವು ಪಾರಮಾರ್ಥಿಕ ವಿಚಾರದ ವಿಮರ್ಶೆಯ ಆಗರವಾಗಿದೆ, ಸಾಗರವಾಗಿದೆ. ಭರತಖಂಡದಲ್ಲಿ ದೇವರ ವಿಚಾರವಿಲ್ಲದಿರುವ ಹೊತ್ತಿಗೆಯು ವಿಶೇಷವಾಗಿ ದೊರೆಯದಿರುವುದೇ ಇದಕ್ಕೆ ಸಾಕಷ್ಟು ಪ್ರಮಾಣ. ನಮ್ಮ ದೇಶದಲ್ಲಿಯ ಎಲ್ಲ ಭಾಷೆಗಳ ಸಾಹಿತ್ಯದೊಲವು ಪಾರಮಾರ್ಥಿಕ ವಿಚಾರವನ್ನೇ, ವಿಷಯವನ್ನೇ ಗುರಿಯಿಟ್ಟುಕೊಂಡು ಸಾಗಿದೆ, ಸಾಹಿತ್ಯದಂತೆ ಜೀವನ. ಅಂತೆಯೇ 'ದೇವರು' ಎಂದರೆ ನಮಗೆ ಬಹು ಭಕ್ತಿ; ಮಿಕ್ಕಿದ ಆಸಕ್ತಿ. ದೇಶಹಿತಕ್ಕಾಗಿ, ಅಭಿಮಾನಕ್ಕಾಗಿ ಜೀವದ ಹಂಗುದೊರೆದು ತೋಪಿನ ಬಾಯಿಗೆ ಬೀಳಲು ಪಾಶ್ಚಿಮಾತ್ಯರಿಗೆ ಯಾವ ಧೈರ್ಯವಿದೆಯೋ ಸ್ಥೈರ್ಯವಿದೆಯೋ ಅದೇ ಧೈರ್ಯ, ಅದೇ ಸ್ಥೈರ್ಯ, ಅದೇ ಉತ್ಸಾಹ, ದೇವರ ವಿಷಯದಲ್ಲಿ ಎಂದಿನಿಂದಲೂ ಭಾರತೀಯರಾದ ನಮಗೆ ರಕ್ತಗತವಾಗಿ ಬಂದಿದೆ, ಬೆಳೆದಿದೆ, ಉಳಿದಿದೆ. ವೈರಿಗಳು ಬಂದು ತನ್ನ ರಾಷ್ಟ್ರವನ್ನು ಮುತ್ತಿ ಮುಂಗಟ್ಟೆ ಕಾದಲು ಬಂದು ತತ್‌ಕ್ಷಣ ನಿಂತಿರುವಾಗ ಚಂದ್ರಶೇನನೆಂಬ ರಾಜನು ದೇವರ ಅರ್ಚನೆಯನ್ನು ಅಚಲಿತನಾಗಿ ಮಾಡಿದನೆಂಬ ಪೌರಾಣಿಕ ಕಥೆಯು ಭಾರತೀಯರ ಈ ದೇವಭಕ್ತಿಯನ್ನು ಸಾರತಕ್ಕದ್ದಾಗಿದೆ, ತೋರತಕ್ಕದ್ದಾಗಿದೆ.

ಇಂತು ಹಿಂದಿನಿಂದ ಇಂದಿನ ವರೆಗೆ ಪರಿಕಿಸಿದರೆ ಭರತಖಂಡ ವಾಸಿಗಳಾದ ನಾವು ಪ್ರಾಪಂಚಿಕರಾಗದೆ ಪಾರಮಾರ್ಥಿಗಳಾಗುತ್ತೇವೆ. ದೇಶಾಭಿಮಾನಕ್ಕಿಂತಲೂ ನಮಗೆ ಈಶಾಭಿಮಾನದಲ್ಲಿ ನೆಚ್ಚು ಮೆಚ್ಚು ಬಹಳ. ಆದುದರಿಂದಲೇ ಪರರಾಜರು ಬಂದು ನಮ್ಮ ರಾಷ್ಟ್ರವನ್ನು ಸುಲಿದು ಗೆಲಿದು ಸ್ವಾಧೀನಪಡಿಸಿಕೊಂಡಿದ್ದರೂ ಯುದ್ಧಕ್ಕೆ ನಾವು ಆತುರಬಡುವುದಿಲ್ಲ. ಆಗ್ರಹ ಮಾಡುವದಿಲ್ಲ. ಇದ ನೋಡಿ ನಮ್ಮನ್ನವರು ಶಕ್ತಿಶೂನ್ಯರೆಂದೂ, ಯುಕ್ತಿಹೀನರೆಂದೂ ಅನಾಗರಿಕರೆಂದೂ ಹಳಿದರೂ ಚಿಂತೆಯಿಲ್ಲ, ಆವೇಶವಿಲ್ಲ. ಆದರೆ ಇದಕ್ಕೆ ಪ್ರತಿಯಾಗಿ ಮುನಿಯದೆ ಅವರಿಗೆ ಸಂತಸದಿಂದ ಆ ಪರಮಾತ್ಮನ ಇರವನ್ನೂ, ಅರಿವನ್ನೂ ಆತನ ರಹಸ್ಯವನ್ನೂ ನೀಡಲು ತಿಳಿಯಪಡಿಸಲು ಇಚ್ಛಿಸುವ ಋಷಿಪುತ್ರರು ನಾವು, ಯಂತ್ರಗಳಿಗಾಗಿಯೇ ಆಹುತಿಯಾಗುತ್ತಿರುವುದನ್ನು ನೋಡಿ ಶಾಶ್ವತ ಸುಖವು ಯಂತ್ರಗಳಲ್ಲಿರದೆ ಮನದಲ್ಲಿದೆ ಎಂದು ಸಾರಲು ತೋರಲು ಅಭಿಲಾಷೆಯುಳ್ಳ ಶಾಂತವೃತ್ತಿಯವರು ನಾವು ಹೀಗೆ ಹೇಳಿದುದರಿಂದ ನಾನು ಪಾಶ್ಚಿಮಾತ್ಯರ ವಿಜ್ಞಾನ ಶಾಸ್ತ್ರವನ್ನು ತುಚ್ಛಮಾಡಿ ಪೌರ್ವಾತ್ಯರ ಮತಧರ್ಮವನ್ನು ಉಚ್ಚಮಾಡಿದೆನೆಂದಲ್ಲ. ಮತಧರ್ಮದಂತೆ ವಿಜ್ಞಾನ ಶಾಸ್ತ್ರವೂ ಜೀವನಕ್ಕೆ ಅವಶ್ಯಕವಾದುದು ಅಭಿಲಕ್ಷಣೀಯವಾದುದು. ಆದರೆ ವಿಜ್ಞಾನ ಶಾಸ್ತ್ರಕ್ಕಿಂತಲೂ ಮತಧರ್ಮವು ಕೊಂಚ ಹೆಚ್ಚು ಉಪಯುಕ್ತವಾಗಬಹುದೆಂದು ನನ್ನ ಮತ.

ಋಷಿವಂಶಜರಾದ ನಮಗೀಗ ಪಾಶ್ಚಿಮಾತ್ಯರ ಭಾಷೆ, ಸಂಸ್ಕೃತಿ, ರೀತಿ, ನೀತಿಗಳ ಸಂಪರ್ಕವೇ ಹೆಚ್ಚಾಗಿ ದೊರೆತಿರುವದರಿಂದ ಮತ್ತು ಕೇವಲ ಅದೇ ಶಿಕ್ಷಣವೇ ವಿಶ್ವವಿದ್ಯಾನಿಲಯಗಳಲ್ಲಿಯೂ ಕೊಡಲ್ಪಡುತ್ತಿರುವುದರಿಂದ ನಮ್ಮ ನಮ್ಮ ಮತ ಧರ್ಮಗಳನ್ನು ಅಲಕ್ಷ್ಯಮಾಡಿ ಮರೆತು ಅವುಗಳನ್ನು ವಿಚಾರಿಸದೆ ನಾವೇ ಅಲ್ಲಗಳೆಯುವ ಸಮಯವು ನಮಗೀಗ ಬಂದಿದೆ. ಸಂದಿದೆ. ನಮ್ಮಲ್ಲಿ ದೈವಾಂಶವಿದೆ ಎಂಬುದನ್ನು ಮರೆತು ಕೇವಲ ಐಹಿಕ ಸುಖ ಸಂಪಾದನೆಯ ವಿಚಾರವನ್ನೇ ವರ್ಧಿಸಲು ಮುಂದುವರಿಯುತ್ತಿದ್ದೇವೆ. ಆದರೆ ಆ ಐಹಿಕ ಸುಖ ಸಂಪಾದನೆಯ ಜೊತೆಯಲ್ಲಿ ' ನಮ್ಮ ಧಾರ್ಮಿಕ ಮತವಿಚಾರಗಳನ್ನೂ ಆಚಾರಗಳನ್ನೂ ಮರೆಯದಂತೆ ತೊರೆಯದಂತೆ ನೋಡಿಕೊಳ್ಳುತ್ತಿರಬೇಕು. ಇಂತಹ ಭಾವನೆಯು ಜನದಲ್ಲಿ ಬಲಿಯಬೇಕಾದರೆ ಬೇರೂರಬೇಕಾದರೆ ನಮ್ಮ ಮತೋದ್ಧಾರಕರ ಮಹಾ ವ್ಯಕ್ತಿಗಳ ಜೀವನ ಚರಿತ್ರೆಯೂ ನಮಗೀಗ ಅತ್ಯವಶ್ಯವಾಗಿದೆ.

ಇದಕ್ಕಾಗಿಯೇ ನಮ್ಮಲ್ಲಿ ಅಂತಹ ಮಹಾ ಪುರುಷರ ಪುಣ್ಯತಿಥಿ ಜಯಂತಿ ಅಥವಾ ಸ್ಮಾರಕೋತ್ಸವ ಮೊದಲಾದವುಗಳನ್ನು ಆಚರಿಸುವದು ರೂಢವಾಗಿ ಬಂದಿದೆ. ಅಂತೆಯೇ ಇಂದು ಕರ್ನಾಟಕ ಮಾತೆಯ ಮಹಾವ್ಯಕ್ತಿಗಳಲ್ಲೊಬ್ಬರಾದ ಶ್ರೀ ಕುಮಾರಯೋಗಿಗಳ ಪುಣ್ಯತಿಥಿಯನ್ನು ತಾವೆಲ್ಲರೂ ಆನಂದದಿಂದ ಕೂಡಿ ಆಚರಿಸುತ್ತಿರುವದನ್ನು ನೋಡಿ ನನಗೆ ಬಹು ಸಂತೋಷವಾಗಿದೆ.

ರಾಷ್ಟ್ರೀಯ ವಿಚಾರದಲ್ಲಿಯೂ ಭೌತಿಕ ಶಾಸ್ತ್ರದಲ್ಲಿಯೂ ಅತಿ ಮೇಧಾವಿಗಳಾದವರು ಪಾಶ್ಚಿಮಾತ್ಯರಲ್ಲಿ ಆಗಾಗ್ಗೆ ಜನ್ಮವೆತ್ತುವಂತೆ ಪೌರ್ವಾತ್ಯರಾದ ನಮ್ಮಲ್ಲಿಯೂ ಧಾರ್ಮಿಕ ಜೀವನಕ್ಕೆ ಸಂಬಂಧಪಟ್ಟ ಎಂದರೆ ಮತೋದ್ಧಾರಕರಾದ ಮಹಾ ವ್ಯಕ್ತಿಗಳು ಅವತರಿಸುತ್ತಾರೆ. ಅಂತಹ ಮಹಾ ಪುರುಷರಲ್ಲಿ ಹಾನಗಲ್ಲ ಶ್ರೀ ಕುಮಾರ ಯೋಗಿಗಳೂ ಒಬ್ಬರು. ಗಿರಿಯಲ್ಲಿಯ ಕಂದರದಿಂದ ಹುಟ್ಟಿದ ಝರಿಯು ಕ್ರಮವಾಗಿ ಬೆಳೆ ಬೆಳೆದು ದೊಡ್ಡ ಪ್ರವಾಹವಾಗಿ ಜನಸಾಮಾನ್ಯಕ್ಕೆ ಹಿತವಾಗುವಂತೆ ಈ ಕುಮಾರ ಯೋಗಿಗಳ ಜೀವನ ಝರಿಯೂ ಒಂದು ಹಳ್ಳಿಯಲ್ಲಿಯ ಸದ್ವಂಶದಿಂದ ಉಗಮವಾಗಿ ಮುಂದೆ ಬರಬರುತ್ತ ವಿಶಾಲವಾದ ಗಂಭೀರವಾದ ಹೊಸದಾಗಿ ಕೊನೆಯ ವರೆಗೂ ಲೋಕಹಿತಕ್ಕಾಗಿಯೇ ಹರಿದು ಹೋಯಿತು. ಆ ಯೋಗಿಯ ಜೀವನವೆಲ್ಲ ಗಂಗೆಯಂತೆ ಪವಿತ್ರವೂ ಹಿಮಾಲಯದಂತೆ ಉನ್ನತವೂ ಸಾಗರದಂತೆ ಗಂಭೀರವೂ ಮಿಸುನಿಯಂತೆ ಮನೋಹರವೂ ಆಗಿದೆಯೆನ್ನಬಹುದು. ಇಂತಹ ಉಜ್ವಲ ವ್ಯಕ್ತಿಯ ಪುಣ್ಯತಿಥಿ ಸಮಾರಂಭದ ಅರ್ಚನೆಯಲ್ಲಿ ಆರಂಭ ಭಾಷಣ ರೂಪಾದ ಆರತಿಯನ್ನು ಬೆಳಗುವ ಪುಣ್ಯ ಸಮಯವನ್ನು ತಾವೆಲ್ಲರೂ ನನಗೆ ಒದಗಿಸಿಕೊಟ್ಟದ್ದಕ್ಕಾಗಿ ತಮ್ಮೆಲ್ಲರಿಗೆ ನನ್ನ ಅನಂತ ವಂದನೆಗಳನ್ನರ್ಪಿಸಿ ಇನ್ನುಳಿದ ಘನ ವಿದ್ವಾಂಸರಾದ ಅನೇಕರ ಸವಿನುಡಿಗಳನ್ನಾಲಿಸಲು ಕೂತುಕೊಳ್ಳುತ್ತೇನೆ.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

## The Sharana Sandesh.

ನ್ಯಾಯನಿಷ್ಠುರಿ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ !
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ — ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೨೧ ನೆಯ ಮಾರ್ಚ ೧೯೩೮. | ಸಂಚಿಕೆ ೨೯

ಜನಸೇವೆಯೇ — ದೇವರಸೇವೆ.

# ಮುಸಲ್ಮಾನರ ಭಯಂಕರ ದೊಂಬಿ!

**ಅಲಹಾಬಾದಿನಲ್ಲಿ ಮುಸಲ್ಮಾನರು ಹಿಂದುಗಳಮೇಲೆ ದೊಂಬಿ ಎಬ್ಬಿದ್ದಾರೆ.**

**ಪೋಲಿಸರು ಗುಂಡು ಹಾರಿಸಿದರು.**

**೧ ಮುಸಲ್ಮಾನ್ ೪ ಹಿಂದುಗಳು ಮೃತಪಟ್ಟರು.**

**೩೧ ಮುಸಲ್ಮಾನರು ೧೧ ಹಿಂದುಗಳು ಗಾಯಹೊಂದಿದರು.**

## ಕಾಶಿಯಲ್ಲಿ ಹಿಂದು-ಮುಸಲ್ಮಾನರ ದೊಂಬಿ !

**ಕಾಶಿಯಲ್ಲಿ ಹಿಂದು-ಮುಸಲ್ಮಾನರ ದೊಂಬಿ ನಡೆದಿದೆ. ೫ ಜನರು ಮೃತಪಟ್ಟರು.**

**೫೭ ಜನಗಳಿಗೆ ಗಾಯಗಳಾಗಿವೆ.**

## ಪೋಲಂಡದ ಆಕ್ರಮಣ?

**ಪೋಲಂಡವು ಲಿಥುಆನಿಯಾಕ್ಕೆ ೭ ಕಟ್ಟಳೆಗಳನ್ನು ತಿಳಿಸಿ**

**೪೮ ತಾಸುಗಳಲ್ಲಿ ಒಪ್ಪಲು ಆಜ್ಞಾಪಿಸಿದೆ!**

**ಯುದ್ಧದ ಬೆಂಕಿ ಹತ್ತುವದೆ?**

## ಸಿಂಧ ಪ್ರಾಂತದ ಮಂತ್ರಿಮಂಡಲ ಉರುಳಿತು !

**ಸಂಯುಕ್ತ ಮಂತ್ರಿಮಂಡಲ ಏರ್ಪಡುವುದು.**

**ಕಾಂಗ್ರೆಸ್ ಪಕ್ಷವು ಸೇರುವುದೇ ?**

ದೇಹವೇ — ದೇವಾಲಯ.



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ- ಸೋಮವಾರ ತಾರೀಖು ೨೧ ನೆಯ ಮಾರ್ಚ ೧೯೩೮. | ಸಂಚಿಕೆ ೨೯

## ಮಹತ್ವದ ಸುದ್ದಿಗಳು.

—ಮಹಾತ್ಮಾ ಗಾಂಧಿ ಮತ್ತು ಬಂಗಾಲದ ಗವ್ಹರ್ನರರಾದ ಲಾರ್ಡ ಬ್ರೊಬರ್ನ ಇವರ ಸಂಭಾಷಣೆಯು ಇಷ್ಟರಲ್ಲೇ ಜರುಗಿ ಬಂಗಾಲ ರಾಜಕೈದಿಗಳ ಬಿಡುಗಡೆಯ ಪ್ರಶ್ನೆಯು ಸಮಾಧಾನಕರವಾಗಿ ಬಿಡಿಸಲ್ಪಡುವುದೆಂದು ಊಹಿಸಲಾಗಿದೆ.

—ರಾಷ್ಟ್ರಾಧಿಪತಿಗಳಾದ ಸುಭಾಷಚಂದ್ರ ಬೋಸರು ಜಂಜಿಬಾರದ ಲವಂಗವನ್ನು ಬಹಿಷ್ಕರಿಸಬೇಕೆಂದು ಪ್ರಕಟಿಸಿದ್ದಾರೆ.

—ಕಳೆದ ಒಂದನೆಯ ತಾರೀಖಿನ ದಿನ ಪುಣೆಯ ಮಸೂರಾಶ್ರಮಶಾಖೆಯಲ್ಲಿ ಒಬ್ಬ ಜನ್ಮಜಾತ ಮುಸಲ್ಮಾನ್ ತರುಣನನ್ನು ಹಿಂದು ಧರ್ಮ ಶಾಸ್ತ್ರದಂತೆ ಶುದ್ಧಗೊಳಿಸಿ ಹಿಂದು ಧರ್ಮದಲ್ಲಿ ತೆಗೆದುಕೊಂಡದ್ದಾಯಿತು. ವೈದಿಕ ವಿಧಿಪ್ರಕಾರ ಪೌರೋಹಿತ್ಯವನ್ನು ಶ್ರೀ. ಮೋಡಕ ಶಾಸ್ತ್ರಿಗಳು ನಡೆಸಿದರು.

—ಮೈಸೂರು ಪ್ರಾಂತದ ಯಡತೂರು ಗ್ರಾಮದಲ್ಲಿ ಹೋಳಿ ಉತ್ಸವವು ಮಸೀದಿಯ ಮುಂದೆ ಹೋಗುತ್ತಿರುವಾಗ ಹಿಂದು-ಮುಸಲ್ಮಾನರಲ್ಲಿ ದೊಂಬಿಯಾಗಿ ಅನೇಕರಿಗೆ ಗಾಯಗಳಾದವು.

—ಸ್ಪೇನ್ ದೇಶವು ಫ್ರಾಂಕೋನ ಸ್ವಾಧೀನವಾಗುವ ಸಂಭವ ತೋರಲಾರಂಭಿಸಿದೆ. ಈ ಸಮಯದಲ್ಲಿ ಪ್ರಜಾ ಪ್ರಭುತ್ವದ ಅಭಿಮಾನಿಗಳಾದ ಎಲ್ಲ ರಾಷ್ಟ್ರದವರೂ ಒಟ್ಟಾಗಿ ಸ್ಪೇನದ ಸಹಾಯಕ್ಕೆ ಬರಬೇಕೆಂದು ಅಂತರ ರಾಷ್ಟ್ರೀಯ ಟ್ರೇಡ್ ಯುನಿಯನ್ ಸಂಘದವರು ಕೇಳಿಕೊಂಡಿದ್ದಾರೆ.

—ಬ್ಯಾರಿಸ್ಟರ್ ಸಾವರಕರರು ಬರೆದಿರುವ "ಮ್ಯಾಜಿನಿ ಚರಿತ್ರೆ" ಮತ್ತು "ನನ್ನ ಜನ್ಮ ಟೇಪ್" ಎಂಬ ಗ್ರಂಥಗಳಲ್ಲಿಯ ಆಕ್ಷೇಪಾರ್ಹ ಭಾಗವನ್ನು ತೆಗೆದುಹಾಕಿ ಮುದ್ರಿಸಲು ಅಡ್ಡಿಯಿಲ್ಲವೆಂದು ಗೃಹಮಂತ್ರಿಗಳಾದ ಶ್ರೀ. ಮುನಸಿಯವರು ಅಸೆಂಬ್ಲಿಯಲ್ಲಿ ಹೇಳಿದರು.

—ಮದ್ರಾಸ ಅಸೆಂಬ್ಲಿಯ ಅಧ್ಯಕ್ಷರಾದ ಶ್ರೀ. ಸಾಂಬಮೂರ್ತಿಯವರು ಇಂಗ್ಲಂಡ್ ಮೊದಲಾದ ಪಾಶ್ಚಾತ್ಯ ದೇಶಗಳಲ್ಲಿಯ ಶಾಸನ ಮಂಡಲಗಳ ಕಾರ್ಯಪದ್ಧತಿಯನ್ನು ತಿಳಿದುಕೊಳ್ಳಲು ಇಷ್ಟರಲ್ಲೇ ಇಂಗ್ಲೆಂಡಿಗೆ ಹೋಗುವವರಿದ್ದಾರೆ.

—ಈ ತಿಂಗಳ ೨೮ ನೆಯ ತಾರೀಖಿನ ದಿವಸ ದಿಲ್ಲಿಯಲ್ಲಿ ಮುಸ್ಲಿಂಲೀಗಿನ ಪರಿಷತ್ತು ಕೂಡುವುದಿದೆ. ಶಾಹೀದಗಂಜ ಪ್ರಕರಣದ ವಿಚಾರವೇ ಮುಖ್ಯವಾದುದು.

—ಅಲಹಾಬಾದ, ಕಾಶಿ, ಕಂಕಿನಾರಾ, ಜಬಲಪುರ, ಲಾಹೋರ, ಮೊದಲಾದ ಅನೇಕ ಸ್ಥಳಗಳಲ್ಲಿ ಹೋಳಿ ಮತ್ತು ಮೊಹರಂ ಹಬ್ಬಗಳು ಕೂಡಿಬಂದುದರಿಂದ ಹಿಂದು-ಮುಸಲ್ಮಾನರಲ್ಲಿ ದೊಂಬೆಗಳಾದವು.

—ಆಸ್ಟ್ರಿಯಾದ ಹಿಂದಿನ ವ್ಹಾಯಿಸ್ ಚಾನ್ಸಲರ್ ಮೇಜರ್ ಫೇ ಇವರು ತಮ್ಮ ಪತ್ನಿ ಮತ್ತು ಮಗನೊಂದಿಗೆ ಆತ್ಮಹತ್ಯಮಾಡಿಕೊಂಡರು! ರಿವ್ಹಾಲ್ವರ್ ಗುಂಡುಗಳು ಮೂವರಿಗೂ ತಗಲಿದ್ದವು.

—ಬಿಹಾರ ಪ್ರಾಂತದ ಎಲ್ಲಾ ರಾಜಕೈದಿಗಳನ್ನೂ ಬಿಟ್ಟಂತಾಯಿತು. ಇನ್ನು ಒಬ್ಬ ಕೈದಿ ಮಾತ್ರ ಇದ್ದಾನೆ. ಇಷ್ಟರಲ್ಲೇ ಬಿಡಬಹುದು.

—ಬಂಗಾಲ ಅಸೆಂಬ್ಲಿ ಸಭಾಸದರಲ್ಲಿ ಮತಭೇದ ಹೆಚ್ಚಾಗಿದೆ. ಅಲ್ಲಿ ಕಾಂಗ್ರೆಸ್ ಪಕ್ಷದ ಬಹುಮತವಾಗುವ ಸಂಭವವಿದೆ.

—ಕರ್ನಾಟಕ ಏಕೀಕರಣಕ್ಕಾಗಿ ಕನ್ನಡಿಗರು ಹೆಚ್ಚಾದ ಸಂಘಟನೆಯಿಂದ ಪರಿಣಾಮಕಾರಿಯಾದ ಚಟುವಟಿಕೆಯನ್ನು ಮಾಡಬೇಕೆಂದು ಶ್ರೀ. ಕಾಕಾ ಕಾಲೇಲಕರ ಇವರು ತಮ್ಮ ಕುಮಠಾ ಭಾಷಣದಲ್ಲಿ ಹೇಳಿದರು.

—ಕರ್ನಾಟಕಕ್ಕೆ ಬಂದಿರತಕ್ಕ ಜಂಜಿಬಾರದ ಲವಂಗವನ್ನು ಎಲ್ಲ ವ್ಯಾಪಾರಿಗಳೂ ಬಹಿಷ್ಕರಿಸಬೇಕಾದುದು ಅವರ ಪವಿತ್ರ ಕರ್ತವ್ಯವಾಗಿದೆ.

—ಹುಬ್ಬಳ್ಳಿಯಲ್ಲಿ ಸೇವಾದಲದ ಪ್ರಥಮಪಥಕದ ಕಾರ್ಯ [illegible] ಪ್ರಾರಂಭವಾಗಿದೆ.

# ಮೊಹೆಂಜೊದಾರೋದ ಜನಾಂಗದವರ ರೀತಿ ನಡತೆಗಳು.

## ರೆವ್ಹರೆಂಡ ಎಚ್. ಹೆರಾಸರ ಅದ್ಭುತವಾದ ಶೋಧನೆಗಳು.

(ಅನುವಾದಕರು:— ಕರಮರಕರ ಅನಂತರಾಯರು ಎಂ. ಎ. ಎಲೆಲ್. ಬಿ. ಧಾರವಾಡ.)

[ಸೆಂಟ ಜೇವಿಯರ್ಸ ಕಾಲೇಜದ ಸಭಾಮಂಟಪದಲ್ಲಿ ಮಿ. ಕೆ. ನಟರಾಜನ್, ಸಂಪಾದಕ, ಶೋಸೋಲ್ ರಿಫಾರ್ಮರ, ಇವರ ಅಧ್ಯಕ್ಷತೆಯಲ್ಲಿ ರೆವ್ಹರೆಂಡ ಎಚ್. ಹೆರಾಸರು ಕೊಟ್ಟ ಭಾಷಣದ ಅನುವಾದ.]

ಮೊಹೆಂಜೊದಾರೋದಲ್ಲಿಯ ಲಿಪಿಗಳನ್ನು ಗುರ್ತುಪಡಿಸಿ ಓದುವ ನಮ್ಮ ಪದ್ಧತಿ ತಪ್ಪಾದದಿದ್ದ ಪಕ್ಷದಲ್ಲಿ ನಾವು ಸಂಶೋಧನೆ ಮಾಡಿದ ಪದ್ಧತಿಯಿಂದ ಒಂದು ರೀತಿಯಿಂದ ಈ ಲೇಖಗಳನ್ನು ಓದಿ ನಾವು ಈ ವರೆಗೆ ಚಿತ್ರಿಸಿದ ಮಜಕೂರು ಎಂದರೆ ಒಂದು ಅದ್ಭುತವಾದ ತಾರ್ಕಣೆಯಾಗಬಹುದು. ಅರ್ಥಾತ್ ನಮ್ಮ ಪದ್ಧತಿ ಶುದ್ಧವಿರುವ ಇದು ಒಂದೆ ಪ್ರಮಾಣವಾಗಲಾರದು. ಆದರೆ ಪ್ರಾಚೀನ ಭಾರತೀಯ ವಾಙ್ಮಯದ ಆಧಾರದ ಮೇಲಿಂದಾದರೂ ನಮ್ಮ ಪದ್ಧತಿಯು ಶುದ್ಧವಿದೆಯೆಂದು ನಾವು ಹೇಳಬಹುದು. ದೇವರು ಅಷ್ಟಸ್ವರೂಪವುಳ್ಳವನು; ಆತನೆ ಉತ್ಪತ್ತಿ ಮತ್ತು ಲಯಕ್ಕೆ . ಕಾರಣೀಭೂತನಾದವನು; ಆತನಿಗೆ ಮೂರು ಕಣ್ಣುಗಳಿವೆ; ಅರ್ಧನಾರಿನಟೇಶ್ವರನ ಕಲ್ಪನೆ ಗಣಪತಿ ವಿಷಯವಾಗಿ ಮೂಲ ಕಲ್ಪನೆ; ಧ್ವನ್ಯರ್ಥ ಸೂಚಕ ಚಿನ್ಹಗಳ ಮೇಲಿಂದ ಮೂರುಗಣ್ಣ (ದ್ರಾವಿಡ ಶಬ್ದ ಸುಬ್ರಹ್ಮಣ್ಯ) ಈ ಶಬ್ದವು ಮುಂತಾದ ಕಲ್ಪನೆಗಳು ಆರ್ಯ ಪೂರ್ವಕಾಲೀನ ಸಂಸ್ಕೃತಿಯ ಅವಶೇಷಗಳಿರುವವೆಂದು ನಾವು ಹೇಳಬಹುದು.

ಈ ಹೊರ್ತು ಸಂಸ್ಕೃತ ಮತ್ತು ತಮಿಳು ವಾಙ್ಮಯದಲ್ಲಿ ನಮ್ಮ ವಿಧಾನಕ್ಕೆ ಸಮರ್ಥಿಸುವ ಇತರ ಅನೇಕ ಆಧಾರಗಳು ಸಿಗ್ಗುತ್ತವೆ. ಪ್ರಜಾಪತಿ ಮನು ಈತನು ಮಹಾ ಪ್ರಳಯಕಾಲದಲ್ಲಿ ಒಂದು ಮತ್ಸ್ಯದ (Horn fish) ಹೋದ ಕಲ್ಪನೆಯಾದರೂ ಮೊಹೆಂಜೊದಾರೋದ ಲೇಖನಗಳಲ್ಲಿರಬಹುದೆಂದು ತೋರುತ್ತದೆ. ಹಾಗು ವೇಲೂರ ಪಟ್ಟಣದ ಸ್ಥಾಪನೆಯ ವಿಷಯವನ್ನು ಕುರಿತು ಸ್ಮಾರಕೋತ್ಸವವನ್ನಾದರೂ ಅತಿ ವಿಸ್ತಾರದಿಂ ಈ ಲೇಖನಗಳಲ್ಲಿ ಮಾಡಿದ್ದು ಕಂಡುಬರುತ್ತದೆ. ಹಾಗೂ "ಮುನ್ನೂರ" ಎಂಬ ಶಬ್ದವು ಸಂಸ್ಕೃತ ಭಾಷೆಯಲ್ಲಿರುವ "ತ್ರಿಪುರ" ಶಬ್ದವೆ ಇರುವದೆಂದು ನಾವು ಹೇಳಬಹುದು. ಈ ಶಬ್ದವಾದರೂ ಆರ್ಯ ಪೂರ್ವಕಾಲಿನ ಸಂಸ್ಕೃತಿಯ ನಿದರ್ಶಕವಾಗಿದೆ. ಪುರಾಣದಲ್ಲಿ ಶಿವನಿಗೆ ತ್ರಿಪುರಾಂತಕನೆಂದು ಹೇಳುತ್ತಾರೆ. ಆತನಿಗೆ ಮೀನ ಅಥವಾ ಮೀನನಾಥನೆಂದು ಸಂಬೋಧಿಸುತ್ತಾರೆ. ಮೊಹೆಂಜೊದಾರೋದ ಲೇಖನಗಳಲ್ಲಾದರೂ ಮೀನರು "ತ್ರಿಪುರ"ನ್ನು ನಾಶಮಾಡಿ ಅದನ್ನು ಕೈವಶಮಾಡಿಕೊಂಡರೆಂದು ಉಲ್ಲಖಿತಮಾಡಿರುತ್ತದೆ.

ಈ ಲೇಖಗಳಲ್ಲಿ ಕೊಡಲದ ಸುತ್ತಮುತ್ತಲು ಉದ್ಯಾನವಿದ್ದವದೆಂದು ಹೇಳಿದೆ. ಕೊಡಲು ಇದು ಮದುರಾ ಪಟ್ಟಣದ ಪ್ರಾಚೀನ ಹೆಸರು. ಈ ಪಟ್ಟಣದ ಸುತ್ತುಮುತ್ತಲೂ ಒಂದು ಉದ್ಯಾನವಿದ್ದಿತೆಂದು ಅಲ್ಲಿಯ ಸ್ಥಳ ಪುರಾಣದಲ್ಲಿ ಹೇಳಿದೆ.

ಇನ್ನು ಮೇಲೆ ಬೇರೆ ಸಂಗತಿಯ ವಿಚಾರ ಮಾಡುವಾ. ಮದುರೆಯಲ್ಲಿ ಆಳುವ ಪಾಟ್ನಾ ಅರಸರಿಗೆ 'ಮೀನವಾನ್' ಎಂಬ ಬಿರದು ಇದ್ದಿತು. ಅವರ ಲಾಂಛನವೆಂದರೆ 'ಎರಡು ಮೀನಗಳು' ಚೋಳರಾಜರ ಬಿರದು ಎಂದರೆ 'ಕೊಲಿಕೊನ್' ಎಂದು ಇದ್ದಿತು. ಇವೆರಡೂ ಬಿರುದುಗಳು ಮೊಹೆಂಜೊದಾರೋದ ಲೇಖಗಳಲ್ಲಿ ಸಿಗುತ್ತವೆ. ಹಾಗೂ ಪರವರೂ ಸೋಮವಂಶೀಯದವರಿದ್ದರೆಂಬುವ ಸಂಗತಿಗಾದರೂ ಒಂದು ಐತಿಹಾಸಿಕ ಪರಂಪರೆಯಿರುವದು. ಮೊಹೆಂಜೊದಾರೋದ ಕಾಲದಲ್ಲಿ ಪರವ ಜನಾಂಗದವರ ಚಿನ್ಹವೆಂದರೆ 'ಚಂದ್ರ'ನಿದ್ದನೆಂದು ಉಲ್ಲೇಖ ಮಾಡಲ್ಪಟ್ಟದೆ. ಹಾಗೂ ಪುರಾಣಗಳಲ್ಲಿ ನಿರ್ದಿಷ್ಟ ಮಾಡಿರುವ ಕಲಕಿಲ ಮತ್ತು ತಿರಯರ ಈ ಜನಾಂಗದವರ ವಿಷಯವಾಗಿ ಮೊಹೆಂಜೊದಾರೋದ ಲೇಖಗಳಲ್ಲಿ ಉಲ್ಲೇಖಮಾಡಿರುತ್ತದೆ. 'ತಿರಿಯರ' ಎಂದರೆ 'ಸಮುದ್ರದವರು' (ಸಮುದ್ರದಲ್ಲಿ ವಾಸಮಾಡುವವರು) ಮತ್ತು ಜನಾಂಗದವರ ವಿಷಯವಾಗಿ ಹೇಳುವಾಗ ಸಪ್ತಸಮುದ್ರ ಉಲ್ಲೇಖ ಮಾಡಲ್ಪಟ್ಟಿದೆ. ಪುರಾಣಗಳಲ್ಲಿ ಸಪ್ತದ್ವೀಪಗಳಿಗೆ ಸುತ್ತಿಗಟ್ಟಿದ ಸಪ್ತ ಸಮುದ್ರಗಳಾದರೂ ಇವೆ ಇರಬಹುದಲ್ಲವೆ?

ಮೊಹೆಂಜೊದಾರೋದ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಕೆಲ ನಡತೆಗಳು ಇತಿಹಾಸದ ಕಾಲದಲ್ಲಾದರೂ ಇದ್ದದ್ದು ಕಂಡುಬರುತ್ತದೆ. ಬೇರೆ ಬೇರೆ ಜನಾಂಗದವರ ಚಿನ್ಹಗಳೆಂದರೆ ನೈಸರ್ಗಿಕ ವಸ್ತುಗಳೇ ಆಗಿದ್ದವು. 'ಕೊನ್' ಮತ್ತು 'ವೆಲ್' ಎಂದು ಸಂಬೋಧಿಸಿದ ಅರಸರು ಸುಗ್ಗಿಯ ಅಖೈರದ ದಿನಸದಲ್ಲಿ ನೆರವೇರಿಸುವ ಈಗ ಪ್ರಚಾರದಲ್ಲಿದ್ದ 'ಪೊಂಗಲ್' ಎಂಬ ಹಬ್ಬಕ್ಕೆ ಆಗ್ಗೆ ' ' ನಂದಲ್ ಎಂದು ಅನ್ನುವದು; ಹಾಗೂ ಹೋರಿಗಳ ಕಾದಾಟ ಅಥವಾ ಕೂಟ ಪ್ರುಶ್ತಿಗಳು ಮತ್ತು ಲಿಪಿಗಳ ವಿಷಯವಾಗಿ ಅಭಿರುಚಿ, ಮುಂತಾದವುಗಳು ನಾವು ಉದಾಹರಣಾರ್ಥವಾಗಿ ಹೇಳಬಹುದು.

ಈ ಹೊರ್ತು ಹೈದರಾಬಾದ ಮತ್ತು ಪುದಕೋಟೆ ಸಂಸ್ಥಾನಗಳಲ್ಲಿ ಉಪಲಬ್ಧವಾದ ದೊಡ್ಡ ಕಲ್ಲಿನ ಶವಾಗಾರಗಳು ಮೊಹೆಂಜೊದಾರೊದಲ್ಲಿಯ ಲಿಪಿಗಳಲ್ಲಿ ಮೃತ್ಯುವಿನ ಚಿನ್ಹವೆಂದು ಕೊರೆಯಲ್ಪಟ್ಟ ಆಕೃತಿಗಳಿಗೆ ಹೋಲುತ್ತವೆ. ಈ ಶವಾಗಾರಕ್ಕೆ ತಮಿಳು ಭಾಷೆಯಲ್ಲಿ 'ಕಲರಾಯ' ಎಂದರೆ ಕಲ್ಲಿನ ಮನೆ ಎಂದು ಅನ್ನುತ್ತಾರೆ. ಹೀಗೆ ಈ ಮೂರುದರಲ್ಲಾದರೂ ಹೇಗೆ ಸಾಮ್ಯವಿದೆ ಎಂಬುದನ್ನು ನೋಡಿ ಯಾರಾದರೂ ಆಶ್ಚರ್ಯಪಡಬಹುದು.

ಹಾಗೂ ಈಗ್ಗೆ ದಕ್ಷಿಣ ಹಿಂದುಸ್ಥಾನದಲ್ಲಿ ಪ್ರಚಾರದಲ್ಲಿದ್ದ ಸಂಗತಿಯೆಂದರೆ ಕೃತ್ತಿಕಾ ನಕ್ಷತ್ರ ನೋಡುವದು ಶುಭವೆಂಬುವ ಕಲ್ಪನೆ ಮೊಹೆಂಜೊದಾರೋದ ಕಾಲದಲ್ಲಾದರೂ ಇದ್ದಿತು. ಹಾಗೂ ದ್ರಾವಿಡ ಭಾಷೆಗಳಲ್ಲಿ ವಿಶಿಷ್ಟ ಪ್ರಕಾರದಿಂದ ಕೆಲ ಸಂಗತಿಗಳನ್ನು ಹೇಳುವ ಪದ್ಧತಿಯಾದರೂ ಮೊಹೆಂಜೊದಾರೊ ಕಾಲದಲ್ಲಿದ್ದಿತು. ಅರಿವೆಗಳ ಬಾಹುಲ್ಯವೆಂದರೆ ಚಳಿಗಾಲ ನಿದರ್ಶಕವಿದ್ದಿತು. ಹಾಗೂ ಓಪ್ಪಿಲ್ಲಮಣಿ ಪೊಲವರ ಈತನ ಕಾವ್ಯದಲ್ಲಿ ಹೇಳಿದಂತೆ ಕಮಲಕ್ಕೆ ಸೂರ್ಯನ ಪುಷ್ಪವೆಂದೂ ಆಗಿನ ಕಾಲದಲ್ಲಿ ಸಂಬೋಧಿಸುತ್ತಿದ್ದರು.

"ಸಂಯುಕ್ತ ಕರ್ನಾಟಕ."

---

### ಕರ್ನಾಟಕ ಏಕೀಕರಣ.

ಕರ್ನಾಟಕ ಏಕೀಕರಣದ ವಿಷಯವಾಗಿ ಮುಂಬೈ ಮಂತ್ರಿಮಂಡಲವು ಉದಾಸೀನ ವೃತ್ತಿಯಲ್ಲಿರುವುದು ತಪ್ಪೆಂತಲೂ ಇದನ್ನು ಪಕ್ಷದ ಪ್ರಶ್ನೆಯನ್ನಾಗಿ ಮಾಡಲು ಕರ್ನಾಟಕದ ಕಾಂಗ್ರೆಸ್ ಸಭಾಸದರು ಒತ್ತಾಯಪಡಿಸಬೇಕೆಂತಲೂ ಹಾಗೆ ಮಾಡದಿದ್ದರೆ ಸಭಾತ್ಯಾಗ ಮಾಡಬೇಕೆಂತಲೂ ಧಾರವಾಡ ಜಿಲ್ಲಾ ಕಾಂಗ್ರೆಸ್ ಕಮಿಟಿಯು ಠರಾವಿಸಿತು.

# ವಚನಕಾರರ ರಾಷ್ಟ್ರಭಾವನೆ.

(ಸದಾಶಿವಪ್ಪ ತೆನಿಹಳ್ಳಿ ವೀರಶೈವ ಸಾಹಿತ್ಯ ಮಂಡಳ ವಿಜಾಪುರ.)

೧೨ ನೇ ಶತಮಾನದ ಕಾಲವೆಂದರೆ ನಮ್ಮ ವಚನಕಾರರ ಉದಯಕಾಲ. ಆಗಿನ ಕಾಲದಲ್ಲಿ ನಮ್ಮ ಹಿಂದುಸ್ಥಾನದ ಸಮಾಜದ ರಚನೆ ಧಾರ್ಮಿಕ ಕಲ್ಪನೆ ಇವುಗಳನ್ನು ತಿಳಿದುಕೊಳ್ಳುವುದು ಅತ್ಯಂತ ಅವಶ್ಯವಿದೆ. ಯಾಕೆಂದರೆ ಯಾವದಾದರೊಂದು ರಾಷ್ಟ್ರದಲ್ಲಿ ಅಥವಾ ಸಮಾಜದಲ್ಲಿ ಕ್ರಾಂತಿಯಾಗಬೇಕಾದರೆ ಆಗಿನ ಕಾಲದ ರಾಷ್ಟ್ರ ಅಥವಾ ಸಮಾಜವು ಏನಾದರೊಂದು ಬಂಧನದೊಳಗೆ ಸಿಲುಕಿಕೊಂಡಿರಬೇಕು. ಆ ಬಂಧನಗಳ ವಿಮೋಚನೆಗಾಗಿ ಮಾಡಿದ ಪ್ರಯತ್ನವೇ ಕ್ರಾಂತಿಯೆನಿಸುವದು. ಕಾಲಮಾನ ಪರಿಸ್ಥಿತಿಗನುಸರಿಸಿ ಸಮಾಜದ ರಚನೆಯಲ್ಲಿಯೂ, ಧಾರ್ಮಿಕ ಕಲ್ಪನೆಗಳಲ್ಲಿಯೂ ಬದಲಾವಣೆಯನ್ನು ಮಾಡಿ ಜನಾಂಗಕ್ಕೆ ಭವಿಷ್ಯ ಜೀವನದ ಸುಖ ಸೌಕರ್ಯದ ಕಲ್ಪನೆಯನ್ನು ತಂದುಕೊಡುವದೇ ಕ್ರಾಂತಿಯು. ಈ ತರದ ಬದಲಾವಣೆಯು ಆಗಿನ ಕಾಲದಲ್ಲಿ ಅವರಿಗೆ ಬೇಕಾಗಿತ್ತು. ನಮ್ಮ ವಚನಕಾರರು ಹಳೇ ವಿಚಾರಗಳ ಗೊಡವೆಗೆ ಹೋಗದೆ ಬರೆ ಹೊಸ ವಿಚಾರಗಳ ಬೆನ್ನು ಹತ್ತಿದರೆಂದ್ರು ಅನ್ನಲಿಕ್ಕೆ ಬರಲಾರದು. ಯಾಕೆಂದರೆ ಅವರು ಹಳೆಯದರಲ್ಲಿಯ ಮಿಥ್ಯ ವಿಚಾರಗಳನ್ನು ಬಿಟ್ಟು ಸತ್ಯವಾದವುಗಳನ್ನೇ ಆಯ್ದುಕೊಂಡರು. ಮತ್ತು ಅಂಥ ವಿಚಾರವೇದಿಕೆಯ ಮೇಲೆಯೇ ತಮ್ಮ ಕ್ರಾಂತಿಗುಡಿಯನ್ನು ಕಟ್ಟಿದರು. ಹೂವು ಗಿಡದ ಸಾರ ಸರ್ವಸ್ವವೇ ಆದರೂ ತನ್ನ ಭವಿಷ್ಯಜೀವನದ ಅನಂತ ಶಕ್ತಿಗಳನ್ನು ತನ್ನಲ್ಲಿ ಅಡಕ ಮಾಡಿಕೊಂಡಂತೆ ವಚನಕಾರರು ನಮ್ಮ ಸತ್ಯ ಧರ್ಮದ ಸನಾತನತ್ವದ ಮೇಲೆಯೇ ತಮ್ಮ ಕ್ರಾಂತಿಯ ಮಂದಿರವನ್ನು ಸ್ಥಾಪಿಸಿದರು. ಮತ್ತು ತಮ್ಮ ಮುಂದಿನ ಜೀವನದ ಏಳಿಗೆಗಾಗಿ ಬೇಕಾಗುವ ಕೆಲವು ತತ್ವಗಳನ್ನು ಅದರೊಳಗೆ ಇಟ್ಟರು. ಹಳೆಯದರಲ್ಲಿ ಹೊಸದನ್ನು ಕಂಡರು; ಹೊಸದರಲ್ಲಿ ಹಳೆಯದನ್ನು ರೂಪಿಸಿದರು. ಇದೇ ಅವರ ಆ ಕ್ರಾಂತಿಯ ಮರ್ಮ.

ಆಗಿನ ಕಾಲದಲ್ಲಿ ಉತ್ತರ ಹಿಂದುಸ್ಥಾನದಲ್ಲಿ ಮುಸಲ್ಮಾನರ ದಾಳಿಗಳು ಅವ್ಯಾಹತವಾಗಿ ನಡದೇ ಇದ್ದುದು ಇತಿಹಾಸ ಪ್ರಸಿದ್ಧವಾದ ಮಾತು. ಮುಸಲ್ಮಾನರ ಒಂದೊಂದು ಗುಂಪು ಹಿಂದುಗಳನ್ನು ಸದೆಬಡೆದು ತಮ್ಮ ಧರ್ಮವನ್ನು ಪ್ರಸಾರಮಾಡಹತ್ತಿದವು. ಇದರಿಂದ ಆಗಿನ ಕಾಲದ ಹಿಂದೂ ಜನರ ಸಾಂಪತ್ತಿಕ ಸ್ಥಿತಿಯ ಮೇಲೂ ಧರ್ಮದ ಹಕ್ಕಿಗೂ ಬಲವಾದ ಏಟುಗಳು ಬಿದ್ದವು. ಈ ಪ್ರಕಾರ ಮುಸಲ್ಮಾನರು ನಮ್ಮ ಹಿಂದೂಗಳ ಮೇಲೆ ಬೀಳಬೇಕಾದರೆ, ಆಗಿನ ಕಾಲದ ಹಿಂದೂ ಸಮಾಜದ ಮನೋ ದೌರ್ಬಲ್ಯವೇ ಕಾರಣವಿರಬಹುದು. ಹೇಗೆಂದರೆ ಮೊದಲು ನಮ್ಮ ಸಮಾಜದಲ್ಲಿ ಜನ್ಮಸಿದ್ಧವಾದ ವರ್ಣಾಶ್ರಮ ಧರ್ಮವು ಪ್ರಚಾರದಲ್ಲಿತ್ತು. ಈ ವರ್ಣಾಶ್ರಮ ಧರ್ಮದ ಪ್ರಭಾವವು ರಾಜಕಾರಣದಲ್ಲಿ ಸಮಾವೇಶವಾಗಹತ್ತಿದ್ದರಿಂದ ಆಗಿನ ಕಾಲದ ನಮ್ಮ ರಾಜಕೀಯ ವಿಚಾರದಲ್ಲಿ ಶಿಥಿಲತೆಯುಂಟಾಯಿತು. ಬ್ರಾಹ್ಮಣರು, ಬಾಹ್ಯ ಜಗತ್ತನ್ನು ನಾವು ಮರೆತವರು, ಇಹಲೋಕದ ಚಿಂತೆ ನಮಗೆ ಬೇಡ. ಬ್ರಹ್ಮ ಚಿಂತನೆಯೇ ನಮ್ಮ ಜೀವನದ ಕೊನೆಯ ಗುರಿಯು ಎಂದು ಆಶ್ರಮವಾಸಿಗಳಾಗಿ ಕಾಲಹರಣ ಮಾಡುತ್ತಿದ್ದರು. ಕ್ಷತ್ರಿಯರು ರಾಜಕಾರಣಕ್ಕೆ ವಿಶೇಷತಃ ಸಂಬಂಧಪಟ್ಟವರಾದರೂ ತಮ್ಮ ತಮ್ಮೊಳಗಿನ ಅಂತಃಕಲಹದಿಂದ ಅವರ ಕ್ಷಾತ್ರ ತೇಜಸ್ಸೇ ಅವರಿಗೆ ವೈರಿಯಾಗಿ ಪರಿಣಮಿಸಿತು. ಇದಕ್ಕೆ ಇತಿಹಾಸವೇ ಸಾಕ್ಷಿ. ವೈಶ್ಯರು ತಮ್ಮ ವ್ಯಾಪಾರದ ಸೀಮೆಯನ್ನು ಬಿಟ್ಟು ಕದಲಲಿಲ್ಲ. ಸಮುದ್ರಯಾನ ಮಾಡುವದು ಪಾಪದ ಕೆಲಸವೆಂದು ಅವರು ತಿಳಿಯುತ್ತಿದ್ದರು. ಇನ್ನುಳಿದ ಶೂದ್ರರಂತೂ ಬುದ್ಧಿಹೀನರಾಗಿ ಹೇಗೋ ಉಪಜೀವನವನ್ನು ಸಾಗಿಸಿಕೊಂಡು ಸೇವಾವೃತ್ತಿಯಲ್ಲಿಯೇ ಕಾಲಹರಣ ಮಾಡುತ್ತ ಇದ್ದರು. ಈ ಪ್ರಕಾರವಿದ್ದ ವರ್ಣವ್ಯವಸ್ಥೆಯಲ್ಲಿ ಒಬ್ಬರ ಸುಖ ದುಃಖಗಳು ಮತ್ತೊಬ್ಬರ ಸುಖ ದುಃಖಗಳಾಗಿ ಪರಿಣಮಿಸಲಿಲ್ಲ. ಸಮಾಜದಲ್ಲಿ ಒಕ್ಕಟ್ಟು ಸಡಲಿತು, ಬಿಕ್ಕಟ್ಟು ಉತ್ಪನ್ನವಾಯಿತು. ಇಂಥ ಪರಿಸ್ಥಿತಿಯಲ್ಲಿ ಮತ್ತೊಂದು ವಿಚಾರವು ನಮ್ಮನ್ನು ಬಾಧಿಸತೊಡಗಿತು. ಅದೇನೆಂದರೆ- ಕೆಲವು ಕರ್ಮಕಾಂಡಿಗಳಾದ ಸನಾತನಿಗಳು ಧರ್ಮದ ಹೆಸರಿನಿಂದ ಅನಂತ ಅತ್ಯಾಚಾರಗಳನ್ನು ಮಾಡುತ್ತಿದ್ದರು. ಒಂದು ಕಡೆ ಯಜ್ಞಯಾಗಾದಿ ಕರ್ಮಗಳ ಹೆಸರಿನಿಂದ ಮೂಕ ಪ್ರಾಣಿಗಳ ವಧೆ ನಡೆಯಿತು. ಮತ್ತೊಂದು ಕಡೆ ಅದೇ ಧರ್ಮದ ಹೆಸರಿನಿಂದ ಸುಲಿಗೆಯಾದರೂ ನಡೆಯಿತು. ದಲಿತ ವರ್ಗದವರಂತೂ ಮೇಲ್ತರಗತಿಯ ಜನರ ಕಡೆಯಿಂದ ಬರುತ್ತಿದ್ದ ಅನಂತ ಯಾತನೆಗಳನ್ನು ಸಹಿಸಿ ಹಿಂದೂ ಧರ್ಮದಲ್ಲಿರತಕ್ಕ ತಮ್ಮ ಸಹಾನುಭೂತಿಯನ್ನು ಸಡಲಿಸಿದರು. ಆದ್ದರಿಂದ ಪರಧರ್ಮದವರ ದಾಳಿಗೆ ಮತ್ತಿಷ್ಟು ಕಳೆ ಏರಿತು. ಇಂಥ ಸಮಯದಲ್ಲಿ ನಮ್ಮ ಹಿಂದೂ ಸಮಾಜದಲ್ಲಿ ಕ್ರಾಂತಿಯಾಗದೆ, ಅದರ ಸಂಸ್ಕೃತಿಯು ಉಳಿಯುವ ಶಕ್ಯವೇ ಇರಲಿಲ್ಲ.

ಇಂಥ ಪ್ರಸಂಗದಲ್ಲಿ ನಮ್ಮ ವಚನಕಾರರು ಜನಾಂಗ ಸಂಘಟನೆ, ಶಿಕ್ಷಣದಲ್ಲಿ ಬದಲಾವಣೆ, ಔದ್ಯೋಗಿಕ ಪ್ರಗತಿ, ಸ್ತ್ರೀ ಸ್ವಾತಂತ್ರ್ಯ, ಅಹಿಂಸೆ ಮೊದಲಾದ ರಾಷ್ಟ್ರಪೋಷಕವಾದ ಶಕ್ತಿಯನ್ನು ಜನಾಂಗದೊಳಗೆ ತುಂಬಹತ್ತಿದರು. ಯಾವ ಪ್ರಕಾರ ಒಬ್ಬ ಚಿತ್ರಕಾರನು ಒಂದು ಒರಡಾದ ಕಾಡುಬಂಡೆಯಲ್ಲಿ ತನಗೆ ಬೇಕಾಗುವ ಒಂದು ಇಷ್ಟವಿಗ್ರಹವನ್ನು ಸಂದರ್ಶಿಸುವಂತೆ ನಮ್ಮ ವಚನಕಾರರು ಭಿನ್ನ ಭಿನ್ನ ಸಂಸ್ಕೃತಿ ಭಿನ್ನ ಭಿನ್ನ ವಿಚಾರಗಳಿಂದ ತುಂಬಿ ತುಳುಕುತ್ತಿದ್ದ ನಮ್ಮ ಭರತಖಂಡದಲ್ಲಿ ಒಂದು ಆದರ್ಶ ಸಮಾಜದ ರೂಪರೇಷೆಯನ್ನು ಸಿದ್ಧಪಡಿಸಿದರು.

## ಸಮಾಜ ಸಂಘಟನೆ.

ಈಗಿನ ಕಾಲದಲ್ಲಿ ನಮ್ಮ ಹಿಂದೂ ಸಮಾಜಕ್ಕೆ ಅಸ್ಪೃಶ್ಯತೆಯು ಕಳಂಕಪ್ರಾಯವಾಗಿರುವಂತೆ ಆಗಿನ ಕಾಲದಲ್ಲಾದರೂ ಇತ್ತು. ಇದನ್ನು ಪರಿಹಾರ ಮಾಡುವದಕ್ಕೋಸ್ಕರ ನಮ್ಮ ವಚನಕಾರರು ಆಯಾ ಧರ್ಮದಲ್ಲಿದ್ದ ನೀತಿವಂತ ಜನರನ್ನು ಒಟ್ಟುಗೂಡಿಸಿ ಒಂದು ಸಭೆಯನ್ನು ಮಾಡಿಕೊಂಡು ಅದರ ಮುಖಾಂತರ ಜನರಿಗೆ ನೀತಿಯ ಬೋಧೆಯನ್ನು ಮಾಡುತ್ತಿದ್ದರು. ಈಗಿನ ರಾಷ್ಟ್ರಸಭೆಯಂತೆ ಆಗಿನ ಶಿವಾನುಭವ ಮಂಟಪ, ಈಗಿನ ರಾಷ್ಟ್ರಸಭೆಯ ಚಾಲಕನಾದ ಮಹಾತ್ಮಾ ಗಾಂಧಿಯಂತೆ ಆಗಿನ ಶಿವಾನುಭವ ಮಂಟಪದ ಚಾಲಕನಾದ ಮಹಾತ್ಮಾ ಬಸವೇಶ್ವರ ಹೀಗೆ ಪರಿಸ್ಥಿತಿಯಾಯಿತು. ಬಸವಣ್ಣನವರು ದಲಿತ ವರ್ಗದವರ ಕೂಡ ಯಾವ ಪ್ರಕಾರದ ವರ್ತನೆಯನ್ನಿಟ್ಟಿದ್ದರು? ಮತ್ತು ಯಾವ ಪ್ರಕಾರ ಅವರ ಜೀವನದೊಳಗೆ ಸಮರಸವಾಗಿದ್ದರೆಂಬುದು ಅವರ ವಚನಗಳೇ ಸ್ಪಷ್ಟೀಕರಣಮಾಡುತ್ತವೆ,

೧. ಅಪ್ಪನು ಡೋಹರ ಕಕ್ಕಯ್ಯನಾಗಿ, ಮುತ್ತಯ್ಯ ಚನ್ನಯ್ಯನಾದರೆ ಆನು ಬದುಕುವೆ. ಮತ್ತು ಶ್ವಪಚಯ್ಯನ ಸನ್ನಿಧಿಯಿಂದ ಭಕ್ತಿಯ ಸದ್ಗುಣವ ನಾನು ಅರಿವೆನಯ್ಯಾ. ಕಷ್ಟಜಾತಿಯ ಜನ್ಮದಲ್ಲಿ ಬರಿಸಿದ, ಎನಗಿದು ವಿಧಿಯೇ ಕೂಡಲ ಸಂಗಮದೇವಾ.

೨. ಶೆಟ್ಟಿಯೆಂಬೆನೆ ಸಿರಿಯಾಳನ? ಮಡಿವಾಳನೆಂಬೆನೆ, ಮಾಚಯ್ಯನ? ಡೋಹರನೆಂಬೆನೆ ಕಕ್ಕಯ್ಯನ? ಮಾದಾರನೆಂಬೆನೆ

ಚನ್ನಯ್ಯನ? ಆನು ಹಾರುವನೆಂದಡೆ ಕೂಡಲ ಸಂಗಯ್ಯ ನಗುವನಯ್ಯಾ.

೩. ಅಪ್ಪನು ನಮ್ಮ ಮಾದರ ಚನ್ನಯ್ಯ. ಬೊಪ್ಪನು ನಮ್ಮ ಡೋಹರ ಕಕ್ಕಯ್ಯ. ಚಿಕ್ಕಯ್ಯ ನಮ್ಮಯ್ಯ ಕಾಣಿರಯ್ಯ. ಅಣ್ಣನು ನಮ್ಮ ಕಿನ್ನರಿ ಬೊಮ್ಮಯ್ಯ. ಎನ್ನನೇತಕ್ಕರಿಯಿರಿ ಕೂಡಲ ಸಂಗಮದೇವಾ.

೪. ಆಚಾರವನ್ನರಿಯಿರಿ, ವಿಚಾರವನ್ನರಿಯಿರಿ. ಜಂಗಮ ಸ್ಥಲಲಿಂಗ ಕಾಣಿರಯ್ಯಾ. ಜಾತಿ ಭೇದವಿಲ್ಲ, ಸೂತಕವಿಲ್ಲ. ಅಜಾಂತಗೆ ಕುಲವಿಲ್ಲ, ನುಡಿದಂತೆ ನಡೆಯದಿದ್ದರೆ, ಕೂಡಲ ಸಂಗಯ್ಯ ಮೆಚ್ಚನು ಕೂಡಲ ಸಂಗಮದೇವಾ.

೫. ಕೊಲ್ಲುವನೆ ಮಾದಿಗ, ಹೊಲಸು ತಿಂಬುವನೆ ಹೊಲೆಯ, ಕುಲವೇನೋ ಆವಂದಿಗರ ಕುಲವೇನೋ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲ ಸಂಗನ ಶರಣರೆಲ್ಲ ಕುಲಜರು.

೬. ಹೊಲೆಯರ ಬಾವಿಯಲೊಂದು ಎಲವು ತಾ ನಟ್ಟಿರಲು ಹೊಲೆ ಎನುವುದೀ ಜಗವು. ಹಲವೆಲುವಿನಿಂದಾದ ಮೆಲುವಂಥ ಬಾಯಿಂದ ಬಲು ಸಟೆಯ ನುಡಿಯಲದು ಹೊಲೆಯರಾ ಬಾವಿಂದ ಕರಕಷ್ಟ ಕಾಣಾ ರಾಮನಾಥಾ,

೭. ನೆಲನೊಂದೇ ಹೊಲಗೇರಿ ಶಿವಾಲಯಕ್ಕೆ, ಜಲವೊಂದೇ ಶೌಚಾ ಚಮನಕ್ಕೆ, ಕುಲವೊಂದೇ ತನ್ನ ತಾನರಿದಂಗೆ, ಫಲ ಒಂದೇ ಷಡುದರ್ಶನ ಮುಕ್ತಿಗೆ, ನಿಲುವೊಂದೇ ಕೂಡಲಸಂಗಮದೇವಾ ನಿಮ್ಮನರಿದಂಗೆ.

ಮಹಾತ್ಮಾ ಬಸವೇಶ್ವರ ಮತ್ತು ಮಹಾತ್ಮಾ ಗಾಂಧಿ ಇವರ ಅಸ್ಪೃಶ್ಯರ ಉದ್ಧಾರ ಕಾರ್ಯದಲ್ಲಿ ಏನಾದರೂ ಮತಭೇದವಿದೆಯೋ ಹೀಗೆಂದು ಯಾರಾದರೂ ಪ್ರಶ್ನಿಸಿದರೆ, ಎಳ್ಳಷ್ಟೂ ಮತಭೇದವಿಲ್ಲವೆಂದು ನನಗೆ ಅನಿಸುತ್ತದೆ. ಮಹಾತ್ಮಾ ಗಾಂಧಿಯವರ ಕೆಲವು ವಚನಗಳನ್ನು ನಾನು ಇಲ್ಲಿ ಉದಾಹರಿಸಿದ್ದೇನೆ.

೧. ಕಷ್ಟದಲ್ಲಿ ಸಿಕ್ಕಬಿದ್ದು ಪರಿತಪಿಸುವವರಾರು? ಬಡವರು ಮತ್ತು ಬಲವಂತರ ದಬ್ಬಾಳಿಕೆಗೆ ಗುರಿಯಾಗಿ ನೊಂದಿರುವ ಅಸ್ಪೃಶ್ಯರು. ಇವರ ಸೇವೆಯೇ ದೇವರ ಸೇವೆ, ದೈವ ಭಕ್ತನು ತ್ರಿಕರಣ ಪೂರ್ವಕವಾಗಿ ಈ ಜನರನ್ನು ಸೇವಿಸಬೇಕು. ಅಸ್ಪೃಶ್ಯರೆಂದು ಹೆಸರಿಟ್ಟು ಜನರನ್ನು ದೂರ ಓಡಿಸುವವರು ದಬ್ಬಾಳಿಕೆಯಿಂದ ನೊಂದು ನರಳುತ್ತಿರುವವರನ್ನು ಹೇಗೆ ಸೇವಿಸಬಲ್ಲರು? ಮಾನವ ವರ್ಗವನ್ನೇ ಹತ್ತಿರ ಸೇರಿಸಿದ ಅವನ ಹೃದಯದಲ್ಲಿ ದೇವರೆಂತು ವಾಸಿಸಿಯಾನು?

೨. ಹಿಂದೂ ಜನರು ಉಚ್ಚವಾದ ಮತ್ತು ಉತ್ತಮವಾದ ಧರ್ಮಕ್ಕೆ ಕಳಂಕ ತರುವಂಥ ಅಸ್ಪೃಶ್ಯತೆಯನ್ನು ಎಲ್ಲಿಯವರೆಗೆ ತೆಗೆದುಹಾಕುವದಿಲ್ಲವೋ ಅಲ್ಲಿಯ ವರೆಗೆ ಅವರು ಸ್ವಾತಂತ್ರ್ಯಕ್ಕೆ ನಿಶ್ಚಯವಾಗಿ ಪಾತ್ರರಾಗಿರಲಾರರು. ಮತ್ತು ಅವರಿಗೆ ಲಭ್ಯವೂ ಆಗಲಾರದು.

೩. ಅಸ್ಪೃಶ್ಯತಾ ನಿರೋಧ ಚಳವಳಿಯು ಸ್ಥಾಪಿತವಾಗುವದೆಂದರೆ ಹರಿಜನ ಸ್ಥಿತಿಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸಮಾಡಬೇಕೆಂದಲ್ಲ. ಎಲ್ಲಾ ಆತ್ಮರುಗಳು ಒಂದೇ ಎಂದೂ ಉತ್ತಮ ಹೀನವೆಂಬ ವಿಭಾಗವು ಮಿಥ್ಯವೆಂದೂ; ಅದು ಮಾಯೆಯ ಪ್ರಭಾವವೆಂದೂ ಪ್ರತಿಪಾದಿಸುವ ಮಹೋನ್ನತ ತತ್ವಗಳನ್ನೊಳಗೊಂಡ ಹಿಂದೂ ಧರ್ಮಕ್ಕೆ ಅಂಟಿರುವ ಉಚ್ಚನೀಚ ಭಾವನೆಗೆ ಮೂಲವಾದ ಅಸ್ಪೃಶ್ಯತೆಯನ್ನು ಪೂರ್ಣವಾಗಿ ನಾಶಮಾಡಿ ಹಿಂದೂ ಧರ್ಮದ ಹಿತವನ್ನು ಸಾಧಿಸುವದೇ ಅಸ್ಪೃಶ್ಯತಾ ಚಳವಳಿಯ ಮೂಲ ಉದ್ದೇಶವು.

ಈ ತರದ ಉಪದೇಶಗಳಲ್ಲಿ ಉಭಯ ಮಹಾತ್ಮರ ಗೊತ್ತುವಳಿಗಳು ಒಂದೇ ಎಂಬುದು ತಿಳಿದುಬರುತ್ತದೆ.

ವಚನಕಾರರ ಈ ಕಾರ್ಯಕ್ರಮದೊಳಗೆ ಆಪತ್ತುಗಳಾದರೂ ಮೇಲಿಂದಮೇಲೆ ಬರಲಾರದೆ ಇರಲಿಲ್ಲ. ಯಾಕಂದರೆ ಆಗಿನ ಕಾಲದಲ್ಲಿ ಸನಾತನಿಗಳೆಂದರೆ ರಾಜರು. ರಾಜರೆಂದರೆ ಸನಾತನಿಗಳು. ವಚನಕಾರರ ಹೊಸ ಆಚಾರ ವಿಚಾರಗಳು ಅವರಿಗೆ ಸರಿದೋರದಾದವು. ವಚನಕಾರರು ಧರ್ಮಲಂಡರೆಂದೂ ಕರ್ಮಭ್ರಷ್ಟರೆಂದೂ ಅವರ ವಿಷಯವಾಗಿ ಬಿಜ್ಜಳ ರಾಜದಲ್ಲಿ ಮೇಲಿಂದ ಮೇಲೆ ಕಲುಷಿತವನ್ನುಂಟುಮಾಡುತ್ತಿದ್ದರು. ಆದ್ದರಿಂದ ವಚನಕಾರರ ಕಾರ್ಯಕ್ರಮದೊಳಗೆ ರಾಜರಿಂದಲೂ ಸನಾತನಿಗಳಿಂದಲೂ ಸಂಕಟಗಳು ಬಂದೊದಗುತ್ತಿದ್ದವು. ಆದರೆ ಇಂಥ ಸಂಕಟದೊಳಗೆ ಭಯಪಡದೆ ಅವರು ಸಮಾಜೋದ್ಧಾರದ ಕಾರ್ಯಕ್ರಮವನ್ನು ಒಳ್ಳೇ ಒತ್ತರದಿಂದ ಸಾಗಿಸಿದರು. ಇಷ್ಟೇ ಅಲ್ಲಾ ಮಧುವಯ್ಯ ಹರಳಯ್ಯರೆಂಬುವರಲ್ಲಿ ಶರೀರ ಸಂಬಂಧ ಬೆಳಿಸಿದರು. ಈ ಪ್ರಕಾರವಾಗಿ ನಮ್ಮ ಹಿಂದೂ ಸಮಾಜದಲ್ಲಿರತಕ್ಕ ಉಚ್ಚ ನೀಚ ಭಾವನೆಗಳನ್ನು ಕಳೆದು ಎಲ್ಲರೂ ಒಂದೇ ತಾಯಿಯ ಮಕ್ಕಳೆಂದೂ ಧಾರ್ಮಿಕ ವಿಚಾರದಲ್ಲಿಯೂ ರಾಜಕಾರಣದಲ್ಲಿಯೂ ಪ್ರವೇಶ ಮಾಡಲಿಕ್ಕೆ ಹಕ್ಕು ಉಂಟೆಂದೂ ಸಾರಿ ಹೇಳಿದರು. ಇದರಿಂದ ಹಿಂದುಳಿದ ಜಾತಿಯವರೂ ಅಸ್ಪೃಶ್ಯರೂ ತಂಡೋಪತಂಡವಾಗಿ ಬಂದು ವಚನಕಾರರ ತತ್ವವನ್ನು ಸ್ವೀಕಾರಮಾಡಿದರು. "ಶಿವಾನುಭವ"

## ಮುಸಲ್ಮಾನರಿಗೆ ಬುದ್ಧಿವಾದ.

ಪಂಜಾಬ ಪ್ರಾಂತದ ಮುಖ್ಯ ಮಂತ್ರಿಗಳಾದ ಸರ್. ಸಿಕಂದರ್ ಹಯಾತ್‌ಖಾನರ ಅಣ್ಣನ ಮಕ್ಕಳಾದ ನವಾಬ ಮಹಮ್ಮದ ಅಲ್ಲಿ ಇವರು ಕಾಂಗ್ರೆಸ್ಸಿಗೆ ಸೇರಿದರು. ಫೇರೋಜಪುರ ರಾಜಕೀಯ ಪರಿಷತ್ತಿಗೆ ಇವರು ಗಾಂಧಿ ಟೊಪ್ಪಿಗೆಯನ್ನು ಹಾಕಿಕೊಂಡು ಸಂಪೂರ್ಣ ಖಾದಿಧಾರಿಗಳಾಗಿ ಬಂದರು. ಇವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ನಾನು ಕಾಂಗ್ರೆಸ್ಸಿಗೆ ಹಿಂದೆ ಮುಂದೆ ಯೋಚಿಸದೆ ಏನೋ ಆವೇಶದಿಂದ ಸೇರಿದೆನೆಂದು ನೀವು ತಿಳಿಯಬೇಡಿರಿ. ನಾನು ಕಾಂಗ್ರೆಸ್ಸಿನ ಎಲ್ಲ ಕಾರ್ಯಕಲಾಪಗಳನ್ನೂ ಈ ವರೆಗೆ ವಿಮರ್ಶಕ ದೃಷ್ಟಿಯಿಂದಲೇ ನೋಡಿದ್ದೇನೆ. ಅದು ಸತ್ಯ ಮತ್ತು ನ್ಯಾಯಗಳ ಮೂರ್ತಿಯಾಗಿದೆಯೆಂದೂ ಬಡಜನಗಳ ಉದ್ಧಾರಾರ್ಥವಾಗಿಯೇ ಪರಿಶ್ರಮಪಡುತ್ತದೆಂದೂ ನನಗೆ ಮನವರಿಕೆಯಾದುದರಿಂದಲೇ ನಾನು ಅದರಲ್ಲಿ ಸೇರಿದ್ದೇನೆ.

ಸಾಮ್ರಾಜ್ಯ ಪ್ರಭುತ್ವವು ಬಡವರನ್ನು ಹೀರುತ್ತಲಿದೆ. ಆದರಿಂದ ಮಾತೃ ಭೂಮಿಯನ್ನು ಬಿಡಿಸಲು ಕಾಂಗ್ರೆಸ್ಸಿನಲ್ಲಿ ಸೇರಿ ದುಡಿಯಬೇಕಾದುದು ಅತ್ಯಗತ್ಯ. ಮುಸಲ್ಮಾನ್ ಬಾಂಧವರು ಕಾಂಗ್ರೆಸ್ಸಿನಲ್ಲಿ ಅಗತ್ಯವಾಗಿ ಸೇರಬೇಕು."

ನವಾಬ ಮಹಮ್ಮದ ಅಲ್ಲಿಯವರ ಬುದ್ಧಿಯ ಮಾತನ್ನಾದರೂ ಅವರ ಮತಬಾಂಧವರು ಕೇಳಿ ಕಾಂಗ್ರೆಸ್ಸಿನಲ್ಲಿ ಕೂಡಲಿ.

---

## ಭಾಯಿ ಪರಮಾನಂದರು.

ಭಾಯಿ ಪರಮಾನಂದರು ತಾ. ೧೫-೩-೩೮ ನೆಯ ದಿನ ಬೆಂಗಳೂರಿನ ಒಂದು ಭಾಷಣದಲ್ಲಿ ಹೀಗೆ ಹೇಳಿದರು—

"ಈಗಿನ ಫೆಡರೇಶನ್ನಿನಲ್ಲಿ ಸ್ವಲ್ಪ ತಿದ್ದುಪಾಟುಗಳಾದರೆ ಅದನ್ನು ಸ್ವೀಕರಿಸಬೇಕು. ಸಂಸ್ಥಾನಿಕರು ತಮ್ಮ ಪ್ರಭುತ್ವವು ಪ್ರಜಾನುವರ್ತಿಯಾಗುವಂತೆ ಮಾಡಬೇಕು."

# ಸಾದರ ಸ್ವೀಕಾರ.

## ಶ್ರೀ ಚರಲಿಂಗ ಸ್ವಾಮಿಗಳ ಚರಿತ್ರೆ.

ಹುಬ್ಬಳ್ಳಿಯ ಪ್ರಸಿದ್ಧ ವ್ಯಾಪಾರಿಗಳೂ ಶ್ರೀ ಅರುವತ್ತ ಮೂರು ಪುರಾತನರ ದಿವ್ಯ ಚರಿತ್ರೆಗಳನ್ನು ಕನ್ನಡದಲ್ಲಿ ಬರೆದು ಬಹು ಉಪಕಾರಮಾಡಿ ಕನ್ನಡಿಗರಿಗೆ ತುಂಬಾ ಪರಿಚಯವಾಗಿರುವವರೂ ವೀರಶೈವ ತತ್ವನಿಷ್ಠರೂ ಆದ ಶ್ರೀಮಾನ್ ಮಿರ್ಜಿ ಮಹಾರುದ್ರಪ್ಪನವರು ಚಿರಸ್ಮರಣೀಯರಾದ ಕಲಬುರ್ಗಿ ಮಠದ ಶ್ರೀ ಚರಲಿಂಗ ಸ್ವಾಮಿಗಳವರ ದಿವ್ಯ ಚರಿತ್ರೆಯನ್ನು ಹೃದಯಂಗಮವಾದ ರೀತಿಯಲ್ಲಿ ಬರೆದುದನ್ನು ನಾವು ಮನಃಪೂರ್ವಕ ಅಭಿನಂದಿಸುತ್ತೇವೆ. ಶರಣ ಸಂದೇಶ ಪತ್ರಿಕೆಯ ಸೇವೆಗೆ ಪ್ರೋತ್ಸಾಹಿಸಲು ಈ ಪುಸ್ತಕದ ೧೦೦ ಪ್ರತಿಗಳನ್ನು ನಮ್ಮ ಕಡೆಗೆ ಕಳಿಸಿದ್ದಾರೆ. ಇವುಗಳನ್ನು ನಾವು ತುಂಬಾ ಕೃತಜ್ಞತಾಪೂರ್ವಕ ಸ್ವೀಕರಿಸಿದ್ದೇವೆ.

ಇದು ಡೆಮ್ಮಿ ಕಾಗದದ ೮ ನೆಯ ಒಂದು ಭಾಗದ ಆಕಾರದಲ್ಲಿ ಬಹು ಮುದ್ದಾಗಿ ಅಚ್ಚಾಗಿದೆ. ಆರಂಭದಲ್ಲಿ ಶ್ರೀ ಚರಲಿಂಗ ಸ್ವಾಮಿಗಳವರ ಭಾವ ಚಿತ್ರವಿದೆ. ೨೦ ಪುಟಗಳಲ್ಲಿ ಶ್ರೀ ಸ್ವಾಮಿಗಳವರ ಚರಿತ್ರೆಯಲ್ಲಿಯ ಮುಖ್ಯಾಂಶಗಳನ್ನು ವಿವರಿಸಿದ್ದಾರೆ. ಇದರ ಕ್ರಯ ೩ ಆಣೆ ಮಾತ್ರ.

ಈ ಪುಸ್ತಕದ ಸಂಬಂಧವಾಗಿ ಕರ್ನಾಟಕ ಸಾಹಿತ್ಯ ಭೂಷಣರಾದ ಶ್ರೀಮಾನ್ ಹಳಕಟ್ಟಿಯವರು ಪಟ್ಟ ಯಥಾರ್ಥವಾದ ಅಭಿಪ್ರಾಯವನ್ನೇ ನಾವು ಇಲ್ಲಿ ಉದಾಹರಿಸಿದ್ದೇವೆ.

### ರಾವಸಾಹೇಬ, ಫ. ಗು. ಹಳಕಟ್ಟಿ ಇವರ ಅಭಿಪ್ರಾಯ.

ಈ ಗ್ರಂಥದ ಲೇಖಕರಾದ ರಾ|| ರಾ|| ಮಹಾರುದ್ರಪ್ಪನವರು ಈ ಗ್ರಂಥದ ವಿಷಯದಲ್ಲಿ ನನ್ನ ಅಭಿಪ್ರಾಯವನ್ನು ಕೋರಿದ್ದಾರೆ. ಈ ಗ್ರಂಥವನ್ನವಲೋಕಿಸಲಾಗಿ ಇದರಲ್ಲಿ ಸಂಶೋಧನ ಪ್ರಯತ್ನಗಳು ವಿಶೇಷವಾಗಿ ತೋರಬಂದದ್ದರಿಂದ ನನ್ನ ಅಭಿಪ್ರಾಯವನ್ನು ಕೊಡಲು ಆನಂದಿಸುತ್ತೇನೆ. ಇಂಥ ಪ್ರಯತ್ನಗಳಿಂದ ವೀರಶೈವ ಸಂಸ್ಕೃತಿಯ ಇತಿಹಾಸದ ಮೇಲೆ ಬಲವಾದ ಪ್ರಕಾಶವು ಬೀಳದಿರದು. ವೀರಶೈವ ಮಠಗಳು ವೀರಶೈವ ಸಂಸ್ಕೃತಿಯನ್ನು ಕಾಪಾಡಲಿಕ್ಕೆ ಮುಖ್ಯ ಕಾರಣವಾಗಿವೆಂಬುದು ನಿರ್ವಿವಾದವು. ಹೋದ ಸಾವಿರ ವರುಷಗಳಲ್ಲಿ ಕರ್ನಾಟಕದಲ್ಲಿ ವಿಧರ್ಮೀಯರು ಬಹುಕಾಲ ರಾಜ್ಯವಾಳಿದರು. ಮತ್ತು ಪರನಾಡಿನವರು ಅದರ ಮೇಲೆ ಆಕ್ರಮಣಗಳನ್ನು ಮಾಡಿದರು. ಆದರೆ ವೀರಶೈವ ಸಂಸ್ಕೃತಿಯು ಕರ್ನಾಟಕದಲ್ಲಿ ಅಚ್ಚಳಿಯದೆ ಉಳಿದಿದೆ. ಇದಕ್ಕೆ ಮಠಾಧೀಶರೇ ಮುಖ್ಯ ಕಾರಣರಾಗಿದ್ದಾರೆ. ಅವರು ತಮ್ಮ ಮಠಗಳಲ್ಲಿ ವಿದ್ಯಾದಾನ ಮಾಡುತ್ತ ಬಂದರು. ಮತ್ತು ವೀರಶೈವ ವಾಙ್ಮಯವನ್ನು ಪೋಷಿಸಿ ವೀರಶೈವ ಧರ್ಮ ತತ್ವಗಳನ್ನು ಜನರಲ್ಲಿ ಪ್ರಕಾಶಪಡಿಸುತ್ತಿದ್ದರು. ಇದರಿಂದಲೇ ವೀರಶೈವ ಸಂಸ್ಕೃತಿಯು ಇಲ್ಲಿ ಉಳಿದಿರುತ್ತದೆ. ಹೀಗೆ ವಿಶೇಷವಾಗಿ ಪ್ರಯತ್ನಿಸಿದಂಥ ಮಠಾಧೀಶರ ಚರಿತ್ರೆಗಳಿಗೆ ನಾವು ಅವಶ್ಯವಾಗಿ ಮಹತ್ವವನ್ನು ಕೊಡಲೇಬೇಕು.

ಈ ಮಠಾಧಿಪತಿಗಳಲ್ಲಿ ಕೆಲವರು ಧರ್ಮತತ್ವಗಳನ್ನು ತಿಳಿದುಕೊಂಡು ಅವುಗಳ ಪ್ರಸಾರಕ್ಕೋಸ್ಕರ ಜನರಲ್ಲಿ ಬೆರೆದು ಬಹು ಪ್ರಯತ್ನಿಸಿದ್ದಾರೆ. ಇವರು ಸಮಾಜ ಸುಧಾರಕರೆಂದು ಹೇಳಬಹುದು. ಅನೇಕ ವಚನಕಾರರೂ ತೋಂಟದಾರ್ಯ, ಸಾರಂಗದೇವ ಇವರಂಥ ಮಠಾಧೀಶರೂ ಇವರಲ್ಲಿ ಬರುತ್ತಾರೆ. ಬೇರೆ ಕೆಲವರು ಇವರಂತೆ ಪ್ರತ್ಯಕ್ಷ ಕಾರ್ಯ ಮಾಡದಿದ್ದರೂ ತಮ್ಮ ಸದಾಚರಣೆ ತೇಜಃಪುಂಜವಾದ ವರ್ತನೆ ಮತ್ತು ಧಾರ್ಮಿಕ ಉಚ್ಚ ಆಚಾರ ಇವುಗಳ ಮೂಲಕ ಸಮಾಜದ ಮೇಲೆ ಮಹತ್ತರ ಪರಿಣಾಮಗಳನ್ನುಂಟುಮಾಡಿದ್ದಾರೆ. ಇವರಾದರೂ ಹೆಚ್ಚಿನ ತರಗತಿಯವರು. ಈ ಉಭಯ ವರ್ಗದವರಿಂದಲೂ ವೀರಶೈವ ಸಂಸ್ಕೃತಿಯು ನಮ್ಮಲ್ಲಿ ಈಗಲೂ ಕೂಡ ಜೀವಿಸಿರುವದು. ಈಗಿನ ಚರಿತ್ರನಾಯಕರು ಈ ಎರಡೂ ದೃಷ್ಟಿಯಿಂದ ಮೇಲ್ತರಗತಿಯವರೆಂದು ಗ್ರಂಥಕಾರರ ವಿವರಣೆಯಿಂದ ತಿಳಿದುಬರುತ್ತದೆ.

ಶ್ರೀ ಚರಲಿಂಗ ಸ್ವಾಮಿಗಳವರು ಕಲಬುರ್ಗಿ ಪಟ್ಟಣದಲ್ಲಿರುವ ಗದ್ದಿಗೀ ಮಠಕ್ಕೆ ಸಂಬಂಧಿಸಿದವರು. ಈ ಮಠದ ಕೆಳಗೆ ದೇಶದಲ್ಲಿ ಅನೇಕ ಕಡೆಗೆ ಶಾಖಾ ಮಠಗಳಾಗಿರುವವು. ಈ ಮಠವು ಸುಮಾರು ೨೫೦ ವರ್ಷಗಳ ಹಿಂದೆ ಶ್ರೀ ರೇವಣಸಿದ್ಧ ಸ್ವಾಮಿಗಳೆಂಬ ಶಿವಾನುಭವಿಗಳಿಂದ ಮೊದಲು ಸ್ಥಾಪಿಸಲ್ಪಟ್ಟಿತು. ಈ ಮಠದ ಪರಂಪರೆಯಲ್ಲಿ ಕೆಲವು ಶಿವಾನುಭವಿಗಳು ಉದಯವಾದಂತೆ ತೋರುತ್ತದೆ. ಅವರಲ್ಲಿ ಚರಿತ್ರನಾಯಕರಾದ ಶ್ರೀ ಚರಲಿಂಗ ಸ್ವಾಮಿಗಳು ಒಬ್ಬರಾಗಿರುವರು. ಇವರು ಆರಂಭದಲ್ಲಿ ಮಲ್ಲನಕೆರೆಯ ಶ್ರೀ ಚನ್ನಬಸವ ಸ್ವಾಮಿಗಳವರಲ್ಲಿ ಅಭ್ಯಾಸಮಾಡಿದರು. ಈ ಸ್ವಾಮಿಗಳವರು ವಚನಶಾಸ್ತ್ರಗಳಲ್ಲಿ ಬಹು ಬಲ್ಲಿದರೆಂದು ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ಹೇಳುತ್ತಿದ್ದುದನ್ನು ನಾನು ಬಹು ಸಾರೆ ಕೇಳಿದ್ದೇನೆ. ಶ್ರೀ. ಚರಲಿಂಗ ಸ್ವಾಮಿಗಳು ಅವರಲ್ಲಿ ಕೆಲವು ಕಾಲವಿದ್ದು ಮುಂದೆ ಮಠಾಧಿಕಾರವನ್ನು ಹೊಂದಿ ಯಾದವಾಡ, ಲೋಕಾಪುರ ಇಲ್ಲಿಯೂ ಮುಂದೆ ಹುಬ್ಬಳ್ಳಿಯ ತಮ್ಮ ಮಠದಲ್ಲಿಯೂ ಇದ್ದರು. ಆ ಮೇಲೆ ಕಲಬುರ್ಗಿಯ ಮಠದಲ್ಲಿಯೂ ವಾಸಿಸಿದರು. ಈ ಕಾಲದಲ್ಲೆಲ್ಲ ಅವರು ತಮ್ಮ ಧಾರ್ಮಿಕ ವೃತ್ತಿಯಿಂದ ಜನಾನುರಾಗವನ್ನು ಸಂಪಾದಿಸಿದರು. ಮತ್ತು ಜನರಲ್ಲಿ ಬಹು ಪೂಜ್ಯರಾದರು. ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ಸ್ಥಾಪಿಸಿದ ಶ್ರೀ ಶಿವಯೋಗ ಮಂದಿರದ ಕಾರ್ಯದಲ್ಲಿಯೂ ಅವರು ನೆರವಾಗುತ್ತಿದ್ದರು. ಇವರಂತೆಯೇ ಸರ್ವ ಮಠಾಧಿಪತಿಗಳು ಶಿವಾನುಭವವನ್ನು ಚನ್ನಾಗಿ ತಿಳಿದು, ಅದರಂತೆ ಆಚರಿಸಿ ಸಮಾಜ ಕಾರ್ಯಗಳನ್ನು ಮಾಡುವಲ್ಲಿ ತತ್ಪರರಾದರೆ ಸಮಾಜದ ಹೆಚ್ಚುವಿಕೆಯು ಬೇಗನೆ ಉಂಟಾಗದೆ ಇರದು. ಈ ಸಂಗತಿಗಳು ಗ್ರಂಥಕಾರರು ಬರೆದ ಈ ಚರಿತ್ರೆಯಿಂದ ದೃಢಪಡುತ್ತವೆ. ಇಂಥ ಚರಿತ್ರೆಯನ್ನು ರಾ|| ರಾ|| ಮಹಾರುದ್ರಪ್ಪನವರು ಸುಗಮವಾಗಿ ಮುಖ್ಯ ಸಂಗತಿಗಳನ್ನು ಅತಿಶಯೋಕ್ತಿಗಳಿಲ್ಲದೆ ಸರಲವಾಗಿ ಮತ್ತು ಸುಬೋಧವಾಗಿ ಬರೆಯಲು ಪರಿಶ್ರಮಪಟ್ಟದ್ದಕ್ಕೆ ನಾನು ಅವರನ್ನು ಬಹಳ ಅಭಿನಂದಿಸುತ್ತೇನೆ.

ವಿಜಾಪುರ ತಾ. ೨೧-೨-೩೪.

(ಸಹಿ) ಫ. ಗು. ಹಳಕಟ್ಟಿ.

---

## ಮಹಾರಾಷ್ಟ್ರ ಮತ್ತು ಕರ್ನಾಟಕಗಳಲ್ಲಿ ಭೂಮಿ ನಡುಗಿತು.

ಪುಣೆಯಲ್ಲಿಯು ಖಾನದೇಶದ ಜಳಗಾವ ಮೊದಲಾದ ಕೆಲವು ಸ್ಥಳಗಳಲ್ಲಿಯು ಮುಂಬೈ, ನಾಶಿಕ, ನಾಗಪುರ, ಇಂದೂರು, ಬಡೋದಾ, ಸೂರತ, ಅಜಮೀರ, ಈ ಮೊದಲಾದ ಮಧ್ಯ ಹಿಂದುಸ್ಥಾನದ ಕೆಲವು ಸ್ಥಳಗಳಲ್ಲಿಯು ಅಥಣಿ ತಾಲೂಕಿನ ಜುಗುಳ ಶಹಾಪುರ ರಾಜಾಪುರ ಮೊದಲಾದ ಕೆಲವು ಹಳ್ಳಿಗಳಲ್ಲಿಯು ತಾರೀಖು ೧೪-೩-೩೪ ನೆಯ ಪ್ರಾತಃಕಾಲ ೫ ರಿಂದ ೬ ಗಂಟೆಯೊಳಗಾಗಿ ಬೇರೆ ಬೇರೆ ನಿಮಿಷಗಳಲ್ಲಿ ಭೂಮಿ ನಡುಗಿತು. ಅದರಿಂದ ಅಪಾಯವೇನೂ ಸಂಭವಿಸಲಿಲ್ಲ.

# ಅಕ್ಕನ ಬಳಗ, ಗದಗ.

ಗದಗಿನ ಶಹಾಪುರ ಪೇಟಿಯಲ್ಲಿರುವ ಹಾಲಕೆರೆ ಅನ್ನದಾನೀಶ್ವರ ಹಡಗಲಿ ಮಠದಲ್ಲಿ ತಾ. ೬-೩-೩೮ ನೇ ದಿವಸ ಅಕ್ಕನ ಬಳಗವು ಕೂಡಿತ್ತು. ಈ ಬಳಗಕ್ಕೆ ನೂರಾರು ಮಂದಿ ಮಹಿಳೆಯರು ನೆರೆದಿದ್ದರು. ಈ ಸಭೆಗೆ ಶ್ರೀಮತಿ ಗಂಗೂಬಾಯಿ ಶೆಟ್ರ ಹಾವೇರಿ ಇವರು ಅಧ್ಯಕ್ಷತೆಯನ್ನು ವಹಿಸಿದ್ದರು. ಹೆಣ್ಣುಮಕ್ಕಳು ಅಕ್ಕ ಮಹಾದೇವಿಯ ಗೀತೆಯನ್ನು ಹಾಡಿದನಂತರ ಸಭೆಯ ಕಾರ್ಯವು ಪ್ರಾರಂಭವಾಯಿತು.

ನಾಲ್ಕು ಮಂದಿ ಹೆಣ್ಣುಮಕ್ಕಳು ವೀರಶೈವ ಮಾತೆಯಾದ ಅಕ್ಕಮಹದೇವಿಯ ವಚನಗಳನ್ನೂ ಅದರ ಅರ್ಥವನ್ನೂ ಎಲ್ಲರಿಗೂ ಹೃದಯಂಗಮವಾಗುವಂತೆ ಸರಳವಾಗಿ ಬಿಡಿಸಿ ಹೇಳಿ ಮುಗಿಸಿದರು. ಶ್ರೀಮತಿ ಪರವ್ವ ಕಿಣಗಿ ಬಾಗಲಕೋಟೆ ಇವರು ಸಭೆಯ ಆಗ್ರಹದ ಮೇರೆಗೆ ರಾ. ರಾ. ಶಿವಯೋಗಪ್ಪ ಶೆಟ್ರ ಕರ್ಜಗಿ ಇವರನ್ನು ಸಭೆಯ ಭಾವಿ ಸಿಸ್ತು, ನಿಯಮ ಇತ್ಯಾದಿ ವಿಷಯ.ಗಳನ್ನು ಹೇಳಲು ಬಿನ್ನವಿಸಿಕೊಂಡರು.

ಆಗ ರಾ. ರಾ. ಶೆಟ್ರ ಕರ್ಜಗಿ ಇವರು ಭಾಷಣಮಾಡುತ್ತಾ, ಈ ಬಳಗವು ಅಲ್ಪ ಕಾಲದಲ್ಲಿ ಸ್ಥಾಪನೆಯಾಗಿದ್ದರೂ ಕೂಡ ನೀವು ಬಹಳ ಮುತವರ್ಜಿಯಿಂದಲೂ ಹುರುಪಿನಿಂದಲೂ ವಾರಕ್ಕೊಂದಾವರ್ತಿಕೂಡಿ ಅಕ್ಕ ಮಹದೇವಿಯ ವಚನಗಳನ್ನು ಅದರ ಅರ್ಥವನ್ನು ಬಿಡಿಸಿ ಹೇಳುವುದನ್ನು ನೋಡಿ ನನಗೆ ತುಂಬಾ ಸಂತೋಷವಾಯಿತು. ನೀವೆಲ್ಲರೂ ಒಕ್ಕಟ್ಟನಿಂದ ಕೂಡಿಕೊಂಡು ಶಾಂತಿ ಮಾರ್ಗ ಮುಂದಿಟ್ಟುಕೊಂಡು ಬಳಗವನ್ನು ವೃದ್ಧಿಮಾಡಬೇಕು. ಬಳಗವೆಂದರೆ ತಮ್ಮ ಮನೆಯಲ್ಲಿ ಅಣ್ಣ, ತಮ್ಮ, ಅಕ್ಕ ತಂಗಿ ಇನ್ನೂ ಮುಂತಾದ ಆಪ್ತರೊಡನೆ ಕೂಡಿಕೊಂಡು ಪ್ರೇಮದಿಂದಲೂ, ಉದಾರದಿಂದಲೂ ಸಹನಭಾವದಿಂದಲೂ ಇದ್ದುಕೊಂಡು ತಮ್ಮ ಸಂಸಾರ ಜೀವನದ ಮಾರ್ಗ ಉನ್ನತಿಯನ್ನು ಬೆಳಸುವಂತೆ ಈ ಬಳಗವನ್ನೂ ಕೂಡ ಅವೇ ಗುಣಗಳಿಂದ ವೃದ್ಧಿಮಾಡಬೇಕು. ಒಬ್ಬರಿಗೊಬ್ಬರು ಕೋಪಿಸಿಕೊಳ್ಳಬಾರದು. ಎಲ್ಲರೂ ಶಾಂತಿ ಸಮಾಧಾನದಿಂದ ಇದ್ದುಕೊಂಡು ಹೋಗಬೇಕು. ನೀವು ಯಾವ ಕೆಲಸವನ್ನು ಮಾಡಬೇಕಾದರೂ ವಿಚಾರ ಶೀಲನೆಮಾಡಿ ನಡೆಯಬೇಕು. ಬಳಗದಲ್ಲಿ ಹಿರಿಯರು ಕಿರಿಯರು ಎಂಬ ಭೇದವಿರದೆ ಎಲ್ಲರಿಗೂ ಸಮತಾ ಅಧಿಕಾರವಿರಬೇಕು. ಅಕ್ಕನ ಬಳಗಕ್ಕೆ ಕುಂದು ಬಾರದ ಹಾಗೆ ತೋಟದ ಬೇಲಿಯಂತೆ ಶಿಸ್ತು ಬೆಳಸಿ ಕಾಪಾಡಬೇಕು. ಲೋಕಾಪವಾದಕ್ಕೆ ಗುರಿಯಾಗದ ಹಾಗೆ ಎಲ್ಲರೂ ಧೈರ್ಯದಿಂದ ಕೆಲಸಮಾಡಬೇಕು. ತಮ್ಮ ಆತ್ಮ ಶಕ್ತಿಯಿಂದ ಈ ಬಳಗವನ್ನು ಶೀಘ್ರದಲ್ಲಿಯೇ ಆದರ್ಶ ಬಳಗ ಮಾಡಿದರೆ ತಕ್ಕಮಟ್ಟಿ ಪಿ ಫಂಡನ್ನು ಕೂಡಿಸುವ ಏರ್ಪಾಡುಮಾಡಲಾಗುವುದು. ಎಂದು ಹೇಳಿ ತಮ್ಮ ಭಾಷಣವನ್ನು ಮುಗಿಸಿದರು.

ಆ ಮೇಲೆ ವೇ. ನಾಗಭೂಷಣ ಶಾಸ್ತ್ರಿಗಳವರು ಭಾಷಣ ಮಾಡುತ್ತಾ ಈ ದಿವಸದ ಬಳಗದಲ್ಲಿ ಹೆಣ್ಣುಮಕ್ಕಳು ಒಬ್ಬರಿಗೊಬ್ಬರು ಕೂಡಿಕೊಂಡು ಉತ್ಸಾಹದಿಂದ ವಚನಗಳನ್ನು ಅದರ ಅರ್ಥವನ್ನೂ ಸರಳ ಶೈಲಿಯಲ್ಲಿ ಬಿಡಿಸಿ ಹೇಳುವುದನ್ನು ನೋಡಿದರೆ ನನಗೆ ಅತ್ಯಾನಂದವಾಯಿತು. ಸ್ತ್ರೀಯೆಂದರೆ ಪುರುಷನ ಅರ್ಧಾಂಗಿನಿಯು. ಅರ್ಧಾಂಗಿನಿಯಾದಾಗ್ಯು ಕೂಡ ಅರ್ಧಾಂಗ ಪುರುಷಗಿಂತ ಅರ್ಧಾಂಗ ಸ್ತ್ರೀಗೆ ಹೆಚ್ಚು ಕಿಮ್ಮತ್ತು ಹಿಂದಿನಿಂದಲೂ ಕೊಟ್ಟಿದೆ. ಈಗಲೂ ಕೊಟ್ಟಿರುತ್ತಾರೆ ಸ್ತ್ರೀಯರು ತಮ್ಮ ಪತಿವ್ರತೆಯರ ಧರ್ಮ, ಪತಿ ಭಕ್ತಿ, ಇವುಗಳನ್ನು ಕಾಪಾಡಿಕೊಂಡು ತಮ್ಮ ಜೀವನದಲ್ಲಿ ಸುಖಹೊಂದಬೇಕೆಂಬುದರ ಉದ್ದೇಶವೇ ಈ ಬಳಗದ ಕರ್ತವ್ಯವಾಗಿರುತ್ತದೆ. ಶ್ರೀಗೂ ಸ್ತ್ರೀಗೂ ಭೇದವಿಲ್ಲ. ಹೇಗೆಂದರೆ ಶ್ರೀ ಎಂದರೆ ಲಕ್ಷ್ಮಿ, ಸ್ತ್ರೀ ಎಂದರೆ ಮಹಿಳೆ. ಲಕ್ಷ್ಮಿಯು ಜಗತ್ತಿನ ಪ್ರತಿಯೊಂದು ವ್ಯವಹಾರಕ್ಕೆ ಮೂಲಾಧಾರವಾಗಿರುವಂತೆ ಸಂಸಾರವೆಂಬ ಜಗತ್ತಿನ ಮಹಿಳೆಯು ಮೂಲಾಧಾರವಾಗಿದ್ದಾಳೆ.

ಮುಂದಿನ ಸಂತತಿಯು ಪೂರ್ಣ ಸುಖ ಹೊಂದಿ ರಾಷ್ಟ್ರದ ಸಮಾಜದ ವೀರತ್ವವಾಗಬೇಕಾದರೆ ಈಗಿನಿಂದಲೇ ಇಂಥ ಬಳಗದಲ್ಲಿ ಎಲ್ಲರೂ ಸಹೋದರಿಯರಂತೆ ಕೂಡಿಕೊಂಡು ತಮ್ಮ ಜೀವನದ ಪವಿತ್ರತೆಯನ್ನು ಹೆಚ್ಚಾಗಿ ಸಂಪಾದಿಸುವದಕ್ಕಾಗಿ ಪ್ರಯತ್ನ ಪಡತಕ್ಕದ್ದು. ಬರೇ ಬಾಹ್ಯಾಡಂಬರವೂ ಉಪಯುಕ್ತವಲ್ಲ. ಶಿಕ್ಷಣವೆಂದರೆ ಒಳಗಿನ ಬೆಳಕನ್ನು ಮುಸಕಿದ ದೋಷವನ್ನು ಹೊಡೆದೋಡಿಸಿ ಶುದ್ಧ ಪ್ರಕಾಶವನ್ನು ಹೊರಹೊಮ್ಮಿಸಲು ತಕ್ಕ ಸಾಧನವೇ ಶಿಕ್ಷಣವೆನಿಸುವದು. ಎಷ್ಟು ಜನ ಅಕ್ಷರಾಭ್ಯಾಸಮಾಡಿದಂಥ ಸ್ತ್ರೀಯರಿಗಿಂತಲೂ ಅಕ್ಷರ ಯಾವ ಅಭ್ಯಾಸವಿಲ್ಲದ ಸ್ತ್ರೀಯರ ಪವಿತ್ರತೆಯು ಎಂಥವರನ್ನು ಮುಗ್ಧಗೊಳಿಸಿದೆ ಬಿಟ್ಟಿಲ್ಲ. ಇದರ ಮೇಲಿಂದ ಅಂತರ್ಜೀವನದ ಶೋಧವೇ ಶಿಕ್ಷಣದ ಮುಖ್ಯೋದ್ದೇಶವಾಗಿರುವದು. ಅಂಥ ತಾಯಿಗಳೇ ಜಗತ್ತಿನ ಶಾಂತಿಗೆ ಮೂಲ ಕಾರಣರಾಗಿರುವರು ಕೆಲವರು ಇಂಥ ವಿಚಾರ ಕ್ರಾಂತಿಕಾಲದಲ್ಲಿಯೂ ಸ್ತ್ರೀಯರನ್ನು ಗೃಹ ಕತ್ತಲೆಯ ಕೋಣೆಯಲ್ಲಿ ಇಡಬೇಕೆಂದು ಬಯಸುವರು. ಮತ್ತೆ ಕೆಲವರು ಪಾಶ್ಚಾತ್ಯ ಸಭ್ಯತೆಯ ಸಂಸ್ಕಾರದಿಂದ ಕೂಡಿದ ಕೆಲವರು ಏನೂ ತಿಳಿಯದ ರಾಷ್ಟ್ರೀಯ ಕಾರ್ಯದಲ್ಲಿ ಸ್ತ್ರೀಯರನ್ನು ಒಮ್ಮೆಲೇ ಎಳೆದು ನಿಲ್ಲಿಸಬೇಕೆಂದು ಬಯಸುವರು. ಇವರಿಬ್ಬರೂ ಸ್ತ್ರೀಯರ ಪ್ರಕೃತಿ ಶಾಸ್ತ್ರವನ್ನು ಅಭ್ಯಾಸಿಸಿದರೆ ತಮ್ಮ ಭ್ರಾಂತ ವಿಚಾರವನ್ನು ತಿದ್ದಿಕೊಳ್ಳುವಲ್ಲಿ ಸಂದೇಹವಿಲ್ಲ. ಸ್ತ್ರೀಯರು ಮೊದಲು ತಮ್ಮ ಯೋಗ್ಯತೆಯ ಬಗ್ಗೆ ವಿಶ್ವಸ್ತರಾಗಿ ತಮ್ಮ ಧರ್ಮದ ಪರಿಪೂರ್ಣತೆಯನ್ನು ಹೊಂದಿದಾಗ ಎಂಥ ರಾಷ್ಟ್ರೀಯ ಕಾರ್ಯವೂ ಸುಲಭವಾಗಿ ಸಾಧಿಸುವಂತೆ ಪುರುಷರಿಗೆ ಸಹಾಯವಾಗಬಲ್ಲರು.

ಸ್ತ್ರೀಯರಿಗೆ ಈಗಿನ ಹೆಣ್ಣುಮಕ್ಕಳು ಆದರ್ಶಭೂತರಾಗುವಂತೆ ಎತ್ನಿಸುವದು ತಮ್ಮ ಸಮಾಜಕ್ಕೆ ಅಥವಾ ಭಾರತಕ್ಕೇ ಅಲಂಕಾರಪ್ರಾಯವಾದದ್ದು. ನಮಗೆ ಭಾರತೀಯ ಸಭ್ಯತೆಯ ಅವಶ್ಯಕತೆ ಇರುವದಲ್ಲದೆ ಪಾಶ್ಚಾತ್ಯ ಸಭ್ಯತೆಯ ಅವಶ್ಯಕತೆಯಿರುವುದಿಲ್ಲ. ಅವರ ಸಭ್ಯತೆಯು ಪರಿಣಾಮದಲ್ಲಿ ಅತಿ ಭೀಕರವಾಗಿರುವದೆಂಬುದು ದೂರದರ್ಶಿಗಳಿಗೆ ಈಗಾಗಲೇ ತಿಳಿದುಬಂದಿದೆ. ಆದ್ದರಿಂದ ತಾಯಿಗಳೆಲ್ಲರೂ ಭಾರತೀಯ ಸಭ್ಯತೆಯ ಬೆಳಕನ್ನು ಜಗತ್ತಿಗೆಲ್ಲ ಹರಡಿ ಎಲ್ಲರೂ ಮಾರ್ಗದರ್ಶಕರಾಗಬೇಕಾಗಿ ನನ್ನ ಬಲವಾದ ಬೇಡಿಕೆ ಎಂದು ಹೇಳಿ ತಮ್ಮ ಭಾಷಣವನ್ನು ಮುಗಿಸಿದರು.

ವ್ಯವಸ್ಥಾಪಕ
ಅಕ್ಕನ ಬಳಗ.

---

—ಬಡೋದೆಯಲ್ಲಿ ಒಂದು ವಿಮಾನ ಗೃಹ ಮತ್ತು ಒಂದು ಬ್ರಾಡಕಾಸ್ಟಿಂಗ ಸ್ಟೇಶನ್ ಸ್ಥಾಪಿಸಬೇಕೆಂದು ಬಡೋದಾ ಸರಕಾರದವರು ವಿಚಾರಿಸಿದ್ದಾರೆ.

ವಿಮಾನ ಗೃಹದ ಸಲುವಾಗಿ ೨ ಲಕ್ಷ ರೂಪಾಯಿ ವೆಚ್ಚವಾಗುವದು. ಮತ್ತು ಬ್ರಾಡ್ ಕಾಸ್ಟಿಂಗ್ ಸ್ಟೇಶನ್ನಕ್ಕಾಗಿ ಮೊದಲು ೧॥ ಲಕ್ಷ ರೂ. ವೆಚ್ಚವಾಗಿ ಅನಂತರ ಪ್ರತಿವರ್ಷ ೪೦ ಸಾವಿರ ರೂ. ವೆಚ್ಚ ಬರುವದು.

# ಇಂದೂರು ಮಹಾರಾಜರ ಅಭಿನಂದನ.

## ಕಾಂಗ್ರೆಸ್ಸಿಗಿಂತ ಮುಂದೆ.

ಇಂದೂರು ಮಹಾರಾಜರು ಆದಿ ಹಿಂದುಗಳಿಗೆ ಸಂಪೂರ್ಣ ನಾಗರಿಕತ್ವದ ಸ್ವಾತಂತ್ರ್ಯ ಕೊಟ್ಟುದಕ್ಕೋಸ್ಕರ ಹಿಂದು ಮಹಾಸಭಾಧ್ಯಕ್ಷರಾದ ಸ್ವಾತಂತ್ರ್ಯವೀರ ಸಾವರಕರರು ಮಹಾರಾಜರನ್ನು ಅಭಿನಂದಿಸಿ ಒಂದು ಪತ್ರವನ್ನು ಬರೆದಿದ್ದಾರೆ. ಅದರಲ್ಲಿ ಹೀಗೆ ಹೇಳಿದ್ದಾರೆ—

"ತಾವು ಎಲ್ಲಾ ಸಂಸ್ಥಾನಿಕರಿಗಿಂತಲೂ ಒಂದಡಿ ಮುಂದೆ ಹೋಗಿದ್ದೀರಿ. ಆದಿ ಹಿಂದುಗಳಿಗೆ ದೇವಾಲಯ ಮತ್ತು ಜಲಾಶಯಗಳ ಪ್ರವೇಶದ ಮಟ್ಟಿಗೆ ಮಾತ್ರ ಅನುಕೂಲಪಡಿಸದೆ ಚಹಾ ಅಂಗಡಿಗಳಲ್ಲಿಯೂ ಪ್ರವೇಶಿಸಲು ಯಾವ ಸಂಕೋಚವೂ ಇಲ್ಲದಂತೆ ಮಾಡಿ ಸಂಘಟನಾ ಪ್ರೇಮಿಗಳ ಅಭಿನಂದನೆಗೆ ಪಾತ್ರರಾಗಿದ್ದೀರಿ. ಹಿಂದಿಸಂಸ್ಥಾನಾಧಿಪತಿಗಳು ಮನಸ್ಸು ಮಾಡಿದರೆ ಕಾಂಗ್ರೆಸ್ ಮಂತ್ರಿಮಂಡಲದವರಿಗಿಂತಲೂ ಹೆಚ್ಚಾದ ಸಾಮಾಜಿಕ ಸುಧಾರಣೆಗಳನ್ನು ಧೈರ್ಯದಿಂದ ಸಾಗಿಸಬಲ್ಲರೆಂಬುದನ್ನು ತಾವು ಕೃತಿಯಿಂದ ತೋರಿಸಿರುವಿರಿ.

ತಮ್ಮ ಈ ಅಪ್ಪಣೆಯೇನೋ ಅತ್ಯಂತ ಸ್ತುತ್ಯವಾದುದು. ಆದರೆ ಇದು ಸಂಪೂರ್ಣ ಆಚರಣೆಯಲ್ಲಿ ಬರುವುದರ ಕಡೆಗೆ ಅಧಿಕಾರಿಗಳು ಪೂರ್ಣ ಲಕ್ಷಿಸುವರೋ, ಇಲ್ಲವೊ, ಎಂಬುದು ಮಾತ್ರ ಒಂದು ಸಂಶಯದ ಸಂಗತಿ. ಆದಕಾರಣ ತಾವು ಈ ವಿಚಾರವಾಗಿ ಹೆಚ್ಚು ಲಕ್ಷಿಸಿ ಅಪ್ಪಣೆಯು ಆಚರಣೆಯಲ್ಲಿ ಬರುವಂತೆ ಮಾಡುವಿರೆಂದೇ ನಾನು ನಂಬಿದ್ದೇನೆ."

# ಕಾಂಗ್ರೆಸ್ ಸದಸ್ಯರ ಮೇಲೆ ಟೀಕೆ!

ಪಂಜಾಬ ಅಸೆಂಬ್ಲಿಯಲ್ಲಿ ಮುಖ್ಯಮಂತ್ರಿಗಳಾದ ಸರ್. ಶಿಕಂದರ ಹಯಾತಖಾನರು ಕಾಂಗ್ರೆಸ್ ಸದಸ್ಯರ ಮೇಲೆ ಸಲ್ಲದ ಟೀಕೆ ಮಾಡಿದರೆಂದು ತುಂಬಾ ಗಲಾಟೆಯಾಯಿತು. ಮಂತ್ರಿಗಳು ಹೀಗೆ ಸ್ಪಷ್ಟೀಕರಣ ಮಾಡಿದರು—

"ನನ್ನ ಭಾಷಣವನ್ನು ಸಭಾಸದರು ತಪ್ಪಾಗಿ ಗ್ರಹಿಸಿದರು. ೧೦೦ ಕ್ಕೆ ೯೦ ರಷ್ಟು ಕಾಂಗ್ರೆಸ್ಸಿನಲ್ಲಿ "ಬದಮಾಷ" ರು ಕೂಡಿದ್ದಾರೆಂದು ನಾನು ಹೇಳಿದ್ದರಿಂದ ಕಾಂಗ್ರೆಸ್ ಸದಸ್ಯರಲ್ಲಿ ೧೦೦ ಕ್ಕೆ ೯೦ ರಷ್ಟು ಜನರು "ಬದಮಾಷ" ರಿದ್ದಾರೆಂದು ಅರ್ಥ ಮಾಡಬಾರದು."

ಮುಖ್ಯ ಮಂತ್ರಿಗಳ ಈ ಸ್ಪಷ್ಟೀಕರಣವು ಕಾಂಗ್ರೆಸ್ ಸಭಾಸದರಿಗೆ ಸಮಾಧಾನಕರವಾಗಿ ತೋರಲಿಲ್ಲ. ಅವರು ಈ ಶಬ್ದಗಳನ್ನು ತಿರುಗಿ ತೆಗೆದುಕೊಳ್ಳಬೇಕೆಂದೇ ಕಾಂಗ್ರೆಸ್ ಪಕ್ಷದವರು ಹೇಳುತ್ತಿದ್ದಾರೆ. ಅಸೆಂಬ್ಲಿಯಲ್ಲಿ ಈ ವಿಚಾರವಾಗಿ ತುಂಬಾ ಮತಭೇದವುಂಟಾದರೆ ಅಧ್ಯಕ್ಷರು ತಮ್ಮ ಕೆಲಸದಿಂದ ನಿವೃತ್ತರಾಗುವಂತೆಯೂ ತೋರುತ್ತದೆ. ಅಂತೂ ಪಂಜಾಬ ಅಸೆಂಬ್ಲಿಯಲ್ಲಿ ರಾಜಕಾರಣಕ್ಕೆ ಸಲ್ಲದಂತಹ ಅನೇಕ ವಿರೋಧ ವೃತ್ತಿಗಳು ಹೆಚ್ಚುತ್ತಿರುವುದು ತುಂಬಾ ವಿಷಾದಕರವಾದುದು.

—ಶಾಹೀದಗಂಜ ಪ್ರಕರಣದಲ್ಲಿ ಶಕ್ಯವಿದ್ದ ಎಲ್ಲ ಸಹಾಯವನ್ನೂ ಕಾಂಗ್ರೆಸ್ ಪಕ್ಷವು ಮಾಡುವುದಾಗಿ ಮೌ. ಅಬ್ದುಲ್ ಕಲಂ ಆಜಾದರು ಪಂಜಾಬದ ಮುಖ್ಯಮಂತ್ರಿಗಳಿಗೆ ತಿಳಿಸಿದ್ದಾರೆ.

# ಮುಸೋಲಿನಿಯ ಬುದ್ಧಿಯ ಮಾತು!

ಹಿಟ್ಲರ್ ಮತ್ತು ಮುಸೋಲಿನಿ ಈ ಉಭಯ ಮಹಾವ್ಯಕ್ತಿಗಳೂ ನಿರಂಕುಶ ಪ್ರಭುತ್ವದ ಒಂದೇ ನಾಣ್ಯದ ಎರಡು ಮಗ್ಗುಲಲ್ಲಿರುವವರು. ಎಂದಮೇಲೆ ಹಿಟ್ಲರನ ಆಕ್ರಮಣ ಕೃತಿಯನ್ನು ಮುಸೋಲಿನಿಯು ಸಮರ್ಥಿಸುವುದು ಸ್ವಾಭಾವಿಕವಾಗಿಯೇ ಇದೆಯಷ್ಟೆ.

ಆಸ್ಟ್ರಿಯಾ ರಾಜ್ಯವನ್ನು ಜರ್ಮನಿಯು ಆಕ್ರಮಿಸಿಕೊಂಡದ್ದಕ್ಕೆ ಮುಸೋಲಿನಿಯು ಹೇಳಿದ್ದೇನು? "ಬಂದದ್ದನ್ನೆಲ್ಲಾ ಅನುಭವಿಸಲೇ ಬೇಕು! ಬಿಟ್ಟದ್ದಲ್ಲ. ಡಾ. ಶಿಶ್ನಿಗರ್ ಇವರು ಪ್ರಜಾಪ್ರಭುತ್ವದ ವಿಚಾರವಾಗಿ ಪ್ರಯತ್ನಿಸಿದುದು ಮಡಿಲಲ್ಲಿ ಬೆಂಕಿಯನ್ನು ಕಟ್ಟಿಕೊಂಡಂತೆಯೇ ಸರಿ. ಜರ್ಮನ್ ಮತ್ತು ಇಟಲಿಗಳ ಸ್ನೇಹವು ಕೃತ್ರಿಮವಾದುದಾಗಲಿ ಅಥವಾ ರಾಜಕಾರಣ ವಿಶಿಷ್ಟವಾದುದಾಗಲಿ ಇರದೆ ಅದು ಸತ್ಯದ ದೃಢತೆಯಿಂದ ಕೂಡಿದ್ದಾಗಿದೆ."

ಅಂತೂ ಹಿಟ್ಲರ್ ಮತ್ತು ಮುಸೋಲಿನಿ ಈ ಉಭಯ ಮಹಾವ್ಯಕ್ತಿಗಳು ಜಗತ್ತಿನ ರಾಜಕಾರಣದಲ್ಲಿ ಮಹತ್ತರವಾದ ವ್ಯತ್ಯಾಸ ಮಾಡುತ್ತಿರುವ ಯುಗಪುರುಷರಾಗಿಯೇ ಇದ್ದಾರೆಂಬುದೇನೋ ನಿರ್ವಿವಾದ ಸಂಗತಿಯು.

# ಮೈಸೂರು ಸರಕಾರದ ಸ್ತುತ್ಯ ಕಾರ್ಯ.

ಮೈಸೂರು ಸರಕಾರವು ಮದ್ಯಪಾನ ಪ್ರತಿಬಂಧದ ಕಡೆಗೆ ಲಕ್ಷಿಸಿರುವುದು ಅತ್ಯಂತ ಸ್ತುತ್ಯವಾದುದು. ೧೯೩೭ ನೆಯ ಇಸವಿ ಪ್ರಜಾ ಪ್ರತಿನಿಧಿಸಭೆಯಲ್ಲಿ ಈ ಸಂಬಂಧವಾಗಿ ಚರ್ಚೆಯಾದಂತೆ ಮೈಸೂರು ಸರಕಾರವು ಯೋಚಿಸಿ ಒಂದು ಯೋಜನೆಯನ್ನು ಗೊತ್ತುಮಾಡಿತು.

ಬೆಂಗಳೂರು ಜಿಲ್ಲಾ ಕ್ಲೋಜ ಪೇಟೆ ಮತ್ತು ಚೆನ್ನಪಟ್ಟಣ ಈ ಎರಡು ತಾಲೂಕುಗಳಲ್ಲಿ ಮದ್ಯಪಾನವು ನಿಲ್ಲಿಸಲ್ಪಡುವುದೆಂದೂ ಬರುವ ಜುಲೈ ೧ ನೆಯ ತಾರೀಖಿನಿಂದ ಈ ನಿಯಮವು ಆಚರಣೆಯಲ್ಲಿ ಬರುವುದೆಂದೂ ಒಂದು ವರ್ಷ ಪ್ರಯೋಗ ಸ್ಥಿತಿಯಲ್ಲಿಯೇ ಇದರ ಪ್ರಯೋಜನವನ್ನು ಕಂಡುಕೊಳ್ಳಲಾಗುವುದೆಂದೂ ಸರಕಾರವು ತಿಳಿಸಿದ್ದಾಗಿದೆ.

ಮೈಸೂರು ಸರಕಾರದ ಈ ಪ್ರಯತ್ನವೇನೋ ಸ್ತುತ್ಯವಾದುದೇ ಸರಿ. ಇದು ಸರಿಯಾಗಿ ಆಚರಣೆಯಲ್ಲಿ ಬಂದು ಮಾದಕ ಪದಾರ್ಥ ಸೇವನೆಯು ಆ ಪ್ರಾಂತದಲ್ಲಿಯೇ ನಿಂತು ಹೋಗಲು ಕಾರಣವಾಗುವಂತಹ ಶುಭ ಪರಿಣಾಮವೇ ವರುಷಾಂತ್ಯದಲ್ಲಿ ದೊರೆಯಬೇಕಾದುದು ಅವಶ್ಯವಾಗಿದೆ. ಹೀಗಾಗಬೇಕಾದರೆ ಸರಕಾರವು ಪ್ರಜಾಮುಖಂಡರನ್ನು ಸಹಕರಿಸಿ ನಡೆಯಬೇಕು. ಪ್ರಜಾಪ್ರಮುಖರಾದರೋ ದೇಶದ ಕಲ್ಯಾಣಕ್ಕೆ ಮುಖ್ಯವಾದ ಈ ಕಾರ್ಯವು ಶುಭಪ್ರದವಾಗುವ ರೀತಿಯಲ್ಲಿ ಜನಜಾಗೃತಿಯನ್ನು ಉಂಟುಮಾಡಬೇಕಾದುದೂ ಅಗತ್ಯವಾಗಿದೆ.

—ಭಾಯಿ ಮಾನವೇಂದ್ರರಾಯರು ನಾಗಪುರ ನಗರ ಸಭೆಯ ಮಾನಪತ್ರಕ್ಕೆ ಉತ್ತರವಾಗಿ ಹೇಳುವಾಗ ಕಾಂಗ್ರೆಸ್ಸಿನ ೩೦ ಲಕ್ಷ ಸದಸ್ಯರಲ್ಲಿ ಸಂಘಟನೆಯುಂಟಾಗಬೇಕೆಂದೂ ಕಾಂಗ್ರೆಸ್ ಮಂತ್ರಿಮಂಡಲಕ್ಕೆ ಎಲ್ಲರೂ ಸಹಾಯಮಾಡಬೇಕೆಂದೂ ತಿಳಿಸಿದರು.




ಶಾ. ಶ. ೧೮೫೯ ನೆಯ ಫಾಲ್ಗುಣ ಬ|| ೫ ಸೋಮವಾರ.

# ಅನ್ಯಾಯದ ಅತಿರೇಕ!

ಈಗ ಅನೇಕ ವಿದ್ವಾಂಸರು ವಿಜ್ಞಾನ ಶಾಸ್ತ್ರದಲ್ಲಿ ಅಪೂರ್ವ ಶೋಧಗಳನ್ನು ಮಾಡಿ ಪ್ರಪಂಚವೇ ಬೆರಗಾಗುವಂತೆ ಮಾಡುತ್ತಿದ್ದಾರಷ್ಟೆ. ಅವರಂತೆಯೇ ಹಿಟಲರ್, ಮುಸೋಲಿನಿ, ಫ್ರಾಂಕೊ ಮೊದಲಾದ ಮಹಾ ವ್ಯಕ್ತಿಗಳು ರಾಜಕಾರಣದಲ್ಲಿ ಅನೇಕ ಹೊಸ ಶೋಧಗಳನ್ನು ಮಾಡಿ ಜಗತ್ತೇ ಆಶ್ಚರ್ಯಗೊಳ್ಳುವಂತೆ ಮಾಡುತ್ತಿದ್ದಾರೆ! ಅವರಿಗೆ ಅನ್ಯರ ರಾಜ್ಯವನ್ನು ಆಕ್ರಮಣ ಮಾಡಿಕೊಳ್ಳುವುದೇ ಸರ್ವಶ್ರೇಷ್ಠವಾದ ನೀತಿಯಾಗಿ ಪರಿಣಮಿಸಿದೆ. ತಮ್ಮ ಅಧೀನದಲ್ಲಿ ಯಾರು ಇರುವುದಿಲ್ಲವೋ ಅವರೆಲ್ಲರೂ ಲೋಕದಲ್ಲಿ ಜೀವಿಸಲು ಅಪಾತ್ರರೆಂದೇ ಅವರು ಗ್ರಹಿಸಿದಂತೆ ತೋರುತ್ತದೆ!

ಧಾರ್ಮಿಕ ದುರಭಿಮಾನವು ಒಂದು ಕಾಲದಲ್ಲಿ ಪ್ರಪಂಚಕ್ಕೆ ಎಂಥ ಮಹದನರ್ಥವನ್ನು ಉಂಟುಮಾಡಿದ್ದಿತೋ ಅದಕ್ಕಿಂತಲೂ ಈಗಿನ ಸಾಮ್ರಾಜ್ಯ ದಾಹವು ಜಗತ್ತಿಗೆ ಘೋರತರವಾದ ವಿಪತ್ತನ್ನು ತಂದಿಟ್ಟಿದೆ. ಇಟಲಿ ಮತ್ತು ಜಪಾನಗಳ ಆಕ್ರಮಣದ ಅನ್ಯಾಯವು ಒಂದು ರೀತಿಯಾಗಿದ್ದರೆ ಜರ್ಮನಿಯ ಆಕ್ರಮಣವು ಮತ್ತೊಂದು ರೀತಿಯಾಯಿತು. ಹಿಟಲರನು ಆಸ್ಟ್ರಿಯಾ ದೇಶವನ್ನು ಮೂರು ದಿನಗಳಲ್ಲಿ - ಮೂರು ತಾಸುಗಳಲ್ಲಿ - ಒಂದು ಗುಂಡನ್ನೂ ಹಾರಿಸದೆ ಒಂದು ರಕ್ತದ ಹನಿಯನ್ನೂ ಭೂಮಿಗೆ ಬೀಳಗೊಡದೆ ತನ್ನ ಸ್ವಾಧೀನ ಮಾಡಿಕೊಂಡುಬಿಟ್ಟನು! ಈ ವಿಧವಾದ ಆಕ್ರಮಣವು ಇತಿಹಾಸದಲ್ಲಿ ಈ ವರೆಗೆ ಎಲ್ಲಿಯೂ ತೋರುವುದಿಲ್ಲ.

**ಮುಂದಣ ಭೀಕರ ದೃಶ್ಯ.**

ಆಸ್ಟ್ರಿಯಾ ದೇಶವು ಜರ್ಮನಿಯ ಪ್ರಚಂಡ ಶಕ್ತಿಯನ್ನು ನೋಡಿ ಈಗ ಸುಮ್ಮನಿದ್ದ ಮಾತ್ರದಿಂದ ಅದು ಸಮಾಧಾನ ಹೊಂದಿದೆಯೆಂದು ಹೇಳಲಿಕ್ಕಾಗುವುದಿಲ್ಲ. ಜರ್ಮನಿಯ ಈ ಅನ್ಯಾಯದ ಅತಿರೇಕವು ಮುಂದೆ ಅನರ್ಥಕ್ಕೇನೇ ಕಾರಣವಾಗದೆ ಇರಲಾರದು. ರಶಿಯಾ ದೇಶವು ಈ ಅನ್ಯಾಯದಿಂದ ಸಂತಾಪಗೊಂಡು ಜರ್ಮನಿಯನ್ನು ಹಾದಿಗೆ ತರಲು ಯೋಚಿಸಲಾರಂಭಿಸಿದೆ.

ಹಂಗೇರಿ ದೇಶದ ಬೋರಿಸ್ಕಾ ಸಿಲ್ವಿಜರ್ ಎಂಬ ಜ್ಯೋತಿಷಜ್ಞಳು ಇದೇ ಮೇ ತಿಂಗಳಲ್ಲಿ ಯುರೋಪದ ಮಹಾ ಯುದ್ಧವು ಪ್ರಾರಂಭವಾಗುತ್ತದೆಂದೂ ಅದು ೧೯೪೨ ವರೆಗೆ ಜರುಗುವುದೆಂದೂ ಭವಿಷ್ಯ ಹೇಳಿದ್ದು ಕೇವಲ ಕಾಲ್ಪನಿಕವಾದುದೇ ಸರಿಯೆಂದು ತಿಳಿಯುವಂತಿಲ್ಲ. ಯುರೋಪಖಂಡದ ಅಂತಃಕಲಹಾಗ್ನಿಯು ಘುಡಿಘುಡಿಸುತ್ತಿರುವ ರೀತಿಯನ್ನು ನೋಡಿದರೆ ಇಂದಿಲ್ಲ, ನಾಳೆ ಅದು ಭಯಂಕರವಾದ ರೀತಿಯಲ್ಲಿ ಹೊರಬೀಳಲೇಬೇಕೆಂಬುದನ್ನು ಹೇಳಲು ಯಾವ ಜ್ಯೋತಿಷಜ್ಞರೂ ಬೇಕಿಲ್ಲ.

ಆಸ್ಟ್ರಿಯಾದ ಮೇಲಿನ ಆಕ್ರಮಣವನ್ನು ಇಂಗ್ಲೆಂಡ್ ಮೊದಲಾದ ಕೆಲವು ರಾಷ್ಟ್ರಗಳು ನಿಷೇಧಿಸುತ್ತಲಿವೆಯೇ ವಿನಾ ಜರ್ಮನಿಯ ಕಿವಿ ಹಿಂಡಲು ಮುಂದೆ ಬರುವ ಸಾಹಸ ಸಾಮರ್ಥ್ಯಗಳನ್ನು ಮಾತ್ರ ತೋರಿಸುತ್ತಾ ಇಲ್ಲ. ಜರ್ಮನಿಯ ಈ ಉದ್ದಾಮತನವು ರಶಿಯಾ ಮತ್ತು ಫ್ರಾನ್ಸಗಳಿಗೆ ಶೂಲಪ್ರಾಯವಾಗಿದೆ. ಜರ್ಮನಿಯ ಈ ಅನ್ಯಾಯದ ಅತಿರೇಕವು ಯುರೋಪದ ಅಶಾಂತತೆಗೆ ಮುಖ್ಯ ಕಾರಣವಾಗದೆ ಇರಲಾರದು. ಯುರೋಪದವರಿಗಿರುವ ಸಾಮ್ರಾಜ್ಯದಾಹವು ಅಡಗಿದಾಗಲೇ ಲೋಕಕ್ಕೆ ನಿಜವಾದ ಶಾಂತಿಯು. ಅಂಥ ಶಾಂತಿಯು ಜಾಗ್ರತೆ ದೊರೆಯಲಿಕ್ಕಾಗಿಯೇ ಇಂಥ ಅನ್ಯಾಯವು ನಡೆದಿರಬಹುದೆ?

---

# ಬಂಗಾಲದಲ್ಲಿ ಕಾಂಗ್ರೆಸ್ ರಾಜ್ಯ?

ಕಾಂಗ್ರೆಸ್ ಪಕ್ಷವು ರಾಜ್ಯಸೂತ್ರವನ್ನು ಹಿಡಿದು ರಾಷ್ಟ್ರೋನ್ನತಿಗೆ ಸಾಧ್ಯವಿರುವ ಕಾರ್ಯಗಳನ್ನೆಲ್ಲಾ ಈಗ ಏಳು ಪ್ರಾಂತಗಳಲ್ಲಿ ಮಾಡುತ್ತಲಿದೆಯಷ್ಟೆ. ಇದನ್ನು ನೋಡಿ ಅನ್ಯ ಪ್ರಾಂತಗಳಲ್ಲಿಯೂ ವಿಚಾರಕ್ರಾಂತಿಯಾಗಲಾರಂಭಿಸಿದೆ. ಇದು ಶುಭಲಕ್ಷಣವೇ ಸರಿ.

ಬಂಗಾಲ ಪ್ರಾಂತದ ಈಗಿನ ಮಂತ್ರಿಮಂಡಲವು ಕಾಂಗ್ರೆಸ್ ಪಕ್ಷದಂತೆ ಉದಾರ ಧೋರಣವುಳ್ಳದ್ದಾಗಿಲ್ಲ. ಅದರ ಕಾರ್ಯಕ್ರಮಗಳಾದರೂ ಅಷ್ಟು ಜನಪ್ರಿಯವಾಗಿಲ್ಲ. ಜಾತಿವಿಶಿಷ್ಟ ಕ್ಷುದ್ರ ಕಲ್ಪನೆಗಳೂ ಆಗಾಗ್ಗೆ ತಲೆ ಎತ್ತುತ್ತಲಿವೆ. ಇಂಥ ಸ್ಥಿತಿಯಲ್ಲಿ ಆ ಮಂತ್ರಿಮಂಡಲದ ಕೈಯಲ್ಲಿದ್ದ ರಾಜ್ಯಸೂತ್ರವು ಕಾಂಗ್ರೆಸ್ಸಿನ ಕೈಯಿಗೆ ಬರಲೆಂದು ಬಹು ಜನರು ಹಾರೈಸುವುದು ಸ್ವಾಭಾವಿಕವಷ್ಟೆ.

ರಾಷ್ಟ್ರಾಧಿಪತಿಗಳಾದ ಬಾಬು ಸುಭಾಷಚಂದ್ರ ಬೋಸರ ವಿಚಕ್ಷಣವಾದ ಧೋರಣದಿಂದಲೂ ಗಾಂಧೀಜಿಯವರು ಬಂಗಾಲಕ್ಕೆ ಹೋಗಿ ಮಾಡಿದ ವಿಚಾರವಿನಿಮಯದಿಂದಲೂ ಬಂಗಾಲ ಅಸೆಂಬ್ಲಿ ಸಭಾಸದರಲ್ಲಿ ಮಹತ್ತರವಾದ ವಿಚಾರಕ್ರಾಂತಿಯಾಗಿದೆ. ಅಸೆಂಬ್ಲಿಯ ಒಟ್ಟು ೨೫೦ ಸದಸ್ಯರಲ್ಲಿ ಈಗಿನ ಮಂತ್ರಿಮಂಡಲದ ಕಡೆಗೆ ೧೩೦ ಸದಸ್ಯರಿದ್ದರು. ಈಗ ಅವರಲ್ಲಿ ೬೦ ಜನ ಸದಸ್ಯರು ಬೇರೆಯಾಗಿದ್ದಾರೆ. ಅವರು ಕಾಂಗ್ರೆಸ್ ಪಕ್ಷವನ್ನು ಸೇರುವ ಸಂಭವವಿದೆ. ಹಾಗಾದರೆ ಕಾಂಗ್ರೆಸ್ ಪಕ್ಷಕ್ಕೆ ಈಗಲೇ ೧೨೦ ಜನ ಸದಸ್ಯರಾಗುವರು.

ಇದರಿಂದ ಈಗಿನ ಮಂತ್ರಿಮಂಡಲವು ಉರುಳುವಂತಹ ಸ್ಥಿತಿಗೆ ಬಂದಿದೆ. ಯುರೋಪಿಯನ್ ಪಕ್ಷದ ಸರ್. ಜಾರ್ಜ ಕ್ಯಾಂಬೆಲ್ ಇವರು ಗಾಂಧೀಜಿಯವರ ಕಡೆ ಬಂದು ಸಂಭಾಷಣೆ

ನಡೆಯಿಸಿದರು. ಆದಿಹಿಂದುಗಳ ೩೫ ಸದಸ್ಯರು ಗಾಂಧೀಜಿಯವರ ಹತ್ತಿರ ಬಂದು ತಾವು ಶಕ್ಯವಿದ್ದ ಮಟ್ಟಿಗೆ ಕಾಂಗ್ರೆಸ್ ಪಕ್ಷದ ಸಂಗಡ ಸಹಕರಿಸಿ ನಡೆಯುವೆವೆಂದೇ ಹೇಳಿದರು.

ಗಾಂಧೀಜಿಯವರಾದರೋ, ಅವರಿಗೆ ನೀವು ಕಾಂಗ್ರೆಸ್ಸಿನಲ್ಲಿಯೇ ಸೇರಿರೆಂದೂ ಇಂದಲ್ಲ ನಾಳೆ, ಬಂಗಾಲ ಪ್ರಾಂತದ ರಾಜ್ಯಸೂತ್ರವು ಕಾಂಗ್ರೆಸ್ಸಿನ ಕೈಯಲ್ಲಿಯೇ ಖಂಡಿತವಾಗಿ ಬರುವುದೆಂದೂ ತಿಳಿಸಿಹೇಳಿದರು. ಇದರಿಂದ ಆದಿಹಿಂದು ಪಕ್ಷವಾದರೂ ಕಾಂಗ್ರೆಸ್ಸಿನಲ್ಲಿ ಸೇರುವ ಸಂಭವವಿದೆ. ಆದುದರಿಂದ ಇಷ್ಟರಲ್ಲೇ ಬಂಗಾಲ ಪ್ರಾಂತದ ಪ್ರಭುತ್ವವೂ ಕಾಂಗ್ರೆಸ್ ಪಕ್ಷದ ಕೈಯಲ್ಲಿಯೇ ಬರುವುದು. ಅಂಥ ಸಮಯ ಜಾಗ್ರತೆ ಬರಲೆಂದೇ ರಾಷ್ಟ್ರಹಿತೈಷಿಗಳು ಹಾರೈಸುತ್ತಿದ್ದಾರೆ.

## ಹಿಂದು-ಮುಸ್ಲಿಂ ಐಕಮತ್ಯ.

ಹಿಂದುಸ್ಥಾನದಲ್ಲಿ ಹಿಂದು-ಮುಸ್ಲಿಂ ಐಕಮತ್ಯವು ಒಂದು ಮಹತ್ವದ ರಾಷ್ಟ್ರೀಯ ಪ್ರಶ್ನೆಯಾಗಿಯೇ ಇದೆ. ಈ ತೊಡಕಿನ ಪ್ರಶ್ನೆಯನ್ನು ಬಿಡಿಸಲು ಈ ವರೆಗೆ ಮಾಡಲ್ಪಟ್ಟ ಅನೇಕ ಪ್ರಯತ್ನಗಳು ಪೂರ್ಣ ಫಲಕಾರಿಯಾಗಿಲ್ಲವಾದರೂ ಎಷ್ಟೋಮಟ್ಟಿಗೆ ಅನುಕೂಲ ವಾತಾವರಣವನ್ನೇ ಉಂಟುಮಾಡಿವೆ.

ಬಂಗಾಲದಲ್ಲಿ ಹಿಂದು-ಮುಸ್ಲಿಂ ಐಕಮತ್ಯವುಂಟಾಗಬೇಕೆಂದು ಅನೇಕ ಪ್ರಮುಖ ಹಿಂದು-ಮುಸ್ಲಿಂ ಪ್ರಮುಖರು ಪ್ರಯತ್ನಿಸುತ್ತಿದ್ದಾರಷ್ಟೆ. ಇವರ ಪ್ರಯತ್ನವು ಸ್ವಲ್ಪ ಪ್ರಮಾಣದಲ್ಲಾದರೂ ಫಲಕಾರಿಯಾಗುವಂತೆ ತೋರುತ್ತದೆ. ಎಲ್ಲಾ ಕಡೆಗಳಂತೆ ಬಂಗಾಲದಲ್ಲಿಯೂ ಹಿಂದುಗಳು ಮುಸಲ್ಮಾನರ ಇಷ್ಟಕ್ಕೆ ಒಳಪಟ್ಟು ಐಕಮತ್ಯವುಂಟಾಗಲು ಮುಂದರಿಯುತ್ತಿದ್ದಂತೆ ತೋರುತ್ತದೆ.

ವಂಗ ವಿಶ್ವವಿದ್ಯಾಲಯದ ಚಿನ್ಹದ ಕಮಲ ಮತ್ತು ಲಕ್ಷ್ಮೀಮೂರ್ತಿಯ ವಿರುದ್ಧವಾಗಿ ಮುಸಲ್ಮಾನರು ಇತ್ತೀಚೆಗೆ ಪ್ರಬಲ ಚಟುವಟಿಕೆಯನ್ನೇ ನಡೆಯಿಸಿದ್ದಾರಷ್ಟೆ. ವಿಶ್ವ ವಿದ್ಯಾಲಯದವರು ಮೊನ್ನೆ ಹೊರಡಿಸಿದ ಒಂದು ಪ್ರಕಟನೆಯಲ್ಲಿ ಆ ಚಿನ್ಹಗಳಿರಲಿಲ್ಲ. ಆದುದರಿಂದ ಮುಸಲ್ಮಾನರ ಇಷ್ಟದಂತೆ ಅವುಗಳನ್ನು ಬಿಟ್ಟದ್ದಾಗಿರಬೇಕೆಂದು ತಿಳಿಯಲಾಗಿದೆ.

ಮಹಾತ್ಮಾ ಗಾಂಧಿಯವರೂ ಈಗ ಬಂಗಾಲದಲ್ಲಿ ನಡೆದಿರುವ ಹಿಂದು-ಮುಸ್ಲಿಂ ಐಕಮತ್ಯದ ಕಡೆಗೆ ಲಕ್ಷಿಸಿದ್ದಾರೆ. ಈಗ ಅಧಿಕಾರಾರೂಢವಾಗಿರುವ ಪಕ್ಷದಲ್ಲಿಯ ಒಬ್ಬ ಪ್ರಮುಖ ಸಭಾಸದರಾದ ಮೌ. ಅಕ್ರಮಖಾನರೊಂದಿಗೆ ಗಾಂಧೀಜಿಯವರು ಬಂಗಾಲದ ಹಿಂದು-ಮುಸಲ್ಮಾನರ ಐಕಮತ್ಯದ ಸಂಬಂಧವಾಗಿ ವಿಚಾರ ವಿನಿಮಯಮಾಡಿದರು. ಆಗ ಮೌ. ಅಬ್ದುಲ್ ಕಲಮ ಅಜಾದರೂ ಇದ್ದರು.

ಗಾಂಧೀಜಿಯವರ ಈಗಿನ ಬಂಗಾಲದ ಪ್ರವಾಸವು ರಾಜಕೈದಿಗಳ ಬಿಡುಗಡೆಯ ಪ್ರಶ್ನೆಯು ಸಮಾಧಾನಕರವಾಗಿ ಬಿಡಿಸಲು ಸಹಾಯವಾಗುವುದಲ್ಲದೆ ಆ ಪ್ರಾಂತದ ರಾಜ್ಯಸೂತ್ರ ಕಾಂಗ್ರೆಸ್ಸಿನ ಕೈಯಲ್ಲಿ ಬರಲಿಕ್ಕೂ ಹಿಂದು-ಮುಸಲ್ಮಾನರಲ್ಲಿ ಐಕಮತ್ಯವುಂಟಾಗಲಿಕ್ಕೂ ಕಾರಣವಾಗಲೆಂದು ಹಾರೈಸುತ್ತೇವೆ.

### ಶ್ರೀ. ಸಿ. ಪಿ. ಹಳಕಟ್ಟಿಯವರ ಅಭಿನಂದನ.

ರಾ| ಸಾ| ಹಳಕಟ್ಟಿಯವರ ಮಕ್ಕಳಾದ ಶ್ರೀ. ಸಿ. ಪಿ. ಹಳಕಟ್ಟಿಯವರು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಬಟ್ಟೆ ಕೈಗಾರಿಕೆಯ ಹೆಚ್ಚಿನ ಶಿಕ್ಷಣ ಹೊಂದಿ ಬಿ. ಎಸ್. ಸಿ. ಪದವಿಯನ್ನೂ ಸಂಪಾದಿಸಿಕೊಂಡು ಈ ವಾರ ಸ್ವಸ್ಥಳಕ್ಕೆ ಬಂದುದನ್ನು ನಾವು ಅಭಿನಂದಿಸುತ್ತೇವೆ.

## ನ್ಯಾಯ ನಿಷ್ಠುರತೆ ಬೇಡವೆ?

ಕಾಂಗ್ರೆಸ್ ಪಕ್ಷಕ್ಕೆ ನ್ಯಾಯ ಮತ್ತು ಶಾಂತಿಗಳು ಬಲವಾದ ಆಧಾರಗಳೆಂದು ತಿಳಿಯಲ್ಪಡುತ್ತಾ ಇದೆಯಷ್ಟೆ. ಎಂದಮೇಲೆ ಇದರ ಕಾರ್ಯದಲ್ಲಿ ನ್ಯಾಯನಿಷ್ಠುರತೆಯು ಅತ್ಯಾವಶ್ಯಕವಾಗಿಲ್ಲವೆ?

ಮುಂಬೈ ಪ್ರಾಂತಿಕ ಮಂತ್ರಿಮಂಡಲವು "ಲೋಕಶಕ್ತಿ" ಪತ್ರಿಕೆಗೇನೇ ಪ್ರಕಟನೆಯನ್ನು ಸರಕಾರವು ಕೊಡಬೇಕೆಂದು ಒಂದು ಗುಪ್ತ ಪ್ರಕಟನೆ ಹೊರಡಿಸಿ ಅನ್ಯಾಯವಾದ ರೀತಿಯಲ್ಲಿ ನಡೆದುದು ಸರ್ವಶ್ರುತವಷ್ಟೆ.

ಈ ಅನ್ಯಾಯವನ್ನು ಗೃಹಮಂತ್ರಿಗಳಾದ ಶ್ರೀ. ಮುನಸಿಯವರು ಮಾಡಿ ಮಂತ್ರಿಮಂಡಲಕ್ಕೇನೇ ಹೇಗೆ ಒಂದು ಕಲಂಕವನ್ನು ಉಂಟುಮಾಡಿದರೋ ಹಾಗೆಯೇ ಇದೇ ಮಂತ್ರಿಗಳು ವೈಯಕ್ತಿಕ ಅಧಿಕಾರದಿಂದ ಗುಜರಾಥದ ಶ್ರೀ. ಜಾಧವಜಿ ಗಾಂಧಿ ಮತ್ತು ಶ್ರೀ. ಧೀರಜಲಾಲ ಪ್ಯಾರಿಲಾಲ ಎಂಬ ಇಬ್ಬರು ಸಟ್ಟಾ ವ್ಯಾಪಾರಿಗಳಿಗೆ ಮುಂಬೈ ಹೈಕೋರ್ಟಿನವರು ವಿಧಿಸಿದ ಆರು ತಿಂಗಳ ಕಠಿಣ ಶಿಕ್ಷೆಯನ್ನು ಅವರು ಅನುಭವಿಸದಂತೆ ತಡೆಮಾಡಿ ಮತ್ತೊಂದು ಅನ್ಯಾಯವನ್ನು ಮಾಡಿದ್ದಾರೆ.

ಅಪರಾಧಿಗಳು ಆಗಲೇ ಶಿಕ್ಷೆಯನ್ನು ಅನುಭವಿಸಹೋಗಿದ್ದರೆ ಅವರ ಲಕ್ಷಾಂತರ ರೂ. ಗಳ ನಷ್ಟವಾಗುತ್ತಿದ್ದಿತೆಂದು ಶ್ರೀ. ಮುನಸಿಯವರು ಹೇಳಿದರು! ಎಂದಮೇಲೆ ಇದು ವ್ಯಕ್ತಿಯ ಅಭಿಮಾನವೇ ವಿನಾ ನ್ಯಾಯನಿಷ್ಠೆಯಲ್ಲವೆಂದೇ ಸ್ಪಷ್ಟವಾಗುವುದಿಲ್ಲವೆ?

### ಮಧ್ಯ ಪ್ರಾಂತದಲ್ಲಿಯೂ ಅನ್ಯಾಯ.

ಮಧ್ಯಪ್ರಾಂತದ ರಾಜ್ಯಸೂತ್ರವೂ ಕಾಂಗ್ರೆಸ್ಸಿನ ಕೈಯಲ್ಲಿದೆಯಷ್ಟೆ. ಅಲ್ಲಿನ ಗೃಹ ಮಂತ್ರಿಗಳು ಮಿ. ಶರೀಫ ಎಂಬ ಮುಸಲ್ಮಾನರು. ಮಂತ್ರಿಮಂಡಲದಲ್ಲಿ ಒಬ್ಬ ಮುಸಲ್ಮಾನರಿರಬೇಕೆಂದು ಮೌ. ಅಬ್ದುಲ್ ಕಲಂ ಅಜಾದರ ಒಪ್ಪಿಗೆಯಿಂದ ಈ ಸ್ಥಾನಕ್ಕೆ ಬಂದವರು ಮಿ. ಶರೀಫರು. ಇವರು ಮಾಡಿದ ಅನ್ಯಾಯ ಹೀಗಿದೆ—

"ಒಬ್ಬ ದುಷ್ಟ ಮುಸಲ್ಮಾನನು ಒಬ್ಬ ಆದಿ ಹಿಂದು ಹುಡಿಗಿಯ ಮೇಲೆ ಅತ್ಯಾಚಾರವನ್ನು ನಡೆಯಿಸಿದನು. ನ್ಯಾಯಸ್ಥಾನದಲ್ಲಿ ಆತನಿಗೆ ಶಿಕ್ಷೆಯೂ ವಿಧಿಸಲ್ಪಟ್ಟಿತು. ಆ ಶಿಕ್ಷೆಯ ಮೂರನೆಯ ಒಂದು ಭಾಗದಷ್ಟು ಅವಧಿಯ ವರೆಗು ಕೂಡಾ ಅಪರಾಧಿಯು ಕಾರಾಗೃಹವಾಸ ಮಾಡದ ಮುಂಚೆಯೇ ಆತನನ್ನು ಗೃಹಮಂತ್ರಿಗಳಾದ ಮಿ. ಶರೀಫರು ಬಿಟ್ಟುಬಿಟ್ಟಿದ್ದಾರೆ!"

ಇದರಿಂದ ಆ ಭಾಗದಲ್ಲಿ ತುಂಬಾ ಅಸಂತೋಷವುಂಟಾಗಿದೆ. ಮಹಾತ್ಮಾ ಗಾಂಧಿಯವರ ಕಡೆಗೂ ಈ ವಿಷಯ ಹೋಗಿದೆ. ಇಂಥ ಅತ್ಯಾಚಾರ ನಡೆಸಿದ ಅಪರಾಧಿಗೆ ಹೆಚ್ಚಾದ ಶಿಕ್ಷೆಯಾಗಿ ದೇಶದಲ್ಲಿ ಹೆಣ್ಣುಮಕ್ಕಳ ಸಂರಕ್ಷಣೆಗೆ ವಿಶೇಷ ಅನುಕೂಲವಾದ ವಾತಾವರಣವುಂಟಾಗಬೇಕಾದುದೇ ನ್ಯಾಯವಾಗಿದೆ. ಹೀಗಿರುವಾಗ ಜಾತಿಯ ಅಥವಾ ವ್ಯಕ್ತಿಯ ಅಭಿಮಾನದಿಂದ ಹೀಗೆ ದುಷ್ಕೃತ್ಯ ನಡೆಯಿಸಿದವರಿಗೆ ಸೌಲಭ್ಯ ದೊರೆತರೆ ಅತ್ಯಾಚಾರಗಳಿಗೆ ಪ್ರೋತ್ಸಾಹಿಸಿದಂತಾಗಲಿಲ್ಲವೆ?

ಕಾಂಗ್ರೆಸ್ ಪಕ್ಷಕ್ಕೆ ಈಗಿನ ಘನತೆಯು ಮಹಾತ್ಮಾ ಗಾಂಧಿ ಮೊದಲಾದ ಕೆಲವು ಮಹಾ ವಿಭೂತಿಗಳ ನ್ಯಾಯ ನಿಷ್ಠುರತೆಯಿಂದಲೇ ಬಂದುದಾಗಿದೆ. ಅದನ್ನು ಇಂಥ ವ್ಯಕ್ತಿಯ ಅಭಿಮಾನಗಳೇ ಕಳೆಯಲು ಕಾರಣರಾಗುತ್ತಾರೆ. ಆದಕಾರಣ ನ್ಯಾಯನಿಷ್ಠುರವಾಗಿ ನಡೆಯುವ ಪವಿತ್ರತೆಯು ಹೊಣೆಗಾರಿಕೆಯುಳ್ಳ ಎಲ್ಲ ಕಾಂಗ್ರೆಸ್ ಪ್ರಮುಖರಲ್ಲಿಯಾದರೂ ತಪ್ಪದೆ ಉಂಟಾಗಲೆಂದು ಹಾರೈಸುತ್ತೇವೆ.

## ಶಾಹಿದಗಂಜ ಪ್ರಕರಣ.

### ಮಂತ್ರಿಗಳ ಮತಭೇದ.

ಪಂಜಾಬ ಆಸೆಂಬ್ಲಿಯಲ್ಲಿ ಮಿ. ಮಲಿಕ ಬರಕತ ಅಲ್ಲಿ ಇವರು ಶಾಹಿದಗಂಜ ಮತ್ತು ಬೇರೆ ಮಸೀದಿಗಳ ಸಂರಕ್ಷಣೆಯ ಸಂಬಂಧವಾಗಿ ಒಂದು ಗೊತ್ತುವಳಿಯನ್ನು ತರುವವರಿದ್ದರು. ಅದಕ್ಕೆ ಅಪ್ಪಣೆ ದೊರೆಯಲಿಲ್ಲ.

ಮುಖ್ಯ ಮಂತ್ರಿಗಳಾದ ಸರ್. ಶಿಕಂದರ ಹಯಾತಖಾನರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಅಸೆಂಬ್ಲಿಗೂ ಮಂತ್ರಿಮಂಡಲಕ್ಕೂ ಶಾಹಿದಗಂಜ ಪ್ರಕರಣದ ವಿಷಯದಲ್ಲಿ ಭಿನ್ನಾಭಿಪ್ರಾಯವಾದರೆ ಮಂತ್ರಿಮಂಡಲವು ರಾಜ್ಯಭಾರವನ್ನು ತ್ಯಾಗಮಾಡಲು ಸಿದ್ಧವಿದೆ. ಮಂತ್ರಿಮಂಡಲವು ರಾಜ್ಯಭಾರವನ್ನು ಬಿಡುವುದರಿಂದ ಶಾಹೀದಗಂಜ ಪ್ರಕರಣವು ಮುಸಲ್ಮಾನರಂತೆ ಆಗುವುದಾದರೆ ನಮಗೆ ಸಂತೋಷವೇ ಇದೆ. ಆದರೆ ಮಿ. ಮಲಿಕಬರಕತ ಅಲ್ಲಿಯವರ ಗೊತ್ತುವಳಿಯಿಂದ ಜಾತಿಯ ಜಗಳವು ಹೆಚ್ಚುವುದೇ ವಿನಾ ಶಾಹೀದಗಂಜ ಪ್ರಕರಣವೇನೂ ಮುಸಲ್ಮಾನರಿಗೆ ಅನುಕೂಲವಾಗಿ ಪರಿಣಮಿಸಲಾರದು."

ಈಗ ಈ ವಿಷಯವು ಪಂಜಾಬ ಆಸೆಂಬ್ಲಿಯಲ್ಲಿ ಒಂದು ಮುಖ್ಯವಾದುದಾಗಿದೆ. ಶಾಹಿದಗಂಜ ಸತ್ಯಾಗ್ರಹವು ಅವ್ಯಾಹತವಾಗಿ ನಡೆದೇ ಇದೆ. ಈ ವರೆಗೆ ೬೦೦ ಜನರು ಸತ್ಯಾಗ್ರಹಿಗಳಾಗಿ ಬಂಧಿಸಲ್ಪಟ್ಟಿದ್ದಾರೆ.

---

## ಬಂಗಾಲ ಕೈದಿಗಳ ಬಿಡುಗಡೆ.

ಮಹಾತ್ಮಾ ಗಾಂಧಿಯವರು ತಾ. ೧೬ ನೆಯ ದಿನ ಕಲಕತ್ತಾ ಪಟ್ಟಣಕ್ಕೆ ಹೋದರು. ರಾಷ್ಟ್ರಾಧಿಪತಿ ಬಾಬು ಸುಭಾಷಚಂದ್ರ ಬೋಸರವರೇ ಮೊದಲಾದ ಮುಖಂಡರು ಗಾಂಧೀಜಿಯವರನ್ನು ಸ್ವಾಗತಿಸಿದರು. ಶ್ರೀ. ಶರಶ್ಚಂದ್ರ ಬೋಸರವರಲ್ಲಿ ಗಾಂಧೀಜಿಯವರು ವಾಸವಾಗಿದ್ದಾರೆ.

ಆ ದಿನವೇ ಬಂಗಾಲ ಸರಕಾರದ ಅರ್ಥಸಚಿವರಾದ ಶ್ರೀ. ನಲಿನೀರಂಜನ ಸರಕಾರ ಇವರು ಗಾಂಧೀಜಿಯವರನ್ನು ಕಂಡು ಮಂತ್ರಿಮಂಡಲವು ರಾಜಕೈದಿಗಳ ಬಿಡುಗಡೆಯ ವಿಚಾರದಲ್ಲಿ ಯಾವ ಧೋರಣವುಳ್ಳದ್ದಾಗಿದೆಯೆಂಬುದನ್ನು ತಿಳಿಸಿದರು. ಇಷ್ಟರಲ್ಲೇ ಗವ್ಹರ್ನರರಿಗೂ ಗಾಂಧೀಜಿಯವರಿಗೂ ಈ ಸಂಬಂಧವಾಗಿ ಸಂಭಾಷಣೆ ಜರುಗುವುದಾಗಿ ತೋರುತ್ತದೆ.

ಬಂಗಾಲ ಮಂತ್ರಿಮಂಡಲವು ರಾಜಕೈದಿಗಳ ಬಿಡುಗಡೆಯ ಸಂಬಂಧವಾಗಿ ಈ ಕೆಳಗಿನಂತೆ ಗೊತ್ತುಪಡಿಸಿದೆಯೆಂದು ಊಹಿಸಲಾಗಿದೆ—

(೧) ಈಗ ಕಾರಾಗೃಹದಲ್ಲಿರುವ ರಾಜಕೈದಿಗಳನ್ನೆಲ್ಲ ಯಾವ ನಿಯಮಗಳ ಕಟ್ಟನ್ನೂ ಹಾಕದೆ ಬಿಟ್ಟುಬಿಡುವುದು. (೨) ಸ್ಥಾನಬದ್ಧ ಕೈದಿಗಳನ್ನು ಈ ತಿಂಗಳ ಕೊನೆಯಲ್ಲಿ ಬಿಡುವುದು. (೩) ಮೂರನೆಯ ನಿಯಮದಂತೆ ಶಿಕ್ಷೆಹೊಂದಿದ ಕೈದಿಗಳನ್ನು ಇಬ್ಬಿಬ್ಬರಂತೆ ಬಿಡುತ್ತಾ ಹೋಗುವುದು. ಅಂದಮಾನ ಕೈದಿಗಳ ವಿಚಾರವು ಈಗ ನಡೆದಿದೆ. ಅನಂತರ ಆ ಸಂಬಂಧವಾದ ನಿಯಮವನ್ನು ಗೊತ್ತುಮಾಡುವುದು.

## ಜರ್ಮನಿಯ ಶಕ್ತಿ ಹೆಚ್ಚಿತು.

ಜರ್ಮನಿಯು ಆಸ್ಟ್ರಿಯಾದ ಮೇಲೆ ಆಕ್ರಮಣ ಮಾಡಿ ಅದನ್ನು ತನ್ನ ರಾಜ್ಯಕ್ಕೆ ಕೂಡಿಸಿಕೊಂಡುಬಿಟ್ಟಿತು. ಈ ಎರಡೂ ದೇಶಗಳ ಸಂಸ್ಕೃತಿಯು ಒಂದೇ ಆಗಿರುವುದರಿಂದ ಯುರೋಪ ಖಂಡದಲ್ಲಿ ಒಂದು ಪ್ರಬಲ ಜರ್ಮನ್ ರಾಷ್ಟ್ರವನ್ನು ನಿರ್ಮಾಣ ಮಾಡಬೇಕೆಂದೇ ಹಿಟ್ಲರನ ಈ ಆಕ್ರಮಣದ ಮುಖ್ಯೋದ್ದೇಶವು.

ಆಸ್ಟ್ರಿಯಾ ದೇಶವು ೨೦ ವರುಷಗಳ ಹಿಂದೆ ಪ್ರಜಾಪ್ರಭುತ್ವ ಕ್ಕೊಳಪಟ್ಟಿತ್ತು. ಇದರಲ್ಲಿ ಒಂಬತ್ತು ಪ್ರಾಂತಗಳಿವೆ. ಇದರ ಜನಸಂಖ್ಯೆ ೬೮ ಲಕ್ಷ. ಇಂಥ ನೆರೆಯ ರಾಷ್ಟ್ರವು ಪ್ರಜಾಪ್ರಭುತ್ವದಲ್ಲಿರುವದು ಜರ್ಮನಿಗೆ ಮಹಾ ವಿಪತ್ತೆಂದೇ ಹಿಟ್ಲರನ ಯೋಚನೆ. ಅದಕ್ಕಾಗಿ ಅದನ್ನೂ ತನ್ನ ಪಕ್ಷದಲ್ಲಿ ಸೇರಿಸಿಕೊಂಡು ಅಲ್ಲಿ ನಾಝಿ ತತ್ವದ ರಾಜ್ಯವೇ ಸ್ಥಾಪನೆಯಾಗಬೇಕೆಂದು ಈ ಆಕ್ರಮಣವನ್ನು ನಡೆಸಿದನು. ಜರ್ಮನಿಯ ಜನಸಂಖ್ಯೆ ೬ ಕೋಟಿ ೬೦ ಲಕ್ಷ.

ಆಸ್ಟ್ರಿಯಾದಲ್ಲಿ ಖನಿಜ ಸಂಪತ್ತು ವಿಶೇಷವಾಗಿದೆ. ಆದರಿಂದ ಜರ್ಮನಿಯು ತನ್ನ ಸಾಂಪತ್ತಿಕ ಶಕ್ತಿಯನ್ನು ಹೆಚ್ಚಿಸಿಕೊಳ್ಳುವುದು. ತನ್ನ ಸೈನ್ಯವನ್ನೂ ಹೆಚ್ಚಿಸಿಕೊಳ್ಳಲು ಜರ್ಮನಿಗೆ ಅನುಕೂಲವಾಯಿತು. ಜರ್ಮನಿಯ ಈ ಆಕ್ರಮಣವು ಮಧ್ಯಯುರೋಪದಲ್ಲಿ ಒಂದು ಭಯಂಕರವಾದ ಯುದ್ಧ ಜ್ವಾಲೆಯನ್ನು ಪುಟಗೊಳಿಸುವ ಪೂರ್ವ ಸಿದ್ಧತೆಯೆಂದೇ ಹೇಳಬಹುದು.

---

## ಕಾರವಾರ ಜಿಲ್ಲೆಯ ಘನತೆ.

ಕಳೆದ ಕರ ನಿರಾಕರಣೆಯ ಶಾಂತಿ ಸಮರದಲ್ಲಿ ಕಾರವಾರ ಜಿಲ್ಲೆಯು ಬಹು ಮುಂದರಿದು ಸ್ವಾರ್ಥತ್ಯಾಗದಿಂದ ವಿಶೇಷ ಘನತೆಯನ್ನು ಹೊಂದಿತಷ್ಟೆ. ಆ ಕಾಲಕ್ಕೆ ಅನೇಕರ ಭೂಮಿಗಳು "ಲಿಲಾವ" ಆಗಿ ಹೋಗಿದ್ದವು. ಈಗ ಅವು ಆಯಾಯ ವ್ಯಕ್ತಿಗಳಿಗೆ ದೊರೆಯಬೇಕೆಂದು ಗೊತ್ತಾದುದರಿಂದ ಸಿದ್ದಾಪುರ ಅಂಕೋಲಾ ತಾಲೂಕಗಳಲ್ಲಿಯ ಅನೇಕರು ತಾವು "ಲಿಲಾವ" ನಲ್ಲಿ ತೆಗೆದುಕೊಂಡಷ್ಟು ಹಣವಿಗೇನೇ ಆ ಭೂಮಿಗಳನ್ನು ಅವುಗಳ ಮೂಲ ಯಜಮಾನರಿಗೆ ಕೊಡಲು ಸಿದ್ಧರಾಗಿದ್ದಾರೆ. ಇದು ಸ್ತುತ್ಯವಾದುದೇ ಸರಿ.

---

## ಲಿಂಗಾಯತ ವರನು ಬೇಕು.

ತಿಂಗಳಿಗೆ ೨೫ ರೂ. ಗಳಾದರೂ ಆದಾಯ ಬರುವ ಸುಶಿಕ್ಷಿತ ನಿರೋಗಿ ಸದೃಢ ಸ್ವಾವಲಂಬಿ ಲಿಂಗಾಯತ ವರನು ಬೇಕಾಗಿದ್ದಾನೆ. ವರುಷ ೨೦ ರಿಂದ ೩೦ ರೊಳಗಾಗಿರಬೇಕು. ಒಳಪಂಗಡ ಏಕೀಕರಣಕ್ಕೆ ಒಪ್ಪಿಗೆಯುಳ್ಳವನೂ ಆಧುನಿಕ ವಿಚಾರಸರಣಿಯುವನೂ ಇರಬೇಕು.

ವಧು ೧೬ ವರುಷದವಳು. ಮುಲಕೀ ಪರೀಕ್ಷೆ ವರೆಗೆ ಕನ್ನಡ ಮತ್ತು ಉರ್ದು ಶಿಕ್ಷಣ ಹೊಂದಿದವಳು. ಸುಂದರ ಸುಲಕ್ಷಣಗಳುಳ್ಳ ಬಡಕುಟುಂಬದವಳು. ಕೆಳಗಿನ ವಿಳಾಸಕ್ಕೆ ಬರೆದು ಹೆಚ್ಚಿನ ಸಂಗತಿ ತಿಳಿದುಕೊಳ್ಳಬೇಕು.

"ಶರಣ ಸಂದೇಶ" ಆಫೀಸ್
ಪೋ. ಆಲಮಟ್ಟಿ. ಜಿ. ವಿಜಾಪುರ

## ಹೊಂಬಳ (ಗದಗ.)

"ಶಾಲೆಗಳ ಮೇಲೆ ರಾಷ್ಟ್ರಧ್ವಜಾರೋಹಣವೂ ಶಾಲೆಗಳಲ್ಲಿ ಮಹಾತ್ಮರ ಭಾವಚಿತ್ರಗಳ ಅನಾವರಣ ಸಮಾರಂಭವೂ ವಾರ್ಷಿಕ ಪರೀಕ್ಷೆಯಲ್ಲಿ ಪಾಸಾದ ವಿದ್ಯಾರ್ಥಿಗಳ ಪಾರಿತೋಷಕ ಸಮಾರಂಭವೂ"

ತಾ. ೬-೩-೩೮ ನೇ ರವಿವಾರ ದಿವಸ ಮುಂಜಾನೆ ದೇ. ಭ. ಡಾಕ್ಟರ್ ನಾರಾಯಣರಾವ ಕಬ್ಬೂರ ಧಾರವಾಡ ಇವರ ಹಸ್ತದಿಂದ ಕನ್ನಡ ವ ಉರ್ದು ಶಾಲೆಗಳ ಮೇಲೆ ರಾಷ್ಟ್ರಧ್ವಜಾರೋಹಣವೂ ಶಾಲೆಗಳಲ್ಲಿ ಮಹಾತ್ಮಾ ಗಾಂಧಿಯವರ ಭಾವಚಿತ್ರಗಳ ಅನಾವರಣ ಸಮಾರಂಭವೂ ನೆರವೇರಿದವು. ಅವುಗಳ ವಿವರ ಮುಂಜಾನೆ ೮|| ಗಂಟೆಗೆ ದೇ. ಭ. ಕಬ್ಬೂರವರು ನಮ್ಮ ಶಾಲೆಗೆ ಬಂದರು. ಮಹಾತ್ಮರ ಭಾವಚಿತ್ರವನ್ನು ಪಲ್ಲಕ್ಕಿಯಲ್ಲಿರಿಸಿ ವಾದ್ಯಗಳೊಂದಿಗೆ ಮೆರವಣಿಗೆಯು ಹೊರಟಿತು. ಮುಂಭಾಗದಲ್ಲಿ ಊರ ಜನರು, ಬಾಲಬಾಲಕಿಯರು, ಶಿಕ್ಷಕಶಿಕ್ಷಿಕೆಯರು ಜಯಜಯಕಾರದೊಡನೆ ಹೊರಬಿದ್ದರು. ಬಾಲಕಿಯರು ಕೋಲು ಹಾಕುತ್ತಾ ನಡೆದಿದ್ದರು. ಹಿಂಭಾಗದಲ್ಲಿ ಹೆಣ್ಣುಮಕ್ಕಳು ಆರತಿಯನ್ನು ಹಿಡಿದಿದ್ದರು. ಪ್ರಮುಖ ಬೀದಿಯೊಳಗೆ ಹಾಯ್ದು ಎಲ್ಲ ಶಾಲೆಗಳ ಮೇಲೆ ರಾಷ್ಟ್ರಧ್ವಜಾರೋಹಣವು ಸದರಿಯವರ ಹಸ್ತದಿಂದ ಪದ್ಧತಿಪ್ರಕಾರ ಏರಿಸಿ ಭಾವ ಚಿತ್ರವನ್ನು ಸದರಿಯವರಿಂದಲೇ ಶಾಲೆಗಳಲ್ಲಿರಿಸಲ್ಪಟ್ಟನಂತರ ಹೆಣ್ಣುಮಕ್ಕಳು ಆರತಿಯನ್ನು ಬೆಳಗಿದರು. ಬಳಿಕ ದೇ. ಭ. ಕಬ್ಬೂರವರು ಧ್ವಜದ ಬಗ್ಗೆ ೧ ತಾಸಿನೊರೆಗೆ ಸರಸವಾಗಿ ಭಾಷಣಮಾಡಿದ ಮೇಲೆ ಹಾರ ತುರಾಯಿ ತಾಂಬೂಲಾದಿಗಳಾದ ಬಳಿಕ ಫೋಟೋ ತೆಗೆಯಿಸಿ ಮುಂಜಾವಿನ ಕಾರ್ಯಕ್ರಮ ಮುಗಿಸಲ್ಪಟ್ಟಿತು.

ಸಾಯಂಕಾಲದಲ್ಲಿ ಸರಿಯಾಗಿ ೩ ಗಂಟೆಗೆ ಗದಗಿನ ಮಾಧ್ಯಮಿಕ ಸ್ಕೂಲಿನ ಶಿಕ್ಷಕರಾದ ಶ್ರೀ ಗು. ಬಿ. ಜೋಶಿ ಎಂ. ಎ. ಬಿ. ಟಿ. ಇವರ ಅಧ್ಯಕ್ಷತೆಯ ಕೆಳಗೆ ಪಾರಿತೋಷಕ ಸಮಾರಂಭವು ನೆರವೇರಿತು. ಮೊದಲು ಈಶಸ್ತವನ ಸ್ವಾಗತ ಪದವಾದ ಮೇಲೆ ಬಾಲಕರ ಡ್ರಿಲ್, ಸ್ಕೌಟ್, ಆಟ, ಆಸನ, ಲಾಠಿ ಬಾಲಕಿಯರ ಕೋಲಾಟ ಒಳ್ಳೇ ಶಿಸ್ತಿನಿಂದ ಸಾಗಿದವು. ೧ ನೇ ಅ. ಮಾ. ದ. ದ. ಪಾಟೀಲ ಇವರು ಅಧ್ಯಕ್ಷರ ಪರಿಚಯಮಾಡಿಕೊಟ್ಟ ಮೇಲೆ ಅಧ್ಯಕ್ಷರು ಅಧ್ಯಕ್ಷಸ್ಥಾನವನ್ನು ಸ್ವೀಕರಿಸಿದರು. ಹೆ. ಮಾ. ಬ. ಬ. ಹಾವೇರಿ ಇವರು ನಮ್ಮ ಶಾಲೆಯ ಪಂಚ ವಾರ್ಷಿಕ ವರದಿಯನ್ನು ಓದಿದರು. ವರ್ಷಾನುವರ್ಷಗಳ ನಮ್ಮ ಶಾಲೆಯ ಪ್ರಗತಿಯು ಹೇಗೆ ಹೊಂದುತ್ತಿರುವದೆಂಬುದನ್ನು ಸಿದ್ಧಮಾಡಿ ತೋರಿಸಿದರು. ಊರವರಿಂದ ಸ್ಕೂಲ ಬೋರ್ಡಿನವರಿಂದ ಏನೇನು ಸಹಾಯ ಸಿಗಬೇಕೆಂಬುದನ್ನು ತೋರಿಸಿಕೊಟ್ಟ ಮೇಲೆ ೨ನೇ ಅ. ಮಾ. ಕಾಂಬಳೆ ಇವರು ಈ ಸಮಾರಂಭಕ್ಕೆ ಊರವರಿಂದ ಕೂಡಿದ ೪೨ ರೂ. ಗಳ ಆಯವ್ಯಯ ಪತ್ರಿಕೆಯನ್ನು ಓದಿ ಹೇಳಿದರು. ಬಳಿಕ ಅಧ್ಯಕ್ಷರ ಹಸ್ತದಿಂದ ಪಾಸಾದ ಎಲ್ಲ ಬಾಲಕಿಯರಿಗೆ ಕ್ರಮಿಕ ಪುಸ್ತಕಗಳನ್ನೂ ಮಿಠಾಯಿಯನ್ನೂ ಹಂಚಿದರು. ಅಧ್ಯಕ್ಷರು ಹಿಂದುಸ್ಥಾನ ಪಾಶ್ಚಿಮಾತ್ಯ ಶಿಕ್ಷಣದ ಹೆಚ್ಚುಕಡಿಮೆ ಇವುಗಳ ಬಗ್ಗೆ ಒಂದು ತಾಸಿನ ವರೆಗೆ ಭಾಷಣಮಾಡಿದರು. ತರುವಾಯ ಬಾಲಕರಿಂದ ತಯಾರಿಸಿದ ಹಸ್ತ ಶಿಕ್ಷಣ ಪ್ರದರ್ಶನವನ್ನು ನೋಡಿ ಇಲ್ಲಿಯ ಶಿಕ್ಷಕರ ಸಂಘಶಕ್ತಿಯನ್ನೂ ಪ್ರೇಮವನ್ನೂ ನೋಡಿ ಇದು ಕಡೆತನಕ ಉಳಿದರೆ ಈ ಶಾಲೆಯು ಮಾದರಿ ಶಾಲೆಯಾಗುವದರಲ್ಲಿ ಏನೂ ಸಂಶಯವಿಲ್ಲ. ಎಂಬ ತಮ್ಮ ಮನೋಗತವನ್ನು ವ್ಯಕ್ತಪಡಿಸಿದರು. ಅದರಂತೆ ಉತ್ತಮ ಶರಾ ಬರೆದರು. ತರುವಾಯ ಹಾರ ತುರಾಯಿ ಅತ್ತರ ತಾಂಬೂಲಾದಿಗಳಾದ ಬಳಿಕ ಅಧ್ಯಕ್ಷರ ಆಭಾರವನ್ನಿಸಿ ಫೋಟೋ ತೆಗೆಯಿಸಿದ ಬಳಿಕ ರಾಷ್ಟ್ರಗೀತೆಯೊಡನೆ ಸಮಾರಂಭವು ಮುಗಿಸಲ್ಪಟ್ಟಿತು.

ನಿಂ. ಮು. ಕಾಂಬಳೆ
ಅ. ಮಾ. ಹೊಂಬಳ

---

## ಲಿಂಗಧಾರಣ ಸಮಾರಂಭ.

ಕರ್ಜಗಿಯ ನಿವಾಸಿಗಳೂ, ಕುರಬ ಸಮಾಜ ಬಂಧುಗಳೂ, ಆದ ಶ್ರೀ. ದ್ಯಾಮಣ್ಣ ಎಂಬವರು ಈಗ ಹತ್ತೆಂಟು ವರ್ಷಗಳಿಂದ ಮದ್ಯಮಾಂಸಾದಿಗಳನ್ನು ತ್ಯಜಿಸಿ, ಒಳ್ಳೇ ಸುಶೀಲರಾಗಿ ಅಸಹಕಾರ ಚಳವಳಿಯಲ್ಲಿ ಎರಡು ಸಾರೆ ಕಾರಾಗೃಹ ವಾಸವನ್ನು ಸಹ ಅನುಭವಿಸಿ ಬಂದಿರುವರು. ಮಹಾತ್ಮರ ತತ್ವದಲ್ಲಿ ಒಳ್ಳೇ ಮನಸ್ಸುಳ್ಳವರಾಗಿದ್ದು ಬಸವಾದಿ ಪ್ರಮಥರ ತತ್ವವನ್ನು ಓದಿ ತಿಳಿದುಕೊಂಡಿರುವರು. ಇವರು ತಮ್ಮ ಆತ್ಮೋನ್ನತಿಯ ಸಲುವಾಗಿ ಲಿಂಗಧಾರಿಗಳಾಗಬೇಕೆಂದು ಬಯಸುತ್ತಿದ್ದರು. ಮೊನ್ನೆ ಮಂಗಳವಾರ ತಾ. ೮-೩-೩೮ ದಿವಸ ಶುಭ ಮುಹೂರ್ತದಲ್ಲಿ ಕಲ್ಲೇದೇವರ ಗ್ರಾಮದ ಹಿರೇಮಠ ಗುರುಗಳಿಂದ ಹಾವೇರಿಯ ಹೊಸಮನಿ ಪರಮಣ್ಣನವರ ಆಶ್ರಮದಲ್ಲಿ ವಿಧಿಯುಕ್ತ ಪ್ರಕಾರ ಲಿಂಗಧಾರಣೆಯು ಜರುಗಿಸಲ್ಪಟ್ಟಿತು. ಯಾವ ಆಡಂಬರವೂ ಇಲ್ಲದೆ ಲಿಂಗಧಾರಣೆಯು ನೆರವೇರಿಸಲ್ಪಟ್ಟಿತು. ಲಿಂಗಧಾರಣೆಗೆ ಶ್ರೀ ದ್ಯಾಮಣ್ಣನವರು ಎಲ್ಲ ತರದಿಂದಲೂ ಯೋಗ್ಯರಾಗಿದ್ದರು. ಇಂಥವರಿಗೆ ಲಿಂಗಧಾರಣವನ್ನು ಮಾಡಬೇಕೆಂದು ನಮ್ಮ ಶಾಸ್ತ್ರಗಳು ಸಾರಿ ಸಾರಿ ಹೇಳುತ್ತವೆ. ಶ್ರೀಯುತ ದ್ಯಾಮಣ್ಣನವರು ಇನ್ನೂ ಹೆಚ್ಚಾಗಿ ಪ್ರಮಥರ ತತ್ವವನ್ನು ಅಭ್ಯಾಸಮಾಡಿ ಶಿವಭಕ್ತಿಯ ನಿಜವಾದ ನೆಲೆಯನ್ನು ಕಂಡುಕೊಳ್ಳಬೇಕು. ಈಗ ಇವರ ಮನಸ್ಸು ಧರ್ಮದ ಕಡೆಗೇ ಒಲಿದಿರುತ್ತದೆ. ತ್ಯಾಗವೃತ್ತಿಯಂತೂ ಮಿಗಿಲಾಗಿದೆ. ಅಂದಮೇಲೆ ಕೇಳುವದೇನು? ಇವರೇ ಪರಮ ಶಿವಭಕ್ತರೆಂದು ನಾವು ಹೇಳದೆ ಇರಲಾರೆವು.

ಓರ್ವ ಪ್ರತ್ಯಕ್ಷದರ್ಶಿ

---



---

—ಮಹಾತ್ಮಾ ಗಾಂಧಿ ಮತ್ತು ಲಾರ್ಡ ಬ್ರೆಬೋರ್ನ ಇವರ ಭೆಟ್ಟಿಯು ಸಂಭವಿಸಬಹುದೆಂದು ಬಹಳ ನಿರೀಕ್ಷಣೆ ಮಾಡಲಾಗಿದೆ. ಬಹುಶರ ಈ ಭೆಟ್ಟಿಯು ಈ ವಾರದಲ್ಲಿಯೇ ಆಗುವದೆಂದು ಅಸೋಸಿಯೇಟೆಡ್ ಪತ್ರಿಕಾ ಪ್ರತಿನಿಧಿಗೆ ತಿಳಿದುಬಂದಿದೆ.

—ಕ್ಷಯರೋಗ ನಿವಾರಕ ಫಂಡಿಗೆ ಬಡೋದಾ ಮಹಾರಾಜರು ೨ ಲಕ್ಷ ರೂ. ಕಾಣಿಕೆ ಕೊಟ್ಟಿದ್ದಾರೆ.

## ಶ್ರೀ ಮಹಾ ನಂದಿಕ್ಷೇತ್ರದಲ್ಲಿ ಮಹಾ ಶಿವರಾತ್ರೆಯ ಉತ್ಸವವು.

### ಶ್ರೀ ಬಸವ ಮಂದಿರ ಸಮಾಜದ ಕಾರ್ಯಕಲಾಪಗಳು.

ಸೃಷ್ಟಿ ಸೌಂದರ್ಯದ ತವರುಮನೆಯಾದ ಮನೋಜ್ಞಯಾದ ಶ್ರೀಮಹಾ ನಂದಿ ಕ್ಷೇತ್ರದಲ್ಲಿ ಈ ಸಾರೆ ಶ್ರೀ ಶಿವರಾತ್ರೆ ಉತ್ಸವದ ಸಮಾರಂಭವು ಅಭೂತಪೂರ್ವವಾದ ವೈಭವದಿಂದ ಜರುಗಿಸಲ್ಪಟ್ಟಿತು. ಸುಮಾರು ಐವತ್ತು ಸಾವಿರ ಮೇಲ್ಪಟ್ಟು ಜನಸಂದಣಿಯು ಸೇರಿದ್ದಿತು. ಇಲ್ಲಿಗೆ ನಾನಭಾಗದಿಂದ ಬಂದಿದ್ದ ಸಾವಿರಾರು ವೀರಶೈವ ಯಾತ್ರಿಕರಿಗೆ ಇಲ್ಲಿ ಬಹು ದಿವಸಗಳಿಂದ ಅವಿಚ್ಛಿನ್ನವಾಗಿ ನಡೆದು ಬಂದಿರುವ ಶ್ರೀ ಬಸವ ಮಂದಿರ ಸಮಾಜದಲ್ಲಿ ಅನ್ನಪಾನಾದಿ ಸೌಕರ್ಯಗಳು ಬಹು ಸಮರ್ಪಕವಾಗಿ ಒದಗಿಸಿಕೊಡಲ್ಪಟ್ಟವೆಂದು ತಿಳಿಸಲು ಬಹು ಸಂತೋಷವೆನಿಸುತ್ತದೆ. ಈ ಧರ್ಮ ಸಂಸ್ಥೆಯ ಪಾಲಕರಾದ ಶ್ರೀ. ವೇ|| ನಂದಲಮಠದ ಭೂದೇವಯ್ಯನವರು ಅಹರ್ನಿಶವು ಅವಿಶ್ರಾಂತರಾಗಿ ದುಡಿಯುತ್ತಾ ಬಂದ ವೀರಶೈವ ಯಾತ್ರಿಕರನ್ನು ದಿವ್ಯವಾದ ಆತಿಥ್ಯದಿಂದ ಸತ್ಕರಿಸಿ ಇಡಿ ಸಮಾಜದ ಅಭಿನಂದನೆಗೆ ಪಾತ್ರರಾಗಿರುವರು. ಶ್ರೀಶೈಲ ಯಾತ್ರೆಯಿಂದ ದಣಿದು ಈ ಮನೋಹರವಾದ ಕ್ಷೇತ್ರಕ್ಕೆ ಬಂದ ಯಾತ್ರಿಕರು ಮಹೇಶ್ವರರ ಆತಿಥ್ಯವನ್ನು ಸ್ವೀಕರಿಸಿ ಮಹದಾನಂದವನ್ನು ಪಡೆದರು.

ವೀರಶೈವ ಸಮಾಜವು ಅಷ್ಟೊಂದು ಪ್ರಬಲವಾಗಿಲ್ಲದ ಈ ಪ್ರಾಂತದಲ್ಲ ಇಂಥ ಧಾರ್ಮಿಕ ಸಂಸ್ಥೆಗಳು ಅತ್ಯಂತ ಯಶಸ್ವಿಯಾಗಿ ನಡೆಯುತ್ತಿರುವದು ತುಂಬಾ ಆನಂದವಾದ ಸಂಗತಿ. ಪ್ರತಿ ದಿವಸವು ಮಂದಿರದಲ್ಲಿ ಶಿವಕಥಾ ಶ್ರವಣವು ನಡೆಯಿತು. ಈ ಕ್ಷೇತ್ರದಲ್ಲಿ ವೀರಶೈವರಿಗಾಗಿ ಒಂದು ದೊಡ್ಡ ಕಟ್ಟಡವನ್ನು ನಿರ್ಮಿಸಬೇಕಾಗಿ ಶ್ರೀ ಬಸವ ಮಂದಿರದ ಪಾಲಕರ ಪವಿತ್ರೋದ್ದೇಶವಿರುತ್ತದೆ. ಇವರು ತಮ್ಮ ಉದ್ದೇಶವನ್ನು ಇಲ್ಲಿಗೆ ದಯಮಾಡಿಸಿದ ಶ್ರೀ. ವೇ|| ಅನಗವಾಡಿ ಮಠದ ಮುರಿಗೆಪ್ಪಯ್ಯನವರು ದಾವಣಗೆರೆ. ಶ್ರೀ. ಐ. ಐ. ಹಾಲಭಾವಿಯವರು ಬಿ. ಎ. ಎಲ್. ಎಲ್. ಬಿ. ರಿಟೈಯರಡ ಡಿಸ್ಟ್ರಿಕ್ಟ ಜಡ್ಜರು ಧಾರವಾಡ. ಶ್ರೀ. ಆಲೂರವರು ಬಿ. ಎ. ಎಲ್. ಎಲ್. ಬಿ. ಸಬ್ ಜಡ್ಜರು ಧಾರವಾಡ ಮುಂತಾದ ಸದ್ಗೃಹಸ್ಥರ ಮುಂದೆ ಮಂಡಿಸಲು ಅವರು ಕಟ್ಟಡದ ಸ್ಥಳ ಮುಂತಾದವುಗಳನ್ನು ನಿರೀಕ್ಷಿಸಿ ಈ ಉದ್ಯಮಕ್ಕೆ ತಮ್ಮ ಸಹಾನುಭೂತಿಯನ್ನು ವ್ಯಕ್ತಗೊಳಿಸಿದರು.

ಮತ್ತು ಆದಷ್ಟು ತೀವ್ರವೇ ಕಟ್ಟಡದ ಅಸ್ತಿಭಾರವನ್ನು ಹಾಕುವ ಸಮಾರಂಭವನ್ನು ನೆರವೇರಿಸಬೇಕೆಂದು ನಿರ್ಧರವಾಯಿತು. ಶ್ರೀ. ವೇ| ಅನಗವಾಡಿ ಮಠದ ಮುರಿಗೆಪ್ಪಯ್ಯನವರು ತಾವು ಒಂದು ಮಂಟಪದ ಕಟ್ಟಡದ ವೆಚ್ಚವನ್ನು ಕೊಡಲು ವಾಗ್ದಾನವಿತ್ತರು. ಅದೇ ರೀತಿ ದಾವಣಗೆರೆ ತಿರುಕಪ್ಪನವರ ಮಠದ ಓಂಕಾರಯ್ಯನವರ ಧರ್ಮಪತ್ನಿ ಶ್ರೀಮತಿ ಬಸವಲಿಂಗಮ್ಮನವರು ತಮ್ಮ ಯಜಮಾನರ ಜ್ಞಾಪಕಾರ್ಥವಾಗಿ ಒಂದು ಮಂಟಪವನ್ನು ಕಟ್ಟಿಸಿಕೊಡಲು ಒಪ್ಪಿಕೊಂಡರು. ಇದೇ ರೀತಿ ಈ ಮಹತ್ಕಾರ್ಯದಲ್ಲಿ ಭಾಗವಹಿಸಲು ಅನೇಕ ಮಹನೀಯರುಗಳು ಅತಿ ಉತ್ಸಾಹದಿಂದ ಮುಂದರಿಯುತ್ತಿರುವರು. ಮಂಟಪ ಒಂದಕ್ಕೆ [illegible] ರೂ. ಮಾತ್ರ ವೆಚ್ಚವಾಗುತ್ತವೆ. ಇಂಥಾದೊಂದು ಸಂಸ್ಥೆಯು ಇಲ್ಲಿ ಬಹು ಅವಶ್ಯಕವಾಗಿರುವದರಿಂದ ವೀರಶೈವ ಸಮಾಜದವರು ಇತ್ತಕಡೆ ಲಕ್ಷ ಕೊಡಬೇಕಾಗಿ ಪ್ರಾರ್ಥನೆ.

ಈ ಭವ್ಯ ಕ್ಷೇತ್ರದಲ್ಲಿ ಒಂದು ಭಾರತ ವೀರಶೈವ ಮಹಾಸಭೆಯನ್ನು ಜರುಗಿಸಬೇಕೆಂದು ಈ ಸಂಸ್ಥೆಯವರ ಉದ್ದೇಶವಿರುತ್ತದೆ. ಆಂಧ್ರ ಪ್ರಾಂತದಲ್ಲಿ ವೀರಶೈವ ಸಮಾಜವು ಒಂದಾನೊಂದು ಕಾಲದಲ್ಲಿ ಅತ್ಯಂತ ವೈಭವದೆಶೆಯಲ್ಲಿದ್ದದ್ದು ಇತ್ತೀಚೆಗೆ ಬಹು ಕ್ಷೀಣದೆಸೆಗೆ ಬರುತ್ತ ನಡೆದಿದೆ. ಆಂಧ್ರ ವೀರಶೈವರಿಗೂ ಕರ್ನಾಟಕದ ವೀರಶೈವರಿಗೂ ಇದ್ದ ನಿಕಟ ಸಂಬಂಧವು ತಪ್ಪಿ ಹೋಗುತ್ತಲಿದೆ. ಇಂಥಾ ಸಂದರ್ಭದಲ್ಲಿ ಆಂಧ್ರ ಕರ್ನಾಟಕ ಮಧ್ಯಭಾಗದಲ್ಲಿರುವ ಈ ಕ್ಷೇತ್ರದಲ್ಲಿ ವೀರಶೈವ ಮಹಾಸಭೆಯನ್ನು ಜರುಗಿಸುವ ಆವಶ್ಯಕತೆಯ ಬಗ್ಗೆ ಬೇರೆ ಹೇಳಬೇಕಾಗಿಲ್ಲ. ಈ ಸಂಸ್ಥೆಯ ಪಾಲಕರ ಪವಿತ್ರೋದ್ದೇಶಗಳನ್ನು ಕ್ಷಿಪ್ರದಲ್ಲಿಯೇ ಕೊನೆಗಾಣಿಸುವದಾಗಿ ಶ್ರೀ ಪರಮಾತ್ಮನನ್ನು ಅನನ್ಯ ಭಾವದಿಂದ ಪ್ರಾರ್ಥಿಸುವೆನು.

ಓರ್ವ ವೀರಶೈವ ಯಾತ್ರಿಕ.

---

## ಆದಿಹಿಂದುಗಳ ಸ್ವಾತಂತ್ರ್ಯ.

ಇಂದೂರು ಸಂಸ್ಥಾನಾಧಿಪತಿಗಳಾದ ರಾಜರಾಜೇಶ್ವರ ಶ್ರೀ. ಯಶವಂತರಾವ ಬಹದ್ದೂರ್‌ರವರು ಕಳೆದ ಒಂದನೆಯ ತಾರೀಖಿನ ದಿವಸ ಒಂದು ಆಜ್ಞಾ ಪತ್ರವನ್ನು ಪ್ರಕಟಿಸಿ ತಮ್ಮ ಸಂಸ್ಥಾನದಲ್ಲಿ ಸಕಲ ಆದಿ ಹಿಂದುಗಳಿಗೂ ನಾಗರಿಕತ್ವದ ಸಂಪೂರ್ಣ ಸ್ವಾತಂತ್ರ್ಯವನ್ನ ಕೊಟ್ಟಿದ್ದು ಅತ್ಯಂತ ಅಭಿನಂದನೀಯವಾಗಿದೆ. ಬೇರೆ ಮಾದರಿ ಸಂಸ್ಥಾನಗಳೂ ಕಾಂಗ್ರೆಸ್ ಸರಕಾರ ಏರ್ಪಟ್ಟ ಪ್ರಾಂತಗಳೂ ಈಗಲಾದರೂ ಇಂದೂರಿನ ಅನುಕರಣ ಮಾಡಬಾರದೆ?

ಸಂಸ್ಥಾನದ ಎಲ್ಲ ದೇವಾಲಯಗಳಲ್ಲಿ ಪ್ರವೇಶಿಸಲಿಕ್ಕೂ ಎಲ್ಲ ಜಲಾಶಯಗಳ ನೀರನ್ನು ತರಲಿಕ್ಕೂ ಎಲ್ಲ ಸಾರ್ವಜನಿಕ ಕಟ್ಟಡ, ಉಪಾಹಾರ ಗೃಹಗಳಲ್ಲಿ ಪ್ರವೇಶಿಸಲಿಕ್ಕೂ ಎಲ್ಲ ಶಿಕ್ಷಣ ಸಂಸ್ಥೆಗಳಲ್ಲಿಯೂ ಅಧಿಕಾರಗಳಲ್ಲಿಯೂ ಆದಿ ಹಿಂದುಗಳು ಸೇರಲಿಕ್ಕೂ ಬೇಕಾದ ಆಭರಣಗಳನ್ನು ಇಟ್ಟುಕೊಂಡು ಮೆರವಣಿಗೆ ಹೊರಡಲಿಕ್ಕೂ ಸವರ್ಣ ಹಿಂದುಗಳಂತೆ ಸಂಪೂರ್ಣ ಸ್ವತಂತ್ರರಾಗಿದ್ದಾರೆ. ಹೀಗೆ ಎಲ್ಲ ಕಡೆಗೂ ಆದಿ ಹಿಂದುಗಳಿಗೆ ಸಾಮಾಜಿಕ ಸ್ವಾತಂತ್ರ್ಯವು ಸಂಪೂರ್ಣವಾಗಿ ದೊರೆತ ವಿನಾ ಅವರ ನಿಜವಾದ ಉನ್ನತಿಯಾಗುವುದಿಲ್ಲ. ಮತ್ತು ಹಿಂದುಸ್ಥಾನವು ಯಥಾರ್ಥವಾದ ಸ್ವಾತಂತ್ರ್ಯಕ್ಕೆ ಅರ್ಹವಾಗುವುದಿಲ್ಲ.

---

## ಹರಿಜನರಿಗೆ ದೇವಾಲಯ ಪ್ರವೇಶ ಮಾಡಗೊಡಿರಿ. ಟ್ರಸ್ಟದ ನಿರ್ಬಂಧವು ಶಾ ಸ ನ ದಿಂ ದ ದೂರಾಗಿದೆ.

ಮುಂಬೈ ಇಲಾಖೆಯ ಹರಿಜನ ಸೇವಕ ಸಂಘಗಳ

## ಅಧ್ಯಕ್ಷರ ವಿನಂತಿ ಪತ್ರ.

ಹಿಂದು ದೇವಾಲಯಗಳ ಟ್ರಸ್ಟಗಳ ಸನ್ನಿಧಿಗೆ—

ಪ್ರಿಯ ಮಹಾಶಯರೇ,

ದೇವಾಲಯಗಳ ದ್ವಾರವನ್ನು ಹರಿಜನರಿಗೆ ತೆರೆಯಬೇಕೆಂದು ಒಂದು ವೇಳೆ ಟ್ರಸ್ಟ ಪತ್ರದಲ್ಲಿ ಉಲ್ಲೇಖಿತವಾಗಿರದಿದ್ದರೂ ಈಗ ದೇವಾಲಯದ ಟ್ರಸ್ಟಗಳು ಈ ಪ್ರಕಾರ ಮಾಡುವಂತೆ ಮುಂಬಯಿ ಲೆ|| ಅಸೆಂಬ್ಲಿ ಮತ್ತು ಕೌನ್ಸಿಲ್ಲುಗಳಲ್ಲಿ ಒಂದು ಶಾಸನವು ತೀರ್ಮಾನವಾದುದು ನಿಮಗೆ ಗೊತ್ತಿರಬಹುದು.

ಆ ಪ್ರಕಾರ ಕಾರ್ಯಮಾಡಲು ಸಮ್ಮತಿ ದೊರೆತೇ ದೊರೆಯುವದು. ಹರಿಜನರಿಗೆ ದೇವಾಲಯ ಪ್ರವೇಶ ಮಾಡಗೊಡುವದರಲ್ಲಿ ಒಂದು ಗೂಢಾರ್ಥವು ಅಡಕವಾಗಿದೆ ಆ ಪ್ರಕಾರ ಮಾಡುವದರಿಂದ ಸಮಾಜದ ಭವಿಷ್ಯವು ಉಜ್ವಲವಾಗುವುದು.

ಈ ದೇಶದಲ್ಲಿ ಮೊದಲು ನಿಜವಾದ ಸಾಮಾಜಿಕ ಸುಧಾರಣೆಗಳೆಷ್ಟೋ ಆಗಿವೆ. ತಮ್ಮ ದಲಿತ ಬಂಧುಭಗಿನಿಯರ ದುಃಖಗಳನ್ನು ಕಂಡು ಹಿಂದುಗಳ ಅಂತರಾತ್ಮವು ಜಾಗ್ರತವಾಗದೆ ಹರಿಜನರಿಗೆ ಹಿಂದುಗಳು ಅನೇಕ ಹಕ್ಕುಗಳನ್ನು ಕೊಟ್ಟಿರುವದಿಲ್ಲ. ದೇವಾಲಯ ಪ್ರವೇಶ ಕೂಡಾ ಅವರಿಗೆ ವರ್ಜಿತಮಾಡಲ್ಪಟ್ಟಿದೆ. ದೇವಾಲಯ ಪ್ರವೇಶ ಮಾಡಗೊಡದಿರಲು ಈ ಕಾರಣವನ್ನು ಹೇಳಲಾಗುತ್ತಿದ್ದಿತು. ದೇವಾಲಯ ಪ್ರವೇಶಕ್ಕೆ ಟ್ರಸ್ಟಗಳು ಒಪ್ಪಿದರೂ ಒಪ್ಪಬಹುದು. ಆದರೆ ಟ್ರಸ್ಟ ಪತ್ರಗಳಲ್ಲಿ ಮಾತ್ರ ಹಾಗೆ ಹೇಳಿಲ್ಲವಲ್ಲ. ಹರಿಜನರು ಪ್ರವೇಶ ಮಾಡದಂತೆ ಟ್ರಸ್ಟ ಪತ್ರಗಳು ಅಸಾಧ್ಯವಾದ ಕಂಟಕಗಳಾಗಿವೆ.

ಈಗ ದೇವಾಲಯ ಪ್ರವೇಶದ ಮಸೂದೆಯನ್ನು ಸ್ಟ್ಯಾಚ್ಯೂಟ ಪುಸ್ತಕದಲ್ಲಿ ಬರೆದು ಬಿಡಲಾಗಿದೆಯಷ್ಟೆ. ಇದರಿಂದ ಟ್ರಸ್ಟ ಪತ್ರದ ಆತಂಕವಂತೂ ನಿವಾರಣೆಯಾದಂತಾಯಿತು. ನಿಮ್ಮ ಹೃದಯದ ಅಂತರಾಳದಲ್ಲಿಯ ಹರಿಜನರೂ ಉಚ್ಚ ವರ್ಗದ ಹಿಂದುಗಳಂತೆ ದೇವಾಲಯ ಪ್ರವೇಶಿಸಲು ಅಡ್ಡಿಯಿಲ್ಲವೆಂಬ ನಿಮ್ಮ ಭಾವನೆಯನ್ನು ಕಾರ್ಯರೂಪದಲ್ಲಿ ವ್ಯಕ್ತಪಡಿಸಲು ಈಗ ನೀವು ಸ್ವತಂತ್ರರಾಗಿದ್ದೀರಿ. ಆದುದರಿಂದ ನಾವು ನಿಮಗೆ ವಿನಂತಿಮಾಡಿಕೊಳ್ಳುವುದೇನೆಂದರೆ ಈಗ ಹೊಸದಾಗಿ ತೀರ್ಮಾನವಾಗಿರುವ ಈ ಸಾಮಾಜಿಕ ಶಾಸನದ ಲಾಭವನ್ನು ತೆಗೆದುಕೊಳ್ಳಿರಿ. ಹಾಗು ನಿಮ್ಮ ಮೇಲ್ವಿಚಾರಣೆಯಲ್ಲಿರುವಂಥ ದೇವಾಲಯಗಳಲ್ಲಿ ಹರಿಜನ ಪ್ರವೇಶಕ್ಕೆ ಅಡ್ಡಿಯಿಲ್ಲವೆಂಬ ಗೊತ್ತುವಳಿಯನ್ನು ತೀರ್ಮಾನ ಮಾಡಿರಿ. ಈ ನಮ್ಮ ವಿನಂತಿಯ ಬಗ್ಗೆ ಇನ್ನೂ ಹೆಚ್ಚಿಗೆ ಹೇಳಿ ಬೆಂಬಲವನ್ನುಂಟು ಮಾಡುವ ಪ್ರಸಂಗವು ಬೇಕಾಗಿಲ್ಲವೆಂದು ನಾವು ಇಚ್ಛಿಸುತ್ತೇವೆ.

ಕೆಳಗೆ ಸಹಿ ಮಾಡಿದ ನಾವು ಕರ್ನಾಟಕ, ಮಹಾರಾಷ್ಟ್ರ, ಗುಜರಾಥ, ಹಾಗು ಮುಂಬೈ ಹರಿಜನ ಸೇವಕ ಸಂಘಗಳ ಅಧ್ಯಕ್ಷರಿದ್ದೇವೆ. ನಮ್ಮ ಈ ವಿನಂತಿಯನ್ನು ಮಾನ್ಯಮಾಡಿ ನೀವು ನವೀನ ವಿಚಾರಗಳಿಗೆ ಹಾಗು ಭಾವನೆಗಳಿಗೆ ನಿಮ್ಮ ಲಕ್ಷವನ್ನು ಪೂರೈಸುವಿರೆಂದು ನಾವು ನಂಬಿದ್ದೇವೆ.

ಈ ಪ್ರಕಾರ ನೀವು ಮಾಡಿದ್ದಾದರೆ ನಮ್ಮ ಹರಿಜನ ಬಂಧುಭಗಿನಿಯರ ಮಾರ್ಗದಲ್ಲಿಯ ಒಂದು ದೊಡ್ಡ ವಿಘ್ನವನ್ನು ದೂರಮಾಡಿದಂತಾಗುವುದು. ಆ ವಿಘ್ನವಾದರೋ ಸಾಮಾಜಿಕ ನ್ಯಾಯಕ್ಕೂ ಹಾಗು ಧಾರ್ಮಿಕ ಸ್ವಾತಂತ್ರ್ಯಕ್ಕೂ ವಿರೋಧವಾಗಿರುವದಲ್ಲವೆ?

| | | |
|---|---|---|
| ವೀರನಗೌಡ ಪಾಟೀಲ | ಅಧ್ಯಕ್ಷ ಕರ್ನಾಟಕ ಹ. ಸೇ. ಸಂಘ | |
| ವ್ಹಿ. ಎಸ್. ಬರ್ವೆ | ,, ಮಹಾರಾಷ್ಟ್ರ | ,, |
| ಎ. ವ್ಹಿ. ಠಕ್ಕರ | ,, ಗುಜರಾಥ | ,, |
| ಜಿ. ಕೆ. ಮೆಹತಾ | ,, ಮುಂಬಯಿ | ,, |

## ನವ ಬಂಗಾಲದ ನಿರ್ಮಾಣ.

ರಾಷ್ಟ್ರಾಧಿಪತಿಗಳಾದ ಬಾಬು ಸುಭಾಷಚಂದ್ರ ಬೋಸರು ಬಂಗಾಲದಲ್ಲಿರುವ ಪಕ್ಷ ಭೇದಗಳನ್ನು ತೆಗೆದುಹಾಕಿ ಕಾಂಗ್ರೆಸ್ಸಿನ ಧ್ವಜದಡಿಯಲ್ಲಿ ಎಲ್ಲರೂ ಸೇರಿ ಸಕ್ರಮವಾಗಿ ನಡೆದುಕೊಳ್ಳುವಂತೆ ಪ್ರಯತ್ನಿಸಲಾರಂಭಿಸಿದ್ದಾರೆ. ಬಂಗಾಲವು ಹಿಂದುಸ್ಥಾನದ ಮಿದುಳಾಗಿದೆಯೆಂದು ಹೇಳುವ ಮಾತಿನಲ್ಲಿ ಅತ್ಯುಕ್ತಿಯೇನೂ ಇಲ್ಲ.

ಕಳೆದ ೧೫-೨೦ ವರುಷಗಳಿಂದ ಬಂಗಾಲದ ಕೆಲವು ತರುಣರು ಭಾವನಾವಿಶಿಷ್ಟರಾಗಿ ಸ್ವಲ್ಪ ತಪ್ಪು ದಾರಿಯಲ್ಲಿ ಹೋದುದರಿಂದ ಆ ಪ್ರಾಂತವೇ ಭಯಂಕರವಾದ ದಬ್ಬಾಳಿಕೆಗೆ ಗುರಿಯಾಗಿ ಬಹು ಬೆಂದು ಬೆಂಡಾಯಿತು. ಅವರಲ್ಲಿರುವ ಅದ್ಭುತವಾದ ಶಕ್ತಿಯು ಸಂಪೂರ್ಣವಾಗಿ ರಾಷ್ಟ್ರಸೇವೆಗೆ ಉಪಯೋಗವಾಗಲಿಲ್ಲ. ಈ ದುರವಸ್ಥೆಯನ್ನು ನೋಡಿಯೇ ಬಾಬು ಸುಭಾಷಚಂದ್ರ ಬೋಸರು ಅದರಲ್ಲಿ ಸಂಘಟನೆಯನ್ನುಂಟು ಮಾಡಿ ನ್ಯಾಯವಾದ ಮಾರ್ಗದಿಂದ ಸಕ್ರಮವಾಗಿ ನಡೆಯುವಂತೆ ಮಾಡಲು ಪ್ರಯತ್ನಿಸಿದ್ದಾರೆ.

### ನವ ಬಂಗಾಲದ ನಿರ್ಮಾಣವೆಂದರೆ ?

ತಾ. ೧೬-೩-೩೮ ನೆಯ ದಿವಸ ಕಲಕತ್ತಾ ಪಟ್ಟಣದ ಹರೀಶ ಉದ್ಯಾನದಲ್ಲಿ ರಾಷ್ಟ್ರಾಧಿಪತಿಗಳಾದ ಬಾಬು ಸುಭಾಷಚಂದ್ರ ಬೋಸರವರಿಗೆ ೮೫ ಸಂಸ್ಥೆಯವರು ಮಾನಪತ್ರಗಳನ್ನು ಅರ್ಪಿಸಿದರು. ಕಲಕತ್ತಾ ಮೇಯರ್‌ರವರು ಅಧ್ಯಕ್ಷರಾಗಿದ್ದರು. ಈ ಪ್ರಚಂಡ ಸಭೆಗೆ ೩೫ ಸಾವಿರ ಜನರು ಸೇರಿದ್ದರು. ಆಗ ಬಾಬೂಜಿಯವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ನಾನು ನವ ಬಂಗಾಲವನ್ನು ನಿರ್ಮಿಸಬೇಕೆಂದಿದ್ದೇನೆ. ಬಂಗಾಲದಲ್ಲಿ ಬುದ್ಧಿವಂತಿಗೆ ತ್ಯಾಗ ಉತ್ಸಾಹಗಳಿಗೇನೂ ಕೊರತೆಯಿಲ್ಲ. ಆದರೆ ಪಕ್ಷಭೇದ, ಅನೈಕಮತ್ಯ, ಅಸೂಯೆ ಅಕ್ರಮಗಳಿಂದ ಯಾವ ಕಾರ್ಯವೂ ಆಗುತ್ತಾ ಇಲ್ಲ. ಇವುಗಳನ್ನೆಲ್ಲ ಗಂಗೆಯಲ್ಲಿ ತೊಳೆದುಬಿಡಿರಿ. ಹಾಗೆ ಮಾಡಿ ಏಕಮತ್ಯದಿಂದರೂ ಸಕ್ರಮದಿಂದಲೂ ನನಗೆ ನೆರವಾದರೆ ಐದೇ ವರುಷಗಳಲ್ಲಿ ನವ ಬಂಗಾಲವನ್ನು ನಿರ್ಮಿಸುವೆನು."

## ವೀರಶೈವ ವರನು ಬೇಕು.

ವೀರಶೈವರಲ್ಲಿಯ ಲೋಕಬಳಕೆ ಪಂಗಡಕ್ಕೆ ಸೇರಿದ ಒಂದು ಸುಶೀಲ, ಸುಲಕ್ಷಣ, ಸುಶಿಕ್ಷಿತ ಪ್ರೌಢ ಕನ್ಯೆ ಇದೆ. ಇದೇ ಪಂಗಡದ ತಕ್ಕಷ್ಟು ಆದಾಯವುಳ್ಳ ಯೋಗ್ಯ ವರನು ಬೇಕಾಗಿದ್ದಾನೆ. ಅಂಥವರು ಈ ಕೆಳಗಿನ ವಿಳಾಸಕ್ಕೆ ಬರೆದು ತಿಳಿಸಬೇಕು. ಹಿತ ತೋರಿದರೆ ಸಾಲಂಕೃತ ಕನ್ಯಾದಾನಮಾಡಿಕೊಡಲ್ಪಡುವದು.

"ಶರಣ ಸಂದೇಶ" ಆಫೀಸ್
ಪೋ. ಆಲಮಟ್ಟಿ
ಜಿ. ವಿಜಾಪುರ.

# ಕೇವಲ ಬಸವ ಜಯಂತಿಗಾಗಿ ಸಿದ್ಧಗೊಳಿಸಿದ

# ವಚನ ಪಟ ಸಂಗ್ರಹ.

ಭಗವಾನ್ ಬಸವಣ್ಣ, ಅಕ್ಕ ಮಹಾದೇವಿ, ಚೆನ್ನಬಸವಣ್ಣನವರೇ ಮೊದಲಾದ ಶಿವಶರಣರ ಶ್ರೇಷ್ಠ ವಚನಗಳನ್ನು ೨ ಬಣ್ಣಗಳಿಂದ ಸುಂದರವಾಗಿ ದಪ್ಪವಾದ ಕಾರ್ಡಿನ ಮೇಲೆ ಮುದ್ರಿಸಿದೆ. ಕಟ್ಟು ಹಾಕಿಸಿ ಇಲ್ಲವೆ ಹಾಗೆಯೇ ಮನೆ, ಮಠ, ಅಂಗಡಿ ದೇವಸ್ಥಾನ ಮೊದಲಾದ ಸ್ಥಳಗಳಲ್ಲಿ ಹಚ್ಚಲು ಅನುಕೂಲವಾಗಿವೆ.

**೧೨ ಪಟಗಳ ಸಂಗ್ರಹ ಒಂದಕ್ಕೆ ೮ ಆಣೆ.**

**ಪೋಸ್ಟೇಜ್ ೪ ಆಣೆ.**

**೧೨ ಆಣೆಗಳ ಒಂದಾಣೆಯ ಟಿಕೀಟು ಕಳಿಸಿದವರಿಗೆ ಕಳಿಸಲಾಗುತ್ತದೆ.**

**ಜಾಗ್ರತೆ ಕೆಳಗೆ ಬರೆದ ವಿಳಾಸಗಳಿಗೆ ಬರೆಯಿರಿ.**

ಮ್ಯಾನೇಜರ್
'ಶರಣ ಸಂದೇಶ'
ಪೋ. ಆಲಮಟ್ಟಿ. ಜಿ. ವಿಜಾಪುರ

ಎಸ್. ಸಿ. ಶಿವಲಿಂಗಣ್ಣ
ಪೋ. ಅಥರಗಾ
ಜಿ. ವಿಜಾಪುರ.

---

## ಅಕ್ಕನ ಹುಣ್ಣಿಮೆ ಬಂತು !

ಅಕ್ಕರದಿಂದ

# ಅಕ್ಕನ ಉಪದೇಶ

ಎಂಬ

**ಚಿಕ್ಕ ಪುಸ್ತಕಗಳನ್ನು ಬೇಗನೆ ತರಿಸಿರಿ.**

೨೦೦೦ ಪ್ರತಿಗಳು ಮಾತ್ರ ಇವೆ.

ಶ್ರೀಮಾನ್ ಮಾಗಾವಿ ಚೆನ್ನಬಸವಪ್ಪನವರು ಹಾವೇರಿ ಇವರು ತಮ್ಮ ಅಣ್ಣನವರಾದ ಕೈ. ಸಿದ್ಧಪ್ಪನವರ ಸ್ಮರಣಾರ್ಥ ಈ ಪುಸ್ತಕ ಪ್ರಕಾರಕ್ಕೆ ಧನ ಸಹಾಯಮಾಡಿದುದರಿಂದ ಡೆಮ್ಮಿ ೧೬ ನೆಯ ಆಕಾರದ ೩೨ ಪುಟಗಳ ಮುದ್ದಾದ ಮುದ್ರಣದ ೨೫ ಪುಸ್ತಕಗಳಿಗೆ ಒಂದೇ ಒಂದು ರೂಪಾಯಿ. ೨೫ ಪುಸ್ತಕಗಳಿಗಿಂತ ಕಡಿಮೆಯಾಗಿ ಕಳಿಸಲಾಗುವುದಿಲ್ಲ. ರೇಲ್ವೆ ಮೂಲಕವೇ ಕಳಿಸಲಾಗುವವು. ರೂ. ಗಳನ್ನು ಮನಿಯಾರ್ಡರ ಮೂಲಕ ಕಳಿಸಿದವರಿಗೆ ಮಾತ್ರ ಪುಸ್ತಕಗಳನ್ನು ಕಳಿಸಲಾಗುವುದು

**ಸೂಚನೆ**— ಅಕ್ಕನ ಹುಣ್ಣಿವೆ (ಚೈತ್ರ ಶು|| ಹುಣ್ಣಿವೆ) ಎಪ್ರೆಲ್ ೧೪ ನೇ ತಾರೀಖು ಗುರುವಾರ ಇದೆ. ಅದಕಾರಣ ತಾ ೭-೪-೩೮ ನೇ ದಿನವೇ ಪುಸ್ತಕಗಳನ್ನು ಪಾರ್ಸಲ್ ಮೂಲಕ ಕಳಿಸಲಾಗುವುದು.

ವಿಳಾಸ— ಮ್ಯಾನೇಜರ್ 'ಶರಣ ಸಂದೇಶ'
ಪೋ. ಆಲಮಟ್ಟಿ. ಜಿ. ವಿಜಾಪುರ



# ಸಂತತಿ ನಿಯಮನ.

( ಬಿ. ಎಮ್. ಶೇಣ. )

ಜಗತ್ತಿನಲ್ಲಿಯ ಬಹುತರ ಪ್ರತಿಯೊಂದು ರಾಷ್ಟ್ರಗಳಲ್ಲಿಯೂ ಪ್ರಜಾಸಂಖ್ಯೆಯುತ್ಪತ್ತಿಯು ಪ್ರತಿವರ್ಷಕ್ಕೂ ಹೆಚ್ಚಾಗುವದು ನಡದೆ ಇದೆ. ಹೀಗೆ ಹೆಚ್ಚುತ್ತಿದ್ದರ ಪರಿಣಾಮವಾಗಿಯೇ ಇಟಲಿಯು ಅಬಿಸೀನಿಯಾವನ್ನು ನುಂಗಿತು. ಜಪಾನವು ಚೀಣಾವನ್ನು ಆಕ್ರಮಣಮಾಡಹತ್ತಿರುವದೆಂದು ಧಾರಾಳವಾಗಿ ಹೇಳಬಹುದು. ವಿಶ್ವದ ಪ್ರಶ್ನೆಯನ್ನು ಬಿಟ್ಟು ಭರತಖಂಡದ ವಿಷಯವಾಗಿ ವಿಚಾರಿಸಿದರೂ ಕೂಡ ಕಳೆದ ಸನ್ ೧೯೩೧ರ ಜನಗಣನೆಯಲ್ಲಿ ಹಿಂದಿನ ಹತ್ತು ವರ್ಷಕ್ಕಿಂತಲೂ ಈ ಸಾರೆ ೨ ಕೋಟಿ ಹೆಚ್ಚಾಗಿರುವದು. ಅಂದರೆ ಸದ್ಯಕ್ಕೆ ೩೫ ಕೋಟಿ ಪ್ರಜಾ ಸಂಖ್ಯೆಯು ಇರುತ್ತದೆ.

ಇಂಥ ಮಹತ್ವದ ಬಿಕ್ಕಟ್ಟಿನ ಪ್ರಶ್ನೆಯ ಕಡೆಗೆ ಅಲಕ್ಷ್ಯ ಮಾಡುವುದು ತರವಲ್ಲವೆಂಬ ಸಂಗತಿಯನ್ನು ರಾಷ್ಟ್ರದ ಮುಂದಾಳುಗಳು ಹಗಲಿರುಳು ಚಿಂತಿಸುತ್ತಿರುವದೇನು ಆಶ್ಚರ್ಯವಲ್ಲ.

ಭಾರತದಲ್ಲಿ ಒಂದಾನೊಂದು ಕಾಲಕ್ಕೆ ಪ್ರಜಾ ವೃದ್ಧಿಯನ್ನು ಮಾಡಬೇಕಾಗಿದ್ದ ಆಗತ್ಯವಾದ ಪ್ರಸಂಗದಲ್ಲಿ ಯಾವ ಮಹರ್ಷಿಗಳು "ಅಪುತ್ರಸ್ಯಗತಿರ್ನಾಸ್ತಿ" ಎಂದು ಸಾರಿದರೋ ಅದನ್ನೇ ಈಗ ಅರ್ವಾಚೀನ ಕಾಲದಲ್ಲಿ ಪಠಿಸುತ್ತ ಅದಕ್ಕೇ ಮಹತ್ವವೆಂದು ತಿಳಿಯುವದರಲ್ಲಿ ಯಾವ ಪೌರುಷವೂ ಕಂಡುಬರುವದಿಲ್ಲ. ವೇದ ಕಾಲದಿಂದ ಹಿಂದುಸ್ಥಾನದ ಇತಿಹಾಸವನ್ನು ನೋಡಿದರೂ ಕೂಡ ಸಂತತಿ ನಿಯಮನವು ಒಂದಿಲ್ಲೊಂದು ಬಗೆಯಿಂದ ಕಂಡುಬರುತ್ತದೆ. ವಂಶಾಭಿವೃದ್ಧಿಗಾಗಿಯೂ ತನ್ನ ಅಂತಿಮ ಕ್ರಿಯೆಗಳನ್ನು ಮಾಡಿ ತನ್ನನ್ನು ಸ್ವರ್ಗಕ್ಕೆ ಕಳಿಸಬೇಕೆಂಬ ನಂಬಿಕೆಯಿಂದಲೂ ಒಬ್ಬ ಮಗನು ಇರಲೇಬೇಕೆಂದು ಪದ್ಧತಿಯು ಇದ್ದಂತೆ ತೋರುತ್ತದೆ. ಮತ್ತು ನಾಲ್ಕು ಆಶ್ರಮಗಳನ್ನು ಮಾಡಿಕೊಂಡು ಮಕ್ಕಳು ಹುಟ್ಟಿದನಂತರ ಗೃಹಸ್ಥಾಶ್ರಮವನ್ನು ತ್ಯಜಿಸಿ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸುತ್ತಿದ್ದರು.

ಆದರೆ ಈಗಿನ ಕಾಲಕ್ಕಾದರೋ ಆಶ್ರಮಗಳ ಪದ್ಧತಿಯಂತೂ ಎಂದೋ ಮಾಯವಾಗಿರುವದು. ಅದರಿಂದ ಮಕ್ಕಳನ್ನು ಹಡೆಯುವದಕ್ಕೆ ವಯಸ್ಸಿನ ಹಾಗು ಪ್ರಸ್ತುತ ಶಾಸ್ತ್ರಾಧಾರಗಳ ನಿರ್ಬಂಧವೂ ಇಲ್ಲ. ಧರ್ಮಾಧಿಕಾರಿಗಳೂ ಸಮಾಜದ ಮುಂದಾಳುಗಳೂ ಇದನ್ನು ವಿಚಾರಿಸುವರೆನ್ನಬೇಕೆ? ಅದೂ ಇಲ್ಲ; ಇಷ್ಟೇ ಅಲ್ಲ ಸಂತತಿ ನಿಯಮನ ಎಂಬ ಶಬ್ದವನ್ನು ಉಚ್ಚರಿಸಿದರೆ 'ಶಾಂತಂ ಪಾಪಂ' ಎಂದು ತಮ್ಮ ಕರ್ಣಗಳನ್ನೇ ಮುಚ್ಚುತ್ತಾರೆ. ಹೀಗೆಂದ ಮಾತ್ರಕ್ಕೆ ಮಕ್ಕಳನ್ನು ಹಡೆಯುವದೇ ವಿಹಿತವಲ್ಲವೆಂದಲ್ಲ ಪ್ರತಿಯೊಂದಕ್ಕೆ ಮಿತಿಯಿರಬೇಕಷ್ಟೆ. ಆ ಪ್ರಕಾರ ತಮ್ಮ ಹಾಗೂ ಮಕ್ಕಳ ಆರೋಗ್ಯ ಮತ್ತು ಪೋಷಣೆಗಳನ್ನು ಮಾಡಲಿಕ್ಕೆ ತಿಳುವಳಿಕೆಯುಳ್ಳ ವಯಸ್ಸಿನಲ್ಲಿಯೇ ಹಡೆಯತಕ್ಕದ್ದು. ಅಲ್ಲದೆ ಹುಟ್ಟಿದ ಮಕ್ಕಳಿಗೆ ಸರಿಯಾದ ವಿದ್ಯಾಭ್ಯಾಸಗಳನ್ನು ಮಾಡಿಸುವ ವ್ಯವಸ್ಥೆಯು ತನ್ನಿಂದ ಆಗಲಿಕ್ಕೇಬೇಕೆಂಬದನ್ನು ಯಾವಾಗಲೂ ಚೆನ್ನಾಗಿ ಲಕ್ಷ್ಯದಲ್ಲಿಡತಕ್ಕದ್ದು.

ಇತ್ತಿತ್ತಲಾಗಿ ಮಕ್ಕಳಾಗಲಿಲ್ಲವೆಂಬ ಕಾರಣಕ್ಕೋಸ್ಕರವಾಗಿ ಎಂಥ ಜರಠನೂ ಕೂಡ ನವ ತರುಣಿಯನ್ನು ಮದುವೆಯಾಗಿ ಹಿಂದಿನಿಂದ ಹಂಬಲಿಸುತ್ತಿರುವವರೇನೂ ಕಡಿಮೆ ಇಲ್ಲ. ಸ್ತ್ರೀಯು ಮಕ್ಕಳನ್ನು ಹುಟ್ಟಿಸುವ ಯಂತ್ರವೆಂದು ತಿಳಿದುಕೊಂಡಂಥ ಇಂಥ ಮನುಷ್ಯರಿಗೆ ಏನೆನ್ನಬೇಕು? ಮಕ್ಕಳ ಹೊಟ್ಟೆಬಟ್ಟೆಗೆ ಯೋಗ್ಯವಾದ ವ್ಯವಸ್ಥೆಯನ್ನು ಮಾಡಲಿಕ್ಕೆ ಅಶಕ್ತನಾದ ತರುಣನೂ ಮಕ್ಕಳನ್ನು ಹಡೆಯುವದರಲ್ಲಿಯೇ ತನ್ನ ಪಾಂಡಿತ್ಯವನ್ನು ತೋರಿಸುವದು ಎಂಥ ನಗೆಗೀಡಾಗುವಂಥ ಮಾತು!! ಎಷ್ಟೋ ಜನರು ಎಂಟು ಹತ್ತು ಮಕ್ಕಳನ್ನು ಹಡೆದು 'ಪ್ರಪಂಚವು ದೊಡ್ಡದಾಯಿತು. ಗಳಿಕೆಯು ಸಾಲದಾಯಿತು. ಏನು ಮಾಡಬೇಕು? ಹೇಗೆ ಮಾಡಬೇಕು? ಎಂದು ಪೇಚಾಡಹತ್ತಿರುವವರನ್ನು ಪ್ರತಿ ದಿವಸ ಕಾಣಬಹುದು. ತಮಗೇ ಇಂಥ ದಿಕ್ಕು ತೋಚಲಾರದ ಪರಿಸ್ಥಿತಿಯಲ್ಲಿ ಹುಟ್ಟಿದ ಕಂದಮ್ಮಗಳನ್ನು ಹೇಗೆ ಪೋಷಿಸಬಹುದು? ಎಂಥ ವಿದ್ಯೆಯನ್ನು ಕೊಡಬಹುದೆಂಬದನ್ನು ವಾಚಕರೆ ಊಹಿಸಲಿ.

ಹೆಚ್ಚಾಗಿ ಗರ್ಭವತಿಯರಾಗುವದರಿಂದ ಮಹಿಳೆಯರ ಪ್ರಕೃತಿಯು ಎಷ್ಟು ಚಿಂತಾಜನಕವಾಗಬಹುದು? ಬಾಲ್ಯದಲ್ಲಿಯೇ ವಿವಾಹ; ಲಗ್ನವಾದ ತುಸು ದಿವಸಗಳಲ್ಲಿಯೇ ಮಕ್ಕಳು ಹುಟ್ಟುವಿಕೆ ಅಂದಮೇಲೆ 'ಗಾಯದ ಮೇಲೆ ಬರೆ ಕೊಟ್ಟಂತೆ' ಯಾಗಲಿಕ್ಕಿಲ್ಲವೆ? ಇದೂ ಹೋಗಲಿ; ಬಹಳವಾಗಿ ಮಕ್ಕಳನ್ನು ಹಡೆದು ಕ್ಷುದ್ರ ಸ್ವಾರ್ಥಪರವಾದ ಸಂಸಾರದಲ್ಲಿಯೇ ತೊಳಲಾಡಹತ್ತಿದ ಮೇಲೆ ಸಮಾಜದ ಹಿತವೂ ತದ್ವಾರ ರಾಷ್ಟ್ರದ ಉನ್ನತಿಯೂ ಹೇಗೆ ಆಗಬಹುದೆಂಬದನ್ನಾದರೂ ವಿಚಾರಿಸಬೇಡವೆ?

ಭಾರತದ ಅಷ್ಟೇ ಏಕೆ? ಜಗತ್ತಿನ ಅಸಂಖ್ಯಾತ ರಾಷ್ಟ್ರಗಳು ಸಂತತಿ ನಿಯಮನದ ಕಡೆಗೆ ಮನಸ್ಸುಹಾಕುತ್ತಿರುವಾಗ ತದ್ವಿರುದ್ಧವಾಗಿ ಜರ್ಮನ್, ಇಟಾಲಿಗಳ ನಾಯಕರು ಹಿಟ್ಲರ್ ಮುಸೋಲಿನಿಗಳು ಮಕ್ಕಳನ್ನು ಬಹಳ ಹಡೆದವರಿಗೆ ಇನಾಮುಗಳನ್ನು ಹಂಚುವರು!! ಆದರೆ ಬಹು ಜನ ಸಮಾಜಕ್ಕೆ ಬೇಡಾದ ಅವರ ಈ ವರ್ತನವು ಬಹು ದಿನ ಉಳಿಯುವದು ಶಕ್ಯವೇ ಇಲ್ಲವೆಂಬದು ನಿಸ್ಸಂಶಯವಾದ ಮಾತು. ಏನೇ ಇರಲಿ. ಹಿಂದೀಯರು ದೇಶದ ಸದ್ಯದ ಪರಿಸ್ಥಿತಿಯನ್ನು ವಿಚಾರಿಸಿ ಕೆಲವು ದಿನಗಳ ಮಟ್ಟಿಗಾದರೂ ಕೇವಲ ಪ್ರಜಾಭಿವೃದ್ಧಿಯ ಕಡೆಗೆ ಮನಸ್ಸು ಕೊಡದೆ ಭಾರತಾಂಬೆಯ ಉದ್ಧಾರಕ್ಕಾಗಿ ಮಾಡಬೇಕಾದ ಮಹತ್ವದ ಕಾರ್ಯಗಳನ್ನು ಕೈಕೊಳ್ಳುವದೇ ನಿಜವಾದ ತರುಣನ ಆದ್ಯ ಕರ್ತವ್ಯವು. ಜಯ ಭಾರತ ಮಾತಾ!

---

## ಹಿಂದು ತರುಣ ಸಂಘ ಹಾವೇರಿ.

ತಾರೀಖು ೧೧-೩-೩೮ ನೆಯ ಇಸ್ವಿ ಶುಕ್ರವಾರ ದಿವಸ ಶ್ರೀ ಸಿದ್ಧಲಿಂಗೇಶ್ವರ ವಾಚನಾಲಯದಲ್ಲಿ ಸಂಘದ ಮಹಾಸಭೆಯು ಕೂಡಿ ಕರ್ನಾಟಕ ಏಕೀಕರಣಕ್ಕೆ ಬೆಂಬಲಕೊಡುವ ಠರಾವು ಸರ್ವಾನುಮತದಿಂದ ಪಾಸುಮಾಡಲ್ಪಟ್ಟು ಇದನ್ನು ತಂತಿಯಿಂದ ಮುಖ್ಯ ಮಂತ್ರಿಗಳಾದ ನಾ|| ಖೇರರವರಿಗೂ ಅಸೆಂಬ್ಲಿ ಸದಸ್ಯರಾದ ಶ್ರೀ. ಜೋಗರಾಯರಿಗೂ ತಿಳಿಸಿರುತ್ತದೆ.

ಕಾರ್ಯದರ್ಶಿ

ಚನ್ನಬಸಪ್ಪ ಮೆಳ್ಳಿಹಳ್ಳಿ.

---

## ಶ್ರೀ ವಿದ್ಯಾರಣ್ಯ ಸಮಿತಿ ಬೆಳಗಾವ.

### ಶ್ರೀ ವಿದ್ಯಾರಣ್ಯ ಗ್ರಂಥಮಾಲಾ ಬೆಳಗಾವ.

೧ ನೇ ಹೂವು ಚುರಮರಿ ಶಾಕುಂತಲ ನಾಟಕವು
೨ ನೇ ಹೂವು ಪುನರ್ಜನ್ಮ ಎರಡೂ ಅರಳಿವೆ
೩ ನೇ ಹೂವು "ತಾಯಿ" ಅಚ್ಚಿನಲ್ಲಿದೆ. ಡಿಶೆಂಬರ ತಿಂಗಳ ಕೊನೆಯಲ್ಲಿ ಅರಳುವದು.

ವಾ. ಚ. ಅ. ವೆ. ಸೇರಿ ೩-೦-೦ ರೂ. ಗಳು

ಸಂಪಾದಕರು— ವಿ. ರಾ. ನಗರ.

## ವಿಜಾಪುರ ಜಿಲ್ಲೆಯ ಕ್ಷಾಮ.

### ಶ್ರೀ. ಕಾಳೆಯವರ ಪ್ರಶ್ನೆ.

ವಿಜಾಪುರ ಜಿಲ್ಲೆಯ ಬಹು ಭಾಗವು ಉಗ್ರವಾದ ಕ್ಷಾಮಕ್ಕೆ ಆಹುತಿಯಾಗಿದೆ. ಬಹು ಜನರು ಅನೇಕ ಕಷ್ಟಗೊಳಗಾಗಿದ್ದಾರೆ. ದನಕರುಗಳು ಮೇವಿಲ್ಲದೆ ಬೆಂದು ಬೆಂಡಾಗಿವೆ. ಕ್ಷಾಮದ ಕಷ್ಟವನ್ನು ಕಳೆಯಲು ವಿಜಾಪುರ ಜಿಲ್ಲೆಯಲ್ಲಿ ನಡೆಸಿರುವ ಸರಕಾರದ ಕಾರ್ಯವು ಅಪೂರ್ಣವಾಗಿದೆಯೆಂಬುದನ್ನು ಸರಕಾರದ ಲಕ್ಷಕ್ಕೆ ತರಲು ಸ್ವತಂತ್ರ ಕೂಲಿಕಾರ ಪಕ್ಷದ ಸಭಾಸದರಾದ ಶ್ರೀ. ಕಾಳೆಯವರು ಒಂದು ಕಡಿಸದ ಗೊತ್ತುವಳಿಯನ್ನು ಅಸೆಂಬ್ಲಿಯಲ್ಲಿ ತಂದು ಕನ್ನಡದಲ್ಲಿಯೇ ಮಾತನಾಡಿದರು. ಇದಕ್ಕೆ ಉತ್ತರವಾಗಿ ಮಂತ್ರಿಗಳಾದ ಶ್ರೀ. ದೇಸಾಯಿಯವರು ಹೀಗೆ ಹೇಳಿದರು—

"ಕೆಲಸಗಾರರಿಗೆ ಕೆಲಸವು ಇಲ್ಲದಂತಾಗಿದೆಯೆಂದು ನಾನು ಪತ್ರಿಕೆಗಳಲ್ಲಿ ಓದಿನೋಡಿದ್ದೇನೆ. ಇವರ ನಿಜಾಂಶವನ್ನು ನಾನು ತಿಳಿದುಕೊಂಡು ಪ್ರತಿನಿತ್ಯ ೮ ತಾಸು ದುಡಿಯುವವರಿಗೆ ೨|| ಆಣೆಗಳಾದರೂ ದೊರೆಯುವಂತೆ ವ್ಯವಸ್ಥೆ ಮಾಡಲಾಗಿದೆ. "ವಸೀಲಿ" ಪಿಡುಗಿನ ಸಂಬಂಧವಾಗಿ ಇಲ್ಲಿ ಪ್ರಸ್ತಾಪಿಸಲ್ಪಟ್ಟಿತು. ನಿರಾಧಾರವಾಗಿ ಹೀಗೆ ಆಕ್ಷೇಪಿಸಬಾರದು. ಸಪ್ರಮಾಣಗಳಿಂದ ಈ ಸಂಗತಿಯನ್ನು ಇಟ್ಟಿದ್ದಾದರೆ ಅದರ ಸಂಬಂಧವಾಗಿ ಲಕ್ಷಪೂರ್ವಕ ಯೋಚಿಸಲಾಗುವುದು."

---

## ಜ್ಯೂ ಜನರ ವಿಪತ್ತು.

ಬಲವಿಲ್ಲದ ಜನಾಂಗವು ಎಷ್ಟು ಬಳಲಬೇಕಾಗುತ್ತದೆಂಬುದಕ್ಕೆ ಜ್ಯೂ ಜನಾಂಗವೇ ದೃಷ್ಟಾಂತವಾಗಿದೆ. ಈ ಜನಾಂಗವು ಸಂಪತ್ತಿನಲ್ಲಿ ಬಹು ಶ್ರೀಷ್ಟವಾದುದಾಗಿದ್ದರೂ ಒಂದು ಸ್ವತಂತ್ರ ರಾಷ್ಟ್ರವುಳ್ಳದ್ದಾಗಿಲ್ಲ. ಯುರೋಪ ಖಂಡದಲ್ಲಿ ಹರಿದು ಹಂಚಿ ಹೋಗಿದೆ. ಅಂತೆಯೇ ಅದು ಅನೇಕ ವಿಪತ್ತುಗಳಿಗೆ ಆಗಾಗ್ಗೆ ಈಡಾಗುತ್ತಲಿದೆ.

ಹಿಂದುಸ್ಥಾನದಲ್ಲಿ ಆದಿ ಹಿಂದುಗಳನ್ನು ಸವರ್ಣೀಯರು ಕಾಣುವಂತೆಯೇ ಜರ್ಮನಿಯು ಜ್ಯೂ ಜನಗಳನ್ನು ಕಾಣುತ್ತದೆಂದು ಹೇಳಬಹುದು. ಆಸ್ಟ್ರಿಯಾದಲ್ಲಿಯೂ ಜ್ಯೂ ಜನರಿಗೆ ಎಷ್ಟೋ ಕಷ್ಟಗಳಿದ್ದವು. ಈಗಂತೂ ಅದು ಜರ್ಮನಿಯ ಕೈಯಲ್ಲಿ ಬಂದಿತು. ಜ್ಯೂ ಜನರಿಗೆ ರಾಜಕೀಯ ಪಕ್ಷದ ಚುನಾವಣೆಯಲ್ಲಿ ಮತಕೊಡುವ ಅಧಿಕಾರವೇ ಇಲ್ಲವೆಂದು ಈಗ ಗೊತ್ತುಮಾಡಿದ್ದಾಯಿತು! ಇನ್ನುಮೇಲೆ ಅಲ್ಲಿ ಆ ಜನರ ಮೇಲೆ ಯಾವ ಯಾದ ವಿಪತ್ತುಗಳು ಬರುತ್ತವೋ! ರಾಷ್ಟ್ರಸಂಘವು ಈ ಕಡೆಗೆ ಲಕ್ಷಿಸಬೇಕಾಗಿ ಜ್ಯೂ ಜನಗಳು ಕೇಳಿಕೊಂಡಿದ್ದಾರೆ. ರಾಷ್ಟ್ರಸಂಘದ ಅಸ್ತಿತ್ವವೂ ಬಲವೂ ಎಷ್ಟರಮಟ್ಟಿಗೆವೆಯೆಂಬುದು ಸರ್ವಶ್ರುತ ಸಂಗತಿಯಷ್ಟೆ. ಬಲಹೀನರು ಈಗ ಬಾಳುವುದೇ ಕಷ್ಟ.

---

## ರಶಿಯಾ ದೇಶದ ಆಮಂತ್ರಣ.

ಜರ್ಮನಿಯು ಆಸ್ಟ್ರಿಯಾ ದೇಶವನ್ನು ಆಕ್ರಮಿಸಿಕೊಂಡಿತು. ಝುಕೊಸ್ಲಾವಾಕಿಯಾದ ಮೇಲೆ ಕಣ್ಣಿಟ್ಟಿದೆ. ಮುಸೋಲಿನಿಯು ಜರ್ಮನಿಯ ಕೃತಿಯನ್ನು ಸಮರ್ಥಿಸಿದನು. ಸ್ಪೇನದಲ್ಲಿ ಫ್ರಾಂಕೊ ಬಾರ್ಸಿಲೋನಾದ ಮೇಲೆ ಬಾಂಬಿನ ಮಳೆಗರೆದು ಅಮಾನುಷಕೃತಿ ಮಾಡುತ್ತಿದ್ದಾನೆ. ಈ ಪ್ರಕಾರ ಜರ್ಮನ್, ಇಟಲಿ, ಸ್ಪೇನ ದೇಶಗಳು ಒಂದಾಗಿ ನಿರಂಕುಶ ಪ್ರಭುತ್ವವನ್ನು ಪ್ರಸಾರಗೊಳಿಸುತ್ತಿರುವುದು ರಶಿಯಾ ದೇಶಕ್ಕೆ ಬಹು ಸಂತಾಪವನ್ನುಂಟುಮಾಡಿದೆ. ಆದಕಾರಣ ಈ ಮೂರು ರಾಷ್ಟ್ರಗಳನ್ನು ಬಿಟ್ಟು ಉಳಿದ ರಾಷ್ಟ್ರಗಳಿಗೆ ಆಮಂತ್ರಣ ಕೊಟ್ಟು ಎಲ್ಲವೂ ಸಂಘಟಿತವಾಗಿ ಜರ್ಮನಿಯ ಅತ್ಯಾಚಾರವನ್ನು ನಿಲ್ಲಿಸಬೇಕೆಂತಲೂ ಅದರಲ್ಲಿ ರಶಿಯಾ ಭಾಗವಹಿಸಲು ಸಿದ್ಧವಿದೆಯೆಂತಲೂ ಹೇಳಿದೆ. ರಶಿಯಾ ದೇಶದ ಕಡೆಗೆ ಯಾವ ರಾಷ್ಟ್ರಗಳು ಬರುವವೋ ನೋಡಬೇಕು. ಯಾವ ರಾಷ್ಟ್ರಗಳು ಬಾರದಿದ್ದರೂ ತಾನು ಒಂಟಿಗನಾಗಿಯೇ ಹೇಗೆ ಮಾಡಬೇಕೆಂಬುದನ್ನೂ ಅದು ಯೋಚಿಸಿದೆಯಂತೆ.

---

## ಶಂಕರ ಕಾಲೇಜಿನ ಅಭಿವೃದ್ಧಿ.

ಯಾದಗಿರಿ ಧರ್ಮವೀರ ಶಂಕರಣ್ಣನವರು ೧|| ಲಕ್ಷ ರೂ.ಗಳನ್ನು ಸಂಸ್ಕೃತ ವಿದ್ಯಾಭಿವೃದ್ಧಿಗಾಗಿ ದಾನಮಾಡಿದ್ದರಿಂದ ಯಾದಗಿರಿಯಲ್ಲಿ ಒಂದು ಸಂಸ್ಕೃತ ಕಾಲೇಜ್ ಏರ್ಪಟ್ಟು ಪಂಡಿತ ಚಂದ್ರಶೇಖರ ಶಾಸ್ತ್ರಿಗಳವರ ಪರಿಶ್ರಮದಿಂದ ೪-೬ ವರುಷಗಳಲ್ಲಿಯೇ ಬಹು ಅಭಿವೃದ್ಧಿಗೆ ಬಂದಿದ್ದಿತಷ್ಟೆ.

ಅನಂತರ ಆ ಸಂಸ್ಥೆಯ ಚಾಲಕರಲ್ಲಿ ಭಿನ್ನಾಭಿಪ್ರಾಯವುಂಟಾದುದರಿಂದ ಶ್ರೀ. ಶಾಸ್ತ್ರಿಗಳವರು ಆ ಸಂಸ್ಥೆಯನ್ನು ಬಿಡಬೇಕಾಯಿತು. ಅವರು ಬಿಟ್ಟನಂತರ ಕಳೆದ ೭ ವರುಷಗಳಲ್ಲಿ ಅದು ದಿನೆ ದಿನೆ ಕ್ಷೀಣಸ್ಥಿತಿಗೆ ಬಂದುದು ಅತ್ಯಂತ ವಿಷಾದದ ಸಂಗತಿಯು.

ಈಗ ಪುನಃ ಆ ಸಂಸ್ಥೆಯಲ್ಲಿ ಶ್ರೀ ಚಂದ್ರಶೇಖರ ಶಾಸ್ತ್ರಿಗಳವರು ಪ್ರಿನ್ಸಿಪಾಲರಾದುದು ಸಂತೋಷದ ಸಂಗತಿಯು. ಇನ್ನುಮೇಲೆ ಅವರ ನೇತೃತ್ವದಲ್ಲಿ ಅದು ದಿನೆ ದಿನೆ ಅಭಿವೃದ್ಧಿ ಹೊಂದಿ ವೀರಶೈವ ಸಮಾಜಕ್ಕೆ ಉಪಯುಕ್ತವಾಗುವ ರೀತಿಯಲ್ಲಿ ಸಂಸ್ಕೃತ ಶಿಕ್ಷಣ ಪ್ರಸಾರವಾಗುವುದೆಂದು ನಾವು ನಂಬಿದ್ದೇವೆ.

---

## ಕಾಂಗ್ರೆಸ್ ಮಂತ್ರಿಗಳ "ಭತ್ತೆ"

ಮುಂಬೈ ಪ್ರಾಂತಿಕ ಅಸೆಂಬ್ಲಿಯಲ್ಲಿ ಶ್ರೀ. ಜಾಧವ ಇವರು ಕಾಂಗ್ರೆಸ್ ಮಂತ್ರಿಗಳು ಈ ವರೆಗೆ ಪ್ರವಾಸಕ್ಕೋಸ್ಕರ ಎಷ್ಟು "ಭತ್ತೆ" ತೆಗೆದುಕೊಂಡಿದ್ದಾರೆಂದು ಪ್ರಶ್ನೆಮಾಡಿದರು. ಅದಕ್ಕೆ ಉತ್ತರವಾಗಿ ಮುಖ್ಯ ಮಂತ್ರಿಗಳು ಹೀಗೆ ಹೇಳಿದರು—

ಮಂತ್ರಿಗಳಿಗೆ ಪ್ರತ್ಯೇಕ "ಸಲೂನ" ದಲ್ಲಿ ಪ್ರವಾಸಮಾಡುವ ಅಧಿಕಾರವಿದ್ದರೂ ಅವರು ಹಾಗೆ ಪ್ರವಾಸಮಾಡಲಿಲ್ಲ. ಮೂರನೆಯ ತರಗತಿಯ ಡಬ್ಬಿಗಳಲ್ಲಿ ಕುಳಿತು ಪ್ರವಾಸಮಾಡಲು ಅವರ ಹತ್ತಿರ ಮಹತ್ವದ ಕಾಗದ ಪತ್ರಗಳಿರುತ್ತಿದ್ದುದರಿಂದಲೂ ಕೆಲಸಕ್ಕೆ ತೊಂದರೆಯಾದುದರಿಂದಲೂ ಎರಡನೆಯ ತರಗತಿಯ ಡಬ್ಬಿಗಳಲ್ಲಿ ಕುಳಿತೇ ಪ್ರಯಾಣಮಾಡಿದರು. ಆಯಾಯ ಮಂತ್ರಿಗಳ ವೆಚ್ಚದ ವಿವರ ಹೀಗಿದೆ—

(೧) ಮುಖ್ಯ ಮಂತ್ರಿಗಳು— ರೂ. ೯೭೫-೭-೦ (೨) ಆರ್ಥಿಕ ಮಂತ್ರಿಗಳು ೩೮೯-೮-೦ (೩) ಗೃಹಮಂತ್ರಿಗಳು ೧೮೨-೧೫-೦ (೪) ಆರೋಗ್ಯಶಾಖೆಯ ಮಂತ್ರಿಗಳು— ೧೧೦-೧೦-೦ (೫) ಕಂದಾಯ ಮಂತ್ರಿಗಳು— ೭೨೨-೧೨-೦ (೬) ಪಬ್ಲಿಕ್ ವರ್ಕ್ಸ ಶಾಖಾ ಮಂತ್ರಿಗಳು— ೨೧೧೩-೦-೦ (೭) ಸ್ಥಾನಿಕ ಸ್ವರಾಜ್ಯ ಮಂತ್ರಿಗಳು— [illegible]

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರ, ದಾಕ್ಷಿಣ್ಯಪರನಾನಲ್ಲ, ಲೋಕವಿರೋಧಿ, ಶರಣನಾರಾರಿಗೂ ಅಂಜುವವನಲ್ಲ !
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೨೮ ನೆಯ ಮಾರ್ಚ ೧೯೩೮. | ಸಂಚಿಕೆ ೩೦ |
|---|---|---|

ಜನಸೇವೆಯೇ ದೇವರಸೇವೆ.

## ನಾಳೆ ಏಕೀಕರಣದ ದಿನ.

ಕರ್ನಾಟಕ ಏಕೀಕರಣದ ದಿನವನ್ನು
ನಾಳೆ (ತಾ. ೨೯ ನೆಯ ಮಂಗಳವಾರ)
ಕನ್ನಡ ನಾಡಿನ ಎಲ್ಲ ಕಡೆಗೂ
ಅತ್ಯದ್ಭುತವಾಗಿ ಆಚರಿಸಿರಿ.

## ಅಕ್ಕನ ಹುಣ್ಣಿಮೆ ಬಂತು.

ತಾ. ೧೪-೪-೩೮ ನೆಯ ದಿನ
ಎಲ್ಲ ಕಡೆಗೂ ಸಂಭ್ರಮದಿಂದ
ನಡೆಯಿಸಲು
ಈಗಲೇ ಸಿದ್ಧತೆಗಳನ್ನು ಮಾಡಿಕೊಳ್ಳಿರಿ.

ಅಕ್ಕನ ಉಪದೇಶ
ಎಂಬ ಚಿಕ್ಕ ಪುಸ್ತಕಗಳನ್ನು ಜಾಗ್ರತೆ
ತರಿಸಿಕೊಳ್ಳಿರಿ.



ಅಕ್ಕಮಹಾದೇವಿ.

ದೇಹವೇ ದೇವಾಲಯ.



# ಶರಣ ಸಂದೇಶ
THE SHARANA SANDESHA.




## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. ಆಲಮಟ್ಟಿ-ಸೋಮವಾರ ತಾರೀಖು ೨೮ ನೆಯ ಮಾರ್ಚ ೧೯೩೮. ಸಂಚಿಕೆ ೩೦


## ಮಹತ್ವದ ಸುದ್ದಿಗಳು.

—XOX—

—ಜಗನ್ನಾಥ ದೇವರು ಸವರ್ಣೀಯ ಹಿಂದುಗಳ ನಾಥನೇ ಮಾತ್ರ ಆಗಿದ್ದರೆ ಎಂದರೆ "ಹರಿಜನ" ಪ್ರವೇಶಕ್ಕೆ ಅವಕಾಶ ಕೊಡದಿದ್ದರೆ ಆ ದೇವಾಲಯಕ್ಕೆ ನಾನೂ ಹೋಗುವುದಿಲ್ಲೆಂದು ಮಹಾತ್ಮಾ ಗಾಂಧಿಯುವರು ಬೀರಬಾಯು ಎಂಬಲ್ಲಿಯ ತಮ್ಮ ಭಾಷಣದಲ್ಲಿ ಹೇಳಿದರು.

—ಗಾಂಧೀಜಿಯವರೂ ಪಂಡಿತ ಜವಾಹರಲಾಲರೂ ಬರೆದ ಪತ್ರಗಳಿಗೆ ಬ್ಯಾ. ಜಿನ್ನಾರವರು ಉತ್ತರ ಕೊಟ್ಟಿದ್ದಾರಂತೆ. ಇನ್ನೂ ಪತ್ರವ್ಯವಹಾರ ನಡೆದಿದೆಯಂತೆ.

—ದಿಲ್ಲಿ ಅಸೆಂಬ್ಲಿಯಲ್ಲಿರುವ ಎಲ್ಲ ಮುಸಲ್ಮಾನ್ ಸಭಾಸದರೂ ಸೇರಿ ಒಂದೇ ಪಕ್ಷವನ್ನು ಮಾಡಬೇಕೆಂದೂ ಅದು ಮುಸ್ಲಿಂ ಲೀಗಿಗೆ ಸಂಬಂಧಪಡಬೇಕೆಂದೂ ಗೊತ್ತಾಗಿದೆ. ಇದಕ್ಕೆ ಬ್ಯಾ. ಜಿನ್ನಾರವರೇ ಅಧ್ಯಕ್ಷರಾಗಿದ್ದಾರೆ.

—ನಾಗಪುರದಲ್ಲಿ ಪ್ರಚಂಡ ಸಭೆ ಸೇರಿ ಮಿ. ಶರೀಫರು (ಗೃಹ ಮಂತ್ರಿಗಳು) ಆದಿ ಹಿಂದು ಹುಡುಗಿಯ ಮೇಲೆ ಬಲಾತ್ಕಾರ ಮಾಡಿದ ಅಪರಾಧಿಯನ್ನು ಬಿಟ್ಟಿದ್ದಕ್ಕಾಗಿ ತೀವ್ರತರವಾದ ನಿಷೇಧವನ್ನು ಪ್ರದರ್ಶಿಸಿದರು. ಇದರಲ್ಲಿ ಮಹಿಳೆಯರೇ ಬಹು ಮುಂದರಿದಿದ್ದರು.

—ಮಧ್ಯಪ್ರಾಂತ ಅಸೆಂಬ್ಲಿಯ ಕಾಂಗ್ರೆಸ್ ಪಕ್ಷದ ಸಭಾಸದರೆಲ್ಲರೂ ಸಭೆ ಸೇರಿ ಮಿ. ಶರೀಫರ ಅನ್ಯಾಯವನ್ನೇ ಸಮರ್ಥಿಸಿದರು. ಈ ತಮ್ಮ ಅಭಿಪ್ರಾಯವನ್ನು ವರ್ಕಿಂಗ್ ಕಮಿಟಿಗೆ ಕಳಿಸುತ್ತಾರಂತೆ. ಬಹು ಚೆನ್ನಾಗಿದೆ ಇವರ ತೀರ್ಮಾನ!

—ನಾಳೆ (ತಾ. ೨೯) ಕರ್ನಾಟಕದಲ್ಲೆಲ್ಲಾ ಕರ್ನಾಟಕ ಏಕೀಕರಣದ ದಿನವನ್ನಾಚರಿಸಿ ಮುಂಬೈ ಮತ್ತು ಮದ್ರಾಸ್ ಅಸೆಂಬ್ಲಿಗಳಲ್ಲಿ ಬರಲಿರುವ ಕರ್ನಾಟಕ ಏಕೀಕರಣದ ಗೊತ್ತುವಳಿಗೆ ಒಪ್ಪಿಗೆಯನ್ನು ಕೊಟ್ಟು ತಂತೀ ಮೂಲಕ ಮುಂಬೈ ಮತ್ತು ಮದ್ರಾಸ್ ಅಸೆಂಬ್ಲಿಗಳ ಕಾಂಗ್ರೆಸ್ ಪಕ್ಷದ ಪ್ರಮುಖರಿಗೆ ತಿಳಿಸಬೇಕೆಂದು ಕರ್ನಾಟಕ ಏಕೀಕರಣದ ಸಂಘಾಧ್ಯಕ್ಷರಾದ ಶ್ರೀ. ದಾತಾರ ಬಳವಂತರಾಯರು ಪ್ರಕಟಿಸಿದ್ದಾರೆ.

—ರಾಯಚೂರು ಜಿಲ್ಲಾ ಮಸ್ಕಿಯಲ್ಲಿ ಭೂಶೋಧನೆಯು ನಡೆದಿದೆಯಷ್ಟೆ. ಅಲ್ಲಿ ಈಗ ದೊರೆತ ಒಂದು ಸ್ತ್ರೀವಿಗ್ರಹ, ಅನೇಕ ಮಣ್ಣಿನ ಪಾತ್ರೆ, ಕಲ್ಲಿನ ಆಯುಧ, ಮೊದಲಾದವುಗಳಿಂದ ಮೂರು ಸಾವಿರ ವರುಷಗಳ ಹಿಂದೆ ಅದೊಂದು ಕೈಗಾರಿಕೆಯ ಮುಖ್ಯ ಪಟ್ಟಣವಾಗಿದ್ದಿತೆಂದು ಊಹಿಸಲಾಗಿದೆ.

—ಸಾಖಳಿ ಆಟದಿಂದ ಬೆಳಗಾವ ಜಿಲ್ಲೆಯಲ್ಲಿ ಬಹು ಹಣಗಳಿಸಿ ಪ್ರಸಿದ್ಧಿಗೆ ಬಂದಿದ್ದ ಸಾವಜಿಯುವರ ಮೇಲಿನ ವ್ಯಾಜ್ಯವು ಗೋಕಾಕದ ೧ ನೇ ವರ್ಗದ ನ್ಯಾಯಾಧೀಶರಾದ ಶ್ರೀ. ಚೆಟ್ಟಿಯವರಲ್ಲಿ ನಡೆದಿತ್ತು. ಅಪರಾಧಿಗೆ ೩ ವರುಷ ಕಠಿಣ ಶಿಕ್ಷೆ ೧ ಸಾವಿರ ರೂ. ದಂಡವನ್ನು ನ್ಯಾಯಾಧೀಶರು ವಿಧಿಸಿದರು.

—ಮೈಸೂರಿನ ಅನೇಕ ಪ್ರಮುಖ ವೀರಶೈವರು ಶ್ರೀ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾ ಸ್ವಾಮಿಗಳವರನ್ನು ತಮ್ಮ ತಮ್ಮ ಮನೆಗೆ ವೈಭವದೊಡನೆ ಬರಮಾಡಿಕೊಂಡು ಭಕ್ತಿಪುರಸ್ಸರವಾಗಿ ಕಾಣಿಕೆಯನ್ನು ಅರ್ಪಿಸುತ್ತಿದ್ದಾರೆ. ಪ್ರತಿನಿತ್ಯ ಮಹಾ ಜಗದ್ಗುರು ಸನ್ನಿಧಿಯಲ್ಲಿ ವಿದ್ವಾಂಸರ ವ್ಯಾಖ್ಯಾನಗಳು ನಡೆಯುತ್ತಲಿವೆ. ಸ್ತ್ರೀ ಪುರುಷರು ವಿಶೇಷವಾಗಿ ಸಭೆಗೆ ಬರುತ್ತಲಿದ್ದಾರೆ.

—ಶ್ರೀ. ಗುಪ್ತರು ಮೈಸೂರು ದೇಶದಲ್ಲಿರಕೂಡದೆಂದು ಮಾಡಲ್ಪಟ್ಟಿದ್ದ ಪ್ರತಿಬಂಧವು ಇಷ್ಟರಲ್ಲೇ ನಿವಾರಣೆಯಾಗುವದೆಂದು ತಿಳಿದಿದೆ.

—ಜನವಾಣಿ ಪತ್ರಿಕೆಗಿದ್ದ ಪ್ರತಿಬಂಧವು ನಿವಾರಣೆಯಾದುದರಿಂದ ಬರುವ ಎಪ್ರಿಲ್ ೧ ನೆಯ ತಾರೀಖಿನಿಂದ ಜನವಾಣಿ ದಿನ ಪತ್ರಿಕೆಯು ಪುನಃ ಬೆಂಗಳೂರಲ್ಲಿ ಪ್ರಕಟವಾಗುವದು.

# ಅಕ್ಕಮಹಾದೇವಿ.

(ಗ್ರಂಥಾವಲೋಕನ)

## ಅಕ್ಕನ ವಚನಗಳು ಕನ್ನಡ ವಾಙ್ಮಯಕ್ಕೆ ರತ್ನದ ತುಂಡುಗಳಾಗಿವೆ. ಅವಳ ಆಂತರಂಗಿಕ ಜೀವನಕ್ಕೆ ಕನ್ನಡಿಗಳಾಗಿವೆ.

ಲೇ:— ಶ್ರೀ ಚಂದ್ರಶೇಖರದೇವರು, ಅಡ್ನೂರು.

ತಾಯ್ನುಡಿಯ ಅಭಿಮಾನಿಗಳಾದ ರಂ. ಶ್ರೀ. ಮುಗುಳಿಯವರು, ಮಹಾತಾಯಿಯಾದ ಸಾಹಿತ್ಯದ ಸುಗ್ಗಿಯಾದ ಅಕ್ಕಮಹದೇವಿಯ ರಮ್ಯ ಜೀವನವನ್ನು ನಾಟಕರೂಪವಾಗಿಯೇ ವಚನಶೈಲಿಯಲ್ಲಿಯೇ ಬಹು ಸರಿಯಾಗಿಸಾರಿದ್ದಾರೆ. ಇದನ್ನು ಸವಿದಷ್ಟೂ ಸವಿಯುವ ತವಕವು ಹೆಚ್ಚುತ್ತಿದೆ. ಇದು ಮೂರಂಕಿನ ನಾಟಕ, ಇದರ ಬಹಿರಂಗದಲ್ಲಿ ಅಕ್ಕನದೊಂದು ಭಾವಚಿತ್ರವಿದೆ. ಈ ಭಾವಚಿತ್ರವು ಪ್ರೇಕ್ಷಕರ ಕಣ್ಮನಗಳನ್ನು ಸಂಪೂರ್ಣ ಸೆಳೆದುಬಿಡುತ್ತದೆ. ಅಕ್ಕನು ಸಮಾಧಿಯಲ್ಲಿ ಕಣ್ಮುಚ್ಚಿ ಕೈಚಾಚಿ ಕುಳಿತಿರುವ ಠೀವಿಯನ್ನೂ ಮುಖದಮುದ್ರೆಯನ್ನೂ ನೋಡುವವರಂತೂ ತಾವೂ ಅವಳಂತೆ ಭಾವಾವಿಷ್ಟರಾಗುತ್ತಾರೆ ಅವಳ ಅಂಗಕಾಂತಿಯನ್ನೂ ಚೆನ್ನಮಲ್ಲಿಕಾರ್ಜುನನ ಒಲುವನ್ನೂ ಗಿಡದ ಬೆಡಗನ್ನೂ ನೋಡಿದಂತೆ ನೋಡುವ ಆಶೆಯು ಹೆಚ್ಚುತ್ತಹೋಗುತ್ತದೆ ಒಟ್ಟಿನಲ್ಲಿ ಆ ಚಿತ್ರವೆಲ್ಲವೂ ಚಿತ್ತಾಕರ್ಷಕವಾಗಿದೆ, ಭಾವಭರಿತವಾಗಿದೆ.

ಇವರ ಕೃತಿಯು (ನಾಟಕವು) ಇವರೇ ಮುನ್ನುಡಿಯಲ್ಲಿ "ಮಹಾವ್ಯಕ್ತಿಗಳ ವ್ಯಕ್ತಿತ್ವವು ಎದ್ದುನಿಲ್ಲುವಂತೆ ಸೂಕ್ಷ್ಮ ಸುಂದರವಾದ ಕಲಾರೂಪದಲ್ಲಿ ಅವರ ಮೂರ್ತಿಗಳನ್ನು ನಾವು ಕಡೆಯಬೇಕು. ಅದರಲ್ಲಿ ಸಾಹಿತ್ಯರೂಪವು ಜೀವಂತವಾಗಿ ಆ ವ್ಯಕ್ತಿಗಳನ್ನು ನಿರ್ಮಿಸಿ ಇಂದಿನ ಕನ್ನಡ ಜನಮನದಲ್ಲಿ ಒಂದು ಸ್ಫೂರ್ತಿಮಂದಿರವನ್ನು ಸ್ಥಾಪಿಸಬೇಕು." ಎಂದು ಹೇಳಿರುವಂತೆಯೇ ಚಿತ್ರಿತವಾಗಿದೆ. ಇದು ಬಹಿರಂಗ ಭೂಮಿಗೆ ಬಾರದಂತಿದೆಯಾದರೂ ಅಂತರಂಗಕ್ಕೆ ( ಓದಿತಲ್ಲೀನರಾಗುವದಕ್ಕೆ ) ಬಹು ಸೊಗಸಾಗಿದೆ; ಸರಸಾಗಿದೆ. ಅಕ್ಕನ ವಾಙ್ಮಯದಿಂದ ಲೇಖಕರ ವಾಣಿಕುಣಿದಂತೆ, ಲೇಖಕರ ಈ ಕೃತಿಯ ಶೈಲಿ, ಸೊಬಗೂ, ಪಾತ್ರರಚನೆ, ವಚನಗಳಯೋಜನದ ಔಚಿತ್ಯ ಮೊದಲಾದವುಗಳು, ಓದುಗರ ತಲೆದೂಗಿ ತಾಳಹಾಕುವಂತಿವೆ. ಇವರು ಈ ಗ್ರಂಥಕ್ಕೆ ಬರೆದ ವಿಚಾರ ಪರಿಪ್ಲುತವಾದ ಮುನ್ನುಡಿಯು ಈ ನಾಟಕಮಂದಿರಕ್ಕೆ ಹೊಳಪಿನ ಹೊಂಗಳಸನ್ನಿಟ್ಟಂತಾಗಿದೆ. ಇದರ ವಿಚಾರವಾಗಿ ನಾವೆಷ್ಟು ಬರೆದರೂ ಅದು ಸ್ವಲ್ಪವೇ.

'ಉಸುಬಿನ ಬುಡದಲ್ಲಿ ತಿಳಿಯೊರತಿಯುದೆ ಎಂದು ನಾವು ಅರಿತಿಲ್ಲವೆ?' 'ಅವಳ ವಚನಗಳ ಆತ್ಮಚರಿತ್ರೆಯೊಂದೇ ಅವಳ ಕಾಲದಲ್ಲಿ ಹುಟ್ಟಿದುದು.' 'ಆ ಅಕ್ಕನ ವಚನಗಳು ಕನ್ನಡ ವಾಙ್ಮಯಕ್ಕೆ ರತ್ನದ ತುಂಡುಗಳಾಗಿವೆ.' 'ಅವಳ ಅಂತರಂಗಿಕ ಕನ್ನಡಿಗಳಾಗಿವೆ'

ಎಂಬ ಮಾತುಗಳು ಬಹು ಬೆಲೆಬಾಳುವಂಥವುಗಳಾಗಿವೆ. ಇಲ್ಲಿ ಇನ್ನೊಂದು ವಿಚಾರ. ಇವರು ಅಕ್ಕನ ನಗ್ನತೆಯ ವಿಚಾರದಲ್ಲಿ ವಾದವನ್ನೆತ್ತಿ— "ಅವಳ ಆಧ್ಯಾತ್ಮಿಕ ಧೈರ್ಯ, ಸಾಹಸ ಅಸಾಮಯಿಕ ಆಚಾರ ವಿಚಾರ ಇವುಗಳಿಂದ ನಗ್ನತೆಯು ಅಕ್ಕನಲ್ಲಿ ಅಸಹಜವಲ್ಲವೆಂದು ನಾನು ಬಗೆದಿರುವೆನು." ಎಂದು ತಮ್ಮ ಅಂತ್ಯ ಅಭಿಪ್ರಾಯವನ್ನು ಅಭಿವ್ಯಕ್ತಮಾಡಿದ್ದಾರೆ. ಇದು ಒಪ್ಪತಕ್ಕ ಮಾತಾಗಿದೆ. ಇದಕ್ಕೆ ಇಂದು ಒಂದು ಪ್ರಬಲ ಪ್ರಮಾಣವೂ ಸಿಕ್ಕು ಸಂಶಯವು ಅಸಂಶಯವಾಗಿ ನಿಂತಿದೆ. ಸಾಕ್ಷಾತ್ ಅಕ್ಕಗಳೇ ತಮ್ಮ ಯೋಗಾಂಗ ತ್ರಿವಿಧಿಯಲ್ಲಿ—

ಉಟ್ಟ ಸೀರೆಯ ಸೆಳೆದು| ಕೊಟ್ಟ ತೊಡಿಗೆಯ ಹರಿದು|
ಬಿಟ್ಟೆನೋ ನಾನು ಬಿಡು ಮುಡಿಯ ಎಲೆ ದೇವ! |
ಕೊಟ್ಟೆನೋ ಎನ್ನ ತನುಮನವ ||೮೨||

ಎಂದು ಸ್ಪಷ್ಟವಾಗಿ ಹೇಳುವರು. ಇದೆಲ್ಲ ಮುನ್ನುಡಿಯ ಮಾತು. ಇವರ ಈ ನಾಟಕವು ಕೌಶಿಕನ ಓಲಗದ ಮುಕ್ತಾಯದೊಡನೆ ಆರಂಭವಾಗುತ್ತದೆ. ಮೊದಲನೆಯ ದೃಶ್ಯದಲ್ಲಿ ಆ ಸಭೆಯಿಂದ ಹೊರಹೊರಟ ಐದಾರು ಸಭಿಕರ ಸೊಗಸಿನ ಸಂವಾದವನ್ನು ಓದಿ ನೋಡಿಯೇ ಕಥಾನಾಯಿಕೆಯು ಸಭೆಯಲ್ಲಿ ಯಾವ ಭಾಷೆಯಲ್ಲಿ ಎಂಥ ಗೌರವದಲ್ಲಿ ನಿಂತು ಮಾತಾಡಿರಬೇಕು. ಎಂಬ ಯೋಚನೆಯು ಎದುರಿಗೆ ಬಂದು ನಿಲ್ಲುತ್ತದೆ. ಅವಳ ಆ ಜಾಣ್ನುಡಿಯ ಸೊಬಗನ್ನು ಇನ್ನೂ ವಿಶದವಾಗಿ ತಿಳಿಯಬೇಕು. ಎಂದು ಮನಸ್ಸು ಹಾತೊರೆಯುತ್ತದೆ. ಸುಂದರವಾದ ಆ ಅಲ್ಪ ಸಂವಾದವು ಓದುಗರ ಬಾಯಿಂದ ಅಕ್ಕಗಳು ಓಲಗದಲ್ಲಿ 'ಚಿಕ್ಕೆಯಂತೆ ಹೊಳೆದು ಚಕ್ಕನೆ ಹೋದಂತಾಗುತ್ತದೆ. ೩-೪ ನೆಯವರು ಅಕ್ಕನು ಸಭೆಯಲ್ಲಾಡಿದ ಸುಂದರ ಮುತ್ತುಗಳೆರಡನ್ನು ನಮಗೆ [ಓದುಗರಿಗೆ] ತೋರಿಸುವರಾದರೂ ಅವುಗಳಿಂದ ತೃಪ್ತಿತೀರುವದಿಲ್ಲ. ಅಷ್ಟನಾದರೂ ತೋರ್ಪಡಿಸಿದ ಅವರೀರ್ವರಿಗೆ ನಾವು ಧನ್ಯವಾದವನ್ನರ್ಪಿಸಲೇಬೇಕು.

ಸಭಿಕರಿಗೆ ಚಿಕ್ಕೆಯಂತೆ ಚಕ್ಕನೆ ಹೊಳೆದು ಹೋದ ಅಕ್ಕನು ಕೌಶಿಕನ ಎದೆಯಲ್ಲಿ ಮಾತ್ರ ಆಳವಾಗಿ ಸಿಕ್ಕಿಬಿದ್ದಿದ್ದಳು. ಆತನ ಕಣ್ಮನಗಳಲ್ಲಿ ಅವಳ ಸುಂದರ ಸ್ವರೂಪವು ತಾಂಡವಾಡುತ್ತಲೇ ಇದ್ದಿತು. ಅಂತೆಯೇ ಸೇವಕರು ಅವನಿಗಾಗಿ ತಂದ ತಿನುಸುಗಳು ತಿರುಗಿ ಹಾಗೆಯೇ ಹೋಗುವವು. ರಾಜ್ಯ ಸೂತ್ರದ ಓಲೆಗಳನ್ನು ತೋರಿಸಲು ತಂದ ಬಂದ ಪ್ರಧಾನಿಯು ಮರುಮಾತಾಡದೆ ಮೆತ್ತಗೆ ಹಿಂದಿರುಗುವನು. ಪಕ್ಕನೆ ಆ ಮೈಸಿರಿಯು ಅರಸನನ್ನು ಅನಿತೊಂದು ಕೈಸೆರೆ ಹಿಡಿದಿತ್ತು.

ಮರುದಿನ ಅರಸನು ಲೆಂಕನೋರ್ವನನ್ನು ಅಕ್ಕನ ಮನೆಗೆ ಅಟ್ಟುವನು. ಆತನು ತಂದ ಓಲೆಯನ್ನು ಮನೆಯ ಮುಂದಿನ ಕಟ್ಟೆಯಲ್ಲಿ ಕುಳಿತ ಅಕ್ಕನ ಕೈಯಲ್ಲಿ ಕೊಟ್ಟು ಅವಳ ಹೆಸರನ್ನು ತನ್ನ ಹೃದಯದಲ್ಲಿಟ್ಟುಕೊಂಡು ಹಿಂದಿರುಗುವನು. ಆ ಓಲೆಯು ಅಕ್ಕನಿಗೆ ಮರುಕನ್ನು ಹುಟ್ಟಿಸುವದು. ತೆರಣಿಯ ಹುಳು ತನ್ನ ಪ್ರೇಮದ ಎಳೆಯಿಂದ ತಾನೆ ಸುತ್ತಿ ಸಾಯುವಂತೆ, ಸಭೆಗೆ ಹೋದ ನನ್ನ ಸ್ನೇಹವೇ ನನ್ನನ್ನು ತಿನ್ನತೊಡಗಿತಲ್ಲ. ಎಂದು ಮರಗುವಳು. ಆ ಮರುಗಿನಲ್ಲಿಯೇ ಕೈಯೋಲೆಯನ್ನು ಬಿಚ್ಚುವಳು. ಬಿಚ್ಚಿದ ಆ ಓಲೆಯು ಬೆಳ್ದಿಂಗಳಲ್ಲಿ ಬೆಳ್ನಲ್ಲಿಗೆ ಅರಳಿದಂತಾಗಿದೆ. ಓದತೊಡಗುವಳು ಓದಿದಂತೆ ಕೌಶಿಕ ದೊರೆಯ ಎದೆಯೊಲವಿನ ಒಡನಾಟ, ತನ್ನ ಸೌಂದರ್ಯ ಸವಿನುಡಿಗಳಿಂದಾದ ಅವನ ಮನದೊಲವು, ತನ್ನ ಕಾಂಬ ಆತನ ತವಕ, ಅವಳ ಕಣ್ಣೆದುರು ಕಟ್ಟಿದಂತಾಗಿವೆ. ಅವಳ ಮನಸ್ಸು ಆ ಪ್ರೇಮಕ್ಕೆ ಒಲಿದಿದೆ. ಆ ನೆಕ್ಕೀಯ ನುಡಿಗಳನ್ನು ಧಿಕ್ಕರಿಸಿ ನಿಲ್ಲುವದಕ್ಕೆ ಧೈರ್ಯವು ಆಕೆಯ ಮೆಲ್ಲೆದೆಗೆ ಸಲ್ಲದಂತಾಗಿದೆ. 'ಒಲವಿರುವಲ್ಲಿ ಒಲ್ಲೆನುವುದೆ?' ಎಂದು ಮನಸ್ಸಿನಲ್ಲಿ ನಿರ್ಧರಿಸುವಳು. ಮರುದಿನ ಅರಸನೋಲಗಕ್ಕೆ ಹೋಗುವ ಸ್ನೇಹವು ಅವಳ ಹೃದಯದೊಳು ಸೇರುವದು. ಅವಳ ತಾಯ್ತಂದೆಗಳ ಕೂಗಾಟಕ್ಕೆ ಮನೆಯೊಳು ಸೇರುವಳು.

ಇತ್ತ ಕೌಶಿಕನು ಕುಸುಮವಾಟಿಕೆಯಲ್ಲಿ ಕುಳಿತು ಕಾಮುಕರಿಗೆ ತಕ್ಕಂತೆ ಕಾತರಿಸುತ್ತಿರುವನು. ತನ್ನ ಪರಿಜನಕೆ ಅಕ್ಕನ ಹೆಸರಿನಕ್ಕರಗಳನ್ನು ಅಲರುಗಳಿಂದ ಹೆಣೆಯ ಹೇಳುವನು. ಹೆಣೆದ ಹೆಸರನ್ನು ಅಂದುಕೊಂಡು ಆನಂದಪಡುವನು. ಅಷ್ಟರೊಳಗೆ ಅಲ್ಲಿಗೆ ಅಕ್ಕಗಳ ಆಗಮನವಾಗುವದು. ಆಗ ಅವರೀರ್ವರಿಗೂ ನಡೆವ ಸಂವಾದದ ಸೊಬಗು ಅನಿತಿನಿತಲ್ಲ. ಆತನ ಗುಣಕ್ಕೆ ತಕ್ಕ ಕಾಮ್ಯ ಪ್ರೇಮದ ಪ್ರಶ್ನೆಗಳು ಅವಳ ಅಂತರಂಗಿಕ ನಿಷ್ಕಾಮ ನಿರ್ಮಳ ಪ್ರೇಮದ ಉತ್ತರಗಳು ಎಂತಹರನ್ನೂ ಬೆರಗುಗೊಳಿಸುತ್ತವೆ. ಕೊನೆಗೆ ಅಕ್ಕಗಳು ಅರಸನಿಗೆ ಮರು ದಿನ ಮರಳಿ ಬರುವ ಭರವಶವನ್ನು ಕೊಟ್ಟು ಹೊರಳಿ ಹೋಗುವಳು.

### ೨ ನೆಯ ಅಂಕು.

ಹಿಂದೆ ನಡೆದ ಈ ಎಲ್ಲ ಸಂಗತಿಯನ್ನು ನಾಲ್ಕೈದು ಹೆಮ್ಮಕ್ಕಳು ಕೂಡಿ ಅಕ್ಕನ ಮನೆಯ ಮುಂದೆ ನಿಂತು ಮಾತಾಡುತ್ತಾರೆ. ಅವರು ಹಾಗೆ ಮಾತಾಡುವದು ಅವರ ಸ್ತ್ರೀ ಸ್ವಭಾವಕ್ಕೆ ಸಹಜವಾಗಿದೆ. . ಅವರಲ್ಲಿ ಐದನೆಯವಳು ಅಕ್ಕನ ಸಹಜ ಶ್ರೇಷ್ಠ ಮಾರ್ಗವನ್ನು ಕಂಡು ನಿಜವಾದುದನ್ನು ಹೇಳುವಳು. ಅದನ್ನು ಸಹಿಸದೆ ಉಳಿದವರೆಲ್ಲರೂ ಸೇರಿ ಹಂಗಿಸುತ್ತ ಹೋಗುವರು. ಇದೂ ಒಂದು ಸ್ತ್ರೀಯರ ಸಹಜ ಸ್ವಭಾವದ ಸುಂದರ ಚಿತ್ರ. ಇದನ್ನು ಸುಮತಿಯು ಕೇಳಿ ತನ್ನ ಪತಿಗೆ ತಿಳಿಸುವಳು. ಇಬ್ಬರೂ ಆ ಹಾದಿಯ ಹೆಂಗಸರ ಹೀಯಾಳಿಕೆಗೆ ಶೋಕಾಕುಲರಾಗುವರು. ಹೀಗಾಗುವದು ಅವರಿಗೆ ಅವರ ಸ್ವಭಾವಕ್ಕೆ ನ್ಯಾಯವಾದುದಾಗಿದೆ. ಅದೇ ಸಮಯಕ್ಕೆ ಅಲ್ಲಿಗೆ ಆಕ್ಕನು ಬರುವಳು. ಅಳುವ ಕಾರಣವನ್ನು ಕೇಳುವಳು. ತಾಯಿಯು ಉತ್ತರಿಸುವದನ್ನು ಬಿಟ್ಟು ಇನ್ನಿಷ್ಟು ಅಳಲು ಆರಂಭಿಸುವಳು. ತಂದೆಯ ಕೇಳುವಳು. ಆತನಿಗೂ ಕಂಠವು ಬಿಗಿದುಬರುವುದು. ಈವಾಗ ಓದುಗರಿಗೆ 'ಸ್ವಜನಸ್ಯಹಿ ದುಃಖಮಗ್ರತೋ ವಿವೃತದ್ವಾರಮಿವೋಪಜಾಯತೇ' ಎಂಬ ಕವಿಕಾಲಿದಾಸೋಕ್ತಿಯೂ 'ಸಂಭಾವಿತಸ್ಯಚಾ ಕೀರ್ತಿರ್ಮರಣಾದತಿರಿಚ್ಯತೇ' ಎಂಬ ಭಗವದುಕ್ತಿಯೂ ನೆನವಿಗೆ ಬಾರದೆ ಉಳಿಯುವದಿಲ್ಲ. ಅನಂತರ ಹೇಗೋ ಶೋಕವನ್ನು ಸಹಿಸಿಗೊಂಡು ನಡೆದ ಕತೆಯನ್ನು ಇಬ್ಬರೂ ಹೇಳುವರು. ಅದಕ್ಕೆ ಅಕ್ಕನು 'ಮೋಹವಳಿದ ನೇಹಕೂ ಈ ನಿಂದೆಯ ಕುಂದಕವೆ?' ಎಂದು ತನ್ನ ನೈಸರ್ಗಿಕ ಧೈರ್ಯದ ಪ್ರಶ್ನೆ ಮಾಡುವಳು. ಹಾಗೆಯೇ ಸಂವಾದ ನಡೆಯುವದು. ಅಷ್ಟರಲ್ಲಿ ಅರಮನೆಯಿಂದ ರಥ ಬರುವದು. ಅಕ್ಕನು ಹೊರಟುನಿಲ್ಲುವಳು. ತಾಯಿ ತಂದೆಗಳು ಬೇಡೆಂದು ಅಡ್ಡಬರುವರು. ಆದರೂ ಅವರ ಮಾತು ಮೀರಿ ಹೊರಡುವಳು. ತಾಯಿಯು ಕೊನೆಗೆ ನಮ್ಮ ಮಾತನ್ನು ಕೇಳದಿದ್ದರೂ ಜನಕ್ಕಾದರೂ ಅಂಜಿಬಿಡು. ಎಂದು ಹೇಳಿಕೊಳ್ಳುವಳು. ಅದಕ್ಕೂ ತನ್ನ ವೀರವಿರತಿಗೆ ಒಪ್ಪುವಂತಹ ಉತ್ತರವನ್ನು ಕೊಟ್ಟು ಹೊರಟುಬಿಡುವಳು.

ಇಲ್ಲಿ ಲೇಖಕರು ಅಕ್ಕನನ್ನು ತಾಯ್ತಂದೆಗಳ ಮಾತನ್ನು ಲೆಕ್ಕಿಸದ ಕಲ್ಲೆದೆಯವಳನ್ನಾಗಿ ಚಿತ್ರಿಸಿದ್ದರೂ ಅದು ವಿಚಾರಾಂತ್ಯದಲ್ಲಿ ಸೂಕ್ತವಾಗಿ ಪರಿಣಮಿಸುತ್ತದೆ. ಏಕೆಂದರೆ ಅವಳು ತಾಯ್ತಂದೆಗಳ ಮಾತನ್ನು ಮೀರಿದರೂ ತನ್ನ ವ್ಯಕ್ತಿತ್ವವನ್ನು ಹಾಳುಮಾಡಿಕೊಳ್ಳಲಿಲ್ಲ. ತನ್ನ ಮನೋಧೈರ್ಯವನ್ನೂ ಮುಂದಿನ ಜೀವನದ ಉಜ್ವಲತೆಯನ್ನೂ ಭಂಗಪಡಿಸಿಕೊಳ್ಳಲಿಲ್ಲ. ಆದ್ದರಿಂದ ತಾಯ್ತಂದೆಗಳ ಮಾತನ್ನು ಮೀರಿದ ಅಕ್ಕನ ಅಪರಾಧವು ಅವಳ ಮುಂದಿನ ಜಾಜ್ವಲ್ಯ ಜೀವನದಲ್ಲಿ ಪರ್ಯವಸಾನವಾಗುತ್ತದೆ.

ಇತ್ತ ಅರಮನೆಯಲ್ಲಿ ಅರಸನು ಅಕ್ಕನ ಬರುವಿಕೆಗೆ ಕಾತರಿಸುತ್ತ ಕುಳಿತಿರುವನು. ಬೇರೆ ಯಾವ ಕಾರ್ಯಗಳೂ ಆತನಿಗೆ ಬೇಡಾಗಿದ್ದವು. ಅಕ್ಕನು ಬರುವ ದಾರಿಯಲ್ಲಿಯೇ ಆತನ ಕಣ್ಮನಗಳು. ಪ್ರಧಾನಿಯು ತಂದ ಬೇರೆ ಜೈನದರಸುಕುವರಿಯರ ಕಮನೀಯ ಚಿತ್ರಗಳೂ ಸಹ ಆತನ ಕಣ್ಮನಸ್ಸುಗಳನ್ನು ತಣಿಸದಾಗಿದ್ದವು. ಆತನಿಗೆ ಅಕ್ಕನ ಕಾಣುವ ಕಾತರವೇ ಕಾತರ. ಅಷ್ಟರಲ್ಲಿ ಅಕ್ಕನೂ ಬರುವಳು. ಅರಸನಿಗೆ ಪೊಡಮಡುವಳು. ಅದಕ್ಕೆ ಅರಸನು 'ಇದೇನು ನಡವಳಿಕೆ ಅರಿಗಾರು ಬಾಗುವದು? ಚೆಲುವಿನಾಳಿಗೆ ಚೆಲುವಿನೊಡತಿಯೆ?' ಎಂದು ತನ್ನ ಹೀನ ಮನೋವೃತ್ತಿಯನ್ನು ಹೊರಗೆ ಹಾಕುವನು. ಇಲ್ಲಿ ಅಕ್ಕನ ಸಹಜ ನುಡಿ, ಅರಸನ ಕೇವಲ ಒಲವಿನ ಹೊರಮಾತು ಅವರವರಿಗೆ ತಕ್ಕಂತೆ ನಡೆಯುವವು. ಇದರಿಂದ ಅವರೀರ್ವರ ಅಂತರಂಗಗಳು ಎಂತೆಂತಹವೆಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ. ಕೊನೆಗೆ ಅಕ್ಕನು ಅರಸನಿಗೆ ಅರಮನೆಯನ್ನು ಬಿಡಲು ಕೇಳುವಳು. ಅವನಕ್ಕಾತ ಒಪ್ಪುವದಿಲ್ಲ. ಅವಳೂ ಆತನ ಇಚ್ಛೆಗೆ ಒಪ್ಪದೆ ಹಾಗೆಯೇ ಹೊರಳಿ ಹೋಗಿಬಿಡುವಳು. ಇಲ್ಲಿ ಅಕ್ಕನು, ಅರಸನು ಅಪಾರ ರಾಜ್ಯ ಸಂಪತ್ತನ್ನು ತೋರಿಸಿದರೂ ಅದಕ್ಕ ಮೋಹಿಸದೆ ಅದಕ್ಕೆ ಪ್ರತಿಯಾಗಿ ಅರಣ್ಯಕ್ಕೆ ಬಾ ಎಂದು ಕರೆದುದು ಅವಳ ವೈರಾಗ್ಯ ವೃತ್ತಿಯ ಹೆಗ್ಗುರುತಾಗಿದೆ.

ಅರಮನೆಯಿಂದ ಹೊರಬಿದ್ದ ಅಕ್ಕನು ಉಟ್ಟ ಬಟ್ಟೆಯನ್ನು ಬಿಸುಟಿ, ತೊಟ್ಟ ತೊಡಿಗೆಯನ್ನು ತೊರೆದು ನಗ್ನಳಾಗಿ ನಾಚಿಕೆಯನ್ನು ನೀಗಿ, ವೈರಾಗಿಣಿಯಾಗಿ ಎಲ್ಲಿಯೋ ಹೊರಟು ನಿಲ್ಲುವಳು. ಆಗ ಅವಳ ತಾಯ್ತಂದೆಗಳು ಅವಳ ವೈರಾಗ್ಯದ ಬಟ್ಟೆಗೆ ಸಂಸಾರದ ಅಗಳಿಯನ್ನು ಅಡ್ಡಹಾಕಲು ಯತ್ನಿಸುವರು. ಅದನ್ನು ಲೆಕ್ಕಿಸದೆ ಹಾಗೆಯೇ ಹೊರಟುಬಿಡುವಳು.

### ೩ ನೆಯ ಅಂಕು.

ಹೊರಟು ದೂರದಲ್ಲಿರುವ ತುಂಗಭದ್ರೆಗೆ ಬಂದು ಅಲ್ಲಿ ಮಿಂದು ಜಗದಾಸೆಯನ್ನು ಬಿಟ್ಟು ಜಗಚ್ಚಕ್ಷುವನ್ನು ನಿಷ್ಕಾಮದಿಂದ ನಿರುಕಿಸುತ್ತ ಒಂದು ಕಲ್ಲುಬಂಡೆಯ ಮೇಲೆ ತಾನೆ ತಾನಾಗಿ ಕುಳಿತುಕೊಳ್ಳುವಳು. ತನ್ನ ಮನದ ಹಿರಿಯಾಸೆಗಳನ್ನು ಆ ಹೊಂಬೆಳಗಿನಲ್ಲಿ ತೇಲಿಸುತ್ತಿರುವಳು. ಅಷ್ಟರಲ್ಲಿ ಕೌಶಿಕನು ಕಳಿಸಿದ ಕಪಟ ಜೋಗಿಣಿಯೊಬ್ಬಳು ಬಂದು ನಮಿಸಿ ಕೆಳಗಿನ ಬಂಡೆಗಲ್ಲಿನಮೇಲೆ ಕೂಡುವಳು. ಅಕ್ಕಗಳು ಫಕ್ಕನೆ ನೋಡಿ ಪ್ರಶ್ನೆ ಮಾಡುವರು. ಜೋಗಿಣಿಯು ತನ್ನ ವೇಷಕ್ಕೆ ಒಪ್ಪುವಂತೆ ಉತ್ತರಿಸುವಳು. ಅಕ್ಕನನ್ನು ಸಂಸಾರದತ್ತ ತಿರುಗಿಸಲು ಅತುಲ ಸಾಹಸಗೈಯುವಳು ಆದರೆ ಅದೆಲ್ಲವೂ ಬೂದಿಯಲ್ಲಿ ಹೋಮಮಾಡಿದಂತೆ ವ್ಯರ್ಥವಾಗುವದು, ಹುಟ್ಟಿದ ಸೂರ್ಯನು ಒಮ್ಮೆ ಹಿಂದಕ್ಕೆ ತೆರಳಬಹುದು. ಆದರೆ ಅಕ್ಕನು ಮಾತ್ರ ಮುಂದಿಟ್ಟ ಅಡಿಯನ್ನು ಹಿಂದಿಡುವವಳಲ್ಲ. ಆ ಜೊಳ್ಳು ಜೋಗಿಣಿಯ ಪೊಳ್ಳು ನುಡಿಗೆ ಮನಸೋಲುವವಳಲ್ಲ. ಲಗ್ನಕ್ಕೆ ಒಪ್ಪದೆ ನಗ್ನಳಾಗಿ ಬಂದ ನಾನು ಮರಳಿ ಲಗ್ನದ ಬಲೆಗೆ ಬೀಳಲಾ! ಎಂದು ಹಾಗೆಯೇ ಎದ್ದು ದಂಡೆಗುಂಟ ಓಡಿಹೋಗುವಳು. ಜೋಗಿಣಿಯು ದಿಙ್ಮೂಢಳಾಗಿ ಹಿಂತಿರುಗುವಳು. ಇತ್ತ ಅಕ್ಕನು ತನ್ನಂತರಂಗದಲ್ಲಿ ಮಾಡಿದ ವಿಚಾರಗಳನ್ನು ವಚನರೂಪಾಗಿ ಕಟ್ಟಿ ಹೊಳೆಯ ತಿಳಿದನಿಯೊಡವೆ ತಾಳಮೇಳಾಗಿ ಹಾಡುವಳು. ಹಾತೊರೆಯುವಳು. ಸ್ವಲ್ಪ ಕಾಲದ ಮೇಲೆ ತುಂಗೆಗೆ ತಲೆವಾಗಿ ತನ್ನ ಮನದತ್ತ ಪಯಣಮಾಡುವಳು. ಹಾದಿಯಲ್ಲಿ ಹತ್ತುವ ಹಳ್ಳಿಯ ಹೆಂಗೆಳೆಯರ ಹಂಗತಿಗೆ ಹರಟೆಗೆ ಸರಿಯಾದ ಉತ್ತರವೀಯುತ್ತ ನಗೆಸುತ್ತ ನೆಗೆಯುತ್ತ ನಡೆಯುವಳು. ಬತ್ತಲೆ ಹೊರಟ ಅವಳ ರೂಪಕ್ಕೆ ಬದಲಾಗಿ ಹಳ್ಳಿಯ ಹೆಂಗಸರು ಚಿತ್ರದ ಬೊಂಬೆಯಂತೆ ಅಲ್ಲಲ್ಲಿ ನಿಂತುಬಿಡುವರು. ಆ ಹಳ್ಳಿಯ ಹೆಂಗಸರು ತಮ್ಮ ಸ್ವಭಾವಕ್ಕನುಗುಣವಾಗಿ ಮರವೆಯಿಂದ (ಅಜ್ಞಾನ

(೧೬ ನೆಯ ಪುಟಕ್ಕೆ ಮುಂದೆ ಸಾಗಿದೆ.)

# ಹಿರೇಮಣ್ಣೂರು ನಿದ್ರಿತ ಅಣ್ಣಗಳಿರಾ ಇನ್ನೆಂದು ಕಣ್ದೆರೆವಿರಿ ?

ಲೇಖಕರು— ಶ್ರೀ. ಬಸವಪ್ಪ ಚನ್ನಪ್ಪ ಪಟ್ಟೇದ ಸಹಾಧ್ಯಕ್ಷ,
ವೀ. ಶೈ. ಸಂಘ ವಂಟಮುರಿ.

ನೀವು ಮಲಗಿ ಬಹುಕಾಲವಾಯಿತು. ಕುಂಭಕರ್ಣನನ್ನೂ ಮರೆಸುವಂತಾಯಿತು. ಈ ಅವಧಿಯಲ್ಲಿ ಜಗತ್ತಿನೊಳಗೆ ಬಹಳೇ ವ್ಯತ್ಯಾಸಗಳಾಗಿರುವವು. ನಿಮಗೆ ಅದರ ಕಲ್ಪನೆಯೇ ಬಾರದು. ನೀವು ನಿದ್ರೆಹೋದುದು ಸನಾತನೀಯ ಯುಗವು. ಈಗಿನ ಇಪ್ಪತ್ತನೆಯ ಶತಕವು ಸುಧಾರಣೆಯ ಕಾಲವು. ಆಗಿನದು ಅಂಧ ಪರಂಪರೆಯ ಸಾಂಪ್ರದಾಯಿಕ ಯುಗವು. ಈಗಿನದು ಪ್ರತಿಯೊಂದುಮಾತು ವಿಚಾರದ ಒರೆಗಲ್ಲಿಗೆ ತಿಕ್ಕಿ ಪರೀಕ್ಷಿಸಿ ಸ್ವೀಕರಿಸುವ ಕಾಲವು. ಮೇಲಾಗಿ ಉಭಯ ಪರಿಸ್ಥಿತಿಗಳಲ್ಲಿ ಮಹದಂತರ! ಈಗ ಭಾವಿಕತನ ಕೂಪಮಂಡೂಕ ವೃತ್ತಿ ಅಹಂಮನ್ಯತೆಗಳ ಮಾರಾಟವು ನಿಂತಿರುವದು. ವಿದ್ಯಾಪ್ರಸಾರವಾಗಿ ಎಲ್ಲ ವಿಧದ ಜನರೂ ಕಣ್ಣುಳ್ಳವರಾಗಿರುವರು. ಮೂಢ ಶ್ರದ್ಧೆಯು ಮಣ್ಣುಗೂಡಿರುವದು.

ಈಗಿನ ಪರಿಸ್ಥಿತಿಯನ್ನು ಅವಲೋಕಿಸಿದರೆ ಎತ್ತನೋಡಿದತ್ತೆಲ್ಲ ಕೆಳಗಿನ ಸಂಗತಿಗಳು ತಪ್ಪದೆ ದೃಷ್ಟಿಗೆ ಬೀಳುವವು. (೧) ಈಗ ಊರೂರಿಗೆ ಚಹಾದ ಹೊಟೆಲುಗಳಾಗಿರುತ್ತವೆ. ಅಲ್ಲಿ ಎಲ್ಲರೂ ಹೋಗಿ ಕುಡಿಯುತ್ತಾರೆ, ತಿನ್ನುತ್ತಾರೆ. ಆ ಹೊಟೆಲುಗಳನ್ನು ಹೊಲೆಹದಿನೆಂಟು ಜಾತಿಯವರು ಇಟ್ಟಿದ್ದರೂ ಅದು ಯಾರದೆಂಬುದನ್ನು ಸಹ ಯಾರೂ ಕೇಳುವುದಿಲ್ಲ. ಅಲ್ಲಿ ನಿಃಶಂಕೆಯಿಂದ ಬೇಕಾದ ಹಾಗೆ ವರ್ತಿಸಿದರೂ ಅವರ ಬಗ್ಗೆ ಯಾರೂ ಚಕಾರವಕಾರ ಮಾತಾಡುವದಿಲ್ಲ.

(೨) ರಾಜಭಾಷೆಯಾದ ಇಂಗ್ಲಿಷನ್ನು ಕಲಿಸುವ ಪ್ರವೃತ್ತಿಯು ಎಲ್ಲ ಜನರಲ್ಲಿಯೂ ಹೆಚ್ಚೆಚ್ಚು ಬೆಳೆಯುತ್ತಲೇ ಇರುವದು. ಆ ಹಾಯ್‌ಸ್ಕೂಲುಗಳೂ ಉಚ್ಚ ಶಿಕ್ಷಣದ ಕಾಲೇಜುಗಳೂ ಅಲ್ಲಲ್ಲಿಗೆ ತುಂಬಿರುತ್ತವೆ. ಅವುಗಳಲ್ಲಿ ಕಲಿಯುವ ವಿದ್ಯಾರ್ಥಿಗಳು ಭೇದಭಾವವಿಲ್ಲದೆ ಪರಸ್ಪರ ಅನ್ನೋದಕ ವ್ಯವಹಾರ ನಡೆಸುವದನ್ನು ಎಲ್ಲರೂ ಬಲ್ಲರು. ಆ ಹುಡುಗರೆಂದರೆ ಬೇರೆಯವರಲ್ಲ. ನಿಮ್ಮ ನಿಮ್ಮ ಮಕ್ಕಳೇ ಇರುವರು. ಅವರಿಗೆ ನಾವು ಏನೂ ಮಾತಾಡಲಿಕ್ಕೆ ಅವಸರವಿಲ್ಲ.

(೩) ರೈಲು ಮೋಟಾರ ಪ್ರವಾಸಗಳಲ್ಲಿ ಮನೆಯಿಂದ ಕಟ್ಟಿಕೊಂಡು ಒಯ್ದ ಬುತ್ತಿಯನ್ನು ಫರಾಳದ ಹೆಸರಿನಿಂದ ಯಾವ ಭಯವೂ ಇಲ್ಲದೆ ಉಂಡು ತೇಗುವವರನ್ನು ಕಾಣದವರು ಸಿಗಲಾರರು. ಇದಲ್ಲದೆ ರೇಲ್ವೆ ಬಂಡಿಯಲ್ಲಿಯೇ ಇರುವ ರಿಫ್ರೆಶ್‌ಮೆಂಟ್ ರೂಮಿನಲ್ಲಿ ಪ್ರಸಿದ್ಧರೀತಿಯಿಂದಲೇ ಉಣ್ಣುವವರನ್ನೂ ಯಾರೂ ಕೇಳುವದಿಲ್ಲ.

(೪) ಸೋಡಾ, ಲೇಮನ್ ಅಂತ ಬಾಟ್ಲಗಳಲ್ಲಿರುವ ನೀರು ವಿಧಿನಿಷೇಧವಿಲ್ಲದೆ ಬೇಕಾದವರ ಕೈಯೊಳಗಿಂದ ತಗೊಂಡು ಕುಡಿಯುವದಂತೂ ಸರ್ವಸಾಧಾರಣ ವಿಷಯವಾಗಿದೆ. ನಳದ ನೀರು ಎಲ್ಲರೂ ಕುಡಿಯುವರು. ರೇಲ್ವೆ ಸ್ಟೇಶನ್ನುಗಳಲ್ಲಂತೂ ಗಡಬಿಡಿಯೊಳಗೆ ಒಬ್ಬರ ಮೇಲೊಬ್ಬರು ಬಿದ್ದು ನಳದ ನೀರು ತಂದು ಕುಡಿಯುವದನ್ನು ನೋಡೇ ನೋಡುತ್ತೇವೆ. ಎಷ್ಟೋ ಸಾರೆ ಉಗಿಬಂಡಿಯಿಂದಲೇ ತರಿಸಿ ನೀರು ಉಪಯೋಗಿಸಿದ ಉದಾಹರಣೆಗಳೂ ಉಂಟು. ಜಲಮಿಶ್ರಿತ ದವಾಖಾನೆಯ ಔಷಧವು ಎಲ್ಲರಿಗೂ ಮಾನ್ಯ.

(೫) ಮಹಾ ಸಭೆಗಳೂ ಪರಿಷತ್ತುಗಳೂ ಕೂಡಿದಾಗ ಎಲ್ಲ ಜಾತಿ ಪಂಥ ಧರ್ಮಗಳ ಜನರೂ ಒತ್ತಟ್ಟಿಗೆ ಕೂಡಿಯೇ ಉಣ್ಣುವರು. ತಿನ್ನುವರು. ಬೇಕಾದವರ ಕೈಯಲ್ಲಿಯ ನೀರು ಕುಡಿಯುತ್ತಾರೆ. ಅವರಿಗೆ ಆತಂಕಪಡಿಸಿದವರನ್ನು ಎಲ್ಲಿಯೂ ಕಂಡಿಲ್ಲ. ಕೇಳಿಲ್ಲ.

(೬) ಸ್ಕೌಟ್ ಕ್ಯಾಂಪ, ಸ್ವಯಂಸೇವಕರ ಸಿಬಿರ, ಸೆರೆಮನೆ, ಪರದೇಶಗಮನ ಇತ್ಯಾದಿಗಳಲ್ಲಿ ಜಾತಿಗೆ ಆಸ್ಪದವೇ ಇಲ್ಲ. ಅಲ್ಲಿ ಎಲ್ಲರೂ ಕೂಡೇ ವ್ಯವಹರಿಸುವರು. ಅವರು ತಿರುಗಿ ಬಂದು ತಮ್ಮ ತಮ್ಮ ಊರುಗಳಲ್ಲಿ ಮೊದಲಿನಂತೆ ಸಮಾಜದೊಳಗೆ ಬೆರೆದೇ ವಾಸಿಸುವರು. ಎಲ್ಲ ಕಡೆಗೆ ಈ ಜನರನ್ನು ಸ್ವಾಗತಿಸುತ್ತಲೇ ಇರುವರು.

(೭) ಪಟ್ಟಣಗಳಲ್ಲಿ ಸಹಭೋಜನಗಳು ಬುದ್ಧ್ಯಾ ಆಗಾಗ್ಗೆ ನೆರವೇರಿಸಲ್ಪಡುತ್ತವೆ. ಅವೇನು ಮುಚ್ಚಿಮರೆಯಲ್ಲ. ಪ್ರಸಿದ್ಧ ರೀತಿಯಿಂದ ಅವುಗಳಲ್ಲಿ ಎಲ್ಲ ಜಾತಿಯವರೂ ಅಸ್ಪೃಶ್ಯರು ಸಹ ಸೇರಿ ಉಣ್ಣುವರು. ಎಷ್ಟೋ ಸಹಭೋಜನಗಳು ಹೊಲಗೇರಿಯಲ್ಲಿ ಹೊಲೆಯರು ಸಿದ್ಧಪಡಿಸಿದ ಅನ್ನದಿಂದಲೇ ನಡೆದು ಹೋಗುತ್ತವೆ. ಈಗ ಕಲಿತ ಜನರಿಗೆ ಜಾತಿಗಳು ನಿರುಪಯುಕ್ತವೂ ಮರುಳತನವೂ ವಿನಾಶಕಾರಕವೂ ಆಗಿ ತೋರಹತ್ತಿವೆ. ಹೀಗೆ ಒಂದೋ ಎರಡೋ ಅನೇಕ ರೀತಿಯಿಂದ ಜಾತಿಯ ಹೇಳಹೆಸರಿಲ್ಲದಾಗಿ ನಡೆದವೆ. ಎಲ್ಲರೂ (ಅನೇಕ ಲಿಂಗವಂತರು ಸಹ) ಈ ಬಗೆಯಾಗಿ ಆಚರಿಸುತ್ತಾರೆ. ಮತ್ತು ಅವರಿಗೂ ನಮಗೂ ನಿತ್ಯನಿಕಟ ಸಂಬಂಧವು ತಪ್ಪಿಲ್ಲ. ಈ ವಿಷಯವಾಗಿ ಕೆಳಗಿನ ಪದ್ಯವನ್ನು ಎಲ್ಲರೂ ಮನನೀಸಬೇಕೆಂದು ಸೂಚಿಸುವೆನು.

ಕಂದ|| ಸೆರೆಮನೆ ವಿದೇಶಗಮನಂ | ಪುರನಳಮುಂ ಸ್ಕೌಟ್
ಕ್ಯಾಂಪ್ ಸಹಭೋಜನಗಳ್|| ನೆರೆಸೋಡಾ ಟೀಪಾನಂ| ಹುರಿದುವು
ಕುಲಗಳನು ಸಭೆಯು ರೈಲ್ ಮೋಟಾರ್ಗಳ್ ||೧||

ಈಗಿನ ಅನಿವಾರ್ಯ ಪರಿಸ್ಥಿತಿಯ ಮೂಲಕ ಪದೇ ಪದೇ ಜಾತಿಯನ್ನೇ ಬದಿಗಟ್ಟು ವ್ಯವಹರಿಸುವ ಪ್ರಸಂಗಗಳು ಸರ್ವದಾ ಬರುತ್ತಿದ್ದು ಆ ಪ್ರಕಾರ ನೀವು ನಾವು ಸಹಿತ ಎಲ್ಲರೂ ವರ್ತಿಸುತ್ತಿರುವಾಗ ಇನ್ನೊಬ್ಬರಿಗೆ ಹೆಸರಿಡುವುದೆಂತು ! ಆ ಕಾಲವು ಎಂದೋ ಮಾಯವಾಗಿ ಬಿಟ್ಟಿದೆ. ಆದುದರಿಂದ ನೀವು ಎದ್ದು ಕಣ್ದೆರೆದು ಪೂರಾ ಎಚ್ಚರಾಗಿ ಸುತ್ತುಮುತ್ತೆಲ್ಲ ನೋಡಿ ನಿಜಸ್ಥಿತಿಯ ಆಕಲನಮಾಡಿರಿ. ಈಗಿನ ದುಸ್ತರವಾದ ಜೀವನ ಕಲಹದಲ್ಲಿ ಬೇರೆ ಬೇರೆ ಬಲಿಷ್ಠ ರಾಷ್ಟ್ರಗಳ ಮೇಲಾಟದಲ್ಲಿ ನಾವು ಉಳಿದು ಬದುಕಿ ಬಾಳಬೇಕಾದರೆ ಗತ್ಯಂತರಗಾಣದೆ ಮೊದಲಿನಿಂದ ನಡೆದು ಬಂದ ಜಾತಿಯ ಅನೇಕ ಸಾಂಪ್ರದಾಯಗಳನ್ನು ದುರ್ಲಕ್ಷಿಸುವದು ಅಪರಿಹಾರ್ಯವಾಗಿದೆ. ಇವುಗಳಿಗೆ ಕೆಲಮಟ್ಟಿಗೆ ಲೋಪವುಂಟಾದರೂ ನಿಜಧರ್ಮಕ್ಕೇನೂ ಬಾಧೆ ಬರಲಾರದು. ನಿಜಧರ್ಮದ ಆನೆಯನ್ನೇ ಕಳಕೊಂಡು ಹೊರಗಿನ ಸಾಂಪ್ರದಾಯದ ಈ ಒಣ ಬಾಲಕ್ಕೇನೇ ಹೆಣಗಾಡುವದು ಹಾಸ್ಯಾಸ್ಪದವು. ನಿಜ ಧರ್ಮಗಳನ್ನು ಸಹ ಎತ್ತಲಿಕ್ಕೆ ಯಾರಿಗೂ ಈಗ ಅವಸರವೇ ಇಲ್ಲವಾದುದು ಬಹು ವಿಷಾದಕರವು.

ವಸ್ತುಸ್ಥಿತಿಯು ಹೀಗಿರುವಾಗ ಉಡಚಾಣ ಶಿವ್ರ ಮೊದಲಾದ ಕಡೆಯವರು ಸುಶೀಲರಾದ ಅನ್ಯರನ್ನು ಶಾಸ್ತ್ರೋಕ್ತ ದೀಕ್ಷಾ ಸಂಸ್ಕಾರಗೊಳಿಸಿ ಪುನೀತರನ್ನು ಮಾಡಿ ಅವರೊಡನೆ ಬಳಕೆ ಭೋಜನಾದಿಗಳನ್ನು ನಡೆಸಿದರೆ ಅದಕ್ಕೆ ನಿಮ್ಮ ಪ್ರತಿಬಂಧವೆ ? ಯಾವ ಸಂಸ್ಕಾರವೂ ವಿಧಿನಿಷೇಧವೂ ಇಲ್ಲದೆ ಮೇಲೆ ಉಲ್ಲೇಖಿಸಿದಂತೆ ವರ್ತಿಸುವವರಿಗೆ ನಿಮ್ಮ ಸಹಾನುಭೂತಿಯೇ ! ಸಂಸ್ಕಾರಗೊಳಿಸಿ ಶಾಸ್ತ್ರೋಕ್ತ ರೀತಿಯಿಂದ ನಡೆಯಲಪೇಕ್ಷಿಸುವವರಿಗೆ

ನಿಮ್ಮ ಬಹಿಷ್ಕಾರವೇ ? ಇಂತಹ ಬಹಿಷ್ಕಾರಕ್ಕೆ ಈಗ ಎಷ್ಟು ಮಟ್ಟಿಗೆ ಬೆಲೆ ಬಂದೀತೆಂಬುದರ ಅರಿವು ನಿಮಗೆ ತುಸುವಾದರೂ ಇರಬಾರದೆ ? ಒಕ್ಕೊಳ್ಳೇ ದೇವರು (ಕುಲಗುರು ಜಗದ್ಗುರುಗಳು ಆದಿಯಾಗಿ) ಮೂಲೆಗುಂಪಾಗಿ ಬಿದ್ದಿರುವಾಗ ನಮ್ಮ ನಿಮ್ಮ ಸಾಮಾನ್ಯರ ಪಾಡೇನು ? 'ಕೈ ಕೋರಿಸಿ ಅವಲಕ್ಷಣ' ಎಂಬಂತೆ ನಿಮ್ಮ ಗತಿಯಾಯಿತು. ಯಾವ ಪಂಡಿತರದೂ ಈ ವಿಷಯದಲ್ಲಿ ಏನೂ ಆಟ ಸಾಗಲಾರದು. ಶಾಸ್ತ್ರೋಕ್ತವೂ ಮಹಾಜನ ಸಮ್ಮತವೂ ಇದ್ದ ಮಾತಿನಲ್ಲಿ ಪಂಡಿತರೇನು ಮಾಡುವರು ?

ನದೀಗತ ಸಕಲ ಜಲವು ತೀರ್ಥವಾಗುವಂತೆ ವಹ್ನಿದಗ್ಧ ವಿವಿಧ ಕಾಷ್ಟಂಗಳೆಲ್ಲ ಒಂದೇ ಒಂದಾದ ಬೆಂಕೆಯಾಗುವಂತೆ ಶಿವ (ಲಿಂಗ) ದೀಕ್ಷಾ ಸಂಪನ್ನರು ಪೂತಾತ್ಮರಾಗಿ ಸಮಾನಸ್ಕಂಧರಾಗುವರು. ಆದು ಕಾರಣವೇ ಶ್ರೀ ಬಸವೇಶ್ವರರು "ವಿಪ್ರ ಮೊದಲುಗೊಂಡು ಅಂತ್ಯಜಕಡೆಯಾಗಿ ಶಿವ (ಲಿಂಗ) ಭಕ್ತರೆಲ್ಲರನು ಒಂದೇ ಎಂಬೆ" ಮತ್ತು "ಶ್ವಪಚನಾದರೂ ಲಿಂಗಭಕ್ತನೇ ಕುಲಜನು" "ಪಟ್ಟವ ಕಟ್ಟಿದ ಬಳಿಕ ಲಕ್ಷಣವ ನರಸುವರೇ?" ಎಂದೂ ಶ್ರೀ ಚೆನ್ನಬಸವೇಶ್ವರರು— "ದಾಸೀ ಪುತ್ರನೇ ಆಗಲಿ ವೇಶ್ಯಾ ಪುತ್ರನೇ ಆಗಲಿ ಶಿವದೀಕ್ಷೆಯಾದ ಬಳಿಕ ಸಾಕ್ಷಾತ್ ಶಿವನೆಂದು ವಂದಿಸಿ ಪೂಜಿಸಿ ಪಾದೋದಕ ಪ್ರಸಾದವ ಕೊಂಬುವದೇ ಯೋಗ್ಯ. ಹೀಗಲ್ಲದೆ ಉದಾಸೀನಮಾಡಿ ಬಿಡುವವರಿಗೆ ಪಂಚಮಹಾಪಾತಕ ನರಕ ಕಾಣಾ" ಎಂದೂ ತಮ್ಮ ವಚನಗಳಲ್ಲಿ ಅಪ್ಪಣೆಕೊಡಿಸಿದ್ದಾರೆ. ಇದೇ ಅಭಿಪ್ರಾಯದ ಅನೇಕ ಆಗಮ ಪ್ರಮಾಣಗಳೂ ಉಂಟು.

ನುರಿತ ಶಿವಭಕ್ತರು ನೂತನ ಶಿವಾದೀಕ್ಷಾ ಸಂಪನ್ನರೊಡನೆ ಬಳಿಕೆ ಇಡದೆ ಅವರನ್ನು ದೂರದಲ್ಲಿರಿಸಿದರೆ ಅವರ ಪೂರ್ವಾಶ್ರಮವು (ಮೊದಲಿನ ಭವಿತನದ ವರ್ತನವು) ಅದೆಂತು ತಾನೇ ನಾಶವಾಗಿ ಸದ್ಭಕ್ತರ ಶೀಲಾಚಾರಗಳು ಅವರಲ್ಲಿ ಅಳವಡುವವು? ನಮ್ಮ ಮನೆಯಲ್ಲಿ ಜನಿಸಿದ ಕೂಸಿಗೆ (ಏನೂ ಅರಿಯದ ಅಜ್ಞಾನ ಪ್ರಾಣಿಗೆ) ನಾವು ಅದರ ಬಳಿಕೆ ಬಿಡದೆ, ಪರಿಪರಿಯಿಂದ ಕ್ರಮ ಕ್ರಮವಾಗಿ ಬೋಧಿಸಿ ನಮ್ಮ ನಡತೆ ರೀತಿಗಳನ್ನು ಅದರಲ್ಲುಂಟು ಮಾಡಿ ಬೆರಸಿಕೊಂಡು ನಡೆಯುವದಿಲ್ಲವೆ ? ಅದರಂತೆಯೇ ಸಮಾಜ ಪುರುಷನು ತಾನು ಹಡೆದ ಈ ನೂತನ ಕೂಸುಗಳನ್ನು ದೂರೀಕರಿಸಿದರೆ ಅದೆಂತು ನ್ಯಾಯವಾಗುವದು ? ಅವರಲ್ಲೆಂತು ಇಷ್ಟ ಸುಧಾರಣೆಯಾಗಿ ಸಮಾಜದಲ್ಲಿ ಕೂಡುವರು ? ಕೂಡಿಕೊಂಡೇ ಹೆಚ್ಚು ಪ್ರೀತಿಯಿಂದಲೂ ಅಂತಃಕರಣದಿಂದಲೂ ಅವರೊಡನೆ ವರ್ತಿಸುವದೇ ಉಚಿತವು.

ಹಿಂದಿನವರು ಹೀಗೆ ಮಾಡದೆ ಬಿಟ್ಟುದರಿಂದಲೇ ಈಗ ತೋರುವ ಅನೇಕ ಒಳಪಂಗಡಗಳಿಗೆ ಆಸ್ಪದವಾಯಿತು. ಇನ್ನೂ ಅದನ್ನೇ ಮಾಡಬೇಕೆನ್ನುವಿರಾ ? ಇತರ ಸಮಾಜದವರನ್ನು ತುಸು ನೋಡಿರಿ! ಆರ್ಯಸಮಾಜಿಷ್ಟರು, ಕ್ರಿಶ್ಚನ್ನರು, ಇಸ್ಲಾಮರು ಮುಂತಾದವರು ಹೇಗೆ ವರ್ತಿಸುವರೆಂಬುದನ್ನು ಲಕ್ಷಿಸಿರಿ. "ಪಟ್ಟವ ಕಟ್ಟಿದ ಬಳಿಕ್" ಎಂಬ ಶ್ರೀ ಬಸವೇಶ್ವರ ವಚನವನ್ನು ನೆನಿಸಿರಿ. ಆದಕಾರಣ ಈ ನೂತನ ಲಿಂಗಧಾರಿಗಳೊಡನೆ ಅವಶ್ಯವಾಗಿ ಬಳಿಕೆಭೋಜನಾದಿಗಳು ಬೇಕೇಬೇಕು. ಕೆಳಗಿನ ಪದ್ಯವನ್ನು ಉಡಚಾಣ ಶಿವುರ ಮೊದಲಾದ ಗ್ರಾಮದವರೂ ಎಲ್ಲ ವೀರಶೈವ ತರುಣ ಸಂಘದವರೂ ಗಮನಿಸಿ ಈಗ ತಾವು ಕೈಕೊಂಡ ಅವಶ್ಯವೂ ಕಾಲೋಚಿತವೂ ಆದ ಶುದ್ಧಿ ಸಂಘಟನೆಯ ಮಹತ್ವದ ಕಾರ್ಯವನ್ನು ಒಳ್ಳೇ ಹುರುಪಿನಿಂದ ಮುಂದೆ ಸಾಗಿಸುವರೆಂದು ಆಶಿಸುವೆನು.

ಕಂದ॥ ಭೀತಿಯದೇಂ ಶಾಸ್ತ್ರಕ್ಕಂ । ಖ್ಯಾತ ಮಹಾ ಸಭೆಗ ಮೊಪ್ಪು ತಾನಾಗಿಹುದಾ ॥ ಪೂತಾಚಾರದೆ ನಡೆಯಲ್ । ನೂತನರೊಳ್ ಬೆರೆದು ವರ್ತಿಪುದೆ ಸಲೆ ನ್ಯಾಯಂ! ॥೧॥

## ಶಾಹೀದಗಂಜದಲ್ಲಿ ಗಾಂಧೀಜಿ ?

ಶಾಹೀದಗಂಜ ಯಾರದೆಂಬ ವಿಚಾರವಾಗಿ ಪಂಜಾಬದ ಶೀಖ ಮತ್ತು ಮುಸಲ್ಮಾನ್ ಸಮಾಜಗಳಲ್ಲಿ ತೀವ್ರತರವಾದ ಹೋರಾಟವು ನಡೆದಿದೆಯಷ್ಟೆ. ಇ. ಸ. ೧೭೬೨ ರಿಂದ ಅದು ಶೀಖರ ಸ್ವಾಧೀನದಲ್ಲಿಯೇ ಇದೆ. ಮುಸಲ್ಮಾನರು ಅದನ್ನ ತಮ್ಮ ಸ್ವಾಧೀನಪಡಿಸಿಕೊಳ್ಳಬೇಕೆಂದು ೧೮೫೫ ರಲ್ಲಿ ಪ್ರಯತ್ನಿಸಿದರು. ಅದು ಸಾಧ್ಯವಾಗಲಿಲ್ಲ. ಆಮೇಲೆ ೧೯೩೦ ನೆಯ ಇಸವಿಯಲ್ಲಿ ಶಾಸನಮಂಡಲದ ಮುಂದೆ ಈ ಪ್ರಶ್ನೆ ಬರಲು ಇದರ ನಿರ್ಣಯಕ್ಕಾಗಿ ಗೊತ್ತಾದ "ಗುರುದ್ವಾರ ಪಂಚಾಯತಿ" ಮಂಡಲವು ಶಾಹಿದಗಂಜ ಶೀಖರದೆಂದು ನಿರ್ಣಯ ಮಾಡಿತು.

ಆ ಬಳಿಕ ನ್ಯಾಯಸ್ಥಾನದಲ್ಲಿ ಮುಸಲ್ಮಾನರು ವ್ಯಾಜ್ಯ ಹೂಡಿದರು. ಕೆಳಗಿನ ಕೋರ್ಟಿನಲ್ಲಿಯೂ ಕಡೆಗೆ ಹೈ ಕೋರ್ಟಿನಲ್ಲಿಯೂ ಅದು ಶೀಖರದೆಂದೇ ಗೊತ್ತಾಯಿತು. ಅಷ್ಟಕ್ಕೇ ಆ ವಿಷಯವನ್ನು ಮುಸಲ್ಮಾನರು ಬಿಡದೆ ಆ ಮೇಲೆ ಸಶಸ್ತ್ರ ದೊಂಬಿ ಮಾಡಿ ಅದನ್ನು ಸ್ವಾಧೀನಪಡಿಸಿಕೊಳ್ಳಲು ಪ್ರಯತ್ನಿಸಿದರು. ಶೀಖರು ಅವರಿಗಿಂತಲೂ ಶೂರರೂ ಆತ್ಮಾರ್ಪಣೆಗೆ ಮುಂದರಿಯುವವರೂ ಪ್ರಖರ ಧರ್ಮಾಭಿಮಾನಿಗಳೂ ಇದ್ದುದರಿಂದ ಮುಸಲ್ಮಾನರು ಹಿಂಜರಿಯಬೇಕಾಯಿತು.

ಹೀಗೆ ಎಲ್ಲಾ ರೀತಿಗಳೂ ಮುಗಿದಮೇಲೆ ಈಗ ಸತ್ಯಾಗ್ರಹವನ್ನು ಪ್ರಾರಂಭಿಸಿ ೬೦೦ ಜನರ ವರೆಗೆ ಕಾರಾಗೃಹಕ್ಕೆ ಹೋಗಿದ್ದಾರೆ. ಇದೂ ಫಲಕಾರಿಯಾಗಲಾರದೆಂದು ಅಸೆಂಬ್ಲಿಯಲ್ಲಿ ತಮ್ಮ ಬಹುಮತವಿರುವುದರಿಂದ ಆ ಮೂಲಕ ಸ್ವಾಧೀನಪಡಿಸಿಕೊಳ್ಳಲು ಕೆಲವರು ಸಾಹಸಮಾಡಿದರು. ಆದರೆ ಮುಖ್ಯ ಮಂತ್ರಿಗಳೇ ಅದಕ್ಕೆ ವಿರೋಧಿಸಿದರು. ಹೀಗೆ ಎಲ್ಲೆಲ್ಲಿಯೂ ಅನುವು ದೊರೆಯದಿದ್ದುದರಿಂದ ಈಗ ಗಾಂಧೀಜಿಯವರ ಹತ್ತಿರ ಈ ವ್ಯಾಜ್ಯವನ್ನು ತರಬೇಕೆಂದು ಕೆಲವರು ಪ್ರಯತ್ನಿಸಿದ್ದಾರೆ. ಏಕೆಂದರೆ, ಮಹಾತ್ಮರು ತಮಗೆ ಏನಾದರೊಂದು ಸೌಲಭ್ಯವನ್ನು ಕಲ್ಪಿಸಿ ಕೊಡದೆ ತೀರ್ಮಾನ ಹೇಳುವುದಾದರೂ ಹೇಗೆಂದೇ ಅವರ ಯೋಚನೆ.

ತಕ್ಕಿದರೆ ಸರಿಯಷ್ಟು; ಸಂದರೆ ತಳ್ಳಪ್ಪು; ಎಂಬ ಮುಸಲ್ಮಾನರ ಈ ವೃತ್ತಿಯನ್ನು ಬಲ್ಲ ಶೀಖರು ಗಾಂಧೀಜಿಯವರ ಕಡೆಗೆ ಈ ವ್ಯಾಜ್ಯವನ್ನು ಕಳುಹಿಸಲು ಒಪ್ಪುವರೋ? ಗಾಂಧೀಜಿಯವರು ಈ ವ್ಯಾಜ್ಯದಲ್ಲಿ ಸೇರಲು ಸಮ್ಮತಿಸುವರೋ? ಎಂಬಂಶಗಳು ಇನ್ನೂ ಗೊತ್ತಾಗಿಲ್ಲ.

## ಸರ್. ಶೆಟ್ಟರ ಉದಾರ ದಾನ.

ಸರ್. ಕೆ. ಪಿ. ಪುಟ್ಟಣ್ಣಶೆಟ್ಟರು ಬೆಂಗಳೂರಿನ ಅನೇಕ ಸಾರ್ವಜನಿಕ ಕಾರ್ಯಗಳಿಗೆ ಈ ವರೆಗೆ ಸಹಸ್ರಾವಧಿ ರೂ. ಗಳನ್ನು ದಾನಮಾಡಿ ಕೀರ್ತಿಶಾಲಿಗಳಾಗಿದ್ದಾರಷ್ಟೆ.

ಈ ಮಹಾಶಯರು ಕಳೆದ ೧೪ ನೆಯ ತಾರೀಖಿನ ದಿವಸ ಬೆಂಗಳೂರು ಶ್ರೀ ಮಹಾಂತಿನ ಮಠದಲ್ಲಿ ಸೇರಿದ್ದ ವೀರಶೈವ ಸಭೆಯಲ್ಲಿ ಭಾಷಣ ಮಾಡುವಾಗ ಹೀಗೆ ಸಾರಿದರು—

"ವೀರಶೈವ ಮತಕ್ಕೆ ಸೇರಿದ ಎಲ್ಲ ಬಗೆಯ ವಿದ್ಯಾಭ್ಯಾಸಮಾಡುವ ಬಡ ವಿದ್ಯಾರ್ಥಿಗಳ ಸಹಾಯಾರ್ಥವಾಗಿ ಬೆಂಗಳೂರಲ್ಲಿ ಒಂದು ಉಚಿತವಾದ "ವೀರಶೈವ ಫ್ರೀ ಬೋರ್ಡಿಂಗ್ ಹೋಮ್" ಸ್ಥಾಪಿಸಲು ೮೫೦೦೦ ರೂ. ಗಳನ್ನು ತೆಗೆದಿಟ್ಟಿದ್ದೇನೆ. ಈ ನನ್ನ ವ್ಯವಸ್ಥೆಯನ್ನು ನಮ್ಮ ಘನ ಸರಕಾರದವರು ಅಂಗೀಕರಿಸಿದ್ದಾರೆ."

ಸರ್. ಶೆಟ್ಟರ ಈ ಸಂಕಲ್ಪವು ಅತ್ಯಂತ ಅಭಿನಂದನೀಯವಾದುದು. ಇದು ಜಾಗ್ರತೆ ನೆರವೇರಲೆಂದು ಹಾರೈಸುತ್ತೇವೆ.

# ಡಾ. ಆಂಬೇಡಕರರ

## ಸಂತಾಪ ಸೂಚನೆ.

ಮಧ್ಯಪ್ರಾಂತದ ಗೃಹಮಂತ್ರಿಗಳಾದ ಮಿ. ಶರೀಫ ಇವರು ವಿದ್ಯಾಶಾಖೆಯ ಇನಸ್ಪೆಕ್ಟರ್ ಜಾಫರ್ ಹಸನ್ ಎಂಬ ಆದಿಹಿಂದು ಹುಡುಗಿಯ ಮೇಲೆ ಬಲಾತ್ಕಾರ ಮಾಡಿ ಜೈಲಿನಲ್ಲಿದ್ದ ಅಪರಾಧಿಯನ್ನು ಬಿಡುಗಡೆ ಮಾಡಿದ ಸಂಬಂಧವಾಗಿ ಡಾ. ಆಂಬೇಡಕರರು ಮುಂಬೈ "ಟಾಯಿಮ್ಸ ಆಫ್ ಇಂಡಿಯಾ" ಪತ್ರಿಕೆಯಲ್ಲಿ ಒಂದು ಲೇಖನವನ್ನು ಪ್ರಕಟಿಸಿದ್ದಾರೆ. ಅವರ ಈ ಸಂತಾಪದ ಸೂಚನೆಯು ತುಂಬಾ ವಿಚಾರಾರ್ಹವಾದುದಾಗಿದೆ. ಡಾ. ಆಂಬೇಡಕರರು ಹೇಳಿದುದೇನೆಂದರೆ—



( ಡಾ. ಆಂಬೇಡಕರರು. )

### ಇದು ನಾಚಿಕೆಗೇಡಿಗಳ ಕೆಲಸ.

" ಮುಂಬೈ ಹೈಕೋರ್ಟಿನವರು ಇಬ್ಬರು ಜೂಜುಗಾರರಿಗೆ ವಿಧಿಸಿದ ಶಿಕ್ಷೆಯನ್ನು ಮುಂಬೈ ಪ್ರಾಂತದ ಗೃಹ ಮಂತ್ರಿಗಳು ತಡೆದಿದ್ದಾರೆಂಬ ಸುದ್ದಿಯನ್ನು ಕೇಳುವಷ್ಟರಲ್ಲಿಯೇ ಮಧ್ಯಪ್ರಾಂತದ ಗೃಹ ಮಂತ್ರಿಗಳ ಇಂಥ ಇನ್ನೊಂದು ಕೃತ್ಯವು ಬೈಲಿಗೆ ಬಂದಿತು. ಜಾಫರ್ ಹುಸೇನ ಎಂಬ ಒಬ್ಬ ಮನುಷ್ಯನು ೧ಳ ವರುಷಗಳ ಒಬ್ಬ ಹುಡುಗಿಯಮೇಲೆ ಬಲಾತ್ಕಾರ ಮಾಡಿದ್ದರಿಂದ ಮೂರು ವರುಷಗಳ ಕಠಿಣ ಶಿಕ್ಷೆಗೆ ಪಾತ್ರನಾಗಿದ್ದನು. ಒಂದು ವರುಷ ಶಿಕ್ಷೆಯನ್ನು ಅನುಭವಿಸಿದನಂತರ ಈಗ ಆತನನ್ನು ಅಲ್ಲಿಯ ಗೃಹಮಂತ್ರಿಗಳು ಬಿಡುಗಡೆ ಮಾಡಿದ್ದಾರೆ!

ಮಧ್ಯಪ್ರಾಂತ ಕಾಂಗ್ರೆಸ್ ಪಕ್ಷೀಯ ಮಂತ್ರಿಗಳ ಈ ಕೃತ್ಯವು ನಾಚಿಕೆಗೇಡಿಗಳ ಕೆಲಸವೆಂದೇ ನನಗೆ ತೋರುತ್ತದೆ. ಇಂಥ ಕೆಲಸವನ್ನು ಯಾರೂ ಮಾಡಲಾರರು. ಹಿಂದುಗಳು ಅಂಥರಾಗಿ ಕಾಂಗ್ರೆಸ್ಸಿನ ಬೆನ್ನು ಹತ್ತಿದ್ದಾರಲ್ಲಾ! ಅವರಿಗೆ ಈ ಕೃತ್ಯದಿಂದ ತೋರುವುದೇನು?

ಇದು ಸ್ಪೃಶ್ಯ ಹಿಂದು ಹುಡುಗಿಯ ಸಂಬಂಧವಾಗಿ ನಡೆದದ್ದಾಗಿದ್ದರೆ ನಾನು ಈ ಲೇಖನ ಪ್ರಕಟಿಸಲು ನಿಮಗೆ ತೊಂದರೆ ಕೊಡುತ್ತಿರಲಿಲ್ಲ. ಹೀಗೆಂದ ಮಾತ್ರದಲ್ಲಿ ಸ್ಪೃಶ್ಯ ಹಿಂದು ಹುಡುಗಿಯರ ಮೇಲೆ ಇಂಥ ಅತ್ಯಾಚಾರಗಳಾದರೆ ಆಗಲೆಂದು ನನ್ನ ಅಭಿಪ್ರಾಯವಲ್ಲ. ಹಿಂದುಗಳು ಕಾಂಗ್ರೆಸ್ಸಿನ ವಿನಾ ಬೇರೊಂದು ಪಕ್ಷವೇ ಇಲ್ಲವೆಂತಲೂ ಮಹಾತ್ಮಾ ಗಾಂಧಿಯವರ ವಿನಾ ತಮಗೆ ಮೋಕ್ಷದಾತರು ಬೇರೆಯವರು ಇಲ್ಲವೇ ಇಲ್ಲವೆಂತಲೂ ತಿಳಿದಿದ್ದಾರಷ್ಟೆ. ಅಂತೆಯೇ ತಮ್ಮ ಭವಿತವ್ಯವನ್ನೆಲ್ಲಾ ಒಂದು ಪಕ್ಷದ ಮತ್ತು ಒಬ್ಬ ವ್ಯಕ್ತಿಯ ಕೈಯಲ್ಲಿಯೇ ಕೊಟ್ಟು ತಾವು ಆ ವಿಚಾರವಾಗಿ ವಿಮರ್ಶೆಯನ್ನೇ ಮಾಡುವುದಿಲ್ಲ. ಆದಕಾರಣ ಇಂಥ ಸ್ಥಿತಿಯಲ್ಲಿ ಸ್ಪೃಶ್ಯ ಹಿಂದುಗಳಿಗೆ ಸಂಭವಿಸುವ ಅನರ್ಥಗಳಿಗೆಲ್ಲಾ ಅವರೇ ಹೊಣೆಗಾರರಷ್ಟೆ.

ಆದರೆ ಬಲಾತ್ಕಾರಕ್ಕೊಳಗಾಗಿದ್ದ ಹುಡುಗಿಯು ಸ್ಪೃಶ್ಯ ಹಿಂದುಗಳಿಗೆ ಸೇರಿದವಳಲ್ಲ. ಅವಳು ಅಸ್ಪೃಶ್ಯ ವರ್ಗಕ್ಕೆ ಸೇರಿದ ಚಮ್ಮಗಾರಳು. ಅಂತೆಯೇ ನನಗೆ ತುಂಬಾ ಚಿಂತೆ. ನಾವು ಯಾವಾಗಲೂ ಅಲ್ಪ ಸಂಖ್ಯಾಕರಾಗಿಯೇ ಇರುವೆವು. ನಮ್ಮ ಕೈಯಲ್ಲಿ ಅಧಿಕಾರ ಬರುವ ಆಸೆಯೇ ನಮಗಿಲ್ಲ.

ಮಧ್ಯಪ್ರಾಂತದ ಮಂತ್ರಿಯ ಈ ಕೃತ್ಯವನ್ನು ಹಿಂದುಗಳು ಸಹಿಸಿಕೊಂಡರೆ, ಮುಖ್ಯ ಮಂತ್ರಿಗಳು ಅದಕ್ಕೆ ಒಪ್ಪಿಗೆ ಕೊಟ್ಟರೆ, ಮಹಾತ್ಮಾ ಗಾಂಧಿಯವರು ಈ ವಿಷಯದ ಕಡೆಗೆ ನಿರ್ಲಕ್ಷಿಸಿದರೆ, ನಮಗೆ ನ್ಯಾಯ ದೊರೆಯುವ ಆಸೆ ಇನ್ನೆಲ್ಲಿ? ಬೇರೆ ಯಾವ ದೇಶದಲ್ಲಾಗಿದ್ದರೂ ಇಂಥ ಮಂತ್ರಿಯನ್ನು ಕೂಡಲೇ ಕೆಲಸದಿಂದ ತೆಗೆದು ಹಾಕುತ್ತಿದ್ದರು. ಆದರೆ ಹಿಂದುಸ್ಥಾನದಲ್ಲಿ ಇದು ಶಕ್ಯವೆ? ಈ ವಿಷಯವಾಗಿ ಮುಖ್ಯ ಮಂತ್ರಿಗಳು ಮತ್ತು ಗಾಂಧೀಜಿಯವರು ಯಾವ ಅಭಿಪ್ರಾಯವುಳ್ಳವರಾಗಿದ್ದಾರೆಂಬುದನ್ನು ಅಸ್ಪೃಶ್ಯ ವರ್ಗದವರಿಗಾಗಿ ಸ್ಪಷ್ಟೀಕರಿಸುವುದು ಅವರ ಕರ್ತವ್ಯವಾಗಿದೆ."

---

## ಸಂಸ್ಥಾನಗಳಲ್ಲಿ ಜವಾಬ್ದಾರಿ ಸರಕಾರ.

ದೇಶಿ ಸಂಸ್ಥಾನಗಳಲ್ಲಿ ಜವಾಬ್ದಾರಿ ಸರಕಾರವನ್ನು ಸ್ಥಾಪಿಸಲು ಬ್ರಿಟಿಶ್ ಸರಕಾರವೇನೂ ಅಡ್ಡಿ ಮಾಡುವುದಿಲ್ಲವಾಗಿ ಪಾರ್ಲಮೆಂಟಿನಲ್ಲಿ ಅರ್ಲ ವಿಂಟರಟನ್‌ರವರೇ ಹೇಳಿದ್ದಾರಷ್ಟೆ. ಎಂದ ಮೇಲೆ ಸಂಸ್ಥಾನಾಧಿಪತಿಗಳು ಬ್ರಿಟಿಶ್ ಸರಕಾರದ ಕಡೆಗೆ ಬೆರಳು ಮಾಡುವಂತಿಲ್ಲವಾಯಿತು.

ಸಂಸ್ಥಾನಗಳಲ್ಲಿಯ ಪ್ರಜೆಗಳು ಎಷ್ಟು ಸಂಘಟಿತರಾಗಿ ನ್ಯಾಯಬದ್ಧ ರೀತಿಯಿಂದ ಪ್ರಬಲವಾಗಿ ಹೋರಾಡುವರೋ ಅಷ್ಟು ಅವರಿಗೆ ಜವಾಬ್ದಾರಿ ಸರಕಾರವು ಲಭಿಸುವುದು. ಈ ವಿಚಾರವಾಗಿ ಬ್ರಿಟಿಶ್ ಸಾಮ್ರಾಜ್ಯದ ಒಬ್ಬ ಪ್ರಸಿದ್ಧ ನ್ಯಾಯ ಶಾಸ್ತ್ರಜ್ಞರಾದ ಎಡಿಂಬರೋ ವಿಶ್ವ ವಿದ್ಯಾಲಯದ ಡಾ. ಬೆಂಡಲ್ ಕೀಥರವರು ಹೀಗೆ ಹೇಳಿದ್ದಾರೆ—

"ಬ್ರಿಟಿಶ್ ಸರಕಾರವು ಪ್ರಜಾ ಪ್ರಭುತ್ವ ಪ್ರಿಯವಾದುದು. ಆದಕಾರಣ ಸಂಸ್ಥಾನಿಕರು ಜವಾಬ್ದಾರಿ ಸರಕಾರವನ್ನು ಏರ್ಪಡಿಸಿದರೆ ಅವರೆಂದಿಗೂ ಅಡ್ಡಿ ಮಾಡುವುದಿಲ್ಲ. ಸಂಯುಕ್ತ ರಾಜ್ಯಘಟನೆಯಲ್ಲಿ ಸಂಸ್ಥಾನಗಳಿಂದ ಚುನಾಯಿಸಲ್ಪಟ್ಟ ಪ್ರತಿನಿಧಿಗಳನ್ನೇ ಕಳಿಸಬೇಕಾದುದು ಜವಾಬ್ದಾರಿ ಸರಕಾರದ ಲಕ್ಷಣ. ಸಂಸ್ಥಾನಾಧಿಪತಿಗಳಿಗೆ ತಮ್ಮ ಸ್ಥಾನ ಭದ್ರವಾಗಿರಬೇಕೆಂಬ ಇಷ್ಟವಿದ್ದರೆ ಆದಷ್ಟು ಜಾಗ್ರುತಿ ಅವರು ತಮ್ಮಲ್ಲಿ ಜವಾಬ್ದಾರಿ ಸರಕಾರವನ್ನು ಏರ್ಪಡಿಸಬೇಕು."

---

—ಹಿಂದು ಮಹಾಸಭಾ ಅಧ್ಯಕ್ಷರಾದ ಬ್ಯಾ. ಸಾವರಕರರು ಪಂಜಾಬದ ಮುಖ್ಯಮಂತ್ರಿಗಳಾದ ಸರ್. ಶಿಕಂದರ ಹಯಾತಖಾನರಿಗೆ ಒಂದು ಪತ್ರವನ್ನು ಬರೆದು ಶಾಹೀದಗಂಜ ಪ್ರಶ್ನೆಯು ಅಸೆಂಬ್ಲಿಯಲ್ಲಿ ಪುನಃ ಬರಲು ಅವಕಾಶ ಕೊಡದೆ ಜಾತಿಯ ಜಗಳವು ಹೆಚ್ಚದಂತೆ ಮಾಡಿದುದಕ್ಕಾಗಿ ಅವರನ್ನು ಅಭಿನಂದಿಸಿದ್ದಾರೆ.

# ಭಾಯಿ ಪರಮಾನಂದರು.

### ಹೈದರಾಬಾದ.

ತಾ. ೧೬-೩-೩೮ ನೆಯ ಸಾಯಂಕಾಲ ಏಳು ಘಂಟೆಗೆ ಶ್ರೀ. ಭಾಯಿ ಪರಮಾನಂದರು ಮೈಸೂರಿಂದ ಹೈದರಾಬಾದಿಗೆ ಬಂದರು. ಮೂರು ನಾಲ್ಕು ಸಾವಿರ ಜನರು ಭಾಯೀಜಿಯವರ ಸ್ವಾಗತಕ್ಕಾಗಿ ಸ್ಟೇಶನ್ನಿಕ್ಕೆ ಬಂದಿದ್ದರು. ಭಾಯೀಜಿಯವರು ಹಸನ್ಮುಖರಾಗಿಯೇ ಸರ್ವರಿಗೆ ಅಭಿವಂದಿಸಿದರು. ಸರ್ವರು ಬಹು ಸಂಭ್ರಮದಿಂದ ಉತ್ಸವದೊಂದಿಗೆ ಭಾಯೀಜಿಯವರನ್ನು ಆರ್ಯ ಮಂದಿರಕ್ಕೆ ಕರೆತಂದರು. ಭಾಯೀಜಿಯವರು ಬಹು ದಣಿದು ಬಂದಿದ್ದರೂ ಮಂದಿರದಲ್ಲಿ ಅರ್ಧ ತಾಸಿನ ವರೆಗೆ ತರುಣರನ್ನುದ್ದೇಶಿಸಿ ಉಪದೇಶಿಸಿದರು.

"ತರುಣರೇ, ನಿಮ್ಮೀ ತಾರುಣ್ಯವನ್ನು ಆಟಪಾಟಗಳಲ್ಲಿ ನೋಟನಾಟಗಳಲ್ಲಿ ಕಳೆಯಬೇಡಿರಿ. ಜೀವನದಲ್ಲಿ ಒಂದು ಧ್ಯೇಯವನ್ನಿಟ್ಟುಕೊಳ್ಳಿರಿ. ಆ ಧ್ಯೇಯವನ್ನು ಸಾಧಿಸಲನುವಾಗಿರಿ. ಮತ್ತು ಅದಕ್ಕಾಗಿಯೇ ನಿಮ್ಮ ಜೀವನವನ್ನು ಧಾರೆ ಎರೆಯಿರಿ. ಅಂದರೇನೇ ಜಗತ್ತಿನಲ್ಲಿ ಮನುಷ್ಯನಾಗಿ ಹುಟ್ಟಿ ಬಂದುದಕ್ಕೆ ಸಾರ್ಥಕ. ಇಲ್ಲವಾದರೆ ಪ್ರತಿ ಕ್ಷಣ ಕ್ಷಣಕ್ಕೆ ಹುಟ್ಟಿ ಸಾಯುತ್ತಿರುವ ಕ್ರಿಮಿ ಕೀಟಕಗಳಿಗೂ ನಿಮಗೂ ಭೇದವೇನಿದೆ? ಎಂದು ಉಪದೇಶಿಸುತ್ತ ಕಡೆಗೆ ನನ್ನೀ ಉಪದೇಶದಿಂದ ಇಲ್ಲಿಯ ನಾಲ್ಕೆಂಟು ಜನರಾದರೂ ತಮ್ಮ ಧರ್ಮದೇವತೆಗಾಗಿ ತಮ್ಮ ಉಚ್ಚ ಧ್ಯೇಯವನ್ನಿಟ್ಟುಕೊಂಡು ನಡೆದದ್ದಾದರೆ ನನ್ನೀ ವ್ಯಾಖ್ಯಾನವು ಸಾರ್ಥಕವಾಯಿತೆಂದು ತಿಳಿಯುವೆನು." ಎಂದು ಹೇಳಿದರು.

### ಭಾಯೀಜಿಯವರ ಭಾಷಣ.

ತಾ. ೧೭-೩-೩೮ ನೆಯ ಬೆಳಗಿನ ೭॥ ಘಂಟೆಗೆ ಗೋಲಿಗೂಡದಲ್ಲಿಯ ರಾಮ ಮಂದಿರದಲ್ಲಿ ಶ್ರೀ. ಭಾಯಿ ಪರಮಾನಂದರ ವ್ಯಾಖ್ಯಾನ "ಧರ್ಮ" ದ ಮೇಲೆ ಆಯಿತು. ಜನರು ಮಂದಿರದಲ್ಲಿ ಕಿಕ್ಕಿರಿದಿದ್ದರು. ಲೌಡ ಸ್ಪೀಕರದ ವ್ಯವಸ್ಥೆಯಾಗಿದ್ದಿತು. ಇವರು ಹೀಗೆ ಹೇಳಿದರು—

"ಒಂದು ಗಿಡಕ್ಕೆ ಅನೇಕ ಕೊಲ್ಲೆ ಟೊಂಗೆಗಳಿವೆ. ಆ ಕೊಲ್ಲೆ ಟೊಂಗೆಗಳನ್ನು ಕಡಿದಾಕ್ಷಣಕ್ಕೆ ಆ ಗಿಡವೇನಾದರೂ ನಾಶವಾಗಬಹುದೆ? ಆ ಟೊಂಗೆಗಳಿಗೆ ಗಿಡವೆನ್ನಬಹುದೆ? ಆ ಗಿಡದ ಜೀವ ಮುಖ್ಯವಾಗಿ ಆ ಗಿಡದ ಬುಡದಲ್ಲಿರುತ್ತದೆ. ಅದರಂತೆ ಮನುಷ್ಯ ಜಾತಿಯ ಜೀವವೇ ಧರ್ಮ. ಧರ್ಮದ ನಿಜ ವ್ಯಾಖ್ಯೆಯನ್ನು ಯಾವ ಧರ್ಮಗ್ರಂಥಗಳೂ ಚನ್ನಾಗಿ ಮಾಡಿಲ್ಲ. ಇದಕ್ಕೇನೇ ಧರ್ಮವೆಂದೆನ್ನುವರೆಂದು ಯಾವ ವೇದ, ಖುರಾನ, ಬೈಬಲ್‌ಗಳಲ್ಲಿಯೂ ಹೇಳಿಲ್ಲ. ಇಷ್ಟು ಮಾತ್ರ ವೇದದಲ್ಲಿ ಹೇಳಿದೆ- ಕಾಲದ ಮಹಾ ಪುರುಷರು ನಡೆದಂತೆ ನಡೆಯುವದೇ ಧರ್ಮ. ಮಹಾ ಪುರುಷರು ನಡೆಯುತ್ತಿರುವ ಮಾರ್ಗದಂತೆ ನಡೆಯುವದರಲ್ಲಿಯೇ ಜೀವನದ ಹಿತವಿದೆ.

ಮನುಷ್ಯನು ಯಾವ ಮತದಲ್ಲಿ ಹುಟ್ಟಿರುವನೋ ಅದರಲ್ಲಿಯೇ ವಿಶ್ವಾಸವಿಟ್ಟು ನಡೆಯುವದು ಲೇಸು. ಇಲ್ಲವಾದರೆ ಅವನ ಜೀವನ ಬಹು ಕೆಡಕಾಗಿ ಹೋಗುವದು. ಕ್ರೈಸ್ತ ಮಹಮ್ಮದೀಯರು ಹೊಸದಾಗಿ ಸೇರುವ ಜನರಿಗೆ ಅವರವರ ಧರ್ಮದ ಗುಟ್ಟು ಏನೇನು ಹೇಳಿಕೊಡುವರೆಂಬದರ/ಬಗ್ಗೆ ನಿಮಗೆ ತಿಳಿದಿದೆಯೋ? ಕ್ರೈಸ್ತರು ಹೊಸದಾಗಿ ಕ್ರೈಸ್ತರಾಗುವವರಿಗೆ ಏಸುವಿನ ಕಥೆಯನ್ನು ಹೇಳಿ ಅವನು ದೇವರ ಮಗನೆಂತಲು, ಅವನು ಶೂಲವನ್ನೇರಿ ಹಿಂಸೆಹೊಂದಿ ಸತ್ತುದು ತಮ್ಮ ಮುಕ್ತಿಗಾಗಿ ಎಂದು ಮತ್ತು ಕ್ರೈಸ್ತರಾದವರಿಗೆ ಮುಕ್ತಿ ಸಿಗುವುದೆಂದು, ಇದಕ್ಕೆಲ್ಲ ನೀವು ನಂಬಿರೆಂದು ಬೋಧಿಸುವರು. ಸ್ವಲ್ಪ ವಿಚಾರಮಾಡಿರಿ. ಅವನು ಹಿಂಸೆಹೊಂದಿ ಸತ್ತುದರಿಂದ ಇವರಿಗೆ ಹೇಗೆ ಮುಕ್ತಿ ಸಿಗುವದೋ ತಿಳಿಯದು. ಒಬ್ಬನು ಮಾಡಿದ ಕರ್ಮಕ್ಕಾಗಿ ಇನ್ನೊಬ್ಬನಿಗೆ ಅದರ ಫಲವೆ? ದೇವರ ನ್ಯಾಯವೇ ಹೀಗಿರಬಹುದೆ? ಮುಸಲ್ಮಾನರಾದರೂ ಹೊಸದಾಗಿ ಮುಸಲ್ಮಾನರಾಗುವವರಿಗೆ ಅವರನ್ನು ಮಸೂದಿಯಲ್ಲಿ ಕರೆದೊಯ್ದು ಮಹಮ್ಮದ ಪೈಗಂಬರರ ಚರಿತ್ರೆಯನ್ನು ಹೇಳಿ ಕಲಮಾ ಓದಿಸಿ ಇದರಲ್ಲೇ ನಂಬು ಎಂದು ಉಪದೇಶಿಸಿ ಎಲ್ಲರೂ ಕೂಡಿ ನೀರು ಕುಡಿದು ಬಿಡುವರು. ಇಷ್ಟೇ ಧರ್ಮಗಳ ಸ್ವೀಕಾರ. ಯಾವನು ತನ್ನ ಮಾತೃ ಧರ್ಮವನ್ನು ಬಿಟ್ಟು ಹೋಗುತ್ತಿರುವನೋ ಅವನಷ್ಟು ಕೀಳು ಜಗತ್ತಿನಲ್ಲಿ ಬೇರೊಬ್ಬನಿಲ್ಲ. ತನಗೆ ಏನು ಮಾಡಬೇಕಾಗಿದ್ದರೂ ತನ್ನ ಧರ್ಮದಲ್ಲಿದ್ದು ಬೇಕಾದದ್ದು ಮಾಡಬಹುದು. ಯಾವ ಕಾರಣದಿಂದಾಗಲಿ ತನ್ನ ಸ್ವಂತ ಧರ್ಮ ಬಿಡುವುದೆಂದರೆ ಬಹು ಕೆಡಕಾದುದಾಗಿದೆ. ಮುಖ್ಯವಾಗಿ ಯಾವುದಾದರೂ ಅವರವರ ನಂಬಿಗೆಯ ಮೇಲಿದೆ. ಶ್ಲೋಕ— ಸ್ವ ಧರ್ಮೇ ನಿಧನಂ ಶ್ರೇಯಃ ಪರ ಧರ್ಮೋ ಭಯಾವಹಃ.

ವರ್ಣಾಶ್ರಮ ಧರ್ಮಗಳನ್ನು ಅನುಸರಿಸಿಯೇ ನಡೆಯಬೇಕು. ಸ್ತ್ರೀಯರ ಧರ್ಮ ಕೂಡ ಬೇರೆ. ಎಲ್ಲರೂ ತಮ್ಮ ತಮ್ಮ ಧರ್ಮದಂತೆ ನಡೆದರೇನೇ ಲೇಸು. ಇಲ್ಲವಾದರೆ ಭಯಪ್ರದವಿದೆ. ಈಗ ಸ್ತ್ರೀಯರು ದೊಡ್ಡ ದೊಡ್ಡ ಅಧಿಕಾರಗಳಲ್ಲೂ ಮತ್ತು ಕೌನ್ಸಿಲ್ಲುಗಳಲ್ಲೂ ಸೇರಬಯಸುವರು. ವಕೀಲರಾಗಿ ವಾದವಿವಾದಗಳಲ್ಲಿ ಗೆದಿಯಬೇಕೆನ್ನುವರು. (ಜನರು ಸ್ವಲ್ಪ ನಗುವರು, ಹೆಣ್ಣುಮಕ್ಕಳು ನಾಚಿ ತಲೆ ಕೆಳಗೆ ಮಾಡುವರು.) ನನ್ನೀ ಹೇಳಿಕೆಯಿಂದ ಅವರು ಕೀಳರೆಂದು ತಿಳಿಯಕೂಡದು. ಅವರೂ ಗಂಡಸಿನ ಸರಿಸಮಾನರು. ಇಷ್ಟೆ. ಗಂಡಸಿನ ಧರ್ಮ ಬೇರೆ. ಹೆಂಗಸರ ಧರ್ಮ ಬೇರೆ. ಸ್ತ್ರೀಯರ ಧರ್ಮ ಪುರುಷರ ಧರ್ಮಕ್ಕಿಂತಲೂ ಎಷ್ಟೋ ಮೇಲ್ಪಟ್ಟದ್ದಾಗಿದೆ. ಅವರು ಧರ್ಮ, ಭೀಮರಂಥ ಮಕ್ಕಳನ್ನು ಹಡೆದು ಕೊಡುವದೇ ಶ್ರೇಷ್ಠವಾದ ಧರ್ಮವಾಗಿದೆ. ಮನೆ ಕೆಲಸದ ಸುಧಾರಣೆ ಮಾಡಿಕೊಳ್ಳುವ ಜವಾಬ್ದಾರಿಯ ಕೆಲಸವೇನು ಸಾಮಾನ್ಯವಾದುದೆ? ಇದೆಲ್ಲವನ್ನು ಬಿಟ್ಟು ಸ್ತ್ರೀಯರು ನಾವು ಎಲ್ಲದರಲ್ಲಿಯೂ ಪುರುಷರ ಸರಿಸಮಾನರೆಂದು ಹೇಳಿಕೊಳ್ಳುತ್ತ ಧರ್ಮಬಾಹ್ಯರಾಗುತ್ತಿರುವುದು ಭಯಪ್ರದವಾದುದಾಗಿದೆ.

ಗೀತೆಯ ಬೋಧಕನಾದ ಶ್ರೀಕೃಷ್ಣನಿಗೆ ಎಷ್ಟೋ ಜನರು ಪರಮಾತ್ಮನೆಂದೇ ತಿಳಿದಿರುವರು. ಯುದ್ಧದ ಮುಂಚೆ ಅರ್ಜುನನು ತನ್ನ ಗುರುತಾತಂದಿರು ಬಂಧುಬಾಂಧವರು ಮತ್ತು ಮಿತ್ರರನ್ನು ನೋಡಿ "ನಾನು ಈ ಎಲ್ಲಾ ಜನರನ್ನು ಕೊಲ್ಲಲೆ?" ಎಂದು ಬಾಯಿಂದ ಶಬ್ದಗಳು ಹೊರಡುತ್ತಿರುವಾಗಲೇ ಅವನ ಕೈಯೊಳಗಿನ ಬಾಣಬತ್ತಳಿಕೆಗಳು ತಾನಾಗಿಯೇ ಬಿದ್ದುಬಿಟ್ಟವು.

ಅರ್ಜುನನ ಆ ಉದ್ಗಾರಕ್ಕೆ ಶ್ರೀಕೃಷ್ಣನು ಸರಿಯಾದ ಉತ್ತರ ಕೊಡದೆ ಬೇರೆ ಬೇರೆ ವಿಷಯಗಳನ್ನು ಹೇಳಿರುವನು. ಅರ್ಜುನನು "ನನ್ನವರನ್ನು ನಾನು ಅದು ಹೇಗೆ ಕೊಲ್ಲಲೆಂದು ಅದರಿಂದ ನಮ್ಮದೇ ಸರ್ವನಾಶವಾಗುವದಿಲ್ಲವೆ?" ಎಂದು ಶ್ರೀಕೃಷ್ಣನನ್ನು ಕೇಳಿದ್ದಕ್ಕೆ ಅವನು ಸರಿಯಾದ ಉತ್ತರ ಕೊಡಲಾರದೆ ಹೋದನು. ಅದೆಲ್ಲ ಮಾಯೆ, ನಿನಗೂ ಅವರಿಗೂ ಸಂಬಂಧವಿಲ್ಲವೆಂದು ವೇದಾಂತದ ಮಾತುಗಳನ್ನು ಹೇಳಿ ಅರ್ಜುನನ ಮುಖ್ಯ ಪ್ರಶ್ನೆಯನ್ನೇ ಮರೆಯಿಸಿರುವನು. ಗೀತೆಯಲ್ಲಿ ಯಾವ ಕಡೆಯಲ್ಲಿಯೂ

(೧೨ ನೆಯ ಪುಟಕ್ಕೆ ಮುಂದೆ ಸಾಗಿದೆ.)




ಶಾ. ಶ. ೧೮೫೯ ನೆಯ ಫಾಲ್ಗುಣ ಬ|| ೧೨ ಸೋಮವಾರ.

# ಕಾಂಗ್ರೆಸ್ಸಿನ ಮಾನ ಕಾಯಿರಿ.

ಮಹಾತ್ಮಾ ಗಾಂಧಿಯವರು ಹೇಳಿಕೊಟ್ಟ ಸತ್ಯ ಮತ್ತು ಅಹಿಂಸೆಗಳ ರೀತಿ ನೀತಿಗಳನ್ನು ಅನುಸರಿಸುವ ಕಾಂಗ್ರೆಸ್ಸಿನಲ್ಲಿರುವವರು ತಪ್ಪು ಮಾಡಲೇಬಾರದು. ಒಂದು ವೇಳೆ ಮಾಡಿದರೆ ಆ ತಪ್ಪನ್ನೇ ಒಪ್ಪೆಂದು ಸಾಧಿಸದೆ ತಪ್ಪಿನ ಪಾಪನಿವೃತ್ತಿಗಾಗಿ ಆತ್ಮಶುದ್ಧಿಯ ಉಪೋಷಣಾದಿ ಕ್ರಿಯೆಗಳನ್ನು ಆಚರಿಸಬೇಕು. ಇದೇ ಅವರ ಈ ಹಿಂದಿನ ರೀತಿಯಾಗಿದ್ದಿತು. ಅಂತೆಯೇ ಕಾಂಗ್ರೆಸ್ಸಿನ ನಡೆ ನುಡಿಗಳಲ್ಲಿ ಜನರಿಗೆ ವಿಶೇಷವಾದ ಭಕ್ತಿ ವಿಶ್ವಾಸಗಳುಂಟಾದವು.

ಕಾಂಗ್ರೆಸ್ಸಿನ ಸಣ್ಣ ಪುಟ್ಟ ಕಾರ್ಯಗಳನ್ನು ಮಾಡುತ್ತಿದ್ದ ಅನೇಕರು ಕೂಡಾ ತಮ್ಮಿಂದ ಅತ್ಯಲ್ಪ ಅಪರಾಧ ಸಂಭವಿಸಿದರು ಕೂಡಾ ಉಪೋಷಣೆ, ಮೌನ, ಮೊದಲಾದ ವ್ರತಗಳನ್ನು ಮೊದಲು ಅನುಸರಿಸುತ್ತಿದ್ದುದು ಅನೇಕರಿಗೆ ಜ್ಞಾಪಕವಿರಬಹುದು. ಆದರೆ ಈ ರೀತಿಯು ಕಾಂಗ್ರೆಸ್ಸಿನ ಬಲ ಹೆಚ್ಚಿದಂತೆ ಮಾಯವಾಗುತ್ತಾ ಬಂದುದು ವಿಷಾದದ ಸಂಗತಿಯು. ಕಾಂಗ್ರೆಸ್ಸಿನ ಕೈಯಲ್ಲಿ ಅಧಿಕಾರ ಸೂತ್ರ ಬಂದಮೇಲಂತೂ ಒಂದು ತಾಲೂಕಿನ ಕಾಂಗ್ರೆಸ್ ಅಧ್ಯಕ್ಷರಿಂದ ಒಂದು ಪ್ರಾಂತದ ಮಂತ್ರಿಗಳ ವರೆಗೂ ಅನೇಕರಿಂದ ಅನೇಕ ಅಪರಾಧಗಳು ಜರುಗುತ್ತಿದ್ದರೂ ಕಾಂಗ್ರೆಸ್ಸಿನ ತತ್ವದ ಬೆಳಕಿನಲ್ಲಿಯೇ ಅವೆಲ್ಲಾ ಈಗ ಕಾಣದಂತಾಗಲಾರಂಭಿಸಿವೆ. ಇಷ್ಟೇ ಅಲ್ಲ; ಅನೇಕರು ತಮ್ಮ ಅಪರಾಧ ತಿಳಿಯಬಾರದೆಂದು ಉದ್ದೇಶಪೂರ್ವಕ ಮುಚ್ಚಲು ಪ್ರಯತ್ನಿಸುತ್ತಿದ್ದಾರೆ. ಎಂದಮೇಲೆ ಮೊದಲಿನ ಆ ತತ್ವನಿಷ್ಠೆ ಎತ್ತ? ಈಗಿನ ಅಧಿಕಾರ ನಿಷ್ಠೆ ಎತ್ತ?

### ಅಪರಾಧದ ಘೋರ ಸ್ವರೂಪ.

ಮಧ್ಯಪ್ರಾಂತದ ಅಧಿಕಾರವು ಕಾಂಗ್ರೆಸ್ಸಿನ ಕೈಯಲ್ಲಿದೆಯಷ್ಟೆ. ಆ ಪ್ರಾಂತದ ಗೃಹಮಂತ್ರಿಗಳಾದ ಮಿ. ಶರೀಫರು ಘೋರ ಅಪರಾಧ ಮಾಡಿದ್ದ ಜಾಫರ ಹುಸೇನ ಎಂಬಾತನನ್ನು ಬಿಟ್ಟ ವಿಚಾರವಾಗಿ ನಾವು ಕಳೆದ ಸಂಚಿಕೆಯಲ್ಲಿಯೇ ತಿಳಿಸಿದ್ದೇವಷ್ಟೆ. ಆ ಅಪರಾಧಿಯ ವಿವರ ಹೀಗಿದೆ—

ಖಾನಸಾಹೇಬ ಜಾಫರ ಹುಸೇನ ಎಂಬುವವರು ವಿದ್ಯಾಶಾಖೆಯ ಒಬ್ಬ ಅಧಿಕಾರಿಗಳಾಗಿದ್ದರು. ಇವರು ೧೩ ವರುಷ ವಯಸ್ಸಿನ ಒಬ್ಬ ಚಮ್ಮಗಾರ ಹುಡುಗಿಯ ಮೇಲೆ ಬಲಾತ್ಕಾರ ನಡೆಯಿಸಿದರು. ಪೋಲಿಸ್ ಸಬ್ ಇನಸ್ಪೆಕ್ಟರ್ ಮಿ. ದಾವೂದ ಎಂಬುವವರ ಸಹಾಯದಿಂದ ಈ ಘೋರ ಕೃತ್ಯವನ್ನು ಮಾಡಿದರು. ಈ ಅಪರಾಧದ ವಿಚಾರಣೆಯಾಗಿ ೧೯೩೬ ನೆಯ ಇಸವಿಯಲ್ಲಿ ಸೆಶನ್ಸ್ ಜಜ್ಜರು ಅಪರಾಧಿಗೆ ೩ ವರುಷಗಳ ಕಠಿಣ ಶಿಕ್ಷೆಯನ್ನು ವಿಧಿಸಿದರು.

ವಿದ್ಯಾಶಾಖೆಯಲ್ಲಿರುವ ಇಂಥ ಹೊಣೆಗಾರಿಕೆಯ ಸುಶಿಕ್ಷಿತ ಮನುಷ್ಯನು ಈ ಘೋರ ಕೃತ್ಯ ಮಾಡಿದುದರಿಂದ ನ್ಯಾಯಾಧೀಶರು ವಿಧಿಸಿದ ಶಿಕ್ಷೆಯು ಯೋಗ್ಯವಾದುದೆಂದೇ ನಿಷ್ಪಕ್ಷಪಾತಿಗಳು ಹೇಳದಿರಲಾರರು. ಅಪರಾಧಿಯು ತಾನು ಎಂಥ ಘೋರ ಕೃತ್ಯ ಮಾಡಿದ್ದರೂ ತನಗಾದ ಶಿಕ್ಷೆಯು ಮಾತ್ರ ಹೆಚ್ಚಿನದೆಂದೇ ಹೇಳುವುದು ಸ್ವಾಭಾವಿಕ. ಅದೇ ಪ್ರಕಾರ ಜಾಫರ ಹುಸೇನ ಅಪರಾಧಿಯೂ ತನ್ನ ಶಿಕ್ಷೆಯನ್ನು ನಿವಾರಣೆ ಮಾಡಿ ದಯೆಯನ್ನು ತೋರಿಸಬೇಕೆಂದು ಹಿಂದಿನ ತಾತ್ಕಾಲಿಕ ಮಂತ್ರಿಮಂಡಲಕ್ಕೆ ಕೇಳಿಕೊಂಡಿದ್ದನಂತೆ. ಆ ಮಂತ್ರಿಗಳು ಮಾತ್ರ ಇಂಥ ನೀಚ ಕೃತ್ಯ ಮಾಡಿದ ಅಪರಾಧಿಗೆ ದಯೆಯನ್ನು ತೋರಿಸದೆ ಆತನ ಪ್ರಾರ್ಥನೆಯನ್ನು ತಳ್ಳಿಹಾಕಿದರು.

### ಕಾಂಗ್ರೆಸ್ಸಿನ ಮಂತ್ರಿಗಳ ದಯೆ!

ಕಾಂಗ್ರೆಸ್ ಪಕ್ಷವು ದಯಾಮಯವಾದುದಷ್ಟೆ. ಇದರಲ್ಲಿ ಬೇಡಿಕೊಂಡರೆ ದಯೆ ಬರಬಹುದೆಂದು ಜಾಫರ ಹುಸೇನರು ಬೇಡಿಕೊಂಡರು. ಕಾಂಗ್ರೆಸ್ ಪಕ್ಷದಲ್ಲಿ ತಾವು ಮಂತ್ರಿಗಳಾಗುವ ಮುನ್ನಿನ ದಿನವೇ ಮುಸ್ಲಿಂಲೀಗಿನ ವೇಷ ತೆಗೆದು ಕಾಂಗ್ರೆಸ್ಸಿನ ವೇಷ ಧಾರಣ ಮಾಡಿದ ಮಿ. ಶರೀಫ ಮಂತ್ರಿಗಳ ಹೃದಯವು ಆ ಪ್ರಾರ್ಥನೆಯಿಂದ ಕರಗಿತು! ಮುಖ್ಯ ಮಂತ್ರಿಗಳ ಅಭಿಪ್ರಾಯವನ್ನು ಕೂಡಾ ತಿಳಿದುಕೊಳ್ಳದೆ ಜಾಫರ ಹುಸೇನ ಎಂಬ ಘೋರ ಅಪರಾಧಿಯನ್ನು ಬಿಡುಗಡೆಮಾಡಿದರು.

ಕಾಂಗ್ರೆಸ್ಸಿನ ಎಲ್ಲಾ ಮಂತ್ರಿಗಳಿಗೂ ಈ ವಿಧವಾದ ದಯೆಯುಂಟಾದರೆ ಕಾಂಗ್ರೆಸ್ಸಿನ ರಾಜ್ಯದಲ್ಲಿ ವ್ಯಭಿಚಾರ, ಕೊಲೆ, ಸುಲಿಗೆ ಮೊದಲಾದ ನೀಚ ಕಾರ್ಯಮಾಡುವವರಿಗಾದರೂ ಸಂಪೂರ್ಣ ಸ್ವಾತಂತ್ರ್ಯ ದೊರೆತಂತಾಗುವುದಿಲ್ಲವೆ? ವಿಚಾರಪರರಾರೂ ಇಂಥ ವಿಷಯದಲ್ಲಿ ದಯೆಯನ್ನು ತೋರಿಸಲಾರರು. ಹೀಗೆ ನಡೆಯುವವರಿಗೆ ದಯಾಶಾಲಿಗಳೆಂದೂ ಹೇಳಲಾರರು.

### ಮುಖ್ಯ ಮಂತ್ರಿಗಳ ಬಣ್ಣದ ಮಾತು.

ಕಾಂಗ್ರೆಸ್ ಮಂತ್ರಿಮಂಡಲದ ಈ ನಿಂದ್ಯ ಕೃತಿಯನ್ನು ಎಲ್ಲರೂ ತುಂಬಾ ನಿಷೇಧಿಸುತ್ತಿದ್ದಾರೆ. ಡಾ. ಅಂಬೇಡಕರರು ಸೂಚಿಸಿದ ಸಂಗತಿಗಳನ್ನೂ ನಾವು ಬೇರೆ ಕಡೆ ಕೊಟ್ಟಿದ್ದೇವೆ. ಸರದಾರ ವಲ್ಲಭ ಭಾಯಿಯವರು ಈ ವಿಷಯವನ್ನು ಕಲಕತ್ತೆದಲ್ಲಿ ಕೂಡುವ ವರ್ಕಿಂಗ್ ಕಮಿಟಿಯ ಮುಂದಿಡುವವರಿದ್ದಾರಂತೆ. ಅದು ಯುಕ್ತವಾದುದಾಗಿಯೂ ಇದೆ.

ಮಧ್ಯ ಪ್ರಾಂತದ ಮಂತ್ರಿಮಂಡಲವು ಮಾಡಿದ ಈ ಅನ್ಯಾಯವನ್ನು ನಿಷೇಧಿಸಲು ಕಳೆದ ೨೮ ನೆಯ ತಾರೀಖಿನ ದಿವಸ ೫ ಸಾವಿರ ಜನರ ಒಂದು ಮೆರವಣಿಗೆಯು ಹೊರಟು ಅಸೆಂಬ್ಲಿ ಭವನದ ಕಡೆಗೆ ಹೋಯಿತು. ಅದರಲ್ಲಿ ೮೦೦ ಜನ ಸ್ತ್ರೀಯರೂ

ಇದ್ದರು. ಗೃಹ ಮಂತ್ರಿಗಳಾದ ಮಿ. ಶರೀಫರನ್ನು ಕೆಲಸದಿಂದ ತೆಗೆದುಹಾಕಬೇಕೆಂದೇ ಮೆರವಣಿಗೆಯವರು ಹೇಳುತ್ತಿದ್ದರು.

ಮುಖ್ಯ ಮಂತ್ರಿಗಳಾದ ಡಾ. ಖರೆಯವರು ಮೆರವಣಿಗೆಯ ಮುಖಂಡರಲ್ಲಿ ಮಾತನಾಡಿ ಗೃಹಮಂತ್ರಿಗಳು ಅಪರಾಧಿಯ ವಿಚಾರದಲ್ಲಿ ಕ್ಷಮೆಯನ್ನು ತೋರಿಸಿದ್ದಾರೆಂದು ಹೇಳಿದರು! ಇದು ಇವರ ಶೀಲಕ್ಕೆ ಶೋಭಿಸುವ ಮಾತಲ್ಲ. ವರ್ಕಿಂಗ್ ಕಮಿಟಿಯ ಮುಂದೆ ತಮ್ಮ ಹೇಳಿಕೆಯನ್ನು ಇಡಿರೆಂತಲೂ ಕೇಳಿಕೊಂಡರು. ಅದಕ್ಕೂ ಮುಖ್ಯ ಮಂತ್ರಿಗಳು ಒಪ್ಪಲಿಲ್ಲ. ಮೆರವಣಿಗೆಯ ಜನ ಮಧ್ಯದಲ್ಲಿ ಬಂದು ನಿಮ್ಮ ಅಭಿಪ್ರಾಯವನ್ನು ಸ್ಪಷ್ಟೀಕರಿಸಿರೆಂತಲೂ ಹೇಳಿದರು. ಅನ್ಯಾಯ ಕೃತಿಯನ್ನು ಜನ ಮಧ್ಯದಲ್ಲಿ ಬಂದು ಸಮರ್ಥಿಸಲು ಇವರ ನಾಲಿಗೆಯಾದರೂ ಹೇಗೆ ಒಪ್ಪುವುದು ? ಅಸೆಂಬ್ಲಿಯ ಕಾಂಗ್ರೆಸ್ ಸಭಾಸದರೆಲ್ಲರೂ ಶರೀಫರ ಕೃತಿಯನ್ನು ಸಮರ್ಥಿಸಿದ್ದಾರೆ ! ಇವರು ಕಾಂಗ್ರೆಸ್ಸಿನ ಮಾನ ಕಾಯುವವರೊ ?

ಅಂತೂ ಮಧ್ಯಪ್ರಾಂತದ ಮಂತ್ರಿಮಂಡಲವು ತನ್ನ ಭಯಂಕರವಾದ ತಪ್ಪನ್ನು ಒಪ್ಪಿಕೊಳ್ಳದೆ ಅದನ್ನೇ ಸಾಧಿಸಲು ಬಣ್ಣದ ಮಾತುಗಳನ್ನೇ ಆಡಿ ಏನೇನೋ ಬುದ್ಧಿವಂತಿಕೆಯನ್ನು ತೋರಿಸಿ ಪಾರಾಗುವ ಹಂಚಿಕೆಯಲ್ಲಿಯೇ ಇದೆಯೆಂದು ಸ್ಪಷ್ಟವಾಯಿತು. ಇದು ಕಾಂಗ್ರೆಸ್ಸಿನ ಹೆಸರಿನಲ್ಲಿರುವ ಮಂತ್ರಿಮಂಡಲಕ್ಕಂತೂ ಸ್ವಲ್ಪವೂ ಶೋಭಿಸತಕ್ಕದಲ್ಲ. ಇದು ಅಧಿಕಾರದ ಘನತೆಯ ಒಣ ಹೆಮ್ಮೆಗೆ ಒಳಗಾಗಿ ಹೀಗೆ ತಪ್ಪು ದಾರಿ ಹಿಡಿಯದೆ ಇನ್ನಾದರೂ ಆತ್ಮ ಶುದ್ಧಿಯ ಕಡೆಗೆ ಲಕ್ಷಿಸಬೇಕು. ಇದು ತಾನಾಗಿಯೇ ಆ ದಾರಿಗೆ ಬಾರದಿದ್ದರೆ ವರ್ಕಿಂಗ್ ಕಮಿಟಿಯಾದರೂ ಇದಕ್ಕೆ ಯೋಗ್ಯ ಶಿಕ್ಷೆಯನ್ನು ವಿಧಿಸಬೇಕು. ಅದು ಹಾಗೆ ಮಾಡದಿದ್ದರೆ ಕಾಂಗ್ರೆಸ್ಸಿನ ಘನತೆಗೆ ಬಲವಾದ ಕಲಂಕವುಂಟಾಗದಿರಲಾರದು. ಆದುದರಿಂದ ವರ್ಕಿಂಗ್ ಕಮಿಟಿಯು ಈ ವಿಷಯದ ಕಡೆಗೆ ಸಂಪೂರ್ಣ ಲಕ್ಷಿಸುವುದೆಂದೂ ಅದು ಹಾಗೆ ಲಕ್ಷಿಸುವಂತೆ ಈ ನಿಂದ್ಯ ಕೃತಿಯು ಪ್ರಖರವಾಗಿ ಖಂಡಿಸಲ್ಪಡುವುದೆಂದೂ ನಾವು ಪೂರ್ಣ ನಂಬಿದ್ದೇವೆ.

## ಎಂದು ಕರ್ನಾಟಕದ ಏಕೀಕರಣ ?

ಹಿಂದಿಗಳಿಗೆ ಹಿಂದುಸ್ಥಾನದ ಸ್ವಾತಂತ್ರ್ಯವು ಎಷ್ಟು ಮಹತ್ವದ ವಿಷಯವೋ ಅಷ್ಟೇ ಕನ್ನಡಿಗರಿಗೆ ಕರ್ನಾಟಕದ ಏಕೀಕರಣವೂ ಮಹತ್ವದ ಸಂಗತಿಯಾಗಿದೆಯಷ್ಟೆ. ಎಂದಮೇಲೆ ಸ್ವಾತಂತ್ರ್ಯ ಪ್ರಾಪ್ತಿಗಾಗಿ ಹೇಗೆ ಹಿಂದುಗಳೇ ಹೆಚ್ಚಾದ ಸಾಹಸ ಮತ್ತು ಸ್ವಾರ್ಥತ್ಯಾಗಗಳನ್ನು ಮಾಡಬೇಕಾಗಿದೆಯೋ ಹಾಗೆಯೇ ಕನ್ನಡಿಗರು ಕರ್ನಾಟಕ ಏಕೀಕರಣಕ್ಕೋಸ್ಕರ ಪ್ರಚಂಡವಾದ ಪ್ರಯತ್ನಗಳನ್ನು ಮಾಡುವುದು ಅಗತ್ಯವಾಗಿಲ್ಲವೆ ?

ಆಂಧ್ರರು ಮದ್ರಾಸ್ ಅಸೆಂಬ್ಲಿಯಲ್ಲಿ ಐಕಮತ್ಯದಿಂದ ನಿರ್ದಾಕ್ಷಿಣ್ಯವಾಗಿ ಹೋರಾಡಲಾರಂಭಿಸಿದ್ದಾರೆ. ಹೊರಗಡೆಯಲ್ಲಿಯೂ ಅದ್ಭುತ ಚಟುವಟಿಕೆಯನ್ನು ನಡೆಯಿಸಲು ಲಕ್ಷ ರೂ. ಗಳನ್ನೂ ಸಾವಿರಾರು ಸ್ವಯಂಸೇವಕರನ್ನೂ ಸಿದ್ಧಗೊಳಿಸುತ್ತಿದ್ದಾರೆ. ಹೀಗೆ ತಮ್ಮ ಜನ್ಮಸಿದ್ಧವಾದ ಏಕೀಕರಣಕ್ಕೋಸ್ಕರ ಕಾಂಗ್ರೆಸ್ ಸರಕಾರದೊಂದಿಗೂ ತೀಕ್ಷ್ಣವಾಗಿ ಹೋರಾಡಲು ಮುಂದರಿಯುತ್ತಿದ್ದಾರೆ. ಹಿಂದುಸ್ಥಾನಕ್ಕೆ ಸ್ವಾತಂತ್ರ್ಯ ದೊರೆತನಂತರ ನೋಡೋಣವೆಂದು ಅವರೇನೂ ಏಕೀಕರಣದ ವಿಷಯವನ್ನು ಬಿಡಲಿಲ್ಲ. ಅಥವಾ ಕಾಂಗ್ರೆಸ್ ಸರಕಾರಕ್ಕೆ ಎಲ್ಲಿ ನೋವುಂಟಾದೀತೋ ಎಂದು ದಾಕ್ಷಿಣ್ಯದಿಂದ ಮೆತ್ತಗೆ ಮಾತಾಡುತ್ತಾ ಇಲ್ಲ.

ಕನ್ನಡಿಗರಾದ ನಾವು ನಮ್ಮ ನೆರೆಯವರ ಸಾಹಸವನ್ನು ನೋಡಿಯಾದರೂ ಕಲಿತುಕೊಳ್ಳಬಾರದೆ ? ಮುಂಬೈ ಅಸೆಂಬ್ಲಿಯಲ್ಲಿರುವ ಕರ್ನಾಟಕದ ಎಲ್ಲ ಸಭಾಸದರಿಗೂ ಇದು ಅಷ್ಟು ಮಹತ್ವದ ವಿಷಯವಾಗಿ ತೋರಬಾರದೆ ?

ನಮ್ಮಿಂದ ಆರಿಸಿ ಹೋದವರಿಗೇನೇ ಅದು ಅಷ್ಟು ಮಹತ್ವದ್ದಾಗಿ ತೋರಿ ಎಲ್ಲರೂ ಒಂದೇ ಅಭಿಪ್ರಾಯವುಳ್ಳವರಾಗದಿದ್ದ ಮೇಲೆ ಅನ್ಯ ಪ್ರಾಂತದವರಿಗೆ ಇದು ಹೆಚ್ಚಿನ ವಿಷಯವಾಗಿ ತೋರುವುದೆ? ಮೊದಲು ಸ್ವಾತಂತ್ರ್ಯ, ಅನಂತರ ಏಕೀಕರಣವೆಂಬ ಉಜ್ವಲ ಸ್ವಾತಂತ್ರ್ಯಭಕ್ತರೂ ನಮ್ಮಲ್ಲಿದ್ದಾರೆ. ನಮ್ಮ ಏಕೀಕರಣದ ಚಟುವಟಿಕೆಯು ಕಾಂಗ್ರೆಸ್ ಮಂತ್ರಿಮಂಡಲಕ್ಕೆ ಎಲ್ಲಿ ನೋವನ್ನುಂಟು ಮಾಡುವುದೋ ಎಂಬ ದಯಾಶಾಲಿಗಳಾದ ರಾಜಕಾರಣ ಪಟುಗಳೂ ನಮ್ಮಲ್ಲಿದ್ದಾರೆ. ಏನು ಏಕೀಕರಣ? ಯಾವ ನಾಡು ಯಾವ ಭಾಗದಲ್ಲಿದ್ದರೇನು? ಈ ನಾಡಿನ ಮತ್ತು ಭಾಷೆಯ ಸಂಕುಚಿತ ಸ್ವರೂಪ ಹೋಗಿ ಅಖಂಡ ಹಿಂದಿಗಳಾಗಬೇಕೆಂಬ ಅದ್ವೈತ ರಾಷ್ಟ್ರಭಕ್ತರೂ ನಮ್ಮಲ್ಲಿದ್ದಾರೆ.

ಹೀಗೆ ನಮ್ಮ ನಾಡಿನ ಮುಂದಾಳುಗಳಲ್ಲಿಯೇ ಭಿನ್ನಾಭಿಪ್ರಾಯವಿರುವಾಗ ಕರ್ನಾಟಕದ ಏಕೀಕರಣವೆ? ಈ ಮತಭೇದಗಳೆಲ್ಲ ಹೋಗಿ ಏಕಮುಖವಾದ ಪ್ರಚಂಡ ಚಟುವಟಿಕೆಯು ನಡೆದಾಗಲೇ ಕರ್ನಾಟಕ ಏಕೀಕರಣವಲ್ಲವೆ? ಈಗ ಅಸೆಂಬ್ಲಿಯ ಮುಂದೆ ಬರಲಿರುವ ಕರ್ನಾಟಕ ಏಕೀಕರಣದ ಗೊತ್ತುವಳಿಯ ವಿಷಯದಲ್ಲಿ ಕರ್ನಾಟಕದ ಸಭಾಸದರೆಲ್ಲರೂ ಏಕಾಭಿಪ್ರಾಯದಿಂದ ಹೋರಾಡಬೇಕಲ್ಲವೆ? ಅವರು ಶಕ್ಯವಿರುವ ಎಲ್ಲ ಪ್ರಯತ್ನಗಳನ್ನೂ ಮಾಡಬೇಕಾದುದು ಅವರ ಕರ್ತವ್ಯವಾಗಿದೆ. ಕನ್ನಡ ಜನತೆಯು ಈಗ ಎಚ್ಚತ್ತು ಪ್ರಚಂಡವಾಗಿ ಪ್ರಯತ್ನಿಸಿದರೇನೇ ಅಸೆಂಬ್ಲಿ ಸಭಾಸದರಿಗೂ ಬಲ ಬರುವುದರಿಂದ ಈ ಉಭಯ ಪ್ರಯತ್ನ ನಡೆದಾಗಲೇ ಕರ್ನಾಟಕ ಏಕೀಕರಣವು. ಅಂಥ ಸುಸಮಯವು ಜಾಗ್ರತೆ ಬರಬೇಕಾಗಿದೆ. ಅದಕ್ಕಾಗಿಯೇ ಕರ್ನಾಟಕದಲ್ಲಿ ಏಕೀಕರಣದ ಚಟುವಟಿಕೆಯು ಅದ್ಭುತವಾಗಿ ನಾಳೆಯಿಂದಲೇ ಪ್ರಾರಂಭವಾಗಲಿ.

## ಲಿಂಗಧಾರಣದೀಕ್ಷೆ

**ಬಾಗಲಕೋಟೆ.**

ಇಲ್ಲಿರುವ ಸಾಳಿಮಠದ ಬಸವಂತವ್ವ ಇವರ ಮಕ್ಕಳಾದ ಅಕ್ಕಮಹಾದೇವಿ, ಯಮುನವ್ವ, ಮಾಣಿಕ ಮತ್ತು ಮೊಮ್ಮಗಳಾದ ಕಮಲಾ ಈ ೫ ಜನರಿಗೆ ಮುಚಖಂಡಿಯ ಶ್ರೀ ವೀರಭದ್ರದೇವರ ಗುಡಿಯಲ್ಲಿ ಲಿಂಗದೀಕ್ಷೆಯನ್ನು ಕೊಟ್ಟು ಸಹಭೋಜನ ಸಮಾರಂಭವು ತಾ. ೭-೩-೩೮ ಕ್ಕೆ ಜರುಗಿತು. ದೀಕ್ಷಾ ವಿಧಿಯನ್ನು ಚಿತ್ರರಗಿಯ ಶ್ರೀ ಪಟ್ಟದದೇವರು ನಡೆಸಿದರು. ಈ ಸಮಾರಂಭಕ್ಕೆ ಇಲ್ಲಿಯ ನಗರಾಧ್ಯಕ್ಷ ಶ್ರೀಯುತ ಲೂತಿಮಠ ವಕೀಲರು, ಡಾ|| ಬಸಪ್ಪನವರು, ಶ್ರೀಯುತರಾದ ಹುಚ್ಚಪ್ಪ ವಿಜಾಪುರ ಬಸಪ್ಪ ಕಿತ್ತಲಿ, ಮುಂಗೆಪ್ಪ ಉಳ್ಳೇಗಡ್ಡಿ, ಸಂಕಪ್ಪ ಮಂಕಣಿ, ಬಸಪ್ಪ ಬಾಲವತ್ತಿ, ರುದ್ರಪ್ಪ ಕುಂಬಾರ ಮುಂತಾದ ಜನರು ಬಂದಿದ್ದರು. ಇವರಲ್ಲದೆ ಅನೇಕ ಜಂಗಮ ಪುಂಗವರು ಸಹ ಆಗಮಿಸಿದ್ದರು. ದೀಕ್ಷೆಯನಂತರ ಸಹಭೋಜನ ಸಮಾರಂಭದಲ್ಲಿ ಎಲ್ಲರೂ ಭಾಗವಹಿಸಿದ್ದರು.

ಇದರಂತೆಯೇ ಇನ್ನೂ ಕೆಲವು ಜನರಿಗೆ ದೀಕ್ಷೆಯನ್ನು ಕೊಡುವ ಸಮಾರಂಭವು ಕೆಲವು ದಿನಗಳಲ್ಲಿ ನಡೆಯತಕ್ಕವು ಅವೆ.

ಓರ್ವ ಪ್ರತ್ಯಕ್ಷದರ್ಶಿ.

(೯ ನೆಯ ಪುಟದಿಂದ ಮುಂದೆ ಸಾಗಿದೆ.)

ಉತ್ತರವೇ ಇಲ್ಲ. (ಜನರು ನಗುವರು) ಮಹಾಭಾರತದ ಯುದ್ಧದಿಂದಲೇನೇ ನಮ್ಮ ಸಂಸ್ಕೃತಿಗೆ ಬಹು ಭಯಂಕರ ನಷ್ಟವಾಯಿತು. ದೊಡ್ಡ ದೊಡ್ಡ ಯೋಧರೆಲ್ಲ ಯುದ್ಧದಲ್ಲಿ ಮಡಿದರು. ಶೂರರೆಲ್ಲ ಶೂಲವನೇರಿದರು. ಕಲಾಕೋವಿದರೆಲ್ಲ ಕೈಲಾಸವನೇರಿದರು. ಒಟ್ಟ ನಮೇಲೆ ಅತ್ಯುನ್ನತೆಗೇರಿದ ನಮ್ಮ ನಾಗರಿಕತೆಯ ಸಂಸ್ಕೃತಿಯು ಅಂದೇ ಮಣ್ಣುಗೂಡಿತು. ಈ ವಿಷಯವನ್ನೇ ಅರ್ಜುನನು ಶ್ರೀಕೃಷ್ಣನಿಗೆ ಕೇಳಿದರೆ ಅವನು ಆ ವಿಷಯವನ್ನೇ ಲಕ್ಷಕ್ಕೆ ತರಲಿಲ್ಲ. ಏನೇನೋ ಹೇಳಿ ಆ ವಿಷಯವನ್ನೇ ಮರೆಯಿಸಿದನು. ಅಂದಿನಿಂದಲೇ ನಮ್ಮ ಜಾತಿ ಧರ್ಮದ ಕೆಡಗಾಲದ ಆರಂಭ. ಅರ್ಜುನನ ಆ ನುಡಿಯನ್ನೇ ಈಗ ಇಟಲಿಯ ಮುಸೋಲಿನಿಯು ಅನ್ನುತ್ತಿರುವನು.

ಇನ್ನೊಂದು ಮಹಾಯುದ್ಧವಾಯಿತೆಂದರೆ ಯುರೋಪದ ಸರ್ವ ಸಂಸ್ಕೃತಿಯು ನಾಗರಿಕತೆಯು ಸಮುದ್ರ ಪಾಲಾಗುವದೆಂಬುದನ್ನು ಲಕ್ಷದಲ್ಲಿರಿಂದು ಗರ್ಜಿಸಿ ಸರ್ವರಿಗೂ ಎಚ್ಚರಿಕೆ ಕೊಟ್ಟಿರುವನು. ಬಂಧು ಮಿತ್ರದ್ರೋಹ ಮಾಡುವದರಿಂದ ಕುಲ ನಾಶವಾಗುವದು. ಅಂತೆ ಮಹಾಭಾರತದ ಯುದ್ಧದ ನಂತರವೇ ಜಾತಿ ಧರ್ಮದ ನಾಶವಾಯಿತು.

ಜಯಚಂದನ ಮಗಳು ಪೃಥ್ವಿರಾಜನ ಪತ್ನಿ, ಸಂಯುಕ್ತೆಯು ಮುಸಲ್ಮಾನರು ದಂಡೆತ್ತಿ ಬಂದಾಗ ತನ್ನ ತಂದೆಯನ್ನು ಈ ಸಂಕಟ ಸಮಯದಲ್ಲಿ ತನ್ನ ಪತಿಗೆ ಸಹಾಯ ಮಾಡಲು ಪರಿಪರಿಯಿಂದ ಮನೆವರಿಗೆ ಹೋಗಿ ಬೇಡಿಕೊಂಡಳು, ಆದರೆ ಜಯಚಂದನು ಪೃಥ್ವಿರಾಜನ ಕರಳನ್ನು ಕಿತ್ತಿದಾಗಲೇ ಕನಗಾನಂದವಾಗುವದೆಂದು ಹೇಳಿದನು. ಮುಸಲ್ಮಾನರು ಪೃಥ್ವಿ ರಾಜನನ್ನು ಕೊಂದರೆಗೋಳಿಸುವ ಕಾಲಕ್ಕೆ ಜಯಚಂದನು ನಸುನಗುತ್ತ ಅಲ್ಹಾದದಿಂದಿದ್ದ. ಆದರೆ ಅದೇ ಹಾಡು ತನಗೆ ಬಂದಾಗ್ಗೆ ಬಹು ಮರಮರ ಮರುಗಿದನು. ಅವನಿಗೆ ತನ್ನ ಅಂತ್ಯದಲ್ಲಿ• ಬುದ್ಧಿ ತಿಳಿಯಿತು. ತನ್ನ ತಪ್ಪು ತನಗೆ ಮನವರಿಕೆಯಾಯಿತು. ನಾವಾದರೂ ಇವನಿಂದ ಪಾಠ ಕಲಿಯಬೇಕಾಗಿದೆ. ಪೇಶ್ವೆರ ಕಾಲಕ್ಕಾದರೂ ಇದೇ ಸ್ಥಿತಿ. ಸಿಂಧೆಯ ಹೋಳಕರರು ಒಬ್ಬರಿಗೊಬ್ಬರು ತಮ್ಮ ಜಾತಿ ಧರ್ಮ ಬಿಟ್ಟುದುದರಿಂದ ಏನು ಗತಿಯಾಯಿತೆಂಬುದು ನಿಮಗೆ ಇತಿಹಾಸ ತಿಳಿಸುತ್ತಿರುವದು.

"ಜಾತಿಧರ್ಮ ಜೀವನಕ್ಕೆ ಲೇಸಾದುದಾಗಿದೆ. ಈ ಜೀವನ ಹೋರಾಟದಲ್ಲಿ ಇದರ ಆವಶ್ಯಕತೆ ಇದೆ.

"ಜಾಲಂಧರನಲ್ಲಿ ನಡೆದ ಅತ್ಯಾಚಾರದ ವಿಷಯಕ್ಕೆ ನೀವು ಕೇಳಿರಬೇಕು. ತಮ್ಮ ಸ್ತ್ರೀಯರ ಅಪಮಾನ ಕಣ್ಣಾರೆ ಕಂಡರೂ ಕಾಣದಂತಿದ್ದರು. ಸ್ತ್ರೀಯರನ್ನು ಪರಕೀಯರು ಎಳೆಯುವದನ್ನು ನೋಡುತ್ತಿದ್ದರೂ ನೋಡದವರಂತೆ ದೇವರ ಧ್ಯಾನದಲ್ಲಿ ಮಗ್ನರಾಗಿ ಯೋಗಿಗಳು ಸನ್ಯಾಸಿಗಳು ಆಗಿ ಅದೆಲ್ಲ ಮಾಯೆ, ಆ ಮಾಯೆಗಾಗಿ ನಾವು ಬಡಿದಾಡುವದೆ? ಎಂದು ವೇದಾಂತ ಹೇಳಿದರು. ಇದೆ ಅಲ್ಲವೆ ಅವರ ಕೈಲಾಗದ ಹೇಡಿಗಳ ಉದ್ಗಾರ. ಒಂದು ಕಾಲದಲ್ಲಿ ಅಫಗಾನಿಸ್ಥಾನವು ರಜಪುತರ ಸ್ಥಾನವಾಗಿದ್ದಿತು. ಆದರೆ ಈಗ?

ಪರರಿಗಾಗಿ ತನ್ನಾತ್ಮಾರ್ಪಣ ಮಾಡುವದೇ ಧರ್ಮ. ಇದೇ ಯಜ್ಞ. ಇಂಥ ಯಜ್ಞದಿಂದಲೇನೇ ಜಗತ್ತೆಲ್ಲ ನಡೆಯುವದು. ಈ ತರಹದ ಯಜ್ಞದಿಂದ ನಮ್ಮ ಧರ್ಮ ಪುನರುದ್ಧಾರವಾಗುವದು.

ಮನುಷ್ಯನು ಜೀವನದಿಂದಿರುವದು ಸಂತೋಷವೆಂದು ತಿಳಿದುದರಿಂದಲೇನೇ ಅವನು ಮರಣಕ್ಕೆ ಅಂಜುತ್ತಿರುವನು. ಗುರು ಗೋವಿಂದಸಿಂಗನು ಮಾಡಿದ ಯಜ್ಞದಿಂದಲೇ ಅವನ ಮತ ಜೀವದಿಂದಿರಲು ಶಕ್ಯವಾಯಿತು.

ಯಾರು ತಮ್ಮ ಸ್ತ್ರೀಯರನ್ನು ರಕ್ಷಣೆಮಾಡಿಕೊಳ್ಳಲಾರರೋ ಅವರು ಧರ್ಮವನ್ನೇನು ರಕ್ಷಣೆ ಮಾಡಿಕೊಳ್ಳುವರು? ಈ ತರಹದ ಜನರಿಗೆ ಇಹಲೋಕದ ಸುಖವಿಲ್ಲ. ಪರಲೋಕ ಸುಖವಂತೂ ದೂರೇ ಉಳಿಯಿತು.

ಒಂದುಸಾರೆ ಧರ್ಮರಾಯನು ಭೀಷ್ಮಾಚಾರ್ಯರನ್ನು ರಾಜ್ಯ ಹೇಗೆ ದೊರಕಿಸಬೇಕೆಂದು ಕೇಳಿದಾಗ್ಗೆ ಭೀಷ್ಮ ಪಿತಾಮಹರು ಶಕ್ತಿ ಮತ್ತು ಧರ್ಮಗಳಿಂದ ರಾಜ್ಯಪ್ರಾಪ್ತಿಯಾಗುವದೆಂದು ಹೇಳಿರುವರು. ಧರ್ಮರಾಜನು ಧರ್ಮದಿಂದಲೇ ರಾಜ್ಯಪ್ರಾಪ್ತಿ ಆದೇಕೆ ಆಗಬಾರದೆಂದು ಬಹು ಪರಿಯಾಗಿ ವಾದಿಸಿದನು. ಭೀಷ್ಮರು ರಾಜ್ಯಪ್ರಾಪ್ತಿಗೆ ಮುಖ್ಯ ಬಲ ಬೇಕು. ಅನಂತರ ಧರ್ಮವೆಂದು ತಿಳಿಹೇಳಿದರು.

ಕಾರಣ ಯಾವ ಜನಾಂಗದಲ್ಲಿ ಶಕ್ತಿ ಬಲಗಳಿಲ್ಲವೋ ಅಲ್ಲಿ ಧರ್ಮ ನಿಲ್ಲಲಾರದು. ಆ ಶಕ್ತಿಯಾದರೂ ಎಲ್ಲರೂ ಸಂಘಟಿತರಾದಾಗಲೇ ಬರುವದು. ಅದರಿಂದ ಧರ್ಮದ ರಕ್ಷಣೆಯೂ ಆಗುವದು."

ಈ ವ್ಯಾಖ್ಯಾನ ಮುಂಜಾನೆ ೭|| ಇಂದ ೮|| ವರೆಗೂ ಸುಮಾರು ನಾಲ್ಕೈದು ಸಾವಿರ ಜನರಲ್ಲಿ ಜರುಗಿತು.

ಭಾಯೀಜಿಯವರು ಈ ದಿವಸ ಮುಖ್ಯ ಪ್ರಧಾನರಾದ ಸರ್. ಹೈದರಿಯವರನ್ನು ಮತ್ತು ರಾಜಾ ಕಿಷಣಪ್ರಸಾದ ಮಹಾರಾಜರನ್ನು ಸಂದರ್ಶಿಸಿ ಸಾಯಂಕಾಲ ಲಾಹೋರ ಕಡೆಗೆ ತೆರಳಿದರು.

---

## ಯಹುದಿಗಳಿಗೆ ಯಮ ಹಿಂಸೆ!

ಬಹು ಪುರಾತನವೂ ಧನ ಸಂಪನ್ನವೂ ಆಗಿರುವ ಯಹುದಿ ಜನಾಂಗಕ್ಕೆ ಹಿಟ್ಲರನು ಯಮನಾಗಿದ್ದಾನೆ. ಜರ್ಮನಿಯಲ್ಲಿ ಯಹುದಿಗಳು ಯಮಹಿಂಸೆ ಹೊಂದುತ್ತಿದ್ದಾರೆ. ಈಗ ಆಸ್ಟ್ರಿಯಾ ದೇಶವು ಜರ್ಮನಿಯ ಅಧೀನವಾದುದರಿಂದ ಅಲ್ಲಿರುವ ಲಕ್ಷಾಂತರ ಯಹುದಿಗಳು ಯಮಹಿಂಸೆಗೀಡಾಗಿದ್ದಾರೆ.

ಯಹುದಿ ಕಾಂಗ್ರೆಸ್ಸಿನವರ ಊಹೆಯ ಪ್ರಕಾರ ಆಸ್ಟ್ರಿಯಾದಲ್ಲಿ ಈಗಾಗಲೇ ೧೭೦೦ ಯಹುದಿಗಳು ಯಮ ಹಿಂಸೆ ತಾಳಲಾರದೆ ಆತ್ಮಹತ್ಯ ಮಾಡಿಕೊಂಡಿರಬೇಕೆಂದು ತಿಳಿಯಲಾಗಿದೆ.

ಆಸ್ಟ್ರಿಯಾ ದೇಶದ ಯಹುದಿಗಳ ಅಂಗಡಿಗಳಲ್ಲಿ ೧೦೦ ಕ್ಕೆ ೯೦ ಅಂಗಡಿಗಳು ಈಗಾಗಲೇ ಯಮರಾಜ್ಯಕ್ಕೆ ಸೇರಲ್ಪಟ್ಟು ಯಮದೂತರ ಅಧೀನವಾದವಂತೆ.

### ಆತ್ಮಹತ್ಯದ ಸುಗ್ಗಿ!

ಆಸ್ಟ್ರಿಯಾ ದೇಶವು ರಕ್ತಪ್ರಿಯ ಹಿಟ್ಲರನ ಅಧೀನವಾದುದರಿಂದ ಮುಂದೆ ತಮಗೆ ಎಂಥ ವಿಪತ್ತು ಬರುವುದೋ ಎಂದು ಆಸ್ಟ್ರಿಯಾದಲ್ಲಿರುವ ಅನೇಕರು ಆ ಭೀಕರ ಸ್ಥಿತಿಯನ್ನು ನೋಡಲಾಗದೆಂದು ಆತ್ಮಹತ್ಯ ಮಾಡಿಕೊಳ್ಳುತ್ತಿದ್ದಾರೆ.

ರಾಜಕಾರಣ ಪ್ರವೀಣರೂ, ಇತಿಹಾಸಜ್ಞರೂ ಅನೇಕ ಸಂಶೋಧಕರೂ ಆದ ಅನೇಕ ಪ್ರಮುಖರು ಆತ್ಮಹತ್ಯ ಮಾಡಿಕೊಂಡಿದ್ದಾರೆ. ಆ ದೇಶದಲ್ಲಿ ಈಗ ಆತ್ಮಹತ್ಯದ ಸುಗ್ಗಿ! ಎಲ್ಲಿ ಯಾರು ಯಾವಾಗ ಆತ್ಮಹತ್ಯ ಮಾಡಿಕೊಳ್ಳುವರೋ ತಿಳಿಯದಾಗಿದೆ.

---

## ಬಾಗಲಕೋಟೆ.

ತಾ. ೩೦-೩-೩೮ನೇ ದಿವಸ ಮುಂಜಾನೆ ೮-೩೦ ಘಂಟೆಗೆ ಇಲ್ಲಿಯ ಕೋ ಆಪರೇಟಿವ್ಹ ಇನ್ಸ್ಟಿಟ್ಯೂಟ ಆಫೀಸದಲ್ಲಿ ಮೇ. ಅಸಿಸ್ಟಂಟ ರಜಿಸ್ಟ್ರಾರಸಾಹೇಬ, ಸಹಕಾರಿ ಸಂಘ ದಕ್ಷಿಣ ಭಾಗ ಇವರ ಅಧ್ಯಕ್ಷತೆಯ ಕೆಳಗೆ ಸಹಕಾರೀ ಕಾರ್ಯಕರ್ತರ ( Field workers ) ಸಭೆಯೊಂದು ಕೂಡಲಿರುವದು.

"ಸಂಘಗಳ ಸುಧಾರಣೆ ಮತ್ತು ಸವಲತ್ತು" ಮೊದಲಾದ ಮುಖ್ಯ ವಿಷಯಗಳು ಸಭೆಯಲ್ಲಿ ಚರ್ಚಿಸಲ್ಪಡುವವಿವೆ. ಆದ್ದರಿಂದ ಎಲ್ಲ ಸಹಕಾರೀ ಕಾರ್ಯಕರ್ತರು ಸಭೆಗೆ ಆಗಮಿಸಬೇಕಾಗಿ ವಿನಂತಿ.

—ಸೆಕ್ರೆಟರಿ.

## ನೈಜಾಮು ಪ್ರಾಂತದ ಆದಿ ಹಿಂದುಗಳು.

ನೈಜಾಮು ಪ್ರಾಂತದಲ್ಲಿಯ ಜನರು ಸುಧಾರಿಸಿದ ಪ್ರಾಂತಗಳಲ್ಲಿಯ ಜನರಿಗಿಂತ ಶಿಕ್ಷಣದಲ್ಲಿ ಬಹು ಹಿಂದುಳಿದಿದ್ದಾರೆ. ಅವರಲ್ಲಿ ಆದಿ ಹಿಂದುಗಳಂತೂ ಬಹು ಶೋಚನೀಯ ಸ್ಥಿತಿಯಲ್ಲಿದ್ದಾರೆ. ಅವರು ಹಿಂದು ಜನಾಂಗಕ್ಕೆ ಸೇರಿದವರೇ ಅಲ್ಲವೆಂದು ಅಲ್ಲಿಯ ಮುಸಲ್ಮಾನ್ ಸಂಘದವರು ಸಾರುತ್ತಿದ್ದಾರೆ. ಇಂತಹ ಸ್ಥಿತಿಯಲ್ಲಿ ಅವರು ಸುಧಾರಣೆ ಹೊಂದಬೇಕಾಗಿರುವುದು ಬಹು ಕಠಿಣವಾಗಿಲ್ಲವೆ ?

ಅಲ್ಲಿಯ ಆದಿ ಹಿಂದುಗಳಲ್ಲಿ ಜಾಗೃತಿಯನ್ನುಂಟುಮಾಡಬೇಕೆಂದು ಆದಿ ಹಿಂದು ಮುಖಂಡರಾದ ಶ್ರೀ. ರಾಜಭೋಜ ಇವರು ಹೈದರಾಬಾದಿನಲ್ಲಿ ಒಂದು ಮಹತ್ವದ ವ್ಯಾಖ್ಯಾನವನ್ನು ಮಾಡಿದರು. ಆಗ ಅಲ್ಲಿಯ ಸುಪ್ರಸಿದ್ಧ ಅಡ್ವೋಕೇಟ್ ಶ್ರೀ. ಕಾಶಿನಾಥರಾವ ವೈದ್ಯ ಇವರು ಅಧ್ಯಕ್ಷರಾಗಿದ್ದರು. ಶ್ರೀ. ರಾಜಭೋಜ ಇವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ನಾವು ಎಲ್ಲ ಪ್ರಾಂತಗಳಲ್ಲಿಯೂ ಶಿಕ್ಷಣದಲ್ಲಿ ಹಿಂದುಳಿದಿದ್ದೇವೆ. ನಮ್ಮಲ್ಲಿ ಸಂಘಟನೆಯಿಲ್ಲ. ಡಾ. ಆಂಬೇಡಕರರು ಕೂಡಾ ತಮ್ಮ ಒಂದೇ ಜಾತಿಯ ಜನರ ಕಡೆಗೆ ಲಕ್ಷಿಸುವುದು ಹೆಚ್ಚು. ನಮ್ಮೆಲ್ಲರ ಸಂಘಟನೆಗಾಗಿ ಪ್ರಯತ್ನಿಸುವುದಿಲ್ಲ. ಮ. ಗಾಂಧಿಯವರಿಂದ ಸವರ್ಣಿಯ ಹಿಂದುಗಳಲ್ಲಿ ನಮ್ಮ ಸಂಬಂಧವಾಗಿ ಪುಣೆ ಒಪ್ಪಂದದ ಕಾಲಕ್ಕೆ ಜಾಗೃತಿ ಉಂಟಾಯಿತು. ಈಗ ಅದೂ ನಿಂತು ಹೋಗಿದೆ. ಗಾಂಧೀಜಿಯವರೂ ಇತ್ತ ಲಕ್ಷಿಸಿಲ್ಲ. ಅವರು ಎಷ್ಟು ಕಡೆಗೆ ನೋಡುವರು ? ಅವರ ಅನುಯಾಯಿಗಳು ಈಗ ಈ ಕಾರ್ಯವನ್ನು ತೃಪ್ತಿಕರವಾಗಿ ಮಾಡುತ್ತಾ ಇಲ್ಲ.

ನಾವೇ ನಮ್ಮ ಕಾರ್ಯವನ್ನು ಸಂಘಟಿತರಾಗಿ ಮಾಡಿಕೊಳ್ಳಬೇಕು. ತ್ರಾವಣಕೋರ ಮತ್ತು ಇಂದೂರು ಸಂಸ್ಥಾನಗಳಲ್ಲಿ ನಮ್ಮ ಜನರಿಗೆ ಮಂದಿರ ಪ್ರವೇಶಕ್ಕೆ ಅವಕಾಶ ದೊರೆತಂತೆ ಈ ಸಂಸ್ಥಾನದಲ್ಲಿಯೂ ದೊರೆಯಲೆಂದು ಹಾರೈಸುತ್ತೇನೆ."

### ಅಧ್ಯಕ್ಷರ ಮನನೀಯ ವಿಚಾರ.

ಅನಂತರ ಅಧ್ಯಕ್ಷರಾದ ಶ್ರೀ. ವೈದ್ಯರವರು ನಿಜಾಮ ಪ್ರಾಂತದ ಸವರ್ಣಿಯ ಹಿಂದುಗಳು ಕಣ್ಣು ತೆರೆದು ಇನ್ನು ಮೇಲಾದರೂ ಆದಿ ಹಿಂದುಗಳಿಗೆ ಸಾಮಾಜಿಕ ಸ್ವಾತಂತ್ರ್ಯ ಕೊಡಲು ಯೋಗ್ಯವಾದ ಉಪದೇಶವನ್ನು ಮಾಡಿದರು. ಇವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಈ ಪ್ರಾಂತದ ೧೯೨೧ ನೆಯ ಜನಪರಿಗಣನೆಯಿಂದ ಈ ರಾಜ್ಯದಲ್ಲಿ ಸಾಧಾರಣ ೩೦ ಲಕ್ಷ ಅಸ್ಪೃಶ್ಯರು ಆಗ ಇದ್ದರೆಂದೂ ೧೯೩೧ ನೆಯ ಜನಪರಿಗಣನೆಯ ಕಾಲಕ್ಕೆ ೨೪ ಲಕ್ಷ ಜನರು ಮಾತ್ರ ಉಳಿದರೆಂದೂ ತೋರುತ್ತದೆ. ಇದರಿಂದ ದಲಿತ ವರ್ಗದ ಸಂಖ್ಯೆಯು ದಿನೆ ದಿನೆ ಕಡಿಮೆಯಾಗುತ್ತಿದ್ದುದು ಸ್ಪಷ್ಟಗೊತ್ತಾಗುತ್ತದೆ. ಈಗ ಇಲ್ಲಿ ನಡೆದಿರುವ "ತಬಲೀಗ್" ಚಳವಳಿಯೇ ಇದಕ್ಕೆ ಮುಖ್ಯ ಕಾರಣ. ಒಬ್ಬೊಬ್ಬರನ್ನು ಅವರು ಮುಸಲ್ಮಾನ್ ಧರ್ಮಕ್ಕೆ ಸೇರಿಸಿಕೊಳ್ಳುತ್ತಾ ಇಲ್ಲ. ಅಸ್ಪೃಶ್ಯರ ತಂಡು ತಂಡನ್ನೇ ಅವರು ಇಸ್ಲಾಂ ಧರ್ಮಕ್ಕೆ ಸೇರಿಸಿಕೊಳ್ಳುತ್ತಿದ್ದಾರೆ. ಸವರ್ಣಿಯ ಹಿಂದುಗಳು ಈ ಕಡೆಗೆ ಪೂರ್ಣ ಲಕ್ಷಿಸಬೇಕು. ಅಸ್ಪೃಶ್ಯರಿಗೆ ಜಲಾಶಯ, ದೇವಾಲಯ ಪ್ರವೇಶಕ್ಕೆ ಅವಕಾಶ ಕೊಡಬೇಕು"

## ಮೈಸೂರು ರಾಜಕಾರಣ.

ಮೈಸೂರು ಸಂಸ್ಥಾನದ ಪ್ರಜೆಗಳು ಹಿಂದುಸ್ಥಾನದ ಎಲ್ಲ ಸಂಸ್ಥಾನಗಳ ಪ್ರಜೆಗಳಿಗಿಂತ ಹೆಚ್ಚಾಗಿ ರಾಜಕಾರಣದಲ್ಲಿ ಮುಂದರಿದಿದ್ದಾರೆ. ಜವಾಬ್ದಾರಿ ಸರಕಾರಕ್ಕೋಸ್ಕರ ಬಹು ಹಸಿದಿದ್ದಾರೆ. ಅದಕ್ಕಾಗಿ ಕಷ್ಟನಷ್ಟಗಳನ್ನು ಅನುಭವಿಸಲೂ ಸಿದ್ಧರಾಗಿದ್ದಾರೆ. ಇದು ಅವರಿಗೆ ಭೂಷಣಪ್ರದವಾದುದು. ಕರ್ನಾಟಕಕ್ಕೂ ಒಂದು ಹೆಮ್ಮೆಯ ಸಂಗತಿಯು.

ಘನಹೊಂದಿದ ಮೈಸೂರು ಮಹಾರಾಜರವರೂ ಪ್ರಜಾನುರಾಗ ಪ್ರಿಯರಾದುದರಿಂದ ಪ್ರಜೆಗಳ ಆಕಾಂಕ್ಷೆಯ ಕಡೆಗೆ ಲಕ್ಷಿಸುತ್ತಿದ್ದಾರೆ.

ಬೆಂಗಳೂರಲ್ಲಿ ಹೊರಡುತ್ತಿದ್ದ ಲೋಕಪ್ರಿಯ "ಜನವಾಣಿ" ದಿನ ಪತ್ರಿಕೆಯನ್ನು ಮೈಸೂರು ಸರಕಾರವು ನಿಲ್ಲಿಸಿದ್ದಿತು. ಈಗ ಅದರ ಮೇಲಿನ ನಿರ್ಬಂಧವನ್ನು ತೆಗೆದುಹಾಕಿದುದು ವಿಹಿತವಾಗಿದೆ.

ಮೈಸೂರು ಕಾಂಗ್ರೆಸ್ ಬೋರ್ಡಿನ ಅಧ್ಯಕ್ಷರಾದ ಶ್ರೀ. ಟ. ಸಿದ್ಧಲಿಂಗಯ್ಯನವರು ಸಂಸ್ಥಾನದ ರಾಜಕಾರಣದ ಸಂಬಂಧವಾಗಿ ಮಹಾತ್ಮಾ ಗಾಂಧಿಯವರಲ್ಲಿ ಪ್ರಸ್ತಾಪಿಸಲು ಕಲಕತ್ತಾ ಪಟ್ಟಣಕ್ಕೆ ಹೋಗಿದ್ದಾರೆ.

ಮೈಸೂರಲ್ಲಿ ಸಾರ್ವಜನಿಕ ಸಭೆಗಳನ್ನು ಕೂಡಿಸಬಾರದಾಗಿ ಮಾಡಿದ ಡಿ| ಮ್ಯಾ| ಅಪ್ಪಣೆಯ ಅವಧಿಯು ಇದೇ ೨೯ ನೆಯ ತಾರೀಖಿಗೆ ಪೂರೈಸುವುದರಿಂದ ಮತ್ತೆ ಆರು ತಿಂಗಳುಗಳ ಪ್ರಾಣದಾನವನ್ನು ಆ ಅಪ್ಪಣೆಗೆ ಸರಕಾರವು ಕೊಟ್ಟಿತು! ಇದು ದುಃಖದ ಸಂಗತಿ.

ಸಂಸ್ಥಾನಗಳ ಪ್ರಜಾ ಪ್ರಾತಿನಿಧ್ಯವಿಲ್ಲದ ಫೆಡರೇಶನ್ನನ್ನು ಕಾಂಗ್ರೆಸ್ ಮಾನ್ಯಮಾಡುವುದಿಲ್ಲವಾಗಿ ಸರದಾರ ಪಟೇಲರು ರಾಜಕೋಟದಲ್ಲಿ ಹೇಳಿದ ಅಭಿಪ್ರಾಯವನ್ನು ಮೈಸೂರು ಪ್ರಾಂತದ ಪ್ರಮುಖ ರಾಜಕೀಯ ಮುಂದಾಳುಗಳಾದ ಶ್ರೀ. ಭಾಷ್ಯಂ ಮೊದಲಾದವರು ಅಭಿನಂದನ ಪೂರ್ವಕ ಸಮ್ಮತಿಸಿದ್ದಾರೆ.

ಮೈಸೂರು ಕಾಂಗ್ರೆಸ್ಸಿನ ಮೊದಲನೆಯ ಅಧಿವೇಶನವು ಶಿವಪುರದಲ್ಲಿ ಎಪ್ರಿಲ್ ೨ ನೆಯ ವಾರ ಜರುಗುವುದಿದೆ.

# ಸ್ವಾಮಿಗಳ ಮತ್ತು ಅಯ್ಯನವರ ಹಾವಳಿ.

ಬರೆದವರು— ಬಸವರಾಜ ಅಕ್ಕಿ.

ವೀರಶೈವ ಸಮಾಜವನ್ನು ಮಹಾನುಭಾವರಾದ ಬಸವಣ್ಣನವರು ಎಂಥ ಪವಿತ್ರವಾದ ಧ್ಯೇಯದಿಂದ ಸ್ಥಾಪಿಸಿದರೆಂಬುದನ್ನು ತಿಳಿದವರಿಗೆ ಹೇಳಬೇಕಾಗಿಲ್ಲ. ಆ ಕಾಲದಲ್ಲಿ ತಲೆ ಎತ್ತಿದ್ದ ಉಚ್ಚ ತುಚ್ಛ ಜಾತಿಭಾವ, ಧನಿಕ, ದರಿದ್ರರೆಂಬ ಮಾನಭೇದ ಮಾಡಿದ್ದರಿಂದ ಮಾನವ ಸಮಾಜವೇ ವಿಚ್ಛಿನ್ನವಾಗಿ ಹೊಡೆದಾಡುತ್ತಿದ್ದ ಕಾಲದಲ್ಲಿ ಆ ಕಳಂಕವನ್ನು ಕಳೆದು ಮಾನವ ಸಮಾಜದಲ್ಲಿಯೇ ಐಕಮತ್ಯವನ್ನು ಉಂಟುಮಾಡಿ ಬೆಳೆಸುವ ಮಹತ್ವದ ಸಾಹಸವೇ ವೀರಶೈವ ಮತದ ಮೂಲ. ಇದನ್ನು ಸಾಧಿಸುವದಕ್ಕಾಗಿ ಬಸವಣ್ಣನವರು ತಮ್ಮ ಪ್ರತಿಭೆ ಮತ್ತು ಪಾರಮಾರ್ಥಿಕ ಕಾರ್ಯದ ಮಹತ್ವವನ್ನರಿತ, ಹಿಂಬಾಲಿಸಿದ ಭಕ್ತರಲ್ಲಿ ಅವರವರ ಯೋಗ್ಯತೆಯನ್ನರಿತು ಹಲವರನ್ನು ಉಪದೇಶಕರನ್ನಾಗಿಯೂ ಮತ್ತು ಕೆಲವರನ್ನು ಸುಧಾರಕರನ್ನಾಗಿಯೂ ಮಾಡಿ ಸಮಾಜದ ಸಹಾಯಕ್ಕೆ ತೊಡಗಿದರು. ಆ ಕಾಲದಲ್ಲಿ ನಿಯೋಗಿಸಿದ ಮುಂದಾಳುಗಳೇ ಈಗಿನ ಸ್ವಾಮಿ ಅಯ್ಯನವರ ಉತ್ಪತ್ತಿ. ಇವರೂ ಈ ಮುಂದಾಳುಗಳೂ ತಮ್ಮ ತನು ಮನ ಧನ ಸರ್ವಸ್ವವನ್ನು ಸಮಾಜಕ್ಕೆ ಧಾರೆಯೆರೆದು ನಿಸ್ವಾರ್ಥರಂಗದಲ್ಲಿ ದುಡಿಯುವ ಪವಿತ್ರ ಧ್ಯೇಯವುಳ್ಳವರಾಗಿದ್ದರು. ಅವರ ಉದ್ದೇಶಸಾಧನೆಯನ್ನಿನ್ನು ವಿವರಿಸುವದು ಅವಶ್ಯವಲ್ಲ. ಸದ್ಯಕ್ಕೆ ಇವರ ಧ್ಯೇಯ ಸಾಧನೆಯು ಯಾವ ಹಾದಿಯಲ್ಲಿ ಮುಂದುವರಿಯುತ್ತಿದೆಯೆಂದು ವಿಚಾರಮಾಡೋಣ.

ಸ್ವಾಮಿಗಳು ಮೊದಲು ಸಮಾಜದ ವೃದ್ಧಿಗಾಗಿ ಹೇಗೆ ತಮ್ಮನ್ನು ಒಪ್ಪಿಸಲಾಗಿಟ್ಟಿದ್ದರೋ ಅದಕ್ಕೆ ಪ್ರತಿಕೃತಿಯಾಗಿ ಈಗ ಅನೇಕರು ತಮ್ಮ ಸ್ವಂತ ಸುಖವಿಲಾಸಕ್ಕಾಗಿ ಸಮಾಜವನ್ನು ಹೊಂದಿಕೊಂಡಿರುವಂತಿದೆ. ಸಮಾಜವು ಸ್ವಾಮಿಗಳಿಗೆ ಅವರ ಜೀವನದ ಸೌಕರ್ಯಗಳನ್ನೇನೋ ಒದಗಿಸಿಕೊಡಬೇಕೆಂಬುದೇನೋ ಸಹಜವೇ ಮತ್ತು ಅವಶ್ಯವೇ. ಆದರೆ ಅದು ಇವರ ಒತ್ತಾಯ ಪೀಡೆಗಳಿಗಾಗಿ ಅಲ್ಲ. ಇವರ ಒಮ್ಮೆ ನಲ್ಮೆಗಾಗಿ ಕೊಡಬೇಕು. ಆ ವಿಧದ ಸದ್ಗುಣಗಳಿಲ್ಲದೆ ಕೇವಲ ತಮ್ಮ ಅಧಿಕಾರ ದಂಡವನ್ನು ದುರುಪಯೋಗಮಾಡುತ್ತ ಬಡ ಮಂದಿಯನ್ನೇ ಪೀಡೆಗೊಳಿಸುತ್ತಿದ್ದಾರೆ. ತಮ್ಮ ಮಕ್ಕಳ ಹೊಟ್ಟೆಗಳನ್ನು ಹೊರೆಯಲಿಕ್ಕೆ ಸಾಧ್ಯವಿಲ್ಲದ ಬಡ ಜನರ ಬಾಗಿಲಿಗೆ ಬಂದು ಭಿಕ್ಷೆ ಭಿಕ್ಷೆ ಎಂದು ಅಧಿಕಾರವಾಣಿಯಿಂದ ಕೇಳುವರು. ಕೊಡದವರಿಗೆ ಬಹಿಷ್ಕಾರವನ್ನು ಹಾಕುವರು. ಅರೆ ಹೊಟ್ಟೆಗೆ ಗತಿಯಿಲ್ಲದವರು ಇವರ ಹೊರೆಗಟ್ಟಲೆ ತರಬೇಕೆಂದರೆಲ್ಲಿಂದ ಸಾಧ್ಯ? ಈ ವಿಧದ ಹಾವಳಿಯು ಸ್ವಾಮಿಗಳವರಿಂದ ಮಾತ್ರ ಅಷ್ಟೇ ಅಲ್ಲ. ಎಂದೋ ಒಂದುಕಾಲದಲ್ಲಿ ಸಮಾಜದ ಸುವ್ಯವಸ್ಥೆಗೆಂದು ನಿಯೋಜಿತರಾದ ಮಡದಿಮಕ್ಕಳನ್ನು ಕಟ್ಟಿಕೊಂಡ ಸಾಂಸಾರಿಕ ಅಸಂಖ್ಯ ಅಯ್ಯನವರ ಉಪದ್ರವನ್ನು ಹೇಳಬೇಕಾಗಿಲ್ಲ. ಇವರು ಬಡ ಜನರ ಬಳಿಗೆ ಬಂದು ಬೇಡುವುದೂ ಕಾಡುವುದೂ ಬೆದರಿಸುದೂ ಇತ್ಯಾದಿ ಪೀಡೆಯು ಅಸಹನೀಯವಾಗಿದೆ.

ಇದರಿಂದ ಇವರಿಗೆ ನಿಜವಾದ ಧ್ಯೇಯದ ಸುಖಸಿದ್ಧಿಯಿಲ್ಲ. ಸಮಾಜದಲ್ಲಿ ಶ್ರೇಯಸ್ಸಿಲ್ಲ. ಸ್ವಾಮಿಗಳ ಐಶ್ವರ್ಯಕ್ಕೆ ಸಹಾಯವಾದಂಥ ಸಮಾಜದವರಿಗೆ ಈ ಸ್ವಾಮಿಗಳಿಂದ ಹಿತವಿಕಾಸವಿಲ್ಲ. ಒಂದಿಲ್ಲೊಂದು ಬೇಸರಿಕೆಯ ಭಾವನೆಯುಂಟಾಗಿಬಿಟ್ಟಿದೆ. ಅನೇಕ ಅಯ್ಯನವರನ್ನು ನೋಡೋಣ. ಇವರು ಎಂದೋ ತಮಗೆ ಸಮಾಜದಲ್ಲಿ ದೊರೆತ ಮಾನದ ಅಧಿಕಾರದಿಂದ ಸಮಾಜದಲ್ಲಿ ಸೋಮಾರಿಗಳಾಗಿ ಮಂದಿಗಳನ್ನು ಸುಲಿದು ತಿನ್ನುವ ಉಪಜೀವಿಗಳೇ ಆಗಿ ಬೆಳೆದಿದ್ದಾರೆ. ಇವರಿಂದ ಇವರಿಗೇನು ಹಿತವದೆ? ಈ ಪ್ರವೃತ್ತಿಯು ಕೆಲಕಾಲಕ್ಕೆ ಇವರ ಹೊಟ್ಟೆ ತುಂಬಿಸಬಹುದಾದರೂ ದಿನ ಹೋದಂತೆ ಪ್ರಗತಿಯ ಬೆಳಕಿನಿಂದ ಬದಲಾಗುತ್ತಿರುವ ಈ ಪ್ರಪಂಚದಲ್ಲಿ ಇನ್ನೆಷ್ಟು ಕಾಲ ಈ ಸುಲಿಗೆಯ ಜೀವನವನ್ನು ನಡೆಸಬಲ್ಲರು? ಆದ್ದರಿಂದ ಕೇವಲ ಮಾರಕವಾದ ಈ ಹವ್ಯಾಸವು ಇವರ ಸಂತತಿಯಲ್ಲಿಯೂ ವಂಶಪರಂಪರೆಯಾಗಿ ಮೈಗೂಡಿ ಬಂದು ಅವರನ್ನು ಈ ಸೋಮಾರಿತನದ ಚಟಕ್ಕೆ ಹಚ್ಚುವದೆಂದರೆ ಪ್ರಗತಿಪರ ಜೀವನದಲ್ಲಿ ಇವರ ದಿಕ್ಕಿಲ್ಲದವರನ್ನಾಗಿ ಮಾಡುವುದೇ ಅಲ್ಲವೆ? ಆದ್ದರಿಂದ ಪೂಜ್ಯರಾದ ಸ್ವಾಮಿಗಳೂ ಮಹನೀಯರಾದ ಅಯ್ಯನವರೂ ತಮ್ಮ ಹಿತವಿಕಾಶ ಪ್ರಗತಿಗಳಿಗೇನೇ ಬಾಧಕವಾದ ಈ ಪ್ರವೃತ್ತಿಯನ್ನು ತ್ಯಜಿಸಿ ಸಾರ್ವತ್ರಿಕರಿಗೂ ತಮಗೂ ಶ್ರೇಯಸ್ಕರವಾದ ಸಾಮಾನ್ಯಜೀವನದ ಹಾದಿಯನ್ನೇ ಹಿಡಿಯಬೇಕು. (ಸಮಾಜದಲ್ಲಿ ಅನೇಕ ಸ್ವಾಮಿಗಳು ಸಮಾಜಕ್ಕೆ ಉತ್ತಮತರದ ಕೆಲಸವನ್ನು ಮಾಡಿದ್ದಾರೆ. ಮಾಡುತ್ತಲೇ ಇದ್ದಾರೆ. ಅವರಿಗೆ ಮಾತ್ರ ಸಮಾಜವು ತುಂಬಾ ಕೃತಜ್ಞವಾಗಿದೆ.) ಇವರ ಜೀವನವು ಸಮಾಜಿಕರಿಗೆ ಮಾದರಿಯಾಗಿ ಸಾಧಕವಾಗಿರಬೇಕಲ್ಲದೆ ಬಾಧಕವಾಗಿರಬಾರದು. ಮುಂದುವರಿದವರ ವೃತ್ತಿಯು ಹಿಂದುಳಿದವರಿಗೆ ಅನುಕರಣ ಯೋಗ್ಯವಲ್ಲದೆ ಹಾನಿಕರವಾಗಿದ್ದರೆ ಆ ಸಮಾಜವೇ ಹಾನಿಹೊಂದುವದೆಂಬುದು ಬುದ್ಧಿಗೆ ತೋರುವ ಮಾತೇ ಅಲ್ಲವೆ? ಈ ವಿಷಯವನ್ನು ಸಮಾಜದ ಸ್ವಾಮಿಗಳೂ ಅಯ್ಯನವರೂ ಗಮನಿಸಿ ಅನುಸರಿಸಿದರೆ ವೀರಶೈವ ಸಮಾಜವು ಹಾನಿಯ ಹೊಡೆತದಿಂದ ತಪ್ಪಿ ವೃದ್ಧಿಯ ಗತಿಯನ್ನು ಹೊಂದುವದೆಂದು ಹೇಳಬಹುದು.

---

# ಹಿಂದುಗಳೇ ಜಾಗೃತರಾಗಿರಿ.

## ಸಭೆಯ ಮೂಲಕ ವಿರೋಧಿಸಿರಿ.

ದಿಲ್ಲಿ ಅಸೆಂಬ್ಲಿಯಲ್ಲಿ ಮಿ. ಕಾಜಮಿ ಎಂಬುವವರು ತಾ. ೧೦-೨-೩೮ ನೆಯ ದಿವಸ ಮುಸಲ್ಮಾನ ಮಹಿಳೆಯರ ಸಂಬಂಧವಾಗಿ ಈ ಕೆಳಗಿನ ಅಭಿಪ್ರಾಯದ ಒಂದು ಗೊತ್ತುವಳಿಯನ್ನು ತಂದಿದ್ದಾರೆ.—

"ಒಬ್ಬ ಮುಸಲ್ಮಾನ್ ಮಹಿಳೆಯು ಹಿಂದು ಅಥವಾ ಕ್ರಿಸ್ತ ಧರ್ಮದಲ್ಲಿ ಸೇರಿದರೆ ಅವಳು ಆ ಧರ್ಮದಂತೆ ನಡೆಯಬಹುದು. ಆದರೆ ಅವಳು ತನ್ನ ಗಂಡನಿಂದ ಬಿಡುಗಡೆ ಪತ್ರವನ್ನು ಮಾತ್ರ ಹೊಂದಕೂಡದು. ಆದರೆ ಒಬ್ಬ ಹಿಂದು ಅಥವಾ ಕ್ರಿಸ್ತ ಮಹಿಳೆಯು ಮುಸಲ್ಮಾನ್ ಧರ್ಮದಲ್ಲಿ ಬಂದರೆ ಮೊದಲು ಅವಳು ತನ್ನ ಗಂಡನಿಗೂ ಮುಸಲ್ಮಾನನಾಗಲು ಹೇಳಬೇಕು. ಆತನು ಮುಸಲ್ಮಾನನಾಗದಿದ್ದರೆ ತಾನು ಬೇರೆಯವನನ್ನು ಲಗ್ನವಾಗಬೇಕು."

ಈ ಪಕ್ಷಪಾತದ ರೀತಿಯು ಶಾಸನವಾಗಿ ಪರಿಣಮಿಸಿದರೆ ಹಿಂದುಜಾತಿಗೆ ಭಯಂಕರವಾದ ಅಪಾಯವಾಗುವುದು. ಶಾಸನವು ಎಲ್ಲ ಧರ್ಮದವರಿಗೂ ಸಮಾನವಿರಬೇಕೇ ವಿನಾ ಹೀಗೆ ಒಬ್ಬರಿಗೆ ಅನುಕೂಲ ಇನ್ನೊಬ್ಬರಿಗೆ ಪ್ರತಿಕೂಲವಾಗಬಾರದು. ಈ ಅನ್ಯಾಯದ ಗೊತ್ತುವಳಿಯು ಅಸೆಂಬ್ಲಿಯ ಮುಂದೆ ಬಂದಾಗ ಕಾಂಗ್ರೆಸ್ ಪಕ್ಷವು ಕೈಕಟ್ಟಿಕುಳಿತುಕೊಂಡಿತ್ತೆಂಬುದನ್ನು ಲಕ್ಷಿಸಿ ಹಿಂದು ಕ್ರಿಸ್ತ ಧರ್ಮಾಭಿಮಾನಿಗಳಾದರೂ ಈಗ ಜಾಗೃತರಾಗಬೇಕು. ಕಾಂಗ್ರೆಸ್ಸಿನ ಒಲವು ಮುಸಲ್ಮಾನರನ್ನು ಸಂತುಷ್ಟಗೊಳಿಸುವುದರ ಕಡೆಗೇ ಇರುತ್ತದೆಂಬುದೇನೂ ಹೊಸ ಸಂಗತಿಯಲ್ಲ.

ಆದಕಾರಣ ಎಲ್ಲ ಕಡೆಗೂ ಹಿಂದುಗಳು ಸಭೆ ಸೇರಿ ಈ ಗೊತ್ತುವಳಿಯನ್ನು ನಿಷೇಧಿಸಿ ವ್ಹಾಯಿಸ್‌ರಾಯರ ಕಡೆಗೆ ತಂತೀ ಮೂಲಕ ತಿಳಿಸಬೇಕೆಂದು ಹಿಂದು ಮಹಾಸಭೆಯ ಉಪಪ್ರಧಾನ ಶ್ರೀ. ಕುಮಾರ ಚಾಂದಕರಣ ಸಾರಡಾ ಇವರು ಅಖಿಲ ಹಿಂದು ಸಮಾಜಕ್ಕೆ ವಿಜ್ಞಾಪಿಸಿಕೊಂಡಿದ್ದಾರೆ.

# ವಸಂತ ಸಾಹಿತ್ಯೋತ್ಸವ.

## ೧೯೩೮.

೧. ಕಳೆದ ನಾಲ್ಕು ವರ್ಷಗಳೂ ನಡೆಸಿದಂತೆ ಈ ವರ್ಷವೂ ಬೇಸಿಗೆಯಲ್ಲಿ, ಏಪ್ರಿಲ್ ತಿಂಗಳ ಕಡೆಯ ಸುಮಾರಿನಲ್ಲಿ, ವಸಂತ ಸಾಹಿತ್ಯೋತ್ಸವವನ್ನು ನಡೆಸತಕ್ಕದ್ದೆಂದು ಪರಿಷತ್ತು ತೀರ್ಮಾನಿಸಿ ಕಾರ್ಯಗಳನ್ನು ಕೈಕೊಂಡಿದೆ. ಎಂದಿನಂತೆ ಉಪನ್ಯಾಸಗಳು, ಕನ್ನಡ ಗ್ರಂಥ ಮತ್ತು ವೃತ್ತ ಪತ್ರಿಕಾ ಪ್ರದರ್ಶನ, ಗಿರಣಿ, ವಿಜ್ಞಾನ ಶಾಸ್ತ್ರಶೋಧನ ಶಾಲೆ ಮತ್ತು ಕೈಗಾರಿಕೆ ಶಾಲೆಗಳ ನೋಟ, ಮಹಿಳೆಯರ ಸಭೆ, ಕಾವ್ಯ ಗಾಯನ, ವಿವಿಧ ವಿನೋದಗಳು, ಸಂಘ ಸಮ್ಮೇಳನ ಇವು ನಡೆಯುವವು.

೨. ಕರ್ಣಾಟಕದ ಬೇರೆ ಬೇರೆ ಭಾಗಗಳಲ್ಲಿಯೂ ಈ ವಿಶೇಷ ಸಾಹಿತ್ಯೋತ್ಸವವನ್ನು ನಡೆಸಬೇಕೆಂದು ಹಲವರು ಆಗಾಗ್ಗೆ ಕೊಟ್ಟಿರುವ ಸಲಹೆಯ ಮೇರೆಗೆ, ಈ ಸಲ ಬೆಂಗಳೂರಿನ ಉತ್ಸವವನ್ನು ನಾಲ್ಕು ದಿನಗಳ ಕಾಲವೂ, ಮೈಸೂರು ಸಂಸ್ಥಾನದ ಒಂದು ಗ್ರಾಮದಲ್ಲಿ (ಈ ಸಲ ಶಿವಮೊಗ್ಗಾ ಡಿಸ್ಟ್ರಿಕ್ಟಿನ ಒಂದು ಹಳ್ಳಿಯಲ್ಲಿ) ಮೂರು ದಿನಗಳ ಕಾಲವೂ ಉತ್ತರ ಕರ್ಣಾಟಕದ ಒಂದು ಕೇಂದ್ರದಲ್ಲಿ (ಬಹುಶಃ ಗದಗಿನಲ್ಲಿ) ಮೂರು ದಿನಗಳ ಕಾಲವೂ, ಈ ಉತ್ಸವವನ್ನು ನಡೆಸತಕ್ಕದ್ದೆಂದು ತೀರ್ಮಾನವಾಗಿದೆ.

೩. ಈ ಸಲದ ವಿಶೇಷ ಲಕ್ಷಣವೆಂದರೆ, ಗ್ರಂಥ ಪ್ರದರ್ಶನದ ಜೊತೆಗೆ ವೃತ್ತ ಪತ್ರಿಕಾ ಪ್ರದರ್ಶನವೊಂದನ್ನು ತೆರೆಯಲಾಗುವದು. ಪ್ರತಿದಿನ ಬೆಳಗ್ಗೆ ನಡೆಯುವ ಉಪನ್ಯಾಸಗಳೆಲ್ಲ ಮುಖ್ಯವಾಗಿ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳ ಉಪಾಧ್ಯಾಯರ ಮತ್ತು ಹೈಸ್ಕೂಲು ಪಂಡಿತರುಗಳ ಪ್ರಯೋಜನಕ್ಕಾಗಿಯೇ ಏರ್ಪಡುವವು. ಪ್ರತಿ ದಿನವೂ ಮಧ್ಯಾಹ್ನ ಮಹಿಳೆಯರಿಗೆ ಸಭೆ ಸೇರಲು ಅವಕಾಶ ಕಲ್ಪಿಸಿದೆ. ಅವರಿಗಾಗಿಯೇ ವಿಶೇಷ ಬಗೆಯ ಉಪನ್ಯಾಸ ವಿನೋದಾದಿಗಳನ್ನು ರಚಿಸುವ ಏರ್ಪಾಡು ಮಾಡಲಾಗಿದೆ. ಜೊತೆಗೆ ಎರಡು ದಿನ ಮಕ್ಕಳ ಕೂಟವನ್ನೂ, ಎರಡು ದಿನ ವಿದ್ಯಾರ್ಥಿಗಳ ಕೂಟವನ್ನೂ ಸೇರಿಸಲಾಗುವುದು. ಪ್ರತಿ ಸಂಜೆಯೂ ಅಖಿಲ ಮಹಾಜನರ ಪ್ರಯೋಜನಕ್ಕಾಗಿ ದಿನವೊಂದಕ್ಕೆ ಎರಡರಂತೆ ಒಟ್ಟು ೮ ಉಪನ್ಯಾಸಗಳನ್ನು ಏರ್ಪಡಿಸಲಾಗುವುದು. ಕಡೆಯ ದಿನ ಸಕಲ ಕರ್ಣಾಟಕ ಸಂಘ ಸಮ್ಮೇಳನ ಕೂಡುವುದು

೪. ಈ ಉತ್ಸವಕ್ಕೆ ಬೆಂಗಳೂರಲ್ಲಿರುವ ಎಲ್ಲ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲಾ ಉಪಾಧ್ಯಾಯರೂ, ಹೈಸ್ಕೂಲು ಪಂಡಿತರೂ ಯಾವ ರುಸುಮನ್ನೂ ತೆರದೆ ದಯಮಾಡಿಸಬಹುದು. ಎಂದಿನಂತೆ ತಮ್ಮ ಶಾಲಾಧಿಕಾರಿಗಳ ಮೂಲಕ ತಮ್ಮ ಹೆಸರುಗಳನ್ನು ರಿಜಿಸ್ಟರ್ ಮಾಡಿಸಿ, ಪ್ರವೇಶ ಪತ್ರಿಕೆಗಳನ್ನು ಪಡೆದುಕೊಳ್ಳಬೇಕು. ಹೊರಗಿಂದ ಬರುವವರಿಗೆಲ್ಲರಿಗೂ ಸ್ವಾಗತವುಂಟು. ಆದರೆ ಹಾಗೆ ಬರುವವರೆಲ್ಲರಿಗೂ ಸ್ಥಳ ಸೌಕರ್ಯವನ್ನು ಮಾತ್ರ ಕಲ್ಪಿಸಲಾಗುವುದೇ ಹೊರತು ಊಟ ಉಪಚಾರಾದಿಗಳಿಗೆ ಅವರವರೇ ಸ್ವಂತ ಏರ್ಪಾಟು ಮಾಡಿಕೊಳ್ಳಬೇಕು. ಇಷ್ಟ ಪಡುವವರಿಗೆ ಪರಿಷತ್ತಿನ ಮೇಲ್ವಿಚಾರಣೆಯಲ್ಲಿ ಚಾಲಿತವಾಗುವ ಭೋಜನಶಾಲೆಯವರು ಸುಲಭವಾದ ದರಗಳನ್ನಿಟ್ಟು ಊಟ ತಿಂಡಿ ವ್ಯವಸ್ಥೆ ಮಾಡುವರು.

೫. ಉತ್ಸವ ಏಪ್ರಿಲ್ ತಿಂಗಳ ಕಡೆಯ ವಾರದಲ್ಲಿಯೋ, ತಪ್ಪಿದರೆ ಮೇ ತಿಂಗಳ ಮೊದಲನೆ ವಾರದಲ್ಲಿಯೋ ಆರಂಭವಾಗುವುದು. ಹೆಚ್ಚಿನ ವಿವರಗಳನ್ನು ಮುಂದಿನ ಪ್ರಕಟನೆಗಳಲ್ಲಿ ತಿಳಿಸಲಾಗುವುದು. ಉತ್ಸವಕ್ಕೆ ದಯಮಾಡಿಸಿ ಅದರ ಪ್ರಯೋಜನವನ್ನು ಬಯಸುವ ಎಲ್ಲರೂ ತಮ್ಮ ಅಭಿಲಾಷೆಯನ್ನು ದಯವಿಟ್ಟು ಕಾಗದದ ಮೂಲಕ ತಿಳಿಸಬೇಕು. ಉಪಾಧ್ಯಾಯ ಮಹನೀಯರು ತಮ್ಮ ಹೆಸರುಗಳನ್ನು ಏಪ್ರಿಲ್ ೧೦ ನೆಯ ತಾರೀಖಿನೊಳಗಾಗಿ ಪರಿಷತ್ತಿನ ಕಛೇರಿಯಲ್ಲಿ ದಯವಿಟ್ಟು ರಿಜಿಸ್ಟರ್ ಮಾಡಿಸಿಕೊಳ್ಳಬೇಕು. ವ್ಯವಸ್ಥೆಗಳು ಶಿಸ್ತಿನಿಂದ ನಡೆಯಲು ಸಾಧ್ಯವಾಗಿ ಉತ್ಸವದ ಪ್ರಯೋಜನ ಮೇಲಾಗಿ ದೊರೆಯುವಂತೆ ಮಹಾಜನರು ನಮಗೆ ಎಲ್ಲ ಬಗೆಯ ಸಹಾಯಗಳನ್ನೂ ನೀಡುವರೆಂದು ನಂಬಿದ್ದೇವೆ.

ಇಂಥ ಉತ್ಸವಗಳು ಯಶಸ್ವಿಯಾಗಿ ಈ ವರೆಗೆ ನೆರವೇರಿರುವುದು ಮಹಾಜನರು ನಮಗೆ ಉದಾರವಾಗಿ ಕೊಟ್ಟಿರುವ ಪ್ರೋತ್ಸಾಹದಿಂದ, ಸಹಾಯದಿಂದ. ಈ ಸಲದ ಉತ್ಸವಕ್ಕೆ ಸುಮಾರು ೧೦೦೦ ರೂಪಾಯಿಗಳ ವೆಚ್ಚ ಆದೀತೆಂಬ ಎಣಿಕೆಯಿದೆ. ಕನ್ನಡ ದೇಶ, ಕನ್ನಡ ಭಾಷಾ, ಸಂಸ್ಕೃತಿಗಳ ಅಭಿಮಾನಿಗಳೆಲ್ಲರೂ ನಮ್ಮ ಕಾರ್ಯಕ್ಕೆ ನೆರವಾಗಿ ಧನಸಹಾಯ ಮಾಡಬೇಕೆಂದೂ ಗುಂಪು ಗುಂಪಾಗಿ ನೆರೆದು ಉತ್ಸವವನ್ನು ವೈಭವಪೂರ್ಣವಾಗಿ ಮಾಡಿಕೊಡಬೇಕೆಂದೂ ಪ್ರಾರ್ಥಿಸುತ್ತೇವೆ.

| | |
|---|---|
| | ಬಿ. ಎಂ. ಶ್ರೀಕಂಠಯ್ಯ |
| ವಿ. ಸೀತಾರಾಮಯ್ಯ, | ಎಂ. ಎ. ಬಿ. ಎಲ್. |
| ಎಂ. ಎ. | ಉಪಾಧ್ಯಕ್ಷ |
| ವ್ಯವಸ್ಥಾಪಕ | ಎಸ್. ವಿ. ರಂಗಣ್ಣ ಎಂ. ಎ. |
| ೧೫ ನೆಯ ಮಾರ್ಚ ೧೯೩೮ | ಗೌರವ ಕಾರ್ಯದರ್ಶಿ. |

---



---

## ವೀರಶೈವ ವರನು ಬೇಕು.

ವೀರಶೈವರಲ್ಲಿಯ ಲೋಕಬಳಕಿ ಪಂಗಡಕ್ಕೆ ಸೇರಿದ ಒಂದು ಸುಶೀಲ, ಸುಲಕ್ಷಣ, ಸುಶಿಕ್ಷಿತ ಪ್ರೌಢ ಕನ್ಯೆ ಇದೆ. ಇದೇ ಪಂಗಡದ ತಕ್ಕಷ್ಟು ಆದಾಯವುಳ್ಳ ಯೋಗ್ಯ ವರನು ಬೇಕಾಗಿದ್ದಾನೆ. ಅಂಥವರು ಈ ಕೆಳಗಿನ ವಿಳಾಸಕ್ಕೆ ಬರೆದು ತಿಳಿಸಬೇಕು. ವಿಹಿತ ತೋರಿದರೆ ಸಾಲಂಕೃತ ಕನ್ಯಾದಾನಮಾಡಿಕೊಡಲ್ಪಡುವದು.

"ಶರಣ ಸಂದೇಶ" ಆಫೀಸ್
ಪೋ. ಆಲಮಟ್ಟಿ
ಜಿ. ವಿಜಾಪುರ.

(೫ ನೆಯ ಪುಟದಿಂದ ಮುಂದೆ ಸಾಗಿದೆ.)

ದಿಂದ) ಸಹಜವಾಗಿ ಮಾತಾಡಿದ ಮಾತುಗಳು ಅರುವಿನಿಂದ ಅರುಹುವ ವೇದಗಳ ಹಿನ್ನುಡಿಗಳನ್ನೂ ಸಹ ಮೀರುವಂತಾದವಲ್ಲ! ಎಂದು ಹರಿಷಿಸುತ ಸಾಗುವಳು. ಅಲ್ಲಲ್ಲಿ ಚನ್ನಮಲ್ಲಿಕಾರ್ಜುನನ ವಿರಹ ಕುರುಹುಗಳನ್ನು ಹಕ್ಕಿಪಕ್ಕಿಗಳಿಗೂ ತರುಲತೆಗಳಿಗೂ ಬೀರುತ್ತ ಬೇಡುತ್ತ ನಿಲ್ಲುವಳು. ಅಷ್ಟರೊಳಗೆ ಸಹಿಸದಂತೆ ಸಂಜೆಯು ದಿಗಂತವನ್ನು ವ್ಯಾಪಿಸಿ ಸರ್ವಶೂನ್ಯವಾಗಿ ಮಾಡಿಬಿಡುತ್ತದೆ. ಅದರೇನು? ಅವಳು ತನ್ನಂತರಂಗದಲ್ಲಿಯೇ ತನ್ನಾಳ್ದನನ್ನು ಕುರಿತು ಅಂಗಲಾಚಿ ಬೇಡಿ ಬೇಡಿ ಕಳವಳಿಸುವಳು. ಹಗಲಿಗಿಂತಲೂ ಹೆಚ್ಚು ಹೆಚ್ಚಾಗಿ ಹಂಬಲಿಸುವಳು. ಇದನ್ನು ನೋಡಿ ದಯೆಯಿಂದಲೋ ಏನೋ ಎಂಬಂತೆ ಚಂದಿರನು ತನ್ನ ತಿಂಗಳ ಸೂಡುವನು. ಆಗ ಅಕ್ಕನು ಫಕ್ಕನೆ ಕಣ್ದೆರೆದು ಆಹಾ! ಏನು ತಿಂಗಳ ತಂಪು! ಎಂಥ ಹೂಗಳ ಕಂಪು!! ಎಂದು ವಿಸ್ಮಿತಳಾಗಿ ಅತ್ತಿತ್ತ ಅಲೆದಾಡುವಳು. ಮತ್ತೆ ಕ್ಷಣದಲ್ಲಿಯೇ ಆ ಬೆಡಗನ್ನು ಮರೆತು ವಿರಹದಲ್ಲಿ ಬೆರೆತು ಕಂಡುದನ್ನು ಕೇಳತೊಡಗುವಳು. ಒಮ್ಮೆ ಬೆಳದಿಂಗಳವನ್ನೂ ಮಾಮರವನ್ನೂ ಕೇಳುವಳು. ಮತ್ತೊಮ್ಮೆ ಕೋಗಿಲೆಯನ್ನೂ ಅಳಿಕುಳವನ್ನೂ ಕೇಳುವಳು. ಕೊನೆಗೆ ಕಾಣುದದಕೆ ಕಂದುವಳು. ಬೆಳದಿಂಗಳವೂ ಅವಳಿಗೆ ಬೇಸಿಗೆಯಾಗಿ ಪರಿಣಮಿಸಿದೆ. ಮೈ ಬೆವರಿದೆ, ಮನ ಕರಗಿದೆ ಹೃದಯ ಹಂಬಲಿಸತೊಡಗಿದೆ. ಕೋಗಿಲೆಯ ಕೂಗು ಕರ್ಣಕಠೋರವಾಗಿದೆ. ಕೊನೆಗೆ "ಸುಡಲಿ ವಿರಹವ ನಾನಾರಿಗೆ ಧೃತಿಗೆಡುವೆ. ಚೆನ್ನಮಲ್ಲಿಕಾರ್ಜುನ ದೇವನೆನ್ನೊಲ್ಲದ ಕಾರಣ ಎಲ್ಲರಿಗೆ ಹಂಗಿತಿಯಾದೆನವ್ವಾ" ಎಂದು ಬಿಕ್ಕಿ ಬಿಕ್ಕಿ ಅಳುವಳು, ಅವಳಿದ್ದುದು ಘೋರಾರಣ್ಯ. ಕ್ರೂರ ಮೃಗಗಳ ಮನೆ. ವಿಷ ಪ್ರಾಣಿಗಳ ಹೊದರು. ಅವುಗಳ ದಾಳಿ ಇದನ್ನೆಲ್ಲ ನೆನಿಸಿಕೊಂಡು "ಸಾವೊಂದು ನನ್ನ ಹೆದರಿಸಲೆನ್ನುತಿದೆ. ನನ್ನೊಡೆಯ ಕಿಚ್ಚಿನಲಿ ಅದೆ ತಾನೆ ಸಾಯಲಿ." ಎಂದು ನಿರ್ಧರಿಸಿ ದೇವನನ್ನು ನೆನೆವಳು. ನಯನಗಳನ್ನು ಮುಚ್ಚುವಳು. ಮತ್ತೆ ನೇಸರ ಬೆಳಗಿನೊಡನೆ ತನ್ನ ಕಣ್ಬೆಳಗನು ತೇಲಿಸಿ ಏಳುವಳು. ಎದ್ದು ತನಗೆದುರಾದ ತೋಟದೊಡತಿಗೆ ತನ್ನ ವಿರಹ ಸಂತಾಪವನ್ನು ತೋಡಿಕೊಂಡು ಅವಳನ್ನು ಹರಸಿ ಕಲ್ಯಾಣದತ್ತ ತೆರಳುವಳು.

ಅಕ್ಕನು ಕಲ್ಯಾಣದ ಸಮೀಪಕ್ಕೆ ಬರಲು ಕಿನ್ನರಯ್ಯನು ಬಳಿಸಾರುವನು. ಒರೆದು ನೋಡುವನು. ಒಲಿದು ಕರದೊಯ್ಯುವನು. ಅಕ್ಕನು ಅವನೊಡನೆ ಅನುಭವಮಂಟಪವನ್ನು ಹೊಕ್ಕು ಹರುಷಮಿಕ್ಕಿ ಬಸವಣ್ಣನನ್ನು ಬಣ್ಣಿಸುವಳು. ಪ್ರಭುವು ಪ್ರಶ್ನೆ ಹಾಕುವನು. ಅಕ್ಕನು ಅವಕ್ಕೆಲ್ಲ ಜಾಣ್ನುಡಿಯಿಂದ ಉತ್ತರ ಕೊಡುವಳು ಅದನ್ನು ಕೇಳಿ ಚೆನ್ನಬಸವಾದಿಗಳು ಮೆಚ್ಚಿ ಬಾಯ್ಬಿಚ್ಚಿ ಅಕ್ಕನನ್ನು ಹೊಗಳುವರು. ಅಕ್ಕನು ತನ್ನ ವಿರಹಂಭಾವವನ್ನು ವ್ಯಕ್ತ ಮಾಡಿ ತೋರಿಸಿ ತಾನು ಹೋಪಠಾವನ್ನು ಪ್ರಭುವಿನಿಂದ ತಿಳಿದುಕೊಂಡು ಶರಣ ಸಂಕುಳಕೆ ತಲೆವಾಗಿ ಶ್ರೀಗಿರಿಗೆ ತೆರಳುವಳು.

ಶ್ರೀಗಿರಿಯ ಮಾರ್ಗದಲ್ಲಿ ಹರನಿಗಾಗಿ ಹಲವು ವಿಧವಾಗಿ ಹಂಬಲಿಸುತ್ತ ಹಾದಿಗರ ಹುಚ್ಚುಹುಚ್ಚಾದ ರೀತಿ ನೀತಿಗಳನ್ನು ಪರಿಹರಿಸುತ್ತ ಶ್ರೀಗಿರಿಗೆ ಬಂದು ಮುಟ್ಟುವಳು. ಇತ್ತ ಕೌಶಿಕನು ಕೌಪೀನಧಾರಿಯಾಗಿ ಬಂದು ಅಕ್ಕನಿಗೆ ಪುನಃ ಭೆಟ್ಟಿ ಕೊಡುವನು. ಇಂದಿನ ಕೌಶಿಕನೇ ಬೇರೆ. ಭವವನ್ನು ಬಿಟ್ಟು ಭಕ್ತನಾದವನು. ರಾಗಯೋಗವನ್ನು ತೊರೆದು ರಾಜಯೋಗವನ್ನು ಧರಿಸಿದವನು. ರಾಜ್ಯವನ್ನು ತ್ಯಾಜ್ಯಮಾಡಿ ಶಿವನ ಕರುಣೆಗಾಗಿ ಕೈಯೊಡ್ಡಿದವನು. ಚೆಲುವಿಗಾಗಿ ಸತಿಯನ್ನಾಗಿ ಬಯಸಿದವಳನ್ನು ಶಿವನೊಲುವೆಗಾಗಿ ಗುರುವನ್ನಾಗಿ ಭಾವಿಸಿ ಶರಣುಹೊಕ್ಕ ಸಚ್ಛಿಷ್ಯನು. "ಮಹಾದೇವಿ! ಮಹಾತಾಯಿ!! ನನ್ನನುದ್ಧರಿಸು." ಎಂದು ನಿರ್ಮಲ ಹೃದಯದಿಂದ ಮೊರೆಹೋಗುವನು. ಆತನ ಆ ವಿಮ್ಮಳ ಹೃದಯಕ್ಕೆ ಒಲಿದು ಹಿರಿಹಿಗ್ಗಿನಿಂದ ಹರಭಕ್ತಿಯನ್ನು ಉಪದೇಶಮಾಡಿ ವಂದನೆಗೈದು ತಾನು ಘನದಲ್ಲಿ ಬಯಲಾಗುವಳು.

ಒಟ್ಟಿನಲ್ಲಿ ಕನ್ನಡ ಜನಮನಕ್ಕೆ ಒಂದು ಸ್ಫೂರ್ತಿ ಹುಟ್ಟುವಂತೆ ಬರೆದ ಕನ್ನಡ ನಾಡಿನ ಪುಣ್ಯಮೂರ್ತಿಯಾದ ಅಕ್ಕಮಹಾದೇವಿಯ ಈ ಕಲಾಪೂರ್ಣ ಕೃತಿಯನ್ನು ಕನ್ನಡಿಗರು ಸಂತೋಷದಿಂದ ಸ್ವಾಗತಿಸುವರೆಂದು ನಚ್ಚಿದ್ದೇವೆ.

## ದೀಕ್ಷೆಗೆ ಇದೇ ಮೋಕ್ಷವೆ?

ಶ್ರೀ ಚೌಡದಾನ ಪುರದ ಒಡೆಯರಿಂದ ನಾವು ನೂರಾರು ಮಂದಿ ದೀಕ್ಷೆಯನ್ನು ಹೊಂದಿ ಎಂಟು ಹತ್ತು ವರ್ಷಗಳಾದವು. ನಮ್ಮ ನಡೆ ನುಡಿ ಆಚಾರ ವಿಚಾರ ಶುದ್ಧತೆಗಳನ್ನು ನೋಡಿ ಅಂದೇ ನಮಗೆ ಪಂಕ್ತಿಪಾವನ ಮಾಡಿದರು. ನಮ್ಮ ಅಷ್ಟಾವರಣ ಷಟಸ್ಥಲಗಳ ನಿಷ್ಠೆಗಾಗಿ ಒಬ್ಬ ಆಚಾರ್ಯರನ್ನು ನಿಯಮಿಸಿ ಕೊಟ್ಟರು. ಇದುವರೆಗೂ ಊರವರ ಬಾಧೆ ಇಲ್ಲದೆ ಸುಖರೂಪದಿಂದ ಕಾಲ ಕಳೆದದ್ದಾಯಿತು. ನಮ್ಮ ಹಿರಿಯರಲ್ಲಿ ಹಲ ಕೆಲವರಿಗೆ ಶೆಟ್ಟರ ಸಮೂಹದಲ್ಲಿ ಊಟೋಪಚಾರಗಳನ್ನು ನಡೆಯಿಸಬೇಕೆಂಬ ದುರಭಿಮಾನದ ಪಿಶಾಚವೊಂದು ಗಂಟುಬಿತ್ತು. ಮತ್ತೇನು? ಶೆಟ್ಟರ ಕಾಲು ಹಿಡಿ. ಮುಂದೇನು? ನಮ್ಮ ಪಿಶಾಚ ಉಚ್ಚಾಟನೆಗೆ ಶೆಟ್ಟರೆಲ್ಲಾ ಮಂತ್ರವಾದಿಗಳಾದರು. ಶೆಟ್ಟರ ಮಂಡಳಿ ಎಲ್ಲವೂ ಸೇರಿ ೧೦೦೦ ರೂ. ಗಳನ್ನು ತಮ್ಮ ಬುಟ್ಟಿಯಲ್ಲಿ ಹಾಕಬೇಕೆಂದರು. ಹಾಯ್ ಹಾಯ್ ದೀಕ್ಷೆಗೆ ಇದೇ ಮೋಕ್ಷವೇ? ಅತ್ತ ಗುರುಗಳದೊಂದು ಲಂಚ. ಇತ್ತ ಭಕ್ತರದೊಂದು ಲಂಚ. ವೀರಶೈವರ ನಿಜತತ್ವವು ಹೀಗೆ ಹೇಳಿದೆಯೆ? ಅಯ್ಯೋ! ಇನ್ನು, ಮುನ್ನ ಬಸವಣ್ಣನವರ ನಿಜತತ್ವವು ಅಳಿಯುವದೋ ಉಳಿಯುವದೋ? ಬಸವಾ ಬಸವಾ! ನೀನೇ ನೋಡು. ಅವತಾರ ಮಾಡು. ಬಾ ಧರೆಗೆ. ನಮ್ಮವರು ಇಷ್ಟಕ್ಕೆ ನಿರಾಶರಾಗಲಿಲ್ಲ. ಆಗರಖೇಡದ ಮೊರೆ ಹೊಕ್ಕರು. ಅಲ್ಲಿ ನೂರು ರೂ. ಗಳನ್ನು ಕೊಟ್ಟರೆ ಒಬ್ಬರು ಬರುವರು. ಅಟ್ಟದ ಮೇಲಿಂದ ಬಿದ್ದವಗೆ ದೊಣ್ಣೆಯು ಪೆಟ್ಟು ಕೊಟ್ಟಂತೆ ನಮ್ಮೆಲ್ಲರಿಗೂ ಆಗಬಾರದ ಕಷ್ಟ ಬರಬಾರದ ದುಃಖ ಬಂದು ಬಿಟ್ಟಿತು.

ವೀರಶೈವ ದಯಾಮಯರೇ, ನಮ್ಮ ದುಃಖವು ನಿಮ್ಮ ಅಂತಃಕರಣಕ್ಕೆ ತಾಕಿರಬಹುದಲ್ಲವೆ? ಮಾಡುವದೇನು? ಎಲ್ಲಿ ನೋಡಿದಡಲ್ಲಿ ಲಂಚಕ್ಕೆ ಹೊಂಚುಹಾಕುವವರಾದರೆ ನಮ್ಮ ವೀರಶೈವ ನಿಜತತ್ವವು ಉಳಿಯುವದೆಂತು? ಸೇರುವವರಾದರು ಹೇಗೆ ಸೇರುವರು? ಈ ಧರ್ಮಕ್ಕಿಂತಲೂ ಕ್ರಿಶ್ಚಿಯನ್; ಮುಸಲ್ಮಾನ್ ಆರ್ಯ ಸಮಾಜಗಳು ಮೇಲಲ್ಲವೆ? ನಮಗೆ ಕಷ್ಟವಿಲ್ಲದ ಸುಖಮೇಲೋ ಅಥವಾ ಸುಖವಿಲ್ಲದ ಕಷ್ಟ ಮೇಲೊ? ನೀವೇ ಹೇಳಿರಿ.

ಮದ್ಬಾಂಧವರೇ ನಮಗಾಗಿರುವ ಕಷ್ಟವನ್ನು ಹೇಳಲಳವಲ್ಲ. ನನ್ನಲ್ಲಿ ತಪ್ಪಿದ್ದರೆ ನನಗೆ ಬುದ್ಧಿಯನ್ನು ಕಲಿಸಿರಿ. ಇಲ್ಲದೆ ಹೋದರೆ ಲಂಚಕೋರರ ಮುಸುಕು ತೆರೆಯುವಂತೆ ಸುವಿಚಾರವನ್ನು ಪ್ರಕಟಸುವಿರೆಂದು ಸಂಪೂರ್ಣ ನಂಬಿಹ

ತಮ್ಮ ವಿಧೇಯ,

ಸಿದ್ಧರಾಮಪ್ಪ ಅಲ್ಲಾಪೂರ

ಸಾ|| ಹಿರೇಮಣೂರ.

---

—೧೯೪೦ ನೆಯ ಇಸವಿಯಲ್ಲಿ ಫೆಡರೇಶನ್ ಆಚರಣೆಯಲ್ಲಿ ಬರುವುದೆಂದು ಕೆಲವು ರಾಜಕಾರಣ ಪಟುಗಳ ಊಹೆ.

—ಸಂಯುಕ್ತಪ್ರಾಂತ ಸರಕಾರವು ಮೊನ್ನೆ ನಡೆದ ಜಾತಿ ಜಗಳದಲ್ಲಿ ಸರಿಯಾದ ಕೆಲಸ ಮಾಡಲಿಲ್ಲವೆಂದು ಅಸೆಂಬ್ಲಿಯಲ್ಲಿ ಚರ್ಚೆ ಹೂಡಿದ್ದಾರೆ.

## ಪ್ರಾರ್ಥನೆ.

ದಾಟಿ— "ಹಾ ಪ್ರಿಯಾ ಪ್ರಶಾಂತ ಹೃದಯಾ" ಎಂಬಂತೆ.

ಹಾ! ಬಸವಾ ವಿಶಾಲ ವಿಭವಾ ಪಾಲಿಸೈ!
ಜಗವಾ| ಬಸವಾ ||ಪಲ್ಲ||
ಕ್ಲೇಶದಿಂದ ಕೊರಗುತಿರುವಾ| ದೇಶವನ್ನು
ನೀ. ಕಾಯೈ!
ಚಿನ್ನ ಬೆಳೆಯುವ ಭೂಮಿಯೊಳಗೆ|
ಚಿಗುರು ಕಾಣೆವೈ| ಬಸವಾ!
ಅನ್ನವಿಲ್ಲದೆ ಬನ್ನ ಬಡುವಾ|
ನಮ್ಮ ನಾಡನ್ನು ಪೊರೆಯೈ!
ಮೇವು ಇಲ್ಲದೆ ಗೋಗಳೆಲ್ಲವು
ಕೊರಗಿ ಸಾಯುವವೈ| ಬಸವಾ!
ದೇಶಭಕ್ತಿ ಪ್ರೇಮ ಪಾಠಾ|
ತೋಷದಿಂದಲಿ| ಕಲಿಸೈ.
ವಿದೇಶಿ ವಸ್ತ್ರದ ಮೋಹ ಬಿಡಿಸಿ|
ಖಾದಿ ತೊಡಿಸಯ್ಯ ಬಸವಾ!
ಜಾತಿ ಭೇದದ ತೊಡಕು ತೆಗೆದು
ನೀತಿ ಮಾರ್ಗವ ನೀ ತೋರೈ|
ಗುಲಾಮಗಿರಿಯ ಬೇಗಕಳೆದು
ಸ್ವರಾಜ್ಯ ನೆಲಿಸಯ್ಯ ಬಸವಾ|

—ಆನಂದಕವಿ ಕುರಗುಂದ.

## ಮಹಾತ್ಮರು ಲೋಕಕ್ಕೆ ಅರುಹಿದ ಸಂದೇಶಗಳು.

(ಸಂಗ್ರಾಹಕ— ಶ್ರೀ. ಆನಂದಕವಿ ಕುರುಗುಂದ.)

ಹಣವಿದ್ದು ಸತ್ಕಾರ್ಯದಲ್ಲಿ ವ್ಯಯ ಮಾಡದವನು ಕಳ್ಳನೇ ಸರಿ. —ಮಹಾತ್ಮಾ ಗಾಂಧಿ.

ಅನ್ನದೊಳಗೊಂದಗಳು, ಸೀರೆಯೊಳಗೊಂದೆಳೆಯು ಹೊನ್ನಿನೊಳಗೊಂದರಿಯು ಇಂದಿಗೆ ನಾಳಿಂಗೆ ಬೇಕೆಂದರೆ ನಿನ್ನಾಣೆ ನಿನ್ನ ಪ್ರಮಥರಾಣೆ ಕೂಡಲ ಸಂಗಮದೇವಾ

—ಶ್ರೀ ಬಸವಣ್ಣನವರು.

ಹಣವಂತರು ತಮ್ಮಲ್ಲಿರುವ ಧನವನ್ನು ಬಡವರಿಗೆ ಹಂಚಬೇಕು. ಹಣವಂತನು ಸ್ವರ್ಗವನ್ನು ಸೇರುವದೇ ಅಪರೂಪ. ಸೂಜಿಯ ಎಚ್ಚದೊಳಗಿಂದಾದರೂ ಒಂಟೆಯು ದಾಟಿ ಹೋಗಬಹುದು. ಆದರೆ ಹಣವಂತನು ಭಗವಾನನ. ಸಾಮ್ರಾಜ್ಯಕ್ಕೆ ಕಾಲಿಡಲು ಸಾಧ್ಯವಿಲ್ಲ. —ಏಸೂ ಕ್ರಿಸ್ತ.

ಜಾತಿ ಮತಗಳ ಪ್ರಶ್ನೆಯು ಮೇಲಾದವರನ್ನು ಕೀಳು ಮಾಡುವದರಲ್ಲಿಲ್ಲ. ಕೀಳಾಗಿರುವವರನ್ನು ಮೇಲೆ ಎತ್ತುವದರಲ್ಲಿದೆ.

—ಶ್ರೀ ಸ್ವಾಮಿ ವಿವೇಕಾನಂದ.

ಆತ್ಮಗೌರವ, ಸ್ವ ಸ್ವರೂಪ ಜ್ಞಾನ, ಇಂದ್ರಿಯ ನಿಗ್ರಹತ್ವ ಇವು ಮೂರೇ ನಮ್ಮ ಜೀವಮಾನವನ್ನು ಉತ್ತಮಗೊಳಿಸುವ ಹಾಗು ಜೀವಮಾನಕ್ಕೆ ಉತ್ಕೃಷ್ಟತೆಯನ್ನೀಯುವ ಮುಖ್ಯ ಗುಣಗಳು.

—ಟೆನಿಸನ್.

ಒಬ್ಬನ ಜೀವಮಾನದ ಕಾಲವು ಯಾವದೆಂದರೆ, ಪ್ರೀತಿದಯಾಯುಕ್ತವಾದ ಪರಹಿತಕಾರ್ಯಗಳನ್ನೆಸಗುವ ಕಾಲ.

—ವರ್ಡ್ಸ್‌ವರ್ತ್.

## ನಾಡ ಗುಡಿ.

(ತ್ರಿಪುಡೆ.)

ನಾಡಗುಡಿಯನು ನಲ್ಮೆಯಿಂದಲಿ ಪಾನಗೆಯ್ಯುತೆ ನಮಿಸುವ |
ಹಾಡಿ ಹರುಷದಿ ಪ್ರೇಮಪೂರ್ವಕ ನಾಡಸೇವೆಯ ಗೈಯುವ ||
ಮೂರು ಬಣ್ಣದಿ ಮೆರೆವ ನಮ್ಮಯ ನಾಡ ಗುಡಿಯನು ನಮಿಸುವ |
ವೀರ ಭಾರತ ಕೀರ್ತಿ ಬೆಳೆಸುವ ರಾಷ್ಟ್ರಗೀತೆಯ ಹಾಡುವ ||

ಹರುಷ ಬೀರುವ ಪರಮಕೇಶರ ವರ್ಣಶೋಭೆಯ ಸೊಬಗದು|
ಪರಮ ಧೈರ್ಯವ ಶ್ರೇಷ್ಠ ತ್ಯಾಗಗಳನ್ನು ಜಗದಲಿ ತೋರ್ಪುದು ||
ಏಳು ಬಣ್ಣದಿ ಕೂಡಿ ಶೋಭಿಪ ಬಿಳಿಯ ಬಣ್ಣದ ಅಂದವು |
ಹೊಳೆವ ಸುಂದರ ಸತ್ಯಕಾಂತಿಯ ಶ್ರೇಷ್ಠ ಸೊಬಗನು ತೋರ್ಪುದು ||
ಹಸರು ಬಣ್ಣದಿ ಚೆಲ್ವ ಸೃಷ್ಟಿಯ ಸೊಬಗ ಬೀರುತಲಿರುವದು |
ಎಸೆವ ನಮ್ಮಯ ನಾಡ ನಂಬುಗೆಯನ್ನು ವಿಶ್ವದಿ ತೋರ್ಪುದು ||

ನಾಡಗುಡಿಯದು ಮೂರು ಲೋಕದ ಮನವನೆಲ್ಲವ ಸೆಳೆವುದು|
ನಾಡಸೇವೆಯ ಮಾಡಲೆಮ್ಮನು ಕೂಗಿ ಹರುಷದಿ ಕರೆವುದು ||
ನೀಲಗಗನದಿ ನಿಂತು ನಮಗದು ಬೋಧಗೈಯುತಲಿರುವದು |
ಕೀಳುಮೇಲುಗಳೆಂಬ ಜಾತಿ ಜಗಳ ಕಳೆಯಲು ಪೇಳ್ವುದು ||

ಸತ್ಯನೀತಿಯ ಪೊರೆಯಲೆಮಗದು ಪ್ರೀತಿಯಿಂದಲಿ ಪೇಳ್ವುದು|
ನಿತ್ಯ ಆತ್ಮನ ತೇಜ ಬೆಳೆಸಲು ಉಚ್ಚಸ್ವರದಿಂ ಉಲಿವುದು ||
ದೇಶಭಕ್ತಿಯ ಪರಮಸುಂದರ ಪಾಠ ಕಲಿಸುತೆ ನಲಿವುದು |
ದೇವರಂದದಿ ಪೂಜ್ಯ ರೂಪದಿ ನಮ್ಮ ಹೃದಯಕೆ ತೋರ್ಪುದು ||
ಪೂಜ್ಯ ಗಾಂಧಿಯ ತತ್ವಪಾಲಿಸಿ ರಾಟೆ ತಿರುಹಲು ಉಲಿವುದು |
ರಾಜ್ಯ ಸಂಪದಗಳಿಗಲೋಸುಗ ಖಾದಿ ಧರಿಸಲು ಪೇಳ್ವುದು ||
ಶಾಂತಿತತ್ವದ ಬೆಳಕುಪಸರಿಸಿ ಸುಖದನೆಲೆಯನು ತೋರ್ಪುದು|
ಕ್ರಾಂತಿ ಧರ್ಮದ ಕಹಳೆಯೂದುತ ಹುರುಪು ಹೆಚ್ಚಿಸುತಿರುವದು ||
ವೀರ ಗರ್ಜನೆಯಿಂದ "ವಂದೇಮಾತರಂ" ಗಡನುಡಿಯುವ |
ಭಾರತಾಂಬೆಯ ನಾಡಗುಡಿಯನು ಭಕ್ತಿಪೂರ್ವಕ ನಮಿಸುವ ||

—ಆನಂದ ಕವಿ ಕುರುಗುಂದ

## ಲಿಂಗಾಯತ ವರನು ಬೇಕು.

ತಿಂಗಳಿಗೆ ೨೫ ರೂ. ಗಳಾದರೂ ಆದಾಯ ಬರುವ ಸುಶಿಕ್ಷಿತ ನಿರೋಗಿ ಸದ್ಗುಣ ಸ್ವಾವಲಂಬಿ ಲಿಂಗಾಯತ ವರನು ಬೇಕಾಗಿದ್ದಾನೆ. ವರುಷ ೨೦ ರಿಂದ ೩೦ ರೊಳಗಾಗಿರಬೇಕು. ಒಳಪಂಗಡ ಏಕೀಕರಣಕ್ಕೆ ಒಪ್ಪಿಗೆಯುಳ್ಳವನೂ ಆಧುನಿಕ ವಿಚಾರಸರಣಿಯುವವನೂ ಇರಬೇಕು.

ವಧು ೧೬ ವರುಷದವಳು. ಮುಲಕೀ ಪರೀಕ್ಷೆ ವರೆಗೆ ಕನ್ನಡ ಮತ್ತು ಉರ್ದು ಶಿಕ್ಷಣ ಹೊಂದಿದವಳು. ಸುಂದರ ಸುಲಕ್ಷಣಗಳುಳ್ಳ ಬಡಕುಟುಂಬದವಳು. ಕೆಳಗಿನ ವಿಳಾಸಕ್ಕೆ ಬರೆದು ಹೆಚ್ಚಿನ ಸಂಗತಿ ತಿಳಿದುಕೊಳ್ಳಬೇಕು.

"ಶರಣ ಸಂದೇಶ" ಆಫೀಸ್
ಪೋ. ಆಲಮಟ್ಟಿ. ಜಿ. ವಿಜಾಪುರ

# ಕೇವಲ ಬಸವ ಜಯಂತಿಗಾಗಿ ಸಿದ್ಧಗೊಳಿಸಿದ

# ವಚನ ಪಟ ಸಂಗ್ರಹ.

ಭಗವಾನ್ ಬಸವಣ್ಣ, ಅಕ್ಕ ಮಹಾದೇವಿ, ಚೆನ್ನಬಸವಣ್ಣನವರೇ ಮೊದಲಾದ ಶಿವಶರಣರ ಶ್ರೇಷ್ಠ ವಚನಗಳನ್ನು ೨ ಬಣ್ಣಗಳಿಂದ ಸುಂದರವಾಗಿ ದಪ್ಪವಾದ ಕಾರ್ಡಿನ ಮೇಲೆ ಮುದ್ರಿಸಿದೆ. ಕಟ್ಟು ಹಾಕಿಸಿ ಇಲ್ಲವೆ ಹಾಗೆಯೇ ಮನೆ, ಮಠ, ಅಂಗಡಿ ದೇವಸ್ಥಾನ ಮೊದಲಾದ ಸ್ಥಳಗಳಲ್ಲಿ ಹಚ್ಚಲು ಅನುಕೂಲವಾಗಿವೆ.

೧೨ ಪಟಗಳ ಸಂಗ್ರಹ ಒಂದಕ್ಕೆ ೮ ಆಣೆ.

ಪೋಸ್ಟೇಜ್ ೪ ಆಣೆ.

೧೨ ಆಣೆಗಳ ಒಂದಾಣೆಯ ಟಿಕೀಟು ಕಳಿಸಿದವರಿಗೆ ಕಳಿಸಲಾಗುತ್ತದೆ.

ಜಾಗ್ರತೆ ಕೆಳಗೆ ಬರೆದ ವಿಳಾಸಗಳಿಗೆ ಬರೆಯಿರಿ.

ಮ್ಯಾನೇಜರ್
'ಶರಣ ಸಂದೇಶ'
ಪೋ. ಆಲಮಟ್ಟಿ. ಜಿ. ವಿಜಾಪುರ

ಎಸ್. ಸಿ. ಶಿವಲಿಂಗಣ್ಣ
ಪೋ. ಅಥರಗಾ
ಜಿ. ವಿಜಾಪುರ.

---

ಅಕ್ಕನ ಹುಣ್ಣಿಮೆ ಬಂತು !

ಅಕ್ಕರದಿಂದ

## ಅಕ್ಕನ ಉಪದೇಶ

ಎಂಬ

ಚಿಕ್ಕ ಪುಸ್ತಕಗಳನ್ನು ಬೇಗನೆ

ತರಿಸಿರಿ.

೨೦೦೦ ಪ್ರತಿಗಳು ಮಾತ್ರ ಇವೆ.

ಶ್ರೀಮಾನ್ ಮಾಗಾವಿ ಚೆನ್ನಬಸವಪ್ಪನವರು ಹಾವೇರಿ ಇವರು ತಮ್ಮ ಅಣ್ಣನವರಾದ ಕೈ. ಸಿದ್ಧಪ್ಪನವರ ಸ್ಮರಣಾರ್ಥ ಈ ಪುಸ್ತಕ ಪ್ರಚಾರಕ್ಕೆ ಧನ ಸಹಾಯಮಾಡಿದುದರಿಂದ

ಡೆಮ್ಮಿ ೧೬ ನೆಯ ಆಕಾರದ ೩೨ ಪುಟಗಳ ಮುದ್ದಾದ ಮುದ್ರಣದ ೨೫ ಪುಸ್ತಕಗಳಿಗೆ ಒಂದೇ ಒಂದು ರೂಪಾಯಿ. ೫೦ ಪುಸ್ತಕಗಳಿಗಿಂತ ಕಡಿಮೆಯಾಗಿ ಕಳಿಸಲಾಗುವುದಿಲ್ಲ. ರೇಲ್ವೆ ಮೂಲಕವೇ ಕಳಿಸಲಾಗುವುದು. ರೂ. ಗಳನ್ನು ಮನಿಯಾರ್ಡರ ಮೂಲಕ ಕಳಿಸಿದವರಿಗೆ ಮಾತ್ರ ಪುಸ್ತಕಗಳನ್ನು ಕಳಿಸಲಾಗುವುದು.

ಸೂಚನೆ— ಅಕ್ಕನ ಹುಣ್ಣಿಮೆ (ಚೈತ್ರ ಶು|| ಹುಣ್ಣಿಮೆ) ಏಪ್ರೀಲ್ ೧೪ ನೇ ತಾರೀಖು ಗುರುವಾರ ಇದೆ. ಆದಕಾರಣ ತಾ. ೭-೪-೩೮ ನೇ ದಿನವೇ ಪುಸ್ತಕಗಳನ್ನು ಪಾರ್ಸಲ್ ಮೂಲಕ ಕಳಿಸಲಾಗುವುದು.

ವಿಳಾಸ— ಮ್ಯಾನೇಜರ್ 'ಶರಣ ಸಂದೇಶ'
ಪೋ. ಆಲಮಟ್ಟಿ. ಜಿ. ವಿಜಾಪುರ.



ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

## The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ !
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.


ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೪ ನೆಯ ಎಪ್ರಿಲ್ ೧೯೩೮. | ಸಂಚಿಕೆ ೧


ಜನಸೇವೆಯೇ ದೇವರಸೇವೆ.

# ಏಕೀಕರಣದ ಗೊತ್ತುವಳಿ.

**ಕರ್ನಾಟಕ ಏಕೀಕರಣದ ಗೊತ್ತುವಳಿಯು**
**ಈ ದಿನ (ತಾ. ೪-೪-೧೯೩೮)**
**ಮುಂಬೈ ಪ್ರಾಂತಿಕ ಅಸೆಂಬ್ಲಿಯಲ್ಲಿ ಬಂದು**
**ಒಪ್ಪಿಗೆಯನ್ನೂ ಹೊಂದುವುದು.**

ಗೊತ್ತುವಳಿ ಹೀಗಿದೆ:—

"ಮುಂಬೈ, ಮದ್ರಾಸ್, ಕೊಡಗು ಪ್ರಾಂತಗಳಲ್ಲಿಯ ಬಹು ಸಂಖ್ಯಾಕರ ಭಾಷೆಯು ಕನ್ನಡವೇ ಆಗಿರುವ ಎಲ್ಲ ಭಾಗಗಳನ್ನು ಸ್ವಾಯತ್ತ ಆಡಳಿತೆಯಲ್ಲಿ ತಂದ ಕರ್ನಾಟಕ ಪ್ರಾಂತವೆಂಬ ಒಂದು ಪ್ರಾಂತ ನಿರ್ಮಾಣ ಮಾಡಲು ಶಕ್ಯವಿದ್ದಷ್ಟು ಬೇಗನೆ ಉಪಾಯಗಳು ಕೈಕೊಳ್ಳಲ್ಪಡಬೇಕೆಂದು ಈ ಅಸೆಂಬ್ಲಿಯು ಅಭಿಪ್ರಾಯಪಡುತ್ತದೆ. ಮತ್ತು ಅದನ್ನು ಚಕ್ರವರ್ತಿ ಸರಕಾರಕ್ಕೆ ತಿಳಿಸಲು ಈ ಅಸೆಂಬ್ಲಿಯು ಸರಕಾರಕ್ಕೆ ಸೂಚಿಸುತ್ತದೆ."

**ಆಂಧ್ರ ಏಕೀಕರಣಕ್ಕಾಗಿ ಶಿಷ್ಟ ಮಂಡಲವು**
**ಇಷ್ಟರಲ್ಲೇ ಇಂಗ್ಲೆಂಡಿಗೆ ಹೋಗುವುದು.**

**ಆಸಾಮ ಪ್ರಾಂತದಲ್ಲಿ ಕಾಂಗ್ರೆಸ್ಸ ಸರಕಾರ**
**ಏರ್ಪಡುವ ಸಂಭವವಿದೆ.**

ದೇಹವೇ ದೇವಾಲಯ



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ-ಸೋಮವಾರ ತಾರೀಖು ೪ ನೆಯ ಎಪ್ರಿಲ್ ೧೯೩೮. | ಸಂಚಿಕೆ ೩೧


## ಮಹತ್ವದ ಸುದ್ದಿಗಳು.

—ಮಹಾತ್ಮಾ ಗಾಂಧಿಯವರು ಹಿಂದುಸ್ಥಾನದಲ್ಲಿರುವ ಜಾತಿ ಜಗಳವನ್ನು ನಿವಾರಣೆಮಾಡಲು ಅಹಿಂಸಾ ಮೂಲಕವಾದ ಒಂದು ಯೋಜನೆಯನ್ನು ಸಿದ್ಧಗೊಳಿಸಿದ್ದಾರಂತೆ.

—ಜಾತಿಜಗಳದ ನಿವಾರಣೆಗಾಗಿ ಗಾಂಧೀಜಿಯವರು ಏರ್ಪಡಿಸುವ ಸ್ವಯಂಸೇವಕ ಸಂಘವಲ್ಲಿ ಸೇನಾಪತಿ ಬಾಪಟ ಇವರು ಸೇರುವರಂತೆ. ಆ ಪ್ರಕಾರ ಗಾಂಧೀಜಿಯವರಿಗೆ ತಿಳಿಸಿ ಇವರು ಕಾಂಗ್ರೆಸ್ ಸದಸ್ಯರಾದರಂತೆ.

—ಸಿಂಧ ಮಂತ್ರಿಮಂಡಲವು ಮಿ. ಅಲ್ಲಾಭಕ್ಷರ ಅಧ್ಯಕ್ಷತೆಯಲ್ಲಿ ಈಗ ಹೊಸವಾಗಿ ಏರ್ಪಟ್ಟದೆ. ಇದರ ಮೇಲೆ ವಿಶ್ವಾಸವಿಲ್ಲವೆಂದು ಕರಾಚಿ ನಾಗರಿಕರು ಕಳೆದ ೨೯ ನೆಯ ತಾರೀಖಿನ ದಿನ ಸಭೆಯಲ್ಲಿ ಸಾರಿದರು.

—ರಶಿಯಾ ಸರಕಾರವು ರಾಜದ್ರೋಹದ ಅಪರಾಧ ಹೊರಿಸಿ ೧೯ ಸೊವ್ಹಿಯಟ್ ಪ್ರಮುಖರನ್ನು ಕಳೆದ ೨೯ ನೆಯ ತಾರೀಖಿನ ದಿವಸ ಶೂಲಕ್ಕೇರಿಸಿತು.

—ಅಖಿಲ ಭಾರತ ಶುದ್ಧೀ ಸಭೆಯ ದಿಲ್ಲಿ ಶಾಖೆಯವರು ಕಳೆದ ಮಾರ್ಚ ತಿಂಗಳ ೧೫ ದಿನಗಳಲ್ಲಿ ೪೨೯ ಜನಗಳಿಗೆ ಶುದ್ಧಮಾಡಿ ಹಿಂದುಧರ್ಮದಲ್ಲಿ ತೆಗೆದುಕೊಂಡರು.

—ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಕಾರ್ಯವು ಕಲಕತ್ತಾದಲ್ಲಿ ತಾ. ೧-೪-೩೮ ನೆಯ ದಿವಸದಿಂದ ರಾಷ್ಟ್ರಾಧಿಪತಿಗಳಾದ ಶ್ರೀ. ಸುಭಾಷಚಂದ್ರ ಬೋಸರ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು. ಪಂಡಿತ ನೆಹರು ಮೊದಲಾದ ೧೨ ಜನ ಸದಸ್ಯರು ಬಂದಿದ್ದರು.

—ಬಾಗಲಕೋಟೆ ಬಸವೇಶ್ವರ ಹೈಸ್ಕೂಲಿನಲ್ಲಿ ವಿದ್ಯಾರ್ಥಿ ಸಂಘದ ಪರವಾಗಿ ಶ್ರೀ. ಕಿಣಗಿ ವಕೀಲರ ಅಧ್ಯಕ್ಷತೆಯಲ್ಲಿ ಕರ್ನಾಟಕ ಏಕೀಕರಣದ ದಿನವು ಆಚರಿಸಲ್ಪಟ್ಟಿತು.

—೧೯೩೭ ನೆಯ ಇಸವಿಯಲ್ಲಿ ಅಖಿಲ ಭಾರತ ರಾಟೆ ಸಂಘದಿಂದ ೭೫ ಲಕ್ಷ ಚದುರು ಗಜ ಖಾದಿ ಬಟ್ಟೆಯು ಸಿದ್ಧವಾಯಿತು. ಸಾಧಾರಣ ೧೫ ಲಕ್ಷ ರೂ. ಗಳು ಕೂಲಿ ರೂಪದಲ್ಲಿ ಹಂಚಲ್ಪಟ್ಟವು.

—ಡಾ. ಅಂಬೇಡಕರರು ಅಸ್ಪೃಶ್ಯತೆಯ ಸಂಬಂಧವಾಗಿ ಒಂದು ಮಹತ್ವದ ಗ್ರಂಥವನ್ನು ಇಂಗ್ಲಿಷಿನಲ್ಲಿ ಬರೆದಿದ್ದಾರೆ. ಇದನ್ನು ಒಂದು ಇಂಗ್ಲಿಷ್ ಕಂಪನಿಯು ಪ್ರಕಟಿಸುವುದು.

—ವಿಜಾಪುರ ಜಿಲ್ಲೆಯ ಶಂಕರರಾವ ಮಾನೆ ಎಂಬುವವರು ಮುಸಲ್ಮಾನ್ ಧರ್ಮದಲ್ಲ ಸೇರಿ ಅಬ್ದುಲ್ ಕರೀಮು ಎಂಬ ಹೆಸರನ್ನು ಹೊಂದಿದ್ದರು. ಇವರನ್ನು ಪುಣೆ ಆರ್ಯ ಸಮಾಜದವರು ತಾ. ೨೭-೩-೩೮ ನೆಯ ದಿವಸ ಶುದ್ಧಗೊಳಿಸಿ ಅವರ ಮುಂಚಿನ ಹೆಸರಾದ ಶಂಕರರಾವ ಎಂಬುದನ್ನೇ ಇಟ್ಟರು.

—ಶ್ರೀರಾಮ ಕೇಶವ ಮೆಹತಾ ಎಂಬುವವರು ಕ್ರಿಸ್ತ ಮತದಲ್ಲಿ ಸೇರಿದ್ದರು. ಇವರಿಗೆ ನಂದುರಬಾರ ಎಂಬಲ್ಲಿ ಶುದ್ಧೀಕರಿಸಿ ಹಿಂದು ಧರ್ಮದಲ್ಲಿ ತೆಗೆದುಕೊಳ್ಳಲಾಯಿತು.

—ಮದ್ರಾಸ್ ಪ್ರಾಂತಿಕ ಅಸೆಂಬ್ಲಿಯಲ್ಲಿ ಭಾಷಾನುಗುಣ್ಯ ಪ್ರಾಂತರಚನೆಯಾಗಬೇಕೆಂದು ಠರಾವಾಯಿತು. ಮತ್ತು ಆಂಧ್ರ ಪ್ರಾಂತವು ಬೇರೆಯಾಗಲು ಒಪ್ಪಿಗೆಯೂ ದೊರೆಯಿತು.

—ಮೈಸೂರು ಸರಕಾರದವರು ರಾಜ್ಯಭಾರ ಸುಧಾರಣೆಯ ಸಂಬಂಧವಾಗಿ ಯೋಚಿಸಿ ವರದಿಮಾಡಲು ಒಂದು ಸಮಿತಿಯನ್ನು ಏರ್ಪಡಿಸಿದ್ದಾರೆ. ಅದರಲ್ಲಿ ಕಾಂಗ್ರೆಸ್ಸಿನ ಪಕ್ಷದ ನಾಲ್ಕು ಜನರು ಇದ್ದಾರೆ. ಇತರ ಪಕ್ಷದವರೇ ಅತ್ಯಧಿಕ.

—ಮಧ್ಯ ಪ್ರಾಂತ ಸರಕಾರದ ಗೃಹಮಂತ್ರಿ ಮಿ. ಶರೀಫರು ಜಾಫರ ಅಪರಾಧಿ ಬಿಟ್ಟದ್ದಕ್ಕಾಗಿ ವಿಷಾದಿಸಿ ತಮ್ಮ ಕೆಲಸಕ್ಕೆ ತ್ಯಾಗ ಪತ್ರ ಕೊಟ್ಟಿದ್ದಾರೆ. ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಇವರ ತಪ್ಪನ್ನು ಮನ್ನಿಸಿ ಕೆಲಸದ ಮೇಲೆ ಇಡಬಹುದಾಗಿ ತೋರುತ್ತದೆ.

# ಯೇಸುಕ್ರಿಸ್ತರು ಶೈವ ಮತದವರಾಗಿದ್ದರೆ?

ಯೇಸುಕ್ರಿಸ್ತರು ಒಬ್ಬ ಕಲ್ಪಿತ ಪುರುಷರೇ ವಿನಾ ಆ ಹೆಸರಿನ ಒಬ್ಬ ವ್ಯಕ್ತಿಯು ಜನ್ಮಿಸಿರಲಿಲ್ಲವೆಂದೇ ಕೆಲವರ ಹೇಳಿಕೆ. ಯಶೋದೆ ಕೃಷ್ಣ ಎಂಬ ಹೆಸರೇ ಯೇಸುಕ್ರಿಸ್ತ ಎಂದು ಮಾರ್ಪಟ್ಟಿತೆಂದು ಅವರ ವಾದ. ಇದು ಸರಿಯಲ್ಲ. ಯೇಸುಕ್ರಿಸ್ತರೆಂಬ ಮಹಾ ವಿಭೂತಿಗಳಿದ್ದುದು ನಿಜ. ಅವರ ಜನ್ಮದಿಂದ ೧೩ ವರುಷಗಳ ಚರಿತ್ರೆ ಮಾತ್ರ ಇದೆ. ಅನಂತರ ೧೭ ವರುಷಗಳ ವರೆಗೆ ಅವರೆಲ್ಲಿದ್ದರೋ ಗೊತ್ತಿಲ್ಲವೆಂದೇ ಬಹು ಜನರು ಹೇಳುತ್ತಿದ್ದಾರೆ.

ಈ ವಿಷಯದ ಸತ್ಯತೆಯನ್ನು ಕಂಡುಹಿಡಿಯಬೇಕೆಂದು ರಶಿಯಾ ದೇಶದ ಡಾ. ನೊತೊವಿಚ್ ಎಂಬ ಸುಪ್ರಸಿದ್ಧ ವಿದ್ವಾಂಸರು ೪೫ ವರುಷ ಪರಿಶೋಧಿಸಿ ಯೇಸುಕ್ರಿಸ್ತರು ೧೭ ವರುಷ ಹಿಂದುಸ್ಥಾನ ಮತ್ತು ತಿಬೇಟ ದೇಶಗಳಲ್ಲಿ ಸಂಚರಿಸಿದ್ದರೆಂದು ದೃಢೀಕರಿಸಿದ್ದಾರೆ. ಈ ಸಂಬಂಧವಾಗಿ ಹೀಗೆ ಪ್ರಕಟವಾಗಿದೆ—

"ಡಾ. ನೊತೊವಿಚ್ ಇವರು ತಿಬೇಟ ದೇಶದ ಹಿಮಿಸ ಎಂಬಲ್ಲಿಯ ಬುದ್ಧ ಮಂದಿರಕ್ಕೆ ಹೋಗಿದ್ದರು. ಅಲ್ಲಿದ್ದ ಲಾಮಾ ಎಂಬ ಧರ್ಮಗುರುಗಳು ತಮ್ಮಲ್ಲಿದ್ದ ಪ್ರಾಚೀನ ಗ್ರಂಥಗಳಲ್ಲಿ ಒಂದನ್ನು ಡಾ. ನೊತೊವಿಚ್ ಇವರ ಕಡೆಗೆ ಕೊಟ್ಟರು. ಅವರು ಆ ಪುಸ್ತಕದ ಎಲ್ಲ ಪುಟಗಳ ಫೋಟೋ ತೆಗೆದುಕೊಂಡು ತಮ್ಮ ದೇಶಕ್ಕೆ ಹೋಗಿ ಅವುಗಳ ಮೂರು ಪ್ರತಿಗಳನ್ನು ಮಾಡಿ ಕ್ರಿಸ್ತಧರ್ಮದ ಜಗದ್ಗುರುಗಳಾದ ರೋಮ ಪಟ್ಟಣದ ಪೋಪರ ಕಡೆಗೆ ಒಂದು ಪ್ರತಿಯನ್ನು ಕಳುಹಿಸಿದರು."

ಆ ಪುಸ್ತಕದಲ್ಲಿ ಯೇಸುಕ್ರಿಸ್ತರು ೧೭ ವರುಷ ಹಿಂದುಸ್ಥಾನದಲ್ಲಿ ಸಂಚರಿಸಿದ್ದೂ ಆ ಕಾಲದಲ್ಲಿ ಅವರು ಒಂದು ಪುಸ್ತಕವನ್ನು ಬರೆದದ್ದೂ ಆ ಗ್ರಂಥದಲ್ಲಿದೆ! ಆ ಎಲ್ಲಾ ಸಂಗತಿಗಳನ್ನು ಪೋಪರು ನೋಡಿ ಆರು ತಿಂಗಳುಗಳನಂತರ ಡಾ. ನೊತೊವಿಚ್ ಇವರಿಗೆ ಹೀಗೆ ಬರೆದರು—

"ನೀವು ಕಳುಹಿಸಿದ ಕಾಗದಪತ್ರಗಳನ್ನು ನಾನು ಸುಟ್ಟುಹಾಕಿದ್ದೇನೆ. ನೀವು ಅವುಗಳನ್ನು ಪ್ರಕಟಿಸಬೇಡಿರಿ."

ಡಾ. ನೊತೊವಿಚ್‌ರವರಿಗೆ ಪೋಪರು ಹೀಗೆ ಮಾಡಬಹುದೆಂದು ಮೊದಲೇ ಗೊತ್ತಿತ್ತು. ಅಂತೆಯೇ ಅವರು ಮೂರು ಪ್ರತಿಗಳನ್ನು ಮಾಡಿಕೊಂಡಿದ್ದರು. ಈಗ ಅವರು "ಕ್ರಿಸ್ತರ ಅಜ್ಞಾತ ಚರಿತ್ರೆ" ಎಂಬ ಗ್ರಂಥವನ್ನು ಬರೆದು ಪ್ರಕಟಿಸಿದ್ದಾರೆ. ಜರ್ಮನ್ ಮತ್ತು ಫ್ರೆಂಚ್ ಭಾಷೆಗಳಲ್ಲಿಯೂ ಇವು ಈಗಾಗಲೇ ಬರೆಯಲ್ಪಟ್ಟಿವೆ.. ಆ ಗ್ರಂಥದ ಮುಖ್ಯಾಂಶಗಳು ಹೀಗಿವೆ.—

### ಕ್ರಿಸ್ತರ ವೈರಾಗ್ಯ.

"ಕ್ರಿಸ್ತ ಕುಮಾರನು ೧೩ ನೆಯ ವರುಷದವನಿರುವಾಗ ಆತನಿಗೆ ಲಗ್ನಮಾಡಬೇಕೆಂದು ಆತನ ಅಪ್ಪರು ಪ್ರಯತ್ನಿಸಿದರು. ಇದು ಕುಮಾರನಿಗೆ ಸರಿತೋರಲಿಲ್ಲ. ಬ್ರಹ್ಮಚಾರಿಯಾಗಿದ್ದು ಬುದ್ಧನಂತೆಯೇ ನಿರ್ವಾಣಹೊಂದಬೇಕೆಂದು ನಿರ್ಧರಿಸಿ ವ್ಯಾಪಾರಿಗಳ ಸಂಗಡ ಸಿಂಧು ನದಿಯ ಪ್ರಾಂತಕ್ಕೆ ಬಂದನು. ಆ ಮೇಲೆ ಆರ್ಯಾವರ್ತದಲ್ಲಿ ಕೆಲವು ದಿನಗಳ ವರೆಗಿದ್ದು ಜಗನ್ನಾಥಪುರಿಯ ವರೆಗೂ ಸಂಚಾರಮಾಡಿದನು. ಈತನು ಕೆಲವು ದಿನಗಳ ವರೆಗೆ ಜೈನರ ಸಹವಾಸದಲ್ಲಿದ್ದನು. ಬ್ರಾಹ್ಮಣರಲ್ಲಿದ್ದು ವೇದವನ್ನೂ ಕಲಿತನು. ಆಗ ಈತನಿಗೆ ೨೦ ವರುಷಗಳಾಗಿದ್ದವು. ಆ ಮೇಲೆ ಸಾಧು, ಸಂತರ ಸಹವಾಸದಲ್ಲಿರಲು ರಾಜಗೃಹ, ಕಾಶಿ ಪ್ರಯಾಗ ಮೊದಲಾದ ಅನೇಕ ಸ್ಥಳಗಳಿಗೆ ಹೋಗಿದ್ದನು.

೬ ವರುಷ ಬೌದ್ಧ ಭಿಕ್ಷುಗಳಲ್ಲಿದ್ದು ಬುದ್ಧನ ತತ್ವಜ್ಞಾನವನ್ನು ಕಲಿತು ನೇಪಾಳ, ತಿಬೇಟ ದೇಶಗಳಲ್ಲಿ ಸಂಚರಿಸಿ ಬುದ್ಧ ಭಿಕ್ಷುವಾಗಿ ಇರಾಣದ ಮಾರ್ಗವಾಗಿ ತನ್ನ ೩೦ ನೆಯ ವರುಷದಲ್ಲಿ ಸ್ವದೇಶಕ್ಕೆ ಹೋದನು."

ಹಿಮಿಸ ಮಂದಿರದಲ್ಲಿ ದೊರೆತ ಆ ಪುಸ್ತಕದಲ್ಲಿ ೧೪ ಭಾಗಗಳಿವೆ. ಅವೆಲ್ಲವುಗಳ ಒಟ್ಟು ಶ್ಲೋಕ ಸಂಖ್ಯೆ ೨೪೪೪.

ವಿಂಧ್ಯಪರ್ವತದ ನಾಥ ಸಂಪ್ರದಾಯದವರಲ್ಲಿರುವ "ನಾಥ ನಾಮಾವಲಿ" ಎಂಬ ಗ್ರಂಥದಲ್ಲಿ ಯೇಸುಕ್ರಿಸ್ತನ ವಿಚಾರವಾಗಿ ಹೀಗೆ ಬರೆದಿದೆ—

### ಯೇಸು ಶೈವ ಸಾಧು!

"ಯೇಸು ೧೪ ನೆಯ ವರ್ಷದವನಿರುವಾಗ ಹಿಂದುಸ್ಥಾನಕ್ಕೆ ಬಂದನು. ಈತನು ಶಿವೋಪಾಸಕನಾದನು. ಆಗ "ಈಶನಾಥ" ಎಂದು ಈತನ ಹೆಸರು. ಈಶನಾಥನು ತನ್ನ ದೇಶಕ್ಕೆ ಹೋಗಿ ಶೈವ ಮತವನ್ನು ಪ್ರಸಾರಮಾಡಲಾರಂಭಿಸಿದನು. ಆಗ ಆತನನ್ನು ಶೂಲಕ್ಕೇರಿಸಿದರು. ಆಗ ನಾಥ ಪಂಥದವರು ಆತನನ್ನು ಶೂಲದಿಂದಿಳಿಸಿ ಜೀವದಾನ ಮಾಡಿ ಹಿಂದುಸ್ಥಾನಕ್ಕೆ ಕರೆದುಕೊಂಡುಬಂದರು. ಈಶನಾಥನು ತನ್ನ ಗುರುಗಳೊಂದಿಗೆ ಹಿಮಾಲಯದಲ್ಲಿ ೩ ವರುಷ ತಪಸ್ಸು ಮಾಡಿ ೪೯ ನೆಯ ವರುಷದಲ್ಲಿ ದೇಹಬಿಟ್ಟನು."

"ಈಶ" ಎಂಬ ಶಬ್ದವೇ "ಏಸಃ" ಎಂದು ರೂಪಾಂತರ ಹೊಂದಿತೆಂದು ತೋರುತ್ತದೆ ಇಟಾಲಿ ದೇಶದ ವಿಟೀಕಾನ ಎಂಬ ರಾಜಭವನದಲ್ಲಿ ಯೇಸು ಕ್ರಿಸ್ತನ ಒಂದು ಚಿತ್ರವಿದೆ. ಯೇಸು ಧೋತರವನ್ನು ಉಟ್ಟುಕೊಂಡು ಪಂಚೆಯನ್ನು ಹೊದ್ದುಕೊಂಡಿದ್ದಾನೆ. ಆತನು ಒಬ್ಬ ಶೈವ ಸಾಧುವಿನಂತೆ ತೋರುತ್ತಿದ್ದಾನೆ. ಆ ಚಿತ್ರವು ಈಗಿನ ಕ್ರಿಸ್ತರಿಗೆ ಪ್ರಿಯವಾಗಿಲ್ಲ.

ಕ್ರಿಸ್ತನ ಬೋಧೆಯೆಂದು ಪ್ರಕಟವಾಗಿರುವ ಸಂಗತಿಗಳಲ್ಲಿ ತೋರುತ್ತಿರುವ ಅನೇಕ ಶಾಂತಿ ಮತ್ತು ದಯೆಯ ದಿವ್ಯೋಪದೇಶಗಳನ್ನು ನೋಡಿದರೆ ಆತನಿಗೆ ಬುದ್ಧಾದಿ ಪ್ರಾಚೀನ ಭಾರತೀಯ ತತ್ವಜ್ಞಾನಿಗಳ ಜ್ಞಾನ ಪ್ರಾಪ್ತವಾಗಿದ್ದಿತೆಂದು ಸ್ಪಷ್ಟ ತೋರುತ್ತದೆ.

ಯೇರೂಸಲೇಮಿನ ಜಾತ್ರೆಯ ಕಾಲಕ್ಕೆ ೧೨ ವರುಷಗಳ ಯೇಸು ಕುಮಾರನು ದೇವಾಲಯದಲ್ಲಿ ಬೋಧಕರ ನಡುವೆ ಕುಳಿತುಕೊಂಡು ವಾದಿಸುತ್ತಿದ್ದನೆಂದೂ ಆತನನ್ನು ಜಾತ್ರೆಯಲ್ಲಿ ಕಳೆದುಕೊಂಡ ತಾಯಿಯು ಮಗನ ಈ ಜಾಣ್ಮೆಯನ್ನು ನೋಡಿ ಬೆರಗಾಗಿ ಮನೆಗೆ ಬರಲು ಕರೆದಳೆಂದೂ ಆತನು "ನಾನು ನನ್ನ ತಂದೆಯ ಮನೆಯಲ್ಲಿ ಇರಬೇಕಾದದ್ದು ನಿಮಗೆ ತಿಳಿಯಲಿಲ್ಲವೊ?" ಎಂದು ಕೇಳಿದನೆಂದೂ ಇದರ ಅರ್ಥವು ತಾಯಿಗೆ ಆಗಲಿಲ್ಲವೆಂದೂ ಲೂಕನು ಬರೆದ ಬೈಬಲ್ಲಿನಲ್ಲಿಯ ಸಂಗತಿಗಳನ್ನು ನೋಡಿದರೆ ಆಗಲೇ ಆತನು ಮನೆಯನ್ನು ಬಿಟ್ಟು ಹಿಂದುಸ್ಥಾನದ ಕಡೆಗೆ ಬಂದಿರಬೇಕೆಂದು ತೋರುತ್ತದೆ.

ಯೇರೂಸಲೇಮಿನ ಜಾತ್ರೆಯಲ್ಲಿ ಪ್ರಾಣಿಗಳನ್ನು ಕೊಲ್ಲುತ್ತಿದ್ದರು. ಅದನ್ನು ಬಿಡಿಸಲು ಬೌದ್ಧ ಭಿಕ್ಷುಗಳೇ ಬೋಧಕರಾಗಿ ಹೋಗಿರಬೇಕು. ಲೂಕನು ಹೇಳಿದ ಬೋಧಕರು ಬೌದ್ಧ ಭಿಕ್ಷುಗಳೇ ಆಗಿರಬೇಕು. ಅವರ ಉಪದೇಶವು ಪವಿತ್ರಾತ್ಮನಾದ ಯೇಸುವಿನ ಮೇಲೆ ಹೆಚ್ಚು ಪರಿಣಾಮವನ್ನುಂಟುಮಾಡಿದ್ದರಿಂದ ಮನೆಯನ್ನು ಬಿಟ್ಟು ಅವರ ಹಿಂಬಾಲಿಸಿ ಹಿಂದುಸ್ಥಾನಕ್ಕೆ ಬಂದಿದ್ದರೆ ಅದೇನೂ ಅಶಕ್ಯದ ಸಂಗತಿಯೆಂದು ಹೇಳಲಿಕ್ಕಾಗುವುದಿಲ್ಲ.

ಯೇಸು ಹುಟ್ಟುವ ೯೦೦ ವರುಷಗಳ ಹಿಂದೆಯೇ ಯೆರೂಸಲೇಮುದಲ್ಲಿ ಆಳುತ್ತಿದ್ದ ಯಹುದಿಗಳ ಪ್ರಸಿದ್ಧ ರಾಜನಾದ ಸಾಲೋಮನ್ನನು ಶೂರನೂ ಬುದ್ಧಿಶಾಲಿಯೂ ನೀತಿಪರನೂ ಧಾರ್ಮಿಕ ಪುರುಷನೂ ಆಗಿದ್ದನಷ್ಟೆ. ಈತನೇ ಶೈವರ ಮುಖ್ಯ ಚಿನ್ಹವಾದ ಷಟ್ಕೋನವನ್ನು ತನ್ನ ಮುದ್ರಿಯನ್ನಾಗಿ ಮಾಡಿಕೊಂಡನು. ಆದಕಾರಣ ಯೇಸು ಹುಟ್ಟುವ ಮುಂಚೆ ಅನೇಕ ಶತಮಾನಗಳಿಂದಲೂ ಯೆರೂಸಲೇಮು ಪ್ರಾಂತದಲ್ಲಿ ಶೈವಮತಪ್ರಸಾರವಾಗುತ್ತಿದ್ದಿತೆಂದು ಹೇಳಬಹುದು. ಅಂತೆಯೇ ಯೇಸು ಕುಮಾರನು ಹಿಂದುಸ್ಥಾನಕ್ಕೆ ಬಂದನಂತರ ಶೈವ ಸಿದ್ಧಾಂತಗಳನ್ನೂ ಕಲಿತಿರಬಹುದು.

ಅಂತೂ ಈ ವಿಷಯದಲ್ಲಿ ಪರಿಶೋಧನೆಯಾದಷ್ಟು ಯೇಸುವಿನ ಚಾರಿತ್ರ್ಯವು ದಿವ್ಯತರವಾದುದಾಗುವುದಕ್ಕೆ ಭಾರತೀಯ ತತ್ವಜ್ಞಾನದ ಬೆಳಕು ಅದರ ಮೇಲೆ ಬಿದ್ದುದೇ ಕಾರಣವಾಯಿತೆಂಬ ಮಾತು ಹೆಚ್ಚು ಹೆಚ್ಚಾಗಿ ಸ್ಪಷ್ಟವಾಗದೆ ಇರಲಾರದು.

---

# ಕ್ಷಾತ್ರವೃತ್ತಿಯ ಆವಶ್ಯಕತೆ.

### ಶಿಂದೆ ಮಹಾರಾಜರ ಭಾಷಣ.

ನಾಶಿಕದ ಭೋಸಲಾ ಸೈನ್ಯ ವಿದ್ಯಾಲಯದ ಉದ್ಘಾಟನಾ ಸಮಾರಂಭವು ತಾ. ೨೭-೬-೩೮ ನೆಯ ದಿವಸ ಶ್ರೀಮಂತ ಜೀವಾಜಿರಾವ ಮಹಾರಾಜ ಶಿಂದೆ ಇವರ ಹಸ್ತದಿಂದ ಜರುಗಿತು. ಆಗ ಮಹಾರಾಜರವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಹಿಂದುಸ್ಥಾನದ ತರುಣರಿಗೆ ಸೈನ್ಯ ಶಿಕ್ಷಣವನ್ನು ಕೊಡುವುದು ಅತ್ಯಗತ್ಯವಾಗಿದೆ. ಜಗತ್ತಿನ ಬೇರೆ ಸುಧಾರಿಸಿದ ರಾಷ್ಟ್ರಗಳಲ್ಲಿ ದೊರೆಯುತ್ತಿರುವ ಸೈನ್ಯ ಶಿಕ್ಷಣದಂತೆ ಈ ದೇಶದಲ್ಲಿಯೂ ಶಿಕ್ಷಣ ದೊರೆಯಬೇಕೆಂದು 'ಇಂಡಿಯನ್ ಮಿಲಿಟರಿ ಅಕಾಡಮಿ" ಶಿಕ್ಷಣ ಸಂಸ್ಥೆಯು ಸ್ಥಾಪನೆಯಾಗಿದೆ. ಅದರ ಉದ್ದೇಶವು ಪೂರ್ತಿಯಾಗಬೇಕಾದರೆ ಜನರಲ್ಲಿ ಕ್ಷಾತ್ರ ವೃತ್ತಿಯನ್ನು ಹೆಚ್ಚಿಸುವಂತಹ ಸೈನ್ಯ ಶಿಕ್ಷಣಾಲಯಗಳನ್ನು ಎಲ್ಲ ಕಡೆಗೂ ಏರ್ಪಡಿಸುವುದು ಅಗತ್ಯವಾಗಿದೆ.

ವಾಙ್ಮಯಾತ್ಮಕ ಶಿಕ್ಷಣಾಲಯಗಳು ಹೇಗೆ ಅಗತ್ಯವಾಗಿವೆಯೋ ಹಾಗೆಯೇ ಜನರ ಶೌರ್ಯಸಾಹಸಗಳನ್ನು ಹೆಚ್ಚಿಸುವ ಇಂಥ ಸೈನ್ಯ ಶಿಕ್ಷಣಾಲಯಗಳೂ ದೇಶಕ್ಕೆ ಅವಶ್ಯವಾಗಿವೆ. ಈ ಕಾರ್ಯಗಳು ಒಂದೇ ದಿನದಲ್ಲಿ ಆಗತಕ್ಕವುಗಳಲ್ಲ. ಆದಕಾರಣ ತರುಣರ ಮನಸ್ಸಿನಲ್ಲಿ ಕ್ಷಾತ್ರ ವೃತ್ತಿಯು ಮೊದಲಿನಿಂದಲೂ ಉಂಟಾಗಬೇಕು. ಈ ಭೋಸಲಾ ವಿದ್ಯಾಲಯದಲ್ಲಿ ಯೋಗ್ಯವಾದ ಯುದ್ಧ ವಿದ್ಯೆಯು ದೊರೆತು ಇಲ್ಲಿ ಶಿಕ್ಷಣ ಹೊಂದಿದವರು ಮಾತೃಭೂಮಿ ರಕ್ಷಣೆಯ ಮಹಾತ್ಕಾರ್ಯವನ್ನು ಮಾಡುವರೆಂದೇ ನಾನು ನಂಬಿದ್ದೇನೆ.

ರಾಷ್ಟ್ರದ ಸಂಸ್ಕೃತಿ ಮತ್ತು ಕ್ಷಾತ್ರವೃತ್ತಿ ಸಂರಕ್ಷಿಸಲ್ಪಡಬೇಕಾದರೆ ಇಂಥ ಸೈನ್ಯ ಶಿಕ್ಷಣಾಲಯಗಳು ಅಗತ್ಯವಾಗಿವೆ. ಇಲ್ಲಿ ಕಲಿಯುವ ತರುಣರೇ ರಾಷ್ಟ್ರದ ಮುಂದಣ ಆಧಾರಸ್ತಂಭಗಳಾಗಿದ್ದಾರೆ. ಇವರ ಮಾನಸಿಕ ವಿಕಾಸದಂತೆ ಶಾರೀರಿಕ ಬಲವೂ ಹೆಚ್ಚಿದರೇನೇ ಮುಂದಣ ರಾಷ್ಟ್ರವು ಸುಸ್ಥಿತಿಯಲ್ಲಿರುವಂತೆ ಮಾಡಲು ಸಮರ್ಥರಾಗುವರೆಂಬ ಸಂಗತಿಯು ಸುಧಾರಿಸಿದ ರಾಷ್ಟ್ರಗಳ ಚರಿತ್ರೆಯಿಂದ ಗೊತ್ತಾಗುತ್ತದೆ.

ಗ್ರೀಸ, ರೋಮ, ಹಿಂದುಸ್ಥಾನ ಈ ಮೂರು ರಾಷ್ಟ್ರಗಳಲ್ಲಿಯು ಕ್ಷಾತ್ರವೃತ್ತಿಯು ನಾಶವಾದಾಗಲೇ ಇವು ಪರಾಧೀನವಾದವೆಂದು ಇತಿಹಾಸವು ಹೇಳುತ್ತದೆ. ನಾವು ಶಾರೀರಿಕ ಬಲದ ಕಡೆಗೆ ಲಕ್ಷಿಸಿದ್ದರೆ ನಮಗೆ ಅಂಥ ಸ್ಥಿತಿಯು ಬರುತ್ತಿರಲಿಲ್ಲ. ಈಗಿನ ತರುಣರಾದರೂ ಈ ವಿಷಯದ ಕಡೆಗೆ ಲಕ್ಷಿಸಬೇಕು.

### ಯುದ್ಧವು ಅಪರಿಹಾರ್ಯವಾದುದು.

ಜಗತ್ತಿನಲ್ಲಿ ಶಾಂತಿಯು ಸ್ಥಿರವಾಗಿರಬೇಕೆಂದೇ ಜಗದಾದಿಯಿಂದಲೂ ಅನೇಕ ಮಹಾತ್ಮರು ಪ್ರಯತ್ನಿಸುತ್ತಾ ಬಂದಿದ್ದಾರೆ. ಆದರೆ ಅವರ ಪ್ರಯತ್ನ ಮಾತ್ರ ಇನ್ನೂ ನೆರವೇರಿಲ್ಲ. ಸಹಾರಾ ಉಸುಕಿನ ಬೈಲಲ್ಲಿಯ ಮೃಗಜಲದಂತೆ ಅವರ ಶಾಂತಿಯ ದೃಶ್ಯವು ಮುಂದೆ ಮುಂದೆಯೇ ಹೋಗುತ್ತಲಿದೆ. ಬಲವೇ ಅಧಿಕಾರವೆಂಬ ಸಿದ್ಧಾಂತವು ಈಗಲೂ ಜಗತ್ತಿನಲ್ಲಿ ಸ್ಥಾಪನೆಯಾಗುತ್ತಾ ಇದೆ. ಆದಕಾರಣ ಯುದ್ಧವು ದುಃಖದಾಯಕವಾದುದಾಗಿದ್ದರೂ ಅದು ಅಪರಿಹಾರ್ಯವಾದುದಾಗಿಯೇ ಇರುತ್ತದೆಂಬುದನ್ನು ತಿಳಿದು ಅದಕ್ಕೆ ಎದೆಗೊಡಲು ಸಿದ್ಧರಾಗಬೇಕು.

ಕಳೆದ ಮಹಾ ಯುದ್ಧವು ಪೂರ್ತಿಯಾದನಂತರ ಇನ್ನು ಜಗತ್ತಿನಲ್ಲಿ ಶಾಂತಿಯೇ ನೆಲೆಸುವುದೆಂದು ತಿಳಿದಿದ್ದರಷ್ಟೆ. ಆದರೆ ಈಗಿನ ಸ್ಥಿತಿಯು ಹೇಗಿದೆ? ಜಗತ್ತಿನಲ್ಲಿ ಶಾಂತತೆಯುಂಟಾಗಬೇಕಾದರೆ ಸ್ವ ಸಂರಕ್ಷಣೆಗಾಗಿ ಅದ್ಭುತ ಸಾಮರ್ಥ್ಯವನ್ನು ಹೊಂದಬೇಕಾದುದೇ ಮುಖ್ಯೋಪಾಯವೆಂದು ಈಗ ಎಲ್ಲ ರಾಷ್ಟ್ರಗಳೂ ತಿಳಿದು ಆ ಪ್ರಕಾರ ಪ್ರಯತ್ನಿಸುತ್ತಲಿವೆ. ಹಿಂದುಸ್ಥಾನವು ಮೊದಲು ಈ ವಿಚಾರವಾಗಿ ಪ್ರಯತ್ನಿಸಿದಂತೆ ಇನ್ನು ಮೇಲೆಯೂ ಪ್ರಯತ್ನಿಸುವುದರಲ್ಲಿ ಸಂಶಯವಿಲ್ಲ.

ವಿದ್ಯೆ, ಸಂಸ್ಕೃತಿ ಮತ್ತು ರಾಷ್ಟ್ರ ರಕ್ಷಣೆಗಳ ಸಲುವಾಗಿ ಮಾಡುವ ಕಾರ್ಯಗಳೆಲ್ಲಾ ದೇವರ ಪೂಜೆಗಳೇ ಆಗಿವೆ. ಅಂತೆಯೇ ಯಾವ ಉದಾರಿಗಳ ಪ್ರಯತ್ನದಿಂದ ಈ ದಿನದ ಶುಭ ಕಾರ್ಯವು ಜರುಗಿತೋ ಆ ಉದಾರಿಗಳನ್ನು ನಾನು ಹೃದಯಪೂರ್ವಕ ಅಭಿನಂದಿಸುತ್ತೇನೆ."

### ಶಿಂದೆ ಮಹಾರಾಜರ ಉದಾರ ದಾನ.

ಭೋಸಲಾ ಯುದ್ಧ ವಿದ್ಯಾಲಯಕ್ಕೆ ಗ್ವಾಲ್ಹೇರ ಸಂಸ್ಥಾನಾಧಿಪತಿಗಳಾದ ಶ್ರೀಮಂತ ಜೀವಾಜಿರಾವ ಶಿಂದೆ ಇವರು ಒಂದು ಲಕ್ಷ ರೂ. ಗಳನ್ನು ದಾನವಾಗಿ ಕೊಟ್ಟಿದ್ದು ಅತ್ಯಂತ ಅಭಿನಂದನೀಯವಾಗಿದೆ. ಈ ಮಹಾರಾಜರು ಭೋಸಲಾ ಯುದ್ಧವಿದ್ಯಾಲಯದ ಉದ್ಘಾಟನದ ಕಾಲಕ್ಕೆ ಮಾಡಿದ ಭಾಷಣವು ಅದರ ಹೃದಯಪೂರ್ವಕವಾದುದೆಂಬುದಕ್ಕೆ ಆ ವಿದ್ಯಾಲಯಕ್ಕೆ ಒಂದು ಲಕ್ಷ ರೂ. ಗಳನ್ನು ಕೊಟ್ಟಿದ್ದೇ ದೃಷ್ಟಾಂತವಾಗಿದೆ.

ಈ ವಿದ್ಯಾಲಯದ ಉದ್ಘಾಟನದ ಕಾಲಕ್ಕೆ ಇದರ ಅಭಿವೃದ್ಧಿಗಾಗಿ ಹಿಂದಿನ ವ್ಹಾಯಿಸ್‌ರಾಯರಾದ ಲಾರ್ಡ ವಿಲಿಂಗಡನ್‌ರ ಮತ್ತು ಈಗಿನ ಮುಂಬೈ ಗವ್ಹರ್ನರರಾದ ಸರ್. ಲುಮ್ಲೆಯವರ ಸಂದೇಶಗಳೂ ಬಂದಿದ್ದವು.

ಬಂಗಾಲದ ಒಬ್ಬ ದೇಶಭಕ್ತರು ತಮ್ಮ ಹೆಸರನ್ನು ಪ್ರಕಟಿಸಬಾರದಾಗಿ ೫ ಸಾವಿರ ರೂ. ಗಳನ್ನು ಈ ವಿದ್ಯಾಲಯಕ್ಕೆ ಆ ದಿನವೇ ಡಾ. ಮುಂಜೆಯವರ ಕಡೆಗೆ ಕಳುಹಿಸಿದ್ದರು.

ಡಾ. ಮುಂಜೆಯವರ ಪ್ರಯತ್ನ ವಿಶೇಷದಿಂದ ಸ್ಥಾಪನೆಯಾದ ಈ ಯುದ್ಧ ವಿದ್ಯಾಲಯದಲ್ಲಿ ಈಗ ೯೦ ವಿದ್ಯಾರ್ಥಿಗಳಿದ್ದಾರೆ. ಒಟ್ಟು ೩೦೦ ವಿದ್ಯಾರ್ಥಿಗಳ ಶಿಕ್ಷಣಕ್ಕೆ ಇಲ್ಲಿ ಏರ್ಪಾಟುಮಾಡುವದಿದೆ. ಒಟ್ಟು ೧೦ ಲಕ್ಷ ರೂ. ಗಳು ಬೇಕಾಗಿವೆ. ಈಗಾಗಲೇ ಮೂರು ಲಕ್ಷ ರೂ. ಗಳು ಕೂಡಿವೆ. ಈ ವಿದ್ಯಾಲಯಕ್ಕೆ ಬೇಕಾಗುವ ಹಣವು ಜಾಗ್ರತೆ ಕೂಡಿ ಇದೊಂದು ರಾಷ್ಟ್ರ ರಕ್ಷಣೆಯ ಮಹಾ ಸಂಸ್ಥೆಯಾಗದಿರಲಾರದು.

# ನೀಡಲಾರದ ಕೈ ಎಂಜಲು.

**ಸ್ವಾತಂತ್ರ್ಯವು ದಾನದ ವಸ್ತುವೇ ಅಲ್ಲ.
ಅದನ್ನು ಸಾಮರ್ಥ್ಯ, ಸತ್ಯ' ಸ್ವಾರ್ಥತ್ಯಾಗ, ಆತ್ಮಾರ್ಪಣ
ಗಳಿಂದಲೇ ಸಂಪಾದಿಸಬೇಕು.**

(ಲೇಖಕ— ಶ್ರೀ. ಅನ್ನದಾನಯ್ಯ ಹಿರೇಮಠ ತಿಮ್ಮಾಪುರ.)

ಕರ್ನಾಟಕ ಏಕೀಕರಣದ ವಿಚಾರದಲ್ಲಿ ವಿಲಕ್ಷಣವಾದ ಆಂದೋಲನವು ಈಗ ಅನೇಕ ವರುಷಗಳಿಂದ ನಡೆದಿದ್ದು ಕೆಲವು ದಿವಸಗಳಿಂದಂತೂ ಅತ್ಯಂತ ಮಹತ್ವದ ಪ್ರಶ್ನೆಯಾಗಿ ಕರ್ನಾಟಕ ಏಕೀಕರಣದ ಅವಶ್ಯಕತೆ ಹಾಗೂ ಆತುರತೆಗಳು ಹೆಚ್ಚಾಗಿರುವ ಸಂಗತಿ ಪತ್ರಿಕೆಗಳನ್ನು ಓದುವವರಿಗೂ ಪಟ್ಟಣಗರಿಗೂ ಹಳ್ಳಿಗರಿಗೂ ಸಹ ಗೊತ್ತಿದ್ದ ವಿಚಾರವಾಗಿದೆ.

ಈ ಬಗ್ಗೆ ಕರ್ನಾಟಕದ ಅಖಿಲ ಪತ್ರಿಕೆಗಳು ಏಕಮುಖವಾದ ಅಭಿಪ್ರಾಯವನ್ನು ಸೂಚಿಸಿ ಕರ್ನಾಟಕ ಏಕೀಕರಣವನ್ನು ಆದಷ್ಟು ಜಾಗ್ರತೆ ಮಾಡುವಂತೆ ಮದ್ರಾಸ್ ಮುಂಬೈ ಕಾಂಗ್ರೆಸ್ ಮಂತ್ರಿಮಂಡಲಗಳಿಗೂ ಹಿಂದುಸ್ಥಾನ ಸರಕಾರಕ್ಕೂ ಆಗ್ರಹದ ವಿನಂತಿಗಳನ್ನು ಮಾಡಿಕೊಂಡಿವೆ.

ಹೀಗಿದ್ದರೂ ಮುಂಬೈ ಮುಖ್ಯ ಮಂತ್ರಿಗಳೂ ಅವರ ಮಂತ್ರಿಮಂಡಲವೂ ಅಸೆಂಬ್ಲಿಯ ಸದಸ್ಯರೂ ಆಡಿದ ಮಾತುಗಳು (ಪರದೇಶದಿಂದ ಬಂದ ಗವ್ಹರ್ನರ್ ಮೊದಲಾದವರಂತೆ) ತೋರಿಸಿದ ಉದಾಸೀನ, ಪರಿಹಾಸ್ಯಪೂರ್ಣಭಾವಗಳು ನಿಜಕನ್ನಡಿಗರೆಲ್ಲರ ಹೃದಯವನ್ನು ಕಲಕಿಬಿಟ್ಟವೆ. ಅವರಾಡಿದ ಮಾತುಗಳು ಗಾಯದಮೇಲೆ ಬರೆಕೊಟ್ಟಂತಾಗಿವೆ. ಕರ್ನಾಟಕ ಏಕೀಕರಣದ ವಿಷಯದಲ್ಲಿ ಉದಾಸೀನತೆ, ಉಪಹಾಸ್ಯ, ಅಸೂಯೆ, ಟೀಕೆ, ಟಪ್ಪಣೆಗಳನ್ನು ಮಾಡುವ ಮಹನೀಯರಿಗೆ ಕನ್ನಡಿಗರ ಹೃದಯವನ್ನು ಅರಿಯದವರಿಗೆ ಕರ್ನಾಟಕದ ಇತಿಹಾಸ ಸಂಸ್ಕೃತಿ ಹಾಗೂ ಸಾಹಿತ್ಯ ಪ್ರಾಚೀನತೆ ಸಂಪತ್ತುಗಳ ಬಗ್ಗೆ ಪೂರ್ಣ ತಿಳುವಳಿಕೆಯಿಲ್ಲೆಂದು ಸ್ಪಷ್ಟವಾಗುತ್ತಲ್ಲದೇ "ಬಂಜೆ ಬೇನೆಯನರಿಯಳು ಮಲತಾಯಿ ಮುದ್ದು ಬಲ್ಲಳೇ" ಎನ್ನುವಂತೆ ಮರಾಠಿಗರ ಕಂಕುಳ ಕೂಸುಗಳಂತಿರುವ ಅಸೆಂಬ್ಲಿಯ ಸದಸ್ಯರಿಗಾಗಲೀ ಮಂತ್ರಿಮಂಡಲಕ್ಕಾಗಲೀ ಕರ್ನಾಟಕ ಏಕೀಕರಣದ ಬಗ್ಗೆ ನೋವಾಗಲೀ ಪ್ರೀತಿಯಾಗಲೀ ಇರಲು ಕಾರಣವಿಲ್ಲ.

ಈಗಿನ ಮುಂಬೈ ಮಂತ್ರಿಮಂಡಲದ ಹಾಗೂ ಅಸೆಂಬ್ಲಿ ಸದಸ್ಯರ ಅಭಿಪ್ರಾಯವನ್ನು ನೋಡಿದರೆ ೧೯೨೮ ನೇ ಇಸ್ವಿಯ ನೆಹರು ರಿಪೋರ್ಟ ಹಾಗೂ ಮಹಾತ್ಮಾಜಿಯವರ ಮತ್ತು ಅ. ಭಾ. ಕಾಂ. ಮಹಾ ಸಭೆಯ ಕರ್ನಾಟಕ ಏಕೀಕರಣ ಅಥವಾ ಭಾಷಾವಾರ ಪ್ರಾಂತರಚನೆಯ ಬಗ್ಗೆ ತೋರಿಸಿದ ಸಹಾನುಭೂತಿಗಳು ಮೂಢತನದವೆಂದು ಹೇಳಿದಂತಾಗುತ್ತದೆ. ಪಾಪ! ಇವರಷ್ಟು ಸ್ವಾರ್ಥತ್ಯಾಗ ದೂರದೃಷ್ಟಿ, ಯೋಚನೆಗಳು ಪಂ. ಮೋತಿಲಾಲರಿಗಾಗಲೀ ಮಹಾತ್ಮಾಜಿಯವರಿಗಾಗಲೀ ಕಾಂಗ್ರೆಸ್ ಮಹಾಸಭೆಗಾಗಲೀ ಇದ್ದಂತೆ ತೋರುವದಿಲ್ಲ!

ನಾನು ಅಖಿಲ ಕರ್ನಾಟಕವನ್ನು ಸಂಚರಿಸುತ್ತೇನೆ. ಹಾಗೂ ವರ್ಷಕ್ಕೊಮ್ಮೆಯಾದರೂ ಅಖಿಲ ಕರ್ನಾಟಕವನ್ನು ಸುತ್ತುತ್ತೇನೆ. ಕರ್ನಾಟಕದ ನಾನಾ ಭಾಗದ ಜನರೊಡನೆ ಬೆರೆತು ಅವರ ಸ್ಥಿತಿಗತಿ ರೀತಿನೀತಿ ಕುಂದು ಕೊರತೆಗಳನ್ನು ಬಹುಮಟ್ಟಿಗೆ ಅರಿತವನಾಗಿರುತ್ತೇನೆ. ಎಲ್ಲಿ ನೋಡಿದರೂ ಕೇಳಿದರೂ ಕರ್ನಾಟಕವು ಛಿದ್ರ ವಿಚ್ಛಿದ್ರವಾಗಿರುವದೇ ಕನ್ನಡಿಗರ ದುರವಸ್ಥೆಗೂ ಅಧಃಪತನಕ್ಕೂ ಕಾರಣವೆಂಬ ಒಂದೇ ಒಂದು ಧ್ವನಿಯು ಕೇಳಬರುತ್ತದೆ. ಕರ್ನಾಟಕದ ಕನ್ನಡಿಗರ ಹೃದಯದ ನಿಜಾನುಭವವು ಎಂದಾದರೊಮ್ಮೆ ಹೋಗಿ ಸಹಸ್ರಾರು ಜನರು ಸೇರಿದ ಸಭೆಯ ವೇದಿಕೆಯ ಮೇಲೆ ನಿಂತು ಮೂಗಿಗೆ ತುಪ್ಪ ಸವರುವಂತೆ ನಾಲ್ಕು ಹುಳಿ ಬಿಳಿ ಮಾತುಗಳನ್ನಾಡಿ ಹಣ್ಣು ಹಾಲು ಸಕ್ಕರೆಯನ್ನು ಕುಡಿದು ಕಾರಿನಲ್ಲಿ ಕುಳಿತು ಸರ್‍ರನೇ ಬಂದು ಬರ್‍ರನೇ ಹೋಗುವ ಗವ್ಹರ್ನರರಿಗಾಗಲೀ ಮಂತ್ರಿಗಳಿಗಾಗಲೀ ಇತರ ಅಸೂಯಾಪರರಿಗಾಗಲೀ ಸ್ವಾಭಿಮಾನಶೂನ್ಯರಿಗಾಗಲೀ ಕನ್ನಡ ಮಾತೆಯ ಕನ್ನಡ ಪುತ್ರ ಪುತ್ರಿಯರ ಆರ್ತಧ್ವನಿಯ ಹೃದಯವೇದನೆಯ ಅನುಭವವು ಹೇಗಾದೀತು?

ಕರ್ನಾಟಕ ಏಕೀಕರಣವೇ ಇಂದು ಕನ್ನಡಿಗರೆಲ್ಲರ ಜಪವಾಗಿದೆಯೆಂಬುದನ್ನು ಮನವರಿಕೆಮಾಡಿಕೊಳ್ಳಬೇಕೆಂಬ ಆಕಾಂಕ್ಷೆಯು ಮುಂಬೈ ಮಂತ್ರಿಮಂಡಲಕ್ಕೂ ಹಿಂದುಸ್ಥಾನ ಸರಕಾರಕ್ಕೂ ಇದ್ದರೆ ಕರ್ನಾಟಕದ ಪ್ರತಿಯೊಂದು ಜಿಲ್ಲೆಗೆ ಆಯಾಭಾಗದ ಪೂರ್ಣ ತಿಳುವಳಿಕೆಯುಳ್ಳ ಅಚ್ಚ ಕನ್ನಡಿಗರಾದ ನಾಲ್ಕು ನಾಲ್ಕು ಜನರನ್ನು ಆಯಾ ಜಿಲ್ಲೆಗಳ ಜನರಿಂದಲೇ ಆರಿಸಿ ಒಂದು ಸಮಿತಿಯನ್ನೇ ಏರ್ಪಡಿಸಿ ಕರ್ನಾಟಕದ ಸ್ಥಿತಿಗತಿ ಜನರ ಅಭಿಪ್ರಾಯಗಳ ಬಗ್ಗೆ ವರದಿಯನ್ನು ಒಪ್ಪಿಸುವಂತೆ ಗೊತ್ತುಮಾಡಬೇಕು. ಆಗ ಕನ್ನಡಿಗರು ಕರ್ನಾಟಕವು ಸಂಸ್ಕೃತಿ, ಸಾಹಿತ್ಯ, ಸಂಗೀತ, ಲಲಿತ ಕಲೆ, ಧರ್ಮ, ನೀತಿ, ಆಚಾರ, ವ್ಯವಹಾರ, ಪ್ರಕೃತಿ ಸೌಂದರ್ಯ ವಾಣಿಜ್ಯ, ಒಕ್ಕಲತನ, ಸಂಪತ್ತು, ಜಲ, ಫಲವತ್ಪ್ರದೇಶ ಹಾಗೂ ಇತಿಹಾಸ ಮುಂತಾದ ಯಾವ ಭಾಗಗಳಲ್ಲೂ ಹಿಂದುಸ್ಥಾನದ ಯಾವ ಪ್ರಾಂತಕ್ಕೂ ಕಡಿಮೆಯಿಲ್ಲವೆಂಬುದನ್ನೂ ಇವುಗಳ ರಕ್ಷಣೆಗಾಗಿಯೇ ಕರ್ನಾಟಕ ಏಕೀಕರಣದ ಅವಶ್ಯಕತೆಯುಂಟೆಂಬುದನ್ನೂ ಸಿದ್ಧಮಾಡಿಕೊಡಲು ಕನ್ನಡಿಗರು ಸತ್ಯವಿಶ್ವಾಸಿಗಳಾಗಿರುತ್ತಾರೆಂಬುದನ್ನು ಧೈರ್ಯವಾಗಿ ಸೂಚಿಸುತ್ತೇನೆ.

ಈಗಿನ ಕಾಂಗ್ರೆಸ್ ಮಂತ್ರಿಮಂಡಲವೂ ಅಸೆಂಬ್ಲಿ ಅನೇಕ ಸದಸ್ಯರೂ ಕರ್ನಾಟಕ ಏಕೀಕರಣದ ಬಗ್ಗೆ ಉದಾಸೀನ, ಅಢ್ಯತೆ, ವಿಡಂಬನೆ ಪರಿಹಾಸಗಳನ್ನು ಮಾಡುತ್ತಿರುವದನ್ನು ನೋಡಿದರೆ ಈ ಮೊದಲಿನ ಸರಕಾರದ ಮಂತ್ರಿಮಂಡಲವೇ ಕನ್ನಡಿಗರ ಆಸೆಯನ್ನು ಪೂರ್ತಿಗೊಳಿಸತಕ್ಕದ್ದಾಗಿತ್ತೆಂಬ ಸಂಶಯವೂ ಇಲ್ಲವೇ ಅವರಂತೆಯೇ ಇವರೂ ಎಂಬ ಭಾವನೆಯೂ ಉಂಟಾಗಿರುತ್ತದೆ. ಅಲ್ಲದೆ ದಿ. ಬ. ಕಂಬಳಿಯವರಂಥ ಕನ್ನಡ ಮಂತ್ರಿಗಳನ್ನು ಆರಿಸಿ ಕಳಿಸದೇ ಇದ್ದುದಕ್ಕೆ ವ್ಯಸನಪಡಬೇಕಾಗಿದೆ. ಆ ಕನ್ನಡ ಸಿಂಹವು ಮಂತ್ರಿಮಂಡಲದಲ್ಲಿರುವ ವರೆಗೆ ಪ್ರತ್ಯಕ್ಷವಾಗಿ ಇಷ್ಟು ಪರಿಹಾಸವನ್ನು ವ್ಯಕ್ತಮಾಡುವ ಎದೆಯು ಯಾರಿಗೂ ಇರಲಿಲ್ಲವೆಂದು ಹೇಳಬಹುದಾಗಿದೆ. ದಿ. ಬ. ಕಂಬಳಿಯವರಷ್ಟಾದರೂ ನ್ಯಾಯಪೂರ್ವಕವಾದ ಕನ್ನಡಿಗರ ಹಿತವನ್ನು ಈಗಿನ ಕಾಂಗ್ರೆಸ್ ಮಂತ್ರಿಮಂಡಲವಾಗಲೀ ಕೆಲವು ಅಸೆಂಬ್ಲಿ ಮೆಂಬರರಾಗಲೀ ಸಾಧಿಸುವಷ್ಟು ಆತ್ಮ ವಿಕಾಸವುಳ್ಳವರಲ್ಲವೆಂಬುದು ಸ್ಪಷ್ಟವಾದಂತಾಗಿದೆ. ಅಂತೇ "ಬೆಕ್ಕು ಇಲ್ಲದ ಮನೆಯಲ್ಲಿ ಇಲಿಯು ಲಾಗ ಹೊಡೆಯಿತೆಂಬ" ಗಾದೆಯಂತೆ ಎಲ್ಲರೂ ಕನ್ನಡಿಗರ ಪರಿಹಾಸವನ್ನು ಮಾಡಲು ಅವಕಾಶವಾಗಿದೆ. ಕರ್ನಾಟಕ ಪ್ರತಿನಿಧಿಗಳೇ ಮತ್ತು ಕರ್ನಾಟಕದ ಮಂತ್ರಿಗಳೇ, ಪರರ ದರ್ಪ ದಾಕ್ಷಿಣ್ಯಗಳಿಗೆ ಬೆರಗಾಗಿ ನಿಮ್ಮ ಆತ್ಮನನ್ನು ಮಾರಿಕೊಳ್ಳಬೇಡಿ. ನಾವು ಯಾರು? ನಮ್ಮನ್ನು ಇಲ್ಲಿಗೆ ಕಳುಹಿಸಿದವರ ಧ್ಯೇಯವೇನೆಂಬುದನ್ನು ಇಷ್ಟು ಅಲ್ಪಾವಧಿಯಲ್ಲಿಯೇ ಮರೆಯದೆ ಸ್ವ ಸ್ವರೂಪವನ್ನು ತಿಳಿದು ಕಾರ್ಯಮಾಡಿರಿ. ಮತ್ತು ಕೀರ್ತಿಶಾಲಿಗಳಾಗಿರಿ.

(೧೫ ನೇ ಪುಟಕ್ಕೆ ಮುಂದೆ ಸಾಗಿದೆ.)

# ಭಾಯೀಜಿಯವರು ಕಂಡದ್ದೇನು?

ಭಾಯಿ ಪರಮಾನಂದರು ಕಳೆದ ತಿಂಗಳ ಮಧ್ಯ ಕಾಲದಲ್ಲಿ ಮೈಸೂರು, ಹೈದರಾಬಾದ, ಭೋಪಾಳ ಸಂಸ್ಥಾನಗಳಲ್ಲಿ ಸಂಚರಿಸಿ ಹೋದರಷ್ಟೆ. ತಾವು ಈ ಮೂರು ಸಂಸ್ಥಾನಗಳಲ್ಲಿ ಕಂಡದ್ದೇನೆಂಬುದನ್ನು ಈಗ ಪ್ರಕಟಿಸಿದ್ದಾರೆ. ಆ ಪ್ರಕಟನೆಯ ಮುಖ್ಯಾಂಶವು ಈ ಪ್ರಕಾರವಾಗಿದೆ—

### ಪ್ರವಾಸದ ಕಾರಣ.

ಅಹಮುದಾಬಾದಿನಲ್ಲಿ ಹಿಂದು ಮಹಾಸಭೆಯು ಕೂಡಿದಾಗ ಹೈದರಾಬಾದ ಮತ್ತು ಭೋಪಾಳ ಸಂಸ್ಥಾನಗಳಿಗೆ ಒಂದು ಶಿಷ್ಟ ಮಂಡಲವು ಹೋಗಿ ಅಲ್ಲಿಯ ಹಿಂದುಗಳ ಕಷ್ಟನಷ್ಟಗಳ ಸಂಬಂಧವಾಗಿ ಆಯಾಯ ಸರಕಾರಗಳಿಗೆ ತಿಳಿಸಬೇಕೆಂದು ಗೊತ್ತಾಗಿದ್ದಿತು. ಈ ಕಾರ್ಯದ ಮುಖ್ಯ ಚಾಲಕರಾದ ಡಾ. ಮುಂಜೆಯವರು ಅಧಿಕಾರಿಗಳಿಗೆ ಅನೇಕ ಪತ್ರಗಳನ್ನು ಬರೆದರೆ ಅವುಗಳಿಗೆ ಉತ್ತರವು ಕೂಡಾ ಬರಲಿಲ್ಲ.

ಆ ಕಾಲದಲ್ಲಿ ಮೈಸೂರು ದಿವಾನರಾದ ಸರ್. ಮಿರ್ಜಾ ಇಸ್ಮಾಯಿಲ್‌ರವರು ಹಿಂದು ಮಹಾಸಭಾ ಭವನಕ್ಕೆ ಬಂದಿದ್ದರು. ಅವರು ನನಗೆ ತಮ್ಮ ಸಂಸ್ಥಾನಕ್ಕೆ ಬಂದು ಅಲ್ಲಿಯ ಸ್ಥಿತಿಗಳನ್ನು ಕಣ್ಣಾರೆ ನೋಡಿ ಪ್ರಾಚೀನ ಭಾರತೀಯ ಸಂಸ್ಕೃತಿಯ ಸಂರಕ್ಷಣೆಯ ಕಾರ್ಯ ಹೇಗೆ ನಡೆದಿದೆಯೆಂಬುದನ್ನು ನೋಡಿರೆಂದು ಹೇಳಿದರು. ಮಹಾತ್ಮಾ ಗಾಂಧಿಯವರ ದೇಹಾರೋಗ್ಯದ ವಿಚಾರವಾಗಿ ನಾನು ಅವರನ್ನು ಕಾಣಬೇಕಾಗಿದ್ದಿತು. ಅಂತೆಯೇ ಅದೇ ಕಾಲದಲ್ಲಿ ಈ ಪ್ರವಾಸವೊಂದನ್ನು ಪೂರ್ತಿಮಾಡಬೇಕೆಂದು ನಿರ್ಧರಿಸಿದೆನು. ಹಿಂದು ಮಹಾಸಭೆಯ ಮಂತ್ರಿಗಳಾದ ಶ್ರೀ ಗಣಪತರಾಯರೂ ನನ್ನ ಸಂಗಡ ಇದ್ದರು.

### ಮೈಸೂರು ದೇಶ.

ನಾನು ಮೈಸೂರು ದೇಶದಲ್ಲಿ ಮೂರು ದಿವಸ ಸರಕಾರದ ಅತಿಥಿಯಾಗಿದ್ದೆನು. ಅಲ್ಲಿಯ ವಿದ್ಯುಚ್ಛಕ್ತಿ ವಿಜ್ಞಾನ ಸಂಶೋಧನಾಲಯ ಅನೇಕ ಉಪಯುಕ್ತ ಕಾರ್ಯಾಲಯಗಳನ್ನು ನೋಡಿದೆನು ಆ ರಾಜ್ಯವು ಸಂಪದಭಿವೃದ್ಧಿಗಾಗಿ ತುಂಬಾ ಪ್ರಯತ್ನಿಸುತ್ತಲಿವೆ ಅನೇಕ ಪ್ರಾಚೀನ ದೇವಾಲಯಗಳನ್ನೂ ಶಿಲ್ಪಕಲೆಯನ್ನೂ ನೋಡಿದೆನು.

ಬೆಂಗಳೂರಲ್ಲಿ ಕೆಲವು ಕಾಂಗ್ರೆಸ್ ಪಕ್ಷದ ಮಹಾಶಯರು ನನ್ನನ್ನು ಕಂಡು ರಾಜ್ಯಭಾರದ ವಿಷಯದಲ್ಲಿ ಕೆಲವು ಆಕ್ಷೇಪಣೆಗಳನ್ನು ಹೇಳಿದರು. ನಗರ ಭವನದಲ್ಲಿ ನಾನು ಭಾಷಣಮಾಡಿದ ನಂತರ ಕೆಲವು ಪ್ರಶ್ನೋತ್ತರಗಳೂ ನಡೆದವು.

### ಹೈದರಾಬಾದ ಪ್ರಾಂತ.

ಮೈಸೂರಿಂದ ನಾನು ಹೈದರಾಬಾದ ಪ್ರಾಂತಕ್ಕೆ ಬಂದೆನು. ಅಲ್ಲಿ ಒಂದೇ ದಿನ ಇದ್ದೆನು. ಮೈಸೂರಿಂದ ಬಂದು ಹೈದರಾಬಾದಿನಲ್ಲಿ ಪ್ರವೇಶಿಸಿದೊಡನೆ ವಿಚಿತ್ರ ಭಿನ್ನಸ್ಥಿತಿಯೇ (Contrast) ತೋರಿತು ಮೈಸೂರು ದೇಶದಲ್ಲಿ ಬ್ರಿಟಿಶ್ ಹಿಂದುಸ್ಥಾನಕ್ಕಿಂತಲೂ ಹೆಚ್ಚಾದ ಸ್ವಾತಂತ್ರ್ಯ ಮತ್ತು ಸುಧಾರಿಸಲ್ಪಟ್ಟ ರಾಜ್ಯ ಇದೆ. ಆದರೆ ಹೈದರಾಬಾದದಲ್ಲಿ ಅದರ ವಿರುದ್ಧ. ಅಲ್ಲಿ ಸರಕಾರದ ಅಪ್ಪಣೆಯ ವಿನಾ ಸಭೆ ಅಥವಾ ವ್ಯಾಖ್ಯಾನಗಳಾಗಲು ಶಕ್ಯವೇ ಇಲ್ಲ.

ರಾಜ ಮತ್ತು ಪ್ರಜೆಗಳು ಮೈಸೂರು ಪ್ರಾಂತದಲ್ಲಿ ಹಿಂದುಗಳೇ ಇದ್ದರೂ ಅಲ್ಲಿಯ ಸೈನ್ಯದಲ್ಲಿ ಮುಸಲ್ಮಾನರೇ ಹೆಚ್ಚಾಗಿದ್ದಾರೆ. ಆದರೆ ಹೈದರಾಬಾದ ಮತ್ತು ಭೋಪಾಳಗಳಲ್ಲಿ ನೂರಕ್ಕೆ ೯೦ ಜನರು ಹಿಂದುಗಳಿದ್ದರೂ ಈ ಎರಡೂ ರಾಜ್ಯಗಳ ಸೈನ್ಯ ಮತ್ತು ಪೋಲೀಸ್ ಶಾಖೆಗಳು ಅತ್ಯಧಿಕವಾಗಿ ಅಲ್ಲ; ಸಂಪೂರ್ಣವಾಗಿಯೇ ಮುಸಲ್ಮಾನರ ಸ್ವಾಧೀನದಲ್ಲಿವೆ. ರಾಜ್ಯಭಾರದಲ್ಲಿ ಹಿಂದುಗಳ ಹೇಳುವಂತಹ ಅಸ್ತಿತ್ವವೇ ಇಲ್ಲ. ಹೈದರಾಬಾದ ಸಂಸ್ಥಾನದಲ್ಲಿ ಪ್ರವೇಶಿಸಲು ನನಗೆ ಅಪ್ಪಣೆಯಾದರೂ ದೊರೆಯುತ್ತದೆಯೋ ಇಲ್ಲವೋ ಎಂದೇ ನಾನು ತಿಳಿದಿದ್ದೆನು. ಮುಖ್ಯ ಮಂತ್ರಿಗಳನ್ನು ಕಾಣಲು ನಾನು ತಂತೀ ಮೂಲಕ ಮುಂಚೆಯೇ ತಿಳಿಸಿದ್ದೆನು.

ಹೈದರಾಬಾದ ಸ್ಟೇಶನ್ನಿನಲ್ಲಿ ಸಾವಿರಾರು ಹಿಂದುಗಳು ನನ್ನನ್ನು ಕಾಣಲು ಬಂದುದನ್ನು ನೋಡಿ ಅವರಲ್ಲಿರುವ ಆದರಾಭಿಮಾನಗಳು ಗೊತ್ತಾದವು. ಮೆರವಣಿಗೆ ಹೋಗಲು ಅಲ್ಲಿ ಅಪ್ಪಣೆಯಿಲ್ಲದಿದ್ದರೂ ನನ್ನ ಸಂಗಡ ಜನರು ವಿಶೇಷವಾಗಿ ಬಂದುದರಿಂದ ಅದೇ ಮೆರವಣಿಗೆಯಾಯಿತು. ನಾನು ರಾಮ ಮಂದಿರದಲ್ಲಿ ಧರ್ಮದ ಸಂಬಂಧವಾಗಿ ವ್ಯಾಖ್ಯಾನ ಮಾಡಿದೆನು.

### ಸರ್. ಹೈದರಿಯವರನ್ನು ಕಂಡೆನು.

ನಾನು ಸರ್. ಅಕಬರ್ ಹೈದರಿಯವರನ್ನು ಮುಂಚೆಯೇ ಗೊತ್ತಾದ ವೇಳೆಗೆ ಅವರ ಕಾರ್ಯಾಲಯದಲ್ಲಿ ಕಂಡೊಡನೆ ಮೊದಲು ಅವರನ್ನು ನಾನು ಹೀಗೆ ಕೇಳಿದೆನು—

ಹಿಂದು ಮಹಾಸಭೆಯ ಶಿಷ್ಟಮಂಡಲದವರು ಬರೆದ ಪತ್ರಕ್ಕೆ ನೀವು ಉತ್ತರವನ್ನು ಏಕೆ ಕೊಡಲಿಲ್ಲ? ಉತ್ತರವಾಗಿ ಅವರು ಹೀಗೆ ಹೇಳಿದರು— ನೈಜಾಮದ ಹೊರಗಿನ ಭಾಗದವರು ನಮ್ಮಲ್ಲಿಯ ರಾಜ್ಯಭಾರದ ವಿಚಾರವಾಗಿ ಕೈ ಹಾಕಬಾರದೆಂದೇ ನಮ್ಮ ನಿಯಮವಿದೆ.

ಆಗ ನಾನು ಹೀಗೆ ಕೇಳಿದೆನು— ನಿಮ್ಮ ರಾಜ್ಯದಲ್ಲಿರುವ ಜನರ ಕಷ್ಟ ನಷ್ಟಗಳು ನಿಮ್ಮಿಂದ ದೂರಾಗದಿದ್ದರೆ ಆ ಜನರ ಧರ್ಮದವರಾದ ಹೊರಗಿನವರು ಅವರ ಸಂಬಂಧವಾಗಿ ಏನು ಮಾಡಬೇಕು? ಉತ್ತರವಾಗಿ ಹೀಗೆ ಹೇಳಿದರು— ಬಂದು ನಮ್ಮನ್ನು ಕಾಣಬಹುದು. ಅಥವಾ ಪತ್ರವ್ಯವಹಾರ ಮಾಡಬಹುದು.

### ಹಿಂದುಗಳ ಕಷ್ಟನಷ್ಟ.

ನಾನು ಸರ್. ಅಕಬರ ಹೈದರಿಯವರ ಮುಂದೆ ಈ ಕೆಳಗಿನ ಸಂಗತಿಗಳನ್ನು ಇಟ್ಟೆನು.

(೧) ಹಿಂದುಗಳ ಧಾರ್ಮಿಕ ತೊಂದರೆಗಳು. (೨) ರಾಜ್ಯಭಾರ ನಡೆಯಿಸುವ ಅಧಿಕಾರಿಗಳಲ್ಲಿ ಹಿಂದುಗಳ ಸಂಖ್ಯಾ ಪ್ರಮಾಣದಂತೆ ಹಿಂದು ಅಧಿಕಾರಿಗಳಿಲ್ಲ. (೩) ಉರ್ದು ಭಾಷೆಗೆ ಹೆಚ್ಚಿಗೆ ಪ್ರೋತ್ಸಾಹ. ತೆಲಗು, ಮರಾಠಿ ಮೊದಲಾದ ದೇಶ ಭಾಷೆಗಳ ಕಡೆಗೆ ಉಪೇಕ್ಷೆ. ೭೦ ಲಕ್ಷ ಜನರು ತೆಲಗು ಮಾತಾಡುವವರೂ ೩೩ ಲಕ್ಷ ಮರಾಠಿ ಮಾತಾಡುವವರೂ ನಿಮ್ಮ ರಾಜ್ಯದಲ್ಲಿದ್ದಾರೆ. ಉರ್ದು ಮಾತನಾಡುವವರಾದರೋ ಕೇವಲ ೧೫ ಲಕ್ಷ ಜನರಿದ್ದಾರೆ. (೪) ದಲಿತ ವರ್ಗ (ಆದಿಹಿಂದು) ದವರನ್ನು ಸಾಮೂಹಿಕವಾಗಿ ಧರ್ಮಾಂತರಗೊಳಿಸುವುದರಲ್ಲಿ ಸರಕಾರ ಅಧಿಕಾರಿಗಳ ಸಕ್ರಿಯ ಸಹಾನುಭೂತಿ. (೫) ಹಿಂದು ಜನರ ಸಭೆ, ಸಮ್ಮೇಲನ ಭಾಷಣ ಮೊದಲಾದ ನಾಗರಿಕ ಸ್ವಾತಂತ್ರ್ಯಗಳಿಗಿರುವ ಪ್ರತಿಬಂಧ.

ಈ ಸಂಬಂಧವಾಗಿ ನಾವಿಬ್ಬರೂ ಚರ್ಚೆ ನಡೆಸಿದೆವು. ಹಿಂದು ಪ್ರಜೆಗಳಿಗಾಗಿಯೇ ಯಾವ ತೊಂದರೆಯು ಇಲ್ಲವೆಂತಲೂ ಇರತಕ್ಕ ತೊಂದರೆಗಳು ಎಲ್ಲಾ ಪ್ರಜೆಗಳಿಗೂ ಸಂಬಂಧಿಸಿವೆಯೆಂತಲೂ ಅವರ ಅಭಿಪ್ರಾಯ. ಧರ್ಮಾಂತರವನ್ನೇನೂ ನಿಲ್ಲಿಸಲಿಕ್ಕಾಗುವುದಿಲ್ಲ. ಆದರೆ ಅದರಲ್ಲಿ ಸರಕಾರಿ ಅಧಿಕಾರಿಗಳು ಸೇರಬಾರದೆಂದು

ಆಜ್ಞೆ ಮಾಡಲಾಗಿದೆ. ನೌಕರಿಗಳ ಸಂಬಂಧವಾಗಿ ಒಂದು ಸಮಿತಿಯನ್ನು ನಿಯಮಿಸಿದೆ. ಅದರ ತೀರ್ಮಾನವನ್ನು ನೋಡಬೇಕಾಗಿದೆ. ಇನ್ನುಮೇಲೆ ಏನಾದರೂ ತೊಂದರೆಗಳಾದರೆ ನಮಗೆ ತಿಳಿಸಿರಿ. ಎಂದು ಸರ್. ಹೈದರಿಯವರು ನನಗೆ ಹೇಳಿದರು. ಈ ಪ್ರಕಾರ ನಮ್ಮಿಬ್ಬರಲ್ಲಿ ಸಂಭಾಷಣೆ ನಡೆಯಲು ಅವರು ಅವಕಾಶವನ್ನು ಕೊಟ್ಟದ್ದಕ್ಕೆ ನಾನು ಅವರಿಗೆ ವಂದಿಸುತ್ತೇನೆ.

### ಭೋಪಾಳ ಸಂಸ್ಥಾನ.

ನಾನು ಭೋಪಾಳ ಸಂಸ್ಥಾನದಲ್ಲಿ ಒಂದೇ ದಿನ ಇದ್ದೆನು. ಹೈದರಾಬಾದ ಸಂಸ್ಥಾನದ ಹಿಂದುಗಳ ಸ್ಥಿತಿ ಹೇಗೊ ಹಾಗೆಯೇ ಭೋಪಾಳ ಸಂಸ್ಥಾನದ ಹಿಂದುಗಳ ಸ್ಥಿತಿಯು. ನನ್ನನ್ನು ಅಲ್ಲಿಯ ಹಿಂದುಗಳು ಬಹು ಪ್ರೇಮಾದರಗಳಿಂದ ಸ್ವಾಗತಿಸಿದರು. ಇಲ್ಲಿ ಮೆರವಣಿಗೆಗೆ ಅವಕಾಶವಿತ್ತು. ಸರ್. ಜೋಸೆಫ್ ಭೋರ ಇವರ ಸಂಗಡ ನಾನು ಸಂಭಾಷಣೆ ನಡೆಯಿಸಿ ಆರ್ಥಿಕ ವಿಚಾರಗಳನ್ನು ತಿಳಿದುಕೊಂಡೆನು.

ಭೋಪಾಳ ಸಂಸ್ಥಾನದ ನಬಾಬರ ಸಂಗಡ ಅಲ್ಲಿಯ ರಾಜ್ಯಭಾರದ ಸಂಬಂಧವಾಗಿ ಪ್ರಸ್ತಾಪಿಸಲು ಅವಕಾಶ ದೊರೆಯಬಹುದೆ? ಎಂದು ಕೇಳಿದೆನು. ಅದು ಶಕ್ಯವಿಲ್ಲವೆಂದು ತಿಳಿಸಿದ್ದರಿಂದ ನಾನು ತಿರುಗಿ ಬಂದೆನು. ಇನ್ನುಮೇಲಾದರೂ ಹಿಂದುಗಳ ಹೇಳಿಕೆಯು ನಬಾಬ ಸಾಹೇಬರ ಕಿವಿಗೆ ಮುಟ್ಟುವ ಪ್ರಸಂಗ ಬರಲೆಂದು ಹಾರೈಸುತ್ತೇನೆ."

---

## ನಿಜಾಮ ರಾಜ್ಯದ ಲಿಂಗಾಯತರು
## ಸರಕಾರಕ್ಕೆ ವಿಜ್ಞಾಪಿಸಿಕೊಂಡರು.

ನಿಜಾಮ ರಾಜ್ಯದ ಲಿಂಗಾಯತ ಪ್ರಜೆಗಳ ಒಂದು ಶಿಷ್ಟ ಮಂಡಲಿಯು ಹೈದರಾಬಾದ ಸಂಸ್ಥಾನದ ಮುಖ್ಯ ಮಂತ್ರಿಗಳಾದ ಸರ್. ಅಕಬರ ಹೈದರಿಯವರ ಕಡೆಗೆ ಹೋಗಿ, ಸಂಸ್ಥಾನದ ಪ್ರಜೆಗಳ ಮುಖ್ಯ ಭಾಗವಾದ ಲಿಂಗಾಯತ ಪ್ರಜೆಗಳ ಪರವಾಗಿ ಮನವಿಯನ್ನು ಮಾಡಿಕೊಂಡಿತು. ಅದರ ಸಾರಾಂಶವು ಈ ರೀತಿಯಾಗಿದೆ—

"ವೀರಶೈವ ಧರ್ಮವು ಅತ್ಯಂತ ಸನಾತನ ಧರ್ಮಗಳಲ್ಲೊಂದಾಗಿದೆ. ಅದು ಪ್ರಪಂಚದಲ್ಲಿರುವ ಅನೇಕ ಧರ್ಮಗಳಲ್ಲಿ ಅತ್ಯಂತ ವಿಶಾಲ ತತ್ವಗಳನ್ನೊಳಗೊಂಡ ಧರ್ಮಗಳಲ್ಲಿ ವೀರಶೈವ ಧರ್ಮವೂ ಒಂದಾಗಿದೆ. ಈ ಧರ್ಮವು ೧೨ ನೇ ಶತಮಾನದಲ್ಲಿ ಶ್ರೀ ಬಸವೇಶ್ವರರಿಂದ ಉಜ್ವಲಗೊಂಡಿತು. ಬಸವೇಶ್ವರರು ಇದೇ ಸಂಸ್ಥಾನದ ಗುಲಬರ್ಗಾ ಜಿಲ್ಲೆಯಲ್ಲಿರುವ ಕಲ್ಯಾಣವನ್ನು ರಾಜಧಾನಿಯನ್ನಾಗಿಟ್ಟುಕೊಂಡು ಕಲಚೂರ್ಯ ರಾಜ್ಯದ ಮಂತ್ರಿಗಳಾಗಿದ್ದರು.

ಲಿಂಗಾಯತರು ಕಠೋರ ಶಾಕಾಹಾರಿಗಳಾಗಿದ್ದಾರೆ. ಅಲ್ಲದೇ ಅವರಲ್ಲಿ ಜಾತಿಭೇದವಿಲ್ಲ. ಮತ್ತು ಅವರ ಧರ್ಮದಲ್ಲಿ ಸ್ತ್ರೀಯರಿಗೆ ಪುರುಷನಷ್ಟೇ ಸಮಾನತೆಯಿರುತ್ತದೆ. ಇಂತಹ ಧರ್ಮವನ್ನು ಎತ್ತಿ ಹಿಡಿದು ಬಸವೇಶ್ವರರು ಬಹಳ ಸಾಹಸಮಾಡಿದರು. ಐತಿಹಾಸಿಕವಾಗಿ ಹೇಳಬೇಕಾದರೆ ಶ್ರೀ ಬಸವೇಶ್ವರರು ೧೨ ನೆಯ ಶತಮಾನದಲ್ಲಿ ಸಾಮಾಜಿಕ ಮತ್ತು ರಾಜಕೀಯ ಧುರೀಣರಲ್ಲಿ ಅನುಪಮೇಯವಾದ ಅಗ್ರಸ್ಥಾನವನ್ನು ಗಳಿಸಿದ್ದರೆನ್ನಬಹುದು. ಅವರ ಹೋರಾಟವು ಅಬ್ರಾಹ್ಮಣರ ಮೇಲಾಗುತ್ತಿರುವ ಆಘಾತಗಳನ್ನು ಪ್ರತಿಭಟಿಸಲು ಎದ್ದು ನಿಂತ ಘೋರ ಕ್ರಾಂತಿಯೇ ಆಗಿದ್ದಿತು. ಶ್ರೀ ಬಸವೇಶ್ವರರ ಘನತರವಾದ ಜೀವನವನ್ನು ಕುರಿತು ಸುಪ್ರಸಿದ್ಧ ಆಂಗ್ಲ ದಿನ ಪತ್ರವಾದ "ಟೈಮ್ಸ್ ಪತ್ರ" ವು ೧೯೧೮ ರ ೧೭ ನೇ ತಾರೀಖಿನ ದಿನ ತನ್ನ ಅಗ್ರಲೇಖದಲ್ಲಿ ಚನ್ನಾಗಿ ಶ್ಲಾಘಿಸಿದೆ. "ಬಸವೇಶ್ವರನ ಸಂದೇಶವು ಪ್ರಪಂಚಕ್ಕೇ ಎತ್ತಿದ ಸಮಾಜ ಕ್ರಾಂತಿಯಾಗಿದೆ. ಧರ್ಮ ಪ್ರಚಾರವನ್ನು ಸಮಾಜ ಸುಧಾರಣೆಯ ದೃಷ್ಟಿಯಿಂದ ಸಾಧಿಸಿದ ವೀರನೆಂದರೆ ಶ್ರೀ ಬಸವನೆ? ಸ್ತ್ರೀ ಸಮಾಜದ ಸಂಪೂರ್ಣ ಸ್ವಾತಂತ್ರ್ಯವೇ ಅವನ ಧರ್ಮ ಪ್ರಚಾರದ ಗಮ್ಯವಾಗಿದ್ದಿತು.

### ಸಂಸ್ಥಾನದ ಲಿಂಗಾಯತ ಪ್ರಜೆಗಳು.

ಎಚ್. ಇ. ಎಚ್. ನೈಜಾಮರ ಸಂಸ್ಥಾನದಲ್ಲಿ ಲಿಂಗಾಯತ ಪ್ರಜೆಗಳು ಹೆಚ್ಚಾಗಿ ಗುಲಬರ್ಗಾ, ರಾಯಚೂರು, ಜಿಲ್ಲೆಗಳಲ್ಲಿಯೇ ನೆಲೆಸಿರುತ್ತಾರೆ. ಉಳಿದ ಜಿಲ್ಲೆಗಳಲ್ಲಿ ಅಲ್ಲಲ್ಲಿ ಕಡಿಮೆ ಪ್ರಮಾಣದಿಂದ ಅವರ ವಸತಿಯಿದೆ. ೧೯೩೧ ರ ಜನಗಣನೆಯ ಮೇರೆಗೆ ನೈಜಾಮ ಪ್ರಾಂತದ ಲಿಂಗಾಯತ ಪ್ರಜೆಗಳ ಸಂಖ್ಯೆಯು ೭,೮೮,೮೨೯ ರಷ್ಟಿದೆ. ಸುಮಾರು ದುಂಡಂಕಿಯಲ್ಲಿ ಲಿಂಗಾಯತರ ಸಂಖ್ಯೆಯನ್ನು ತೆಗೆದುಕೊಂಡರೆ ೯ ಲಕ್ಷವೆಂದು ಹೇಳಬಹುದು. ಏಕೆಂದರೆ ಜನಗಣನೆಯ ಕಾಲಕ್ಕೆ ಅನೇಕ ಲಿಂಗಾಯತರು ತಮ್ಮ ತಮ್ಮ ಜಾತಿಗಳನ್ನು "ತೇಲಿಗಳು," 'ನೇಕಾರರು' 'ಹಜಾಮರು' 'ಅಗಸರು' ರೆಡ್ಡಿಗಳು' 'ಧಾಗರರು' 'ಗೌಳಿಗರು' 'ಪತ್ತಾರರು' ಎಂದು ಮುಂತಾಗಿ ವೃತ್ತಿಗಳನ್ನೇ ಜಾತಿಗಳಾಗಿ ಹೇಳಿದ್ದಾರೆ. ಇವರೆಲ್ಲರೂ ಲಿಂಗಾಯತರೇ ಆಗಿದ್ದು ಈಗ ಜಾತಿಯೆಂದು ಹಚ್ಚಿಕೊಂಡದ್ದು ಅವರ ಜೀವನವೃತ್ತಿಯೇ ಆಗಿರುತ್ತದೆ. ಹೀಗೆ ಸಂಸ್ಥಾನದಲ್ಲಿ ೯ ಲಕ್ಷದಷ್ಟು ಲಿಂಗಾಯತ ಪ್ರಜೆಗಳು ವಾಸಿಸುತ್ತಾರೆ.

### ಹಳ್ಳಿಯ ಉದ್ಯೋಗ.

೧೨ ನೇ ಶತಮಾನದ ಕ್ರಾಂತಿಯಿಂದ ಲಿಂಗಾಯತ ಧರ್ಮವು ಅತ್ಯಂತ ವಿಶಾಲವಾಯಿತು. ಧರ್ಮಾಭಿಮಾನಿಗಳು ಜೀವನೋದ್ದೇಶಕ್ಕೆ ತಮತಮಗೆ ಅಗತ್ಯವೆನಿಸಿದ ನಾನಾ ವೃತ್ತಿಗಳನ್ನು ಅನುಸರಿಸಿದರು. ಅಂತೆಯೇ ಧರ್ಮವು ಸ್ವಾವಲಂಬಿಯಾಗಿ ನಿಂತಿತೆನ್ನಬಹುದು. ಲಿಂಗಾಯತರಲ್ಲಿ ಅತ್ಯಂತ ಪ್ರಾಮುಖ್ಯವಾದ ಉದ್ಯೋಗವೆಂದರೆ ಒಕ್ಕಲತನವು. ಅನಂತರ ನೇಯಿಗೆ ಬಣ್ಣಗಾರಿಕೆ ಮೊದಲಾವುಗಳನ್ನು ಲಿಂಗಾಯತರೇ ಗುತ್ತಿಗೆ ಹೊತ್ತಿದ್ದಾರೋ ಎನ್ನುವಷ್ಟು ಅವರು ಆ ವ್ಯವಸಾಯಗಳನ್ನು ಅನುವುಗೊಳಿಸಿಕೊಂಡರು. ಆದರೆ ಇತ್ತೀಚೆಗೆ ಯಾಂತ್ರಿಕ ಸ್ಪರ್ಧೆ ಹೆಚ್ಚಾಯಿತು. ಯಾಂತ್ರಿಕ ಸ್ಪರ್ಧೆಯಿಂದ ನಮ್ಮ ಹಳ್ಳಿಯ ಉದ್ಯೋಗಗಳಿಗೆ ಅತ್ಯಂತ ದೊಡ್ಡ ಆಘಾತವೇ ಬಡಿಯಿತು ಎಂದು ಹೇಳಬಹುದು. ಅತ್ಯಂತ ಪ್ರಗತಿಪಥದಲ್ಲಿ ನಮ್ಮ ಚಿಕ್ಕ ಪುಟ್ಟ ಉದ್ಯೋಗಗಳು ಯಾಂತ್ರಿಕಯುಗದಲ್ಲಿ ಅಧಃಪತನ ಹೊಂದಹತ್ತಿವೆ.

### ಒಕ್ಕಲತನ.

ಈ ಹಿಂದಿನ ೫೦ ವರುಷಗಳಿಂದ ಭೂಕಂದಾಯವು ಇಳಿಯುತ್ತಲೇ ಬಂದಿದೆ, ಏಕೆಂದರೆ ಜನರಿಗೆ ಸಶಾಸ್ತ್ರವಾಗಿ ಬೆಳೆ ತೆಗೆಯುವ ಜ್ಞಾನವಿಲ್ಲ. ಕಾಲುವೆಗಳ ಯೋಜನೆಗಳೂ, ಭೂಗುಣಜ್ಞಾನವೂ ಇಲ್ಲದ್ದರಿಂದ ಹೊಲಗಳು ತಕ್ಕಷ್ಟು ಬೆಳೆಯನ್ನು ಹುಟ್ಟಿಸದಂತೆಯಾಗಿವೆ. ಅಲ್ಲದೇ ಬೇಸಾಯದ ಧಾನ್ಯಗಳ ಬೆಲೆಯೂ ಇಳಿದುಬಿಟ್ಟಿದೆ ಇವೆಲ್ಲ ಕಾರಣಗಳಿಂದ ಒಕ್ಕಲತನವು ಕೀಳಾಗಿದೆ.

### ವ್ಯಾಪಾರ.

ವ್ಯಾಪಾರದ ಕೇಂದ್ರವು ಈಗ ಔದ್ಯೋಗಿಕ ಕೇಂದ್ರಗಳಾದ ಬೊಂಬಾಯಿಯಂಥ ನಗರಗಳಿಗೆ ಸಾಗಿಸಲ್ಪಟ್ಟಿದೆ. ಔದ್ಯೋಗಿಕ

(೧೩ ನೇ ಪುಟಕ್ಕೆ ಮುಂದೆ ಸಾಗಿದೆ.)

# ಶರಣ ಸಂದೇಶ ಪತ್ರಿಕೆಯ

# ಹೊಸ ಯೋಜನೆ.

## ಚಿಕ್ಕ ಪುಸ್ತಕ ಪ್ರಸಾರದ ವ್ಯವಸ್ಥೆ. ಇಬ್ಬರು ಪ್ರಚಾರಕರ ಏರ್ಪಾಟು.

### ೫೦೦೦ ರೂಪಾಯಿಗಳ ಆವಶ್ಯಕತೆ.

ವೀರಶೈವ ವಿದ್ಯಾಲಯದಿಂದ ಹೊರಡುತ್ತಿರುವ "ಶರಣ ಸಂದೇಶ" ವಾರ ಪತ್ರಿಕೆಯು ಕಳೆದ ಏಳು ವರುಷಗಳಿಂದ ಸಾಮಾಜಿಕ, ಧಾರ್ಮಿಕ ಮತ್ತು ರಾಜಕೀಯ ವಿಷಯಗಳಲ್ಲಿ ಕನ್ನಡ ನಾಡಿನ ಸೇವೆ ಮಾಡುತ್ತಿರುವುದು ಸರ್ವಶ್ರುತವಷ್ಟೆ.

ಅನೇಕ ಮಹಾಶಯರು ಇದರ ಸೇವೆಯು ನಮ್ಮ ನಾಡಿಗೆ ಹೆಚ್ಚು ಪ್ರಮಾಣದಲ್ಲಿ ಸಲ್ಲಲೆಂದು ಈ ಪತ್ರಿಕೆಯನ್ನು ದೊಡ್ಡ ಆಕಾರದಲ್ಲಿ ಹೆಚ್ಚು ಪುಟಗಳಿಂದ ಹೊರಡಿಸಬೇಕೆಂದೂ ಅದಕ್ಕಾಗಿ ತಮಗೆ ಶಕ್ಯವಿರುವಷ್ಟು ಧನ ಸಹಾಯ ಮಾಡುವೆವೆಂದೂ ತಿಳಿಸಿದ್ದಾರೆ.

ಈ ಮಹನೀಯರ ಸದುದ್ದೇಶವನ್ನು ಹೃತ್ಪೂರ್ವಕ ಅಭಿನಂದಿಸಿ, ವಿದ್ಯಾಲಯದ ಕಾರ್ಯಕ್ರಮಗಳಲ್ಲಿ ಒಂದಾದ ಇದರ ಸಂಬಂಧವಾಗಿ ಯೋಚಿಸಿ, ಒಂದು ಹೊಸ ಯೋಜನೆಯನ್ನು ಈ ನಮ್ಮ ನಾಡಿನವರ ಮುಂದೆ ಇಟ್ಟದ್ದಾಗಿದೆ.

### ೫೦೦೦ ರೂ. ಗಳ ಆವಶ್ಯಕತೆ.

(೧) ಶರಣ ಸಂದೇಶ ಪತ್ರಿಕೆಯನ್ನು ಬರುವ ಎಂಟನೆಯ ವರುಷದ ಆರಂಭದಿಂದ (ಶ್ರಾವಣ ಶುದ್ಧದಿಂದ) ದೊಡ್ಡ ಆಕಾರದ ಹೆಚ್ಚು ಪುಟಗಳುಳ್ಳದ್ದನ್ನಾಗಿ ಮಾಡಿ ಹೊರಡಿಸುವುದು.

ಈಗಿನಂತೆ ಮೂರೇ ರೂಪಾಯಿ ಚಂದಾ ಇಟ್ಟು ನಮ್ಮ ನಾಡಿನ ಜನ ಜಾಗೃತಿಗೆ ಈಗ ಅತ್ಯವಶ್ಯಕವಾಗಿರುವ ಅನೇಕ ವಿಷಯಗಳು ಸಚಿತ್ರವಾಗಿ ಇದರಲ್ಲಿ ಪ್ರಕಟವಾಗುವಂತೆ ಮಾಡುವುದು.

ಈ ಕಾರ್ಯಕ್ಕೆ ದೊಡ್ಡ ಮುದ್ರಣ ಯಂತ್ರವನ್ನು ತರಿಸಬೇಕಾಗುವುದು. ಅದರಲ್ಲಿ ಪತ್ರಿಕೆಯ ಕಾರ್ಯವಲ್ಲದೆ ಜನಜಾಗೃತಿಗಾಗಿ ಚಿಕ್ಕ ಚಿಕ್ಕ ಪುಸ್ತಕಗಳನ್ನೂ ಹೆಚ್ಚಾಗಿ ಅಚ್ಚುಮಾಡಲು ಅನುಕೂಲವಾಗುತ್ತದೆ. ಈಗಿರುವ ಸಣ್ಣ ಮುದ್ರಣ ಯಂತ್ರದಲ್ಲಿಯೇ ಪತ್ರಿಕೆಯನ್ನು ಅಚ್ಚು ಮಾಡಿದ್ದಲ್ಲದೆ ಕಳೆದ ಎಂಟು ವರುಷಗಳಲ್ಲಿ ಸಾಧಾರಣ ಒಂದು ಲಕ್ಷ ಚಿಕ್ಕ ಪುಸ್ತಕಗಳನ್ನೂ ೩೫ ಸಾವಿರ ಸ್ವಲ್ಪ ದೊಡ್ಡ ಪುಸ್ತಕಗಳನ್ನೂ ಅಚ್ಚುಮಾಡಿ ಪ್ರಸಾರಗೊಳಿಸಿದ್ದಾಗಿದೆ.

ಈ ಚಿಕ್ಕ ಪುಸ್ತಕ ಪ್ರಸಾರದ ಕಾರ್ಯವು ಆರ್ಥಿಕ ದೃಷ್ಟಿಯಿಂದ ಲಾಭದಾಯಕವಾದುದಾಗಿರದಿದ್ದರೂ ಜನಜಾಗೃತಿಯ ದೃಷ್ಟಿಯಿಂದ 'ಬಹು ಮಹತ್ವದ್ದೆಂದೇ' ಗೊತ್ತಾಗಿದೆ.

(೨) ಪುಸ್ತಕ ಪ್ರಸಾರವು ಅತ್ಯುಪಯುಕ್ತವಾದದ್ದೆಂದು ಈ ವರೆಗಿನ ಅನುಭವದಿಂದ ಗೊತ್ತಾದ ಕಾರಣ ಈ ಕಾರ್ಯವನ್ನು ಮುಂದರಿಸಲು ದೊಡ್ಡ ಮುದ್ರಣಯಂತ್ರವಿದ್ದರೆ ಹೆಚ್ಚು ಅನುಕೂಲ. ಶ್ರಮವೂ, ಕಾಲವೂ, ವೆಚ್ಚವೂ, ಉಳಿತಾಯವಾಗುವುದು. ಈ ಕಾರ್ಯಕ್ಕಾಗಿ ಕಾಗದ ಮೊದಲಾದ ಸಾಮಗ್ರಿಗಳ ಸಂಗ್ರಹವೂ ಅಗತ್ಯವು. ಏಕೆಂದರೆ, ಈ ವರೆಗೆ ನಡೆದಂತೆ ಪುಸ್ತಕ ಪ್ರಸಾರದ ಕಾರ್ಯವೂ ಹೆಚ್ಚಾಗಿ ಜರುಗಬೇಕಾಗಿದೆ.

(೩) ಪ್ರಚಾರಕರು ಇದ್ದರೇನೇ ಚಿಕ್ಕ ಪುಸ್ತಕಗಳ ಪ್ರಸಾರವು ಹೆಚ್ಚಾಗುವುದು. ಜನ ಜಾಗೃತಿಯ ಕಾರ್ಯವೂ ಪ್ರಚಾರಕರಿಂದ ಎಷ್ಟೋ ಮಟ್ಟಿಗೆ ನಡೆಯುತ್ತದೆ. ನಿಜಾಮ ಪ್ರಾಂತದ ಕನ್ನಡ ನಾಡು ಮತ್ತು ವಿಜಾಪುರ ಜಿಲ್ಲೆ ಈ ಎರಡು ಭಾಗಗಳಿಗೆ ಇಬ್ಬರು ಪ್ರಚಾರಕರು ಆವಶ್ಯಕವೆಂದು ತೋರಿದೆ.

ಹೀಗೆ ಈ ಮೂರು ಕಾರ್ಯಗಳೂ ಪ್ರಾರಂಭವಾಗಲು ೫೦೦೦ ರೂ. ಗಳು ಆವಶ್ಯಕವಾಗಿ ಬೇಕು. ಅನಂತರ ಆಯಾಯ ಕಾರ್ಯಗಳು ತಮ್ಮ ತಮ್ಮ ಆದಾಯ ವೆಚ್ಚಗಳನ್ನು ಸರಿಪಡಿಸಿಕೊಂಡು ಮುಂದರಿಯುವವು. ಈ ಕಾರ್ಯಗಳಲ್ಲಿ ಯಾವುದು ಯಾರಿಗೆ ಪ್ರಿಯವಾಗಿದೆಯೋ ಅವರು ಆ ಕಾರ್ಯಕ್ಕೆಂದೇ ಧನ ಸಹಾಯ ಮಾಡಬಹುದು. ಅವರ ಇಷ್ಟದಂತೆಯೇ ಆ ಕಾರ್ಯಕ್ಕೆ ವಿನಿಯೋಗಿಸಲಾಗುವುದು. ಉದಾರಿಗಳಿಂದ ಎಷ್ಟರ ಮಟ್ಟಿಗೆ ಧನಸಹಾಯವಾಗುವುದೋ ಅಷ್ಟರ ಮಟ್ಟಿಗೆ ಈ ಮೂರು ಕಾರ್ಯಗಳು ಜರುಗತಕ್ಕವುಗಳಾಗಿವೆ.

ಮುದ್ರಣ ಕಲೆಯನ್ನು ಕಲಿಸಲು ಕಳೆದ ಮೂರು ವರುಷಗಳಲ್ಲಿ ೧೧ ಬಡ ವಿದ್ಯಾರ್ಥಿಗಳನ್ನು ಉಚಿತವಾಗಿಟ್ಟುಕೊಂಡದ್ದಾಗಿದ್ದಿತು. ಅವರಲ್ಲಿ ೭ ಜನರು ಈಗ ಬೇರೆ ಮುದ್ರಣಾಲಯಗಳಲ್ಲಿ ಸೇರಿಕೊಂಡು ತಮ್ಮ ಜೀವನಕ್ಕೆ ಎಷ್ಟೋ ಅನುಕೂಲಮಾಡಿಕೊಂಡಿದ್ದಾರೆ. ಈ ಹೊಸ ಯೋಜನೆಯಂತೆ ಕಾರ್ಯ ಹೆಚ್ಚಲ್ಪಟ್ಟರೆ ಹೆಚ್ಚು ಬಡ ವಿದ್ಯಾರ್ಥಿಗಳನ್ನಿಟ್ಟುಕೊಳ್ಳಲು ಅನುಕೂಲವಾಗಿ ಆ ಮೂಲಕವೂ ಎಷ್ಟೋ ಪ್ರಯೋಜನವನ್ನು ಮಾಡಿಕೊಟ್ಟಂತಾಗುತ್ತದೆ.

ಇದೇ ವೈಶಾಖ ಮಾಸದ ಅಂತ್ಯದೊಳಗಾಗಿ ಅರ್ಧದಷ್ಟು ಹಣವಾದರೂ ಜನಸೇವೆಯ ಈ ಕಾರ್ಯಕ್ಕೆ ಮಹಾಶಯರಿಂದ ದೊರೆತರೆ ಶ್ರಾವಣ ಮಾಸದಲ್ಲಿ ಶರಣ ಸಂದೇಶ ಪತ್ರಿಕೆಯನ್ನು ಹೊಸ ಯೋಜನೆಯಂತೆ ಪ್ರಕಟಿಸಲು ಶಕ್ಯವಾಗುವುದು.

ಈ ವರೆಗಿನ ಕಾರ್ಯಗಳಿಗೆ ಅನೇಕ ಮಹಾಶಯರಿಂದ ಧನ ಸಹಾಯವಾದಂತೆಯೇ ಈ ಹೊಸ ಏರ್ಪಾಟಿಗೂ ಸಕಾಲಕ್ಕೆ ಸಹಾಯ ದೊರೆತು ನಮ್ಮಿಂದ ಜನಸೇವೆಯು ಈ ಕಾರ್ಯವು ಹೆಚ್ಚು ಪ್ರಮಾಣದಲ್ಲಿ ಜರುಗುವುದೆಂದೇ ನಂಬಿದ್ದೇವೆ.

ಹರ್ಡೇಕರ ಮಂಜಪ್ಪ. ನೋಟಗಿ ಚೆನ್ನವೀರಪ್ಪ.

ವೀರಶೈವ ವಿದ್ಯಾಲಯದ ಎಗ್ಸಿಕ್ಯೂಟಿವ್ ಕಮಿಟಿ,

ಶಕೆ ೧೮೬೦ ನೆಯ ಚೈತ್ರ ಶು. ೧.

ಆಲಮಟ್ಟಿ.



ಶಾ. ಶ. ೧೮೬೦ ನೆಯ ಚೈತ್ರ ಶು|| ೪ ಸೋಮವಾರ.

# ಕಾಂಗ್ರೆಸ್ಸಿನ ಅಹಿಂಸೆ.

ಮಹಾತ್ಮಾ ಗಾಂಧಿಯವರು ಕಳೆದ ೨೬ ನೆಯ ತಾರೀಖಿನ "ಹರಿಜನ" ಪತ್ರಿಕೆಯಲ್ಲಿ ಕಾಂಗ್ರೆಸ್ಸಿನ ಅಹಿಂಸೆಯ ತತ್ವವನ್ನು ಕುರಿತು ಒಂದು ಮಹತ್ವದ ಲೇಖನವನ್ನು ಬರೆದಿದ್ದಾರೆ. ಅದರ ಮುಖ್ಯಾಂಶವನ್ನು ನಾವು ಇದೇ ಸಂಚಿಕೆಯ ಬೇರೆ ಕಡೆ ಕೊಟ್ಟಿದ್ದೇವೆ. ಜಗತ್ತಿಗೆ ಅಹಿಂಸೆಯ ಒಂದು ಹೊಸ ಮಾರ್ಗವನ್ನು ತೋರಿಸುತ್ತಿರುವ ಮಹಾತ್ಮಾ ಗಾಂಧಿಯವರು ಹೀಗೆ ತಾವು ಆತ್ಮ ನಿರೀಕ್ಷಣೆಯನ್ನು ಮಾಡಿದುದೂ ಕಾಂಗ್ರೆಸ್ ಪಕ್ಷವೂ ಮಾಡಬೇಕೆಂದು ಸೂಚಿಸಿದುದೂ ಯುಕ್ತವಾಗಿಯೇ ಇದೆ.

ಗಾಂಧೀಜಿಯವರ ಅತ್ಯಂತ ಮಹತ್ವದ ಈ ಸೂಚನೆಯ ಕಡೆಗೆ ಕಾಂಗ್ರೆಸ್ ಪಕ್ಷದ ವಿಚಾರಪರರು ಪೂರ್ಣ ಲಕ್ಷಿಸಿ, ಸಾರ್ವಜನಿಕವಾಗಿಯೂ ಈ ಸಂಗತಿಯನ್ನು ಪ್ರಸ್ತಾಪಿಸಿ, ನಿಜ ಸ್ಥಿತಿ ಗೊತ್ತಾಗಲು ಅನುಕೂಲಪಡಿಸುವುದು ಅತ್ಯವಶ್ಯಕವಾಗಿದೆ. ಕಾಂಗ್ರೆಸ್ ಪಕ್ಷವು ಅನುಸರಿಸುವ ರೀತಿ ನೀತಿಗಳಿಂದ ರಾಷ್ಟ್ರದ ಮೇಲೆ ಬಹು ಮಹತ್ತರವಾದ ಪರಿಣಾಮಗಳುಂಟಾಗುವಕಾರಣ ಕಾಂಗ್ರೆಸ್ಸಿನ ಹೊರಗಿರುವವರೂ ಈ ವಿಷಯವನ್ನು ಯೋಚಿಸುವುದು ಅಗತ್ಯವಾಗಿದೆ. ಅಂತೆಯೇ ಬೇರೆಯವರೂ ಈ ವಿಷಯದ ಕಡೆಗೆ ಲಕ್ಷಿಸಬೇಕೆಂದು ನಾವು ಈ ಸಂಬಂಧವಾಗಿ ಇಲ್ಲಿ ಪ್ರಸ್ತಾಪಿಸಿದ್ದೇವೆ.

### ಅಹಿಂಸೆಯ ವ್ಯಾಪಕತೆ.

ಗಾಂಧೀಜಿಯವರು ತಮ್ಮ ಲೇಖನದಲ್ಲಿ ಹೇಳಿದಂತೆ ಕಾಂಗ್ರೆಸ್ಸು ಅಹಿಂಸಾ ತತ್ವವನ್ನು ಸ್ವೀಕರಿಸಿ ೧೭ ವರುಷಗಳಾದವು. ಕಾಂಗ್ರೆಸ್ ರಾಜಕಾರಣದ ಸಂಸ್ಥೆಯಾಗಿದೆ. ರಾಜಕೀಯ ಸ್ವಾತಂತ್ರ್ಯವೇ ಅದರ ಗುರಿ. ಅಂಥ ಗುರಿಯನ್ನು ಅದು ಅಹಿಂಸಾ ಮಾರ್ಗದಲ್ಲಿ ಹೋಗಿಯೇ ಸೇರಬೇಕೆಂದು ನಿರ್ಧರಿಸಿದೆ.

ಈಗ ಕಾಂಗ್ರೆಸ್ಸಿಗೆ ಸೇರಿರತಕ್ಕ ೩೦ ಲಕ್ಷ ಜನರು ರಾಜಕೀಯ ಸ್ವಾತಂತ್ರ್ಯ ಸಂಪಾದನೆಯ ಕಾರ್ಯದಲ್ಲಿ ಮಾತ್ರ ಅಹಿಂಸಾ ವ್ರತದಿಂದ ಆಚರಿಸಲು ಬದ್ಧರಾಗಿದ್ದಾರೆಯೇ ವಿನಾ ನೈತಿಕ ಅಥವಾ ಧಾರ್ಮಿಕ ವಿಚಾರಸರಣಿಯಿಂದ ಅವರು ಅಹಿಂಸಾ ವ್ರತವನ್ನು ಕೈಕೊಂಡವರೇನೂ ಅಲ್ಲವೆಂದೇ ನಮ್ಮ ತಿಳುವಳಿಕೆ.

ಯಾವ ಪ್ರಾಣಿಯನ್ನೂ ಯಾವ ಕಾರಣದಿಂದಲೂ ಕೊಲ್ಲದಿರುವಂತಹ ಅಹಿಂಸಾ ಧರ್ಮವನ್ನಾಗಲಿ ಅಥವಾ ಯಾವ ಕಾರಣದಿಂದಲೂ ಯಾವ ಮನುಷ್ಯನನ್ನೂ ಹಿಂಸಿಸದಿರುವ ಅಹಿಂಸಾ ನೀತಿಯನ್ನಾಗಲಿ ಕಾಂಗ್ರೆಸ್ ಪಕ್ಷವು ಅನುಸರಿಸಿದೆಯೆಂದು ನಮಗೆ ತೋರುವುದಿಲ್ಲ. ಆದರ ಅಹಿಂಸಾ ತತ್ವದ ವ್ಯಾಪ್ತಿಯು ಕೇವಲ ರಾಜಕಾರಣದ ಕಾರ್ಯಗಳ ಮಟ್ಟಿಗೆ ಇದ್ದಂತೆಯೇ ತೋರುತ್ತದೆ.

### ಮಹಾತ್ಮರ ಅಪೇಕ್ಷೆ.

ಮೊನ್ನೆ ಅಲಾಹಾಬಾದಿನಲ್ಲಿ ಮುಸಲ್ಮಾನರ ದೊಂಬಿಯಾಗಿ ಜಾತಿಜಗಳವು ವಿಕೋಪಸ್ಥಿತಿಗೆ ಹೋದುದರಿಂದ ಗಾಂಧೀಜಿಯವರು ಬಹು ನೊಂದುಕೊಂಡು ಈ ವಿಷಯದ ಕಡೆಗೆ ಲಕ್ಷಿಸಿದ್ದಾರೆ. ಜಾತಿಯ ಜಗಳಗಳಲ್ಲಿ ಕೂಡಾ ಹಿಂಸೆಯು ಸಂಭವಿಸಬಾರದೆಂದೇ ಇವರ ಇಚ್ಛೆ. ಅಹಿಂಸಾ ತತ್ವದಿಂದ ಸಾಮರ್ಥ್ಯವನ್ನು ಹೊಂದಿ ಪ್ರಭುತ್ವವನ್ನು ಮಾಡುತ್ತಿರುವ ಕಾಂಗ್ರೆಸ್ ಪಕ್ಷದ ರಾಜ್ಯದಲ್ಲಿಯೂ ಜಾತಿಯ ಜಗಳವಾಗಿ ಹಿಂಸೆ ನಡೆಯಬಹುದೆ? ಎಂದೂ, ಹಾಗಾದರೆ ಇಂಗ್ಲಿಷ್ ಸರಕಾರಕ್ಕೂ ಕಾಂಗ್ರೆಸ್ ಸರಕಾರಕ್ಕೂ ಈ ವಿಚಾರದಲ್ಲಿ ವ್ಯತ್ಯಾಸವೇನಿದೆ? ಎಂದೂ, ಪ್ರಶ್ನೆಮಾಡಿದ್ದಾರೆ.

ಕಾಂಗ್ರೆಸ್ ರಾಜ್ಯದಲ್ಲಿ ಯಾರೂ ಯಾವ ಕಾರಣದಿಂದಲೂ ಸಾಮೂಹಿಕವಾಗಿ ಕೊಲೆಯನ್ನು ನಡೆಯಿಸಲೇಕೂಡದೆಂದೂ ಒಂದು ವೇಳೆ ಇಂಥ ಕೊಲೆಗಳುಂಟಾಗಲಾರಂಭವಾದರೆ ಅವುಗಳನ್ನು ಪೋಲಿಸ್ ಮತ್ತು ಸೈನ್ಯಗಳ ಬಲದಿಂದ ತಡೆಯದೆ ಅಹಿಂಸಾ ಮಾರ್ಗದಿಂದಲೇ ತಡೆಯಬೇಕೆಂದೂ ಗಾಂಧೀಜಿಯವರು ಅಪೇಕ್ಷಿಸುತ್ತಿದ್ದಾರೆ.

ಸಂಯುಕ್ತ ಪ್ರಾಂತದಲ್ಲಿ ಹೀಗೆ ಸಂಭವಿಸದೆ ಇದ್ದುದರಿಂದ ಕಾಂಗ್ರೆಸ್ಸಿನ ಅಹಿಂಸೆ ಅದೆಂತಹದು? ಬಲಹೀನವಾಗಿ ಈ ತತ್ವವನ್ನು ಹಿಡಿದಿದೆಯೆ? ಅಥವಾ ಬಲಶಾಲಿಯಾಗಿದ್ದು ಇದನ್ನನುಸರಿಸಿದೆಯೆ? ಎಂದು ಕೇಳಿ ಆತ್ಮನಿರೀಕ್ಷಣೆ ಮಾಡಲು ಗಾಂಧೀಜಿಯವರು ಸೂಚಿಸಿದ್ದಾರೆ.

### ಈಗಿನ ಅಹಿಂಸೆಯ ರೀತಿ.

ಮಹಾತ್ಮಾ ಗಾಂಧಿಯವರಂತೆಯೇ ಅಹಿಂಸೆಯಲ್ಲಿ ಅಪಾರವಾದ ನಂಬಿಗೆಯುಳ್ಳವರೂ ಹಾಗೆಯೇ ಆಚರಿಸುತ್ತಿದ್ದವರೂ ಮೂವತ್ತು ಲಕ್ಷ ಕಾಂಗ್ರೆಸ್ ಸದಸ್ಯರಲ್ಲಿ ಮೂವತ್ತು ಜನರಾದರೂ ಇರುತ್ತಾರೆಯೋ ಇಲ್ಲವೋ ಎಂಬುದು ಸಂಶಯ. "ಕಾಂಗ್ರೆಸ್ಸಿನ ಅಹಿಂಸಾ ವ್ರತವನ್ನು ನಾವು ಹಿಡಿದಿದ್ದರಿಂದ ಈಗ ಸುಮ್ಮನಿರಬೇಕಾಗಿದೆ." ಎಂದು ಕೇವಲ ಕಾರ್ಯದ ಧೋರಣಕ್ಕಾಗಿಯೇ ರಾಜಕಾರಣದಲ್ಲಿ ಮಾತ್ರ ಅಹಿಂಸೆಯನ್ನು ಅನುಸರಿಸಿರುವವರೇ ವಿಶೇಷ. ನಿರಾಯುಧರಾಗಿರುವುದರಿಂದ ಅಹಿಂಸೆಯನ್ನು ಅನುಸರಿಸಬೇಕಾಗಿದೆಯೆಂದು ತಿಳಿದಿರುವವರೇ ಅತ್ಯಧಿಕ.

ಅಂತೆಯೇ ಕಾಂಗ್ರೆಸ್ ಈಗ ೩೦ ಲಕ್ಷ ಸದಸ್ಯರುಳ್ಳದ್ದಾಗಿ ಬಹು ಬಲಶಾಲಿಯಾಗಿದೆಯೆಂದರೂ ಗಾಂಧೀಜಿಯವರು ಅಪೇಕ್ಷಿಸುವಂತಹ ಅಹಿಂಸಾ ವಾತಾವರಣವನ್ನೇನೂ ಅದು ರಾಷ್ಟ್ರದಲ್ಲಿ ಉಂಟುಮಾಡಿಲ್ಲ.

ಜಾತಿಯ ಜಗಳವನ್ನು ನಿವಾರಣೆ ಮಾಡಲು ಆಗಬೇಕಾದ ಏರ್ಪಾಟುಗಳನ್ನೂ ಅಹಿಂಸೆಯ ಮೂಲಕವಾದ ಪ್ರಯತ್ನವು

ಎಷ್ಟರ ಮಟ್ಟಿಗೆ ಉಪಯೋಗಿಸಲ್ಪಡುವುದು ಶಕ್ಯವೆಂಬುದನ್ನೂ ಕುರಿತು ನಾವು ಮುಂದಣ ವಾರ ಪ್ರಸ್ತಾಪಿಸುವೆವು.

---

# ಜಾತಿ ಜಗಳಕ್ಕೆ ಕಾರಣವೇನು?

## ಕಾಂಗ್ರೆಸ್ ಮಂತ್ರಿಗಳ ಅಭಿಪ್ರಾಯ.

ಅಲಹಾಬಾದ, ಕಾಶಿ ಮೊದಲಾದ ಸ್ಥಳಗಳಲ್ಲಿ ಮುಸಲ್ಮಾನರು ಮೊನ್ನೆ ಹೋಳಿ-ಮೊಹರಂ ಹಬ್ಬಗಳ ಕಾಲಕ್ಕೆ ದೊಂಬಿಮಾಡಿದರಷ್ಟೆ. ಅಲಹಾಬಾದಿನಲ್ಲಿ ೩೮ ಹಿಂದುಗಳು ೪ ಮುಸಲ್ಮಾನರು ಮೃತಪಟ್ಟರು. ಅಹಿಂಸಾ ತತ್ವ ಪ್ರಿಯವಾದ ಕಾಂಗ್ರೆಸ್ಸಿನ ಪ್ರಭುತ್ವದಲ್ಲಿ ಕಾಂಗ್ರೆಸ್ಸಿನ ಮುಖ್ಯ ಕಾರ್ಯಕೇಂದ್ರವಾದ ಪ್ರಯಾಗ ಕ್ಷೇತ್ರದಲ್ಲಿ ಹೀಗೆ ಹಿಂದು ಮುಸಲ್ಮಾನರ ರಕ್ತಗಳಿಂದ ಭೀಕರ ಸ್ಥಿತಿಯುಂಟಾಗಲು ಕಾಂಗ್ರೆಸ್ ಸರಕಾರದ ನಿರ್ಲಕ್ಷ್ಯಯೇ ಕಾರಣವೆಂದು ಕೆಲವರ ತಿಳುವಳಿಕೆ. ಅಂತೆಯೇ ಮುಸ್ಲಿಂ ಲೀಗಿನ ಪ್ರತಿನಿಧಿಗಳಾದ ಮಿ. ಜಹೀರುದ್ದೀನ ಫರೂಕಿ ಇವರು ಸಂಯುಕ್ತ ಪ್ರಾಂತದ ಅಸೆಂಬ್ಲಿಯಲ್ಲಿ ಒಂದು ನಿಲುವಳಿ ಸೂಚನೆಯನ್ನು ತಂದರು. ಆಗ ಕಾಂಗ್ರೆಸ್ ಪಕ್ಷದ ಮಂತ್ರಿಗಳಾದ ಶ್ರೀ ಗೋವಿಂದ ವಲ್ಲಭ ಪಂತರು ಮತ್ತು ಶ್ರೀ. ಕೈ ಲಾ ಸ ನಾ ಥ ಕಾಟಜು, ಶ್ರೀ. ಸಂಪೂರ್ಣಾನಂದರು ಈ ಮೂವರೂ ದೊಂಬಿಗೆ ಯಾರು ಕಾರಣರೆಂಬುದನ್ನು ಸ್ಪಷ್ಟೀಕರಿಸಿದರು.

### ಶ್ರೀ. ಸಂಪೂರ್ಣಾನಂದರು.

"ದೊಂಬಿಯಾಗಬಾರದೆಂದು ಅಧಿಕಾರಿಗಳು ಶಕ್ಯವಿರುವ ಎಲ್ಲಾ ಪ್ರಯತ್ನಗಳನ್ನೂ ಮಾಡಿದರು. ಆದರೆ ಮುಸ್ಲಿಂಲೀಗಿನವರಂಥ ಕೆಲವರು ಅಧಿಕಾರಿಗಳ ಪ್ರಯತ್ನಕ್ಕೆ ವಿಘ್ನವನ್ನುಂಟುಮಾಡಿದರು. ದೊಂಬಿಗಾರಿಕೆಯಿಂದ ಸರಕಾರವನ್ನು ಮೆತ್ತಗೆ ಮಾಡಬಹುದೆಂದೇ ಅವರ ಕಲ್ಪನೆ."

### ಶ್ರೀ ಗೋವಿಂದ ವಲ್ಲಭ ಪಂತರು.

"ಈ ವರುಷ ಹೋಳಿ-ಮೊಹರಂ ಕೂಡಿಬಂದವು. ಅವುಗಳ ಜತೆಯಲ್ಲಿ ಮುಸ್ಲಿಂ ಲೀಗಿನ ಪ್ರಚಾರವೂ ಸೇರಿತು. ಜಾತಿಯ ದ್ವೇಷಾಗ್ನಿಗೆ ಮುಸ್ಲಿಂಲೀಗಿನ ಪ್ರಚಾರವು ಉರುವಲವಾಗಿ ಪರಿಣಮಿಸಿತು. ಮಂತ್ರಿಮಂಡಲದಲ್ಲಿರುವ ಮುಸಲ್ಮಾನರೂ ಕಾಫಿರರೆಂದೇ ಪ್ರಚಾರ ನಡೆಸಿದರು. ಹೀಗಾದರೂ ಎರಡೇ ಸ್ಥಳಗಳಲ್ಲಿ ದೊಂಬಿಯಾಯಿತು. ಸರ್. ಮಹಾರಾಜಸಿಂಹ ಮತ್ತು ನವಾಬ ಛತ್ತಾರಿ ಇವರಿಗೆ ನಾನು ಕೇಳುವುದೇನೆಂದರೆ, ಇಷ್ಟು ಜಾಗ್ರತೆ ದೊಂಬಿಯು ಹಿಂದೆಂದಾದರೂ ಶಾಂತವಾಗಿತ್ತೆ? ನಾನು ಹಿಂದು ಮತ್ತು ಮುಸಲ್ಮಾನರ ಸೇವೆಯನ್ನು ಸಮಾನವಾಗಿಯೇ ಮಾಡುವವನು. ಏಕೆಂದರೆ ನನಗೆ ಇಬ್ಬರೂ ಬಂಧುಗಳು."

### ಶ್ರೀ ಕೈಲಾಸನಾಥ ಕಾಟಜು.

"ದೊಂಬಿಗೆ ಮುಸ್ಲಿಂಲೀಗ್ ಕಾರಣವೆಂದೇ ನನಗೆ ತೋರುತ್ತದೆ. ಅದರ ಪತ್ರಿಕೆಗಳಲ್ಲೆಲ್ಲಾ ಸುಳ್ಳೇ ತುಂಬಿರುತ್ತದೆ. ಮಂತ್ರಿಮಂಡಲದಲ್ಲಿರುವ ಮುಸಲ್ಮಾನರನ್ನು ಕೊಲೆ ಮಾಡುವುದಾಗಿಯೂ ಅವರು ಸಂಚಾರ ಹೋದಾಗ ಹಸ್ತ ಪತ್ರಿಕೆಗಳು ಪ್ರಕಟಿಸಲ್ಪಡಲಿಲ್ಲವೆ? ರಾಜ್ಯಭಾರದಲ್ಲಿ ಮುಸಲ್ಮಾನರ ಸಂಖ್ಯೆಯು ನೂರಕ್ಕೆ ಎಷ್ಟರಂತೆ ಇದೆಯೆಂದು ಯಾವಾಗಲೂ ಕೇಳಲ್ಪಡುತ್ತಾ ಇಲ್ಲವೆ? (ಆಗ ಇದಕ್ಕೂ ದೊಂಬಿಗೂ ಏನು ಸಂಬಂಧವೆಂಬ ಧ್ವನಿಯುಂಟಾಯಿತು. ಆಗ ಡಾ. ಕಾಟಜುರವರು ಹೀಗೆ ಹೇಳಿದರು— "ಅದರ ಫಲವೇ ನೀವು ಅಪೇಕ್ಷಿಸುತ್ತಿದ್ದ ಈ ದೊಂಬಿಯು.") ಪೋಲಿಸ್ ಶಾಖೆಯಲ್ಲಿ ನೂರಕ್ಕೆ ೬೩ ರಂತೆ ಮುಸಲ್ಮಾನರಿದ್ದಾರೆ. ಮುದ್ರಣ ಮತ್ತು ಭಾಷಣ ಸ್ವಾತಂತ್ರ್ಯವನ್ನು ಮುಸ್ಲಿಂ ಲೀಗಿನವರು ದುರುಪಯೋಗಮಾಡಿಕೊಳ್ಳುತ್ತಿದ್ದಾರೆ. ಅಲಹಾಬಾದ ಮತ್ತು ಕಾಶಿ ಪಟ್ಟಣಗಳಲ್ಲಿಯ ಉರ್ದು ಪತ್ರಿಕೆಗಳ ಮೇಲೆ ಬಲವಾದ ಪ್ರತಿಬಂಧವನ್ನು ಮಾಡಿದ್ದರೆ ಈ ದೊಂಬಿಯೇ ಉಂಟಾಗುತ್ತಿರಲಿಲ್ಲ. ನೀವು ಸರಕಾರಕ್ಕೆ ಹೆದರಿಸಬೇಕೆಂದು ಯೋಚಿಸುತ್ತಿದ್ದೀರಿ. ಆದರೆ ಅದೆಂದೂ ಸಫಲವಾಗುವುದಿಲ್ಲ."

ಈ ದೇಶದ ಹಿಂದು-ಮುಸಲ್ಮಾನರಲ್ಲಿಯ ಜಗಳಕ್ಕೆ ಯಾರು ಕಾರಣರೆಂಬುದನ್ನು ಕಾಂಗ್ರೆಸ್ ಮಂತ್ರಿಗಳೇ ಈಗ ಹೇಳಿದ್ದಾದರೂ ಕಾಂಗ್ರೆಸ್ ಪಕ್ಷದಲ್ಲಿರುವ ಜಾತಿ ಭಾವ ಶೂನ್ಯರಿಗೆ ಒಪ್ಪಿಗೆಯಾಗುವುದೆ? ಈ ಹೇಳಿಕೆಯು ಹಿಂದು ಮಹಾಸಭೆಯವರಿಂದೇನೂ ಹೊರಟುದಲ್ಲವಷ್ಟೆ. ಸತ್ಯ ತತ್ವಾವಲಂಬಿಯಾದ ಕಾಂಗ್ರೆಸ್ಸಿನ ಪ್ರಮುಖರಿಂದಲೇ ಹೇಳಲ್ಪಟ್ಟ ಈ ಸಂಗತಿಗಳಿಂದಲಾದರೂ ಜಾತಿನಿರ್ಣಯ ಮತ್ತು ಮುಸಲ್ಮಾನರ ಆಕ್ರಮಣಗಳಿಂದಾಗುತ್ತಿರುವ ಅನರ್ಥಗಳು ಕಾಂಗ್ರೆಸ್ಸಿಗೆ ತಿಳಿದರೆ ಎಷ್ಟೋ ಕ್ಷೇಮ.

---

# ಹಿಂದು-ಮುಸಲ್ಮಾನರ ಐಕ್ಯ.

ಹಿಂದು ಮಹಾಸಭಾಧ್ಯಕ್ಷರಾದ ಬ್ಯಾ. ಸಾವರಕರರು ಮುಂಬೈ ಗಿರಗಾಂವ ಬ್ರಾಹ್ಮಣ ಸಭೆಯಲ್ಲಿ ಭಾಷಣಮಾಡುವಾಗ ಹೀಗೆ ಹೇಳಿದರು—

"ಹಿಂದುತ್ವವೇ ಹಿಂದುಸ್ಥಾನದ ರಾಷ್ಟ್ರೀಯತ್ವವು. ಇದನ್ನು ನಾಶ ಮಾಡಲು ಕಾಂಗ್ರೆಸ್ ಪ್ರಯತ್ನಿಸಿದರೆ ಅದು ರಾಷ್ಟ್ರೀಯ ದೃಷ್ಟಿಯಿಂದಲೂ ಒಂದು ಪಾಪವನ್ನು ಮಾಡಿದಂತೆಯೇ ಸರಿ. ಹಿಂದುತ್ವ ರಕ್ಷಣೆಗೆ ಪ್ರಯತ್ನಿಸುವವರಿಗೇನೇ ನೀವು ಮುಂದಿನ ಚುನಾವಣೆಯ ಕಾಲಕ್ಕೆ ಮತಕೊಡಬೇಕು. ಹಾಗಾದರೆ ಅಸೆಂಬ್ಲಿಯು ಹಿಂದುತ್ವ ಸಂರಕ್ಷಕರ ಸ್ವಾಧೀನವಾಗುವುದು.

ಮುಸಲ್ಮಾನರಿಗೆ ಹಿಂದುಗಳ ಸಂಗಡ ಐಕಮತ್ಯದಿಂದಿರಬೇಕೆಂದು ಎಂದು ತೋರುವುದೋ, ಹಿಂದುಗಳ ಜತೆಯಲ್ಲಿ ಐಕಮತ್ಯದಿಂದ ಇದ್ದ ವಿನಾ ನಮ್ಮ ಉನ್ನತಿ ಮತ್ತು ಅಸ್ತಿತ್ವವು ಶಕ್ಯವಿಲ್ಲವೆಂದು ಮುಸಲ್ಮಾನರಿಗೆ ಯಾವಾಗ ಗೊತ್ತಾಗುವದೋ ಆಗಲೇ ನಾವು ಹಿಂದು-ಮುಸಲ್ಮಾನರ ಐಕ್ಯದ ವಿಚಾರವಾಗಿ ಪ್ರಸ್ತಾಪಿಸುವೆವು. ಆಗ ನಾವು ಅವರಿಗೆ ವಿಶೇಷ ಸೌಲಭ್ಯಗಳನ್ನು ಕೊಡುವೆವು. ಆಗಲೇ ಅದು ನಮ್ಮ ಉದಾರ ಭಾವವೆಂದು ಪರಿಗಣಿಸಲ್ಪಡುವದು. ಈಗಲಾದರೋ ನಾವು ನಿರ್ಬಲರೆಂದೂ ನಾವು ಶರಣುಬಂದಿದ್ದೇವೆಂದೂ ತಿಳಿಯಲ್ಪಡುತ್ತಿರುವುದರಿಂದ ಐಕಮತ್ಯವನ್ನುಂಟುಮಾಡಬೇಕೆಂಬ ಪ್ರಯತ್ನವು ಆತ್ಮಘಾತದ ವರೆಗೂ ಹೋಗಬಹುದು."

---

# "ಕರ್ನಾಟಕ ಬಂಧು" ಪತ್ರಿಕೆಯ

## ಸ್ತುತ್ಯ ಪ್ರಯತ್ನ.

ಗದಗಿನಲ್ಲಿ ಹೊರಡುತ್ತಿರುವ ಕರ್ನಾಟಕ ಬಂಧು ಎಂಬ ವಾರ ಪತ್ರಿಕೆಯ ಸುಧಾರಣೆಯ ಎರಡು ಸಂಚಿಕೆಗಳು ನಮ್ಮ ಕಡೆಗೆ ಬಂದಿವೆ. ಇದು ಹೊಸ ಪದ್ಧತಿಯಿಂದ ದೊಡ್ಡ ಆಕಾರದಲ್ಲಿ ಈಗ ಹೊರಡಲಾರಂಭವಾಗಿದೆ. ಕನ್ನಡ ಪತ್ರಿಕಾ ಪ್ರಪಂಚದಲ್ಲಿ ವಿಶೇಷ ಕ್ರಾಂತಿಯಾಗುವಂತೆ ಮುಂದರಿಯುತ್ತಿರುವ ಪ್ರಜಾಮತ ಪತ್ರಿಕೆಯ ಆಕಾರ, ಪದ್ಧತಿ, ಮೊದಲಾದವುಗಳನ್ನೇ ಈ ಕರ್ನಾಟಕ ಬಂಧು ಪತ್ರಿಕೆಯೂ ಅನುಸರಿಸಿದೆ. ಎಂದ ಮೇಲೆ ಅದರ ಪ್ರಯತ್ನವು ಎಷ್ಟು ಸ್ತುತ್ಯವಾದುದಾಗಿದೆಯೆಂಬುದನ್ನು ತಿಳಿಸಬೇಕಾದುದೇ ಇಲ್ಲ. ಇದರ ಈ ಸಾಹಸವನ್ನು ನಾವು ಹೃದಯಪೂರ್ವಕ ಅಭಿನಂದಿಸಿ ಇದು ಬಹುಜನ ಪ್ರಿಯವಾಗಲೆಂದೇ ಹಾರೈಸುತ್ತೇವೆ.

## ಶ್ರೀ ಬಸವೇಶ್ವರ ವಚನ ಇಂಗ್ಲಿಷಿನಲ್ಲಿ ಭಾಷಾಂತರಿಸುವವರಿಗೆ

# ೨೦೦ ರೂಪಾಯಿ ಬಹುಮಾನ.

ವಿಜಾಪುರದಲ್ಲಿರುವ ರಾವಸಾಹೇಬ ಪಿ. ಜಿ. ಹಳಕಟ್ಟಿ ಬಿ. ಎ. ಎಲ್‌ಎಲ್. ಬಿ. ಇವರು ಪ್ರಕಟಿಸಿರುವ ಶ್ರೀ ಬಸವೇಶ್ವರ ವಚನಗಳು ಎಂಬ ಪುಸ್ತಕದಲ್ಲಿರುವ ೧ ರಿಂದ ೨೫೦ ವಚನಗಳನ್ನು ಅವುಗಳ ಸಂಪೂರ್ಣ ಭಾವ ಮತ್ತು ಅರ್ಥವು ಬರುವಂತೆ ಉತ್ತಮವಾದ ಶೈಲಿಯಲ್ಲಿ ಇಂಗ್ಲೀಷ್ ಭಾಷೆಗೆ ತರ್ಜುಮೆ ಮಾಡಿಕೊಡತಕ್ಕವರಿಗೆ ದಾವಣಗೆರೆ ಶ್ರೀ ವೀರಶೈವ ವಿದ್ಯಾವರ್ಧಕಫಂಡ ಸಂಘದವರು ಎರಡು ನೂರು ರೂಪಾಯಿಗಳನ್ನು ಬಹುಮಾನರೂಪವಾಗಿ ಕೊಡಲು ನಿರ್ಧರಿಸಿರುತ್ತಾರೆ.

ಮೇಲ್ಕಂಡ ರೀತಿ ಎರಡು ನೂರ ಐವತ್ತು ವಚನಗಳನ್ನು ಭಾಷಾಂತರ ಮಾಡಲು ಇಷ್ಟವುಳ್ಳವರು ೧೯೩೬ ನೆಯ ಇಸ್ವಿ ಅಕ್ಟೋಬರ್ ತಿಂಗಳು ಅಖೈರ ಒಳಗಾಗಿ ಈ ಕೆಳಗಿನ ವಿಳಾಸಕ್ಕೆ ತಮ್ಮ ಭಾಷಾಂತರಗಳನ್ನು ಕಳುಹಿಸತಕ್ಕದ್ದು. ವಾಯಿದೆ ಒಳಗಾಗಿ ಬರುವ ಭಾಷಾಂತರಗಳನ್ನೆಲ್ಲಾ ಶ್ರೀ ವೀರಶೈವ ವಿದ್ಯಾವರ್ಧಕ ಫಂಡ ಸಂಘದ ಮ್ಯಾನೇಜಿಂಗ್ ಕಮಿಟಿಯಲ್ಲಿಟ್ಟು ಕಮಿಟಿಯವರು ಚುನಾಯಿಸುವ ಭಾಷಾಂತರಗಳಿಗೆ ಬಹುಮಾನವನ್ನು ಕೊಡಲಾಗುತ್ತೆ. ಹಾಗೆ ಚುನಾಯಿಸಲ್ಪಟ್ಟ ಭಾಷಾಂತರಗಳನ್ನು ವಾಪಸು ಕೊಡಲಾಗುವುದಿಲ್ಲ. ಅವುಗಳನ್ನಿಟ್ಟುಕೊಂಡು ಅವುಗಳನ್ನು ಅಚ್ಚು ಹಾಕಿಸುವ ಮಾರಾಟಮಾಡುವ ವಗೈರೆ ಸಂಪೂರ್ಣ ಅಧಿಕಾರವು ಸಂಘಕ್ಕೆ ಸೇರಿದ್ದಾಗಿರುತ್ತೆ. ಕಮಿಟಿಯಲ್ಲಿ ಮಂಜೂರಾಗದೆ ಇರತಕ್ಕ ಭಾಷಾಂತರಗಳನ್ನು ಕಮಿಟಿಯ ತೀರ್ಮಾನವಾದೊಡನೆ ಅವರವರಿಗೆ ವಾಪಸು ಕಳುಹಿಸಲಾಗುವುದು. ಹೆಚ್ಚಿನ ವಿಷಯುಗಳಿಗೆ ಸಂಘದ ಸೆಕ್ರೆಟರಿಗಳಿಗೆ ಬರೆದು ತಿಳಿದುಕೊಳ್ಳಬಹುದು.

ಸೆಕ್ರೆಟರಿ—

ಶ್ರೀ ವೀರಶೈವ ವಿದ್ಯಾವರ್ಧಕ ಫಂಡ್ ಸಂಘ

ದಾವಣಗೆರೆ

---

## ಇದೇ ತಾ. ೧೪-೪-೩೬ ನೇ ಗುರುವಾರ ಜರುಗುವ

# ಶ್ರೀ ಅಕ್ಕಮಹಾದೇವಿಯ ಜಯಂತಿಗಾಗಿ

## ಶ್ರೀ ಅಕ್ಕಮಹಾದೇವಿಯು ಶ್ರೀಶೈಲ ಪರ್ವತದ ಕದಳೀ ವನದಲ್ಲಿ ಕುಳಿತುಕೊಂಡು ಲಿಂಗಪೂಜೆಮಾಡುತ್ತಿರುವ ಫೋಟೋ.

ಸೈಜ್ ೧೦×೧೪ ರದು ಹೊಸದಾಗಿ ಮಾಡಿಸಿದೆ. ಪ್ರಚಾರದ ಉದ್ದಿಶ್ಯವಾಗಿ ಜಯಂತಿಯ ಕಾಲದಲ್ಲಿ ಜಯಂತಿಯ ಸಂಘದವರು ಮತ್ತು ಮಹಾಜನರು ಉಚಿತವಾಗಿ ಹಂಚಲು ಅನುಕೂಲವಾಗುವಂತೆ ಬಹಳ ಕಡಿಮೆ ಬೆಲೆಗೆ ದೊರೆಯುವಂತೆ ಏರ್ಪಾಡಿಸಿರುತ್ತದೆ.

ನೂರು ಫೋಟೋಗಳಿಗೆ ೬-೦-೦ ರೂಪಾಯಿ. ೨೫ ಫೋಟೋಗಳಿಗಿಂತ ಕಮ್ಮಿ ಕಳಿಸಲಾಗುವುದಿಲ್ಲ. ಹಣವನ್ನು ಮುಂದಾಗಿ ಕಳಿಸಿದವರಿಗೆ ಪೋಸ್ಟೇಜ್ ಉಚಿತ. ಸ್ವಲ್ಪೇ ಪ್ರತಿಗಳನ್ನು ಮಾಡಿಸಿರುತ್ತದೆ. ಬೇಕಾದವರು ಜಾಗ್ರತೆ ಬರೆಯಿರಿ.

### —ದೊರೆಯುವ ವಿಳಾಸಗಳು—

"ಶರಣ ಸಂದೇಶ" ಕಾರ್ಯಾಲಯ
ಪೋಸ್ಟ ಆಲಮಟ್ಟಿ
ಜಿ. ವಿಜಾಪುರ

ಎಂ. ಎನ್. ಶಿವಪ್ಪ ಅಂಡ್ ಬ್ರದರ್ಸ
ಚಿಕ್ಕಪೇಟೆ ಚೌಕ
ಬೆಂಗಳೂರು ಸಿಟಿ.

---

## ಆರ್ಯಸಮಾಜ-ಕಾಂಗ್ರೆಸ್.

### ಬ್ಯಾ. ಸಾವರಕರರ ವಿಚಾರ.

ಮುಂಬೈ ಆರ್ಯ ಸಮಾಜದ ವಾರ್ಷಿಕ ಸಭೆಯ ಕಾಲಕ್ಕೆ ಹಿಂದು ಮಹಾಸಭಾ ಅಧ್ಯಕ್ಷರಾದ ಬ್ಯಾ. ಸಾವರಕರರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಆರ್ಯ ಸಮಾಜವು ಜಾತಿನಿಷ್ಠ ಸಂಸ್ಥೆಯೆಂದು ಆ ಸಮಾಜದವರನ್ನು ಕಾಂಗ್ರೆಸ್ ಕಾರ್ಯನಿರ್ವಾಹಕ ಕಮಿಟಿಯಲ್ಲಿ ತೆಗೆದುಕೊಳ್ಳದಿದ್ದರೆ ಆರ್ಯ ಸಮಾಜದವರು ಕಾಂಗ್ರೆಸ್ಸಿನಲ್ಲಿ ಸೇರಲೇಬಾರದು. ಹಿಂದುತ್ವವನ್ನು ಪೋಷಿಸುವ ಸ್ವರಾಜ್ಯವೇ ಆರ್ಯ ಸಮಾಜದವರ ಸ್ವರಾಜ್ಯವು. ಏಕೆಂದರೆ ಶ್ರೀ ಸ್ವಾಮಿ ದಯಾನಂದರು ಅಂಥ ಸ್ವರಾಜ್ಯವನ್ನೇ ಹೇಳಿದ್ದಾರೆ. ನಿಮ್ಮ ಗುರು ದಯಾನಂದರೇ ವಿನಾ ಕಾಂಗ್ರೆಸ್ ಅಲ್ಲ.

ಆರ್ಯ ಸಮಾಜದ ಪತ್ರಿಕೆಗಳಿಗೆ ಹರಿಪುರ ಕಾಂಗ್ರೆಸ್ಸಿನಲ್ಲಿ ಜಾತಿನಿಷ್ಠ ಪತ್ರಿಕೆಗಳೆಂದು ಪ್ರತಿಬಂಧಿಸಲಾಯಿತು. ಆದರೆ "ಹಿಲಾಲ" ಎಂಬ ಮುಸ್ಲಿಂ ಪತ್ರಿಕಾ ಪ್ರತಿನಿಧಿಯನ್ನು ಕಾಂಗ್ರೆಸ್ಸಿನಲ್ಲಿ ತೆಗೆದುಕೊಂಡದ್ದಾಯಿತು. ಮಹಾತ್ಮಾ ಗಾಂಧಿಯವರು ಆರ್ಯ ಸಮಾಜಕ್ಕೆ "ಜಗಳದ ಬೇರು" ಎಂದು ಹೇಳಿದ್ದಾರೆ. ಆದರೆ ಮುಸ್ಲಿಂ ಲೀಗಿನ ಸಂಬಂಧವಾಗಿ ಇಲ್ಲವೆ ಶಾಹಿದಗಂಜ್ ವ್ಯಾಜ್ಯದ ಸಂಬಂಧವಾಗಿ ಒಂದು ಶಬ್ದವನ್ನಾಗಲಿ ಆಡುವುದಿಲ್ಲ. ಭೋಪಾಳ ಸಂಸ್ಥಾನವು ರಾಮರಾಜ್ಯವೆಂದೂ ಹೇಳಿಬಿಟ್ಟದ್ದಾರೆ. ಹಿಂದು ಮಹಾಸಭೆ, ಆರ್ಯಸಮಾಜ, ಇವುಗಳನ್ನು ಕಾಂಗ್ರೆಸ್ ದೂರುವವರೆಗೂ ಅದರಲ್ಲಿ ನೀವು ಸೇರಬೇಡಿರಿ. ಮುಂದಣ ಚುನಾವಣೆ ಕಾಲಕ್ಕೆ ಹಿಂದುತ್ವ ರಕ್ಷಕರಿಗೇನೇ ಮತ ಕೊಡಿರಿ. ಆಗ ಇವರ ಕಣ್ಣು ತೆರೆಯುವುದು."

---

(೮ ನೇ ಪುಟದಿಂದ ಮುಂದರಿದುದು.)

ಪ್ರಗತಿಯ ಆಘಾತಕ್ಕೆ ವಾಣಿಜ್ಯವೂ ಸಿಕ್ಕಿ ನುಗ್ಗಾಗಿದೆ. ಇದರಿಂದ ವರ್ತಕರಾದ ಲಿಂಗಾಯತರಿಗೆ ಹೆಚ್ಚು ನಷ್ಟ. ಆದರೂ ಗುಲಬರ್ಗಾ, ಬೀದರ, ರಾಯಚೂರ, ಲಾತೂರ, ತಾಂಡೂರ, ಯಾದಗಿರಿ, ಸದಾಶಿವಪೇಟ ಮೊದಲಾದವುಗಳಲ್ಲಿ ಈಗಲೂ ಲಿಂಗಾಯತ ಪ್ರಜೆಗಳು ವ್ಯಾಪಾರವನ್ನು ಸಾಗಿಸುತ್ತಲೇ ಇದ್ದಾರೆ.

ಹೀಗೆ ಲಿಂಗಾಯತರು ನಾನಾ ವೃತ್ತಿಗಳಲ್ಲಿಯೂ ಆಘಾತವನ್ನು ಹೊಂದುತ್ತಿದ್ದಾರೆ. ಆದ್ದರಿಂದ ಪ್ರಭುಗಳವರು ಲಿಂಗಾಯತರ ಪರಿಸ್ಥಿತಿಯನ್ನು ಈ ಮೇಲೆ ತಿಳಿಸಿರುವ ವಿಷಯಗಳ ಬಗ್ಗೆ ಗಮನವಹಿಸಿ ತಕ್ಕ ಸುಧಾರಣೆಗಳ ಬಗ್ಗೆ ವಿಚಾರಿಸಬೇಕೆಂದು ನಂಬಿದ್ದೇವೆ. ಅಲ್ಲದೆ ಶೈಕ್ಷಣಿಕ ವಿಭಾಗದಲ್ಲಿಯೂ ಯೋಗ್ಯ ಸುಧಾರಣೆಗಳಾಗಬೇಕು ಎಂಬುದಾಗಿಯೂ ನಮ್ಮ ಪ್ರಾರ್ಥನೆಯಿದೆ.

ಮನೆಮನೆಯ ಉದ್ಯೋಗಗಳಿಗೆ ಪ್ರೋತ್ಸಾಹನೆ ಕೊಡಬೇಕು. ಬಣ್ಣ ತಯಾರಿಸುವದು, ಚರ್ಮ ಮುದ್ರೆಯ ಕೆಲಸ, ಕುಂಬಾರಿಕೆ ನೇಯ್ಗೆ, ಇವುಗಳಿಗೆ ಯೋಗ್ಯ ಪ್ರೋತ್ಸಾಹನವಿತ್ತು ಆ ಕೈಗಾರಿಕೆಗಳ ಅಭಿವೃದ್ಧಿಯಾಗುವಂತೆ ಯೋಚಿಸಬೇಕು.

ಬೇಸಾಯದ ಉತ್ಪನ್ನನುಲಕ್ಷಿಸಿ ಸುಂಕವನ್ನು ಇಳಿಸಿ ಯೋಗ್ಯ ಸ್ಕೇಲನ್ನು ನಿರ್ಮಿಸಬೇಕು.

ಮಾನ್ಸೂನಿನಿಂದ ಪರಾವೃತರಾಗಿ ಬೆಳೆಯಿಲ್ಲದೆ ಬಂಜೆ ಭೂಮಿಯೆಂದು ತಿಳಿಯಲ್ಪಡುತ್ತಿರುವ ಯೋಜನೆ ಮಾಡಿ ಫಲವತ್ತಾದ ಭೂಮಿಯನ್ನು ತಯಾರಿಸಬೇಕು.

ಅಲ್ಲದೆ ಒಕ್ಕಲತನ ಸಂಶೋಧನ ಸಂಸ್ಥೆಗಳನ್ನು ಸ್ಥಾಪಿಸಬೇಕು. ನಮ್ಮ ವಿದ್ಯಾರ್ಥಿಗಳಿಗೆ ಇವರೊಂದಿಗೆ ಈ ಉದ್ಯೋಗಗಳ ಜ್ಞಾನವನ್ನೂ ಮಾಡಿಕೊಡಬೇಕು ಒಕ್ಕಲಿಗನನ್ನು ಸಶಾಸ್ತ್ರೀಯವಾಗಿ ಬೆಳೆಯುವಂತೆ ಕರಬೇಕು ಮಾಡಲು ಪ್ರತಿ ಹತ್ತು ಹಳ್ಳಿಗೆ ಒಂದು ಒಕ್ಕಲತನದ ಶಿಕ್ಷಣದ ಕೇಂದ್ರವನ್ನು ಸ್ಥಾಪಿಸಬೇಕು.

ಮತ್ತು ಬೀಜದ ಹೋರಿಗಳನ್ನು ಸಂಗ್ರಹಿಸುವ ಕೇಂದ್ರಗಳೂ ಸಿದ್ಧವಾಗಬೇಕು. ಲಿಂಗಾಯತರೂ ಇನ್ನಿತರ ವಿಶಿಷ್ಟ ಜಾತಿಯವರಂತೆಯೇ ಸನ್ಮಾನಿಸಲ್ಪಡಬೇಕು.

ಮುಂಬೈಯಲ್ಲಿ ಒಂದು ಸಂಸ್ಥಾನೀ ಬ್ಯಾಂಕನ್ನೂ ಸಂಸ್ಥಾನದ ಔದ್ಯೋಗಿಕ ಕೇಂದ್ರಗಳಲ್ಲಿ ಬ್ಯಾಂಕುಗಳನ್ನೂ ಪ್ರಾರಂಭಿಸಬೇಕು. ಇದರಿಂದ ಮುಲ್ಕೀ ವ್ಯಾಪಾರಿಗಳ ಮತ್ತು ಲಿಂಗಾಯತರ ವ್ಯಾಪಾರಕ್ಕೆ ಹೆಚ್ಚು ಅನುಕೂಲವಾಗುತ್ತದೆ

## ಶಿಕ್ಷಣ ಸುಧಾರಣೆ.

ಜ್ಞಾನವು ಅನಂತಕಾಲದಿಂದಲೂ ಬ್ರಾಹ್ಮಣರ ಸೊತ್ತೇ ಆಗಿ ಬಂದಿದೆ. ಆದರೆ ೧೨ ನೇ ಶತಮಾನದ ವೀರಶೈವ ಕ್ರಾಂತಿಯಿಂದ ಅದು ಅಬ್ರಾಹ್ಮಣರಿಗೂ ಲಭಿಸಿತು. ನಮ್ಮ ಮಾತೃ ಭಾಷೆಯಾದ ಕನ್ನಡದಲ್ಲಿ 'ವಚನಗಳು' ಜೀವಗೊಂಡವು. ಅಲ್ಲದೆ ಶಿಕ್ಷಣವನ್ನು ಕೊಡುವ ಕೆಲಸವನ್ನು ಶಿವಶರಣರು 'ಮಠ' ಗಳಲ್ಲಿ ಪ್ರಾರಂಭಿಸಿದರು. ಈ ರೀತಿ ಜಾತಿ ಮತ ಭೇದವಿಲ್ಲದೆ ಅವಿಚ್ಛಿನ್ನವಾಗಿ ಸಾಮಾನ್ಯರಿಗೆ ಕೇವಲ ಪುಕ್ಕಟೆಯಾಗಿ ಜ್ಞಾನ ಪ್ರಸಾರ ಮಾಡುವ ಶಿಕ್ಷಣ ಛತ್ರಗಳೆಂದರೆ ಮಠಗಳೇ ಆಗಿವೆ. ಇಂತಹ ಮೂರು ಸಾವಿರ ಮಠಗಳು ತಮ್ಮ ಕೆಲಸವನ್ನು ಈ ನಮ್ಮ ನಿಜಾಮ ಸಂಸ್ಥಾನದಲ್ಲಿ ಸಾಗಿಸುತ್ತಲಿವೆಯೆಂದು ನಾವು ಧೈರ್ಯವಾಗಿ ಹೇಳುತ್ತೇವೆ.

ಲಿಂಗಾಯತರಲ್ಲಿ ಅನೇಕ ಕನ್ನಡ ಕವಿಗಳು ಬೆಳಕಿಗೆ ಬಂದಿದ್ದಾರೆ. ಕನ್ನಡ ಭಾಷೆಗೆ ಅವರಿಂದ ಅನೇಕ ಕಡೆ ಗೌರವ ಪ್ರಾಪ್ತವಾಗಿದೆ.

ಆದರೆ ಆಧುನಿಕ ಸುಧಾರಣೆ ಧುಮುಕುತ್ತಲೇ ನಮ್ಮ ಶಿಕ್ಷಣ ಹಿಂಬದಿಗೆ ಬಿದ್ದಿತು. ಹಳ್ಳಿಗಳಲ್ಲಿ ಪ್ರತ್ಯೇಕ ಶಾಲೆಗಳಾಗಲಿಲ್ಲ. ಪಟ್ಟಣಗಳ ಪ್ರೌಢ ಶಿಕ್ಷಣವನ್ನೂ ಕನ್ನಡವೇ ಮಾತೃಭಾಷೆಯಾಗುಳ್ಳ ನಮ್ಮ ಮಕ್ಕಳು ಮರಾಠಿ ಮೊದಲಾದ ಪರಪ್ರಾಂತೀಯ ಭಾಷೆಗಳ ಮುಖಾಂತರ ಶಿಕ್ಷಣವನ್ನು ಪಡೆಯಬೇಕಾಯಿತು. ಹೀಗಾಗಿ ಶಿಕ್ಷಣ ದೃಷ್ಟಿಯಿಂದಲೂ ನಮ್ಮ ಪಂಥದವರು ಅತ್ಯಂತ ಹಿಂದುಳಿಯಬೇಕಾಯಿತು.

ಅಲ್ಲದೇ ಇಂದಿನ ವರೆಗೆ ನಮ್ಮ ವಿದ್ಯಾರ್ಥಿಗಳಿಗೆ ಪರದೇಶ ಶಿಕ್ಷಣಕ್ಕೆ ಶಿಷ್ಯ ವೇತನಗಳು ದೊರಕಲೇ ಇಲ್ಲ. ಇವರು ಶಿಕ್ಷಣ ಕ್ಷೇತ್ರದಲ್ಲಿ ಅತ್ಯಂತ ಹಿಂದುಳಿದವರೆಂಬುದನ್ನು ತಿಳಿದು ಶಿಷ್ಯ ವೇತನದ ಪ್ರೋತ್ಸಾಹವು ಸಿಕ್ಕಬೇಕಾಗಿದ್ದಿತು. ದುರ್ದೈವದಿಂದ ಅಂತಹ ಪ್ರೋತ್ಸಾಹವೂ ನಮ್ಮ ಸಮಾಜಕ್ಕೆ ಲಭಿಸಿರುವದಿಲ್ಲ.

ಆದ್ದರಿಂದ ಇನ್ನು ಮೇಲಾದರೂ ನಮ್ಮ ಸಮಾಜದ ವಿದ್ಯಾರ್ಥಿಗಳಿಗೆ ಪರದೇಶ ಶಿಕ್ಷಣ ವೇತನಗಳೂ ಇತರ ಶಿಷ್ಯ ವೇತನಗಳೂ ದೊರೆಯಬೇಕೆಂದು ಆಗ್ರಹದಿಂದ ಪ್ರಾರ್ಥಿಸುತ್ತೇವೆ.

ಹಳ್ಳಿಯಲ್ಲೇ ನಾವು ಇರುವವರಾದ್ದರಿಂದಲೂ ಈ ಮೇಲಿನ ಪರಿಸ್ಥಿತಿಗಳಿಂದ ಶಿಕ್ಷಣದಿಂದಲೂ ಹಿಂದೂಡಲ್ಪಟ್ಟವರಾದ್ದರಿಂದಲೂ ನಮಗೆ ರಾಜಕೀಯ ಕ್ಷೇತ್ರದಲ್ಲಿಯೂ ಯೋಗ್ಯ ಸ್ಥಾನಗಳು ಸಿಕ್ಕಿರುವದಿಲ್ಲ. ರಾಜಕೀಯ ಕ್ಷೇತ್ರದಲ್ಲಿ ನಾವೂ ತಕ್ಕ ಅಧಿಕಾರವನ್ನು ಹೊಂದಲು ಯೋಗ್ಯರಾಗಿದ್ದೇವೆ. ಆದರೂ ಅದು ನಮಗೆ ಲಭಿಸಿಲ್ಲ. ನಮ್ಮ ಧರ್ಮದವರಿಗೆ ಸಾರ್ವಜನಿಕ ಕೆಲಸಗಳಲ್ಲಿ ಪ್ರಾತಿನಿಧ್ಯವಿಲ್ಲ. ನಮ್ಮಲ್ಲಿಯ ಅನೇಕ ಬಿ. ಎ. ಎಲ್‌ಎಲ್. ಬಿ. ಪದವೀಧರರೂ ಇದ್ದಾರೆ. ಇನ್ನು ಮೇಲಾದರೂ ನಮ್ಮ ಸಮಾಜದವರಿಗೆ ಈ ತರದ ಸರಕಾರೀ ಸ್ಥಳಗಳಲ್ಲಿಯಾದರೂ ಅನ್ಯಾಯವಾಗದಿರಲಿ ಎಂದು ಪ್ರಾರ್ಥಿಸುತ್ತೇವೆ.

ಅಲ್ಲದೆ ಗುಲಬರ್ಗಾ, ಬೀದರ, ಮತ್ತು ರಾಯಚೂರುಗಳನ್ನು ಬಿಟ್ಟು ಉಳಿದ ಜಿಲ್ಲೆಗಳಲ್ಲಿ ನೆಲೆಸಿದ ನಮ್ಮ ಬಾಂಧವರಿಗೆ ತಮ್ಮ ಸಂಸ್ಕೃತಿ ಭಾಷೆ ಸೊತ್ತುಗಳ ರಕ್ಷಣೆಯನ್ನು ಮಾಡಿಕೊಳ್ಳಲು ಅನುಕೂಲವಾಗುವಂತೆ ಅವರಿಗೂ ಯೋಗ್ಯ ಸ್ಥಳಗಳನ್ನು ಕಾಯ್ದಿಡಬೇಕೆಂದೂ ನಾವು ವಿನಯಪೂರ್ವಕವಾಗಿ ಪ್ರಾರ್ಥಿಸುತ್ತೇವೆ.

ಪ್ರಭುಗಳವರಿಗೆ ಯೋಗ್ಯವಾದ ಶುಭಾಕಾಂಕ್ಷೆಯನ್ನು ಕೋರಿ, ನಮ್ಮ ಪ್ರಾರ್ಥನೆಯನ್ನು ಮನ್ನಿಸಿ ನಮಗೆ ಯೋಗ್ಯ ನ್ಯಾಯವನ್ನು ಪಾಲಿಸಬೇಕಾಗಿ ಪ್ರಾರ್ಥನೆ.

ತಮ್ಮ
ಅತ್ಯಂತ ರಾಜನಿಷ್ಠೆಯ ಪ್ರಜೆಗಳು.

೧ ಹಣಮಂತರಾವ ಹಾಗರಗೀಕರ
ಹೈಕೋರ್ಟ ವಕೀಲ ಗುಲಬರ್ಗಾ.

೨. ಸದಾಶಿವಪ್ಪ ದುಂಡಪ್ಪ ಅಕ್ಕಿ
ಬಿ. ಎಸ್. ಸಿ. ವರ್ತಕರು ಗುಲಬರ್ಗಾ.

೩. ಪ್ರಭುರಾವ ಶಿದ್ರಾಮಪ್ಪ ಗಂದಿಗುಡಿ ವರ್ತಕರು
ಮತ್ತು ಜಮೀನದಾರರು ಗುಲಬರ್ಗಾ.

೪. ಸಂಗಪ್ಪ ನಂದಾಲ ವರ್ತಕರು ಗುಲಬರ್ಗಾ.

೫, ಸಂಗ್ರಾಮಪ್ಪ ಸೇಟಗಾರ ಹೈಕೋರ್ಟ
ವಕೀಲರು ಉದಗೀರ.

೬. ಶ್ರೀನಿವಾಸರಾವ ಹೈಕೋರ್ಟ ವಕೀಲರು ಹೈದರಾಬಾದ.

೭. ಪ್ರಭವಪ್ಪ ಚಾವಳೆ ವರ್ತಕರು ಲಾತೂರ.

೮. ರಾಯಿ ಕೇಶವರಾವ ದೇಶಮುಖ ಭಾಲಕಿ.

೯. ಸಿದ್ರಾಮಪ್ಪ ಯರ್ಮರಸ ಹೈಕೋರ್ಟ ವಕೀಲ
ರಾಯಚೂರು

# ಕನ್ನಡ ಗ್ರಂಥ ಮತ್ತು ಪತ್ರಿಕೆಗಳ ಪ್ರದರ್ಶನ.

ಕರ್ನಾಟಕ ಸಾಹಿತ್ಯ ಪರಿಷತ್ತು ಕಳೆದ ನಾಲ್ಕು ವರ್ಷಗಳಲ್ಲಿಯೂ ವಿಶೇಷ ಸಾಹಿತ್ಯೋತ್ಸವದ ಅಂಗವಾಗಿ ಒಂದು ಕನ್ನಡ ಗ್ರಂಥ ಪ್ರದರ್ಶನವನ್ನು ನಡೆಸಿಕೊಂಡು ಬಂದಿರುವಂತೆಯೇ ಈ ವರ್ಷವೂ ಬರುವ ಎಪ್ರಿಲ್ ತಿಂಗಳ ಕೊನೆಯ ವಾರದಲ್ಲಿ ನಡೆಯಲಿರುವ ವಸಂತ ಸಾಹಿತ್ಯೋತ್ಸವದ ಕಾಲದಲ್ಲಿ ೧೯೩೭ನೆಯ ವರ್ಷದಲ್ಲಿ ಪ್ರಕಟವಾದ ಕನ್ನಡ ಗ್ರಂಥಗಳ ಪ್ರದರ್ಶನವನ್ನು ನಡೆಸಬೇಕೆಂದು ನಿಶ್ಚಯಿಸಿದೆ. ಜತೆಗೆ ಕನ್ನಡ ಪತ್ರಿಕೆಗಳ ಪ್ರದರ್ಶನವೊಂದನ್ನು ಏರ್ಪಡಿಸಬೇಕೆಂದಿದೆ.

ಕನ್ನಡದಲ್ಲಿ ಗ್ರಂಥ ನಿರ್ಮಾಣವೂ ಪತ್ರಿಕಾ ಪ್ರಚಾರವೂ ಎಷ್ಟರ ಮಟ್ಟಿಗೆ ಮುಂದುವರಿಯುತ್ತಿವೆಯೆಂಬದನ್ನು ಮಹಾಜನರ ಅವಗಾಹನೆಗೆ ತಂದುಕೊಟ್ಟು, ಆ ಮೂಲಕ ಅವರಿಗೆ ಅವುಗಳಲ್ಲಿ ಆಸಕ್ತಿ ಹುಟ್ಟಿಸುವುದೇ ಈ ಪ್ರದರ್ಶನದ ಉದ್ದೇಶ.

ಈ ಪ್ರದರ್ಶನ ಸಮಾರಂಭಕ್ಕೆ ಎಲ್ಲ ಗ್ರಂಥಕರ್ತರೂ ಎಲ್ಲ ಪತ್ರಿಕಾಕರ್ತರೂ ಮತ್ತು ಪ್ರಕಾಶಕರೂ ನೆರವಾಗಬೇಕೆಂದು ಪರಿಷತ್ತು ಬೇಡುತ್ತದೆ.

## ಗ್ರಂಥ ಪ್ರದರ್ಶನ.

ಗ್ರಂಥ ಪ್ರದರ್ಶನದಲ್ಲಿ ೧೯೩೭ನೆಯ ಇಸವಿ ಜನವರಿ ೧ನೆಯ ತಾರೀಖಿನಿಂದ ಡಿಶಂಬರ್ ೩೧ರ ವರೆಗೆ ಪ್ರಕಟವಾದ ಎಲ್ಲ ಕನ್ನಡ ಗ್ರಂಥಗಳಿಗೂ ಸ್ಥಳವುಂಟು. ಗ್ರಂಥಗಳು ಪೂರ್ತಿಯಾಗಿಲ್ಲದಿದ್ದರೆ ಸ್ವಲ್ಪ ಭಾಗದಲ್ಲಾದರೂ ಕನ್ನಡದಲ್ಲಿರಬೇಕು. ಎಲ್ಲ ಗ್ರಂಥಗಳೂ ೧೯೩೮ನೆಯ ಎಪ್ರಿಲ್ ೧೫ರೊಳಗಾಗಿ ಪರಿಷತ್ತಿನ ಕಾರ್ಯಾಲಯಕ್ಕೆ ಬಂದಿರಬೇಕು.

ಗ್ರಂಥಗಳು ಯಾವ ವಿಷಯವಾದರೂ ಆಗಿರಬಹುದು. ಅವನ್ನು ವಿಷಯಾನುಸಾರ ಜಾತಿವಾರಾಗಿ ವಿಂಗಡಿಸಿ ಆಯಾ ಜಾತಿಗೆ ಗೊತ್ತಾದ ಸ್ಥಳದಲ್ಲಿ ಇರಿಸಲಾಗುತ್ತದೆ.

ಪ್ರತಿಯೊಂದು ಗ್ರಂಥದ ಜತೆಯಲ್ಲಿಯೂ ಈ ಕೆಳಗಿನ ವಿವರಗಳನ್ನು ತೋರಿಸುವ ಪಟ್ಟಿಯೊಂದು ಇರತಕ್ಕದ್ದು

(೧) ಗ್ರಂಥದ ಹೆಸರು; (೨) ಅಡ್ಡಹೆಸರು (ಇದ್ದರೆ;) (೩) ವಿಷಯ; (೪) ಜಾತಿ (೫) ಲೇಖಕರ ಹೆಸರು, ವಿಳಾಸ; (೬) ಪ್ರಕಟನಕರ್ತನ ಹೆಸರು, ವಿಳಾಸ; (೭) ಮೊದಲು ಪ್ರಕಟವಾದ ತಾರೀಖು; (೮) ಈಗಿನದು ಎಷ್ಟನೆಯ ಆವೃತ್ತಿ, (೯) ಈಗಿನ ಆವೃತ್ತಿಯ ತಾರೀಖು; (೧೦) ಇಲ್ಲಿಯವರೆಗೆ ಮುದ್ರಣವಾಗಿರುವ ಪ್ರತಿಗಳ ಸಂಖ್ಯೆ; (೧೧) ಉತ್ತಮ ಪ್ರತಿಯ ಬೆಲೆ; (೧೨) ಸಾಮಾನ್ಯ ಪ್ರತಿಯ ಬೆಲೆ; (೧೩) ವಿಶೇಷಾಂಶಗಳು (ದೊರೆತಿರಬಹುದಾದ ಬಹುಮಾನ ಮೊದಲಾದವು.)

ಒಂದೇ ಗ್ರಂಥ ಎರಡು ಮೂರು ತರಗಳಲ್ಲಿ ಪ್ರಕಟವಾಗಿದ್ದರೆ ಪ್ರತಿಯೊಂದು ತರದ ಪ್ರತಿಯೂ ಒಂದೊಂದು ಇರಬೇಕು.

ಪ್ರದರ್ಶನ ಮುಗಿಯುವವರೆಗೂ ಗ್ರಂಥಗಳನ್ನು ಪ್ರದರ್ಶನ ಸ್ಥಳದಿಂದ ಹೊರಗೆ ತೆಗೆದುಕೊಂಡು ಹೋಗತಕ್ಕದ್ದಲ್ಲ. ಗ್ರಂಥಗಳಿಗೆ ಸಂಬಂಧಪಟ್ಟ ಹಸ್ತಪತ್ರಿಕೆಗಳನ್ನು ಪ್ರಕಟನ ಕರ್ತರು ಕಳಿಸಿದರೆ ಅವನ್ನು ಹಂಚಲು ಏರ್ಪಾಟಾಗುವದು. ನೋಡಬಂದವರು ಗ್ರಂಥಗಳನ್ನು ಕೊಳ್ಳಲು ಬಯಸಿದಲ್ಲಿ ಅವರ ವಿಳಾಸವನ್ನು ಪ್ರಕಟನಕರ್ತರಿಗೆ ತಿಳಿಸಲಾಗುತ್ತದೆ.

ಪ್ರದರ್ಶನ ಮುಗಿದ ಬಳಿಕ ಗ್ರಂಥಗಳನ್ನು ಪ್ರಕಟನಕರ್ತರಿಗೆ ಪರಿಷತ್ತಿನ ಖರ್ಚಿನಿಂದ ಹಿಂದಿರುಗಿಸಲಾಗುತ್ತದೆ.

ಒಂದು ಬಿನ್ನಹ—ಪರಿಷತ್ತಿನ ಸರಸ್ವತೀ ಭಂಡಾರ ಇನ್ನೂ ಬಡವಾಗಿದೆ. ಪರಿಷತ್ತಿಗೆ ಹಣದ ಕೊರತೆ ಹೆಚ್ಚಾಗಿರುವುದರಿಂದ, ಗ್ರಂಥಕರ್ತರೂ ಪ್ರಕಟನಕರ್ತರೂ ತಮ್ಮ ಗ್ರಂಥಗಳನ್ನು ಸರಸ್ವತೀ ಭಂಡಾರಕ್ಕೆ ಉಚಿತವಾಗಿ ಕೊಟ್ಟರೆ ಅವನ್ನು ಕೃತಜ್ಞತೆಯಿಂದ ಸ್ವೀಕರಿಸುತ್ತದೆ.

## ಪತ್ರಿಕೆಗಳ ಪ್ರದರ್ಶನ.

ಈ ಪ್ರದರ್ಶನದಲ್ಲಿ ದಿನ ಪತ್ರಿಕೆ, ವಾರ ಪತ್ರಿಕೆ, ಮಾಸ ಪತ್ರಿಕೆ ತ್ರೈಮಾಸಿಕ ಪತ್ರಿಕೆ ಮೊದಲಾದ ಎಲ್ಲ ಬಗೆಯ ಕನ್ನಡ ವೃತ್ತಪತ್ರಿಕೆಗಳಿಗೂ ಸಾಹಿತ್ಯ ವಿಜ್ಞಾನ ಸಾಮಾಜಿಕ ಪತ್ರಿಕೆಗಳಿಗೂ ಸ್ಥಳವುಂಟು. ಪತ್ರಿಕೆಗಳು ಕನ್ನಡದುವಾಗಿರಬೇಕು. ಪತ್ರಿಕೆಯ ಪ್ರತಿಗಳು ಏಪ್ರಿಲ್ ೧೫ರೊಳಗೆ ಪರಿಷತ್ತಿನ ಕಾರ್ಯಾಲಯಕ್ಕೆ ಬಂದಿರಬೇಕು. ಪ್ರತಿಯೊಂದು ಪತ್ರಿಕೆಯ ಸದ್ಯದ ಸಂಚಿಕೆಯೊಂದನ್ನೂ ಮೊತ್ತಮೊದಲಿನ ಅಥವಾ ಆದಷ್ಟು ಹಿಂದಿನ ಸಂಚಿಕೆಯೊಂದನ್ನು ಕಳಿಸಬೇಕು. ಮೊತ್ತಮೊದಲಿನ ಅಥವಾ ಬಹಳ ಹಿಂದಿನ ಸಂಚಿಕೆಗಳನ್ನು ಎಚ್ಚರಿಕೆಯಿಂದ ನೋಡಿಕೊಂಡು ಪ್ರದರ್ಶನ ಮುಗಿದ ಬಳಿಕ ಅವನ್ನು ಪರಿಷತ್ತಿನ ಖರ್ಚಿನಿಂದ ಪ್ರಕಾಶಕರಿಗೆ ಹಿಂದಿರುಗಿಸಲಾಗುತ್ತದೆ. ಪ್ರದರ್ಶನಕ್ಕೆ ಬಂದ ಪತ್ರಿಕೆಗಳನ್ನು ಯುಕ್ತರೀತಿಯಲ್ಲಿ ವಿಂಗಡಿಸಿ ತೋರಿಸುವ ಏರ್ಪಾಟಾಗುತ್ತದೆ. ಪ್ರತಿಯೊಂದು ಸಂಚಿಕೆಯೊಡನೆಯೂ ಈ ಕೆಳಗೆ ಕಾಣಿಸಿರುವ ವಿವರಗಳನ್ನು ತೋರಿಸುವ ಪಟ್ಟಿಯೊಂದು ಇರತಕ್ಕದ್ದು.

(೧) ಪತ್ರಿಕೆಯ ಹೆಸರು; (೨) ಪ್ರಕಟನ ಕಾಲ (ದಿನ, ವಾರ, ಮಾಸ ಮೊದಲಾದವು;) (೩) ಪ್ರಕಟನ ಸ್ಥಳ; (೪) ಸಂಪಾದಕರು; (೫) ಪ್ರಕಾಶಕರು; (೬) ಸ್ಥಾಪನೆ ಯಾವಾಗ (೭) ಸ್ಥಾಪಕರು ಯಾರು; (೮) ಸಂಪಾದಕ ಪರಂಪರೆ; (೯) ಪ್ರಕಾಶಕ ಪರಂಪರೆ; (೧೦) ಪ್ರಚಾರ ಸಂಖ್ಯೆ; (೧೧) ಪ್ರಚಾರ ಪ್ರಾಂತ (ಯಾವ ಪ್ರದೇಶಗಳಲ್ಲಿ ಹೆಚ್ಚು ಪ್ರಚಾರವಿದೆಯೆಂಬುದು;) (೧೨) ಚಂದಾ ವಿವರ; (೧೩) ಸಚಿತ್ರವೆ (ಅಲ್ಲವೆ,) (೧೪) ಸರ್ಕಾರದ, ಸ್ಥಳೀಯ ಸಂಸ್ಥೆಗಳ. ಸಹಾಯ ಪ್ರೋತ್ಸಾಹ ದ್ರವ್ಯ, ಕೊಳ್ಳುವ ಸಂಖ್ಯೆ ಮೊದಲಾದವು;) (೧೫) ವಿಶೇಷಾಂಶಗಳು.

ಗ್ರಂಥಗಳ ಮತ್ತು ಪತ್ರಿಕೆಗಳ ವಿವರ ಪಟ್ಟಿಯ ನಮೂನೆಗಳನ್ನು ಅಚ್ಚು ಮಾಡಿಸಿಟ್ಟಿದೆ. ಪ್ರಕಾಶಕರು ಎಷ್ಟು ಪುಸ್ತಕಗಳನ್ನು, ಅಥವಾ ಪತ್ರಿಕೆಗಳನ್ನು, ಕಳಿಸುವರೆಂಬುದನ್ನು ದಯಮಾಡಿ ತಿಳಿಸಿದರೆ ಅಷ್ಟು ನಮೂನೆಗಳನ್ನು ಕಳಿಸಲಾಗುತ್ತದೆ.

ಹೆಚ್ಚಿನ ವಿವರಗಳಿಗೆ ದಯವಿಟ್ಟು ಪ್ರದರ್ಶನ ಚಾಲಕರಿಗೆ ಬರೆಯಿರಿ.

| ವಿ. ಸೀತಾರಾಮಯ್ಯ | ಕೆ. ವಿ. ರಾಘವಾಚಾರ್, |
| --- | --- |
| ಎಂ. ಎ., | ಎಂ. ಎ., ಬಿ. ಟಿ. |
| ವ್ಯವಸ್ಥಾಪಕ, | ಪ್ರದರ್ಶನ ಚಾಲಕ. |
| ಬೆಂಗಳೂರು. | |

## ಕರ್ನಾಟಕ ಏಕೀಕರಣ.

ಕಳೆದ ೨೯ ನೆಯ ತಾರೀಖಿನ ದಿವಸ ಕರ್ನಾಟಕ ಏಕೀಕರಣದ ದಿನವು ಕರ್ನಾಟಕದ ಎಲ್ಲ ಮುಖ್ಯ ಸ್ಥಳಗಳಲ್ಲಿಯೂ ಬಹು ಪರಿಣಾಮಕಾರಿಯಾಗಿ ಆಚರಿಸಲ್ಪಟ್ಟಿತು.

ಕರ್ನಾಟಕ ಏಕೀಕರಣಕ್ಕಾಗಿ ಪ್ರಚಂಡ ಆಂದೋಲನವನ್ನು ಹೂಡಲೇಬೇಕೆಂದೂ ಇದಕ್ಕಾಗಿ ಸತ್ಯಾಗ್ರಹವನ್ನು ಕೂಡಾ ಮಾಡಬೇಕೆಂದೂ ಅನೇಕರು ಪ್ರತಿಪಾದಿಸಿದರು.

(೬ ನೇ ಪುಟದಿಂದ ಮುಂದರಿದುದು.)

ಅಚ್ಚಕನ್ನಡಿಗರಾದ ದಿ. ಬ. ಕಂಬಳಿಯವರು ಮಂತ್ರಿಗಳಾಗಿರುವ ವರೆಗೆ ಮರಾಠಿಗರೂ, ಮರಾಠಾ ಪತ್ರಿಕೆಗಳೂ, ಅಸೂಯಾಪರರಾದ ಕೆಲವು ಕನ್ನಡಿಗರೂ ಅವರನ್ನು ಮನಬಂದಂತೆ ದೂಷಿಸಿ ಇಲ್ಲದ ಆಕ್ಷೇಪಣೆಗಳನ್ನು ಮಾಡುತ್ತಿದ್ದರು. ಈಗ ತಮ್ಮದೇ ಮಂತ್ರಿಮಂಡಲಗಳು ಅಧಿಕಾರ ಸೂತ್ರಗಳನ್ನು ವಹಿಸಿರುವದರಿಂದ ಅವರ ಹೋಳಿಗೆಯು ತುಪ್ಪದಲ್ಲಿ ಬಿದ್ದಂತೆ ಆಗಿದೆ. ಅವರ ಉಜ್ವಲ ದೇಶಾಭಿಮಾನಕ್ಕೆ, ಭಾಷಾಭಿಮಾನಕ್ಕೆ ಅಭಿನಂದಿಸುತ್ತೇವೆ. ಆದರೆ ಕರ್ನಾಟಕದ ವಿಚಾರಕ್ಕೆ ಅವರಿಗಿರುವ ತಿರಸ್ಕಾರವು ಅಳಿಯುವ ವರೆಗೆ ನಾವಾದರೂ ಅವರನ್ನು ನಮ್ಮ ಹಿತಕ್ಕಾಗಿ ಅದೇ ಭಾವದಿಂದ ನೋಡಬೇಕಾಗಿದೆ.

ಆರ್ಥಿಕ ದೃಷ್ಟಿಯಿಂದ ಕರ್ನಾಟಕ ಏಕೀಕರಣವು ಶಕ್ಯವಿಲ್ಲೆಂದು ಹೇಳಿದ ಶ್ರೀ. ಲಠ್ಠೆಯವರಿಗೆ ಕರ್ನಾಟಕದ ಆಯವ್ಯಯ ಪಟ್ಟಿಯನ್ನು ಹೊರಡಿಸಲು ಒಬ್ಬರು ವಿನಂತಿಮಾಡಿಕೊಂಡಿದ್ದಾರೆ. ಹಾಗೆ ಅವರು ಬಡ್ಜೆಟ್ ಪತ್ರಿಕೆಯಲ್ಲಿ ಹಣದ ಅಭಾವವನ್ನು ತೋರಿಸಿದರೆ ಕರ್ನಾಟಕದ ಏಕೀಕರಣವಾದರೆ ಕರ್ನಾಟಕ ಮಾತೆಯು ತನ್ನ ಪುತ್ರ ಪುತ್ರಿಯರನ್ನು ಸಂರಕ್ಷಿಸುವದಲ್ಲದೇ ಪತಿತರಾದ ನೆರೆ ಪ್ರಾಂತೀಯರಿಗೂ ಸಹ ತನ್ನ ಸಹಾಯ ಹಸ್ತವನ್ನು ಚಾಚಬಲ್ಲಳೆಂಬುದನ್ನು ಕನ್ನಡಿಗರು ಸಿದ್ಧಮಾಡಿ ಕೊಡಬಲ್ಲರೆಂಬುದನ್ನು ವಿನಯವಾಗಿ ಸೂಚಿಸುತ್ತೇನೆ. ಇದು ಕೆಲವರಿಗೆ ಮನದಟ್ಟಾಗಿದ್ದರೂ ಕರ್ನಾಟಕವು ಒಂದಾದರೆ ಸರ್ವಾಂಗಸುಂದರವಾಗಿ ತಲೆಯತ್ತಿ ಮೆರೆಯುವದನ್ನು ನೋಡಿ ಸಹಿಸಲಿಕ್ಕಾಗದೇ "ಇಕ್ಕಲಾರದ ಕೈ ಎಂಜಲು" ಎಂಬಂತೆ ಕುಂಟು ನೆವಗಳನ್ನು ಮುಂದುಮಾಡುತ್ತಿರುವದು ಸರಿಯಲ್ಲ.

ಸ್ವರಾಜ್ಯ ಮೊದಲು ಅನಂತರ ಕರ್ನಾಟಕವೆಂದೂ ಸ್ವರಾಜ್ಯ ದೊರೆತರೆ, ಕರ್ನಾಟಕ ಹಾಳಾದರೂ ಆಗಲಿ ಎಂದೂ ಹೇಳುವವರಿಗೆ ಮೊದಲು ಕರ್ನಾಟಕ ಏಕೀಕರಣ ಅನಂತರ ಸ್ವರಾಜ್ಯವೆಂದೂ ಕರ್ನಾಟಕ ಏಕೀಕರಣವಾಗದಿದ್ದರೆ ಸ್ವರಾಜ್ಯವಾಗಲೀ ಕಾಂಗ್ರೆಸ್ಸು ಮಂತ್ರಿಗಳಾಗಲೀ ಬೇಕಾಗಿಲ್ಲವೆಂದೂ ಕನ್ನಡಿಗರೇ ಸ್ಪಷ್ಟವಾಗಿ ತಿಳಿಸಬೇಕೆಂದು ಬೇಡುತ್ತೇನೆ.

ಕರ್ನಾಟಕ ಬಂಧು ಭಗಿನಿಯರೇ? ಹೊಳೆ ದಾಟದ ನಂತರ ಅಂಬಿಗರ....ನೆಂಬಂತೆ ಕಾಂಗ್ರೆಸ್ ಮಂತ್ರಿಗಳಾಗಲಿ ಕೆಲವು ಕರ್ನಾಟಕ ಸದಸ್ಯರಾಗಲಿ ಕರ್ನಾಟಕ ಏಕೀಕರಣಕ್ಕಾಗಿ ಒಪ್ಪಲಾರರೆಂದೂ ಅದಕ್ಕಾಗಿ ಪ್ರಯತ್ನಪಡಲಾರರೆಂದೂ ಸ್ಪಷ್ಟವಾದಂತಾಗಿದೆ. ಅಲ್ಲದೆ ಕಾಂಗ್ರೆಸ್ ಮಹಾಸಭೆಯಾಗಲಿ, ಮಹಾತ್ಮಾಜಿಯವರಾಗಲಿ ಕನ್ನಡಿಗರ ಬೇಡಿಕೆಯನ್ನು ಪೂರೈಸಲು ಕಾಂಗ್ರೆಸ್ ಮಂತ್ರಿಗಳಿಗೆ ಒತ್ತಾಯಮಾಡಲಾರರೆಂದೂ ಸಂಶಯ ಬರುತ್ತಿದೆ. ಇಲ್ಲವಾದರೆ ಇಷ್ಟು ಹೊತ್ತಿಗೆ ಅವರು ಮಂತ್ರಿಗಳಿಗೆ ತಮ್ಮ ಸಂದೇಶವನ್ನು ಕೊಡಬಹುದಾಗಿತ್ತು.

ಕನ್ನಡ ವೀರ ಪುತ್ರ ಪುತ್ರಿಯರೇ, ಒಂದಾನೊಂದು ಕಾಲದಲ್ಲಿ ಅಖಿಲ ಹಿಂದುಸ್ಥಾನದ ಮೇಲೆ ಸಾರ್ವಭೌಮತ್ವವನ್ನು ಮಾಡಿದ ನಮಗಿಂದು ನಮ್ಮ ಒಂದು ಕರ್ನಾಟಕದ ಏಕೀಕರಣವನ್ನು ಮಾಡಿಕೊಡಬೇಕೆಂದು ಪರರಿಗೆ ದೈನ್ಯದಿಂದ ಪರಿಪರಿಯಿಂದ ಅಂಗಲಾಚಿ ಬೇಡಿಕೊಳ್ಳುವ ಸ್ಥಿತಿಯೂ ಪ್ರಾಪ್ತವಾಗಿದೆ. ನಮ್ಮ ಪೂರ್ವಜರು ಸಾರ್ವಭೌಮತ್ವವನ್ನು ಪರರಿಂದ ಬೇಡಿ ಬೆಸಗೊಂಡು ಬಸವಳಿಯಲಿಲ್ಲ. ತಮ್ಮ ಉಜ್ವಲ ಆತ್ಮ ಬಲದಿಂದ ನಿಷ್ಕಲ್ಮಷ ಸ್ವಾರ್ಥತ್ಯಾಗದಿಂದ ಹಾಗೂ ಆತ್ಮಾರ್ಪಣಗಳಿಂದಲೇ ದೊರಕಿಸಿದರು. ಜಗತ್ತಿನ ಯಾವ ಭಾಗದ ಇತಿಹಾಸವನ್ನು ನೋಡಿದರೂ ಸ್ವಾತಂತ್ರ್ಯವು ದಾನಪೂರ್ವಕವಾಗಿ ಲಭಿಸಿಲ್ಲ. ಹಾಗಿದ್ದರೂ ಕಾರ್ಯಸಾಧನೆ ಮಾತ್ರಕ್ಕೆಂದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಹಿಂದುಸ್ಥಾನಕ್ಕೆ ಸ್ವರಾಜ್ಯವು ಹೇಗೆ ತಾನೇ ಲಭಿಸಲಾರದೋ ಅದರಂತೆ ಕರ್ನಾಟಕ ಏಕೀಕರಣವಾದರೂ ಪರರಿಂದ ಲಭಿಸಲಾರದು. ಅದನ್ನು ನಾವು ನಮ್ಮ ಸ್ವ ಸಾಮರ್ಥ್ಯ ಸತ್ಯ ಸ್ವಾರ್ಥತ್ಯಾಗ ಹಾಗೂ ಆತ್ಮಾರ್ಪಣಗಳಿಂದಲೇ ದೊರಕಿಸಲು ಸಿದ್ಧರಾಗಬೇಕು. ಯಾಕೆಂದರೆ ಸ್ವಾತಂತ್ರ್ಯವು ದಾನದ ವಸ್ತುವೇ ಅಲ್ಲ. ಪ್ರಯುಕ್ತ ಕನ್ನಡಿಗರೆಲ್ಲರೂ ನಿರ್ಮಲ ಮನಸ್ಸಿನಿಂದ ಒಂದಾಗಿ ಸಿಂಧ-ಓರಿಸಾಗಳನ್ನು ಪ್ರತ್ಯೇಕ ಪ್ರಾಂತಗಳನ್ನಾಗಿ ಮಾಡಿಕೊಂಡು ಬಂಗಾಳವನ್ನು ಒಟ್ಟುಗೂಡಿಸಿಕೊಂಡಂತ ಮುಂದಾಳುಗಳನ್ನು ಅಂದರೆ ಕೆಚ್ಚೆದೆಯಅಚ್ಚ ಕನ್ನಡಿಗರನ್ನು ನಾವೇ ಆರಿಸಿಕೊಂಡು ಸತ್ಯ ಅಹಿಂಸೆಗಳಿಂದೊಡಗೂಡಿದ ವಿಧವಿಧವಾದ ಕ್ರಾಂತಿಯಿಂದ ಕರ್ನಾಟಕ ಏಕೀಕರಣವನ್ನು ಸಾಧಿಸಬೇಕು.

ಇವುಗಳಿಗಾಗಿ ಈಗ ತಕ್ಕ ಕಾರ್ಯಕ್ರಮವನ್ನು ಕೂಡಲೇ ಕೈಕೊಳ್ಳಬೇಕು. ಕನ್ನಡಿಗರು ನಿಜವಾದ ವೀರರೂ ಸ್ವಾಭಿಮಾನಿಗಳೆಂಬುದನ್ನು ಜಗತ್ತಿಗೆ ತೋರಿಕೊಡಬೇಕೆಂದು ವಿನಯಪೂರ್ವಕವಾಗಿ ಬೇಡುತ್ತೇನೆ.

---



---

## ವೀರಶೈವ ವರನು ಬೇಕು.

ವೀರಶೈವರಲ್ಲಿಯ ಲೋಕಬಳಕಿ ಪಂಗಡಕ್ಕೆ ಸೇರಿದ ಒಂದು ದುಶೀಲ, ಸುಲಕ್ಷಣ, ಸುಶಿಕ್ಷಿತ ಪ್ರೌಢ ಕನ್ಯೆ ಇದೆ. ಇದೇ ಪಂಗಡದ ತಕ್ಕಷ್ಟು ಆದಾಯವುಳ್ಳ ಯೋಗ್ಯ ವರನು ಬೇಕಾಗಿದ್ದಾನೆ. ಅಂಥವರು ಈ ಕೆಳಗಿನ ವಿಳಾಸಕ್ಕೆ ಬರೆದು ತಿಳಿಸಬೇಕು. ವಿಹಿತ ತೋರಿದರೆ ಸಾಲಂಕೃತ ಕನ್ಯಾದಾನಮಾಡಿಕೊಡಲ್ಪಡುವದು.

"ಶರಣ ಸಂದೇಶ" ಆಫೀಸ್
ಪೋ. ಆಲಮಟ್ಟಿ
ಜಿ. ವಿಜಾಪುರ.

---

—ದಿಲ್ಲಿಯಲ್ಲಿ ಕಳೆದ ೨೫ ನೆಯ ತಾರೀಖಿನ ದಿವಸ "ಲೇಡಿ ಐರ್ವಿನ್ ಕಾಲೇಜ್" ಉದ್ಘಾಟನಾ ಸಮಾರಂಭವು ಲೇಡಿ ಲಿನ್‌ಲಿಥಗೋ ಇವರ ಹಸ್ತದಿಂದ ಬಹು ಸಂಭ್ರಮವಾಗಿ ಜರುಗಿತು. ಈ ಕಾಲೇಜಿನ ಕಟ್ಟಡಕ್ಕೆ ೫|| ಲಕ್ಷ ರೂ.ಗಳು ವೆಚ್ಚವಾಗಿವೆ.

# ಶಾಸ್ತ್ರಸಮ್ಮತವಾದ ಪುನರ್ವಿವಾಹ.

### ಶ್ರೀ. ನಿ. ಪ್ರ ಗುರುಮಠಕಲ್ಲ ಶಾಂತವೀರ ಮಹಾಸ್ವಾಮಿಗಳ ದಿವ್ಯೋಪದೇಶ.

(ಲೇಖಕ- ಶಿ. ಭೋ. ಪಾಟೀಲ ಮಾಸ್ತರ ಹಿರೇಬಾಗೇವಾಡಿ.)

ಬೆಳಗಾಂವ ಜಿಲ್ಲಾ ಹಿರೇಬಾಗೇವಾಡಿಯಲ್ಲಿ ಶ್ರೀ ರುದ್ರಪ್ಪ ಬಸನಪ್ಪ ಸುತಗಟ್ಟಿ ಈತನ ಪುನರ್ವಿವಾಹವು ಕಳೆದ ಸೋಮವಾರ ತಾರೀಖು ೨೧-೩-೩೭ ನೆಯ ದಿನ ಸುಮುಹೂರ್ತದಲ್ಲಿ ಇಲ್ಲಿಯ ಕಾಂಗ್ರೆಸ್ ಮುಂದಾಳುಗಳಾದ ಬಸವಗೌಡ ಪಾಟೀಲರವರ ನೇತೃತ್ವದಲ್ಲಿ ಜರುಗಿತು. ಈ ಪುನರ್ವಿವಾಹವು ಶಾಸ್ತ್ರ ಸಮ್ಮತವಾಗಿದ್ದರೂ ಅಜ್ಞಾನ ರೂಢಿಗಳ ಜಾಲದಿಂದ ಈ ಪದ್ಧತಿಯು ಕಳೆದ ಹಲವು ವರ್ಷಗಳಿಂದ ಲೋಪಹೊಂದಿತ್ತೆಂದೇ ಹೇಳಬಹುದು. ಆದುದರಿಂದ ಸಮಾಜೋದ್ಧಾರದ ಕಳಕಳಿಯುಳ್ಳ ಮಹಾಜನರು ಈ ವಿಷಯದ ಕಡೆಗೆ ಹೆಚ್ಚಾಗಿ ಗಮನಿಸತೊಡಗಿದ್ದಾರೆ. ಅದಕ್ಕನುಗುಣವಾಗಿ ಶಾಸ್ತ್ರಾಧಾರದಿಂದ ವಿಧಿವತ್ತಾಗಿ ಇಂಥ ಪುನರ್ವಿವಾಹಗಳು ಜರುಗುತ್ತಿರುವದು ತುಂಬಾ ಸಂತೋಷಾರ್ಹವಾದ ವಿಷಯ. ಹಲಕೆಲವು ಸುಶಿಕ್ಷಿತರು ಈ ತತ್ವವನ್ನರಿತವರಾಗಿದ್ದರೂ ಇದನ್ನು ಬಳಕೆಯಲ್ಲಿ ತರುವಾಗ ಹೆದರುವದುಂಟು. ತರಲಿಕ್ಕೆ ಯತ್ನಿಸುವರಾದರೂ ಕಾಡುಗುರುಗಳ ಆ ನಿರಕ್ಷರ ಶತ್ರು ವೃದ್ಧ ಪಿತಾಮಹರ ತಡೆಯಾಗುವುದೂ ಉಂಟು. ಹೀಗಾಗಿ ನಮ್ಮ ಜಿಲ್ಲೆಯಲ್ಲಿ ನೂರಿನ್ನೂರು ವರುಷದಿಂದ "ಉಡಿಕಿ" ಎಂಬ ಅಶಾಸ್ತ್ರೀಯವಾದ ಹಾಗೂ ಅನಿಷ್ಟವಾದ ಪದ್ಧತಿಯು ರೂಢಿಗೊಂಡಿದೆ. "ಶುಷ್ಕವಾದ ಮಾತಿಗಿಂತಲೂ ಕೃತಿಯೇ ಬೆಲೆಯುಳ್ಳದ್ದಲ್ಲವೆ ?" ಆದುದರಿಂದ ಈ ಪದ್ಧತಿಯನ್ನು ಪ್ರತ್ಯಕ್ಷ ಆಚರಣೆಯಲ್ಲಿ ತರಲು ಕಂಕಣಬದ್ಧರಾದ ನಮ್ಮೂರ ಬಸವಗೌಡರು ಈ ವಿವಾಹದ ಬಗ್ಗೆ ಇಲ್ಲಿಯ ಸುಶಿಕ್ಷಿತ ವರ್ಗದಲ್ಲಿ ವಿಚಾರವಿನಿಮಯಮಾಡಿ ವಧೂವರರನ್ನೂ ಪಾಲಕರನ್ನೂ ಒಡಂಬಡಿಸಿ ಮಹಾಸ್ವಾಮಿಗಳವರ ಹಸ್ತದಿಂದ ಕಾರ್ಯವು ಸಾಂಗವಾದರೆ ಈ ವಿವಾಹದ ಎಲ್ಲ ತಡೆಗಳು ಕಟ್ಟಾಗುವವೆಂಬುದನ್ನರಿತು, ಶ್ರೀ ಶಾಂತವೀರ ಗುರುವರರಲ್ಲಿ ಈ ವಿಷಯವನ್ನು ಅಂಕೆಮಾಡಿಕೊಂಡು ವಿವಾಹಕ್ಕೆ ಬರಲೇಬೇಕಾಗಿ ಬಿನ್ನಯಿಸಿದ್ದರಿಂದ ವೀರಶೈವ ಸಮಾಜೋದ್ಧಾರಕ್ಕೆ ಬಹು ವಿಧದಿಂದಲೂ ಯತ್ನಿಸುವ ಈ ಮಹಾಸ್ವಾಮಿಗಳವರು ಬರಲನುಗ್ರಹಿಸಿ ಮಹಾ ಸ್ವಾಮಿಗಳವರು ಲಗ್ನ ಸಮಾರಂಭಕ್ಕೆ ಆಗಮಿಸಿದರು.

**ಶ್ರೀಗಳವರು ಮಾಡಿದ ದಿವ್ಯೋಪದೇಶದ ಸಾರವು.**

೧. ಗುರುಗಳೂ ಸನಾತನಿಗಳೂ ಸುಶಿಕ್ಷಿತರೂ ಒಡಂಬಡುವಂತೆ ಈ ಪುನರ್ವಿವಾಹಕ್ಕೆ ಆಗಮದಲ್ಲಿ ಆಧಾರಗಳುಂಟೆಂಬುದನ್ನು ಸಪ್ರಮಾಣವಾಗಿ ಪ್ರತಿಪಾದಿಸಿದರು.

೨. ಮನುಸ್ಮೃತಿಯಲ್ಲಿ ಈ ವಿವಾಹ ಸಂಬಂಧವಾಗಿ ಇದ್ದ ಕೆಲವು ನಿಯಮಗಳು ಸ್ವಕಪೋಲ ಕಲ್ಪಿತವಾದವುಗಳೂ ಸ್ವಾರ್ಥ ದೃಷ್ಟಿಯಿಂದ ಬರೆದವುಗಳೂ ಆದ್ದರಿಂದ ಆ ನಿಯಮಗಳು ತ್ಯಾಜ್ಯವಾದವುಗಳೆಂದು ಸುಸ್ಪಷ್ಟವಾಗಿ ಮಂಡಿಸಿದರು.

೩. ಐತಿಹಾಸಿಕ ಪೌರಾಣಿಕ ದೃಷ್ಟಿಗಳಿಂದ ಮನುಷ್ಯ ಜಾತಿಯ ಇತಿಹಾಸ ವಿಕಾಸವಾದ ಪ್ರಗತಿ ತತ್ವಗಳನ್ನು ಸುಸಂಬದ್ಧವಾಗಿಯೂ ಸುಬೋಧವಾಗಿಯೂ ನಿರೂಪಿಸಿದರು.

೪. ಪುನರ್ವಿವಾಹವು ಸಶಾಸ್ತ್ರವೆಂಬುದನ್ನು ಶಾಸ್ತ್ರಾಧಾರ ಸುಗಮ ಪ್ರಗತಿಪರ ಅತ್ಯಾವಶ್ಯಕ ಸಹಜ ಮತ್ತು ಸ್ವಯಂ ಸಿದ್ಧವಾದುದೆಂಬುದನ್ನು ಸೂಕ್ಷ್ಮವಾಗಿ ಆಳವಾಗಿ ಗಂಭೀರವಾಗಿ ವಿವೇಚಿಸಿದರು.

೫. ಕುಲಶೀಲನಾದ ಯಾವ ವೀರಶೈವನಿಗೂ (ಭಕ್ತನಿರಲಿ ಗುರುವಿರಲಿ) ಈ ವಿವಾಹ ವಿಧಿಯನ್ನು ಮಾಡುವ ಅಧಿಕಾರವಿದೆಯೆಂಬುದನ್ನು ಮನದಟ್ಟಾಗುವಂತೆ ಮಂಡಿಸಿದರು.

೬. ತಾವು ಕಣ್ಣಾರೆ ಕಂಡ ಒಂದು ಲಗ್ನದಲ್ಲಿ ನಾಲ್ವತ್ತು ಸಾವಿರ ರೂಪಾಯಿ ವೆಚ್ಚವಾದುದನ್ನು ಹೇಳಿ ಲಗ್ನಗಳಲ್ಲಿಯ ದುಂದುಗಾರಿಕೆಯನ್ನು ವಿವರಿಸಿ ಮಿತವ್ಯಯದ ಬಗ್ಗೆ ಆದರಲ್ಲೂ ಅತ್ಯಲ್ಪ ಖರ್ಚಿನಲ್ಲಿ ಲಗ್ನಗಳಾಗುವ ಬಗ್ಗೆ ಹೃದಯಸ್ಫೂರ್ತಿಯಾದ ಭಾಷಣವನ್ನು ಮಾಡಿದರು. ಮತ್ತು ಇಂಥ ಅಲ್ಪ ಖರ್ಚಿನಿಂದಾದ ಲಗ್ನವೇ ಮಾದರಿಯ ಮೇಲ್ತರಗತಿಯ ಲಗ್ನವೆಂದು ಒಡಮೂಡುವಂತೆ ಒತ್ತಿ ಹೇಳಿದರು.

೭. ಸಾಂಪ್ರತ ಬಹುಶಃ ಲಗ್ನಮಂಟಪವೆಂದರೆ ಬಾಬು ಹಕ್ಕುದಾರರ ಗುರುಗಳ ಜಗಳದ "ಆಗರ" ವೆಂಬುದನ್ನು ಉದಾಹರಣೆಗಳಿಂದ ವಿವೇಚಿಸಿ ಅವುಗಳಿಂದ ಜರುಗುವ ಪರಿಣಾಮವು ಎಷ್ಟು ಹಾಸ್ಯಾಸ್ಪದವಾದುದೆಂಬುದನ್ನು ಬಲು ಮನೋರಂಜಕವಾಗಿ ಹೇಳಿ ಶ್ರೋತೃಗಳ ಮನಸ್ಸಿನ ಮೇಲೆ ಸಾರಸ ಪರಿಣಾಮವನ್ನುಂಟುಮಾಡಿದರು.

೮. ಕೇವಲ ದುಡ್ಡಿಗಾಗಿ ಮಂತ್ರಗಳನ್ನು ಹೇಳುವ ಅಬದ್ಧವಾಗಿ ಮಂತ್ರ ನುಡಿಯುವ ಪ್ರತಿ ಮಂತ್ರಕ್ಕೆ ಬೇರೆ ಬೇರೆಯಾಗಿ ರೊಕ್ಕ ಎಬ್ಬಿಸುವ, ಮಂತ್ರದ ಅರ್ಥವು ತನಗೆ ಸಹ ತಿಳಿಯದ ಏನೇನೋ ಹೇಳಿಬಿಡುವ ವಧೂವರರಿಗಾಗಿ ಶುಭವನ್ನು ಕೋರುವ ಲಗ್ನದಂಥ ಪವಿತ್ರ ಕಾರ್ಯದಲ್ಲಿ ಅನ್ಯಾಯವಾಗಿ ದಾನದ ಸುಲಿಗೆ ನಡೆಯಿಸಿರುವ ಆ ಕಾಡು ಗುರುಗಳ ವರ್ತನೆಯನ್ನು ಖಂಡು ತುಂಡಾಗಿ ಖಂಡಿಸಿದರು. ಅರ್ಥಾತ್ ನಿಷ್ಕಾಮ ಕರ್ಮ ಬುದ್ಧಿಯಿಂದ ಸುಪ್ರಸನ್ನ ಚಿತ್ತರಾಗಿ ಕಾರ್ಯ ನೆರವೇರಿಸಬೇಕೆಂದು ಗುರುಗಳಿಗೆ ಒಳಿತಾಗಿ ಬೋಧಿಸಿದರು.

೯. ಈ ಪುನರ್ವಿವಾಹ ಪ್ರಸಾರಕ್ಕಾಗಿ ಅಣ್ಣ ಬಸವಣ್ಣ ಅಕ್ಕಮಹಾದೇವಿಯರು ೮೦೦ ವರುಷಗಳ ಹಿಂದೆಯೇ ವಹಿಸಿದ ಪರಿಶ್ರಮವನ್ನು ತುಂಬಾ ಕೊಂಡಾಡಿದರು.

೧೦. ಸದ್ಯಕ್ಕೆ ಈ ಭರತಭೂಮಿಯಲ್ಲಿ ೮೦ ಲಕ್ಷ ವಿಧವೆಯರಿರುವರೆಂಬ ಹೃದಯದ್ರಾವಕ ಸಂಖ್ಯೆಯನ್ನು ಹೇಳಿ ಅವರ ಗತಿಯನ್ನು ವಿವರವಾಗಿ ತಿಳಿಸಿ ಪುನರ್ವಿವಾಹದ ಅವಶ್ಯಕತೆ ಎಷ್ಟೆಂಬುದನ್ನು ವೀರವತ್ತಾಗಿ ತಿಳಿಸಿ ಶ್ರೋತೃಗಳನ್ನು ಸ್ತಂಭೀಭೂತರನ್ನಾಗಿ ಮಾಡಿದರು. ಈ ಸಂದರ್ಭದಲ್ಲಿ ಶ್ರೋತೃಗಳು ವಿಸ್ಮಿತರಾದರು. ಸಖೇದಾಶ್ಚರ್ಯ ಹೊಂದಿದರು. ಪುನರ್ವಿವಾಹಕ್ಕೆ ಹೃತ್ಪೂರ್ವಕ ಒಪ್ಪಿಗೆ ಕೊಟ್ಟರು.

೧೧. ಹೇಯವಾದ ತೆರುವಿನ ಪದ್ಧತಿಯನ್ನು (ಕನ್ಯಾಶುಲ್ಕ) ತಡೆಗಟ್ಟಲು ಪ್ರೇರೇಪಿಸಿದರು. ತೆರವು ತೆಗೆದುಕೊಳ್ಳುವ ಪಾಪಿಗಳನ್ನು ಶಪಿಸಿದರು. ಕನ್ಯಾದಾನ ಮಾಡುವ ಮಹನೀಯರನ್ನು ಮನ್ನಣೆ ಮನ್ನಿಸಿದರು.

---

# ಜರ್ಮನಿಯ ನವೀನ ಧರ್ಮ!

ಜರ್ಮನಿಯಲ್ಲಿ ಕ್ರೈಸ್ತ ಮತವು ಮೂಲೆ ಗುಂಪಾಗುತ್ತಿದೆ. ಅದರ ಸ್ಥಾನದಲ್ಲಿ ಒಂದು ನವೀನ ಧರ್ಮದ ಪ್ರಸಾರವಾಗುತ್ತಿದೆ. ನಾಜಿ ತತ್ವಗಳೇ ಆ ಹೊಸ ಧರ್ಮದ ಸೂತ್ರಗಳು. ಹಿಟ್ಲರನೇ ಹೊಸ ಧರ್ಮಾವಲಂಬಿಗಳ ಆರಾಧ್ಯ ದೇವತೆ ಅವನು ಅವರ ಸರ್ವಸ್ವ. ಹಿಟ್ಲರನ ಶೋಡಶೋಪಚಾರಯುಕ್ತ ದಿವ್ಯ ಪೂಜೆ ಮಾಡಿದರೆ ಜರ್ಮನರು ತಮ್ಮ ಜನ್ಮ ಸಫಲವಾಗುವದೆಂದೂ ಇಹದಲ್ಲಿ ಸುಖ, ಪರದಲ್ಲಿ ಮೋಕ್ಷ ದೊರಕುವದೆಂದೂ ನಂಬತೊಡಗಿದ್ದಾರೆ. ನಿರಾಕಾರ ಪರಬ್ರಹ್ಮನ ಸ್ಥಾನದಲ್ಲಿ ಸಾಕಾರ ಹಿಟ್ಲರನನ್ನು ಭಕ್ತಿ ಶ್ರದ್ಧೆ ವಿಶ್ವಾಸಗಳಿಂದ ಪೂಜಿಸಿ ತಮ್ಮನ್ನು ತಾವು ಕೃತಾರ್ಥರೆಂದು ತಿಳಿಯುತ್ತಿದ್ದಾರೆ.

ನವೀನ ಧರ್ಮವನ್ನನುಸರಿಸಿ ಜರ್ಮನಿಯಲ್ಲಿ ಹೊಸ ಪ್ರಾರ್ಥನಾಲಯಗಳು ಕಟ್ಟಲ್ಪಡುತ್ತಿವೆ. ಜರ್ಮನ ಭೂಮಿ, ಕುಟುಂಬ ಮತ್ತು ಕುಲ ಹಾಗು ಹಿಟ್ಲರನ ಪೂಜೆಗಳೇ ಈ ಪ್ರಾರ್ಥನಾಲಯಗಳಲ್ಲಿ ನಡೆಯುವ ಕರ್ತವ್ಯ ವಿಧಿಗಳು. ಹಿಟ್ಲರನ ಪ್ರತಾಪವು ಅಳಿಯದಿದ್ದರೆ ಜರ್ಮನಿಯಲ್ಲಿ ಯಹೂದಿ ಕ್ರೈಸ್ತ ಮತಗಳ ಸ್ಥಾನವನ್ನು ನಾಜಿಗಳ ಈ ನವೀನ ಧರ್ಮವು ಆಕ್ರಮಿಸದೆ ಇರಲಾರದು.

ನವೀನ ಧರ್ಮದ ಪ್ರಚಾರವು ಹೇಗಾಗುತ್ತದೆ, ಎಲ್ಲಾಗುತ್ತದೆ, ಯಾಕಾಗುತ್ತದೆ ಎಂಬ ವಿಚಾರವು ಗುಪ್ತವಾಗಿರಿಸಲ್ಪಟ್ಟಿದೆ. ಆದರ ಸಂಗತಿಗಳು ವೃತ್ತ ಪತ್ರಿಕೆಗಳಲ್ಲಿ ಪ್ರಕಟವಾಗುವುದಿಲ್ಲ. ಪ್ರಪಂಚವು ಈ ನವೀನ ಧರ್ಮದಿಂದ ದಿಗಿಲುಗೊಂಡು ವಿರೋಧ ಪ್ರಚಾರ ಮಾಡದಂತೆ ಅದನ್ನು ತಡೆಯುವದಕ್ಕಾಗಿಯೇ ಹೀಗೆ ಈ ವಿಷಯವನ್ನು ನಾಜಿಗಳು ಬೇಕುಬೇಕೆಂದೇ ಗುಪ್ತವಾಗಿಟ್ಟಿದ್ದಾರೆ.

ನಾಜಿ ಪಂಗಡದ ಸ್ಥಳೀಯ ಮುಖಂಡರು ಪ್ರಾರ್ಥನಾಲಯಗಳಲ್ಲಿ ಪೌರೋಹಿತ್ಯವನ್ನು ಮಾಡುತ್ತಾರೆ. ಚರ್ಚಿನಲ್ಲಿ ಶಿಲುಬೆಯ (ಕ್ರಾಸ್) ಸ್ಥಾನದಲ್ಲಿ ಸ್ವಸ್ತಿಕಾ ಇರುತ್ತದೆ. ಯೇಸು, ಮೇರಿ ಮತ್ತು ಇತರ ಕ್ರೈಸ್ತ ಸಾಧುಸಂತರ ಚಿತ್ರಪಟಗಳ ಸ್ಥಾನದಲ್ಲಿ ಹಿಟ್ಲರ್ ಮತ್ತು ಅವನ ಪಂಗಡಕ್ಕೆ ಸೇರಿದ ಮಹಾ ಮುಖಂಡರ ಭಾವಚಿತ್ರಗಳು ತೂಗಾಡುತ್ತವೆ. ಯೇಸು, ಮೇರಿ ಮೊದಲಾದವರ ಪ್ರತಿಮೆಗಳಿರುವಲ್ಲಿ ಜರ್ಮನ್ ಮಾತೆಯ ಪ್ರತಿಮೆಯನ್ನಿಟ್ಟಿರುತ್ತಾರೆ. ನಾಲ್ಕು ಮಕ್ಕಳು ಅವಳ ಪಾದಕಮಲವನ್ನು ಮುದ್ದಿಸುವಂತೆ ಮೂರ್ತಿಯು ಕೆತ್ತಲ್ಪಟ್ಟಿರುತ್ತದೆ. ಮೂರ್ತಿಮಂತ ಜರ್ಮನ್ ಮಾತೆಯು ಜರ್ಮನರ ಯೇಸು! ಅವರಮೇರಿ! ಗೋಡೆಗಳ ಮೇಲೆ ಬೈಬಲ ವಾಕ್ಯಗಳಿರುವದರ ಬದಲಿಗೆ ನಾಜಿಗಳ ತತ್ವ ಸೂತ್ರಗಳು, ಅವರ ನೀತಿ ಧರ್ಮಗಳು, ಕುಲೀನ ಜರ್ಮನರ ನಾಮಾವಳಿಗಳು ಬರೆಯಲ್ಪಡುತ್ತವೆ.

### ಧರ್ಮ ಸೂತ್ರಗಳು

ಜರ್ಮನಿಯ ಮೇಲೆ ನಮಗೆ ಪೂರ್ಣ ವಿಶ್ವಾಸವಿದೆ. ಸತ್ಯದ ಜಯದಲ್ಲಿ ನಮಗೆ ನಂಬಿಗೆಯಿದೆ. ಸತ್ಯವೆಂದರೆ ಸಂಗ್ರಾಮ. ಜೀವನ ಸಂಗ್ರಾಮದಲ್ಲಿ ನಾವು ನಿಶ್ಚಯವಾಗಿಯೂ ಸಫಲರಾಗುವೆವು. ಯಾವಾತನು ಬಲಿಷ್ಠನೋ ಅವನೇ ನ್ಯಾಯವಂತನು; ಜರ್ಮನ ಮಕ್ಕಳ ವಿಷಯದಲ್ಲಿ ನ್ಯಾಯವು ಕಾಪಾಡಲ್ಪಡಲೇಬೇಕು. ಆ ಮಕ್ಕಳಿಗಾಗಿ ಪ್ರಾಣಕೊಡುವವನು ಧೈರ್ಯವಂತನು, ಧೀಮಂತನು; ಅವನೇ ನಿಜವಾದ ಜರ್ಮನನು.— ಇವು ನವೀನ ನಾಜಿ ಧರ್ಮದ ಕೆಲವು ನೀತಿ ಸೂತ್ರಗಳು. ಇವುಗಳನ್ನು ಓದಿದೊಡನೆ ಮೈ ಜುಮ್ಮೆನ್ನುವುದಿಲ್ಲವೆ?

### ನಿತ್ಯ ಪ್ರಾರ್ಥನೆ.

“ಹೇ ಜರ್ಮನಿ ! ನಾವು ಅಳಿದರೂ ನೀನು ಉಳಿಯುವೆ. ನಾವು ಬಾಡಿದರೂ ನೀನು ಅರಳುವೆ.

‘ಹೇ ಜರ್ಮನಿ ! ನಾವು ಏನು ಮಾಡುವೆವೋ ನಿನಗಾಗಿ ಮಾಡುವೆವು. ನಾವು ಏನು ಅರ್ಪಿಸುವೆವೋ, ನಿನಗಾಗಿ ಅರ್ಪಿಸುವೆವು.

‘ಹೇ ಜರ್ಮನಿ ! ನಾವು, ನಮ್ಮ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು ನಿನಗಾಗಿ ಹುಟ್ಟುವೆವು, ನಿನಗಾಗಿ ಬಾಳುವೆವು, ನಿನಗಾಗಿ ಸಾಯುವೆವು. ಹೇ ಜರ್ಮನಿ ! ನಾವು ನಿನಗಾಗಿ, ಕೇವಲ ನಿನಗಾಗಿ ಇರುವೆವು.’—ಇದು ನವೀನ ನಾಜಿ ಧರ್ಮಾನುಯಾಯಿಗಳ ನಿತ್ಯ ಪ್ರಾರ್ಥನೆಯ ಕ್ರಮವಾಗಿದೆ.

“ಸ್ವದೇಶಾಭಿಮಾನಿ.”

---

# ಹಿಂದುಸ್ಥಾನದ ಪವಿತ್ರ ಧರ್ಮ.

ಮಹಾತ್ಮಾ ಗಾಂಧಿಯವರು ಹಿಂದುಸ್ಥಾನದಲ್ಲಿ ಒಂದು ಪವಿತ್ರ ಧರ್ಮವನ್ನು ಸ್ಥಾಪಿಸಲು ಪ್ರಾರಂಭಿಸಿದ್ದಾರಷ್ಟೆ. ಮೊನ್ನೆ ಅಲಹಾಬಾದಿನಲ್ಲಿ ಜಾತಿಯ ಜಗಳದಿಂದ ಕೊಲೆಸುಲಿಗೆಗಳು ನಡೆದುದನ್ನು ಕುರಿತು. ತಾ. ೨೬-೩-೩೮ ನೆಯ “ಹರಿಜನ” ಪತ್ರಿಕೆಯಲ್ಲಿ ಹೀಗೆ ಬರೆದಿದ್ದಾರೆ—

### ಕಾಂಗ್ರೆಸ್ಸಿನ ಅಹಿಂಸಾ ಧರ್ಮ.

“ಕಾಂಗ್ರೆಸ್ಸಿನ ಕಾರ್ಯಕೇಂದ್ರವಾದ ಅಲಹಾಬಾದಿನಲ್ಲಿಯೇ ಮೊನ್ನೆ ಜಾತಿಯ ಜಗಳ ಮತ್ತು ದೊಂಬಿಗಳಾದವು. ಪೋಲಿಸರೂ ಸೈನ್ಯವೂ ಅವುಗಳನ್ನು ತಡೆಯಲು ಬರಬೇಕಾಯಿತು. ಇದು ಏನನ್ನು ತೋರಿಸಿತು ? ಇಂಗ್ಲಿಷರಂತೆಯೇ ಕಾಂಗ್ರೆಸ್ಸು ಕೂಡಾ ರಾಜ್ಯವಾಳಲು ಇನ್ನೂ ಸಮರ್ಥವಾಗಿಲ್ಲವೆಂದು, ಇದು ಅಪ್ರಿಯವಾದುದಾಗಿದ್ದರೂ ಸತ್ಯ ಸಂಗತಿಯು. ಆದುದರಿಂದ ನಾವು ಇದನ್ನು ಒಪ್ಪಿಕೊಂಡು ಈ ಅಸಮರ್ಥತೆಯನ್ನು ಕಳೆದುಕೊಳ್ಳಲು ಪ್ರಯತ್ನಿಸಬೇಕು.

ಕಾಂಗ್ರೆಸ್ಸು ಕೇವಲ ತನ್ನ ಪಕ್ಷದ ಪ್ರತಿನಿಧಿಯೇ ಅಲ್ಲ. ಅದು ರಾಷ್ಟ್ರದ ಪ್ರತಿನಿಧಿಯೆಂದೇ ಹೇಳಿಕೊಳ್ಳುತ್ತದಷ್ಟೆ. ಎಂದ ಮೇಲೆ ತನ್ನ ವಿರೋಧದ ಪಕ್ಷಕ್ಕೂ ಅದು ನಿಜವಾಗಿಯೇ ಪ್ರತಿನಿಧಿಯಾದಾಗ ಹಿಂದುಸ್ಥಾನವನ್ನು ಸ್ವತಂತ್ರವಾಗಿ ಆಳಲು ಸಮರ್ಥವಾಗುವುದು. ಈಗಲೂ ಇಂಥ ಜಾತಿ ದೊಂಬಿಗಳಾಗುತ್ತಿದ್ದ ಮೇಲೆ ಕಾಂಗ್ರೆಸ್ಸಿನ ಬಲವು ಹೆಚ್ಚಿದೆಯೇ ? ಎಂದು ನಾವೇ ನಮ್ಮ ಮನಸ್ಸಿಗೆ ಪ್ರಶ್ನೆ ಮಾಡಬೇಕು.

ಕಾಂಗ್ರೆಸ್ಸು ಅಹಿಂಸಾ ಧರ್ಮವನ್ನು ಅನುಸರಿಸಿದ್ದರಿಂದಲೇ ಅದಕ್ಕೆ ಇಂಥ ಅದ್ಭುತ ಶಕ್ತಿ ಬಂದಿದೆಯೆಂಬುದೇನೋ ನಿಜ. ಆದರೆ ಕಾಂಗ್ರೆಸ್ಸಿನ ಈ ಅಹಿಂಸಾ ಧರ್ಮವು ಬಲಶಾಲಿಗಳದೋ, ಅಥವಾ ನಿರ್ಬಲರದೋ? ನಿರ್ಬಲರದ್ದಾಗಿದ್ದರೆ ಇದರ ಆಚರಣೆಯಿಂದ ಮುಂದೆ ಸ್ವರಾಜ್ಯಕ್ಕೆ ನಾವು ಅಪಾತ್ರರಾಗುವೆವು. ಆದಕಾರಣ ಕಾಂಗ್ರೆಸ್ಸಿನವರು ತಮ್ಮಲ್ಲಿಯೇ ಈ ಪ್ರಶ್ನೆಯ ಉತ್ತರವನ್ನು ಹೊಂದಿ ಇದರಲ್ಲಿ ಅಂಥ ಶಕ್ತಿಯಿಲ್ಲದಿದ್ದರೆ ಹಾಗೆ ಈಗಲೇ ಸಾರಿಹೇಳುವುದು ಯುಕ್ತವು.

ಶಾಂತಿ ಸ್ಥಾಪನೆಗಾಗಿ ಪ್ರಾಣವನ್ನು ಕೊಟ್ಟ ಪಶುಪತಿನಾಥ ಗುಪ್ತರಂತೆ ಸಹಸ್ರಾವಧಿ ಸ್ವಯಂ ಸೇವಕರು ಸಿದ್ಧರಿರಬೇಕು. ಇಂಥ ಸೈನ್ಯವೇ ಜಾತಿಯ ದೊಂಬಿಯನ್ನು ನಿವಾರಣೆ ಮಾಡಿ ಶಾಂತಿಯನ್ನು ಸ್ಥಾಪಿಸುವುದು.„


ನಮ್ಮಲ್ಲಿ ಫ್ರೋಟೋ,
ಲೈನ್ ಬ್ಲಾಕುಗಳು,
ಹಿತ್ತಾಳೆ ಮತ್ತು ಸೀಸದ
ಬ್ಲಾಕುಗಳು ಅರಗಿನ
ಸೀಲು, ಜವಾನರ ಬಿಲ್ಲೆಗ
ಳು, ದೇವರ 3 ಬಣ್ಣದ
ಪತಗಳು, ಕ್ಯಾಲೆಂಡರು
ಗಳು, ನಿಮ್ಮ ಮನ
ಒಪ್ಪುವಂತೆ ತಯಾರಾ
ಗುತ್ತವೆ.
ಯೂಜನ್ರ್ಗಾ ಅಂಡ್ ಕಂ.
ಚಿಕ್ಕಪೇಟೆ,
ಬೆಂಗಳೂರು ಸಿಟಿ

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

## ಶ್ರೀ ಬಸವೇಶ್ವರ ವಚನ ಇಂಗ್ಲಿಷಿನಲ್ಲಿ ಭಾಷಾಂತರಿಸುವವರಿಗೆ

# ೨೦೦ ರೂಪಾಯಿ ಬಹುಮಾನ.

ವಿಜಾಪುರದಲ್ಲಿರುವ ರಾವಸಾಹೇಬ ಪಿ. ಜಿ. ಹಳಕಟ್ಟಿ ಬಿ. ಎ. ಎಲೆಲ್. ಬಿ. ಇವರು ಪ್ರಕಟಿಸಿರುವ ಶ್ರೀ ಬಸವೇಶ್ವರ ವಚನಗಳು ಎಂಬ ಪುಸ್ತಕದಲ್ಲಿರುವ ೧ ರಿಂದ ೨೫೦ ವಚನಗಳನ್ನು ಅವುಗಳ ಸಂಪೂರ್ಣ ಭಾವ ಮತ್ತು ಅರ್ಥವು ಬರುವಂತೆ ಉತ್ತಮವಾದ ಶೈಲಿಯಲ್ಲಿ ಇಂಗ್ಲೀಷ್ ಭಾಷೆಗೆ ತರ್ಜುಮೆ ಮಾಡಿಕೊಡತಕ್ಕವರಿಗೆ ದಾವಣಗೆರೆ ಶ್ರೀ ವೀರಶೈವ ವಿದ್ಯಾವರ್ಧಕಫಂಡ ಸಂಘದವರು ಎರಡು ನೂರು ರೂಪಾಯಿಗಳನ್ನು ಬಹುಮಾನರೂಪವಾಗಿ ಕೊಡಲು ನಿರ್ಧರಿಸಿರುತ್ತಾರೆ.

ಮೇಲ್ಕಂಡ ರೀತಿ ಎರಡು ನೂರ ಐವತ್ತು ವಚನಗಳನ್ನು ಭಾಷಾಂತರ ಮಾಡಲು ಇಷ್ಟವುಳ್ಳವರು ೧೯೩೮ ನೆಯ ಇಸ್ವಿ ಅಕ್ಟೋಬರ್ ತಿಂಗಳು ಅಖೈರ ಒಳಗಾಗಿ ಈ ಕೆಳಗಿನ ವಿಳಾಸಕ್ಕೆ ತಮ್ಮ ಭಾಷಾಂತರಗಳನ್ನು ಕಳುಹಿಸತಕ್ಕದ್ದು. ವಾಯಿದೆ ಒಳಗಾಗಿ ಬರುವ ಭಾಷಾಂತರಗಳನ್ನೆಲ್ಲಾ ಶ್ರೀ ವೀರಶೈವ ವಿದ್ಯಾವರ್ಧಕ ಫಂಡ ಸಂಘದ ಮ್ಯಾನೇಜಿಂಗ್ ಕಮಿಟಿಯಲ್ಲಿಟ್ಟು ಕಮಿಟಿಯವರು ಚುನಾಯಿಸುವ ಭಾಷಾಂತರಗಳಿಗೆ ಬಹುಮಾನವನ್ನು ಕೊಡಲಾಗುತ್ತೆ. ಹಾಗೆ ಚುನಾಯಿಸಲ್ಪಟ್ಟ ಭಾಷಾಂತರಗಳನ್ನು ವಾಪಸು ಕೊಡಲಾಗುವುದಿಲ್ಲ ಅವುಗಳನ್ನಿಟ್ಟುಕೊಂಡು ಅವುಗಳನ್ನು ಅಚ್ಚು ಹಾಕಿಸುವ ಪ್ರಾರಾಟಮಾಡುವ ವಗೈರೆ ಸಂಪೂರ್ಣ ಅಧಿಕಾರವು ಸಂಘಕ್ಕೆ ಸೇರಿದ್ದಾಗಿರುತ್ತೆ. ಕಮಿಟಿಯಲ್ಲಿ ಮಂಜೂರಾಗದೆ ಇರತಕ್ಕ ಭಾಷಾಂತರಗಳನ್ನು ಕಮಿಟಿಯ ತೀರ್ಮಾನವಾದೊಡನೆ ಅವರವರಿಗೆ ವಾಪಸು ಕಳುಹಿಸಲಾಗುವುದು. ಹೆಚ್ಚಿನ ವಿಷಯಗಳಿಗೆ ಸಂಘದ ಸೆಕ್ರೆಟರಿಗಳಿಗೆ ಬರೆದು ತಿಳಿದುಕೊಳ್ಳಬಹುದು.

ಸೆಕ್ರೆಟರಿ—

ಶ್ರೀ ವೀರಶೈವ ವಿದ್ಯಾವರ್ಧಕ ಫಂಡ್ ಸಂಘ
ದಾವಣಗೆರೆ

---

### ಇದೇ ತಾ. ೧೪-೪-೩೮ ನೇ ಗುರುವಾರ ಜರುಗುವ

# ಶ್ರೀ ಅಕ್ಕಮಹಾದೇವಿಯ ಜಯಂತಿಗಾಗಿ

## ಶ್ರೀ ಅಕ್ಕ ಮಹಾದೇವಿಯು ಶ್ರೀಶೈಲ ಪರ್ವತದ ಕದಳೀ ವನದಲ್ಲಿ ಕುಳಿತುಕೊಂಡು ಲಿಂಗಪೂಜೆಮಾಡುತ್ತಿರುವ ಫೋಟೋ.

ಸೈಜ್ ೧೦×೧೪ ರದು ಹೊಸದಾಗಿ ಮಾಡಿಸಿದೆ. ಪ್ರಚಾರದ ಉದ್ದಿಶ್ಯವಾಗಿ ಜಯಂತಿಯ ಕಾಲದಲ್ಲಿ ಜಯಂತಿಯ ಸಂಘದವರು ಮತ್ತು ಮಹಾಜನರು ಉಚಿತವಾಗಿ ಹಂಚಲು ಅನುಕೂಲವಾಗುವಂತೆ ಬಹಳ ಕಡಿಮೆ ಬೆಲೆಗೆ ದೊರೆಯುವಂತೆ ಏರ್ಪಡಿಸಿರುತ್ತದೆ.

ನೂರು ಫೋಟೋಗಳಿಗೆ ೬-೦-೦ ರೂಪಾಯಿ. ೨೫ ಫೋಟೋಗಳಿಗಿಂತ ಕಮ್ಮಿ ಕಳಿಸಲಾಗುವುದಿಲ್ಲ. ಹಣವನ್ನು ಮುಂದಾಗಿ ಕಳಿಸಿದವರಿಗೆ ಪೋಸ್ಟೇಜ್ ಉಚಿತ. ಸ್ವಲ್ಪೇ ಪ್ರತಿಗಳನ್ನು ಮಾಡಿಸಿರುತ್ತದೆ. ಬೇಕಾದವರು ಜಾಗ್ರತೆ ಬರೆಯಿರಿ.

—ದೊರೆಯುವ ವಿಳಾಸಗಳು—

"ಶರಣ ಸಂದೇಶ" ಕಾರ್ಯಾಲಯ
ಪೋಷ್ಟ ಆಲಮಟ್ಟಿ
ಜಿ. ವಿಜಾಪುರ.

ಎಂ. ಎನ್. ಶಿವಪ್ಪ ಅಂಡ್ ಬ್ರದರ್ಸ
ಚಿಕ್ಕಪೇಟೆ ಚೌಕ
ಬೆಂಗಳೂರು ಸಿಟಿ.

---

—ವ್ಹಾಯಿಸ್‌ರಾಯರಾದ ಲಾರ್ಡ ಲಿನ್ ಲಿಥಗೋರವರು ೪ ತಿಂಗಳು ವಿಶ್ರಾಂತಿಗಾಗಿ ಇಂಗ್ಲೆಂಡಿಗೆ ಹೋಗುವರು. ಅವರ ಸ್ಥಳಕ್ಕೆ ಈಗಿನ ಬಂಗಾಲದ ಗವ್ಹರ್ನರರಾದ ಲಾರ್ಡ ಬ್ರೆಬರ್ನರವರು ವ್ಹಾಯಿಸ್‌ರಾಯರಾಗಿ ನಿಯಮಿಸಲ್ಪಟ್ಟಿದ್ದಾರೆ.

—ಹಿಂದುಸ್ಥಾನದಲ್ಲಿ ಸಂಚರಿಸಿ ಈಗ ತಾನೇ ಇಂಗ್ಲೆಂಡಿಗೆ ಹೋದ ಸರ್. ಜಾನ್ ವಿಲ್ಲೆ ಎಂಬುವವರು ಕಾಂಗ್ರೆಸ್ ಮಂತ್ರಿ ಮಂಡಲಗಳು ಸಮರ್ಥತೆಯಿಂದ ರಾಜ್ಯಭಾರ ನಡೆಸಿವೆಯೆಂದೂ ಸಂಯುಕ್ತ ರಾಜ್ಯಘಟನೆಯನ್ನು ಜಾಗ್ರತೆ ಆಚರಣೆಯಲ್ಲಿ ತರಬೇಕೆಂದೂ ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸಿದ್ದಾರೆ.

—ಮಂಗಳೂರ ಜಿಲ್ಲಾ ನೀಲೇಶ್ವರ ಎಂಬಲ್ಲಿ ಸಿಡಿಲು ಹೊಡೆದು ೧೧ ಜನರು ಮೃತಪಟ್ಟರು. ೪೦ ಜನರಿಗೆ ಗಾಯಗಳಾಗಿವೆ.

—ಎರಡು ಸಾವಿರಕ್ಕಿಂತ ಹೆಚ್ಚು ಜನಸಂಖ್ಯೆಯುಳ್ಳ ಪ್ರತಿಯೊಂದು ಗ್ರಾಮದಲ್ಲಿಯೂ ಗ್ರಾಮ ಪಂಚಾಯತಿಯನ್ನು ಸ್ಥಾಪಿಸಬೇಕೆಂದೂ ಅದರ ಸದಸ್ಯರು [illegible] ಜನರಿಂದ ಆರಿಸಲ್ಪಟ್ಟವರಿರಬೇಕೆಂದೂ ಮುಂಬೈ ಅಸೆಂಬ್ಲಿಯಲ್ಲಿ ಒಂದು ಗೊತ್ತುವಳಿಯಾಯಿತು.

—ಶಾಹಿದಗಂಜ ಸತ್ಯಾಗ್ರಹವು ಇನ್ನೂ ನಡೆದಿದೆ. ಒಪ್ಪಂದ ಮಾಡಿಸಬೇಕಾಗಿ ಗಾಂಧೀಜಿಯವರಲ್ಲಿಯೂ ಕೆಲವರು ಹೇಳಿಕೊಂಡಿದ್ದಾರಂತೆ.

—ಮುಂಬೈ ಸರಕಾರದವರು ಇದೇ ಎಪ್ರೆಲ್ ೧ ನೆಯ ತಾರೀಖಿನಿಂದ ಒಟ್ಟು ೨೦೦ ಮದ್ಯದಂಗಡಿಗಳನ್ನು ನಿಷ್ಟಿಸಿಬಿಟ್ಟಿದ್ದಾರೆ. ಅವುಗಳಲ್ಲಿ ೧೨ ಅಂಗಡಿಗಳು ಮಾತ್ರ ವಿಜಾಪುರ ಜಿಲ್ಲೆಗೆ ಸಂಬಂಧಿಸಿದ್ದವು.

॥ ಶ್ರೀಗುರು ಬಸವಲಿಂಗಾಯ ನಮಃ ॥

## ಎಲ್ಲ ಊರುಗಳಲ್ಲಿಯೂ ಶ್ರೀ ಬಸವಜಯಂತಿ ಮಹೋತ್ಸವ ಸಮಯದಲ್ಲಿ ಅತ್ಯವಶ್ಯ ಮಾಡಬೇಕಾದ

# ವೀರಶೈವ ಪ್ರತಿಜ್ಞಾಪಂಚಕ

ರಚಿಸಿದವರು:—ಶ್ರೀ. ಕಲ್ಲಿನಾಥ ಶಾಸ್ತ್ರಿಗಳು ಹಿರೇಮಠ ದ್ಯಾಂಪುರ.

ಉ. ಮಾ. ವೃ.

೧ ನೆಯ ಪ್ರತಿಜ್ಞೆ.

ಶ್ರೀ ಶಿವಲಿಂಗಧಾರಕನು ಕಾಯಕಮೇನನು ಗೈವುತಿರ್ದಡುಂ|
ದೋಷವಿದೂರನೆಂದರಿದು ತೋಷವನೊಂದುತೆ ಮಾಳ್ಪ ಭೋಜನಂ॥
ಕೂಸನು ಕೊಟ್ಟು ಕೊಳ್ಳುವೆವು; ನಮ್ಮೊಳಭೇದದ ಮೇಲು-ಕೀಳ್ಗಳಂ
ನಾಶಪೆನೀಯುವೆಂ ಸಮತೆಯಾದ ಜನಕ್ಕೆ ಸಮಾಜದೊಳ್ ಜವಂ ||೧||

೨ ನೆಯ ಪ್ರತಿಜ್ಞೆ.

ಪುರಾಲ ನಿವಾಸಿಯಾಗಿರಲಿ, ಹಾರುವನಾಗಲಿ, ಹೆಂಗಸಾಗಲೀ |
ಹ..ಲಲನಾತ್ಮಜಾತರೊಳಗಾವನು ವನಾಗಲಿ, ವೀರಶೈವದೊಳ್॥
ಶೀಲವನೊಂದಿ ಬಪ್ಪನಿಗೆ ಸದ್ಗುರುವರ್ಯನ ಹಸ್ತಪದ್ಮದಿಂ |
ಕಾಲನನೇನನುಂ ಕಳೆಯದಾಗಲೆ ಲಿಂಗವನಿತ್ತು ವಂದಿಪೆಂ ||೨||

೩ ನೆಯ ಪ್ರತಿಜ್ಞೆ.

ಕಂದ.

ಘನತರ ಸಮಾಜದೇಳ್ಗೆಗೆ |
ಮಿನುಗುವ ತರತರದ ಕಲೆಗಳಂ ಬೆಳಸಲಿಕೆ ||
ವನಿತೆಯರುನ್ನತಿಗೋಸುಗ |
ತನು ಮನ ಧನಗಳನು ಮೀಸಲೆಂದಿಡುವೆ ನಿಜಂ ||೩||

ಉ. ಮಾ. ವೃ.

೪ ನೆಯ ಪ್ರತಿಜ್ಞೆ.

ನಮ್ಮಯ ಧರ್ಮ ದೇಶ ಮತಭಾಷೆ ಮಠಂ ಗುಡಿ ಗೋಧ್ವಜಂಗಳಂ|
ಹಮ್ಮಲಿ ವೈರಿಗಳ್ ನಶಿಸಲಿಚ್ಛಿಸೆ, ಜೀವದ ಹಂಗ ನೀಗಿ ಮೇ ||
ಣೊಮ್ಮನದಿಂದ ರಕ್ಷಿಸುವೆ; ವೈರಿಗಳಿಂಗೆದೆಗೊಟ್ಟು ನಿಲ್ವೆನೆ !
ನ್ಮವ್ಮೊಳು ಪುಟ್ಟುತಿಪ್ಪ ಕಲಹಾಗ್ನಿಯನಲ್ಲಿಯೆ ನಂದಿಪೆಂಗಡಾ ||೪||

೫ ನೆಯ ಪ್ರತಿಜ್ಞೆ.

ನಾಲಕು ವರ್ಣ ಜುಟ್ಟು ಜನಿವಾರದ ಸೂತಕ ಯಜ್ಞ ಯಾಗದಾ|
ಜಾಲದಿ ಸಿಲ್ಕಿ ಬೀಳೆ, ಪರದೇಶದ ವಸ್ತುವ ಕೊಳ್ಳೆನಾವಗಂ ||
ಶೀಲನಿದೇ ಸ್ವದೇಶದೊಡವೆಂಗಳ ಧಾರಣ ಮಾಳ್ಪುದೆಂಬುವೆಂ, |
ಪಾಲಕ ಮಂತ್ರಮೂರ್ತಿ ಬಸವಣ್ಣನ ಬೋಧೆಯಬೀರ್ವೆ ಲೋಕದೊಳ್ ||೫||

ಕಂದ

ವರವೀರಶೈವ ಸಮಯಿಯು |
ಪರತರ ಪಂಚಪ್ರತಿಜ್ಞೆ ಬಸವಜಯಂತೀ ||
ಪಿಂದಹ ಪರ್ವದಿ ಗೈಯಲು |
ಚರಸೇವಕ ಕಲ್ಲಿನಾಥ ನೊಲವಿಂದೊರೆದಂ ||

ಗದಗ
ಶಕೆ ೧೮೬೦ ಬಹ.ಧಾನ್ಯ
ಯುಗಾದಿ.
-ಪ್ರಕಾಶಕರು-
ಮಡಿವಾಳಪ್ಪ ಮತ್ತು ಸೋದರರು,
ಶ್ರೀ ಶಿವಾನಂದ ಮುದ್ರಣದ ಒಡೆಯರು.

## ಇಂಗ್ಲೆಂಡಿನ ಬಟ್ಟೆ ವ್ಯಾಪಾರ.

### ಹಿಂದುಸ್ಥಾನದ ಬಟ್ಟೆ.

ಇಂಗ್ಲೆಂಡಿನ ನೂಲಿನ ಬಟ್ಟೆಯು ೧೯೧೩ ನೆಯ ಇಸವಿಯಲ್ಲಿ ಎಷ್ಟು ಪರದೇಶಕ್ಕೆ ಹೋಗಿದ್ದಿತು? ಅನಂತರ ೧೯೩೭ ರಲ್ಲಿ ಎಷ್ಟು ಪರದೇಶಕ್ಕೆ ಹೋಯಿತು? ಎಂಬುದನ್ನು ತಿಳಿಸಬೇಕಾಗಿ ಪಾರ್ಲಮೆಂಟಿನಲ್ಲಿ ಮಿ. ಟಾಮ್‌ಲಿನ್ಸನ್ ಎಂಬುವವರು ಕೇಳಿದರು.

ಅದಕ್ಕೆ ಉತ್ತರವಾಗಿ ಬೋರ್ಡ ಆಫ್ ಟ್ರೇಡದ ಅಧ್ಯಕ್ಷರಾದ ಮಿ. ಸ್ಟನಲೆ ಎಂಬುವವರು ಹೀಗೆ ಹೇಳಿದರು—

"೧೯೧೩ ರಲ್ಲಿ ೯. ೭ ಕೋಟಿ ಪೌಂಡುಗಳ ಬಟ್ಟೆ ಪರದೇಶಗಳಿಗೆ ಹೋಗಿದ್ದಿತು. ಅದರಲ್ಲಿ ೩. ೪ ಕೋಟಿ ಪೌಂಡು ಬಟ್ಟೆಯನ್ನು ಹಿಂದುಸ್ಥಾನವು ತೆಗೆದುಕೊಂಡಿದ್ದಿತು. ೧೯೩೭ ನೆಯ ಇಸವಿಯಲ್ಲಿ ೪. ೪ ಕೋಟಿ ಪೌಂಡು ಬಟ್ಟೆ ಮಾತ್ರ ಪರದೇಶಗಳಿಗೆ ಹೋಯಿತು. ಅದರಲ್ಲಿ ಅರ್ಧ ಕೋಟಿ ಪೌಂಡು ಬಟ್ಟೆಯನ್ನು ಮಾತ್ರ ಹಿಂದುಸ್ಥಾನವು ತೆಗೆದುಕೊಂಡಿತು."

ಈ ವ್ಯತ್ಯಾಸವನ್ನು ನೋಡಿ ಹಿಂದುಸ್ಥಾನದ ಸಂಗಡ ವ್ಯಾಪಾರದ ಒಪ್ಪಂದವಾಗುವುದು ಅತ್ಯಗತ್ಯವೆಂದು ಮಿ. ಲಿನ್ಸನ್‌ರು ಪ್ರತಿಪಾದಿಸಿದರು. ಬ್ರಿಟಿಶ್ ಗಲಿಚಾಗಳಿಗೆ ೧೦೦ ಕ್ಕೆ ೨೫ ರಂತೆ ಸುಂಕವನ್ನು ಹಿಂದುಸ್ಥಾನದಲ್ಲಿ ಕೊಡಬೇಕಾಗಿದೆ. ಆದರೆ ಹಿಂದ ಗಲಿಚಾಗಳಿಗೆ ಮಾತ್ರ ಇಂಗ್ಲೆಂಡಿನಲ್ಲಿ ಸುಂಕವಿಲ್ಲ. ಈ ವ್ಯತ್ಯಾಸವನ್ನು ಮುಂದಿನ ಒಪ್ಪಂದದ ಕಾಲಕ್ಕೆ ಲಕ್ಷಿಸಬೇಕಾಗಿ ತಿಳಿಸಿದರು.



ಶಾ. ಶ. ೧೮೬೦ ನೆಯ ಚೈತ್ರ ಶು|| ೧೨ ಸೋಮವಾರ.

# ಜಾತಿಯ ಜಗಳ ನಿಲ್ಲುವ ಬಗೆ.

ಹಿಂದುಸ್ಥಾನದಲ್ಲಿ ಸಾವಿರಾರು ಜಾತಿಗಳಿರುವುದರಿಂದ ಪರ
ಸ್ಪರ ಜಗಳಾಡುತ್ತಿರುವುದು ಸ್ವಾಭಾವಿಕವು. ಈ ಜಾತಿಯ ಜಗಳ
ಗಳಲ್ಲಿ ಹಿಂದು-ಮುಸಲ್ಮಾನರ ಜಗಳವೇ ಬಹು ಹೆಚ್ಚಿನದು.
ಆದುದರಿಂದ ಹಿಂದು-ಮುಸಲ್ಮಾನರ ಜಾತಿಯ ಜಗಳವೊಂದು
ನಿಂತು ಹೋದರೆ ಇನ್ನಿತರ ಜಾತಿಗಳಲ್ಲಿ ಆಗುತ್ತಿರುವ ಚಿಕ್ಕ ಪುಟ್ಟ
ಜಗಳಗಳನ್ನು ತಡೆಯಲು ಅಷ್ಟೇನೂ ಯೋಚಿಸಬೇಕಾದುದಿಲ್ಲ.
ಅವುಗಳಿಗೆ ರಾಷ್ಟ್ರೀಯ ಸ್ವರೂಪವೂ ಇಲ್ಲ.

ಅಂತೆಯೇ ಹಿಂದು - ಮುಸಲ್ಮಾನರಲ್ಲಿಯ ಜಗಳಗಳ ಕಾರಣ
ಗಳನ್ನು ತೆಗೆದು ಹಾಕಿ ಈ ಉಭಯ ಪ್ರಚಂಡ ಸಮಾಜಗಳಲ್ಲಿ
ಪರಸ್ಪರ ಪ್ರೇಮಾದರಗಳುಂಟಾಗುವಂತೆ ಅನೇಕರು ಅನೇಕ ರೀತಿ
ಗಳಿಂದ ಈ ವರೆಗೂ ಪ್ರಯತ್ನಿಸುತ್ತಾ ಬಂದಿದ್ದಾರೆ. ಮಹಾತ್ಮಾ
ಗಾಂಧಿಯವರೂ ಈ ದೇಶದ ರಾಜಕಾರಣದಲ್ಲಿ ಪ್ರವೇಶಿಸಿದನಂತರ
ಈ ಸಂಬಂಧವಾಗಿ ಪ್ರಯತ್ನಿಸಿ, ಉಪವಾಸ ವ್ರತವನ್ನು ಕೂಡಾ
ಆಚರಿಸಿ, ಇತ್ತೀಚಿಗೆ ಆ ವಿಷಯವನ್ನೇ ಬಿಟ್ಟುಬಿಟ್ಟಿದ್ದರು.

## ಗಾಂಧೀಜಿಯವರ ಸೂಚನೆ.

ಮೊನ್ನೆ ಅಲಹಾಬಾದಿನಲ್ಲಿ ಭಯಂಕರವಾಗಿ ಮುಸಲ್ಮಾನರ
ದೊಂಬಿಯಾದುದರಿಂದಲೂ ಅದನ್ನು ಕಾಂಗ್ರೆಸ್ ಸರಕಾರವು
ಇಂಗ್ಲಿಷ್ ಸರಕಾರದಂತೆಯೇ ಪೋಲಿಸ್ ಮತ್ತು ಸೈನ್ಯಗಳ ಬಲ
ದಿಂದ ನಿಲ್ಲಿಸಿದ್ದರಿಂದಲೂ ಗಾಂಧೀಜಿಯವರು ಮತ್ತೆ ಈ ವಿಷ
ಯದ ಕಡೆಗೆ ಲಕ್ಷಿಸಿ ಹಿಂದು-ಮುಸಲ್ಮಾನರ ಕಲಹ ನಿವಾರಣೆಯ
ಉಪಾಯವನ್ನು ಕುರಿತು ಪ್ರಸ್ತಾಪಿಸಿದ್ದಾರೆ.

ರಾಜಕಾರಣದಲ್ಲಿ ಈಗ ಕಾಂಗ್ರೆಸ್ ಪಕ್ಷವು ಹೇಗೆ ಅಹಿಂ
ಸಾ ಮಾರ್ಗವನ್ನು ಅನುಸರಿಸಿದೆಯೋ ಹಾಗೆಯೇ ಈ ಜಾತಿಯ
ಜಗಳದಲ್ಲಿಯೂ ಅಹಿಂಸಾ ಮಾರ್ಗವನ್ನೇ ಅನುಸರಿಸಬೇಕೆಂದು
ಗಾಂಧೀಜಿಯವರು ಸೂಚಿಸಿದ್ದಾರೆ. ಮುಸಲ್ಮಾನರು ಹಿಂದುಗಳ
ಮೇಲೆ ದೊಂಬಿ ಎದ್ದು ಅವರನ್ನು ಕೊಲ್ಲಲಾರಂಭಿಸಿದರೆ ಹಿಂದು
ಗಳು ಹೇಡಿಗಳಂತೆ ಓಡಿ ಹೋಗಬಾರದು. ಅಥವಾ ಅವರಂತೆ
ಯೇ ಕ್ರೂರಕೃತ್ಯಗಳನ್ನೂ ಮಾಡಬಾರದು. ಮುಸಲ್ಮಾನರ ಬಡ
ಗಿಗೆ ತಮ್ಮ ತಲೆಯನ್ನು ವೀರತನದಿಂದ ಕೊಟ್ಟು ಅವರ ಹಿಂಸೆ
ಯನ್ನು ತಮ್ಮ ಅಹಿಂಸೆಯಿಂದಲೇ ಗೆಲ್ಲಬೇಕು.

ಹಿಂದುಗಳು ಮುಸಲ್ಮಾನರನ್ನು ಕೊಲ್ಲಲು ಬಂದರು ಕೂಡಾ
ಅವರೂ ಹೀಗೆಯೇ ಅಹಿಂಸಾ ಮಾರ್ಗವನ್ನೇ ಅನುಸರಿಸಬೇಕೆಂ
ದೇ ಗಾಂಧೀಜಿಯವರು ಅಪೇಕ್ಷಿಸುತ್ತಾರೆ. ಹೀಗೆ ಸಾವಿರಾರು
ಜನರು ಜಾತಿಯ ಜಗಳವನ್ನು ನಿಲ್ಲಿಸಲು ಆತ್ಮಾರ್ಪಣಮಾಡಬೇ
ಕೆಂದೇ ಗಾಂಧೀಜಿಯವರ ಅಭಿಪ್ರಾಯ.

## ಈ ವರೆಗಿನ ಅನುಭವ.

ಮಹಾತ್ಮಾಜಿಯವರ ಈ ತತ್ವೋಪದೇಶವೇನೋ ಬಹು ಪವಿ
ತ್ರವಾದುದು. ಮನುಷ್ಯ ಜಾತಿಗೆ ಕ್ಷೇಮಕರವೂ ಆದುದು. ಆದ
ರೆ ಜನಸಾಮಾನ್ಯರ ಆಚರಣೆಯಲ್ಲಿ ಬರುವುದು ಶಕ್ಯವೆ? ಎಂಬು
ದೇ ಮುಖ್ಯ ಪ್ರಶ್ನೆಯು. ರಾಜಕಾರಣದಲ್ಲಿ ಇದು ಈಗ ಶಕ್ಯ
ವಾಯಿತೆಂದೂ ಮೊದಲು ಅನೇಕರು ರಾಜಕಾರಣದಲ್ಲಿ ಅಹಿಂಸೆ
ಯು ಅಶಕ್ಯವೆಂದೇ ಹೇಳಿದ್ದರೆಂದೂ ಪ್ರಬಲವಾದ ಇಂಗ್ಲಿಷ ಸರ
ಕಾರವು ಕೂಡಾ ಅಹಿಂಸಾಮಾರ್ಗದ ಕಾಂಗ್ರೆಸ್ಸಿಗೆ ತಲೆಬಾಗಿತೆಂದೂ
ಮೇಲಣ ಪ್ರಶ್ನೆಗೆ ಕೆಲವರ ಉತ್ತರ.

ಈ ವರೆಗೆ ನಡೆದ ಹಿಂದು-ಮುಸಲ್ಮಾನರಲ್ಲಿಯ ಜಗಳಗಳ
ನ್ನು ನೋಡಿದರೆ ಮುಕ್ಕಾಲು ಪಾಲಿಗಿಂತಲೂ ಹೆಚ್ಚಾಗಿ ಮುಸ
ಲ್ಮಾನರೇ ಜಗಳವನ್ನು ಹೂಡಿದ್ದಾರೆಂದೂ ಅವರು ಮೊದಲೇ ಯೋ
ಚಿಸಿ ಸಂಘಟಿತರಾಗಿಯೇ ಹಿಂದುಗಳ ಮೇಲೆ ಏರಿಬರುತ್ತಿದ್ದಾರೆಂ
ದೂ ದೊಂಬಿಯಲ್ಲಿ ಹಿಂದುಗಳೇ ಪ್ರಾಣ ಧನಗಳಿಂದ ಹೆಚ್ಚಾಗಿ
ನಷ್ಟಹೊಂದುತ್ತಿದ್ದಾರೆಂದೂ ಸ್ಪಷ್ಟವಾಗುತ್ತದೆ.

ಇಂಗ್ಲಿಷರು ಈ ದೇಶಕ್ಕೆ ಬೇರೆಯವರಾಗಿರುವುದರಿಂದ ಅವರು
ನಮ್ಮ ನಮ್ಮಲ್ಲಿ ಯಾರು ಜಗಳವನ್ನು ಹೂಡಿದರೂ ಹಿಂದು-ಮುಸ
ಲ್ಮಾನರ ಜಗಳವೆಂದೇ ಅದಕ್ಕೆ ಹೇಳುತ್ತ ಬಂದಿದ್ದಾರೆ. ಈಗಲೂ
ಹಾಗೆಯೇ ಹೇಳುವ ರೂಢಿಯುದೆ. ನಿಜವಾದ ರೀತಿಯಿಂದ ಹೇಳ
ಬೇಕೆಂದರೆ ಮುಸಲ್ಮಾನರ ದೊಂಬಿ ಎಂದು ಹೇಳಿಸಿಕೊಳ್ಳುವಂತಹ
ಜಗಳಗಳೇ ಅತ್ಯಧಿಕ.

ಹೀಗಿರುವಾಗ ಆತ್ಮ ಸಂರಕ್ಷಣೆಯ ಪ್ರಯತ್ನವನ್ನೂ ಹಿಂದು
ಗಳು ಬಿಟ್ಟು ಅವರ ಬಡಗಿ, ಕತ್ತಿ, ಕಠಾರಿಗಳಿಗೆ ತಲೆಯನ್ನೇ
ಕೊಟ್ಟರೆ ಅವರ ದೊಂಬಿಗಾರಿಕೆಯು ಮತ್ತಿಷ್ಟೂ ಉಗ್ರವಾಗಲಾ
ರದೆ? ರಾಜಕಾರಣದಲ್ಲಿ ಮುಸಲ್ಮಾನರಿಗೆ ಹೆಚ್ಚು ಸೌಲಭ್ಯಗಳನ್ನು
ಕೊಟ್ಟು ಅವರ ಮನಸ್ಸನ್ನು ಒಲಿಸಬೇಕೆಂಬ ಹಿಂದುಗಳ ಪ್ರಯ
ತ್ನವು ಈಗ ಎಷ್ಟರಮಟ್ಟಿಗೆ ಫಲಕಾರಿಯಾಗಿದೆ? ಅಸಂಖ್ಯ ಮುಸ
ಲ್ಮಾನರ ಸ್ವಾರ್ಥವು ದಿನೆ ದಿನೆ ಹೆಚ್ಚುತ್ತಲೇ ಬಂದಿಲ್ಲವೆ?

ಇಂಗ್ಲಿಷರು ತಾವು ಈ ದೇಶವನ್ನು ಎಂದಾದರೂ ಒಂದು
ದಿನ ಬಿಟ್ಟು ಹೋಗಬೇಕಾಗಿದೆಯೆಂದೇ ತಿಳಿದಿದ್ದಾರೆ. ಆದರೆ
ಮುಸಲ್ಮಾನರಲ್ಲಿ ಅನೇಕರಾದರೋ ತಾವು ಎಂದಾದರೂ ಒಂದು
ದಿನ ಹಿಂದುಗಳ ಮೇಲೆ ಪ್ರಭುತ್ವವನ್ನು ಮಾಡಬೇಕೆಂದೇ ಯೋ
ಚಿಸಿದ್ದಾರೆ. ಇಂಗ್ಲಿಷರಾದರೋ ಹಿಂದಿಯರನ್ನು ಹಿಂಸಿಸಲು ಹಿಂದಿ
ಗಳ ಸಹಾಯವನ್ನೇ ತೆಗೆದುಕೊಳ್ಳಬೇಕಾಗಿರುವುದರಿಂದ ಅನ್ಯಾ
ಯದ ಪರಿಣಾಮವನ್ನು ಲಕ್ಷಿಸಿ ನಡೆಯಬೇಕಾಗಿದೆ. ಆದರೆ
ಹಿಂದು-ಮುಸಲ್ಮಾನರು ಜಗಳದ ಕಾಲದಲ್ಲಿ ತಮ್ಮ ತಮ್ಮ ಜಾತಿಯ

# "ಹಿಂದು" ಆಗಿ ಹುಟ್ಟಿದ್ದೇ ತಪ್ಪೆ?

### ಬ್ಯಾ. ಸಾವರಕರರ ವೀರವಾಣಿ.

ಸ್ವಾತಂತ್ರ್ಯವೀರ ಸಾವರಕರರು ತಾ. ೫-೪-೩೮ ನೆಯ ದಿವಸ ಲಖನೌ ಪಟ್ಟಣಕ್ಕೆ ಆಗಮಿಸಲು ಪ್ರಚಂಡ ಸ್ವಾಗತ ಸಮಾರಂಭ ಜರುಗಿತು. ನಾಲ್ಕು ಬಿಳಿ ಕುದುರೆಗಳ ದಿವ್ಯ ರಥದಲ್ಲಿ ಹಿಂದು ಮಹಾಸಭಾಧ್ಯಕ್ಷರಾದ ಶ್ರೀ. ಸಾವರಕರರು ಕುಳಿತಿದ್ದರು.

ಈ ಪ್ರಚಂಡ ಮೆರವಣಿಗೆಯಲ್ಲಿ ೧೫-೨೦ ಸಾವಿರ ಜನರು ಸೇರಿದ್ದರು. ರಾಜಮಾರ್ಗಗಳಲ್ಲಿ ೨೫ ಭವ್ಯ ಮಂಟಪಗಳು ಏರ್ಪಟ್ಟಿದ್ದವು. ಈ ಮಂಟಪಗಳ ಪ್ರವೇಶದ್ವಾರಗಳಿಗೆ ಶ್ರೀ. ಶಿವಾಜಿ ಪ್ರವೇಶದ್ವಾರ, ಪ್ರತಾಪ ಪ್ರವೇಶದ್ವಾರ, ಗುರುಗೋವಿಂದ ಪ್ರವೇಶ ದ್ವಾರ ಎಂಬ ಹಿಂದು ಮಹಾಪುರುಷರ ಹೆಸರುಗಳು ಇಡಲ್ಪಟ್ಟಿದ್ದವು. ಆ ದಿನ ಸಾಯಂಕಾಲ ೪೦ ಸಾವಿರ ಜನರು ಸೇರಿದ್ದ ಪ್ರಚಂಡ ಸಭೆಯಲ್ಲಿ ಸ್ವಾತಂತ್ರ್ಯವೀರ ಸಾವರಕರರು ಎರಡು ತಾಸು ಭಾಷಣ ಮಾಡಿ ಈ ಪ್ರಕಾರ ತಿಳಿಸಿದರು—

### ಅಲ್ಪ ಸಂಖ್ಯಾಕರ ಪ್ರಶ್ನೆ.

"ಹಿಂದುಸ್ಥಾನದಲ್ಲಿರುವ ಅಲ್ಪ ಸಂಖ್ಯಾಕರ ಧರ್ಮ, ಭಾಷೆ, ಸಂಸ್ಕೃತಿಗಳನ್ನು ಸಂರಕ್ಷಿಸಬೇಕಾದುದು ನಮ್ಮ ಕರ್ತವ್ಯವೇ ಆಗಿದೆ. ಅವರ ಸಂಖ್ಯಾಬಲದಂತೆ ಪ್ರಾತಿನಿಧ್ಯವನ್ನೂ ಅವರಿಗೆ ಕೊಡಲೇಬೇಕು. ಆದರೆ ಹಿಂದುಗಳು ಬಹು ಸಂಖ್ಯಾಕರಿದ್ದಾರೆಂದು ಅವರ ಹಕ್ಕು ಬಾಧ್ಯತೆಗಳನ್ನು ಹಾಳುಮಾಡುವುದು ಯುಕ್ತವಲ್ಲ. ಈ ದೇಶದಲ್ಲಿ ಹಿಂದುಗಳು ಬಹು ಸಂಖ್ಯಾಕರಾಗಿರುವುದೇ ಅಪರಾಧವೆ? ನಾವು ಹಿಂದುಗಳಾಗಿ ಹುಟ್ಟಿದ್ದೇ ತಪ್ಪಾಯಿತೆ?

ಅಲ್ಪ ಸಂಖ್ಯಾಕರಿಗೆ ವಿಶೇಷ ಸೌಲಭ್ಯವನ್ನು ಕಲ್ಪಿಸಿಕೊಡುವುದು ಅನ್ಯಾಯವಾದುದು. ರಾಷ್ಟ್ರೋನ್ನತಿಗೆ ಅದು ಘಾತಕವಾದುದು. ಅಲ್ಪ ಸಂಖ್ಯಾಕರಿಗೆ ಹೆಚ್ಚಿಗೆ ಸೌಲಭ್ಯ ದೊರೆಯಬೇಕೆಂದು ಈ ಲಖನೌ ಪಟ್ಟಣದಲ್ಲಿ ನಿರ್ಣಯವಾದ ದಿನವು ಪಾಪದ ದಿನವೆಂದು ತಿಳಿಯಬೇಕು. ಅಲ್ಪ ಸಂಖ್ಯಾಕರ ಆಸೆ ಆಕಾಂಕ್ಷೆಗಳಿಗೇನಾದರೂ ಮೇರೆಯುದೆಯೆ? ಅವರಿಗಾಗಿಯೇ ಪ್ರತ್ಯೇಕವಾದ ಯಾವ ಸೌಲಭ್ಯ ಮತ್ತು ಹಕ್ಕು ಬಾಧ್ಯತೆಗಳೂ ಇರಕೂಡದು. ಹಾಗಿರುವುದೆಂದರೆ ಅದು ರಾಷ್ಟ್ರೀಯತ್ವಕ್ಕೆ ವಿಘಾತಕವಾದುದು."

### ತರುಣರ ಕರ್ತವ್ಯ.

ಕನ್ಯಾ ಕುಬ್ಜ ವಿದ್ಯಾಲಯದಲ್ಲಿ ವಿದ್ಯಾರ್ಥಿಗಳಿಗೆ ಹೀಗೆ ಬೋಧಿಸಿದರು—

"ತರುಣರೇ, ನೀವೇ ರಾಷ್ಟ್ರದ ಮುಂದಣ ಐತಿಹಾಸಿಕ ಪುರುಷರಾಗುವವರು. ಆದಕಾರಣ ಈಗ ಕೇವಲ ಇತಿಹಾಸ ಓದುವವರೇ ನೀವಾಗಬೇಡಿರಿ. ನೀವು ಇತಿಹಾಸವನ್ನುಂಟುಮಾಡುವವರಾಗಿರಿ. ಇದು ಮದ್ದು ಗುಂಡುಗಳ ಯುಗವಾಗಿದೆ. ಹಿಂದುಸ್ಥಾನವು ನಿಮ್ಮ ಸ್ವಾತಂತ್ರ್ಯದಲ್ಲಿರಬೇಕಾದರೆ ನೀವು ಯುದ್ಧ ವಿದ್ಯೆಯಲ್ಲಿ ಪ್ರವೀಣರಾಗುವುದು ಅತ್ಯಗತ್ಯ. ಸೈನ್ಯ ಶಿಕ್ಷಣವು ಈ ದೇಶದಲ್ಲಿ ಪ್ರಸಾರವಾಗುವುದು ಅಗತ್ಯವಾಗಿದೆ."

ಲಖನೌ ನಗರದವರ ಮಾನಪತ್ರಕ್ಕೆ ಉತ್ತರವಾಗಿ ಹೇಳುವಾಗಲೂ ಬ್ಯಾ. ಸಾವರಕರರು ಸೈನ್ಯ ಶಿಕ್ಷಣ ಪ್ರಸಾರಕ್ಕೆ ಎಲ್ಲರೂ ಪ್ರೋತ್ಸಾಹಿಸಬೇಕಾದುದು ಅತ್ಯಗತ್ಯವಾಗಿದೆಯೆಂದು ತಿಳಿಸಿದರು.

---

# "ಶರೀಫ್" ದಯೆಯ ನಿರ್ಣಯ.

### ವರ್ಕಿಂಗ್ ಕಮಿಟಿಯ ತೀರ್ಮಾನ.

ಕಲಕತ್ತಾ ಪಟ್ಟಣದಲ್ಲಿ ಕಳೆದ ವಾರ ಕೂಡಿದ್ದ ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಮಧ್ಯಪ್ರಾಂತದ ಮಂತ್ರಿಗಳಾದ ಮಿ. ಶರೀಫರು ಆದಿ ಹಿಂದು ಹುಡುಗಿಯ ಮೇಲೆ ಬಲಾತ್ಕಾರಮಾಡಿದ ಅಪರಾಧಿಗೆ ದಯೆ ತೋರಿಸಿ ಸೆರೆಮನೆಯಿಂದ ಬಿಡುಗಡೆಮಾಡಿದ್ದನ್ನು ಆಲೋಚಿಸಿ ಹೀಗೆ ತೀರ್ಮಾನ ಮಾಡಿತು.—

"ಶರೀಫರು ತೋರಿಸಿದ ದಯೆಯು ರಾಜಶಾಸನ ಸಮ್ಮತವಾದುದೇ ಅಥವಾ ಅಸಮ್ಮತವಾದುದೇ ಎಂಬುದನ್ನು ನಿರ್ಧರಿಸಲು ರಾಜಶಾಸನ ಪ್ರವೀಣರಾದವರ ಕಡೆಗೆ ಒಪ್ಪಿಸಲಾಗುವುದು. ಅವರು ತೋರಿಸಿದ ದಯೆಯು ಯುಕ್ತವಾದುದೆಂದು ನ್ಯಾಯಾಧೀಶರು ಹೇಳಿದರೆ ಈಗ ಶರೀಫರು ಕೊಟ್ಟ ತ್ಯಾಗಪತ್ರವನ್ನು ವರ್ಕಿಂಗ್ ಕಮಿಟಿಯು ಹಿಡಿಯದೆ ಅವರನ್ನು ಕೆಲಸದ ಮೇಲೆಯೇ ಇಡಲಾಗುವದು. ಒಂದುವೇಳೆ ಇವರು ಅನ್ಯಾಯಮಾಡಿದ್ದಾರೆಂದು ನಿರ್ಧಾರವಾದರೆ ತ್ಯಾಗಪತ್ರವನ್ನು ಸ್ವೀಕರಿಸಿ ಅವರನ್ನು ಕೆಲಸದಿಂದ ತೆಗೆಯಲಾಗುವುದು."

---

# ಮೈಸೂರು ಕಾಂಗ್ರೆಸ್ಸಿನ ಅಸಹಕಾರ?

ಮೈಸೂರು ಸರಕಾರದವರು ತಮ್ಮ ಸಂಸ್ಥಾನದ ರಾಜ್ಯಭಾರದಲ್ಲಿ ಮಾಡಬೇಕಾದ ಸುಧಾರಣೆಗಳನ್ನು ಕುರಿತು ಸೂಚಿಸಲು ಒಂದು ಸಮಿತಿಯನ್ನು ಏರ್ಪಡಿಸಿದ್ದಾರಷ್ಟೆ. ಅದರಲ್ಲಿ ಮೈಸೂರು ಕಾಂಗ್ರೆಸ್ ಪಕ್ಷದ ಸದಸ್ಯರನ್ನೂ ತೆಗೆದುಕೊಂಡಿದ್ದಾರೆ. ಆ ಸದಸ್ಯರು ಅದರಲ್ಲಿದ್ದು ಕಾರ್ಯಮಾಡಬೇಕೆ? ಅಥವಾ ಅಸಹಕಾರ ಮಾಡಿ ಆ ಸಮಿತಿಯಿಂದ ಹೊರಗೆ ಬರಬೇಕೆ? ಎಂಬುದೊಂದು ಪ್ರಶ್ನೆ ಈಗ ಅಲ್ಲಿ ಉಂಟಾಗಿದೆ.

ಏಕೆಂದರೆ, ಜವಾಬ್ದಾರಿ ಸರಕಾರವನ್ನು ಏರ್ಪಡಿಸುವುದಾಗಿ ದಿವಾನರು ಆಶ್ವಾಸನ ಕೊಡಬೇಕೆಂದು ಮೈಸೂರು ಕಾಂಗ್ರೆಸ್ ಪಕ್ಷದವರು ದಿವಾನರನ್ನು ಕೇಳಿದರು. ಹಾಗೆ ತಾವು ಕೇಳುವುದು ನ್ಯಾಯವಾಗಿದೆಯೆಂದೂ ಮಹಾತ್ಮಾ ಗಾಂಧಿಯವರೇ ಇದನ್ನು ಸೂಚಿಸಿದ್ದಾರೆಂದೂ ತಿಳಿಸಿದರು. ದಿವಾನರು ಹಾಗೆ ಆಶ್ವಾಸನ ಕೊಡಲು ಒಪ್ಪಲಿಲ್ಲ. ಎಂದಮೇಲೆ ಆ ಸಮಿತಿಯಲ್ಲಿ ತಮ್ಮ ಪಕ್ಷವು ಇರಬಾರದೆಂದೇ ಕೆಲವರ ಅಭಿಪ್ರಾಯ.

ಶಿವಪುರದಲ್ಲಿ ಈ ತಿಂಗಳು ೧೧ ನೆಯ ತಾರೀಖಿನ ದಿನ ಮೈಸೂರು ಕಾಂಗ್ರೆಸ್ ಪಕ್ಷದ ಅಧಿವೇಶನವು ಶ್ರೀ. ಸಿದ್ಧಲಿಂಗಯ್ಯನವರ ಅಧ್ಯಕ್ಷತೆಯಲ್ಲಿ ಜರುಗುವದು.

---

# ಲವಂಗಕ್ಕೆ ಬಹಿಷ್ಕಾರ.

ಪರದೇಶಗಳ ಲವಂಗಗಳಿಗೆ ಸಂಪೂರ್ಣ ಬಹಿಷ್ಕಾರ ಹಾಕಿ ಜಂಜೀಬಾರದ ಹಿಂದಿಗಳಿಗೆ ತುಂಬಾ ನೆರವಾಗಬೇಕೆಂದು ರಾಷ್ಟ್ರಾಧಿಪತಿಗಳಾದ ಸುಭಾಷಚಂದ್ರ ಬೋಸರವರು ತಾರೀಖು ೭ ನೆಯ ದಿನ ಒಂದು ಮಹತ್ವದ ಪ್ರಕಟನೆಯನ್ನು ಹೊರಡಿಸಿದ್ದಾರೆ.




ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ-ಸೋಮವಾರ ತಾರೀಖು ೧೧ ನೆಯ ಎಪ್ರಿಲ್ ೧೯೩೮. | ಸಂಚಿಕೆ ೩೨

# ಮಹತ್ವದ ಸುದ್ದಿಗಳು.

ಮಹಾತ್ಮಾ ಗಾಂಧಿಯವರು ಹಿಜಲಿ ಸೆರೆಮನೆಯಲ್ಲಿದ್ದ ಹದಿನಾಲ್ಕು ಜನ ರಾಜಕೈದಿಗಳನ್ನೂ ಮಿದನಾಪುರ ಜೈಲಿನಲ್ಲಿದ್ದ ೪ ಜನ ರಾಜಕೈದಿಗಳಾದ ಸ್ತ್ರೀಯರನ್ನೂ ಕಲಕತ್ತಾ ಪಟ್ಟಣದ ಪ್ರೆಸಿಡೆನ್ಸಿ ಜೈಲಿನಲ್ಲಿ ತಾ. ೮ ನೆಯ ದಿನ ಕಂಡು ಮೂರು ತಾಸು ಮಾತನಾಡಿದರು.

—ಹುಬ್ಬಳ್ಳಿಯಲ್ಲಿ ತಾ. ೮ ನೆಯ ದಿನ ಎಮ್. ಎಸ್. ಎಮ್. ರೇಲ್ವೆ ಕೆಲಸಗಾರರ ಸಂಘದ ಪರಿಷತ್ತು ಬೆಂಗಳೂರಿನ ಶ್ರೀ. ಎನ್. ಎನ್. ಚಂಡೂರ ಇವರ ಅಧ್ಯಕ್ಷತೆಯಲ್ಲ ಕೂಡಿದ್ದಿತು.

—ಮದ್ರಾಸ್ ಪ್ರಾಂತದಲ್ಲಿರುವ ನೀಲಗಿರಿ ಜಿಲ್ಲೆಯನ್ನು ಎರಡು ಭಾಗಮಾಡಿ ಒಂದನ್ನು ಕೊಯಿಮತ್ತೂರ ಜಿಲ್ಲೆಗೂ ಇನ್ನೊಂದನ್ನು ಮಲಬಾರ ಜಿಲ್ಲೆಗೂ ಕೂಡಿಸುತ್ತಾರೆಂದು ಸುದ್ದಿ. ಇದು ನಿಜವಿದ್ದರೆ ನೀಲಗಿರಿ ಕನ್ನಡ ಜಿಲ್ಲೆಯು ನಾಶವಾದಂತಾಯಿತು. ಇದೊಂದು ದೊಡ್ಡ ಅನ್ಯಾಯ.

—ನೊನ್ನೆ ಹರಿಪುರದ ಕಾಂಗ್ರೆಸ್ ಕಾಲಕ್ಕೆ ಹಿಂದುಸ್ಥಾನದ ೮ ಸಾವಿರ ಮೈಲುಗಳ ಪ್ರವಾಸಮಾಡಿ ಕಾಂಗ್ರೆಸ್ಸನ್ನು ಕಣ್ಣಾರೆ ನೋಡಿ ಈ ದೇಶದ ಅನೇಕ ರಾಜಕೀಯ ಮುಖಂಡರನ್ನು ಕಂಡ ವ್ಹಾಯಕೌಂಟ್ ಸಾಮ್ಯುಅಲ್ಲರು ಹೀಗೆ ಪ್ರಕಟಿಸಿದ್ದಾರೆ— "ಕಾಂಗ್ರೆಸ್ ಸಂಸ್ಥೆಯೇ ಹಿಂದುಸ್ಥಾನದಲ್ಲಿ ಒಂದೇ ಒಂದಾದ ರಾಜಕೀಯ ಸಂಸ್ಥೆಯು. ಈಗ ಅದು ಪ್ರಾಂತಿಕ ಪ್ರಭುತ್ವವನ್ನು ಚೆನ್ನಾಗಿ ಸಾಗಿಸಿದೆ. ಫೆಡರೇಶನ್ನಿನಲ್ಲಿ ತಿದ್ದುಪಾಟಾಗದೆ ಅದನ್ನು ಆಚರಣೆಯಲ್ಲಿ ತಂದರೆ ಅದು ರಾಷ್ಟ್ರಕ್ಕೆ ಒಪ್ಪಿಗೆಯಾಗುವುದಿಲ್ಲ."

—ಮಹಾತ್ಮಾ ಗಾಂಧಿಯವರು ಕಳೆದ ೨೦ ವರುಷಗಳಿಂದಲೂ ರಾಷ್ಟ್ರೀಯ ಸಪ್ತಾಹದಲ್ಲಿ ಉಪವಾಸ ವ್ರತವನ್ನಾಚರಿಸುತ್ತ ಬಂದಿದ್ದಾರೆ. ಅದೇ ಪ್ರಕಾರ ಈ ಸಾರೆಯೂ ಆಚರಿಸಿದ್ದರಿಂದ ಅವರ ದೇಹಾರೋಗ್ಯವು ಈಗ ಚೆನ್ನಾಗಿಲ್ಲ.

—ಬೇಗಂಸಾಹೇಬ ಸರದಾರ ನಬಾಬ ಹಾಫೀಸುದ್ದೀನ ಅಹಮದಖಾನ ಇವರ ಪ್ರಯತ್ನದಿಂದ ಸೂರತ್ ಪಟ್ಟಣದಲ್ಲಿ ಮುಸ್ಲಿಂಲೀಗಿಗೆ ೫೦೦ ಜನ ಮುಸಲ್ಮಾನ್ ಸ್ತ್ರೀಯರು ಸಭಾಸದರಾದರು.

—ಇದೇ ತಿಂಗಳು ೧೨-೧೩ ನೆಯ ತಾರೀಖುಗಳಲ್ಲಿ ಅಖಿಲ ಭಾರತ ಸೋಶಾಲಿಸ್ಟ ಪರಿಷತ್ತು ಲಾಹೋರ ಪಟ್ಟಣದಲ್ಲಿ ಜರಗುವದು.

—ಮಿ. ಜಾರ್ಜ ಜೋಸೆಫ್ ಇವರ ಮರಣದಿಂದ ದಿಲ್ಲಿ ಕೇಂದ್ರ ಶಾಸನ ಸಭೆಯಲ್ಲಿ ಬರಿದಾದ ಸ್ಥಳಕ್ಕೆ ಮದ್ರಾಸ್ ಸರಕಾರದ ಶಿಕ್ಷಣ ಮಂತ್ರಿಗಳಾದ ಡಾ. ಸುಬ್ಬರಾಯಿನ್ ಇವರ ಪತ್ನಿ ಸೌ|| ರಾಧಾದೇವಿ ಸುಬ್ರಾಯಿನ್ ಇವರು ಕಾಂಗ್ರೆಸ್ ಪಕ್ಷದಿಂದ ಆರಿಸಿ ಬಂದರು.

—ದಿಲ್ಲಿ ಕೇಂದ್ರ ಶಾಸನ ಮಂಡಲದ ಅವಧಿಯನ್ನು ೧೯೩೮ ನೆಯ ಅಕ್ಟೋಬರದಿಂದ ಒಂದು ವರುಷದ ವರೆಗೆ ಮತ್ತೆ ಹೆಚ್ಚಿಸಿರುವುದಾಗಿ ಸರಕಾರದವರು ಪ್ರಕಟಿಸಿದ್ದಾರೆ.

—ಗಾಂಧೀಜಿಯವರ ದೇಹಾರೋಗ್ಯ ಚೆನ್ನಾಗಿರದಿದ್ದರೂ ಅವರು ತಾ. ೭ ನೆಯ ದಿನ ಬಂಗಾಲದ ಗವ್ಹರ್ನರರನ್ನು ಕಂಡು ಎರಡು ತಾಸು ಮಾತನಾಡಿದರು.

—ಮಧ್ಯಪ್ರಾಂತದ ಮಂತ್ರಿಗಳಾದ ಮಿ. ಶರೀಫರ ಮೇಲೆ ಕಟಾರಿ ತೆಗೆದುಕೊಂಡು ಹೋಗುತ್ತಿದ್ದ ಸೀತಾರಾಮ ಬಾಳಾಜಿ ಗಾಯಕವಾಡ ಎಂಬ ಆದಿ ಹಿಂದು ತರುಣ ವಿದ್ಯಾರ್ಥಿಯನ್ನು ಹಿಡಿದು ನ್ಯಾಯಾಧೀಶರ ಮುಂದೆ ನಿಲ್ಲಿಸಿದ್ದರು. ಒಂದು ಸಾವಿರ ರೂ. ಹೊಣೆಯಮೇಲೆ ಆತನನ್ನು ಈಗ ಬಿಟ್ಟಿದ್ದಾರೆ.

—ಮಧ್ಯಪ್ರಾಂತದ ಅಸೆಂಬ್ಲಿಗೆ ಕಾಂಗ್ರೆಸ್ ಹುರಿಯಾಳನ್ನು ಸೋಲಿಸಿ ಆರಿಸಬಂದಿರುವ ಡಾ. ರಾಘವೇಂದ್ರರಾಯರು ಚುನಾವಣೆಕಾಲದಲ್ಲಿ ಅನ್ಯಾಯವಾದ ರೀತಿಯಿಂದ ನಡೆದಿದ್ದಾರೆಂದೂ ವಿಚಾರಣೆ ನಡೆಯಬೇಕೆಂದೂ ಕಾಂಗ್ರೆಸ್ ಪಕ್ಷದವರು ವ್ಯಾಜ್ಯ ಹೂಡಿದ್ದಾರೆ. ಇದೇ ತಿಂಗಳು ೨೫ ನೆಯ ತಾರೀಖಿಗೆ ವಿಚಾರಣೆ ಪ್ರಾರಂಭವಾಗುತ್ತದೆ. ಈ ವಿಚಾರಣೆಯಲ್ಲಿ ೨ ಸಾವಿರ ಸಾಕ್ಷಿದಾರರ ಪಟ್ಟಿಯೂ ಒಂದು ಬರುವುದಿದೆಯಂತೆ.

# ಅಖಿಲ ಭಾರತೀಯ ರಾಟೆ ಸಂಘದ ವರದಿ.

ಮಹಾತ್ಮಾ ಗಾಂಧಿಯವರು ಈ ರಾಷ್ಟ್ರಕ್ಕೆ ಮಾಡಿರತಕ್ಕ ಅಮೋಘವಾದ ಉಪಕಾರಗಳಲ್ಲಿ ಖಾದಿ ಪ್ರಸಾರವೂ ಒಂದು ಮುಖ್ಯವಾದುದಾಗಿದೆ. ಈ ಕಾರ್ಯವು ಪರಿಣಾಮಕಾರಿಯಾಗಿ ಅವಿಚ್ಛಿನ್ನ ನಡೆಯಲು "ಅಖಿಲ ಭಾರತ ರಾಟೆಸಂಘ" ಎಂಬ ಒಂದು ಮಹಾ ಸಂಸ್ಥೆಯನ್ನು ಸ್ಥಾಪಿಸಿದ್ದಾರಷ್ಟೆ. ಅದರ ೧೯೩೭ ನೆಯ ಇಸವಿ ವರದಿಯ ಮುಖ್ಯಾಂಶವು ಈ ಕೆಳಗಿನಂತೆ ಪ್ರಕಟವಾಗಿದೆ—

೧೯೩೭ ನೇ ಇಸ್ವಿಯಲ್ಲಿ ದೇಶದ ರಾಜಕೀಯ ಪರಿಸ್ಥಿತಿಯಲ್ಲಿ ಬದಲಾವಣೆಯಾದ್ದರಿಂದ ಖಾದಿ ಚಳವಳಿಗೆ ಹೆಚ್ಚಿನ ಪ್ರೋತ್ಸಾಹ ಸಿಕ್ಕಿತು. ಖಾದಿ ಬೇಡಿಕೆಯು ದೀನೆ ದಿನೇ ಹೆಚ್ಚಾಗಹತ್ತಿದ್ದರಿಂದ ಉತ್ಪತ್ತಿ ಕೇಂದ್ರಗಳ ಚಟುವಟಿಕೆಗಳನ್ನು ಕೂಡಲೇ ವಿಸ್ತೃತಗೊಳಿಸಲಾಯಿತು.

ಸಂಘದವರಲ್ಲಿದ್ದ ಧನ ಮತ್ತು ಜನಬಲವು ಸಾಕಷ್ಟಿಲ್ಲವೆಂದು ಎನಿಸಿದ್ದರಿಂದ ಹೆಚ್ಚಿನ ನಿಧಿಯ ಸಲುವಾಗಿ ವ್ಯವಸ್ಥೆ ಮಾಡಲಾಯಿತು. ಕೆಲಸಗಾರರ ಸಂಖ್ಯೆಯನ್ನು ಬೆಳೆಸಲಾಯಿತು. ೧೯೩೬ ರ ಕೊನೆಯಲ್ಲಿ ೧೬೩೫ ಜನರಿದ್ದರು. ಆದರೆ ೧೯೩೭ ರ ಕೊನೆಗೆ ಅವರ ಸಂಖ್ಯೆಯು ೧೬೨೧ ಆಯಿತು.

ವರದಿಯ ವರ್ಷದಲ್ಲಿ ಕಾಂಗ್ರೆಸ್ ಮಂತ್ರಿಗಳು ಅಧಿಕಾರದಲ್ಲಿದ್ದ ಬೇರೆ ಬೇರೆ ಸರಕಾರದವರು ಖಾದಿ ಅಭಿವೃದ್ಧಿಯನ್ನು ಕುರಿತು ಸೂಚನೆಗಳನ್ನು ವಿಚಾರಿಸಿದರು, ಮತ್ತು ಗ್ರಾಂಟರೂಪದಿಂದ ೨ ಲಕ್ಷ ೨೫ ಸಾವಿರ ರೂಪಾಯಿಗಳನ್ನು ನೂಲುಗಾರರಿಗೆ ಉತ್ತಮವಾದ ಉಪಕರಣಗಳನ್ನು ಒದಗಿಸಿಕೊಟ್ಟು ಅವರಿಗೆ ಅವುಗಳ ಉಪಯೋಗವನ್ನು ತಿಳಿಸಲಿಕ್ಕೂ ನೂಲುಗಾರರಿಗೆ ಹಾಗು ನೇಕಾರರಿಗೆ ಸಾಕಷ್ಟು ಕೂಲಿ ಕೊಡಲಿಕ್ಕೂ ಮತ್ತು ಖಾದಿ ಚಳವಳಿಗೆ ಸಹಾಯ ಮಾಡಲಿಕ್ಕೂ ಮಂಜೂರ ಮಾಡಿದರು.

ಈ ವರ್ಷದಲ್ಲಿ ಒಟ್ಟು ೭೦೦೦೦ ಕೂಲಿಕಾರರು ಹೆಚ್ಚಿಗೆ ತೆಗೆದುಕೊಳ್ಳಲ್ಪಟ್ಟರು. ೧೯೩೬ ರಲ್ಲಿ ೧೩೪೪೩ ನೂಲುಗಾರರು ಇದ್ದರು. ೧೯೩೭ರಲ್ಲಿ ಅವರ ಸಂಖ್ಯೆಯು ೧೭೧೭೬೦ ಆಯಿತು. ೧೯೩೬ ರಲ್ಲಿ ೧೦೧೦೬ ನೇಕಾರರಿದ್ದು ೧೯೩೭ ರಲ್ಲಿ ಅವರ ಸಂಖ್ಯೆಯು ೧೩೪೩೨ ಆಯಿತು. ಇದರಂತೆ ಖಾದಿ ಉತ್ಪತ್ತಿಯು ೧೦ ಲಕ್ಷ ಚಚ್ಚೌಕು ಯಾರ್ಡುಗಳಿಂದ ಹೆಚ್ಚು ಆಯಿತು. ಅಂದರೆ ೧೯೩೭ ರಲ್ಲಿ ಒಟ್ಟು ೭೫ ಲಕ್ಷ ಚಚ್ಚೌಕ ಯಾರ್ಡ ತಯಾರಾಯಿತು. ಖಾದಿ ಉತ್ಪತ್ತಿಯಲ್ಲಿ ಮದ್ರಾಸ ಇಲಾಖೆಯು ೧ ನೇ ನಂಬರ ಇದ್ದು ಅಲ್ಲಿ ೧೬ ಲಕ್ಷ ಚಚ್ಚೌಕ ಯಾರ್ಡ ಅಂವೆಯೂ ಹೊರಟಿರುತ್ತದೆ. ಖಾದಿ ಸಂಬಂಧದಲ್ಲಿ ಒಟ್ಟು ೫೭೪ ಕೆಲಸಗಾರರು ಪ್ರಚಾರ ಕಾರ್ಯ ಕೈಕೊಂಡಿದ್ದು ೧೦೦೦೦ ಹಳ್ಳಿಗಳಲ್ಲಿ ಕೆಲಸ ನಡೆದಿರುತ್ತದೆ. ಕಳೆದ ವರ್ಷ ೬೦೦೦ ಹಳ್ಳಿಗಳಲ್ಲಿ ನಡೆದಿತ್ತು.

ನೂಲುಗಾರರಿಗೂ ನೇಕಾರರಿಗೂ ಕೂಡಿ ಕೂಲಿಯ ರೂಪದಲ್ಲಿ ೧೪೭೬ ಲಕ್ಷ ರೂಪಾಯಿ ಹಂಚಲಾಗಿದೆ. ಕಳೆದ ವರ್ಷಕ್ಕಿಂತ ೫ ಲಕ್ಷದಿಂದ ಇದು ಹೆಚ್ಚಾಗಿರುವದು. ತೊಟ್ಟುಕೊಳ್ಳಲು ಸಾಕಷ್ಟು ಖಾದಿ ಮತ್ತು ಹೊಟ್ಟೆಗೆ ಸಾಕಷ್ಟು ಆಹಾರ ದೊರಕಿಸಿಕೊಳ್ಳಲು ಶಕ್ಯವಾಗುವಂತೆಯೇ ನೂಲುಗಾರರಿಗೆ ಕೂಲಿಯನ್ನು ಕೊಡಬೇಕೆಂದು ೧೯೩೫ ನೇ ಇಸ್ವಿಯ ಅಖಿಲ ಭಾರತ ಚರಕ ಸಂಘದ ಕಾರ್ಯಕಾರಿ ಸಭೆಯಲ್ಲಿ ನಿರ್ಣಯವಾದ ಹೆಚ್ಚಿನ ಪ್ರಮಾಣದ ಮೇರೆಗೇನೇ ಈ ಕೂಲಿಯನ್ನು ಕೊಡಲಾಗಿದೆ.

ನೂಲುಗಾರರ ಮತ್ತು ನೇಕಾರರ ಕಾರ್ಯಕ್ಷಮತೆ ಬೆಳೆಸಲು ಪ್ರಯತ್ನ ಮಾಡಲಾಯಿತು. ಈ ಬಗ್ಗೆ ಕೆಲಸಗಾರರಿಗೆ ಶಿಕ್ಷಣ ಕೊಡಲು ಶಿಕ್ಷಣ ವರ್ಗಗಳನ್ನು ತೆರೆಯಲಾಯಿತು. ಒಟ್ಟು ೪೦೦ ಕೆಲಸಗಾರರಿಗೆ ಶಿಕ್ಷಣ ಕೊಟ್ಟು ಬೇರೆ ಬೇರೆ ಉತ್ಪತ್ತಿ ಕೇಂದ್ರಗಳಿಗೆ ಅವರನ್ನು ಕಳಿಸಿತು. ಉಪಕರಣಗಳಲ್ಲಿ ಸುಧಾರಣೆಗಳನ್ನು ಸೂಚಿಸಲು ಮತ್ತು ಸಂಶೋಧನ ಮಾಡಲು ಅಹಮುದಾಬಾದದಲ್ಲಿ ಸಂಶೋಧಕ ಕಾರಖಾನೆ ಪ್ರಾರಂಭವಾಗಿದೆ. ಇದಲ್ಲದೆ ಸಂಘದ ಡಿಪೋದವರು ನೂಲುಗಾರರಲ್ಲಿ ಔಷಧಗಳನ್ನು ಹಂಚುವ ಮತ್ತು ಕೈಗಾರಿಕೆಯವರಿಗೆ ಶಿಕ್ಷಣ ಕೊಡುವ ಜನಹಿತ ಕಾರ್ಯವನ್ನೂ ಕೈಕೊಂಡಿದ್ದಾರೆ.

ಈ ವರುಷ ದೇಶದಲ್ಲಿ ಖಾದಿಧಾರಿಗಳ ಸಂಖ್ಯೆಯು ಹೆಚ್ಚಿಗೆ ಆಗಿದೆ. ರಾಜಕೀಯ ಪರಿಸ್ಥಿತಿಯಲ್ಲಿ ಬದಲಾವಣೆಯಾದದ್ದೇ ಇದಕ್ಕೆ ಕಾರಣವು. ಉತ್ಪತ್ತಿಯ ಬೇರೆ ಬೇರೆ ವಿಧಗಳಲ್ಲಿ ಶಾಸ್ತ್ರೀಯ ಪದ್ಧತಿಯನ್ನು ಈಗ ಪ್ರಾರಂಭಿಸಿದ್ದರಿಂದ ನೂಲುಗಾರರಿಗೆ ಸಾಕಷ್ಟು ಕೂಲಿ ಕೊಟ್ಟು ಖಾದಿಯಲ್ಲಿ ಪರಿಣಾಮಕಾರಿಯಾದ ಸುಧಾರಣೆಮಾಡುವದು ಸಾಧ್ಯವಿದೆಯೆಂದೂ ಕಂಡುಬಂದಿದೆ.

ಯೋಗ್ಯವಾದ ರೀತಿಯಲ್ಲಿ ಜೀವನ ಸಾಗಿಸಿಕೊಂಡು ಹೋಗಲು ಈ ಉದ್ಯೋಗದಿಂದ ಹಳ್ಳಿಗರಿಗೆ ಸಹಾಯವಾಗುತ್ತಿದ್ದು ಖಾದಿ ಚಳವಳಿಯನ್ನು ಸಾಧ್ಯವಿದ್ದಷ್ಟು ಹೆಚ್ಚು ಹಳ್ಳಿಗೆ ಮುಟ್ಟಿಸುವದು ಖಾದಿ ಪ್ರೇಮಿಗಳ ಕರ್ತವ್ಯವೇ ಆಗಿದೆ.

"ಸಂಯುಕ್ತಕರ್ನಾಟಕ"

# ಅಕ್ಕಮಹಾದೇವಿ ಮತ್ತು ಪ್ರಭುದೇವರ ಮಹತ್ವದ ಸಂವಾದ.

ಶ್ರೀ. ಅಕ್ಕಮಹಾದೇವಿಯು ಕನ್ನಡ ನಾಡಿನ ಒಬ್ಬ ಮಹಾತ್ಮಳು. ಇಷ್ಟೇ ಅಲ್ಲ; ಜಗತ್ತಿನ ಸುಪ್ರಸಿದ್ಧ ಹೆಣ್ಣುಮಕ್ಕಳಲ್ಲಿ ಒಬ್ಬಳು. ಈ ಮಹನೀಯಳ ಸ್ಮಾರಕ ಸಮಾರಂಭವು ಪದ್ಧತಿಯ ಪ್ರಕಾರ ಚೈತ್ರ ಶುದ್ಧ ಹುಣ್ಣಿಮೆಯ ದಿನ ಅಕ್ಕನ ಹುಣ್ಣಿಮೆಯೆಂದು ಈ ಸಾರೆಯೂ ಇದೇ ತಿಂಗಳು ೧೪ ನೆಯ ದಿನ ಕನ್ನಡ ನಾಡಿನಲ್ಲಿ, ಹೆಚ್ಚಾಗಿ ಮಹಿಳಾ ಮಂಡಲಿಯಲ್ಲಿ ಜರುಗುವುದಷ್ಟೆ.

ಈ ಮಹಾತ್ಮಳ ಅದ್ವಿತೀಯವಾದ ವೈರಾಗ್ಯವು ಮಾಯ ಕೋಲಾಹಲರೆಂದು ಪ್ರಸಿದ್ಧರಾದ ಜಂಗಮಪುಂಗವ ಶ್ರೀ. ಪ್ರಭುದೇವರ ಸಂಗಡ ಶಿವಾನುಭವ ಮಂಟಪದಲ್ಲಿ ನಡೆದ ಬಹು ಬೋಧಪರವಾದ ಸಂವಾದದಿಂದ ಸ್ಪಷ್ಟ ಗೊತ್ತಾಗುವಂತಿದೆ. ಶ್ರೀ. ಪ್ರಭುದೇವರು ಶ್ರೀ. ಅಕ್ಕಮಹಾದೇವಿಗೆ ನಿನ್ನ ಪತಿ ಯಾರು ಹೇಳವ್ವಾ ಎಂದು ಕೇಳಿದಾಗ ಅಕ್ಕನು ಹೇಳಿದ ಉತ್ತರವೂ ಆಗ ನಡೆದ ಸಂವಾದಗಳೂ ಮಹತ್ವದವುಗಳಾಗಿರುವುದರಿಂದ ಶೂನ್ಯ ಸಂಪಾದನೆಯಲ್ಲಿಯ ಆ ಭಾಗವನ್ನೇ ಇಲ್ಲಿ ಸ್ವಲ್ಪ ಕೊಡಲಾಗಿದೆ.—

### ಅಕ್ಕನು ಅಣ್ಣನನ್ನು ಕಂಡು ನಮಿಸಿದಳು.

ಅಯ್ಯ ನಿಮ್ಮ ಸಜ್ಜನ ಸದಾಚಾರವ ಕಂಡೆನಾಗಿ ಎನ್ನ ಕಂಗಳ ಪಟಲ ಹರಿಯಿತ್ತೆಂದು. ಅಯ್ಯ ನಿಮ್ಮ ಸಜ್ಜನ ಸದ್ಭಾವರ ಶ್ರೀಚರಣಕ್ಕೆರಗಿದೆನಾಗಿ ಎನ್ನ ಹಣೆಯ ಲಿಖಿತ ತೊಡೆಯಿತ್ತೆಂದು. ಚನ್ನಮಲ್ಲಿಕಾರ್ಜುನ ನಿಮ್ಮ ಶರಣ ಸಂಗನಬಸವಣ್ಣನ ಪಾದವ ಕಂಡು ಮಿಗೆ ಮಿಗೆ ನಮೊ ನಮೊ ಎನುತಿರ್ದೆನು. ||೧||

ಇಂತೀ ಮಹಾದೇವಿಯಕ್ಕಗಳು ಬಸವರಾಜದೇವರ ಶ್ರೀಪಾದಮಂ ದರ್ಶನವಾಗಿ, ನಮಸ್ಕರಿಸಿ ಕೈಮುಗಿದು, ನಿಂದಿರಲು, ಆ ಪ್ರಸ್ಥಾವದೊಳು ಬಸವರಾಜದೇವರು ಮಹದೇವಿಯಕ್ಕನಂ ಕಂಡು ಪ್ರಭುದೇವರಂಗೆ ತೋರಿ ನುಡಿದ ಪ್ರಸ್ಥಾವದ ವಚನ.||

ಕಾಯದ ಲಜ್ಜೆಯ ಕಲ್ಪಿತವ ಕಳೆದು ಜೀವದ ಲಜ್ಜೆಯ ಮೋಹವನಳಿದು, ಮನದ ಲಜ್ಜೆಯ ನೆನಹು ಸುಟ್ಟು ಭಾವದ ಕೂಟ ಬತ್ತಲೆ ಎಂದರಿದು, ತವಕದ ಸ್ನೇಹ ವ್ಯವಹಾರಕ್ಕೆ ಹೋಗದು. ಕೂಡಲ ಸಂಗಮದೇವಯ್ಯ ಎನ್ನ ಹೆತ್ತತಾಯಿ ಮಹಾದೇವಿಯಕ್ಕನ ನಿಲವನೋಡಯ್ಯ ಪ್ರಭುವೆ ||೨||

ರೂಹಿಲ್ಲದಂಗೆ ಒಲಿದವರಿಗೆ ತನುವಿನ ಹಂಗುಂಟೆ? ಮನವಿಲ್ಲದವಂಗೆ ಮಚ್ಚಿದವರಿಗೆ ಅಭಿಮಾನದ ಹಂಗುಂಟೆ? ದಿಗಂಬರಿಗೆ ಒಲಿದವರಿಗೆ ಕೌಪೀನದ ಹಂಗುಂಟೆ? ಕೂಡಲ ಸಂಗಮದೇವಯ್ಯ ಮಹದೇವಿಯಕ್ಕನೆಂಬ ಭಕ್ತೆಗೆ ಆವ ಹೊರೆಯು ಇಲ್ಲ ನೋಡಾ ಪ್ರಭುವೆ. ||೩||

ಹೀಗೆಂದು ಬಸವರಾಜದೇವರು ಪ್ರಭುದೇವರಿಗೆ ಮಹದೇವಿಯಕ್ಕನ ನಿಲವನೋರೆದೋರೆದು, ಹೇಳಿ ಹಿಗ್ಗಿ ತೋರಲು, ಆ ಪ್ರಭುದೇವರು ಮಹದೇವಿಯಕ್ಕನ ಅನುಭವ ಸುಖ ಮುಖದಿಂ ನುಡಿವ ಪ್ರಸ್ಥಾವದ ವಚನ||

ಉದ ಮದದ ಯೌವ್ವನವ ನೊಳಕೊಂಡು, ಸತಿ ನೀನೆ ಇತ್ತಲೇತಕ್ಕೆ ಬಂದೆಯವ್ವ? ಸತಿ ಎಂದರೆ ಮುನಿವರು ಎಮ್ಮ ಶರಣರು. ನಿನ್ನ ಪತಿಯ ಕುರುಹ ಹೇಳಿದರೆ ಬಂದು ಕುಳ್ಳಿರು ಅಲ್ಲದಿರೆ ತೊಲಗು ತಾಯೆ ನಮ್ಮ ಗುಹೇಶ್ವರನ ಶರಣರಲ್ಲಿ ಸಂಗಸುಖ ಸನ್ನಿಹಿತವ ಬಯಸುವರೆ ನಿನ್ನ ಪತಿ ಯಾರೆಂಬುದು ಹೇಳಾ ಎಲೆ ಅವ್ವಾ. ||೪||

ಕಾಯ ಸತಿ ಎಂದು ಹೇಳಿ ಕಳೆದೆ. ವಾಯದ ಮನ ಮಾಯೆ ಎಂದು ಹೇಸಿ ಬಿಟ್ಟೆ. ವಾಯದ ಸತಿ ಎಂಬ ಸಂದೇಹವೆಮಗೇಕೆ? ಸತಿಯರ ಗೋಷ್ಠಿ ವಿಷ ಕಾಣವ್ವ ಗುಹೇಶ್ವರ ಲಿಂಗದಲ್ಲಿ ನಿನ್ನ ಪತಿಯ ಕುರುಹ ಹೇಳಾ ಎಲೆ ಅವ್ವಾ. ||೫||

ಹೀಗೆಂದು ಪ್ರಭುದೇವರು ಮಹದೇವಿಯಕ್ಕಗಳ ಬೆಸಗೊಳ್ಳಲು,

ಆ ಮಹಾದೇವಿಯಕ್ಕಗಳು ತನ್ನ ಪತಿಯ ಕುರುಹ ಬಿನ್ನಹಮಂ ಮಾಡುವ ಪ್ರಸ್ಥಾವದ ವಚನ.||

ಹರನೆ ನೀನೆನಗೆ ಗಂಡನಾಗಬೇಕೆಂದು ಅನಂತ ಕಾಲ ತಪಸಿದ್ದೆ ನೋಡಾ! ಹಸೆಯ ಮೇಲಣ ಮಾತ ಬೆಸಗೊಳಲಟ್ಟಿದರೆ ಶಶಿಧರನ ಹತ್ತಿರ ಕಳುಹಿದರೆಮ್ಮವರು. ಭಸ್ಮವನೆ ಹೂಸಿ ಕಂಕಣವನೆ ಕಟ್ಟಿ ಚನ್ನಮಲ್ಲಿಕಾರ್ಜುನ ತನಗೆ ನಾನಾಗಬೇಕೆಂದು ||೬||

ಪಚ್ಚೆಯದ ನೆಲಗಟ್ಟು, ಕನಕದ ತೋರಣ, ವಜ್ರದ ಕಂಭ, ಪವಳದ ಚಪ್ಪರವಿಕ್ಕಿ, ಮದುವೆಯ ಮಾಡಿದರೆಮ್ಮವರೆನ್ನ ಮದುವೆಯ ಮಾಡಿದರು. ಕಂಕಣ ಕೈದಾರೆ ಸ್ಥಿರಸೇಸೆಯನಿಕ್ಕಿ ಚನ್ನಮಲ್ಲಿಕಾರ್ಜುನನೆಂಬ ಗಂಡಗೆನ್ನ ಮದುವೆಯ ಮಾಡಿದರು ||೭||

ಗುರುವೇ ತೆತ್ತಿಗನಾದ, ಲಿಂಗವೆ ಮದುವಳಿಗನಾದ, ನಾನೆ ಮದುವಳಗೆಯಾದೆನು. ಈ ಭುವನವೆಲ್ಲರಿಯಲು ಅಸಂಖ್ಯಾತರೆನಗೆ ತಾಯಿ ತಂದೆಗಳು. ಕೊಟ್ಟರು ಪ್ರಭುವಿನ ಮನೆಗೆ ಸಾದೃಶ್ಯವಪ್ಪ ವರನ ನೋಡಿ. ಇದು ಕಾರಣ ಚನ್ನಮಲ್ಲಿಕಾರ್ಜುನ ಗಂಡನೆನಗೆ ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯ ಪ್ರಭುವೆ. ||೮||

ಹೀಗೆಂದು ಮಹದೇವಿಯಕ್ಕಗಳು ತಮ್ಮ ಪತಿಯ ಕುರುಹ ಹೇಳಲು, ಅದರೆ ನೀನು ಕೌಶಿಕನೆಂಬ ಭವಿಯ ಮೇಲೆ ಲಿಂಗಧಾರಣವಾಗದ ತಪ್ಪು ಹೊರಿಸಿ ನಿರ್ವಾಣವಾಗಿ ಬಾಹಲ್ಲಿ ಕೇಶ ಮರೆಯಾದರೆ ಅಭಿಮಾನ ಹರಿಯದೆಂದು, ನಿರೂಪಿಸಿದ ಪ್ರಸ್ಥಾವದ ವಚನ.||

ತಪ್ಪು ಹೊರಿಸಿ ಹೊರಟೆನೆಂಬುದು ಸತ್ಯವೆ? ತನು ಸಿರಿಯನಳಿದು ನಿರ್ವಾಣವಾದಲ್ಲಿ ಮನದ ಭ್ರಾಂತು ನಿಶ್ಚಯವಾಗದು. ಕೇಶವೆಂಬ ಸೀರೆಯೆ ಅಂಗಕ್ಕೆ ಮರೆಯಾಯಿತ್ತು. ಅಪಮಾನವೆಂತು ಹರಿಯಿತ್ತು. ಇದು ಗುಹೇಶ್ವರ ಲಿಂಗಕ್ಕೆ ಸಲ್ಲದ ವೇಷ ||೯||

ಇದಕ್ಕೆ ಮಹದೇವಿಯಕ್ಕಗಳ ಬಿನ್ನಹ.

ಕಾಯ ಕರ್ರನೆ ಕಂದಿದರೇನಯ್ಯ? ಕಾಯ ಮಿರ್ರನೆ ಮಿಂಚಿದರೇನಯ್ಯ? ಅಂತರಂಗ ಶುದ್ಧವಾದಬಳಿಕ ಚನ್ನಮಲ್ಲಿಕಾರ್ಜುನನ ಲಿಂಗವು ಒಲಿದ ಕಾಯವು ಹೇಗಿದ್ದಡೇನಯ್ಯ? ||೧೦||

ಇದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ.

ಜೀವನೊಲಿಯದೆ ನೀನೊಲಿಸಿದೆನೆಂಬುದು ಅದಾವುದಕ್ಕೆ? ಭಾವ ಶುದ್ಧವಾದಲ್ಲಿ ಸೀರೆಯನಳಿದು ಕೂದಿಲ ಮರೆಮಾಡಲೇತಕ್ಕೆ? ಅದು ಅಂತರಂಗದ ನಾಚಿಕೆ. ಬಾಹ್ಯದಲ್ಲಿ ತೋರಿತ್ತು. ಅದು ಗುಹೇಶ್ವರ ಲಿಂಗಕ್ಕೆ ಒಲವರವಲ್ಲ. ||೧೧||

ಇದಕ್ಕೆ ಮಹದೇವಿಯಕ್ಕಗಳ ಬಿನ್ನಹ.

ಫಲ ಪಕ್ವವಾದಲ್ಲದೆ ಹೊರಗಣ ಸಿಪ್ಪೆ ಒಪ್ಪುಗೆಡದು. ಕಾಮನ ಮುದ್ರೆಯ ಕಂಡು ನಿಮಗೆ ನೋವಾದಿತೆಂದು ಆ ಭಾವದಿಂದೆ ಮುಚ್ಚಿದೆ, ಇದಕ್ಕೆ ನೋವೇಕೆ? ಕಾಡದಿರಣ್ಣ ಚನ್ನಮಲ್ಲಿಕಾರ್ಜುನ ದೇವರ ದೇವನ ಒಳಗಾಗದವಳಾ. ||೧೨||

ಇದಕ್ಕೆ ಪ್ರಭುದೇವರು ನಿರೂಪಿಸಿದ ವಚನ.

ನೀ ದೇವರೊಳಗೋ ದೇವರು ನಿನ್ನೊಳಗೋ, ಎಂಬ ಠಾವ ನರಿಯೆ. ಸಿಪ್ಪೆ ಒಪ್ಪಗೆಟ್ಟಾಗ, ಹಣ್ಣಿನ ರಸ ಕೊಳಕಾಯಿತ್ತು. ಅದು ಗುಹೇಶ್ವರಲಿಂಗ ಒಪ್ಪದನಾತು. ||೧೨||

ಅದಕ್ಕೆ ಮಹದೇವಿಯಕ್ಕಗಳ ಬಿನ್ನಹ.

ಗುಣದೋಷವ ಸಂಪಾದನೆಯ ಮಾಡುವನಕ್ಕರ ಕಾಮದ ಒಡಲು, ಕ್ರೋಧದ ಗೊತ್ತು. ಲೋಭದ ಇಕ್ಕೆ, ಮೋಹದ ಮಂದಿರ, ಆ ಭಾವವರತಲ್ಲದೆ ಚನ್ನಮಲ್ಲಿಕಾರ್ಜುನನ ಕೇಳುವದಕೆ ಇಂಬಿಲ್ಲ ಎಲೆ ಅಣ್ಣಗಳಿರಾ. ||೧೩||

ಇದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ.

ಕಾಮದಿಂದ ಖಂಡ, ಕ್ರೋಧದಿಂದ ಅಸ್ಥಿ, ಲೋಭದಿಂದ ಸಕಲ ವಿಷಯಂಗಳು ಮೋಹದಿಂದೆ ನೋಡಿಹೆನೆಂಬುದೆಲ್ಲವು ಕಾಮನ ಬಲೆಯೊಳಗು, ಕಾಮನ ಗೆದ್ದ ಠಾವಾವುದು ಹೇಳಾ ಗುಹೇಶ್ವರ ಲಿಂಗಕ್ಕೆ? ||೧೪||

ಇದಕ್ಕೆ ಮಹಾದೇವಿಯಕ್ಕಗಳ ಬಿನ್ನಹ.

ಕೆಂಡದ ಶ್ರುವದಂತೆ, ಸೂತ್ರ ತಪ್ಪಿದ ಬೊಂಬೆಯಂತೆ ಜಲವರತ ತಟಾಕದಂತೆ, ಬೆಂದ ನುಲಿಯಂತೆ, ಮತ್ತೆ ಹಿಂದಣ ಹಂಗುಂಟೆ? ಅಣ್ಣಾ ಚನ್ನಮಲ್ಲಿಕಾರ್ಜುನನಂಗವೆ ಆಶ್ರಯವಾದ ವಳಿಗೆ? ||೧೫||

ಇಂತು ಮಹಾದೇವಿಯಕ್ಕಗಳು ನಾನು ನಿಃಕಾಮಿಯಾಗಿ ನಿರಾಕಾರ ಬ್ರಹ್ಮವನೆ ಕೈವಿಡಿದೆನೆಂದು, ನಿರೂಪಿಸುವ ಪ್ರಸ್ತಾವದ ವಚನ.

ಸಾವಿಲ್ಲದ ಕೇಡಿಲ್ಲದ, ರೂಹಿಲ್ಲದ ಚಲುವಂಗೆ, ಭವವಿಲ್ಲದ ಭಯವಿಲ್ಲದ ನಿರ್ಭಯದ ಚಲುವಂಗೆ ನಾನೊಲಿದೆನಯ್ಯಾ. ಚನ್ನಮಲ್ಲಿಕಾರ್ಜುನ ಗಂಡನೆನಗೆ ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯಾ. ||೧೬||

---

# ಏಕೀಕರಣದ ಗೊತ್ತುವಳಿಯು

## ತೀರ್ಮಾನವಾಯಿತು.

### ಮುಖಂಡರ ಭಾಷಣಗಳು.

ನಾವು ಕಳೆದ ವಾರವೇ ಪ್ರಕಟಿಸಿದಂತೆ ತಾರೀಖು ೪-೪-೩೮ ನೆಯ ದಿವಸ ಮುಂಬೈ ಅಸೆಂಬ್ಲಿಯಲ್ಲಿ ಬಂದ ಕರ್ನಾಟಕ ಏಕೀಕರಣದ ಗೊತ್ತುವಳಿಯು ತೀರ್ಮಾನವಾಯಿತು. ಆ ಕಾಲಕ್ಕೆ ಕೆಲವು ಮುಖಂಡರು ಮಾಡಿದ ಭಾಷಣಗಳ ಮುಖ್ಯಾಂಶಗಳನ್ನು ಇಲ್ಲಿ ಕೊಟ್ಟಿದೆ—

#### ಶ್ರೀ. ಜೋಗ ವಿಶ್ವನಾಥರಾಯರು.

ಶ್ರೀ. ಜೋಗ ವಿಶ್ವನಾಥರಾಯರು ಕರ್ನಾಟಕ ಏಕೀಕರಣದ ಗೊತ್ತುವಳಿಯನ್ನು ತಂದನಂತರ ಶ್ರೀ. ರಾವುತ ಮತ್ತು ಶ್ರೀ. ಕರಂದೀಕರ್ ಇವರು ಎರಡು ಉಪಸೂಚನೆಗಳನ್ನು ಸೂಚಿಸಿದರು. ಅಧ್ಯಕ್ಷರು ಈ ಸೂಚನೆಗಳು ಮೂಲ ಗೊತ್ತುವಳಿಗೆ ಸಂಬಂಧಪಡುವುದಿಲ್ಲವೆಂದು ನಿರ್ಣಯ ಹೇಳಿದರು.

ಆ ಮೇಲೆ ಸರ್. ಅಲ್ಲಿ ಮಹಮ್ಮದ ಖಾನ ದೆಹಲವಿ ಮತ್ತು ಡಾ. ಅಂಬೇಡಕರ್ ಇವರು ಶಾಸನ ಸಂಬಂಧವಾದ ಕೆಲವು ಸಂಶಯಗಳನ್ನು ತಿಳಿಸಿದರು. ಅಧ್ಯಕ್ಷರು ಅವುಗಳನ್ನೂ ನಿವಾರಣೆ ಮಾಡಿದರು, ಆ ಮೇಲೆ ಶ್ರೀ. ಎಂ. ಪಿ. ಪಾಟೀಲರು ಶ್ರೀ. ಜೋಗರವರ ಗೊತ್ತುವಳಿಯನ್ನು ವಿಶದೀಕರಿಸುವ ಸೂಚನೆಯನ್ನು ತರಲು ಅದನ್ನು ಶ್ರೀ. ಜೋಗರು ಅಂಗೀಕರಿಸಿ ತಮ್ಮ ಭಾಷಣದಲ್ಲಿ ಹೇಳಿದ್ದೇನೆಂದರೆ—

"ಕರ್ನಾಟಕವು ಸ್ವತಂತ್ರ ಪ್ರಾಂತವಾಗಿರಲು ಎಲ್ಲ ದೃಷ್ಟಿಗಳಿಂದಲೂ ಅರ್ಹವಾಗಿದೆ. ಇದಕ್ಕಾಗಿ ಪ್ರತ್ಯೇಕವಾದ ಎಲ್ಲ ಸೌಲಭ್ಯಗಳೂ ಇವೆ. ಸಂಸ್ಕೃತಿ, ಸಾಹಿತ್ಯ ಮೊದಲಾದವುಗಳಿಂದಲೂ ಇದು ಸ್ವತಂತ್ರವಾಗಿದೆ.

ಹೀಗೆ ಇದು ಸ್ವತಂತ್ರವಾಗಿಯೇ ಅಭಿವೃದ್ಧಿಯನ್ನು ಹೊಂದಲು ಸಮರ್ಥವಾದುದಾಗಿದ್ದರೂ ಬೇರೆ ಬೇರೆ ಪ್ರಾಂತಗಳಿಗೆ ಹಂಚಿ ಹಾಕಿದ್ದರಿಂದ ಇದರ ಉನ್ನತಿಯಾಗದಂತಾಗಿದೆ. ಮುಂಬೈ ಇಲಾಖೆಯ ನೀರಾವರಿಗಾಗಿ ೧೦|| ಕೋಟಿ ರೂ. ವೆಚ್ಚಮಾಡಬೇಕೆಂದೇನೋ ನಿರ್ಣಯವಾಯಿತು. ಆದರೆ ಕರ್ನಾಟಕದ ಪಾಲಿಗೆ ೧೪ ಲಕ್ಷ ರೂ. ಗಳು ಮಾತ್ರ ಬಂದವು.

ಧಾರವಾಡ, ಬೆಳಗಾವ, ವಿಜಾಪುರ ಮತ್ತು ಕಾರವಾರ ಈ ನಾಲ್ಕು ಜಿಲ್ಲೆಗಳ ಆದಾಯ ವೆಚ್ಚ ಹೋಗಲಾಗಿ ೧೦ ಲಕ್ಷ ರೂ. ಗಳು ಉಳಿಯುತ್ತವೆ, ಮಂಗಳೂರು ಜಿಲ್ಲೆಯು ಫಲವತ್ತಾದುದಾಗಿದೆ. ಒಟ್ಟಿಗೆ ಕರ್ನಾಟಕವು ೩ ಕೋಟಿ ೩೦ ಲಕ್ಷ ರೂ. ಉತ್ಪನ್ನವುಳ್ಳದ್ದಾಗಿದೆ. ಇಂಥ ಭಾಗವು ಸ್ವತಂತ್ರವಾಗಿರತಕ್ಕದ್ದು ಅತ್ಯಗತ್ಯವಾಗಿದೆ."

#### ಶ್ರೀ. ದೊಡ್ಡಮೇಟಿ ಅಂದಾನಪ್ಪನವರು.

ಆ ಮೇಲೆ ಈ ಗೊತ್ತುವಳಿಗೆ ಶ್ರೀ. ದೊಡ್ಡಮೇಟಿ ಅಂದಾನಪ್ಪನವರು ಒಪ್ಪಿಗೆಯನ್ನು ಕೊಡುವಾಗ ಹೀಗೆ ಹೇಳಿದರು—

"ಕರ್ನಾಟಕ ಏಕೀಕರಣವು ಕನ್ನಡಿಗರಿಗೆ ಹಿಂದುಸ್ಥಾನದ ಸ್ವಾತಂತ್ರ್ಯದಷ್ಟೇ ಮಹತ್ವದ ವಿಷಯವಾಗಿದೆ. ಕರ್ನಾಟಕಕ್ಕೆ ಸ್ವತಂತ್ರ ಬಂದರವಿದೆ. ಇದು ಪ್ರತ್ಯೇಕ ಪ್ರಾಂತವಾದರೆ ಆ ಬಂದರವೂ ಅಭಿವೃದ್ಧಿಗೆ ಬರುತ್ತದೆ ಆರ್ಥಿಕ ಸ್ಥಿತಿಯೂ ಸುಧಾರಿಸುತ್ತದೆ."

#### ಶ್ರೀ. ಜಿ. ಆರ್. ನಲವಡಿಯವರು.

"ಕರ್ನಾಟಕದ ಕಡೆಗೆ ಈ ವರೆಗೂ ಲಕ್ಷ್ಯಸದೆ ಇದ್ದುದರಿಂದ ಅದಕ್ಕೆ ಬಹಳ ಹಾನಿಯಾಗಿದೆ. ಈಗಲಾದರೂ ಕೂಡಲೆ ಲಕ್ಷ್ಯಸಿ ಇದನ್ನು ಪ್ರತ್ಯೇಕವಾದ ಪ್ರಾಂತವನ್ನು ಮಾಡಬೇಕು." ಎಂದು ಶ್ರೀ. ನಲವಡಿಯವರು ತಮ್ಮ ಭಾಷಣದಲ್ಲಿ ಹೇಳಿದರು.

#### ಶ್ರೀ. ಜಕಾತಿ ಪರಪ್ಪನವರು.

"ಕರ್ನಾಟಕದ ಸಂಸ್ಕೃತಿ ಮತ್ತು ಇತಿಹಾಸ ನೋಡಿದರೆ ಇದು ಸ್ವತಂತ್ರ ಪ್ರಾಂತವಾಗಿರಲು ಯೋಗ್ಯವಾಗಿದೆಯೆಂದೇ ಸಿದ್ಧವಾಗುತ್ತದೆ. ಇದು ಸ್ವತಂತ್ರ ಪ್ರಾಂತವಾದರೆ ಇದರ ವ್ಯಾಪಾರ ಉದ್ಯೋಗಗಳು ಹೆಚ್ಚಿ ಆರ್ಥಿಕದೃಷ್ಟಿಯಿಂದಲೂ ಇದು ಮುಂದೆ ಬರುವುದು." ಎಂದು ಶ್ರೀ. ಜಕಾತಿ ಪರಪ್ಪನವರು ಹೇಳಿದರು.

#### ಸರ್. ಕಂಬಳಿ ಸಿದ್ಧಪ್ಪನವರು.

ಹೊಸದಾಗಿ ಪ್ರಾಂತಿಕ ಪ್ರಭುತ್ವ ಪ್ರಾರಂಭವಾದನಂತರ ಅಸೆಂಬ್ಲಿಯಲ್ಲಿ ಸರ್. ಸಿದ್ಧಪ್ಪನವರು ಭಾಷಣಮಾಡಿದ್ದು ಇದೇ ಮೊದಲು. ಅಂತೆಯೇ ಇವರು ಭಾಷಣಮಾಡಲು ಎದ್ದು ನಿಂತೊಡನೆ ಸಭಾಸದರು ಕರತಾಡನ ಮೂಲಕ ತಮ್ಮ ಸಂತೋಷವನ್ನು ಪ್ರದರ್ಶಿಸಿದರು. ಇವರು ಶ್ರೀ. ಜೋಗರ ಗೊತ್ತುವಳಿಯನ್ನು ಸಮರ್ಥಿಸುತ್ತಾ ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ನಾನು ಹಿಂದಿನ ಪ್ರಭುತ್ವದಲ್ಲಿ ಈ ಪ್ರಕಾರ ಕರ್ನಾಟಕ ಏಕೀಕರಣದ ಗೊತ್ತುವಳಿಯನ್ನು ಅನೇಕ ಸಾರೆ ತಂದಿದ್ದೆನು.

# ಯಕ್ಕುಂಡಿ.

ಪದ್ಧತಿಯಂತೆ ಯಕ್ಕುಂಡಿಯ ವಿರಕ್ತ ಮಠದಲ್ಲಿ ಈ ಸಲ ಯುಗಾದಿಯ ಮಹೋತ್ಸವವು ಜ್ಞಾನವೃದ್ಧರೂ ವಯೋವೃದ್ಧರೂ ಆದ ಸದರೀ ಮಠದ ಶ್ರೀ. ಮ. ನಿ. ಪ್ರ. ಶ್ರೀ. ಮುರಗೇಂದ್ರ ಮಹಾಸ್ವಾಮಿಗಳವರ ನೇತೃತ್ವದಲ್ಲಿ ಅತ್ಯಂತ ವಿಜೃಂಭಣೆಯಿಂದ ಜರುಗಿತು. ಫಾಲ್ಗುಣ ವದ್ಯ ಪ್ರತಿಪದದಿಂದ ಶ್ರೀ ಪ್ರಭುಲಿಂಗ ಲೀಲಾ ಎಂಬ ಪುರಾಣವು ಪ್ರಾರಂಭಿಸಲ್ಪಟ್ಟು ಸವದತ್ತಿ ಹೊಸ ಮಠದ ಶ್ರೀ ಗಂಗಾಧರ ದೇವರ ಮಂಜುಳ ಗಾನ ಯುಕ್ತವಾದ ಓದುವಿಕೆಯಿಂದಲೂ ಶ್ರೀ. ಗುರುಪಾದಪ್ಪನವರು ಹೊಂಗಲ ಇವರ ರಸಭರಿತವಾದ ಹೇಳುವಿಕೆಯಿಂದಲೂ ಸದರಿ ಯಕ್ಕುಂಡಿ ವಿರಕ್ತ ಮಠಾಧ್ಯಕ್ಷರಾದ ಶ್ರೀ. ಮ. ನಿ. ಪ್ರ. ಶ್ರೀ ಸಿದ್ಧರಾಮ ಸ್ವಾಮಿಗಳ ಜನಾಕರ್ಷಕವಾದ ವಚನ ಪ್ರವಚನಗಳಿಂದಲೂ ಬಹುಳ ಚತುರ್ದಶಿಯವರೆಗೂ ಯಥಾಕ್ರಮವಾಗಿ ನಡೆದು ಸದರೀ ಪುರಾಣವು ದಾಸೋಹದೊಡನೆ ಸಮಾಪ್ತಿಯಾಯಿತು. ಅದೇ ಸಮಯಕ್ಕೆ ಸದರಿ ಮಠದ ಕಾರಭಾರಿಗಳಾದ ಶ್ರೀ. ಗುರುಪಾದಯ್ಯನವರ ಸುಪುತ್ರಿ ಶಿವಲಿಂಗವ್ವ ಎಂಬ ಕುಮಾರಿಯು ಸ್ತ್ರೀ ಶಿಕ್ಷಣವೆಂಬ ವಿಷಯದ ಮೇಲೆ ಅತಿ ದಿಟ್ಟತನದಿಂದ ಸುರಳಿತವಾಗಿ ಭಾಷಣಮಾಡಿದ್ದು ಕೇಳಿ ವೇದಾಂತಾಚಾರ್ಯ ಶ್ರೀ. ಮ. ಘ. ಚ. ಬೆಟ್ಟಸೂರ ಪಟ್ಟದ ಸ್ವಾಮಿಗಳವರು ಕುಮಾರಿಯ ವಾಕ್ಪಟುತ್ವವನ್ನು ಶ್ಲಾಘಿಸಿ (೧) ರೂಪಾಯಿ ಪಾರಿತೋಷಕವನ್ನಿತ್ತರು. ಈ ಅವಧಿಯಲ್ಲಿ ಬಹುಳ ದ್ವಾದಶಿಯ ದಿವಸ ಪುರಾಣ ಶ್ರವಣಕ್ಕೆ ಆಗಮಿಸಿದ ದೇಶಭಕ್ತ ಹೂಲಿ ವೆಂಕರಡ್ಡಿಯವರು "ಧರ್ಮ" ಈ ವಿಷಯದ ಮೇಲೆ ಪರಿಣಾಮಕಾರಕವಾಗಿ ಭಾಷಣಮಾಡಿದರು.

ಮರುದಿವಸ ತಾ. ೩೧-೩-೩೪ ನೇ ಗುರುವಾರ ಅಮಾವಾಸೆ ಬೆಳಗ್ಗೆ ವಿಧ್ಯುಕ್ತವಾಗಿ ಶ್ರೀ ಕರ್ತೃ ಗದ್ದಿಗೆಯ ಮಹಾ ರುದ್ರಾಭಿಷೇಕವನ್ನು ಸುತಗಟ್ಟಿಯ ಶ್ರೀ. ಸಂಗಯ್ಯನವರು ಗುಡಿಮಠ ಇವರು ಮಾಡಿದರು. ನಂತರ ೮ ಘಂಟೆಗೆ ಕಿತ್ತೂರು ಕಲ್ಮಠದ ಶ್ರೀ. ಮ. ನಿ. ಪ್ರ. ಶ್ರೀ ಗುರುಸಿದ್ಧೇಶ್ವರ ಮಹಾಸ್ವಾಮಿಗಳವರ ಅಡ್ಡಪಲ್ಲಕ್ಕಿಯ ಮಹೋತ್ಸವವು ಸದರಿ ಮಠದಿಂದ ಹೊರಟು ತಳಿರು ತೋರಣ ಛತ್ರ ಚಾಮರಗಳಿಂದಲೂ, ಬಿರುದು ಬಾಹುಲ್ಯಗಳಿಂದಲೂ ಸುಶ್ರಾವ್ಯ ಭಜನೆಗಳ ಮೇಳಗಳಿಂದಲೂ ಮತ್ತು ಧಾರವಾಡದ ಸುಪ್ರಸಿದ್ಧರಾದ ತಿಮ್ಮಣ್ಣ ಜಗತೇರಿ ಇವರ ಅನೇಕಾನೇಕ ವಾದ್ಯಗಳ ಅಬ್ಬರಗಳಿಂದಲೂ ಉತ್ಸವವು ಕರ್ತೃ ಗದ್ದಿಗೆಗೆ ತಲುಪಿ ತಿರುಗಿ ೧ ಘಂಟೆಗೆ ಮಠಕ್ಕೆ ಬಂದುಮುಟ್ಟಿತು. ಆ ಮೇಲೆ ಗಣ ಸಂತರ್ಪಣೆಯಾಗಿ ಮಹಾ ದಾಸೋಹವು ರಾತ್ರಿ ೧೨ ಘಂಟೆಯ ವರೆಗೂ ಅವಿಶ್ರಾಂತವಾಗಿ ನಡೆದು ಕೊನೆಗಂಡಿತು.

ಸದರೀ ಉತ್ಸವಕ್ಕೆ ಶ್ರೀ. ಮ. ಘ. ಚ. ತೊರಗಲ್ಲ ಬೆಟ್ಟಸೂರ ಬೈಲವಾಡದ ಪಟ್ಟದ ಸ್ವಾಮಿಗಳೂ ಮತ್ತು ಸವದತ್ತಿ, ಹುಬ್ಬಳ್ಳಿ, ಗೊರವನಕೊಳ್ಳ, ಹೊಂಗಲ, ಸುತಗಟ್ಟಿ ಮೊದಲಾದ ಊರ ಭಕ್ತರು ದಯಮಾಡಿಸಿ ಮಹೋತ್ಸವಕ್ಕೆ ಕಳೆಯನ್ನು ಹೆಚ್ಚಿಸಿದರು. ಪುನಃ ಅದೇ ದಿವಸ ರಾತ್ರಿ ೮ ಘಂಟೆಗೆ ಶ್ರೀ. ಮ. ನಿ. ಪ್ರ. ಶ್ರೀ ಗುರುಸಿದ್ಧೇಶ್ವರ ಮಹಾಸ್ವಾಮಿಗಳು ಕಿತ್ತೂರ ಇವರ ಅಧ್ಯಕ್ಷತೆಯಲ್ಲಿ "ಭಕ್ತಿಯೇ ಮುಕ್ತಿ" ಎಂಬ ವಿಷಯದ ಮೇಲೆ ಶ್ರೀ. ಗುರುಪಾದಪ್ಪನವರು ಹೊಂಗಲ ಇವರು ಸುಶ್ರಾವ್ಯವಾಗಿ ಕೀರ್ತನ ಮಾಡಿದ ಮೇಲೆ ಶ್ರೀ. ಮ. ಘ. ಚ. ಬೆಟ್ಟಸೂರ ಮತ್ತು ತೊರಗಲ್ಲ ಶ್ರೀ ಪಟ್ಟದ ಸ್ವಾಮಿಗಳವರು "ಧರ್ಮ ಮತ್ತು ಮಾನವನ ಕರ್ತವ್ಯ" ವಿಷಯಗಳ ಮೇಲೆ ಜನತೆಗೆ ಅತ್ಯಂತ ಪರಿಣಾಮವಾಗುವಂತೆ ಭಾಷಣ ಮಾಡಿದರು. ಆ ಮೇಲೆ ಸದರಿ ಮಠಾಧ್ಯಕ್ಷರಾದ ಶ್ರೀ ಮ. ನಿ. ಪ್ರ. ಶ್ರೀ. ಸಿದ್ಧರಾಮ ಸ್ವಾಮಿಗಳು ಉಪಸಂಹಾರಯುಕ್ತ ಭಾಷಣ ಮಾಡಿದ ಮೇಲೆ ಭಕ್ತವೃಂದದ ಮಂಗಲ ಜಯ ಜಯಕಾರದೊಡನೆ ಸಭೆಯು ಸಮಾಪ್ತಿಯಾಯಿತು

ವ್ಯವಸ್ಥಾಪಕ ಮಂಡಳಿ.

---

# ಅಖಿಲ ಹಿಂದುಗಳಿಗೆ ಎಚ್ಚರಿಕೆ.

(ಲೇಖಕ— ಶ್ರೀ. ಶಾಮರಾವ ಟಪಾಲ ಯಾದಗಿರಿ.)

ಈ ಇಪ್ಪತ್ತನೆಯ ಶತಮಾನದಲ್ಲಿ ನಮ್ಮ ಧರ್ಮ, ಸಂಸ್ಕೃತಿ, ಮತ್ತು ಪಂಗಡಗಳಲ್ಲಿ ಎಷ್ಟೋ ಹೆಚ್ಚು ಕಡಿಮೆ ಆಗುತ್ತ ನಡೆದಿದೆ. ಕಾಲಾನುಸಾರವಾಗಿ ಬದಲಾವಣೆ ಆಗುವದು ಸಹಜವು. ನಮ್ಮ ಪೂರ್ವಜರು ಔಡಲ ಎಣ್ಣೆಯ ದೀಪಗಳನ್ನು ಹಚ್ಚುತ್ತಿದ್ದರು. ಆದರೆ ನಾವು ಗ್ಯಾಸಿನ ದೀಪಗಳನ್ನು ಹಚ್ಚುವದಿಲ್ಲವೆ? ಇದರಂತೆ ಎಲ್ಲ ಪ್ರಕಾರಗಳು.

ಹಿಂದು ಧರ್ಮವನ್ನು ಈ ಸಮಯದಲ್ಲಿ ಕಾಪಾಡಬೇಕಾದರೆ ಶಕ್ತಿ, ವಿದ್ಯೆ, ಒಕ್ಕಟ್ಟು ಇವು ಬೇಕು. ಎಲ್ಲ ಹಿಂದುಗಳ ಮೊದಲನೆ ಕೆಲಸವೇನೆಂದರೆ ತಾವು ತಮ್ಮ ದೇಹವನ್ನು ಬಲಪಡಿಸಬೇಕು. ಪ್ರತಿಯೊಬ್ಬ ಹಿಂದು ವ್ಯಾಯಾಮ ಯಾವ ತರದ್ದೇ ಆಗಲಿ ದಿನಾಲು ತಪ್ಪದೇ ಮಾಡಬೇಕು. ಮತ್ತು ಶಕ್ತಿಯನ್ನು ಸಂಪಾದನೆಮಾಡಬೇಕು. ಪ್ರತಿ ಒಬ್ಬ ಹಿಂದು ಶಕ್ತಿವಂತನಾಗಿದ್ದರೆ ನಮ್ಮ ಸಮಾಜವು ಬಲವಂತವಾಗುವದು ಸಹಜವು.

ನಮ್ಮ ಹಿಂದು ಸಮಾಜದಲ್ಲಿಯ ಕೆಲವು ಪಂಗಡದವರು ವಿದ್ಯಾಭೂಷಣರಾದರೆ ಏನು ಪ್ರಯೋಜನವಿಲ್ಲಾ. ಅಖಿಲ ಹಿಂದುಗಳು ತಮ್ಮ ತಮ್ಮ ಮನೆಯಲ್ಲಿಯ ಬಾಲಕರನ್ನು ವಿದ್ಯಾವಂತರನ್ನಾಗಿ ಮಾಡಬೇಕು.

ಹಿಂದು ಸಮಾಜವು ಅಬಲವಾಗಿರುವ ಕಾರಣವೇನೆಂದರೆ ಅದರ ನೂರ ಎಂಟು ಪಂಗಡಗಳು ಮತ್ತು ಅದರಲ್ಲ ಒಂದು ಪಂಗಡದವರು ಎರಡನೆ ಪಂಗಡವವರ ಸಂಗಡ ಜಗಳಾಡುವದು, ನಿಂದಾಮಾಡುವದು, ಈ ಪ್ರಕಾರ ಜಗಳಾಡುವದು ಹಿಂದುಗಳ ಧರ್ಮವಲ್ಲ. ಹಿಂದುಗಳು ಅಂದರೆ ಶಾಂತ ಸಮುದ್ರ. ಸಮುದ್ರ ಯಾವ ಪ್ರಕಾರ ಶಾಂತದಿಂದ ಅಸಂಖ್ಯ ನದಿಗಳನ್ನು ಸೇರಿಸಿಕೊಳ್ಳುವದೋ ಅದೇ ಪ್ರಕಾರ ಅಖಿಲ ಹಿಂದುಗಳು ತಮ್ಮ ಪಂಗಡದ ಜಗಳಗಳನ್ನು ತೆಗೆದುಹಾಕಿ ಶಾಂತರಾಗಿರಬೇಕು. ಎಲ್ಲರೂ ಒಂದೇ ಮನಸ್ಸಿನಿಂದ ನಡೆಯಬೇಕು.

ಈಗ ಆದಿ ಹಿಂದು ಜನರು ದಿನಾಲು ಬಹು ಹೆಚ್ಚು ಹೆಚ್ಚಾಗಿ ಯವನ ಧರ್ಮಕ್ಕೆ ಸೇರುತ್ತಲಿದ್ದಾರೆ. ಇದು ಲಾಂಛನಾಸ್ಪದ ಮಾತಾಗಿದೆ. ನಾವು ಅವರಿಗೆ ದೂರುಮಾಡುವದು ಯವನರು ಅವರನ್ನು ಕರೆದುಕೊಂಡು ತಮ್ಮ ಧರ್ಮದಲ್ಲಿ ಸೇರಿಸುವದು ಎಷ್ಟು ಖೇದದ ಮಾತು? ನೀವೇ ವಿಚಾರಮಾಡಿರಿ. ಯವನರಲ್ಲಿ ಒಂದು ಸಂಘವು ಸ್ಥಾಪನವಾಗಿದೆ. ಅದರ ಹೆಸರು "ತಬ್ಲೀಗ" ಈ ಸಂಘವು ದಿನಾಲು ನೂರಾರು ಹಿಂದುಗಳನ್ನು ಯವನರನ್ನು ಮಾಡುವದೇ ಇದರ ಮುಖ್ಯ ಕರ್ತವ್ಯವಾಗಿದೆ. ಅಖಿಲ ಹಿಂದು ಬಾಂಧವರೆ? ನೀವು ಎಚ್ಚರದಿಂದ ಇರಬೇಕು. ಮತ್ತು ನಿಮ್ಮ ಧರ್ಮವನ್ನು ಕಾಪಾಡುವದೇ ಮೋಕ್ಷಕ್ಕೆ ಸಾಧನವು. ಇದಕ್ಕೆ ಹೆಚ್ಚಿನದು ಜಗತ್ತಿನಲ್ಲಿ ಏನೂ ಇಲ್ಲ. ಜನ ಸೇವೆಯೇ ದೇವರ ಸೇವೆಯೆಂದು ಚೆನ್ನಾಗಿ ತಿಳಿಯಿರಿ. ಜಗತ್ತಿನಲ್ಲಿ ಎಷ್ಟೋ ಕಷ್ಟ ಬಂದರೂ ಧರ್ಮವನ್ನು ಕಾಪಾಡುವದೇ ಹಿಂದುಗಳ ಮುಖ್ಯ ಕರ್ತವ್ಯವಾಗಿದೆ.

# ಮತ್ತೊಂದು ಯುದ್ಧದ ಸಿದ್ಧತೆ.

### ಮುಸೋಲಿನಿಯ ಸನ್ನಾಹ.

ಇಟಲಿಯ ಸರ್ವಾಧಿಕಾರಿ ಸಿ. ಮುಸೋಲಿನಿಯು ಜಗತ್ತಿನ ಒಬ್ಬ ಮಹಾ ವ್ಯಕ್ತಿಯಷ್ಟೆ. ಈಗಿನ ಪ್ರಪಂಚದ ಯುದ್ಧಾಗ್ನಿಯು ಪ್ರಜ್ವಲಿಸಲು ನಿರ್ಬಲ ರಾಷ್ಟ್ರಗಳನ್ನು ಆಹುತಿಕೊಡುವ ನರಮೇಧಯಾಗದ ಒಬ್ಬ ಪ್ರಮುಖ ದೀಕ್ಷಿತನಷ್ಟೆ. ಈ ವೀರ ವ್ಯಕ್ತಿಯು ಕಳೆದ ೩೦ ನೆಯ ತಾರೀಖಿನ ದಿವಸ ರೋಮ ಪಟ್ಟಣದಲ್ಲಿ ಹೀಗೆ ಸಾರಿತು—

"ಸ್ವ ಸಂರಕ್ಷಣೆಗೆ ಯುದ್ಧವೇ ಮುಖ್ಯ ಸಾಧನವಾಗಿದೆ. ಇಟಲಿಯಲ್ಲಿ ಈಗ ೪ ಕೋಟಿ ೪೦ ಲಕ್ಷ ಜನಸಂಖ್ಯೆಯಿದೆ. ಇನ್ನು ಹತ್ತು ವರುಷಗಳಲ್ಲಿ ೫ ಕೋಟಿ ಜನಸಂಖ್ಯೆಯಾಗುತ್ತದೆ.

ದೊಡ್ಡ ದೊಡ್ಡ ಸೇನಾದಳಗಳನ್ನು ನಿರ್ಮಿಸಲು ಸೈನಿಕರ ಸಂಖ್ಯೆಯು ಹೆಚ್ಚಾಗಬೇಕಾಗಿದೆ. ಲಿಬಿಯಾ ಮತ್ತು ಸ್ಪೇನ್‌ಗಳ ಕಡೆಗೆ ನಾವು ಸೈನ್ಯವನ್ನು ಕಳಿಸಿದ್ದರೂ ನಮ್ಮ ಸೈನ್ಯ ಬಲವೇನೂ ಕಡಿಮೆಯಾಗಿಲ್ಲ.

ಜಯಾಪಜಯಗಳ ತೀರ್ಮಾನ ಜಾಗ್ರತೆ ಆಗುವುದಕ್ಕಾಗಿ ಸೈನ್ಯ ಮತ್ತು ಸಾಮುಗ್ರಿಗಳ ಸಿದ್ಧತೆಯನ್ನು ತೀವ್ರತರವಾಗಿ ಮಾಡುತ್ತಿದ್ದೇವೆ. ಸೈನಿಕರ ಸಂಖ್ಯೆಯ ಪ್ರಮಾಣದಂತೆ ತೋಫುಗಳು ಹೆಚ್ಚಲ್ಪಡುವುದು ಶಕ್ಯವಿಲ್ಲ. ಏಕೆಂದರೆ ತೋಫು ಯುದ್ಧದ ರಾಣಿ ಎಂದೇ ತಿಳಿಯಲ್ಪಡುತ್ತಾ ಇದೆ.

ಇಟಲಿಯಲ್ಲಿ ರಾಜಕಾರಣದ ಮತ್ತು ಜನಸಂಖ್ಯೆಯ ಸೂತ್ರಗಳೆರಡೂ ಒಂದೇ ವ್ಯಕ್ತಿಯ ಕೈಯಲ್ಲಿವೆ. ಯುದ್ಧದ ಹಡಗಗಳೂ ಇಟಲಿಗೆ ಅಗತ್ಯವಾಗಿವೆ. ೧೯೪೧ ನೆಯ ಇಸವಿಗೆ ಇಟಲಿಯ ಹತ್ತಿರ ಎಂಟು ದೊಡ್ಡ ಯುದ್ಧದ ಹಡಗಗಳು ಇರುವವು ಅಬಿಸೀನಿಯಾದ ಯುದ್ಧದಲ್ಲಿ ನಮ್ಮ ಹಡಗಗಳು ಮಹತ್ವದ ಕಾರ್ಯಗಳನ್ನು ಮಾಡಿವೆ.

### ಮುಂದಣ ಯುದ್ಧ.

ಮುಂದಣ ಯುದ್ಧದಲ್ಲಿ ಇಟಲಿಯ ಹಡಗಗಳು ಕೇವಲ ಬಂದರದಲ್ಲಿಯೇ ಇರತಕ್ಕವುಗಳಾಗದೆ ಅವು ಯುದ್ಧಕ್ಕೂ ಹೋಗುವವು. ಆಗ ಫಾಸಿಸ್ಟ್ ಪ್ರಭುತ್ವದಲ್ಲಿ ಇಟಲಿ ನಾವಿಕರ ಸುಧಾರಣೆಯು ಎಷ್ಟರ ಮಟ್ಟಿಗೆ ಆಗಿದೆಯೆಂಬುದು ಗೊತ್ತಾಗುವುದು.

ಇಟಲಿಯ ಹಡಗು ಪಡೆಯು ಆಧುನಿಕ ಸುಧಾರಣೆಯ ಎಲ್ಲ ಸೌಲಭ್ಯಗಳಿಂದ ಕೂಡಿದ್ದಾಗಿದೆ. ಬಹು ದಿನಗಳ ವರೆಗೆ ಸಾಲುವಷ್ಟು ಎಣ್ಣೆಯನ್ನು ಸಂಗ್ರಹಿಸಿಡಲಾಗಿದೆ.

### ೩೦ ಸಾವಿರ ವೈಮಾನಿಕರು.

ಇಟಲಿಯು ವಿಮಾನ ಶಕ್ತಿಯಲ್ಲಿ ಬಹು ಮುಂದರಿದಿದೆ. ಈಗ ವಿಮಾನಗಳನ್ನು ಮಾಡಲು ೪೮ ಸಾವಿರ ಕೆಲಸಗಾರರಿದ್ದಾರೆ. ಹಗಲೂ ಇರುಳೂ ಬಾಂಬುಗಳನ್ನು ಎಸೆಯತಕ್ಕ ಹೊಸ ಪದ್ಧತಿಯ ವಿಮಾನುಗಳನ್ನು ಮಾಡುವುದರಲ್ಲಿ ಶಾಸ್ತ್ರಜ್ಞರು ನಿರತರಾಗಿದ್ದಾರೆ.

ಈಗ ಇಟಲಿಯಲ್ಲಿ ೨೦-೩೦ ಸಾವಿರ ವೈಮಾನಿಕರಿದ್ದಾರೆ. ಇವರು ಬಹು ಕುಶಲರು. ಭೀತಿಯೆಂಬುದು ಇವರಿಗೆ ಗೊತ್ತೇ ಇಲ್ಲ. ಇವರಲ್ಲಿ ಅನೇಕರಿಗೆ ಕಳೆದ ೨ ವರುಷಗಳ ಯುದ್ಧದ ಅನುಭವವೂ ಇದೆ.

ಮುಂದಣ ಯುದ್ಧದಲ್ಲಿ ವಿಮಾನದ ಮಹತ್ವವು ವಿಶೇಷವಾಗಿದೆ. ನಮ್ಮ ಹಿತಕ್ಕೆ ವಿರೋಧ ಮಾಡುವವರ ಮೇಲೆ ಒಂದೇ ಕಾಲದಲ್ಲಿ ಭೂಮಿ, ಜಲ, ಮತ್ತು ಆಕಾಶ ಈ ಮೂರು ಕಡೆ ಯುದ್ಧಹೂಡಲು ಸಿದ್ಧರಿದ್ದೇವೆ.

ಯುದ್ಧದ ಎಲ್ಲ ಸಿದ್ಧತೆಯೂ ನಮ್ಮಲ್ಲಿರುವುದರಿಂದ ಈಗ ನಾವು ಶಾಂತವಾಗಿ ನಿದ್ರೆಮಾಡಲು ಅಡ್ಡಿಯಿಲ್ಲ. ಜಗತ್ತಿನಲ್ಲಿ ಮುಖ್ಯವಾಗಿ ನಮ್ಮಲ್ಲಿ ಶಾಂತತೆಯಿರಬೇಕೆಂದೇ ನಾವು ಪ್ರಯತ್ನಿಸುವವರು. ಮನೋರಾಜ್ಯ ಅಥವಾ ಕಲ್ಪನಾಸೃಷ್ಟಿ ನಮ್ಮ ಮುಂದಿಲ್ಲ. ಅಂತೆಯೇ ನಾವು ಈ ವಸ್ತುಗಳನ್ನು ಜಿನೀವಾದಲ್ಲಿ ಮಾರಲಿಕ್ಕೆ ಬರುವ ಅಂಗಡಿಕಾರರ ( ರಾಷ್ಟ್ರ ಸಂಘ ) ಸಂಬಂಧವನ್ನು ತೆಗೆದುಹಾಕಿದ್ದೇವೆ.

ಇಟಲಿ ದೇಶದವರು ಒಂದು ದಿನ ಜಗತ್ತಿನ ಪ್ರಸಿದ್ಧ ಸೈನಿಕರಾಗುವರೆಂದು ನೆಪೋಲಿಯನ್ನನು ಹೇಳಿದ್ದನು. ಆತನ ಭವಿಷ್ಯವು ಈಗಿನ ಫಾಸಿಸ್ಟ್ ಮತ್ತು ರೋಮನ್ ಸರಕಾರ ನಿಜವೆಂದು ಸಿದ್ಧಮಾಡಿಕೊಡುವವೆಂದೇ ನಾವು ತಿಳಿದಿದ್ದೇವೆ."

ಮುಸೋಲಿನಿಯ ಭಾಷಣ ಮುಗಿಯಲು ಸಭಿಕರು ಪ್ರಚಂಡವಾಗಿ ಕರತಾಡನ ಮಾಡುತ್ತಾ ಎದ್ದು ನಿಂತಿದ್ದರು. ಆ ಮೇಲೆ ಫಾಸಿಸ್ಟ್ ಗೀತೆಯು ಹೇಳಲ್ಪಟ್ಟಿತು.

---



---

# ಶ್ರೀ ಚೆನ್ನಬಸವ ಗುರುಕುಲದ
## ಪ್ರಥಮ ವಾರ್ಷಿಕೋತ್ಸವ ಸಮಾರಂಭ.

ಇದೇ ಈಶ್ವರ ಸಂವತ್ಸರದ ಫಾಲ್ಗುಣ ಬಹುಳ ನವಮಿ ತಾರೀಖು ೨೫-೩-೧೯೩೮ ನೇ ಶುಕ್ರವಾರ ದಿವಸ ಮೈಸೂರು ಡಿಸ್ಟ್ರಿಕ್ಟು ಹೆಗ್ಗಡದೇವನಕೋಟೆ ತಾಲೂಕು ಹಂಪಾಪುರದ ಹೋಬಳಿ ಮಾದಾಪುರ ಗ್ರಾಮದ ಶ್ರೀಮಲ್ಲಿಕಾರ್ಜುನ ಗಿರಿಯ ಸಮೀಪದಲ್ಲಿರುವ ಶ್ರೀ ಚೆನ್ನಬಸವ ಗುರುಕುಲದ ಪ್ರಥಮ ವಾರ್ಷಿಕೋತ್ಸವವು ಬೆಳಗಾವಿ ಶ್ರೀ. ಚಂದ್ರಶೇಖರ ಮಠಾಧ್ಯಕ್ಷರಾದ ಶ್ರೀಮನ್ನಿರಂಜನ ಪಂಡಿತ ಗುರುಲಿಂಗದೇವರು "ದರ್ಶನ ವಿಶಾರದ ನ್ಯಾಯಾಚಾರ್ಯ" ಇವರ ಅಧ್ಯಕ್ಷತೆಯಲ್ಲಿ ನಡೆಯಿಸಲ್ಪಟ್ಟಿತು. ಮೈಸೂರು ಪಟ್ಟಣಕ್ಕೆ ಶ್ರೀಮನ್ನಿರಂಜನ ಜಗದ್ಗುರು ಮುರುಘರಾಜೇಂದ್ರ ಮಹಾಸ್ವಾಮಿಯವರ ಪರಿವಾರದೊಡನೆ ಆಗಮಿಸಿರುವ ವೇ|| ಅಯ್ಯಪ್ಪ ಶಾಸ್ತ್ರಿಗಳು, ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳು ಹುಲುಕುಂಟೆ ಮಠ ತುಮಕೂರು ಮತ್ತು ಶ್ರೀ ಮಾದನಹಳ್ಳಿ ಮಠಾಧ್ಯಕ್ಷರು ಇವರು ಸಹ ಆಗಮಿಸಿ ಮೈಸೂರು, ನಂಜನಗೂಡು ತಾಲೂಕು ಹಳ್ಳಿಗಳಿಂದಲೂ ಹೆಗ್ಗಡದೇವನಕೋಟೆ ತಾಲೂಕಿನ ಗ್ರಾಮಾಂತರಗಳಿಂದಲೂ ದಯಮಾಡಿಸಿದ್ದ ಜನ ಸಮೂಹದ ಮಧ್ಯೆ ಮೇಲ್ಕಂಡ ಚಂದ್ರಶೇಖರ ಮಠಾಧ್ಯಕ್ಷರು ಅಧ್ಯಕ್ಷತೆಯನ್ನು ವಹಿಸಿ ಈ ಮುಂದಣ ಕಾರ್ಯಕ್ರಮಗಳು ಜರುಗಿದವು.

ಗುರುಕುಲದ ಬಾಲಕ ವೃಂದವು ಸುಸ್ವಾಗತ ಬಯಸಿತು. ನಂತರ ಅಧ್ಯಕ್ಷರ ಪ್ರಾಸ್ತಾವಿಕ ಭಾಷಣವು ಗುರುಕುಲಗಳ ಸ್ಥಾಪನ, ವಿದ್ಯಾ ಪ್ರಸಾರಣ, ವೀರಶೈವರ ನಿತ್ಯಾಚರಣೆ, ಮತತತ್ವ ಪ್ರಸಾರಣೆ ಇವುಗಳನ್ನೊಳಗೊಂಡು ಶ್ರೋತೃವೃಂದವು ಆನಂದಿಸುವಂತೆ ಮಾಡಿತು. ತರುವಾಯ ಸುಪ್ರಸಿದ್ಧ ಭಾಷಣಕಾರರು ಮತ್ತು ಆಚಾರನಿಷ್ಠರೂ ಆದ ಶ್ರೀ ಸರ್ಪಭೂಷಣ ಶಿವಯೋಗಿಗಳ ಮಠಾಧ್ಯಕ್ಷರಾದ ಶ್ರೀಮನ್ನಿರಂಜನ ಪಂಡಿತ ಮಹಾದೇವ ಸ್ವಾಮಿಗಳವರು "ಶರಣರ ಜೀವನ ರಹಸ್ಯ" ದ ಮೇಲೆ ಅತ್ಯುತ್ತಮವಾಗಿ ಭಾಷಣ ಮಾಡಿ ಜನರಿಗೆ ಆಹ್ಲಾದವನ್ನುಂಟುಮಾಡಿದರು. ಇದಾದಮೇಲೆ ಗುರುಕುಲದ ವಿದ್ಯಾರ್ಥಿಗಳು ಸ್ಥಾಪಕರಾದ ವೇ|| ಚಕ್ರದಾನ ಮೂರ್ತಿ ಸ್ವಾಮಿಗಳವರಿಂದಲೂ, ಅಧ್ಯಾಪಕರಾದ ವೇ|| ಬಸವರಾಜ ಶಾಸ್ತ್ರಿಗಳಿಂದಲೂ ಅಭ್ಯಾಸಿಸಲ್ಪಟ್ಟಿದ್ದ ಶಿವಶರಣರ ವಚನಗಳನ್ನೂ ಯೋಗಾಸನಗಳನ್ನೂ ಮತ್ತು ಅಷ್ಟಾವರಣದ ವಿಚಾರವಾಗಿ ಸಂವಾದವನ್ನೂ ನಡೆಯಿಸಿ ಕೂಡಿದ್ದ ಸಭೆಯಲ್ಲಿ ಪ್ರಶಂಸನೀಯವಾಗಿ ಪ್ರದರ್ಶಿಸಿದರು. ಗುರುಕುಲದ ಸೆಕ್ರೆಟರಿಗಳಾದ ಮಿ. ಎನ್. ಭೋಗಿ ಮಲ್ಲಯ್ಯನವರಿಂದ ವಾರ್ಷಿಕ ವರದಿಯು ಓದಲ್ಪಟ್ಟಿತು. ಪ್ರಜಾ ಪ್ರತಿನಿಧಿ ಸಭೆ ಮತ್ತು ಡಿಸ್ಟ್ರಿಕ್ಟು ಬೋರ್ಡ್ ಮೆಂಬರರಾದ ಮಿ ಹೆಚ್. ಪಿ. ಬಸಪ್ಪನವರು, ಮಳಲಿ ಮಿ. ಎಂ. ಡಿ. ಶಿವಪ್ಪನವರು ಮತ್ತು ಕೋಹಳದ ಹುಂಡಿ ಮಿ. ಎಂ. ಪುಟ್ಟಸ್ವಾಮಿಯವರು ಇವರು ಗುರುಕುಲವು ಸಾರೋದ್ಧಾರವಾಗುವಂತೆ ನಡೆಯಲು ಕೆಲವು ಸೂಚನೆಗಳನ್ನು ಸೂಚಿಸಿ ಪ್ರತಿಯೊಬ್ಬರು ಅದರಂತೆ ನಡೆದಲ್ಲಿ ಅತಿ ಶೀಘ್ರದಲ್ಲಿಯೇ ಅಭಿವೃದ್ಧಿಯನ್ನೈದುವುದರಲ್ಲಿ ಸಂಶಯವಿಲ್ಲವೆಂದು ತಿಳಿಸಿದರು. ವಾರ್ಷಿಕ ಸಮಾರಂಭವು ಯಶಸ್ವಿಯಾಗಿ ನಡೆಯಲು ಸಹಕರಿಸಿದ ಗ್ರಾಮದ ಮುಖಂಡರುಗಳಿಗೂ ಮ್ಯಾನೇಜರ್ ಮಿ. ಎಂ. ಎಸ್. ಪುಟ್ಟಸ್ವಾಮಿಯವರಿಗೂ ಗುರುಕುಲದ ಸೆಕ್ರೆಟರಿ ಮಿ. ಎ. ಭೋಗಿ ಮಲ್ಲಯ್ಯನವರು ತಮ್ಮ ಅಭಿನಂದನೆಗಳನ್ನರ್ಪಿಸಿದರು. ಅಧ್ಯಕ್ಷ ಮಹಾಶಯರಿಗೂ ನೆರೆದಿದ್ದ ಸಭಿಕರಿಗೂ ಕೃತಜ್ಞತಾ ಸಮರ್ಪಣೆಯೂ ಮತ್ತು ಅಭಿನಂದನೆಯೂ ಆದನಂತರ ಜಯ ಜಯಕಾರದೊಡನೆ ಸಭೆಯು ವಿಸರ್ಜಿಸಲ್ಪಟ್ಟಿತು.

ಪ್ರೇಕ್ಷಕ,
ಪ. ನಂಜೇಗೌಡ.

---

## ಉದ್ಗಿರಿ "ವೀರಶೈವ ಸಮಾಜ" ದ ವಾರ್ಷಿಕೋತ್ಸವ.

ಸಚ್ಚಿದಾನಂದ ಪರಮೇಶ್ವರನ ಕೃಪೆಯಿಂದ ಉದ್ಗಿರಿ "ವೀರಶೈವ ಸಮಾಜ" ಸಂಸ್ಥೆಯ ವಾರ್ಷಿಕೋತ್ಸವವು ತಾ. ೨೩, ೨೪, ೨೫, ೨೬ ಖುರ್ದಾದ ಸ. ಫ. ೧೩೪೭ ಕ್ಕೆ ಸರಿಯಾದ ೧೯೩೮ ನೇ ಇಸವಿ ಎಪ್ರೆಲ್ ತಾರೀಖು ೨೭, ೨೮, ೨೯, ೩೦ ಬುಧ, ಗುರು, ಶುಕ್ರ ಮತ್ತು ಶನಿವಾರ ಈ ನಾಲ್ಕು ದಿವಸ ನಡೆಯುವದು ನಿಶ್ಚಯವಾಗಿದೆ.

ಈ ಸಮಾರಂಭದ ಕಾಲಕ್ಕೆ ಶ್ರೀ. ಹರ್ಡೇಕರ ಮಂಜಪ್ಪನವರು, ಸೊಲ್ಲಾಪುರದ ಶ್ರೀ. ಕಲ್ಯಾಣಶೆಟ್ಟಿ ಬಿ. ಎ. ಎಲ್. ಎಲ್. ಬಿ. ಸಂಪಾದಕ ಸುದರ್ಶನ ಇವರು ಮತ್ತು ಲಾತೂರಿನ ಪ್ರಸಿದ್ಧ ವಿದ್ವಾಂಸರಾದ ಶ್ರೀ. ದೇಶಿಕೇಂದ್ರ ಮಹಾರಾಜರು ಇನ್ನೂ ಅನೇಕ ವಿದ್ವಾನ್ ಉಪದೇಶಕರು ಬರುವವರಿದ್ದಾರೆ.

ಅದೇ ಕಾಲದಲ್ಲಿ ವ್ಯಾಯಾಮ ಪ್ರದರ್ಶನ, ಮಹಿಳಾ ಸಮ್ಮೇಳನ ಮೊದಲಾದ ಉಪಯುಕ್ತ ಕಾರ್ಯಗಳೂ ನಡೆಯತಕ್ಕವುಗಳಿರುವುದರಿಂದ ಸಕಲ ಬಂಧುಭಗಿನಿಯರು ಈ ವಾರ್ಷಿಕೋತ್ಸವಕ್ಕೆ ಅಗತ್ಯವಾಗಿ ಬರಬೇಕೆಂದು ವಿನಂತಿ.

ಕಾಶೀನಾಥ
ಮಂತ್ರಿ
ವೀರಶೈವ ಸಮಾಜ ಉದ್ಗಿರಿ.

---

## ಶ್ರೀ ಮನ್ನಿರಂಜನ ಜಗದ್ಗುರು ಮುರುಘರಾಜೇಂದ್ರ ಫ್ರೀ ಬೋರ್ಡಿಂಗ್ ಹಾವೇರಿ ಪೇಟೆ
### ಧಾರವಾಡ.

ಶ್ರೀಮನ್ನಿರಂಜನ ಜಗದ್ಗುರು ಮುರಘರಾಜೇಂದ್ರ ಫ್ರೀ ಬೋರ್ಡಿಂಗ್ ಹಾವೇರಿಪೇಟೆ ಧಾರವಾಡ ಈ ಸಂಸ್ಥೆಗೆ ಅಂತರ್ಗತವಾದ ಶ್ರೀ ಶಿವಾನುಭವ ಕಾಲೇಜದಲ್ಲಿ ಈಗಿರುವ ಪಂಡಿತ ವೀರಭದ್ರ ಶಾಸ್ತ್ರಿಗಳವರು ಕೂಗವಾಡ ಹಿರೇಮಠ ಇವರು ತಮ್ಮ ಮಕ್ಕಳಿಗೆ ಬೇರೆ ಕಡೆಗೆ ವರ್ಗವಾದ್ದರಿಂದ ಹಾಗೂ ಅವರು ಅಲ್ಲಿಗೆ ಹೋಗಬೇಕಾದ್ದರಿಂದ ಸದರೀ ಕಾಲೇಜದಲ್ಲಿಯ ತಮ್ಮ ಜಾಗೆಗೆ ರಾಜೀನಾಮೆಕೊಟ್ಟಿರುವರು. ಆದ್ದರಿಂದ ಜೂನ್ ೧೨ ನೇ ತಾರೀಖಿಗೆ ಕೂಡುವ ಜನರಲ್ ಕಮೀಟಿಯೊಳಗಾಗಿ ಈ ಸ್ಥಳಕ್ಕೆ ಬರಲಪೇಕ್ಷಿಸುವ ಶಾಸ್ತ್ರಿಗಳು ತಮ್ಮ ಸರ್ಟಿಫಿಕೇಟುಗಳನ್ನು ಲಗತ ಇಟ್ಟು ಅರ್ಜಿ ಮಾಡಿಕೊಳ್ಳಬೇಕು. ಅಥವಾ ಸಂಸ್ಥೆಯ ಚೇರಮನ್‌ರಿಗೆ ಸದರಿ ತಾರೀಖಿನೊಳಗಾಗಿ ಸಮಕ್ಷಮ ಭೆಟ್ಟಿಯಾಗಬೇಕು.

ಸೆಕ್ರೆಟರಿ.

---

—ರಾಷ್ಟ್ರಾಧಿಪತಿಗಳಾದ ಶ್ರೀ ಸುಭಾಷಚಂದ್ರ ಬೋಸರು ಮೇ ತಿಂಗಳ ಮೊದಲನೆಯ ವಾರದಲ್ಲಿ ಪುಣೆಗೆ ಬರುವರು. ಈಸ್ಟುವ ಹೊಸ ಸರೋವರದ ಉದ್ಘಾಟನಾ ಸಮಾರಂಭವು ಇವರ ಹಸ್ತದಿಂದ ಜರುಗುವುದು.

# ಏಕೀಕರಣ ಚಳವಳಿಗೆ ಒಂದು ಲಕ್ಷ ರೂಪಾಯಿ ಬೇಕು.

ಶ್ರೀ. ಬಳವಂತರಾವ ದಾತಾರ ಕಾರ್ಯಾಧ್ಯಕ್ಷ ಕರ್ನಾಟಕ ಏಕೀಕರಣ ಸಂಘ, ಬೆಳಗಾವಿ ಇವರ ಲೇಖನದ ಮುಖ್ಯಾಂಶ-

“ಮೊದಲು ಅಪಹಾಸ್ಯ, ನಂತರ ಮನ್ನಣೆ” ಎಂದು ಇಂಗ್ಲಿಷಿನಲ್ಲಿ ಅನ್ನುವಂತೆ ಏಕೀಕರಣದ ಚಳವಳಿಯು ಅಪಹಾಸ್ಯದ ಮೊಟ್ಟಮೊದಲಿನ ಅವಸ್ಥೆಯನ್ನು ದಾಟ ಕ್ರಮೇಣ ಮನ್ನಣೆಯನ್ನು ಪಡಕೊಳ್ಳತೊಡಗಿದೆ.

ಮುಂಬಯಿ ಮದ್ರಾಸ್ ಶಾಸನ ಸಭೆಗಳಲ್ಲಿ ಕರ್ನಾಟಕ ಏಕೀಕರಣದ ಗೊತ್ತುವಳಿಯು ಮಂತ್ರಿಮಂಡಲದ ಸಮ್ಮತಿಯನ್ನು ಪಡೆದು ಸ್ವೀಕೃತವಾದದ್ದನ್ನು ಕಂಡು ಯಾವ ಕನ್ನಡಿಗನಿಗೆ ಸಂತೋಷವೆನಿಸಲಿಕ್ಕಿಲ್ಲ?

೧೮ ವರುಷಗಳ ಪೂರ್ವದಲ್ಲಿ ನಾಗಪುರ ಕಾಂಗ್ರೆಸ್ಸಿನಲ್ಲಿ ಕರ್ನಾಟಕಕ್ಕಾಗಿ ಪ್ರತ್ಯೇಕವಾದ ಪ್ರಾಂತವನ್ನು ಮಾಡಿದ ತರುವಾಯ ಈ ಬಗೆಯ ಮಹತ್ವವುಳ್ಳ ಘಟನೆಯು ಏಕೀಕರಣದ ಚಟುವಟಿಕೆಯ ಇತಿಹಾಸದಲ್ಲಿ ಈ ವರೆಗೆ ಒದಗಿದ್ದಿಲ್ಲ. ಆದುದರಿಂದ ಈ ಶ್ರೇಷ್ಠತರವಾದ ಸಂಗತಿಯನ್ನು ನಾವೆಂದಿಗೂ ಮರೆಯುವಂತೆ ಇಲ್ಲ.

ಜನತೆಯ ಮನ್ನಣೆಗೆ ಪಾತ್ರವಾದ ನಮ್ಮ ಕಾರ್ಯಕ್ಕೆ ಮುಂಬಯಿ—ಮದರಾಸ ಸರಕಾರಗಳ ಬೆಂಬಲವು ಅಧಿಕೃತ ರೀತಿಯಲ್ಲಿ ಪ್ರಾಪ್ತವಾದದ್ದರಿಂದ ಮುಂದಿನ ಕಾರ್ಯವು ಅದೆಷ್ಟೋ ಸುಲಭವಾಗಿದೆಯೆಂದು ನಾವು ಭಾವಿಸಬೇಕಾಗಿದೆ. ಹಿಂದೀ ಜನಾಂಗದ ಪ್ರತಿನಿಧಿಗಳಾದ ಕಾಂಗ್ರೆಸ್ ಮಂತ್ರಿಮಂಡಲಗಳು ಮುಂಬೈ ಮದ್ರಾಸ ಪ್ರಾಂತಗಳಲ್ಲಿ ಅಧಿಕಾರ ಸೂತ್ರವನ್ನು ವಹಿಸಿದ್ದರಿಂದಲೇ ನಮ್ಮ ಕಾರ್ಯವು ಕೈಗೂಡಿತೆಂಬ ಈ ಗುಟ್ಟಿನ ಮಾತನ್ನು ನಾವು ಒಪ್ಪಿಕೊಳ್ಳಬೇಕು.

### ಧ್ಯೇಯವು ಇನ್ನೂ ಕೈಸೂಡಿಲ್ಲ.

ಇಷ್ಟರಿಂದಲೇ ನಮ್ಮ ಧ್ಯೇಯವು ಕೈವಶವಾಯಿತೆಂದು ತಿಳಿಯುವಂತೆ ಮರುಳರಲ್ಲ. ನಮ್ಮ ಕಾರ್ಯವು ಸಫಲತೆಯನ್ನು ಹೊಂದುವ ಪೂರ್ವದಲ್ಲಿ ಅದೆಷ್ಟೋ ಎಡರುಗಳನ್ನು ನಾವು ಪ್ರತಿಭಟಿಸಬೇಕಾಗಿದೆ. ಆದುದರಿಂದ ನಾವು ನಮ್ಮ ಮುಂದಿನ ಕಾರ್ಯಕ್ರಮವನ್ನು ಕೂಡಲೇ ಗೊತ್ತುಪಡಿಸಿ ಭರದಿಂದ ನಮ್ಮ ಚಳವಳಿಯನ್ನು ಸಾಗಿಸಲೇಬೇಕು. ಈ ವಿಷಯಕ್ಕೆ ಸಂಬಂಧಪಟ್ಟ ನನ್ನ ಯೋಜನೆಗಳನ್ನು ಪತ್ರಿಕೆಯ ಮುಖಾಂತರ ಕರ್ನಾಟಕದ ಮಹಾಜನಗಳಲ್ಲಿ ನಾನು ಮಂಡಿಸಲಿಚ್ಛಿಸುತ್ತೇನೆ.

### ನಮ್ಮ ಲಕ್ಷ್ಯವು ದಿಲ್ಲಿಯ ಕಡೆಗೆ.

ಪ್ರಾಂತೀಯ ಸರಕಾರಗಳ ಬೆಂಬಲವು ದೊರೆತಿರುವದರಿಂದ ನಾವು ಇನ್ನುಮುಂದೆ ವ್ಹಾಯಿಸ್‌ರಾಯರ ಕಡೆಗೆ ಶಿಷ್ಟಮಂಡಲವೊಂದನ್ನು ಕಳುಹಿಸಬೇಕು. ಮತ್ತು ಮಧ್ಯವರ್ತಿ ಕಾನೂನ ಮಂಡಲಗಳಲ್ಲಾದರೂ ಈ ಪ್ರಶ್ನೆಯು ಸಮ್ಮತವಾಗುವಂತೆ ಏರ್ಪಡಿಸಬೇಕು. ಶಕ್ಯವಾದಲ್ಲಿ ಕೂಡಲೇ ಇಂಗ್ಲಂಡಕ್ಕೆ ನಮ್ಮ ಶಿಷ್ಟಮಂಡಲವು ಹೋಗಿ ಭಾರತ ಮಂತ್ರಿಗಳನ್ನು ಸಂದರ್ಶಿಸಿ ಅವರ ಮನಸ್ಸನ್ನು ಒಲಿಸಿದರೆ ದೇಹಲಿ ಸರಕಾರವು ಅನುಕೂಲವಾಗಿ ನಮ್ಮ ಕಾರ್ಯವು ಸುಲಭವಾದೀತೆಂದು ನನ್ನ ಭರವಸೆ.

### ಅನ್ಯಪ್ರಾಂತೀಯರ ಆಕ್ರಮಣ ಶೀಲತೆ.

ವಿಶೇಷವಾಗಿ ಮೇರೆಗಳನ್ನು ಗೊತ್ತುಪಡಿಸುವದರಲ್ಲಿ ಎಷ್ಟೋ ಎಡರು ತೊಡರುಗಳನ್ನು ನಮಗೆ ಎದುರಿಸಬೇಕಾಗುವುದು. ನಮ್ಮ ಹತ್ತರಿರುವ ಅನ್ಯ ಪ್ರಾಂತೀಯರು ನಮ್ಮ ಪ್ರದೇಶಗಳನ್ನು ಸಾಧಿಸಲು ಟೊಂಕ ಕಟ್ಟಿ ನಿಂತಿರುತ್ತಾರೆ. ಗಡಿನಾಡಿನಲ್ಲಿ ಈ ವಿಷಯಕ್ಕಾಗಿ ನಾವು ಎಚ್ಚರಪಟ್ಟು ನಮ್ಮ ಪ್ರಾಂತೀಯ ವೈಶಿಷ್ಟ್ಯಕ್ಕೆ ಒಪ್ಪುವ ಸಾಧನ ಲಕ್ಷಣಗಳನ್ನು ಬೆಳೆಯಿಸಬೇಕು. ಕನ್ನಡಿಗರಲ್ಲಿ ಅಲ್ಲಲ್ಲಿ ಕಂಡುಬರುವ ಉದಾಸೀನತೆಯನ್ನೂ ಅಭಿಮಾನ ಶೂನ್ಯತೆಯನ್ನೂ ಸಾತ್ವಿಕವಾದ ಮಾರ್ಗಗಳಿಂದ ತೆಗೆದುಹಾಕದೆ ನಮ್ಮ ಕಾರ್ಯವು ಮುಂದೆ ಸಾಗದು. ನಮ್ಮ ಜನಾಂಗದಲ್ಲಿ ಆತ್ಮಜಾಗ್ರತಿಯನ್ನುಂಟುಮಾಡಿದರೆ ನಮಗೆ ಸಲ್ಲತಕ್ಕ ಯಾವ ಪ್ರದೇಶವಾದರೂ ನಮ್ಮ ಕೈ ಬಿಡಲಿಕ್ಕಿಲ್ಲೆಂದು ನನ್ನ ಭರವಸೆ.

### ಒಂದು ಲಕ್ಷ ರೂ. ನಿಧಿ.

ಆದರೆ ಈ ಕಾರ್ಯಕ್ರಮವನ್ನು ಕೈಕೊಂಡು ನೆರವೇರಿಸಲಿಕ್ಕೆ ಪ್ರಚಂಡವಾದ ಧನಸಹಾಯವು ಬೇಕು. ಉತ್ಕಲ ಪ್ರಾಂತವನ್ನು ಸ್ವತಂತ್ರವನ್ನಾಗಿ ಮಾಡಿಕೊಳ್ಳುವದಕ್ಕಾಗಿ ಅಲ್ಲಿಯ ಧನವಂತರೂ ಜಮೀನದಾರರೂ ಲಕ್ಷಗಟ್ಟಲೆ ಹಣವನ್ನು ವೆಚ್ಚ ಮಾಡಿದರು. ಇಂಗ್ಲಂಡಕ್ಕೆ ಹಲವು ಸಲ ಶಿಷ್ಟಮಂಡಲಗಳನ್ನೂ ಕಳುಹಿಸಿದ್ದರು. ನಮ್ಮಂತೆ ಸಹದುಃಖಿಗಳಾದ ಆಂಧ್ರರಾದರೂ ಎಚ್ಚತ್ತು ಆಂಧ್ರ ಪ್ರಾಂತ ರಚನೆಯ ಚಳವಳಿಗಾಗಿ ಒಂದು ಲಕ್ಷ ರೂ. ಗಳನ್ನು ವೆಚ್ಚಮಾಡಬೇಕೆಂದು ಮೊನ್ನೆ ನಿಶ್ಚಯಿಸಿರುತ್ತಾರೆ. ನಮ್ಮಲ್ಲಿಯ ಜಮೀನದಾರರೂ ವರ್ತಕರೂ ಧನವಂತರೂ ಇನ್ನೂ ಆ ಪ್ರಮಾಣದಲ್ಲಿ ರಾಷ್ಟ್ರಪ್ರೇಮಿಗಳಾಗಿರುವದಿಲ್ಲ. ದೂರ ದೃಷ್ಟಿಯನ್ನು ತಾಳಿ ಈ ಕಾರ್ಯಕ್ಕೆ ನೆರವಾದರೆ ಶ್ರೇಷ್ಠವಾದ ಸಂಪಾದನೆಯಾದರೂ ಅವರ ಕೈಗೂಡುವದು. ನಾವಾದರೂ ಒಂದು ಲಕ್ಷ ರೂ. ನಿಧಿಯನ್ನೂ ಕೂಡಿಸಿದರೇನೇ ಈ ಎಲ್ಲ ಕಾರ್ಯಕ್ರಮವು ಆಚರಣೆಯಲ್ಲಿ ಇಳಿಯುವದು.

ಮೇ ತಿಂಗಳಲ್ಲಿ ಏಕೀಕರಣ ಪರಿಷತ್ತು ಧಾರವಾಡದಲ್ಲಿ ಸೇರಲಿರುವದು. ಈ ವಿಷಯದಲ್ಲಿ ವಿಚಾರ ಪ್ರವರ್ತನೆಯಾಗಬೇಕೆಂದು ನಾನು ಕೆಲವೊಂದು ಸೂಚನೆಗಳನ್ನು ಇಲ್ಲಿ ಮಂಡಿಸಿರುತ್ತೇನೆ. ಆ ಕಾಲಕ್ಕೆ ಕರ್ನಾಟಕ ಪ್ರೇಮಿಗಳೆಲ್ಲರೂ ಸೇರಿ ದೀರ್ಘಾಲೋಚನೆಯನ್ನು ಮಾಡಿ ನಮಗೆ ತಕ್ಕ ದಾರಿಯನ್ನು ತೋರಿಸಲೆಂದು ನಾನು ಅವರಲ್ಲಿ ಬೇಡಿಕೊಳ್ಳುತ್ತೇನೆ.”

## ನೀಲಗಿರಿ ಜಿಲ್ಲೆಯ ವಿಭಾಗ.

ಎ. ಎಚ್. ಎ. ಟಾಡ್ ಇವರ ನಿಧನದಿಂದ ತೆರವಾದ ರೆವ್ಹಿನ್ಯೂ ಬೋರ್ಡಿನ ೩ ನೇ ಮೆಂಬರ ಸ್ಥಳಕ್ಕೆ ಈಗ ನೀಲಗಿರಿ ಕಲೆಕ್ಟರರಾಗಿರುವ ಪರ್ಶಿ ಮ್ಯಾಕ್ವೀನ ಇವರು ನೇಮಿಸಲ್ಪಡುವರೆಂದು ವದಂತಿ ಇದೆ. ಕಾಂಗ್ರೆಸ್ ಮಂತ್ರಿಮಂಡಲದ ವೆಚ್ಚ ಉಳಿತಾಯದ ಧೋರಣಾನುಸಾರವಾಗಿ ನೀಲಗಿರಿ ಜಿಲ್ಲೆಯು ರದ್ದು ಮಾಡಲ್ಪಡುವದೇ ಇದಕ್ಕೆ ಕಾರಣವಾಗಿದೆ. ಅದನ್ನು ಎರಡು ಭಾಗಮಾಡಿ ತಪ್ಪಲು ಪ್ರದೇಶವನ್ನು ಕೊಯಿಮತ್ತೂರ ಜಿಲ್ಲೆಗೂ ವಾಯನಾಡು ಮತ್ತು ಗುಡಾಲೂರ ತಾಲೂಕುಗಳನ್ನು ಮಲಬಾರ ಜಿಲ್ಲೆಗೂ ಕೂಡಿಸಲು ಯೋಚಿಸಿರುವರು.

ನೀಲಗಿರಿ ಜಿಲ್ಲೆಯು ಮುಖ್ಯವಾಗಿ ಕನ್ನಡ ಜಿಲ್ಲೆಯಿರುವದು. ಭಾಷಾನುಗುಣ ಪ್ರಾಂತ ರಚನೆಯ ಈ ಕಾಲದಲ್ಲಿ ನೀಲಗಿರಿ ಜಿಲ್ಲೆಯನ್ನು ಹೀಗೆ ಎರಡು ಭಾಗಮಾಡಿ ಬೇರೆ ಸಂಸ್ಕೃತಿಯವರಲ್ಲಿ ಅವರನ್ನು ಸೇರ್ಪಡಿಸುವುದು ಅನ್ಯಾಯವೇ ಸರಿ.

REGISTERED No. B. 2891.

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಿಗೂ ಅಂಜುವವನಲ್ಲ ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೧೮ ನೆಯ ಎಪ್ರಿಲ್ ೧೯೩೮. | ಸಂಚಿಕೆ ೩೩

ಜನಸೇವೆಯೇ ದೇವರಸೇವೆ.

## ಗಾಂಧಿ-ವ್ಹಾಯಿಸ್‌ರಾಯರ ಭೆಟ್ಟಿ.



ತಾ. ೧೫ ನೆಯ ದಿವಸ
ಹಗಲು
೧೧ ಗಂಟೆಗೆ
ಮಹಾತ್ಮಾ
ಗಾಂಧಿಯವರು
ತಮ್ಮ
ಪ್ರಾವ್ಹೇಟ್ ಸೆಕ್ರೆಟರಿಗಳಾದ
ಶ್ರೀ. ಮಹಾದೇವ
ದೇಸಾಯಿಗಳೊಂದಿಗೆ
ದಿಲ್ಲಿಯಲ್ಲಿ
ವ್ಹಾಯಿಸ್‌ರಾಯರನ್ನು
ಕಂಡರು.



೧|| ಗಂಟೆಯ ವರೆಗೂ ಸಾಮಾನ್ಯ ವಿಷಯಗಳ ಸಂಬಂಧವಾಗಿ
ಮಾತುಕತೆಯಾಡಿದರು.

ಮೊನ್ನೆ ಹರಿದ್ವಾರ ಕುಂಭಮೇಳಾದಲ್ಲಿ ಬೆಂಕಿ ತಗಲಿ ೫೦ ಲಕ್ಷ ರೂ.
ನಷ್ಟವಾಗಿದೆ. ಐದು ಜನರು ಸತ್ತಿದ್ದಾರೆ.

ದೇಹವೇ ದೇವಾಲಯ.



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ-ಸೋಮವಾರ ತಾರೀಖು ೧೮ ನೆಯ ಎಪ್ರಿಲ್ ೧೯೩೮. | ಸಂಚಿಕೆ ೩೩

## ಮಹತ್ವದ ಸುದ್ದಿಗಳು.

—ತಾ. ೭ ನೆಯ ದಿನ ಮದ್ರಾಸದ ಸೆಂಟ್ರಲ್ ಜೇಲಿನಲ್ಲಿ ರೇಡಿಯೋ ಯಂತ್ರ ಸ್ಥಾಪನೆಯ ಸಮಾರಂಭವು ಜೈಲ ಖಾತೆಯ ಮಂತ್ರಿಗಳಾದ ನಾ. ರಾಮನ್ ಮೆನನ್‌ರ ಹಸ್ತದಿಂದ ನೆರವೇರಿಸಲ್ಪಟ್ಟಿತು. ರೇಡಿಯೋ ಭಾಷಣ ಸಂಗೀತ ಮುಂತಾದವುಗಳು ಎಲ್ಲರಿಗೂ ಕೇಳಿಸುವಂತಾಗಲೆಂದು ಅಲ್ಲಲ್ಲಿ ಧ್ವನಿವಾಹಕ ಯಂತ್ರಗಳನ್ನಿಡಲಾಗಿದೆ.

—ಸದ್ಯಕ್ಕೆ ಸೈಬೇರಿಯವನ್ನು ದಾಟಿ ಹೋಗಲು ಯಾರಿಗೂ ಪಾಸಪೋರ್ಟ ಕೊಡಕೂಡದೆಂದು ಸೋವ್ಹಿಯೆಟ್ ರಾಯಭಾರಿ ಕಚೇರಿಯಿಂದ ಪ್ರವಾಸಿಗರಿಗೆಲ್ಲ ತಿಳಿಸಲ್ಪಟ್ಟಿದೆ. ಈ ಕಟ್ಟಾಜ್ಞೆಯನ್ನು ಹೊರಡಿಸಲು ಮಂಚುಕೊವಿಗೂ ರಶಿಯಕ್ಕೂ ಯುದ್ಧಾರಂಭವಾದುದೇ ಕಾರಣವಿರಬೇಕೆಂದು ಊಹಿಸಲ್ಪಟ್ಟಿದೆ.

—ಮೊನ್ನಿನ ದಂಗೆಯ ಕಾಲಕ್ಕೆ ಹೈದರಾಬಾದಿನ ಕನ್ನಡ ಕಾರ್ಯಕರ್ತರಾದ ಶ್ರೀ. ಅಳವಂಡಿಕರ ಭಗವಂತರಾಯರನ್ನು ಪೋಲಿಸರು ಹಿಡಿದೊಯ್ದು ಒಂದು ತಿಂಗಳ ಸಾದಾ ಶಿಕ್ಷೆಯನ್ನು ವಿಧಿಸಿದ್ದರು. ೨-೩ ಜನ ವಕೀಲರು ಜಾಮೀನ ಆಗಿ ಪುನಃ ಬಿಡಿಸಿಕೊಂಡು ಬಂದಿದ್ದಾರೆ.

—ಆಸ್ಟ್ರಿಯಾ ಸಂಬಂಧವಾಗಿ ನಡೆದ ಮತದಾನದ ಪರಿಣಾಮಗಳನ್ನು ನೋಡಿದರೆ ಜರ್ಮನಿಗಿಂತ ಆಸ್ಟ್ರಿಯಾದಲ್ಲಿಯೇ ಹಿಟ್ಲರನ ಕೃತಿಗೆ ಹೆಚ್ಚು ಬೆಂಬಲ ಸಿಕ್ಕಿದೆ. ಆಸ್ಟ್ರಿಯಾದಲ್ಲಿ ೧೦೦ ಕ್ಕೆ ೯೯ ಜನರು ಜರ್ಮನಿಯಲ್ಲಿ ೧೦೦ ಕ್ಕೆ ೯೮ ಜನರು ಹಿಟ್ಲರನಿಗೆ ಬೆಂಬಲ ಕೊಟ್ಟಿರುತ್ತಾರೆ.

—ನಿಜಾಮ ಸರಕಾರದವರು ಹೈದರಾಬಾದಿನಲ್ಲಿ ಹೊರಡುತ್ತಿದ್ದ ಮಸಾವಾತ್ ಎಂಬ ಉರ್ದು ವಾರ ಪತ್ರಿಕೆಯನ್ನು ನಿಲ್ಲಿಸಿದ್ದಾರೆ.

—ಬಾಲ್ಯವಿವಾಹ ನಿರೋಧ ಶಾಸನದಲ್ಲಿ ತಿದ್ದುಪಡಿಮಾಡಿದ ಶ್ರೀ. ಬಿ. ದಾಸರವರ ಬಿಲ್ಲು ಮಧ್ಯವರ್ತಿ ಲೆ. ಅಸೆಂಬ್ಲಿಯಲ್ಲಿ ತೀರ್ಮಾನಿಸಲ್ಪಟ್ಟಿತು. ಅದಕ್ಕೆ ಗವ್ಹರ್ನರ ಜನರಲ್ಲರ ಸಮ್ಮತಿಯೂ ದೊರೆತಿದೆ.

—ಒಬ್ಬ ಮುಸಲ್ಮಾನನು ಹಿಂದು ಹುಡುಗೆಯ ಮೇಲೆ ಕೈಹಾಕಿದ್ದಕ್ಕಾಗಿ ಇಟಾವಾದ ಹಿಂದು ಮುಸಲ್ಮಾನರಲ್ಲಿ ತಾ. ೧೪ ನೆಯ ದಿವಸ ದಂಗೆಯಾಗಿ ೩ ಜನರು ಸತ್ತಿದ್ದಾರೆ. ೧೦೦ ಜನರು ಗಾಯ ಹೊಂದಿದರು.

—ಪಂಜಾಬ ಪ್ರಾಂತ ಬಿಟ್ಟು ಕೂಡಲೇ ಹೊರಟು ಹೋಗಬೇಕೆಂಬ ಆಜ್ಞೆಯನ್ನು ಉಲ್ಲಂಘಿಸಿ ಸಮತಾವಾದಿಗಳ ಪರಿಷತ್ತಿನಲ್ಲಿ ಭಾಗ ವಹಿಸಿದುದರಿಂದ ತಾ. ೧೪ ನೆಯ ದಿವಸ ಶ್ರೀಮತಿ ಸತ್ಯವತಿ ದೇವಿಯವರನ್ನು ಸೆರೆಹಿಡಿದು ನಂತರ ದಿಲ್ಲಿಯಲ್ಲಿ ಬಿಡುಗಡೆ ಮಾಡಿದರು.

—ಉದಗೀರಿಯಲ್ಲಿ ಮುಸಲ್ಮಾನರು ಪ್ರತಿ ದಿವಸ ಸಶಸ್ತ್ರ ಪ್ರಭಾತಪೇರಿ ತೆಗೆಯುತ್ತಿರುವರೆಂದೂ ಈ ವರೆಗೂ ಅಧಿಕಾರಿಗಳು ಆ ಕಡೆಗೆ ಲಕ್ಷ್ಯಕೊಟ್ಟಿಲ್ಲವೆಂದೂ ತಿಳಿದುಬಂದಿದೆ.

—ಗೃಹಮಂತ್ರಿಗಳಾದ ನಾ. ಮುನಸಿಯವರು ಈ ವಾರ ಕರ್ನಾಟಕದ ಬೆಳಗಾವ, ಧಾರವಾಡ, ಹುಬ್ಬಳ್ಳಿಗಳನ್ನು ಸಂದರ್ಶಿಸಿದರು.

—ಸಿಂಧ ಪ್ರಾಂತದ ಮಂತ್ರಿಮಂಡಲದವರು ಪ್ರಕಟನೆ ಹೊರಡಿಸಿ ಅಧಿಕಾರಿಗಳೆಲ್ಲರೂ ಲಂಚ ಮುಂತಾದ್ದನ್ನು ತೆಗೆದುಕೊಳ್ಳಬಾರದೆಂದೂ ಕಾಯದೆಗೆ ವಿರುದ್ಧವಾಗಿ ಹಣ ಸ್ವೀಕರಿಸಿದವರ ಮೇಲೆ ಯೋಗ್ಯ ಕ್ರಮ ನಡೆಯಿಸಬೇಕೆಂದೂ ಮೇಲಾಧಿಕಾರಿಗಳಿಗೆ ತಿಳಿಸಲಾಗಿದೆ.

—ಜರ್ಮನಿ ಆಸ್ಟ್ರಿಯಾಗಳ ಮತಗಣನೆಯ ಪರಿಣಾಮವನ್ನು ನೋಡಿ ಜರ್ಮನಿ ಮತ್ತೆ ಬೇರೆ ಯಾವ ದೇಶದ ಮೇಲಾದರೂ ಬೀಳುವದೆಂದು [illegible] ಅಂಜಿರುವವಂತೆ.

# ಪತ್ರಿಕಾಕರ್ತರಿಗೆ ಬುದ್ಧಿವಾದ.

### ಶ್ರೀ. ಪಟ್ಟಾಭಿ ಸೀತಾರಾಮಯ್ಯನವರ ವಿಚಾರ.

ಹಿಂದಿ ರಾಜಕಾರಣದಲ್ಲಿ ತುಂಬಾ ಅನುಭವಶಾಲಿಗಳೂ ಒಬ್ಬ ಹಿಂದಿ ಪ್ರಮುಖ ಮುಂದಾಳುಗಳೂ ಆದ ಡಾ. ಪಟ್ಟಾಭಿ ಸೀತಾರಾಮಯ್ಯನವರು ಕಲಕತ್ತಾ ಪಟ್ಟಣದಲ್ಲಿ ವಸುಮತಿ ಪತ್ರಿಕಾ ಸಂಪಾದಕರಾದ ಶ್ರೀ. ಹೇಮೇಂದ್ರ ಪ್ರಸಾದ ಘೋಷ ಇವರ ಅಧ್ಯಕ್ಷತೆಯಲ್ಲಿ ಕಳೆದ ವಾರ ಪತ್ರಿಕಾ ಉದ್ಯೋಗದ ಸಂಬಂಧವಾಗಿ ಒಂದು ಭಾಷಣವನ್ನು ಮಾಡಿದರು. ಆಗ ಇವರು ಹೇಳಿದುದೇನೆಂದರೆ—

### ವಾಚಕರಿಗೆ ಆಶ್ಚರ್ಯಗೊಳಿಸುವುದು.

ಈಗ ಪತ್ರಿಕಾಕರ್ತರು ವಾಚಕರಿಗೆ ವಿಶೇಷ ಆಶ್ಚರ್ಯವಾಗುವಂತಹ ಸಂಗತಿಗಳನ್ನು ಪ್ರಕಟಿಸಿ ಅವರ ಮನಸ್ಸನ್ನು ಪತ್ರಿಕೆಯ ಕಡೆಗೆ ತಿರುಗಿಸುವ ಸಾಹಸ ಮಾಡುತ್ತಿದ್ದಾರೆ ಈ ವಿಧವಾದ ಪ್ರಯತ್ನ ಇತ್ತೀಚಿಗೆ ಹೆಚ್ಚಿದೆ. ಇದು ಹಿತಕರವಾದುದಲ್ಲ. ವಾಚಕರು ಬೆರಗಾಗುವಂತೆ ಮಾಡುವುದೇನೂ ಪತ್ರಿಕಾಕರ್ತರ ಕಾರ್ಯವಲ್ಲ.

ಪತ್ರಿಕಾಕರ್ತರ ಮೇಲೆ ಹೆಚ್ಚಿನ ಹೊಣೆಗಾರಿಕೆಯಿದೆ. ಆದುದರಿಂದ ಅವರ ಕರ್ತವ್ಯವೂ ಬಹು ಮಹತ್ವದ್ದು. ಪತ್ರಿಕೆಗಳು. ಕೇವಲ ಸುದ್ದಿಗಳನ್ನು ಪ್ರಕಟಗೊಳಿಸತಕ್ಕವುಗಳೇ ಆಗಿರಬಾರದು. ಜನರೇ ಒಂದು ಒಂದು ಅಭಿಪ್ರಾಯವನ್ನು ಉಂಟುಮಾಡುವಂತೆಯೂ ಅವರ ಅಭಿಪ್ರಾಯವು ವಿಕಾಸಹೊಂದಿ ಅದು ಬಲಪಡುವಂತೆಯೂ ಪ್ರಯತ್ನಿಸಬೇಕಾದುದು ಪತ್ರಿಕಾಕರ್ತರ ಕರ್ತವ್ಯವು. ಹೀಗೆ ಮಾಡಬೇಕಾದರೆ ಪತ್ರಿಕಾಕರ್ತರಿಗೆ ಹೆಚ್ಚಾದ ಧೈರ್ಯವಿರಬೇಕಾಗುವುದು.

ನಮ್ಮ ದೇಶದಲ್ಲಿ ಅನೇಕ ಪತ್ರಿಕೆಗಳು ಬಹು ಕಾಲದಿಂದಲೂ ಬಾಳಿಕೊಂಡು ಬಂದಿವೆ. ಮಹತ್ವದ ಪ್ರಸಂಗದಲ್ಲಿ ಅಗ್ರ ಲೇಖನಗಳ ಮೂಲಕ ತಮ್ಮ ವಿಚಾರವನ್ನು ಪ್ರದರ್ಶಿಸದೆ ಬೇರೊಂದು ವಿಷಯವನ್ನು ಬರೆದು ತಲೆ ತಪ್ಪಿಸಿಕೊಂಡು ಆ ಪ್ರಖರವಾಗಿದ್ದ ಮಹತ್ವದ ಕಾಲವು ಮಿಂಚಿ ಹೋದಮೇಲೆ ತಮ್ಮ ಪಾಂಡಿತ್ಯವನ್ನು ತೋರಿಸಲು ಬರೆಯುತ್ತಾರೆ. ಇಂಥ ಅಂಜುಬುರುಕತನದಿಂದ ನಡೆಯುವ ಹೇಡಿ ಪತ್ರಿಕೆಗಳು ಜನಾಭಿಪ್ರಾಯವನ್ನು ಉಂಟುಮಾಡಲಾರವು.

### ಜನಾಭಿಪ್ರಾಯ ಹೇಗೆ ಹುಟ್ಟುತ್ತದೆ?

ನೀವು ರಾಷ್ಟ್ರದ ಮುಂದೆ ಬಂದ ವಿಷಯವನ್ನು ಆಳವಾಗಿ ಆಲೋಚಿಸಿರಿ. ಮಹತ್ವದ ಸಮಸ್ಯೆಗಳನ್ನು ಚೆನ್ನಾಗಿ ವಿಮರ್ಶಿಸಿರಿ. ನಿಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಸಿರಿ. ಆಗ ಜನಾಭಿಪ್ರಾಯವು ತಾನೇ ಉಂಟಾಗುವುದು. ಪತ್ರಿಕಾ ಉದ್ಯೋಗಿಗಳು ಎಲ್ಲ ಹೊಣೆಗಾರಿಕೆಯನ್ನೂ ತಾವೇ ಹೊತ್ತುಕೊಂಡು ಜನಾಭಿಪ್ರಾಯವು ಉಂಟಾಗುವಂತೆ ಪ್ರಯತ್ನಿಸಬೇಕು.

ಒಂದು ಪಕ್ಷವನ್ನೇ ಹಿಡಿದುಕೊಂಡು ನಡೆಯುತ್ತಿರುವ ಪತ್ರಿಕೆಗಳ ಸ್ಥಿತಿಯನ್ನು ನೋಡಿ ನನಗೆ ತುಂಬಾ ಅಸಮಾಧಾನ. ಇವು ಬಹುಕಾಲ ಬಾಳಲಾರವು. ಸೌಮ್ಯ ಪಕ್ಷದ ಪತ್ರಿಕೆಗಳು ಸರಕಾರವನ್ನೇ ಹಿಂಬಾಲಿಸಿದ್ದವು. ಕಡೆಗೆ ಅವುಗಳ ಸ್ಥಿತಿ ಹೇಗಾಯಿತು? ಕೆಲವು ಮುತ್ಸದ್ದಿಗಳು ಪತ್ರಿಕೆಗಳ ಮೂಲಕ ಹೆಚ್ಚಾದ ಗೌರವವನ್ನು ಹೊಂದಬೇಕೆಂದು ಪ್ರಯತ್ನಿಸುತ್ತಿದ್ದಾರೆ. ಇದು ಸರಿಯಲ್ಲ.

---

# ಹಿಂದುಸ್ಥಾನ ಯಾರದು?

### ಸೇನಾಪತಿ ಬಾಪಟರ ವಿಚಾರ.

ಕಳೆದ ಯುಗಾದಿ ದಿವಸ ಸೇನಾಪತಿ ಬಾಪಟರವರು "ರಾಷ್ಟ್ರೀಯ ಸ್ವಯಂ ಸೇವಕ ಸಂಘ" ದವರಿಗೆ ಉಪದೇಶಪರವಾಗಿ ಹೇಳಿದ ಸಂಗತಿಗಳಲ್ಲಿ ಈ ಕೆಳಗಿನ ವಿಭಾಗಗಳಿದ್ದವು.—

(೧) ಕಾಂಗ್ರೆಸ್ಸಿನ ಪ್ರಮುಖ ಮುಂದಾಳುಗಳು ಪ್ರತಿನಿತ್ಯ ೧೫ ನಿಮಿಷ ಊರಲ್ಲಿಯ ಹೊಲಸನ್ನು ತೆಗೆಯುವ ಪವಿತ್ರ ಕಾರ್ಯವನ್ನು ಮಾಡಬೇಕು. ಹಾಗಾದರೆ ಹೊಲಸು ತೆಗೆಯುವ ಆದಿಹಿಂದುಗಳು ಕೀಳರೆಂಬ ಭಾವನೆಯು ನಿವಾರಣೆಯಾಗುವುದು.

(೨) ರಾಷ್ಟ್ರೀಯ ಸ್ವಯಂಸೇವಕ ಸಂಘದವರೂ ಮೂರು ಬಣ್ಣಗಳ ಈಗಿನ ರಾಷ್ಟ್ರಧ್ವಜನನ್ನು ಇಡಲೇಬೇಕು. ನಾನು ಏಳು ಬಣ್ಣಗಳ ಧ್ವಜವಿರಬೇಕೆಂದು ಹೇಳುವವನು. ಹಾಗಾದರೆ ಎಲ್ಲಾ ಜಾತಿಗಳೂ ಅದರಲ್ಲಿ ಸಮಾವೇಶವಾಗುವವು. ಆ ವರೆಗೆ ಈ ಮೂರು ಬಣ್ಣಗಳ ಧ್ವಜವನ್ನಾದರೂ ಎಲ್ಲರೂ ಗೌರವಿಸಲೇಬೇಕು.

(೩) ರಶಿಯಾ ದೇಶದ ರಾಜ್ಯಭಾರವು ಈಗ ಜಗತ್ತಿನ ಎಲ್ಲ ರಾಷ್ಟ್ರಗಳಲ್ಲಿಯ ರಾಜ್ಯಭಾರಕ್ಕಿಂತಲೂ ಉತ್ತಮವಾದುದಿರುವುದರಿಂದ ನಾವೂ ಅದನ್ನೇ ಅನುಕರಿಸಬೇಕು.

(೪) ಈ ದೇಶವು ಹಿಂದುಗಳ ದೇಶವೆಂದು ನೀವು ಹೇಳುತ್ತಿದ್ದೀರಿ. ನಾನಾದರೋ ಈ ದೇಶವು ಹಿಂದು, ಮುಸಲ್ಮಾನ್, ಕ್ರಿಸ್ತ, ಪಾರ್ಶಿ ಮೊದಲಾದ ಎಲ್ಲಾ ಜಾತಿಯವರದ್ದೆಂದೇ ಹೇಳುತ್ತೇನೆ. ಮತ್ತು ಇವರೆಲ್ಲರೂ ಹಿಂದುಗಳೇ ಆಗಿದ್ದಾರೆ.

(೫) ಈ ದೇಶದಲ್ಲಿ ಹಿಂದು ಮತ್ತು ಅಹಿಂದು ಎಂಬ ಎರಡೇ ಜಾತಿಗಳಿವೆ ಯಾರು ಬ್ರಿಟಿಶ್ ಸಾಮ್ರಾಜ್ಯ ಪೋಷಕರೋ ಅವರೆಲ್ಲ ಅಹಿಂದುಗಳು. ಯಾರು ಹಿಂದಿ ಸ್ವಾತಂತ್ರ್ಯ ಸಂಪಾದಕರೋ ಅವರೆಲ್ಲರೂ ಹಿಂದುಗಳು.

(೬) ಹಿಂದುಸ್ಥಾನವು ಹಿಂದುಗಳ ದೇಶವೇ ವಿನಾ ಮುಸಲ್ಮಾನ್, ಕ್ರೈಸ್ತ ಮೊದಲಾದವರ ದೇಶವು ಅಲ್ಲವೆಂದು ಹೇಳುತ್ತಿದ್ದಾರೆ. ಹಿಂದುಸ್ಥಾನವು ನಮ್ಮ ದೇಶವಾದರೂ ಹೇಗಾಗುತ್ತದೆ? ನಾವು ಈ ದೇಶದ ಮೂಲ ನಿವಾಸಿಗಳಾದ ಅಸ್ಪೃಶ್ಯರೇ ಮೊದಲಾದವರನ್ನು ಗೆದ್ದು, ಅವರನ್ನು ತುಳಿದು ಅವರ ಮೇಲೆ ಅನೇಕ ಅತ್ಯಾಚಾರಗಳನ್ನು ಮಾಡಿ ಅವರ ಮೇಲೆ ಪ್ರಭುತ್ವವನ್ನು ಮಾಡುತ್ತಾ ಬಂದೆವು. ಈಗಲೂ ಪ್ರಭುತ್ವವನ್ನು ಮಾಡುತ್ತಿದ್ದೇವೆ. ಎಂದಮೇಲೆ ಮುಸಲ್ಮಾನರೇ ಪರದೇಶದವರೆಂದು ಹೇಳುವದೇಕೆ? ನಾವೂ ಪರದೇಶದವರೇ ಅಲ್ಲವೆ?

---

### ೪೦ ವರುಷ ಪ್ರಾಯದಲ್ಲಿ ೩೧ ಮಕ್ಕಳು!

ಜೇಮನದ ಬಣ್ಣಗಾರನ ಹೆಂಡತಿಯಾದ ಮಿಸೆಸ್ ಫ್ರಾಜಿಸ್ಕ ವೆಲೆಂಟಿಚ್ ಎಂಬ ೪೧ ವರುಷ ಪ್ರಾಯದ ಹೆಂಗಸು ಇದೇ ಈಗ ತನ್ನ ೩೧ನೇ ಮಗುವನ್ನು ಹಡೆದಿದ್ದಾಳೆ.

ತನಗೆ ಇನ್ನೂ ಮಕ್ಕಳು ಹುಟ್ಟಬೇಕೆಂದು ಈ ಮಹಾತಾಯಿಯು ಅಪೇಕ್ಷೆಪಟ್ಟಿದ್ದಾಳೆ. ಆಕೆಯ ಬಯಕೆಗೆ ಗಂಡನ ಪೂರ್ಣ ಸಮ್ಮತಿಯಿದೆ.

# ಜಾತಿಯ ಮಾನರಕ್ಷಣೆಗಾಗಿ ಕೊಲೆಯ ಪ್ರಯತ್ನ!

XOX

## ಹೊಲೆಯರ ವಿದ್ಯಾರ್ಥಿಯ ಹೇಳಿಕೆ.

ಮಧ್ಯಪ್ರಾಂತದ ಮಂತ್ರಿಗಳಾದ ನಾ. ಶರೀಫರು ಮಿ. ಝೂಕರ ಹುಸೇನ ಎಂಬ ಅಪರಾಧಿಯನ್ನು ಬಿಡುಗಡೆ ಮಾಡಿದ್ದರಿಂದ ಶ್ರೀ. ಸೀತಾರಾಮ ಬಾಳಾಜಿ ಗಾಯಕವಾಡ ಎಂಬ ೨೫ ವರುಷದ ಆದಿ ಹಿಂದು ವಿದ್ಯಾರ್ಥಿಯು ನಾ. ಶರೀಫರನ್ನು ಕಠಾರಿಯಿಂದ ಕೊಲೆ ಮಾಡಲು ಪ್ರಯತ್ನಿಸಿದನು. ಆಗ ಅತನನ್ನು ಹಿಡಿದರು. ಕಳೆದ ೨೪ ನೆಯ ತಾರೀಖಿನ ದಿವಸ ಆ ವಿದ್ಯಾರ್ಥಿಯು ಪೋಲಿಸರ ಹತ್ತಿರ ಕೊಟ್ಟ ಹೇಳಿಕೆಯು ಈ ಕೆಳಗಿನಂತಿದೆ—

"ನಾನು ಹೊಲೆಯರ ಜಾತಿಯವನಿದ್ದೇನೆ. 'ಹೊಲೆಯ' ಎಂಬ ಶಬ್ದವನ್ನು ತಿರಸ್ಕಾರದಿಂದ ನೋಡುವವರನ್ನು ನಾನು ತಿರಸ್ಕರಿಸುತ್ತೇನೆ. ನಾನು ಶಾಲೆಯಲ್ಲಿದ್ದಾಗ ಒಮ್ಮೆ ನನ್ನ ಮಿತ್ರರೊಬ್ಬರು ನನಗೆ ಊಟಕ್ಕೆ ಹೇಳಿದ್ದರು. ಆಗ ನನ್ನನ್ನು ದೂರ ಕುಳ್ಳಿರಿಸಿದ್ದುದರಿಂದಲೇ ನಾನು ಆ ಅಪಮಾನವನ್ನು ಸಹಿಸದೆ ಹಾಗೆಯೇ ಎದ್ದುಬಂದೆ. ನನ್ನೊಬ್ಬನನ್ನೇ ಎಷ್ಟೇ ಅಪಮಾನಗೊಳಿಸಿದರೂ ಅದನ್ನು ನಾನು ಸಹಿಸಿಕೊಳ್ಳಬಲ್ಲೆ. ಆದರೆ ನನ್ನ ಜಾತಿಯ ವಿಷಯವಾಗಿ ಯಾರಾದರೂ ತುಚ್ಛತೆ ತೋರಿಸಿದರೆ ಅದನ್ನು ಮಾತ್ರ ಖಂಡಿತ ಸಹಿಸಲಾರೆನು.

ನನ್ನ ಜಾತಿಯ ಮಾನವನ್ನು ಕಾಯ್ದುಕೊಳ್ಳುವುದೇ ನನ್ನ ಜೀವನದ ಮುಖ್ಯ ಉದ್ದೇಶವಾಗಿದೆ. ನನ್ನ ಅಕ್ಕ ತಂಗಿಯರ ಅಪಮಾನವನ್ನು ನಮ್ಮ ಜಾತಿಯ ಕುಮಾರಿಕೆಯರನ್ನು ಅನೀತಿ ಮಾರ್ಗಕ್ಕೆ ಹಚ್ಚುತ್ತಿರುವ ಅನ್ಯಾಯವನ್ನು ನಾನು ಎಷ್ಟುಮಾತ್ರವೂ ಸಹಿಸಲಾರೆ. ಕಳೆದ ವರುಷ ಇಂಥ ಎರಡು ಜನ ಪುಂಡರನ್ನು ಹಿಡಿದಿದ್ದೇನೆ.

ಈ ವರ್ಷ ನಾನು ಹಳ್ಳಿಹಳ್ಳಿಗಳಲ್ಲಿ ಸಂಚರಿಸಿ ಜನಗಳ ಹೆಚ್ಚಾಗಿ ನಮ್ಮ ದಲಿತ ವರ್ಗದವರ ಸ್ಥಿತಿಯು ಹೇಗಿದೆಯೆಂಬುದನ್ನು ತಿಳಿದುಕೊಳ್ಳಬೇಕೆಂದು ನಿಶ್ಚಯಿಸಿ ನಾಗಪುರಕ್ಕೆ ಬಂದಿದ್ದೆ. ಆದರೆ ದೈವೇಚ್ಛೆ ಮಾತ್ರ ಬೇರೆಯಾಗಿದ್ದಿತು.

ನಾನು ನಾಗಪುರಕ್ಕೆ ಬಂದಾಗಲೇ ಆ ಝೂಕರ ಹುಸೇನ ವಾದವು ಅಸೆಂಬ್ಲಿಯಲ್ಲಿ ಬಂದಿತು. ಸ್ತ್ರೀಯರು ತಮ್ಮ ವಿರೋಧ ಪ್ರದರ್ಶಿಸುವದಕ್ಕಾಗಿ ಅಸೆಂಬ್ಲಿಯ ವರೆಗೂ ಮೆರವಣಿಗೆಯನ್ನು ತೆಗೆದರು. ಇದು ಒಬ್ಬ ಆದಿಜನ ಬಾಲಿಕೆಯ ಮಾನ ಮರ್ಯಾದೆಯ ಪ್ರಶ್ನೆಯಾಗಿದ್ದಿತು. ಕಾಂಗ್ರೆಸ್ಸಿನವರಾದರೂ ನಮ್ಮ ಸಲುವಾಗಿ ಏನು ಮಾಡಿದ್ದಾರೆ? ಅಸೆಂಬ್ಲಿಯಲ್ಲಿ ೧೪ ಜನ ಮುಸಲ್ಮಾನ ಸದಸ್ಯರಿದ್ದರೆ ಅವರಲ್ಲಿ ಒಬ್ಬರಿಗೆ ಮಂತ್ರಿಮಂಡಳದಲ್ಲಿ ಪ್ರವೇಶ ದೊರೆತಿದೆ. ಆದರೆ ಅಸೆಂಬ್ಲಿಯಲ್ಲಿ ಆದಿ ಜನಗಳ ೨೦ ಜನ ಸದಸ್ಯರಿದ್ದರೂ ಈ ಮಂತ್ರಿಮಂಡಳದಲ್ಲಿರಲು ಯೋಗ್ಯರಾದ ಒಬ್ಬರೂ ಇವರಿಗೆ ದೊರೆಯದಿರುವುದು ತುಂಬಾ ವಿಚಿತ್ರವಾದುದಾಗಿದೆ.

ಈ ಝೂಕರ ಹುಸೇನರ ವಾದವಿವಾದವು ಅಸೆಂಬ್ಲಿಯಲ್ಲಿ ನಡೆದಾಗ ಒಬ್ಬರು ಝೂಕರ-ಹುಸೇನ ಬಲಾತ್ಕಾರಮಾಡಿದ ಬುಚಮ್ಮ (ಯಾವ ಹುಡುಗಿಯ ಮೇಲೆ ಝೂಕರ ಹುಸೇನನು ಒಂದೇ ರಾತ್ರಿ ಅನೇಕ ವೇಳೆ ಬಲಾತ್ಕಾರ ಮಾಡಿದ್ದನೋ ಆ ೧೩ ವರುಷ ವಯಸ್ಸಿನ ಆದಿಜನ ಬಾಲಿಕೆ) ಇವಳು ಇಂಥ ಜಾತಿಯವಳೆಂದು ಹೇಳಿದುದನ್ನು ಕೇಳಿದಕೂಡಲೇ ನನಗೆ ನಾ. ಶರೀಫರ ಬಗ್ಗೆ ತುಂಬಾ ದ್ವೇಷವುಂಟಾಯಿತು.

ಚಿಟ್ನಿಸ್ ಪಾರ್ಕಿನ ಸಭೆಯಲ್ಲಿ ಮಂತ್ರಿಮಂಡಳದವರು ಈ ವಿಷಯದ ಬಗ್ಗೆ ಮಾತನಾಡುವರೆಂದೂ ಆಗ ನಾ. ಶರೀಫರೂ ಇರುವರೆಂದೂ ನನಗೆ ಮೊದಲೇ ತಿಳಿದಿದ್ದಿತು. ನನ್ನ ಜಾತಿಯ ಅಪಮಾನದ ಸೇಡು ತೀರಿಸಿಕೊಳ್ಳುವ ಸಮಯವು ಇದೇ ಎಂದು ಭಾವಿಸಿ ಕಠಾರಿ ತೆಗೆದುಕೊಂಡು ನಾನು ಮನೆಯಿಂದ ಹೊರಟೆನು. ನಾ. ಶರೀಫರು ಮಾಡಿದ ಅನ್ಯಾಯವು ಕಾಂಗ್ರೆಸ್ ಮಂತ್ರಿಮಂಡಳಕ್ಕೆ ಶೋಭಿಸತಕ್ಕದ್ದಲ್ಲವೆಂಬ ಡಾ. ಆಂಬೇಡಕರರ ಅಭಿಪ್ರಾಯವನ್ನು ನೋಡಿದ್ದೆ. ನಾನು ೬|| ಗಂಟೆಗೆ ಚಿಟ್ನಿಸ್ ಪಾರ್ಕಿನ ಸಭೆಗೆ ಹೋದಾಗ ಶ್ರೀ. ಕೇದಾರ ಇವರು ಮಾತನಾಡುತ್ತಿದ್ದರು. ಅವರು ಕೆಲವು ಅಯೋಗ್ಯ ಉದ್ಗಾರ ತೆಗೆದುದರಿಂದ ಸಭೆಯಲ್ಲಿ ಗೊಂದಲವೆದ್ದಿತು. ಜನಗಳು ಮಂತ್ರಿಗಳ ಮೇಲೆ ಜೋಡು ಚಪ್ಪಲಗಳ ಮಳೆಗರೆಯಹತ್ತಿದರು. ಪೋಲೀಸರು ಒಳನುಗ್ಗಿದರು. ವ್ಯಾಸಪೀಠದ ಮೇಲೆ ಮಣ್ಣನ್ನು ಒಗೆಯಹತ್ತಿದರು. ಇದೇ ಯೋಗ್ಯ ಸಮಯವೆಂದು ನಾನು ಭಾವಿಸಿದೆ. ಮಂತ್ರಿಮಂಡಳದವರು ಯಾವ ಅಭಿಪ್ರಾಯಪಡುವರೆಂಬುದರ ಕಡೆಗೇನೇ ನಾನು ಉತ್ಸುಕನಾಗಿದ್ದೆ. ಡಾ. ಖರೆಯವರು ಒಂದು ಪತ್ರಿಕೆಯನ್ನು ಓದಿತೋರಿಸಿ ಮೊದಲು ಕೂಡಾ ಬಲಾತ್ಕಾರಮಾಡಿದ ಗುನ್ಹೆಗಾರರನ್ನು ೪೦೧ ನೆಯ ಕಲಮಿನ ಪ್ರಕಾರ ಬಿಡುಗಡೆ ಮಾಡಿದುದನ್ನು ತೋರಿಸಿಕೊಟ್ಟರು. ಆದರಿಂದ ನಾನು ಶಾಂತನಾದೆ. ನಾ. ಮಿಶ್ರರವರ ಭಾಷಣದಿಂದಲೂ ನಾನು ಸಂಪೂರ್ಣ ಶಾಂತನಾದೆ. ಆದರೆ ಡಾ. ಪರಾಂಜಪೆಯವರು ಮಾತನಾಡಲು ಎದ್ದಾಗ ಪುನಃ ನನ್ನ ರಕ್ತವು ಕುದಿಯಹತ್ತಿತು. ಕಿಸೆಯೊಳಗಿನ ಕಠಾರಿ ತೆಗೆದು ನನ್ನ ಸ್ಥಳಬಿಟ್ಟು ಹೊರಡುವಷ್ಟರಲ್ಲಿಯೇ ಯಾರೋ ನನ್ನಲ್ಲಿರುವ ಕಠಾರಿಯನ್ನು ನೋಡಿದರು. ಮತ್ತು ನನ್ನ ಇಚ್ಛೆಯು ಪೂರ್ಣವಾಗುವ ಮುಂಚೆಯೇ ನನ್ನನ್ನು ಹಿಡಿದರು. ನನ್ನ ಕೃತ್ಯದ ಬಗ್ಗೆ ನಾನು ಪೂರ್ಣ ವಿಚಾರ ಮಾಡಿದ್ದೆ. ಮತ್ತು ಸರ್ವ ಆಯುಷ್ಯ ವ್ಯರ್ಥ ಹೋಗುವುದೆಂಬುದೂ ನನಗೆ ಗೊತ್ತಿದ್ದಿತು. ಆದರೆ ಒಬ್ಬನ ಆಯುಷ್ಯವು ನಾಶವಾಗಿ ಅನೇಕ ದುಷ್ಟರ ಹೃದಯದಲ್ಲಿರುವ ದುಷ್ಟ ವಾಸನೆಯ ಬಗ್ಗೆ ಭಯವುಂಟಾಗುವ ಸಂಭವವಿದ್ದಲ್ಲಿ ನಾನು ಅಂಥ ಸ್ವಾರ್ಥತ್ಯಾಗ ಮಾಡಲು ಕೂಡಾ ಸಿದ್ಧನಿದ್ದೇನೆ.

ನನ್ನ ಜಾತಿಯು ಹಿಂದುಳಿದಿದೆ. ನಮ್ಮ ಜನಗಳು ಅಶಿಕ್ಷಿತರಿದ್ದಾರೆ. ಬಡವರಿದ್ದಾರೆ. ಈ ಎಲ್ಲ ಸಂಗತಿಗಳೂ ಗೊತ್ತಿದ್ದೂ ನಾನು ನನ್ನ ಜಾತಿಯ ಉದ್ಧಾರಕ್ಕಾಗಿ ಬಡಿದಾಡದಿದ್ದರೆ ಜೀವಿಸಿದ್ದರೂ ಫಲವೇನು? ಶರೀಫರ ಖೂನಿ ಮಾಡಿ ನೀನೇನು ದೊರಕಿಸುತ್ತಿದ್ದಿ ಎಂದು ಅನೇಕರು ಕೇಳಬಹುದು. ಅದು ಕೂಡಾ ಯೋಗ್ಯವಿದೆ. ಅವರಿಗೆ ನನ್ನ ಉತ್ತರ ಇಷ್ಟೆ. ಭಗತಸಿಂಗನಿಗೆ ಇಲ್ಲವೆ ಸಾಕ್ರೆಟಿಸನಿಗೆ ಏನು ದೊರೆಯಿತು? ಇದು ಕೇವಲ ತತ್ವದ ಮಾತಿದೆ. ನನ್ನನ್ನು ಜೇಲಿನಲ್ಲಿ ಹಾಕಿ ಆ ನನ್ನ ಶಿಕ್ಷೆಯಿಂದ ಹತ್ತು ಜನ ಬುಚಮ್ಮಗಳ ಮಾನ ಮರ್ಯಾದೆಗೆ ಧಕ್ಕೆ ಉಂಟಾಗದಂತಾದರೆ ನನ್ನ ಉದ್ದೇಶ ಈಡೇರಿತೆಂದೇ ನಾನು ತಿಳಿಯುತ್ತೇನೆ."

# ಶ್ರೀ ಬಸವ ಜಯಂತಿಯ ಕಾಣಿಕೆಗಾಗಿ

## ಪ್ರಚಾರಗೊಳಿಸಬೇಕಾದ

ಹೊಸ ಪುಸ್ತಕ. ಜಾಗ್ರತೆ ತರಿಸಿರಿ. ಎರಡೇ ಸಾವಿರ ಪ್ರತಿಗಳಿವೆ.

ಆಧುನಿಕ ವಿಚಾರ ಸರಣಿಯ

# ಅಣ್ಣನ ಅರ್ಪಣಯೋಗ.

ಮಹಾನುಭಾವರಾದ ಬಸವಣ್ಣನವರು

ತನು ಮನ ಧನಗಳನ್ನು ಲೋಕಸೇವೆಗೆ ಅರ್ಪಣಮಾಡುವ

ಅದ್ವಿತೀಯ ಯೋಗವನ್ನು ತಾವು ಆಚರಿಸಿದ್ದಲ್ಲದೆ

ಪ್ರಪಂಚವೂ ಆಚರಿಸಬೇಕಾದ ರೀತಿನೀತಿಗಳನ್ನು

ತಮ್ಮ ಅನೇಕ ದಿವ್ಯ ವಚನಗಳಲ್ಲಿ ಬಹು ಹೃದಯಂಗಮವಾಗಿ ವಿವರಿಸಿದ್ದಾರೆ.

ಅವುಗಳನ್ನೆಲ್ಲ ಆಯ್ದುಕೊಂಡು

## ಪ್ರಶ್ನೋತ್ತರ ರೂಪವಾಗಿ

ಈ ಪುಸ್ತಕವು ಬರೆಯಲ್ಪಟ್ಟಿದೆ.

ಲೇಖಕರು— ಶ್ರೀ. ಹರ್ಡೇಕರ ಮಂಜಪ್ಪನವರು.

ಈ ಕಾರ್ಯಕ್ಕೆ

ಹಾವೇರಿಯ ಶ್ರೀಮಾನ್ ಮಾಗಾವಿ ಚೆನ್ನಬಸಪ್ಪನವರು ತಮ್ಮ ಅಣ್ಣಂದಿರಾದ ಕೈ. ಸಿದ್ಧಪ್ಪನವರ ಸ್ಮರಣಾರ್ಥವಾಗಿ ಧನ ಸಹಾಯ ಮಾಡಿರುವುದರಿಂದ

ಡೆಮ್ಮಿ ೧೬ ನೆಯ ಆಕಾರದ ೩೨ ಪುಟಗಳ ಮುದ್ದಾದ ಮುದ್ರಣದ ಈ ಪುಸ್ತಕದ ೨೫ ಪ್ರತಿಗಳಿಗೆ ಒಂದೇ ರೂಪಾಯಿ. ಅಂಚೇ ವೆಚ್ಚ ೪ ಆಣೆ. ೧೦೦ ಪ್ರತಿಗಳ ವರೆಗೂ ರೇಲ್ವೆ ಚಾರ್ಜು ಆರು ಆಣೆ.

೨೫ ಪ್ರತಿಗಳಿಗಿಂತ ಕಡಿಮೆ ಪ್ರತಿಗಳನ್ನು ಕಳಿಸಲಾಗುವುದಿಲ್ಲ. ತಮಗೆ ಎಷ್ಟು ಪ್ರತಿಗಳು ಬೇಕೋ ಅಷ್ಟು ಪ್ರತಿಗಳಿಗಾಗುವ ಕ್ರಯ ಮತ್ತು ಅವುಗಳನ್ನು ಕಳಿಸುವ ಅಂಚೆ ಅಥವಾ ರೇಲ್ವೆ ಚಾರ್ಜು ಮುಂಚಿತವಾಗಿಯೇ ಕಳುಹಿಸಬೇಕು.

## ಸ್ವಲ್ಪೇ ಪ್ರತಿಗಳಿರುವುದರಿಂದ ಜಾಗ್ರತೆ ಹಣ ಕಳಿಸಿದವರಿಗೆ

ಮಾತ್ರ ದೊರೆಯುವವು.

ವಿಳಾಸ— ಮ್ಯಾನೇಜರ್ "ಶರಣ ಸಂದೇಶ"

ಪೋ. ಆಲಮಟ್ಟಿ. ಜಿ. ವಿಜಾಪುರ.

# ಅಹಿಂಸೆ ಮತ್ತು ಜಾತಿಯ ಜಗಳ.

## ಗಾಂಧೀಜಿಯವರ ವಿಚಾರಗಳು.

ತಾ. ೯-೪-೩೮ನೆಯ "ಹರಿಜನ" ಪತ್ರಿಕೆಯಲ್ಲಿ ಮಹಾತ್ಮಾ ಗಾಂಧಿಯವರು ಹೀಗೆ ಬರೆದಿದ್ದಾರೆ.—

ಈಚೆಗೆ ಸಂಯುಕ್ತ ಪ್ರಾಂತದಲ್ಲಿ ನಡೆದ ಜಾತೀಯ ಕಲಹಗಳ ಬಗ್ಗೆ ನಾನು ಮಾಡಿದ ಟೀಕೆಯು ಹಲವರ ಲಕ್ಷವನ್ನು ಸೆಳೆದಿದೆ.

ಪರಿಸ್ಥಿತಿಯ ಪೂರ್ಣ ಜ್ಞಾನವಿಲ್ಲದೆ, ನಾನು ತಲೆತಿರುಕನಂತೆ ಟೀಕಿಸಿದೆನೆಂದೂ ಈ ಹಿಂದೆ ಅಸಹಕಾರ ಮತ್ತು ಸತ್ಯಾಗ್ರಹಗಳನ್ನು ಹಿಂದಕ್ಕೆ ತೆಗೆದುಕೊಂಡು ನಾನೀಗ ಪ್ರಾಗತಿಕ ತತ್ವಾನುಯಾಯಿಯಾಗಿರುವೆನೆಂದೂ ನಾನು ಹೇಳುವಂತೆ ಮನುಷ್ಯ ಮಾತ್ರರಿಗೆ ನಡೆದುಕೊಳ್ಳಲು ಸಾಧ್ಯವಾಗಬಾರದೆಂದೂ, ಅಹಿಂಸಾ ಮಾರ್ಗದಿಂದ ಸ್ವರಾಜ್ಯ ದೊರೆಯಲಾರದೆಂದೂ ನನ್ನ ಮೇಲೆ ಆರೋಪ ಹೊರಿಸಲಾಗಿದೆ. ಆದರೆ ನಿಜವಾಗಿ ನೋಡಿದರೆ ನಾನು ಹಿಂದಿನಂತೆ ಇಂದೂ ಅಹಿಂಸಾಮಯ ಅಸಹಕಾರವಾದಿಯಾಗಿಯೇ ಇರುವೆನು. ನನ್ನ ತತ್ವದಲ್ಲಿ ಬದಲಾವಣೆಯಾಗಿರುವುದಿಲ್ಲ ನಾನು ಹೇಳುವ ಅಹಿಂಸೆಯು ಹೇಡಿಗಳ ಅಹಿಂಸೆಯಾಗಬಾರದು; ಹೇಡಿಗಳ ಅಹಿಂಸಾ ಮಾರ್ಗದಿಂದ ಸ್ವರಾಜ್ಯ ಸಿಗಲಾರದು. ಧೈರ್ಯಶಾಲಿಗಳ ಅಹಿಂಸಾ ಮಾರ್ಗದಿಂದಲೇ ಹಿಂಸೆಯನ್ನು ತಡೆಯಲು ಸಾಧ್ಯ. ಸ್ವರಾಜ್ಯ ಪಡೆಯಲಿಕ್ಕೆ ಬೇರೆ ದಾರಿ ಇಲ್ಲವೆಂದು ನಾನೆಂದೂ ಹೇಳಿಲ್ಲ. ಟೀಕಾಕಾರರು ಇದನ್ನು ಗಮನಿಸಬೇಕು. ಬೇರೆ ದಾರಿಗಳಿಂದ ಸ್ವರಾಜ್ಯ ಪ ಡೆ ಯ ಲು ಸಾಧ್ಯವೆಂದಾದರೆ, ಬ್ರಿಟಿಷರೊಡನೆ ಹೋ ರಾ ಡ ಲು ಇನ್ನೂ ಸಿದ್ಧರಾಗಿಲ್ಲ.

ಪರಿಸ್ಥಿತಿಯ ಪೂರ್ಣಜ್ಞಾನವಿಲ್ಲವೆಂಬದರ ಅರ್ಥವಾದರೂ ಏನು? ಬಡಿದಾಟಗಳಾದದ್ದು ನಿಜವಲ್ಲವೆ? ಅಸಹಕಾರ ಮತ್ತು ಸತ್ಯಾಗ್ರಹಗಳಲ್ಲಿ ನನಗೆ ನಂಬಿಗೆ ಕ ಳೆ ದು ಹೋಗಿದೆಯೆಂದು ನನ್ನ ಲೇಖದಲ್ಲಿ ನಾನು ಬ ರೆ ದಿ ಲ್ಲ. ಹಾಗೆ ತಿಳಿದುಕೊಳ್ಳಲು ಟೀಕಾಕಾರರಿಗೆ ದೊ ರೆ ತ ಆಧಾರವಾದರೂ ಏನು? ಅವುಗಳಲ್ಲಿ ನನ್ನ ನಂಬಿಗೆ ಮುಂಚೆಗಿಂತಲೂ ಈಗ ಹೆಚ್ಚಾಗಿದೆ. ನಾನು ಪ್ರಾಗತಿಕ ಪಕ್ಷದ ತತ್ವದ ಕಡೆಗೆ ಸಾಗುತ್ತಿದ್ದೇನೆಂದು ಟೀಕೆ ಮಾಡಿದ್ದಾರೆ. ಆ ಪಕ್ಷದವನಾಗಲು ನ ನ ಗೆ ಆ ಶೆ ಇ ದೆ. ಆದರೆ ಮಾಡುವದೇನು? ನನ್ನ ಹಿಂದೆ ಇರುವ ಶಕ್ತಿ ಅವರಿಗಿರುವದಿಲ್ಲ.

ನಾವು ಬ್ರಿಟಿಶರ ವಿಷಯದಲ್ಲಿ ಮಾತ್ರವೇ ಅಹಿಂಸೆಯಿಂದ ನಡೆದುಕೊಂಡರೆ ಸಾಲದು. ನಮ್ಮ ಪರಸ್ಪರ ವ್ಯವಹಾರಗಳಲ್ಲಿಯೂ ಅಹಿಂಸೆಯನ್ನು ಆಚರಿಸಬೇಕು.

ಕಾಂಗ್ರೆಸ್ಸಿನಲ್ಲಿಂದು ಅದರ ತತ್ವದಲ್ಲಿ ನಿಜವಾಗಿ ಶ್ರದ್ಧೆಯಿಲ್ಲದ ಎಷ್ಟೋ ಮಂದಿ ಸೇರಿದ್ದಾರೆ. ಇಂಥ ಸದಸ್ಯರ ಓಟುಗಳಿಂದ ಆರಿಸಿ ಬರುವದರಿಂದ ಪ್ರಯೋಜನವೇನ.? ನಾವೀಗ ಆಚರಿಸುತ್ತಿರುವ ಅಹಿಂಸೆಯು ನಾನು ಹೇಳುತ್ತಿರುವ ಅಹಿಂಸೆಯಲ್ಲ. ಅದ್ದರಿಂದಲೇ ಹಿಂದೂ ಮುಸ್ಲಿಂ ಬಡಿದಾಟಗಳಾಗುತ್ತವೆ.

ನನ್ನೀ ಸಲಹೆಗಳಂತೆ ನಡೆದುಕೊಳ್ಳಲು ಸಾಧ್ಯವೇ ಇಲ್ಲವೆಂದು ಟೀಕೆ ಮಾಡಲ್ಪಟ್ಟಿದೆ. ಆದರೆ ಯಾರಿಗೆ ಅಹಿಂಸೆಯಲ್ಲಿ ಶ್ರದ್ಧೆ ಇಲ್ಲವೋ ಅವರಿಗೆ ಮಾತ್ರ ಸಾಧ್ಯವಾಗಲಾರದು.

ತಪ್ಪು ಮಾಡಿದ್ದನ್ನು ಒಪ್ಪಿಕೊಳ್ಳುವದರಲ್ಲಿ ನಾಚಿಕೆಪಡುವ ಕಾರಣವಿಲ್ಲ. ಹಿಂಸೆಯ ಹೊರತು ಬ್ರಿಟಿಶ ಸರಕಾರವನ್ನು ಬಗ್ಗಿಸಲು ಸಾಧ್ಯವಿಲ್ಲವೆಂದು ಭಾವಿಸುವುದಾದರೆ, ಕಾಂಗ್ರೆಸ್ಸು ಅದನ್ನು ಸ್ಪಷ್ಟವಾಗಿ ಹೇಳಬೇಕು ಮತ್ತು ದೇ ಶ ವ ನ್ನು ಅದಕ್ಕೆ ಸಿದ್ಧಗೊಳಿಸಬೇಕು.

ನಮ್ಮಲ್ಲಿ ಯಾವ ಬಗೆಯ ಅಹಿಂಸಾ ವೃತ್ತಿಯು ನೆಲೆಗೊಂಡಿರಬೇಕೋ ಅಂತಹುದು ಇನ್ನೂ ನೆಲೆಗೊಂಡಿಲ್ಲ. ಎಂದು ನಾನು ಅಂಜುತ್ತ ಹೇಳುತ್ತಿದ್ದೇನೆ. ನಾನು ಈ ಬಗ್ಗೆ ಕೊಟ್ಟ ಎಚ್ಚರವನ್ನು ಕಾಂಗ್ರೆಸ್ ಕಾರ್ಯಕರ್ತರು ಚನ್ನಾಗಿ ಲಕ್ಷಿಸಬೇಕು. ಅಹಿಂಸೆಯ ವಿಷಯದಲ್ಲಿ ನಾನು ತಜ್ಞನೆಂದು ಕಾಂಗ್ರೆಸ್ಸು ಒಪ್ಪಿದೆ. ನನ್ನಲ್ಲಿಯೂ ಆ ಬಗ್ಗೆ ಒಳ್ಳೇ ಆತ್ಮವಿಶ್ವಾಸವಿದೆ. ನಾವು ನಿಜವಾಗಿ ಅಹಿಂಸೆಯ ಮೇಲೆ ಆತ್ಮ ವಿಶ್ವಾಸವುಳ್ಳವರಿದ್ದರೆ ಈಗಿನ ಪರಿಸ್ಥಿತಿಯಲ್ಲಿ ಕೂಡ ನಾವು ಹಲವು ಉಪಾಯಗಳನ್ನು ಕೈಕೊಳ್ಳಬಹುದು. ಹಾಗೂ ಪರಿಸ್ಥಿತಿಯನ್ನು ಮಾರ್ಪಡಿಸಬಹುದು, ಆ ಉಪಾಯಗಳು ಈ ಕೆಳಗಿನಂತಿವೆ—

(೧) ಹಿಂದೂ-ಮುಸಲ್ಮಾನರ ನಡುವಿನ ಈಗಿನ ಜಗ್ಗಾಟವನ್ನು ನಿಲ್ಲಿಸುವ ಉಪಾಯವನ್ನು ಶೋಧಿಸಲಿಕ್ಕೇ ಬೇಕು. ಈ ಉಪಾಯವು ಯಶಸ್ವಿಯಾದರೆ ಮಿಕ್ಕ ಜಾತಿಗಳ ನಡುವಿನ ಜಗ್ಗಾಟವು ತನ್ನಿಂದ ತಾನೇ ಸರಿಯಾಗುವುದು.

(೨) ನಮ್ಮ ಕಾಂಗ್ರೆಸ್ ರಜಿಸ್ಟರದೊಳಗಿನ ಜೊಳ್ಳು ಪೊಳ್ಳು ಹೆಸರುಗಳನ್ನು ನಾವು ತೆಗೆದೊಗೆಯಲಿಕ್ಕೇಬೇಕು. ಅಂಥ ಹೆಸರುಗಳು ಬಹಳ ಇರುವವೆಂದು ನಾನು ಕೇಳಿದ್ದೇನೆ.

(೩) ಈಗ ತಾವು ಬಹುಸಂಖ್ಯಾಕರಾಗಿದ್ದರೂ ಅಲ್ಪಸಂಖ್ಯಾಕರಾಗುವ ಭಯವನ್ನು ಕಾಂಗ್ರೆಸ್ಸಿನವರು ತೊರೆಯಬೇಕು.

(೪) ಒಂದು ಕ್ಷಣದ ವಿ ಲ ೦ ಬ ವ ನ್ನು ಕೂಡ ಮಾಡದೆ ಕಾಯಾ ವಾಚಾ ಮನಸಾ ಅಹಿಂಸಾ ವೃತ್ತಿಯನ್ನು ತಳೆಯುವೆವು. ಎಂಬ ಪ್ರತಿಜ್ಞೆಮಾಡಿದ ಸ್ವಯಂಸೇವಕರ ದಲವನ್ನು ಪ್ರತಿಯೊಂದು ಪ್ರಾಂತೀಯ ಕಾಂಗ್ರೆಸ್ ಕಮಿಟಿಯವರು ಸಿದ್ಧಪಡಿಸಲಿಕ್ಕೇಬೇಕು. ಅವರವರ ಶಿಕ್ಷಣ ಮುಂತಾದವುಗಳನ್ನು ಕುರಿತು ನಿಯಮಾವಲಿಯುಳ್ಳ ಒಂದು ಕೈಪಿಡಿಯನ್ನು ತಯಾರ ಮಾಡಲಿಕ್ಕೇಬೇಕು.

ನಾನು ಮಾಡಿದ ಮೇಲಿನ ಸೂಚನೆಗಳಲ್ಲಿ ಅವ್ಯವಹಾರ್ಯವಾದುದಾವುದು ಇಲ್ಲ. ಈಗಿನ ನಮ್ಮ ಮುಖಂಡರು ಅಹಿಂಸೆಯಲ್ಲಿ ವಿಶ್ವಾಸವುಳ್ಳವರಿರದಿದ್ದರೆ ಮಾತ್ರ ಇದೆಲ್ಲ ಅವ್ಯವಹಾರ್ಯವು ಹಾಗೆ ಅಹಿಂಸೆಯಲ್ಲಿ ಅವರ ವಿಶ್ವಾಸವಿಲ್ಲದಿದ್ದರೆ, ಆ ಅಹಿಂಸೆಯೆಂಬುದನ್ನು ಕಾಂಗ್ರೆಸ್ ಕಾರ್ಯಕ್ರಮದೊಳಗಿಂದ ತಳ್ಳಿಬಿಡುವದು ವಿಹಿತವೂ ಹಾಗು ಹಿತಾವಹವು.

ಇನ್ನು ಈ ಮಾರ್ಗವನ್ನು ಸ್ವೀಕರಿಸದಿದ್ದರೆ ಪೂರ್ಣ ಹಿಂಸಾ ಮಾರ್ಗವೊಂದೇ ಉಳಿಯುವದೆಂದು ನಾನು ಅನ್ನುವದಿಲ್ಲ. ನಿಶ್ಚಳವಾದ ಅಹಿಂಸೆಯನ್ನೇ ತನ್ನ ಮಾರ್ಗವನ್ನಾಗಿ ಮಾಡಿಕೊಂಡ ರಾಜಕೀಯ ಸಂಸ್ಥೆಯು ಹಿಂದುಸ್ಥಾನದಲ್ಲಿ ಯಾವುದಾದರೊಂದು ಇದ್ದರೆ ಅದು ಕಾಂಗ್ರೆಸ್ಸೊಂದೇ. ಅಹಿಂಸೆಯೇ ಕಾಂಗ್ರೆಸ್ಸಿನ ಅತ್ಯಂತಿಕ ಆಧಾರವು, ಹಾಗೂ ಬಲವು.

ಆದರೆ ಅಹಿಂಸೆಯು ಧೈರ್ಯಶಾಲಿಗಳ ಅಹಿಂಸೆಯಾಗಿರಬೇಕು. ಹೇಡಿಗಳ ಅಹಿಂಸೆಯಿಂದ ನಮ್ಮಿ ಕಾರ್ಯವಾಗದು. ಸ್ವಾತಂತ್ರ್ಯವೀರರಿಗೆ ಹೇಡಿತನಕ್ಕಿಂತ ಹೆಚ್ಚಿನ ಅಪಮಾನವೇ ಇಲ್ಲ.

ಈಗಲೂ ನಾವು ಪುನರ್ವಿಚಾರ ಮಾಡಬಹುದು. ಹಿಂಸಾತ್ಮಕ ಹೋರಾಟದ ಹೊರ್ತು ನಮಗೆ ಸ್ವರಾಜ್ಯ ದೊರೆಯದು ಎಂದು ಕಾಂಗ್ರೆಸ್ಸಿಗೆ ತೋರುತ್ತಿದ್ದರೆ ಆ ಪ್ರಕಾರ ಸಾರಿ ರಾಷ್ಟ್ರವನ್ನು ಆ ಬಗೆಯಿಂದ ಸಾಗಲು ಅದನ್ನು ಸಿದ್ಧಪಡಿಸುವದು ಕಾಂಗ್ರೆಸ್ಸಿನ ಕರ್ತವ್ಯವಿದೆ. ಇದೇ ನಮ್ಮ ವಿಶ್ವಾಸವಾಗಿದ್ದರೆ ನಾನು ಈಗ ೧೭ ವರುಷ ವ್ಯರ್ಥ ಕಳೆದಂತಾಯಿತು. ಆದರೂ ಚಿಂತೆಯಿಲ್ಲ ಈಗಾದರೂ ನಾವು ನಮ್ಮ ವಿಶ್ವಾಸದ ದಾರಿಯನ್ನು ಹಿಡಿಯಬೇಕು.

# ರಾಜಧಾನಿಯಲ್ಲಿ
# ಶ್ರೀ ಜಗದ್ಗುರು ಜಯದೇವ ಮುರಘರಾಜೇಂದ್ರ
# ಮಹಾ ಸ್ವಾಮಿಗಳ ಸನ್ನಿಧಿಯಲ್ಲಿ
# ನಡೆದ ಭಾಷಣಗಳು.

( ಸಂಗ್ರಾಹಕರು:— ಶ್ರೀ. ಜಿ. ಎಸ್. )

### ಆರ್ಟಿಸ್ಟ್ ಎಂ. ವೀರಪ್ಪನವರ ಗುರುಭಕ್ತಿ

ತಾ. ೬-೪-೧೯೩೬ ನೆಯ ಪ್ರಾತಃಕಾಲ ಶ್ರೀಮನ್ನಿರಂಜನ ಜಗದ್ಗುರು ಜಯದೇವ ಮುರಘರಾಜೇಂದ್ರ ಮಹಾಸ್ವಾಮಿಗಳವರು ವಾಣೀವಿಲಾಸ ಮೊಹಲ್ಲಾದಲ್ಲಿರುವ ಆರ್ಟಿಸ್ಟ್ ಶ್ರೀ. ಎಂ. ವೀರಪ್ಪನವರ ಮನೆಗೆ ಶೇಷಾದ್ರಿಗಳ ಬಂಗಲೆಯಿಂದ ರೈಲ್ವೆ ಸ್ಟೇಶನ್ ರೋಡಿನ ಮೂಲಕ ಸಕಲ ಮರ್ಯಾದೆಗಳೊಡನೆ ದಯಮಾಡಿಸಿ ಶ್ರೀ. ಎಂ. ವೀರಪ್ಪನವರ ಗೃಹದ ಮುಂದೆ ಹಾಕಿದ್ದ ಚಪ್ಪರದಲ್ಲಿ ಏರ್ಪಡಿಸಿದ್ದ ಸಭೆಯಲ್ಲಿ ಭಾಷಣಮಾಡಿ ಶ್ರೀ. ಎಂ. ವೀರಪ್ಪನವರು ಉತ್ತಮ ದರ್ಜೆಯ ಕಲಾಜ್ಞರೆಂದು ತಾವು ಕೇಳಿ ಸಂತೋಷಪಟ್ಟು ಇಂದು ತಮ್ಮ ಗೃಹಕ್ಕೆ ಅನೇಕ ಮಾನ್ಯ ಅತಿಥಿಗಳನ್ನು ಬರಮಾಡಿಕೊಂಡು ತಮಗಿರುವ ಗುರುಭಕ್ತಿಯನ್ನು ತೋರಿಸಿದುದರಿಂದ ತಮಗೆ ಅಧಿಕ ಸಂತೋಷವುಂಟಾಗಿದೆಯೆಂಬ ಅಂಶವನ್ನು ಸೂಚಿಸಿದ ಬಳಿಕ ಶ್ರೀ ಸನ್ನಿಧಿಯು ಪೂಜಾದಿಗಳನ್ನು ತೀರಿಸಿದ ಬಳಿಕ ಸುಮಾರು ೩೦೦ ಜನರು ಭೋಜನವನ್ನು ಮಾಡಿದರು.

ತರುವಾಯ ಮಧ್ಯಾಹ್ನ ೪ ಘಂಟೆಗೆ ಚಪ್ಪರದಲ್ಲಿ ಸೇರಿದ ಸಭೆಯಲ್ಲಿ ಶ್ರೀ ಜಗದ್ಗುರುಗಳ ಸನ್ನಿಧಿಯಲ್ಲಿ ಆಸ್ಥಾನ್ ವಿದ್ವಾನ್ ಎಂ. ಎಸ್. ಶಿವರುದ್ರಪ್ಪನವರ ಸಂಗೀತ ಕಚೇರಿಯು ನಡೆಯಿತು. ಈ ಸಂದರ್ಭದಲ್ಲಿ ಶ್ರೀಮಾನ್ ಎಂ. ವೀರಪ್ಪನವರು ಗಂಧದ ಮರದ ಚೌಕಟ್ಟಿನಲ್ಲಿ ದಂತದಿಂದ ತಯಾರಿಸಲ್ಪಟ್ಟಿದ್ದ ಶ್ರೀ ಜಗದ್ಗುರು ಜಯದೇವ ಮುರಘರಾಜೇಂದ್ರ ಮಹಾ ಸ್ವಾಮಿಗಳ ಭಾವಚಿತ್ರವನ್ನು ಶ್ರೀ. ಜಗದ್ಗುರುಗಳ ಹಸ್ತದಿಂದ ಡಾ. ಅಣ್ಣಾಜಪ್ಪನವರಿಗೆ ಕೊಡಿಸಿದರು. ತರುವಾಯ ಶ್ರೀ ಸನ್ನಿಧಿಯು ವಾಪಸ್ಸು ಬಂದಿತು.

ತಾ. ೬-೪-೩೬ ನೆಯ ಸಾಯಂಕಾಲ ಶೇಷಾದ್ರಿಗಳ ಬಂಗಲೆಯಲ್ಲಿ ಶ್ರೀ. ಜಗದ್ಗುರು ಮುರುಘರಾಜೇಂದ್ರ ಸ್ವಾಮಿಗಳ ದಿವ್ಯ ಸನ್ನಿಧಿಯಲ್ಲಿ ಸಭೆ ಸೇರಿತ್ತು. ಅನೇಕ ಜನ ಸ್ತ್ರೀ ಪುರುಷರೂ ವಿದ್ಯಾರ್ಥಿಗಳೂ ನೆರೆದಿದ್ದರು. ಪ್ರಾರಂಭದಲ್ಲಿ ಬಿಟ್ಟಿದಪುರದ ಸ್ವಾಮಿಗಳವರು "ಪ್ರಾರ್ಥನೆ" ಎಂಬ ವಿಚಾರವಾಗಿ ಭಾಷಣ ಮಾಡುತ್ತಾ ಮಾನವನ ಜೀವನಾಧಾರಕ್ಕೆ ಆಹಾರಾದಿಗಳು ಹೇಗೆ ಕಾರಣೀಭೂತವಾಗಿರುವವೋ ಹಾಗೆಯೇ ಆತ್ಮೋನ್ನತಿಗೆ ಪ್ರಾರ್ಥನೆಯೆಂಬುದು ಸಹಕಾರಿಯಾಗಿದೆಯೆಂದೂ ಸರ್ವರೂ ಭಗವಂತನಿಗೆ ಪ್ರಾರ್ಥನೆಮಾಡುವುದತ್ಯಾವಶ್ಯಕವೆಂದೂ ಭಾಷಣಮಾಡಿದರು.

### ಹಿಂದು ಧರ್ಮದ ಪುನರುದ್ಧಾರ.

ತರುವಾಯ ಶ್ರೀ ಜಿ. ಸ್ವಾಮಿದಾಸರು ಹಿಂದೂ ಧರ್ಮದ ಪ್ರಾಚೀನತೆಯನ್ನೂ ಹಿಂದು ಧರ್ಮದ ಅನಂತವಾದ ಆಧ್ಯಾತ್ಮಿಕ ಬೋಧನೆಗಳನ್ನೂ ಪ್ರಸ್ತಾಪಿಸುತ್ತ ಒಂದಾನೊಂದು ಕಾಲದಲ್ಲಿ ಅತ್ಯುನ್ನತೆಯನ್ನು ಪಡೆದು ಜಗತ್ತಿಗೆ ಬೆಳಕನ್ನು ಬೀರುತ್ತಿದ್ದ ಹಿಂದು ಧರ್ಮವು ಕಾಲಗತಿಯಿಂದಲೂ ಪರಕೀಯರ ಧಾರ್ಮಿಕ ಸಂಬಂಧದಿಂದಲೂ ಮಲಿನವಾಗುತ್ತಾ ಬಂದಿತೆಂದೂ ಈಗಲೂ ವಿಧರ್ಮೀಯರ ಆವಾಂತರದ ನಿರೋಧ ಕಾರ್ಯಕ್ಕೆ ತಕ್ಕ ಏರ್ಪಾಡುಗಳು ನಡೆಯತಕ್ಕದೆಂದೂ ಅತ್ಯಂತ ಮುಖ್ಯವಾಗಿ ವಿಧರ್ಮೀಯರ ಅವಾಂತರಗಳನ್ನು ತಪ್ಪಿಸಲು ಮಠಾಧಿಪತಿಗಳೂ ಹಿಂದು ರಾಜರೂ ಶ್ರಮಿಸಿ ಭಾರತದ ಧರ್ಮ ಧ್ವಜವನ್ನು ಜಗತ್ತಿಗೆ ತೋರಿಸಬೇಕೆಂದೂ ಉದ್ಘೋಷಿಸಿದರು.

ಧರ್ಮ ಸಂರಕ್ಷಣೆಗೆ ಧರ್ಮ ಪೀಠಗಳೂ ರಾಜ ಪೀಠಗಳೂ ಅವಿಶ್ರಾಂತವಾಗಿ ದುಡಿಯುವ ಕಾಲಬಂದಿದೆ. ಹಿಂದೂ ಧರ್ಮದ ಪುನರುದ್ಧಾರವೇ ಹಿಂದೂ ದೇಶದ ಪುನರುದ್ಧಾರ. ನಮ್ಮ ದೇಶ, ನಮ್ಮ ಧರ್ಮ ಸಂಸ್ಕೃತಿಗಳ ಪುನರುದ್ಧಾರವೇ ನಮ್ಮ ಉದ್ಧಾರ. ನಾವು ಬದುಕಿದರೆ ಧರ್ಮಕ್ಕಾಗಿ ಬದುಕೋಣ ಸತ್ತರೂ ಧರ್ಮಕ್ಕಾಗಿ ಸಾಯೋಣ. ವೀರಶೈವ ಧರ್ಮದ ಪ್ರಾಚೀನತೆಯನ್ನು ಬಸವೇಶ್ವರರ ವಚನದಲ್ಲಿ ಕಾಣುತ್ತಿದ್ದೇವೆ. ಈಗ ಶ್ರೀ ಶೂನ್ಯ ಪೀಠವು ಹಿಂದೂ ಧರ್ಮದ ವಿಶಾಲದೃಷ್ಟಿಯಿಂದಲೂ ಮುಖ್ಯವಾಗಿ ವೀರಶೈವ ಸಮಾಜದ ಸಂಘಟನೆಗೂ ಪತಿತರ ಉದ್ಧಾರಕ್ಕೂ ದೇಶಾಟನೆ ಮಾಡುತ್ತಿರುವುದು ಇಡೀ ಹಿಂದೂ ಸಮಾಜಕ್ಕೆ ಒಂದು ಗೌರವವಾಗಿದೆ. ನಾವು ಭಾರತೀಯರು. ಭರತಖಂಡದ ರಾಜಾಧಿರಾಜರು ಧಾರ್ಮಿಕ ತಳಹದಿಯ ಮೇಲೆಯೇ ತಮ್ಮ ರಾಜ್ಯಗಳನ್ನು ಕಟ್ಟಿದರು. ಯಾವಾಗ ಅವರು ಧರ್ಮಾಭಿಮಾನ ಶೂನ್ಯರಾದರೋ ಆಗ ಅವರ ರಾಜ್ಯಗಳು ವಿನಾಶವನ್ನು ಹೊಂದಿದವು. ಇಂದಾದರೂ ಜಗತ್ತಿನ ಶಾಂತಿಗೆ ಹಿಂದೂ ಧರ್ಮವಲ್ಲದೆ ಬೇರೊಂದು ಔಷಧವಿಲ್ಲ.

ಕಾಲದೇಶ ಪರಿಸ್ಥಿತಿಗಳಿಗನುಗುಣವಾಗಿ ಹಿಂದೂ ಧರ್ಮದಲ್ಲಿ ಉಚಿತವಾದ ಬದಲಾವಣೆಗಳೂ ಸುಧಾರಣೆಗಳೂ ನಡೆಯಬೇಕಾಗಿದೆ. ಅತ್ಯಂತ ಗಮನಾರ್ಹ ವಿಷಯವೆಂದರೆ ನಾವು ಭಾರತೀಯರು ನಮ್ಮ ಧರ್ಮದಲ್ಲಿದ್ದರೆ ಸಾಕೆಂಬ ಭಾವನೆಯಿದ್ದರೆ ಸಾಲದು. ಪರಕೀಯರಿಂದ ನಮ್ಮ ಧರ್ಮಕ್ಕೆ ತಗಲುತ್ತಿರುವ ಧಕ್ಕೆಗೆ ನಾವು ಪ್ರತಿಭಟನೆ ಮಾಡಬೇಕು. ವಿಧರ್ಮಿಯರಿಂದ ನಮ್ಮ ದೇಶಕ್ಕೆ ಮೂರು ಭಾರೀ ಏಟುಗಳು ಬೀಳುತ್ತಿವೆ (೧) ಪರಕೀಯರಿಂದ ನಮ್ಮ ರಾಜ್ಯವು ಆಳಲ್ಪಡುತ್ತಿದೆ. ಇದಕ್ಕೆ ರಾಜಕೀಯ ರಂಗದ ಹೋರಾಟವು ಪ್ರಾರಂಭಿಸಲ್ಪಡಬೇಕಾಯಿತು. (೨) ಭಾರತೀಯರ ರಾಜಕೀಯದ ಜೊತೆಗೆ ನಮ್ಮ ಸಂಸ್ಕೃತಿಯ ತುಳಿತವೂ ಪ್ರಾರಂಭವಾಯಿತು. ಈಗ ನಾವು ನಮ್ಮ ಸಂಸ್ಕೃತಿಯ ಪುನರುದ್ಧಾರಕ್ಕಾಗಿ ದುಡಿಯಬೇಕಾಗಿದೆ. ಇದು ಇಡೀ ಹಿಂದು ಜನಾಂಗಕ್ಕೆ ಸೇರಿದ ಸಮಸ್ಯೆ. ಇದಕ್ಕಿಂತಲೂ ಮುಖ್ಯವಾದುದೆಂದರೆ (೩) ಧಾರ್ಮಿಕ ಧಾಳಿ. ನಮ್ಮ ರಾಜಕೀಯವು ಪರರ ಪಾಲಾಯಿತು. ನಮ್ಮ ಸಂಸ್ಕೃತಿಯೂ ಪರರ ಪಾಲಾಯಿತು. ನಮ್ಮ ಧರ್ಮವೂ ಪರಕೀಯರ ಪಾಲಾಗುವ ದುರವಸ್ಥೆ ಬಂದಿತು. ವಿಧರ್ಮೀಯರ ಅವಾಂತರಗಳನ್ನು ಸಂಪೂರ್ಣವಾಗಿ ವಿರೋಧಿಸಿ ನಿರ್ಮೂಲಮಾಡಲು ಸುಶಿಕ್ಷಣದ ಸಂಸ್ಥೆಗಳನ್ನು ಏರ್ಪಡಿಸಿ ತನ್ಮೂಲಕ ವಿಧರ್ಮೀಯರ

ಅವಾಂತರಗಳನ್ನು ವಿರೋಧಿಸಲು ನಾನು ಈಗ್ಗೆ ೨೫ ವರುಷಗಳಿಂದಲೂ ದುಡಿಯುತ್ತಿರುತ್ತೇನೆ. ಜನ ಬೆಂಬಲದಿಂದ ಮಾತ್ರ ಈ ಕಾರ್ಯಸಾಧನೆ ನಡೆಯುವುದು. ನಮ್ಮಲ್ಲಿ ಮಾತಾಡುವುದಕ್ಕೆ ಕೊಡುವಷ್ಟು ಬೆಲೆಯನ್ನು ಕೃತಿಗೆ ಕೊಡದಿರುವುದೇ ನಮ್ಮ ದುರ್ದೆಸೆಗೆ ಕಾರಣ."

ತರುವಾಯ ಶಿವಯೋಗಮಂದಿರದಿಂದ ದಯಮಾಡಿಸಿದ್ದ ಶ್ರೀ. ಪ್ರ. ಸ್ವ. ಬಸವಲಿಂಗ ಸ್ವಾಮಿಗಳವರು ಭಾಷಣ ಮಾಡುತ್ತಾ ಜನರು ಹಿಂದೂ ಧರ್ಮದ ಮಹ ತತ್ವಗಳನ್ನು ಅರಿಯದೆ ಮತಾಂತರವಾಗುತ್ತಿರುವರೆಂದೂ ಹಿಂದೂ ಸಮಾಜದಲ್ಲಿ ಧರ್ಮಾಭಿಮಾನಿಗಳೂ ಮಠಾಧಿಪತಿಗಳೂ ವಿಧರ್ಮಿಯರ ಧಾರ್ಮಿಕ ದಾಂದಲೆಗಳನ್ನು "ಶಾಪಾದಪಿ-ಶರಾದಪಿ" ಎಂಬಂತೆ ಬ್ರಹ್ಮತೇಜಸ್ಸಿನಿಂದಲಾಗಲಿ ತಡೆಯಬೇಕಾದುದು ಅತ್ಯಾವಶ್ಯಕವೆಂದೂ ಮುಖ್ಯವಾಗಿ ರಾಷ್ಟ್ರೀಯತೆಯಲ್ಲಿ ಧಾರ್ಮಿಕ ತೇಜಸ್ಸೂ ಸೇರಿ ಭಾರತೀಯರ ಧಾರ್ಮಿಕ ದೀವಿಗೆಯು ನಂದಾದೀವಿಗೆಯಂತೆ ದೇದಿಪ್ಯಮಾನವಾಗಿ ವಿರಾಜಿಸುವಂತೆ ಮಾಡತಕ್ಕ ಪವಿತ್ರ ಕರ್ತವ್ಯವನ್ನು ಹಿಂದು ಧರ್ಮಾಭಿಮಾನಿಗಳೆಲ್ಲರೂ ಅತ್ಯಾವಶ್ಯಕವಾಗಿ ಮಾಡಬೇಕೆಂದೂ ಹೇಳಿ ತಮ್ಮ ಭಾಷಣವನ್ನು ಮುಗಿಸಿದರು.

ತದನಂತರ ಶ್ರೀ. ಜಗದ್ಗುರುಗಳು ಹಿಂದೂ ಧರ್ಮದಲ್ಲಿ ವೈಶಾಲ್ಯತೆಯುಂಟಾಗಬೇಕೆಂದೂ ಅಸ್ಪೃಶ್ಯರ ಉದ್ಧಾರಕ್ಕೆ ಉತ್ತಮರೆಂದೆನಿಸಿಕೊಂಡವರು ವಿಶೇಷ ದುಡಿಯಬೇಕೆಂದೂ ಅಸ್ಪೃಶ್ಯರೆಂಬುವರು ಉತ್ತಮರಾಗಲು ಶ್ರೀ ಸನ್ನಿಧಿಯು ನಡೆಯಿಸಿರುವ ಕೆಲವು ನಿದರ್ಶನಗಳಿಂದ ಸರ್ವರೂ ವಿಶಾಲ ಮನೋಭಾವನೆಯುಳ್ಳವರೂ ಹಿಂದೂ ಧರ್ಮಾಭಿಮಾನಿಗಳೂ ಆಗಿ ತಮ್ಮ ಜನ್ಮಪಾವನ ಮಾಡಿಕೊಳ್ಳಬೇಕೆಂದು ಅಪ್ಪಣೆಮಾಡಿದರು.

---

## ಅಂತರ್ಜಾತೀಯ ವಿವಾಹಕ್ಕೆ ಕನ್ಯೆ ಬೇಕಾಗಿದೆ.



---

## ಗಾಂಧೀಜಿ - ವೈಸರಾಯರ ಭೆಟ್ಟಿ.

ಗಾಂಧೀಜಿಯವರು ತಮ್ಮ ಕಾರ್ಯದರ್ಶಿಗಳಾದ ಶ್ರೀ ಮಹಾದೇವ ದೇಸಾಯಿ ಇವರೊಡನೆ ತಾ. ೧೫ ನೆಯ ದಿವಸ ಮುಂಜಾನೆ ೧೧ ಗಂಟೆಗೆ ವ್ಹಾಯಿಸ್‌ರಾಯರನ್ನು ಕಂಡು ೧| ಗಂಟೆಯ ವರೆಗೆ ಸಂಭಾಷಣೆ ಮಾಡಿ ಬಂದನಂತರ ಈ ಪ್ರಕಾರ ಒಂದು ಪ್ರಕಟನೆ ತೆಗೆಯಲಾಯಿತು.—

" ಮಾರ್ಚ ತಿಂಗಳ ಕೊನೆಯಕ್ಕೆ ನಾ| ವೈಸರಾಯರು ಮಹಾತ್ಮಾ ಗಾಂಧಿಯವರಿಗೆ ಒಂದು ಪತ್ರ ಬರೆದು ತಾವು ಸಿಮ್ಲಾಕ್ಕೆ ಹೊರಡುವ ಪೂರ್ವದಲ್ಲಿ ಗಾಂಧಿಯವರು ಇನ್ನೊಮ್ಮೆ ಭೆಟ್ಟಿಯಾಗಿ ಪರಿಚಯ ಬೆಳೆಸಿದರೆ ತಮಗೆ ಹೆಚ್ಚು ಆನಂದವಾಗುವದೆಂದು ತಿಳಿಸಿದ್ದರು. ಒಂದು ವೇಳೆ ಗಾಂಧೀಜಿಯವರು ಕಲಕತ್ತೆಗೆ ಹೋಗುವ ಕಾಲಕ್ಕೆ ದಿಲ್ಲಿಯ ಮೇಲಿಂದ ಹಾಯ್ದು ಹೋದರೂ ಭೆಟ್ಟಿಯು ಅನುಕೂಲವಾಗುವದೆಂದು ಮತ್ತು ಆ ಪತ್ರದಲ್ಲಿ ಮುಂದೆ ಹೀಗೆ ತಿಳಿಸಲಾಗಿದ್ದಿತು.—

"ಗಾಂಧೀಜಿಯವರ ಸಂಗಡ ಚರ್ಚೆಮಾಡುವಂಥ ವಿಶೇಷ ಕೆಲಸವೇನೂ ವ್ಹಾಯಿಸ್‌ರಾಯರಿಗಿಲ್ಲ. ಅವರನ್ನು ಪುನಃ ಕಾಣಬೇಕೆಂಬ ಇಚ್ಛೆಯಿದೆ ಇಷ್ಟೇ."

ಉಭಯರು ೧| ಗಂಟೆಯ ವರೆಗೆ ಸಾಮಾನ್ಯ ವಿಷಯಗಳ ಬಗ್ಗೆ ಚರ್ಚೆಮಾಡಿದರು.

---

## ಅಖಿಲಭಾರತ ಕಾಂಗ್ರೆಸ್ ಸಮತಾವಾದಿಗಳ ಪರಿಷತ್ತು.

ಲಾಹೋರಿನಲ್ಲಿ ಕಳೆದ ವಾರ ಅಖಿಲಭಾರತ ಕಾಂಗ್ರೆಸ್ ಸಮತಾವಾದಿಗಳ ಸಮ್ಮೇಳನವು ಮುಂಬೈಯಿಯ ಸುಪ್ರಸಿದ್ಧ ಸಮತಾವಾದಿ ಮುಂದಾಳುಗಳಾದ ಬ್ಯಾ. ಎಂ. ಆರ್. ಮಸಾನಿಯವರ ಅಧ್ಯಕ್ಷತೆಯಲ್ಲಿ ನಡೆಯಿತು. ಶಾ. ಮಸಾನಿಯವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಈ ಪ್ರಕಾರ ಹೇಳಿದರು—

"ಫೈಜಪುರ ಮಹಾಧಿವೇಶನದ ೧೬ ತಿಂಗಳುಗಳ ತರುವಾಯ ನಾವೀಗ ಮತ್ತೆ ಕೂಡಿದ್ದೇವೆ. ಈ ದೀರ್ಘ ಕಾಲದಲ್ಲಿ ನಮ್ಮ ದೇಶದಲ್ಲಿಯೂ ಪರರಾಷ್ಟ್ರಗಳಲ್ಲಿಯೂ ಪ್ರಚಂಡ ಪರಿವರ್ತನೆಗಳಾಗಿವೆ.

ಸೋವ್ಹಿಯೆಟ್ ರಶಿಯಾದ ರಾಜ್ಯಭಾರ ಪದ್ಧತಿಯ ಲೋಪ ದೋಷಗಳನ್ನು ಟೀಕಿಸಬಾರದೆಂದು ನನ್ನ ಅಭಿಪ್ರಾಯವಲ್ಲ. ದೋಷಗಳನ್ನು ಟೀಕಿಸದೆ ಹೋದರೆ ನಾವು ಸೋವ್ಹಿಯೆಟ್ ರಶಿಯಾದ ನಿಜವಾದ ಸ್ನೇಹಿತರಾಗಲಾರೆವು. ಸತ್ಯವೆಂಬುದು ಅವಶ್ಯವಾಗಿದ್ದ ಆಯುಧವಾಗಿದೆ. ಕಾಂಗ್ರೆಸ್ಸಿನಲ್ಲಿರುವ ಗಾಂಧಿ ಭಕ್ತರಿಗೆ ಮಾತ್ರವೇ ಸತ್ಯ ಅಹಿಂಸೆಗಳು ಮೀಸಲಾಗಿಲ್ಲ. ಗಾಂಧಿ ಭಕ್ತರು ಹೀಗೆ ಹೇಳುವುದನ್ನು ನಾವು ಅಲ್ಲಗಳೆಯುತ್ತೇವೆ. ಸಮತಾವಾದವು ಸಮಭಾವವುಳ್ಳವರ ಸಮೂಹವಷ್ಟೇ ಅಲ್ಲದೆ ಮಾನವ ಬಾಂಧವ್ಯದಲ್ಲಿ ಹಿಂಸೆ ಅಸತ್ಯಗಳಿರಕೂಡದೆಂದೂ ಅವುಗಳನ್ನು ತೊಡೆದಟ್ಟಬೇಕೆಂದೂ ನಾವು ಸಾರುತ್ತೇವೆ.

ಕಾಂಗ್ರೆಸ್ಸಿನ ಇಂದಿನ ಮುಖಂಡತ್ವ ಹಾಗೂ ಧೋರಣಗಳು ಸ್ವಾಭಾವಿಕವಾಗಿಯೇ ನಮ್ಮ ಮನಸ್ಸಿಗೆ ಹಿಡಿಯುವುದಿಲ್ಲ. ಹೊಸ ರಾಜ್ಯಘಟನೆಯನ್ನು ಸೆದೆಬಡಿಯುವ ವಿಷಯದಲ್ಲಿಯೂ ಮಂತ್ರಿಪದ ಸ್ವೀಕಾರದ ಬಗ್ಗೆಯೂ ನಮಗೂ ಕಾಂಗ್ರೆಸ್ಸಿಗೂ ಭಿನ್ನಾಭಿಪ್ರಾಯಗಳುಂಟಾಗಿವೆ. ನಮಗೆ ಸೋಲುಗಳುಂಟಾದರೂ ಕಾಂಗ್ರೆಸ್ಸಿನ ಗೊತ್ತುವಳಿಗಳಲ್ಲೆಲ್ಲಾ ನಮ್ಮ ಪಕ್ಷದ ಕೈ ಕಂಡುಬಾರದೇ ಇರಲಾರದು.

ಸಮತಾವಾದಗಳಲ್ಲಿ ಇಬ್ಬಣವಾಗಿರುವುದು ದುಃಖಕರ. ನಾವು ನಮ್ಮ ಪಕ್ಷದ ಸದಸ್ಯರ ಸಂಖ್ಯೆಯನ್ನು ಬೆಳೆಸುತ್ತ ಹೋದೆವೆಂದರೆ ನಮ್ಮ ಇದಿರು ಪಕ್ಷದ ಪ್ರಭಾವವು ಕಳೆಗುಂದಿ ನಮ್ಮಲ್ಲಿ ನಿಜವಾದ ಐಕ್ಯವುಂಟಾಗದೆ ಇರಲಾರದು."



ಶಾ. ಶ. ೧೮೬೦ ನೆಯ ಚೈತ್ರ ಬ|| ೪ ಸೋಮವಾರ.

# ಹಿಂದುಗಳ ಮೇಲಿನ ಆಕ್ರಮಣ.

ಕಳೆದ ಹತ್ತು ಹನ್ನೆರಡು ಶತಮಾನಗಳಿಂದಲೂ ಹಿಂದುಗಳ ಮೇಲೆ ಅನ್ಯ ಧರ್ಮದವರ ಆಕ್ರಮಣವು ಅನೇಕ ರೀತಿಗಳಿಂದ ಆಗುತ್ತಲೇ ಬಂದಿದೆ. ಮೊದಲು ಮುಸಲ್ಮಾನರು ಹಿಂದು ದೇಶದ ಮೇಲೆ ದಂಡೆತ್ತಿ ಬಂದು ಈ ದೇಶದಲ್ಲಿ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದ್ದಲ್ಲದೆ ತಮ್ಮ ಧರ್ಮವನ್ನೂ ನಾನಾ ರೀತಿಗಳಿಂದ ಪ್ರಸಾರಗೊಳಿಸಿದರು.

ಈಗ ಇವರು ಹಿಂದುಗಳಂತೆಯೇ ಇಂಗ್ಲಿಷ್ ಸರಕಾರದ ಅಧೀನರಾಗಿರುವುದರಿಂದ ಹಿಂದುಗಳ ಮೇಲೆ ರಾಜಕೀಯ ಆಕ್ರಮಣವನ್ನು ಮೊದಲಿನಂತೆ ಮಾಡದಿದ್ದರೂ ಹಿಂದುಗಳ ಮೇಲಿನ ಧಾರ್ಮಿಕ ಆಕ್ರಮಣವನ್ನೇನೂ ನಿಲ್ಲಿಸಿಲ್ಲ. ತಮ್ಮ ರಾಜಕೀಯ ಪ್ರಭುತ್ವವಿದ್ದಲ್ಲಿ ಆ ಮೂಲಕವಾಗಿಯೂ ಶಕ್ಯವಿದ್ದಷ್ಟು ಹಿಂದುಗಳ ಮೇಲೆ ಧಾರ್ಮಿಕ ಆಕ್ರಮಣವನ್ನು ನಡೆಸುತ್ತ ಇಸ್ಲಾಂ ಧರ್ಮವು ಈ ದೇಶದಲ್ಲಿ ಪ್ರಸಾರವಾಗುವಂತೆ ನಾನಾ ಪ್ರಯತ್ನಗಳನ್ನು ಅನೇಕರು ಅವ್ಯಾಹತವಾಗಿ ನಡೆಸಿಯೇ ಇದ್ದಾರೆ.

ತಮ್ಮ ಸಂಖ್ಯಾ ಬಲವು ಹೆಚ್ಚಾದಂತೆ ಹಿಂದುಸ್ಥಾನದಲ್ಲಿ ತಮ್ಮ ಪಾಲುಗಾರಿಕೆಯು ಬೆಳೆಯುತ್ತದೆಂತಲೂ ಇಂದಲ್ಲ, ನಾಳೆ ಹಿಂದುಸ್ಥಾನಕ್ಕೆ ತಾವೂ ಸಮಾನರಾದ ಪಾಲುಗಾರರಾಗಿ ಇದನ್ನು ಹಂಚಿಕೊಂಡು ಸ್ವತಂತ್ರ ರಾಜಕೀಯ ಅಸ್ತಿತ್ವವುಳ್ಳವರಾಗಬಹುದೆಂತಲೂ ಅನೇಕರು ಯೋಚಿಸಿ ಆ ಪ್ರಕಾರ ತಮ್ಮ ಕಾರ್ಯಕ್ರಮಗಳನ್ನು ಈಗಲೇ ಪ್ರಾರಂಭಿಸಿದ್ದಾರೆ.

ಹೀಗೆ ಹಿಂದುಗಳ ಮೇಲಿನ ಮುಸಲ್ಮಾನರ ಆಕ್ರಮಣವು ಈ ದೇಶದಲ್ಲಿ ಯಾವಾಗಲೂ ಹೆಚ್ಚುಕಡಿಮೆಯಾಗಿ ನಡೆಯತಕ್ಕದ್ದಾಗಿಯೇ ಪರಿಣಮಿಸಿದೆ. ಆದುದರಿಂದ ಈ ವಿಷಯದ ಕಡೆಗೆ ಉಪೇಕ್ಷಿಸುವುದು ಹಿಂದು ಜನಾಂಗಕ್ಕೂ ಹಿಂದುಸ್ಥಾನಕ್ಕೂ ಅನರ್ಥಕರವಾದುದೇ ಸರಿ.

### ಕ್ರೈಸ್ತರ ಆಕ್ರಮಣ.

ಹಿಂದುಗಳ ಮೇಲಿನ ಎರಡನೆಯ ಆಕ್ರಮಣವು ಕ್ರೈಸ್ತರದು. ಇವರ ಆಕ್ರಮಣವು ಮುಸಲ್ಮಾನರ ಆಕ್ರಮಣದಷ್ಟು ಭಯಂಕರವಾದುದಾಗಿಲ್ಲದಿದ್ದರೂ ಉಪೇಕ್ಷಣೀಯವಾದುದೇನೂ ಅಲ್ಲ. ಈ ದೇಶದ ಮುಸಲ್ಮಾನರಷ್ಟು ಈ ದೇಶದ ಕ್ರೈಸ್ತರು ಇಲ್ಲಿ ಸಂಖ್ಯಾಬಲವುಳ್ಳವರಾಗಲಿ ಅಥವಾ ರಾಜಕೀಯ ಸ್ವಾಮಿತ್ವವುಳ್ಳವರಾಗಲಿ ಇಲ್ಲದಿದ್ದುದರಿಂದ ಹಿಂದುಸ್ಥಾನದಲ್ಲಿ ತಮ್ಮದೊಂದು ಪ್ರತ್ಯೇಕವಾದ ರಾಜಕೀಯ ಅಸ್ತಿತ್ವವನ್ನು ಸ್ಥಾಪಿಸುವ ಉದ್ದೇಶವುಳ್ಳವರಾಗಿಲ್ಲ. ಧರ್ಮ ಪ್ರಸಾರವೇ ಇವರ ಮುಖ್ಯ ಕಾರ್ಯವಾಗಿರುವುದರಿಂದ ಹಿಂದುಗಳ ಮೇಲೆ ಧಾರ್ಮಿಕ ಆಕ್ರಮಣವು ಮಾತ್ರ ಸೌಮ್ಯ ಸ್ವರೂಪದಲ್ಲಿ ನಡೆದಿದೆ.

ಅಂತೆಯೇ, ಮುಸಲ್ಮಾನರ ಆಕ್ರಮಣದಷ್ಟು ಇವರ ಆಕ್ರಮಣವು ಭೀಕರವಾಗಿಲ್ಲ. ಅಲ್ಲದೆ ಭಾಷೆ, ಉಡುಪು, ರೀತಿ ನೀತಿಗಳಲ್ಲಿ ಮುಸಲ್ಮಾನರಂತೆ ಹಿಂದುಗಳಿಂದ ತೀರ ಭಿನ್ನವಾಗಿರಲು ಇವರು ಇಚ್ಛಿಸುವುದಿಲ್ಲ. ಕೇವಲ ಔಪಾಸನಾ ದೃಷ್ಟಿಯಿಂದಲೇ ಕ್ರಿಸ್ತನೆಂಬ ಮಹಾ ಸಾಧು ಪುರುಷನನ್ನು ಇವರು ಮೊರೆಹೊಕ್ಕು ಆತನ ಉಪದೇಶದಂತೆ ನಡೆಯಬೇಕೆಂಬುವವರಾಗಿದ್ದಾರೆ. ಹಿಂದು ಸಂಸ್ಕೃತಿಯನ್ನು ಬಹುಮಟ್ಟಿಗೆ ಅನುಸರಿಸಿ ನಡೆಯುವ ಪ್ರವೃತ್ತಿಯೂ ಈ ದೇಶದ ಕ್ರೈಸ್ತರಲ್ಲಿ ಇತ್ತೀಚಿಗೆ ಹೆಚ್ಚುತ್ತಲಿದೆ.

### ಮತ ಪ್ರಚಾರವೂ ಒಂದು ವ್ಯಾಪಾರ!

ಈ ದೇಶದಲ್ಲಿ ನಡೆದಿರುವ ಕ್ರಿಸ್ತಮತ ಪ್ರಸಾರವು ಮನುಷ್ಯನ ಆತ್ಮೋನ್ನತಿಗೆ ಸಾಧನವಾದ ರೀತಿಯಲ್ಲಿಲ್ಲವೆಂಬುದೂ ಅನೇಕ ದೇಶೀಯ ಕ್ರೈಸ್ತ ಮಹಾ ಜನರಿಗೆ ಈಗ ಸ್ಪಷ್ಟ ಗೊತ್ತಾಗಿದೆ. ಕಳೆದ ವರುಷ ಮೈಸೂರಲ್ಲಿ ದೇಶೀಯ ಕ್ರೈಸ್ತರ ಸಮ್ಮೇಲನವು ಕೂಡಿದ್ದಿತು. ಆ ಸಂಬಂಧವಾಗಿ ಶ್ರೀ. ಜೆ. ಸ್ವಾಮಿದಾಸರ ಹೆಸರಿನಿಂದ ಪ್ರಕಟವಾದ ಆಮಂತ್ರಣ ಪತ್ರಿಕೆ ಮೊದಲಾದ ಪ್ರಕಟನೆಗಳು ನಮ್ಮ ಕಡೆ ಈಗ ಬಂದಿವೆ. ಆಮಂತ್ರಣ ಪತ್ರಿಕೆಯಲ್ಲಿ ಹೀಗಿದೆ—

“ಪಾಶ್ಚಿಮಾತ್ಯ ರೀತಿಯಾದ ಕ್ರೈಸ್ತಮತ ಪ್ರಸಾರವು ಒಂದು ಭಾರೀ ವ್ಯಾಪಾರದ ಸಂಸ್ಥೆಯಾಗಿ ದಿನದಿನಕ್ಕೂ ಆಧ್ಯಾತ್ಮಿಕ ಭಾವನೆಗಳೆಲ್ಲಾ ಮಾರ್ಪಟ್ಟು “ಮತ ಮತ್ತು ಧರ್ಮ” ಗಳ ನೆವದಲ್ಲಿ ವಿವರಿಸಲಸದಳವಾದ ಅನ್ಯಾಯ:ಗಳು ನಡೆಯುತ್ತಿರುವವು. ಈ ಕಾರಣಗಳಿಂದ ದೇಶೀಯ ಕ್ರೈಸ್ತರ ಕುಂದುಕೊರತೆಗಳನ್ನೆಲ್ಲಾ ಆದ್ಯಂತವಾಗಿ ವಿಮರ್ಶಿಸಿ, ಕಳೆದ ಒಂದೂವರೆ ಶತಮಾನದಿಂದಲೂ ಸಮಾಜದ ಸ್ವಾತಂತ್ರ್ಯವನ್ನೂ ,ಹಕ್ಕುಬಾಧ್ಯತೆಗಳನ್ನೂ ಕಳೆದುಕೊಂಡಿರುವ ಸಮಾಜಿಕರಿಗೆ ಸ್ವತಂತ್ರವನ್ನುಂಟುಮಾಡುವುದಕ್ಕೂ ಪಾಶ್ಚಿಮಾತ್ಯ ರೀತ್ಯದ ಧಾರ್ಮಿಕ ಪ್ರಚಾರದ ಕಾರ್ಯಗಳನ್ನು ಬದಲಾಯಿಸಿ, ಪೂರ್ವಾತ್ಯರ ಸಂಪ್ರದಾಯಗಳಿಗನುಗುಣವಾದ ಸುಧಾರಣೆಗಳನ್ನು ಮಾಡಿಕೊಳ್ಳುವುದಕ್ಕೂ, ಅವಶ್ಯಕವಾದ ಕಾರ್ಯಕ್ರಮಗಳೂ ನಿರ್ಣಯಗಳೂ ಮಹಾಜನರ ಮತ್ತು ಘನ ಸರ್ಕಾರದವರ ಅವಗಾಹನೆಗೆ ಈ ಸಮ್ಮೇಲನದ ಮೂಲಕ ತರಲ್ಪಡುವುವು.

ಸ್ವ ಕಾರ್ಯ ಸಾಧನಾದುರಂಧರರಾದ ಮಿಷನರಿಗಳ ರೀತ್ಯ ಪ್ರ[illegible]ವಾಗುತ್ತಲಿರುವ ಕ್ರೈಸ್ತ ಮತದಿಂದ ದೇಶೀಯ ಕ್ರೈಸ್ತ

ರಿಗೂ ಇತರ ಮತೀಯರಿಗೂ ಭಿನ್ನಾಭಿಪ್ರಾಯಗಳೂ ದ್ವೇಷಾಸೂಯೆಗಳೂ ವೃದ್ಧಿಯಾಗುತ್ತಿರುವುವು. ಇದನ್ನು ಸಕಾರಣವಾಗಿ ವಿವರಿಸಿ ತಪ್ಪು ಭಾವನೆಗಳಿಗೆ ಅವಕಾಶವಿಲ್ಲದಂತೆ ವ್ಯವಸ್ಥೆ ಮಾಡುವುದು ಅತ್ಯಾವಶ್ಯಕವಾಗಿರುವುದು. ದೇಶೀಯ ಕ್ರೈಸ್ತರು "ರಾಷ್ಟ್ರೀಯ ಮಹಾ ಸಭೆ" ಗೆ ಸೇರಬೇಕೆಂಬ ನಿರ್ಣಯವು ಈ ಸಮ್ಮೇಳನದಲ್ಲಿ ನಿರ್ಧರಿಸಲ್ಪಡುವುದು."

ಈ ದೇಶದಲ್ಲಿ ಕ್ರೈಸ್ತಮತ ಪ್ರಸಾರವು ಅನೇಕ ಸಲ್ಲದ ರೀತಿಗಳಿಂದ ನಡೆಯುತ್ತಲಿದೆಯೆಂದೂ ಆದರಿಂದ ಜನಗಳ ಹೀನದೀನ ಸ್ಥಿತಿಗಳೇನೂ ನಿವಾರಣೆಯಾಗುವುದಿಲ್ಲವೆಂದೂ ಈ ವರಿಗೆ ಅನೇಕ ಹಿಂದು ಮುಖಂಡರು ಹೇಳುತ್ತಲೇ ಬಂದಿದ್ದಾರಷ್ಟೆ. ದೇಶೀಯ ಕ್ರೈಸ್ತ ಮಹಾ ಜನರೇ ತಮ್ಮ ಅನುಭವದಿಂದ ಹೇಳಿದ ಮೇಲಿನ ಸಂಗತಿಗಳು ಹಿಂದು ಮುಖಂಡರ ಈ ವರೆಗಿನ ಹೇಳಿಕೆಯನ್ನು ದೃಢೀಕರಿಸುತ್ತವೆ. ಆದಕಾರಣ ನಮ್ಮ ಹಿಂದು ಬಾಂಧವರು ಈಗಲಾದರೂ ಎಚ್ಚತ್ತು ಕ್ರೈಸ್ತ ಮಿಷನರಿಗಳ ಬಲೆಯಲ್ಲಿ ಬೀಳದಿರುವುದು ಕ್ಷೇಮಕರವಲ್ಲವೆ?

ರಾಜಕೀಯ ವಿಷಯದಲ್ಲಿ ದೇಶೀಯ ಕ್ರೈಸ್ತರು ಮುಸಲ್ಮಾನರಂತೆ ಹಿಂದುಗಳಿಂದ ಭಿನ್ನವಾಗಿರಲು ಇಷ್ಟಪಡದಿರುವುದೂ ಅವರಿಗೆ ಭೂಷಣಪ್ರದವಾದುದೇ ಆಗಿಲ್ಲವೆ?

ಉತ್ತರ ಹಿಂದುಸ್ಥಾನವು ಮುಸಲ್ಮಾನರ ತುಳಿತದಿಂದ ಬಹು ಗಾಸಿಯಾಗಿ ಈಗಲೂ ಆ ಭಾಗದ ಹಿಂದು ಬಾಂಧವರು ಆಗಾಗ್ಗೆ ಅವರ ಆಕ್ರಮಣಕ್ಕೆ ಆಹುತಿಯಾಗುತ್ತಿದ್ದಾರಷ್ಟೆ. ಈ ದುರವಸ್ಥೆ ನಿಲ್ಲಬೇಕಾದರೆ ಅಖಿಲ ಹಿಂದುಸ್ಥಾನದ ಹಿಂದುಗಳೂ ಜಾಗೃತರಾಗಿ ಸ್ವಸಂರಕ್ಷಣೆಗೆ ಸಂಘಟಿತರಾಗಬೇಕು. ದಕ್ಷಿಣ ಹಿಂದುಸ್ಥಾನದಲ್ಲಿ ನಡೆದಿರುವ ಅನೇಕ ಕ್ರೈಸ್ತ ಮಿಷನರಿಗಳ ಹಾವಳಿಯು ನಿಲ್ಲಬೇಕಾದರೆ ದೇಶೀಯ ಕ್ರೈಸ್ತ ಮಹಾಜನರ ಮೇಲಿನ ಸಂಗತಿಗಳನ್ನು ತಿಳಿದುಕೊಂಡು ಹಿಂದುಗಳು ಇನ್ನು ಮೇಲಾದರೂ ಕ್ರಿಸ್ತ ಮತಕ್ಕೆ ಹೋಗುವುದನ್ನು ಬಿಡಬೇಕು. ಮತ್ತು ಸವರ್ಣೀಯ ಹಿಂದುಗಳು ಆದಿ ಹಿಂದುಗಳಿಗಿರುವ ಸಾಮಾಜಿಕ ಪಾರತಂತ್ರ್ಯಗಳನ್ನೆಲ್ಲಾ ತೆಗೆದು ಹಾಕಿ ತಮ್ಮಲ್ಲಿಯೇ ಅವರನ್ನು ಬಂಧುಭಾವದಿಂದ ಕೂಡಿಸಿಕೊಳ್ಳಬೇಕು.

ಈ ಪ್ರಕಾರ ಹಿಂದುಗಳು ಪ್ರಚಂಡವಾಗಿ ತಮ್ಮ ಸಂಘಟನೆಯ ಕಾರ್ಯವನ್ನು ಮಾಡದಿದ್ದರೆ ಧರ್ಮವೀರ ಡಾ. ಮುಂಜೆಯವರು ಹೇಳುವಂತೆ ಹಿಂದು ಸಮಾಜವೆಂಬ ಮೇಣಬತ್ತಿಯ ಮೇಲ್ಭಾಗವು ಮುಸಲ್ಮಾನರ ಆಕ್ರಮಣವೆಂಬ ಉರಿಯಿಂದಲೂ ಕೆಳಭಾಗವು ಕ್ರೈಸ್ತರ ಆಕ್ರಮಣವೆಂಬ ಉರಿಯಿಂದಲೂ ಸ್ವಲ್ಪ ಕಾಲದಲ್ಲಿಯೇ ಕರಗಿ ಹೋಗದೆ ಇರಲಾರದು. ಆದುದರಿಂದ ಹಿಂದು ಬಾಂಧವರು ಇತ್ತ ಕಡೆ ಈಗಲಾದರೂ ಲಕ್ಷಿಸುವರೆ?

---

## ಶ್ರೀ. ಕಾಶೀನಾಥ ಶಾಸ್ತ್ರಿಗಳಿಗೆ ಕೇಸರೀಕಾರರ ವೇದೋಕ್ತ ಉಡುಗರೆ!

ಮಹಾನುಭಾವರಾದ ಬಸವಾದಿ ಪ್ರಮಥರನ್ನು ನಿಂದಿಸಿ ಪ್ರಸಿದ್ಧಿಗೆ ಬಂದ ಶ್ರೀ ಕಾಶೀನಾಥ ಶಾಸ್ತ್ರಿಗಳ ಪಂಚಯವು ವೀರಶೈವರಿಗೆ ಇದ್ದೇ ಇದೆಯಷ್ಟೆ. ಇವರು ಬರೆದ "ವೀರಶೈವ ರತ್ನ" ಎಂಬ ಪುಸ್ತಕವು ಮರಾಠಿ ಭಾಷೆಗೂ ಪರಿವರ್ತಿಸಲ್ಪಟ್ಟು ಪುಣೆಯ "ಕೇಸರೀ" ಪತ್ರಿಕಾಕರ್ತರ ಕಡೆ ವಿಮರ್ಶೆಗಾಗಿ ಹೋಗಿದೆ. ಆ ಪುಸ್ತಕವನ್ನು ಕುರಿತು ವಿಮರ್ಶಿಸುವಾಗ ಕೇಸರೀ ಪತ್ರಿಕಾಕರ್ತರು ತಾರೀಖು ೧-೪-೩೮ ನೆಯ ಸಂಚಿಕೆಯಲ್ಲಿ ಹೀಗೆ ಬರೆದಿದ್ದಾರೆ.—

"ಶ್ರೀ. ಕಾಶೀನಾಥ ಪಂಡಿತರು ಬಸವ ಪಂಥವು ಅವೈದಿಕ, ವರ್ಣಾಶ್ರಮ ಧರ್ಮವಿರೋಧಿ ಎಂದು ಹೇಳಿ ತಾವು "ಬಸವ ಮತಧ್ವಾಂತ ದಿವಾಕರ" ಎಂದು ಹೇಳಿಕೊಂಡಿದ್ದಾರೆ. ಆದರೆ ಕಾಶಿಯಲ್ಲಿಯ ಒಬ್ಬ ಪಂಡಿತರಾದ ಶ್ರೀ. ಕಾಲಿಕೇಶ್ವರದತ್ತ ಎಂಬುವವರು "ಬ್ರಾಹ್ಮಣೋತ್ಪತ್ತಿ ಎಂಬ ಗ್ರಂಥದಲ್ಲಿ "ಲಿಂಗಧಾರಿಗಳು ಅವೈದಿಕರು" ಎಂದು ಹೇಳಿರುವುದರಿಂದ ಬಹು ಸಂತಾಪಗೊಂಡಿರುವುದೇಕೆ?

ಶ್ರೀ ಕಾಶೀನಾಥ ಶಾಸ್ತ್ರಿಗಳ ಐತಿಹಾಸಿಕ ಜ್ಞಾನವು ಕೌತುಕಾಸ್ಪದವಾದುದು. ಕೇದಾರ ಮಠಕ್ಕೆ ಜನಮೇಜಯರಾಯನು ಉಂಬಳಿಹಾಕಿಕೊಟ್ಟಿದ್ದರ ತಾಮ್ರ ಪಟ (೫ ಸಾವಿರ ವರುಷಗಳ ಹಿಂದಿನದು) ಇವರಲ್ಲಿದೆಯಂತೆ. ಶ್ರೀ ಶಂಕರಾಚಾರ್ಯರು ಕ್ರಿಸ್ತಶಕ ಪೂರ್ವ ೮ ನೆಯ ಶತಮಾನದವರಂತೆ! ಇಂಥ ನಂಬಲರ್ಹವಲ್ಲದ ಐತಿಹಾಸಿಕ ಸಂಗತಿಗಳನ್ನು ತೆಗೆದುಹಾಕಿದರೆ ಈ ಪುಸ್ತಕವು ಇವರ ಪಾಂಡಿತ್ಯವನ್ನು ವ್ಯಕ್ತಗೊಳಿಸುತ್ತದೆ."

---

## ಹೈದರಾಬಾದಿನ ದಂಗೆಯ ಸಲುವಾಗಿ ನಿಜಾಮು ಸರಕಾರದ ನಿಷೇಧ.

ಕಳೆದ ೧೩ ನೆಯ ತಾರೀಖಿನ ದಿವಸ ಪುಣೆಯ ಟಿಳಕ ಸ್ಮಾರಕ ಮಂದಿರದಲ್ಲಿ ಹಿಂದು ಮಹಾಸಭೆಯ ಪರವಾಗಿ ಶ್ರೀ. ಲ. ಬ. ಭೋಪಟಕರರ ಅಧ್ಯಕ್ಷತೆಯಲ್ಲಿ ಹಿಂದೂ ನಾಗರಿಕರ ಪ್ರಚಂಡ ಸಭೆ ಸೇರಿದ್ದಿತು. ಹೈದರಾಬಾದಿನಲ್ಲಿಯ ದಂಗೆಯನ್ನು ಪ್ರತ್ಯಕ್ಷ ಕಣ್ಣಿನಿಂದ ನೋಡಿ ಅಲ್ಲಿಯ ನಿಜ ಸ್ಥಿತಿಯನ್ನು ಸಂಸ್ಥಾನದ ಬೇರೆ ಕಡೆಗೂ ತಿಳುಹಿಸಬೇಕೆಂದು ಬಂದಿದ್ದ ಶ್ರೀ ದೇವ ಇವರು ಅಲ್ಲಿಯ ದಂಗೆಯ ಹೃದಯದ್ರಾವಕ ಸ್ಥಿತಿಯನ್ನು ಹೇಳಿದರು. ಈ ಕೆಳಗಿನ ಗೊತ್ತುವಳಿಯನ್ನು ಸಭೆಯಲ್ಲಿ ಠರಾವು ಮಾಡಿದರು—

"ಹೈದರಾಬಾದಿನಲ್ಲಿ ಕಳೆದ ಮಂಗಳವಾರದಿಂದಲೂ ಪ್ರಾರಂಭವಾದ ಹಿಂದು-ಮುಸಲ್ಮಾನರ ದಂಗೆಯಲ್ಲಿ ಪ್ರಕಟನೆಗಳಿಂದಲೂ ಮತ್ತು ಪ್ರತ್ಯಕ್ಷ ನೋಡಿ ಬಂದ ಸಂಗತಿಗಳಿಂದಲೂ ಅಲ್ಲಿಯ ಸರಕಾರಿ ಅಧಿಕಾರಿಗಳ ಪೂರ್ಣ ಬೆಂಬಲವಿದೆಯೆಂದೇ ಸ್ಪಷ್ಟ ತೋರುತ್ತದೆ. ಮತ್ತು ಅಧಿಕಾರಿಗಳಿಂದ ಹಿಂದು ಪ್ರಜೆಗಳ ಸಂರಕ್ಷಣೆಯಾಗುವುದು ಈ ಸಭೆಗೆ ಕಠಿಣವಾಗಿ ತೋರುತ್ತದೆ. ಏಕೆಂದರೆ ಎಂಟು ದಿವಸಗಳಾದರೂ ದಂಗೆ ನಡೆದೇ ಇರುತ್ತದೆ. ನಿಜಾಮ ಸರಕಾರದವರು ಹೊರಡಿಸಿದ ಪತ್ರಿಕೆಯು ಕೂಡಾ ತಪ್ಪಿದ್ದು ಆರ್ಯಸಮಾಜ ಶೀಖ ಮೊದಲಾದ ಹಿಂದು ಪ್ರಜೆಗಳ ಮೇಲೆ ಸರಕಾರದವರು ಆರೋಪ ಹೊರಿಸುವ ಅಶ್ಲಾಘ್ಯ ಪ್ರಯತ್ನಮಾಡಿದ್ದಾರೆಂದು ಈ ಸಭೆಯ ಮತವಿದೆ.

ಸಂಸ್ಥಾನದ ತುಂಬೆಲ್ಲ ಪ್ರವಾಸಮಾಡಿ ಸಾಮೂಹಿಕವಾಗಿ ಹಿಂದುಗಳನ್ನು ಹೆಚ್ಚಾಗಿ ಆದಿ ಜನಗಳನ್ನು ಧರ್ಮಾಂತರಗೊಳಿಸುವ ಕಾರ್ಯಕ್ಕೂ ಸರಕಾರ ಅಧಿಕಾರಿಗಳು ಸಹಾಯಮಾಡುತ್ತಿದ್ದಾರೆಂದು ಸ್ಪಷ್ಟ ಗೊತ್ತಾಗುತ್ತದೆ. ಆದಕ್ಕಾಗಿಯೂ ಈ ಸಭೆಯು ನಿಜಾಮು ಸರಕಾರದ ಈ ಧೋರಣವನ್ನು ತೀವ್ರತರವಾಗಿ ನಿಷೇಧಿಸುತ್ತದೆ. ಈ ದಂಗೆಯಲ್ಲಿ ಮರಣಹೊಂದಿದವರ ಮತ್ತು ಸಂಕಟಕ್ಕೊಳಗಾದವರ ಬಗ್ಗೆ ಈ ಸಭೆಯು ಸಹಾನುಭೂತಿ ವ್ಯಕ್ತಮಾಡುತ್ತದೆ.

ಬ್ರಿಟಿಷ್ ಸರಕಾರವು ಸಂಸ್ಥಾನಗಳಲ್ಲಿ ಸುರಾಜ್ಯ ಮತ್ತು ಸುವ್ಯವಸ್ಥೆಗಳನ್ನಿಡುವ ತನ್ನ ಜವಾಬುದಾರಿಯನ್ನು ತಿಳಿದುಕೊಂಡು ನಿಜಾಮು ಸರಕಾರದವರಿಂದ ಒಂದು ವಿಚಾರಣಾ ಕಮಿಟಿ ನಿಯಮಿಸುವ ವ್ಯವಸ್ಥೆ ಮಾಡಬೇಕೆಂದೂ ಮತ್ತು ಸದ್ಯ ನಡೆಜಿರುವ ಅತ್ಯಾಚಾರ ನಿಲ್ಲಿಸಲು ಕಡುಕರವಾದ ಉಪಾಯ ಯೋಚಿಸಬೇಕೆಂದೂ ಈ ಸಭೆಯು ಬೇಡಿಕೊಳ್ಳುತ್ತದೆ.

ಸಂಸ್ಥಾನವಲ್ಲಿಯ ಹಿಂದು ಪ್ರಜೆಗಳು ಒಂದು ವಿಚಾರಣಾ ಕಮಿಟಿ ನಿಯಮಿಸಿಕೊಂಡು ಸಂಸ್ಥಾನದಲ್ಲಿ ಈಗ ನಡೆದಿರುವ ದಂಗೆ ಅತ್ಯಾಚಾರಗಳ ಸಂಬಂಧವಾಗಿ ಒಂದು ರಿಪೋರ್ಟ್ ಪ್ರಕಟಿಸಬೇಕೆಂದೂ ಈ ಸಭೆಯು ಸೂಚಿಸುತ್ತದೆ"

## ಮೈಸೂರಲ್ಲಿ ಪುನಃ ಗಲಭೆ.

ತಾ. ೧೧ ನೆಯ ದಿನ ಶಿವಪುರದಲ್ಲಿ ಮೈಸೂರು ಕಾಂಗ್ರೆಸ್ ಮಹಾ ಅಧಿವೇಶನವನ್ನು ನೆರವೇರಿಸಬೇಕೆಂದು ಈ ಮೊದಲೇ ನಿರ್ಧರಿಸಲ್ಪಟ್ಟಿತ್ತಷ್ಟೆ. ಆದರೆ ಜಿಲ್ಲಾಧಿಕಾರಿಗಳು ಕಾಂಗ್ರೆಸ್ ಧ್ವಜ ಏರಿಸಲು ಪ್ರತಿಬಂಧಗೊಳಿಸಿದ್ದರಿಂದ ಪುನಃ ಗಲಭೆಯುಂಟಾಗಲು ಅವಕಾಶವಾಯಿತು. ಜಿಲ್ಲಾಧಿಕಾರಿಗಳ ಈ ಪ್ರತಿಬಂಧಕಾಜ್ಞೆಯನ್ನು ಮುರಿದು ಮೈಸೂರು ಕಾಂಗ್ರೆಸ್ ಅಧ್ಯಕ್ಷರಾದ ಟಿ. ಸಿದ್ಧಲಿಂಗಯ್ಯನವರು, ಶ್ರೀ ಎಚ್. ಸಿ. ದಾಸಪ್ಪ, ಶ್ರೀ. ವ್ಹಿ. ವೆಂಕಟಪ್ಪ, ಶ್ರೀ. ಚೆಂಗಲರಾಯರೆಡ್ಡಿ, ಶ್ರೀ. ಕೆ. ಟಿ. ಭಾಷ್ಯಂ, ಶ್ರೀ. ಎಚ್. ಸಿದ್ಧಯ್ಯ ಮತ್ತು ಬಳ್ಳಾರಿ ಸಿದ್ಧಮ್ಮ ಮೊದಲಾದವರು ಕಾರಾಗೃಹ ಸೇರಿದರು.

## ಏಕೀಕರಣದ ಮುನ್ನಡೆ.

ಮುಂಬೈ ಕೌನ್ಸಿಲ್ಲಿನಲ್ಲಿ ತಾ ೧೩ ನೆಯ ದಿನ ಶ್ರೀ ನರಸಿಂಹರಾವ ದೇಸಾಯಿ ಇವರು ಅಸೆಂಬ್ಲಿಯಲ್ಲಿ ತೀರ್ಮಾನಿಸಲ್ಪಟ್ಟ ಗೊತ್ತುವಳಿಯಂತೆ ಕರ್ನಾಟಕ ಏಕೀಕರಣದ ಗೊತ್ತುವಳಿಯನ್ನು ಮಂಡಿಸಿದ್ದರು. ಶ್ರೀಯುತರಾದ ತಲ್ಲೂರ ದೇಸಾಯಿ, ಪ್ರಧಾನ, ದಾದಾಸಾಹೇಬ ದೇಸಾಯಿ, ಸುಬ್ಬರಾವ ಹಳದಿಪುರ, ಡಾ. ಸೂಳಂಕೆ, ದೇವದೇವಕರ ಇವರು ಬೆಂಬಲವನ್ನಿತ್ತರು. ಅರ್ಥಸಚಿವರಾದ ನಾ. ಲಠ್ಠೆಯವರು ಸಮರ್ಥಿಸಿ ಮಾತನಾಡಿದರು. ಮತಗಣನೆಯಾಗಲಾಗಿ ಗೊತ್ತುವಳಿಯು ಬಹುಮತದಿಂದ ಸ್ವೀಕೃತವಾಯಿತು.

## ರಶಿಯುವು ಚೀನಕ್ಕೆ ಸಹಾಯಮಾಡುವುದು.

ಚೀನ ಸರಕಾರದ ಮಂತ್ರಿಗಳಾದ ಡಾ. ಸುನಫೊ ಇವರು ಸುಪ್ರಸಿದ್ಧ ಡಾ. ಸನ್-ಯತ್-ಸನ್‌ರ ಮಕ್ಕಳು. ಇವರು ಈಗ ಯುರೋಪದಲ್ಲಿ ಸಂಚರಿಸುತ್ತ ಅನೇಕ ಜನ ಮುತ್ಸದ್ದಿಗಳನ್ನು ಕಂಡು ಅವರೊಡನೆ ಚೀನದ ಬಗ್ಗೆ ವಿಚಾರವಿನಿಮಯಮಾಡುತ್ತಿರುವರು. ಇವರು ವೃತ್ತಪತ್ರಿಕಾಕಾರರಿಗೆ ಈ ಪ್ರಕಾರ ತಿಳಿಸಿದರು.—

"ಜಪಾನವು ಚೀನವನ್ನು ಸಂಪೂರ್ಣವಾಗಿ ಗೆಲ್ಲುವದೆಂಬ ಅಂಜಿಕೆಯು ತೋರಿದೊಡನೆ ರಶಿಯುವು ಯುರೋಪದಲ್ಲಾಗುವ ಪರಿಣಾಮಗಳನ್ನು ಲೆಕ್ಕಿಸದೆ ಚೀನ-ಜಪಾನ ಯುದ್ಧದಲ್ಲಿ ಬಿದ್ದು ಚೀನದ ಪರವಾಗಿ ಹೋರಾಡುವುದು."

## ಕೆ. ನಾಗೇಶ್ವರರಾಯರ ಶೋಚನೀಯ ನಿಧನ.

ಆಂಧ್ರ ಪತ್ರಿಕೆಯ ಸಂಪಾದಕರೂ ಸುಪ್ರಸಿದ್ಧ ಕಾಂಗ್ರೆಸ್ ಭಕ್ತರೂ ಆಗಿದ್ದ ಶ್ರೀ. ಕೆ. ನಾಗೇಶ್ವರರಾಯರು ತಾ. ೧೧ ನೆಯ ದಿನ ಮಧ್ಯಾನ್ಹ ೨-೧೫ ಕ್ಕೆ ನಿಧನಹೊಂದಿದರು. ಸಾಯುವಕಾಲಕ್ಕೆ ಇವರಿಗೆ ೭೧ ವರ್ಷಗಳಾಗಿದ್ದವು. ಮಹಾತ್ಮಾ ಗಾಂಧಿಯವರು ನಾಗೇಶ್ವರರಾಯರ ನಿಧನದ ವಾರ್ತೆಯನ್ನು ಕೇಳಿ ಈ ಪ್ರಕಾರ ಅಭಿಪ್ರಾಯಪಟ್ಟರು—

"ಶ್ರೀ. ನಾಗೇಶ್ವರರಾಯರ ನಿಧನದಿಂದ ರಾಷ್ಟ್ರಕ್ಕೆ ಅಮೂಲ್ಯ ನಷ್ಟವಾಗಿದೆ. ನೂರಾರು ಜನ ಬಡ ಜೀವಿಗಳಿಗೆ ಸದ್ದಿಲ್ಲದೆ ಉಪಕಾರ ಮಾಡುವಂಥ ಇವರು ತೀರಿದಮೇಲೆ ಇವರ ಸ್ಥಾನದಲ್ಲಿ ಇನ್ನು ಬರುವವರಾರು? "

## ಗಾಂಧೀಜಿಯವರ ಪ್ರಕಟನೆ.

ಗಾಂಧೀಜಿಯವರು ಕಳೆದ ೧೩ ನೆಯ ತಾರೀಖಿನ ದಿವಸ ಕಲಕತ್ತಾ ಬಿಟ್ಟು ದಿಲ್ಲಿಗೆ ಹೊರಡುವ ಪೂರ್ವದಲ್ಲಿ ಬಂಗಾಲದ ರಾಜಕೀಯ ಕೈದಿಗಳ ಬಿಡುಗಡೆಯ ಸಂಬಂಧವಾಗಿ ಈ ಪ್ರಕಾರ ಒಂದು ಪ್ರಕಟನೆ ಹೊರಡಿಸಿದ್ದಾರೆ—

"ಬಂಗಾಲ ಸರಕಾರದೊಡನೆ ನಾನು ನಡೆಯಿಸಿದ ಸಂಧಾನ ಕಾರ್ಯವು ಇನ್ನೂ ಮುಗಿದಿರುವುದಿಲ್ಲ. ನಾನು ಈಗ ಗೃಹಮಂತ್ರಿಗಳಾದ ನಾ| ನಜೀಮುದ್ದೀನ ಇವರಿಗೆ ಒಂದು ಪತ್ರ ಬರೆದು ನನ್ನ ಸೂಚನೆಗಳೆಲ್ಲವನ್ನು ಸಂಕ್ಷಿಪ್ತವಾಗಿ ಕೊಡುತ್ತಿದ್ದೇನೆ. ಅವುಗಳನ್ನು ಬಂಗಾಲ ಸರಕಾರದವರು ಆದಷ್ಟು ಶೀಘ್ರ ವಿಚಾರಿಸುವುದಾಗಿ ತಿಳಿಸಿದ್ದಾರೆ. ಅವುಗಳನ್ನು ವಿಚಾರಿಸಿ ನಿಶ್ಚಿತವಾದ ನಿರ್ಣಯ ಹೇಳಲು ಸಾಧಾರಣ ಒಂದು ತಿಂಗಳು ಕಾಲ ಬೇಕು.

ಅಲ್ಲಿಯವರೆಗೆ ಸ್ಥಾನಬದ್ಧ ಸೆರೆಯಾಳುಗಳ ಅಥವಾ ರಾಜಕೀಯ ಸೆರೆಯಾಳುಗಳ ಬಗ್ಗೆ ಎಲ್ಲಾ ಚಟುವಟಿಕೆಗಳನ್ನು ನಿಲ್ಲಿಸಿ ಬಿಡಬೇಕು. ಪರಸ್ಪರ ಪತ್ರವ್ಯವಹಾರ ಮಾತ್ರ ನಡೆದಿರುವದು."

## ಜವಾಹರಲಾಲರ ಸಂದೇಶ.

ಗ್ರೇಟ್‌ಬ್ರಿಟನ್ ಮತ್ತು ಅಯರ್ಲಂಡ್‌ಗಳಲ್ಲಿರುವ ಹಿಂದೀ ವಿದ್ಯಾರ್ಥಿ ಸಂಘಗಳ ಸಂಯುಕ್ತ ಸಂಸ್ಥೆಯ ದ್ವಿತೀಯ ವಾರ್ಷಿಕ ಪರಿಷತ್ತು ಮಿ. ಜಿ. ಎಸ್. ಕಸಬೇಕರ ಇವರ ಅಧ್ಯಕ್ಷತೆಯಲ್ಲಿ ಲಂಡನ್ನಿನಲ್ಲಿ ಕೂಡಿತ್ತು. ಪಂ. ಜವಾಹರಲಾಲರು ಈ ಕೆಳಗಿನ ಸಂದೇಶವನ್ನು ಕಳುಹಿಸಿಕೊಟ್ಟಿದ್ದರು—

"ಹಿಂದೀ ಜನರು ಸ್ವಾತಂತ್ರ್ಯದ ಸಲುವಾಗಿ ದೃಢ ಪ್ರತಿಜ್ಞೆಯನ್ನೇ ತೊಟ್ಟಿದ್ದಾರೆ. ಎಂತಹ ವಿಪತ್ತುಗಳು ಬಂದರೂ ಈ ಪ್ರತಿಜ್ಞೆಯನ್ನು ಮುರಿಯಲು ಸಾಧ್ಯವಿಲ್ಲ. ಎಂತಹ ಕಠಿಣ ಪರಿಸ್ಥಿತಿ ವಿಪತ್ತು ಬಂದೊದಗಿದರೂ ಅದನ್ನು ನಾವು ಎದುರಿಸಲೇಬೇಕು. ಆಪತ್ತು ವಿಪತ್ತುಗಳಿಂದ ತುಂಬಿದ ಈ ಜಗತ್ತಿನಲ್ಲಿ ಇತಿಹಾಸ ಪ್ರಸಿದ್ಧ ಘಟನೆಗಳನ್ನು ನಿರ್ಮಿಸುವುದು ದೂರ ದೃಷ್ಟಿ ಮತ್ತು ಶಿಸ್ತಿನ ಮನಸ್ಸುಳ್ಳ ಸ್ತ್ರೀ ಪುರುಷರಿಗೆ ಮಾತ್ರ ಸಾಧ್ಯ. ನಾನಾ ಬಗೆಯ ಕ್ಲಿಷ್ಟ ಸಮಸ್ಯೆಗಳು ಇಂದು ನಮ್ಮನ್ನು ಮುತ್ತಿವೆ. ಇದನ್ನು ಬಿಡಿಸುವ ಜವಾಬದಾರಿಯು ಇಂದಿನ ಯುವಕರ ಮೇಲಿದೆ."

# ಆಡಿನ ಹಾಲಿನ ಗುಣಧರ್ಮ.

(ಬರೆದವರು:— ಬಸವರಾಜ ಅಕ್ಕಿ ಹುಂಗಭದ್ರ.)

ಸಾಧಾರಣವಾಗಿ ಮನುಷ್ಯ ದೇಹದ ಬೆಳವಣಿಗೆಗೆ ಬೇಕಾಗಿರುವ ಎಲ್ಲ ಆಹಾರ ಪೋಷಕಾಂಶಗಳು ಹಾಲಿನಲ್ಲಿರುವವು. ಬಹುಜನರು ಆಡು ಒಂದು ಅಪವಿತ್ರವಾದ ಪ್ರಾಣಿ, ಅದರ ಹಾಲನ್ನು ಕುಡಿಯುವದೊಂದು ದೊಡ್ಡ ತಪ್ಪು ಎಂಬ ತಪ್ಪು ಭಾವನೆಯುಳ್ಳವರಿರುವರು. ಆಡಿನ ಹಾಲಿನ ಗುಣಧರ್ಮಗಳನ್ನು ಕಂಡುಹಿಡಿಯದೇ ಅಜ್ಞಾನವನ್ನೇ ಅದರ ಆಧಾರವಾಗಿಟ್ಟುಕೊಂಡು ಆ ಹಾಲಿನಿಂದ ಸಿಗತಕ್ಕ ಅನಂತ ಲಾಭಗಳನ್ನು ಪಡೆಯದೆ ಇರುವದು ತಪ್ಪಲ್ಲವೆ?

ಆಡಿನ ಹಾಲು ರೋಗಿಗೂ, ನಿರೋಗಿಗೂ, ಧನಿಕನಿಗೂ ದಾರಿದ್ರ್ಯನಿಗೂ, ಆರೋಗ್ಯದಲ್ಲಿಯೂ, ಅನಾರೋಗ್ಯದಲ್ಲಿಯೂ ಪಥ್ಯವಾಗಿ ದೇಹಕ್ಕೆ ಹಿತವನ್ನುಂಟುಮಾಡುವುದು. ಇದರ ಹಾಲು ಸಹಜವಾಗಿ ಜೀರ್ಣವಾಗಿ ದೇಹದಲ್ಲಿ ತೀವ್ರವೇ ಸೇರಿಕೊಳ್ಳುವದು ಹೊಟ್ಟೆಯಲ್ಲಿ ಕ್ರಿಮಿಯ ಉತ್ಪತ್ತಿಯಾಗುವುದಿಲ್ಲ. ದೇಹಕ್ಕೆ ಬಲವನ್ನು ಕೊಡುವುದು.

ಯಕೃತ್, ಪ್ಲೀಹ ವೃದ್ಧಿ (Liver and spleen enlargement) ಯನ್ನು ಕಡಿಮೆ ಮಾಡುವದು. ಅತಿಸಾರದಲ್ಲಿ ಇದು ಒಳ್ಳೆಯ ಪೇಯವಾಗಿದೆ. ಕ್ಷಯರೋಗದಲ್ಲಿ ಆಡಿನ ಹಾಲು ಬಹಳ ಗುಣಕಾರಿಯಾಗಿ ಕಂಡುಬಂದಿರುವದು. ಯಾಕೆಂದರೆ ಇದರಲ್ಲಿ ಯಾವ ತರದ ರೋಗಾಣುಗಳು ಕಂಡುಬಂದಿಲ್ಲವೆಂದು ಮೊನ್ನೆ ಒಬ್ಬ ಜರ್ಮನಿಯ ಶರೀರ ಶಾಸ್ತ್ರಜ್ಞರು ಕಂಡು ಹಿಡಿದಿದ್ದಾರೆ.

(It has been lately found out by a German physiologist that tubercular Bacilli will not thrive in goat's milk.)

ಆಡಿನ ಹಾಲನ್ನು ಹಿಂಡಿದ ಕೂಡಲೇ ಚೆನ್ನಾಗಿ ಸೋಸಿ ಹಾಗೆಯೇ ರುಚಿಗೆ ತಕ್ಕ ಸಕ್ಕರೆಯನ್ನು ಕೂಡಿಸಿ ಸೇವಿಸಬೇಕು. ಕಾಯಿಸ್ವಲ್ಪ ಹೊತ್ತು ಇಡುವುದಾದರೆ ಕಾಯಿಸಿ ಕುಡಿಯಬೇಕು. ಕಾಯಿಸುವುದರಿಂದ ಹಾಲಿನಲ್ಲಿದ್ದ ಕೆಲವೊಂದು ಪೋಷಕಾಂಶಗಳು ಸುಟ್ಟು ಹೋಗುವವು.

ಚಹಾ, ಕಾಫಿ, ಕೋಕೊವನ್ನು ಮಿತಿಮೀರಿ ಕುಡಿಯುವದರಿಂದ ಚುಟ್ಟಾ ಶಿಗರೇಟ ಅತಿಯಾಗಿ ಸೇದುವದರಿಂದುಂಟಾದ ಕೆಟ್ಟ ಪರಿಣಾಮಗಳು ಆಡಿನ ಹಾಲು ಸೇವಿಸುವದರಿಂದ ಕಡಿಮೆಯಾಗುವವು. ಕುಷ್ಠರೋಗ ಜಲೋದರ ಮತ್ತು ಮೂತ್ರದಲ್ಲಿ ಸಕ್ಕರೆ ಹೋಗುವದಕ್ಕೆ ಆಡಿನ ಹಾಲು ಒಳ್ಳೇ ಹಿತಕಾರಿ.

ಎಮ್ಮೆ, ಆಕಳುಗಳ ಹಾಲಿಗಿಂತ ಆಡಿನ ಹಾಲು ಪವಿತ್ರವಾದದ್ದೆಂದೇ ಹೇಳಬಹುದು. ಯಾಕೆಂದರೆ ಆಡು ಇನ್ನುಳಿದ ಪ್ರಾಣಿಗಳ ಹಾಗೆ ಯಾವ ತರದ ಹೊಲಸು ವಸ್ತುಗಳನ್ನು ತಿನ್ನುವದು ಕಂಡು ಬಂದಿಲ್ಲ. ಮಗುವು ಹುಟ್ಟಿದ ಕೂಡಲೇ ಆಕಸ್ಮಾತ್ ತಾಯಿಯು ಯಾವದೇ ಕಾರಣದಿಂದ ಸತ್ತುಹೋದ ಸಮಯದಲ್ಲಿ ಆಡಿನ ಹಾಲಿನಿಂದ ಎಷ್ಟೋ ಕೂಸುಗಳು ಬೆಳೆದು ಬಲವಾಗಿರುತ್ತವೆ. ಇದರ ಹಾಲು ಯಾವತರದ ಹೊಲಸು ವಾಸನೆಯಿರುವುದಿಲ್ಲ. ಅಜೀರ್ಣ, ಅಗ್ನಿಮಾಂದ್ಯದಲ್ಲಿಯೂ ಆಡಿನ ಹಾಲು ಉಪಯುಕ್ತವಾಗಿ ಕಂಡುಬಂದಿದೆ. ಆದ್ದರಿಂದ ಆಡಿನ ಹಾಲನ್ನು ಪ್ರತಿದಿನಸ ಸೇವಿಸುವದರಿಂದ ನಮ್ಮ ದೇಹಾರೋಗ್ಯವು ಬೆಳೆದು ಯಾವ ತರದ ರೋಗವೂ ಬರದಹಾಗೆ ಸುರಕ್ಷಿತವಾಗಿ ಇಡುವದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ.

# ಶ್ರೀ ಮಹಾದೇವಿಯಕ್ಕನ ಸೇವಾ ಸಮಾಜ

## ಬೆಂಗಳೂರು ನಗರ.

## ಶ್ರೀ ಬಸವ ಜಯಂತಿ ಮಹೋತ್ಸವದಲ್ಲಿ

೧೯೩೮.

## ಅಕ್ಕನ ವಚನಗಳ ಕಂಠ ಪಾಠ ಸ್ಪರ್ಧೆ.

ಶ್ರೀ. ಮಹಾದೇವಿಯಕ್ಕನ ವಚನಗಳ ವಿಚಾರವು ಹಿಂದುಳಿದ ಮಹಿಳೆಯರಲ್ಲಿ ಪ್ರಚಾರವಾಗಲೆಂಬ ಇಚ್ಛೆಯಿಂದ ಶ್ರೀ ಮಹಾದೇವಿಯಕ್ಕನ ಸೇವಾಸಮಾಜವು ಬಾಲಕಿಯರಿಗಾಗಿ ಅಕ್ಕನ ವಚನಗಳ ಕಂಠ ಪಾಠ ಸ್ಪರ್ಧೆಯನ್ನು ಏರ್ಪಡಿಸಿದೆ.

ನಿಯಮಗಳು.

೧ ಹತ್ತು ವರ್ಷ ವಯಸ್ಸಿನೊಳಗಿರುವ ಬಾಲಕಿಯರು ಕಿರಿಯರ ಗುಂಪಿಗೂ, ಹತ್ತು ವರ್ಷಕ್ಕೆ ಮೇಲ್ಪಟ್ಟ ಬಾಲಕಿಯರು ಹಿರಿಯರಗುಂಪಿಗೂ ಸೇರಬಹುದು.

೨. ಈ ಸ್ಪರ್ಧೆಗೆ ಸೇರಬಯಸುವವರು ಇದೇ ಎಪ್ರಿಲ್ ದೊಳಗಾಗಿ ತಮ್ಮ ಹೆಸರು ವಿಳಾಸಗಳನ್ನು ಒಂದಾಣೆ ಪ್ರವೇಶನದೊಂದಿಗೆ ಶ್ರೀ ಸರ್ಪಭೂಷಣ ಸ್ವಾಮಿಗಳವರು ಮಠ (ಸೆಲೆಕ್ಟ್ ಟಾಕೀಸ್ ಹಿಂಭಾಗ) ಬಳೆಪೇಟೆ ಬೆಂಗಳೂರ ಸಿಟಿ. ಇವರಲ್ಲಿ ಕೊಡಬೇಕು. ಸಮಯ ಮೀರಿ ಬಂದವರನ್ನು ಸೇರಿಸಲಾಗುವದಿಲ್ಲ.

೩. ಸಾಕಷ್ಟು ಸ್ಪರ್ಧೆಗಳು ಸೇರದಿದ್ದಲ್ಲಿ ಸ್ಪರ್ಧೆಯನ್ನು ನಿಲ್ಲಿಸಲಾಗುತ್ತೆ.

೪. ಸಂಘದವರು ಗೊತ್ತುಮಾಡುವ ಪರೀಕ್ಷಕರ ತೀರ್ಮಾನವೇ ಕೊನೆಯದು.

೫. ಮೇ ೮ ನೇ ತಾರೀಖು ಸಂಜೆ ೫ ಘಂಟೆಗೆ ಚಿಕ್ಕಪೇಟೆಯಲ್ಲಿರುವ ಶ್ರೀ ಗೌಡರ ವೀರಭದ್ರಪ್ಪನವರ ಛತ್ರದ ಸಭಾಂಗಣದಲ್ಲಿ ಸ್ಪರ್ಧೆಗಳು ಪ್ರಾರಂಭವಾಗುವವು.

೬. ಸ್ಪರ್ಧೆಗಾಗಿ ಆರಿಸಿರುವ ವಚನಗಳ ಪುಸ್ತಕಗಳನ್ನು ಶ್ರೀ ಸರ್ಪಭೂಷಣ ಮಠದಲ್ಲಿ ಪಡೆಯಬೇಕು. ವಚನಗಳನ್ನು ಹೇಳುವ ರೀತಿಯನ್ನು ಮೇಲ್ಕಂಡ ಮಠದಲ್ಲಿರುವ ಶ್ರೀ. ಮ. ನಿ. ಪ್ರ. ಈಶ್ವರಸ್ವಾಮಿಗಳು ಬೆಳಿಗ್ಗೆ ೮ ರಿಂದ ೧೦ ರ ವರೆಗೆ ಸಾಯಂಕಾಲ ೩ ರಿಂದ ೫ ರ ವರೆಗೂ ಹೇಳಿಕೊಡಲು ದಯವಿಟ್ಟು ಒಪ್ಪಿರುತ್ತಾರೆ.

ಕಾರ್ಯದರ್ಶಿಗಳು.

ಎ. ಎಸ್. ಗದಿಗೆಮ್ಮ ಮತ್ತು ಜಿ. ವಿ. ಗೌರಮ್ಮ.

---

—ಬಂಗಾಲ ಅಸೆಂಬ್ಲಿಯ ಆದಿಜನ ಸಭಾಸದರಾದ ಪಿ.ಆರ್. ಠಾಕೂರರು ೧೦ ನೆಯ ತಾರೀಖಿನ ದಿವಸ ಕಲಕತ್ತೆಯಲ್ಲಿ ಮಹಾತ್ಮಾಜಿಯವನ್ನು ಕಂಡು ಬಂಗಾಲದ ಆದಿಜನರು ಆದಷ್ಟು ಶೀಘ್ರವಾಗಿ ಕಾಂಗ್ರೆಸ್ಸಿನಲ್ಲಿ ಕೂಡುವದಾಗಿ ಆಶ್ವಾಸನಕೊಟ್ಟರು.

—ರಾಷ್ಟ್ರಸಂಘದ ಕೌನ್ಸಿಲ್ಲಿನ ಮುಂದಿನಸಭೆಯು ಮೇ ೨೧ ನೇಯ ತಾರೀಖಿನ ದಿವಸ ಕೂಡುವದು. ಅಂದಿನ ಸಭೆಯಲ್ಲಿ ಅಬಿಸೀನಿಯಾ ಪ್ರಶ್ನೆಯನ್ನು ಕುರಿತು ಏನಾದರೊಂದು ನಿರ್ಣಯ ಮಾಡಲೇಬೇಕೆಂದು ಬ್ರಿಟಿಷ್ ಸರಕಾರದವರು ರಾಷ್ಟ್ರಸಂಘಕ್ಕೆ ಬರೆದಿರುವರು.

॥ಶ್ರೀ ಗುರು ಬಸವಲಿಂಗಾಯ ನಮಃ॥

# ಅಕ್ಕನ ಹುಣಿಮೆಯ ಮಹೋತ್ಸವ ಕಾಲದಲ್ಲಿ

## ಅಕ್ಕನ ಬಳಗದವರು ಮಾಡಿದ

# ವೀರಶೈವ ಮಹಿಳಾ ಪ್ರತಿಜ್ಞೆ.

(ರಚಿಸಿದವರು— ಕಲ್ಲಿನಾಥ ಶಾಸ್ತ್ರಿಗಳು ಹಿರೇಮಠ, ದ್ಯಾಂಪುರ.)

ನನಗೂ ಆಣೆ ಅಕ್ಕ, ನಿನಗೂ ಆಣೆ ।
ನನಗೂ ನಿನಗೂ ಇಬ್ಬರಿಗೂ ಶರಣರಾಣೆ ॥೧॥

ಜಂಗುಳಿ ದೈವಕೆ ನಮಿಸುವೆನಾದರೆ ನನಗೆ ಆಣೆ ।ಅಕ್ಕ।
ಲಿಂಗದಿ ಮನವನು ನಿಲಿಸದಿದ್ದರೆ ನಿನಗೂ ಆಣೆ ॥೨॥

ಪಂಚಕ ವರ್ಣಗಳನು ಪಾಲಿಸಿದರೆ ನನಗೆ ಆಣೆ ।ಅಕ್ಕ।
ಪಂಚಸೂತಕವ ಬಿಡಿಸದಿದ್ದರೆ ನಿನಗೂ ಆಣೆ ॥೩॥

ಲಿಂಗಿಗಳೊಳು ಕುಲಜಾತಿಯನೆಣಿಸಲು ನನಗೆ ಆಣೆ ।ಅಕ್ಕ।
ಹಿಂಗಿಸದಿದ್ದರೆ ಭುಂಜಿಸದಿರುವುದ ನಿನಗೂ ಆಣೆ ॥೪॥

ಕಾಯಕದಲಿ ಸಮಭಾವವನಿಡದಿರೆ ನನಗೆ ಆಣೆ ।ಅಕ್ಕ
ಬಾಯಿಲೆ ಮಾತ್ರವೆ ಐಕ್ಯವ ನುಡಿಸಲು ನಿನಗೂ ಆಣೆ ॥೫॥

ಮೂಢ ರೂಢಿಗಳನನುಸರಿಸಿದರೆ ನನಗೆ ಆಣೆ ।ಅಕ್ಕ।
ಗಾಢಾಂಧಾನುಕರಣ ಬಿಡಿಸದಿರೆ ನಿನಗೂ ಆಣೆ ॥೬॥

ಪರಧರ್ಮದ ದಬ್ಬಾಳಿಕೆ ಸಹಿಸಲು ನನಗೆ ಆಣೆ ।ಅಕ್ಕ।
ದುರುಳರ ಸಂಗದಿ ದೂರಿರಿಸದಿರೆ ನಿನಗೂ ಆಣೆ ॥೭॥

ಪರದೇಶದ ಒಡವೆಗಳನು ಕೊಂಡರೆ ನನಗೆ ಆಣೆ ।ಅಕ್ಕ।
ಅರಳೆಯನೆನ್ನಿಂ ನೂಲಿಸದಿದ್ದರೆ ನಿನಗೂ ಆಣೆ ॥೮॥

ಸುಮ್ಮನೆ ಪರನುಡಿನಡೆಯನುಸರಿಸಲು ನನಗೆ ಆಣೆ ।ಅಕ್ಕ।
ನಮ್ಮಯ ಸಂಸ್ಕೃತಿ ಮರಿಸಿದಿಯಾದರೆ ನಿನಗೂ ಆಣೆ ॥೯॥

ಆಹ! ಮಠಸೇವೆಗೆಮುಗುವನಿಲಿಸದಿರೆ ನನಗೆ ಆಣೆ ।ಅಕ್ಕ।
ಗೃಹ ಶಿಕ್ಷಣೆಯ ಬುದ್ಧಿಯ ಕೊಡದಿರೆ ನಿನಗೂ ಆಣೆ ॥೧೦॥

ವೀರಮಾತೆ ನಾನಾಗದಿದ್ದರೆ ನನಗೆ ಆಣೆ ।ಅಕ್ಕ।
ವೀರ ಪತ್ನಿಯೆನೆ ಹೊಗಳಿಸದಿದ್ದರೆ ನಿನಗೂ ಆಣೆ ॥೧೧॥

### ಮತ್ತೇಭವಿಕ್ರೀಡಿತ ವೃತ್ತಂ.

ನನಗುಂ, ನನ್ನಯ ತಂದೆ ತಾಯಿಗಳಿಗುಂ ನನ್ನೀ ಸಮಾಜಕ್ಕೆ ಮೇಣ್।
ಘನ ಕರ್ನಾಟಕ ದೇಶ ಭಾಷೆಗಳಿಗುಂ ಸನ್ಮಾತೆ ನೀನಲ್ತೆ? ಕೇಳ್॥
ಮನದಿಂ, ಕಾಯದಿ ಮತ್ತೆ ಸದ್ವಚನದಿಂ ನೀ ಮೇಲ್ಮೆಯಂ ಗೈದೆಯಾ।
ಜನತಾ ಸೇವೆಯ ಮಾಳ್ಪವೀ 'ಬಳಗ' ಮಂ ಕಾಯಾ ಜಗದ್ವಂದಿತೆ॥

ಗದಗ
ಶಕೆ ೧೮೬೦ ಬಹುಧಾನ್ಯ
ಯುಗಾದಿ

ಪ್ರಕಾಶಕರು—
ಮಡಿವಾಳಪ್ಪ ಮತ್ತು ಸೋದರರು.
ಶಿವಾನಂದ ಮುದ್ರಣಾಲಯದೊಡೆಯರು,

# ಪಂಚಾಚಾರ್ಯರು ಬಸವಮಾರ್ಗಾನುವರ್ತಿಗಳು

# ಬಸವ ಪ್ರೇಮಿಗಳು,

# ಬಸವಾರಾಧಕರು.

(ಲೇಖಕರು— ಜೀರಗೆ ಕೆ. ಬಸವಪ್ಪ ಬಿ. ಎ.)

ಚರಿತ್ರೆಯನ್ನರಿಯದ ಕೆಲವರು ಇತ್ತೀಚಿಗೆ ಹೇಳುವಂತೆ ಪಂಚಾಚಾರ್ಯರು ಬಸವಣ್ಣನವರಿಗೆ ವಿರೋಧಿಗಳೆಂಬುದೂ, ಬಸವಣ್ಣನವರ ಪಂಥವೇ ಬೇರೆ, ಪಂಚಾಚಾರ್ಯರ ಪಂಥವೇ ಬೇರೆ ಎಂಬುದೂ, ಬಸವಣ್ಣನವರು ಜಾತಿಸಂಕರಮಾಡಿದರೆಂಬುದೂ, ಪಂಚಾಚಾರ್ಯರು ಹಾಗೇನೂ ಮಾಡಲಿಲ್ಲವೆಂಬುದೂ ಇವೇ ಮುಂತಾದ ಹೇಳಿಕೆಗಳು ತಪ್ಪಾಗಿವೆ. ಬಸವಣ್ಣನವರೂ ಪಂಚಾಚಾರ್ಯರೂ ವಿರೋಧಿಗಳಲ್ಲ. ಇಬ್ಬರೂ ಒಂದೇ ಹಾದಿಯಲ್ಲಿ ನಡೆದಿರುತ್ತಾರೆ. ಬಸವಣ್ಣನವರು ವೀರಶೈವಕ್ಕೆ ಮೊದಲಿಗರೂ, ನಾಯಕರೂ, ಮುಖಂಡರೂ ಆದರೆ, ಪಂಚಾಚಾರ್ಯರು ಬಸವಮಾರ್ಗಾನುವರ್ತಿಗಳೂ, ಬಸವಪ್ರೇಮಿಗಳೂ, ಬಸವಾರಾಧಕರೂ ತನ್ಮೂಲಕ ವೀರಶೈವ ಮತಪ್ರಚಾರಕರೂ ಆಗಿದ್ದಾರೆ. ಸ್ವಲ್ಪ ಚರಿತ್ರೆಯ ಕಡೆಗೆ ತಿರುಗುವ.

ಇಂದಿಗೆ ಪಂಚಾಚಾರ್ಯರೆಂದು ಕರೆಯಲ್ಪಡುತ್ತಿರುವ ರೇವಣಸಿದ್ಧ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯ, ವಿಶ್ವಾರಾಧ್ಯ ಈ ಐದು ಜನಗಳಿಗೆ ಹಿಂದೆ ಪಂಚಾಚಾರ್ಯ ಎಂಬ ಹೆಸರು ಇರಲಿಲ್ಲ. ಅಗ್ಗೆ ಇದ್ದವರು ನಾಲ್ಕು ಜನರು ಮಾತ್ರ. ಅವರನ್ನು ಕೆಲವು ಕವಿಗಳು ಚತುರಾಚಾರ್ಯರೆಂದು ಸಂಬೋಧಿಸಿದ್ದಾರೆ. ಆದಕ್ಕೂ ಹಿಂದೆ ಚತುರಾಚಾರ್ಯರೆಂಬ ಹೆಸರೂ ಇದ್ದಿಲ್ಲ. ಅವರು ಬೇರೆ ಬೇರೆಯಾಗಿ ತಮ್ಮ ತಮ್ಮ ನಿಜನಾಮಗಳಿಂದ ಕರೆಯಲ್ಪಡುತ್ತಿದ್ದರು. ಬಸವಾದಿಗಳ ಕಾಲಕ್ಕಂತೂ ಇವರ ಹೆಸರೇ ವೀರಶೈವ ಪ್ರಪಂಚದಲ್ಲಿ ಪ್ರಚಾರದಲ್ಲಿರಲಿಲ್ಲ. ಆದರೆ ಬಸವಣ್ಣನವರ ಜೀವಿತದ ಅಂತ್ಯಕಾಲದಲ್ಲಿ ರೇವಣಸಿದ್ಧರೇ ಮೊದಲಾದವರು ಬಸವಣ್ಣನವರ ವೀರಶೈವ ಪಂಥವನ್ನು ಸ್ವೀಕರಿಸಿ ಬಸವಾದಿಗಳು ಪೂರ್ಣಮಾಡಲಿಕ್ಕಾಗದೆ ಬಿಟ್ಟುಹೋಗಿದ್ದ ವೀರಶೈವ ಮತಪ್ರಚಾರವನ್ನು ಮುಂದುವರಿಸಿದರು. ಬಸವಾದಿಗಳ ಅಪೇಕ್ಷೆಯಂತೆ ಗುರುಪೀಠಗಳನ್ನೇರ್ಪಡಿಸಿಕೊಂಡು ವೀರಶೈವ ಧರ್ಮದ ಬೆಳವಣಿಗೆಗೆ ಬಹಳವಾಗಿ ಶ್ರಮಿಸಿದರು. ಬಸವಾದಿಗಳ ದೀಕ್ಷಾಕಾರ್ಯವನ್ನು ಮುಂದುವರಿಸಿಕೊಂಡು ಬಂದು ಅನೇಕರನ್ನು ವೀರಶೈವ ಮತಕ್ಕೆ ಸೇರಿಸಿಕೊಂಡು ಪತಿತೋದ್ಧಾರಮಾಡಿದರು. ಈ ವಿಷಯಗಳು ಇವರ ಚರಿತ್ರೆಯಿಂದಲೇ ಗೊತ್ತಾಗುತ್ತವೆ.

ಪಂಚಾಚಾರ್ಯರಲ್ಲಿ ಒಬ್ಬರೂ ಹಾಗೂ ಪಂಡಿತ ತ್ರಯದಲ್ಲಿ ಒಬ್ಬರೂ ಆದ ಶ್ರೀ. ಮಲ್ಲಿಕಾರ್ಜುನ ಪಂಡಿತಾರಾಧ್ಯರ ಚರಿತ್ರೆಯ ಕೆಲವು ಅಂಶಗಳನ್ನು ಮಾತ್ರ ಈ ಲೇಖನದಲ್ಲಿ ಸ್ವಲ್ಪ ವಿಚಾರಮಾಡುತ್ತೇನೆ. ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯರ ಚರಿತ್ರೆಯನ್ನು ಶ್ರೀ. ನೀಲಕಂಠಾಚಾರ್ಯರೆಂಬವರು ಬರೆದಿದ್ದಾರೆ. ಈ ಚರಿತ್ರೆಗೆ "ಆರಾಧ್ಯ ಚಾರಿತ್ರ" ಎಂದು ಹೆಸರು. ಈ ಆರಾಧ್ಯ ಚರಿತ್ರೆಯನ್ನು ಬರೆದ ಈ ನೀಲಕಂಠಾಚಾರ್ಯರು ಸಾಮಾನ್ಯರಲ್ಲ. ಇವರು ಪ್ರಸಿದ್ಧ ಕವಿಗಳೂ, ಆಗಿರುವರಲ್ಲದೆ ಪ್ರಸಿದ್ಧ ಮನೆತನದವರೂ ಆಗಿದ್ದಾರೆ. ಅವರ ವಂಶಪರಂಪರೆಯನ್ನು ಸ್ವಲ್ಪ ಕೇಳಿ— "ಸೋಮಶಂಭು ದೇಶಿಕರು. ಇವರ ಮಗ ಕಾಮಿಕಾಧ್ಯಖಿಳ ಶಿವಕಥಿತ ತಂತ್ರಾವಳಿಗೆ ಪ್ರೇಮದಿಂ ವೃತ್ತಿ ದೀಪಿಕೆಗಳಂ ಬಿತ್ತರಿಸಿ ಸೋಮಧರ ಸಮಯಮಂ ಧರಣಿಯೋಳ್ ನಿಲಿಸಿದ" ಸಕಲಾಗಮಾಚಾರ್ಯರು ಇವರ ಮಗ "ವಿಶ್ವನಾಥಂಗೆ ಲೆಂಕತ್ವದಿಂದೆಸೆವ" ಶಿವಲೆಂಕಮಂಚಣ್ಣಪಂಡಿತರು ಇವರ ಮಗ ಉರಿಲಿಂಗದೇವ ದೇಶಿಕರು ಇವರ ಮಗ ಉರಿಲಿಂಗ ಪೆದ್ದಿಗಳು. ಇವರ ಮಗ ವಿಶ್ವೇಶ್ವರ ಪೆದ್ದಣಾರ್ಯರು, ಇವರ ಮಗ "ವಿಭೂತಿ ಮಹಿಮೆಯಂ ಲೋಕದೊಳಗೆ ಪಸರಿಸಿದ" ವಿಭೂತಿ ಸಿದ್ಧಾಚಾರ್ಯರು, ಇವರ ಮಗ ಸೋಮನಾಥಾರ್ಯರು ಇವರ ಮಗ ಅನಂತಪೆದ್ದಣ್ಣ ದೇಶಿಕರು. ಇವರ ಮಗ ವಾರಣಾಸಿಯ ಬಲ್ಲಣಾರ್ಯರು. ಇವರ ಮಗ ನಾಗನಾಥಾರ್ಯರು. ಇವರ ಮಗ ನೀಲಕಂಠಾಚಾರ್ಯರು. ಇವರ ಮಗ ವಿಶ್ವನಾಥಾರ್ಯರು ಇವರ ಸಂತತಿಯಲ್ಲಿ ಹುಟ್ಟಿದವರು ಮಘುವೇಶ್ವರರು. ಇವರ ಮಗ ನೀಲಕಂಠಾಚಾರ್ಯರು. ಇವರ ಮಗ ಶಿವೋಕ್ತತಂತ್ರೈಕಪರರಾದ ವಿಶ್ವನಾಥ ದೇಶಿಕರು. ಇವರ ಮಕ್ಕಳೇ "ಆರಾಧ್ಯ ಚಾರಿತ್ರ" ವನ್ನು ಬರೆದ ನೀಲಕಂಠಾಚಾರ್ಯರು. ಈ ನೀಲಕಂಠಾಚಾರ್ಯರ ಗುರುಗಳಾದರೋ ಕರ್ನಾಟಕ ಸಂಸ್ಕೃತ ಭಾಷೆಗಳಲ್ಲಿ ಪ್ರವೀಣರಾಗಿ ಶಿವಾಗಮಗಳನ್ನು ಭಕ್ತರ್ಗೆ ಬೋಧಿಸಿದ ಗಂಗಾಧರಾಚಾರ್ಯರು.

ಇಂಥ ಸುಪ್ರಸಿದ್ಧ ಕವಿವರ್ಯರಾದ ನೀಲಕಂಠಾಚಾರ್ಯರೇ ಅಲ್ಲದೆ ಇನ್ನೂ ಅನೇಕ ಕವಿಪುಂಗವರು ಪಂಡಿತಾರಾಧ್ಯರ ಚರಿತ್ರೆಯನ್ನು ಬರೆದಿದ್ದಾರೆ. ಗುರುರಾಜರೆಂಬ ಕವಿಗಳು ಸಂಸ್ಕೃತ ಪಂಡಿತ ಚರಿತ್ರೆಯನ್ನು ಬರೆದಿದ್ದಾರೆ. ಸಿದ್ಧನಂಜೇಶರೆಂಬವರು ಗುರುರಾಜ ಚಾರಿತ್ರವನ್ನು ಬರೆದಿದ್ದಾರೆ.

ಇವೇ ಮೊದಲಾದ ಗ್ರಂಥಗಳಿಂದ ಗೊತ್ತಾಗುವ ಪಂಡಿತಾರಾಧ್ಯರ ಚರಿತ್ರೆಯ ಬಗ್ಗೆ ಕವಿಚರಿತ್ರಕಾರರು ಸೂಕ್ಷ್ಮವಾಗಿ ಈ ರೀತಿ ಹೇಳಿದ್ದಾರೆ—

ಮಲ್ಲಿಕಾರ್ಜುನ ಪಂಡಿತಾರಾಧ್ಯರು ಈಶ್ವರನಿಂದ ಭೂಲೋಕದಲ್ಲಿ ಬಸವೇಶ್ವರನೊಡನೆ ಹೋಗಿ ಅವತರಿಸುವಂತೆ ಅಜ್ಞಾಪ್ತರಾಗಿ ಶ್ರೀಶೈಲದಲ್ಲಿ ಮಲ್ಲಿಕಾರ್ಜುನ ಲಿಂಗದ ಸನ್ನಿಧಿಯಲ್ಲಿ ಪುತ್ರಾರ್ಥಿಯಾಗಿ ತಪಂಬಟ್ಟಿದ್ದ ವೆಂಗಿದೇಶಕ್ಕೆ ತಿಲಕಪ್ರಾಯವಾಗಿದ ದ್ರಾಕ್ಷಾರಾಮಪುರದಲ್ಲಿಯ ಭೀಮೇಶ್ವರ ಲಿಂಗದ ಪುರೋಹಿತರಾದ ಪಾಣಸಾನ್ವಯಜ ಭೀಮನ ಪಂಡಿತರಿಗೂ ಗೌರಾಂಬೆಯರಿಗೂ ಮಗನಾಗಿ ಹುಟ್ಟಿದರು. ಇವರ ಗುರುಮಹೇಶ್ವರ ಗಣಾಗ್ರಣಿಯಾದ ಅವಾಂತರಾರ್ಯರ ಶಿಷ್ಯ ರಾಜಮಂತ್ರಜ್ಞರಾದ ಕೋಟಿಪಲ್ಲಾರಾಧ್ಯರು ಮಲ್ಲಿಕಾರ್ಜುನರು ವೆಲನಾಡು ಚೋಳರಾಜನ ಆಸ್ಥಾನಕ್ಕೆ ಹೋಗಿ ಅಲ್ಲಿ ಬಂದ ವಾದಿಗಳನ್ನು ಜಯಿಸಿ ಬೌದ್ಧ ಜೈನ ಚಾರ್ವಾಕಾದಿ ಮತಗಳನ್ನು ನಿರಸನಮಾಡಿ ವೀರಶೈವಾಚಾರವನ್ನು ಸ್ಥಾಪಿಸಿದರು.

ಚೋಳನು ಇವರ ಕಣ್ಣನ್ನು ಕಿತ್ತಿಸಲು ಇವರು ಅವನನ್ನು ಶಪಿಸಿ ಆ ದೇಶವನ್ನು ಬಿಟ್ಟು ಅಮರಾನಗರಕ್ಕೆ ಬಂದು ಅಲ್ಲಿ ಗಣ ಸಹಸ್ರಸ್ತುತಿಯನ್ನು ಹೇಳಿ ಈಶ್ವರನ ಅನುಗ್ರಹದಿಂದ ಊರ್ಧ್ವ ನೇತ್ರವನ್ನು ಪಡೆದರು. (ಅಮರಾನಗರಕ್ಕೆ ಬಂದು ನೆಲಸಿದುದರಿಂದ ಇವರಿಗೆ ಅಮರಗುಂಡದ ಮಲ್ಲಿಕಾರ್ಜುನ ಎಂಬ ಹೆಸರೂ ಉಂಟು.) ಬಸವಣ್ಣನವರು ಕಳಿಸಿಕೊಟ್ಟ ಭಸಿತವನ್ನು ಧರಿಸಿಕೊಳ್ಳಲು ಇವರಿಗೆ ಆ ಕ್ಷಣವೇ ಕರ್ನಾಟಕ ಭಾಷೆ ಬಂದಿತು. ಆ ಭಾಷೆಯಿಂದ ಇಷ್ಟಲಿಂಗ ಸ್ತೋತ್ರವನ್ನೂ ಬಸವಮಹಾತ್ಮೆಯ ಗೀತವನ್ನೂ ಮಾಡಿದರು. ಇವರು ಕಲ್ಯಾಣಕ್ಕೆ ಹೋಗಿ ಬಸವಣ್ಣನವರನ್ನು ನೋಡಬೇಕೆಂದು ಹೊರಟು ಹಾನಗಲ್ಲಿಗೆ ಬಂದಾಗ ದಾರಿಯಲ್ಲಿ ಒಬ್ಬ ಚರನು ಬಂದು "ಬಸವಂ ಕೂಡಲ ಸಂಗಮೇಶ್ವರನಲ್ಲಿ ಅಡಗಿದಂ; ಬಿಜ್ಜಳನಂ ಶರಣರು ಕೊಂದರು. ಎಂದು ಹೇಳಲು "ಬಸವ ಬಯಲಾದೆಯಾ" ಎಂದು ಅಳಲಿಗೀತವನ್ನು

ಹಾಡಿದರು. ಬಳಿಕ ಪಂಡಿತಾರಾಧ್ಯರು ಶ್ರೀಗಿರಿಗೆ ಹೋಗಿ ಅಲ್ಲಿ ಶಿವೈಕ್ಯರಾದರು.

ನೋಡಿದಿರಾ ! ವೀರಶೈವ ಬಾಂಧವರೇ ? ನೋಡಿದಿರಾ! ನಿಜವಾದ ಚರಿತ್ರೆಯು ಹೀಗಿರುವಲ್ಲಿ ಪಂಚಾಚಾರ್ಯರು ಬಸವಣ್ಣನವರಿಗೆ ವಿರೋಧಿಗಳೆಂದು ಹೇಳುವುದು ಎಂತಹ ಅನ್ಯಾಯವಾಗಿದೆ? ಎಂತಹ ತಪ್ಪು ಮಾತಾಗಿದೆ? ಪಂಡಿತಾರಾಧ್ಯರು ಬಸವಣ್ಣನವರ ಸಮಕಾಲೀನರೆಂಬುದೂ ಬಸವಣ್ಣನವರಲ್ಲಿ ಅವರು ಅನುಪಮ ಪ್ರೇಮಾದರ ಭಕ್ತಿಗಳನ್ನಿಟ್ಟಿದ್ದರೆಂಬುದೂ ಮೇಲ್ಕಂಡ ಚಾರಿತ್ರಿಕ ವಿಷಯಗಳಿಂದ ಕರತಳಾಮಳಕವಾಗುವುದಿಲ್ಲವೆ? ವೀರಶೈವ ಬಾಂಧವರೇ ! ಲಾಲಿಸಿ: ಶರಣರ ಸತ್ಯ ಚರಿತ್ರೆಯನ್ನರಿತಲ್ಲಿ ಯಾವ ಜಗಳವೂ ಇಲ್ಲ. ಯಾವ ದ್ವೇಷವೂ ಇಲ್ಲ. ಯಾವ ಅಸೂಯೆಯೂ ಇಲ್ಲ. ನೀನು ನಾನೆಂಬ ಹಮ್ಮುಬಿಮ್ಮುಗಳೂ ಇಲ್ಲ. ಅಂದು ಇಂದೆಂಬ ಅಜ್ಞಾನವೂ ಇಲ್ಲ. ಇವಕ್ಕೆ ಬದಲು ಸತ್ಯವು ನೆಲಿಸುವುದು. ಪ್ರೇಮವು ಅಂಕುರಿಸುವುದು. ಅಭಿಮಾನವು ತಲೆದೋರುವುದು. ಭಕ್ತಿಶ್ರದ್ಧೆಗಳು ತಾಂಡವವಾಡುವುವು. ಆದ್ದರಿಂದ ವೀರಶೈವ ಬಾಂಧವರೇ! ಗೌಪ್ಯವಾಗಿ ಅಡಗಿರುವ ಅಪಾರವಾದ ನಮ್ಮ ವೀರಶೈವ ಸಾಹಿತ್ಯವನ್ನು ಬೆಳಕಿಗೆ ತಂದು ಅದರ ನೈಜರೂಪದಲ್ಲಿ ಇದ್ದಕ್ಕಿದ್ದಂತೆಯೇ ಪ್ರಕಾಶಗೊಳಿಸಿ ಸತ್ಯವನ್ನು ಹರಡತಕ್ಕದ್ದೂ ತನ್ಮೂಲಕ ಶರಣರ ಸತ್ಯಚರಿತ್ರೆಯನ್ನು ಪ್ರಪಂಚಕ್ಕೆ ತಿಳಿಸತಕ್ಕದ್ದೂ ನಮ್ಮ ಬದ್ಧ ಕರ್ತವ್ಯವಾಗಿದೆ. ಅನ್ನದಾನಮಾಡುವದು ಎಷ್ಟು ಪುಣ್ಯಕಾರಿಯೋ ಜ್ಞಾನ ದಾನಮಾಡುವುದೂ ಅಷ್ಟೇ ಪುಣ್ಯಕಾರಿಯಾಗಿದೆ.

ಅನ್ನವು ಶಾರೀರಿಕ ಆಹಾರವಾದರೆ ಜ್ಞಾನವು ಆಧ್ಯಾತ್ಮಿಕ ಆಹಾರವಾಗಿದೆ. ಅಖಂಡವಾದ ನಮ್ಮ ವೀರಶೈವ ಸಾಹಿತ್ಯವನ್ನು ಬೆಳಕಿಗೆ ತರುವುದರ ಮೂಲಕ ಜ್ಞಾನದಾನವನ್ನು ಮಾಡಬೇಕಾಗಿದೆ. ವೀರಶೈವ ಧರ್ಮತಳಹದಿಯಾದ ಷಟಸ್ಥಲ ಜ್ಞಾನವು ಅನುಪಮ ಅದ್ವಿತೀಯ ಜ್ಞಾನವಾಗಿದೆ. ಷಟಸ್ಥಲದಲ್ಲಿ ನಡೆನುಡಿಗಳು ಹಾಸು ಹೊಕ್ಕುಗಳಂತೆ ಒಂದಕ್ಕೊಂದು ಹೆಣೆದುಕೊಂಡಿವೆ. ಒಂದನ್ನು ಬಿಟ್ಟು ಒಂದಿಲ್ಲ. "ನುಡಿಯೇ ಶರಣರ ಸಾಹಿತ್ಯ. ನಡಿಯೇ ಅವರ ಚರಿತ್ರ. ಈ ಸಾಹಿತ್ಯ ಚರಿತ್ರೆಗಳ ಅರಿವೇ ಜ್ಞಾನ." ಇಂಥಾ ಜ್ಞಾನದಿಂದ ನಮ್ಮ ನಡೆನುಡಿಗಳನ್ನು ಪರಿಶುದ್ಧಗೊಳಿಸಿಕೊಂಡು ನಮ್ಮ ಜೀವನವನ್ನು ಉತ್ತಮಗೊಳಿಸಿಕೊಳ್ಳುವ ಧ್ಯೇಯವಲ್ಲದೆ ಮತ್ತಿನ್ನಾವ ಧ್ಯೇಯವು ನಮಗುಂಟು ?

---

# ನೋಟೀಸು.

ಶ್ರೀ ಜ. ಮುರುಘರಾಜೇಂದ್ರ ಫ್ರೀ ಬೋರ್ಡಿಂಗ್ ಹಾವೇರಿಪೇಟೆ ಧಾರವಾಡ ಈ ಸಂಸ್ಥೆಯ ಹೆಸರು ಹೇಳಿ ಗದಗಿನಲ್ಲಿ ವರ್ಗಣಿ ವಸೂಲಿಗೆ ಗಂಗಯ್ಯ ಚರಂತಿಮಠ ಎಂಬ ವಿದ್ಯಾರ್ಥಿ ಬಂದಿದ್ದನೆಂದು ನಮಗೆ ತಿಳಿದುಬಂದಿದೆ. ಕಾರಣ ಅವನನ್ನು ಸಂಸ್ಥೆಯಿಂದ ವಸೂಲಿಗೆ ಕಳಿಸಿಲ್ಲ. ಸಂಸ್ಥೆಯಿಂದ ಗುರುಸಿದ್ಧಪ್ಪ ಕೆರೂರ ರಾಮದುರ್ಗ ಎಂಬುವವರೊಬ್ಬರೇ ವರ್ಗಣಿ ವಸೂಲಿಗೆ ೫-೬ ವರುಷಗಳಿಂದ ಇದ್ದಾರೆ. ಇವರ ಹೊರತಾಗಿ ಯಾರಾದರೂ ವಸೂಲಿಗೆ ಬಂದರೆ ವರ್ಗಣಿದಾರರು ಕೊಡಬಾರದು. ಸಂಸ್ಥೆಯ ಚೇರಮನ್‌ರ ಸಹಿ ಇದ್ದ ಪಾವತಿ ಬುಕ್ ಮೊಹರ ವಗೈರೆ ಇದ್ದದ್ದನ್ನು ನೋಡಿ ಕೊಡಬೇಕು.

ಸೆಕ್ರೆಟರಿ

ಶಿವಪ್ಪ ಚನವೀರಪ್ಪ ಮುಟ್ಟಿ.

## ಯಾತ್ರಾ ಮಹೋತ್ಸವ.

ನಿಜಾಮ ಇಲಾಖಾ ಕುಷ್ಟಗಿ ತಾ|| ಪೇಠಾ ಹನಮಸಾಗರದಲ್ಲಿ ಗವಿಸಿದ್ಧೇಶ್ವರ ಉರ್ಫ ಗುರುಮಹಾಂತ ಸ್ವಾಮಿಗಳವರು ಮೈಸೂರ ವಿರಕ್ತಮಠ ಇವರು ತಮ್ಮ ಸ್ವಕೀಯ ಪುಣ್ಯಾಶ್ರಮವಾದ ಶ್ರೀ ಕರಿಸಿದ್ಧೇಶ್ವರ ಮಹಾಸ್ಥಾನದಲ್ಲಿ ಪುರಾಣ ಪ್ರವಚನವನ್ನು ಪಂಡಿತ ಗೌರೀನಾಥ ಶಾಸ್ತ್ರಿಗಳವರಿಂದ ಒಂದು ತಿಂಗಳಲಾಗಾಯಿತು ಸರ್ವ ಭಕ್ತರಿಗೂ ಸುಶ್ರಾವ್ಯವಾಗಿ ಬೋಧೆ ನಡೆಸಿದ್ದು ಫಾ. ಬ. ೩೦ ಕ್ಕೆ ಸಮಾಪ್ತಿಯನ್ನು ಹೊಂದಿತು. ಪ್ರತಿವರ್ಷ ಪದ್ಧತಿಯಂತೆ ಚೈ| ಶು| ೧ ಕ್ಕೆ ಜರಗುವ ಶ್ರೀ ಕರಿಸಿದ್ಧೇಶ್ವರ ಜಾತ್ರೆಯ ಮಹೋತ್ಸವವು ಪನ್ನೀರು ಛಳೆಯಿಂದಲೂ ತಳಿರು ತೋರಣಗಳಿಂದಲೂ ಅಲಂಕೃತವಾದ ರಾಜಬೀದಿಯಲ್ಲಿ ಪ್ರಚಂಡ ಜನಸಂದಣಿಯೊಡನೆ ಒಳ್ಳೇ ವಿಜೃಂಭಣೆಯಿಂದ ನೆರವೇರಿತು. ಹಾಗೂ ಚೈತ್ರ ಶು| ೨ ಮಹಾಪುರಾಣೋತ್ಸವವು ಸರ್ವಾಲಂಕೃತ ಪೂರಿತವಾದ ಪಾಲಕಿಯಲ್ಲಿ ಅತ್ಯಂತ ವೈಭವದಿಂದ ಸಾಗಿಸಲ್ಪಟ್ಟಿತು. ಈ ಕಾರ್ಯವನ್ನು ಇಲ್ಲಿಯ ಸರ್ವ ವೀರಶೈವ ಭಕ್ತ ಮಂಡಳಿಯವರು ಅತ್ಯಂತ ಭಕ್ತಿಪೂರ್ವಕವಾಗಿ ನೆರವೇರಿಸಿದರು. ಇವರಿಗೆ ಶ್ರೀ ಕರಿಸಿದ್ಧೇಶ್ವರನು ಸದಾ ಇಂಥ ಸದ್ಭಕ್ತಿಯನ್ನೀಯಲೆಂದು ಅನನ್ಯಭಾವದಿಂದ ಪ್ರಾರ್ಥಿಸುವೆನು.

ಓರ್ವಸದ್ಭಕ್ತ.

---



---

# ಕೇವಲ ಬಸವ ಜಯಂತಿಗಾಗಿ ಸಿದ್ಧಗೊಳಿಸಿದ

# ವಚನ ಪಟ ಸಂಗ್ರಹ.

ಭಗವಾನ್ ಬಸವಣ್ಣ, ಅಕ್ಕ ಮಹಾದೇವಿ, ಚೆನ್ನಬಸವಣ್ಣನವರೇ ಮೊದಲಾದ ಶಿವಶರಣರ ಶ್ರೇಷ್ಠ ವಚನಗಳನ್ನು ೨ ಬಣ್ಣಗಳಿಂದ ಸುಂದರವಾಗಿ ದಪ್ಪವಾದ ಕಾರ್ಡಿನ ಮೇಲೆ ಮುದ್ರಿಸಿದೆ. ಕಟ್ಟು ಹಾಕಿಸಿ ಇಲ್ಲವೆ ಹಾಗೆಯೇ ಮನೆ, ಮಠ, ಅಂಗಡಿ ದೇವಸ್ಥಾನ ಮೊದಲಾದ ಸ್ಥಳಗಳಲ್ಲಿ ಹಚ್ಚಲು ಅನುಕೂಲವಾಗಿವೆ.

೧೨ ಪಟಗಳ ಸಂಗ್ರಹ ಒಂದಕ್ಕೆ ೮ ಆಣೆ.

ಪೋಸ್ಟೇಜ್ ೪ ಆಣೆ.

೧೨ ಆಣೆಗಳ ಒಂದಾಣೆಯ ಟಿಕೀಟು ಕಳಿಸಿದವರಿಗೆ ಕಳಿಸಲಾಗುತ್ತದೆ.

ಜಾಗ್ರತೆ ಕೆಳಗೆ ಬರೆದ ವಿಳಾಸಗಳಿಗೆ ಬರೆಯಿರಿ.

ಮ್ಯಾನೇಜರ್
'ಶರಣ ಸಂದೇಶ'
ಪೋ. ಆಲಮಟ್ಟಿ. ಜಿ. ವಿಜಾಪುರ

ಎಸ್. ಸಿ. ಶಿವಲಿಂಗಣ್ಣ
ಪೋ. ಅಥರಗಾ
ಜಿ. ವಿಜಾಪುರ.

## "ಶರಣ ಸಾಹಿತ್ಯ"

ಸಂಪಾದಕ:— ಕೀರ್ತನಕೇಸರಿ. ಬಿ. ಶಿವಮೂರ್ತಿಶಾಸ್ತ್ರಿ.

ಹಿಂದೂಧರ್ಮ, ಕನ್ನಡ ಸಾಹಿತ್ಯ, ಲಿಂಗವಂತ ಸಂಸ್ಕೃತಿ ಇವುಗಳ ಉನ್ನತಿಗಾಗಿ ಪ್ರಯತ್ನಿಸುವುದೇ ಈ ಪತ್ರಿಕೆಯ ಮುಖ್ಯೋದ್ದೇಶ. ಕನ್ನಡ ಮತ್ತು ಸಂಸ್ಕೃತ ಪ್ರಾಚೀನ ಗ್ರಂಥಗಳ ಪ್ರಕಟನೆಯೂ ಇದರ ಮತ್ತೊಂದು ಉದ್ದೇಶ. ಪ್ರತಿಯೊಬ್ಬ ಕನ್ನಡಿಗನೂ ಓದಬೇಕಾದ ಸಾಹಿತ್ಯ ವಿಮರ್ಶೆ, ತತ್ವಜ್ಞಾನ ಲಲಿತಕಲೆ, ಸಮಾಜ ಶಾಸ್ತ್ರ ಜೀವನ ಚರಿತ್ರೆ, ಇತಿಹಾಸ ಮೊದಲಾದ ಪ್ರೌಢ ವಿಷಯಗಳ ಮೇಲಿನ ಲೇಖನಗಳ ಮತ್ತು ಕವಿತೆಗಳ ಸುರಿಮಳೆ, ದೇಶ, ಧರ್ಮ, ಭಾಷೆ, ಸಮಾಜ ಇವುಗಳ ಹಿತಕಾಂಕ್ಷಿಗಳೆಲ್ಲರೂ ಈ ಪತ್ರಿಕೆಗೆ ಪ್ರೋತ್ಸಾಹ ಕೊಡಬೇಕೆಂದು ಬಿನ್ನಹ.

ವಿಳಾಸ— ಮ್ಯಾನೇಜರ್ ಶರಣ ಸಾಹಿತ್ಯ ಕಾರ್ಯಾಲಯ,
ಪೋಸ್ಟ್ ಮಲ್ಲೇಶ್ವರಂ ಬೆಂಗಳೂರು,

## ಮಾಸಿಕ ಪತ್ರಿಕೆ] ಕಲ್ಯಾಣ. [ಸಚಿತ್ರ ಪತ್ರಿಕೆ

ಸಂಪಾದಕರು } ಪಾಟೀಲ ಲಿಂಗನಗೌಡರು
ಎಂ. ಪಿ. ಕಲಬುರ್ಗಿ

ಈ ಮಾಸ ಪತ್ರಿಕೆಯಲ್ಲಿ ಧಾರ್ಮಿಕ ಸಾಮಾಜಿಕ ರಾಷ್ಟ್ರೀಯ ಲೇಖನಗಳು, ಬಣ್ಣದ ಚಿತ್ರಗಳು, ಶಿವಭಕ್ತರ ಪೌರಾಣಿಕ ಮತ್ತು ಐತಿಹಾಸಿಕ ಸಂಶೋಧಿತ ಚರಿತ್ರೆಗಳು, ವೀರಶೈವ ಧರ್ಮ ಗ್ರಂಥಗಳು ಪ್ರತಿ ತಿಂಗಳು ಪ್ರಕಟವಾಗುವವು. ಮೊದಲನೆಯ ಸಂಚಿಕೆ ಇದೇ ನಾಡಹಬ್ಬ (ವಿಜಯಾ ದಶಮಿ) ದಿವಸ ಪ್ರಸಿದ್ಧವಾಯಿತು.

—ಇಂದೇ ವರ್ಗಣಿದಾರರಾಗಿರಿ.—

ವಾರ್ಷಿಕ ವರ್ಗಣಿ ೩ ರೂ. ೪ ಆಣೆ (ಅಂಚೆ ವೆಚ್ಚ ಸಹಿತ)

ವಿಳಾಸ— ಮ್ಯಾನೇಜರ್ "ಕಲ್ಯಾಣ"
ಕಲ್ಯಾಣ ಆಫೀಸ ನಂ. ೨೦೬೧
ಗಂಟೀಕೇರಿ. ಹುಬ್ಬಳ್ಳಿ.

## ಲಿಂಗಾಯತ ವರನು ಬೇಕು.

ತಿಂಗಳಿಗೆ ೨೫ ರೂ. ಗಳಾದರೂ ಆದಾಯ ಬರುವ ಸುಶಿಕ್ಷಿತ ನಿರೋಗಿ ಸದೃಢ ಸ್ವಾವಲಂಬಿ ಲಿಂಗಾಯತ ವರನು ಬೇಕಾಗಿದ್ದಾನೆ. ವರುಷ ೨೦ ರಿಂದ ೩೦ ರೊಳಗಾಗಿರಬೇಕು. ಒಳಪಂಗಡ ಏಕೀಕರಣಕ್ಕೆ ಒಪ್ಪಿಗೆಯುಳ್ಳವನೂ ಆಧುನಿಕ ವಿಚಾರಸರಣಿಯುವನೂ ಇರಬೇಕು.

ವಧು ೧೬ ವರುಷದವಳು. ಮುಲಕೀ ಪರೀಕ್ಷೆ ವರೆಗೆ ಕನ್ನಡ ಮತ್ತು ಉರ್ದು ಶಿಕ್ಷಣ ಹೊಂದಿದವಳು. ಸುಂದರ ಸುಲಕ್ಷಣಗಳುಳ್ಳ ಬಡಕುಟುಂಬದವಳು. ಕೆಳಗಿನ ವಿಳಾಸಕ್ಕೆ ಬರೆದು ಹೆಚ್ಚಿನ ಸಂಗತಿ ತಿಳಿದುಕೊಳ್ಳಬೇಕು.

"ಶರಣ ಸಂದೇಶ" ಆಫೀಸ್
ಪೋ. ಆಲಮಟ್ಟಿ. ಜಿ. ವಿಜಾಪುರ

## ಶ್ರೀ ವಿದ್ಯಾರಣ್ಯ ಸಮಿತಿ ಬೆಳಗಾವ.

ಶ್ರೀ ವಿದ್ಯಾರಣ್ಯ ಗ್ರಂಥಮಾಲಾ ಬೆಳಗಾವ.

೧ ನೇ ಹೂವು ಚುರಮುರಿ ಶಾಕುಂತಲ ನಾಟಕವು
೨ ನೇ ಹೂವು ಪುನರ್ಜನ್ಮ ಎರಡೂ ಅರಳಿವೆ
೩ ನೇ ಹೂವು "ತಾಯಿ" ಅಚ್ಚಿನಲ್ಲಿದೆ. ಡಿಶೆಂಬರ ತಿಂಗಳ ಕೊನೆಯಲ್ಲಿ ಅರಳುವದು.

ವಾ. ಚ. ಅ. ವೆ. ಸೇರಿ ೩-೦-೦ ರೂ. ಗಳು
ಸಂಪಾದಕರು— ವಿ. ರಾ. ನಗರ.

# ಕರ್ನಾಟಕ ಸಾಹಿತ್ಯಪರಿಷತ್ತು.

## ವಸಂತ ಸಾಹಿತ್ಯೋತ್ಸವ.

### ಉಪಾಧ್ಯಾಯರಿಗೆ ಪ್ರಕಟನೆ.

ಇದೇ ಎಪ್ರಿಲ್ ತಿಂಗಳಿನ ಕಡೆಯ ಸುಮಾರಿನಲ್ಲಿ ನಡೆಯಲಿರುವ ಈ ವರ್ಷದ ವಸಂತ ಸಾಹಿತ್ಯೋತ್ಸವಕ್ಕೆ ಉಚಿತ ಪ್ರವೇಶ ಪಡೆಯಲು ಎಲ್ಲ ಪ್ರೈಮರಿ ಮತ್ತು ಮಿಡಲ್ ಶಾಲಾ ಉಪಾಧ್ಯಾಯರುಗಳು ಹೈಸ್ಕೂಲಿನ ಪಂಡಿತರೂ ಇದೇ ೧೦ ನೆಯ ತಾರೀಖಿನ ಒಳಗೆ ತಮ್ಮ ಹೆಸರುಗಳನ್ನು ರಜಿಸ್ಟರ್ ಮಾಡಿಸಿಕೊಳ್ಳಬೇಕೆಂದು ಈ ಹಿಂದೆಯೇ ಪ್ರಕಟಿಸಿದೆ. ಈ ವರೆಗೆ ಹೆಸರುಗಳನ್ನು ರಜಿಸ್ಟರ ಮಾಡಿಸಿಕೊಳ್ಳದಿರುವ ಉಪಾಧ್ಯಾಯರ ಪ್ರಯೋಜನಕ್ಕಾಗಿ ತಾ|| ೧೮-೪-೩೮ ರ ವರೆಗೂ ಕಾಲದ ಅವಕಾಶವನ್ನು ಮುಂದು ವರಿಸಲಾಗಿದೆ. ಬೇಗನೆ ಹೆಸರನ್ನು ರಜಿಸ್ಟರ್ ಮಾಡಿಸಿಕೊಳ್ಳದಿದ್ದಲ್ಲಿ ಸ್ಥಳಾವಕಾಶದ ಏರ್ಪಾಟುಮಾಡುವುದಕ್ಕೆ ಬಹಳ ತೊಂದರೆ ಯಾಗುವುದು. ಆದ್ದರಿಂದ ಉತ್ಸವದ ಪ್ರಯೋಜನವನ್ನು ಬಯಸಿ, ಇನ್ನೂ ನಮಗೆ ಬರೆದು ಕೊಳ್ಳದಿರುವ ಉಪಾಧ್ಯಾಯ ಮಹನೀಯರು ಮೇಲ್ಕಂಡ ತಾರೀಖಿನೊಳಗೆ ತಮ್ಮ ಹೆಸರುಗಳನ್ನು ಈ ಕಚೇರಿಯಲ್ಲಿ ರಜಿಸ್ಟರು ಮಾಡಿಸಿಕೊಳ್ಳಬೇಕೆಂದು ಬಯಸುತ್ತೇವೆ.

ಪ್ರವೇಶ ಪತ್ರವನ್ನು ತೆಗೆದುಕೊಳ್ಳಬೇಕಾಗಿರುವವರು ತಕ್ಕ ಅಧಿಕಾರಿಗಳಿಂದ ತಮ್ಮ ಪರಿಚಯ ಪತ್ರವನ್ನು ತಂದು ತೋರಿಸಿ ಪರಿಷತ್ತು ಪ್ರಕಟಿಸುವ ಉತ್ಸವದ ತಾರೀಖಿಗೆ ಎರಡು ದಿನಗಳ ಮುಂಚೆ ಅದನ್ನು ಪಡೆದುಕೊಳ್ಳಬೇಕು. ಪರಿಚಯ ಪತ್ರ ತಾರದಿರುವವರಿಗೆ ಪ್ರವೇಶ ಪತ್ರಗಳನ್ನು ಕೊಡುವುದು ಅಸಾಧ್ಯವಾಗುವುದು.

ತಾ. ೧೨-೪-೧೯೩೮. ವಿ. ಸೀತಾರಾಮಯ್ಯ.
ವ್ಯವಸ್ಥಾಪಕ.
ವಸಂತ ಸಾಹಿತ್ಯೋತ್ಸವ.
ಕ. ಸಾ. ಪರಿಷತ್ತು. ಚಾಮರಾಜಪೇಟೆ, ಬೆಂಗಳೂರು

---

# ಕರ್ನಾಟಕ ಸಾಹಿತ್ಯ ಪರಿಷತ್ತು

ಶ್ರೀ. ಕೃಷ್ಣರಾಜೇಂದ್ರ ಪರಿಷನ್ಮಂದಿರ ಚಾಮರಾಜಪೇಟೆ
ಬೆಂಗಳೂರು ನಗರ.

### ವಸಂತ ಸಾಹಿತ್ಯೋತ್ಸವ ೧೯೩೮

### ಅನವಟ್ಟಿ ಶಾಖೆ.

ಕರ್ನಾಟಕ ಸಾಹಿತ್ಯಪರಿಷತ್ತಿನ ಈ ವರ್ಷದ ವಸಂತ ಸಾಹಿತ್ಯೋತ್ಸವದ ಅಂಗವಾಗಿ ಬರುವ ಮೇ ತಿಂಗಳಲ್ಲಿ ಮೂರು ದಿನಗಳ ಉತ್ಸವವನ್ನು ಅನವಟ್ಟಿಯಲ್ಲಿ ನೆರವೇರಿಸಬೇಕೆಂದು ಅಲ್ಲಿಯ ಕರ್ನಾಟಕ ಸಂಘದವರು ತೀರ್ಮಾನಿಸಿದ್ದಾರೆ. ಉತ್ಸವದ ಆ ಸಮಿತಿಗೆ ಮ|| ಎಣ್ಣೆಕೊಪ್ಪದ ಮಲ್ಲಿಕಾರ್ಜುನಪ್ಪ ಗೌಡರು ಅಧ್ಯಕ್ಷರಾಗಿಯೂ ಮ|| ಗುರುನಾಥ ಕೃಷ್ಣ ನಾಡಿಗೇರ (ಆರ್ ಎ. ಮೆಂಬರ) ಮತ್ತು ಮ|| ಕೆ. ವಿ. ರುದ್ರಗೌಡರು, ಬಿ. ಎ. ಇವರು ಉಪಾಧ್ಯಕ್ಷರಾಗಿಯೂ ಮ|| ಮೂಗೂರು ಹನುಮಂತಾಚಾರ್ಯ ಮತ್ತು ನಾಡಿಗ ರಾಮರಾವ ಬಿ. ಎಸ್. ಸಿ. ಇವರುಗಳು ಕಾರ್ಯದರ್ಶಿಗಳಾಗಿಯೂ ಚುನಾಯಿತರಾಗಿದ್ದಾರೆ. ಅದಕ್ಕೆ ಶಿವಮೊಗ್ಗಾ ಕರ್ನಾಟಕ ಸಂಘದ ಮ|| ಬಿ. ಆರ್. ಪುಟ್ಟನಂಜಪ್ಪ ಎಂ. ಎ. ಎಲ್. ಎಲ್. ಬಿ. ಎಂ. ಎಲ್. ಸಿ. ಅವರ ಮತ್ತು ಮ|| ಎಸ್ ವಿ. ಕೃಷ್ಣಮೂರ್ತಿ ಬಿ. ಎಸ್‌ಸಿ, ಎಲೆಲ್. ಬಿ. (ಅಡ್ವೊಕೇಟ್) ಅವರ ಬೆಂಬಲವೂ ಇದೆ.

ಅನವಟ್ಟಿ ಶಿವಮೊಗ್ಗಾ ಜಿಲ್ಲೆಯ ಸೊರಬ ತಾಲೂಕಿನ ಹಳ್ಳಿ, ಉತ್ತರ ಕರ್ನಾಟಕಕ್ಕೂ ಮೈಸೂರು ಸೀಮೆಗೂ ನಡುವೆ ಇದೆ. ಈ ಸ್ಥಳ ಶಿವಮೊಗ್ಗಾ-ಹುಬ್ಬಳ್ಳಿ ರಸ್ತೆಯಲ್ಲಿ ಎರಡೂ ಸ್ಥಳಗಳಿಗೆ ೬೦ ಮೈಲು ದೂರದಲ್ಲಿದೆ. ಚರಿತ್ರಾರ್ಹವಾದ ಬಳ್ಳಿಗಾವಿ ಇಲ್ಲಿಗೆ ೧೫ ಮೈಲಿನಲ್ಲಿದೆ. ಕದಂಬ ರಾಜಧಾನಿಯಾದ ಬನವಾಸಿ ಪಟ್ಟಣಕ್ಕೂ ಇಲ್ಲಿಗೂ ೧೦ ಮೈಲು ದೂರ ಮಾತ್ರ. ಹತ್ತಿರವೇ ಚಂದ್ರಹಾಸನ ರಾಜಧಾನಿಯಾಗಿದ್ದ ಕುಂತಳ ನಗರವೆಂದು ಪ್ರಖ್ಯಾತಿ ಹೊಂದಿದ ಕುಬಟೂರು ಗ್ರಾಮವಿದೆ.

ಬಿ. ಎಂ. ಶ್ರೀಕಂಠಯ್ಯ
ಪರಿಷತ್ತಿನ ಉಪಾಧ್ಯಕ್ಷ.
ವಿ. ಸೀತಾರಾಮಯ್ಯ.
ವಸಂತ ಸಾಹಿತ್ಯೋತ್ಸವ
ಸಮಿತಿಯ ಪರವಾಗಿ,

ಮೂಗೂರು ಹನುಮಂತಾಚಾರ್ಯ
ನಾಡಿಗ ರಾಮರಾವ.
ಕಾರ್ಯದರ್ಶಿಗಳು
ವಸಂತ ಸಾಹಿತ್ಯೋತ್ಸವ ಸಮಿತಿ.
ಅನವಟ್ಟಿ.

---

## ಕಾಂಗ್ರೆಸ್ಸಿಗೆ ಮಿ. ಜಿನ್ನಾರವರ ಇನ್ನೂ ೭ ಬೇಡಿಕೆಗಳು.

ಕಾಂಗ್ರೆಸ್ಸಿನ ಮುಂದೆ ಮುಸ್ಲಿಂ ಲೀಗಿನ ಅಧ್ಯಕ್ಷರಾದ ಬ್ಯಾ. ಜಿನ್ನಾರವರು ಮುಸ್ಲಿಂ ಸಮಾಜದ ಬೇಡಿಕೆಗಳೆಂದು ಈ ಕೆಳಗಿನ ೭ ವಿಷಯಗಳನ್ನು ಮಹಾತ್ಮಾ ಗಾಂಧಿಯವರಿಗೆ ಪತ್ರ ಮುಖೇನ ತಿಳಿಸಿರುವರೆಂದು ವದಂತಿ ಎದ್ದಿದೆ.

(೧) ಮುಸ್ಲಿಂಲೀಗವು ಎಂದಿಗೂ ಕಾಂಗ್ರೆಸ್ಸಿನೊಳಗೆ ಅಂತರ್ಗತವಾಗಬಾರದು. ಮುಸ್ಲಿಂಲೀಗವು ಸ್ವತಂತ್ರವಾಗಿಯೇ ಉಳಿಯತಕ್ಕದ್ದು. (೨) ಕಾಂಗ್ರೆಸ್ ಮುಸಲ್ಮಾನ್ ಜನಸಾಮಾನ್ಯರಲ್ಲಿ ಪ್ರಚಾರಮಾಡುವುದನ್ನು ನಿಲ್ಲಿಸಬೇಕು. (೩) ಜಾತಿಯ ಪ್ರಶ್ನೆಗಳ ಬಗ್ಗೆ ಮುಸ್ಲಿಂಲೀಗಿಗೆ ತನ್ನ ಇಷ್ಟಾನುಸಾರವಾಗಿ ನಡೆದುಕೊಳ್ಳಲು ಬಿಡಬೇಕು. (೪) ಸ್ಥಳಿಕ ಸಂಸ್ಥೆಗಳ ಚುನಾವಣೆಯು ಜಾತೀಯ (ಪ್ರತ್ಯೇಕ) ಮತದಾರ ಪದ್ಧತಿಯಿಂದಲೇ ನಡೆಯಬೇಕು. ಮತ್ತು ಸಂಯುಕ್ತ ಮತದಾರ ಪದ್ಧತಿಯು ಸರ್ವಥಾ ಜಾರಿಗೆ ತರಲ್ಪಡಕೂಡದು. (೫) ಮುಸ್ಲಿಂಲೀಗದ ಧ್ವಜವು ಕಾಂಗ್ರೆಸ್ ಧ್ವಜದ ಸಮಾನವೆಂದು ಭಾವಿಸತಕ್ಕದ್ದು. ಮತ್ತು ಧ್ವಜವಂದನ ಸಮಾರಂಭ ಕಾಲದಲ್ಲಿ ಎರಡೂ ಧ್ವಜಗಳನ್ನು ಪ್ರದರ್ಶಿಸಬೇಕು. (೬) ವಂದೇ ಮಾತರಂ ಗೀತಾ ಪದವನ್ನು ನಿಲ್ಲಿಸಬೇಕು- (೭) ಕಾಂಗ್ರೆಸ್ ಹಿಂದೀ ಭಾಷೆಯ ಪ್ರಚಾರವನ್ನು ನಿಲ್ಲಿಸಬೇಕು. ಹಿಂದೀ ಸಾಹಿತ್ಯ ಸಮ್ಮೇಲನದ ಬಾಂಧವ್ಯವನ್ನು ಬಿಡಬೇಕು. ಉರ್ದು ಭಾಷೆಯನ್ನು ಹಿಂದಿಯೊಟ್ಟಿಗೇ ಪ್ರಚಾರ ಮಾಡಬೇಕು.

---

—ಮಹಾತ್ಮಾಗಾಂಧಿಯವರು ಡಮ್‌ಡಮ್ ಜೇಲಿನಲ್ಲಿರುವ ರಾಜಕೀಯ ಕೈದಿಗಳ ಸಂದರ್ಶನಕ್ಕಾಗಿ ಹೋದಾಗ ಅಲ್ಲಿಯ ಅಧಿಕಾರಿಗಳು ಗಾಂಧೀಜಿಯವರಿಗೆ ಬುಟ್ಟಿ ತುಂಬ ಹಣ್ಣುಗಳನ್ನೂ ಆಡಿನ ಹಾಲನ್ನೂ ಕೊಟ್ಟು ಕಳುಹಿಸಿದರು.



ನಮ್ಮಲ್ಲಿ ಫೋಟೋ, ಲೈನ ಬ್ಲಾಕುಗಳು, ಹಕ್ತಾಳೆ ಮತ್ತು ಸೀಸದ ಬ್ಲಾಕುಗಳು ಅರಗಿನ ಸೀಲು, ಜವಾನರ ಬಿಲ್ಲೆಗಳು. ದೇವರ 3 ಬಣ್ಣದ ಪಟಗಳು, ಕ್ಯಾಲೆಂಡರುಗಳು, ನಿಮ್ಮ ಮನ ಒಪ್ಪುವಂತೆ ತಯಾರಾಗುತ್ತವೆ.

ಬಿಜವರ್ ಆರ್ಟ್ ಸ್ಟ.
ಚಿಕ್ಕಪೇಟೆ.
ಬೆಂಗಳೂರು ಸಿಟಿ

---

**ಸ್ಥಳೀಯ** ಸಂಸ್ಥೆಗಳ ಪತ್ರಿಕೆ— ಮುನಸಿಪಾಲಿಟಿ ಲೋಕಲ್ ಬೋರ್ಡ ಮೊದಲಾದ ಸ್ಥಾನಿಕ ಸ್ವರಾಜ್ಯದ ಸಂಗತಿಗಳನ್ನು ತಿಳಿದುಕೊಳ್ಳಬೇಕೆಂಬುವವರು ಈ ಪಕ್ಷ ಪತ್ರಿಕೆಯನ್ನು ತರಿಸಿಕೊಳ್ಳಿರಿ.

ವಾರ್ಷಿಕ ಚಂದಾ ೨ ರೂ.

ವಿಳಾಸ— ಟಿ. ಎನ್. ಚೆನ್ನಪ್ಪ
ಗಾಂಧಿ ನಗರ ಬೆಂಗಳೂರು ಸಿಟಿ.

---

**ಅರವಿಂದ** ಗ್ರಂಥಮಾಲೆಯಲ್ಲಿ ವರ್ಷಕ್ಕೆ ಆರು ಒಳ್ಳೊಳ್ಳೇ ಗ್ರಂಥ ಕುಸುಮಗಳು ಅರಳುತ್ತವೆ.

ಸಂಪಾದಕರು— ಮಧುರ ಚೆನ್ನರು.

ವಾರ್ಷಿಕ ಚಂದಾ ೩-೮-೦ (ಅಂಚೆ ವೆಚ್ಚ ಸೇರಿ)

ವಿಳಾಸ— ಅರವಿಂದ ಗ್ರಂಥಮಾಲಾ ಕಾರ್ಯಾಲಯ.
ಪೋ. ಹಲಸಂಗಿ. ಜಿ. ವಿಜಾಪುರ

---

# ಎಲ್ಲರೂ ಓದಲೇಬೇಕಾದ ಪುಸ್ತಕಗಳು.

## ಇಕೋ, ಇಲ್ಲಿವೆ.

### ಹರ್ಡೇಕರ ಮಂಜಪ್ಪನವರು ಬರೆದ ಪುಸ್ತಕಗಳು.

| | |
|---|---|
| ಬುದ್ಧಿಯ ಮಾತು | ೦-೩-೦ |
| ವೀರಶೈವ ಮತಬೋಧೆ | ೦-೨-೦ |
| ವೀರಶೈವ ಮತತತ್ವ | ೦-೪-೦ |
| ಕಾಯಕವೆ ಕೈಲಾಸ | ೦-೩-೦ |
| ಶ್ರೀ. ಲಿಂಗರಾಜರ ಚರಿತ್ರೆ | ೦-೬-೦ |
| ಪ್ರಭುದೇವರ ಕಥೆ | ೦-೧-೬ |
| ಏಕಲವ್ಯನ ಕಥೆ | ೦-೧-೬ |
| ಲಜಪತರಾಯರ ಚರಿತ್ರೆ | ೦-೧-೬ |
| ಆದಿಜನ ಸುಧಾರಣೆ | ೦-೨-೦ |
| ಬಸವ ಬೋಧಾಮೃತ | ೦-೬-೦ |
| ಭಜನಾವಳಿ | ೦-೧-೬ |
| ಜಾತಿಯ ವಾದ ವಿಮರ್ಶೆ | ೦-೧-೦ |
| ವಚನಕಾರರ ಸಮಾಜರಚನೆ | ೦-೨-೦ |
| ವೀರಶೈವ ಏಕೀಕರಣ | ೦-೦-೩ |
| ಪುಲಿಕೇಶಿಯ ಚರಿತ್ರೆ | ೦-೧-೬ |
| ಕಚದೇವನ ಕಥೆ | ೦-೧-೬ |
| ಸ್ವಾಮಿ ವಿವೇಕಾನಂದರ ಚರಿತ್ರೆ | ೦-೧-೬ |
| ಸುಕಲಾದೇವಿಯ ಕಥೆ | ೦-೧-೬ |
| ಸ್ತ್ರೀನೀತಿ ಸಂಗ್ರಹ | ೦-೪-೦ |
| ದಾಂಪತ್ಯ ಧರ್ಮ | ೦-೩-೦ |
| ದೇವಯಾನಿಯ ಕಥೆ | ೦-೧-೬ |
| ವಿಜಯವಾಣಿ | ೦-೨-೦ |
| ರಾಷ್ಟ್ರಗೀತೆ | ೦-೦-೬ |
| ಜೀವನ ರಹಸ್ಯ (ಅನುವಾದಿತ ಕೃತಿ.) | ೦-೧-೦ |
| ಶುದ್ಧಿ ಮತ್ತು ಸಂಘಟನೆ | ೦-೪-೦ |
| ಸ್ಮಾರಕ ಚಂದ್ರಿಕೆ | ೧-೦-೦ |
| ಪ್ರಮಥಾಚಾರ ದೀಪಿಕೆ | ೦-೩-೦ |
| ೬೩ ಪುರಾತನರ ಚರಿತ್ರೆ (ಬಿಡಿ ಕೃತಿ) | ೨-೦-೦ |

ವಿಳಾಸಃ- ಜ್ಞಾನೋದಯ ಗ್ರಂಥ ಭಾಂಡಾರ ಆಲಮಟ್ಟಿ. ಪೋ. ಆಲಮಟ್ಟಿ ಜಿ. ವಿಜಾಪುರ.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. R. 2891.

# ಶರಣ ಸಂದೇಶ

The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ!
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೨೫ ನೆಯ ಎಪ್ರಿಲ್ ೧೯೩೮. | ಸಂಚಿಕೆ೩೪ |
|---|---|---|

ಜನಸೇವೆಯೇ ದೇವರಸೇವೆ.

## ಶಿಯಾ-ಸುನ್ನಿಗಳಲ್ಲಿ ದಂಗೆ.

ಲಖನೌ ನಗರದಲ್ಲಿ ತಾ. ೨೨ ನೇ ದಿವಸ ಸಂಜೆಗೆ
ಚೆಚಲಂ ಮೆರವಣಿಗೆಯ ಕಾಲಕ್ಕೆ
ಶಿಯಾ ಮತ್ತು ಸುನ್ನಿ ಪಂಥದವರಲ್ಲಿ
ದಂಗೆಯಾಗಿ ೫ ಜನರು ಸತ್ತಿರುವರಲ್ಲದೆ
ಅನೇಕರು ಗಾಯಗೊಂಡಿದ್ದಾರೆ.

ಜಪಾನವು
ಅಮೇರಿಕೆಯ ಯುನಾಯಿಟೆಡ್ ಸ್ಟೇಟ್ಸ್ ಸರಕಾರಕ್ಕೆ
ಸಂಬಂಧಿಸಿದ 'ಪ್ಯಾನೆ' ಹಡಗವನ್ನು
ಮುಳುಗಿಸಿದುದಕ್ಕಾಗಿ ೪೪೨೦೦೦ ಪೌಂಡು
ನಷ್ಟ ತುಂಬಿ ಕೊಟ್ಟಿತು.

ದೇಹವೇ ದೇವಾಲಯ



# ಶರಣ ಸಂದೇಶ

THE SHARANA SANDESHA.



## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ-ಸೋಮವಾರ ತಾರೀಖು ೨೫ ನೆಯ ಎಪ್ರಿಲ್ ೧೯೩೮. | ಸಂಚಿಕೆ ೩೪

## ಮಹತ್ವದ ಸುದ್ದಿಗಳು.

—ಹಿಂದುಗಳಲ್ಲಿ ಮದುವೆ ಕಾಲದಲ್ಲಿ ವರದಕ್ಷಿಣೆ ಕೊಡುವುದನ್ನು ಅಥವಾ ತೆಗೆದುಕೊಳ್ಳುವುದನ್ನು ತಪ್ಪಿಸುವುದಕ್ಕಾಗಿ ಶ್ರೀ. ಸುಖಲಾಲಸಿಂಗ ಎಂಬವರು ಬಿಹಾರ ಅಸೆಂಬ್ಲಿಯಲ್ಲಿ ಒಂದು ಬಿಲ್ಲನ್ನು ತಂದಿರುವರು. ವರದಕ್ಷಿಣೆ ಕೊಟ್ಟವರಿಗೆ ಮತ್ತು ತೆಗೆದುಕೊಂಡವರಿಗೆ ೬ ತಿಂಗಳ ಶಿಕ್ಷೆ ಇಲ್ಲವೆ ೧೦೦೦ ರೂ. ದಂಡ ಇಲ್ಲವೆ ಶಿಕ್ಷೆ ದಂಡಗಳೆರಡನ್ನೂ ವಿಧಿಸಬೇಕೆಂಬುದೇ ಬಿಲ್ಲಿನ ಉದ್ದೇಶ.

—ಹುಬ್ಬಳ್ಳಿಯ ಲ್ಯಾಮಿಂಗ್‌ಟನ್ ಹಾಯಸ್ಕೂಲಿನ ೭-೮ ಜನ ವಿದ್ಯಾರ್ಥಿಗಳು ಹುಬ್ಬಳ್ಳಿಯಿಂದ ೬ ಮೈಲಿನ ಮೇಲಿರುವ ದೇವರಗುಡಿಹಾಳ ಕೆರಿಯನ್ನು ನೋಡಲು ಹೋದಾಗ ತಿರುಗಿ ಬರುವಾಗ ಪರಸಾಪುರ ಹತ್ತಿರ ಸಿಡಿಲು ಬಡೆದು ೨ ಜನ ವಿದ್ಯಾರ್ಥಿಗಳು ಕೂಡಲೇ ಸತ್ತರು. ಇಬ್ಬರಿಗೆ ಧಕ್ಕೆ ತಗಲಿದೆ.

—ಮಧ್ಯಪ್ರಾಂತ ಸರಕಾರದವರು ಯೋಜಿಸಿದ ವಿದ್ಯಾಮಂದಿರದ ಕಟ್ಟಡದ ತಳಕಲ್ಲು ಕೂಡ್ರಿಸುವ ಸಮಾರಂಭವು ವರ್ಧಾದಲ್ಲಿ ಮಹಾತ್ಮಾ ಗಾಂಧಿಯವರ ಹಸ್ತದಿಂದ ನೆರವೇರಿಸಲ್ಪಟ್ಟಿತು.

—ಅ. ಭಾ. ಕಾಂಗ್ರೆಸ್ ಸಮಾಜ ಸತ್ತಾವಾದಿ ಪಕ್ಷದ ಕಾರ್ಯದರ್ಶಿಗಳಾದ ಭಾಯಿ ಮೇಅರ ಅಲ್ಲಿಯವರು ಆರೋಗ್ಯದ ನಿಮಿತ್ತವಾಗಿ ತಾ. ೨೮ ನೆಯ ದಿವಸ ಯುರೋಪಖಂಡಕ್ಕೆ ಹೋಗುವವರಿದ್ದಾರೆ.

—ಹೊಸಪೇಟೆ ಮುನಸಿಪಲ್ ಚುನಾವಣೆಗೆ ಕಾಂಗ್ರೆಸ್ಸಿನಿಂದ ೨೦ ಜನರು ಹುರಿಯಾಳಾಗಿ ನಿಂತಿದ್ದರು. ಅವರಲ್ಲಿ ೯ ಜನರು ಅವಿರೋಧವಾಗಿ ಆರಿಸಿಬಂದಿದ್ದಾರೆ.

—ಕಲ್ಕತ್ತೆಯಲ್ಲಿ ಮೇ ೧೧ ನೆಯ ತಾರೀಖಿನ ದಿವಸ ಸೇರಲಿರುವ ಮಹಾಕೋಸಲ ರಾಜಕೀಯ ಪರಿಷತ್ತಿಗೆ ಪಂ. ಜವಾಹರಲಾಲ ನೆಹರುರವರು ಅಧ್ಯಕ್ಷರಾಗುವರೆಂದು ತಿಳಿದುಬರುತ್ತದೆ.

—ಕಳೆದ ನಾಲವತ್ತು ವರುಷಗಳಿಂದಲೂ ಅವ್ಯಾಹತವಾಗಿ ಸಾಹಿತ್ಯ ಸೇವೆಮಾಡಿ ಕನ್ನಡ ಲೇಖಕರಲ್ಲಿ ಗಣ್ಯರೆನಿಸಿಕೊಂಡ ಶ್ರೀ. ಹೊಸಕೆರೆ ಚಿದಂಬರಯ್ಯನವರು ತಾ. ೧೭ ನೆಯ ದಿವಸ ಮಧ್ಯಾಹ್ನ ೧೨ ಘಂಟೆಗೆ ಮೈಸೂರು ಸಂಸ್ಥಾನದ ತಿರುಮಕೂಡಲು ನರಸೀಪುರದಲ್ಲಿ ತೀರಿಕೊಂಡರೆಂದು ತಿಳಿಸಲು ವಿಷಾದವಾಗುತ್ತದೆ.

—ರತ್ಲಾಂ ಸಂಸ್ಥಾನದ ಅಧಿಪತಿಗಳು ತಮ್ಮ ಮಗನ ಮದುವೆಯ ಖರ್ಚಿನ ಸಲುವಾಗಿ ಪ್ರತಿಯೊಬ್ಬ ರೈತನಿಗೆ ೫ ರೂ. ತಲೆಕಂದಾಯ ಹಾಕಿರುವರೆಂದೂ ಇದರಿಂದ ಸುಮಾರು ೮ ಲಕ್ಷ ರೂ. ಉತ್ಪನ್ನವಾಗಬಹುದೆಂದೂ ತಿಳಿದುಬರುತ್ತದೆ.

—ಅಸಾಮ ಮಂತ್ರಿಮಂಡಲದ ಬಗ್ಗೆ ತೊಡಕು ಉಪಸ್ಥಿತವಾದರೆ ಗವ್ಹರ್ನರರು ಅಸೆಂಬ್ಲಿಯನ್ನೇ ವಿಸರ್ಜಿಸಿ ಬಿಡುವರೆಂದು ಸುದ್ದಿ. ಆದರೆ ಮಂತ್ರಿಮಂಡಲದ ಭದ್ರತೆಯನ್ನು ಕಾಯ್ದುಕೊಳ್ಳಲು ವಿಶೇಷ ಪ್ರಯತ್ನಪಡುತ್ತಿರುವರು. ಕಾಂಗ್ರೆಸ್ ಪಕ್ಷದವರೂ ಸಹ ತಮ್ಮ ಪಕ್ಷದ ಬಲವನ್ನು ಹೆಚ್ಚಿಸಿಕೊಳ್ಳುತ್ತಿರುವರು.

—ನಾ. ಶರೀಫರ ಪ್ರಕರಣವನ್ನು ವಿಚಾರಮಾಡಲು ನಿಯಮಿಸಲ್ಪಟ್ಟ ಸರ್. ಮನ್ಮಥನಾಥ ಮುಕರ್ಜಿಯವರ ಕಡೆಗೆ ಅ. ಭಾ. ಕಾಂಗ್ರೆಸ್ ಪಾರ್ಲಿಮೆಂಟರಿ ಸಬ್ ಕಮಿಟಿಯ ಅಧ್ಯಕ್ಷರಾದ ಸರದಾರ ವಲ್ಲಭಭಾಯಿಯವರು ಆ ಪ್ರಕರಣಕ್ಕೆ ಸಂಬಂಧಿಸಿದ ದೀರ್ಘವಾದ ಮನವಿಯೊಂದನ್ನು ಕಳುಹಿಸಿಕೊಟ್ಟಿದ್ದಾರೆ.

—ತುರ್ಕಸ್ತಾನದಲ್ಲಿ ಕಳೆದ ವಾರ ಭಯಂಕರ ಭೂಕಂಪವಾಗಿದೆ. ಈ ಭೂಕಂಪದಿಂದ ಸಾಧಾರಣ ೮೦೦ ಜನರು ನಾಶವಾಗಿದ್ದಾರೆಂದೂ ತಿಳಿದಿದೆ. ೧೮ ಹಳ್ಳಿಗಳು ಸಂಪೂರ್ಣ ಕಣ್ಮರೆಯಾಗಿವೆಯಂತೆ. ೨೨ ಹಳ್ಳಿಗಳು ಹಾಳಾಗಿವೆಯಂತೆ. ಸುಮಾರು ೫೦೦೦೦ ಜನರು ನಿರಾಶ್ರಿತರಾಗಿದ್ದಾರೆ.

—ವ್ಹಾಯಿಸ್‌ರಾಯರು ಸರಹದ್ದ ಪ್ರಾಂತಕ್ಕೆ ಹೋದಾಗ ಅಲ್ಲಿಯ ಜನರು ವ್ಹಾಯಿಸ್‌ರಾಯರಿಗೆ ಕುರಿಗಳನ್ನು ಕಾಣಿಕೆಯಾಗಿ ಕೊಟ್ಟರಂತೆ !

# ಬಸವೇಶ್ವರನ ಘನತೆ.

( ಲೇಖಕರು:— ಎಸ್. ವ್ಹಿ. ಹಂಚಿ, ಬಿ. ಎ. ಬೆಳಗಾವ. )

ಬಸವೇಶ್ವರನು ಜಗತ್ತಿನ ಮಹಾಪುರುಷರಲ್ಲಿ ಒಬ್ಬನೆಂದು ಹೇಳಲಿಕ್ಕೆ ಏನೂ ಅಡ್ಡಿಯಿಲ್ಲ. ಇವನು ಗತಿಸಿಹೋಗಿ ಸುಮಾರು ೮೦೦ ವರ್ಷಗಳಾದರೂ ಸಹ ಇವನ ಹೆಸರು ಅಚ್ಚಳಿಯದೆ ಸ್ವಚ್ಛವಾಗಿದ್ದದ್ದನ್ನು ನೋಡಿದರೆ ಇವನು ಮಾಡಿದಂಥ ಕಾರ್ಯಗಳು ಸಾಮಾನ್ಯವಲ್ಲವೆಂದು ಹೇಳಬಹುದು. ಇವನು ಇದ್ದ ಕಾಲವು ಇವನ ಕೀರ್ತಿಯನ್ನು ಎಲ್ಲ ಕಡೆಗೂ ಹಬ್ಬಿಸಲಿಕ್ಕೆ ಅನಾನುಕೂಲವಾಗಿತ್ತು. ಆದರೂ ಕೂಡ ಕಲ್ಯಾಣದಲ್ಲಿಯೇ ನಿಂತು ಸುತ್ತುಮುತ್ತಲಿನ ಎಲ್ಲ ನಾಡುಗಳಿಂದ ಜನರನ್ನು ಅವರಲ್ಲಿ ಮುಖ್ಯವಾಗಿ ಅಲ್ಲಮಪ್ರಭು, ಸಿದ್ಧರಾಮೇಶ್ವರ, ಮಹಾದೇವಿಯಕ್ಕ ಮೊದಲಾದ ಸುಪ್ರಸಿದ್ಧ ವ್ಯಕ್ತಿಗಳನ್ನು ತನ್ನ ಭಕ್ತಿಯ ಪ್ರಭಾವದ ಮೂಲಕ ಎಳೆದುಕೊಂಡು ಅನೇಕ ಕಾರ್ಯಗಳನ್ನು ನೆರವೇರಿಸಿದನು. ನಮ್ಮ ಜನರ ಅಜ್ಞಾನದ ಇಲ್ಲವೆ ಐತಿಹಾಸಿಕ ಶೋಧದ ಅಭಾವದ ಮೂಲಕ ಬಸವೇಶ್ವರನ ನಿಜವಾದ ಚರಿತ್ರವು ನಮಗೂ ಕೂಡ ಗೊತ್ತಿಲ್ಲದೆ ಇರುವದು ನಮ್ಮ ದುರ್ದೈವವೇ ಸರಿ. ಆದರೂ ಇತ್ತಿತ್ತಲಾಗಿ ಐತಿಹಾಸಿಕ ಶೋಧವು ಭರದಿಂದ ನಡೆದದ್ದರಿಂದ ಬಸವೇಶ್ವರನ ಚರಿತ್ರದ ಸಂಬಂಧ ಗ್ರಂಥಗಳು, ಪುರಾಣಗಳು, ವಚನಗಳು, ಶಿಲಾಶಾಸನಗಳು, ತಾಡವಾಲೆಯ ಪತ್ರಗಳು ಮತ್ತು ಕೈ ಬರಹದ ಪತ್ರಿಕೆಗಳು ದೊರೆತು ಅವನ ಬಗ್ಗೆ ಇದ್ದ ಅಜ್ಞಾನವು ಏನೋ ಸ್ವಲ್ಪ ದೂರವಾಗುತ್ತಲಿದೆ. ಅವನ ವಿಷಯವಾಗಿ ಪಕ್ಷಪಾತವಿಲ್ಲದೆ ವಿಮರ್ಶಕ ಬುದ್ಧಿಯಿಂದ ಬರೆದ ಕೆಲವು ಗ್ರಂಥಗಳು ಅವನ ಘನತೆಯನ್ನು ಸ್ಪಷ್ಟವಾಗಿ ತೋರಿಸುತ್ತವೆ.

ಬಸವೇಶ್ವರನು ಚಿಕ್ಕಂದಿನಿಂದಲೇ ಧರ್ಮದ ನಿಜವಾದ ತತ್ವಗಳನ್ನು ಚೆನ್ನಾಗಿ ಅಭ್ಯಾಸಮಾಡಿ ಸರ್ವರಿಗೂ ಅನ್ವಯಿಸುವ ವೀರಶೈವ ಮತವನ್ನು ಪುನರುಜ್ಜೀವನಗೊಳಿಸಿದನು. ಧರ್ಮದ ಅವನ ಕಲ್ಪನೆಯು ಎಷ್ಟು ಉದಾತ್ತವಾಗಿತ್ತೆಂದು ಕೆಳಗಿನ ವಚನದಿಂದ ಕಂಡುಬರುವದು

ದಯವಿಲ್ಲದ ಧರ್ಮವದಾವುದಯ್ಯ? ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ. ದಯವೇ ಧರ್ಮದ ಮೂಲವಯ್ಯ.

ಉಳಿದ ಮತಗಳಲ್ಲಿಯ ಹಿಂಸೆ ಮೊದಲಾದ ಉಪಯೋಗವಿಲ್ಲದ ಅಂಶಗಳನ್ನು ಬಿಟ್ಟು ಉಪಯುಕ್ತವಾದ ಹೊಸ ತತ್ವಗಳನ್ನು ಸೇರಿಸಿ ಸರ್ವಸಂಗ್ರಾಹ್ಯವಾದ ಈ ಮತವನ್ನು ಪ್ರಚಾರಗೊಳಿಸಿದನು. "ಸರ್ವಂ ಶಿವಮಯಂ ಜಗತ್" ಎಂದು ಸಾರಿ ಲಿಂಗದೀಕ್ಷೆಯಾದ ಕೂಡಲೇ ಹಿಂದಿನ ಕರ್ಮಗಳು ಅಳಿಯುವವೆಂದು ಉಪದೇಶ ಮಾಡಿದನು. ಉಳಿದ ಮತಗಳು ಈ ಜನ್ಮದಲ್ಲಿಯ ಸುಖ ದುಃಖಗಳು ಪೂರ್ವಜನ್ಮದ ಕರ್ಮಗಳ ಫಲಗಳು ಎಂದು ಹೇಳಿದ್ದವು. ಅವು ಮುಗಿಯುವ ವರೆಗೆ ಮೋಕ್ಷ ಸಿಗುವುದಿಲ್ಲೆಂದು ಸಾರಿದ್ದವು. ಆದರೆ ಬಸವೇಶ್ವರನು ಆಚಾರಕ್ಕೆ ಮಹತ್ವ ಕೊಟ್ಟು ಬೇಕಾದ ಮನುಷ್ಯನು ಸದಾಚಾರದಿಂದ ಈ ಲೋಕದಲ್ಲಿ ವರ್ತಿಸಿದರೆ ಅವನಿಗೆ ನಿಜವಾಗಿಯೂ ಮೋಕ್ಷವಾಗುವುದೆಂದು ತಿಳಿಸಿಕೊಟ್ಟನು.

ಅಯ್ಯಾ ಎಂದರೆ ಸ್ವರ್ಗ, ಎಲವೋ ಎಂದರೆ ನರಕ. ಪುಣ್ಯ ಪಾಪಗಳೆಂಬವು ತಮ್ಮ ಇಷ್ಟವು ಕಂಡಿರಯ್ಯ. ಆಚಾರವೇ ಸ್ವರ್ಗ ಅನಾಚಾರವೇ ನರಕ.

ಇವನ ಈ ನುಡಿಗಳಿಂದ ಸ್ವರ್ಗ ನರಕಗಳ ಕಲ್ಪನೆಯೂ ಸ್ವರ್ಗವನ್ನು ಪಡೆಯಲಿಕ್ಕೆ ನರಕವನ್ನು ತಪ್ಪಿಸಲಿಕ್ಕೆ ನಾವು ಪುಣ್ಯ ಮಾಡಬೇಕು, ಪಾಪವನ್ನು ಮಾಡಬಾರದು ಎಂಬ ವಿಚಾರವೂ ಮತ್ತು ಇವು ಪ್ರತಿಯೊಬ್ಬನ ಕೈಯಲ್ಲಿವೆ ಎಂಬ ನೂತನ ಮಾತೂ ಕಂಡು ಬರುತ್ತವೆ. ಇವನು ಹಿಂದಿನ ವರ್ಣಾಶ್ರಮಗಳ ಪದ್ಧತಿಯನ್ನು ತೆಗೆದುಹಾಕಿ ಎಲ್ಲರೂ ಲಿಂಗದೀಕ್ಷೆಯಾಗಲಿಕ್ಕೆ ಯೋಗ್ಯರು ಮತ್ತು ಅವರೆಲ್ಲರು ಸಮಾನರೆಂಬ ಭಾವನೆಯನ್ನುಂಟುಮಾಡಿದನು. ಇದರಿಂದ ಶೂದ್ರರಿಗೆ ಮತ್ತು ಉಳಿದ ಕೀಳು ಕುಲದವರಿಗೆ ಸಮಾಜದಲ್ಲಿ ಒಂದು ಉಚ್ಚ ಸ್ಥಾನವನ್ನು ಕಲ್ಪಿಸಿದನು. ಬಸವೇಶ್ವರನು ವೀರಶೈವ ಮತವನ್ನು ಪ್ರಸಾರಗೊಳಿಸುತ್ತ ಅದರ ಕೂಡ ಮತ್ತೊಂದು ಅದ್ಭುತ ಕಾರ್ಯವನ್ನು ನೆರವೇರಿಸಿದನು. ಅದೇ ಔದ್ಯೋಗಿಕ ಕ್ರಾಂತಿಯು. (Industrial Revolution) ಪ್ರತಿಯೊಬ್ಬ ವೀರಶೈವನು ಸ್ವಾವಲಂಬಿಯಾಗಿ ಒಂದು ಸ್ವಂತ ಉದ್ಯೋಗವನ್ನು ಮಾಡಿಯೇ ಉಪಜೀವಿಸಬೇಕೆಂದು ಕಟ್ಟುಮಾಡಿದನು. ಮತ್ತು ಅದಕ್ಕೆ ಧಾರ್ಮಿಕ ಸ್ವರೂಪವನ್ನು ಕೊಟ್ಟು "ಕಾಯಕವೇ ಕೈಲಾಸ"ವೆಂದರೆ ಸ್ವಂತ ಉದ್ಯೋಗದಿಂದಲೇ ಮೋಕ್ಷವೆಂದು ಹೇಳಿದ್ದರಿಂದ ಎಲ್ಲರೂ ಸ್ವಂತ ಉದ್ಯೋಗಗಳನ್ನು ಮಾಡಹತ್ತಿದರು. ಈ ಉದ್ಯೋಗಗಳು ಮೊದಲು ಇದ್ದಿಲ್ಲವೆಂತಲ್ಲ. ಆದರೆ ಅವುಗಳಿಗೆ ಹೊಸ ಅರ್ಥ ಕೊಟ್ಟು ಅವುಗಳ ಮಹತ್ವವನ್ನು ತಿಳಿಸಿಕೊಟ್ಟದ್ದರಿಂದ ಮೊದಲು 'ಕೀಳು' ಎಂದು ತಿಳಿದು ಬಿಟ್ಟ ಉದ್ಯೋಗಗಳನ್ನು ಈಗ ಭರದಿಂದ ಮಾಡಹತ್ತಿದರು. ಇದರಿಂದ ವೀರಶೈವರಲ್ಲಿ ಎಲ್ಲ ತರದ ಉದ್ಯೋಗಗಳು ಬಂದು ಅನ್ಯಮತದವರಿಗೆ ಬಾಯಿ ತೆರೆಯದಂತಾಗಿ ವೀರಶೈವ ಸಮಾಜವು ಸರ್ವಾಂಗ ಪರಿಪೂರ್ಣವಾಯಿತು.

ಬಸವೇಶ್ವರನು ಎಲ್ಲರಿಗೂ ಲಿಂಗದೀಕ್ಷೆಯನ್ನು ಕೊಟ್ಟು ವೀರಶೈವ ಮತವನ್ನು ಪ್ರಚಾರಮಾಡುವಾಗ ಇನ್ನೊಂದು ಅಪೂರ್ವವಾದ ಸಾಹಸದ ಕಾರ್ಯವನ್ನು ಮಾಡಿದನು. ಬಹುಕಾಲ ಪರಂಪರೆಯಿಂದ ನಡೆದುಬಂದ ಅಸಹ್ಯವಾದ ಪದ್ಧತಿಯನ್ನು ತೆಗೆದುಹಾಕಿದನು. ಒಮ್ಮೆ ಲಿಂಗದೀಕ್ಷೆಯಾದ ಕೂಡಲೇ ಹೊಲೆಯನೂ ಕೂಡ ಉಳಿದವರ ಸಮಾನನೆಂದು ಹೇಳಿ ಅಸ್ಪೃಶ್ಯ ನಿವಾರಣೆಯನ್ನು ಮಾಡಿದನು. ಅವರಿಗೆ ಮೊದಲು ಸಮಾಜದಲ್ಲಿ ಸ್ಥಾನವಿರಲಿಲ್ಲ. ಇಷ್ಟೇ ಅಲ್ಲ; ಅವರು ಊರ ಹೊರಗೆ ಹೊಲಸು ಸ್ಥಳದಲ್ಲಿದ್ದು ಹೇಳಿದ ಕೆಲಸಗಳನ್ನು ಮಾಡಿ ಉಳಿದವರು ಉಪಯೋಗಿಸುವ ನೀರನ್ನು ಕೂಡ ಮುಟ್ಟದೆ ಬಹಳ ಹೀನಾವಸ್ಥೆಯಲ್ಲಿದ್ದರು. ಇವರನ್ನು ಬಸವೇಶ್ವರನು ಉದ್ಧಾರ ಮಾಡಿದನಲ್ಲದೆ ಹರಳಯ್ಯನೆಂಬ ಮೊಚ್ಚೆಗಾರನ ಮಗನಿಗೆ ಮಧುವಯ್ಯನೆಂಬ ಬ್ರಾಹ್ಮಣನ ಮಗಳನ್ನು ಮದುವೆ ಮಾಡಿ ಮಿಶ್ರ ವಿವಾಹವನ್ನು ಪ್ರಚಾರದಲ್ಲಿ ತಂದು ಒಳ್ಳೇ ಸಾಹಸದ ಕೃತ್ಯವನ್ನು ಮಾಡಿದನು. ಇದರಿಂದ ಅವರಿಗೆ ಅನೇಕರು ವಿರೋಧಿಗಳಾದರು. ಆದರೂ ವಿಶಾಲ ಹೃದಯವುಳ್ಳ ಬಸವೇಶ್ವರನು—

ಕೊಲ್ಲುವನೇ ಮಾದಿಗ. ಹೊಲಸು ತಿಂಬುವನೇ ಹೊಲೆಯ. ಕುಲವೇನೋ ಅವಂದಿರ ಕುಲವೇನೋ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲ ಸಂಗನ ಶರಣರೇ ಕುಲಜರು.

ಎಂದು ಹೇಳಿ ಅಸ್ಪೃಶ್ಯರ ಉದ್ಧಾರವನ್ನು ಆಗಲೇ ಮಾಡಿದನು.

ಇನ್ನು ಬಸವೇಶ್ವರನು ಸ್ತ್ರೀಯರ ಉನ್ನತಿಗಾಗಿ ಏನು ಮಾಡಿದನೆಂದು ನೋಡೋಣ. ನಿಜವಾಗಿ ಅವನಲ್ಲಿ ಇವರ ಬಗ್ಗೆ ಬಹಳ ಉಚ್ಚ ವಿಚಾರಗಳಿದ್ದವು. ಪುರುಷನೇ ದೊಡ್ಡವನು, ಅವನೇ ದೀಕ್ಷೆಗೆ ಯೋಗ್ಯನು, ಅವನ ಮುಖಾಂತರವೇ ಸ್ತ್ರೀಯಳು ಮೋಕ್ಷವನ್ನು ಪಡೆಯಬೇಕು ಎಂಬ ಕೀಳು ವಿಚಾರಗಳನ್ನು ತೆಗೆದುಹಾಕಿ ಸ್ತ್ರೀಯರು ಪುರುಷರ ಸಮಾನರು, ಅವರೂ ದೀಕ್ಷೆಗೆ ಯೋಗ್ಯರು, ಮತ್ತು ಮೋಕ್ಷವನ್ನೂ ಮತ್ತು ತಮ್ಮ ಪತಿಗಳ ಸದ್ಗತಿಯನ್ನೂ

ಪಡೆಯಲು ಸಮರ್ಥರು ಎಂದು ಹೇಳಿ ಅವರ ಉನ್ನತಿಗೆ ಪ್ರೋತ್ಸಾಹನ ಕೊಟ್ಟನು. ಗಂಡಹೆಂಡರಿಬ್ಬರೂ ಒಬ್ಬರಿಗೊಬ್ಬರು ಸಹಾಯಕರಾಗಿ ಸದ್ಗತಿಯನ್ನು ಪಡೆಯಬೇಕೆಂದು ಬೋಧಿಸಿದನು.

ಕೊನೆಗೆ ಬಸವೇಶ್ವರನು ಕನ್ನಡ ಸಾಹಿತ್ಯ ಸೇವೆಯನ್ನು ಮಾಡಿದ್ದಾನೆಂದು ಹೇಳಿದರೆ ನಮ್ಮ ಆಧುನಿಕ ಸಾಹಿತಿಗಳು ಬೆರಗಾಗಬಹುದು. ಅವನು ಸಾಹಿತ್ಯಸೇವೆಯನ್ನು ಮಾಡಬೇಕೆಂದು ಹೊರಟವನಲ್ಲ. ಆದರೆ ಉಳಿದ ಅವನ ಕಾರ್ಯಗಳೊಡನೆ ಸಾಹಿತ್ಯ ಸೇವೆಯು ಸಹಜವಾಗಿಯೇ ಆಗಿಹೋಯಿತು. ಅವನು ವೀರಶೈವ ಮತದ ತತ್ವಗಳನ್ನು ಪ್ರಚಾರಮಾಡುವಾಗ ಅವನ ಮುಂದೆ ಸಂಸ್ಕೃತ ಬಲ್ಲ ಪಂಡಿತರಿದ್ದರೂ ಸಾಮಾನ್ಯ ಜನರು ಕೂಡ ಅಸಂಖ್ಯಾತರಾಗಿದ್ದರು. ಇಂಥವರಿಗೆ ಸಂಸ್ಕೃತದಲ್ಲಿ ಹೇಳಿದರೆ ಏನು ತಿಳಿಯಬೇಕು? ಆದುದರಿಂದ ಅವರ ಸಾಮಾನ್ಯ ಭಾಷೆಯಾದ ಕನ್ನಡದಲ್ಲಿ ಸುಲಭವಾದ ಶಬ್ದಗಳನ್ನು ಉಪಯೋಗಿಸಿ ಸಹಜವಾಗಿ ತಿಳಿಯುವ ಸರಳವಾದ ಶೈಲಿಯಿಂದ ತನ್ನ ವಿಚಾರಗಳನ್ನು ತಿಳಿಸಿದನು. ದೊಡ್ಡ ದೊಡ್ಡ ತತ್ವಜ್ಞಾನದ ವಿಚಾರಗಳನ್ನು ಕೂಡ ತಿಳಿಗನ್ನಡದಲ್ಲಿ ಸಾಮಾನ್ಯ ಜನರಿಗೂ ಸಹ ತಿಳಿಯುವಂತೆ ಹೇಳಿದನು. ಬಸವೇಶ್ವರನ ಹೃದಯವು ಕೋಮಲವಾಗಿದ್ದು ಜನಸೇವೆಗಾಗಿ ಅವನಲ್ಲಿ ಭಕ್ತಿಪ್ರೇರಿತವಾದ ಒಂದು ತರದ ಸ್ಫೂರ್ತಿಯುಂಟಾಗಿ ಅಂತಃಕರಣಪೂರ್ವಕವಾಗಿ ಅವನಿಂದ ಕೆಲವು ನುಡಿಗಳು ಹೊರಟವು. ಈ ನುಡಿಗಳೇ ವಚನಗಳು. ಇವು ಸಹಜವಾಗಿ ಅವನ ಹೃದಯದಿಂದ ಹೊರಹೊಮ್ಮಿದವಾದುದರಿಂದ ಇವುಗಳನ್ನು ಶುದ್ಧ ಸಾಹಿತ್ಯದಲ್ಲಿ ಸೇರಿಸಲಿಕ್ಕೆ ಯಾವ ಅಡ್ಡಿಯೂ ಇಲ್ಲ. ಬಸವೇಶ್ವರನೂ ಮತ್ತು ಶಿವಾನುಭವ ಮಂಟಪದಲ್ಲಿದ್ದ ಚನ್ನಬಸವೇಶ್ವರ, ಅಲ್ಲಮಪ್ರಭು, ಸಿದ್ಧರಾಮೇಶ್ವರ, ಮಹಾದೇವಿಯಕ್ಕ ಮೊದಲಾದವರೆಲ್ಲರೂ ಸಹ ಇಂಥ ವಚನಗಳನ್ನು ರಚಿಸಿದ್ದಾರೆ. ಈ ವಚನಕಾರರ ಮತ್ತು ಅವರ ವಚನಗಳ ಸಂಖ್ಯೆಯು ಬಹಳವಿದ್ದು ಅವುಗಳ ಬಗ್ಗೆ ಶೋಧವು ಇನ್ನೂ ನಡೆದಿದೆ. ಈ ವಚನಗಳು ಬಿಡಿಬಿಡಿಯಾದ ಶಬ್ದಗಳಿಂದ ಕೂಡಿ ಸಣ್ಣ ಸಣ್ಣ ವಾಕ್ಯಗಳಾಗಿ ಕನ್ನಡ ಗದ್ಯದ ಬೆಳವಣಿಗೆಗೆ ತಳಹದಿಯಾಗಿದೆ. ಮುಂದೆ ಈ ವಚನಗಳ ಮೇಲೆ ಟೀಕೆಗಳನ್ನು ಬರೆಯಹತ್ತಿದ್ದರಿಂದ ಕನ್ನಡದಲ್ಲಿ ಗದ್ಯ ಲೇಖನವು ಹೆಚ್ಚಾಯಿತು. ಈ ವಚನಗಳು ಗದ್ಯದಲ್ಲಿದ್ದರೂ ಕಾವ್ಯಾಂಶಗಳಿಂದ ಕೂಡಿದ್ದರಿಂದ ಕಾವ್ಯಮಯವಾದ ಗದ್ಯ (Poetic Prose) ದಲ್ಲಿ ಇರುತ್ತವೆ. ಇವುಗಳನ್ನು ಓದುವಾಗ ಕಾವ್ಯದಲ್ಲಿರುವ ಶಬ್ದಮಾಧುರ್ಯವು (Music) ಹೊರಡುತ್ತದೆ. ಇವೆಲ್ಲ ಕಾರಣಗಳಿಂದ ಕನ್ನಡ ಸಾಹಿತ್ಯದಲ್ಲಿ ವಚನಗಳಿಗೆ ಒಂದು ವಿಶಿಷ್ಟವಾದ ಮಹತ್ವದ ಸ್ಥಾನವು ಉಂಟಾಗಿದೆ.

ಒಟ್ಟಿನಮೇಲೆ ಬಸವೇಶ್ವರನು ತನ್ನ ಅಲ್ಪಾವಧಿಯಲ್ಲಿ ಯಾವ ಅಲೌಕಿಕ ಪುರುಷನೂ ಮಾಡದ ಕಾರ್ಯಗಳನ್ನು ನೆರವೇರಿಸಿದನು. ಉಚ್ಚನೀಚ ಕುಲಗಳೆಂಬ ಭೇದಭಾವವಿಲ್ಲದೆ ಎಲ್ಲರಿಗೂ ಲಿಂಗದೀಕ್ಷೆಯನ್ನು ಕೊಟ್ಟು ಡಂಭಾಚಾರಗಳನ್ನು ಕಡಿಮೆಮಾಡಿ ಆಚಾರಕ್ಕೆ ಹೆಚ್ಚು ಮಹತ್ವ ಕೊಟ್ಟನು. ಅದರೊಂದಿಗೆ ಪ್ರತಿಯೊಬ್ಬ ವೀರಶೈವನು ಒಂದು ಸ್ವಂತ ಉದ್ಯೋಗವನ್ನು ಮಾಡಿಯೇ ಜೀವಿಸಬೇಕೆಂದು ತಿಳಿಸಿಕೊಟ್ಟು ಆರ್ಥಿಕ ಸ್ಥಿತಿಯನ್ನು ಸುಧಾರಿಸಿದನು. ಉಳಿದ ಯಾವ ಮತದವರೂ ಅಸ್ಪೃಶ್ಯರಿಗೆ ಸಮಾಜದಲ್ಲಿ ಸ್ಥಾನ ಕೊಟ್ಟದ್ದಿಲ್ಲ. ಆದರೆ ಬಸವೇಶ್ವರನು ಆ ತರದ ಭೇದವನ್ನೇ ತೆಗೆದು ಹಾಕಿ ಎಲ್ಲರೂ ಸಮಾನರು; ಶಿವಭಕ್ತರು ಎಂದು ಹೇಳಿದನು. ಸ್ತ್ರೀಯರಿಗೂ ಪುರುಷರ ಸಮಾನ ಹಕ್ಕುಗಳನ್ನು ಒದಗಿಸಿಕೊಟ್ಟು ಅವರ ನಿಜವಾದ ಮಹತ್ವವನ್ನು ತಿಳಿಸಿಕೊಟ್ಟನು. ಈ ಎಲ್ಲ ಸುಧಾರಣೆಗಳಿಂದ ಸಮಾಜದಲ್ಲಿ ಸ್ವಾತಂತ್ರ್ಯ, ಸಮಾನತ್ವ, ಭ್ರಾತೃತ್ವ (Liberty, Equality, Fraternity) ಗಳು ಉಂಟಾದವು. ಇವನು ವೀರಶೈವ ಮತಕ್ಕೆ ಮಹತ್ವಕೊಟ್ಟ ಮುಖ್ಯ ಕಾರಣವೇನೆಂದರೆ ಇದರಲ್ಲಿ ಇಡೀ ಮಾನವ ಧರ್ಮಕ್ಕೆ ಅನ್ವಯಿಸುವ ಉಚ್ಚ ವಿಚಾರಗಳಿರುತ್ತವೆ. ಧರ್ಮ ಸುಧಾರಕರಲ್ಲಿ ಇದಕ್ಕೂ ಹೆಚ್ಚಾಗಿನ್ನೇನು ಬೇಕು? ಇವನು ಅನ್ಯಮತದವರನ್ನು ಹಳಿದಿಲ್ಲ, ನಿಂದಿಸಿಲ್ಲ. ಮತ್ತು ಇವನು ಈ ಜಗತ್ತು ಇರುವ ವರೆಗೂ ನೆನಪಿರುವಂತೆ ಮಾಡಿದ ಕಾರ್ಯವೆಂದರೆ ಕನ್ನಡ ಸಾಹಿತ್ಯಸೇವೆಯು.

ನಾವು ಯಾರಿಗಾದರೂ ಉಚ್ಚಸ್ಥಾನವನ್ನು ಕೊಡಬೇಕಾದರೆ ಅವರನ್ನು ವಿಶಾಲವಾದ ಹೃದಯದಿಂದ ಕಂಡು, ವಿಶಾಲವಾದ ದೃಷ್ಟಿಯಿಂದ ನೋಡಿ ನಿಷ್ಪಕ್ಷಪಾತ ಮತ್ತು ವಿಮರ್ಶಕ ಬುದ್ಧಿಯಿಂದ ಅವರ ಗುಣ ದೋಷಗಳನ್ನು ಚೆನ್ನಾಗಿ ವಿಚಾರ ಮಾಡಬೇಕಾಗುವದು. ಕೆಲವರು ಇವನನ್ನು ಭಗವಾನ್ ಬುದ್ಧ, ಮಹಾತ್ಮಾ ಗಾಂಧಿ ಮೊದಲಾದ ಮಹಾ ಪುರುಷರೊಡನೆ ಹೋಲಿಸುವರು. "Comparisons are always odious" ಅಂದರೆ 'ಹೋಲಿಸಿ ನೋಡುವುದು ಯಾವಾಗಲೂ ತಿರಸ್ಕರಣೀಯವು' ಎಂಬದನ್ನು ನೆನಪಿನಲ್ಲಿಟ್ಟು ಬಸವೇಶ್ವರನು ಸಾಮಾನ್ಯರಲ್ಲಿಯ ಅಸಾಮಾನ್ಯನು, ಲೌಕಿಕರಲ್ಲಿ ಅಲೌಕಿಕನು; ಜಗತ್ತಿನ ಇತಿಹಾಸದಲ್ಲಿ ಒಂದು ವಿಶಿಷ್ಟ ಸ್ಥಾನವುಳ್ಳವನು ಎಂದು ಹೇಳಿದರೆ ಸಾಕು. ಮತ್ತು ಕೆಳಗಿನ ವಚನದಿಂದ ಆತನಲ್ಲಿ ಎಳ್ಳಷ್ಟು ಆತ್ಮಸ್ತುತಿಯ ವಿಚಾರವಿಲ್ಲೆಂದು ತಿಳಿಯುವದು.

ಎನಗಿಂತ ಕಿರಿಯರಿಲ್ಲ. ಶಿವಭಕ್ತರಿಗಿಂತ ಹಿರಿಯರಿಲ್ಲ. ಎನ್ನ ಮನ ಸಾಕ್ಷಿ. ನಿಮ್ಮ ಪಾದ ಸಾಕ್ಷಿ. ಕೂಡಲ ಸಂಗಮದೇವಾ ಎನಗಿದೇ ದಿಬ್ಯ.

ಇದರಿಂದ ಸಹಜವಾಗಿ ಇವನ ಘನತೆಯು
ಒಡೆದು ಕಾಣುವದು.

"ಶಿವಾನುಭವ."

---

—ಮೇ ತಿಂಗಳ ಮೊದಲನೆಯ ವಾರದಲ್ಲಿ ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ವರ್ಧಾದಲ್ಲಿ ಕೂಡುವದು. ಮಧ್ಯ ಪ್ರಾಂತದ ಕಾಯದೇ ಮಂತ್ರಿಗಳು ರಾಜಕೀಯವಲ್ಲದ ಕೈದಿಯನ್ನು ಬಿಡುಗಡೆ ಮಾಡಿದ ಬಗ್ಗೆ ಶ್ರೀ. ಮನ್ಮಥನಾಥ ಮುಕರ್ಜಿಯವರ ವರದಿಯು ಕೂಡಾ ಈ ಸಭೆಯ ಮುಂದೆ ಬರುವುದು. ವರ್ಕಿಂಗ್ ಕಮಿಟಿಯು ತನ್ನ ನಿರ್ಣಯ ಕೂಡಾ ಕೊಡಬಹುದು.

---

# ವರ್ಣಗಳು ವಿಘಾತಕ.

## ಶ್ರೀ. ಅ. ಪ. ಕರಮರಕರರ ವಿಚಾರ.

### ಅಸ್ಪೃಶ್ಯತಾ ನಿವಾರಣೆ ಹಾಗು ಕಾಂಗ್ರೆಸ್‌ದ ಕಾರ್ಯಕಲಾಪ ಎಂಬ ಲೇಖನದಲ್ಲಿ

(ಸಂಯುಕ್ತ ಕರ್ನಾಟಕ ತಾ. ೧೨-೪-೩೮)

ಶ್ರೀ. ಅ.ಪ. ಕರಮರಕರ ಎಂ. ಎ. ಎಲೆಲ್. ಬಿ. ಧಾರವಾಡ

ಇವರು ಬರೆದುದೇನೆಂದರೆ—

ಆರ್ಯರು ಇಲ್ಲಿ ಪ್ರಥಮತಃ ಅಗ್ನಿಪೂಜಕರಾಗಿ ಕಾಲೂರಿದರು. ಆದರೆ ಅವರು ತಮ್ಮ ವರ್ಣ ಶ್ರೇಷ್ಠತೆಯನ್ನು ಕಾಪಾಡುವದರ ದೆಸೆಯಿಂದ ಆರ್ಯ ಪೂರ್ವಕಾಲೀನ ಸಂಸ್ಕೃತಿಯಮೇಲೆ ಅಗ್ನಿಪೂಜೆಯ ವಿಧಿಯನ್ನು ಏರ್ಪಾಡು ಮಾಡಿ ಭಾರತದಲ್ಲಿ ಪ್ರಥಮತಃ ವರ್ಣಾಶ್ರಮ ಭೇದವನ್ನು ನಿರ್ಮಾಣ ಮಾಡಿದರೆಂದು ನಾವು ಹೇಳಿದರೆ ಅದು ಆಶ್ಚರ್ಯಕಾರಕ ಸಂಗತಿಯಾಗಲಿಕ್ಕಿಲ್ಲ' ಇಂಡೋ—ಇರಾಣಿಯನ ಕಾಲದಲ್ಲಿ ಆರ್ಯ—ಐರ್ಯ ಎಂಬುವ ಶಬ್ದಗಳು ಪ್ರಚಾರದಲ್ಲಿದ್ದವು. ಅವರು ಅಗ್ನಿಪೂಜಕರಿದ್ದರು. ಆದರೆ ಭಾರತದಲ್ಲಿ ಪ್ರವೇಶ ಮಾಡಿದಮೇಲೆ ಅವರು ಚಾತುರ್ವರ್ಣ್ಯದಂಥ ಹಿಂದುಸ್ಥಾನಕ್ಕೆ ವಿಘಾತಕವಾದ ಕಲ್ಪನೆ ವಿಜೃಂಭಿತ ಮಾಡಿ ಅತ್ಯಂತ ಚತುರತನದಿಂದ ಮತ್ತು ಮುತ್ಸದ್ದಿತನದಿಂದ ನಮ್ಮಲ್ಲಿ ಆರ್ಯ— ಅನಾರ್ಯ ಮತ್ತು ಚಾತುರ್ವರ್ಣ್ಯದ ವಿಷಮತೆಯ ಕಲ್ಪನೆ ನಿರ್ಮಾಣ ಮಾಡಿದರು.

ಆರ್ಯರು ಬಂದನಂತರ ಇಲ್ಲಿದ್ದ ಜನಾಂಗದವರ ಕೂಡ ಸಂಬಂಧ ಬಂದಿತು. ಈ ಸಂಬಂಧವು ಬಂದಮೇಲೆ ಭಾರತದಲ್ಲಿ ಅನೇಕ ಮಿಶ್ರ ಜಾತಿಗಳಾದರೂ ನಿರ್ಮಾಣವಾದವು. ಕಿಂಬಹುನಾ ಭಾರತದಲ್ಲಿ ಈಗ್ಯೆ ಶುದ್ಧ ಆರ್ಯವಂಶದವರು ಇರಬಹುದೋ ಎನೋ ಎಂಬುವ ಸಂದೇಹ ಯಾರಿಗಾದರೂ ಬರಬಹುದು. ಇರಲಿ. ಈ ಪ್ರಕಾರವಾಗಿ ಒಮ್ಮೆ ಮಿಶ್ರ ಜಾತಿಗಳು ಅಸ್ತಿತ್ವದಲ್ಲಿ ಬಂದನಂತರ ಅವರಿಗಾದರೂ ಈ ಚಾತುರ್ವರ್ಣ್ಯದಲ್ಲಿ ಸಮಾವೇಶ ಮಾಡುವುದು ಅವಶ್ಯಕವಾಯಿತು. ಆದ್ದರಿಂದ ವೇದ ಕಾಲದಲ್ಲಿ ವಿದ್ಯಾ ಬಲದಿಂದ, ಹಾಗೂ ತಪೋಬಲದಿಂದ ಬ್ರಾಹ್ಮಣರಾದದ್ದು ಕಂಡುಬರುತ್ತದೆ. ಪರಾಶರನು ಚಾಂಡಾಲ ಸ್ತ್ರೀಯಿಂದ ಜನ್ಮ ಹೊಂದಿದನು. ಆದರೆ ಧೀವರನ ಹೊಟ್ಟೆಯಲ್ಲಿ ಹುಟ್ಟಿದ ವ್ಯಾಸನಾದರೂ ಬ್ರಾಹ್ಮಣನಾದನೆಂದು ಪ್ರಾಚೀನ ಗ್ರಂಥಗಳಲ್ಲಿ ಉಲ್ಲೇಖಗಳಿರುವವು. ಹಾಗೂ ಕೌತ್ಸನು ಗಣಿಕಾ ಪುತ್ರನೆಂದು ಉಲ್ಲೇಖ ಮಾಡಿರುತ್ತಾರೆ. ಈ ಪ್ರಕಾರವಾಗಿ ವೇದ ಕಾಲದಲ್ಲಿ ಚಾತುರ್ವರ್ಣ್ಯದ ಕಲ್ಪನೆಯು ಈಗ್ಯೆ ಕಂಡುಬರುವ ಘೋರ ಶೃಂಖಲೆಯಿಂದ ಬದ್ಧವಾಗಿರಲಿಲ್ಲ.

#### ಬ್ರಾಹ್ಮಣರ ಕಾಲ.

ಆದರೆ ಯಜುರ್ವೇದ ಮತ್ತು ಬ್ರಾಹ್ಮಣ ಕಾಲದಲ್ಲಿ ಮಾತ್ರ ಬ್ರಾಹ್ಮಣರು ಬಲಿಷ್ಠತರಾಗಿದ್ದಾರೆ. ಭಾರತದಲ್ಲಿಯ ಎಲ್ಲ ಜನಾಂಗದವರಿಗೆ ಅಜ್ಞಾನಾಂಧಕಾರದಲ್ಲಿಟ್ಟು ವೇದಗಳ ಅರ್ಥವನ್ನಾದರೂ ವಿಪರ್ಯಸ್ತ ರೀತಿಯಿಂದ ಮಂಡಿತಮಾಡಿ ಬ್ರಾಹ್ಮಣರೆಂದರೆ ಪೃಥ್ವೀ ಮೇಲಿನ ದೇವತೆಗಳೆಂಬುವ ಭಾವನೆಯನ್ನು ವಿಜೃಂಭಿತ ಮಾಡಿದರು. ಬ್ರಾಹ್ಮಣರೇ ಮಾಂತ್ರಿಕ, ಪುರೋಹಿತ, ಮಂತ್ರಿ ಮುಂತಾದ ಕಾರ್ಯಕಲಾಪಗಳನ್ನು ಏರ್ಪಡಿಸಲಿಕ್ಕೆ ಯೋಗ್ಯರಿರುವರೆಂಬುವ ಭಾವನೆ ಉಂಟುಮಾಡಿದರು. ಇದಲ್ಲದೆ ಧರ್ಮದ ಪುರಸ್ಕಾರವಾದರೂ ಬ್ರಾಹ್ಮಣರೇ ಮಾಡತಕ್ಕದ್ದು. ದೇಶದಲ್ಲಿ ಆಳುವ ಅರಸನಾದರೂ ಈ ಪುರೋಹಿತರ ಅನುಜ್ಞೆ ಹೊರತು ಯಾವ ಪ್ರಕಾರದ್ದಾದರೂ ಧಾರ್ಮಿಕ ಕಟ್ಟಳೆಗಳನ್ನೂ ಮಾಡತಕ್ಕದ್ದಲ್ಲವೆಂದು ಅವರು ವಿಧಿಸಿದರು. ಈ ಹೊರತು ತಮ್ಮ ಸಹಾಯದಿಂದಲೇ ಯಾರಿಗಾದರೂ ಮೋಕ್ಷ ಪ್ರಾಪ್ತಿಯಾಗುವದೆಂದು ಅವರು ಹೇಳಿದರು. ಹೀಗಾದಮೇಲೆ ಬ್ರಾಹ್ಮಣರು ಅಂದು ಚಾತುರ್ವರ್ಣ್ಯದ ಜನಾಂಗದಲ್ಲಿ ಶ್ರೇಷ್ಠರು, ಹಾಗೂ ಚಾತುರ್ವರ್ಣ್ಯದ ಹೊರಗಿಡಲ್ಪಟ್ಟ ಜನಾಂಗದವರಲ್ಲಾದರೂ ಶ್ರೇಷ್ಠರೆಂಬುವ ಕಲ್ಪನೆ ವಿಜೃಂಭಿತ ಮಾಡಲ್ಪಟ್ಟಿತು. ಇದೇ ಕಾಲದಲ್ಲಿ ಜಾತಿ ಉಪಜಾತಿ ಉಚ್ಚನೀಚ ಸ್ಪೃಶ್ಯ ಅಸ್ಪೃಶ್ಯ ಎಂಬುವ ಭೇದ ನಿರ್ಮಾಣವಾಯಿತೆಂದು ನಾವು ಹೇಳಬಹುದು, ಇದೇ ಕಾಲದಲ್ಲಿ ಅಸ್ಪೃಶ್ಯರ ವಿಷಯವಾಗಿ ವಿಷಮತೆಯ ಉಗಮವಾಯಿತು. ಮತ್ತು ಇನ್ನು ಮುಂದೆ ಅಸ್ಪೃಶ್ಯರಿಗೆ ಧರ್ಮದ ಬಾಗಿಲವು ಬಂದುಮಾಡಲ್ಪಟ್ಟಿತು. ಹಿಂದೂ ಧರ್ಮದ ಮೇಲಿನ ಈ ಘೋರ ಅಪಘಾತವನ್ನು ದೂರಪಡಿಸುವದರ ದಶೆಯಿಂದ ಗೌತಮ ಬುದ್ಧನು, ಭಾಗವತ ಧರ್ಮವು ಬಸವೇಶ್ವರ ಮುಂತಾದವರು ಬೇರೆ ಬೇರೆ ರೀತಿಯಿಂದ ಪ್ರಯತ್ನಿಸಿದರು.

#### ನಮ್ಮ ಪೂರ್ವೇತಿಹಾಸ.

ವಿಧಿಘಟನೆ ಹೇಗಿರುವದೋ ನೋಡಿರಿ. ಪರಕೀಯರಾದ ಆರ್ಯರು ಇಲ್ಲಿ ಬಂದು ಇಲ್ಲಿಯವರ ಧಾರ್ಮಿಕ ಕಲ್ಪನೆಗಳನ್ನು ಅನುಗೊಳಿಸಿ ಇಲ್ಲಿದ್ದ ಜನಾಂಗದವರಲ್ಲಿ ಚಾತುರ್ವರ್ಣ್ಯದಂಥ ಬುದ್ಧಿಭೇದ ಮಾಡುವಂಥ ಕಲ್ಪನೆಯನ್ನಾದರೂ ವಿಜೃಂಭಿತ ಮಾಡಿದರು. ಇದಲ್ಲದೆ ಇಲ್ಲಿದ್ದ ಜನಾಂಗದವರ ಪೈಕಿಯೇ ಕೆಲವರಿಗೆ ಧಾರ್ಮಿಕ ಬಹಿಷ್ಕಾರವನ್ನು ಹಾಕಿದರು. ಭಾರತದಲ್ಲಿ ಇದ್ದವರು ನಾವೆಲ್ಲರೂ ದ್ರಾವಿಡರೇ ಸರಿ. ಆದರೆ ಆರ್ಯರು ಕೊಟ್ಟ ಶಿಕ್ಷಣದಿಂದ ನಾವಾದರೂ ಆರ್ಯ ಭೂಮಿಯಲ್ಲಿಯೇ ವಾಸ ಮಾಡುತ್ತಿರುವ ಆರ್ಯರೆಂದು ತಪ್ಪು ಕಲ್ಪನೆ ಮಾಡಿಕೊಂಡು ಆರ್ಯ-ಅನಾರ್ಯ ಈ ಭೇದವನ್ನು ಮಾಡಲು ಹತ್ತಿದ್ದೇವೆ!

---

ಸರಕಾರವೂ ಅವಕಾಶವನ್ನು ಕೊಡಬೇಕಾದುದೇ ವಿಹಿತವು. ಇದಕ್ಕಾಗಿಯೇ ಪ್ರಜೆಗಳನ್ನು ಹೀಗೆ ಎದುರುಹಾಕಿಕೊಂಡರೆ ಜನಗಳಲ್ಲಿ ಅಸಂತೋಷವು ಹೆಚ್ಚದಿರಲಾರದು.

ಬ್ರಿಟಿಶ್ ಧ್ವಜವು ಇಂದಲ್ಲ ನಾಳೆ ಹೋಗಿ ಹಿಂದೀ ಧ್ವಜವೇ ಹೇಗೆ ಹಾರಾಡುವ ಸಮಯ ಬರುವುದೋ ಹಾಗೆಯೇ ಮಹಾರಾಜಾ ಸರಕಾರದ ಧ್ವಜವೂ ಹೋಗಿ ಹಿಂದೀ ಧ್ವಜವೇ ಅಲ್ಲಿಯೂ ಮೆರೆಯುವ ಕಾಲ ಬಂದೇ ಬರುವುದು. ಈಗಿನ ಚಟುವಟಿಕೆಯು ಅದನ್ನೇ ಸೂಚಿಸುತ್ತದೆ. ಸರಕಾರಕ್ಕೆ ಅಪ್ರಿಯವಾದ ಅಂಥ ಸಮಯವನ್ನು ಅದು ಮುಂದಾಲೋಚನೆಯಿಲ್ಲದ ತನ್ನ ಇಂಥ ದಬ್ಬಾಳಿಕೆಯಿಂದಲೇ ಜಾಗ್ರತೆ ತಂದುಕೊಳ್ಳುತ್ತಲಿದೆಯಲ್ಲವೆ ?

---

# ಮೈಸೂರು ಸಂಸ್ಥಾನದ ಮುಸಲ್ಮಾನರ ಆರಾಷ್ಟ್ರೀಯ ವಿಚಾರ.

ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರಕಾರವು ಏರ್ಪಡಬೇಕೆಂದು "ಮೈಸೂರು ಕಾಂಗ್ರೆಸ್" ಸಂಸ್ಥೆಯು ಪ್ರಯತ್ನಿಸುತ್ತಲಿದೆಯಷ್ಟೆ. ಈ ಸಂಸ್ಥೆಯಲ್ಲಿ ಮೈಸೂರು ಸಂಸ್ಥಾನದ ಮುಸಲ್ಮಾನ ಸಮಾಜವೇನೂ ಸೇರಿಲ್ಲ. ಆದರೆ ಬ್ರಿಟಿಶ್ ಹಿಂದುಸ್ಥಾನದ ಕಾಂಗ್ರೆಸ್ಸಿನಲ್ಲಿ ಹೇಗೆ ಮುಸಲ್ಮಾನ್ ಸಮಾಜವು ಸೇರದೆ, ಸರಕಾರದ ದಬ್ಬಾಳಿಕೆಗೆ ತುತ್ತಾಗದೆ, ಯಾವ ನಷ್ಟಕಷ್ಟಗಳನ್ನೂ ಅನುಭವಿಸದೆ, ದೂರದಲ್ಲಿದ್ದು ಕಾಂಗ್ರೆಸ್ಸಿನ ಪ್ರಯತ್ನದಿಂದ ದೊರೆತ ರಾಜಕೀಯ ಸೌಲಭ್ಯದಲ್ಲಿ ಮಾತ್ರ ಹೆಚ್ಚಾದ ಪಾಲುಗಾರಿಕೆಯನ್ನು ಹೊಂದಲು ಮುಂದೆ ಬಂದಿತೋ ಹಾಗೆಯೇ ಮೈಸೂರು ಸಂಸ್ಥಾನದ ಮುಸಲ್ಮಾನ್ ಸಮಾಜವೂ ಯಾವ ವಿಧವಾಗಿಯೂ ದೇಶಸೇವೆಗೆ ತನು ಮನ ಧನಗಳನ್ನು ಸವಿಸದೆ ಹೆಚ್ಚಿನ ಪಾಲುಗಾರಿಕೆಗೆ ಮಾತ್ರ ಈಗಾಗಲೇ ಕೈ ಚಾಚಿದೆ.

ಮೈಸೂರು ಸಂಸ್ಥಾನದ ಮುಸಲ್ಮಾನರ ಪರವಾಗಿ ಒಂದು ಶಿಷ್ಟಮಂಡಲವು ಕಳೆದ ೧೪ ನೆಯ ತಾರೀಖಿನ ದಿವಸ ಬೆಂಗಳೂರಲ್ಲಿ ದಿವಾನರಾದ ಸರ್. ಮಿರ್ಜಾ ಸಾಹೇಬರನ್ನು ಕಂಡು ತನ್ನ ಆಕಾಂಕ್ಷೆಯನ್ನು ತಿಳಿಸಿತು. ಅದರಲ್ಲಿ ಈ ಕೆಳಗಿನ ಮುಖ್ಯ ಸಂಗತಿಗಳಿವೆ.

## ಮುಸಲ್ಮಾನರ ಬೇಡಿಕೆಗಳು.

(೧) ಮಹಾರಾಜಾ ಸರಕಾರದ ಮಂತ್ರಿಮಂಡಲದಲ್ಲಿ ಒಬ್ಬರಾದರೂ ಮುಸಲ್ಮಾನ್ ಮಂತ್ರಿಗಳಿರಬೇಕು. ದಿವಾನರು ಮುಸಲ್ಮಾನರಿದ್ದರೂ ಮಂತ್ರಿಮಂಡಲದಲ್ಲಿ ಒಬ್ಬರು ಮುಸಲ್ಮಾನರಿರಬೇಕಾದುದು ಅಗತ್ಯ.

(೨) ಸ್ಥಳೀಯ ಸಂಸ್ಥೆಗಳಲ್ಲಿಯೂ ಶಾಸನ ಸಭೆಗಳಲ್ಲಿಯೂ ಮುಸಲ್ಮಾನರಿಗೆ ಪ್ರತ್ಯೇಕವಾದ ಪ್ರಾತಿನಿಧ್ಯವನ್ನು ಕೊಡಬೇಕು.

(೩) ಮುಸಲ್ಮಾನರನ್ನು ಬ್ರಾಹ್ಮಣೇತರ ಪಂಗಡದಲ್ಲಿ ಸೇರಿಸದೆ ಅವರು ಪ್ರತ್ಯೇಕವಾದ ಒಂದು ಜನಾಂಗದವರೆಂದೇ ಪರಿಗಣಿಸಿ ಅವರ ಹಕ್ಕುಬಾಧ್ಯತೆಗಳನ್ನು ಸಂರಕ್ಷಿಸಬೇಕು.

(೪) ರಾಜಕೀಯ ಸುಧಾರಣಾ ಸಮಿತಿಯಲ್ಲಿ ಈಗ ಇಬ್ಬರು ಮುಸಲ್ಮಾನರನ್ನು ನಿಯಮಿಸಿರುವುದು ಸಾಲದು. ಇನ್ನು ಇಬ್ಬರನ್ನಾದರೂ ನಿಯಮಿಸಬೇಕು.

(೫) ಉರ್ದು, ಅರಬಿ, ಪರ್ಶಿಯನ್ ಭಾಷೆಗಳಿಗೂ ಮುಸಲ್ಮಾನರ ಶಿಕ್ಷಣ ಪ್ರಸಾರಕ್ಕೂ ಉತ್ತೇಜನವನ್ನು ಕೊಡಬೇಕು.

(೬) ಮುಸಲ್ಮಾನರು ಈ ಸಂಸ್ಥಾನದಲ್ಲಿ ೧೦೦ಕ್ಕೆ ೬ ರಂತೆ ಸಂಖ್ಯಾಬಲವುಳ್ಳವರಾಗಿದ್ದಾರೆ. ಇವರಿಗೆ ರಾಜ್ಯಾಂಗದಲ್ಲಿ ೧೦೦ಕ್ಕೆ ೨೦ ರಂತೆ ಸ್ಥಾನಗಳನ್ನು ಕೊಡಬೇಕು.

ಮುಸ್ಲಿಂಲೀಗಿನ ಚಟುವಟಿಕೆಯು ಹೇಗೆ ಅರಾಷ್ಟ್ರೀಯವಾದುದೂ ರಾಷ್ಟ್ರಕ್ಕೆಘಾತಕವಾದುದೂ ಆಗಿದೆಯೋ ಹಾಗೆಯೇ ಮೈಸೂರು ಮುಸಲ್ಮಾನ್ ಸಮಾಜದವರ ಈ ವಿಚಾರಗಳೂ ಆ ಸಂಸ್ಥಾನಕ್ಕೆ ಅಪಾಯಕರವಾದವುಗಳೇ ಆಗಿವೆ.

ಈ ಶಿಷ್ಟಮಂಡಲದವರು ಮಹಾರಾಜಾ ಸರಕಾರದ ಈಗಿನ ರಾಜ್ಯಪದ್ಧತಿಯೇ ಉಚಿತವಾದುದೆಂದು ಹೇಳಿದ್ದಾರೆ. ಪಾಶ್ಚಾತ್ಯ ಪದ್ಧತಿಯ ಪ್ರಜಾ ಪ್ರಭುತ್ವವು ಮೈಸೂರು ಸಂಸ್ಥಾನಕ್ಕೆ ಸಂಬೀಳುವುದಿಲ್ಲವಂತೆ. ಎಂದಮೇಲೆ ಜವಾಬ್ದಾರಿ ಸರಕಾರವನ್ನು ಸ್ಥಾಪಿಸಬೇಕೆಂಬ ಈಗಿನ ಪ್ರಯತ್ನವು ಕೂಡಾ ಇವರಿಗೆ ಒಪ್ಪಿಗೆಯಿಲ್ಲವೆಂದೇ ಸ್ಪಷ್ಟವಾಗುತ್ತದೆ. ಆದರೆ ಅಂಥ ಪ್ರಭುತ್ವ ಏರ್ಪಡುವುದಾದರೆ ತಮಗೆ ಮೇಲಿನಂತಹ ಅನುಕೂಲತೆಗಳೆಲ್ಲಾ ಉಂಟಾಗಬೇಕಂತೆ. "ಕೂಳಿಗೆ ನಾನು. ಕಾಳಗಕ್ಕೆ ನಮ್ಮಣ್ಣ" ಎಂಬಂತೆ ಇವರ ಹೇಳಿಕೆಯಲ್ಲವೆ?

ಜಾತಿವಿಶಿಷ್ಟ ಪ್ರಾತಿನಿಧ್ಯವು ಅರಾಷ್ಟ್ರೀಯವಾದುದೂ ರಾಷ್ಟ್ರದ ಐಕಮತ್ಯಕ್ಕೆ ಘಾತಕವಾದುದೂ ಆಗಿದೆಯೆಂದು ವಿಚಾರಪರರೆಲ್ಲರೂ ಹೇಳುತ್ತಿರುವಾಗ ಮೈಸೂರು ಸಂಸ್ಥಾನದ ನಮ್ಮ ಮುಸಲ್ಮಾನ್ ಬಾಂಧವರು ಈ ಮಾರ್ಗವನ್ನೇ ಅನುಸರಿಸಲು ಸಿದ್ಧರಾದುದು ವಿಷಾದಕರವಲ್ಲವೆ?

ಈಗ ಮೈಸೂರು ಸಂಸ್ಥಾನವು ಹೆಸರಿಗೆ ಹಿಂದು ಸಂಸ್ಥಾನವಾಗಿದೆಯೇ ವಿನಾ ಅಲ್ಲಿ ಹೈದರಾಬಾದ ಸಂಸ್ಥಾನದಂತೆ ಜಾತಿವಿಶಿಷ್ಟವಾದ ನಡವಳಿಕೆಯೇನಾದರೂ ಎಳ್ಳಷ್ಟಿದೆಯೆ? ದಿವಾನರು ಮುಸಲ್ಮಾನರು. ಜಿಲ್ಲಾಧಿಕಾರಿಗಳಲ್ಲಿ ಅರ್ಧದಷ್ಟು ಮುಸಲ್ಮಾನರು. ಎಲ್ಲಾ ಶಾಖೆಗಳಲ್ಲಿಯೂ ಮುಸಲ್ಮಾನರು ಹೆಚ್ಚಾಗಿಯೇ ಇದ್ದಾರೆ. ಹೀಗಿರುವಾಗ ಇವರಿಗೆ ಈಗ ಆಗಿರುವ ಕೊರತೆಯೇನು? ಮೈಸೂರು ರಾಜ್ಯಭಾರವು ಹೆಚ್ಚಾಗಿ ಆಯಾಯ ದಿವಾನರ ಮೇಲೆಯೇ ಈಗ ಅವಲಂಬಿಸಿರುವ ರೂಢಿ. ಸರ್. ಮಿರ್ಜಾ ಸಾಹೇಬರು ದಿವಾನರಾಗುವ ಮುಂಚೆ ಎಂದರೆ ಹತ್ತು ವರುಷಗಳ ಹಿಂದೆ ರಾಜ್ಯಾಂಗದಲ್ಲಿ ಮುಸಲ್ಮಾನರ ಸಂಖ್ಯೆ ಹೇಗಿತ್ತು? ಈಗ ಹೇಗಾಗಿದೆ? ನೂರಕ್ಕೆ ೬ ರಂತೆ ಸಂಖ್ಯೆಯುಳ್ಳ ಮುಸಲ್ಮಾನರಿಗೆ ಇಷ್ಟು ಸೌಲಭ್ಯವಿದ್ದರೂ ಜಾತಿವಿಶಿಷ್ಟ ಪ್ರಾತಿನಿಧ್ಯ ಬೇಕೆಂದು ಕೇಳುತ್ತಿರುವುದರ ಉದ್ದೇಶವೇನು? ತಮ್ಮ ಸಂಖ್ಯಾಬಲ ಆರರಂತೆ ಇರುವಾಗ ಇಪ್ಪತ್ತರಂತೆ ಅಧಿಕಾರ ದೊರೆಯಬೇಕೆಂಬುದು ಯಾವ ನ್ಯಾಯ?

ಮೈಸೂರು ಸಂಸ್ಥಾನದ ಮುಸಲ್ಮಾನರು ಹೈದರಾಬಾದ ಸಂಸ್ಥಾನದ ಕಡೆಗೆ ಸ್ವಲ್ಪ ತಿರುಗಿ ನೋಡಲಿ. ಅಲ್ಲಿ ನೂರಕ್ಕೆ ೮೫ ರಂತೆ ಹಿಂದುಗಳಿದ್ದರೂ ರಾಜ್ಯಭಾರದಲ್ಲಿ ನೂರಕ್ಕೆ ಹತ್ತರಷ್ಟಾದರೂ ಅಧಿಕಾರಗಳು ಹಿಂದುಗಳಿಗಿವೆಯೆ? ಅದು, ಹೇಗೆ ನಡೆಯಲ್ಲಿಯೂ ಮುಸಲ್ಮಾನ್ ರಾಜ್ಯವೇ ಆಗಿದೆಯೋ ಹಾಗೆ ಮೈಸೂರು ರಾಜ್ಯವೇನಾದರೂ ಹಿಂದು ರಾಜ್ಯವಾಗಿದೆಯೆ? ಮೈಸೂರು ಕಾಂಗ್ರೆಸ್ಸಿನವರು ಅಲ್ಲಿಯ ಮುಸಲ್ಮಾನರ ಈ ಬೇಡಿಕೆಗಳನ್ನು ತುಂಬಾ ನಿಷೇಧಿಸುವರೆಂದೇ ನಾವು ನಿರೀಕ್ಷಿಸಿದ್ದೇವೆ. ಮಹಾರಾಜಾ ಸರಕಾರದವರು ಅರಾಷ್ಟ್ರೀಯವಾದ ಮುಸಲ್ಮಾನರ ಬೇಡಿಕೆಗಳನ್ನು ಮಾನ್ಯ ಮಾಡಿದರೆ ಜಾತಿವಿಶಿಷ್ಟ ಕಲಹಕ್ಕೆ ಅವಕಾಶವನ್ನು ಕೊಟ್ಟಂತಾಗುವುದು. ಮೈಸೂರು ದೇಶದ ಪ್ರಜಾ ಪ್ರಮುಖರು ಈಗಲೇ ಜಾಗೃತರಾಗಿ ಜಾತಿವಿಶಿಷ್ಟ ಪ್ರಾತಿನಿಧ್ಯವೆಂಬ ವಿಷವು ರಾಜ್ಯಭಾರದಲ್ಲಿ ಸೇರದಂತೆಯೂ ಮುಸಲ್ಮಾನ್ ಸಮಾಜಕ್ಕೆ ಇಷ್ಟು ಅತ್ಯಧಿಕವಾದ ಪ್ರಾತಿನಿಧ್ಯವು ಕಾದಿಡಲ್ಪಡದಂತೆಯೂ ಈಗಲೇ ಪರಿಣಾಮಕಾರಿಯಾದ ವಿರೋಧವನ್ನು ಮಾಡುವುದು ಅತ್ಯಗತ್ಯವು. ಆದುದರಿಂದ ದೇಶಹಿತಚಿಂತಕರು ಇತ್ತ ಲಕ್ಷಿಸುವರೆ?

# ಅಕ್ಕಮಹಾದೇವಿಯ ಜಯಂತಿ.

## ಬೆಂಗಳೂರು.

ಇಲ್ಲಿಯ ಶ್ರೀ ಮಹಾದೇವಿಯಕ್ಕನ ಸೇವಾ ಸಮಾಜದವರು ಅಕ್ಕನ ಹುಣ್ಣಿಮೆಯನ್ನು ಪದ್ಧತಿ ಪ್ರಕಾರ ಈ ಸಾರೆ ಬಹು ವಿಜೃಂಭಣೆಯಿಂದ ನಡೆಯಿಸಿದರು. ಈ ಸಾರೆ ಈ ಸಮಾಜದ ಬಾಲಕಿಯರು ಶ್ರೀಮಾನ್ ಮುಗಳಿಯವರು ರಚಿಸಿದ ಅಕ್ಕಮಹಾದೇವಿಯ ನಾಟಕವನ್ನು ಬಹು ಸೊಗಸಾಗಿ ಅಭಿನಯಿಸಿದುದು ವಿಶೇಷ. ಶಿವಾನುಭವಿಗಳಾದ ಇಲ್ಲಿಯ ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠಾಧ್ಯಕ್ಷರಾದ ಶ್ರೀಮನ್ನಿರಂಜನ ಶ್ರೀ ಮಹದೇವಸ್ವಾಮಿಗಳವರು ಬಹು ದಿನಗಳಿಂದ ತಮ್ಮ ಮಠದಲ್ಲಿ ವಚನ ಪ್ರವಚನ ನಡೆಸುತ್ತಾ ಬಂದುದರ ದಿವ್ಯ ಫಲವೇ ಇಲ್ಲಿಯ ಮಹಿಳಾ ಮಂಡಲವು ಇಂಥ ಪರಿಣಾಮಕಾರಿಯಾದ ನಾಟಕವನ್ನು ಪ್ರದರ್ಶಿಸುವಂಥ ಸಾಮರ್ಥ್ಯ ಹೊಂದಿದುದು.

ಈ ಕೆಳಗಿನ ಕಾರ್ಯಕ್ರಮಗಳೆಲ್ಲಾ ಇಲ್ಲಿಯ ಶ್ರೀ ಜಗದ್ಗುರು ಜಯದೇವ ಮುರಘರಾಜೇಂದ್ರ ವಿದ್ಯಾರ್ಥಿ ನಿಲಯದಲ್ಲಿಯೇ ಜರುಗಿದವು.

ತಾ. ೧೪-೪-೩೮ ನೆಯ ಗುರುವಾರ ಸಾಯಂಕಾಲ ಶ್ರೀಮತಿ ಸುಶೀಲಾದೇವಿ ಎಂ. ಎಸ್. ಸಿ. ಇವರ ಅಧ್ಯಕ್ಷತೆಯಲ್ಲಿ ಸಭೆ ಸೇರಿತು. ಇಲ್ಲಿಯ ಶ್ರೀ. ಚಂದ್ರಶೇಖರ ದೇವರು ಅಡ್ನೂರು ಇವರು ರಚಿಸಿದ ಶ್ರೀ ಮಹಾದೇವಿಯಕ್ಕನ "ಲಾವಣಿ" ಪದವನ್ನು ಶ್ರೀ. ಎಂ. ಪಿ. ನೀಲಕಂಠಯ್ಯ ಮತ್ತು ಶ್ರೀ. ವೈ. ಕೆ. ಪರ್ವತಯ್ಯ ಇವರು ಬಹು ಚೆನ್ನಾಗಿ ಹೇಳಿದನಂತರ ಉಪನ್ಯಾಸಗಳು ಈ ಕೆಳಗಿನಂತೆ ಜರುಗಿದವು.

(೧) ಶ್ರೀಮತಿ ಶಶಿಮುಖಿ ದೇವಿಯವರು-- ಸ್ತ್ರೀ ಧರ್ಮ

(೨) ಶ್ರೀಮತಿ ಆರ್. ಭ್ರಮರಾಂಬಾದೇವಿಯವರು--
ಬಸವಣ್ಣನೂ ಮತ್ತು ಅಕ್ಕಮಹಾದೇವಿಗಳೂ.

(೩) ಶ್ರೀಮತಿ ಜಿ. ಸರೋಜಾದೇವಿಯವರು-- ಭಕ್ತಿ.

ತಾ. ೧೫-೪-೧೯೩೮ ನೇ ಶುಕ್ರವಾರ ಸಂಜೆ ೪-೩೦ ಘಂಟೆಗೆ ಶ್ರೀಮತಿ ಎಂ. ಪಿ. ಪುಟ್ಟಕಾಯಮ್ಮನವರ ಅಧ್ಯಕ್ಷತೆಯಲ್ಲಿ

(೧) ಶ್ರೀಮತಿ ಎಂ. ರಾಜೇಶ್ವರಮ್ಮನವರು,
ಕನ್ನಡ ವೀರ ಮಹಿಳೆ ಮಹಾದೇವಿಯಕ್ಕ

(೨) ಶ್ರೀಮತಿ ಅನುಸೂಯಾ ದೇವಿಯವರು, ಹಾವೇರಿ
ಮಹಾದೇವಿಯಕ್ಕನ ಹೃದಯ ಹಂಬಲ.

(೩) ಶ್ರೀಮತಿ ಕನಕಮ್ಮನವರು,
ಅಕ್ಕಮ್ಮನವರ ಲೌಕಿಕ ಜಾಣ್ಮೆ.

ತಾ. ೧೬-೪-೩೮ ನೇ ಶನಿವಾರ ಸಂಜೆ ೪-೩೦ ಘಂಟೆಗೆ ಶ್ರೀಮತಿ ಲೇಡಿ ಪುಟ್ಟಣ್ಣ ಶೆಟ್ಟರ ಅಧ್ಯಕ್ಷತೆಯಲ್ಲಿ ಮಹಾದೇವಿಯಕ್ಕನ ನಾಟಕ.

ತಾ. ೧೭-೪-೩೮ ನೆಯ ದಿನ ಸಾಯಂಕಾಲ ೬ ಗಂಟೆಯಿಂದ ೯ ಗಂಟೆಯ ವರೆಗೆ ಅಕ್ಕಮಹಾದೇವಿಯ ನಾಟಕವನ್ನು ಇಲ್ಲಿಯ ಬಾಲಕಿಯರು ಬಹು ಸೊಗಸಾಗಿ ಅಭಿನಯಿಸಿದರು. ಶ್ರೀಮನ್ನಿರಂಜನ ಶ್ರೀ ಮಹಾದೇವಸ್ವಾಮಿಗಳವರೇ ಮೊದಲಾದ ಪೂಜ್ಯರೂ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರೇ ಮೊದಲಾದ ಮಾನ್ಯರೂ ಅನೇಕ ಪ್ರಮುಖ ಸ್ತ್ರೀಪುರುಷರೂ ಈ ನಾಟಕವನ್ನು ನೋಡಲು ಆಗಮಿಸಿದ್ದರು. ಏಳು ವರುಷಗಳಿಂದ ೧೪ ವರುಷಗಳೊಳಗಿನ ಬಾಲಕಿಯರೇ ಈ ನಾಟಕದಲ್ಲಿ ಪಾತ್ರಗಳನ್ನು ವಹಿಸಿದ್ದರು.

ಅಕ್ಕಮಹಾದೇವಿಯ ಪಾತ್ರವನ್ನು ವಹಿಸಿದ್ದ ಸೌ|| ಬಸವರಾಜದೇವಿಯವರು ಇಲ್ಲಿಯ ಹೊಸಕೋಟಿ ಶ್ರೀ. ಭದ್ರಪ್ಪನವರ ಸುಪುತ್ರಿ. ಕೌಶಿಕ ಪಾತ್ರವನ್ನು ವಹಿಸಿದ್ದ ಕುಮಾರಿ ಶಾರದಾದೇವಿಯವರು ಇಲ್ಲಿಯ ಕೆ. ನಾಗಪ್ಪನವರ ಮೊಮ್ಮಗಳು. ಎಲ್ಲ ಪಾತ್ರಗಳೂ ತಮ್ಮ ತಮ್ಮ ಕಾರ್ಯಗಳನ್ನು ಬಹು ತೃಪ್ತಿಕರವಾಗಿ ಮಾಡಿದರು. ಈ ಮುಖ್ಯ ಪಾತ್ರಗಳಂತೂ ಬಹು ಸೊಗಸಾಗಿ ಅಭಿನಯಿಸಿ ಪ್ರೇಕ್ಷಕರ ಮನಸ್ಸಿನ ಮೇಲೆ ವಿಶೇಷವಾದ ಪರಿಣಾಮವನ್ನುಂಟುಮಾಡಿದವು. ಬಾಲಕಿಯರು ಇಷ್ಟು ಚೆನ್ನಾಗಿ ಈ ನಾಟಕವನ್ನು ಅಭಿನಯಿಸಿದ್ದಕ್ಕೋಸ್ಕರ ಸಕಲರೂ ತುಂಬಾ ಸಂತೋಷಪಟ್ಟರು. ಕೊನೆಯಲ್ಲಿ ಶ್ರೀಮನ್ನಿರಂಜನ ಶ್ರೀ ಮಹದೇವ ಸ್ವಾಮಿಗಳವರು ಬಾಲಕಿಯರ ಈ ಸ್ತುತ್ಯ ಪ್ರಯತ್ನವನ್ನು ಶ್ಲಾಘಿಸಿ ಸಮಾಜದವರು ಆಯಾಯ ಪಾತ್ರಗಳಿಗೆ ಕೊಟ್ಟ ಬಹುಮಾನಗಳನ್ನು ಆಶೀರ್ವದಿಸಿದರು. ಈ ಪ್ರಕಾರ ಅಕ್ಕನ ಹುಣ್ಣಿಮೆಯ ಕಾರ್ಯಕ್ರಮಗಳು ಈ ಸಾರೆ ಇಲ್ಲಿ ಇಷ್ಟು ಪರಿಣಾಮಕಾರಿಯಾಗಿ ಜರುಗಿದುದು ಇಲ್ಲಿಯ ವೀರಶೈವ ಮಹಿಳಾ ಮಂಡಲಕ್ಕೆ ಬಹು ಭೂಷಣಪ್ರದವಾದುದು.

ಓರ್ವ ಪ್ರೇಕ್ಷಕ.

---

## ಧಾರವಾಡ.

ಚೈತ್ರ ಹುಣ್ಣಿಮೆಯ ದಿವಸ ಮಹಿಳಾ ಮಂಡಲದ ವತಿಯಿಂದ ಅಕ್ಕ ಮಹಾದೇವಿಯ ಹುಟ್ಟಿದ ಹಬ್ಬವನ್ನು ಆಚರಿಸಲಾಯಿತು. ಸೌ|| ಗೋದುಬಾಯಿ ಕೊಯಿಮುತ್ತೂರು ಇವರ ಅಧ್ಯಕ್ಷತೆಯಲ್ಲ ಸೌ|| ಶಾಮಲಾಬಾಯಿ ಬೆಳಗಾಂವಕರ ಇವರು ಅಕ್ಕನ ಚರಿತ್ರೆಯನ್ನು ಸವಿಸ್ತಾರವಾಗಿ ಹೇಳಿ ಅವರಿಂದ ಸ್ತ್ರೀಯರು ಕಲಿಯತಕ್ಕ ಬೋಧವನ್ನು ತಿಳಿಸಿದರು. ಬಳಿಕ ಸೌ|| ಸರಸ್ವತಿಬಾಯಿ ಲಿಮೆಯೆ, ಸೌ|| ಶಾಂತಾಬಾಯಿ ಬಸವನಾಳ ಇವರು ದೇವಿಯ ಪೂಜಾವಿಧಿಯನ್ನು ಮುಗಿಸಿದ ಬಳಿಕ, ಸೌ|| ಕೇಸರಿಬಾಯಿಯವರು ಪ್ರಸಾದವನ್ನು ಹಂಚುತ್ತಾ "ಕರ್ನಾಟಕದ ಜನರು ಇಂತಿಂತಹ ಸಾಧ್ವಿಯರ ಚರಿತ್ರೆಗಳನ್ನು ಎಲ್ಲೆಲ್ಲಿಯೂ ಹರಡುವದನ್ನು ಮರೆಯುವರೆಂತು ?" ಎಂದುಬಿಟ್ಟರು. ಸೌ|| ಮಾಳವಾಡ ಮತ್ತು ಶಿವೂತಾಯಿ ಇವರು ಅಕ್ಕನ ವಚನಗಳನ್ನು ಆಡಿದರು.

ಅದೇ ದಿವಸ ಸಾಯಂಕಾಲ ೭ ಘಂಟೆಗೆ ಲಿಂಗಾಯತ ಆಟಪಾಟ ಕ್ಲಬ್ಬಿನಲ್ಲಿಯೂ ಕುಮಾರಿ ನಾಗಮ್ಮ, ಶಿವೂತಾಯಿ ಸೌ|| ಮಾಳವಾಡ ಮತ್ತು ಬೆಳಗಾಂವಕರರ ಭಾಷಣಗಳಾದವು. ಪ್ರೊ. ಬಸವನಾಳರು ಅಧ್ಯಕ್ಷರಿದ್ದರು. ಮೊದಲಿನ ಮೂವರು ಅಕ್ಕನ ಜೀವನ ಚರಿತ್ರೆಯನ್ನೂ, ಕೆಲವು ವಚನಗಳನ್ನೂ ಹೇಳಿದರು.

ಇಲ್ಲಿಯ ತರುಣರ ಕೂಟದ ವತಿಯಿಂದ ಶ್ರೀ ಶಿವಶರಣೆ ಅಕ್ಕ ಮಹಾದೇವಿಯವರ ಜಯಂತಿಯು ಇದೇ ತಾ. ೧೪-೪-೩೮ ನೇ ಗುರುವಾರ ಪ್ರೊ. ಎಸ್. ಎಸ್. ಬಸವನಾಳ ಇವರ ಅಧ್ಯಕ್ಷತೆಯಲ್ಲಿ ಜರುಗಿತು.

ಪ್ರೊ. ಮಾಳವಾಡರವರು ಅಕ್ಕನ ಜೀವನವು ಹೇಗೆ ಆದರ್ಶವಾಗಿದೆಯೆಂದೂ ಅಕ್ಕನ ನಾಲ್ಕು ಸ್ಥಾನಗಳನ್ನೂ ಒಳ್ಳೇ ಹೃದಯಂಗಮವಾಗಿ ಮಾತನಾಡಿದರು. ಶ್ರೀ. ಬುದ್ಧಯ್ಯನವರು ವೀರಶೈವ ಧರ್ಮದಲ್ಲಿ ಅಕ್ಕ ಮಹಾದೇವಿಗೂ ಅಲ್ಲಮಪ್ರಭುವಿಗೂ ಇರುವ ಸಂಬಂಧವನ್ನು ತುಲನಾತ್ಮಕ ದೃಷ್ಟಿಯಿಂದ ಹೇಳಿ ವೀರಶೈವ ಧರ್ಮದ ತತ್ವದ ತಿರುಳನ್ನು ವಿವರಿಸಿದರು. ಇವರಲ್ಲದೆ ಶ್ರೀಮತಿ

ಮಾಳವಾಡ ಶಾಂತಾದೇವಿಯವರು, ಶ್ರೀಮತಿ ಬೆಳಗಾವಿ ಶಾಮಲಾದೇವಿ, ಕುಮಾರಿ ನಾಗಮ್ಮ ಶಿವಪೂತಾಯಿ ಮೊದಲಾದವರು ಭಾಷಣಮಾಡಿದರು. ಈ ಸಂದರ್ಭದಲ್ಲಿ ಶ್ರೀಮತಿ ಶಾರದಾಬಾಯಿಯವರು ಅಕ್ಕನ ಕುರಿತು ಸೊಗಸಾಗಿ ಮಾತನಾಡಿದರು.

ಅಧ್ಯಕ್ಷರು ಸಮಯೋಚಿತ ಉಪಸಂಹಾರ ಭಾಷಣಮಾಡಿ ಅಭಾರಮನ್ನಿಸಿದರು.

ಬಿ. ವ್ಹಿ. ಹಾಳಭಾವಿಯವರು ತೆಗೆದ ಅಕ್ಕನ ಭಾವಚಿತ್ರದ ಪೂಜೆ ಆರತಿಯಾಗಿ ಸಭೆ ಮುಗಿಯಿತು.

## ತಾಳಿಕೋಟೆ.

ತಾ. ೧೪-೪-೩೪ ನೆಯ ದಿವಸ ವಿಜಾಪುರ ಶ್ರೀ ಸಿದ್ಧೇಶ್ವರ ಹಾಯಸ್ಕೂಲಿನ ಶ್ರೀ. ಬ್ಯಾಳಿ ಮಾಸ್ತರರ ಅಧ್ಯಕ್ಷತೆಯ ಕೆಳಗೆ ಸಭೆಸೇರಿ ಅಕ್ಕ ಮಹಾದೇವಿಯ ಬಗ್ಗೆ ವ್ಯಾಖ್ಯಾನಪ್ರವಚನಗಳಾದವು. ಶ್ರೀ. ಬ್ಯಾಳಿ ಮಾಸ್ತರರು ಮಹಾದೇವಿಯಕ್ಕಗಳ ಅಸಾಧಾರಣವಾದ ವಿರಕ್ತಿಯನ್ನೂ ಉಜ್ವಲವಾದ ಷಟ್‌ಸ್ಥಲ ಜ್ಞಾನವನ್ನೂ ವಿವರಿಸಿ ಆಕೆಯ ಕೆಲವು ವಚನಗಳ ಮೇಲೆ ಪ್ರವಚನವನ್ನು ಮಾಡಿದರು.

## ಗುಳೇದಗುಡ್ಡ.

ತಾ. ೧೪ ನೆಯ ದಿವಸ ಅಕ್ಕ ಮಹಾದೇವಿಯ ಜಯಂತಿಯು ಒಳ್ಳೇ ವಿಜೃಂಭಣೆಯಿಂದ ಜರುಗಿತು. ಮುಂಜಾನೆ ಅಕ್ಕ ಮಹಾದೇವಿಯ ಫೋಟೋದ ಮೆರವಣಿಗೆಯು ಆಗಿ ಸಂಜೆಯ ಮುಂದೆ ಮುರಘಾ ಮಠದಲ್ಲಿ ಶ್ರೀ ನೀಲಕಂಠ ಮಹಾಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಸಭೆಯು ಜರುಗಿತು. ಹೆಣ್ಣುಮಕ್ಕಳು ವಿಶೇಷ ಭಾಗತೆಗೆದುಕೊಂಡಿದ್ದರು. ಕಡೆಗೆ ಹೆಣ್ಣು ಹುಡುಗರಿಗೆ ಅನೇಕ ಇನಾಮುಗಳು ಹಂಚಲ್ಪಟ್ಟವು.

## ಅಕ್ಕಲಕೋಟೆ.

ಪದ್ಧತಿಪ್ರಕಾರ ಚೈತ್ರ ಶುದ್ಧ ೧೫, ತಾ. ೧೪-೪-೩೪ ನೇ ದಿವಸ ಅಕ್ಕ ಮಹಾದೇವಿಯ ಜಯಂತಿಯು ಶ್ರೀ. ಗುರಲಿಂಗಪ್ಪ ಕೊರಿ ಇವರ ಪಟಾಂಗಣದಲ್ಲಿ ನೆರವೇರಿಸಲ್ಪಟ್ಟಿತು. ಇಲ್ಲಿಯ ವೀರಶೈವ ಮಹಿಲಾ ಮಂಡಲದ ಉತ್ಸಾಹಿ ಸೆಕ್ರೆಟರಿಗಳಾದ ಸೌ|| ಗಂಗಾಬಾಯಿ ಪಟಣೆ ಹೆಡ್ ಮಿಸ್ಟ್ರೆಸ್ ಗರ್ಲ್ಸ ಸ್ಕೂಲ್ ಶ್ರೀ. ಬುದ್ಧವ್ವಬಾಯಿ ಹರಸುರಿ ಮಿಸ್ಟ್ರೆಸ್ ಗರ್ಲ್ಸ ಸ್ಕೂಲ್ ಮೊದಲಾದವರು ಸಮಯೋಚಿತ ಭಾಷಣಮಾಡಿದನಂತರ ಅಕ್ಕ ಮಹಾದೇವಿಯ ಜಯಜಯಕಾರದೊಡನೆ ಸಭೆಯು ವಿಸರ್ಜಿಸಲ್ಪಟ್ಟಿತು.

## ಓ ಕ ಳಿ.

ಓಕಳಿ ತರುಣ ಸಂಘದ ಬಾಲ ಬಾಲಕಿಯರಿಂದ ಶ್ರೀ ಅಕ್ಕನ ಹುಣ್ಣಿಮೆಯ ದಿವಸ ಶ್ರೀ. ಅಕ್ಕ ಮಹಾದೇವಿಯ ಜಯಂತಿ ಉತ್ಸವವು ಅತ್ಯಂತ ವಿಜೃಂಭಣೆಯಿಂದ ನೆರವೇರಿಸಲ್ಪಟ್ಟಿತು. ಆ ದಿವಸದ ಸಭೆಗೆ ೨೦೦ ಜನ ಸ್ತ್ರೀಯರೂ ೩೦೦ ಜನ ಪುರುಷರೂ ನೆರೆದಿದ್ದರು. ಬಾಲಿಕೆಯರು ವಚನಗಳಿಂದಲೂ ಮುದ್ದಾದ ಭಾಷಣಗಳಿಂದಲೂ ಜನರನ್ನು ಆನಂದಪಡಿಸಿದರು. ನಂತರ ವಚನಗಳನ್ನು ಹೇಳುತ್ತ ಜಯಘೋಷಮಾಡುತ್ತ ನಗರ ಪ್ರದಕ್ಷಿಣಮಾಡಲಾಯಿತು.

ಸೆಕ್ರೆಟರಿ.
ವಿ. ತ. ಸಂಘ, ಓಕಳಿ.

## ಮೈದರ್ಗಿ.

ಈ ಊರಲ್ಲಿ ಅಕ್ಕನ ಜಯಂತಿ ಮಹೋತ್ಸವವು ಶ್ರೀ. ಶಂಕರಪ್ಪ ಗೊಬ್ಬೂರ ಇವರ ಅಧ್ಯಕ್ಷತೆಯಲ್ಲಿ ಪರಿಣಾಮಕಾರಿಯಾಗಿ ನಡೆಯಿತು. ಈ ದಿನ ಬೆಳಗ್ಗೆ ಅಕ್ಕನ ಫೋಟೋವನ್ನು ವಚನಗಳನ್ನು ಹೇಳುತ್ತ ಊರಲ್ಲೆಲ್ಲಾ ಮೆರೆಯಿಸಲಾಯಿತು. ಸಭೆಯಲ್ಲಿ ಅಕ್ಕನ ದಿವ್ಯ ಉಪದೇಶವನ್ನೂ ಚರಿತ್ರೆಯನ್ನೂ ಅಕ್ಕನ ಜೀವನದಿಂದ ಹೆಣ್ಣುಮಕ್ಕಳು ಕಲಿಯಬೇಕಾದ ಪಾಠ ಮೊದಲಾದವುಗಳನ್ನೂ ವಿವರಿಸಲಾಯಿತು. ಇದೇ ಪ್ರಕಾರ ಪ್ರತಿ ವರುಷ ಪ್ರತಿಯೊಂದು ಹಳ್ಳಿಪಳ್ಳಿಗಳಲ್ಲಿ ಅಕ್ಕನ ಹುಣ್ಣಿಮೆಯು ಜರುಗಲೆಂದು ಹಾರೈಸುವ

—ಸಾತಲಿಂಗಪ್ಪ ಸಾಬಾದಿ.

—ದಾವಣಗೆರೆ - ತುಮಕೂರು ಮೊದಲಾದ ಸ್ಥಳಗಳಲ್ಲಿಯೂ ಶ್ರೀ ಅಕ್ಕನ ಜಯಂತಿಯು ತುಂಬಾ ವಿಜೃಂಭಣೆಯಿಂದ ಜರುಗಿಸಲ್ಪಟ್ಟಿತು.

# ಕೋರಿಕೆ.

(ಬಸವ ಜಯಂತಿಗಾಗಿ ಬರೆದುದು.)

ಕುಶಲ ಕರ್ಮ ಯೋಗಿ ಬಸವ-|
ನೊಸಗೆಯಂತೆ ನುಡಿದು ನಡೆದು |
ಪೊಸತು ಜೀವ ಕಳೆಯ ತಳೆದು ನಲಿಯಿರೆಲ್ಲರು ||
ಅಸಮ ಜ್ಞಾನಿ ಬಸವ ತೋರ್ದ |
ಮಿಸುಪ ಬುದ್ಧಿಯೋಗ ಬಲದ |
ಕಸುವಿನಿಂದ ಕೆಚ್ಚಿನಿಂದ ಬೆಳೆದು ಬಾಳಿರಿ ||೧||

ನೋಡಿ ಜಗವದೆನಿತು ಮುಂದೆ |
ಓಡಿ ಓಡಿ ಸಾಗುತಿಹುದು |
ಹೇಡಿತನವು ಸಾಕು ನಡೆಯಿರಿನ್ನು ಮುಂದಕೆ ||
ನೋಡಿ ಜ್ಞಾನ ಸೂರ್ಯನನ್ನು |
ಮಾಡಿ ಕುಶಲ ಕರ್ಮವನ್ನು |
ಕೂಡಿರೈಕಮತ್ಯದಿಂದ ವೀರಶೈವರೇ ||೨||

ಕಳೆಯಿರಣ್ಣ ಕುಲದ ಛಲವ |
ತೊಳೆಯಿರಣ್ಣ ಮನದ ಮಲವ |
ಕಲಿಯಿರಣ್ಣ ಸಮತೆಯೆಂಬ ಹಿತದ ಪಾಠವ ||
ಕಲಿಯಿರಣ್ಣ ನಲ್ಮೆಗೊಂಡು |
ನಲಿಯಿರಣ್ಣ ಶಾಂತಿಯುಂಡು |
ತಳೆಯಿರಣ್ಣ ಒಳ್ಳಿತನವನೆಲ್ಲರೀಳ್ಗಿಗೆ ||೩||

ದ್ವೇಷ ಹೊಟ್ಟೆಕಿಚ್ಚು ದುಷ್ಟ |
ಆಶೆ ಈರ್ಷೆ ದುಂದು ವೆಚ್ಚ |
ಮೋಸ ಕೀಳುತನಗಳಿಂದ ಗಾಸಿಯಾದೆವೈ |
ಸೋಸಿ ತಿಳಿದು ನೋಡಿರಣ್ಣ |
ಲೇಸಿಗಿದುವೆ ದಾರಿಯಣ್ಣ |
ಹೇಸಿ ಗುಣಗಳಳಿವೆ ಇಹಪರಗಳ ಸಾಧನ ||೪||

ಹಿಂದಕೊಮ್ಮೆ ಶರಣರಿದ್ದ-|
ರಿಂದೊಡೀಗ ನಮ್ಮೊಳೀತ-|
ರೆಂದು ಮೊಬ್ಬರೊಬ್ಬರಾಗದಿಹೆವು ಶರಣರು? ||
ಸಂದ ಸಿರಿಯ ನೆನೆವುದರೊಳೆ |
ಮಂದತನವು ಬೆಳೆದು ನಾವು |
ಮುಂದುಗಾಣದಾದೆವಯ್ಯೊ ಮೂಢರಲ್ತೆ ನಾವ್ ||೫||

ಮುಗ್ಗಿತೆಮ್ಮ ಒಕ್ಕಲುತನ |
ಕುಗ್ಗಿತೆಮ್ಮ ದುಡಿಮೆ ಗಳಿಕೆ |
ತಗ್ಗಿತೆಮ್ಮ ಕಸುವು ಬಹಳ ಬಡವರಾದೆವು ||
ಹಿಗ್ಗಿನಿಂದ ದುಡಿಯಿರಣ್ಣ |
ನುಗ್ಗಿ ಮುಂದೆ ನಡೆದು ಸಿರಿಯ |
ಸುಗ್ಗಿಮಾಡಿ ಸಗ್ಗದೈಸಿರಿಯನು ಪಡೆಯಿರೈ ||೬||

ವೀರಶೈವ ಶೆಟ್ಟರುಗಳು |
ಭೂರಿ ದ್ರವ್ಯ ಪಡೆದರಂದು |
ಮಾರವಾಡಿ ಗುಜ್ಜರಿಂದು ಪೆರ್ಮೆವೆತ್ತಿಹರ್ ||
ಹಾರಿರಣ್ಣ ಧೀರತನದಿ |
ದೂರ ದೂರ ದೇಶಗಳಿಗೆ |
ಸಾರಿ ಬಂದರಗಳನಲ್ಲಿ ಮೀರಿ ಗಳಿಸಿರಿ ||೭||

ಮಿತಿಯು ಬೇಕು ಬಳಕೆಯಲ್ಲಿ |
ಅತಿಯು ಬೇಕು ಗಳಿಕೆಯಲ್ಲಿ |
ಕೃತಿಯ ನೆಸಗಲಿಂತು ದ್ರವ್ಯ ರಾಶಿ ದೊರೆಯದೆ? ||
ವ್ಯಥಿಸ ಬೇಡಿ ಸೋಲಿನಲ್ಲಿ |
ಗತಿಯು ಜಯಕೆ ಕಾಣ್ಬುದಲ್ಲಿ |
ಸತತ ಯತ್ನವೆಂಬ ಬೆಲೆಯು ಬೇಕು ವಿಜಯಕೆ ||೮||

ವಿದ್ಯೆ ಬೇಕು, ನೇಗಿಲುಗಳ |
ವಿದ್ಯೆಬೇಕು; ಯಂತ್ರವಣಿಕ !
ವಿದ್ಯೆ ಬೇಕು; ರಾಜಕೀಯ ವಿದ್ಯೆ, ವೈದ್ಯಕ ||
ವಿದ್ಯೆ ಬೇಕು, ವಿಪುಲ ಧನದ !
ವಿದ್ಯೆ ಬೇಕು; ನಮಗೆ ಬಂದೆ !
ವಿದ್ಯೆ ಸಾಲದೀಗ ಇಂಥ ಜಟಿಲ ಕಾಲದೊಳ್ ||೯||

ತನುವು ತುಚ್ಛವೆನ್ನ ಬೇಡಿ |
ತನುವೆ ಆತ್ಮ ದೇವನ ಗುಡಿ |
ತನುವ ಪುಷ್ಟಿಯಿಂದ ಚೆಲುವುಗೊಳಿಸಿ ಬೆಳೆಸಿರೈ ||
ತನುವು ನೆಟ್ಟಗಿಲ್ಲದಿರಲು |
ಜನರೆ ನಿಮಗೆ ಸಾಧ್ಯವೇನು |
ದಿನದ ದುಡಿತ ಮೇಣು ಆತ್ಮ ಲಿಂಗದರ್ಶನ ? ||೧೦||

ಒಳ್ಳೇ ಊಟ ಒಳ್ಳೆ ಆಟ |
ಒಳ್ಳೆ ಬೇಟ ಒಳ್ಳೆ ಕೂಟ |
ಒಳ್ಳೆ ನೋಟಗಳನು ನಿಯಮದಿಂದ ನಡೆಸಲು ||
ಒಳ್ಳೆ ಶಕ್ತಿ ಎಲ್ಲರಲ್ಲಿ !
ಒಳ್ಳೆ ಜ್ಞಾನವೆಲ್ಲರಲ್ಲಿ !
ಒಳ್ಳಿತೆಲ್ಲದರೊಳು ಮೂಡಿ ಸೌಖ್ಯ ಲಭಿಸದೆ ? ||೧೧||

ಬಸವ ತನ್ನ ಬಾಳಿನಿಂದ |
ಒಸಗೆಯಿತ್ತ ನಲ್ತೆ ನಮಗೆ |
ಎಸಗಲಿಂತು ಸ್ವ ಪರ ಹಿತದ ಕುಶಲ ಕರ್ಮವ ||
ಕುಶಲ ಕರ್ಮ ಧರ್ಮದುಸಿರು |
ಕುಶಲ ಕರ್ಮ ಧರ್ಮ ಮರ್ಮ |
ಕುಶಲ ಕರ್ಮದಿಂದ ಪೆಂಪು ಇಂಪು ಬಾಳಿಗೆ ||೧೨||

G. V. W.

## ೭ ನೆಯ ಕರ್ನಾಟಕ ಏಕೀಕರಣ ಪರಿಷತ್ತು, ಧಾರವಾಡ.

ಈ ಸಲದ ಪರಿಷತ್ತು ಅತ್ಯಂತ ಮಹತ್ವದ್ದಿದ್ದು ಕರ್ನಾಟಕದೊಳಗಿನ ಎಲ್ಲ ಭಾಗದ ಜನರು ಕಲೆತು ತಮ್ಮ ಭವಿತವ್ಯವನ್ನು ನಿರ್ಣಯಿಸಬೇಕಾಗಿದೆ. ಆದುದರಿಂದ ಕರ್ನಾಟಕದೊಳಗಿನ ಪ್ರತಿಯೊಂದು ಭಾಗದಲ್ಲಿ ಪ್ರಚಾರ ಮಾಡುವದು ಅವಶ್ಯವಿದೆ.

ಸ್ವಾಗತ ಕಮಿಟಿಯ ಸಭಾಸದರನ್ನು ಮಾಡಲಿಕ್ಕೂ ಕರ್ನಾಟಕದಲ್ಲಿ ಪ್ರಚಾರ ಕಾರ್ಯವನ್ನು ಕೈಕೊಳ್ಳಲಿಕ್ಕೂ ಇದೇ ಮೇ ೭, ೮ ನೆಯ ತಾರೀಖಿಗೆ ಪರಿಷತ್ತು ನೆರೆಯಿಸಿದರೆ ಅವಧಿಯು ಸಾಲದೆಂದು ಪರಿಷತ್ತನ್ನು ಮೇ ೨೧, ೨೨ ರಲ್ಲಿ ನೆರೆಯಿಸಬೇಕೆಂದು ಕಾರ್ಯಾಧ್ಯಕ್ಷರಾದ ದಾತಾರ ಬಳವಂತರಾಯರು ಧಾರವಾಡ ಹಾಗೂ ಹುಬ್ಬಳ್ಳಿಯ ಕಾರ್ಯಕರ್ತರೊಡನೆ ವಿಚಾರಮಾಡಿ ನಿರ್ಣಯಿಸಿದ್ದಾರೆ.

ಪ್ರಚಾರ ಕಾರ್ಯವು ತೀವ್ರವಾಗಿ ಪ್ರಾರಂಭವಾಗುವದು. ಶ್ರೀ. ದಿವಾಕರ, ಹುಕ್ಕೇರಿಕರ, ದಾತಾರ, ಚಂದ್ರಶೇಖರ ಶಾಸ್ತ್ರಿ, ದೊಡ್ಡಮೇಟಿ, ಮುದವೀಡು, ಶ್ರೀಮತಿ ಪಣಜಿಕರ ಮೊದಲಾದ ಮುಖಂಡರಿಗೆ ಪ್ರಚಾರಕಾರ್ಯವನ್ನು ಕೈಕೊಳ್ಳಲು ಬಿನ್ನವಿಸಲಾಗಿದೆ. ಕರ್ನಾಟಕದೊಳಗಿನ ಪ್ರತಿಯೊಂದು ಸಂಘ ಸಂಸ್ಥೆಯವರು ಈ ಕಾರ್ಯದಲ್ಲಿ ನೆರವಾಗಬೇಕಾಗಿ ಬಿನ್ನಹ

ಸ್ವಾಗತ ಕಮಿಟಿಯ ಸದಸ್ಯರ ಸಭೆಯನ್ನು ಇದೇ ತಿಂಗಳ ೨೦ ನೇ ತಾರೀಖಿಗೆ ಕರೆಯಬೇಕೆಂದಿದ್ದೇವೆ. ಧಾರವಾಡ ಜಿಲ್ಲೆಯ ಎಲ್ಲ ಭಾಗದಲ್ಲಿಯು ಸ್ವಾ. ಕಮಿಟಿಯ ಸಭಾಸದರನ್ನು ಮಾಡುವ ಕಾರ್ಯವನ್ನು ಒತ್ತರದಿಂದ ಸಾಗಿಸಬೇಕಾಗಿ ಬಿನ್ನಹ.

೨ ನೇ ಪ್ರಕಟನೆಯಂತೆ ಸೂಚನೆಗಳನ್ನು ಮಾಡುವವರು ಇದೇ ತಿಂಗಳ ೨೮ ನೆಯ ತಾರೀಖಿನೊಳಗಾಗಿ ಕಳಿಸಬೇಕಾಗಿ ಬಿನ್ನಹ. ಈಗಾಗಲೇ ನಮ್ಮ ಕಡೆಗೆ ಅಧ್ಯಕ್ಷರ ಬಗ್ಗೆ ಶ್ರೀ. ಕೆ. ಆರ್. ಕಾರಂತ, ದಿವಾಕರ, ಬಳವಂತರಾವ ದಾತಾರ ಈ ಮೂವರ ಹೆಸರುಗಳು ಬಂದಿವೆ. ಸೂಚನೆಗಳನ್ನು ಕಳಿಸಿರಿ.

ಕಾರ್ಯದರ್ಶಿಗಳು.
ಶ್ರೀ. ಬುರ್ಲಿ ಬಿಂದುಮಾಧವ
ಶ್ರೀ. ಭೂಸನೂರು ಗುರುಬಸಪ್ಪ
ಶ್ರೀ. ಡಿ. ಪಿ. ಕರಮರಕರ

## ಮುಸಲ್ಮಾನ್ ಮಾಸ್ತರನ ಪುಂಡತನ.

ತಾ. ೩೦ ಆರ್ದಿಬೆಹಸ್ತ ದಿವಸ ಲಾತೂರಿನ ಸರಕಾರೀ ಶಾಲೆಯ ಓರ್ವ ಮುಸಲ್ಮಾನ್ ಮಾಸ್ತರನು ಒಬ್ಬ ಲಿಂಗಾಯತ ಹುಡುಗನನ್ನು ನಿನ್ನ ಧರ್ಮವಾವುದು ಎಂದು ವಿಚಾರಿಸಲು ಆ ಹುಡುಗನು 'ಲಿಂಗಾಯತ' ಎಂದು ಹೇಳಲು ಆ ಮಾಸ್ತರನು 'ಲಿಂಗಾಯತ'ರು ಮಾಂಸ ತಿನ್ನುತ್ತಾರೆ. ಅವರು ಅರ್ಧಮರ್ಧರಿರುತ್ತಾರೆ. ನಿಮಗೆ ಧರ್ಮಗ್ರಂಥಗಳಿಲ್ಲ. ಎಂದು ಮುಂತಾಗಿ ಹೇಳಿ ಕೊರಳಲ್ಲಿ ಏನು ಕಟ್ಟಿರುವಿ ಎಂದು ಆ ಹುಡುಗನ ಕೊರಳಲ್ಲಿರುವ ಸಜ್ಜಿಗೆಯನ್ನು ಕಸಿದುಕೊಳ್ಳಲು ಪ್ರಯತ್ನಿಸಿದನು. ಆ ಹುಡುಗನು ಸಜ್ಜಿಗೆಯನ್ನು ಕೊಡದಿದ್ದುದರಿಂದ ಆ ಮಾಸ್ತರನು ನಾನು ಅನೇಕರ ಲಿಂಗ ನೋಡಿದ್ದೇನೆ. ಅದು ದುಂಡಗೆ ಇರುತ್ತದೆಂದು ಫಳದ ಮೇಲೆ ಆಕೃತಿ ತೆಗೆದನಂತೆ. ಮತ್ತು "ನೋಡಿರಿ ನಮ್ಮ ಇಸ್ಲಾಂ ಧರ್ಮವು ಜಗತ್ತಿನಲ್ಲಿಯೇ ಶ್ರೇಷ್ಠವಿದೆ. ಸಮುದ್ರದಂತೆ ವಿಶಾಲವಾಗಿದೆ. ಮೊದಲು ಇಸ್ಲಾಮ. ಅನಂತರ ಬ್ರಾಹ್ಮಣ ಧರ್ಮ ಹುಟ್ಟಿದವು. ಆರ್ಯ ಧರ್ಮವು ಎಲ್ಲರಿಗಿಂತ ಕೆಟ್ಟ ಧರ್ಮವು. ಮತ್ತು ಅರ್ಧಮರ್ಧ ಧರ್ಮ ಲಿಂಗಾಯತರದು ಇರುತ್ತದೆ." ಎಂದು ಹುಡುಗರಿಗೆ ಉಪದೇಶಮಾಡಿದನು.

ಇದು ಊರಲ್ಲಿಯ ಪ್ರಮುಖ ಜನರಿಗೆ ತಿಳಿದೊಡನೆಯೇ ಅವರು ಅಲ್ಲಿಯ ಪ್ರಮುಖ ಅಧಿಕಾರಿಗಳಿಗೆ ತಿಳಿಸಿದರು. ಈ ವಿಷಯದಲ್ಲಿ ಈ ವರೆಗೂ ಏನೂ ನಿರ್ಣಯವಾಗಿಲ್ಲ. ಜಾಗ್ರತೆ ನಿರ್ಣಯವಾದರೆ ಸರಿ. ಇಲ್ಲವಾದರೆ ಮುಂದೆ ಬರೆದು ಈ ವಿಷಯದ ನಿರ್ಣಯ ಮಾಡಿಕೊಳ್ಳಬೇಕು.

—ಒಬ್ಬ ವಿದ್ಯಾರ್ಥಿ ಲಾತೂರು.

(ಮೇಲಿನ ಸಂಗತಿಗಳನ್ನು ಓದಿದರೆ ಅಲ್ಲಿಯ ಸರಕಾರಿ ಅಧಿಕಾರಿಗಳು ಕೂಡಾ ಹಿಂದು ಹುಡುಗರನ್ನು ಮತಾಂತರಗೊಳಿಸಲು ಹೇಗೆ ಪ್ರಯತ್ನಿಸುತ್ತಿದ್ದಾರೆಂಬುದು ಸ್ಪಷ್ಟ ಗೊತ್ತಾಗುವಂತಿದೆ. ಸರಕಾರವೇ ಕುಳಿತು ಈ ಪ್ರಕಾರ ಅನ್ಯಾಯ ಜುಲುಮೆಗಳಿಗೆ ಅವಕಾಶವಿತ್ತರೆ ಅಲ್ಲಿಯ ಹಿಂದುಗಳು ಉಳಿಯುವುದು ಕೂಡಾ ಕಷ್ಟವಾಗಿ ತೋರುತ್ತದೆ. "ಬೇಲಿಯೇ ಬೆಳೆ ಮೇಯಲು ಹತ್ತಿದರೆ ಬೆಳೆ ಸಂರಕ್ಷಣೆಯಾಗುವ ಬಗೆ ಹೇಗೆ?" ಇದಕ್ಕೆಲ್ಲ ಒಂದೇ ಒಂದು ಉಪಾಯವಿದೆ. ಹಿಂದುಗಳು ತಮ್ಮ ತಮ್ಮಲ್ಲಿಯ ಅನೈಕ ಮತ್ಯವನ್ನೆಲ್ಲ ಬದಿಗಿಟ್ಟು ಶುದ್ಧಿ ಸಂಘಟನ ಮೊದಲಾದ ಕಾರ್ಯಗಳನ್ನು ಕೈಕೊಳ್ಳಬೇಕು. ಇಂಥಾ ಅತ್ಯಾಚಾರಗಳು ಸಂಭವಿಸಿದಲ್ಲಿ ಮೇಲಧಿಕಾರಿಗಳ ವರೆಗೂ ಪ್ರಕರಣ ಒಯ್ದು ಪುಂಡರಿಗೆ ಯೋಗ್ಯ ಶಿಕ್ಷೆಯಾಗುವಂತೆ ಮಾಡಲೇಬೇಕು. ಇಂಥ ಅತ್ಯಾಚಾರಗಳು ಸಂಭವಿಸಿದಲ್ಲಿ ಮೇಲಿಂದ ಮೇಲೆ ಸಮಾಜದ ಮುಂದಿಡುತ್ತಾ ಹೋಗಬೇಕು.)

## ಹುಮನಾಬಾದ.

ವೀರಶೈವ ಸಮಾಜದ ೨ ನೆಯ ವಾರ್ಷಿಕ ಉತ್ಸವವು ತಾ. ೫, ೭, ೭-೪-೩೬ ಮೂರು ದಿವಸ ಪಂ. ಚಿದಿರೆಮಠದ ವೀರಭದ್ರ ಶಾಸ್ತ್ರಿಗಳವರ ಅಧ್ಯಕ್ಷತೆಯಲ್ಲಿ ತುಂಬಾ ವಿಜೃಂಭಣೆಯಿಂದ ಜರುಗಿಸಲ್ಪಟ್ಟಿತು. ಸಭೆಯಲ್ಲಿ ಭಾಲಕಿಯ ಪಟ್ಟಾಧ್ಯಕ್ಷ ಚನ್ನವೀರ ಸ್ವಾಮಿಗಳು ಶಂಕಾಸಮಾಧಾನಮಾಡಿದರು. ಅಂತು ಈ ವರ್ಷದ ಉತ್ಸವವು ತುಂಬಾ ಉತ್ಸುಕತೆಯಿಂದ ಕೊನೆಗಂಡಿತೆಂದು ತಿಳಿಸಲು ತುಂಬಾ ಸಂತೋಷವಾಗುತ್ತದೆ.

ಶ್ರೀ ಅಕ್ಕಮಹಾದೇವಿಯವರ ಜಯಂತಿಯು ವೀರಶೈವ ಸಮಾಜದಲ್ಲಿ ಜರುಗಿಸಲ್ಪಟ್ಟಿತು. ಶ್ರೀ. ಭಂಗಿಸಿದ್ಧರಾಮಯ್ಯನವರು ಬಸವಣ್ಣನವರ ಮತ್ತು ಅಕ್ಕ ಮಹಾದೇವಿಯವರ ವಚನಗಳನ್ನು ವಿವರಿಸಿ ಅಕ್ಕನ ಅಗಾಧ ಪಾಂಡಿತ್ಯವನ್ನು ತೋರಿಸಿಕೊಟ್ಟರು. ನಂತರ ಶರಣ ಸಮಾಜದ ಕಾರ್ಯಕಾರೀ ಮಂಡಳದ ಆಯ್ಕೆಯಾಗಿ ಸಭೆಯು ವಿಸರ್ಜಿಸಲ್ಪಟ್ಟಿತು.

ಸೆಕ್ರೆಟರಿ
ವೀರಶೈವ ಸಮಾಜ ಹುಮನಾಬಾದ.

## ಬಾಗಲಕೋಟೆ.

ತಾ. ೧೪-೪-೩೪ ನೆಯ ಗುರುವಾರ ಅಕ್ಕಮಹಾದೇವಿಯ ಜಯಂತ್ಯೋತ್ಸವದ ದಿನ ಸಾಯಂಕಾಲದ ೫ ಘಂಟೆಗೆ ಮಹಾತ್ಮಳಾದ ಅಕ್ಕನವರ ಚಿತ್ರಪಟವನ್ನು ಟೇಕಿನ ಮಠದಲ್ಲಿ ದಿವ್ಯ ಆಸನದಲ್ಲಿ ಕೂಡ್ರಿಸಿ ವಿಧಾನೋಕ್ತ ಪೂಜೆಯನ್ನು ಮಾಡಿದ ಮೇಲೆ ಸಭೆಯ ಕೆಲಸವು ಪ್ರಾರಂಭವಾಯಿತು. ಸಭೆಗೆ ವೀರಶೈವರೂ ಇತರೆ ಹೆಣ್ಣುಮಕ್ಕಳೂ ಬಹಳವಾಗಿ ಬಂದಿದ್ದರು. ಮಠದ ಅವಾರವು ಕಿಕ್ಕಿರಿದು ತುಂಬಿತ್ತು. ಮೊದಲು ಅಕ್ಕ ಮಹಾದೇವಿ ಭಗಿನಿ ಮಂಡಲದ ಕಾರ್ಯದರ್ಶಿಗಳಾದ ಸೌ|| ಬಸವ್ವಾ ವಸ್ತ್ರದ ಇವರು ಅಕ್ಕನವರ ಜೀವನ ಚರಿತ್ರವನ್ನು ಹೇಳಿದರು.

ಆ ಮೇಲೆ ಬೇರೆ ಬೇರೆ ೩-೪ ಜನ ಹುಡುಗೆಯರು, ಸ್ತ್ರೀಯರು ಮಾತನಾಡಿದರು. ನಂತರ ಶ್ರೀ. ಜಂಗಿನ ಮಂಗಯ್ಯನವರು ಅಕ್ಕನವರ ಧಾರ್ಮಿಕ ನೈತಿಕ ಭಕ್ತಿ ವೈರಾಗ್ಯದಿಂದ ನಡೆದದ್ದು ರಾಜ್ಯವೈಭವವನ್ನು ಧರ್ಮಕ್ಕಾಗಿ ತ್ಯಜಿಸಿದ್ದು ಮುಂತಾದ ಅನೇಕ ವಿಷಯಗಳನ್ನು ಮನವರಿಕೆಯಾಗುವಂತೆ ಹೇಳಿದರು. ಮಂಗಳಾರತಿಯಾದಮೇಲೆ ಪ್ರಸಾದವನ್ನು ಎಲ್ಲರಿಗೂ ಕೊಟ್ಟು ಸಭೆಯ ಕೆಲಸವು ಮುಗಿಸಲ್ಪಟ್ಟಿತು.

ತಮ್ಮ<br>
ಸಕರಪ್ಪ ಕೆರಕಲಮಟ್ಟಿ<br>
ಬಾಗಲಕೋಟೆ.

## ಜಕ್ಕಲಿಯ ಸುದ್ದಿ.

ನಮ್ಮ ಗ್ರಾಮದಲ್ಲಿ ತಾ. ೮-೧೨-೩೨ ನೆಯ ದಿವಸ ಹರಿಜನ ಸೇವಾ ಸಂಘವು ಸ್ಥಾಪಿತವಾಗಿದ್ದು ಅದು ಈಗ ಅಲ್ಪ ಸ್ವಲ್ಪ ಕೆಲಸಾ ಮಾಡಿಕೋತಾ ಬಂದಿರುತ್ತದೆ. ತಾ. ೧೦-೪-೩೪ ನೇ ಇಸ್ವಿ ದಿವಸ ಅಂದಾನೆಪ್ಪ ದೊಡ್ಡಮೇಟಿ ಇವರ ಅಧ್ಯಕ್ಷತೆಯ ಕೆಳಗೆ ನಮ್ಮ ಗ್ರಾಮದೊಳಗೆ ಸಭೆಸೇರಿ ಇಲ್ಲಿ ಹರಿಜನ ಸೇವಾ ಸಂಘ ಇದ್ದದ್ದು ಅಪಪ್ರಚಾರದ್ದು, ಪ್ರಾತಿನಿಧ್ಯ ಇಲ್ಲದ್ದು ಅಂತಾ ತಾ. ೧೩-೪-೩೪ ನೆಯ ಇಸ್ವಿ ದಿವಸ ಲೋಕಮತ ಪತ್ರಿಕೆಯಲ್ಲಿ ಲೇಖ ಕೊಟ್ಟದ್ದು ನೋಡಿ ವಿಷಾದವೆನಿಸುತ್ತದೆ ತಾ. ೮-೧೨-೩೨ ನೇ ಇಸ್ವಿ ದಿವಸ ಸ್ಥಾಪಿತವಾಗಿರುವ ಹರಿಜನ ಸೇವಾ ಸಂಘವು ಪ್ರಚಾರವುಳ್ಳದ್ದು ಪ್ರಾತಿನಿಧ್ಯ ಹೊಂದಿದ್ದು ಅನ್ನುವ ಬಗ್ಗೆ ಸಂಘದವರು ಮಾಡಿದ ಕೆಲಸ ಸಂಘದ ಲೆಕ್ಕಪತ್ರ ನೋಡಿದರೆ ತಾನೇ ಹೇಳುತ್ತದೆ.

ಅಂದಾನೆಪ್ಪ ಪಟ್ಟಣಶೆಟ್ಟಿ<br>
ಕಾರ್ಯದರ್ಶಿ<br>
ಕುಮಾರ ಸೇವಾ ಸಂಘ ಜಕ್ಕಲಿ

ತಾ ೧೭-೪-೩೪ ಇಸ್ವಿ.

## ನಿಜಾಮ ವೀರಶೈವ ಪ್ರಾಂತಿಕ ಪರಿಷತ್ತು ೩ ನೆಯ ಅಧಿವೇಶನ ಲಾತೂರು.

ಈ ಪರಿಷತ್ತಿನ ೩ ನೆಯ ಅಧಿವೇಶನವು ತಾ. ೭, ೮, ೯ ಶೀರ ಸನ್ ೧೩೪೩ ಫ. ಮಿತಿ ವೈಶಾಖ ಶು|| ೧೩, ೧೪, ೧೫ ತಾ. ೧೨, ೧೩, ೧೪ ಮೇ ೧೯೩೪ ಇಸ್ವಿ ಗುರು, ಶುಕ್ರ, ಶನಿವಾರ ಈ ಪ್ರಕಾರ ಮೂರು ದಿವಸ ಲಾತೂರಿನಲ್ಲಿ ಜರುಗತಕ್ಕದ್ದೆಂದು ಕಾರ್ಯಕಾರಿ ಮಂಡಳದವರು ನಿಶ್ಚಯಿಸಿದ್ದಾರೆ.

ಈ ಮೂರನೆಯ ಪರಿಷತ್ತಿನ ಅಧ್ಯಕ್ಷಸ್ಥಾನ ವಹಿಸಲು ಸಮಾಜದ ಬಗ್ಗೆ ತುಂಬಾ ಕಳಕಳಪಡುವ ಶ್ರೀ. ರಾಯ ಕಾಶೀರಾವ ಸಾಹೇಬ ದೇಶಮುಖ ವಕೀಲ ಭಾಲ್ಕಿ ಇವರು ಒಪ್ಪಿಕೊಂಡಿದ್ದಾರೆ. ಸರ್ವ ವೀರಶೈವ ಬಂಧುಭಗಿನಿಯರು ಪರಿಷತ್ತಿನ ಸಭಾಸದರಾಗಿ ಈ ಪರಿಷತ್ತಿನ ಕಾರ್ಯವು ಯಶಸ್ವಿಯನ್ನಾಗಿ ಮಾಡಲು ತಮಗೆ ಶಕ್ಯವಿದ್ದಷ್ಟು ದುಡ್ಡಿನ ಸಹಾಯಮಾಡಬೇಕೆಂದು ಆಗ್ರಹದ ವಿನಂತಿ ಇದೆ.

ಇದೇ ಸಮಯದಲ್ಲಿಯೇ ಅಖಿಲ ವೀರಶೈವ ಮಹಿಳಾ ಪರಿಷತ್ತನ್ನು ಜರುಗಿಸಬೇಕೆಂದು ನಿರ್ಧರಿಸಿದೆ. ಪರಿಷತ್ತಿನ ಮುಂದೆ ಗೊತ್ತುವಳಿಗಳನ್ನು ತರಲಿಚ್ಛಿಸುವವರು ಖುರ್ದಾದ ತಿಂಗಳ ಕೊನೆಯೊಳಗಾಗಿ ತಮ್ಮ ಗೊತ್ತುವಳಿಗಳ ನಕಲನ್ನು ಸುವಾಚ್ಯ ಅಕ್ಷರಗಳಿಂದ ಬರೆದು ಚಿಟ್ನಿಸರ ಕಡೆಗೆ ಕಳುಹಿಸಿಕೊಡಬೇಕು. ಪರಿಷತ್ತಿನ ವ್ಯವಸ್ಥೆಯ ದೆಸೆಯಿಂದ ಸ್ವಯಂಸೇವಕರ ದಲವನ್ನು ನಿರ್ಮಿಸಿದ್ದು ಸ್ವಯಂಸೇವಕರಾಗುವವರು ಜಾಗ್ರತೆ ತಮ್ಮ ಹೆಸರುಗಳನ್ನು ಕಳುಹಿಸಬೇಕು. ಮೂರು ರೂ. ಕೊಟ್ಟು ಪ್ರತಿನಿಧಿಗಳಾಗುವವರಿಗೆ ಭೋಜನದ ಮತ್ತು ಇರಲು ಸ್ಥಳದ ಏರ್ಪಾಟುಮಾಡಲಾಗುತ್ತದೆ. ಪ್ರೇಕ್ಷಕರಿಗೆ ೧ ರೂ. ವಿಶೇಷ ಸಂಗತಿಗಳಿಗೆ ಮುಂದಿನ ಪ್ರಕಟನೆಯನ್ನು ನೋಡಿರಿ

ತಮ್ಮ<br>
ವಿರೂಪಾಕ್ಷಸ್ವಾಮಿ ದೇಶಿಕೇಂದ್ರ ಮಹಾರಾಜ,<br>
ಚಿಟ್ನಿಸ ನಿಜಾಮ ವೀರಶೈವ ಪ್ರಾಂತಿಕ ಪರಿಷತ್ತು<br>
ಲಾತೂರು, ಬಿ. ಎಲ್. ಆರ್.


ನಮ್ಮಲ್ಲಿ ಫೋಟೋ,
ಲೈನ್ ಬ್ಲಾಕುಗಳು,
ಹಿತ್ತಾಳೆ ಮತ್ತು ಸೀಸದ
ಬ್ಲಾಕುಗಳು ಆರಗಿನ
ಸೀಲು, ಜವಾಸರ ಬಿಲ್ಲೆಗ
ಳು. ದೇವರ 3 ಬಣ್ಣದ
ಪಠಗಳು, ಕ್ಯಾಲೆಂಡರು
ಗಳು, ನಿಮ್ಮಮನ
ಒಪ್ಪುವಂತೆ ತಯಾರಾ
ಗುತ್ತವೆ.
ಬಜರ್ವಾ ಅಂಡ್ ಕೋ.
ಚಿಕ್ಕಪೇಟೆ.
ಬೆಂಗಳೂರು ಸಿಟಿ

ಅಖಿಲ ಭಾರತ ವಸ್ತು ಪ್ರದರ್ಶನದಲ್ಲಿ
ಸುವರ್ಣ ಪದಕಗಳನ್ನು ಮತ್ತು ಸರ್ಟೀಫಿಕೇಟುಗಳನ್ನು ಪಡೆದು ಹೆಸರಾದ
ಇಂಡಿಯಾ ಸರಕಾರದಲ್ಲಿ ರಜಿಸ್ಟರ್ ಆದ

# ಸಿದ್ಧೇಶ್ವರ ಟ್ರೇಝರಿ ಕಂಪನಿ, ಹುಬ್ಬಳ್ಳಿ.










ನಮ್ಮ "ಸಿದ್ಧೇಶ್ವರ ಟ್ರೇಝರಿ" ಗಳನ್ನು ಈ ವರೆಗೆ ಕೈಗಾರಿಕೆಯ ಕೆಲಸಗಳಲ್ಲಿ ಹೆಸರಾದ ಯುರೋಪ, ಅಮೇರಿಕಾ ವಗೈರೆ ಪರರಾಷ್ಟ್ರಗಳಲ್ಲಿ ತಯಾರಾಗುವ ಟ್ರೇಝುರಿಗಳ ಪದ್ಧತಿಯ ಮೇರೆಗೆ ಹೊಸ ಉಕ್ಕಿನ ಅಖಂಡ ಒಂದೇ ತಗಡಿನಲ್ಲಿ ೧೨ ಮೂಲೆಗಳನ್ನು ೩೫೦ ಟನ್ ಪ್ರೇಷರ ಕೊಡುವ ಮಶಿನ್ನಿನಿಂದ ಬಗ್ಗಿಸಿ, ರಿವ್ಹಿಟ್ಸ ಮೊದಲಾದವುಗಳಿಂದ ಜಾಯಿಂಟ ಮಾಡದೆ ಇಲೆಕ್ಟ್ರಿಸಿಟಿಯಿಂದ ಬೆಸೆದು ತಯಾರಿಸುತ್ತೇವೆ.

ಈ ಹೊಸ ಸುಧಾರಣೆಯಿಂದ ಮಾಡಿದ ತಿಜೋರಿಗಳಿಗೂ ಮತ್ತು ಯಾವದೇ ನಮ್ಮ ಸಾಮಾನಕ್ಕೂ ಯಾವ ತರದ ಭಯವಿಲ್ಲ. ಮತ್ತು ಅವು ಒಳ್ಳೇ ಮಜಬೂತವಾಗಿಯೂ ಸುಂದರವಾಗಿಯೂ ಆಗುತ್ತವೆ. ನಾವು ನಮ್ಮ ತಿಜೋರಿಗಳಿಗೂ ಮತ್ತು ನಮ್ಮಲ್ಲಿ ತಯಾರಾಗುವ ಉಕ್ಕಿನ ಕಪಾಟು, ಕ್ಯಾಶಬಾಕ್ಸ, ಸ್ಟ್ರಾಂಗರೂಮ ಡೋರ್‍ಸು ಗಳಿಗೂ ನಮ್ಮ ಕಾರಖಾನೆಯಲ್ಲಿಯೇ ತಯಾರಾಗುವ ಉತ್ತಮವಾದ ಮತ್ತು ಮಜಬೂತವಾದ ಕೀಲಿಗಳನ್ನು ಹಚ್ಚುತ್ತೇವೆ. ಮತ್ತು ಇದಲ್ಲದೆ ನಮ್ಮಲ್ಲಿ ಹೊಸ ಪದ್ಧತಿಯ ಮೇರೆಗೆ ತಯಾರಾಗುವ ಕಾಂಬಿನೇಶನ್ ಕೀ ಲೆಸ್ಸಾ ಲಾಕ್ಸು (ನಂಬರ ಕೀಲಿ) ಗಳನ್ನು ತಿಜೋರಿಗಳಿಗೆ ಹಚ್ಚಿಸಿದರೆ ಆ ತಿಜೋರಿಗಳನ್ನು ಯಾರೂ ತೆಗೆಯಲು ಸಾಧ್ಯವಿಲ್ಲ. ಯಾರಾದರೂ ತೆಗೆದರೆ ಅವರಿಗೆ

**೧೦೦೦ ರೂ. ಬಹುಮಾನ ಕೊಡುವೆವು.**

ನಮ್ಮ ಫಾಯರ ಪ್ರೂಫ್ ತಿಜೋರಿಗಳು ತುಂಬಾ ಖಾತ್ರಿಯಾದವುಗಳಿರುತ್ತವೆ.

**ಈ ಬಗ್ಗೆ ಅನೇಕ ವಸ್ತು ಪ್ರದರ್ಶನಗಳಲ್ಲಿ ಒಳಗೆ ನೋಟು ವಗೈರೆ ಸಾಮಾನುಗಳನ್ನು ಇಟ್ಟು ಕೆಂಪಗೆ ಕಾಸಿದನಂತರ ಒಳಗಿಟ್ಟ ಸಾಮಾನುಗಳು ಸುಡದೆ ಇದ್ದದ್ದನ್ನು ಖಾತ್ರಿ ಮಾಡಿಕೊಟ್ಟಿದ್ದೇವೆ.**

ಧಾರಣೆಗಳ ಬಗ್ಗೆ ನಮ್ಮ ಸಚಿತ್ರ ಕ್ಯಾಟಲಾಗುಗಳಿಗೆ ಬರೆಯಿರಿ.
ಅ ಥ ವಾ
ಸಮಕ್ಷಮ ಬಂದಲ್ಲಿ ತಿಳಿಯುವದು.

ತಮ್ಮ ಕಲಾಭಿಮಾನಿ,
ಸಿದ್ಧೇಶ್ವರ ಮತ್ತು ಕಂಪನಿ
ಟ್ರೇಝುರಿ ಮೇಕರ್ಸ
ಹುಬ್ಬಳ್ಳಿ.

ಫ್ಯಾಕ್ಟರಿ ಮತ್ತು ಹೆಡ್ ಆಫೀಸ್-
ಹುಬ್ಬಳ್ಳಿ.

ಬ್ರ್ಯಾಂಚ ಆಫೀಸುಗಳು-
ಹೈದರಾಬಾದ (ಡೆಕ್ಕನ) ಮತ್ತು ಕೊಲ್ಹಾಪುರ (ಲಕ್ಷ್ಮೀಪುರಿ)

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2301.

# ಶರಣ ಸಂದೇಶ

# The Sharana Sandesh

ನ್ಯಾಯನಿಷ್ಠುರ, ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ, ಶರಣನಾರಾರಿಗೂ ಅಂಜುವವನಲ್ಲ!
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಪ್ರತಿ ಸೋಮವಾರವೂ ಪ್ರಕಟವಾಗುವುದು

ಬಿಡಿಸಂಚಿಕೆಗೆ ೧ ಆಣೆ. ಅಂಚೆಯ ವೆಚ್ಚ ಸೇರಿ ೩ ರೂ.

ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೧೬ ನೆಯ ಮೇ ೧೯೩೮. | ಸಂಚಿಕೆ ೬

ಜನಸೇವೆಯೇ ... ದೇಶಸೇವೆ

# ಮುಖ್ಯ ಪ್ರಧಾನರ ಪರಿಷತ್ತು.

ಕಾಂಗ್ರೆಸ್ಸಿನ ಬಹುಮತವುಳ್ಳ ೭ ಪ್ರಾಂತಗಳ
ಮುಖ್ಯ ಪ್ರಧಾನರ ಪರಿಷತ್ತು ಮುಂಬೈಯಲ್ಲಿ
ಕಳೆದ ವಾರ ೩ ದಿವಸಗಳ ವರೆಗೂ
ರಾಷ್ಟ್ರಪತಿ ಬಾಬು ಸುಭಾಸಚಂದ್ರ ಬೋಸರವರ
ಅಧ್ಯಕ್ಷತೆಯಲ್ಲಿ ಜರುಗಿತು.
ಸೆರೆಮನೆ ಸುಧಾರಣೆ, ಕೂಲಿಕಾರರ ಸಮಸ್ಯೆ,
ರಾಜಕೀಯ ಸೆರೆಯಾಳುಗಳ ತರಗತಿ ಭಿನ್ನತೆಯನ್ನು ತೆಗೆದು
ಹಾಕುವುದು, ಸರಕಾರದ ಆಡಳಿತದ ವೆಚ್ಚವನ್ನು ತಗ್ಗಿಸುವುದೇ
ಮೊದಲಾದ ವಿಷಯಗಳನ್ನು ಕುರಿತು ಚರ್ಚಿಸಿ
೭ ಪ್ರಾಂತಗಳಲ್ಲಿಯೂ ಒಂದೇ ಧೋರಣವನ್ನಿಟ್ಟು
ಕೊಳ್ಳಬೇಕೆಂದು ನಿರ್ಧರಿಸಿದರು.

ದೇವಸೇವೆ ... ದೇವಾಲಯ.



# ಶರಣ ಸಂದೇಶ

THE SHARANA SANDESHA.



## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ-ಸೋಮವಾರ ತಾರೀಖು ೧೬ ನೆಯ ಮೇ ೧೯೩೮. | ಸಂಚಿಕೆ ೩೬

## ಮಹತ್ವದ ಸುದ್ದಿಗಳು.

—ಮದ್ರಾಸ ಸ್ಥಾನಿಕ ಸಂಸ್ಥೆಗಳ ಮಂತ್ರಿಗಳಾದ ನಾ|| ಗೋಪಾಳ ರಡ್ಡಿಯವರ ವಿವಾಹವು ವಿಶ್ವಭಾರತಿಯಲ್ಲಿ ಹಿಂದಕ್ಕೆ ವಿದ್ಯಾರ್ಥಿನಿಯಾಗಿದ್ದ ಶ್ರೀ ಲಕ್ಷ್ಮೀಕಾಂತಮ್ಮನವರೊಡನೆ ಪಚಪ್ಪ ಕಾಲೇಜಿನ ಹಾಸ್ಟೇಲಿನ ಬಯಲಿನಲ್ಲಿ ತಾ|| ೮ನೆಯ ದಿವಸ ಅತಿ ವೈಭವದಿಂದ ಜರುಗಿತು. ವಿವಾಹದನಂತರ ಸಮ್ಮಿಶ್ರ ಭೋಜನಸಮಾರಂಭ ನೆರವೇರಿತು, ಡಾ. ಟಾಗೋರರವರು ವಧೂವರರ ಅಭಿನಂದನ ಪರ ತಂತಿಯನ್ನು ಕಳುಹಿಸಿಕೊಟ್ಟಿದ್ದರು.

—ಸ್ಪೇನಿನಲ್ಲಿಯ ಯಾದವೀ ಯುದ್ಧವು ನಿಲ್ಲಬೇಕಾದರೆ ಸರಕಾರವು ಅನಿರ್ಬಂಧವಾಗಿ ಶರಣು ಬರಲೇಬೇಕೆಂದು ಜನರಲ್ ಫ್ರಾಂಕೋರವರು ಒಂದು ಪ್ರಕಟನೆಯಲ್ಲಿ ಸ್ಪಷ್ಟಪಡಿಸಿದ್ದಾರೆ.

—ಮದ್ರಾಸ ಅಸೆಂಬ್ಲಿ ಪ್ರೆಸಿಡೆಂಟರಾದ ಶ್ರೀ ಬಲುಸು ಸಾಂಬಮೂರ್ತಿಯವರು ಅಧ್ಯಕ್ಷತೆಗೂ ಅಸೆಂಬ್ಲಿ ಸದಸ್ಯತೆಗೂ ರಾಜೀನಾಮೆ ಕೊಟ್ಟಿದ್ದಾರೆಂದು ತಿಳಿದು ಬಂದಿದೆ. ಅದನ್ನು ಅವರು ವರ್ಕಿಂಗ ಕಮೀಟಿಯ ಕಡೆಗೆ ಕಳುಹಿಸಿ ಕೊಟ್ಟಿದ್ದಾರೆ.

—ಜಯಪುರ ಮಹಾರಾಜ ಸರಕಾರದ ಆಜ್ಞೆಗೆ ವಿರುದ್ಧವಾಗಿ ನಡೆದುಕೊಂಡರೆಂಬ ಕಾರಣದಿಂದ ಸಿಕಾರ ಸಂಸ್ಥಾನವನ್ನು ಜಯಪುರ ಸರಕಾರವು ವಶಪಡಿಸಿ ಕೊಂಡಿದೆ. ಅಲ್ಲಿಯ ರಾಜರಾದ ಶ್ರೀ ಕಲ್ಯಾಣ ಸಿಂಹರು ಸಿಂಹಾಸನ ಬಾಹಿರರೆಂದು ಸಾರಲಾಗಿದೆ.

— ಜಮಖಂಡಿ ಸಂಸ್ಥಾನದ ಪ್ರಜಾ ಪರಿಷತ್ತು ಕುಂದಗೋಳ ತಾಲೂಕಿನ ಸಂಶಿಯಲ್ಲಿ ಇದೇ ತಿಂಗಳ ೩೦-೩೧ ನೆಯ ತಾರೀಖುಗಳಲ್ಲಿ ಶ್ರೀ. ಅಂದಾನೆಪ್ಪ ದೊಡ್ಡಮೇಟಿ ಇವರ ಅಧ್ಯಕ್ಷತೆಯಲ್ಲಿ ನಡೆಯುವುದಿದೆ.

—ಅಹಮದನಗರ ಡಿಸ್ಟ್ರಿಕ್ಟ ಜಡ್ಜರಾದ ಶ್ರೀ ಶಿ| ಶಿ| ಹುಲಕೋಟಿ ಯವರು ತಮ್ಮ ಮಗಳ ಲಗ್ನದಕಾಲಕ್ಕೆ ಕರ್ನಾಟಕ ಲಿಂಗಾಯತ ಎಜ್ಯುಕೇಶನ್ ಸೊಸಾಯಿಟಿಯ ಧಾರವಾಡದ ರಾಜಾ ಲಖಮನಗೌಡಾ ಸರದೇಸಾಯಿ ಹಾಯಸ್ಕೂಲಿಗೆ ಒಂದು ಸಾವಿರ ರೂ. ಉದಾರದೇಣಿಗೆ ಕೊಟ್ಟರು. ವರಪಕ್ಷದವರಾದ ಹುಬ್ಬಳ್ಳಿಯ ಶ್ರೀ. ಬಸವಂಣೆಪ್ಪಾ ಮಂಟೂರ ಶೆಟ್ರು ಇವರು ಮೇಲಿನ ಸಂಸ್ಥೆಗೆ ೨೦೧ ರೂ. ಕೊಟ್ಟಿದ್ದಾರೆ.

— ಪಂಡಿತ ಜವಾಹರಲಾಲ ನೆಹರುರವರು ಕಾಂಟೆಬಿಯಾನ ಕ್ಯಾಮ್ನೋ ಹಡಗದಿಂದ ಜೂನ ೨ ನೆಯ ತಾರೀಖಿನ ದಿವಸ ಯುರೋಪಕ್ಕೆ ಹೋಗುವವರಿದ್ದಾರೆ. ಮೊದಲು ಅವರು ಲಾಸೇನಾಕ್ಕೆ ಹೋಗಿ ನಂತರ ಜಿನೇವಾಕ್ಕೆ ಪ್ರಯಾಣಮಾಡುವರು.

— ಮಹಾತ್ಮಾ ಗಾಂಧಿಯವರು ತಾ. ೧೩ ನೆಯ ದಿವಸ ಮಧ್ಯಾನ್ಹ ಸರಕಾರಭವನದಲ್ಲಿ ಮುಂಬೈ ಪ್ರಾಂತದ ಗವ್ಹರ್ನರರಾದ ಸರ್. ರೋಜರ್ ಲುಮ್ಲೆಯವರನ್ನು ಕಂಡು ೧|| ತಾಸಿನವರೆಗೆ ಮಾತು ಕತೆ ನಡೆಯಿಸಿದರು.

— ಕಾಂಗ್ರೆಸ್ಸು ಹಿಂದೂ ಸಂಘಟನೆ ಮಾಡಲು ಹಿಂದುಗಳಿಗೆ ಅಪ್ಪಣೆ ಕೊಡುವುದಾದರೆ ನಾನು ಕಾಂಗ್ರೆಸ್ಸನ್ನು ಸೇರುವೆನೆಂದು ಬ್ಯಾ. ಸಾವರಕರರು ರಾಷ್ಟ್ರಪತಿ ಸುಭಾಸಚಂದ್ರಬೋಸರವರಿಗೆ ತಿಳುಹಿಸಿರುವುದಾಗಿ ಬ್ಯಾ. ಸಾವರಕರರು ಪ್ರೆಸ್ ಪ್ರತಿನಿಧಿಗಳ ಸಂದರ್ಶನ ಕಾಲದಲ್ಲಿ ಹೇಳಿದರು.

— ಮುಂಬೈಸರಕಾರದ ಉಪಮಂತ್ರಿಗಳಾದ ಶ್ರೀ. ಟಿ. ಆರ್. ನೇಸ್ವಿಯವರ ಸೋದರಮಾವನ ಮಗನಾದ ಶ್ರೀ. ಶಾಲಪ್ಪ ಮಾಪಿನತೋಪ ಇವರಿಗೂ ಸರದಾರ ವೀರನಗೌಡರ ಮೊಮ್ಮಗಳಾದ ಶ್ರೀ ಗಂಗವ್ವ ಇವರಿಗೂ ಹಾನಗಲ್ಲ ತಾಲೂಕ ಆಲದಕಟ್ಟಿಯಲ್ಲಿ ತಾ. ೧೫-೫-೩೮ನೆಯ ದಿವಸ ವಿವಾಹ ಜರುಗಿತು ವರನು ಸಾದಾರಾಧ್ಯ ಮತ್ತು ವಧೂ ಪಂಚಮಶಾಲಿಯವರಿದ್ದಾರೆ. ವೀರಶೈವ ಏಕೀಕರಣವನ್ನುಂಟುಮಾಡಿದ ಈ ವಧೂವರರು ತುಂಬಾ ಅಭಿನಂದನೆಗೆ ಕಾರಣರಾಗಿದ್ದಾರೆ.

—ಪೇಶಾವರ ಜಿಲ್ಲಾ ರಾಜಕೀಯ ಪರಿಷತ್ತು ತಾ ೮ನೆಯ ದಿವಸ ಮೌಲಾನಾ ಹುಸೇನ ಅಹಮ್ಮದರವರ ಅಧ್ಯಕ್ಷತೆಯಲ್ಲಿ ಜರುಗಿಸಲ್ಪಟ್ಟಿತು.

# ಶ್ರೀ ಬಸವ ಪ್ರಾರ್ಥನೆ.

ದಾಟಿ:— ಹಾ! ಪ್ರಿಯಾ ಪ್ರಶಾಂತ ಹೃದಯಾ! ? ಎಂಬಂತೆ

ಹಾ! ಬಸವಾ ವಿಶಾಲ ವಿಭವಾ!
ಪಾಲಿಸೈ ಜಗವಾ! ಬಸವಾ ||ಪಲ್ಲ||

ಕ್ಲೇಶದಿಂದ ಕೊರಗುತಿರುವಾ!
ಚಿನ್ನಬಳೆಯುವ ಭೂಮಿಯೊಳಗೆ
ಚಿಗುರು ಕಾಣೆವೈ! ಬಸವಾ!
ಅನ್ನವಿಲ್ಲದೆ ಬನ್ನಬಡುವಾ
ನಮ್ಮನಾಡನ್ನು ಪೊರೆಯೈ!
ಮೇವುಇಲ್ಲದೆ ಗೋವುಗಳೆಲ್ಲವು
ಕೊರಗಿಸಾಯುವವೈ! ಬಸವಾ!!
ದೇಶಭಕ್ತಿ ಪ್ರೇಮ-ಪಾಠಾ
ತೋಷದಿಂದಲಿ ಕಲಿಸೈ!
ವಿದೇಶಿವಸ್ತ್ರದ ಮೋಹಬಿಡಿಸಿ
ಖಾದಿ ತೊಡಿಸೈ!
ಜಾತಿಭೇದದ ತೊಡಕುತೆಗೆದು
ನೀತಿಮಾರ್ಗವ ನೀ ತೋರೈ!
ಸತ್ಯ-ಪ್ರೀತಿ ಶಾಂತಿ-ಸೇವಾ
ಸರಳದಾಯವನು ತೋರಯ್ಯ (ತೋರೈ)
ಗುಲಾಮಗಿರಿಯಾ ಬೇಗಕಳೆದು
ಸ್ವರಾಜ್ಯ ನೆಲಿಸಯ್ಯ.

---

# ಜಯ! ಬಸವೇಶ.

ದಾಟಿ:— "ಎನಿತು ಇನಿತು ಈ ಕನ್ನಡ ನುಡಿಯು" ಎಂಬಂತೆ.
(ರಾಗ:— ಸಾರಂಗ ಆದಿತಾಳ)

ಜಯ! ಬಸವೇಶನ ಸುಂದರ ಪಾದವ
ನಯ ವಿನಯದಿಂ ನೆನೆಯುತೆ ನಮಿಸುವ ||ಪಲ್ಲ||

ಸತ್ಯಾಗ್ರಹದೊಳು
ಕೀರ್ತಿಯು ಪೊಂದಿದ
ನಿತ್ಯಾನಂದದ
ನಿಜವನು ತೋರಿದ
ಧರ್ಮೋದ್ಧಾರಕ! ಮಹಿಮಾ ಪುರುಷನ ||೧||

ಅಹಿಂಸಾ ವ್ರತವನು.
ಲೋಕಕೆ ಸಾರಿ
ದಯಾಧರ್ಮದ
ಕೀಲವ ನರುಹಿ
ದೇಶೋದ್ಧಾರವ ಗೈದಿಹ ಶರಣನ ||೨||

ಜಾತಿಯ ಭೇದದ
ಸೂತಕ ವಳುಕಿಸಿ
ಸಮತಾ ವಾದವ
ಜಗದೊಳು ಹಬ್ಬಿಸಿ
ರಾಷ್ಟ್ರೋದ್ಧಾರವ ಗೈದ ಮಹಾತ್ಮನ. ||೩||

— ಆನಂದಕವಿ ಕುರುಗುಂದ

# ವೀರಶೈವ ಒಳಪಂಗಡಗಳ ಏಕೀಕರಣ ಸಂಪಗಾವ.

(ಪದ್ಯ ಚ. ಮಾ. ವೃ.)

ಮೆರೆಯಲಿ ವೀರಶೈವ ಮತಧಾತ್ರಿಯೊಳೊಮ್ಮತದಿಂದ ಸರ್ವದಾ|
ಹರಿಯಲಿಯುಚ್ಚ ನೀಚ ಬಲ ಭಾವನೆಗಳ್ ಸದುಬೋಧೆಯಿಂದಲಾ|
ಸುರಿಯಲಿ ಪ್ರೇಮವಾರಿ ವಿಷಮಾಂಧತೆ ಜಾರಿ ಸಮಾನ ಭಾವದಿಂ|
ತೊರೆಯಲಿ ಮೂಢ ರೂಢಿ ಗಡ ಶ್ರೀ ಬಸವೇಶನ ಪುಣ್ಯದಿಂದಿರಲ್||

ಮಹಾನುಭಾವರಾದ ಬಸವಣ್ಣನವರು ವೀರಶೈವ ಧರ್ಮಕ್ಕೆ ಸುಸ್ವರೂಪಕೊಟ್ಟು ಅದು ವಿಶ್ವಧರ್ಮವಾಗಲು ಅರ್ಹತೆಯುಳ್ಳ ತತ್ವಗಳನ್ನು ಅಡಕವಾಗಿಟ್ಟು ಗುಣಕರ್ಮಗಳಿಗೆ ಮಹತ್ವವನ್ನು ಕೊಟ್ಟು ಜಾತಿಜನ್ಮದ ಹೆಚ್ಚಳವನ್ನು ಸುಟ್ಟು ಲಿಂಗಾಂಗಿಗಳೆಲ್ಲರೂ ಸರಿಸಮಾನರೆಂಬ ಗುಟ್ಟನ್ನು ತಿಳಿಸಿ ಬೆಳಸಿದರು. ಆದರೆ ಆದರಲ್ಲಿಯ ಪಂಗಡಗಳನ್ನು ಮುರಿದು ಹುರಿದು ಏಕೀಕರಿಸಬೇಕೆಂಬ ಅವರ ಜೀವನದ ಗುರಿಗೆ ಸಾಕಷ್ಟು ಸಮಯ ಸಿಗದೆಹೋಯಿತು.

ಈಗ ೮೦೦ ವರುಷಗಳಿಂದಲೂ ವೀರಶೈವ ಮತದ ಉಚ್ಚ ತತ್ವಗಳಿಗನುಸಾರವಾಗಿ ನಡೆಯುತ್ತಿರುವ ಕೆಲವು ಪಂಗಡದವರಲ್ಲಿ ಇನ್ನುಳಿದ ಪಂಗಡದವರು ತಿಳುವಳಿಕೆಹೀನರಾಗಿ ಬಳಿಕೆ ಭೋಜನಾದಿಗಳನ್ನು ಮಾಡದೆ ಉಳಿದಿರುವದರಿಂದ ಬಸವಣ್ಣನವರ ಮೂಲತತ್ವಕ್ಕೆ ವಿರೋಧವಾಗಿಯೂ ಸಮಾಜದ ಐಕ್ಯಕ್ಕೆ ಆರದಾಳ ಹಚ್ಚುವಂಥಾದ್ದಾಗಿಯೂ ಇರುವ ಇದನ್ನು ಹೋಗಲಾಡಿಸುವದಕ್ಕಾಗಿ ವೀರಶೈವ ಮಹಾಸಭೆಯಲ್ಲಿ ಮಹಾನ್ ಸ್ವಾಮಿಗಳೂ, ಸಮಾಜದೊಳಗಿನ ಮುಂದಾಳುಗಳೂ ಒಳಸಂಗಡಗಳನ್ನು ಮುರಿಯಬೇಕೆಂಬ ಠರಾವುಗಳನ್ನು ತಂದು ಪಾಸುಮಾಡಿದರು.

ಇದನ್ನರಿತು ಒಳಪಂಗಡಗಳಲ್ಲಿಯ ಸಮಾಜದವರು ಎಚ್ಚತ್ತರು. ಅದರಲ್ಲಿಯೂ ನಮ್ಮ ಹಡಪದ ಸಮಾಜದವರು ವಿಶೇಷ ಚಟುವಟಿಕೆಯುಳ್ಳವರಾಗಿ ಅನಗೋಳ, ಬನಶಂಕರಿ, ಸವದತ್ತಿಗಳಲ್ಲಿ ಸಭೆಗಳನ್ನೇರ್ಪಡಿಸಿ ಧಾರ್ಮಿಕ ತತ್ವಗಳನ್ನು ತಿಳಿಸಿ ಸಮಾಜದಲ್ಲಿ ನವಚೈತನ್ಯವನ್ನುಂಟುಮಾಡಿದರು. ಅದಕ್ಕೋಸ್ಕರ ಹಡಪದವರಬಗ್ಗೆ ದೊಡ್ಡ ಪ್ರಮಾಣದ ಮೇರೆಗೆ ಸಂಪಗಾವಿಯಲ್ಲಿ ಸಭೆಗೂಡಿಸುವದಕ್ಕಾಗಿ ಇಲ್ಲಿಯ ಶ್ರೀ. ಚರಮೂರ್ತಿಸ್ವಾಮಿಗಳ ನೇತೃತ್ವದಲ್ಲಿ ಕೆಳಗೆ ಬರೆದ ಮೇರೆಗೆ ಸ್ವಾಗತ ಕಮೀಟಿಯು ಸ್ಥಾಪಿಸಲ್ಪಟ್ಟದೆ.

ಸ್ವಾಗತಾಧ್ಯಕ್ಷರು— ಶ್ರೀ. ಗಂಗಪ್ಪ ಸಿದ್ರಾಮಪ್ಪ ಮಮದಾಪುರ.

ಮೆಂಬರರು—(೧) ಶ್ರೀ. ಗಂಗಪ್ಪ ಬಸವಂತಪ್ಪ ಮುಕ್ಕಾಂಡಿ (೨) ಶ್ರೀ. ಚನ್ನಪ್ಪ ವಾಲಿ. (೩) ಶ್ರೀ. ಬಸಪ್ಪ ಶಿವರುದ್ರಪ್ಪ ತಿದ್ನಾಳ. (೪) ಕೇಶವ ಅಪ್ಪಣ್ಣ ಅಥಣಿ. (೫) ಗದಿಗೆಪ್ಪ ಹಿಡಣ್ಣನವರ. (೬) ಜಕ್ಕಪ್ಪ ಹಲ್ಕಿ. (೭) ಚನಬಸಪ್ಪ ಪುಟ್ಟಿ. (೮) ಗುರುಬಸಪ್ಪ ನೇಸರಗಿ.

ಅಧ್ಯಕ್ಷರ ಹೆಸರು ಹಿಂದಿನಿಂದ ತಿಳಿಸಲ್ಪಡುವದು. ಆದ್ದರಿಂದ ಮಹಾನ್ ಸ್ವಾಮಿಗಳವರೂ, ಸಮಾಜದ ಹಿತೈಷಿಗಳೂ, ಮುಂದಾಳುಗಳೂ ಸಭೆಗೆ ಆಗಮಿಸಿ ಸಭೆಯ ಉದ್ದೇಶವನ್ನು ಪೂರ್ತಿಗೊಳಿಸುವರೆಂದು ನಂಬಿದ್ದೇವೆ.

ಗ. ಸಿ. ಮಮದಾಪುರ.

## ದೀಕ್ಷಾವಿಧಿ ಲಿಂಗಧಾರಣ ಮಹೋತ್ಸವ ತುಮ್ಮಿನಕಟ್ಟೆ.

ಈ ಹಿಂದೆ ಹದಿನೆಂಟು ಇಪ್ಪತ್ತು ವರುಷಗಳ ಕೆಳಗೆ ನಮ್ಮ ಈ ಊರ ವೀರಶೈವ ಹಿರೇಕುರುಹಿನಶೆಟ್ಟಿ ಸಮಾಜದ ನೀಲವ್ವ ವ ಸಣ್ಣವ್ವ ಎಂಬುವರು ಅನೀತಿಯಿಂದ ಸಮಾಜ ಬಾಹಿರರಾಗಿದ್ದರು. ಆದರೂ ಅವರೂ ಅವರ ಮಕ್ಕಳೂ ಈ ವರೆಗೆ ಅನ್ನಾಹಾರಮಾಡದೆ ಸದಾಚಾರಿಗಳಾಗಿಯೇ ಇದ್ದರು. ಈಗ ಅವರು ತಮ್ಮ ಸಮಾಜಕ್ಕೆ ಬರಬೇಕೆಂದು ಬಿನ್ನಹಬರಕೊಂಡ ಪ್ರಕಾರ ತುಮ್ಮಿನಕಟ್ಟೆ ಮಾಳನಾಯಕನ ಹಳ್ಳಿಯ ಎಲ್ಲಾ ದೈವದವರು ಕೂಡಿ ಶ್ರೀ ಬಸವೇಶ್ವರ ಮಹಾನುಭಾವರ ದಿವ್ಯ ತತ್ವಗಳನ್ನು ಸ್ಮರಿಸಿ ಶುದ್ಧೀಸಂಘಟನೆಯನ್ನು ಮಾಡಬೇಕೆಂದು ಠರಾಯಿಸಿ ಶ್ರೀ. ಮನ್ಮಹಾರಾಜಾ ನಿರಂಜನ ಜಗದ್ಗುರು ಜಯದೇವ ಮುರಘಾರಾಜೇಂದ್ರ ಮಹಾಸ್ವಾಮಿಗಳವರ ಪ್ರೀತಿಗೆ ಪಾತ್ರರಾದ ಗೌಡನಕಟ್ಟೆಯಲ್ಲಿರುವ ಹಂಸಭಾವಿ ಉಜ್ಜನಿ ಮಠದ ಪಟ್ಟದ ಚೆನ್ನಬಸವಸ್ವಾಮಿಗಳವರನ್ನು ಬರಮಾಡಿಕೊಂಡು ಅವರ ನೇತೃತ್ವದಲ್ಲಿ ತಾ| ೨೨-೪-೩೮ ನೇ ಶುಕ್ರವಾರ ದಿವಸ ಪದ್ಧತಿ ಪ್ರಕಾರ ವೇ|| ಎಳೆವಳಿ ಶಾಸ್ತ್ರಿಗಳವರಿಂದ ೮-೧೦ ಮಂದಿಗೂ ವೇದೋಕ್ತವಾಗಿ ದೀಕ್ಷಾ ಲಿಂಗಧಾರಣ ವಿಧಿಗಳನ್ನುಮಾಡಿಸಿದರು. ದೀಕ್ಷೆಯಾದನಂತರ ತಮ್ಮ ಯಾವತ್ತೂ ಸಮಾಜದವರೊಡನೆ ಸಹಭೋಜನ ಕಾರ್ಯವು ಕೂಡಾ ಒಳ್ಳೇ ವೈಭವದಿಂದಲೇ ಜರುಗಿತು. ಸದರೀ ಸಮಾಜದ ಯಾವತ್ತೂ ಮನೆಯವರು ಒಳ್ಳೇ ಉತ್ಸಾಹದಿಂದ ಸಹಪಂಕ್ತಿಯಲ್ಲಿ ಭಾಗಿಗಳಾಗಿದ್ದರು. ಅಂತೂ ಯಾವ ತರದ ಗಲಭೆಯಿಲ್ಲದೆ ಕಾರ್ಯ ನೆರವೇರಿದ್ದಕ್ಕೆ ಗೌಡನಕಟ್ಟೆ ಹಂಸಭಾವಿ ಉಜ್ಜನಿ ಮಠದ ಶ್ರೀ ಪಟ್ಟದ ಚೆನ್ನಬಸವಸ್ವಾಮಿಗಳವ೦ ಹಾಗೂ ಇದೇ ಗ್ರಾಮದ ಪರಮತೀಯರಾದ ಮ. ರಾ. ಹನುಮಂತಪ್ಪನವರು ಬೆಂಕಿ ಮೊದಲಾದವರ ಕರ್ತವ್ಯದಕ್ಷತೆಯೂ ಕಾರಣವೆಂದು ಹೇಳಲಿಕ್ಕೆ ಅಡ್ಡಿಯಿಲ್ಲ.

ಶ್ರೀ ಬಸವೇಶ್ವರ ಮಹಾನುಭಾವರ ದಿವ್ಯತತ್ವಗಳನ್ನು ಓದಿಯೂ ಅವರ ತತ್ವಗಳನ್ನು ಆಚರಣೆಯಲ್ಲಿ ತರಲಿಕ್ಕೆ ಹೆದರುವ ಜನರಂತೆ ಈ ಸಮಾಜದವರು ಹೆದರದೆ ಪ್ರತ್ಯಕ್ಷವಾಗಿ ಆಚರಣೆಯಲ್ಲಿ ತಂದು ಸಮಾಜೋನ್ನತಿಯನ್ನು ಮಾಡಹತ್ತಿದ್ದಕ್ಕಾಗಿ ಶ್ರೀಗಳವರನ್ನು ಹಾಗೂ ಈ ಹಿರೇಕುರುಹಿನಶೆಟ್ಟಿ ಸಮಾಜದ ಪ್ರಮುಖರನ್ನು ಹಾಗೂ ಇದಕ್ಕೆ ಸಹಾಯ.ಮಾಡಿದ ಬೆಂಕಿ ಹನುಮಂತಪ್ಪನವರು ಮೊದಲಾದವರನ್ನು ನಾವು ಹೃತ್ಪೂರ್ವಕ ಅಭಿನಂದಿಸುತ್ತೇವೆ.

ಚೆನ್ನಪ್ಪ ಶೆಟ್ರ ತುಮ್ಮಿನಕಟ್ಟೆ

## ಯಾದಗಿರಿ ಶಂಕರ ಸಂಸ್ಕೃತ ಕಾಲೇಜದ ಪ್ರಾರಂಭವು.

ವೀರಶೈವ ವಿದ್ಯಾರ್ಥಿಗಳಿಗೆ ಈ ಪ್ರಕಟನೆಯ ಮೂಲಕ ತಿಳಿಸುವದೇನೆಂದರೆ— ನಮ್ಮ ಕಾಲೇಜು ಜ್ಯೇಷ್ಠ ಶು|| ೨ ಯಲ್ಲಿ ಅಂದರೆ ತಾ. ೩೧-೫-೩೮ ರಲ್ಲಿ ತೆರೆಯಲ್ಪಡುವದು. ಬರತಕ್ಕ ಪರೀಕ್ಷೆಯ ವಿದ್ಯಾರ್ಥಿಗಳು ತಾ. ೨೫-೫-೩೮ ರ ಒಳಗಾಗಿ ಸೆಕ್ರೆಟರಿಗಳವರ ಕಡೆಗೆ ಅರ್ಜಿ ಕಳುಹಿಸಬೇಕು. ಅರ್ಜಿ ದಾಖಲ ಮಾಡಿದ ವಿದ್ಯಾರ್ಥಿಗಳು ತಾ. ೩೧-೫-೩೮ ಕ್ಕೆ ಹಾಜರಾಗಬೇಕು.

ಹಂಪಣ್ಣ ಸೆಕ್ರೆಟರಿ
ಶಂಕರ ಸಂಸ್ಕೃತ ಕಾಲೇಜ ಯಾದಗಿರಿ.

## ಉದ್ಗಿರಿಯ ಮಹೋತ್ಸವ.

(ನಮ್ಮ ಸ್ವಂತ ಪ್ರತಿನಿಧಿಯಿಂದ)

ಈ ಮುಂಚೆ ಪ್ರಕಟವಾಗಿದ್ದ ಪ್ರಕಾರ ಉದ್ಗಿರಿ ವೀರಶೈವ ಸಮಾಜದ ವಾರ್ಷಿಕೋತ್ಸವವು ಕಳೆದ ತಿಂಗಳು ೨೭, ೨೮, ೨೯ ಮತ್ತು ೩೦ ಈ ತಾರೀಖುಗಳಲ್ಲಿ ಬಹು ಪರಿಣಾಮಕಾರಿಯಾಗಿ ನಡೆಯಿತು. ಈ ವಾರ್ಷಿಕೋತ್ಸವಕ್ಕೆ ಲಾತೂರು, ಉಮರಗಾ, ಭಾಲ್ಕಿ, ಹುಮನಾಬಾದ, ಜಾಯರಾಬಾದ ಮೊದಲಾದ ಅನೇಕ ಸ್ಥಳಗಳಿಂದ ೪-೫ ನೂರು ವೀರಶೈವ ಪ್ರಮುಖರು ಬಂದಿದ್ದರು.

ಈ ಸಾರೆಯ ವಾರ್ಷಿಕ ಸಭೆಗೆ ಶ್ರೀಯುತ ಹರ್ಡೆಕರ ಮಂಜಪ್ಪನವರು ಲಾತೂರಿನ ಶ್ರೀ. ದೇಶಿಕೇಂದ್ರ ಮಹಾರಾಜ ಇವರು ಶ್ರೀ ಮನ್ನಿರಂಜನ ಶ್ರೀ ಬಸವತೀರ್ಥದ ಮಹಾಸ್ವಾಮಿಗಳು ಪ್ರೊಫೆಸರ್ ಸಿದ್ಧರಾಮಪ್ಪ ಫುಲಾರೆಯವರು ಆಗಮಿಸಿದ್ದರಿಂದ ಸಭೆಯ ಕಾರ್ಯಗಳು ಬಹು ಯಶಸ್ವಿಯಾಗಿ ಸಾಗಿದವು.

ತಾ. ೨೭ ನೆಯ ದಿವಸ ವಾರ್ಷಿಕ ಸಭೆಯ ಕಾರ್ಯವು ಪ್ರಾರಂಭವಾಯಿತು. ಧಾರ್ಮಿಕ ಶಂಕೆಗಳ ಸಮಾಧಾನದ ಕಾರ್ಯವನ್ನು ಇಲ್ಲಿಯ ಮುಖ್ಯ ಕಾರ್ಯಕರ್ತರಾದ ಶ್ರೀ. ವಕೀಲ ಸಂಗ್ರಾಮಪ್ಪನವರು ವಹಿಸಿ ಬಹು ಸಮಾಧಾನಕರವಾಗಿ ನಡೆಸಿದರು. ಈ ಶಂಕಾಸಮಾಧಾನದ ಕಾರ್ಯವು ಪ್ರತಿ ದಿವಸ ಒಂದೆರಡು ತಾಸು ನಡೆಯುತ್ತಿತ್ತು. ವೀರಶೈವರಲ್ಲಿ ಇತ್ತೀಚೆಗೆ ಚಂಡಿಕೆ ಬಿಡಿಸಿ ಪಂಚಸೂತಕಗಳನ್ನು ಪಾಲಿಸಿ, ವರ್ಣಗಳನ್ನು ಏರ್ಪಡಿಸಬೇಕೆಂದು ಪ್ರಯತ್ನಿಸುತ್ತಿರುವ ಪಂಚಾಚಾರ್ಯರ ಹೆಸರಿನಿಂದ ವಿಘಾತಕ ಚಳವಳಿ ನಡೆಸಿರುವವರು ಮಾಡುತ್ತಿರುವ ಶಂಕೆಗಳಿಗೂ ಆರ್ಯ ಸಮಾಜದವರು ವೀರಶೈವರ ದಿವ್ಯ ತತ್ವಗಳ ಸಂಬಂಧವಾಗಿ ದುರಭಿಪ್ರಾಯವನ್ನುಂಟುಮಾಡುತ್ತಿರುವ ಕುಶಂಕೆಗಳಿಗೂ ಶ್ರೀ. ಸಂಗ್ರಾಮಪ್ಪನವರು ಸಪ್ರಮಾಣಗಳಿಂದ ಸಮಂಜಸವಾದ ಉತ್ತರಗಳನ್ನು ಕೊಟ್ಟು ಸಮಾಧಾನಗೊಳಿಸುತ್ತಿದ್ದರು.

ಶ್ರೀ. ಹರ್ಡೆಕರ ಮಂಜಪ್ಪನವರು ತಾ. ೨೮ ಮತ್ತು ೨೯ ಈ ಎರಡು ದಿವಸ ಎರಡೆರಡು ತಾಸುಗಳ ವರೆಗೆ ಬಸವಾದಿ ಪ್ರಮಥರು ಮಾಡಿದ ಧಾರ್ಮಿಕ ಸಾಮಾಜಿಕ ಮತ್ತು ಆರ್ಥಿಕ ಕ್ರಾಂತಿಗಳನ್ನು ಕುರಿತು ಆಧುನಿಕ ವಿಚಾರ ಸರಣಿಗೆ ಒಪ್ಪುವಂತೆ ಬಹು ವಿವರವಾಗಿ ಭಾಷಣಮಾಡಿ ಬಸವಾದಿ ಶರಣರ ಉದಾತ್ತವಾದ ಸಮಾಜರಚನೆಯ ಮಹತ್ವವನ್ನು ತಿಳಿಸಿ ವೀರಶೈವ ಸಮಾಜ ಸಂವರ್ಧನೆ ಮತ್ತು ಸಂಘಟನೆಗಳಿಗಾಗಿ ಪ್ರಯತ್ನಿಸಬೇಕಾದ ರೀತಿನೀತಿಗಳನ್ನು ಸೂಚಿಸಿದರು.

### ಅನುಕರಣೀಯ ಕಾರ್ಯ

ವೀರಶೈವ ತತ್ವಪ್ರಚಾರಕರು ನೈಜಾಮ ಭಾಗದಲ್ಲಿ ಈಗ ಅತ್ಯಗತ್ಯವಾಗಿದೆಯೆಂದೂ ಇದಕ್ಕಾಗಿ ಆಧುನಿಕ ವಿಚಾರದಂತೆ ವೀರಶೈವ ತತ್ವಗಳನ್ನು ಅರಿತು ಆಚರಿಸುವ ಉತ್ಸಾಹಿ ಜನರು ಮುಂದೆ ಬಂದು ಪ್ರಚಾರಕರಾಗಬೇಕೆಂದೂ ಇವರಿಗೆ ಧನಿಕರು ತುಂಬಾ ಧನ ಸಹಾಯಮಾಡಬೇಕೆಂದೂ ಶ್ರೀ. ಹರ್ಡೆಕರ ಮಂಜಪ್ಪನವರು ಸೂಚಿಸಿದ್ದು ಸಭಿಕರಿಗೆ ಮಾನ್ಯವಾಯಿತು. ಉದ್ಗಿರಿ ವೀರಶೈವ ಸಮಾಜದವರು ಈ ಕಾರ್ಯದಲ್ಲಿ ಮುಂದಾಳುಗಳಾಗಿ ಬಂದರು. ಶ್ರೀ ರಾಚಯ್ಯ ಸ್ವಾಮಿ ನಿಲಂಗ ಇವರನ್ನು ಪ್ರಚಾರಕರನ್ನಾಗಿ ಗೊತ್ತುಮಾಡಿದರು. ಈ ಉತ್ಸಾಹಿ ಸುಶಿಕ್ಷಿತ ತರುಣರು ಈ ಸಮಾಜ ಕಾರ್ಯವನ್ನು ಸಂತೋಷದಿಂದ ಮಾಡಲು ಸಿದ್ಧರಾದರು. ಇವರ ವೇತನ ಮೊದಲಾದ ಕಾರ್ಯಗಳಿಗಾಗಿ ಸಭೆಯಲ್ಲಿಯೇ ಸಾಧಾರಣ ೨೫೦ ರೂ. ಗಳು ಕೂಡಿದವು.

ಇಲ್ಲಿಯ ಸುಪ್ರಸಿದ್ಧ ಕಾರ್ಯಕರ್ತರೂ ವೀರಶೈವ ತತ್ವಗಳನ್ನೂ ಆರ್ಯ ಸಮಾಜದ ಸಿದ್ಧಾಂತಗಳನ್ನೂ ಚೆನ್ನಾಗಿ ತಿಳಿದುಕೊಂಡಿರುವ ಧರ್ಮವೀರ ರಾಚಯ್ಯ ಸ್ವಾಮಿಗಳು ತಮ್ಮ ಹುಂಡೇಕಾರಿ ಉದ್ಯೋಗವನ್ನು ಬಿಟ್ಟು ಪ್ರಚಾರಕಾರ್ಯಕ್ಕಾಗಿಯೇ ಇನ್ನು ಮುಂದೆ ಬರುವರೆಂದು ನಿರ್ಧರ ಮಾಡಿದ್ದು ಈ ಭಾಗದವರಿಗೆ ಬಹು ಸಂತೋಷವನ್ನುಂಟುಮಾಡಿದೆ. ಇವರ ಈ ಅಪೂರ್ವ ಸ್ವಾರ್ಥತ್ಯಾಗವು ಈ ಭಾಗದ ವೀರಶೈವ ಸಮಾಜಕ್ಕೆ ಬಹು ಪ್ರಯೋಜನವಾಗುವುದು. ಇವರಂತೆಯೇ ಇಲ್ಲಿಯ ಶ್ರೀ. ಧರ್ಮಪಾಲ ಇವರೂ ಪ್ರಚಾರ ಕಾರ್ಯಕ್ಕೆ ಮುಂದೆ ಬಂದದ್ದು ಇಲ್ಲಿಯವರಿಗೆ ಬಹು ಸಂತೋಷವನ್ನುಂಟುಮಾಡಿದೆ.

### ಮಹತ್ವದ ಭಾಷಣ ಮತ್ತು ಶಕ್ತಿಪ್ರಯೋಗ.

ಲಾತೂರ ಶ್ರೀ. ದೇಶಿಕೇಂದ್ರ ಮಹಾರಾಜರು ನಿಜಾಮ ವೀರಶೈವ ಸಮಾಜದಲ್ಲಿರುವ ವಿದ್ಯಾವಿಹೀನತೆ ಮತ್ತು ಅನೇಕ ಮೂಢ ಕಲ್ಪನೆಗಳ ನಿವಾರಣೆಗಾಗಿ ಮಾಡಬೇಕಾದ ಪ್ರಯತ್ನ ಹಾಗೂ ಬಸವಾದಿ ಪ್ರಮಥರು ಮಾಡಿರುವ ಮಹತ್ವದ ಧಾರ್ಮಿಕ ಸಾಮಾಜಿಕ ಸುಧಾರಣೆ ಇವುಗಳನ್ನು ಕುರಿತು ಮಹತ್ವದ ಭಾಷಣಗಳನ್ನು ಮಾಡಿದರು. ಶ್ರೀಮನ್ನಿರಂಜನ ಶ್ರೀ ಬಸವ ತೀರ್ಥದ ಸ್ವಾಮಿಗಳವರು ವೀರಶೈವ ಶುದ್ಧಿ ಮತ್ತು ಸಂಘಟನೆ ಬಗ್ಗೆ ಭಾಷಣಮಾಡಿದರು.

ಪ್ರೊಫೆಸರ್ ಘುಲಾರಿಯವರು ತಮ್ಮ ಸಂಗಡಿಗರೊಂದಿಗೆ ಬಹು ಅತ್ಯದ್ಭುತವಾದ ತಮ್ಮ ಶಕ್ತಿಪ್ರಯೋಗವನ್ನು ತೋರಿಸಿದರು. ಕಬ್ಬಿಣದ ಸರಳನ್ನು ಹಲ್ಲಿನಿಂದ ಮಣಿಸುವುದು ಹದನಾದ ಕಬ್ಬಿಣದ ಸರಳನ್ನು ಗಂಟಲಿಂದ ಮಣಿಸುವುದೂ ಅದರ ಮೇಲೆ ಒಂದು ಹುಡುಗನನ್ನು ನಿಲ್ಲಿಸುವುದು ಬೆಂಕಿ ಮತ್ತು ಶಸ್ತ್ರಗಳ ಬಳಗಳಲ್ಲಿ ಹಾರಿಹೋಗುವುದು ಮೊದಲಾದ ಇವರ ಪ್ರಯೋಗಗಳು ಅತ್ಯದ್ಭುತವಾದವುಗಳಾಗಿದ್ದವು. ಇವರಲ್ಲಿದ್ದ ಮೂರು ಹುಡುಗರ ಪ್ರಯೋಗಗಳೂ ಒಬ್ಬರ ವಿನೋದಕರವಾದ ನುಡಿನಡೆಗಳೂ ಪ್ರೇಕ್ಷಣೀಯವಾಗಿದ್ದವು.

ಈ ಪ್ರಕಾರ ಮೂರು ದಿನ ಕಾರ್ಯ ನಡೆದ ಮೇಲೆ ತಾ. ೩೦ ನೆಯ ದಿನ ಮಹಿಳಾ ಪರಿಷತ್ತು ಕೂಡಿತು. ಅನೇಕ ಕುಮಾರಿಯರು ಭಾಷಣಗಳನ್ನೂ ಸಂವಾದಗಳನ್ನೂ ಮಾಡಿದರು. ಈ ಪ್ರಕಾರ ಇಲ್ಲಿಯ ವೀರಶೈವ ಸಮಾಜದವರ ಕಾರ್ಯಕ್ರಮಗಳು ಬಹು ಪರಿಣಾಮಕಾರವಾಗಿ ನಡೆದವು. ಸಭೆಗೆ ಸಾಧಾರಣ ೧೫೦೦ ಸ್ತ್ರೀಪುರುಷರು ಕೂಡುತ್ತಿದ್ದರು. ಅಹಮದಪುರ ತಾಲೂಕು ಶಿರೂರು ಗ್ರಾಮದ ಒಬ್ಬ ಶುದ್ಧಾಚಾರಶೀಲನಿಗೆ ತಾ. ೩೦ ನೆಯ ದಿವಸ ಲಿಂಗಾಧಾರಣ ದೀಕ್ಷೆಯು ಕೊಡಲ್ಪಟ್ಟು, ಸಹಭೋಜನವೂ ನಡೆಯಿತು. ಈ ಪ್ರಕಾರ ಎಲ್ಲ ರೀತಿಗಳಿಂದ ಉದ್ಗಿರ ವೀರಶೈವ ಸಮಾಜದವರ ವಾರ್ಷಿಕೋತ್ಸವವು ಬಹು ಪರಿಣಾಮಕಾರಿಯಾಗಿ ಈ ವರುಷ ನಡೆಯಿತು. ಇವರಂತೆಯೇ ನೈಜಾಮ ಭಾಗದ ಉಳಿದ ವೀರಶೈವ ಸಮಾಜ ಮತ್ತು ಸಂಘದವರು ಕಾರ್ಯಮಾಡಬೇಕು.

---

### ಶಿಕ್ಷಣ ಪಡೆದ ನಿರುದ್ಯೋಗಿ ವಿದ್ಯಾರ್ಥಿಗಳಿಗೆ ಸುಸಂಧಿ.

## ಆಯುರ್ವೇದಕ್ಕೆ ಸರಕಾರದ ಮಾನ್ಯತೆ.

ಶಿಕ್ಷಣ ಪಡೆದ ನಿರುದ್ಯೋಗಿ ವಿದ್ಯಾರ್ಥಿಗಳಿಗೆ ಉಪಜೀವನದ ಸಾಧನ ಮತ್ತು ಬಡ ರೋಗಿಗಳಿಗೆ ಸುಲಭವಾಗಿ ಔಷಧ ದೊರೆಯಬೇಕೆಂಬ ಉದ್ದೇಶದಿಂದ ಜೂನ ೧೯೩೩ ರಿಂದ ಬೆಳಗಾವಿಯಲ್ಲಿ ಕರ್ನಾಟಕ ಆಯುರ್ವೇದ ವಿದ್ಯಾಪೀಠವು ಸ್ಥಾಪಿಸುವುದರಲ್ಲಿ ಬಂದಿರುವುದು.

ಬೆಳಗಾವ ಭಿಷಗ್ವರ ಮತ್ತು ಭಿಷಕ್ ವರ್ಗಗಳ ಕ್ರಮವು ೪|೩ ವರ್ಷ. ಪ್ರವೇಶ ಫೀ ರೂ. ೫|೨ ಮತ್ತು ಪ್ರತಿ ವರುಷದ ಫೀ ರೂ. ೨೪|೧೨ ಅನುಕ್ರಮವಾಗಿ ಇರುವವು- ಭಿಷಗ್ವರ ಮತ್ತು ಭಿಷಕ್ ವಿದ್ಯಾರ್ಥಿಗಳಿಗೆ ಮೊದಲಿನ ಎರಡು ವರ್ಷ ಬೆಳಗಾವ ಮುಖ್ಯ ಶಾಲೆಯಲ್ಲಿ ಅಥವಾ ನಿಪ್ಪಾಣಿ ವಿಜಾಪುರ ಅಥವಾ ಹುಬ್ಬಳ್ಳಿ ಶಾಖಾಶಾಲೆಯಲ್ಲಿ ಮತ್ತು ಕಡೆಯ ೨|೧ ವರುಷ ಬೆಳಗಾವ ಮುಖ್ಯ ಶಾಲೆಯಲ್ಲೇ ಶಿಕ್ಷಣ ಪಡೆಯಬೇಕಾಗುವುದು. ಭಿಷಕ್ ವಿದ್ಯಾರ್ಥಿಗಳಿಗೂ ಮುಖ್ಯವಾಗಿ ಆಯುರ್ವೇದ ಮತ್ತು ಅವಶ್ಯವೆನಿಸುವ ಪಾಶ್ಚಿಮಾತ್ಯ ವೈದ್ಯಕೀಯ ಶಿಕ್ಷಣವನ್ನು ಕನ್ನಡ ಅಥವಾ ಮರಾಠಿಯಲ್ಲಿ ಕೊಡಲಾಗುವದು.

ಮ್ಯಾಟ್ರಿಕ್ ಅಥವಾ ವ್ಹರ್ನ್ಯಾಕ್ಯುಲರಫಾಯನಲ್ (ಮುಲ್ಕಿ) ಪರೀಕ್ಷೆ ಪಾಸಾದವರಿಗೆ ಅನುಕ್ರಮವಾಗಿ ಭಿಷಗ್ವರ ಅಥವಾ ಭಿಷಕ್ ವರ್ಗದಲ್ಲಿ ಪ್ರವೇಶ ಸಿಗುತ್ತಿದ್ದರೂ ಪಾಸಾಗದ ವಿದ್ಯಾರ್ಥಿಗಳ ಯೋಗ್ಯತೆಯು ಸಂಸ್ಥೆಯ ಪ್ರವೇಶ ಪರೀಕ್ಷೆಯಲ್ಲಿ ಕಂಡು ಬಂದಂತೆ ಮುಖ್ಯ ಅಧ್ಯಾಪಕರು ಆಯಾ ವರ್ಗಗಳಿಗೆ ಅವರನ್ನು ಸೇರಿಸಬಹುದು.

ಪುಸ್ತಕ ಶಿಕ್ಷಣವಲ್ಲದೆ ಪ್ರಯೋಗ ಶಿಕ್ಷಣದ ಸಲುವಾಗಿ ವಿದ್ಯಾಪೀಠದ ಕಟ್ಟಡದಲ್ಲಿರುವ ದವಾಖಾನೆ ಮತ್ತು ರಸಶಾಲೆ ಅಲ್ಲದೆ ಈ ವರುಷದಿಂದ ಸೂತಿಕಾಗೃಹ (Maternity home) ಮತ್ತು ಶಸ್ತ್ರ ಚಿಕಿತ್ಸಾಲಯ (Surgerical ward) ಗಳನ್ನು ಸೇರಿಸುವ ವ್ಯವಸ್ಥೆಯನ್ನು ಮಾಡುವುದರಲ್ಲಿ ಬರುವುದು. ಇದಲ್ಲದೆ ಸರಕಾರದವರು ಆಯುರ್ವೇದಕ್ಕೆ ಉತ್ತೇಜನ ಕೊಡುವ ಕುರಿತು ಇದೇ ವರುಷ ಹೊಸದಾಗಿ ಮಾಡಲಿರುವ ಕಾಯದೆಗೆ ಸರಿಯಾಗಿ ಈಗಿದ್ದ ಅಭ್ಯಾಸ ಕ್ರಮದಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಮಾಡಬೇಕಾದಲ್ಲಿ ಸಹಜವಾಗಿ ಮಾಡಲಾದೀತು.

ಬನಾರಸ ಭಿಷಕ್ ಮತ್ತು ಅಲ್ಲೀಗಡ ವೈದ್ಯಭೂಷಣ ಪದವೀ ಪರೀಕ್ಷೆಗಳ ಕೇಂದ್ರ ಈ ವಿದ್ಯಾಪೀಠದಲ್ಲಿದ್ದು ಮೇಲೆ ಕಾಣಿಸಿದ ಶಾಖಾಶಾಲೆಗಳಲ್ಲಿಯೇ ಶಿಕ್ಷಣ ಪಡೆದ ವಿದ್ಯಾರ್ಥಿಗಳು ಸಹ ಸಹಜ ಪಾಸಾಗಬಲ್ಲರು.

ಎಲ್ಲ ಶಾಲೆಗಳು ತಾ. ೧೫-೬-೩೮ ರಿಂದ ಸುರುವಾಗುವವು. ಶಕ್ಯವಾದರೆ ಜೂನ ತಿಂಗಳ ಕೊನೆಯ ವರೆಗೆ ಪ್ರವೇಶ ಸಿಗಬಹುದು. ಬೇಕಾದವರು ಪ್ರಿನ್ಸಿಪಾಲ ಕರ್ನಾಟಕ ಆಯುರ್ವೇದ ವಿದ್ಯಾಪೀಠ ಬೆಳಗಾವ ಅಥವಾ ಆಯಾ ಶಾಖಾಶಾಲೆಗಳ ಹೆಡ್ ಮಾಸ್ತರರ ಕಡೆಗೆ ಅರ್ಜಿಮಾಡಬೇಕು.

B. S. Jirge
ಪ್ರಿನ್ಸಿಪಾಲ
ಕರ್ನಾಟಕ ಆಯುರ್ವೇದ ವಿದ್ಯಾಪೀಠ ಬೆಳಗಾವ

---

—ಕಂದಾಯದ ಮಂತ್ರಿಗಳಾದ ನಾ. ಮುರಾರಜಿ ದೇಸಾಯಿ ಇವರು ಕುಟ್ಟಿದ ಅಕ್ಕಿಯ ಅನ್ನ ಮತ್ತು ಕೈಯಿಂದ ಬೀಸಿದ ಹಿಟ್ಟಿನ ರೊಟ್ಟಿಯನ್ನು ಉಣ್ಣುತ್ತಿದ್ದು ತಮ್ಮ ಪ್ರವಾಸದಲ್ಲಿ ಅದರಂತೆ ವ್ಯವಸ್ಥೆ ಮಾಡಬೇಕೆಂದು ಧಾರವಾಡದ ಅಧಿಕಾರಿಗಳಿಗೆ ತಿಳಿಸಿರುವರೆಂದು ತಿಳಿಯುತ್ತದೆ. ಗೋದಿಯ ರೊಟ್ಟಿಯಕ್ಕಿಂತ ಅವರಿಗೆ ಸಜ್ಜೆಯ ರೊಟ್ಟಿಯು ಹೆಚ್ಚು ಸೇರುವದಂತೆ. ಮತ್ತು ಮಸರು ರೊಟ್ಟಿಯ ಮೇಲೆ ಅವರ ಪ್ರೀತಿ ಹೆಚ್ಚು ಎಂದು ತಿಳಿಸಿರುವರಾಗಿ ತಿಳಿಯುತ್ತದೆ.

### ನಂದೀ ಮಂಡಲದಲ್ಲಿ

# ಬಸವ ಪ್ರಭುವಿನ ಜಯ ಜಯಕಾರವು.

## 'ಬಸವ ವಾಙ್ಮಯವು ಆಂಧ್ರ ಕರ್ನಾಟಕ ಸಂಸ್ಕೃತಿ ಮಹಾಸಾಗರಗಳ ಸೇತು ಬಂಧನವು.'

ಕರ್ನೂಲುಡಿ|| ನಂದ್ಯಾಲ ಪಟ್ಟಣದಲ್ಲಿ ಕಳೆದ ತಾ|| ೨-೫-೩೪ ರಲ್ಲಿ ಶ್ರೀ ಬಸವೇಶ್ವರ ಜಯಂತ್ಯುತ್ಸವವು ಅತ್ಯಂತ ವೈಭವದಿಂದ ಜರುಗಿಸಲ್ಪಟ್ಟಿತು. ಹಿಂದೂ ಧರ್ಮದ ಸಮಸ್ತ ವರ್ಣದವರೂ ಇದರಲ್ಲಿ ಭಾಗವಹಿಸಿದ್ದರೆಂಬುದು ಅಪೂರ್ವವಾದ ಸಂಗತಿಯು. ಪ್ರಾತಃ ಕಾಲ ಸಾವಿರಾರು ಬಡ ಜನರಿಗೆ ಅನ್ನಸಂತರ್ಪಣೆಯು ಜರುಗಿಸಲ್ಪಟ್ಟಿತು. ಸಾಯಂಕಾಲ ಬಸವಣ್ಣನ ಸುಂದರವಾದ ಭಾವ ಚಿತ್ರಪಟವು ಪೂಮಾಲೆಗಳಿಂದಲಂಕೃತವಾದ ಮೋಟಾರಿನಲ್ಲಿ ಮಂಡಿಸಲ್ಪಟ್ಟು ರಾಜಬೀದಿಯಲ್ಲಿ ಮೆರೆಸಲ್ಪಟ್ಟು ಉತ್ಸವವು ಶ್ರೀ ಮಹಾನಂದೀಶ್ವರ ದೇವಳದ ಭವ್ಯವಾದ ಸಭಾಮಂಟಪವನ್ನು ಸೇರಿತು. ಅಲ್ಲಿ ಪಟ್ಟಣದ ಎಲ್ಲಾ ಜನಾಂಗದವರೂ ಸರಕಾರಿ ಉದ್ಯೋಗಸ್ಥರೂ ವಕೀಲರೂ ವರ್ತಕರೂ ವಿದ್ಯಾರ್ಥಿಗಳೂ ಕಿಕ್ಕಿರಿದಿದ್ದರು. ಮಹಿಳೆಯರು ಫಲಪುಷ್ಪಾದಿಗಳೊಡನೆ ತಂಡತಂಡವಾಗಿ ಬಂದಿದ್ದರು. ಶ್ರೀ ಬಸವೇಶ್ವರನ ಅರ್ಚನೆ ಮಂಗಳಾರತಿಗಳಾದನಂತರ ಮಹಾನಂದೀಕ್ಷೇತ್ರದ ಧರ್ಮಕರ್ತರಾದ ಶ್ರೀ ಭೈ. ಮಹಾನಂದಯ್ಯನವರು ಶ್ರೀ ಬಸವೇಶ್ವರನ ಅಪಾರವಾದ ಮಹಿಮಾತಿಶಯಗಳ ಬಗ್ಗೆ ಮಾತನಾಡಿ ಆ ದಿನದ ಸಭಾಧ್ಯಕ್ಷತೆಯನ್ನು ವಹಿಸಲು ಇಲ್ಲಿಯ ವೇ|| ಸರ್ಜನರಾದ ಡಾ. ಸುಬ್ರಹ್ಮಣ್ಯಶಾಸ್ತ್ರಿಗಳನ್ನು ಕೋರಿದ ಮೇರೆಗೆ ಅವರು ಬಸವಣ್ಣನ ಜೀವಿತ ಚರಿತ್ರೆಯನ್ನು ಆಮೂಲಾಗ್ರವಾಗಿ ವಿವರಿಸಿ ಬಸವೇಶ್ವರನು ವೀರಶೈವ ಧರ್ಮಕ್ಕೆ ಸಂಬಂಧಪಟ್ಟವನಾಗಿದ್ದರೂ ಆತನು ನುಡಿದ ನುಡಿದಂತೆ ನಡೆದ ಅಮೋಘ ತತ್ವಗಳು ವಿಶ್ವದ ಎಲ್ಲಾ ಧರ್ಮಗಳಿಗೆ ಸಂಬಂಧಪಟ್ಟವುಗಳಾಗಿದ್ದರಿಂದ ಬಸವಣ್ಣನು ವಿಶ್ವವಿಭೂತಿಯೆಂದು ಹೇಳಿ ಆತನ ದಿವ್ಯ ಸಂದೇಶಗಳ ಬಗ್ಗೆ ಭಾಷಣಮಾಡಲು ಇಲ್ಲಿಯ ಡಿ|| ಮುನಸಿಫರಾದ ಶ್ರೀ. ಟಿ. ಹೆಚ್. ಎಂ. ಸದಾಶಿವಯ್ಯ ಎಂ. ಎ. ಬಿ. ಎಲ್. ಇವರನ್ನು ಕೋರಿದರು. ಶ್ರೀ. ಸದಾಶಿವಯ್ಯನವರ ಭಾಷಣದ ಸಾರಾಂಶವನ್ನು ಈ ಕೆಳಗೆ ಕೊಟ್ಟಿದೆ.—

### ನಂದೀಮಂಡಳವು.

ಇದು ಹಿಂದಾನೊಂದುಕಾಲದಲ್ಲಿ ಶೈವಧರ್ಮದ ಕೇಂದ್ರಸ್ಥಾನವಾಗಿದ್ದಿತು. ಭಾರತ ವರುಷದ ಸುಪ್ರಸಿದ್ಧ ಪುರಾತನ ಕ್ಷೇತ್ರಗಳಲ್ಲಿ ಹಿರಿದಾದ ಶ್ರೀಶೈಲ ಮಹಾಕ್ಷೇತ್ರವು ವೀರಶೈವರಿಗೆ ಪರಮಪೂಜ್ಯವಾದುದು. ವೀರಶೈವ ಆಚಾರ್ಯರಲ್ಲಿ ಒಬ್ಬರಾದ ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯರ ಪೀಠವಿರುವುದಿಲ್ಲಿಯೇ. ಅನಾದಿ ನಿರಂಜನ ಜಂಗಮ ಸಾರ್ವಭೌಮನಾದ ಶ್ರೀ ಪ್ರಭುದೇವನು ಲಿಂಗಾನಂದ ಸಾಮ್ರಾಜ್ಯವನ್ನಾಳಿದ್ದು ಈ ಪುಣ್ಯ ಭೂಮಿಯಲ್ಲಿಯೇ. ತನ್ನ ನಿಜ ನಾಥನಾದ ಚೆನ್ನಮಲ್ಲಿಕಾರ್ಜುನನನ್ನು ಹುಡುಕುತ್ತಾ ಬಂದ ವೀರ ವಿರಾಗಿಣಿಯಾದ ಶ್ರೀ ಮಹಾದೇವಿಯಕ್ಕನು ತನ್ನ ಪಾವನಜೀವಿತದ ಅಂತಿಮಧ್ಯೇಯವನ್ನು ಕೊನೆಸಾಗಿಸಿಕೊಂಡಿದುದು ಈ ಕದಳೀ ವನದ ಪ್ರಾಂತದಲ್ಲಿಯೇ. ಕಲ್ಯಾಣ ಪಟ್ಟಣದ ಪತನವಾದನಂತರ ಅಲ್ಲಿಯ ಶಿವಶರಣವೃಂದಕ್ಕೆ ಆಶ್ರಯವನ್ನಿತ್ತುದು ಈ ಮಂಡಲವೆ. ಇಂಥಾ ನಂದೀಮಂಡಳದ ಮುಖ್ಯ ಪಟ್ಟಣವಾದ ನಂದ್ಯಾಲದಲ್ಲಿ ಯುಗಪುರುಷನಾದ ಬಸವೇಶ್ವರನ ಸ್ಮಾರಕೋತ್ಸವವು ಇಷ್ಟೊಂದು ಅಭೂತಪೂರ್ವವಾದ ವೈಭವದಿಂದ ಜರುಗಿಸಲ್ಪಡುವುದು ಸಹಜವೇ ಆಗಿದೆ. ಈ ಪವಿತ್ರೋದ್ಯಮವನ್ನು ಕೈಕೊಂಡ ಮಹನೀಯರುಗಳಿಗೆಲ್ಲ ನನ್ನ ಅಭಿನಂದನೆಗಳು.

### ಬಸವಣ್ಣನೂ ಆಂಧ್ರಪ್ರಾಂತವೂ.

ಬಸವಣ್ಣನು ಕನ್ನಡಿಗನು. ಆತನ ಕಾರ್ಯ ಕ್ಷೇತ್ರವು ಕರ್ನಾಟಕವು. ಆದರೆ ಆತನು ಜಗತ್ತಿಗಿತ್ತ ಘನಸಂದೇಶಕ್ಕೆ ಮೇರೆಗಳನ್ನು ಕಲ್ಪಿಸುವಂತಿಲ್ಲ. ದೇಶ ಕಾಲಾತೀತವದು. ಅದರಲ್ಲಿ ಆಂಧ್ರ ಪ್ರಾಂತಕ್ಕೂ ಬಸವೇಶ್ವರನ ಸಂಸ್ಕೃತಿಗೂ ಬಹು ನಿಕಟಸಂಬಂಧವಿದೆ ಆಂಧ್ರದೇಶದ ವಿಭೂತಿಗಳನೇಕರು ಬಸವಣ್ಣನ ಶಿವಾನುಭವ ಮಂಟಪದಲ್ಲಿ ವಿರಾಜಮಾನರಾಗಿದ್ದರು. ಬಂದರ ಪ್ರಾಂತ ರಾಜನೊಬ್ಬನು ತನ್ನ ರಾಜ್ಯತ್ಯಾಗ ಮಾಡಿ ಯಾವುದೋ ಒಂದು ಚಿಕ್ಕ ಕಾಯಕವನ್ನು ಕೈಕೊಂಡು ಕಲ್ಯಾಣದಲ್ಲಿ ನೆಲಸಿದ್ದನು. ಗುರು ಪುಂಗವನಾದ ಪಂಡಿತರಾಧ್ಯನು ಶುದ್ಧ ಆಂಧ್ರನಾಗಿದ್ದು ಬಸವಣ್ಣನು ಕಳುಹಿಸಿಕೊಟ್ಟ ವಿಭೂತಿಯ ಮಹಿಮೆಯಿಂದ ಕಣ್ಣಡದ ಪರಿಜ್ಞಾನವನ್ನು ಪಡೆದು ಬಸವಣ್ಣನ ಸಂದೇಶವನ್ನು ತನ್ನ "ಶಿವತತ್ವಸಾರ" ವೆಂಬ ಗ್ರಂಥವ ಮೂಲಕ ಆಂಧ್ರ ಪ್ರಾಂತದಲ್ಲೆಲ್ಲಾ ಸಾರಿದನು. ಇನ್ನೊಂದು ವಿಶೇಷವೆಂದರೆ ಬಸವಣ್ಣನ ಜನ್ಮದ ಇತಿಹಾಸವು ಪ್ರಥಮದಲ್ಲಿ ಆಂಧ್ರ ಭಾಷೆಯಲ್ಲಿ ಹುಟ್ಟಿತು. ಸುಪ್ರಸಿದ್ಧರಾದ ಪಾಲ್ಕುರಿಕೆ ಸೋಮನಾಥ್ಯರ ದ್ವಿಪದ ಬಸವ ಪುರಾಣವೇ ಬಸವಣ್ಣನ ಪ್ರಥಮ ಜೀವಿತ ಚರಿತ್ರೆಯು. ಅದರಿಂದೀಚೆಗೆ ಆಂಧ್ರ ಕರ್ನಾಟಕ ಭಾಷೆಗಳಲ್ಲಿ ಬಸವಣ್ಣನ ವಿಷಯವಾಗಿ ಅನೇಕಾನೇಕ ಗ್ರಂಥಗಳು ಹುಟ್ಟಿದವು. ದಿವಂಗತರಾದ ದೇಶೋದ್ಧಾರಕ ಕೈ|| ನಾಗೇಶ್ವರರಾವು ಪಂತರು ಅವರು ಬಸವ ಪಂಥಾನುಯಾಯಿಗಳಾಗಿದ್ದು ದ್ವಿಪದ ಬಸವ ಪುರಾಣವನ್ನು ವಿಸ್ತಾರವಾದ ಪೀಠಿಕೆಯೊಡನೆ ಸರ್ವಾಂಗ ಸುಂದರವಾಗಿ ಮುದ್ರಿಸಿ ಪ್ರಚುರಗೊಳಿಸಿ ನಮ್ಮೆಲ್ಲರ ಚಿರಕೃತಜ್ಞತೆಗೆ ಪಾತ್ರರಾಗಿರುವರು. ಬಸವ ಯುಗದ ವಿಚಾರ ಸ್ವಾತಂತ್ರ್ಯದ ಗಾಳಿಯ ಸೋಂಕು ಆಂಧ್ರ ವಾಙ್ಮಯದಲ್ಲಿಯೂ ಸಹಾ ಅದ್ಭುತವಾದ ಆಂದೋಳನವನ್ನೆಬ್ಬಿಸಿತು. ನನ್ನಯ ಭಟ್ಟನ ಯುಗದ ಆಂಧ್ರ ವಾಙ್ಮಯಕ್ಕೂ ೧೨ನೇ ಶತಮಾನದಿಂದೀಚೆಗಿನ ವಾಙ್ಮಯಕ್ಕೂ ಎಷ್ಟೋ ಅಂತರವಿದೆ. ಸುಲಭವಾದ ದ್ವಿಪದ, ರಗಳೆ, ಗೀತೆ ಮುಂತಾದ ಛಂದಸ್ಸಿನ ಕಾವ್ಯಗಳು ಹುಟ್ಟಿದುದೂ, ಸುಲಿದ ಬಾಳೆಯ ಹಣ್ಣಿನಂದದ ಜಾನಪದ ತೆನುಗು ಭಾಷೆಯು ಜಾರಿಗೆ ಬಂದುದೂ, ಕವಿಗಳು ಕವಿ ಸಮಯ ಮುಂತಾದ ರೂಢಿಗಳ ಶೃಂಖಲೆಗಳನ್ನು ಕಿತ್ತೊಗೆದುದೂ ಈ ಗಾಳಿಯ ಸೋಂಕಿನಿಂ

ದಲೇ, ಆಂಧ್ರದಲ್ಲಿ ಅನೇಕ ವೀರಶೈವ ಕವಿಗಳು ಬಸವ ಯುಗ ವೈಭವವನ್ನು ಚಿತ್ರಿಸುವುದರಲ್ಲೇ ತಮ್ಮ ಜೀವಮಾನವನ್ನು ಕಳೆದರಲ್ಲದೇ ಕವಿಸಾರ್ವಭೌಮರೆಂದೆನ್ನಿಸಿಕೊಂಡಿರುವ ಶ್ರೀನಾಥ, ಬಮ್ಮೆರಪೋತನ ಮುಂತಾದವರು ಆ ಶಿವಶರಣರ ಯುಗವನ್ನು ವೆಗ್ಗಳವಾಗಿ ವರ್ಣಿಸಿರುವರು. ಕಾರಣ ಬಸವಯುಗದ ಸಂಸ್ಕೃತಿಯು ಆಂಧ್ರ ಕರ್ನಾಟಕ ಸಂಸ್ಕೃತಿ ಮಹಾಸಾಗರಗಳ ಸೇತು ಬಂಧನವೆಂದು ಹೇಳಬಹುದು.

### ಬಸವಣ್ಣನ ಹಿಂದೂಧರ್ಮವು ಜೀವಂತ ಧರ್ಮವು.

ಬಸವ ಯುಗದ ಪೂರ್ವದಲ್ಲಿ ಹಿಂದೂ ಧರ್ಮವು ಅನೇಕ ಧಕ್ಕೆಗಳಿಗೆ ಸಿಲುಕಿ ನಿರ್ನಾಮವಾಗುವ ಸ್ಥಿತಿಯಲ್ಲಿದ್ದರೂ ಆದರ ನಿಜ ಸ್ವರೂಪವು ಅಳಿದುಹೋಗಿದ್ದಿತು. ಅದು ಕರ್ಮಠರ ಕೈಯಲ್ಲಿ ಸಿಲುಕಿ ತನ್ನ ಅಸ್ತಿತ್ವವನ್ನು ಕಳೆದುಕೊಂಡು ನಿರ್ಜೀವಧರ್ಮವಾಗಿದ್ದಿತು. ರೂಢಿಸಾಂಪ್ರದಾಯಗಳ ಹೆಚ್ಚಳದ ಕಾರಣದಿಂದ ಮೂಲ ತತ್ವಗಳು ಮರೆಯಾಗಿ ಬಿಟ್ಟಿದ್ದವು. ಮೇಲೆ ಪರಧರ್ಮಗಳ ದಾಳಿಯು ಸುರುವಾಗಿದ್ದಿತು. ಇಂಥ ವಿಷಮ ಪರಿಸ್ಥಿತಿಯಲ್ಲಿ ಬಸವಣ್ಣನು ಅವತರಿಸಿ ಅದ್ಭುತ ವಿಚಾರಕ್ರಾಂತಿಯನ್ನೆಬ್ಬಿಸಿ ಹಿಂದೂ ಧರ್ಮವನ್ನು ಸಂಘಟನಗೊಳಿಸಿ ನವಚೈತನ್ಯವನ್ನು ಬೀರಿದನು. ಭದ್ರವಾದ ಅಸ್ತಿಭಾರದ ಮೇಲೆ ಸರ್ವಾಂಗ ಸುಂದರವಾದ ನೂತನ ಸಮಾಜ ಮಂದಿರವನ್ನು ನಿರ್ಮಿಸಿದನು. ಆ ನವ ಸಮಾಜದಲ್ಲಿ—

### ಮೇಲು ಕೀಳುಗಳಿಗೆ ಸ್ಥಾನವಿದ್ದಿಲ್ಲ.

"ಮೇಲಾಗಲೊಲ್ಲೆನು ಕೀಳಾಗ್ವೆನಲ್ಲದೆ" "ಎನಗಿಂತ ಕಿರಿಯರಿಲ್ಲ" ಎಂದು ಉದ್ಘೋಷಿಸಿದ ಬಸವಣ್ಣನು ಜನರನ್ನು ಮಂಕುಗೊಳಿಸಿದ್ದ ಜಾತಿಕುಲಗಳ ಹೆಚ್ಚಿನ ಹುಚ್ಚನ್ನು ಬಿಡಿಸಿದನು. ದೀನರನ್ನೂ ಪತಿತರನ್ನೂ ಉದ್ಧರಿಸಿದನು. "ಕೈಲಾಸದ ಬಾಗಿಲು ಅರಿಸಲ್ಪಟ್ಟ ಅಲ್ಪ ಸಂಖ್ಯಾಕರಿಗೆ ಮಾತ್ರವಲ್ಲದೇ ಸರ್ವರಿಗೂ ತೆರೆದಿಡಲ್ಪಟ್ಟಿದೆ. ಶಿವಧೊ! ಶಿವಧೊ!! ಎಂದು ಸಾಗಿರಿ" ಎಂದು ಸಾರಿ ಜನತೆಯಲ್ಲಿ ಆಶೋತ್ತೇಜಕ ಸಂದೇಶವನ್ನು ಬೀರಿದನು. ಕೃತ್ರಿಮವಾದ ವರ್ಣಾಶ್ರಮ ವ್ಯವಸ್ಥೆಯ ಹುರುಳನ್ನು ಬಯಲಿಗಿಟ್ಟನು. ಆ ಆದರ್ಶ ಸಮಾಜದಲ್ಲಿ—

### ಸ್ತ್ರೀಯರಿಗೆ ಪೂಜ್ಯ ಸ್ಥಾನವು ದೊರೆಕಿತು

ಉಪನಿಷತ್ಕಾಲದಲ್ಲಿದ್ದ ಗೌರವ ಪದವಿಯು ಅವರಿಗೆ ಸಿಕ್ಕಿತು. ಧಾರ್ಮಿಕ ಕ್ಷೇತ್ರದಲ್ಲಿ ಪುರುಷರೊಡನೆ ಸಮಾನತ್ವವು ಸಿಕ್ಕಿತಲ್ಲದೆ ದೀಕ್ಷಾಧಿಕಾರವು ಸಹ ಕೊಡಲ್ಪಟ್ಟಿತು. ಅಂತೇ ಗಾರ್ಗಿ ಮೈತ್ರೇಯಿ ಮುಂತಾದ ವೇದ ಯುಗದ ವಿದುಷೀಮಣಿಗಳನ್ನು ಸಹ ನಾಚಿಸುವ ಮಹಾದೇವಿ ಮುಕ್ತಾಯಿ ಮುಂತಾದ ಯೋಷಾರತ್ನಗಳು ಆ ಯುಗದಲ್ಲಿ ಹುಟ್ಟಿ ಜಗತ್ತನ್ನು ಬೆಳಗಿದವು. ಆ ಭವ್ಯ ಸಮಾಜದಲ್ಲಿ ತತ್ವಜ್ಞಾನ ಪ್ರಸಾರವು ಕೇವಲ—

### ತಾಯ್ನುಡಿಯಲ್ಲೇ ಆಯಿತು.

ಧರ್ಮ ಪ್ರವಚನವು ಸಂಸ್ಕೃತ ಭಾಷೆಯಲ್ಲಿಯೇ ಆಗಬೇಕೆಂಬ ಭ್ರಮೆಯು ಬಯಲಾಯಿತು. ವೇದಾಗಮೋಪನಿಷತ್ತುಗಳ ದಿವ್ಯ ವಾಕ್ಯಗಳು ಹೃದಯದಲ್ಲಿ ಅಳವಟ್ಟು ಅನುಭವವೆಂಬ ಪಡಿಅಚ್ಚಿನಲ್ಲಿ ಒತ್ತಲ್ಪಟ್ಟ ವಚನಗಳೆಂಬ ಹೆಸರಿನಿಂದ ಹೊರಬಿದ್ದು ಸಾಮಾನ್ಯ ಜನತೆಯ ಅಂಧಕಾರಮಯವಾದ ಹೃದಯ ಕುಹರವನ್ನು ದೂರಿ ಒಮ್ಮೆಲೆ ವಿಚಾರಕ್ರಾಂತಿಯ ಅಗ್ನಿ ಕಣವನ್ನು ಹೊತ್ತಿಸಿದವು. ಕೇಳಬೇಕೇನು? ನೈಸರ್ಗಿಕವಾದ ಎದೆಯ ಧರ್ಮಕ್ಕೂ ಉಪನಿಷದ್ಧರ್ಮಕ್ಕೂ ಭೇದವಿಲ್ಲವೆಂಬುದು ಎಲ್ಲರಿಗೂ ಮನದಟ್ಟಾಯಿತು. ಇದುವರೆವಿಗೂ ತಾವು 'ಧರ್ಮ' ವೆಂದು ನಂಬಿಕೊಂಡಿದುದು ಕೆಲ ಸ್ವಾರ್ಥಪರರಿಂದ ಪ್ರತಿಪಾದಿಸಲ್ಪಟ್ಟ ಧರ್ಮವೆಂದು ಜನಸಾಮಾನ್ಯರು ಎಚ್ಚರಗೊಂಡರು. ಈ ಹೊಸ ಬೆಳಕನ್ನುಂಟುಮಾಡಿದ ಬಸವಣ್ಣನ ಪತಾಕೆಯ ಕೆಳಗೆ ಸಮಾವೇಶರಾದರು. ಆ ದಿವ್ಯ ಸಮಾಜದಲ್ಲಿ ಸತ್ಯ, ಅಹಿಂಸೆ ಅಸ್ತೇಯಗಳೇ ಮುಖ್ಯ ವ್ರತಗಳಾಗಿ ಕೈಕೊಳ್ಳಲ್ಪಟ್ಟವು. ನಿರ್ಭೀತಿ ನಿರ್ದಾಕ್ಷಿಣ್ಯಗಳು ವಿಚಾರಕ್ರಾಂತಿಯಿಂದ ಹುಟ್ಟಿ ಬೆಳೆದ ವ್ಯಕ್ತಿ ಸ್ವಾತಂತ್ರ್ಯದ ಹೆಗ್ಗುರುತುಗಳು. ನಿರ್ಭೀತಿಯುಳ್ಳವನಿಗೆ ನಿರ್ದಾಕ್ಷಿಣ್ಯಪರನಿಗೆ ಅಸತ್ಯವೆಂಬುದೇನೊ ತಿಳಿಯದು. 'ಸಕಲ ಜಗಕ್ಕೆ ಲೇಸನೇ ಬಯಸು' ವವನಿಗೆ ಹಿಂಸಾ ವೃತ್ತಿಯು ರುಚಿಸುವ ಸಂಭವವೇ ಇಲ್ಲ. ಸರ್ವವೂ ಪರಮಾತ್ಮನಿಗೆ ಸೇರಿದುದು.

ನನ್ನದೆಂಬುದು ಯಾವುದೂ ಇಲ್ಲ. ನಾನು ಉಂಬುವುದೂ ಉಡುವುದೂ ಪರಮಾತ್ಮನಿಗೆ ಅಂಕಿತವಾಗಿಯೇ ಎಂಬುದೇ ತನ್ನ ಜನ್ಮ ಗೀತೆಯ ಪಲ್ಲವಿಯಾಗಿ ಉಳ್ಳವನಿಗೆ ಅಸ್ತೇಯ ವ್ರತವು ನೈಸರ್ಗಿಕವಾಗಿಯೇ ಅಳವಡುವುದು. ತನಗೆ ಅವಶ್ಯಕವಿರುವ ಪರಿಮಿತಿಗಿಂತಲೂ ಹೆಚ್ಚು ದ್ರವ್ಯವನ್ನು ತನ್ನಲ್ಲಿಟ್ಟುಕೊಂಡರೆ ಪರಮಾತ್ಮನನ್ನೂ ಪರಮಾತ್ಮನ ಈ ಕುಟುಂಬವಾದ ಈ ಪ್ರಪಂಚವನ್ನೂ ವಂಚಿಸಿದಂತಾಗುವುದೆಂದು ಸ್ವಾಭಾವಿಕವಾಗಿಯೇ ತಿಳಿದುಕೊಳ್ಳುವನು. ಆಹಾ! ಎಂಥ ಭವ್ಯವಾದ ಗಹನವಾದ ಸಮತಾವಾದವಿದು? ಇವರಲ್ಲಿ ದ್ವೇಷಾಸೂಯೆಗಳಿಗೆ ಎಳ್ಳಷ್ಟೂ ಆಸ್ಪದವಿಲ್ಲ. ಈ ಅಸ್ತೇಯ ವ್ರತವು ಭಕ್ತನ ನೈಜಮಾರ್ಗವು—

### ಬಸವಣ್ಣನು ಭಕ್ತಿಭಾಂಡಾರಿಯು.

ಅವನ ಭಕ್ತಿತತ್ವವು ಪ್ರೇಮಮಯವಾದುದು. ನಿಷ್ಕಾಮವಾದುದು. ಅದರ ಗುರಿಯು ಆತ್ಮಸಾಧನೆಯಲ್ಲ ಆತ್ಮಾರ್ಪಣವು. ವಿಷ್ಣು, ರುದ್ರ, ಬ್ರಹ್ಮ ಪದವಿಗಳು ಅದಕ್ಕೆ ಬೇಕಿಲ್ಲ. ಅದರ ದೃಷ್ಟಿಯಲ್ಲಿ ಮೋಕ್ಷವು ಬೇಕೆನ್ನುವುದು ಸಹ ಬಂಧನವು. ಶರಣನ ಭಕ್ತಿಯು ಶಿವಭಕ್ತಿಗಿಂತಲೂ ಹೆಚ್ಚು ಬಲವುಳ್ಳದ್ದೆಂಬುದನ್ನು ಬಸವಣ್ಣನು ತೋರಿಸಿಕೊಟ್ಟನು.

### ಆತನು ಉಜ್ವಲ ಕರ್ಮಯೋಗಿಯು.

ಜ್ಞಾನ ಕರ್ಮಗಳನ್ನು ಸ್ವರಮೇಳನಗೊಳಿಸಿದವನು. ಸಂಸಾರವು ಕಷ್ಟಮಯವಾದುದೆಂದು ಅದನ್ನು ತ್ಯಜಿಸಿ ಗಿರಿ ಗುಹೆಗಳನ್ನು ಸೇರಿದವನಲ್ಲ. ಸಂಸಾರದಲ್ಲೇ ಒಬ್ಬರಲ್ಲ; ಇಬ್ಬರು ಹೆಂಡಂದಿರನ್ನು ಕಟ್ಟಿಕೊಂಡು ಮಂತ್ರಿತ್ವ ದಂಡನಾಯಕತ್ವಗಳ ಜವಾಬ್ದಾರಿಕೆಯ ಕೆಲಸಗಳ ಹೊರೆಯನ್ನು ಹೊತ್ತುಕೊಂಡಿದ್ದನು. ಅನೇಕ ಕಷ್ಟ ನಿಷ್ಠುರಗಳಿಗೆ ಗುರಿಯಾದನು. ರಾಜಕೋಪಕ್ಕೆ ಪಾತ್ರನಾದನು. ಆದರೂ ಆರಾರಿಗೂ ಅಂಜುವವನಲ್ಲವೆಂಬ ಪ್ರಾಪಂಚಿಕ ಜೀವಿತದಲ್ಲಿಯೇ ಇದ್ದು ದಿವ್ಯಾನುಭವವನ್ನು ಪಡೆದನು.

### ಬಸವಣ್ಣನು ಕಾಯಕವೇ ಕೈಲಾಸವೆಂದನು.

ಬಸವಣ್ಣನು ಕಾಯಕವೇ ಕೈಲಾಸವೆಂದು ಸಾರುತ್ತ ಜನತೆಗೆ ಕಾಯಕಗೌರವದ ಮಹತ್ವವನ್ನು ಅರುಹಿ ಪ್ರತಿಯೊಬ್ಬನೂ ಯಾವುದಾದರೊಂದು ಕಾಯಕವನ್ನು ಕೈಕೊಳ್ಳಲಿಕ್ಕೇಬೇಕೆಂದನು. ತನ್ನ ಉದರಂಭರಣಕ್ಕಾಗಿ ಇನ್ನೊಬ್ಬರನ್ನು ಬೇಡುವುದು ಕಳ್ತನವೆಂದನು. ಇತ್ಯಾದಿ ಉದಾತ್ತ ತತ್ವಗಳನ್ನು ಬಸವಣ್ಣನು ಇಲ್ಲಿಗೆ ಎಂಟು ನೂರು ವರುಷಗಳ ಕೆಳಗೇನೇ ಜಾರಿಯಲ್ಲಿ ತಂದನು. ಹೀಗೆ ಒಂದಲ್ಲ, ಎರಡಲ್ಲ; ಹಲವು ಕ್ಷೇತ್ರಗಳಲ್ಲಿ ಅನೇಕ ಸುಧಾರಣೆಗಳನ್ನು ಮಾಡಿ ಹಿಂದೂ ಧರ್ಮವನ್ನು ಜೀವಂತ ಧರ್ಮವಾಗಿ ಮಾಡಿದನು. ಎಂದು ಮುಂತಾಗಿ ಹೇಳಿ ಬಸವಣ್ಣನ ಕೆಲವು ವಚನಗಳನ್ನು ಇಂಗ್ಲೀಷ ಭಾಷೆಯಲ್ಲಿ ಓದಿ ಹೇಳಿ ತೆಲುಗಿನಲ್ಲಿ

# ಅಖಿಲ ಮಹಾರಾಷ್ಟ್ರ ಹಿಂದು ಯುವಕ ಪರಿಷತ್ತು.

## ಮಹತ್ವದ ಗೊತ್ತುವಳಿಗಳು.



ಶ್ರೀ. ಕ್ಷಾತ್ರ ಜಗದ್ಗುರುಗಳು.



ಬ್ಯಾ. ಸಾವರಕರರು.



ಡಾ. ಕೆ. ಬಿ. ಹೆಡಗೆವಾರ.

ಈ ಮೊದಲೇ ನಿಶ್ಚಯಿಸಲ್ಪಟ್ಟಂತೆ ತಾ. ೩೦-೪-೩೪ ನೇ ದಿವಸ ಅಖಿಲ ಮಹಾರಾಷ್ಟ್ರ ಹಿಂದು ಯುವಕ ಪರಿಷತ್ತು ಪುಣೆಯಲ್ಲಿ ರಾಷ್ಟ್ರಧುರೀಣ ಡಾ. ಕೆ. ಬಿ. ಹೆಡಗೆವಾರ ಇವರ ಅಧ್ಯಕ್ಷತೆಯಲ್ಲಿ ತುಂಬಾ ಉತ್ಸಾಹದಿಂದ ಪ್ರಾರಂಭವಾಗಿ ಕೊನೆಗಂಡಿತು. ಪುಣೆಯ ಪ್ರತಿಷ್ಠಿತ ನಾಗರಿಕರಾದ ಶ್ರೀ. ಜಿ. ಎಂ. ನಲಾವಡೆಯವರು ಸ್ವಾಗತಾಧ್ಯಕ್ಷರಾಗಿದ್ದರು ಕೊಲ್ಹಾಪುರದ ಶ್ರೀ ಕ್ಷಾತ್ರ ಜಗದ್ಗುರುಗಳವರು ಉದ್ಘಾಟನ ಸಮಾರಂಭವನ್ನು ನೆರವೇರಿಸಿದರು.

ಈ ಸಭೆಗೆ ಡಾ. ಮುಂಜೆ, ಹಿಂದು ಮಹಾಸಭೆಯ ಅಧ್ಯಕ್ಷರಾದ ಬ್ಯಾ. ಸಾವರಕರ ಮೊದಲಾದ ಮುಂದಾಳುಗಳೂ ಬಂದಿದ್ದರು. ಪರಿಷತ್ತಿನಲ್ಲಿ ತೀರ್ಮಾನಿಸಲ್ಪಟ್ಟ ಮಹತ್ವದ ಗೊತ್ತುವಳಿಗಳನ್ನು ಇದರಡಿಯಲ್ಲಿ ಕೊಟ್ಟಿದೆ—

### ಹಿಂದು ಸ್ವಾತಂತ್ರ್ಯ.

ಹಿಂದು ಸಮಾಜ, ಹಿಂದುಧರ್ಮ ಮತ್ತು ಹಿಂದು ಸಂಸ್ಕೃತಿಗಳ ಸಂರಕ್ಷಣೆ, ಸಂವರ್ಧನೆಗಳಿಗೋಸ್ಕರ ಹಿಂದುರಾಷ್ಟ್ರದ ಅಭ್ಯುದಯ ಮತ್ತು ವೈಭವಗಳ ವೃದ್ಧಿಗಾಗಿ ಯೋಗ್ಯ ಕಂಡ ನ್ಯಾಯ ಮಾರ್ಗಗಳಿಂದ ಸಂಪೂರ್ಣ ಸ್ವಾತಂತ್ರ್ಯ ಸಂಪಾದನೆಮಾಡುವುದೇ ಪ್ರತಿಯೊಬ್ಬ ಹಿಂದು ಯುವಕನ ಆದ್ಯ ಕರ್ತವ್ಯವಾಗಿದೆ.

### ಹಿಂದುಸ್ಥಾನ ಹಿಂದುಗಳ ದೇಶ.

ಹಿಂದುಸ್ಥಾನವು ಹಿಂದುಗಳ ದೇಶವು. ಈ ದೇಶದಲ್ಲಿ ಹಿಂದುಗಳೇ ಬಹು ಸಂಖ್ಯಾಕರಾಗಿರುವುದರಿಂದ ರಾಜ್ಯಭಾರದ ಸರ್ವ ಸೂತ್ರಗಳೂ ಹಿಂದು ಜನರ ಕೈಯಲ್ಲಿಯೇ ಇರಬೇಕು. ಜಾತಿ ನಿರ್ಣಯದಿಂದ ಈ ದೇಶದ ಸಾರ್ವಜನಿಕ ಕಾರ್ಯಗಳಲ್ಲಿ ವಿಷಯುಕ್ತ ವಿಚಾರಗಳು ಪ್ರಚಾರವಾಗುತ್ತಲಿವೆ. ಆದಕಾರಣ ಜಾತಿ ನಿರ್ಣಯವನ್ನು ಈ ಪರಿಷತ್ತು ನಿಷೇಧಿಸುತ್ತದೆ. ಮತ್ತು ಜಾಗ್ರತೆ ಇದನ್ನು ತೆಗೆದುಹಾಕಲು ಪ್ರಯತ್ನಿಸಬೇಕೆಂದು ಸಕಲರಿಗೂ ವಿನಂತಿಮಾಡಿಕೊಳ್ಳುತ್ತದೆ. ಕಾಂಗ್ರೆಸ್ ಪಕ್ಷದ ಈಗಿನ ಧೋರಣದಿಂದ ಹಿಂದುಗಳ ಹಿತಕ್ಕೆ ವಿಪತ್ತು ಬಂದುದರಿಂದ ಅದರ ರೀತಿ ನೀತಿಗಳನ್ನು ಈ ಪರಿಷತ್ತು ನಿಷೇಧಿಸುತ್ತದೆ.

### ಸಮತಾವಾದದ ನಿಷೇಧ.

ವರ್ಗಕಲಹದಿಂದ ರಾಷ್ಟ್ರದ ಉನ್ನತಿಯಾಗುವುದಿಲ್ಲವೆಂದೂ ಸಮತಾವಾದಿಗಳು ಈಗ ಉಂಟುಮಾಡುತ್ತಿರುವ ವರ್ಗಕಲಹವು ರಾಷ್ಟ್ರಕ್ಕೆ ವಿಘಾತಕವಾದುದೆಂದೂ ಕೂಲಿಕಾರರೂ ಒಕ್ಕಲಿಗರೂ ಉನ್ನತಿ ಸ್ಥಿತಿಗೆ ಬರುವಂತೆ ಪ್ರಯತ್ನಿಸಬೇಕೆಂದೂ ಈ ಪರಿಷತ್ತು ಅಭಿಪ್ರಾಯಪಡುತ್ತದೆ.

(೧೨ ನೆಯ ಪುಟಕ್ಕೆ ಮುಂದೆ ಸಾಗಿದೆ.)

---

ಅರ್ಥಮಾಡಿದರು. ಸದ್ರಿ ಇಂಗ್ಲಿಷ ವಚನಗಳ ಪ್ರತಿಗಳು ಸಭಿಕರಲ್ಲಿ ಹಂಚಲ್ಪಟ್ಟವು. ತದನಂತರ ಶ್ರೀ. ಆರ್. ಶೇಷಗಿರಿರಾಯರು ಬಿ. ಎ. ಬಿ. ಎಲ್, ಶ್ರೀ. ದೇಶಪಾಂಡೆ ಸುಬ್ಬರಾಯರು ಬಿ. ಎ. ಬಿ. ಎಲ್. ಮುಂತಾದವರು ಬಸವಣ್ಣನ ಭಕ್ತಿಮಾರ್ಗವನ್ನೂ ರಾಜಕಾರಣಪಟುತ್ವವನ್ನೂ ವರ್ಣಿಸಿ ಹಿಂದೂಧರ್ಮಕ್ಕೆ ಆ ಮಹಾನುಭಾವನಿಂದ ಚಿರಸ್ಮರಣೀಯವಾದ ಮಹದುಪಕಾರವಾಯಿತೆಂದೂ ಆತನು ತುಳಿದ ಮಾರ್ಗವು ಆಧುನಿಕ ಸಮಾಜಸುಧಾರಕರಿಗೆ ಆದರ್ಶವಾಗಿರುವದೆಂದೂ ಹೇಳಿದರು. ಅಧ್ಯಕ್ಷರಸಮಾರೋಪಕ ಭಾಷಣವಾದನಂತರ ಅವರ ಕೋರಿಕೆಯ ಮೇರೆಗೆ ಶ್ರೀ. ಸದಾಶಿವಯ್ಯನವರು ಶ್ರೀ ಅಕ್ಕ ಮಹಾದೇವಿಯು ಬಸವಣ್ಣನನ್ನು ಹೊಗಳಿನುಡಿದ ಒಂದು ದಿವ್ಯ ವಚನವನ್ನು ಓದಿ ಹೇಳಿದರು. ಸರ್ವರಿಗೂ ಪ್ರಸಾದವು ಹಂಚಲ್ಪಟ್ಟು ಸಭೆಯು ಮುಕ್ತಾಯಗೊಂಡಿತು.



ಶಾ. ಶ. ೧೮೬೦ ನೆಯ ವೈಶಾಖ ಬ॥ ೨ ಸೋಮವಾರ.

# ಹಿಂದುಜಾತಿ ಸ್ವಾತಂತ್ರ್ಯ

ಹಿಂದುಸ್ಥಾನಕ್ಕೆ ರಾಜಕೀಯ ಸ್ವಾತಂತ್ರ್ಯ ಪ್ರಾಪ್ತವಾಗಬೇಕೆಂದು ಈಗ ಪ್ರಚಂಡ ಪ್ರಯತ್ನ ನಡೆದಿದೆಯಷ್ಟೆ. ಈ ಪ್ರಯತ್ನವು ಫಲಕಾರಿಯಾದರೆ ಹಿಂದುಜಾತಿಗೂ ಸ್ವಾತಂತ್ರ್ಯವು ದೊರೆಯಲೇ ಬೇಕಾದುದು ವಿಹಿತವಾದುದು. ಏಕೆಂದರೆ, ಹಿಂದುಸ್ಥಾನದಲ್ಲಿ ಹಿಂದುಗಳೇ ಬಹು ಸಂಖ್ಯಾಕರು. ಮತ್ತು ಹಿಂದುಸ್ಥಾನವು ಹಿಂದುಗಳ ಜನ್ಮಭೂಮಿಯೂ ಆಗಿದೆ.

ಯಾರಿಗೆ ಈ ದೇಶವು ತಮ್ಮ ಪೂರ್ವಜರ ದೇಶವಾಗಿಯೂ ತಮ್ಮ ಮತಸ್ಥಾಪಕರ ಜನ್ಮಭೂಮಿಯಾಗಿಯೂ ಇದೆಯೋ ಅವರೇ ಹಿಂದುಗಳೆಂದು ಬ್ಯಾ. ಸಾವರಕರರು ಹೇಳಿರುವ ವ್ಯಾಖ್ಯೆಯು ಈಗ ಹಿಂದು ಮಹಾಸಭೆಗೂ ಮಾನ್ಯವಾಗಿದೆ. ಆದುದರಿಂದ ಈ ವ್ಯಾಖ್ಯೆಯ ಪ್ರಕಾರ ಬ್ರಾಹ್ಮಣಾದಿ ಚತುರ್ವರ್ಣದವರೂ ಜೈನ, ಶೀಖ, ಲಿಂಗಾಯತರೂ ಹಿಂದುಗಳಲ್ಲಿಯೇ ಎಣಿಸಲ್ಪಡುವುದರಿಂದ ೧೯೩೧ ನೆಯ ಜನಸಂಗಣನೆಯ ಪ್ರಕಾರ ಈ ದೇಶದ ೩೫ ಕೋಟಿ ಜನರಲ್ಲಿ ಹಿಂದುಗಳು ೨೪ ಕೋಟಿ ಜನರಿದ್ದಾರೆ. ಮುಸಲ್ಮಾನರಾದರೋ ೮ ಕೋಟಿ ಜನರಿದ್ದಾರೆ. ಕ್ರಿಸ್ತರು ೬೨ ಲಕ್ಷ ಪಾರ್ಶಿಗಳು ೧ ಲಕ್ಷ ಮಾತ್ರ ಇದ್ದಾರೆ.

ಹಿಂದುಗಳು ಈ ದೇಶದ ಮುಖ್ಯ ಜನಾಂಗದವರಾಗಿಯೂ ಮುಸಲ್ಮಾನರಿಗಿಂತ ಮೂರುಪಾಲು ಹೆಚ್ಚಾಗಿಯೂ ಇರುವುದರಿಂದ ಈ ದೇಶದ ರಾಜಕೀಯ ಸ್ವಾತಂತ್ರ್ಯ ಸೂತ್ರವು ಇವರ ಕೈಯಲ್ಲಿಯೇ ಇರಬೇಕಾದುದು ನ್ಯಾಯವಾಗಿಯೂ ಸ್ವಾಭಾವಿಕವಾಗಿಯೂ ಇದೆ. ಇಂಥ ಸಹಜ ಸ್ಥಿತಿಯು ಕೂಡಾ ಈಗ ವ್ಯತ್ಯಸ್ತವಾಗುತ್ತಿರುವುದು ಅತ್ಯಂತ ಅನ್ಯಾಯದ ಮತ್ತು ವಿಷಾದದ ಸಂಗತಿಯಾಗಿಲ್ಲವೆ?

ಮುಸಲ್ಮಾನರ ಆಕ್ರಮಣವೃತ್ತಿಯಿಂದಲೂ ಹಿಂದುಸ್ಥಾನದ ಪ್ರಮುಖ ರಾಜಕೀಯ ಸಂಗಡವಾದ ಕಾಂಗ್ರೆಸ್ಸಿನ ದಾಕ್ಷಿಣ್ಯ ಪ್ರವೃತ್ತಿಯಿಂದಲೂ ಹಿಂದುಸ್ಥಾನಕ್ಕೆ ಸ್ವಾತಂತ್ರ್ಯ ದೊರಕಿದರೂ ಹಿಂದುಜಾತಿಗೆ ಮಾತ್ರ ಅದರ ನಿಜವಾದ ಫಲಪ್ರಯೋಜನಗಳು ದೊರೆಯುತ್ತವೆಯೋ? ಇಲ್ಲವೋ? ಎಂಬ ಸಂಶಯವುಂಟಾಗಿದೆ.

## ಈ ವರೆಗಿನ ಅನುಭವ.

ಹಿಂದುಸ್ಥಾನಕ್ಕೆ ಸ್ವಾತಂತ್ರ್ಯ ದೊರೆತರೆ ಈ ದೇಶದ ಪ್ರತಿಯೊಂದು ವ್ಯಕ್ತಿಗೂ ಸ್ವಾತಂತ್ರ್ಯ ದೊರೆತೇ ದೊರೆಯುವಾಗ ಬಹು ಸಂಖ್ಯಾಕರಾದ ಹಿಂದುಗಳಿಗೆ ಮಾತ್ರ ಅದು ದೊರೆಯುವುದಿಲ್ಲವೆ? ಎಂದು ಕೆಲವರು ಕೇಳಬಹುದು. ಇಂಥವರು ಈ ವರೆಗಿನ ಸಾವಿರಾರು ವರುಷಗಳ ಅನುಭವವನ್ನು ನೋಡಲಿ.

ನಾಲ್ಕಾರು ಸಾವಿರು ವರುಷಗಳ ಹಿಂದೆ ಈ ದೇಶದ ಮೇಲೆ ದಂಡೆತ್ತಿ ಬಂದವರು ಆರ್ಯರು. ಅವರು ಈ ದೇಶದ ದ್ರಾವಿಡಾದಿ ಜನಾಂಗದವರನ್ನು ಸೋಲಿಸಿ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದರು. ಅವರು ಮಾಡಿದ ಅತ್ಯಾಚಾರಗಳು ಋಗ್ವೇದಾದಿ ಗ್ರಂಥಗಳಲ್ಲಿ ಈ ಕೆಳಗಿನಂತೆ ಎಷ್ಟೋ ಉಕ್ತವಾಗಿವೆ.

"ಇಂದ್ರನೆ, ನೀನು ಐದು ಲಕ್ಷ ಶಸ್ತ್ರಧಾರಿ ದಾಸರನ್ನು ಸಂಹಾರಮಾಡಿದಿ." (ಋಗ್ವೇದ ೪-೩೦-೧೫)

"ಇಂದ್ರನೇ, ಕಲ್ಲುಗಳಿಂದ ಕಟ್ಟಲ್ಪಟ್ಟ ದಾಸರ ಒಂದು ನೂರು ನಗರಗಳನ್ನು ಹಾಳುಮಾಡಿ ಆರ್ಯ ರಾಜನಾದ ದಿವೋದಾಸನಿಗೆ ಕೊಟ್ಟೆ." (ಋಗ್ವೇದ ೪-೩೦-೨೦)

ಆರ್ಯರು ಆಕ್ರಮಣಮಾಡಿದ ಕಾಲವು ಹಿಂದುಸ್ಥಾನದ ಸ್ವಾತಂತ್ರ್ಯಕಾಲವೆಂದೇ ಎಣಿಸಲ್ಪಟ್ಟದ್ದಾದರೆ ಆಗ ಬಹು ಸಂಖ್ಯಾಕರಾಗಿದ್ದ ದ್ರಾವಿಡಾದಿ ಜನರು ಪರತಂತ್ರದಲ್ಲಿಯೇ ಬಳಲುತ್ತಿದ್ದರು. ಬ್ರಾಹ್ಮಣಾದಿ ಅಲ್ಪ ಸಂಖ್ಯಾಕರಾದ ದ್ವಿಜರಿಗೆ ಮಾತ್ರವೇ ಆಗ ನಿಜವಾದ ಸ್ವಾತಂತ್ರ್ಯವಿದ್ದಿತೇ ವಿನಾ ಬಹು ಸಂಖ್ಯಾಕರಾದ ಶೂದ್ರಾದಿಗಳು ರಾಜಕೀಯ, ಧಾರ್ಮಿಕ, ಸಾಮಾಜಿಕ, ಸಾಂಪತ್ತಿಕ ಪಾರತಂತ್ರ್ಯಗಳಲ್ಲಿಯೇ ಬಳಲುತ್ತಿದ್ದರು. ಒಂದು ದೇಶಕ್ಕೆ ಸ್ವಾತಂತ್ರ್ಯವಿದ್ದ ಮಾತ್ರದಿಂದ ಆ ದೇಶದ ಎಲ್ಲ ವ್ಯಕ್ತಿಗಳಿಗೂ ಸ್ವಾತಂತ್ರ್ಯವು ದೊರೆತೇ ದೊರೆಯುತ್ತದೆಂದು ಹೇಳಲಿಕ್ಕಾಗುವುದಿಲ್ಲವೆಂಬುದಕ್ಕೆ ಇದೇ ಬಲವಾದ ದೃಷ್ಟಾಂತವು.

ರಾಜ ಪ್ರಭುತ್ವದ ಆಗಿನ ತಮೋ ಯುಗದಲ್ಲಿ ಮಾತ್ರವೇ ಹಾಗಿದ್ದಿತೆಂದಲ್ಲ. ಪ್ರಜಾಪ್ರಭುತ್ವದ ಈಗಿನ ಬೆಳಕಿನ ಕಾಲದಲ್ಲಿಯೂ ಅದೇ ಸ್ಥಿತಿಯು ಸ್ವಲ್ಪ ಬೇರೆಯಾಗಿ ಇದ್ದೇ ಇದೆ. ಈಗಿನ ೨೪ ಕೋಟಿ ಹಿಂದುಗಳಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂದು ಹೇಳಿಕೊಳ್ಳುವವರ ಸಂಖ್ಯೆ ಸಾಧಾರಣ ೪॥ ಕೋಟಿ ಮಾತ್ರವೇ ಇದೆ. ರಾಷ್ಟ್ರದ ರಾಜಕೀಯ ಧಾರ್ಮಿಕ ಸಾಮಾಜಿಕ ಮತ್ತು ಸಾಂಪತ್ತಿಕ ಸ್ವಾತಂತ್ರ್ಯ ಸೌಲಭ್ಯಗಳೆಲ್ಲ ಈ ಜನರ ಸ್ವಾಧೀನದಲ್ಲಿಯೇ ಇವೆಯೇ ವಿನಾ ಹಿಂದುಗಳಲ್ಲಿ ಸಾಧಾರಣ ೨೦ ಕೋಟಿ ಜನರು ಹೆಚ್ಚಾದ ದಾರಿದ್ರ್ಯ, ಅಜ್ಞಾನ, ಪರಾಧೀನತೆಗಳಲ್ಲಿಯೇ ಬಳಲುತ್ತಿದ್ದಾರೆ. ಆದಕಾರಣ ಈ ದೇಶದಲ್ಲಿ ಸಾಮಾಜಿಕ ಉನ್ನತಿಯ ರೀತಿ ನೀತಿ ಅಂತಸ್ತುಗಳು ಭಿನ್ನಭಿನ್ನವಾಗಿರುವುದರಿಂದ ರಾಷ್ಟ್ರದ ಸ್ವಾತಂತ್ರ್ಯವು ಈ ರಾಷ್ಟ್ರದ ಪ್ರತಿಯೊಂದು ವ್ಯಕ್ತಿಗೂ ಅನ್ವಯಿಸುತ್ತದೆಂದು ಹೇಳಲಿಕ್ಕಾಗದು.

## ಮುಸಲ್ಮಾನರ ಆಕ್ರಮಣ.

ಆರ್ಯರ ತರುವಾಯ ಈ ದೇಶದ ಮೇಲೆ ಆಕ್ರಮಣಮಾಡಿ ಇಲ್ಲಿಯೇ ಪ್ರಭುತ್ವವನ್ನು ಸ್ಥಾಪಿಸಿ ನೆಲೆಸಿರುವವರು ಮುಸಲ್ಮಾನರಷ್ಟೆ. ಇಂಗ್ಲಿಷರು ಈ ದೇಶದಲ್ಲಿ ಪ್ರಭುತ್ವವನ್ನು ಸ್ಥಾಪಿ

ಸುವ ಮುಂಚೆ ಈ ದೇಶಕ್ಕೆ ಸ್ವಾತಂತ್ರ್ಯವಿದ್ದಿತೆಂದರೆ ಆಗ ಬಹು ಸಂಖ್ಯಾಕರಾಗಿದ್ದ ಹಿಂದುಗಳು ಪಾರತಂತ್ರ್ಯದಲ್ಲಿಯೇ ಇದ್ದರು. ಮುಸಲ್ಮಾನರು ಈ ದೇಶದವರಾಗಿದ್ದರೂ ಅವರ ಪ್ರಭುತ್ವವು ಹಿಂದುಗಳನ್ನು ಪಾರತಂತ್ರ್ಯದಲ್ಲಿಡುವುದೇ ಆಗಿದ್ದಿತು. ಆದಕಾರಣ ದೇಶದ ಸ್ವಾತಂತ್ರ್ಯವು ಆ ದೇಶದ ಎಲ್ಲ ಜನರ ಸ್ವಾತಂತ್ರ್ಯಕ್ಕೂ ಸಾಧನವಾಗಿಯೇ ಪರಿಣಮಿಸುತ್ತದೆಂದು ಹೇಳಲಿಕ್ಕಾಗುವುದಿಲ್ಲ.

ಹಿಂದಿನ ಮುಸಲ್ಮಾನರ ಪ್ರಭುತ್ವದ ದುರವಸ್ಥೆಯ ಕಥೆ ಹಾಗಿರಲಿ. ಈಗ ನಿಜಾಮ ರಾಜ್ಯದ ಸ್ಥಿತಿ ಹೇಗಿದೆ? ಅಲ್ಲಿ ೧೦೦ಕ್ಕೆ ೮೫ ಜನರು ಹಿಂದುಗಳಿದ್ದರೂ ಅವರನ್ನು ನೂರಕ್ಕೆ ೧೫ ರಂತೆ ಇರುವ ಮುಸಲ್ಮಾನರೇ ಆಳುತ್ತಾ ಇಲ್ಲವೆ? ಅದು ಇಸ್ಲಾಮಿ ರಾಜ್ಯವೆಂದೇ ತಿಳಿಯಲ್ಪಡುತ್ತಾ ಇಲ್ಲವೆ?

### ಈಗಿನ ಸ್ವಾತಂತ್ರ್ಯ ಹೇಗಿರಬೇಕು?

ಇವೆಲ್ಲ [illegible]ಜಪ್ರಭುತ್ವದ ದೃಷ್ಟಾಂತಗಳೆಂದೂ ಇನ್ನು ಮೇಲೆ ಪ್ರಜಾಪ್ರಭುತ್ವ ಸ್ಥಾಪನೆಯಾಗುವದರಿಂದ ಈ ಪದ್ಧತಿಯು ಇನ್ನು ಮೇಲೆ ಉಳಿಯುವದಿಲ್ಲವೆಂದೂ ಕೆಲವರು ಹೇಳಬಹುದು. ಹಾಗಾಗಬೇಕೆಂದೇ ನಿಜವಾದ ಸ್ವಾತಂತ್ರ್ಯಪ್ರಿಯರು ಇಚ್ಛಿಸುತ್ತಾರೆ.

ಆದರೆ ಈಗ ಮುಸಲ್ಮಾನರಿಗೆ ಸರಕಾರವು ಕೊಟ್ಟಿರುವ ವಿಶೇಷ ಸೌಲಭ್ಯ ಮತ್ತು ಕಾಂಗ್ರೆಸ್ ಪಕ್ಷವು ಅವರಿಗೆ ಕೊಡುತ್ತಿರುವ ಅನುಕೂಲತೆ ಇವು ಪ್ರಜಾಪ್ರಭುತ್ವಕ್ಕೆ ವಿರುದ್ಧವಾದವುಗಳಾಗಿವೆ. ಜಾತಿವಿಶಿಷ್ಟ ಧೋರಣವನ್ನು ಪ್ರಜಾಪ್ರಭುತ್ವದ ಮರೆಯಲ್ಲಿ ಸ್ಥಾಪಿಸುತ್ತಿರುವುದು ಘಾತಕವಾದುದಾಗಿದೆ.

ಒಂದು ವ್ಯಕ್ತಿಗೆ ಒಂದೇ ಮತವಿರಬೇಕಾದುದು ಪ್ರಜಾಪ್ರಭುತ್ವದ ಮೂಲ ಸಿದ್ಧಾಂತ. ವ್ಯಕ್ತಿಯ ಜಾತಿಪಂಥಗಳಿಂದ ರಾಜಕಾರಣಗಳಲ್ಲಿ ವಿಶೇಷ ಸೌಲಭ್ಯವನ್ನು ಹೊಂದುವುದು ನಿಜವಾದ ಸ್ವಾತಂತ್ರ್ಯವಲ್ಲ. ಅಲ್ಪ ಸಂಖ್ಯಾಕರ ಹಿತ ರಕ್ಷಣೆಯೆಂದರೆ ಬಹು ಸಂಖ್ಯಾಕರ ಹಿತಾಪಹಾರವಲ್ಲ. ಈಗ ಬ್ರಿಟಿಶ್ ಸರಕಾರವು ಮಾಡಿರುವ ಜಾತಿನಿರ್ಣಯವು ಹಿಂದುಜಾತಿಯ ಸ್ವಾತಂತ್ರ್ಯಕ್ಕೆ ವಿಘಾತಕವಾದುದಾಗಿದೆ. ಕಾಂಗ್ರೆಸ್ ಪಕ್ಷವು ಜಾತಿನಿರ್ಣಯವನ್ನು ಉಪೇಕ್ಷಿಸಿ ಮುಸಲ್ಮಾನರೊಂದಿಗೆ ಸಂಧಾನಮಾಡಿಕೊಳ್ಳುತ್ತಿರುವ ಈಗಿನ ರೀತಿಯು ಹಿಂದುಜಾತಿ ಸ್ವಾತಂತ್ರ್ಯಕ್ಕೆ ಕಂಟಕಪ್ರಾಯವಾಗಿ ಪರಿಣಮಿಸದಿರಲಾರದು.

ಆದಕಾರಣ ಈಗಿನ ಪ್ರಜಾಪ್ರಭುತ್ವದ ದೊಡ್ಡ ಹೆಸರಿಗೆ ಮೋಸಹೋಗದೆ ಹಿಂದುಗಳು ಸಂಘಟಿತರಾಗಿ ಹಿಂದುಸ್ಥಾನದ ಎಲ್ಲ ಜಾತಿಮತಪಂಥದವರೂ ಸಮಾನವಾದ ರಾಜಕೀಯ ಸ್ವಾತಂತ್ರ್ಯವು ಅವರವರ ಸಂಖ್ಯಾ ಪ್ರಮಾಣದಂತೆಯೇ ದೊರೆಯುವ ಹಾಗೆ ಪ್ರಯತ್ನಿಸಬೇಕು. ಅಲ್ಪ ಸಂಖ್ಯಾಕರೆಂಬ ನೆವದಿಂದ ಬಹು ಸಂಖ್ಯಾಕರ ನಿಜವಾದ ಸೌಲಭ್ಯ ಸ್ವಾತಂತ್ರ್ಯಗಳನ್ನು ಅಪಹಾರ ಮಾಡಲು ಅವಕಾಶಕೊಡಕೂಡದು. ಈಗ ರಾಜಕಾರಣದಲ್ಲಿ ಮುಸಲ್ಮಾನರಿಗೆ ವಿಶೇಷ ಸೌಲಭ್ಯವನ್ನು ಕೊಟ್ಟುದೇ ಹಿಂದುಜಾತಿ ಸ್ವಾತಂತ್ರ್ಯಕ್ಕೆ ಎಷ್ಟೋ ಅಪಾಯಕರವಾಗಿರುವಾಗ ಇನ್ನೂ ಹೆಚ್ಚಾದ ಸೌಲಭ್ಯಗಳನ್ನು ಕೊಟ್ಟರೆ ಕೊನೆಗೆ ಹಿಂದುಸ್ಥಾನಕ್ಕೆ ಸ್ವಾತಂತ್ರ್ಯ ದೊರೆತರೂ ಹಿಂದುಜಾತಿಯು ಮಾತ್ರ ಪಾರತಂತ್ರ್ಯದಲ್ಲಿಯೇ ಇರಬೇಕಾಗುವ ಪ್ರಸಂಗ ಬಾರದೆ ಇರಲಾರದು. ಆದಕಾರಣ ನಿಜವಾದ ಸ್ವಾತಂತ್ರ್ಯಪ್ರಿಯರು ಈಗಲೇ ಈ ವಿಷಯದ ಕಡೆ ತುಂಬಾ ಲಕ್ಷಿಸುವುದು ಅಗತ್ಯವಾಗಿಲ್ಲವೆ?

---

# ಮೈಸೂರು ಕಾಂಗ್ರೆಸ್ ಸತ್ಯಾಗ್ರಹದಲ್ಲಿ

## ಸೇರಿದ ದಾವಣಗೇರೆಯ

### ವೀರ ಮಹಿಳೆಯರು.



ಶ್ರೀಮತಿ ಬಳ್ಳಾರಿ ಸಿದ್ಧಮ್ಮನವರು.

ಶಿವಪುರದಲ್ಲಿ ಜರುಗಿದ ಮೈಸೂರು ಕಾಂಗ್ರೆಸ್ ಮಹಾಧಿವೇಶನದ ಕಾಲಕ್ಕೆ ಧ್ವಜಸತ್ಯಾಗ್ರಹ ಮಾಡಿದುದಕ್ಕಾಗಿ ದಾವಣಗೆರೆಯ ಶ್ರೀಮತಿ ಬಳ್ಳಾರಿ ಸಿದ್ಧಮ್ಮನವರನ್ನು ಸೆರೆಹಿಡಿದು ೨೫ ದಿನಗಳ ಶಿಕ್ಷೆಯನ್ನು ವಿಧಿಸಿದ್ದರು. ಇವರು ತಮ್ಮ ಶಿಕ್ಷೆಯನ್ನು ಅನುಭವಿಸಿ ತಾ. ೭ ನೆಯ ದಿವಸ ಬಿಡುಗಡೆಹೊಂದಿದರು. ಅಂದಿನಿಂದಲೇ ಇವರು ಮೈಸೂರು ಕಾಂಗ್ರೆಸ್ ಕಮಿಟಿಯ ತಾತ್ಪೂರ್ತಿಕ ಅಧ್ಯಕ್ಷತೆಯನ್ನು ವಹಿಸಿಕೊಂಡಿದ್ದಾರೆ.



ಶ್ರೀಮತಿ ಸಾವಿತ್ರಮ್ಮನವರು.

ಅಖಿಲ ಭಾರತೀಯ ಚರಕಾಸಂಘದ ಹುಬ್ಬಳ್ಳಿ ಶಾಖೆಯಲ್ಲಿ ಖಾದಿಯನ್ನು ಹೊತ್ತು ಮಾರುವ ಖಾದಿ ಸಿದ್ಧಲಿಂಗಪ್ಪನವರೆಂದು ಪ್ರಸಿದ್ಧರಾದ ದಾವಣಗೆರೆಯ ಬೆಲ್ಲದ ಸಿದ್ಧಲಿಂಗಪ್ಪನವರ ತಾಯಿಯವರಿವರು. ಶ್ರೀಮತಿ ಸಾವಿತ್ರಮ್ಮನವರು ಮುಪ್ಪಿನ ಮುದುಕಿಯಾಗಿದ್ದರೂ ಧ್ವಜಸತ್ಯಾಗ್ರಹದಲ್ಲಿ ಸೇರಿ ಮೂರು ತಿಂಗಳುಗಳ ಕಾರಾಗೃಹವಾಸ ಕೈಕೊಂಡಿದ್ದಾರೆ.




ಶಾ. ಶ. ೧೮೬೦ ನೆಯ ವೈಶಾಖ ಬ|| ೨ ಸೋಮವಾರ.

# ಹಿಂದುಜಾತಿ ಸ್ವಾತಂತ್ರ್ಯ

ಹಿಂದುಸ್ಥಾನಕ್ಕೆ ರಾಜಕೀಯ ಸ್ವಾತಂತ್ರ್ಯ ಪ್ರಾಪ್ತವಾಗಬೇಕೆಂದು ಈಗ ಪ್ರಚಂಡ ಪ್ರಯತ್ನ ನಡೆದಿದೆಯಷ್ಟೆ. ಈ ಪ್ರಯತ್ನವು ಫಲಕಾರಿಯಾದರೆ ಹಿಂದುಜಾತಿಗೂ ಸ್ವಾತಂತ್ರ್ಯವು ದೊರಿಯಲೇ ಬೇಕಾದುದು ವಿಹಿತವಾದುದು. ಏಕೆಂದರೆ, ಹಿಂದುಸ್ಥಾನದಲ್ಲಿ ಹಿಂದುಗಳೇ ಬಹು ಸಂಖ್ಯಾಕರು. ಮತ್ತು ಹಿಂದುಸ್ಥಾನವು ಹಿಂದುಗಳ ಜನ್ಮಭೂಮಿಯೂ ಆಗಿದೆ.

ಯಾಂಗೆ ಈ ದೇಶವು ತಮ್ಮ ಪೂರ್ವಜರ ದೇಶವಾಗಿಯೂ ತಮ್ಮ ಮತಸ್ಥಾಪಕರ ಜನ್ಮಭೂಮಿಯಾಗಿಯೂ ಇದೆಯೋ ಅವರೇ ಹಿಂದುಗಳೆಂದು ಬ್ಯಾ. ಸಾವರಕರರು ಹೇಳಿರುವ ವ್ಯಾಖ್ಯೆಯು ಈಗ ಹಿಂದು ಮಹಾಸಭೆಗೂ ಮಾನ್ಯವಾಗಿದೆ. ಆದುದರಿಂದ ಈ ವ್ಯಾಖ್ಯೆಯ ಪ್ರಕಾರ ಬ್ರಾಹ್ಮಣಾದಿ ಚತುರ್ವರ್ಣದವರೂ ಜೈನ, ಶೀಖ, ಲಿಂಗಾಯತರೂ ಹಿಂದುಗಳಲ್ಲಿಯೇ ಎಣಿಸಲ್ಪಡುವುದರಿಂದ ೧೯೩೧ ನೆಯ ಜನಸಂಗಣನೆಯ ಪ್ರಕಾರ ಈ ದೇಶದ ೩೫ ಕೋಟಿ ಜನರಲ್ಲಿ ಹಿಂದುಗಳು ೨೪ ಕೋಟಿ ಜನರಿದ್ದಾರೆ. ಮುಸಲ್ಮಾನರಾದರೋ ೮ ಕೋಟಿ ಜನರಿದ್ದಾರೆ. ಕ್ರಿಸ್ತರು ೬೨ ಲಕ್ಷ ಪಾರ್ಶಿಗಳು ೧ ಲಕ್ಷ ಮಾತ್ರ ಇದ್ದಾರೆ.

ಹಿಂದುಗಳು ಈ ದೇಶದ ಮುಖ್ಯ ಜನಾಂಗದವರಾಗಿಯೂ ಮುಸಲ್ಮಾನರಿಗಿಂತ ಮೂರುಪಾಲು ಹೆಚ್ಚಾಗಿಯೂ ಇರುವುದರಿಂದ ಈ ದೇಶದ ರಾಜಕೀಯ ಸ್ವಾತಂತ್ರ್ಯ ಸೂತ್ರವು ಇವರ ಕೈಯಲ್ಲಿಯೇ ಇರಬೇಕಾದುದು ನ್ಯಾಯವಾಗಿಯೂ ಸ್ವಾಭಾವಿಕವಾಗಿಯೂ ಇದೆ. ಇಂಥ ಸಹಜ ಸ್ಥಿತಿಯು ಕೂಡಾ ಈಗ ವ್ಯತ್ಯಸ್ತವಾಗುತ್ತಿರುವುದು ಅತ್ಯಂತ ಅನ್ಯಾಯದ ಮತ್ತು ವಿಷಾದದ ಸಂಗತಿಯಾಗಿಲ್ಲವೆ?

ಮುಸಲ್ಮಾನರ ಆಕ್ರಮಣವೃತ್ತಿಯಿಂದಲೂ ಹಿಂದುಸ್ಥಾನದ ಪ್ರಮುಖ ರಾಜಕೀಯ ಸಂಗಡವಾದ ಕಾಂಗ್ರೆಸ್ಸಿನ ದಾಕ್ಷಿಣ್ಯ ಪ್ರವೃತ್ತಿಯಿಂದಲೂ ಹಿಂದುಸ್ಥಾನಕ್ಕೆ ಸ್ವಾತಂತ್ರ್ಯ ದೊರಕಿದರೂ ಹಿಂದುಜಾತಿಗೆ ಮಾತ್ರ ಅದರ ನಿಜವಾದ ಫಲಪ್ರಯೋಜನಗಳು ದೊರೆಯುತ್ತವೆಯೋ? ಇಲ್ಲವೋ? ಎಂಬ ಸಂಶಯವುಂಟಾಗಿದೆ.

## ಈ ವರೆಗಿನ ಅನುಭವ.

ಹಿಂದುಸ್ಥಾನಕ್ಕೆ ಸ್ವಾತಂತ್ರ್ಯ ದೊರೆತರೆ ಈ ದೇಶದ ಪ್ರತಿಯೊಂದು ವ್ಯಕ್ತಿಗೂ ಸ್ವಾತಂತ್ರ್ಯ ದೊರೆತೇ ದೊರೆಯುವಾಗ ಬಹು ಸಂಖ್ಯಾಕರಾದ ಹಿಂದುಗಳಿಗೆ ಮಾತ್ರ ಅದು ದೊರೆಯುವುದಿಲ್ಲವೆ? ಎಂದು ಕೆಲವರು ಕೇಳಬಹುದು. ಇಂಥವರು ಈ ವರೆಗಿನ ಸಾವಿರಾರು ವರುಷಗಳ ಅನುಭವವನ್ನು ನೋಡಲಿ.

ನಾಲ್ಕಾರು ಸಾವಿರು ವರುಷಗಳ ಹಿಂದೆ ಈ ದೇಶದ ಮೇಲೆ ದಂಡೆತ್ತಿ ಬಂದವರು ಆರ್ಯರು. ಅವರು ಈ ದೇಶದ ದ್ರಾವಿಡಾದಿ ಜನಾಂಗದವರನ್ನು ಸೋಲಿಸಿ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದರು. ಅವರು ಮಾಡಿದ ಅತ್ಯಾಚಾರಗಳು ಋಗ್ವೇದಾದಿ ಗ್ರಂಥಗಳಲ್ಲಿ ಈ ಕೆಳಗಿನಂತೆ ಎಷ್ಟೋ ಉಕ್ತವಾಗಿವೆ.

"ಇಂದ್ರನೆ, ನೀನು ಐದು ಲಕ್ಷ ಶಸ್ತ್ರಧಾರಿ ದಾಸರನ್ನು ಸಂಹಾರಮಾಡಿದಿ." (ಋಗ್ವೇದ ೪-೩೦-೧೫)

"ಇಂದ್ರನೇ, ಕಲ್ಲುಗಳಿಂದ ಕಟ್ಟಲ್ಪಟ್ಟ ದಾಸರ ಒಂದು ನೂರು ನಗರಗಳನ್ನು ಹಾಳುಮಾಡಿ ಆರ್ಯ ರಾಜನಾದ ದಿವೋದಾಸನಿಗೆ ಕೊಟ್ಟೆ." (ಋಗ್ವೇದ ೪-೩೦-೨೦)

ಆರ್ಯರು ಆಕ್ರಮಣಮಾಡಿದ ಕಾಲವು ಹಿಂದುಸ್ಥಾನದ ಸ್ವಾತಂತ್ರ್ಯಕಾಲವೆಂದೇ ಎಣಿಸಲ್ಪಟ್ಟದ್ದಾದರೆ ಆಗ ಬಹು ಸಂಖ್ಯಾಕರಾಗಿದ್ದ ದ್ರಾವಿಡಾದಿ ಜನರು ಪರತಂತ್ರದಲ್ಲಿಯೇ ಬಳಲುತ್ತಿದ್ದರು. ಬ್ರಾಹ್ಮಣಾದಿ ಅಲ್ಪ ಸಂಖ್ಯಾಕರಾದ ದ್ವಿಜರಿಗೆ ಮಾತ್ರವೇ ಆಗ ನಿಜವಾದ ಸ್ವಾತಂತ್ರ್ಯವಿದ್ದಿತೇ ವಿನಾ ಬಹು ಸಂಖ್ಯಾಕರಾದ ಶೂದ್ರಾದಿಗಳು ರಾಜಕೀಯ, ಧಾರ್ಮಿಕ, ಸಾಮಾಜಿಕ, ಸಾಂಪತ್ತಿಕ ಪಾರತಂತ್ರ್ಯಗಳಲ್ಲಿಯೇ ಬಳಲುತ್ತಿದ್ದರು. ಒಂದು ದೇಶಕ್ಕೆ ಸ್ವಾತಂತ್ರ್ಯವಿದ್ದ ಮಾತ್ರದಿಂದ ಆ ದೇಶದ ಎಲ್ಲ ವ್ಯಕ್ತಿಗಳಿಗೂ ಸ್ವಾತಂತ್ರ್ಯವು ದೊರೆತೇ ದೊರೆಯುತ್ತದೆಂದು ಹೇಳಲಿಕ್ಕಾಗುವುದಿಲ್ಲವೆಂಬುದಕ್ಕೆ ಇದೇ ಬಲವಾದ ದೃಷ್ಟಾಂತವು.

ರಾಜ ಪ್ರಭುತ್ವದ ಆಗಿನ ತಮೋ ಯುಗದಲ್ಲಿ ಮಾತ್ರವೇ ಹಾಗಿದ್ದಿತೆಂದಲ್ಲ. ಪ್ರಜಾಪ್ರಭುತ್ವದ ಈಗಿನ ಬೆಳಕಿನ ಕಾಲದಲ್ಲಿಯೂ ಅದೇ ಸ್ಥಿತಿಯು ಸ್ವಲ್ಪ ಬೇರೆಯಾಗಿ ಇದ್ದೇ ಇದೆ. ಈಗಿನ ೨೪ ಕೋಟಿ ಹಿಂದುಗಳಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂದು ಹೇಳಿಕೊಳ್ಳುವವರ ಸಂಖ್ಯೆ ಸಾಧಾರಣ ೪|| ಕೋಟಿ ಮಾತ್ರವೇ ಇದೆ. ರಾಷ್ಟ್ರದ ರಾಜಕೀಯ ಧಾರ್ಮಿಕ ಸಾಮಾಜಿಕ ಮತ್ತು ಸಾಂಪತ್ತಿಕ ಸ್ವಾತಂತ್ರ್ಯ ಸೌಲಭ್ಯಗಳೆಲ್ಲ ಈ ಜನರ ಸ್ವಾಧೀನದಲ್ಲಿಯೇ ಇವೆಯೇ ವಿನಾ ಹಿಂದುಗಳಲ್ಲಿ ಸಾಧಾರಣ ೨೦ ಕೋಟಿ ಜನರು ಹೆಚ್ಚಾದ ದಾರಿದ್ರ್ಯ, ಅಜ್ಞಾನ, ಪರಾಧೀನತೆಗಳಲ್ಲಿಯೇ ಬಳಲುತ್ತಿದ್ದಾರೆ. ಆದಕಾರಣ ಈ ದೇಶದಲ್ಲಿ ಸಾಮಾಜಿಕ ಉನ್ನತಿಯ ರೀತಿ ನೀತಿ ಅಂತಸ್ತುಗಳು ಭಿನ್ನಭಿನ್ನವಾಗಿರುವುದರಿಂದ ರಾಷ್ಟ್ರದ ಸ್ವಾತಂತ್ರ್ಯವು ಈ ರಾಷ್ಟ್ರದ ಪ್ರತಿಯೊಂದು ವ್ಯಕ್ತಿಗೂ ಅನ್ವಯಿಸುತ್ತದೆಂದು ಹೇಳಲಿಕ್ಕಾಗದು.

## ಮುಸಲ್ಮಾನರ ಆಕ್ರಮಣ.

ಆರ್ಯರ ತರುವಾಯ ಈ ದೇಶದ ಮೇಲೆ ಆಕ್ರಮಣಮಾಡಿ ಇಲ್ಲಿಯೇ ಪ್ರಭುತ್ವವನ್ನು ಸ್ಥಾಪಿಸಿ ನೆಲೆಸಿರುವವರು ಮುಸಲ್ಮಾನರಷ್ಟೆ. ಇಂಗ್ಲಿಷರು ಈ ದೇಶದಲ್ಲಿ ಪ್ರಭುತ್ವವನ್ನು • ಸ್ಥಾಪಿ

ಸುವ ಮುಂಚೆ ಈ ದೇಶಕ್ಕೆ ಸ್ವಾತಂತ್ರ್ಯವಿದ್ದಿತೆಂದರೆ ಆಗ ಬಹುಸಂಖ್ಯಾಕರಾಗಿದ್ದ ಹಿಂದುಗಳು ಪಾರತಂತ್ರ್ಯದಲ್ಲಿಯೇ ಇದ್ದರು. ಮುಸಲ್ಮಾನರು ಈ ದೇಶದವರಾಗಿದ್ದರೂ ಅವರ ಪ್ರಭುತ್ವವು ಹಿಂದುಗಳನ್ನು ಪಾರತಂತ್ರ್ಯದಲ್ಲಿಡುವುದೇ ಆಗಿದ್ದಿತು. ಆದಕಾರಣ ದೇಶದ ಸ್ವಾತಂತ್ರ್ಯವು ಆ ದೇಶದ ಎಲ್ಲ ಜನರ ಸ್ವಾತಂತ್ರ್ಯಕ್ಕೂ ಸಾಧನವಾಗಿಯೇ ಪರಿಣಮಿಸುತ್ತದೆಂದು ಹೇಳಲಿಕ್ಕಾಗುವುದಿಲ್ಲ.

ಹಿಂದಿನ ಮುಸಲ್ಮಾನರ ಪ್ರಭುತ್ವದ ದುರವಸ್ಥೆಯ ಕಥೆ ಹಾಗಿರಲಿ. ಈಗ ನಿಜಾಮ ರಾಜ್ಯದ ಸ್ಥಿತಿ ಹೇಗಿದೆ? ಅಲ್ಲಿ ೧೦೦ ಕ್ಕೆ ೮೫ ಜನರು ಹಿಂದುಗಳಿದ್ದರೂ ಅವರನ್ನು ನೂರಕ್ಕೆ ೧೫ ರಂತೆ ಇರುವ ಮುಸಲ್ಮಾನರೇ ಆಳುತ್ತಾ ಇಲ್ಲವೆ? ಅದು ಇಸ್ಲಾಮಿ ರಾಜ್ಯವೆಂದೇ ತಿಳಿಯಲ್ಪಡುತ್ತಾ ಇಲ್ಲವೆ?

### ಈಗಿನ ಸ್ವಾತಂತ್ರ್ಯ ಹೇಗಿರಬೇಕು?

ಇವೆಲ್ಲ ರಾಜಪ್ರಭುತ್ವದ ದೃಷ್ಟಾಂತಗಳೆಂದೂ ಇನ್ನು ಮೇಲೆ ಪ್ರಜಾಪ್ರಭುತ್ವ ಸ್ಥಾಪನೆಯಾಗುವದರಿಂದ ಈ ಪದ್ಧತಿಯು ಇನ್ನು ಮೇಲೆ ಉಳಿಯುವದಿಲ್ಲವೆಂದೂ ಕೆಲವರು ಹೇಳಬಹುದು. ಹಾಗಾಗಬೇಕೆಂದೇ ನಿಜವಾದ ಸ್ವಾತಂತ್ರ್ಯಪ್ರಿಯರು ಇಚ್ಛಿಸುತ್ತಾರೆ.

ಆದರೆ ಈಗ ಮುಸಲ್ಮಾನರಿಗೆ ಸರಕಾರವು ಕೊಟ್ಟಿರುವ ವಿಶೇಷ ಸೌಲಭ್ಯ ಮತ್ತು ಕಾಂಗ್ರೆಸ್ ಪಕ್ಷವು ಅವರಿಗೆ ಕೊಡುತ್ತಿರುವ ಅನುಕೂಲತೆ ಇವು ಪ್ರಜಾಪ್ರಭುತ್ವಕ್ಕೆ ವಿರುದ್ಧವಾದವುಗಳಾಗಿವೆ. ಜಾತಿವಿಶಿಷ್ಟ ಧೋರಣವನ್ನು ಪ್ರಜಾಪ್ರಭುತ್ವದ ಮರೆಯಲ್ಲಿ ಸ್ಥಾಪಿಸುತ್ತಿರುವುದು ಘಾತಕವಾದುದಾಗಿದೆ.

ಒಂದು ವ್ಯಕ್ತಿಗೆ ಒಂದೇ ಮತವಿರಬೇಕಾದುದು ಪ್ರಜಾಪ್ರಭುತ್ವದ ಮೂಲ ಸಿದ್ಧಾಂತ. ವ್ಯಕ್ತಿಯು ಜಾತಿಪಂಥಗಳಿಂದ ರಾಜಕಾರಣಗಲ್ಲಿ ವಿಶೇಷ ಸೌಲಭ್ಯವನ್ನು ಹೊಂದುವುದು ನಿಜವಾದ ಸ್ವಾತಂತ್ರ್ಯವಲ್ಲ. ಅಲ್ಪ ಸಂಖ್ಯಾಕರ ಹಿತ ರಕ್ಷಣೆಯೆಂದರೆ ಬಹುಸಂಖ್ಯಾಕರ ಹಿತಾಪಹಾರವಲ್ಲ. ಈಗ ಬ್ರಿಟಿಶ್ ಸರಕಾರವು ಮಾಡಿರುವ ಜಾತಿನಿರ್ಣಯವು ಹಿಂದುಜಾತಿಯ ಸ್ವಾತಂತ್ರ್ಯಕ್ಕೆ ವಿಘಾತಕವಾದುದಾಗಿದೆ. ಕಾಂಗ್ರೆಸ್ ಪಕ್ಷವು ಜಾತಿನಿರ್ಣಯವನ್ನು ಉಪೇಕ್ಷಿಸಿ ಮುಸಲ್ಮಾನರೊಂದಿಗೆ ಸಂಧಾನಮಾಡಿಕೊಳ್ಳುತ್ತಿರುವ ಈಗಿನ ರೀತಿಯು ಹಿಂದುಜಾತಿ ಸ್ವಾತಂತ್ರ್ಯಕ್ಕೆ ಕಂಟಕಪ್ರಾಯವಾಗಿ ಪರಿಣಮಿಸದಿರಲಾರದು.

ಆದಕಾರಣ ಈಗಿನ ಪ್ರಜಾಪ್ರಭುತ್ವದ ದೊಡ್ಡ ಹೆಸರಿಗೆ ಮೋಸಹೋಗದೆ ಹಿಂದುಗಳು ಸಂಘಟಿತರಾಗಿ ಹಿಂದುಸ್ಥಾನದ ಎಲ್ಲ ಜಾತಿಮತಪಂಥದವರೂ ಸಮಾನವಾದ ರಾಜಕೀಯ ಸ್ವಾತಂತ್ರ್ಯವು ಅವರವರ ಸಂಖ್ಯಾ ಪ್ರಮಾಣದಂತೆಯೇ ದೊರೆಯುವ ಹಾಗೆ ಪ್ರಯತ್ನಿಸಬೇಕು. ಅಲ್ಪ ಸಂಖ್ಯಾಕರೆಂಬ ನೆವದಿಂದ ಬಹುಸಂಖ್ಯಾಕರ ನಿಜವಾದ ಸೌಲಭ್ಯ ಸ್ವಾತಂತ್ರ್ಯಗಳನ್ನು ಅಪಹಾರಮಾಡಲು ಅವಕಾಶಕೊಡಕೂಡದು. ಈಗ ರಾಜಕಾರಣದಲ್ಲಿ ಮುಸಲ್ಮಾನರಿಗೆ ವಿಶೇಷ ಸೌಲಭ್ಯವನ್ನು ಕೊಟ್ಟಿದೇ ಹಿಂದುಜಾತಿ ಸ್ವಾತಂತ್ರ್ಯಕ್ಕೆ ಎಷ್ಟೋ ಅಪಾಯಕರವಾಗಿರುವಾಗ ಇನ್ನೂ ಹೆಚ್ಚಾದ ಸೌಲಭ್ಯಗಳನ್ನು ಕೊಟ್ಟರೆ ಕೊನೆಗೆ ಹಿಂದುಸ್ಥಾನಕ್ಕೆ ಸ್ವಾತಂತ್ರ್ಯ ದೊರೆತರೂ ಹಿಂದುಜಾತಿಯು ಮಾತ್ರ ಪಾರತಂತ್ರ್ಯದಲ್ಲಿಯೇ ಇರಬೇಕಾಗುವ ಪ್ರಸಂಗ ಬಾರದೆ ಇರಲಾರದು. ಆದಕಾರಣ ನಿಜವಾದ ಸ್ವಾತಂತ್ರ್ಯಪ್ರಿಯರು ಈಗಲೇ ಈ ವಿಷಯದ ಕಡೆ ತುಂಬಾ ಲಕ್ಷಿಸುವುದು ಅಗತ್ಯವಾಗಿಲ್ಲವೆ?

---

## ಮೈಸೂರು ಕಾಂಗ್ರೆಸ್ ಸತ್ಯಾಗ್ರಹದಲ್ಲಿ ಸೇರಿದ ದಾವಣಗೇರೆಯ ವೀರ ಮಹಿಳೆಯರು.



ಶ್ರೀಮತಿ ಬಳ್ಳಾರಿ ಸಿದ್ಧಮ್ಮನವರು.

ಶಿವಪುರದಲ್ಲಿ ಜರುಗಿದ ಮೈಸೂರು ಕಾಂಗ್ರೆಸ್ ಮಹಾಧಿವೇಶನದ ಕಾಲಕ್ಕೆ ಧ್ವಜಸತ್ಯಾಗ್ರಹ ಮಾಡಿದುದಕ್ಕಾಗಿ ದಾವಣಗೆರೆಯ ಶ್ರೀಮತಿ ಬಳ್ಳಾರಿ ಸಿದ್ಧಮ್ಮನವರನ್ನು ಸೆರೆಹಿಡಿದು ೨೫ ದಿನಗಳ ಶಿಕ್ಷೆಯನ್ನು ವಿಧಿಸಿದ್ದರು. ಇವರು ತಮ್ಮ ಶಿಕ್ಷೆಯನ್ನು ಅನುಭವಿಸಿ ತಾ. ೭ ನೆಯ ದಿವಸ ಬಿಡುಗಡೆಹೊಂದಿದರು. ಅಂದಿನಿಂದಲೇ ಇವರು ಮೈಸೂರು ಕಾಂಗ್ರೆಸ್ ಕಮಿಟಿಯ ತಾತ್ಪೂರ್ತಿಕ ಅಧ್ಯಕ್ಷತೆಯನ್ನು ವಹಿಸಿಕೊಂಡಿದ್ದಾರೆ.



ಶ್ರೀಮತಿ ಸಾವಿತ್ರಮ್ಮನವರು.

ಅಖಿಲ ಭಾರತೀಯ ಚರಕಾಸಂಘದ ಹುಬ್ಬಳ್ಳಿ ಶಾಖೆಯಲ್ಲಿ ಖಾದಿಯನ್ನು ಹೊತ್ತು ಮಾರುವ ಖಾದಿ ಸಿದ್ಧಲಿಂಗಪ್ಪನವರೆಂದು ಪ್ರಸಿದ್ಧರಾದ ದಾವಣಗೆರೆಯ ಬೆಲ್ಲದ ಸಿದ್ಧಲಿಂಗಪ್ಪನವರ ತಾಯಿಯವರಿವರು. ಶ್ರೀಮತಿ ಸಾವಿತ್ರಮ್ಮನವರು ಮುಪ್ಪಿನ ಮುದುಕಿಯಾಗಿದ್ದರೂ ಧ್ವಜಸತ್ಯಾಗ್ರಹದಲ್ಲಿ ಸೇರಿ ಮೂರು ತಿಂಗಳುಗಳ ಕಾರಾಗೃಹವಾಸ ಕೈಕೊಂಡಿದ್ದಾರೆ.

## ಅಖಿಲ ಮಹಾರಾಷ್ಟ್ರ ಹಿಂದು ಯುವಕ
### ಪರಿಷತ್ತಿನ ಮಹತ್ವದ ಗೊತ್ತುವಳಿಗಳು.

(೯ ನೆಯ ಪುಟದಿಂದ ಬಂದುದು.)

**ಸೈನ್ಯ ಶಿಕ್ಷಣ.**

ಯುದ್ಧ ವಿದ್ಯೆಯನ್ನು ಹೊಂದುವುದು ರಾಷ್ಟ್ರದ ಪ್ರತಿಯೊಬ್ಬ ತರುಣನ ಜನ್ಮಸಿದ್ಧ ಹಕ್ಕು. ಸ್ವರಾಜ್ಯ ಸಂಪಾದನೆಗೂ ಸಂರಕ್ಷಣೆಗೂ ರಾಷ್ಟ್ರದ ತರುಣರಲ್ಲಿ ಸೈನ್ಯಶಿಕ್ಷಣ ಪ್ರಸಾರವಾಗುವದು ಅತ್ಯಗತ್ಯವಾಗಿದೆ. ಆದಕಾರಣ ಶಿಕ್ಷಣದ ಕಾರ್ಯಕ್ರಮಗಳಲ್ಲಿ ಸೈನ್ಯ ಶಿಕ್ಷಣವನ್ನೂ ಕೂಡಿಸಬೇಕೆಂದು ಸರಕಾರಕ್ಕೆ ಈ ಪರಿಷತ್ತು ಸೂಚಿಸುತ್ತದೆ.

**ಶಾರೀರಿಕ ಬಲ ಸಂವರ್ಧನೆ.**

ಈಗಿನ ಆಕ್ರಮಣ ಕಾಲದಲ್ಲಿ ಪ್ರತಿಯೊಬ್ಬ ಹಿಂದು ತರುಣ ತರುಣಿಯರು ಸ್ವ ಸಂರಕ್ಷಣೆಗಾಗಿ ಎಲ್ಲ ಪ್ರಕಾರಗಳ ಶಾರೀರಿಕ ವ್ಯಾಯಾಮಗಳನ್ನು ಹೊಂದಬೇಕು. ಮತ್ತು ತರುಣರು ಮಲ್ಲಯುದ್ಧವನ್ನು ಕಲಿಯಬೇಕು.

**ಕಾಂಗ್ರೆಸ್ ಮಂತ್ರಿಗಳ ನಿಷೇಧ.**

ಮಧ್ಯಪ್ರಾಂತದ ಕಾಂಗ್ರೆಸ್ ಮಂತ್ರಿಮಂಡಲವು ಜಾಫರ ಹುಸೇನ ಪ್ರಕರಣದಲ್ಲಿ ತೋರಿಸಿದ ಮುಸಲ್ಮಾನ್ ದಾಕ್ಷಿಣ್ಯವೃತ್ತಿ ಮತ್ತು ಹೇಡಿತನಗಳನ್ನು, ಗಡಿನಾಡ ಪ್ರಾಂತದ ಮಂತ್ರಿ ಡಾ. ಖಾನಸಾಹೇಬರು ಶಾಲಾಮಾಸ್ತರ ಅಬ್ದುಲ್ಲಾ ಪ್ರಕರಣದಲ್ಲಿ ಮಾಡಿದ ಅನ್ಯಾಯವನ್ನು ನಿಷೇಧಿಸುವದಲ್ಲದೆ ಕಾಂಗ್ರೆಸ್ ರಾಜ್ಯದಲ್ಲಿ ಹಿಂದುಗಳ ಹಿತ- ಮುಖ್ಯವಾಗಿ ಹಿಂದು ಸ್ತ್ರೀಯರ ಮಾನರಕ್ಷಣೆ ಶಕ್ಯವಿಲ್ಲವೆಂದು ಈ ಪರಿಷತ್ತು ಅಭಿಪ್ರಾಯಪಡುತ್ತದೆ.

ಸೊಲ್ಲಾಪುರದಲ್ಲಿ ಶ್ರೀ. ಕುಲಕರ್ಣಿ ವಕೀಲರ ಕೊಲೆಮಾಡಿ ಶಿಕ್ಷೆ ಹೊಂದಿದ ಅಪರಾಧಿಯನ್ನು ಮುಂಬೈ ಮಂತ್ರಿಮಂಡಲವು ಬಿಟ್ಟಿದಕ್ಕಾಗಿ ಅದರ ಕೃತಿಯನ್ನು ಈ ಪರಿಷತ್ತು ನಿಷೇಧಿಸುತ್ತದೆ.

**ಮುಸಲ್ಮಾನ್ ಸಂಸ್ಥಾನಗಳ ಪಕ್ಷಪಾತ.**

ಹಿಂದುಸ್ಥಾನದ ಮುಸಲ್ಮಾನ್ ಸಂಸ್ಥಾನಗಳು ಮುಖ್ಯವಾಗಿ ನಿಜಾಮ ಮತ್ತು ಭೋಪಾಳ ಸಂಸ್ಥಾನಗಳು ಹಿಂದುಗಳ ಹಕ್ಕು ಬಾಧ್ಯತೆಗಳಿಗೆ ಬಹು ಪ್ರತಿಬಂಧಗೊಳಿಸಿರುವುದನ್ನೂ ಕೆಲವು ದಿನಗಳ ಹಿಂದೆ ಹೈದರಾಬಾದ ಸಂಸ್ಥಾನದಲ್ಲಿ ಮುಸಲ್ಮಾನ ಪುಂಡರು ಮಾಡಿದ ಅತ್ಯಾಚಾರವನ್ನೂ ಆಗ ಅಧಿಕಾರಿಗಳು ಉಪೇಕ್ಷೆಯಿಂದಿದ್ದುದನ್ನೂ ಈ ಪರಿಷತ್ತು ನಿಷೇಧಿಸುತ್ತದೆ. ಮತ್ತು ಹೈದರಾಬಾದದಲ್ಲಿ ನಡೆದ ದೊಂಬಿಯ ನಿಜಸ್ಥಿತಿಯು ಗೊತ್ತಾಗುವದಕ್ಕೋಸ್ಕರ ಸರಕಾರಿ ಮತ್ತು ಸಾರ್ವಜನಿಕ ಪ್ರಮುಖರ ಒಂದು ವಿಚಾರಣ ಸಮಿತಿ ಏರ್ಪಡುವಂತೆ ಮಾಡಬೇಕೆಂದು ವ್ಹಾಯಿಸ್‌ರಾಯರಿಗೆ ಈ ಪರಿಷತ್ತು ವಿನಂತಿಮಾಡಿಕೊಳ್ಳುತ್ತದೆ.

**ಮುಸಲ್ಮಾನರ ಆಕ್ರಮಣ ವೃತ್ತಿ.**

ಮುಸಲ್ಮಾನರು ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಆಕ್ರಮಣಗಳನ್ನು ರಾಷ್ಟ್ರದಲ್ಲಿ ನಡೆಸಿರುವರೆಂದು ಈ ಕೆಳಗಿನ ಸಂಗತಿಗಳಿಂದ ಸ್ಪಷ್ಟ ಗೊತ್ತಾಗುವ ಕಾರಣ ಇವರ ಈ ಧೋರಣವನ್ನು ಪರಿಷತ್ತು ನಿಷೇಧಿಸುತ್ತದೆ. (೧) ವಂದೇ ಮಾತರಂ ಗೀತೆಗೆ ಪ್ರತಿಬಾಧ. (೨) ಶಾಹಿದಗಂಜ ನಿರ್ಮಾಣದ ಮೇಲೆ ಶೀಖರ ವಿರುದ್ಧವಾಗಿ ನಡೆಸಿದ ಚಟುವಟಿಕೆ. (೩) ಉರ್ದು ಭಾಷೆ ಮತ್ತು ಲಿಪಿಗಳನ್ನು ರಾಷ್ಟ್ರದ ಮೇಲೆ ಹೇರುವ ಸಾಹಸ. (೪) ಕಲಕತ್ತಾ ವಿಶ್ವವಿದ್ಯಾಲಯದ "ಶ್ರೀ ಮತ್ತು ಕಮಲ" ಚಿನ್ಹಗಳನ್ನು ತೆಗೆದು ಹಾಕಲು ನಡೆಸಿದ ಪ್ರಯತ್ನ.

**ಮೂರು ಗೊತ್ತುವಳಿಗಳು.**

(೧) ಹಿಂದುಗಳಲ್ಲಿ ಕ್ಷಾತ್ರವೃತ್ತಿಯನ್ನು ನಷ್ಟಗೊಳಿಸುತ್ತಿರುವ ಶಸ್ತ್ರ ನಿರ್ಬಂಧ ಶಾಸನವನ್ನು ಜಾಗ್ರತೆ ತೆಗೆದುಹಾಕಲು ಪ್ರಚಂಡವಾದ ಚಟುವಟಿಕೆಯನ್ನು ನಡೆಯಿಸಬೇಕು. (೨) ಹಿಂದುಗಳ ಪರವಾಗಿ ಮುಸಲ್ಮಾನರ ಸಂಗಡ ಸಂಧಿಮಾಡಿಕೊಳ್ಳಲು ಕಾಂಗ್ರೆಸ್ ಪಕ್ಷಕ್ಕೆ ಯಾವ ಅಧಿಕಾರವೂ ಇಲ್ಲ. ಹಿಂದು ಮಹಾಸಭೆಯ ಒಪ್ಪಿಗೆ ವಿನಾ ಕಾಂಗ್ರೆಸ್ಸಿನವರು ಮುಸ್ಲಿಂಲೀಗಿನವರ ಸಂಗಡ ಮಾಡಿಕೊಳ್ಳುವ ಒಪ್ಪಂದವು ಹಿಂದುಗಳಿಗೆ ಬಂಧನಕಾರಿಯಲ್ಲ. (೩) ಹಿಂದು ಶುದ್ಧಿ ಮತ್ತು ಸಂಘಟನೆಗಳಿಗಾಗಿ ಪ್ರಯತ್ನಿಸುತ್ತಿರುವ ಶ್ರೀ ಕ್ಷಾತ್ರ ಜಗದ್ಗುರುಗಳೇ ಮೊದಲಾದವರ ಅಭಿನಂದನೆ.

---

## ಕಂದಾಯದ ಮಂತ್ರಿಗಳಾದ
### ನಾ. ಮುರಾರಜಿಯವರ ಸಂಚಾರ.

ಮುಂಬೈ ಇಲಾಖೆಯ ಕಂದಾಯ ಮಂತ್ರಿಗಳಾದ ನಾ. ಮುರಾರಜಿ ದೇಸಾಯಿಯವರು ತಾ. ೧೫-೫-೩೮ ನೆಯ ದಿವಸ ಪುಣೆಯಿಂದ ಹುಬ್ಬಳ್ಳಿಗೆ ಬಂದರು ಅಲ್ಲಿಂದ ಹೊರಟು ಅವರು ನೆಟ್ಟಗೆ ಕಾರವಾರಕ್ಕೆ ಹೋದರು. ಅಲ್ಲಿ ಒಂದು ವಾರದವರೆಗೆ ಸಂಚಾರಮಾಡಿ ತಾ. ೨೧-೫-೩೮ ನೆಯ ದಿವಸ ಧಾರವಾಡಕ್ಕೆ ಬರುವರು. ಇಲ್ಲಿಯ ಕಾರ್ಯಕ್ರಮ ತೀರಿಸಿಕೊಂಡು ಮೂರು ದಿವಸ ಬ್ಯಾಹಟ್ಟಿ, ಹೆಬಸೂರು, ಯಮನೂರು, ನವಲಗುಂದ, ಹುಲಕೋಟಿಗಳಲ್ಲಿಯ ಕಾರ್ಯಕ್ರಮ ತೀರಿಸಿಕೊಂಡು ತಾ. ೨೨-೫-೩೮ ನೆಯ ದಿವಸ ಮುಂಜಾನೆ ೧೦ ಗಂಟೆಗೆ ಗದಗಿಗೆ ಬರುವರು. ಅಲ್ಲಿ ಮುನಸಿಪಾಲ್ಟಿ ಮತ್ತು ಕಾಟನ್‌ಸೇಲ್ ಸೊಸಾಯಿಟಿಗಳ ಮಾನಪತ್ರಗಳನ್ನು ಸ್ವೀಕರಿಸಿ ಮುಳಗುಂದ ಮೇಲಿಂದ ಹಾವೇರಿಗೆ ಹೋಗುವರು. ಅದೇ ದಿನ ಹೊಸರಿತ್ತಿ ಗಾಂಧೀ ಆಶ್ರಮಕ್ಕೆ ಹೋಗಿ ತಿರುಗಿ ಹಾವೇರಿಗೆ ಬರುವರು. ತಾ. ೨೩-೫-೩೮ ನೆಯ ದಿವಸ ಹಾವೇರಿಯಿಂದ ಹೊರಟು ಧಾರವಾಡಕ್ಕೆ ೯-೪೫ ಗಂಟೆಗೆ ಬರುವರು. ೩ ಗಂಟೆಗೆ ಮುನಸಿಪಾಲ್ಟಿಯವರ ಮಾನಪತ್ರವನ್ನು ಸ್ವೀಕರಿಸಿ ಸಾಯಂಕಾಲ ಮೇಲಿನಿಂದ ಪೂನಾಕ್ಕೆ ಹೋಗುವರು.

**ಕರ್ನಾಟಕ ಏಕೀಕರಣ ಪರಿಷತ್ತು.**

ಕರ್ನಾಟಕ ಏಕೀಕರಣ ಪರಿಷತ್ತು ಇದೇ ತಿಂಗಳ ೨೪ ಮತ್ತು ೨೫ ನೆಯ ತಾರೀಖಿನ ದಿವಸ ಮಂಗಳೂರಿನ ಸುಪ್ರಸಿದ್ಧ ನಾಗರಿಕರೂ, ದ. ಕನ್ನಡ ಜಿಲ್ಲೆಯ ಮುಂದಾಳುಗಳೂ, ಮದ್ರಾಸ ಕಾಯದೆ ಮಂಡಳದ ಸದಸ್ಯರೂ ಆದ ಶ್ರೀಮಾನ್ ಕೆ. ಆರ್. ಕಾರಂತ ಬಿ. ಎ. ಬಿ. ಎಲ್. ಇವರ ಅಧ್ಯಕ್ಷತೆಯಲ್ಲಿ ಜರುಗುವುದಿದೆ. ಉದ್ಘಾಟನ ಸಮಾರಂಭವನ್ನು ನೆರವೇರಿಸಲು ಶ್ರೀ ಮನ್ಮಹಾರಾಜ ಜಗದ್ಗುರು ಜಯದೇವ ಮುರಘರಾಜೇಂದ್ರ, ಮಹಾಸ್ವಾಮಿಗಳವರು ಒಪ್ಪಿಕೊಂಡಿದ್ದಾರೆ.

---

—ಮೈಸೂರು ಕಾಂಗ್ರೆಸ್ಸಿನ ತಾತ್ಪೂರ್ತಿಕ ಅಧ್ಯಕ್ಷರು ಶ್ರೀಮನ್ಮಹಾರಾಜರವರಿಗೆ ಹುಜುರು ಸೆಕ್ರೆಟರಿಯವರ ಮೂಲಕ ಒಂದು ತಂತಿಯನ್ನು ಕಳುಹಿಸಿದರು. ರಾಜಕುಮಾರ ಶ್ರೀ ಜಯಚಾಮರಾಜೇಂದ್ರ ಒಡೆಯರರ ವಿವಾಹ ಮಹೋತ್ಸವ ಸಮಾರಂಭಕ್ಕಾಗಿ ಬಹಳ ಸಂತೋಷಗೊಂಡಿರುವುದಾಗಿಯೂ ಯುವರಾಜ ದಂಪತಿಗಳಿಗೆ ಆಯುರಾರೋಗ್ಯ ಯಶಸ್ಸು ಆನಂದಗಳುಂಟಾಗಲೆಂದು ಭಗವಂತನಲ್ಲಿ ಪ್ರಾರ್ಥಿಸುವೆವೆಂದೂ ತಿಳಿಸಿರುವರು.

# ಸಾವರಕರರ ಉಪದೇಶ.

ಹಿಂದೂ ಮಹಾಸಭೆಯ ಅಧ್ಯಕ್ಷರಾದ ಶ್ರೀ. ಸಾವರಕರರು ಲಾಹೋರಿನ ಸನಾತನ ಧರ್ಮಶಾಲೇಜದಲ್ಲಿ ಭಾಷಣ ಮಾಡುವಾಗ ಈ ರೀತಿ ಹೇಳಿದರು—

"ಜಿನ್ನಾ ಸಾಹೇಬರು ತಮ್ಮ ಜಾತಿ ಬಂಧುಗಳಿಗೆ ಪ್ರತ್ಯೇಕ ಪ್ರಾತಿನಿಧ್ಯವಿರಬೇಕೆಂದು ವಾದಿಸುತ್ತಿದ್ದಾರೆ. ಅಷ್ಟೇ ಹಕ್ಕು ಹಿಂದುಗಳಿಗೂ ಇದೆ. ಸಾವಿರಾರು ಜಾತಿಗಳಾಗಿ ಹಿಂದು ಧರ್ಮವು ವಿಭಜಿಸಲ್ಪಟ್ಟಿದ್ದರೂ ಒಂದೇ ಸಂಸ್ಕೃತಿ, ಒಂದೇ ಧರ್ಮ, ಒಂದೇ ಪವಿತ್ರಭೂಮಿ, ಹಿಂದುಗಳಿಗಿದೆ. ಯುವಕರೆಲ್ಲರೂ ಹಿಂದೂ ಧರ್ಮದ ಉದ್ಧಾರಕ್ಕಾಗಿಯೇ ಮಡಿಯ ಬೇಕೆಂದು ನಾನು ಬೇಡಿಕೊಳ್ಳುತ್ತೇನೆ. ಇತ್ತೀಚಿಗೆ ಬಂಗಾಲದ ಮುಖ್ಯಮಂತ್ರಿಗಳಾದ ನಾ. ಫಜಲುಲ್ ಹಕ್ಕರು ತಾವು ಸಿಂಹ ಹುಲಿಗಳೆಂದು ಹೊಗಳಿಕೊಳ್ಳುತ್ತಿದ್ದಾರೆ. ನಾನು ಅವರಿಗೆ ತಿಳಿಸುವುದಿಷ್ಟೇ. ಹುಲಿ ಸಿಂಹಗಳನ್ನು ಮಾನವರು ಪೂರ್ವದಿಂದಲೂ ತಮ್ಮ ಅಂಕಿತದಲ್ಲಿಟ್ಟುಕೊಂಡಿರುವುದಲ್ಲದೆ ಸದ್ದಿಲ್ಲದಂತೆ ಓಡಿಸಿ ಬಿಡಲು ಶಕ್ತರಿರುವರೆಂಬುದನ್ನು ಅವರು ಮರೆಯದಿರಲಿ."

## ರಾಷ್ಟ್ರಪತಿಗಳಿಗೆ ಮಾನಪತ್ರ.

ರಾಷ್ಟ್ರಪತಿ ಬಾಬು ಸುಭಾಸಚಂದ್ರ ಬೋಸರವರಿಗೆ ತಾ. ೧೧ ನೆಯ ದಿವಸ ಮುಂಬೈ ಕಾರ್ಪೋರೇಶನ್ನಿನ ಪರಿಯಿಂದ ಮಾನಪತ್ರವನ್ನರ್ಪಿಸಲಾಯಿತು. ಮುಂಬೈ ಮಂತ್ರಿಗಳೂ ಪ್ರಮುಖ ವ್ಯಾಪಾರಸ್ಥರೂ ಸಮಾರಂಭಕ್ಕೆ ಬಂದಿದ್ದರು.

ಮೇಯರರಾದ ಸುಲ್ತಾನಚಿನೋಯ ಇವರು ಮಾನಪತ್ರವನ್ನು ಓದಿದರು. ಅವರು ಕಾಂಗ್ರೆಸ್ಸಿನ ಈ ವರೆಗಿನ ಕಾರ್ಯಕಲಾಪಗಳನ್ನು ತುಂಬಾ ಪ್ರಶಂಸಿಸಿ ಬಾಬು ಸುಭಾಸಚಂದ್ರರ ತ್ಯಾಗಕ್ಕೆ ಅವರನ್ನು ಅಭಿನಂದಿಸಿದರು. ಬಾಬು ಸುಭಾಸಚಂದ್ರರು ತಮಗೆ ಮಾನಪತ್ರವನ್ನರ್ಪಿಸಿದುದಕ್ಕಾಗಿ ಕೃತಜ್ಞತೆಯನ್ನು ವ್ಯಕ್ತಗೊಳಿಸಿ ತಾವು ಕಾಂಗ್ರೆಸ್ಸಿನ ಪ್ರತಿನಿಧಿಯೆಂದು ಹೇಳಿದರು ನಂತರ ಮುಂಬೈಯ ಶರೀಫರು ಬಾಬು ಸುಭಾಸರಿಗೆ ಒಂದು ಸತ್ಕಾರ ಕೂಟವನ್ನು ನಡೆಯಿಸಿದರು.

## ಮೈಸೂರಿನಲ್ಲಿ ಒಪ್ಪಂದ.

ಶಿವಪುರದಲ್ಲಿ ಜರುಗಿದ ಮೈಸೂರು ಕಾಂಗ್ರೆಸ್ ಮಹಾಧಿವೇಶನದ ಕಾಲದಿಂದಲೂ ಮೈಸೂರಿನಲ್ಲಿ ತುಂಬಾ ಗೊಂದಲವೆದ್ದಿದ್ದಿತಷ್ಟೆ. ಮೈಸೂರು ಕಾಂಗ್ರೆಸ್ಸ ಮತ್ತು ಸರಕಾರಗಳಲ್ಲಿ ಸನ್ಮಾನ್ಯವಾದ ಒಪ್ಪಂದವನ್ನುಂಟು ಮಾಡಲು ಸರದಾರ ವಲ್ಲಭಭಾಯಿ ಪಟೇಲರು ಆಚಾರ್ಯ ಕೃಪಾಲಿನಿಯವರು ಮೈಸೂರಿಗೆ ಹೋಗಿ ಸರಕಾರಕ್ಕೂ ಕಾಂಗ್ರೆಸ್ಸಿಗೂ ಉಂಟಾದ ಘರ್ಷಣೆಯಲ್ಲಿ ಒಪ್ಪಂದವನ್ನುಂಟುಮಾಡಿ ಬಂದಿದ್ದಾರೆ. ಒಪ್ಪಂದವು ಈ ಪ್ರಕಾರ ಇದೆ-

(೧) ಮೈಸೂರು ಕಾಂಗ್ರೆಸ್ಸು ಮಾನ್ಯಮಾಡಲ್ಪಡಬೇಕು (೨) ಮೈಸೂರಿನಲ್ಲಿ ಜವಾಬದಾರ ಸರಕಾರ ಸ್ಥಾಪನೆಯ ಬಗ್ಗೆ ಸುಧಾರಣಾ ಸಮಿತಿಯು ಚರ್ಚೆ ನಡೆಯಿಸಿ ಸಿಫಾರಸು ಮಾಡಲು ಅಧಿಕಾರವುಳ್ಳದ್ದಿರಬೇಕು. (೩) ಕಾಂಗ್ರೆಸ್ಸಿನವರು ಧ್ವಜ ಸತ್ಯಾಗ್ರಹ ಮುಂತಾದ ಶಾಸನೋಲ್ಲಂಘನೆಯನ್ನು ಹಿಂತೆಗೆದುಕೊಳ್ಳತಕ್ಕದ್ದು. (೪) ರಾಜಕೀಯ ಕೈದಿಗಳನ್ನೆಲ್ಲ ಬಿಡುಗಡೆ ಮಾಡತಕ್ಕದ್ದು. (೫) ಮಹಾತ್ಮರು ಸೂಚಿಸಿದಂತೆ ಉತ್ಸವಕಾಲಗಳಲ್ಲೆಲ್ಲ ರಾಷ್ಟ್ರಧ್ವಜವು ಮೈಸೂರು ಧ್ವಜದೊಡನೆ ಏರಿಸಲ್ಪಡತಕ್ಕದ್ದು. ಖಾಸಗಿ ಸಮಾರಂಭಗಳಲ್ಲಿ ರಾಷ್ಟ್ರಧ್ವಜ ಏರಿಸಲು ಕಾಂಗ್ರೆಸ್ಸಿನವರಿಗೆ ಅನುಮತಿ ಕೊಡತಕ್ಕದ್ದು.

ಈ ಒಪ್ಪಂದವು ಮೈಸೂರು ಸರಕಾರದ ಎಗ್ಜಿಕ್ಯೂಟಿವ್ ಕೌನ್ಸಿಲ್ಲಿನಲ್ಲಿ ಮುಂಜೂರಾಗುವುದಿದೆ.

## ಶರೀಫ ಮಂತ್ರಿಗಳ ಪ್ರಕರಣ.

ಮಧ್ಯಪ್ರಾಂತದ ಮಂತ್ರಿಗಳಾದ ನಾ|| ಶರೀಫರು ಕ್ರಿಮಿನಲ್ ಕೈದಿಯನ್ನು ಅವಧಿ ಮುಗಿಯುವ ಮುಂಚೆಯೇ ಬಿಡುಗಡೆ ಮಾಡಿರುವ ಪ್ರಕರಣದ ಬಗ್ಗೆ ಕಾಂಗ್ರೆಸ್ಸಿನಿಂದ ನಿಯಮಿಸಲ್ಪಟ್ಟ ಸರ್ ಮನ್ಮಥನಾಥ ಮುಕರ್ಜಿಯವರು ವಿಚಾರಣೆ ಮುಗಿಸಿದ್ದಾರೆ. ಅವರ ತೀರ್ಪು ಒಟ್ಟು ೩೦ ಪುಟದಷ್ಟು ವಿಸ್ತಾರವಾಗಿದೆ. ಯಾವುದೇ ತಪ್ಪಿಗಾಗಿ ಶಿಕ್ಷಿತನಾದ ಕೈದಿಯನ್ನು ಬಿಟ್ಟುಬಿಡಲು ನ್ಯಾಯಖಾತೆಯ ಮಂತ್ರಿಗಳಿಗೆ ಸಂಪೂರ್ಣ ಅಧಿಕಾರ ಸ್ವಾತಂತ್ರ್ಯವಿರುವುದೆಂದು ಅವರು ಸಿದ್ಧಪಡಿಸಿದ್ದಾರೆ. ಈ ಸಿದ್ಧಾಂತಕ್ಕೆ ಎಷ್ಟೋ ಆಧಾರಗಳನ್ನು ಕೊಟ್ಟಿದ್ದಾರೆ. ಮತ್ತು ಕೇವಲ ಲಾಕ್ಕೆ ಅನುಸರಿಸಿಯೇ ತಾವು ಈ ವಿಚಾರಣೆ ನಡೆಸಿರುವೆವೇ ಹೊರತು ಸಾರ್ವಜನಿಕಾಭಿಪ್ರಾಯವನ್ನು ಗಮನಿಸಿಲ್ಲವೆಂದು ಅವರು ಹೇಳಿದ್ದಾರೆ.

ಅವರ ಸಿದ್ಧಾಂತದ ಮೇರೆಗೆ, ಈ ಕೈದಿಯನ್ನು ಬಿಡುಗಡೆ ಮಾಡಿದ್ದರಿಂದ ನಾ|| ಶರೀಫರು ಕಾನೂನಿಗೆ ವಿರೋಧವಾಗಿ ನಡೆದುಕೊಂಡಂತಾಗಿಲ್ಲವೆಂದು ತಿಳಿದು ಬರುತ್ತದೆ.

## ಮದ್ರಾಸ ಜೇಲುಗಳಲ್ಲಿ ಸುಧಾರಣೆ.

೧೯೩೭ನೇ ಇಸ್ವಿ ಆಗಸ್ಟ ತಿಂಗಳಿಂದ ಜೇಲುಗಳಲ್ಲಿ ಕೈದಿಗಳಿಗೆ ಮಜ್ಜಿಗೆ ಪೂರೈಸುತ್ತ ಬಂದಿದೆ. ಪ್ರತಿಯೊಬ್ಬ ಕೈದಿಗೆ ಕೊಡತಕ್ಕ ಉಪ್ಪಿನ ಪ್ರಮಾಣವು ಹೆಚ್ಚಿಸಲ್ಪಟ್ಟಿದೆ. ಎಷ್ಟೋ ಜನರಿಂದ ದಾನವಾಗಿ ಕೊಡಲ್ಪಟ್ಟ ರೇಡಿಯೋಗಳನ್ನು ಕೈದಿಗಳ ಉಪಯೋಗಕ್ಕಾಗಿ ಮದ್ರಾಸ ವೆಲ್ಲೂರ ತ್ರಿಚನಾಪಳ್ಳಿ ಮೊದಲಾದ ಜೇಲುಗಳಲ್ಲಿ ಇಡಲಾಗಿದೆ.

ಜೇಲುಗಳ ಮತ್ತು ಬೋರ್ಸ್ಟಲ್ ಸ್ಕೂಲುಗಳ ಕೈದಿಗಳ ಉಪಯೋಗಕ್ಕಾಗಿ ಹಾಸ್ಯಕಾರಕ ವರ್ತಮಾನ ಪತ್ರಗಳನ್ನು ಕೊಡಲು ಆಜ್ಞೆ ಮಾಡಲಾಗಿದೆ. ತ್ರಿಚನಾಪಳ್ಳಿ ಜೇಲಿನಲ್ಲಿ ಕೈದಿಗಳಿಗೆ ಬೇಕಾಗುವ ಅಕ್ಕಿಯನ್ನು ಅಲ್ಲಿಯೇ ಕೈಯಿಂದ ಕುಟ್ಟಿಸಲಾಗುವದು. ಅದನ್ನು ಸದ್ಯಕ್ಕೆ ಅನುಭವ ಕ್ರಮವೆಂದು ನಡೆಯಿಸಲಾಗಿದೆ.

—ಬಳ್ಳಾರಿ ಮುನಿಸಿಪಾಲ್ಟಿಯ ಕಾಂಗ್ರೆಸ್ ಪಕ್ಷದ ಸಭೆಯು ಸೇರಿ ಅಧ್ಯಕ್ಷಸ್ಥಾನಕ್ಕೆ ಶ್ರೀ ಮಹಮ್ಮದ ಮುಸಾಸಾಹೇಬರನ್ನು ಒಮ್ಮತದಿಂದ ಆರಿಸಲಾಯಿತು. ಇವರಿಗೆ ಸ್ವತಂತ್ರ ಪಕ್ಷದ ಬೆಂಬಲವೂ ಇದೆಯಂತೆ.

## ಜಾಯರಾಬಾದ.

ತಾ. ೩೦ ನೆಯ ಮಧ್ಯಾಹ್ನ ಶ್ರೀ. ಹರ್ಡೇಕರ ಮಂಜಪ್ಪನವರು ಉದ್ಗಿರಿಯಿಂದ ಹೊರಟು ಸಾಯಂಕಾಲ ಜಾಯರಾಬಾದ (ಎಕ್ಕೆಹಳ್ಳಿ) ಕ್ಕೆ ಇಲ್ಲಿಯ ವೀರಶೈವ ಪ್ರಮುಖರ ಅತ್ಯಾಗ್ರಹದಿಂದ ಬಂದರು. ಶ್ರೀ. ಮೋಟಾರ ಸಂಗಪ್ಪನವರು ಮತ್ತು ಇಲ್ಲಿಯ ತರುಣ ಸಂಘದವರು ವಿರಕ್ತಮಠದಲ್ಲಿ ಭಾಷಣ ನಡೆಯುವಂತೆ ವ್ಯವಸ್ಥೆಮಾಡಿದ್ದರು. ಬಸವಾದಿ ಪ್ರಮಥರು ಮಾಡಿದ ಮಹತ್ಕಾರ್ಯಗಳನ್ನು ಶ್ರೀ. ಹರ್ಡೇಕರ ಮಂಜಪ್ಪನವರು ತಮ್ಮ ಭಾಷಣದಲ್ಲಿ ತಿಳಿಸಿದರು. ವೀರಶೈವ ಉನ್ನತಿಗಾಗಿ ಅಲ್ಲಿಯ ಜನರು ಪ್ರಯತ್ನಿಸಬೇಕಾದ ರೀತಿನೀತಿಗಳನ್ನು ತಿಳಿಸಿದರು.

## ಹುಮನಾಬಾದ.

ತಾ. ೧-೫-೩೮ ನೆಯ. ದಿವಸ ಹುಮನಾಬಾದ ವೀರಶೈವ ಸಮಾಜದವರ ಆಗ್ರಹದ ಮೇರೆಗೆ ಶ್ರೀ ಹರ್ಡೇಕರ ಮಂಜಪ್ಪನವರು ಇಲ್ಲಿಗೆ ಮಧ್ಯಾಹ್ನಕ್ಕೆ ಬಂದರು. ಆ ದಿನ ಸಾಯಂಕಾಲ ಇಲ್ಲಿಯ ಶ್ರೀ ವೀರಭದ್ರ ದೇವಾಲಯದಲ್ಲಿ ಬಸವ ಸಂದೇಶ ಮತ್ತು ಲಿಂಗ ತತ್ವಗಳ ಸಂಬಂಧವಾಗಿ ಶ್ರೀ. ಹರ್ಡೇಕರ ಮಂಜಪ್ಪನವರು ಭಾಷಣ ಮಾಡಿ ಆರ್ಯಸಮಾಜದವರ ಮತ್ತು ಆಧುನಿಕ ಪಂಚಾಚಾರ್ಯರ ಪಕ್ಷದವರ ಅನೇಕ ಶಂಕೆಗಳಿಗೆ ಸಮರ್ಪಕವಾದ ಉತ್ತರಗಳನ್ನು ಆ ಭಾಷಣದಲ್ಲಿಯೇ ಕೊಟ್ಟರು. ನೆರೆ ಗ್ರಾಮವಾದ ಹುಡಗಿ ಎಂಬಲ್ಲಿಯ ತರುಣಸಂಘದವರೂ ಈ ದಿನದ ಸಭೆಗೆ ಬಂದಿದ್ದರು. ಸಭೆಯ ಕಾರ್ಯ ಮುಗಿದನಂತರ ಅನೇಕ ತರುಣರು ತಮ್ಮ ಶಂಕೆಗಳನ್ನು ತಿಳಿಸಿ ಸಮಾಧಾನಕರವಾದ ಉತ್ತರಗಳನ್ನು ಹೊಂದಿದರು.

## ಉಮರಗಾ.

ಉಸ್ಮಾನಾಬಾದ ಜಿಲ್ಲಾ ಉಮರಗಾ ಸ್ಥಳದ ವೀರಶೈವರ ಆಮಂತ್ರಣದ ಮೇರೆಗೆ ತಾ. ೨ ನೆಯ ದಿನ ಶ್ರೀ ಬಸವ ಜಯಂತಿ ಉತ್ಸವಕ್ಕಾಗಿ ಶ್ರೀ. ಹರ್ಡೇಕರ ಮಂಜಪ್ಪನವರು ಹುಮನಾಬಾದದಿಂದ ಉಮರಗಾಕ್ಕೆ ಬಂದರು. ಇಲ್ಲಿಯ ವೀರಶೈವ ಸಮಾಜದವರು ಜಯಂತಿಯ ಉತ್ಸವವನ್ನು ಬಹು ಸಂಭ್ರಮದಿಂದ ಮಾಡಿದರು. ಗ್ರಾಮದ ಎಲ್ಲ ಹಿಂದುಗಳೂ ಈ ಉತ್ಸವದಲ್ಲಿ ಭಾಗವಹಿಸಿದ್ದರು. ಶ್ರೀಮಂತ ಶರಣಪ್ಪ ಮಲಿಂಗ, ಶ್ರೀಮಂತ ಬಸಪ್ಪ ಮಲಿಂಗ, ಶ್ರೀ. ಕಲ್ಲಶೆಟ್ಟಿ ಪೋಲೀಸ ಪಾಟೀಲ ಮೊದಲಾದ ಇಲ್ಲಿಯ ವೀರಶೈವ ಪ್ರಮುಖರ ಪ್ರಯತ್ನದಿಂದ ಸಭೆಯ ಕಾರ್ಯ ರಾತ್ರಿ ಬಹಳ ಉತ್ತಮವಾಗಿ ನಡೆಯಿತು. ಶ್ರೀ ಹರ್ಡೇಕರ ಮಂಜಪ್ಪನವರು ಬಸವ ಮಹಾನುಭಾವನ ಮಹತ್ಕಾರ್ಯಗಳನ್ನು ಸವಿಸ್ತಾರವಾಗಿ ತಿಳಿಸಿದರು. ಸಭೆಗೆ ಎಲ್ಲ ಧರ್ಮ ಮತಪಂಥಗಳ ಪ್ರಮುಖರೂ ಬಂದಿದ್ದರು. ಸುತ್ತಲಿನ ಗ್ರಾಮಗಳಿಂದ ಹೆಚ್ಚಾಗಿ ಜನರು ಬಂದಿದ್ದರು. ತಾ. ೩ ನೆಯ ದಿವಸ ಬಂದಿದ್ದ ಅನೇಕ ಸ್ಥಳಗಳ ತರುಣರ ಶಂಕೆಗಳಿಗೆ ಸಮಾಧಾನಕರವಾದ ಉತ್ತರಗಳನ್ನು ಕೊಟ್ಟು ಸೊಲ್ಲಾಪುರಕ್ಕೆ ಹೋದರು

## ಶಹಾಪೂರ ತಾಲೂಕದಲ್ಲಿ ಕೆಲವು ಹಳ್ಳಿಗಳ ಗೋಳು.

ಬರಗಾಲದ ಪರಿಸ್ಥಿತಿಯನ್ನು ಪರಿಶೀಲಿಸಿ ಬರೆಯಲಿಕ್ಕೆ ಬರುವಂತಿಲ್ಲ. ಒಂದೊಂದು ಮನೆಗಳ ಗೋಳು ಕೇಳಿ ನೋಡುವದೆಂದರೆ ಅದುಯಾವ ಮಾನುಷ ಹೃದಯನಿಗೆ ಕರುಣವಾಗಲಿಕ್ಕಿಲ್ಲ? ಪರಮಾತ್ಮಾ, ಇಂಥ ದುಸ್ಥಿತಿಯನ್ನು ಕಂಡು ಕಾಪಾಡುವ ಅವದಾದರೊಂದು ಉಪಾಯವನ್ನು ಕಾಣಿಸಿ ಕೊಡಬಾರದೆ? ತೀರ ಕಡಿಮೆ ಕೂಲಿಗಾದರೂ ಕರೆಯುವ ದಾತನಿರಬಾರದೆ? ಒಂದಕ್ಕೆ ಎರಡು ಬಡ್ಡಿಕೊಡುತ್ತೇನೆಂದರು ಕೊಡುವ ಸಾಹುಕಾರನನ್ನು ತೋರಿಸಬಾರದೆ? ಸಾಹುಕಾರನ ಮನೆಗೆ ಬಾರಿ ಬಾರಿ ತಿರುಗಿದರೂ ಅವರು ಹೇಳುವದೆಂದರೆ— ೧೦ ರೂ. ಗೆ ೨೦೦-೩೦೦ ರೂ. ಬೆಳೆ ಬಾಳುವ ಹೊಲಗಳನ್ನು ರಜಿಸ್ಟರಮಾಡಿ ಕೊಡಬೇಕಂತೆ. ಕೊಟ್ಟರು ರೂ. ಗೆ ಒಂದಾಣೆ ಬಡ್ಡಿಯಂತೆ. ಈ ರೀತಿಯಿಂದ ಬಡವರ ಸಾರವನ್ನು ಹೀರಿ ಹಿರಿಯರಾಗಿ ಮೆರೆಯುವ ಸಾಹುಕಾರರು ಕಾಪಾಡುವದೆಂತು? ಸಾಹುಕಾರರು ಸಹಾಯ ಮಾಡದೆ ಹೋದರೂ ಸರಕಾರವಾದರು ಇದುವರೆಗೂ ದರಕಾರಕ್ಕೆ ಶರದೆಹೋಯಿತು. ಜನರ ಗೋಳು ದಿನೆ ದಿನೆ ಬಹಳ ಹೀನಾವಸ್ಥೆಗೆ ಹೋಗಹತ್ತಿದೆ. ಬಡವ ಬಾಲರು ಅಳಲಿ ಬಳಲುವ ಕಷ್ಟವನ್ನು ನೋಡಲಾಸಲ್ಲ. ಮೈಮುರಿದು ದುಡಿಯುವ ಮನುಷ್ಯರ ಜೋಲು ಮುಖವನ್ನು ನೋಡದಂತಾಗಿದೆ. ಬೀದಿ ಬೀದಿಗಳಲ್ಲಿ ಕುಳಿತು ನುಡಿಯುತ್ತಿರುವ ಹೆಂಗಳೆಯರ ದೀನಸ್ವರವನ್ನು ಕೇಳದಂತಾಗಿದೆ.

ಈಗ ಅವರ ಜೀವನ ಯಾತ್ರೆಯು ಸಾಗುವದೆಂದರೆ ಅತಿ ಶೋಚನೀಯ ವಿಷಯವಾಗಿದೆ. "ಅಂಬಲಿ" ಒಂದು ಪಾವು ಜೋಳವನ್ನು ಬೀಸಿ ಅಂಬಲಿಯನ್ನು ಮಾಡಿ ೬-೭ ಜನರು ಊಟ ಮಾಡುತ್ತಿದ್ದರು. ಇತ್ತೀಚಿಗೆ ಅದೂ ಕೂಡಾ ಸಿಗದಾಗಿದೆ. ಕೆಲವು ಹಳ್ಳಿಗಳಲ್ಲಿ ಸಿಂದಿ ಗಿಡದ ಹಣ್ಣಿನ ಮೇಲೆ ತಮ್ಮ ಜೀವನ ಯಾತ್ರೆಯನ್ನು ಸಾಗಿಸಹತ್ತಿದ್ದಾರೆ.

ಈ ಕಾಲವಾದರೂ ಕಡೆಯವರೆಗೂ ಇರಬಹುದೆ? ಇಲ್ಲ. ಪರದೇಶದಲ್ಲಿ ಎರಡನೆಯ ಪ್ರಾಂತಗಳಲ್ಲಿ ನಡೆಯುತ್ತಿರುವ ಸರಕಾರದ ಮತ್ತು ಸಾಹುಕಾರರ ಸಹಾಯವನ್ನು ಕೇಳಿ, ಕಂಡು, ಓದಿದರೆ ಅದು ಯಾವ ಬಡರೈತನ ಮನಸ್ಸ ತಲ್ಲಣಿಸದಿರಲಾರದು. ಆದಷ್ಟು ಬೇಗನೇ ಈ ಅಲ್ಪಕಾಲದಲ್ಲ ಸಾಹುಕಾರರು, ಸರಕಾರವು ಸೇರಿ ಸಂರಕ್ಷಿಸಿದರೆ ಬಡಜೀವಿಗಳ ಪ್ರಾಣವನ್ನು ಮಾಡಿದಂತೆಯಾಗಲಿಕ್ಕಿಲ್ಲವೆ?

ಓರ್ವ ರೈತ.
ಬಿ. ಎಸ್. ಕುಲಕರ್ಣಿ

---

—ಅಖಿಲ ಭಾರತ ರೈತ ಪರಿಷತ್ತಿನ ೩ನೆಯ ಅಧಿವೇಶನವು ಸ್ವಾಮಿ ಸಹಜಾನಂದ ಸರಸ್ವತಿಯವರ ಅಧ್ಯಕ್ಷತೆಯಲ್ಲಿ ಕೋಮಿಲ್ಲಾದಲ್ಲಿ ಮೆ ೧೪ ನೇ ದಿವಸ ಜರುಗಿಸಲ್ಪಟ್ಟಿತು. ಪರಿಷತ್ತಿಗೆ ಎಲ್ಲ ವಿಭಾಗಳಿಂದಲೂ ಪ್ರತಿನಿಧಿಗಳು ಬಂದಿದ್ದರು.

---

# ಅಲ್ಲಲ್ಲಿ ಬಸವ ಜಯಂತಿ.

## ಯಮಕನಮರ್ಡಿ

ವೈಶಾಖ ಶುದ್ಧ ತೃತಿಯಾ ಅಂದರೆ ವೀರಶೈವರಿಗೂ ಅದರಂತೆ ಮರಾಠಾ ಜನರಿಗೂ ಒಳ್ಳೇ ಆನಂದದ ದಿವಸ. ಎಲ್ಲೆಲ್ಲಿಯೂ ಜನಜಾಗೃತಿಯ ಸೂಚಕವಾಗಿ 'ಬಸವ ಜಯಂತಿ' 'ಶಿವ ಜಯಂತಿ' ಗಳು ಜರುಗುತ್ತಿರುವವು. ಅದರಂತೆಯೇ ನಮ್ಮ ಊರಲ್ಲಿಯೂ ಜರುಗಿತು. ಮುಂಜಾನೆಯಿಂದಲೂ ಸಂಜೆಯವರೆಗೆ ಒಂದಿಲ್ಲೊಂದು ಕಾರ್ಯಕ್ರಮಗಳಿದ್ದೇ ಇದ್ದವು. ಬಸವ ಜನ್ಮ ಹೆಸರಿಡುವದು ಮೆರವಣಿಗೆ ಪೂಜೆ ಇತ್ಯಾದಿಗಳೆಲ್ಲವೂ ಉತ್ಸಾಹದಿಂದ ಉತ್ಸವದಿಂದ ನಡೆದವು ಶಾಲೆಯ ಬಾಲಿಕೆಯರು ಈ ಸಲ ಭಾಗವಹಿಸಿ ಉತ್ತಮರೀತಿಯಿಂದ ಕೆಲಸಮಾಡಿ ಎಲ್ಲರನ್ನೂ ಸಂತೋಷಗೊಳಿಸಿದರು. ಸಂಜೆಯ ಆರು ಗಂಟೆಗೆ ಮುಖ್ಯ ವ್ಯಾಖ್ಯಾತರಾಗಿ ಆಮಂತ್ರಿತರಾದ ಶ್ರೀಯುತ ಹಂಜಿ ಎಸ್. ವ್ಹಿ. ಬಿ. ಎ. ಶ್ರೀಯುತ ಆನಂದ ಕವಿ ಕುರಗುಂದ ಮತ್ತು ಶ್ರೀಯುತ ಈಶ್ವರ ಸಣಕಲ್ಲ ಇವರು ಬಂದರು. ಸ್ವಾಗತಪದ, ಶರ್ಯತ್ತುಗಳಲ್ಲಿ ಜಯಪಡೆದ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಪಾರಿತೋಷಕ ಹಂಚುವದು, ಬಾಲಿಕೆಯರ ವಚನ ಪಠಣಗಳಾದಮೇಲೆ ಶ್ರೀಯುತ ಹಂಜಿಯವರು ತಮ್ಮ ಭಾಷಣವನ್ನು ಆರಂಭಿಸಿದರು. ಅವರು ತಮ್ಮ ಭಾಷಣದಲ್ಲಿ ಮಹಾನುಭಾವ ಬಸವೇಶ್ವರನ ಘನತೆ, ಯೋಗ್ಯತೆ, ಅವರ ವಚನಗಳ ಮಹತ್ವ ಇತ್ಯಾದಿಗಳನ್ನು ಸಂಕ್ಷೇಪವಾಗಿಯಾದರೂ ಸರಸವಾಗಿ ವಿವರಿಸಿದರು. ನಂತರ ಶ್ರೀ ಆನಂದಕವಿಗಳು ಬಸವೇಶ್ವರರ ಸ್ವಾವಲಂಬನ, ಮಹಾತ್ಮಾಗಾಂಧಿಯವರ ಮತ್ತು ಬಸವೇಶ್ವರರ ತತ್ವ ವಿಚಾರಗಳಲ್ಲಿಯ ಸಾಮ್ಯ, ಈ ತತ್ವಗಳಿಂದ ಆಗುವ ಆತ್ಮೋನ್ನತಿ ಮೊದಲಾದವುಗಳನ್ನು ವಿವರಿಸುತ್ತ ನಡನಡುವೆ ತಮ್ಮಿಂದ ರಚಿತವಾದ ಪದ್ಯಗಳನ್ನು ಅಭಿನಯ ಪೂರ್ವಕವಾಗಿ ಹಾಡಿ, ಕುಣಿದು ಜನರನ್ನು ಸಂತೋಷಗೊಳಿಸಿದರು. ತರುವಾಯ ಶ್ರೀ ಈಶ್ವರ ಸಣಕಲ್ಲ ಇವರು ಬಸವೇಶ್ವರನ ಸಹಕಾರ ಅಂದು ಅವರು ವೀರಶೈವರಲ್ಲಿ ಸಹಕಾರ ಸಂಘಟನೆಗಳನ್ನು, ಶಿವಾನುಭವ ಮಂಟಪ ಕಾಯಕ ಸ್ವಾವಲಂಬನಗಳ ಮೂಲಕವಾಗಿ ಹೇಗೆ ಮಾಡಿದರು? ಆ ತತ್ವಗಳು ಇಂದಿನ ತರುಣರಿಗೆ, ಭಾರತಕ್ಕೆ, ಇಡೀ ದೇಶಕ್ಕೆ ಹೇಗೆ ಮಾನ್ಯವಾಗುತ್ತವೆ? ಎಂಬುದನ್ನು ತಿಳಿಸಿದರು. ನಂತರ ಬಸವೇಶ್ವರರ ಪ್ರಾರ್ಥನೆ, ಪ್ರಸಾದ ಹಂಚುವದು, ವ್ಯಾಖ್ಯಾತರ ಮತ್ತು ಶ್ರೋತೃವರ್ಗದ ಆಭಾರಮನ್ನಣೆಯಾದ ನಂತರ, ಕಾರ್ಯಕ್ರಮವು ಕೊನೆಗೊಂಡಿತು.

— ಓರ್ವಪ್ರೇಕ್ಷಕ.

---

## ಕುಷ್ಟಗಿ.

ರಾಯಚೂರ ಜಿಲ್ಲಾ ಕುಷ್ಟಗಿಯಲ್ಲಿ ಕಳೆದ ವೈಶಾಖ ಶು. ೨ ಸೋಮವಾರ ಶ್ರೀ ಬಸವಜಯಂತಿಯ ನಿಮಿತ್ತವಾಗಿ, ಇಲ್ಲಿಯ ಮಹಾಜನಗಳೆಲ್ಲ ಶ್ರೀ ವಿರಕ್ತಮಠದಲ್ಲಿ ಸಾಯಂಕಾಲ ೬ ಗಂಟೆಗೆ ಸಭೆಸೇರಿದರು. ಪರಸ್ಥಳದಿಂದ ಶ್ರೀಮಂತ ಬಾಪೂರಾವ ದೇಸಾಯಿ ಹಂದಿಗನೂರ ಇವರು ಮತ್ತು ಸುತ್ತುಮುತ್ತಿನ ಗ್ರಾಮಗಳಿಂದ ಇನ್ನೂ ಅನೇಕ ಸಭ್ಯಗೃಹಸ್ಥರು ಬಂದಿದ್ದರು. ಬ್ರಾಹ್ಮಣಾದಿ ಸಕಲ ಮತೀಯರಿಂದಲೂ ಕೂಡಿಕೊಂಡ ಆ ಸಭೆಯು ಸುಮಾರು ೩ ನೂರು ಜನಗಳಿಂದ ತುಂಬಿತ್ತು. ಸಭೆಯ ಅಧ್ಯಕ್ಷಸ್ಥಾನವನ್ನು ಶ್ರೀ. ಸಿದ್ಧಯ್ಯನವರು ಹಿರೇಮಠ ಶಾಂತಗಿರಿ ಇವರು ಸ್ವೀಕರಿಸಿದ್ದರು. ಭಗವಾನ್ ಬಸವಣ್ಣನವರು ಮಾಡಿದ ಧಾರ್ಮಿಕ, ನೈತಿಕ, ಸಾಮಾಜಿಕ, ಆರ್ಥಿಕ, ಔದ್ಯೋಗಿಕ ಸುಧಾರಣೆಗಳ ಬಗ್ಗೆ ಮತ್ತು ತರುಣ ಸಂಘ ವಾಚನಾಲಯಗಳ ಅವಶ್ಯಕತೆಯ ಬಗ್ಗೆ ಶ್ರೀ. ವೃಷಭೇಂದ್ರಯ್ಯನವರು, ಶ್ರೀ. ಬಾಬಾಚಾರ್ಯರು ಗುನ್ನಾಳ ಬಿ. ಎ., ಶ್ರೀ. ಎಮ್. ಕಿಸನರಾವ ಇತ್ಯಾದಿ ವಿದ್ವಾಂಸರು ಸುಶ್ರಾವ್ಯವಾದ ಉಪನ್ಯಾಸವಿತ್ತರು. ಆಗ ವೀರಶೈವ ತರುಣ ಸಂಘವೂ ಶ್ರೀ ಬಸವೇಶ್ವರ ವಾಚನಾಲಯವೂ ಸ್ಥಾಪಿಸಲ್ಪಟ್ಟು, ಅವೆರಡಕ್ಕೂ ಕೂಡಿ, ನಡೆಯುವ ವರ್ಷದ ಮಟ್ಟಿಗೆ ಶ್ರೀ. ಸಿದ್ಧಲಿಂಗಯ್ಯನವರು ಮಳೆಮಠ ವಕೀಲ ಇವರ ಅಧ್ಯಕ್ಷತೆಯ ಕೆಳಗೆ ೧೨ ಜನರದೊಂದು ಕಾರ್ಯಕಾರಿ ಮಂಡಲವು ರಚಿಸಲ್ಪಟ್ಟಿತು. ಆಮೇಲೆ ಅಧ್ಯಕ್ಷರ, ವ್ಯಾಖ್ಯಾನಕಾರರ ಮತ್ತು ಸಭಿಕರ ಆಭಾರಮನ್ನಿಸಿ ಹಾರ ತುರಾಯಿಗಳಿಂದ ಸನ್ಮಾನಿಸಿದನಂತರ ಭಗವಾನ್ ಬಸವೇಶ್ವರನ ಮತ್ತು ಕನ್ನಡ ತಾಯಿಯ ಜಯ ಜಯಕಾರದೊಡನೆ ಸಭೆಯು ಕೊನೆಗೊಂಡಿತು.

ಈ ಮಹಾಕಾರ್ಯದಲ್ಲಿ ತನು, ಮನ, ಧನಗಳಿಂದ ನೆರವಾದ ಸ್ವ ಪರಮತೀಯ ಬಾಂಧವರಿಗೆಲ್ಲಾ ನನ್ನ ವಂದನೆಗಳನ್ನರ್ಪಿಸಿ, ಮುಂದಿನ ವರ್ಷ ಇದಕ್ಕಿಂತಲೂ ಹೆಚ್ಚು ವೈಭವದಿಂದ ಜಯಂತ್ಯುತ್ಸವ ಮಾಡುವ ಮನವನ್ನು ನನ್ನ ಸಮಾಜ ಬಾಂಧವರಿಗೆ ಕೊಡಲೆಂದು ಅಣ್ಣ ಬಸವಣ್ಣನನ್ನು ಅನನ್ಯಭಾವದಿಂದ ಪ್ರಾರ್ಥಿಸುವ,

ಹೊಸವಕ್ಕಲ ಸಿದ್ಧಬಸಪ್ಪ.
ಸೆಕ್ರೆಟರಿ.
ವೀರಶೈವ ತರುಣ ಸಂಘ, ಕುಷ್ಟಗಿ.

---

## ಯಾದಗಿರಿ.

ಈ ವರ್ಷ ಶ್ರೀ ಬಸವಜಯಂತಿಯ ಮಹೋತ್ಸವವು ಪ್ರತಿ ವರ್ಷದಂತೆ ತಾರೀಖು ೨-೫-೩೪ ನೇ ದಿವಸ [illegible] ವಿಜೃಂಭಣೆಯಿಂದ ಜರುಗಿತು. ಇಲ್ಲಿ ಶ್ರೀ ಬಸವೇಶ್ವರನ ಭಾವಚಿತ್ರವ ಶೃಂಗಾರ ಪಲ್ಲಕ್ಕಿಯ ವೈಭವವಾಗಲಿ ಜನಸಮೂಹವಾಗಲಿ ಅಥವಾ "ಬಿಜಲಿಗಳ" ಪ್ರಕಾಶವಾಗಲಿ ವರ್ಣಿಸಲು ಅವಶ್ಯವಿಲ್ಲ. ಯಾಕೆಂದರೆ ಇವಂತೂ ಪ್ರತಿಯೊಂದು ಚಿಕ್ಕ ದೊಡ್ಡ ಉತ್ಸವಗಳಲ್ಲಿ ಇದ್ದೇ ಇರುತ್ತವೆ. ನಮ್ಮ ಶ್ರೀ ಬಸವ ಜಯಂತಿಗೆ ಈ ಸಾರೆ ವಿಶೇಷ ಮಹತ್ವ ಉಂಟಾಗಲಿಕ್ಕೆ ಈ ಕೆಳಗಿನ ವಿಷಯಗಳು ಮುಖ್ಯ ಕಾರಣಗಳಾಗಿರುತ್ತವೆ. ಅವು ಯಾವವೆಂದರೆ— ನಮ್ಮ ವೀರಶೈವ ಬಂಧುಗಳು ದೀರ್ಘ ನಿದ್ರೆಯಿಂದ ಜಾಗೃತರಾಗಿ ತಮ್ಮ ಮುಂದಿನ ಉನ್ನತಿ ಮತ್ತು ಏಳ್ಗೆಗಳಿಗೆ ಹಿಂದುಳಿದ ಆದಿ ಹಿಂದುಗಳೇ ಮುಖ್ಯ ಸಹಾಯಕರೆಂದು ಮನಗಂಡು ಅವರಿಗೆ ಶ್ರೀ ಶರಣಬಸವೇಶ್ವರ ದೇವಾಲಯವನ್ನು ಪ್ರವೇಶಮಾಡಲಿಕ್ಕೂ ಮತ್ತು ಉತ್ಸವದಲ್ಲಿ ಭಾಗವಹಿಸಲಿಕ್ಕೂ ಒಪ್ಪಿಗೆ ಕೊಟ್ಟು ತಮ್ಮ ವಿಶಾಲ ಹೃದಯ ದೂರದೃಷ್ಟಿ ಹಾಗು ಸಹಾನುಭೂತಿಯನ್ನು ಪ್ರಕಟಿಸಿದ್ದಾರೆ.

ವೀರಶೈವ ಮಂಡಳಿ ಯಾದಗಿರಿ.

### ಸದಾಶಿವ ಪೇಟೆ.

ಇಲ್ಲಿ ಶ್ರೀ ಬಸವಜಯಂತಿಯು ಶ್ರೀ. ಸ್ವಾಮಿ ವಿರೂಪಾಕ್ಷಾನಂದ ನ್ಯಾಯತೀರ್ಥ ಇವರ ಅಧ್ಯಕ್ಷತೆಯಲ್ಲಿ ನೆರವೇರಿಸಲ್ಪಟ್ಟಿತು. ಶ್ರೀ. ಶೆಟ್ಟಿ ರೇವಪ್ಪನವರು ಬಸವಣ್ಣನವರು ಮಾಡಿದ ಧಾರ್ಮಿಕ, ಸಾಮಾಜಿಕ ಕ್ರಾಂತಿಯ ಬಗ್ಗೆ ಮಾತನಾಡಿದರು.

ವೀರಶೈವ ತರುಣ ಸಂಘ.

## ಬಂಥನಾಳ.

ವೈಶಾಖ ಶು || ೩ ಅಕ್ಷತೃತಿಯಾ ಸೋಮವಾರ ಶ್ರೀ. ಬಸವೇಶ್ವರ ಜಯಂತಿ ಇದ್ದು ಆ ದಿವಸ ತಾಲೂಕ ಇಂಡಿ ಪೈಕಿ ಬಂಥನಾಳದಲ್ಲಿ ಜರುಗಿದ ಕಾರ್ಯಕ್ರಮಗಳ ವಿವರ—

ಊರೊಳಗಿನ ಎಲ್ಲ ಜನರೂ ಪ್ರತಿವರ್ಷದಂತೆ ಎತ್ತುಗಳ ಹಾಗೂ ಗೋವುಗಳ, ಕರುಗಳ ಮೈ ತೊಳಿಸಿ ಪೂಜಾ ನೈವೇದ್ಯ ಗಳನ್ನು ಮಾಡಿದರು.

ಸಂಜೆಯ ೫|| ಘಂಟೆಗೆ ಶ್ರೀ ಬಸವೇಶ್ವರನ ಪಲ್ಲಕ್ಕಿ ಮಹೋತ್ಸವವು ಭಜನಿ ಮೇಳದೊಂದಿಗೆ ನಗಾರಿ ನೌಬತ್ತುಗಳೊಂದಿಗೆ ಜಯ ಜಯ ಕಾರದಿಂದ ಊರಲ್ಲಿ ಒಳ್ಳೇ ಆಡಂಬರದಿಂದ ಆಯಿತು.

ಸಂಜೆಯ ೬ ಘಂಟೆಗೆ ಶ್ರೀ ಮನ್ನಿರಂಜನ ಶ್ರೀ ಶಿವಯೋಗಿಗಳವರ ಅಧ್ಯಕ್ಷತೆಯಲ್ಲ ಸಭೆಯು ಜರುಗಿ ಅದರಲ್ಲಿ ಶ್ರೀಯ.ತ ಯಶವಂತರಾವ ಕುಲಕರ್ಣಿ ಇವರು ಬಸವ ಜಯಂತಿ ಅಂದರೇನು? ಹಾಗೂ ಗೋಮಾತಾ, ಎತ್ತು, ಹೋರಿ ಮುಂತಾದವುಗಳನ್ನು ಕಾಪಾಡುವದರಿಂದ ನಮ್ಮೆಲ್ಲರಿಗೆ ಆಗುವ ಪ್ರಾಪಂಚಿಕ ಸಾಮಾಜಿಕ, ಆರ್ಥಿಕ ಲಾಭಗಳನ್ನು ವಿವರಿಸಿ ಹೇಳಿದರು.

ಶ್ರೀಯುತ ನಾರಾಯಣರಾವ ಕುಲಕರ್ಣಿ ಇವರು ಒಕ್ಕಲತನದಲ್ಲಿ ಒಕ್ಕಲಿಗರಿಗೆ ಇದ್ದ ಕುಂದು ಕೊರತೆಗಳು ಯಾವು? ನಿವಾರಣೆಗಾಗಿ ಯಾವ ತತ್ವಗಳನ್ನು ಕೈಕೊಳ್ಳಬೇಕು? ಅವುಗಳಿಂದ ಯಾವ ಯಾವ ತರದ ಲಾಭಗಳಾಗುವವು? ಎಂಬುದನ್ನು ತಿಳಿಸಿದರು.

ಶ್ರೀ ಶಿವಯ್ಯ ಮಂದೇವರು ಇವರು ಸತ್ಸಂಗತಿ ಅಂದರೇನು ಅದನ್ನು ಅನುಕರಿಸುವದರಿಂದ ಆಗುವ ಲಾಭಗಳು ಯಾವವು ಇದನ್ನು ಸ್ಪಷ್ಟೀಕರಿಸಿದರು.

ಶ್ರೀಮತ್ ಶ್ರೀ. ಸಚ್ಚಿದಾನಂದ ಶ್ರೀ ಶಿವಯೋಗಿಗಳು ಶ್ರೀ ಬಸವೇಶ್ವರನ ಅಪಾರ ಪಾರಮಾರ್ಥಿಕ ತತ್ವಗಳನ್ನೂ ಶ್ರೀ ಬಸವೇಶ್ವರನು ಪಾಯಾಹಾಕಿದ ಈಗಿನ ಸಮಾಜಸುಧಾರಣೆಯ ತತ್ವಗಳನ್ನೂ ನೆನಪಿಗೆ ತಂದುಕೊಟ್ಟರು. ಸರ್ವಜನರೂ ಸಮಭಾವದಿಂದ ಏನೂ ದ್ವೈತಭಾವವಿಲ್ಲದೆ ನಡೆಯಲಿಕ್ಕೆ ತಿಳಿಸಿದರು. ಸುಳ್ಳು, ಪರಸ್ತ್ರೀ ಗಮನ, ಅನಿಯಮಿತ ಆಹಾರ ಇವುಗಳಿಂದ ಆಗುವ ಹಾನಿಗಳನ್ನೂ ಇವುಗಳನ್ನು ಬದಲಿಸಿದರೆ ಆಗುವ ಲಾಭಗಳನ್ನೂ ವಿಸ್ತರಿಸಿದರು

ಶ್ರೀ ಬಸವೇಶ್ವರನ ಕಾಲದಲ್ಲಿ ಎಲ್ಲ ಕಾಯಕದವರಿದ್ದರೂ ಶಿವ ಶರಣರಾದ ಶ್ರೀ. ಮಂಜಪ್ಪ ಹರ್ಡೇಕರರಂಥ ಲೇಖನ ಕಾಯಕದವರು ಇದ್ದಿಲ್ಲವೆಂದು ವ್ಯಕ್ತವಾಗುತ್ತದೆ. ಇವರಿಂದ ರಚಿತವಾದ ಅರ್ಪಣಯೋಗವೆಂಬ ಚಿಕ್ಕ ಪುಸ್ತಕವು ಜ್ಞಾನಯೋಗ ಕರ್ಮಯೋಗ, ರಾಜಯೋಗ, ಭಕ್ತಿಯೋಗ ಇವುಗಳಿಗಿಂತಲೂ ಇವುಗಳನ್ನೊಳಕೊಂಡ ಅರ್ಪಣಯೋಗವೇ ಅಧಿಕ ವೆಂಬ ತತ್ವರಸವುಳ್ಳ, ಪುಟ್ಟ ಪುಸ್ತಕವು ಇದರಂತೆ ಎಲ್ಲರೂ ಅನುಕರಿಸಲಿಕ್ಕೆ ಶ್ರೀ ಸ್ವಾಮಿಗಳವರ ದಿವ್ಯ ಸಹಾಯದಿಂದ ಇದು ಪುಕ್ಕಟೆಯಾಗಿ ಹಂಚಲ್ಪಟ್ಟಿತು.

ಈ ಎಲ್ಲ ಸಾಮಾಜಿಕ, ಧಾರ್ಮಿಕ, ಆರ್ಥಿಕ, ನೈಸರ್ಗಿಕ ಸುಧಾರಣೆಯು ಪ್ರಜ್ವಲಿಸುವ ಸಲುವಾಗಿ ಇಂಥ ಸಣ್ಣಹಳ್ಳಿಯಲ್ಲಿ ಪ್ರಕಟವಾದಂತೆ ಎಲ್ಲ ಹಳ್ಳಿಗಳಲ್ಲಿಯೂ ಪಟ್ಟಣಗಳಲ್ಲಿಯೂ ಅನುಕರಿಸಬೇಕೆಂದು ಬಯಸುವೆವು ಇದರ ಲಾಭಗಳನ್ನು ಎಲ್ಲರೂ ಪಡಿಯಬೇಕೆಂದು ಆಶಿಸುತ್ತೇವೆ.

— ಬಸವ ಜಯಂತಿ ಮಹೋತ್ಸವ ಮಂಡಳಿ.

## ನಿಡಗುಂದಿ.

ಕಾಳಗಿ ನಿಡಗುಂದಿಯಲ್ಲಿರತಕ್ಕ ವಿರಕ್ತಮಠದ ಸ್ವಾಮಿಗಳವರು ಇದೇ ಊರಲ್ಲಿರುವ ಪಟ್ಟದ ಮಠದ ಶ್ರೀ ಮ|| ಚ|| ರುದ್ರಸ್ವಾಮಿಗಳವರಿಗೆ ಬಸವಣ್ಣನವರ ವಚನವನ್ನು ನಮ್ಮ ಮಠದಲ್ಲಿ ಹೇಳಬೇಕೆಂದು ಸೂಚಿಸಿದ್ದರಿಂದ ಸದರೀ ಸ್ವಾಮಿಗಳವರು ೨|| ತಾಸಿನಂತೆ ೫ ದಿವಸ ಪರ್ಯಂತರವಾಗಿ 'ಶ್ರೀ ಬಸವಣ್ಣನವರ ವಚನ' ಮತ್ತು ನೂಲಿಯ ಚಂದಯ್ಯನವರ ಸಂಪಾದನೆಗಳನ್ನು ಬಹು ಸ್ವಾರಸ್ಯವಾಗಿ ಹೇಳಿದರು. ಜನರು ಕಿಕ್ಕಿರಿದು ಆಗ್ರಹದಿಂದ ಕೇಳಲಿಕ್ಕೆ ಬರುತ್ತಿದ್ದರು. ಕಡೇ ದಿನ ಶ್ರೀ|| ಮ|| ಚ|| ರುದ್ರಸ್ವಾಮಿಗಳವರು ಬಸವಣ್ಣನವರು ಮಾಡಿದ ರಾಜಕೀಯ ಮತ್ತು ಧಾರ್ಮಿಕ ಆಚರಣೆಗಳನ್ನು ಒಳ್ಳೇ ಹುರುಪಿನಿಂದ ಹೇಳಿದಮೇಲೆ ವಿಜಾಪುರದ ಶ್ರೀ. ಮ. ಚ. ಮಡಿವಾಳ ಸ್ವಾಮಿಗಳವರು ಬಸವಣ್ಣನ ಆದ್ಯಂತ ಚರಿತ್ರೆಯನ್ನು ಜನರಿಗೆ ಮನಾನಂದವಾಗುವ ಹಾಗೆ ಹೇಳಿದರು. ಅನಂತರ ಶ್ರೀಮನ್ನಿರಂಜನ ವಿರಕ್ತಮಠದ ಸ್ವಾಮಿಗಳವರು ಬಸವಣ್ಣನ ಉದಾತ್ತ ತತ್ವಗಳನ್ನು ಹೇಳಿದರು. ಅನಂತರ ಶ್ರೀ. ಮ. ಚ. ರುದ್ರಸ್ವಾಮಿಗಳವರು ಮತ್ತು ಯಾವತ್ತೂ ಜನಗಳೊಂದಿಗೆ ಬಸವಣ್ಣನವರ ಜಯ ಜಯಕಾರದೊಂದಿಗೆ ಸಮಾಪ್ತಿ ಮಾಡಿದರು.

ಓರ್ವ ಪ್ರತ್ಯಕ್ಷದರ್ಶೀ.

---

## ಮಾದಾಪುರ.

ತಾ. ೨-೫-೩೮ ನೇ ಸೋಮವಾರ ದಿವಸ ಹೆಗ್ಗಡದೇವನ ಕೋಟೆ ತಾಲೂಕು ಮಾದಾಪುರದಲ್ಲಿ ಸ್ಥಾಪಿತವಾಗಿರುವ ಶ್ರೀ ಚೆನ್ನ ಬಸವ ಗುರುಕುಲಾಶ್ರಮದಲ್ಲಿ ಈ ಗ್ರಾಮದ ಸದ್ಭಕ್ತರೆಲ್ಲರೂ ಸೇರಿ ಪ್ರತಿ ವರುಷದಂತೆ ಈ ವರುಷವೂ ಅತ್ಯಂತ ಭಕ್ತಿಯಿಂದ ಶ್ರೀ ಬಸವಜಯಂತಿಯ ಉತ್ಸವವನ್ನು ನಡೆಯಿಸಿದರು. ಈ ಕಾರ್ಯಕ್ಕೆ ವೀರಶೈವರೇ ಅಲ್ಲದೆ ಇನ್ನಿತರೂ ಸೇರಿದ್ದರು. ಮೊದಲು ಶ್ರೀ ಬಸವೇಶ್ವರನಿಗೆ ಸಹಸ್ರಬಿಲ್ವಾಚರಣೆಯೂ ಷೋಡಶೋಪಚಾರ ಪೂಜೆಯೂ ಆದ ಬಳಿಕ ಗಣಸಂತರ್ಪಣೆಯಾಯಿತು. ಅನಂತರ ಮಧ್ಯಾನ್ಹ ಶ್ರೀ ಬಸವೇಶ್ವರನ ಜನನದ ವಿಷಯದಲ್ಲಿ ಸದರಿ ಆಶ್ರಮದ ಸ್ವಾಮಿಯವರಿಂದ ಸುಶ್ರಾವ್ಯವಾಗಿ ಪುರಾಣಪಠನೆಯಾಯಿತು. ತದನಂತರ ಶ್ರೀ ಬಸವೇಶ್ವರರ ಭಾವಚಿತ್ರವು ಈ ಗ್ರಾಮದ ಬೀದಿಗಳಲ್ಲೆಲ್ಲಾ ಆಶ್ರಮದ ಬಾಲಕರ ಭಜನೆಯೊಡನೆ ಬಹಳ ವಿಜೃಂಭಣೆಯಿಂದ ಮೆರೆಯಿಸಲ್ಪಟ್ಟಿತು.

ಪ. ನಂಜೇಗೌಡ.

---

## ಬಿಡದಿ.

ಶ್ರೀ ಬಸವೇಶನ ಜಯಂತ್ಯುತ್ಸವವು ಬಿಡದಿಯಲ್ಲಿ ಅತ್ಯಂತ ವಿಜೃಂಭಣೆಯಿಂದ ನಡೆಯಿತು. ಪ್ರಾತಃಕಾಲ ದೇವಸ್ಥಾನಗಳೂ ಪುರದ ಬೀದಿಗಳೂ ತಳಿರು ತೋರಣಗಳಿಂದ ಶೃಂಗರಿಸಲ್ಪಟ್ಟ ಉಭಯ ದೇವಸ್ಥಾನಗಳಲ್ಲಿಯೂ ಶ್ರೀ ಜಗದ್ಗುರು ಬಸವೇಶ್ವರನಿಗೆ ಸಹಸ್ರ ಬಿಲ್ವಾರ್ಚನೆಯು ನಡೆಸಲ್ಪಟ್ಟು ತತ್ಪರ ಪಾನಕಾದಿ ಸಂತರ್ಪಣೆಯು ಯಥೇಚ್ಛವಾಗಿ ನಡೆಸಲ್ಪಟ್ಟಿತು. ಸಾಯಂಕಾಲ ಶೃಂಗರಿಸಲ್ಪಟ್ಟ ರಥದಲ್ಲಿ ಶ್ರೀ ಗುರುಮೂರ್ತಿಯನ್ನು ಬಿಜಯಮಾಡಿಸಿ ಉತ್ಸವವು ನಡೆಸಲ್ಪಟ್ಟಿತು. ಎಲ್ಲ ಮಠಸ್ಥರೂ ಅನನ್ಯ ಭಕ್ತಿಯಿಂದ ಫಲತಾಂಬೂಲಗಳನ್ನು ಸಮರ್ಪಿಸಿದರು. ಎಲ್ಲ ಕಾರ್ಯಗಳನ್ನೂ ಕಳಕಳಿಯಿಂದ ನಡೆಸುತ್ತಿರುವ ಭಕ್ತಮಂಡಲಿಯವರೇ ಧನ್ಯರು. ಶ್ರೀ ಜಗದ್ಗುರು ಬಸವೇಶ್ವರನು ಎರಡೆಣಿಸದ ಸದ್ಭಕ್ತಿಯನ್ನೂ ಸದ್ಧರ್ಮೇಚ್ಛೆಯನ್ನೂ ಸಕಲರಿಗೂ ಅನುಗ್ರಹಿಸಲಿ.

ಓರ್ವ ಉತ್ಸವಭಾಗಿ.

## ಹುನಗುಂದ.

ಶಕೆ ೧೮೫೬ ವೈಶಾಖ ಶು|| ೭ ಸೋಮವಾರ ತಾ. ೭-೫-೩೪ ನೇ ದಿವಸ ಶ್ರೀ ಮಹಾನುಭಾವರಾದ ಬಸವಣ್ಣನವರ ಜಯಂತಿ ಉತ್ಸವವು ಶ್ರೀಯುತ ಶಿವಪ್ಪ ಮೇಗೂರು ಬಿ. ಎ. ಇವರ ಅಧ್ಯಕ್ಷತೆಯ ಕೆಳಗೆ ನೆರವೇರಿಸಲ್ಪಟ್ಟಿತು. ಪ್ರಾರಂಭದಲ್ಲಿ ಈಶ ಸ್ತೋತ್ರ ವಾದನಂತರ ಶ್ರೀಯುತ ಬಸವಶೆಟ್ಟೆಪ್ಪ ಬಳೂಟಗಿ, ಶ್ರೀಯುತ ಅಪ್ಪಾರಾವ ಮರಗೂರ ಸೋಲಾಪುರ ಇವರು ಶ್ರೀ ಬಸವೇಶ್ವರನು ಮಾಡಿದ ಕಾರ್ಯಗಳ ಬಗ್ಗೆ ಮತ್ತು ಈಗ ನಾವು ಮಾಡಬೇಕಾದ ಕಾರ್ಯದ ಬಗ್ಗೆ ಭಾಷಣಮಾಡಿದರು. ನಂತರ ಅಧ್ಯಕ್ಷರು ಮಹಾತ್ಮಾ ಗಾಂಧಿಯವರು ಈಗ ಮಾಡುವ ಕಾರ್ಯಗಳನ್ನೇ ೧೨ ನೇ ಶತಮಾನದಲ್ಲಿ ಶ್ರೀ ಬಸವೇಶ್ವರನು ಮಾಡಿದನೆಂದು ಹೇಳಿದರು. ಈಗ ನಾವಾದರೂ ಸ್ವದೇಶಿ ವಸ್ತುಗಳ ಉಪಯೋಗ ಒಳಪಂಗಡಗಳ ಏಕೀಕರಣ, ಅಸ್ಪೃಶ್ಯತಾ ನಿವಾರಣೆ ಮುಂತಾದ ಕಾರ್ಯಗಳನ್ನು ಕೈಕೊಂಡು ಕಾರ್ಯರೂಪದಲ್ಲಿ ತರಲಿಕ್ಕೆ ಪ್ರಯತ್ನಿಸಬೇಕೆಂದು ಜನರ ಮೇಲೆ ಪರಿಣಾಮವಾಗುವಂತೆ ಭಾಷಣಮಾಡಿದರು. ನಂತರ ಸಭೆಗೆ ಆಗಮಿಸಿದಂಥ ಬೆಳ್ಳುಳ್ಳಿ ಪಟ್ಟದ್ದೇವರ, ಅಧ್ಯಕ್ಷರ, ಇತರ ಸಭ್ಯಗೃಹಸ್ಥರ, ಆಭಾರಮನ್ನಿಸಿ ಮಂಗಲದೊಡನೆ ಸಭೆಯ ಕಾರ್ಯವು ಪೂರೈಸಲ್ಪಟ್ಟಿತು. ಆ ಮೇಲೆ ಬಂದಂಥ ಯಾವತ್ತೂ ಸಭ್ಯಗೃಹಸ್ಥರಿಗೂ ಬಾಲಬಾಲಕಿಯರಿಗೂ ಚೂರಮರಿ ಪುಠಾಣಿ ಕೊಬ್ರಿ ಹಂಚಲ್ಪಟ್ಟಿತು. ಈ ಸಮಾರಂಭದ ಕಾಲಕ್ಕೆ ಶ್ರೀಮಂತ ದೊಡ್ಡಪ್ಪಣ್ಣಾ ನಾಗರಾಳ ಇವರು ದೇ. ಭ. ಹರ್ಡೆಕರ ಮಂಜಪ್ಪನವರಿಂದ ಬರೆಯಲ್ಪಟ್ಟ "ಅಣ್ಣನ ಅರ್ಪಣಯೋಗ" ಎಂಬ ಪುಸ್ತಕವನ್ನು ಉಚಿತವಾಗಿ ಕೊಟ್ಟರೆಂದು ತಿಳಿಸಲು ಪುಂಬಾ ಸಂತೋಷವಾಗುತ್ತದೆ.

ಬಸವಶೆಟ್ಟೆಪ್ಪ ಬಳೂಟಗಿ.

---

## ತಾಂಡೂರು.

ಶ್ರೀ ಭದ್ರೇಶ್ವರ ದೇವಸ್ಥಾನದಲ್ಲಿ ವೈ|| ಶು|| ೨, ತಾ. ೭-೫-೩೪ ನೆಯ ಶುಭ ದಿವಸ ವೀರಶೈವ ಮತೋದ್ಧಾರಕರಾದ ಭಗವಾನ್ ಬಸವಣ್ಣನವರ ಜಯಂತ್ಯುತ್ಸವವು ಇಲ್ಲಿಯ ವೀರಶೈವ ತರುಣಸಂಘದವರ ಪರವಾಗಿ ಅತ್ಯಂತ ವಿಜೃಂಭಣೆಯಿಂದ ನೆರವೇರಿಸಲ್ಪಟ್ಟಿತು, ತರುಣ ಸಂಘದವರ ಆಮಂತ್ರಣವನ್ನು ಪ್ರೇಮದಿಂದ ಸ್ವೀಕರಿಸಿ ಸುಲೇಪೇಟದ ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ ಶ್ರೀ ಸದಾಶಿವ ಸ್ವಾಮಿಗಳೂ ಕಲಬುರ್ಗಿಯ ಸುಪ್ರಸಿದ್ಧ ವಕೀಲರೂ ವೀರಶೈವ ಮುಂದಾಳುಗಳೂ ಆದ ಶ್ರೀಮಾನ್ ಹನಮಂತರಾವ ಹಾಗರೀಕರ ಹೈಕೋರ್ಟ ವಕೀಲ ಇವರೂ ಬಂದದ್ದರಿಂದ ಉತ್ಸವಕ್ಕೆ ಹೆಚ್ಚು ಕಳೆ ಬಂದಿತ್ತು.

ಶ್ರೀ ಸದಾಶಿವ ಮಹಾಸ್ವಾಮಿಗಳು- "ಪರಧರ್ಮದವರು ನಮ್ಮ ಮೇಲೆ ದಾಳಿ ನಡೆಸಿರುವರು. ಎಷ್ಟೋ ಜನ ವೀರಶೈವರು ಪರಧರ್ಮಕ್ಕೆ ಸೇರುತ್ತಿರುವರು. ವೀರಶೈವ ಜನಸಂಖ್ಯೆಯು ದಿನೆ ದಿನೆ ಕಡಿಮೆ ಆಗುತ್ತಿರುವದು. ಇಷ್ಟಾದರೂ ಕೂಡಾ ವೀರಶೈವರು ನಿದ್ರೆಯಲ್ಲಿಯೇ ಇರುವರು. ವೀರಶೈವರಲ್ಲಿ ಪರಸ್ಪರ ಪ್ರೇಮ ಸಹಾನುಭೂತಿಗಳು ಕಡಿಮೆಯಾಗಿ ಅನೈಕಮತ್ಯವು ಹೆಚ್ಚಿರುವದು. ಮೇಲು ಕೀಳುಗಳೆಂಬ ಜಾತಿಯಭೂತದಿಂದ ಸಮಾಜವೇ ಹಾಳಾಗುತ್ತಿರುವುದು. ವೀರಶೈವರೇ ಇನ್ನಾದರೂ ಎಚ್ಚರಿಕೆ." ಎಂದು ಅತ್ಯಂತ ಪರಿಣಾಮಕಾರಿಯಾದ ಭಾಷಣಮಾಡಿದರು.

ಶ್ರೀಮಾನ್ ಹಾಗರೀಕರ ವಕೀಲರು- "ವೀರಶೈವರಲ್ಲಿ ಜಾತಿಭೇದಗಳಿಲ್ಲವೇ ಇಲ್ಲವೆಂದೂ ಲಿಂಗಪೂಜೆಯು ಮೂರ್ತಿ ಪೂಜೆಯಲ್ಲವೆಂದೂ ವೀರಶೈವ ಧರ್ಮವು ವಿಶ್ವ ಧರ್ಮವಾಗಲು ಯೋಗ್ಯವಾಗಿದೆಯೆಂದೂ ವೀರಶೈವರು ಇನ್ನಾದರೂ ಜಾಗೃತರಾಗಿ ಧರ್ಮದ ನಿಜತತ್ವದಂತೆ ಆಚರಿಸಬೇಕೆಂದೂ ವೀರಶೈವರಲ್ಲಿ 'ಜಂಗಮ'ರೆಂಬದೊಂದು ಬೇರೆ ಜಾತಿ ಇಲ್ಲವೆಂದೂ" ಅತ್ಯಂತ ಸ್ಫೂರ್ತಿದಾಯಕವಾದ ಭಾಷಣಮಾಡಿದರು. ಶ್ರೀ. ವಕೀಲರು ಲಿಂಗದ ವಿಷಯವಾಗಿ ಲಿಂಗವೆಂದರೇನು ? ಎಂಬ ವಿಷಯದ ಮೇಲೆ ಅತ್ಯಂತ ಸುಂದರವಾಗಿ ವೈಜ್ಞಾನಿಕ ದೃಷ್ಟಿಯಿಂದ ವಿವೇಚಿಸಿದರು. ಜನರ ಮೇಲೆ ಈ ವಿಷಯವು ಹೆಚ್ಚು ಪರಿಣಾಮವಾಯಿತು. ತರುಣ ಸಂಘದ ವತಿಯಿಂದ ಶ್ರೀ ಸದಾಶಿವ ಮಹಾ ಸ್ವಾಮಿಗಳಿಗೂ ಶ್ರೀ. ವಕೀಲರಿಗೂ ಪುಷ್ಪಹಾರಗಳು ಅರ್ಪಿಸಲ್ಪಟ್ಟವು.

ಸಭೆಯಲ್ಲಿ 'ವೀರಶೈವ ಏಕೀಕರಣ' 'ಅಣ್ಣನ ಅರ್ಪಣಯೋಗ' ಎಂಬ ಪುಸ್ತಕಗಳು ಉಚಿತವಾಗಿ ಹಂಚಲ್ಪಟ್ಟವು. ಶ್ರೀ ಕ್ಯಾಸುವಾರ ಚೆನ್ನಬಸವಯ್ಯನವರು, ಶ್ರೀ. ಗಂಗಾಪುರ ಶಂಕ್ರಪ್ಪನವರು ಶ್ರೀ. ಹುಮನಾಬಾದ ಸಿದ್ಧಪ್ಪನವರು, ಶ್ರೀ. ಕೆ. ಚೆನ್ನಬಸವಪ್ಪನವರು, ಶ್ರೀ. ವಿ. ಅಡಿವೆಪ್ಪನವರು, ಶ್ರೀ ಶೆಟ್ರು ವೀರಪ್ಪನವರು, ಶ್ರೀ. ಜೆ. ಗುಂಡಪ್ಪನವರು ಇವರೆಲ್ಲರ ವಿಶೇಷ ಪರಿಶ್ರಮದಿಂದ ಉತ್ಸವವು ಆನಂದದಿಂದ ಕೊನೆಗೊಂಡಿತು.

ವೀರಶೈವ ತರುಣ ಸಂಘದವರು.

---

## ಚಡಚಣ.

ಶ್ರೀ ಬಸವಜಯಂತ್ಯುತ್ಸವವು ಪ್ರತಿ ವರುಷದಂತೆ ಈ ವರ್ಷ ವೈ|| ಶು|| ೨ ತಾ. ೭-೫-೩೪ ನೇ ಸೋಮವಾರ ದಿವಸ ಬೆಳಗಿನ ೫ ಘಂಟೆಯಿಂದ ವಿಶೇಷ ಜನಸಮೂಹದೊಡನೆ ಪ್ರಭಾತಫೇರಿ ಹೊರಟು ೭ ಘಂಟೆಗೆ ಝುಂಡಾ ವಂದನೆ ಕೆಲಸ ಪೂರ್ತಿಗೊಂಡಮೇಲೆ ೮ ಘಂಟೆಗೆ ಶ್ರೀ ವೀರಭದ್ರದೇವರ ಗುಡಿಯಲ್ಲಿ ತಳಿರು ತೋರಣಗಳಿಂದ ಶೃಂಗರಿಸಿದ ಮಂಟಪದಲ್ಲಿ ಶ್ರೀ ಬಸವ ಮಹಾತ್ಮನ ಭಾವಚಿತ್ರವನ್ನಿಟ್ಟು ಪೂಜಿಸಲ್ಪಟ್ಟಮೇಲೆ ಸಂಜೆಯ ೭ ಘಂಟೆಗೆ ನಾನಾ ತರದ ವಾದ್ಯ ವೈಭವದೊಂದಿಗೆ ಪ್ರಚಂಡ ಮೆರವಣಿಗೆ ಹೊರಟು. ಸಂಜೆಯ ೮ ಘಂಟೆಗೆ ದೇವರ ಗುಡಿಗೆ ತಲುಪಿ ಕಾರ್ಯವು ಕೊನೆಗೊಂಡಿತು. ಈ ಉತ್ಸವದಲ್ಲಿ ಶ್ರೀ. ಕಲ್ಲಪ್ಪ ಚಾವಳಗಿ, ಶ್ರೀ. ಬಸಪ್ಪ ಜಂಗಮಶೆಟ್ಟಿ, ಶ್ರೀ. ರೇವಪ್ಪ ಸಾವಳಗಿ, ಶ್ರೀ. ಗುರುಪಾದಪ್ಪ ಸರಸಂಬಿ, ಶ್ರೀ. ಮಲ್ಲೇಶಪ್ಪ ಅಳಗಿ ಮೊದಲಾದ ತರುಣರು ವಿಶೇಷ ಪ್ರೇಮದಿಂದ ಕಾರ್ಯ ಮಾಡಿದರೆಂದು ತಿಳಿಸಲಿಕ್ಕೆ ಸಂತೋಷವಾಗುತ್ತದೆ.

ಎಂ. ಎಸ್. ಎಳಮೇಲಿ

---

## ರಕ್ಕಸಗಿ.

ಹುನಗುಂದ ತಾಲೂಕು ಪೈಕಿ ರಕ್ಕಸಿಗಿ ಎಂಬ ಗ್ರಾಮದಲ್ಲಿ ಶ್ರೀ ಜಗದ್ಗುರು ಬಸವಣ್ಣನವರ ಜಯಂತಿಯು ತಾ. ೭-೫-೩೪ ನೇ ಸೋಮವಾರ ದಿವಸ ಒಳ್ಳೇ ವೈಭವದೊಡನೆ ಜರುಗಿತು. ಮತ್ತು ಅದೇ ದಿವಸ ಹುಬ್ಬಳ್ಳಿಯ ಶ್ರೀ ಜಗದ್ಗುರು ಗಂಗಾಧರ ಸಂಸ್ಕೃತ ಕಾಲೇಜದಲ್ಲಿ ಅಧ್ಯಯನವನ್ನು ಮಾಡತಕ್ಕ ಶ್ರೀ. ಬಸವರಾಜ ಹಿರೇಮಠ ಹಳ್ಳೂರು ಸಾ|| ರಕ್ಕಸಗಿ ಇವರು ಬಸವಣ್ಣನವರ ಪರವಾಗಿ ಶಿವಕೀರ್ತನೆಯನ್ನು ಎಲ್ಲ ಜನರ ಮೇಲೆ ಪರಿಣಾಮವಾಗುವಂತೆ ಮಾಡಿದರು. ಅನಂತರ 'ಶ್ರೀ ಜಗದ್ಗುರು ಬಸವೇಶ್ವರ ಮಹಾರಾಜಕೀ ಜಯ' ಎಂಬ ಜಯಘೋಷದೊಡನೆ ಸಭೆಯು ವಿಸರ್ಜಿಸಲ್ಪಟ್ಟಿತು.

ಬಸಪ್ಪ ಅಯ್ಯಪ್ಪ ಸೂಳಿಭಾವಿ.

## ಹಂಜಗಿ.

ಇಲ್ಲಿಯ ಬಸವೇಶ್ವರ ಭಜನಾ ಸಂಘದವರು ಪದ್ಧತಿಯಂತೆ ಈ ಸಾರೆ ಬಸವ ಜಯಂತಿಯನ್ನು ಬಹು ಉತ್ಸುಕತೆಯಿಂದ ನೆರವೇರಿಸಿದರು. ಮುಸಲ್ಮಾನ-ಹಿಂದು ಎಂಬ ಭೇದಭಾವವಿಲ್ಲದೆ ಎಲ್ಲರೂ ಸೇರಿದ್ದರು. ಸಾಯಂಕಾಲದ ಸಭೆಯಲ್ಲಿ ಶ್ರೀ. ಚಿನ್ನಪ್ಪ ಬಿರಾದಾರ, ಶ್ರೀ. ಬಸಪ್ಪ ಭೂಪಾಳೆ ಶಾಲಾಮಾಸ್ತರ ಮತ್ತು ಶ್ರೀ. ಶಂಕರಲಿಂಗ ಸ್ವಾಮಿಗಳು ಬಸವನ ಘನತೆ ಆತನ ದಿವ್ಯ ಚರಿತ್ರೆ ಮೊದಲಾದವುಗಳ ಬಗ್ಗೆ ಭಾಷಣಮಾಡಿದರು. ಸಭೆಗೆ ಮುಸಲ್ಮಾನ ಸಮಾಜದವರೇ ಹೆಚ್ಚಾಗಿ ಬಂದಿದ್ದರು. ನಂತರ ಭಾವಚಿತ್ರದ ಪೂಜೆ ಆರುತಿಯಾದನಂತರ ಬಸವೇಶ್ವರ ಜಯಜಯಕಾರದೊಡನೆ ಸಭೆಯು ವಿಸರ್ಜಿಸಲ್ಪಟ್ಟಿತು.

—ಶಂಕರಗೌಡ ಪಾಟೀಲ.

---

## ಪಡಗಾನೂರು.

ತಾ. ೨೮-೪-೩೮ ನೆಯ ದಿವಸವೇ ಬಸವಜಯಂತಿಯನ್ನು ಆಚರಿಸುವ ಆವಶ್ಯಕತೆಯ ಬಗ್ಗೆ ಶ್ರೀ. ಜೋಶಿ ಮಾಸ್ತರರ ಅಧ್ಯಕ್ಷತೆಯಲ್ಲಿ ಸಭೆ ಸೇರಿದ್ದಿತು. ಆಗ ವಿಜಾಪುರದ ಧನಶೆಟ್ಟಿ ಶಂಕ್ರಪ್ಪನವರು ಶಂಕರಗೌಡರು ಮತ್ತು ಸಾವಳಿಗೆಯ್ಯನವರ ಭಾಷಣ ಮಾಡಿದರು.

ಜಯಂತಿಯ ದಿವಸ ಶ್ರೀ. ಆಕಳವಾಡಿ ಸಾಹೇಬಗೌಡರು ಮತ್ತು ಸೋಮಪ್ಪ ಗೊಬ್ಬೂರ ಇವರು ತಯಾರಿಸಿದ ಸುಂದರವಾದ ಮಂಟಪದಲ್ಲಿ ಬಸವಭಾನುವಿನ ಭಾವಚಿತ್ರದ ಪೂಜಾ ಸಮಾರಂಭವು ನೆರವೇರಿತು. ಸಂಜೆಗೆ ಶ್ರೀ ಬಸವೇಶ್ವರ ಮತ್ತು ಮಹಾತ್ಮಾಜಿಯವರ ಭಾವಚಿತ್ರದ ಮೆರವಣಿಗೆಯನ್ನು ಹೊರಡಿಸಲಾಗಿತ್ತು. ಆ ಮೇಲೆ ಶ್ರೀ ಸೋಮೇಶ್ವರ ದೇವಸ್ಥಾನದಲ್ಲಿ ಶ್ರೀ. ಸದಾಶಿವಯ್ಯನವರ ಅಧ್ಯಕ್ಷತೆಯಲ್ಲಿ ಸಭೆಸೇರಿ ವಿದ್ಯಾರ್ಥಿಗಳ ಸಂವಾದವಾದನಂತರ ಶ್ರೀ. ಜೋಶಿಮಾಸ್ತರರು ಸಾವಳಿಗೆಯ್ಯನವರು, ಶಂಕರಗೌಡರು ಶಿವಣಗಿ ಶಾಲೆಯ ಮಾಸ್ತರರಾದ ಶ್ರೀ. ವೀರನಗೌಡ ಮೊದಲಾದವರ ಭಾಷಣ, ಕೀರ್ತನ, ಲಾವಣಿಗಳಾದವು. ಅಧ್ಯಕ್ಷರ ಸಮಾರೋಪ ಭಾಷಣವಾದನಂತರ ಸಭೆಯು ವಿಸರ್ಜಿಸಲ್ಪಟ್ಟಿತು.

ಸೋಮಪ್ಪ ಹೊಸಟಿನ.

---

## ಕಮಲಾಪುರ.

ಶ್ರೀ. ಮಹಾನುಭಾವರಾದ ಬಸವಣ್ಣನವರ ಜಯಂತ್ಯುತ್ಸವವು ಇಲ್ಲಿಯ ವೀರಶೈವ ತರುಣ ಸಂಘದ ಸರವಾಗಿ ಅತ್ಯಂತ ವಿಜೃಂಭಣೆಯಿಂದ ನೆರವೇರಿಸಲ್ಪಟ್ಟಿತು. ಜಯಂತಿಯ ದಿವಸ ಬೆಳಗ್ಗೆ ವೀರಶೈವ ಧರ್ಮ ಧ್ವಜದ ವಂದನೆಯಾಯಿತು. ನಂತರ ಗುಲಬರ್ಗಾದ ಶ್ರೀ. ರೇವಣಸಿದ್ಧಯ್ಯ ನಂದೀಮಠ ಇವರ ಹಸ್ತದಿಂದ ಪತಿತರಾದ ಇಲ್ಲಿಯ ಗೌರಮ್ಮ ಮತ್ತು ಶಿವವ್ವ ಇವರಿಗೆ ಅವರಿಷ್ಟದಂತೆ ನಮ್ಮ ಸಂಘಕ್ಕೆ ವಿನಂತಿ ಮಾಡಿಕೊಂಡ ಮೇರೆಗೆ ವಿಧಿವತ್ತಾಗಿ ದೀಕ್ಷೆ ಮಾಡಲಾಯಿತು. ನಂತರ ಶಿವದೀಕ್ಷೆಹೊಂದಿದ ಮಹಿಳೆಯರೊಡನೆ ಸಹಭೋಜನ ಮಾಡಲಾಯಿತು. ಸಾಯಂಕಾಲ ಶ್ರೀ. ಗುಂಡಾರಾಧ್ಯ ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ಸಭೆ ಸೇರಿದ್ದಿತು. ಆಗ ಶ್ರೀ. ನಂದೀಮಠ ಮತ್ತು ಸಿದ್ಧರಾಮಪ್ಪ ಕರಕಲ್ಲರವರ ಇವರು ಶುದ್ಧಿಸಂಘಟನೆಯ ಆವಶ್ಯಕತೆ ಬಸವ ಮಹಾತ್ಮನು ಮಾಡಿದ ಅದ್ಭುತ ಕ್ರಾಂತಿಯ ಬಗ್ಗೆ ಮಾತನಾಡಿದರು

ವಿ. ತ. ಸಂಘ ಕಮಲಾಪುರ

---



---



---



---

## ಜಾಹೀರ ನೋಟೀಸ.

ಹುನಗುಂದ ವೀರಶೈವ ತರುಣ ಸಂಘದ ಸಹಾಯದಿಂದ ಕನ್ನಡ ಮತ್ತು ಇಂಗ್ಲೀಷ ಕಲಿಯಲಿಚ್ಛಿಸುವ ವೀರಶೈವ ಬಡ ಮತ್ತು ಸುಸ್ವಭಾವವುಳ್ಳ ವಿದ್ಯಾರ್ಥಿಗಳು ಇದೇ ತಿಂಗಳ ೨೦ ನೇ ತಾರೀಖಿನೊಳಗಾಗಿ ಕೆಳಗೆ ಸಹಿಮಾಡಿದವರ ಕಡೆಗೆ ಅರ್ಜಿ ಕಳಿಸಬೇಕು. ಅರ್ಜಿ ಸಂಗಡ ಹುಷಾರ ಸುಸ್ವಭಾವ ಮತ್ತು ಬಡವನಿದ್ದ ಬಗ್ಗೆ ತಮ್ಮ ಮಾಸ್ತರರ ಮತ್ತು ಸಭ್ಯಗೃಹಸ್ಥರ ಶಿಫಾರಸ ಪತ್ರಗಳನ್ನಿಟ್ಟು ಕಳಿಸಿಕೊಡಬೇಕಾಗಿ ವಿನಂತಿ—

ಹುನಗುಂದ
ತಾ. ೨-೫-೧೯೩೮

ಕಾರ್ಯದರ್ಶಿಗಳು ವಿ. ತ. ಸ.
ನೂರಂದಪ್ಪ ವೀರಸಂಗಪ್ಪ ಉಪ್ಪಿನ
ಬಸವಶೆಟ್ಟೆಪ್ಪ ಅಡಿವೆಪ್ಪ ಬಳೂಟಗಿ


ನಮ್ಮಲ್ಲಿ ಫೋಟೋ
ಲೈನ್ ಬ್ಲಾಕುಗಳು,
ಹಾಪ್‌ಟೋನ್ ಮತ್ತು ಸೀಸದ
ಬ್ಲಾಕುಗಳು ಅರಗಿನ
ಸೀಲು, ಜವಾನರ ಬಿಲ್ಲೆಗ
ಳು. ದೇವರ ೩ಬಣ್ಣದ
ಪಠಗಳು, ಕ್ಯಾಲೆಂಡರು
ಗಳು, ನಿಮ್ಮ ಮನ
ಒಪ್ಪುವಂತೆ ತಯಾರಾ
ಗುತ್ತವೆ.
ಯಾಜರ್ಸ್ ಅಂಡ್ ಸ‌ನ್ಸ್,
ಚಿಕ್ಕಪೇಟೆ,
ಬೆಂಗಳೂರು ಸಿಟಿ

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರ, ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ !
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೨ ನೆಯ ಮೇ ೧೯೩೮. | ಸಂಚಿಕೆ ೩೫ |
|---|---|---|

ಜನಸೇವೆಯೇ ದೇವಸೇವೆ.

## ಜಯ ಬಸವ ಜಗದಣ್ಣ!



ಕುಲದಲ್ಲಿ ಹುಟ್ಟಿ ಕುಲವನರಸದಿಹ ಮಹಿಮ ಬಸವಣ್ಣ.
ಜನತಾಪದುರಿಂಗೆ ಅರಗಾಗಿ ಕರಗಿದನು ಬಸವಣ್ಣ.

ದೇಹವೇ ದೇವಾಲಯ.



# ಶರಣ ಸಂದೇಶ

THE SHARANA SANDESHA.




## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ-ಸೋಮವಾರ ತಾರೀಖು ೨ ನೆಯ ಮೇ ೧೯೩೮. | ಸಂಚಿಕೆ ೩೫


## ಮಹತ್ವದ ಸುದ್ದಿಗಳು.

—ಐವರಿಗಿಂತ ಹೆಚ್ಚು ಜನರು ಒಂದಡೆಯಲ್ಲಿ ಸೇರಬಾರದು. ಸಾರ್ವಜನಿಕ ಸಭೆಗಳನ್ನು ನೆರೆಯಿಸಬಾರದು. ಮತ್ತು ರಾಷ್ಟ್ರ ಧ್ವಜಾರೋಹಣ ಮಾಡಬಾರದೆಂಬ ಮ್ಯಾಜಿಸ್ಟ್ರೇಟರ ಆಜ್ಞೆಯನ್ನು ಉಲ್ಲಂಘಿಸಿ ಬೆಂಗಳೂರಿನಲ್ಲಿ ಈ ವರೆಗೆ ೪೬ ಜನರು ಸೆರೆಮನೆಯನ್ನು ಸೇರಿದರು.

—ಮೈಸೂರು ಕಾಂಗ್ರೆಸ್ ಅಧ್ಯಕ್ಷರಿಗೆ ಪಂಡಿತ ಜವಾಹರಲಾಲ ನೆಹರುರವರು ಒಂದು ಪತ್ರವನ್ನು ಬರೆದು 'ರಾಷ್ಟ್ರಧ್ವಜ ಸತ್ಯಾಗ್ರಹಕ್ಕೆ ಕೆಲಮಟ್ಟಿಗೆ ವಿಜಯ ದೊರೆತಿದೆಯೆಂದು ನಾನು ತಿಳಿಯುತ್ತೇನೆ. ರಾಷ್ಟ್ರಧ್ವಜದ ಮರ್ಯಾದೆ ಪ್ರತಿಷ್ಠೆಗಳನ್ನು ನೀವು ರಕ್ಷಿಸಿದ್ದುದಕ್ಕಾಗಿ ನನಗೆ ಸಂತೋಷವೆನಿಸುತ್ತದೆ.' ಎಂದು ತಿಳಿಸಿದ್ದಾರೆ.

—೧೯೩೧ ನೆಯ ಇಸವಿಯಲ್ಲಿ ಒಂದು ಭಾಷಣದಲ್ಲಿ ಭಗತಸಿಂಗರನ್ನು ಪ್ರಶಂಸಿಸಿ ಮಾತನಾಡಿದುದಕ್ಕಾಗಿ ಸೇವಾ ನಿವೃತ್ತ ಸಿವ್ಹಿಲ್ ಸರ್ಜನ್ನರೂ ಸದ್ಯಕ್ಕೆ ಗೌಹತಿ ಜಿಲ್ಲೆಯ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರೂ ಆದ ಹರೀಂದ್ರ ಕೃಷ್ಣದಾಸ ಇವರ ಪೆನ್ಶನ್ ನಿಲ್ಲಿಸಲ್ಪಟ್ಟಿದ್ದಿತು. ಆದರೆ ಈಗ ಆಸಾಮ ಸರಕಾರದವರು ಪೆನ್ಶನ್ ತಿರುಗಿ ಕೊಡುವರೆಂದು ತಿಳಿದು ಬಂದಿದೆ.

—ಮಹಾತ್ಮಾ ಗಾಂಧಿಯವರು ಮಹಾದೇವ ದೇಸಾಯಿಗಳೊಂದಿಗೆ ಜಿನ್ನಾರವರ ಕಡೆಗೆ ಹೋದಾಗ ಪತ್ರಿಕಾ ಪ್ರತಿನಿಧಿಗಳ ಗುಂಪು ಅವರನ್ನು ಮುತ್ತಿತು. ಆಗ ಮಹಾತ್ಮರು "ಯಾರು ಇವರನ್ನು ಇಲ್ಲಿಗೆ ಬರಮಾಡಿದರು? ಇವರಿಗೆ ಗುಂಡು ಹಾಕಿರಿ. ಇವರಿಗಿದು ಯೋಗ್ಯ ಸ್ಥಳವಲ್ಲ." ಎಂದು ಪರಿಹಾಸ್ಯಮಾಡಿ ಇವರೆಲ್ಲರನ್ನೂ ದೂರ ಕರೆದುಕೊಂಡು ಹೋಗಲು ಮಹದೇವ ದೇಸಾಯಿಗಳಿಗೆ ತಿಳಿಸಿದರು.

—ಅಖಿಲ ಭಾರತ ಕಾಂಗ್ರೆಸ್ ಸಾಮ್ಯವಾದಿ ಪಕ್ಷದ ಕಾರ್ಯದರ್ಶಿಗಳಾದ ಛಾಯಿ ಜಯಪ್ರಕಾಶ ನಾರಾಯಣರು ಕಳೆದ ವಾರ ಹುಬ್ಬಳ್ಳಿ, ಧಾರವಾಡ, ಗದಗ ಮೊದಲಾದ ಸ್ಥಳಗಳಲ್ಲಿ ಭಾಷಣಮಾಡಿದರು.

—ಮಹಾತ್ಮಾ ಗಾಂಧೀಜಿಯವರು ಬ್ಯಾ. ಜಿನ್ನಾರವರೊಡನೆ ಮಾತುಕತೆ ಮುಗಿಸಿದ ನಂತರ ೯ ದಿನಗಳ ವರೆಗೆ ಗಡಿನಾಡಿನಲ್ಲಿ ಸಂಚರಿಸುವವರಿದ್ದಾರೆ. "ಅಂಜಿಕೆಯಿಂದ ಕಂಪಿಸುತ್ತ ನಾನು ಗಡಿನಾಡ ಪ್ರಾಂತದ ಪ್ರವಾಸವನ್ನು ಕೈಕೊಂಡಿದ್ದೇನೆ. ಪ್ರತಿಯೊಂದು ಸ್ಟೇಶನ್ನಿನಲ್ಲಿ ಸಾವಿರಾರು ಜನರು ನನ್ನ ಡಬ್ಬಿಯನ್ನು ಮುತ್ತಬಹುದೆಂಬ ಅಂಜಿಕೆ ನನಗುಂಟಾಗಿದೆ. ಆದ್ದರಿಂದ ಜನರು ತಂಡೋಪತಂಡವಾಗಿ ಸ್ಟೇಶನುಗಳಿಗೆ ಬಂದು ನನ್ನ ಡಬ್ಬಿಯನ್ನು ಮುತ್ತಿ ಯಾವದೇ ಬಗೆಯ ಗೊಂದಲ ಮಾಡಬಾರದೆಂದು" ಗಾಂಧಿಯವರು ಎಲ್ಲ ಕಾಂಗ್ರೆಸ್ ಕಮಿಟಿಗಳಿಗೆ ವಿಜ್ಞಾಪಿಸಿಕೊಂಡಿದ್ದಾರೆ.

## ಶರಣ ಸಂದೇಶ ಪತ್ರಿಕೆಯು

**ಪದ್ಧತಿಯಂತೆ ಬಸವ ಜಯಂತಿಯ**

**ನಿಮಿತ್ತವಾಗಿ**

**ತಾ. ೯-೫-೩೮ ನೆಯ ದಿವಸ ಹೊರಡದೆ**

**ತಾ. ೧೬-೫-೩೮ ನೆಯ ದಿವಸ**

**ಹೊರಡುವುದು.**

—೨೫-೪-೩೮ ನೆಯ ದಿವಸ ಕೊಲ್ಹಾಪುರದಲ್ಲಿ ಕಾಂಗ್ರೆಸ್ ಕೆಲಸಗಾರರಾದ ವೀರಶೈವ ತರುಣ ಶ್ರೀ. ಸಿದ್ಧಲಿಂಗಪ್ಪ ಬಾಬುರಾವ ಹಾವೇರಿ ಇವರು ಕು. ಅನುಸೂಯಾ ಕಾಂಬಳೆ ಎಂಬ ಆದಿ ಜನ ಕನ್ಯೆಯನ್ನು ಲಗ್ನವಾದರು. ಈ ವಧೂವರರನ್ನು ಅಭಿನಂದಿಸುವುದಕ್ಕಾಗಿ ಅದೇ ದಿನ ಒಂದು ಪ್ರಚಂಡವಾದ ಸಭೆ ಸೇರಿದ್ದಿತು. ಮ. ಗಾಂಧಿ, ಸಾವರಕರ, ಪ್ರೊ. ನಂದೀಮಠ ಮೊದಲಾದವರು ಶುಭ ಸಂದೇಶಗಳನ್ನು ಕಳುಹಿಸಿಕೊಟ್ಟಿದ್ದರು.

### ಅಖಿಲ ವೀರಶೈವ ಬಾಂಧವರಲ್ಲಿ

# ಸವಿನಯಪೂರ್ವಕವಾದ ವಿಜ್ಞಾಪನೆ.

## ಓರ್ವ ವೀರಶೈವನಿಗೆ ಲಂಡನ್‌ನಗರದಿಂದ ಆಮಂತ್ರಣ.

ಅಖಿಲ ವೀರಶೈವರಿಗೆ ಒಂದು ಆನಂದದ ಸುದ್ದಿಯನ್ನು ತಿಳಿಸಬೇಕಾದ ಪ್ರಸಂಗವು ಬಂದುದರಿಂದ ಬಹಳ ಆನಂದವೆನಿಸುತ್ತದೆ. ಹಿಂದಕ್ಕೆ ಅಮೇರಿಕದಲ್ಲಿ ಚಿಕ್ಯಾಗೊ ನಗರದಲ್ಲಿ ಸರ್ವ ಧರ್ಮ ಸಮ್ಮೇಲನವು (Parliament of Religion) ನೆರೆದದ್ದು ಇಡೀ ಭರತಖಂಡದವರಿಗೆ ಗೊತ್ತಿದ್ದ ಸಂಗತಿಯೇ ಸರಿ. ಮತ್ತು ಆಗ ಭರತಖಂಡದಿಂದ ಹಿಂದೂ ಜನರ ಪ್ರತಿನಿಧಿಯಾಗಿ ಹೋಗಿ ಹಿಂದೂ ಧರ್ಮದ ಘನತೆಯನ್ನೂ ಮತ್ತು ಅದರ ಅವಶ್ಯಕತೆಯನ್ನೂ ಸ್ವಾಮಿ ವಿವೇಕಾನಂದರವರು ತಮ್ಮ ಅಲೌಕಿಕ ವಾಣಿಯಿಂದ ತೋರಿಸಿಕೊಟ್ಟದ್ದನ್ನು ಸಹ ಯಾರೂ ಮರೆತಿರಲಿಕ್ಕಿಲ್ಲ. ವಿವೇಕಾನಂದರವರು ಅದ್ಭುತ ಪ್ರತಿಭಾಸಂಪನ್ನರಿದ್ದು ಹಿಂದೂ ಧರ್ಮದ ಶ್ರೇಷ್ಠತ್ವವನ್ನು ನಾನಾ ದೇಶಗಳ ನಾನಾ ಜನಾಂಗಗಳ ಧರ್ಮವನ್ನು ಅಭ್ಯಾಸಮಾಡಿದ ಸುಪ್ರಸಿದ್ಧ ಪಂಡಿತ ಜನರ ನಡುವೆ ನಿಂತು ಮಾತಾಡಿ ತೋರಿಸಿಕೊಟ್ಟದ್ದು ನಮ್ಮ ಹಿಂದುಸ್ಥಾನಕ್ಕೆ ಒಂದು ದೊಡ್ಡ ಗೌರವವೇ ಸರಿ.

ಆದರೆ ಇತ್ತಿತ್ತಲಾಗಿ ಭರತಖಂಡದಲ್ಲಿ ಮತ್ತೊಂದು ಮತದ ಗ್ರಂಥಗಳ ಶೋಧವಾಗಿ ಅದರ ಅಭ್ಯಾಸವನ್ನು ಆಳವಾಗಿ ಮತ್ತು ವಿಮರ್ಶಕ ಬುದ್ಧಿಯಿಂದ ಮಾಡಿ ಜಗತ್ತಿನ ಎಲ್ಲ ಮತಗಳಲ್ಲಿ ಅದಕ್ಕೂ ಒಂದು ಸ್ಥಾನವಿದೆ ಇಷ್ಟೇ ಅಲ್ಲ; ಎಲ್ಲ ಮತಗಳಿಗಿಂತಲೂ ಒಂದು ತೂಕ ಈ ಮತದಲ್ಲಿ ಹೆಚ್ಚಿನ ಮಹತ್ವವಿದೆ ಎಂಬುದನ್ನು ಅನೇಕರು ಒಪ್ಪಿಕೊಂಡಿದ್ದಾರೆ. ಆ ಮತವೆಂದರೆ ವೀರಶೈವ ಮತ ಎಂದು ಬೇರೆ ಹೇಳುವ ಅವಶ್ಯವಿಲ್ಲ. ಈಗ ೪೦ ವರ್ಷಗಳ ಪೂರ್ವದಲ್ಲಿ ಇದರ ಬಗ್ಗೆ ಸ್ವಲ್ಪಾದರೂ ಗೊತ್ತಿದ್ದರೆ ಸಾಕಾಗಿತ್ತು. ವಿವೇಕಾನಂದರವರ ವಾಣಿಯಿಂದ ಅದರ ಮಹತ್ವವು ಎಲ್ಲರಿಗೂ ತಿಳಿಯುತ್ತಿತ್ತು. ಆದರೆ ದಕ್ಷಿಣ ಹಿಂದುಸ್ಥಾನದಲ್ಲಿ ಕೆಳದಿ ಮೊದಲಾದ ವೀರಶೈವ ರಾಜ್ಯಗಳು ಹಾಳಾದಂದಿನಿಂದ ವೀರಶೈವರ ಇತಿಹಾಸವೇ ಮುಗಿದಂತಾಯಿತು. ಹೀಗಾಗಿ ಅದರ ಇತಿಹಾಸ ಮಹತ್ವವು ಯಾರಿಗೂ ತಿಳಿಯದಹಾಗಾಯಿತು. ಇದೇ ಕಾರಣದಿಂದ ಭರತಖಂಡದವರೇ ಆದ ವಿವೇಕಾನಂದರವರಿಗೂ ಸಹ ಇದರ ಹೆಸರು ಗೊತ್ತಾಗಿರಲಿಲ್ಲ.

ಮುಂದೆ ವೀರಶೈವರಲ್ಲಿ ವಿದ್ಯಾ ಪುನರುಜ್ಜೀವನವಾಗಿ ಅನೇಕ ವಿದ್ಯಾವಂತರ ಐತಿಹಾಸಿಕ ಸಂಶೋಧನ ಕಾರ್ಯವು ಒಳ್ಳೇ ಭರದಿಂದ ನಡೆದದ್ದರಿಂದ ವೀರಶೈವ ಮತದ ಬಗ್ಗೆ ವಚನಗಳು, ಪುರಾಣಗಳು, ಚರಿತ್ರೆಗಳು, ಶಿಲಾಶಾಸನಗಳು, ತಾಡವಾಲೆಯ ಪತ್ರಗಳು, ಕೈ ಬರಹದ ಪತ್ರಿಕೆಗಳು ದೊರೆತು ವೀರಶೈವ ಮತದ ತತ್ವಗಳನ್ನು ತಿಳಕೊಳ್ಳಲಿಕ್ಕೆ ಬಹಳ ಉತ್ತೇಜನವು ದೊರೆತಿದೆ. ರಾವಸಾಹೇಬ ಪಿ. ಜಿ. ಹಳಕಟ್ಟಿಯವರ ವಿದ್ವತ್ಪರಿಶ್ರಮದಿಂದ ಬಸವೇಶ್ವರ, ಮಹಾದೇವಿಯಕ್ಕ, ಅಲ್ಲಮಪ್ರಭು, ಸಿದ್ಧರಾಮೇಶ್ವರ ಚನ್ನಬಸವೇಶ್ವರ ಮೊದಲಾದವರ ವಚನಗಳೂ ಮತ್ತು ಇತರ ವೀರಶೈವರ ಗ್ರಂಥಗಳೂ ಬೆಳಕಿಗೆ ಬಂದವು. ಧಾರವಾಡ ಲಿಂಗಾಯತ ಎಜ್ಯುಕೇಶನ್ ಅಸೋಸಿಯೇಶನ್ನದವರು ಮೂರು ವರ್ಷ ಅವಿಶ್ರಾಂತ ಶ್ರಮಪಟ್ಟು "ಚೆನ್ನಬಸವ ಪುರಾಣ" ಎಂಬ ಪ್ರಸಿದ್ಧ ಗ್ರಂಥವನ್ನು ಪ್ರಕಟಿಸಿದರು. ಪ್ರಭುಲಿಂಗ ಲೀಲೆಯಾದರೂ ಅವರಿಂದ ಈಗ ಪ್ರಕಟವಾಗಿದೆ. ರಾವಸಾಹೇಬ ಹಳಕಟ್ಟಿಯವರ ಗ್ರಂಥಗಳಿಂದ ಪ್ರೇರಿತರಾಗಿ ಶ್ರೀಯುತ ಶ್ರೀನಿವಾಸಮೂರ್ತಿಯವರು "ಭಕ್ತಿ ಭಾಂಡಾರಿ ಬಸವಣ್ಣನವರು" ಎಂಬ ಉತ್ತಮ ವಿಮರ್ಶಕ ಗ್ರಂಥವನ್ನು ಬರೆದರು. ದೇಶಭಕ್ತ ದಿವಾಕರರು ವೀರಶೈವ ತತ್ವಗಳನ್ನೂ ವಚನಗಳನ್ನೂ ಆಳವಾಗಿ ಅಭ್ಯಾಸಮಾಡಿ "ವಚನ ಶಾಸ್ತ್ರ ಸಾರ" ಎಂಬ ಅತ್ಯುತ್ತಮ ಗ್ರಂಥವನ್ನು ಬರೆದದ್ದು ಎಲ್ಲರಿಗೂ ಗೊತ್ತಿದ್ದ ಸಂಗತಿಯೇ ಸರಿ. ಸದ್ಯಕ್ಕೆ ಮುಂಬಯಿ ವಿಶ್ವ ವಿದ್ಯಾಲಯದವರು ಕನ್ನಡದ ಉಚ್ಚತರದ ಅಭ್ಯಾಸಕ್ಕೆ ವೀರಶೈವ ತತ್ವಜ್ಞಾನ (Virashaiva Philosophy) ವನ್ನು ನೇಮಿಸಿದ್ದಾರೆ. ಹೀಗೆ ಅನೇಕ ಜನರ ಮನಸ್ಸು ವೀರಶೈವ ಮತದ ತತ್ವಗಳ ಕಡೆಗೆ ಒಲಿದಿದೆ.

ಹೀಗೆ ವಿವಿಧ ರೀತಿಯಿಂದ ಇದರ ಅಭ್ಯಾಸವು ನಡೆದಿರುವಾಗ ಮತ್ತೊಬ್ಬರೂ ಇದನ್ನು ಅಭ್ಯಾಸ ಮಾಡಿದ್ದರು. ಇವರು ಈಗ ಹತ್ತು ವರ್ಷಗಳ ಪೂರ್ವದಲ್ಲಿಯೇ ಇದನ್ನು ಚೆನ್ನಾಗಿ ಅಭ್ಯಾಸಮಾಡಿ ಪುಸ್ತಕಗಳನ್ನು ಪ್ರಕಟಿಸಿ ನಮ್ಮ ಸಮಾಜದಲ್ಲಿ ಅಷ್ಟೇ ಅಲ್ಲದೆ ಪರಪ್ರಾಂತಗಳಲ್ಲಿ ಸಮುದ್ರದಾಚೆಗಿರುವ ಪರದೇಶಗಳಲ್ಲಿಯೂ ಪ್ರಚಾರ ಮಾಡಿದರು. ಹೀಗೆ ಪ್ರಚಾರ ಮಾಡುವಾಗ ಒಂದು ವಿಚಿತ್ರ ಸಂಗತಿಯು ಒದಗಿತು. ಅದು ಏನೆಂದರೆ ೧೯೩೬ ರಲ್ಲಿ ಲಂಡನ್ ನಗರದಲ್ಲಿ ಒಂದು ಸರ್ವ ಧರ್ಮ ಪರಿಷತ್ತು (World Congress of Faith) ಕೂಡಿತು. ಆಗ ಇವರು ವೀರಶೈವ ಮತದ ಬಗೆ ಒಳ್ಳೇ ಪರಿಣಾಮಕಾರಕವಾದ ಒಂದು ಲೇಖವನ್ನು ಕಳಿಸಿಕೊಟ್ಟರು. ೧೯೩೬ ನೆಯ ಸಭೆಯಲ್ಲಿ ಧರ್ಮದ್ವಾರಾ ವಿಶ್ವಬಂಧುತ್ವ (World Fellowship through Religion) ಎಂಬ ವಿಷಯವಾಗಿ ಚರ್ಚೆ ನಡೆಯಿತು. ಮುಂದಿನ ಸಭೆಯಲ್ಲಿ ಜಗತ್ತಿಗೆ ಧರ್ಮದ ಅವಶ್ಯಕತೆ (World's need of Religion) ಎಂಬ ವಿಷಯವಾಗಿ ಚರ್ಚೆ ನಡೆಯುವುದು. ಈ ವರ್ಷದ ಸಭೆಯು ಬರುವ ಜೂನ ತಿಂಗಳಲ್ಲಿ ಕೂಡುವುದು. ಮತ್ತು ಧರ್ಮದ ಪುನರುಜ್ಜೀವನ (Renaissnce of Religion) ಎಂಬ ವಿಷಯವಾಗಿ ಚರ್ಚೆ ನಡೆಯುವದು. ಹಿಂದೆ ಕಳಿಸಿದ ಲೇಖದ ಪರಿಣಾಮದಿಂದ ಇವರಿಗೆ ಈ ವರ್ಷದ ಸಭೆಗೆ ಬರಬೇಕೆಂದು ಆಮಂತ್ರಣ ಪತ್ರಿಕೆಯು ಲಂಡನ್ (London) ನಗರದಿಂದ ಬಂದಿರುತ್ತದೆ. ಇದೇ ಆನಂದದ ಸಂಗತಿಯು. ಇದನ್ನು ನೋಡಿದರೆ ವೀರಶೈವರಿಗೆ ಇದು ಒಂದು ಸುವರ್ಣ ಸಂಧಿಯೆಂದೇ ಹೇಳಬಹುದು. ಯಾಕಂದರೆ ಇವರು ವೀರಶೈವ ಸಮಾಜದ ವತಿಯಿಂದ ಹೋಗಿ ವೀರಶೈವ ಮತದ ಘನತೆಯನ್ನೂ ವಿಶಾಲತೆಯನ್ನೂ ಇಡೀ ಮಾನವ ಕುಟುಂಬಕ್ಕೆ ಬೇಕಾದ ಧರ್ಮದ ತತ್ವಗಳು ಇದರಲ್ಲಿಯೇ ಅವೆಯೆಂದು ಇಡೀ ಪೃಥ್ವಿಗೆ ತೋರಿಸಿಕೊಡಲಿಕ್ಕೆ ಸಮಯ ದೊರೆಯುವದು.

ಲಂಡನ್‌ದಿಂದ ಈ ಆಮಂತ್ರಣವು ಯಾರಿಗೆ ಬಂದಿರುವದು ಎಂಬುದನ್ನು ತಿಳಕೊಳ್ಳಲಿಕ್ಕೆ ತಾವು ಆತುರರಾಗಿರಬಹುದು. ಅವರು

ನಿಮ್ಮ ಪರಿಚಯದವರೇ ಇದ್ದಾರೆ. ಇವರ ಹೆಸರು ಎಚ್. ಬಿ. ಕಲಬುರ್ಗಿ ಬಿ. ಎ. ಸದ್ಯಕ್ಕೆ ಇವರು ಬೆಳಗಾವಿಯ ಗಿಲಗಂಚಿ ಅರ್ಟಾಳ ಹಾಯಸ್ಕೂಲಿನಲ್ಲಿ ಶಿಕ್ಷಕರಿರುವರು. ಇವರು ಇಂಗ್ಲಿಷ್, ಸಂಸ್ಕೃತ, ಕನ್ನಡ ಭಾಷೆಗಳಲ್ಲಿ ಒಳ್ಳೇ ಪ್ರಾವಿಣ್ಯತೆಯನ್ನು ಪಡೆದಿರುವರು. ಇದಲ್ಲದೆ ಇವರು ಧರ್ಮ ತತ್ವಜ್ಞಾನ ಇವುಗಳ ಬಗ್ಗೆ ಅನೇಕ ಗ್ರಂಥಗಳನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದಾರೆ. ಅದರಲ್ಲಿಯೂ ವೀರಶೈವ ಮತದ ತತ್ವಗಳನ್ನು ಬಹು ಸೂಕ್ಷ್ಮ ರೀತಿಯಿಂದ ಅಭ್ಯಾಸಮಾಡಿ "ಪುಷ್ಪಗಳು" 'ಸಮಾಜ ಸುಧಾರಣೆ' ಎಂಬ ಗ್ರಂಥಗಳನ್ನು ಕನ್ನಡದಲ್ಲಿ ಬರೆದಿದ್ದಾರೆ. The servant of truth ಎಂಬ ಇಂಗ್ಲಿಷ ಪತ್ರಿಕೆಯನ್ನು ಹೊರಡಿಸಿ ದೇಶ ವಿದೇಶಗಳಲ್ಲಿ ಪ್ರಚಾರ ಮಾಡಿದ್ದಾರೆ. ಹೀಗೆ ಇವರ ಹೆಸರು ಪರದೇಶಗಳಲ್ಲಿಯೂ ಸಹ ಗೊತ್ತಾಗಿದೆ. ಹಿಂದೆ ೧೯೩೨ ರಲ್ಲಿ ಪರದೇಶಗಳಿಗೆ ಹೋಗಲಿಕ್ಕೆ ಪರವಾನಿಗೆ ಪತ್ರವನ್ನು (Passport) ಸಹ ತರಿಸಿದ್ದರು. ಆದರೆ ಕೆಲವು ಅನಾನುಕೂಲತೆಗಳಿಗಾಗಿ ಹೋಗುವದಾಗಲಿಲ್ಲ. ಇವರು ತಾವು ಗಳಿಸಿದ ಹಣವನ್ನೆಲ್ಲ ವೀರಶೈವ ಮತದ ಸಲುವಾಗಿ ಮೇಲೆ ಹೇಳಿದ ಗ್ರಂಥಗಳನ್ನು ಪ್ರಕಟಿಸಿ ಉಚಿತವಾಗಿ ಪ್ರಚಾರ ಮಾಡುವುದರಲ್ಲಿಯೇ ವೆಚ್ಚಮಾಡಿರುವರು. ಸದ್ಯಕ್ಕೆ ಇವರಿಗೆ ಸ್ವಂತ ಖರ್ಚಿನಿಂದ ಹೋಗುವದು ಸಾಧ್ಯವಿಲ್ಲ. ಇವರು ಇಂಗ್ಲಿಷ ಭಾಷೆಯಲ್ಲಿ ಒಳ್ಳೇ ಭಾಷಣಕಾರರೂ ವಾಗ್ವಾದ ಮಾಡುವದರಲ್ಲಿ ಬಹಳ ಚತುರರೂ ಇರುವರು. ಆದುದರಿಂದ ಇವರನ್ನೇ ವೀರಶೈವ ಸಮಾಜದವರು ಧನಸಹಾಯಮಾಡಿ ಲಂಡನ್ನಕ್ಕೆ ಕಳಿಸುವದು ಉಚಿತವೆಂದು ತೋರುತ್ತದೆ. ಇವರು ಶಿವಛತ್ರಪತಿಯೆಂಬ ಬೇರೆ ಹೆಸರನ್ನಿಟ್ಟುಕೊಂಡಿದ್ದಾರೆ. ವಾಡಿಕೆಯಾಗಿ ಜನರು ತಿಳಕೊಳ್ಳುವಂತೆ ಅದರ ಅರ್ಥವು ಇರುವದಿಲ್ಲ. ಅದರ ನಿಜವಾದ ಅರ್ಥವು ಸರ್ವಸಾಮ್ರಾಟನಾದ (ಸರ್ವೇಶ್ವರ) ಶಿವನಿಗೆ ಛತ್ರಿಗೆಯನ್ನು ಹಿಡಿಯುವವನು ಅಂದರೆ ನಂದೀಶ್ವರನು ಎಂದು ಆಗುವದು. ನಂದೀಶ್ವರನೇ ಕಾಲಕಾಲಕ್ಕೆ ಭೂಲೋಕದಲ್ಲಿ ಅವತರಿಸಿ ಧರ್ಮರಕ್ಷಣೆಮಾಡಿ ಶಿವನ ಮಹಿಮೆಯನ್ನು ಹರಡಿರುವನು. ಅಂಥ ನಂದೀಶ್ವರನೇ ಶಿವಧರ್ಮ ಪ್ರಸಾರ ಕಾರ್ಯದಲ್ಲಿ ನೆರವಾಗಿ ಸ್ಫೂರ್ತಿಕೊಡಲೆಂಬ ಉದ್ದೇಶದಿಂದ ಇವರು ತಮ್ಮ ಸರ್ವಸ್ವವನ್ನು ಅವನ ಹೆಸರಿನಿಂದ ಸೂರೆಮಾಡಿ ಹೋರಾಡುತ್ತಿರುವರು. ಒಂದು ವೇಳೆ ಇವರಿಗಿಂತಲೂ ಸಮರ್ಥವಿದ್ದವರು ಯಾರಾದರೂ ಹೋಗಲಿಚ್ಛಿಸಿದರೆ ಅದಕ್ಕೂ ಅವರ ಸಂತೋಷವೇ ಇರುವದು.

ಆದುದರಿಂದ ಇಡೀ ವೀರಶೈವ ಸಮಾಜಕ್ಕೆ ಈ ಸವಿಸ್ತಾರವಾದ ಲೇಖದಿಂದ ಸವಿನಯ ಪೂರ್ವಕವಾಗಿ ಬೇಡಿಕೊಳ್ಳುವದೇನೆಂದರೆ— ಈ ಅಪೂರ್ವವಾದ ಸುಸಂಧಿಯನ್ನು ಲಂಡನ್ ನಗರದಿಂದ ವೀರಶೈವನಿಗೆ ಬಂದ ಆಮಂತ್ರಣವನ್ನು ವ್ಯರ್ಥ ಹೋಗಗೊಡಬಾರದು. ನಮ್ಮ ಸಮಾಜದಲ್ಲಿ ಎಷ್ಟೋ ವಿದ್ಯಾವಂತರಿದ್ದಾರೆ. ಉದಾರ ದಾನಶೂರ ಶ್ರೀಮಂತ ಸಗ್ರಹಸ್ಥರಿದ್ದಾರೆ. ಧರ್ಮಾಭಿಮಾನಿಗಳಾದ ಮಹಾ ಸ್ವಾಮಿಗಳಿದ್ದಾರೆ. ಎಲ್ಲರೂ ತಮಗೆ ಕೈಲಾದಷ್ಟು ಹಣದ ರೂಪದಿಂದ ಸಹಾಯ ಮಾಡಬೇಕು. ಸದ್ಯಕ್ಕೆ ಬೆಳಗಾವಿಯಲ್ಲಿಯ ಡಿ. ಕೋಆಪರೇಟಿವ್ಹ ಬ್ಯಾಂಕಿನಲ್ಲಿ ಶ್ರೀಯುತ ಕಲಬುರ್ಗಿಯವರ ಹೆಸರಿನಿಂದ ಖಾತೆಯು ತೆರೆದಿದೆ. ಹಣವನ್ನು ಕಳಿಸುವವರು ಅದಷ್ಟು ಬೇಗನೆ ಕಳಿಸಬೇಕು. ಒಂದೊಂದು ಊರಿನವರು ಒಟ್ಟುಗೂಡಿಸಿ ಒಂದೇ ಮನಿಯಾರ್ಡರ ಮಾಡಿಕಳಿಸಬಹುದು. ಸದ್ಯಕ್ಕೆ ಕೆಲವು ಹಣವನ್ನು ಮುಂಗಡ ಕಳಿಸಿ ಲಂಡನ್‌ದಲ್ಲಿ ಹೆಸರನ್ನು ರಜಿಸ್ಟರ್ ಮಾಡಬೇಕಾಗಿರುವದು. ಆದುದರಿಂದ ಉದಾರ ದಾನಶೂರ ವೀರಶೈವ ಮಹನೀಯರು ಈ ವರೆಗೆ ಧನಸಹಾಯ ಮಾಡುತ್ತ ಬಂದಂತೆ ಈಗಲಾದರೂ ಸಹ ತಮಗೆ ಶಕ್ಯವಿದ್ದಷ್ಟು ಮಟ್ಟಿಗೆ ಸಹಾಯಮಾಡಿ ಶ್ರೀಯುತ ಕಲಬುರ್ಗಿಯವರನ್ನು ಸಭೆಗೆ ಕಳುಹಿಸಿಕೊಡಬೇಕೆಂದು ಸವಿನಯ ವಿಜ್ಞಾಪನೆ.

ಎಸ್. ವ್ಹಿ. ಹಂಜಿ ಬಿ. ಎ.

# ಉದಾರಿಗಳಲ್ಲಿ ವಿಜ್ಞಾಪನೆ.

ಶ್ರೀಮಾನ್ ಎಚ್. ಬಿ. ಕಲಬುರ್ಗಿ ಇವರು ಉದಾರಿ ಮಹಾಶಯರಲ್ಲಿ ಒಂದು ವಿಜ್ಞಾಪನೆ ಮಾಡಿಕೊಂಡಿರುವರು.—

ಮಹಾಶಯರೆ,

ಜಗತ್ತಿನ ಧಾರ್ಮಿಕ ಮಹಾಸಭೆಗೆ ೧೯೩೬ ರಲ್ಲಿ ನಾನು ವೀರಶೈವ ಧರ್ಮದ ಸಂಬಂಧವಾಗಿ ಒಂದು ಚಿಕ್ಕ ಮತ್ತು ಚೊಕ್ಕ ಹೇಳಿಕೆಯನ್ನು ಕಳಿಸಿದ್ದೆನು. ಲಂಡನದಲ್ಲಿ ಕೂಡಲಿರುವ ಆ ಮಹಾ ಸಭೆಗೆ ನನಗೆ ಕರೆಬಂದಿದೆ. ಹೋದ ಸಾರೆ ಧರ್ಮದ ಮುಖಾಂತರ ಜಗತ್ತಿನ ಸಹಕಾರ ಎಂಬ ವಿಷಯವು ಚರ್ಚಿಸಲ್ಪಟ್ಟಿತು. ಎರಡನೆ ಸಭೆಯು ಜಗತ್ತಿಗೆ ಧರ್ಮದ ಅವಶ್ಯಕತೆ ಎಂಬ ವಿಷಯವನ್ನು ಚರ್ಚಿಸಿತು. ಈ ಸಾರೆ ಧಾರ್ಮಿಕ ಪ್ರಗತಿ ಎಂಬುದಾಗಿ ಚರ್ಚೆಯು ನಡೆಯುವದು. ಇಂಥ ಕಾಲದಲ್ಲಿ ಪ್ರತಿಯೊಬ್ಬ ವೀರಶೈವನು ತನ್ನ ಧರ್ಮವನ್ನು ಪ್ರಚುರಗೊಳಿಸುವದು ಅತ್ಯಂತ ಆಗತ್ಯವಿದೆ. ನಾನು ಇಲ್ಲಿಯ ವರೆಗೆ ನನ್ನ ದೆಂಬುದನ್ನೆಲ್ಲ ರಾಷ್ಟ್ರದಲ್ಲಿ ಮತ್ತು ಹೊರ ದೇಶದಲ್ಲಿ ಇದರ ಪ್ರಚಾರಾರ್ಥವಾಗಿಯೇ ವಿನಿಯೋಗಿಸಿದ್ದೇನೆ. ಆದ್ದರಿಂದ ದಯವುಳ್ಳವರು ಮತ್ತು ಧನಿಕರು ನನಗೆ ಅಲ್ಲಿಗೆ ಹೋಗಲು ಯೋಗ್ಯವಾದ ರೀತಿಯಲ್ಲಿ ಧನಸಹಾಯ ಮಾಡುವರೆಂದು ನಂಬಿರುವೆ. ಧಾರ್ಮಿಕ ಕ್ಷೇತ್ರದಲ್ಲಿ ನಾನು ಇಲ್ಲಿಯ ವರೆಗೆ ಸೇವೆಯನ್ನು ಮಾಡುತ್ತ ಬಂದಂತೆ ನನಗೆ ಶಕ್ಯವಿದ್ದಷ್ಟೂ ಸೇವೆ ಮಾಡುವೆನೆಂದು ಈಗಾದರೂ ಆಶ್ವಾಸನ ಕೊಡುವೆ.

ಜನಜಾಗೃತಿ ಸಂಘದ

# ಕಾರ್ಯದರ್ಶಿಗಳ ಗಡಿಪಾರು.

ಬೆಂಗಳೂರು ಜನಜಾಗೃತಿ ಸಂಘದ ಕಾರ್ಯದರ್ಶಿಗಳಾದ ಶ್ರೀ. ಮೊನ್ನಯ್ಯ ಇವರು ಸಂಸ್ಥಾನದಲ್ಲಿ ನೆಮ್ಮದಿ ಭಂಗ ಮತ್ತು ಅಸಂತೋಷವನ್ನು ಹಬ್ಬಿಸುತ್ತಿರುವರೆಂದು ಆರೋಪಿಸಿ, ಅವರು ಕೂಡಲೇ ಮೈಸೂರ ಸಂಸ್ಥಾನದ ಗಡಿಯನ್ನು ಬಿಟ್ಟು ಹೋಗಬೇಕೆಂದು ಸರಕಾರದವರು ಹುಕುಮು ಮಾಡಿರುವರು.

ಮಿ. ಮೊನ್ನಯ್ಯ ಇವರು ಕೊಡಗಿನವರು. ಇವರು ಬೆಂಗಳೂರನ್ನು ಬಿಟ್ಟು ಹೋದರು.

ಗಾಂಧೀಜಿಯವರ

# ಗಡಿನಾಡಿನ ಪ್ರವಾಸ.

ಜಿನ್ನಾರ ಭೆಟ್ಟಿಗೆ ಮುಂಬೈಗೆ ಬರುವ ಗಾಂಧೀಜಿಯವರು ತಾ. ೨೯ ಕ್ಕೆ ಮುಂಬಯಿಂದ ನೆರವಾಗಿ ಗಡಿನಾಡ ಪ್ರಾಂತದ ಪ್ರವಾಸವನ್ನು ಕೈಕೊಂಡು ಆ ಪ್ರಾಂತದಲ್ಲಿ ೯ ದಿನಗಳ ಕಾರ್ಯಕ್ರಮಗಳನ್ನು ನಡೆಸುವರೆಂದು ಪೇಶಾವರದಿಂದ ಬಂದ ಸುದ್ದಿಯಿಂದ ಗೊತ್ತಾಗಿದೆ.

# ಕರ್ನಾಟಕ ಏಕೀಕರಣದ ಠರಾವು ಪಾಸಾಯಿತು.

## ಆದರೆ ಕನ್ನಡಿಗರ ಮುಂದಿನ ಕರ್ತವ್ಯವೇನು ?

ಕನ್ನಡಿಗರ ಕರುಳನ್ನು ಕೊರೆಯುತ್ತಿದ್ದ ಕರ್ನಾಟಕ ಏಕೀಕರಣದ ಠರಾವು ತಾ. ೫-೪-೪೭ ನೇ ದಿವಸ ಮುಂಬೈ ಅಸೆಂಬ್ಲಿಯಲ್ಲಿ ಮತಗಣನೆ ಇಲ್ಲದೆ ಪಾಸಾದ್ದಕ್ಕಾಗಿ ಸದರಿ ಠರಾವನ್ನು ಮಂಡಿಸಿದ ಶ್ರೀ. ಜೋಗರಿಗೂ ಅದಕ್ಕೆ ಬೆಂಬಲ ಕೊಟ್ಟ ಮುಂಬೈ ಕಾಂಗ್ರೆಸ್ ಮಂತ್ರಿಮಂಡಲಕ್ಕೂ ಸರ್. ಸಿದ್ಧಪ್ಪನವರೇ ಮೊದಲಾದ ಅಸೆಂಬ್ಲಿ ಮೆಂಬರರಿಗೂ ಕನ್ನಡಿಗರು ತಮ್ಮ ಕೃತಜ್ಞತೆಯನ್ನು ಸೂಚಿಸುವುದು ಯುಕ್ತವಾಗಿದೆ.

ಸರ್. ಸಿದ್ಧಪ್ಪನವರು ಕರ್ನಾಟಕವು ಸ್ವತಂತ್ರ ಪ್ರಾಂತವಾದರೆ ಹಿಂದುಸ್ಥಾನದ ಆದರ್ಶ ಪ್ರಾಂತವಾಗುವದೆಂದೂ ಈ ಹೊಸ ಪ್ರಾಂತದ ವಿಸ್ತೀರ್ಣ ೬೫೦೦೦ ಚೌರಸ ಮೈಲು ಇರುವುದಲ್ಲದೇ ೬೮ ಲಕ್ಷ ಜನಸಂಖ್ಯೆಯುಳ್ಳ ಹಾಗೂ ೨॥ ಕೋಟಿ ಉತ್ಪನ್ನದ ಪ್ರಾಂತವಾಗುವದೆಂದೂ ಅಂಕಿ ಅಂಶಗಳಿಂದ ಸ್ಪಷ್ಟ ಮಾಡಿರುವದು ಮುಂಬೈ ಆರ್ಥಿಕ ಮಂತ್ರಿಗಳಾದ ಶ್ರೀ. ಲಠ್ಠೆಯವರ ಆರ್ಥಿಕ ಅಭಾವದ ಪ್ರಶ್ನೆಗೆ ಯೋಗ್ಯ ಉತ್ತರವಾಗಿದೆ. ಅಲ್ಲದೆ ನಿವೃತ್ತ ಮುಂಬೈ ಮಂತ್ರಿಗಳಾದ ಸರ್. ಕಂಬಳಿಯವರ ಈ ವಿಚಾರಪರಿಪ್ಲುತವಾದ ಅಭಿಪ್ರಾಯಕ್ಕೆ ಯಾರೂ ಸಂಶಯಪಡಲು ಕಾರಣವಿಲ್ಲ.

ಈ ಮೇಲ್ಕಂಡ ಅಂಕಿ ಅಂಶಗಳಲ್ಲಿ ನಿಜಾಂ ಪ್ರಾಂತದ ಕೊಪ್ಪಳ, ರಾಯಚೂರು, ಗುಲಬರ್ಗಾ, ಬೀದರ್ ಜಿಲ್ಲೆಗಳು ಸೇರಿವೆಯೋ ಇಲ್ಲವೋ ಎಂಬುದೇ ತಿಳಿದುಕೊಳ್ಳಬೇಕಾದ ವಿಚಾರ.

ಕರ್ನಾಟಕ ಏಕೀಕರಣ ಪ್ರಶ್ನೆಯು ಅಸೆಂಬ್ಲಿಯಲ್ಲಿ ಇನ್ನೊಂದು ಸ್ವಾರಸ್ಯವಾದ ವಿಚಾರವೇನೆಂದರೆ- ಸರ್. ಸಿದ್ಧಪ್ಪನವರು ಏಕೀಕರಣದ ವಿಚಾರವು ತೀವ್ರ ಇತ್ಯರ್ಥವಾಗದಿದ್ದರೆ ಅಹಿಂಸೆಯಿಂದೊಡಗೂಡಿದ ಅಸಹಕಾರವನ್ನು ಮಾಡುವುದಾಗಿ ಹೇಳಿರುವದು ಸರ್ ಕಂಬಳಿಯವರ ಕನ್ನಡತನದ ಕೆಚ್ಚನ್ನು ವ್ಯಕ್ತಗೊಳಿಸತಕ್ಕದ್ದಾಗಿದೆ. ಅದಕ್ಕೆ ಮುಖ್ಯಮಂತ್ರಿಗಳಾದ ಬಿ. ಜಿ. ಖೇರರವರು, ಸರ್. ಸಿದ್ಧಪ್ಪನವರು ಮಹಾತ್ಮಾ ಗಾಂಧಿಯವರ ಹೊಸ ಶಿಷ್ಯರಾದರು ಎಂದು ಹೇಳಿದ್ದು ಬಹು ಮನೋಹರವಾದ ಉತ್ತರವೆಂದು ಹೇಳಬಹುದಾಗಿದೆ.

ಕರ್ನಾಟಕ ಏಕೀಕರಣಕ್ಕೆ ಮುಂಬೈ ಅಸೆಂಬ್ಲಿಯು ತನ್ನ ಒಪ್ಪಿಗೆಯನ್ನು ಕೊಟ್ಟಿತು. ಠರಾವು ಪಾಸಾಯಿತು. ಇದರಿಂದ ಕನ್ನಡಿಗರು ಸ್ವಲ್ಪ ಮಟ್ಟಿಗೆ ಸಮಾಧಾನವುಳ್ಳವರಾಗಿರುತ್ತಾರೆಂದು ತಿಳಿದು ಮುಂದಿನ ಚಟುವಟಿಕೆಗಳನ್ನು ಅದಷ್ಟು ಜೋರಿನಿಂದ, ಶಿಸ್ತಿನಿಂದ, ಸಂಘಟನೆಯಿಂದ ನಡೆಸುವುದನ್ನು ಮರೆಯಬಾರದು. ಅಂದರೆ ಕನ್ನಡಿಗರು ಆರಂಭಶೂರರೆಂದೂ ಅಲ್ಪ ತುಷ್ಟಿಗರೆಂದೂ ಪರಿಹಾಸಕ್ಕೆ ಕಾರಣವಾಗಬೇಕಾಗುತ್ತದೆ. ಆದ್ದರಿಂದ ಸದರಿ ಠರಾವನ್ನು ಗವ್ಹರ್ನರ್ ಜನರಲ್ಲರ ಕಡೆಗೂ ಭಾರತ ಮಂತ್ರಿಗಳ ಕಡೆಗೂ ಕೂಡಲೇ ಕಳುಹಿಸಿ ಅವರ ಒಪ್ಪಿಗೆಯನ್ನು ಪಡೆಯುವಂತೆ ತಕ್ಕ ಕಾರ್ಯವನ್ನು ಕೈಕೊಳ್ಳಲು ಮಂತ್ರಿಮಂಡಲಕ್ಕೆ ಒತ್ತಾಯಗಳನ್ನು ಮಾಡಬೇಕು.

ಗವ್ಹರ್ನರ ಜನರಲ್ಲರಾಗಲಿ ಭಾರತ ಮಂತ್ರಿಗಳಾಗಲಿ ಈ ಕಾರ್ಯಕ್ಕೆ ತಮ್ಮ ಒಪ್ಪಿಗೆಯನ್ನು ಅಷ್ಟು ಸುಲಭವಾಗಿ ಕೊಡಲಾರರು. ಯಾಕಂದರೆ ಡಾ. ಆಂಬೇಡಕರರ ಪಕ್ಷದವರಾದ ಶ್ರೀ. ವರಾಳೆಯವರು ಹೇಳುವಂತೆ ಕರ್ನಾಟಕದ ಏಕೀಕರಣವಾದರೆ ಕರ್ನಾಟಕವು ಬ್ರಾಹ್ಮಣ ಮತ್ತು ವೀರಶೈವರ ರಾಜ್ಯವಾಗುವುದೆಂದೂ ಅಲ್ಪಸಂಖ್ಯಾಕರಾದ ಆದಿ ಕರ್ನಾಟಕ ಮುಂತಾದವರಿಗೆ ಅನ್ಯಾಯವಾಗಬಹುದಾದ್ದರಿಂದ ಅಲ್ಪ ಸಂಖ್ಯಾಕರ ಹಿತದೃಷ್ಟಿಯಿಂದ ಕರ್ನಾಟಕ ಏಕೀಕರಣವನ್ನು ಒಪ್ಪಲಾಗುವದಿಲ್ಲವೆಂಬ (ಹೊಸ ಸುಧಾರಣೆಯ ಅಧಿಕಾರ ಬಲದಿಂದ) ಕುಂಟ ನೆವವನ್ನು ಮುಂದೆ ಮಾಡಿ ಆತಂಕವನ್ನು ತಂದೊಡ್ಡಬಹುದು. ಅದಕ್ಕಾಗಿ ಕರ್ನಾಟಕ ಏಕೀಕರಣದ ಆವಶ್ಯಕತೆಯನ್ನೂ ಅಲ್ಪ ಸಂಖ್ಯಾಕರಾದ ಆದಿಕರ್ನಾಟಕ ಮೊದಲಾದವರೊಡನೆ ಸಹಕರಿಸಿ ನಡೆದುಕೊಳ್ಳುತ್ತೇವೆಂಬ ಬಗ್ಗೆ ಸರಿಯಾದ ತಿಳುವಳಿಕೆಯನ್ನು ಕೊಟ್ಟು ಅಲ್ಪಸಂಖ್ಯಾಕರೆಂಬುವರ ಸಂದೇಹಗಳನ್ನು ಬಿಡಿಸಿ ಅವರ ಮನವನ್ನು ಒಪ್ಪಿಸುವದೂ ಮುಖ್ಯ ಕಾರ್ಯವಾಗಿದೆ (ಇದಕ್ಕಾಗಿ ಕೊಡಗರು ಕರ್ನಾಟಕ ಏಕೀಕರಣವನ್ನು ಒಪ್ಪಲು ಹಿಂಜರಿಯುತ್ತಿದ್ದಾರೆ.) ಇಲ್ಲವಾದರೆ ಜಾತಿಭೇದವನ್ನೇ ಮುಂದೆ ಮಾಡಿ ಭಾರತದ ಜುಟ್ಟನ್ನು ತಮ್ಮ ಕೈಯಲ್ಲಿ ಹಿಡಿದುಕೊಂಡಿರುವ ಬ್ರಿಟಿಷರಿಗೆ ನಮ್ಮ ಬೆರಳನ್ನೇ ನಮ್ಮ ಕಣ್ಣಲ್ಲಿ ಚುಚ್ಚಲಿಕ್ಕೆ ಅವಕಾಶವನ್ನು ಕಲ್ಪಿಸಿ ಕೊಟ್ಟಂತಾಗುತ್ತದೆ.

ಕಾರಣ ಬರುವ ಮೇ ತಿಂಗಳಲ್ಲಿ ಕೂಡುವ ಕರ್ನಾಟಕ ಏಕೀಕರಣ ಪರಿಷತ್ತಿನಲ್ಲಿ ಕರ್ನಾಟಕದ ಏಕೀಕರಣ ಮತ್ತು ಅದರ ಆವಶ್ಯಕತೆಗಳನ್ನು ಕುರಿತು ಪ್ರಚಾರಮಾಡಲು ಒಂದು ಮಂಡಳಿಯನ್ನು ನೇಮಿಸುವುದು. ಅವರು ಕರ್ನಾಟಕದ ಮೂಲೆ ಮೂಲೆಗೂ ಸಂಚರಿಸಿ ಏಕೀಕರಣದ ಆವಶ್ಯಕತೆಯನ್ನು ಜನತೆಗೆ ಮನದಟ್ಟು ಮಾಡಿಕೊಡುತ್ತಾ ಆಯಾ ಪ್ರಾಂತದ ಜನಸಂಖ್ಯೆ, ಭೂಪ್ರದೇಶ, ಅರಣ್ಯ, ನದಿ ಆಯಾ ಪ್ರಾಂತದಫಲಗಳು ಒಟ್ಟು ಹುಟ್ಟುವಳಿ ಹಾಗು ಖರ್ಚು [ಅಂದರೆ ಬಜೆಟ] ವೆಗೈರೆ ಸಂಗತಿಗಳ ಬಗ್ಗೆ ಪೂರ್ಣ ಮಾಹಿತಿಯನ್ನು ಪಡೆದುಕೊಂಡು ಬಂದು ಕರ್ನಾಟಕ ಏಕೀಕರಣ ಪರಿಷತ್ತಿಗೆ ಒಂದು ರಿಪೋರ್ಟನ್ನು ಒಪ್ಪಿಸುವಂತೆ ಮಾಡತಕ್ಕದ್ದು. ಹಾಗೂ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯವರು ಗೊತ್ತುಮಾಡಿದಂತೆ ಯಾವತ್ತೂ ಕರ್ನಾಟಕದ ಸಕಲ ಸಂಪತ್ತನ್ನು ತೋರಿಸುವ ಒಂದು ಉತ್ತಮವಾದ ನಕಾಶವನ್ನು ತಯಾರಿಸುವಂತೆ ಮಾಡಬೇಕು. ಇದಕ್ಕೆಲ್ಲಾ ಮಹಾಜನರ ಸಹಾಯ ಸಹಾನುಭೂತಿಗಳು ಆವಶ್ಯಕ. ಯಾವುದಾದರೊಂದು ಕಾರ್ಯ ಕೈಕೊಳ್ಳಲು ಧನದ ಪ್ರಶ್ನೆಯೇ ಮೊದಲು ಬರತಕ್ಕದ್ದಾಗಿದೆ. ಕರ್ನಾಟಕದಲ್ಲಿ ನೆಲೆಸಿರುವ ಮಠಾಧಿಪತಿಗಳೂ ಶ್ರೀಮಂತರೂ ಕೊಡಗೈ ದೊರೆಗಳೆಂದು ಹೆಸರು ಪಡೆದಿದ್ದಾರೆ. ಅವರೆಲ್ಲರೂ ಈ ಕಾರ್ಯಕ್ಕೆ ಶಕ್ಯವಿರುವ ಎಲ್ಲಾ ಸಹಾಯ ಸಹಾನುಭೂತಿಗಳನ್ನು ತೋರಿಸುವುದು ಕರ್ತವ್ಯವಾಗಿದೆ. ಇದಕ್ಕೆ ಕಾರಣವಾಗಿ ಸಾರ್ವಜನಿಕ ಕೆಲಸ ಮಾಡತಕ್ಕ ಮುಂದಾಳುಗಳಲ್ಲಿ ಕೆಲವು ಲೋಪಗಳಿವೆ. ಉದಾ:— ವಿಜಯನಗರದ ಸಾಮ್ರಾಜ್ಯ ಸ್ಮಾರಕೋತ್ಸವದ ರಿಪೋರ್ಟು ಈ ವರೆಗೆ ಮಹಾಜನರ ಅವಗಾಹನೆಗೆ ಬಂದಿರುವುದಿಲ್ಲ. ಆದುದರಿಂದ ಬಹು ಜನರಿಗೆ ಸಂದೇಹವುಂಟಾಗಿರುತ್ತೆ. ಪ್ರಯುಕ್ತ ಕರ್ನಾಟಕ ಏಕೀಕರಣ ಚಳವಳಿ ವಿಚಾರದಲ್ಲಿ ಇಂತಹ ಲೋಪಗಳಿಗೆ ಕಾರಣರಾದವರನ್ನು ಮುಖಂಡರನ್ನಾಗಿ ಆರಿಸದೇ ನಿಸ್ವಾರ್ಥಿಗಳಾದ ಪವಿತ್ರ ಧ್ಯೇಯವುಳ್ಳ ವಿಶಾಲ ಹೃದಯದ ಕೆಚ್ಚಿನ ಅಚ್ಚಗನ್ನಡಿಗರನ್ನೇ ಆರಿಸತಕ್ಕದ್ದೂ ಒಂದು ಮುಖ್ಯ ಕಾರ್ಯವಾಗಿದೆ.

ಅಲ್ಲದೆ ಕರ್ನಾಟಕ ಏಕೀಕರಣ ಪ್ರಾಂತದಲ್ಲಿ ನೈಜಾಂ ದೇಶಕ್ಕೆ ಸೇರಿದ ಕೊಪ್ಪಳ ಮತ್ತು ರಾಯಚೂರು ಗುಲಬರ್ಗಾ ಬೀದರ ಜಿಲ್ಲೆಗಳಲ್ಲಿ ಕರ್ನಾಟಕ ಏಕೀಕರಣದ ಚಳವಳಿಯನ್ನು ಹರಡುವದು ಮಹತ್ವದ ವಿಚಾರ. ಯಾಕಂದರೆ ನೈಜಾಂ ಪ್ರಜೆಗಳು ರಾಜಕೀಯದಲ್ಲಿ ಕೇವಲ ಹಿಂದುಳಿದವರು. ರಾಜಕೀಯ ವಿಚಾರದಲ್ಲಿ ಒಂದ

ಮಾತನ್ನು ಆಡುವದಕ್ಕೂ ಅವರಿಗೆ ಧೈರ್ಯವಿಲ್ಲ. ಯಾಕೆಂದರೆ ಮೊಗಲಾಯಿಯ ಕಾನೂನುಗಳು ಬಹು ಕ್ರೂರವಾದವುಗಳು. ನಿಜಾಂ ದೇಶದ ಕಾನೂನುಗಳು ಅಲ್ಲಿಯ ಪ್ರಜೆಗಳನ್ನು ಮುಂಡಿಯಂತೆ ಮಾಡಿವೆ. ಅರ್ಥಾತ್ ನಿರ್ಜೀವ ಸ್ಥಿತಿಯಲ್ಲಿದ್ದು ಕೇವಲ ಗುಲಾಮಗಿರಿಯನ್ನು ಅನುಭವಿಸತಕ್ಕವರು ಆಗಿರುತ್ತಾರೆ. ಆದ್ದರಿಂದ ಅಲ್ಲಿ ಯೋಗ್ಯವಾದ ಚಳುವಳಿಯಿಂದ ಅವರ ಹೃದಯಗಳು ಕರ್ನಾಟಕ ಏಕೀಕರಣದ ಕಡೆಗೆ ತಿರುಗುವಂತೆ ತಕ್ಕ ಪ್ರಚಾರ ಕಾರ್ಯಕ್ರಮವನ್ನು ಕೈಕೊಳ್ಳಬೇಕು.

ಕೊನೆಯ ವಿಚಾರವೇನೆಂದರೆ- ಕರ್ನಾಟಕವು ವಿಕ್ಷಿಪ್ತ ಸ್ಥಿತಿಯಲ್ಲಿದ್ದ ಮೂಲಕ ಮರಾಠರೂ ಆಂಧ್ರರೂ ಕರ್ನಾಟಕದಲ್ಲಿ ಬಹಳವಾಗಿ ತಮ್ಮ ಕೈವಾಡಗಳನ್ನು ಮಾಡಿರುತ್ತಾರೆ. ಹೇಗೆಂದರೆ ಸಮುದ್ರದಾಚೆಯಿಂದ ಬಂದ ಯುರೋಪಿಯನ್‌ರು ತಾವು ಹಿಂದುಸ್ಥಾನದ ದೇಶ ಭಾಷೆಗಳನ್ನು ಅಭ್ಯಾಸಮಾಡುವ ಗೋಜಿಗೆ ಹೋಗದೆ ತಮ್ಮ ಭಾಷೆಯಾದ ಇಂಗ್ಲಿಷನ್ನೇ ಪ್ರಪಂಚದಲ್ಲೆಲ್ಲಾ ಹರಡಿ ಇಂಗ್ಲಿಷ್ ಕಲಿಯದವನು ಮನುಷ್ಯನೇ ಅಲ್ಲವೆಂಬ ಸ್ಥಿತಿಗೆ ತಂದಿರುವಂತೆ ದಕ್ಷಿಣ ಕನ್ನಡ ಉತ್ತರ ಕನ್ನಡದಲ್ಲಿಯೂ ಬೆಳಗಾವ ಜಿಲ್ಲೆಯ ಬಹು ಭಾಗದಲ್ಲಿಯೂ ವಿಜಾಪುರ ಮುಂತಾದ ಪ್ರಾಂತದಲ್ಲಿ ಮರಾಠಿಯನ್ನು ಅವರ ಜನ್ಮಭಾಷೆಯಾಗುವಂತೆಯೇ ಕಾರ್ಯ ನಡೆಸಿದ್ದರೆ, ಇತ್ತ ಆಂಧ್ರರು ತೆಲುಗನ್ನು ಬಳ್ಳಾರಿ, ಆದವಾನಿ, ಯಾದಗಿರಿ, ಬೀದರ ಮುಂತಾದ ಜಿಲ್ಲೆಗಳಲ್ಲಿ ತಮ್ಮ ಭಾಷೆಯನ್ನು ಹರಡಿದ್ದಾರೆ. ಗುಲಬರ್ಗಾದಲ್ಲಿ ಎರಡೂ ಮಿಶ್ರವಾಗಿದೆ. ಅವರು ಅದನ್ನು ಚಿರವಾಗಿ ಬಾಳುವಂತೆ ಆಯಾ ಪ್ರಾಂತದಲ್ಲಿ ಕಡ್ಡಾಯದ ಮರಾಠಿ ಹಾಗೂ ತೆಲುಗು ಪ್ರಾಥಮಿಕ ಸ್ಕೂಲುಗಳನ್ನು ಸ್ಥಾಪಿಸಿರುತ್ತಾರಲ್ಲದೆ ಲೆಖ್ಖಪತ್ರಗಳನ್ನು ತೆಲಗು ಹಾಗು ಮರಾಠಿಗಳಲ್ಲಿಯೇ ಇರುವಂತೆ ಮಾಡಿರುತ್ತಾರೆ. ಇದರಿಂದ ಮರಾಠರ ಹಾಗು ತೆಲುಗರ ಉದ್ದೇಶ ಹಾಗು ಕೈವಾಡಗಳು ಚನ್ನಾಗಿ ವ್ಯಕ್ತವಾಗುತ್ತವೆ. ಆದ್ದರಿಂದ ಕಾರವಾರ, ಹಳ್ಯಾಳ, ಬೆಳಗಾವ, ಅಥಣಿ, ನಿಪ್ಪಾಣಿ, ಗುಲಬರ್ಗಾ ಮುಂತಾದ ವರ್ತಕ ಮಂಡಲಿಗೆಲ್ಲಾ ಕನ್ನಡ ಭಾಷೆಯ ಮಹತ್ವವನ್ನು ಹೇಳಿಕೊಟ್ಟು ಅವರ ಲೆಖ್ಖಪತ್ರಗಳು ಕನ್ನಡದಲ್ಲೇ ನಡೆಯುವಂತೆಯೂ ತಮ್ಮ ಮಕ್ಕಳಿಗೆಲ್ಲಾ ಕಡ್ಡಾಯವಾಗಿ ಕನ್ನಡವನ್ನೇ ಪ್ರಾಥಮಿಕ ಅಭ್ಯಾಸ ಮಾಡುವಂತೆಯೂ ಮತ್ತು ಹೊಸಪೇಟೆ, ಬಳ್ಳಾರಿ, ಆದವಾನಿ ಯಾದಗಿರಿ ಮುಂತಾದ ಕಡೆಯವರಿಗೂ ಅದೇ ರೀತಿ ಹೇಳಿ ತೆಲಗು ಲೆಖ್ಖಪತ್ರಗಳ ಬದಲಾಗಿ ಕನ್ನಡದಲ್ಲಿಯೇ ಇಡುವಂತೆಯೂ ತಮ್ಮ ಮಕ್ಕಳಿಗೆ ತೆಲಗಿನ ಹೊರ್ತಾಗಿ ಕನ್ನಡವನ್ನೇ ಕಲಿಸುವಂತೆಯೂ ಹೆಚ್ಚು ಚಳವಳಿಯನ್ನು ನಡೆಸತಕ್ಕದ್ದು ಅತ್ಯಾವಶ್ಯಕವಾಗಿದೆ. ನಿಜಾಮ ದೇಶದ ಕೊಪ್ಪಳ, ರಾಯಚೂರು, ಗುಲ್ಬರ್ಗಾ ಜಿಲ್ಲೆಗಳಲ್ಲಿ ಕನ್ನಡ ಹಾಗು ಉರ್ದುಗಳೆರಡನ್ನೂ ಅಭ್ಯಾಸ ಮಾಡಿಸುತ್ತಿದ್ದರು. ಇತ್ತೀಚೆಗೆ ರಾಯಚೂರು ಜಿಲ್ಲೆಯಲ್ಲಿ ಕನ್ನಡವನ್ನು ಪೂರ್ಣ ತೆಗೆದುಹಾಕಿ ಕೇವಲ ಉರ್ದುವಿನಲ್ಲಿಯೇ ಶಿಕ್ಷಣವನ್ನು ಕೊಡತಕ್ಕ ಬಗ್ಗೆ ಅಲ್ಲಿಯ ಸರಕಾರದವರು ಪ್ರಯತ್ನಮಾಡುತ್ತಿರುವುದರಿಂದ ಅದು ಕ್ರಮವಾಗಿ ಕೊಪ್ಪಳ ಹಾಗೂ ಗುಲಬರ್ಗಾ ಮುಂತಾದ ಜಿಲ್ಲೆಗಳಲ್ಲಿಯೂ ವ್ಯಾಪಿಸಬಹುದಾದ್ದರಿಂದ ಅತ್ತ ಕಡೆಗೆ ಸಹ ಹೆಚ್ಚು ಲಕ್ಷವನ್ನು ಪೂರೈಸಬೇಕಾಗಿರುತ್ತದೆ. ಮತ್ತು ಯಾವತ್ತೂ ಸರಕಾರಿ ಪ್ರಕಟನೆಗಳು ಕೋರ್ಟು ವ್ಯವಹಾರಗಳು (ಅಲ್ಲಲ್ಲಿ ಹೆಚ್ಚುವ ಬೋರ್ಡುಗಳು ಸಹ) ಕನ್ನಡದಲ್ಲಿಯೇ ನಡೆಯುವಂತೆ ಪ್ರಯತ್ನಿಸಬೇಕು.

ಈ ವಿಚಾರದಲ್ಲಿ ಕರ್ನಾಟಕ ಏಕೀಕರಣ ಮಂಡಲಿಯು ಕರ್ನಾಟಕ ಸಾಹಿತ್ಯ ಪರಿಷತ್ತು ಹಾಗೂ ವೀರಶೈವ ಮಹಾ ಸಭೆಯೂ ತಕ್ಕ ಕಾರ್ಯವನ್ನು ಕೈಕೊಳ್ಳುವುದು ವಿಹಿತವಾಗಿದೆ. ಕನ್ನಡ ಬಂಧು ಭಗಿನಿಯರೇ ಕರ್ನಾಟಕ ಏಕೀಕರಣವು ಆದಷ್ಟು ಜಾಗ್ರತೆ ದೊರೆಯುವ ಬಗ್ಗೆ ಅಸಹಕಾರ ಮತ್ತು ಕಾನೂನು ಭಂಗ ಮಾಡಬೇಕಾದ ಪ್ರಸಂಗ ಬಂದರೂ ಸೆರೆ ಮನೆಯನ್ನು ಸೇರುವುದು ಅನಿವಾರ್ಯವಾಗಿ ಕಂಡುಬಂದರೂ ಶಿಸ್ತು ಹಾಗು ಸಂಘಟನೆಯುಳ್ಳವರಾಗಿ ಧೈರ್ಯವನ್ನೂ ಸಾಹಸವನ್ನೂ ಶಕ್ತಿಯನ್ನೂ ಜಾಣ್ಮೆಯನ್ನೂ ತೋರಿ ಸ್ವಾರ್ಥವನ್ನು ತ್ಯಜಿಸಿ ಕನ್ನಡ ನಾಡಿನ ಏಕೀಕರಣವನ್ನು ಸಾಧಿಸಿ ಕೀರ್ತಿಶಾಲಿಗಳಾಗಬೇಕಾಗಿ ಹಾರೈಸುವ,

ಬೃಹನ್ಮಠ. ಅನ್ನದಾನಯ್ಯ ಹಿರೇಮಠ
ತಿಮ್ಮಾಪುರ.

---

## ಗ್ರೇಟಬ್ರಿಟನ್ನಿನಲ್ಲಿಯ ವೃತ್ತಪತ್ರಿಕೆಗಳು.

**೧೩೮ ದಿನ ಪತ್ರಿಕೆ! ೧೯೦ ಲಕ್ಷ ಓದುಗರು!!**

ಗ್ರೇಟಬ್ರಿಟನ್ನಿನಲ್ಲಿ ಈಗ ೫೨ ಮುಂಜಾನೆ ಮತ್ತು ೮೬ ಸಂಜೆಗೆ ಪ್ರಕಟವಾಗುವ ದಿನ ಪತ್ರಿಕೆಗಳಿವೆ. ಮತ್ತು ೧೮ ರವಿವಾರ ಹೊರಡುವ ಪತ್ರಿಕೆಗಳಿವೆ. ಒಟ್ಟು ಇವುಗಳಲ್ಲಿ ೮೦೦೦೦ ಜನರು ಕೆಲಸಮಾಡುತ್ತಿರುವರು. ಮುಂಜಾನೆ ಪ್ರಕಟವಾಗುವ ಪತ್ರಿಕೆಗಳೆಲ್ಲ ಲಂಡನ್ ನಗರದಿಂದ ೧೦೦ ಮೈಲುಗಳ ಅಂತರದಲ್ಲಿರುವ ಮೂರು ಪಟ್ಟಣಗಳಲ್ಲಿಯೇ ಹೊರಡುವವು. ೧೯೩೦ ರಿಂದ ೧೯೩೬ ರ ವರೆಗೆ ದಿನ ಪತ್ರಿಕೆಗಳ ಪ್ರಸಾರವು ೧೪.೮ ದಶಲಕ್ಷದಿಂದ ೧೯.೦೫ ದಶಲಕ್ಷದ ವರೆಗೆ ಬೆಳೆಯಿತು. ಸಾಮಾನ್ಯವಾಗಿ ಸ್ತ್ರೀಯರಿಗಿಂತ ಪುರುಷರೇ ಹೆಚ್ಚಾಗಿ ಪತ್ರಿಕೆಗಳನ್ನು ಓದುತ್ತಿದ್ದರೂ ಸಚಿತ್ರ ಪತ್ರಿಕೆಗಳಿಗೆ ಮಾತ್ರ ಪುರುಷರಿಗಿಂತ ಸ್ತ್ರೀಯರೇ ಹೆಚ್ಚು ಚಂದಾದಾರರಿದ್ದಾರೆ.

---

## ಮೂವರಲ್ಲಿ ಸ್ಪರ್ಧೆ.

ಅಮೃತಸರ ಮುಸ್ಲೀಮ ಮತದಾರ ಸಂಘದಿಂದ ನಡೆಯತಕ್ಕ ಪಂಜಾಬ ಅಸೆಂಬ್ಲಿಯ ಉಪಚುನಾವಣೆಗೆ ಕಾಂಗ್ರೆಸ್ ಪರವಾಗಿ ಡಾ. ಕಿಚಲೂ ಮುಸ್ಲಿಂ ಲೀಗಿನ ಪರವಾಗಿ ಶೇಖಮಹಮ್ಮದ ಸದೀಕ ಮತ್ತು ಅಹರಾರ ಪರವಾಗಿ ಚೌಧರಿ ಅಫಜಲ್ ಹಕ್ಕ ಇವರು ಉಮೇದುವಾರರಾಗಿ ನಿಂತಿದ್ದಾರೆ.

---

## ಅಂತರ್ಜಾತೀಯ ವಿವಾಹಕ್ಕೆ ಕನ್ಯೆ ಬೇಕಾಗಿದೆ.

ಸಲಕ್ಷಣ, ಸದೃಢ, ಮತ್ತು ಒಂದು ಭಾಷೆಯಲ್ಲಾದರೂ ತಕ್ಕಷ್ಟು ಶಿಕ್ಷಣ ಹೊಂದಿದ ಪ್ರೌಢ ಕನ್ಯೆ ಬೇಕಾಗಿದೆ.

ಕನ್ಯೆಯು ಜೈನ, ಲಿಂಗಾಯತ, ಬ್ರಾಹ್ಮಣ ಈ ಮತಗಳಲ್ಲಿಯ ಯಾವ ಒಳಪಂಗಡಕ್ಕೆ ಸೇರಿದ್ದರೂ ಆಗಬಹುದು.

ವರನು ಸುಸ್ವರೂಪನೂ, ಸುಶಿಕ್ಷಿತನೂ, ೨೫ ವರುಷ ಪ್ರಾಯದವನೂ ಇದ್ದಾನೆ. ತಿಂಗಳಿಗೆ ೭೫ ರೂ. ಆದಾಯವುಳ್ಳ ಸ್ವತಂತ್ರ ಉದ್ಯೋಗದವನು.

ವಿಳಾಸ:—

ಠೀ C/o ಶರಣ ಸಂದೇಶ ಕಾರ್ಯಾಲಯ
ಪೋ. ಆಲಮಟ್ಟಿ ಜಿ. ವಿಜಾಪುರ.

# ಮೈಸೂರಲ್ಲಿ ಅತ್ಯಾಚಾರ.

## ೩೨ ಜನರು ಸತ್ತರು! ೪೮ ಜನರು ಗಾಯಹೊಂದಿದರು!

### ವಿದುರಾಶ್ವತ್ಥದ ಭೀಕರ ದೃಶ್ಯ.

ವಿದುರಾಶ್ವತ್ಥವು ಬೆಂಗಳೂರಿನಿಂದ ೫೦ ಮೈಲು ದೂರಿನಲ್ಲಿರುವ ಕೋಲಾರ ಜಿಲ್ಲೆಗೆ ಸೇರಿದ ಒಂದು ಯಾತ್ರಾಸ್ಥಳ. ಅಲ್ಲಿ ಧ್ವಜ ವಂದನೆಗಾಗಿ ಸೇರಿದ ೧೦ ಸಾವಿರ ಜನ ಸಮೂಹದ ಮೇಲೆ ಪೋಲೀಸರು ಗುಂಡು ಹಾರಿಸಿದರು. ಇದರಿಂದ ೩೨ ಜನರು ಕೂಡಲೇ ಮರಣಪಟ್ಟರು. ೪೮ ಜನರಿಗೆ ಭಯಂಕರ ಗಾಯಗಳಾಗಿವೆ.

ಇದೇ ಎಪ್ರಿಲ್ ೮ ನೆಯ ತಾರೀಖಿನ ದಿನ ಈ ಹಳ್ಳಿಯನ್ನೊಳಗೊಂಡ ಗೋರಿಬಿದನೂರು ತಾಲೂಕಿನ ಅಮಲದಾರ ಮ್ಯಾಜಿಸ್ಟ್ರೇಟರು ಇಲ್ಲಿಯ ಪ್ರಸಿದ್ಧ ಕಾಂಗ್ರೆಸ್ ಮುಖಂಡರಾದ ಶ್ರೀ. ಕಲ್ಲೂರು ಸುಬ್ಬರಾಯರಿಗೆ ಒಂದು ನೋಟೀಸು ಜಾರಿಮಾಡಿ ಅವರು ಅಂದಿನಿಂದ ಒಂದು ತಿಂಗಳ ವರೆಗೆ ಆ ಹಳ್ಳಿಯಲ್ಲಿ ಸಾರ್ವಜನಿಕ ಭಾಷಣಮಾಡಕೂಡದೆಂದು ನಿರ್ಬಂಧಿಸಿದರು. ಆದರೆ ಮೈಸೂರು ಗಡಿಯ ಆಚೆ (ಅನಂತಪುರ ಜಿಲ್ಲೆಯಲ್ಲಿ) ಒಂದು ಸಭೆ ಸೇರಿಸಿ ಶ್ರೀ. ಸುಬ್ಬರಾಯರು ಭಾಷಣಮಾಡಿದರು. ಇಷ್ಟರಲ್ಲಿಯೇ ಜಿಲ್ಲಾಧಿಕಾರಿಗಳು ರಾಷ್ಟ್ರಧ್ವಜಾರೋಹಣ ಮತ್ತು ಸಾರ್ವಜನಿಕ ಸಭೆಗಳನ್ನು ಒಂದು ತಿಂಗಳ ತನಕ ನಿರ್ಬಂಧಿಸಿ, ೧೪೪ ನೇ ಸೆಕ್ಷನನ್ನೂ ಮೈಸೂರು ಪೋಲೀಸ ರೆಗ್ಯುಲೇಶನ್ ೩೯ ನೇ ಸೆಕ್ಷನನ್ನೂ ಜಾರಿಮಾಡಿದರು.

ಜಿಲ್ಲಾಧಿಕಾರಿಗಳ ಈ ಪ್ರತಿಬಂಧಕಾಜ್ಞೆಯು ಜಾರಿಯಲ್ಲಿದ್ದಾಗ್ಯೂ, ಅದನ್ನು ಗಣಿಸದೆ ಸ್ಥಳಿಕ ಕಾಂಗ್ರೆಸ್ ಕಮೀಟಿಯವರು ಎಪ್ರಿಲ್ ೨೫ ನೆಯ ತಾರೀಖಿನ ದಿನ ಪ್ರಭಾತ ಫೇರಿ ಮೆರವಣಿಗೆ ಹೊರಡಿಸಿ ಆಜ್ಞೆಯನ್ನು ಮುರಿದರು. ಪೋಲೀಸರು ಈ ಸಂಬಂಧವಾಗಿ ೮ ಜನರನ್ನು ಕೈದುಮಾಡಿದರು. ಮಾರನೆಯ ದಿನ ಮತ್ತಿಬ್ಬರು ಕೈದುಮಾಡಲ್ಪಟ್ಟರು. ೨೪ ನೆಯ ತಾರೀಖಿನ ದಿನವೂ ವಿಶೇಷ ಅಚಾತುರ್ಯವೇನೂ ಸಂಭವಿಸಲಿಲ್ಲ ಆದರೆ ನಿನ್ನೆ ಗೋರಿಬಿದುನೂರಿನಿಂದ ಮೈಸೂರು ನ್ಯಾಯವಿಧಾಯಕ ಸಭಾ ಸದಸ್ಯರಾದ ಶ್ರೀ. ಟಿ. ರಾಮಾಚಾರ್ಯರ ನಾಯಕತ್ವದಲ್ಲಿ ಪ್ರಭಾತ ಫೇರಿ ಮೆರವಣಿಗೆಯು ಹೊರಟು ಮಧ್ಯಾನ್ಹ ೧೧ ಗಂಟೆಗೆ ವಿದುರಾಶ್ವತ್ಥಕ್ಕೆ ಬಂದು ತಲಪಿತು. ಗೊಂದಲವುಂಟಾಗಬಹುದೆಂಬ ನಿರೀಕ್ಷಣೆಯಿಂದ ಜಿಲ್ಲಾಧಿಕಾರಿಗಳೂ ಪೋಲೀಸ ಸುಪರಿಂಟೆಂಡಂಟರೂ ಸಬ್ ಡಿವಿಜನ್ ಆಫೀಸರರೂ ಅಮಲದಾರ ಮ್ಯಾಜಿಸ್ಟ್ರೇಟರೂ ರಿಜರ್ವ ಪೋಲಿಸರ ದಳ ಸಹಿತವಾಗಿ ವಿದುರಾಶ್ವತ್ಥಕ್ಕೆ ಬಂದು ನಿಂತಿದ್ದರು.

ನಿನ್ನೆಯ ದಿವಸ ಸಂತೆಯ ದಿನವಾಗಿತ್ತು. ಹಳ್ಳಿಯ ಒಂದು ಖಾಸಗಿ ತೋಟದಲ್ಲಿ ಸಾರ್ವಜನಿಕ ಸಭೆ ಪ್ರಾರಂಭವಾಯಿತು.

ಈ ಸಭೆಯು ಬೇಕಾಯದೇಶೀರವೆಂದು ಜಿಲ್ಲಾಧಿಕಾರಿಗಳು ಹುಕುಂ ಜಾರಿಮಾಡಿ ಬಂದ ಜನಗಳನ್ನು ಚೆದರಿ ಹೋಗಲು ಆಜ್ಞೆಮಾಡಿದರು. ಗುಂಟೂರಿನ ಶ್ರೀ. ಸುಬ್ಬರಾಯರು ಸಭೆಯಲ್ಲಿ ಭಾಷಣಮಾಡಲು ಅವರನ್ನು ಕೈದುಮಾಡಲಾಯಿತು. ಸಭೆ ಚೆದರಲು ಪೋಲೀಸ ಅಧಿಕಾರಿಗಳು ೧೦ ಮಿನಿಟು ಅವಧಿ ಕೊಟ್ಟರು. ಜನರು ಚೆದರದೆ ಇರಲು ಪೋಲೀಸರು ಲಾಠಿ ಚಾರ್ಜ ಮಾಡಿದರು. ಈ ಹಲ್ಲೆಯಿಂದ ಇಬ್ಬರು ಸತ್ತರೆಂದು ಹೇಳಲಾಗಿದೆ. ಪರಿಸ್ಥಿತಿಯು ಹಿಡಿತ ತಪ್ಪಿದಂತಾಗಲು ಪೋಲೀಸರು ಗೋಳೀಬಾರು ಮಾಡಿದರು. ಇದರ ಪರಿಣಾಮವಾಗಿ ೩೨ ಮಂದಿ ಸತ್ತು ಬಿದ್ದರು. ೪೮ ಜನರಿಗೆ ಗುಂಡಿನೇಟಿನಿಂದ ಭಯಂಕರ ಗಾಯಗಳಾದವು.

ತೋಟದ ಒಂದು ಮೂಲೆಯಲ್ಲಿ ಊಟಕ್ಕೆ ಕೂತಿದ್ದ ಒಕ್ಕಲಿಗನೊಬ್ಬನಿಗೆ ಈ ಗಲಿಬಿಲಿಯಲ್ಲಿ ಗುಂಡು ತಗಲಿ ಆತನು ಅಲ್ಲಿಯೇ ಸತ್ತು ಬಿದ್ದದ್ದು ಈ ಭಯಂಕರ ಅತ್ಯಾಚಾರದ ಅಮಾನುಷ ಕೃತಿಯನ್ನು ತೋರಿಸುತ್ತದೆ.

---

## ಗಾಂಧೀಜಿಯವರಿಗೆ ಸಿಡಿಲು ಬಡಿದಂತಾಯಿತು.

ಶ್ರೀ. ಮಹಾದೇವ ಭಾಯಿ ದೇಸಾಯಿಯವರು ಕೆಳಗಿನಂತೆ ಪ್ರಕಟಿಸಿದ್ದಾರೆ—

ಮೈಸೂರು ಗೋಳಿಬಾರಿನ ಬಗ್ಗೆ ಪತ್ರಿಕೆಯ ಮುಖಾಂತರ ಬಂದ ಸುದ್ದಿಯು ಗಾಂಧೀಜಿಗೆ ಸಿಡಿಲು ಬಡಿದಂತೆನಿಸಿತು. ನಿನ್ನೆಯ ದಿವಸವೇ ಮೈಸೂರು ಪ್ರತಿನಿಧಿಗಳು ಶಾಂತತೆಯನ್ನುಂಟುಮಾಡುವ ಬಗ್ಗೆ ಗಾಂಧೀಜಿಯ ಸಲಹೆ ಕೇಳಲು ಇಲ್ಲಿಗೆ ಬಂದಿದ್ದು ಮೈಸೂರಲ್ಲಿ ದಿನೆ ದಿನೆ ಕೆಡುತ್ತಿರುವ ಪರಿಸ್ಥಿತಿಯ ಬಗ್ಗೆ ಶಾಂತತೆಯ ಮಾರ್ಗ ತೋರಿಸಲು ಗಾಂಧೀಜಿಯೊಡನೆ ಮಾತು ಕತೆನಡೆಸುತ್ತಿದ್ದರು. ಗಾಂಧೀಜಿಯವರು ಮೈಸೂರು ಕಾಂಗ್ರೆಸ್ ಅಧ್ಯಕ್ಷರಿಗೆ ಒಂದು ಪತ್ರವನ್ನು ಬರೆದು ಪ್ರತಿನಿಧಿಗಳ ಕಡೆಗೆ ಕೊಟ್ಟಿದ್ದರು. ಶಾಂತತೆಯ ಪ್ರತಿನಿಧಿಗಳು ಇಲ್ಲಿರುವದನ್ನು ಮತ್ತು ಅವರು ಬೇಗ ಮೈಸೂರಿಗೆ ಹಿಂತಿರುಗುವರೆಂಬುದನ್ನು ಸರಕಾರವು ತಿಳಿದಿರಬಹುದು. ಪ್ರತಿನಿಧಿಗಳು ತಿರುಗಿ ಹೋಗುವಾಗ ಸರದಾರ ವಲ್ಲಭಭಾಯಿ ಪಟೇಲರನ್ನು ಕಂಡು ವಿಚಾರ ವಿನಿಮಯ ಮಾಡಿದರು. ಸರದಾರರಾದರೂ ಒಂದು ಮಾರ್ಗವನ್ನು ಕಂಡುಕೊಳ್ಳಲು ಬಹಳವಾಗಿ ವಿಚಾರಿಸಿ ಮಹಾತ್ಮರ ಪತ್ರದಲ್ಲಿಯ ಸೂಚನೆಯನ್ನು ಒಪ್ಪಿಕೊಂಡಿದ್ದರು ಆದರೆ ಗೋಳೀಬಾರಿನ ಸುದ್ದಿಯನ್ನು ಕೇಳಿ ಸರದಾರರು ದಿಗ್ಭ್ರಮೆಗೊಂಡರು. ಪ್ರತಿನಿಧಿಗಳನ್ನು ತಿರುಗಿ ವರ್ಧಾಕ್ಕೆ ಕಳಿಸಿದರು. ಪರಿಸ್ಥಿತಿಯ ಬದಲಾವಣೆಯಿಂದ ಮಹಾತ್ಮರು ತಮ್ಮ ಮೊದಲಿನ ಪತ್ರವನ್ನು ರದ್ದುಗೊಳಿಸಬೇಕಾಯಿತು. ಜನತೆಯು ಕೊನೆಯ ವರೆಗೆ ಅಹಿಂಸಾ ವೃತ್ತಿಯಿಂದಲೇ ನಡೆದುಕೊಂಡಿರಬಹುದೆಂದೂ ಮತ್ತು ಮಹೋಗ್ರತೆಯಲ್ಲಿಯೂ ಅದೇ ವೃತ್ತಿಯಿಂದ ಸಾಗುವರೆಂದೂ ಮಹಾತ್ಮರ ಆಶೆಯಾಗಿದೆ. ಅವರು ಹಾಗೆ ಮಾಡಿದರೆ ಕೊನೆಯಲ್ಲಿ ಅವರದೇ ಆಗ

# ಮುಸಲ್ಮಾನರಿಗೆ ಬುದ್ಧಿವಾದ.

ಸಿಂಧ ಅಸೆಂಬ್ಲಿಯ ಕಾಂಗ್ರೆಸ್ ಪಕ್ಷದ ಮುಂದಾಳುಗಳಾದ ಶ್ರೀ. ಆರ್. ಕೆ. ಸಿಧ್ವರವರು ಮದ್ರಾಸ ಇಲಾಖೆಯ ಕಡಪ್ಪಾದಲ್ಲಿ ಒಂದು ಭಾಷಣಮಾಡಿದರು. ಅದರಲ್ಲಿ ಮುಸಲ್ಮಾನರು ಕಾಂಗ್ರೆಸ್ಸನ್ನು ಸೇರಿ ತಮ್ಮ ಹಿತಮಾಡಿಕೊಳ್ಳುವುದು ಎಷ್ಟು ಅಗತ್ಯವಿದೆಯೆಂಬುದನ್ನು ಅವರು ಈ ರೀತಿ ವಿವರಿಸಿ ಹೇಳಿದರು—

“ಕಾಂಗ್ರೆಸ್ಸಿಗೆ ಸೇರಬಾರದೆಂದು ಮುಸ್ಲಿಂರಿಗೆ ಜಿನ್ನಾರವರು ಬೋಧಿಸುತ್ತಿದ್ದಾರೆ. ಖಿಲಾಫತ ಚಳವಳದ ನೆನಪು ನಿಮಗಿದೆಯೆ? ಖಿಲಾಫತದ ಚಳವಳಿಗೆ ಕಾಂಗ್ರೆಸ್ಸಿನ ಸಂಬಂಧವೇನು? ಆದರೂ ಕಾಂಗ್ರೆಸ್ಸು ಅದನ್ನು ಕೈ ಕೊಂ ಡಿ ತು. ಅದೇ ಕಾರಣಕ್ಕಾಗಿ ಮುಸ್ಲಿಮರೊಡನೆ ಹಿಂದುಗಳೂ ಜೇಲಿಗೆ ಹೋದರು. ಆ ಸಮಯ ಜಿನ್ನಾರವರು ಎಲ್ಲಿ ಅವಿತಿದ್ದರು? ಜಿನ್ನಾರವರು ಅವರ ಅನುಯಾಯಿಗಳು ಕಾಂಗ್ರೆಸ್ಸಿಗೆ ಸೇರುವಂತೆ ಕಾಂಗ್ರೆಸ್ಸು ತನ್ನಿಂದಾದಷ್ಟು ಯತ್ನ ನಡೆಸಿದೆ. ಜಿನ್ನಾರವರು ಹೇಳಿಕೆಯನ್ನು ಸ್ಪಷ್ಟೀಕರಿಸಬೇಕೆಂದು ಕಾಂಗ್ರೆಸ್ಸು ಹಲವು ಬಾರಿ ವಿನಂತಿಮಾಡಿಕೊಂಡಿದೆ. ಸ್ವರಾಜ್ಯ ಸಂಪಾದನೆಯ ಪವಿತ್ರ ಹೋರಾಟದಲ್ಲಿ ಕಾಂಗ್ರೆಸ್ಸಿನೊಡನೆ ಹೆಗಲಿಗೆ ಹೆಗಲು ಕೊಟ್ಟು ನಿಲ್ಲಲು ಜಿನ್ನಾರವರಿಗೆ ಕಾಂಗ್ರೆಸ್ಸು ಅನೇಕ ಬಾರಿ ಬಿನ್ನಯಿಸಿದೆ. ಎರಡು ಪಕ್ಷಗಳೊಡನೆ ಒಪ್ಪಂದವಾಗಲು ಮಹಾತ್ಮಾ-ಜಿನ್ನಾ ಭೆಟ್ಟಿಯು ಶುಭದಾಯಕವಾಗಿದೆ. ಸಮಾಧಾನಕರವಾಗಿ ಇದು ಕೊನೆಗೊಳ್ಳುವಂತೆ ನಾವು ಪ್ರಾರ್ಥಿಸೋಣ.

ಮುಸಲ್ಮಾನರು ಕಾಂಗ್ರೆಸ್ಸಿಗೆ ಸೇರಿದರೆ ಮಾತ್ರ ಅವರಿಗೆ ಸುಖವು ಪ್ರಾಪ್ತಿಯಾಗುವುದೆಂದು ನಾನು ಮುಸಲ್ಮಾನರಿಗೆ ಹೇಳಬಯಸುವೆ. ಜನ ಸಾಮಾನ್ಯರ ಹೊಟ್ಟೆಗೆ ರೊಟ್ಟಿಯನ್ನು ಒದಗಿಸಿಕೊಡಲು ಕಾಂಗ್ರೆಸ್ಸು ಹೊಡೆದಾಡುತ್ತದೆ. ಹಿಂದುಗಳು ತಿನ್ನುವ ರೊಟ್ಟಿ ಬೇರೆ, ಮುಸಲ್ಮಾನರು ತಿನ್ನುವ ರೊಟ್ಟಿಯೊಂದು ಬೇರೆ ಇದೆಯೆ? ಎಲ್ಲರಿಗೂ ಈಗ ರೊಟ್ಟಿ ಬೇಕಾಗಿದೆ. ಎಷ್ಟೋ ಗ್ರಾಮಸ್ಥರು ಉದ್ಯೋಗವಿಲ್ಲದೆ ಹೊಟ್ಟೆಗಿಲ್ಲದೆ ಜೀವನ್ಮೃತರಾಗಿರುವರು. ಸ್ತ್ರೀ-ಪುರುಷ ಬಡವ-ಧನಿಕ ಹಿಂದೂ-ಮುಸ್ಲಿಂ ಎಂಬ ಭೇದಭಾವವಿಲ್ಲದೆ ಪ್ರತಿಯೊಬ್ಬನಿಗೂ ದಿನಕ್ಕೊಂದು ಹೊಟ್ಟೆ ತುಂಬಾ ಊಟವು ದೊರಕುವಂತೆ ಮಾಡುವುದೇ ಕಾಂಗ್ರೆಸ್ಸಿನ ಮುಖ್ಯೋದ್ದೇಶವಾಗಿದೆ. ಹಳ್ಳಿಗಳಲ್ಲಿ ಹಿಂದೂ ಮುಸ್ಲಿಂ ಎಂಬ ಭೇದಭಾವವೇ ಇರುವುದಿಲ್ಲ. ಪಟ್ಟಣಗಳಲ್ಲಿ ವಾಸಿಸುವ ಈ ದೊಡ್ಡ ಮನುಷ್ಯರಿಂದಲೇ ಇದರ ನಿರ್ಮಾಣವಾಗಿದೆ. ಮೂವತ್ತು ವರುಷಗಳ ಹಿಂದೆ ಕಾಂಗ್ರೆಸ್ಸಿನಲ್ಲಿ ಈ ದೊಡ್ಡ ಮನುಷ್ಯ ಪ್ರಭಾವ ವ್ಯಕ್ತಿತ್ವವೇ ಹೆಚ್ಚಾಗಿದ್ದಿತು. ತ್ಯಾಗಕ್ಕೆ ಈ ಮಹನೀಯರು ಸಿದ್ಧರಲ್ಲದಿದ್ದುದರಿಂದಲೇ ದೊಡ್ಡ ಮನುಷ್ಯರೆಲ್ಲರೂ ಹೋಗಲೇ ಬೇಕಾಯಿತು.

ಪಿ. ಜಿನ್ನಾರವರಿಗೆ ಅಸೆಂಬ್ಲಿಗಳಲ್ಲಿ ಕೌನ್ಸಿಲ್ಲುಗಳಲ್ಲಿರುವ ಮುಸ್ಲಿಂ ಪ್ರಾತಿನಿಧ್ಯವು ಕಡಿಮೆಯೆಂಬುದು ಮಾತ್ರ ಗೋಚರಿಸುತ್ತಿರುವುದು ತೀರ ಶೋಚನೀಯವಾಗಿದೆ. ಆದರೆ ಹೊಟ್ಟೆಗೆ ಹಿಟ್ಟಿಲ್ಲದ ಲಕ್ಷಾಂತರ ಮುಸಲ್ಮಾನರ ಕಡೆ ಅವರ ಲಕ್ಷವಿಲ್ಲ.

ಕೊನೆಗೆ ಸಿಧ್ವರವರು ಸ್ಥಾನಿಕ ಕಾಂಗ್ರೆಸ್ ಕಾರ್ಯಕರ್ತರು ಮುಸ್ಲಿಮರೊಂದಿಗೆ ಸಹಕರಿಸಬೇಕೆಂದೂ ಸಾರ್ವಜನಿಕರಲ್ಲಿ ಸಾಕ್ಷರತೆಯ ಪ್ರಸಾರವನ್ನು ಮಾಡಬೇಕೆಂದೂ ಬಿನ್ನವಿಸಿಕೊಂಡರು.”

# ಗಾಂಧಿ-ಜಿನ್ನಾರವರಲ್ಲಿ ಮಾತುಕತೆ.



ಮಹಾತ್ಮಾ ಗಾಂಧಿಯವರು ಜಿನ್ನಾರವರೊಡನೆ ಹಿಂದು-ಮುಸಲ್ಮಾನರ ಐಕ್ಯದ ವಿಷಯದಲ್ಲಿ ಮಾತುಕತೆಗಳನ್ನು ನಡೆಯಿಸಲು ವರ್ಧಾದಿಂದ ಶ್ರೀ. ಮಹಾದೇವ ಭಾಯಿ ದೇಸಾಯಿ ಮತ್ತು ಪ್ಯಾರೆಲಾಲರೊಂದಿಗೆ ತಾ. ೨೮ ನೆಯ ದಿವಸ ಮುಂಜಾನೆ ಮುಂಬೈಗೆ ಬಂದರು. ಸ್ಟೇಶನ್ನಿನಲ್ಲಿ ಸರದಾರ ವಲ್ಲಭಭಾಯಿ ಪಟೇಲ, ಶ್ರೀ. ಕೆ. ಎಂ. ಮುನಶಿ, ಆಚಾರ್ಯ ಕೃಪಲಾಣಿ, ನಗೀನದಾಸ ಮಾಸ್ತರ ಶೇಟ ಜಮನಾಲಾಲ ಬಜಾಜ ಮೊದಲಾದವರು ಸ್ವಾಗತಿಸಿದರು. ಅನಂತರ ಅವರು ಜುಹುದಲ್ಲಿಯ ಜಾನಕೀ ಕುಟೀರದ ಕಡೆಗೆ ಹೋದರು.

ತಾ. ೨೮-೪-೩೮ ನೆಯ ದಿನ ೧೧|| ಗಂಟೆಗೆ ಮಹಾತ್ಮಾ ಗಾಂಧಿಯವರು ಮಹಾದೇವ ಭಾಯಿ ದೇಸಾಯಿ ಸಹಿತ ಮಲಬಾರ ಹಿಲ್ಲಿನಲ್ಲಿರುವ ಬ್ಯಾ. ಜಿನ್ನಾರವರ ನಿವಾಸಸ್ಥಾನಕ್ಕೆ ತೆರಳಿದರು. ಬ್ಯಾ. ಜಿನ್ನಾರವರು ಮಹಾತ್ಮರನ್ನು ಸ್ವಾಗತಿಸಿ ಮಾತುಕತೆಗಳನ್ನಾಡಲು ಏರ್ಪಡಿಸಿದ ದಿವಾನಖಾನೆಗೆ ಮಹಾತ್ಮಾಜಿಯವರನ್ನು ಕರೆದುಕೊಂಡು ಹೋದರು. ಅಲ್ಲಿ ಮಹಾತ್ಮಾಜಿಯವರು ಜಿನ್ನಾರವರೊಡನೆ ೩ ತಾಸು ೧೦ ನಿಮಿಷಗಳ ವರೆಗೆ ಮಾತನಾಡಿ ಹೊರಗೆ ಬಂದರು. ಅನಂತರ ಗಾಂಧೀಜಿಯವರು ಮತ್ತು ಜಿನ್ನಾರವರು ಒಂದು ಈ ಕೆಳಗಿನಂತೆ ಪ್ರಕಟನೆ ಹೊರಡಿಸಿದ್ದಾರೆ—

“ಮೂರು ಗಂಟೆಗಳ ವರೆಗೆ ಹಿಂದು-ಮುಸ್ಲಿಂ ಸಮಸ್ಯೆಯ ಬಗ್ಗೆ ನಾವಿಬ್ಬರು ಗೆಳೆಯರಂತೆ ಮಾತುಕತೆ ನಡೆಯಿಸಿದೆವು. ಚರ್ಚೆ ಇನ್ನೂ ನಡೆಯಲಿರುವುದು. ಯೋಗ್ಯ ಸಮಯದಲ್ಲಿ ಜನಗಳಿಗೆ ಎಲ್ಲವನ್ನು ತಿಳಿಸಲಾಗುವುದು”

ಮಹಾತ್ಮಾಜಿಯವರು ತಾ. ೨೯ ನೆಯ ದಿನ ಪುನಃ ಜಿನ್ನಾರವರನ್ನು ಕಂಡರು.

ಲಿರುವ ಸ್ವಾತಂತ್ರ್ಯಕ್ಕಾಗಿ ಅವರು ಮನಸಾ ಹೊಂದುವ ಕಷ್ಟನಷ್ಟಗಳು ಹೆಚ್ಚಿನವೆನಿಸಲಾರವು.

ಗಾಂಧಿಯವರು ಅಧಿಕಾರಿಗಳ ಅಭಿಮತವನ್ನು ತಿಳಿದುಕೊಂಡು ಅನಂತರ ಸಾರ್ವಜನಿಕ ಪ್ರಕಟನೆಯನ್ನು ತೆಗೆಯುವವರಿದ್ದಾರೆ. ಸದ್ಯಕ್ಕೆ ಜನತೆಯ ಪ್ರತಿನಿಧಿಯಾದ ಶ್ರೀ. ಭೂಪಾಳಂ ಚಂದ್ರಶೇಖರಯ್ಯನವರು ಗಾಂಧೀಜಿಯ ಸಂದೇಶದೊಂದಿಗೆ ಮೈಸೂರಿಗೆ ಪ್ರಯಾಣಬೆಳೆಸಿರುವರು.



ಶಾ. ಶ. ೧೮೬೦ ನೆಯ ವೈಶಾಖ ಶು|| ೨ ಸೋಮವಾರ.

# ಜಯ ಬಸವ ಜಗದಣ್ಣ!

ಈ ದಿವಸ ಮಹಾನುಭಾವರಾದ ಬಸವಣ್ಣನವರ ಜಯಂತಿಯು. ಹನ್ನೆರಡನೆಯ ಶತಮಾನದಲ್ಲಿ ಅತ್ಯದ್ಭುತವಾದ ಧಾರ್ಮಿಕ, ಸಾಮಾಜಿಕ, ಆರ್ಥಿಕ ಕ್ರಾಂತಿಗಳನ್ನು ಮಾಡಿದ ಬಸವ ಮಹಾತ್ಮರ ಈ ಜಯಂತ್ಯುತ್ಸವವು ಪ್ರಾರಂಭವಾಗಿ ಇಂದಿಗೆ ಇಪ್ಪತ್ತೈದು ವರುಷಗಳಾದವು. ಈಗ ಕಾಲು ಶತಮಾನದಲ್ಲಿ ಕರ್ನಾಟಕದಲ್ಲಂತೂ ಇದೊಂದು ರಾಷ್ಟ್ರೀಯ ಮಹೋತ್ಸವವಾಗಿಯೇ ಪರಿಣಮಿಸಿದೆ.

ರಾಷ್ಟ್ರೋನ್ನತಿಗೆ ಈಗ ಅತ್ಯವಶ್ಯಕವಾದ ಅನೇಕ ಸಂಗತಿಗಳು ಜನಾಂಗದಲ್ಲಿ ಆಚರಣೆಗೆ ಬರಲು ಈ ಮಹಾನುಭಾವರ ಜಯಂತಿಯು ಎಷ್ಟೋ ಸಹಾಯಕವಾಗುತ್ತಾ ಇದೆ. ಹೀಗೆ ಬಸವ ಮಹಾನುಭಾವರ ೮೦೦ ವರುಷಗಳ ಹಿಂದಿನ ದಿವ್ಯೋಪದೇಶಗಳು ಈಗಿನ ಜನಜಾಗೃತಿಗೆ ತುಂಬಾ ಸಹಾಯಮಾಡುತ್ತಿರುವುದರಿಂದಲೇ ಕನ್ನಡ ನಾಡಿಗೆ ಇದೊಂದು ರಾಷ್ಟ್ರೀಯ ಹಬ್ಬವಾಗಿ ಪರಿಣಮಿಸಿರುವುದು ಸ್ವಾಭಾವಿಕವು.

### ಕುಲಮದವ ಕಳೆದ ಬಸವಣ್ಣ.

ಬಸವಣ್ಣನವರ ನಡೆ ನುಡಿಗಳು ಕನ್ನಡ ನಾಡಿಗೆ ಗೊತ್ತಿರುವಂತೆ ಹಿಂದುಸ್ಥಾನದ ಬೇರೆ ಬೇರೆ ಪ್ರಾಂತಗಳಿಗೆ ಗೊತ್ತಿಲ್ಲ. ಇದೊಂದು ದೊಡ್ಡ ಕೊರತೆಯೇ ಸರಿ. ಈ ಕೊರತೆಯು ನಿವಾರಣೆಯಾದರೆ ಬಸವ ಜಯಂತಿಯು ಅಖಿಲ ಭಾರತದಲ್ಲಿ ಆಚರಿಸಲ್ಪಡದೇ ಇರಲಾರದು. ಏಕೆಂದರೆ, ಬಸವಣ್ಣನವರ ನಡೆ ನುಡಿಗಳು ಬೇರೆ ಅನೇಕ ಪ್ರಾಂತಗಳಿಗೆ ಗೊತ್ತಿರದಿದ್ದರೂ ಅವರ ತತ್ವದ ಕಡೆಗೇನೇ ಆ ಪ್ರಾಂತಗಳು ಹೋಗುತ್ತಲಿವೆ,

ಹಿಂದುಸ್ಥಾನದಲ್ಲಿ ಕುಲಮದವು ಬಹು ಕಾಲದಿಂದಲೂ ಬೇರೂರಿದೆ. ಜನ್ಮ ವಿಶಿಷ್ಟವಾದ ಮೇಲು ಕೀಳುಗಳೆಂಬ ಈ ಕುಲಮದವು ಹಿಂದು ಜನಾಂಗಕ್ಕೆ ಭಯಂಕರವಾದ ಹುಣ್ಣಾಗಿದೆ. ಇದರಿಂದಲೇ ಈ ಜನಾಂಗವು ದಿನೆ ದಿನೆ ಕ್ಷೀಣಿಸುತ್ತಲಿದೆಯೆಂದೂ ಈ ಕುಲಮದದ ಘೋರ ವಿಷವನ್ನು ಜಾಗ್ರತೆ ತೆಗೆದುಹಾಕಬೇಕೆಂದೂ ಅನೇಕ ವಿಭೂತಿಗಳು ಈಗ ಪ್ರಚಂಡ ಪ್ರಯತ್ನಗಳನ್ನು ಮಾಡುತ್ತಿದ್ದಾರೆ.

ಅಂತೆಯೇ ಬಸವಣ್ಣನವರ ಈ ಕೆಳಗಿನ ದಿವ್ಯೋಪದೇಶವು ಕೇವಲ ಕನ್ನಡ ನಾಡಿಗೇನೇ ಅಲ್ಲ; ಹಿಂದುಸ್ಥಾನಕ್ಕೇನೇ ಈಗ ಪರಮೌಷಧವಾಗಿದೆ.

ಕೊಲ್ಲುವನೆ ಮಾದಿಗ. ಹೊಲಸು ತಿಂಬುವನೆ
ಹೊಲೆಯ. ಕುಲವೇನೋ? ಅವಂದಿರ ಕುಲವೇನೋ?
ಸಕಲ ಜೀವಾತ್ಮರಿಗೆ ಲೇಸನೆ ಬಯಸುವವ ಕುಲಜ.

ಹಿಂದು ಜನಾಂಗವು ಈಗ ಛಿನ್ನ ವಿಚ್ಛಿನ್ನವಾಗಿ, ಪರದೇಶ ಪರಧರ್ಮದವರ ಆಕ್ರಮಣಗಳಿಗೆ ಆಹುತಿಯಾಗಿ, ಬಳಲುತ್ತಿರುವುದಕ್ಕೆ ಹಿಂದುಗಳಲ್ಲಿ ಬೇರೂರಿರುವ ಜನ್ಮವಿಶಿಷ್ಟ ಮೇಲು ಕೀಳುಗಳ ಕುಲ ಕಲ್ಪನೆಯೇ ಮುಖ್ಯ ಕಾರಣವು. ಇದನ್ನು ಬಸವ ಮಹಾನುಭಾವನು ನಾಶಮಾಡಲು ಅತ್ಯದ್ಭುತ ಪ್ರಯತ್ನ ಮಾಡಿದನು. ಆ ಮಹಾತ್ಮನು ಹೀಗೆ ಹೇಳಿಕೊಂಡಿದ್ದಾನೆ—

ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ
ಹೊರೆಯ ಹೊರಿಸದಿರಯ್ಯಾ।

ಹಿಂದು ಜನಾಂಗದವರೇ ಅಲ್ಲ ಅನ್ಯ ಧರ್ಮದವರು ಕೂಡಾ ತಮ್ಮ ಕುಲಗೋತ್ರಗಳೇ ಹೆಚ್ಚಿನವುಗಳೆಂದು ತಿಳಿದುಕೊಳ್ಳುವುದು ಜಗತ್ತಿನ ಸುಖ ಶಾಂತಿಗಳಿಗೆ ವಿಘಾತಕವಾದುದು.

ಅಂತೆಯೇ ಮನುಷ್ಯನು ತನ್ನ ಗುಣಶೀಲಾದಿಗಳಿಂದ ಹೆಚ್ಚು ಕಡಿಮೆಯವನಾಗಿ ಪರಿಣಮಿಸುತ್ತಾನೆಯೇ ವಿನಾ ಹುಟ್ಟಿನಿಂದ ಮೇಲು ಕೀಳೆಂದು ತಿಳಿಯಬಾರದಾಗಿ ಮನುಷ್ಯ ಜಾತಿಗೆ ಆ ಜಗದಣ್ಣನಾದ ಬಸವಣ್ಣನು ಸಾರಿಹೇಳಿದ್ದಾನೆ.

### ನ್ಯಾಯ ನಿಷ್ಠುರಿ ಬಸವಣ್ಣ.

ನ್ಯಾಯವಾದ ಸಂಗತಿಗಳನ್ನು ನುಡಿಯುವುದರಲ್ಲಾಗಲಿ ಅಥವಾ ನಡವಳಿಕೆಗೆ ತರುವುದರಲ್ಲಾಗಲಿ ದಾಕ್ಷಿಣ್ಯಪರರಾಗಬಾರದೆಂದೂ ನಿಷ್ಠುರವಾಗಿಯಾದರೂ ನ್ಯಾಯವನ್ನೇ ಆಚರಿಸಬೇಕೆಂದೂ ಆ ಮಹಾತ್ಮ ಬಸವಣ್ಣನು ಲೋಕಕ್ಕೆ ಬೋಧಿಸಿದನು. ಅದೇ ಪ್ರಕಾರ ತಾನೂ ಆಚರಿಸಿ ಅನೇಕ ವಿಪತ್ತುಗಳಿಗೆ ಎದೆಗೊಟ್ಟನು.

ಈಗ ಜನಾಂಗಕ್ಕೆ ಅಂಥ ನ್ಯಾಯ ನಿಷ್ಠುರತೆಯೇ ಬೇಕಾಗಿದೆ. ಅನ್ಯಾಯ, ದಾಕ್ಷಿಣ್ಯಗಳಿಂದ ಜನಾಂಗವು ನಿರ್ಬಲವಾಗುತ್ತಾ ಇದೆ.

### ಮರಣವೇ ಮಾನವಮಿಯೆಂದ ಬಸವಣ್ಣ.

ನ್ಯಾಯಪರನಾಗಿ ನಡೆಯಬೇಕಾದಾಗ ಬರುವ ವಿಪತ್ತುಗಳಿಗೆ ಎದೆಗೊಡಬೇಕು. ಆಗ ಬರುವ ಮರಣವು ತನಗೆ ಮಹಾನವಮಿ ಹಬ್ಬದಂತೆ ಸಂತೋಷಕರವಾದುದೆಂದು ತಿಳಿಯಬೇಕು. ಇಂಥ ಸತ್ಯಪ್ರೇಮ ಮತ್ತು ಸ್ವಾರ್ಥತ್ಯಾಗಗಳ ಮೂಲಕ ಲೋಕ ಸೇವೆಯನ್ನು ಮಾಡಬೇಕೆಂದೇ ಭಗವಾನ್ ಬಸವದೇವನು ತನ್ನ ನಡೆನುಡಿಗಳಿಂದ ಜನಾಂಗಕ್ಕೆ ತೋರಿಸಿದ್ದಾನೆ.

### ತಾಯಿ ನುಡಿಯ ಬೆಳಗಿದ ಬಸವಣ್ಣ.

ತಾಯಿ ನುಡಿಯಿಂದಲೇ ಮನುಷ್ಯನು ತನ್ನ ಉನ್ನತಿಯ ಎಲ್ಲ ಶಿಕ್ಷಣಗಳನ್ನೂ ಹೊಂದಬೇಕೆಂದು ಬಸವಣ್ಣನು ತನ್ನ ತತ್ವಗಳನ್ನು

ಕನ್ನಡದಲ್ಲಿಯೇ ಬೋಧಿಸಿದನು. ಬಸವ ಮಹಾತ್ಮನ ಈ ದಿವ್ಯ ತತ್ವವು ಈಗ ಲೋಕಮಾನ್ಯವಾಗಿದೆ.

ಕನ್ನಡ ನುಡಿಗೆ ಬಸವಣ್ಣನು ಹೊಸ ಬೆಳಕನ್ನು ತಂದುಕೊಟ್ಟನೆಂದೂ ಆ ಬೆಳಕಿನಲ್ಲಿ ನಾವು ಹೋದರೆ ನಮಗೆ ಬರುತ್ತಿರುವ ಅನೇಕ ಕಷ್ಟಗಳೆಲ್ಲಾ ನಿವಾರಣೆಯಾಗುವವೆಂದೂ ಈಗ ನಮ್ಮ ನಾಡಿನ ವಿಚಾರಪರರಾದ ಎಲ್ಲ ಮಹನೀಯರೂ ಹೇಳುತ್ತಿದ್ದಾರೆ.

### ಕೈಕಸಬು ಕೀಳಲ್ಲವೆಂದ ಬಸವಣ್ಣ.

ಜನ ಜೀವನಕ್ಕೆ ಸಾಧನವಾದ ಎಲ್ಲ ಕೈಕಸಬುಗಳೂ ಪವಿತ್ರವಾದವುಗಳೆಂದೇ ಬಸವಣ್ಣನು ಸಾರಿ ಹೇಳಿದನು. ಈ ದೇಶದಲ್ಲಿ ಸಾವಿರಾರು ವರುಷಗಳಿಂದ ಕೈಕಸಬುಗಳಲ್ಲಿಯೂ ಮೇಲು ಕೀಳುಗಳು ಕಲ್ಪಿಸಲ್ಪಟ್ಟಿದ್ದವು ಅವುಗಳನ್ನೆಲ್ಲ ಬಸವಣ್ಣನು ತೆಗೆದುಹಾಕಿ ಪಾದರಕ್ಷೆಗಳನ್ನು ಮಾಡುವ ಕಸಬಿನಿಂದ ಕೈಯಲ್ಲಿ ಕತ್ತಿಯನ್ನು ಹಿಡಿದು ರಣದಲ್ಲಿ ಹೋರಾಡುವ ಕೆಲಸದ ವರೆಗಿನ ಎಲ್ಲ ಕಸಬುಗಳೂ ಸಮಾನವಾದವುಗಳೆಂದೇ ತಿಳಿಸಿ ಜನಾಂಗವು ಸ್ವಾವಲಂಬಿಯಾಗುವಂತೆ ಮಾಡಿದನು.

### ಸಮತೆಯನು ಸಾರಿದನು ಬಸವಣ್ಣ.

ಗಂಡು-ಹೆಣ್ಣೆಂದಾಗಲಿ, ಹಾರುವ-ಶ್ವಪಚನೆಂದಾಗಲಿ, ಧನಿಕ-ದರಿದ್ರನೆಂದಾಗಲಿ ಸಾಮಾಜಿಕ ವಿಷಮತೆಯ ವಿಷವನ್ನು ಜನಾಂಗದಲ್ಲಿ ಇರಗೊಡದೆ ಎಲ್ಲೆಲ್ಲಿಯೂ ಸಮತೆಯನ್ನೇ ನೆಲೆಗೊಳಿಸಲು ಬಸವಣ್ಣನು ಪ್ರಯತ್ನಿಸಿದನು. ಅದಕ್ಕೆ ವ್ಯಕ್ತಿಯ ಸತ್ಯ, ದಯೆ, ಶೀಲಾದಿಗಳು ಕಾರಣಗಳೇ ವಿನಾ ಜನ್ಮ ಕಸಬು, ಧನಾದಿಗಳೇನೂ ಕಾರಣವಲ್ಲವೆಂದು ಬಸವಣ್ಣನು ಬೋಧಿಸಿದನು.

### ಉರಿಗೆ ಅರಗಾಗಿ ಕರಗಿರೆಂದ ಬಸವಣ್ಣ.

ದ್ವೈತ, ಅದ್ವೈತ, ಮೊದಲಾದ ಪಾರಲೌಕಿಕ ಸಂಗತಿಗಳ ವಾದಗಳಲ್ಲಿ ಕಾಲ ಕಳೆಯದೆ ಇಹಲೋಕದಲ್ಲಿ ಜನಾಂಗಕ್ಕಿರುವ ನಾನಾ ದುಃಖಗಳೆಂಬ ಉರಿಗೆ ನಿಮ್ಮ ತನು ಮನ ಧನಗಳೆಂಬ ಅರಗನ್ನು ಹಿಡಿದು ಕರಗಿಸಿರೆಂದು ಬಸವಣ್ಣನು ವ್ಯಾವಹಾರಿಕ ವೇದಾಂತವನ್ನು ಬೋಧಿಸಿ ಅದರಂತೆಯೇ ಆಚರಿಸಿದನು.

ಲೋಕಸೇವೆಗೆ ಆತ್ಮ ನೈವೇದ್ಯಮಾಡಿದಾತನೇ ಧನ್ಯನೆಂದು ಬಸವಣ್ಣನು ಹೇಳಿ ಮನುಷ್ಯ ಜಾತಿಯ ಮುಖ್ಯ ಧ್ಯೇಯ ಯಾವುದೆಂಬುದನ್ನು ತೋರಿಸಿದನು.

### ಅಂತೆಯೇ ಜಗದಣ್ಣ ಬಸವಣ್ಣ.

ಹೀಗೆ ಬಸವಣ್ಣನು ಜಗತ್ತಿನ ಸುಖ ಶಾಂತಿಗಳಿಗಾಗಿ ಮನುಷ್ಯನು ಮಾಡಬೇಕಾದ ಕಾರ್ಯಗಳ ರೀತಿ ನೀತಿಗಳನ್ನು ತೋರಿಸಿಕೊಟ್ಟಿದ್ದರಿಂದ ಆತನು ಜಗದಣ್ಣನಾಗಿದ್ದಾನೆ. ಆತನ ದಿವ್ಯ ತತ್ವಗಳು ಈಗ ಜನಮಾನ್ಯವಾಗಲಾರಂಭಿಸಿವೆ. ಅಂತೆಯೇ ಆತನು ವಿಜಯಶಾಲಿ.

ಜಯ ಬಸವ ಜಗದಣ್ಣ! ನಿನ್ನ ಈ ದಿವ್ಯ ತತ್ವಗಳು ಹೆಚ್ಚಾಗಿ ಜಾಗ್ರತೆ ಪ್ರಸಾರವಾಗಲಿ. ಈ ಜಯಂತಿಯು ಅಂಥ ಪವಿತ್ರ ಕಾರ್ಯಕ್ಕೆ ನೆರವಾಗಲಿ.

---

## ಬಿ. ರಾಮರಾಯರ ಪ್ರಯಾಣ.

ದಕ್ಷಿಣ ಅಫ್ರಿಕೆಯ ಏಜಂಟ ಜನರಲ್ಲರಾಗಿ ನಿಯಮಿಸಲ್ಪಟ್ಟಿರುವ ಶ್ರೀ. ಬಿ. ರಾಮರಾವ ಆಯ್. ಸಿ. ಎಸ್. ಇವರು ತಾ. ೨೭ ನೆಯ ದಿನ ಟೇರಿಯಾ ಉಗಿ ಹಡಗದಿಂದ ಪ್ರಯಾಣ ಬೆಳೆಸಿದರು.

## ಕೇರಳ ಪ್ರಾಂತಿಕ ರಾಜಕೀಯ ಪರಿಷತ್ತಿನಲ್ಲಿ ಬ್ಯಾ. ಜಯಪ್ರಕಾಶರ ಭಾಷಣ.

ಬ್ಯಾ. ಜಯಪ್ರಕಾಶ ನಾರಾಯಣರು ತಾ. ೨೫-೪-೩೮ ನೆಯ ದಿವಸ ನೆರೆದ ಕೇರಳ ಪ್ರಾಂತೀಯ ರಾಜಕೀಯ ಪರಿಷತ್ತಿನ ಅಧ್ಯಕ್ಷ ಪೀಠದಿಂದ ಈ ರೀತಿ ಭಾಷಣ ಮಾಡಿದರು—

"ಕಾಂಗ್ರೆಸ್ ಸಮತಾವಾದಿಗಳು ಕಾಂಗ್ರೆಸ್ಸಿಗೂ ಸಮತಾವಾದಕ್ಕೂ ಏಕಕಾಲದಲ್ಲೇ ಅಂಟಿಕೊಂಡಿರುವದು ಸರ್ವಥಾ ತಪ್ಪಲ್ಲ. ಸಮತಾವಾದಿ ಪಕ್ಷದಿಂದ ಕಾಂಗ್ರೆಸ್ಸಿನ ಶಕ್ತಿ ಕಡಿಮೆಯಾಗಿದೆ ಎಂದು ಭಾವಿಸುವುದು ಶೀರತಪ್ಪು. ಸಾಮ್ರಾಜ್ಯ ಶಾಹಿಯನ್ನು ವಿರೋಧಿಸುವಲ್ಲಿ ಹಾಗೂ ಜನಸಾಮಾನ್ಯರಲ್ಲಿ ನಿಕಟ ಸಂಬಂಧ ಬೆಳಸುವಲ್ಲಿ ಸಮತಾವಾದಿಗಳು ಕಾಂಗ್ರೆಸ್ಸಿಗೆ ಬೆಂಬಲಗೊಟ್ಟು ಅದರ ಶಕ್ತಿಯನ್ನು ಹೆಚ್ಚಿಸಿದ್ದಾರೆ. ಸಮತಾವಾದಿಗಳು ಕಾಂಗ್ರೆಸ್ ನಿರ್ಣಯಿಸಿದಂತೆ ಉತ್ಸಾಹಪೂರ್ವಕವಾಗಿ ಕೆಲಸಮಾಡಿ ತೋರಿಸಿದ್ದಾರೆ. ಮಂತ್ರಿಮಂಡಳ ಸ್ವೀಕರಿಸಿದ ಈ ಸುಸಂಧಿಯಲ್ಲಿ ಕಾಂಗ್ರೆಸ್ಸು ಎಲ್ಲೆಡೆಗಳಲ್ಲಿಯೂ ತನ್ನ ಕಮಿಟಿಗಳನ್ನು ಬಲಗೊಳಿಸಿ ಬ್ರಿಟಿಷ್ ಸರಕಾರಕ್ಕೆ ಸಮಾನವಾದ ಎರಡನೇ ಸರಕಾರವನ್ನು ಸ್ಥಾಪಿಸಲು ಪ್ರಯತ್ನಿಸಬೇಕು. ಪ್ರಾಥಮಿಕ ಕಾಂಗ್ರೆಸ್ ಕಮಿಟಿಗಳು ಸಿದ್ಧಗೊಳಿಸುವ ಬಲವಾದ ಸ್ವಯಂಸೇವಕ ದಳವು ಈಗಿನ ಪೋಲಿಸ ಖಾತೆಯ ಸ್ಥಳವನ್ನು ಆಕ್ರಮಿಸಬೇಕು. ಮ್ಯಾಜಿಸ್ಟ್ರೇಟರುಗಳ ಹಾಗು ಪೋಲಿಸರ ಮೇಲೆ ಜನಸಾಮಾನ್ಯರಿಗೆ ಅಧಿಕಾರ ಉಂಟಾಗುವಂತೆ ಸ್ಥಾನಿಕ ಸಂಸ್ಥೆ (ಲೋಕಲ್‌ಬೋರ್ಡು ಮುಂತಾದವು) ಗಳನ್ನು ಬಲಪಡಿಸಬೇಕು.

ಕಾಂಗ್ರೆಸ್ಸಿನಲ್ಲಿರುವ ಸಮಯಸಾಧಕ ಸ್ವಾರ್ಥಿಗಳನ್ನು ಹೊರಗೆ ತಳ್ಳಿ, ಅದನ್ನಿಂದು ಬಲಗೊಳಿಸಬೇಕಾಗಿದೆ. ಕಾಂಗ್ರೆಸ್ಸು ಅಧಿಕಾರ ಸ್ವೀಕಾರ ಮಾಡಿದ್ದರಿಂದ ಅದರಲ್ಲಿ ನಾನಾ ತರದ ಜನಗಳು ಕೇವಲ ಸ್ವಾರ್ಥ ಸಾಧಿಸಿಕೊಳ್ಳುವುದಕ್ಕಾಗಿ ಬಂದು ಸೇರಿದ್ದಾರೆ. ಮಹಾತ್ಮಾ ಗಾಂಧಿಯವರೂ ಇದನ್ನು ಅರಿತಿದ್ದಾರೆ."

ಎಂದು ನುಡಿದು, ತಾವು ಸಮತಾವಾದಿಗಳಾದದ್ದೇಕೆಂಬುದನ್ನು ವಿವರಿಸುತ್ತ, ಸಮತಾವಾದವೇ ಹಿಂದುಸ್ಥಾನದ ದಿವ್ಯೌಷಧವಾಗಿದೆಯೆಂದು ಸಾರಿದರು.

ಸಂಯುಕ್ತ ಘಟನೆಯನ್ನು ನಿಷೇಧಿಸಬೇಕೆಂದೂ ಒಂದು ವೇಳೆ ಅದು ಬಲಾತ್ಕಾರವಾಗಿ ಹೊರಿಸಲ್ಪಟ್ಟರೆ ಸಾರ್ವತ್ರಿಕ ಕಾಯಿದೆಭಂಗ, ಸಂಪು, ಕರನಿರಾಕರಣ ಮುಂತಾದ ಚಳವಳಿಗಳನ್ನು ಹೂಡಬೇಕೆಂದೂ ಠರಾವು ಮಾಡಲ್ಪಟ್ಟಿತು.

ಯುದ್ಧ ವಿರೋಧಕ ಠರಾವು ಹಾಗೂ ಕೂಲಿಕಾರರ ಮತ್ತು ಒಕ್ಕಲಿಗ ಸಂಘಟನೆ ಮತ್ತು ಸಂರಕ್ಷಣೆ ಸಂಬಂಧಪಟ್ಟ ಠರಾವು ಸ್ವೀಕೃತವಾದವು.

ಇನ್ನೊಂದು ಗೊತ್ತುವಳಿಯ ಪ್ರಕಾರ ಕೇರಳವನ್ನು ಸ್ವತಂತ್ರ ಪ್ರಾಂತವಾಗಿ ವಿಭಾಗಿಸತಕ್ಕದ್ದೆಂದು ಸಾರಲಾಯಿತು.

ಕೊಚ್ಚಿ, ತಿರವಾಂಕೂರ ಮತ್ತು ಮೈಸೂರು ದೇಶಿ ಸಂಸ್ಥಾನಗಳಲ್ಲೀಗ ಜವಾಬ್ದಾರಿ ಸರಕಾರ ಸ್ಥಾಪನೆಯ ಬಗ್ಗೆ ನಡೆದಿರುವ ಚಳವಳಿಯನ್ನು ಸಮರ್ಥಿಸುವ ಇನ್ನೊಂದು ಗೊತ್ತುವಳಿಯು ಪಾಸಾಯಿತು.

ಅಖಿಲ ಭಾರತ ಕಮ್ಯುನಿಷ್ಟ ಪಾರ್ಟಿಯ ಮೇಲಣ ನಿರ್ಬಂಧವನ್ನು ತೆಗೆದು ಹಾಕುವ ಬಗ್ಗೆಯೂ ಠರಾವು ಪಾಸಾಯಿತು.

---



ಶಾ. ಶ. ೧೮೬೦ ನೆಯ ವೈಶಾಖ ಶು|| ೨ ಸೋಮವಾರ.

# ಜಯ ಬಸವ ಜಗದಣ್ಣ!

ಈ ದಿವಸ ಮಹಾನುಭಾವರಾದ ಬಸವಣ್ಣನವರ ಜಯಂತಿಯು. ಹನ್ನೆರಡನೆಯ ಶತಮಾನದಲ್ಲಿ ಅತ್ಯದ್ಭುತವಾದ ಧಾರ್ಮಿಕ, ಸಾಮಾಜಿಕ, ಆರ್ಥಿಕ ಕ್ರಾಂತಿಗಳನ್ನು ಮಾಡಿದ ಬಸವ ಮಹಾತ್ಮರ ಈ ಜಯಂತ್ಯುತ್ಸವವು ಪ್ರಾರಂಭವಾಗಿ ಇಂದಿಗೆ ಇಪ್ಪತ್ತೈದು ವರುಷಗಳಾದವು. ಈಗ ಕೆಲವು ಶತಮಾನದಲ್ಲಿ ಕರ್ನಾಟಕದಲ್ಲಂತೂ ಇದೊಂದು ರಾಷ್ಟ್ರೀಯ ಮಹೋತ್ಸವವಾಗಿಯೇ ಪರಿಣಮಿಸಿದೆ.

ರಾಷ್ಟ್ರೋನ್ನತಿಗೆ ಈಗ ಅತ್ಯವಶ್ಯಕವಾದ ಅನೇಕ ಸಂಗತಿಗಳು ಜನಾಂಗದಲ್ಲಿ ಆಚರಣೆಗೆ ಬರಲು ಈ ಮಹಾನುಭಾವರ ಜಯಂತಿಯು ಎಷ್ಟೋ ಸಹಾಯವಾಗುತ್ತಾ ಇದೆ. ಹೀಗೆ ಬಸವ ಮಹಾನುಭಾವರ ೮೦೦ ವರುಷಗಳ ಹಿಂದಿನ ದಿವ್ಯೋಪದೇಶಗಳು ಈಗಿನ ಜನಜಾಗೃತಿಗೆ ತುಂಬಾ ಸಹಾಯಮಾಡುತ್ತಿರುವುದರಿಂದಲೇ ಕನ್ನಡ ನಾಡಿಗೆ ಇದೊಂದು ರಾಷ್ಟ್ರೀಯ ಹಬ್ಬವಾಗಿ ಪರಿಣಮಿಸಿರುವುದು ಸ್ವಾಭಾವಿಕವು.

### ಕುಲಮದವ ಕಳಿದ ಬಸವಣ್ಣ.

ಬಸವಣ್ಣನವರ ನಡೆ ನುಡಿಗಳು ಕನ್ನಡ ನಾಡಿಗೆ ಗೊತ್ತಿರುವಂತೆ ಹಿಂದುಸ್ಥಾನದ ಬೇರೆ ಬೇರೆ ಪ್ರಾಂತಗಳಿಗೆ ಗೊತ್ತಿಲ್ಲ. ಇದೊಂದು ದೊಡ್ಡ ಕೊರತೆಯೇ ಸರಿ. ಈ ಕೊರತೆಯು ನಿವಾರಣೆಯಾದರೆ ಬಸವ ಜಯಂತಿಯು ಅಖಿಲ ಭಾರತದಲ್ಲಿ ಆಚರಿಸಲ್ಪಡದೇ ಇರಲಾರದು. ಏಕೆಂದರೆ, ಬಸವಣ್ಣನವರ ನಡೆ ನುಡಿಗಳು ಬೇರೆ ಅನೇಕ ಪ್ರಾಂತಗಳಿಗೆ ಗೊತ್ತಿರದಿದ್ದರೂ ಅವರ ತತ್ವದ ಕಡೆಗೇನೇ ಆ ಪ್ರಾಂತಗಳು ಹೋಗುತ್ತಲಿವೆ.

ಹಿಂದುಸ್ಥಾನದಲ್ಲಿ ಕುಲಮದವು ಬಹು ಕಾಲದಿಂದಲೂ ಬೇರೂರಿದೆ. ಜನ್ಮ ವಿಶಿಷ್ಟವಾದ ಮೇಲು ಕೀಳುಗಳೆಂಬ ಈ ಕುಲಮದವು ಹಿಂದು ಜನಾಂಗಕ್ಕೆ ಭಯಂಕರವಾದ ಹುಣ್ಣಾಗಿದೆ. ಇದರಿಂದಲೇ ಈ ಜನಾಂಗವು ದಿನೆ ದಿನೆ ಕ್ಷೀಣಿಸುತ್ತಲಿದೆಯೆಂದೂ ಈ ಕುಲಮದದ ಘೋರ ವಿಷವನ್ನು ಜಾಗ್ರತೆ ತೆಗೆದುಹಾಕಬೇಕೆಂದೂ ಅನೇಕ ವಿಭೂತಿಗಳು ಈಗ ಪ್ರಚಂಡ ಪ್ರಯತ್ನಗಳನ್ನು ಮಾಡುತ್ತಿದ್ದಾರೆ.

ಅಂತೆಯೇ ಬಸವಣ್ಣನವರ ಈ ಕೆಳಗಿನ ದಿವ್ಯೋಪದೇಶವು ಕೇವಲ ಕನ್ನಡ ನಾಡಿಗೇನೇ ಅಲ್ಲ; ಹಿಂದುಸ್ಥಾನಕ್ಕೇನೇ ಈಗ ಪರಮೌಷಧವಾಗಿದೆ.

ಕೊಲ್ಲುವನೆ ಮಾದಿಗ. ಹೊಲಸು ತಿಂಬುವನೆ
ಹೊಲೆಯ. ಕುಲವೇನೋ? ಅವಂದಿರ ಕುಲವೇನೋ?
ಸಕಲ ಜೀವಾತ್ಮರಿಗೆ ಲೇಸನೆ ಬಯಸುವವ ಕುಲಜ.

ಹಿಂದು ಜನಾಂಗವು ಈಗ ಛಿನ್ನ ವಿಚ್ಛಿನ್ನವಾಗಿ, ಪರದೇಶ ಪರಧರ್ಮದವರ ಆಕ್ರಮಣಗಳಿಗೆ ಆಹುತಿಯಾಗಿ, ಬಳಲುತ್ತಿರುವುದಕ್ಕೆ ಹಿಂದುಗಳಲ್ಲಿ ಬೇರೂರಿರುವ ಜನ್ಮವಿಶಿಷ್ಟ ಮೇಲು ಕೀಳುಗಳ ಕುಲ ಕಲ್ಪನೆಯೇ ಮುಖ್ಯ ಕಾರಣವು. ಇದನ್ನು ಬಸವ ಮಹಾನುಭಾವನು ನಾಶಮಾಡಲು ಅತ್ಯದ್ಭುತ ಪ್ರಯತ್ನ ಮಾಡಿದನು. ಆ ಮಹಾತ್ಮನು ಹೀಗೆ ಹೇಳಿಕೊಂಡಿದ್ದಾನೆ—

ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ
ಹೊರೆಯ ಹೊರಸದಿರಯ್ಯಾ।

ಹಿಂದು ಜನಾಂಗದವರೇ ಅಲ್ಲ ಅನ್ಯ ಧರ್ಮದವರು ಕೂಡಾ ತಮ್ಮ ಕುಲಗೋತ್ರಗಳೇ ಹೆಚ್ಚಿನವುಗಳೆಂದು ತಿಳಿದುಕೊಳ್ಳುವುದು ಜಗತ್ತಿನ ಸುಖ ಶಾಂತಿಗಳಿಗೆ ವಿಘಾತಕವಾದುದು.

ಅಂತೆಯೇ ಮನುಷ್ಯನು ತನ್ನ ಗುಣಶೀಲಾದಿಗಳಿಂದ ಹೆಚ್ಚು ಕಡಿಮೆಯವನಾಗಿ ಪರಿಣಮಿಸುತ್ತಾನೆಯೇ ವಿನಾ ಹುಟ್ಟಿನಿಂದ ಮೇಲು ಕೀಳೆಂದು ತಿಳಿಯಬಾರದಾಗಿ ಮನುಷ್ಯ ಜಾತಿಗೆ ಆ ಜಗದಣ್ಣನಾದ ಬಸವಣ್ಣನು ಸಾರಿಹೇಳಿದ್ದಾನೆ.

### ನ್ಯಾಯ ನಿಷ್ಠುರಿ ಬಸವಣ್ಣ.

ನ್ಯಾಯವಾದ ಸಂಗತಿಗಳನ್ನು ನುಡಿಯುವುದರಲ್ಲಾಗಲಿ ಅಥವಾ ನಡವಳಿಕೆಗೆ ತರುವುದರಲ್ಲಾಗಲಿ ದಾಕ್ಷಿಣ್ಯಪರರಾಗಬಾರದೆಂದೂ ನಿಷ್ಠುರವಾಗಿಯಾದರೂ ನ್ಯಾಯವನ್ನೇ ಆಚರಿಸಬೇಕೆಂದೂ ಆ ಮಹಾತ್ಮ ಬಸವಣ್ಣನು ಲೋಕಕ್ಕೆ ಬೋಧಿಸಿದನು. ಅದೇ ಪ್ರಕಾರ ತಾನೂ ಆಚರಿಸಿ ಅನೇಕ ವಿಪತ್ತುಗಳಿಗೆ ಎದೆಗೊಟ್ಟನು.

ಈಗ ಜನಾಂಗಕ್ಕೆ ಅಂಥ ನ್ಯಾಯ ನಿಷ್ಠುರತೆಯೇ ಬೇಕಾಗಿದೆ. ಅನ್ಯಾಯ, ದಾಕ್ಷಿಣ್ಯಗಳಿಂದ ಜನಾಂಗವು ನಿರ್ಬಲವಾಗುತ್ತಾ ಇದೆ.

### ಮರಣವೇ ಮಾನವಮಿಯೆಂದ ಬಸವಣ್ಣ.

ನ್ಯಾಯಪರನಾಗಿ ನಡೆಯಬೇಕಾದಾಗ ಬರುವ ವಿಪತ್ತುಗಳಿಗೆ ಎದೆಗೊಡಬೇಕು. ಆಗ ಬರುವ ಮರಣವು ತನಗೆ ಮಹಾನವಮಿ ಹಬ್ಬದಂತೆ ಸಂತೋಷಕರವಾದುದೆಂದು ತಿಳಿಯಬೇಕು. ಇಂಥ ಸತ್ಯಪ್ರೇಮ ಮತ್ತು ಸ್ವಾರ್ಥತ್ಯಾಗಗಳ ಮೂಲಕ ಲೋಕ ಸೇವೆಯನ್ನು ಮಾಡಬೇಕೆಂದೇ ಭಗವಾನ್ ಬಸವದೇವನು ತನ್ನ ನಡೆ ನುಡಿಗಳಿಂದ ಜನಾಂಗಕ್ಕೆ ತೋರಿಸಿದ್ದಾನೆ.

### ತಾಯಿ ನುಡಿಯ ಬೆಳಗಿದ ಬಸವಣ್ಣ.

ತಾಯಿ ನುಡಿಯಿಂದಲೇ ಮನುಷ್ಯನು ತನ್ನ ಉನ್ನತಿಯ ಎಲ್ಲ ಶಿಕ್ಷಣಗಳನ್ನೂ ಹೊಂದಬೇಕೆಂದು ಬಸವಣ್ಣನು ತನ್ನ ತತ್ವಗಳನ್ನು

ಕನ್ನಡದಲ್ಲಿಯೇ ಬೋಧಿಸಿದನು. ಬಸವ ಮಹಾತ್ಮನ ಈ ದಿವ್ಯ ತತ್ವವು ಈಗ ಲೋಕಮಾನ್ಯವಾಗಿದೆ.

ಕನ್ನಡ ನುಡಿಗೆ ಬಸವಣ್ಣನು ಹೊಸ ಬೆಳಕನ್ನು ತಂದುಕೊಟ್ಟನೆಂದೂ ಆ ಬೆಳಕಿನಲ್ಲಿ ನಾವು ಹೋದರೆ ನಮಗೆ ಬರುತ್ತಿರುವ ಅನೇಕ ಕಷ್ಟಗಳೆಲ್ಲಾ ನಿವಾರಣೆಯಾಗುವವೆಂದೂ ಈಗ ನಮ್ಮ ನಾಡಿನ ವಿಚಾರಪರರಾದ ಎಲ್ಲ ಮಹನೀಯರೂ ಹೇಳುತ್ತಿದ್ದಾರೆ.

### ಕೈಕಸಬು ಕೀಳಲ್ಲವೆಂದ ಬಸವಣ್ಣ.

ಜನ ಜೀವನಕ್ಕೆ ಸಾಧನವಾದ ಎಲ್ಲ ಕೈಕಸಬುಗಳೂ ಪವಿತ್ರವಾದವುಗಳೆಂದೇ ಬಸವಣ್ಣನು ಸಾರಿ ಹೇಳಿದನು. ಈ ದೇಶದಲ್ಲಿ ಸಾವಿರಾರು ವರುಷಗಳಿಂದ ಕೈಕಸಬುಗಳಲ್ಲಿಯೂ ಮೇಲು ಕೀಳುಗಳು ಕಲ್ಪಿಸಲ್ಪಟ್ಟಿದ್ದವು ಅವುಗಳನ್ನೆಲ್ಲ ಬಸವಣ್ಣನು ತೆಗೆದುಹಾಕಿ ಪಾದರಕ್ಷೆಗಳನ್ನು ಮಾಡುವ ಕಸಬಿನಿಂದ ಕೈಯಲ್ಲಿ ಕತ್ತಿಯನ್ನು ಹಿಡಿದು ರಣದಲ್ಲಿ ಹೋರಾಡುವ ಕೆಲಸದ ವರೆಗಿನ ಎಲ್ಲ ಕಸಬುಗಳೂ ಸಮಾನವಾದವುಗಳೆಂದೇ ತಿಳಿಸಿ ಜನಾಂಗವು ಸ್ವಾವಲಂಬಿಯಾಗುವಂತೆ ಮಾಡಿದನು.

### ಸಮತೆಯನು ಸಾರಿದನು ಬಸವಣ್ಣ.

ಗಂಡು-ಹೆಣ್ಣೆಂದಾಗಲಿ, ಹಾರುವ-ಶ್ವಪಚನೆಂದಾಗಲಿ, ಧನಿಕ-ದರಿದ್ರನೆಂದಾಗಲಿ ಸಾಮಾಜಿಕ ವಿಷಮತೆಯ ವಿಷವನ್ನು ಜನಾಂಗದಲ್ಲಿ ಇರಗೊಡದೆ ಎಲ್ಲೆಲ್ಲಿಯೂ ಸಮತೆಯನ್ನೇ ನೆಲೆಗೊಳಿಸಲು ಬಸವಣ್ಣನು ಪ್ರಯತ್ನಿಸಿದನು. ಅದಕ್ಕೆ ವ್ಯಕ್ತಿಯ ಸತ್ಯ, ದಯೆ, ಶೀಲಾದಿಗಳು ಕಾರಣಗಳೇ ವಿನಾ ಜನ್ಮ ಕಸಬು, ಧನಾದಿಗಳೇನೂ ಕಾರಣವಲ್ಲವೆಂದು ಬಸವಣ್ಣನು ಬೋಧಿಸಿದನು.

### ಉರಿಗೆ ಅರಗಾಗಿ ಕರಗಿರೆಂದ ಬಸವಣ್ಣ.

ದ್ವೈತ, ಅದ್ವೈತ, ಮೊದಲಾದ ಪಾರಲೌಕಿಕ ಸಂಗತಿಗಳ ವಾದಗಳಲ್ಲಿ ಕಾಲ ಕಳೆಯದೆ ಇಹಲೋಕದಲ್ಲಿ ಜನಾಂಗಕ್ಕಿರುವ ನಾನಾ ದುಃಖಗಳೆಂಬ ಉರಿಗೆ ನಿಮ್ಮ ತನು ಮನ ಧನಗಳೆಂಬ ಅರಗನ್ನು ಹಿಡಿದು ಕರಗಿಸಿರೆಂದು ಬಸವಣ್ಣನು ವ್ಯಾವಹಾರಿಕ ವೇದಾಂತವನ್ನು ಬೋಧಿಸಿ ಅದರಂತೆಯೇ ಆಚರಿಸಿದನು.

ಲೋಕಸೇವೆಗೆ ಆತ್ಮ ನೈವೇದ್ಯಮಾಡಿದಾತನೇ ಧನ್ಯನೆಂದು ಬಸವಣ್ಣನು ಹೇಳಿ ಮನುಷ್ಯ ಜಾತಿಯ ಮುಖ್ಯ ಧ್ಯೇಯ ಯಾವುದೆಂಬುದನ್ನು ತೋರಿಸಿದನು.

### ಅಂತೆಯೇ ಜಗದಣ್ಣ ಬಸವಣ್ಣ.

ಹೀಗೆ ಬಸವಣ್ಣನು ಜಗತ್ತಿನ ಸುಖ ಶಾಂತಿಗಳಿಗಾಗಿ ಮನುಷ್ಯನು ಮಾಡಬೇಕಾದ ಕಾರ್ಯಗಳ ರೀತಿ ನೀತಿಗಳನ್ನು ತೋರಿಸಿಕೊಟ್ಟಿದ್ದರಿಂದ ಆತನು ಜಗದಣ್ಣನಾಗಿದ್ದಾನೆ. ಆತನ ದಿವ್ಯ ತತ್ವಗಳು ಈಗ ಜನಮಾನ್ಯವಾಗಲಾರಂಭಿಸಿವೆ. ಅಂತೆಯೇ ಆತನು ವಿಜಯಶಾಲಿ.

ಜಯ ಬಸವ ಜಗದಣ್ಣ! ನಿನ್ನ ಈ ದಿವ್ಯ ತತ್ವಗಳು ಹೆಚ್ಚಾಗಿ ಜಾಗ್ರತೆ ಪ್ರಸಾರವಾಗಲಿ. ಈ ಜಯಂತಿಯು ಅಂಥ ಪವಿತ್ರ ಕಾರ್ಯಕ್ಕೆ ನೆರವಾಗಲಿ.

---

## ಬಿ. ರಾಮರಾಯರ ಪ್ರಯಾಣ.

ದಕ್ಷಿಣ ಆಫ್ರಿಕೆಯ ಏಜಂಟ ಜನರಲ್ಲರಾಗಿ ನಿಯಮಿಸಲ್ಪಟ್ಟಿರುವ ಶ್ರೀ. ಬಿ. ರಾಮರಾವ ಆಯ್. ಸಿ. ಎಸ್. ಇವರು ತಾ. ೨೭ ನೆಯ ದಿನ ಟೇರಿಯಾ ಉಗಿ ಹಡಗದಿಂದ ಪ್ರಯಾಣ ಬೆಳೆಸಿದರು.

## ಕೇರಳ ಪ್ರಾಂತಿಕ ರಾಜಕೀಯ ಪರಿಷತ್ತಿನಲ್ಲಿ ಬ್ಯಾ. ಜಯಪ್ರಕಾಶರ ಭಾಷಣ.

ಬ್ಯಾ. ಜಯಪ್ರಕಾಶ ನಾರಾಯಣರು ತಾ. ೨೫-೪-೩೮ ನೆಯ ದಿವಸ ನೆರೆದ ಕೇರಳ ಪ್ರಾಂತೀಯ ರಾಜಕೀಯ ಪರಿಷತ್ತಿನ ಅಧ್ಯಕ್ಷ ಪೀಠದಿಂದ ಈ ರೀತಿ ಭಾಷಣ ಮಾಡಿದರು—

"ಕಾಂಗ್ರೆಸ್ ಸಮತಾವಾದಿಗಳು ಕಾಂಗ್ರೆಸ್ಸಿಗೂ ಸಮತಾವಾದಕ್ಕೂ ಏಕಕಾಲದಲ್ಲೇ ಅಂಟಿಕೊಂಡಿರುವದು ಸರ್ವಥಾ ತಪ್ಪಲ್ಲ. ಸಮತಾವಾದಿ ಪಕ್ಷದಿಂದ ಕಾಂಗ್ರೆಸ್ಸಿನ ಶಕ್ತಿ ಕಡಿಮೆಯಾಗಿದೆ ಎಂದು ಭಾವಿಸುವುದು ತೀರ ತಪ್ಪು. ಸಾಮ್ರಾಜ್ಯ ಶಾಹಿಯನ್ನು ವಿರೋಧಿಸುವಲ್ಲಿ ಹಾಗೂ ಜನಸಾಮಾನ್ಯರಲ್ಲಿ ನಿಕಟ ಸಂಬಂಧ ಬೆಳಸುವಲ್ಲಿ ಸಮತಾವಾದಿಗಳು ಕಾಂಗ್ರೆಸ್ಸಿಗೆ ಬೆಂಬಲಗೊಟ್ಟು ಅದರ ಶಕ್ತಿಯನ್ನು ಹೆಚ್ಚಿಸಿದ್ದಾರೆ. ಸಮತಾವಾದಿಗಳು ಕಾಂಗ್ರೆಸ್ ನಿರ್ಣಯಿಸಿದಂತೆ ಉತ್ಸಾಹಪೂರ್ವಕವಾಗಿ ಕೆಲಸಮಾಡಿ ತೋರಿಸಿದ್ದಾರೆ. ಮಂತ್ರಿಮಂಡಳ ಸ್ವೀಕರಿಸಿದ ಈ ಸುಸಂಧಿಯಲ್ಲಿ ಕಾಂಗ್ರೆಸ್ಸು ಎಲ್ಲೆಡೆಗಳಲ್ಲಿಯೂ ತನ್ನ ಕಮಿಟಿಗಳನ್ನು ಬಲಗೊಳಿಸಿ ಬ್ರಿಟಿಷ್ ಸರಕಾರಕ್ಕೆ ಸಮಾನವಾದ ಎರಡನೇ ಸರಕಾರವನ್ನು ಸ್ಥಾಪಿಸಲು ಪ್ರಯತ್ನಿಸಬೇಕು. ಪ್ರಾಥಮಿಕ ಕಾಂಗ್ರೆಸ್ ಕಮಿಟಿಗಳು ಸಿದ್ಧಗೊಳಿಸುವ ಬಲವಾದ ಸ್ವಯಂಸೇವಕ ದಳವು ಈಗಿನ ಪೋಲಿಸ ಖಾತೆಯ ಸ್ಥಳವನ್ನು ಆಕ್ರಮಿಸಬೇಕು. ಮ್ಯಾಜಿಸ್ಟ್ರೇಟರುಗಳ ಹಾಗು ಪೋಲಿಸರ ಮೇಲೆ ಜನಸಾಮಾನ್ಯರಿಗೆ ಅಧಿಕಾರ ಉಂಟಾಗುವಂತೆ ಸ್ಥಾನಿಕ ಸಂಸ್ಥೆ (ಲೋಕಲ್‌ಬೋರ್ಡು ಮುಂತಾದವು) ಗಳನ್ನು ಬಲಪಡಿಸಬೇಕು.

ಕಾಂಗ್ರೆಸ್ಸಿನಲ್ಲಿರುವ ಸಮಯಸಾಧಕ ಸ್ವಾರ್ಥಿಗಳನ್ನು ಹೊರಗೆ ತಳ್ಳಿ, ಅದನ್ನಿಂದು ಬಲಗೊಳಿಸಬೇಕಾಗಿದೆ. ಕಾಂಗ್ರೆಸ್ಸು ಅಧಿಕಾರ ಸ್ವೀಕಾರ ಮಾಡಿದ್ದರಿಂದ ಅದರಲ್ಲಿ ನಾನಾ ತರದ ಜನಗಳು ಕೇವಲ ಸ್ವಾರ್ಥ ಸಾಧಿಸಿಕೊಳ್ಳುವುದಕ್ಕಾಗಿ ಬಂದು ಸೇರಿದ್ದಾರೆ. ಮಹಾತ್ಮಾ ಗಾಂಧಿಯವರೂ ಇದನ್ನು ಅರಿತಿದ್ದಾರೆ."

ಎಂದು ನುಡಿದು, ತಾವು ಸಮತಾವಾದಿಗಳಾದದ್ದೇಕೆಂಬುದನ್ನು ವಿವರಿಸುತ್ತ, ಸಮತಾವಾದವೇ ಹಿಂದುಸ್ಥಾನದ ದಿವ್ಯೌಷಧವಾಗಿದೆಯೆಂದು ಸಾರಿದರು.

ಸಂಯುಕ್ತ ಘಟನೆಯನ್ನು ನಿಷೇಧಿಸಬೇಕೆಂದೂ ಒಂದು ವೇಳೆ ಅದು ಬಲಾತ್ಕಾರವಾಗಿ ಹೊರಿಸಲ್ಪಟ್ಟರೆ ಸಾರ್ವತ್ರಿಕ ಕಾಯಿದೆಭಂಗ, ಸಂಪು, ಕರನಿರಾಕರಣ ಮುಂತಾದ ಚಳವಳಿಗಳನ್ನು ಹೂಡಬೇಕೆಂದೂ ಠರಾವು ಮಾಡಲ್ಪಟ್ಟಿತು.

ಯುದ್ಧ ವಿರೋಧಕ ಠರಾವು ಹಾಗೂ ಕೂಲಿಕಾರರ ಮತ್ತು ಒಕ್ಕಲಿಗ ಸಂಘಟನೆ ಮತ್ತು ಸಂರಕ್ಷಣೆ ಸಂಬಂಧಪಟ್ಟ ಠರಾವು ಸ್ವೀಕೃತವಾದವು.

ಇನ್ನೊಂದು ಗೊತ್ತುವಳಿಯ ಪ್ರಕಾರ ಕೇರಳವನ್ನು ಸ್ವತಂತ್ರ ಪ್ರಾಂತವಾಗಿ ವಿಭಾಗಿಸತಕ್ಕದ್ದೆಂದು ಸಾರಲಾಯಿತು.

ಕೊಚ್ಚಿ, ತಿರವಾಂಕೂರ ಮತ್ತು ಮೈಸೂರು ದೇಶಿ ಸಂಸ್ಥಾನಗಳಲ್ಲೀಗ ಜವಾಬ್ದಾರಿ ಸರಕಾರ ಸ್ಥಾಪನೆಯ ಬಗ್ಗೆ ನಡೆದಿರುವ ಚಳವಳಿಯನ್ನು ಸಮರ್ಥಿಸುವ ಇನ್ನೊಂದು ಗೊತ್ತುವಳಿಯು ಪಾಸಾಯಿತು.

ಅಖಿಲ ಭಾರತ ಕಮ್ಯುನಿಷ್ಟ ಪಾರ್ಟಿಯ ಮೇಲಣ ನಿರ್ಬಂಧವನ್ನು ತೆಗೆದು ಹಾಕುವ ಬಗ್ಗೆಯೂ ಠರಾವು ಪಾಸಾಯಿತು.

# ಅಕ್ಕ ಮಹಾದೇವಿಯ ಜಯಂತಿ.

## ಗದಗ.

ಹಾಲಕೆರಿ ಅನ್ನದಾನ ಮಹಾಸ್ವಾಮಿಗಳವರ ಮಠದಲ್ಲಿ ಉಡುತಡಿಯ ಮಹಾದೇವಿಯಕ್ಕನ ಜಯಂತ್ಯುತ್ಸವವು ಗದಗಿನ ಅಕ್ಕನ ಬಳಗದವರ ಪರವಾಗಿ ೫ ದಿವಗಳ ವರೆಗೂ ನಡೆಯಿತು. ಚೈತ್ರ ಶು|| ೧೫ ಗುರುವಾರ ಅಕ್ಕಗಳ ಭಾವಚಿತ್ರವನ್ನು ಸ್ಥಾಪಿಸಿ ಎಲ್ಲರೂ ಉತ್ಸಾಹದಿಂದ ಮಂಗಲ ಗೀತೆಯನ್ನು ಹಾಡಿದರು. ಅನಂತರ ಹಿರಿಯರು ಅಕ್ಕನ ವಚನಗಳನ್ನು ಹೇಳಿ ಅವುಗಳ ತಾತ್ಪರ್ಯವನ್ನು ಸಭಿಕರಿಗೆಲ್ಲ ಆನಂದವಾಗುವಂತೆ ತಿಳಿಸಿಕೊಟ್ಟರು. ಇದರಂತೆಯೇ ಬಾಲಿಕೆಯರೂ ತಮ್ಮ ಮಧುರವಾದ ವಾಣಿಯಿಂದ ವಚನಗಳನ್ನು ಪಠಿಸಿ ಸಭಿಕರನ್ನೆಲ್ಲ ಸಂತೋಷ ಸಾಗರದಲ್ಲಿ ಮುಳುಗಿಸಿದರು. ಅನಂತರ ಮಂಗಲದೊಡನೆ ಆ ದಿವದ ಕಾರ್ಯವು ಪೂರೈಸಲ್ಪಟ್ಟಿತು. ಈ ಪ್ರಕಾರ ೪ ದಿವಸಗಳ ವರೆಗೂ ಕಾರ್ಯಕ್ರಮ ಜರುಗಿದನಂತರ ಕೊನೆಯ ಸೋಮವಾರ ದಿವಸದ ಸಭೆಯಲ್ಲಿ ನಮ್ಮ ಬಳಗದ ಆಮಂತ್ರಣವನ್ನು ಮನ್ನಿಸಿ ಶ್ರೀ. ಶಿವಯೋಗಪ್ಪನವರು ಶೆಟ್ಟರು ಕರ್ಜಗಿ ನಿವೃತ್ತ ಸುಪರವಾಯಜರ್, ಪಂ. ನಾಗಭೂಷಣ ಶಾಸ್ತ್ರಿಗಳು, ಶ್ರೀ. ಕಲ್ಮಠ ಮಾಸ್ತರರು ಬಿ. ಎ. ಬಿ. ಟಿ. ಮೊದಲಾದವರು ಸಮಯೋಚಿತ ಭಾಷಣ ಮಾಡಿದರು.

ಶ್ರೀ. ಕಲ್ಮಠ ಮಾಸ್ತರರು, "ತಾವು ಈ ಅಕ್ಕನ ಬಳಗವನ್ನು ಏರ್ಪಡಿಸಿಕೊಂಡು ಅತ್ಯುತ್ಸಾಹದಿಂದ ಕಾರ್ಯ ನೆರವೇರಿಸುತ್ತಿರುವದನ್ನು ನೋಡಿ ನನಗೆ ತುಂಬಾ ಆನಂದವಾಗಿದೆ. ಗದಗಿನ ವೀರಶೈವ ಸಮಾಜಕ್ಕೆ ಈ ಬಳಗವು ಗೌರವಾಸ್ಪದವಾಗಿದೆ. ಈ ಬಳಗದವರೆಲ್ಲರೂ ಪರಸ್ಪರ ಪ್ರೇಮ ಸಹಾನುಭೂತಿಗಳಿಂದ ನಡೆದುಕೊಂಡು ಹೋಗಬೇಕಾಗಿ ವಿಜ್ಞಾಪಿಸಿಕೊಳ್ಳುತ್ತೇನೆ. ಈ ದಿವಸ ವಚನಗಳನ್ನು ಹೇಳಿದ ಬಾಲಿಕೆಯರಿಗೆ ಪಾರಿತೋಷಕ ಹಂಚುವ ಕಾರ್ಯವನ್ನು ನನಗೊಪ್ಪಿಸಿದ್ದುದರಿಂದ ಬಳಗದವರಿಗೆ ನಾನು ತುಂಬಾ ಕೃತಜ್ಞನು." ಎಂದು ಹೇಳಿ ಕೆಳಗೆ ಕಾಣಿಸಿದ ಬಾಲಿಕೆಯರಿಗೆ ಪಾರಿತೋಷಕವನ್ನು ಹಂಚಿದರು—

೧ ಕು. ಬಸವಣ್ಣೆವ್ವ ಹೊಸಮಠ ೨ ಕು. ಗುರುಸಿದ್ಧವ್ವ ಕರ್ಜಗಿ ಶೆಟ್ಟರ ೩. ಕು. ಅನುಸೂಯಾ ಮಾನ್ವಿ ೪. ಕು. ನೀಲವ್ವ ತಳಕಲ್ಲ ೫. ಕು. ರೇವಣವ್ವ ಸಂಶಿಮಠ ೬. ಕು. ನೀಲಗಂಗವ್ವ ಗುಗ್ಗರಿ ೭ ಕು. ಪಾರ್ವತೆವ್ವ ಬಳ್ಳಾರಿ.

ಅನಂತರ ಅಕ್ಕನ ಬಳಗದ ಕಾರ್ಯದರ್ಶಿನಿಯರಾದ ಸೌ|| ಪರವ್ವ ಕಿಣಗಿ ಇವರು ಭಾಷಣಕಾರರ ಮತ್ತು ಸಭಿಕರ ಆಭಾರವನ್ನಿಸಿದರು. ತರುವಾಯ ಮಂಗಲದೊಡನೆ ಸಭೆಯ ಕಾರ್ಯವು ಸಮಾಪ್ತವಾಯಿತು.

—ಅಕ್ಕನ ಬಳಗದವರು.

## ಶ್ರೀ ಗುರುಬಸವ ಮಂಟಪದ ಪ್ರಾರಂಭೋತ್ಸವ.

ಭಗವಾನ್ ಬಸವಣ್ಣನವರ ಜಯಂತಿಯ ವೈಶಾಖ ಶು|| ೩ ತಾ. ೨-೫-೧೯೩೪ ನೆಯ ಶುಭ ದಿವಸ ಹುಬ್ಬಳ್ಳಿಯ ಬಡಿಗೇರ ಓಣಿಯ ಹತ್ತಿರ "ಶ್ರೀ ಗುರುಬಸವ ಮಂಟಪ" ವನ್ನು ಹೊಸದಾಗಿ ಪ್ರಾರಂಭಿಸುವವರಿದ್ದಾರೆ. ಪ್ರಾರಂಭೋತ್ಸವದ ನಿಮಿತ್ತವಾಗಿ ಧಾರವಾಡ ನವಕಲ್ಯಾಣ ಮಠದ ಶ್ರೀ ಗುರುಸಿದ್ಧ ಪ್ರಭುದೇವರ ಕರಕಮಲ ಸಂಜಾತರಾದ ಶ್ರೀ ಕುಮಾರ ಸ್ವಾಮಿಗಳವರು ಬಿ. ಎ. ಇವರು ಉಪನ್ಯಾಸ ಮಾಡುವರೆಂದು ಗುರುಸಿದ್ಧಪ್ಪ ಸಂಗಪ್ಪ ಭೂಸನವರ ಮತ್ತು ಮಲ್ಲೇಶಪ್ಪ ಗುರುಶಾಂತಪ್ಪ ಸಾದರ ಹಳ್ಳಿ ಇವರು ತಿಳಿಸುತ್ತಾರೆ.

---

## ವೀರಶೈವ ದೀಕ್ಷೆ.

ವಿಜಾಪುರದಲ್ಲಿರುವ ಲಕ್ಷ್ಮೀಬಾಯಿ ಬಡಿಗೇರ ಇವಳು ತಾನು ವೀರಶೈವ ಧರ್ಮದಲ್ಲಿ ಬರುವೆನೆಂದು ಶ್ರೀ ಸಿದ್ಧೇಶ್ವರ ಸಂಸ್ಥೆಯವರ ಕಡೆಗೆ ವಿನಂತಿ ಮಾಡಿಕೊಂಡ ಮೇರೆಗೆ ತಾ. ೨೪ ನೆಯ ದಿವಸ ಮುಂಜಾನೆ ೮ ಗಂಟೆಗೆ ಶಪರ್ಡ ಹಾಲಿನಲ್ಲಿ ವಿಜಾಪುರ ಗಚ್ಚಿನ ಮಠದ ಪಟ್ಟದ ಸ್ವಾಮಿಗಳು ಲಕ್ಷ್ಮೀಬಾಯಿ ಬಡಿಗೇರ ಇವಳಿಗೆ ಶಿವದೀಕ್ಷೆ ಕೊಟ್ಟು ವೀರಶೈವ ಧರ್ಮದ ಅಷ್ಟಾವರ್ಣ ಪಂಚಾಚಾರ ಷಟಸ್ಥಳ, ಪ್ರಾಣಲಿಂಗ ಮೊದಲಾದ ವಿಷಯಗಳನ್ನು ತಿಳಿಸಿ ಮೊದಲಿನ ಹೆಸರಿನ ಬದಲಾಗಿ "ಮಹಾದೇವಿ" ಎಂಬ ಹೆಸರನ್ನಿಟ್ಟರು. ಇವರು ಎರಡನೇ ವರುಷದ ಟ್ರೇಂಡರಿದ್ದು ಇಲ್ಲಿಯ ಮುನಸಿಪಲ್ ಸ್ಕೂಲಿನಲ್ಲಿ ಮಾಸ್ತರರಿದ್ದಾರೆ.

ದೀಕ್ಷೆ ಸಮಾರಂಭ ತೀರಿದನಂತರ ವಿಜಾಪುರದ ವೀರಪ್ಪ ಭೀಮಪ್ಪ ಮುಲಗೆ ಇವರು ಶಿವದೀಕ್ಷೆಹೊಂದಿದ ಮಹಾದೇವಿಯನ್ನು ಶ್ರೀ ಸಿದ್ಧೇಶ್ವರ ಗುಡಿಯಲ್ಲಿ ಮುಂಜಾನೆ ಹತ್ತು ಗಂಟೆಯ ಸುಮಾರಕ್ಕೆ ಲಗ್ನವಾದರು. ದೀಕ್ಷೆ, ವಿವಾಹ ನಡೆದ ಕಾಲಕ್ಕೆ ಸಂಸ್ಥೆಯ ಸದಸ್ಯರೂ ಊರಲ್ಲಿಯ ಪ್ರತಿಷ್ಠಿತ ಜನರೂ ಇದ್ದರು.

ವೀರಶೈವನಾದ ವೀರಪ್ಪ ಮುಲಗೆ ಇವರು ಧೈರ್ಯದಿಂದ ಮುಂದೆ ಬಂದು ಲಗ್ನವಾಗಿ ಉಳಿದ ವೀರಶೈವ ತರುಣರಿಗೆ ಮಾರ್ಗದರ್ಶಕರಾಗಿದ್ದಾರೆ.

---

ಮದ್ರಾಸು

## ವೀರಶೈವ ವಿದ್ಯಾವರ್ಧಕ ಸಂಘ

## ಬಳ್ಳಾರಿ.

ಈ ಸಂಘದಿಂದ ಸಹಾಯ ಪಡೆಯಲು ಅಪೇಕ್ಷೆಯುಳ್ಳ ಮದ್ರಾಸ ಪ್ರಾಂತದ ವೀರಶೈವ ವಿದ್ಯಾರ್ಥಿಗಳಿಗೆ ತಿಳುಹಿಸುವದೇನೆಂದರೆ—

ವೇತನಕ್ಕೆ ಅರ್ಜಿ ಇಟ್ಟುಕೊಳ್ಳುವ ಅರ್ಜಿ ಫಾರಂ ಕೆಲವು ನೇಮಗಳ ತಿದ್ದುಪಾಟುಗಳೊಂದಿಗೆ ಬದಲಾಯಿಸಿದೆ. ಎರಡನೇ ದಫೆ ಅರ್ಜಿ ಇಡುವ ಹಳೇ ವಿದ್ಯಾರ್ಥಿಗಳಿಗೆ ಸಹ ಪ್ರತ್ಯೇಕವಾಗಿ ಅರ್ಜಿ ಫಾರಂಗಳು ಅಚ್ಚು ಹಾಕಿಸಿರುತ್ತದೆ. ವೇತನಕ್ಕೆ ಅರ್ಜಿ ಇಡುವ ವಿದ್ಯಾರ್ಥಿಗಳು ಮುಂಚಿತವಾಗಿ ಟಪ್ಪಾಲ ಖರ್ಚುಗಳು ಕಳುಹಿಸಿ ಅರ್ಜಿ ಫಾರಂ ತರಿಸಿಕೊಳ್ಳತಕ್ಕದ್ದು. ಅರ್ಜಿಗಳನ್ನು ಜೂನ ತಿಂಗಳು ೧೦ ನೇ ತೇದಿ ವಳಗಾಗಿ ಕಳುಹಿಸತಕ್ಕದ್ದು. ಖಾಲಿ ಕಾಗದಗಳ ದ್ವಾರ ಬರೆದುಕೊಳ್ಳುವ ಅರ್ಜಿಗಳನ್ನು ಅಂಗೀಕರಿಸುವುದಿಲ್ಲ.

—ಸೆಕ್ರೆಟರಿ.

—೦—

# ವೀರಶೈವರಲ್ಲಿ ಮೇಲುಕೀಳುಗಳಿಲ್ಲ.

(ಲೇಖಕ-- ಬಸವರಾಜ ಅಕ್ಕಿ ತುಂಗಭದ್ರಾ.)

ಯಾವದೇ ಸಮಾಜವು ಬೆಳೆಯಬೇಕಾದರೆ ಆ ಸಮಾಜದಲ್ಲಿ ಅಜ್ಞಾನದಿಂದಾಗಲಿ ಅನುಕೂಲತೆಗಾಗಲಿ ತಲೆಯೆತ್ತಿದ್ದ ಮೇಲು ಕೀಳು ಉಚ್ಚ ನೀಚವೆಂಬ ಜಾತಿ ಪಂಗಡಗಳನ್ನು ಕಿತ್ತೊಗೆಯ ಬೇಕು. ವೀರಶೈವ ಮತತತ್ವಗಳನ್ನು ನೋಡಿದರೆ ಅದರಲ್ಲಿ ಒಬ್ಬರು ಹೆಚ್ಚು ಮತ್ತೊಬ್ಬರು ಕಡಿಮೆ ಎಂದು ಭೇದಭಾವಗಳು ಕಂಡುಬರುವುದಿಲ್ಲ. ಆದರೆ ಈಗಿನ ಹೆಚ್ಚಾದ ವೀರಶೈವ ಮತದ ಅನುಯಾಯಿಗಳು, ಆ ತತ್ವಗಳನ್ನು ಕೃತಿಯಲ್ಲಿ ತರದೆ ತಮ್ಮ ತಮ್ಮ ಅನುಕೂಲತೆಯ ಮೇರೆಗೆ ನಡೆದುಕೊಂಡು ಹೋಗುತ್ತಾರೆ. ಹೀಗಾಗಿ ಆ ಸಮಾಜವು ಬಹು ದಿವಸ ಬಾಳಿ ಬೆಳೆಯುವದಿಲ್ಲ. ಅದಕ್ಕೆ ಸಮಾನತೆ ಸಾಕಲ್ಯತೆಯೂ ಬಾರದೆ ಬಹು ಜನರಿಗೆ ಅಪ್ರಿಯವಾಗಿ ಕಂಡುಬರುವುದು. ವೀರಶೈವ ಮತೋದ್ಧಾರಕರಾದ ಮಹಾನುಭಾವರಾದ ಬಸವಣ್ಣನವರು ಸಮಾಜದಲ್ಲಿದ್ದ ಕುಂದುಕೊರತೆಗಳನ್ನು ಸಾಮಾನ್ಯ ಜನರಿಗೆ ತಿಳಿಯುವಂತೆ ವಚನ ರೂಪದಲ್ಲಿ ಬೋಧಮಾಡಿದ್ದಾರೆ.

ಮತ್ತು ಅದರಂತೆ ತಾವು ಆಚರಿಸಿದ್ದಾರೆ. ಬಸವಣ್ಣನವರು ಸ್ಪೃಶ್ಯ ಅಸ್ಪೃಶ್ಯ, ಮಾದಿಗ ಹೊಲೆಯ, ಎಂಬ ಭೇದಭಾವವನ್ನು ಮಾಡದೇ ಸಕಲ ಮಾನವರು ಒಂದೇ ಎಂದು ಹೇಳಿದ್ದಾರೆ. "ಕೊಲ್ಲುವವನೇ ಮಾದಿಗ, ಹೊಲಸು ತಿಂಬುವವನೇ ಹೊಲೆಯನಯ್ಯಾ". ಈಗ ಒಬ್ಬ ವೀರಶೈವನು ಪ್ರತಿ ದಿವಸ ಸ್ನಾನಮಾಡಿ ಮೂರು ತಾಸು ಶಿವಪೂಜೆಯನ್ನು ಮಾಡಬಹುದು. ಆದರೆ ಅಕಸ್ಮಾತ್ ಅವನಿದ್ದ ಊರಿಗೆ ಒಬ್ಬ ಸರಕಾರಿ ನೌಕರದಾರರು ಬಂದು ಆ ವೀರಶೈವನಿಗೆ ಕೆಲವು ಕೋಳಿಗಳನ್ನು ತಿನ್ನಲಿಕ್ಕೆ ಕಳಿಸಿಕೊಡೆಂದು ಹೇಳಿದರೆಂದು ತಿಳಿಯುವಾ. ಆ ಲಿಂಗಾಯತನು ಸರಕಾರಿಯವನ ಅಧಿಕಾರಕ್ಕೆ ಹೆದರಿಯಾಗಲೀ ಅಥವಾ ಅವನ ಪ್ರೀತಿಯನ್ನು ಗಳಿಸುವದಕ್ಕಾಗಲೀ ಅವನಿಗೆ ಕೋಳಿಯನ್ನು ಕಳುಹಿಸಿಕೊಟ್ಟರೆ ಅವನೆಂದಿಗೂ ಲಿಂಗಾಯತನಾಗಲಾರನು. ಅವನು ಕೇವಲ ಹೊಲೆಯನೇ ಸರಿ.

ಸಮಾಜದೊಳಗೆ ಏನೋ ಒಂದು ಕಾರಣದಿಂದ ತಲೆಯೆತ್ತಿದ್ದ ಅನ್ಯಾಯ, ಅತ್ಯಾಚಾರಗಳನ್ನು ಧೈರ್ಯದಿಂದ ಜನರಿಗೆ ತೋರಿಸಿ ಸತ್ಯದ ಹಾದಿಯನ್ನು ಹಿಂಬಾಲಿಸುವವನೇ ನಿಜವಾದ ವೀರಶೈವನು. ಬರೀ ಒಂದು ಲಿಂಗದ ಕಾಯಿಯನ್ನು ಮತ್ತು ರುದ್ರಾಕ್ಷಿ ಸರವನ್ನು ಹಾಕುವದರಿಂದ ಲಿಂಗಾಯತನೆಂದಿಗೂ ಆಗಲಾರನು. ಬಸವಣ್ಣನವರೇ "ಏಸುಕಾಲ ಶಿವಪೂಜೆ ಮಾಡಿದರೇನಯ್ಯ ನಿಜವಾದ ಜ್ಞಾನವಿಲ್ಲದಿದ್ದರೆ" ಎಂದು ಹೇಳಿದ್ದಾರೆ. ಬಹು ಜನರು ಅಂಕಿಯನ್ನು ಪಾಠಮಾಡಿದ ಹಾಗೆ ಕೆಲವು ಮಂತ್ರಗಳನ್ನು ಅಂದು ವಿಭೂತಿ ಬಿಲ್ವ ಪತ್ರಿಯನ್ನು ದೇವರಿಗೆ ಏರಿಸಿದರೆ ಪೂಜೆಯಾಯಿತೆಂದು ತಿಳಿಯುವರು. ಆ ತರದ ಪೂಜೆಯಿಂದ ದೇಹಶುದ್ಧಿಯಿಲ್ಲ. ಆತ್ಮವಿಕಾಸವಿಲ್ಲ. ಇದರಿಂದ ಶಿವಪೂಜೆಯನ್ನು ಮಾಡುವದು ತಪ್ಪೆಂದು ಹೇಳುವದಿಲ್ಲ. ಆದರೆ ಅದನ್ನು ಮಾಡುವದು ಹೇಗೆ ಏತಕ್ಕೆ ಎಂಬುದನ್ನು ಸರಿಯಾಗಿ ಅರಿತು ಮಾಡಬೇಕು. ಇಲ್ಲದಿದ್ದರೆ ಆ ರೀತಿಯ ಪೂಜೆಯಿಂದ ನಮಗೆ ಸಿಗುವದು ದುರ್ಗತಿಯೇ ಸರಿ.

ಇನ್ನು ಕೆಲವು ಜನರು ಎರಡನೇದವರಲ್ಲಿ ಊಟ ಅಥವಾ ನೀರನ್ನು ಕುಡಿಯುವದರಿಂದ ಕುಲವು ಕೆಡುವದೆಂದು ಹೇಳುವರು. ಜಾತಿಯು ಊಟದಲ್ಲಿಲ್ಲ, ನೀರಲ್ಲಿಲ್ಲ. ಬಸವಣ್ಣನವರೇ 'ಉಂಬಲ್ಲಿ ಉಡುವಲ್ಲಿ ಕುಲವನರಸುವರೇನಯ್ಯ ಇವರೆಂಥ ಜಂಗಮರಯ್ಯ ಇವರೆಂಥ ಭಕ್ತರಯ್ಯ" ಎಂದು ಹೇಳಿದ್ದಾರೆ. ಯಾವನು ತಾನು ಎಲ್ಲರಿಗಿಂತ ಹೆಚ್ಚಿನವನೆಂದು ತಿಳಿಯುವನೋ ಅವನಲ್ಲಿಯ ಆ ಉಚ್ಚತನವು ಕೇವಲ ನೀಚತನದ ಭಾವನೆಯಿಂದುಂಟಾಗಿದೆ ಎಂದು ಹೇಳುವುದರಲ್ಲಿ ಸಂದೇಹವಿಲ್ಲ. ಯಾಕೆಂದರೆ ದೊಡ್ಡವರಿದ್ದವರು ತಾವು ದೊಡ್ಡವರೆಂದು ಹೇಳಿಕೊಳ್ಳುವದಿಲ್ಲ. ಆ ದೊಡ್ಡಿಸ್ತಿಕೆಯು ಅವರಿಗೆ ಬೇಡಾಗಿದ್ದರೂ ಅವರು ಮಾಡಿದ ಕಾರ್ಯ ಪ್ರತಿಫಲವಾಗಿ ಉಳಿದ ಜನರು ಅವರಿಗೆ ಒಂದು ಮನ್ನಣೆಯನ್ನು ಕೊಡುವರು. ಬಸವಣ್ಣನವರು ಅಷ್ಟು ದೊಡ್ಡ ಮಹಾತ್ಮರಾದರೂ "ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ" ಎಂದು ನುಡಿದಿದ್ದಾರೆ. ಆದ್ದರಿಂದ ಸ್ವಾಮಿಗಳೂ, ಸುಧಾರಕರೂ ಸಮಾಜದಲ್ಲಿ ಕೊಳೆತು ನಾರುವಂತಿರುವ ಜಾತಿಪಂಗಡಗಳನ್ನು ಕಿತ್ತೊಗೆಯಲಿಕ್ಕೆ ಪ್ರಯತ್ನ ಮಾಡಬೇಕು.

---



---

# ಶ್ರೀ ವಿಶ್ವ ವಿಭೂತಿ ಬಸವೇಶ.

ರಾಗ— ಕೇದಾರ. ತಾಳ— ಝಂಪಾ.

("ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು" ಎಂಬಂತೆ)

ಶ್ರೀ ಬಸವರಾಜ! ಘನತೇಜ!! ಅಹ! ಸುರಭೂಜ !!
ಬಾ! ಬಾರೊ!! ಗುಣಸಿಂಧು!!! ಮರಳಿ ಮಹಿಗಿಂದು ||ಪ||

ವಿನುತ ಬಸವನ ಉದಯು ಬಾಗವಾಡಿಯೊಳಾಯ್ತು ।
ಜನನಿ-ಜನಕರು ಮಾದಲಾಂಬೆ-ಮಾದರಸರ್ ||
ಎನಿತು ಪೇಳಲಿ! ದ್ವಿಜನು ಶಿವದೀಕ್ಷೆ ಹೊಂದಿದನು ।
ತನಗೆ ಕೂಡಲ ಸಂಗಮೇಶ ಗುರುವೆಂದು ||೧||

ಶ್ವಪಚರನ, ಪತಿತರನು ಸುಪಥಕೆಳೆಸಿದ ಶಾಂತಿ- ।
ನಿಪುಣನಾತನು ಸ್ತ್ರೀಸಮಾಜ ಪಾಲಕನು ||
ಅಪರಮಿತ ಪಾಂಡಿತ್ಯದಿಂ ಮಂತ್ರಿ ತಾನಾಗಿ ।
ಶಪಥಗಳ ಪಾಲಿಸಿದ ಆತ್ಮ ಬಲದಿಂದ ||೨||

ವಿಮಲ ಖಾದಿಯ ಮೆರಿಸಿ, ಕೈಗಾರಿಕೆಯ ಬರಿಸಿ ।
ಅಮಮ! ಮಾಯೆಯು ಮೀರಿ, ಮಹಿಮೆಗಳ ತೋರಿ ||
ಅಮಿತ-ಅನುಪಮ-ಅಮರ ಅನುಭವದ ವಚನಗಳ ।
ನಮಗಾಗಿ ಬೋಧಿಸಿದ ಸರಳಗನ್ನಡದಿ ||೩||

ಭೂರಿ ಕರುಣಾಭರಣ! ಕಲ್ಯಾಣ ಬಸವಣ್ಣ ।
ಚಾರು ಧರ್ಮದ ಮೂರ್ತಿ! ಪೂರ್ತಿ!! ಬಸವಣ್ಣ ||
ವೀರಶೈವರ ವಿಭವ! ಪ್ರತಿ ಅಭವ!! ಬಸವಣ್ಣ ।
ಪಾರಮಾರ್ಥಿಕ ಪಾತ ಪೀಠ ಬಸವಣ್ಣ ||೪||

ತಿಳಿಸಿದನು ಜಗಕೆಲ್ಲ ಶರಣಸಂದೇಶವನು ।
ಗಳಿಸಿದನು ಗಡ! ವಿಶ್ವಪ್ರೀತಿ-ನೀತಿಯನು ||
ಬೆಳಸಿದನು ತಾಯ್ನುಡಿಯನುಳಿಸಿದನು ಹರಮತವ ।
ನಳಿಸಿದನು ಬಲಗೊಂಡ ಬರಿನಂಬಿಕೆಗಳ ||೫||

ಬಸವೇಶ! ತತ್ವಖನಿ!! ಸನ್ಮಾನಿ! ಮಾದಾನಿ!!
ಪೆಸರಾಂತ ಚರಮೋಹಿ! ವರಲಿಂಗದೇಹಿ ||
ಬಸವ ಭಾಸ್ಕರ! ಭಾಪುರೆ!! ಭಕ್ತಿಭಾಂಡಾರ!!!
ಎಸೆದ ಕಾಯಕಯೋಗಿ! ಭಲೆ!! ಕರ್ಮಯೋಗಿ ||೬||

ಸಕಲ ಮಾನ್ಯರೆ! ಸಾಧುಸಜ್ಜನರ ಸಂಸ್ಮರಣ ।
ವಖಿಲ ಜೀವಿತ ಧ್ಯೇಯಗಳಲಿ ಮಿಗಿಲಲ್ತೆ? ||
ಶತಪುರುಷ ಬಸವೇಶ್ವರನ ಜನ್ಮದಿನವೆಂದೆ ।
ಸುಖಮಾಸ- ವೈಶಾಖ ಶುದ್ಧ ಬಿದಿಗೆಯೆರೆ ||೭||

ವೇದ-ವಾದಗಳೇಕೆ? ಶಸ್ತ್ರ-ಶಾಸ್ತ್ರಗಳೇಕೆ? ।
ಸೋದರರೆ! ನುಡಿಯಂತೆ ನಡೆಯೊಂದೆ ಸಾಕು ||
ಈ ದಿನವು ಕರುನಾಡ-ಅಲ್ಲಲ್ಲ-ಭಾರತದ ।
ಮೇದಿನಿಯ ಪಾವಿತ್ರ್ಯದಿನವಾಗಬೇಕು ||೮||

ಶಶಿಧರಗೆ-ಶಾಂಭವಿಗೆ-ಶಿವಸುತ-ವಿನಾಯಕಗೆ ।
ಅಸಮ ಕವಿತಿಲಕರಿಗೆ-ಮುನಿವರೇಣ್ಯರಿಗೆ ||
ಬಸವಾದಿ ಪ್ರಮಥರಿಗೆ-ನಿಜರಾಷ್ಟ್ರವೀರರಿಗೆ ।
ಒಸೆದು ನುಡಿಸಿದ "ಮಹಾಂತ" ಯತಿಗೆ ಮಂಗಲವು ||೯||

ಗದಗ-ನಗರ. ತುಂಗ ಬಸವಪಾದಾಬ್ಜ ಭೃಂಗ
ಶ್ರೀ ಬಸವ ಶಕ ೮೦೭
ವೈ. ಶು. ೨ ಸೋಮವಾರ "ಶ್ರೀಸಂಗ"
ತಾ. ೨-೫-೧೯೩೮

ಪ್ರಕಾಶಕರು— ಮಡಿವಾಳಪ್ಪ ಮತ್ತು ಸೋದರರು
ಶ್ರೀ ಶಿವಾನಂದ ಮುದ್ರಣಾಲಯದೊಡೆಯರು.

## ೭ ನೆಯ ಕರ್ನಾಟಕ ಏಕೀಕರಣ ಪರಿಷತ್ತು

### ೫ ನೆಯ ಪ್ರಕಟಣೆ

## ಸ್ವಾಗತ ಸಮಿತಿಯ ಸಭೆ.

ಏಕೀಕರಣ ಪರಿಷತ್ತಿನ ಸ್ವಾಗತ ಸಮಿತಿಯ ಸಭೆಯು ೨೪-೪-೩೮ ನೇ ದಿವಸ ಶ್ರೀ. ಗೋದಾಚಾರ್ಯ ಗುತ್ತಲ ಇವರ ಅಧ್ಯಕ್ಷತೆಯಲ್ಲಿ ಜರುಗಿತು. ಸಭೆಗೆ ಗದಗ, ನವಲಗುಂದ, ಹುಬ್ಬಳ್ಳಿ ಮೊದಲಾದ ಸ್ಥಳಗಳಿಂದ ಜನರು ಬಂದಿದ್ದರು, ಸಭೆಯಲ್ಲಿ ಕೆಳಗಿನ ಗೊತ್ತುವಳಿಗಳಾದವು—

ಪರಿಷತ್ತಿನ ಅಧ್ಯಕ್ಷರು— ಶ್ರೀಮಾನ್ ಕೆ. ಆರ್. ಕಾರಂತ ಎಮ್. ಎಲ್. ಎ. ಮಂಗಳೂರು. (೨) ಸ್ವಾಗತಾಧ್ಯಕ್ಷರು— ಶ್ರೀ ಅಂದಾನೆಪ್ಪ ದೊಡ್ಡಮೇಟಿಯವರು ಎಮ್. ಎಲ್. ಎ. (೩) ಉಪಾಧ್ಯಕ್ಷರು— ೧ ಶ್ರೀ. ಜೋಗ ಎಮ್. ಎಲ್. ಎ. ೨ ನಲವಡಿ ಎಂ ಎಲ್. ಎ. ೩ ಸಾಂಬ್ರಾಣಿ ಧರ್ಮಪ್ಪನವರು. ೪ ಸೌ|| ಕೃಷ್ಣಾಬಾಯಿ ಪಂಜೀಕರ. ೫ ಶ್ರೀ. ನರಶಿಂಗರಾವ ಕಲ್ಹಾಪುರ ದೇಸಾಯಿ ೬ ಬಣಗಾರ ಸಿದ್ಧಪ್ಪ. ೭ ರಾವಬಹಾದ್ದೂರ ಮಾನ್ವಿ ಶಿವಪ್ಪನವರು (೪) ಕೋಶಾಧ್ಯಕ್ಷರು— ಬಸವನಾಳ ವಕೀಲರು. (೫] ಕಾರ್ಯಾಧ್ಯಕ್ಷರು— ಹುಕ್ಕೇರಿ ರಾಮರಾಯರು. (೬) ಕಾರ್ಯದರ್ಶಿಗಳು— ೧ ದತ್ತಾತ್ರೆಯ ಕರಮರಕರ. ೨ ಭೂಸನೂರು ಗುರಬಸಪ್ಪನವರು ೩ ಶ್ರೀ. ಬುರ್ಲಿ ಬಿಂದಾಚಾರ್ಯರು. (೭) ಕಾರ್ಯಕಾರೀಮಂಡಳ ೧ ಹುರಳಿ ಗದಿಗೆಪ್ಪ. ೨ ಗುದ್ಲೆಪ್ಪ ಹಳ್ಳೀಕೇರಿ. ೩ ತಲ್ಲೂರ ರಾಯನಗೌಡರು ೪ ಕಮಲಾಪುರ ಕಾಂತರಾಯರು. ೫ ಕಬ್ಬೂರ ನಾರಾಯಣರಾಯರು. ೬ ಮಳೀಮಠ ವಕೀಲ. ೭ ಚಂದ್ರಶೇಖರ ಶಾಸ್ತ್ರಿಗಳು. ೮ ಮಂಕಣಿ ವಕೀಲರು. ೯ ಕಳ್ಳಿ ತಿಪ್ಪಣ್ಣ ಶಾಸ್ತ್ರಿಗಳು ೧೦ ಶ್ರೀಪೋತದಾರ ಶ್ರೀನಿವಾಸರಾಯರು. ೧೧ಶಿರಹಟ್ಟಿಮಠ. ೧೨ ಕೆ ಎಫ್. ಪಾಟೀಲ ೧೩ ಎಸ್. ಬಿ. ಹಿರೇಮಠ. ೧೪ ಧಾರವಾಡಕರ ಗುರುರಾಯರು. ೧೫ ಎನ್. ಬಿ. ಹಿರೇಮಠ

ಮುಂದಿನ ಕಾರ್ಯದ ಎಲ್ಲ ಅಧಿಕಾರಗಳನ್ನು ಕಾರ್ಯಕಾರೀ ಮಂಡಳಕ್ಕೆ ಕೊಟ್ಟಿದೆ. (೮) ಉದ್ಘಾಟನ ಸಮಾರಂಭಕ್ಕೆ ಚಿತ್ರದುರ್ಗದ ಶ್ರೀಮನ್ನಿರಂಜನ ಮುರಘಾರಾಜೇಂದ್ರ ಸ್ವಾಮಿಗಳನ್ನು ಕೇಳಿಕೊಳ್ಳಲಾಗಿದೆ.

ತಮ್ಮ
ಶ್ರೀ ಬುರ್ಲಿ ಬಿಂದುಮಾಧವ
ಶ್ರೀ. ಭೂಸನೂರ ಗುರುಬಸಪ್ಪ.
ಶ್ರೀ. ಡಿ. ಪಿ. ಕರಮರಕರ.

# ಶ್ರೀ ಶರಣ ಬಸವೇಶ್ವರ ಯಾತ್ರಾ ಮಹೋತ್ಸವ ಚಿತ್ತಾಪುರ.

ಪದ್ಧತಿಯ ಪ್ರಕಾರ ಶ್ರೀ ಶರಣ ಬಸವೇಶ್ವರ ಯಾತ್ರಾ ಮಹೋತ್ಸವವು ಒಳ್ಳೇ ವಿಜೃಂಭಣೆಯಿಂದ ನೆರವೇರಿಸಲ್ಪಟ್ಟಿತೆಂದು ತಿಳಿಸಲು ತುಂಬಾ ಸಂತೋಷವಾಗುತ್ತದೆ.

ತಾ. ೧೯-೪-೩೮ ನೆಯ ದಿವಸ ೪ ಗಂಟೆಯಿಂದ ೮ ಗಂಟೆಯ ವರೆಗೆ ಶ್ರೀ ಶರಣ ಬಸವೇಶ್ವರ ದೇವಸ್ಥಾನದಲ್ಲಿ ಶ್ರೀ ಗುರು ಶಾಂತ ಶಾಸ್ತ್ರಿಗಳು ಚಂದ್ರಶೇಖರ ಶಾಲಾಧ್ಯಾಪಕ ಇವರು ವೇದ ವಿಧಿಗನುಸರಿಸಿ ಮಹಾಮಹಿಮನಿಗೆ ರುದ್ರಾಭಿಷೇಕ ಮಾಡಿದರು. ಅದರಲ್ಲಿ ಶ್ರೀ. ರೇಶ್ಮಿ ಕಲ್ಲಪ್ಪನವರು, ಶ್ರೀ. ಸಂಗನಬಸಪ್ಪನವರು ಭಾಗ ವಹಿಸಿದ್ದರು. ನಂತರ ೧೦ ಗಂಟೆಯಿಂದ ೩ ಗಂಟೆಯ ವರೆಗೆ ಮಹಾ ಗಣಾರಾಧನೆಯು ಜರುಗಿತು. ಆ ಮೇಲೆ ಶ್ರೀ ಶರಣ ಬಸವೇಶ್ವರ ದೇವಾಲಯವು ಗ್ರಾಮದಿಂದ ಸ್ವಲ್ಪ ದೂರ ಇರುವುದರಿಂದ ೪ ಗಂಟೆಗೇನೇ ಶ್ರೀ ಪಲ್ಲಕ್ಕಿ ಉತ್ಸವವು ಊರಿಂದ ಹೊರಟು ವಾದ್ಯ ವೈಭವದೊಡನೆ ತಳಿರು ತೋರಣಗಳಿಂದ ಶೃಂಗರಿಸಲ್ಪಟ್ಟ ಮಾರ್ಗದ ಮೇಲೆ ಹಾಯುತ್ತ ೭ ಗಂಟೆಯ ಸಮಯಕ್ಕೆ ದೇವಾಲಯವನ್ನು ಮುಟ್ಟಿತು. ಹೈದರಾಬಾದ ಗುಲಬರ್ಗಾದಲ್ಲಿ ದಂಗೆಯಾದುದರಿಂದ ಇಲ್ಲಿಯ ಸರಕಾರಿ ಅಧಿಕಾರಿಗಳೂ ಊರಲ್ಲಿಯ ಪ್ರಮುಖರೂ ಸರಿಯಾದ ವ್ಯವಸ್ಥೆಯನ್ನಿಟ್ಟಿದ್ದರು.

ಊರಲ್ಲಿಯ ಹಿಂದು ಮುಸಲ್ಮಾನರಲ್ಲಿ ಒಕ್ಕಟ್ಟು ಇರಬೇಕೆಂದು ತಾ. ೧೮ ನೆಯ ದಿವಸವೇ ಶ್ರೀ ಶಿವಶರಣಪ್ಪನವರ ಮಠದಲ್ಲಿ ಸಭೆ ಸೇರಿಸಲಾಗಿತ್ತು. ಸಭೆಗೆ ಊರಲ್ಲಿಯ ಸರಕಾರಿ ಅಧಿಕಾರಿಗಳೂ ಪ್ರಮುಖ ವ್ಯಾಪಾರಸ್ಥರೂ ಬಂದಿದ್ದರು. ಸಭಾಧ್ಯಕ್ಷರಾಗಿದ್ದ ನಾಜಮ ಸಾ. ಜಾಗೀರ ಇವರು ಪರಸ್ಪರರು ಐಕ್ಯದಿಂದ ವರ್ತಿಸಬೇಕೆಂದು ಬೇಡಿಕೊಂಡನಂತರ ಶ್ರೀ. ಬಡೇಸಾಹೇಬ ವಕೀಲ, ಶಂಕರರಾವ, ಮಶ್ಯಾಖಸಾ| ನಂದ್ಯಾಡ, ಶ್ರೀ. ಸಿದ್ಧರಾಮಪ್ಪನವರು ರೇಶ್ಮಿ ಮೊದಲಾದವರು ಮಾತನಾಡಿದರು.

ತಾ. ೨೦-೪-೩೮ ನೆಯ ದಿವಸ ೩ ಗಂಟೆಯಿಂದ ೬ ಗಂಟೆಯ ವರೆಗೆ ಶ್ರೀ. ಸಣ್ಣ ಅಣಿಯಪ್ಪ ಇವರು ತಮ್ಮ ಸ್ವಂತ ವೆಚ್ಚದಿಂದ ಕುಸ್ತಿಯನ್ನು ಮಾಡಿಸಿದರು. ನಂತರ ಸಭೆಸೇರಿ ಶ್ರೀ ಗುರು ಶಾಂತ ಶಾಸ್ತ್ರಿಗಳು ಶಿವಭಕ್ತಿ ಸದ್ಯದ ಸ್ಥಿತಿ ಮೊದಲಾದ ವಿಷಯಗಳನ್ನು ಕುರಿತು ಸ್ವಾರಸ್ಯವಾಗಿ ಭಾಷಣಮಾಡಿದರು.

ಈ ವರ್ಷ ಶ್ರೀ ಶರಣ ಬಸವೇಶ್ವರ ಯಾತ್ರಾ ಮಹೋತ್ಸವವು ಸುಗಮವಾಗಿ ಸಾಗಲು ಇಲ್ಲಿಯ ಅಧಿಕಾರಿಗಳೂ ಊರಲ್ಲಿಯ ಪ್ರಮುಖ ಮುಂದಾಳುಗಳೂ ಬಲಭೀಮ ವಿಠ್ಠಲ ಸಮಾಜದ ಸದಸ್ಯರೂ ಕಾರಣರಲ್ಲದೆ ಮತ್ತಾರೂ ಇಲ್ಲ. ಎಲ್ಲರಿಗೂ ಶ್ರೀ ಶರಣಬಸವೇಶ್ವರರು ಸುಖಸಂಪತ್ತುಗಳನ್ನೊದಗಿಸಿ ಕೊಡಬೇಕಾಗಿ ಪ್ರಾರ್ಥನೆ—

ತಮ್ಮ

ದೈವಮಂಡಳಿ ಚಿತ್ತಾಪುರ.

---

## ಯಲಬುರ್ಗಿ (ಜಿ. ಕೊಪ್ಪಳ.)

ಈ ಊರಿನ ಬಾಜೂ ಹಳ್ಳಿಯಾದ ಕುದುರಿಯಕೋಟೆ ಎಂಬಲ್ಲಿಗೆ ಅಲ್ಲಲ್ಲಿ ಪುರಾಣಗಳನ್ನು ಹಚ್ಚಿಸುತ್ತ ಅಥವಾ ಬಾವಿಗಳನ್ನು ತೋಡಿಸುತ್ತ, ಹೀಗೆ ಒಂದಿಲ್ಲೊಂದು ರೀತಿಯಿಂದ ಸಾರ್ವಜನಿಕ ಕಾರ್ಯಗಳಲ್ಲಿ ಶ್ರಮಪಡುತ್ತ ಸಂಚರಿಸುತ್ತಿರುವ ಶಲವಡಿಯ ಮಹಂತ ಸ್ವಾಮಿಗಳವರು ದಯಮಾಡಿಸಿ ಅರವತ್ತು ಮೂರು ಪುರಾತನರ ಪುರಾಣ ಹೇಳಿಸಬೇಕೆಂಬ ತಮ್ಮ ಮನದಾಶೆಯನ್ನು ಅಲ್ಲಿಯ ಜನರಲ್ಲಿ ಸೂಚಿಸಿ ಅದಕ್ಕೆ ಬೇಕಾಗುವ ಸಾಮಗ್ರಿಗಳನ್ನು ಸಹ ಭಿಕ್ಷಾವೃತ್ತಿಯಿಂದ ತಂದೊದಗಿಸಲು ಸಿದ್ಧರಿರುವುದನ್ನು ಕೂಡಾ ತಿಳಿಸಲು ಇದನ್ನೆಲ್ಲ ಕೇಳಿ ಸ್ಥಳೀಯರಾದ ವೇ. ಕಲ್ಲಯ್ಯ ಸ್ವಾಮಿಗಳು ಮತ್ತು ಭೀಮಪ್ಪ ವಗ್ಗೆರೆ ಜನರೂ ಹಾಗೂ ಯಲಬುರ್ಗಿಯ ದೊಡ್ಡನಗೌಡರು ಮತ್ತು ಅಧಿಕಾರಿ ನೀಲಪ್ಪನವರೂ ಕಲೆತು ಈ ಮಹಾ ಕಾರ್ಯಕ್ಕೆ ಸಮ್ಮತಿಸಿ, ಹೇಳುವವರನ್ನು ಕರೆಸುವ ಬಗ್ಗೆ ದೀರ್ಘವಾಗಿ ಆಲೋಚಿಸಿ ಜಾಲೀಹಾಳ ಮುಂತಾದ ಸ್ಥಳಗಳಲ್ಲಿ ಪುರಾಣ ಹೇಳಿ ನಾಮಾಂಕಿತರಾದ ನರೇಗಲ್ಲ ವ ಹಿರೇ ಹರಕುಣಿ ಹಿರೇಮಠದ ವೇ| ಸಿದ್ಧಲಿಂಗ ದೇವರು ಇವರುಗಳನ್ನು ಆಗ್ರಹಪೂರ್ವಕ ಬಿನ್ನವಿಸಿ ಕರೆತಂದು ವೇ. ಕಲ್ಲಯ್ಯನವರ ಮಠದಲ್ಲಿ ಪ್ರಾರಂಭಿಸಿದರು. ಸದರ ವೇ|| ಸಿದ್ಧಲಿಂಗದೇವರು ತಮ್ಮ ರಸವತ್ತಾದ ಹಾಗು ಚಿತ್ತಾಕರ್ಷಕವಾದ ಅಮೃತವಾಣಿಯಿಂದ ಇಂದು ಲೋಕದಲ್ಲೆಲ್ಲ ವಿಖ್ಯಾತಿ ಹೊಂದಿದ ಮಹಾತ್ಮಾಗಾಂಧಿ ಪಂಡಿತ ಜವಾಹರಲಾಲ ಮೊದಲಾದ ಕಾಂಗ್ರೆಸ್ ಮಂಡಲದ ಮಹಾ ವಿಭೂತಿಗಳ ಜೀವನ ಚರಿತ್ರೆಗೂ ಒಂದೊಂದು ವ್ರತದಲ್ಲಿ ಬಲ್ಲಿದವರಾಗಿ ಗಣಪದವಿಯನ್ನು ಪಡೆದಪುರಾತನರ ಜೀವನಚರಿತ್ರೆಗೂ ಹೊಂದಿಕೆಮಾಡಿ ಹೋಲಿಸಿ ಹೇಳುತ್ತಿದ್ದರು. ಇವರ ಈ ಸ್ತುತ್ಯವಾದ ಮಂಜುಳ ಗಾಯನದಿಂದೊಡಗೂಡಿದ ಸುಶ್ರಾವ್ಯವಾದ ಬೋಧಾಮೃತವನ್ನು ಪಾನಮಾಡಲು ಯಲಬುರ್ಗಿಯ ಆಬಾಲ ವೃದ್ಧಸ್ತ್ರೀಪುರುಷರೆಲ್ಲ ಪ್ರತಿನಿತ್ಯವೂ ತಪ್ಪದೇ ಹೋಗಿ ಬರುತ್ತಿದ್ದರಲ್ಲದೆ ಸುತ್ತ ಹಳ್ಳಿಯ ಜನರು ಸಹ ನೆರೆಯುತ್ತಿದ್ದರು. ಸ್ವಾಮಿಗಳು ತಮ್ಮ ದೈವಿಕ ಶಕ್ತಿಯಿಂದ ಸಾವಿರಾರು ಜನರು ಕಲೆತಂಥ ಜನಸಮೂಹವನ್ನು ಅಲುಗಾಡಗೊಡದಂತೆ ಕೂಡ್ರಿಸಿ ಎಲ್ಲರ ಮನಸ್ಸುಗಳನ್ನು ತಮ್ಮ ಬೋಧೆಯಲ್ಲಿ ತಲ್ಲೀಣಮಾಡಿಕೊಳ್ಳುತ್ತಿದ್ದರು. ಹಾಗು ನೆರೆದ ಜನರ ಆದರೋಪಚಾರವನ್ನು ವೇ|| [illegible]ಯ್ಯ ಸ್ವಾಮಿಗಳು ಸರಿಯಾಗಿ ನೆರವೇರಿಸುತ್ತಿದ್ದರಲ್ಲದೆ ಮೇ[illegible] ಮಹಾಜನರು ಸಹ ಅವರಿಗೆ ಈ ಕಾರ್ಯದಲ್ಲಿ ತುಂಬಾ ನೆರವಾದರು.

ಈ ಪ್ರಕಾರ ಒಂದು ತಿಂಗಳ ಪರಿಯಂತರ ನಡೆದ ಪುರಾಣವು ಸಮಾಪ್ತ ಹೊಂದಿದ ಬಳಿಕ ಯಲಬುರ್ಗಿಯ ಪೋಲಿಸ್ ಪಾಟೀಲರಾದ ಶ್ರೀ. ಭೀಮನಗೌಡರ ಆಗ್ರಹದ ಪ್ರಕಾರ ವೇ|| ಗಳವರು ಇಲ್ಲಿಗೆ ದಯಮಾಡಿಸಿ ಬೇರೆ ಬೇರೆ ಓಣಿಗಳಲ್ಲಿ ಎರಡು ಮೂರು ಪ್ರವಚನಗಳನ್ನು ಕೃತಕಪಡಿಸಿದರು. ಶ್ರೀಗಳವರು ತಾ. ೧೬-೪-೩೮ ನೇ ಶನಿವಾರ ತಮ್ಮ ಅಮೋಘವಾದ ಪ್ರವಚನವನ್ನು ಶ್ರೀ ಮನ್ಮಹಾರಾಜ ಕೈ. ವಾ. ಲಿಂಗರಾಜ ಸರದೇಸಾಯಿಯವರ ಉತ್ಕಟವಾದ ವಿದ್ಯಾಪ್ರೇಮದ ಹಾಗು ವಿದ್ಯಾಭಿವೃದ್ಧಿಗೋಸುಗ ತಮ್ಮ ದೇಶಗತಿಯ ಆದಾಯವನ್ನೇ ಟ್ರಸ್ಟ ಫಂಡನ್ನಾಗಿ ಮಾಡಿದ ಉದಾರವಾದ ಶ್ರೇಷ್ಠ ದಾನದ ಅನುಪಮೇಯ ಉಪಮಾನದೊಂದಿಗೆ ತಮ್ಮ ಅಸ್ಖಲಿತವಾದ ಹಾಗು ಅಧಿಕಾರಯುಕ್ತ ವಾಣಿಯಿಂದ ಪ್ರತಿಫಲಾಪೇಕ್ಷೆಯಿಲ್ಲದೆ ಪ್ರಾರಂಭಿಸಿದರು. ಆ ಹೊತ್ತು ಈ ಊರ ಸಂತೆಯಾದ್ದರಿಂದ ಸುತ್ತು ಹಳ್ಳಿಯ ಸಾಮಾನ್ಯ ಲಿಂಗಾಂಗಿಗಳೂ ಇನ್ನಿತರರೂ ಬರಲನುವಾಗಿತ್ತು. ವೇ|| ಗಳವರು ತಮ್ಮ ಘನತರವಾದ ಪಾಂಡಿತ್ಯ ಪ್ರಭಾವದಿಂದ ನೆರೆದ ಪ್ರಚಂಡ ಜನಸಮೂಹಕ್ಕೆ ವಿದ್ಯೆಯ ಆವಶ್ಯಕತೆಯನ್ನು ಕುರಿತು ಬಹು ಪರಿಣಾಮಕಾರವಾಗಿ ಬೋಧಿಸಿದರು. ಸ್ವಾಮಿಗಳು ಇನ್ನೂ ಪೂರ್ವ ವಯಸ್ಸಿನವರಿದ್ದು ತಮ್ಮ ತೇಜಸ್ಸನ್ನು ಕಾಯ್ದುಕೊಂಡು ಈ ರೀತಿಯಾಗಿ ತಮ್ಮ ಅಧಿಕಾರವನ್ನು ಸದುಪಯೋಗಪಡಿಸುತ್ತಿರುವುದು ಶ್ಲಾಘನೀಯವಾಗಿದೆ.

ಚನ್ನನಗೌಡ ಮಾಸ್ತರ.

ಶ್ರೀ ವೃಷಭೇಶ್ವರ

# ನಕ್ಷತ್ರಮಾಲಿಕಾ ಸ್ತೋತ್ರ.

(ಲೇಖಕರು— ಹೆಚ್. ಶಿವಲಿಂಗಶಾಸ್ತ್ರಿ.)

ಶ್ರೀ ವಿಧುಧರ ಸದ್ವಾಹಂ ।
ಭಾವಜ್ಞಂ ಸುಜ್ಞಾನ ಶರಧಿ ಮುಕ್ತ್ಯಾಲಾಪಂ ॥
ದೈವಜ್ಞನುತಂ ಷಟ್ಸ್ಥಲ ।
ಭಾವಂ ಕುಡುಗೆಮಗೆ ಗತಿಯ ನಾವೃಷಭೇಶಂ ॥ ||೧||

ವೀರಂ ಶಿಲಾದ ಮೌನಿಕು ।
ಮಾರಂ ಶಿವಯೋಗ ತತ್ವಸಾರ ವಿಚಾರಂ ।
ಧೀರಂ ಶರಣೋದ್ಯಾನವಿ ।
ಹಾರಂ ತಾನೀಗೆ ಶುಭಮ ನಾವೃಷಭೇಶಂ ||೨||

ರಜತಾಚಲ ಪ್ರವಾಸಂ ।
ವಿಜಿತಾಮರನಾಥ ನಮಲಚಿನ್ನಿಧಿಕೋಶಂ ॥
ವೃಜಿನ ವಿತಾನ ವಿನಾಶಂ ।
ವಿಜಯಂತಾಂ ಪೊರೆಯಲೆಂದು ಮಾವೃಷಭೇಶಂ ||೩||

ಶೈಲಸುತಾದರ ಪಾತ್ರಂ ।
ಪಾಲಿತ ನಿಜಭಕ್ತಜಾಲ ನಮಲ ಚರಿತ್ರಂ ॥
ಶೀಲಗುಣಾಂಕ ಪವಿತ್ರಂ ।
ಪಾಲಿಕೆ ತಾನೆಂದು ಮೆಮ್ಮನಾ ವೃಷಭೇಶಂ ||೪||

ವರವೇದಾಗಮ ಸಾರಂ ।
ಸುರುಚಿರ ಶಿವಭಕ್ತ ಸುಮುಖ ಸಾರಸ ಮಿಹಿರಂ ॥
ಸುರಕುಲ ನತಸಚ್ಚರಣಂ ।
ಪೊರೆಗೆಂದುಂ ಬಿಡದೆಯಮ್ಮನಾ ವೃಷಭೇಶಂ ||೫||

ಮದನಾರಿ ಮಂತ್ರಸದನಂ ।
ಚದುರಂ ಪರಿಲಸಿತ ವಜ್ರಚಯ ಸಮರದನಂ ॥
ಮುದಿತಂ ನೆರೆ ಜಿತಮದನಂ ।
ಸದುಹೃದಯ.ಂ ಪೊರೆಯಲೆಂದು ಮಾವೃಷಭೇಶಂ ||೬||

ಕರಣ ಶಶಾಂಕ ಸುನಯನಂ ।
ಕರುಣಾರಸಪೂರ ನಮಳ ಶರಣಾವರಣಂ ॥
ದುರಿತ ತಮೋಜ್ವಲ ತರಣಿಂ ।
ಪರಮಂ ತಾಂ ಪೊರೆಯಲೆಮ್ಮ ನಾವೃಷಭೇಶಂ । ||೭||

ಸುಜನಾಂತರ್ವಾಸಂ ಶಿವ ।
ಭಜಕಂ ವೇದಾಂತಸಾರ ನಿಗಮಾತೀತಂ ॥
ಕುಜನೋತ್ಸಾಹ ವಿನಾಶಂ ॥
ನಿಜದಿಂ ತಾಂ ಪೊರೆಯಲೆಮ್ಮ ನಾವೃಷಭೇಶಂ ||೮||

ಧಾತಾಮರನುತದೇವಂ।
ಧಾತಂ ಮಹಿಮಾಭಿರಾಮ ನ ಕುಟಿಲಂಭಾವಂ ॥
ಭೂತಾಳಿ ನಮಿತನಿಸದಪು ।
ನೀತಂ ತಾಂ ಪೊರೆಯ ಲೆಮ್ಮನಾ ವೃಷಭೇಶಂ ||೯||

ರಸವಕ್ಕವಿತಾಲೋಲಂ ।
ರಸಿಕಂ ವರಭಾಷಣಾಂಕ ನಪಗತ ಚಪಲಂ ॥
ಅಸಮಾಕ್ಷ ವಿನುತಕಾಯಂ ।
ಜಸದಿಂ ತಾಂ ಕುಡುಗೆ ಶುಭಮನಾವೃಷಭೇಶಂ ||೧೦||

ಕನ್ನಡ ನುಡಿ ಪೊಡವಿಯಲ ।
ಕ್ಷುನ್ನತ ಗತಿಗಡರ್ವತೆರನನೆಸಗಿರ್ಪ ನಘಂ ॥
ಭಿನ್ನಕಲಾಪ ವಿದೂರಂ ।
ಚೆನ್ನ ಮೊಗಂ ಪೊರೆಯಲೆಂದು ಮಾವೃಷಭೇಶಂ ||೧೧||

ಶ್ರೀ ಪಂಡಿತ ಸುಖದಂ ಜಿತ ।
ತಾಪಂಖಲ ಶಿಂಶುಮಾರ ಮದ ವಿಧ್ವಂಸಂ ॥
ಗೋಪಂ ವರಭಕ್ತಿ ಕಲಾ ಚಿ ।
ದ್ರೂಪಂ ಕುಡುಗೆಮಗೆ ಸುಖಮನಾವೃಷಭೇಶಂ ||೧೨||

ಗುರು ಬಸವ ದೇವ ಜೀವಂ ।
ನಿರುಪಮ ವಿಷ್ಣುಪ್ರತಾತ ಹಿತಶಿವದೇವಂ ॥
ಶರಣಾಂತರ್ಗತಜೀವಂ ।
ನಿರಘಂನೆರೆ ಪೋಷಿಯಲೆಂದು ಮಾವೃಷಭೇಶಂ ||೧೩||

ರುರುಗೌತಮಾದಿ ನಮಿತಂ ।
ಚಿರಪಜ್ಞಲ ಪಾನಶೀಲ ಮಾನಸ ಮಹಿತಂ ॥
ಶರಣಂ ಷಡಹಿತ ರಹಿತಂ ।
ಪರಮಂ ತಾಂ ಕುಡುಗೆ ಮುದಮನಾವೃಷಭೇಶಂ ||೧೪||

ಬಲದೇವ ವರಸುತಾಕರ ।
ಕಲಿತಂ ಕಲ್ಯಾಣ ಪತ್ರನಾಲಯ ನನಿಶಂ ।
ಸಲೆಸತ್ಕೀರ್ತಿ ವಿಶಾಲೊ ।
ಜ್ವಲಿತಂ ತಾನೀಗೆ ದಯವನಾವೃಷಭೇಶಂ ||೧೫||

ಸತ್ಯಾಗಾರ ನಿವಾಸಂ ।
ಭೃತ್ಯಾಚಾರಾಗ್ರಗಣ್ಯ ದೋಷಾನಲ ತಾಂ ॥
ನಿತ್ಯಾನಂದ ನಮಂದಂ ।
ಸ್ತುತ್ಯಾರ್ಹಂ ಪೊರೆಯ.ಲೆಂದು ಮಾವೃಷಭೇಶಂ ||೧೬||

ವಚನಾಮೃತ ರಸಕೂಪಂ ।
ರುಚಿರಾಭವನಟಿತ ವಿಮಲ ಲೀಲಾರೂಪಂ ॥
ಅಚಲಿತಹೃದಯಂ ಕರುಣಾ ।
ರುಚಿವೃತ ರೆನಿಸೆಮ್ಮ ಪೊರೆಯಲಾವೃಷಭೇಶಂ ||೧೭||

ರಾಜಸಮಾಜ ವಿಕಾಸಂ ।
ರಾಜಿತ ಶುಭ್ರಾಂಶು ತೇಜ ನತಸುರಭೂಜಂ ॥
ರಾಜ ಶಿರೋಧೃತ ಪಾದ ಪ ।
ಯೋಜಂ ತಾನೀಗೆ ದಯಮ ನಾವೃಷಭೇಶಂ ||೧೮||

ಜಗದೋದ್ಧಾರಾಧಾರಂ ।
ನಗುರೋರಧಿಕೇತಿ ವಾಕ್ಯಪಾಲನವೀರಂ ॥
ಅಗಣಿತ ಮಹಿಮಾಗಾರಂ ।
ಮಿಗಿಲಂ ನಗೆ ಮೊಗದಲೀ ಯಲಾವೃಷಭೇಶಂ ||೧೯||

ಪ್ರಮಥ ಪ್ರಥಮಾಚಾರ್ಯಂ ।
ಸಮರಸ ಸದ್ಭಾವ ನಿಲಯ ನ ತುಳಿತಕಾರ್ಯಂ ॥
ಯಮಿ ಹೃದಯಾಬ್ಜನಿವಾಸಂ ।
ಸುಮನಸ ತಾನೀಗೆ ಸುಖಮನಾವೃಷಭೇಶಂ ||೨೦||

ಸೀತೆಯನಪಹರಿಸಿದವಂ ।
ಕಾತುರದಿಂ ಕೆಣಕಲವನ ಶಪಿಸಿರ್ಪಾತಂ ॥
ಪಾತಕ ಮೂಲ ಸುಬಾಡಬ ।
ಪ್ರೀತಿಯಲುರೆ ಪೊರೆಯಲೆಂದು ಮಾವೃಷಭೇಶಂ ||೨೧||

ದಶವಿಧನಾದಾತೀತಂ ।
ನಿಸದಂ ಮನ್ಮಾಥ ನಾಥ ಚಿತ್ಸಂಕಾಶಂ ॥
ಅಸಮಾಕ್ಷಚಿತ್ತಜಾತಂ
ವಸುಧೆಯೊಳಿರದೆನ್ನ ಪೊರೆಯಲಾ ವೃಷಭೇಶಂ ||೨೨||

ನತಕಾಮಧೇನು ವೆನಿಸಿಪಥಿ |
ಮತದಿಂ ಸನ್ನುತಿಪ ರಂಗ ಸಂಗದೊಳೆಸೆದಾ ||
ಶೃತಿಪಾದಂ ಜಿತಭೇದಂ |
ಸತತಂ ಕುಡುಗೆಮಗೆ ಸುಖಮನಾವೃಷಭೇಶಂ ||೨೩||

ಕ್ಷಮೆಯಿಂ ವೆರಸಿದ ಶೂರಂ |
ಶಮೆಯಿಂ ಸತ್ಪ್ರಮಥರಿರಮ ಸಲಿಸಿದ ವೀರಂ ||
ಉಮತ ಜನಾಂಬುಜವಾರಣ |
ಕ್ರಮದಿಂ ತಾನೀಗೆ ಗತಿಯನಾವೃಷಭೇಶಂ ||೨೪||

ತ್ರಯಕರಣ ವಿಶುದ್ಧಂನಯ |
ಮಯ ನ ಖರ್ವಗರ್ವ ನಿರತರಕ್ಷಣಕರ್ತಂ ||
ಭಯರಹಿತಂ ವಿಲಸಿತ ಚಿ |
ನ್ಮಯನುರಿ ತಾಂ ಪೊರೆಯಲೆಂದು ವೃಷಭೇಶಂ ||೨೫||

ಮಾಯಾತೀತಂ ಚತುರೊ |
ಪಾಯಂ ನಿರಪಾಯ ಜೀಯ ಮುಕ್ತೈವಲ್ಯಂ ||
ಹೇಯಚ್ಚ ವಿನಾಶಂ ನಿ |
ರ್ಮಾಯಂ ತಾಂ ಸತತಪೊರೆಯಲೆಮ್ಮ ನಾವೃಷಭೇಶಂ ||೨೬||

ಲಾಕ್ಷಣಿಕಂ ಸಾಧನ ನಿರ |
ಪೇಕ್ಷಕ ಕರುಣಾಕಟಾಕ್ಷ ನಕ್ಷಯಪಕ್ಷಂ ||
ಅಕ್ಷಸು ಮಾಲವಿಭೂಷ ವಿ
ಚಕ್ಷಣ ತಾನೀಗೆ ದಯಮನಾವೃಷಭೇಶಂ ||೨೭||

ಜ್ಯೌತಿಷಿ ಪುಚ್ಚಪ್ಪಾರ್ಯನ |
ಪೂತಾತ್ಮಜ ಶಿವಲಿಂಗ ರಚಿಸಿರೆ ಸ್ತವಮಂ ||
ರೀತಿಯನರಿಯುತ ಪಠಿಸಲ್ |
ಖಾತಂ ತಾಂ ಪೊರೆಯಲೆಂದು ಮಾವೃಷಭೇಶಂ ||೨೮||

ಜಯವಕ್ಕೆ ವೃಷಭದೇವಗೆ |
ಜಯಮಾಗಲ್ಕರೆ ವೀರಶೈವ ಧರ್ಮದ ನೆಲೆಗಂ||
ಜಯಮಕ್ಕೆ ಸುಜನ ನಿಕರಕೆ |
ಜಯಮಾಗಲಿ ಜಯತು ಸತತ ನಾಡಮ್ಮನಿಗುಂ ||೨೯||

ಇತಿ ಶ್ರೀ ವೃಷಭೇಶ್ವರ ನಕ್ಷತ್ರ ಮಾಲಿಕಾ ಸ್ತೋತ್ರಂ ಸಮಾಪ್ತಂ

## ಲಚ್ಯಾಣ ಜಾತ್ರೆಯ ಸಮಾಚಾರ.

ಪೂರ್ವಜರು ಜಾತ್ರೆಗಳನ್ನುಂಟುಮಾಡಿದ್ದು ಜನಸುಧಾರಣೆಗಾಗಿಯೇ ಎಂಬ ವಿಷಯವನ್ನು ಬಲ್ಲಂಥ ಶ್ರೀ ಬಂಥನಾಳ ಶಿವಯೋಗಿಗಳು ತಮ್ಮ ಸ್ಥಾನಗಳಲ್ಲಿ ಜರಗತಕ್ಕ ಉತ್ಸವಾದಿಗಳನ್ನು ಈ ಉದ್ದೇಶವನ್ನಿಟ್ಟುಕೊಂಡೇ ನಡೆಸುತ್ತಿರುವರೆಂಬ ಸಂಗತಿಯು ಬಹು ಜನರಿಗೆ ಗೊತ್ತಿದ್ದೇ ಸರಿ. ಈ ವರ್ಷ ಲಚ್ಯಾಣ ಜಾತ್ರೆಯು ಕೂಡಾ ಈ ಉದ್ದೇಶವನ್ನಿಟ್ಟುಕೊಂಡೇ ಪೂರೈಸಿತು. ಪದ್ಧತಿಪ್ರಕಾರ ರಥೋತ್ಸವ, ಅಗ್ನಿಉತ್ಸವ, ಅಡ್ಡಪಲ್ಲಕ್ಕಿ ಉತ್ಸವ ಮೊದಲಾದವುಗಳು ಯಥಾರೀತಿಯಾಗಿ ಪೂರೈಸಿದನಂತರ ನಿರ್ವೀರ್ಯವಾದ ಹಾಗೂ ನಿರ್ಬಲವಾದ ಜನಾಂಗವು ಸಬಲ ಹಾಗೂ ಸತೇಜವಾಗುವಂತೆ ಮಾಡಲು ಆದರ್ಶಪ್ರಾಯರಾದ ಮಿರ್ಜೆ, ಬುಧಗಾಂವ, ಕೆಂಪವಾಡ, ಪಂಜಾಬ, ಪಡನೂರು, ಖರ್ಜಗಿ, ಆಗರಖೇಡ, ಮೊದಲಾದ ಕಡೆಯ ಪ್ರಸಿದ್ಧ ಜಟ್ಟಿಗಳನ್ನು ನೂರಾರು ರೂ. ಖರ್ಚುಮಾಡಿ ಕರೆಯಿಸಿ ಅವರ ಶಕ್ತಿಪ್ರದರ್ಶನವನ್ನು ಎಲ್ಲ ಜನರಿಗೂ ತೋರಿಸಿದವರಾದರು. ಇದಲ್ಲದೆ ಶ್ರೀ [illegible] ಮಹಾದೇವ ಸ್ವಾಮಿಗಳವರು ಬೆಂಗಳೂರು ಇವರ ಶಿಷ್ಯರಾದ ಕನ್ನಡ ಜಟ್ಟಿ ಬಸವರಾಜರನ್ನು ಕರೆಯಿಸಿಕೊಂಡು ಅವರು ಮಾಡುವ ಅನೇಕ ಅದ್ಭುತ ಶಾರೀರಿಕ ಪ್ರಯೋಗಗಳನ್ನು ಎಲ್ಲ ಜನರೂ ನೋಡುವಂತೆ ಒದಗಿಸಿಕೊಟ್ಟರು.

ಮತ್ತು ಇದರಂತೆ ನೀವು ನಿಮ್ಮ ಮಕ್ಕಳು ಬಲವಂತರಾಗಿ ವೀರ್ಯವಂತರಾಗಿ ಮನೆತನದ ಸಮಾಜ [illegible] ಶಾಸ್ತ್ರದ ಸ್ವಾತಂತ್ರ್ಯವನ್ನು ರಕ್ಷಿಸಿರೆಂದು. ತಾವೇ ಸ್ವತಃ [illegible]ಶವಮಾಡಿದರು. ಮತ್ತು ಜಾತ್ರೆಗೆ ಬಂದ ಅನೇಕ ಕೀರ್ತನ[illegible] ಧಾರ್ಮಿಕ ನೈತಿಕ ಮೊದಲಾದವುಗಳ ಸುಧಾರಣ[illegible]ದೇಶಮಾಡಿಸಿ ಜನಜಾಗ್ರತಿಯನ್ನು ಮಾಡಿಸಿದರು. [illegible] ಎಲ್ಲ ಕಡೆಯ ಜಾತ್ರೆಗಳು ಸಮಾಜ ಸುಧಾರಣೆಯ ಉದ್ದೇಶವನ್ನಿಟ್ಟುಕೊಂಡೇ ನಡೆಸಿದ್ದಾದರೆ ಕ್ರಮೇಣವಾಗಿಯ[illegible] ಜನಾಂಗವು ಸುಧಾರಣೆಯಾಗದಿದ್ದೀತೆ ?

ಪ್ರ. ನೋಡಿದವ.

## ಶ್ರೀ ಜಗದ್ಗುರು ಗಂಗಾಧರ ಸಂಸ್ಕೃತ ಕಾಲೇಜವು ಪ್ರಾರಂಭವಾಯಿತು.

ಇಲ್ಲಿಯ ಶ್ರೀ ಜಗದ್ಗುರು ಗಂಗಾಧರ ಸಂಸ್ಕೃತ ಕಾಲೇಜವು ಪ್ರಾರಂಭವಾಗಿದೆ. ಈಗಾಗಲೇ ೨೦-೨೫ ಜನ ವಿದ್ಯಾರ್ಥಿಗಳು ಬಂದಿರುವರು. ಇನ್ನೂ ಬರಲಿರುವರು. ಅನೇಕ ಕಡೆಗಳಿಂದ ಪತ್ರಗಳು ಬರುತ್ತಿರುವವು. ಕೆಳ ತರಗತಿಯ ವಿದ್ಯಾರ್ಥಿಗಳಿಗೆ ಅನುವು ದೊರೆಯಲಾರದು. ಪ್ರೌಢ ವಿದ್ಯಾರ್ಥಿಗಳ ಸಂಖ್ಯೆಯು ಹೆಚ್ಚುತ್ತಿರುವದು. ಸಾಹಿತ್ಯ ವೇದಾಂತ ನ್ಯಾಯ ವ್ಯಾಕರಣ ಮೊದಲಾದ ವಿಷಯಗಳು ಒಳ್ಳೇ ಭರದಿಂದ ಸಾಗಿವೆ. ಬೇರೊಬ್ಬ ಶಿಕ್ಷಕರನ್ನೂ ನಿಯಮಿಸಲಾಗಿದೆ.

ಇನ್ನೊಂದು ಆನಂದದ ಸಂಗತಿಯೇನೆಂದರೆ— ಹೆಚ್ಚಾಗಿ ವ್ಯವಹಾರಜ್ಞಾನವಾಗಬೇಕೆಂದು ಅಭ್ಯಾಸಕ್ರಮದಲ್ಲಿ ಇತಿಹಾಸ ವಿಷಯವನ್ನು ಈ ಸಲ ಕಲಿಸಲು ಹೊಸದಾಗಿ ಏರ್ಪಾಡುಮಾಡಿದೆ. ಇಂಗ್ಲಿಷವು ಹಿಂದೀ ಕನ್ನಡ ವಚನ ಸಂಗೀತ ಮೊದಲಾದ ವಿಷಯಗಳೊಡನೆ ಇತಿಹಾಸವನ್ನು ಸೇರಿಸಲಾಗಿದೆ. ಇದರಿಂದ ಪೂರ್ವಜರ ವೀರಚರಿತೆಯು ಮನದಟ್ಟಾಗಿ ಮುಂದಡಿ ಇಡಲು ಅನುಕೂಲವಾಗುವದು. ಇದರಂತೆ ಇನ್ನೂ ಅನೇಕ ಹೊಸ ಸುಧಾರಣೆಗಳನ್ನು ಮಾಡುವ ಯೋಜನೆ ಇದೆ. ಕಲಕತ್ತಾ ಸಂಸ್ಕೃತ ಪರೀಕ್ಷೆಯ ಪರಿಣಾಮವು ಈ ತಿಂಗಳ ಅಂತ್ಯ[illegible]ಯುವದು.

ಪ್ರಿನ್ಸಿ[illegible]
ಶ್ರೀ ಜಗದ್ಗುರು ಗಂಗಾಧರ ಸಂಸ್ಕೃ[illegible] ಹುಬ್ಬಳ್ಳಿ.

## ಶ್ರೀ ವಿದ್ಯಾರಣ್ಯ ಸಮಿತಿ ಬೆಳಗಾವ.

ಶ್ರೀ ವಿದ್ಯಾರಣ್ಯ ಗ್ರಂಥಮಾಲಾ ಬೆಳಗಾವ

೧ ನೇ ಹೂವು ಚುರಮುರಿ ಶಾಕುಂತಲ ನಾಟಕವು
೨ ನೇ ಹೂವು ಪುನರ್ಜನ್ಮ ಎರಡೂ ಅರಳಿವೆ.
೩ ನೇ ಹೂವು "ತಾಯಿ" ಅಚ್ಚಿನಲ್ಲಿದೆ ಡಿಶೆಂಬರ ತಿಂಗಳ ಕೊನೆಯಲ್ಲಿ ಅರಳುವದು.

ವಾ. ಚ. ಅ. ವೆ. ಸೇರಿ ೩-೦-೦ ರೂ. ಗಳು
ಸಂಪಾದಕರು— ವಿ. ರಾ. ನಗರ.




## ಸ್ಥಳೀಯ ಸಂಸ್ಥೆಗಳ ಪತ್ರಿಕೆ—

ಮುನಿಸಿಪಾಲ್ಟಿ ಲೋಕಲ್ ಬೋರ್ಡ ಮೊದಲಾದ ಸ್ಥಾನಿಕ ಸ್ವರಾಜ್ಯದ ಸಂಗತಿಗಳನ್ನು ತಿಳಿದುಕೊಳ್ಳಬೇಕೆಂಬುವವರು ಈ ಪಕ್ಷ ಪತ್ರಿಕೆಯನ್ನು ತರಿಸಿಕೊಳ್ಳಿರಿ.

ವಾರ್ಷಿಕ ಚಂದಾ ೨ ರೂ.

ವಿಳಾಸ— ಟಿ. ಎಸ್. ಚೆನ್ನಪ್ಪ
ಗಾಂಧಿ ನಗರ ಬೆಂಗಳೂರು ಸಿಟಿ.

## ಅರವಿಂದ ಗ್ರಂಥಮಾಲೆಯಲ್ಲಿ ವರ್ಷಕ್ಕೆ ಆರು

ಒಳ್ಳೊಳ್ಳೇ ಗ್ರಂಥ ಕುಸುಮಗಳು ಅರಳುತ್ತವೆ.

ಸಂಪಾದಕರು— ಮಧುರ ಚೆನ್ನರು.

ವಾರ್ಷಿಕ ಚಂದಾ ೩-೮-೦ (ಅಂಚೆ ವೆಚ್ಚ ಸೇರಿ)

ವಿಳಾಸ— ಅರವಿಂದ ಗ್ರಂಥಮಾಲಾ ಕಾರ್ಯಾಲಯ.
ಪೋ. ಹಲಸಂಗಿ. ಜಿ. ವಿಜಾಪುರ

# ಎಲ್ಲರೂ ಓದಲೇಬೇಕಾದ ಪುಸ್ತಕಗಳು.

# ಇಕೋ, ಇಲ್ಲಿವೆ.

## ಹರ್ಡೇಕರ ಮಂಜಪ್ಪನವರು ಬರೆದ ಪುಸ್ತಕಗಳು.

| ಪುಸ್ತಕ | ಬೆಲೆ |
|---|---|
| ಬುದ್ಧಿಯ ಮಾತು | ೦-೩-೦ |
| ವೀರಶೈವ ಮತಬೋಧೆ | ೦-೨-೦ |
| ವೀರಶೈವ ಮತತತ್ವ | ೦-೪-೦ |
| ಕಾಯಕವೆ ಕೈಲಾಸ | ೦-೩-೦ |
| ಶ್ರೀ. ಲಿಂಗರಾಜರ ಚರಿತ್ರೆ | ೦-೬-೦ |
| ಪ್ರಭುದೇವರ ಕಥೆ | ೦-೧-೬ |
| ಏಕಲವ್ಯನ ಕಥೆ | ೦-೧-೬ |
| ಲಜಪತರಾಯರ ಚರಿತ್ರೆ | ೦-೧-೬ |
| ಆದಿಜನ ಸುಧಾರಣೆ | ೦-೧-೬ |
| ಬಸವ ಬೋಧಾಮೃತ | ೦-೨-೦ |
| ಭಜನಾವಳಿ | ೦-೬-೦ |
| ಜಾತಿಯ ವಾದ ವಿಮರ್ಶೆ | ೦-೧-೬ |
| ವಚನಕಾರರ ಸಮಾಜರಚನೆ | ೦-೧-೦ |
| ವೀರಶೈವ ಏಕೀಕರಣ | ೦-೨-೦ |
| | ೦-೦-೩ |

| ಪುಸ್ತಕ | ಬೆಲೆ |
|---|---|
| ಪುಲಿಕೇಶಿಯ ಚರಿತ್ರೆ | ೦-೧-೬ |
| ಕಚದೇವನ ಕಥೆ | ೦-೧-೬ |
| ಸ್ವಾಮಿ ವಿವೇಕಾನಂದರ ಚರಿತ್ರೆ | ೦-೧-೬ |
| ಸುಕಲಾದೇವಿಯ ಕಥೆ | ೦-೧-೬ |
| ಸ್ತ್ರೀನೀತಿ ಸಂಗ್ರಹ | ೦-೪-೦ |
| ದಾಂಪತ್ಯ ಧರ್ಮ | ೦-೩-೦ |
| ದೇವಯಾನಿಯ ಕಥೆ | ೦-೧-೬ |
| ವಿಜಯವಾಣಿ | ೦-೨-೦ |
| ರಾಷ್ಟ್ರಗೀತೆ | ೦-೦-೬ |
| ಜೀವನ ರಹಸ್ಯ (ಅಣ್ಣದಾನೀಶ್ವರ ಕೃತ.) | ೦-೧-೦ |
| ಶುದ್ಧಿ ಮತ್ತು ಸಂಘಟನೆ | ೦-೪-೦ |
| ಸ್ಮಾರಕ ಚಂದ್ರಿಕೆ | ೧-೦-೦ |
| ಪ್ರಮಥಾಚಾರ ದೀಪಿಕೆ | ೦-೩-೦ |
| ೬೩ ಪುರಾತನರ ಚರಿತ್ರೆ (ಬಿರ್ಜೆ ಕೃತ) | ೨-೦-೦ |

ವಿಳಾಸ:- ಜ್ಞಾನೋದಯ ಗ್ರಂಥ ಭಾಂಡಾರ ಆಲಮಟ್ಟಿ. ಪೋ. ಆಲಮಟ್ಟಿ ಜಿ. ವಿಜಾಪುರ.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.


ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೨೩ ನೆಯ ಮೇ ೧೯೩೮. | ಸಂಚಿಕೆ೩೮ |
|---|---|---|


ಜನಸೇವೆಯೇ ದೇವರಸೇವೆ

## ಗಾಂಧೀಜಿ-ಜಿನ್ನಾರವರ ಸಂಭಾಷಣೆ.



ತಾ. ೨೦ ನೆಯ ದಿವಸ
ಗಾಂಧೀಜಿಯವರು ಪುನಃ
ಜಿನ್ನಾ ರವರನ್ನು ಮುಂಬೈಯಲ್ಲಿ
ಕಂಡರು.



ಹಿಂದು-ಮುಸಲ್ಮಾನರ ಐಕಮತ್ಯವನ್ನು ಕುರಿತು
೨॥ ತಾಸು ಮಾತನಾಡಿದರು.



# ಶರಣ ಸಂದೇಶ

# THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ-ಸೋಮವಾರ ತಾರೀಖು ೨೩ ನೆಯ ಮೇ ೧೯೩೮. | ಸಂಚಿಕೆ ೩೭

## ಮಹತ್ವದ ಸುದ್ದಿಗಳು.

—ಮಹಾತ್ಮಾ ಗಾಂಧಿಯುವರು ಬ್ಯಾ. ಜಿನ್ನಾರವರನ್ನು ಅವರ ಭವನದಲ್ಲಿ ತಾ. ೨೦ ನೆಯ ದಿವಸ ಕಂಡು ಹಿಂದು-ಮುಸಲ್ಮಾನ್ ಐಕಮತ್ಯದ ವಿಚಾರವಾಗಿ ೨|| ತಾಸು ಮಾತನಾಡಿದರು.

ಯುನಾಯಿಟೆಡ್ ಪ್ರೆಸ್ ಪ್ರತಿನಿಧಿಯು ಗಾಂಧೀಜಿಯವರು ಯಾವ ವಿಷಯುವಾಗಿ ಮಾತನಾಡಲು ಬರುತ್ತಿದ್ದಾರೆಂದು ಬ್ಯಾ. ಜಿನ್ನಾರವರನ್ನು ಕೇಳಲು ಅವರು ಹೀಗೆ ಹೇಳಿದರು—

"ಗಾಂಧೀಜಿಯವರು ಬರಬೇಕಾದರೆ ಯಾವುದೋ ಒಂದು ಹೊಸ ತೊಡಕು ಬಂದಿರಬೇಕು. ಆದರೆ ಆ ತೊಡಕು ಯಾವುದೆಂಬುದು ನನಗೂ ಗೊತ್ತಿಲ್ಲ."

—ಮಧ್ಯಪ್ರಾಂತದ ನ್ಯಾಯಶಾಖಾ ಮಂತ್ರಿಗಳಾದ ಮಿಸ್ಟರ್ ಶರೀಫರು ಆದಿಹಿಂದು ಬಾಲಿಕೆಯು ಮೇಲೆ ಬಲಾತ್ಕಾರ ಮಾಡಿದ್ದ ಅಪರಾಧಿಯನ್ನು ಬಿಟ್ಟದ್ದು ತಪ್ಪೆಂತಲೂ ಅವರು ಕೆಲಸದಿಂದ ನಿವೃತ್ತರಾಗಬೇಕೆಂತಲೂ ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ನಿರ್ಣಯಿಸಿದೆ. ಆ ಪ್ರಕಾರ ಇದೇ ೨೪ ನೆಯ ತಾರೀಖಿನ ದಿವಸ ಮಿ. ಶರೀಫರು ಮಂತ್ರಿತ್ವದಿಂದ ನಿವೃತ್ತರಾಗುವರು.

—ಗಡಿನಾಡಿನಲ್ಲಿ ಅಪರಾಧಿಯಾಗಿದ್ದ ಮುಸಲ್ಮಾನ್ ಶಿಕ್ಷಕನನ್ನು ಕೆಲಸದ ಮೇಲೆ ತೆಗೆದುಕೊಂಡದ್ದರ ಸಂಬಂಧವಾಗಿ ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ವಿಚಾರಣೆ ನಡೆಯಿಸದೆ ಗಡಿನಾಡಿನ ಶಿಕ್ಷಣ ಶಾಖೆಯೇ ಸ್ವತಂತ್ರವಾಗಿ ವಿಚಾರಣೆ ನಡೆಯಿಸಬೇಕೆಂದು ನಿರ್ಧರಿಸಿತು.

—ಕಾಂಗ್ರೆಸ್ಸ ವರ್ಕಿಂಗ್ ಕಮಿಟಿಗೆ ಕಡಿಮೆಯಾಗಿದ್ದ ಒಂದು ಸದಸ್ಯತ್ವಕ್ಕೆ ಮಹಾರಾಷ್ಟ್ರದ ಶ್ರೀ. ಶಂಕರರಾವ ದೇವ ಇವರನ್ನು ನಿಯಮಿಸಿಕೊಂಡರೆಂದು ಪ್ರಕಟವಾಗಿದೆ. ಈ ಸ್ಥಳಕ್ಕೆ ಕರ್ನಾಟಕದ ಶ್ರೀ. ದೇಶಪಾಂಡೆ ಗಂಗಾಧರರಾಯರನ್ನು ನಿಯಮಿಸಿಕೊಳ್ಳುವರೆಂದು ಈ ಮುಂಚೆ ಸುದ್ದಿಯಿದ್ದಿತು.

—ಮೈಸೂರು ಕಾಂಗ್ರೆಸ್ಸಿನವರು ಬಹಿರಂಗವಾಗಿ ರಾಜಕೀಯ ಕಾರ್ಯಕಲಾಪಗಳನ್ನು ನಡೆಯುಸುವಾಗ ರಾಷ್ಟ್ರೀಯ ಧ್ವಜ ಮತ್ತು ಮೈಸೂರು ಧ್ವಜ ಇವೆರಡನ್ನೂ ಹಾರಿಸಬೇಕೆಂದು ಗೊತ್ತಾಗಿದೆಯಷ್ಟೆ. ಇವುಗಳಲ್ಲಿ ಮೊದಲು ಮೈಸೂರು ಸರಕಾರದ ಧ್ವಜವನ್ನೇ ಹಾರಿಸಬೇಕೆಂದೂ ಅದರಿಂದ ಮಹಾರಾಜರ ವಿಷಯದಲ್ಲಿರುವ ರಾಜನಿಷ್ಠೆಯು ನಿಚ್ಚಳವಾಗಿ ತೋರುವುದೆಂದೂ ಮಹಾತ್ಮಾ ಗಾಂಧಿಯವರು ಮೈಸೂರು ಕಾಂಗ್ರೆಸ್ಸಿನವರಿಗೆ ಸಲಹೆಕೊಟ್ಟಿದ್ದಾರೆ.

—ಹಿಂದು-ಮುಸಲ್ಮಾನ್ ಐಕಮತ್ಯದ ವಿಚಾರವಾಗಿ ಚರ್ಚಿಸಲು ಮುಸ್ಲಿಂಲೀಗಿನ ಕಾರ್ಯಕಾರಿಮಂಡಲವು ಮುಂಬೈಯಲ್ಲಿ ಜೂನ್ ೪ ನೆಯ ತಾರೀಖಿನ ದಿನ ಕೂಡುವುದು.

—ಇಪಿ ಫಕೀರ ಮತ್ತು ಅವರ ಜತೆಗಾರ ಶೇರಅಲ್ಲಿ ವಜೀರಸ್ಥಾನದಲ್ಲಿ ಅಸಂತೋಷವನ್ನುಂಟುಮಾಡಿರುವುದರಿಂದ ಅಲ್ಲಿಯ ಶಾಂತತೆಗಾಗಿ ಉಗ್ರ ಉಪಾಯುಗಳನ್ನು ಮಾಡಲಾಗುವದೆಂದು ಹಿಂದುಸ್ಥಾನ ಸರಕಾರದವರು ಪ್ರಕಟಿಸಿದ್ದಾರೆ.

—ಗೋ ಸಂರಕ್ಷಣೆಯ ಪವಿತ್ರ ಕಾರ್ಯವನ್ನು ಕಳೆದ ೩೦ ವರುಷಗಳಿಂದಲೂ ಅವಿಚ್ಛಿನ್ನವಾಗಿ ಮಾಡುತ್ತಿರುವ ಸುಪ್ರಸಿದ್ಧ ಶ್ರೀ. ಚೌಂಡೆ ಮಹಾರಾಜರ ಹೀರಕೋತ್ಸವವು ಈ ತಿಂಗಳು ೨೨ ನೆಯ ತಾರೀಖಿನಿಂದ ಒಂದು ವಾರ ಪುಣೆ, ಮುಂಬೈ ಮೊದಲಾದ ಅನೇಕ ಸ್ಥಳಗಳಲ್ಲಿ ಜರುಗುವುದು.

—ಸಂಸ್ಥಾನಗಳ ರಾಜಕೀಯ ಪಕ್ಷಗಳು 'ಕಾಂಗ್ರೆಸ್' ಎಂಬ ಹೆಸರನ್ನು ತಮ್ಮ ಪಕ್ಷಕ್ಕೆ ಇಟ್ಟುಕೊಳ್ಳಬಾರದಾಗಿ ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಠರಾವುಮಾಡಿದೆ. ಮೈಸೂರು ಕಾಂಗ್ರೆಸ್ ಪಕ್ಷದ ಪ್ರಮುಖರು ಈ ಸೂಚನೆಯನ್ನು ಮಾನ್ಯಮಾಡಲಿಲ್ಲ. ಈ ಸೂಚನೆಯು ತಮಗೇನೂ ಸಂಬಂಧಪಟ್ಟಿಲ್ಲವೆಂದೂ ಅವರು ತಿಳಿದಿದ್ದಾರೆ. ಹೈದರಾಬಾದ ಸ್ಟೇಟ ಕಾಂಗ್ರೆಸ್ ಎಂಬ ಸಂಸ್ಥೆ ನಿಜಾಮ ಹೈದರಾಬಾದದಲ್ಲಿ ಉಂಟಾಗಿದೆಯಂತೆ.

# ಮಹಾದೇವಿಯಕ್ಕನ ಜೀವನ ಕಾವ್ಯ.

(ಲೇಖಕರು— ಶ್ರೀಮನ್ನಿರಂಜನ ಮಹಾದೇವ ಸ್ವಾಮಿಗಳು ಸರ್ಪಭೂಷಣಮಠ, ಬೆಂಗಳೂರು.)

ಯಾವ ನಾಡಿನಲ್ಲಿಯೇ ಆಗಲಿ, ಯಾವ ದೇಶದಲ್ಲಿಯೇ ಆಗಲಿ, ಸಾಹಿತ್ಯವನ್ನು ಸೃಷ್ಟಿಸಿ, ಸಾಹಿತಿಗಳಾಗುವವರು ಕಡಿಮೆ. ಅದರಲ್ಲೂ ಸ್ತ್ರೀಯರ ಸಂಖ್ಯೆಯು ತೀರ ಕಡಿಮೆ. ಅದರೊಳಗಂತೂ ನಮ್ಮ ಕನ್ನಡ ನಾಡಿನೊಳಗೆ ಸ್ತ್ರೀಯರು ಸಾಹಿತ್ಯದಲ್ಲಿ ಬಹಳ ಹಿಂದುಳಿದಿದ್ದಾರೆ. ಗಣನೆಯನ್ನು ಮಾಡಹೊರಟರೆ ಕೈಬೆರಳುಗಳನ್ನು ಮಾತ್ರ ಎಣಿಸಬೇಕಾಗುತ್ತದೆ. ಮಹಾದೇವಿಯಕ್ಕ, ಲಿಂಗಮ್ಮ, ನೀಲಮ್ಮ, ಹೊನ್ನಮ್ಮ ಮೊದಲಾದ ನಾಲ್ಕಾರು ವ್ಯಕ್ತಿಗಳನ್ನು ಬಿಟ್ಟರೆ ನಮ್ಮ ಪ್ರಾಚೀನ ಸಾಹಿತಿಗಳ ಪಂಕ್ತಿಯಲ್ಲಿ ಸೇರುವ ಸ್ತ್ರೀಯರು ಬೇರೆ ಯಾರೂ ಇಲ್ಲ. "ನಾನೃಷಿಃ ಕವಿಃ" ಎಂಬ ಋಷಿ ನಿರ್ಬಂಧಕ್ಕೆ ಹೆದರಿಬಿಟ್ಟರೋ ಇಲ್ಲವೆ ಸಾಹಿತ್ಯಸೇವೆಯು ಕೇವಲ ಪುರುಷರ ಸೊತ್ತೆಂದು ಭಾವಿಸಿಬಿಟ್ಟರೋ ಬೇರೆ ನಾವು ತಿಳಿಯೆವು.

ನಮ್ಮ ಈ ಕನ್ನಡನಾಡಿನಲ್ಲಿ ದೊರೆಯುವ ನಾಲ್ಕಾರು ಮಂದಿ ಸ್ತ್ರೀ ಸಾಹಿತಿಗಳಲ್ಲಿ ನಮ್ಮ ಅಕ್ಕ ಮಹಾದೇವಿಯು ಅಗ್ರಗಣ್ಯಳು. ಸ್ತ್ರೀಯರಲ್ಲಿ ಅಷ್ಟೇ ಅಲ್ಲ, ಪುರುಷರಲ್ಲಿಯೂ ಅವಳಿಗೆ ಮೇಲ್ಮೆಯು ದೊರಕಿದೆ. ಅದಕ್ಕೆ ಮೂಲ ಕಾರಣವೇನೆಂದರೆ— ಅವಳು ಕಲಿತು ಕಾವ್ಯವನ್ನು ಬರೆಯಲಿಲ್ಲ. ಕೀರ್ತಿಗಾಗಿ ಗ್ರಂಥಗಳನ್ನು ರಚಿಸಲಿಲ್ಲ. ಅವಳ ಇಡೀ ಜೀವನವೇ ಒಂದು ಕಾವ್ಯಮಯವಾಗಿತ್ತು. ಅವಳ ಅಂತರಂಗ ಸ್ಫೂರ್ತಿಯು ಆ ತೆರನಾಗಿತ್ತು. ಅಂತಹದೊಂದು ಸ್ಥಿತಿಯು ಬಾರದ ವಿನಹ ಒಂದು ವಿಲಕ್ಷಣವಾದ, ಅನುಪಮವಾದ ಕಾವ್ಯಶಕ್ತಿಯು ಅದೆಂದಿಗೂ ಬರಲಾರದು. ಒಂದು ವೇಳೆ ಬಂದರೂ ಅದು ಬಹು ಜನರಿಗೆ ಮೆಚ್ಚುಗೆಯಾಗಲಾರದು. ಬಹು ದಿನ ಬದುಕಲಾರದು. ಆದುದರಿಂದ ಮಹಾ ಕವಿ ಹರಿಹರನು—

ಕಂದ|| ಕ್ಷುದ್ರಂಗೆ ಸಕಲ ಸುಜನೋ|
ಪದ್ರುವ ರೂಪಂಗೆ ಪರರ ಕಾವ್ಯಾರ್ಥಮುಮಂ||
ಛಿದ್ರಿಸುವಂಗತಿ ಶಬ್ದದ|
ರುದ್ರಂಗಕ್ಕುಮೆ ನವೀನ ಕಾವ್ಯಾರಂಭಂ||

ಎಂದು ಬಣ್ಣಿಸಿದ್ದಾನೆ, ಬೀರಿದ್ದಾನೆ.

ಅಕ್ಕಮಹಾದೇವಿಯು ವಿದುಷಿ ಶ್ರೇಷ್ಠಳಾಗಿದ್ದಳೆಂದು ಕೇವಲ ನಾವು ನಮ್ಮ ಕಲ್ಪನೆಯಿಂದ ಹೇಳಬೇಕಾಗಿಲ್ಲ. ಅವಳೇ ರಚಿಸಿದ ಗ್ರಂಥಗಳಿಂದ ಗೊತ್ತಾಗುವದಲ್ಲದೆ ಇನ್ನಿತರ ಕವಿಗಳ ಉಕ್ತಿಗಳಿಂದಲೂ ವ್ಯಕ್ತವಾಗುತ್ತದೆ ಅವಳ ಅಪಾರವಾದ ವೈದುಷ್ಯಕ್ಕೆ ಮೆಚ್ಚಿ ಚೆನ್ನಬಸವಣ್ಣನು—

"ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತುವಚನ, ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ, ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ, ಅಜಗಣ್ಣನ ಐದು ವಚನಕ್ಕೆ ಕೂಡಲ ಚೆನ್ನಸಂಗಯ್ಯನಲ್ಲಿ ಮಹಾದೇವಿಯಕ್ಕಗಳ ಒಂದು ವಚನ ನಿರ್ವಚನ ಕಾಣಾ ಸಿದ್ಧರಾಮಯ್ಯ"

ಎಂದು ಬಣ್ಣಿಸಿದ್ದಾನೆ. ಹರಿಹರದೇವನು "ಸಾಹಿತ್ಯದ ನಿಧಿ" "ಸಕಲ ಕಲಾಕೋವಿದೆ" ಎಂದು ಹೊಗಳಿದ್ದಾನೆ ಸಿದ್ಧವೀರಣ್ಣೊಡೆಯನು "ಸ್ವಾನುಭವ ಸಾಗರ" "ತತ್ವ ಶಿಖಾಮಣಿ" ಎಂದು ಮುಂತಾಗಿ ಸ್ತುತಿಸಿದ್ದಾನೆ. ಇನ್ನುಳಿದ [illegible] ರಸ ಷಡಕ್ಷರ ಮೊದಲಾದ ಉದ್ದಾಮ ಕವಿಗಳು ತಮ್ಮ ಕಾವ್ಯಗಳ ಆದಿಯಲ್ಲಿ ಅಕ್ಕನನ್ನು ಸ್ಮರಿಸದೆ ಸ್ತುತಿಸದೆ ಬಿಟ್ಟಿಲ್ಲ. ಒಟ್ಟಿನಲ್ಲಿ ಅಕ್ಕನು ತನ್ನ ವೀರ ವಿರತಿಯಿಂದ ಎಲ್ಲರನ್ನೂ ಬೆರಗುಗೊಳಿಸಿದಂತೆ ತನ್ನ ಅನುಪಮವಾದ ವೈದುಷ್ಯದಿಂದಲೂ ಎಲ್ಲರನ್ನು ತಲೆದೂಗಿಸಿದ್ದಾಳೆ.

ಮಹಾದೇವಿಯಕ್ಕನು ವಯೋವೃದ್ಧೆಯಾಗಿ ವಚನಗಳನ್ನು ಹೇಳಿರುವುದಿಲ್ಲ. ಆಕೆಯು ನವ ತಾರುಣ್ಯದಲ್ಲಿಯೇ ವೈರಾಗ್ಯವನ್ನು ತಳೆದು ವಚನಗಳನ್ನು ಸನ್ನಿವೇಶಕ್ಕೆ ತಕ್ಕಂತೆ ವಿರಚಿಸಿದಳು. ಆಶಾಪಾಶವನ್ನು ಹರಿಯಲು ತನ್ನ ಮನಸ್ಸಿಗೆ ಒಳ್ಳೇ ಶಿಕ್ಷಣವನ್ನು ಕೊಟ್ಟಳು. ಹೆಣ್ಣುಮಕ್ಕಳ ಸ್ವಭಾವಕ್ಕನುಗುಣವಾಗಿ ಆಕೆಯೂ ತನಗೆ ಉತ್ತಮನಾದ ರೂಪ-ಲಾವಣ್ಯ, ತಾರುಣ್ಯ, ಧನ-ಕನಕ ವಸ್ತ್ರಾದಿ ಸಕಲ ಸುಖ ಸಂಪತ್ತಿನಿಂದ ಕೂಡಿದ ರಾಜನನ್ನು ಕೈ ಹಿಡಿದು ಬಾಳಬಹುದಾದರೂ ಅದಕ್ಕೆ ಆಕೆಯು ಮನಸೋಲದೆ ಬಾಯಿ ನೀರು ಕರೆಯದೆ, "ಹರನೇ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಸಿದ್ದೆ ನೋಡಾ" ಎಂದು ಹೇಳಿ ತನ್ನ ಭಕ್ತಿಯ ಭಾವೋದ್ರೇಕವನ್ನು ಬೀರಿದ್ದಾಳೆ.

ಇದೇ ಮಾರ್ಗದಲ್ಲಿ ರಚಿಸಿದ ಅವಳ ಸಾಹಿತ್ಯವೆಂದರೆ ೧. ವಚನ, ೨. ಯೋಗಾಂಗ ತ್ರಿವಿಧಿ, ೩. ಸೃಷ್ಟಿಯ ವಚನ, ೪. ಅಕ್ಕಗಳ ಪೀಠಿಕೆ, ಹೀಗೆ ನಾಲ್ಕು ಗ್ರಂಥಗಳನ್ನು ಸ್ವತಂತ್ರವಾಗಿ ಬರೆದಂತೆ ಇಂದಿಗೆ ತಿಳಿದುಬಂದಿದೆ. ಇವುಗಳಲ್ಲಿ ಮೊದಲಿನವೆರಡು ಅಚ್ಚಾಗಿ ಹೊರಬಿದ್ದಿವೆ. ಅದರಲ್ಲಿ ಅಕ್ಕನ ವಚನವಂತೂ ಎಲ್ಲರ ಕೈಬಾಯಿಗಳಲ್ಲಿ ನಲಿಯುತ್ತದೆ. ಅದರ ಸಹಾಯದಿಂದ ಅನೇಕರು ನಾಟಕ, ಚರಿತ್ರ, ಲಾವಣಿ ಮುಂತಾದ ರೂಪದಲ್ಲಿ ಗ್ರಂಥಗಳನ್ನು ಬರೆದಿದ್ದಾರೆ. ಬರೆಯುತ್ತಲೂ ಇದ್ದಾರೆ.

## ಅಕ್ಕನ ಸಾಹಿತ್ಯದಲ್ಲಿಯ ಒಂದು ವೈಶಿಷ್ಟ್ಯ.

ಸಾಮಾನ್ಯ ಸಾಹಿತ್ಯಗಳಲ್ಲಿ ಶೃಂಗಾರ-ರಸ, ಜೀವ ಜೀವರುಗಳ ಹೋರಾಟ, ಲಘು-ಪ್ರಹಸನ ಇವು ತುಂಬಿ ತುಳುಕುತ್ತವೆ. ಆದರೆ ನಮ್ಮ ಅಕ್ಕನ ಸಾಹಿತ್ಯದಲ್ಲಿ ಶೃಂಗಾರರಸವು ಭಕ್ತಿರಸವಾಗಿ ಪರಿಣಮಿಸಿದೆ. ಜೀವಜೀವರ ಹೋರಾಟವು ಅಡಗಿ, ಜೀವಶಿವರ ಹೋರಾಟವು ಬೆರೆತಿದೆ. ಮೊದಲನೆಯ ಸಾಹಿತ್ಯವು ಕ್ಷಣಸುಖದಾಯಕವಾದದ್ದು; ಮರುಕ್ಷಣ ವಿರಸವಾಗಿ ನಿಲ್ಲುವಂಥಾದ್ದು. ಇವಳದು ಚಿರಸುಖಪ್ರದವಲ್ಲದೆ ಸವಿದಂತೆ ಸೊಗಸುವಂತಹದು. ಈ ಸಾಹಿತ್ಯವು ಸಂಪೂರ್ಣವಾದುದು. ಜನಜೀವನವನ್ನು ಉಚ್ಚಸ್ಥಿತಿಗೆ ಒಳ್ಳೇ ಜಾಣ್ಮೆಯಿಂದ ಒಯ್ಯುವಂತಹದು.

ಶೃಂಗಾರ-ರಸ ಪ್ರಧಾನವಾದ ಸಾಹಿತ್ಯದಲ್ಲಿ ಒಂದು ಜೀವವು ಇನ್ನೊಂದು ಜೀವವನ್ನು ಬೆರೆಯಬಯಸುವದು. ಅದು ಒಪ್ಪಿ ಅಗಲುವ ಸುಖ. ಆ ಗುರಿಯು ನಿಜವಾದುದಲ್ಲ. ಅದು ಅಕ್ಷನಿಗೆ ಕ್ಷಣಸುಖದೋರಿದರೂ ಅದೇ ಉನ್ನತಿಗೆ ಕಾರಣವಾಗಲರಿಯದು. ಅದು ಕೇವಲ ಭೋಗ. ಮಾನವನ ಮುಖ್ಯ ಗುರಿಯಲ್ಲ. ಆದರೆ ಅಕ್ಕನ ಸಾಹಿತ್ಯವು ಹಾಗಿಲ್ಲ. ಇದು ಅದೇ ಮಟ್ಟನಲ್ಲಿದ್ದೇ ಭಾವವನ್ನು ಬೇರ್ಪಡಿಸುತ್ತದೆ. ಅವೇ ಶಬ್ದಗಳಿಂದಲೇ ಜೀವನವನ್ನು ಪರಿಪೂರ್ತಿಗೊಳಿಸುತ್ತದೆ. ಅದೇ ಶೈಲಿಯಲ್ಲಿ [illegible] ಆನಂದವನ್ನು ಹುಟ್ಟಿಸುತ್ತದೆ. ಶೃಂಗಾರರಸ

ದಲ್ಲಿ ಮುಳುಗಿದಂಥಹ ವ್ಯಕ್ತಿಯು, ತನ್ನ ಪ್ರೇಮದ ವಸ್ತುವನ್ನು ಅಗಲಿ ಹೇಗೆ ಕಾತರಿಸಬೇಕೋ ಹಾಗೆ ಅಕ್ಕನು ಭಕ್ತಿರಸದಲ್ಲಿ ಮುಳುಗಿ ಹರನ ವಿರಹದಿಂದ ಹಂಬಲಿಸುತ್ತಾಳೆ. ಆದುದರಿಂದ ಅವಳ ಸಾಹಿತ್ಯವು ಸುಂದರವಾಗಿದೆ; ಗಂಭೀರವಾಗಿದೆ. ಅಂತಹ ಕೆಲವು ಉದಾಹರಣೆಗಳನ್ನು ಇಲ್ಲಿ ನಾವು ತೋರ ಬಯಸುತ್ತೇವೆ.

ಕವಿ ಕಾಳಿದಾಸ ವಿರಚಿತವಾದ ವಿಕ್ರಮೋರ್ವಸೀಯ ನಾಟಕದಲ್ಲಿ ನಾಯಕನಾದ ವಿಕ್ರಮನು, ತನ್ನ ಪ್ರಿಯಳಾದ ಉರ್ವಸಿಯನ್ನು ಅಗಲಿ ಆರ್ತನಾಗಿ—

"........ಮಧುಕರ ಮದಿರಾಕ್ಷ್ಯಾಃಶಂಸ ತಸ್ಯಾಃ ಪ್ರವೃತ್ತಿಂ"

ಎಂದು ಭೃಂಗ ಮೊದಲಾದವುಗಳನ್ನು ಮೋಹಮೂಢನಾಗಿ ಕೇಳುವಂತೆ, ನಮ್ಮ ಅಕ್ಕ ಮಹಾದೇವಿಯು ಜಗದ್ಭರಿತನಾದ ಚೆನ್ನಮಲ್ಲಿಕಾರ್ಜುನನ್ನು ಕಾಣದೆ—

"ಅಳಿಸಂಕುಳವೆ, ಮಾಮರವೆ, ಬೆಳದಿಂಗಳೆ, ಕೋಗಿಲೆಯೆ ನಿಮ್ಮ ನಿಮ್ಮನೆಲ್ಲರನು ಒಂದು ಬೇಡುವೆನು. ಎನ್ನೊಡೆಯ, ಚೆನ್ನಮಲ್ಲಿಕಾರ್ಜುನ ದೇವರ ಕಂಡರೆ ಕರೆದು ತೋರಿರೆ."

ಎಂದು ಭಾವೋದ್ರೇಕವಾಗಿ ಕೇಳಿದ್ದಾಳೆ. ಹಾರದಲ್ಲಿರುವ ಹೂಗಳಲ್ಲೆಲ್ಲಾ ಎಳೆಯು ಹೊಂದಿಕೊಂಡಿರುವಂತೆ ಶಿವನು ಈ ಭವಮಾಲೆಯಲ್ಲಿರುವ ಸಮಸ್ತ ಪ್ರಾಣಿಗಳಲ್ಲೆಲ್ಲಾ ವ್ಯಾಪಿಸಿಕೊಂಡಿರುವನು. ಆದುದರಿಂದ ಅವೆಲ್ಲವೂ ಆತನ ಪರಿಚಯವನ್ನು ಕೇಳಲು ಯೋಗ್ಯವಾಗಿವೆಯೆಂಬುದೇ ಅವಳ ಭಾವನೆ. ಈ ಈರ್ವರ ವಿರಹ ಸಂತಾಪವು ಒಂದೇ ವಿಧವಾಗಿದ್ದರೂ ಭಾವವು ಬೇರೆ ಬೇರೆಯಾಗಿವೆ. ವಿಕ್ರಮನು ಕೇಳುವದು ಮೋಹ ಮೌಢ್ಯದಿಂದ. ಅಕ್ಕನು ಕೇಳವದು ಜಗದ್ಭರಿತನು ಶಿವನು ಎಂಬ ಜ್ಞಾನದಿಂದ. ವಿಕ್ರಮನು ಅವುಗಳಲ್ಲಿ ತನ್ನ ಪ್ರೇಮದ ಪ್ರೇಯಸಿಯನ್ನು ಪಡೆಯಲಾರನು. ಅಕ್ಕನು ಅವುಗಳಲ್ಲಿ ಆತನನ್ನು ಪಡೆಯಬಲ್ಲಳು. ಹೀಗೆಯೇ ಇನ್ನೊಂದು ದೃಷ್ಟಾಂತವನ್ನು ನೋಡುವ. ಇನ್ನೊಬ್ಬನಾವನೋ ತನ್ನ ಮಡದಿಯ ವಿಯೋಗವನ್ನು ಸಹಿಸದೆ ಸೊಗಸದೆ ಇರುವಾಗ—

"ಚಂದ್ರಶ್ಚಂಡ ಕ ರಾ ಯ ತೇ ಮೃದುಗತಿರ್ವಾತೋಽಪಿ ವಜ್ರಾಯತೇ........"

ಎಂಬುದಾಗಿ ಆತನಿಗೆ ಚಂದ್ರವಾಯುಗಳು ವಿಪರೀತವಾಗಿ ಪರಿಣಮಿಸಿದಂತೆ, ಅಕ್ಕ ಮಹಾದೇವಿಯಾದರೂ ಆ ಪರ ವಸ್ತುವಿನ ಪ್ರಾಪ್ತಿಯಾಗದೆ—

"....ಸುಳಿದು ಬೀಸುವ ಗಾಳಿ ಉರಿಯಾಯಿತವ್ವ! ಬೆಳದಿಂಗಳು ಬಿಸಲಾಯಿತ್ತು ಕೆಳದಿ. ಹೊಳಲು ಸುಂಕಿಗನಂತೆ ತೊಳಲುತ್ತಿದ್ದೆನವ್ವಾ!"

ಎಂದು ಅದೇ ಬಗೆಯಾಗಿ ಕೊರಗಿ ಮರುಗಿದ್ದಾಳೆ. ಆದರೆ ಅದು ತನ್ನಂತಹ ದುಃಖಭಾಗಿಯಾದ ಮತ್ತೊಂದು ಜೀವಕ್ಕಾಗಿಯಲ್ಲ. ತನ್ನನ್ನು ತೀರದ ಸುಖದಲ್ಲಿರಿಸುವ ತನಗಿಂತಲೂ ಉನ್ನತ ಸ್ಥಿತಿಯಲ್ಲಿರುವ ಬೇರೊಂದು ವಸ್ತುವಿಗಾಗಿ. ಯಾವಾಗಲೂ ಜೀವನು ಶ್ರೇಷ್ಠವಾದ ಮತ್ತು ಸತ್ಯವಾದ ವಸ್ತುವಿಗಾಗಿ ಹೆಣಗಬೇಕೇ ವಿನಹ ತನ್ನಂತಹ ದುಃಖಮಯವಾದ ವಸ್ತುವಿಗಾಗಿ ಬಳಲಬಾರದು. ಬಡವನು ಬಡವನನ್ನು ಬೇಡಿ ಬಲ್ಲಿದನಾಗಬಲ್ಲನೆ?

ಇನ್ನೋರ್ವ ಪ್ರೇಯಸಿಯು ತನ್ನ ಪ್ರಿಯನು ತನ್ನನ್ನು ಅಗಲಿ ಹೋಗುವಾಗ— "ಗಚ್ಛ ಗಚ್ಛಸಿ ಚೇತ್‌ಕಾಂತ! ತತ್ರೈವ ಸ್ಯಾತ್ ಜನಿರ್ಮಮ"

(ಎಲೋ ಮನೋ ವಲ್ಲಭನೆ! ಹೋಗುವುದಾದರೆ ಹೋಗು. ನಿನ್ನನಾನಗಲಿರದೆ ಅಸುಗಳ ಈಡಾಡಿ ಅಲ್ಲಿಗೇನೇ ಬಂದು ಬಿಡುವೆನು.) ಎಂದು ಪ್ರಿಯನೇ ತನ್ನ ಪ್ರಾಣವೆಂಬರ್ಥದಲ್ಲಿ ಹೇಳಿರುವಂತೆ, ಅಕ್ಕಗಳಾದರೂ ತನ್ನ ಚೆನ್ನಮಲ್ಲಿಕಾರ್ಜುನನ್ನು ಕುರಿತು— 'ನಿನ್ನ ಬರುವೆನ್ನ ಅಸುವಿನ ಬರುವು ಬಾರಯ್ಯ!"

ಎಂದು ಹೇಳಿರುವಲ್ಲಿ ಯಾವ ಭಾವ ಕಡಿಮೆಯಿದೆ?

ಮತ್ತೋರ್ವ ಕಾಮಿನಿಯು ಉಡುತೊಡುಗೆಗಳನ್ನೆಲ್ಲಾ ಧರಿಸಿಕೊಂಡು ಅಲಂಕೃತಳಾಗಿದ್ದು ವೇಳೆಗೆ ಸರಿಯಾಗಿ ತನ್ನ ಪ್ರಿಯನು ಬಾರದಿದ್ದಲ್ಲಿ ಅವಳಿಗೆ ಯಾವ ಕಾತರವು ಹುಟ್ಟಬೇಕೋ ಯಾವ ಕುತೂಹಲವು ಜನಿಸಬೇಕೋ ಆ ಕಾತರ ಆ ಕುತೂಹಲಗಳು ಅಕ್ಕಗಳಿಗೆ ಚೆನ್ನಮಲ್ಲಿಕಾರ್ಜುನನಲ್ಲಿ ಜನಿಸಿದುದನ್ನು ಇಲ್ಲಿ ನೋಡಿ!

"ಅರಿಸಿನವನೆ ಮಿಂದು, ಹೊಂದುಡಿಗೆಯನೆ ತೊಟ್ಟು ಬಂದಿಹನೆಂದು ಬಟ್ಟೆಯ ನೋಡಿ, ಬಾರದಿರ್ದೊಡೆ ಕರಗಿ ಕೊರಗಿದೆನವ್ವಾ! ತಡವಾದೊಡೆ ಬಡವಾದೆ ತಾಯೆ, ಚೆನ್ನಮಲ್ಲಿಕಾರ್ಜುನನ ಒಂದಿರುಳ ಅಗಲಿದಡೆ, ತಕ್ಕೆ ಸಡಲಿದ ಜಕ್ಕವಕ್ಕಿಯಂತಾದೆನವ್ವಾ!"

ಹೀಗೆ ಒಂದಲ್ಲ, ಎರಡಲ್ಲ; ಶೃಂಗಾರಿಗಳು ಸ್ವಲ್ಪ ಸುಖಕ್ಕಾಗಿ ಸಂತಾಪಗೊಳ್ಳುವ ಅವಸ್ಥೆಗಿಂತಲೂ ಮಿಗಿಲಾಗಿ ಮಲ್ಲಿಕಾರ್ಜುನನ ಕೂಡುವ ಕಡೆಯಿಲ್ಲದ ಸುಖಕ್ಕಾಗಿ ಅಕ್ಕನು ಹಂಬಲಿಸಿದ್ದಾಳೆ. ಅವೇ ಶಬ್ದಗಳಲ್ಲಿಯೇ ತನ್ನ ಕಾವ್ಯವನ್ನು ಹೆಣದಿದ್ದರೂ ಅವುಗಳಿಗಿಂತಲೂ ಹೆಚ್ಚಿನ ಯಾವುದೋ ಒಂದು ರಮ್ಯತೆಯನ್ನು ತಂದು ತುಂಬಿದ್ದಾಳೆ. ಅದೇ ರಸವನ್ನೇ ಕೆಳಗಿಟ್ಟು ಕೀಳಾಗಿ ಮಾಡದೆ ಮೇಲಿಟ್ಟು ಮೇರೆಯಿಲ್ಲದೆ ಲೋಲಾಡಿದ್ದಾಳೆ. ಶೃಂಗಾರರಸವನ್ನೇ ಭಕ್ತಿರಸವನ್ನು ಮಾಡಿಕೊಂಡು ಸ್ವಾತ್ಮಸುಖವನ್ನೂ ಸಾಹಿತ್ಯಸೇವೆಯನ್ನೂ ಮಾಡಬಹುದೆಂಬ ಹೊಸ ಪಾಠವನ್ನು ಕಲಿಸಿದ್ದಾಳೆ. ಅಬಲೆಯರು ಸಬಲೆಯರಾಗಬಹುದೆಂದು ಸಾರಿದ್ದಾಳೆ. ಅಂತಹ ಅವಳ ವಚನದಲ್ಲಿ ಕವಿಗಳು ತಮ್ಮ ಕಾವ್ಯಗಳಲ್ಲಿ ಉಪಯೋಗಿಸುವ ಯಾವ ಅಲಂಕಾರಿಗಳಿಗೂ ಕಡಿಮೆಯಿಲ್ಲ. ಯಾವ ಶೈಲಿಗೂ ಕಮ್ಮಿಯಿಲ್ಲ. ದೃಷ್ಟಾಂತಕ್ಕಾಗಿ—

### ಸ್ವಭಾವೋಕ್ತಿ.

ಮಾಘ ಮಾಸವು ಪೋಗಿ! ಮೇಗೆ ಬಂದಿತು ಚೈತ್ರ|
ಬೇಗಮಾಮರವು ತಳಿರಿತು ಅದು ಕಂಡು|
ಕೂಗಿ ಕರೆಯಿತು ಕಳಕಂಠ||

### ರೂಪಕ.

ಪಶ್ಚಿಮದ ಕೊಳದಲ್ಲಿ| ಅಚ್ಚ ತಾವರೆ ಅರಳೆ|
ನಿಚ್ಚಳ ಗಂಧವೆಸೆಯಲು ಅದು ಕಂಡು||
ಸಚ್ಚಿತ್ತ ಭ್ರಮರವೆಸಗಿತು||

—ಯೋಗಾಂಗತ್ರಿವಿಧಿ.

"ಬಂಜೆ ಬೇನೆಯನರಿಯಳು. ಬಲದಾಯಿ ಮುದ್ದು ಬಲ್ಲಳೆ? ನೊಂದನೋವ ನೋಯದವರೆತ್ತ ಬಲ್ಲರು? ಚೆನ್ನಮಲ್ಲಿಕಾರ್ಜುನ ನೀನಿರಿದಲಗು ಒಡಲಲ್ಲಿ ಮುರಿದು ಹೊರಳುವಳ ನೀವೆತ್ತ ಬಲ್ಲಿರೇ ಎಲೆ ತಾಯಿಗಳಿರಾ?"

ವಚನಗಳಲ್ಲಿ ಇದೊಂದೇ ವಚನ ಸಾಕು. ಇದೊಂದರಲ್ಲಿಯೇ ಉಪಮಾನಾಲಂಕಾರ, ಅರ್ಥಾಂತರನ್ಯಾಸಗಳನ್ನು ತುಂಬಿದ್ದಾಳೆ. ಇದರಂತೆ ಬರೆಯುತ್ತಾ ಹೋದರೆ ಬೇಕಾದಷ್ಟಿವೆ. ಆದರೆ ಅವನ್ನೆಲ್ಲಾ ಬರೆದು ಬೆಳೆಸುವದು ಇಲ್ಲಿ ಅನುಚಿತ.

ರಸ-ಭಾವಗಳಿಲ್ಲದ ಸಾಹಿತ್ಯವು ನಿಜವಾದ ಸಾಹಿತ್ಯವಲ್ಲ. ಅದು ಆತ್ಮವಿಲ್ಲದ ಅಂಗದಂತೆ. ಆದರೆ ಆ ರಸ-ಭಾವಗಳ ಗುರಿಯು ವಿರಸವಾದ ವಸ್ತುವಿನಲ್ಲಿ ಪರ್ಯವಸಾನವಾಗಬಾರದು. ಸರಸ-ಸುರಸವಾದ ವಸ್ತುವಿನಲ್ಲಿ ಲೀನವಾಗಬೇಕು. ಅಂಥ ಸಾಹಿತ್ಯವೇ ಶ್ರೇಷ್ಠ ಸಾಹಿತ್ಯ. ಅದೇ ಜನಜೀವನವನ್ನು ಮಾರ್ಪಡಿಸುವ ಮಹೋನ್ನತ

ಗೊಳಿಸುವ ಸಾಹಿತ್ಯ. "ಕಾವ್ಯಾಲಾಪಾಂಶ್ಚ ವರ್ಜಯೇತ್" ಎಂದು ತೆಗಳಿದ್ದು ಜೀವನನ್ನು ಜವನ ಬಾಯಿಗಿಕ್ಕುವ ನಿರ್ಜೀವ ಸಾಹಿತ್ಯ ವನ್ನೇ ಹೊರ್ತು ಜೀವನನ್ನು ಶಿವನನ್ನು ಮಾಡುವ ಅಕ್ಕನಂತಹ ಸರಳಸುಂದರ ಸಾಹಿತ್ಯವನ್ನಲ್ಲ.

ಅಕ್ಕನ ಸಾಹಿತ್ಯವು ಧಾರ್ಮಿಕ ಪ್ರವಾಹವಾಗಿಹರದಿದ್ದರೂ ನಮ್ಮನ್ನು ವೇದೋಪನಿಷತ್ತುಗಳಂತೆ ಎಲ್ಲಿಯೋ ಒಯ್ದು ಕಣ್ಣು ಕಾಣದ, ಬಗೆಹರಿಯದ ಗಡುಚಾದ ಸ್ಥಾನದಲ್ಲಿ ನಿಲ್ಲಿಸುವದಿಲ್ಲ. ಯಾವ ವಚನವನ್ನು ಓದಿದರೂ ಸುಲಭವಾಗಿ ಅರ್ಥಮಾಡಿಕೊಳ್ಳಬಹುದು. ಸುಲಭ ಶೈಲಿಯಲ್ಲಿ — ಬಳಕೆಯ ಭಾಷೆಯಲ್ಲಿ ಬಾಳಿನ ತಿರುಳನ್ನೂ ಜೀವನದ ಚರಮ ಗುರಿಯನ್ನೂ ಗುರ್ತಿಸಿಕೊಡುತ್ತದೆ. ಆ ಅಕ್ಕನ ಸಾಹಿತ್ಯದಲ್ಲಿ ಎಲ್ಲವೂ ಬೆರೆತಿದೆ. ಅವಳ ಜಾಣ್ಮೆಯನ್ನು ವಿಹಂಗಮ ದೃಷ್ಟಿಯಿಂದ ಕೊಂಚ ನೋಡಿ.

"ತಿಲದ ಮರೆಯ ತೈಲದಂತೆ, ಮರದ ಮರೆಯ ತೇಜದಂತೆ"
"ಅಮೇಧ್ಯದ ಹಡಿಕೆ, ಮೂತ್ರದ ಕುಡಿಕೆ, ಎಲುವಿನ ತಡಿಕೆ"
"ಜಗದ ಜಂಗುಳಿಗೆ ಬೆಂಗೋಲನೆತ್ತಿ ಕಾಡಿತ್ತು ಮಾಯೆ"
"ಎನಗೇಕಯ್ಯ ಸಾವ ಪ್ರಪಂಚಿನ ಪುತ್ಥಳಿ? ಮಾಯಿಕದ ಮಲಭಾಂಡ; ಆತುರದ ಭವನಿಳಯ"
"ಅಯ್ಯಾ ಪಾತಾಳವಿತ್ತತ್ತ ಶ್ರೀಪಾದವತ್ತತ್ತ"
"ಪಚ್ಚೆಯ ನೆಲಗಟ್ಟು, ಕನಕದ ತೋರಣ, ವಜ್ರದ ಕಂಭ, ಪವಳದ ಚಪ್ಪರ"
"ಸಿಂಹದ ಮರಿಯು ಸೀಳ್ನಾಯಿತಿಂಬರೆ ಭಂಗವಿನ್ನಾರದೋ?"
"ನಿಮ್ಮ ಮಂಡೆಗೆ ಹೂವ್ವ ತಾಹೆನಲ್ಲದೆ ಹುಲ್ಲ ತಾರೆನು"
"ನಿನ್ನನೊಲಿದು ಕೊಂಡಾಡಿದರೆ ಇರುವೆ ರುದ್ರನಾಗದೆ ಹೇಳಯ್ಯ ?"
"ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ, ಚಲುವಂಗಾನೊಲಿದೆನವ್ವ"
"ಕತ್ತಲೆಯ ಪಾಳೆಯವ ರವಿ ಹೊಕ್ಕಂತಾಯಿತ್ತು."
"ಅಪ್ಪಿದರೆ ಅಸ್ಥಿಗಳು ನುಗ್ಗುನುರಿಯಾಗಬೇಕು."
"ತಕ್ಕೆ ಸಡಲಿದ ಜಕ್ಕವಕ್ಕಿಯಂತಾದೆನವ್ವಾ."

ತೆಗೆದುಕೊಳ್ಳಿ. ಇಲ್ಲಿ ಯಾವ ಸಾಹಿತ್ಯ ಬೇಕು, ಯಾವ ತತ್ವ ಬೇಕು, ಯಾವ ನೀತಿ ಬೇಕು, ಯಾವ ಶೈಲಿ ಬೇಕು, ಯಾವ ಸೊಬಗು ಬೇಕು, ಅದೆಲ್ಲವೂ ಇದೆ. ಆದುದರಿಂದ ನಾವು ಒಟ್ಟನಲ್ಲಿ ಹೇಳುವ ಉದ್ದೇಶವೇನೆಂದರೆ, ಅಕ್ಕನ ಜೀವನವನ್ನು ಯಾವ ದೃಷ್ಟಿಯಿಂದ ನೋಡಿದರೂ ಅದೊಂದು ಕಾವ್ಯಮಯವಾಗಿದೆ. ಅವಳ ವಾಗ್ಝರಿಯು ಯಾವ ಕಾವ್ಯಕ್ಕೆ ಕಡಿಮೆಯಿಲ್ಲ. ಅವಳ ವರ್ತನವು ಯಾವ ಕಾವ್ಯಕ್ಕೆ ಕುಂದಕವಾಗುವಂತಿಲ್ಲ. ಹುಟ್ಟನಿಂದ ಹಿಡಿದು ಶ್ರೀ ಗಿರಿಯನ್ನು ಮೆಟ್ಟುವ ವರೆಗೂ ಇರುವ ಅವಳ ಜೀವನ ಕ್ರಮವು ಒಂದು ಸುಂದರ ಸಾಹಿತ್ಯವಾಗಿ ಪರಿಣಮಿಸಿದೆ. ಅಂತೆಯೇ ಕವಿಕುಲತಿಲಕರು ಆಕೆಯ ಚರಿತ್ರೆಯನ್ನು ಕಾವ್ಯಕಟ್ಟಿ ಹಾಡಿದರು; ಹರುಷಿಸಿದರು. ಕಾರಣ ಕರ್ನಾಟಕದ ಆದಿ ವಿದುಷಿಯಾದ ಆ ಅಕ್ಕನು ಕನ್ನಡಿಗರಿಗೆಲ್ಲ ಅಭಿಮಾನದ ಮೂರ್ತಿಯಾಗಿದ್ದಾಳೆ. ಕನ್ನಡ ದೇವಿಗೆ ಪರಮ ಪ್ರೇಮಾಸ್ಪದಳಾಗಿದ್ದಾಳೆ. ಅವಳ ವಚನ ಸಾಹಿತ್ಯವು ಇಂದಿನ ಮಹಿಳಾ ಪ್ರಪಂಚವನ್ನು ಎಲ್ಲ ವಿಧದಿಂದಲೂ ಉತ್ಸಾಹಿಸಿ ಉದ್ಧರಿಸಲು ದಿವ್ಯೌಷಧಿಯಾಗಿದೆ. ಅಂತಹ ಅವಳ ಆ ವಾಗ್ದೇವಿಯು ಇಂದಿನ ಕನ್ನಡ ನಾಡಿನ ಸ್ತ್ರೀ ಪುರುಷರನ್ನು ಎಚ್ಚರಿಸಿ, ಧ್ಯೇಯದತ್ತ ಹೊರಳಿಸಿ, ಸಾಹಿತ್ಯ ಸೇವೆಯನ್ನು ಮಾಡ ಹಚ್ಚಲೆಂದು ನಾವು ತುಂಬಾ ಹಾರೈಸುತ್ತೇವೆ.

—"ಜಯಕರ್ನಾಟಕ."

---

# ಜಯ! ಬಸವೇಶ.

ಚಂಪಕ ಮಾಲಾ ವೃತ್ತ.

ಬಸವನ ನಾಮವಂ ನೆನೆವುತುಂ ಬಸವೇಶನ ಕೀರ್ತನಂಗಳಂ|
ಪಸರಿಸಿ ಪಾಡುತುಂ ಬಸವನುಜ್ವಲ ಮೂರ್ತಿಯ ನೊಲ್ದು ಚಾನಿಸು|
ತ್ತಿಸೆವ ನರಂಗೆ ಜನ್ಮತತಿಯುಂಟೆ! ಜಡಸ್ಥಿತಿಯುಂಟೆ! ಪಾತಕ|
ಪ್ರಸರ ಮದಂಟೆ! ಮೃತ್ಯುಭಯಮುಂಟೆ! ಮಧಾಂಧತೆಯುಂಟೆ
ಧಾತ್ರಿಯೊಳ್ ||೧|| —ಶ್ರೀ ಷಡಕ್ಷರಿದೇವ.

ಭಕ್ತಿ ಭಾಂಡಾರಿಯಾದ ಬಸವೇಶ್ವರನು. ಬಾಗೇವಾಡಿಯಲ್ಲಿ ಜನಿಸಿದನು. ಅವನು ಕೂಡಲ ಸಂಗಮೇಶ್ವರನ ಆಶ್ರಮದಲ್ಲಿ ಇದ್ದುಕೊಂಡು ಉರುತರ ಬ್ರಹ್ಮಚರ್ಯ ವ್ರತವನ್ನು ಪಾಲಿಸಿ, ವಿದ್ಯಾಭ್ಯಾಸ ಮಾಡಿ ಸಕಲ ಶಾಸ್ತ್ರಂಗಳಲ್ಲಿ ಪಾರಂಗತನಾದನು. ಆ ಮೇಲೆ ಲೋಕ ಕಲ್ಯಾಣಾರ್ಥವಾಗಿ (ಶಿವಮತೋದ್ಧಾರಕ್ಕಾಗಿ) ಕರ್ನಾಟಕದ ಸಾಮ್ರಾಟನಾದ ಬಿಜ್ಜಳನ ಮಂತ್ರಿಯಾಗಿದ್ದನು. ಕಲ್ಯಾಣ ಪಟ್ಟಣದಲ್ಲಿ ಬೀಡಾರ ಮಾಡಿಕೊಂಡು ಯಾವಾಗಲೂ ಧರ್ಮಕಾರ್ಯಗಳನ್ನು ಗೈದನು. ಆದುದರಿಂದ ಅವನನ್ನು ಬುಧಜನರು ಬಹು ಪ್ರೀತಿಸುತ್ತಿರುವರು. ಅವನೂ ಅವನನ್ನು ಬಳಿವಿಡಿದ ಶಿವಶರಣರೂ ಆಡಿದ ವಚನಗಳು ಕನ್ನಡ ಸಾಹಿತ್ಯದಲ್ಲಿ ಅಜರಾಮರವೂ ಆತ್ಮೋನ್ನತಿಯ ರಾಜಮಾರ್ಗದರ್ಶಕವೂ ಆಗಿವೆ. ಹಿಂದುಳಿದ ಸಮಾಜವನ್ನು ಮುಂದೆ ತಂದ ಮಹಾ ಪುರುಷರಲ್ಲಿ ಬಸವೇಶ್ವರನೇ ಅಗ್ರುಗಣ್ಯನು. ಬೂದಿಗಳೆದ ಕೆಂಡದಂತೆ ಅವನ ಚರಿತೆಯು ಬಹು ಉಜ್ವಲವಾಗಿರುವದು. ಸ್ವಷ್ಟೋಕ್ತಿಮಯವೂ ಮೃದು ಮಧುರವೂ ಆದ ಅವನ ವಚನಗಳು ಹಣ್ಣಿನಲ್ಲಿ ಬೆರೆತಿರುವ ಮಾಧುರ್ಯದಂತೆ ಬಲು ಸವಿಯಾಗಿರುವವು. ಬೇಕಾದವರು ಅವುಗಳನ್ನು ಓದಿ, ಅದರಂತೆ ನಡೆದು ಪುನೀತರಾಗಬಹುದು. ಅವನು ತನ್ನ ವಚನದಲ್ಲಿ "ಬೈದವರೆನ್ನ ಬಂಧುಗಳೆಂಬೆ, ನಿಂದಿಸಿದವರೆನ್ನ ತಂದೆ ತಾಯಿಗಳೆಂಬೆ." ಎಂದು ಹೇಳಿರುವದನ್ನು ನೋಡಿದರೆ ನಿಸ್ಸೀಮ ನಿರಹಂಕಾರತೆಯು ಸ್ಪಷ್ಟವಾಗಿ ಕಂಡು ಬರುವದು. ಬಸವಣ್ಣನವರ ವಚನಗಳನ್ನು ಚೆನ್ನಾಗಿ ಪರಿಶೀಲಿಸಿ ನೋಡಿದರೆ, ಅವನಷ್ಟು ಹೃದಯ ಶುದ್ಧಿಯುಳ್ಳ ನೈಷ್ಠಿಕ ವೈನಯಿಕನಾದ ಮಹಾಪುರುಷನು ಎಂದೂ ಆಗಿಲ್ಲೆಂದು ನಿಸ್ಸಂದೇಹವಾಗಿ ಹೇಳಬಹುದು. ಬೊಡ್ಡಿಯಿಂದ ತುದಿಯ ವರೆಗೆ ಅವನ ಚರಿತೆಯು ಬಹು ಅಸದೃಶವಾಗಿರುವದು. ಸತ್ಯದಿಂದಲೇ ತುಂಬಿ ತುಳುಕುವ, ಬೋಧಪ್ರದವಾದ ಅವನ ನುಡಿಗಳು ಸರ್ವರಿಗೂ ಆನಂದವನ್ನುಂಟು ಮಾಡದಿರವು. ಅವು ಮಾನವನ ಬೌದ್ಧಿಕೋನ್ನತಿಯನ್ನು ಮಾಡುವವಲ್ಲದೆ, ಪಾರಮಾರ್ಥಿಕ ಜ್ಞಾನವನ್ನು ಬಹು ಸುಲಭವಾಗಿ ಮಾಡಿಕೊಡುವವು. "ನುಡಿಯೇ ನಡೆಯಾದ, ನಡೆಯೇ ನುಡಿಯಾದ" ಆ ಮಹಾತ್ಮನ ಜೀವನ ಚರಿತೆಯು ಜಗತ್ತಿಗೇನೇ ಆದರ್ಶರೂಪವಾಗಿರುವದು.

ಬಸವಣ್ಣನು ಹಚ್ಚಿದ ವಚನ ರೂಪದ ಬಳ್ಳಿಗಳು ಈಗ ಎಲ್ಲಿ ನೋಡಿದಡಲ್ಲಿ ಹಬ್ಬಿ, ಹರಿಬಿದ್ದು, ಹೂ ಗೊಂಚಲಗಳಿಂದಲೂ ಮಿಡಿಗಾಯಿ ಪಾಡುಪಣ್ಣುಗಳಿಂದಲೂ ಪರಿಶೋಭಿಸುತ್ತಿರುವವು.

ಇದು ವಸಂತ ಋತುವು. ಮೇಲಾಗಿ ವೈಶಾಖ ಮಾಸವು. ಅದರಲ್ಲಿ ಬಸವ ಜಯಂತಿಯಂತಹ ಮಂಗಲ ಸಮಯ. ಇಂತಹ ಕಾಲದಲ್ಲಿ ಆ ಬಳ್ಳಿಗಳು ತಮ್ಮ ತನಿವಣ್ಣುಗಳಿಂದ ಇನಿರಸವ ಸುರಿಸುತ್ತಿರುವವು. ಅದನ್ನು ಸವಿದು ನಮ್ಮ ಜನ್ಮ ಸಾರ್ಥಕವನ್ನು ಮಾಡಿಕೊಳ್ಳವ.

(ಈ ಲೇಖದಲ್ಲಿ ಬ-ಬಾ........ದ ಬಳ್ಳಿಯು ಜೋಡಿಸಲ್ಪಟ್ಟಿದೆ.)

—ಆನಂದಕವಿ ಕುರುಗುಂದ.

ಹಿಂದುಧರ್ಮಜ್ಯೋತಿ!

ಸ್ವಾತಂತ್ರ್ಯವೀರ!

# ಸಾವರಕರ ಜಯಂತಿ.



ಡಾ. ಸಾವರಕರರು.

## ಉಜ್ವಲ ಚರಿತ್ರೆ.

ಹಿಂದು ಮಹಾಸಭೆಯ ಅಧ್ಯಕ್ಷರಾದ ಸ್ವಾತಂತ್ರ್ಯವೀರ ಸಾವರಕರರ ೫೬ ನೆಯ ವರ್ಷ ವರ್ಧಂತಿಯನ್ನು ಇದೇ ಮೇ ತಿಂಗಳ ೨೮ ನೆಯ ತಾರೀಖಿನ ದಿವಸ ಸಕಲರೂ ಆಚರಿಸಬೇಕಾಗಿ ಹಿಂದು ಯುವಕ ಸಂಘದವರು ಗೊತ್ತುಪಡಿಸಿದ್ದಾರೆ. ಆ ಪ್ರಕಾರ ಅನೇಕ ಸ್ಥಳಗಳಲ್ಲಿ ಸಾವರಕರ ಜಯಂತಿಯು ನಡೆಯುವದಿದೆ.

ಶ್ರೀ. ವಿನಾಯಕರಾವ ಸಾವರಕರ್ ಇವರು ನಾಶಿಕ ಜಿಲ್ಲಾ ಭಗೂರ ಎಂಬ ಗ್ರಾಮದಲ್ಲಿ ಕ್ರಿ. ಶ. ೧೮೮೩ ನೆಯ ಇಸವಿ ಮೇ ತಿಂಗಳ ೨೮ ನೆಯ ತಾರೀಖಿನ ದಿವಸ ಜನ್ಮವೆತ್ತಿದರು. ಇವರ ಈ ವರೆಗಿನ ಆಯುಷ್ಯವು ಹಿಂದುಸ್ಥಾನದ ರಾಜಕೀಯ ಸ್ವಾತಂತ್ರ್ಯ ಮತ್ತು ಹಿಂದುಧರ್ಮ ಸಂರಕ್ಷಣೆಗಳಿಗಾಗಿಯೇ ಸವಿಸಲ್ಪಟ್ಟಿದೆ. ಈ ಪ್ರಕಾರ ರಾಜಕೀಯ ಮತ್ತು ಧಾರ್ಮಿಕ ಈ ಉಭಯ ವಿಷಯಗಳಲ್ಲಿಯೂ ಅತ್ಯುಗ್ರವಾದ ಚಟುವಟಿಕೆಯನ್ನು ನಡೆಸಿದ ರಾಷ್ಟ್ರಭಕ್ತರು ಈ ದೇಶದಲ್ಲಿ ಬಹು ವಿರಳ. ಇವರ ಈ ದಿವ್ಯ ಮಾರ್ಗವು ಹಿಂದುಸ್ಥಾನದ ಶಾಶ್ವತವಾದ ಕಲ್ಯಾಣಕ್ಕೆ ಬಹು ಉಪಯುಕ್ತವಾದುದಾಗಿದೆ. ಅಂತೆಯೇ ಇವರ ಉಜ್ವಲ ಚಾರಿತ್ರ್ಯದ ಕಡೆಗೆ ತರುಣರು ಲಕ್ಷಿಸಬೇಕಾದುದು ಅತ್ಯಗತ್ಯವಾಗಿದೆ.

ಶ್ರೀ. ಸಾವರಕರರು ತಮ್ಮ ೧೨ ನೆಯ ವರುಷದಲ್ಲಿಯೇ ಹಿಂದುಸ್ಥಾನದ ಸ್ವಾತಂತ್ರ್ಯದ ವಿಚಾರವಾಗಿ ಯೋಚಿಸಲಾರಂಭಿಸಿದರು. ಯಾವ ಕಾಲದಲ್ಲಿ ಸ್ವರಾಜ್ಯ, ಸ್ವಾತಂತ್ರ್ಯ ಎಂಬ ಶಬ್ದಗಳನ್ನು ಪಯೋಗಿಸುವುದು ಕೂಡಾ ರಾಜದ್ರೋಹಕರವಾಗಿ ಪರಿಣಮಿಸಿದ್ದಿತೋ ಆ ಕಾಲದಲ್ಲಿ ಸ್ವಾತಂತ್ರ್ಯವೀರ ಸಾವರಕರರು ಸ್ವಾತಂತ್ರ್ಯಕ್ಕಾಗಿ ಹೋರಾಡಿದರು.

ತಮ್ಮ ೨೨ ನೆಯ ವರುಷದಲ್ಲಿ ಇಂಗ್ಲೆಂಡಿಗೆ ವಿದ್ಯಾಭ್ಯಾಸಕ್ಕಾಗಿ ಹೋಗಿ ಅಲ್ಲಿ ಕ್ರಾಂತಿಕಾರಕರ ಸಂಘವನ್ನು ಸ್ಥಾಪಿಸಿದರು. ಇವರ ೨೭ ನೆಯ ವರುಷದಲ್ಲಿ ಇವರನ್ನು ಸರಕಾರದವರು ಲಂಡನ್ನಿನಲ್ಲಿ ಬಂಧಿಸಿ ಹಿಂದುಸ್ಥಾನಕ್ಕೆ ಕರೆದುಕೊಂಡು ಬರುವಾಗ ಸಮುದ್ರದಲ್ಲಿ ಹಾರಿ ಫ್ರೆಂಚ ಪ್ರಾಂತಕ್ಕೆ ಹೋಗಿ ಒಂದು ಮಹತ್ವದ ಅಂತರ ರಾಷ್ಟ್ರೀಯ ಚರ್ಚೆಗೇನೇ ಕಾರಣರಾದರು. ಆ ಮೇಲೆ ಇವರಿಗೆ ಬ್ರಿಟಿಶ್ ಸರಕಾರದವರು ೫೦ ವರುಷಗಳ ಕಠಿಣ ಶಿಕ್ಷೆಯನ್ನು ವಿಧಿಸಿ ಅಂದಮಾನ ದ್ವೀಪದಲ್ಲಿಟ್ಟರು. ಅಲ್ಲಿ ೧೩ ವರುಷ ಅನಿರ್ವಚನೀಯವಾದ ಕಷ್ಟಗಳನ್ನು ಅನುಭವಿಸಿದರು. ಅಲ್ಲಿರುವಾಗಲೇ ಹಿಂದುಸಂಘಟನೆ, ಹಿಂದುಶುದ್ಧಿಗಳ ಸಂಬಂಧವಾಗಿ ಹಿಂದು ಸಮಾಜದಲ್ಲಿ ಜಾಗೃತಿಯನ್ನುಂಟುಮಾಡಿದರು.

೧೯೨೪ ನೆಯ ಇಸವಿಯಲ್ಲಿ ಎಂದರೆ ಇವರ ೪೧ ನೇ ವರುಷದಲ್ಲಿ ಅಂದಮಾನ ದ್ವೀಪದಿಂದ ರತ್ನಾಗಿರಿಗೆ ಸರಕಾರದವರು ರಾಷ್ಟ್ರವೀರ ಸಾವರಕರರನ್ನು ತಂದು ಪ್ರತಿಬಂಧದಲ್ಲಿಟ್ಟರು. ಇಲ್ಲಿಯು ಕೂಡಾ ಹಿಂದು ಸಮಾಜ ಸುಧಾರಣೆಯ ವಿಷಯವಾಗಿ ಜನರಲ್ಲಿ ವಿಶೇಷವಾದ ಕ್ರಾಂತಿಯುಂಟಾಗುವಂತೆ ಪ್ರಯತ್ನಿಸಿದರು.

ಹಿಂದು ಮಹಾಸಭೆಯ ಅಧ್ಯಕ್ಷರಾದನಂತರ ಹಿಂದುಸಂಘಟನೆಯ ಸಂಬಂಧವಾಗಿ ದೇಶದಲ್ಲಿ ಮಹತ್ತರವಾದ ಜಾಗೃತಿಯನ್ನುಂಟುಮಾಡುತ್ತಿದ್ದಾರೆ. ಈ ಪ್ರಕಾರ ಇವರ ದಿವ್ಯ ಚರಿತ್ರೆಯು ರಾಜಕೀಯ ಮತ್ತು ಸಾಮಾಜಿಕ ಉಜ್ವಲ ಪ್ರಯತ್ನಗಳಿಂದ ಕೂಡಿದ್ದಾಗಿದೆ. ಇವರ ರಾಜಕೀಯ ಸ್ವಾತಂತ್ರ್ಯಾಪೇಕ್ಷೆಯೇನೋ ಸರ್ವಮಾನ್ಯವಾದುದೇ ಸರಿ. ಆದರೆ ಇವರು ಆಗ ಅನುಸರಿಸಿದ್ದ ಹಿಂಸಾಯುಕ್ತಮಾರ್ಗವು ಮಾತ್ರ ಬಹು ಜನರಿಗೆ ಮಾನ್ಯವಾಗಲಾರದು.

ಇವರ ಚರಿತ್ರೆಯ ಪೂರ್ವಭಾಗವು ರಾಜಕೀಯ ಸ್ವಾತಂತ್ರ್ಯ ಸಂಪಾದನೆಯ ವೀರ ಮಾರ್ಗದಲ್ಲಿಯೇ ಸವಿಸಲ್ಪಟ್ಟಿದೆ. ಈಗಿನ ಉತ್ತರ ಭಾಗವಾದರೋ ಹಿಂದುಜಾತಿ ಸ್ವಾತಂತ್ರ್ಯವೇ ಹಿಂದುಸ್ಥಾನದ ಸ್ವಾತಂತ್ರ್ಯವೆಂಬ ಸಿದ್ಧಾಂತದ ಪ್ರಕಾರ ಹಿಂದುತ್ವದ ರಕ್ಷಣೆಗಾಗಿ ಸಮರ್ಪಿಸಲ್ಪಡುತ್ತಾ ಇದೆ.

ಈ ದೇಶದಲ್ಲಿ ಈಗ ರಾಜಕೀಯ ಸ್ವಾತಂತ್ರ್ಯಕ್ಕಾಗಿಯೇ ಹೋರಾಡುವವರು ಅತ್ಯಧಿಕವಾಗಿದ್ದಾರೆ. ಆದರೆ ಸ್ವಾತಂತ್ರ್ಯವೀರ ಸಾವರಕರರಂತೆ ಹಿಂದುಜಾತಿಯ ಸ್ವಾತಂತ್ರ್ಯವೇ ಹಿಂದುಸ್ಥಾನದ ಸ್ವಾತಂತ್ರ್ಯವೆಂಬ ಸತ್ಯಸಿದ್ಧಾಂತವನ್ನನುಸರಿಸಿ ಹಿಂದುತ್ವಕ್ಕಾಗಿಯೇ ತಮ್ಮ ತನು ಮನ ಧನಗಳನ್ನು ಸೂರೆಮಾಡುತ್ತಿರುವವರು ಮಾತ್ರ ಬಹು ವಿರಳ. ಇಂಥ ಹಿಂದುಧರ್ಮಜ್ಯೋತಿಯ ಬೆಳಕಿನಲ್ಲಿಯೇ ಹಿಂದು ತರುಣರು ಮುಂದಡಿಯನ್ನಿಟ್ಟದ್ದಾದರೆ ಹಿಂದುಸ್ಥಾನವು ನಿಜವಾದ ಸ್ವಾತಂತ್ರ್ಯವನ್ನನುಭವಿಸುವುದು. ಅಂಥ ಸ್ವಾತಂತ್ರ್ಯ ಪ್ರಾಪ್ತಿಗೋಸ್ಕರ ಶ್ರೀ. ಸಾವರಕರರಿಗೆ ದೀರ್ಘಾಯುರಾರೋಗ್ಯಗಳು ಪ್ರಾಪ್ತವಾಗಲೆಂದು ಹಾರೈಸುತ್ತೇವೆ.

---

## ಶ್ರೀ ಶಿವಯೋಗಮಂದಿರ ಪಾಠಶಾಲೆಯ ಸಂಸ್ಕೃತ ಪರೀಕ್ಷೆಯ ಪರಿಣಾಮ.

ಈ ವರ್ಷ ಇಲ್ಲಿಂದ ಐದು ಜನರು ಪರೀಕ್ಷೆಗೆ ಕುಳಿತಿದ್ದರು. ಅವರಲ್ಲಿ—

(೧) ಶಾಂತದೇವರು ಐಹೊಳಿ, (೨) ರೇವಣಸಿದ್ಧದೇವರು, (೩) ಮಹಾಲಿಂಗಾರ್ಯರು, (೪) ಸದಾಶಿವಾರ್ಯರು. ಈ ನಾಲ್ಕು ಜನರು ಎರಡನೆಯ ವರ್ಗದಲ್ಲಿ ಪಾಸಾಗಿದ್ದಾರೆಂದು ತಿಳಿಸಲು ಸಂತೋಷವಾಗುತ್ತದೆ. ಇದರ ಮೇಲಿಂದ ಇಲ್ಲಿಯ ಅಭ್ಯಾಸದ ಗತಿಯು ಯಾವ ರೀತಿಯಿಂದ ಸಾಗಿದೆಯೆಂದು ಊಹಿಸಲಿಕ್ಕೆ ಬರುವಂತಿದೆ.

—ಅಧ್ಯಾಪಕ.

## ಗಾಂಧೀಜಿಯವರ ಅಂತರಾತ್ಮ ಸಂದೇಶ.

### ಗಾಂಧೀಜಿಯವರ ಆಸ್ತಿಕ್ಯ ಬುದ್ಧಿ.

ಮಹಾತ್ಮಾ ಗಾಂಧಿಯವರು ಗಡಿನಾಡಿನ ಪ್ರವಾಸದಲ್ಲಿರುವಾಗ ಪೇಶಾವರದ ಇಸ್ಲಾಮಿಯಾ ಕಾಲೇಜಿನ ಒಬ್ಬ ಪ್ರೊಫೆಸರರು ದೇವರ ಅಸ್ತಿತ್ವದ ವಿಚಾರವಾಗಿ ಗಾಂಧೀಜಿಯವರನ್ನು ಪ್ರಶ್ನೆ ಮಾಡಲು ಈ ಪ್ರಕಾರವಾಗಿ ಉತ್ತರಕೊಟ್ಟರು—

"ದೇವರ ಅಸ್ತಿತ್ವದ ವಿಷಯದಲ್ಲಿ ನನಗೆ ದೃಢತರವಾದ ನಂಬಿಕೆಯಿದೆ. ಈ ನನ್ನ ನಂಬಿಕೆಯನ್ನು ನಿಮಗೆ ದೃಷ್ಟಾಂತದ ಮೂಲಕವಾಗಿಯಾಗಲಿ ಅಥವಾ ಯುಕ್ತಿವಾದದಿಂದಾಗಲಿ ನಾನು ಮನವರಿಕೆಮಾಡಿಕೊಡಲಾರೆನು. ನೀವು ಮತ್ತು ನಾನು ಈಗ ಈ ಕೋಣೆಯಲ್ಲಿ ಕುಳಿತಿರುವುದು ನನಗೆ ಎಷ್ಟು ಸತ್ಯವಾದುದಾಗಿ ತೋರುತ್ತಲಿದೆಯೋ ಅದಕ್ಕಿಂತಲೂ ದೇವರಿದ್ದುದು ನನಗೆ ಹೆಚ್ಚಿಗೆ ಸತ್ಯವಾದುದಾಗಿ ತೋರುತ್ತದೆ.

ಹವೆ ಮತ್ತು ನೀರುಗಳ ವಿನಾ ನಾನು ಬದುಕಬಲ್ಲೆನು. ಆದರೆ ದೇವರ ವಿನಾ ನಾನು ಒಂದು ಕ್ಷಣವಾದರೂ ಬದುಕಲಾರೆನು. ನೀವು ನನ್ನ ಕಣ್ಣುಗಳನ್ನು ಕಿತ್ತರೂ ನಾನು ಸಾಯುವದಿಲ್ಲ. ಆದರೆ ದೇವರ ಮೇಲಿರುವ ನನ್ನ ಶ್ರದ್ಧೆಯನ್ನು ತೆಗೆದುಹಾಕಿದ್ದಾದರೆ ಆಗಲೇ ನಾನು ಮರಣ ಹೊಂದುವೆನು. ಇದು ನನ್ನ ಭ್ರಮೆಯೆಂದು ನೀವು ಬೇಕಾದರೆ ಹೇಳಿರಿ. ನಾನು ಚಿಕ್ಕವನಿದ್ದಾಗ ನನ್ನ ಸಂಕಟಸಮಯದಲ್ಲಿ ಹೇಗೆ ರಾಮನಾಮಸ್ಮರಣೆಯನ್ನು ಮಾಡುತ್ತಿದ್ದೆನೋ ಹಾಗೆಯೇ ಈಗಲು ಕೂಡಾ ದೇವರ ಅಸ್ತಿತ್ವದ ವಿಷಯದಲ್ಲಿ ನನಗೆ ದೃಢತರವಾದ ನಂಬಿಕೆಯಿದೆ.

ಪ್ರಶ್ನೆ— ಋಷಿ, ಮುನಿಗಳಂತೆ ಪರಮಾತ್ಮನ ಇಚ್ಛೆಯನ್ನು ವ್ಯಕ್ತಗೊಳಿಸುವವನಾಗಿದ್ದೇನೆಂದು ನೀವು ನಿಮ್ಮನ್ನು ತಿಳಿದುಕೊಂಡಿರುವಿರಾ ?

ಉತ್ತರ— ನೀವು ಋಷಿ ಮುನಿಗಳೆಂದು ಯಾರಿಗೆ ಹೇಳುವಿರೋ ನನಗೆ ಗೊತ್ತಿಲ್ಲ. ಮತ್ತು ಪರಮಾತ್ಮನ ಇಚ್ಛೆಯನ್ನು ವ್ಯಕ್ತಗೊಳಿಸುವದೆಂದರೆ ಏನೆಂಬುದೂ ನನಗೆ ತಿಳಿಯದು. ಆದರೆ ನನ್ನ ಆಯುಷ್ಯದಲ್ಲಿಯ ಕೆಲವು ಅನುಭವಗಳನ್ನು ಮಾತ್ರ ನಿಮಗೆ ತಿಳಿಸಬಲ್ಲೆನು.

ನಾನು ಕಾರಾಗೃಹದಲ್ಲಿ ೨೧ ದಿನಗಳ ಉಪವಾಸ ವ್ರತವನ್ನು ಕೈಕೊಂಡಿದ್ದೆನಷ್ಟೆ. ಆ ಮುಂಚೆ ನಾನು ಅದರ ಸಾಧಕ ಬಾಧಕಗಳನ್ನು ಕುರಿತೇನೂ ಯೋಚಿಸಿರಲಿಲ್ಲ. ಅದರ ಹಿಂದಿನ ದಿನ ಮಲಗುವಾಗ ನನಗೆ ಆ ಉಪವಾಸದ ಕಲ್ಪನೆಯು ಕೂಡಾ ಇರಲಿಲ್ಲ. ಆದರೆ ಆ ರಾತ್ರಿ ನನಗೊಂದು ಧ್ವನಿ ಕೇಳಿಸಿತು. "ಉಪವಾಸ ಮಾಡು" ಎಂಬುದೇ ಆ ಧ್ವನಿಯು. ಆಗ ನಾನು ಎಷ್ಟು ದಿನ ಎಂದು ಕೇಳಿದೆನು. "ಇಪ್ಪತ್ತೊಂದು" ಎಂಬ ಉತ್ತರ ಕೇಳಿಸಿತು. ಮರುದಿನ ಉಪವಾಸಮಾಡುವಷ್ಟು ಸಿದ್ಧತೆ ಅಥವಾ ಸಾಮರ್ಥ್ಯ ನನ್ನಲ್ಲಿರಲಿಲ್ಲ. ಆದರೂ ಅದು ಅಂತರಾತ್ಮನ ಅಜ್ಞೆಯೆಂದೇ ನಾನು ಉಪವಾಸ ವ್ರತವನ್ನು ಪ್ರಾರಂಭಿಸಿದೆನು. ನನ್ನ ಆಯುಷ್ಯದಲ್ಲಿ ಯಾವ ಯಾವ ಮಹತ್ವದ ಪ್ರಸಂಗಗಳು ಜರುಗಿವೆಯೋ ಅವೆಲ್ಲವೂ ಅಂತರಾತ್ಮನ ಸಂದೇಶದಿಂದಲೇ ಸಂಭವಿಸಿವೆ.

೧೯೩೦ ನೇ ಇಸವಿ ದಾಂಡಿಯಾತ್ರೆಯ ಸಂಗತಿಯೂ ಹೀಗೆಯೇ ಇದೆ. ಉಪ್ಪಿನ ಶಾಸನವನ್ನು ಉಲ್ಲಂಘಿಸಿದರೆ ಏನಾಗಬಹುದೆಂಬ ಕಲ್ಪನೆಯು ಕೂಡಾ ನನಗಿರಲಿಲ್ಲ. ಪಂಡಿತ ಮೋ[illegible] ನೆಹರು ಮೊದಲಾದ ಪ್ರಮುಖರು ಆ ವಿಷಯದಲ್ಲಿ ಸಂಶಯವುಳ್ಳವರಾಗಿದ್ದರು. ನನಗೆ ವಿದ್ಯುತ್ತಿನ ಸಂವೇದನದಂತೆ ಒಮ್ಮೆಲೇ ಪ್ರೇರಣೆಯಾಯಿತು. ಅದು ಎಷ್ಟು ಅದ್ಭುತವಾಗಿ ಪರಿಣಮಿಸಿತೆಂಬುದು ಸಕಲರಿಗೂ ತಿಳಿದ ಸಂಗತಿಯು.

೧೯೧೯ ನೆಯ ಇಸವಿ ಎಪ್ರೆಲ್ ೬ ನೆಯ ತಾರೀಖಿನ ದಿವಸ ಹರತಾಳವನ್ನಾಚರಿಸಿ ಉಪವಾಸ ವ್ರತವನ್ನು ಪ್ರಾರಂಭಿಸಬೇಕೆಂಬ ಕಲ್ಪನೆಯು ನನಗೆ ಆ ಮುಂಚೆ ಇರಲೇ ಇಲ್ಲ. ಹಿಂದಿನ ದಿನ ನನಗೆ ಒಂದು ಸ್ವಪ್ನ ತೋರಿತು. ಅದನ್ನು ಮರು ದಿನ ನಾನು ಶ್ರೀ. ರಾಜಗೋಪಾಲಾಚಾರ್ಯರಿಗೆ ತಿಳಿಸಿ ಆ ಪ್ರಕಾರ ಆಚರಿಸಿದೆನು. ಅದು ಎಷ್ಟು ಪರಿಣಾಮಕಾರಿಯಾಯಿತೆಂಬುದೂ ಸರ್ವಶ್ರುತವಾದ ಸಂಗತಿಯು.

---

## ಹಿಂದು-ಮುಸ್ಲಿಂ ಐಕಮತ್ಯ.

ಹಿಂದು-ಮುಸಲ್ಮಾನರಲ್ಲಿ ಐಕಮತ್ಯವನ್ನುಂಟುಮಾಡಬೇಕೆಂದು ಮಹಾತ್ಮಾ ಗಾಂಧಿಯವರು ಮತ್ತು ಬ್ಯಾ. ಜಿನ್ನಾರವರು ಕಳೆದ ತಿಂಗಳು ೨೮ ನೆಯ ತಾರೀಖಿನ ದಿನ ೩ ತಾಸು ಸಂಭಾಷಣೆ ನಡೆಯಿಸಿದ್ದರು.

ಅನಂತರ ಮುಂಬೈಯಲ್ಲಿ ಕಳೆದ ೧೧ ನೆಯ ತಾರೀಖಿನಿಂದ ರಾಷ್ಟ್ರಾಧ್ಯಕ್ಷ ಶ್ರೀ. ಸುಭಾಷಚಂದ್ರ ಬೋಸರೂ ಮುಸ್ಲಿಂಲೀಗಿನ ಪ್ರಮುಖರಾದ ಬ್ಯಾ. ಜಿನ್ನಾರವರೂ ತಾ. ೧೭ ರ ವರೆಗೆ ಅನೇಕ ಸಾರೆ ಕಾಂಗ್ರೆಸ್ ಮತ್ತು ಮುಸ್ಲಿಂಲೀಗುಗಳಲ್ಲಿ ಒಪ್ಪಂದವಾಗುವ ಸಂಬಂಧವಾಗಿ ಸಂಭಾಷಣೆ ಜರುಗಿಸಿದರು.

ಕಾಂಗ್ರೆಸ್ಸಿನ ಪ್ರಮುಖ ಮುಂದಾಳುಗಳಾದ ಪಂಡಿತ ಜವಾಹರಲಾಲ ನೆಹರು, ಬಾಬು ರಾಜೇಂದ್ರ ಪ್ರಸಾದ, ಮೌಲಾನಾ ಆಜಾದ ಮೊದಲಾದವರೂ ಹಿಂದು-ಮುಸಲ್ಮಾನರ ಐಕಮತ್ಯಕ್ಕೆ ಕಾರಣವಾದ ಈ ಒಪ್ಪಂದವನ್ನು ಕುರಿತು ತುಂಬಾ ಚರ್ಚಿಸಿದರು.

ಕೊನೆಗೆ ವರ್ಕಿಂಗ್ ಕಮಿಟಿಯ ನಿರ್ಣಯವನ್ನು ಬ್ಯಾ. ಜಿನ್ನಾರವರಿಗೆ ತಿಳಿಸಿದ್ದಾಯಿತು. ಬ್ಯಾ. ಜಿನ್ನಾರವರು ಮುಸ್ಲಿಂಲೀಗಿನ ವರ್ಕಿಂಗ್ ಕಮಿಟಿಯ ಮುಂದೆ ಬರುವ ಜೂನ್ ತಿಂಗಳ ಮೊದಲನೆಯ ವಾರದಲ್ಲಿ ಕಾಂಗ್ರೆಸ್ಸಿನವರ ತೀರ್ಮಾನವನ್ನು ಇಟ್ಟು ಅನಂತರ ಮುಸ್ಲಿಂಲೀಗಿನ ಅಭಿಪ್ರಾಯವನ್ನು ತಿಳಿಸುವರು. ಲೀಗಿನ ವರ್ಕಿಂಗ್ ಕಮಿಟಿಯಲ್ಲಿ ಮಿ. ಫಜಲುಲ್ ಹಕ್, ಸರ್. ಹಯಾಯತಖಾನ, ಮೌ. ಶೌಕತಅಲ್ಲಿ, ಮೊದಲಾದ ೨೧ ಜನ ಮುಸಲ್ಮಾನ್ ಪ್ರಮುಖರಿದ್ದಾರೆ.

### ಕಾಂಗ್ರೆಸ್ಸಿನ ಮುಖ್ಯ ನಿಯಮ.

ರಾಷ್ಟ್ರೀಯತ್ವಕ್ಕೆ ವಿರೋಧವಿಲ್ಲದಂಥ ನಿಯಮಗಳನ್ನು ಮುಸ್ಲಿಂಲೀಗ್ ತಿಳಿಸಿದಲ್ಲಿ ಕಾಂಗ್ರೆಸ್ ಅವುಗಳನ್ನು ಒಪ್ಪುವದು. ಕಾಂಗ್ರೆಸ್ಸಿನ ಪ್ರಚಾರವನ್ನು ಎಲ್ಲ ಸಮಾಜಗಳಲ್ಲಿಯೂ ಮಾಡುವಂತೆ ಮುಸಲ್ಮಾನ್ ಸಮಾಜದಲ್ಲಿಯೂ ಅದು ಮಾಡುವುದು. ಆದರೆ ಮುಸ್ಲಿಂಲೀಗಿನ ವಿರುದ್ಧವಾಗಿ ಅದು ಪ್ರಚಾರವನ್ನೇನೂ ಮಾಡುವುದಿಲ್ಲ.

ಕಾಂಗ್ರೆಸ್ ಮಂತ್ರಿಮಂಡಲದಲ್ಲಿ ಮುಸ್ಲಿಂಲೀಗಿನವರನ್ನು ತೆಗೆದುಕೊಳ್ಳಬೇಕಾದರೆ ಅವರು ಕಾಂಗ್ರೆಸ್ಸಿನ ನಿಯಮಗಳನ್ನು ಮಾತ್ರ ಮಾನ್ಯ ಮಾಡಲೇಬೇಕು. ಎಂಬುದಾಗಿ ಬ್ಯಾ. ಜಿನ್ನಾರವರಿಗೆ ಕಾಂಗ್ರೆಸ್ ವರ್ಕಿಂಗ್ ಕಮಿಟಿಯವರು ಸ್ಪಷ್ಟ ತಿಳಿಸಿದ್ದಾರೆಂದು ತಿಳಿಯಲಾಗಿದೆ.

## ನವಲಗುಂದದ ಶ್ರೀ ಬಸವಲಿಂಗ ಸ್ವಾಮಿಗಳಿಗೆ ಅವರ ನಿಷ್ಕಾಮ ಕರ್ಮ ಫಲವು

### ತಾನೇ ಆಮಂತ್ರಣವಿತ್ತಿತು.

ಆಶೆ, ಆಕಾಂಕ್ಷೆಗಳು ಗೊತ್ತುಗುರಿಗಳು ಪ್ರತಿಯೊಬ್ಬರಿಗೂ ಇರಬೇಕಾದುದು ಸಹಜ. ಆದರೆ ಅವುಗಳನ್ನೇ ಆಳವಾಗಿ ಅಂತರಂಗದಲ್ಲಿಟ್ಟುಕೊಂಡು ಕಾರ್ಯಪ್ರವೃತ್ತರಾದರೆ ಅವು ಫಲಿಸುವದು, ಕೊಣೆಗಾಣುವದು ಕಡಿಮೆ. ಯಾರು ನಿರಪೇಕ್ಷ ಬುದ್ಧಿಯಿಂದ ಆಚರಿಸುವರೋ ಅವರ ಬೆಂಬತ್ತಿ ಅವು ತಾವೇ ಬರುವವು. ಕರತಲಾಮಲಕವಾಗುವವು.

ಈ ನೇಮಕ್ಕೆ ಒಳಗಾದವರು ಇವರೊಬ್ಬರು. ಇವರು ತಿಲ್ಲಾಪುರದಲ್ಲಿ ಜನಿಸಿದ್ದರೂ ಇವರು ಬಾಳಿಬೆಳೆದದ್ದು ಬೇರೊಂದೂರಲ್ಲಿ. ಇವರು ಚಿಕ್ಕಂದಿನಲ್ಲಿಯೇ ಶ್ರೀ ಶಿವಯೋಗಮಂದಿರದಲ್ಲಿ ಶಿಕ್ಷಣ ಪಡೆದು ಅದೇ ಸಂಸ್ಥೆಗೆ ಉಪಾಧ್ಯಕ್ಷರಾಗಿ ಆರಿಸಿಬಂದರು. ಇದರಿಂದ ಇವರ ಬುದ್ಧಿಮತ್ತೆಯು ವ್ಯಕ್ತವಾಗುತ್ತದೆ. ಇವರು ಸ್ವಂತ ಮಠದ ಏಳಿಗೆಗಾಗಿ ಹೆಣಗಲಿಲ್ಲ. ಸಂಸ್ಥೆಯ ಮತ್ತು ಸಾಹಿತ್ಯದ ಸೇವೆಗಾಗಿ ಸವಿಯುತ್ತಿರುವರು. ಇವರ ಪರಿಚಯವಿಲ್ಲದ ಕನ್ನಡ ಸಾಹಿತಿಗಳಿಲ್ಲ. ಅವರ ಹೆಸರನ್ನು ಕೇಳದ ಕಲಾವಂತರಿಲ್ಲ. ಗುರು, ಲಿಂಗ ಮೊದಲಾದ ಪುಸ್ತಕಗಳನ್ನೂ ಹಂತಿ ಹಾಡುಗಳನ್ನೂ ಸ್ತೋತ್ರ ಪದ್ಯಗಳನ್ನೂ ಬರೆದು, ಅಲ್ಲಲ್ಲಿ ದಯಮಾಡಿಸಿ ಮಾಡಿದ ಮಾಡುತ್ತಿರುವ ಭಾಷಣಗಳಿಂದಲೂ ಎಲ್ಲ ಕನ್ನಡಿಗರಿಗೂ ಪರಿಚಿತರಾಗಿದ್ದಾರೆ. ಯಾವದೇ ಕಲೆಯಾಗಲಿ ಅದರ ಮೇಲೆ ಇವರಿಗೆ ಹೆಚ್ಚು ಪ್ರೇಮ, ಮಿಕ್ಕಿದ ಆದರ. ಅದಕ್ಕೂ ಕಲಾವಂತರ ಮೇಲೆ ಹೇಳಲಾಗದ ಆದರ ಬುದ್ಧಿ. ಕಲಾವಂತರನ್ನು ಕಂಡರೆ ಕೈಲಾಸ ಸುಖವನ್ನು ಕಂಡಷ್ಟು ಆನಂದ. ಆದ್ದರಿಂದ ಇವರೆಂದರೆ ಎಲ್ಲ ಮತ ಪಂಥದವರಿಗೂ ನಂಬಿಗೆ. ವಿಶ್ವಾಸ. ಈಗ ಒಂದೆರಡು ವರುಷಗಳಿಂದ ಕರ್ನಾಟಕ ಸಾಹಿತ್ಯ ಪರಿಷತ್ತಿನ ಸದಸ್ಯರಾಗಿ ತಮ್ಮ ಸಾಹಿತ್ಯ ಪ್ರೇಮವನ್ನು ತೋರ್ಪಡಿಸಿದ್ದಾರೆ. ಮತ್ತು ಜಮಖಂಡಿ ಸಾಹಿತ್ಯ ಸಮ್ಮೇಲನದಲ್ಲಿ ಇವರು ಮೆಂಬರರಾಗಿ ಆರಿಸಿಬಂದುದು ಇವರ ನಾಡನುಡಿಯ ಪ್ರೇಮದ ಹೆಚ್ಚಳವನ್ನು ತೋರಿಸುವದಿಲ್ಲವೆ ?

ಹೀಗೆ ನಿಷ್ಕಾಮವಾಗಿ ಕೆಲಸಮಾಡುತ್ತಿರುವುದನ್ನು ಕಂಡೇ ತಾ. ೧೧-೫-೩೮ ನೆಯ ದಿವಸ ಚರಪಟ್ಟಾಧಿಕಾರರೂಪ ಫಲವು ಇವರಿಗೆ ತಾನೇ ಆಮಂತ್ರಣವಿತ್ತಿತು. ವಿಶೇಷವಾಗಿ ಕನ್ನಡ ವಿದ್ವಾಂಸರೂ, ಅಭಿಮಾನಿಗಳೂ, ಗಾಯಕರೂ, ಗಮಕಿಗಳೂ ಸೇರಿ ಉತ್ಸವಕ್ಕೆ ಹೆಚ್ಚಿನ ಶೋಭೆಯನ್ನು ತಂದಿದ್ದರು. ಮತ್ತು ನವಲಗುಂದದ ಸದ್ಭಕ್ತರು ಇಂತಹ ಆರ್ಥಿಕ ದುಃಸ್ಥಿತಿಯಲ್ಲಿಯೂ ಆದರದಿಂದಲೂ ಉತ್ಸಾಹದಿಂದಲೂ ಉತ್ಸವವನ್ನು ಜರುಗಿಸಿದರು. ಇದನ್ನು ಕಣ್ಣಾರೆ ಕಂಡು ನನಗೆನಿಸಿದ ಆನಂದದ ಇವೆರಡಲೆಗಳು.

ಓರ್ವ ಪ್ರೇಕ್ಷಕ.

---

## ನಿಜಾಂ ಕನ್ನಡಿಗರ ಸಾಂಜಲೀ ಪ್ರಾರ್ಥನೆ.

ಕರ್ನಾಟಕ ಏಕೀಕರಣ ಮಂಡಲಿಯ ಮಹಾಶಯರೇ, ತಾವುಗಳು ತಾ. ೩-೫-೩೮ ನೇ ಇಸ್ವಿಯಲ್ಲಿ ಕರ್ನಾಟಕ ಏಕೀಕರಣದ ಠರಾವು ಮಾಡಿದ್ದನ್ನು ನೋಡಿ ನಿಜಾಂ ಪ್ರಾಂತದ ಹತಭಾಗ್ಯರಾದ ಕನ್ನಡಿಗರಿಗೆ ಆದ ಆನಂದವನ್ನು ವರ್ಣಿಸಲಳವಲ್ಲ. ಶರಣಸಂದೇಶದಲ್ಲಿ ಶ್ರೀ ಅನ್ನದಾನಯ್ಯಾ ಹಿರೇಮಠ ಇವರು ಸೂಚಿಸಿದ ಅಭಿಪ್ರಾಯಗಳನ್ನು ತಾವು ಪೂರ್ಣಮಾಡುವಿರೆಂದು ತುಂಬಾ ನಂಬಿದ್ದೇವೆ.

ಕರ್ನಾಟಕ ಏಕೀಕರಣ ಸಂಘದವರು ನಿಜಾಮ ಪ್ರಾಂತದ ಕರ್ನಾಟಕ ಸ್ಥಾನಗಳಾದ ಗುಲಬರ್ಗಾ, ರಾಯಚೂರು, ಕೊಪ್ಪಳ ಬೀದರ ಈ ನಾಲ್ಕು ತಾಲೂಕುಗಳ ಹಳ್ಳಿ ಕೊಂಪಿ ಇತ್ಯಾದಿ ಗ್ರಾಮಗಳನ್ನು ತಿರುಗಿ ಗಾಢನಿದ್ರಾ ದೇವತೆಯ ಪಾಶದಲ್ಲಿ ಶಿಲುಕಿ ಅನಿವಾರ ಘೋರ ಯಾತನೆಯನ್ನು ಹೊಂದುತ್ತಿರುವ ನಿಜಾಮ ಕನ್ನಡಿಗರಿಗೆ ಎಚ್ಚರಗೊಳಿಸಿ ನವಚೈತನ್ಯವನ್ನುಂಟುಮಾಡುವಿರೆಂದು ನಂಬಿದ್ದೇವೆ. ಕರ್ನಾಟಕ ಏಕೀಕರಣ ಸಂಘದವರು ತಮ್ಮ ಅಮೌಲ್ಯವಾದ ವೇಳೆಯನ್ನು ವೆಚ್ಚಮಾಡಿ ನಿಜಾಮ ಪ್ರಾಂತವನ್ನು ತಮ್ಮ ಪವಿತ್ರವಾದ ಪಾದಧೂಳಿಯಿಂದ ನಿದ್ದೆಹತ್ತಿ ಕುಂಭಕರ್ಣೋಪಾದಿಯಲ್ಲಿ ಬಿದ್ದ ಕನ್ನಡಿಗರ ನಾಶಿಕದಲ್ಲಿ ಯಾವ ಪ್ರಕಾರ ಮಾರ್ರುತಿಯ ಪವಿತ್ರ ಪಾದ ಧೂಳಿಯು ಕುಂಭಕರ್ಣನ ನಾಶಿಕದಲ್ಲಿ ಸೇರಿ ಎಚ್ಚರಗೊಳಿಸಿತೋ ಅದೇ ಪ್ರಕಾರ ತಾವು ತಮ್ಮ ಪವಿತ್ರವಾದ ಪಾದಧೂಳಿಯಿಂದ ನಿಜಾಮ ಕನ್ನಡಿಗರ ನಾಶಿಕದಲ್ಲಿ ಸೇರುವಂತೆ ಮಾಡಿ ಎಚ್ಚರಗೊಳಿಸಿ ಮಾತೃಭಾಷೆಯ ಪ್ರೀತಿಯನ್ನು ಹೆಚ್ಚಿಸುವಿರೆಂದು ತುಂಬಾ ನಂಬಿಕೆಯಿದೆ. ಈ ಪ್ರಕಾರ ನಡೆದಲ್ಲಿ ಹತಭಾಗ್ಯ ನಿರ್ವೀರ್ಯರಾದ ನಿಜಾಮ ಕನ್ನಡಿಗರಿಂದ ಶ್ರೀರಾಮಚಂದ್ರ ದೇವರಿಗೆ ಸೇತುಬಂಧನ ಕಾಲಕ್ಕೆ ಅಳೂಲಿಯ ಮರಿಗಳಿಂದ ದೊರೆತ ಸಹಾಯುವನ್ನು ನಿಜಾಮ ಕನ್ನಡಿಗರು ತಮ್ಮ ಜ್ಞಾಪಕಕ್ಕೆ ತಂದುಕೊಡಬಹುದು.

ಶೇಷಗಿರರಾವ ಹೋಳಿ
ಶಹಾಪೂರ.

---

## ಪರಮಾಪುರ.

ಗುಂಡ್ಲಪೇಟೆ ತಾಲೂಕು ಪರಮಾಪುರದಲ್ಲಿ ಶ್ರೀ ಬಸವ ಜಯಂತಿಯು ಮಹಾ ವೈಭವದಿಂದ ಜರುಗಿತು, ಪಡಗೂರು ಅಪ್ಪವಿ ಮಠದ ಶ್ರೀಮನ್ನಿರಂಜನ ಶ್ರೀ ಶಿವಕುಮಾರ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಸಭೆಸೇರಿದ್ದಿತು. ಕಾರ್ಯದರ್ಶಿಗಳಾದ ಯಜಮಾನ್ ಶ್ರೀ. ಮಾದಪ್ಪನವರು ಶ್ರೀ. ಗುರುಸ್ವಾಮಪ್ಪನವರು ಮೊದಲಾದ ಪ್ರಮುಖರ ಧನಸಹಾಯದಿಂದ ಇಲ್ಲಿ ಒಂದು ಬಸವ ಮಂದಿರವು ಕಟ್ಟಲ್ಪಡಬೇಕೆಂದು ಗೊತ್ತಾಯಿತು. ಪಂಡಿತ ಹೆಚ್. ಶಿವಲಿಂಗಶಾಸ್ತ್ರಿಗಳು ಮೈಸೂರು ಇವರು ಬಸವಣ್ಣನವರು ಮಾಡಿದ ಮಹತ್ಕಾರ್ಯಗಳನ್ನು ಕುರಿತು ಬಹು ಸ್ವಾರಸ್ಯವಾದ ಭಾಷಣವನ್ನು ಮಾಡಿದರು

ಎಂ. ಬೆಳ್ಳಪ್ಪ.

---

## ಹರವಿ.

ಪದ್ಧತಿಯ ಪ್ರಕಾರ ರಾಯಚೂರು ಜಿಲ್ಲಾ ಹರವಿ ಗ್ರಾಮದಲ್ಲಿ ಶ್ರೀ ಬಸವ ಜಯಂತಿಯು ಬಹು ವೈಭವದಿಂದ ಜರುಗಿತು. ಶ್ರೀ. ಪಾಟೀಲ ವಿರೂಪಾಕ್ಷಗೌಡರು ವಕೀಲ ಹೈಕೋರ್ಟ ಇವರು ಶ್ರೀ. ಚೆನ್ನಯ್ಯನವರು, ಶ್ರೀಮತಿ ಪಾಟೀಲ ಸೂಗಮ್ಮನವರು, ಶ್ರೀ. ಪಾಟೀಲ ಜಂಬನಗೌಡರು, ಶ್ರೀ. ಸಿದ್ಧರಾಮಯ್ಯನವರು ಶ್ರೀ. ಬಸವಲಿಂಗಯ್ಯನವರು, ಬಸವಣ್ಣನವರ ಮಹತ್ಕಾರ್ಯಗಳನ್ನೂ ವೀರಶೈವ ತತ್ವಗಳನ್ನೂ ಕುರಿತು ಮಹತ್ವದ ಭಾಷಣಗಳನ್ನು ಮಾಡಿದರು.

ಈ ಸಭೆಗೆ ಪಂಡಿತ ಶಂಭುಲಿಂಗಯ್ಯನವರು ಸುರಪುರ ಇವರು ಅಧ್ಯಕ್ಷರಾಗಿದ್ದರು. ಇವರ ಭಾಷಣವೂ ಬಹು ಬೋಧಪರವಾಗಿದ್ದಿತು. ಶ್ರೀ ಬಸವೇಶ್ವರ ಮುಷ್ಟಿಫಂಡಿನ ಕಾರ್ಯನಿರ್ವಾಹಕರು ಮೊದಲಿನಂತೆಯೇ ಉತ್ಸಾಹದಿಂದ ಕಾರ್ಯಮಾಡಬೇಕೆಂದು ಗೊತ್ತಾಯಿತು. ಮಾನವಿ ಗ್ರಾಮದಲ್ಲಿಯೂ ಜಯಂತಿಯ ಕಾರ್ಯ ಸಾಗಿತು.

ಓರ್ವ ಬಸವಭಕ್ತ.




ಶಾ. ಶ. ೧೮೬೦ ನೆಯ ವೈಶಾಖ ಬ|| ೯ ಸೋಮವಾರ.

# ಕನ್ನಡಿಗರ ಮುಂದಡಿ.

ಕನ್ನಡಿಗರಾದ ನಮಗೆ ಕರ್ನಾಟಕ ಏಕೀಕರಣವು ಅತ್ಯಂತ ಮಹತ್ವದ ವಿಷಯವಾಗಿದೆ. ಕನ್ನಡ ತಾಯಿಯ ಛಿನ್ನ ವಿಚ್ಛಿನ್ನವು ನಮಗೆ ಸಹಿಸಲಾರದಷ್ಟು ತಾಪದಾಯಕವಾದುದಾಗಿ ಪರಿಣಮಿಸಲಾರಂಭಿಸಿದೆ. ನಾವು ಮೊದಲ: ಕನ್ನಡಿಗರು, ಅನಂತರ ಹಿಂದಿಗಳೆಂದು ಹೇಳಿಕೊಳ್ಳಬೇಕೆಂಬ ನಮ್ಮ ನಾಡಿನ ಹೆಮ್ಮೆಯ ನುಡಿಯು ಈಗೀಗ ಹೊರಬೀಳಲಾರಂಭವಾಗಿದೆ. ನಮ್ಮ ನಾಡಿನ ಅಭಿಮಾನವನ್ನು ಕುಂದಿಸಲು ನಾವು ಅನುಸರಿಸಿರುವ ಮತ ಪಂಥಗಳು ಅಸಮರ್ಥವಾಗಲಾರಂಭಿಸಿವೆ.

ನಮ್ಮ ತಾಯಿ ನುಡಿಯ ಮತ್ತು ನಾಡಿನ ಸಂಬಂಧವಾಗಿ ಈ ವಿಧವಾದ ಪ್ರೇಮಾದರಗಳು ನಮ್ಮಲ್ಲುಂಟಾಗಲು ಸಾಧಾರಣ ಅರ್ಧ ಶತಮಾನ ಬೇಕಾಯಿತು. ನಮ್ಮ ತಾಯಿ ನುಡಿಯ ಮೇಲೆ ಮರಾಠಿಗರು ಆಕ್ರಮಣ ಮಾಡುತ್ತಿದ್ದುದನ್ನು ಡಾ. ಫ್ಲೀಟ್ ದೊರೆಗಳು ನೋಡಿ ಸಹಿಸಲಾರದೆ ೧೮೯೦ ನೆಯ ಇಸವಿಯಲ್ಲಿಯೇ ಅವರ ಕೃತಿಯನ್ನು ನಿಷೇಧಿಸಿದರು. ಕ್ರಿಸ್ತ ಪಾದ್ರಿಗಳು ತಮ್ಮ ಧರ್ಮ ಪ್ರಸಾರ ಕಾರ್ಯಕ್ಕೆ ಸಹಾಯವಾಗಬೇಕೆಂಬ ನಿಮಿತ್ತದಿಂದಲಾದರೂ ಕನ್ನಡ ನುಡಿಯ ಮೇಲೆ ಮರಾಠಿಗರಿಂದಾಗುತ್ತಿದ್ದ ಆಕ್ರಮಣವನ್ನು ತಡೆಯಲು ಮೊದಲು ಎಷ್ಟೋ ಪ್ರಯತ್ನಿಸಿದರು.

## ನಮ್ಮ ನಾಲ್ಕು ಹೆಜ್ಜೆಗಳು.

ತಾಯಿ ನುಡಿಯ ವಿಷಯದಲ್ಲಿ ಅಪಾರವಾದ ಪ್ರೇಮಾದರಗಳಿದ್ದ ಕೀರ್ತಿಶೇಷ ಡೆಪುಟಿ ಚೆನ್ನಬಸವಪ್ಪನವರು, ವೆಂಕಟರಂಗೋ ಕಟ್ಟೀಯವರು, ಗಂಗಾಧರ ತುರಮರಿಯವರೇ ಮೊದಲಾದ ಚಿರಸ್ಮರಣೀಯ ಮಹಾಶಯರು ನಡೆಸಿದ ಚಟುವಟಿಕೆಗಳ ಫಲವಾಗಿ ಕರ್ನಾಟಕ ವಿದ್ಯಾವರ್ಧಕ ಸಂಘವು ಏರ್ಪಟ್ಟಿತು. ಇದೇ ಕನ್ನಡಿಗರ ಮೊದಲನೆಯ ಹೆಜ್ಜೆಯೆಂದು ಹೇಳಬಹುದು.

ಅನಂತರ ಕೀರ್ತಿಶೇಷ ಕಡಪಾ ರಾಘವೇಂದ್ರರಾಯರೇ ಮೊದಲಾದ ಮಹನೀಯರು ನಾಡಿನಲ್ಲಿ ಎಷ್ಟೋ ಜಾಗೃತಿಯನ್ನುಂಟು ಮಾಡಿ ಮಾಂಟೇಗ್ ದೊರೆಗಳ ಕಣ್ಣ ಮುಂದೆ ಕರ್ನಾಟಕ ಏಕೀಕರಣದ ದೃಶ್ಯವನ್ನಿಟ್ಟುದು ಕನ್ನಡಿಗರ ಎರಡನೆಯ ಹೆಜ್ಜೆಯು.

ಮಹಾತ್ಮಾ ಗಾಂಧಿಯವರ ಸಹಾನುಭೂತಿಯಿಂದ ಕರ್ನಾಟಕವು ಒಂದು ಪ್ರತ್ಯೇಕ ಪ್ರಾಂತವೆಂದು ನಾಗಪುರ ಕಾಂಗ್ರೆಸ್ಸಿನಲ್ಲಿ ನಿರ್ಣಯವಾದುದು ಕನ್ನಡಿಗರು ಮತ್ತೊಂದು ಅಡಿಯನ್ನು ಮುಂದಿಟ್ಟುದರ ಗುರುತು.

ಕಳೆದ ೧೬ ವರುಷ ಕರ್ನಾಟಕ ಏಕೀಕರಣಕ್ಕೋಸ್ಕರ ಅನೇಕ ಸಭೆ ಸಮ್ಮೇಲನಗಳನ್ನು ಏರ್ಪಡಿಸಿ ಜನರಲ್ಲಿ ಎಷ್ಟೋ ಜಾಗೃತಿಯನ್ನುಂಟುಮಾಡಿ ಮೊನ್ನೆ ಅಸೆಂಬ್ಲಿಯಲ್ಲಿ ಕರ್ನಾಟಕ ಏಕೀಕರಣದ ಗೊತ್ತುವಳಿಯು ತೀರ್ಮಾನವಾಗುವಂತೆ ಮಾಡಿದುದು ಕನ್ನಡಿಗರ ಹಿರಿಯ ಹೆಜ್ಜೆಯ ಹೆಗ್ಗುರುತು.

## ಆಕ್ಷೇಪಕರೂ ಅಳಿಮನದವರೂ ಲಕ್ಷಿಸಲಿ.

ಕನ್ನಡಿಗರು ಹೀಗೆ ತಮ್ಮ ತಾಯಿನಾಡು ಒಂದಾಗಬೇಕೆಂದು ಮುಂದಡಿಯಿಡುತ್ತಾ ಬರುತ್ತಿರುವುದನ್ನು ನೋಡಿ ಅನೇಕರು ಇದೊಂದು ಪ್ರತ್ಯೇಕ ಪ್ರಾಂತವಾಗಲು ಸಾಧ್ಯವಿಲ್ಲವೆಂದು ಹೇಳುತ್ತಿದ್ದಾರೆ. ಅನೇಕ ಅಳಿಮನದವರಿಗೆ ಅದು ನಿಜವೆಂತಲೂ ತೋರಲಾರಂಭಿಸಿದೆ. ಆದಕಾರಣ ಅವರು ಈ ಕೆಳಗಿನ ಸಂಗತಿಗಳನ್ನು ಲಕ್ಷಿಸಬೇಕಾದುದು ಅತ್ಯಗತ್ಯ —

ಬ್ರಿಟಿಶ್ ಸರಕಾರಕ್ಕೆ ಒಳಪಟ್ಟ ಕನ್ನಡ ನಾಡನ್ನೆ ಮಾತ್ರ ಈಗ ಒಂದುಗೂಡಿಸಬೇಕೆಂಬ ಪ್ರಯತ್ನ ನಡೆದಿದೆಯಷ್ಟೆ. ಹಂಚು ಹಂಚಲ್ಪಟ್ಟ ಈ ನಾಡು ಮುಂಬೈ ಪ್ರಾಂತ, ಮದ್ರಾಸ ಪ್ರಾಂತ ಮತ್ತು ಕೊಡಗು ಎಂಬ ಈ ಮೂರು ಭಾಗಗಳಲ್ಲಿದೆ. ಇವೆಲ್ಲವುಗಳ ವಿಸ್ತಾರ ಸಾಧಾರಣ ೪೫ ಸಾವಿರ ಚದರು ಮೈಲು. ಜನಸಂಖ್ಯೆಯಾದರೋ ಸಾಧಾರಣ ೬೩ ಲಕ್ಷ. ಈ ಬ್ರಿಟಿಶ್ ಕರ್ನಾಟಕದ ಆದಾಯ ಸಾಧಾರಣ ೨|| ಕೋಟಿ ರೂಪಾಯಿ.

ಇಂಥ ಪ್ರದೇಶವು ಪ್ರತ್ಯೇಕವಾಗಿರಲು ಸಾಧ್ಯವಿಲ್ಲವೆ? ಕನ್ನಡ ನಾಡು ತನ್ನ ಸ್ವತಂತ್ರವಾದ ಸಂಸ್ಕೃತಿಯುಳ್ಳದ್ದಾಗಿಲ್ಲವೆ? ಈ ನಾಡು ಕೇವಲ ಸಾಂಸ್ಕೃತಿಕವಾಗಿಯೇ ಅಲ್ಲ; ಭೌಗೋಲಿಕ ದೃಷ್ಟಿಯಿಂದಲೂ, ಪ್ರಾಕೃತಿಕ ಸೌಲಭ್ಯ ಸಲಕರಣೆಗಳಿಂದಲೂ ಸ್ವತಂತ್ರವಾಗಿಯೇ ಇಲ್ಲವೆ? ಎಂದಮೇಲೆ ನಮ್ಮ ಚಲುವ ಕನ್ನಡ ನಾಡು ಅದೇಕೆ ಒಂದಾಗಿ ಪ್ರತ್ಯೇಕ ಇರಬಾರದು?

## ಬೇರೆ ಪ್ರಾಂತ ಮತ್ತು ದೇಶ.

ನಮ್ಮ ದೇಶದ ಆಸಾಮು, ಸಿಂಧ, ಗಡಿನಾಡು, ಈ ಪ್ರಾಂತಗಳು ಸ್ವತಂತ್ರವಾಗಿಯೇ ಇವೆಯಷ್ಟೆ. ಇವೆಲ್ಲವೂ ೪೦ ಲಕ್ಷಕ್ಕಿಂತಲೂ ಕಡಿಮೆ ಜನಸಂಖ್ಯೆಯುಳ್ಳವುಗಳೇ ಆಗಿವೆ. ನಮ್ಮ ನೆರೆಯ ನೇಪಾಳ ಮತ್ತು ಅಫಗಾಣಿಸ್ಥಾನ ಈ ದೇಶಗಳು ಕೂಡಾ ೬೫ ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳವುಗಳು. ಯುರೋಪ ಖಂಡದಲ್ಲಂತೂ ೩೦-೪೦ ಲಕ್ಷ ಜನಸಂಖ್ಯೆಯುಳ್ಳ ಸ್ವತಂತ್ರ ದೇಶಗಳೂ ಇವೆ. ಎಂದಮೇಲೆ ಬ್ರಿಟಿಶ್ ಕರ್ನಾಟಕವಾದರೂ ಅದೇಕೆ ಪ್ರತ್ಯೇಕ ಪ್ರಾಂತವಾಗಿರಲಾರದು?

## ಮುಂದಿನ ಪ್ರಯತ್ನ.

ಇದೇ ೨೪-೨೫ ನೆಯ ತಾರೀಖುಗಳಲ್ಲಿ ಧಾರವಾಡದಲ್ಲಿ ಕರ್ನಾಟಕ ಏಕೀಕರಣದ ಪರಿಷತ್ತು ಕೂಡುತ್ತಿರುವುದಾದರೂ ಈ ಮಹತ್ಕಾರ್ಯಕ್ಕೋಸ್ಕರವೇ ಸರಿ. ಧಾರ್ಮಿಕ ಕ್ಷೇತ್ರದಲ್ಲಿ ಪ್ರಕಾಶಮಯರಾಗಿರುವ ಶ್ರೀ ಜಗದ್ಗುರು ಜಯದೇವ ಮುರಘರಾಜೇಂದ್ರ ಮಹಾಸ್ವಾಮಿಗಳವರು ಈ ಪರಿಷತ್ತಿನ ಉದ್ಘಾಟನ

ಸಮಾರಂಭಕ್ಕೆ ಆಗಮಿಸುತ್ತಿರುವುದರ ಮೇಲಿಂದ ಈ ವಿಷಯವು ಕೇವಲ ರಾಜಕೀಯ ದೃಷ್ಟಿಯಿಂದಲೇ ಮಹತ್ವವಾದುದಲ್ಲ. ಸಾಂಸ್ಕೃತಿಕ ದೃಷ್ಟಿಯಿಂದಲೂ ಅತ್ಯಂತ ಮಹತ್ವವಾದುದೆಂದೇ ಸಿದ್ಧವಾಗುವುದಿಲ್ಲವೆ ?

ಆದುದರಿಂದ ಕನ್ನಡಿಗರೆಲ್ಲರೂ— ಅವರು ಧಾರ್ಮಿಕ ಅಥವಾ ರಾಜಕೀಯ ವಿಷಯಗಳಲ್ಲಿ ಎಷ್ಟೇ ಭಿನ್ನಾಭಿಪ್ರಾಯವುಳ್ಳವರಾಗಿದ್ದರೂ— ಈ ಕರ್ನಾಟಕ ಏಕೀಕರಣವು ತಮ್ಮ ಪ್ರಾಣಸ್ವರೂಪವೆಂದು ತಿಳಿದು ಪ್ರಚಂಡ ಪ್ರಯತ್ನ ಮಾಡಲೇಬೇಕು. ಶಾಸನ ಮಂಡಲದಲ್ಲಿ ತೀರ್ಮಾನವಾದ ಮಾತ್ರದಿಂದ ಈ ಕಾರ್ಯ ನೆರವೇರುವುದಿಲ್ಲ. ಅಸಾಧಾರಣವಾದ ಪ್ರಯತ್ನವನ್ನು ನಾವು ಇನ್ನು ಮೇಲೆ ಮಾಡಿದರೇನೇ ಈ ಕಾರ್ಯವು ನೆರವೇರುವುದು.

### ಕನ್ನಡ ತಾಯಿಯ ಮುಡುಪು.

ಕನ್ನಡ ನಾಡು ಒಂದಾಗುವುದಕ್ಕೋಸ್ಕರ ನಾಳೆ ಧಾರವಾಡದಲ್ಲಿ ಕೂಡುವ ಪರಿಷತ್ತಿಗೆ ಕನ್ನಡ ನಾಡಿನ ಪ್ರತಿಯೊಂದು ಗ್ರಾಮದಲ್ಲಿಯೂ ಸಭೆ ಸೇರಿ ಸಹಾನುಭೂತಿಯನ್ನು ವ್ಯಕ್ತಗೊಳಿಸಬೇಕು. ನಾಳೆ ಕರ್ನಾಟಕದಲ್ಲೆಲ್ಲಾ ಏಕೀಕರಣದ ಮಹತ್ಕಾರ್ಯಕ್ಕೆ ನುಡಿಮಾತ್ರದಲ್ಲಿಯೇ ಸಹಾನುಭೂತಿ ದೊರೆತರೆ ಸಾಲದು. ಹಣವನ್ನು ಕೂಡಿಸುವ ನಡವಳಿಕೆಯೂ ಪ್ರಚಂಡವಾಗಿ ಜರುಗಬೇಕು.

ನಾಳೆಯ ದಿನ ಕನ್ನಡ ನಾಡಿನ ಪ್ರತಿಯೊಂದು ಮನೆಯಲ್ಲಿಯೂ ನಮ್ಮ ಕನ್ನಡ ತಾಯಿಯ ಮುಡುಪನ್ನು ತೆಗೆದಿಡಬೇಕು. ಒಂದು ಲಕ್ಷ ರೂ. ಗಳನ್ನಾದರೂ ಕೂಡಿಸುವ ದೃಢಸಂಕಲ್ಪ ಮಾಡಬೇಕು. ಹೀಗೆ ಧನವನ್ನು ಸೇಖರಿಸಿಕೊಂಡು ಜನ ಬಲದಿಂದ ಸಾಹಸದ ಮುಂದಡಿಯನ್ನಿಟ್ಟರೇನೇ ಕರ್ನಾಟಕ ಏಕೀಕರಣವು ಸಾಧ್ಯ. ಇಲ್ಲದಿದ್ದರೆ ಅಸೆಂಬ್ಲಿಯಲ್ಲಾದ ತೀರ್ಮಾನವು ಕಾಗದದಲ್ಲಿಯೇ ಉಳಿಯುವುದು. ಈ ಕಾರ್ಯಕ್ಕೆ ಜನಬಲದಷ್ಟೇ ಧನಬಲವೂ ಈಗ ಅಗತ್ಯವಾಗಿದೆ. ಆದಕಾರಣ ತಾಯಿಯ ಮುಡುಪೆಂದು ಸಕಲ ಕನ್ನಡಿಗರೂ ಉದಾರ ಬುದ್ಧಿಯಿಂದ ಈ ಕಾರ್ಯಕ್ಕೆ ಈಗ ಧನ ಸಹಾಯ ಮಾಡಬೇಕಾಗಿದೆ.

ಧಾರವಾಡದ ಪರಿಷತ್ತಿನಲ್ಲಿ ಈ ಕಾರ್ಯಕ್ಕೋಸ್ಕರ ಪ್ರಮುಖರ ಒಂದು ಸಮಿತಿಯನ್ನು ಏರ್ಪಡಿಸಿ ಅವರ ಅವಿಶ್ರಾಂತ ಶ್ರಮದಿಂದ ಈ ಮಹಾಕಾರ್ಯ ಜಾಗ್ರತೆ ನೆರವೇರುವಂತೆ ಕನ್ನಡಿಗರು ಮುಂದಡಿಯನ್ನಿಟ್ಟು ಪ್ರಯತ್ನಿಸುವರೆಂದೇ ನಾವು ನಂಬಿದ್ದೇವೆ.

---

## ಲಿಂಗಾಯತ-ಹರಿಜನ ವಿವಾಹವೆ ?

ಕೊಲ್ಹಾಪುರದ ಶ್ರೀ. ಸಿದ್ಧಲಿಂಗಪ್ಪ ಬಾಬೂರಾವ ಹಾವೇರಿ ಎಂಬ ಒಬ್ಬ ಕಾಂಗ್ರೆಸ್ ಕೆಲಸಗಾರರು ಕುಮಾರಿ ಅನುಸೂಯಾ ಶಾಂತಾರಾಮ ಕಾಂಬಳೆ ಎಂಬ ಆದಿಹಿಂದು (ಹರಿಜನ) ಕನ್ಯೆಯನ್ನು ವಿವಾಹವಾದರೆಂದು ಈ ಮುಂಚೆಯೇ ಪ್ರಕಟವಾಗಿದೆಯಷ್ಟೆ. ಶ್ರೀ. ಸಿದ್ಧಲಿಂಗಪ್ಪನವರ ಈ ಕೃತಿಯನ್ನು ಕೆಲವು ಲಿಂಗಾಯತ ಮಹಾಶಯರು ಈಗ ಅಭಿನಂದಿಸಿದ್ದಾರೆ. ಅವರ ಆ ಅಭಿನಂದನೆಯನ್ನೂ ಇದೇ ಸಂಚಿಕೆಯ ಬೇರೊಂದು ಕಡೆ ಕೊಟ್ಟಿದ್ದೇವೆ. ಈ ವಿಚಾರವಾಗಿ ನಮ್ಮ ಅಭಿಪ್ರಾಯವನ್ನು ಸೂಚಿಸಬೇಕೆಂದು ಅನೇಕರು ತಿಳಿಸಿರುವುದರಿಂದ ಈಗ ಆ ವಿಷಯವನ್ನು ಪ್ರಸ್ತಾಪಿಸಿದ್ದೇವೆ.

ಶ್ರೀ. ಸಿದ್ಧಲಿಂಗಪ್ಪನವರು "ರಜಿಸ್ಟ್ರೇಶನ್" ಪದ್ಧತಿಯಂತೆ ವಿವಾಹವಾಗಿದ್ದಾರೆಂದು ಪ್ರಕಟವಾಗಿದೆ. ಎಂದಮೇಲೆ ಕನ್ಯೆಗೆ ಲಿಂಗಧಾರಣವಾಗಿಲ್ಲವೆಂಬುದೇ ಸ್ಪಷ್ಟ ಗೊತ್ತಾಗುತ್ತದೆ. ಹೀಗೆ ಅಲಿಂಗಿಯ ಸಂಗಡ ವಿವಾಹವಾದವರು ಲಿಂಗಾಯತರೆಂದು ಲಿಂಗಾಯತ ತತ್ವದಂತೆ ಹೇಳಲಿಕ್ಕೆ ಬರುವುದಿಲ್ಲ. ಭಾಂಡ ಮತ್ತು ಭಾಜನ ಹೇಗೆ ಶುದ್ಧವಾದುದಾಗಿಯೇ ಇರಬೇಕೋ ಹಾಗೆಯೇ ಪತಿಸತಿಗಳೀರ್ವರೂ ಸಮಾನ ಮತ ಶೀಲಾಚಾರಗಳುಳ್ಳವರಾಗಿರಬೇಕೆಂದೇ ಲಿಂಗಾಯತ ಮತದ ಸಿದ್ಧಾಂತವು.

ಮಹಾತ್ಮಾ ಗಾಂಧಿಯವರ ಮಕ್ಕಳಾದ ಶ್ರೀ. ದೇವಿದಾಸ ಗಾಂಧಿಯವರಿಗೂ ಶ್ರೀ. ರಾಜಗೋಪಾಲಾಚಾರ್ಯರ ಸುಪುತ್ರಿಗೂ ವಿವಾಹವಾಯಿತಷ್ಟೆ. ಶ್ರೀ. ದೇವಿದಾಸರು ವೈಶ್ಯವರ್ಣದವರು. ಶ್ರೀ. ರಾಜಾಜಿಯವರ ಪುತ್ರಿಯಾದರೊ ಬ್ರಾಹ್ಮಣವರ್ಣದವರು. ಇವರೀರ್ವರ ಈ ವಿಷಮ ವರ್ಣ ವಿವಾಹವು ಸಮಂಜಸವಲ್ಲವೆಂದೇ ವಿವಾಹದ ಮುಂಚೆ ಶ್ರೀ. ದೇವಿದಾಸರಿಗೆ ಬ್ರಾಹ್ಮಣ ವರ್ಣದ ಸಂಸ್ಕಾರವನ್ನು ಕೊಟ್ಟು ವಧೂವರರೀರ್ವರೂ ಸಮವರ್ಣದವರಾಗುವಂತೆ ಮಾಡಿದರು.

ವರ್ಣವಾದಿಗಳು ಹೇಗೆ ಸಮವರ್ಣದವರಲ್ಲಿ ವಿವಾಹವಾಗುವುದೇ ವಿಹಿತವೆಂದು ತಿಳಿದಿದ್ದಾರೆಯೋ ಹಾಗೆಯೇ ವರ್ಣಗಳನ್ನು ತೆಗೆದು ಹಾಕಿ ಜಾತಿ ಸೂತಕವೇ ಇಲ್ಲವೆಂದು ಪ್ರತಿಪಾದಿಸುವ ಲಿಂಗಾಯತರು ಸಮಾನವಾದ ಮತ ಶೀಲಾಚಾರಗಳಿರಬೇಕೆಂದು ಗೊತ್ತು ಮಾಡಿರುವುದು ಸಮಂಜಸವಾಗಿಯೇ ಇದೆ. 'ಹರಿಜನ' ಎಂಬುದು ಒಂದು ಮತವೇನೂ ಅಲ್ಲ. ಎಂದಮೇಲೆ ಆ ಕನ್ಯೆಯ ಮತ ಯಾವುದು? ಈ ವಿಷಮ ಮತ ವಿವಾಹವು ಹಿತಕರವಲ್ಲ. ಲಿಂಗಾಯತ ಮತವು ವರ್ಣವನ್ನು ಮಾನ್ಯ ಮಾಡುವುದಿಲ್ಲ. ಜಾತಿಸೂತಕವನ್ನಿಟ್ಟುಕೊಂಡಿಲ್ಲ. ಆದಕಾರಣ "ಹರಿಜನ" ಕನ್ಯೆಗೆ ಲಿಂಗಧಾರಣ ದೀಕ್ಷೆಯನ್ನು ಕೊಡಿಸಿ ವಿವಾಹವಾಗಿದ್ದರೆ ಒಳ್ಳೆಯದಾಗಿದ್ದಿತು.

ಇವರ ಈ ವಿವಾಹವು ಹಿಂದುಧರ್ಮದಲ್ಲಿಯ ವರ್ಣತತ್ವವನ್ನಾಗಲಿ ಅಥವಾ ಮತತತ್ವವನ್ನಾಗಲಿ ಅನುಸರಿಸಿರುವುದಾಗಿಲ್ಲ. ಎಂದಮೇಲೆ ಇವರ ಸಂತಾನವು ಹಿಂದುಧರ್ಮದಂತೆ ಒಂದು ವಿಶಿಷ್ಟವಾದ ವರ್ಣ ಅಥವಾ ಮತಕ್ಕೆ ಒಳಪಡುವುದಿಲ್ಲ. ಶ್ರೀ. ಸಿದ್ಧಲಿಂಗಪ್ಪನವರ ಈ ಸಾಹಸವು ಹಿಂದುಸಂಘಟನೆಯ ದೃಷ್ಟಿಯಿಂದ ಅತ್ಯಂತ ಅಭಿನಂದನೀಯವಾದುದೇ ಸರಿ. ಆದರೆ ಅದು ಸಕ್ರಮವಾಗಿ ಇಲ್ಲದಿರುವುದೇ ಒಂದು ದೊಡ್ಡ ದೋಷವೆಂದು ನಮಗೆ ತೋರುತ್ತದೆ.

---

—ಲಾರ್ಡ ಸಿಂಹರ ಮೊಮ್ಮಗಳು ಕುಮಾರಿ ವೃಂದಾದತ್ತ ಎಂಬುವವಳು ಲೆಫ್ಟನಂಟ್ ಗಾರ್ಡನ್ ಎಂಬ ಕ್ರೈಸ್ತ ತರುಣನೊಂದಿಗೆ ರಜಿಸ್ಟರ ಪದ್ಧತಿಯಿಂದ ವಿವಾಹವಾದಳು!

—ಸಾಂಗಲಿ ಸಂಸ್ಥಾನದ ದುಧೊಂಡಿ ಗ್ರಾಮದಲ್ಲಿ ಪೀರರ ಉರುಸಿನ ಕಾಲಕ್ಕೆ ಅನೇಕ ಹಿಂದುಗಳು ಆ ಉತ್ಸವದಲ್ಲಿ ಸೇರಿ ಪೀರರಿಗೆ ೦-೮ ನೂರು ಕುರಿಗಳನ್ನು ಕಡಿಸುತ್ತಿದ್ದರು. ಶ್ರೀ. ರಾಮಾನಂದ ಸ್ವಾಮಿ ಮೈಸೂರಕರ ಇವರು ಈ ಸಾರೆ ಹಿಂದುಗಳಲ್ಲಿ ಜಾಗೃತಿಯನ್ನುಂಟು ಮಾಡಿ ಒಂದು ಕುರಿಯನ್ನೂ ಬಲಿ ಕೊಡದಂತೆ ಮಾಡಿದರು.

### ಮಧ್ಯಪ್ರಾಂತದ ಮಂತ್ರಿಮಂಡಲ ಬೇರೆಯಾಗುವುದೆ?

ನಾಳೆ ಪಚಮಢಿ ಎಂಬಲ್ಲಿ ಕೂಡುವ ಮಧ್ಯಪ್ರಾಂತದ ಅಸೆಂಬ್ಲಿ ಸಭಾಸದರ ಸಭೆಗೆ ಸರದಾರ ವಲ್ಲಭಭಾಯಿಯವರು ಅಧ್ಯಕ್ಷರಾಗುವರು. ಆಗ ಮಂತ್ರಿಮಂಡಲ ಬೇರೆಯಾಗಿ ಶ್ರೀ. ಖಾಂಡೇಕರ್ ಎಂಬುವವರು ಮುಖ್ಯ ಮಂತ್ರಿಗಳಾಗುವರೆಂದು ಸುದ್ದಿ.

## ಚೆಳಿಗೇರಿಯಲ್ಲಿ
## ನವಜಾಗೃತಿ.

ರಾಯಚೂರ ಜಿಲ್ಲಾ ಕುಷ್ಟಗಿ ತಾಲೂಕಿನ ಚೆಳಿಗೇರಿ ಗ್ರಾಮದಲ್ಲಿ ಬಸವ ನಿಂದಕರು ವಿಶೇಷವಿದ್ದರೂ ಈ ವರುಷ ಜಯಂತಿ ಉತ್ಸವವು ಆದದ್ದು ಎಲ್ಲರಿಗೂ ಅತ್ಯಾಶ್ಚರ್ಯವನ್ನುಂಟುಮಾಡಿತು.

ಅಂದಿನ ದಿವಸ ಬನ್ನಿ ಗಿಡದ ಕಟ್ಟೆಯ ಮೇಲೆ ಶ್ರೀ. ಬಸವಣ್ಣನವರ ಭಾವ ಚಿತ್ರವು ತಳಿರು ತೋರಣಾದಿಗಳಿಂದ ಶೃಂಗರಿಸಲ್ಪಟ್ಟಿದ್ದಿತು. ಊರಲ್ಲಿಯ ಎಲ್ಲ ಜನರೂ ಅಲ್ಲಿಗೆ ಬಂದು ಎಡಿ, ಕಾಯಿ, ಕರ್ಪುರಗಳನ್ನು ಅರ್ಪಿಸುತ್ತಿದ್ದರು.

ಸಂಜೆಯ ಏಳು ಗಂಟೆಯ ಸುಮಾರಕ್ಕೆ ಬಸವಣ್ಣನವರ ಭಾವ ಚಿತ್ರದ ಮೆರವಣಿಗೆಯು ಜಯ ಜಯಕಾರದೊಡನೆ ಹೊರಟು ರಾತ್ರಿ ೧೧ ಗಂಟೆಯ ವರೆಗೂ ಅತಿ ಸಂಭ್ರಮದಿಂದ ಜರುಗಿತು.

ಈ ಕಾರ್ಯದಲ್ಲಿ ಊರಲ್ಲಿಯ ಮಹಾ ಜನರು ಉತ್ಸಾಹದಿಂದ ಮುಂದೆ ಬಂದು ಈ ಸಮಾಜದ ಕೆಲಸ ಮಾಡಿದ್ದಕ್ಕಾಗಿ ಈ ನಮ್ಮ ತರುಣ ಸಂಘದವರು ಅಭಾರ ಮನ್ನಿಸಿ ಮುಂದಿನ ವರುಷ ಇದಕ್ಕಿಂತಲೂ ಹೆಚ್ಚಿನ ವೈಭವದಿಂದ ಜಯಂತಿಯನ್ನು ಮಾಡುವ ಮನವನ್ನು ಎಲ್ಲರಿಗೂ ಕೊಡಲೆಂದು ಈ ನಮ್ಮ ತರುಣ ಸಂಘದವರು ಆ ಜಗದಣ್ಣನಾದ ಬಸವಣ್ಣನನ್ನು ಅನನ್ಯ ಭಾವದಿಂದ ಪ್ರಾರ್ಥಿಸಿದರು.

ವೀರಶೈವ ತರುಣ ಸಂಘ.

---

## ಹಿಂದುಗಳೇ ಹಿಂದುಗಳ ವೈರಿಗಳು.

ಈ ಸಮಯದಲ್ಲಿ ಎಲ್ಲಿ ನೋಡಿದಲ್ಲಿ ಜನಾಂಗದಲ್ಲಿ ಬದಲಾವಣೆ ಉಂಟಾಗಿದೆ. ಜನರು ಆದಷ್ಟು ಪ್ರಯತ್ನ ಮಾಡುತ್ತಾ ತಮ್ಮ ತಮ್ಮ ಧರ್ಮವನ್ನು ಕಾಪಾಡುವದಕ್ಕಾಗಿ ಬಗೆ ಬಗೆಯ ಉಪಾಯಗಳನ್ನು ಮಾಡುತ್ತಾ ನಡೆದಿದ್ದಾರೆ.

ಯಾದಗಿರಿಯ ತರುಣ ಸಂಘದವರು ಅಸ್ಪೃಶ್ಯ ನಿವಾರಣಾರ್ಥವಾಗಿ ಇಲ್ಲಿ ಆದಿಹಿಂದು ಜನರನ್ನು ತಮ್ಮಲ್ಲಿ ಕೂಡಿಸಿ ಒಂದು ಆಟವನ್ನು ಆಡಿದರು. ಅದರ ಮೂಲ ಕಾರಣವೇನೆಂದರೆ ಎಲ್ಲರಲ್ಲಿಯ ಭೇದ ಭಾವನೆ ದೂರಾಗುವದು.

ಆದರೆ ಇಲ್ಲಿಯ ಕೆಲವು ಜನರು ತಮ್ಮ ಕಡೆಯಿಂದ ಯಾವ ಕೆಲಸವನ್ನು ಮಾಡುವುದು ಆಗದಿದ್ದರೂ, ಆ ಕೆಲಸವನ್ನು ಮಾಡುವವರಿಗೆ ಅಡ್ಡಿಮಾಡುವರು. ಪರಕೀಯರ ಮುಂದೆ ತಮ್ಮವರ ನಿಂದೆ ಮಾಡುವದು ಎಷ್ಟು ಶೋಚನೀಯ ಮಾತಾಗಿದೆ. ಒಂದು ವೇಳೆ ಪರಕೀಯರು ತಮಗೆ ಈ ವಿಷಯವಾಗಿ ವಿಚಾರಿಸಿದರೆ ತರುಣರು ಏನೋ ಮಾಡುವರು; ಅದರ ಗೊಡುವೆ ನಮಗೇಕೆ ಅನ್ನುವದು ಮಧ್ಯಮವು. ನಾವು ನಮ್ಮ ಜನಾಂಗದ ಧರ್ಮವನ್ನು ತಿದ್ದುಪಡಿ ಮಾಡುವೆವು. ಇದರಲ್ಲಿ ನಿಮ್ಮದೇನು ಸಂಬಂಧವಿಲ್ಲ, ಮತ್ತು ಅಡ್ಡಿ ಮಾಡುವುದು ತಪ್ಪು ಎನ್ನುವುದು ಉತ್ತಮವು.

ಪರಕೀ ಜನಾಂಗದ ಜನರ ಕಡೆಯಿಂದ ತಮ್ಮೆದುರಿಗೆ ಮನಸ್ಸಿಗೆ ಬಂದಹಾಗೆ ತಮ್ಮ ಧರ್ಮ ಜನಾಂಗದ ಅವಮಾನ ಮಾಡಿಸಿಕೊಳ್ಳುವದು ಖೇದದ ಮಾತಾಗಿದೆ. ಅವರು ನಮ್ಮ ಆದಿಹಿಂದು ಜನರನ್ನು ದಿನಾಲು ನುಂಗುತ್ತಾ ನಡೆದಿದ್ದಾರೆ. ಈ ವಿಷಯವಾಗಿ ನಮ್ಮವರಿಗೆ ಎಚ್ಚರಿಕೆ ಬಾರದ ಹೊರತು ನಮ್ಮ ಉದ್ಧಾರವಾಗುವುದಿಲ್ಲ. ಏನು ಇವರಲ್ಲಿಯ ತಮ್ಮ ಧರ್ಮದ ಅಭಿಮಾನವು ಕರಗಿ ಹೋಯಿತೋ? ಅಥವಾ ಇವರ ಮನೋಭಾವನೆ ಮಣ್ಣುಗೂಡಿತೋ ತಿಳಿಯದು.

ಎರಡನೆ ಜನರು ದಿನೆ ದಿನೆ ಪ್ರಬಲವಾಗುತ್ತಾ ನಡೆದಿದ್ದಾರೆ. ಅವರನ್ನಾದರೂ ನೋಡಿ ನಮ್ಮವರು ತಮ್ಮ ಧರ್ಮ, ಜನಾಂಗದ ಅಭಿಮಾನವನ್ನು ತಮ್ಮಲ್ಲಿ ಉತ್ಪನ್ನ ಮಾಡಲಿ. ಮತ್ತು ಮುಂದಿನಿಂದ ಯಾವದೆ ಕಾರ್ಯ ಸಾಗಿದರೆ ಅದಕ್ಕೆ ಎಲ್ಲರೂ ತಮ್ಮ ಪ್ರೇಮಪೂರ್ವಕ ಧರ್ಮದ ಸಲುವಾಗಿ ಸಹಾಯ ಕೊಡಲಿ.

ಶಾಮರಾವ ಟಿಪಾಲ.

---

## ಗುಡಿಯಾತ್ತಂ.

ಪ್ರತಿ ವರ್ಷದಂತೆ ಈ ವರುಷವಲ್ಲಿಯೂ ಜಗದಣ್ಣನ ಜಯಂತಿಯು ಬಹು ವಿಜೃಂಭಣೆಯಾಗಿ ೨-೫-೩೮ ನೆಯ ಸೋಮವಾರ ಜರುಗಿತು. ಬೆಳಿಗ್ಗೆ ವಾದ್ಯ ವೈಭವದೊಂದಿಗೆ ದೇವಾಲಯಗಳಲ್ಲಿ ಅಭಿಷೇಕ ಆರಾಧನೆ ಜರುಗಿಸಲ್ಪಟ್ಟು ಸಾಯಂಕಾಲ ಅಣ್ಣನ ಭಾವ ಚಿತ್ರವು ದಿವ್ಯ ಅಲಂಕಾರವಾಗಿ ಶೃಂಗರಿಸಲ್ಪಟ್ಟು ಊರ ಬೀದಿಗಳಲ್ಲಿ ಮೆರವಣಿಗೆ ಜರುಗಿತು. ಭಕ್ತಾದಿಗಳು ನಾರಿಕೇಳ ಫಲ ಪುಷ್ಪ ತಾಂಬೂಲಗಳನ್ನು ಅರ್ಪಿಸುತ್ತ ಆತನ ಪ್ರೀತಿಗೆ ಪಾತ್ರರಾಗುತ್ತಿದ್ದರು. ಉತ್ಸವವು ಸ್ಥಳಕ್ಕೆ ಬಂದು ಸೇರಿದ ಕೂಡಲೇ ಬಳ್ಳಾರಿ ಶ್ರೀ. ನಸ್ರದ ಮಲ್ಲಯ್ಯನವರು ಬಸವಣ್ಣನವರ ಚರಿತ್ರೆಯಬಗ್ಗೆ ಭಾಷಣ ಮಾಡಿದರು. ಶ್ರೀ. ಸಿ. ಎಸ್. ನೀಲಕಂಠಪ್ಪನವರು ಸದರಿಯವರ ಭಾಷಣವನ್ನು ಸ್ಪಷ್ಟೀಕರಿಸಿ ಮಾತನಾಡಿದರು. ಈ ಸಮಯದಲ್ಲಿ ಎಚ್. ಎಸ್. ನಾಗಪ್ಪ ಎಮ್. ಎ. ಮುರಿಗೆಪ್ಪ ಕೆ. ಎಸ್. ರುದ್ರಪ್ಪ ಸಿ. ಕೆ. ಹಡಾಕ್ಷರಪ್ಪ ಮೊದಲಾದವರು ಅವಿಶ್ರಾಂತ ಶ್ರಮವಹಿಸಿದ್ದರು. ಸಭಿಕರಿಗೆ ಫಲ ತಾಂಬೂಲಾದಿಗಳು ಜರುಗಿದ ಬಳಿಕ ಶ್ರೀ ಬಸವೇಶ್ವರನ ಜಯಘೋಷದೊಡನೆ ಸಭೆಯು ಮುಕ್ತಾಯಗೊಂಡಿತು. ಇದೇ ರೀತಿಯಾಗಿ ಅಂಬೂರ, ವಾಲಾಜಿ, ಕಲ್ಯಾಣ, ಹೊಸಪೇಟೆ ಈ ಸ್ಥಳಗಳಲ್ಲಿ ಅಣ್ಣನ ಜಯಂತಿಯು ಬಹು ವಿಜೃಂಭಣೆಯಿಂದ ಜರುಗಿತೆಂದು ತಿಳಿಸಲು ತುಂಬಾ ಸಂತೋಷಪಡುತ್ತೇವೆ. ಎಸ್. ಷಣ್ಮುಖಪ್ಪ.

---

## ಸೇಲ ಯುನಿಯನ್.

ಹುನಗುಂದ ಮತ್ತು ಬಾಗಲಕೋಟ ತಾಲೂಕದೊಳಗಿನ ಎಲ್ಲ ಸಹಕಾರಿ ಸಂಘಗಳಿಗೆ ತಿಳಿಸುವದೇನಂದರೆ—

ಸದರ ತಾಲೂಕಗಳ ಸಲುವಾಗಿ ಬಾಗಲಕೋಟದಲ್ಲಿ ಒಂದು ಸೇಲ ಯುನಿಯನ್ ಸ್ಥಾಪಿಸುವ ಕುರಿತು ಶೇಅರ ಹಣವನ್ನು ಕೂಡಿಸಹತ್ತಿದೆಯಷ್ಟೆ. ಆದರೆ ಇನ್ನೂ ಸಾಕಷ್ಟು ಶೇಅರ...... ಭಾಂಡವಲ ಕೂಡಿರುವದಿಲ್ಲ. ಅದ್ದರಿಂದ ಎಲ್ಲ ಸಂಘಗಳು ಈ ಸಂಬಂಧ ಬಡ ರೈತರ ಹಿತದ ಕಡೆಗೆ ಗಮನಿಸಿ ತೀವ್ರ ಶೇಅರ ಹಣವನ್ನು ಕಳುಹಿಸಬೇಕು. ಪ್ರತಿಯೊಂದು ಶೇಅರಿನ ಕಿಮ್ಮತ್ತು ಇಂತಿಷ್ಟೇ ಎಂದು ಇನ್ನೂ ನಿರ್ಧರಿಸಿಲ್ಲ. ಆದರೂ ೧೦ ರೂ. ಗಳಿಗೆ ಒಂದು ಶೇಅರಿನಂತೆ ಶಕ್ಯವಿದ್ದಷ್ಟು ಹೆಚ್ಚು ಶೇಅರುಗಳ ರಕಮನ್ನು ಕಳುಹಿಸಬೇಕಾಗಿ ವಿನಂತಿ.

ಎಮ್. ಪಿ. ನಾಡಗೌಡ
ಆ. ಸೆಕ್ರೆಟರಿ,
ಕೋ. ಇನ್‌ಸ್ಟಿಟ್ಯೂಟ, ಬಾಗಲಕೋಟ.

## ಕಾಂಗ್ರೆಸ್ಸಿನ ಅರಾಷ್ಟ್ರೀಯತೆ!

ಕಾಂಗ್ರೆಸ್ಸು ತಾನೇ ರಾಷ್ಟ್ರೀಯ ವೃತ್ತಿಯುಳ್ಳದ್ದೆಂದೂ ಇತರ ಸಂಸ್ಥೆಗಳು ಜಾತಿ ವಿಶಿಷ್ಟವೆಂದೂ ಹೇಳುತ್ತಿರುವುದುಂಟಷ್ಟೆ. ಈ ವಿಚಾರವಾಗಿ ಹಿಂದು ಮಹಾಸಭೆಯ ಅಧ್ಯಕ್ಷರಾದ ಬ್ಯಾ. ಸಾವರಕರರು ಕಳೆದ ೧೮ ನೆಯ ತಾರೀಖಿನ ದಿವಸ ಅಜಮೀರದ ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಕಾಂಗ್ರೆಸ್ ಮತ್ತು ಹಿಂದು ಮಹಾಸಭೆ ಇವೆರಡೂ ಸಂಸ್ಥೆಗಳ ಧ್ಯೇಯ ಸಂಪೂರ್ಣ ಸ್ವಾತಂತ್ರ್ಯವೇ ಆಗಿದೆ. ಆದರೆ ಕಾಂಗ್ರೆಸ್ಸಿನ ಸ್ವರಾಜ್ಯ ಮತ್ತು ಹಿಂದು ಮಹಾಸಭೆಯ ಸ್ವರಾಜ್ಯ ಇವೆರಡರಲ್ಲಿ ಮಹದಂತರವಿದೆ. ಪ್ರತಿಯೊಂದು ಜಾತಿಗೂ ಸಮಾನವಾದ ಹಕ್ಕು ಬಾಧ್ಯತೆಗಳಿರಬೇಕೆಂದೂ ಎಲ್ಲ ವ್ಯಕ್ತಿಗಳಿಗೂ ಸಮಾನವಾದ ನಾಗರಿಕ ಸ್ವಾತಂತ್ರ್ಯವಿರಬೇಕೆಂದೂ ಹಿಂದು ಮಹಾಸಭೆಯು ಹೇಳುತ್ತದೆ. ಆದರೆ ಕಾಂಗ್ರೆಸ್ ಮಾತ್ರ ಜಾತಿ ಜಾತಿಗಳಲ್ಲಿ ಭೇದವನ್ನು ಮಾಡುತ್ತದೆ. ಹೆಚ್ಚು ಕಡಿಮೆ ಹಕ್ಕು ಬಾಧ್ಯತೆಗಳನ್ನು ಕೊಡುತ್ತದೆ. ಆದುದರಿಂದ ಅದರಲ್ಲಿ ಅರಾಷ್ಟ್ರೀಯತೆ ಇದೆ."

## ಸ್ವರಾಜ್ಯ ಮತ್ತು ಸಂಸ್ಕೃತಿ.

ಪುಣೆಯಲ್ಲಿ ತಾ. ೧೨-೫-೩೮ ನೆಯ ದಿವಸ ಪ್ರೊಫೆಸರ್ ಬೆಹರೆ ಎಂಬುವವರು ಶ್ರೀ. ಭೋಪಟಕರರ ಅಧ್ಯಕ್ಷತೆಯಲ್ಲಿ ಮಹತ್ವದ ಭಾಷಣವನ್ನು ಮಾಡಿದರು. ಅದರ ಮುಖ್ಯಾಂಶವು ಹೀಗಿದ್ದಿತು-

"ಒಂದು ಜನಾಂಗದ ಭಾಷೆಯಲ್ಲಿ ಆ ಜನಾಂಗದ ಮನೋಭಾವನೆಗಳು ಅಡಕವಾಗಿರುತ್ತವೆ. ಆ ಜನಾಂಗದ ಧಾರ್ಮಿಕ ಕಲ್ಪನೆಗಳೂ ಪೂರ್ವಜರ ಐತಿಹಾಸಿಕ ಕಾರ್ಯ ಕಲಾಪಗಳೂ ಅದರ ಉನ್ನತಿಗೆ ಸಾಧನಗಳಾಗಿವೆ. ಒಂದು ಜನಾಂಗದ ಸಂಸ್ಕೃತಿಯೆಂದರೆ ಅದರಲ್ಲಿ ಇವೆಲ್ಲವೂ ಅಡಕವಾಗಿರುತ್ತವೆ.

ಜನಾಂಗದ ಉನ್ನತಿಗೆ ಅದರ ಸಂಸ್ಕೃತಿಯ ಸಂರಕ್ಷಣೆ ಮತ್ತು ಪೋಷಣೆಗಳು ಅಗತ್ಯವಾಗಿವೆ. ಧರ್ಮ ಮತ್ತು ಸಂಸ್ಕೃತಿಗಳು ಅನಾವಶ್ಯಕವೆಂಬ ವಿಚಾರಗಳು ಈಗ ಪ್ರಸಾರಗೊಳಿಸಲ್ಪಡುತ್ತಲಿವೆ. ಧರ್ಮವು ಒಂದು ಮಾದಕ ವಸ್ತುವೆಂತಲೂ ಈಗಿನ ಭಾಯಿಗಳು ಹೇಳುತ್ತಿದ್ದಾರೆ.

ಸ್ವರಾಜ್ಯವೇ ಜನಾಂಗದ ಉನ್ನತಿಗೆ ಮೂಲಾಧಾರವೆಂದ. ಇವರ ತಿಳುವಳಿಕೆಯು. ಜನಾಂಗದ ಸಂಸ್ಕೃತಿಯೇ ಅದರ ಪ್ರಾಣವು ಅದರ ರಕ್ಷಣೆಗೆ ಸ್ವರಾಜ್ಯವು ಬೇಕೇ ವಿನಾ ಸ್ವರಾಜ್ಯವೇನೂ ಜನಾಂಗದ ಪ್ರಾಣವಲ್ಲ.

ಈಗಿನ ಭಾಯಿ ಜನರು ಎಂದರೆ ಸಮತಾವಾದಿಗಳು ಜನಾಂಗದ ಸಂಸ್ಕೃತಿಯನ್ನು ತೆಗೆದುಹಾಕಬೇಕೆಂದೂ ಧಾರ್ಮಿಕ ಭಾವನೆಯನ್ನು ನಿವಾರಣೆ ಮಾಡಬೇಕೆಂದೂ ಪ್ರಯತ್ನಿಸುತ್ತಿದ್ದಾರೆ. ಇದು ವ್ಯರ್ಥ ಸಾಹಸವೇ ಸರಿ. ಜನಾಂಗಕ್ಕೆ ಒಂದು ಸಂಸ್ಕೃತಿಯು ಅಂಟಿಕೊಂಡೇ ಇರುತ್ತದೆ. ಅದನ್ನು ಜನಾಂಗದಿಂದ ಬೇರೆ ಮಾಡುವುದು ಶಕ್ಯವೇ ಇಲ್ಲ. ಧಾರ್ಮಿಕ ಭಾವನೆಯು ಕಾಲಮಾನದಂತೆ ಜನಾಂಗದಲ್ಲಿ ಬೇರೆ ಬೇರೆ ರೂಪಗಳನ್ನು ತಾಳುತ್ತದೆ. ಜನಾಂಗದ ಸಂಸ್ಕೃತಿಯೇ ರೂಪಗೊಂಡು ಧಾರ್ಮಿಕ ಪ್ರತೀಕವಾಗುತ್ತದೆ.

ಹಿಂದುಗಳು ತಮ್ಮ ಭಾವನೆಯನ್ನು ಒಂದು ಮೂರ್ತಿಯಲ್ಲಿ ನೆಲೆಗೊಳಿಸುತ್ತಾರೆ. ಮುಸಲ್ಮಾನರಾದರೋ ಒಂದು ಮಂದಿರದಲ್ಲಿ ಪೂಜ್ಯ ಭಾವವನ್ನಿರಿಸಿ ತಮ್ಮ ಮಶೀದಿಗೆ ಬಹು ಮಹತ್ವವನ್ನು ಕೊಡುತ್ತಿದ್ದಾರೆ. ಕಾಡು ಜನರಿಂದ ಅತ್ಯಂತ ಸುಧಾರಿಸಿದ ಜನರ ವರೆಗಿನ ಯಾವ ಸಮಾಜದವರಾದರೂ ಯಾವುದಾದರೊಂದು ಸಂಸ್ಕೃತಿ ಮತ್ತು ಧಾರ್ಮಿಕ ಭಾವನೆಗೆ ಒಳಪಟ್ಟವರೇ ಆಗಿರುತ್ತಾರೆ.

ರಾಮ ಮತ್ತು ಹನುಮಂತ ಪ್ರತಿಮೆಗಳನ್ನು ಪೂಜಿಸುವ ಹಿಂದುಗಳನ್ನು ಕಂಡು ಪರಿಹಾಸ್ಯ ಮಾಡುವ ಸಮತಾವಾದಿಗಳು ಲೆನಿನ್‌ನ ಸಮಾಧಿಯ ಮುಂದೆ ಮೊಣಕಾಲೂರಿ ಲೆನಿನ್ನನಿಗೆ ವಂದಿಸುತ್ತಿರುವುದೇಕೆ? ರಶಿಯಾದಲ್ಲಿ ಚರ್ಚಗಳನ್ನು ನಿಷೇಧಿಸುವವರು ಲೆನಿನ್ ಮಂದಿರವನ್ನು ಪೂಜ್ಯಭಾವದಿಂದ ಕಾಣುತ್ತಿರುವುದೇಕೆ? ಕೇವಲ ಆರ್ಥಿಕ ಸಮತೆಯಿಂದ ಜನಾಂಗವು ಸುಖ ಸಮಾಧಾನಗಳನ್ನು ಹೊಂದುವುದಿಲ್ಲ. ಈ ಕೃತ್ರಿಮ ಸಮಾನತೆಯು ಪುನಃ ಜನಾಂಗದಲ್ಲಿ ವಿಷಮತೆಯನ್ನೇ ಉಂಟುಮಾಡುವುದು. ಅದಕಾರಣ ಹಿಂದು ಸಂಸ್ಕೃತಿಯನ್ನು ಲೋಪಗೊಳಿಸುವ ಅನರ್ಥಕರ ಕಾರ್ಯಕ್ಕೆ ಕೈ ಹಾಕಬಾರದು."

## ಗೋಸಂರಕ್ಷಣೆ.

### ಗಾಂಧೀಜಿಯವರ ಅಭಿಪ್ರಾಯ.

ಮಹಾರಾಷ್ಟ್ರ ಗೋಸಂವರ್ಧನ ಮಂಡಲದ ಕಾರ್ಯನಿರ್ವಾಹಕರಾದ ಶ್ರೀ. ಪಾರನೇರಕರ ಎಂಬುವವರು ಸೇಗಾವದಲ್ಲಿ ಗಾಂಧೀಜಿಯವರ ಹತ್ತಿರ ಇದ್ದು ಗೋಸಂರಕ್ಷಣೆಯ ಸಂಬಂಧವಾಗಿ ಅನೇಕ ಪ್ರಯೋಗಗಳನ್ನು ನಡೆಯಿಸಿದ್ದಾರೆ. ಗಾಂಧೀಜಿಯವರ ಸಂಗಡ ವಿಚಾರ ವಿನಿಮಯಮಾಡಿ ಗೋಸಂರಕ್ಷಣೆಗೋಸ್ಕರ ಈ ಕೆಳಗಿನ ನಿಯಮಗಳನ್ನು ಗೊತ್ತುಮಾಡಿದ್ದಾರೆ.—

೧. ಆಕಳ ಹಾಲನ್ನೇ ಉಪಯೋಗಿಸುವವರ ಸಂಖ್ಯೆಯನ್ನು ಹೆಚ್ಚಿಸುವುದು. ೨. ಆಕಳ ಸ್ಥಿತಿಯನ್ನು ಸುಧಾರಿಸಲು ಹಳ್ಳಿಗಳಲ್ಲಿ ಗೋವರ್ಧನ ಸಂಸ್ಥೆಗಳನ್ನು ಸ್ಥಾಪಿಸುವುದು. ೩. ಪಟ್ಟಣಗಳ ಹತ್ತಿರ ಮೇವಿಗಾಗಿ ಭೂಮಿಯನ್ನು ಕಾದಿಟ್ಟು ಅಲ್ಲಿ ಹೈನದ ಕಾರ್ಯಾಲಯಗಳನ್ನು ಏರ್ಪಡಿಸುವುದು. ೪. ಸ್ವಾಭಾವಿಕವಾಗಿ ಸತ್ತ ದನಗಳ ಚರ್ಮ ಮೊದಲಾದವುಗಳಿಂದ ಅನೇಕ ವಸ್ತುಗಳನ್ನು ಮಾಡಿ ಆದಾಯವನ್ನು ಹೆಚ್ಚಿಸುವುದು. ೫. ಸರಕಾರದವರು, ಸಾರ್ವಜನಿಕ ಸಂಸ್ಥೆಯವರು; ಉದಾರಿಗಳು ಧನಸಹಾಯಮಾಡಿ ಗೋಸಂರಕ್ಷಣೆಗೆ ನೆರವಾಗುವುದು.

### ಗಾಂಧೀಜಿಯವರ ಸಂದೇಶ.

"ಎಲ್ಲಿಯ ವರೆಗೆ ನಾವು ಗೋವಂಶೋನ್ನತಿಗಾಗಿ ಸಂಪೂರ್ಣ ಲಕ್ಷಿಸುವುದಿಲ್ಲವೋ ಗೋಕ್ಷೀರವೇ ಸರ್ವಶ್ರೇಷ್ಠವಾದುದೆಂದು ಜನಗಳಿಗೆ ಮನವರಿಕೆ ಮಾಡಿಕೊಡುವುದಿಲ್ಲವೋ, ದನಗಳ ಚರ್ಮದ ಸದುಪಯೋಗ ಮಾಡುವುದಿಲ್ಲವೋ ಅಲ್ಲಿಯ ವರೆಗೂ ಗೋಸಂರಕ್ಷಣೆಯಾಗುವುದಿಲ್ಲ ವೆಂದೇ ನಾನು ತಿಳಿದಿದ್ದೇನೆ. ಆದಕಾರಣ ಸಂಘಟಿತವಾಗಿ ಮೇಲಿನ ಕಾರ್ಯಗಳು ಜರುಗಬೇಕು."

## ನಲ್ವಾರ.

ಇಲ್ಲಿಯ ಉತ್ಸಾಹಿ ವೀರಶೈವರು ಶ್ರೀ. ಬಸವಜಯಂತಿಯನ್ನು ಒಳ್ಳೇ ಉತ್ಸುಕತೆಯಿಂದ ನೆರವೇರಿಸಿದರು. ಶ್ರೀ ಬಸವೇಶ್ವರರ ಭಾವಚಿತ್ರದ ಮೆರವಣಿಗೆಯು ಶ್ರೀ ಸಿದ್ಧೇಶ್ವರ ಮಠದಿಂದ ಹೊರಟು ಮಂಜುಳವಾದ್ಯ, ಇಂಪಾದ ಗಾನ, ಬಸವ ಜಯಜಯಕಾರದೊಡನೆ ಶ್ರೀ ಸಿದ್ಧಲಿಂಗೇಶ್ವರ ಮಠಕ್ಕೆ ಹೋಗಿ ಪುನಃ ತನ್ನ ಸ್ಥಾನಕ್ಕೆ ಬಂದಿತು.

—ಬಸವ ಕಿಂಕರ.

## "ಕೌಮುದಿ" ಸಂಪಾದಕರಿಗೆ ಶಿಕ್ಷೆ.

ಪುಣೆಯಲ್ಲಿ ಹೊರಡುತ್ತಿರುವ "ಕೌಮುದಿ" ಎಂಬ ಮರಾಠಿ ಪತ್ರಿಕೆಯಲ್ಲಿ ಬೆಳಗಾವ ಲಿಂಗರಾಜ ಕಾಲೇಜಿನ ಪ್ರಿನ್ಸಿಪಾಲರಾದ ಡಾ. ನಂದಿಮಠರ ಸಂಬಂಧವಾಗಿ ಸಲ್ಲದ ಲೇಖನ ಪ್ರಕಟವಾಗಿದ್ದಿತಷ್ಟೆ. ಜಾತಿದ್ವೇಷ ದ್ಯೋತಕವಾದ ಆ ಲೇಖನವನ್ನು ಕುರಿತು ತಾ|| ೩-೮-೩೭ ನೆಯ ದಿವಸ ಡಾ. ನಂದಿಮಠರವರು ಹೂಡಿದ ಮಾನನಷ್ಟದ ವ್ಯಾಜ್ಯದ ತೀರ್ಮಾನವನ್ನು ಅಲ್ಲಿಯ ಸಿಟಿ ಮ್ಯಾಜಿಸ್ಟ್ರೇಟರಾದ ಖಾ. ಸಾ. ದಾಜಗಾರ ಎಂಬುವವರು ತಾ|| ೧೬-೫-೩೮ ನೆಯ ದಿನ ಈ ಪ್ರಕಾರ ಹೇಳಿದರು—

**ಅಪರಾಧಿಗಳಿಗೆ ಶಿಕ್ಷೆ.**

(೧) ಎಸ್. ವ್ಹಿ. ಗಾಡಗೀಳರಿಗೆ ೫೫ ರೂ. ದಂಡ (೨) ಡಿ. ಎಂ. ಹಾತವಾಳಣೆ (೩) ಜಿ. ಪಿ. ರಾನಡೆ (೪) ಎಸ್. ಆರ್. ರಾಜಗುರು (೫) ವಾಯ್. ಜಿ. ಜೋಶಿ ಈ ನಾಲ್ವರಲ್ಲಿ ಪ್ರತಿಯೊಬ್ಬರಿಗೂ ೧೦ ರೂ. ದಂಡ. ಈ ಪ್ರಕಾರ ಇ. ಪಿ. ಕೊ. ೫೦೦ ನೆಯ ನಿಯಮದಂತೆ ಒಟ್ಟು ೯೫ ರೂ. ದಂಡವನ್ನು ವಿಧಿಸಿದ್ದಾಯಿತು.

ಈ ವ್ಯಾಜ್ಯದಲ್ಲಿ ಡಾ. ನಂದಿಮಠರವರ ಪರವಾಗಿ ಬೆಳಗಾವಿಯ ಸುಪ್ರಸಿದ್ಧ ವಕೀಲರಾದ ಶ್ರೀ. ವ್ಹಿ. ಪಿ. ಕಿತ್ತೂರರವರು ಬಹು ಜಾಣ್ಮೆಯಿಂದ ಕೆಲಸ ನಡೆಯಿಸಿದರು.

## ಸಾಧುಗಳನ್ನು ಸುಟ್ಟರು!

ಹರದ್ವಾರ ಯಾತ್ರೆಗೆ ಹೊರಟಿದ್ದ ೫ ಜನ ಸಾಧುಗಳು ಕೀರ್ತಿಹಳ್ಳಿ ಎಂಬ ಗ್ರಾಮದ ಧರ್ಮಶಾಲೆಯಲ್ಲಿ ವಾಸವಾಗಿದ್ದರು. ಆ ದಿನ ರಾತ್ರಿ ಆ ಹಳ್ಳಿಯ ೨೦ ಮನೆಗಳು ಸುಟ್ಟು ಬೂದಿಯಾದವು.

ಈ ಸಾಧುಗಳೇ ಮಂತ್ರ ಹಾಕಿ ಮನೆಗಳನ್ನು ಸುಟ್ಟರೆಂದು ಆ ಹಳ್ಳಿಯ ಅನೇಕ ಮೂಢರು ತಿಳಿದು ಧರ್ಮಶಾಲೆಗೆ ಬಂದು ಆ ಸಾಧುಗಳನ್ನು ಹಿಡಿದುಕೊಂಡು ಹೋಗಿ ಧಗಧಗ ಸುಡುತ್ತಿದ್ದ ಮನೆಗಳ ಆ ಭಯಂಕರವಾದ ಬೆಂಕಿಯಲ್ಲಿ ಹಾಕಿ ಅವರನ್ನು ಸುಟ್ಟುಬಿಟ್ಟರು.

ಈ ಘೋರ ಕೃತ್ಯಕ್ಕೋಸ್ಕರ ಆ ಹಳ್ಳಿಯ ೩೫ ಜನಗಳ ಮೇಲೆ ವ್ಯಾಜ್ಯವಾಗಿ ಹಳ್ಳಿಯ ಗೌಡನೇ ಮೊದಲಾದ ೫ ಜನರಿಗೆ ದ್ವೀಪಾಂತರ ಶಿಕ್ಷೆಯೂ ಇನ್ನುಳಿದ ೩೦ ಜನರಿಗೆ ಕಾರಾಗೃಹವಾಸದ ಶಿಕ್ಷೆಯೂ ವಿಧಿಸಲ್ಪಟ್ಟಿತು.

## ಹರಿಜನ-ಲಿಂಗಾಯತ ವಿವಾಹ.

**ಲಿಂಗಾಯತ ಪ್ರಮುಖರ ಅಭಿನಂದನೆ.**

ಕೊಲ್ಹಾಪುರದಲ್ಲಿ ಕಾಂಗ್ರೆಸ್ ಕಾರ್ಯಕರ್ತರಾಗಿರುವ ಶ್ರೀ. ಹಾವೇರಿ ಸಿದ್ಧಲಿಂಗಪ್ಪನವರು ಆದಿಹಿಂದು ಕನ್ಯೆಯನ್ನು ವಿವಾಹವಾದುದುದರಿಂದ ಈ ಕೆಳಗಿನ ಲಿಂಗಾಯತ ಮಹಾಶಯರು ಶ್ರೀ. ಸಿದ್ಧಲಿಂಗಪ್ಪನವರನ್ನು ಈ ಪ್ರಕಾರ ಅಭಿನಂದಿಸಿದ್ದಾರೆ.—

ಇಂದಿನ ಪಂಕ್ತಿಸ್ಥಿತಿಯಲ್ಲಿ ಜಾತಿ ಜಾತಿಗಳ ಭಿನ್ನಭೇದಗಳಿಂದ ಉಂಟಾಗಿರುವ ಉಚ್ಚ ನೀಚ ಭಾವಗಳನ್ನು ಹೊಡೆದೋಡಿಸುವಂಥ ಮಾರ್ಗಗಳಲ್ಲಿ ಒಂದಾದ ಹರಿಜನ ಕನ್ಯೆಯ ಶರೀರ ಸಂಬಂಧದ ಈ ನಿಮ್ಮ ಕೃತಿಯನ್ನು ಈ ಕೆಳಗಿನವರಾದ ನಾವು ಹೃತ್ಪೂರ್ವಕ ಅಭಿನಂದಿಸುತ್ತೇವೆ.—

(೧) ವ್ಹಿ. ವ್ಹಿ. ಪಾಟೀಲ. (೨) ಟಿ. ಆರ್. ನೇಶ್ವಿ ಎಂ. ಎಲ್. ಎ. (೩) ಗುದ್ಲೆಪ್ಪ ಹಳ್ಳಿಕೇರಿ. (೪) ಸೌ|| ನಾಗಮ್ಮ ಪಾಟೀಲ ಎಂ. ಎಲ್. ಎ. (೫) ತಲ್ಲೂರ ರಾಯನಗೌಡರು. (೬) ರಾ| ಬ| ಬಿ. ಎಲ್. ಪಾಟೀಲ. (೭) ಹೊಸಮನಿ ಪರಮಣ್ಣನವರು. (೮) ಸಿಂಧೂರ ಸಿದ್ಧಪ್ಪನವರು. (೯) ಎಂ. ಎಸ್. ಅಂಗಡಿ ವಕೀಲರು. (೧೦) ಬೆಲ್ಲದ ಚನ್ನಬಸಪ್ಪನವರು ಹೊಸಪೇಟೆ. (೧೧) ಎಸ್. ಬಿ. ಹಿರೇಮಠ ವಕೀಲರು ಹಾವೇರಿ. (೧೨) ಮರುಳಾರಾಧ್ಯ ಶಾಸ್ತ್ರಿಗಳು. (೧೩) ಅಂಬಲಿ ಚನಬಸಪ್ಪನವರು.

## ಸತ್ಯಾಗ್ರಹಿಗಳ ಆಗಮನ.

**ದಾವಣಗೆರೆ.**

ಧ್ವಜ ಸತ್ಯಾಗ್ರಹದಿಂದ ಕಾರಾಗೃಹವಾಸಿಗಳಾದ ದಾವಣಗೆರೆಯ ರಾಷ್ಟ್ರವೀರರು ತಾ. ೧೬ ನೆಯ ಸಾಯಂಕಾಲ ಬೆಂಗಳೂರಿಂದ ಇಲ್ಲಿಗೆ ಬಂದರು. ಮೈಸೂರು ಕಾಂಗ್ರೆಸ್ ಅಧ್ಯಕ್ಷರಾದ ಶ್ರೀಮತಿ ಬಳ್ಳಾರಿ ಸಿದ್ಧಮ್ಮನವರು ಖಾದಿ ಸಿದ್ಧಲಿಂಗಪ್ಪನವರ ತಾಯಿಯವರಾದ ಶ್ರೀಮತಿ ಸಾವಿತ್ರಮ್ಮನವರು ಇಲ್ಲಿಯ ಪ್ರಸಿದ್ಧ ವ್ಯಾಪಾರಿಗಳೂ ಕಾಂಗ್ರೆಸ್ ಕಾರ್ಯಕರ್ತರೂ ಆದ ದೇಶಭಕ್ತ ಕಾಸಲ ಶ್ರೀನಿವಾಸ ಶೆಟ್ಟರು ಮತ್ತು ಶ್ರೀ. ಎಸ್. ಆರ್. ಗುಂಡಪ್ಪನವರು ಮೊದಲಾದ ೨೦ ಜನ ಸತ್ಯಾಗ್ರಹಿಗಳು ಬರಲು ಪ್ರಚಂಡವಾದ ಜನಸಮೂಹವು ಇವರನ್ನು ಸ್ವಾಗತಿಸಿತು.

ಅನಂತರ ೨೦ ಎತ್ತುಗಳನ್ನು ಹೂಡಿದ ಬಂಡಿಯಲ್ಲಿ ಈ ೨೦ ಸತ್ಯಾಗ್ರಹಿಗಳನ್ನು ಕೂಡ್ರಿಸಿ ಪ್ರಚಂಡವಾದ ಮೆರವಣಿಗೆಯಿಂದ ಗಾಂಧಿ ಮೈದಾನಕ್ಕೆ ಕರೆದುಕೊಂಡು ಹೋದರು. ಮೆರವಣಿಗೆಯು ಅಭೂತಪೂರ್ವವಾದುದಾಗಿದ್ದಿತು. ನಾನಾ ವಾದ್ಯಗಳು ಮೊಳಗುತ್ತಿದ್ದವು. ಈ ಮೆರವಣಿಗೆಯಲ್ಲಿ ೮-೧೦ ಸಾವಿರ ಜನರು ಸೇರಿದ್ದರು.

ಗಾಂಧೀ ಮೈದಾನದಲ್ಲಿ ಪ್ರಚಂಡ ಸಭೆ ಸೇರಿತ್ತು. ೪-೫ ನೂರು ಸ್ತ್ರೀಯರೂ ಬಂದಿದ್ದರು. ಸತ್ಯಾಗ್ರಹಿಗಳನ್ನು ನಗರವಾಸಿಗಳು ಅಭಿನಂದಿಸಿದರು. ಜನತೆಯು ಮಾಡಿದ ಮನ್ನಣೆಯು ನಮಗೆ ಸಂಬಂಧಿಸಿರದೆ ಅದು ಕಾಂಗ್ರೆಸ್ ಸಂಸ್ಥೆಗೆ ಸಂಬಂಧಿಸಿದೆಯೆಂದು ಶ್ರೀಮತಿ ಸಿದ್ಧಮ್ಮನವರು ತಿಳಿಸಿದರು. ಶ್ರೀ. ಶ್ರೀನಿವಾಸ ಶೆಟ್ಟರೇ ಮೊದಲಾದವರು ಕಾರಾಗೃಹ ವಾಸದ ಅನುಭವವನ್ನು ತಿಳಿಸಿದರು.

## ಮಹಿಳಾ ಪರಿಷತ್ತು.

ಮಹಗಾವ ವೀ. ತ. ಸಂಘದವರು ತಾ|| ೨-೫-೩೮ನೆಯ ದಿನ ಶ್ರೀ ಬಸವ ಜಯಂತಿಯನ್ನು ಒಳ್ಳೇ ಉತ್ಸುಕತೆಯಿಂದ ನೆರವೇರಿಸಿದರು.

ಅದೇ ಶುಭದಿವಸ ಸಾಯಂಕಾಲ ೬ ಗಂಟೆಗೆ ಮಹಿಳಾ ಪರಿಷತ್ತು ಕೂಡಿದ್ದಿತು. ೪-೫ ನೂರು ಮಹಿಳೆಯರು ಸಭೆಗೆ ಬಂದಿದ್ದರು. ಶ್ರೀ. ಪಾರ್ವತಿಬಾಯಿ ಮತ್ತು ಶ್ರೀ. ಮೇನುಕಾಂಬೆ ಬೆಣೆ ಮತ್ತು ಕೆಲವು ವಿದ್ಯಾರ್ಥಿನಿಯರು ಆ ಬಸವ ಮಹಾತ್ಮನ ದಿವ್ಯ ಸಂದೇಶವನ್ನು ಇದೇ ಮಹಗಾವ ಮಹಿಳೆಯರಿಗೆ ತಿಳಿಹೇಳಿ ಹುರುಪುಗೊಳಿಸಿದರು. ಆ ಮೇಲೆ ಜಗಜ್ಯೋತಿ ಬಸವನ ಜಯಘೋಷದೊಡನೆ ಸಭೆಯು ವಿಸರ್ಜಿಸಲ್ಪಟ್ಟಿತು.

ಸೆಕ್ರೆಟರಿ ವೀ. ತ. ಸಂಘ.

## ಕರ್ನಾಟಕ ವಿದ್ಯಾವರ್ಧಕ ಸಂಘ ಧಾರವಾಡ.

ಹಿಂದಕ್ಕೆ ಮ. ರಾ. ರಾ. ಕೃಷ್ಣರಾವ ಮುದವೇಡ ಇವರು
ಸಂಘದ ಆಡಳಿತೆಯ ವಿಷಯವಾಗಿ ಸಾಶಂಕವೃತ್ತಿಯವರಾಗಿ
೧೯೩೬ ನೆಯ ಇಸವಿಯ ಫೆಬ್ರವರಿ ತಿಂಗಳ ೧೫ ನೆಯ ತಾರೀ
ಖಿನ ಸಂಯುಕ್ತ ಕರ್ನಾಟಕದ ಸಂಚಿಕೆಯಲ್ಲಿ ಒಂದು ಲೇಖವನ್ನು
ಪ್ರಕಟಿಸಿದ್ದರು. ಅದಕ್ಕೆ ಉತ್ತರವನ್ನು ನಾನು ಅದೇ ಪತ್ರಿಕೆ
ಯ ತಾ. ೨೯-೨-೧೯೩೬ ನೇ ಸಂಚಿಕೆಯಲ್ಲಿ ಕೊಡಬೇಕಾಯಿತು.
ಈ ಪತ್ರ ವ್ಯವಹಾರದಿಂದ ಸಂಘದ ಸಭಾಸದರಲ್ಲಿ ಸ್ವಲ್ಪ ಜಾಗ್ರ
ತೆಯುಂಟಾಗಿ ತಾ. ೧೨-೭-೧೯೩೬ ನೇ ದಿವಸ ಕೂಡಿದ ವಾರ್ಷಿ
ಕ ಸಾಧಾರಣ ಸಭೆಗೆ ೩೯ ಜನ ಸಭಾಸದರು ಹಾಜರಾಗಿ ಒಂದು
ಹೊಸ ವ್ಯವಸ್ಥಾಪಕ ಮಂಡಲವನ್ನು ಆರಿಸಿದರು. ಈ ಚಟುವಟಿಕೆ
ಯಿಂದ ಸಂಘದ ಸ್ಥಿತಿಯು ತುಸು ಅವಧಿಯಲ್ಲಿ ಸುಧಾರಿಸಬಹು
ದೋ ಎಂಬ ಆಶಾಂಕುರವು ಎಷ್ಟೋ ಜನರಲ್ಲಿ ತಲೆದೋರಿರಬ
ಹುದು. ಆದರೆ ಸಂಘದ ಸ್ಥಿತಿಯಲ್ಲಿ ಇಲ್ಲಿಯ ವರೆಗೆ ಏನೂ ಹೆಚ್ಚು
ಕಡಿಮೆಯಾಗಿಲ್ಲವೆಂದು ಬಹು ವಿಷಾದದಿಂದ ಹೇಳಬೇಕಾಗುತ್ತದೆ.

ಈಗ ಸುಮಾರು ಹತ್ತು ವರುಷಗಳಿಂದ ಸಂಘದ ಮೇಲೆ
ಸಾಲಗಳ ಭಾರವಿದ್ದು ಅದು ಈಗ ಸುಮಾರು ೧೦೦೦೦ ರೂ. ಗಳ
ವರೆಗೆ ಆಗಿರುವದು. ಈ ಸಾಲಗಳಲ್ಲಿ ಧಾರವಾಡದ ಸದರ್ನ ಮ
ರಾಠಾ ಅರ್ಬನ್ ಕೋ ಆಪರೇಟಿವ್ಹ ಬ್ಯಾಂಕಿಗೆ ಬಡ್ಡಿ ಸಹಿತ ಸು
ಮಾರು ೬೨೦೦ ರೂ. ಸಲ್ಲತಕ್ಕವವೆ. ಈ ಹಣದ ಬಗ್ಗೆ ಕಾಯ
ದೆಯ ಪ್ರಕಾರ ಪಂಚರ ಮುಂದೆ ವ್ಯಾಜ್ಯವು ಹೋಗಿ ಆ ಬಗ್ಗೆ
ವಿಚಾರಮಾಡಲಿಕ್ಕೆ ಕಾರ್ಯಕಾರೀ ಮಂಡಲದ ಸಭೆಯನ್ನು ಕರೆದ
ರೆ ಮೊದಲನೇ ಸಾರೆ ಕೋರಮ್ಮ ಕೂಡಲಿಲ್ಲ. ಮುಂದರಿಸಿದ ಸ
ಭೆಗೆ ಇಬ್ಬರೇ ಹಾಜರಿದ್ದು ಈ ವಿಷಯವನ್ನು ಇದೇ ಮೇ ೨೬ ನೇ
ತಾರೀಖಿನ ದಿವಸ ಕೂಡತಕ್ಕ ಸಾಧಾರಣ ಸಭೆಯವರು ವಿಚಾ
ರಿಸಬೇಕೆಂದು ನಿರ್ಣಯವಾಗಿದೆ. ಆ ದಿವಸವಾದರೂ ಸಂಘದ
ಅಭಿಮಾನಿಗಳೆಲ್ಲರೂ ಕೂಡಿ ಸಂಘವು ಜೀವದಿಂದ ಉಳಿಯುವಂತೆ
ಮಾಡಬಹುದೆಂಬ ಆಶೆಯಿದೆ. ಪಂಚರು ವ್ಯಾಜ್ಯವನ್ನು ತಾ.
೧೫-೬-೩೮ ನೆಯ ದಿವಸ ಕಡೆಯ ನಿರ್ಣಯಕ್ಕೆಂದು ನಿಯಮಿಸಿರು
ವರು. ಅಷ್ಟರಲ್ಲಿ ಈ ಸಾಲವನ್ನು ತೀರಿಸುವ ಯೋಗ್ಯ ವ್ಯವಸ್ಥೆ
ಯು ಆಗದಿದ್ದರೆ ಸಂಘದ ಗತಿಯು ಏನಾಗಬಹುದೆಂಬುದನ್ನು
ಕರ್ನಾಟಕಸ್ಥರೆಲ್ಲ ವಿಚಾರಿಸಬೇಕು. ಕೆಲ ಕೆಲವು ವಿಷಯಗಳಲ್ಲಿ
ಎಲ್ಲ ಕರ್ನಾಟಕಸ್ಥರಲ್ಲಿ ಒಂದೇ ಭಾವನೆ ಇರುವದಿಲ್ಲವೆಂಬುದು
ಮೇಲಿಂದ ಮೇಲೆ ಕಂಡುಬರುತ್ತದೆ. ಈ ಭಾವನೆಯ ಅಭಾವ
ವು ಸಂಘಕ್ಕೆ ತಟ್ಟಿ ಸಾಲವನ್ನು ತೀರಿಸುವದಾಗದಿದ್ದರೆ ಈ ಬಗ್ಗೆ
ದೋಷವು ಮುಖ್ಯವಾಗಿ ಧಾರವಾಡ ನಿವಾಸಿಗಳ ಮೇಲೆಯೇ ಹೇರಲ್ಪ
ಡುವ ಸಂಭವವೂ ಉಂಟು. ಕಾರಣ ಧಾರವಾಡ ನಿವಾಸಿಗಳೂ ಇತರ
ಕರ್ನಾಟಕಸ್ಥರೂ ಒಮ್ಮನಸ್ಸಿನಿಂದ ಈ ಭಾರವನ್ನು ಇಳಿಸಲಿಕ್ಕೆ
ಪ್ರಯತ್ನಿಸಬೇಕೆಂದು ನನ್ನ ನಮ್ರ ವಿನಂತಿ ಇದೆ.

ತಮ್ಮ
ವೀ. ಬ. ಹಾಲಭಾವಿ ಅಧ್ಯಕ್ಷ
ಕಾರ್ಯಕಾರೀ ಮಂಡಲ.



## ಬಸವ ಮಂಟಪ ಸ್ಥಾಪನೆ.

ಹುಬ್ಬಳ್ಳಿಯಲ್ಲಿ ಶಿವಾನುಭವವು ನಡೆಯಬೇಕೆಂಬ ಉದ್ದೇಶ
ದಿಂದ ಬಡಿಗೇರ ಓಣಿಯಲ್ಲಿ ಸಾರ್ವಜನಿಕ ಉಪಯೋಗದ ಸಲು
ವಾಗಿ ಒಂದು ಕಟ್ಟಡವು ಕಟ್ಟಿಸಲ್ಪಟ್ಟಿರುತ್ತದೆ. ಆಸಕ್ಕೆ ಧಾರವಾಡ
ದ ನವ ಕಲ್ಯಾಣ ಮಠದ ಶ್ರೀ ಕುಮಾರ ಸ್ವಾಮಿಗಳು 'ಬಸವ ಮಂ
ಟಪ' ವೆಂದು ನಾಮಕರಣಮಾಡಿದ್ದಾರೆ. ಈ ಕಟ್ಟಡವು ಬಹುಶಃ
ಒಂದು ಸಾವಿರದ ವರೆಗೂ ಜನರು ನಿರಾಯಾಸವಾಗಿ ಕೂಡ್ರುವಹಾ
ಗಿದ್ದು ಒಂದು ಬಾಜುವಿಗೆ ವ್ಯಾಖ್ಯಾನಕಾರರ ವ್ಯಾಸಪೀಠವಿರುತ್ತ
ದೆ. ಗೋಡೆಯ ಮೇಲೆ ಬಸವೇಶ್ವರ, ಚೆನ್ನಬಸವೇಶ್ವರ, ಅಲ್ಲಮ
ಪ್ರಭು, ಅಕ್ಕಮಹಾದೇವಿ, ಲಿಂಗಮ್ಮ, ಹಡಪದ ಅಪ್ಪಣ್ಣ ಮೊದ
ಲಾದ ಶಿವಶರಣರ ಅನುಭವ ವಚನಗಳು ಕಂಗೊಳಿಸುತ್ತವೆ. ಒ
ಟ್ಟಾರೆ ಬಸವ ಮಂಟಪವು ಭವ್ಯವೂ ವಿಶಾಲವೂ ಇದ್ದು, ಅಡಿಗೆ
ಮಾಡುವದಕ್ಕೋಸ್ಕರ ಬೇರೆ ಸ್ಥಳವು ಸಹ ಒಂದು ಮಗ್ಗಲಿಗೆ
ಇರುತ್ತದೆ.

ಈ ಬಸವ ಮಂಟಪದ ಉದ್ಘಾಟನ ಸಮಾರಂಭವು ಶ್ರೀ
ಬಸವ ಜಯಂತಿಯ ದಿವಸವೇ ನಡೆಯಿತು. ಆ ದಿವಸ ಊರಲ್ಲಿ
ದೊಡ್ಡ ದೊಡ್ಡ ಉತ್ಸವಗಳು ಇದ್ದರೂ 'ಬಸವ ಮಂಟಪ' ವು
ಜನರಿಂದ ತುಂಬಿಹೋಗಿತ್ತು. ಸ್ವಾಮಿಗಳ ಸಂಪೂರ್ಣ ಭಾಷಣ
ವನ್ನು ಬರೆಯುವದು ಅಸಾಧ್ಯವೇ ಆಗಿದ್ದಿತು. ವಿಷಯವು ಎಷ್ಟೇ
ಗಡಚಿದ್ದರೂ ಪುನಃ ಪುನಃ ಅವರು ತಿಳಿಸಿ ಹೇಳುವ ಶೈಲಿಯು
ನೋಡುವಂಥದಿದ್ದಿತು. "ಲಿಂಗದರ್ಶನ ಕರಮುಟ್ಟಿ, ಜಂಗಮ ದ
ರ್ಶನ ಶಿರಮುಟ್ಟಿ, ಆವುದು ಘನವೆಂಬೆ, ಆವುದು ಕಿರಿದೆಂಬೆ, ತಾಳ
ಸಂಪುಟಕ್ಕೆ ಬಾರದ ಘನವ ಅರ್ಪಿಸಹೋದರೆ ಅರ್ಪಣ ಮುನ್ನಿಲ್ಲ,
ಗಮನ ನಿರ್ಗಮನವಾಯಿತ್ತು. ಈ ಉಭಯ ಭೇದವನರಿಯರಾಗಿ
ಜಂಗಮವೇ ಲಿಂಗ ಕೂಡಲ ಸಂಗಮದೇವಾ" ಎಂಬ ವಚನವ
ನ್ನು ಮುಳ್ಳಾಲು ತಾಸಿನ ವರೆಗೆ ಸರ್ವರಿಗೂ ತಿಳಿಯುವಂತೆ ಹೇ
ಳಿದರು. ಮತ್ತು ಶಿವಾನುಭವ ಮಂಟಪ ಹಾಗೂ ಬಸವಾದಿ ಪ್ರ
ಮಥ ಪುಂಗವರ ವಚನಗಳ ಸತ್ಯಾರ್ಥ ಪ್ರಕಾಶವಾದಲ್ಲಿ ಇಡೀ ಮಾ
ನವಕೋಟಿಗೇನೇ ಖಂಡಿತವಾಗಿ ಸುಖವಾಗುವದೆಂಬದರಲ್ಲಿ ಸಂದೇ
ಹವಿಲ್ಲವೆಂದು ವಿಶದವಾಗಿ ಸಭಿಕರು ಒಪ್ಪುವಂತೆ ಮಾತನಾಡು
ವಾಗ ಅರವಿಂದ ಘೋಷ ಟಾಲ್‌ಸ್ಟಾಯ ಮೊದಲಾದ ತತ್ವಜ್ಞಾ
ನಿಗಳ ಇಂಗ್ಲೀಷ ಟಿಪ್ಪಣಿಗಳನ್ನು ಉದಾಹರಣಾರ್ಥವಾಗಿ ಪುಸ್ತ
ಕ ಸಹಾಯವಿಲ್ಲದೆ ನಿರಾಯಾಸವಾಗಿ ಹೇಳುತ್ತಿದ್ದರು. ಇದಲ್ಲದೆ
ಇನ್ನೂ ಅನೇಕ ವಚನಗಳನ್ನು ಬಿಡಿಸಿ ಹೇಳುವ ಶೈಲಿಯನ್ನು
ನೋಡಿ ಜನರು ಚಕಿತರಾಗಿ ಹೋಗಿದ್ದರು.

ಓರ್ವ ಪ್ರೇಕ್ಷಕ.

# ಅಲ್ಲಲ್ಲಿ ಬಸವ ಜಯಂತಿ.

## ಸೂಗೂರು.

ತಾ. ೨-೫-೩೬ ನೇ ಸೋಮವಾರ ಸೂಗೂರಿನಲ್ಲಿ ಇದೇ ಊರಿನ ಕಂಟ್ರಾಕ್ಟರು, ವರ್ತಕರು ಆದ ಶ್ರೀಮಾನ್ ಎಸ್. ಬಿ. ನಂಜಪ್ಪನವರ ಅಧ್ಯಕ್ಷತೆಯಲ್ಲಿ ತಿಪಟೂರಿಂದ ದಯಮಾಡಿದ್ದ ಟಿ. ನಾಗಪ್ಪನವರ ಮಗ ಶ್ರೀಮಾನ್ ಟಿ. ಎನ್. ಪುಟ್ಟಣ್ಣನವರು ಬಸವಜಯಂತಿಯಲ್ಲಿ ವೀರಶೈವರ ಕರ್ತವ್ಯ ಬಸವಣ್ಣನವರು ಮಾಡಿರುವ ನೈತಿಕ, ಧಾರ್ಮಿಕ, ಸಾಮಾಜಿಕ, ಸ್ತ್ರೀಸುಧಾರಣೆ ಎಂಬ ವಿಷಯಗಳನ್ನು ಕುರಿತು ತಮ್ಮ ಅಮೃತವಾಣಿಯಿಂದ ಸ್ಫೂರ್ತಿದಾಯಕವಾಗಿ ಭಾಷಣಮಾಡಿದರು.

ಅನಂತರ ತಿಪಟೂರಿನ ಮ. ರಾ. ರುದ್ರಪ್ಪನವರ ಮಗ ಶ್ರೀಮಾನ್ ಎಸ್. ಆರ್. ಮಲ್ಲಯ್ಯನವರು ವಚನ ಸಾಹಿತ್ಯ ವೀರಶೈವ ಏಕೀಕರಣ ವಚನದ ಮಹಾತ್ಮೆ ಮೊದಲಾದ ವಿಷಯಗಳಲ್ಲಿ ಸ್ಫೂರ್ತಿಯಿಂದ ಭಾಷಣಮಾಡಿದರು. ಟಿ. ಎನ್. ಪುಟ್ಟಣ್ಣನವರ ಸಹೋದರರಾದ ಟಿ. ಎನ್. ಸದಾಶಿವಯ್ಯನವರು ಬಸವೇಶ್ವರನ ಲಾವಣಿಯನ್ನು, ವಚನಗಳನ್ನು ಹೇಳಿದರು. ಈ ಊರಿನ ಕೆಲವು ಬಾಲಕರಿಂದ ವಚನ ಹೇಳಿಸಿ ಬಾಲಕರಿಗೂ ಪ್ರಮುಖರಿಗೂ "ಅಣ್ಣನ ಅರ್ಪಣಯೋಗ" ವಚನದ ಫೋಟೋಗಳನ್ನು ಬಹುಮಾನವಾಗಿ ಹಂಚಿದರು. ಅನಂತರ ಬಸವೇಶ್ವರನ ಫೋಟೋದ ಮೆರವಣಿಗೆಯಾಗಿ ಜಯಜಯಕಾರಗಳಿಂದ ಸಭೆಯು ಮುಕ್ತಾಯವಾಯಿತು.

—ಎಸ್. ಬಿ. ನಂಜಪ್ಪ.

---

## ವನಪೇಟೆ.

ತಾ. ೨-೫-೩೬ ನೆಯ ಬೆಳಿಗ್ಗೆ ವನಪೇಟೆಯಲ್ಲಿ ಶ್ರೀ ಬಸವೇಶ್ವರ ದೇವಸ್ಥಾನವನ್ನು ಸಾರಣೆಕಾರಣೆಗಳಿಂದಲು ತಳಿರು ತೋರಣಗಳಿಂದಲು ಅಲಂಕರಿಸಿ ಬೆಳಿಗ್ಗೆ ೭ ಗಂಟೆಗೆ ವಾದ್ಯಘೋಷದೊಡನೆ ವೀರಶೈವ ಮಹಾಜನರು ಸೇರಿ ಶ್ರೀ ಬಸವೇಶ್ವರರಿಗೆ ಅಭಿಷೇಕ ಮಾಡಿಸಲು ಪ್ರಾರಂಭಿಸಿ ೧೧ ಗಂಟೆಗೆ ಪೂರ್ತಿಗೊಳಿಸಿದರು. ಅನಂತರ ಪ್ರಸಾದ ಮುಗಿಸಲ್ಪಟ್ಟಿತು.

ಸಾಯಂಕಾಲ ೮॥ ಗಂಟೆಗೆ ಶ್ರೀ ಬಸವೇಶ್ವರ ಭಾವಚಿತ್ರವನ್ನು ಮಲ್ಲಿಗೆ ಹೂವಿನಿಂದ ಅಲಂಕೃತವಾದ ಪೀಠದಲ್ಲಿ ಮೂರ್ತಮಾಡಿಸಿ ವೀರಶೈವ ಮಹಾಜನಗಳಿಂದ ಪುರಪ್ರವೇಶಮಾಡಿಸಿ ಒಂದೊಂದು ಮನೆಯಲ್ಲಿಯು ಕಾಯಿ ಹಣ್ಣು ಕರ್ಪೂರಾದಿಗಳಿಂದ ಮಂಗಳಾರತಿಮಾಡಿಸಿಕೊಂಡು ೧೦॥ ಗಂಟೆಗೆ ಶ್ರೀ ದೇವಸ್ಥಾನವನ್ನು ತಲ್ಪಿಸಿತು. ಅನಂತರ ಮಂಗಳಾರತಿ ಆಗಿ ಶ್ರೀ ಬಸವರಾಜಕೀ ಜೈ ಎಂಬ ಜಯಘೋಷದೊಡನೆ ಬಸವಜಯಂತಿಯ ಕಾರ್ಯವು ಮುಕ್ತಾಯಮಾಡಲ್ಪಟ್ಟಿತು.

—ಭಸವ ಭಕ್ತ.

---

## ಯರಗೋಳ.

ಹಿಂದು ಸಮಾಜ ಸುಧಾರಕರಲ್ಲೊಬ್ಬರಾದ ಶ್ರೀ ಬಸವೇಶ್ವರನ ಜಯಂತಿಯು ಈಗ ೨೫ ವರ್ಷಗಳಿಂದಲೂ ಕರ್ನಾಟಕದ ಪ್ರತಿಯೊಂದು ಭಾಗದಲ್ಲಿ ಬಹು ವಿಜೃಂಭಣೆಯಿಂದ ಜರುಗುತ್ತಿರುವದಷ್ಟೆ. ಇಲ್ಲಿಯ ತರುಣರಾದರೂ ಈ ಉತ್ಸವವನ್ನು ನೆರವೇರಿಸಬೇಕೆಂದು ಹೋದವರುಷವೇ ನಿಶ್ಚಯಿಸಿದ್ದರು. ಆದರೆ ಊರಲ್ಲಿ ಹವೆಯು ಕೆಟ್ಟಿದ್ದರಿಂದ ಅದು ಈಡೇರಲಿಲ್ಲ. ಈ ವರುಷ ಜಯಂತಿಯ ಒಂದು ವಾರ ಮುಂಚೆಯೇ ಪ್ರಕಟನಾಪತ್ರಿಕೆಗಳನ್ನು ಇಲ್ಲಿಯ ಪೋಲಿಸ ಅಧಿಕಾರಿಯೊಬ್ಬರ ಸಮ್ಮತಿಯಿಂದ ಹಂಚಲಾಯಿತು. ಅದರಂತೆ ಊರಲ್ಲೆಲ್ಲ ಆ ದಿವಸ ಎತ್ತುಗಳನ್ನು ಹೂಡದೆ, ಅವುಗಳನ್ನು ಪೂಜಿಸಿ ಹಬ್ಬವನ್ನಾಚರಿಸಲಾಯಿತು.

ಇಲ್ಲಿಯ ಚಿಕ್ಕ ಮಠದಲ್ಲಿ ಶ್ರೀ ಬಸವೇಶ್ವರನ ಪೂಜೆ ಭಜನೆ ಆರತಿ ಮುಂತಾದ ಕಾರ್ಯಗಳು ಜರಗಿದವು. ಸಭೆಗೆ ವೀರಶೈವರಿಗಿಂತಲೂ ಅನ್ಯರೇ ಹೆಚ್ಚಾಗಿ ಸೇರಿದ್ದರು. ಈ ವರ್ಷದ ಬಸವ ಜಯಂತಿಯ ಕಾಣಿಕೆಗಾಗಿ ಶ್ರೀ. ಹರ್ಡೇಕರ ಮಂಜಪ್ಪನವರಿಂದ ಬರೆಯಲ್ಪಟ್ಟ "ಅಣ್ಣನ ಅರ್ಪಣಯೋಗ" ಎಂಬ ಚಿಕ್ಕಪುಸ್ತಕದ ೨೫ ಪ್ರತಿಗಳನ್ನು ಸಭೆಯಲ್ಲಿ ಹಂಚಲಾಯಿತು. ಶ್ರೀ. ಸಿದ್ಧಲಿಂಗಸ್ವಾಮಿ ಚಿಕ್ಕಮಠ, ಇವರು ಆ ಪುಸ್ತಕವನ್ನು ಸಭಿಕರಿಗೆ ಓದಿಹೇಳಿದರು.

—ಹಿಂದು ತರುಣ ಸಂಘ.

---

## ನರಗುಂದ.

ಇಲ್ಲಿಯ ಶ್ರೀ ಬಸವಜಯಂತ್ಯುತ್ಸವ ಸಮಿತಿಯವರು ಪ್ರತಿವರ್ಷದಂತೆ ಈ ಸಾರೆಯೂ ಬಸವ ಜಯಂತಿಯನ್ನು ಒಳ್ಳೇ ಉತ್ಸುಕತೆಯಿಂದ ನೆರವೇರಿಸಿದರು. ತಾ॥ ೨೮-೪-೩೬ ರಿಂದ ತಾ॥ ೨-೫-೩೬ ರ ವರೆಗೆ ೫ ದಿನ ಕಾರ್ಯಕ್ರಮಗಳನ್ನೇರ್ಪಡಿಸಲಾಗಿತ್ತು.

ಪ್ರತಿನಿತ್ಯ ಪ್ರಾತಃಕಾಲದಲ್ಲಿ ಸಕಲ ಮೇಳಗಳೊಂದಿಗೆ ನಗರ ಸಂಕೀರ್ತನೆ, ತಾ। ೨೯ ನೆಯ ದಿನ ಓಡುವುದು, ಸಾಯಕಲ್ ಹೊಡೆಯುವದು ಮೊದಲಾದ ಪಂದ್ಯಾಟಗಳು ಜರುಗಿದವು. ತಾ॥ ೩೦ ನೆಯ ದಿನ ರಾತ್ರಿ ೮ ಗಂಟೆಯಿಂದ ೧೦ ಗಂಟೆಯ ವರೆಗೆ ವಿರಕ್ತ ಮಠದಲ್ಲಿ ಶ್ರೀ ಕೊಣ್ಣೂರ ಪಟ್ಟದಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಸಭೆಕೂಡಿ, ಇಲ್ಲಿಯ ಪಾಠಶಾಲಾಧ್ಯಾಪಕರಾದ ಶ್ರೀ ಗೌರಿಶಂಕರ ಶಾಸ್ತ್ರಿಗಳು, ಶ್ರೀ ವ್ಹಿ. ಎಂ. ಮ್ಯಾಗೇರಿ ಮತ್ತು ಶ್ರೀ ಬಸವಲಿಂಗಪ್ಪನವರು ನಾಗಠಾಣ ಇವರು ಬಸವೇಶ್ವರನ ತತ್ವ, ಘನತೆಗಳ ಬಗ್ಗೆ ಭಾಷಣ ಮಾಡಿದರು. ಅನಂತರ ಅಧ್ಯಕ್ಷರು ಉಪಸಂಹಾರ ಭಾಷಣ ಮಾಡಿದಮೇಲೆ ಸಭೆಯು ಮುಕ್ತಾಯವಾಯಿತು.

ತಾ. ೧-೫-೩೬ ನೆಯ ದಿವಸ ಸಂಜೆ ೭ ಗಂಟೆಯಿಂದ ರಾತ್ರಿ ೮ ಗಂಟೆಯ ವರೆಗೆ ಬಾಲಕರು ಶಿವಶರಣರ ವಚನಗಳನ್ನು ಮಧುರ ವಾಣಿಯಿಂದ ಹೇಳಿದರು. ಅನಂತರ ೮ ರಿಂದ ೧೦ ಗಂಟೆಯ ವರೆಗೆ ಗಾಂಧಿ ಚೌಕಿನಲ್ಲಿ ಡಾ. ಹುಡೇದ ಇವರ ಅಧ್ಯಕ್ಷತೆಯ ಕೆಳಗೆ ಸಭೆಕೂಡಿ ಈ ಸಮಿತಿಯವರ ವಿನಂತಿಗೆ ಮಾನ್ಯಕೊಟ್ಟು ಆಗಮಿಸಿದ ಪ್ರೊ. ಎಸ್. ಎಸ್. ಮಾಳವಾಡ ಇವರು ಮಹಾನುಭಾವ ಬಸವಣ್ಣನವರ ತತ್ವಗಳು ಎಷ್ಟು ಉಚ್ಚತರದವುಗಳಿರುತ್ತವೆಂಬದನ್ನು ಅಬಾಲ ವೃದ್ಧರಿಗೂ ತಿಳಿಯುವ ಹಾಗೆ ತಮ್ಮ ಅಸ್ಖಲಿತವಾಣಿಯಿಂದ ಅಚ್ಚ ಕನ್ನಡದಲ್ಲಿ ಸಿಚ್ಛಳವಾಗಿ ಬೋಧಿಸಿದರು. ನಂತರ ಅಧ್ಯಕ್ಷರ ಉಪಸಂಹಾರ ಭಾಷಣವಾದ ಮೇಲೆ ಸಭೆಯು ವಿಸರ್ಜನೆಯಾಯಿತು.

ತಾ. ೨-೫-೩೬ ನೇ ಸೋಮವಾರ ಹಗಲು ೩ ಗಂಟೆಗೆ ಶ್ರೀ ಕಟ್ಟಿನೂರ ದೇವಾಲಯದಿಂದ ಸುಮಂಗಲ ವಾದ್ಯಗಳಿಂದಲೂ ವಚನ ಘೋಷಗಳಿಂದಲೂ ಮಹಾನುಭಾವ ಬಸವಣ್ಣನವರ ಭಾವಚಿತ್ರಪಟದ ಮೆರವಣಿಗೆ ಹೊರಟು ನಗರದ ಮುಖ್ಯ ಮುಖ್ಯ ಬೀದಿಗಳಲ್ಲಿ ಹಾಯ್ದು ರಾತ್ರಿ ೮ ಗಂಟೆಗೆ ಸರಿಯಾಗಿ ಕಟ್ಟಿನೂರ ದೇವಾಲಯಕ್ಕೆ ಬಂದು ತಲುಪಿತು. ನಂತರ ಪಂದ್ಯಾಟ ಮತ್ತು ವಚನ ಹೇಳುವುದರಲ್ಲಿ ಹಾಗು ಕಲ್ಲು ಇರಿಸು ಎತ್ತುವುದರಲ್ಲಿ ಮೇಲು ಬಂದವರಿಗೆ ಶ್ರೀ. ಫಕೀರಗೌಡರು ಪಾಟೀಲ ಇವರ ಹಸ್ತದಿಂದ ಪಾರಿತೋಷಕಗಳು ಹಂಚಲ್ಪಟ್ಟು ಜಯಂತಿ ಕಾರ್ಯವು ಪೂರ್ತಿ ಮಾಡಲ್ಪಟ್ಟಿತು.

—ಉತ್ಸವ ಸಮಿತಿ.

## ಬೆಂಗಳೂರ.

ವೀರಶೈವ ನಿರ್ಣಯ ಪರಮಾವತಾರರೂ, ಕರ್ನಾಟಕ ಭಾಷಾಭಿವರ್ಧಕರೂ ಆದ "ಮಹಾ ಕಾರುಣಿಕ ಶ್ರೀ ಬಸವಣ್ಣನವರ" ಪುಣ್ಯ ಜಯಂತ್ಯುತ್ಸವವು ಇದೇ ಶ್ರೀ ಬಹುಧಾನ್ಯ ಸಂವತ್ಸರದ ವೈಶಾಖ ಶುದ್ಧ ೩ಕ್ಕೆ ಸರಿಯಾದ ತಾ|| ೨-೫-೩೮ನೇ ಸೋಮವಾರ ನಮ್ಮ ರಾಷ್ಟ್ರದ ಸಮಸ್ತ ಭಾಗಗಳಲ್ಲಿಯೂ ಅಚರಿ ಭಕ್ತಿ ಶ್ರದ್ಧೆಗಳಿಂದಲೂ, ವೈಭವ ವಿಜೃಂಭಣೆಗಳಿಂದಲೂ ಆಚರಿಸಲ್ಪಟ್ಟಿತು.

ಪದ್ಧತಿಯಂತೆ ಶ್ರೀ ವೀರಶೈವ ಸಮಾಜಸೇವಾಸಂಘದ ಆಶ್ರಯದಲ್ಲ ಶೇಷಾದ್ರಿ ರಸ್ತೆಯಲ್ಲಿರುವ ಶ್ರೀ ಜಗದ್ಗುರು ಜಯದೇವ ಮುರುಘರಾಜೇಂದ್ರ ವೀರಶೈವ ವಿದ್ಯಾರ್ಥಿ ನಿಲಯದ ವ್ಯಾಖ್ಯಾನ ಮಂದಿರದಲ್ಲಿ ಈ ಕೆಳಗೆ ಕಂಡಂತೆ ಕಾರ್ಯಕ್ರಮಗಳನ್ನೇರ್ಪಡಿಸಲಾಗಿತ್ತು.

ತಾ|| ೨-೫-೩೮ನೇ ಸೋಮವಾರ ಸಂಜೆ ೫|| ಗಂಟೆಗೆ ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠಾಧಿಪತಿಗಳಾದ ಶ್ರೀ ಮನ್ನಿರಂಜನ ಪ್ರಣವಸ್ವರೂಪಿ ಶ್ರೀ ಮಹಾದೇವ ಸ್ವಾಮಿಗಳವರು ಶ್ರೀ ಬಸವಜಯಂತ್ಯುತ್ಸವದ ಪ್ರಾರಂಭ ಸಮಾರಂಭವನ್ನು ನೆರವೇರಿಸಿದರು.

ತಾ|| ೨-೫-೩೮ನೇ ಸೋಮವಾರ ಜಯಕರ್ನಾಟಕ ಪತ್ರಿಕಾ ಸಂಪಾದಕರಾದ ಶ್ರೀಮಾನ್ ಬೆಳಗಾಂವಿ ರಾಮಚಂದ್ರರಾಯರು "ಶ್ರೀ ಬಸವಣ್ಣನವರ ಭಕ್ತಿ" ಎಂಬ ವಿಷಯವಾಗಿ ಅಸಿಸ್ಟೆಂಟ್ ಕಮೀಷನರಾದ ಶ್ರೀಮಾನ್ ಜಿ. ಮಲ್ಲಿಕಾರ್ಜುನಯ್ಯ, ಬಿ ಎ., ಇವರ ಅಧ್ಯಕ್ಷತೆಯಲ್ಲಿ ಭಾಷಣಮಾಡಿದರು

ತಾ|| ೩-೫-೩೮ನೇ ಮಂಗಳವಾರ ಕೀರ್ತನಕೇಸರಿ, ಕವಿರತ್ನ ಇತ್ಯಾದಿ ಬಿರುದಾಂಕಿತರಾದ ಶ್ರೀಮಾನ್ ಬಿ. ಶಿವಮೂರ್ತಿ ಶಾಸ್ತ್ರಿಗಳವರು. "ಭಾರತಿಯರ ತತ್ವಜ್ಞಾನಕ್ಕೆ ಲಿಂಗವಂತರ ಕಾಣಿಕೆ" ಎಂಬ ವಿಷಯವಾಗಿ ನಿವೃತ್ತ ಅಸಿಸ್ಟೆಂಟ ಕಮೀಷನರಾದ ಶ್ರೀಮಾನ್ ಎಂ. ಬಿ. ಶಂಕರಪ್ಪನವರ ಅಧ್ಯಕ್ಷತೆಯಲ್ಲಿ ಭಾಷಣ ಮಾಡಿದರು.

ತಾ|| ೪-೫-೩೮ನೇ ಬುಧವಾರ ಸುಪ್ರಸಿದ್ಧರಸಿಕ ಸಾಹಿತಿಗಳಾದ ಶ್ರೀಮಾನ್ ಅ. ನ. ಕೃಷ್ಣರಾಯರವರು "ಅನುಭವ ಮಂಟಪ" ಎಂಬ ವಿಷಯವಾಗಿ ಮೈಸೂರು ಸಕ್ಕರೆ ಕಾರ್ಖಾನೆಯ ಕಛೇರಿಯ ಉಪಕಾರ್ಯದರ್ಶಿಗಳಾದ ಶ್ರೀಮಾನ್ ಹೆಚ್ ಕೆ. ಮಲ್ಲಪ್ಪನವರ ಅಧ್ಯತೆಯಲ್ಲಿ ಭಾಷಣಮಾಡಿದರು.

ತಾ|| ೫-೫-೩೮ನೇ ಗುರುವಾರ ಶಾಕ್ಯಸಾಹಿತ್ಯ ಮಂಟಪದ ಸಂಸ್ಥಾಪಕರೂ ಸರಳ ಸಾಹಿತಿಗಳೂ ಆದ ಶ್ರೀಮಾನ್ ಜಿ. ಪಿ. ರಾಜರತ್ನಂ, ಎಂ. ಎ., ಇವರು "ಶ್ರೀ ಬಸವಣ್ಣನವರು" ಎಂಬ ವಿಷಯವಾಗಿ ಸಮಾಜಾಭಿಮಾನಿಗಳೂ ಪ್ರಸಿದ್ಧ ವರ್ತಕರೂ ಆದ ಶ್ರೀಮಾನ್ ಪಿ. ಎಂ. ಬಸವಪ್ಪನವರ ಅಧ್ಯಕ್ಷತೆಯಲ್ಲಿ ಭಾಷಣ ಮಾಡಿದರು.

ತಾ|| ೬-೫-೩೮ನೇ ಶುಕ್ರವಾರ "ನಮ್ಮ ಪುಸ್ತಕ" ಪತ್ರಿಕಾ ಸಂಪಾದಕರೂ ಪ್ರೌಢ ಸಾಹಿತಿಗಳೂ ಆದ ಶ್ರೀಮಾನ್ ದೇವುಡು ನರಸಿಂಹಶಾಸ್ತ್ರಿ ಎಂ. ಎ., ಇವರು "ವಚನಗಳೂ— ಉಪನಿಷತ್ತುಗಳೂ" ಎಂಬ ವಿಷಯವಾಗಿ ನಿವೃತ್ತ ಪೋಲೀಸ ಮುಖ್ಯಾಧಿಕಾರಿಗಳಾದ ಶ್ರೀಮಾನ್ ಜಿ. ಶಾಂತವೀರಪ್ಪ, ಬಿ. ಎ. ಇವರ ಅಧ್ಯಕ್ಷತೆಯಲ್ಲಿ ಭಾಷಣಮಾಡಿದರು.

ತಾ|| ೭-೫-೩೮ನೇ ಶನಿವಾರ ಶ್ರೀ ಸಿದ್ಧಗಂಗಾಕ್ಷೇತ್ರಾಧಿಪತಿಗಳಾದ ಶ್ರೀ ಮನ್ನಿರಂಜನ ಪ್ರಣವಸ್ವರೂಪಿಗಳಾದ ಶ್ರೀ ಶಿವಕುಮಾರ ಸ್ವಾಮಿಗಳವರು "ಕಾಯಕವೇ ಕೈಲಾಸ" ಎಂಬ ವಿಷಯವಾಗಿ ನಿವೃತ್ತ ಫಿಜಿಕ್ಸ ಪ್ರೊಫೆಸರರೂ ತಾತಾ ಇನ್ಸ್ಟಿಟ್ಯೂಟಿನ ಡೈರೆಕ್ಟರರೂ ಆದ ಶ್ರೀ ರಾವ್ ಬಹದ್ದೂರ್ ಬಿ. ವೆಂಕಟೇಶಾಚಾರ್ಯ, ಎಂ. ಎ. ಎಫ್. ಇನ್‌ಸ್ಟ ಪಿ. ಇವರ ಅಧ್ಯಕ್ಷತೆಯಲ್ಲಿ ಭಾಷಣಮಾಡಿದರು.

ತಾ|| ೮-೫-೩೮ನೇ ಭಾನುವಾರ ಸಂಜೆ ೫ ಗಂಟೆಗೆ ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠಾಧಿಪತಿಗಳಾದ ಶ್ರೀ ಮನ್ನಿರಂಜನ ಶ್ರೀ ಮಹಾದೇವಸ್ವಾಮಿಗಳವರ ಅಧ್ಯಕ್ಷತೆಯಲ್ಲಿ 'ಪ್ರಮಥ ಚಾರಿತ್ರ್ಯ ಲಾವಣಿ' ಮತ್ತು 'ವ್ಯಾಯಾಮ ಪ್ರದರ್ಶನ' ಗಳು ಜರುಗಿದವು.

ಎಂ. ಎಸ್. ಶಿವಪ್ಪ, ಕೆ. ಬಸಪ್ಪ.
ಗೌರವ ಕಾರ್ಯದರ್ಶಿಗಳು.

## ಚಿತಾಪುರ.

ವಾರ್ಷಿಕ ಪದ್ಧತಿಗನುಸರಿಸಿ ಈ ವರ್ಷದಲ್ಲಾದರು ಇದೆ ವೈಶಾಖ ಶು| ೩ ಸೋಮವಾರ ಅಂದರೆ ತಾ|| ೨-೫-೩೮ನೇ ದಿವಸ ಶ್ರೀ. ಶಿವಶಂಕರಪ್ಪನವರ ಮಠದಲ್ಲಿ ಶ್ರೀ ಬಸವಮಹಾತ್ಮನ ಜಯಂತಿಯು ಒಳ್ಳೇ ವೈಭವದೊಡನೆ ನೆರವೇರಿತೆಂದು ತಿಳಿಸಲು ಮಹದಾನಂದವಾಗುತ್ತದೆ. ತಾರೀಖು ೨-೫-೧೯೩೮ ನೆಯ ಮಧ್ಯಾಹ್ನ ೩ ಗಂಟೆಯಿಂದ ೬ ಗಂಟೆಯ ವರೆಗೆ ಶ್ರೀ ಗುರು ಶಾಂತಶಾಸ್ತ್ರಿಗಳು ಅಳ್ಳಗಿ, ಹಿರೇಮಠ ಚಂದ್ರಶೇಖರ ಶಾಲಾಧ್ಯಾಪಕ ಇವರು ಶ್ರೀ ಬಸವೇಶ್ವರನ ಜನನದ ಬಗ್ಗೆ ಕೀರ್ತನ ರೂಪದಿಂದ ಶ್ರೋತ್ರಿಯರ ಮನಾನಂದವಾಗುವಂತೆ ಬೋಧಿಸಿದರು. ೬ ಗಂಟೆಯಿಂದ ೭ ಗಂಟೆಯ ವರೆಗೆ ಧಾರ್ಮಿಕ ಸಭೆನಡೆಯಿತು. ಸಭೆಗೆ ಶ್ರೀ ಚಂದ್ರಶೇಖರ ಹಿರೇಮಠದ ಶ್ರೀಗಳವರೇ ಅಧ್ಯಕ್ಷರಾಗಬೇಕೆಂದು ಶ್ರೀಯುತ ಶರಣಪ್ಪ ಮಾಸ್ತರ. ಎಫ್. ಎ ಇವರು ತಿಳಿಸಿದರು. ಅದಕ್ಕೆ ಸಭಿಕರ ವತಿಯಿಂದ ಶಾಸ್ತ್ರಿಗಳವರ ಅನುಮೋದನವನ್ನು ಕೊಟ್ಟರು. ಆಮೇಲೆ ಅಧ್ಯಕ್ಷಮಹಾಶಯರು ಅವತಾರ-ಧರ್ಮ, ಮನುಷ್ಯಜನ್ಮದ ಸಾರ್ಥಕತೆ ಇವೆ ಮೊದಲಾದ ವಿಷಯಗಳ ಮೇಲೆ ತಮ್ಮ ಮಧುರಮಯವಾಣಿಯಿಂದ ಎಲ್ಲರ ಹೃದಯಕಮಲ ವಿಕಸಿತವಾಗುವಂತೆ ಬೋಧಿಸಿದರು. ಅಷ್ಟಕ್ಕೆ ಸಭೆಯಕಾರ್ಯವು ವಿಸರ್ಜಿಸಿತು. ೭ ಗಂಟೆಗೆ ಶ್ರೀ ಬಸವಮಹಾತ್ಮನ ಭಾವಚಿತ್ರದಿಂದೊಡಗೂಡಿದ ಪಲ್ಲಕ್ಕಿ ಮಹೋತ್ಸವವು ಹೊರಟು ೧೦ ಗಂಟೆಗೆ ಮಠಕ್ಕೆ ಬಂದು ತಲ್ಪಿತು. ಗ್ರಾಮದ ಎಲ್ಲ ಭಾಗವು ತಳಿರು ತೋರಣಗಳಿಂದಲೂ ರಂಗವಲ್ಲಿ ಸಾರಣೆಗಳಿಂದಲೂ ಅಲಂಕೃತವಾಗಿತ್ತು.' ಎಲ್ಲಿ ನೋಡಿದರು ಬಸವೇಶ್ವರನ ಜಯಘೋಷ ಭಜನೆಯಲ್ಲದೆ ಬೇರೊಂದು ಶಬ್ದವು ಕೇಳುವಂತಿದ್ದಿಲ್ಲ. ಇದೇ ಪ್ರಕಾರ ಉತ್ಸವ ಕಾರ್ಯ ಮುಗಿದಮೇಲೆ ಶ್ರೀ ಗುರುಶಾಂತಶಾಸ್ತ್ರಿಗಳು ಎಲ್ಲ ಜನರಿಗೆ "ನೀವೆಲ್ಲರು ಪ್ರೇಮ ಮತ್ತು ಒಕ್ಕಟ್ಟನಿಂದ ಕಾರ್ಯ ಮಾಡೋಣದರಿಂದಲೇ ಈ ಕಾರ್ಯವು ಯಶಸ್ವಿಯಾಯಿತು. ಇದರಂತೆ ಪ್ರತಿಯೊಂದು ಕಾರ್ಯದಲ್ಲಾಚರಿಸಿ ಸುಖಶಾಂತಿಯುಳ್ಳವರಾಗಬೇಕೆಂದು" ಹೇಳಿ ಸಮಾರೋಪಣಭಾಷಣವನ್ನು ಮುಗಿಸಿದರು. ವೇಳೆಯಾದ ಮೂಲಕ ಬಸವ ಮಹಾತ್ಮನ ಮಂಗಲದೊಡನೆಯೂ ಜಯಘೋಷದೊಡನೆಯೂ ಸದರಿ ಕಾರ್ಯವನ್ನು ವಿಸರ್ಜಿಸಿ ಎಲ್ಲರೂ ದರ್ಶನಾಶೀರ್ವಾದವನ್ನು ತೆಗೆದುಕೊಂಡು ತಮ್ಮ ತಮ್ಮ ಮನೆಗಳಿಗೆ ಹೋದರು.

— ಪಂಚ ಕಮಿಟಿ.

## ಆದಿಹಿಂದುಗಳ ಧರ್ಮಾಂತರ!

ಸಾಂಗಲಿ ಸಂಸ್ಥಾನದ ನಾಂದ್ರೆ ಗ್ರಾಮದಲ್ಲಿರುವ ಆದಿಹಿಂದು (ಹೊಲೆಯರು) ಗಳೆಲ್ಲರೂ ಕ್ರಿಸ್ತಮತಕ್ಕೆ (ತಾ. ೨೨ ಕ್ಕೆ) ಸೇರುವರೆಂದು ಪ್ರಕಟವಾಗಿದೆ. ಸವರ್ಣ ಹಿಂದುಗಳಿಂದಾಗುತ್ತಿರುವ ಸಾಮಾಜಿಕ ಹಿಂಸೆಗಳನ್ನು ತಾಳಲಾರದೆ ಇವರು ಕ್ರಿಸ್ತಮತಕ್ಕೆ ಸೇರಲು ಸಿದ್ಧರಾದರು.

ಇವರು ಈ ಮುಂಚೆಯೇ ಈ ಪ್ರಕಾರ ಧರ್ಮಾಂತರ ಹೊಂದುತ್ತಿದ್ದರು. ಆದರೆ ಹಿಂದುಧರ್ಮಪ್ರೇಮಿಗಳು ಇವರಿಗೆ ನಿಮ್ಮ ಮೇಲಾಗುತ್ತಿರುವ ಸಾಮಾಜಿಕ ಬಲತ್ಕಾರಗಳನ್ನು ತಪ್ಪಿಸುವೆವೆಂದು ಅವರಿಗೆ ಅಭಿವಚನಕೊಟ್ಟಿದ್ದರು. ಆ ಪ್ರಕಾರ ಅವರಿಂದ ಕಾರ್ಯವಾಗದಿರಲು ಈಗ ಹೀಗೆ ಧರ್ಮಾಂತರ ಹೊಂದಲು ಮುಂದರಿದರಂತೆ.

ಸವರ್ಣ ಹಿಂದುಗಳು ತಮ್ಮಲ್ಲಿರುವ ಈ ಅಸ್ಪೃಶ್ಯತೆ ಎಂಬ ಪಾಪವನ್ನು ಕಳೆದುಕೊಳ್ಳದಿದ್ದರೆ ಇದೇ ಪ್ರಕಾರ ಅಸಂಖ್ಯ ಆದಿ ಹಿಂದುಗಳು ಹಿಂದುಧರ್ಮವನ್ನು ಬಿಟ್ಟು ಹೋಗುವುದು ಖಂಡಿತ. ಆಗ ಈ ಸನಾತನಿ ವಿಚಾರದ ಹಿಂದುಗಳು ನಾನಾ ರೀತಿಗಳಿಂದ ಅಧೋಗತಿಗೀಡಾಗುವರು. ಅಂತೆಯೇ ಮಹಾತ್ಮಾ ಗಾಂಧಿಯವರು ಅಸ್ಪೃಶ್ಯತೆಯು ಅಳಿದರೇನೇ ಹಿಂದುಧರ್ಮವು ಉಳಿಯುವದೆಂದು ಸಾರಿ ಸಾರಿ ಹೇಳುತ್ತಿದ್ದಾರೆ. ಮಹಾತ್ಮರ ಈ ದಿವ್ಯ ವಚನವು ಸನಾತನಿಗಳಿಗೆ ಎಷ್ಟು ಜಾಗ್ರುತೆ ತಿಳಿದು ಆಚರಣೆಯಲ್ಲಿ ಬರುವುದೋ ಅಷ್ಟು ರಾಷ್ಟ್ರಕ್ಕೆ ಹಿತ.

## ನಿಜಾಮ ಪ್ರಾಂತದ ವೀರಶೈವ ಪರಿಷತ್ತು.

### ೩ ನೆಯ ಅಧಿವೇಶನ ಲಾತೂರು.

ನಿಜಾಮ ಪ್ರಾಂತದ ವೀರಶೈವ ಪರಿಷತ್ತಿನ ಮೊದಲನೆಯ ಮತ್ತು ಎರಡನೆಯ ಅಧಿವೇಶನಗಳು ನಿಜಾಮ ಪ್ರಾಂತದ ವೀರಶೈವರ ಜಾಗೃತಿಗೆ ಕೇಂದ್ರಸ್ಥಾನವಾದ ಉದ್ಗಿರಿಯಲ್ಲಿ ಈ ಮುಂಚೆ ಬಹು ಪರಿಣಾಮಕಾರಿಯಾಗಿ ಜರುಗಿದ್ದವಷ್ಟೆ.

ಈ ಪರಿಷತ್ತಿನ ೩ ನೆಯ ಅಧಿವೇಶನವು ಲಾತೂರಲ್ಲಿ ಈ ತಿಂಗಳು ೨೭, ೨೮, ೨೯ ನೆಯ ತಾರೀಖುಗಳಲ್ಲಿ ಜರುಗುವಂತೆ ಅಲ್ಲಿಯ ವೀರಶೈವ ಮಹಾಜನರು ಪ್ರಚಂಡ ಪ್ರಯತ್ನ ನಡೆಸಿದ್ದಾರೆ.

ಈಗಾಗಲೇ ಪರಿಷತ್ತಿನ ಸಕಲ ಕಾರ್ಯಗಳೂ ಯಶಸ್ವಿಯಾಗಿ ಜರುಗಲಿಕ್ಕೆ ಬೇಕಾಗುವ ಸಕಲ ಸಿದ್ಧತೆಗಳೂ ನಡೆದಿವೆ, ಮಹಿಳಾ ಪರಿಷತ್ತನ್ನು ಕೂಡಿಸಿ ವೀರಶೈವ ಮಹಿಳೆಯರಲ್ಲಿಯೂ ಧಾರ್ಮಿಕ ಜಾಗೃತಿಯುಂಟಾಗುವಂತೆ ಮಾಡಿದ್ದಾರೆ.

ಈ ಪರಿಷತ್ತಿಗೆ ಶ್ರೀಮಂತ ರಾಯ ಕಾಶಿರಾಯ ದೇಶಮುಖ ವಕೀಲ ಇವರು ಅಧ್ಯಕ್ಷರಾಗಿಯೂ ಶ್ರೀಮಾನ್ ತ್ರಿಂಬಕಪ್ಪ ಗಿರವಲಕರ ಇವರು ಸ್ವಾಗತಸಂಘಾಧ್ಯಕ್ಷರಾಗಿಯೂ ಶ್ರೀ. ವಿರೂಪಾಕ್ಷ ಸ್ವಾಮಿ ದೇಶಿಕೇಂದ್ರ ಮಹಾರಾಜ ಮತ್ತು ಶ್ರೀ. ವ್ಹಿ. ಎಂ. 'ಶೇಟೆ ವಕೀಲ ಇವರು ಕಾರ್ಯದರ್ಶಿಗಳಾಗಿಯೂ ನಿಯಮಿಸಲ್ಪಟ್ಟಿದ್ದಾರೆ.

ನಿಜಾಮ ಪ್ರಾಂತದ ಸಕಲ ವೀರಶೈವರೂ ಈ ಪರಿಷತ್ತಿಗೆ ಅಗತ್ಯವಾಗಿ ಬಂದು ಇದನ್ನು ಯಶಸ್ವಿಯಾಗುವಂತೆ ಮಾಡಬೇಕಾಗಿ ಸ್ವಾಗತಸಂಘದವರು ವಿಜ್ಞಾಪಿಸಿಕೊಂಡಿದ್ದಾರೆ.

—ದುಧೊಂಡಿ ಉರುಸಿನ ಕಾಲಕ್ಕೆ ಕುರಿಗಳನ್ನು ಕಡಿಯುವುದು ಮುಸಲ್ಮಾನಿ ಧರ್ಮಕ್ಕೆ ಸಮ್ಮತವಾದುದಲ್ಲವೆಂದು ಸಾಂಗಲಿಯ ಮೌಲವಿ ಅಬ್ದುಲ್ ಹನಾನ ಇವರು ದುಧೊಂಡಿಯ ತಮ್ಮ ಭಾಷಣದಲ್ಲಿ ಹೇಳಿದರು. ಇವರ ಹಿತೋಕ್ತಿಯಂತೆ ಎಲ್ಲ ಮುಸಲ್ಮಾನ್ ಬಂಧುಗಳೂ ನಡೆದುಕೊಳ್ಳಲಿ.

—ಶ್ರೀ. ಚೌಂಡೇ ಮಹಾರಾಜರ ಹೀರಕೋತ್ಸವದ ನಿಮಿತ್ತವಾಗಿ ಧರ್ಮಾತ್ಮಾ ಮಾಲವೀಯ, ಸ್ವಾತಂತ್ರ್ಯವೀರ ಸಾವರಕರ ಮೊದಲಾದ ಹಿಂದು ಧರ್ಮಾಭಿಮಾನಿಗಳು ಶುಭ ಸಂದೇಶಗಳನ್ನು ಕಳುಹಿಸಿದ್ದಾರೆ. ಡ್ಯಾ. ಜಯಕರರು ೨೫೦ ರೂ. ಗಳನ್ನು ಗೋವರ್ಧನ ಸಂಸ್ಥೆಗೆ ಕೊಟ್ಟು ಶ್ರೀ. ಚೌಂಡೇ ಮಹಾರಾಜರ ಕಾರ್ಯವನ್ನು ಶ್ಲಾಘಿಸಿದ್ದಾರೆ.

—ಪಂಜಾಬ ಪ್ರಾಂತದ ಕಾಂಗ್ರೆಸ್ ಪಕ್ಷದಲ್ಲಿ ಪಂಗಡಗಳುಂಟಾಗಿ ೫೦ ಜನ ಕಾರ್ಯ ನಿರ್ವಾಹಕರು 'ಕಾಂಗ್ರೆಸ್ ಸ್ವರಾಜ್ಯ ಪಕ್ಷ" ಎಂಬ ಒಂದು ಪಕ್ಷವನ್ನು ಸ್ಥಾಪಿಸಿದ್ದಾರೆ. ಈಗಿರತಕ್ಕ ಕಾಂಗ್ರೆಸ್ಸಿನ ಅಧಿಕಾರಿಗಳನ್ನು ತೆಗೆದುಹಾಕುವುದೇ ಈ ಪಕ್ಷದ ಮುಖ್ಯ ಧೋರಣವಾಗಿದೆ.


ನಮ್ಮಲ್ಲಿ ಫೋಟೋ,
ಲೈನ್ ಬ್ಲಾಕುಗಳು,
ಹಿತ್ತಾಳೆ ಮತ್ತು ಸೀಸದ
ಬ್ಲಾಕುಗಳು ಅರಗಿನ
ಸೀಲು, ಜವಾನರ ಬಿಲ್ಲೆಗ
ಳು. ದೇವರ ೩ ಬಣ್ಣದ
ಪಟಗಳು, ಕ್ಯಾಲೆಂಡರು
ಗಳು, ನಿಮ್ಮ ಮನ
ಒಪ್ಪುವಂತೆ ತಯಾರಾ
ಗುತ್ತವೆ.
ಬಾಜವರ್ಗ ಅಂಡ್ ಸನ್ಸ್,
ಚಿಕ್ಕಪೇಟೆ,
ಬೆಂಗಳೂರು ಸಿಟಿ

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ !
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ‖ —ಶ್ರೀ ಬಸವಣ್ಣನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೩೦ ನೆಯ ಮೇ ೧೯೩೮. | ಸಂಚಿಕೆ ೩೮ |
|---|---|---|

ಜನಸೇವೆಯೇ ದೇವರಸೇವೆ.

# ಕರ್ನಾಟಕ ಏಕೀಕರಣದ ಯಶಸ್ವಿ ಅಧಿವೇಶನ.

"ಕರ್ನಾಟಕ ಏಕೀಕರಣವು ಹಿಂದುಸ್ಥಾನಕ್ಕೆ
ಸ್ವಾತಂತ್ರ್ಯ ದೊರೆಯುವುದಕ್ಕಿಂತ
ಮುಂಚೆಯೇ ಆಗಬೇಕಾದ ಕಾರ್ಯ.
ಕರ್ನಾಟಕ ಏಕೀಕರಣದಿಂದ
ಸ್ವಾತಂತ್ರ್ಯದ ಹೋರಾಟಕ್ಕೆ
ಹೆಚ್ಚು ಬಲ ಬರುತ್ತದೆ."

—ಅಧ್ಯಕ್ಷರು.

ರಾಷ್ಟ್ರಾಧ್ಯಕ್ಷ ಬಾಬು ಸುಭಾಷಚಂದ್ರ ಬೋಸರು
ತಮ್ಮ ಅಧ್ಯಕ್ಷೀಯ ಅವಧಿಯು
ಮುಗಿಯುವುದರೊಳಗಾಗಿ
ಇಡೀ ಹಿಂದುಸ್ಥಾನದಲ್ಲಿ
ಪ್ರವಾಸ ಮಾಡುವರು.

ದೇಹವೇ ದೇವಾಲಯ.




ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ-ಸೋಮವಾರ ತಾರೀಖು ೩೦ ನೆಯ ಮೇ ೧೯೩೮. | ಸಂಚಿಕೆ ೩೮

## ಕರ್ನಾಟಕ ಏಕೀಕರಣ ಪರಿಷತ್ತಿನಲ್ಲಿ ಪಾಸಾದ ಠರಾವುಗಳು.

೧ ಕರ್ನಾಟಕ ಏಕೀಕರಣಕ್ಕಾಗಿ ಪ್ರಯತ್ನಿಸುತ್ತಿದ್ದ ಶ್ರೀ. ಸದಾಶಿವರಾವ ಕರ್ನಾಡ ಪಂಜೇಮಂಗೇಶರಾಯರು, ಶ್ರೀ. ನಾರಾಯಣರಾವ ದೇಶಪಾಂಡೆ, ಶ್ರೀ. ಅಣ್ಣಾಚಾರ್ಯ ಹೊಸಕೇರಿ ಪ್ರೊ. ಸಾಸನೂರ ನಿಧನಕ್ಕಾಗಿ ಈ ಸಭೆಯು ಅತ್ಯಂತ ದುಃಖಪಡುತ್ತದೆ.

೨ ಭಾಷಾನುಗುಣ ಪ್ರಾಂತರಚನೆಯ ಸರ್ವಸಮ್ಮತವಾದ ತತ್ವವನ್ನು ಅಂಗೀಕರಿಸಿ ಮದ್ರಾಸ ಮತ್ತು ಮುಂಬೈ ಪ್ರಾಂತಿಕ ಸರಕಾರಗಳು ಕರ್ನಾಟಕವು ಸ್ವಾಯತ್ತವಾದ ಸ್ವತಂತ್ರ ಪ್ರಾಂತವಾಗುವ ಗೊತ್ತುವಳಿಗೆ ಅನುಮತಿಯನ್ನು ಕೊಟ್ಟದ್ದಕ್ಕಾಗಿ ಆ ಸರಕಾರಗಳಿಗೂ ಮತ್ತು ಆ ಗೊತ್ತುವಳಿ ಪಾಸಾಗುವುದಕ್ಕೆ ಸಹಾಯಮಾಡಿದ ಆಯಾ ಕಾನೂನ ಮಂಡಲಗಳ ಸಭಾಸದರಿಗೂ ಈ ಪರಿಷತ್ತು ಅಭಿನಂದನೆಗಳನ್ನು ಸಮರ್ಪಿಸುತ್ತದೆ. ಮತ್ತು ಆ ಗೊತ್ತುವಳಿಗೆ ಅನುಸಾರವಾಗಿ ಕರ್ನಾಟಕವು ಬೇಗನೆ ಸ್ವತಂತ್ರ ಪ್ರಾಂತವಾಗುವಂತೆ ಕಾರ್ಯ ಕೈಕೊಳ್ಳಲು ಬ್ರಿಟಿಶ್ ಸರಕಾರವನ್ನು ಒತ್ತಾಯಪಡಿಸುವದಲ್ಲದೆ ಆ ಬಗ್ಗೆ ಬೇಕಾಗುವ ಎಲ್ಲ ಅವಶ್ಯಕ ಉಪಾಯಗಳನ್ನು ತೀವ್ರವಾಗಿ ಕೈಕೊಳ್ಳಬೇಕೆಂದು ಈ ಪರಿಷತ್ತು ಎರಡೂ ಪ್ರಾಂತಿಕ ಸರಕಾರಗಳಿಗೂ ಬಲವಂತವಾಗಿ ಸೂಚಿಸುತ್ತದೆ.

೩ (ಅ) ಮುಂಬೈ, ಮದ್ರಾಸ ಹಾಗು ಕೊಡಗು ಪ್ರಾಂತಗಳ ಅಧೀನದಲ್ಲಿದ್ದ ಕರ್ನಾಟಕದ ಪ್ರದೇಶವನ್ನೆಲ್ಲ, ಅಂದರೆ ಪ್ರಾಮುಖ್ಯವಾಗಿ ಕನ್ನಡ ಮಾತನಾಡುವ ಜನರ ಪ್ರದೇಶವನ್ನೆಲ್ಲ ಒಂದುಗೂಡಿಸಿ ಕರ್ನಾಟಕವನ್ನು ಕೂಡಲೆ ಪ್ರತ್ಯೇಕ ಸ್ವಾಯತ್ತ ಪ್ರಾಂತವನ್ನಾಗಿ ಮಾಡಬೇಕೆಂದಿರುವ ಕರ್ನಾಟಕ ಜನತೆಯ ವಿಮುಖವಾದ ಬೇಡಿಕೆಯನ್ನು ಈ ಪರಿಷತ್ತು ಪುನಃ ಒತ್ತಿ ಹೇಳುತ್ತದೆ.

(ಬ) ಮುಂಬೈ ಮದ್ರಾಸ ಶಾಸನ ಸಭೆಗಳಲ್ಲಿ ಅಂಗೀಕೃತವಾದ ಗೊತ್ತುವಳಿಗಳನ್ನು ಅನುಲಕ್ಷಿಸಿಯೂ ಆಯಾ ಸರಕಾರಗಳಿಂದ ಈ ಗೊತ್ತುವಳಿಗಳಿಗೆ ಕೊಡಲ್ಪಟ್ಟ ಬೆಂಬಲವನ್ನು ನಿರೀಕ್ಷಿಸಿಯೂ ಈ ಬೇಡಿಕೆಯನ್ನು ಕೂಡಲೆ ಪೂರೈಸಿಕೊಡಬೇಕೆಂದು ಬ್ರಿಟಿಶ್ ಸರಕಾರಕ್ಕೂ ಪಾರ್ಲಿಮೆಂಟಿಗೂ ಈ ಪರಿಷತ್ತು ಒತ್ತಾಯಪಡಿಸುತ್ತದೆ.

(ಕ) ಈ ಪ್ರಶ್ನೆಯನ್ನು ಅವಸರದ ಪ್ರಶ್ನೆಯೆಂದು ಭಾವಿಸಿ ಅದನ್ನು ತೃಪ್ತಿಕರವಾಗಿ ಬಿಡಿಸುವ ಕೆಲಸವನ್ನು ಕೂಡಲೆ ಕೈಕೊಳ್ಳಬೇಕೆಂದು ಹಿಂದೀ ರಾಷ್ಟ್ರೀಯ ಮಹಾಸಭೆಗೂ ಅ. ಭಾ. ಕಾ. ಸಮಿತಿಗೂ, ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಗೂ ಈ ಪರಿಷತ್ತು ಬಿನ್ನವಿಸಿಕೊಳ್ಳುತ್ತದೆ.

(ಡ) ೧೯೩೫ ನೆಯ ಇಸ್ವಿಯ ಹಿಂದುಸ್ಥಾನ ಸರಕಾರದ ಕಾಯಿದೆಯಲ್ಲಿ ನಿರೂಪಿತವಾದ ಸಂಯುಕ್ತ ರಾಜ್ಯಘಟನೆಯನ್ನು ವಿರೋಧಿಸುವ ಹಿಂದೀ ರಾಷ್ಟ್ರೀಯ ಮಹಾಸಭೆಯ ಹೋರಾಟಕ್ಕೆ ಈ ಪರಿಷತ್ತು ತನ್ನ ಸಂಪೂರ್ಣ ಬೆಂಬಲವನ್ನು ಕೊಡುತ್ತದೆ. ಮತ್ತು ರಾಷ್ಟ್ರೀಯ ಮಹಾಸಭೆಯಿಂದ ಸ್ವೀಕಾರಾರ್ಹವಾದ ಯಾವುದೇ ಸಂಯುಕ್ತ ರಾಜ್ಯಾಂಗ ಘಟನೆಯ ಯೋಜನೆಯಲ್ಲಿ ಕರ್ನಾಟಕ ಜನತೆಗೆ, ಕರ್ನಾಟಕವು ಸ್ವತಂತ್ರವಾಗಿರಬೇಕೆಂದು ಸ್ವಾಯತ್ತ ಪ್ರಾಂತವನ್ನೊಳಗೊಂಡಂತಹದಿರತಕ್ಕದ್ದೆಂದು ಈ ಪರಿಷತ್ತು ತನ್ನ ಅಭಿಪ್ರಾಯವನ್ನು ಆಗ್ರಹಪೂರ್ವಕವಾಗಿ ರಾಷ್ಟ್ರೀಯ ಸಭೆಗೆ ತಿಳಿಸುತ್ತದೆ.

(ಈ) ಈ ಬೇಡಿಕೆಯನ್ನು ದೊರಕಿಸುವ ಕುರಿತು ಅಖಂಡವಾದ ಆಂದೋಲನವನ್ನು ಅವ್ಯಾಹತವಾಗಿ ಸಾಗಿಸಬೇಕೆಂದು ಯಾವತ್ತೂ ಕರ್ನಾಟಕಸ್ಥರಿಗೆ ಈ ಸಭೆಯು ಆಗ್ರಹಪೂರ್ವಕವಾಗಿ ಹೇಳಿಕೊಳ್ಳುತ್ತದೆ. ಮತ್ತು ಈ ಕಾರ್ಯವನ್ನು ಮುಂದರಿಸಲು ಕಾಲಕಾಲಕ್ಕೆ ಸಂದೋರಿದ ಉಪಾಯಗಳನ್ನು ಯೋಜಿಸಲು ಅಖಿಲ ಕರ್ನಾಟಕ ಏಕೀಕರಣ ಸಂಘದ ಕಾರ್ಯಕಾರೀ ಮಂಡಲಕ್ಕೆ ಪೂರ್ಣ ಅಧಿಕಾರವನ್ನು ಕೊಡುತ್ತದೆ.

(ಸಶೇಷ.)

# ವೀರ ಸಾವರಕರರ ಪಂಜಾಬದ ಯಾತ್ರೆ.

## ಹಿಂದುತ್ವವು ನನ್ನ ರಕ್ತ ನಾಳಗಳಲ್ಲೆಲ್ಲಾ ವ್ಯಾಪಿಸಿದೆ.

### "ಶಾಹೀದಗಂಜ" ಹಿಂದುಗಳ ಪ್ರಾಣ.

ಸ್ವಾತಂತ್ರ್ಯವೀರ ಸಾವರಕರರು ಕಳೆದ ತಿಂಗಳ ೨ನೆಯ ವಾರದಲ್ಲಿ ಪಂಜಾಬ ಪ್ರಾಂತದ ಅನೇಕ ಸ್ಥಳಗಳಲ್ಲಿ ಸಂಚರಿಸಿ ಹಿಂದು ಸಂಘಟನೆಯ ಸಂಬಂಧವಾಗಿ ಪ್ರಚಂಡ ಜಾಗೃತಿಯನ್ನು ಉಂಟುಮಾಡಿದರು.

#### ನಾನು ಕಾಂಗ್ರೆಸ್ಸಿನಲ್ಲಿ ಏಕೆ ಸೇರಲಿಲ್ಲ?

ದಿಲ್ಲಿಯಿಂದ ವೀರ ಸಾವರಕರರು ಲಾಹೋರಿಗೆ ಬಂದೊಡನೆ ಪ್ರಚಂಡ ಮೆರವಣಿಗೆಯ ಮೂಲಕ ಲಾಹೋರ ಹಿಂದುಗಳು ತಮ್ಮ ಪ್ರೇಮಾದರಗಳನ್ನು ವ್ಯಕ್ತಗೊಳಿಸಿದರು. ಮೆರವಣಿಗೆಯು ಒಂದು ಮೈಲು ದೂರದ ವರೆಗೂ ಇದ್ದಿತು. ಸಾವರಕರರ ಮತ್ತು ಹಿಂದು ಧರ್ಮದ ಜಯಜಯಕಾರಗಳು ವಾಯು ಮಂಡಲವನ್ನು ವ್ಯಾಪಿಸಿದ್ದವು. ಲಾಹೋರಿನ ಎಲ್ಲ ಪತ್ರಿಕಾಪ್ರತಿನಿಧಿಗಳು ಸಾವರಕರರ ದರ್ಶನಕ್ಕೆ ಬಂದು ಅನೇಕ ಪ್ರಶ್ನೆಗಳನ್ನು ಮಾಡಿದರು. ಅವುಗಳಲ್ಲಿಯ ಕೆಲವನ್ನು ಇಲ್ಲಿ ಕೊಡಲಾಗಿದೆ.—

ಪ್ರಶ್ನೆ— ಕಾಂಗ್ರೆಸ್ಸಿನ ವಿಚಾರವಾಗಿ ನಿಮ್ಮ ಅಭಿಪ್ರಾಯ ವೇನು?

ಉತ್ತರ— ಕಾಂಗ್ರೆಸ್ಸಿನ ಕಾರ್ಯಕ್ರಮಗಳಲ್ಲಿ ೧೦೦ ಕ್ಕೆ ೯೦ ರಷ್ಟು ನನಗೆ ಮಾನ್ಯವಾಗಿವೆ. ಆದಕಾರಣ ಅವುಗಳನ್ನು ನಾನು ಕಾಂಗ್ರೆಸ್ಸಿನೊಂದಿಗೆ ಸೇರಿ ಮಾಡಲು ಸಿದ್ಧನಿದ್ದೇನೆ. ನಾನು ಬಾಬು ಸುಭಾಷಚಂದ್ರ ಬೋಸರ ಸಂಗಡ ಮೂರು ದಿನ ಈ ವಿಚಾರವಾಗಿ ಮಾತನಾಡಿದ್ದೇನೆ.

ನಾನು ಕಾಂಗ್ರೆಸ್ಸಿನ ಸದಸ್ಯನಾಗಿ ಹಿಂದು ಮಹಾ ಸಭೆಯ ಸದಸ್ಯನಾಗಿಯೂ ಇರಲು ಇಚ್ಛಿಸುತ್ತೇನೆ. ಪಂಡಿತ ಜವಾಹರಲಾಲ ನೆಹರುರವರ ಅಭಿಪ್ರಾಯದಂತೆ ನಾನು ಹೀಗಿರಲು ಬರದಂತಾಗಿದೆ. ಮದ್ರಾಸಿನ ಕ್ರಿಸ್ತ ಪಾದ್ರಿಗಳು ತಮ್ಮ ಸಂಘದ ಸದಸ್ಯರಾಗಿದ್ದು ಕಾಂಗ್ರೆಸ್ಸಿನ ಸದಸ್ಯರಾಗಿಯೂ ಇರಲು ಬರುತ್ತದೆ. ಆದರೆ ನನಗೇಕೆ ಆ ಅಧಿಕಾರವಿರಬಾರದು? ಈ ನನ್ನ ಪ್ರಶ್ನೆಗೆ ಬಾಬು ಸುಭಾಷಚಂದ್ರರು ನಿರುತ್ತರರಾದರು.

ಪ್ರಶ್ನೆ— ನೀವು ಮೊನ್ನೆ ಜೈಲಿನಿಂದ ಬಿಡುಗಡೆ ಹೊಂದಿದ ಬಳಿಕ ಹಿಂದು ಸಂಘಟನೆಯ ವಿಚಾರವಾಗಿ ಯೋಚಿಸಿದಿರಾ?

ಉತ್ತರ— ಇಲ್ಲ. ನಾನು ಅಂದಮಾನ ದ್ವೀಪದಲ್ಲಿದ್ದಾಗಲೇ ಈ ವಿಚಾರವನ್ನು ಮಾಡಿದ್ದೇನೆ. ನಾನು ಬರೆದಿರುವ "ಹಿಂದುತ್ವ" ಎಂಬ ಪುಸ್ತಕದಿಂದಲೇ ಈ ಸಂಗತಿಯು ನಿಮಗೆ ಗೊತ್ತಾಗಬಹುದು. ಅಲ್ಲಿ ಕಾಗದ ದೊರೆಯುತ್ತಿರಲಿಲ್ಲ. ಆದಕಾರಣ ನನ್ನ ವಿಚಾರಗಳನ್ನು ಅಲ್ಲಿಯ ಗೋಡೆಗಳ ಮೇಲೆ ಬರೆಯುತ್ತಿದ್ದೆನು.

ಪ್ರಶ್ನೆ— ಮುಸ್ಲಿಂಲೀಗ್ ಮತ್ತು ಹಿಂದು ಮಹಾ ಸಭೆ ಇವೆರಡೂ ನಿಂತುಹೋಗಬೇಕು. ಇವುಗಳಿಂದ ರಾಷ್ಟ್ರೋನ್ನತಿಗೆ ಪ್ರತಿಬಂಧವಾಗಿದೆ.

ಉತ್ತರ— ಇದು ನಿಮ್ಮ ಭ್ರಮೆ. ಹಿಂದು-ಮುಸಲ್ಮಾನರ ಐಕಮತ್ಯಕ್ಕೆ ಕಾಂಗ್ರೆಸ್ಸಿನವರು ಹೆಚ್ಚು ಮಹತ್ವವನ್ನು ಕೊಟ್ಟು ಮುಸಲ್ಮಾನರನ್ನು ತಲೆಯ ಮೇಲೆ ಕುಳ್ಳಿರಿಸಿಕೊಂಡಿದ್ದಾರೆ. ಮುಸಲ್ಮಾನರು ಅಧಿಕಾರ ಸೌಲಭ್ಯಗಳನ್ನೆಲ್ಲಾ ನೂರಕ್ಕೆ ಎಷ್ಟು ಪ್ರಮಾಣದಂತೆ ಕೊಡುವಿರೆಂದು ಕೇಳುತ್ತಿದ್ದಾರಷ್ಟೆ. ಅವರು ಆ ಪ್ರಮಾಣದಂತೆ ಕಾರಾಗೃಹ ವಾಸ, ದ್ವೀಪಾಂತರ ವಾಸ, ಮತ್ತು ಮರಣ ದಂಡನೆಗಳನ್ನು ಹೊಂದಲು ಮುಂದೆ ಬಂದಿರುವರೋ? ನಾವು ಶಕ್ತಿವಂತರಾದರೆ ಮುಸಲ್ಮಾನರು ತಾವಾಗಿಯೇ ದಾರಿಗೆ ಬರುವರು.

#### ಸರದಾರ ರಾಮಸಿಂಗರ ಹೇಳಿಕೆ.

"ಕಾಂಗ್ರೆಸ್ ಕೆಲಸಗಾರರು ನಿನ್ನೆ ಹಿಂದು ಮುಂದಾಳುಗಳ ಮೇಲೆ ಕಲ್ಲನ್ನು ಎಸೆದರಷ್ಟೆ. ಅವರ ಶೂರತ್ವವು ಎಷ್ಟಿದೆಯೆಂಬುದು ಬ್ಯಾ. ಜಿನ್ನಾರವರ ಮೆರವಣಿಗೆಯ ಮೇಲೆ ಇಂಥ ಅತ್ಯಾಚಾರವನ್ನು ಮಾಡಿದ್ದರೆ ಗೊತ್ತಾಗುತ್ತಿದ್ದಿತು." ಎಂದು ಆಗಿನ ಸಂಭಾಷಣೆಯ ಕಾಲದಲ್ಲಿ ಸರದಾರ ರಾಮಸಿಂಗರವರು ಹೇಳಿದರು.

#### ಪಂಜಾಬದ ಹಿಂದುಗಳ ಸ್ಥಿತಿ.

ಶ್ರೀ ದಯಾನಂದ ವಿದ್ಯಾಲಯದಲ್ಲಿ ಪಟ್ಟಣದ ಪ್ರಮುಖರು ವೀರ ಸಾವರಕರರಿಗೆ ಒಪ್ಪಿಸಿದ ವಿಜ್ಞಾಪನಾ ಪತ್ರಿಕೆಯಲ್ಲಿ ಪಂಜಾಬದ ಹಿಂದುಗಳ ಶೋಚನೀಯ ಸ್ಥಿತಿಯನ್ನು ವ್ಯಕ್ತಗೊಳಿಸಿದ್ದರು. ಅದಕ್ಕೆ ಉತ್ತರವಾಗಿ ಸಾವರಕರರು ಹೀಗೆ ಹೇಳಿದರು.—

"ಪಂಜಾಬದ ಹಿಂದುಗಳು ಎಂಥ ಭೀಕರಸ್ಥಿತಿಯಲ್ಲಿದ್ದಾರೆಂಬುದನ್ನು ನಾನು ಬಲ್ಲೆನು. ಜರ್ಮನಿಯಲ್ಲಿ ಜರ್ಮನ್ ಇಂಗ್ಲೆಂಡಿನಲ್ಲಿ ಇಂಗ್ಲಿಷ್ ಜಾತಿಗಳು ಎಲ್ಲಿಯವರೆಗೆ ಜಾತಿವಿಶಿಷ್ಟ ಜೀವನವನ್ನು ನಡೆಸುತ್ತಲಿವೆಯೋ ಅಲ್ಲಿಯ ವರೆಗೆ ಹಿಂದುಸ್ಥಾನದಲ್ಲಿ ಹಿಂದುಗಳೂ ಜಾತಿವಿಶಿಷ್ಟ ಜೀವನದಿಂದಲೇ ಬಾಳಬೇಕಾಗುವುದು."

#### ಮುಸಲ್ಮಾನರಿಂದ ಕಲಿಯಿರಿ.

ಲಾಹೋರದ ಒಂದು ಭಾಷಣದಲ್ಲಿ ವೀರ ಸಾವರಕರರು ಹೀಗೆ ಹೇಳಿದರು—

"ಮುಸಲ್ಮಾನರು ತಮ್ಮ ತಮ್ಮಲ್ಲಿ ಹೊಡೆದಾಡಿದರೂ ಅನ್ಯರ ವಿಷಯದಲ್ಲಿ ಅವರು ಒಂದೇ ಆಗುತ್ತಾರೆ. ಹಿಂದುಗಳು ಅವರಿಂದ ಈ ಗುಣವನ್ನು ಕಲಿಯಬೇಕು. ಕಾಂಗ್ರೆಸ್ಸಿನಲ್ಲಿರುವ ಅನೇಕರು ಹಿಂದುತ್ವವನ್ನೇ ಮರೆತಿದ್ದಾರೆ. ಕಾಂಗ್ರೆಸ್ಸಿನಲ್ಲಿ ಸೇರಿರಿ. ಆದರೆ ಹಿಂದುತ್ವವನ್ನು ಮರೆಯಬೇಡಿರಿ. ಪಂಡಿತ ಜವಾಹರಲಾಲರು ಗಡಿನಾಡಿನಲ್ಲಿ ಸಂಚರಿಸಿದರು. ಆದರೆ ಹಿಂದು ಹುಡುಗಿಯರ ಅಪಹಾರದ ವಿಚಾರವಾಗಿ ಒಂದು ಶಬ್ದವನ್ನಾದರೂ ಆಡಿದರೋ? ಜಿನ್ನಾರವರು ತಮ್ಮ ಧರ್ಮ, ಸಂಸ್ಕೃತಿಗಳ ಸಂರಕ್ಷಣೆಗಾಗಿ ಆಶ್ವಾಸನವನ್ನು ಕೇಳುತ್ತಿದ್ದಾರೆ. ನಾವು ಮಾತ್ರ ಹಾಗೆ ಕೇಳಬಾರದೋ?

ಎಲ್ಲಿಯವರೆಗೆ ಮುಸಲ್ಮಾನರಲ್ಲಿ ರಾಷ್ಟ್ರೀಯ ಭಾವನೆ ಬರುವುದಿಲ್ಲವೋ ಅಲ್ಲಿಯ ವರೆಗೂ ಅವರ ಸಂಗಡ ಒಪ್ಪಂದ ಮಾಡಿಕೊಳ್ಳಲು ಮಾಡುವ ಪ್ರಯತ್ನಗಳೆಲ್ಲಾ ವಿಫಲವಾಗದಿರಲಾರವು."

#### ಒಂದು ಲಕ್ಷ ಮರಾಠಿ ಸ್ವಯಂಸೇವಕರು!

ಗುರುದ್ವಾರ ಶಾಹಿದಗಂಜದಲ್ಲಿ ಶೀಖ ಪ್ರಮುಖರು ವೀರ ಸಾವರಕರರಿಗೆ ಮಾನ ಪತ್ರವನ್ನು ಅರ್ಪಿಸಿದರು. ಆಗ ಮಾಸ್ತರ್ ತಾರಸಿಂಗರವರು ಹೀಗೆ ಹೇಳಿದರು—

# ಕರ್ನಾಟಕ ಏಕೀಕರಣ ಪರಿಷತ್ತು.

## ಉತ್ಸಾಹ ಭರಿತ ಅಧಿವೇಶನ.

ಈ ಮುಂಚೆ ಗೊತ್ತಾದಂತೆ ಧಾರವಾಡದಲ್ಲಿ ಕರ್ನಾಟಕ ಏಕೀಕರಣ ಪರಿಷತ್ತಿನ ಏಳನೆಯ ಅಧಿವೇಶನವು ಶ್ರೀಮಾನ್ ಕಾರಂತರವರ ಅಧ್ಯಕ್ಷತೆಯಲ್ಲಿ ಕಳೆದ ೨೪-೨೫ ನೆಯ ತಾರೀಖು ಗಳಲ್ಲಿ ಬಹು ಉತ್ಸಾಹಭರಿತವಾಗಿ ಜರುಗಿತು. ಕನ್ನಡ ನಾಡಿನ ಅನೇಕ ಪ್ರಮುಖ ಮಹಾಶಯರು ಪರಿಷತ್ತಿಗೆ ಆಗಮಿಸಿದ್ದರು.

ಮೊದಲು ಸ್ವಾಗತ ಸಂಘಾಧ್ಯಕ್ಷರಾದ ಶ್ರೀ. ದೊಡ್ಡಮೇಟಿ ಅಂದಾನೆಪ್ಪನವರು ಎಂ. ಎಲ್. ಎ. ಇವರು ತಮ್ಮ ಭಾಷಣವನ್ನು ಮಾಡಿದನಂತರ ಶ್ರೀಮನ್ನಿರಂಜನ ಜಗದ್ಗುರು ಜಯದೇವ ಮುರ ಘಾರಾಜೇಂದ್ರ ಮಹಾಸ್ವಾಮಿಗಳವರಿಂದ ಪರಿಷತ್ತಿನ ಉದ್ಘಾಟನ ಸಮಾರಂಭ ಜರುಗಿತು. ಆ ಮೇಲೆ ಅಧ್ಯಕ್ಷರ ಮನನೀಯ ಭಾಷಣವಾದ ತರುವಾಯ ರಾತ್ರಿ ವಿಷಯನಿಯಾಮಕ ಸಂಘವು ಕೂಡಿತು.

### ಸ್ವಾಗತ ಸಂಘಾಧ್ಯಕ್ಷರ ಭಾಷಣ.

ಕನ್ನಡನಾಡಿನ ಏಳ್ಗೆಗಾಗಿ ಹಂಬಲಿಸುವ
ಪ್ರಿಯ ಬಂಧುಭಗಿನಿಯರೆ,

ಕರ್ನಾಟಕ ಏಕೀಕರಣದಂತಹ ಪವಿತ್ರ ಕಾರ್ಯವನ್ನು ನೆರವೇರಿಸಲು ಕರ್ನಾಟಕದ ಬೇರೆಬೇರೆ ಭಾಗಗಳಿಂದ ಬಂದು ಕುಳಿತಿರುವ ತಮ್ಮೆಲ್ಲರಿಗೂ ಸ್ವಾಗತಮಂಡಲದ ಪರವಾಗಿ ಅಂತಃಕರಣ ಪೂರ್ವಕವಾಗಿ ಸ್ವಾಗತವನ್ನೀಯುತ್ತೇನೆ. ದೂರ ದೂರದಿಂದ ಬಂದ ತಮಗೆ ಎಲ್ಲ ಅನುಕೂಲತೆಗಳನ್ನು ಒದಗಿಸದಾದುದನ್ನು ತಾವು ಉದಾರ ಅಂತಃಕರಣದಿಂದ ಕ್ಷಮಿಸಿ, ನಮ್ಮ ಸೇವೆಯನ್ನು ತಾವು ಸ್ವೀಕರಿಸುವಿರೆಂದು ನಂಬಿರುವೆನು. ನಾವು ಇಲ್ಲಿ ಕೂಡಿದುದು ಯಾವುದೊಂದು ಹಬ್ಬಕ್ಕಾಗಿಯಲ್ಲ; ನಾವು ಕೂಡಿದುದು ಕನ್ನಡ ಮಾತೆಯ ಸೇವೆಗಾಗಿ. ಹರಿದು ಹಂಚಿಹೋದ ಕನ್ನಡನಾಡಿನ ತುಣುಕುಗಳನ್ನು ಒಂದೆಡೆಗೆ ಸೇರಿಸಿ, ಭಾರತ ಮಾತೆಯ ಸೇವೆಯನ್ನು ಮಾಡಲು ಅನುಕೂಲವಾದ ನಾಡನ್ನು ಕಟ್ಟುವುದಕ್ಕಾಗಿ, ಒಂದೇ ತಾಯಿಯ ಬಸಿರಿನಲ್ಲಿ ಹುಟ್ಟಿದ ಒಂದೇ ಮಾತನಾಡುವ ಒಂದೇ ಪವಿತ್ರಪರಂಪರೆಯುಳ್ಳ ಜನಾಂಗದಲ್ಲಿಯ ವಿಸ್ಕಳಿತೆಯನ್ನು ದೂರಮಾಡಿ, ಅದನ್ನು ಏಕೀಕರಿಸುವುದಕ್ಕಾಗಿ ಸುಂದರವಾದ ಸ್ವತಂತ್ರ ಕರ್ನಾಟಕವನ್ನು ನಿರ್ಮಿಸಿ ಕೊಡಬೇಕಾದ ಹೋರಾಟದ ಪೂರ್ವಸಿದ್ಧತೆಗಾಗಿ ಇಂತಹ ಸಂದರ್ಭದಲ್ಲಿ ಕೇವಲ ಔಪಚಾರಿಕ ಮಾತುಗಳಿಗೆ ಎಡೆಯಿಲ್ಲ. ಆದುದರಿಂದ ಮಾತುಗಳಲ್ಲಿ ಹೊತ್ತುಗಳೆಯದೆ, ಇವತ್ತಿನ ಅತ್ಯಂತ ಮಹತ್ವದ ವಿಷಯವನ್ನು ಕುರಿತು ಕೆಲವು ವಿಚಾರಗಳನ್ನು ತಮ್ಮೆದುರಿನಲ್ಲಿಡಬಯಸುತ್ತೇನೆ.

### ಏಕೀಕರಣದ ಆಂದೋಲನವು.

ಕರ್ನಾಟಕ ಏಕೀಕರಣದ ಆಂದೋಲನವು ನಡೆದು ಇಪ್ಪತ್ತು ವರುಷಗಳಾಗಿ ಹೋದವು. ವಿಜಯನಗರ ಸಾಮ್ರಾಜ್ಯವು ಅಳಿದು ಹೋದಂದಿನಿಂದ ಕನ್ನಡನಾಡು ಪರಕೀಯರ ಆಡಳಿತೆಯ ಸೆಳವಿಗೆ ಸಿಕ್ಕು ತುಂಡುತುಂಡಾಗಿ ನಿರ್ಗತಿಕವಾಗಿ ನಿರ್ಜೀವಿಯಾಗಿ ತನ್ನ ಸಂಸ್ಕೃತಿ ಪರಂಪರೆಯನ್ನು ಕಳೆದುಕೊಂಡು ಬಿರುಗಾಳಿಯ ಏಟಿಗೆ ಸಿಕ್ಕ ಡೋಣಿಯಂತೆ ಅತ್ತಿಂದಿತ್ತ ಗುರಿಯಿಲ್ಲದೆ ಹೊಯ್ದಾಡುತ್ತ ಬಂದಿತು. ರಾಜಕೀಯ ಸೂತ್ರಗಳನ್ನು ಕಳೆದು ಕೊಂಡದ್ದರಿಂದ ಬೌದ್ಧಿಕ ಆರ್ಥಿಕ ಅಧೋಗತಿಗೂ ನಾವು ಗುರಿ ಯಾದೆವು. ಕನ್ನಡ ನುಡಿಗೆ ಉತ್ತೇಜನವು ದೊರೆಯದಾಯಿತು. ಮುಂಬಯಿ, ಮದ್ರಾಸ, ಮೈಸೂರ, ಹೈದರಾಬಾದ, ಕೊಡಗು ಈ ಬೇರೆ ಬೇರೆ ಆಧಿಪತ್ಯಕ್ಕೊಳಗಾದ ಕನ್ನಡಿಗರು ಪರಸ್ಪರರ 'ಬಂಧುತ್ವವನ್ನು ಮರೆತುಬಿಟ್ಟರು. ಈ ಘಟನೆಯ ದುಷ್ಪರಿಣಾಮಗಳನ್ನು ನಾವಿಂದು ಅನುಭವಿಸುತ್ತಲಿರುವೆವು. ಮುಂಬಯಿ ಇಲಾಖೆಗೊಳಗಾದ ಬೆಳಗಾವಿ, ಧಾರವಾಡ, ಕಾರವಾರ ಮತ್ತು ವಿಜಾಪುರ ಜಿಲ್ಹೆಗಳ ಹಿತವನ್ನು ಮುಂಬಯಿ ಸರಕಾರದವರು ಸಾಧಿಸಲಿಲ್ಲ. ಹಾಗೆಯೇ ಬಳ್ಳಾರಿ, ಮಂಗಳೂರ ನೊದಲಾದ ಕನ್ನಡ ಪ್ರದೇಶಗಳ ಏಳ್ಗೆಯು ಮದ್ರಾಸ ಸರಕಾರದಿಂದ ಸಾಧಿಸಲಿಲ್ಲ. ನಿಜಾಮ ರಾಜ್ಯದಲ್ಲಿ ಸಿಕ್ಕ ರಾಯಚೂರ ಗುಲಬರ್ಗಗಳ ಭವಣೆಯನ್ನು ಹೇಳತೀರುವಂತಿಲ್ಲ. ಕೊಡಗೂ, ಮೈಸೂರೂ ಬೇರೆ ಬೇರೆ ಆಡಳಿತೆಯಲ್ಲಿರುವುದರಿಂದ ಅಲ್ಲಿಯ ಜನರು ಅಖಂಡ ಕನ್ನಡ ಜನಾಂಗದ ಜೀವನ ಪ್ರವಾಹದಲ್ಲಿ ಸಮಭಾಗಿಯಾಗಲು ಅವಕಾಶವಿರಲಿಲ್ಲ. ಉಳಿದ ಸಂಸ್ಥಾನದ ಕನ್ನಡಿಗರ ಪರಿಣಾಮವೂ ಹೀಗೆಯೇ ಆಯಿತು. ಇದೆಲ್ಲದರ ಪರಿಣಾಮವಾಗಿ ಹಿಂದಿನ ಕಾಲದಲ್ಲಿ ಸುಖದ ನೆಲವೀಡಾದ, ಧರ್ಮದ ಆಧಾರವಾದ, ಕಲೆಗಳ ತವರು ಮನೆಯಾದ ವೀರರ ಭೂಮಿಯಾದ ಅಖಂಡ-ಭರತಖಂಡದಲ್ಲಿ ವಿದ್ಯೆಗಾಗಿ, ಶೌರ್ಯಕ್ಕಾಗಿ, ಸಂಸ್ಕೃತಿಗಾಗಿ, ಪರಾಕ್ರಮಕ್ಕಾಗಿ ಹೆಸರುಗೊಂಡ ಕನ್ನಡನಾಡು ನಿರ್ನಾಮವಾಗುವ ಪ್ರಸಂಗವು ಬಂದೊದಗಿತು!

ಆದರೆ ಕಾಲಗತಿಯ ಲೀಲೆಯಿಂದ ಪರತಂತ್ರ ಹಿಂದುಸ್ಥಾನದಲ್ಲಿ ಸ್ವಾತಂತ್ರ್ಯದ ನವಜಾಗೃತಿಯು ಪ್ರಾರಂಭವಾದಂತೆ ಕನ್ನಡ ನಾಡಿನಲ್ಲಿಯೂ 'ತನ್ನ'ತನದ ಎಚ್ಚರವುಂಟಾಗಿ ಕನ್ನಡ ಜನಾಂಗದಲ್ಲಿ ಏಕೀಕರಣದ ಭಾವನೆಯು ತಲೆದೋರಿತು. ಶಾಂತ ಕವಿಗಳು, ಕಡಪಾ ರಾಘವೇಂದ್ರರಾಯರು ಮುಂತಾದ ಮಹನೀಯರು ತಮ್ಮ ನೇತೃತ್ವದಿಂದ ಈ ಪವಿತ್ರ ಭಾವನೆಯನ್ನು ಪೋಷಿಸಿದರು. ೧೯೨೦ ರಲ್ಲಿ ಅಖಿಲ ಕರ್ನಾಟಕ ಪ್ರಥಮ ಪರಿಷತ್ತಿನಲ್ಲಿ ಈ ಭಾವನೆಯ ಸ್ಪಷ್ಟ ಉಚ್ಚಾರವಾಯಿತು. ನಾಗಪೂರ ಕಾಂಗ್ರೆಸ್ಸಿನಲ್ಲಿ ರಾಷ್ಟ್ರೀಯ ಸಂಘಟನೆಯಲ್ಲಿ ಕರ್ನಾಟಕಕ್ಕೆ ಸ್ವತಂತ್ರಸ್ಥಾನವು ದೊರೆಯಿತು. ಹಿಂದುಸ್ಥಾನದ ಮುಂದಿನ ಆಡಳಿತೆಯು ಹೇಗಿರಬೇಕೆಂದು ವಿಚಾರ ಮಾಡಲು ಏರ್ಪಡಿಸಲ್ಪಟ್ಟ ನೆಹರೂ ಕಮೀಟಿಯವರು 'ಕರ್ನಾಟಕವು ಸ್ವತಂತ್ರ ಪ್ರಾಂತವಾಗಲು ಅರ್ಹವಿದೆ' ಎಂದು ಆಶೀರ್ವಾದವನ್ನಿತ್ತರು. ಕನ್ನಡ ನಾಡಿನ ಮೂಲೆ ಮೂಲೆಯಿಂದಲೂ ಏಕೀಕರಣದ ಕೂಗು ಕೇಳಿಸಲಾರಂಭಿಸಿತು. ಲೋಕಲ್ ಬೋರ್ಡುಗಳು, ಮುನಸಿಪಾಲ್ಟಿಗಳು, ಪರಿಷತ್ತುಗಳು, ಪತ್ರಿಕೆಗಳು, ಪ್ರಾಮುಖ್ಯ ವ್ಯಕ್ತಿಗಳು 'ಏಕೀಕರಣ'ದ ನ್ಯಾಯವಾದ ಬೇಡಿಕೆಯನ್ನು ಪುಷ್ಟೀಕರಿಸಿದವು. ಈ ಮೊದಲು ಸೇರಿದ ಏಕೀಕರಣ ಪರಿಷತ್ತುಗಳ ಮುಖಾಂತರವಾಗಿ ಕನ್ನಡ ನಾಡಿನ ಪ್ರತಿನಿಧಿಗಳು ಏಕೀಕರಣದ ಆಂದೋಲನಕ್ಕೆ ತಮ್ಮ ಬೆಂಬಲವನ್ನು ಕೊಟ್ಟರು. ಇದೆಲ್ಲದರ ಪರಿಣಾಮವಾಗಿ ಕಳೆದ ವರುಷ ಆಲ್ ಇಂಡಿಯಾ

ಕಾಂಗ್ರೆಸ್ ಕಮೀಟಿಯವರು 'ಕರ್ನಾಟಕ' ಪ್ರಾಂತವನ್ನು ಬೇರೆಯಾಗಿ ಏರ್ಪಡಿಸಬೇಕೆಂದು ಠರಾವುಮಾಡಿದರು. ಮಾರ್ಚ ತಿಂಗಳದಲ್ಲಿ ಮುಂಬೈ ಮತ್ತು ಮದ್ರಾಸ ಅಸೆಂಬ್ಲಿಯಲ್ಲಿ ಕರ್ನಾಟಕ ಪ್ರಾಂತೀಕರಣಕ್ಕೆ ಅನುಕೂಲವಾದ ನಿರ್ಣಯಗಳು ಆಯಾ ಪ್ರಾಂತಗಳ ಸಮ್ಮತಿಯಿಂದ ಪಾಸಾದವು.

ಏಕೀಕರಣದ ತತ್ವಕ್ಕೆ ಇಷ್ಟು ಬೆಂಬಲವು ದೊರೆತರೂ ಸ್ವತಂತ್ರ ಪ್ರಾಂತವನ್ನು ದೊರಕಿಸುವ ಗುರಿಯು ಇನ್ನೂ ಏಕೆ ಸಾಧಿಸಲೊಲ್ಲದು? ಇದಕ್ಕೆ ಅನೇಕ ಉತ್ತರಗಳಿವೆ. ಮೊದಲಿನಿಂದಲೂ ಬ್ರಿಟಿಶ್ ಸರಕಾರದವರು ಈ ಪ್ರಶ್ನೆಯ ಕಡೆಗೆ ಅಷ್ಟೊಂದು ಆಸ್ಥೆಯಿಂದ ಗಮನಕೊಟ್ಟಿಲ್ಲ. ನಮಗೆ ಸಹಾನುಭೂತಿಯುಳ್ಳ ಪರಪ್ರಾಂತೀಯರಿಗೆ ಏಕೀಕರಣದ ಅಗತ್ಯವು ಮನದಟ್ಟಾಗಿಲ್ಲ. ಕರ್ನಾಟಕದಲ್ಲಿಯಾದರೂ ಕರ್ನಾಟಕದ ತತ್ವಕ್ಕೆ ಸಾಮಾನ್ಯ ಮಾನ್ಯತೆಯು ದೊರೆತಿದ್ದರೂ 'ಏಕೀಕರಣದಿಂದಲೇ ನಮ್ಮ ಗತಿ' ಎಂಬ ಭಾವನೆಯು ಸಾಕಷ್ಟು ಉತ್ಕಟತೆಯಿಂದ ಬೇರೂರಿಲ್ಲ. ಇವೆಲ್ಲ ಕಾರಣಗಳಿಂದಲೇ ಏಕೀಕರಣ ಗುರಿಯನ್ನು ನಾವು ಸಾಧಿಸಲು ಸಮರ್ಥರಾಗಿಲ್ಲ. ಆದುದರಿಂದ ಏಕೀಕರಣದ ನಿಜವಾದ ಮರ್ಮವನ್ನು ನಾವು ಕಂಡುಕೊಳ್ಳುವುದು ಅತ್ಯಗತ್ಯದ ಮಾತಾಗಿದೆ.

### ಏಕೀಕರಣದ ಮಹತ್ವ ಮತ್ತು ಸ್ವರೂಪವು.

ಈ ವಿಷಯದಲ್ಲಿ ಮೊದಲನೆಯ ಮಾತನ್ನು ನಾವೂ ಇತರರೂ ಲಕ್ಷದಲ್ಲಿಡಬೇಕಾದುದೆಂದರೆ ಏಕೀಕರಣದ ಆಂದೋಲನವು ನಿಸರ್ಗ ಪ್ರವೃತ್ತಿಯ ಪರಿಣಾಮವಾಗಿದೆ. ಒಂದು ಭಾಷೆಯವರು ಒಂದೇ ಪರಂಪರೆಯುಳ್ಳವರು ಪರಸ್ಪರರಿಂದ ಆಕರ್ಷಿಸಲ್ಪಟ್ಟು ಒಂದೇ ಆಡಳಿತೆಗೆ ಸೇರಲಿಚ್ಛಿಸುವುದು, ಇದೊಂದು ತಡೆಯಲಸಾಧ್ಯವಾದ ಪ್ರವೃತ್ತಿಯಿದೆ. ಆದುದರಿಂದ ಬೇರೆ ಬೇರೆ ಆಡಳಿತೆಗಳಿಗೆ ಸೇರಿದ ಕನ್ನಡ ಬಂಧುಗಳು ಒಂದೇ ಸ್ವತಂತ್ರ ಪ್ರಾಂತವನ್ನ ಪೇಕ್ಷಿಸುವುದು ನಿಸರ್ಗ ಪ್ರವೃತ್ತಿಗನುಸರಿಸಿಯೇ ಇದೆ. ಈ ಪ್ರವೃತ್ತಿಯನ್ನು ಕೆಲವರು ಕೆಲಕಾಲದಮಟ್ಟಿಗೆ ಅಡ್ಡಗಟ್ಟಬಲ್ಲರು; ಅದನ್ನು ಕೊನೆಯವರೆಗೂ ತಡೆಯುವುದು ಯಾರಿಂದಲೂ ಸಾಧ್ಯವಿಲ್ಲ. ಈ ಪ್ರವೃತ್ತಿಯ ಪೂರ್ಣವಿಕಾಸದಲ್ಲಿಯೇ ಜನತೆಯ ಸುಖದ ಬೀಜವಿದೆ. ಆದುದರಿಂದ ಸ್ವಾತಂತ್ರ್ಯದಂತೆಯೇ ಏಕೀಕರಣವೂ ಪ್ರತಿಯೊಂದು ಜನಾಂಗದ ಜನ್ಮಸಿದ್ಧವಾದ ಹಕ್ಕು ಇದೆ. ಅದನ್ನು ಕಸಿದುಕೊಳ್ಳುವ ಶಕ್ತಿಯಾಗಲಿ ಅಧಿಕಾರವಾಗಲಿ ಯಾರಿಗೂ ಇರುವುದಿಲ್ಲ.

ಏಕೀಕರಣದ ವಿಷಯದಲ್ಲಿ ಲಕ್ಷದಲ್ಲಿಡಬೇಕಾದ ಮುಂದಿನ ಮಾತೆಂದರೆ ಭರತಖಂಡದಲ್ಲಿ ಸ್ವಾತಂತ್ರ್ಯವು ನೆಲೆಗೊಂಡು ಪ್ರಜಾಹಿತವು ಪೂರ್ಣವಾಗಿ ಸಾಧಿಸಬೇಕಾದರೆ ಜನಸಾಮಾನ್ಯರು ರಾಜ್ಯದಾಡಳಿತೆಯಲ್ಲಿ ಪ್ರತ್ಯಕ್ಷ ಭಾಗವಹಿಸಬೇಕು. ಅದರ ಹೊರತು ದೊರೆತ ಸ್ವಾತಂತ್ರ್ಯವು ಸ್ಥಿರವಾಗಲಾರದು. ಈ ರೀತಿ ಜನಸಾಮಾನ್ಯರು ತಮ್ಮ ಆಡಳಿತೆಯ ಭಾರವನ್ನು ಹೊರಬೇಕಾದರೆ ಆಯಾ ವಿಭಾಗದ ಆಡಳಿತೆಯು ಅಲ್ಲಿಯ ಭಾಷೆಯಲ್ಲಿಯೇ ನಡೆಯಬೇಕು. ತಾತ್ವಿಕವಾಗಿ ನೋಡಿದರೆ ಕನ್ನಡ ಭಾಷೆಯಲ್ಲಿ ಮಾತಾಡಲಾರದ ಬ್ರಿಟಿಶ್ ಅಧಿಕಾರಿಗೂ ಹಿಂದೀ ಅಧಿಕಾರಿಗೂ ದೊಡ್ಡ ಅಂತರವು ಕನ್ನಡಿಗನಿಗೆ ಎನಿಸುವುದಿಲ್ಲ. ಸದ್ಯದ ಕಾಂಗ್ರೆಸ್ ಮಂತ್ರಿಮಂಡಲವು ನಮ್ಮದಿದ್ದರೂ ಆ ಮಂತ್ರಿಗಳು ಕನ್ನಡಿಗರಿಗೆ ನಾಲ್ಕು ಮಾತು ಕನ್ನಡದಲ್ಲಿ ಹೇಳಲಸಮರ್ಥರಾದರೆ ಅವರು ನಮ್ಮವರೇ ಆದರೂ ಪರಕೀಯರಂತೆ ಕಾಣುವರು, ಅವರೂ ಕನ್ನಡ ಜನತೆಯೂ ಸಮರಸವಾಗುವುದು ಸಾಧ್ಯವಿಲ್ಲ. ಕರ್ನಾಟಕವು ತನ್ನ ಆಡಳಿತೆಯಲ್ಲಿ ಪೂರ್ಣ ಸಮರಸವಾಗಬೇಕಾದರೆ ಕರ್ನಾಟಕದ ಆಡಳಿತೆಗಾರರೆಲ್ಲರೂ ಕನ್ನಡಿಗರೇ ಇರಬೇಕು. ಕನ್ನಡ ಪ್ರಜೆಗಳು ಸಂಪೂರ್ಣವಾಗಿ ತಮ್ಮ ಪ್ರತಿನಿಧಿಗಳ ಮುಖಾಂತರವಾಗಿಯೇ ತಮ್ಮ ಆಡಳಿತೆಯನ್ನು ಸಾಗಿಸಬೇಕು! ಆದರಿಂದಲೇ ಕನ್ನಡ ಉನ್ನತಿ ಸಾಧಿಸಬಲ್ಲದು! ಇದೇ ಪ್ರಜಾಸ್ವಾತಂತ್ರ್ಯದ ರಹಸ್ಯವು.

ಕನ್ನಡಿಗರ ಆರ್ಥಿಕ, ಸಾಂಸ್ಕೃತಿಕ ಹಿತವು ಸಾಧಿಸಬೇಕಾದರೂ ಖಂಡಿತವಾದ ಕರ್ನಾಟಕವನ್ನು ಒಂದು ಮಾಡದೆ ಗತಿಯಿಲ್ಲವೆಂಬುದು ಸ್ಪಷ್ಟವಾಗಿದೆ. ಜನತೆಯ ಏಳುವು ಸಂಖ್ಯಾಬಲವನ್ನೇ ಅವಲಂಬಿಸಿದೆ. ೧ ಕೋಟಿ ೨೦ ಲಕ್ಷದಷ್ಟಿರುವ ಕನ್ನಡಿಗರು ಆರ್ಥಿಕ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಹಿಂದುಳಿದಿರುವರು. ಈ ಹೀನಾವಸ್ಥೆಯನ್ನು ಹೋಗಲಾಡಿಸಲು ಅಖಂಡ ಕನ್ನಡ ಜನಾಂಗವು ಒಂದಾಗದ ಹೊರತು ಇನ್ನೊಂದು ಮಾರ್ಗವಿಲ್ಲೆಂಬುದನ್ನು ವಿಸ್ತಾರದಿಂದ ಹೇಳಬೇಕಾಗಿಲ್ಲ.

ರಾಷ್ಟ್ರೀಯ ಸ್ವಾತಂತ್ರ್ಯದ ದೃಷ್ಟಿಯಿಂದ ವಿಚಾರಿಸಿದರೂ ಏಕೀಕರಣವು ಅತ್ಯಾವಶ್ಯವಿದೆಯೆಂದು ಎಲ್ಲರೂ ಒಪ್ಪತಕ್ಕ ಮಾತು. ಕಾಂಗ್ರೆಸ್ಸಿನಲ್ಲಿ ೧೯೨೧ ರಲ್ಲಿ ಕರ್ನಾಟಕಕ್ಕೆ ಸ್ವತಂತ್ರ ಸ್ಥಾನವು ದೊರೆತನಂತರ ಅದಷ್ಟು ರಾಷ್ಟ್ರ ಕಾರ್ಯವು ಅದಕ್ಕೂ ಮೊದಲು ಆಗಿರಲಿಲ್ಲ. ಒಂದೇ ಭಾಷೆಯನ್ನಾಡುವವರನ್ನು ಒಂದೇ ಆಡಳಿತೆಗೆ ಒಳಪಡಿಸುವುದರಲ್ಲಿಯೇ ಜನಾಂಗದ ಏಳುವಿದೆ ಎಂಬುದನ್ನು ಬೇರೆ ವಿಶದಪಡಿಸಬೇಕಿಲ್ಲ. ಹಿಂದುಸ್ಥಾನದ ಸ್ವಾತಂತ್ರ್ಯಯುದ್ಧದಲ್ಲಿ ಏಕೀಕೃತ ಕನ್ನಡ ಜನಾಂಗವು ಮಾಡುವಷ್ಟು ಕಾರ್ಯವನ್ನು ಸಿಡಿದು ಬಿದ್ದ ಕನ್ನಡಿಗರು ಮಾಡಲಾರರು. ಕರ್ನಾಟಕ ಏಕೀಕರಣವು ರಾಷ್ಟ್ರೀಯತ್ವಕ್ಕೆ ಅಡ್ಡಿಯಾಗಲಾರದಷ್ಟೇ ಅಲ್ಲ; ಅದಕ್ಕೆ ಪೂರ್ಣ ಪೋಷಕವಾಗುವುದು.

ಮೇಲೆ ಹೇಳಿದ ಕಾರಣಗಳ ಮೂಲಕ ಕನ್ನಡಿಗರಿಗೆ ಏಕೀಕರಣವೇ ಮುಖ್ಯ ಪ್ರಶ್ನೆಯಾಗಿರಬೇಕಾಗಿದೆ. ಉಳಿದ ಕಾರ್ಯವನ್ನು ಬದಿಗಿಟ್ಟು ಕೇವಲ ಇದೊಂದೇ ಪ್ರಶ್ನೆಯನ್ನು ಬಿಡಿಸಲುದ್ಯುಕ್ತರಾಗುವುದು ಅಗತ್ಯವಾಗಿದೆ.

ಕರ್ನಾಟಕ ಏಕೀಕರಣದಿಂದ ಮುಸಲ್ಮಾನ ಹರಿಜನ ಮೊದಲಾದ ಅಲ್ಪಸಂಖ್ಯಾಕರ ಹಿತಸಂಬಂಧಿಗಳಿಗೆ ಬಾಧೆ ಬರಬಹುದೆಂದು ಕೆಲವರ ಆಕ್ಷೇಪಣೆಯಿದೆ ಎನ್ನುವುದು ನನಗೆ ಗೊತ್ತಿದೆ. ನಾವೆಲ್ಲರೂ ಜಾತಿ-ಮತ-ಪಂಥ ಇವುಗಳನ್ನು ಲೆಕ್ಕಿಸದೆ ಪ್ರಜಾಹಿತವನ್ನೇ ಪ್ರಧಾನವಾಗಿಟ್ಟುಕೊಂಡು ಸಾಗುತ್ತಿರುವಾಗ ಇಂತಹ ಭಾವನೆಗೆ ಎಡೆಯಿರಲಾರದು. ಅಲ್ಲದೆ ಅಲ್ಪಸಂಖ್ಯಾಕರನ್ನು ಅಸಂತುಷ್ಟರನ್ನಾಗಿಟ್ಟುಕೊಂಡು ಯಾವ ದೇಶದ ಆಡಳಿತೆಯೂ ಸುಖಕರವಾಗಿ ಬಹು ಕಾಲದ ವರೆಗೆ ಬಾಳಲಾರದು. ಆದುದರಿಂದ ಅಖಂಡ ಕರ್ನಾಟಕದ ಹಿತವನ್ನು ಬಯಸಿ ಆ ಹಿತದೊಡನೆ ಸಮರಸವಾಗುವುದು ಹೇಗೆ ಅಲ್ಪಸಂಖ್ಯಾಕರ ಕರ್ತವ್ಯವೋ ಅದೇ ರೀತಿ ಅಲ್ಪಸಂಖ್ಯಾಕರ ಹಿತ-ಭಾಷೆ-ಸಂಸ್ಕೃತಿ ಇವುಗಳಿಗೆ ಬಾಧೆ ಬರದಂತೆ ನೋಡಿಕೊಳ್ಳುವದು ತನ್ನ ಕರ್ತವ್ಯವೆಂದು ಏಕೀಕೃತ ಕರ್ನಾಟಕ ಆಡಳಿತೆಗಾರರು ತಿಳಿಯುವರೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

### ನಾವು ಮಾಡಬೇಕಾದ ಕಾರ್ಯವು.

ಸ್ವತಂತ್ರ ಕರ್ನಾಟಕದ ಗುರಿಯನ್ನು ನಾವು ತೀವ್ರವೇ ಮುಟ್ಟಬೇಕಾದರೆ, ನಾವು ಮಾಡಬೇಕಾದ ಮೊದಲನೆಯ ಕಾರ್ಯವೆಂದರೆ ಜನಜಾಗೃತಿ. ಸದ್ಯಕ್ಕೆ ಏಕೀಕರಣದ ಆಂದೋಲನವು ಮಧ್ಯಮ ವರ್ಗದವರಲ್ಲಿಯೇ ಮುಖ್ಯವಾಗಿ ಪ್ರಚಾರವಾಗಿದೆ. ಆದರೆ ಏಕೀಕರಣದ ಸಂದೇಶವು ಹಳ್ಳಿ ಹಳ್ಳಿಗೂ ಮುಟ್ಟುವುದು ಅವಶ್ಯವಿದೆ. ಅದರಂತೆಯೇ ಬಳ್ಳಾರಿ, ಮಂಗಳೂರು ಮತ್ತು ಉಳಿದ ಗಡಿನಾಡಿನ ಕನ್ನಡ ಪ್ರದೇಶಗಳಲ್ಲಿಯೂ ಇನ್ನೂ ಹೆಚ್ಚು ಸಂಘಟಿತವಾಗಿ ಪ್ರಚಾರಕಾರ್ಯವಾಗುವುದು ಅವಶ್ಯವಿದೆ. ಈ ಮಾತಿನಲ್ಲಿ ಏಕೀಕರಣ ಸಂಘದವರಿಗೆ ನಮ್ಮ ಪೂರ್ಣ ಬೆಂಬಲವನ್ನು ಕೊಡುವುದು ಅವಶ್ಯವಿದೆ. ಇದೂ ಅಲ್ಲದೆ ನಮ್ಮ ಸದ್ಯದ ಗುರಿಯು

ಬ್ರಿಟಿಶ್ ಆಡಳಿತೆಗೆ ಸೇರಿದ ಭಾಗಗಳನ್ನು ಏಕೀಕರಣಮಾಡುವು
ದಿದ್ದರೂ ಸಂಸ್ಥಾನದ ಯಾವತ್ತೂ ಕನ್ನಡ ಸೀಮೆಗಳನ್ನೊಳಗೊಂ
ಡ ಕನ್ನಡ ರಾಷ್ಟ್ರ ನಿರ್ಮಾಣವೇ ನಮ್ಮ ಕೊನೆಯ ಗುರಿಯಾಗಿ
ರುವುದರಿಂದ ಈ ಕಾರ್ಯಕ್ಕೆ ಮೈಸೂರು ಮೊದಲಾದ ಸಂಸ್ಥಾನ
ದ ಕನ್ನಡ ಬಂಧುಗಳಲ್ಲಿಯೂ ಜಾಗೃತಿಯನ್ನುಂಟುಮಾಡಿ ಈ ಕಾ
ಲಕ್ಕೆ ಅವರ ಬೆಂಬಲವನ್ನು ದೊರಕಿಸುವುದೂ ಅತ್ಯವಶ್ಯವಿದೆ. ಈ
ಗುರಿಯೂ ಪೂರ್ಣವಾಗುವ ಒಂದು ಕಾಲವು ಒದಗಿರಲಾರದೆಂಬು
ದು ದಿಟ್ಟಿಸಿ ನೋಡಿದರೆ ನಮಗೆ ಕಾಣದೆ ಇರಲಾರದು.

ಸದ್ಯಕ್ಕೆ ನಮ್ಮ ನಾಡಿನಲ್ಲಿ ಜನತೆಯ ಏಕಮೇವಾದ್ವಿತೀಯ
ಪ್ರಾತಿನಿಧಿಕ ಸಂಸ್ಥೆಯೆಂದರೆ ಕಾಂಗ್ರೆಸ್. ಹಿಂದುಸ್ಥಾನದ ಏಳು
ಪ್ರಾಂತಗಳಲ್ಲಿ ಕಾಂಗ್ರೆಸ್ ರಾಜ್ಯವು ನಡೆದಿದೆ. ಆದುದರಿಂದ
ಕಾಂಗ್ರೆಸ್ ಸಂಸ್ಥೆಯೇ ಏಕೀಕರಣದ ಕಾರ್ಯವನ್ನು ಕೈಕೊಂಡು
ಕೊಣೆಗಾಣಿಸುವುದು ಸಾಧ್ಯವಿದೆ. ಆದುದರಿಂದ ಕರ್ನಾಟಕ ಪ್ರಾಂ
ತಿಕ ಕಾಂಗ್ರೆಸ್ ಕಮಿಟಿಯವರು ಈ ಕಾರ್ಯವನ್ನು ತಮ್ಮೆದು
ರಿನಲ್ಲಿಟ್ಟುಕೊಂಡು ಕರ್ನಾಟಕಕ್ಕೆ ಸ್ವಾತಂತ್ರ್ಯವನ್ನು ಒದಗಿಸಿಕೊ
ಡುವುದು ಅವರ ಕರ್ತವ್ಯವಾಗಿದೆಯೆಂಬುದನ್ನು ನಾನು ಒತ್ತಿ ಹೇ
ಳದಿರಲಾರೆನು.

ಕರ್ನಾಟಕದ ಪ್ರಾಂತರಚನೆಯ ಠರಾವು ಪಾಸಾಗಿದ್ದರೂ ಅಲ್ಲಿ
ಸದ್ಯಕ್ಕೆ ಮುಂಬೈ ಮದ್ರಾಸ ಕಾಯದೆ ಮಂಡಲಗಳಲ್ಲಿ ಕನ್ನಡ
ಸದಸ್ಯರು ಈ ಕಡೆಗೆ ಇನ್ನೂ ಹೆಚ್ಚು ಗಮನ ಕೊಡುವುದು ಅವ
ಶ್ಯವಿದೆಯೆಂದು ಹೇಳದಿರಲಾರೆನು. ಯಾಕೆಂದರೆ, ತಮ್ಮ ತಮ್ಮ
ಪ್ರಾಂತಗಳಲ್ಲಿಯ ಸರಕಾರದವರು ಕರ್ನಾಟಕ ಪ್ರಾಂತೀಕರಣದ
ಪ್ರಶ್ನೆಯನ್ನು ಪ್ರಮುಖ ಪ್ರಶ್ನೆಯನ್ನಾಗಿ ಮಾಡಿ ಕೇಂದ್ರ ಸರಕಾ
ರಕ್ಕೂ ಹಾಗೂ ಬ್ರಿಟಿಶ್ ಪಾರ್ಲಿಮೆಂಟಿಗೂ ಒತ್ತಾಯಪಡಿಸುವು
ದು ಅವಶ್ಯವಿದೆ. ಕರ್ನಾಟಕದ ಪ್ರತಿನಿಧಿಗಳನ್ನೂ ಇಂದಿನ ಈ
ಸಭೆಯನ್ನೂ ಆಶೀರ್ವದಿಸಲು ಜ್ಞಾನವೃದ್ಧರೂ ತಪೋವೃದ್ಧರೂ
ಆದ ಶ್ರೀಮನ್ನಿರಂಜನ ಜಗದ್ಗುರು ಜಯದೇವ ಮುರುಘಾರಾ
ಜೇಂದ್ರ ಸ್ವಾಮಿಗಳಂತಹ ಆಧ್ಯಾತ್ಮಿಕ ಶ್ರೇಷ್ಠರು ದೊರೆತುದು
ಅಪೂರ್ವಯೋಗವೇ ಸರಿ. ಈ ಸಭೆಯ ಕಾರ್ಯವನ್ನು ನಿರ್ವಹಿಸ
ಲು ಜನತೆಯ ನಿಸ್ಸೀಮ ಸೇವಕರಾದ ಶ್ರೀಮಾನ್ ಕೆ. ಆರ್.
ಕಾರಂತರು, ಎಲ್. ಎಲ್. ಬಿ. ಎಂ. ಎಲ್. ಎ. ಅವರು ಅಧ್ಯ
ಕ್ಷರಾಗಿ ದೊರೆತದ್ದು ನಮ್ಮ ದೊಡ್ಡಭಾಗ್ಯ.

ಅಸ್ವಾಭಾವಿಕ ಪ್ರಾಂತರಚನೆಯಿಂದ ಅಗಲಿದ್ದ ಕನ್ನಡಿಗರು
ಒಂದುಗೂಡುವುದಕ್ಕೆ ಬೇಕಾಗುವ ಕಾರ್ಯದ ಮುಸಲತ್ತನ್ನೂ
ಹೋರಾಟದ ಮಾರ್ಗಗಳನ್ನೂ ಈ ಸಭೆಯು ನಿಚ್ಚಳವಾಗಿ ಗೊ
ತ್ತುಪಡಿಸುವುದೆಂದೂ ಸಾಧನಕ್ಕೆ ಎಲ್ಲ ತ್ಯಾಗವನ್ನು ಮಾಡಲು
ನಾವು ಸಿದ್ಧರಿರುವುದನ್ನೂ ಈ ಸಭೆಯು ಸಕಲರಿಗೂ ತಿಳಿಸುವು
ದೆಂದೂ ನಾನು ನಂಬುತ್ತೇನೆ.

ಈ ನಮ್ಮ ಹೋರಾಟದಲ್ಲಿ ನಮ್ಮ ಹಿರಿಯಣ್ಣಂದಿರಾದ ಆಂಧ್ರ
ರೂ ಮಹಾರಾಷ್ಟ್ರರೂ ನಮಗೆ ತುಂಬಾ ನೆರವಾಗುವರೆಂದೂ,
ಬಲವಾನರಾದ ಅವರು ಗಡಿಗಳನ್ನು ಗೊತ್ತುಮಾಡುವ ಕಾಲಕ್ಕೆ
ಕೂಡ ಚಿಕ್ಕ ತಮ್ಮಂದಿರಾದ ಕನ್ನಡಿಗರೊಡನೆ ಉದಾರ ಬುದ್ಧಿ
ಯಿಂದ ನೆರವಾಗುವಲ್ಲಿ ಸಂದೇಹವಿಲ್ಲವೆಂದೂ ನಾನು ತಿಳಿಯು
ತ್ತೇನೆ.

ಏಕೀಕರಣ ವಿಷಯವನ್ನು ನನಗೆ ತಿಳಿದಷ್ಟರಮಟ್ಟಿಗೆ ಕೆಲವು
ಸೂಚನೆಗಳನ್ನು ಮಾಡಿರುವೆನು. ಈ ಬಗ್ಗೆ ಇನ್ನೂ ಹೇಳಬೇಕಾ
ದ ಎಷ್ಟೋ ಮಾತುಗಳಿದ್ದರೂ ಅವೆಲ್ಲವನ್ನು ಹೇಳುತ್ತ ಕೂಡುವು
ದು ತಮಗೆ ಸ್ವಾಗತವನ್ನು ಬಯಸಲಿಕ್ಕೆ ನಿಂತ ನನ್ನ ಕೆಲಸವ
ಲ್ಲ. ಇನ್ನೊಂದು ಬಾರಿ ತಮ್ಮೆಲ್ಲರಿಗೂ ಹೃತ್ಪೂರ್ವಕ ಸ್ವಾಗತವನ್ನು
ಕೋರಿ ಬೆಡಗಿನ ಕೊಡಗಿನಿಂದಲೂ. ನಿಸರ್ಗರಮಣೀಯವಾದ
ಕಾರವಾರ ಮಂಗಳೂರುಗಳಿಂದಲೂ, ಉಳಿದ ಒಳನಾಡುಗಳಿಂದಲೂ
ಸರ್ವಾಂಗಸುಂದರವಾಗಿ ಒಪ್ಪುವ ಕರ್ನಾಟಕ ಮಾತೆಯ ಪ್ರತ್ಯ
ಕ್ಷ ದರ್ಶನವು ತೀವ್ರವೇ ನಮಗಾಗಲೆಂದು ಆ ದೇವನನ್ನು ಪ್ರಾರ್ಥಿ
ಸಿ ನನ್ನ ಮಾತು ಮುಗಿಸುವೆನು.

ಕರ್ನಾಟಕಾಂತರ್ಗತ ಭಾರತಮಾತೆಗೆ ಜಯವಾಗಲಿ.

ವಂದೇ ಮಾತರಂ !!

---

## ಶ್ರೀ ಜಗದ್ಗುರು ಜಯದೇವ ಮುರುಘಾರಾಜೇಂದ್ರ ಮಹಾಸ್ವಾಮಿಗಳವರು ಅಪ್ಪಣೆಕೊಡಸಿದ ಭಾಷಣವು.

ಮಹಾಜನಗಳೇ,

ಮುಂಬೈ ಕರ್ನಾಟಕದ ಜಿಲ್ಲೆಗಳು ನಮಗೆ ಅಪರಿಚಿತವಾ
ದವುಗಳಲ್ಲ. ಇಲ್ಲಿ ನಮ್ಮ ಸಂಸ್ಥಾನದ ನೂರಾರು ಮಠಗಳು ನೆಲೆ
ಗೊಂಡಿರುವುದರಿಂದ ಜನಸಾಮಾನ್ಯದ ಪರಿಚಯವು ಚೆನ್ನಾಗಿರು
ತ್ತದೆ. ಈ ಭಾಗದಿಂದಲೇ ಕರ್ನಾಟಕದ ಏಕೀಕರಣದ ಜೀವಂ
ತ ಝರಿಯು ಹರಿದು ಅಖಿಲ ಕರ್ನಾಟಕವನ್ನೇ ವ್ಯಾಪಿಸಿದ್ದು ನಮ್ಮ
ದೃಷ್ಟಿಗೆ ಎಲ್ಲೆಲ್ಲಿಯೂ ಬೀಳುತ್ತಲಿದೆ. ಕರ್ನಾಟಕ ಏಕೀಕರಣವು
ದೂರದರ್ಶಿಗಳಿಗೂ ವಿಶಾಲಭಾವನೆಯುಳ್ಳವರಿಗೂ ಮತ್ತು ಅಖಿಲ
ಕನ್ನಡಿಗರಿಗೂ ಅಭಿಮಾನವನ್ನುಂಟುಮಾಡತಕ್ಕ ಸಂಗತಿಯಾಗಿದೆ.
ಇಂತಹ ಏಕೀಭೂತ ಕರ್ನಾಟಕದ ಪ್ರತಿನಿಧಿಗಳಾಗಿ ಬಂದ ಮಹಾ
ಜನಗಳಿಂದ ಕೂಡಿದ ಈ ಸಭೆಯ ಪ್ರಾರಂಭೋತ್ಸವವನ್ನು ಜರು
ಗಿಸುವ ಸುಸಂಧಿಯನ್ನು ಸ್ವಾಗತಸಮಿತಿಯವರು ಸಾದರದಿಂದ
ನಮಗೆ ಒಪ್ಪಿಸಿರುವುದು ತುಂಬಾ ಸಂತೋಷವನ್ನುಂಟುಮಾಡಿದೆ.

### ರಾಜಕಾರಣ.

ಕರ್ನಾಟಕ ಏಕೀಕರಣದ ಕಾರ್ಯವು ಕನ್ನಡಿಗರಿಗೆ ಮಹ
ತ್ವದ್ದಾಗಿರುತ್ತದೆ. ಕನ್ನಡ ನಾಡಿನ ಇತಿಹಾಸವು ಎಷ್ಟು ಉಜ್ವ
ಲವಾಗಿದೆಯೋ ಅಷ್ಟೇ ಪ್ರಾಚೀನವೂ ಆಗಿರುತ್ತದೆ. ಕನ್ನಡ ದೇ
ಶದ ಸಾಮ್ರಾಜ್ಯಾಧಿಪತಿಗಳು ಸ್ವರಾಜ್ಯವನ್ನು ಕಟ್ಟಿ ವಂಗ
(ಬಂಗಾಲ) ದೇಶದ ವರೆಗೆ ಆಳಿರುತ್ತಾರೆಂಬುದು ಇತಿಹಾಸ ಪ್ರಸಿ
ದ್ಧವು. ಈ ಸಾಮ್ರಾಜ್ಯಾಧಿಪತಿಗಳಲ್ಲಿ ವಿಜಯನಗರದ ಅರಸರ
ಹೆಸರನ್ನು ತೆಗೆದುಕೊಂಡಕೂಡಲೆ ಕನ್ನಡಿಗರ ಸ್ವಾಭಿಮಾನದ
ಜ್ಯೋತಿಯು ಉಕ್ಕುತ್ತಲಿರುವದು ಸ್ವಾಭಾವಿಕವು.

### ಧರ್ಮ.

ಕರ್ನಾಟಕವು ಅಖಿಲ ಭಾರತಭೂಮಿಗೆ ಮತ್ತೊಂದು ಶ್ರೇಷ್ಠ
ವಾದ ಕಾಣಿಕೆಯನ್ನು ಕೊಟ್ಟಿರುತ್ತದೆ. ಆ ಕಾಣಿಕೆಯು ಧಾರ್ಮಿ
ಕ ಸ್ವರೂಪದ್ದಿರುತ್ತದೆ. ಹಿಂದುಸ್ಥಾನದಲ್ಲಿ ಪ್ರಸಿದ್ಧಿಯನ್ನು ಹೊಂ
ದಿದ ಎಲ್ಲಾ ಮತಗಳ ಸ್ಥಾಪಕರೂ ಉದ್ಧಾರಕರೂ ಕರ್ನಾಟಕ
ದಲ್ಲಿಯೇ ವಿಶೇಷವಾಗಿ ಆಗಿರುತ್ತಾರೆಂದು ಹೇಳಲಿಕ್ಕೆ ನಮಗೆ ಅಭಿ
ಮಾನವೂ ಆನಂದವೂ ಉಂಟಾಗುತ್ತಲಿದೆ.

### ಸಂಸ್ಕೃತಿ.

ಕನ್ನಡಿಗರ ಸಂಸ್ಕೃತಿಯು ಪ್ರಾಚೀನ ಕಾಲದಿಂದ ಪ್ರಸಿದ್ಧಿ
ಯನ್ನು ಹೊಂದಿರುತ್ತದೆ. ಶಿಲ್ಪಕಲೆಯು ಹಿಂದುಸ್ಥಾನದ ಯಾವ
ಪ್ರಾಂತದ ಕಲೆಗೂ ಇಷ್ಟೇ ಏಕೆ ಜಗತ್ತಿನ ಯಾವದೇ ಒಂದು
ದೇಶದ ಶಿಲ್ಪ ಕಲೆಗಿಂತಲೂ ಮಿಗಿಲಾದ ಸ್ಥಾನವನ್ನು ಪಡೆದಿದೆ.

(೧೨ ನೇ ಪುಟಕ್ಕೆ ಮುಂದೆ ಸಾಗಿದೆ.)



ಶಾ. ಶ. ೧೮೬೦ ನೆಯ ಜ್ಯೇಷ್ಠ ಶು॥ ೧ ಸೋಮವಾರ.

# ಕಾಂಗ್ರೆಸ್-ಮುಸ್ಲಿಂಲೀಗ್ ಒಪ್ಪಂದ.

ಹಿಂದು-ಮುಸಲ್ಮಾನರಲ್ಲಿ ಐಕಮತ್ಯವನ್ನುಂಟುಮಾಡಬೇಕೆಂದು ಮಹಾತ್ಮಾ ಗಾಂಧಿಯವರೂ ಬ್ಯಾ. ಜಿನ್ನಾರವರೂ ಪ್ರಾರಂಭಿಸಿದ ಸಂಭಾಷಣೆಯು ಕೊನೆಗೆ ಕಾಂಗ್ರೆಸ್ ಪಕ್ಷ ಮತ್ತು ಮುಸ್ಲಿಂ ಲೀಗಿನ ಒಪ್ಪಂದದ ಸಂಭಾಷಣೆಯಾಗಿ ಪರಿಣಮಿಸಿತು. ಇದೇ ಬರುವ ವಾರದಲ್ಲಿ ಮುಸ್ಲಿಂ ಲೀಗಿನವರು ಸೇರಿ ಕಾಂಗ್ರೆಸ್ ಪಕ್ಷವು ಸೂಚಿಸಿದ ಸಂಗತಿಗಳನ್ನು ಪರ್ಯಾಲೋಚಿಸಿ ತಮ್ಮ ಅಭಿಪ್ರಾಯವನ್ನು ಕಾಂಗ್ರೆಸ್ಸಿಗೆ ತಿಳಿಸುವವರಾಗಿದ್ದಾರೆ.

## ಹಿಂದು-ಮುಸಲ್ಮಾನರ ಒಪ್ಪಂದವಲ್ಲ.

ಹಿಂದು-ಮುಸಲ್ಮಾನರಲ್ಲಿ ಐಕಮತ್ಯವುಂಟಾಗುವ ಒಪ್ಪಂದ ಏರ್ಪಡಬೇಕಾಗಿದ್ದರೆ ಹಿಂದು ಜನಾಂಗದ ಪ್ರತಿನಿಧಿಯಾದ ಹಿಂದು ಮಹಾಸಭೆಯ ಅಭಿಪ್ರಾಯವನ್ನೂ ತಿಳಿದುಕೊಳ್ಳಬೇಕಾಗಿದ್ದಿತು. ಕಾಂಗ್ರೆಸ್ ಪಕ್ಷವು ತಾನು ಕೇವಲ ಹಿಂದು ಅಥವಾ ಮುಸಲ್ಮಾನ್ ಪಕ್ಷವಲ್ಲ, ಇದು ಯಾವುದೊಂದು ಜಾತಿವಿಶಿಷ್ಟ ಸಂಸ್ಥೆಯುಲ್ಲ. ಆದಕಾರಣ ಜಾತಿವಿಶಿಷ್ಟ ಸಂಸ್ಥೆಗಳಾದ ಹಿಂದು ಮಹಾ ಸಭೆ ಮತ್ತು ಮುಸ್ಲಿಂ ಲೀಗುಗಳಲ್ಲಿ ಐಕಮತ್ಯವುಂಟಾಗುವಂತೆ ಕಾಂಗ್ರೆಸ್ ಪಕ್ಷವು ತಾನು ಮಧ್ಯವರ್ತಿಯಾಗಿದ್ದು ಪ್ರಯತ್ನಿಸಬೇಕಾಗಿದ್ದಿತು.

ಈಗ ಅದು ಹಾಗೆ ಮಾಡಲಿಲ್ಲ. ಹಿಂದು ಮಹಾಸಭೆಯನ್ನು ವಿಚಾರಿಸದೆ ಅದರ ಅಭಿಪ್ರಾಯವನ್ನು ತಿಳಿದುಕೊಳ್ಳದೆ ಮುಸ್ಲಿಂ ಲೀಗಿನ ಸಂಗಡ ಒಪ್ಪಂದಕ್ಕಾಗಿ ತನ್ನ ನಿಯಮಗಳನ್ನು ತಿಳಿಸಿರುವುದರಿಂದ ಈ ಪ್ರಯತ್ನಕ್ಕೆ ಕಾಂಗ್ರೆಸ್-ಮುಸ್ಲಿಂಲೀಗ್ ಒಪ್ಪಂದದ ಪ್ರಯತ್ನವೆಂದು ಹೇಳಬೇಕಾದುದೇ ಸಮಂಜಸವಾಗಿದೆ.

ಕಾಂಗ್ರೆಸ್ ಯಾವುದೊಂದು ಜಾತಿ ಸಂಸ್ಥೆಯಲ್ಲವೆಂದೂ ಇದರಲ್ಲಿ ಹಿಂದು, ಮುಸಲ್ಮಾನ್, ಪಾರ್ಶಿ ಮೊದಲಾದ ಎಲ್ಲ ಜಾತಿಯವರೂ ಸೇರಲು ಅವಕಾಶವಿದೆಯೆಂದೂ ಕಾಂಗ್ರೆಸ್ಸಿನ ಅಧ್ಯಕ್ಷರಾದ ಬಾಬು ಸುಭಾಷಚಂದ್ರ ಬೋಸರು ಮೊನ್ನೆ ಪುಣೆಯ ತಮ್ಮ ಭಾಷಣದಲ್ಲಿ ಸಾರಿ ಹೇಳಿದ್ದಾರಷ್ಟೆ. ಎಂದಮೇಲೆ ಹಿಂದು ಜಾತಿಯ ಪರವಾಗಿ ಮುಸ್ಲಿಂಲೀಗಿನೊಡನೆ ಒಪ್ಪಂದದ ಮಾತನಾಡಲು ಇದಕ್ಕೆ ಅಧಿಕಾರವೆಲ್ಲಿದೆ? ಒಂದು ಸಮಯದಲ್ಲಿ ಜಾತಿ ಸಂಸ್ಥೆಯಲ್ಲವೆಂದೂ ಇನ್ನೊಂದು ಸಮಯದಲ್ಲಿ ತಾನೊಂದು ಜಾತಿಯ ಪ್ರತಿನಿಧಿಯೆಂದೂ ಹೇಳುವುದು ಅನುಚಿತವಾದುದಲ್ಲವೆ? ಆದಕಾರಣ ಈಗ ನಡೆದಿರುವ ಒಪ್ಪಂದದ ಪ್ರಯತ್ನವು ಎರಡು ರಾಜಕೀಯ ಸಂಸ್ಥೆಗಳಲ್ಲಿ ನಡೆದುದಾಗಿದೆಯೇ ವಿನಾ ಎರಡು ಧಾರ್ಮಿಕ ಸಮಾಜಗಳಲ್ಲಿ ನಡೆದುದಾಗಿಲ್ಲ.

## ಕಾಂಗ್ರೆಸ್ಸಿನ ಮುಖ್ಯ ನಿಯಮ.

ಕಾಂಗ್ರೆಸ್ ಪಕ್ಷವು ಮುಸ್ಲಿಂ ಲೀಗಿಗೆ ತಿಳಿಸಿರುವ ನಿಯಮಗಳಲ್ಲಿ ಈ ಕೆಳಗಿನ ಮೂರು ಸಂಗತಿಗಳಿವೆಯೆಂದು ಊಹಿಸಲಾಗಿದೆ.

(೧) ಮುಸ್ಲಿಂ ಲೀಗಿನ ಸದಸ್ಯರು ಕಾಂಗ್ರೆಸ್ ಪ್ರತಿಜ್ಞಾ ಪತ್ರಿಕೆಗೆ ರುಜು ಮಾಡಬೇಕು. (೨) ಶಾಸನ ಮಂಡಲಗಳಲ್ಲಿ ಬರುವ ಮುಸ್ಲಿಂಲೀಗಿನ ಸದಸ್ಯರು ಕಾಂಗ್ರೆಸ್ ಕಾರ್ಯಕ್ರಮವನ್ನು ಒಪ್ಪಬೇಕು. (೩) ಫೆಡರೇಶನ್ನಿನ ವಿರೋಧಕ್ಕೋಸ್ಕರ ಮುಸ್ಲಿಂ ಲೀಗ್ ಕಾಂಗ್ರೆಸ್ಸಿನೊಂದಿಗೆ ಸಹಕರಿಸಬೇಕು.

ಈ ಸಂಗತಿಗಳು ನಿಜವಿದ್ದ ಪಕ್ಷದಲ್ಲಿ ರಾಜಕಾರಣದ ದೃಷ್ಟಿಯಿಂದಲೇ ಈ ಉಭಯ ಸಂಸ್ಥೆಗಳಲ್ಲಿ ಈಗ ಒಪ್ಪಂದದ ಪ್ರಯತ್ನ ನಡೆದಿದೆಯೆಂದು ಸ್ಪಷ್ಟವಾಗುವುದಿಲ್ಲವೆ? ಕಾಂಗ್ರೆಸ್ಸಿಗೆ ಬಹುಮತವಿಲ್ಲದ ಪ್ರಾಂತಗಳ ಮಂತ್ರಿಮಂಡಲಗಳಲ್ಲಿ ಮೂರು ಮಂತ್ರಿಗಳು ಕಾಂಗ್ರೆಸ್ಸಿನವರಿರಬೇಕೆಂದೂ ಕಾಂಗ್ರೆಸ್ಸಿನ ಬಹುಮತವುಳ್ಳ ಮಂತ್ರಿಮಂಡಲದಲ್ಲಿ ಇಬ್ಬರಾದರೂ ಮುಸ್ಲಿಂ ಲೀಗಿನ ಮಂತ್ರಿಗಳಿರಬೇಕೆಂದೂ ಗೊತ್ತುಮಾಡಿರುವುದಾಗಿ ಊಹಿಸಲಾಗಿದೆ. ಇದು ಕೂಡಾ ರಾಜಕೀಯ ಸಂಬಂಧವಾದ ಒಂದು ನಿಯಮವೇ ಸರಿ. ಹೀಗೆ ರಾಜಕೀಯ ದೃಷ್ಟಿಯಿಂದ ಮಾಡಲ್ಪಡುವ ಒಪ್ಪಂದವು ಹಿಂದು-ಮುಸಲ್ಮಾನರಲ್ಲಿರುವ ಜಾತಿವಿಶಿಷ್ಟವಾದ ಅಸಂತೋಷವನ್ನೇನೂ ಸಂಪೂರ್ಣವಾಗಿ ನಿವಾರಣೆ ಮಾಡಲಾರದು. ಆದರೆ ಕೆಲವು ಮಟ್ಟಿಗೆ ಕಡಿಮೆಯಾದಂತೆ ತೋರಬಹುದು. ಅದು ಪರಿಣಾಮದಲ್ಲಿ ಘಾತಕವಾದುದಾಗಿಯೇ ಪರಿಣಮಿಸದಿರಲಾರದು.

## ಪ್ರತ್ಯೇಕವಾದ ಸಂಸ್ಥೆಯಿರಕೂಡದು.

ರಾಜಕೀಯ ಕ್ಷೇತ್ರದಲ್ಲಿ ಜಾತಿವಿಶಿಷ್ಟವಾದ ಮುಸ್ಲಿಂ ಲೀಗ್ ಎಂಬ ಒಂದು ಪ್ರತ್ಯೇಕವಾದ ಸಂಸ್ಥೆಯಿರಕೂಡದು. ಅದನ್ನು ಇರಗೊಟ್ಟು ಮಾಡಿಕೊಳ್ಳುವ ಈ ವಿಧವಾದ ಪ್ರಯತ್ನವು ಈ ದೇಶದಲ್ಲಿ ಮುಸ್ಲಿಂಮರ ಜಾತಿವಿಶಿಷ್ಟ ಧೋರಣವನ್ನು ಬಲಪಡಿಸಲಿಕ್ಕೇನೇ ಸಾಧನವಾಗದೆ ಇರಲಾರದು. ಈಗಿನ ಜಾತಿ ನಿರ್ಣಯವು ಹೇಗೆ ಘಾತಕವಾದುದೋ ಹಾಗೆಯೇ ಜಾತಿವಿಶಿಷ್ಟ ರಾಜಕೀಯ ಸಂಸ್ಥೆಯನ್ನು ಮಾನ್ಯಮಾಡಿ ಅದರೊಂದಿಗೆ ಒಪ್ಪಂದ ಮಾಡಿಕೊಳ್ಳುವುದೂ ಅಪಾಯಕರವಾದುದೇ ಸರಿ. ಏಕೆಂದರೆ ಅದರಿಂದ ರಾಜಕಾರಣದಲ್ಲಿ ಜಾತೀಯ ಭಾವನೆಯು ನಷ್ಟವಾಗದೇ ಪೋಷಣೆಯಾಗಲಿಕ್ಕೇನೇ ಸಹಾಯವಾಗುವುದು.

ಈಗ ಹಿಂದು-ಮುಸಲ್ಮಾನರಲ್ಲಿ ದೊಂಬಿಯಾಗುತ್ತಿರುವುದು ಮುಖ್ಯವಾಗಿ ಧಾರ್ಮಿಕ ಸಂಗತಿಗಳಲ್ಲಿಯೇ ಸರಿ. ಮಜೀದಿ ಮುಂದೆ ವಾದ್ಯ ಬಾರಿಸುವ ಅಥವಾ ಗೋವಧೆ ಮಾಡಲ್ಪಡುವ ಸಂಬಂಧವಾದ ಕಲಹಗಳು ನಿವಾರಣೆಯಾಗಬೇಕಾದರೆ ಹಿಂದು-ಮುಸಲ್ಮಾನರಲ್ಲಿ ಧಾರ್ಮಿಕ ದೃಷ್ಟಿಯಿಂದಲೂ ಒಪ್ಪಂದವಾಗಬೇಕು. ಹಾಗಾದಾಗಲೇ ಈ ದೇಶದ ಹಿಂದು-ಮುಸಲ್ಮಾನರಲ್ಲಿ ನಿಜವಾದ

ಪ್ರೇಮಾದರಗಳ ಐಕಮತ್ಯವುಂಟಾಗುವುದು. ಅಂಥ ಐಕಮತ್ಯವುಂಟಾಗಲು ಈಗಿನ ಕಾಂಗ್ರೆಸ್-ಮುಸ್ಲಿಂಲೀಗಿನ ಒಪ್ಪಂದವು ಸಹಾಯವಾಗುವಂತೆ ಜಯಪ್ರದವಾಗಲೆಂದೇ ನಾವು ಹಾರೈಸುತ್ತೇವೆ.

## ಡಾ. ಆಂಬೇಡಕರರ ವಿಚಾರ ಸರಣಿ !

ಆದಿ ಹಿಂದುಗಳ ಒಬ್ಬ ಪ್ರಮುಖ ಮುಂದಾಳುಗಳಾದ ಡಾ. ಆಂಬೇಡಕರರ ಅಧ್ಯಕ್ಷತೆಯಲ್ಲಿ ಕೊಂಕಣದ ಪಂಚಮಹಾಲ "ಹೊಲೆಯರ" ಪರಿಷತ್ತು ಕಣಕವಲಿ ಎಂಬಲ್ಲಿ ಕೂಡಿದ್ದಿತು. ಸಭೆಗೆ ಎರಡು ಸಾವಿರ ಜನರು ಬಂದಿದ್ದರು. ಅವರಲ್ಲಿ ಅನೇಕ ಸ್ತ್ರೀಯರೂ ಇದ್ದರು. ಡಾ. ಆಂಬೇಡಕರರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

### ಕಾಂಗ್ರೆಸ್ಸಿನಲ್ಲಿ ಭಟಜಿ-ಶೇಟಜಿ ರಾಜ್ಯ.

"ಪೇಶ್ವೆಯವರ ಪ್ರಭುತ್ವದ ಕಾಲದಲ್ಲಿ ಹೊಲೆಯರನ್ನು ಬಹು ಕ್ರೂರ ರೀತಿಗಳಿಂದ ನಡೆಯಿಸಿಕೊಂಡರು. ಇಂಗ್ಲಿಷರ ಪ್ರಭುತ್ವವು ಪ್ರಾರಂಭವಾದನಂತರವೇ ದೀನರಾದ ಹೊಲೆಯರಿಗೆ ಸ್ವಲ್ಪ ಅವಕಾಶ ದೊರೆತಿದೆ. ಈಗ ಕಾಂಗ್ರೆಸ್ಸಿನಲ್ಲೆಲ್ಲಾ ಭಟಜಿ ಮತ್ತು ಶೇಟಜಿಯವರ ರಾಜ್ಯವೇ ನಡೆದಿದೆ. ಇವರೇ ಅಸ್ಪೃಶ್ಯರ ನಿಜವಾದ ಶತ್ರುಗಳು. ಇವರೇ ಅಸ್ಪೃಶ್ಯರ ಈಗಿನ ದುಃಖಕ್ಕೆ ಕಾರಣರು. ಕಾಂಗ್ರೆಸ್ಸಿನಲ್ಲಿರುವ ಧನಿಕ ವರ್ಗವನ್ನು ತೆಗೆದುಹಾಕಲು ನನಗೆ ಎಷ್ಟು ಉತ್ಸುಕತೆಯುಂಟೋ ಅಷ್ಟು ಹಿಂದುಸ್ಥಾನದಿಂದ ಬ್ರಿಟಿಶ್ ಸಾಮ್ರಾಜ್ಯವನ್ನು ತೆಗೆದು ಹಾಕಲು ಉತ್ಸುಕತೆಯಿಲ್ಲ. ಧನಿಕರ ಕೈಯಿಂದ ರಾಜ್ಯ ಸೂತ್ರವು ನಮ್ಮ ಕೈಗೆ ಬರುವಂತೆ ಮಾಡಲು ನಾವು ಪ್ರಯತ್ನಿಸಬೇಕು. ಹಾಗೆ ಪ್ರಯತ್ನಿಸಿದರೆ ಈಗಿನ ಕಾಂಗ್ರೆಸ್ ಪಕ್ಷಕ್ಕಿಂತ ನಮ್ಮ ಪಕ್ಷವು ಹೆಚ್ಚು ಬಲಶಾಲಿಯಾಗದೆ ಇರಲಾರದು. ಅಂಥ ಸಮಯ ಜಾಗ್ರತೆ ಬರುವುದೆಂದೇ ನಾನು ನಂಬಿದ್ದೇನೆ."

ಕಳೆದ ೪-೬ ಸಾವಿರ ವರುಷಗಳಿಂದ ಸ್ಪೃಶ್ಯ ಹಿಂದುಗಳು ಈ ಆದಿ ಹಿಂದುಗಳಿಗೆ ಮಾಡುತ್ತಾ ಬಂದಿರುವ ನಾನಾ ಘೋರ ಹಿಂಸೆಗಳನ್ನೂ ಈಗಲೂ ಧಾರ್ಮಿಕ, ಸಾಮಾಜಿಕ, ಆರ್ಥಿಕ ಶೋಚನೀಯ ಸ್ಥಿತಿಯಲ್ಲಿ ಅವರನ್ನಿಟ್ಟಿರುವುದನ್ನೂ ನೋಡಿದರೆ ಡಾ. ಆಂಬೇಡಕರರು ನಮ್ಮನ್ನು ಎಷ್ಟು ಆಕ್ಷೇಪಿಸಿದರೂ ಕಡಿಮೆಯೇ ಸರಿಯೆಂದು ನಾವು ಒಪ್ಪಿಕೊಳ್ಳಬೇಕು.

ಈಗಲು ಕೂಡಾ ಬ್ರಾಹ್ಮಣಾದಿ ಸುಶಿಕ್ಷಿತ ಮತ್ತು ಧನಿಕ ಸ್ಪೃಶ್ಯ ಹಿಂದುಗಳ ಕೈಯಲ್ಲಿಯೇ ರಾಜ್ಯಸೂತ್ರವಿದ್ದುದೂ ನಿಜ. ಡಾ. ಆಂಬೇಡಕರರ ಅಭಿಪ್ರಾಯದಂತೆ ರಾಜ್ಯಸೂತ್ರವು ಬಡವರ ಮತ್ತು ಸಾಮಾಜಿಕ ಹೀನ ದೀನ ಸ್ಥಿತಿಗಳಲ್ಲಿರುವ ಆದಿಹಿಂದುಗಳೇ ಮೊದಲಾದವರ ಕೈಯಲ್ಲಿ ಬಂದಾಗಲೇ ಹಿಂದುಸ್ಥಾನಕ್ಕೆ ನಿಜವಾದ ಸ್ವಾತಂತ್ರ್ಯ ದೊರೆಯಿತೆಂದು ತಿಳಿಯಬೇಕು.

ಈಗಿನ ಕಾಂಗ್ರೆಸ್ ಪಕ್ಷದವರು ಮೊದಲಿನ ಸ್ಪೃಶ್ಯ ಹಿಂದುಗಳಂತೆ ಆದಿಹಿಂದುಗಳನ್ನು ಕಾಣುತ್ತಿದ್ದಾರೆಂದೂ ಇವರು ಆದಿ ಹಿಂದುಗಳ ಶತ್ರುಗಳೆಂದೂ ಡಾ. ಆಂಬೇಡಕರರು ಹೇಳುವುದು ಸರಿಯಲ್ಲ. ಈಗ ಸ್ಪೃಶ್ಯಹಿಂದುಗಳ ಕೈಯಲ್ಲಿಯೇ ಇರತಕ್ಕ ರಾಜ್ಯಸೂತ್ರವು ತಮ್ಮ ಜನಸಾಮಾನ್ಯದ ಕೈಯಲ್ಲಿ ಬರುವಂತೆ ಇವರು ಪ್ರಯತ್ನಿಸುವುದೇನೂ ಅನುಚಿತವಾದುದಲ್ಲ. ಆದರೆ ಬ್ರಿಟಿಶ್ ಸಾಮ್ರಾಜ್ಯವನ್ನು ಈ ದೇಶದಿಂದ ತಳ್ಳಿಹಾಕಲು ಅಷ್ಟು ಉತ್ಸಾಹವು ಇವರಲ್ಲಿಲ್ಲದಿದ್ದುದು ಮಾತ್ರ ದೊಡ್ಡ ದೋಷವು. ಜನಸಾಮಾನ್ಯದ ಕೈಯಲ್ಲಿ ರಾಜ್ಯಸೂತ್ರ ಬರಬೇಕಾದರೆ ಇವರು ಇಂಗ್ಲಿಷ್ ಸಾಮ್ರಾಜ್ಯವನ್ನು ಈ ದೇಶದಿಂದ ತಳ್ಳಿ ಹಾಕುವ ಕಾರ್ಯಕ್ಕೆ ತುಂಬಾ ಪ್ರೋತ್ಸಾಹಿಸಬೇಕಾದುದೇ ಅಗತ್ಯವು.

## ತ್ರಿವರ್ಣ ಧ್ವಜದ ವಿವೇಚನೆ.

### ಸರದಾರ ಪಟೇಲರ ಅಭಿಪ್ರಾಯ.

ಮೈಸೂರು ಪ್ರಾಂತದಲ್ಲಿ ರಾಷ್ಟ್ರಧ್ವಜ ಸತ್ಯಾಗ್ರಹದ ಹೋರಾಟ ನಡೆದಾಗ ಅನೇಕರು ರಾಷ್ಟ್ರಧ್ವಜದಲ್ಲಿರುವ ಮೂರು ಬಣ್ಣಗಳ ಸಂಬಂಧವಾಗಿ ವಿವೇಚಿಸುತ್ತಿದ್ದರಷ್ಟೆ. ಆಗ ಹೇಳುತ್ತಿದ್ದ ಕೆಲವರ ಅಭಿಪ್ರಾಯ ಸರಿಯಾಗಿರಲಿಲ್ಲವೆಂದೂ ಈ ಧ್ವಜಕ್ಕಾಗಿ ಸರಕಾರವು ಅಷ್ಟು ಭಯಪಡಬೇಕಾದ ಕಾರಣವಿಲ್ಲವೆಂದೂ ನಾವು ತ್ರಿವರ್ಣಗಳ ವಿವೇಚನೆಯನ್ನು ಆಗ ತಿಳಿಸಿದ್ದೆವು. ಆ ವಿವೇಚನೆಯ ಸತ್ಯತೆಯನ್ನು ಸರದಾರ ವಲ್ಲಭಭಾಯಿ ಪಟೇಲರವರು ತಾ. ೨೨-೫-೩೮ ನೇ ದಿನ ರಾಷ್ಟ್ರಧ್ವಜವನ್ನು ಕುರಿತು ಸಾಂಗಲಿಯಲ್ಲಿ ಮಾಡಿದ ಈ ಕೆಳಗಿನ ವ್ಯಾಖ್ಯೆಯಿಂದ ತಿಳಿದುಕೊಳ್ಳಬಹುದು. ಸರದಾರರು ಹೀಗೆ ಹೇಳಿದರು—

"ರಾಷ್ಟ್ರಧ್ವಜದಲ್ಲಿರತಕ್ಕ ಮೂರು ಬಣ್ಣಗಳಲ್ಲಿ ಕೆಂಪು ಮತ್ತು ಹಸರು ಇವು ಹಿಂದು, ಮುಸಲ್ಮಾನ್ ಜನರ ಬಿಳಿದು ಶೀಖ, ಪಾರ್ಶಿ ಮೊದಲಾದ ಇತರ ಸಮಾಜದವರ ದ್ಯೋತಕ. ಅವುಗಳಲ್ಲಿರುವ ರಾಟೆಯು ನೂಲು ತೆಗೆಯಲ್ಪಡುವ ಯಂತ್ರದ ಗುರುತಲ್ಲ. ಅದರಿಂದ ಲಕ್ಷಾಂತರ ಜನಗಳ ಜೀವನ ನಡೆಯುತ್ತಿರುವ ಕಾರಣ ಅದು ಸತ್ಯ ಮತ್ತು ಅಹಿಂಸೆಗಳ ಗುರುತಾಗಿದೆ."

ರಾಷ್ಟ್ರಧ್ವಜವು ಈ ಪ್ರಕಾರ ಹಿಂದುಸ್ಥಾನದಲ್ಲಿರುವ ಎಲ್ಲ ಜಾತಿಮತಪಂಥದವರ ಸಂಸ್ಕೃತಿ ದ್ಯೋತಕವಾಗಿಯೂ ಅವರು ಸುಖಶಾಂತಿಗಳಿಂದ ಜೀವಿಸಬೇಕೆಂಬ ಉದಾತ್ತ ಮನೋಭಾವವನ್ನು ವ್ಯಕ್ತಗೊಳಿಸತಕ್ಕದ್ದಾಗಿಯೂ ಇದೆಯೆಂದೇ ತಿಳಿದು ಇದೇ ಅಭಿಪ್ರಾಯವನ್ನು ಪ್ರಚಾರಗೊಳಿಸುವುದು ಅತ್ಯಗತ್ಯವಾಗಿದೆ.

## ರಾಷ್ಟ್ರಧ್ವಜಕ್ಕೆ ಅವಮಾನ!

### ನಿಜಾಮು ರಾಜ್ಯದಲ್ಲಿ ದಬ್ಬಾಳಿಕೆ.

ರಾಷ್ಟ್ರಧ್ವಜವು ಹಿಂದುಸ್ಥಾನದ ಎಲ್ಲ ಜಾತಿ ಮತ ಪಂಥದವರ ಸುಖ ಶಾಂತಿಗಳ ಸ್ಥಾಪನೆಯ ದ್ಯೋತಕವಾದುದು. ಹೀಗಿರುವಾಗ ಹಿಂದುಸ್ಥಾನದಲ್ಲಿಯೇ ಹುಟ್ಟಿ ಬೆಳೆದು, ಹಿಂದುಸ್ಥಾನವನ್ನೇ ಮಾತೃಭೂಮಿಯಾಗಿ ತಿಳಿದವರು-ಅವರು ಅರಸರೇ ಇರಲಿ ಅಥವಾ ಆಳುಗಳೇ ಇರಲಿ-ರಾಷ್ಟ್ರಧ್ವಜಕ್ಕೆ ಅವಮಾನಮಾಡುವುದು ತಮ್ಮ ಅವಮಾನವನ್ನೇ ಮಾಡಿಕೊಂಡಂತಲ್ಲವೆ? ನಿಜಾಮು ರಾಜ್ಯದಲ್ಲಿಯೂ ಇದರ ಮೇಲೆ ದಬ್ಬಾಳಿಕೆ ಪ್ರಾರಂಭವಾದ ಈ ಕೆಳಗಿನ ರೀತಿಯು ನಿಜವಾಗಿದ್ದರೆ ಆ ಸರಕಾರದ ಕ್ರೂರತನವು ವ್ಯಕ್ತವಾಗದೆ ಇರಲಾರದು. ಆ ಸಂಗತಿಯು ಈ ಕೆಳಗಿನಂತೆ ಪ್ರಕಟವಾಗಿದೆ.

"ಬುಲಢಾಣಾ ಎಂಬಲ್ಲಿಂದ ಕಾಂಗ್ರೆಸ್ ಪಕ್ಷದ ಪ್ರಮುಖ ಮುಂದಾಳುಗಳಾದ ಶ್ರೀ. ಭಿಕಮಸಿಂಗ್ ಎಂಬುವವರು ನಿಜಾಮು ರಾಜ್ಯದ ಭರಾಜ ಎಂಬಲ್ಲಿ ತಾ. ೨೨-೫-೩೮ ನೆಯ ದಿನ ಕೂಡಿದ್ದ ಒಕ್ಕಲಿಗರ ಪರಿಷತ್ತಿಗೆ ೨೦ ಸ್ವಯಂಸೇವಕರನ್ನು ಕರೆದುಕೊಂಡು ಹೋಗಿದ್ದರು.

ಇವರಿಗೆ ಅಲ್ಲಿಯ ಪೋಲಿಸರು ಮತ್ತು ತಹಶೀಲದಾರರು ಬಲವಾಗಿ ಹೊಡೆದು ಇನ್ನುಮೇಲೆ ನಿಜಾಮ ರಾಜ್ಯದಲ್ಲಿ ಬಾರದಂತೆ ಹೊಣೆಯನ್ನು ತೆಗೆದುಕೊಂಡು ತಮ್ಮ ರಾಜ್ಯದಿಂದ ಹೊರಗೆ ಹಾಕಿದರು. ಆ ಮೇಲೆ ರಾಷ್ಟ್ರಧ್ವಜವನ್ನು ಹರಿದು ಸುಟ್ಟುಬಿಟ್ಟರು. ಈ ಕಾರ್ಯಕ್ಕಾಗಿ ೨೦೦ ಪೋಲಿಸರನ್ನು ಅಲ್ಲಿಗೆ ಕರೆಸಿದ್ದರು."

ವ್ಯಾಜ್ಯ ಹೂಡಿ, ಕಾರಾಗೃಹ ಶಿಕ್ಷೆ ವಿಧಿಸುವ ಇಪ್ಪತ್ತನೆಯ ಶತಮಾನದ ಇಂಗ್ಲಿಷ್ ಸರಕಾರದ ಪದ್ಧತಿಯನ್ನು ಬಿಟ್ಟು ಈ ಸರಕಾರವು ೧೮ ನೆಯ ಶತಮಾನದ ಮುಸಲ್ಮಾನಿ ರಾಜ್ಯದ ದೊಣ್ಣೆ ಕಾಯಿದವನ್ನೇ ಪ್ರಾರಂಭಿಸಿತೆಂದು ಈ ದಬ್ಬಾಳಿಕೆಯಿಂದ ಜನರು ಯೋಚಿಸಲಾರರೆ?

( ೯ ನೆಯ ಪುಟದಿಂದ ಬಂದುದು. )

ಮೈಸೂರು ಶ್ರೀಮನ್ಮಹಾರಾಜರವರ ಆಧಿಪತ್ಯಕ್ಕೊಳಪಟ್ಟ ಹಳೇಬೀಡು, ಶ್ರವಣಬೆಳಗೊಳ ಬೇಲೂರು ಮೊದಲಾದ ಸ್ಥಳಗಳಲ್ಲಿರುವ ಕಟ್ಟಡಗಳು ನಮ್ಮ ನಾಡಿನ ಶಿಲ್ಪಿಗಳ ಅದ್ಭುತ ಸಾಮರ್ಥ್ಯವನ್ನು ತೋರಿಸುತ್ತವೆ. ಇತಿಹಾಸವಲ್ಲಿ ಸುಪ್ರಸಿದ್ಧರಾದ ಸರ್. ಯದುನಾಥ ಸರಕಾರ ಮತ್ತು ಡಾ. ಕಾಲಿದಾಸ ನಾಗ ಮೊದಲಾದವರು ಬಾದಾಮಿಯೇ ಮೊದಲಾದ ಸ್ಥಳಗಳನ್ನು ನೋಡಿ ನಮ್ಮ ದೇಶದ ಶಿಲ್ಪಕಲೆಯನ್ನು ಹೊಗಳಿರುತ್ತಾರೆ.

ಸಾಹಿತ್ಯ.

ಕನ್ನಡ ವಾಙ್ಮಯದ ಬಗ್ಗೆ ಒಂದೆರಡು ಮಾತುಗಳನ್ನು ಹೇಳುತ್ತೇವೆ. ಯಾವುದಾದರೊಂದು ದೇಶದ ಇತಿಹಾಸವು ತೇಜಃಪುಂಜವಾಗಬೇಕಾದರೆ ಆ ದೇಶದ ಸಾಹಿತ್ಯವೂ ಒಂದು ಕಾರಣವಾಗಿರುತ್ತದೆ. ಇಂದಿನ ನಮ್ಮ ಸಾಹಿತ್ಯವೇ ಮುಂದಿನ ಜನಾಂಗದ ಏಳಿಗೆಯ ಹೆಗ್ಗುರುತು. ಇಂತಹ ಸಾಹಿತ್ಯವನ್ನು ಬೆಳೆಸಲಿಕ್ಕೆ ನಮ್ಮಲ್ಲಿ ಒಂದು ಸಾವಿರಕ್ಕಿಂತಲೂ ಹೆಚ್ಚು ಕವಿಗಳಾಗಿರುತ್ತಾರೆ. ಈ ಸಾವಿರ ಜನ ಕವಿಗಳಲ್ಲದೆ ೩೦೦ ಜನ ಶಿವಶರಣರು ಎರಡೆಂಬತ್ತು ಕೋಟಿ ವಚನಗಳನ್ನು ಬರೆದು ಕರ್ನಾಟಕ ವಾಙ್ಮಯಕ್ಕೆ ಮಹದುಪಕಾರವನ್ನು ಮಾಡಿರುತ್ತಾರೆ. ಹರಿದಾಸರೂ ಕೂಡ ಹೇರಳವಾಗಿ ಪದಗಳನ್ನು ವಿವಿಧ ರೀತಿಯಿಂದ ರಚಿಸಿ ನಮ್ಮ ಸಾಹಿತ್ಯವನ್ನು ಬೆಳೆಸಿರುತ್ತಾರೆ.

ಈ ೨೦ ನೆಯ ಶತಮಾನದಲ್ಲಿ ಮೈಸೂರು ಶ್ರೀಮನ್ಮಹಾರಾಜರವರು ಕರ್ನಾಟಕದ ಸಾಹಿತ್ಯ ಸಂಸ್ಕೃತಿ ಹಾಗೂ ಜನಾಂಗದ ಅಭ್ಯುದಯಕ್ಕಾಗಿ ವಿಶೇಷವಾದ ಸಹಾಯವನ್ನೂ ಉತ್ತೇಜನವನ್ನೂ ಕಲ್ಪಿಸಿಕೊಟ್ಟಿರುತ್ತಾರೆ. ಈ ವಚನಗಳಿಗೆ ಮಹಾಮಹೋಪಾಧ್ಯಾಯರೂ, ಕನ್ನಡ ಭಾಷೆಯ ಸಂಶೋಧನಕ್ಕೆ ತಮ್ಮ ಜೀವಿತವನ್ನೇ ಅರ್ಪಣಮಾಡಿದವರೂ ಆದ ವೈ. ಆರ್. ನರಸಿಂಹಾಚಾರ್ಯರು ಕನ್ನಡ ಉಪನಿಷತ್ತುಗಳೆಂದು ಸ್ಪಷ್ಟವಾಗಿ ಹೇಳಿರುತ್ತಾರೆ.

ಏಕೀಕರಣ.

ಇಂದಿನ ಜಾಗತಿಕ ಸ್ಥಿತಿಯಲ್ಲಿ ನಮ್ಮ ಪ್ರಾಂತವನ್ನು ಇತರ ಪ್ರಾಂತಗಳಿಗೆ ತುಲನಾತ್ಮಕ ದೃಷ್ಟಿಯಿಂದ ನೋಡಿದರೆ ನಾವು ಪ್ರತಿಯೊಂದು ವಿಷಯದಲ್ಲಿ ಹಿಂದೆ ಬಿದ್ದಿರುವದು ನಮಗೆ ಕಾಣಿಸುತ್ತಲಿದೆ. ಕರ್ನಾಟಕವು ಹಲವು ಸರಕಾರಗಳಲ್ಲಿ ಹಂಚಿಹೋಗಿರುವದೇ ಇದಕ್ಕೆ ಮುಖ್ಯ ಕಾರಣವಾಗಿರುತ್ತದೆ. ಒಂದು ಸಮೃದ್ಧಿಯಾದ ಮನೆತನವು ಅನಂತಭಾಗವಾಗಿಬಿಟ್ಟರೆ ಆ ಮನೆತನದ ಪರಿಸ್ಥಿತಿಯು ಎಂತಹ ವಿಪತ್ತಿಗೀಡಾಗುತ್ತದೆಂಬುದು ಎಲ್ಲರಿಗೂ ತಿಳಿದ ಮಾತಾಗಿರುತ್ತದೆ. ಕನ್ನಡ ಪ್ರಾಂತದ ಸ್ಥಿತಿಯು ಹೀಗೆ ಆಗಿರುವದರಿಂದ ಕನ್ನಡಿಗರ ವರ್ಚಸ್ಸು ಯಾವ ಪ್ರಾಂತದಲ್ಲಿಯೂ ಇರುವದಿಲ್ಲ. ನಮ್ಮ ವಿದ್ಯಾರ್ಥಿಗಳ ಸೌಕರ್ಯಕ್ಕೆ ಬ್ರಿಟಿಶ್ ಕರ್ನಾಟಕದಲ್ಲಿ ವಿಶ್ವವಿದ್ಯಾನಿಲಯವಿಲ್ಲ. ವ್ಯಾಪಾರಸ್ಥರಿಗೆ ಯೋಗ್ಯ ಬಂದರವಿಲ್ಲ. ನದಿಗಳಿಗೆ ಕಾಲುವೆಗಳಿಲ್ಲ. ಕರ್ನಾಟಕವು ಏಕೀಕೃತವಾದರೆ ಇವೆಲ್ಲವೂ ಸಾಧ್ಯವಾಗುವವು. ಕರ್ನಾಟಕವು ಪ್ರಕೃತಿಸೌಂದರ್ಯ ಅಮೌಲ್ಯ ಖನಿಜ, ಅರಣ್ಯ, ಜನಸಂಖ್ಯೆ, ವಿಸ್ತೀರ್ಣ ಬಂದರ ಯೋಗ್ಯವಾದ ಸ್ಥಳ, ಫಲವತ್ತಾದ ಭೂಮಿ, ನದಿ, ಆರ್ಥಿಕ ಮತ್ತು ಸಾಮಾಜಿಕ ಎಲ್ಲ ರೀತಿಯಿಂದಲೂ ಏಕೀಕರಣಕ್ಕೆ ಯೋಗ್ಯವಾಗಿದೆ.

ವಿಶಾಲ ಹೃದಯದವರಾದ ಮಹಾತ್ಮಾ ಗಾಂಧಿಯವರೂ ಕೂಡ ಕರ್ನಾಟಕ ಏಕೀಕರಣಕ್ಕೆ ಬೆಂಬಲವನ್ನು ಕೊಟ್ಟಿರುತ್ತಾರೆ. ಆದ್ದರಿಂದ ಸರ್ವರೂ ಈ ಕಾರ್ಯದಲ್ಲಿ ಆಸಕ್ತಿಯನ್ನು ವಹಿಸಬೇಕು. ಕರ್ನಾಟಕ ಏಕೀಕರಣದಿಂದ ಕನ್ನಡಿಗರು ತೃಪ್ತರಾಗುವದನ್ನು ನೋಡಿ ಪರಪ್ರಾಂತೀಯರೂ ಸಂತೋಷಪಡಬೇಕು. ಈಗಾಗಲೇ ಮುಂಬಯಿ ಮತ್ತು ಮದ್ರಾಸ ಕಾಯದೆಯ ಸಭೆಗಳಲ್ಲಿ ಏಕೀಕರಣದ ಗೊತ್ತುವಳಿಯು ಪಾಸಾಗಿರುವದು ಒಂದು ಹೆಜ್ಜೆಯನ್ನು ಮುಂದೆ ಇಟ್ಟಂತಾಗಿರುತ್ತದೆ.

ಇದನ್ನು ಸಾಧಿಸಿಕೊಳ್ಳಬೇಕಾದರೆ ಕನ್ನಡಿಗರು ಮೊದಲು ಏಕೀಕೃತರಾಗಬೇಕು. ಕನ್ನಡಿಗರೆಲ್ಲರೂ ಒಂದೇ ಎಂಬುವ ಭಾವನೆಯನ್ನು ತಾಳಬೇಕು. ನಮ್ಮ ಕುಲವು ಕನ್ನಡ ಕುಲವು, ನಮ್ಮ ಸಂಸ್ಕೃತಿಯು ಕನ್ನಡ. ಇಂತಹ ಕನ್ನಡಕುಲದ ಉದ್ಧಾರವಾಗಬೇಕಾದರೆ ಜಾತಿ, ಮತ, ಪಂಥಗಳ ತೊಡಕನ್ನು ತರಿದೆ ಸಮಸ್ತ ಕರ್ನಾಟಕಸ್ಥರ ಉದ್ಧಾರವು ಕನ್ನಡದೇಶದ ಏಕೀಕರಣದಲ್ಲಿಯೇ ಇರುತ್ತದೆಂದು ತಿಳಿದು ಸರ್ವರೂ ಪ್ರಯತ್ನಿಸಬೇಕಾಗಿರುತ್ತದೆ.

ಕನ್ನಡ ನಾಡು ಒಟ್ಟುಗೂಡದ ವಿನಹ ನಮ್ಮಲ್ಲಿ ಪರಸ್ಪರ ಪ್ರೇಮವು ಹುಟ್ಟಲಾರದು. ಅಂತೆಯೇ ಈಗ ಕನ್ನಡಿಗರಾದ ನಾವು ಇಂದಿಗೆ ಪರಕೀಯರ ಅಪಹಾಸ್ಯಕ್ಕೆ ಗುರಿಯಾಗಿದ್ದೇವೆ. ಮತ್ತು ಸ್ವಾಭಿಮಾನವನ್ನು ಕಳೆದುಕೊಂಡಿದ್ದೇವೆ. ಆದ್ದರಿಂದ ಇಂತಹ ಪರಮ ಪವಿತ್ರವಾದ ಏಕೀಕರಣ ಕಾರ್ಯವನ್ನು ಸಾಧಿಸಲಿಕ್ಕೆ ಕನ್ನಡಿಗರು ಬೇಕಾದಂತಹ ಸ್ವಾರ್ಥತ್ಯಾಗವನ್ನು ಮಾಡಲಿಕ್ಕೆ ಸಜ್ಜಾಗಬೇಕು. ಭಾರತ ದೇಶದಲ್ಲಿ ಬೇರೆ ಬೇರ ಭಾಷೆಗಳನ್ನಾಡತಕ್ಕ ಅನೇಕ ಪ್ರಾಂತಗಳಿರುತ್ತವೆ. ಪ್ರತಿಯೊಂದು ಪ್ರಾಂತವು ತನ್ನ ಸುಧಾರಣೆಯನ್ನು ಮಾಡಿಕೊಂಡರೆ ಹಿಂದುಸ್ಥಾನದ ಉದ್ಧಾರವೇ ಆಗುವದು. ಪ್ರಾಂತಗಳ ನಿರ್ಮಾಣವು ಹಿಂದುಸ್ಥಾನ ಸ್ವರಾಜ್ಯಭವನಕ್ಕೆ ಆಧಾರಸ್ತಂಭದಂತಿರುತ್ತದೆ. ಈ ತತ್ವವನ್ನು ಕಾಂಗ್ರೆಸ್ಸೂ ಕೂಡ ಈ ಮೊದಲೇ ಒಪ್ಪಿರುತ್ತದೆ.

ಸಕಾಲದಲ್ಲಿ ಎಚ್ಚರಗೊಂಡ ಸಿಂಧ, ಓರಿಸಾ ಪ್ರಾಂತಗಳು ಬೇರೆಯಾದವು. ಸಾಕಷ್ಟು ಪ್ರಯತ್ನ ಆಗದ್ದರಿಂದ ಕನ್ನಡಿಗರ ಕಾರ್ಯವಾಗಿಲ್ಲ. ಹಿಂದುಸ್ಥಾನಕ್ಕೆ ಸ್ವಾತಂತ್ರ್ಯದ ಮಹತ್ವವಿದ್ದಷ್ಟು ಕನ್ನಡಿಗರಿಗೆ ಕರ್ನಾಟಕ ಏಕೀಕರಣದ ಮಹತ್ವವಿದೆ. ಕರ್ನಾಟಕ ಏಕೀಕರಣವು ಕನ್ನಡಿಗರ ಜೀವಾಳವಾಗಿರುವದರಿಂದ ಅದನ್ನು ಸಾಧಿಸಲೇಬೇಕೆಂದು ಮತ್ತೊಂದು ಸಾರೆ ಹೇಳುವೆವು.

ಎಲ್ಲ ಭಾಗದ ಕನ್ನಡಿಗರ ಪ್ರಾತಿನಿಧ್ಯದಿಂದ ಕೂಡಿದ ಈ ಸಭೆಯಲ್ಲಿ ಭಾಗವನ್ನು ವಹಿಸುವ ಪ್ರಸಂಗವನ್ನು ಸ್ವಾಗತ ಸಂಘದವರು ಒದಗಿಸಿಕೊಟ್ಟದ್ದು ನಮಗೆ ಪರಮ ಸಂತೋಷವನ್ನುಂಟುಮಾಡಿರುತ್ತದೆಂದು ಮತ್ತೊಂದು ಸಾರೆ ಹೇಳದಿರಲಾರೆವು. ಕರ್ನಾಟಕ ಏಕೀಕರಣಕ್ಕೆ ನಮ್ಮ ಸಂಸ್ಥಾನದ ಸಂಪೂರ್ಣ ಸಹಾನುಭೂತಿಯುಂಟು.

ಸ್ವಾಗತ ಸಮಿತಿಯವರು ಈ ಸಭೆಗೆ ಅಧ್ಯಕ್ಷರನ್ನಾಗಿ ಆರಿಸಿರುವ ಶ್ರೀ. ಕೆ. ಆರ್. ಕಾರಂತ ಬಿ. ಎ, ಬಿ. ಎಲ್. ಎಮ್. ಎಲ್. ಎ. ಇವರು ಸಮರ್ಥರಿರುವರು. ಅವರ ನೇತೃತ್ವದ ಕೆಳಗೆ ಈ ಸಭೆಯು ಯಶಸ್ವಿಯಾಗುವದೆಂದು ನಮಗೆ ಮನವರಿಕೆಯಾಗಿರುತ್ತದೆ. ಈ ಸಭೆಯ ಕಾರ್ಯವು ಜಯಪ್ರದವಾಗಿ ನಡೆದು ಕನ್ನಡಿಗರ ಇಷ್ಟಾರ್ಥಗಳು ಕೈಗೂಡಲೆಂದು ಹಾರೈಸಿ ಈ ಸಭೆಯು ಪ್ರಾರಂಭವಾಯಿತೆಂದು ಸಂತೋಷದಿಂದ ಪ್ರಕಟಿಸುತ್ತೇವೆ.

ಸರ್ವೇಜನಾಃ ಸುಖಿನೋಭವಂತು !

॥ಓಂ ಶಿವಂ ಭೂಯಾತ್॥

# ಅಧ್ಯಕ್ಷರ ಭಾಷಣ.

ಗೆಳೆಯರೆ,

ನಿಮ್ಮ ಪರಿಷತ್ತಿನ ಅಧಿವೇಶನಕ್ಕೆ ಅಧ್ಯಕ್ಷನಾಗಬೇಕೆಂದು ನನ್ನನ್ನು ಪ್ರೀತಿಪೂರ್ವಕವಾಗಿ ಕೇಳಿಕೊಂಡುದಕ್ಕಾಗಿ ತಮಗೆ ಅಂತಃಕರಣಪೂರ್ವಕವಾಗಿ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಆದರೆ ಈ ಸ್ಥಾನವನ್ನು ಸ್ವೀಕರಿಸಲು ನಾನು ಸ್ವಲ್ಪ ಅನುಮಾನದಿಂದ ಒಪ್ಪಿಕೊಳ್ಳಬೇಕಾಯಿತು. ಈ ಕರ್ತವ್ಯವನ್ನು ಜರುಗಿಸಲು ನನ್ನ ಒಪ್ಪಿಗೆಯಿಲ್ಲವೆಂದಲ್ಲ; ನಮ್ಮನ್ನು ಎದುರಿಸುವ ಸಮಸ್ಯೆಯ ಹೆಚ್ಚಿನ ಹೊಣೆಗಾರಿಕೆಯನ್ನು ಅರಿತು ಮತ್ತು ಅದನ್ನು ಪೂರ್ಣವಾದ ಮತ್ತು ಶಕ್ಯದಾದ ರೀತಿಯಲ್ಲಿ ತೂಗಿಸಿಕೊಂಡುಹೋಗುವ ಶಕ್ತಿಯು ನನ್ನಲ್ಲಿ ಇದೆಯೊ ಎಂಬ ಸಂಶಯದಿಂದ ನಾನು ಸ್ವಲ್ಪ ಅನುಮಾನಿಸಿದೆನು. ಆದರೂ ಅದನ್ನು ನಾನು ಸ್ವೀಕರಿಸಿದ್ದೇನೆ. ಮತ್ತು ಈ ಪರಿಷತ್ತಿನ ಕಾರ್ಯ ಕಲಾಪಗಳನ್ನು ಜಯಶೀಲವಾಗಿ ನೆರವೇರಿಸುವಲ್ಲಿ ತಾವು ನನಗೆ ತಮ್ಮ ಪ್ರೀತಿಪೂರ್ವಕವಾದ ಸಹಾಯ್ಯ ಸಹಾನುಭೂತಿಗಳನ್ನು ನೀಡಬೇಕೆಂದು ಬೇಡುವೆನು.

೨. ನಾವು ಈಗ ನಮ್ಮ ಚಳವಳದ ಒಳ್ಳೇ ಇಕ್ಕಟ್ಟಿನ ಪ್ರಸಂಗದಲ್ಲಿ ನೆರಿದಿದ್ದೇವೆ. ಬ್ರಿಟಿಷ್ ಭಾರತದ ಕನ್ನಡ ಮಾತನಾಡುವ ಭಾಗಗಳನ್ನೆಲ್ಲ ಏಕೀಕರಿಸಿ ಒಂದು ಪ್ರತ್ಯೇಕ ಪ್ರಾಂತವನ್ನು ನಿರ್ಮಿಸಬೇಕೆಂದು ಕಳೆದ ೨೦ ವರುಷಗಳಿಂದ ಎಡೆಬಿಡದೆ ಮತ್ತು ಏಕವಾಕ್ಯತೆಯಿಂದ ನಡೆದ ಆಂದೋಲನವನ್ನು ಇನ್ನೂ ಹಾಗೆಯೇ ಸಾಗಿಸಬೇಕೆನ್ನುವುದು ಮತ್ತು ಸ್ವಯಂಸಿದ್ಧವಾಗಿರುವ ಬೇಡಿಕೆಗಳನ್ನು ಇನ್ನೂ ಸಿದ್ಧಪಡಿಸಬೇಕೆನ್ನುವುದು ಅತ್ಯಂತ ದುರ್ದೈವದ ಸಂಗತಿಯು.

೩. ಮುಂಬೈ ಮತ್ತು ಮದ್ರಾಸ ಪ್ರಾಂತಗಳ ಕನ್ನಡ ಭಾಗಗಳನ್ನು ಮತ್ತು ಕೊಡಗು ಸೀಮೆಯನ್ನು ಸೇರಿಸಿ ಆಡಳಿತದ ಒಂದು ಪ್ರತ್ಯೇಕ ಪ್ರಾಂತವನ್ನಾಗಿ ಮಾಡಬೇಕೆಂಬ ನಮ್ಮ ಬೇಡಿಕೆಗಳು ನ್ಯಾಯ ಹಾಗೂ ವ್ಯವಹಾರ್ಯವಾದವುಗಳೆಂದು ಬಲ್ಲವರೆಲ್ಲರೂ ಒಪ್ಪಿಕೊಂಡಿದ್ದಾರೆ. ಅನೇಕ ಸಾರ್ವಜನಿಕ ಸಂಘ ಸಂಸ್ಥೆಗಳ ಗೊತ್ತುವಳಿಗಳಿಂದ ಹಾಗೂ ಭಾಷಣ ಮತ್ತು ಪ್ರಕಟನೆಗಳಿಂದ ಆಗಾಗ್ಗೆ ಇಂತಹ ಪ್ರಾಂತ ನಿರ್ಮಾಣಕ್ಕಾಗಿ ಮಂಡಿಸಿದ ಬೇಡಿಕೆಗೆ ಎಲ್ಲಿಯೂ ವಿರೋಧವುಂಟಾದಂತೆ ಇಲ್ಲ. ಆದುದರಿಂದ ಆ ವಿಷಯವನ್ನು ಮತ್ತೆ ಎತ್ತುವುದರಿಂದ ಚರ್ವಿತಚರ್ವಣಮಾಡಿ ವ್ಯರ್ಥವಾಗಿ ನಿಮ್ಮ ವೇಳೆಯನ್ನು ಹಾಳುಮಾಡಿದಂತಾಗುವದು. ೧೯೧೨ ರಲ್ಲಿ ವಂಗವಿಭಜನೆಯನ್ನು ರಹಿತಪಡಿಸಿದಬಳಿಕ ಮತ್ತು ಮಾಂಟೆಗ್ಯೂ ಚೆಮ್ಸಫರ್ಡ ವರದಿಯಲ್ಲಿ, ೧೯೧೯ ನೆಯ ಗವರ್ನಮೆಂಟ ಆಫ್ ಇಂಡಿಯಾ ಆಕ್ಟಿನಲ್ಲಿ, ಸೈಮನ್ ಕಮಿಶನ್ ರಿಪೋರ್ಟಿನಲ್ಲಿ, ಜಾಯಿಂಟ್ ಸಿಲೆಕ್ಟ ಕಮಿಟಿಯ ರಿಪೋರ್ಟಿನಲ್ಲಿ ಮತ್ತು ೧೯೩೫ ರ ಗವರ್ನಮೆಂಟ ಆಫ್ ಇಂಡಿಯಾ ಆಕ್ಟಿನ ಮೇರೆಗೆ ಸಿಂಧ ಮತ್ತು ಓರಿಸಾಗಳನ್ನು ಪ್ರತ್ಯೇಕಿಸುವಾಗ ಸರಕಾರದವರು ಭಾಷಾನುಗುಣ ಪ್ರಾಂತರಚನೆಯ ತತ್ವವನ್ನು ಒಪ್ಪಿಕೊಂಡಿದ್ದಾರೆ. ಅದಲ್ಲದೆ ಭಾರತೀಯ ಪ್ರಜೆಗಳು ಕೂಡ ಭಾಷಾನುಗುಣ ಪ್ರಾಂತರಚನೆಯ ತತ್ವಕ್ಕೆ ಸಮ್ಮತಿಯನ್ನಿತ್ತಿದ್ದಾರೆ. ರಾಷ್ಟ್ರೀಯ ಸಭೆಯ ವ್ಯವಹಾರದ ಮಟ್ಟಿಗಂತೂ ೧೯೨೦ ರಿಂದ ಕರ್ನಾಟಕವು ಸ್ವತಂತ್ರ ಪ್ರಾಂತವಾಗಿದೆ. ನೆಹರು ಕಮಿಟಿಯ ವರದಿಯಲ್ಲಿ ಸಹ ಕರ್ನಾಟಕದ ಪ್ರತ್ಯೇಕ ಪ್ರಾಂತದ ಬೇಡಿಕೆಯು ನ್ಯಾಯವಾದುದೆಂದು ಒಪ್ಪಿಕೊಳ್ಳಲಾಗಿದೆ. ಮುಂದೆ ೧೯೨೮ ರ ಸರ್ವಪಕ್ಷೀಯ ಪರಿಷತ್ತಿನಲ್ಲಿಯೂ ೧೯೨೦ ರಿಂದ ೩೭ ರ ವರೆಗೆ ಆಗಾಗ್ಗೆ ಮುಂಬೈ, ಮದರಾಸ ಮತ್ತು ಕೊಡಗಿನ ಶಾಸನಮಂಡಲಗಳಲ್ಲಿಯೂ ಸ್ವತಂತ್ರ ಕರ್ನಾಟಕವಾಗುವ ಬಗ್ಗೆ ಅನುಕೂಲವಾದ ಗೊತ್ತುವಳಿಗಳಾಗಿವೆ. ಕಳೆದ ಮಾರ್ಚ ಎಪ್ರಿಲ್ ತಿಂಗಳುಗಳಲ್ಲಿ ಮದರಾಸ ಮತ್ತು ಮುಂಬೈ ಶಾಸನ ಮಂಡಲಗಳಲ್ಲಿ ಈ ನಮ್ಮ ಬೇಡಿಕೆಯ ಪುನರುಚ್ಚಾರವಾಗಿ ಅದನ್ನು ಸ್ವೀಕರಿಸಲಾಗಿದೆ. ಅಖಿಲ ಭಾರತೀಯ ಕಾ. ಕಮಿಟಿಯು
ಕಾಲಕಾಲಕ್ಕೆ ಈ ಬೇಡಿಕೆಗೆ ಬೆಂಬಲವನ್ನು ಕೊಟ್ಟಿದೆ.

೪. ಇಂತಹ ಸರ್ವಸಮ್ಮತವಾದ ಬೇಡಿಕೆಗೆ ಭಾರತ ಉಪಮಂ
ತ್ರಿಗಳಾದ ಲಾರ್ಡಸ್ಟಾನ್ಲಿಯವರು ಮೇ ೨ ನೆಯ ತಾರೀಖಿನ
ದಿವಸ ಹೌಸ್ ಆಫ್ ಕಾಮನ್ಸಿನಲ್ಲಿ ತಮ್ಮ ನಾಯಕರಾದ ಭಾರ
ತ ಮಂತ್ರಿಗಳು "ಈಗಿನ ಸಂದರ್ಭದಲ್ಲಿ ಪ್ರತ್ಯೇಕ ಪ್ರಾಂತಗಳ
ನ್ನು ನಿರ್ಮಿಸುವ ಧೋರಣೆಯನ್ನು ಸ್ವೀಕರಿಸುವುದು ಭಾರತದ ಹಿ
ತದ ದೃಷ್ಟಿಯಿಂದ ಸರಿಯಾಗಿಲ್ಲ" ಎಂಬು ಭಾವಿಸಿದ್ದಾರೆಂದು
ಹೇಳಿದುದು ತುಂಬಾ ವಿಷಾದಕರವಾದ ವಿಷಯು. ಆದರೆ ನನ್ನ
ಮಟ್ಟಿಗೆ ಇಂತಹ ಪ್ರಾಂತನಿರ್ಮಾಣವು ಈಗಲೆ ಆಗಬೇಕು, ಇಲ್ಲ
ವಾದರೆ ಇನ್ನೆಂದಿಗೂ ಇದಕ್ಕೆ ಅನುಕೂಲ ಕಾಲವು ಒದಗಲಿಕ್ಕಿ
ಲ್ಲವೆಂದು ನನ್ನ ದೃಢವಾದ ನಂಬಿಕೆ. ಮದರಾಸಿನ ೯ ತಿಂಗಳ
ನಿವಾಸ ಮತ್ತು ನಮ್ಮ ಮದ್ರಾಸ ಇಲಾಖೆಯ ಬಹು ಭಾಗದಲ್ಲಿ
ನಾನು ಮಾಡಿದ ಪ್ರವಾಸ ಇವುಗಳಿಂದ ಮದ್ರಾಸಿನಂತಹ ಬಹು
ಭಾಷೆಗಳ ಕಿಚ್ಚಡಿಯಂತಹ ಪ್ರಾಂತವನ್ನು ಭಾಷಾನುಗುಣ ಪ್ರಾಂ
ತ ರಚನೆಯ ತತ್ವದ ಮೇರೆಗೆ ವಿಭಜಿಸುವುದು ಅತ್ಯಂತ ಅಗತ್ಯ
ವಾದ ವಿಷಯವೆಂದು ನನಗೆ ಸಂಪೂರ್ಣ ಮನವರಿಕೆಯಾಗಿದೆ. ಈ
ಗಿನ ಪ್ರಾಂತಗಳು ಈಗ ಇದ್ದಂತೆಯೇ ಸಾಗುವುದಾದರೆ ಪ್ರಾಂತೀ
ಯ ಸ್ವಾಯತ್ತತೆ ಮತ್ತು ಪ್ರಜಾಪ್ರಭುತ್ವವೆಂಬುದಕ್ಕೆ ಅರ್ಥವೆ
ಉಳಿಯುವದಿಲ್ಲ. ಏಕೆಂದರೆ ಶಾಸನ ಮಂಡಲಗಳ ಸದಸ್ಯರು
ತಮ್ಮ ದೇಶ ಭಾಷೆಯಲ್ಲಿ ಮಾತನಾಡಿದರೆ ಇನ್ನೊಂದು ಪ್ರಾಂತೀ
ಯ ಭಾಷೆಯವರಿಗೆ ಅರ್ಥವಾಗುವದಿಲ್ಲ. ಆಂಗ್ಲ ಭಾಷೆಯಲ್ಲಿ
ಮಾತನಾಡಿದರೆ ಬಹು ಸಂಖ್ಯಾಕರಿಗೆ ಏನೂ ತಿಳಿಯದು. ಹೀಗಾ
ಗಿ ಶಾಸನಮಂಡಲಗಳ ಕಾರ್ಯಕಲಾಪಗಳೆಂದರೆ ಒಂದು ಹುಚ್ಚಾ
ಟ! ಈ ಮುಂಚಿನ ಶಾಸನಮಂಡಲಗಳ ಬಹು ಸಂಖ್ಯಾಕ ಸದ
ಸ್ಯರು ಇಂಗ್ಲಿಷನ್ನು ಚೆನ್ನಾಗಿ ಬಲ್ಲವರಾಗಿದ್ದರು. ಆದರೆ ಇಂದಿ
ನ ಪರಿಸ್ಥಿತಿಯು ಹಾಗಿಲ್ಲ. ಮದ್ರಾಸ ಅಸೆಂಬ್ಲಿಯ ಸದಸ್ಯರಲ್ಲಿ
ಇಂಗ್ಲಿಷವನ್ನರಿಯದವರೆ ಹೆಚ್ಚಾಗಿದ್ದು ಅವರು ಅಸೆಂಬ್ಲಿಯ ಕಾ
ರ್ಯಕಲಾಪಗಳನ್ನು ತಿಳಿದುಕೊಳ್ಳುವದಕ್ಕೂ ಅದರಲ್ಲಿ ಭಾಗವಹಿ
ಸುವದಕ್ಕೂ ಅಸಮರ್ಥರಾಗಿದ್ದಾರೆ. ಶಾಸನಮಂಡಲದೊಳಗಿನ ಹಾ
ಡು ಹೀಗಾದಮೇಲೆ ಇಲ್ಲಿ ತಮಗೇ ಏನೂ ತಿಳಿಯದವರು ಅವರ ಹಿ
ತಕ್ಕೆ ಅಗತ್ಯವಾಗಿರುವ ಕಾನೂನುಗಳ ವಿಚಾರದಲ್ಲಿ ಹೊರಗೆ ಮತ
ದಾರರಿಗೆ ಯಾವ ಶಿಕ್ಷಣವನ್ನು ತಾನೆ ಕೊಡಬಲ್ಲರು ? ಶಾಸನಮಂಡ
ಳದಲ್ಲಿ ಏನು ಹಣೆಬರೆಹವೋ ಅದುವೆ ಆಡಳಿತದ ವಿಚಾರದಲ್ಲಿಯೂ!
೧೧ ಪ್ರಾಂತಗಳಲ್ಲಿ ೭ ಪ್ರಾಂತಗಳ ಮಟ್ಟಿಗೆ ವಿಶೇಷತಃ ಮುಂಬೈ
ಮತ್ತು ಮದ್ರಾಸುಗಳಲ್ಲಿ ಕಾಂಗ್ರೆಸ್ಸು ಅಧಿಕಾರಾರೂಢವಾಗಿದ್ದರೂ
ಕೋರ್ಟಿನ ವ್ಯವಹಾರವು ನ್ಯಾಯ ತೀರ್ಮಾನಕ್ಕಾಗಿ ವೆಚ್ಚವನ್ನು
ಹೊರುವ ಪಕ್ಷಕಾರರಿಗೆ ತಿಳಿಯದ ಇಂಗ್ಲಿಷಿನಲ್ಲಿಯೇ ನಡೆಯುವುದು
ತುಂಬಾ ಶೋಚನೀಯ! ಜನತೆಯ ಭಾಷೆಯ ಕಡೆಗೆ ಗಮನವನ್ನೀ
ಯದೆ ಒಂದು ಭಾಷೆಯನ್ನು ಬಲ್ಲ ಅಧಿಕಾರಿಗಳನ್ನು ಅವರು ಅರಿಯ
ದ ಇನ್ನೊಂದು ಭಾಷೆಯನ್ನಾಡುವ ಭಾಗಕ್ಕೆ ಬದಲಿಸುವುದರಿಂದ
ಜನತೆಯು ಪಡುವ ಗೋಳನ್ನು ದೇವರೆ ಬಲ್ಲ. ನನ್ನ ಜಿಲ್ಲೆಯ
ಲ್ಲಿ ಕೆಲಸಮಾಡುತ್ತಿರುವವರಲ್ಲಿ ಕೆಲವರು ಪಂಚಾಯತ ಅಧಿಕಾರಿ
ಗಳು ಮತ್ತು ಜಿಲ್ಲೆಯ ವಿದ್ಯಾಧಿಕಾರಿಗಳು ತಾವು ದುಡಿಯುತ್ತಿ
ರುವ ಜಿಲ್ಲೆಯ ಭಾಷೆಯನ್ನು ಅರಿಯರೆಂಬುದನ್ನು ಬಲ್ಲೆ. ನಾನು
ಇತ್ತೀಚೆಗೆ ಸಂಚರಿಸಿದ ಆಂಧ್ರದೇಶದಲ್ಲಾಗಲಿ ನಮ್ಮ ಕರ್ನಾಟ
ಕದ ಭಾಗದಲ್ಲಾಗಲಿ ಮದ್ರಾಸ ಇಲಾಖೆಯಲ್ಲಿ ಒಳಗೊಂಡ ಬೇರೆ

ಯಾವುದೇ ಭಾಗದಲ್ಲಾಗಲಿ ಜನರ ಕುಂದುಕೊರತೆಗಳಿಗೆ ನಾವು ಬೇಡುವ ಹೊಸ ಭಾಷಾನುಗುಣ ಪ್ರಾಂತರಚನೆಯಾಗುವ ವರೆಗೆ ತಕ್ಕುದಾದ ಮತ್ತು ಸಾಕಷ್ಟು ಪರಿಹಾರವು ಸಿಕ್ಕಲಾರದು. ಶಿಕ್ಷಣ, ಒಕ್ಕಲತನ, ನೀರಾವರಿ, ಉದ್ಯೋಗ, ಪ್ರವಾಸ ಸೌಕರ್ಯ ಈ ವಿಷಯಗಳಲ್ಲಾಗಲಿ ಅಥವಾ ಇನ್ನಾವ ವಿಷಯಗಳಲ್ಲಾಗಲಿ ಕರ್ನಾಟಕದ ಹಿತವು ದುರ್ಲಕ್ಷಿಸಲ್ಪಟ್ಟಿರುವದರಿಂದ ಇನ್ನೂ ಹೆಚ್ಚು ಕಾಲ ಸಹಿಸಲು ಸಾಧ್ಯವಿಲ್ಲ. ನನ್ನ ಜಿಲ್ಲೆಯ ಅಥವಾ ಮದ್ರಾಸ ಕರ್ನಾಟಕದ ಉಳಿದ ಭಾಗಗಳಲ್ಲಿ ಈ ಬಗೆಯ ತಾತ್ಸಾರವಾದುದನ್ನು ಅಂಕೆ ಅಂಶಗಳಿಂದ ಸಿದ್ಧಪಡಿಸಬಲ್ಲೆನು. ಮುಂಬೈ ಕರ್ನಾಟಕದ ಸ್ಥಿತಿಯಂತೂ ಇದಕ್ಕಿಂತಲೂ ಹೆಚ್ಚು ಖೇದಕಾರಕವಾಗಿದೆ. ಆದರೆ ಈ ಹಳೆಯ ದುಃಖಗಳನ್ನು ಮರಳಿ ನೆನಿಸಿಕೊಳ್ಳುವುದರಿಂದ ಏನೂ ಲಾಭವಿಲ್ಲ. ಆದುದರಿಂದ ಆ ಮಾತನ್ನು ಮುಂದರಿಸುವದಿಲ್ಲ.

೫. ವಸ್ತುಸ್ಥಿತಿಯು ಹೀಗಿದ್ದು ತತ್ವಕ್ಕೆ ಮಾನ್ಯತೆ ದೊರಕಿರುವಾಗ ಹಾಗೂ ಆರ್ಥಿಕ ದೃಷ್ಟಿಯಿಂದ ಕೂಡ ಕರ್ನಾಟಕವು ತನ್ನ ಆಡಳಿತವನ್ನು ಸಾಗಿಸಿಕೊಂಡು ಹೋಗಬಹುದೆಂದು ಹಲವು ಸಲ ಸಿದ್ಧಪಡಿಸಿರುವಾಗ ಈ ಪ್ರಶ್ನೆಯನ್ನು ತತ್‌ಕ್ಷಣ ಇತ್ಯರ್ಥಗೊಳಿಸಿದೆ ಭಾರತ ಮಂತ್ರಿಗಳ ಅಥವಾ ಬ್ರಿಟಿಶ್ ಸರಕಾರದ ಅನುಕೂಲವನ್ನವಲಂಬಿಸುವಂತೆ ಮಾಡುವುದು ಎಲ್ಲಿಯ ನ್ಯಾಯವೆಂಬುದನ್ನು ಯಾವದೇ ಸುಜ್ಞ ಗೃಹಸ್ಥನು—ಅವನು ವರಿಷ್ಠನಿರಲಿ, ಕನಿಷ್ಠನಿರಲಿ— ಹೇಳಬಲ್ಲನೆ? ಬ್ರಿಟನ್ನು ತನ್ನ ಯುದ್ಧನೀತಿಯನ್ನು ಮುಂದರಿಸುವುದರಲ್ಲಿಯೇ ಮತ್ತು ಶಸ್ತ್ರ ಸಾಹಿತ್ಯವನ್ನು ಪರ್ವತಪ್ರಾಯವಾಗಿ ಸಿದ್ಧಪಡಿಸುವುದರಲ್ಲಿಯೇ ತೊಡಗಿದುದರಿಂದಲೊ, ಅಷ್ಟೇ ಇಲ್ಲಿಯ ಜನತೆಯ ಇಚ್ಛೆಗೆ ವಿರುದ್ಧವಾಗಿಯಾದರೂ ಸಂಯುಕ್ತರಾಜ್ಯಘಟನೆಯನ್ನು ಇಲ್ಲಿನವರ ಕೊರಳಿಗೆ ಕಟ್ಟಿಬಿಡಬೇಕೆಂದು ಸಂಕಲ್ಪಿಸಿದುದರಿಂದಲೊ ಈ ಗತ್ತುಗಾರಿಕೆ ನಡೆದಿರಬಹುದೇ? ಇದು ಸಮಯವಲ್ಲವೆಂದು ಹೇಳುತ್ತಿದ್ದಾರೆ. ಆದರೆ ಕಾರಣವನ್ನು ತಿಳಿಯಪಡಿಸುತ್ತಿಲ್ಲ. ೧೯೧೮ ರಲ್ಲಿಯೇ ಪ್ರಾಂತಗಳ ಪುನರ್ನಿರ್ಮಾಣವು ಅಗತ್ಯವೆಂದು ಎಣಿಸಲ್ಪಟ್ಟಿದ್ದಿತು. ಮಾಂಟೆಗ್ಯೂ ಚೇಮ್ಸಫೋರ್ಡ ರಿಪೋರ್ಟಿನಲ್ಲಿ ಇಂತು ಹೇಳಲಾಗಿದೆ—

"ಈಗಿದ್ದ ಆಡಳಿತದ ವಿಭಜನೆಗಳು ಕೃತ್ರಿಮವೆಂಬುದು ಮತ್ತು ಹಲವು ಸಲ ಅನನುಕೂಲವೆಂಬುದು ನಮಗೆ ಮನವರಿಕೆಯಾಗಿದೆ. ಚಾರಿತ್ರಿಕ ಕಾರಣಗಳಿಂದ ಇದಾಯಿತೆಂಬುದನ್ನು ನಾವು ತಿಳಿದುಕೊಂಡಿದ್ದೇವೆ. ಆಡಳಿತದ ಭಾಗಗಳು ಚಿಕ್ಕವಿದ್ದು ಏಕರೂಪವಾಗಿರುವಷ್ಟು ರಾಜ್ಯಭಾರಕ್ರಮವು ಸುಲಭವಾಗುತ್ತದೆಂಬುದರ ಬಗ್ಗೆ ಸಂದೇಹವಿಲ್ಲ. ಮತ್ತು ತಕ್ಕಮಟ್ಟಿಗೆ ಅನನುಭವಿಕರಾದವರ ಕೈಯಲ್ಲಿಯೇ ಹಿಂದುಸ್ಥಾನದ ಜವಾಬ್ದಾರಿಗಳು ಒಪ್ಪಿಸಲ್ಪಡುವ ಸಂಭವವು ಸಮೀಪದಲ್ಲಿಯೇ ಇದ್ದಾಗಲಂತೂ ಈ ಮಾತಿಗೆ ಹೆಚ್ಚಿನ ಮಹತ್ವ ಬರುವುದು. ಭಾಷಾನುಗುಣ ಅಥವಾ ಸಾಂಸ್ಕೃತಿಕ ಏಕೀಕರಣದಿಂದ ಇನ್ನೂ ಒಂದು ಮಹತ್ವದ ಅನುಕೂಲತೆಯೊದಗುವುದು. ದೇಶಭಾಷೆಯಲ್ಲಿ ರಾಜ್ಯಭಾರದ ಕಾರ್ಯವನ್ನು ನಡೆಸುವುದನ್ನು ಸಾಧ್ಯಗೊಳಿಸುವುದರಿಂದ ಸಾರ್ವಜನಿಕ ಕಾರ್ಯಕ್ಷೇತ್ರದಲ್ಲಿ ಇಂಗ್ಲಿಷವನ್ನರಿಯದ ಎಷ್ಟೋ ಜನರನ್ನು ಬರಮಾಡಿಕೊಳ್ಳಲು ಬರುವುದು. ಪ್ರಭುತ್ವದ ಒತ್ತಾಯದಿಂದ ಹೊಸ ಪ್ರಾಂತಗಳ ರಚನೆಯನ್ನು ಜನತೆಯಮೇಲೆ ಹೇರುವುದು ಸಾಧ್ಯವಿಲ್ಲವೆಂದು ನಮ್ಮ ದೃಢವಾದ ಅಭಿಪ್ರಾಯವಿದೆ. ಮತ್ತು ಇಂತಹ ಎತ್ತುಗಡೆಯು ರಾಜಕೀಯ ಸುಧಾರಣೆಗಳು ಜಾರಿಯಲ್ಲಿ ಬಂದ ತರುವಾಯವೇ ಆಗಬೇಕು, ಅದಕ್ಕೂ ಮುಂಚಿತ ಅಥವಾ ಅದರ ಜತೆಜತೆಗೇ ಆಗಕೂಡದು ಎಂತಲೂ ನಮ್ಮ ಮತವಾಗಿದೆ. ಆದರೆ ಎಲ್ಲೆಲ್ಲಿ ಪ್ರಾಂತವಿಭಜನೆಗಳು ಸಾಧ್ಯವಿವೆಯೋ ಮತ್ತು ಸರ್ವರ ಸಮ್ಮತಿಯಿಂದ ಹಾಗೆ ಮಾಡಲು ಬರುವುದೋ ಅಲ್ಲಲ್ಲೆಲ್ಲ ಆ ಬಗೆಯ ಪ್ರಯತ್ನಗಳನ್ನು ಮಾಡುವುದು ಅಗತ್ಯವೆಂದು ನಮ್ಮ ಅಭಿಪ್ರಾಯವನ್ನು ಸೂಚಿಸದಿರಲಾರೆವು. ಆದ್ದರಿಂದ ಹೊಸ ಸುಧಾರಣೆಗಳನ್ವಯ ಜಾರಿಯಲ್ಲಿ ಬರುವ ಪ್ರಾಂತೀಯ ಸರಕಾರಗಳು ಇಂತಹ ಯೋಜನೆಗಳನ್ನು ಕುರಿತು ಜನಮತವನ್ನು ಪರೀಕ್ಷಿಸುವ ಕೆಲಸವನ್ನು ಕೂಡಲೆ ಕೈಕೊಳ್ಳಬೇಕೆಂದು ನಾವು ಸೂಚಿಸಲಪೇಕ್ಷಿಸುತ್ತೇವೆ."

ಇದು ನಡೆದುಹೋಗಿ ೨೦ ವರ್ಷಗಳಾದವು. ಬಾರಿಬಾರಿಗೂ ಸ್ವತಂತ್ರ ಪ್ರಾಂತದ ಬೇಡಿಕೆಯನ್ನು ನಾವು ಉದ್ಘೋಷಿಸಿದ್ದೇವೆ. ಎಲ್ಲರೂ ಅದು ನ್ಯಾಯವೆಂದು ಒಪ್ಪಿದ್ದಾರೆ; ಆದರೂ ಇಂಗ್ಲಂಡಿನಲ್ಲಿಯ ಯಾವನೊಬ್ಬ ಮಹಾನುಭಾವನು ಪ್ರಸನ್ನನಾಗುವವರೆಗೂ ತಡೆಯಿರೆಂದು ಹೇಳುತ್ತಿದ್ದಾರೆ. ಭಾರತ ಮಂತ್ರಿಗಳು ಕೂಡ ಇಂತಹ ನಿರಂಕುಶ ಆಜ್ಞೆಗಳನ್ನು ಹೊರಡಿಸುವ ದಿನಗಳು ಹಳೆಯ ಮಾತಾದವು. ಮತ್ತು ಕನ್ನಡಿಗರಂತೂ ಇವುಗಳಿಗೆಂದೂ ಸೊಪ್ಪು ಹಾಕಲಾರರು!

೬. ಈ ಮೊದಲೇ ನಾನು ತಿಳಿಸಿದಂತೆ, ವಿವಿಧ ಆಡಳಿತಗಳಲ್ಲಿ ಹರಿದು ಹಂಚಿಹೋಗ ಕನ್ನಡ ಜನಾಂಗಕ್ಕೆ ಪ್ರಾಂತೀಯ ಸ್ವಾಯತ್ತತೆಯು ಯಾವ ವಿಧವಾದ ಉಪಕಾರವನ್ನೂ ಮಾಡಿಲ್ಲ. ನಾವು ನಮ್ಮ ಸೀಮೆಯ ರಾಜ್ಯಭಾರವನ್ನು ನಮ್ಮ ಇಷ್ಟದಂತೆ ನಡೆಯಿಸಬೇಕೆನ್ನುತ್ತೇವೆ. ಈ ವರೆಗಿನ ರೀತಿಗಿಂತಲೂ ಚೆನ್ನಾಗಿ ನಮ್ಮ ಜನತೆಗೆ ಶಿಕ್ಷಣ ಕೊಡಬೇಕೆಂದು, ನಮ್ಮ ಕೃಷಿ-ಉದ್ಯೋಗಗಳ ಈಗಿನ ನಿಕೃಷ್ಟಸ್ಥಿತಿ ಹೋಗಿ ಅವು ಒಳ್ಳೆಯ ಸುಧಾರಣೆ ಹೊಂದುವಂತೆ ಮಾಡಬೇಕೆಂದು, ನೀರಾವರಿಯ, ವಿದ್ಯುತ್ಪೂರೈಕೆಯ, ಮಾರ್ಗನಿರ್ಮಾಣದ (ಇದೂ ಈ ವರೆಗಾದದ್ದು ಕಡಿಮೆ-ಈ ಮುಂದಾಗುವುದೂ ಅಷ್ಟಕಷ್ಟೇ ಎಂದು ಹೇಳಬಹುದು.) ಯೋಜನೆಗಳನ್ನು ಕೈಕೊಳ್ಳಬೇಕೆಂದು ನಮ್ಮ ಇಚ್ಛೆಯಿದೆ; ಹಾಗೆ ಮಾಡುವುದು ನಮ್ಮ ಹಕ್ಕೂ ಇದೆ. ಕಳೆದ ಎಪ್ರಿಲ್ ತಿಂಗಳಿನಲ್ಲಿ ಕರ್ನಾಟಕ ಪ್ರಾಂತನಿರ್ಮಾಣಕ್ಕೆ ಸಂಬಂಧಿಸಿದ ನಿರ್ಣಯವನ್ನು ಅಂಗೀಕರಿಸುವಾಗ ನಮ್ಮ ಕರ್ನಾಟಕದ ಮಂತ್ರಿಗಳಾದ ಶ್ರೀ. ಲಕ್ಷ್ಮಯವರು ಹೇಳಿದುದರ ಬಗ್ಗೆ ಪತ್ರಿಕೆಗಳೊಳಗಿನ ಅವತರಣಿಕೆಯನ್ನೋದಿ ನನಗೆ ವಿಷಾದವಾಯಿತು. 'ಕರ್ನಾಟಕಕ್ಕಾಗಿ ಬಂದರಿನ ಮತ್ತು ರೇಲ್ವೆ ಯೋಜನೆಯ ಅಗತ್ಯವನ್ನು ಕುರಿತು ಮಾತನಾಡುತ್ತಾ, ಈ ವಿಷಯಗಳು ಸ್ವತಂತ್ರಪ್ರಾಂತ ನಿರ್ಮಾಣವಾದ ಮೇಲೂ ಕರ್ನಾಟಕದ ಕೈಯಲ್ಲಿ ಬರಲಾರವು; ಏಕೆಂದರೆ ಅವು ಹಿಂದುಸ್ಥಾನ ಸರಕಾರದ ಆಡಳಿತಕ್ಕೆ ಒಳಪಟ್ಟವೆ—ಎಂದು ಮಾನ್ಯ ಮಂತ್ರಿಗಳು ಹೇಳಿದರು. ಚಿಕ್ಕ ಸ್ವತಂತ್ರ ಪ್ರಾಂತವಾಗಿರದೆ, ಮುಂಬೈ ಪ್ರಾಂತದ ಭಾಗವಾಗಿರುವುದರಿಂದಲೇ ಈ ಸೌಲಭ್ಯಗಳನ್ನು ಹೆಚ್ಚು ಸುಲಭವಾಗಿ ಸಂಪಾದಿಸಬಹುದೆಂತಲೂ ಅವರು ಹೇಳಿದರು." ಈ ಅವತರಣಿಕೆಯು ಸತ್ಯಾಂಶವನ್ನೇ ಹೇಳುತ್ತಿದ್ದರೆ, ಶ್ರೀ. ಲಕ್ಷ್ಮಯವರಿಗಾಗಿ ನಾನು ನಿಜವಾಗಿಯೂ ವಿಷಾದಪಡುತ್ತೇನೆ. ಮದ್ರಾಸ, ಮುಂಬೈಗಳಂತಹ 'ಸಮರ್ಥ' ಪ್ರಾಂತಗಳ ಭಾಗಗಳಾಗಿ ಇಷ್ಟು ವರ್ಷಗಳವರೆಗಿದ್ದುದಕ್ಕೆ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳು ಎಷ್ಟು ರೇಲ್ವೆಗಳನ್ನು, ಎಷ್ಟು ಬಂದರುಗಳನ್ನು ಸಂಪಾದಿಸಿದವು? ಕರ್ನಾಟಕದ ಭಾಗವಾದ ನನ್ನ ಜಿಲ್ಲೆಯಲ್ಲಿ ರೇಲ್ವೆಯ ಉದ್ದಳತೆಯು ಸುಮಾರು ೩೦ ಮೈಲು ಮಾತ್ರ ಇದೆ. ಉತ್ತರ ಕನ್ನಡದಲ್ಲಿಯಂತೂ ಇಲ್ಲವೇ ಇಲ್ಲ. ಕೆಲವು ವರ್ಷಗಳ ಹಿಂದೆ ನಾನು ಆ ಜಿಲ್ಲೆಯಲ್ಲಿ ಸಂಚರಿಸಿದೆನು. ಇದು ವರೆಗೆ ಮುಂಬೈ ಪ್ರಾಂತದ ಸರ್ಕಾರದವರು ಆ ದುರ್ಭಾಗ್ಯ ಜಿಲ್ಲೆಯ ಜನರಿಗಾಗಿ ಎಷ್ಟೊಂದು ಹಿತದ ಕಾರ್ಯಗಳನ್ನು ಮಾಡಿದ್ದಾರೆಂಬುದು

(೧೮ ನೇ ಪುಟಕ್ಕೆ ಮುಂದೆ ಸಾಗಿದೆ.)

## ಮದ್ರಾಸು ವೀರಶೈವ ವಿದ್ಯಾವರ್ಧಕ ಸಂಘ ಬಳ್ಳಾರಿ.

ಸನ್ ೧೯೩೪ ನೇ ಜೂನ ತಿಂಗಳ ೮ ನೇ ತೇದಿ ಬುಧವಾರ ಸಾಯಂಕಾಲ ೩ ಘಂಟೆಗೆ ಕೀರ್ತಿಶೇಷಳಾದ ಹೀರದ ಸೂಗಮ್ಮನವರ ಚೌಕಿಯಲ್ಲಿ ಈ ಸಂಘದ ೨೨ ನೇ ಜನರಲ್ ಕಮಿಟಿಯು ಸೇರು ವಂತೆ ನಿಯಮಿಸಿರುತ್ತದೆ. ಕಾರಣ ಸಭಾಸದರಾದ ತಾವು ದಯ ಮಾಡಿ ಬಂದು ಈ ಕೆಳಗೆ ನಮೂದಿಸಿದ ವಿಷಯಗಳನ್ನು ಆಲೋಚಿಸಿ ತೀರ್ಮಾನಿಸಬೇಕೆಂದು ಕೋರುತ್ತೇವೆ.

ವಿಷಯಗಳು.

೧. ಆಡಿಟರು ಇವರಿಂದ ಪರಿಶೋಧಿಸಲ್ಪಟ್ಟ ಲೆಕ್ಕಗಳು, ರಿಪೋರ್ಟುಗಳು ಸೆಕ್ರೆಟರಿ ವಗೈರಾ ಅವರುಗಳ ರಿಪೋರ್ಟುಗಳನ್ನು ಓದಿ ಮಂಜೂರ ಮಾಡುವುದು.

೨. ಕಾರ್ಯನಿರ್ವಾಹಕರನ್ನು ಚುನಾಯಿಸುವುದು.

೩. ಮ್ಯಾನೇಜಿಂಗ್ ಕಮಿಟಿಯವರು ತಯಾರಿಸಿದ ಬಜೆಟ್ಟು ಮಂಜೂರ ಮಾಡುವದು.

೪. ಇತರ ವಿಷಯಗಳು.

ಎನ್. ಮರಿಬಸವನಗೌಡ.
ಪ್ರೆಸಿಡೆಂಟ್.

ಕೊಗರಿ ವೀರಮಲ್ಲಪ್ಪ
ಸೆಕ್ರೆಟರಿ.

---

## ಕನ್ನೂರ.

ಪದ್ಧತಿಯ ಪ್ರಕಾರ ಶ್ರೀ ವಿರಕ್ತಸ್ವಾಮಿಗಳವರ ಯಾತ್ರಾ ಮಹೋತ್ಸವವು ಒಳ್ಳೇ ಶುಭದಾಯಕವಾಗಿ ನೆರವೇರಿಸಲ್ಪಟ್ಟಿತೆಂದು ತಿಳಿಸಲು ತುಂಬಾ ಸಂತೋಷವೆನಿಸುತ್ತದೆ.

ತಾ. ೨೧-೫-೩೪ನೇ ಶನಿವಾರ ಸಂಜೆಯ ಮುಂದೆ ಶಿವಕೀರ್ತನಗಳಾದನಂತರ ಶ್ರೀ. ಶಂಕರಲಿಂಗ ಸ್ವಾಮಿಗಳು ಹಂಜಿಗಿ ಇವರ ಅಧ್ಯಕ್ಷತೆಯಲ್ಲಿ ಸಭೆಯನ್ನು ಕೂಡಿಸಿದ್ದರು. ಮೊದಲು ವಂದೇ ಮಾತರಂ ಗೀತೆಯಾದನಂತರ ಶ್ರೀ. ಬಾಪುರಾವ ಇವರು ಮಹಾತ್ಮಾ ಗಾಂಧಿಯವರ ಜೀವನ ಚರಿತ್ರೆಯನ್ನೂ ಅವರು ಇಲ್ಲಿಯ ವರೆಗೆ ಮಾಡಿದ ದೇಶ ಸೇವೆಯನ್ನೂ ಬೋಧ ಮಾಡಿದರು. ಆ ಮೇಲೆ ಶ್ರೀ. ಶಂಕರಲಿಂಗ ಸ್ವಾಮಿಗಳು ಹಂಜಿಗಿ ಇವರು ಪುರಾತನರು ಮಠಗಳನ್ನು ಯಾಕೆ ಸ್ಥಾಪನೆಮಾಡಿದರು? ಮಠವು ಹೇಗಿರಬೇಕು? ಮತ್ತು ಮಠದಲ್ಲಿಯ ಅಧಿಕಾರಿಯ ಕರ್ತವ್ಯವೇನು? ಎಂಬ ವಿಷಯವಾಗಿ ಒಳ್ಳೇ ಮಹತ್ವದ ಭಾಷಣ ಮಾಡಿದರು. ಆ ಮೇಲೆ ಸಮಾಜ ರಾಷ್ಟ್ರದ ಸ್ವಾತಂತ್ರ್ಯವನ್ನು ಗಳಿಸಲಿಕ್ಕೆ ಅಸ್ಪೃಶ್ಯತಾ ನಿವಾರಣೆಯೇ ಮುಖ್ಯ ಉಪಾಯವೆಂದು ಮಹಾತ್ಮಾ ಬಸವೇಶ್ವರರ ವಚನಗಳನ್ನು ತಮ್ಮ ಅಮೃತವಾಣಿಯಿಂದ ಬೋಧಮಾಡಿದರೆಂದು ತಿಳಿಸಲು ಸಂತೋಷವೆನಿಸುತ್ತದೆ. ಓರ್ವ ಕಾಂಗ್ರೆಸ್ ಭಕ್ತ.

---



## ಹಾಲ್ಕೋಡ.

ಇಲ್ಲಿ ಸೋಮವಾರ ಶ್ರೀ ಬಸವ ಜಯಂತಿಯು ಮೆರವಣಿಗೆ ಉತ್ಸಾಹಗಳಿಂದ ಬಹು ವಿಜೃಂಭಣೆಯಾಗಿ ಜರುಗಿತು. ಹಳ್ಳಿ ಚಿಕ್ಕದಾದರೂ ಮೆರವಣಿಗೆ ಸ್ಥಳಕ್ಕೆ ಬರಲು ಐದು ಘಂಟೆಗಳ ಕಾಲ ಬೇಕಾಯಿತು. ಜನರು ಭಕ್ತಿಪೂರ್ವಕ ಹೋದಡೆಯಲ್ಲೆಲ್ಲಾ ಕಾಯಿ ಕರ್ಪೂರಗಳಿಂದ ಶ್ರೀ ಬಸವನನ್ನು ಪೂಜಿಸಿಯೇ ಮುಂದಕ್ಕೆ ಬಿಡುತ್ತಿದ್ದರು. ಅಲ್ಲಲ್ಲಿಗೆ ನಂದಿಕೋಲಿನ ಕುಣಿತ ಮತ್ತು ಶ್ರೀ ವೀರಭದ್ರಯ್ಯನವರ ವಡುವು ಬಹು ಆಕರ್ಷಕವಾಗಿದ್ದವು. ಮರುದಿನ ಮಂಗಳವಾರ ಆರಕೇರಿ ಶ್ರೀ ಮಲ್ಲೇಶಯ್ಯನವರ ಕೀರ್ತನ ಮತ್ತು ವ್ಯಾಖ್ಯಾನಗಳು ಜರುಗಿದವು.

ಓರ್ವ ಪ್ರತ್ಯಕ್ಷದರ್ಶಿ.

---

—ಮೈಮೇನಸಿಂಗದ ಡಿಸ್ಟ್ರಿಕ್ಟ ಮ್ಯಾಜಿಸ್ಟ್ರೇಟರಾದ ಮಿ॥ ಎಚ್. ಗ್ರೆಮ ಆಯ್. ಸಿ. ಎಸ್. ರವರನ್ನು ಕೊಲ್ಲಲು ಪ್ರಯತ್ನಿಸಿ ಕಡೆಗೆ ೭ ವರ್ಷದ ಕಠಿಣ ಶಿಕ್ಷೆಗೆ ಗುರಿಯಾದ ಶ್ರೀ. ಸಿತೇಂಗೆಸುದತ್ತರಾಯ ಎಂಬಾತನನ್ನೂ ಮತ್ತು ಪಂಜಾಬದ ರಾಜಕೀಯ ಕೈದಿಯಾದ ಶ್ರೀ. ಭಗತಸಿಂಗರನ್ನೂ ತಾ. ೨೧ ನೆಯ ದಿವಸ ಅಂದಮಾನದ ಥಂಥಂ ಜೇಲಿನಿಂದ ಬಿಡುಗಡೆ ಮಾಡಲಾಗಿದೆ.

---

## ಬೆಂಗಳೂರು ನಗರದಲ್ಲಿ

# ರಾಜ ವಿವಾಹ ನಿಮಿತ್ತವಾಗಿ

## ಗಣಾರಾಧನೆ ಮಹೋತ್ಸವ.

ಇದೇ ತಾ. ೧೫-೫-೩೮ ನೇ ಭಾನುವಾರ ಮೈಸೂರು ರಾಜಧಾನಿಯಲ್ಲಿ ನೆರವೇರಿದ ರಾಜಕುಮಾರ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್‌ರವರ ಮತ್ತು ರಾಜಕುಮಾರಿ ಚಿ|| ಸೌ|| ಸತ್ಯಪ್ರೇಮ ಕುಮಾರಿ ದೇವಿಯವರ ವಿವಾಹ ಮಹೋತ್ಸವ ಸಂಬಂಧವಾಗಿ ಬೆಂಗಳೂರು ಪಟ್ಟಣದಲ್ಲಿ ಸಮಸ್ತ ಜನಾಂಗದವರಿಗೂ ಭೋಜನ ಸಮಾರಂಭವನ್ನೇರ್ಪಡಿಸಬೇಕೆಂಬ ನಮ್ಮನ್ನಾಳುವ ಶ್ರೀಮನ್ನಾಲ್ವಡಿ ಕೃಷ್ಣರಾಜೇಂದ್ರ ಭೂಪಾಲರ ಅಭೀಷ್ಟದಂತೆ ಬೆಂಗಳೂರು ನಗರದ ವೀರಶೈವ ಬಂಧುಗಳಿಗಾಗಿ ಇದೇ ತಾ. ೧೫-೫-೩೮ ನೇ ಭಾನುವಾರ ಮಧ್ಯಾಹ್ನ ೧೧ ಗಂಟೆಗೆ ಬೆಂಗಳೂರು ಶೇಷಾದ್ರಿ ರಸ್ತೆಯಲ್ಲಿರುವ ಶ್ರೀ ಜಗದ್ಗುರು ಜಯದೇವ ಮುರುಘರಾಜೇಂದ್ರ ವೀರಶೈವ ವಿದ್ಯಾರ್ಥಿ ನಿಲಯದಲ್ಲಿ ಶ್ರೀ ವೀರಶೈವ ಸಮಾಜ ಸೇವಾ ಸಂಘದವರು ಮಹಾಗಣಾರಾಧನೆಯನ್ನು ಏರ್ಪಡಿಸಿದ್ದರು.

ಅಂದು ವಿದ್ಯಾರ್ಥಿನಿಲಯವು ಕದಳೀ ಸ್ತಂಭ ತಳಿರು ತೋರಣಗಳಿಂದಲೂ ನಗರದ ಮುನಿಸಿಪಾಲ್ಟಿಯವರು ಕಳಿಸಿಕೊಟ್ಟಿದ್ದ ಬಣ್ಣದ ತೋರಣ ಕಂಭಗಳಿಂದಲೂ ಶೃಂಗರಿಸಲ್ಪಟ್ಟು ಶೋಭಾಯಮಾನವಾಗಿತ್ತು. ಶ್ರೀ ಪ್ರಣವಸ್ವರೂಪಿ ಶ್ರೀ ಈಶ್ವರಸ್ವಾಮಿಗಳ ಮಹಾಪಾದಪೂಜೆಯು ನೆರವೇರಿದನಂತರ ಗಣಾರಾಧನೆಯು ಪ್ರಾರಂಭವಾಯಿತು. ಸುಮಾರು ಆರು ನೂರಕ್ಕೆ ಮೇಲ್ಪಟ್ಟು ಜನರು ಭೋಜನದಲ್ಲಿ ಭಾಗಿಗಳಾಗಿದ್ದರು. ಭೋಜನ ವ್ಯವಸ್ಥೆಯು ಬಹಳ ತೃಪ್ತಿಕರವಾಗಿತ್ತು.

ಭೋಜನವಾದನಂತರ ಸಂಜೆ ೬ ಗಂಟೆಗೆ ವಿದ್ಯಾರ್ಥಿ ನಿಲಯದ ವ್ಯಾಖ್ಯಾನ ಮಂಟಪದಲ್ಲಿ ಮೊದಲೇ ಪ್ರಸಿದ್ಧಿಸಿದ ಪ್ರಕಾರ ನಗರದ ವೀರಶೈವ ಬಂಧುಗಳು ಸಭೆಗೂಡಿದರು. ಒಂದು ಕಡೆ ಶ್ರೀ ಬಸವಣ್ಣನವರ ಪ್ರತಿಮೆಯು ಮತ್ತೊಂದು ಕಡೆ ಶ್ರೀಮನ್ಮಹಾರಾಜರವರ ಮತ್ತು ರಾಜಕುಮಾರ ಶ್ರೀ ಜಯಚಾಮರಾಜ ಒಡೆಯರವರ ಭಾವಚಿತ್ರಗಳು ವಿದ್ಯುದ್ದೀಪಗಳಿಂದಲೂ ಪುಷ್ಪಮಾಲಿಕೆಗಳಿಂದಲೂ ಅಲಂಕರಿಸಲ್ಪಟ್ಟಿದ್ದವು. ಮೊದಲು ಶ್ರೀ ವೀರಶೈವ ಸಮಾಜ ಸೇವಾಸಂಘದ ಅಧ್ಯಕ್ಷರಾದ ಶ್ರೀಮಾನ್ ಜೀರಗೆ ಕ. ಬಸವಪ್ಪ ಬಿ. ಎ. ಇವರು ರಾಜವಿವಾಹ ನಿಮಿತ್ತ ಪ್ರಜೆಗಳಿಗುಂಟಾಗಿರುವ ಆನಂದದ ಬಗ್ಗೆ ಒಂದೆರಡು ಮಾತುಗಳನ್ನು ಆಡಿ ಈ ಸಂತೋಷ ಸಮಯದಲ್ಲಿ ಶ್ರೀಮನ್ಮಹಾರಾಜರವರಿಗೆ ಸಂಘದ ಪರವಾಗಿ ಕಳಿಸಿಕೊಟ್ಟ ಶುಭಾಶಂಸನ ಪತ್ರಿಕೆಯನ್ನು ಸಭೆಯ ಮುಂದೆ ಓದಿದರು. ನಂತರ ಶ್ರೀ. ಎಂ. ಜಿ. ನಂಜುಂಡಾರಾಧ್ಯರೂ ಮತ್ತು ಅವರ ವೈದಿಕ ಮಂಡಲಿಯವರೂ ರಾಜಾಶೀರ್ವಾದ ಕಾರ್ಯಕ್ರಮವನ್ನು ವಿಜೃಂಭಣೆಯಿಂದ ನೆರವೇರಿಸಿದರು. ಬಳಿಕ ಶ್ರೀ ಮನ್ಮಹಾರಾಜರವರಿಗೂ ಶ್ರೀ ಮದ್ಯುವರಾಜರಿಗೂ ಶ್ರೀ ರಾಜಕುಮಾರರಿಗೂ ಮತ್ತು ಶ್ರೀ ರಾಜಕುಟುಂಬಕ್ಕೂ ಜಯಜಯಕಾರಗಳಾದವು.

ಇದಾದಮೇಲೆ ಶ್ರೀ. ವೀರಶೈವ ಸಮಾಜ ಸೇವಾ ಸಂಘದ ಕಲಾ ಸೇವಾ ಸಮಿತಿಯವರು ವಿವಾಹದ ಸಂತೋಷಾರ್ಥವಾಗಿ "ಸುಧಾರಣೆ" ಎಂಬ ನಾಟಕವನ್ನು ಅಭಿನಯಿಸಿದರು. ಮಹಾಮಂಗಳಾರತಿಯಾದನಂತರ ಸಭೆಯು ಮುಕ್ತಾಯಗೊಂಡಿತು.

ಮೇಲೆ ಹೇಳಿದಂತೆ ಶ್ರೀಮನ್ಮಹಾರಾಜರವರಿಗೆ ಸಂಘದ ಪರವಾಗಿ ಕಳಿಸಿಕೊಟ್ಟ ಶುಭಾಶಂಸನ ಪತ್ರಿಕೆಯನ್ನು ಈ ಕೆಳಗೆ ಪ್ರಕಟಿಸಲಾಗಿದೆ. ಈ ಪತ್ರಿಕೆಯನ್ನು ಸ್ವೀಕರಿಸಿ ಶ್ರೀಮನ್ಮಹಾರಾಜರವರು ತಮ್ಮ ಸಂತೋಷವನ್ನು ವ್ಯಕ್ತಪಡಿಸಿ ಒಂದು ಅಭಿನಂದನ ಪತ್ರವನ್ನು ಸಂಘಕ್ಕೆ ದಯಪಾಲಿಸಿದ್ದಾರೆ.

|| ಶ್ರೀ ಗುರು ಬಸವಲಿಂಗಾಯ ನಮಃ ||

### ಶುಭಾಶಂಸನ ಪತ್ರಿಕಾ.

ಶ್ರೀಮದ್ರಾಜಾಧಿರಾಜ ಕರ್ನಾಟಕ ರತ್ನ ಸಿಂಹಾಸನಾಧೀಶ್ವರ ಶ್ರೀಮನ್ನಾಲ್ವಡಿ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್ ಮಹಾಪ್ರಭುಗಳವರ ದಿವ್ಯ ಸಮ್ಮುಖದಲ್ಲಿ—

ಬೆಂಗಳೂರು ನಗರದ ಶ್ರೀ. ವೀರಶೈವ ಸಮಾಜಸೇವಾ ಸಂಘದವರು ಮಾಡುವ ಭಕ್ತಿಪೂರ್ವಕ ಪ್ರಣಾಮಂಗಳು.

ಮಹಾಸ್ವಾಮಿ,

ಈಗ ರಾಜಧಾನಿಯ ರಾಜಮಂದಿರದಲ್ಲಿ ನಡೆಯುತ್ತಿರುವ ಶ್ರೀಮದ್ಯುವರಾಜ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರರವರ ಪುತ್ರರಾದ ರಾಜಕುಮಾರ ಶ್ರೀ. ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರರವರ ವಿವಾಹ ಮಹೋತ್ಸವವು ಸಂಸ್ಥಾನವಾದ್ಯಂತಕ್ಕೂ ಅಷ್ಟೇ ಏಕೆ ಭಾರತೀಯ ಸಂಸ್ಕೃತಿ ಪ್ರೇಮಿಗಳಾದ ಸಮಸ್ತ ಭಾರತೀಯ ಪ್ರಜಾಕೋಟಿಗೂ ಅತ್ಯಾನಂದದಾಯಕವೂ, ಮನೋಲ್ಲಾಸಕರವೂ ಆದ ಸುದ್ದಿಯಾಗಿ ಪರಿಣಮಿಸಿದೆ ಮಹಾಸ್ವಾಮಿ,

ಈ ಮಹದಾನಂದದ ಸಮಯದಲ್ಲಿ ಬೆಂಗಳೂರಿನ ವೀರಶೈವ ಜನಾಂಗದ ಪರವಾಗಿಯೂ ನಮ್ಮ ಸಂಘದ ಪರವಾಗಿಯೂ ನಾವು ಇದೇ ಶ್ರೀ. ಶಾಲಿವಾಹನ ಶಕೆ ೧೮೬೦ ನೆಯ ಬಹುಧಾನ್ಯ ಸಂವತ್ಸರದ ವೈಶಾಖ ಬಹುಳ ಪಾಡ್ಯ ಭಾನುವಾರಕ್ಕೆ ಸರಿಯಾದ ತಾ. ೧೫-೫-೩೮ ನೆಯ ಶುಭ ದಿವಸ ವಿವಾಹಿತರಾಗುವ ನಮ್ಮ ರಾಜಕುಮಾರರಾದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್‌ರವರ ಮತ್ತು ರಾಜಕುಮಾರಿ ಚಿ|| ಸೌ|| ಸತ್ಯಪ್ರೇಮ ಕುಮಾರಿ ದೇವಿಯವರ ವಿವಾಹ ಮಹೋತ್ಸವವು ನಮ್ಮ ನಾಡಿಗೇ ಮಂಗಳದಾಯಕವಾಗಿ ಪರಿಣಮಿಸಲೆಂದೂ ಜಗದೀಶ್ವರನು ಈ ನಮ್ಮ ನೂತನ ರಾಜದಂಪತಿಗಳಿಗೆ ಸಮಸ್ತ ಮಂಗಳ ಪರಂಪರೆಗಳನ್ನು ಕರುಣಿಸಲೆಂದೂ ಈ ನಮ್ಮ ಮೈಸೂರೊಡೆಯರ ಆಳ್ವಿಕೆಯಲ್ಲಿ ನಮ್ಮ ನುಡಿ ನಮ್ಮ ಭಾಷೆ ನಮ್ಮ ಸಂಸ್ಕೃತಿ ಮುಂತಾದವುಗಳಿಗೆ ಅಧಿಕಾಧಿಕವಾದ ಪ್ರೋತ್ಸಾಹವು ದೊರೆತು ದಿನೇ ದಿನೇ ವರ್ಧಿತವಾಗುತ್ತಿರಲೆಂದೂ ಮುಖ್ಯವಾಗಿ ಮೈಸೂರೊಡೆಯರ ಮನೆತನದಲ್ಲಿ ಬಹು ಪುರಾತನ ಕಾಲದಿಂದಲೂ ಅನುಚಿನವಾಗಿ ನೆಲೆಗೊಂಡಿದ್ದ "ವೀರಶೈವ ಸಂಸ್ಕೃತಿ"ಯು ಪ್ರವರ್ಧಿತವಾಗಿ ನೆಲೆಗೊಳ್ಳಲೆಂದೂ ಹಾರೈಸುವದಲ್ಲದೆ ಜಗದೀಶ್ವರನು ಮೈಸೂರೊಡೆಯರ ಮನೆತನಕ್ಕೆ ಆಯುರಾರೋಗ್ಯಾದಿ ಸಮಸ್ತ ಸಂಪದ್ವೈಭವಗಳನ್ನು ಕರುಣಿಸಲೆಂದು ಹಾರೈಸುವೆವೆಂಬುದನ್ನು ಮಹಾ ಪ್ರಭುಗಳವರ ಸಮ್ಮುಖದಲ್ಲಿ ನಿವೇದಿಸಲು ಅಪ್ಪಣೆಯನ್ನು ಕೋರುತ್ತೇವೆ ಮಹಾಸ್ವಾಮಿ.

ಸನ್ನಿಧಾನದ ಸೇವಕರಾದ<br>
ತಾ. ೧೪-೫-೧೯೩೮. ಜೀರಗೆ ಕ. ಬಸವಪ್ಪ<br>
ಅಧ್ಯಕ್ಷ<br>
ಬೆಂಗಳೂರು ನಗರ. ಎಂ. ಎನ್. ಶಿವಪ್ಪ, ಕೆ. ಬಸಪ್ಪ<br>
ಗೌ|| ಕಾರ್ಯದರ್ಶಿಗಳು.

# ವರ್ಣಭೇದವನ್ನು ಕಿತ್ತುಹಾಕಿರಿ.

(ಲೇಖಕರು— ಶ್ರೀ. ಗೋವಿಂದ ರಾಮಟಿ ಎಂ. ಎ. ಎಲ್. ಎಲ್. ಬಿ.)

ವೈದಿಕ ಕಾಲದ ಋಷಿಗಳು ಎಲ್ಲ ಜಾತಿಯವರೂ ಇದ್ದಾರೆ. ಆಗಿನ ೯೨ ಋಷಿಗಳಲ್ಲಿ ೧೦ಂಕ್ಕೆ ೨೫ ರಂತೆ ಬ್ರಾಹ್ಮಣೇತರ ವರ್ಣದವರೇ ಋಷಿಗಳಿದ್ದಾರೆ. ಕಾವಶನು ಒಬ್ಬ ದಾಸಿಯ ಪುತ್ರನು. ಪರಾಶರನು ಒಬ್ಬ ಚಾಂಡಾಲಿನಿಯ ಮಗನು. ವಶಿಷ್ಠನು ಒಬ್ಬ ವೇಶ್ಯಾ ಪುತ್ರನು.

ಋಗ್ವೇದ ಕಾಲದಲ್ಲಿ ಭಿನ್ನ ವರ್ಣ ಮತ್ತು ಜಾತಿಗಳಲ್ಲಿ ಪರಸ್ಪರ ವಿವಾಹವಾಗಲು ಯಾವ ಅಡ್ಡಿಯೂ ಇರಲಿಲ್ಲ. ಧಾರಾಳವಾಗಿ ಲಗ್ನವಾಗುತ್ತಿದ್ದರು. ಆದರೆ ಬ್ರಾಹ್ಮಣರು ತಮ್ಮ ವರ್ಣವನ್ನೇ ಬೇರೆ ಮಾಡಿದನಂತರ ಕ್ಷತ್ರಿಯರೂ ಅವರ ಅನುಕರಣವನ್ನೇ ಮಾಡಿದರು. ಕಸಬಿನ ಮೇಲಿಂದಲೇ ವರ್ಣಗಳ ಅಭಿಮಾನವುಂಟಾಯಿತು ಆರ್ಯರು ತಮ್ಮ ವಂಶದ ವಿಷಯದಲ್ಲಿ ಬಹು ಹೆಮ್ಮೆಯುಳ್ಳವರಾಗಿದ್ದರು. ಆದುದರಿಂದ ವರ್ಣಸಂಕರವು ಎಲ್ಲಿ ಸಂಭವಿಸುವುದೋ ಎಂದು ಅವರು ಬಹು ಅಂಜುತ್ತಿದ್ದರು. ಇವರು ಶೂದ್ರರೊಂದಿಗೆ ವಿವಾಹವಾಗುವುದನ್ನು ನಿಲ್ಲಿಸಿಬಿಟ್ಟರು. ಆದಕಾರಣ ದಿನೆ ದಿನೆ ವರ್ಣಗಳ ಅಹಂಕಾರವು ಹೆಚ್ಚುತ್ತಾ ಬಂದಿತು.

ಬ್ರಾಹ್ಮಣರಿಗೆ ವರ್ಣಗಳಲ್ಲಿ ಅಗ್ರಸ್ಥಾನವು ಪ್ರಾಪ್ತವಾಗಿದ್ದಿತು. ಅವರನ್ನು ಬಹು ಪವಿತ್ರರೆಂದೇ ತಿಳಿಯುತ್ತಿದ್ದರು. ಬೇರೆ ಜಾತಿಯ ಜನರು ಅಂಥ ಸ್ಥಿತಿಗೆ ಎಂದೂ ಬರಲಾರರೆಂದೇ ತಿಳಿಯುತ್ತಿದ್ದರು. ಒಂದು ಶ್ಲೋಕದಲ್ಲಿ ಹೀಗಿದೆ—

"ಒಬ್ಬ ಪತಿತ ಬ್ರಾಹ್ಮಣನು ಒಬ್ಬ ಧಾರ್ಮಿಕ ಶೂದ್ರನಿಗಿಂತ ಶ್ರೇಷ್ಠನು. ಹೇಗೆಂದರೆ, ಹಾಲು ಕೊಡದಿರುವ ಹಸು ಹಾಲು ಕೊಡುವ ಕತ್ತೆಗಿಂತ ಪವಿತ್ರವಾದುದಾಗಿಲ್ಲವೆ ?"

ಸ್ಮೃತಿಗಳ ಕಾಲದಲ್ಲಿ ಶೂದ್ರರ ಮೇಲೆ ಬಹು ಬಲಾತ್ಕಾರ ಮಾಡಲ್ಪಟ್ಟಿತು. ಅವರನ್ನು ಹತ್ತಿಕ್ಕಿಡಲು ಅನೇಕ ಭಯಂಕರವಾದ ಕಟ್ಟಳೆಗಳು ವಿಧಿಸಲ್ಪಟ್ಟವು. ವಿಷ್ಣು ಸ್ಮೃತಿಯಲ್ಲಿ ಹೀಗೆ ಹೇಳಿದೆ—

"ಒಬ್ಬ ಅಸ್ಪೃಶ್ಯನು ದ್ವಿಜನನ್ನು ಮುಟ್ಟಿದರೆ ಆತನ ಶಿರಚ್ಛೇದ ಮಾಡಬೇಕು. ಆದರೆ ಒಬ್ಬ ಬ್ರಾಹ್ಮಣನು ಅಸ್ಪೃಶ್ಯನನ್ನು ಕೊಂದರೆ ಆತನಿಗೆ ಹತ್ತು ರೂ. ಗಳ ದಂಡವನ್ನು ವಿಧಿಸಬೇಕು."

ಯಾಜ್ಞವಲ್ಕ್ಯ ಸ್ಮೃತಿಯಲ್ಲಿಯು ಕೂಡಾ ಇದೇ ಪ್ರಕಾರ ಪಕ್ಷಪಾತದ ನಿಯಮಗಳನ್ನು ಹೇಳಿದೆ. ಒಬ್ಬ ಕೀಳು ಕುಲದ ಸ್ತ್ರೀಯಳ ಮೇಲೆ ಒಬ್ಬ ಹೆಚ್ಚಿನ ಕುಲದವನು ಅತ್ಯಾಚಾರ ನಡೆಯಿಸಿದರೆ ಆತನು ಅಪರಾಧಿಯೆಂದೇನೂ ಎಣಿಸಲ್ಪಡಕೂಡದು.

ಹೆಚ್ಚಿನ ಕುಲದವರು ಕೈ ಕಸಬುಗಳು ಹೀನವಾದವುಗಳೆಂದು ತಿಳಿದಿದ್ದರು. ವ್ಯಾಪಾರವು ಕೂಡಾ ಅವರಿಗೆ ಮನ್ನಣೆಯ ಉದ್ಯೋಗವಾಗಿರಲಿಲ್ಲ. ಆದುದರಿಂದ ಕೈ ಕಸಬುಗಳೆಲ್ಲ ಶೂದ್ರರ ಪಾಲಾದವು. ಬ್ರಾಹ್ಮಣ ಮತ್ತು ರಾಜ ಇವರ ವಿನಾ ಇನ್ನಿತರ ಜನರೆಲ್ಲರೂ ತಮ್ಮ ತಮ್ಮ ಉದ್ಯೋಗಗಳನ್ನೇ ಮಾಡಬೇಕೆಂದು ಶಾಸನದಿಂದಲೇ ಕಟ್ಟು ಮಾಡಲ್ಪಟ್ಟಿದ್ದಿತು. ದ್ವಿಜರು ವೈದ್ಯರ ಸಂಗಡ ಕೂಡಾ ಸಹ ಭೋಜನ ನಡೆಯಿಸಕೂಡದೆಂದೇ ನಿರ್ಬಂಧಗೊಳಿಸಲಾಗಿದ್ದಿತು. ಒಕ್ಕಲತನ ಮತ್ತು ಕೈಗಾರಿಕೆಗಳು ಶೂದ್ರರ ಕೆಲಸಗಳೆಂದೇ ತಿಳಿಯಲ್ಪಡುತ್ತಿದ್ದವು. ಈ ಕೆಲಸಗಳನ್ನು ಮಾಡುವವರಿಗೆ ಯಾವ ಸನ್ಮಾನವೂ ದೊರೆಯುತ್ತಿರಲಿಲ್ಲ. ಆದಕಾರಣ ಅವರು ತಮ್ಮ ಉದ್ಯೋಗಗಳನ್ನು ಮಾಡಲು ಉತ್ಸಾಹಶಾಲಿಗಳಾಗಿರುತ್ತಿರಲಿಲ್ಲ. ಈ ವಿಧವಾದ ವರ್ಣವ್ಯವಸ್ಥೆ ಮತ್ತು ಸಮಾಜ ಕಟ್ಟಳೆಗಳಲ್ಲಿ ಕಲಾ ಕೌಶಲ್ಯಗಳು ಊರ್ಜಿತಾವಸ್ಥೆಯನ್ನು ಹೊಂದುವುದು ಅಸಂಭಾವ್ಯವಾಗಿಯೇ ಇದ್ದಿತು. ಈ ವಿಧವಾದ ಸಮಾಜ ರಚನೆಗೆ ಯಾರು ತಾನೆ ಅಭಿಮಾನಪಡುವರು?

ಇಂತಹ ಸ್ಥಿತಿಯಲ್ಲಿ ಕ್ರಾಂತಿಯಾಗುವುದು ನ್ಯಾಯವಾಗಿಯೇ ಇದ್ದಿತು. ಅಂಥ ಕ್ರಾಂತಿಯು ಪರಕೀಯರ ದಾಳಿಯ ರೂಪದಲ್ಲಿ ಪ್ರಕಟವಾಯಿತು. ಹಿಂದುಗಳು ಪರಕೀಯರ ಆಕ್ರಮಣವನ್ನು ತಡೆಯಲಾರದೆ ಹೋದರು. ಏಕೆಂದರೆ ಬ್ರಾಹ್ಮಣ, ವೈಶ್ಯ ಮತ್ತು ಶೂದ್ರ ಈ ಮೂರೂ ವರ್ಣದವರು ಯುದ್ಧ ಮಾಡುವುದನ್ನು ಅರಿತಿರಲಿಲ್ಲ. ದೇಶದಲ್ಲಿ ಬಹು ಸ್ವಲ್ಪ ಜನರೇ ಯೋದ್ಧರಿದ್ದರು. ಅವರಲ್ಲಿಯೂ ಚಿಕ್ಕ ಪುಟ್ಟ ಪಂಗಡಗಳು ನೆಲೆಗೊಂಡಿದ್ದವು.

ಶ್ರೀ. ಪ್ರಸಾದ ಎಂಬ ಆಧುನಿಕ ಇತಿಹಾಸಜ್ಞರು ಹೀಗೆ ಹೇಳಿದ್ದಾರೆ— "ಹಿಂದುಗಳ ರಾಜಕೀಯ ಪಾರತಂತ್ರ್ಯಕ್ಕೆ ವರ್ಣ ವ್ಯವಸ್ಥೆಯೇ ಮುಖ್ಯ ಕಾರಣವಾಗಿದೆ."

ಈಗ ಹಿಂದುಗಳಲ್ಲಿ ೨೩೭೮ ಜಾತಿಗಳಿವೆ. ಇವರಲ್ಲಿ ಪರಸ್ಪರ ಊಟೋಪಚಾರ ಮತ್ತು ಶರೀರ ಸಂಬಂಧಗಳನ್ನು ಕುರಿತು ಇರತಕ್ಕ ನಿಯಮಗಳು ಬಹು ವಿಚಿತ್ರವಾದವುಗಳು. ಮತ್ತು ಹಾಸ್ಯಾಸ್ಪದವಾದವುಗಳು.

ಕುಂಬಾರರಲ್ಲಿ ಕುಳಿತು ಮಡಿಕೆ ಮಾಡುವವರೆಂತಲೂ ನಿಂತು ಮಡಿಕೆ ಮಾಡುವವರೆಂತಲೂ ಎರಡು ಜಾತಿಗಳು. ಇವರಲ್ಲಿ ಪರಸ್ಪರ ಶರೀರ ಸಂಬಂಧವಾಗುವುದಿಲ್ಲ! ಇವರಂತೆಯೇ ಮೀನಗಾರರಲ್ಲಿಯೂ ಎರಡು ಜಾತಿಗಳಿವೆ. ಕೆಲವರು ಬಲೆಯನ್ನು ಬಲದಿಂದ ಎಡಕ್ಕೆ ಬೀಸುವರು, ಕೆಲವರಾದರೋ ಎಡದಿಂದ ಬಲಕ್ಕೆ ಬೀಸುವರು. ಇವರಿಬ್ಬರಲ್ಲಿ ಪರಸ್ಪರ ಶರೀರಸಂಬಂಧವಾಗುವುದಿಲ್ಲ! ಇವುಗಳಿಗಿಂತ ಹೆಚ್ಚಿನ ಮೂಢತನದ ಕಟ್ಟಳೆಗಳ ಕಲ್ಪನೆಯು ಯಾರಲ್ಲಾದರೂ ಉಂಟಾಗಬಹುದೆ?

ಅಸ್ಪೃಶ್ಯತೆಯು ನಿವಾರಣೆಯಾಗಬೇಕೆಂತಲೂ ರಾಷ್ಟ್ರವು ಅಭಿವೃದ್ಧಿಯನ್ನು ಹೊಂದಬೇಕೆಂತಲೂ ಹಿಂದು ಸಮಾಜವು ಒಂದು ಪ್ರಬಲ ಜನಾಂಗವಾಗಬೇಕೆಂತಲೂ ಹಿಂದುಗಳು ಸ್ವರಾಜ್ಯವನ್ನು ಸಂಪಾದಿಸಬೇಕೆಂತಲೂ ನೀವು ಇಚ್ಛಿಸುತ್ತಿದ್ದರೆ ಹಿಂದುಗಳಲ್ಲಿರುವ ವರ್ಣಗಳನ್ನೂ, ಜಾತಿಗಳನ್ನೂ ಕಿತ್ತೊಗೆಯಲು ಸಿದ್ಧರಾಗಿರಿ.

"ಕ್ರಾಂತಿ"

---

(೧೪ ನೆಯ ಪುಟದಿಂದ ಬಂದುದು.)

ನನಗೆ ಗೊತ್ತಿದೆ. ಈ ಮಂತ್ರಿಗಳು ಮಾತನಾಡಿದ ರೀತಿಯಲ್ಲಿ ಯಾವುದೇ ಕಾಂಗ್ರೆಸ್ ಮಂತ್ರಿಯು ಮಾತನಾಡಬೇಕಾಗಿ ಬಂದುದು ಶೋಚನೀಯವೇ ಸರಿ. ನಿನ್ನೆ ಗಳಿಸಿದ ರಾಜಕೀಯ ಬಲವು ನಾಳೆ ಹೋಗಬಹುದು; ಆದರಿಂದ ನಮ್ಮ ತಲೆ ತಿರುಗದಿರಲಿ, ಮತ್ತು ನಮ್ಮ ಹಳೆಯ ವಾಗ್ದಾನಗಳನ್ನು ಮರೆಯುವಂತೆ— ನಾವೇ ಅವನ್ನು ಜರಿದುಬಿಡುವಂತೆ ಮಾಡದಿರಲಿ. ನಮಗೆ ಸ್ವತಂತ್ರ ಪ್ರಾಂತವು ದೊರೆಯದಿದ್ದರೆ, ಕಾಂಗ್ರೆಸ್ಸು ಬೇಡುವ ಮಧ್ಯವರ್ತಿ ಸರಕಾರದಂತಹ ಸಂಯುಕ್ತ ರಾಜ್ಯಘಟನೆಯಾಗಲಿ ಅಥವಾ ಇನ್ನಾವ ಘಟನೆಯಾಗಲಿ ನಮಗೆ ನಿರುಪಯುಕ್ತವೇ ಸರಿ. ಆದುದರಿಂದ ನಮ್ಮ ಬೇಡಿಕೆಗಳನ್ನು ನಾವು ಗಟ್ಟಿಯಾಗಿ ಹೇಳಬೇಕು; ಕಾಂಗ್ರೆಸ್ಸಿನವರು ನಮ್ಮ ಕೂಗನ್ನು ಇದು ವರೆಗೆ ಸಾಕಷ್ಟು ಕೇಳುತ್ತಿರಲಿಲ್ಲ; ಅದು ಆಗದ ಹಾಗೆ ಉಚ್ಚ ಧ್ವನಿಯಲ್ಲಿ ಒತ್ತಿ ಹೇಳಬೇಕು. ಈ ಪ್ರಶ್ನೆಯ ಬಿಡುವಳಿಗಾಗಿ ಇನ್ನು ದಾರಿ ಕಾಯುವುದು ನಿಷ್ಪ್ರಯೋಜಕವೆಂದೂ ಅದೇಕೆ ಭಯಾವಹವೆಂದೂ ನನಗನಿಸುತ್ತದೆ. ಭಯಾವಹವೇಕೆಂದರೆ ಈ ವರೆಗಾದ ಬೇರೆ ಭಾಷೆಯ ಪ್ರಾಂತಗಳ ಅವ್ಯಾಹತವಾದ ಆಕ್ರಮಣದಿಂದ ನಮ್ಮ ನಾಡು ಈಗಾಗಲೆ ಎಷ್ಟೋ ತೊಂದರೆಗೊಳಪಟ್ಟಿದೆ; ಮತ್ತು ಭವಿಷ್ಯತ್ತಾದರೊ ಇನ್ನೂ ಭೀಕರವಾಗಿ ತೋರುವುದು.

೭. ನಾವು ನಮ್ಮ ಗುರಿಯನ್ನು ಕೂಡಲೆ ಸಾಧಿಸಲು ಯಾವ ಯಾವ ಉಪಾಯಗಳನ್ನು ಕೈಕೊಳ್ಳಬೇಕೆಂಬುದನ್ನು ಈ ಅಧಿವೇಶನದಲ್ಲಿ ನಿರ್ಣಯಿಸುವುದು ಅತ್ಯಂತ ಅಗತ್ಯವಾದ ವಿಷಯ. ನಮ್ಮ ಆಂದೋಲನವನ್ನು ನಡೆಯಿಸಬಹುದಾದ ಮೂರು ಮಾರ್ಗಗಳನ್ನು ನಾನು ಸೂಚಿಸುವೆನು.

(ಅ) ಪ್ರಾಂತದ ತುಂಬೆಲ್ಲ ಸಾರ್ವಜನಿಕ ಸಭೆಗಳನ್ನು ನೆರೆಯಿಸಿ ಮತ್ತು ಸ್ಥಳೀಯ ಸಂಘ ಸಂಸ್ಥೆಗಳ ಹಾಗೂ ಪತ್ರಿಕೆಗಳ ಮೂಲಕ ನಮ್ಮ ಬೇಡಿಕೆಗಳ ಪುನರುಚ್ಚಾರಣೆ ಮಾಡಿ, ಈ ಸಂಬಂಧದ ಗೊತ್ತುವಳಿಗಳನ್ನು ಮಾಡಿ ನಮ್ಮ ಬೇಡಿಕೆಯ ಬಗ್ಗೆ ದುರ್ದಮನೀಯವಾದ ಆಂದೋಲನವನ್ನು ಹೂಡುವುದು.

(ಬ) ಈ ಸಮಸ್ಯೆಯ ನಿಜವಾದ ಪರಿಸ್ಥಿತಿಯನ್ನು ಇಂಗ್ಲಂಡಿನ ಜನತೆಯ ಮುಂದೆ ಮಂಡಿಸಲು ಒಂದು ಶಿಷ್ಟಮಂಡಲವನ್ನು ಅವಶ್ಯವಿದ್ದರೆ ಕಳಿಸಬೇಕು. ಆದರೆ ಕಾಂಗ್ರೆಸ್ಸಿನ ವರ್ಕಿಂಗ ಕಮಿಟಿಯವರು ಭಾರತ ಮಂತ್ರಿಗಳನ್ನು ಸಂದರ್ಶಿಸಲು ಆಂಧ್ರರ ಶಿಷ್ಟಮಂಡಳವು ಹೋಗಬೇಕೆಂಬ ವಿಚಾರವನ್ನು ನಿರಾಕರಿಸಿದ್ದಾರೆಂಬುದನ್ನು ನೋಡಿ ನನಗೆ ಸ್ವಲ್ಪ ವಿಷಾದವಾಗುತ್ತದೆಂದು ಇಲ್ಲಿ ಹೇಳದಿರಲಾರೆನು. ನಮ್ಮ ಜನ್ಮಸಿದ್ಧ ಹಕ್ಕಿನ ಬಗ್ಗೆ ಅವರ ತಲೆಬಾಗಿಲ ವರೆಗೆ ಹೋಗಿ ಬೇಡಿಕೊಳ್ಳುವುದು ಸರಿಯಲ್ಲವೆಂಬುದು ಸತ್ಯವಿದ್ದರೂ, ಮದ್ರಾಸ ಮತ್ತು ಮುಂಬೈ ಶಾಸನ ಮಂದಿರಗಳಲ್ಲಿ ಕಾಂಗ್ರೆಸ್ ಸರಕಾರಗಳ ಬೆಂಬಲದಿಂದ ಪ್ರಾಂತನಿರ್ಮಾಣದ ನಿರ್ಣಯಗಳನ್ನು ಪಾಸು ಮಾಡಿಸಿಕೊಳ್ಳುವ ಧೋರಣೆಯೊಡನೆ ಮೇಲಣ ಮನೋರಚನೆಯನ್ನು ಸಮನ್ವಯಿಸುವುದು ನನಗಂತೂ ಗಡಚಾಗಿ ತೋರುವುದು. ಈಗ ಅಂಗೀಕೃತವಾದ ನಿರ್ಣಯಗಳು ಬರಿ ತಾತ್ಪೂರ್ತಿಕ ಸಮಾಧಾನಕ್ಕಾಗಿ ಮಾತ್ರ ಇರದಿದ್ದರೆ ಕೂಡಲೇ ಕೈಕೊಳ್ಳಬೇಕಾದ ಉಪಾಯಗಳನ್ನು ಕುರಿತು ಇಂಗ್ಲಂಡಿನಲ್ಲಿಯ ಅಥವಾ ಇತರ ಕಡೆಗಳಲ್ಲಿಯ ಜನತಾಭಿಪ್ರಾಯವನ್ನು ತಕ್ಕ ರೀತಿಯಲ್ಲಿ ತಿದ್ದುವುದಕ್ಕಾಗಿ ಏನಾದರೂ ನಿಶ್ಚಿತವಾದ ಮತ್ತು ಪ್ರತ್ಯಕ್ಷವಾದ ಕಾರ್ಯವನ್ನು ಕೈಕೊಳ್ಳಲೇಬೇಕು.

(ಸಶೇಷ.)

## ವೀರಶೈವ ದೀಕ್ಷಾ ಸಮಾರಂಭ.

ಸೊಲ್ಲಾಪುರದಲ್ಲಿ ಕಳೆದ ವೈಶಾಖ ಶುದ್ಧ ನವಮಿ ರವಿವಾರ ಶ್ರೀಮನ್ನಿರಂಜನ ಕಡಗಂಚಿ ಶ್ರೀ ಶಾಂತವೀರ ಸ್ವಾಮಿಗಳವರ ನೇತೃತ್ವದಲ್ಲಿ ಲಿಂಗಾಂಗಿ ಪಾಳರಡ್ಡಿ ಪಂಗಡದ ೩೧ ಮನೆಗಳ ೨೫೫ ಜನರಿಗೆ ವೀರಶೈವ ದೀಕ್ಷೆಯನ್ನು ಮಾಡಿ ಅವರನ್ನು ಬಳಕಿಯಲ್ಲಿ ತೆಗೆದುಕೊಂಡುದು ಅಭಿನಂದನೀಯವಾದುದು.

—ತಾ. ೨೮ ನೆಯ ದಿನ ಸೊಲ್ಲಾಪುರ ಜಿಲ್ಲೆಯ ಸಾಂಗೋಲಿಯಲ್ಲಿ ಅಖಿಲ ಮುಂಬಯಿ ಇಲಾಖಾ ಚರ್ಮಕಾರ ಪರಿಷತ್ತಿನ ದ್ವಿತೀಯ ಅಧಿವೇಶನವು ಶ್ರೀ. ಸಾಂಬ್ರಾಣಿಯವರ ಅಧ್ಯಕ್ಷತೆಯಲ್ಲಿ ಬಹು ಯಶಸ್ವಿಯಾಗಿ ಜರುಗಿತು.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

# ಶರಣ ಸಂದೇಶ

The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಲ್ಲ. ಲೋಕವಿರೋಧಿ. ಶರಣನಾರಿಗೂ ಅಂಜುವವನಲ್ಲ !
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಬಿಡಿಸಂಚಿಕೆಗೆ ೧ ಆಣೆ.

ಸಂಪಾದಕರು:-
ಹರ್ಡೇಕರ ಮಂಜಪ್ಪನವರು.

ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೬ ನೆಯ ಮೇ ೧೯೩೮. | ಸಂಚಿಕೆ ೪೯ |
|---|---|---|


ಜನಸೇವೆಯೇ ... ದೇವಸೇವೆ.

## ಕಾಂಗ್ರೆಸ್ಸಿನ ರಾಯಭಾರಿಗಳ

## ಪರದೇಶ ಸಂಚಾರ.

### ಪಂಡಿತ ಜವಾಹರಲಾಲ ನೆಹರುರವರು

ಕಾಂಗ್ರೆಸ್ಸಿನ ರಾಯಭಾರಿಗಳಾಗಿ
ಯುರೋಪ, ಅಮೇರಿಕಾ, ಏಶಿಯಾ ಖಂಡಗಳಲ್ಲಿ ಸಂಚರಿಸಲು
ತಾ. ೨-೬-೩೮ ನೆಯ ದಿವಸ ಮುಂಬೈಯಿಂದ
ಪ್ರಯಾಣ ಮಾಡಿದ್ದಾರು.

## ಕಾಂಗ್ರೆಸ್-ಮುಸ್ಲಿಂಲೀಗ್ ಒಪ್ಪಂದ ?

ತಾ. ೪-೬-೩೮ ನೆಯ ದಿವಸ ಮುಂಬೈಯಲ್ಲಿ ಮುಸ್ಲಿಂಲೀಗಿನ
ವರ್ಕಿಂಗ್ ಕಮಿಟಿಯು ಕೂಡಿ
ಕಾಂಗ್ರೆಸ್ಸಿಗೆ ತಿಳಿಸುವ ಗೊತ್ತುವಳಿಯನ್ನು
ಸರ್ವಾನುಮತದಿಂದ ನಿರ್ಧರಿಸಿತು.

ದ್ವಾರಿ[illegible]ದೇ ... ದೇವಾಲಯ.



# ಶರಣ ಸಂದೇಶ

THE SHARANA SANDESHA.



## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ-ಸೋಮವಾರ ತಾರೀಖು ೬ ನೆಯ ಜೂನ ೧೯೩೮. | ಸಂಚಿಕೆ ೩೯

## ಮಹತ್ವದ ಸುದ್ದಿಗಳು.

—ಸಿಕಂದ್ರಾಬಾದಿನಲ್ಲಿ ಮಹಮ್ಮದ ಪೈಗಂಬರರ ಜನ್ಮ ದಿನಾಚರಣೆಯ ನಿಮಿತ್ತ ಹತ್ತು ಸಾವಿರ ಮುಸಲ್ಮಾನರ ಮಹಾಸಭೆ ಸೇರಿದ್ದಿತು. ಅದರಲ್ಲಿ ನವಾಬ ಬಹದ್ದೂರ ಯಾರ ಜಂಗರು ಭಾಷಣಮಾಡುವುದಾಗಿ ಪ್ರಕಟವಾಗಿದ್ದಿತು. ಅವರು ಭಾಷಣಮಾಡಲು ನಿಲ್ಲುವಷ್ಟರಲ್ಲಿಯೇ ಪೋಲೀಸರು ತಡೆದು ಭಾಷಣಮಾಡಬಾರದೆಂದು ತಿಳಿಸಿದರು.

—ರಾಮದುರ್ಗ ಸಂಸ್ಥಾನದಲ್ಲಿಯ ಈಗಿನ ಚಳವಳಿಯನ್ನು ನೋಡಿ ಕಳವಳಗೊಂಡು ಅಲ್ಲಿಯ ದಿವಾನರು ತಮ್ಮ ಸ್ಥಾನಕ್ಕೆ ರಾಜೀನಾಮೆ ಕೊಟ್ಟರು.

—ಮುಂಬೈ ಅಸೆಂಬ್ಲಿಯಲ್ಲಿ ತೀರ್ಮಾನಿಸಲ್ಪಟ್ಟ ಮಂದಿರದಲ್ಲಿ ಪ್ರವೇಶಿಸಿ ಪೂಜೆಮಾಡಲು ಹರಿಜನರಿಗಿದ್ದ ಅನಾನುಕೂಲತೆಗಳನ್ನು ಹೋಗಲಾಡಿಸುವ ಶಾಸನಕ್ಕೆ ವ್ಹಾಯಿಸ್‌ರಾಯರು ಒಪ್ಪಿಗೆ ಕೊಟ್ಟಿದ್ದಾರೆ.

—ಸ್ಪೇನ ಬಂಡುಗಾರ ಸರಕಾರಕ್ಕೆ ಜೆಕೋಸ್ಲೊವಾಕಿಯಾ ಮಾನ್ಯತೆ ಕೊಟ್ಟಿದೆ. ಇದರಿಂದ ಉಭಯ ಸರಕಾರಗಳಲ್ಲಿ ವಿಚಾರ ವಿನಿಮಯಮಾಡಲು ಅನುಕೂಲವಾಗಿದೆ.

—ಜಸ್ಟಿಸ್ ಪಂಗಡದ ಬಳ್ಳಾರಿಯ ಪ್ರಮುಖ ಮುಂದಾಳುಗಳಾದ ದಿವಾಣ ಬಹದ್ದೂರ್, ಕೈಸರ್ ಹಿಂದ ಮೊದಲಾದ ಬಿರುದುಗಳನ್ನು ಪಡೆದ ಶ್ರೀ. ಗೋಪಾಲ ಸ್ವಾಮಿ ಮೊದಲಿಯಾರರವರು ತಮ್ಮ ಎಲ್ಲ ಬಿರುದುಗಳನ್ನು ಬಿಟ್ಟುಕೊಟ್ಟಿದ್ದಾರೆ.

—ಮೈಸೂರಿನ ಪ್ರಿನ್ಸ್ ಜಯಚಾಮರಾಜ ಒಡೆಯರವರು ತಮ್ಮ ಪತ್ನಿಯವರಾದ ಪ್ರಿನ್ಸೆಸ್ ಸತ್ಯಪ್ರೇಮಾ ದೇವಿಯವರೊಡನೆ ವಿಶ್ರಾಂತಿಗಾಗಿ ಇಂಗ್ಲೆಂಡಿಗೆ ತೀವ್ರವೇ ಪ್ರಯಾಣಬೆಳಿಸುವವರಿದ್ದಾರೆ.

—ಮದ್ರಾಸದ ಹಿಂದು ಪತ್ರಿಕೆಯ ಸಂಪಾದಕರಾದ ಶ್ರೀ. ಕೆ. ಶ್ರೀನಿವಾಸನ್ ಇವರು ತಾ. ೪ ನೆಯ ದಿವಸ ಮುಂಬೈಯಿಂದ ಲಂಡನ್ ನಗರಕ್ಕೆ ಪ್ರಯಾಣಮಾಡಿದರು. ಅವರು ಯುರೋಪಿನ ಬೇರೆ ಬೇರೆ ಸ್ಥಳಗಳಲ್ಲಿ ಸಂಚರಿಸಿ ೩ ತಿಂಗಳುಗಳನಂತರ ತಿರುಗಿ ಬರುವವರಿದ್ದಾರೆ.

—ಮದರಾಸ ಅಸೆಂಬ್ಲಿಯ ಅಧ್ಯಕ್ಷರಾದ ಶ್ರೀ. ಬಿ. ಸಾಂಬಮೂರ್ತಿಯವರು ಪ್ರತಿ ದಿವಸ ಮುಂಜಾನೆ ೩ ಗಂಟೆಗಳ ವರೆಗೆ ಮೌನವ್ರತವನ್ನಾಚರಿಸುವವರಿದ್ದಾರೆ. ಈ ಅವಧಿಯಲ್ಲಿ ಅವರು ಅಭ್ಯಾಸ ಕ್ರಮವನ್ನು ಕೈಕೊಳ್ಳತಕ್ಕವರಿದ್ದಾರೆ.

—ಪುಣೆ ಜಿಲ್ಲೆಯಲ್ಲಿರುವ ನೀರಾ ನದಿಗೆ ವೀರಾ ಎಂಬ ಗ್ರಾಮದ ಹತ್ತಿರ ಮುಂಬೈ ಸರಕಾರದವರು ೪೦ ಲಕ್ಷ ರೂ. ವೆಚ್ಚಮಾಡಿ ಆಣೆ ಕಟ್ಟನ್ನು ಕಟ್ಟಿಸಬೇಕೆಂದು ನಿರ್ಧರಿಸಿದ್ದಾರೆ. ಸುತ್ತು ಮುತ್ತಲಿನ ಸ್ಥಳಗಳಿಗೆ ವಿದ್ಯುಚ್ಛಕ್ತಿಯನ್ನು ಒದಗಿಸಿಕೊಡುವುದು ಮತ್ತು ಸಣ್ಣ ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸುವುದಕ್ಕೆ ಸಹಾಯ ಮಾಡುವುದೇ ಈ ಯೋಜನೆಯ ಗುರಿಯಾಗಿದೆ.

—ಗಡಿನಾಡಿನಲ್ಲಿ ಇಪಿ ಫಕೀರರು ಬ್ರಿಟಿಶ್ ಸರಕಾರದ ವಿರುದ್ಧವಾಗಿ ದೊಂಬಿ ಏಳಲು ಅನೇಕರಿಗೆ ಪ್ರೋತ್ಸಾಹಿಸುತ್ತಿದ್ದಾರೆಂದು ಗೊತ್ತಾಗಿದೆ. ಅದಕ್ಕಾಗಿ ಸರಕಾರವು ಉತ್ತರ ವಜೀರ ಸ್ಥಾನದಲ್ಲಿ ಯುದ್ಧವನ್ನೇ ಹೂಡಬೇಕಾದ ಪ್ರಸಂಗ ಬಂದಿದೆ.

— ನಿಜಾಮ ರಾಜ್ಯದ ಲಾತೂರಲ್ಲಿ ಕೂಡಿದ್ದ ಮಹಾರಾಷ್ಟ್ರ ಪರಿಷತ್ತನ್ನು ಅಲ್ಲಿಯ ಸರಕಾರದ ದಬ್ಬಾಳಿಕೆಯಿಂದ ಸ್ವಾಗತ ಸಂಘದವರು ಮಧ್ಯದಲ್ಲಿಯೇ ನಿಲ್ಲಿಸಿಬಿಟ್ಟರು.

—ನಿಜಾಮ ರಾಜ್ಯದ ಹಿಂದುಗಳ ನ್ಯಾಯವಾದ ಹಕ್ಕುಗಳ ಕಡೆಗೆ ಸರಕಾರವು ಲಕ್ಷಿಸದಿದ್ದರೆ ಬ್ರಿಟಿಶ್ ಭಾಗದ ಹಿಂದುಗಳು ಆ ರಾಜ್ಯದಲ್ಲಿ ಸೇರಿ ಪ್ರಯತ್ನಿಸಬೇಕಾಗಬಹುದೆಂದು ಹಿಂದು ಮಹಾಸಭೆಯು ನಿಜಾಮ ಸರಕಾರಕ್ಕೆ ಎಚ್ಚರಿಕೆಯನ್ನು ಕೊಟ್ಟಿದೆ.

# ಕರ್ನಾಟಕ ಏಕೀಕರಣ ಪರಿಷತ್ತು

## ಏಳನೆಯ ಅಧಿವೇಶನ

ಧಾರವಾಡ.

—

## ಅಧ್ಯಕ್ಷರ ಭಾಷಣ.

(ಕಳೆದ ಸಂಚಿಕೆಯಿಂದ ಮುಂದರಿದುದು.)

(ಕ) ಆಗ, ಈಗ ಏಕೀಕರಣದ ನಿರ್ಣಯಗಳನ್ನು ಅಂಗೀಕರಿಸುವುದರ ಹೊರತಾಗಿ ಕಾಂಗ್ರೆಸ್ಸಿನವರು ಈ ವಿಷಯಕ್ಕೆ ತಕ್ಕ ಗಮನವನ್ನು ಕೊಟ್ಟಿಲ್ಲವೆಂದು ನನಗೆ ಎನಿಸುತ್ತದೆ. ಹೆಚ್ಚಿನ ಮಹತ್ವದ ಸಂಗತಿಗಳು ಅವರ ಮನಸ್ಸನ್ನು ಸೆಳೆದಿವೆಯೆಂಬುದು ಸತ್ಯವಿದೆ. ಆದರೆ ಈ ವಿಷಯದಲ್ಲಿ ಆಂಧ್ರರ ಮತ್ತು ಕರ್ನಾಟಕರ ತಾಳ್ಮೆಯ ಮೇರೆಯು ಮೀರುತ್ತ ಬಂದಿದೆ. ಇನ್ನು ನಾವು ತಡೆಯುವುದಿಲ್ಲ. ತಡೆಯುವುದು ಸಾಧ್ಯವೂ ಇಲ್ಲ. ಎ. ಐ. ಸಿ. ಸಿ. ಯವರು ಇದನ್ನು ಆಗತ್ಯದ ವಿಷಯವೆಂದ ಕೂಡಲೇ ಕೈಕೊಳ್ಳುವಂತೆ ಈ ಎರಡೂ ಪ್ರಾಂತಗಳೊಳಗಿನ ಕಾಂಗ್ರೆಸ್ಸಿನವರು ಸುಸಂಘಟಿತ ರೀತಿಯಲ್ಲಿ ಏಕಮುಖವಾಗಿ ಒತ್ತಾಯಪಡಿಸುವ ಸಮಯವು ಬಂದಿದೆಯೆಂದು ನಾನು ಭಾವಿಸಿದ್ದೇನೆ. ಇಷ್ಟೇ ಅಲ್ಲ; ಬರಲಿರುವ ಸಂಯುಕ್ತ ರಾಜ್ಯಘಟನೆಯ ಪ್ರಶ್ನೆಯ ವಿಚಾರದಲ್ಲಿಯೇ ಏಕೀಕರಣದ ಪ್ರಶ್ನೆಯೂ ಸೇರ್ಪಡೆಯಾಗಬೇಕು. ಈ ಸಂದರ್ಭದಲ್ಲಿ ಕಾಂಗ್ರೆಸ್ ಮತ್ತು ಬ್ರಿಟಿಶ್ ಸರಕಾರಗಳ ನಡುವೆ ಸಾಮೋಪಾಯದ ಚರ್ಚೆ ನಡೆದಾಗ ಆಗಲಿ, ಅದು ವ್ಯರ್ಥವಾಗುವ ಹೊತ್ತು ಬಂದಲ್ಲಿ ದಂಡೋಪಾಯಗಳನ್ನು ಯೋಜಿಸುವ ಸಂದರ್ಭ ಬಂದಾಗ ಆಗಲಿ ಏಕೀಕರಣವು ಆ ಹಿರಿ ಸಮಸ್ಯೆಯ ಅನಿವಾರ್ಯವಾದ ಭಾಗವಾಗಲೇಬೇಕು. ಹಾಗೆ ಮಾಡದಿದ್ದರೆ ಸಂಯುಕ್ತ ರಾಜ್ಯಘಟನೆಯು ಅಸ್ತಿತ್ವದಲ್ಲಿ ಬಂದು ಕಾಂಗ್ರೆಸ್ಸಿನವರು ಸ್ವಲ್ಪ ಬದಲಾವಣೆಗಳೊಂದಿಗೆ ಅದನ್ನು ನಡೆಯಿಸಿಕೊಂಡು ಹೋಗುವ ಸಮಯ ಬಂದರೆ, ಹಲವು ವರುಷಗಳ ವರೆಗೆ ಈ ಪ್ರಶ್ನೆಯು ಇತ್ಯರ್ಥವಾಗದೆ ಉಳಿಯುವುದು. ಮತ್ತು ನಮ್ಮ ಮಿತ್ರರಲ್ಲಿಯೇ ಕೆಲವರಲ್ಲಿ ಅದನ್ನು ಮುಂದಕ್ಕೆ ತಳ್ಳುವ ಮನೋವೃತ್ತಿಯು ಬೆಳೆಯುವ ಸಂಭವವೂ ಇದೆ.

೮. ನನ್ನ ಪ್ರಾಂತದ ಮಟ್ಟಿಗೆ ನಮ್ಮ ಮಂತ್ರಿವರ್ಯರೂ ಅವರ ಸಹಕಾರಿಗಳೂ ಈ ಪ್ರಶ್ನೆಯನ್ನು ಇನ್ನು ಮುಂದಕ್ಕೆ ಹಾಕುವುದು ಅಸಾಧ್ಯವೆಂದು ಮನಗಂಡಿದ್ದಾರೆಂದು ಹೇಳಲು ನನಗೆ ಸಂತೋಷವೆನಿಸುತ್ತದೆ. ಮನೆತನದಲ್ಲಿಯ ಅಣ್ಣತಮ್ಮಂದರು ಪಾಲಾಗಬೇಕೆಂದು ನಿಶ್ಚಯಿಸಿದ್ದಾರೆಂಬುದನ್ನು ತಿಳಿದುಬಂದಮೇಲೆ ಇನ್ನದನ್ನು ತಡೆದು ಹಿಡಿಯುವುದು ತಪ್ಪೆಂದು ಅವರಿಗೆ ಮನವರಿಕೆಯಾಗಿದೆ. ಹಾಗೆಂದೇ ಮದ್ರಾಸ ಸರಕಾರದವರು ಮಾರ್ಚ ತಿಂಗಳಲ್ಲಿ ಈ ನಿರ್ಣಯವನ್ನು ಪುರಸ್ಕರಿಸಿದರು. ನನ್ನ ಮಟ್ಟಿಗಂತೂ ಅವರ ಪ್ರಾಮಾಣಿಕತನವನ್ನು ಸ್ವಲ್ಪವೂ ಶಂಕಿಸಲಾರೆನು. ಆ ನಿರ್ಣಯವು ಕೊನೆಮುಟ್ಟುವುದಕ್ಕೆ ಮಾಡಬೇಕಾದುದನ್ನೆಲ್ಲ ತಮ್ಮ ಮಟ್ಟಿಗೆ ಸರಕಾರದವರು ಮಾಡಿಯೆ ತೀರುವರೆಂದು ನನ್ನ ನಂಬುಗೆ. ಮುಂಬೈ ಸರಕಾರದವರು ಹೀಗೆಯೇ ನಡೆಯುವರೆಂದು ನನ್ನ ನಂಬುಗೆಯಿದ್ದರೂ ಶ್ರೀಯುತ ಲಕ್ಕಿ ಹಾಗೂ ಇನ್ನೊಬ್ಬ ಮಂತ್ರಿಗಳ ಕೆಲವು ಉದ್ಗಾರಗಳಿಂದ ನನ್ನ ಮನಸ್ಸಿನಲ್ಲಿ ಸ್ವಲ್ಪ ಸಂದೇಹವು ತಲೆದೋರಿದೆ. ಆದರೂ ನನಗೆ ಮುಂಬೈ ಸರಕಾರದಲ್ಲಿ ನಡೆದ ಒಳಮಾತುಗಳ ಪರಿಚಯವು ಸಾಕಷ್ಟು ಇಲ್ಲದಿರುವುದರಿಂದ ಏಕೀಕರಣದ ವಿಷಯದಲ್ಲಿ ಮುಂದೆ ಕೈಕೊಳ್ಳಬೇಕಾದ ಉಪಾಯಗಳ ಬಗ್ಗೆ ಈ ಪ್ರಾಂತದಲ್ಲಿ ಮೀನಮೇಷ ಮನೋವೃತ್ತಿಯಾಗಲಿ, ಇತರ ಯಾವ ತೊಂದರೆಯಾಗಲಿ ಕಂಡುಬಂದ ಪಕ್ಷಕ್ಕೆ ಯಾವ ಯೋಜನೆಯನ್ನು ಕೈಕೊಳ್ಳಬೇಕೆಂಬುದನ್ನು ನೀವು ಬಲ್ಲಿರೆಂದು ಭಾವಿಸುತ್ತೇನೆ. ಮದ್ರಾಸ ಸರಕಾರದ ಮಾತು ಹಾಗಿರಲಿ, ನಮ್ಮ ಆಶೆ ಆಕಾಂಕ್ಷೆಗಳ ಬಗ್ಗೆ ಆಂಧ್ರ, ಕೇರಳ ಮತ್ತು ತಮಿಳು ನಾಡುಗಳಲ್ಲಿ ಸಹ ಸಂಪೂರ್ಣ ಸೌಹಾರ್ದವಿದೆಯೆಂದು ನಾನು ಖಂಡಿತವಾಗಿ ಹೇಳಬಲ್ಲೆನು. ಗುಜರಾತ ಮಹಾರಾಷ್ಟ್ರಗಳ ಬಂಧುಗಳ ಅಭಿಪ್ರಾಯವಾದರೂ ಇದೇ ರೀತಿಯಾಗಿರುವುದೆಂದು ನಾನು ನಂಬುತ್ತೇನೆ. ಸೌಹಾರ್ದ-ಸಮ್ಮತಿಗಳು ನಮ್ಮ ಆಂದೋಲನವು ನಿರಾತಂಕವಾಗಿ ನೆರವೇರಲು ಅಗತ್ಯವಾದುದರಿಂದ ಅವರು ನಮ್ಮ ಹೋರಾಟದಲ್ಲಿ ಪೂರ್ಣ ನೆರವಾಗಬೇಕೆಂದು ನಾನು ಬೇಡಿಕೊಳ್ಳುತ್ತೇನೆ. ಈ ವಿಷಯವು ತೀವ್ರ ಕೈಗೂಡುವ ದಾರಿಯಲ್ಲಿ ಅಡೆತಡೆಗಳನ್ನು ಒಡ್ಡುವುದರಿಂದ ಮುಂಬೈ ಮದ್ರಾಸಗಳ ಕಾಂಗ್ರೆಸ್ ಸರಕಾರಗಳ ಅಥವಾ ಜನತೆಯ ನಿಜವಾದ ಹಿತವು ಎಷ್ಟು ಮಾತ್ರಕ್ಕೂ ಸಾಧಿಸುವದಿಲ್ಲೆಂದು ನಾನು ಸಾರಿ ಹೇಳುತ್ತೇನೆ. ಇಂದು ಮದ್ರಾಸ ಇಲಾಖೆಯಲ್ಲಿ ಭಾವನೆಯೊಂದು ಉಂಟಾಗಿದೆ. ನಾವಿಬ್ಬರೂ ಪರಸ್ಪರ ಸಮ್ಮತಿಯಿಂದ ಬೇರೆಯಾಗಲು ಒಪ್ಪಿಕೊಂಡಿದ್ದೇವೆಂಬ ಈ ತರದ ತಿಳುವಳಿಕೆಯು ಹಬ್ಬಿರುವಾಗ ಒಂದೇ ಮನೆಯಲ್ಲಿ ಕೂಡಿ ನಡೆಯುವುದನ್ನು ಅರೆಕ್ಷಣವಾದರೂ ಮುಂದರಿಸುವುದಕ್ಕಿಂತ ಪ್ರಾಂತಗಳನ್ನು ಹಂಚಿಕೊಡುವ ಕೆಲಸವನ್ನು ಆದಷ್ಟು ತೀವ್ರವಾಗಿ ಮಾಡಿಬಿಡುವುದು ವಿಹಿತವೆಂಬುದನ್ನು ತಮಗೆ ಹೇಳಬೇಕಾಗಿಲ್ಲ. ಈಗಿನ ಸಂದೇಹಮಯ ಮತ್ತು ಕಾಲವಿಲಂಬದ ವಾತಾವರಣದಲ್ಲಿ ಪ್ರಗತಿಪರವಾದ ಯಾವ ಮಹತ್ವದ ಯೋಜನೆಯನ್ನೂ ಕೈಕೊಳ್ಳಲಿಕ್ಕೆ ಸಾಧ್ಯವಿಲ್ಲ. ಆದುದರಿಂದ ಈ ಅಧಿವೇಶನದಲ್ಲಿ ಈ ವಿಷಯವನ್ನು ಕುರಿತು ಚನ್ನಾಗಿ ವಿಚಾರಮಾಡಿ ನಮ್ಮ ಬೇಡಿಕೆಗಳನ್ನು ಬೇಗನೆ ಕೈಗೂಡಿಸಿಕೊಳ್ಳಲು ಯಾವ ಉಪಾಯಗಳನ್ನು ಯೋಜಿಸಬೇಕೆಂಬುದನ್ನು ನಿರ್ಣಯಿಸುವುದು ಅಗತ್ಯವಿದೆ.

೯. ನಮ್ಮ ಸದ್ಯದ ಬೇಡಿಕೆಯು ಮುಂಬಯಿ ಮದ್ರಾಸ ಇಲಾಖೆಗಳ ಕನ್ನಡ ಭಾಗಗಳನ್ನೂ ಕೊಡಗು ಸೀಮೆಯನ್ನೂ ಒಂದುಗೂಡಿಸಿ ಪ್ರತ್ಯೇಕ—ಪ್ರಾಂತವನ್ನಾಗಿಮಾಡಬೇಕೆಂದಿದ್ದರೂ ಭಾರತದ ಅಂತಿಮ ಧ್ಯೇಯವು ಬ್ರಿಟಿಶ್ ಹಾಗೂ ಸಂಸ್ಥಾನ ಭಾರತದ ಸಾಮಾನ್ಯ ಭಾಷೆಯ ಭಾಗಗಳನ್ನೆಲ್ಲ ಒಂದುಗೂಡಿಸಿ ಚನ್ನಾಗಿ ಹುರಿಗೊಳಿಸಿ ಹೆಣೆದ ಪ್ರಾಂತಗಳನ್ನಾಗಿ ಮಾಡುವುದಾಗಿದೆಯೆಂದು ನಾನು ನಂಬುತ್ತೇನೆ. ನಮ್ಮ ಪರದೇಶೀಯ ಪ್ರಭುಗಳಿಂದ ಸ್ವಾತಂತ್ರ್ಯವನ್ನು ಪಡೆಯುವಷ್ಟು ಈ ದೇಶದ ಜನರು ಸಮರ್ಥರಾದಾಗ ಸ್ವಪ್ರಜಾಜನರನ್ನು ನಿರಂಕುಶವಾಗಿ ಆಳುವ ಅಧಿಕಾರವು ದೇವಾಯತ್ತವಾಗಿ ಬಂದಿದೆಯೆಂದು ತಿಳಿಯುವ ಅಸಂಖ್ಯ ಸಂಸ್ಥಾನಿಕರೊಡನೆಯೂ ತೀರ್ಮಾನಕ್ಕೆ ಬರುವಷ್ಟು ಅವರು ಸಮರ್ಥರಾಗುವುದರಲ್ಲಿ ಸಂದೇಹವಿಲ್ಲ. ಈ ದೃಷ್ಟಿಯಿಂದ ಮೈಸೂರಲ್ಲಿ ನಮ್ಮ ಕನ್ನಡ ಬಂಧುಗಳು ಕಲಿತನದಿಂದ ನಡೆಯಿಸಿದ ಸ್ವಾತಂತ್ರ್ಯದ ಹೋರಾಟವು ತುಂಬಾ ಅರ್ಥಪೂರ್ಣವೂ ಆಶಾದಾಯಕವೂ ಆಗಿದೆ. ಅವರಿಗೆ ನಮ್ಮ ಅಭಿನಂದನೆಗಳನ್ನೂ ಆದರದ ಪ್ರಣಾಮಗಳನ್ನೂ ಅರ್ಪಿಸುತ್ತೇನೆ. ಅನೇಕ ಕನ್ನಡ ಸಂಸ್ಥಾನಗಳ ಜತೆಜತೆಗೆ ಬ್ರಿಟಿಶ್ ಹಿಂದುಸ್ಥಾನದಲ್ಲಿಯೂ ಸ್ವಾಯತ್ತತೆಯ ಅಧಿಕಾರಗಳನ್ನು ಕನ್ನಡ ಜನಾಂಗವು ಸಂಪಾದಿಸಿದ ಮೇಲೆ ಒಂದೇ ಪ್ರಾಂತೀಯ ಆಡಳಿತದಲ್ಲಿ ಎಲ್ಲವನ್ನೂ ಒಗ್ಗೂಡಿಸುವುದು ನಮ್ಮ ಕೊನೆಯ ಗುರಿಯಾಗಿದೆ.

—

# ಕರ್ನಾಟಕ ಏಕೀಕರಣ ಪರಿಷತ್ತಿನಲ್ಲಿ ಪಾಸಾದ ಠರಾವುಗಳು.

(ಕಳೆದ ಸಂಚಿಕೆಯಿಂದ ಮುಂದರಿದುದು.)

೪. ಹಿಂದುಸ್ಥಾನದ ಅನೇಕ ಭಾಗಗಳಲ್ಲಿ ವಿಶೇಷತಃ ಕರ್ನಾ
ಟಕ ಮತ್ತು ಆಂಧ್ರ ಪ್ರಾಂತಗಳಲ್ಲಿ ಭಾಷಾನುಗುಣವಾದ ಹೊಸ
ಪ್ರಾಂತರಚನೆಯು ಈಗ ಅತ್ಯವಶ್ಯವೆಂಬುದಾಗಿ ತೀವ್ರತಮವಾದ
ಆಂದೋಲನವು ನಡೆದಿರಲು, ಹಿಂದೀ ರಾಷ್ಟ್ರೀಯ ಮಹಾಸಭೆಯಂಥ
ಪ್ರಮುಖ ಪ್ರಾತಿನಿಧಿಕ ಸಂಸ್ಥೆಯು ಭಾಷಾನುಗುಣ ಪ್ರಾಂತರಚ
ನೆಯ ತತ್ವವನ್ನೊಪ್ಪಿ ಕರ್ನಾಟಕಾಂಧ್ರಗಳ ಸ್ವತಂತ್ರೀಕರಣಕ್ಕೆ
ಮಾನ್ಯತೆಯನ್ನಿತ್ತಿರಲು, ಮುಂಬಯಿ ಮದ್ರಾಸಗಳ ಕಾನೂನು ಮಂ
ಡಲಗಳು ಕರ್ನಾಟಕಾಂಧ್ರ ಪ್ರಾಂತಗಳ ನಿರ್ಮಾಣಕ್ಕೆ ಮೊನ್ನೆಯೇ
ಸಮ್ಮತಿಯನ್ನಿತ್ತಿರಲು, ಭಾರತ ಮಂತ್ರಿಗಳಾದ ಲಾರ್ಡ ಝೆಟಲೆಂ
ಡರು ಸದ್ಯಕ್ಕೆ ಹೊಸ ಪ್ರಾಂತರಚನೆಯು ಹಿಂದುಸ್ಥಾನಕ್ಕೆ ಹಿತಕರ
ವಲ್ಲೆಂದು ತಮ್ಮ ಉಪಮಂತ್ರಿಗಳ ಮುಖಾಂತರ ಪಾರ್ಲಿಮೆಂಟಿನಲ್ಲಿ
ಒಡನುಡಿದುದನ್ನು ಈ ಪರಿಷತ್ತು ತೀವ್ರವಾಗಿ ನಿಷೇಧಿಸುತ್ತದೆ.

೫. ಕರ್ನಾಟಕದ ಭಾಗವಾಗಿರುವ ಮೈಸೂರು ಸಂಸ್ಥಾನದಲ್ಲಿ
ಪ್ರಜಾಪ್ರಭುತ್ವ ಪದ್ಧತಿಯ ಸರಕಾರದ ವಿಷಯವಾಗಿ ಉಂಟಾಗಿ
ರುವ ಅದ್ಭುತವಾದ ಜನಜಾಗೃತಿಯ ಬಗ್ಗೆ ಈ ಪರಿಷತ್ತು ಅತ್ಯಂತ
ಸಂತೋಷ ಸೂಚಿಸುತ್ತದೆ.

ಜವಾಬದಾರ ಸರಕಾರವನ್ನು ದೊರಕಿಸುವ ಬಗ್ಗೆ ಮೈಸೂ
ರಿನ ಮಹಾಜನರು ನಡೆಸಿರುವ ತ್ಯಾಗಪೂರ್ವಕವಾದ ಪ್ರಯತ್ನಗಳು
ಶೀಘ್ರವೇ ಸಫಲವಾಗಲೆಂದು ಹಾರೈಸುತ್ತದೆ.

೬. ಕರ್ನಾಟಕ ಪ್ರತ್ಯೇಕ ಪ್ರಾಂತನಿರ್ಮಾಣವು ಕನ್ನಡಿಗರ
ಜೀವಾಳದ ಪ್ರಶ್ನೆ ಎಂಬುದನ್ನು ಕುರಿತು ಕರ್ನಾಟಕಕ್ಕೆ ಸಂಬಂಧಿ
ಸಿದ ಶಾಸನ ಸಭೆಗಳು ಇದಕ್ಕೆ ಸಮ್ಮತಿ ಕೊಟ್ಟಿರುವದನ್ನು ಲಕ್ಷಿಸಿ
ಪಾರ್ಲಿಮೆಂಟಿನವರು ಯೋಗ್ಯ ವೇಳೆಯಲ್ಲಿಯೇ ಕರ್ನಾಟಕ ಸ್ವತಂ
ತ್ರ ಪ್ರಾಂತದ ಪ್ರತ್ಯೇಕ ಆಡಳಿತೆಯನ್ನು ಪ್ರಾರಂಭಿಸದಿದ್ದಲ್ಲಿ
ಅದನ್ನು ದೊರಕಿಸುವ ಬಗ್ಗೆ ಕರ್ನಾಟಕವು ಎಲ್ಲ ಬಗೆಯ ಸತ್ಯಾ
ಗ್ರಹ ಮೊದಲಾದ ತ್ಯಾಗವನ್ನು ಮಾಡಲು ಸಿದ್ಧವಿರಬೇಕೆಂದು ಈ
ಸಭೆಯು ಸಕಲ ಕನ್ನಡಿಗರಿಗೆ ಬೇಡಿಕೊಳ್ಳುತ್ತದೆ.

೭. ಬಳ್ಳಾರಿ ಜಿಲ್ಲೆಯನ್ನು ತಮ್ಮ ಅಧಿಕಾರ ಕ್ಷೇತ್ರದಲ್ಲಿ ಸೇರಿ
ಸಿಕೊಳ್ಳಬೇಕೆಂದು ಆಂಧ್ರ ವಿಶ್ವವಿದ್ಯಾಲಯದ ಅಧಿಕಾರಿಗಳು
ನಡೆಸಿದ ಪ್ರಯತ್ನವನ್ನು ಈ ಪರಿಷತ್ತು ತೀವ್ರವಾಗಿ ನಿಷೇಧಿಸು
ತ್ತದೆ.

೮. ಕನ್ನಡ ಜಿಲ್ಲೆಯಾದ ನೀಲಗಿರಿಯನ್ನು ಒಡೆದು ಮಲ
ಬಾರ ಹಾಗು ಕೊಯಿಮತ್ತೂರ ಜಿಲ್ಲೆಗಳಲ್ಲಿ ಹಂಚುವದು ಮದ್ರಾಸ
ಸರಕಾರದ ವಿಚಾರವಿದೆಯೆಂದು ಪತ್ರಿಕೆಗಳಲ್ಲಿ ಪ್ರಕಟವಾಗಿದೆ.
ಅದು ಸತ್ಯವಿದ್ದ ಪಕ್ಷದಲ್ಲಿ ಈ ಸಭೆಯು ಅದನ್ನು ನಿಷೇಧಿಸುತ್ತದೆ.

೯. ಕಾಂಗ್ರೆಸ್ಸು ಒಪ್ಪಿರುವ ಭಾಷಾನುಸಾರ ಪ್ರಾಂತ ರಚ
ನೆಯು ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಕಾರ್ಯ
ಕ್ಷೇತ್ರಕ್ಕೆ ನ್ಯಾಯವಾಗಿ ಸೇರಬೇಕಾಗಿದ್ದ ಮುಂಬೈ ಮದ್ರಾಸ ಇಲಾ
ಖೆಗಳ ಎಷ್ಟೋ ಭಾಗಗಳು ಇನ್ನೂ ಹೊರಗೇ ಉಳಿದಿರುತ್ತವೆ.
ಇಂತಹ ಪ್ರದೇಶಗಳನ್ನು ಭಾವೀ ಕರ್ನಾಟಕ ಪ್ರಾಂತ ನಿರ್ಮಾಣದ
ಪೂರ್ವ ಪೀಠಿಕೆಯಾಗಿ ತೀವ್ರವೇ ತನ್ನ ಕಾರ್ಯಕ್ಷೇತ್ರದಲ್ಲಿ ತಂದು
ಕೊಳ್ಳಲು ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯು ಅಖಿಲ
ಭಾರತ ಕಾಂಗ್ರೆಸ್ ಕಮಿಟಿಯ ಮುಖಾಂತರ ಅವಶ್ಯವಾದ ಎಲ್ಲ
ಪ್ರಯತ್ನಗಳನ್ನು ಕೂಡಲೇ ಕೈಕೊಳ್ಳಬೇಕೆಂದು ಈ ಪರಿಷತ್ತು
ಕೇಳಿಕೊಳ್ಳುತ್ತದೆ.

೧೦. ಕರ್ನಾಟಕ ಏಕೀಕರಣದ ಕಾರ್ಯವನ್ನು ಸಾಗಿಸುವು
ದಕ್ಕಾಗಿ ಹೆಚ್ಚಿನ ಹಣವು ಬೇಕಾಗಿರುವುದರಿಂದ ಅಖಿಲ ಕರ್ನಾಟಕ
ಏಕೀಕರಣದ ನಿಧಿಯನ್ನು ಸಂಗ್ರಹಿಸಲು ಈ ಪರಿಷತ್ತು ಕಾರ್ಯ
ಕಾರೀ ಮಂಡಲಕ್ಕೆ ಅಧಿಕಾರ ಕೊಡುತ್ತದೆ. ಕರ್ನಾಟಕದ ಮಹಾ
ಜನರು ಈ ನಿಧಿಗೆ ಕೊಡಗೈಯಿಂದ ಸಹಾಯ ಮಾಡಬೇಕೆಂದು
ಬಿನ್ನವಿಸುತ್ತದೆ.

೧೧. ಏಕೀಕರಣ ಸಂಘದ ಕಾರ್ಯಕಾರೀ ಮಂಡಲದವರು
ಕೆಳಗೆ ಕಾಣಿಸಿದ ವಿಷಯಗಳ ಬಗ್ಗೆ ಯೋಗ್ಯವಾದ ಉಪಾಯ ಯೋ
ಜನೆಯನ್ನು ಬೇಗನೆ ಮಾಡಬೇಕೆಂದು ಈ ಪರಿಷತ್ತು ವಿಧಿಸುತ್ತದೆ.

(ಅ) ಕರ್ನಾಟಕದ ಗಡಿನಾಡುಗಳಲ್ಲಿ ಏಕೀಕರಣದ ಬಗ್ಗೆ
ಜಾಗೃತಿಯನ್ನುಂಟುಮಾಡುವದು.

(ಆ) ಏಕೀಕರಣಕ್ಕೆ ಅಡ್ಡ ಬರುವ ಅಂತರ್ಬಾಹ್ಯದ ಆತಂಕ
ಗಳನ್ನು ನಿವಾರಿಸುವ ಪ್ರಯತ್ನ ಮಾಡುವದು.

(ಇ) ಕರ್ನಾಟಕ ಸೀಮೆಯೊಳಗಿನ ಸಂಸ್ಥಾನಗಳಲ್ಲಿ ಕನ್ನಡ
ಭಾಷೆಗೆ ಯೋಗ್ಯ ಸ್ಥಾನವು ದೊರೆಯುವಂತೆ ಪ್ರಯತ್ನಿಸುವದು.

(ಈ) ಕರ್ನಾಟಕದ ಸಾಂಪತ್ತಿಕ ಸ್ಥಿತಿಗಳ ವಿಷಯಕ್ಕೆ
ತಜ್ಞರ ಮುಖಾಂತರ ಸಾಧಾರಣವಾದ ಸಂಖ್ಯೆ ಸಂಗತಿಗಳನ್ನು
ಕಲೆಹಾಕಿ ಅದರ ವರದಿಯನ್ನು ಪ್ರಸಿದ್ಧಿಸುವದು.

(ಉ) ಕರ್ನಾಟಕದ ಕಲಾ ಕೈಗಾರಿಗೆ ವಿಮಾವಾಣಿಜ್ಯ ಕುಸಿ
ಬಾಗಾರಾ ಮುಂತಾದ ಆರ್ಥಿಕ ಸಂಸ್ಥೆಗಳನ್ನು ಪ್ರಬಲಗೊಳಿಸಲು
ಅಗತ್ಯವುಳ್ಳ ಎಲ್ಲ ಪ್ರಚಾರ ಕಾರ್ಯವನ್ನು ಮಾಡುವದು.

(ಊ) ಮಾಧ್ಯಮಿಕ ಶಾಲೆಗಳ ವಿದ್ಯಾರ್ಥಿಗಳಿಗಾಗಿ ರೇಡಿಯೊ
ಮೂಲಕ ಕೊಡಲ್ಪಡುತ್ತಿರುವ ಶಿಕ್ಷಣದಲ್ಲಿ ಕನ್ನಡಕ್ಕೂ ಸ್ಥಾನ
ದೊರೆಯುವಂತೆ ಸಂಸ್ಥೆಗಳನ್ನು ಪ್ರಾರಂಭಿಸಬೇಕೆಂದು ಕರ್ನಾಟಕ
ದಲ್ಲಿ ಉಚ್ಚ ಶಿಕ್ಷಣದ ವಿವಿಧ ಆಯಾ ಸಂಸ್ಥೆಗಳಿಗೆ ಬಿನ್ನಯಿ
ಸುವದು.

ಕರ್ನಾಟಕ ವಿವಿಧ ಸಮಸ್ಯೆಗಳನ್ನು ಕುರಿತು ಪರ ಪ್ರಾಂತ
ಗಳಲ್ಲಿ ಕೂಡಾ ಪ್ರಚಾರ ಕಾರ್ಯವನ್ನು ಸಾಗಿಸುವದು ಸುಲಭ
ವಾಗುವಂತೆ ಇಂಗ್ಲಿಷ್ ಭಾಷೆಯಲ್ಲಿ ಒಂದು ವೃತ್ತ ಪತ್ರಿಕೆಯ
ನ್ನು ಹೊರಡಿಸುವ ಬಗ್ಗೆ ಕಾರ್ಯಕಾರೀ ಮಂಡಲದವರು ಬೇಗನೆ
ಉಪಾಯ ಯೋಜನೆ ಮಾಡಬೇಕೆಂದು ಈ ಪರಿಷತ್ತು ಸೂಚಿಸು
ತ್ತದೆ.

ಕರ್ನಾಟಕ ಪ್ರಾಂತವು ಸ್ವಾಯತ್ತ ಪ್ರಾಂತವಾದನಂತರ
ಕರ್ನಾಟಕ ಪ್ರಾಂತದಲ್ಲಿಯ ಎಲ್ಲ ಅಲ್ಪಸಂಖ್ಯಾಕ ಮತ್ತು ಹರಿಜನ
ಮೊದಲಾದ ಹಿಂದುಳಿದ ವರ್ಗಗಳ ಹಕ್ಕು ಬಾಧ್ಯತೆಗಳು ಯೋಗ್ಯ
ರೀತಿಯಿಂದ ರಕ್ಷಿಸಲ್ಪಡುವದೆಂದು ಈ ಪರಿಷತ್ತು ಆಶ್ವಾಸನ ಕೊಡು
ತ್ತದೆ.

೧೨ ಕರ್ನಾಟಕ ಏಕೀಕರಣದ ಪರಿಷತ್ತಿನ ಕಾರ್ಯಗಳೆಲ್ಲ
ಸುಲಭವಾಗಿ ನಡೆಯಲಿಕ್ಕೆಂದು ಒಂದು ಘಟನೆಯು ಅತ್ಯವಶ್ಯವಾ
ಗಿದೆ. ಅಂತಹ ಘಟನೆಯನ್ನು ಸಿದ್ಧಪಡಿಸುವದರ ಸಲುವಾಗಿ ಒಂ
ದು ಸಮಿತಿಯನ್ನು ಈ ಸಭೆಯು ನಿಯಮಿಸುತ್ತದೆ. ಆ ಸಮಿತಿಯು
ಘಟನೆಯನ್ನು ಮೂರು ತಿಂಗಳೊಳಗಾಗಿ ತಯಾರಿಸಿ ಅದರ ವರದಿ
ಯನ್ನು ಪರಿಷತ್ತಿನ ಕಾರ್ಯಕಾರಿ ಮಂಡಲಕ್ಕೆ ಒಪ್ಪಿಸಬೇಕು.
ಘಟನಾ ಸಮಿತಿಯಲ್ಲಿ ಕೆಳಗಿನಂತೆ ಸಭಾಸದರಿರತಕ್ಕದ್ದು. ಶ್ರೀ.
ಕಾರಂತರು, ಶ್ರೀ. ದಾತಾರರು, ಶ್ರೀ. ದಿವಾಕರರು, ಶ್ರೀ. ಹುಕ್ಕೇರಿ
ಕರು, ಶ್ರೀ. ಭೂಸನವರು, ಶ್ರೀ. ಅಡ್ಡಣಗಿ, ಶ್ರೀ. ಮುಂಗೆಯ್ಯ
ನವರು ಜಂಗಿನ.

# ಬ್ರಾಹ್ಮಣರ ಅವನತಿ.

ಬ್ರಾಹ್ಮಣ ಸಮಾಜವು ಒಂದು ಕಾಲಕ್ಕೆ ಊರ್ಜಿತಾವಸ್ಥೆಯ ಶಿಖರಕ್ಕೇರಿತ್ತು. ಅದು ಈಗ ದಿನೆ ದಿನೆ ಕ್ಷೀಣವಾಗುತ್ತಾ ನಡೆದಿದೆ. ಗಾಢ ನಿದ್ರೆಯಿಂದ ಮಲಗಿರುವ ಈ ಸಮಾಜವು ಎಂದು ಎಚ್ಚರಪಡುವದೋ ದೇವರಿಗೆ ಗೊತ್ತು. ಬ್ರಾಹ್ಮಣರು ಪರ ಜಾತಿಯವರನ್ನು ಬಲವಿದ್ದಾಗ ಹಿಂಸಿಸಿದ್ದು ಒಂದು ಕಡೆ ಇರಲಿ, ಈಗ ತಮ್ಮ ಸಮಾಜದಲ್ಲೇ ಒಡಕನ್ನುಂಟುಮಾಡಿಕೊಂಡು ಮೇಲು ಕೀಳೆಂಬ ಭಾವನೆಯಿಂದ ಬಡಿದಾಡುತ್ತಿದ್ದಾರೆ. ಸ್ಮಾರ್ತರನ್ನು ಕಂಡರೆ ವೈಷ್ಣವರು ಸ್ನಾನಮಾಡಬೇಕಂತೆ! ತಮ್ಮ ಹೆಣ್ಣುಗಳನ್ನು ಅವರಿಗೆ ಕೊಡುವದಕ್ಕಿಂತಲೂ ಬಾವಿಯಲ್ಲಿ ಹಾಕಿ ಕೊಲ್ಲುವದು ಧರ್ಮವಂತೆ! ದ್ವೈತಾದ್ವೈತದ ಜಗಳ ಬೇರೆ. ಯಾರ ಅಭಿಪ್ರಾಯ ನಿಜವೋ ದೇವರಿಗೆ ಗೊತ್ತು. ಅದ್ವೈತ ಮತಸ್ಥಾಪಕರಾದ ಶಂಕರಾಚಾರ್ಯರು ಸಾಮಾನ್ಯ ವ್ಯಕ್ತಿಗಳೆ? ದ್ವೈತಮತ ಸ್ಥಾಪಕರಾದ ಮಧ್ವಾಚಾರ್ಯರೂ ಕೂಡ ಸಾಮಾನ್ಯ ವ್ಯಕ್ತಿಗಳಲ್ಲ. ಅವರಿಗೆ ಆ ಕಾಲಕ್ಕೆ ಯಾವ ನಿಯಮಗಳನ್ನು ಸಿದ್ಧಾಂತಗೊಳಿಸುವ ಅವಶ್ಯಕತೆ ಇತ್ತೋ ಅವುಗಳನ್ನು ಪೂರ್ಣಮಾಡಿ ಹೋದರು. ಉಭಯ ವ್ಯಕ್ತಿಗಳು ಸಮಕಾಲೀನರಾಗಿದ್ದರೆ ಯಾರದು ನಿಜವೋ ತಿಳಿಯುತ್ತಿತ್ತು. ಈಗಿನ ಕಾಲಕ್ಕೆ ನಾವು ಅವರ ಸೂಕ್ಷ್ಮ ವಿಚಾರಗಳನ್ನು ತೆಗೆದುಕೊಂಡು ಬಡಿದಾಡುವುದು ನಮಗೆ ಹಾನಿಕರ. ಒಂದೇ ಮನೆಯವರಾದ ನಾವು ಹೀಗೆ ಬಡೆದಾಡಿದರೆ ನೆರೆಮನೆಯವರು ನಗಲಿಕ್ಕಿಲ್ಲವೆ? ಈ ಸಮಾಜದ ಕೊರತೆಗಳನ್ನು ಎಷ್ಟು ಹೇಳಿದರೂ ತೀರದು. ಅನ್ಯ ಮತದವರನ್ನು ತಮ್ಮ ಜಾತಿಯಲ್ಲಿ ಸೇರಿಸಿಕೊಳ್ಳುವದೊಂದುಕಡೆ ಇರಲಿ, ತಮ್ಮವರನ್ನೇ ಸ್ವಲ್ಪ ಸ್ವಲ್ಪ ತಪ್ಪುಗಳಿಗಾಗಿ ತಮ್ಮ ಮತದಿಂದ ದಬ್ಬುವರು. ಆಧುನಿಕ ಸ್ಥಿತಿಯ ವಿಚಾರವೇ ಇವರಿಗಿಲ್ಲ. ಯಾವ ಜನಾಂಗದ ಜನಸಂಖ್ಯೆಯು ಹೆಚ್ಚಿರುವದೋ ಅವರಿಗೇನೇ ಹೆಚ್ಚು ಅಧಿಕಾರ ದೊರೆಯುವವೆಂಬುದನ್ನು ಮರೆತಿರುವರು.

ಈ ಸಮಾಜದಲ್ಲಿ ವಿಧವೆಯರ ಸಂಖ್ಯೆ ದಿನೆ ದಿನೆ ಹೆಚ್ಚುತ್ತಲಿದೆ. ಇದಕ್ಕೆ ಬಾಲವಿವಾಹವೇ ಮುಖ್ಯ ಕಾರಣ. ಗಂಡಂದಿರು ಸತ್ತಕೂಡಲೆ ಸಣ್ಣ ಸಣ್ಣ ತರುಣಿಯರ ತಲೆ ಬೋಳಿಸಿ ಅವರಿಗೆ ವಿಕಾರ ಸ್ವರೂಪವನ್ನುಂಟುಮಾಡುವರು. ಪುನರ್ವಿವಾಹ ಮಾಡುವದೊಂದು ಕಡೆ ಇರಲಿ, ತಲೆ ಬೋಳಿಸುವ ರೂಢಿ ಎಂದು ತಪ್ಪುವದೊ ತಿಳಿಯದು. ಗಂಡಸರು ಹಸಿದಾಗೊಮ್ಮೆ ೫೦ ಸಾರೆಯಾದರೂ ತಿಂಡಿ ತಿಂದರೂ ಮತ್ತು ೨೦ ಕನ್ಯೆಯರನ್ನು ಲಗ್ನವಾದರೂ ಅಡ್ಡಿ ಇಲ್ಲ. ಅದೇ ಗಂಡ ಸತ್ತ ಸ್ತ್ರೀಯರು ಒಪ್ಪತ್ತು ಉಂಡು ಹಸಿವೆಯಿಂದ ಬಳಲಿ ವಿಧಿಯನ್ನು, ಸ್ವಾಮಿಗಳನ್ನು, ಸಮಾಜವನ್ನು ಶಾಪಿಸುತ್ತ ಇಹಲೋಕಯಾತ್ರೆಯನ್ನು ಮುಗಿಸಬೇಕಂತೆ. ಹಾ! ಇದೆಂತಹ ಧರ್ಮ?

ಪುರುಷರಿಗೆ ಹೇಗೆ ಹಸಿವೆ, ನೀರಡಿಕೆ, ನಿದ್ರೆ, ಕಾಮ, ಸುಖ ಮತ್ತು ದುಃಖಗಳಿವೆಯೋ ಅದರಂತೆ ಸ್ತ್ರೀಯರಿಗು ಕೂಡಾ ಇರಲಿಕ್ಕಿಲ್ಲವೆ? ಪುರುಷನಿಗೇನೇ ಈ ಸೌಖ್ಯಗಳು ಬೇಕು, ಸ್ತ್ರೀಯರಿಗೆ ಬೇಕಿಲ್ಲವೆ? ಯಾವ ಧರ್ಮವು ಹೀಗೆ ಹೇಳುವುದಿಲ್ಲ? ಇಂತಹ ಅಧರ್ಮ ಸದ್ಯಕ್ಕೆ ಬ್ರಾಹ್ಮಣರಲ್ಲೇ ಕಂಡುಬರುವದು. ಈ ಜನರು ರೂಢಿಯನ್ನೇ ಒಂದು ಧರ್ಮವೆಂದು ತಿಳಿದಿರುವರು. ಹಿಂದಕ್ಕೆ ಸತಿ ಹೋಗುವ ಪದ್ಧತಿ ಇತ್ತು. ಗಂಡನು ಸತ್ತಕೂಡಲೆ ಹೆಂಡಂದಿರು ಗಂಡನಿಲ್ಲದ ಬಾಳು ಹಾಳೆಂದು ತಿಳಿದು ಆತ್ಮಾರ್ಪಣ ಮಾಡುತ್ತಿದ್ದರು. ಇತ್ತೀಚಿಗೆ ಒತ್ತಾಯದಿಂದ ಸ್ತ್ರೀಯರನ್ನು ಸಹಗಮನ ಮಾಡಿಸಹತ್ತಿದರು. ಲಾರ್ಡ ವಿಲಿಯಮ್ ಬೆಂಟಿಂಗ್‌ನ ಕಾಲಕ್ಕೆ ಈ ಕ್ರೂರ ನಿಯಮವು ಹಾರಿಹೋಯಿತು. ಆಗ ಸ್ವಾರ್ಥಿಗಳಾದ ಬ್ರಾಹ್ಮಣರು ತಮ್ಮ ಒಡೆತನವನ್ನು ಸ್ತ್ರೀಯರಮೇಲೆ ನೆಲೆಸುವದಕ್ಕಾಗಿ ಗಂಡನ ಮರಣದ ನಂತರ ಸ್ತ್ರೀಯರ ತಲೆ ಬೋಳಿಸಿ ಕೊಡಿಸಹತ್ತಿದರು. ತಮ್ಮದೇ ಕಾರಭಾರ; ತಮ್ಮದೇ ಕಾನೂನು ಹೇಳುವವರಾರು? ಅದೇ ಸ್ತ್ರೀಯರ ಕೈಯಲ್ಲಿ ಅಧಿಕಾರ ಸಿಕ್ಕಿದ್ದರೆ ಅವರು ಕೂಡ ಸ್ತ್ರೀಯರಿಗೆ ಹೆಚ್ಚು ಅನುಕೂಲವಾಗುವಂತೆ ನಿಯಮಗಳನ್ನು ಮಾಡಿಬಿಡುತ್ತಿದ್ದರು. ಅವರ ಕೈಯಲ್ಲಿ ಅಧಿಕಾರ ಸಿಕ್ಕಿದ್ದರೂ ಅವರು ಪುರುಷರಂತಹ ಕ್ರೂರ ಮತ್ತು ಸ್ವಾರ್ಥ ನಿಯಮಗಳನ್ನು ಮಾಡುತ್ತಿದ್ದಿಲ್ಲವೆಂಬುದನ್ನು ನಾವು, ಅವರು ಪುರುಷರ ಮೇಲೆ ಮಾಡುತ್ತಿರುವ ನಿಸ್ವಾರ್ಥ ಮತ್ತು ಪವಿತ್ರ ಪ್ರೇಮದಿಂದ ತಿಳಿಯಬಹುದು. ಸಾವಿರಾರು ಬಾಲ ವಿಧವೆಯರ ಭಯಂಕರ ಶಾಪದಿಂದ ಈ ಸಮಾಜವು ನಾಶವಾಗದೆ ಇರದು. ಪುನರ್ವಿವಾಹವು ಹಿಂದಕ್ಕೆ ರೂಢಿಯಲ್ಲಿತ್ತೆಂಬುದಕ್ಕೆ ಧರ್ಮ ಶಾಸ್ತ್ರದಲ್ಲಿಯ ಈ ಶ್ಲೋಕವೇ ಆಧಾರವಾಗಿದೆ.

ನಷ್ಟೇ ಮೃತೆ ಪ್ರವರ್ಜಿತೇ ಕ್ಲೀಬೇಚ ಪತಿತೇ, ಪತೌ ಪಂಚಸ್ವಾಪಚ್ಛು ನಾರೀಣಾಮ ಪತಿರನ್ಯೋ ವಿಧೀಯತೆ. ಇದರ ಅರ್ಥವೇನೆಂದರೆ ಗಂಡನು ಸತ್ತರೆ, ಷಂಡನಿದ್ದರೆ, ಭಯಂಕರ ರೋಗದಿಂದ ಪೀಡಿತನಾದರೆ, ದೇಶಭ್ರಷ್ಟನಾದರೆ ಮತ್ತು ಜಾತಿ ಭ್ರಷ್ಟನಾದರೆ ಈ ಐದು ಕಾರಣಗಳಿಂದ ಸ್ತ್ರೀ ಪುನರ್ವಿವಾಹಮಾಡಿಕೊಳ್ಳತಕ್ಕದ್ದು. ಒಟ್ಟಿಗೆ ಹೇಳುವದೇನೆಂದರೆ, ಎಲ್ಲಿಯ ವರೆಗೆ ಈ ಸಮಾಜವು ಪುನರ್ವಿವಾಹವನ್ನು ರೂಢಿಯಲ್ಲಿ ತರುವುದಿಲ್ಲವೋ ಮತ್ತು ತಮ್ಮಲ್ಲಿ ಮೇಲು ಕೀಳೆಂಬ ಭಾವನೆಗಳನ್ನು ತೆಗೆದುಹಾಕುವುದಿಲ್ಲವೋ ಅಲ್ಲಿಯ ವರೆಗೆ ಈ ಸಮಾಜವು ಎಂದಿಗೂ ಮುಂದಕ್ಕೆ ಬರದು.

ಅಸ್ಪೃಶ್ಯರನ್ನು ಹೀನಾವಸ್ಥೆಯಲ್ಲಿಟ್ಟವರೂ ಬ್ರಾಹ್ಮಣರೆ. ಅವರ ಬಡತನವನ್ನು ಮತ್ತು ಅವರ ದಡ್ಡತನವನ್ನು ಹೆಚ್ಚಿಸಿದವರು, ಅವರನ್ನು ಕಷ್ಟಕ್ಕೆ ಗುರಿಮಾಡಿದ ಮಹನೀಯರು ಇವರೇ. ಅಸ್ಪೃಶ್ಯರ ಶಾಪ ಈ ಸಮಾಜಕ್ಕೆ ತಗಲಹತ್ತಿದೆ. ಇಂದಿನ ನಮ್ಮ ಆಪ್ತ ಬಾಂಧವರಾದ ಹರಿಜನರನ್ನು ನಾವು ಮುಟ್ಟಿಸಿಕೊಳ್ಳದಿದ್ದರೆ ಕೀಳಾಗಿ ಕಂಡರೆ ನಾಳೆ ಅವರು ಮಹಮ್ಮದೀಯರಾಗಿ ನಮ್ಮ ಶತ್ರುಗಳಾಗುವರು. ನಮ್ಮ ಜನರನ್ನು ಶತ್ರುಗಳನ್ನಾಗಿ ಮಾಡಿಕೊಳ್ಳುವದು ವಿಹಿತವೆ? ಸನಾತನಿಗಳು ವಿಚಾರ ಮಾಡತಕ್ಕದ್ದು. ಇಂತಹ ಕಠಿಣ ಪ್ರಸಂಗದಲ್ಲಿ ಈ ಸಮಾಜವು ಘೋರ ನಿದ್ರೆಯಿಂದ ಎಚ್ಚತ್ತು ತಮ್ಮ ಕೊರತೆಗಳನ್ನು ದೂರಮಾಡಿಕೊಳ್ಳದಿದ್ದರೆ ಇವರಿಗೆ ಕೇಡು ತಪ್ಪದು.

ವೆಂಕಟೇಶ ರಾಘವೇಂದ್ರ ಕುಲಕರ್ಣಿ.
ಸೂಗೂರು.

---

# ಗಂಡುಮಕ್ಕಳೇ ಬೇಕೆಂಬ ಹುಚ್ಚುಭಾವನೆ ಏಕೆ?

## ಹಿಂದು ಸಮಾಜದ ದುಷ್ಟಪದ್ಧತಿಗೆ ಗಾಂಧೀಜಿಯವರ ವಿರೋಧ.

[ಮ. ಗಾಂಧಿಯವರು ೨೮-೫-೩೮ ನೇ 'ಹರಿಜನ' ಪತ್ರಿಕೆಯಲ್ಲಿ ಈ ರೀತಿ ಬರೆದಿದ್ದಾರೆ.]

ಒಬ್ಬ ಸುದ್ದಿಗಾರನು ಹೀಗೆ ತಿಳಿಸಿದ್ದಾನೆ.—

"ಕಚ್ಛ ಪ್ರಾಂತದಲ್ಲಿ ಅನೇಕ ಜನ ಕುಲೀನ ಸಭ್ಯಗೃಹಸ್ಥರಿದ್ದಾರೆ. ಇವರೆಲ್ಲರೂ ಪ್ರಾಮಾಣಿಕರು, ನೀತಿವಂತರು, ಉದಾರಿಗಳು ಮತ್ತು ಮಹಾ ತ್ಯಾಗಿಗಳು. ಆದರೆ ಕೇವಲ ಗಂಡುಮಕ್ಕಳನ್ನು ಪಡೆಯುವದಕ್ಕಾಗಿ ಇವರು ಪುನರ್ವಿವಾಹ ಮಾಡಿಕೊಳ್ಳುವದಕ್ಕೆ ಮಾತ್ರ ಹಿಂದೆಗೆಯುವದಿಲ್ಲ. ಹೆಣ್ಣುಮಕ್ಕಳನ್ನು ಹೀನಯಿಸುವ ಪದ್ಧತಿಯು ಹಿಂದುಗಳಲ್ಲಿ ಹೆಚ್ಚಾಗಿರುವದಕ್ಕೆ ನೀವು ಒಪ್ಪುವಿರಾ? ಗಂಡು ಸಂತಾನವಿಲ್ಲದಿದ್ದರೆ ಮನುಷ್ಯನು ಸ್ವರ್ಗಕ್ಕೆ ಹೋಗಲಾರನು ಎಂಬುದಕ್ಕೆ ನಿಮ್ಮ ಒಪ್ಪಿಗೆ ಇರುವದೆ?

"ದಾನಶೂರ ಮಹನೀಯನೊಬ್ಬನಿದ್ದನು. ಅವನಿಗೆ ಮೂರುಜನ ಹೆಂಡತಿಯರಿದ್ದರು. ಈಗ ಅವನು ನಾಲ್ಕನೆಯ ಮದುವೆ ಮಾಡಿಕೊಂಡಿರುವನು. ಸ್ವಲ್ಪ ದಿನಗಳ ಹಿಂದೆ ಅವನು ಒಂದು ದೊಡ್ಡ ಯಜ್ಞ ಮಾಡಿ ಪ್ರತಿದಿನ ೫೦೦ ಬ್ರಾಹ್ಮಣರಿಗೆ ಅನ್ನ ಹಾಕಿಸಿದನು. ಇದಕ್ಕೆ ಸುಮಾರು ಒಂದು ಲಕ್ಷ ರೂ. ವೆಚ್ಚವಾಗಿರಬಹುದು. ಇಂತಹ ಉದಾಹರಣೆಗಳನ್ನು ಬೇಕಾದಷ್ಟು ಕೊಡಬಹುದು."

"ಗಂಡುಮಕ್ಕಳೇ ಬೇಕೆಂಬ ಈ ಹುಚ್ಚು ಭಾವನೆಯು, ದುರ್ದೈವದಿಂದ ಹಿಂದೂ ಸಮಾಜದಲ್ಲಿ ಹಬ್ಬಿರುವದು. ಈ ಭಾವನೆಯು ಹೇಗೆ ಹುಟ್ಟಿತು. ಎಂಬುದನ್ನು ನಾವು ತಿಳಿದುಕೊಳ್ಳುವದಗತ್ಯವಿಲ್ಲ. ಆದರೆ ಹೆಂಗಸರು ಮತ್ತು ಗಂಡಸರೆಂಬ ಭೇದಭಾವವಿರಬಾರದು. ಎಲ್ಲರನ್ನೂ ಸಮದೃಷ್ಟಿಯಿಂದ ನೋಡಬೇಕೆನ್ನುವ ಈ ಕಾಲದಲ್ಲಿ ಹೆಣ್ಣುಮಕ್ಕಳ ವಿರುದ್ಧ ಈ ರೀತಿ ಮಾತ್ಸರ್ಯ ಜನಕ ಪಕ್ಷಪಾತ ಮಾಡುವದು ಮಹಾಪರಾಧವಲ್ಲದೆ, ಮತ್ತೇನೂ ಅಲ್ಲ. ಗಂಡುಮಕ್ಕಳು ಹುಟ್ಟಿದರೆ ಸಂತೋಷಪಡಬೇಕೇಕೆ? ಮತ್ತು ಹೆಣ್ಣುಮಕ್ಕಳು ಹುಟ್ಟಿದರೆ ದುಃಖಪಡಬೇಕೇಕೆ? ಇಬ್ಬರೂ ಪರಮಾತ್ಮನ ವರಪ್ರಸಾದಗಳು. ಬದುಕಿ ಬಾಳಲು ಇಬ್ಬರಿಗೂ ಸಮಾನವಾದ ಹಕ್ಕು ಬಾಧ್ಯತೆಗಳಿವೆ. ಪ್ರಪಂಚವು ನಡೆಯಬೇಕಾದರೆ ಇಬ್ಬರೂ ಇರುವದು ಅಗತ್ಯ. ಆದರೆ ಈಗ ಪ್ರಚಲಿತವಾಗಿರುವ ಹಳೆಯ ಕಾಲದ ಹುಚ್ಚು ಭಾವನೆಗಳು ಒಮ್ಮೆಲೇ ಹೋಗುವದು ಸಾಧ್ಯವಿಲ್ಲ. ಸಮಾಜದಲ್ಲಿ ಕ್ರಮವಾಗಿ ಜಾಗೃತಿಯಾದಮೇಲೆ ಹೆಂಗಸರ ಸ್ಥಾನಮಾನಗಳು ಜನರಿಗೆ ಚನ್ನಾಗಿ ತಿಳಿದ ಮೇಲೆ ಮಾತ್ರ ಇವು ಹೋಗುವವು. ಗಂಡುಮಕ್ಕಳಾಗದಿದ್ದರೆ, ಗಂಡನು ಪುನರ್ವಿವಾಹ ಮಾಡಿಕೊಳ್ಳುವದಕ್ಕೆ ಇಂದು ಹೆಂಡತಿಯೂ ಸಮ್ಮತಿಸುವಳು. ಸಮಾಜ ಸುಧಾರಕರು ಇಂತಹ ಪ್ರಸಂಗಗಳನ್ನು ಕಂಡು, ಒಮ್ಮೆಲೇ ಸಿಟ್ಟಿಗೇಳದೆ ಅಥವಾ ನಿರಾಶರಾಗದೆ, ತಾಳ್ಮೆಯಿಂದಿದ್ದು ಕೆಲಸಮಾಡಬೇಕು. ತಮ್ಮ ಕಾರ್ಯದಲ್ಲಿ ಅವರು ಸಂಪೂರ್ಣ ವಿಶ್ವಾಸವಿಟ್ಟು, ಹೆಣ್ಣು-ಗಂಡುಗಳ ನಡುವೆ ಪಕ್ಷಪಾತ ಮಾಡುವ ಈ ದುಷ್ಟ ಪದ್ಧತಿಯನ್ನು ಸಮಾಜವು ಎಂದಾದರೊಂದು ದಿನ ಕಿತ್ತೊಗೆಯುವದೆಂಬ ನಂಬಿಕೆಯಿಂದ ಕೆಲಸ ಮಾಡಬೇಕು."

---

# ಮಾದರಿಯ ಲಗ್ನವು.

ಗೋಕಾಕದಲ್ಲಿ ತಾ. ೨೭-೫-೩೮ ನೆಯ ದಿವಸ ತರುಣ ಸಂಘದ ಮತ್ತು ಜಿಲ್ಲಾ ಕಾಂಗ್ರೆಸ್ ಕಮಿಟಿಯ ಮೆಂಬರರಾದ ಶ್ರೀ. ಸಿದ್ಧಪ್ಪ ತಮದಡ್ಡಿ ಇವರ ಲಗ್ನವು ರಾಷ್ಟ್ರೀಯ ವೃತ್ತಿಯಿಂದ ಜರುಗಿತು.

ಮುಂಜಾನೆ ಪ್ರಭಾತಫೇರಿಯು ತೆಗೆಯಲ್ಪಟ್ಟಿತ್ತು. ಇದರಲ್ಲಿ ವಧೂವರರು ಖಾದಿ ಬಟ್ಟೆಯಿಂದ ಶೋಭಾಯಮಾನವಾಗಿ ಕಾಣುತ್ತಿದ್ದರು. ಮತ್ತು ಎಷ್ಟೋ ಜನರು ವಧೂವರರಿಗೆ ಆರತಿಯನ್ನು ಬೆಳಗಿದರು. ಆ ಮೇಲೆ ಸರಿಯಾಗಿ ೧೦-೩೦ ಗಂಟೆಗೆ ಅಕ್ಷತಾ ರೋಪಣವಾಯಿತು. ಇದರಲ್ಲಿ ತಾಲೂಕ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರಾದ ಡಾ. ಕಡಲಗಿಕರ ಮತ್ತು ತಾಲೂಕ ಕಾಂಗ್ರೆಸ್ ಕಮಿಟಿಯ ಸೆಕ್ರೆಟರಿ ಮತ್ತು ತರುಣ ಸಂಘದ ಅಧ್ಯಕ್ಷರು ಆದ ಶ್ರೀ. ಎಮ್. ಎಮ್. ಉಮರಾಣಿ ಮತ್ತು ಗಿರಣಿಯ ಭುಜಂಗಜೋಶಿ ಮಾಸ್ತರರು ಮೊದಲಾದವರು ಭಾಷಣಮಾಡಿದರು. ಆ ಮೇಲೆ ಸಂಜೆಯ ಆರು ಗಂಟೆಗೆ ಸರಿಯಾಗಿ ಮೆರವಣಿಗೆಯು ಹೊರಟಿತು. ವಧೂವರರು ಕೂತ ಗಾಡಿಯು ರಾಷ್ಟ್ರಧ್ವಜಗಳಿಂದ ಶೃಂಗರಿಸಲ್ಪಟ್ಟಿತ್ತು. ಇದರಲ್ಲಿ ಜಯಜಯಕಾರದ ಶಬ್ದಗಳು ಕೇಳಬರುತ್ತಿದ್ದವು. ಮುಖ್ಯವಾಗಿ ಹಿಂದು-ಮುಸಲ್ಮಾನರ ಜೈ! ಎಂಬ ಶಬ್ದವು ಕೇಳಿಸಿ ಬರುತ್ತಿತ್ತು.

—ಓರ್ವ ಸುದ್ದಿಗಾರ.

---

## ಶ್ರೀ ಶಿವಯೋಗೀಶ್ವರ ವೀರಶೈವ ಬೋರ್ಡಿಂಗ ಬ್ಯಾಡಗಿ.

### ಇಂಗ್ಲಿಷ್ ಕಲಿಯುವ ವಿದ್ಯಾರ್ಥಿಗಳಿಗೆ ಸುಸಂಧಿ.

ಶ್ರೀ ಶಿವಯೋಗೀಶ್ವರ ವೀರಶೈವ ಬೋರ್ಡಿಂಗ್ ಬ್ಯಾಡಗಿ ಇವರಿಂದ ಇಂಗ್ಲಿಷ ಕಲಿಯುವ ಯಾವತ್ತೂ ಬಡ ವಿದ್ಯಾರ್ಥಿಗಳಿಗೆ ಈ ಮೂಲಕ ತಿಳಿಸುವದೇನೆಂದರೆ— ೧೯೩೮ ನೇ ಇಸ್ವಿಯ ಜೂನ ತಿಂಗಳಿಂದ ಇಲ್ಲಿಯ ಮುನಸಿಪಲ್ ಇಂಗ್ಲಿಷ್ ಶಾಲೆಯಲ್ಲಿ ೫ ನೆಯ ಇಯತ್ತೆಯು ಸುರುವು ಮಾಡಲ್ಪಡುವದು. ಕಾರಣ ೧ ನೆಯ ಇಯತ್ತೆಯಿಂದ ೫ ನೆಯ ಇಯತ್ತೆಯವರೆಗೆ ಇಂಗ್ಲಿಷ ಕಲಿಯುವ ವಿದ್ಯಾರ್ಥಿಗಳಿಗೆ ನಮ್ಮ ಬೋರ್ಡಿಂಗಿನಲ್ಲಿ ವಿಶೇಷ ಸವಲತ್ತುಗಳು ಕೊಡಲ್ಪಡುತ್ತವೆ. ಕಾರಣ ಈ ಬೋರ್ಡಿಂಗಿಗೆ ಸೇರಲಿಚ್ಛಿಸುವ ಬಡ ವಿದ್ಯಾರ್ಥಿಗಳು ನಮ್ಮ ಅಚ್ಚಾದ ಅರ್ಜಿ ಫಾರ್ಮಿನಲ್ಲಿ ಕೆಳಗೆ ಕಾಣಿಸಿದ ವಿಳಾಸಕ್ಕೆ ಇದೇ ಜೂನ ತಿಂಗಳ ೧೦ ನೇ ತಾರೀಖಿನ ಒಳಗಾಗಿ ಅರ್ಜಿ ಕಳಿಸತಕ್ಕದ್ದು. ಅರ್ಜಿ ಫಾರ್ಮುಗಳು ನಮ್ಮ ಬೋರ್ಡಿಂಗಿನ ಆಫೀಸಿನಲ್ಲಿ ಸಿಗುತ್ತವೆ. ಒಂದು ಆಣೆ ಸ್ಟಾಂಪು ಕಳಿಸಿದಲ್ಲಿ ಅರ್ಜಿ ಫಾರ್ಮುಗಳು ಕಳಿಸಲ್ಪಡುತ್ತವೆ.

ರುದ್ರಪ್ಪ ಸಂಗಪ್ಪ ಸಂಕಣ್ಣವರ
ಚೇರಮನ್.

---

—ಇಂಡಿಯಲ್ ಸಿವ್ಹಿಲ್ ಸರ್ವ್ಹಿಸಕ್ಕೆ ರಾಜೀನಾಮೆಕೊಟ್ಟ ಶ್ರೀ. ಎಚ್. ವಿ. ಕಾಮತರು ತಮ್ಮ ಮುಂದಿನ ಕಾರ್ಯಕ್ರಮದ ಬಗ್ಗೆ ಮಾತುಕತೆಗಳನ್ನು ನಡೆಸಲು ರಾಷ್ಟ್ರಪತಿ ಬಾಬು ಸುಭಾಸರನ್ನು ಭೆಟ್ಟಿಯಾದರು.

# ನಿಜಾಮ ಪ್ರಾಂತೀಯ ವೀರಶೈವ ಪರಿಷತ್ತು.

## ಮೂರನೆಯ ಅಧಿವೇಶನ ಲಾತೂರು.

### ಪ್ರಚಂಡ ಉತ್ಸಾಹ! ಹತ್ತು ಲಕ್ಷ ರೂ. ಗಳ ಫಂಡ!!

### ವೇದಾಗಮಗಳು ವೀರಶೈವರ ಪ್ರಮಾಣ ಗ್ರಂಥಗಳಲ್ಲ.

ಈ ಮುಂಚೆ ಗೊತ್ತಾದ ಪ್ರಕಾರ ಲಾತೂರಲ್ಲಿ ನಿಜಾಮ ಪ್ರಾಂತೀಯ ವೀರಶೈವ ಪರಿಷತ್ತಿನ ೩ ನೆಯ ಅಧಿವೇಶನವು ಮೇ ತಿಂಗಳ ತಾ. ೨೭-೨೮-೨೯ ಈ ಮೂರು ದಿವಸ ಬಹು ಉತ್ಸಾಹ ದಿಂದ ಜರುಗಿತು. ಪರಿಷತ್ತಿಗೆ ಕಲಬುರ್ಗಿ, ಬೀದರ, ಉಸ್ಮಾನಾಬಾದ, ಬೀಡ, ಭಾಲ್ಕಿ, ಮೊಮಿನಾಬಾದ, ಉದ್ಗಿರಿ, ಉಮರಗಾ, ಕಲ್ಯಾಣ ಮೊದಲಾದ ಸ್ಥಳಗಳಿಂದ ಸಾಧಾರಣ ೫೦೦ ಪ್ರತಿನಿಧಿ ಗಳೂ ನೂರಾರು ಪ್ರೇಕ್ಷಕರೂ ಬಂದಿದ್ದರು.

ತಾ. ೨೭-೫-೩೮ ನೆಯ ದಿನ ಪ್ರಾತಃಕಾಲ ಪರಿಷತ್ತಿನ ಅಧ್ಯಕ್ಷರಾದ ಶ್ರೀಮಂತ ಭಾಲ್ಕಿ ದೇಶಮುಖ ಕಾಶೀರಾಯ ವಕೀಲರವರ ಪ್ರಚಂಡ ಮೆರವಣಿಗೆಯಾಯಿತು. ಸಾಯಂಕಾಲ ಪರಿಷತ್ತು ಭವ್ಯವಾದ ಥೇಟರಿನಲ್ಲಿ ಕೂಡಿತು. ಸ್ಥಳ ಪರಸ್ಥಳಗಳಿಂದ ಪರಿಷತ್ತಿಗೆ ಸಾಧಾರಣ ೧೫೦೦ ಸ್ತ್ರೀ ಪುರುಷರು ಬಂದಿದ್ದರು. ಉದ್ಗಿರಿಯ ಸ್ವಯಂ ಸೇವಕರು ಸಭಿಕರಿಗೆ ಸರಿಯಾದ ವ್ಯವಸ್ಥೆಯನ್ನು ಮಾಡುತ್ತಿದ್ದರು.

ಆರಂಭದಲ್ಲಿ ಈಶಸ್ತವನ ಮತ್ತು ಸ್ವಾಗತಪರ ಪದ್ಯ ಜರುಗಿದಮೇಲೆ ಸ್ವಾಗತಾಧ್ಯಕ್ಷರಾದ ಶ್ರೀ. ಎಂ. ಎನ್. ಗಿರವಲಕರ ಇವರು ಮರಾಠಿಯಲ್ಲಿ ತಮ್ಮ ಭಾಷಣವನ್ನು ಓದಿ ಹೇಳಿದರು.

#### ಸ್ವಾಗತಾಧ್ಯಕ್ಷರ ಭಾಷಣ.

ಸ್ವಾಗತಾಧ್ಯಕ್ಷರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ನಿಜಾಮ ರಾಜ್ಯದ ಮಹರಾಷ್ಟ್ರ ಭಾಗದಲ್ಲಿ ಲಾತೂರು ಒಂದು ಮುಖ್ಯ ಸ್ಥಳವು. ಇದು ಈ ಭಾಗದ ವ್ಯಾಪಾರಕ್ಕೆ ಕೇಂದ್ರ ಸ್ಥಳವಾಗಿದೆ. ಇಲ್ಲಿ ವೀರಶೈವರು ವ್ಯಾಪಾರದಲ್ಲೇನೋ ಮುಂದಿದ್ದರೂ ಶಿಕ್ಷಣದಲ್ಲಿ ಹಿಂದುಳಿದಿದ್ದಾರೆ.

ನಿಜಾಮ ಭಾಗದ ವೀರಶೈವರಾದ ನಾವು ಶಿಕ್ಷಣದಲ್ಲಿ ಬಹಳ ಹಿಂದುಳಿದಿದ್ದೇವೆ, ಆದಕಾರಣ ನಮ್ಮಲ್ಲಿ ಶಿಕ್ಷಣ ಪ್ರಸಾರವಾಗಲು ಶಿಕ್ಷಣ ಫಂಡನ್ನು ಸ್ಥಾಪಿಸಬೇಕು. ಮತ್ತು ಧರ್ಮ ಪ್ರಚಾರದ ಕಾರ್ಯ ಅಗತ್ಯವಾಗಿ ಆಗಬೇಕು. ಪರಧರ್ಮಗಳಿಗೆ ನಮ್ಮ ಮತದವರು ಆಹುತಿಯಾಗುತ್ತಿರುವುದು ನಿಲ್ಲಬೇಕಾದರೆ ನಮ್ಮ ಮತವನ್ನು ಪ್ರಚಾರ ಮಾಡುವವರು ಬೇಕಾಗಿದ್ದಾರೆ. ಈ ಪ್ರಾಂತಿಕ ಪರಿಷತ್ತಿನ ಶಾಖೆಯು ಪ್ರತಿಯೊಂದು ಹಳ್ಳಿಯಲ್ಲಿಯೂ ಸ್ಥಾಪನೆಯಾಗಿ ವೀರಶೈವರಲ್ಲಿ ಜಾಗೃತಿಯನ್ನು ಉಂಟುಮಾಡಬೇಕು."

#### ಅಧ್ಯಕ್ಷರ ಭಾಷಣ.

ಸ್ವಾಗತ ಸಂಘಾಧ್ಯಕ್ಷರ ಭಾಷಣವಾದ ಮೇಲೆ ಪದ್ಧತಿಯ ಪ್ರಕಾರ ಬೇರೆ ಬೇರೆ ಮಹಾಶಯರು ಅಧ್ಯಕ್ಷರನ್ನು ಆರಿಸುವ ಕುರಿತು ಅವರ ಸಂಬಂಧವಾದ ಸಂಗತಿಗಳನ್ನು ಸಭಿಕರಿಗೆ ತಿಳಿಸಿದರು. ಸರ್ವಾನುಮತದಿಂದ ಶ್ರೀ. ಕಾಶೀರಾಯ ದೇಶಮುಖರು ಅಧ್ಯಕ್ಷ ಸ್ಥಾನವನ್ನು ವಹಿಸಿದ ನಂತರ ಅವರು ತಮ್ಮ ಭಾಷಣವನ್ನು ಉರ್ದು ಭಾಷೆಯಲ್ಲಿ ಓದಿ ಹೇಳಿದರು. ಅವರ ಭಾಷಣವು ಉರ್ದು ಮತ್ತು ಮರಾಠಿ ಎರಡೂ ಭಾಷೆಗಳಲ್ಲಿ ಮುದ್ರಿಸಲ್ಪಟ್ಟದ್ದವು.

ಅಧ್ಯಕ್ಷರು ತಮ್ಮ ಭಾಷಣದಲ್ಲಿ ಮೊದಲು ರಾಜನಿಷ್ಠೆಯನ್ನು ವ್ಯಕ್ತಗೊಳಿಸಿ ಉದ್ಗಿರಿಯ ಪ್ರಸಿದ್ಧ ಕಾರ್ಯಕರ್ತ ಶ್ರೀ. ಶಂಕರರಾವ ವಕೀಲರು ಮತ್ತು ಶ್ರೀ. ಭೀಮರಾವ ಕೋರವಾರ ಗುಲಬರ್ಗಾ ಇವರು ಲಿಂಗೈಕ್ಯರಾದ ಬಗ್ಗೆ ದುಃಖವನ್ನು ಪ್ರದರ್ಶಿಸಿ ಅನಂತರ ಹೀಗೆ ಹೇಳಿದರು—

"ನಿಜಾಮ ರಾಜ್ಯದಲ್ಲಿ ೬೮೮೮೪ ವೀರಶೈವರಿದ್ದಾರೆಂದು ಕಳೆದ ಜನ ಪರಿಗಣನೆಯಿಂದ ಗೊತ್ತಾಗುತ್ತದೆ. ಈ ಸಂಖ್ಯೆಯು ೯ ಲಕ್ಷದ ವರೆಗೆ ಇರಬಹುದು. ನಮ್ಮ ಸಮಾಜದ ಅನೇಕ ಜನರು ತೇಲಿ, ವಾಣಿ, ಮಾಳಿ, ಗವಳಿ ಎಂದು ತಮ್ಮ ಉದ್ಯೋಗದ ಮೇಲಿಂದಲೇ ಜಾತಿಯನ್ನು ಹೇಳಿ ಬರೆಸುತ್ತಿರುವುದರಿಂದ ಹೀಗೆ ನಮ್ಮ ಸಂಖ್ಯೆಯು ಕಡಿಮೆಯಾಗಿ ತೋರಿದೆ.

#### ಶಿಕ್ಷಣ ಪ್ರಸಾರ ಮತ್ತು ಏಕೀಕರಣ.

ನಾವು ಶಿಕ್ಷಣದಲ್ಲಿ ಬೇರೆ ಭಾಗಗಳ ವೀರಶೈವರಿಗಿಂತ ಬಹು ಹಿಂದುಳಿದಿದ್ದೇವೆ. ನಮ್ಮಲ್ಲಿ ಶಿಕ್ಷಣ ಪ್ರಸಾರವಾದ ವಿನಾ ನಾವು ಉನ್ನತ ಸ್ಥಿತಿಗೆ ಬರುವುದಿಲ್ಲ. ಸ್ತ್ರೀ ಶಿಕ್ಷಣ, ಔದ್ಯೋಗಿಕ ಶಿಕ್ಷಣ ಮೊದಲಾದ ಎಲ್ಲಾ ಶಿಕ್ಷಣಗಳೂ ನಮ್ಮಲ್ಲಿ ಪ್ರಸಾರವಾಗಬೇಕು. ಇದಕ್ಕಾಗಿ ಒಂದು ಶಿಕ್ಷಣ ಫಂಡ್ ಏರ್ಪಟ್ಟು ನಮ್ಮ ಸಮಾಜದ ಪ್ರತಿಯೊಂದು ವ್ಯಕ್ತಿ ಒಂದು ರೂಪಾಯಿ ಕೊಟ್ಟರೆ ಹತ್ತು ಲಕ್ಷ ರೂ. ಫಂಡ ಕೂಡಲು ಅಡ್ಡಿಯಿಲ್ಲ. ಈ ಪರಿಷತ್ತು ಆ ಕಾರ್ಯವನ್ನು ಮೊದಲು ಮಾಡಬೇಕು.

೧೨ ನೆಯ ಶತಮಾನದಲ್ಲಿ ಅತ್ಯದ್ಭುತವಾದ ಧಾರ್ಮಿಕ ಕ್ರಾಂತಿಯನ್ನು ಮಾಡಿದ ಭಗವಾನ್ ಬಸವೇಶ್ವರನ ಕಾರ್ಯಕ್ಷೇತ್ರವಾದ ಈ ಕಲ್ಯಾಣದ ಪುಣ್ಯ ಪ್ರದೇಶದಲ್ಲಿ ಈಗ ವೀರಶೈವರ ಧಾರ್ಮಿಕ ಅವನತಿಯು ಭಯಂಕರ ಸ್ಥಿತಿಗೆ ಬಂದಿದೆ. ವೀರಶೈವರಲ್ಲಿಯ ಒಳ ಭೇದಗಳನ್ನು ತೆಗೆದುಹಾಕಿ ಏಕೀಕರಣವಾಗುವುದು ಅತ್ಯಗತ್ಯವಾಗಿದೆ. ವರ್ಣಗಳ ಬೇಡಿಯನ್ನು ತೆಗೆದುಹಾಕಿ ಸಾಮಾಜಿಕ ಸ್ವಾತಂತ್ರ್ಯವನ್ನೂ ಉದ್ಯೋಗ ಸ್ವಾತಂತ್ರ್ಯವನ್ನೂ ಉಂಟು ಮಾಡಿಕೊಟ್ಟು ಪ್ರಪಂಚಕ್ಕೆ ಮಾರ್ಗದರ್ಶಿಯಾದ ಬಸವ ಮಹಾನುಭಾವನ ಮತದವರಾದ ನಾವು ಈಗ ನಾನಾ ಭೇದಗಳನ್ನು ಮಾಡಿಕೊಂಡಿರುವುದು ಘಾತಕವಾದುದಾಗಿದೆ.

ನಮ್ಮ ಸಮಾಜವು ಈಗ ನಾನಾ ರೀತಿಗಳಿಂದ ಕಷ್ಟಕ್ಕೀಡಾಗಿರುವಾಗ ನಮ್ಮಲ್ಲಿ "ಗುರು ವಿರಕ್ತ ವಾದ" ಎಂಬ ಜಗಳ ದಿನೆ ದಿನೆ ಬೇರೆ ಬೇರೆ ಬಣ್ಣವನ್ನು ಹೊಂದುತ್ತಾ ಸಮಾಜಕ್ಕೆ ಅನರ್ಥವನ್ನುಂಟುಮಾಡುತ್ತಲಿದೆ. ಈ ಜಗಳದ ಗುರು ವಿರಕ್ತರಿಗೆ ನಾವು ಯಾವ ವಿಧವಾದ ಮಾನ ಮನ್ನಣೆಯನ್ನೂ ಕೊಡಬಾರದು. ಆಗ ಅವರು ಹಾದಿಗೆ ಬರುತ್ತಾರೆ."

ಅನಂತರ ಸಭೆಯ ಕಾರ್ಯ ಮುಗಿದು ವಿಷಯನಿಯಾಮಕ ಕಮಿಟಿಯು ಕೂಡಿತು. ಕಮಿಟಿಯಲ್ಲಿ ಅನೇಕ ವಿಷಯಗಳು ಚರ್ಚಿಸಲ್ಪಟ್ಟವು.

### ಮಹತ್ವದ ಗೊತ್ತುವಳಿಗಳು.

ತಾ. ೨೮ ನೆಯ ದಿವಸ ಪರಿಷತ್ತಿನ ಕಾರ್ಯ ಪ್ರಾರಂಭವಾಯಿತು. ಕಾವಿ ಬಣ್ಣದ ನಿಶಾನೆಯಲ್ಲಿ ಬಿಳಿ ಬಣ್ಣದ ಷಟ್ಕೋನ ಮತ್ತು ಅದರ ಮಧ್ಯದಲ್ಲಿ ಓಂಕಾರವುಳ್ಳದ್ದೇ ವೀರಶೈವರ ಧ್ವಜವೆಂದು ತಿಳಿಯಬೇಕೆಂದೂ ನಿಜಾಮ ಭಾಗದ ಯಾವ ವೀರಶೈವರ ಸಭೆ ಸಮ್ಮೇಲನಗಳು ಜರುಗುತ್ತಿದ್ದರೂ ಇದೇ ಧ್ವಜವನ್ನು ಹಿಡಿಯಬೇಕೆಂದೂ ಗೊತ್ತಾಯಿತು.

ಹೀಗೆ ಧ್ವಜದ ನಿರ್ಣಯವಾದನಂತರ "ವೀರಶೈವ ಧರ್ಮಕಿಜೈ" ಎಂಬ ಜಯಘೋಷವನ್ನೂ ಧ್ವಜವಂದನೆಯ ಪದ್ಯಗಳನ್ನೂ ಗೊತ್ತುಮಾಡಿದ ಒಂದು ನಿರ್ಣಯವೂ ಆಯಿತು.

ಭೂಮಿಯನ್ನು ಕೊಡುಕೊಳ್ಳುವ ವಿಚಾರವಾಗಿ ಈಗ ಸರಕಾರವು ಪ್ರಯೋಗಾರ್ಥ ನಡೆಸಿದ ಕಾನೂನಿನಲ್ಲಿ ಲಿಂಗಾಯತ ಸಮಾಜವನ್ನು ಸೇರ್ಪಡಿಸದೆ ಅದನ್ನು ಸುಧಾರಿಸಿದ ಸಮಾಜಗಳಲ್ಲಿ ಎಣಿಸಿರುವುದು ಸರಿಯಲ್ಲವೆಂದೂ ಲಿಂಗಾಯತರು ಮುಖ್ಯವಾಗಿ ಒಕ್ಕಲತನವನ್ನೇ ಮಾಡುವವರಾಗಿರುವುದರಿಂದ ಈ ಹೊಸ ಕಾನೂನಿನಲ್ಲಿ ಲಿಂಗಾಯತರನ್ನು ಸೇರಿಸಬೇಕೆಂದೂ ಸೂಚಿಸುವ ಒಂದು ಗೊತ್ತುವಳಿಯಾಯಿತು.

ವೀರಶೈವ ಮತ ಪ್ರಚಾರಕರ ಅಗತ್ಯವು ಈಗ ವಿಶೇಷವಾಗಿರುವುದರಿಂದ ಮೂರು ಜನ ಮತ ಪ್ರಚಾರಕರನ್ನು ಈ ಪರಿಷತ್ತು ನಿಯಮಿಸಬೇಕೆಂದೂ, ಬರುವ ೧೯೪೧ ನೆಯ ಇಸವಿ "ಖಾನೆ ಸುಮಾರಿ" ಯಲ್ಲಿ ಲಿಂಗಾಯತರೆಲ್ಲರೂ ಲಿಂಗಾಯತ (ವೀರಶೈವ) ಎಂದೇ ಬರೆಯಿಸಬೇಕಲ್ಲದೆ ವಾಣಿ, ತೇಲಿ, ಮೊದಲಾದ ಯಾವ ಒಳ ಭೇದಗಳನ್ನು ಬರೆಯಿಸಬಾರದೆಂದೂ ಇದಕ್ಕಾಗಿ ಪರಿಷತ್ತು ಈಗಲೇ ಜನ ಜಾಗೃತಿಯಾಗುವಂತೆ ಚಟುವಟಿಕೆ ನಡೆಯಿಸಬೇಕೆಂದೂ ಸರಕಾರದವರು ಕೂಡಾ ಲಿಂಗಾಯತ ಎಂಬ ಒಂದು ಪ್ರತ್ಯೇಕ ಪಟ್ಟಿಯನ್ನೇ ಖಾನೆ ಸುಮಾರಿ ಲೆಖ್ಖದಲ್ಲಿಡಬೇಕೆಂದೂ ಗೊತ್ತುವಳಿಯಾಯಿತು.

### ವೇದಾಗಮಗಳು ಪ್ರಮಾಣ ಗ್ರಂಥಗಳಲ್ಲ.

ತಾ. ೨೯ ನೆಯ ದಿನ ಧಾರ್ಮಿಕ ಮತ್ತು ಶೈಕ್ಷಣಿಕ ವಿಷಯಗಳಲ್ಲಿ ಮಹತ್ವದ ಗೊತ್ತುವಳಿಗಳಾದವು. ವೀರಶೈವರಿಗೆ ವೇದಾಗಮ ಶಾಸ್ತ್ರಗಳು ಪ್ರಮಾಣ ಗ್ರಂಥಗಳೆಂದೂ ವೀರಶೈವ ಮತವು ವೈದಿಕ ಮತವೆಂದೂ ಪ್ರತಿಪಾದಿಸುವ ಒಂದು ಗೊತ್ತುವಳಿಯು ಆ ದಿವ ಸಭೆಯಲ್ಲಿ ಶ್ರೀ. ಉದ್ಗಿರ ಪಾಟೀಲ ವಕೀಲರಿಂದ ಬಂದಿತು. ಅದನ್ನು ಶಿಕಂದರಾಬಾದಿನಲ್ಲಿರುವ ಚಿದರಿ ಮಠದ ಪಂಡಿತ ವೀರಭದ್ರ ಶರ್ಮ ಇವರು ಅನುಮೋದಿಸುವಾಗ ಹೀಗೆ ಹೇಳಿದರು—

"ವೀರಶೈವರಲ್ಲಿರುವ ಅಷ್ಟಾವರಣ, ಪಂಚಾಚಾರ, ಷಟಸ್ಥಲ ಇವುಗಳಲ್ಲಿ ಒಂದಾದರೂ ದ್ರಾವಿಡ ಭಾಷೆಯ ಶಬ್ದದಲ್ಲಿಲ್ಲ. ಎಲ್ಲವೂ ಸಂಸ್ಕೃತ ಶಬ್ದಗಳು, ವೇದದಲ್ಲಿ ಅಷ್ಟಾವರಣ, ಪಂಚಾಚಾರ, ಷಟಸ್ಥಳಗಳು ಸೂತ್ರ ರೂಪದಲ್ಲಿವೆ. ಆಗಮಗಳಲ್ಲಿ ಅವೇ ವಿಸ್ತಾರವಾಗಿವೆ. ಆದಕಾರಣ ವೇದಾಗಮಗಳು ವೀರಶೈವರಿಗೆ ಪ್ರಮಾಣ ಗ್ರಂಥಗಳು. ಇವುಗಳಂತೆಯೇ ವೇದಾಗಮಗಳಿಗೆ ಅವಿರೋಧವಾಗಿರತಕ್ಕ ವಚನ ಶಾಸ್ತ್ರವೂ ವೀರಶೈವರಗೆ ಪ್ರಮಾಣ ಗ್ರಂಥ.

ವೇದವು ಸಮುದ್ರದಂತಿದೆ. ಸಮುದ್ರದಲ್ಲಿ ರತ್ನ ಮತ್ತು ಮೊಸಳೆಗಳಿರುವಂತೆ ವೇದದಲ್ಲಿಯೂ ಗ್ರಾಹ್ಯ ಮತ್ತು ಅಗ್ರಾಹ್ಯ ಸಂಗತಿಗಳಿವೆ, ವೀರಶೈವರು ಹಿಂಸಾಯುಕ್ತ ಯಜ್ಞ ಯಾಗಾದಿಗಳನ್ನು ಗ್ರಾಹ್ಯ ಮಾಡುವುದಿಲ್ಲ."

ಪಂಡಿತಜಿಯವರು ತಮ್ಮ ಭಾಷಣವನ್ನು ಹಿಂದಿಯಲ್ಲಿ ಬಹು ಚೆನ್ನಾಗಿ ಮಾಡಿದರು. ಆ ಮೇಲೆ ಈ ಗೊತ್ತುವಳಿಗೆ ವಿರೋಧವಾಗಿ ಕಲ್ಲಬುರ್ಗಿ ವಕೀಲ ಶ್ರೀ. ಹನುಮಂತರಾವ ಹಾಗರಗಿಕರ್ ಇವರು ಉರ್ದು ಭಾಷೆಯಲ್ಲಿ ಬಹು ಸ್ಫೂರ್ತಿದಾಯಕ ಭಾಷಣಮಾಡಿದರು. ಇವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಭಾಷೆಯ ಮೇಲಿಂದ ಹೀಗೆ ಸಿದ್ಧಾಂತಮಾಡುವುದು ಸರಿಯಲ್ಲ. ಸಂಸ್ಕೃತವೇ ಅನೇಕ ಭಾಷೆಗಳಿಗೆ ಮೂಲವಾಗಿದೆಯೆಂದು ಇಂಗ್ಲಿಷ್ ಅರಬಿ ಭಾಷೆಗಳಲ್ಲಿರುವ ಬೈಬಲ್, ಖುರಾನ ಗ್ರಂಥಗಳೆಲ್ಲಾ ಲಿಂಗಾಯತರಿಗೆ ಪ್ರಮಾಣ ಗ್ರಂಥಗಳಾಗಬಹುದೆ? ಪುರಾಣಗಳಲ್ಲಿರುವ ಲಿಂಗಪೂಜೆಯ ಸಂಗತಿ ಬೇರೆ. ಇಷ್ಟಲಿಂಗದ ಸಂಗತಿಯೇ ಬೇರೆ. ಶೈವಲಿಂಗಗಳನ್ನು ಹರಿವಿರಂಚಿಗಳು ಪೂಜಿಸುವ ಮುಂಚೆಯೇ ಇದ್ದ ಪರಮಾತ್ಮನನ್ನೇ ಲಿಂಗವಾಗಿ ನಾವು ಭಾವಿಸಿ ಧರಿಸಿ ಪೂಜಿಸುತ್ತಿದ್ದೇವೆ. ಬಸವೇಶ್ವರರು ಇದನ್ನೇ ಸಾರಿದ್ದಾರೆ. ವೇದಾದಿ ಗ್ರಂಥಗಳ ಗುಲಾಮರಾಗಬೇಡಿರಿ. ಸ್ವಾನುಭಾವಶೀಲರಾಗಿರಿ."

ಆ ಮೇಲೆ ಉದ್ಗಿರಿಯ ವಕೀಲ ಶ್ರೀ. ಸಂಗ್ರಾಮಪ್ಪನವರು ಮೇಲಣ ವಿರೋಧವನ್ನೇ ತಮ್ಮ ವಿಚಾರಾತ್ಮಕ ಭಾಷಣದಲ್ಲಿ ವಿಶದೀಕರಿಸುವಾಗ ಹೀಗೆ ಹೇಳಿದರು—

"ವೇದಗಳು ದೇವರಿಂದ ಉಂಟಾದವುಗಳಲ್ಲ. ಅವು ಆರ್ಯಜನರ ಗ್ರಂಥಗಳು. ಅವುಗಳಲ್ಲಿ ಯಜ್ಞ ಸಂಸ್ಕೃತಿಯು. ಅವರು ಪ್ರಕೃತಿಪೂಜಕರಾಗಿದ್ದರು. ಈ ದೇಶಕ್ಕೆ ಬಂದಾಗ ದ್ರಾವಿಡರೊಂದಿಗೆ ಯುದ್ಧಮಾಡಿದ್ದಾರೆ. ಋಗ್ವೇದದಲ್ಲಿ ಇಂಥ ಅನೇಕ ಸಂಗತಿಗಳಿವೆ. ದ್ರಾವಿಡರು ಯಜ್ಞವಿಧ್ವಂಸಕರು. ಲಿಂಗಪೂಜಕರು. ವೀರಶೈವರು ದ್ರಾವಿಡ ಸಂಸ್ಕೃತಿಯವರು. ಅಂತೆಯೇ ವೇದಗಳು ಅವರಿಗೆ ಪ್ರಮಾಣ ಗ್ರಂಥಗಳಲ್ಲ. ಅದರಲ್ಲಿ ಗ್ರಾಹ್ಯ ಮತ್ತು ಅಗ್ರಾಹ್ಯ ಸಂಗತಿಗಳೆರಡೂ ಇವೆಯೆಂದು ಪಂಡಿತಜಿಯವರು ಹೇಳಿದ್ದಾರೆ. ಅಂದಮೇಲೆ ಅದು ಪ್ರಮಾಣ ಗ್ರಂಥವಾಗುವುದಿಲ್ಲ."

### ಭಾಷಣಕ್ಕೆ ಅಪ್ಪಣೆ ದೊರೆಯಿತು.

ಪರ ಪ್ರಾಂತದವರಿಗೆ ನೈಜಾಮ ರಾಜ್ಯದ ಸಭೆಸಮ್ಮೇಲಣಗಳಲ್ಲಿ ಭಾಷಣಮಾಡಲು ಸರಕಾರದ ಪ್ರತಿಬಂಧವಿದೆ. ಆದಕಾರಣ ಈ ಪರಿಷತ್ತಿಗೆ ಶ್ರೀ. ಹರ್ಡೆಕರ ಮಂಜಪ್ಪನವರು ಮತ್ತು ಸೊಲ್ಲಾಪುರದಿಂದ ಸುದರ್ಶನ ಪತ್ರಿಕಾಕರ್ತರಾದ ಶ್ರೀ. ಕಲ್ಯಾಣಶೆಟ್ಟಿಯವರು ಬಂದಿದ್ದರೂ ಭಾಷಣಕ್ಕೆ ಆ ವರೆಗೂ ಪರವಾನಗಿ ದೊರೆತಿರಲಿಲ್ಲ. ತಾ. ೨೯ ನೆಯ ದಿನ ಇಲ್ಲಿಯ ತಾಲೂಕುದಾರ ಸಾಹೇಬರು ಪರವಾನಗಿ ಕೊಟ್ಟಕಾರಣ ಶ್ರೀ. ಕಲ್ಯಾಣಶೆಟ್ಟಿಯವರು ಅಧ್ಯಕ್ಷರ ಸೂಚನೆಯ ಮೇರೆಗೆ ಮರಾಠಿಯಲ್ಲಿ ಮೇಲಿನ ಗೊತ್ತುವಳಿಗೆ ವಿರೋಧಪರವಾಗಿ ಭಾಷಣಮಾಡಿದರು. ಇವರು ತಮ್ಮ ಆವೇಶಪೂರ್ಣ ಭಾಷಣದಲ್ಲಿ ಹೀಗೆ ಹೇಳಿದರು—

"ವೇದಗಳು ಆರ್ಯರ ಗ್ರಂಥಗಳು. ಅವುಗಳಲ್ಲಿ ಅಷ್ಟಾವರಣಾದಿ ವೀರಶೈವರ ತತ್ವಗಳು ಪಂಡಿತಜಿಯವರು ಹೇಳುವಂತೆ ಇಲ್ಲ. ಲಿಂಗಪೂಜೆಯು ವೇದದಲ್ಲಿದೆಯೆಂಬುದನ್ನು ಶಾಸ್ತ್ರಿಗಳು ಆರ್ಯಸಮಾಜದವರಿಗೆ ಸಿದ್ಧಮಾಡಿಕೊಡಲಿ. ಅವರು ಸಾವಿರಾರು ರೂ. ಗಳ ಬಹುಮಾನವನ್ನು ಇಟ್ಟಿದ್ದಾರೆ. ನಮ್ಮ ಶಾಸ್ತ್ರಿಗಳು ವೇದಾಧಾರದಿಂದ ಲಿಂಗಪೂಜೆಯನ್ನು ಸಿದ್ಧಮಾಡಿದರೆ ನಮಗೆ ಬಹು ಸಂತೋಷ. ಆರ್ಯರು ಅಗ್ನಿಪೂಜಕರಾಗಿದ್ದರು. ದ್ರಾವಿಡ ಸಂಸ್ಕೃತಿಯುವರಾದ ನಾವು ಲಿಂಗಪೂಜಕರು. ಅಂತೆಯೇ ಈಗಲೂ ವೀರಭದ್ರನು ಆಗ ಯಜ್ಞ ವಿಧ್ವಂಸಮಾಡಿದ್ದನ್ನು ಸ್ಮರಿಸಿ ನಾವು ಅಗ್ನಿಯನ್ನು ತುಳಿಯುವ ಸಮಾರಂಭಮಾಡುತ್ತಿದ್ದೇವೆ."

(೧೨ ನೆಯ ಪುಟಕ್ಕೆ ಮುಂದೆ ಸಾಗಿದೆ.)



ಶಾ. ಶ. ೧೮೬೦ ನೆಯ ಜ್ಯೇಷ್ಠ ಶು॥ ೯ ಸೋಮವಾರ.

# ಸಂಸ್ಥಾನಗಳಲ್ಲಿಯ ಹೋರಾಟ.

ಬ್ರಿಟಿಶ್ ಹಿಂದುಸ್ಥಾನದಲ್ಲಿ ರಾಜಕೀಯ ಸ್ವಾತಂತ್ರ್ಯದ ಹೋರಾಟವು ದಿನೆ ದಿನೆ ಪ್ರಚಂಡ ಸ್ವರೂಪವನ್ನು ಹೊಂದುತ್ತಲಿದೆಯಷ್ಟೆ. ಸಂಸ್ಥಾನಗಳು ಕೂಡಾ ಹಿಂದುಸ್ಥಾನದ ಅಂಗಗಳಾಗಿಯೇ ಇರುವುದರಿಂದ ಅವುಗಳಲ್ಲಿಯೂ ಹೆಚ್ಚುಕಡಿಮೆಯಾಗಿ ಸ್ವಾತಂತ್ರ್ಯದ ಹೋರಾಟ ಪ್ರಾರಂಭವಾಗಿರುವುದು ಸ್ವಾಭಾವಿಕ.

ಹಿಂದುಸ್ಥಾನದಲ್ಲ ಮಾದರಿ ಸಂಸ್ಥಾನವೆಂದು ಹೆಸರುಹೊಂದಿದ್ದ ಮೈಸೂರು ಸಂಸ್ಥಾನದಲ್ಲಿ ಹೊಣೆಗಾರಿಕೆ ಪ್ರಭುತ್ವ ಪ್ರಾರಂಭವಾಗಲು ಉಂಟಾದ ಹೋರಾಟವು ಕೂಡಾ ಬೇರೆ ಸಂಸ್ಥಾನಗಳಿಗೆ ಮಾದರಿಯಾದುದಾಗಿಯೇ ಇದೆ. ಸಾಂಗಲಿ, ಜಮಖಂಡಿ, ರಾಮದುರ್ಗ ಮೊದಲಾದ ಚಿಕ್ಕ ಪುಟ್ಟ ಸಂಸ್ಥಾನಗಳಲ್ಲಿಯೂ ಪ್ರಾರಂಭವಾದ ಸ್ವಾತಂತ್ರ್ಯದ ಹೋರಾಟವು ತುಂಬಾ ಉತ್ಸಾಹ ಜನಕವಾದುದಾಗಿದೆ. ಶಾಂತಿಯುಕ್ತವಾಗಿಯೂ ತ್ಯಾಗಮೂಲಕವಾಗಿಯೂ ಈ ಹೋರಾಟವು ಯಾವ ಸಂಸ್ಥಾನದಲ್ಲಿ ಎಷ್ಟು ಪ್ರಚಂಡವಾಗಿ ನಡೆಯುವುದೋ ಅಷ್ಟು ಜಾಗ್ರತೆ ಅಲ್ಲಿಯ ಪ್ರಜೆಗಳು ಹೊಣೆಗಾರಿಕೆಯ ಪ್ರಭುತ್ವವನ್ನು ಹೊಂದುವುದರಲ್ಲಿ ಅಭ್ಯಂತರವೇ ಇಲ್ಲ.

### ಮೈಸೂರಲ್ಲೇ ಇಷ್ಟು ಜಾಗೃತಿ ಏಕೆ?

ಹಿಂದುಸ್ಥಾನದ ಎಲ್ಲ ಸಂಸ್ಥಾನಗಳಿಗಿಂತಲೂ ಈಗ ಮೈಸೂರು ಸಂಸ್ಥಾನದಲ್ಲಿಯೇ ಸ್ವಾತಂತ್ರ್ಯದ ಹೋರಾಟವು ಬಹು ಪರಿಣಾಮಕಾರಿಯಾಗಿ ನಡೆದಿದೆಯಷ್ಟೆ. ಇದಕ್ಕೆ ಮೈಸೂರು ಪ್ರಜಾಪ್ರಮುಖರ ಸಾಹಸವೇ ಕಾರಣವೆಂದು ಅನೇಕರು ತಿಳಿದಿರುವುದುಂಟು. ಕಾಂಗ್ರೆಸ್ ೫೦ ವರುಷಗಳಲ್ಲಿ ಮಾಡಿದ ಕಾರ್ಯವನ್ನು ಮೈಸೂರು ಆರು ತಿಂಗಳುಗಳಲ್ಲಿಯೇ ಮಾಡಿತೆಂದು ಮೈಸೂರಿನ ಅನೇಕ ಮುಂದಾಳುಗಳು ಹೇಳಿದುದೂ ಉಂಟು. ಇದು ಸರಿಯಾದ ವಿಚಾರವಲ್ಲ.

ಕಾಂಗ್ರೆಸ್ಸು ೫೦ ವರುಷಗಳಿಂದಲೂ ಮಾಡುತ್ತ ಬಂದಿರುವ ಪ್ರಚಂಡ ಆಂದೋಲನವೇ ಇದಕ್ಕೆ ಮುಖ್ಯ ಕಾರಣ. ಮೈಸೂರು ಸಂಸ್ಥಾನದ ಪ್ರಜಾಪ್ರಮುಖರು ತಮ್ಮ ರಾಜಕೀಯ ಸಂಘಕ್ಕೆ "ಕಾಂಗ್ರೆಸ್" ಎಂಬ ಶಬ್ದವನ್ನು ಜೋಡಿಸದಿದ್ದರೆ ಅಲ್ಲಿ ಇಷ್ಟು ಜಾಗೃತಿಯಾಗುವ ಸಂಭವವಿರಲಿಲ್ಲವೆಂದು ಕೂಡಾ ಹೇಳಬಹುದು. ಹೀಗಿರಲಾಗಿ ಕಾಂಗ್ರೆಸ್ಸಿನಿಂದಾದ ಫಲಪ್ರಯೋಜನಗಳನ್ನು ಉಪೇಕ್ಷಿಸಿ ತಮ್ಮ ಶಕ್ತಿಯನ್ನೇ ಅತ್ಯುಕ್ತಿಯಾಗಿ ಹೇಳಕೂಡದು.

ಮೈಸೂರಿನ ಅನೇಕ ಪ್ರಜಾಪ್ರಮುಖರೂ ಅವರ ಅನೇಕ ಅನುಯಾಯಿಗಳೂ ಮಾಡಿರುವ ಸಾಹಸ ಮತ್ತು ಸ್ವಾರ್ಥತ್ಯಾಗಗಳು ಅಭಿನಂದನೀಯವಾಗಿಯೂ ಅನುಕರಣೀಯವಾಗಿಯೂ ಇವೆ. ಈಗಿನ ಅಲ್ಲಿಯ ಜಾಗೃತಿಗೆ ಇವು ಮುಖ್ಯ ಕಾರಣಗಳಾಗಿಯೂ ಇವೆ. ಆದರೆ ಈಗಿನ ಹೋರಾಟದ ಶಕ್ತಿಯೆಲ್ಲಾ ತಮ್ಮಿಂದಲೇ ಉಂಟಾದುದೆಂದು ಅವರು ತಿಳಿಯಕೂಡದು. ಕಾಂಗ್ರೆಸ್ಸಿನಿಂದ ಅಲ್ಲಿಯ ಪ್ರಜಾಪ್ರಮುಖರಿಗೆ ಹೇಗೆ ಶಕ್ತಿಯು ಬಂದಿತೋ ಹಾಗೆಯೇ ಕಾಂಗ್ರೆಸ್ ಹುಟ್ಟದ ಮುಂಚೆಯೇ ಕೀರ್ತಿಶೇಷ ರಂಗಾಚಾರ್ಯರ ಮುಂದಾಲೋಚನೆಯಿಂದ ಮೈಸೂರು ಸಂಸ್ಥಾನದಲ್ಲಿ ಉಂಟಾಗಿರುವ ಪ್ರಜಾಪ್ರತಿನಿಧಿ ಸಭೆಯಿಂದಲೂ ಮಹಾರಾಜಾ ಸರಕಾರವು ಬ್ರಿಟಿಶ್ ಪದ್ಧತಿಯಂತೆ ಶಿಕ್ಷಣಾದಿ ಎಷ್ಟೋ ಸಂಗತಿಗಳಲ್ಲಿ ತುಂಬಾ ಅನುಕೂಲವಾದ ಪ್ರಭುತ್ವವನ್ನು ಮಾಡಿಕೊಳ್ಳುತ್ತಾ ಬಂದುದರಿಂದಲೂ ಅಲ್ಲಿಯ ಪ್ರಜೆಗಳಲ್ಲಿ ಈಗಿನ ಹೋರಾಟಕ್ಕೆ ಈ ವಿಧವಾದ ಶಕ್ತಿಯು ಬಂದಿತು. ಇವೆಲ್ಲವುಗಳನ್ನೂ ಯೋಚಿಸಿದರೆ ಮೈಸೂರು ಸಂಸ್ಥಾನದಲ್ಲಿಯೇ ಈಗ ಇಷ್ಟು ಜಾಗೃತಿಯು ಏಕುಂಟಾಗಿದೆಯೆಂಬುದು ಸ್ಪಷ್ಟವಾಗುತ್ತದೆ.

### ಪಂಡಿತಜಿಯವರ ಸ್ಪಷ್ಟೋಕ್ತಿ.

ಪಂಡಿತ ಜವಾಹರಲಾಲ ನೆಹರುರವರು ಸಂಸ್ಥಾನಗಳ ಸಂಬಂಧವಾಗಿ ಮೊನ್ನೆ ಒಂದು ಪ್ರಕಟನೆಯನ್ನು ಹೊರಡಿಸಿದ್ದಾರೆ. ಅದರಲ್ಲಿ ಅವರು ಹೀಗೆ ಹೇಳಿದ್ದಾರೆ—

"ಮೈಸೂರು ಸಂಸ್ಥಾನದಲ್ಲಿ ಪ್ರಜೆಗಳಿಗೂ ಸರಕಾರಕ್ಕೂ ಉಂಟಾದ ಒಡಂಬಡಿಕೆಯು ಪ್ರಜೆಗಳ ಬಲವನ್ನು ಹೆಚ್ಚಿಸಿತು. ಅದರ ಪರಿಣಾಮವು ಇತರ ಸಂಸ್ಥಾನಗಳ ಮೇಲೂ ಆಗದೆ ಇರಲಾರದು. ಈಗ ಸಂಸ್ಥಾನಗಳಲ್ಲಿ ಜಾಗೃತಿಯುಂಟಾಗಿದೆ. ಕಾಂಗ್ರೆಸ್ಸಿನವರು ಈ ಸಮಯದಲ್ಲಿ ಅವರಿಗೆ ಸಹಾಯ ಮಾಡಬೇಕು.

ಹಿಂದಿ ಸಂಸ್ಥಾನಗಳಲ್ಲಿ ರಾಜಪುತಾನಾ, ಪಂಜಾಬ ಪ್ರಾಂತಗಳ ಸಂಸ್ಥಾನಗಳು ಬಹು ಹಿಂದುಳಿದಿವೆ. ಇಷ್ಟೇ ಅಲ್ಲ; ಪ್ರತಿಗಾಮಿ ಧೋರಣದಿಂದ ನಡೆಯುತ್ತಲಿವೆ. ಎಲ್ಲಾ ಸಂಸ್ಥಾನಗಳಲ್ಲಿ ಹೈದರಾಬಾದ ಸಂಸ್ಥಾನವು ಬಹು ಹಿಂದುಳಿದ ಪ್ರತಿಗಾಮಿ ಸಂಸ್ಥಾನವು. ಭೋಪಾಳ ಸಂಸ್ಥಾನವೂ ಇದೇ ವರ್ಗಕ್ಕೆ ಸೇರಿದೆ. ಭೋಪಾಳದಲ್ಲಿ ಯಾವ ವಿಧವಾದ ರಾಜಕೀಯ ಚಟುವಟಿಕೆಗೂ ಅವಕಾಶವಿಲ್ಲ. ದೇವಾಲಯ ಮತ್ತು ಮಸೀದಿಗಳಲ್ಲಿ ಕೂಡುವ ಸಭೆಗೂ ಸರಕಾರದ ಅಪ್ಪಣೆ ಬೇಕು. ಇಷ್ಟೇ ಅಲ್ಲ; ಸ್ವಂತ ಮನೆಯಲ್ಲಿ ಕೂಡುವ ಸಭೆಗೂ ಸರಕಾರದ ನಿಯಂತ್ರಣ!

ಹೆಚ್ಚಾದ ಹಣ ಕೊಡಬೇಕೆಂದು ಹಣದ ಭಾರ ಹೇರಿ ಅನೇಕ ಪತ್ರಿಕೆಗಳೇ ತಮ್ಮಲ್ಲಿ ಹೊರಡದಂತೆ ಮಾಡಿದ್ದಾರೆ. ಬೇರೆ ಭಾಗದಿಂದ ಬರುವ ಪತ್ರಿಕೆಗಳಲ್ಲಿ ಸಾಧಾರಣ ೮೦ ಪತ್ರಿಕೆಗಳಿಗೆ ಪ್ರತಿಬಂಧದ ಆಜ್ಞೆಯನ್ನು ಮಾಡಿದ್ದಾರೆ. ಅನೇಕ ಪುಸ್ತಕಗಳು ಸಂಸ್ಥಾನದಲ್ಲಿ ಬರದಂತೆ ಮಾಡಿದ್ದಾರೆ. ಸಂಸ್ಥಾನಗಳಲ್ಲಿ ನಡೆದಿರುವ

ಈ ದಬ್ಬಾಳಿಕೆಯನ್ನು ನಾವು ಇನ್ನೂ ನೋಡುತ್ತಲೇ ಸಮಾಧಾನದಿಂದ ಕುಳಿತುಕೊಳ್ಳುವುದು ಶಕ್ಯವಿಲ್ಲ. ಅಲ್ಲಿಯ ಪ್ರಜೆಗಳ ಹೋರಾಟಕ್ಕೆ ನಾವು ಸಹಾಯುಮಾಡಬೇಕು.”

### ಬಾಯಿ ಕಟ್ಟಿ ಬಾರಕೋಲಿನ ಏಟು!

ಈ ದೇಶದ ಅನೇಕ ಸಂಸ್ಥಾನಗಳಲ್ಲಿಯ ಪ್ರಜೆಗಳು ಎಂತಹ ಶೋಚನೀಯ ಸ್ಥಿತಿಯಲ್ಲಿದ್ದಾರೆಂಬುದು ಪಂಡಿತಜಿಯವರ ಮೇಲಣ ಹೇಳಿಕೆಯಿಂದ ಸ್ಪಷ್ಟವಾಗುತ್ತದೆ. ಆ ಸಂಸ್ಥಾನಾಧಿಪತಿಗಳು ತಮ್ಮ ಪ್ರಜೆಗಳೆಂದರೆ ತಾವು ಕೊಂಡುಕೊಂಡ ಮೂಕ ಪ್ರಾಣಿಗಳೆಂದೇ ಭಾವಿಸಿದಂತೆ ತೋರುತ್ತದೆ. ಅಲ್ಲಿನ ಪ್ರಜೆಗಳಿಗೆ ಬಾಯಿ ಇದ್ದರೂ ಮಾತನಾಡುವ ಅಧಿಕಾರವಿಲ್ಲ. ಕೈ ಇದ್ದರೂ ಬರೆಯಲು ಅವಕಾಶವಿಲ್ಲ. ವಿಚಾರವಿದ್ದರೂ ಆಚರಿಸುವ ಸ್ವಾತಂತ್ರ್ಯವಿಲ್ಲ. ಬಾಯಿಕಟ್ಟಿ ಬಾರಿಕೋಲಿನಿಂದ ಹೊಡೆಯುವಂತೆ ತಮ್ಮ ಪ್ರಜೆಗಳ ಕೈ ಬಾಯಿಗಳನ್ನು ಬಂಧಿಸಿ ಆಳುತ್ತಿರುವ ಈ ಸಂಸ್ಥಾನಾಧಿಪತಿಗಳ ರೀತಿಗಳನ್ನು ನೋಡಿದರೆ ಯಾರಿಗೆ ತಾನೆ ಸಂತಾಪವುಂಟಾಗಲಿಕ್ಕಿಲ್ಲ? ಅಲ್ಲಿಯ ಪ್ರಜೆಗಳ ಹೀನದೀನ ಸ್ಥಿತಿಗಳನ್ನು ನೋಡಿ ಯಾರು ತಾನೆ ವಿಷಾದಿಸಲಿಕ್ಕಿಲ್ಲ?

ಯಾವ ಪೂರ್ವಜರು ತಮ್ಮ ರಕ್ತವನ್ನು ಸೂರೆಮಾಡಿ ಈ ಸಂಸ್ಥಾನಗಳನ್ನು ಸಂರಕ್ಷಿಸಿದರೋ ಅವರ ವಂಶಜರಿಗೇನೇ ಆ ಸಂಸ್ಥಾನಾಧಿಪತಿಗಳು ಈಗ ಇಂತಹ ಶೋಚನೀಯ ಸ್ಥಿತಿಯುಂಟಾಗುವಂತೆ ಮಾಡುವುದು ಕೃತಘ್ನತೆಯಲ್ಲವೆ? ಸ್ವದೇಶದ ಸ್ವ ಪ್ರಜೆಗಳಿಗೆ ಸ್ವಾತಂತ್ರ್ಯವನ್ನು ತಾವೇ ಮೊದಲು ಕೊಟ್ಟು ಬ್ರಿಟಿಶ್ ಸರಕಾರಕ್ಕೆ ಮಾರ್ಗದರ್ಶಿಗಳಾಗಬೇಕಾದುದು ಈ ಸಂಸ್ಥಾನಾಧಿಪತಿಗಳ ಕರ್ತವ್ಯವು. ಹೀಗೆ ಮಾಡುವುದೇ ಇವರಿಗೆ ಭೂಷಣ. ಹೀಗಿರುವಾಗ ಪರದೇಶದ ಬ್ರಿಟಿಶ್ ಸರಕಾರವು ಪರಪ್ರಜೆಗಳಾದ ಹಿಂದಿಯರಿಗೆ ಎಷ್ಟು ಸ್ವಾತಂತ್ರ್ಯ ಸೌಲಭ್ಯಗಳನ್ನು ಕೊಟ್ಟಿದೆಯೋ ಅಷ್ಟನ್ನಾದರೂ ಈ ಸಂಸ್ಥಾನಾಧಿಪತಿಗಳು ಕೊಡದಿರುವುದು ಇವರಿಗೆ ತುಂಬಾ ಲಾಂಛನಾಸ್ಪದವಾದುದಲ್ಲವೆ?

### ತ್ಯಾಗದ ವಿನಾ ಸ್ವಾತಂತ್ರ್ಯವಿಲ್ಲ.

ಅನೇಕ ಸಂಸ್ಥಾನಾಧಿಪತಿಗಳು ತಮ್ಮ ಪ್ರಜೆಗಳನ್ನು ಎಷ್ಟು ಹತ್ತಿಕ್ಕಿಡಲು ಈಗ ಪ್ರಯತ್ನಿಸಿದರೂ ಅದು ಇನ್ನೂ ಬಹು ಕಾಲ ನಡೆಯುವುದು ಶಕ್ಯವಿಲ್ಲ. ರಾಷ್ಟ್ರದಲ್ಲಿ ಸ್ವಾತಂತ್ರ್ಯದ ದಾಹವು ಅತ್ಯಧಿಕವಾಗುತ್ತಲಿದೆ. ಸಂಸ್ಥಾನಗಳ ಪ್ರಜೆಗಳಲ್ಲಿ ಹುದುಗಿರುವ ಅಸಂತೋಷವು ಇಷ್ಟರಲ್ಲೇ ಪ್ರಜ್ವಲಿಸದೆ ಇರಲಾರದು.

ಹೂವಿನ ಹಾಸಿಗೆಯ ಮೇಲೆ ಮಲಗಿ ಸ್ವಾತಂತ್ರ್ಯವನ್ನು ಸಂಪಾದಿಸುವುದು ಶಕ್ಯವೆ? ತನು ಮನ ಧನಗಳನ್ನು ಸ್ವಾತಂತ್ರ್ಯ ದೇವಿಗೆ ಆಹುತಿ ಕೊಟ್ಟಾಗಲೇ ಅವಳು ಪ್ರಸನ್ನಳಾಗುವಳು. ಶಾಂತಿಯುಕ್ತವಾದ ತ್ಯಾಗದ ವಿನಾ ಸ್ವಾತಂತ್ರ್ಯವು ಲಭಿಸುವುದೇ ಇಲ್ಲ. ನಿರಂಕುಶರಾದ ಸಂಸ್ಥಾನಾಧಿಪತಿಗಳು ಈಗಲೇ ಎಚ್ಚತ್ತು ತಮ್ಮ ಪ್ರಜೆಗಳಿಗೆ ಹೊಣೆಗಾರಿಕೆಯ ಪ್ರಭುತ್ವವನ್ನು ಕೊಡಲು ಪ್ರಾರಂಭಿಸಬೇಕು. ಹಾಗೆ ಮಾಡದೆ ಅವರು ತಲೆ ಎತ್ತದಂತೆ ಅವರ ಮೇಲೆ ನಾನಾ ಬಲಾತ್ಕಾರಗಳನ್ನೇ ಮಾಡುತ್ತ ನಡೆದರೆ ತಮ್ಮ ಅರಸೊತ್ತಿಗೆಯ ಸಮಾಧಿಯನ್ನು ತಾವೇ ಸಿದ್ಧಗೊಳಿಸಿಕೊಂಡಂತಾಗುವುದು. ಆದಕಾರಣ ಸಂಸ್ಥಾನಾಧಿಪತಿಗಳು ತಮಗೆ ವಿಘಾತಕವಾದ ಈಗಿನ ಬಲಾತ್ಕಾರದ ಮಾರ್ಗವನ್ನು ಕೂಡಲೆ ಬಿಡಬೇಕಾದುದು ಕ್ಷೇಮಕರ. ಸಂಸ್ಥಾನಗಳ ಪ್ರಜೆಗಳಾದರೋ ಇದೇ ಸಮಯದಲ್ಲಿ ಅಹಿಂಸಾ ಮಾರ್ಗದಿಂದ ಶಕ್ಯವಿದ್ದಷ್ಟು ಪ್ರಬಲವಾಗಿ ತಮ್ಮ ಸ್ವಾತಂತ್ರ್ಯದ ಹೋರಾಟವನ್ನು ನಡೆಯಿಸಬೇಕು.

### ಜಾತಿ ವಿಶಿಷ್ಟ ಹೋರಾಟವೆ?

ಸಂಸ್ಥಾನಗಳ ರಾಜಕೀಯ ಹೋರಾಟವು ಜಾತಿ ವಿಶಿಷ್ಟವಾದುದಾಗಿದೆಯೆಂದು ಕೆಲವು ಸ್ವಾರ್ಥಿಗಳು ಕೂಗಾಡುವುದುಂಟು. ಸ್ವಾತಂತ್ರ್ಯಪ್ರಿಯರು ಅತ್ತಕಡೆ ಲಕ್ಷಿಸಕೂಡದು. ಜಾತ್ಯಂಧತೆಯು ಸ್ವಾತಂತ್ರ್ಯದ ಹೋರಾಟದಲ್ಲಿ ಸೇರದಂತೆ ಮುಂದಾಳುಗಳು ಬಹು ಎಚ್ಚರದಿಂದಿರಬೇಕು.

ಮೈಸೂರು ಸಂಸ್ಥಾನವು ಹಿಂದುಗಳ ಸಂಸ್ಥಾನ. ಅಲ್ಲಿ ಹಿಂದುಗಳೇ ಮುಖ್ಯ ಪ್ರಜೆಗಳು. ಮುಸಲ್ಮಾನರಾದರೋ ೧೦೦ಕ್ಕೆ ೬ ರಂತೆ ಮಾತ್ರ ಇದ್ದಾರೆ. ಹೀಗಿದ್ದರೂ ಹೊಣೆಗಾರಿಕೆಯ ಪ್ರಭುತ್ವ ಸ್ಥಾಪನೆಗೆ ಹೋರಾಡುವವರೆಲ್ಲರೂ ಹಿಂದುಗಳೇ ಆಗಿದ್ದಾರೆ. ಮುಸಲ್ಮಾನರೇ ಈ ಹೋರಾಟದಲ್ಲಿ ಸೇರಿಲ್ಲ. ಎಂದಮೇಲೆ ಹಿಂದು ರಾಜರ ವಿರುದ್ಧವಾಗಿ ಮುಸಲ್ಮಾನ ಪ್ರಜೆಗಳು ಹೋರಾಡುತ್ತಿದ್ದಾರೆಂದು ಜಾತಿ ಭಾವನೆಯನ್ನು ಬೆರಸಿ ಹೇಳಲು ಬರುವಂತೆಯೋ ಇಲ್ಲವಷ್ಟೆ.

ಹಿಂದುಗಳಲ್ಲಿಯ ಒಕ್ಕಲಿಗರು, ಲಿಂಗಾಯತರು, ಬ್ರಾಹ್ಮಣರು ಹೆಚ್ಚಾಗಿ ಅಲ್ಲಿಯ ಹೋರಾಟದಲ್ಲಿ ಸೇರಿದ್ದಾರೆ, ಬ್ರಾಹ್ಮಣರು ಬಹು ಮಂದಿ ಅಧಿಕಾರದಲ್ಲಿರುವುದರಿಂದ ತೋರಿಕೆಗಾಗಿ ಕೆಲವರು ಹೋರಾಡುತ್ತಿದ್ದಾರೇ ವಿನಾ ಆ ಜಾತಿಯವರೆಲ್ಲಾ ಸರಕಾರದ ಕಡೆಗೇ ಸರಿಯೆಂದಾಗಲಿ, ಲಿಂಗಾಯತರಲ್ಲಿ ಕೆಲವರು ಸಭೆ ಸೇರಿ, ಮೈಸೂರು ಕಾಂಗ್ರೆಸ್ಸಿನ ಕಾರ್ಯಕಲಾಪಗಳನ್ನು ಖಂಡಿಸಿದ ಮಾತ್ರದಿಂದ ಲಿಂಗಾಯತ ಸಮಾಜವು ಸರಕಾರದ ಕಡೆಗಿದೆಯೆಂದಾಗಲಿ, ಮುಸಲ್ಮಾನ್ ದಿವಾನರಿದ್ದುದರಿಂದ ಹಿಂದುಗಳು ಈ ಹೋರಾಟವನ್ನು ಹೂಡಿದ್ದಾರೆಂದಾಗಲೀ ಈಗಿನ ಹೋರಾಟಕ್ಕೆ ಜಾತಿಯ ಬಣ್ಣವನ್ನು ಬರೆಯ ಹೋಗುವುದು ಅತ್ಯಂತ ನಿಂದ್ಯವಾದುದಾಗಿದೆ. ಸಂಸ್ಥಾನಗಳಲ್ಲಿ ನಡೆದಿರುವ ಈಗಿನ ಹೋರಾಟವು ಜಾತಿವಿಶಿಷ್ಟವಾದುದಲ್ಲ. ಅದು ಸ್ವಾತಂತ್ರ್ಯ ದಾಹದಿಂದುಂಟಾದುದು, ಆ ದಾಹವು ಇಂದಲ್ಲ ನಾಳೆ ಶಮನವಾಗಿಯೇ ತೀರುವುದು. ನಿರಂಕುಶ ಪ್ರಭುತ್ವಕ್ಕೆ ಅಳಿಗಾಲವು ಬಂದೇ ಬರುವುದು. ಆ ವರೆಗೂ ಸಂಸ್ಥಾನಗಳಲ್ಲಿ ಹೋರಾಟವು ಅವಿಚ್ಛಿನ್ನವಾಗಿ ನಡೆಯುತ್ತಲೇ ಇರುವುದು.

---

## ಹೆಂಗಸರು ಮಕ್ಕಳ ವಧೆ.

ಜಪಾನಿ ವಿಮಾನಗಳು ಚೀನಿ ನಗರಗಳನ್ನು ಮುತ್ತಿ ನಿರಾಯುಧರೂ ಅಸಹಾಯರೂ ಆದ ಹೆಂಗಸರನ್ನೂ ಮಕ್ಕಳನ್ನೂ ಮನಬಂದಂತೆ ಬಾಂಬು ಹಾಕಿ ಕೊಲ್ಲುತ್ತಿರುವುದನ್ನು ಚೀನವು ಪ್ರತಿಭಟಿಸಿದೆ. ಲಂಡನ್ ನಗರದಲ್ಲಿರುವ ಚೀನಿ ರಾಯಭಾರಿಯು ಬ್ರಿಟಿಶ್ ವಿದೇಶ ಮಂತ್ರಿ ಲಾರ್ಡ ಹ್ಯಾಲಿಫಾಕ್ಸರವರಿಗೆ ಒಂದು ಪತ್ರವನ್ನು ಬರೆದು ಅದರಲ್ಲಿ ಜಪಾನಿನ ಈ ವರ್ತನೆಯನ್ನು ಖಂಡಿಸಿ ನಿರಪರಾಧಿಯಾದ ಹೆಂಗಸರ ಮಕ್ಕಳ ವಧೆಮಾಡದಂತೆ ಜಪಾನವನ್ನು ತಡೆಯಬೇಕೆಂದು ಬ್ರಿಟನ್ ಮೊದಲಾದ ರಾಷ್ಟ್ರಗಳಿಗೆ ಬಿನ್ನವಿಸಿಕೊಂಡಿರುವರು. ರಾಷ್ಟ್ರಸಂಘದವರಿಗೂ ಇದೇ ರೀತಿ ಒಂದು ಪತ್ರವನ್ನು ಬರೆಯಲಾಗಿದೆ.

---

—ಮೈಸೂರ ಸರಕಾರದ ಬರುವ ವರ್ಷದ ಮುಂಗಡ ಪತ್ರಿಕೆಯಲ್ಲಿ ೧ ಲಕ್ಷ ೧೩ ಸಾವಿರ ರೂಪಾಯಿ ಉಳಿತಾಯ ತೋರಿಸಲಾಗಿದೆ. ಒಟ್ಟು ಉತ್ಪನ್ನವನ್ನು ೩೮೬-೮೩ ಲಕ್ಷ ಎಂದು ಹಿಡಿದಿದ್ದು ಖರ್ಚು ೩೮೫-೭೦ ಲಕ್ಷ ಎಂದು ಹಿಡಿದಿರುತ್ತದೆ.

(೯ ನೆಯ ಪುಟದಿಂದ ಬಂದುದು.)

ಆಮೇಲೆ ಅಧ್ಯಕ್ಷರ ಮತ್ತು ಸಭಿಕರ ಇಷ್ಟದಂತೆ ಶ್ರೀ. ಹರ್ಡೇಕರ ಮಂಜಪ್ಪನವರು ಮೇಲಣ ವಿಷಯವನ್ನೇ ಪುಷ್ಟೀಕರಿಸಿ ಭಾಷಣಮಾಡಿದರು. ಅವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು.—

"ಭಾಷಣ ಮಾಡುವುದು ಮನುಷ್ಯ ಪ್ರಾಣಿಯ ಜನ್ಮಸಿದ್ಧ ಹಕ್ಕು. ಅದು ನನಗೆ ಇಲ್ಲಿ ಈ ವರೆಗೆ ಇರಲಿಲ್ಲ. ಇದೇ ಈಗ ಅಂಥ ಹಕ್ಕನ್ನು ಇಲ್ಲಿಯ ತಾಲೂಕದಾರ ಸಾಹೇಬರು ನನಗೆ ಉಂಟುಮಾಡಿಕೊಟ್ಟದ್ದಕ್ಕೆ ನಾನು ಅವರಿಗೆ ಆಭಾರಿಯಾಗಿದ್ದೇನೆ. ವೇದಾಗಮಗಳು ವೀರಶೈವರಿಗೆ ಪ್ರಮಾಣ ಗ್ರಂಥಗಳಲ್ಲ. ಪ್ರಮಾಣ ಗ್ರಂಥವೆಂದರೆ ಆ ಗ್ರಂಥದಲ್ಲಿರುವ ಸಂಗತಿಗಳೆಲ್ಲವೂ ಮಾನ್ಯವಾಗಿರಬೇಕು. ನಮಗೆ ಮಾನ್ಯವಿರತಕ್ಕ ಸಂಗತಿಗಳು ಆ ಗ್ರಂಥಗಳಲ್ಲಿವೆಯೆಂಬ ಮಾತ್ರದಲ್ಲಿಯೇ ಅವು ಪ್ರಮಾಣ ಗ್ರಂಥಗಳಾಗುವುದಾದರೆ ಖುರಾನ, ಬೈಬಲ್ ಗ್ರಂಥಗಳಲ್ಲಿಯೂ ನಮಗೆ ಮಾನ್ಯವಿರತಕ್ಕ ಅನೇಕ ಒಳ್ಳೆಯ ಸಂಗತಿಗಳಿವೆ. ಹಾಗಾದರೆ ಅವು ವೀರಶೈವರ ಪ್ರಮಾಣ ಗ್ರಂಥಗಳೆ?

ವೇದಗಳಲ್ಲಿರುವ ಏಕೇಶ್ವರೀ ವಾದವು ನಮಗೆ ಮಾನ್ಯ. ಅದರಲ್ಲಿರುವ ವರ್ಣರಚನೆ, ಹಿಂಸಾಯುಕ್ತ ಯಜ್ಞ ಮೊದಲಾದವುಗಳೆಲ್ಲಾ ಅಮಾನ್ಯ. ಅಂತೆಯೇ ಅವು ಪ್ರಮಾಣ ಗ್ರಂಥಗಳಾಗುವುದಿಲ್ಲ. ವಚನ ಶಾಸ್ತ್ರಕ್ಕೆ ಅವಿರೋಧವಾಗಿರತಕ್ಕ ಸಂಗತಿಗಳು ವೇದಾಗಮಗಳೇ ಏಕೆ? ಯಾವ ಗ್ರಂಥದಲ್ಲಿದ್ದರೂ ಮಾನ್ಯ. ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ, ಆಗಮದ ಮೂಗ ಕೊಯ್ಯುವೆ ಎಂದು ಬಸವಣ್ಣನವರು ಹೇಳಿದ್ದರ ಮೇಲಿಂದಲೇ ಅವು ನಮ್ಮ ಪ್ರಮಾಣಗ್ರಂಥಗಳಲ್ಲವೆಂದೇ ಸಿದ್ಧವಾಗುತ್ತದೆ."

ಮೇಲಣ ಗೊತ್ತುವಳಿಗೆ ೧೭ ಜನರು ಮಾತ್ರ ಒಪ್ಪಿಗೆ ಕೊಟ್ಟರು. ಪ್ರಚಂಡ ಬಹುಮತದಿಂದ ಪಂಡಿತ ವೀರಭದ್ರ ಶರ್ಮರವರ ಗೊತ್ತುವಳಿಯು ಬಿದ್ದುಹೋಯಿತು.

### ಪಂಡಿತಜಿಯವರಿಗೆ ಮತ್ತೊಂದು ಸೋಲು.

ಆಮೇಲೆ ಅಷ್ಟಾವರಣಯುಕ್ತ ವೀರಶೈವರಲ್ಲಿರುವ ಒಳ ಪಂಗಡಗಳೆಲ್ಲವೂ ಹೋಗಬೇಕೆಂತಲೂ ಒಳ ಪಂಗಡಗಳಲ್ಲಿ ಪರಸ್ಪರ ಊಟೋಪಚಾರ ಮತ್ತು ಶರೀರ ಸಂಬಂಧವಾಗಬೇಕೆಂತಲೂ ಈ ಮುಂಚಿನ ಪರಿಷತ್ತಿನಲ್ಲಿ ಆದ ಠರಾವು ಹೆಚ್ಚಾಗಿ ಆಚರಣೆಗೆ ಬರುವ ಕುರಿತು ಒಂದು ಗೊತ್ತುವಳಿಯು ಪರಿಷತ್ತಿನ ಮುಂದೆ ಬಂದಿತು. ಅದರಲ್ಲಿರುವ ಪರಸ್ಪರ ಶರೀರ ಸಂಬಂಧದ ಸೂಚನೆಯು ಅಗ್ರಾಹ್ಯವಾದುದೆಂದು ಪಂಡಿತ ವೀರಭದ್ರ ಶರ್ಮರವರು ಸೂಚನೆಯನ್ನು ತಂದರು. ಅವರ ಸೂಚನೆಗೆ ಅನುಮತಿ ಕೊಡುವವರು ಕೂಡಾ ದೊರೆಯದೆ ಅದು ಬಿದ್ದುಹೋಗಿ ಮೂಲ ಗೊತ್ತುವಳಿ ಠರಾವಾಯಿತು.

### ಹತ್ತು ಲಕ್ಷ ರೂ. ಫಂಡ್!

ಶಿಕ್ಷಣ ಪ್ರಸಾರಕ್ಕಾಗಿ ಒಂದು ಫಂಡ್ ಏರ್ಪಡಬೇಕೆಂದು ಗೊತ್ತಾಯಿತು. ಆ ಫಂಡಿಗೆ ಅಧ್ಯಕ್ಷರಾದ ಶ್ರೀಮಂತ ಕಾಶೀರಾಯ ದೇಶಮುಖರು ೧೫೦೦ ರೂ. ಗಳನ್ನೂ ಸ್ವಾಗತಾಧ್ಯಕ್ಷರಾದ ಶ್ರೀ. ಗಿರವಲಕರ ಇವರು ೧೦೦೦ ರೂ. ಗಳನ್ನೂ ಕೊಡುವುದಾಗಿ ಸೂಚಿಸಿದರು. ಇದೇ ಪ್ರಕಾರ ಅನೇಕ ಮಹಾಶಯರು ತಮ್ಮ ತಮ್ಮ ಇಷ್ಟಾನುಸಾರ ಕಂತಿನಿಂದ ಕೂಡಾ ಈ ಫಂಡಿಗೆ ಸಹಾಯ ಮಾಡುವುದಾಗಿ ತಿಳಿಸಿದರು. ಒಟ್ಟು ೧೭ ಸಾವಿರ ರೂ. ಗಳ ವರೆಗೆ ವಾಗ್ದಾನವಾಯಿತು. ಹಿಂದಕ್ಕೆ ಹೀಗೆಯೇ ೨೧ ಸಾವಿರ ರೂ. ಗಳ ವರೆಗೂ ವಾಗ್ದಾನವಾಗಿ ಒಂದು ರೂ. ಕೂಡಾ ಕೂಡಿರಲಿಲ್ಲ. ಈ ಸಾರೆಯೂ ಹಾಗೇ ಆಗದೆ ಹಣವು ಜಾಗ್ರತೆ ಕೂಡಲು ಪ್ರಯತ್ನವಾಗಬೇಕೆಂದೂ ಹಾಗಾದರೇನೇ ಹತ್ತು ಲಕ್ಷವಿಲ್ಲದಿದ್ದರೂ ಒಂದು ಲಕ್ಷವಾದರೂ ಕೂಡಬಹುದೆಂದೂ ಅನೇಕರು ಮಾತನಾಡಿದರು. ಧ್ವನಿವಾಹಕ ಯಂತ್ರದ ವ್ಯವಸ್ಥೆಯಿದ್ದುದರಿಂದ ಎಲ್ಲರ ಭಾಷಣಗಳೂ ಸಭಿಕರಿಗೆ ಚೆನ್ನಾಗಿ ಕೇಳಿಸುತ್ತಿದ್ದವು.

ಈ ಪ್ರಕಾರ ಪರಿಷತ್ತಿನ ಕಾರ್ಯ ಉತ್ಸಾಹದಿಂದ ನಡೆದ ಬಳಿಕ ಆಭಾರ ಮನ್ನಣೆಯಾಗಿ ಮುಕ್ತಾಯವಾಯಿತು.

## ಮಹಿಳಾ ಪರಿಷತ್ತು.

ಲಾತೂರಲ್ಲಿ ನೈಜಾಮ ವೀರಶೈವ ಮಹಿಳಾ ಪರಿಷತ್ತು ಕಳೆದ ೨೯ನೆಯ ತಾರೀಖಿನ ದಿವಸ ಮುಂಚೆಯೇ ಗೊತ್ತಾದ ಮೇರೆಗೆ ಬಾರ್ಶಿಯ ಸೌ॥ ಗೌಸಾನೆಯವರ ಅಧ್ಯಕ್ಷತೆಯಲ್ಲಿ ಜರುಗಿತು. ಅನೇಕ ಮಹಿಳೆಯರು ಮರಾಠಿಯಲ್ಲಿ ಸ್ತ್ರೀ ಸಮಾಜದ ಉನ್ನತಿಗಾಗಿ ಭಾಷಣ ಮಾಡಿದರು. ರಂಜೇರಿಯ ಸೌ॥ ಮೇನಕಾಂಬಾಬೇಣಿ ಇವರು ವೀರಶೈವ ಮಹಿಳೆಯ ಸುಧಾರಣೆಗಾಗಿ ಕನ್ನಡದಲ್ಲಿ ಬಹು ಸ್ವಾರಸ್ಯವಾದ ಭಾಷಣಮಾಡಿದರು.

ಶ್ರೀ. ಶರಣ ಕವಿಗಳು ಬಸವಾದಿ ಶರಣರ ಕಾಲದ ಮಹಿಳೆಯರು ಮಾಡುತ್ತಿದ್ದ ಕಾರ್ಯಕಲಾಪಗಳ ಸಂಬಂಧವಾದ ತಮ್ಮ ಪದ್ಯವನ್ನು ಹಾಡಿ ಅದರ ಅರ್ಥವನ್ನು ತಿಳಿಸಿದರು.

ಶ್ರೀ. ಹರ್ಡೇಕರ ಮಂಜಪ್ಪನವರು ವೀರಶೈವ ಮಹಿಳೆಯರಿಗಿರತಕ್ಕ ಧಾರ್ಮಿಕ, ಸಾಮಾಜಿಕ, ಮೊದಲಾದ ಸಂಗತಿಗಳಲ್ಲಿಯ ಸ್ವಾತಂತ್ರ್ಯವನ್ನೂ ಈಗಿನ ಮಹಿಳೆಯರು ಅದರ ಉಪಯೋಗ ಮಾಡಿಕೊಳ್ಳಬೇಕಾದ ರೀತಿ ನೀತಿಗಳನ್ನೂ ತಿಳಿಸಿದರು.

ಓರ್ವ ಪ್ರೇಕ್ಷಕ.

## ಪಂ. ಜವಾಹರಲಾಲರ ಪ್ರಯಾಣ.

ಪಂ. ಜವಾಹರಲಾಲ ನೆಹರುರವರು ತಾ. ೨ ನೆಯ ದಿವಸ 'ಕಾಂಟೆ ಬಿಯಾಂಕೊ' ಎಂಬ ಇಟಾಲಿಯನ್ ಹಡಗಿನಿಂದ ಮುಂಬೈಯಿಂದ ಪ್ರಯಾಣ ಬೆಳಿಸಿದರು. ಪಂ. ಜವಾಹರಲಾಲರನ್ನು ಕಳುಹಿಸಿಕೊಡುವುದಕ್ಕಾಗಿ ಮುಂಬೈ ಪ್ರಾಂತಿಕ ಕಾಂಗ್ರೆಸ್ ಕಮಿಟಿಯವರು ೧೦ ಗಂಟೆಗೇನೇ ಕಾರ್ಯಕ್ರಮವನ್ನಿಟ್ಟುಕೊಂಡಿದ್ದರು. 'ಬೆಲಾರ್ಡ ಪಿಯರಿ' ನ ಮೇಲೆ ೫-೬ ಸಾವಿರ ಜನಗಳೂ, ಮಂತ್ರಿಗಳೂ ಶೇಟ ಜಮುನಾಲಾಲ ಬಜಾಜ, ಅಚ್ಯುತರಾವ ಪಟವರ್ಧನ, ನಗಿನದಾಸ ಮಾಸ್ತರ್ ಮೊದಲಾದವರೂ ಸೇರಿದ್ದರು. ಪಂಡಿತಜಿಯವರಿಗೆ ಅನೇಕ ಸಂಸ್ಥೆಗಳ ಪರವಾಗಿ ಪುಷ್ಪಹಾರಗಳನ್ನೂ ಅರ್ಪಿಸಲಾಯಿತು. ಪಂಡಿತಜಿಯವರ ಭಗಿನಿಯರಾದ ಸೌ॥ ವಿಜಯಲಕ್ಷ್ಮಿ ಪಂಡಿತ ಮತ್ತು ಸೌ॥ ಕೃಷ್ಣಾ ಹಥಿಸಿಂಗ ಇವರು ಪಂಡಿತಜಿಯವರನ್ನು ಆಲಿಂಗನ ಮಾಡಿದರು.

ಕೂಡಿದ ಜನಗಳನ್ನುದ್ದೇಶಿಸಿ ಪಂಡಿತಜಿಯವರು ಒಂದು ಚಿಕ್ಕ ಭಾಷಣ ಮಾಡಿದರು. ಅದರಲ್ಲಿ ಅವರು 'ಪ್ರಿಯ ದೇಶಬಾಂಧವರೇ, ನಾನು ತಮ್ಮ ಮತ್ತು ಕಾಂಗ್ರೆಸ್ಸಿನ ಆಜ್ಞೆಯಂತೆ ಪರ ದೇಶಗಳಿಗೆ ಹೋಗುತ್ತಾ ಇದ್ದೇನೆ. ಸ್ವಾತಂತ್ರ್ಯಯುದ್ಧವನ್ನು ಮುಂದುವರಿಸುತ್ತಲೇ ಇರಬೇಕು. ಕಾಂಗ್ರೆಸ್ಸಿನ ಧ್ವಜವು ಯಾವಾಗಲೂ ಎತ್ತರದಲ್ಲಿ ಹಾರಾಡುತ್ತಿರಲೇ ಬೇಕು.' ಎಂದು ಹೇಳಿ ಹಡಗವನ್ನು ಹತ್ತಿದರು. ೧॥ ಗಂಟೆಗೆ ಹಡಗಿನೊಳಗಿಂದ ಪಂಡಿತಜಿಯವರು ಯುರೋಪಕ್ಕೆ ಪ್ರಯಾಣ ಬೆಳಿಸಿದರು.

## ಕಾಂಗ್ರೆಸ್ಸು ಹಿಂದುಗಳ ಪ್ರತಿನಿಧಿಯಾಗಲಾರದು.

ಹಿಂದು ಮಹಾಸಭೆಯ ವರ್ಕಿಂಗ್‌ಕಮಿಟಿಯು ಕಳೆದ ವಾರ ನಾಶಿಕದಲ್ಲಿ ಕೂಡಿ ಕಾಂಗ್ರೆಸ್ ಮುಸ್ಲಿಂಲೀಗುಗಳ ನಡುವೆ ನಡೆಯುತ್ತಿರುವ ಒಪ್ಪಂದದ ಮಾತುಕತೆಗಳ ಬಗ್ಗೆ ಈ ಕೆಳಗಿನ ಗೊತ್ತುವಳಿಯನ್ನು ತೀರ್ಮಾನಮಾಡಿತು.

"ಕಾಂಗ್ರೆಸ್ಸು ಹಿಂದುಸ್ಥಾನದ ರಾಜಕೀಯ ಆರ್ಥಿಕ ಸ್ವಾತಂತ್ರ್ಯಕ್ಕಾಗಿ ಸ್ಥಾಪಿತವಾದ ರಾಷ್ಟ್ರೀಯ ಸಂಸ್ಥೆಯಾಗಿದೆ. ನಿಜವಾಗಿಯೂ ಶುದ್ಧ ರಾಷ್ಟ್ರೀಯ ತತ್ವಕ್ಕಾಗಿ ಹೋರಾಡುತ್ತಿರುವುದಾದರೆ ಅದುಕ್ತಿಯಾವುದೇ ಜಾತಿಯ ಪ್ರತಿನಿಧಿಯಾಗಿ ಜಾತೀಯ ಒಪ್ಪಂದಮಾಡಿಕೊಳ್ಳಕೂಡದು. ಅದು ಸರ್ವ ಜಾತಿಗಳನ್ನೊಳಕೊಂಡ ಯಾವತ್ತೂ ರಾಷ್ಟ್ರದ ಪ್ರತಿನಿಧಿಯಾಗತಕ್ಕದ್ದು. ಹಿಂದು ಸಮಾಜದ ಬಗ್ಗೆ ಮಾತನಾಡಲು ಕಾಂಗ್ರೆಸ್ಸಿಗೆ ಅಧಿಕಾರವಾದರೂ ಏನು? ಕಾಂಗ್ರೆಸ್ಸು ಚಾತುರ್ಯದಿಂದ ಇಲ್ಲವೆ ಅಚಾತುರ್ಯದಿಂದಲೇ ಆಗಲಿ ಜಾತಿಯ ಸಂಸ್ಥೆಯಾದ ಮುಸ್ಲಿಂಲೀಗಿನೊಡನೆ ಹಿಂದುಗಳ ಪರವಾಗಿ ಒಪ್ಪಂದಮಾಡಿಕೊಂಡಲ್ಲಿ ಕಾಂಗ್ರೆಸ್ಸು ಹಿಂದುಗಳ ಸಂಸ್ಥೆಯೆಂದು ಮುಸಲ್ಮಾನರು ಅದರ ಮೇಲೆ ಹೊರಿಸುತ್ತಿರುವ ಆರೋಪಗಳು ನ್ಯಾಯವಾಗಿ ಪರಿಗಣಿಸಲ್ಪಡಲು ಅವಕಾಶವಿದೆ.

ಕಾಂಗ್ರೆಸ್ಸು ಹಿಂದು ಸಮಾಜದ ಹೆಸರಿನಲ್ಲಿ ಯಾವ ಜಾತಿಯ ಸಂಸ್ಥೆಯೊಡನೆಯೂ ಮುಖ್ಯವಾಗಿ ಮುಸ್ಲಿಂಲೀಗಿನೊಡನೆ ಒಪ್ಪಂದಮಾಡಿಕೊಳ್ಳುವುದನ್ನು ಈ ಸಮಿತಿಯು ತೀಕ್ಷ್ಣವಾಗಿ ವಿರೋಧಿಸುತ್ತದೆ. ಕಾಂಗ್ರೆಸ್ಸು ಮುಸ್ಲಿಂಲೀಗಿನೊಡನೆ ಮಾಡಿಕೊಳ್ಳುವ ಒಪ್ಪಂದವು ಸರ್ವಥಾ ಹಿಂದು ಸಮಾಜದ ಒಪ್ಪಂದವಾಗಲಾರದು. ಅಂಥ ಒಪ್ಪಂದಮಾಡಿಕೊಳ್ಳಲಿಕ್ಕೆ ಹಿಂದು ಮಹಾಸಭೆಗೆ ಮಾತ್ರವೇ ಅಧಿಕಾರವಿರುತ್ತದೆ. ಸರಕಾರವೂ ಹಿಂದು ಮಹಾ ಸಭಾ ಮುಸ್ಲಿಂಲೀಗ ಒಪ್ಪಂದವನ್ನೇ ನಿಜವಾದ ಹಿಂದು ಮುಸ್ಲಿಂ ಒಪ್ಪಂದವೆಂದು ಸ್ವೀಕರಿಸಿ ಆ ಪ್ರಕಾರ ರಾಜ್ಯಘಟನೆಯಲ್ಲಿ ಬದಲಾವಣೆಮಾಡತಕ್ಕದ್ದು."

---

## ಜಮಖಂಡಿ ಸಂಸ್ಥಾನ ಪ್ರಜಾ ಪರಿಷತ್ತು.

ಜಮಖಂಡಿ ಸಂಸ್ಥಾನದ ೬ ನೆಯ ಪ್ರಜಾ ಪರಿಷತ್ತಿನ ಅಧಿವೇಶನವು ಸಂಶಿಯಲ್ಲಿ ತಾ. ೩೦ ನೆಯ ದಿವಸ ಶ್ರೀ. ದೊಡ್ಡಮೇಟಿ ಅಂದಾನಪ್ಪನವರ ಅಧ್ಯಕ್ಷತೆಯಲ್ಲಿ ಜರುಗಿತು. ಅವರು ತಮ್ಮ ಭಾಷಣದಲ್ಲಿ ಸಂಯುಕ್ತ ರಾಜ್ಯಘಟನೆಯ ಭೇದ ನೀತಿಯನ್ನು ವಿವರಿಸಿ ಸಂಸ್ಥಾನಗಳಲ್ಲಿ ಜಾಗೃತಿಯಾಗಿ ಹೊಣೆಗಾರ ರಾಜ್ಯ ಪದ್ಧತಿಯನ್ನು ಪ್ರಾರಂಭಿಸುವುದು ಹೇಗೆ ಅವಶ್ಯವಿದೆಯೆಂಬುದನ್ನು ತೋರಿಸಿಕೊಟ್ಟರು. ಅನಂತರ ಅವರು "ಯಾವ ರಾಜ್ಯಘಟನೆಯಲ್ಲಿಯೇ ಆಗಲಿ ಪ್ರಜೆಗಳ ಮೂಲಭೂತ ಹಕ್ಕುಗಳೆಂದು ಕೆಲವು ಹಕ್ಕುಗಳಿರುತ್ತವೆ. ಭಾಷಣ, ಮುದ್ರಣ, ವ್ಯಕ್ತಿ ಮತ್ತು ಸಂಘ ಸ್ವಾತಂತ್ರ್ಯಗಳನ್ನು ಯಾವುದೇ ಸಂಸ್ಥಾನಿಕನಾದರೂ ಮನ್ನಿಸಲೇಬೇಕು. ಏಕೆಂದರೆ ಶರೀರ ಧಾರಣೆಗೆ ಅನ್ನ, ನೀರು, ಗಾಳಿ, ಬೆಳಕುಗಳ ಅವಶ್ಯಕತೆಯಿದ್ದಂತೆ ಒಂದು ರಾಷ್ಟ್ರ, ರಾಜ್ಯ, ಸಂಸ್ಥಾನ ಜೀವಂತವಿಡೆಯೆಂದು ತೋರಿಸಿಕೊಡಲು ಭಾಷಣ, ಮುದ್ರಣ, ವ್ಯಕ್ತಿ ಸ್ವಾತಂತ್ರ್ಯವಿರುವುದೇ ಅತ್ಯವಶ್ಯಕವಾಗಿದೆ. ಈ ಹಕ್ಕುಗಳಿಲ್ಲದ ಪ್ರಜೆಗಳೆಂದರೆ ಜೀವಂತ ಹೆಣಗಳಿದ್ದಂತೆ. ಇಂಥ ಹೆಣಗಳನ್ನು ಆಳುವ ಅರಸರಾದರೂ ಹಾಗೆಯೇ ಸರಿ." ಎಂದು ಹೇಳಿದರು.

---

## ಮೈಸೂರಲ್ಲಿ ವೃತ್ತ ಪತ್ರಿಕಾ ಶಾಸನ.

ಮೈಸೂರು ಸರಕಾರದವರು ವೃತ್ತ ಪತ್ರಿಕೆಗಳ ಸಂಬಂಧವಾಗಿ ಒಂದು ಹೊಸ ಶಾಸನವನ್ನು ಮಾಡುವವರಿದ್ದಾರೆ. ಅದರಲ್ಲಿಯ ಕೆಲವು ಮುಖ್ಯ ನಿಯಮಗಳು ಈ ಕೆಳಗಿನಂತಿವೆಯೆಂದು ಕಂಡು ಬಂದಿದೆ.

(೧) ಪತ್ರಿಕೆಯನ್ನು ಪ್ರಕಟಿಸುವ ಪೂರ್ವದಲ್ಲಿ ಸರಕಾರದ ಅನುಮತಿ ಪಡೆಯಬೇಕು.

(೨) ಪತ್ರಿಕೆಗೆ ಅನುಮತಿ ಕೊಡುವ ಕಾಲದಲ್ಲಿ ಮ್ಯಾಜಿಸ್ಟ್ರೇಟರು ಅಡವಿನ ಹಣ ಕೇಳಬಹುದು.

(೩) ಸರಕಾರಕ್ಕೆ ಆಕ್ಷೇಪಣೀಯ ವಿಷಯ ಪ್ರಕಟಿಸಿದ್ದು ಕಂಡುಬಂದರೆ ಸರಕಾರವು ಅಡವನ್ನು ಜಪ್ತ ಮಾಡಬಹುದು. ಅಡವನ್ನು ಇಡದೆ ಇರುವ ಮುದ್ರಣಾಲಯ ವಶಪಡಿಸಿಕೊಳ್ಳಬಹುದು.

(೪) ಹೊಸ ಡಿಕ್ಲರೇಶನ್ ಕಾಲದಲ್ಲಿ ಮ್ಯಾಜಿಸ್ಟ್ರೇಟರು ಹೆಚ್ಚು ಅಡವಿನ ಹಣವನ್ನು ಬೇಡಬಹುದು. ಪುನಃ ಅಡವಿನ ಹಣ ಜಪ್ತಾದರೆ ಮೂರನೆಯ ಸಲ ಡಿಕ್ಲರೇಶನ್ ಕೊಡುವದಿಲ್ಲ.

(೫) ಅಧಿಕಾರವಿಲ್ಲದೆ ಅಕ್ರಮವಾದ ವರ್ತಮಾನ ಪತ್ರಗಳನ್ನು ಮಾರಿದಲ್ಲಿ ಶಿಕ್ಷೆಯನ್ನು ವಿಧಿಸಲಾಗುವದು.

---

## ಕಾಂಗ್ರೆಸ್ ಅಧಿವೇಶನದ ಸಿದ್ಧತೆ.

ಮಹಾ ಕೋಸಲದಲ್ಲಿ ನಡೆಯಲಿರುವ ಮುಂದಿನ ಕಾಂಗ್ರೆಸ್ ಅಧಿವೇಶನದ ಸಿದ್ಧತೆಯು ರಭಸದಿಂದ ಸಾಗಿದೆ. ಪ್ರಾಂತಿಕ ಕಾಂಗ್ರೆಸ್ ಕಮೀಟಿಯ ಅಧ್ಯಕ್ಷರಾದ ಠಾಕೋರ ಛೇದಿಲಾಲ ಇವರು ಕಾಂಗ್ರೆಸ್ ಅಧಿವೇಶನದ ಕೆಲಸವನ್ನು ಸಾಗಿಸುವ ಬಗ್ಗೆ ಸ್ವಯಂ ಸೇವಕರ ದಳವನ್ನು ಸಿದ್ಧಗೊಳಿಸುತ್ತಿದ್ದಾರೆ.

ಸ್ವಯಂ ಸೇವಕರ ದಳದ ಅಧಿಕಾರಿಗಳನ್ನು ತಯಾರಿಸಲು ಬೆತುಲದಲ್ಲಿ ಸ್ವಯಂ ಸೇವಕರ ಸೇನೆಯ ಸಿದ್ಧತೆ ನಡೆದಿದೆ. ಈ ಶಿಕ್ಷಣ ಹೊಂದ ಬಯಸುವವರು ಜಾಗ್ರತೆ ಅರ್ಜಿ ಕಳುಹಿಸಿಕೊಡತಕ್ಕದ್ದೆಂದೂ ಪ್ರತಿಯೊಂದು ಜಿಲ್ಲೆಗೆ ತಿಳಿಸಲಾಗಿದೆ. ಪ್ರತಿಯೊಂದು ಜಿಲ್ಲೆಯಿಂದ ೫ ಜನರನ್ನು ತೆಗೆದುಕೊಳ್ಳಲಾಗುವುದು.

ಆದಷ್ಟು ಬೇಗನೆ ಸ್ವಾಗತ ಮಂಡಲಕ್ಕೆ ಸಾಕಷ್ಟು ಸದಸ್ಯರನ್ನು ಸೇರಿಸತಕ್ಕದ್ದೆಂದು ಗೊತ್ತಾಗಿದೆ. ಈ ಪ್ರಚಾರದ ಬಗ್ಗೆ ಪ್ರಾಂತದ ಮುಂದಾಳುಗಳಾದ ಶೇಟ ಗೋವಿಂದ ದಾಸ, ಶೇಟ ಸೇವಾದಾಸ, ಠಾಕೋರ ಛೇದಿಲಾಲ ಮೊದಲಾದವರು ಪ್ರಾಂತದಲ್ಲೆಲ್ಲ ಸಂಚರಿಸಿ ಒಟ್ಟು ೩೫೦೦ ಜನರನ್ನು ಸ್ವಾಗತ ಸಮಿತಿಯ ಸದಸ್ಯರನ್ನು ಮಾಡತಕ್ಕದ್ದೆಂದು ನಿರ್ಣಯವಾಗಿದೆ.

---

—ಮದ್ರಾಸ ಇಲಾಖೆಯಲ್ಲಿ ಗ್ರಾಮೋದ್ಧಾರ ಕಾರ್ಯ ಕೈಕೊಳ್ಳುವುದಕ್ಕಾಗಿ ಸರಕಾರವು ಮತ್ತೆ ೨ ಲಕ್ಷ ರೂ. ಗಳನ್ನು ತೆಗೆದಿಟ್ಟಿದೆ.

## ಪಂಚ, ಷಟ್ ಕಳಶಗಳ ಮೇಲಾಟ.

ವೀರಶೈವ ಬಂಧುಗಳೇ, ಈಗ ೧೦-೧೫ ವರುಷಗಳಿಂದೀಚೆಗೆ ನಮ್ಮ ಧರ್ಮವು ದ್ವಿದಳವಾಗಿ ನಮ್ಮ ನಮ್ಮೊಳಗೆ ಕೆಲ ಕೆಲವು ಬಡಿದಾಟಗಳೂ ಆಗುತ್ತ ಬಂದಿವೆಂಬುದು ಎಲ್ಲರಿಗೂ ಗೊತ್ತಿದ್ದ ಮಾತೇ ಆಗಿದೆ. ಈಗಿನ ಕಾಲದಲ್ಲಿ ದೇಶದಲ್ಲಿ ಒಕ್ಕಟ್ಟಿನ ಪ್ರಸಂಗವು ಮಹಾತ್ಮಾಜಿಯವರ ನೇತೃತ್ವದಲ್ಲಿ ಹೇಗೆ ಹೇಗೆ ಮುಂದೆ ಹೆಜ್ಜೆಯನ್ನು ಇಡುತ್ತ ನಡೆದಿದೆಯೆಂಬುದನ್ನು ಕಣ್ಣಾರೆ ಕಂಡೂ ಕಂಡು ನಮ್ಮ ಸಮಾಜವು ಈ ಪ್ರಕಾರ ನಡೆಯುತ್ತಿರುವುದನ್ನು ನೋಡಿ ಪರಧರ್ಮದವರಿಗೂ ಸಹ ದುಃಖವಾಗದೆ ಇರಲಾರದು. ಈ ಪರಿಸ್ಥಿತಿಯು ನಮ್ಮ ಸಮಾಜದಲ್ಲಿ ಇತ್ತೀಚೆಗೆ ಯಾವ ಯಾವ ಪ್ರಕಾರದಿಂದ ಉದಯವಾಗುತ್ತ ಬಂದಿದೆಂಬುದನ್ನು ಸ್ವಲ್ಪದರಲ್ಲಿ ಈ ಲೇಖಕನು ಶ್ರುತಪಡಿಸುವನು

ವಿವಾಹದ ವೇಳೆಯಲ್ಲಿ ಕೆಲವರು ಪಂಚಕಳಸ, ಕೆಲವರು ಷಟ್ ಕಳಸಗಳನ್ನು ಹೂಡಬೇಕೆಂದು ವಾದಿಸಿ ಆ ವೇಳೆಯಲ್ಲಿ ಕೂಡಿದ ಜನರೊಳಗೇ ಇತ್ತಂಡವಾಗಿ ಬಡಿದಾಡಿ ಶುಭವೇಳೆಯನ್ನು ಅಶುಭವನ್ನಾಗಿ ಮಾಡುವರು. ಆ ವೇಳೆಯಲ್ಲಿ ಬೇರೆ ಬೇರೆ ಊರ ಜನರು ಕೂಡಿರುವುದರಿಂದ ಅದರ ಪರಿಣಾಮವು ಹೆಚ್ಚು ಹೆಚ್ಚಾಗುತ್ತ ಹೋಗಿ ಫಲವು ಕೆಟ್ಟರೂಪದಲ್ಲಿ ಪರಿಣಮಿಸುವುದು. ಇದೇ ಪ್ರಕಾರ ಭಿನ್ನತ್ವವು ಅನೇಕ ರೂಪದಿಂದ ನಮ್ಮ ಸಮಾಜದಲ್ಲಿ ನಡೆಯುತ್ತಿರುವದೆಂಬುದು ಎಲ್ಲರಿಗೂ ಗೊತ್ತೇ ಇದೆ. ಅದರ ಬಗ್ಗೆ ಈಗ ವಿಚಾರ ಬೇಡ. ಸದ್ಯಕ್ಕೆ ಕಳಸಗಳ ವಿಚಾರವನ್ನಷ್ಟೇ ಮಾಡೋಣ.

ವಿವಾಹದ ಕಾಲದಲ್ಲಿ ಕಳಸಗಳನ್ನು ಹೂಡಿ ಅದಕ್ಕೆ ಸೂತ್ರವನ್ನು ಹಾಕಿ ಆ ಸೂತ್ರಕ್ಕೆ ನಾವು ಒಳಪಟ್ಟು ನಡೆಯುತ್ತೇವೆಂದು ವಧೂವರರ ಕಡೆಯಿಂದ ಅನ್ನಿಸುವರು. ಆ ಸೂತ್ರವು ಯಾವ ಸಿಂಹಾಸನಗಳ ಕಳಸಗಳಿಂದಲೂ ಬಂಧಿತವಾಗಿರದೆ ಸೃಷ್ಟಿಯ ನಿರ್ಮಾಣ ತತ್ವಗಳ ರೂಪವಾದ ಕಳಸಗಳಿಂದ ಬಂಧಿತವಾಗಿರುತ್ತದೆ. ಹೇಗೆಂದರೆ ಈ ಸೃಷ್ಟಿಯು ಪಂಚ ತತ್ವಗಳಿಂದ ಉತ್ಪನ್ನವಾಗಿದೆಯೆಂಬುದು ಪ್ರತಿಯೊಬ್ಬರಿಗೂ ತಿಳಿದ ಮಾತೇ ಅದೆ. ಕಾರಣ ಈ ಪಂಚ ತತ್ವಗಳ ರೂಪವಾದ ಪಂಚ ಕಳಸಗಳನ್ನು ಮತ್ತು ಈ ಪಂಚ ತತ್ವಗಳನ್ನು (ಸೃಷ್ಟಿಯನ್ನು) ಉತ್ಪನ್ನ ಮಾಡಿದ ಆ ಪರಮಾತ್ಮನ ರೂಪವಾದ ಒಂದು ಕಳಸವನ್ನು ಮಧ್ಯದಲ್ಲಿ ಸ್ಥಾಪಿಸಿ ಅದಕ್ಕೆ ಸೂತ್ರವನ್ನು ಹಾಕಿ ಈ ಸೂತ್ರದಂತೆ ಅಂದರೆ ಯಾವ ಪರಮಾತ್ಮನು ಈ ಸೃಷ್ಟಿಯನ್ನು ನಿರ್ಮಾಣಮಾಡಿದನೋ ಆ ಪರಮಾತ್ಮನ ಸೂತ್ರದಂತೆ (ನಿಯಮದಂತೆ) ನಡೆಯುತ್ತೇನೆಂದು ವಧೂವರರ ಕಡೆಯಿಂದ ಅನ್ನಿಸಿ ಅದನ್ನು ಬೋಧಿಸಿ ನಡೆಯಲಿಕ್ಕೆ ಹಚ್ಚಬೇಕು. ಹೀಗಲ್ಲದೆ ಪಂಚ ಕಳಸಗಳನ್ನಷ್ಟೇ ಹೂಡಿ ಅದರ ಸೂತ್ರದಂತೆ ನಡೆಯುತ್ತೇವೆ ಅಂತ ಅನ್ನಿಸಿದರೆ ಸೃಷ್ಟಿಯ ಮೇಲೆ ಉತ್ಪನ್ನವಾದ ಪಶು, ಪಕ್ಷಿ, ಗಿಡ, ಮರಗಳಂತೆಯೇ ಜ್ಞಾನವಿಲ್ಲದೆ ಪರಮಾತ್ಮನನ್ನು ಮರೆತು ಅನೇಕ ಜನ್ಮಗಳನ್ನು ತಾಳುತ್ತ ಇಲ್ಲಿಯೇ ಸುತ್ತಿ ಸುಳಿಯುತ್ತ ಇರುತ್ತೇವೆಂಬರ್ಥವನ್ನು ಅವರಿಗೆ ಬೋಧಿಸಿದಂತೆ ಆಗುತ್ತದೆ. ಕಾರಣ ಯಾವ ಪಂಚ ತತ್ವಗಳು (ಸೃಷ್ಟಿಯು) ಎಲ್ಲಿಂದ ಉದಯಿಸಿ ಎಲ್ಲಿ ಅಡಗುವವೋ ಹಾಗೆಯೇ ನಾವೂ ಯಾವ ಪರಮಾತ್ಮನಿಂದ ಉದಯಿಸಿದೆವೋ ಅಲ್ಲಿಯೇ ಐಕ್ಯವಾಗುವೆವು. ಅಂದರೆ ಮೋಕ್ಷವನ್ನು ಪಡೆಯುವೆವು. ಎಂಬುದಾಗಿ ಅವರಿಂದ ಅನ್ನಿಸಿ ಅದರಂತೆ ನಡೆಯಲಿಕ್ಕೆ ಹಚ್ಚಬೇಕಾಗುವುದು. ಅದೇ ನಮ್ಮ ಧರ್ಮದ ಮೂಲ ಗುಟ್ಟು.

ಕಾರಣ ಧರ್ಮಾಧಿಕಾರಿಗಳು ಇದನ್ನು ದಯವಿಟ್ಟು ವಿಚಾರಿಸಿ ಭಕ್ತಮಹೇಶ್ವರರ ಮನಸ್ಸಿನಲ್ಲಿದ್ದ ಈ ಬಗೆಯ ಕುಂದುಕೊರತೆಗಳನ್ನು ಸಮೂಲ ನಾಶಪಡಿಸಿ ವೀರಶೈವ ಮತವು ವೃದ್ಧಿ ಹೊಂದಲಿಕ್ಕೆ ಯಾವುದಾದರೊಂದು ತಳಹದಿಯನ್ನು ಗಟ್ಟಿಮಾಡಿ ನಮ್ಮ ಸಮಾಜವನ್ನು ಊರ್ಜಿತ ಸ್ಥಿತಿಗೆ ತರಬೇಕಾಗಿ ಈ ಲೇಖಕನ ವಿನಯಪೂರ್ವಕ ಪ್ರಾರ್ಥನೆ.

ವೀರಭದ್ರಪ್ಪ ಹೆಗಡಾಳ
ಸೆಕ್ರೆಟರಿ
ಶಿವಾನುಭವ ಸಂಘ ಹಿರೇಕೆರೂರು.

---

## ಶಿವಮೊಗ್ಗಾ ಡಿ. ಬೋ. ವೈಸ್ ಪ್ರೆಸಿಡೆಂಟರಾದ ಜಿ. ಸಿ ಮಹಾಲಿಂಗಪ್ಪನವರ ಮೇಲೆ ಮಾನನಷ್ಟದ ವ್ಯಾಜ್ಯ.

ಶ್ರೀ ಬಾಳೆಹೊನ್ನೂರು ಸ್ವಾಮಿಗಳು ಶಿವಮೊಗ್ಗಾಕ್ಕೆ ತಾರೀಖು ೨೧-೫-೩೬ ರಲ್ಲಿ ಉತ್ಸವದಿಂದ ದಯಮಾಡಿಸಿದ್ದು ಸರಿಯಷ್ಟೆ. ಸದರಿ ಶ್ರೀಗಳವರನ್ನು ತಾ. ೨೧-೯-೩೬ ರಲ್ಲಿ ಟೌನ್ನಿನ ಕೆಲವು ವೀರಶೈವರು ಶ್ರೀ ಬಸವೇಶ್ವರ ದೇವಸ್ಥಾನಕ್ಕೆ ಕರೆದುಕೊಂಡು ಬರುವದರ ಫಲವಾಗಿ ಸದರಿ ಸ್ವಾಮಿಗಳ ಸ್ವಾಗತ ಸಮಿತಿಯ ಪ್ರೆಸಿಡೆಂಟರಾಗಿದ್ದ ಮ. ರಾ. ಜಿ. ಸಿ. ಮಹಲಿಂಗಪ್ಪನವರು ಸದರಿ ಟೌನ್ನಿನ ಕೆಲವು ಪ್ರಮುಖರಾದ ಮ. ರಾ. ಎಲ್ ಕರಬಸಪ್ಪ ವಗೈರೆ ಹತ್ತು ಜನಗಳ ಮೇಲೆ ಸಹಕರಿಸದೆ ಇದ್ದದ್ದಕ್ಕಾಗಿ ಶಿವಮೊಗ್ಗಾ ಜಿಲ್ಲಾಧಿಕಾರಿಗಳಲ್ಲಿ ಅರ್ಜಿ ಕೊಟ್ಟಿದ್ದರು.

ಸದರಿ ಅರ್ಜಿಯಲ್ಲಿ ಮ. ರಾ. ಜಿ. ಸಿ. ಮಹಲಿಂಗಪ್ಪನವರು ಮೇಲ್ಕಂಡ ಹತ್ತು ಜನಗಳಿಗೆ ಅವಮಾನಕರವಾದ ರೀತಿಯಿಂದ ಅರ್ಜಿಕೊಟ್ಟಿರುತ್ತಾರೆಂಬ ಕಾರಣದಿಂದ ಹತ್ತು ಜನರಲ್ಲೊಬ್ಬರಾದ ಮ. ರಾ. ಸಿ. ಬಸವಪ್ಪ ಎಂಬುವವರು ಶಿವಮೊಗ್ಗಾ ಒಂದನೆ ತರಗತಿ ಮ್ಯಾಜಿಸ್ಟ್ರೇಟರವರ ಕೋರ್ಟಿನಲ್ಲಿ ಅರ್ಜಿ ಕೊಟ್ಟಿರುತ್ತಾರೆ.

ಈ ಕೆಳಗಿನ ಮುಖ್ಯ ಸಾಕ್ಷಿಗಳಾದ ಈಗ ಬೆಂಗಳೂರು ಮುನಸಿಪಲ್ ಕಮಿಶನ್‌ರಾದ ಶ್ರೀಮಾನ್ ಎಸ್. ನಾರಾಯಣರಾವ ಎಂ. ಎ. ಆನರ್ಸ (ಆಗ ಡೆಪ್ಟಿ ಕಮಿಶನ್ನರಾಗಿದ್ದ) ಇವರ ವಿಚಾರಣೆ ತಾ. ೨೫-೫-೩೭ ರಲ್ಲಿ ನಡೆದು ಬಾಕಿ ಸಾಕ್ಷಿಗಳಾದ ಸಬ್ ಡಿವಿಜನ್ ಆಫಿಸರರು ತಾಲೂಕು ಇನ್‌ಸ್ಪೆಕ್ಟರವರು ಇವರೇ ಮೊದಲಾದವರ ವಿಚಾರಣೆಯ ಬಗ್ಗೆ ತಾರೀಖು ೧೦-೬-೩೭ ಕ್ಕೆ ಮುಂದರಿಸಲಾಗಿದೆ.

ರಾಜಕೀಯ ಬಾತ್ಮಿದಾರ
ಬೆಂಗಳೂರು.

---

—ಝುಕೊಸ್ಲೊವಾಕಿಯಾದಲ್ಲಿ ನಡೆದ ಚುನಾವಣೆಗಳಲ್ಲಿ ಝುಕ್ ಯುನಾಯಿಟೆಡ್ ಪಕ್ಷದವರಿಗೆ ಪ್ರಚಂಡ ವಿಜಯ ಸಿಕ್ಕಿರುವದು. ಜರ್ಮನ್ ಸೋಸಿಯಲ್ ಡೆಮೊಕ್ರಾಟಿಕ್ ಪಕ್ಷದವರು ಪರಾಜಯ ಹೊಂದಿದರು. ಜರ್ಮನ್ ಪ್ರಜೆಗಳಲ್ಲಿ ನೂರಕ್ಕೆ ೮೦ ಜನರು ಹೆನಲಿಯನ ಪಕ್ಷದವರಿಗೆ ಮತಕೊಟ್ಟರು.

## ಲಕ್ಷ್ಮೇಶ್ವರದಲ್ಲಿ ಶಿರಹಟ್ಟಿಯ ಶ್ರೀ ಫಕೀರಸ್ವಾಮಿಗಳ ವಿಜೃಂಭಣೆಯ ಸವಾದ್ಯ ಮೆರವಣಿಗೆ.

**ಮುಹಮ್ಮದೀಯ ಬಂಧುಗಳ ಅನುಚಿತ ವರ್ತನೆ!**

**ಮಿರಜ ಸರಕಾರದ ಕರ್ತವ್ಯ ತತ್ಪರತೆ.**

ಕರ್ನಾಟಕದಲ್ಲಿ ಸುಪ್ರಸಿದ್ಧ ವೀರಶೈವ ಧರ್ಮ ಸಂಸ್ಥಾನವಾದ ಶ್ರೀ ಫಕೀರೇಶ್ವರ ಸ್ವಾಮಿಗಳವರ ಜಾತ್ರೆಯು ವೈಶಾಖ ಮಾಸದಲ್ಲಿ ಪ್ರತಿ ವರುಷ ವಿಜೃಂಭಣೆಯಿಂದ ನೆರವೇರುವದು ಸರ್ವ ಶ್ರುತವಿದೆ. ಈ ಮಠಕ್ಕೆ ಮುಹಮ್ಮದೀಯ ಬಾದಶಹರ ಕಾಲದಿಂದ ಇಂದಿನ ವರೆಗೂ ಹಿಂದೂ ಮುಹಮ್ಮದೀಯ ಸರಕಾರಗಳು ಉಚಿತವಾದ ಮನ್ನಣೆಯನ್ನು ಸಲ್ಲಿಸುತ್ತ ಬಂದಿರುವರೆಂಬುದು ಪರಂಪರೆಯ ಮೇಲಿಂದಲೂ ಭಕ್ತರ ಭಕ್ತಿವಿಶ್ವಾಸಗಳ ಮೇಲಿಂದಲೂ ಇತಿಹಾಸಪ್ರಸಿದ್ಧವಾಗಿದೆ. ಜಾತ್ರೆಯ ಪೂರ್ವದಲ್ಲಿ ಶ್ರೀ ಸ್ವಾಮಿಗಳು ಒಂದು ದಿವಸ ಲಕ್ಷ್ಮೇಶ್ವರಕ್ಕೆ ಹೋಗಿ ಅಲ್ಲಿನ ಮಿರಜ ಸರಕಾರದಿಂದ ಸಲ್ಲುತ್ತಿರುವ ಮರ್ಯಾದೆಯ ಕಾಲಕ್ಕೆ ಆ ಊರ ಸಾರ್ವಜನಿಕ ಮುಖ್ಯ ಪೇಟೆಯ ರಸ್ತೆಯೊಳಗಿನ ಜುಮ್ಮಾ ಮಸೀದಿಯ ಮುಂದಿನಿಂದ ಹಾಯ್ದು ರಾಜಪ್ರಜೆಗಳ ಭಕ್ತಿಯ ಸಾಕ್ಷಿಯೊಡನೆ ವಾದ್ಯವೈಭವದಿಂದ ಕೂಡಿ ಕಛೇರಿಗೆ ಹೋಗಿ ವರ್ಷಾಶನ ಸ್ವೀಕರಿಸುವರು. ಆ ಮುಂದೆ ಪುನಃ ಅದೇ ರಸ್ತೆಯ ಮೇಲಿಂದ ತಮ್ಮ ಮಠಕ್ಕೆ ಬಂದು ಅಲ್ಲಿನ ಭಕ್ತ ಜನಗಳಿಗೆ ಆಶೀರ್ವಾದ ಕೊಟ್ಟು ಶಿರಹಟ್ಟಿಯ ಕಡೆಗೆ ಬರುವುದುಂಟು.

ಮೇಲಿನ ವೈಭವಯುಕ್ತ ಸವಾದ್ಯ ಮೆರವಣಿಗೆಯು ಹಿಂದೆ ಯಾವ ಕಾಲಕ್ಕೂ ಯಾವ ಧರ್ಮದವರಿಂದಲೂ ಸರಕಾರದಿಂದಲೂ ಅಡ್ಡಿಮಾಡಲ್ಪಟ್ಟಿಲ್ಲವೆಂಬುದು ವಹಿವಾಟಿಯ ರೂಢಿಯ ಮಾತಾಗಿದೆ. ಈ ವರ್ಷ ಮಾತ್ರ ಲಕ್ಷ್ಮೇಶ್ವರದ ಮಹಮ್ಮದೀಯ ಸಮಾಜದವರು ನಿಷ್ಕಾರಣವಾಗಿ ಬೇಕಾಯಿದೇಶೀರ ರೀತಿಯಿಂದ ಶ್ರೀ ಸ್ವಾಮಿಗಳವರ ಮೆರವಣಿಗೆಯನ್ನು ತಡೆಯುವ ಬೆದರಿಕೆಯನ್ನು ತೋರಿಸಿದರು. ಈ ಸಂಗತಿಯು ಅವಿವೇಕದ್ದೂ ವಿಷಾದಕರವಾದುದೂ ಎಂದು ಬೇರೆ ಹೇಳುವ ಕಾರಣವಿಲ್ಲ. ಮತ್ತು ಶ್ರೀ ಸ್ವಾಮಿಗಳು ಮೆರವಣಿಗೆಯ ಕಾಲಕ್ಕೆ ತಮ್ಮ ಮಸೀದಿಯ ಮುಂದೆ ವಾದ್ಯ ಬಾರಿಸಕೂಡದೆಂದು ತಕರಾರಿ ಅರ್ಜಿಯೊಂದನ್ನು ಮೆ. ರಾ. ಸಾ. ಮ್ಯಾಜಿಸ್ಟ್ರೇಟ ಸಾಹೇಬ ಲಕ್ಷ್ಮೇಶ್ವರ ಅವರ ಕಡೆಗೆ ಕೊಟ್ಟರು. ಮಿರಜ ಸರಕಾರಕ್ಕೂ ಈ ಅರ್ಜಿಯ ದಾದು ಮುಟ್ಟಿತು. ಕೊನೆಗೆ ಮಿರಜ ಸರಕಾರದವರು ಶ್ರೀ ಫಕೀರಸ್ವಾಮಿಗಳವರ ಪರಂಪರಾಗತ ಸವಾದ್ಯ ಮೆರವಣಿಗೆಯ ಹಕ್ಕನ್ನು ಮನ್ನಿಸಿ ಮೆರವಣಿಗೆಯು ಶಾಂತವಾಗಿಯೂ ಅನಿರ್ಬಂಧವಾಗಿಯೂ ಕೊನೆಗಾಣುವಂತೆ ಯೋಗ್ಯ ಪೋಲಿಸ ಬಂದೋಬಸ್ತಿನ ವ್ಯವಸ್ಥೆಮಾಡಿದ್ದರು. ಲಕ್ಷ್ಮೇಶ್ವರದ ಮ್ಯಾಜಿಸ್ಟ್ರೇಟ ಸಾಹೇಬರೂ ಪೋಲೀಸ ಅಧಿಕಾರಿಗಳೂ ಮೆರವಣಿಗೆಯ ಕಾಲಕ್ಕೆ ಸ್ವತಃ ಹಾಜರ ಇದ್ದು ಶಾಂತತಾ ರಕ್ಷಣೆಯ ಕಾರ್ಯದಲ್ಲಿ ಒಳ್ಳೇ ದಕ್ಷತೆ ವಹಿಸಿದ್ದರು.

ತಾ. ೧೩-೫-೩೪ ನೆಯ ದಿವಸ ಶುಕ್ರವಾರ ಬೆಳಿಗ್ಗೆ ಸುಮಾರು ೯ ಘಂಟೆಗೆ ಶ್ರೀಸ್ವಾಮಿಗಳವರ ಸವಾದ್ಯ ಮೆರವಣಿಗೆಯು ಅವರ ಲಕ್ಷ್ಮೇಶ್ವರದಲ್ಲಿನ ಮಠದಿಂದ ಹೊರಟು ಧಾನ್ಯ ಮಾರ್ಕೆಟಿನ ಮುಂದಿನ ಮುಖ್ಯ ರಸ್ತೆಯೊಳಗಿನ ಜುಮ್ಮಾ ಮಸೀದೆಯ ಮುಂದೆ ಹಾಯ್ದು ಸಡಗರದಿಂದ ಅನಿರ್ಬಂಧವಾದ ಡಂಕೆ, ನಗಾರಿ, ಕರ್ಣಿ, ಕಾಳಿ, ಮಜಲು. ಮೊದಲಾದ ಒಳ್ಳೇ ವಿಜೃಂಭಣೆಯಿಂದ ನೆರವೇರಿತು. ಆ ಕಾಲಕ್ಕೆ ಮೆರವಣಿಗೆಯಲ್ಲಿ ಎಲ್ಲ ಪಂಥದ ಧರ್ಮದ ಸುಮಾರು ನಾಲ್ಕೈದು ಸಾವಿರ ಜನಗಳ ಪ್ರಚಂಡ ಸಮುದಾಯವು ಕೂಡಿತ್ತು. ಲಕ್ಷ್ಮೇಶ್ವರದ ಭಕ್ತ ಜನಗಳು ಮತ್ತು ಅಲ್ಲಿನ ಮಿರಜ ದರಬಾರದವರು ಶ್ರೀಸ್ವಾಮಿಗಳವರ ವಿಷಯಕ್ಕೆ ತೋರಿಸಿದ ಭಕ್ತಿ ವಿಶ್ವಾಸ ಸಹಕಾರ ಸಹಾನುಭೂತಿಗಳಿಗಾಗಿ ಶ್ರೀಗಳವರಿಗೆ ಅತ್ಯಾನಂದವಾಗಿದೆ.

ಫಕೀರಪ್ಪ ಶಿವಜೋಗೆಪ್ಪ ಘೋರಶೆಟ್ಟಿ
ಒಟ್ಟ ಮುಖ್ತ್ಯಾರ
ಶ್ರೀ ಫಕೀರಸ್ವಾಮಿಮಠ ಶಿರಹಟ್ಟಿ.

## ಶ್ರೀ. ಜಗದ್ಗುರು ಗಂಗಾಧರ ಸಂಸ್ಕೃತ ಕಾಲೇಜದಲ್ಲಿ ಉಜ್ವಲ ರಾಷ್ಟ್ರೀಯ ಉಪನ್ಯಾಸ.

### ಅಭ್ಯಾಸಕೂಟದವರಿಗೆ ಪದಕದ ಆಶೀರ್ವಾದ.

ಶ್ರೀ ಜಗದ್ಗುರು ಗಂಗಾಧರ ಸಂಸ್ಕೃತ ಕಾಲೇಜದಲ್ಲಿ ತಾ. ೨೬-೫-೩೮ ನೆಯ ದಿವಸ ವಿದ್ಯಾರ್ಥಿಗಳು ಶೂರತನದ ನಾಟಕವನ್ನು ಚೆನ್ನಾಗಿ ಅಭಿನಯಿಸಿದರು. ವೀರರಿಗೆ ಉಚಿತವಾದ ಮಾತುಗಳೂ ಖಡ್ಗ ತಿರುಗಿಸುವ ಕೈಚಳಕ, ಸ್ವರಾಜ್ಯ ಸ್ಥಾಪನೆಯ ಹಂಬಲ, ಜನಸಾಮಾನ್ಯರ ದೇಶಭಕ್ತಿ, ಇವು ಪ್ರೇಕ್ಷಣೀಯವಾಗಿದ್ದವು. ಓಲಿ ಮಠದ ವಿಶಾಲವಾದ ಪಟಾಂಗಣದಲ್ಲಿ ಸಾಧಾರಣ ೩೦೦-೪೦೦ ಜನರು ಸೇರಿದ್ದರು. ಇಂಗ್ಲಿಷ ವಿದ್ಯಾರ್ಥಿಗಳು ತಾವು ಹೆಚ್ಚಿನವರೆಂಬ ದುರಭಿಮಾನವನ್ನು ಬದಿಗಿಟ್ಟು ಪ್ರೌಢ ಕನ್ನಡ ವಿದ್ಯಾರ್ಥಿಗಳೊಡನೆ ಸಹೋದರ ಭಾವನೆಯಿಂದ ಕನ್ನಡ ತಾಯಿಯ ಸೇವೆ ಮಾಡಿದುದನ್ನು ನೋಡಿದರೆ ಅದಾವ ಕನ್ನಡಿಗನಿಗೆ ಸಂತೋಷವೆನಿಸಲಿಕ್ಕಿಲ್ಲ? ಮಹಾತ್ಮರ, ವೀರರ, ಸ್ವರಾಜ್ಯ ಚಳವಳಿಗೆ ಜನಸಾಮಾನ್ಯರ ಸಕ್ರಿಯ ಸಹಾನುಭೂತಿಯ ಬೆಂಬಲಗಳಿಂದಲೇ ಜಯಪ್ರಾಪ್ತಿಯೆಂಬುದು ಸಭಿಕರಿಗೆ ಸ್ಪಷ್ಟವಾಯಿತು. ನಾಟಕದ ಕೊನೆಗೆ ಅಭ್ಯಾಸಕೂಟದ ಅಧ್ಯಕ್ಷರಾದ ಶ್ರೀ. ಅನ್ನದಾನೀಶ ವಿರಕ್ತಮಠರು ರಾಷ್ಟ್ರೀಯತೆಯ ಬಗ್ಗೆ ಉಜ್ವಲ ಭಾಷಣ ಮಾಡಿದರು.

### ಭಾಷಣದ ಸಾರಾಂಶ.

"ದೇಶದ ಗುಲಾಮಗಿರಿಯನ್ನು ಕಂಡು ಕಣ್ಣೀರು ಸುರಿಸಿ ಗುಲಾಮಗಿರಿಯನ್ನು ನಾಶಮಾಡಿ ಸ್ವರಾಜ್ಯ ಗಳಿಸುವ ಇಚ್ಛೆಯನ್ನು ತಾಳುವದೇ ದುಃಖಿತರ ದುಃಖವನ್ನು ಕಳೆಯುವ ಮನಸ್ಸಿನ ತಯಾರಿಯೇ ರಾಷ್ಟ್ರೀಯ ಮೊದಲನೇ ಅಂತಸ್ತು. ಒಂದು ಉಪಾಯವನ್ನು ಹುಡುಕಿ ಧ್ಯೇಯದ ಕಡೆಗೆ ಸಾಗುವದೇ ಎರಡನೇ ಅಂತಸ್ತು. ದೇಶ, ಧರ್ಮ, ಸಂಸ್ಕೃತಿಗಳ ರಕ್ಷಣೆಗಾಗಿ, ಸ್ವರಾಜ್ಯ ಸಾಧನೆಗಾಗಿ ಭಾರತಮಾತೆಯ ಅಡಿದಾವರೆಗಳಲ್ಲಿ ಪ್ರಾಣವನ್ನು ಅರ್ಪಿಸುವ ಧೈರ್ಯ ಸ್ಥೈರ್ಯಗಳನ್ನು ತಾಳುವದೇ ಮೂರನೇ ಅಂತಸ್ತು."

ಹಿಂದೂ ಧರ್ಮದ ಧ್ವಜವನ್ನು ವಿಖ್ಯಾತ ದೇಶಗಳಲ್ಲಿ ಊರಿಬಂದ ಸ್ವಾಮಿ ವಿವೇಕಾನಂದರ ವೀರವಾಣಿಯಿದು. ಅವರ ವೀರವಾಣಿಯಂತೆ ಇಂದು ಕಾಂಗ್ರೆಸ್ಸು ಉಜ್ವಲ ರಾಷ್ಟ್ರಕಾರ್ಯ ಸಾಗಿಸಿದೆ. ಅದಕ್ಕೆ ಮೆಂಬರರಾಗುವದು ಪ್ರತಿಯೊಬ್ಬರ ಕರ್ತವ್ಯ. ಕಾಂಗ್ರೆಸ್ಸಿನ ರಾಜಕಾರಣದಿಂದ ಸ್ವರಾಜ್ಯ ಗಳಿಸುವದು ಶಕ್ಯವಿದೆ. ರಾಷ್ಟ್ರೀಯತೆಯಿಂದ ಜಾತಿಭೇದವಿಲ್ಲದೆ ಶಿಸ್ತು, ಸಂಘಟನೆಗಳಿಂದ ಹೊರಡುವದನ್ನೇ ಅರುಣೋದಯ ನಾಟಕವು ತಿಳಿಸುತ್ತದೆ. ಸ್ವರಾಜ್ಯ ಸಿಕ್ಕನಂತರ ಆ ವಿಜಯನಗರದ ವೀರರಂತೆ ನಮಗೂ ಶಸ್ತ್ರಾಸ್ತ್ರಗಳನ್ನು ಧರಿಸುವದು ಸಜ್ಜಾದ ಸೈನ್ಯದ ಅಗತ್ಯವೂ ಬೀಳುವದು. ಮಹಾತ್ಮಾಜಿಯವರೂ ಇಂಗ್ಲಂಡದಲ್ಲಿ ಈ ಮಾತನ್ನು ಸ್ಪಷ್ಟವಾಗಿ ಹೇಳಿದ್ದಾರೆ. ಸ್ವರಾಜ್ಯ ಸಂಗ್ರಾಮದಲ್ಲಿ ವೀರರೂ ಬೇಕು. ಮಹಾತ್ಮರು ಬೇಕು. ಸ್ತ್ರೀಯರೂ ಬೇಕು. ತರುಣರೂ ಬೇಕು. ಸಾಮಾನ್ಯ ಜನರು ಮುಖ್ಯವಾಗಿ ಬೇಕು. ಬುದ್ಧಿಶಕ್ತಿ, ಕ್ರಿಯಾಶಕ್ತಿ, ಪಾವಿತ್ರ್ಯ ಶಕ್ತಿ ಬೇಕು. ಸತ್ಯ, ಪ್ರೇಮ, ಸ್ವಾರ್ಥತ್ಯಾಗ, ಸೇವಾಭಾವನೆ, ಧೈರ್ಯ, ಕಷ್ಟ ಸಹಿಷ್ಣುತೆ ಬೇಕು." ಇದನ್ನೇ ಅರುಣೋದಯವು ಹೇಳುತ್ತದೆ. ಇಂದಿನ ಬಿಕ್ಕಟ್ಟಿನ ಸಮಯದಲ್ಲಿ ಕರ್ನಾಟಕ ಏಕೀಕರಣವಾಗಲಿಕ್ಕೂ, ಭಾರತದ ಸ್ವಾತಂತ್ರ್ಯ ಪ್ರಾಪ್ತಿಗೂ, ಉಜ್ವಲ, ವಿಶಾಲ ರಾಷ್ಟ್ರೀಯ ಭಾವನೆಯೇ ಬೇಕು. ಮಾಧುರ್ಯ, ಪ್ರಕಾಶಗಳುಳ್ಳಂಥ ಸಂಸ್ಕೃತ ಭಾಷೆಯಲ್ಲಿ ಆದರ್ಶ ರಾಷ್ಟ್ರವೀರರ ಕಾವ್ಯಗಳನ್ನು ಬರೆದು ಉದ್ದಾಮ ಕವಿಗಳಾಗಿ ಹೋಗಿದ್ದಾರೆ. ಅಂಥ ಮಹತ್ವದ ಸಂಸ್ಕೃತ ಭಾಷೆಯನ್ನು ಸಕಲರಿಗೂ ಜಾತಿಭೇದವಿಲ್ಲದೆ ಕಲಿಸುತ್ತಿರುವ ಸ್ವತಂತ್ರ, ಸುಧಾರಕ, ವಿಚಾರಶಕ್ತಿಯುಳ್ಳ, ಜಗದ್ಗುರುಗಳಿಂದ ಸಾಗಿದ ಈ ಕಾಲೇಜದಲ್ಲಿ ರಾಷ್ಟ್ರೀಯತೆಯ ಕೊರತೆಯಾಗಬಹುದೆ? ಭಾಷಣ ಆದ ನಂತರ ಜಗದ್ಗುರುಗಳ ಅಪ್ಪಣೆಯಾದಪ್ರಕಾರ ಶ್ರೀ. ತಿಲಸಂಗ ಹಿರೇಮಠದ ಸ್ವಾಮಿಗಳು ಧಾಲಿನ ಚಿನ್ನವುಳ್ಳ ಪದಕವನ್ನು ಅಭ್ಯಾಸಕೂಟಕ್ಕೆ ಆಶೀರ್ವದಿಸಿದರು. ಆ ಕಾಲಕ್ಕೆ ವೀರರಸಪ್ರಧಾನವಾದ ವಾಣಿಯಿಂದ ಅಭ್ಯಾಸ ಕೂಟದವರು ಕರ್ನಾಟಕದಲ್ಲಿ ಸಂಚರಿಸಿ ತಮ್ಮ ಎಲ್ಲ ಚಟುವಟಿಕೆಗಳನ್ನು ಹರಡಬೇಕೆಂದು ಮುಂತಾಗಿ ಸ್ವಾರಸ್ಯವಾದ ಉಪನ್ಯಾಸ ಮಾಡಿದರು. ಪ್ರಿಯ ಇರ್ಕಲ್ (ಅಭ್ಯಾಸ ಕೂಟದ ಜನರಲ್ ಸೆಕ್ರೆಟರಿ) ಈತನು ಅದನ್ನು ಸ್ವೀಕರಿಸಿ ಆಭಾರ ಮನ್ನಿಸಿದನು. ನಂತರ ವಂದೇಮಾತರಂ ಗೀತೆಯಾಗಿ ಸಭೆಯು ಮುಕ್ತಾಯವಾಯಿತು. ಓರ್ವ ಪ್ರೇಕ್ಷಕ.

## ಜಯಪುರ ಮಹಾರಾಜರ ವೈಭವ!

ಹಿಂದುಸ್ಥಾನದ ಸಂಸ್ಥಾನಿಕರ ವೈಭವ, ಔದಾರ್ಯ ಕಲ್ಪನೆಗಳ ಸಂಬಂಧವಾಗಿ ಇಂಗ್ಲೆಂಡಿನಲ್ಲಿ ಎಷ್ಟೋ ಮನೋರಂಜಕ ಸಂಗತಿಗಳು ಪ್ರಕಟವಾಗುತ್ತಿರುತ್ತವೆ. ಜಯಪುರ ಮಹಾರಾಜರ ಸಂಬಂಧವಾಗಿ "ಎವ್ಹರಿ ಬಡೀಜ್ ವೀಕಲಿ" ಎಂಬ ಪತ್ರಿಕೆಯಲ್ಲಿ ಈ ಕೆಳಗಿನಂತೆ ಪ್ರಕಟವಾಗಿದೆ.—

"ಈಗಿನ ಜಯಪುರದ ಮಹಾರಾಜರು ಸ್ವಂತ ಒಂದು ವಿಮಾನವನ್ನು ಇಟ್ಟುಕೊಂಡಿದ್ದಾರೆ. ಅದರಲ್ಲಿ ಕುಳಿತು ಅವರು ಬೇಕಾದಾಗ ಬೇಕಾದ ಸ್ಥಳಕ್ಕೆ ಹೋಗುತ್ತಾರೆ.

ಈಗಿನ ಮಹಾರಾಜರು ೨೬ ವರುಷದವರಿದ್ದಾರೆ. ಇವರು ಬಹು ಪ್ರಗತಿಪರ ವಿಚಾರದವರು. ಚಕ್ರವರ್ತಿಗಳಲ್ಲಿ ಪೃಥ ನಿಷ್ಠೆಯುಳ್ಳವರು. ಪೋಲೋ ಆಟದಲ್ಲಿ ಬಹು ಪ್ರೇಮವುಳ್ಳವರು. ಈ ಆಟಕ್ಕಾಗಿ ಲಕ್ಷಾಂತರ ರೂ. ಗಳನ್ನು ಇವರು ವೆಚ್ಚಮಾಡುತ್ತಿದ್ದಾರೆ. ಅಮೇರಿಕೆಯ ಕೋಟ್ಯಾಧಿಪತಿಗಳು ಕೂಡಾ ಇವರ ಮುಂದೆ ನಿಸ್ತೇಜರು.

೧೦-೧೫ ಸಾವಿರ ರೂ. ಗಳ ಕ್ರಯದ ೨೦-೨೫ ಕುದುರೆಗಳು ಇವರ ಹತ್ತಿರ ಇರುತ್ತವೆ. ಇವುಗಳ ಜೋಪಾನಕ್ಕೆ ಆಗುವ ವೆಚ್ಚವು ಅವರಿಗೆ ಕಡ್ಡಿಗಿಂತ ಕಡೆ! ಇವರ ಸ್ವಂತ ಆಸ್ತಿಯು ಹತ್ತು ಕೋಟ ಪೌಂಡುಗಳಿಗಿಂತಲೂ ಅಧಿಕವಾಗಿದೆ!

ಜಯಪುರದ ಮಹಾರಾಜರು ಪೋಲೋ ಆಟವನ್ನು ಆಡಲು ಇಂಗ್ಲೆಂಡಿಗೆ ಬರುವಾಗ ತಮ್ಮ ಪರಿವಾರಕ್ಕೋಸ್ಕರ ಒಂದು ಹಡಗವನ್ನೇ ಬಾಡಿಗೆಗಾಗಿ ತೆಗೆದುಕೊಳ್ಳುತ್ತಾರೆ. ಇವರ ಈ ರೀತಿಯೇನೂ ಹೊಸದಲ್ಲ. ಇವರ ತಂದೆಯವರ ಪದ್ಧತಿಯನ್ನೇ ಇವರು ಅನುಸರಿಸಿದ್ದಾರೆ.

### ಜಯಪುರದ ಮಣ್ಣು ಇಂಗ್ಲೆಂಡಿಗೆ?

ಈಗಿನ ಮಹಾರಾಜರ ಅಜ್ಜಂದಿರು ಏಳನೆಯ ಎಡ್ವರ್ಡ ಬಾದಶಹರ ರಾಜ್ಯಾರೋಹಣದ ಕಾಲಕ್ಕೆ ಇಂಗ್ಲೆಂಡಿಗೆ ಬರುವಾಗ ೨೦೦ ಜನ ಪರಿವಾರದವರನ್ನು ಒಂದು ಪ್ರತ್ಯೇಕವಾದ ಹಡಗಿನಲ್ಲಿಯೇ ಕರೆದುಕೊಂಡು ಬಂದಿದ್ದರು. ಇಷ್ಟೇ ಅಲ್ಲ; ಇಂಗ್ಲೆಂಡಿನಲ್ಲಿರುವವರೆಗೂ ಅವರಿಗೆ ಬೇಕಾಗುವಷ್ಟು ಅನ್ನಸಾಮುಗ್ರಿಗಳನ್ನು ತೆಗೆದುಕೊಂಡು ಬಂದಿದ್ದರು.

ಜಯಪುರದ ಭೂಮಿಯ ವಿನಾ ತಾವು ಊಟಮಾಡುವುದಿಲ್ಲವೆಂದು ಅವರು ಮೊದಲು ಪ್ರತಿಜ್ಞೆಮಾಡಿದ್ದರು. ಆದಕಾರಣ ಇಂಗ್ಲೆಂಡಿಗೆ ಬರುವಾಗ ಅವರು ಜಯಪುರದ ಮಣ್ಣನ್ನೂ ಸಂಗಡ ತೆಗೆದುಕೊಂಡು ಬಂದಿದ್ದರು. ಆ ಮಣ್ಣಿನ ಕಟ್ಟೆ ಹಾಕಿ ಆ ಕಟ್ಟೆಯ ಮೇಲೆ ಕುಳಿತೇ ಮಹಾರಾಜರು ಊಟಮಾಡುತ್ತಿದ್ದರು. ಬಿಳಿ ಆಕಳ ಹಾಲೇ ಬೇಕೆಂದು ಇವರು ಕಟ್ಟುಮಾಡಿಕೊಂಡಿದ್ದರು. ಆದಕಾರಣ ಇಂಗ್ಲೆಂಡಿನಲ್ಲಿದ್ದಾಗ ಬಹು ಶ್ರಮವಹಿಸಿ ಇಂಥ ಆಕಳನ್ನು ತಂದಿದ್ದರು."

---

## ಗೋವಾ "ಲಾಟರಿ."

ಗೋವಾ ಪಟ್ಟಣವು ಲಾಟರಿ ವಿಷಯಕ್ಕೆ ಬಹು ಪ್ರಸಿದ್ಧಿಯನ್ನು ಹೊಂದಿದೆ. ಗೋವಾ ಪ್ರಾಂತದಲ್ಲಿ ಮಡಗಾವ, ಪಣಜಿ ಮತ್ತು ಮ್ಹಾಪಸೆ ಎಂಬ ಮೂರು ಸ್ಥಳಗಳಲ್ಲಿ ಮೂರು ಲಾಟರಿ ಸಂಘಗಳಿವೆ. ಒಂದು ವರುಷದಲ್ಲಿ ಈ ಮೂರು ಸ್ಥಳಗಳಿಂದ ೩೬ ಸಾರೆ, ಲಾಟರಿ ತೆಗೆಯಲ್ಪಡುತ್ತದೆ. ಈ ಲಾಟರಿ ನಿಮಿತ್ತವಾಗಿ ಪ್ರತಿ ವರುಷ ಲಕ್ಷಾಂತರ ರೂ. ಗಳ ಚಲಾವಣೆಯು ಇಲ್ಲಿ ನಡೆಯುತ್ತಲಿದೆ.

ಲಾಟರಿಗಾಗಿ ಕೊಡುವ ಹಣದಲ್ಲಿ ಸಾಧಾರಣ ಅರ್ಧದಷ್ಟು ಹಣವನ್ನು ಬೇರೆ ಬೇರೆ ನಂಬರಗಳಿಗಾಗಿ ಹಂಚಿ ಉಳಿದ ಅರ್ಧ ಹಣದಿಂದ ಮೂರು ಧರ್ಮಾರ್ಥ ವೈದ್ಯಾಲಯಗಳನ್ನು ನಡೆಸುತ್ತಾರೆ. ಈ ವೈದ್ಯಾಲಯಗಳು ಬಹು ಶ್ರೇಷ್ಠ ಸ್ಥಿತಿಯಲ್ಲಿವೆ. ಡಾಕ್ಟರರೇ ಮೊದಲಾದವರ ವೇತನಗಳು ಯಥೇಚ್ಛವಾಗಿವೆ. ಇವುಗಳ ಉಪಯೋಗವನ್ನು ಹೊಂದುವವರು ಮಾತ್ರ ಕ್ರಿಸ್ತ ಜನಗಳೇ ಅತ್ಯಧಿಕ. ಹಿಂದುಗಳು ಈ ವೈದ್ಯಾಲಯಗಳಿಗೆ ಬರುವುದು ಬಹು ಕಡಿಮೆ.

ಡಾಕ್ಟರರ ಕಡೆ ಹೋದರೆ ಮರಣವೇ ಸರಿಯೆಂಬ ತಪ್ಪು ಕಲ್ಪನೆ ಬಹು ಜನರಲ್ಲಿದೆ. ಮನೆಯಲ್ಲಿ ರೋಗದಿಂದ ಸಾಯುವುದಾದರೂ ಬೇಕು. ಈ ವೈದ್ಯಾಲಯದಲ್ಲಿ ಔಷಧಿಯನ್ನು ತೆಗೆದುಕೊಳ್ಳುವುದು ಬೇಡವೆಂದೇ ಅನೇಕ ಹಿಂದುಗಳು ತಿಳಿದಿದ್ದಾರೆ. ಈ ಲಾಟರಿ ಪಂಚರಲ್ಲಿ ಇತ್ತಲಾಗಿ ಸರಕಾರಿ ಅಧಿಕಾರಿಗಳೂ ಇರುವ ಏರ್ಪಾಟಾಗಿದೆ.

---

## ಜಾಹೀರ ನೋಟೀಸ.

ಶ್ರೀ. ಮ. ನಿ. ಜಗದ್ಗುರು ಮುರಘರಾಜೇಂದ್ರ ಫ್ರೀ ಬೋರ್ಡಿಂಗ ಹಾವೇರಿಪೇಟೆ ಧಾರವಾಡ ಈ ಸಂಸ್ಥೆಯಿಂದ ಸಂಸ್ಕೃತ ಇಂಗ್ಲಿಷ ಕಲಿಯಲಿಚ್ಛಿಸುವ ಎಲ್ಲ ವೀರಶೈವ ಬಡ ವಿದ್ಯಾರ್ಥಿಗಳಿಗೆ ತಿಳಿಸುವದೇನೆಂದರೆ— ಪದ್ಧತಿಯಂತೆ ಈ ವರ್ಷ ಬೋರ್ಡಿಂಗಿನಲ್ಲಿ ಸೇರಲಿಚ್ಛಿಸುವವರು ಮತ್ತು ಸದ್ಯದಲ್ಲಿದ್ದವರು ತಾ. ೧೦-೬-೩೭ ನೇ ಇಸ್ವಿಯೊಳಗಾಗಿ ಬೋರ್ಡಿಂಗಿಗೆ ಮುಟ್ಟುವಂತೆ ಅರ್ಜಿಯನ್ನು ಕಳಿಸಬೇಕು. ಅರ್ಜಿಯನ್ನು, ಸಂಸ್ಥೆಯವರು ಈ ವರ್ಷ ಮುದ್ರಿಸಿದ ಫಾರ್ಮುಗಳಲ್ಲಿಯೇ ಎಲ್ಲ ಮಾಹಿತಿ ತುಂಬಿ ಕಳಿಸಬೇಕು. ಪೂರ್ಣ ಮಾಹಿತಿ ಇಲ್ಲದ ಮುದ್ದತ್ತು ಮೀರಿ ಬಂದ ಮತ್ತು ಕೈಬರಹದ ಅರ್ಜಿಗಳನ್ನು ವಿಚಾರಮಾಡಲಾಗುವದಿಲ್ಲ. ಸದರಿ ಅರ್ಜಿ ಫಾರ್ಮುಗಳು ಸಂಸ್ಥೆಯ ಆಫೀಸಿನಲ್ಲಿ ಉಚಿತವಾಗಿ ಸಿಗುವವು. ಸಮಕ್ಷಮ ಬಂದು ಅಥವಾ ಅಂಚೆ ಟಿಕೀಟ ೧ ಆಣೆ ಇಟ್ಟು ಕಳಿಸಿದಲ್ಲಿ ಅರ್ಜಿ ಫಾರ್ಮುಗಳು ಕಳಿಸಲ್ಪಡುತ್ತವೆ.

ಸಂಸ್ಥೆಯ ಜನರಲ್ ಕಮೀಟಿಯ ಎಲ್ಲ ಮೆಂಬರುಗಳಿಗೆ ಈ ನೋಟೀಸ ಮೂಲಕ ತಿಳಿಸುವದೇನೆಂದರೆ— ಈ ವರ್ಷ ವಿದ್ಯಾರ್ಥಿಗಳನ್ನು ತೆಗೆದುಕೊಳ್ಳುವದರ ಬಗ್ಗೆಯೂ ಮತ್ತು ಇನ್ನಿತರ ವಿಷಯಗಳ ಬಗ್ಗೆಯೂ ಆಲೋಚಿಸುವ ಕುರಿತು ಜನರಲ್ ಕಮಿಟಿಯು ತಾ. ೧೨-೬-೩೭ ನೆಯ ಇಸ್ವಿ ರವಿವಾರ ಮುಂಜಾನೆ ೮ ಘಂಟೆಗೆ ಸಂಸ್ಥೆಯ ಮಂದಿರದಲ್ಲಿ ಸೇರತಕ್ಕದ್ದಿರುತ್ತದೆ. ಆ ಸಮಯಕ್ಕೆ ತಾವು ಬರಬೇಕಾಗಿ ಕೋರಿಕೆ.

—ಚೇರಮನ್.

---

## ಹಾನಗಲ್ಲಲ್ಲಿ
# ಹಿಂದೂ ಮಹಾ ಸಭೆ.

ಹಾನಗಲ್ಲ ತಾಲೂಕ ಹಿಂದು ಮಹಾಸಭೆಯ ಕಾರ್ಯದರ್ಶಿಗಳು ಈ ರೀತಿ ತಿಳಿಸುತ್ತಾರೆ—

"ತಾ. ೩೦-೫-೩೮ ನೆಯ ದಿವಸ ಸುಮಾರು ೧೦೦-೧೨೫ ಮಂದಿ ಹಿಂದು ಯುವಕರ ಸಭೆಯು ಶ್ರೀ. ಮಾರ್ತಾಂಡರಾವ ಕುಲಕರ್ಣಿ ಇವರ ಅಧ್ಯಕ್ಷತೆಯ ಮೇಲೆ ಕೂಡಿತು. ಆಗ್ಗೆ ಹಿಂದೂ ಮಹಾಸಭೆಯ ಪ್ರಾಂತಿಕ ಕಾರ್ಯಕರ್ತರಾದ ಸುಪುತ್ರ ಸಿದ್ಧಪ್ಪ ಗೋಪಾಳ ಭೀಮರಾವ ಬದಾಮಿ ಇವರು ಹಿಂದೂ ಧರ್ಮವು ಹೇಗೆ ಕಡಿಮೆಯಾಗುತ್ತ ನಡೆದಿದೆ. ಹಿಂದೂ ಧರ್ಮದೊಳಗಿನ ಒಳಭೇದಗಳು ಮತ್ತು ಧರ್ಮದ ಮೇಲೆ ಪರಧರ್ಮದವರಿಂದ ಆಗತಕ್ಕ ಆಕ್ರಮಣವು ಇವುಗಳ ಮೇಲೆ ಖಾಸಗಿ ಚರ್ಚೆ ೩| ತಾಸು ಆಗಿ ಸರ್ವ ಹಿಂದೂ ಯುವಕರು ಒಕ್ಕಟ್ಟಿನಿಂದ ನಡೆದಲ್ಲಿ ಆಗತಕ್ಕ ಲಾಭ ಅಸ್ಪೃಶ್ಯತಾ ನಿವಾರಣೆಯಿಂದ ಆಗತಕ್ಕ ಹಿತ ಇವುಗಳನ್ನು ತಿಳಿಸಿ ಹೇಳಿದನಂತರ ರಾತ್ರಿ ೨|| ಗಂಟೆಗೆ ಸಭೆಯು ಮುಕ್ತಾಯವಾಯಿತು.

ತಾ. ೩೧-೫-೩೮ ನೇ ದಿವಸ ಮಿ. ಬದಾಮಿ ರಾಮಾಚಾರ್ಯ ಚಿನ್ನ ಮುಳಗುಂದ, ಶ್ಯಾಮರಾವ ದೇಸಾಯಿ ಇವರೆಲ್ಲರೂ ಊರಲ್ಲಿ ತಿರುಗಿ ೫೦-೬೦ ಜನ ಹಿಂದೂ ಮಹಾಸಭೆಯ ಸದಸ್ಯರನ್ನು ಮಾಡಿದರು. ಮತ್ತು ಹಿಂದೂ ಮಹಾಸಭೆ ಹಾನಗಲ್ಲ ಅಂತಹ ಸಂಸ್ಥೆಯು ಸ್ಥಾಪನೆಯಾಗಿ ಶ್ರೀ. ರಾಮಾಚಾರ್ಯ ಚಿನ್ನ ಮುಳಗುಂದ ಇವರು ಕಾರ್ಯದರ್ಶಿಗಳಾಗಿ ನೇಮಿಸಲ್ಪಟ್ಟರು. ತರುವಾಯ ರಾತ್ರಿ ೯ ಗಂಟೆಗೆ ಮಹಾಸಭೆಯ ವತಿಯಿಂದ ಸಾರ್ವಜನಿಕ ಸಭೆಯು ಕರೆಯಲ್ಪಟ್ಟಿತು. ಸಭೆಗೆ ೩೦೦-೪೦೦ ಜನರು ಕೂಡಿದ್ದರು. ಅಧ್ಯಕ್ಷ ಸ್ಥಾನವನ್ನು ಶ್ಯಾಮರಾಯ ದೇಸಾಯಿಯವರು ವಹಿಸಿದ್ದರು ಸಭೆಯಲ್ಲಿ ಅಸ್ಪೃಶ್ಯತಾ ನಿವಾರಣೆ ಬಗ್ಗೆ ಹೇಳುತ್ತಾ, ಮಿ. ಬದಾಮಿಯವರು ಹಿಂದು ಧರ್ಮದ ಮೇಲೆ ಪರಧರ್ಮದವರಿಂದ ಆಗತಕ್ಕ ಆಕ್ರಮಣ ಅದರಿಂದ ಹಿಂದೂ ಧರ್ಮಕ್ಕೆ ಆಗತಕ್ಕ ಹಾನಿ ಮತ್ತು ಅದು ಇಡೀ ಹಿಂದುಸ್ಥಾನಕ್ಕೆ ಹೇಗೆ ಹಾನಿಕರವಾಗುವದು ಸಭಿಕರಿಗೆ ಪರಿಣಾಮವಾಗುವಂತೆ ತಿಳಿಸಿ ಹೇಳಿದರು. ಮುಸಲ್ಮಾನರ ರಾಜ್ಯದಲ್ಲಿ ಹಿಂದೂ ಜನರ ಮತ್ತು ಹಿಂದೂ ಧರ್ಮದ ಮೇಲೆ ಆಗತಕ್ಕ ಅನ್ಯಾಯವನ್ನು ರಕ್ಷಿಸುವದಕ್ಕಾಗಿ ಛತ್ರಪತಿ ಶಿವಾಜಿ ಮಹರಾಜರು ಸ್ವರಾಜ್ಯವನ್ನು ಸ್ಥಾಪನೆ ಮಾಡಿದರು: ಮೊದಲಾದ ಉದಾಹರಣೆಯನ್ನು ಕೊಟ್ಟು ಜನರ ಮೇಲೆ ಒಳ್ಳೇ ಪರಿಣಾಮವಾಗುವಂತೆ ಹೇಳಿದರು. ಅನಂತರ ಅಧ್ಯಕ್ಷರ ಭಾಷಣವಾದ ಮೇಲೆ ಆಭಾರ ಮನ್ನಣೆಯಾಗಿ ಸಭೆಯು ಮುಕ್ತಾಯವಾಯಿತು.

---

## ವೀರ ನರಿಮನ್ನರ ಭಾಷಣ.

ಮುಂಬೈಯ ಪ್ರಮುಖ ಮುಂದಾಳುಗಳಾದ ವೀರ ನರಿಮನ್ನರು ಬರೋಡಾದಲ್ಲಿ ಕಳೆದ ವಾರ ಒಕ್ಕಲಿಗರ ಸಭೆಯಲ್ಲಿ ಒಂದು ಮಹತ್ವದ ಭಾಷಣಮಾಡಿದರು. ಅದರಲ್ಲಿ ಅವರು ಹೇಳಿದ್ದೇನೆಂದರೆ—

"ನೀವೆಲ್ಲರೂ ಒಕ್ಕಟ್ಟಾಗಿರಿ. ನಿಮ್ಮ ನಿಮ್ಮೊಳಗೆ ಸುಸಂಘಟಿತರಾಗಿರಿ. ಸಂಘಗಳನ್ನು ಏರ್ಪಡಿಸಿ ಈಗ ಅಧಿಕಾರಾರೂಢರಾದ ಕಾಂಗ್ರೆಸ್ ಮಂತ್ರಿಗಳ ಸಲಹೆಗಳನ್ನು ಪಡೆದು ನಿಮ್ಮ ದುಃಖಗಳನ್ನು ಪರಿಹರಿಸಿಕೊಳ್ಳಿರಿ. ನಿಮ್ಮ ಮೇಲೆ ಹೊರಿಸುವ ಅನ್ಯಾಯದ ಕರಗಳನ್ನು ತೆಗೆದುಹಾಕಲು ನೀವೆಲ್ಲರೂ ಒಕ್ಕಟ್ಟಾಗಿ ಕಾಂಗ್ರೆಸ್ಸಿನ ಬಲದಿಂದ ನಿಮ್ಮ ವರಿಷ್ಠ ಅಧಿಕಾರಿಗಳ ಕಡೆಗೆ ಅರ್ಜಿ ಮಾಡಿಕೊಳ್ಳಿರಿ. ಆದರೆ ಎಲ್ಲಕ್ಕೂ ಮೊದಲು ನೀವು ಮದ್ಯವನ್ನು ಕುಡಿದು ದುಡಿದ ಹಣವನ್ನು ಸರಾಯಿ ಅಂಗಡಿಯಲ್ಲಿ ಹಾಕಿ ಹೆಂಡರು ಮಕ್ಕಳನ್ನು ಕಷ್ಟಪಡಿಸಿ ಗತಿಗೆಟ್ಟು ಸಂಸಾರವನ್ನು ಹಾಳು ಮಾಡುವದಕ್ಕಿಂತ ನಿಮ್ಮ ದುಡಿತದಿಂದ ಬಂದ ಹಣವನ್ನು ಮಿತವ್ಯದಿಂದ ಖರ್ಚು ಮಾಡಿ ಮದ್ಯಪಾನದಂಥ ನೀಚ ಚಟವನ್ನು ಬಿಟ್ಟು ಈಗ ಕಾಂಗ್ರೆಸ್ಸಿನವರು ಆರಂಭಿಸಿದ ಮದ್ಯಪಾನ ನಿಷೇಧಕ ಕಾಯಿದೆಯನ್ನು ಮನಸ್ಸಿನಲ್ಲಿ ತೆಗೆದುಕೊಳ್ಳಿರಿ, ಒಕ್ಕಟ್ಟಾಗಿರಿ; ಸಂಘಗಳನ್ನು ಏರ್ಪಡಿಸಿರಿ, ಮದ್ಯಪಾನವನ್ನು ಆಮೂಲಾಗ್ರವಾಗಿ ನಾಶಪಡಿಸಿರಿ."

---

## ಪಂಡಿತಜಿಯವರ
## ಎಚ್ಚರಿಕೆ.

ಪಂಢಿತ ಜವಾಹರಲಾಲ ನೆಹರುರವರು ತಾ. ೨ ನೆಯ ದಿನ ಯುರೋಪಿಗೆ ಪ್ರಯಾಣ ಮಾಡುವ ಮುನ್ನ ಮುಂಬಯಿ ಕ್ರಾನಿಕಲ್ ಪತ್ರಿಕೆಯ ಪ್ರತಿನಿಧಿಗಳಿಗಿತ್ತ ಸಂದರ್ಶನದಲ್ಲಿ ಸಂಯುಕ್ತ ಪ್ರಾಂತದ ಜಮೀನದಾರರ ಪ್ರತಿಗಾಮಿ ಧೋರಣವ ಕುರಿತು ಈ ರೀತಿ ಹೇಳಿದರು—

### ಹಿಂದುಸ್ಥಾನದ ಹಿಟ್ಲರರು.

"ಫ್ಯಾಸಿಜಂ ಪದ್ಧತಿಯನ್ನನುಸರಿಸಿ (ಹಿಟ್ಲರ ಮುಸೋಲಿನಿಯರಂತೆ) ಈ ಜಮೀನುದಾರರು ತಮ್ಮ ಸ್ವಾರ್ಥ ರಕ್ಷಣಾರ್ಥವಾಗಿ ಸ್ವಯಂಸೇವಕ ದಳವನ್ನು ರಚಿಸಿಕೊಳ್ಳಹತ್ತಿದ್ದಾರೆ. ಈ ಮಾರ್ಗವು ಅಪಾಯಕರವೆಂಬುದನ್ನು ಇವರೇಕೆ ತಿಳಿಯಬಾರದು? ಕಾಂಗ್ರೆಸ್ಸು ವಿನಂತಿ ಮಾಡಿಕೊಂಡಿತೆಂದರೆ ಸಂಯುಕ್ತ ಪ್ರಾಂತದ ಹಳ್ಳಿಗಳಿಂದ ಹತ್ತು ಲಕ್ಷ ಸ್ವಯಂ ಸೇವಕರು ಮುಂದೆ ಬರುವರು. ಸಂಯುಕ್ತ ಪ್ರಾಂತದ ಒಕ್ಕಲಿಗರ ಹಕ್ಕು ಬಾಧ್ಯತೆಗಳ ರಕ್ಷಣಾರ್ಥವಾಗಿ ಅಸೆಂಬ್ಲಿಯಲ್ಲಿಂದು ಮಂಡಿಸಲ್ಪಟ್ಟ ಈ ಮಸೂದೆಗಳನ್ನು ಜಮೀನುದಾರರು ವಿರೋಧಿಸುತ್ತಿರುವುದು ವಿಹಿತವಾಗಿಲ್ಲ. ಇಂಥಾ ವಿರೋಧದಿಂದ ಅವರು ತಮ್ಮ ನಾಶಕ್ಕೆ ತಾವೇ ಕಾರಣರಾಗುತ್ತಾರೆ.

ಕಾನಪುರದ ಗಿರಣಿ ಮಾಲಕರು ಈ ಜಮೀನುದಾರರೊಡನೆ ಒಕ್ಕಟ್ಟಾಗಿದ್ದಾರೆ. ಇದರಲ್ಲಿ ಆಶ್ಚರ್ಯವೇನೂ ಇರುವುದಿಲ್ಲ. ಈಗ ಉಂಟಾಗಿರುವ ಮಹಾ ಮುಷ್ಕರದ ದೆಸೆಯಿಂದ ಈ ಗಿರಣಿ ಮಾಲಕರು ಸಂಯುಕ್ತ ಪ್ರಾಂತದ ಪ್ರತಿಗಾಮಿ ಶಕ್ತಿಗಳಿಗೊಟ್ಟಿಗೆ ಬೆರೆಯಹತ್ತಿದ್ದಾರೆ. ಈ ಮುಷ್ಕರಕ್ಕೆ ರಶಿಯಾದಿಂದ ದ್ರವ್ಯ ಸಹಾಯ ಬರುತ್ತಿದೆಂದು ಅವರು ಯದ್ವಾ ತದ್ವಾ ಆರೋಪ ಹೊರಿಸುತ್ತಿದ್ದಾರೆ. ಈ ಆರೋಪವನ್ನವರು ಸಿದ್ಧಮಾಡಿ ತೋರಿಸಲಿ.

ಸಂಯುಕ್ತ ಪ್ರಾಂತದ ಕಾಂಗ್ರೆಸ್ಸು ರೈತರಿಗೂ ಸಂಪುಗಾರರಿಗೂ ಪೂರ್ಣ ಬೆಂಬಲ ಕೊಡುವುದು. ಈ ಜಮೀನದಾರರೂ ಗಿರಣಿ ಒಡೆಯರೂ ಸ್ವಲ್ಪವಾದರೂ ಶಾಂತರಾಗಿ ಅಂಥಾ ಹುಚ್ಚು ಮಾತಾಡುವುದನ್ನೂ ಆರೋಪ ಹೊರಿಸುವುದನ್ನೂ ಬಿಟ್ಟು ಕೊಡಬೇಕು. ಅವರು ಹಾಗೆ ನಡೆದುಕೊಳ್ಳದೆ ಇನ್ನೂ ಹಟವನ್ನೇ ಹಿಡಿಯುವುದಾದರೆ ನಾವು ಎಲ್ಲಕ್ಕೂ ಸಿದ್ಧರಾಗಿರುವೆವೆಂಬುದನ್ನವರು ಮರೆಯಕೂಡದು."


ನಮ್ಮಲ್ಲಿ ಫೋಟೋಗ್ರ
ಫೈ ಬ್ಲಾಕುಗಳು,
ಹಿತ್ತಾಳೆ ಮತ್ತು ಸೀಸದ
ಬ್ಲಾಕುಗಳು ಅರಗಿನ
ಸೀಲು, ಜವಾನರ ಬಿಲ್ಲೆಗ
ಳು. ದೇವರ 3 ಬಣ್ಣದ
ಪತಗಳು, ಕ್ಯಾಲೆಂಡರು
ಗಳು, ನಿಮ್ಮ ಮನ
ಒಪ್ಪುವಂತೆ ತಯಾರಾ
ಗುತ್ತವೆ.
ಬಜವರ್ಗ ಅಂಡ್ ಸನ್.
ಚಿಕ್ಕಪೇಟೆ.
ಬೆಂಗಳೂರು ಸಿಟಿ

ಅಖಿಲ ಭಾರತ ವಸ್ತು ಪ್ರದರ್ಶನದಲ್ಲಿ
ಸುವರ್ಣ ಪದಕಗಳನ್ನು ಮತ್ತು ಸರ್ಟೀಫಿಕೇಟುಗಳನ್ನು ಪಡೆದು ಹೆಸರಾದ
ಇಂಡಿಯಾ ಸರಕಾರದಲ್ಲಿ ರಜಿಸ್ಟರ್ ಆದ

# ಸಿದ್ಧೇಶ್ವರ ಟ್ರೇಝುರಿ ಕಂಪನಿ, ಹುಬ್ಬಳ್ಳಿ.










ನಮ್ಮ "ಸಿದ್ಧೇಶ್ವರ ಟ್ರೇಝುರಿ" ಗಳನ್ನು ಈ ವರೆಗೆ ಕೈಗಾರಿಕೆಯ ಕೆಲಸಗಳಲ್ಲಿ ಹೆಸರಾದ ಯುರೋಪ, ಅಮೇರಿಕಾ ವಗೈರೆ ಪರರಾಷ್ಟ್ರಗಳಲ್ಲಿ ತಯಾರಾಗುವ ಟ್ರೇಝುರಿಗಳ ಪದ್ಧತಿಯ ಮೇರೆಗೆ ಹೊಸ ಉಕ್ಕಿನ ಅಖಂಡ ಒಂದೇ ತಗಡಿನಲ್ಲಿ ೧೨ ಮೂಲೆಗಳನ್ನು ೨೫೦ ಟನ್ ಪ್ರೇಷರ ಕೊಡುವ ಮಶಿನ್ನಿನಿಂದ ಬಗ್ಗಿಸಿ, ರಿವ್ಹಿಟ್ಸ ಮೊದಲಾದವುಗಳಿಂದ ಜಾಯಿಂಟ ಮಾಡದೆ ಇಲೆಕ್ಟ್ರಿಸಿಟಿಯಿಂದ ಬೆಸೆದು ತಯಾರಿಸುತ್ತೇವೆ.

ಈ ಹೊಸ ಸುಧಾರಣೆಯಿಂದ ಮಾಡಿದ ತಿಜೋರಿಗಳಿಗೂ ಮತ್ತು ಯಾವದೇ ನಮ್ಮ ಸಾಮಾನಕ್ಕೂ ಯಾವ ತರದ ಭಯವಿಲ್ಲ. ಮತ್ತು ಅವು ಒಳ್ಳೇ ಮಜಬೂತವಾಗಿಯೂ ಸುಂದರವಾಗಿಯೂ ಆಗುತ್ತವೆ. ನಾವು ನಮ್ಮ ತಿಜೋರಿಗಳಿಗೂ ಮತ್ತು ನಮ್ಮಲ್ಲಿ ತಯಾರಾಗುವ ಉಕ್ಕಿನ ಕಪಾಟು, ಕ್ಯಾಶಬಾಕ್ಸ, ಸ್ಟ್ರಾಂಗರೂಮ ಡೋರ್ಸು ಗಳಿಗೂ ನಮ್ಮ ಕಾರಖಾನೆಯಲ್ಲಿಯೇ ತಯಾರಾಗುವ ಉತ್ತಮವಾದ ಮತ್ತು ಮಜಬೂತವಾದ ಕೀಲಿಗಳನ್ನು ಹಚ್ಚುತ್ತೇವೆ. ಮತ್ತು ಇದಲ್ಲದೆ ನಮ್ಮಲ್ಲಿ ಹೊಸ ಪದ್ಧತಿಯ ಮೇರೆಗೆ ತಯಾರಾಗುವ ಕಾಂಬಿನೇಶನ್ ಕೀ ಲೆಸ್ಸಾ ಲಾಕ್ಸು (ನಂಬರ ಕೀಲಿ) ಗಳನ್ನು ತಿಜೋರಿಗಳಿಗೆ ಹಚ್ಚಿಸಿದರೆ ಆ ತಿಜೋರಿಗಳನ್ನು ಯಾರೂ ತೆಗೆಯಲು ಸಾಧ್ಯವಿಲ್ಲ. ಯಾರಾದರೂ ತೆಗೆದರೆ ಅವರಿಗೆ

## ೧೦೦೦ ರೂ. ಬಹುಮಾನ ಕೊಡುವೆವು.

ನಮ್ಮ ಫಾಯರ ಪ್ರೂಫ್ ತಿಜೋರಿಗಳು ತುಂಬಾ ಖಾತ್ರಿಯಾದವುಗಳಿರುತ್ತವೆ.

**ಈ ಬಗ್ಗೆ ಅನೇಕ ವಸ್ತು ಪ್ರದರ್ಶನಗಳಲ್ಲಿ ಒಳಗೆ ನೋಟು ವಗೈರೆ ಸಾಮಾನುಗಳನ್ನು ಇಟ್ಟು ಕೆಂಪಗೆ ಕಾಸಿದನಂತರ ಒಳಗಿಟ್ಟ ಸಾಮಾನುಗಳು ಸುಡದೆ ಇದ್ದದ್ದನ್ನು ಖಾತ್ರಿ ಮಾಡಿಕೊಟ್ಟಿದ್ದೇವೆ.**

ಧಾರಣೆಗಳ ಬಗ್ಗೆ ನಮ್ಮ ಸಚಿತ್ರ ಕ್ಯಾಟಲಾಗುಗಳಿಗೆ ಬರೆಯಿರಿ.
ಅ ಥ ವಾ
ಸಮಕ್ಷಮ ಬಂದಲ್ಲಿ ತಿಳಿಯುವದು.

ತಮ್ಮ ಕಲಾಭಿಮಾನಿ,
ಸಿದ್ಧೇಶ್ವರ ಮತ್ತು ಕಂಪನಿ
ಟ್ರೇಝುರಿ ಮೇಕರ್ಸ
ಹುಬ್ಬಳ್ಳಿ.

ಫ್ಯಾಕ್ಟರಿ ಮತ್ತು ಹೆಡ್ ಆಫೀಸ್-
ಹುಬ್ಬಳ್ಳಿ.

ಬ್ರ್ಯಾಂಚ ಆಫೀಸುಗಳು-
ಹೈದರಾಬಾದ (ಡೆಕ್ಕನ) ಸ್ಟೇಷನ ಕೊಲ್ಹಾಪುರ (ಲಕ್ಷ್ಮೀಪುರಿ)

...ಪುದನ್ನೂ ಆರೋಪ ಹೊರಿಸುವುದನ್ನೂ ... ಬೇಕು. ಅವರು ಹಾಗೆ ನಡೆದುಕೊಳ್ಳದೆ ಇನ್ನೂ ಹಟವನ್ನೇ ಹಿಡಿಯುವುದಾದರೆ ನಾವು ಎಲ್ಲಕ್ಕೂ ಸಿದ್ಧರಾಗಿರುವೆವೆಂಬುದನ್ನವರು ಮರೆಯಕೂಡದು."

...ಸಿಕೆಫಿಟ ಈ ಪತ್ರಿಕೆಯು ಆಲನ... ಡಿಸಿ ಈಗ ಅಧಿಕಾರಾರೂಢರಾದ ಆಲನಮಟ್ಟಿ ವೀರ...

REGISTERED No. B. 2891



# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ !
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೧೩ನೆಯ ಜೂನ ೧೯೩೮. | ಸಂಚಿಕೆ ೪೦

ಜನಸೇವೆಯೇ ದೇವರಸೇವೆ

## ನೆಹರು-ಜಿನ್ನಾರವರ ಪತ್ರವ್ಯವಹಾರ.

**ಪಂಡಿತ ಜವಾಹರಲಾಲ ನೆಹರುರವರ ತಾ. ೧೭-೩-೩೮ ನೆಯ ಪತ್ರಕ್ಕೆ ಉತ್ತರವಾಗಿ ಬ್ಯಾ. ಜಿನ್ನಾರವರು ಹೀಗೆ ತಿಳಿಸಿದ್ದಾರೆ—**

**"ಮುಸಲ್ಮಾನರ ಸಂಸ್ಕೃತಿ, ಭಾಷೆ, ವೈಯಕ್ತಿಕ ಶಾಸನ ಮತ್ತು ರಾಜಕೀಯ ಹಕ್ಕು ಇವುಗಳ ರಕ್ಷಣೆಯಾಗಬೇಕು.**
ನನ್ನ ೧೪ ನಿಯಮಗಳು, ಸ್ಟೇಟ್ಸ್‌ಮನ್ ಪತ್ರಿಕೆಯಲ್ಲಿ ಪ್ರಕಟವಾದ ಮುಸಲ್ಮಾನರ ಕೇಳಿಕೆಗಳು, ಲಕ್ಷಿಸಲ್ಪಡಬೇಕು."

## ನೆಹರು-ನಾಹಸಪಾಶಾ ಸಂದರ್ಶನ.

**ತಾ. ೧೧-೬-೩೮ ನೆಯ ದಿನ ಪಂ. ಜವಾಹರಲಾಲ ನೆಹರುರವರು**
ಈಜಿಪ್ತಿನ ಮುಖ್ಯಾಧಿಕಾರಿಗಳಾದ ನಾಹಸಪಾಶಾರವರನ್ನು ಅಲೇಕಝಾಂಡ್ರಾದಲ್ಲಿ ಕಂಡು ಅವರ ಔತಣವನ್ನು ಸ್ವೀಕರಿಸಿದರು.

## ಮೈಸೂರಲ್ಲಿ ಪ್ರಜಾಪಕ್ಷದ ವಿಜಯ.

ಸರಕಾರದವರು ಪ್ರಜಾಪ್ರತಿನಿಧಿ ಸಭೆಯಲ್ಲಿಟ್ಟ ಪತ್ರಿಕಾ ಶಾಸನವು ೫೭ ಅನುಕೂಲ ೧೦೦ ಪ್ರತಿಕೂಲ ಮತಗಳಿಂದ ಬಿದ್ದು ಹೋಯಿತು.

ದೇಶವೇ ದೇವಾಲಯ



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ-ಸೋಮವಾರ ತಾರೀಖು ೧೩ ನೆಯ ಜೂನ ೧೯೩೮. | ಸಂಚಿಕೆ ೪೦


## ಮಹತ್ವದ ಸುದ್ದಿಗಳು.

ಮಹಾತ್ಮಾ ಗಾಂಧಿಯವರು ಮಳೆಗಾಲವನ್ನೆಲ್ಲಾ ವರ್ಧಾದಲ್ಲಿ ಕಳೆದು ಸಂಪೂರ್ಣ ವಿಶ್ರಾಂತಿ ಹೊಂದಿ ಮುಂದೆ ಗಡಿಸಾಡಿಗೆ ಹೋಗುವವರಿದ್ದಾರೆ.

—ಬ್ಯಾ. ಜಿನ್ನಾರವರ ಸಂಗಡ ಕಾಂಗ್ರೆಸ್ ನಡೆಸಿದ ಒಪ್ಪಂದದ ಆಲೋಚನೆಯ ಸಂಬಂಧವಾಗಿ ಧರ್ಮವೀರ ಡಾ. ಮುಂಜೆಯವರು ಒಂದು ಪ್ರಕಟನೆ ಹೊರಡಿಸಿ ಕಾಂಗ್ರೆಸ್ ಜಾತೀಯ ಸಂಸ್ಥೆಯ ಮಟ್ಟಕ್ಕೆ ಇಳಿದು ಮುಸ್ಲಿಂಲೀಗದ ಸಂಗಡ ಒಪ್ಪಂದ ಮಾಡಿಕೊಳ್ಳಬಾರದಾಗಿ ಸೂಚಿಸಿದ್ದಾರೆ.

—ಕಳೆದ ೭ ನೆಯ ತಾರೀಖಿನ ದಿನ ಮುಂಬೈ ಬೋರಿಬಂದರ ಸ್ಟೇಶನ್ನಿನ ಪೇಶಾವರ ಎಕ್ಸಪ್ರೆಸ್ ಗಾಡಿಯಲ್ಲಿ ಒಬ್ಬ ಹಿಂದು ತರುಣಿಯ ಶವ ದೊರಕಿತು ! ಯಾರೋ ಅವಳ ಕೊಲೆ ಮಾಡಿ ಚೀಲದಲ್ಲಿ ಕಟ್ಟಿ ಗಾಡಿಯಲ್ಲಿಟ್ಟಿದ್ದರು.

—ಕಳೆದ ೮ ನೆಯ ತಾರೀಖಿನ ದಿನ ಮೈಸೂರು ಶ್ರೀ ಮನ್ಮಹಾರಾಜ ಕೃಷ್ಣರಾಜೇಂದ್ರ ಒಡೆಯರರ ೫೫ ನೆಯ ವರುಷ ವರ್ಧಂತ್ಯುತ್ಸವವು ಮೈಸೂರಲ್ಲಿ ಸಂಭ್ರಮದಿಂದ ಜರುಗಿತು.

—ಕಳೆದ ೭ ನೆಯ ತಾರೀಖಿನ ದಿವಸ ಮೃಗನಕ್ಷತ್ರ ಕೂಡಿತು. ೫ ನೆಯ ತಾರೀಖಿನಿಂದಲೇ ಅನೇಕ ಕಡೆ ಮಳೆ ಪ್ರಾರಂಭವಾಗಿದೆ. ಈ ಸಾರೆ ವಿಜಾಪುರ ಜಿಲ್ಲೆಯಲ್ಲಿ ಮುಂಗಾರಿ ಬಿತ್ತಿಗೆ ಪ್ರಾರಂಭವಾಗುವ ಶುಭ ಲಕ್ಷಣ ತೋರುತ್ತದೆ.

—ಡಾ. ಟಿ. ವ್ಹಿ. ಮಾಧವರಾವ ಎಂಬುವವರು ಶಿಕ್ಷಣ ಪ್ರಸಾರದ ಮೂಲಕ ಸ್ವಾತಂತ್ರ್ಯ ಪ್ರಾಪ್ತಿಗಾಗಿ ಕಾಂಗ್ರೆಸ್ಸಿನ ಕಡೆಗೆ ೩ ಲಕ್ಷ ರೂ. ಗಳನ್ನು ಕೊಟ್ಟಿದ್ದಾರೆ. ಇವರು ಭೂಗರ್ಭಶಾಸ್ತ್ರಜ್ಞರಿದ್ದರು. ಜಗತ್ತಿನ ಪ್ರವಾಸಮಾಡಿದ್ದರು. ಇವರು ಮರಣಕಾಲಕ್ಕೆ ೩೮ ವರುಷದವರಾಗಿದ್ದರು.

—ಚೀನ ಮತ್ತು ರಶಿಯಾ ದೇಶಗಳಲ್ಲಿ ಒಪ್ಪಂದವಾಗಿದೆಯೆಂದೂ ಚೀನಕ್ಕೆ ರಶಿಯಾ ವಿಮಾನು ಮೊದಲಾದ ಯುದ್ಧ ಸಾಮಗ್ರಿಗಳನ್ನು ಕೊಡುವುಗೆಂದೂ ಪ್ರಕಟವಾಗಿದೆ.

—ಜಗನ್ನಾಥ ಪುರಿ ದೇವಾಲಯದ ಮತ್ತು ಅಲ್ಲಿಯ ಹಣವಿನ ಯೋಗ್ಯ ವ್ಯವಸ್ಥೆಯಾಗುವ ಕುರಿತು ಓರಿಸಾ ಶಾಸನ ಮಂಡಲದಲ್ಲಿ ಒಂದು ಗೊತ್ತುವಳಿ ಬಂದು ಅದು ವಿಚಾರಣಾ ಸಮಿತಿಯ ಕಡೆಗೆ ಕಳುಹಿಸಲ್ಪಟ್ಟಿದೆ.

—ಕುರಾನ ಗ್ರಂಥವನ್ನು ಮುಸಲ್ಮಾನರ ವಿನಾ ಯಾರೂ ಮಾರಕೂಡದೆಂದೂ ಅದರ ಮೇಲೆ ಟೀಕೆ ಟಿಪ್ಪಣಿಗಳನ್ನು ಬರೆಯಕೂಡದೆಂದೂ ಮುಸಲ್ಮಾನ್ ಫಕೀರರ ಸಮಾಧಿಯ ಸುತ್ತಲೂ ಮೂರು ಮೈಲುಗಳೊಳಗಾಗಿ ಯಾರೂ ನರ್ತನಮಾಡಕೂಡದೆಂದೂ ದಿಲ್ಲಿ ಕೇಂದ್ರ ಶಾಸನ ಸಭೆಯಲ್ಲಿ ಮಿ. ಮಹಮ್ಮದ ಯುಸೂಫರು ಎರಡು ಗೊತ್ತುವಳಿಗಳನ್ನು ತರುವವರಿದ್ದಾರೆ.

—ಮುಂದಿನ ತಿಂಗಳಿಂದ ಮೈಸೂರು ಸರಕಾರದವರು ಕ್ಲೋಜಪೇಟೆ ಕೇಂದ್ರದಲ್ಲಿ ಮದ್ಯಪಾನ ನಿರೋಧ ಪ್ರಯೋಗವನ್ನು ಪ್ರಾರಂಭಿಸುವರು. ಇದರಿಂದ ೨೫ ಸಾವಿರ ರೂ. ಗಳ ಆದಾಯ ಕಡಿಮೆಯಾಗುವದಂತೆ.

—ಶೃಂಗೇರಿ ಪೀಠದ ಶ್ರೀ ಜಗದ್ಗುರು ಚಂದ್ರಶೇಖರ ಭಾರತಿ ಸ್ವಾಮಿಗಳು ಪಾದಚಾರಿಗಳಾಗಿ ಒಂದು ತಿಂಗಳಲ್ಲಿ ಬೆಂಗಳೂರಿಗೆ ದಯಮಾಡಿಸುವರು. ಇವರ ಸಂಗಡ ೨೦ ಜನ ಪರಿವಾರದವರಿರುವರು. ಪ್ರತಿನಿತ್ಯ ಶ್ರೀಗಳವರು ೮ ಮೈಲು ಪ್ರವಾಸಮಾಡುವರು. ಸಂಗಡ ಯಾವ ಬಿರುದಾವಳಿಗಳಾಗಲಿ ಆನೆ ಕುದುರೆಗಳಾಗಲಿ ಇರುವುದಿಲ್ಲ.

—ಹುಬ್ಬಳ್ಳಿಯಲ್ಲಿ ಶ್ರೀ. ಹರ್ತಿಯವರ ಮಗನ ವಿವಾಹವು ಪಂಚಕಲಶ ಹೂಡದೆ ವಿಭೂತಿಗಟ್ಟಿಯನ್ನೇ ನಿರಂಜನ ಮೂರ್ತಿಯೆಂದು ಭಾವಿಸಿ ಸಂಸ್ಕೃತ ಶ್ಲೋಕಗಳನ್ನು ಉಪಯೋಗಿಸದೆ ಕನ್ನಡ ನುಡಿಗಳಿಂದಲೇ ಲಗ್ನವಿಧಿಯನ್ನು ಮಾಡಿಸಿ ಜರುಗಿಸಲ್ಪಟ್ಟಿತು. ಆ ಮೇಲೆ ಶ್ರೀ ಕುಮಾರ ಸ್ವಾಮಿಗಳು ಲಗ್ನವನ್ನು ಕುರಿತು ಉಪನ್ಯಾಸಮಾಡಿದರು.

# ಪ್ರಾಚೀನ ಆರ್ಯಾವರ್ತದ 'ಮಿಸ್ ಮೇಯೋ.'

( ಲೇಖಕರು:— ಶ್ರೀಮಾನ್ ಜೋಗಳೇಕರ ಪಾಂಡುರಂಗರಾಯರು B. A. S. T. C. )

ಐತಿಹಾಸಿಕ ಕ್ಷೇತ್ರದಲ್ಲಾದಷ್ಟು ಸತ್ಯದ ಕೊಲೆಯು ಬೇರೆ ಯಾವ ಕ್ಷೇತ್ರದಲ್ಲಿಯೂ ಆಗಿರಲಿಕ್ಕಿಲ್ಲ. ಇದ್ದುದನ್ನು ಇದ್ದಂತೆ ಹೇಳುವ ಇತಿಹಾಸಕಾರರಷ್ಟೇ ನಿರ್ವಿಕಾರ ಮನಸ್ಸಿನಿಂದ ಗತ ಸಂಗತಿಗಳನ್ನು ಅರಿಯಲಿಚ್ಛಿಸುವ ಇತಿಹಾಸ ಭಕ್ತರೂ ಅಪರೂಪ. ಇತಿಹಾಸವನ್ನು ಪಕ್ಷಪಾತವಿಲ್ಲದೆ ಕಲಿಯಬೇಕೆಂಬ ತತ್ವವನ್ನು ಬಾಯ್ಮಾತಿನಿಂದ ಎಲ್ಲರೂ ಮನ್ನಿಸಿದರೂ ನಿತ್ಯದ ವ್ಯವಹಾರದಲ್ಲಿ ಈ ತತ್ವಕ್ಕೆ ಬಹಳ ಮಾಡಿ ಎಲ್ಲರೂ ಮಣ್ಣು ಕೊಡುತ್ತ ಬಂದಿರುವರು ಎಂಬುದು ಕಂಡ ಮಾತು.

ಅಹಂಕಾರಕ್ಕೀಡಾಗಿ ವಿವೇಕ ಭ್ರಷ್ಟರಾಗುವವರು, ಕೇವಲ ಜನಸಾಮಾನ್ಯರಷ್ಟೇ ಅಲ್ಲ. ದೊಡ್ಡ ದೊಡ್ಡ ಪಂಡಿತರೂ, 'ತನ್ನತನ' ದ ದುರಭಿಮಾನಕ್ಕೆ ತುತ್ತಾಗಿ, ತರ್ಕ ಶಾಸ್ತ್ರಕ್ಕೆ ತೀರ ವಿರುದ್ಧವಾದ ಹಾಗೂ ವಸ್ತು ಸ್ಥಿತಿಯ ವಿಪರ್ಯಾಸ ಮಾಡುವ ಇತಿಹಾಸಗಳನ್ನು ಬರೆದಿರುವರು. ಉದಾಹರಣಕ್ಕಾಗಿ ಪ್ರಸಿದ್ಧ ಆಂಗ್ಲ ಇತಿಹಾಸಕರ್ತರಾದ 'ಗ್ರ್ಯಾಂಟಡಫ್' ಮೊದಲಾದವರ ಗ್ರಂಥಗಳನ್ನು ಪರಿಶೀಲಿಸಿದರೆ ನಾವು ಮೇಲೆ ಹೇಳಿದ ಮಾತಿನಲ್ಲಿ ಎಷ್ಟೂ ಅತಿಶಯೋಕ್ತಿಯಿಲ್ಲೆಂಬುದು ಕಂಡುಬರಬಹುದು. 'ಗ್ರ್ಯಾಂಟಡಫ್' ಸಾಹೇಬರು ಉಳಿದ ಇತಿಹಾಸಕಾರರಂತೆಯೇ ಪೂರ್ವಗ್ರಹ ದೂಷಿತರಾದವರು! ಜಗತ್ತಿನಲ್ಲಿ 'ಆಂಗ್ಲರೇ ಶ್ರೇಷ್ಠರು' ಅವರಿಗೆ ಅಂಕಿತರಾದ ಭಾರತೀಯರು ಕಾಡು ಇರಲೇ ಬೇಕು.' ಎಂದು ಅವರು ನಂಬಿದ್ದರಿಂದ ಅವರು ಹಿಂದುಸ್ಥಾನದ ಬಗ್ಗೆ ಬರೆದ ಯಾವತ್ತೂ ಬರಹಗಳಲ್ಲಿ ಭಾರತೀಯ ಸಂಸ್ಥಾನಿಕರನ್ನೂ ಅವರ ಪ್ರಜೆಗಳನ್ನೂ ಕಾಡಿಗೆಯಿಂದ ಚಿತ್ರಿಸಿ ತಮ್ಮ ದೇಶ ಬಾಂಧವರಾದ ಆಂಗ್ಲರನ್ನು ಚೊಕ್ಕ ಬಿಳಿಯ ಬಣ್ಣದಿಂದ ಚಿತ್ರಿಸಿರುವರು. ಸುಪ್ರಸಿದ್ಧ ವಂಗ ಇತಿಹಾಸಕರ್ತರಾದ 'ಜದುನಾಥ ಸರ್ಕಾರ' ರವರು ಮರಾಠರ ವಿಷಯವಾಗಿ ಅನೌದಾರ್ಯವನ್ನು ತೋರಿಸಿದ್ದಾರೆ. ಅದರಂತೆಯೇ ನಮ್ಮೆಲ್ಲರಿಗೂ ಚಿರಪರಿಚಿತರಾದ 'ಭಾರತಾಚಾರ್ಯ' ವೈದ್ಯ ಚಿಂತಾಮಣಿ ರಾಯರು ತಮ್ಮ 'ಮಧ್ಯಯುಗೀನ ಭಾರತ' (Medieval India) ದಲ್ಲಿ ಹಲಕೆಲವು ರಾಜ್ಯ ಸಂಸ್ಥಾಪಕರು ಕನ್ನಡಿಗರಿದ್ದರೂ ಅವರು ಮಹಾರಾಷ್ಟ್ರೀಯರೇ ಇದ್ದರೆಂದು ಪ್ರತಿಪಾದಿಸಿದ್ದಾರೆ. ಇದಕ್ಕೆ ಅವರ 'ಬೃಹನ್ ಮಹಾರಾಷ್ಟ್ರ'ದ ಹುಚ್ಚು ಮುಖ್ಯ ಕಾರಣವೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಹಾಗೆಯೇ ನಮ್ಮ ನಾಡಿನ ಇತಿಹಾಸ ಸಂಶೋಧಕರಲ್ಲಿ ಹಲವರು ಜಾತೀಯ, ಹಾಗೂ ಪ್ರಾಂತೀಯ ಭಾವನೆಗಳಿಗೀಡಾಗಿ, ತಮ್ಮವರ ಡೊಳ್ಳು ಬಡೆದಿರುವರೆಂಬುದನ್ನು ನಾವೆಲ್ಲರೂ ಎಷ್ಟೋ ಸಲ ಕೇಳಿದ್ದೇವೆ. ಅಲ್ಲದೆ ಅಮೇರಿಕೆಯಿಂದ ಇಲ್ಲಿಗೆ ದಯಮಾಡಿಸಿ ಕಲಕತ್ತಾ, ಲಾಹೋರ ಮುಂತಾದ ದೊಡ್ಡ ದೊಡ್ಡ ಪಟ್ಟಣಗಳ ನರಕಪ್ರಾಯ ದೃಶ್ಯಗಳನ್ನು ನೋಡಿ ಒಂದೆರಡು ಹಾಳು ಹಳ್ಳಿಗಳ ಭೀಕರ ದೃಶ್ಯವನ್ನೂ ವಾಯು ವೇಗದಿಂದ ಪ್ರವಾಸ ಮಾಡುವಾಗ ನೋಡಿ ಎಷ್ಟರ ಮಟ್ಟಿಗೆ ತನಗೆ ಜ್ಞಾನವಾಗಿರಬಹುದೋ ಅಂಥ ಅಗಾಧ 'ಜ್ಞಾನ'ದ ತಳಹದಿಯ ಮೇಲೆ ತನ್ನ 'ಭಾರತ ಮಾತೆ' (Mother India) ಎಂಬ ಹೆಸರಿಗೆ ಎಷ್ಟೂ ಸಲ್ಲದ ಕುತ್ಸಿತ ಗ್ರಂಥವನ್ನು 'ಮಿಸ್ ಮೇಯೋ' ಎಂಬ ಅಮೇರಿಕೆಯ 'ಪ್ರಾಜ್ಞ' ಕುಮಾರಿಯು ಬರೆದುದನ್ನು ನಮ್ಮಲ್ಲಿಯ ಹಸುಳೆಗಳೂ ಬಲ್ಲವು.

ರಾಮಾಯಣವೆಂದರೆ ರಘುಕುಲೋತ್ತಮನಾದ ಶ್ರೀ ರಾಮಚಂದ್ರನ ಕತೆ. ಇದರಲ್ಲಿ ರಾಮಚಂದ್ರನ ಇಡಿಯ ಚರಿತ್ರೆಯೂ ಅಡಕವಾಗಿದೆ. ರಾಮನ ಕಾಲದಲ್ಲಿ ಉತ್ತರ ಭಾರತವು ಅಂದರೆ ಹಿಮಾಚಲ-ವಿಂಧ್ಯಾಚಲಗಳ ನಡುವಣ ಪ್ರದೇಶವು; ಆರ್ಯಾವರ್ತವು, ಆರ್ಯರ ಆಳಿಕೆಗೆ ಸಂಪೂರ್ಣ ಒಳಪಟ್ಟಿತ್ತೆಂಬುದಾಗಿ ತೋರುತ್ತದೆ. ದಕ್ಷಿಣ ಭಾರತವು ಅಂದರೆ ವಿಂಧ್ಯಾಚಲದಿಂದ ಕನ್ಯಾಕುಮಾರಿಯ ವರೆಗಿನ ಪ್ರದೇಶವು ದ್ರವಿಡ ಹಾಗೂ ಆದಿದ್ರವಿಡರ ವಶದಲ್ಲಿದ್ದಂತೆ ತೋರುತ್ತದೆ. ಮುಂದೆ ರಾಮನು ದಕ್ಷಿಣ ಭಾರತದಲ್ಲಿ ಬಂದು ದಕ್ಷಿಣ ಭಾರತವನ್ನು ದ್ರವಿಡ ಹಾಗೂ ಆದಿದ್ರವಿಡರ ನೆರವಿನಿಂದ ಆರ್ಯರ ಆಳಿಕೆಗೆ ಒಳಪಡಿಸಿದನೆಂಬುದು ರಾಮಾಯಣದಿಂದ ಸಿದ್ಧವಾಗುತ್ತದೆ. ಆರ್ಯಾವರ್ತದಲ್ಲಿ ಅಂದರೆ ಉತ್ತರ ಭಾರತದಲ್ಲಿ ಆರ್ಯರ ಸಂಪೂರ್ಣ ಅಧಿಕಾರ ನೆಲೆಗೊಂಡಿದ್ದು, ಅಲ್ಲಿ ಆರ್ಯ ಸಂಸ್ಕೃತಿಯು ಬೇರೂರಿತ್ತು. ದಕ್ಷಿಣ ಭಾರತದಲ್ಲಿ ಅನಾರ್ಯರ ಎಷ್ಟೋ ರಾಜ್ಯಗಳೂ, ತಂಡಗಳೂ ಇದ್ದು ಅಲ್ಲಿ ಅನಾರ್ಯ ಸಂಸ್ಕೃತಿಗಳು ಪ್ರಚಾರದಲ್ಲಿದ್ದವು. ಇವೆಲ್ಲ ಸಂಸ್ಕೃತಿಗಳನ್ನು ಪರಿಶೀಲಿಸಲಾಗಿ ಆರ್ಯ ಸಂಸ್ಕೃತಿಯು ಮಿಗಿಲಾದುದೂ ಪ್ರಭಾವಶಾಲಿಯೂ ಆಕ್ರಮಣಶೀಲವೂ ಇದ್ದಿತೆಂಬುದು ಕಂಡುಬರಬಹುದು. ಪರಿಸ್ಥಿತಿಯು ಹೀಗಿರುವಾಗ ಆಗಿನ ಕಾಲದಲ್ಲಿ ಆರ್ಯರಿಗೂ ಅನಾರ್ಯರಿಗೂ ತೀವ್ರ ವ್ಯತ್ಯಾಸ-ವೈಮನಸ್ಯಾದಿಗಳು ಉಂಟಾಗಿದ್ದುವೆಂಬುದಕ್ಕೆ ಸಂದೇಹವಿಲ್ಲ. ಆರ್ಯರು ಎಷ್ಟು ಸುಸಂಸ್ಕೃತರಿದ್ದರೋ ಅಷ್ಟೇ ಸುಸಂಘಟಿತರಾಗಿದ್ದರೆಂಬಂತೆ ತೋರುತ್ತದೆ. ಅನಾರ್ಯರು ಮಾತ್ರ ಗುಂಪುಗುಂಪಾಗಿ ಒಳ ಜಗಳಕ್ಕೀಡಾಗಿ, ಅಸಂಘಟಿತರಾಗಿ, ಏಕಾಧಿಪತ್ಯವಿಲ್ಲದ ಮೂಲಕ ಸುಸಂಸ್ಕೃತರಾಗಿಲು: ಆಗ ಅಸಮರ್ಥರಾಗಿದ್ದಲ್ಲಿ ಆಶ್ಚರ್ಯವಿಲ್ಲ. ತೆಂಕಣ ಭಾರತದಲ್ಲ ಎಷ್ಟೋ ತಂಡಗಳೂ ಜನಾಂಗಗಳೂ ಇದ್ದವೆಂದು ಹೇಳದ್ದಾಯಿತು. ಅವುಗಳಲ್ಲಿ ದ್ರವಿಡ ಜನಾಂಗಗಳು ಮಿಗಿಲಾದ ಸುಸಂಸ್ಕೃತಿಯನ್ನು ಪಡೆದವರೂ ಆಕ್ರಮಣಶೀಲರೂ ಆಗಿರಲಿಕ್ಕೆ ಸಾಕು. ಇವರು, ಅಂದರೆ ದ್ರವಿಡರು ಆದಿದ್ರವಿಡಾದಿ ತಮಗಿಂತ ಹೀನ ಸಂಸ್ಕೃತಿಯವರನ್ನು ಫಲವತ್ತಾದ ನಾಡಿನೊಳಗಿಂದ ಹೊಡೆದೋಡಿಸಿ ಅವರನ್ನು ದಂಡಕಾರಣ್ಯ, ಸಿಂಹಲದ್ವೀಪ ಮುಂತಾದ ಕಡೆಗೆ ದಬ್ಬಿರಲಿಕ್ಕೆ ಸಾಕು.

ಆರ್ಯರು ಅನಾರ್ಯರಿಂದ ಬಹಿರಂಗದಲ್ಲಿಯೂ ಅಂತರಂಗದಲ್ಲಿಯೂ ತೀರ ಭಿನ್ನರಾಗಿದ್ದರು. ರಘುವಂಶದಲ್ಲಿ ದಿಲೀಪ ಮುಂತಾದವರ ವರ್ಣನೆಯನ್ನು ಓದಿದರೆ ಆರ್ಯರ ಕಾಂತಿ, ಮೈಕಟ್ಟು ಮುಂತಾದವುಗಳ ಬಗ್ಗೆ ಯಥಾರ್ಥ ಕಲ್ಪನೆಯು ಬರಬಹುದು. ಅವರು ಬಿಳಿಯ ಕಾಂತಿಯುಳ್ಳವರೂ ಎತ್ತರ ಹಾಗೂ ಅಂದಚಂದವಾದ ಮೈಕಟ್ಟಿನವರೂ ಆಗಿರಲಿಕ್ಕೆ ಸಾಕು. ಆದರೆ ತೆಂಕಣ ಭಾರತದ ಅನಾರ್ಯ ಜನಾಂಗಗಳು ಕಪ್ಪು ಬಣ್ಣದವರೂ ಮೈಕಟ್ಟಿನಲ್ಲಿ ಚಂದ ಹಾಗೂ ಅಚ್ಚುಕಟ್ಟಾಗಿ ಇರದವರೂ ಇರಬಹುದೆಂಬುದು ರಾಮಾಯಣದಲ್ಲಿ ವಾಲ್ಮೀಕಿಯವರು ಮಾಡಿದ ವರ್ಣನೆಯ ಮೇಲಿಂದ ಸಿದ್ಧವಾಗುವುದು. ಅಂದಚಂದರಾದ ಆರ್ಯರು ಕಪ್ಪು ಬಣ್ಣದ ದ್ರವಿಡ ಹಾಗೂ ಆದಿದ್ರವಿಡಾದಿ ಜನರನ್ನು ನೋಡಿ ತಮ್ಮ ಸಾಂಸ್ಕೃತಿಕ ಗರ್ವದ ಮೂಲಕ ತಾವಷ್ಟೇ ಮಾನವರೆಂಬ

ಹೆಮ್ಮೆಯಿಂದ ಈ ಅನಾರ್ಯರು ಮಾನವರೋ ಅಥವಾ ಉಳಿದ
ಯಾವ ಪ್ರಾಣಿಗಳೋ ಎಂಬ ತಿರಸ್ಕಾರಯುಕ್ತ ಸಂದೇಹಕ್ಕೆ ಈಡಾ
ದಂತೆ ತೋರುತ್ತದೆ. ಆದುದರಿಂದಲೇ ಮಧ್ಯತೆಂಕಣದ ಅಡವಿಗ
ಳಲ್ಲಿಯೂ ಸಿಂಹಲ ದ್ವೀಪದಲ್ಲಿಯೂ ಮನೆಮಾಡಿಕೊಂಡ ಮಾನವ
ರನ್ನು ವಾಲ್ಮೀಕಿ ಮುನಿನಾಥರವರು ದಾನವರೆಂಬುದಾಗಿ ಬಣ್ಣಿಸಿ
ದ್ದಾರೆ. ಒಂದು ವೇಳೆ ಈ ಅರಣ್ಯ ವಾಸಿಗಳಲ್ಲಿ ಹಲಕೆಲವು ಕನಿಷ್ಠ
ತರಗತಿಯ ತಂಡುಗಳು ಆಗ ನರ ಭಕ್ಷಕರೂ ಆಗಿರಲಿಕ್ಕೆ ಸಾಕು.
ಆದುದರಿಂದಲೇ ಅವರನ್ನು ದಾನವ ಅಥವಾ ರಾಕ್ಷಸ ವೆಂಬ
ಶಬ್ದಗಳಿಂದ ನಿರ್ದೇಶಿಸಿರಬಹುದು. ಆದರೆ ಈ ತಂಡಗಳು ಹೀನ
ಸಂಸ್ಕೃತಿಯವರೂ ನರಭಕ್ಷಕರೂ ಆರ್ಯರ ರೀತಿ-ನೀತಿಗಳನ್ನು
ಅರಿಯದವರೂ ಇದ್ದರೆಂಬುದನ್ನು ಹೇಳಿದ್ದರೆ ವಾಲ್ಮೀಕಿ ಮುನಿ
ವರ್ಯರಿಗೆ ನಾವು ದೋಷವನ್ನು ಕೊಡುತ್ತಿದ್ದಿಲ್ಲ. ಆದರೆ ಮುನಿ
ವರ್ಯರು ಅಷ್ಟಕ್ಕೆ ನಿಲ್ಲದೆ ಈ ಹಿಂದುಳಿದ ಜನಾಂಗಗಳ ಬಹಿರಂಗ
ವನ್ನೂ ಕೂಡ ಮನಬಂದಂತೆ ಚಿತ್ರಿಸಿದ್ದಾರೆ. ರಾಮಾಯಣದಲ್ಲಿ
ರಾವಣ, ಕುಂಭಕರ್ಣ, ತಾಟಕಾ, ಶೂರ್ಪನಖಾ ಮುಂತಾದವರ
ವರ್ಣನೆಯನ್ನು ಓದಿದರೆ ವಾಲ್ಮೀಕಿಯವರ ವಿಷಯವಾಗಿ ಇತಿ
ಹಾಸ ದೃಷ್ಟಿಯುಳ್ಳ ಓದುಗರಲ್ಲಿ ವಿಚಿತ್ರ ವಿಕಾರಗಳುಂಟಾಗದೆ
ಇರವು. ಐತಿಹಾಸಿಕ ಹಾಗೂ ಭೌಗೋಲಿಕ ಅಜ್ಞಾನದ ಬಗ್ಗೆ
ಮುನಿನಾಥರನ್ನು ನೋಡಿ ನಗಬೇಕೋ ಅಥವಾ ಆರ್ಯಸಂಸ್ಕೃ
ತಿಯ ಅಭಿಮಾನಾತಿರೇಕದಿಂದ ಹಾಗೂ ಅನಾರ್ಯ ಸಂಸ್ಕೃತಿಯ
ತಿರಸ್ಕಾರಾತಿರೇಕದಿಂದ ಉನ್ಮತ್ತರಾಗಿ ಮತಿಗೆಟ್ಟ ಮುನಿವರ್ಯ
ರನ್ನು ಕಠೋರ ಶಬ್ದಗಳಲ್ಲಿ ನಿಷೇಧಿಸಬೇಕೋ ತಿಳಿಯದು!

ರಾವಣನ ಜನಾಂಗವನ್ನು ಮುನಿವರ್ಯರು ರಾಕ್ಷಸರೆಂಬು
ದಾಗಿ ಬಣ್ಣಿಸಿದ್ದಾರೆ. ದಿಗ್ವಿಜಯ ಮಾಡಹೊರಟ ಆರ್ಯ ಸಮ್ರಾ
ಟನಿಗೆ—ಶ್ರೀರಾಮಚಂದ್ರನಿಗೆ ಆರ್ಯ ಸಮ್ರಾಜ್ಞಿಯಾದ ಸೀತಾ
ದೇವಿಯನ್ನು ಲಂಕಾಪತಿಯಿಂದ ಬಿಡಿಸಿ ತರುವಲ್ಲಿ ತನು ಮನ
ಧನದಿಂದ ನೆರವಿತ್ತ ಸುಗ್ರೀವ, ಹಣಮಪ್ಪ ಮೊದಲಾದ ನಮ್ಮ
ದ್ರವಿಡ ಪೂರ್ವಜರನ್ನು ವಾಲ್ಮೀಕಿಯವರು 'ವಾನರ' ಎಂಬುದಾಗಿ
ಚಿತ್ರಿಸಿ ದ್ರವಿಡರು ಆರ್ಯರಿಗೆ ಮಾಡಿದ ಉಪಕಾರಕ್ಕೆ ಅಕ್ಷಮ್ಯ
ಅಪಕಾರವನ್ನು ಮಾಡಿದ್ದಾರೆ. ನಾವು ಮೇಲೆ ಉದಾಹರಿಸಿದ
'ಗ್ರ್ಯಾಂಟಡಫ್' ಮೊದಲಾದ ಇತಿಹಾಸಕರ್ತರ ಸತ್ಯಾಘಾತಗಳು
ವಾಲ್ಮೀಕಿಯವರ ವಿಪರ್ಯಾಸಗಳ ಮುಂದೆ ಎಲ್ಲಿಯೋ ಅಡಗಿ
ಹೋಗುವವು. ಗ್ರ್ಯಾಂಟಡಫ್ ಮೊದಲಾದವರ ವಿಧಾನಗಳು
ಈಗ ಬೈಲಿಗೆ ಬಂದದ್ದು ಅವುಗಳನ್ನು ನಂಬುವವರ ಸಂಖ್ಯೆಯು
ತೀರ ಕಡಿಮೆಯಾಗಿದೆ. ಆದರೆ ವಾಲ್ಮೀಕಿಯವರು ಮಾನವರನ್ನು
ವಾನರರನ್ನಾಗಿಯೂ ದಾನವರನ್ನಾಗಿಯೂ ಪರಿವರ್ತಿಸಿದ ರಾಮಾ
ಯಣವೆಂಬ ಸುಳ್ಳು ಹೆಸರಿನಿಂದ ತುಂಬಿದ ಯಾವತ್ತು ದ್ರವಿಡ
ಜನಾಂಗಗಳಿಗೂ ಆದಿ ದ್ರವಿಡರಿಗೂ ಅಪಮಾನದಿಂದ ತಲೆ ಕೆಳಗೆ
ಹಾಕಹಚ್ಚುವ ಗ್ರಂಥವು ಮಾತ್ರ ಈಗಲೂ ಯಾವತ್ತೂ ಭಾರತೀ
ಯರಿಗೆ—ದ್ರವಿಡ—ಆದಿದ್ರವಿಡರಿಗೂ ಕೂಡ ಪರಮ ಪವಿತ್ರವಾದ
ಗ್ರಂಥವಾಗಿ ಉಳಿದಿರುವುದನ್ನು ನೋಡಿದರೆ ನಮ್ಮ ಕನ್ನಡ ತಮಿಳು
ಮುಂತಾದ ನಾಡಿನ ಜನಾಂಗಗಳ ಸ್ವಾಭಿಮಾನ ಶೂನ್ಯತೆಯು
ಹಾಗೂ ದ್ರಾವಿಡ ಪೂರ್ವಜರ ಬಗ್ಗೆ ಎಳ್ಳಷ್ಟೂ ನಮ್ಮಲ್ಲಿ ಆದರವಿ
ಲ್ಲದುದರ ಬಗ್ಗೆ ಅತ್ಯಂತ ವಿಷಾದವೆನ್ನಿಸುವಂತೆ ಎಷ್ಟೋ ಸಾವಿರ
ವರುಷಗಳಾಗಿ ಹೋದರೂ ರಾಮಾಯಣದಲ್ಲಿ ಅನಾರ್ಯರನ್ನು
ಕುರಿತು ಮಾಡಿದ ಹಾವಾಡಿಗತನವು ಇದುವರೆಗೆ ಅಳಿಯದಂತೆ
ಆ ರಾಮನ ಕಥೆಯನ್ನು ಬರೆದ ವಾಲ್ಮೀಕಿಯ ಬಗ್ಗೆ ಅದ್ಭುತ
ಕೌತುಕವೂ ಎನ್ನಿಸುತ್ತಿದೆ.

ಅಂತೆಯೇ ವಿಪರ್ಯಾಸಮಾಡಲಿಕ್ಕೆ ವಸ್ತುಸ್ಥಿತಿಯೇ ಇಲ್ಲ
ದಂಥ ಇತಿಹಾಸಗಳನ್ನು ಬರೆದ ಶ್ರೇಷ್ಠ ಇತಿಹಾಸಕರ್ತರ ಶಿಖಾ
ಮಣಿಗಳೆಂಬುದಾಗಿ ವಾಲ್ಮೀಕಿ ಮುನಿನಾಥರವರನ್ನು ನಾವು ಮೇಲೆ
ಬಣ್ಣಿಸಿದ್ದಾಯಿತು. ಆರ್ಯರ ಬಗ್ಗೆಯಾಗಲಿ ಆರ್ಯರ ಭಾಷೆಯಾದ
ಸಂಸ್ಕೃತದ ಬಗ್ಗೆಯಾಗಲಿ, ಆರ್ಯರ ಆಚಾರ-ವಿಚಾರಗಳ ಬಗ್ಗೆ
ಯಾಗಲಿ ನನ್ನ ಕನ್ನಡ ಬಾಂಧವರಲ್ಲಿ ದ್ವೇಷವುಂಟಾಗಬೇಕೆಂಬ
ಗುರಿಯನ್ನಿಟ್ಟು ಈ ಚಿಕ್ಕ ಬರೆಹವನ್ನು ಬರೆದಿಲ್ಲ. ಆರ್ಯರು ಲಂಕೆ
ಸಹಿತ ಇಡಿಯ ಭರತಖಂಡವನ್ನು ಗೆದ್ದ ಬಳಿಕ ಆರ್ಯರೂ ದ್ರವಿ
ಡರೂ ಕೆಲಮಟ್ಟಿಗೆ ಆದಿದ್ರವಿಡರೂ ಪರಸ್ಪರರೊಡನೆ ಎಲ್ಲ ಬಗೆ
ಯಿಂದಲೂ ಬಳಿಕೆ ಮಾಡಲಾರಂಭಿಸಿದರು. ಸದ್ಯ ಭರತಖಂಡ
ದಲ್ಲಿ ಶುದ್ಧ ಆರ್ಯರಾಗಲಿ ಕೇವಲ ದ್ರವಿಡರಾಗಲಿ ಉಳಿದಿಲ್ಲ.
ಈಗಿನ ಭಾರತದಲ್ಲಿ ಆರ್ಯ ಹಾಗೂ ಅನಾರ್ಯ ನೆತ್ತರಗಳು
ಬೆರೆತುಹೋಗಿವೆ. ತೆಂಕಣ ಭಾರತದಲ್ಲಿ ದ್ರವಿಡ ಹಾಗೂ ಆದಿ
ದ್ರವಿಡ ಅಂಶವು ಹೆಚ್ಚಿನ ಪ್ರಮಾಣದಲ್ಲಿದ್ದು ಬಡಗಣ ಭಾರತದಲ್ಲಿ
ಆರ್ಯರ ಅಂಶವು ಹೆಚ್ಚಿನ ಪ್ರಮಾಣದಲ್ಲಿ ಇದ್ದಿರಬಹುದು. ವಂಗ
ದೇಶದಲ್ಲಿ ಮಂಗೋಲಿಯನ್ ಅಂಶವೂ ಇರುವುದೆಂದು ನಂಬಲಾ
ಗುತ್ತದೆ. ಅಂತೂ ನಮ್ಮ ನೆತ್ತರವು ಹೇಗೆ ಸಮ್ಮಿಶ್ರವಾಗಿದೆಯೋ
ಹಾಗೆಯೇ ನಮ್ಮ ಭಾರತೀಯ ಸಂಸ್ಕೃತಿಯಾದರೂ ಆರ್ಯ ಹಾಗೂ
ಅನಾರ್ಯ ಆಚಾರ ವಿಚಾರಗಳಿಂದ ಸಮ್ಮಿಶ್ರವಾಗಿದೆ. ನಮ್ಮ
ಈಗಿನ ಸಂಸ್ಕೃತಿಗೆ ಆರ್ಯ ಸಂಸ್ಕೃತಿಯೆಂದೂ ಅಥವಾ ದ್ರಾವಿಡ
ಸಂಸ್ಕೃತಿಯೆಂದೂ ಅನ್ನಲಿಕ್ಕೆ ಬಾರದು. ನಮ್ಮ ಸಂಸ್ಕೃತಿಗೆ
'ಭಾರತೀಯ ಸಂಸ್ಕೃತಿ'ಯೆಂದೇ ಹೇಳಬೇಕು.

ಆರ್ಯರ ಪಕ್ಷಪಾತಿಯಾದ ವಾಲ್ಮೀಕಿಯು ರಾಮಾಯಣ
ವನ್ನು ಬರೆಯುವಾಗ ವಸ್ತುಸ್ಥಿತಿಗೆ ಎಷ್ಟು ಸಲ್ಲದ ಎಂತೆಂತಹ
ವಿಪರೀತ ಸಂಗತಿಗಳನ್ನು ಹೇಳಿರುವನೆಂಬುದನ್ನು ಓದುಗರು ಅರಿ
ತಂತಾಯಿತು. ರಾಮಾಯಣವನ್ನು ಬರೆಯುವಾಗ ಈ ಮಹಾ
ಮುನಿಯು ಒತ್ತಟ್ಟಿಗ ಸುಣ್ಣದ ಗಡಿಗೆಯನ್ನೂ ಬೇರೆ ಕಡೆಗೆ
ಕಾಡಿಗೆಯ ಗಡಿಗೆಯನ್ನೂ ಇಟ್ಟುಕೊಂಡು ಆರ್ಯರನ್ನು ಚಿತ್ರಿಸು
ವಾಗ ತನ್ನ ಕುಂಚವನ್ನು ಸುಣ್ಣದಲ್ಲಿ ಎದ್ದುತ್ತಲೂ, ದ್ರವಿಡಾದಿ
ಅನಾರ್ಯರನ್ನು ಚಿತ್ರಿಸುವಾಗ ತನ್ನ ಕಸಬರಿಗಿಯನ್ನು ಕಾಡಿಗೆ
ಯಲ್ಲಿ ಎದ್ದುತ್ತಲೂ ತನ್ನ ದಿವ್ಯಗ್ರಂಥವನ್ನು ರಚಿಸಿದಂತೆ ತೋರು
ತ್ತದೆ. ಮಹಾಮುನಿಯೆನಿಸಿಕೊಳ್ಳುವವನಾದರೂ ಇಂತಹ ಅಕ್ಷಮ್ಯ
ಸಾಂಸ್ಕೃತಿಕ ದುರಭಿಮಾನಕ್ಕೆ ಈಡಾಗಬಾರದಿತ್ತು. ಆದರೆ ಇಂ
ತಹ ಮಹಾಮುನಿಯೂ ಸಾಂಸ್ಕೃತಿಕ ಅಹಂಕಾರ ತಿರಸ್ಕಾರ ಮುಂ
ತಾದವುಗಳಿಗೆ ತುತ್ತಾಗುವನೆಂದ ಬಳಿಕ ಸಾಮಾನ್ಯ ಇತಿಹಾಸಕಾ
ರರ ಮೇಲೆ ಪ್ರಾಂತೀಯ ಹಾಗೂ ಜಾತೀಯ ವಿಕಾರಗಳು ಪ್ರಭಾ
ವಶಾಲಿಯಾದಲ್ಲಿ ಆಶ್ಚರ್ಯವೇನು? ರಾಮಾಯಣವು ಆರ್ಯರ
ವಿಷಯದಲ್ಲಿ ಅತಿಶಯೋಕ್ತಿಯಿಂದಲೂ ಅನಾರ್ಯರ ವಿಷಯದಲ್ಲಿ
ಊನೋಕ್ತಿಯಿಂದಲೂ ಕಲಂಕಿತವಾಗಿದ್ದರೂ ಐತಿಹಾಸಿಕ ದೃಷ್ಟಿ
ಯಿಂದ ಅದರ ಮಹತ್ವವು ಇಷ್ಟೇ ಎಂದು ಹೇಳಲು ಬರುವಂತಿಲ್ಲ.
ಮಹಾಭಾರತದ ಜೊತೆಗೆ ರಾಮಾಯಣವೂ ಅತ್ಯವಶ್ಯವಾದ
ಉದ್ಗ್ರಂಥವು. ಇವೆರಡೂ ಗ್ರಂಥಗಳಿಂದ ಪ್ರಾಚೀನ ಭಾರತದ
ನಮ್ಮ ಸಾಮಾಜಿಕ ರಾಜಕೀಯ ಧಾರ್ಮಿಕ ಮುಂತಾದ ಸ್ಥಿತಿಗ
ಳನ್ನು ನಾವು ಅರಿಯಬಹುದಾಗಿದೆ; ಮಾತ್ರ ಅವುಗಳನ್ನು ಐತಿಹಾ
ಸಿಕ ದೃಷ್ಟಿಯಿಂದ ಪರಿಶೀಲಿಸಬೇಕು. ಅದರೊಳಗಿನ ಕಾವ್ಯಮಯ
ಭಾಗಗಳನ್ನು ಐತಿಹಾಸಿಕ ಜರಡಿಗೆ ಹಿಡಿದು ವಿಂಗಡಿಸಬೇಕು.
ಇನ್ನುಮೇಲೆ ರಾಮಾಯಣದ ಸಂಸ್ಕೃತ ಅಥವಾ ಕನ್ನಡ ಆವೃತ್ತಿ
ಗಳನ್ನು ಪ್ರಕಾಶಿಸುವಾಗ ನಾವು ಈ ಬರೆಹದಲ್ಲಿ ಎತ್ತಿದ ವಿಷಯ
ವನ್ನೂ ಇದೇ ಮಾದರಿಯ ಉಳಿದ ವಿಷಯಗಳನ್ನೂ ಒಳಗೊಂಡ
ಒಂದು ಐತಿಹಾಸಿಕ ಮುನ್ನುಡಿಯನ್ನು ಅವಶ್ಯವಾಗಿ ಆ ಗ್ರಂಥಕ್ಕೆ
ಕೊಡಬೇಕು. ಅಂದರೆ ಅನಾರ್ಯರಿಗೆ ತಗಲಿದ ಅವಮಾನವೂ

ಆರ್ಯರ ವಿಷಯವಾಗಿ ಕಂಡುಬರುವ ಗೌರವಾಧಿಕ್ಯವೂ ಓದುಗರಿಗೆ ಸುಲುಭವಾಗಿ ಕಂಡುಬರುವವು.

ವಾಲ್ಮೀಕಿ ರಾಮಾಯಣ ಗ್ರಂಥದಿಂದ ಓದುಗರಲ್ಲಿ ಉಂಟಾಗುವ ವಿಪರೀತ ಜ್ಞಾನವನ್ನು ಹೋಗಲಾಡಿಸುವುದಕ್ಕಾಗಿ ಓರ್ವ ಇತಿಹಾಸ ಪಂಡಿತರಿಂದ ಬರೆಯಲ್ಪಟ್ಟ ತರ್ಕಶುದ್ಧ ಮುನ್ನುಡಿಯನ್ನು ರಾಮಾಯಣಕ್ಕೆ ಹಾಕುವುದಕ್ಕೂ ಹಾಗೆಯೇ ನಮ್ಮೆಲ್ಲರ ಕಣ್ಣಿಗೆ ಬೀಳುವ ದಕ್ಷಿಣ ಭಾರತದ ಪ್ರಾಚೀನ ಕಾಲದ ದ್ರವಿಡ ದಂಡಿನೊಡೆಯರಾದ ನಮ್ಮ ಹಣಮಪ್ಪನವರ ಮೂರ್ತಿಯಲ್ಲಿಯೂ ಆ ಮೂಲಾಗ್ರ ಬದಲಾವಣೆಯಾಗಬೇಕು. ವಾಲ್ಮೀಕಿ ಮಹಾಮುನಿಗಳವರ ಕಣ್ಕಸಗಿನ ಮೂಲಕ ಪಾಪ! ನಮ್ಮ ಹಣಮಪ್ಪನವರಿಗೆ ಯಾವ ಗುಡಿಯಲ್ಲಿ ನೋಡಿದರೂ ಕೋತಿಯ ಮೋತಿಯೂ ಉದ್ದನ ಬಾಲವೂ ಪ್ರಾಪ್ತವಾಗಿವೆ. ಈ ತರಹದ ಮೂರ್ತಿಯನ್ನು ಎಷ್ಟೋ ಸಾವಿರ ವರುಷಗಳ ವರೆಗೆ ನೋಡಿ ನೋಡಿ ಹಣಮಪ್ಪನವರ ಈ ತೆರನ ದೃಶ್ಯದಲ್ಲಿ ಕಿಂಚಿತ್ತಾದರೂ ಅಸ್ವಾಭಾವಿಕತೆಯೂ ಇರಬಹುದೆಂಬ ಸಂದೇಹವು ನಮ್ಮಗಳ ಕನಸಿನಲ್ಲಿಯೂ ಬರುವದಿಲ್ಲ. ರೂಢಿಯ ಮಹಾತ್ಮ್ಯವು ಹೀಗಿರುತ್ತದೆ. ದ್ರವಿಡ ಕುಲೋತ್ತಮ ಹಣಮಪ್ಪನವರ ಬಾಲವನ್ನು ಕಡಿದೊಗೆದು ಅವರ ಮೋತಿ ಮೊದಲಾದವುಗಳಲ್ಲಿ ತೋರ್ಪಡುವ ಕೋತಿಯ ವೈಚಿತ್ರ್ಯಗಳನ್ನೂ ಹೋಗಲಾಡಿಸಿ ಆಗಿನ ಕಾಲದ ದ್ರವಿಡ ಸೇನಾಧಿಪತಿಯ ರೂಪದಲ್ಲಿಯೂ ಉಡುಪಿನಲ್ಲಿಯೂ ಅವರು ಎದ್ದು ಕಾಣುವಂತೆ ಪ್ರತಿಯೊಂದು ಗುಡಿಯಲ್ಲಿ ಅವರ ಮೂರ್ತಿಯು ಹೊಸ ಯುಗಕ್ಕನ್ವಯಿಸುವಂತೆ ಎಲ್ಲೆಡೆಗೂ ಏರ್ಪಾಡು ಆಗಬೇಕು. ಅಲ್ಲದೆ ಪ್ರತಿಯೊಂದು ರಾಮನ ಗುಡಿಯಲ್ಲಿ ರಾಮನೆದುರಿಗೆ ಅವನ ದಾಸಾನುದಾಸನಂತೆ ಕೈ ಜೋಡಿಸಿ ನಿಂತಿರುವ ನಮ್ಮ ಹಣಮಪ್ಪನವರ ಮೂರ್ತಿಗಳನ್ನು ಕಿತ್ತೊಗೆದು ನಾವು ಈಗ ಹೇಳಿದಂತಹ ಅವರ ಮೂರ್ತಿಯನ್ನು ಆರ್ಯ ರಾಮಚಂದ್ರನ ಬಲಗೈಯಾದ ಅವನ ದ್ರವಿಡ ಗೆಳೆಯನೆಂಬುದಾಗಿ ಅವರನ್ನು ರಾಮನ ಬಲಕ್ಕೆ ಸ್ಥಾಪಿಸಬೇಕು. ದ್ವಾರಪಾಲಕನಂತೆ ದಾಸಾನುದಾಸನಂತೆ ಬಾಲಸಹಿತ ಕೈ ಜೋಡಿಸಿ ನಿಂತಿರುವ ಈಗಿನ ರಾಮದೇವರ ಗುಡಿಗಳಲ್ಲಿ ಕಂಡುಬರುವ ಮಾರುತಿಯ ಮೂರ್ತಿಯು ನಮ್ಮ ದ್ರವಿಡ ಪೂರ್ವಜರ ಸುಳ್ಳು ದಾಸ್ಯತ್ವದ ನಿರಂತರ ಕುರುಹಾಗಿರುವುದೆಂಬುದನ್ನು ನಾವು ಮರೆಯಲಾಗದು. ಆದ್ದರಿಂದ ನಮ್ಮ ದ್ರವಿಡ ಪೂರ್ವಜರ ಬಗ್ಗೆ ಅಭಿಮಾನವನ್ನು ತಾಳುವ ಯಾವತ್ತೂ ಭಾರತೀಯರು ವಿಶೇಷವಾಗಿ ದ್ರವಿಡ ಭಾಷೆಯನ್ನಾಡುವ ನಾವು ಈ ವಿಷಯದ ಕಡೆಗೆ ಶೀಘ್ರವಾಗಿ ಗಮನಕೊಟ್ಟು ನಮ್ಮ ಪೂರ್ವಜರಿಗಾದ ಅನ್ಯಾಯವನ್ನು ಸರಿಪಡಿಸಬೇಕಾಗಿ ಓದುಗರಲ್ಲಿ ನಮ್ಮ ಮನವಿ.

( ಹಾವೇರಿಯ "ಕೆಳೆಯರ ಕೂಟ" ದವರ "ನನ್ನ ನುಡಿ" ಎಂಬ ಕೈ ಬರೆಹದ ಮಾಸಪತ್ರಿಕೆಯಿಂದ )

"ಜಯಕರ್ನಾಟಕ."

## ಮುಂಬೈ ಸರಕಾರದ ಸೂಚನೆ.

ಜಾತಿ, ಮತ, ವರ್ಗಗಳ ಹೆಸರಿನಿಂದ ಯಾವ ಸ್ಥಾನಿಕ ಸಂಸ್ಥೆಗಳ ಶಾಲೆಗಳಲ್ಲಿ ಆದಿಹಿಂದು ವಿದ್ಯಾರ್ಥಿಗಳ ಪ್ರವೇಶಕ್ಕೆ ಪ್ರತಿಬಂಧವಾಗುವದೋ ಅಥವಾ ಅವರನ್ನು ವಿಷಮ ಭಾವದಿಂದ ಶಾಲೆಗಳಲ್ಲಿ ಕಾಣಲಾಗುವದೋ ಆ ಶಾಲೆಗಳಿಗೆ ಸರಕಾರದಿಂದ ಕೊಡಲ್ಪಡುವ ಧನ ಸಹಾಯವು ನಿಲ್ಲಿಸಲ್ಪಡುವುದೆಂದು ಮುಂಬೈ ಸರಕಾರವು ಸ್ತುತ್ಯವಾದ ಸೂಚನೆಯನ್ನು ಮಾಡಿದೆ.

---

ಸಂಪಗಾಂವಿಯಲ್ಲಿ ಕೂಡಿದ್ದ
ವೀರಶೈವ ಒಳಪಂಗಡಗಳ ಏಕೀಕರಣ
ಸಭೆಯಲ್ಲಿ

## ತೀರ್ಮಾನವಾದ ಗೊತ್ತುವಳಿಗಳು.

೧. ವೀರಶೈವ ಧರ್ಮದಲ್ಲಿ ಜಾತಿಭೇದಗಳಿರುವುದಿಲ್ಲ. ಆದ್ದರಿಂದ ಅದರ ಉಪಪಂಗಡಗಳಲ್ಲಿ ಏಕೀಕರಣ ಸಹಭೋಜನ, ಶರೀರ ಸಂಬಂಧ (ವಿವಾಹ) ಮುಂತಾದವು ಎಲ್ಲ ರೀತಿಯಿಂದ ತೀವ್ರವಾಗಿ ಜರುಗುವಂತೆ ಎಲ್ಲ ಕಡೆಗೆ ಪ್ರಯತ್ನಿಸಬೇಕೆಂದೂ ಈ ಸಂಘಟನೆಯು ರಾಷ್ಟ್ರೀಯ ಭಾವನೆಯ ಪೋಷಕವಾಗಿದೆಯೆಂದೂ ಈ ಸಭೆಯು ನಿರ್ಧರಿಸುತ್ತದೆ.

೨. ಕಾಯಕದಲ್ಲಿ (ಉದ್ಯೋಗ) ಉಚ್ಚ, ನೀಚ, ಭಾವನೆ ಮಾಡತಕ್ಕದ್ದಲ್ಲ. ಕಾಯಕದಿಂದ ಪಂಗಡ ಭೇದವನ್ನು ಮಾಡಲಾಗದು. ಕಾಯಕವು ಪವಿತ್ರವೆಂದೇ ತಿಳಿಯತಕ್ಕದ್ದು.

೩. ಹುಬ್ಬಳ್ಳಿಯಲ್ಲಿ ಸ್ಥಾಪಿತವಾದ ಅನಾಥ ಬಾಲಕಾಶ್ರಮವು ಮಾಡುತ್ತಿರುವ ಕಾರ್ಯವು ಸಮಾಜದ ಹಿತದೃಷ್ಟಿಯಿಂದ ಅತ್ಯಂತ ಮಹತ್ವದ್ದೂ ಸ್ತುತ್ಯರ್ಹವೂ ಆಗಿರುವದೆಂದು ಈ ಸಭೆಯು ಅಭಿಪ್ರಾಯಪಡುತ್ತದೆ. ಹಾಗು ಆ ಸಂಘವನ್ನು ಅಭಿನಂದಿಸುತ್ತದೆ. ಸಮಾಜದವರು ಅದಕ್ಕೆ ಶಕ್ತ್ಯಾನುಸಾರ ಸಹಾಯ ಮಾಡತಕ್ಕದ್ದೆಂದು ಈ ಸಭೆಯು ಸೂಚಿಸುತ್ತದೆ.

೪. ವೀರಶೈವ ಮತಕ್ಕೆ ಬರಲಿಚ್ಛಿಸುವವರನ್ನು ವೀರಶೈವ ಧರ್ಮ ದೀಕ್ಷೆ ಕೊಟ್ಟು ತೆಗೆದುಕೊಳ್ಳಬೇಕೆಂದೂ ವೀರಶೈವ ಧರ್ಮದಿಂದ ಪರಧರ್ಮಕ್ಕೆ ಹೋದವರನ್ನು ದೀಕ್ಷೆಯಿಂದ ತಿರುಗಿ ನಮ್ಮ ಧರ್ಮಕ್ಕೆ ತೆಗೆದುಕೊಳ್ಳಬೇಕೆಂದು ಈ ಸಭೆಯು ನಿರ್ಧರಿಸುತ್ತದೆ.

೫. ತಿಗಡಿಯಲ್ಲಿ ಹಡಪದ ಸಮಾಜದವರಿಗೆ ಶ್ರೀ ಸಂಪಗಾವಿ ಚರಮೂರ್ತಿಗಳು ತಿಗಡಿ ಊರ ದೈವದವರು ಮಾಡಿದ ದೀಕ್ಷಾ ಕಾರ್ಯಕ್ಕೆ ಈ ಸಭೆಯು ಪೂರ್ಣ ಬೆಂಬಲ ಕೊಟ್ಟು ಅವರನ್ನು ಅಭಿನಂದಿಸುತ್ತದೆ. ಆ ಸಮಾಜದವರೊಡನೆ ಸರ್ವ ವೀರಶೈವರು ಬಳಿಕೆ, ಭೋಜನ ಮಾಡತಕ್ಕದ್ದೆಂದು ಈ ಸಭೆಯು ನಿರ್ಧರಿಸುತ್ತದೆ

೬. ವೀರಶೈವ ಒಳಪಂಗಡಗಳ ಏಕೀಕರಣದ ಸಲುವಾಗಿ ವೀರಶೈವ ಗುರುವರ್ಗದವರು ಸತತ ಪ್ರಯತ್ನಪಟ್ಟು ಈ ಕಾರ್ಯವನ್ನು ಕಾರ್ಯರೂಪದಲ್ಲಿ ತರುವಂತೆ ಅವರಿಗೆ ಆಗ್ರಹ ಪಡಿಸುತ್ತದೆ.

೭. ಸಾರ್ವಜನಿಕ ಮಠ ಮಾನ್ಯಗಳಲ್ಲಿ ಎಲ್ಲ ವೀರಶೈವರು ತಮ್ಮ ಲಗ್ನ ಮೊದಲಾದ ಕಾರ್ಯಗಳನ್ನು ಮಿತವ್ಯಯದಿಂದ ಜರಗಿಸಬೇಕು. ತೆರವು, ವರದಕ್ಷಿಣೆ ಕೊಡತಕ್ಕೊಳ್ಳುವದನ್ನು ಸಂಪೂರ್ಣವಾಗಿ ನಿಲ್ಲಿಸಬೇಕೆಂದು ಈ ಸಭೆಯು ನಿರ್ಧರಿಸುತ್ತದೆ.

೮. ಒಳಪಂಗಡಗಳ ಏಕೀಕರಣಕ್ಕಾಗಿ ಬೆಳಗಾವಿ ಜಿಲ್ಲೆಯಲ್ಲಿ ಕೆಲಸ ಮಾಡುವದಕ್ಕಾಗಿ ಸಭ್ಯ ಗೃಹಸ್ಥರದೊಂದು ಮಂಡಲವನ್ನು ಈ ಸಭೆಯು ನೇಮಿಸಬೇಕೆಂದು ನಿರ್ಧರಿಸುತ್ತದೆ. ಮತ್ತು ಹುಬ್ಬಳ್ಳಿಯಲ್ಲಿ ಈ ಮೊದಲೇ ಸ್ಥಾಪಿತವಾದ ವೀರಶೈವ ತರುಣ ಸಂಘಗಳ ಸಂಯುಕ್ತ ಘಟನಾಸಂಘಕ್ಕೆ ಈ ಸಭೆಯು ಒಳಪಟ್ಟಿರುತ್ತದೆ.

೯. ವೀರಶೈವ ಬಾಲವಿಧವೆಯರ ಪುನರ್ವಿವಾಹವನ್ನು ಪ್ರೋತ್ಸಾಹಿಸಬೇಕೆಂದೂ ಅವರ ಲಗ್ನವು ಮೊದಲನೆ (ಶುಭ) ಲಗ್ನವೆಂದು ತಿಳಿಯಬೇಕೆಂದು ಈ ಸಭೆಯು ನಿರ್ಧರಿಸುತ್ತದೆ.

# ವೀರಶೈವ ಏಕೀಕರಣ ಸಭೆ.

ಬೆಳಗಾವಿ ಜಿಲ್ಲಾ ಸಂಪಗಾವಿಯಲ್ಲಿ ಕಳೆದ ತಿಂಗಳು ೩೧ ನೆಯ ತಾರೀಖಿನ ದಿವಸ ವೀರಶೈವ ಒಳಪಂಗಡಗಳ ಏಕೀಕರಣದ ಸಭೆಯು ಶ್ರೀ. ಎಚ್. ಎಫ್. ಕಟ್ಟಿಮನಿ ಬಿ. ಎ. ಇವರ ಅಧ್ಯಕ್ಷತೆಯಲ್ಲಿ ಕೂಡಿದ್ದಿತು. ಶ್ರೀ. ಸಂಪಗಾವಿ ಚರಮೂರ್ತಿಗಳೇ ಮೊದಲಾದ ಸಮಾಜ ಸೇವಾ ನಿರತರಾದ ಅನೇಕ ಸ್ವಾಮಿಗಳೂ ಶ್ರೀ. ಚಿಕ್ಕವೀರಯ್ಯನವರು ಚಿಕ್ಕವೀರ ಮಠರವರೇ ಮೊದಲಾದ ವೀರಶೈವ ತರುಣ ಸಂಘಗಳ ಕಾರ್ಯನಿರ್ವಾಹಕರೂ ಶ್ರೀ. ಕೆ. ಎಸ್. ಪಾಟೀಲ ಎಂ. ಎಲ್. ಎ ಮೊದಲಾದ ಕಾಂಗ್ರೆಸ್ ಕಾರ್ಯದಕ್ಷರೂ ಈ ಸಭೆಗೆ ಬಂದಿದ್ದರು. ಸಭೆಯ ಕಾರ್ಯವು ಸಾವಿರಾರು ವೀರಶೈವ ಮಹಾಜನರ ಆಗಮನದ ನಂತರ ಪ್ರಾರಂಭವಾಗಿ ಸ್ವಾಗತಸಂಘಾಧ್ಯಕ್ಷರಾದ ಶ್ರೀ. ಗಂಗಪ್ಪನವರು ಅಧ್ಯಕ್ಷರಾದ ಶ್ರೀ. ಕಟ್ಟಿಮನಿಯವರು ಶ್ರೀ ಬಸವಾದಿ ಪ್ರಮಥರ ಅನೇಕ ವಚನಗಳ ಆಧಾರದಿಂದ ಒಳಪಂಗಡಗಳ ಏಕೀಕರಣವನ್ನು ಕುರಿತು ಬಹು ಮಹತ್ವದ ಭಾಷಣಗಳನ್ನು ಮಾಡಿದರು.

ಆಮೇಲೆ ಶ್ರೀ. ಅಂಗಡಿ ಬೆಳಗಾವ ಜಿಲ್ಲಾ ಲೋಕಲ್ ಬೋರ್ಡ ಪ್ರೆಸಿಡೆಂಟ ಇವರು ಒಳಪಂಗಡಗಳ ಏಕೀಕರಣದ ಬಗ್ಗೆ ಒಳ್ಳೇ ಸ್ಫೂರ್ತಿದಾಯಕ ಭಾಷಣ ಮಾಡಿದರು.

### ಶ್ರೀ. ಎಸ್. ಎನ್. ಅಂಗಡಿಯವರ ಭಾಷಣ.

ಈಗಿನ ೨೦ ನೇ ಶತಮಾನದಲ್ಲಿ ಎಲ್ಲ ಕಡೆಗೆ ಚಹಾದ ಅಂಗಡಿಗಳು ಆಗಿರುವುದರಿಂದ ಸಹಜವಾಗಿ ಏಕೀಕರಣವು ತಾನಾಗಿಯೇ ಆಗಿದೆ. ಇನ್ನು ನಮ್ಮವರಾದ ಹಾಗು ಲಿಂಗಧಾರಿಗಳಾದ ಹಡಪದವರು ಮಡಿವಾಳರೇ ಮೊದಲಾದವರ ಮನೆಯಲ್ಲಿ ಸಹಭೋಜನ ಮಾಡುವುದು ಶರೀರ ಸಂಬಂಧ ಮಾಡುವದರಲ್ಲಿ ಆಶ್ಚರ್ಯವಿಲ್ಲ. ನಮ್ಮ ಅಜ್ಞಾನದಿಂದ ಈ ವರೆಗೆ ನಾ ಹೆಚ್ಚು ನೀ ಕಡಿಮೆ ಎಂದು ಒಬ್ಬರಲ್ಲೊಬ್ಬರು ಬಳಿಕೆ ಭೋಜನ ಮಾಡುತ್ತಿದ್ದಿಲ್ಲ. ಈಗ ಮಾಡಲಿಕ್ಕೆ ಯಾವ ತರದ ಅಡ್ಡಿಯಿಲ್ಲ. ಈ ಕಾರ್ಯಗಳನ್ನು ನಾವು ಆದಷ್ಟು ಜಾಗ್ರತೆಯಾಗಿ ಜಾರಿಯಲ್ಲಿ ತರಬೇಕು. ನೀವು ಈ ಸಭೆಗೆ ಆರಿಸಿದ ಅಧ್ಯಕ್ಷರು ಈ ಮೊದಲು ಒಳಪಂಗಡಗಳನ್ನು ಮುರಿದು ಸಹಭೋಜನ ಸಹ ಮಾಡಿದವರಿದ್ದಾರೆ. ಅವರಂತೆ ನಾನೂ ಸಹಭೋಜನ ಮಾಡಿದ್ದೇನೆ. ಆದ್ದರಿಂದ ತಾವೆಲ್ಲರೂ ಅಷ್ಟಾವರಣಯುಕ್ತರಾದ ಲಿಂಗಾಂಗಿಗಳಲ್ಲಿ ಶರೀರ ಸಂಬಂಧ .ಹಾಗೂ ಸಹಭೋಜನ ಮಾಡಬೇಕು. ಎಂದು ಮುಂತಾಗಿ ಭಾಷಣಮಾಡಿದರು. ಯಾದಗಿರಿ ಕಾಲೇಜದ ಶ್ರೀ. ಚಂದ್ರಶೇಖರ ಶಾಸ್ತ್ರಿ ಪ್ರಿನ್ಸಿಪಾಲರು ಶ್ರೀ. ಮುಮುದಾಪುರ ಮಾಸ್ತರರು ಶ್ರೀ. ವೀರಪ್ಪನವರು ಉಪ್ಪಿನ ಹಾಗೂ ಶ್ರೀ. ಕೆ. ಏಸ್ ಪಾಟೀಲ ಡಾ. ಹುಲ್ಲೊಳ್ಳಿ, ಮಿಸೆಸ್ ಹುಲ್ಲೊಳ್ಳಿ ಇವರೆಲ್ಲರು ಒಳಪಂಗಡಗಳನ್ನು ಮುರಿದು ಶರೀರ ಸಂಬಂಧ ಹಾಗು ಸಹಭೋಜನಗಳನ್ನು ಮಾಡಬೇಕೆಂದೂ ಹೇಳಿದರು. ಬೆಳ್ಳೂರು ಶ್ರೀಮತಿ ಶಾಂತವೀರಮ್ಮ ಇವರ ಭಾಷಣವಾಯಿತು. ಅವರು ಪುರುಷರಾದ ನೀವು ವಿದ್ಯಾವಂತರಿದ್ದು ಒಳಪಂಗಡಗಳ ಏಕೀಕರಣಕ್ಕೆ ಸಿದ್ಧರಾಗಬಹುದು. ಆದರೆ ಅಜ್ಞಾನದೆಶೆಯಲ್ಲಿಟ್ಟ ನಿಮ್ಮ ಹೆಂಗಳೆಯರನ್ನು ನೀವು ಸುಧಾರಿಸಿ ಅವರನ್ನು ಅಕ್ಷರಸ್ಥರನ್ನಾಗಿ ಮಾಡಿರಿ. ಮೊದಲು ಭೂಮಿ ತಯಾರಿಸಿ ಆ ಮೇಲೆ ಬೀಜ ಬಿತ್ತಿರಿ. ಅಂದರೆ ಉತ್ತಮ ಫಲ ಬಂದೀತು. ಇಲ್ಲವಾದರೆ ನೀವು ಮಾಡುವ ಕಾರ್ಯವು ನಿಷ್ಫಲವಾಗುವುದು ಎಂದು ಮುಂತಾಗಿ ಹೇಳಿದರು.

### ಶ್ರೀ ತೊರಗಲ್ಲ ಪಟ್ಟದ ಸ್ವಾಮಿಗಳು.

ಒಳಪಂಗಡಗಳ ಏಕೀಕರಣವನ್ನು ಅವಶ್ಯಮಾಡಲೇ ಬೇಕಲ್ಲದೇ ಶುದ್ಧಿ ಸಂಘಟನೆಯನ್ನು ಮಾಡಬೇಕು. ನಮ್ಮ ಸಮಾಜವು ನಮ್ಮ ಅಜ್ಞಾನದಿಂದ ಹಾಗೂ ಗುರುಗಳೆಂದೆನಿಸಿಕೊಳ್ಳುವವರ ನಿಷ್ಕಾಳಜಿಯಿಂದ ಅಧೋಗತಿಗೆ ಹೋಗಹತ್ತಿದೆ. ನಾವು ನಮ್ಮ ನಮ್ಮೊಳಗೆ ಜಗಳಾಡಿ ಕೋರ್ಟು ಕಚೇರಗಳಿಗೆ ದುಡ್ಡು ಸೂರಿಮಾಡುವುದು ಅಡ್ಡ ಮೆರೆಯುವುದು ಉದ್ದ ಮೆರೆಯುವುದು ಮಾಡಹತ್ತಿದ್ದರಿಂದ ಸಮಾಜ ಕಾರ್ಯವು ನಮ್ಮಿಂದ ಸಾಗಲೊಲ್ಲದು. ನಾವೇ ಹೆಚ್ಚಾಗಿ ಮನಸ್ಸು ಹಾಕಿ ಭಕ್ತರಿಗೆ ತಿಳಿ ಹೇಳಿ ಒಡಪಂಗಡಗಳನ್ನು ಮುರಿಯಲಿಕ್ಕೆ ಉಪದೇಶ ಮಾಡಬೇಕಲ್ಲದೆ ಅವರ ಸಂಗಡ ಸಹಭೋಜನಾದಿ ಕಾರ್ಯಗಳನ್ನು ಜರುಗಿಸಬೇಕು. ಮಹಾತ್ಮಾ ಗಾಂಧಿಯವರು ಇಡೀ ಭಾರತ ದೇಶದಲ್ಲಿಯ ಸಕಲ ಜಾತಿಗಳನ್ನು ಒಂದೇ ಹಿಂದು ಜಾತಿ ಎಂದು ಮಾಡುತ್ತಿರುವಾಗ ನಾವು ವೀರಶೈವರಲ್ಲಿಯೇ ನೂರಾರು ಜಾತಿಗಳನ್ನು ಕಲ್ಪಿಸುವುದು ತೀರ ನಿಂದ್ಯವು. ದೀಕ್ಷೆ ಹೊಂದದೆ ಇದ್ದವರಿಗೆ ದೀಕ್ಷಾ ಸಂಸ್ಕಾರ ಕೊಟ್ಟು ಅವರ ಸಂಗಡ ಬಳಿಕೆ ಭೋಜನಗಳನ್ನು ಮಾಡಬೇಕೆಂದು ಮುಂತಾಗಿ ಒಳ್ಳೇ ಪರಿಣಾಮಕಾರಿ ಭಾಷಣ ಮಾಡಿದರು. ಆಮೇಲೆ ಶ್ರೀ. ಪ್ರ. ಯಮಕನಮರಡಿಯ ಸ್ವಾಮಿಗಳು ಒಳ್ಳೇ ಸ್ಫೂರ್ತಿದಾಯಕ ಭಾಷಣ ಮಾಡಿದರು. ಸಾಯಂಕಾಲ ೭ ಗಂಟೆಗೆ ಅಂದಿನ ಕಾರ್ಯ ಮುಗಿಸಿ ರಾತ್ರಿ ೧೦ ಗಂಟೆಗೆ ವಿಷಯನಿಯಾಮಕ ಕಮಿಟಿಯನ್ನಿಟ್ಟು ಅದರಲ್ಲಿ ಭಾಗತೆಗೆದುಕೊಳ್ಳಬೇಕೆಂದು ಬಯಸುವ ಪ್ರತಿಯೊಬ್ಬನಿಗೆ ಬರಲಿಕ್ಕೆ ಹೇಳಿದ್ದರಿಂದ ಸುಮಾರು ೨೦೦ ಜನರು ಭಾಗವಹಿಸಿ ರಾತ್ರಿ ೧೨ ಗಂಟೆಯ ವರೆಗೆ ಒಳ್ಳೇ ಉತ್ಸಾಹದಿಂದ ಚರ್ಚಿಸಿ ೧೦ ಗೊತ್ತುವಳಿಗಳನ್ನು ಪಾಸುಮಾಡಿದರು.

### ಸಹಭೋಜನ.

ಅದೇ ದಿವಸ ರಾತ್ರಿ ೮ ಗಂಟೆಯಿಂದ ೧೦ ಗಂಟೆಯ ವರೆಗೆ ಶ್ರೀ. ಚನಬಸಪ್ಪ ಹಡಪದ ಎಂಬುವವರು ಕಳೆದ ೨೦ ವರುಷಗಳ ಹಿಂದೆ ದೀಕ್ಷೆ ಹೊಂದಿ ಒಳ್ಳೇ ಆಚಾರದಿಂದ ನಡೆಯುತ್ತಿದ್ದರೂ (ಇಂದಿಗೂ ಹಡಪದ ಕಾಯಕ ಮಾಡುತ್ತಾರೆ.) ಅವರ ಮನೆಗೆ ಸಕಲ ವೀರಶೈವರು ಭೋಜನಕ್ಕೆ ಹೋಗುತ್ತಿದ್ದಿಲ್ಲ. ಆದರೆ ಅದೇ ಸಮಯಕ್ಕೆ ಕೂಡಿದ ಸಭೆಯಲ್ಲಿ ಅವರು ತನ್ನ ಮನೆಗೆ ಭೋಜನಕ್ಕೆ ಬರಬೇಕೆಂದು ಆಮಂತ್ರಣವೀಯಲು ಎಲ್ಲರೂ ಆಮಂತ್ರಣಕ್ಕೆ ಮನ್ನಣಿಯಿತ್ತು ಶ್ರೀ. ಅಂಗಡಿ, ಶ್ರೀ. ಮುಮುದಾಪುರ, ಶ್ರೀ. ಕಟ್ಟಿಮನಿ, ಶ್ರೀ ಗೋವಿಂದಗೌಡರು ತಿಪರಾಶಿ, ಶ್ರೀ. ಚಿಕ್ಕವೀರಯ್ಯನವರು ಚಿಕ್ಕವೀರಮಠ, ಶ್ರೀ. ಎಲ್. ಎಸ್. ಪಾಟೀಲ ಶ್ರೀ ಅಂದಾನಿಮಠ, ಶ್ರೀ ಗಂಗಪ್ಪಾ ಮುಮುದಾಪುರ, ಶ್ರೀ. ಚೆನ್ನಪ್ಪ ವಾಲಿ ಶ್ರೀ. ಸಿದ್ನಾಳ, ಶ್ರೀ. ಮಲ್ಲಪ್ಪ ಹೊಸಮನಿ ಮೊದಲಾದ ನೂರಾರು ಜನ ಪ್ರಮುಖರು ಅವರ ಮನೆಯಲ್ಲಿ ಭೋಜನ ಮಾಡಿದರು. ಮರುದಿವಸ ಯಾವತ್ತೂ ದೀಕ್ಷೆ ಹೊಂದಿದ ಹಡಪದವರು ಹಾಗು ಮಡಿವಾಳರು ಮಾಡಿದ ಅಡಿಗೆಯನ್ನು ಸಾವಿರಾರು ಜನರು ಕೂಡಿ ಒಂದೇ ಪಂಗ್ತಿಯಲ್ಲಿ ಅವರ ಹಸ್ತದಿಂದಲೇ ನೀಡಿಸಿಕೊಂಡು ಊಟ ಮಾಡಿದರು. ಆ ಕಾಲಕ್ಕೆ ಹಡಪದವರ ಹೆಣ್ಣುಮಕ್ಕಳು ರೊಟ್ಟಿ ಮಾಡುವುದು ಗಂಡಸರು ನೀರು ತರುವದು ನೀಡುವದು ಮೊದಲಾದ ಕೆಲಸಗಳನ್ನು ಒಳ್ಳೇ ಆನಂದದಿಂದ ಮಾಡಿದರು. ಇಂಥ ಭೋಜನವು ಈಗಿನ ೨೦ ನೇ ಶತಮಾನದಲ್ಲಿ ಮೊದಲನೇದ್ದೆಂದು ಹೇಳಬಹುದು. ಈ ಸುದ್ದಿಯು ಮರುದಿವಸ ಸುತ್ತಲಿನ ಊರುಗಳಿಗೆ ಹತ್ತಿದಕೂಡಲೇ ಒಳಪಂಗಡಗಳಲ್ಲಿ ದೀಕ್ಷೆ ಹೊಂದದೆ ಇದ್ದವರು ಭಾವಿಹಾಳ, ಬೈಲಹೊಂಗಲ, ಒಕ್ಕುಂದ, ಸಂಪಗಾವಿ, ಕಿತ್ತೂರ ಮೊದಲಾದ ಗ್ರಾಮದಿಂದ ಮಡಿವಾಳರೂ ಹಡಪದವರೂ

ಬಂದು ನಮಗೆ ದೀಕ್ಷೆ ಮಾಡಿರೆಂದು ಕೇಳಿಕೊಳ್ಳಹತ್ತಿದರು, ಅವರೆಲ್ಲರಿಗೆ ಸಭೆಯವರು ಹಾಗು ಎಲ್ಲ ಸ್ವಾಮಿಗಳು ನಿಮ್ಮೆಲ್ಲರಿಗೆ ದೀಕ್ಷೆಯನ್ನು ಕೊಟ್ಟು ಈ ಊರಲ್ಲಿ ನಿಮ್ಮ ಸಂಗಡ ಬಳಿಕೆ ಭೋಜನ ಮಾಡಬಹುದು. ಆದರೆ ನಿಮ್ಮ ಊರುಗಳಲ್ಲಿ ಅದರ ಪರಿಣಾಮವಾಗುವದಿಲ್ಲ. ಆದ್ದರಿಂದ ನಿಮ್ಮ ನಿಮ್ಮ ಊರುಗಳಲ್ಲಿಯೇ ದೀಕ್ಷಾ ಕಾರ್ಯವನ್ನು ಇಟ್ಟುಕೊಂಡು ನಮಗೆ ಆ ದಿವಸ ತಿಳಿಸಿರಿ. ನಾವೆಲ್ಲರೂ ಬಂದು ನಿಮ್ಮಲ್ಲಿಯ ಜನರ ಸಂಗಡ ಕೂಡಿಕೊಂಡು ಬಳಿಕೆ ಭೋಜನಾದಿ ಕಾರ್ಯಗಳನ್ನು ಮಾಡೋಣವೆನ್ನಲು ಅವರು ಸುಮ್ಮನಾದರು. ಇನ್ನು ಆಯಾಯ ಹಳ್ಳಿಗಳಲ್ಲಿ ದೀಕ್ಷಾ ಕಾರ್ಯದ ಒಂದು ಗಾಳಿಯೇ ಬೀಸಿದಂತಾಗಿ ಎಲ್ಲೆಡೆಗೆ ದೀಕ್ಷಾ ಕಾರ್ಯಗಳು ಸುರುವಾಗುವವು

"ತರುಣ ಕರ್ನಾಟಕ"

---

## ಬ್ಯಾ. ಜಿನ್ನಾರವರ ರಾಷ್ಟ್ರೀಯತೆ!

### ಕಾಂಗ್ರೆಸ್ಸಿನ ಮೇಲೆ ಆಕ್ಷೇಪಣೆ.

ಬ್ಯಾ. ಜಿನ್ನಾರವರು ಕಳೆದ ೪ನೆಯ ತಾರೀಖಿನ ಸಾಯಂಕಾಲ ಮುಂಬೈಯಲ್ಲಿ ಮುಸಲ್ಮಾನರ ಸಭೆಯಲ್ಲಿಯು ಮತ್ತು ತಾ. ೬ನೆಯ ದಿನ ಮೆಮನ್ ಚೆಂಬರ ಆಫ್ ಕಾಮರ್ಸ ಸಂಘದವರ ಮಾನಪತ್ರಕ್ಕೆ ಉತ್ತರವಾಗಿಯು ಮಾಡಿದ ಭಾಷಣಗಳಲ್ಲಿ ಹೀಗೆ ಹೇಳಿದರು—



ಬ್ಯಾ. ಜಿನ್ನಾರವರು.

"ನಾನು ಹಿಂದು-ಮುಸಲ್ಮಾನರ ಐಕಮತ್ಯಕ್ಕೋಸ್ಕರ ಬಹು ಆತುರನಾಗಿದ್ದೇನೆ. ಐಕಮತ್ಯವಾದರೋ ಸಮಾನ ಬಲವಿದ್ದವರಲ್ಲಿಯೇ ಉಂಟಾಗುತ್ತದೆ. ನಿರ್ಬಲರು ಒಪ್ಪಂದಕ್ಕೆ ಹೋಗುವುದೆಂದರೆ ಶರಣಾಗತರಾಗುವುದೇ ಸರಿ. ನಾವು ಮುಸಲ್ಮಾನರ ಕಡೆಗೆ ಲಕ್ಷಿಸದಿದ್ದರೆ ಪಂಜಾಬ ಮತ್ತು ಬಂಗಾಲಗಳ ಸ್ಥಿತಿಯಾದರೂ ಸಿಂಧದಂತೆ ಆಗುವುದು. ಮುಸಲ್ಮಾನರ ಮೇಲಿನ ಈ ವಿಪತ್ತು ನಿವಾರಣೆಯಾಗಬೇಕಾದರೆ ನಾವು ಸಂಘಟಿತರಾಗಬೇಕು.

ಕಾಂಗ್ರೆಸ್ ರಾಷ್ಟ್ರೀಯ ಸಂಸ್ಥೆಯಲ್ಲ. ಅದು ರಾಷ್ಟ್ರೀಯ ಸಂಸ್ಥೆಯಾಗಿದ್ದಿದ್ದರೆ ನಾನು ಅದರಿಂದ ಹೊರಗೆ ಬರುತ್ತಿರಲಿಲ್ಲ. ಕಾಂಗ್ರೆಸ್ಸಿನ ಏಳು ಪ್ರಾಂತಗಳಲ್ಲಿ ಈಗ ನಡೆದಿರುವುದನ್ನು ನೋಡಿದರೆ ನನ್ನ ಭೀತಿಯು ನಿಜವಾದುದೆಂದೇ ಅನುಭವದಿಂದಲೂ ಗೊತ್ತಾಗುವುದು. ಕಾಂಗ್ರೆಸ್ ರಾಷ್ಟ್ರೀಯ ಸಂಸ್ಥೆಯಾಗಿದ್ದಿದ್ದರೆ ಮುಸಲ್ಮಾನರ ಮೇಲೆ "ವಂದೇಮಾತರಂ" ಗೀತೆಯನ್ನು ಹೇರುತ್ತಿರಲಿಲ್ಲ. ಈ ಗೀತೆಯಿಂದ ಮುಸಲ್ಮಾನರ ಮನಸ್ಸು ನೋಯುತ್ತಿದ್ದರೂ ಸಾರ್ವಜನಿಕವಾಗಿ ಈ ಗೀತೆಯನ್ನು ಹೇಳುವುದಲ್ಲದೆ ಮುಸಲ್ಮಾನರಿರುವ ಶಾಲೆಗಳಲ್ಲಿ ಇದನ್ನು ಹೇಳಲೇಬೇಕಾಗಿ ನಿಯಮವಾಗಿದೆ. ಇಷ್ಟೇ ಅಲ್ಲ; ಈ ಪದ್ಯ ಹೇಳುವಕಾಲಕ್ಕೆ ಮುಸಲ್ಮಾನರು ಬರಬೇಕೆಂದು ತಿಳಿಸಲಾಗುತ್ತದೆ.

ಅಲ್ಪ ಸಂಖ್ಯಾಕರ ಪ್ರಶ್ನೆಯು ಕ್ಷುಲ್ಲಕವಾದುದಲ್ಲ. ಅದನ್ನು ಉಪೇಕ್ಷಿಸಬಾರದು. ಹಿಂದಿ ಭಾಷೆಯೇ ರಾಷ್ಟ್ರ ಭಾಷೆಯಾಗಬೇಕೆಂದು ಕಾಂಗ್ರೆಸ್ ಪ್ರಯತ್ನಿಸುತ್ತಲಿದೆ. ಹಿಂದುಸ್ಥಾನದ ೮-೯ ಕೋಟಿ ಮುಸಲ್ಮಾನರ ಭಾಷೆಯು ಉರ್ದು. ಅದು ಹಿಂದಿ ಭಾಷೆಗಿಂತ ಭಿನ್ನವಾದುದು. ಮುಸಲ್ಮಾನ ಹುಡುಗರು ಹಿಂದಿ ಭಾಷೆಯನ್ನು ಕಲಿತರೆ ಅವರ ಮನಸ್ಸಿನ ಮೇಲೆ ಹಿಂದು ಸಂಸ್ಕೃತಿಯ ಪರಿಣಾಮವಾಗುವುದು. ಹಿಂದು ಸಾಹಿತ್ಯ, ತತ್ವಜ್ಞಾನಗಳನ್ನು ಅವರು ಅಭ್ಯಾಸಮಾಡುವರು. ಹಿಂದು ವೀರರ ಕಥೆಗಳನ್ನು ಓದುವರು. ಇದರಿಂದ ಉರ್ದು ಭಾಷೆಯ ಮಹತ್ವ ಕಡಿಮೆಯಾಗುವುದು.

ಕಾಂಗ್ರೆಸ್ ಮುಸಲ್ಮಾನರಲ್ಲಿ ತನ್ನ ಪ್ರಚಾರ ಕಾರ್ಯ ನಡೆಯಿಸಿರುವುದು ಅಯುಕ್ತವಾಗಿದೆ. ಅದರಿಂದ ಜಾತಿ ನಿರ್ಣಯವು ವಿಧ್ವಂಸವಾಗುವುದು. ಮುಂಬೈ ಲೋಕಲ್ ಬೋರ್ಡ ಕಾನೂನಿನಲ್ಲಿ ಸಂಯುಕ್ತ ಮತ ಪದ್ಧತಿಯನ್ನು ಐಚ್ಛಿಕವಾಗಿ ಸೇರಿಸಿ ಮುಸಲ್ಮಾನರಲ್ಲಿ ಒಡಕನ್ನು ಹುಟ್ಟಿಸಿದ್ದಾಗಿದೆ. ಕಳೆದ ೫೦ ವರುಷಗಳಿಂದಲೂ ನಾಗರಿಕ ಸ್ವಾತಂತ್ರ್ಯಕ್ಕಾಗಿ ಹೋರಾಡುವ ಕಾಂಗ್ರೆಸ್ ಮುಂಬೈಯಿಂದ ಅಲ್ಲಿಯ ಯಾವನೊಬ್ಬ ವ್ಯಕ್ತಿಯನ್ನು ಸೀಮಾಂತರಗೊಳಿಸಲು ಪೋಲಿಸ ಕಮಿಶನರಿಗೆ ಅಧಿಕಾರ ಕೊಟ್ಟಿದೆ. ಒಬ್ಬನು ಅಪರಾಧ ಮಾಡಿದರೆ ಆತನನ್ನು ನ್ಯಾಯಸ್ಥಾನದ ಮುಂದೆ ತಂದು ವಿಚಾರಣೆ ಮಾಡಬೇಕಾದುದೇ ನ್ಯಾಯವಾದ ರೀತಿಯು."

---

## ಭೋಪಾಳ ಸಂಸ್ಥಾನದ ಹಿಂದುಗಳು.

### ೯ ಲಕ್ಷದಿಂದ ೬ ಲಕ್ಷಕ್ಕೆ!

ಭೋಪಾಳ ಎಂಬುದು ಮುಸಲ್ಮಾನ್ ಸಂಸ್ಥಾನ. ಹೈದರಾಬಾದ ಸಂಸ್ಥಾನದಂತೆಯೇ ಇಲ್ಲಿ ನಿರಂಕುಶ ಪ್ರಭುತ್ವ. ಹಿಂದುಗಳಿಗೆ ಹೆಚ್ಚಾದ ತೊಂದರೆ. ಅಲ್ಲಿ ಕೂಡಿದ್ದ ಹಿಂದು ಮಹಾಸಭೆಯ ಅಧ್ಯಕ್ಷರಾದ ಶ್ರೀ. ಠಾಕುರಲಾಲ ಸಿಂಹರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"೪೦ ವರುಷಗಳ ಹಿಂದೆ ಇಲ್ಲಿ ೯ ಲಕ್ಷಕ್ಕಿಂತ ಹಿಂದುಗಳ ಸಂಖ್ಯೆಯು ಹೆಚ್ಚಾಗಿದ್ದಿತು. ಈಗ ಆರು ಲಕ್ಷಕ್ಕೆ ಇಳಿದಿದೆ. ಇಲ್ಲಿ ನಮ್ಮ ಜೀವನೋಪಾಯಕ್ಕೆ ದಿನೆ ದಿನೆ ಅನಾನುಕೂಲಗಳು ಹೆಚ್ಚುತ್ತಾ ಬಂದುದರಿಂದ ಈ ಸಂಸ್ಥಾನವನ್ನು ಬಿಟ್ಟು ಹಿಂದುಗಳು ಬೇರೆ ಕಡೆ ಹೋಗುತ್ತಿರುವುದೇ ಈ ಸಂಖ್ಯೆ ಇಷ್ಟು ಕಡಿಮೆಯಾಗಲು ಮುಖ್ಯ ಕಾರಣ."

---

## "ವಂದೇಮಾತರಂ" ಹೇಳಕೂಡದು!

ಛಪರಾ ಎಂಬಲ್ಲಿಯ "ವಿಶ್ವೇಶ್ವರ ಸೆಮಿನರಿ" ಎಂಬ ಶಾಲೆಯಲ್ಲಿಯ ಮುಸಲ್ಮಾನ್ ವಿದ್ಯಾರ್ಥಿಗಳು "ವಂದೇಮಾತರಂ" ಗೀತೆಯನ್ನು ಶಾಲೆಯಲ್ಲಿ ಹೇಳಬಾರದಾಗಿ ಹಟತೊಟ್ಟಿದ್ದಾರೆ. ಜಿನ್ನಾ ಜಿಂದಾಬಾದ, ಗಾಂಧಿ ಮುರ್ದಾಬಾದ ಎಂದು ಕೂಗುತ್ತಿದ್ದಾರೆ. ವಂದೇಮಾತರಂ ಗೀತೆಯನ್ನು ಹೇಳದಿದ್ದರೇನೇ ತಾವು ಶಾಲೆಗೆ ಬರುವೆವೆಂದು ಅವರ ಹೇಳಿಕೆ. ಹಿಂದು ವಿದ್ಯಾರ್ಥಿಗಳಾದರೋ ವಂದೇಮಾತರಂ ಗೀತೆಯನ್ನು ಹೇಳಲು ಅವಕಾಶ ಕೊಟ್ಟರೇನೇ ಶಾಲೆಗೆ ಬರುವುದಾಗಿ ಹಟತೊಟ್ಟಿದ್ದಾರೆ. ಹೀಗೆ ಈ ಗೀತೆಯ ಮೂಲಕ ವಿದ್ಯಾರ್ಥಿಗಳಲ್ಲಿ ಜಾತಿಯ ದ್ವೇಷ ಹೆಚ್ಚುತ್ತಲಿದೆ

ಇಲ್ಲಿಯ ರಾಜಪುತ ಶಾಲೆಯ ಹೆಡ್‌ಮಾಸ್ತರರು ತಮ್ಮ ಶಾಲೆಯಲ್ಲಿ ವಂದೇಮಾತರಂ ಗೀತೆಯನ್ನು ಹೇಳಕೂಡದಾಗಿ ಅಪ್ಪಣೆಮಾಡಿದ್ದಾರೆ! ಮುಸ್ಲಿಂಲೀಗಿನವರು ಹೆಡ್‌ಮಾಸ್ತರರನ್ನು ಅಭಿನಂದಿಸಿದ್ದಾರೆ.

## ಮುಸಲ್ಮಾನ್ ಮುಖಂಡರ
# ಅರಾಷ್ಟ್ರೀಯ ಭಾಷಣ.

ಕಾಂಗ್ರೆಸ್-ಮುಸ್ಲಿಂಲೀಗ್ ಸಂಸ್ಥೆಗಳಲ್ಲಿ ಒಪ್ಪಂದ ಜರ
ಗುವ ವಿಚಾರವಾಗಿ ಆಲೋಚನೆಮಾಡಲು ಮುಸ್ಲಿಂಲೀಗ್ ಸಂಸ್ಥೆ
ಯ ಕಾರ್ಯನಿರ್ವಾಹಕ ಮಂಡಲಿಯು ಕಳೆದ ೪ನೆಯ
ತಾರೀಖಿನ ದಿವಸ ಮುಂಬೈಯಲ್ಲಿ ಕೂಡಿದ್ದಿತಷ್ಟೆ. ಆದಿನ ಸರ್.
ಅಲ್ಲಿಮಹಮ್ಮದಖಾನ ದೆಹಲವಿ ಇವರ ಅಧ್ಯಕ್ಷತೆಯಲ್ಲಿ ಮುಸಲ್ಮಾ
ನರ ಒಂದು ಪ್ರಚಂಡವಾದ ಬಹಿರಂಗ ಸಭೆಯು ಕೂಡಿತು. ಆಗ
ಕೆಲವು ಮುಸಲ್ಮಾನ ಮುಖಂಡರು ಮಾಡಿದ ಭಾಷಣಗಳನ್ನು ಕೇ
ಳಿದರೆ ಅವರ ಅರಾಷ್ಟ್ರೀಯತೆ, ಜಾತ್ಯಾಭಿಮಾನ, ಮುಸ್ಲಿಂ
ಪ್ರಪಂಚದ ಕಡೆಗಿರುವ ಒಲವು, ಕಾಂಗ್ರೆಸ್ಸಿನ ಧೋರಣದ ಬಗ್ಗೆ
ಇರುವ ವಿರೋಧ ಮೊದಲಾದವುಗಳು ಸ್ಪಷ್ಟ ಗೊತ್ತಾಗುತ್ತವೆ.

### ಸರ್. ಶಿಕಂದರಖಾನರ ವಿಚಾರಸರಣಿ.

ಪಂಜಾಬ ಪ್ರಾಂತದ ಮುಖ್ಯ ಮಂತ್ರಿಗಳಾದ ಸರ್.
ಶಿಕಂದರ ಖಾನರವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಹಿಂದು-ಮುಸಲ್ಮಾನರಲ್ಲಿ ಐಕಮತ್ಯವಾಗಬೇಕೆಂದೇ ಪ್ರತಿ
ಯೊಬ್ಬ ಮುಸಲ್ಮಾನನೂ ಇಚ್ಛಿಸುತ್ತಾನೆ. ಆದರೆ ಈ ಐಕಮತ್ಯವು
ನಮ್ಮ ಸ್ವಾಭಿಮಾನಕ್ಕೆ ಕೊರತೆಯನ್ನುಂಟು ಮಾಡುವದಾಗಿರ ಕೂ
ಡದು, ಬ್ರಿಟಿಶರ ಗುಲಾಮಗಿರಿಯನ್ನು ತಪ್ಪಿಸಿಕೊಂಡು ಹಿಂದುಗಳ
ಗುಲಾಮಗಿರಿಯಲ್ಲಿ ಬೀಳಲು ನಮಗೆ ಇಷ್ಟವಿಲ್ಲ. ಹಿಂದುಸ್ಥಾ
ನವು ಹಿಂದುಗಳ ದೇಶವೆಂದು ಹಿಂದು ಮಹಾಸಭೆಯ ಕೆಲವರು
ಹೇಳುತ್ತಿದ್ದಾರೆ. ಮುಸಲ್ಮಾನರು ಈ ದೇಶಕ್ಕೆ ಪರದೇಶದಿಂದ
ಬಂದರೆಂಬದನ್ನು ಮಾನ್ಯಮಾಡೋಣ ಹಿಂದುಗಳಾದರೂ ನಮ್ಮಂ
ತೆಯೇ ಪರದೇಶದಿಂದ ಬಂದವರಲ್ಲವೆ? ಮುಸಲ್ಮಾನರು ಈ ದೇ
ಶಕ್ಕೆ ಬಂದು ೮೦೦ ವರುಷಗಳಾಗಿದ್ದರೆ ಹಿಂದುಗಳು ಈ ದೇಶಕ್ಕೆ
ಬಂದು ೨೦೦೦ ವರುಷಗಳಾಗಿರ ಬಹುದು,

ಭಿಲ್ಲರೇ ಮೊದಲಾದ ಕಾಡುಜನರೇ ಈ ದೇಶದ ಮೂಲನಿ
ವಾಸಿಗಳು. ಆದಕಾರಣ ಹಿಂದು ಮತ್ತು ಮುಸಲ್ಮಾನ್ ಈ
ಉಭಯ ಜನಾಂಗದವರೂ ಈ ದೇಶವನ್ನು ಬಿಟ್ಟು ಹೋಗಬೇ
ಕಾಗುವುದು. ಹಿಂದುಗಳಿಗೆ ಈ ದೇಶದಲ್ಲಿರಲು ಎಷ್ಟು ಅಧಿಕಾರ
ವಿದೆಯೋ ಅಷ್ಟೇ ಮುಸಲ್ಮಾನರಿಗೂ ಇದೆ. ಎಂದಮೇಲೆ ಈ
ಎರಡೂ ಜನಾಂಗದವರು ಪರಸ್ಪರ ಪ್ರೇಮಾದರಗಳಿಂದ ಇಲ್ಲಿರು
ವುದೇ ವಿಹಿತವು. ವಿಶ್ವಾಸದಿಂದಲೇ ವಿಶ್ವಾಸವುಂಟಾಗುತ್ತದೆ.
ಆದಕಾರಣ ಹಿಂದುಗಳಲ್ಲಿ ನಮಗೆ ವಿಶ್ವಾಸವುಂಟಾಗಬೇಕಾದರೂ
ಅವರು ನಮ್ಮಲ್ಲಿ ವಿಶ್ವಾಸವಿಟ್ಟು ನಮ್ಮಕೇಳಿಕೆಗಳನ್ನು ಕೊಟ್ಟು
ನಮ್ಮಲ್ಲಿ ಅವರ ಬಗ್ಗೆ ವಿಶ್ವಾಸವುಂಟಾಗುವಂತೆ ಮಾಡಬೇಕು.
ಒಪ್ಪಂದವಾಗಲು ನಾವೇ ಮುಂದರಿದರೆ ಆಗ ಹಿಂದುಗಳು ನಾವು
ಬಲಹೀನರೆಂದೇ ಗ್ರಹಿಸುವರು. ನಾವು ಸಂಘಟಿತರಾಗಬೇಕು.

ಒಂದು ಪ್ರಾಂತದ ಮುಸಲ್ಮಾನರು ತೊಂದರೆಯಲ್ಲಿದ್ದರೆ
ಇನ್ನೊಂದು ಭಾಗದ ಮುಸಲ್ಮಾನರು ಅವರ ಸಹಾಯಕ್ಕಾಗಿ
ಓಡಿಬರಬೇಕು. ಮುಸ್ಲಿಂಲೀಗ ಸಂಸ್ಥೆ ಮುಸಲ್ಮಾನರ ಏಕಮೇವ
ಸಂಸ್ಥೆಯೆಂಬುದನ್ನು. ತೋರಿಸಿಕೊಡಲಿಕ್ಕಾಗಿಯೋ ನಾನು ಈ ಸಂ
ಸ್ಥೆಯಲ್ಲಿ ಸೇರಿದ್ದೇನೆ ಮುಸಲ್ಮಾನ ಪ್ರಾಂತಗಳಲ್ಲಿ ಹಿಂದುಗಳನ್ನು
ನಾವು ಹೇಗೆನಡೆಯಿಸಿಕೊಳ್ಳುತ್ತಿದ್ದೆವೆಯೋ ಹಾಗೆಯೇ ಹಿಂದುಗಳು
ನಮ್ಮನ್ನು ತಮ್ಮಪ್ರಾಂತದಲ್ಲಿ ನಡೆಯಿಸಿಕೊಳ್ಳಬೇಕೆಂದೇ ನಮ್ಮ
ಇಚ್ಛೆ."

ತಾ. ೬-೬-೩೮ನೆಯ ದಿವಸ ಸರ್. ಸಿಕಂದರಖಾನರು ಮುಂ
ಬೈಯಲ್ಲಿ ಮುಸ್ಲಿಂಧ್ವಜವಂದನೆಯ ಸಮಾರಂಭ ನಡೆಸುವಾಗ
ಹೀಗೆ ಹೇಳಿದರು.—

"ಹಿಂದುಸ್ಥಾನದಲ್ಲಿ ಸರ್ವಮಾನ್ಯವಾದ ಒಂದು ಧ್ವಜವು
ಏರ್ಪಡುವವರೆಗೂ ತಮ್ಮ ತಮ್ಮ ಸ್ವತಂತ್ರ ಧ್ವಜವನ್ನು ಹಾರಿ
ಸಲು ಎಲ್ಲ ಜಾತಿಯವರಿಗೂ ಅಧಿಕಾರವಿದೆ."

### ಮಿ. ಫಜಲುಲ್ ಹಕ್ಕರ ಆರ್ಭಟೆ.

ಬಂಗಾಲದ ಮುಖ್ಯ ಮಂತ್ರಿಗಳಾದ ಮಿ. ಫಜಲುಲ್
ಹಕ್ಕರವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು.—

"ಬಂಗಾಲದಲ್ಲಿಯ ಈಗಿನ ಮಂತ್ರಿ ಮಂಡಲವನ್ನು ಎತ್ತಿ
ಒಗೆಯಬೇಕೆಂದು ಕಾಂಗ್ರೆಸ್ ಪಕ್ಷವು ಪ್ರಯತ್ನಿಸುತ್ತಲಿದೆ ಆದ
ರೂ ನಾವು ಅದಕ್ಕೆ ಮಣಿಯದೆ ತಲೆ ಎತ್ತಿಕೊಂಡೇ ಇದ್ದೇವೆ.
ಗಡಿನಾಡು ಮತ್ತು ಸಿಂಧ ಪ್ರಾಂತಗಳಲ್ಲಿಯ ಮುಸಲ್ಮಾನರ ಗತಿ
ಯಂತೆಯೇ ನಮ್ಮ ಸ್ಥಿತಿಯಾದರೂ ಆಗಲಾರದೆಂದು ಹೇಳಲು
ಯಾರಿಗೆ ಸಾಧ್ಯ?

ಈಗ ಹಿಂದುಸ್ಥಾನದಲ್ಲಿ ಮುಸಲ್ಮಾನರಿಗೆ ಯಾರೂ ಮಿತ್ರ
ರಿಲ್ಲ. ಇಂಗ್ಲಿಷರು ನಮ್ಮ ಮಿತ್ರರೆಂದು ತಿಳಿಯುವುದು ತಪ್ಪು.
ನಾವು ನಮ್ಮ ಬಲವನ್ನು ಹೆಚ್ಚಿಸಿಕೊಳ್ಳಬೇಕು. ಎಲ್ಲಿಯ ವರೆಗೂ
ನಾವು ಬಲಶಾಲಿಗಳಾಗುವುದಿಲ್ಲವೋ ಅಲ್ಲಿಯವರೆಗೂ ಇಂಗ್ಲಿಷರು
ನಮ್ಮ ಸಂಗಡ ಮಿತ್ರತ್ವವನ್ನು ಮಾಡಿ ಕೊಳ್ಳುವುದಿಲ್ಲ. ಹಿಂದು
ಮುಸಲ್ಮಾನರ ಒಪ್ಪಂದದ ವಿಚಾರವಾಗಿ ನಾನು ಈಗ ಏನನ್ನೂ
ಹೇಳುವುದಿಲ್ಲ. ಈಗಿನ ಒಪ್ಪಂದದ ಮಾತುಕಥೆಗಳು ನಿಂತುಹೋ
ಗುವ ಪಾಪವನ್ನೇನೂ ನಾನೂ ತಲೆಯಮೇಲೆ ಹೊತ್ತುಕೊಳ್ಳಲು
ಸಿದ್ಧನಿಲ್ಲ.

ಈ ದೇಶದಲ್ಲಿ ೮ ಕೋಟಿ ಮುಸಲ್ಮಾನರಿದ್ದಾರೆ. ಅವರಲ್ಲಿ
ನಾನೊಂದು ಬಿಂದು. ಯಾವುದೋ ಒಂದು ಚಿಕ್ಕ ಪಾತ್ರೆಯ
ನೀರಿನ ಬಿಂದುವೆಂದು ಮಾತ್ರ ತಿಳಿಯಬೇಡಿರಿ. ಜಗತ್ತಿನಲ್ಲಿ ಪಸ
ರಿಸಿರುವ ಇಸ್ಲಾಂ ಸಾಗರದಲ್ಲಿಯ ಒಂದು ಬಿಂದುವೆಂದು ತಿಳಿ
ಯಿರಿ. ಜಗತ್ತಿನ ೪೦ ಕೋಟಿ ಮುಸಲ್ಮಾನರಲ್ಲಿ ನಾವೂ ಒಬ್ಬ
ರೆಂತಲೂ ನಮ್ಮ ಹಿಂದೆ ಇಸ್ಲಾಂ ಪ್ರಪಂಚದ ಶಕ್ತಿಯಿದೆಯೆಂ
ತಲೂ ತಿಳಿಯಿರಿ. ಆ ಶಕ್ತಿಯ ಬಲದಿಂದ ನಾವು ಬೇಕಾದುದ
ನ್ನು ಮಾಡಬಲ್ಲೆವೆಂದು ನೀವು ದೃಢವಾಗಿ ನಂಬಿರಿ."

### ಮಿ. ಔರಂಗಜೇಬ ಖಾನರ ದರ್ಪ!

ಗಡಿನಾಡ ಪ್ರಾಂತಿಕ ಅಸೆಂಬ್ಲಿ ಸಭಾಸದರಾದ ಮಿ. ಔರಂ
ಗಜೇಬ ಖಾನರು ತಮ್ಮ ಭಾಷಣದಲ್ಲಿ ಕಾಂಗ್ರೆಸ್ ಪಕ್ಷವು ಅಲ್ಲಿ
ಮುಸಲ್ಮಾನ್ ಮಂತ್ರಿಮಂಡಲವನ್ನು ಹೇಗೆ ಎತ್ತಿ ಒಗೆಯಿತೆಂದೂ
ಕಾಂಗ್ರೆಸ್ಸಿನ ಸೈತಾನಿ ಆಟ ನಡೆದಿದೆಯೆಂದೂ ಇಷ್ಟರಲ್ಲೇ ಅದ
ನ್ನು ಓಡಿಸಿಬಿಡುವವರಿದ್ದೇವೆಂದೂ ದರ್ಪೋಕ್ತಿಗಳನ್ನು ಆಡಿದರು.

ಮಿ. ಸಿಡಿಕ್ಕಿಯವರು ಹೀಗೆ ಹೇಳಿದರು— ಹಿಂದುಸ್ಥಾನ
ದಲ್ಲಿ ಮುಸಲ್ಮಾನರು ತಮ್ಮ ವರ್ಚಸ್ಸನ್ನು ಸ್ಥಾಪಿಸಬೇಕು ಹಾಗಾ
ದರೆ ಇತರ ಮುಸಲ್ಮಾನ್ ರಾಷ್ಟ್ರಗಳಮೇಲೆ ಇಂಗ್ಲಿಷರಿಂದಾಗುತ್ತಿ
ರುವ ಆಕ್ರಮಣವು ನಿಲ್ಲುವುದು.

ಮಿ. ಮಲಿಕ ಬರಕತ ಅಲ್ಲಿಯವರು ಹೀಗೆ ಹೇಳಿದರು—
"ಕಾಂಗ್ರೆಸ್ ಪ್ರಾಂತದಲ್ಲಿಯ ಮುಸಲ್ಮಾನರಿಗೆ ತೊಂದರೆಯುಂ
ಟಾದರೆ ಪಂಜಾಬ ಮತ್ತು ಬಂಗಾಲಗಳಲ್ಲಿಯ ಮಂತ್ರಿಮಂಡಲ
ಗಳು ಆ ಸೇಡನ್ನು ತೀರಿಸಬೇಕು."

ಮಿ. ಅಬದುಲ್ಲ ಮಜೀದರು ಹೀಗೆ ಹೇಳಿದರು— "ಮು
ಸ್ಲಿಂಲೀಗ್ ಇದು ಜಾತಿಯ ಸಂಸ್ಥೆಯಲ್ಲ. ಹಿಂದುಸ್ಥಾನದ ಹೊ
ರಗಿನ ಇಸ್ಲಾಂ ರಾಷ್ಟ್ರಗಳ ಸಂಗಡ ಅದು ತನ್ನ ಸಂಬಂಧವ
ನ್ನು ಬೆಳೆಯಿಸಿ ಹಿಂದುಸ್ಥಾನದ ಮುಸಲ್ಮಾನರ ಶಕ್ತಿಯನ್ನು ಹೆ
ಚ್ಚಿಸುವುದು. ಮುಸಲ್ಮಾನರು ಹಿಂದುಸ್ಥಾನದಲ್ಲಿಯೇ ಇರುವರು.
ಮತ್ತು ಇಲ್ಲಿಯೇ ಮರಣ ಹೊಂದುವರು. ಇವರು ಸಾಯುವಾಗ
ಸಮಗ್ರ ಹಿಂದುಸ್ಥಾನವನ್ನೇ ವ್ಯಾಪಿಸಿ ಸಾಯುವರು."

## [illegible] !

ಹಿಂದುಸ್ಥಾನದ ಸಂಸ್ಥಾನಗಳು ನಿರಂಕುಶ ಪ್ರಭುತ್ವದಿಂದ ಅನೇಕ ವಿಪತ್ತುಗಳಿಗೀಡಾಗಿವೆಯಷ್ಟೆ. ರಾಮದುರ್ಗ ಚಿಕ್ಕ ಸಂಸ್ಥಾನವೂ ಅವುಗಳಲ್ಲಿ ಒಂದು. ಈ ಸಂಸ್ಥಾನದ ಪ್ರಜೆಗಳಲ್ಲಿ ಈಗ ಭಯಂಕರವಾದ ಅಸಂತೋಷವುಂಟಾದ ಕಾರಣಗಳನ್ನು ಕುರಿತು ಶ್ರೀಮತಿ ಕಮಲಾದೇವಿಯವರು ಒಂದು ಮಹತ್ವದ ಲೇಖನವನ್ನು ಪ್ರಕಟಿಸಿದ್ದಾರೆ. ಅದರಲ್ಲಿ ಅವರು ಹೀಗೆ ತಿಳಿಸಿದ್ದಾರೆ—

### ಸಂಸ್ಥಾನದ ಪರಿಚಯ.

“ರಾಮದುರ್ಗವು ಉತ್ತರ ಕರ್ನಾಟಕದಲ್ಲಿರುವ ಒಂದು ಚಿಕ್ಕ ಸಂಸ್ಥಾನ. ವಿಜಾಪುರ ಮತ್ತು ಧಾರವಾಡ ಜಿಲ್ಲೆಗಳಿಂದ ಇದು ಸುತ್ತುವರಿಯಲ್ಪಟ್ಟಿದೆ. ೪೦ ಹಳ್ಳಿಗಳಿವೆ. ಇದರ ಒಟ್ಟು ವಿಸ್ತಾರ ೧೬೯ ಮೈಲು ಜನಸಂಖ್ಯೆ ಸುಮಾರು ೩೫೪೫೪. ಈ ಸಂಸ್ಥಾನದ ಉತ್ಪನ್ನ ೨೫೫೫೬೧ ರೂ. ಎಂದು ಅಂದಾಜ ಮಾಡಲಾಗಿದೆ.

ಈ ಸಂಸ್ಥಾನದ ಆಡಳಿತೆಯು ಸಾಮಾನ್ಯವಾಗಿ ಎಲ್ಲ ಸಂಸ್ಥಾನಗಳ ಆಡಳಿತೆಯಂತೆಯೇ ಇರುವದು. ರಾಮದುರ್ಗದ ರಾಜರು ಸರ್ವ ಸ್ವತಂತ್ರರಿದ್ದಾರೆ. ಅವರಿಗೆ ಸಂಪೂರ್ಣ ನಿರಂಕುಶಾಧಿಕಾರಗಳಿವೆ. ಸಾಮಾನ್ಯವಾಗಿ ದಿವಾನರ ಮೂಲಕವೇ ಅವರು ರಾಜ್ಯಭಾರಮಾಡುತ್ತಾರೆ. ಕಂದಾಯ ಮತ್ತು ನ್ಯಾಯಖಾತೆಗಳೆರಡಕ್ಕೂ ದಿವಾನರೇ ಮುಖ್ಯಾಧಿಕಾರಿಗಳು.

### ಮಿತಿಮೀರಿದ ವೆಚ್ಚ.

ಸಂಸ್ಥಾನದ ವೆಚ್ಚದ ವಿವರಗಳನ್ನು ಕುರಿತು ಕೆಳಗಿನ ಅಂಕಿಗಳನ್ನು ನೋಡಿದರೆ ಸಂಸ್ಥಾನದ ನಿಜ ಪರಿಸ್ಥಿತಿಯ ಪರಿಚಯವಾಗುವದು.

| | |
|---|---|
| ಆಡಳಿತೆ | ೩೮೦೦೦ |
| ಪೋಲೀಸ | ೧೭೦೦೦ |
| ಶಿಕ್ಷಣ | ೧೮೦೦೦ |
| ವೈದ್ಯಕೀಯ | ೫೭೧೮ |
| ಪಿ. ಡಬ್ಲ್ಯು. ಡಿ. | ೪೧೦೦೦ |
| ದೇವಸ್ಥಾನ | ೧೦೦೦೦ |
| ಸರಂಜಾಮು | ೯೦೦೦ |
| ಸಂಸ್ಥಾನಾಧಿಪತಿಗಳ ವಾಸದಖರ್ಚು | ೩೪೦೦೦ |

ಈ ಅಂಕಿಗಳೇ ನಿಜ ಪರಿಸ್ಥಿತಿಯನ್ನು ತಿಳಿಸುವವು. ಆಡಳಿತೆಯ ಸಲುವಾಗಿ ಖರ್ಚುಮಾಡುವಷ್ಟು ಹಣವನ್ನು ಸಂಸ್ಥಾನಾಧೀಶ್ವರರು ತಮ್ಮ ಖಾಸಗಿ ಖರ್ಚುಗಳಿಗೆ ಉಪಯೋಗಿಸುತ್ತಿರುವದೇನೂ ಆಶ್ಚರ್ಯವಲ್ಲ. ವೈದ್ಯಕೀಯ ಸಹಾಯಕ್ಕಾಗಿ ೫೦೦೦ ರೂ. ಗಳನ್ನು ಖರ್ಚುಮಾಡುತ್ತಿರುವರೆಂದು ಹೇಳಿದರೆ ಎದೆಯೊಡೆಯದೆ ಇರದು. ಆದರೆ ಎಲ್ಲ ಸಂಸ್ಥಾನಗಳ ಪರಿಸ್ಥಿತಿಯೂ ಹೀಗೆಯೇ ಇರುವದು.

### ಕರಭಾರ.

ಇಲ್ಲಿಯ ಜನರು ಶಿಕ್ಷಣದಲ್ಲಿ ಬಹಳ ಹಿಂದುಳಿದಿರುವರು. ಇದರ ಮೇಲೆ ಬಡತನದ ಮತ್ತು ಅಧಿಕಾರಿಗಳ ದಾಳಿಯಾಗುತ್ತಿದೆ. ಹೀಗೆ ಸಂಕಟ ಗ್ರಸ್ತರಾದ ಪ್ರಜೆಗಳು ನಿರುತ್ಸಾಹಿಗಳಾಗಿ ಕುಳಿತಿರುವರು. ತಮ್ಮ ಸಂಸ್ಥಾನಾಧೀಶ್ವರರ ಮಾತಿಗೆ ಪ್ರತಿ ಮಾತ ಕಳೆದ ೨೦ ವರುಷಗಳಲ್ಲಿ ತಮ್ಮ ಉತ್ಪನ್ನವನ್ನು ೨೦೦೦೦ ದ[illegible] ಯಿಂದ ೨॥ ಲಕ್ಷ ರೂ. ಗಳ ವರೆಗೆ ಹೆಚ್ಚಿಸಿರುವರು [illegible] ಸಂಸ್ಥಾನದ ಭೂಕಂದಾಯವು ಬ್ರಿಟಿಶ್ ಹಿಂದುಸ್ಥಾನದ ಕಂ[illegible] ಯಕ್ಕಿಂತ ಮೂರರಷ್ಟು ಹೆಚ್ಚಾಗಿರುವದು. ವರ್ಷಕ್ಕೆ ಕೇ[illegible] ೫೦೦ ರೂ. ಉತ್ಪನ್ನವಿದ್ದರೂ ಅದರ ಮೇಲೆ ಕರವನ್ನು [illegible] ಲಾಗಿದೆ. ಇದಲ್ಲದೆ ಊಹಿಸಲು ಕೂಡ ಅಸಾಧ್ಯವಾಗಿರುವ [illegible]ನ್ನೂ ಅನೇಕ ಬಗೆಯ ಕರಭಾರಗಳಿವೆ. ಒಂದು ಮನೆ ಅಥ[illegible] ಗುಡಸಲಿನ ಮುಂದೆ ಸ್ವಲ್ಪ ಜಾಗವಿದ್ದರೆ ಅದಕ್ಕೆ ಎಕರೆಗೆ [illegible] ರೂಪಾಯಿಗಳಂತೆ ಕರವಿದೆ. ಇದರಿಂದ ಮನೆಯ ಮಾಲಕ[illegible] ಮನೆಯ ಮುಂದೆ ಸ್ವಲ್ಪ ಸ್ಥಳವನ್ನು ಕೂಡಾ ಇಟ್ಟುಕೊಳ್ಳಲು ಕೂಡ ಸಾಧ್ಯವಿಲ್ಲ. ಆಣೆವಾರಿಯಾದರೂ ಬ್ರಿಟಿಶ್ ಹಿಂದುಸ್ಥಾನದ ಆಣೇವಾರಿಗಿಂತ ಮೂರರಷ್ಟು ಹೆಚ್ಚಾಗಿರುವದು. ಪ್ರತಿಯೊಂದು ರಸ್ತೆಗೂ ಒಂದೊಂದು ರೂಪಾಯಿಯಂತೆ ಕರವಿದೆ ಸಂಸ್ಥಾನದಲ್ಲಿ ಲೋಕಲ್ ಬೋರ್ಡಿಗೆ ಸೇರಿದ ಎರಡು ರಸ್ತೆಗಳೂ ಸರಕಾರಕ್ಕೆ ಸೇರಿದ ಮೂರು ರಸ್ತೆಗಳೂ ಇವೆ. ಅಂದರೆ ಹುಲ್ಲು ಮೇಯಲು ಹೊರಗೆ ಹೋಗುವ ಪ್ರತಿಯೊಂದು ದನಕ್ಕೂ ಒಟ್ಟು ೫ ರೂಪಾಯಿ ಕರ ಕೊಡಬೇಕಾಗುವದು.

ಪ್ರತಿಯೊಂದು ಇಂಚು ಸ್ಥಳದ ಮೇಲೂ ಕರ ಹೇರಬೇಕೆಂಬುದೇ ಇಲ್ಲಿನ ಸರಕಾರದ ತತ್ವ ಅದು ಫಲವತ್ತಾಗಿರುವದೋ ಇಲ್ಲವೆ ಅದು ಗುಡ್ಡಗಾಡು ಪ್ರದೇಶವೇ ಬಂಜರು ಭೂಮಿಯೋ ಅಥವಾ ಮರುಳು ಭೂಮಿಯೇ ಎಂಬುದನ್ನು ಈ ಸರಕಾರವು ವಿಚಾರಿಸುವದೇ ಇಲ್ಲ.

ಮಗ್ಗಗಳು ಕೆಲಸಮಾಡಲಿ ಅಥವಾ ಬಿಡಲಿ ಪ್ರತಿ ನಾಲ್ಕು ಮಗ್ಗಗಳ ಮೇಲೆ ೧೧-೪-೦ ಯಂತೆ ಕರ ಹೇರಲಾಗಿದೆ. ಬಣ್ಣ ಅದ್ದುವ ನೂಲಿದ ಮೇಲೆ ೨ ರಿಂದ ೩ ರೂ. ಗಳ ವರೆಗೆ ಕರಕೊಡಬೇಕಾಗುವದು. ಹಾಗು ನೂಲಿಗೆ ಬೇಕಾಗುವ ಬಯಲು ಸ್ಥಳಕ್ಕೆ ೧೦೦ ಚದರಡಿಗೆ ನಾಲ್ಕಾಣೆಯಂತೆ ಕರ! ಯಾವದೇ ತರಹದ ಮಂಟಪ ಅಥವಾ ಗಳದ ಚಪ್ಪರಕ್ಕೆ ಕೂಡ ನಾಲ್ಕು ರೂಪಾಯಿ ಕರವನ್ನು ಒಕ್ಕಲಿಗರು ಕೊಡಬೇಕಾಗುವದು. ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳ ಆಡಂಬರವಿರುವದಾದರೂ ಚುನಾವಣೆ ಎಂದಿಗೂ ಆಗಿಲ್ಲ. ಆಗುವ ಸಂಭವವೂ ಇಲ್ಲ. ಯಾಕೆಂದರೆ ಸರಕಾರವು ತಾನೆ ಅಡ್ಡ ಬರುತ್ತಿರುವದರಿಂದ ಹುರಿಯಾಳಾಗಿ ನಿಲ್ಲಲು ಯಾರೂ ಅಡ್ಡ ಬರುವದಿಲ್ಲ.

### ವಿಚಾರಕ್ರಾಂತಿ.

ನವಚೈತನ್ಯದ ಗಾಳಿಯು ಎಲ್ಲ ಕಡೆಯಲ್ಲಿಯೂ ಬೀಸಹತ್ತಿತು. ಎಲ್ಲೆಲ್ಲಿಯೂ ಹೊಸ ಹುರುಪು ಹೊಸ ಶಕ್ತಿ ಬಂಡುಹೂಡಬೇಕೆಂಬ ಧ್ವನಿಯು ಅವರಿಗೆ ಎಲ್ಲ ಕಡೆಯಿಂದಲೂ ಕೇಳಿಬರಹತ್ತಿತು.

ನಿಮಗೂ ಜೀವನ ಸಾಗಿಸುವ ಹಕ್ಕು ಇದೆ, ನಿಮ್ಮ ರಾಜರೊಬ್ಬರಿಗೇ ಮಾತ್ರವಲ್ಲ. ಈ ಭೂಮಿಯು ನಿಮ್ಮದೆ ನೀವು ಆಹಾರವನ್ನು ಹುಟ್ಟಿಸಿರುವಿರಿ. ಅಂದ ಬಳಿಕ ನೀವು ಉಪವಾಸ ಸಾಯುವದೇಕೆ ? ಏಳಿರಿ. ಈ ಅನ್ಯಾಯದ ವಿರುದ್ಧ ಬಂಡುಹೂಡಿರಿ. ಅತ್ಯಾಚಾರವನ್ನು ಪ್ರತಿಭಟಿಸಿರಿ. ಗಂಡುಗಲಿಗಳಾಗಿರಿ. ಧೀರರಾಗಿರಿ ಇವರಲ್ಲಿಯ ನವಚೈತನ್ಯಕ್ಕೆ ಕಾರಣವಾದ ವಿಚಾರಗಳು ಇವೇ. ಇವುಗಳಿಗೆ ಮನಸೋತು ಅಂಜುತ್ತಂಜುತ್ತಲೇ ಅಂಟಕೊಂಡು ಬಿಟ್ಟರು!”

# ನನ್ನ ಶ್ರೀಶೈಲದ ಪ್ರವಾಸ.

(ಲೇಖಕರು— ಶ್ರೀ ಶಿವಯೋಗಿಗಳು ಬಂಥನಾಳ.)

ಶ್ರೀ ಶೈಲವು ಭರತಖಂಡದ ಸುಪ್ರಸಿದ್ಧ ಪುರಾತನ ದ್ವಾದಶ ಜ್ಯೋತಿರ್ಲಿಂಗಗಳ ಪೈಕಿ ಮಲ್ಲಿಕಾರ್ಜುನ ಲಿಂಗದ ವಾಸಸ್ಥಾನವಾದುದರಿಂದಲೂ ಶ್ರೀಶೈಲವು ವೀರಶೈವರ ಪರಮಪೂಜ್ಯರಾದ ಪ್ರಭುದೇವ, ಪಂಡಿತಾರಾಧ್ಯ, ಸಿದ್ಧರಾಮೇಶ್ವರ, ಅಕ್ಕ ಮಹಾದೇವಿ ಮೊದಲಾದ ದಿವ್ಯ ವಿಭೂತಿಗಳ ಚರಿತ್ರೆಗೆ ಸಂಬಂಧಪಟ್ಟ ಸ್ಥಾನವಾದುದರಿಂದಲೂ ಸುಕ್ಷೇತ್ರ ಬಂಥನಾಳ ನಿರಾಭಾರಿ ಗುರುಪೀಠದ ಮೂಲಪುರುಷರಾದ ವೃಷಭಲಿಂಗ ಶಿವಯೋಗಿಗಳ ತಪಸ್ಸಿನ ಸ್ಥಾನವಾದುದರಿಂದಲೂ ಆ ಪುಣ್ಯ ಸ್ಥಾನವನ್ನು ಒಮ್ಮೆ ನೋಡಬೇಕೆಂಬ ಕುತೂಹಲವು ಬಹು ದಿವಸಗಳಿಂದಲೂ ನನ್ನಲ್ಲಿದ್ದಿತು. ಅದರಂತೆ ಕಳೆದ ಫಾಲ್ಗುಣ ವದಿ ೮ ಶುಕ್ರವಾರ ದಿವಸ ಕೆಲವು ಭಕ್ತಮಂಡಳಿಯೊಡನೆ ಶ್ರೀ ಶೈಲಕ್ಷೇತ್ರಕ್ಕೆ ಹೊರಟದ್ದಾಯಿತು.

ರೇಲ್ವೆ ಮಾರ್ಗದಿಂದ ನಂದ್ಯಾಲಕ್ಕೆ ಹೋಗಿ ಅಲ್ಲಿಂದಾ ಚಕ್ಕಡಿಯಮೇಲೆ ಗಂಗನಪಲ್ಲಿಗೆ ಹೋದದ್ದಾಯಿತು. ಆದರೆ ಅಲ್ಲಿ ಯಾತ್ರಿಕರಿಗಾಗಿ ನೀರು ಸ್ಥಳ ಮೊದಲಾದವುಗಳ ಅನುಕೂಲತೆ ಚೆನ್ನಾಗಿಲ್ಲ. ಬಹುಕಾಲದ ಒಂದು ಕೆರಿಯಲ್ಲಿ ಸ್ವಲ್ಪೇ ನೀರು ಇದ್ದು ಅವು ಕೂಡ ಜೆಂಚರ ಎಮ್ಮೆ ಆಕಳು ಮೊದಲಾದವುಗಳ ಕುಳಿದಾಟದಿಂದ ಅತ್ಯಂತ ಮಲಿನವಾಗಿರುತ್ತವೆ. ಅವು ಯಾತ್ರಿಕರ ಕುಳಿದಾಟದಿಂದ ಮತ್ತಿಷ್ಟು ರಾಡಿಯಾಗುವವು. ಅಂಥ ನೀರನ್ನೇ ಬಾಯಾರಿಕೆಯಿಂದ ಬಳಲಿದ ಯಾತ್ರಿಕರು ಕುಡಿಯಲೇ ಬೇಕಾಗುತ್ತದೆ. ಆ ನೀರಿನ ವಿನಃ ಬೇರೆ ನೀರು ಸಿಗಲು ಶಕ್ಯವಿಲ್ಲ. ನಿಜವಾಗಿ ಹೇಳಬೇಕಾದರೆ ಇಲ್ಲಿಂದಲೇ ಯಾತ್ರಿಕರ ಆರೋಗ್ಯ ಕೆಡಲು ಪ್ರಾರಂಭವಾಗುವುದು. ಅದೇ ನೀರನ್ನೇ ನಾವೆಲ್ಲರೂ ಸ್ನಾನಪಾನಾದಿಗಳಿಗೆ ಉಪಯೋಗಿಸಿಕೊಂಡು ರಾತ್ರಿಯನ್ನು ಅಲ್ಲೇ ಬೈಲಿನಲ್ಲಿಯೇ ಕಳೆದು ನಸುಕಿನಲ್ಲೆದ್ದು ಹೊರಟು ಯಾತ್ರಿಕರೊಡನೆ ೧೧ ಘಂಟೆಗೆ ಭೀಮನ ಕೊಳ್ಳಕ್ಕೆ ಬಂದೆವು. ಅಷ್ಟರಲ್ಲಿ ಯಾತ್ರಿಕರಿಗೆ ಸೋಪಾನಗಳನ್ನು ಏರಿ ಇಳಿದು ಅತಿಶ್ರಮವಾಗಿ ನೀರಡಿಕೆಯು ನಿಶ್ಚಯವಾಗಿ ಆಗುವುದು. ಆದರೆ ಭೀಮನ ಕೊಳ್ಳದಲ್ಲಿ ನೀರಿನ ಅನುಕೂಲತೆಯು ಕಿಂಚಿತ್ತಾದರೂ ಇರುವುದಿಲ್ಲ. ಒಂದು ಕಲ್ಲು ಪಡಿಯಲ್ಲಿ ಸ್ವಲ್ಪೇ ನೀರಿದ್ದು ಅವು ಮಲಿನವಾಗಿರುತ್ತವೆ.

ಅಂಥ ನೀರಿನಲ್ಲಿಯೇ ಹೋದ ಯಾತ್ರಿಕರು ಸ್ನಾನಮಾಡಿ ಸೀರೆ ಧೋತರಗಳನ್ನು ಒಗೆಯುವುದಲ್ಲದೆ ತಂದ ಕುದುರೆ ಎತ್ತುಗಳನ್ನು ಒಳಗೆ ಹೊಗಿಸಿಯೇ ನೀರು ಕುಡಿಸುವುದರಿಂದ ಅವುಗಳ ಮಲಮೂತ್ರಾದಿ ದೋಷದಿಂದ ಆ ನೀರು ಕುಡಿಯಲಿಕ್ಕಷ್ಟೇ ಅಲ್ಲ, ದೂರದಿಂದ ವಾಸನೆ ತೆಗೆದುಕೊಳ್ಳುವುದಕ್ಕು ಕೂಡಾ ಅಯೋಗ್ಯವಾದವುಗಳಾಗಿರುತ್ತವೆ. ಅಂಥ ನೀರನ್ನೇ ನೀರಡಿಕೆಯಿಂದ ನಿಕ್ಕಳಿಕೆಯಿಂದ ಜನರು ಕುಡಿಯದೆ ಗತ್ಯಂತರವಿಲ್ಲ. ಆದರೂ ನಾನು ಎಲ್ಲರಿಗೂ ಈ ನೀರು ಕುಡಿಯಬೇಡಿರೆಂದು ಎಷ್ಟು ಹೇಳಿದರೂ ಬಹು ಜನರು ನೀರಿನ ತಾಪ ತಾಳಲಾರದೆ ಕುಡಿದರು. ನಾನು ಹಾಟಕೇಶ್ವರಕ್ಕೆ ಹೋಗಿ ಸ್ನಾನಾದಿಗಳನ್ನು ಮಾಡಬೇಕೆಂದು ನಿಶ್ಚಯಿಸಿ ನಮ್ಮ ಮಂಡಳಿಯೊಡನೆ ಸ್ವಲ್ಪ ವೇಳೆಯಲ್ಲಿಯೇ ಕೈಲಾಸ ಬಾಗಿಲಿಗೆ ಬಂದೆನು. ಅಲ್ಲಿ ಈ ಭಾಗದ ಕಂಬಿ ಗಣಂಗಳು ತಮ್ಮ ಕಂಬಿಗಳನ್ನಲ್ಲಿಟ್ಟು ಬಂದ ಯಾತ್ರಿಕರಿಂದ ದಕ್ಷಿಣೆ ಎತ್ತುವ ಕಾಯಕ ನಡೆಸಿದ್ದರು.

ಪೂರ್ವದ ಯಾವ ಶ್ರೀಮಂತರು ತಮ್ಮ ಉದಾರ ಬುದ್ಧಿಯಿಂದ ಪುಣ್ಯ ಸಂಪಾದನೆಗಾಗಿ ಶ್ರೀಶೈಲ ಮಾರ್ಗದಲ್ಲಿ ನೀರಿನ ಕೊರತೆ ಇದ್ದದರಿಂದ ಯಾತ್ರಿಕರಿಗೆ ನೀರನ್ನೊದಗಿಸಿಕೊಡುವ ಉದ್ದೇಶದಿಂದ ಈ ಕಂಬಿಗಳನ್ನು ಕಳಿಸುವ ಏರ್ಪಾಟು ಮಾಡಿದ್ದರೋ ಅದು ಈಗ ಇಲ್ಲದಾಗಿದೆ. ದಾರಿಯಲ್ಲಿ ನೀರು ಕೊಡುವುದಂತು ದೂರೇ ಉಳಿದು ಯಾತ್ರಿಕರ ಕೂಡ ನಡೆದು ಹೋಗುವ ಕಂಬಿಯವರು ಕೂಡಾ ಕಡಿಮೆಯಾಗಿದ್ದಾರೆ. ೩-೪ ಕಂಬಿಗಳನ್ನು ೫೦-೫೦ ರೂಪಾಯಿಗಳಿಗೆ ಮಕ್ತೆ ಹಿಡಿದು ಶ್ರೀಮಂತ ಪ್ರಯಾಣಿಕರಂತೆ ಇವರು ಈಗ ಗಾಡಿ ಮೋಟಾರುಗಳಲ್ಲಿಯೇ ಶ್ರೀಗಿರಿಗೆ ಹೆಚ್ಚಾಗಿ ಬರುತ್ತಿದ್ದಾರೆ.

ನಮ್ಮ ಹಿರಿಯರು ಕಂಬಿ ಕಳಿಸುತ್ತಿದ್ದರು. ನಾವು ಕಳಿಸಬೇಕೆಂದು ಅಂಥ ಶ್ರದ್ಧೆಯಿಂದ ಕಳಿಸುವ ಜನರಿಗೆ ಇದರಿಂದ ಪುಣ್ಯ ಬರುವುದೋ ಪಾಪ ಬರುವುದೊ? ವಾಚಕರೇ ನಿಶ್ಚಯಿಸಲಿ.

ನಾವುಗಳೆಲ್ಲ ಕೈಲಾಸ ಬಾಗಿನಲ್ಲಿ ಕಂಬಿ ಗಣಂಗಳ ಲೀಲೆಯನ್ನು ನೋಡಿಕೊಂಡು ಮಧ್ಯಾಹ್ನಕ್ಕೆ ಹಾಟಕೇಶ್ವರಕ್ಕೆ ಹೋದೆವು. ಅಲ್ಲಿ ಭಾವಿ ನೀರು ಸಾಧಾರಣ ಚೆನ್ನಾಗಿವೆ. ಅಲ್ಲಿ ಪೂಜಾ ಪ್ರಸಾದ ತೀರಿಸಿಕೊಂಡು ಹಾಟಕೇಶ್ವರನ ದರ್ಶನ ತೆಗೆದುಕೊಂಡೆವು. ಗುಡಿಯು ಅತಿ ಶಿಥಿಲವಾಗಿದೆ. ದೇವಾಲಯದಲ್ಲಿ ಕೇವಲ ಜಲ ಹರಿಯೇ ಇದ್ದು ಲಿಂಗವು ಇಲ್ಲದಾಗಿದೆ. ಆದರ ಹಿಂದೆ ಒಡೆದ ಒಂದು ಮೂರ್ತಿಯನ್ನು ಕೂಡ್ರಿಸಿದ್ದಾರೆ. ಅದನ್ನು ನೋಡಿದವರಿಗೆ ನೋಡದೆ ಇದ್ದ ಕಾಲದಲ್ಲಿಯ ಭಕ್ತಿಯು ಕೂಡಾ ನೋಡುವಿಕೆಯಿಂದ ಇಲ್ಲದಂತಾಗುತ್ತದೆ. ಈ ಸ್ಥಾನದ ಕಡೆಗೆ ಶ್ರೀಶೈಲ ಪರಿಪಾಲನ ಸಂಘದವರೂ ಜೀರ್ಣೋದ್ಧಾರ ಸಂಘದವರೂ ಲಕ್ಷ ಹಾಕಬಾರದೆ? ಇರಲಿ. ಅಲ್ಲಿಂದ ಶಿಖರೇಶ್ವರನ ನೋಡಿದ್ದಾಯಿತು. ಆ ಸ್ಥಾನವು ಶ್ರೀಶೈಲ ಶಿಖರ ಪ್ರಾಯವಾಗಿರುವುದರಿಂದ ಆ ಹೆಸರು ಅನ್ವರ್ಥಕವಾದುದಾಗಿದೆ. ದೇವಾಲಯವೂ ಲಿಂಗಮೂರ್ತಿಯೂ ಚೆನ್ನಾಗಿವೆ. ಅಲ್ಲಿಂದ ಪಂಚಧಾರೆಯನ್ನು ನೋಡಿದ್ದಾಯಿತು. ಅಲ್ಲಿ ಕಲ್ಲುಗಳ ಸಂದಿಯಲ್ಲಿ ಕೆಲವು ನೀರಿನ ಝರಿಗಳು ಹರಿದು ಬರುತ್ತಿರುವುದರಿಂದ ಇದಕ್ಕೆ ಪಂಚಧಾರೆಯೆಂದು ಕರೆಯುತ್ತಿರಬಹುದೆಂದು ಊಹಿಸಲಾಯಿತು. ಅಲ್ಲಿಂದ ಸಂಜೆಗೆ ಎಲ್ಲ ಮಂಡಳಿಯೊಡನೆ ಮಲ್ಲಿಕಾರ್ಜುನನ ದೇವಾಲಯಕ್ಕೆ ಬಂದದ್ದಾಯಿತು. ಅಷ್ಟರಲ್ಲಿಯೇ ನಮ್ಮ ಭಾಗದ ಬಹು ಯಾತ್ರಿಕರು ಮೊದಲೇ ಅಲ್ಲಿ ಸೇರಿದ್ದರಿಂದಲೂ ನಾನು ಬರುವೆನೆಂಬ ವಾರ್ತೆ ಮೊದಲೇ ತಿಳಿದುಕೊಂಡಿದ್ದರಿಂದಲೂ ಎಲ್ಲ ಜನರು ಕೂಡಿ ಭಜನಾದಿಮೇಳಗಳೊಡನೆ ಇದಿರ್ಗೊಂಡು ಕರೆದುಕೊಂಡು ಹೋಗಲಿಕ್ಕೆ ಬಂದರು.

ಆಗ ನನಗೆ ಮಲ್ಲಿಕಾರ್ಜುನನ ದರ್ಶನಕ್ಕೆ ನಾನು ಬಂದಿರಲು ಆತನೆ ನನ್ನನ್ನು ಪ್ರೇಮಾಂತಃಕರಣದಿಂದ ಕರೆಯ ಕಳಿಸಿದನೇನೋ ಎಂದೆನಿಸಿ ಆಲೋಚನಾಪರನಾಗಿರಲು ಮರುಕ್ಷಣದಲ್ಲಿಯೇ ವಿಷಾದ ಪ್ರಸಂಗವೂ ಒಂದು ಉಂಟಾಯಿತು. ಯಾಕೆಂದರೆ ಕರೆಯ ಬಂದವರೊಡನೆ ಹಾಗೆಯೇ ಮಲ್ಲಿಕಾರ್ಜುನನ ಧೂಳ ದರ್ಶನ ತೆಗೆದುಕೊಂಡು ಇಳಿಯುವಸ್ಥಾನಕ್ಕೆ ಹೋಗಬೇಕೆಂದು ಗರ್ಭಗುಡಿಯ ಬಾಗಿಲಿಗೆ ಬರಲು ದೇವಾಲಯದ ಬ್ರಾಹ್ಮಣ ಕಾವಲಗಾರರು ಟಕೀಟು ಅಥವಾ ಪಾಸ್ ಇಲ್ಲದೆ ಒಳರು ಬಿಡಲಿಕ್ಕಾಗುವದಿಲ್ಲವೆಂದು ತಡೆದರು. ಕೂಡಲೇ ಕೂಡಿದ ಜನ ಬಿಡಲಿಕ್ಕೆ ಬೇಕೆಂದು ಗಲಾಟೆಯನ್ನೆಬ್ಬಿಸಿದರು. ಕೆಲವರು ದೇವಾಲಯ ವ್ಯವಸ್ಥಾ ಕಮೀಟಿಯ ಪ್ರೆಸಿಡೆಂಟ ಹಾಗೂ ಸೆಕ್ರೆಟರಿ ಮೊದಲಾದವರ ಕಡೆಗೆ ಹೋದರು. ನನಗೆ ಮಾತ್ರ ಈ ಯಾವ ಸಂಗತಿಯು ಮೊದಲು ಚೆನ್ನಾಗಿ ಗೊತ್ತಿಲ್ಲದ್ದರಿಂದ ಏನೂ ತೋಚದೆ

ಸುಮ್ಮನೆ ನಿಂತೆನು. ೪-೫ ಮಿನಿಟುಗಳಲ್ಲಿ ಕಾವುಲುಗಾರರು ಸ್ವಾಮೀ ತಾವು ದರ್ಶನಕ್ಕೆ ಹೋಗಬಹುದೆಂದು ವಿನಯದಿಂದ ಹೇಳಹತ್ತಿದರು. ಅಷ್ಟರಲ್ಲ ಬೋರ್ಡಿನ ಸೆಕ್ರೆಟರಿಗಳು ಬಂದು ದರ್ಶನಕ್ಕೆ ಬರಬೇಕೆಂದು ವಿನಯದಿಂದ ಹೇಳಿ ನನ್ನನ್ನು ಸ್ವಾಮಿ ದರ್ಶನಕ್ಕೆ ಒಳಗೆ ಕರೆದುಕೊಂಡು ಹೋದರು. ಹೃದಯಪೂರ್ವಕ ದೇವರ ದರ್ಶನ ಮಾಡಿಕೊಂಡು ಹೊರಗೆ ಬರುವಷ್ಟರಲ್ಲಿಯೇ ನಮ್ಮ ಒಬ್ಬ ಪಟ್ಟಾಧ್ಯಕ್ಷರಿಗೆ ಒಳಗೆ ಬಿಡದೆ ನೂಕ್ಯಾಡುವುದು ನಡೆದಿತ್ತು. ಅವರಿಗೂ ಒಳಗೆ ಬಿಡಿಸಿ ಹಾಗೆಯೇ ನೆರೆದ ಎಲ್ಲ ಸಮೂಹದೊಡನೆ ಮೊದಲೇ ಶಿರೂರ ಶ್ರೀಶೈಲಪ್ಪ ಶೆಟ್ಟರಿಂದ ನಿಯೋಜಿತವಾದ ಭ್ರಮರಾಂಬೆಯ ಗುಡಿಯ ಪೌಳಿಯೊಳಗೆ ಇಳಿದುಕೊಂಡದ್ದಾಯಿತು. ಸೆಕ್ರೆಟರಿ ನರಸಪ್ಪನವರೂ ಪೂಜಾರಿ ಬಸವಯ್ಯನವರೇ ಮೊದಲಾದ ಗುಡಿಯ ಪ್ರಮುಖ ಮಂಡಳಿಯೂ ಹಾಗೂ ಯಾತ್ರೆಗಾಗಿ ಬಂದ ಬಹು ಜನರೂ ಅಲ್ಲಿ ಬಂದದ್ದರಿಂದ ದಾರಿಯಲ್ಲಿ ಜನರಿಗಾಗುವ ಅಡಚಣಿಗಳನ್ನು ಸೆಕ್ರೆಟರಿಯವರ ಮುಂದೆ ಹೇಳಿ ಇದರ ನಿವಾರಣೆಗಾಗಿ ಪ್ರಯತ್ನ ಮಾಡಬೇಕಾಗಿ ತಿಳಿಸಿದ್ದಾಯಿತು. ಎಲ್ಲ ಯಾತ್ರಿಕರ ಸಹಿಯನ್ನೊಳಗೊಂಡ ಒಂದು ಅರ್ಜಿಯನ್ನು ಮದ್ರಾಸ ಪ್ರಾಂತದ ಮುಖ್ಯ ಪ್ರಧಾನರಾದ ರಾಜಗೋಪಾಲಾಚಾರ್ಯರ ಕಡೆಗೆ ಕಳುಹಿಸಲು ಕೂಡಿದ ಪ್ರಮುಖ ಮಂಡಳಿಯೊಡನೆ ಆಲೋಚಿಸಿ ನಿಶ್ಚಯಮಾಡಿತು. ಇದೇ ಪ್ರಸಂಗದಲ್ಲಿಯೇ ಭ್ರಮರಾಂಬೆಯ ಸನ್ನಿಧಿಯಲ್ಲಿ ಶಿವರಾತ್ರಿಯಿಂದ ದವನದ ಹುಣ್ಣಿವೆಯ ವರೆಗೂ ಪ್ರತಿ ಮಂಗಳವಾರ ಪ್ರತಿ ಶುಕ್ರವಾರ ದಿವಸ ಪ್ರಾಣಿ ವಧೆ ಮಾಡುತ್ತಾರೆಂಬ ವಿಷಾದದ ಸಂಗತಿಯು ತಿಳಿದುಬಂತು.

ಈ ಸಮಾಚಾರದಿಂದಂತೂ ಮೊದಲೇ ಮಾರ್ಗಾಯಾಸದಿಂದ ತ್ರಾಸಗೊಂಡ ನನಗೆ ಅತ್ಯಂತ ತಾಪವಾಯಿತು. ರಾತ್ರಿ ನಿದ್ರೆಯೂ ಕೂಡ ಚೆನ್ನಾಗಿ ಆಗಲಿಲ್ಲ. ಮರು ದಿವಸವೇ ಅಮವಾಸಿ ಇದ್ದದರಿಂದಲೂ ಎಲ್ಲಾ ಯಾತ್ರಿಕರೂ ಪಾತಾಳ ಗಂಗೆಯಲ್ಲಿಯೇ ಸ್ನಾನಭೋಜನಾದಿಗಳನ್ನು ಮಾಡುವ ಸಾಂಪ್ರದಾಯವಿದ್ದದರಿಂದಲೂ ನಾನು ನನ್ನ ಮಂಡಳಿಯೊಡನೆ ಪಾತಾಳಗಂಗೆಗೆ ಹೊರಟಿದ್ದಾಯಿತು. ಈ ಮುಂಚೆ ಬಂದ ಸೋಪಾನಗಳಿಗಿಂತ ಪಾತಾಳ ಗಂಗೆಯ ಸೋಪಾನಗಳು ಬಹಳೇ ಎತ್ತರವಾದವುಗಳಿದ್ದು ಕಡಿದಾದವುಗಳಿದ್ದದರಿಂದ ಇಳಿಯಲು ಬಹು ತ್ರಾಸದಾಯಕವಿದ್ದು ಏರಲಿಕ್ಕಂತೂ ಹೇಳಕೂಡದಷ್ಟು ಆಯಾಸ ಅಂತೂ ಇಂತು ಇಳಿದು ಪಾತಾಳಗಂಗೆ (ಕೃಷ್ಣಾನದಿ) ಯನ್ನು ಸೇರಿದ್ದಾಯಿತು. ಸ್ತ್ರೀಪುರುಷರು ತಲೆ ಬೋಳಿಸಿಕೊಳ್ಳುವುದು ಇಲ್ಲಿಯೇ. ಮಂಡೆಯನ್ನು ಕೊಡುವುದು ಈಗ ಕಡಿಮೆಯಾದರೂ ಇನ್ನೂ ಪೂರ್ಣ ನಿಂತಿಲ್ಲ. ಪಾತಾಳ ಗಂಗೆಯ ನೀರು ಪ್ರವಾಯಿಯಾದ್ದರಿಂದ ಕುಡಿಯಲಿಕ್ಕೆ ಯೋಗ್ಯವಾದವುಗಳಿವೆ. ಅಲ್ಲಿ ಬಹು ಜನರು ಹುರಣಗಡಬುಗಳನ್ನು ಮಾಡಿ ದೇವ ಜಂಗಮಾದಿಗಳ ತೃಪ್ತಿ ಮಾಡತಕ್ಕ ಸಾಂಪ್ರದಾಯವಿದ್ದದರಿಂದಲೂ ಅಷ್ಟರಲ್ಲಿಯೇ ಮಧ್ಯಾನ್ಹವಾಗುವದರಿಂದಲೂ ಧಡದಲ್ಲಿ ಗಿಡ ಮೊದಲಾದ ನೆರಳಿನ ಅನುಕೂಲತೆ ಇಲ್ಲದ್ದರಿಂದಲೂ ಜನರು ತಂಬಿಗೆ ಬಿಂದಿಗೆಗಳಲ್ಲಿ ನೀರನ್ನು ತುಂಬಿಕೊಂಡು ಪ್ರಚಂಡ ಬಿಸಿಲಿನಲ್ಲಿಯೇ ಗುಡಿಗೆ ಬರಲು ಹೊರಡುತ್ತಾರೆ.

ಮಿಷ್ಟಾನ್ನ ಭೋಜನದಿಂದಲೂ . ಬಿಸಲಿನ ತಾಪದಿಂದಲೂ ಎತ್ತರವಾದ ಪಾವಟಣಿಗೆಗಳನ್ನು ಹತ್ತುವಾಗ ಅವರಿಗಾಗುವ ಗೋಳಾಟವನ್ನು ಶಿವನೇ ಬಲ್ಲನು. ವರ್ಷ ೨೦ ಸಾವಿರಗಟ್ಲೆ ಯಾತ್ರಿಕರಿಂದ ಕರ ವಸೂಲಮಾಡಿಕೊಳ್ಳುವ ದೇವಾಲಯದ ಪರಿಪಾಲನ ಸಂಘದವರು ನೂರಾರು ರೂಪಾಯಿ ಖರ್ಚುಮಾಡಿ ಪಾತಾಳಗಂಗೆಯ ತೀರದಲ್ಲಿರುವ ಹುಲ್ಲಿನಿಂದಲೇ ಚಪ್ಪರಗಳನ್ನು ಹಾಕಿಸಿದರೆ ಯಾತ್ರಿಕರಿಗೆ ಎಷ್ಟು ಹಿತವಾಗುತ್ತದೆ. ಈ ಕಡೆಗೆ ಬೋರ್ಡಿನವರು ಚೆನ್ನಾಗಿ ಲಕ್ಷಕೊಡಬೇಕು. ಹಾಗೂ ಹೋದ ಯಾತ್ರಿಕರೂ ಕೂಡ ಅವರಿಗೆ ಎಚ್ಚರಿಕೆ ಕೊಡಬೇಕು. ಹೀಗೆ ಮಾಡಿದರೆ ಯಾತ್ರಿಕರು ಆನಂದದಿಂದ ಸಂಜೆಯ ೫ ಗಂಟೆಯ ವರೆಗೂ ಅಲ್ಲಿ ಕಾಲ ಕಳೆದು ಆಯಾಸವಿಲ್ಲದೆ ಹೊರಟು ಸಂಜೆಗೆ ಗುಡಿಯನ್ನು ಸೇರುವರು. ನಮ್ಮ ಮಂಡಳಿಯಲ್ಲವು ಎಲ್ಲರ ಕೂಡ ಹಾಗೆಯೇ ಬಿಸಿಲಿನಲ್ಲಿಯೇ ಬಂದು ಗುಡಿಯನ್ನು ಸೇರಿದ್ದಾಯಿತು. ಆ ದಿವಸ ನನ್ನ ಉಪವಾಸವಿದ್ದದರಿಂದ ದಾರಿಯಲ್ಲಿಯ ಒಂದು ಹಾಳು ಗುಡಿಯಲ್ಲಿ ಸಂಜೆಯ ವರೆಗೂ ಇದ್ದು ಆ ಮೇಲೆ ಗುಡಿಗೆ ಬಂದೆನು. ಪೂಜಾರಿ ಬಸವಯ್ಯನವರನ್ನು ಕರೆಯಿಸಿಕೊಂಡು ನಾಳೆ ಶುಕ್ರವಾರ ದೇವಿಯ ಮುಂದೆ ಜರುಗುವ ಪ್ರಾಣಿವಧೆಗಾಗಿ ಸತ್ಯಾಗ್ರಹ ಮಾಡುವುದು ಯೋಗ್ಯವಾಗುವದೋ ! ಎಂದು ಕೇಳಿಕೊಂಡದ್ದಾಯಿತು. ಅವರು ೧೨ ವರುಷಗಳಿಂದ ಅಲ್ಲಿಯೇ ಇದ್ದು ತಮ್ಮ ಅನುಭವದ ಮೇಲಿಂದ ಒಮ್ಮೆಲೆ ಸತ್ಯಾಗ್ರಹ ಮಾಡುವುದು ಪರಿಣಾಮಕಾರಕವಲ್ಲವೆಂದು ತಿಳಿಸಿದರು.

ಯಾಕೆಂದರೆ ಕೊಲೆಗೆ ಕಾರಣರಾದ ಚೆಂಚರು ಅತ್ಯಂತ ತಾಮಸ ವೃತ್ತಿಯುವರಿದ್ದದರಿಂದ ಈಗ ಬಲತ್ಕಾರದಿಂದ ಪ್ರಾಣಿವಧೆ ಬಂದುಮಾಡಿದ್ದು ಮುಂದೆ ತಮಗೆ ಬಾಧೆ ವಿಶೇಷವಾಗುವುದೆಂದೂ ಅವರಿಗೆ ಸದುಪದೇಶಮಾಡಿ ಈ ಕಾರ್ಯ ನಿಲ್ಲಿಸಲು ಪ್ರಯತ್ನಿಸುವದೇ ಶ್ರೇಯಸ್ಕರವೆಂದು ಹೇಳಿದ್ದರಿಂದ ಸತ್ಯಾಗ್ರಹ ಮಾಡುವುದನ್ನು ಬಿಟ್ಟು ಸಿದ್ಧನಗೌಡ ಬಬಲಾದ, ಹೊನ್ನಾಳ ದೊರೆಗಳು ಈಶ್ವರಗೌಡ ಮುಸಳಿ, ಸಿದ್ಧನಗೌಡ ಬಾಗೇವಾಡಿ ಮೊದಲಾದವರನ್ನು ಕೂಡಿಕೊಂಡು ಮುಖ್ಯ ಪ್ರಧಾನರ ಕಡೆಗೆ ಇಂಗ್ಲಿಷಿನಲ್ಲಿ ಒಂದು ಅರ್ಜಿಯನ್ನು ಬರೆಯಿಸಿ ಕಳುಹಿಸಲು ಗೊತ್ತುಮಾಡಿ ಆದರಂತೆ ಸಿದ್ಧಮಾಡಿತು. ಈ ವಿಷಯ ತಿಳಿದು ಸೆಕ್ರೆಟರಿಯವರು ಭೆಟ್ಟಿಗೆ ಬಂದು ಎಲ್ಲ ಅಡಚಣಿಗಳ ನಿವಾರಣೆಗಾಗಿ ಈ ಮೊದಲೇ ಪ್ರಯತ್ನಿಸಲಿಕ್ಕೆ ಹತ್ತಿದ್ದೇವೆಂದೂ ಸ್ವಲ್ಪ ದಿವಸಗಳಲ್ಲಿಯೇ ನಿವಾರಣೆಯಾಗುವುದೆಂದೂ ತಾವೂ ಪ್ರೆಸಿಡೆಂಟರೊಡನೆ ಆಲೋಚಿಸಲಿಕ್ಕೆಯೇಬೇಕೆಂದು ತಿಳಿಸಿದರು. ಮರು ದಿನ ಪ್ರತಿಪದೆ ಇದ್ದು ಶುಕ್ರವಾರವಿದ್ದದರಿಂದ ದೇವಿ ಸನ್ನಿಧಿಯಲ್ಲಿ ವಧೆಯಾಗುವುದೆಂದು ತಿಳಿದು ನಾವುಗಳೆಲ್ಲ ಆ ಸ್ಥಳವನ್ನು ಬಿಟ್ಟು ಘಂಟಾಮಠಕ್ಕೆ ಹೋದೆವು. ಪ್ರತಿಪದೆಯಿಂದ ೯ ದಿವಸಗಳ ವರೆಗೆ ಪ್ರತಿ ದಿನ ೧೧ ಜನ ವೈದಿಕರಿಂದ ರುದ್ರಾಭಿಷೇಕ ನಡೆಯುವದೆಂದು ಸ್ವಾಮಿಯ ಪೂಜೆಯು ವೀರಶೈವರಿಂದ ನಡೆದರೂ ರುದ್ರಾಭಿಷೇಕವು ಮಾತ್ರ ಬ್ರಾಹ್ಮಣರಿಂದ ನಡೆಯುವದೆಂದೂ . ಇದಕ್ಕಾಗಿಯೂ ಮತ್ತು ದೇವರ ದರ್ಶನಕ್ಕೆ ಬ್ರಾಹ್ಮಣರನ್ನು ಫೀ ಇಲ್ಲದೆ ಬಿಟ್ಟು ಜಂಗಮರಿಗೆ ಫೀ ತಕ್ಕೊಳ್ಳುತ್ತಾರೆಂಬ ಕಾರಣಕ್ಕೂ ಯುಗಾದಿ ದಿವಸ ವೀರಶೈವ ಪ್ರಮುಖರಿಗೂ ಪ್ರೆಸಿಡೆಂಟರಿಗೂ ವಿಶೇಷ ಚರ್ಚೆಯಾಗಿ ನಾನು ಆ ಕಾಲಕ್ಕೆ ಘಂಟಾ ಮಠದಲ್ಲಿ ಲಿಂಗಾರ್ಚನಾದಿ ಕಾರ್ಯಗಳಲ್ಲಿ ತೊಡಗಿದ್ದರಿಂದ ಸಂಜೆಯ ಮುಂದೆ ನನ್ನ ಸಮಕ್ಷಮವಾಗಿಯೇ ಇದರ ತೀರ್ಮಾನವಾಗಬೇಕೆಂದು ನಿರ್ಧರಿಸಿ ಆ ವಿಷಯವನ್ನು ಅಷ್ಟಕ್ಕೆ ನಿಲ್ಲಿಸಿದ ವರ್ತಮಾನವು ನನಗೆ ಗೊತ್ತಾಯಿತು.

ಸಂಜೆಗೆ ಪ್ರೆಸಿಡೆಂಟರ ಆಫೀಸಿನಲ್ಲಿಯೇ ಸಭೆ ಸೇರಿದ್ದಾಯಿತು. ನಮ್ಮೆಲ್ಲರನ್ನು ಪ್ರೆಸಿಡೆಂಟ ಪಿ. ರಾಮಯ್ಯನವರು ಒಳ್ಳೇ ಆದರದಿಂದ ಸ್ವಾಗತಿಸಿದರು. ಅವರಿಗೆ ಕನ್ನಡ ತಿಳಿಯುತ್ತಿದ್ದು ಇಂಗ್ಲಿಷ ತೆಲಗಿನಲ್ಲಿಯೇ ಮಾತಾಡುವ ರೂಢಿ ಇದ್ದದರಿಂದ ಅವರು ಇಂಗ್ಲಿಷಿನಲ್ಲಿಯೇ ಮೇಲ್ಕಾಣಿಸಿದ ನಮ್ಮ ಅಡಚಣಿಗಳ ವಿಚಾರವಾಗಿ ಮಾತನಾಡುತ್ತ ಈ ವರುಷದೊಳಗಾಗಿಯೇ ಈ ತೊಂದರೆಗಳ ಬಹು ಭಾಗವನ್ನು ನಿವಾರಣೆಮಾಡುತ್ತೇವೆಂದು ಒಳ್ಳೇ ಕಳ

ಕಳೆಯಿಂದ ಹೇಳಿ ಚಂಚರಿಗೂ ಕೂಡ ಉಪದೇಶಮಾಡಿ ಸಾತ್ವಿಕ ರೀತಿಯಿಂದ ದೇವಿಗೆ ಬಲಿಯನ್ನು ಕೊಡುವುದನ್ನು ಮಾಡುತ್ತೇವೆಂದು ಹೇಳಿದ್ದಲ್ಲದೆ ಮುಂದಿನ ಚೈತ್ರ ಪ್ರತಿಪದೆಗೆ ರುದ್ರಾಭಿಷೇಕಕ್ಕೆ ೧೧ ಜನ ವೀರಶೈವ ವೈದಿಕರನ್ನು ಕಳಿಸಿದರೆ ಈ ಮೊದಲು ಬ್ರಾಹ್ಮಣರಿಗೆ ಕೊಡುತ್ತಿದ್ದ ಸಂಭಾವನೆಗಿಂತ ೧೦೦ ರೂ. ಗಳನ್ನು ಹೆಚ್ಚಿಗೆ ಕೊಡುತ್ತೇವೆಂದು ಹೇಳಿದರು. ಈ ವಿಷಯವನ್ನು ಪ್ರತ್ಯೇಕ ವೀರಶೈವನು ಆದರೊಳಗೆ ವೈದಿಕ ಕೆಲಸಮಾಡುವ ಶಾಸ್ತ್ರಿಗಳು ಚೆನ್ನಾಗಿ ಲಕ್ಷಕ್ಕೆ ತಂದು ವೈದಿಕರು ಸ್ವಲ್ಪ ಸ್ವಾರ್ಥತ್ಯಾಗಮಾಡಿ ಮುಂದಿನ ವರುಷದ ರುದ್ರಾಭಿಷೇಕಕ್ಕೆ ಅವಶ್ಯವಾಗಿ ಹೋಗಿ ವೀರಶೈವ ಧರ್ಮದ ಅಭಿಮಾನವನ್ನು ಕಾಯಬೇಕು. ಉದಾರಿಗಳಾದ ಭಕ್ತರು ಕೂಡಾ ಸ್ವಲ್ಪ ತ್ಯಾಗ ಬುದ್ಧಿಯನ್ನು ತೋರಿಸಿ ವೈದಿಕ ಪಂಡಿತರನ್ನು ಕಳುಹಿಸಬೇಕು.

ಈ ಪ್ರಕಾರ ಟ್ರಸ್ಟ ಕಮಿಟಿಯ ಪ್ರೆಸಿಡೆಂಟ ಪಿ. ರಾಮಯ್ಯನವರು ಎಲ್ಲ ರೀತಿಯಿಂದಲೂ ಯಾತ್ರಿಕರ ಅಡಚಣೆಗಳ ನಿವಾರಣೆಗೆ ಪೂರ್ಣ ಬೆಂಬಲ ಕೊಟ್ಟದ್ದರಿಂದ ಎಲ್ಲರಿಗೂ ಸಮಾಧಾನವಾಯಿತು. ಮರುದಿವಸ ಮುಂಜಾನೆ ನಾವುಗಳೆಲ್ಲ ಗುಡಿಯನ್ನು ಬಿಟ್ಟು ಹೊರಟು ಎರಡನೇ ದಿವಸ ಮಹಾನಂದಿ ಕ್ಷೇತ್ರಕ್ಕೆ ಬಂದೆವು. ಮಹಾನಂದಿಕ್ಷೇತ್ರವು ತನ್ನ ಹೆಸರಿಗೆ ತಕ್ಕಂತೆ ಬಂದ ಜನರಿಗೆ ನಿಜವಾಗಿಯೇ ಮಹಾನಂದವನ್ನು ಕೊಡತಕ್ಕದ್ದಾಗಿದೆ. ಅಲ್ಲಿ ಪ್ರವಾಹಿಯಾದ ಮತ್ತು ಪವಿತ್ರವಾದ ಹೊಂಡದ ನೀರುಗಳೂ ವಿಶಾಲವಾದ ಮನೋಹರವಾದ ಗುಡಿಯೂ ಸುತ್ತುಮುತ್ತಲಿನ ಮಾವು ತೆಂಗು ಬಾಳೆಗಳ ವನಶ್ರೀಯು ನಿಶ್ಚಯವಾಗಿ ಯಾತ್ರಿಕರ ಅತ್ಯಧಿಕವಾದ ಶ್ರಮವನ್ನು ನಿವಾರಣೆ ಮಾಡುತ್ತವೆ. ನಾವೆಲ್ಲರೂ ಮಹಾನಂದದ ಭಾಗಿಗಳಾಗಿ ಅಲ್ಲಿಂದಾ ನಂದ್ಯಾಲಕ್ಕೆ ಬಂದು ರೇಲ್ವೆ ಮಾರ್ಗವಾಗಿ ಬಳ್ಳಾರಿಗೆ ಬಂದೆವು. ಅಲ್ಲಿಂದ ಹಂಪೆಗೆ ವಿರೂಪಾಕ್ಷೇಶ್ವರನ ದರ್ಶನಕ್ಕೆ ಹೋದೆವು. ವಿರೂಪಾಕ್ಷನ ಗರ್ಭಗುಡಿಯ ಪೌಳಿಯ ಮಹಾದ್ವಾರದಲ್ಲಿ ಒಂದು ಬೋರ್ಡು ಹಚ್ಚಿದ್ದು ನೋಡಿದ್ದಾಯಿತು.

ಬೋರ್ಡಿನಲ್ಲಿ ಬರೆದ ಮುಖ್ಯ ವಿಷಾದದ ಸಂಗತಿಯೇನೆಂದರೆ ಹರಿಜನರು ಹಾಗು ಕ್ರಿಶ್ಚನ್ನರು ಮಾತ್ರ ಒಳಗೆ ಪ್ರವೇಶಮಾಡಕೂಡದು. ಮಾಡಿದರೆ ಯೋಗ್ಯ ಪ್ರಾಯಶ್ಚಿತ್ ಮಾಡಲಾದೀತು. ಇದನ್ನು ನೋಡಿ ನನಗೆ ಅತಿ ಖೇದವೆನಿಸಿತು. ಯಾರಿಂದ ಹಂಪೆಯು ಕೈಲಾಸಕ್ಕೆ ಸಮಾನವಾದ ತನ್ನ ವೈಭವನನ್ನು ಕಳೆದುಕೊಂಡಿತು? ಯಾರಿಂದ ಬದಿಯಲ್ಲಿಯ ವಿಜಯ ನಗರವು ಹಾಳಾಯಿತು? ಯಾರಿಂದ ಇಡೀ ಭರತಖಂಡದಲ್ಲಿಯ ದೇವಾಲಯಗಳೂ ಹಿಂದುಧರ್ಮವೂ ಭ್ರಷ್ಟವಾದವುಗಳಾಗಿರುವವೋ ಅವರು ಮಾತ್ರ ಒಳಗೆ ಬರಬಹುದಲ್ಲವೆ? ಯಾರು ಹೊರಗಿನ ಮಹಾದ್ವಾರವನ್ನೇ ವಿರೂಪಾಕ್ಷನೆಂದು ತಿಳಿದು ತಮ್ಮ ಭಕ್ತಿಯನ್ನು ತೋರಿಸುವರೋ ಆ ಆದಿ ಜನರು ಮಾತ್ರ ಒಳಗೆ ಹೋಗಬಾರದೆಂದರೆ ಇದೆಂಥ ಅನ್ಯಾಯವೋ ನಾ ಕಾಣೆ. ಈ ವಿಷಯವಾಗಿ ಅಲ್ಲಿಯ ವ್ಯವಸ್ಥಾಪಕರೊಡನೆ ಚರ್ಚೆಮಾಡಿ ಈ ಬೋರ್ಡು ತೆಗೆದುಹಾಕಿರೆಂದು ನಿಷ್ಠುರವಾಗಿ ಅವರಿಗೆ ಹೇಳಿ ಅದೇ ದಿವಸವೇ ಹೊರಟು ರಾತ್ರಿಗೆ ರೇಲ್ವೆಯಿಂದ ವಿಜಾಪುರಕ್ಕೆ ಬಂದು ಪ್ರಿಯ ಜತ್ತಿ ಸಿದ್ಧಲಿಂಗಪ್ಪನವರ ಮತ್ತು ಎಸ್. ಎಸ್. ಹೇರಲಗಿಯವರ ಆದರಾತಿಥ್ಯದಲ್ಲಿ ಎರಡು ದಿವಸ ಕಳೆದು ತಾ. ೯-೪-೩೮ ನೇ ದಿವಸ ಬಂಥನಾಳಕ್ಕೆ ಬಂದದ್ದಾಯಿತು. ನಾನು ಬರುವ ವರ್ತಮಾನ ಮೊದಲೇ ಗ್ರಾಮದವರು ತಿಳಿದು ಅಡ್ಡಪಲ್ಲಕ್ಕಿ ಉತ್ಸವಾದಿಗಳಿಂದ ಸ್ವಾಗತಮಾಡಿದರು. ಇದನ್ನು ನೋಡಿ ನಾನು ಶ್ರೀಶೈಲಕ್ಕೆ ಹೋದವರು ಸುರಕ್ಷಿತ ಬರುವುದು ಕಠಿಣವೆಂದೂ ಬಂದವರು ಪುನರ್ಜನ್ಮ ತೊಟ್ಟಂತಾಗುವುದೆಂದೂ ತಿಳಿದೇ ಶ್ರೀಶೈಲಕ್ಕೆ ಹೋಗಿ ಬಂದವರನ್ನು ಅವರವರ ಆಪ್ತೇಷ್ಟ ಜನರು ಊಟ ಉಡುಗರೆಗಳಿಂದ ಸ್ವಾಗತಿಸುವರೆಂದು ತಿಳಿದುಕೊಂಡೆನು. ಈ ಪ್ರಕಾರ ನನ್ನ ಶ್ರೀಶೈಲ ಯಾತ್ರಾ ಪ್ರವಾಸವು ಮುಗಿಯಿತು.

ಈ ನನ್ನ ಪ್ರವಾಸದ ಸಮಾಚಾರದಿಂದ ವಾಚಕರೆಲ್ಲ ತಿಳಿಯತಕ್ಕದ್ದೇನೆಂದರೆ ಶ್ರೀಶೈಲಕ್ಕೆ ಹೋಗುವವರು ಯಾವ ಯಾವ ವ್ಯವಸ್ಥೆಯಿಂದ ಎಂಥವರು ಹ್ಯಾಗೆ ಹೋಗಬೇಕೆನ್ನುವದು ಗೊತ್ತಾಗುವುದು. ಮತ್ತು ಹೋದವರು ಹೀಗೆಯೇ ಅಲ್ಲಿಯ ವ್ಯವಸ್ಥಾಪಕರಿಗೆ ಬಲವಾದ ಎಚ್ಚರಿಕೆ ಕೊಡೋಣದರಿಂದ ತೀವ್ರವಾಗದಿದ್ದರೂ ಸಾವಕಾಶವಾಗಿಯಾದರೂ ಮೇಲ್ಕಾಣಿಸಿದ ಯಾತ್ರಿಕರ ಎಲ್ಲ ಅಡಚಣೆಗಳು ದೂರಾಗುವವು. ಮತ್ತು ಮಲ್ಲಿಕಾರ್ಜುನ ದೇವರ ಹಾಗೂ ಭ್ರಮರಾಂಬೆಯ ಪೂಜಾದಿಗಳು ಕ್ರಮ ಪ್ರಕಾರವಾಗಿಯೂ ಸಾತ್ವಿಕವಾಗಿಯೂ ಜರಗಲನುಕೂಲವಾಗುವುದು. ಇದರಂತೆ ಹೋದವರು ಪ್ರತಿ ವರುಷ ಚಳವಳಿ ಮಾಡಿದರೆ ನಿಶ್ಚಯವಾಗಿ ಎಲ್ಲ ತೊಂದರೆಗಳು ದೂರವಾಗಿ ಜಗತ್ತಿನ ತಂದೆತಾಯಿಗಳಾದ ಮಲ್ಲಿಕಾರ್ಜುನ ಭ್ರಮರಾಂಬೆಯರ ನಿಜವಾದ ಸೇವೆಮಾಡಿದಂತಾಗುತ್ತದೆ. ಈ ವಿಷಯದ ಕಡೆಗೆ ಮುಂದೆ ಯಾತ್ರಾರ್ಥಿಗಳಾಗಿ ಹೋಗತಕ್ಕ ಪ್ರತಿಯೊಬ್ಬ ಸ್ತ್ರೀಪುರುಷರು ಚೆನ್ನಾಗಿ ಲಕ್ಷ ಕೊಡುವಿರೆಂದು ಹಾರೈಸಿಯೇ ಈ ಲೇಖ ಬರೆದದ್ದಾಗಿದೆ.

---



---

# ಜಾತಿಯ ಜಗಳ ಕಳೆಯುವ ಒಂದು ಹೊಸ ಶೋಧ!

ಸಂಯುಕ್ತ ಪ್ರಾಂತಿಕ ಕಾಂಗ್ರೆಸ್ ಕಮೀಟಿ ಸೆಕ್ರೆಟರಿಗಳೂ ಪಂಡಿತ ಜವಾಹರಲಾಲ ನೆಹರುರವರ ಭಗಿನಿ ಶ್ರೀಮತಿ ವಿಜಯ ಲಕ್ಷ್ಮೀ ಪಂಡಿತ ಇವರ ಪತಿಗಳೂ ಆದ ಶ್ರೀ. ಆರ್ ಎಸ್. ಪಂಡಿತ ಇವರು ಹಿಂದು-ಮುಸಲ್ಮಾನರ ಜಾತಿಯ ಜಗಳವನ್ನು ಕಳೆಯಲು ಒಂದು ಹೊಸ ಉಪಾಯವನ್ನು ಸಂಯುಕ್ತ ಪ್ರಾಂತ ಸರಕಾರಕ್ಕೆ ತಿಳಿಸಿದ್ದಾರೆ. ಆ ಉಪಾಯ ಹೀಗಿದೆ—

"ಗೋವಧೆ ಮತ್ತು ಗೋಮಾಂಸ ವಿಕ್ರಯಗಳು ಎಲ್ಲಿ ಬೇಕಾದಲ್ಲಿ ನಡೆಯಲು ಅಡ್ಡಿಯಿಲ್ಲವೆಂದೂ ಹಿಂದುಗಳು ಬೇಕಾದಲ್ಲಿ (ಯಾವ ಮಸೀದಿಯ ಮುಂದಾದರೂ) ಮೆರವಣಿಗೆ ಹೋಗುವ ಮತ್ತು ವಾದ್ಯ ಬಾರಿಸುವ ಅಧಿಕಾರವುಳ್ಳವರೆಂದೂ ಸರಕಾರವು ನಿರ್ಣಯ ಮಾಡಬೇಕು. ಇವು ಆಚರಣೆಯಲ್ಲಿ ಬರಲು ಉಂಟಾಗುವ ಪ್ರತಿಬಂಧಗಳನ್ನು ಹಿಂಸಾಯುಕ್ತ ಮಾರ್ಗದಿಂದಾದರೂ ಸರಕಾರವು ನಿವಾರಣೆ ಮಾಡಬೇಕು."

ಪಂಡಿತಜಿಯವರ ಈ ಹೊಸ ಮಾತ್ರೆಯನ್ನು ಈ ಕಾಲದಲ್ಲಿ ಪ್ರಯೋಗಿಸುವ ಸರಕಾರವು ವೈಕುಂಠ ಯಾತ್ರೆಗೆ ಹೋಗಬೇಕಾಗುವುದು! ಹಿಂದು-ಮುಸಲ್ಮಾನರ ಜಗಳ ನಿವಾರಣೆಗೆ ಇನ್ನೂ ಎಂತೆಂತಹ ಮಿದುಳುಗಳಿಂದ ಯಾವ ಯಾವ ಹೊಸ ಶೋಧಗಳು ಹೊರಗೆ ಬರುತ್ತವೋ?

## ಬಸವೇಶ್ವರ ಹಾಯಸ್ಕೂಲ ಬಾಗಲಕೋಟೆ.

ಈ ಶಾಲೆಯು ಇದೇ ಸೋಮವಾರ ತಾರೀಖು ೧೩-೬-೩೮ ನೆಯ ದಿವಸ ಸುರು ಆಗುವದು. ೧ ನೇ ಇಯತ್ತೆಯಿಂದ ೭ ನೇ ಇಯತ್ತೆ ಮ್ಯಾಟ್ರಿಕ್ಯುಲೇಶನ್ ವರೆಗೆ ಕಲಿಸಲಾಗುವದು. ಮತ್ತು ಮುಲ್ಕೀ ಪರೀಕ್ಷೆ ಪಾಸಾದವರಿಗೆ ಒಂದೇ ವರ್ಷದಲ್ಲಿ ಇಂಗ್ಲೀಷ್ ಇಯತ್ತೆಗಳನ್ನು ಕಲಿಸುವ ಸ್ಪೆಶಲ್ ಕ್ಲಾಸೂ ಇರುವದು. ಈ ಕ್ಲಾಸಿನಿಂದ ಈ ವರ್ಷ ಪರೀಕ್ಷೆಗೆ ಕುಳಿತ ೨೫ ವಿದ್ಯಾರ್ಥಿಗಳಲ್ಲಿ ೧೮ ವಿದ್ಯಾರ್ಥಿಗಳು ಪಾಸಾಗಿದ್ದಾರೆ. ಈ ಹಾಯಸ್ಕೂಲಿನಿಂದ ಮ್ಯಾಟ್ರಿಕ್ ಪರೀಕ್ಷೆಗೆ ಕುಳಿತ ಗಲಗಲಿ ಎಂಬ ವಿದ್ಯಾರ್ಥಿಯು ೪೮೧ ಗುಣಗಳನ್ನು ಪಡೆದು ವಿಜಾಪುರ ಮ್ಯಾಟ್ರಿಕ್ ಸೆಂಟರಕ್ಕೆ ೧ ನೇ ನಂಬರು ಬಂದಿದ್ದಾನೆ. ಈ ಸ್ಕೂಲಿನ ಮ್ಯಾಟ್ರಿಕ್ ಪರೀಕ್ಷೆಯ ಪರಿಣಾಮಗಳು ವರುವರುಷ ಚೆನ್ನಾಗಿ ಆಗುತ್ತಲಿವೆ. ಕೆಳಗಿನ ಇಯತ್ತೆಗಳಿಂದ ಮ್ಯಾಟ್ರಿಕದ ವರೆಗೆ ಎಲ್ಲ ಕ್ಲಾಸುಗಳನ್ನೂ ಸ್ಪೆಶಲ್ ಕ್ಲಾಸನ್ನೂ ಶಿಕ್ಷಣದಲ್ಲಿ ಹತ್ತು ಹದಿನೈದು ವರುಷಗಳಿಂದ ನುರಿತ ಅನುಭವಿಕ ಪದವೀಧರರಾದ ಟ್ರೇಂಡ ಶಿಕ್ಷಕರೇ ಕಲಿಸುವರು.

ಕನ್ನಡ, ಮರಾಠಿ, ಉರ್ದು, ಸಂಸ್ಕೃತ ಮತ್ತು ಪರ್ಶಿಯನ್ ಈ ಭಾಷೆಗಳನ್ನು ಕಲಿಸುವ ಯೋಜನೆಯು ಎಂದಿನಂತೆ ಇರುವದಲ್ಲದೆ ಯಾವತ್ತೂ ಜಾತಿ ಪಂಗಡಗಳ ವಿದ್ಯಾರ್ಥಿಗಳಿಗೆ ಈ ಸ್ಕೂಲಿನಲ್ಲಿ ಪ್ರವೇಶವು ನಿರಾತಂಕವಾಗಿ ದೊರೆಯುವದು. ಶಿಕ್ಷಣದಲ್ಲಿ ಹಿಂದುಳಿದ ಅಸ್ಪೃಶ್ಯರೇ ಮೊದಲಾದವರಿಗೂ, ಬಡ ವಿದ್ಯಾರ್ಥಿಗಳಿಗೂ ಮಾಫೀ ಸ್ಕಾಲರಶಿಪ್ ಮುಂತಾದ ವಿಶೇಷ ಸೌಕರ್ಯಗಳು ದೊರೆಯುವವು. ಹೆಣ್ಣುಮಕ್ಕಳ ಬಗ್ಗೆ ಸಾಕಷ್ಟು ಲಕ್ಷ ಕೊಡಲ್ಪಡುವದು.

ಭವ್ಯವಾದ ಕಟ್ಟಡ, ಪರಿಪೂರ್ಣವಾದ ಸಾಯನ್ಸ ಲ್ಯಾಬೊರೇಟರಿ, ಅನೇಕ ಪುಸ್ತಕ, ಮಾಸಿಕ, ಸಪ್ತಾಹಿಕ, ದೈನಿಕ ಪತ್ರಿಕೆಗಳುಳ್ಳ ಲಾಯಬ್ರರಿ, ರೀಡಿಂಗ್‌ರೂಮ ಫುಟಬಾಲ್, ಕ್ರಿಕೆಟ್, ಹಾಕಿ, ಟೇನಿಸ್, ತಿಳ್ಳಿ, ಖೋಖೋ ಮೊದಲಾದ ಆಟಗಳಿಗೆ ಅನುಕೂಲವಾದ ವಿಸ್ತೀರ್ಣವಾದ ಆಟದ ಮೈದಾನ, ಸರ್ವೋತ್ಕೃಷ್ಟವಾದ ಶಿಸ್ತು, ಆಧುನಿಕ ಪದ್ಧತಿಯಂತೆ ಶಿಕ್ಷಣವನ್ನು ಕೊಡುವ ತಜ್ಞ ಅನುಭವಿಕ ಉತ್ಸಾಹದಿಂದ ಕಲಿಸುವ ಮಾಸ್ತರದಿಂದೊಡಗೂಡಿದ ಈ ಹಾಯಸ್ಕೂಲ ವಿದ್ಯಾಖಾತೆಯವರಿಂದ 'ಅ' ಕ್ಲಾಸಿನ ಹಾಯಸ್ಕೂಲುಗಳಲ್ಲಿ ಗಣಿಸಲ್ಪಟ್ಟದ್ದು ಶಾಲೆಯ ಪ್ರಗತಿಯನ್ನೂ ಯೋಗ್ಯತೆಯನ್ನೂ ಸ್ಪಷ್ಟವಾಗಿ ವ್ಯಕ್ತಪಡಿಸುತ್ತದೆ.

ಶಾಲೆಯಲ್ಲಿ ಹೆಸರು ಹಚ್ಚಿಸುವದು ಇದೇ ಜೂನ್ ೧೩ ನೇ ತಾರೀಖಿನಿಂದ ೨೭ ನೇ ತಾರೀಖಿನ ವರೆಗೆ ಇರುವದು. ಈ ಕಾಲಾವಧಿಯಲ್ಲಿಯೇ ಪಾಲಕರು ತಮ್ಮ ಬಾಲ-ಬಾಲಕಿಯರನ್ನು ಈ ಶಾಲೆಗೆ ಕಳಿಸಿ ಸರ್ವ ಸಮಾಜದವರು ಶಿಕ್ಷಣದ ಲಾಭವನ್ನು ಪಡೆಯುವರೆಂದು ಆಶಿಸುತ್ತೇವೆ.

S. B. Sasnur
Chairman,
B. H. School Comittee,
Bagalkot.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891

# ಶರಣ ಸಂದೇಶ

The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ॰

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೨೦ನೆಯ ಜೂನ ೧೯೩೮. | ಸಂಚಿಕೆ ೪೧ |
|---|---|---|

ಜನಸೇವೆಯೇ ದೇವರಸೇವೆ

## ಮುಸ್ಲಿಂಲೀಗಿನವರ ಅತ್ಯಾಚಾರ.

### ರಾಷ್ಟ್ರಾಧಿಪತಿ ಸುಭಾಷಚಂದ್ರ ಬೋಸರಿಗೆ ಗಾಯವಾಯಿತು!

ರಾಷ್ಟ್ರಪತಿ



ಸುಭಾಷಚಂದ್ರ ಬೋಸರವರು

ಬ್ರಾಹ್ಮಣಬಾರಿಆ ಎಂಬಲ್ಲಿ ರಾಷ್ಟ್ರಾಧಿಪತಿ ಬಾಬು ಸುಭಾಷಚಂದ್ರ ಬೋಸರ ಮೆರವಣಿಗೆ ಹೋಗುತ್ತಿದ್ದಾಗ ಮುಸ್ಲಿಂಲೀಗಿನವರು ಕಲ್ಲುಗಳನ್ನು ಎಸೆದರು.

ಬಾಬು ಸುಭಾಷಚಂದ್ರ ಮೌ. ಅಶ್ರುಫುದ್ದೀನ ಮೊದಲಾದ ೧೫ ಜನರಿಗೆ ಗಾಯಗಳಾಗಿವೆ.

ಮಹಾಗಾವ ಮತ್ತು ಸಾಂಗಲಿಗಳಲ್ಲಿ ತುಂಟ ಮುಸಲ್ಮಾನರು ಹಿಂದುಗಳ ಮೇಲೆ ಅತ್ಯಾಚಾರ ನಡೆಯಿಸಿದರು.

ದೇಹವೇ ದೇವಾಲಯ



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ-ಸೋಮವಾರ ತಾರೀಖು ೨೦ ನೆಯ ಜೂನ ೧೯೩೮. | ಸಂಚಿಕೆ ೪೧

## ಮಹತ್ವದ ಸುದ್ದಿಗಳು.

— ಮಹಾತ್ಮಾ ಗಾಂಧಿಯವರು ಮೊನ್ನೆ ಮಧ್ಯಪ್ರಾಂತದ ಮುಖ್ಯ ಮಂತ್ರಿಗಳಾದ ಡಾ. ಖರೆಯವರಸಂಗಡ ಆ ಪ್ರಾಂತದ ಮಂತ್ರಿ ಮಂಡಲದ ಸಂಬಂಧವಾಗಿ ಎರಡುತಾಸು ಮಾತನಾಡಿದರು.

— ಬಾಗಲಕೋಟೆ ಮತ್ತು ನಿಪ್ಪಾಣಿ ಮುನಸಿಪಾಲ್ಟಿ ಪ್ರಾಥಮಿಕ ಶಾಲೆಗಳ ಆಡಳಿತೆ ಸರಿಯಾಗಿಲ್ಲವೆಂದು ಆ ಶಾಲೆಗಳನ್ನು ಸರಕಾರದವರು ಜಿಲ್ಲಾ ಲೋಕಲ್ ಬೋರ್ಡುಗಳ ವಶಕ್ಕೆ ಇದೇ ಜುಲೈ ಒಂದನೆಯ ತಾರೀಖಿಗೆ ಕೊಡಲು ಅಪ್ಪಣೆ ಮಾಡಿದ್ದಾರೆ.

— ಮೌ. ತಾಜಮುದ್ದೀನ ಅಥವಾ ಗೋಸೇವಕ ಮೌಲಾನಾ ಇವರು ಭೋರಸಂಸ್ಥಾನದಲ್ಲಿ ಈಗ ಸಂಚರಿಸಿ ಗೋರಕ್ಷಣೆಗಾಗಿ ಜನಜಾಗೃತಿಯನ್ನು ಮಾಡುತ್ತಿದ್ದಾರೆ.

— ಥೊಡಗಾವ ಎಂಬಲ್ಲಿ ಆದಿಹಿಂದುಗಳ ಮಹಾಸಭೆಯು ಡಾ. ಆಂಬೇಡಕರರ ಅಧ್ಯಕ್ಷತೆಯಲ್ಲಿ ಕೂಡಿದ್ದಿತು. ಆಗ ದೇವತೆಗೆ ಕುರಿಕೋಳಿಗಳನ್ನು ಬಲಿ ಕೊಡಬೇಡಿರೆಂದು ಡಾ. ಆಂಬೇಡಕರರು ತಮ್ಮ ಜನರಿಗೆ ಸೂಚಿಸಿದರು.

— ಕೃತ್ರಿಮವಾಗಿ ಮಳೆ ಬೀಳುವಂತೆ ರಶಿಯಾದಲ್ಲಿ ಒಂದು ಯಂತ್ರವನ್ನು ಮಾಡಿದ್ದಾರೆ. ಆ ಯಂತ್ರದ ಮೂಲಕ ನದಿಯ ನೀರನ್ನು ಮೇಲಕ್ಕೆ ತೆಗೆದುಕೊಂಡು ೨೨೫ ಎಕರೆ ಪ್ರದೇಶದಲ್ಲಿ ಮಳೆ ಬೀಳುವಂತೆ ಮಾಡಲು ಬರುತ್ತದೆ. ಬರಗಾಲವನ್ನು ಕಳೆಯಬೇಕೆಂದೇ ಈ ಯಂತ್ರ ಶೋಧಕರ ಉದ್ದೇಶ.

— ಬೆಂಗಳೂರಿನಿಂದ ೪೦ ಮೈಲು ದೂರದಲ್ಲಿರುವ ಚೆನ್ನಪಟ್ಟಣ ಎಂಬ ಗ್ರಾಮದಲ್ಲಿ ಹಿಂದು-ಮುಸಲ್ಮಾನರು ಹೊಡೆದಾಡಿದರು. ಅನೇಕರಿಗೆ ಗಾಯಗಳಾಗಿವೆ.

— ಕೀರ್ತಿಶೇಷ ವಿಠ್ಠಲಭಾಯಿ ಪಟೇಲರು ಶ್ರೀ. ಸುಭಾಷಚಂದ್ರ ಬೋಸರ ಕಡೆಗೆ ಪರದೇಶಗಳಲ್ಲಿ ಹಿಂದಿ ಸ್ವಾತಂತ್ರ್ಯದ ಪ್ರಚಾರಕ್ಕೋಸ್ಕರ ಕೊಟ್ಟ ೧ ಲಕ್ಷ ರೂ. ಗಳ ಬಡ್ಡಿಯನ್ನು ಆದಿ ಹಿಂದುಗಳ ಉನ್ನತಿಯ ಕಾರ್ಯಕ್ಕೆ ವಿನಿಯೋಗಿಸಬೇಕೆಂದು ಮ. ಗಾಂಧಿಯವರು ತೀರ್ಮಾನಿಸಿದ್ದಾರೆ.

— ಬರುವ ಅಗಷ್ಟ ತಿಂಗಳಲ್ಲಿ ಜಪಾನಿಗಳಿಗೆ ಅಪಜಯವಾಗಿ ಚೀನದಲ್ಲಿ ದೊಂಬಿ ಪ್ರಾರಂಭವಾಗುವುದೆಂದು ಒಬ್ಬ ಜ್ಯೋತಿಷಜ್ಞನು ಹೇಳಿದ್ದಾನೆ.

— ಶ್ರೀ. ಪಟ್ಟಾಭಿ ಸೀತಾರಾಮಯ್ಯನವರು ಹೈದರಾಬಾದ ಸಂಸ್ಥಾನದಲ್ಲಿ ಬರಬಾರದಾಗಿ ನೈಜಾಮ ಸರಕಾರದವರು ಅವರಿಗೆ ಅಪ್ಪಣೆ ಮಾಡಿದ್ದಾರೆ.

— ಶ್ರೀ. ನರಿಮನ್ನರನ್ನು ನೈಜಾಮ ರಾಜ್ಯದಲ್ಲಿ ಬರದಂತೆ ಮಾಡಿದುದಕ್ಕೆ ದಿಲ್ಲಿಯ ಇಂಟರನೆಶನಲ್ ಆರ್ಯನ್ ಲೀಗಿನವರು ಆ ಸರಕಾರದ ಕೃತಿಯನ್ನು ನಿಷೇಧಿಸಿ ಮುಖ್ಯ ಮಂತ್ರಿಗಳಿಗೆ ತಂತೀ ಮೂಲಕ ಈ ಪ್ರತಿಬಂಧವನ್ನು ತೆಗೆದು ಹಾಕಲು ಕೇಳಿಕೊಂಡಿದ್ದಾರೆ.

— ಇಟಲಿ ಮತ್ತು ಅಫಗಾಣ ಸರಕಾರಗಳಲ್ಲಿ ವ್ಯಾಪಾರಿ ಒಡಂಬಡಿಕೆಯಾಗಿದೆ.

— ಪಂಡಿತ ಜವಾಹರಲಾಲ ನೆಹರುರವರು ಸ್ಪೇನ್ ದೇಶಕ್ಕೆಹೋಗಿ ಅಲ್ಲಿಯ ಪರರಾಷ್ಟ್ರ ಮಂತ್ರಿಗಳ ಸಂಗಡ ಅಲ್ಲಿಯ ರಾಜಕಾರಣವನ್ನು ಕುರಿತು ಮಾತನಾಡಿದರು.

— ದೇಶಬಂಧು ದಾಸರ ೧೩ ನೆಯ ಪುಣ್ಯತಿಥಿಗೆ ಕಲಕತ್ತಾದಲ್ಲಿ ತಾ. ೧೬ ನೆಯ ದಿನ ಪ್ರಚಂಡ ಸಭೆಸೇರಿತ್ತು. ರಾಷ್ಟ್ರಾಧಿಪತಿ ಸುಭಾಷಚಂದ್ರರು ಸ್ಫೂರ್ತಿದಾಯಕ ಸಂದೇಶ ಕಳಿಸಿದ್ದರು.

— ಹಿಂದಿ ಶಿಕ್ಷಣ ವಿರೋಧದ ಚಟುವಟಿಕೆಯನ್ನು ಮದ್ರಾಸಿನ ಮುಖ್ಯ ಮಂತ್ರಿಗಳು ದಬ್ಬಾಳಿಕೆಯಿಂದಲೇ ನಿಲ್ಲಿಸಲಾರಂಭಿಸಿದ್ದಾರೆ.

# ಮೈಸೂರು ದೇಶದ ವೀರಶೈವರ ಸಾಮೂಹಿಕ ಪರಿಸ್ಥಿತಿ.

(ಲೇಖಕ— ಶ್ರೀ ವೀರೇಶ್ವರ ಬೆಂಗಳೂರು ನಗರ.)

ಧಾರ್ಮಿಕ ವಿದ್ಯಾವಂತರೆಂದುಕೊಳ್ಳುವ ಕೆಲವು ವ್ಯಕ್ತಿಗಳು ಸಾರ್ವಜನಿಕ ಹಿತಸಾಧನೆಯ ನೆವದಿಂದ ತಮ್ಮ ವೈಯಕ್ತಿಕ ಸ್ವಾರ್ಥ ಸಾಧನೆಯಲ್ಲಿ ತೊಡಗಿದುದರ ಪರಿಣಾಮವಾಗಿ, ಮೊದಲೇ ಅವಿದ್ಯಾಕೂಪದಲ್ಲಿ ನೆರಳುತ್ತಿದ್ದ ನಮ್ಮ ಸಮಾಜವು ಮತ್ತಿಷ್ಟು ಅಧೋಗತಿಗಿಳಿಯಿತಷ್ಟೆ. ಹೀಗೆ ಅಧೋಗತಿಗಿಳಿದರೂ ನಮ್ಮ ಉತ್ತರ ಕರ್ನಾಟಕದ ಬಂಧುಗಳು ಅದಷ್ಟು ಬೇಗ ಎಚ್ಚರಗೊಂಡು ಬೇರೆ ಬೇರೆ ಪರಿಸ್ಥಿತಿಗಳ ಸಹಾಯದಿಂದ ಸಾಧ್ಯವಾದಷ್ಟೂ ಪ್ರಗತಿಗಾಮಿಗಳಾಗಿ ತಮ್ಮ ಸಮಾಜದ ಘನತೆ ಗೌರವ ಪ್ರತಿಷ್ಠೆಗಳನ್ನು ಕಾಪಾಡಿಕೊಳ್ಳುತ್ತಲೂ ಹೆಚ್ಚಿಸಿಕೊಳ್ಳುತ್ತಲೂ ಇದ್ದಾರೆ.

ಅಲ್ಲಿಯ ಪರಿಸ್ಥಿತಿಯು ಹಾಗಿದ್ದರೆ ಇತ್ತ ನಮ್ಮ ಮೈಸೂರು ಸೀಮೆಯ ವೀರಶೈವರ ಪರಿಸ್ಥಿತಿಯು ನಮಗೆ ತಿಳಿದ ಮಟ್ಟಿಗೂ ತೀರಾ ಶೋಚನೀಯಾವಸ್ಥೆಯಲ್ಲಿದೆಯೆಂದು ಹೇಳಬಹುದು. ಏಕೆಂದರೆ ಈಗ್ಯೆ ಸುಮಾರು ಹತ್ತು ಹನ್ನೆರಡು ವರುಷಗಳಿಂದೀಚೆಗೆ ಮೈಸೂರು ದೇಶದ ವೀರಶೈವರ ಸಾರ್ವಜನಿಕ ಸಾಮೂಹಿಕವಾದ ಯಾವ ವಿಧವಾದ ಸಭೆಗಳಾಗಲಿ, ಕೂಟಗಳಾಗಲಿ ರಾಜಕೀಯ ಸಾಮಾಜಿಕ ಆರ್ಥಿಕಾದಿ ಯಾವ ವಿಚಾರಗಳನ್ನಾದರೂ ಕುರಿತು ಪರ್ಯಾಲೋಚನಾ ಸಭೆಗಳಾಗಲಿ, ನಡೆದುದಿಲ್ಲ. ಬೆಂಗಳೂರಿನಲ್ಲಿ ನೆರೆದಿದ್ದ ಅಖಿಲ ಭಾರತೀಯ ಹತ್ತನೆಯ ವೀರಶೈವ ಮಹಾಸಭೆಯ ನಂತರ ಆ ಬಗೆಯ ಸಾಮೂಹಿಕ ಕೂಟಗಳು ಈಚೆಗೆ ನಡೆದಂತಿಲ್ಲ. ಆ ಹತ್ತನೆ ಮಹಾಸಭೆಯ ಫಲಿತಾಂಶವಾದರೂ ಒಳಗುಟ್ಟು ಶಿವನೇ ಬಲ್ಲ; ಎಂಬಂತಾಯಿತು.

ಹೇಗೆಂದರೆ ಆ ಹತ್ತನೆಯ ಮಹಾ ಸಭೆಯಲ್ಲಿ ನಮ್ಮ ಸಮಾಜದ ಪುರೋಭಿವೃದ್ಧಿಗಾಗಿ ದೈನಿಕ, ಸಾಪ್ತಾಹಿಕ ಮಾಸಿಕಾದಿ ವಿವಿಧ ರೀತಿಯ ವೃತ್ತಪತ್ರಿಕೆಗಳನ್ನು ಹೊರಡಿಸಬೇಕು. ಎಂಬ ಠರಾವು ಸರ್ವಾನುಮತದಿಂದ ನಿರ್ಣಯವಾಗಿದ್ದಿತಲ್ಲದೆ ಇನ್ನೂ ಲೆಕ್ಕ ವಿಲ್ಲದಷ್ಟು ನಿರ್ಣಯಗಳಾಗಿದ್ದವು. ಅವುಗಳಲ್ಲೊಂದೂ ಕಾರ್ಯತಃ ಆಚರಣೆಯಲ್ಲಿ ಬಂದಹಾಗೆ ಕಾಣಲಿಲ್ಲ. ಒಳಪಂಗಡಗಳ ಪರಸ್ಪರ ವಿವಾಹವೇ ಮೊದಲಾದ ಕೆಲವು ಠರಾವುಗಳು ಕಾಲಗತಿಪ್ರಾಬಲ್ಯವನ್ನನುಸರಿಸಿ ತಾವಾಗಿಯೇ ಆಚರಣೆಯಲ್ಲಿ ಬಂದುವೇ ಹೊರ್ತು ಮಹಾಸಭೆಯ ಸಂಚಾಲಕರ ಪ್ರಯತ್ನ ಪ್ರೋತ್ಸಾಹಗಳೊಂದೂ ಇದ್ದಂತೆ ಕಾಣಲಿಲ್ಲ.

ಈ ಕಾಲದಲ್ಲಿ ವೃತ್ತಪತ್ರಿಕೆಗಳಿಗೆ ಎಂಥ ಮಹತ್ತರ ಜವಾಬ್ದಾರಿಯು ಮತ್ತು ಗೌರವದ ಸ್ಥಾನವಿದೆಯೆಂಬುದೂ ವೃತ್ತಪತ್ರಿಕೆಗಳೇ ಜನಾಂಗದ ಯೋಗ್ಯತಾ ನಿರ್ಣಯ ಪತ್ರಗಳೆಂಬುದನ್ನೂ ನಮ್ಮ ಮೈಸೂರು ದೇಶದ ವೀರಶೈವ ಪ್ರಮುಖರು ಮನಗಂಡಿದ್ದರೂ ಮಹಾಸಭೆಯಲ್ಲಿ ಆ ವಿಷಯಕವಾದ ಠರಾವು ಸರ್ವಾನುಮೋದಿತವಾಗಿದ್ದರೂ ಇಷ್ಟು ವರುಷಗಳಾದರೂ ಮೈಸೂರು ದೇಶದಲ್ಲಿ ವೀರಶೈವ ಸಾರ್ವಜನಿಕ ಹಿತವನ್ನು ರಕ್ಷಿಸುವ ಒಂದು ಪತ್ರಿಕೆಯೂ ಇಲ್ಲದಿರುವ ಒಂದೇ ಉದಾಹರಣೆಯು ಸಾಕು ಇಲ್ಲಿಯ ವೀರಶೈವರ ಸಾಮೂಹಿಕ ಪರಿಸ್ಥಿತಿಯ ನಿರ್ಣಯಕ್ಕೆ.

ಕೆಲವು ವರುಷಗಳ ಮೊದಲು "ಮೈಸೂರು ಸ್ಟಾರ್" ಪತ್ರಿಕೆಯು ನಿಂತು ಹೋದಾಗ್ಗೆ ಈ ಸೀಮೆಯ ಕೆಲವು ಪ್ರಮುಖರುಗಳು ಆ ಪತ್ರಿಕೆಯ ಹಕ್ಕನ್ನೂ ಮುದ್ರಣ ಯಂತ್ರಾದಿಗಳನ್ನೂ ಖರೀದಿಮಾಡಿ ಅದನ್ನು ವೀರಶೈವ ಸಮಾಜದ ಸಾರ್ವಜನಿಕ ಸೊತ್ತನ್ನಾಗಿ ಮಾಡಿ ಬೆಂಗಳೂರಿನಿಂದ ಆ ಪತ್ರಿಕೆಯನ್ನು ಹೊರಡಿಸುವ ಪ್ರಯತ್ನ ಮಾಡಬೇಕು. ಎಂಬುದಾಗಿ ಯೋಚಿಸಿ ಖರೀದಿಗಾಗಿ ಮೈಸೂರಿಗೆ ಹೋಗಿದ್ದರೆಂತಲೂ ವದಂತಿಯು ಹಬ್ಬಿದ್ದಿತು. ಅದೇನು ಕಾರಣವೋ ಆ ವದಂತಿಯು ವದಂತಿಯಾಗಿಯೇ ಪರಿಣಮಿಸಿದುದಲ್ಲದೆ ಕೆಲವು ದಿನಗಳನಂತರ ಆ ವದಂತಿಯೂ ಮಾಯವಾಗಿ ಹೋಯಿತು.

ಇನ್ನು ಸಾರ್ವಜನಿಕ ವಿಷಯವಾಗಿ ಯೋಚಿಸಿದರೆ ಸಾರ್ವತ್ರಿಕವಾಗಿ ವೀರಶೈವ ಸಮಾಜದ ರಾಜಕೀಯಾದಿ ಹಿತಸಂರಕ್ಷಣೆಗಾಗಿ ಹೋರಾಡುವ ಸಂಸ್ಥೆಗಳೊಂದೂ ಇರುವಂತೆ ಕಾಣುವದಿಲ್ಲ. ಇರುವ ಸಮಾಜ ಪ್ರಮುಖರುಗಳಾದರೂ ವೈಯಕ್ತಿಕವಾಗಿಯಾದರೂ ಹೋರಾಟವನ್ನು ನಡೆಯಿಸಿ ರಾಜಕೀಯ ಸೌಲಭ್ಯಗಳನ್ನಾಗಲೀ ಪೌರ ಸಂಘಗಳಲ್ಲಿ ಸಮಾಜದ ಗೌರವಕ್ಕೆ ತಕ್ಕಷ್ಟು ಯುಕ್ತ ಸ್ಥಾನಗಳನ್ನಾಗಲೀ ಪಡೆಯಲು ಪ್ರಯತ್ನಿಸುವುದಿಲ್ಲ. ಈಗ ರಾಜಕೀಯಾದಿಗಳಲ್ಲಿ ಭಾಗಿಗಳಾಗಿರುವ ಕೆಲ ವೀರಶೈವ ಪ್ರಮುಖರುಗಳು ಸನ್ನಿವೇಶಬಲದಿಂದಲೂ ಪರಮತೀಯ ಸಹೋದ್ಯೋಗಿಗಳ ಸಹವಾಸದ ಪರಿಣಾಮದಿಂದಲೂ ರಾಜಕೀಯದಲ್ಲಿ ಭಾಗಿಗಳಾಗಿರುವರೇ ಹೊರ್ತು ಸ್ವಯಂ ಧರ್ಮಾಭಿಮಾನದಿಂದಲೂ ಸ್ವಧರ್ಮದ ಉತ್ಕರ್ಷಕ್ಕಾಗಿ ಶ್ರಮಿಸಲೂ ಸ್ವಯಂಪ್ರೇರಣೆಯಿಂದ ಭಾಗಿಗಳಾದವರಲ್ಲವೆಂದೇ ಹೇಳಬಹುದು.

ಇನ್ನು ಈ ಭಾಗದ ಜನರ ಧಾರ್ಮಿಕ ತಿಳುವಳಿಕೆಯ ವಿಷಯವಾಗಿ ವಿವೇಚಿಸಲು ಹೊರಟರೆ ತೀರ ತಲೆ ತಗ್ಗಿಸುವಂತಾಗುತ್ತದೆ. ಈ ಪ್ರಾಂತದ ಗ್ರಾಮಗಳಲ್ಲಿ ವಾಸಿಸಿರುವ ವ್ಯವಸಾಯಾದಿ ವಿವಿಧ ಉದ್ಯೋಗಗಳಲ್ಲಿರುವ ಜನರಿಗೆ ತಿಳಿದಿರುವಷ್ಟು ಧಾರ್ಮಿಕ ವಿಚಾರಗಳೂ, ಆಚಾರಗಳೂ ಶಿವಾನುಭವಾದಿ ತಾತ್ವಿಕ ವಿಚಾರಗಳೂ ತಾವು ಸಂಪೂರ್ಣ ವಿದ್ಯಾವಂತರೆಂದು ತಿಳಿದುಕೊಂಡಿರುವ ಜನಗಳಿಗೆ ತಿಳಿಯದೆಂದೇ ಹೇಳಬಹುದು. ಈ ಭಾಗದಲ್ಲಿ ಆಂಗ್ಲ ಪದವಿಧರರು ಅದರಲ್ಲಿಯೂ ದೊಡ್ಡ ದೊಡ್ಡ ಪದವಿಗಳನ್ನು ಪಡೆದಿರುವವರು ನೂರಾರು ಜನರಿದ್ದರೂ ಸಂಪೂರ್ಣ ವೀರಶೈವ ಧರ್ಮಜ್ಞಾನಿಗಳೂ ತಾತ್ವಿಕ ತಿಳುವಳಿಕೆಯುಳ್ಳವರೂ ಅವರಲ್ಲಿ ಒಬ್ಬಿಬ್ಬರು ದೊರೆಯುವದೂ ಸಹ ದುರ್ಲಭವೆಂದೇ ಹೇಳಬಹುದು.

ಇನ್ನು ಸಮಾಜ ಸುಧಾರಣೆಗಾಗಿ ದುಡಿಯುವವರನ್ನಂತೂ ಹುಡುಕಿದರೂ ದೊರೆಯುವ ಹಾಗಿಲ್ಲ. ಎಲ್ಲಿಯಾದರೂ ಒಬ್ಬಿಬ್ಬರು ಬಹಿರಂಗದಲ್ಲಿ ಸುಧಾರಣೆಯಮಾತನ್ನೆತ್ತಿದರೆ ಸಾಕು. ಇಲ್ಲಿಯ ಪ್ರಮುಖರೆಂದುಕೊಳ್ಳುವವರು ಆ ಸುಧಾರಣಾವಾದಿಗಳನ್ನು ಕೂಡಲೇ ಬಾಯಿ ಮುಚ್ಚಿಸಿಬಿಡುವರು. ತಮ್ಮ ಮೇಲ್ವಿಚಾರಣೆಯಲ್ಲಿಯೇ ತಮಗರಿವಿಲ್ಲದೆಯೇ ಎಷ್ಟೋ ಅಕೃತ್ಯಗಳೂ ಅಚಾತುರ್ಯಗಳೂ ನಡೆದು ಹೋಗುತ್ತಿದ್ದರೂ ಅದರ ಅರಿವಾದಬಳಿಕಲಾದರೂ ಈ ಜನಗಳು ಮುಂದೆ ಆ ಬಗೆಯ ಅಚಾತುರ್ಯಗಳು ನಡೆಯದಂತೆ ಪರಿಸ್ಥಿತಿಯನ್ನು ತಿದ್ದಿ ಸುಧಾರಿಸಿಕೊಳ್ಳಲೊಪ್ಪುವುದಿಲ್ಲ. ಪರಿಸ್ಥಿತಿಯು ಹೀಗೇ ಇದ್ದರೆ ಮುಖಂಡರೆಂಬುವವರು ಜಾಗೃತರಾಗದಿದ್ದರೆ ಪರಿಣಾಮವು ಭಯಾನಕವೆಂದೇ ತೋರುತ್ತದೆ.

---

—ಬೆಳಗಾವಿ ಲಿಂಗರಾಜ ಕಾಲೇಜಿನಿಂದ ಈ ವರುಷ ಬಿ. ಎ. ಪರೀಕ್ಷೆಗೆ ೬೩ ವಿದ್ಯಾರ್ಥಿಗಳು ಕುಳಿತಿದ್ದರು. ಅವರಲ್ಲಿ ೫ ವಿದ್ಯಾರ್ಥಿಗಳು ೨ ನೆಯ ತರಗತಿಯಲ್ಲಿ ತೇರ್ಗಡೆಯಾದರು. ಒಟ್ಟು ೨೭ ವಿದ್ಯಾರ್ಥಿಗಳು ಉತ್ತೀರ್ಣರಾಗಿದ್ದಾರೆ.

# ವೀರ ಬೈರಾಗಿ

## ಧರ್ಮರಕ್ಷಣೆಗೆ ಆತ್ಮಾರ್ಪಣ.

ಸಾವಿರಾರು ವರುಷಗಳಿಂದ ಅನೇಕ ಧರ್ಮಗಳ ಆಘಾತವು ಹಿಂದುಧರ್ಮದ ಮೇಲೆ ಆಗುತ್ತಾ ಬಂದಿದ್ದರೂ ಅದು ಇನ್ನೂ ಬದುಕಿರುವುದಕ್ಕೆ ಇದರ ರಕ್ಷಣೆಗಾಗಿ ಈ ವರೆಗೆ ಅಸಂಖ್ಯರು ಆತ್ಮಾರ್ಪಣಮಾಡಿರುವುದೇ ಮುಖ್ಯ ಕಾರಣವು. ಹೀಗೆ ಆತ್ಮಾರ್ಪಣಮಾಡಿದ ವೀರರಲ್ಲಿ ಬಂದಾ ಬಹದ್ದೂರರವರೂ ಒಬ್ಬ ಪ್ರಮುಖರು. ಕಳೆದ ಜ್ಯೇಷ್ಠ ಶು|| ೧೧ (ಜೂನ್ ೮ ನೆಯ ತಾರೀಖಿನ) ದಿನ ಪಂಜಾಬದಲ್ಲಿ ಇವರ ಜಯಂತಿಯು ಬಹು ಉತ್ಸಾಹದಿಂದ ಜರುಗಿತು. ವೀರಬಂದಾ ಬಹದ್ದೂರರವರ ದಿವ್ಯ ಚರಿತ್ರೆಯಲ್ಲಿಯ ಕೆಲವು ಸಂಗತಿಗಳನ್ನು ಇಲ್ಲಿ ಕೊಟ್ಟಿದೆ.

## ವೀರ ಬೈರಾಗಿಯಾದ!

ಪಂಜಾಬ ಪ್ರಾಂತದ ರಾಜೋರ ಎಂಬ ಗ್ರಾಮದ ಒಂದು ರಜಪುತ ಮನೆತನದಲ್ಲಿ ಲಕ್ಷ್ಮಣ ಎಂಬ ಒಬ್ಬ ವೀರನಿದ್ದನು. ಆತನು ಆಗಾಗ್ಗೆ ಬೇಟೆಯಾಡಲು ಹೋಗುತ್ತಿದ್ದನು. ಒಂದು ದಿನ ಬೇಟೆಯಲ್ಲಿ ಒಂದು ಚಿಗರಿಗೆ ಬಾಣ ಹೊಡೆಯಲು ಅದು ನೆಲಕ್ಕೆ ಬಿದ್ದು ಬಹು ಸಂಕಟದಿಂದ ಪ್ರಾಣ ಬಿಟ್ಟಿತು. ಅದು ಈಯಲಾಗಿದ್ದುದರಿಂದ ಮರಿಗಳೂ ಹೊರಬಿದ್ದು ಚಟಪಟ ಒದ್ದಾಡಿ ಸತ್ತವು. ಈ ಹೃದಯದ್ರಾವಕ ಸ್ಥಿತಿಯನ್ನು ವೀರ ಲಕ್ಷ್ಮಣನು ನೋಡಿದೊಡನೆ ಆತನ ಮನಕರಗಿತು. ದಯೆಯಿಂದ ಕಣ್ಣೀರುದುರಿದವು.

ತನ್ನ ಕೃತ್ಯದ ಬಗ್ಗೆ ಬಹು ಹೇಯವುಂಟಾಯಿತು. ಕೂಡಲೇ ಆ ವೀರನು ಬೈರಾಗಿಯಾಗಿ ದಕ್ಷಿಣ ಪ್ರಾಂತಕ್ಕೆ ಬಂದು ತಪಸ್ಸನ್ನು ಆಚರಿಸಲಾರಂಭಿಸಿದನು. ವೀರ ಲಕ್ಷ್ಮಣನು ಅನಂತರ "ಬಂದಾ ಬೈರಾಗಿ" ಎಂಬ ಹೆಸರಿನಿಂದ ಕರೆಯಲ್ಪಟ್ಟನು. ತಪಸ್ಸಿನಲ್ಲಿಯೂ ಈತನು ಮಹಾ ತೇಜಸ್ವಿಯಾದುದರಿಂದ ಸ್ವಲ್ಪ ದಿನಗಳಲ್ಲಿಯೇ ಈತನ ಕೀರ್ತಿಯು ಎಲ್ಲ ಕಡೆಗೂ ಹಬ್ಬಿತು.

## ಸನ್ಯಾಸಿ ಸೇನಾಧಿಪತಿಯಾದ!

ಇದು ೧೮ ನೆಯ ಶತಮಾನದಲ್ಲಿ ಸಂಭವಿಸಿದ ಸಂಗತಿಯು. ಆಗ ಮುಸಲ್ಮಾನರ ಕ್ರೂರ ಪ್ರಭುತ್ವವು ಉತ್ತರ ಹಿಂದುಸ್ಥಾನದಲ್ಲಿ ಹಾಹಾಕಾರವನ್ನುಂಟುಮಾಡಿದ್ದಿತು. ಹಿಂದುಧರ್ಮ ರಕ್ಷಣೆಗಾಗಿ ಶೀಖರು ಪ್ರಚಂಡವಾಗಿ ಆತ್ಮಾಹುತಿಯನ್ನು ಕೊಡುತ್ತಿದ್ದರು.

ಶೀಖರ ೮ ನೆಯ ಗುರುಗೋವಿಂದಸಿಂಹಜಿಯವರು ಅತುಲ ಪರಾಕ್ರಮದಿಂದ ಮುಸಲ್ಮಾನರ ಹಿಂಸೆಯನ್ನು ತಡೆಯುತ್ತಿದ್ದರು. ಇವರು ತಮ್ಮ ತಂದೆಯನ್ನೂ ನಾಲ್ಕು ಮಕ್ಕಳನ್ನೂ ದಿಲ್ಲಿ ಬಾದಶಹನು ನಡೆಸಿದ್ದ ಹಿಂದುಗಳ ಯಜ್ಞಕ್ಕೆ ಆಹುತಿಯಾಗಿ ಕೊಟ್ಟಿದ್ದರು.

ಗುರುಗೋವಿಂದಜಿಯವರ ವೀರ ಬಾಲಕರು ಆತ್ಮಾರ್ಪಣ ಮಾಡಲು ಕಾರಣವಾದ ಸಂಗತಿಯನ್ನು ಕೇಳಿದರೆ ಅಂಥ ವೀರತ್ವವೇ ಹಿಂದುಜಾತಿಯನ್ನೂ ಹಿಂದುರಾಷ್ಟ್ರವನ್ನೂ ರಕ್ಷಿಸಿತೆಂದು ಸ್ಪಷ್ಟವಾಗುತ್ತದೆ. ಈ ಬಾಲಕರನ್ನು ಸೆರೆಹಿಡಿದು ದಿಲ್ಲಿ ದರ್ಬಾರಿಗೆ ತೆಗೆದುಕೊಂಡು ಹೋಗಿದ್ದರು. ಆಗ ಬಾದಶಹನು ಬಾಲಕರಿಗೆ ಹೀಗೆ ಕೇಳಿದನು—

"ನೀವು ಇಲ್ಲಿಂದ ಬಿಡುಗಡೆ ಹೊಂದಿದ ಮೇಲೆ ಏನು ಮಾಡುವಿರಿ?"

"ನಾವು ಸೈನ್ಯ ಕೂಡಿಸಿ ನಿಮ್ಮ ಸಂಗಡ ಯುದ್ಧಮಾಡುವೆವು."

ಆ ಯುದ್ಧದಲ್ಲಿ ಸೋತರೆ ಆ ಮೇಲೆ ನೀವು ಏನು ಮಾಡುವಿರಿ?

"ಪುನಃ ಸೈನ್ಯ ಕೂಡಿಸಿ ನಿಮ್ಮನ್ನು ಕೊಲ್ಲುವೆವು. ಅಥವಾ ನಾವು ಸಾಯುವೆವು."

ಬಾದಶಹನಿಗೆ ಈ ವೀರ ಬಾಲಕರ ಶೂರ ನುಡಿಕೇಳಿ ಕೋಪ ಬಂದಿತು. ಅವರನ್ನು ಜೀವಂತ ಹುಗಿಸಿ ಕೊಂದನು.

ಗುರುಗೋವಿಂದಸಿಂಹಜಿಯವರು ಇಂಥ ವೀರ ಪುತ್ರರನ್ನೂ ಅನೇಕ ಜತೆಗಾರರನ್ನೂ ಕಳೆದುಕೊಂಡನಂತರ ಮುಂದೇನು ಮಾಡಬೇಕೆಂಬುದು ತೋಚದೆ ಬಂದಾಬೈರಾಗಿಗಳ ಹತ್ತಿರ ಬಂದು ಹಿಂದುಧರ್ಮಕ್ಕೂ ಹಿಂದುದೇಶಕ್ಕೂ ಬಂದ ಘೋರ ವಿಪತ್ತನ್ನು ತಿಳಿಸಿದರು.

ಬಂದಾಬೈರಾಗಿಗಳು ತಮ್ಮ ಮಾತೃಭೂಮಿಗೂ ಪವಿತ್ರ ಧರ್ಮಕ್ಕೂ ಬಂದ ವಿಪತ್ತನ್ನು ಕೇಳಿ ತಪಸ್ಸನ್ನು ಬಿಟ್ಟು ಸೇನಾಪತಿಗಳಾಗಲು ಸಿದ್ಧರಾದರು. ಜಪತಪಾದಿಗಳೆಲ್ಲಾ ಜನಾಂಗವು ಸುಖಶಾಂತಿಗಳಿಂದಿರುವಾಗಲೇ ಆಚರಿಸಲ್ಪಡತಕ್ಕವುಗಳೇ ಸರಿ. ಜನರು ನಾನಾ ಹಿಂಸೆಗಳಿಂದ ಬೆಂದುಬೆಂಡಾಗುತ್ತಿರುವಾಗ ಅವರ ದುಃಖ ನಿವಾರಣೆಗಾಗಿ ತಮ್ಮ ತನುಮನಗಳನ್ನು ಸವೆಸುವುದೇ ನಿಜವಾದ ಜಪತಪಗಳು. ಅಂಥ ಸಮಯದಲ್ಲಿ ತಮ್ಮ ಧರ್ಮ ಮತ್ತು ದೇಶ ಬಾಂಧವರನ್ನು ಬಿಟ್ಟು ತಾವೇ ಒಂಟಿಗರಾಗಿ ಜಪತಪಗಳಲ್ಲಿ ಕಾಲಕಳೆವುದು ಗೌಣವಾದುದು.

ಧರ್ಮದ ಈ ನಿಜ ರಹಸ್ಯವನ್ನು ಬಂದಾಬೈರಾಗಿಗಳು ತಿಳಿದವರಾಗಿದ್ದುದರಿಂದಲೇ ತಮ್ಮ ಕಮಂಡಲವನ್ನು ಎಸೆದು ಕತ್ತಿಯನ್ನು ಹಿಡಿದರು.

## ಬಂದಾಬಹಾದ್ದೂರರ ಆತ್ಮಾಹುತಿ!

ಬಂದಾಬಹಾದ್ದೂರರವರು ಲಾಹೋರಿಗೆ ಹೋಗಿ ಸೈನ್ಯವನ್ನು ಕೂಡಿಸಿ ಮುಸಲ್ಮಾನರ ಸಂಗಡ ಹೋರಾಡಿದರು. ಇವರು ಪಂಜಾಬ ಪ್ರಾಂತದಲ್ಲೆಲ್ಲಾ ತಮ್ಮ ಶಕ್ತಿಯನ್ನು ಹೆಚ್ಚಿಸಿ ಹಿಂದು ರಾಜ್ಯಸ್ಥಾಪನೆಯ ಸಿದ್ಧತೆಯನ್ನು ಮಾಡಿದರು. ಆದರೆ ಅವರ ಉದ್ದೇಶವು ನೆರವೇರಲಿಲ್ಲ.

ಕೊಡಲಿಯಕಾವು ಕುಲಕ್ಕೆ ಮೃತ್ಯು ಎಂಬಂತೆ ಕೆಲವು ಸ್ವಾರ್ಥಿಗಳ ಕುಟಿಲ ಕೃತ್ಯಗಳಿಂದ ಬಂದಾಬಹಾದ್ದೂರರವರು ಮುಸಲ್ಮಾನರ ಕೈಸೆರೆಯಾದರು. ಇವರನ್ನು ದಿಲ್ಲಿಗೆ ಕ್ರಿ. ಶ. ೧೭೧೬ ರಲ್ಲಿ ತೆಗೆದುಕೊಂಡು ಹೋಗಿ ಕಬ್ಬಿಣದ ಪಂಜರದಲ್ಲಿಟ್ಟು ಬಹು ಕ್ರೂರತನದಿಂದ ಕೊಂದರು. ಇವರ ಮುಂದೆಯೇ ಇವರ ಮಗನನ್ನೂ ಕೊಂದರು.

ಬಾದಶಹನು ಇಷ್ಟರಿಂದಲೇ ತೃಪ್ತನಾಗದೆ ಪ್ರತಿ ದಿನ ಒಂದುನೂರು ಶೀಖರ ಶಿರಚ್ಛೇದಮಾಡಬೇಕೆಂದು ಅಪ್ಪಣೆಮಾಡಿದನು. ಹಿಂದುಗಳು ಕೂದಲನ್ನು ಉದ್ದ ಬಿಡಬಾರದೆಂತಲೂ ಕ್ಷೌರಮಾಡಿಸಿಕೊಳ್ಳದಿದ್ದವರ ಶಿರಚ್ಛೇದ ಮಾಡಬೇಕೆಂತಲೂ ಶೀಖರನ್ನು ಹಿಡಿದುಕೊಟ್ಟವರಿಗೆ ೫ ರೂ. ಸಹಾಯಮಾಡಿದವರಿಗೆ ೧೦ ರೂ. ಅವರ ಶಿರಸ್ಸನ್ನು ತಂದುಕೊಟ್ಟವರಿಗೆ ೨೫ ರೂ. ಬಹುಮಾನ ಕೊಡುವುದಾಗಿ ಬಾದಶಹನು ಪ್ರಕಟಿಸಿದನು!

ಇಂಥ ಭೀಷಣ ಕಾಲದಲ್ಲಿ ಧರ್ಮ ಮತ್ತು ದೇಶ ರಕ್ಷಣೆಗಳಿಗಾಗಿ ಮುಂದೆ ಬಂದು ಆತ್ಮಾರ್ಪಣಮಾಡಿದ ವೀರ ಬೈರಾಗಿಯ ದಿವ್ಯ ಚರಿತ್ರೆಯು ಆದರ್ಶಪ್ರಾಯವಾದುದರಿಂದ ಇವರ ಜಯಂತಿಯನ್ನು ಆಚರಿಸಿದುದು ಯುಕ್ತವಾಗಿಲ್ಲವೆ?

# ಲಿಂಗರಾಜ ಕಾಲೇಜಿನ
## ಅಭಿನಂದನೀಯವಾದ ಅಭಿವೃದ್ಧಿ.

"ಕರ್ನಾಟಕ ಲಿಂಗಾಯತ ಎಜುಕೇಶನ್ ಸೊಸೈಟಿ" ಯವರ ಸುದೀರ್ಘ ಪ್ರಯತ್ನದಿಂದ ಬೆಳಗಾವಿಯಲ್ಲಿ ಸ್ಥಾಪನೆಯಾದ ಲಿಂಗರಾಜ ಕಾಲೇಜಿನ ನಾಲ್ಕು ವರುಷಗಳ ವರದಿಯು ನಮ್ಮ ಕಡೆ ಬಂದಿದೆ. ಅದರಿಂದ ಇದು ಈ ಅಲ್ಪಾವಧಿಯಲ್ಲಿಯೇ ಹೇಗೆ ಅಭಿನಂದನೀಯವಾದ ಅಭಿವೃದ್ಧಿಯನ್ನು ಹೊಂದಿದೆಯೆಂಬುದು ಸ್ಪಷ್ಟ ಗೊತ್ತಾಗುತ್ತದೆ. ಇದು ಆ ಕಾಲೇಜಿನ ಚಾಲಕರಾದ ಪ್ರಿನ್ಸಿಪಾಲ ಡಾ. ನಂದಿಮಠರವರಿಗೂ ಅವರ ಸಹಕಾರಿಗಳಾದ ಇತರ ಅಧ್ಯಾಪಕ ಮಂಡಲಿಗೂ ಬಹು ಭೂಷಣಪ್ರದವಾದುದು.

### ವಿದ್ಯಾರ್ಥಿಗಳ ಸಂಖ್ಯೆ.

ಈ ಲಿಂಗರಾಜ ಕಾಲೇಜು ಕ್ರಿ. ಶ. ೧೯೩೩ ನೆಯ ಜೂನ್ ತಿಂಗಳಲ್ಲಿ ಪ್ರಾರಂಭವಾಯಿತು. ಆಗ ಇದು ಎರಡನೆಯ ತರಗತಿಯ ಕಾಲೇಜ್ ಎಂದು ಗಣಿಸಲ್ಪಟ್ಟದ್ದಿತು. ಆಗ ಬಿ. ಎ. ಅಭ್ಯಾಸವು ಇಲ್ಲಿ ನಡೆಯುತ್ತಿರಲಿಲ್ಲ. ಮೊದಲನೆಯ ವರುಷದಲ್ಲಿ ೧೬೯ ವಿದ್ಯಾರ್ಥಿಗಳಿದ್ದರು. ಆನಂತರ ಎರಡನೆಯ ವರುಷದಲ್ಲಿ ೨೩೮, ಮೂರನೆಯ ವರುಷದಲ್ಲಿ ೩೮೯, ನಾಲ್ಕನೆಯ ವರುಷದಲ್ಲಿ ೩೯೭ ವಿದ್ಯಾರ್ಥಿಗಳು ಈ ಕಾಲೇಜಿನಲ್ಲಿ ಅಭ್ಯಾಸಮಾಡಿದರು ಹೀಗೆ ವರ್ಷ ವರ್ಷ ವಿದ್ಯಾರ್ಥಿಗಳು ಹೆಚ್ಚುತ್ತ ಬಂದುದು ಇದರ ಅಭಿವೃದ್ಧಿಯ ಲಕ್ಷಣವು. ಇದರ ಅಭಿವೃದ್ಧಿಯನ್ನು ನೋಡಿ ಮೂರನೆಯ ವರ್ಷದಲ್ಲಿಯೇ ಇದು ಒಂದನೆಯ ತರಗತಿಯ ಕಾಲೇಜ್ ಎಂದು ಗೊತ್ತುಮಾಡಲ್ಪಟ್ಟಿತು. ಅಂದಿನಿಂದ ಬಿ. ಎ. ಅಭ್ಯಾಸವೂ ಇಲ್ಲಿ ಪ್ರಾರಂಭವಾಯಿತು.

### ಪರೀಕ್ಷೆಯ ಪರಿಣಾಮ.

ಈ ಕಾಲೇಜಿನಲ್ಲಿ ಹೀಗೆ ದಿನೆ ದಿನೆ ವಿದ್ಯಾರ್ಥಿಗಳ ಸಂಖ್ಯೆಯು ಹೆಚ್ಚಲು ಇಲ್ಲಿಯ ಪರೀಕ್ಷೆಯ ಪರಿಣಾಮವು ಹೆಚ್ಚು ಪ್ರಮಾಣದಂತೆ ಆಗುತ್ತಾ ಬಂದುದೂ ಒಂದು ಮುಖ್ಯ ಕಾರಣವು. ಮೊದಲನೆಯ ವರುಷ "ಇಂಟರ್ ಆರ್ಟ್ಸ" ಪರೀಕ್ಷೆಯಲ್ಲಿ ೧೦೦ ಕ್ಕೆ ೭೨ ರಂತೆ ವಿದ್ಯಾರ್ಥಿಗಳು ತೇರ್ಗಡೆಯನ್ನು ಹೊಂದಿದ್ದರು. ನಾಲ್ಕನೆಯ ವರುಷವಂತೂ ಈ ಪರೀಕ್ಷೆಯಲ್ಲಿ ನೂರಕ್ಕೆ ೭೮ ಪ್ರಮಾಣದಂತೆಯೂ ಬಿ. ಎ. ಪರೀಕ್ಷೆಯಲ್ಲಿ ನೂರಕ್ಕೆ ೯೬ ಪ್ರಮಾಣದಂತೆಯೂ ವಿದ್ಯಾರ್ಥಿಗಳು ಉತ್ತೀರ್ಣರಾದರು. ಬಿ. ಎ. ಪರೀಕ್ಷೆಯಲ್ಲಿ ಇಷ್ಟು ಪ್ರಮಾಣದಂತೆ ತೇರ್ಗಡೆ ಹೊಂದುವುದು ಯಾವ ಕಾಲೇಜಿನಲ್ಲಾದರೂ ಅಪೂರ್ವವೆಂದೇ ಹೇಳಬಹುದು.

### ಉದಾರವಾದ ಧನ ಸಹಾಯ.

ಕಾಲೇಜಿನ ವಿದ್ಯಾಭವನ, ಭೋಜನಾಲಯ, ಪ್ರಯೋಗಶಾಲೆ ಮೊದಲಾದ ಕಟ್ಟಡಗಳಿಗೋಸ್ಕರ ಈ ವರೆಗೆ ೩, ೩೬, ೭೭೨ ರೂ. ಗಳು ವೆಚ್ಚವಾಗಿವೆ. ವಿದ್ಯಾಭವನಕ್ಕೂ ಲಿಂಗರಾಜ ಭೋಜನಾಲಯಕ್ಕೂ ಒಂದೊಂದು ಲಕ್ಷ ರೂ. ಗಳು ವೆಚ್ಚವಾಗಿವೆ

ಹೀಗೆ ಕಾಲೇಜಿಗೆ ಅತ್ಯವಶ್ಯಕವಾದ ಕಟ್ಟಡಗಳಿಗೋಸ್ಕರ ಕೀರ್ತಿಶೇಷ ತ್ಯಾಗವೀರ ಲಿಂಗರಾಜರ ಹಣವು ವಿನಿಯೋಗಿಸಲ್ಪಟ್ಟದ್ದಲ್ಲದೆ ಧನ ಉದಾರಿಗಳಾದ ಶ್ರೀಮಂತ ಸರದಾರ ರಾಜಾ ಲಖಮನಗೌಡ ಬಸವ ಪ್ರಭು ಸರದೇಸಾಯಿ ವಂಟಮುರಿ ಇವರು ಒಂದು ಲಕ್ಷ ರೂ. ಗಳನ್ನು ಈ ಮಹಾಕಾರ್ಯಕ್ಕೆ ಕೊಟ್ಟಿದ್ದು ತುಂಬಾ ಸಹಾಯವನ್ನು ಮಾಡಿದ್ದಾಗಿದೆ. ಹೀಗೆಯೇ ಅನೇಕ ಉದಾರಿಗಳೂ ಧನಸಹಾಯ ಮಾಡಿರುವುದರಿಂದಲೇ ಈ ಕಾಲೇಜಿನ ಕಾರ್ಯವು ಇಷ್ಟು ತೃಪ್ತಿಕರವಾಗಿನಡೆಯಲು ಅನುಕೂಲವಾಯಿತು ಬೆಳಗಾವಿಯಲ್ಲಿರುವ ಗಿಲಗಂಚಿ ಅರಟಾಳ ಹೈಸ್ಕೂಲಿನ ಭೋಜನಾಲಯದಲ್ಲಿ ಅಡಿಗೆಮಾಡುವ ಶ್ರೀ. ನೆಲವಿಗಿ ಬಸಪ್ಪ ಎಂಬುವವರು ಈ ಕಾಲೇಜಿಗೆ ತಾವು ದುಡಿದು ಕೂಡಿಟ್ಟ ಒಂದು ಸಾವಿರ ರೂ. ಕೊಟ್ಟಿದ್ದನ್ನು ನಾವು ವಿಶೇಷ ಅಭಿನಂದಿಸದೆ ಇರಲಾರೆವು. ಇವರ ಈ ಉದಾರ ಗುಣವು ಅನುಕರಣೀಯವಾಗಿದೆ.

### ಆದಾಯ ವೆಚ್ಚಗಳು.

ಮೊದಲನೆಯ ವರುಷ ಈ ಕಾಲೇಜಿಗೆ ೫೧೦೦ ರೂ. ಸಹಾಯ ದ್ರವ್ಯವಾಗಿ ಸರಕಾರದಿಂದ ದೊರೆತಿತು. ಇದರ ಅಭಿವೃದ್ಧಿಯನ್ನು ನೋಡಿ ೪ ನೆಯ ವರುಷ ಸರಕಾರವು ೭೫೦೦ ರೂ. ಗಳನ್ನು ಕೊಟ್ಟಿತು. ಮೊದಲನೆಯ ವರುಷ ವಿದ್ಯಾರ್ಥಿಗಳಿಂದ ೧೬೭೯೨ ರೂ. ಗಳ 'ಫೀ' ಬಂದಿತು. ನಾಲ್ಕನೆಯ ವರುಷವಾದರೋ ೪೬೧೯೧ ರೂ. ಗಳು ಬಂದವು. ಒಟ್ಟಿಗೆ ಮೊದಲನೆಯ ವರುಷ ೪೦೦೪೬ ರೂ. ಗಳ ಆದಾಯವಿದ್ದಿತು. ನಾಲ್ಕನೆಯ ವರುಷ ೫೫೩೫೫ ರೂ. ಗಳ ಆದಾಯ ಬಂದಿತು.

ಇದೇ ಪ್ರಕಾರ ವೆಚ್ಚವು ಕೂಡಾ ಹೆಚ್ಚುತ್ತಲೇ ಬಂದಿದೆ. ಮೊದಲನೆಯ ವರುಷ ಅಧ್ಯಾಪಕರಿಗಾಗಿ ೧೧೪೬೪ ರೂ. ವೇತನ ಕೊಡಲ್ಪಟ್ಟಿತ್ತು, ನಾಲ್ಕನೇಯ ವರುಷವಾದರೋ ೩೨೭೨೪ ರೂ. ಗಳನ್ನು ವೇತನವಾಗಿ ಕೊಟ್ಟದ್ದಾಗಿದೆ. ಹೀಗೆ ವೆಚ್ಚವು ಕೂಡಾ ಆದಾಯದಷ್ಟೇ ಇದೆ. ಅಧ್ಯಾಪಕರು ನಾಲ್ಕನೆಯ ವರುಷದಲ್ಲಿ ಒಟ್ಟು ೨೩ ಜನರಿದ್ದರು.

### ಅನುಚಿತವಾದ ಆಕ್ಷೇಪಣೆ.

ಲಿಂಗರಾಜ ಕಾಲೇಜು ಈ ಪ್ರಕಾರ ಸಕಲ ರೀತಿಗಳಿಂದಲೂ ಉನ್ನತ ಸ್ಥಿತಿಗೆ ಬರುತ್ತಿರುವುದು ಕೆಲವು ಜಾತಿ ದ್ವೇಷಿಗಳಿಗೂ ನಾಡಿನ ದುರಭಿಮಾನಿಗಳಿಗೂ ಕಳವಳವನ್ನುಂಟುಮಾಡಿದಂತೆ ತೋರುತ್ತದೆ ಆದಕಾರಣ ಇದರ ಚಾಲಕರ ಮೇಲೆಯೂ ಈ ಕಾಲೇಜಿನ ಮೇಲೆಯೂ ಅನುಚಿತವಾದ ಆಕ್ಷೇಪಣೆಗಳನ್ನು ಮಾಡಿ ತಮ್ಮ ಹೀನ ವೃತ್ತಿಯನ್ನು ವ್ಯಕ್ತಗೊಳಿಸುತ್ತಿದ್ದಾರೆ.

ಲಿಂಗರಾಜ ಕಾಲೇಜು ಲಿಂಗಾಯತರಿಗಾಗಿಯೇ ಇದೆಯೆಂದು ಕೆಲವು ಅಸೂಯಾಂಧರು ಹೇಳುತ್ತಿರುವುದುಂಟು. ಇದು ಎಷ್ಟು ಅನುಚಿತವಾದುದೆಂಬುದು ಈ ವರದಿಯಿಂದಲೇ ಗೊತ್ತಾಗುತ್ತದೆ. ಈ ಕಾಲೇಜದಲ್ಲಿರುವ ಅಧ್ಯಾಪಕರಲ್ಲಿ ಬಹುಸಂಖ್ಯಾಕರು ಲಿಂಗಾಯತೇತರರೇ ಇದ್ದಾರೆ. ಎಂದಮೇಲೆ ವೇತನದ ಬಹು ಭಾಗವೆಲ್ಲಾ ಲಿಂಗಾಯತೇತರರಿಗೇನೇ ದೊರೆಯುತ್ತದೆಂಬುದು ಸ್ಪಷ್ಟವಷ್ಟೆ.

ಇಲ್ಲಿ ಕಲಿಯುತ್ತಿರುವ ವಿದ್ಯಾರ್ಥಿಗಳಲ್ಲಿ ಮೊದಲಿನಿಂದಲೂ ಲಿಂಗಾಯತೇತರರೇ ವಿಶೇಷವಾಗಿದ್ದಾರೆ; ಮೊದಲನೆಯ ವರುಷದ ೧೬೯ ವಿದ್ಯಾರ್ಥಿಗಳಲ್ಲಿ ೪೬ ವಿದ್ಯಾರ್ಥಿಗಳು ಬ್ರಾಹ್ಮಣರು, ೫೬ ವಿದ್ಯಾರ್ಥಿಗಳು ಲಿಂಗಾಯತರು ಇನ್ನಿತರರು ಮರಾಠಾ, ಮುಸಲ್ಮಾನ್ ಕ್ರಿಶ್ಚಿಯನ್ ಮೊದಲಾದ ಜಾತಿಯವರು ಇದ್ದರು. ನಾಲ್ಕನೆಯ ವರ್ಷದಲ್ಲಾದರೋ ೩೯೭ ವಿದ್ಯಾರ್ಥಿಗಳಲ್ಲಿ ೧೪೬ ಬ್ರಾಹ್ಮಣರೂ ೧೧೮ ಲಿಂಗಾಯತರೂ ೩೨ ಮರಾಠಾ, ೧೩ ಜೈನ, ೧೯ ಕ್ರಿಶ್ಚಿಯನ್ ಜಾತಿಯವರಿದ್ದರು.

ಎಂದಮೇಲೆ ಲಿಂಗರಾಜ ಕಾಲೇಜು ಲಿಂಗಾಯತರಿಗಾಗಿಯೇ ಇದೆಯೆಂದು ಹೇಳುವುದು ಅಸೂಯೆಯ ಮಾತಲ್ಲವೆ? ಲಿಂಗಾಯತರೇ ಲಕ್ಷಾಂತರ ರೂ. ಗಳನ್ನು ಈ ಕಾರ್ಯಕ್ಕೆ ಕೊಟ್ಟು ಲಿಂಗಾಯತ ಅನೇಕ ಪದವೀಧರರು ಸ್ವಾರ್ಥತ್ಯಾಗದಿಂದ ಇದರ ಸೇವೆ ಮಾಡುತ್ತಿರುವುದು ಲಿಂಗಾಯತ ಸಮಾಜಕ್ಕೆ ಒಂದು ಅಭಿಮಾನಾಸ್ಪದವಾದ

ಸಂಗತಿಯು. ವಿದ್ಯಾಭಿಮಾನಿಗಳಾದ ಕನ್ನಡ ನಾಡಿನ ಸಕಲ ಮತ ಪಂಥದವರೂ ಈ ಸ್ತುತ್ಯ ಕಾರ್ಯದ ಪ್ರಯೋಜನವನ್ನು ಹೊಂದುತ್ತ ಇದನ್ನು ಅಭಿವೃದ್ಧಿಗೊಳಿಸುತ್ತಿರುವುದು ಕನ್ನ ನಾಡಿಗೆ ಒಂದು ಹೆಮ್ಮೆಯ ವಿಷಯವು. ಅಂತೆಯೇ ಈ ಕಾಲೇಜಿನ ಕಾರ್ಯದಕ್ಷರಾದ ಪ್ರಿನ್ಸಿಪಾಲ ಡಾ. ನಂದಿಮಠರವರನ್ನೂ ಅಧ್ಯಾಪಕ ಮಂಡಲಿಯನ್ನೂ ಇದಕ್ಕೆ ಧನಸಹಾಯ ಮಾಡಿದ ಮಹಾಶಯರನ್ನೂ ನಾವು ಹೃದಯಪೂರ್ವಕ ಅಭಿನಂದಿಸಿ ವರ್ಷ ವರ್ಷೇ ಇದು ಇನ್ನೂ ಹೆಚ್ಚಾದ ಉನ್ನತಿಯನ್ನು ಹೊಂದಲೆಂದು ಹಾರೈಸುತ್ತೇವೆ.

---

# ಕ್ರಾಂತಿಯ ದೀಪ.

[ಇದೊಂದು ನಾಟಕದ ಚಿಕ್ಕ ಪುಸ್ತಕ. ಕ್ರೌನ್ ಆಕಾರದ ೬೪ ಪುಟಗಳುಳ್ಳದ್ದಾಗಿದೆ. ಬೆಲೆ ಮೂರೇ ಆಣೆಗಳು. ಗ್ರಂಥಕಾರರು:— ಶ್ರೀ. ಟಿ. ಎಸ್. ಮಹದೇವಯ್ಯನವರು ಬಿ. ಎಸ್. ಸಿ. ಪ್ರಕಾಶಕರು:— ಶ್ರೀ. ಮ ಡಿ ವಾ ಳ ಪ್ಪ ಮತ್ತು ಸಹೋದರರು ಗದಗ. ]

ಬಸವ ಮಹಾನುಭಾವರು ಕಲ್ಯಾಣದಲ್ಲಿ ಮಾಡಿದ ಧಾರ್ಮಿಕ ಕ್ರಾಂತಿಯ ಮುಖ್ಯ ಸಂಗತಿಯನ್ನು ಗ್ರಂಥಕಾರರು ಈ ಪುಸ್ತಕದಲ್ಲಿ ಬಹು ಚೆನ್ನಾಗಿ ಚಿತ್ರಿಸಿದ್ದಾರೆ. ಈ ನಾಟಕವು ಮೂರು ಅಂಕಗಳುಳ್ಳದ್ದಾಗಿದೆ. ಹರಳಯ್ಯ ಮಧುವಯ್ಯಗಳ ಶರೀರ ಸಂಬಂಧ ಮತ್ತು ಅದರಿಂದಾದ ರಾಜ್ಯಕ್ರಾಂತಿ ಇವೇ ಈ ನಾಟಕದಲ್ಲಿಯ ಮುಖ್ಯ ಸಂಗತಿಗಳು. ಗ್ರಂಥಕಾರರು ಈ ಸಂಗತಿಗಳನ್ನೆಲ್ಲಾ ಬಹು ಪರಿಣಾಮಕಾರಿಯಾಗುವಂತೆ ಚಿತ್ರಿಸಿರುವುದು ಅಭಿನಂದನೀಯವಾಗಿದೆ. ಬಸವಣ್ಣನವರ ಅತ್ಯುದಾರವಾದ ಧಾರ್ಮಿಕ ತತ್ವಗಳು ಹೀಗೆ ಬೇರೆ ಬೇರೆ ರೂಪಗಳಿಂದ ಜನರ ಮುಂದೆ ಬಂದು ಜನರಲ್ಲಿ ವಿಚಾರಕ್ರಾಂತಿಯಾಗಬೇಕಾದುದು ಈ ಕಾಲದಲ್ಲಿ ಅತ್ಯಗತ್ಯವಾಗಿದೆ. ಆದುದರಿಂದ ಬಸವಣ್ಣನವರ ದಿವ್ಯ ಚರಿತ್ರೆಯಲ್ಲಿಯ ಈ ಮಹತ್ವವಾದ ಸನ್ನಿವೇಶವನ್ನು ಗ್ರಂಥಕಾರರು ತೆಗೆದುಕೊಂಡು ಹೀಗೆ ಕನ್ನಡಿಗರ ಮುಂದಿಟ್ಟಿರುವುದು ಹೃದಯಪೂರ್ವಕ ಅಭಿನಂದಿಸಲ್ಪಡಬೇಕಾದಸಂಗತಿ.

ಈ ಉಪಯುಕ್ತವಾದ ಪುಸ್ತಕವನ್ನು ವೀರಶೈವ ತತ್ವ ಪ್ರಚಾರದ ಕಾರ್ಯಗಳಿಗೆ ತುಂಬಾ ಸಹಾಯ ಮಾಡುತ್ತಿರುವ ಗದಗಿನ ಶಿವಾನಂದ ಮುದ್ರಣಾಲಯದ ಯಜಮಾನರಾದ ಶ್ರೀ. ಮಡಿವಾಳಪ್ಪ ಮತ್ತು ಸಹೋದರರು ಬಹು ಅಂದವಾಗಿ ಮುದ್ರಿಸಿ ಮೂರೇ ಆಣೆ ಬೆಲೆಯನ್ನಿಟ್ಟು ಪ್ರಚಾರಕ್ಕೆ ತುಂಬಾ ಅನುಕೂಲಪಡಿಸಿರುವುದೂ ಅಭಿನಂದನೀಯವಾಗಿದೆ. ಮುಖಪುಟದ ಮೇಲಿನ ಚಿತ್ರವು ಗ್ರಂಥದಲ್ಲಿಯ ವಿಷಯವನ್ನು ಸ್ಪಷ್ಟಗೊಳಿಸುವಂತೆ ಬಹು ಕುಶಲತೆಯಿಂದ ಚಿತ್ರಿಸಲ್ಪಟ್ಟಿದೆ.

ಇದರಲ್ಲಿ ಕೆಲವು ಲೋಪಗಳೂ ದೋಷಗಳೂ ನಮಗೆ ತೋರುತ್ತವೆ. ಯುಕ್ತ ಕಂಡರೆ ಮುಂದಣ ಮುದ್ರಣದಲ್ಲಿ ಸಂಪಡಿಸಬಹುದು. ಹರಳಯ್ಯ ಮತ್ತು ಮಧುವಯ್ಯಗಳ ಶರೀರ ಸಂಬಂಧವು ಏಕಾಯಿತೆಂಬುದನ್ನು ಹೇಳಬೇಕಾಗಿದ್ದಿತು. ಏಕೆಂದರೆ ಈ ಶರೀರ ಸಂಬಂಧವೇ ಕ್ರಾಂತಿಗೆ ಮೂಲ.

ಬಿಜ್ಜಳನ ಮನೆಯಲ್ಲಿ ಗಂಗಾಂಬಿಕೆಯೆಂಬುವವಳಿದ್ದಳೆಂದೂ ಅವಳು ಬಸವಣ್ಣನವರ ವಚನಗಳನ್ನು ಹಾಡುತ್ತಿದ್ದಳೆಂದೂ ಹೇಳಿದೆ. ಗಂಗಾಂಬಿಕೆ ಎಂಬುವವಳು ಬಸವಣ್ಣನವರ ಪತ್ನಿಯೆಂಬುದು ಸರ್ವಶ್ರುತ ಸಂಗತಿಯಾಗಿರುವುದರಿಂದ ಜನರಲ್ಲಿ ತಪ್ಪು ಕಲ್ಪನೆ ಬರಬಹುದು. ಆದಕಾರಣ ಆ ಹೆಸರನ್ನು ಬೇರೆ ಮಾಡಬೇಕು.

ಬಿಜ್ಜಳನು ಬಸವಣ್ಣನವರ ಸುಧಾರಣೆಗೆ ಅನುಕೂಲವಿದ್ದ ರೀತಿಯಲ್ಲಿ ಆತನಿಂದ ಮಾತನಾಡಿಸಿರುವುದು ಮತ್ತು ಆತನು ಮಂಚಣ್ಣನೊಂದಿಗೆ ಹರಳಯ್ಯನ ಮನೆಗೆ ಹೋಗಿ ಮಾತನಾಡಿದಂತೆ ಹೇಳಿರುವುದು ಚರಿತ್ರೆಗೆ ಪ್ರತಿಕೂಲವಾದವುಗಳು ಮತ್ತು ಕಥೆಯ ಸಂದರ್ಭಕ್ಕೂ ಅಷ್ಟು ಅನುಕೂಲವಲ್ಲ.

ಬಿಜ್ಜಳನ ಕೊಲೆಯ ಕಾಲಕ್ಕೆ ಕಲ್ಯಾಣದಲ್ಲಿ ಬಸವಣ್ಣನವರು ಇದ್ದರೆಂದು ಹೇಳಿದುದು ಚರಿತ್ರೆಯಿಂದ ಸಿದ್ಧವಾದ ಸಂಗತಿಯಲ್ಲ. ಪ್ರಭುದೇವರು ಆ ಕಾಲದಲ್ಲಿ ಇದ್ದರೆಂದು ಹೇಳಿರುವುದಂತೂ ತಪ್ಪೇ ತಪ್ಪು. ಇವರೆಲ್ಲರೂ ಐತಿಹಾಸಿಕ ಮಹಾಪುರುಷರಾಗಿರುವುದರಿಂದ ಹೀಗೆ ಅವರನ್ನು ಜನಗಳ ಮುಂದೆ ನಿಲ್ಲಿಸುವುದು ಸರಿಯಾಗಲಾರದು.

---

# ಜಗಜ್ಜ್ಯೋತಿ ಬಸವೇಶ್ವರ.

ಸೊಲ್ಲಾಪುರದಲ್ಲಿ ಹೊರಡುತ್ತಿರುವ "ಸುದರ್ಶನ" ಪತ್ರಿಕೆಯು ಕಳೆದ ೫ ವರುಷಗಳಿಂದಲೂ ಮಹಾರಾಷ್ಟ್ರ ಪ್ರಾಂತದ ವೀರಶೈವ ಸಮಾಜಕ್ಕೆ ಬಸವಾದಿ ಪ್ರಮಥರ ದಿವ್ಯ ತತ್ವಗಳನ್ನು ತಿಳಿಸಿ ಅವರಲ್ಲಿ ನಿಜವಾದ ವೀರಶೈವಾಚಾರಣೆಯು ಪ್ರಚಾರವಾಗುವಂತೆ ಪ್ರಯತ್ನಿಸುತ್ತಿರುವದಕ್ಕೋಸ್ಕರ ಅದರ ವಿದ್ವಾನ್ ಸಂಪಾದಕರಾದ ಶ್ರೀಯುತ ಕಲ್ಯಾಣಶೆಟ್ಟಿ ಸಿದ್ಧಮಲ್ಲಪ್ಪನವರನ್ನು ವೀರಶೈವಮತಾಭಿಮಾನಿಗಳೆಲ್ಲರೂ ಹೃದಯಪೂರ್ವಕ ಅಭಿನಂದಿಸುತ್ತಿದ್ದಾರಷ್ಟೆ.

ಈ ಮಹಾಶಯರು ಬಸವಜಯಂತಿಯ ಕಾಲಕ್ಕೆ "ಜಗಜ್ಯೋತಿ ಬಸವೇಶ್ವರ" ಎಂಬ ಅತ್ಯುಪಯುಕ್ತವಾದ ಒಂದು ವಿಶೇಷ ಸಂಚಿಕೆಯನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿ ಬಸವ ಮಹಾತ್ಮನ ಉದಾರ ತತ್ವಗಳ ಸಂಬಂಧವಾಗಿ ಅನೇಕ ವಿದ್ವಾಂಸರ ವಿಚಾರಗಳು ಮಹಾರಾಷ್ಟ್ರದ ನಮ್ಮ ಬಾಂಧವರಿಗೆ ತಿಳಿಯುವಂತೆ ಮಾಡಿದುದು ಅಭಿನಂದನೀಯವಾಗಿದೆ. ಮಹಾರಾಷ್ಟ್ರದ ವೀರಶೈವ ಬಾಂಧವರು ಈ ವಿಶೇಷಾಂಕದ ಪ್ರಯೋಜನವನ್ನು ಮಾಡಿಕೊಳ್ಳುವರೆಂದೂ ಶ್ರೀ. ಕಲ್ಯಾಣಶೆಟ್ಟಿಯವರು ಈ ಪ್ರಕಾರ ವಿಶೇಷ ಸಂಚಿಕೆಗಳಿಂದ ಸಮಾಜಕ್ಕೆ ಮಹೋಪಕಾರಮಾಡುತ್ತಿರುವರೆಂದೂ ನಾವು ನಂಬಿದ್ದೇವೆ.

---

# ನಿಜಾಮ ರಾಜ್ಯದ ವೀರಶೈವರಲ್ಲಿ ಪದವೀಧರರು ಎಷ್ಟು ?

ನೈಜಾಮ ರಾಜ್ಯದಲ್ಲಿ ವೀರಶೈವರ ಸಂಖ್ಯೆ ಒಂಬತ್ತು ಲಕ್ಷ ಅದೆ. ಆದರೆ ಇಂಗ್ಲಿಷ ಕಲಿತ ಪದವೀಧರರು ಎಷ್ಟು ಜನರಿದ್ದಾರೆಂಬುದು ಗೊತ್ತೆ? ಈ ವರ್ಷ ಒಂಬತ್ತು ಜನರು ಬಿ. ಎ. ಪರೀಕ್ಷೆಗೆ ಕುಳಿತಿದ್ದರು. ಇಷ್ಟು ಹೆಚ್ಚು ವಿದ್ಯಾರ್ಥಿಗಳು ಯಾವ ವರ್ಷವೂ ಬಿ. ಎ. ಪರೀಕ್ಷೆಗೆ ಕುಳಿತಿರಲಿಲ್ಲ. ಈ ವರ್ಷವೇ ಲಕ್ಷಕ್ಕೆ ಒಬ್ಬರಂತಾದರೂ ಪರೀಕ್ಷೆಗೆ ಕುಳಿತರು. ಇವರಲ್ಲಿ ೫ ಜನರು ತೇರ್ಗಡೆಯಾದರು. ಮುಂದಿನ ವರುಷ ಒಟ್ಟು ೫ ಜನರು ಬಿ. ಎ ಕ್ಲಾಸಿನಲ್ಲಿ ಕಲಿಯುವರು.

ಈ ವರೆಗೆ ಈ ರಾಜ್ಯದ ಒಂಬತ್ತು ಲಕ್ಷ ವೀರಶೈವರಲ್ಲಿ ೧೪ ಜನರು ಬಿ. ಎ. ೪ ಜನರು ಎಲ್. ಎಲ್. ಬಿ. ಪದವಿಗಳನ್ನು ಹೊಂದಿದವರಿದ್ದಾರೆ! ಒಟ್ಟು ಮೂರೇ ಜನರು ಮಾಮಲೇದಾರರಿದ್ದಾರೆ. ಲಿಂಗಾಯತರು ಸರಕಾರದಲ್ಲಿ ಹೆಚ್ಚಿನ ಅಧಿಕಾರವನ್ನು ಹೊಂದಿರುವದು ಇಷ್ಟರಮಟ್ಟಿಗೆ!

ಒಬ್ಬ ವಿದ್ಯಾಭಿಮಾನಿ.

# ವೀರಶೈವ ಮಹಾಸಭೆಯು ಜೀವಿಸಿರುವುದೆ?

[ಹುಬ್ಬಳ್ಳಿಯಲ್ಲಿ ಹೊರಡುವ '·ಕಲ್ಯಾಣ" ಮಾಸ ಪತ್ರಿಕೆಯ ಮೇ ತಿಂಗಳ ಸಂಚಿಕೆಯಲ್ಲಿ ಸಂಪಾದಕ ಮಹಾಶಯರು '·ವೀರಶೈವ, ಮಹಾಸಭೆಯು ಜೀವಿಸಿರುವುದೆ?' ಎಂಬ ಶಿರೋಲೇಖನದಲ್ಲಿ ಹೀಗೆ ಬರೆದಿದ್ದಾರೆ.]

"ಮೊದಲನೆಯ ಮೂಲ ಮಾತೆಂದರೆ ವೀರಶೈವ ಮಹಾ ಸಭೆಯಂಥ ಸಂಸ್ಥೆಯ ಅಗತ್ಯವಿದೆಯೇ ಎಂಬುದು. ಅಗತ್ಯವಿಲ್ಲವೆಂದು ಯಾರೂ ಹೇಳಲಾರರು. ಇಂಥ ರಾಷ್ಟ್ರೀಯ ಯುಗದಲ್ಲಿ ಕೂಡಾ ವೀರಶೈವ ಮಹಾಸಭೆಯ ಅವಶ್ಯಕತೆಯು ವಿಶೇಷವಾಗಿದೆಯೆಂದು ಉಜ್ವಲ ರಾಷ್ಟ್ರೀಯ ವೀರಶೈವರು ಕೂಡಾ ಹೇಳುತ್ತಾರೆ. ಏಕೆಂದರೆ ವೀರಶೈವ ತತ್ವಗಳು ಪರಿಶುದ್ಧವಾಗಿ ಆಚರಣೆಯಲ್ಲಿ ಬರುವಂತೆ ಮಾಡುವ ಮಹತ್ವದ ಹಾಗು ವ್ಯಾಪಕಸಂಸ್ಥೆಯೆಂದರೆ ವೀರಶೈವ ಮಹಾಸಭಾ ಸಂಸ್ಥೆಯೇ ಸರಿಯೆಂದು ತಿಳಿಯುತ್ತಾರೆ. ವೀರಶೈವರ ತತ್ವಗಳಾದರೋ ಸತ್ಯ ಅಹಿಂಸಾ, ಸಮಾನತೆಯ ಆಧಾರದ ಮೇಲೆ ಇರುವುದರಿಂದ ಅವುಗಳ ಪ್ರಸಾರವಾಗುವದು ಎಲ್ಲರಿಗೂ ಬೇಕಾಗಿದೆ. ಆದುದರಿಂದ ಅಂಥ ಕಲ್ಯಾಣಕಾರಿ ತತ್ವಗಳನ್ನು ಪ್ರಚುರಗೊಳಿಸಲು ತಕ್ಕದಾದ ವೀರಶೈವ ಮಹಾಸಭಾ ಸಂಸ್ಥೆಯು ಮುಂದೆ ಬರಬೇಕೆಂದು ಎಲ್ಲರೂ ಒಪ್ಪುತ್ತಾರೆ.

ಹಾಗಾದರೆ ಮಹಾಸಭೆಯ ಕಾರ್ಯವು ಕಟ್ಟಾಗಿ ಹೋಗಿರುವುದೇಕೆ? ವೀರಶೈವರಲ್ಲಿಯೇ ಆ ಬಗ್ಗೆ ಅನಾಸಕ್ತಿ ಇದ್ದಿರಬಹುದೆ? ಅಥವಾ ಅವರಲ್ಲಿಯ ಪರಸ್ಪರ ವೈಷಮ್ಯಗಳು ಅದಕ್ಕೆ ಭಂಗವನ್ನುಂಟುಮಾಡುತ್ತಿವೆಯೆ? ಯಾವ ಕಾರಣದಿಂದ ಅದು ಕೇವಲ ನಾಮಾವಶೇಷವಾಗಿದೆ? ಈ ಪ್ರಶ್ನೆಗೆ ಉತ್ತರ ಕೊಡುವುದು ಸ್ವಲ್ಪ ಕಠಿಣವೇ ಸರಿ. ಯಾರು ಮಹಾಸಭೆಯ ಧುರವನ್ನು ವಹಿಸಿರುವರೋ ಅವರು ಸದ್ಯದ ಜಗದ್ಗುರುಗಳು ವೀರಶೈವ ಸಮಾಜ ಸುಧಾರಣೆಯನ್ನು ಮಾಡುವ ವಿಷಯದಲ್ಲಿ ಯಾವ ಉತ್ತರವನ್ನು ಹೇಳುತ್ತಾರೆಯೋ ಅದೇ ಉತ್ತರವನ್ನು ಹೇಳುತ್ತಾರೆಂದು ತೋರುತ್ತದೆ. ವೀರಶೈವರಲ್ಲಿ ಒಡಕು ಬಹಳ. ಎರಡು ಪಕ್ಷಗಳಂತೂ ಪ್ರಬಲವಾಗಿವೆ. ಆದಕಾರಣ ಯಾವ ಕಾರ್ಯವನ್ನು ಮಾಡಲು ಶಕ್ಯವಿಲ್ಲವೆಂದು ಅವರು ಹೇಳಬಹುದು

ವೀರಶೈವರಲ್ಲಿಯ ಒಡಕನ್ನು ನಿವಾರಣೆ ಮಾಡಲಿಕ್ಕೇನೇ ಮಹಾಸಭೆಯನ್ನು ಏರ್ಪಡಿಸಿದ್ದಾಗಿದೆ. ಆದರೆ ಒಡಕಿಗೆ ಅಂಜಿ ಮಹಾ ಸಭೆಯು ಕೆಲಸಮಾಡುವುದನ್ನೇ ನಿಲ್ಲಿಸುವದು ಎಂಥ ವಿಚಿತ್ರವಾದದ್ದಾಗಿದೆ? ಮುಳ್ಳು ಕಡಿಯಲಿಕ್ಕೆ ಹೋದವನು ಮುಳ್ಳು ನಡುತ್ತವೆಂದು ಅಂಜಿ ಹಿಂಜರಿದಂತಾಯಿತಲ್ಲಾ! ಹಾಗಾದರೆ ಮಹಾಸಭೆಗೆ ಮುಂದೆ ಮಾರ್ಗವೇ ಇಲ್ಲದಂತಾಯಿತೆ? ಅದು ಇದ್ದೂ ಇಲ್ಲದಂತಿರುವದೆಂದು ಅಥವಾ ಇಲ್ಲದಂತಿದ್ದರೂ ಇದೆಯೆಂದು ತಿಳಿಯಬೇಕೇ ಹೇಗೆ? ವೀರಶೈವ ಮಹಾಸಭೆಯ ಧುರವಹಿಸಿದವರು ವೀರಶೈವರೆಲ್ಲರ ತಿಳುವಳಿಕೆಗಾಗಿ ತಮ್ಮ ತೊಂದರೆಗಳನ್ನು ಸಾರ್ವಜನಿಕವಾಗಿ ಪ್ರಕಟಿಸಬಾರದೇಕೆ? ಅವರು ಇಲ್ಲಿಯವರೆವಿಗೂ ಕೈಕಟ್ಟಿಕೊಂಡು ಕುಳಿತರೆ ವೀರಶೈವ ಮಹಾಸಭೆಯ ಗತಿಯೇನಾಯಿತೆಂದು ಯಾರಿಗಾದರೂ ಅನಿಸಲಿಕ್ಕಿಲ್ಲವೆ.?

ವೀರಶೈವ ಮಹಾ ಸಭೆಯ ಸೂತ್ರಗಳನ್ನು ವಹಿಸಿರುವವರು ಕಾರ್ಯಕ್ಷಮರಿಲ್ಲವೆಂದು ಯಾರೂ ಹೇಳಲಾರರು. ಸಾಮಾಜಿಕ ಕಾರ್ಯಗಳಲ್ಲಿ ನುರಿತವರೂ, ಸಮಾಜದ ಬಗ್ಗೆ ಕಳಕಳಿಯುಳ್ಳವರೂ ಆದ ಅನೇಕ ಮಹನೀಯರೂ ಅದರಲ್ಲಿದ್ದಾರೆ. ಆದರೂ ಮಹಾಸಭೆಯು ಕಾರ್ಯಕಾರಿಯಾಗುತ್ತಿರುವದಿಲ್ಲವೆಂಬ ಸಂಗತಿಯನ್ನು ಪ್ರತಿಯೊಬ್ಬ ವೀರಶೈವನು ವಿಚಾರಿಸಬೇಕಾಗಿಲ್ಲವೆ? ಅಂದಮೇಲೆ ಈ ಬಗ್ಗೆ ನಮಗೆ ಕಂಡ ವಿಚಾರಗಳನ್ನು ಪ್ರತಿಯೊಬ್ಬ ವೀರಶೈವನ ಮುಂದೆ ಮಂಡಿಸುತ್ತಿದ್ದೇವೆ. ಅವುಗಳನ್ನು ಸಮಾಜಪ್ರೇಮಿಗಳು ವಿಚಾರಿಸಿ ತಮ್ಮ ತಮ್ಮ ಅಭಿಪ್ರಾಯಗಳನ್ನೂ ಪ್ರಕಟಿಸಲಡ್ಡಿಯಿಲ್ಲ.

## ಘಟನೆಯ ತಿದ್ದುಪಡಿ.

ವೀರಶೈವ ಮಹಾಸಭೆಯಲ್ಲಿ ಒಂದು ಮಹತ್ವದ ದೋಷವೆಂದರೆ ಅದರ ಘಟನೆ. ಶ್ರೀಮಂತರೂ ದೊಡ್ಡ ದೊಡ್ಡ ಅಧಿಕಾರಿಗಳೂ ಸಮಾಜದ ಮುಂದಾಳುಗಳೆಂದು ಅದು ತಿಳಿದು ಆ ಪ್ರಕಾರ ಅಧ್ಯಕ್ಷರನ್ನಾರಿಸುತ್ತ ಅದು ಬಂದಿದೆ. ಜನತಾನಿಯೋಜಿತ ಅಧ್ಯಕ್ಷರು ದೊರೆಯುವದಿಲ್ಲವೆಂಬುದು ನಿಜವಿದೆ. ಆ ಪ್ರಕಾರ ಆರಿಸಲು ಜನರ ಕಮೀಟಿಗಳಲ್ಲಾಗಲಿ ನಿಯಮಬದ್ಧ ಮಹಾಸಭೆಯ ಶಾಖೆಗಳಾಗಲಿ ಇರುವುದಿಲ್ಲ. ಮಹಾಜನರೇ ಅಧ್ಯಕ್ಷರನ್ನು ಆರಿಸಬೇಕಾಗುತ್ತದೆ. ಆದರೆ ಮಹಾಜನರ ಈ ವರೆಗಿನ ದೃಷ್ಟಿಯೆಂದರೆ ಸರಕಾರಿ ದೊಡ್ಡ ಅಧಿಕಾರಿಯನ್ನಾಗಲಿ ಉತ್ತಮ ವಕೀಲನನ್ನಾಗಲಿ ಅಥವಾ ಧನವುಳ್ಳ ಸ್ವಾಮಿಯನ್ನಾಗಲಿ ಅಧ್ಯಕ್ಷರನ್ನಾಗಿ ಆರಿಸಬೇಕೆಂದು ಅಭಿಪ್ರಾಯವಿಟ್ಟುಕೊಂಡಿರುವುದು ಸರಿಯಾದುದಲ್ಲವೆಂದು ನಮಗೆ ತೋರುತ್ತದೆ. ಹಾಗೆ ಮಾಡುವುದರಿಂದ ಅಧ್ಯಕ್ಷಪದ ಮಾತ್ರಬೇಕು, ಕಾರ್ಯ ಮಾತ್ರ ಬೇಡ. ಎಂಬ ವಿಚಾರಸರಣಿಯ ಅಧ್ಯಕ್ಷರೇ ನಮಗೆ ದೊರೆಯುತ್ತಾರೆ. ತಮ್ಮ ಅಧ್ಯಕ್ಷತೆಯಲ್ಲಿ ಯಾವ ಕಾರ್ಯವೂ ಆಗದಿದ್ದರೆ ಅದು ತಮಗೆ ಅಗೌರವವೆಂದೂ ಅದಕ್ಕಾಗಿ ಜನತೆಯು ಲಕ್ಷಕೊಡದಿದ್ದರೆ ತಾವು ಜನತೆಯನ್ನು ಎಚ್ಚರಿಸುವದಕ್ಕಾಗಿ ತಮ್ಮ ಅಧ್ಯಕ್ಷ ಪದಕ್ಕೆ ರಾಜೀನಾಮೆಕೊಡಬೇಕೆಂದೂ ಆದರ ಯಾವ ಅಧ್ಯಕ್ಷರೂ ತಿಳಿಯದಿದ್ದುದು ವಿಚಿತ್ರವಾಗಿದೆ. ಶೃಂಗರಿಸಿದ ಬಂಡಿಯೊಂದಿದ್ದರೆ ತೀರಿತು. ಅದು ಸಾಗಲಿ ಸಾಗದಿರಲಿ ತಾವು ಕುಳಿತುಕೊಂಡು ಬಿಟ್ಟರಾಯಿತೆಂದು ತಿಳಿಯುವ ಅಧ್ಯಕ್ಷರನ್ನು ನಾವು ಆರಿಸುತ್ತಿರುವುದರಿಂದಲೇ ವೀರಶೈವ ಮಹಾ ಸಭೆಗೆ ಈ ಗತಿಯುಂಟಾಗಿದೆ. ನಮ್ಮ ಈ ಕಲ್ಪನೆಯನ್ನು ನಾವು ತೀವ್ರವೇ ತಿದ್ದಿಕೊಳ್ಳಬೇಕು. ಪ್ರಾಂತಿಕ ಕಮಿಟಿಗಳ ಪ್ರತಿನಿಧಿಗಳನ್ನಾಗಲಿ ಸದಸ್ಯರನ್ನಾಗಲಿ ನಿಯಮಿಸುವಾಗಲೂ ಹೆಚ್ಚಾಗಿ ಇದೇ ಪದ್ಧತಿಯನ್ನು ಅನುಸರಿಸುತ್ತಿರುವುದರಿಂದ ೪೦ ಸದಸ್ಯರಿದ್ದ ಕಮಿಟಿಗೆ ೪ ಸದಸ್ಯರು ಹಾಜರಾಗುವುದೂ ಕಠಿಣವಾಗಿ ಕುಳಿತಿದೆ.

## ಪ್ರಚಾರಕರ ಅಭಾವ.

ಎರಡನೆಯ ಸಂಗತಿಯಂದರೆ ವೀರಶೈವ ಮಹಾಸಭೆಯ ವಿಷಯಕ್ಕೆ ಹಾಗು ಅದರ ಕಾರ್ಯ ಪ್ರಣಾಲಿಯ ವಿಷಯಕ್ಕೆ ಪ್ರಚಾರ ಕಾರ್ಯ ಮಾಡುವಂಥ ಪ್ರಚಾರಕರ ಅಭಾವ. ಪ್ರಚಾರಕರ ಅಭಾವಕ್ಕಿಂತಲೂ ಪ್ರಚಾರಕರನ್ನು ನಿಯಮಿಸಿಕೊಳ್ಳುವ ಲಕ್ಷ್ಯದ ಅಭಾವವು ವಿಶೇಷವಾಗಿದೆ. ಎಂಥ ದೊಡ್ಡ ಮಹಾಸಭೆಯಿದ್ದರೂ ಅದು ತಾನೆ ಯಾವ ಕೆಲಸವನ್ನೂ ಮಾಡಲಾರದು. ಅದು ಕೇವಲ ಮೇಲವಿಚಾರಣೆ ಮಾಡಬಹುದು. ಕಾರ್ಯಮಾಡುವಂಥವುಗಳೆಂದರೆ ಅದರ ಕೈಕೆಳಗಿನ ಕಮಿಟಿಗಳು. ಕಮಿಟಿಗಳು ಏರ್ಪಾಟಾಗಬೇಕಾದರೆ ಜನತೆಯಲ್ಲಿ ಆ ವಿಷಯಕ್ಕೆ ಅಭಿರುಚಿ ತಲೆದೋ

ಹಿಂದು-ಮುಸಲ್ಮಾನರ ಐಕಮತ್ಯಕ್ಕೋಸ್ಕರ,
ಪ್ರಯತ್ನಿಸುತ್ತಿರುವ

# ಮುಖ್ಯ ತ್ರಿಮೂರ್ತಿಗಳು.

ವಂದೇ ಮಾತರಂ



ಪಂಡಿತ ಜವಾಹಿರಲಾಲ ನೆಹರುರವರು



ಮಹಾತ್ಮಾ ಗಾಂಧಿಯವರು



ರಾಷ್ಟ್ರಪತಿ ಸುಭಾಷಚಂದ್ರ ಬೋಸರವರು

ಹಿಂದು-ಮುಸಲ್ಮಾನರ ಐಕ್ಯವಾಗಲಿ.

**ಗಾಂಧೀಜಿಯವರು**—ಹಿಂದು-ಮುಸಲ್ಮಾನರ ಒಪ್ಪಂದಕ್ಕೋಸ್ಕರ ಈ ಮುಂಚೆ ೨೧ ದಿನಗಳ ಉಪವಾಸವನ್ನು ಮಾಡಿದ್ದರಷ್ಟೆ. ಬ್ಯಾ ಜಿನ್ನಾರವರಿಗೆ ತಾ. ೧೯-೧೦-೩೭ ನೆಯ ದಿನ ಬರೆದ ಪತ್ರದಲ್ಲಿ ಮತ್ತೆ ಹೀಗೆ ತಿಳಿಸಿದ್ದಾರೆ—

"ಹಿಂದು-ಮುಸಲ್ಮಾನರನ್ನು ಕೂಡಿಸಲು ನನ್ನನ್ನು ಸೇತುವೆಯಾಗಿ ಮಾಡಿಕೊಳ್ಳಲು ಮೀಸಲಾಗಿ ಇಡುವಿರಾ ?"

ಗಾಂಧೀಜಿಯವರು ತಾ. ೩-೨-೩೮ ನೆಯ ಪತ್ರದಲ್ಲಿ ಬ್ಯಾ. ಜಿನ್ನಾರವರಿಗೆ ಹೀಗೆ ಬರೆದಿದ್ದಾರೆ—

"ನಾನು ನಿಮ್ಮಲ್ಲಿ ಮೊಳಕಾಲೂರಿ ಬೇಡಿಕೊಳ್ಳುವುದರ ವಿನಾ ಇನ್ನಾವ ಸೂಚನೆಯನ್ನು ಮಾಡಲಿ ?"

**ಪಂಡಿತಜಿಯವರು**—ತಾ. ೬-೪-೩೮ ನೆಯ ದಿನ ಬ್ಯಾ. ಜಿನ್ನಾರವರಿಗೆ ಪಂಡಿತಜಿಯವರು ೧೪ ಫುಲಿಸ್ಕೇಪ್ ಪುಟತುಂಬುವಷ್ಟು ವಿಸ್ತಾರವಾಗಿ ಬರೆದುದರಲ್ಲಿ ಹೀಗೆ ತಿಳಿಸಿದ್ದಾರೆ—



"ಮುಸಲ್ಮಾನರ ಸಂಸ್ಕೃತಿಯ ಸಂರಕ್ಷಣೆ, ಧಾರ್ಮಿಕಸ್ವಾತಂತ್ರ್ಯ, ವೈಯಕ್ತಿಕ ಶಾಸನ ಇವುಗಳಲ್ಲಿ ವ್ಯತ್ಯಾಸಮಾಡಲು ಕಾಂಗ್ರೆಸ್ ಇಚ್ಛಿಸುವುದಿಲ್ಲ ಗೋವಧೆ ಮಾಡಲು ಮುಸಲ್ಮಾನರಿಗಿರುವ ಹಕ್ಕು ಬಾಧ್ಯತೆಗಳಲ್ಲಿ ಕಾಂಗ್ರೆಸ್ ಕೈ ಹಾಕುವುದಿಲ್ಲ. ಶಾಹೀದಗಂಜ ವ್ಯಾಜ್ಯ ತಮ್ಮ ತಮ್ಮಲ್ಲಿ ಬಗೆಹರಿಸಿಕೊಳ್ಳಲ್ಪಡುತ್ತಿದ್ದರೆ ಕಾಂಗ್ರೆಸ್ ಆ ವಿಷಯದಲ್ಲಿ ಸಹಾಯಮಾಡಲು ಸಿದ್ಧವಾಗಿದೆ.

---

**ಬಾಬೂಜಿಯವರು**—ಮುಸಲ್ಮಾನರು ಕಾಂಗ್ರೆಸ್ಸಿನಲ್ಲಿ ಸೇರಿದರೆ ಎಲ್ಲಾ ಸೂತ್ರಗಳನ್ನೂ ಅವರ ಕೈಯಲ್ಲಿ ಕೊಡಲು ಸಿದ್ಧರಿದ್ದೇವೆ.

ಇಂಥ ವಿಚಾರದ ಐಕ್ಯವನ್ನೂ ಬ್ಯಾ. ಜಿನ್ನಾರವರು ಜಾತ್ಯಂಧತೆಯಿಂದ ನಿರಾಕರಿಸುವರೋ?

## ಹುಬ್ಬಳ್ಳಿಯಲ್ಲಿ
## ಹೊಸ ಮಾದರಿಯ ಲಗ್ನ.

ತಾರೀಖು ೯-೬-೧೯೩೮ ನೆಯ ಇಸ್ವಿ ದಿನ ಧಾರವಾಡದ ಶ್ರೀ. ಕುಮಾರ ಸ್ವಾಮಿಗಳು ಬಿ. ಎ. ಇವರ ಸಮ್ಮುಖದಲ್ಲಿ ಶ್ರೀಯುತ ಪಿ. ಬಿ. ಹರ್ತಿ ಡಿಸ್ಟ್ರಿಕ್ಟ ಡೆಪ್ಯೂಟಿ ಕಲೆಕ್ಟರ ಅಲಿಬಾಗ ಇವರ ಚಿರಂಜೀವನ ಲಗ್ನವು ಸಾದರ ಹಳ್ಳಿಯವರ ಬಂಗ್ಲೆಯಲ್ಲಿ ಸಾಯಂ ಕಾಲ ೬ ಗಂಟೆಗೆ ಜರುಗಿತು. ಈ ಲಗ್ನಕ್ಕೆ ಪ್ರಮುಖ ಜನರು ವ್ಯಾಪಾರಸ್ಥರು ಎಲ್ಲ ಅಧಿಕಾರಿಗಳೂ ಬಂದಿದ್ದರು. ಮತ್ತು ಇದನ್ನು ನೋಡಬೇಕೆಂಬ ಕುತೂಹಲದಿಂದ ಸ್ಥಳ ಪರಸ್ಥಳಗಳಿಂದ ಅನೇಕರು ಬಂದಿದ್ದರು.

ಈ ಲಗ್ನದಲ್ಲಿ ಹಳೆಯ ಪದ್ಧತಿಯ ಸುರಗಿ, ಸುರಗೀಕಾಯಿ ಐರಣಿ, ಭೂಮ್ಮಾ, ಎಣ್ಣಿ ಬೀರುವದು ಗುಗ್ಗಳ, ಕೋರೂಟಿ, ಮೆರವಣಿಗೆ ವಗೈರೆ ಉಪಯೋಗವಿಲ್ಲದ ಹಾಗೂ ವ್ಯರ್ಥ ಹೊತ್ತು ಗಳಿಯುವ ಮತ್ತು ಸುಮ್ಮಸುಮ್ಮನೇ ದುಡ್ಡು ವೆಚ್ಚ ಮಾಡುವ ಕಾರ್ಯಭಾಗವನ್ನು ತೆಗೆದುಹಾಕಿದರು. ಇನ್ನೊಂದು ವಿಶೇಷ ಸಂಗತಿಯೇನೆಂದರೆ ಈ ಲಗ್ನದಲ್ಲಿ ಅಯ್ಯನವರನ್ನು ಬಿಟ್ಟು ಕೇವಲ ಭಕ್ತರಿಂದಲೇ ಕಲ್ಯಾಣ ಕಟ್ಟುವ (ಲಗ್ನಮಾಡುವ) ಕ್ರಿಯೆಯು ಜರುಗಿತು. ಇದರಲ್ಲಿ ವಿಧಿವಿಧಾನಗಳನ್ನು ಜರುಗಿಸಿದ ಮೂವರು ಭಕ್ತರು ಶುದ್ಧ ಖಾದಿಯನ್ನೇ ಉಟ್ಟು ಖಾದಿಯನ್ನೇ ಹೊತ್ತಿದ್ದರು. ಈ ಮೂವರ ಪೈಕಿ ನಡುವೆ ಕೂತಂಥ ಗುರುಸಿದ್ಧಪ್ಪ ಭೂಸನವರ ಇವರು ವಿಧಿ ವಿಧಾನಗಳನ್ನು ಮಾಡುತ್ತಿದ್ದರು. ಉಳಿದವರಿಬ್ಬರು ಮಂತ್ರಗಳನ್ನು ಕನ್ನಡದಲ್ಲಿಯೇ ಎಲ್ಲರಿಗೂ ತಿಳಿಯುವಂತೆ ಪದ್ಯ ರೂಪದಲ್ಲಿ ಅನ್ನುತ್ತಿದ್ದರು. ಮಂತ್ರಗಳ ರಹಸ್ಯವು ಒಳ್ಳೇ ನೀತಿ ಯಿಂದ ಕೂಡಿ ಹೊಗಳುವಂತಹದಿದ್ದಿತು. ಅದರಲ್ಲಿಯ ಒಂದೆರಡು ಪದ್ಯಗಳನ್ನು ವಾಚಕರಿಗಾಗಿ ಇಲ್ಲಿ ಉದಾಹರಿಸಿದೆ.

ಮನಕೆ ಮಂಗಳವಕ್ಕು ತನುವಿಂಗೆ ಸುಖವಕ್ಕು|
ವಿನಯ ಪ್ರಸಾದವು ಸಾಧ್ಯವಕ್ಕು||
ಅನವರದು ರುದ್ರಾಕ್ಷಿಯನಾಗಮ ಸ್ಥಾನದಿ ಧರಿಸಿ|
ತ್ರಿಣಯನ ಕರುಣೆಯಂ ಪಡೆದು ನೀವು ||೧||

ಚಿದ್ರಮಣ ಪರಶಿವನ ಭದ್ರಾಕ್ಷಿಯಿಂದಾದ|
ರುದ್ರಾಕ್ಷಿಗಳನೊಲಿದು ಧರಿಸಿ ನೀವು||
ಚಿದ್ರೂಪ ಲಿಂಗವನು ಹೊಂದಿ ಪರಮಾನಂದ|
ರುದ್ರ ಮೂರ್ತಿಗಳಾಗಿ ಬಾಳಿರಿನ್ನು ||೨||

ವಧೂವರರಿಗೆ ನೀತಿಯನ್ನು ಬೋಧ ಮಾಡುವಾಗ-

ಬೇಡದಿರಿ ನರರಕೊಂಡಾಡದಿರಿ, ಹಿಂಸೆಯಂ|
ಮಾಡದಿರಿ ಪಾಪ ಕೆಡೆಯಾಡದಿರಿ ಕುಚಿತರೊಡ|
ನಾಡದಿರಿ ಕಾಮದೊಳು ನೋಡದಿರಿ ಪರರನ್ನು ಕೂಡದಿರಿ ಕನಸಿನಲ್ಲಿ||

ಕೇಡೆಣಿಸದಿರಿ ಪರರಿಗಾಡದಿರಿ ನಿಷ್ಠುರವ|
ಪೀಡಿಸದಿರನ್ಯರರ ರೂಡಿಸದಿರಪಜಯದಿ|
ಕೂಡಿಸದಿರನ್ಯಾಯ ದೊಡವೆಯಂ ಸದ್ಗತಿಯು ದೊರಕೊಳ್ಳ ದಿದುನಿರುತವು||

ಒಂದುವಂ ಬಯಸದಿರಿ ಬಂದುದತಿಗಳೆಯದಿರಿ|
ಕುಂದು ನಿಂದ್ಯಕ್ಕಳುಕಿ ಸಂದು ಸಂಶಯ ದುಃಖಬರೆ|
ಕಂದರ್ಪ ಹರನಾಜ್ಞೆಯೆಂದು ನಿಶ್ಚಯಿಸೆಡರು ಬಂದೊಡೆ ಕುಂದಿಹುದು||

ಎಂದೆಂದು ಶಿವನಡಿಯ ನೋಡಿ ಜಾನಿಸಿ ಪಸಿವು|
ಯೆಂದಡಿಲ್ಲೆನ್ನದಿರಿ ಮುಂದೆ ವಂದಿಸಿ ಬಳಿಕ|
ಹಿಂದೆ ಬಿಟ್ಟಾಡದಿರಿ ತಂಪೆ ಗುರುದೈವಗಳ ಕಂದಿಸದಿರೆಂದು ಪೇಳ್ವೆಂ||

ಮತ್ತು ಅಕ್ಷತೆಯನ್ನು ಒಗೆಯುವಾಗ್ಗೆ-

ಪರ್ಧಿಪಲಿಂಗ ಸಂಗಸುಖದೋಳ್ ಮನವೋಲ್ದು ನಿಜೇಂದ್ರಿಯಂಗಳಾ|
ಗರ್ಧನ ಮಲ್ಲದಪ್ಪ ವಿಷಯಂಗಳೊಳಾಡದೆ ಶುದ್ಧಭೋಗಮಂ||
ಚಿದ್ಧರೆಯೋಳ್ ಶಿವಾಧವನನುಗ್ರಹದಿಂದೆಡೆಯಿಂದೆ ಲುಣ್ಣುತಂ|
ವೃದ್ಧಿಯನೊಂದಿ ಬಾಳ್ವುದೆನುತಂ ನಿಮಗೀರ್ವರಿಗೇರಿಪೆ ವಕ್ಷತಂಗಳಂ||

ಈ ಪ್ರಕಾರ ಅಂದರು. ಇದರಂತೆ ಅನೇಕ ಶರದ ಶಿವಶರಣರ ವಚನಗಳಿಂದ ಕೂಡಿದ ಬೋಧೆಯನ್ನು ಕೇಳಿದ ನೋಡಿದ ಜನರೆಲ್ಲರು ಆನಂದಪಡುವದು ಸಹಜವದೆ, ಲಗ್ನವಿಧಿಯು ಸಮಾಪ್ತಿಯಾದನಂತರ ಈ ಮಾದರಿಯ ಲಗ್ನದ ವಿಷಯವಾಗಿಯೇ ಶ್ರೀ ಕುಮಾರ ಸ್ವಾಮಿಗಳು ಭಾಷಣ ಮಾಡಿದರು.

ಭಾಷಣದ ಸಾರಾಂಶ— ಈಗಿನ ಲಗ್ನಕಾಲದಲ್ಲಿ ಪರಿಸ್ಥಿತಿಗೆ ತಕ್ಕಂತೆ ಬದಲಾವಣೆಯಾಗುವದು ಅತ್ಯವಶ್ಯವದೆ. ಆರ್ಥಿಕ ಬಡತನದ ಕಾಲದಲ್ಲಿ ಹೆಚ್ಚು ಹೆಚ್ಚು ಹಣ ಹಾಗು ವೇಳೆ ಕಳೆಯುವದು ಯೋಗ್ಯವಲ್ಲವೆಂಬುದನ್ನು ಎಲ್ಲರಿಗೂ ಮನವರಿಕೆಯಾಗುವಂತೆ ಹೇಳಿದರು. ಅಲ್ಲದೆ ಲಗ್ನದಲ್ಲಿ ಮಾಡತಕ್ಕ ಅನವಶ್ಯಕ ಕೆಲಸ ಹಾಗೂ ಮೋಜು ಇನ್ನೂ ಕೆಲವು ಅಶ್ಲೀಲವಿರುವ ವಿಷಯಗಳನ್ನು ಬಿಟ್ಟುಬಿಡಬೇಕೆಂದು ತಿಳಿಸಿದರು. ಮತ್ತು ಲಗ್ನ ಮುಂತಾದ ಎಲ್ಲ ವಿಧಿಗಳಲ್ಲಿ ಭಕ್ತರು ವಿಧಿ ವಿಧಾನಗಳನ್ನು ಮಾಡಲಿಕ್ಕೆ ಬರುತ್ತದೆಂಬ ಮಾತನ್ನು ಘಂಟಾಘೋಷವಾಗಿ ಹೇಳಿದರು.

ಪ್ರತ್ಯಕ್ಷದರ್ಶಿ.

# ಕಾಂಗ್ರೆಸ ಶಕ್ತಿಯ ಪ್ರಭಾವ.

ಲೇ:— ಶ್ರೀ ನೀಲಕಂಠಸ್ವಾಮಿ ಚಿಕ್ಕೋಡಿ
ಶ್ರೀ. ಜ. ಗಂಗಾಧರ ಸಂಸ್ಕೃತ ಕಾಲೇಜ ಹುಬ್ಬಳ್ಳಿ.

ಕಾಂಗ್ರೆಸ ಚಟುವಟಿಕೆಗಳು ಪ್ರಾರಂಭವಾದಂದಿನಿಂದ ಭರತ ಖಂಡದ ಭವಿತವ್ಯತೆಯು ಉಜ್ವಲವಾಗಿ ಕಂಗೊಳಿಸುತ್ತಿರುವದು ಭಾವೀ ಸ್ವಾತಂತ್ರ್ಯದ ಜಯ ಭೇರಿಯ ನಿನಾದವು ಕೇಳಬರುವದು. ಭಾರತ ಮಾತೆಯ ಪಾರತಂತ್ರ್ಯದ ಶೃಂಖಲೆಯು ಛಿನ್ನ ವಿಚ್ಛಿನ್ನವಾಗತೊಡಗಿರುವದು. ಬಾಲ ಬಾಲಿಕೆಯರಲ್ಲಿಯೂ, ತರುಣ ತರುಣಿಯರಲ್ಲಿಯೂ, ವಯೋವೃದ್ಧರಲ್ಲಿಯೂ, ಅಭೂತಪೂರ್ವವಾದ ಉತ್ಸಾಹವೂ, ನವಚೈತನ್ಯವೂ ತುಂಬಿ ತುಳಕುತ್ತದೆ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿ ಭರತ ಖಂಡದ ಜೀವಜ್ಯೋತಿಗಳಾದ ಹುತಾತ್ಮರ ಭಾವಚಿತ್ರಗಳೂ ಅಲೌಕಿಕ ಕಾರ್ಯಕಲಾಪಗಳೂ ಅಚ್ಚಳಿಯದೆ ಪ್ರತಿಯೊಬ್ಬ ಹಿಂದುವಿನ ಹೃದಯ ಪಟಲದಲ್ಲಿ ನಿಚ್ಚಳವಾಗಿ ಕೊರೆಯಲ್ಪಟ್ಟವೆ.

ಕಾಂಗ್ರೆಸ ಸಂದೇಶವು ದಶದಿಕ್ಕುಗಳನ್ನಾದರಿಸಿ "ಅತ್ಯತಿಷ್ಠದ್ದ ಶಾಂಗುಲಂ" ಎಂಬಂತೆ ಎಲ್ಲವನ್ನು ಮೀರಿ ಹತ್ತಂಗುಲ ಮೇಲೆ ಅದೆ. ಅದಕ್ಕಿಂತಲೂ ಮುಂದೊಂದು ಸ್ಥಾನವಿದ್ದರೆ ಅಲ್ಲಿಗೂ ಹೋಗಲು ಹಾತೊರೆಯುತ್ತದೆ. ಜಯಪತಾಕಿ (ಕಾಂಗ್ರೆಸಧ್ವಜ) ಗೆ ಬೆದರಿ ಬೆಪ್ಪಾಗಿ ಸಂಸ್ಥಾನಗಳು ಅಲ್ಲೋಲ ಕಲ್ಲೋಲಗಳಾಗಿವೆ. ಪತಾಕಿಯ ಪಟ ಪಟ ಧ್ವನಿಯು ಮಾಂಡಲೀಕರ (ಸಂಸ್ಥಾನಿಕರ) ಮೊಂಡತನವನ್ನು ಖಂಡಿಸಲು ದಿಗಂತವನ್ನು ವ್ಯಾಪಿಸಿದೆ. ನೂರಾರು ಶತಮಾನಗಳಿಂದ ನಿರ್ಭಯರಾಗಿ ನಿರಾತಂಕರಾಗಿ, ನಿರಾಮಯರಾಗಿ ಆಳುತ್ತ ಬಂದಿರುವ ಆಳರಸರು ಸಾಂಕುಶರಾಗುವುದನ್ನು ಸೂಚಿಸುತ್ತಿರುವದು.

ಭಾರತ ರಾಷ್ಟ್ರದ ಅನಭಿಷಿಕ್ತ ಸಾರ್ವಭೌಮ (ಗಾಂಧಿ) ನ ದಿವ್ಯೌಷಧವು ಹರಕು ಮುರುಕಾದ ಹಿಂದೂ ಮಾತೆಯ ಪಾರತಂತ್ರ್ಯ ಮಹಾರೋಗವನ್ನು ಗಡಿಪಾರುಮಾಡಲು ಉದ್ಯುಕ್ತವಾಗಿದೆ, ಭಾರತ ಮಾತೆಯ ಮಮತೆಯ ಮುಕುಟ ರಹಿತ ವೀರಪುತ್ರ (ಜವಾಹರಲಾಲ) ನು ಕಾಂಗ್ರೆಸ ಶಕ್ತಿಯ ಸಂದೇಶವನ್ನು ಪರರಾಷ್ಟ್ರಗಳಲ್ಲಿ ಬೀರಲು ಭರದಿಂದ ಸಾಗಿರುವನು ಆಳರಸರ ಬಾಳು ಸಮುದ್ರದಾಚೆಗೆಂದು ಹೇಳಿ ಹೊರಟನು. ಹಿಂದುಸ್ಥಾನದ ಮೂರು ಕೋಟಿ ಸೈನ್ಯದ ಸೇನಾನಿ (ಸೈನ್ಯಾಧಿಪತಿ) ಯ ಅಪ್ರತಿಮ ಪ್ರಭೆಯನ್ನು ಅಗಾಧ ಶೌರ್ಯವನ್ನು ಶಸ್ತ್ರ ಸನ್ಯಾಸದ ಯುದ್ಧ ಕೌಶಲ್ಯವನ್ನು ತೋರಿಸಲು ನಡೆದಿಹನು. ಅವನು ಅಲ್ಲಿಂದ ತಿರುಗುವವರೆಗೂ ತಿರಂಗೀ ಧ್ವಜವು ಹಾರಾಡಲೆಂದು ನಿಂತಲ್ಲಿ ಭಾರತೀಯರ ಪ್ರಾಣ ಪತಂಗದ ಹಾಂಟವು ನಿಲ್ಲಲೇಬೇಕೆಂದು ಕಟ್ಟಪ್ಪಣೆ ಹಾಕಿರುವನು. ಮಾತೃಭೂಮಿಯ ಉದ್ಧಾರಕ ಚಿನ್ಹ (ಧ್ವಜ) ಕ್ಕೆ ಅಪಮಾನವಾಗದಂತೆ ಇರಲು ಎಚ್ಚರ ಹೇಳಿದನು.

ಅರಸರ ರತ್ನಖಚಿತ ಕಿರೀಟಗಳು ಮಹಾತ್ಮರ (ಗಾಂಧಿ) ಆತ್ಮ ಪ್ರಭೆಯಲ್ಲಿ ಕಾಣದಂತಾಗಿ ರಾಜ್ಯಶಾಸನ ಮಂದಿರ [ಕೌನ್ಸಿಲ್] ಗಳಲ್ಲಿ ವಜ್ರಮುಕುಟಗಳು ಮಾಯವಾಗಿ ಶುದ್ಧ ಖಾದಿ ಕಿರೀಟಗಳು ವಿರಾಜಿಸುತ್ತಿರುವವು ಕೈನೂಲಿನ ಬಿಳಿಯ ಬಟ್ಟೆಗಳು ಬಿಳಿಯರನ್ನು ಬಾಗಿಸಿರುವವು. ಹೀಗೆ ಕಾಂಗ್ರೆಸ ಶಕ್ತಿಯು ಅಘಟಿತ ಘಟನಾ ಕಾರ್ಯದಲ್ಲಿ ಕೈಹಾಕಿದೆ. ಅದರ ಪ್ರಭಾವವು ಹಳ್ಳಿಹಳ್ಳಿಗಳಲ್ಲಿಯೂ ಸಂದಿಗೊಂದಿಗಳಲ್ಲಿಯೂ ಅಡಗಿರ್ದ ಅಜ್ಞಾನಾಂಧ ಕಾರವನ್ನು ಹೊಡಿದೋಡಿಸಲು ಬದ್ಧಕಂಕಣವಾಗಿದೆ. ಕಾಂಗ್ರೆಸ್ ಶಕ್ತಿಯು ನಿಜವಾದ ಅರುಹನ್ನು ಅರುಹಲು ತರತರದ ಸೊಬಗಿನಿಂದ ಸೊಗಸಾಗಿ ಸಾಗಿದೆ.

ದೀನ ದರಿದ್ರ ದುಃಖ ವಿಮೋಚನೆಯಾಗಲೆಂದು ಹಗಲಿರುಳು ಹಂಬಲಿಸಿ ಅಸಂಖ್ಯಾತ ಸಂಪತ್ತನ್ನು ಸೂರೆಗೈದ ಜವಾಹರ ಗಾಂಧಿ, ಬೋಸರು ಅನಿರ್ಬಂಧ ಬಂಧನದಿಂದ ಮುಕ್ತರಾಗಿ ಭಾರತಾಂಬೆಯ ಮುಕ್ತಿಗಾಗಿ ದೀಕ್ಷಾಬದ್ಧರಾಗಿಹರು. ಆಧುನಿಕ ಆಂದೋಲನದ ಎಲ್ಲೆಯನ್ನು ಅವರಲ್ಲದೆ ಬಲ್ಲವರಾರು?

ಹಿಂದುಸ್ಥಾನದ ಹಣೆಬರಹವು ಮಹಾತ್ಮರ ಅಂತರಂಗದಲ್ಲಡಗಿದೆ. ಮಾತೃಭೂಮಿಯ ಉಚ್ಛೃಂಖಲೆಯ ಕೀಲಿಯ ಕೈ ಮಹಾತ್ಮರ ಕೈಯಲ್ಲಿದೆ. ಹಿಂದುಸ್ಥಾನದ ಉದ್ಧಾರವು ಅಹಲ್ಲೆಯ ಉದ್ಧಾರದಂತೆ ಗಾಂಧಿಯವರ ಪಾದಾರವಿಂದಗಳಲ್ಲಿದೆ. ಭರತಖಂಡದ ಸ್ವಾತಂತ್ರ್ಯ ಸಂಪಾದನೆಯ ತಿರುಳು ಮಹಾತ್ಮರ ಮಿದುಳಿನಲ್ಲಿದೆ. ಸ್ವಾತಂತ್ರ್ಯದೇವಿಯ ದಯಾರಸವು ಮಹಾತ್ಮರ ಮನಃಕೂಪಗಳಲ್ಲಿ ಹೊರಚಿಮ್ಮುತ್ತಿದೆ. ಇದೆಲ್ಲಕ್ಕೂ ಹೇತುವಾದುದು ಕಾಂಗ್ರೆಸ್ ಶಕ್ತಿಯ ಅಪ್ರತಿಮ ಪ್ರತಿಭೆಯ ಪ್ರಭಾವ.

—:ಜಯ ಭುವನೇಶ್ವರಿ:—

---

ಅಂಬಲಗಿಯಲ್ಲಿ

## ವೀರಶೈವ ಸಮಾಜ ಸ್ಥಾಪನೆ.

ಕಮಲಾಪುರ ವೀರಶೈವ ಸಮಾಜದವರು ತಾ. ೯-೬-೩೮ ಗುರುವಾರ ಮಿತಿ ಜ್ಯೇಷ್ಠ ಶು। ೧೨ ದಿವಸ ಅಂಬಲಗಿಯವರ ಆಮಂತ್ರಣಪ್ರಕಾರ ಹೋಗಿ ವೀರಶೈವ ಮತತತ್ವಗಳಲ್ಲಿ ಎಲ್ಲಕ್ಕೂ ಹೆಚ್ಚು ಪ್ರಾಮುಖ್ಯಯುಳ್ಳ ಲಿಂಗತತ್ವ ಅಹಿಂಸಾ ಇವುಗಳನ್ನು ಚೆನ್ನಾಗಿ ವಿಶದಪಡಿಸಿ ಪ್ರತಿಯೊಂದು ಊರುಗಳಲ್ಲಿ ವೀರಶೈವ ಸಮಾಜ ಸ್ಥಾಪನೆಯ ಅವಶ್ಯಕತೆ ಅವರು ಮಾಡಬೇಕಾದ ಕಾರ್ಯ ಮತ್ತು ಅವುಗಳ ರೀತಿನೀತಿಗಳನ್ನು ತಿಳಿಸಿದ್ದಾದಮೇಲೆ ಸಭೆಗೆ ಆಗಮಿಸಿದ ಯಾವತ್ತೂ ವೀರಶೈವ ಪ್ರಮುಖರ ಒಪ್ಪಿಗೆಯಿಂದ ವೀರಶೈವ ಸಮಾಜ ಸ್ಥಾಪನೆಯಾಗಿ ಕೆಳಗಿನ ಪ್ರಕಾರ ಉತ್ಸಾಹಿ ತರುಣರು ಸಮಾಜ ಸೇವೆಮಾಡಲು ಸಂತೋಷದಿಂದ ಮುಂದೆ ಬಂದು ನಿಯಮಿಸಲ್ಪಟ್ಟರೆಂದು ತಿಳಿಸಲು ಆನಂದವೆನಿಸುತ್ತದೆ.

ಅಧ್ಯಕ್ಷ— ಶ್ರೀ. ಶಿವಶಂಕರಸ್ವಾಮಿ ಮಂದೇವ, ಉಪಾಧ್ಯಕ್ಷ— ಶ್ರೀ. ರೇವಣಸಿದ್ಧಯ್ಯಾ ಮಠಪತಿ, ಸೆಕ್ರೆಟರಿ— ಶಿವಪ್ಪನವರು ಮರಗುತ್ತಿ, ಅ| ಸೆಕ್ರೆಟರಿ— ರುದ್ರಪ್ಪ ಸೊಪ್ಪಾ, ಆಡಿಟರ— ಗುರುಬಸಪ್ಪ ಜಾವಳಗಿ, ಖಜಾನದಾರ— ಅಡಿವೆಪ್ಪನವರು ವಣಕಿ, ಪ್ರಚಾರಕ— ಗುರುಸಿದ್ಧಪ್ಪ ದುರ್ಗ.

ಮೆಂಬರರು— (೧) ಗುರುಲಿಂಗಪ್ಪ ದುರ್ಗ. (೨) ರೇವಪ್ಪ ಹಡಗೆ (೩) ಮ.ಹಾದೇವಪ್ಪ ಮರಗುತ್ತಿ, (೪) ರೇವಪ್ಪ ಸೊರಡಿ (೫) ಬಸವಪ್ಪ ಬಣಗಾರ, (೬) ಗುರುಲಿಂಗಪ್ಪ ಕೋಳಸವರು (೭) ಫಕೀರಪ್ಪ ತಪಲಿ (೮) ರೇವಣಸಿದ್ಧಪ್ಪ ಗುತ್ತಿ.

ಸೆಕ್ರೆಟರಿ
ವಿ. ತ. ಸಂಘ ಕಮಲಾಪುರ:

---

—ಹೈದರಾಬಾದಿನಲ್ಲಿ ಈ ಮುಂಚೆ ನಡೆದ ದೊಂಬಿಯ ಕಾಲಕ್ಕೆ ಇಬ್ಬರು ಮುಸಲ್ಮಾನರು ಕೊಲೆ ಮಾಡಲ್ಪಟ್ಟದ್ದರ ಸಂಬಂಧವಾಗಿ ೧೨ ಹಿಂದುಗಳ ಮೇಲೆ ನಡೆದಿರುವ ವ್ಯಾಜ್ಯದಲ್ಲಿ ವಿವಾದಿಸಲು ವೀರ ನರಿಮನ್ನರು ಇದೇ ೧೬ ನೆಯ ತಾರೀಖಿಗೆ ಹೈದರಾಬಾದಿಗೆ ಹೋಗುವವರಿದ್ದರು. ಅವರು ಹೈದರಾಬಾದ ಸಂಸ್ಥಾನದಲ್ಲಿ ಬರಕೂಡದೆಂದು ಅಲ್ಲಿಯ ಸರಕಾರದವರು ಅಪ್ಪಣೆ ಮಾಡಿದ್ದಾರೆ.

## ಶಹಾಪೂರ ಸ್ತ್ರೀಯರಲ್ಲಿ ಜಾಗೃತಿಯು.

ಇಲ್ಲಿಯ ಸ್ತ್ರೀವರ್ಗದ ಉನ್ನತಿಗಾಗಿ ಬಹುಕಾಲದಿಂದ ಕಷ್ಟ ಪಡುತ್ತಿರುವ ಕೆಲವು ಮಹಿಳೆಯರು ಕೂಡಿ, "ಅಕ್ಕನ ಬಳಗ" ವೆಂಬ ಸಂಸ್ಥೆಯನ್ನು ಸ್ಥಾಪಿಸಿರುವರಷ್ಟೇ, ಅವಕ್ಕೆ ಸೋಲಾಪೂರದ ಸೌ|| ಸಂಗವ್ವಾ ತಾಯಿ ಮಡಕಿ, ಸೌ|| ಪಂಚವ್ವಾಬಾಯಿ ಸರದಾರ ಮತ್ತು ವಿಶೇಷವಾಗಿ ಸೌ|| ಜಯದೇವಬಾಯಿ ಲಿಗಾಡೆ ಇವರು ಪ್ರೋತ್ಸಾಹವನ್ನಿತ್ತರು.

ತಾ|| ೩೦-೫-೩೮ ನೇ ದಿವಸ ಮತ್ತು ತಾ|| ೫-೬-೩೮ ನೇ ದಿವಸ ಶ್ರೀಮತಿ ಸಂಗವ್ವಾ ಬಾಯಿ ಬೆಂಬಳಗಿ ಇವರ ಮಹಡಿಯ ಮೇಲೆ ಸೌ|| ಜಯದೇವಬಾಯಿ ಲಿಗಾಡೆ ಇವರ ಅಧ್ಯಕ್ಷತೆಯ ಕೆಳಗೆ ಸಭೆಗಳು ಕೂಡಿದ್ದವು. ಪ್ರತಿಯೊಂದು ಸಭೆಗೆ ಶಹಾಪೂರ, ಬೆಳಗಾಂವ ಮತ್ತು ತಳಕವಾಡಿಯ ಹೆಣ್ಣು ಮಕ್ಕಳೆಲ್ಲರು ಕೂಡಿದ್ದರಲ್ಲದೆ, ಸಂಸ್ಥೆಯ ಸಂಘಟನೆ ಮತ್ತು ಮುಂದೆ ಮಾಡತಕ್ಕ ಕಾರ್ಯಗಳಲ್ಲಿ ಉತ್ಸಾಹ ಮತ್ತು ಆನಂದವನ್ನು ವ್ಯಕ್ತಪಡಿಸಿದರು.

ಮೂರು ಸಭೆಗಳಲ್ಲಿ ಕ್ರಮವಾಗಿ ಸಂಘಶಕ್ತಿ, ಮಹಾದೇವಿ ಅಕ್ಕನವರ ಚರಿತ್ರೆ, ಮತ್ತು ಭಕ್ತಿ ಈ ವಿಷಯಗಳ ಬಗ್ಗೆ ಸೌ|| ಜಯದೇವಬಾಯಿ ಲಿಗಾಡೆ ಇವರು ಜನರ ಮನಸ್ಸಿನ ಮೇಲೆ ಪರಿಣಾಮವಾಗುವಂತೆ ಭಾಷಣ ಮಾಡಿದರು.

ಅಕ್ಕನ ಬಳಗಕ್ಕೆ ಶ್ರೀಮತಿ ಶಾಂತವೀರವ್ವಾ ಬಿಳ್ಳೂರ ಇವರನ್ನು ಅಧ್ಯಕ್ಷರನ್ನಾಗಿ, ಅರಿಸಿ ಗೌರಾಬಾಯಿ ಜಿಗಜಿನ್ನಿ ಇವರನ್ನು ಉಪಾಧ್ಯಕ್ಷರನ್ನಾಗಿ, ಶ್ರೀಮತಿ ಗೌರಾಬಾಯಿ ಉಮರ್ಜಿ ಇವರನ್ನು ಸೆಕ್ರೆಟರಿಗಳನ್ನಾಗಿ ೧೩ ಜನ ಸ್ತ್ರೀಯರನ್ನೂ ಸಲಹೆಗಾರ ಮತ್ತು ಮ್ಯಾನೇಜಿಂಗ್ ಸಭಾಸದರನ್ನಾಗಿ ಸರ್ವಾನುಮತದಿಂದ ಆರಿಸಲಾಯಿತು.

ಮೊದಲು ನೇಮಕ ಮಾಡಿದಂತೆ ಕೆಲವು ಮಹಿಳೆಯರು ತಮ್ಮ ತಮ್ಮ ಭಾಷಣ, ನಿಬಂಧ ವಾಚನ ಮಾಡಿದರಲ್ಲದೆ, ಚಿಕ್ಕ ಮಕ್ಕಳು ಸಹ ವಚನಗಳನ್ನು ಹೇಳಿದರು. ಆಮೇಲೆ "ಅಕ್ಕನ ಬಳಗಕ್ಕಾಗಿ" ತಮ್ಮ ಮಹಡಿಯನ್ನು ಅನುಕೂಲ ಮಾಡಿಕೊಟ್ಟದ್ದಕ್ಕಾಗಿ ಶ್ರೀಮತಿ ಸಂಗವ್ವಾಬಾಯಿ ಬೆಂಬಳಗಿ ಇವರ ಉಪಕಾರವನ್ನು ಅಧ್ಯಕ್ಷರಾದ ಕುಂ|| ಸೌ|| ಲಿಗಾಡೆ ಜಯದೇವಬಾಯಿಯವರು ಆನಂದದಿಂದ ಮೇಲಿಂದಮೇಲೆ ಸ್ಮರಿಸಿ ಹೇಳಿದರು ಶ್ರೀ|| ಬಿಳ್ಳೂರ ಶಾಂತವೀರಮ್ಮನವರು ಸರ್ವರ ಆಭಾರ ಪ್ರದರ್ಶಿತ ಭಾಷಣ ಮಾಡಿದನಂತರ ಮಹಾದೇವಿ ಅಕ್ಕನವರ ಮಂಗಲ ಪದದೊಡನೆ ಸಭೆಯು ಮುಕ್ತಾಯವಾಯಿತು.

ಸೆಕ್ರೆಟರಿ ಅಕ್ಕನ ಬಳಗ ಶಹಾಪೂರ.

## ವಿಶ್ವಪ್ರೇಮ.

ಜಗತ್ತು ಪರಮಾತ್ಮನಿಂದ ನಿರ್ಮಿಸಲ್ಪಟ್ಟಿದೆ. ಅಣುರೇಣು ತೃಣ ಕಾಷ್ಠಗಳಲ್ಲಿಯೂ ಸಹ ಪರಮಾತ್ಮನಿದ್ದಾನೆ. ಯಾವ ಆತ್ಮನು ನಮ್ಮಲ್ಲಿ ವಿರಾಜಮಾನನಿದ್ದಾನೋ, ಅದೇ ಆತ್ಮನೇ ಸರ್ವರ ಅಂತಃಕರಣದಲ್ಲಿ ಇದ್ದಾನೆ. ಈ ಆತ್ಮ ವಿಚಾರ ದೃಷ್ಟಿಯಿಂದ ಯಾವ ಸಾಂಪ್ರದಾಯ ಅಥವಾ ಧರ್ಮದವನಿರಲಿ. ಮನುಷ್ಯ ಮಾತ್ರರೆಲ್ಲರು ಬಂಧು ಬಾಂಧವರೆಂದು ತಿಳಿಯಬೇಕು. ಇಷ್ಟೇ ಅಲ್ಲ; ಪ್ರತಿಯೊಂದು ಪ್ರಾಣಿಯ ಸಂಗಡ ವ್ಯಾಪಕ ಸ್ವರೂಪದಿಂದ ನಮ್ಮ ಭ್ರಾತೃಭಾವವು ಸಂಘಟಿತವಿದೆ. ಈ ಪ್ರಕಾರ ವಿಶ್ವಪ್ರೇಮವು ಜನರ ಹೃದಯದಲ್ಲಿ ಜಾಗೃತವಾದರೆ ವ್ಯರ್ಥವಾದ ವಿವಾದ-ನಿಷ್ಕಾರಣ ದ್ವೇಷ ಮನೋಮಾಲಿನ್ಯ ಮತ್ತು ಸಂಕುಚಿತ ಮನೋವೃತ್ತಿಯು ಸಂಪೂರ್ಣನಾಶವಾಗಿ ಪರಸ್ಪರರಲ್ಲಿ ಪ್ರೇಮಾಧಾರಾಪ್ರವಹಿತವಾಗ ಹತ್ತುತ್ತದೆ (ಉದಾರ ಚರಿತಾನಾಂತು ವಸುಧೈವ ಕುಟುಂಬಕಂ) ಯಂಬಂತೆ ಉದಾರ ಚಿತ್ತದ ಪುರುಷರು ಪ್ರಪಂಚವೇ ತನ್ನ ಕುಟುಂಬವೆಂದು ತಿಳಿಯುತ್ತಾರೆ. ಸರ್ವರಲ್ಲಿ ಈ ಪ್ರಕಾರ ವಿಶ್ವಪ್ರೇಮವು ಉತ್ಪನ್ನವಾದರೆ ಸಮಸ್ತ ಪ್ರಪಂಚದಲ್ಲಿ ಶಾಂತಿಯ ಸಾಮ್ರಾಜ್ಯವು ಸ್ಥಾಪನವಾಗುತ್ತದೆ. ನಮ್ಮಲ್ಲಿಯ ಸಂಕುಚಿತ ಭಾವನೆಯು ದೂರಾಗಬೇಕು. ಪ್ರಪಂಚದ ಕಲ್ಯಾಣವೇ ನಮ್ಮ ಕಲ್ಯಾಣವೆಂದು ತಿಳಿಯಬೇಕು. ಎಲ್ಲವೂ ಬ್ರಹ್ಮಸ್ವರೂಪವೆಂದು ಭಾರತ ವರ್ಷದ ಆಧ್ಯಾತ್ಮಿಕ ಸಿದ್ಧಾಂತವದೆ ಭಾರತ ವರ್ಷವು ಸರ್ವಾತ್ಮೈಕ್ಯದ ಮತ್ತು ವಿಶ್ವಪ್ರೇಮದ ಸಂದೇಶವನ್ನು ಎಲ್ಲ ದೇಶಗಳಿಗೂ ಮುಟ್ಟಿಸಬೇಕು. ಇದರಲ್ಲೇ ಭಾರತ ವರ್ಷದ ಮಹತ್ವವದೆ.

ಬಸಲಿಂಗಯ್ಯನವರು' ಪಂಚಾಕ್ಷರಿ ಮಠ
ಪ್ರಸಿಡೆಂಟ ಬಸವೇಶ್ವರ ವಾಚನಾಲಯ
ಲಿಂಗಸೂಗೂರು

## ವಿವಾಹವೊ ವಿನಾಶವೊ?

(ಲೇಖಕರು— ಶ್ರೀ. ಬಸವರಾಜ ಅಕ್ಕಿ.)

(ವಿವಾಹವೆಂಬ ಪವಿತ್ರವಾದ ಹೆಸರಿನಲ್ಲಿ ಎಂಥ ಅನ್ಯಾಯ ಅನಾಹುತಗಳು ಆಗುವವೆಂದು ತೋರಿಸಿಕೊಡುವದೇ ಈ ಲೇಖನದ ಉದ್ದೇಶ.)

ವಿವಾಹವು ಮಾನವನ ಹಿತವಿಕಾಸಕ್ಕಾಗಿ ಇರುವದಲ್ಲದೆ ಅವನ ವಿನಾಶಕ್ಕಾಗಿ ಎಂದೂ ಇರುವದಿಲ್ಲ. ಮೊನ್ನೆ ಮೊನ್ನೆ ಒಂದು ವಿವಾಹವು ಒಳ್ಳೇ ಸಡಗರದಿಂದೇನೋ ನೆರವೇರಿತು. ಅದರಲ್ಲಿ ಪುರುಷನ ವಯಸ್ಸು ೭೫ ವರುಷವನ್ನು ಮೀರಿತ್ತು. ಅಲ್ಲದೆ ಎಲ್ಲಾ ಚಟಗಳ ಕವರು ಮನೆ. ಅದು ಅವನ ನಾಲ್ಕನೇ ಮದುವೆ. ಆದರೆ ಸ್ತ್ರೀಯಳ ವಯಸ್ಸು ಸುಮಾರು ೧೩ ಇದ್ದಿರಬಹುದು. ಕನ್ಯೆಯ ತಂದೆ ತಾಯಿಂದಿರು ತಮ್ಮ ಚಿಕ್ಕಮಗಳನ್ನು ಆ ವರನೆನ್ನಿಸುವ ವಯಸ್ಸಾದವನಿಗೆ ಕೊಟ್ಟದ್ದು ಕೇವಲ ಅವನ ಸಿರಿವಂತಿಕೆಯನ್ನಷ್ಟು ನೋಡಿ ಸ್ವಲ್ಪ ವರ್ಷದಲ್ಲಿಯೇ ಆ ಸಂಪತ್ತು ತಮ್ಮ ಕೈಗೆ ಬರುವದೆಂದು ಮನವಂಕೆಯಾದಮೇಲೆ ಮಗಳನ್ನು ಲಗ್ನಮಾಡಿ ಕೊಟ್ಟದ್ದು !

ಇಂಥವರ ವಿವಾಹಕ್ಕೆ ಎಲ್ಲರದೂ ಸಂಪೂರ್ಣ ಪ್ರೋತ್ಸಾಹ ಬೆಂಬಲಗಳಿದ್ದವು! ಸ್ವಾಮಿಗಳು, ಅಯ್ಯನವರು, ಶೆಟ್ಟಿ ಸಾವುಕಾರರೂ ಬಂದು ವಿವಾಹವನ್ನು ಸರಿಯಾಗಿ ಸಾಗಿಸಿದರು! ವೀರಶೈವ ಮತೋದ್ಧಾರಕರಾದ ಬಸವಣ್ಣನವರು ಈ ರೀತಿಯ ಲಗ್ನಕ್ಕೆ ಎಂದೆಂದಿಗೂ ಪ್ರೋತ್ಸಾಹ ಸಹಾಯಗಳನ್ನು ಮಾಡಿದ್ದು ಎಲ್ಲೆಲ್ಲಿಯೂ ಕಂಡುಬಂದಿಲ್ಲ ಆದರೆ ಅದರ ಅನುಯಾಯಿಗಳು ಅಷ್ಟೇ ಅಲ್ಲದೆ. ಅದರ ಉದ್ಧಾರವನ್ನು ಮಾಡಲಿಕ್ಕೆಂದು ಹೇಳುವ ಟೊಂಕ ಕಟ್ಟಿ ನಿಂತಿದ್ದ ಸ್ವಾಮಿಗಳು ಮತ್ತು ಅಯ್ಯನವರು ಇಂಥ ಲಗ್ನಕ್ಕೆ ಉತ್ತೇಜನವನ್ನೀಯುತ್ತಿದ್ದಾರೆಂದು ಕಂಡುಬಂದರೆ ಆ ಸಮಾಜವು ದುರ್ಗತಿಗೀಡಾಗುವದೆಂದು ಹೇಳುವದರಲ್ಲಿ ಸಂದೇಹವಿಲ್ಲ. ಇಂಥ ಲಗ್ನದಿಂದ ವ್ಯಕ್ತಿಗೆ ಹಿತವಿಲ್ಲ ಸಮಾಜಕ್ಕೆ ಲಾಭವಿಲ್ಲ. ವರನೆನ್ನಿಸುವ ಆ ಮುದುಕನಂಥವರಿಗೆ ಚಿಕ್ಕ ಮಗಳನ್ನು ಕೊಟ್ಟು ಲಗ್ನ ಮಾಡುವದೆಂದರೆ ಅದು ಕೇವಲ ಆತ್ಮಹತ್ಯ ಮಾಡಿದಂತೆಯೇ ಸರಿ. ಇಂಥ ಮದುವೆಯನ್ನು ಮಾಡಿಕೊಂಡವನಿಗೆ ವಿವಾಹ, ಆದರೆ ಹೆಂಡತಿಗೆ ವಿನಾಶವೇ ಸರಿ. ಸಮಾಜದಲ್ಲಿ ಇಂಥ ಸಂಗತಿಗಳು ಸಂಭವಿಸುತ್ತಹೋದರೆ ಸಮಾಜವೆತ್ತ ಮುಂದರಿಯಬೇಕು?

## ಶ್ರೀ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರರ ರಾಷ್ಟ್ರೀಯ ಭಾಷಣ.

### ಎತ್ತಿನ ಬಂಡಿಯ ಮೇಲೆ ಮೆರವಣಿಗೆ!

ಹುಬ್ಬಳ್ಳಿಯ ಶ್ರೀಮನ್ನಿರಂಜನ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರ ಸ್ವಾಮಿಗಳು ಸಂಕೇಶ್ವರದಲ್ಲಿ ರಾಮದಾಸ ಬ್ರಹ್ಮಚಾರಿಗಳಿಂದ ಸಾಗಿರುವ ಶಿವಸಮರ್ಥ ವ್ಯಾಯಾಮ ಪ್ರಸಾರಕ ಮಂಡಳಿಯವರ ಆಮಂತ್ರಣದ ಪ್ರಕಾರ ತಾ. ೭-೬-೩೮ ನೇ ಮಂಗಳವಾರ ದಯಮಾಡಿಸಿದರು. ಶಿವಸಮರ್ಥ ವ್ಯಾಯಾಮ ಪ್ರಸಾರಕ ಮಂಡಳಿಯವರು ಸಾಯಂಕಾಲ ೪ ಗಂಟೆಗೆ ಜಗದ್ಗುರುಗಳ ಮೆರವಣಿಗೆಯನ್ನು ಹೊರಡಿಸಿದರು.

ಎತ್ತಿನ ಬಂಡಿಯ ಮೇಲೆ ಮೆರವಣಿಗೆ ಇದ್ದುದರಿಂದ ಹೊಸ ವಾತಾವರಣವೇ ಉಂಟಾದಂತಾಗಿತ್ತು. ೩೦ ಎತ್ತುಗಳನ್ನು ಅಲಂಕರಿಸಿ ರೈತರು ಉತ್ಸಾಹದಿಂದ ಬಂಡಿಗೆ ಹೂಡಿದ್ದರು. ಸ್ವಯಂಸೇವಕರು, ಭಜನಾಮೇಳದವರು, ವಾದ್ಯದವರು, ಡೊಳ್ಳಿನವರು, ಕುದುರೆ ಸವಾರರು, ಆನೆಯ ಗಂಭೀರ ನಮಸ್ಕಾರ ಇತ್ಯಾದಿ ಸಂಗತಿಗಳಿಂದ ಮೆರವಣಿಗೆಗೆ ಒಳ್ಳೇ ಕಳೆಯೇರಿತ್ತು. ಮೆರವಣಿಗೆಗೆ ೩ ಸಾವಿರ ಜನರು ಕೂಡಿದ್ದರು. ಶ್ರೀ. ಜಗದ್ಗುರುಗಳ ಮೆರವಣಿಗೆ ಈ ರೀತಿಯಾದುದು ಹಿಂದು ಧರ್ಮದ ಚರಿತ್ರೆಯಲ್ಲಿಯೇ ಹೊಸದು.

ಈ ಹೊಸ ಪದ್ಧತಿಯ ಉತ್ಸವವನ್ನು ಕಂಡು ರಾಷ್ಟ್ರೀಯ ಜನರು ಜಗದ್ಗುರುಗಳ ಸ್ವತಂತ್ರ, ಸುಧಾರಕ ವಿಚಾರ ಶಕ್ತಿಯನ್ನು ಹೊಗಳುತ್ತಿದ್ದರು. ಈ ಉತ್ಸವದಿಂದ ಭಾವಿಕ ಜನರ ಮತ್ತು ರೈತರ ಮೇಲೆ ಒಳ್ಳೇ ಪರಿಣಾಮವಾಯಿತು. ಮೆರವಣಿಗೆಯು ೫|| ಗಂಟೆಗೆ ವ್ಯಾಯಾಮ ಶಾಲೆಯ ವಾರ್ಷಿಕೋತ್ಸವದ ಸ್ಥಾನಕ್ಕೆ ಬಂದಿತು.

#### ವಾರ್ಷಿಕೋತ್ಸವ.

ಶಿವಸಮರ್ಥ ವ್ಯಾಯಾಮ ಪ್ರಸಾರಕ ಮಂಡಳಿಯವರು ನಾಗರೀಕರ ಸಹಾಯ ಸಹಾನುಭೂತಿಗಳಿಂದ ವಿಶಾಲವಾದ ಸ್ಥಾನದಲ್ಲಿ ಸಭಾ ಮಂಟಪವನ್ನೇರ್ಪಡಿಸಿದ್ದರು. ಮಹಾ ಸ್ವಾಮಿಗಳು ಉಚ್ಚಾಸನವನ್ನು ಅಲಂಕರಿಸಿದ ಮೇಲೆ ಶಂಕರಗೌಡ ಪಾಟೀಲ ಇವರ ಮಗನು ಫೋಟೋ ತೆಗೆದುಕೊಂಡನು. ಆಮೇಲೆ ರಾಮದಾಸ ಬ್ರಹ್ಮಚಾರಿಗಳ ಶಿಷ್ಯರ ಕಸರತ್ತುಗಳು ಪ್ರಾರಂಭವಾದವು. ಲಷ್ಕರಿ, ಕವಾಯಿತ, ಮಲಗಂಬ ಕಬ್ಬಿಣ ಕಳಿ ಮಣಿಸುವದು ಚಕ್ಕಡಿ ಮೇಲೆ ಹಾಯಿಸಿಕೊಳ್ಳುವುದು, ಮುಂತಾದ ಕಸರತ್ತುಗಳನ್ನು ನೋಡಿ ಜನರೆಲ್ಲರೂ ಸಂತೋಷಪಟ್ಟರು.

ಬಾಲಿಕೆಯರು ಲೇಜಿಮ್ ಆಡಿದರು. ಕೇವಲ ಒಂದು ವರ್ಷದಲ್ಲಿ ಭಿಕ್ಷೆಯಿಂದ ರಾಮದಾಸ ಬ್ರಹ್ಮಚಾರಿಗಳು ೪೦-೪೫ ತರುಣರನ್ನೂ ೨೦-೩೦ ತರುಣಿಯರನ್ನೂ ಅತ್ಯಲ್ಪ ವ್ಯಾಯಾಮದ ಸಾಮಗ್ರಿಗಳಿಂದ ತಯಾರು ಮಾಡಿದ್ದು ನೋಡಿದರೆ ಯೋಗ್ಯ ಸೌಲಭ್ಯಗಳು ದೊರೆತರೆ ಚಿಕ್ಕೋಡಿ, ನಿಪ್ಪಾಣಿಗಳಲ್ಲಿಯಂತೆಯೇ ಅವರು ಅಲ್ಲಿಯೂ ಉತ್ಕೃಷ್ಟ ಪದ್ಧತಿಗಳನ್ನು ಜಾಗ್ರತೆ ಆಚರಣೆಯಲ್ಲಿ ತರುವರೆಂದು ವಿಚಾರವಂತರು ಅನ್ನುತ್ತಿದ್ದರು.

ಅವರ ಮುಂಚಿನ ಸನ್ಯಾಸ ಜೀವನಕ್ಕಿಂತ ಈಗಿನ ರಾಷ್ಟ್ರೀಯ ಜೀವನವೇ ಹೆಚ್ಚು ಕಲ್ಯಾಣಕರವೆಂದು ರಾಷ್ಟ್ರೀಯ ಜನರೂ, ಪ್ರತಿಷ್ಠಿತ ಜನರೂ ಅನ್ನುತ್ತಿದ್ದರು. ವ್ಯಾಯಾಮ ದರ್ಶನವು ೭|| ಗಂಟೆಗೆ ಮುಗಿಯಿತು. ಸಭಾ ಕಾರ್ಯವು ಪ್ರಾರಂಭವಾಯಿತು. ಪದ್ಧತಿ ಪ್ರಕಾರ ಸ್ವಾಗತ ಗೀತೆ ಮುಂತಾದ ಕಾರ್ಯಕ್ರಮಗಳಾದ ಮೇಲೆ ಜಗದ್ಗುರುಗಳ ಅಧ್ಯಕ್ಷತೆಯಲ್ಲಿ ಶ್ರೀ. ಅನ್ನದಾನೀಶ್ವರ ವಿರಕ್ತಮಠ ಇವರು ಪ್ರಾಚೀನ ಕರ್ನಾಟಕದ ವೀರರ ಇತಿಹಾಸ ಕಾಂಗ್ರೆಸ್ಸಿನ ಸದ್ಯದ ಕಾರ್ಯ, ಪರದೇಶಗಳ ಶರೀರ ಶಿಕ್ಷಣ ಪದ್ಧತಿ, ನಾಗರಿಕರ ಕರ್ತವ್ಯ, ಮುಂತಾದ ಸಂಗತಿಗಳನ್ನು ಸಮಯೋಚಿತವಾಗಿ ವಿವರಿಸಿ ಭಾಷಣ ಮಾಡಿದರು.

ಜಗದ್ಗುರುಗಳು ತಮ್ಮ ಸಮಾರೋಪ ಭಾಷಣವನ್ನು ಪ್ರಾರಂಭಿಸಿದ ಕೂಡಲೇ ಜನರು ಸ್ತಬ್ಧವಾಗಿ ಕೇಳತೊಡಗಿದರು. ಅವರ ಸ್ಫೂರ್ತಿದಾಯಕ ಭಾಷಣದಲ್ಲಿ ಮಧ್ಯದಲ್ಲಿ ಚಪ್ಪಾಳೆಗಳಾಗುತ್ತಿದ್ದವು. ಭಾಷಣವು ಪರಿಣಾಮಕಾರಿಯಾಗಿತ್ತು.

#### ಶ್ರೀ. ಜಗದ್ಗುರುಗಳ ಭಾಷಣದ ಸಾರಾಂಶ.

"ಮಹಾ ಜನಗಳೇ,

ತಾವೆಲ್ಲರೂ ನಮಗೆ ತಪಸ್ವಿಗಳೆಂದಿರಿ. ನಾವು ತಮ್ಮೆಲ್ಲರ ಪ್ರೇಮದ ಬಲದಿಂದ ಉಚ್ಚಾಸನದಲ್ಲಿದ್ದೇವೆಯೇ ವಿನಾ ತಪಸ್ಸಿನ ಬಲದಿಂದಲ್ಲ. ನಾವು ತಪಸ್ವಿಗಳೆಂದು ಹೇಳಿಸಿಕೊಳ್ಳುವದಾಗಲೀ, ಶಾಸ್ತ್ರಗಳಿಂದ ಹೊಗಳಿಸಿಕೊಳ್ಳುವದಾಗಲಿ ಯೋಗ್ಯವಲ್ಲ. ವೀರರಿಗೆ ಪ್ರೋತ್ಸಾಹ ಕೊಡುವದೇ ನಮ್ಮ ಕರ್ತವ್ಯವಾಗಿದೆ. ರಾಷ್ಟ್ರೋನ್ನತಿಗೆ ವ್ಯಾಯಾಮ ಶಾಲೆಗಳು ಅತ್ಯಂತ ಅಗತ್ಯವಾಗಿವೆ. ವ್ಯಾಯಾಮವನ್ನು ಎಲ್ಲರೂ ಮಾಡಬೇಕು. ತರುಣರು ಮುಖ್ಯವಾಗಿ ಇಂಗ್ಲಿಷ ಕಲಿಯುವ ತರುಣರುಚೈನಿಯ ಅಂಧಾನುಕರಣವನ್ನು ಬಿಡಬೇಕು.

ವ್ಯಾಯಾಮ ಶಾಲೆಯ ವೀರರೆಲ್ಲರೂ ಪರಸ್ಪರ ದ್ವೇಷಾಸೂಯೆಗಳನ್ನು ಬಿಡಬೇಕು. ಒಕ್ಕಟ್ಟಿನಿಂದ ಬಂಧುಭಾವನೆಯಿಂದ ಕೂಡಿ ತಯಾರಾಗಬೇಕು. ಇಲ್ಲಿಯ ಶ್ರೀಮಂತರು ದ್ರವ್ಯ ಸಹಾಯ ಮಾಡಿ ವ್ಯಾಯಾಮ ಶಾಲೆಗೆ ಪ್ರೋತ್ಸಾಹಿಸಬೇಕು. ರಾಮದಾಸ ಬ್ರಹ್ಮಚಾರಿಗಳಂಥವರು ಈಗ ರಾಷ್ಟ್ರಕ್ಕೆ ಬಹಳ ಬೇಕು. ನಮ್ಮ ದೇಶವು ಈಗ ದುರ್ಬಲ ಸಂತಾನೋತ್ಪತ್ತಿಯನ್ನು ನಿಲ್ಲಿಸಬೇಕು. ತರುಣರು ಬಾಲವಿವಾಹದ ವಿರುದ್ಧ ಚಳವಳಿ ಹೂಡಬೇಕು. ವ್ಯಸನಗಳನ್ನು ದೂರೀಕರಿಸಬೇಕು. ಸ್ತ್ರೀಯರಿಗೂ ಯೋಗ್ಯ ವ್ಯಾಯಾಮ ಕೊಡಬೇಕು. ಪರದೇಶಗಳು ಸ್ವತಂತ್ರವಾಗಿರುವದರಿಂದ ಅಲ್ಲಿ ವೀರರ ತೇಜಸ್ಸು ಪ್ರಕಾಶವಾಗಲವಕಾಶವಿದೆ.

ನಮ್ಮ ಹತಭಾಗ್ಯ ಹಿಂದುಸ್ಥಾನವು ಗುಲಾಮಗಿರಿಯಲ್ಲಿ ಬಳಲುತ್ತಿರುವದರಿಂದ ಆ ಸೌಲಭ್ಯವಿಲ್ಲ. ಆದಾಗ್ಯೂ ಸ್ವಾವಲಂಬನೆಯಿಂದ ಶಕ್ಯವಿದ್ದಷ್ಟು ಕಾರ್ಯ ಸಾಗಿಸಬೇಕು. ಈ ಸಂಸ್ಥೆಯು ಚಿರಕಾಲ ಬಾಳುವಂತಾದರೆ ನಮ್ಮ ಸಂಸ್ಥಾನದಿಂದ ತಕ್ಕ ದ್ರವ್ಯ ಸಹಾಯ ಮಾಡುತ್ತೇವೆ. ಇಲ್ಲಿಯ ವರೆಗೆ ಹೇಳಿದ್ದು ಅಧಿಕಾರವಾಣಿಯಲ್ಲ. ಸ್ನೇಹಿತೋಕ್ತಿಯ ಹಿತವಚನವು" ಎಂದು ಮುಂತಾಗಿ ಸ್ಫೂರ್ತಿದಾಯಕ ಭಾಷಣವಾದನಂತರ ಜಗದ್ಗುರುಗಳ ಹಸ್ತದಿಂದ ಬಕ್ಷೀಸ ಸಮಾರಂಭವಾಗಿ ಆಭಾರಮನ್ನಣೆಯಾದನಂತರ "ವಂದೇ ಮಾತರಂ" ಎಂಬ ಗೀತೆಯೊಡನೆ ಸಭೆಯು ವಿಸರ್ಜನೆಯಾಯಿತು.

ಓರ್ವ ಸಭಿಕ.

---

## ಶ್ರೀ ಕ್ಷಾತ್ರ ಜಗದ್ಗುರುಗಳು

# ಹಿಂದು ಮಹಿಳೆಯರಿಗೆ ಕೊಟ್ಟ ಎಚ್ಚರಿಕೆ.

### ಹಿಂದು ಸ್ತ್ರೀ ಪುರುಷರು ತಮ್ಮ ಪ್ರಾಣ, ಮಾನ, ಧನಗಳ ರಕ್ಷಣೆಗಾಗಿ ಬಲಿಷ್ಠರಾಗಬೇಕು.



ಶ್ರೀ ಕ್ಷಾತ್ರ ಜಗದ್ಗುರುಗಳವರು.

ಸಾಂಗಲಿಯಲ್ಲಿ "ಹಿಂದು ಭಗಿನಿ ಮಂಡಲ" ದವರು ಏರ್ಪಡಿಸಿದ್ದ ಶಾರೀರಿಕ ಶಿಕ್ಷಣ ವರ್ಗದಲ್ಲಿ ಉತ್ತೀರ್ಣರಾದ ವಿದ್ಯಾರ್ಥಿನಿಯರಿಗೆ ಮೊನ್ನೆ ಪದವಿಗಳನ್ನು ಕೊಡುವಾಗ ಶ್ರೀ ಕ್ಷಾತ್ರ ಜಗದ್ಗುರುಗಳು ಅತ್ಯಂತ ಮಹತ್ವದ ಭಾಷಣವನ್ನು ಮಾಡಿದರು. ಆಗ ಇವರು ಅಪ್ಪಣೆ ಕೊಡಿಸಿದ್ದೇನೆಂದರೆ,

"ಪರಮಾತ್ಮನ ತರುವಾಯ ಈ ಜಗತ್ತಿನಲ್ಲಿ ನಾವು ಹೆಚ್ಚಿಗೆ ಋಣಿಗಳಾಗಿರುವುದು ಮಹಿಳಾ ಮಂಡಲಿಗೆ. ಏಕೆಂದರೆ, ಅವರೇ ನಮ್ಮನ್ನು ಹೆತ್ತು ನಾನಾ ಕಷ್ಟಗಳಿಂದ ಸಾಕಿ ಒಳ್ಳೇ ಸ್ಥಿತಿಗೆ ತಂದವರು. ಮಾನವ ಜಾತಿಗೆ ಬಹು ಉಪಕಾರಿಯಾಗಿರತಕ್ಕ ಈ ಮಹಿಳಾ ವರ್ಗವನ್ನು ನಾವು ಉಪೇಕ್ಷಿಸಿ ರಾಜಕೀಯ ಸಾಮಾಜಿಕ, ಧಾರ್ಮಿಕ ಮೊದಲಾದ ಯಾವ ವಿಷಯಗಳಲ್ಲಿಯೂ ನಿಜವಾದ ಉನ್ನತಿಯನ್ನು ಹೊಂದಲಾರೆವು.

#### ಮಹಿಳೆಯರೇ ಎಚ್ಚರಾಗಿರಿ.

ಪರಧರ್ಮದ ಸ್ತ್ರೀಯರನ್ನು ಭ್ರಷ್ಟಗೊಳಿಸುವದರಿಂದ ತಮಗೆ ಸ್ವರ್ಗ ಪ್ರಾಪ್ತಿಯಾಗುತ್ತದೆಂಬ ದುಷ್ಟ ಮತ್ತು ಘಾತಕವಾದ ಕಲ್ಪನೆಯು ಯಾರ ತಲೆಯಲ್ಲಿ ತುಂಬಿದೆಯೋ ಅಂಥ ಜನರು ಎಲ್ಲಿಯ ವರೆಗೆ ನಮ್ಮ ದೇಶದಲ್ಲಿ ಮತ್ತು ನಮ್ಮ ನೆರೆಯಲ್ಲಿರುತ್ತಾರೆಯೋ ಅಲ್ಲಿಯ ವರೆಗೆ ಹಿಂದು ಸ್ತ್ರೀ ಪುರುಷರು ತಮ್ಮ ಪ್ರಾಣ, ಮಾನ, ಧನಗಳ ರಕ್ಷಣೆಗಾಗಿ ವಿರೋಧಿಗಳಿಗೆ ಭಯಪ್ರದವಾಗಿರುವಂತೆ ಪ್ರತಿಯೊಂದು ಹಳ್ಳಿಯಲ್ಲಿಯೂ ಇಂಥ ಶಾರೀರಿಕ ಶಿಕ್ಷಣಾಲಯಗಳು ಏರ್ಪಡಬೇಕು.

ಭಯಗೊಳಿಸುವ ವಿಷಯದಲ್ಲಿ ನಾವು ಆಕಾಶದ ಮಿಂಚಿನ ಅನುಕರಣಮಾಡಬೇಕು. ಅದು ಪ್ರತ್ಯಕ್ಷವಾಗಿ ಭೂಮಿಯ ಮೇಲೆ ಬಂದು ಅನರ್ಥವನ್ನು ಉಂಟುಮಾಡುವುದು ಅಪರೂಪವಷ್ಟೆ. ಆದರೆ ಅದು ತನ್ನ ಕಡಕಡಾಟ ಶಬ್ದದಿಂದ ಕುಚೇಷ್ಟೆ ಮಾಡುವ ಮಂಗಗಳನ್ನೇ ಅಲ್ಲ, ಹುಲಿ ಸಿಂಹಗಳೆಂಬ ಕ್ರೂರ ಪಶುಗಳನ್ನು ಕೂಡಾ ಅಂಜಿಸಿ ಅವು ಗುಹೆಯನ್ನು ಸೇರುವಂತೆ ಮಾಡುತ್ತದೆ.

ಆದಕಾರಣ ಶರೀರ ಬಲವು ಸ್ತ್ರೀ ಪುರುಷರಿಗೆ ಅತ್ಯಗತ್ಯವಾಗಿದೆ. ಇದು ಕೇವಲ ವ್ಯಾವಹಾರಿಕ ದೃಷ್ಟಿಯಿಂದಲೇ ಅಲ್ಲ, ಧಾರ್ಮಿಕ ದೃಷ್ಟಿಯಿಂದಲೂ ಅಗತ್ಯವಾದುದು. ನಮ್ಮಲ್ಲಿ ಬೀಜ ರೂಪವಾಗಿರತಕ್ಕ ಈಶ್ವರೀ ಗುಣವನ್ನು ವಿಕಾಸಗೊಳಿಸುವುದೇ ಧರ್ಮದ ಮುಖ್ಯ ಧ್ಯೇಯವು. ಈ ಧ್ಯೇಯವನ್ನು ಸಾಧಿಸುವಾಗ ನಿರೋಗಿ ಮತ್ತು ಸದೃಢವಾದ ಶರೀರವು ಆಗತ್ಯವಾಗಿದೆ.

ಸದೃಢ ಮತ್ತು ಸಶಕ್ತವಾದ ದೇಹವು ಆತ್ಮನ ಸುಂದರ ಮಂದಿರವು. ರೋಗ ಮತ್ತು ನಿರ್ಬಲಗಳಿಂದ ಕೂಡಿದ ಶರೀರವು ಆತ್ಮನ ಕಾರಾಗೃಹವು. ಆದಕಾರಣ ನೀವು ಅಶಕ್ತರಾಗಿದ್ದು ಆತ್ಮ ವಿಕಾಸವನ್ನು ಎಂದೆಂದೂ ಹೊಂದಲಾರಿರಿ. ರಾಜಕೀಯ ಉನ್ನತಿಗಂತೂ ಸದೃಢ ಶರೀರವು ಅಗತ್ಯವಾಗಿದೆ. ನಾವು ಸಶಕ್ತರೂ ನಿರೋಗಿಗಳೂ ಆಗಿದ್ದ ವಿನಾ ನಮ್ಮಲ್ಲಿ ಉತ್ಸಾಹ ಸಾಹಸ ಪರಾಕ್ರಮಗಳು ಉಂಟಾಗುವುದಿಲ್ಲ."

---

## ಸಹಕಾರ ವಾರ್ತಾ.

ಇದೇ ತಿಂಗಳ ತಾ. ತಾ. ೨೩-೬-೩೮ ನೇ ದಿವಸ ಬಾಗಲಕೋಟ ತಾಲೂಕು ಪೈಕಿ ಹಳ್ಳೂರಲ್ಲಿ ಮ್ಯಾ. ಕ. ಮೆಂಬರರ ಟ್ರೇನಿಂಗ ಕ್ಲಾಸನ್ನು ತೆರೆಯುವದು ಗೊತ್ತುಮಾಡಿದೆ. ಸದರ ಕ್ಲಾಸಿಗೆ ಮೇ. ಅ. ರಜಿಸ್ಟ್ರಾರ ಸಾಹೇಬರವರು ಬರತಕ್ಕವರಿದ್ದಾರೆ.

ಆದ್ದರಿಂದ ಸದರೀ ಊರಿನ ಸುತ್ತು ಮುತ್ತಲಿನ ಸಂಘಗಳ ಮ್ಯಾ. ಕ. ಮೆಂಬರರೂ ಸೆಕ್ರೆಟರಿಗಳೂ ತಪ್ಪದೇ ಈ ಕ್ಲಾಸಿಗೆ ಹಾಜರಾಗಿ ಇದರ ಲಾಭವನ್ನು ಪಡೆಯಬೇಕಾಗಿ ವಿನಂತಿ.

ಕೊ. ಇನ್‌ಸ್ಟಿಟ್ಯೂಟ್.
ಬಾಗಲಕೋಟೆ.

---

## ಶ್ರೀ ಜಗದ್ಗುರುಗಳ ಶುಭಾಗಮನ.

ಚಿತ್ರದುರ್ಗದ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರಘರಾಜೇಂದ್ರ ಮಹಾಸ್ವಾಮಿಗಳವರು ಕಳೆದ ತಾ. ೧೦-೬-೩೮ ನೆಯ ದಿನ ಗದಗಿಗೆ ಆಗಮಿಸಿದರು. ಅಂದಿನಿಂದ ಈ ವರೆಗೂ ಒಂದುವಾರ ಶ್ರೀಗಳವರು ಜನಜೀವನಕ್ಕೆ ಅತ್ಯಗತ್ಯವಾದ ಧಾರ್ಮಿಕ ವಿಷಯಗಳನ್ನು ಕುರಿತು ಅನೇಕ ಮಹತ್ವದ ವ್ಯಾಖ್ಯಾನಗಳನ್ನು ಮಾಡಿ ಜನರಲ್ಲಿ ಧಾರ್ಮಿಕ ಜಾಗೃತಿಯನ್ನುಂಟುಮಾಡಿದ್ದಾರೆ.

ಓರ್ವ ಪ್ರತ್ಯಕ್ಷ ದರ್ಶಿ.




**ಸ್ಥಳೀಯ** ಸಂಸ್ಥೆಗಳ ಪತ್ರಿಕೆ— ಮುನಸಿಪಾಲ್ಟಿ ಲೋಕಲ್ ಬೋರ್ಡ ಮೊದಲಾದ ಸ್ಥಾನಿಕ ಸ್ವರಾಜ್ಯದ ಸಂಗತಿಗಳನ್ನು ತಿಳಿದುಕೊಳ್ಳಬೇಕೆಂಬುವವರು ಈ ಪಕ್ಷ ಪತ್ರಿಕೆಯನ್ನು ತರಿಸಿಕೊಳ್ಳಿರಿ.

ವಾರ್ಷಿಕ ಚಂದಾ ೨ ರೂ.

ವಿಳಾಸ— ಟ. ಎನ್. ಚೆನ್ನಪ್ಪ
ಗಾಂಧಿ ನಗರ ಬೆಂಗಳೂರು ಸಿಟಿ.

**ಅರವಿಂದ** ಗ್ರಂಥಮಾಲೆಯಲ್ಲಿ ವರ್ಷಕ್ಕೆ ಆರು ಒಳ್ಳೊಳ್ಳೇ ಗ್ರಂಥ ಕುಸುಮಗಳು ಅರಳುತ್ತವೆ.

ಸಂಪಾದಕರು— ಮಧುರ ಚೆನ್ನರು.

ವಾರ್ಷಿಕ ಚಂದಾ ೩-೮-೦ (ಅಂಚೆ ವೆಚ್ಚ ಸೇರಿ)

ವಿಳಾಸ— ಅರವಿಂದ ಗ್ರಂಥಮಾಲಾ ಕಾರ್ಯಾಲಯ.
ಪೋ. ಹಲಸಂಗಿ. ಜಿ. ವಿಜಾಪುರ

# ಎಲ್ಲರೂ ಓದಲೇಬೇಕಾದ ಪುಸ್ತಕಗಳು.

## ಇಕೋ, ಇಲ್ಲಿವೆ.

### ಹರ್ಡೇಕರ ಮಂಜಪ್ಪನವರು ಬರೆದ ಪುಸ್ತಕಗಳು.

| ಪುಸ್ತಕ | ಬೆಲೆ | ಪುಸ್ತಕ | ಬೆಲೆ |
|---|---|---|---|
| ಬುದ್ಧಿಯ ಮಾತು | ೦-೩-೦ | ಪುಲಿಕೇಶಿಯ ಚರಿತ್ರೆ | ೦-೧-೬ |
| ವೀರಶೈವ ಮತಬೋಧೆ | ೦-೨-೦ | ಕಚದೇವನ ಕಥೆ | ೦-೧-೬ |
| ವೀರಶೈವ ಮತತತ್ವ | ೦-೪-೦ | ಸ್ವಾಮಿ ವಿವೇಕಾನಂದರ ಚರಿತ್ರೆ | ೦-೧-೬ |
| ಕಾಯಕವೆ ಕೈಲಾಸ | ೦-೩-೦ | ಸುಕಲಾದೇವಿಯ ಕಥೆ | ೦-೧-೬ |
| ಶ್ರೀ. ಲಿಂಗರಾಜರ ಚರಿತ್ರೆ | ೦-೬-೦ | ಸ್ತ್ರೀನೀತಿ ಸಂಗ್ರಹ | ೦-೧-೬ |
| ಪ್ರಭುದೇವರ ಕಥೆ | ೦-೧-೬ | ದಾಂಪತ್ಯ ಧರ್ಮ | ೦-೪-೦ |
| ಏಕಲವ್ಯನ ಕಥೆ | ೦-೧-೬ | ದೇವಯಾನಿಯ ಕಥೆ | ೦-೩-೦ |
| ಲಜಪತರಾಯರ ಚರಿತ್ರೆ | ೦-೧-೬ | ವಿಜಯವಾಣಿ | ೦-೧-೬ |
| ಆದಿಜನ ಸುಧಾರಣೆ | ೦-೨-೦ | ಅಕ್ಕನ ಉಪದೇಶ | ೦-೨-೦ |
| ಬಸವ ಬೋಧಾಮೃತ | ೦-೬-೦ | ಅಣ್ಣನ ಅರ್ಪಣಯೋಗ | ೦-೧-೦ |
| ಭಜನಾವಳಿ | ೦-೧-೬ | ಶುದ್ಧಿ ಮತ್ತು ಸಂಘಟನೆ | ೦-೧-೦ |
| ಜಾತಿಯ ವಾದ ವಿಮರ್ಶೆ | ೦-೧-೦ | ಸ್ಮಾರಕ ಚಂದ್ರಿಕೆ | ೦-೪-೦ |
| ವಚನಕಾರರ ಸಮಾಜರಚನೆ | ೦-೨-೦ | ಪ್ರಮಥಾಚಾರ ದೀಪಿಕೆ | ೧-೦-೦ |
| ವೀರಶೈವ ಏಕೀಕರಣ | ೦-೦-೩ | ೬೩ ಪುರಾತನರ ಚರಿತ್ರೆ | ೦-೩-೦ |
| | | (ಖಾದೀ ಕೃತಿ) | ೨-೦-೦ |

ವಿಳಾಸಃ- ಜ್ಞಾನೋದಯ ಗ್ರಂಥ ಭಾಂಡಾರ ಆಲಮಟ್ಟಿ. ಪೋ. ಆಲಮಟ್ಟಿ ಜಿ. ವಿಜಾಪುರ,

ಅಖಿಲ ಭಾರತ ವಸ್ತು ಪ್ರದರ್ಶನದಲ್ಲಿ
ಸುವರ್ಣ ಪದಕಗಳನ್ನು ಮತ್ತು ಸರ್ಟೀಫಿಕೇಟುಗಳನ್ನು ಪಡೆದು ಹೆಸರಾದ
ಇಂಡಿಯಾ ಸರಕಾರದಲ್ಲಿ ರಜಿಸ್ಟರ್ ಆದ

# ಸಿದ್ಧೇಶ್ವರ ಟ್ರೇಝುರಿ ಕಂಪನಿ, ಹುಬ್ಬಳ್ಳಿ.










ನಮ್ಮ "ಸಿದ್ಧೇಶ್ವರ ಟ್ರೇಝುರಿ" ಗಳನ್ನು ಈ ವರೆಗೆ ಕೈಗಾರಿಕೆಯ ಕೆಲಸಗಳಲ್ಲಿ ಹೆಸರಾದ ಯುರೋಪ, ಅಮೇರಿಕಾ ವಗೈರೆ ಪರರಾಷ್ಟ್ರಗಳಲ್ಲಿ ತಯಾರಾಗುವ ಟ್ರೇಝುರಿಗಳ ಪದ್ಧತಿಯ ಮೇರೆಗೆ ಹೊಸ ಉಕ್ಕಿನ ಅಖಂಡ ಒಂದೇ ತಗಡಿನಲ್ಲಿ ೧೨ ಮೂಲೆಗಳನ್ನು ೫೦ ಟನ್ ಪ್ರೇಷರ ಕೊಡುವ ಮಶಿನ್ನಿನಿಂದ ಬಗ್ಗಿಸಿ, ರಿವ್ಹಿಟ್ಸ ಮೊದಲಾದವುಗಳಿಂದ ಜಾಯಿಂಟ ಮಾಡದೆ ಇಲೆಕ್ಟ್ರಿಸಿಟಿಯಿಂದ ಬೆಸೆದು ತಯಾರಿಸುತ್ತೇವೆ.

ಈ ಹೊಸ ಸುಧಾರಣೆಯಿಂದ ಮಾಡಿದ ತಿಜೋರಿಗಳಿಗೂ ಮತ್ತು ಯಾವದೇ ನಮ್ಮ ಸಾಮಾನಕ್ಕೂ ಯಾವ ತರದ ಭಯುವಿಲ್ಲ. ಮತ್ತು ಅವು ಒಳ್ಳೇ ಮಜಬೂತವಾಗಿಯೂ ಸುಂದರವಾಗಿಯೂ ಆಗುತ್ತವೆ. ನಾವು ನಮ್ಮ ತಿಜೋರಿಗಳಿಗೂ ಮತ್ತು ನಮ್ಮಲ್ಲಿ ತಯಾರಾಗುವ ಉಕ್ಕಿನ ಕಪಾಟು, ಕ್ಯಾಶಬಾಕ್ಸ, ಸ್ಟ್ರಾಂಗರೂಮ ಡೋರ್ರ್ಸು ಗಳಿಗೂ ನಮ್ಮ ಕಾರಖಾನೆಯಲ್ಲಿಯೇ ತಯಾರಾಗುವ ಉತ್ತಮವಾದ ಮತ್ತು ಮಜಬೂತವಾದ ಕೀಲಿಗಳನ್ನು ಹಚ್ಚುತ್ತೇವೆ. ಮತ್ತು ಇದಲ್ಲದೆ ನಮ್ಮಲ್ಲಿ ಹೊಸ ಪದ್ಧತಿಯ ಮೇರೆಗೆ ತಯಾರಾಗುವ ಕಾಂಬಿನೇಶನ್ ಕೀ ಲೆಸ್ಸಾ ಲಾಕ್ಸು (ನಂಬರ ಕೀಲಿ) ಗಳನ್ನು ತಿಜೋರಿಗಳಿಗೆ ಹಚ್ಚಿಸಿದರೆ ಆ ತಿಜೋರಿಗಳನ್ನು ಯಾರೂ ತೆಗೆಯಲು ಸಾಧ್ಯವಿಲ್ಲ. ಯಾರಾದರೂ ತೆಗೆದರೆ ಅವರಿಗೆ

**೧೦೦೦ ರೂ. ಬಹುಮಾನ ಕೊಡುವೆವು.**

ನಮ್ಮ ಫಾಯರ ಪ್ರೂಫ್ ತಿಜೋರಿಗಳು ತುಂಬಾ ಖಾತ್ರಿಯಾದವುಗಳಿರುತ್ತವೆ.

**ಈ ಬಗ್ಗೆ ಅನೇಕ ವಸ್ತು ಪ್ರದರ್ಶನಗಳಲ್ಲಿ ಒಳಗೆ ನೋಟು ವಗೈರೆ ಸಾಮಾನು ಗಳನ್ನು ಇಟ್ಟು ಕೆಂಪಗೆ ಕಾಸಿದನಂತರ ಒಳಗಿಟ್ಟ ಸಾಮಾನುಗಳು ಸುಡದೆ ಇದ್ದದ್ದನ್ನು ಖಾತ್ರಿ ಮಾಡಿಕೊಟ್ಟಿದ್ದೇವೆ.**

ಧಾರಣೆಗಳ ಬಗ್ಗೆ ನಮ್ಮ ಸಚಿತ್ರ ಕ್ಯಾಟಲಾಗುಗಳಿಗೆ ಬರೆಯಿರಿ.
ಅ ಥ ವಾ
ಸಮಕ್ಷಮ ಬಂದಲ್ಲಿ ತಿಳಿಯುವದು.

ತಮ್ಮ ಕಲಾಭಿಮಾನಿ,
ಸಿದ್ಧೇಶ್ವರ ಮತ್ತು ಕಂಪನಿ
ಟ್ರೇಝುರಿ ಮೇಕರ್ಸ
ಹುಬ್ಬಳ್ಳಿ.

ಫ್ಯಾಕ್ಟರಿ ಮತ್ತು ಹೆಡ್ ಆಫೀಸ್-
**ಹುಬ್ಬಳ್ಳಿ.**

ಬ್ರ್ಯಾಂಚ ಆಫೀಸುಗಳು-
ಹೈದರಾಬಾದ (ಡೆಕ್ಕನ) ಮತ್ತು ಕೊಲ್ಹಾಪುರ (ಲಕ್ಷ್ಮೀಪುರಿ)

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರಿ, ದಾಕ್ಷಿಣ್ಯಪರನಾನಲ್ಲ, ಲೋಕವಿರೋಧಿ, ಶರಣನಾರಾರಿಗೂ ಅಂಜುವವನಲ್ಲ!
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ‖ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೨೭ನೆಯ ಜೂನ ೧೯೩೮. | ಸಂಚಿಕೆ ೪೨ |
|---|---|---|

ಜನಸೇವೆಯೇ ದೇವರಸೇವೆ

## ಹೊಣೆಗಾರಿಕೆಯ ರಾಜ್ಯಸ್ಥಾಪನೆ.

### ಜಮಖಂಡಿ ಸಂಸ್ಥಾನದಲ್ಲಿ ಹೊಣೆಗಾರಿಕೆಯ ರಾಜ್ಯಪದ್ಧತಿಯನ್ನು ಏರ್ಪಡಿಸುವುದೇ ತಮ್ಮ ಧ್ಯೇಯವೆಂದು

ತಾ. ೨೪-೬-೧೯೩೮ ನೆಯ ದಿವಸ

ಜಮಖಂಡಿ ಸಂಸ್ಥಾನಾಧಿಪತಿಗಳು ಸಾರಿದರು.

### ಕಾನಪುರದಲ್ಲಿ ಕಾಂಗ್ರೆಸ್ಸಿನವರ ಕೈಸೆರೆ.

ಕಾನಪುರದಲ್ಲಿ ನಡೆದ ಕೂಲಿಕಾರರ ಕಟ್ಟಿನ ನಿಮಿತ್ತವಾಗಿ
ನೂರಾರು ಕಾಂಗ್ರೆಸ್ ಕೆಲಸಗಾರರನ್ನು
ತಾ. ೨೫-೬-೩೮ ನೆಯ ದಿನ ಸೆರೆಹಿಡಿದರು.

### ಪಂಡಿತಜಿಯವರ ಪ್ರವಾಸ.

ಪಂಡಿತ ಜವಾಹರಲಾಲರು ತಾ. ೯೩ ನೆಯ ದಿನ ಲಂಡನ್ನಿನಲ್ಲಿ
ಸಂಭ್ರಮದಿಂದ ಸ್ವಾಗತಿಸಲ್ಪಟ್ಟರು.
ಬರುವ ತಿಂಗಳು ಇಂಗ್ಲೆಂಡಿನಿಂದ ಹೊರಟು
ರಶಿಯಾ, ತುರ್ಕಿ, ಚೀನ, ಜಪಾನ ದೇಶಗಳಿಗೆ ಹೋಗಿ
ಅಕ್ಟೋಬರ ತಿಂಗಳಲ್ಲಿ ಮಾತೃ ಭೂಮಿಗೆ ಬರುವರು.

ದೇಹವೇ ದೇವಾಲಯ



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ-ಸೋಮವಾರ ತಾರೀಖು ೨೭ ನೆಯ ಜೂನ ೧೯೩೮. | ಸಂಚಿಕೆ ೪೨

## ಮಹತ್ವದ ಸುದ್ದಿಗಳು.

— ಮಹಾತ್ಮಾ ಗಾಂಧಿಯವರನ್ನು ರಾಷ್ಟ್ರಾಧಿಪತಿ ಸುಭಾಷಚಂದ್ರ ಬೋಸರು ಮೌಲಾನಾ ಆಜಾದರು, ಬಾಬು ರಾಜೇಂದ್ರರು, ಸರದಾರ ಪಟೇಲರು ಕಂಡು ಕಾಂಗ್ರೆಸ್ ಮತ್ತು ಮುಸ್ಲಿಂಲೀಗುಗಳ ಒಪ್ಪಂದದ ವಿಚಾರವಾಗಿ ಮುಸ್ಲಿಂಲೀಗಿಗೆ ತಿಳಿಸುವ ಸಂಗತಿಗಳನ್ನು ಕುರಿತು ಕಳೆದ ೨೩ ನೆಯ ತಾರೀಖಿನ ದಿನ ವಿಚಾರ ವಿನಿಮಯ ಮಾಡಿದರು.

— ಶ್ರೀ. ಭುಲಾಭಾಯಿ ದೇಸಾಯಿಯವರು ಇಂಗ್ಲಂಡಿನಿಂದ ಬಂದನಂತರ ಗಾಂಧೀಜಿಯವರನ್ನು ಕಂಡು ಫೆಡರೇಶನ್ನಿನ ಸಂಬಂಧವಾಗಿ ಬ್ರಿಟಿಶರ ಧೋರಣ ಹೇಗಿದೆಯೆಂಬುದನ್ನು ತಿಳಿಸಿದರು.

— ರಾಷ್ಟ್ರಪತಿಗಳಾದ ಶ್ರೀ. ಸುಭಾಷಚಂದ್ರ ಬೋಸರಿಗೆ ಮುಸ್ಲಿಂಲೀಗಿನವರು ಕಲ್ಲುಗಳಿಂದ ಹೊಡೆದು ನಡೆಸಿದ ಅತ್ಯಾಚಾರವನ್ನು ಮುಂಬೈಯಿಯ ರಾಷ್ಟ್ರೀಯ ಮುಸಲ್ಮಾನರು ನಿಷೇಧಿಸಿದರು.

— ಬಳ್ಳಾರಿ ಜಿಲ್ಲಾ ಲೋಕಲ್ ಬೋರ್ಡಿನ ಅಧ್ಯಕ್ಷಸ್ಥಾನಕ್ಕೆ ಡಾ. ನಾಗನಗೌಡರು ಆರಿಸಿಬಂದರು.

— ಜಾತಿಯುಜಗಳವನ್ನು ನಿಲ್ಲಿಸಲು ಪಂಜಾಬ ಸರಕಾರದವರು ಒಂದು ಪರಿಣಾಮಕಾರಿ ಶಾಸನ ಮಾಡಬೇಕೆಂದು ಯೋಚಿಸಿದ್ದಾರೆ.

—ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಗಣಿತದ ಪ್ರೊಫೆಸರರಾಗಿದ್ದ ಪತ್ರಾವಳಿ ಎಂಬುವವರ ಬದಲಿ ಶ್ರೀ. ಫಡಕೆ ಎಂಬುವವರನ್ನು ತಂದದ್ದರಿಂದ ಈ ಕಾಲೇಜಿನ ವಿದ್ಯಾರ್ಥಿಗಳಲ್ಲಿ ಪ್ರಚಂಡ ಅಸಂತೋಷವುಂಟಾಗಿದೆ.

—ಚೀನ ಸೈನ್ಯದ ೮೮ ನೆಯ ಭಾಗದ ಅಧಿಪತಿಗಳು ಆಜ್ಞೆಯನ್ನು ಉಲ್ಲಂಘಿಸಿದ್ದರಿಂದ ಮರಣದಂಡನೆಯ ಶಿಕ್ಷೆಗೊಳಗಾದರು.

— ಪಂಡಿತ ಜವಾಹರಲಾಲರು ಪ್ಯಾರಿಸ ಪಟ್ಟಣದಲ್ಲಿ ಫ್ರಾನ್ಸ್-ಹಿಂದುಸ್ಥಾನಗಳ ಸ್ನೇಹವನ್ನು ಕುರಿತು ನಭೋವಾಣಿಯ ಮೂಲಕ ಭಾಷಣ ಮಾಡಿದರು.

—ಸ್ವಾತಂತ್ರ್ಯವೀರ ಸಾವರಕರರು ದೇಶ ರಕ್ಷಣೆಗಾಗಿ ಯುದ್ಧ ಶಿಕ್ಷಣವನ್ನು ಕಲಿಯಿರೆಂದು ತರುಣರಿಗೆ ಬೋಧಿಸಿದರು. ದೇವರ ಪ್ರಾರ್ಥನೆಗಾಗಿ ದೇವಾಲಯ ಮತ್ತು ಮಶೀದಿಗಳಿಗೆ ಹೋಗುವುದಕ್ಕಿಂತ ಸೈನ್ಯ ಶಿಕ್ಷಣಾಲಯಕ್ಕೆ ಹೋಗುವುದು ಹೆಚ್ಚು ಪವಿತ್ರವಾದುದೆಂದು ತರುಣರಿಗೆ ಸೂಚಿಸಿದರು.

— ಮುಂಬೈಯಿಯ "ಸೈಂಟ್ ಝೇವಿಯರ್" ಕಾಲೇಜಿನ ವಸ್ತು ಸಂಗ್ರಹಾಲಯಕ್ಕೆ ನಿಜಾಮ ಸಾಹೇಬರು ೫೦೦೦ ರೂಗಳನ್ನು ಕೊಟ್ಟರು

—ಅಹಮದಾಬಾದದಿಂದ ೫ ಮೈಲು ಸುತ್ತಲಿನ ಪ್ರದೇಶದಲ್ಲಿ ಮದ್ಯಪಾನವು ಇನ್ನೊಂದು ತಿಂಗಳಲ್ಲಿಯೇ ಸಂಪೂರ್ಣ ನಿಲ್ಲಿಸಲ್ಪಡುವದು.

—ತಾ. ೨೧ ನೆಯ ದಿವಸ ವಿಜಾಪುರ ಜಿಲ್ಲಾ ಕಾಂಗ್ರೆಸ್ ಕಮಿಟಿಯ ಮೀಟಿಂಗ್ ಸೀತಿಮನಿಯಲ್ಲಿ ಕೂಡಿತ್ತು. ಜಿಲ್ಲಾ ಸಿವಿಕ್ ಬೋರ್ಡ ಚುನಾವಣೆ ಮೊದಲಾದ ಕಾರ್ಯಗಳು ನಡೆದವು.

—ಬಾಗಲಕೋಟೆ ಶ್ರೀ ಉಮ್ಮರ್ಜೀ ರಾಘವೇಂದ್ರರಾಯರು ಮುಂಬೈ ವಿಶ್ವ ವಿದ್ಯಾಲಯದ ಎಂ. ಎಸ್‌ಸಿ. ಪರೀಕ್ಷೆಯಲ್ಲಿ ಮೊದಲನೆಯವರಾಗಿ ತೇರ್ಗಡೆ ಹೊಂದಿದ್ದಾರೆ. ಇವರ ವಯಸ್ಸು ೨೧ ವರುಷ ಮಾತ್ರ.

— ಹುಬ್ಬಳ್ಳಿಯ ಪ್ರಸಿದ್ಧ ಡಾಕ್ಟರರಾದ ಡಾ. ಮುಂಡಗನೂರು ಎಲ್. ಎಂ. ಪಿ. ಎಲ್. ಸಿ. ಪಿ. ಎಸ್ (ಮದ್ರಾಸ) ಇವರು ಕಲಕತ್ತಾದ ಡಿ. ಪಿ. ಎಚ್. ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಾರೆ. ಕರ್ನಾಟಕದಲ್ಲಿ ಮತ್ತು ಲಿಂಗಾಯತ ಸಮಾಜದಲ್ಲಿ ಈ ಪರೀಕ್ಷೆ ಹೊಂದಿದವರು ಇವರೊಬ್ಬರೆ.

# ವೀರಶೈವರಿಗೆ ಆಧಾರ ಗ್ರಂಥಗಳು.

## ಶ್ರೀ. ಪಿ. ಜಿ. ಹಳಕಟ್ಟಿಯವರ ಅಭಿಪ್ರಾಯ.

ವೀರಶೈವ ಮತದವರಿಗೆ ತಮ್ಮ ಮತ ತತ್ವಗಳನ್ನೂ ಆಚಾರಗಳನ್ನೂ ತಿಳಿಸುವ ಗ್ರಂಥಗಳಿರಬೇಕಾದುದು ಆತ್ಯಗತ್ಯವಷ್ಟೆ. ಆದುದರಿಂದ ತಮ್ಮ ಮತ ಗ್ರಂಥಗಳು ಯಾವುವೆಂದು ಅನೇಕ ಜಿಜ್ಞಾಸುಗಳು ಕೇಳುತ್ತಿದ್ದಾರೆ. ಕೆಲವರು ವೇದಾಗಮಗಳೇ ತಮ್ಮ ಮತ ಗ್ರಂಥಗಳೆಂದು ಹೇಳುತ್ತಿದ್ದಾರೆ. ಬಸವಪುರಾಣವೇ ತಮ್ಮ ಮತಗ್ರಂಥವೆಂದು ಹೇಳಿದುದೂ ಉಂಟು. ಬಸವಾದಿ ಪ್ರಮಥರ ವಚನಶಾಸ್ತ್ರವೇ ವೀರಶೈವರಿಗೆ ಪ್ರಮಾಣ ಗ್ರಂಥವೆಂದು ಕೆಲವರು ಹೇಳುತ್ತಿದ್ದಾರೆ. ಹೀಗೆ ಭಿನ್ನಾಭಿಪ್ರಾಯಗಳಿರುವುದರಿಂದ ಈ ವಿಷಯದ ವಿವೇಚನೆಯಾಗುವುದು ಅಗತ್ಯವು. ಆದರಿಂದ ನಿಜಸ್ಥಿತಿ ಗೊತ್ತಾಗಲು ತುಂಬಾ ಅನುಕೂಲವಾಗುತ್ತದೆ.

### ವಚನ ಶಾಸ್ತ್ರ ಸಾರದ ೨ ನೆಯ ಭಾಗ.

ಶ್ರೀಮಾನ್ ಪಿ. ಜಿ. ಹಳಕಟ್ಟಿಯವರು ಸುದೀರ್ಘ ಪ್ರಯತ್ನದಿಂದ ಬಸವಾದಿ ಪ್ರಮಥರ ವಚನಗಳನ್ನು ಹುಡುಕಿ, ಅಚ್ಚುಗೊಳಿಸಿ, ಬಹು ಜನರು ಓದಲು ಅನುಕೂಲವಾಗುವಂತೆ ಮಾಡಿದುದು ವೀರಶೈವ ಸಮಾಜಕ್ಕೂ ಕನ್ನಡ ಸಾಹಿತ್ಯಕ್ಕೂ ಮಹೋಪಕಾರವಷ್ಟೆ. ಈ ಮಹಾಶಯರ ಪ್ರಯತ್ನ ವಿಶೇಷದಿಂದಲೇ ವಚನಕಾರರ ದಿವ್ಯ ತತ್ವಗಳು ಈಗ ಎಷ್ಟೋ ಬೆಳಕಿಗೂ ಬಳಕೆಗೂ ಬರಲು ಅನುಕೂಲವಾಯಿತು.

ವಚನ ಶಾಸ್ತ್ರ ಸಾರ ಎಂಬ ಒಂದು ಗ್ರಂಥವು ಈ ಮುಂಚೆಯೇ ಇವರಿಂದ ಪ್ರಕಟವಾಗಿದೆಯಷ್ಟೆ. ಅದರ ಎರಡನೆಯ ಭಾಗವು ಮೊನ್ನೆ ತಾನೆ ಪ್ರಸಿದ್ಧವಾಗಿದೆ. ಮೊದಲನೆಯ ಭಾಗದಲ್ಲಿ ವೀರಶೈವರ ಸಾಮಾಜಿಕ ರೀತಿ ನೀತಿಗಳೇ ಮುಖ್ಯವಾಗಿವೆ. ಈ ಎರಡನೆಯ ಭಾಗದಲ್ಲಾದರೋ ವೀರಶೈವರ ತತ್ವಜ್ಞಾನದ ಅಂಗೋಪಾಂಗಗಳೆಲ್ಲಾ ವಿವರವಾಗಿ ಉದಾಹರಿಸಲ್ಪಟ್ಟಿವೆ. ವೀರಶೈವರ ತತ್ವಜ್ಞಾನವನ್ನು ತಿಳಿದುಕೊಳ್ಳುವವರು ಈ ಪುಸ್ತಕವನ್ನು ಅಗತ್ಯವಾಗಿ ಅಧ್ಯಯನ ಮಾಡಬೇಕು. ಇದು ೬೦೦ ಪುಟಗಳ ದೊಡ್ಡ ಗ್ರಂಥ. ಬೆಲೆ ೪॥ ರೂ.

ಈ ಗ್ರಂಥದ ೫೯೩ ನೆಯ ಪುಟದಲ್ಲಿ ಶ್ರೀಮಾನ್ ಹಳಕಟ್ಟಿಯವರು ವೀರಶೈವರಿಗೆ ಆಧಾರ ಗ್ರಂಥಗಳು ಯಾವುವೆಂಬುದನ್ನು ವಿಸ್ತಾರವಾಗಿ ವಿವರಿಸಿದ್ದಾರೆ. ಆ ವಿವೇಚನೆಯ ಮುಖ್ಯಾಂಶವನ್ನು ಈ ಕೆಳಗೆ ಕೊಟ್ಟಿದೆ—

**ವೇದೋಪನಿಷತ್ತುಗಳು:—** ವೀರಶೈವರು ವೇದೋಪನಿಷತ್ತುಗಳನ್ನು ಜೈನ ಬೌದ್ಧರಂತೆ ತ್ಯಜಿಸುವದಿಲ್ಲ. ಆದರೆ ತಮ್ಮ ಸಮರ್ಥನಕ್ಕಾಗಿ ಬೇಕಾಗುವ ಅವುಗಳಲ್ಲಿಯ ತತ್ವಗಳನ್ನು ಎತ್ತಿ ತೆಗೆದು ಉದಹರಿಸುವುದುಂಟು. ಈ ಸಂಗತಿಯ ಬಗ್ಗೆ ಅನಾದಿ ವೀರಶೈವ ಸಾರ ಸಂಗ್ರಹ ಉರಿಲಿಂಗಪೆದ್ದಿಯ ವಚನಗಳು, ಗಣಭಾಷ್ಯರತ್ನ ಮಾಲಾ ಮುಂತಾದ ಅನೇಕ ಗ್ರಂಥಗಳನ್ನು ನೋಡಬೇಕು. ಅವುಗಳಲ್ಲಿ ವೇದಾಗಮೋಪನಿಷತ್ತುಗಳಲ್ಲಿಯ ಅನೇಕ ಅವತರಣಗಳು ಬಂದಿವೆ.

**ಸ್ಮೃತಿಗಳು:—** ಸ್ಮೃತಿಗಳು ಬ್ರಾಹ್ಮಣಾರಣ್ಯಕ ಗ್ರಂಥಗಳು ಆಚಾರ ವಿಷಯಕವಾಗಿರುತ್ತವೆ. ಇವುಗಳಿಗೂ ವೀರಶೈವರ ಆಚಾರಗಳಿಗೂ ಮಹದಂತರವಿರುತ್ತದೆ. ಆದ್ದರಿಂದ ವೀರಶೈವರು ಈ ಗ್ರಂಥಗಳನ್ನು ಮನ್ನಿಸುವದಿಲ್ಲ.

**ಸಾಂಖ್ಯ ಯೋಗಗಳು:—** ಇವುಗಳ ತತ್ವಗಳನ್ನು ವೀರಶೈವರು ಬಹಳ ಅಂಶದಿಂದ ಒಪ್ಪಿಕೊಂಡಿದ್ದಾರೆ. ಷಟಸ್ಥಲಾಚರಣೆಯಲ್ಲಿ ಇವುಗಳ ವಿಚಾರಗಳು ಆಗಿಂದಾಗ್ಗೆ ಬರುತ್ತವೆ. ಆದ್ದರಿಂದ ಈ ಗ್ರಂಥಗಳೂ ಕೆಲಮಟ್ಟಿಗೆ ಆಧಾರಕ್ಕೋಸ್ಕರ ತೆಗೆದುಕೊಳ್ಳಲ್ಪಟ್ಟಿವೆ.

**ಪುರಾಣಗಳು:—** ಪುರಾಣಗಳು ಹದಿನೆಂಟು ಇದ್ದು ಇವುಗಳಲ್ಲಿ ಶಿವಪುರಾಣಗಳು ಮತ್ತು ವಿಷ್ಣು ಪುರಾಣಗಳು ಎಂಬ ಎರಡು ಮುಖ್ಯ ವಿಭಾಗಗಳಿವೆ. ಶಿವಪುರಾಣಗಳಲ್ಲಿಯ ಅನೇಕ ವಿಷಯಗಳನ್ನು ವೀರಶೈವರು ತಮ್ಮ ಆಧಾರಕ್ಕಾಗಿ ಉದಹರಿಸುವುದುಂಟು. ಹಾಗೆಯೇ ವಿಷ್ಣುಪುರಾಣಗಳಲ್ಲಿಯ ಅನೇಕ ಉಕ್ತಿಗಳನ್ನೂ ಅವರು ತಮ್ಮ ಗ್ರಂಥಗಳಲ್ಲಿ ತೆಗೆದುಕೊಂಡಿದ್ದು ತೋರಿಬರುತ್ತದೆ.

**ಭಾಷ್ಯಗಳು:—** ನೀಲಕಂಠಭಾಷ್ಯ, ಶ್ರೀಕರ ಭಾಷ್ಯ ಇವುಗಳು ವೀರಶೈವರ ಭಾಷ್ಯಗಳೆಂದು ಹೇಳಲ್ಪಡುತ್ತ ಬಂದಿವೆ. ಆದರೆ ಮೂಲ ಗ್ರಂಥಗಳನ್ನು ನೋಡಿದಲ್ಲಿ ಅವುಗಳಲ್ಲಿ ಹೇಳಲ್ಪಡುವ ಸಿದ್ಧಾಂತಗಳು ಆಗಮ ಗ್ರಂಥಗಳಲ್ಲಿಯ ವಿಷಯಗಳನ್ನು ಕೆಲಮಟ್ಟಿಗೆ ಸಮರ್ಥಿಸಿದರೂ ಅವು ಪೂರ್ಣವಾಗಿ ವೀರಶೈವಪರ ಭಾಷ್ಯಗಳೆಂದು ಹೇಳಲಿಕ್ಕೆ ಬರಲಾರದು. ಅವುಗಳಲ್ಲಿ ಹೇಳಲ್ಪಟ್ಟ ಅನೇಕ ಆಚಾರಗಳು ಷಟಸ್ಥಲಾಚರಣೆಗಳಿಗೆ ಹೊಂದುವುದಿಲ್ಲ. ವಚನಕಾರರೂ ತಮ್ಮ ಗ್ರಂಥಗಳಲ್ಲಿ ಅಥವಾ ಉಕ್ತಿಗಳಲ್ಲಿ ಭಾಷ್ಯಗಳನ್ನು ತಮ್ಮ ಆಧಾರಕ್ಕೋಸ್ಕರ ತೆಗೆದುಕೊಂಡವ್ವರ ಉಲ್ಲೇಖಗಳು ಕಂಡುಬರುವದಿಲ್ಲ. ವೀರಶೈವ ತತ್ವಜ್ಞಾನಿಗಳು ದ್ವೈತಾದ್ವೈತದ ಚರ್ಚೆಯಲ್ಲಿ ಹೆಚ್ಚಾಗಿ ಬಿದ್ದಿಲ್ಲ. ಅವರು ಇಂಥ ತಾತ್ವಿಕ ವಿವೇಚನೆಗಳಗಿಂತ ಮನಸ್ಸು, ಕ್ರಿಯೆ, ಆಚರಣೆ ಶಿವಯೋಗ ಇಂಥ ವಿಷಯಗಳ ಬಗ್ಗೆ ಹೆಚ್ಚಾಗಿ ನಿರೂಪಿಸುವದುಂಟು. ಇವುಗಳನ್ನು ವಿವರಿಸುವ ಗ್ರಂಥಗಳು ಅವರಲ್ಲಿ ಅನೇಕವಾಗಿರುತ್ತವೆ. ಅವರ ಪದ್ಯ ಗ್ರಂಥಗಳಲ್ಲಿಯೂ ಸಂಸ್ಕೃತ ಗ್ರಂಥಗಳಲ್ಲಿಯೂ ಇಂಥ ವಿಷಯಗಳೇ ಹೆಚ್ಚಾಗಿ ಬರುತ್ತವೆ. ಅವರು ಮನುಷ್ಯನ ಧ್ಯೇಯವು ಅದ್ವೈತವೆಂದು ಮಾತ್ರ ಹೇಳಿ, ಅದನ್ನು ಸಾಧಿಸುವ ರೀತಿಗಳನ್ನು ಅನೇಕ ಬಗೆಯಾಗಿ ಹೇಳುತ್ತಾರೆ. ಇದು ವೀರಶೈವ ಧರ್ಮಗ್ರಂಥಕಾರರ ವಿಶಿಷ್ಟತೆಯಾಗಿದೆ.

ಒಟ್ಟಿಗೆ ವೀರಶೈವ ಧರ್ಮಗ್ರಂಥಕಾರರು ಮೇಲೆ ಹೇಳಿದ ಯಾವ ಗ್ರಂಥವನ್ನೂ ಸಂಪೂರ್ಣವಾಗಿ ತಮ್ಮ ಆಧಾರಗಳೆಂದು ತಿಳಿದದ್ದು ಕಂಡುಬರುವುದಿಲ್ಲ. ಆದರೆ ಅವರು ತಮ್ಮ ಷಟಸ್ಥಲ ಸಿದ್ಧಾಂತಕ್ಕೆ ಅನುಕೂಲವಿರುವ ಅವುಗಳಲ್ಲಿಯ ವಿಷಯಗಳನ್ನು ತಮ್ಮ ಆಧಾರಕ್ಕಾಗಿ ಮಾತ್ರ ಆಗಿಂದಾಗ್ಗೆ ತೆಗೆದುಕೊಳ್ಳುತ್ತಿರುವದು ತೋರಿಬರುತ್ತದೆ.

### ಆಗಮಗಳು.

ಆಗಮಗಳಲ್ಲಿ ಹೇಳಲ್ಪಡುವ ವಿಷಯಗಳಿಗೂ ವೀರಶೈವ ಸಿದ್ಧಾಂತಕ್ಕೂ ಬಹಳ ಸಂಬಂಧವಿರುತ್ತದೆ. ಈ ಸಂಗತಿಯು ನಿರ್ವಿವಾದವಾಗಿದೆ. ಆಗಮ ಮಾರ್ಗಾನುಯಾಯಿಗಳಲ್ಲಿ ವೀರಶೈವ ಮತಸ್ಥರು ಎಣಿಸಲ್ಪಟ್ಟಿರುವರು. ಆದರೂ ಅವರು ಅವುಗಳಲ್ಲಿ ಕಾಣಿಸಿದ ವಿಷಯಗಳನ್ನೆಲ್ಲ ಅಂಧತೆಯಿಂದ ಸ್ವೀಕರಿಸಿರುವದಿಲ್ಲ. ಆಗಮಗಳನ್ನು ಅವರು ಹಿಂಬಾಲಿಸುವಾಗಲೂ ಕೂಡ, ಸಾರಾಸಾರ ವಿಚಾರಮಾಡಿ ತಮ್ಮ ಷಟಸ್ಥಲ ಮಾರ್ಗಕ್ಕೆ ಹೊಂದಿಕೆಯಾಗಿರುವಂಥ ವಿಷಯಗಳನ್ನು ಮಾತ್ರ ಅವರು ಸ್ವೀಕರಿಸುತ್ತಾರೆ. ಉಳಿದವುಗಳನ್ನು ಅವರು ಬಿಟ್ಟುಕೊಟ್ಟಿದ್ದಾರೆ. ಆಗಮಗಳು ವೀರಶೈವರಿಗೆ ಮಹತ್ವವಾದ ಗ್ರಂಥಗಳಾಗಿರುವದರಿಂದ ಅವುಗಳ ಬಗ್ಗೆ ಇಲ್ಲಿ ಸ್ವಲ್ಪ ವಿಸ್ತಾರವಾಗಿ ನಿರೂಪಿಸುವದು ಆವಶ್ಯವಾಗಿದೆ.

ಆಗಮ ಗ್ರಂಥಗಳಲ್ಲಿ ಶೈವ, ಶಾಕ್ತ, ವೈಷ್ಣವ ಎಂಬ ಮೂರು ವಿಭಾಗಗಳಿವೆ. ಈ ಕಡೆಯ ಎರಡು ವಿಭಾಗಗಳು ವೀರಶೈವಕ್ಕೆ ಸಂಬಂಧಿಸಿದವಲ್ಲ. ಶಿವಾಗಮಗಳಲ್ಲಿಯೂ ಕೂಡ ಪಾಶುಪತ ಲಕುಳ, ಸೋಮ, ಸಿದ್ಧಾಂತ ಎಂದು ಕೆಲವು ವಿಭಾಗಗಳಿರುತ್ತವೆ. ಈ ಶೈವಾಗಮಗಳು ಹಿಂದುಸ್ಥಾನದಲ್ಲಿ ಬಹು ಮಹತ್ವದ ಧಾರ್ಮಿಕ ಕ್ರಾಂತಿಯನ್ನು ಮಾಡಿರುವವು. ದಕ್ಷಿಣ ದೇಶದಲ್ಲಿ ಬೌದ್ಧ ಜೈನ ಮತಗಳು ಹೆಚ್ಚಿದಾಗ ಅವುಗಳ ವರ್ಚಸ್ಸನ್ನು ಇವು ಕಡಿಮೆ ಮಾಡಿರುವವು.

ಕರ್ನಾಟಕ ದೇಶದಲ್ಲಿ ಈಚೆಗೆ ಪ್ರಕಟವಾಗಿರುವ ವಾತುಳ, ಪಾರಮೇಶ್ವರ ಮತ್ತು ಸೂಕ್ಷ್ಮಾಗಮಗಳು ಸಹ ಒಂದೇ ವಿಧವಾಗಿಲ್ಲ. ಪಾರಮೇಶ್ವರ ಆಗಮದಲ್ಲಿ ಬ್ರಾಹ್ಮಣ ಕರ್ಮಗಳು ಹೆಚ್ಚಾಗಿ ಸೇರಿರುತ್ತವೆ. ಆದರೆ ಸೂಕ್ಷ್ಮಾಗಮದಲ್ಲಿ ವಚನಶಾಸ್ತ್ರದ ವಿಚಾರಗಳು ಪೂರ್ಣವಾಗಿ ಬಂದಿರುತ್ತವೆ. ಕೆಲವು ಆಗಮಗಳಲ್ಲಿ ಅನೇಕ ವಿಧ ಮಂತ್ರಗಳ ಮತ್ತು ಮುದ್ರೆಗಳ ವಿಚಾರಗಳು ಬಂದಿರುತ್ತವೆ. ಆದರೆ ಇವು ಶಾಕ್ತರ ಪದ್ಧತಿಯಂತೆ ಇವೆ.

ಈ ಎಲ್ಲ ಸಂಗತಿಗಳನ್ನು ನಾವು ನೋಡಿದಲ್ಲಿ ಶಿವಾಗಮಗಳು ಅಸಂಖ್ಯವಾಗಿದ್ದು ಅವುಗಳ ವಿವೇಚನೆಯಲ್ಲಿ ಅನೇಕ ರೀತಿಯ ವಿಷಯಗಳು ಬಂದಿರುವವಲ್ಲದೆ ಅವುಗಳಲ್ಲಿ ಭಿನ್ನಾಭಿಪ್ರಾಯಗಳೂ ಬಹಳ ಇರುತ್ತವೆ. ಆದರೆ ವೀರಶೈವ ಧರ್ಮಕ್ಕೆ ಹೊಂದಿಕೆಯಾಗಿರುವ ಅಸಂಖ್ಯ ವಿಷಯಗಳೂ ಕೂಡ ಇವುಗಳಲ್ಲಿ ಬಂದಿವೆ. ಇಂಥವುಗಳನ್ನು ಮಾತ್ರ ವೀರಶೈವರು ತಮ್ಮ ಶಾಸ್ತ್ರದಲ್ಲಿ ತೆಗೆದುಕೊಂಡಿರುವರು. ಒಟ್ಟಿನಿಂದ ನೋಡಿದಲ್ಲಿ ಶೈವಾಗಮಗಳಲ್ಲಿ ಹೇಳಿದ ಸಂಗತಿಗಳನ್ನು ವೀರಶೈವರು ಮಾನ್ಯವೆಂದು ಅಂಧತೆಯಿಂದ ಸ್ವೀಕರಿಸುವದಿಲ್ಲೆಂದು ಕಂಡುಬರುತ್ತದೆ.

ವಚನ ಗ್ರಂಥಗಳು:— ಮೇಲಿನ ವಿವರಣೆಗಳಿಂದ ವೀರಶೈವರಿಗೆ ಅತ್ಯಂತ ಮಹತ್ವದ ಗ್ರಂಥಗಳೆಂದರೆ ವಚನ ಗ್ರಂಥಗಳೇ ಎಂದು ಹೇಳಬೇಕಾಗುತ್ತದೆ. ವಚನಗಳು ಕೇವಲ ಶುದ್ಧ ವೀರಶೈವ ಮಾರ್ಗವನ್ನೇ ಅನೇಕ ರೀತಿಯಿಂದ ಬೋಧಿಸುತ್ತವೆ. ಈ ಸಂಗತಿಯು ಈಗಿನ ಈ ಗ್ರಂಥದಲ್ಲಿ ವಿವರಿಸಲ್ಪಟ್ಟ ಅನೇಕ ವಚನಗಳಿಂದ ವಾಚಕರಿಗೆ ಕೂಡಲೆ ತಿಳಿದು ಬರದೆ ಇರಲಾರದು.

ವಚನಕಾರರು ವಿವರಿಸುವ ವೀರಶೈವ ಮಾರ್ಗದಲ್ಲಿ ಭಿನ್ನ ಭಿನ್ನ ಮತಗಳಿರುವದಿಲ್ಲ. ಎಲ್ಲ ವಚನಗಳು ಒಂದೇ ವಿಧ ಸಿದ್ಧಾಂತವನ್ನು ವಿವರಿಸಿರುತ್ತವೆ. ಅವು ನೈತಿಕಾಚಾರಕ್ಕೂ ವಿಚಾರಕ್ಕೂ ಹೊಂದಿಕೆಯಾಗುವಂಥವು ಇವೆ. ಅವುಗಳ ವಿವೇಚನೆಯಲ್ಲಿ ಸುವ್ಯವಸ್ಥೆಯು ಇದೆ. ಮತ್ತು ಅವುಗಳಲ್ಲಿ ಉಪನಿಷತ್ತುಗಳು ಆಗಮಗಳು, ಸಾಂಖ್ಯ, ಯೋಗ, ಪುರಾಣಗಳು ಇವುಗಳಲ್ಲಿಯ ಉಚ್ಚ ತತ್ವಗಳೂ ಬಂದಿವೆ. ಇವುಗಳನ್ನೆಲ್ಲ ಒಳಕೊಂಡು ಷಟಸ್ಥಲ ಮಾರ್ಗವು ಸುಬೋಧವಾಗಿ ವಚನಗ್ರಂಥಗಳಲ್ಲಿ ವಿವರಿಸಲ್ಪಟ್ಟದ್ದು ಕಂಡುಬರುತ್ತದೆ.

ಆದರೆ ವಚನಕಾರರ ಸಿದ್ಧಾಂತಗಳೆಲ್ಲವನ್ನು ಒಂದೆಡೆಗೆ ತಂದು ನಿರೂಪಿಸಿದ ಗ್ರಂಥವು ಅಥವಾ ಗ್ರಂಥಗಳು ನಮಗೆ ಇನ್ನೂ ದೊರೆತಿಲ್ಲ. ಆದರೆ ನಾವು ಹೆಚ್ಚಾಗಿ ಶೋಧಿಸಿದಲ್ಲಿ ಅವು ದೊರೆಯಬಹುದೆಂದು ನಮಗೆ ತೋರುತ್ತದೆ. ನಮಗೆ ಖಂಡಶಃ ದೊರೆತ ವಚನಗ್ರಂಥಗಳನ್ನಷ್ಟೇ ನಾವು ಪರಿಶೋಧಿಸಿದಲ್ಲಿ ಅವುಗಳಲ್ಲಿ ಒಂದು ಅತ್ಯುತ್ತಮ ತರದ ವ್ಯವಸ್ಥೆಯೂ ಒಂದು ಮಹತ್ತರ ಸಿದ್ಧಾಂತವೂ ಇರುವದು ಕಂಡುಬರುತ್ತದೆ. ಇವುಗಳನ್ನು ನಾನಾ ವಿಧವಾಗಿ ವಿಶದಪಡಿಸುವಂಥ ಸಂಸ್ಕೃತ, ಕನ್ನಡ, ತೆಲಗು, ತಮಿಳ ಗ್ರಂಥಗಳೂ ಕೆಲವು ಉಪಲಬ್ಧವಿರುತ್ತವೆ. ಇಂಥ ಗ್ರಂಥಗಳು ನಮಗೆ ಆಧಾರ ಗ್ರಂಥಗಳಾಗಿವೆ. ಇವುಗಳಲ್ಲಿ ಕಂಡುಬಂದ ತತ್ವಗಳನ್ನು ನಾವು ಸಂಗ್ರಹಿಸಿ ವಚನಗಳದ್ವಾರಾ ಈ ಗ್ರಂಥದಲ್ಲಿ ನಿರೂಪಿಸಿದ್ದೇವೆ.

ವೀರಶೈವ ಪರವೆಂದು ತೋರುವ ಬೇರೆ ಕೆಲವು ಗ್ರಂಥಗಳು ಉಪಲಬ್ಧವಿರುತ್ತವೆ. ಆದರೆ ಅವುಗಳಲ್ಲಿ ಬ್ರಾಹ್ಮಣರ ಕರ್ಮತ ಮಾರ್ಗವನ್ನು ಸಮರ್ಥಿಸುವ ವಿಷಯಗಳೂ ಇರುತ್ತವೆ. ಇವುಗಳಲ್ಲಿ ಶೈವ ಮತ್ತು ಬ್ರಾಹ್ಮಣ ಪದ್ಧತಿಗಳೊಡನೆ ವೀರಶೈವರ ಪದ್ಧತಿಗಳೂ ಮಿಶ್ರವಾಗಿರುತ್ತವೆ. ಆದರೆ ಇಂಥವುಗಳು ಆಧಾರವೆಂದು ಹೇಳಲಿಕ್ಕೆ ಬರುವದಿಲ್ಲ.

---

# ಹಿಂದುಗಳು ಅಪವಿತ್ರರು !

### ಒಬ್ಬ ಮೌಲವಿಯವರ ನಡತೆ.

ಕಾಂಗ್ರೆಸ್ಸಿನಲ್ಲಿಯ ಅನೇಕ ಹಿಂದುಗಳು ಹೇಗಾದರೂ ಮುಸಲ್ಮಾನರ ಮನಸ್ಸನ್ನು ಒಲಿಸಿ ಅವರನ್ನು ಕಾಂಗ್ರೆಸ್ಸಿನಲ್ಲಿ ಸೇರಿಸಿಕೊಳ್ಳಬೇಕೆಂಬ ಇಚ್ಛೆಯುಳ್ಳವರಾಗಿದ್ದಾರೆ. ಅದಕ್ಕಾಗಿ ಬೇಕಾದ ರೀತಿಯಲ್ಲಿ ಮುಸಲ್ಮಾನರ ಮನಸ್ಸನ್ನು ಒಲಿಸುವ ಕೃತಿಗಳು ಕಾಂಗ್ರೆಸ್ಸಿನಲ್ಲಿಯ ಅನೇಕ ಹಿಂದುಗಳಿಂದ ನಡೆಯುತ್ತಲಿವೆ. ಈ ಕೆಳಗಿನ ಸಂಗತಿಯು ಅವುಗಳಲ್ಲಿ ಒಂದು.

ಬಂಗಾಲ ಪ್ರಾಂತದ ಬಾಂಕರಗಂಜ ಎಂಬಲ್ಲಿ ಕಾಂಗ್ರೆಸ್ಸಿನ ಒಂದು ಸಭೆ ಕೂಡಿದ್ದಿತು. ಅದರಲ್ಲಿ ಹಿಂದು ಮತ್ತು ಮುಸಲ್ಮಾನರು ಇದ್ದರು. ಒಂದು ಕುರ್ಚಿಯ ಮೇಲೆ ಒಬ್ಬ ಹಿಂದು ಗೃಹಸ್ಥನು ಕುಳಿತಿದ್ದನು. ಒಬ್ಬ ಮೌಲವಿ ಸಾಹೇಬರು ಬಂದೊಡನೆ ಹಿಂದು ಗೃಹಸ್ಥನಿಗೆ ನೀನು ಆ ಕುರ್ಚಿಯನ್ನು ಮೌಲವಿ ಸಾಹೇಬರಿಗೆ ಬಿಟ್ಟುಕೊಡೆಂದು ಹೇಳಲು ಆ ಸಭ್ಯಗೃಹಸ್ಥನು ಬಿಟ್ಟುಕೊಟ್ಟು ಬೇರೆ ಕಡೆ ಹೋದನು.

ಆಗ ಮೌಲವಿಸಾಹೇಬರು ಆ ಕುರ್ಚಿಯ ಮೇಲೆ ಕುಳಿತುಕೊಳ್ಳಲಿಲ್ಲ. ಅದನ್ನು ತೊಳೆದುಕೊಂಡು ಬಂದರೆ ಅದರ ಮೇಲೆ ಕುಳಿತುಕೊಳ್ಳುವುದಾಗಿ ಹೇಳಿದರು! ಹಿಂದು ಗೃಹಸ್ಥನು ಕುಳಿತ ಕುರ್ಚಿಯು ಅವರಿಗೆ ಅಪವಿತ್ರವಾಗಿ ತೋರಿತು. ಆಗ ಸಭೆಯಲ್ಲಿ ಸ್ವಲ್ಪ ಗೊಂದಲವಾಯಿತು. ಮೌಲವಿ ಸಾಹೇಬರಿಗೆ ಬೇರೆ ಕುರ್ಚಿಯನ್ನು ತಂದು ಕೊಟ್ಟನಂತರ ಸಭೆಯ ಕಾರ್ಯವು ಶಾಂತತೆಯಿಂದ ಜರುಗಿತು.

ಹೇಗೆ ಬಂತು ಕಾಲಸ್ಥಿತಿ? ಮೊದಲು ಹಿಂದುಗಳು ಮುಸಲ್ಮಾನರನ್ನು ಮುಟ್ಟಿದರೆ ತಮಗೆ ಮೈಲಿಗೆಯಾಯಿತೆಂದು ತಿಳಿಯುತ್ತಿದ್ದರು. ಈಗ ಹಿಂದುಗಳು ಮುಸಲ್ಮಾನರಿಗೆ ಅಸ್ಪೃಶ್ಯರಾಗಲಾರಂಭಿಸಿದ್ದಾರೆ. ಮುಸಲ್ಮಾನರ ಮನಸ್ಸನ್ನು ಹೇಗಾದರೂ ಒಲಿಸಿ ಕಾಂಗ್ರೆಸ್ಸಿನಲ್ಲಿ ಸೇರಿಸಿಕೊಳ್ಳಬೇಕೆಂದು ಕಾಂಗ್ರೆಸ್ಸಿನ ಅನೇಕ ಹಿಂದುಗಳು ಸ್ವಾಭಿಮಾನ ಶೂನ್ಯರಾಗಿ ಬೇಕಾದ ರೀತಿಯಲ್ಲಿ ನಡೆಯಲು ಸಿದ್ಧರಾದುದರಿಂದಲೇ ಕೆಲವು ಮುಸಲ್ಮಾನರಿಗೆ ತಾವು ಇಷ್ಟು ಶ್ರೇಷ್ಠರೆಂಬ ಕಲ್ಪನೆ ಬರಲು ಕಾರಣವಾಯಿತು.

---

# ಕರ್ನಾಟಕ ಪ್ರಾಂತಿಕ ಕಾಂ. ಕಮೀಟಿಯ ಅಧ್ಯಕ್ಷ ಮಹಾಶಯರಿಗೆ-

ತಾವು ತಾ. ೧೭-೬-೩೮ ನೇ ಲೋಕಮತ ದಿನ ಪತ್ರಿಕೆಯಲ್ಲಿ ಕೊಟ್ಟ ಟೆನನ್ಸಿ ಬಿಲ್ಲಿನ ಬಗ್ಗೆ ಜಾಹೀರವಿನಂತಿ ಲೇಖಕ್ಕೆ ಕೆಳಗಿನಂತೆ ವಿನಂತಿ ಸೂಚನೆಗಳು—

ರೈತರಲ್ಲಿ ಪ್ರಕಾರಗಳು.

(೧) ಸ್ವಂತ ಜಮೀನು ಇದ್ದು ಇತರ ಜನರಿಂದ ಮಾಡಿಸತಕ್ಕವರು. (೨) ತಮ್ಮ ಜಮೀನದಲ್ಲಿ ತಾವೇ ಮಾಡುವಂಥವರು. (೩) ತನ್ನ ಮಾಲಕಿ ಜಮೀನ ಇಲ್ಲದೆ ಎರಡನೆಯವರ ಜಮೀನುಮಾಡಿ ಹೊಟ್ಟೆ ತುಂಬಿಕೊಳ್ಳುವಂಥವರು.

ಈ ಪ್ರಕಾರ ನಾನಾತರಗತಿ ರೈತರಿದ್ದಾರೆ. ಇವರಲ್ಲಿ ನಂಬರ ೧ ಮತ್ತು ನಂಬರು ಮೂರು ಈ ತರಗತಿ ರೈತರ ವಿಷಯ: ವಾಗಿ ವಿಚಾರಮಾಡುವದು ಮುಖ್ಯ ಸಂಗತಿಯಾಗಿದೆ. ನಂಬರ ೨ ನೇ ತರಗತಿ ರೈತನ ವಿಷಯವಾಗಿ ವಿಚಾರಮಾಡುವದು ಸಹ ಅವಶ್ಯವಿದ್ದರೂ ಅದೇನು ಅಷ್ಟು ಮಹತ್ವದ ವಿಷಯವೆಂದು ತೋರುವದಿಲ್ಲ.

ನಂಬರ ೧ ನೇ ತರಗತಿ ರೈತನು ತಾನು ಸಂಪಾದಿಸಿದ ಜಮೀನನ್ನು ಮಾಲ್ಕಿಕಾಯ್ದು ಕೊಳ್ಳಲಿಕ್ಕೆ ಎಷ್ಟು ಶ್ರಮಪಟ್ಟಿರಬೇಕೆಂಬುದನ್ನು ವಿಚಾರಮಾಡುವದು ಮೊದಲನೇ ಕರ್ತವ್ಯವಾಗಿದೆ. ಈ ವರ್ಗದ ರೈತರಲ್ಲಿಯೂ ಮೂರು ವಿಧಗಳುಂಟು. (ಅ) ಇನಾಮುದಾರ ಜಹಾಗಿರದಾರ ವಗೈರೆ ಜನರು. (ಬ) ನೌಕರ ಶಾಹಿ ಮತ್ತು ವ್ಯಾಪಾರ ಧಂದೆ ಮಾಡಿಕೊಂಡು ತಮ್ಮ ಜಮೀನುಗಳನ್ನು ರೈತರಿಗೆ ಮಾಡಲಿಕ್ಕೆ ಕೊಡುವಂಥವರು. (ಕ) ತಮ್ಮ ಜಮೀನುಗಳನ್ನು ತಾವು ಮಾಡಿಕೊಳ್ಳಲಿಕ್ಕೆ ಶಕ್ತಿಯಿಲ್ಲದಂಥ ಅಂದರೆ ವೃದ್ಧರು, ಸಣ್ಣ ವಯಸ್ಸಿನ ಅನಾಥ ಮಕ್ಕಳು, ವಿಧವಾ ಹೆಣ್ಣುಮಕ್ಕಳು. ಇವರ ಆರ್ಥಿಕ ಪರಿಸ್ಥಿತಿಗೆ ಕುಂದು ಬಾರದಂತೆ ಕಾನೂನುಗಳನ್ನು ಮಾಡುವಾಗ್ಗೆ ಸಂಪೂರ್ಣ ಲಕ್ಷ್ಯಕೊಡಬೇಕು.

೩ ನೇ ತರಗತಿಯ ರೈತನು ನಿಜವಾಗಿ ಹೊಲದಲ್ಲಿ ದುಡಿದಿದ್ದರಿಂದಲೇ ೧ ನೇ ತರಗತಿಯವನ ಹೊಟ್ಟೆ ತುಂಬುವದೇನೋ ನಿಜ. ಆದರೆ ಇವನು ಹುಟ್ಟು ಬಡವನಿದ್ದ ಮೂಲಕ ಹೊಟ್ಟೆ ತುಂಬ ಅನ್ನ ಸಂಪಾದಿಸುವ ಉದ್ದೇಶದಿಂದ ಮಿತಿ ಇಲ್ಲದೆ ಲಾವಣಿ ಏರಿಸಿಯಾಗಲೀ ಅಥವಾ ತಮ್ಮ ಶಕ್ತಿಗಿಂತಲೂ ಹೆಚ್ಚಿಗೆ ಹೊಲಗಳನ್ನು ಹಿಡಿದು ಚೆನ್ನಾಗಿ ದುಡಿಯದೆ ಇದ್ದಮೂಲಕವಾಗಿಯಾಗಲೀ ಅಥವಾ ತಾವು ಬಿತ್ತಿಬೆಳೆದ ಪೈಕಿ ಮಾಲಿಗೆ ಯೋಗ್ಯ ಧಾರಣೆ ಸಿಗದ ಮೂಲಕವಾಗಿಯಾಗಲೀ ನಷ್ಟಕ್ಕೆ ಪಾತ್ರರಾಗಿ ಸಾಲಗಾರರಾಗುತ್ತಾರೆ. ನಂಬರ ೧ ನೇ ತರಗತಿಯವರನ್ನು ಸಹ ಸಾಲಗಾರರನ್ನಾಗಿ ಮಾಡುತ್ತಾರೆ. ಮೇಲಿನ ಅನರ್ಥಗಳನ್ನು ತಪ್ಪಿಸುವದಕ್ಕೋಸ್ಕರ ಸರಕಾರದಿಂದ ಯೋಗ್ಯ ಕಾಯದೆಗಳನ್ನುಮಾಡುವದು ಅವಶ್ಯವೆನಿಸುವದು.

ಕಾನೂನುಗಳು.

(೧) ಜಮೀನಿಯ ಲಾವಣಿಮಾಡತಕ್ಕ ರೈತನು ಲಾವಣಿಯು ಜಮೀನಿನಲ್ಲಿ ಯೋಗ್ಯ ಉತ್ಪನ್ನ ತೆಗೆಯದಿದ್ದಲ್ಲಿ ಅಥವಾ ಜಮೀನು ಕೆಡುವಂಥ ಯಾವದಾದರೂ ದುರ್ಲಕ್ಷ್ಯಮಾಡಿದಲ್ಲಿ ಸದರಿ ತನ್ನ ಲಾಭದ ಲಾವಣಿ ಜಮೀನನ್ನು ಮಾಲಕನಿಗೆ ಮಾಲಕನು ಬೇಡಿದಾಗ್ಗೆ ಕೊಡಲಿಕ್ಕೆ ತಕರಾರು ಮಾಡದಂತೆ ಇರಬೇಕು.

(೨) ಎರಡು ಎತ್ತುಗಳುಳ್ಳ ರೈತನು ಇಂತಿಷ್ಟೇ ಜಮೀನು ಮಾಡತಕ್ಕದ್ದೆಂದು ನಿಯಮವಿರಬೇಕು.

(೩) ಒಕ್ಕಲತನದ ಶಾಸ್ತ್ರೀ ಪದ್ಧತಿಗನುಸರಿಸಿ ಒಕ್ಕಲತನದ ಖಾತೆಯವರ ಅನುಮತಿಯಂತೆ ಮಾಡಿ ಅವರು ತೋರಿಸಿಕೊಡುವಷ್ಟು ಉತ್ಪನ್ನ ತೆಗಿಯಲಿಕ್ಕೇಬೇಕೆಂದು ನಿಯಮವಿರಬೇಕು.

(೪)ರೈತನು ತಾನು ಬೆಳೆದ ಮಾಲನ್ನು ಸರಕಾರದಿಂದ ಗೊತ್ತುಮಾಡಿದ ಮಾರಾಟ ಸಂಘಗಳ ಹೊರ್ತಾಗಿ ಬೇರೆ ಕಡೆಗೆ ಮಾಲನ್ನು ಮಾರದಂತೆ ಕಟ್ಟುಪ್ಪಣೆಮಾಡಬೇಕು. ಇಂಥ ಸಂಘಗಳ ಸಂಖ್ಯೆಯಾದರೂ ಪ್ರತಿಯೊಂದು ಹಳ್ಳಿಗೂ ಇರಬೇಕು.

(೫) ಇಂಥ ಸಂಘಗಳ ಮೇಲಾಧಿಕಾರಿಗಳು ಎಲ್ಲ ದೇಶಗಳಲ್ಲಿ ಬೆಳೆಯತಕ್ಕ ಬೆಳೆಗಳ ಬಗ್ಗೆ ಯಾವಾಗಲೂ ಅಭ್ಯಾಸಮಾಡಿ ಪ್ರತಿ ಒಂದು ಮಾಲಿನ ಧಾರಣೆಯನ್ನು ದೇಶದ ಬೆಳೆಗಳ ಮೇಲಿಂದ ಆಗಾಗ್ಗೆ ಕಂಡುಹಿಡಿಯುವಂಥ ಯೋಗ್ಯ (Experts) ತಜ್ಞರನ್ನೇ ನಿಯಮಿಸಬೇಕೆಂದು ಇರಬೇಕು.

(೬) ಹೊಲದ ಮಾಲಕ ಮತ್ತು ರೈತ ಇವರಿಬ್ಬರ ನಡುವೆ ಇರುವ ಸವಲತ್ತಿನ ಪ್ರಶ್ನೆಯು ಹಿಂದು ಮುಸಲ್ಮಾನ್ ಐಕ್ಯದ ಪ್ರಶ್ನೆಯಷ್ಟೇ ಬಿಕ್ಕಟ್ಟಿನದಾಗಿದೆ. ಕಾರಣ ಈ ಸಮಸ್ಯವು ಅವರಿಬ್ಬರ ಅನುಮತಿಯಿಂದಲೇ ನಿರ್ಣಯವಾಗತಕ್ಕ ಸಂಗತಿಯಾಗಿದೆ. ಇದರಲ್ಲಿ ಯಾರನ್ನಾದರೂ ಎತ್ತಿ ಹಿಡಿದಲ್ಲಿ ಮತ್ತೊಬ್ಬರ ನಷ್ಟವಾಗುವದು.

ಈಗಲು ಕೂಡಾ ರೈತನು ನಷ್ಟ ಹೊಂದಿದಲ್ಲಿ ಮಾಲಕನು ಕೆಲವು ಸೂಟುಕೊಡುವ ಪರಿಪಾಠ ಇದ್ದೇ ಇದೆ. ಆದರೆ ಹೊಸದಾಗಿ ಕಾನೂನು ಮಾಡಿದಲ್ಲಿ ಕೂಡಾ ಅದನ್ನೇ ಮಾಡಬೇಕಾಗುವದು.

ಈ ಮೊದಲೇ ಕೆಲವರು ಲೇಖಗಳನ್ನು ಪ್ರಸಿದ್ಧಪಡಿಸಿರುವರಷ್ಟೆ. ಅವುಗಳಲ್ಲಿ ರೈತನಿಗೆ ಬಂದ ಮಾಲಿನ ಪೈಕಿ ಇಂತಿಷ್ಟು ಟಕ್ಕೆ ಮಾಲಕನಿಗೆ ಇಂತಿಷ್ಟು ಟಕ್ಕೆ ರೈತನಿಗೆ ಅಂತಾ ಉಲ್ಲೇಖ ಮಾಡಿರುವರು. ಆದರೆ ಹೀಗೆ ಠರಾಯಿಸುವದರಿಂದ ಮೊದಲೇ ಅಶಿಕ್ಷಿತರಾದ ರೈತರು ಇಂಥ ಕಾಯದೇದ ದುರುಪಯೋಗಮಾಡಿ ಹೊಲದ ಮಾಲಕರನ್ನು ಗೋಳಾಡಿಸುವರು.

ಹೊಲಗಳನ್ನು ಪಾಲಿನಿಂದ ಹಚ್ಚಿದಲ್ಲಿ ರೈತನು ಹೊಲದ ಮಾಲಕನಿಗೆ ಎಷ್ಟು ಪ್ರಮಾಣಿಕತನದಿಂದ ಅರ್ಧಪಾಲು ಕೊಡುತ್ತಿರುವನೆಂಬುದು ಹೊಲ ಇದ್ದ ಮಾಲಕನಿಗೇ ಗೊತ್ತು. ಹೊರ್ತಾಗಿ ಕೇವಲ ಸಾವುಕಾರಿಕೆಮಾಡುವ ಅಥವಾ ಗಿರಣಿಮಾಲಕನೆನಿಸಿಕೊಳ್ಳುವ ಅಥವಾ ವ್ಯಾಪಾರಮಾಡುವ ಕಾಂಗ್ರೆಸ್ ಮುಂದಾಳುಗಳಿಗೆ ತಿಳಿಯದ ಮಾತು.

ಸಧ್ಯಕ್ಕೆ ಯಾವುದಾದರೊಂದು ಅವರ ವ್ಯವಸಾಯಕ್ಕೆ ಅಡ್ಡಿಕೊಡುವ ಕಾನೂನು ಮಾಡಲಿಕ್ಕೆ ಧ್ವನಿಯು ಹೊರಟಲ್ಲಿ ಅವರೇ ಎಷ್ಟು ಗಲಾಟೆ ಎಬ್ಬಿಸುವರೋ ನೋಡಬೇಕು. ತರಮಿನ ಮೇಲೆ ಲಾವಣಿ ನಿಶ್ಚಯಿಸಲಿಕ್ಕೆ ಬಂದರೂ ಬರಬಹುದು. ಆದರೆ ಎಷ್ಟೋ ಕಡೆಗೆ ತರಮು ಕಡಿಮೆ ಇದ್ದು ಹೊಲದ ಲಾವಣಿ (ಉತ್ಪನ್ನ) ಹೆಚ್ಚಿಗಾಗುವ ಸಂಭವವಿದೆ. ಬೇರೆ ಬೇರೆ ಭಾಗಗಳಲ್ಲಿ ಭೂಮಿಗಳು ಭಿನ್ನವಾದ್ದರಿಂದ ಒಂದೇ ದೃಷ್ಟಿಯಿಂದ ಗೊತ್ತುಮಾಡುವದು ಬಹಳೇ ಬಿಕ್ಕಟ್ಟಿನ ಮಾತಾಗಿದೆ. ಕಾರಣ ಮಾಲಕ ರೈತ ಇವರಿಬ್ಬರು ತಮ್ಮ ತಮ್ಮ ಅನುಮತಿಯ ಮೇರೆಗೆ ನಿರ್ಣಯಿಸುವದೇ ಶ್ರೇಯಸ್ಕರವು.

ನೀವು ಆರಿಸಿಬರುವಾಗ ರೈತನಿಗೆ ಹಿತಮಾಡುವೆವೆಂದು ಅವರಿಗೆ ವಚನ ಕೊಟ್ಟಿರುವಿರಿ, ಈ ಮೂಲಕ ಇಂಪೀರಿಯಲ್ಲದಲ್ಲಿ

ನಿಮಗೆ ಏನೂ ಮಾಡಲಿಕ್ಕೆ ಆಗದೆ ಇದ್ದು ಆಡಿದ ಮಾತಿಗೆ ಏನಾದರೂ ಮಾಡಿ ತೋರಿಸಬೇಕು. ಮತ್ತು ಹೀಗೆ ಮಾಡಿ ಅಜ್ಞಾನ ರೈತರ ಸಮೂಹವನ್ನು ನೀವು ನಿಮ್ಮ ಬಾಜುಕ್ಕೆ ಎಳೆಯುವ ಹೇತುವಿದ್ದರೆ ನಡೆಯಲಿ. "ಘೋಡಾ ಮೈದಾನ ಇದ್ವೇ ಅವೆ" ಇದಕ್ಕೆ ನಮ್ಮದೇನೂ ತಕರಾರ ಇಲ್ಲ.

ರೈತನ ಈಗಿನ ಆರ್ಥಿಕ ಸ್ಥಿತಿಯನ್ನು ಕುರಿತು ನೀವು ನಿಜವಾಗಿಯೂ ಕನಿಕರಪಡುತ್ತಿದ್ದರೆ ನಿಜವಾದ ಕಾರಣಗಳು ಹೊಲದ ಮಾಲಕನ ಕಡೆಯಿಂದ ಕೆಲವು ಪ್ರಮಾಣದಲ್ಲಿ ರೈತನಿಗೆ ಲಾವಣಿಯಲ್ಲಿ ಮಾಲಕನಿಗೆ ಸಲ್ಲತಕ್ಕ ಉತ್ಪನ್ನ ಕಸಿದುಕೊಡುವದೊಂದೇ ಇರುವದಿಲ್ಲ. ಇಂಥ ರೈತರು ಅಂದರೆ ಮೇಲ ತರಗತಿಯ ಒಂದು ಕೂಲಿಕಾರರ ವರ್ಗವು ಇವರು ಪೂರ್ವಕಾಲದಿಂದ ಈಗಲೂ ಮತ್ತು ಮುಂದೆಯೂ ಕೂಡಾ ದುಡಿದೇ ತಿನ್ನಬೇಕಲ್ಲದೆ ಬೇರೆ ಯಾವ ಭಾಗವೂ ಇಲ್ಲ. ಇಂಥವರನ್ನು ಸಾವುಕಾರರನ್ನಾಗಿ ಮಾಡುವದೆಂದರೆ ಬೋಲ್ಸೇವಿಜಮ್ ಪಕ್ಷ ಪ್ರಚಾರಮಾಡಿದಂತೆಯೇ ಸರಿ. ಮತ್ತು ಈ ತತ್ವವನ್ನು ಸಮತಾವಾದಿಗಳು ಹಿಂದೆ ಪ್ರಚಾರಮಾಡಲಿಕ್ಕೆ ಯತ್ನಪಟ್ಟಾಗ ವಿರೋಧ ಬಂದು ಸುಮ್ಮನೇ ಇರಬೇಕಾಯಿತು. ಅವರು ನಿಜವಾಗಿ ಹೊಲದಲ್ಲಿ ದುಡಿಯುವದೇನೋ ನಿಜವು. ಅಂತೇ ಅವರಿಗೆ ಗೊತ್ತಾದ ಉತ್ಪನ್ನ ಸಿಕ್ಕೇ ಸಿಗುವದು. ಇಂಥವರು ತಾವು ಈಗ ಕಷ್ಟಪಟ್ಟು ದುಡಿದು ಬಂದ ಉತ್ಪನ್ನಿನಲ್ಲಿ ಉಳಿತಾಯಮಾಡಿದರೆ ಮುಂದೆ ಇವರಾದರೂ ಮಾಲಕರಾಗಬಹುದು.

(A) ರೈತನ ಸುಧಾರಣೆ ಆಗಬೇಕಾದರೆ ಅವನನ್ನು ಸುಶಿಕ್ಷಿತನನ್ನಾಗಿ ಮಾಡಿರಿ.

(B) ಬಡ್ಡಿ ದರ ಕಡಿಮೆ ಮಾಡಿರಿ.

(C) ಉಪಧಂದೆ ಅಂದರೆ ಕೋಳಿ ಕುರಿ ಸಾಕುವದು ಜೇನು ಹುಳ ರೇಶ್ಮಿ ಹುಳ ಸಾಕುವದು ನೂಲುವುದು ನೇಯುವದು ಹಗ್ಗ ಹಂಗಡ ಮಾಡುವದು ಮೊದಲಾದ ಹೊಲಗಳಲ್ಲಿಯೇ ಇದ್ದು ಮಾಡಲಿಕ್ಕೆ ಅನುಕೂಲವುಳ್ಳ ಸ್ವಲ್ಪ ಖರ್ಚಿನಲ್ಲಿ ಹೆಚ್ಚಿಗೆ ಲಾಭಕೊಡುವ ಧಂದೆಗಳನ್ನು ಮಾಡಲಿಕ್ಕೆ ರೈತನಿಗೆ ಕಾಯ್ದೆ ಇಂದಲೇ ಒತ್ತಾಯಪಡಿಸಿರಿ. ಇದು ಕೇವಲ ಬೋಧ ಸತ್ಯಾಗ್ರಹಗಳಿಂದ ತೀವ್ರ ಜಾರಿಯಲ್ಲಿ ಬರತಕ್ಕ ಸಂಗತಿ ಅಲ್ಲ.

(D) ಅಜ್ಞಾನ ರೈತರಲ್ಲಿ ಕದನ ಬೆಳಿಸಿ ದುಡ್ಡು ಸೆಳೆಯುವ ಅಥವಾ ಕಚೇರಿ ಕಟ್ಟೆ ಹತ್ತಿಸಿ ಹಾಳು ಮಾಡಲಿಕ್ಕೆ ಹಚ್ಚುವ ಅನೇಕ ಜನರು (ಗ್ರಾಮಕೀಟಕರು) ಅಂದರೆ ಗೌಡ ಶ್ಯಾನಬೋಗರು ಮತ್ತು ಮನೆಯ ಕೂಳು ತಿಂದು ಊರ ಉಸಾಬರಿ ಮಾಡುವ ಗ್ರಾಮಗುಂಡರ ಕಡೆಗೆ ನಿಮ್ಮ ಲಕ್ಷ ಕೊಟ್ಟು ಇಂಥವರ ಉಪದ್ರವನ್ನು ತಪ್ಪಿಸಿರಿ.

(E) ಹೊರಗಿನ ದುಡ್ಡು ಬಂದಾಗಲೇ ಭಾಂಡಾರ ಭರತಿ ಹ್ಯಾಗಾಗುವದೋ ಆದರಂತೆ ಪರದೇಶದಿಂದ ಹಿಂದುಸ್ಥಾನಕ್ಕೆ ದುಡ್ಡು ಬರುವ ಹಾಗೆ ಮಾರ್ಗಗಳನ್ನು ಕಂಡುಹಿಡಿದು ರೈತನ ಸುಧಾರಣೆ ಮಾಡಿರಿ.

(F) ಮೊದಲೇ ತಿನ್ನಲಿಕ್ಕೆ ಅನ್ನವಿಲ್ಲದ ಮೂಲಕ ಅಶಕ್ತರಾಗಿರುವ ರೈತರು ಹಳ್ಳಿಗಳಲ್ಲಿ ಚಹಾದ ಮಬ್ಬಿಗೆ ಬಿದ್ದು ತಮ್ಮ ಸರ್ವಸ್ವವನ್ನೂ ಹಾಳುಮಾಡಿಕೊಂಡು, ವ್ಯೈಗಳ್ಳರಾಗಹತ್ತಿದ್ದಾರೆ. ಆದ್ದರಿಂದ ಹಳ್ಳಿಗಳಲ್ಲಿಯ ಚಹಾದ ಅಂಗಡಿಗಳನ್ನು ಕಾಯ್ದೆಯಿಂದ ಮುಚ್ಚಿಸಿರಿ.

ಹೀಗೆ ಮಾಡಿದಲ್ಲಿ ಜನರ ಬೊಬ್ಬಾಟವಾದರೂ ಅಡ್ಡಿಯಿಲ್ಲ. ಯಾಕೆಂದರೆ ಹೋದ ಮಹಾಯುದ್ಧದಲ್ಲಿ ಜರ್ಮನರಲ್ಲಿ ಪುರುಷಸಂಖ್ಯೆ ಕಡಿಮೆ ಆದಾಗ ಅವರ ಮುಖ್ಯ ಹೇರ ಹಿಟ್ಲರನು ಯಾವ ಹೆಂಗಸು ಹೆಚ್ಚು ಮಕ್ಕಳನ್ನು ಹಡೆಯುವಳೋ ಅವಳಿಗೆ ಬಹುಮಾನಮಾಡಲಿಲ್ಲವೆ? ಅಂತೇ ೨೦ ವರ್ಷಗಳಲ್ಲಿ ಪುನಃ ಅವರ ರಾಷ್ಟ್ರವು ಬೆಳೆದು ಈಗಿನ ಶಕ್ತಿಯು ಪ್ರಾಪ್ತವಾಗಲಿಲ್ಲವೆ?

ನನ್ನ ಅಲ್ಪಮತಿಗೆ ತಿಳಿದಷ್ಟು ನಾನು ಜಾಹೀರ ರೀತಿಯಿಂದ ತಮಗೆ ಮೇಲೆ ಕಾಣಿಸಿದ ಸೂಚನೆಗಳನ್ನು ಸೂಚಿಸಿದ್ದೇನೆ. ಯುಕ್ತ ಕಂಡವುಗಳನ್ನು ಉಪಯೋಗಿಸಬೇಕೆಂದು ವಿನಂತಿ

ಒಬ್ಬ ರೈತ.
ಜಿ. ಜಿ. ಪಾಟೀಲ.

---

## ರಾಮದುರ್ಗದ ಪ್ರಜೆಗಳಲ್ಲಿ ಒಪ್ಪಂದ.

### ಸತ್ಯಾಗ್ರಹಕ್ಕೆ ಜಯ.

ರಾಮದುರ್ಗ ಸಂಸ್ಥಾನದ ಪ್ರಜೆಗಳು ಹೂಡಿದ ಸತ್ಯಾಗ್ರಹ ಚಟುವಟಿಕೆಯು ಜಯಪ್ರದವಾಗಿ ಕೊನೆಯಾದುದು ಸಂತೋಷದ ಸಂಗತಿಯು. ಅಲ್ಲಿಯ ಶಾಂತತಾಪ್ರಿಯ ಪ್ರಜೆಗಳೂ ರಾಜರೂ ಅಭಿನಂದನೆಗೆ ಪಾತ್ರರು. ಕಳೆದ ೨೧ ನೆಯ ತಾರೀಖಿನ ದಿವಸ ರಾಜ ಪ್ರಜೆಗಳಲ್ಲಿ ಒಪ್ಪಂದವಾಯಿತು. ಒಪ್ಪಂದದ ಮುಖ್ಯ ನಿಯಮಗಳನ್ನು ಇದರಡಿಯಲ್ಲಿ ಕೊಟ್ಟಿದೆ.

#### ಮುಖ್ಯ ನಿಯಮಗಳು.

(೧) ಸರಕಾರಕ್ಕೆ ಸೇರದೆ ಇದ್ದ ೫ ಜನ ಪ್ರಜಾಪ್ರಮುಖರ ಒಂದು ಸಮಿತಿಯು ಏರ್ಪಡಬೇಕು. ಅದರಲ್ಲಿ ೩ ಸದಸ್ಯರು ರಾಜರಿಂದ ನಿಯಮಿಸಲ್ಪಟ್ಟವರು ೨ ಜನರು ಪ್ರಜೆಗಳಿಂದ ಆರಿಸಲ್ಪಟ್ಟವರು ಇರಬೇಕು. ಈ ಸಮಿತಿಯವರು ರಾಜಕೀಯ ವಿಷಯಗಳಲ್ಲಿ ಸರಕಾರಕ್ಕೆ ಸಲಹೆ ಕೊಡಬೇಕು,

(೨) ಹಿಂದಿನ ವರುಷದ ಕಂದಾಯವನ್ನು ಬಿಟ್ಟುಬಿಡಬೇಕು. ಈ ವರುಷದ ಕಂದಾಯವನ್ನು ಅರ್ಧ ಬಿಟ್ಟು ಇನ್ನುಳಿದ ಅರ್ಧವನ್ನು ಮೇಲಿನ ಸಲಹೆಗಾರರ ಸಮಿತಿಯವರ ಸೂಚನೆ ಮೇರೆಗೆ ತೆಗೆದುಕೊಳ್ಳಬೇಕು.

(೩) ಈಗಿನ ಭೂಕಂದಾಯವನ್ನು ಕಡಿಮೆಮಾಡುವುದು.

(೪) ವಾರ್ಷಿಕ ೭೦೦ ರೂ. ಗಳ ಉತ್ಪನ್ನದ ಮೇಲೆಯೇ ಪ್ರಾಪ್ತಿಯ ಕರವನ್ನು ಹಾಕಬಹುದು.

(೫) ಹುಲ್ಲಬನ್ನಿಯನ್ನು ಮುಂದಣ ವರ್ಷದಿಂದ ಸಂಪೂರ್ಣ ನಿಲ್ಲಿಸಬೇಕು. ಆದರೆ ಆಡು ಕುರಿಗಳ ಮೇಲೆ ಸ್ವಲ್ಪ ಕರವನ್ನು ತೆಗೆದುಕೊಳ್ಳಬಹುದು.

(೬) ಮುನಸಿಪಾಲ್ಟಿ ಮತ್ತು ಲೋಕಲ್ ಬೋರ್ಡುಗಳಲ್ಲಿ ಆರಿಸಲ್ಪಟ್ಟವರು ಮೂರನೆಯ ಎರಡು ಭಾಗ ಮತ್ತು ಸರಕಾರದಿಂದ ನಿಯಮಿಸಲ್ಪಡುವವರು ಮೂರರಲ್ಲಿ ಒಂದನೆಯ ಭಾಗ ಮೆಂಬರರು ಇರಬೇಕು,

(೭) ಸರಕಾರದ ಎಲ್ಲ ವ್ಯವಹಾರಗಳೂ ಕನ್ನಡ ಭಾಷೆಯಲ್ಲಿಯೇ ನಡೆಯತಕ್ಕದ್ದೆಂಬ ತತ್ವವು ಸರಕಾರಕ್ಕೆ ಮಾನ್ಯವಾಗಿದೆ. ಕ್ರಮೇಣ ಇದನ್ನು ಆಚರಣೆಯಲ್ಲಿ ತರಲಾಗುವುದು.

(೮) ನ್ಯಾಯ ಮತ್ತು ಸುವ್ಯವಸ್ಥೆಗಳ ರಕ್ಷಣೆಗಾಗಿ ಬ್ರಿಟಿಷ್ ಭಾಗದಲ್ಲಿದ್ದಂಥ ಶಾಸನಗಳನ್ನು ಆಚರಣೆಗೆ ತರಲಾಗುವದು.

(೯) ಸರಕಾರದ ಅಧಿಕಾರ ಸ್ಥಾನಗಳನ್ನು ಜಾತಿ ಮತ ಪಂಥಗಳ ಲಕ್ಷಿಸದೆ ಕೊಡಲಾಗುವುದು.

# ಕಾಂಗ್ರೆಸ್ ಅಧ್ಯಕ್ಷರಿಗೆ

## ನಿಜಾಮ ರಾಜ್ಯ ಸ್ಥಿತಿ ನಿವೇದನೆ.

ಮುಂಬೈಯಲ್ಲಿರುವ ಹೈದರಾಬಾದ ಸಂಸ್ಥಾನ ಸಂಘದ ಕಾರ್ಯದರ್ಶಿಗಳು ಕಾಂಗ್ರೆಸ್ ಅಧ್ಯಕ್ಷ ಶ್ರೀ. ಬೋಸರವರಿಗೆ ಕೆಳಗಿನಂತೆ ತಿಳಿಸಿದ್ದಾರೆ—

"ಹೈದರಾಬಾದದಲ್ಲಿ ಹೆಸರಿಗೆ ಮಾತ್ರ ಕಾಯದೆ ಮಂಡಳವಿದೆ. ಅದರಲ್ಲಿಯ ಯಾವತ್ತೂ ಸದಸ್ಯರು ಬೇರೆ ಬೇರೆ ಖಾತೆಯ ಸೆಕ್ರೆಟರಿಗಳೇ ಇರುವರು. ಕಾಯಿದೆ ಮಂಡಳವು ಬಹಳವಾಗಿ ವರುಷದಲ್ಲಿ ಎರಡು-ಮೂರು ಸಾರೆ ಕೂಡುವುದು. ಅದು ನಡೆಯುವುದಾದರೂ ಎಷ್ಟು ಅವಧಿಯ ವರೆಗೆ? ಅದರ ಕಲ್ಪನೆ ನಿಮಗೆ ಬರಲಿಕ್ಕಿಲ್ಲ. ಕೆಲವು ತಾಸು ಮಾತ್ರ. ಸರಕಾರದ ಅನುಮತಿ ಪಡೆದ ಠರಾವುಗಳನ್ನು ಓದಿ ಮುಗಿಸಿದರೆ ಆ ಕಾಯಿದೆ ಮಂಡಲದ ಕಾರ್ಯ ಮುಗಿಯಿತು. ಈ ಮಂಡಳಕ್ಕೆ ಬಜೆಟ್ಟಿನ ಬಗ್ಗೆ ಚರ್ಚಿಸುವ ಸರಕಾರಿ ಅಧಿಕಾರಿಗಳ ಅನ್ಯಾಯವನ್ನು ಟೀಕಿಸುವ ಅಧಿಕಾರವೇ ಇಲ್ಲ.

ಇತ್ತೀಚೆಗಂತೂ ಅನೇಕ ಕಾಯಿದೆಗಳು ಈ ಕಾಯಿದೆ ಮಂಡಳಕ್ಕೆ ಭೆಟ್ಟಿಯನ್ನು ಕೊಡದೆ ಹಾಗೇ ಅಮಲಿನಲ್ಲಿ ಬರುತ್ತವೆ. ಸಿಟಿ ಪೋಲೀಸ ಆಕ್ಟ, ರೈತ ಸಹಾಯಕ ಬಿಲ್ಲು, ಬ್ಯಾಂಕಿನ ಸಂಬಂಧದ ಬಿಲ್ಲು ಇದಕ್ಕೆ ಸಾಕ್ಷಿ.

ಹೈದರಾಬಾದ ಸಂಸ್ಥಾನದಲ್ಲಿ ಭಾಷಣ, ಮುದ್ರಣ ಸ್ವಾತಂತ್ರ್ಯವಿಲ್ಲ. ಸಂಘ ಸ್ಥಾಪನೆಗೂ ಸ್ವಾತಂತ್ರ್ಯವಿಲ್ಲ. ಸಭೆ ಕೂಡಿಸಬೇಕಾದರೆ ಮೊದಲಿಗೆ ಸರಕಾರದ ಅನುಮತಿ ಪಡೆಯಬೇಕು. ಈ ಅನುಮತಿ ಪಡೆಯುವದೆಂದರೆ ಅಶ್ವಮೇಧಯಾಗವನ್ನೇ ಮಾಡಿದಂತೆ. ಪೋಲೀಸರು ಸಭೆ ಕರೆಯುವವರ ಮತ್ತು ಭಾಷಣಕಾರರ ವಂಶಾವಳಿ, ಜಾತಕ, ನೀತಿ ನಡಾವಳಿಗಳನ್ನು ಪರಿಶೀಲಿಸಿ ವರದಿ ಮಾಡಿದ ಮೇಲೆ ಅಪ್ಪಣೆ ದೊರೆಯಬಹುದು. ಅನೇಕಸಾರೆ ಸಭೆ ಕರೆಯುವ ತಾರೀಖು ಮುಗಿದು ಹೋದ ಅನೇಕ ದಿವಸಗಳ ಮೇಲೆ ಅಪ್ಪಣೆ ಚೀಟಿಯು ಕೈಗೆ ಬರುವದು.

ಹೈದರಾಬಾದ ಸರಕಾರದ ಧೋರಣವು ಪ್ರಾಮುಖ್ಯವಾಗಿ ಜಾತೀಯ ಭಾವನೆಯಿಂದ ಕೂಡಿದ್ದಾಗಿದೆ. ಸರಕಾರದ ಕೆಳಗಿನಿಂದ ಮೇಲಿನ ಸ್ಥಾನದ ವರೆಗೆ ಶೇಕಡ ೯೦ ರಷ್ಟು ಜನರು ಮುಸಲ್ಮಾನರೇ ಇರುವರು. ಸರಕಾರಿ ಭಾಷೆಯು ಪರ್ಶಿಯನ್ ಬೆರೆತ ಉರ್ದು. ಸಂಸ್ಥಾನದ ಉತ್ಪನ್ನವು ಹಿಂದುಗಳಿಂದಲೇ ಇದ್ದರೂ ಆ ಉತ್ಪನ್ನದ ಬಹು ಭಾಗವು ಸಂಸ್ಥಾನದ ಒಳಗೆ ಮತ್ತು ಹೊರಗೆ ಮುಸಲ್ಮಾನ್ ಧರ್ಮದ ಬೆಳವಣಿಗೆಗಾಗಿಯೇ ಖರ್ಚುಮಾಡಲ್ಪಡುವದು. ಅಧಿಕಾರಿಗಳೆಲ್ಲರೂ ಬಹುತೇಕ ಮುಸಲ್ಮಾನರೇ ಇರುವರು. ಉಸ್ಮಾನಿಯಾ ಕಾಲೇಜವನ್ನು ಸ್ಥಾಪಿಸಿರುವದರ ಮುಖ್ಯ ಉದ್ದೇಶವು ಮುಸಲ್ಮಾನ್ ಸಂಸ್ಕೃತಿಯ ಬೆಳವಣಿಗೆ ಮತ್ತು ಪ್ರಚಾರಮಾಡುವದು.

ಹಿಂದುಗಳ ಧಾರ್ಮಿಕ ಆಚರಣೆಗೆ ಆತಂಕವನ್ನುಂಟುಮಾಡುವ ಅನೇಕ ಕಾಯಿದೆಗಳು ಮಾಡಲ್ಪಟ್ಟಿವೆ. ಮುಸಲ್ಮಾನ್ ಅಧಿಕಾರಿಗಳು ಪ್ರತಿಯೊಂದು ಕಡೆಗೆ ಈ ಅಧಿಕಾರವನ್ನು ನಡೆಸುವದರಲ್ಲಿ ಹಿಂದುಗಳಿಗೆ ಬಹಳ ತ್ರಾಸ ಕೊಡುವರು. ಇವಲ್ಲದೆ ಬಲತ್ಕಾರದ ಒಂದು ಮುಸಲ್ಮಾನ್ ಪಕ್ಷವು ಹಿಂದುಗಳನ್ನು ಧರ್ಮಾಂತರಗೊಳಿಸುವ ಕಾರ್ಯದಲ್ಲಿ ತೊಡಗಿರುವದು. ಅಧಿಕಾರಿಗಳು ಅದಕ್ಕೆ ಸಹಾನುಭೂತಿ ತೋರಿಸುವದಲ್ಲದೆ ಅನೇಕ ಸಾರೆ ಪ್ರಾಮುಖ್ಯ ಪಾತ್ರ ವಹಿಸುವರು.

ಸರಕಾರದ ಈ ಜಾತೀಯ ಭಾವನೆಯ ಧೋರಣ ಮತ್ತು ಹಿಂದುಗಳಿಗಾಗುವ ತೊಂದರೆಗಳೇ ಮೊನ್ನೆ ಹೈದರಾಬಾದ ಮತ್ತು ಬೇರೆ ಕಡೆ ನಡೆದ ದೊಂಬಿಗಳ ಕಾರಣಗಳು ಹಿಂದುಗಳನ್ನು ಅಂಜಿಸುವದಕ್ಕಾಗಿ ಅನೇಕಾನೇಕ ಸ್ಥಾನಗಳಲ್ಲಿ ೧೪೪ ನೇ ಕ್ರಿ. ಪ್ರೊ. ಕೋಡನ್ನು ಅನ್ವಯಿಸಲಾಗಿತ್ತು.

ಕಾಂಗ್ರೆಸ್ಸು ಜಾತಿತ್ವವನ್ನು ಹೊಡೆದೋಡಿಸಲು ಪ್ರಯತ್ನಿಸುತ್ತಿದೆ. ಆದ್ದರಿಂದ ಅದು ಬೇಗನೆ ಹೈದರಾಬಾದ ಆಡಳಿತದ ವಿಮರ್ಶೆಗಾಗಿ ಒಂದು ಮಂಡಳಿಯನ್ನು ನೇಮಿಸಿ ಪ್ರಜೆಗಳ ಗೋಳನ್ನು ಹೋಗಲಾಡಿಸಲು ಸಹಾಯಕವಾಗುವದೆಂದು ನಂಬಿರುವೆವು."

---

## ಹಳ್ಳಿಗಳಲ್ಲಿ ಸ್ವರಾಜ್ಯ.

### ಸರ್. ಎಂ. ವಿಶ್ವೇಶ್ವರಯ್ಯನವರ ವಿಚಾರಗಳು.

ಹಳ್ಳಿಗಳಲ್ಲಿ ಜನರಿಗೆ ತಮ್ಮ ಆಡಳಿತವನ್ನು ತಾವೇ ನಡಸಿಕೊಳ್ಳುವುದಕ್ಕೆ ಸಂಪೂರ್ಣ ಅವಕಾಶವಿರುವಂತೆ ಅವರಿಗೆ ನಿಜವಾದ ಸ್ವರಾಜ್ಯ ಕೊಡಬೇಕು. ಸ್ವತಂತ್ರದಿಂದಲೂ ಸ್ವಪ್ರೇರಣೆಯಿಂದಲೂ ರಚನಾತ್ಮಕ ಕಾರ್ಯಗಳು ಮತ್ತು ವಸ್ತು ನಿರ್ಮಾಣ ಸಂಪದಭಿವೃದ್ಧಿಗಳಲ್ಲಿ ಹೆಚ್ಚು ಹೆಚ್ಚಾಗಿ ಕೈ ಹಾಕಿ ಕೆಲಸಮಾಡುವಂತೆ ಅವರಿಗೆ ಪ್ರೋತ್ಸಾಹ ಕೊಡಬೇಕು. ಈ ಎಲ್ಲ ಕೆಲಸಗಳನ್ನೂ ಮಾಡುವುದರಲ್ಲಿ ಹಳ್ಳಿಯ ಜನರಿಗೆ ರೈತರಿಗೆ, ಎರಡು ಮೂರು ವರುಷಗಳ ವರೆಗಾದರೂ ಸರಿಯಾಗಿ ದಾರಿ ತೋರಿಸಬೇಕು. ಅವರು ಸಂಪೂರ್ಣ ಭರವಸೆಯಿಂದ ನಂಬಿಕೆ ಇಡುವಂಥ ಅಧಿಕಾರಿ ಮತ್ತು ನಿಪುಣರ ಸಮಿತಿ ಅವರಿಗೆ ಮಾರ್ಗದರ್ಶನ ಮಾಡಬೇಕು. ಜಪಾನ್ ದೇಶದಲ್ಲಿ ಗ್ರಾಮದ ಆಡಳಿತ ಹೀಗೆ ನಡೆಯುತ್ತಿದೆ, ಅದೇ ಕ್ರಮವನ್ನು ಇಲ್ಲಿಯೂ ಯಾವ ರೀತಿ ಅನುಸರಿಸಿರಬಹುದು. ಎಂಬ ಸಂಗತಿಗಳನ್ನು ಬೇರೊಂದು ಪುಸ್ತಕದಲ್ಲಿ ವಿವರವಾಗಿ ನಿರೂಪಿಸಿದ್ದೇನೆ. ಹಳ್ಳಿಯ ಸಮಸ್ತ ಆಡಳಿತಗಳನ್ನೂ ಅದರ ಹಣಕಾಸಿನ ವಿಷಯವನ್ನು ಕೂಡ ಹತ್ತು ಅಥವಾ ಹನ್ನೆರಡು ಮಂದಿ ಚುನಾಯಿತ ಸದಸ್ಯರುಳ್ಳ ಒಂದು ಸಮಿತಿ ನಡೆಸಬೇಕು. ಈ ಸಮಿತಿಯ ಅಧ್ಯಕ್ಷರನ್ನೂ ಅವರೇ ಚುನಾಯಿಸಿಕೊಳ್ಳುವಂತೆ ಇರಬೇಕು. ವ್ಯವಸಾಯ ಅಭಿವೃದ್ಧಿ ಕೈಗಾರಿಕೆಗಳು, ಗ್ರಾಮನೈರ್ಮಲ್ಯ, ಸೈನಿಕ ಶಿಕ್ಷಣ ಮೊದಲಾದ ಬೇರೆ ಬೇರೆ ರಚನಾತ್ಮಕ ಕಾರ್ಯಗಳನ್ನು ನಡೆಸುವದಕ್ಕೆ ಬೇರೆ ಬೇರೆ ಉಪ ಸಮಿತಿಗಳನ್ನು ಮೇಲೆ ಹೇಳಿದ ಗ್ರಾಮ ಸಮಿತಿಯವರೇ ನೇಮಿಸಬೇಕು. ಜಪಾನ್ ದೇಶದಲ್ಲಿ ಕೆಲವು ಹಳ್ಳಿಗಳವರು ತಾವೇ ಸ್ವತಂತ್ರವಾಗಿ ವ್ಯವಸಾಯಪರಿಶೋಧನೆಗಳನ್ನು ಕೂಡಾ ನಡೆಸುತ್ತಿದ್ದಾರೆ. ಇಲ್ಲಿ ಹಳ್ಳಿಯೆಂದರೆ ೫೦೦೦ ಕ್ಕಿಂತ ಹೆಚ್ಚು ಜನಸಂಖ್ಯೆಯುಳ್ಳ ದೊಡ್ಡ ಹಳ್ಳಿ ಅಥವಾ ಒಟ್ಟು ೫೦೦೦ ಕ್ಕಿಂತ ಕಡಿಮೆಯಿಲ್ಲದಷ್ಟು ಜನಸಂಖ್ಯೆಯುಳ್ಳ ಚಿಕ್ಕ ಚಿಕ್ಕ ಹಳ್ಳಿಗಳ ಮತ್ತು ಮನೆಗಳ ತಂಡ ಎಂದು ಎಣಿಸಿದ್ದೇನೆ. ನಿಜವಾದ ಗ್ರಾಮ ಸ್ವರಾಜ್ಯ ಮನೆ ಕೈಗಾರಿಕೆ ಚಿಕ್ಕ ಚಿಕ್ಕ ಕೈಕೆಲಸಗಳ ಅಭಿವೃದ್ಧಿ, ಸುಧಾರಿಸಿದ ವ್ಯವಸಾಯ, ಇವೆಲ್ಲ ಒಂದುಗೂಡಿದರೆ ಅತ್ಯಲ್ಪ ಕಾಲದಲ್ಲೇ ದೇಶದ ಉತ್ಪತ್ತಿ ಒಂದಕ್ಕೆರಡಾಗುವದೆಂಬುದು ಜಪಾನ್ ದೇಶದ ಅನುಭವನಿಂದ ಕಂಡುಬಂದಿದೆ.

"ವಿಮೋಚಕ"

## ಬಂಗಾಲದ ಹೊಸ ಮಂತ್ರಿ ಮಂಡಳ !

ಬಂಗಾಲದ ಮುಖ್ಯ ಮಂತ್ರಿಗಳಾದ ಮಿ. ಫಜಲುಲ್ ಹಕ್ಕ ರಿಗೂ ಸ್ಥಾನಿಕ ಸ್ವರಾಜ್ಯ ಶಾಖಾ ಮಂತ್ರಿಗಳಾದ ಮಿ. ನೋಶೇರ ಅಲ್ಲಿಯವರಿಗೂ ಭಿನ್ನಾಭಿಪ್ರಾಯವಿದ್ದಿತು. ಆದಕಾರಣ ನೀವು ಕೆಲಸದಿಂದ ನಿವೃತ್ತರಾಗಿರೆಂದು ಮುಖ್ಯ ಮಂತ್ರಿಗಳು ಮಿ. ನೋಶೇರ ಅಲ್ಲಿಯವರಿಗೆ ತಿಳಿಸಿದ್ದರು. ಆದರೆ ಅವರು ಹಾಗೆ ಮಾಡಲು ಒಪ್ಪಲಿಲ್ಲ.

ಆದಕಾರಣ ಮಿ. ಫಜಲುಲ್ ಹಕ್ಕ ಮಂತ್ರಿಮಂಡಲವು ತಾ. ೨೨ ನೆಯ ರಾತ್ರೆ ನಿವೃತ್ತಿ ಪತ್ರವನ್ನು ಗವ್ಹರ್ನರರ ಕಡೆಗೆ ಕೊಟ್ಟಿತು. ಅದೇ ಪ್ರಕಾರ ಮಿ. ನೋಶೇರ ಅಲ್ಲಿಯವರೂ ನಿವೃತ್ತ ಪತ್ರವನ್ನು ಗವ್ಹರ್ನರರ ಕಡೆಗೆ ಕೊಟ್ಟರು, ಮರುದಿನ ಹೊಸ ಮಂತ್ರಿಮಂಡಲವನ್ನು ಏರ್ಪಡಿಸಲು ಗವ್ಹರ್ನರರು ಮಿ. ಹಕ್ಕರವರಿಗೆ ತಿಳಿಸಿದರು. ಅವರು ಮಿ. ನೋಶೇರ ಅಲ್ಲಿಯವರನ್ನು ಬಿಟ್ಟು ಮೊದಲಿನ ೯ ಜನರನ್ನೇ ಮಂತ್ರಿಗಳನ್ನಾಗಿ ಆರಿಸಿಕೊಂಡರು. ಹೀಗಾಗಿ ಮಿ. ನೋಶೇರ ಅಲ್ಲಿಯವರು ಮಂತ್ರಿತ್ವದಿಂದ ಬಿಡುಗಡೆಯಾದರು.

---

## ರಾಷ್ಟ್ರೀಯ ಮುಸಲ್ಮಾನರ ಪರಿಷತ್ತು.

ಮಧ್ಯಪ್ರಾಂತ ಮಹಾಕೋಶಲ ಕಾಂಗ್ರೆಸ್ ಕಮೀಟಿಯ ಉಪಾಧ್ಯಕ್ಷರಾದ ಮೌಲಾನಾ ಚಿರಾಜುದ್ದೀನರು ಮಧ್ಯಪ್ರಾಂತದ ರಾಷ್ಟ್ರೀಯ ಮುಸಲ್ಮಾನರ ಒಂದು ಪರಿಷತ್ತನ್ನು ಕೂಡಿಸಬೇಕೆಂದು ಯೋಚಿಸಿದ್ದಾರೆ.

ಈ ಪರಿಷತ್ತು ಅಗಸ್ಟ ತಿಂಗಳ ಮಧ್ಯದಲ್ಲಿ ಕೂಡುವುದಿದೆ. ಕಾಂಗ್ರೆಸ್ಸಿನವರ ಆಡಳಿತೆಯನ್ನು ಮುಸಲ್ಮಾನರ ದೃಷ್ಟಿಯಿಂದ ವಿಮರ್ಶಿಸುವುದು ಈಗ ಅಗತ್ಯವಾಗಿದೆಯೆಂದೂ ಈ ರಾಷ್ಟ್ರೀಯ ಮುಸಲ್ಮಾನರು ಯೋಚಿಸಿದ್ದಾರೆ!

ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳ ಚುನಾವಣೆಯ ಕಾಲದಲ್ಲಿ ಕಾಂಗ್ರೆಸ್ ಸಂಸ್ಥೆಗಳು ಮುಸಲ್ಮಾನರನ್ನು ಹೇಗೆ ಕಾಣುತ್ತಲಿವೆಯೆಂಬುದನ್ನೂ ಈ ಪರಿಷತ್ತು ಆಲೋಚಿಸುವುದಂತೆ.

---

## ಕಾಂಗ್ರೆಸ್-ಲೀಗಗಳ ಐಕ್ಯ.

**ಜುಲೈ ೯ ನೆಯ ತಾರೀಖಿಗೆ ವರ್ಕಿಂಗ್ ಕಮಿಟಿ.**

ಗಾಂಧೀಜಿ-ಜಿನ್ನಾರವರ ಮತ್ತು ಪಂಡಿತಜಿ-ಜಿನ್ನಾರವರ ಪತ್ರ ವ್ಯವಹಾರಗಳು ಪ್ರಕಟವಾಗಿ ಕಾಂಗ್ರೆಸ್ ಮತ್ತು ಲೀಗಗಳ ಐಕಮತ್ಯ ಎಷ್ಟರಮಟ್ಟಿಗೆ ಸಾಧ್ಯವೆಂಬುದು ಗೊತ್ತಾಗಿದೆಯಷ್ಟೆ. ಬೋಸ-ಜಿನ್ನಾರವರ ಸಂಭಾಷಣೆಯನ್ನೂ ಮುಸ್ಲಿಂಲೀಗಿನ ಹೇಳಿಕೆಯನ್ನೂ ಆಲೋಚಿಸಿ ಲೀಗಿಗೆ ಉತ್ತರ ಕಳಿಸಲು ಕಾಂಗ್ರೆಸ್ ವರ್ಕಿಂಗ್ ಕಮೀಟಿಯು ಜುಲೈ ೯ ನೆಯ ತಾರೀಖಿಗೆ ಕೂಡುವುದು. ಆಗ ಈ ವರೆಗಿನ ಪ್ರಯತ್ನದ ಫಲಿತಾಂಶ ಸ್ಪಷ್ಟ ಗೊತ್ತಾಗುವುದು.

---

## ಕಾಂಗ್ರೆಸ್ಸಿನ ರಾಯಭಾರಿಗಳ ಅಪೂರ್ವ ಕಾರ್ಯಕ್ರಮ.

ಪಂಡಿತ ಜವಾಹರಲಾಲ ನೆಹರುರವರು ಈಗ ಕಾಂಗ್ರೆಸ್ಸಿನ ರಾಯಭಾರಿಗಳಾಗಿ ಯುರೋಪದ ಸಂಚಾರಕ್ಕೆ ಹೋಗಿದ್ದಾರಷ್ಟೆ. ಇವರು ಸ್ಪೇನ್ ಮತ್ತು ಫ್ರಾನ್ಸ ಈ ಎರಡು ದೇಶಗಳಲ್ಲಿ ಸಂಚರಿಸಿ ಅಲ್ಲಿಯ ಅನೇಕ ರಾಜಕಾರಣ ಪಟುಗಳನ್ನೂ ಅಧಿಕಾರಿಗಳನ್ನೂ ಕಂಡು ಯುರೋಪದ ಈಗಿನ ಸ್ಥಿತಿಯ ಸಂಬಂಧವಾಗಿ ತಿಳಿದುಕೊಂಡರು. ಈ ವಾರದಲ್ಲಿ ಇಂಗ್ಲೆಂಡಿನಲ್ಲಿದ್ದು ಜುಲೈ ೧೮ ನೆಯ ತಾರೀಖಿಗೆ ಮತ್ತೆ ಸ್ಪೇನ್ ದೇಶಕ್ಕೆ ಹೋಗುವರು. ಆ ದಿನ ಅಲ್ಲಿ ಅಂತರ ರಾಷ್ಟ್ರೀಯ ಸಮ್ಮೇಲನ ಜರುಗುವದಿದೆ



ಪಂಡಿತಜಿಯವರು

ಹೀಗೆ ಪರರಾಷ್ಟ್ರಗಳಲ್ಲಿ ರಾಜಕೀಯ ಸನ್ನಿವೇಶಗಳ ಕುರಿತು ಯೋಚಿಸಲು ಇಷ್ಟು ಗಣ್ಯವಾದ ರೀತಿಯಲ್ಲಿ ಕಾಂಗ್ರೆಸ್ಸಿನ ರಾಯಭಾರಿಯಾಗಿ ಈ ವರೆಗೆ ಯಾರೂ ಹೋಗಿರಲಿಲ್ಲ. ಪಂಡಿತಜಿಯವರ ಈ ಸ್ತುತ್ಯ ಸಾಹಸವು ಹಿಂದುಸ್ಥಾನದ ರಾಷ್ಟ್ರೀಯ ಗೌರವ ದ್ಯೋತಕವಾಗಿಯೇ ಇದೆಯಲ್ಲವೆ?

---

## ಶಾಹೀದಗಂಜ ಕೈದಿಗಳು ಬಿಡುಗಡೆ ಹೊಂದಿದರು.

ಶಾಹಿದಗಂಜ ಚಟುವಟಿಕೆಗಾಗಿ ೧೯೩೭ ನೆಯ ಇಸವಿಯಿಂದ ಈ ವರೆಗೆ ಸೆರೆ ಹಿಡಿಯಲ್ಪಟ್ಟಿದ್ದ ಎಲ್ಲ ಅಪರಾಧಿಗಳನ್ನೂ ಬಿಟ್ಟುಬಿಡಬೇಕೆಂದು ಪಂಜಾಬದ ಗವ್ಹರ್ನರರು ಅಪ್ಪಣೆ ಮಾಡಿದ್ದಾರೆ. ಆ ಕೈದಿಗಳಿಗೆ ಯಾವ ವಿಧವಾದ ನಿರ್ಬಂಧವನ್ನೂ ಹಾಕಿಲ್ಲ.

"ಕ್ರಿಮಿನಲ್ ಪ್ರೊಸಿಜರ ಕೋಡ್" ೪೦೧ ನೆಯ ನಿಯಮದಂತೆ ಗವ್ಹರ್ನರರಿಗೆ ಇರತಕ್ಕ ಅಧಿಕಾರದಂತೆ ಈ ಅಪ್ಪಣೆಯನ್ನು ಮಾಡಿದ್ದಾಗಿದೆ.

---

## ಮೈಸೂರು ಪತ್ರಿಕಾ ಶಾಸನ.

ಮೈಸೂರು ಸರಕಾರವು ಒಂದು ಪತ್ರಿಕಾ ಶಾಸನವನ್ನು ಮಾಡಬೇಕೆಂದೇ ನಿರ್ಧರಿಸಿ ಒಂದು ಗೊತ್ತುವಳಿಯನ್ನು ಪ್ರಜಾಪ್ರತಿನಿಧಿ ಸಭೆಯಲ್ಲಿಟ್ಟಿತ್ತು. ಅಲ್ಲಿ ಅದಕ್ಕೆ ಒಪ್ಪಿಗೆ ದೊರೆಯಲಿಲ್ಲ. ಆ ಮೇಲೆ ಮೈಸೂರು ಲೆಜಿಸ್ಲೇಟಿವ್ ಕೌನ್ಸಿಲ್ಲಿನಲ್ಲಿ ತಾ. ೨೩ ನೆಯ ದಿನ ಆ ಗೊತ್ತುವಳಿಯಲ್ಲಿಯ ೩ ನೆಯ ನಿಯಮ ಒಂದನ್ನು ತೆಗೆದು ಒಪ್ಪಿಗೆಗಾಗಿ ಇಡಲು ಅಲ್ಲಿಯೂ ಕಾಂಗ್ರೆಸ್ ಪಕ್ಷದವರು ವಿರೋಧಿಸಿದರು. ಕೊನೆಗೆ ೩೧ ಅನುಕೂಲ ೧೫ ವಿರುದ್ಧ ಮತಗಳಿಂದ ಒಪ್ಪಿಗೆಯಾಯಿತು.



ಶಾ. ಶ. ೧೮೬೦ ನೆಯ ಜ್ಯೇಷ್ಠ ಬ|| ೩೦ ಸೋಮವಾರ.

# ಇದೊಂದು ಹೊಸ ಪ್ರಯೋಗ.

ಅಬಿಸೀನಿಯಾ, ಸ್ಪೇನ್, ಚೀನ ರಾಷ್ಟ್ರಗಳು ಈಗ ಪ್ರಪಂಚಕ್ಕೆ ಸಾರಿ ಹೇಳುತ್ತಿರುವುದೇನು ? "ಯಾರಲ್ಲಿ ಬಾಂಬು, ವಿಷವಾಯು, ಮೊದಲಾದ ಜನಸಂಹಾರದ ಘೋರ ಉಪಕರಣಗಳು ಹೆಚ್ಚಾಗಿವೆಯೋ ಅವರೇ ವಿಜಯಶಾಲಿಗಳು. ನಿರಪರಾಧಿಗಳನ್ನು ಹೆಚ್ಚಾಗಿ ಜಾಗ್ರುತೆ ಸಂಹಾರಮಾಡಿ ಅವರ ರಾಷ್ಟ್ರವನ್ನು ಆಕ್ರಮಿಸಿಕೊಳ್ಳುವವರೇ ಜಗತ್ತಿನಲ್ಲಿ ಸುಧಾರಿಸಿದವರು. ಅಂತೆಯೇ ಜನಸಂಹಾರದ ಬುದ್ಧಿವಂತಿಕೆಯನ್ನೇ ಈಗ ಸ್ವಾತಂತ್ರ್ಯದೇವಿಯು ಹಿಂಬಾಲಿಸಿದ್ದಾಳೆ!"

ಹೀಗೆ ಜಗತ್ತು ರಕ್ತದ ಮಡುವಿನಲ್ಲಿ ಅಡಿಯಿಡುತ್ತಾ ನಡೆದಿರುವ ಹಿಂಸಾ ಯುಗದಲ್ಲಿ ಮಹಾತ್ಮಾ ಗಾಂಧಿಯವರು. ಅಹಿಂಸಾ ತತ್ವವನ್ನು ಪ್ರಪಂಚಕ್ಕೆ ಬೋಧಿಸುತ್ತಿದ್ದಾರೆ. ಕೇವಲ ನುಡಿಯಿಂದಲ್ಲ. ನಡೆಯಿಂದ. ತಾವೊಬ್ಬರೇ ಅಲ್ಲ. ತಮ್ಮ ಅನೇಕ ಅನುಯಾಯಿಗಳೊಂದಿಗೆ ಸೇರಿ. ಪರಲೋಕದ ಸುಖಾಪೇಕ್ಷೆಗೆಂದು ಧಾರ್ಮಿಕ ಆಚಾರವಿಚಾರಗಳ ಮೂಲಕವಲ್ಲ. ಸ್ವಾತಂತ್ರ್ಯ ಪ್ರಾಪ್ತಿಗಾಗಿ ರಾಜಕಾರಣದ ಮೂಲಕ.

ಅಂತೆಯೇ ಗಾಂಧೀಜಿಯವರು ಯುಗಪುರುಷರು. ಪ್ರಪಂಚಕ್ಕೆ ಕ್ಷೇಮಕರವಾದ ಮಾರ್ಗವನ್ನು ತೋರಿಸಲು ಪ್ರಯತ್ನಿಸುತ್ತಿರುವವರು. ಹಿಂದುಸ್ಥಾನದಲ್ಲಿ ಕಳೆದ ೨೦ ವರ್ಷಗಳಿಂದ ತಮ್ಮ ಅಹಿಂಸೆಯ ಪ್ರಯೋಗವನ್ನು ನಡೆಯಿಸಿ ಎಷ್ಟೋ ಮಟ್ಟಿಗೆ ಜಯಶಾಲಿಗಳೂ ಆಗಿದ್ದಾರೆ. ಗಾಂಧೀಜಿಯವರಂತೆಯೇ ಕಾಂಗ್ರೆಸ್ಸಿನಲ್ಲಿರುವವರೆಲ್ಲರೂ ಅಹಿಂಸಾ ತತ್ವನಿಷ್ಠರೇನೂ ಅಲ್ಲ. ವ್ಯಾವಹಾರಿಕ ದೃಷ್ಟಿಯಿಂದಲೇ ಅಹಿಂಸೆಯ ರೀತಿನೀತಿಗಳನ್ನು ಅನುಸರಿಸುವವರು ಅತ್ಯಧಿಕ. ಹೀಗಿದ್ದರೂ ರಾಜಕಾರಣದಲ್ಲಿ ಅಹಿಂಸೆಯು ಹಿಂಸೆಯನ್ನು ಎಷ್ಟೋ ಮಟ್ಟಿಗೆ ಗೆದ್ದಿತೆಂದೇ ಸಿದ್ಧವಾಯಿತಷ್ಟೆ.

ಗಾಂಧೀಜಿಯವರು ತಮ್ಮ ಇದೇ ತತ್ವವನ್ನು ಜಾತಿಯ ಜಗಳದಲ್ಲಿಯೂ ಉಪಯೋಗಿಸಲು ತಿಳಿಸಿದ್ದಾರೆ. "ಹರಿಜನ" ಪತ್ರಿಕೆಯ ಕಳೆದ ೧೮ ನೆಯ ತಾರೀಖಿನ ಸಂಚಿಕೆಯಲ್ಲಿ ಶಾಂತಿ ಸೈನ್ಯವು ಹೇಗಿರಬೇಕೆಂಬ ವಿಷಯವನ್ನು ವಿವರಿಸಿದ್ದಾರೆ. ನಾವು ಆ ಸಂಗತಿಯನ್ನು ಇದೇ ಪತ್ರಿಕೆಯ ಬೇರೊಂದು ಕಡೆ ಕೊಟ್ಟಿದ್ದೇವೆ. ಅದನ್ನು ಓದಿದರೆ ಇದೊಂದು ಹೊಸ ಪ್ರಯೋಗವೆಂದೇ ತೋರದಿರಲಾರದು.

ರಾಜಕಾರಣದಲ್ಲಿಯ ಈಗಿನ ಅಹಿಂಸಾ ತತ್ವವು ಎಷ್ಟರ ಮಟ್ಟಿಗೆ ಫಲಕಾರಿಯಾಗಿದೆಯೋ ಅಷ್ಟರ ಮಟ್ಟಿಗಾದರೂ ಈ ಹೊಸ ಪ್ರಯೋಗವು ಫಲಕಾರಿಯಾಗಬಹುದೆ?

## ಅಹಿಂಸೆಯ ರೀತಿನೀತಿಗಳು.

ಗಾಂಧೀಜಿಯವರು ಜಾತಿಯ ಜಗಳದಲ್ಲಿ ಹಿಂದು-ಮುಸಲ್ಮಾನರ ಜಗಳವನ್ನೇ ಮುಖ್ಯವಾಗಿ ನಿರ್ದೇಶಗೊಳಿಸಿ ಅದು ಕೂಡಾ ರಾಜಕೀಯ ದೃಷ್ಟಿಯಿಂದಲೇ ನಡೆಯುತ್ತಿರುವುದು ವಿಶೇಷವೆಂದು ತಿಳಿಸಿದ್ದಾರೆ. ಎಂದಮೇಲೆ ಧಾರ್ಮಿಕ ಮುಸುಕನ್ನು ಹಾಕಿಕೊಂಡು ಧರ್ಮಾಂಧರನ್ನು ಹಿಂಸೆಗೆ ಪ್ರೇರೇಪಿಸುವವರೇ ಅಧಿಕವೆಂದು ಸ್ಪಷ್ಟವಾಯಿತಷ್ಟೆ. ಇಂಥ ಜಾತಿಯ ಜಗಳವನ್ನು ಶಾಂತಿ ಸೈನ್ಯವು ನಿಲ್ಲಿಸುವುದೆ?

ಈ ವರೆಗಿನ ಜಾತಿಯ ಜಗಳದ ಅನುಭವವು ಹೇಳುವುದೇನು? ಹೆಚ್ಚಾಗಿ ಮುಸಲ್ಮಾನರೇ ಹಿಂದುಗಳ ಮೇಲೆ ಆಕ್ರಮಣ ನಡೆಸುತ್ತಿದ್ದಾರೆಂದೇ ಅಲ್ಲವೆ? ಮುಸಲ್ಮಾನರಲ್ಲಿ ಹಿಂದುಗಳಂತೆ ಪರಧರ್ಮ ಸಹಿಷ್ಣುತೆ ಬಂದರೆ ಜಾತಿಯ ಜಗಳವು ತಾನೇ ಅಡಗುವುದು. ಪಾರ್ಶಿಗಳೂ, ಕ್ರಿಸ್ತರೂ ಹಿಂದುಗಳಿಗೆ ಪರಧರ್ಮಿಗಳೇ ಆಗಿದ್ದಾರಷ್ಟೆ. ಆದರೆ ಅವರಲ್ಲಿ ಬಹುಜನ ಮುಸಲ್ಮಾನರಂತೆ ಧಾರ್ಮಿಕ ದುರಭಿಮಾನ ಮತ್ತು ಧರ್ಮಾಂಧತೆಗಳಿಲ್ಲದಿದ್ದುದರಿಂದ ಅವರ ಜಗಳವೇ ಇಲ್ಲ.

ಈ ಶಾಂತಿ ಸೈನ್ಯದಲ್ಲಿ ಹೆಚ್ಚಾಗಿ ಮುಸಲ್ಮಾನರೂ ಸೇರಿದರೇನೇ ಸ್ವಲ್ಪಾದರೂ ಪ್ರಯೋಜನವಾಗುವುದು. ಗಾಂಧೀಜಿಯವರು ಶಾಂತಿಸೈನಿಕರಲ್ಲಿರಬೇಕಾದ ರೀತಿನೀತಿಗಳ ಕುರಿತು ಹೇಳಿರುವುದನ್ನು ನೋಡಿದರೆ ಅವುಗಳಿಗೆ ಒಪ್ಪುವಂತಹ ಮುಸಲ್ಮಾನರು ದೊರೆಯುವುದು ದುರ್ಲಭವೇ ಸರಿ. ಏಕೆಂದರೆ,

(೧) ದೇವರು ಸಕಲ ಪ್ರಾಣಿಗಳಲ್ಲಿಯೂ ವ್ಯಾಪಿಸಿದ್ದಾನೆಂದು ಶಾಂತಿಸೈನಿಕನು ತಿಳಿಯಬೇಕಷ್ಟೆ. ಇದು ಇಸ್ಲಾಂ ಮತಕ್ಕೆ ಸಮ್ಮತವಲ್ಲವೆಂದೇ ಮುಸಲ್ಮಾನರು ತಿಳಿಯುವರು.

(೨) ಎಲ್ಲ ಧರ್ಮಗಳನ್ನೂ ಸಮಾನವಾದ ಆದರಭಾವದಿಂದ ಕಾಣುವುದೂ ಅವರ ತತ್ವಕ್ಕೆ ಸಮ್ಮತವಿಲ್ಲದುದೇ ಆಗಿದೆ. ಮಹಾತ್ಮಾ ಗಾಂಧಿಯವರಂತಹ ಲೋಕಪೂಜ್ಯರು ಕೂಡಾ ಹಿಂದುಗಳೆಂಬ ಕಾರಣದಿಂದಲೇ ರಾಷ್ಟ್ರೀಯ ಮುಸಲ್ಮಾನರಲ್ಲಿ ಅಗ್ರಗಣ್ಯರಾಗಿ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದ ಮೌಲಾನಾ ಮಹಮ್ಮದ ಅಲ್ಲಿಯವರು ಕೂಡಾ ಸಾಮಾನ್ಯನಾದ ಮುಸಲ್ಮಾನನಿಗೆ ಸಂಬಾರರೆಂದು ಹೇಳಿದುದು ಸರ್ವಶ್ರುತವಷ್ಟೆ.

ಶಾಂತಿಸೈನ್ಯವು ಏರ್ಪಟ್ಟರೂ ಅದರಲ್ಲಿ ಹಿಂದುಗಳೇ ಅತ್ಯಧಿಕವಾಗಿ ಸೇರುವರು. ಅನೇಕ ವೀರ ಹಿಂದುಗಳೂ ಆತ್ಮಾಹುತಿ ಕೊಡಬಹುದು. ಅದು ಹಿಂದು ಧರ್ಮಕ್ಕೆ ಗೌರವಪ್ರದವಾದುದೂ ಸರಿ. ಆದರೆ ಜಾತಿಯ ಜಗಳವನ್ನೇನೂ ಅದು ನಿಲ್ಲಿಸಲಾರದು.

## ರಾಷ್ಟ್ರಧ್ವಜದ ಉಪಯೋಗವೆಲ್ಲಿ?

ತ್ರಿವರ್ಣಗಳ ರಾಷ್ಟ್ರಧ್ವಜವು ಗೌರವಿಸಲ್ಪಡಬೇಕಾದುದು ಯುಕ್ತವೇ ಸರಿ. ಆದರೆ ಅದನ್ನು ಉಪಯೋಗಿಸುವ ಸಮಯ ಸಂದರ್ಭಗಳೇನೂ ಕ್ಲುಪ್ತವಾಗಿಲ್ಲವೆ? ಈಗ ಅನೇಕರು ಲಗ್ನ, ಮತಸಂಬಂಧವಾದ ಉತ್ಸವ, ದೇವರ ಮೆರವಣಿಗೆ ಮೊದಲಾದವುಗಳಲ್ಲಿಯೂ ರಾಷ್ಟ್ರಧ್ವಜವನ್ನು ಉಪಯೋಗಿಸುತ್ತಿದ್ದಾರಷ್ಟೆ. ಇದು ಅಸಂಗತವಾದ ರೀತಿಯು. ಧಾರ್ಮಿಕ ಆಚರಣೆ, ವಿಧಿ, ಉತ್ಸವಾದಿಗಳಲ್ಲಿ ಆಯಾಯ ಮತಾಚಾರಣೆಗಳಿಗೆ ಸಂಬಂಧಪಟ್ಟ ಕಾರ್ಯಗಳಿರಬೇಕಾದುದೇ ವಿಹಿತ. ಇವುಗಳಲ್ಲಿಯೂ ರಾಷ್ಟ್ರಧ್ವಜ ಪ್ರವೇಶವಾಗುತ್ತ ಹೋದರೆ ಅದಕ್ಕಿರುವ ರಾಷ್ಟ್ರೀಯ ಸ್ಥಾನ ಮಾನಗಳ ಕೊರತೆಯುಂಟಾದರೂ ಆಗಬಹುದು. ಈ ವಿಚಾರವಾಗಿ ಕಾಂಗ್ರೆಸ್ಸಿನ ಪ್ರಮುಖ ಮುಂದಾಳುಗಳಾದ ಶ್ರೀ. ರಾಜಗೋಪಾಲಾಚಾರ್ಯರು ಕಳೆದ ೨೩ ನೆಯ ತಾರೀಖಿನ ದಿವಸ ಮದ್ರಾಸಿನಲ್ಲಿ ಒಂದು ದೇವಾಲಯದ ಉದ್ಘಾಟನೆಮಾಡುವಾಗ ಹೀಗೆ ಹೇಳಿದರು—

"ಈ ದೇವಾಲಯದ ಮೇಲೆ ರಾಷ್ಟ್ರಧ್ವಜವನ್ನು ನಿಲ್ಲಿಸಬೇಡಿರಿ. ನೀವು ಇಂಥಲ್ಲಿ ರಾಷ್ಟ್ರಧ್ವಜವನ್ನು ಇಟ್ಟಿದ್ದಾದರೆ ಇದು ಹಿಂದುಗಳ ಧ್ವಜವೆಂದೇ ತಪ್ಪು ತಿಳುವಳಿಕೆಯಾಗಲು ಕಾರಣವಾಗಬಹುದು."

ರಾಷ್ಟ್ರಧ್ವಜವನ್ನು ಧಾರ್ಮಿಕ ಕಾರ್ಯಗಳಲ್ಲಿ ಉಪಯೋಗಿಸುವವರು ಈಗಲಾದರೂ ಎಚ್ಚರಿಯುವರೆ?

## ವೀರಶೈವ ದೀಕ್ಷಾ ಸಮಾರಂಭ.

ತಾ. ೧೬-೬-೩೮ ನೆಯ ದಿವಸ ಬೈಲಹೊಂಗಲದಲ್ಲಿ ಶ್ರೀ. ಯಕ್ಕುಂಡಿ ಮಠದ ಸ್ವಾಮಿಗಳು ಬೆಟಸೂರ ಶ್ರೀ. ಪಟ್ಟದ್ದೇವರು ಹಾಗೂ ನಮ್ಮೂರ ಚರಮೂರ್ತಿಗಳ ಸಮ್ಮುಖದಲ್ಲಿ ಇಲ್ಲಿಯ ವೀರಶೈವ ತರುಣ ಸಂಘದವರು ಸ್ಥಾಪಿಸಿರುವ ಶುದ್ಧೀ ಸಂಘಟನಾ ಸಂಘದ ವತಿಯಿಂದ ೧೪೯ ಜನರಿಗೆ (ವೀರಶೈವ ಮಡಿವಾಳರು ೬೬, ವೀರಶೈವ ಹಡಪದವರು ೮೩) ವೀರಶೈವ ಧರ್ಮ ಪದ್ಧತಿಯಂತೆ ದೀಕ್ಷೆ ಕೊಟ್ಟು ಮುಂದೆ ಅವರೊಂದಿಗೆ ಅವರೇ ತಯಾರಿಸಿದ ಅಡಿಗೆಯನ್ನು ಅವರಿಂದಲೇ ನೀಡಿಸಿಕೊಂಡು ಊಟವನ್ನು ಮಾಡಿದರು. ಅಜಮಾಸು ೮೦೦ ಜನರು ಭೋಜನಕ್ಕೆ ಬಂದಿದ್ದರು.

ಊರಲ್ಲಿ ಪ್ರಮುಖರಾದ ಶ್ರೀ. ಮೆಟಗುಡ್ಡ ಅಣ್ಣಪ್ಪನವರು ಶ್ರೀ, ಮೆಟಗುಡ್ಡ ವಕೀಲರು ಶ್ರೀ. ಎತ್ತಿನಮನಿ ಶ್ರೀ. ಆರ್. ಎಫ್. ಪಾಟೀಲರೂ ಶ್ರೀ. ಕೌಜಲಗಿ ವಕೀಲರು ಶ್ರೀ. ಅಂಗಡಿ ಮುಂತಾದ ವಕೀಲರೂ ಅಲ್ಲದೆ ಚನಗುಡೆಪ್ಪ ಮಾಗಿ ಮಾಸ್ತರರೂ ಗುರುಪುತ್ರಪ್ಪ ಊರೊಳಗಿನ ಪ್ರಮುಖರೂ ಮತ್ತು ಊರೊಳಗಿನ ಯಾವತ್ತೂ ಮಠದ ಸ್ವಾಮಿಗಳೂ ಭೋಜನ ಮಾಡಿದರು. ಈ ಸಮಾರಂಭಕ್ಕೆ ಊರೊಳಗೆ ಎಲ್ಲಿಯೂ ವಿರೋಧ ಕಂಡುಬರಲಿಲ್ಲ. ಇಷ್ಟೇ ಅಲ್ಲದೆ ಊರಲ್ಲಿಯ ಎಲ್ಲ ಮುಂದಾಳುಗಳು ಅದರಲ್ಲಿ ವಿಶೇಷತಃ ರಾವಬಹದ್ದೂರ್ ಮಲ್ಲನಾಯಕರೂ ಕೂಡಾ ಅನುಮತಿ ಇತ್ತು. ಈ ಸಮಾರಂಭಕ್ಕೆ ಒಳ್ಳೇ ಕಳೆ ತಂದರು. ಶುದ್ಧೀಕರಣ ಸಂಘದ ಕಾರ್ಯದರ್ಶಿಗಳಾದ ಅಂಗಡಿ ಚನಬಸಪ್ಪನವರು ಅವರ ಸಂಗಡಿಗರಾದ ಶ್ರೀ. ಶರಣಪ್ಪನವರು ಬೆಲ್ಲದ ಮಾಸ್ತರರು ಪಾಟೀಲ ಬಾಬಗೌಡರು ರೇಶ್ಮಿ ಸಿದ್ಧಪ್ಪನವರು ಮುಂತಾದ ಮಹನೀಯರು ಹಗಲು ರಾತ್ರಿ ಅನ್ನದೆ ಈ ಕಾರ್ಯ ಸಿದ್ಧಗೊಳಿಸಲು ಪ್ರಯತ್ನಪಟ್ಟರು. ಮುಂದೆ ಅದೇ ಸ್ಥಳದಲ್ಲಿ ರಾತ್ರಿ ೮ ಗಂಟೆಗೆ ಶ್ರೀ. ಯಕ್ಕುಂಡಿ ಮಠದ ಸ್ವಾಮಿಗಳ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಶ್ರೀ. ಬೆಟಸೂರು ಪಟ್ಟದ್ದೇವರು ಶ್ರೀ. ಎಚ್. ಎಸ್. ಮೆಟಗುಡ್ಡ ವಕೀಲರು ಭಾಷಣ ಮಾಡಿದಮೇಲೆ ಭಜನೆಯೊಂದಿಗೆ ಸಮಾರಂಭವು ಮುಕ್ತಾಯವಾಯಿತು. ವರ್ತಮಾನಿ.

## ಸಂಸ್ಥಾನಾಧಿಪತಿಗಳಿಗೆ ಎಚ್ಚರಿಕೆ.

ಹಿಂದುಸ್ಥಾನದಲ್ಲಿಯ ಸಂಸ್ಥಾನಗಳು ನಿರಂಕುಶವಾಗಿ ಆಳಲ್ಪಡುತ್ತಲಿವೆಯಷ್ಟೆ. ಇವುಗಳಲ್ಲಿಯ ಕೆಲವು ಸಂಸ್ಥಾನಗಳ ಪ್ರಜೆಗಳಂತೂ ರಾಜರಿಂದ ಕೊಂಡಕೊಂಡ ಪ್ರಾಣಿಗಳಂತೆ ಪಾರತಂತ್ರ್ಯದಲ್ಲಿ ಬಳಲುತ್ತಿದ್ದಾರೆ. ಅವರ ಶೋಚನೀಯ ಸ್ಥಿತಿಯು ನಿವಾರಣೆಯಾಗಬೇಕಾದರೆ ಬ್ರಿಟಿಶ್ ಸರಕಾರದವರು ಮತ್ತು ಬ್ರಿಟಿಶ್ ಭಾಗದ ಮಹಾಜನರು ಅತ್ತ ಲಕ್ಷಿಸಿ ಅವರ ಸ್ವಾತಂತ್ರ್ಯಕ್ಕಾಗಿ ಹೋರಾಡುವುದು ಅತ್ಯಗತ್ಯ. ದಕ್ಷಿಣಾಫ್ರಿಕೆಯಲ್ಲಿಯ ತಮ್ಮ ದೇಶಬಾಂಧವರ ದುಃಖನಿವಾರಣೆಗಾಗಿ ಹೋರಾಡುವವರು ತಮ್ಮ ನೆರೆಯ ಈ ಬಾಂಧವರ ದುಃಖದ ಕಡೆಗೆ ಲಕ್ಷಿಸದಿರುವುದು ನ್ಯಾಯವೆ?

ಜಯಪುರ ಸಂಸ್ಥಾನಾಧಿಪತಿಗಳು ಸಿಕಾರ ಎಂಬಲ್ಲಿ ನಡೆದ ಪ್ರಜಾಕ್ಷೋಭೆಯನ್ನು ಹದಿನೈದು ದಿನಗಳೊಳಗಾಗಿ ಶಾಂತಗೊಳಿಸದಿದ್ದರೆ ಬ್ರಿಟಿಶ್ ಸರಕಾರವು ಆ ವಿಷಯದಲ್ಲಿ ಪ್ರವೇಶಿಸುವದೆಂದು ಸರಕಾರದಿಂದ ಸಂಸ್ಥಾನಾಧಿಪತಿಗಳಿಗೆ ಎಚ್ಚರಿಕೆ ಕೊಡಲಾಗಿದೆ.

ಇದು ಅತ್ಯಂತ ವಿಹಿತವಾದುದು. ಸಂಸ್ಥಾನಗಳಲ್ಲಿಯ ಅತ್ಯಾಚಾರಗಳು ಜಾಗ್ರತೆ ನಿಲ್ಲದಿದ್ದರೆ ಬ್ರಿಟಿಶ್ ಸರಕಾರವು ಪ್ರವೇಶಿಸಿ ಸಂಸ್ಥಾನಾಧಿಪತಿಗಳಿಗೆ ಚೆನ್ನಾಗಿ ಬುದ್ಧಿಯನ್ನು ಕಲಿಸಬೇಕು. ಜಯಪುರಕ್ಕೆ ಕೊಡಲ್ಪಟ್ಟ ಎಚ್ಚರಿಕೆಯನ್ನು ಲಕ್ಷಿಸಿಯಾದರೂ ಸಂಸ್ಥಾನಾಧಿಪತಿಗಳು ಎಚ್ಚತ್ತು ತಮ್ಮಲ್ಲಿ ಜಾಗ್ರತೆ ಜವಾಬ್ದಾರಿ ಸರಕಾರವು ಏರ್ಪಡುವಂತೆ ಮಾಡುವರೆ ?

## ಅಭಿನಂದನೀಯ ವಿಧವಾ ವಿವಾಹ.

ಹಿಂದು ಸಮಾಜದ ಅಧೋಗತಿಗೆ ಕಾರಣವಾಗಿರತಕ್ಕ ಅನೇಕ ನಡತೆಗಳಲ್ಲಿ ವಿಧವಾ ವಿವಾಹ ಪ್ರತಿಬಂಧವೂ ಒಂದು ಮುಖ್ಯವಾದುದಾಗಿದೆ. ಕರ್ನಾಟಕದಲ್ಲಿ ಈಗ ಕೆಲವರಿಗೆ ಈ ವಿಷಯವು ತಿಳಿದು ತಮ್ಮ ತಪ್ಪು ಕಲ್ಪನೆಯನ್ನು ತೆಗೆದುಹಾಕಿ ವಿಧವಾ ವಿವಾಹವನ್ನು ಆಚರಣೆಯಲ್ಲಿ ತರಲಾರಂಭಿಸಿದುದು ಸಂತೋಷದ ಸಂಗತಿಯು.

ಕಳೆದ ೨೩ ನೆಯ ತಾರೀಖಿನ ದಿವಸ ದಾವಣಗೆರೆಯಲ್ಲಿ ಇಂಥ ಒಂದು ವಿವಾಹವು ಜರುಗಿತು. ವೈಶ್ಯ ವರ್ಣದ ಕುನಿಬೆಳಕೆರೆ ಶ್ರೀಯುತ ಹನುಮಪ್ಪನವರ ಪುತ್ರ ಶ್ರೀನಿವಾಸ ಶೆಟ್ಟರಿಗೂ ಇದೇ ವರ್ಣದ ಕಡೂರು ಶ್ರೀ. ಮಾಳಶೆಟ್ಟರ ಲಿಂಗಪ್ಪನವರ ಪುತ್ರಿ ಕಮಲಾಕ್ಷಮ್ಮನಿಗೂ ಶ್ರೀ ಕನ್ನಿಕಾ ಪರಮೇಶ್ವರೀ ದೇವಾಲಯದಲ್ಲಿ ಸಂಭ್ರಮದಿಂದ ವಿವಾಹವಾಯಿತು.

ದಾವಣಗೆರೆಯ ಶ್ರೀ. ಕಾಸನ ಶ್ರೀನಿವಾಸ ಶೆಟ್ಟರು ಮೊದಲಾದ ಆದೇವರ್ಣದ ಪ್ರಮುಖರೂ ಅನೇಕ ಬ್ರಾಹ್ಮಣರೂ ಶ್ರೀಮತಿ ಬಳ್ಳಾರಿ ಸಿದ್ಧಮ್ಮನವರು ಶ್ರೀ, ಆನೇಕೊಂಡದ ಮುಪ್ಪಣ್ಣನವರು ಶ್ರೀ. ಶಾದಿ ಸಿದ್ಧಲಿಂಗಪ್ಪನವರು ಮೊದಲಾದ ವೀರಶೈವರೂ ಈ ವಿವಾಹವನ್ನು ಅಭಿನಂದಿಸಿ ಭಾಷಣ ಮಾಡಿದುದು ಯುಕ್ತವಾಗಿದೆ.

ವೈಶ್ಯ ವರ್ಣದವರು ಹಿಂದು ಸಮಾಜದಲ್ಲಿರುವ ಈ ದೋಷವನ್ನು ತೆಗೆದು ಹಾಕಲು ಹೀಗೆ ಮುಂದೆ ಬಂದುದಕ್ಕಾಗಿ ನಾವು ಈ ಮಹಾಶಯರನ್ನು ಹೃದಯಪೂರ್ವಕ ಅಭಿನಂದಿಸುತ್ತೇವೆ. ಈ ನೂತನ ವಧೂವರರು ಸಕಲ ಸಂಗತಿಗಳಲ್ಲಿಯೂ ಶ್ರೇಯಸ್ಸನ್ನು ಹೊಂದಲೆಂದು ಹಾರೈಸುತ್ತೇವೆ.

# ಸುಧಾರಿಸಿದ ರಾಷ್ಟ್ರಗಳಲ್ಲಿ

## ಪತ್ರಿಕೆಗಳ ಪ್ರಚಾರ.

ಜರ್ಮನಿಯ ರಾಜಧಾನಿಯಾದ ಬರ್ಲಿನಿನಲ್ಲಿ ೮೦ ದಿನಪತ್ರಿಕೆಗಳಿವೆ. ಇವುಗಳಲ್ಲಿ ಒಂದೆರಡು ಪತ್ರಿಕೆಗಳು ದಿನಕ್ಕೆ ಮೂರು ಬಾರಿ ಪ್ರಕಟವಾಗುವುವೆಂದರೆ ಅವರ ಪತ್ರಿಕಾಭಿರುಚಿಯನ್ನೂಹಿಸಬಹುದು. ಇವುಗಳು ದಿನಕ್ಕೆ ೩೫ ಲಕ್ಷಕ್ಕೆ ಮೀರಿ ಖರ್ಚಾಗುವವು. ವಾರಕ್ಕೆ ಬರ್ಲಿನಿನ ೨೦ ಲಕ್ಷ ವಾರ ಪತ್ರಿಕೆಗಳು ಖರ್ಚಾಗುತ್ತಿವೆ. ಶೈಕ್ಷಣಿಕ ಪತ್ರಿಕೆಗಳೇ ೧೦ ಲಕ್ಷಕ್ಕೂ ಮೀರಿ ವಿಕ್ರಯಿಸಲ್ಪಡುವವು.

ಲಂಡನ್ನಿನಲ್ಲಿ ೬೨ ಪತ್ರಿಕೆಗಳಿವೆ. ಇವುಗಳಲ್ಲಿ ಪ್ರಾತಃಕಾಲದವು ೨೧ ದೈನಿಕ, ಸಾಯಂಕಾಲದ ದೈನಿಕ ಪತ್ರಿಕೆಗಳು ೬ ಇವೆ. ಇಂಗ್ಲೆಂಡ್ ಮತ್ತು ವೇಲ್ಸ್‌ನಲ್ಲಿ ಪ್ರಾತಃಕಾಲ ದೈನಿಕ ೩೫. ಸಂಜೆಯ ದೈನಿಕ ೮೦, ಇವೆ. ೪|| ಕೋಟಿ ಜನಸಂಖ್ಯೆಯುಳ್ಳ ಬ್ರಿಟನ್ನಿನಲ್ಲಿ ೧೭೫ ದೈನಿಕಗಳಿವೆ. ಇಷ್ಟೊಂದು ಪತ್ರಿಕೆಗಳಿದ್ದರೂ ಅವುಗಳ ಚಂದಾದಾರರೇನು ಕಡಿಮೆಯಿದೆಯೇ? ಕೆಳಗಿನ ಸಂಖ್ಯೆ ಗಮನಿಸಿರಿ.— 'ಡೈಲಿಮೈಲ್' ೧೮,೧೭,೧೫೦; 'ಡೈಲಿಸ್ಕೆಚ್' ೮,೩೭,೬೦೦; 'ಡೈಲಿ ಎಕ್ಸಪ್ರೆಸ್' ೮,೫೫,೦೦೦; 'ಈವಿನಿಂಗ್ ನ್ಯೂಸ್' ೮,೯೪,೬೦೦, 'ಸ್ಟಾರ್' ೮,೦೨,೬೦೦; 'ನ್ಯೂಸ್ ಓಫ್ ದಿ ವರ್ಲ್ಡ್' ೩೦ ಲಕ್ಷ, (ಈ ಪತ್ರಿಕೆಯನ್ನು ಪ್ರಕಟಿಸಲು ಪ್ರತಿಸಲಕ್ಕೆ ೫೨ ಟನ್ ಕಾಗದ ಬೇಕಾಗುತ್ತದೆ.) ಎರಡು ಸಾವಿರ ಜನಸಂಖ್ಯೆ ಇರುವ ಚಿಕ್ಕದೊಂದು ಊರಿನಲ್ಲಿ ಖರ್ಚಾಗುವ ಪತ್ರಿಕಾಸಂಖ್ಯೆ ನೋಡಿರಿ— ದೈನಿಕ ೮೭೨, ವಾರಪತ್ರಿಕೆ ೩೬೨, ಆದಿತ್ಯವಾರದ್ದು ೪೫೦, ಮಾಸ ಪತ್ರಿಕೆ ೫೨೦ ಆಗಿದೆ.

ಅಮೇರಿಕದ ಸಂಖ್ಯೆಗಳನ್ನು ಗಮನಿಸಿರಿ— ೭೨೦ ಪ್ರಾತಃಕಾಲದವು, ೧೭೨೧ ಸಾಯಂಕಾಲದವು (ದೈನಿಕ) ೧೩,೬೬೦ ವಾರ ಪತ್ರಿಕೆಗಳು; ೯೩ ವಾರಕ್ಕೆ ಮೂರಾವೃತ್ತಿಯವು, ೪೫೦ ಪಾಕ್ಷಿಕ; ೩೫೧೭ ಮಾಸಿಕ, ೧೨೦ ದ್ವೈಮಾಸಿಕ, ೪೧೦ ತ್ರೈಮಾಸಿಕ; ೮೦ ಇತರ ಪತ್ರಿಕೆಗಳಿವೆ. 'ನ್ಯೂಯಾರ್ಕ್‌ಟೈಮ್ಸ್' ಪ್ರಚಾರಕ್ಕೆ ದಿನ ೧ ಕ್ಕೆ ೩೦,೦೦೦ ರೂಪಾಯಿ ಖರ್ಚು ತಗಲುತ್ತದೆ. ಅದರಲ್ಲಿ ೩೦೧೯ ಕೆಲಸಗಾರರು ಗೇಯುತ್ತಾರೆ. ವಾರ್ಷಿಕ ಉತ್ಪತ್ತಿ ೫೪,೦೦,೦೦೦ ಪೌಂಡು! ವರ್ಷ ೧ಕ್ಕೆ ೧,೧೦೦,೦೦೦ ಪೌಂಡ್ ಬೆಲೆಯ ಕಾಗದ! ದಿನಂಪ್ರತಿ ೪,೦೦,೦೦೦ ಪ್ರತಿ! ಆದಿತ್ಯವಾರ ೭,೦೦,೦೦೦ ಪ್ರತಿ! ಅದಕ್ಕೆ ೮೦೦೦ ನಗರಗಳಲ್ಲಿ ಚಂದಾದಾರರಿದ್ದಾರೆ. 'ಅಮೇರಿಕನ್' ಎಂಬ ಮಾಸಿಕಕ್ಕೆ ೨೨,೦೦,೦೦೦ ಚಂದಾದಾರರು.

ಜಪಾನಿನಲ್ಲಿ ೪೦೦೦ ಕ್ಕೂ ಮೀರಿ ಪತ್ರಿಕೆಗಳಿವೆ. ನಮ್ಮ ಭಾರತದ ಜನಸಂಖ್ಯೆ ಗ್ರೇಟ್‌ಬ್ರಿಟನಿಗಿಂತ ೮ ಪಾಲಷ್ಟು ಹೆಚ್ಚಿದೆ. ಆದರೆ ಪತ್ರಿಕೆಗಳೆಷ್ಟಿವೆ! ಅದರಲ್ಲೂ ಕರ್ನಾಟಕದ ಪತ್ರಿಕೆಗಳ ಗತಿ ಯೋಚಿಸಿರಿ. ಪತ್ರಿಕೆಗಳ ಜನ್ಮವೇ ಕಡಿಮೆ. ಜನ್ಮಿಸಿದವುಗಳೂ ಅಪಮೃತ್ಯುವಿಗೀಡಾಗುತ್ತಿರುವುವು. ಇದಕ್ಕೆ ಕಾರಣವೇನು? ಜನರಲ್ಲಿ ಇನ್ನೂ ಪತ್ರಿಕಾಭಿರುಚಿ ಮೊಳೆದೋರಿಲ್ಲ. ಓದುವವಲ್ಲಿ ಬೇಡಿ ಓದುವವರೇ ಹೆಚ್ಚು ಮಂದಿ. ಪತ್ರಿಕಾ ವಾಚನವು ಕರ್ತವ್ಯವೆಂದಾಗಲೀ ಜ್ಞಾನಾಭಿವೃದ್ಧಿಯ ಮಾರ್ಗವೆಂದಾಗಲೀ ಭಾವಿಸುವದಿಲ್ಲ. 'ಕೇವಲ ಕಾಲಯಾಪನೆಗಾಗಿ' ಎಂಬ ಭಾವನೆ ಹಲವರಿಗಿದೆ. ಆದುದರಿಂದಲೇ ನಮ್ಮ ಪತ್ರಿಕೆಗಳಿಗೀ ತೆರದ ಕಷ್ಟ ಪ್ರಾಪ್ತಿ. ೧|| ಕೋಟಿಗೂ ಮಿಕ್ಕಿ ಇರುವ ಕನ್ನಡಿಗರ ಮಧ್ಯದಲ್ಲಿ ಜನ್ಮಿಸಿರುವ ಯಾವ ಪತ್ರಿಕೆಗೂ (ಒಂದೆರಡನ್ನುಳಿದು) ೫ ಸಾವಿರಕ್ಕಿಂತ ಮಿಕ್ಕಿದ ಚಂದಾದಾರರಿಲ್ಲವೆಂದರೆ ಕನ್ನಡಿಗರಿಗೆಷ್ಟು ಲಾಂಛನಾಸ್ಪದ!!

ಆಂಧ್ರ ದೇಶದ ಆಂಧ್ರ ಪತ್ರಿಕೆಗೆ ೫೦ ಸಾವಿರಕ್ಕೂ ಮಿಕ್ಕಿ ಚಂದಾದಾರರಿರುವಾಗ ನೆರೆ ಪ್ರಾಂತದವರಾದ ಕನ್ನಡಿಗರಿಗೀತೆರದ ದುರವಸ್ಥೆ ಎಂದರೆ ಏನು ನಾಚಿಕೆಗೇಡು! ಕನ್ನಡಿಗರೇನು ಅಭಿಮಾನಶೂನ್ಯರೇ? ಅಥವಾ ಜಿಪುಣರೇ? ನಿತ್ಯದ ದುಂದುವ್ಯಯದಲ್ಲಿನ ಪುಡಿ ಕಾಸುಗಳನ್ನು ಎತ್ತಿ ಪತ್ರಿಕೆಗಳಿಗೆ ಇತ್ತರೆ ಜ್ಞಾನಾಭಿವೃದ್ಧಿಯ ಜೊತೆಯಲ್ಲಿ ಕನ್ನಡ ಸಾಹಿತ್ಯಾಭಿವೃದ್ಧಿಯಾಗದಿದ್ದೀತೆ? ಬ್ರಿಟನ್, ಜರ್ಮನಿ, ಅಮೇರಿಕ, ಜಪಾನ ಮುಂತಾದ ದೇಶಗಳೇಳ್ಗೆಗೆ ಸಹಕಾರಿಯಾದ ಪತ್ರಿಕೆಗಳ ಮರ್ಮವನ್ನು ನೀವರಿಯಿರೇ? ವಿಲಾಸಾದಿಗಳಲ್ಲಿ ಅವರನ್ನನುಸರಿಸುವ ನಾವೇಕೆ ಈ ವಿಷಯದಲ್ಲಿ ಅನುಸರಿಸಬಾರದು? ಹರಿಹಂಚಾಗಿ ಹರಡಿರುವ ಕರ್ನಾಟಕದಲ್ಲಿ ಐಕ್ಯವನ್ನೂ ಸ್ಥಿರವಾದ ಏಳಿಗೆಯನ್ನೂ ಬಯಸುವಿರಾದರೆ ಕರ್ನಾಟಕವು ಲೋಕದಿದಿರಿನಲ್ಲಿ ಉಜ್ವಲ ಯಶಸ್ಸಿನಿಂದ ಬೆಳಗಬೇಕೆಂದಿಚ್ಛಿಸುವಿರಾದರೆ ಕರ್ನಾಟಕ ಪತ್ರಿಕೆಗಳಿಗೆ ಮುಕ್ತ ಹಸ್ತದಿಂದ ನೆರವಾಗಿ ಉದ್ಧರಿಸಿರಿ. ಕರ್ನಾಟಕದ ಅಭ್ಯುದಯವನ್ನು ಸಾಧಿಸಿರಿ.

"ನವಶಕ್ತಿ."

---

## ತಾಂಡೂರಲ್ಲಿ

## ತರುಣ ಸಂಘದವರ ಮೇಲೆ ವ್ಯಾಜ್ಯ.

ನಿಜಾಮ ರಾಜ್ಯದ ತಾಂಡೂರಿನ ವೀರಶೈವ ತರುಣ ಸಂಘದ ಅಧ್ಯಕ್ಷರಾದ ಶ್ರೀ. ಗಣಾಪುರ ಶಂಕರಪ್ಪನವರು ಕಾರ್ಯದರ್ಶಿಗಳಾದ ಶ್ರೀ. ಚಿನಮಳ್ಳಿ ರಾಚಯ್ಯ ಸ್ವಾಮಿಯವರು ವೈಶ್ಯ ಯುವಕ ಸಂಘದ ಅಧ್ಯಕ್ಷರಾದ ಶ್ರೀ. ಟಿ. ಕನಕಯ್ಯನವರು ಮೊದಲಾದ ಹಿಂದುಗಳಮೇಲೆ ಇವರು ಹೋಳಿ ಹಬ್ಬದಲ್ಲಿ ಗಲಾಟೆಮಾಡಿದರೆಂದು ಈಗ ಇಲ್ಲಿಯ ಪೋಲಿಸರು ವ್ಯಾಜ್ಯ ಹೂಡಿದ್ದಾರೆ.

ಈ ವ್ಯಾಜ್ಯಕ್ಕೋಸ್ಕರ ಹೈದರಾಬಾದಿನಿಂದ ವಕೀಲರು ಬರುವವರಿದ್ದಾರೆ. ವ್ಯಾಜ್ಯವು ತಾ. ೬-೭-೩೮ ನೆಯ ದಿನ ನಡೆಯುವದಿದೆ.

## ಗುಲಬಗರ್ಾದಲ್ಲಿ ಹೊಡೆದಾಟ.

ಗುಲಬಗರ್ಾದಲ್ಲಿ ಕೆಲವು ಆರ್ಯ ಸಮಾಜದವರಿಗೂ ಮುಸಲ್ಮಾನರಿಗೂ ಹೊಡೆದಾಟವು ಕಳೆದ ವಾರದಲ್ಲಿ ನಡೆದು ಕೆಲವರಿಗೆ ಗಾಯಗಳಾಗಿವೆ.

ಓರ್ವ ಸುದ್ದಿಗಾರ

---

— ಶ್ರೀ. ಶ್ರೀನಿವಾಸ ಶಾಸ್ತ್ರಿಗಳನ್ನು ಅನ್ನಾಮಲಾಯಿ ವಿಶ್ವವಿದ್ಯಾಲಯಕ್ಕೆ ಇನ್ನೂ ಮೂರುವರುಷ "ವ್ಹಾಯಿಸ್ ಚಾನ್ಸಲರ್"ರನ್ನಾಗಿ ನಿಯಮಿಸಿದ್ದಾರೆ.

— ಅಯೋಧ್ಯಾ ಮಹಾರಾಣಿಯವರಾದ ಶ್ರೀ ಜಗದಂಬಾದೇವಿಯವರಿಗೆ ಔಷಧಿಯನ್ನು ಕೊಡುವಾಗ ದಾಸಿಯು ತಿಳಿಯದೆ ವಿಷಯುಕ್ತ ಔಷಧಿಯನ್ನು ಕೊಟ್ಟಿದ್ದರಿಂದ ಮೃತಪಟ್ಟರು.

ಪ್ಯಾಲಿಸ್ಟಾಯಿನ್ ದಲ್ಲಿ ಪುನಃ ಗೊಂದಲ ಪ್ರಾರಂಭವಾಗಿ ಏಳುಜನ ಅರಬರನ್ನು ಸಂಹಾರ ಮಾಡಿದರು.

# ಸಾದರ ಸ್ವೀಕಾರ.

**ವಿಮಾವಾಣಿಜ್ಯ—** ಶ್ರೀಮಾನ್ ಜೆ. ವಿ. ದೊಡ್ಡವೀರಪ್ಪನವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿರುವ "ವಿಮಾ ವಾಣಿಜ್ಯ" ಎಂಬ ಮಾಸಪತ್ರಿಕೆಯ ಮೂರನೆಯ ವಿಶೇಷ ಸಂಚಿಕೆಯು ನಮ್ಮ ಕಡೆ ಬಂದಿದೆ. ಇದು ಈ ಮುಂಚಿನ ಎರಡು ವಿಶೇಷ ಸಂಚಿಕೆಗಳಂತೆಯೇ ಸರ್ವಾಂಗಸುಂದರವಾದುದು. ಆರ್ಥಿಕ ವಿಚಾರವಾಗಿ ಚರ್ಚಿಸಿ ಸರಿಯಾದ ರೀತಿ ನೀತಿಗಳನ್ನು ತಿಳಿಸುವುದು ಕರ್ನಾಟಕದಲ್ಲಿ ಇದೊಂದೇ ಪತ್ರಿಕೆಯಾಗಿದೆ. ಪ್ರತಿಸಾರೆಯಂತೆ ಅನೇಕ ಪ್ರಮುಖರ ಸಂದೇಶಗಳೂ ಮಹತ್ವದ ಲೇಖನಗಳೂ ಪ್ರಕಟವಾಗಿವೆ.

ಸಾಂಪತ್ತಿಕ ಸ್ಥಿತಿಯನ್ನು ಸುಧಾರಿಸಿಕೊಳ್ಳಲು ಪ್ರಯತ್ನಿಸುತ್ತಿರುವ ಸಕಲರೂ ಇದನ್ನು ಅವಶ್ಯಕವಾಗಿ ಓದಬೇಕು. ಕನ್ನಡ ನಾಡಿಗೆ ಬಹು ಪ್ರಯೋಜನವಾಗಿರತಕ್ಕ ಈ ಮಹತ್ಕಾರ್ಯವನ್ನು ಶ್ರೀಮಾನ್ ದೊಡ್ಡವೀರಪ್ಪನವರು ಹೀಗೆ ವರ್ಷ ವರ್ಷ ಹೆಚ್ಚು ಪರಿಣಾಮಕಾರಿಯಾಗಿ ಮಾಡುತ್ತಿರುವುದು ಅತ್ಯಂತ ಅಭಿನಂದನೀಯವಾದುದು

**ನವಶಕ್ತಿ—** ಉಡಪಿಯಲ್ಲಿ ಶ್ರೀಮಾನ್ ವಿ. ಎಸ್. ಬನ್ನಂಜೆ ರಾಮಾಚಾರ್ಯರ ಸಂಪಾದಕತ್ವದಲ್ಲಿ ಇದೊಂದು ಮಾಸ ಪತ್ರಿಕೆ ಪ್ರಕಟವಾಗುತ್ತದೆ.

ಇದರಲ್ಲಿ ಹೊಸ ವಿಚಾರಸರಣಿಯ ನಾಟಕ ಕಥೆ ಲೇಖನಗಳು ಪ್ರಕಟವಾಗುತ್ತವೆ. ಹಿಂದು ದೇಶದ ಅವನತಿಗೆ ಹಿಂದುಗಳಲ್ಲಿರುವ ದೈವವಾದವು ಹೇಗೆ ಕಾರಣವಾಗಿದಯೆಂಬುದನ್ನು ಒಂದು ಲೇಖನದಲ್ಲಿ ಶ್ರೀ, ಕೊರಡಲ್ ಶ್ರೀನಿವಾಸರಾಯರು ಬಹು ಚೆನ್ನಾಗಿ ತಿಳಿಸಿದ್ದಾರೆ.

ಕರ್ನಾಟಕ ಏಕೀಕರಣದ ಈಗಿನ ಚಟುವಟಿಕೆ ಫಲಕಾರಿಯಲ್ಲವೆಂದೂ ಈಗಿನ ಕರ್ನಾಟಕವೆಲ್ಲಾ ಒಂದೇ ಪ್ರಾಂತವಾಗುವುದು ಶಕ್ಯವಿಲ್ಲವೆಂದೂ ನಾಲ್ಕು ಪ್ರಾಂತಗಳನ್ನು ಮಾಡಬೇಕೆಂದೂ ಶ್ರೀ. ವಿಚಾರಾನಂದ ಸ್ವಾಮಿಗಳು ಪ್ರಶ್ನೋತ್ತರ ರೂಪದಲ್ಲಿ ಒಂದುಲೇಖನವನ್ನು ಬರೆದಿದ್ದಾರೆ.

ಪತ್ರಿಕೆಯ ಮುದ್ರಣ ಬಹು ಅಂದವಾಗಿದೆ. ಸಕಲರೂ ಓದಬೇಕಾದುದು. ಕ್ರೌನ್ ನಾಲ್ಕನೆಯ ಒಂದು ಆಕಾರದ ೬೦ ಪುಟಗಳ ಪತ್ರಿಕೆಯಾಗಿದ್ದರೂ ವಾರ್ಷಿಕ ಚಂದಾ ೨|| ರೂ. ಮಾತ್ರ ಇದೆ. ಇದು ಕನ್ನಡಿಗರಿಂದ ತುಂಬಾ ಪ್ರೋತ್ಸಾಹಿಸಲ್ಪಡಲೆಂದು ಹಾರೈಸುತ್ತೇವೆ.

**ಕನ್ನಡ ಕೋಗಿಲೆ—** ಇದೊಂದು ಕನ್ನಡ ಮಾಸಪತ್ರಿಕೆ. ನರೇಗಲ್ಲಲ್ಲಿ (ಜಿ. ಧಾರವಾಡ) ಹೊರಡುತ್ತದೆ. ಸಂಪಾದಕರು ಶ್ರೀ ಪಂಚಾಕ್ಷರಿ ಗುರುಪಾದ ಮಠ ಇವರು. ವಾರ್ಷಿಕ ಚಂದಾ ೧|| ರೂ ಕ್ರೌನ್ ನಾಲ್ಕನೆಯ ಆಕಾರದ ೨೮ ಪುಟಗಳಿವೆ.

ಇದರಲ್ಲಿ ಕಥೆ, ಕಾದಂಬರಿ, ಕವಿತೆ, ಮೊದಲಾದ ಉಪಯುಕ್ತ ವಿಷಯಗಳಿವೆ. ಹರ್ತಿಯ ಶ್ರೀ. ಸದಾಸಿವ ಎಂಬುವವರು "ದುಶ್ಚಟ ದೇವಿಯ ದರ್ಬಾರ" ಎಂಬ ಚಿಕ್ಕ ನಾಟಕವನ್ನು ಬರೆದು ಚಹಾ, ತಂಬಾಕು ಮೊದಲಾದ ಚಟಗಳಿಂದ ಹಾಳಾಗುತ್ತಿರುವದನ್ನು ಚೆನ್ನಾಗಿ ಚಿತ್ರಿಸಿದ್ದಾರೆ. ಮುದ್ದಾದ ಮುದ್ರಣ. ಸಕಲರೂ ಓದಬೇಕಾದುದು. ಇದು ಕನ್ನಡ ನಾಡಿನವರಿಂದ ಚೆನ್ನಾಗಿ ಪೋಷಿಸಲ್ಪಡಲೆಂದು ಹಾರೈಸುತ್ತೇವೆ.

---

# ಶಾಂತಿ ಸೈನಿಕರ ನಿಯಮ.

ಮಹಾತ್ಮಾ ಗಾಂಧಿಯವರು ಜಾತಿ ಜಗಳ ನಿವಾರಣೆಗಾಗಿ ಏರ್ಪಡಬೇಕೆಂಬ ಶಾಂತಿ ಸೈನ್ಯದಲ್ಲಿ ಸೇರುವವರ ನಿಯಮಗಳು.—

೧. ಅಹಿಂಸೆಯಲ್ಲಿ ಅಚಲ ಶ್ರದ್ಧೆಯಿರಬೇಕು. ದೇವರಲ್ಲಿ ಅಚಲ ಭಕ್ತಿ ಇಲ್ಲದೆ ಇದು ಸಾಧ್ಯವಾಗದು. ಅಹಿಂಸಾ ವಾದಿಗೆ ಪರಮಾತ್ಮನ ಆಶೀರ್ವಾದ ಸಾಮರ್ಥ್ಯಗಳ ನೆರವಿಲ್ಲದಿದ್ದರೆ ಅವನಿಂದ ಯಾವ ಕಾರ್ಯವೂ ಅಗದು. ಕ್ರೋಧ ಭಯ ದ್ವೇಷ ವರ್ಜಿತನಾಗಿ ಸಾಯುವದು ಕೂಡಾ ಅವನಿಗೆ ಸಾಧ್ಯವಿಲ್ಲ. ದೇವರಲ್ಲಿಯ ಪರಮ ವಿಶ್ವಾಸವೇ ಇಂತಹ ಶಕ್ತಿಗೆ ಕಾರಣವಾಗಿವೆ. ದೇವರು ಸರ್ವಾಂತರ್ಯಾಮಿ ಎಂಬ ಅಂಶವನ್ನು ನಾವು ಅರಿತುಕೊಂಡರೆ ಶತ್ರುಗಳನ್ನು ಕೂಡ ಪ್ರೀತಿಸುವ ಬುದ್ಧಿಯುತ್ಪನ್ನವಾಗುವದು. ಮಾನವನಲ್ಲಿಯ ವಿಷವೃತ್ತಿಯು ಕಮರಿಹೋಗುವದು.

೨. ಜಗತ್ತಿನ ಎಲ್ಲ ಧರ್ಮಗಳನ್ನೂ ಸಮವಾಗಿ ಎಣಿಸಬೇಕು. ಬೇರೆ ಬೇರೆ ಧರ್ಮಗಳ ಮೂಲ ತತ್ವಗಳನ್ನು ಅವರು ಅರಿತವರಾಗಬೇಕು.

೩. ಸಾಮಾನ್ಯವಾಗಿ ಶಾಂತಿ ಸ್ಥಾಪನೆಯ ಕಾರ್ಯವು ಸ್ಥಳೀಯ ಜನರಿಂದ ತಮ್ಮ ಕ್ಷೇತ್ರಗಳಲ್ಲಿಯೇ ಮಾಡಲ್ಪಡತಕ್ಕದ್ದು.

೪. ಈ ಕಾರ್ಯವನ್ನು ವೈಯಕ್ತಿಕವಾಗಲಿ ಸಾಮೂಹಿಕವಾಗಲಿ ಮಾಡಬಹುದಾದ್ದರಿಂದ ಜೊತೆಗಾರರ ಸಲುವಾಗಿ ಕಾಯಬೇಕಾದುದಿಲ್ಲ. ಆದರೂ ಸ್ವ ಸ್ಥಳದಲ್ಲಿ ತನ್ನ ಜೊತೆಗಾರರದೊಂದು ಪಥಕವನ್ನು ಯಾರಾದರೂ ರಚಿಸಲಡ್ಡಿಯಿಲ್ಲ.

೫ ಈ ಶಾಂತಿದೂತನು ತನ್ನ ಕ್ಷೇತ್ರದಲ್ಲಿರುವ ಎಲ್ಲ ಜನರ ಪರಿಚಯವನ್ನು ಮಾಡಿಕೊಂಡು ಅವರ ಸಂಬಂಧವನ್ನಿಟ್ಟುಕೊಳ್ಳಬೇಕು. ದಂಗೆಯ ಪ್ರಸಂಗಗಳಲ್ಲಿ ಅಪರಿಚಿತನಂತೆ ಮುಂದರಿಯುವದು ಯೋಗ್ಯವಾಗದು.

೬. ಇವನ ವರ್ತನವೂ ನಿಷ್ಪಕ್ಷಪಾತತನದ್ದೂ ದ್ವೇಷಾತೀತವು ಇರಬೇಕೆಂದು ಹೇಳುವದವಶ್ಯವಿಲ್ಲ.

೭. ಸಾಮಾನ್ಯವಾಗಿ ದಂಗೆಯ ಲಕ್ಷಣಗಳು ಮೊದಲೇ ಕಂಡುಬರುವದುಂಟು. ಹಾಗೆ ಕಂಡುಬಂದಕೂಡಲೇ ಕಲಹಾಗ್ನಿಯು ಪ್ರಜ್ವಲಿಸುವ ಮೊದಲೇ ಅದನ್ನು ಆರಿಸಿಬಿಡಲು ಯತ್ನಿಸಬೇಕು.

೮. ಸ್ಥಿರ ಕಾರ್ಯಕರ್ತರು ದಂಗೆಯು ಹಬ್ಬಿದಾಗ ಅವಶ್ಯವೆನಿಸಿದರೂ ಅವರು ಯಾವಾಗಲೂ ಬೇಕಾಗುವದಿಲ್ಲ. ಒಳ್ಳೆಯ ಸ್ತ್ರೀ ಪುರುಷರನ್ನು ಶಕ್ಯವಿದ್ದಷ್ಟು ಕಲೆ ಹಾಕಬೇಕು. ಬೇರೆಬೇರೆ ವ್ಯವಸಾಯಗಳಲ್ಲಿ ತೊಡಗಿದ ಆದರೆ ಪರಸ್ಪರರಲ್ಲಿ ಸ್ನೇಹ ಸೌಹಾರ್ದತೆಯನ್ನು ವೃದ್ಧಿಗೊಳಿಸಬೇಕೆನ್ನುವ ಜನರನ್ನು ಸ್ವಯಂ ಸೇವಕರನ್ನಾಗಿ ಆರಿಸಿಕೊಳ್ಳಬೇಕು.

೯. ಈ ಶಾಂತಿಪಥಕದ ಸೈನಿಕನಿಗೆ ಒಂದು ವಿಶಿಷ್ಟ ಸಮವಸ್ತ್ರವಿರತಕ್ಕದ್ದು. ಅಂದರೆ ಅವರು ಸುಲಭವಾಗಿ ಗುರುತಿಸಲ್ಪಡುವರು.

ಇವು ಸಾಮಾನ್ಯ ಸೂಚನೆಗಳು ಪ್ರತಿಯೊಂದು ಕೇಂದ್ರವು ಇವುಗಳ ತಳಹದಿಯ ಮೇಲೆ ತನಗೆ ತಕ್ಕಂತೆ ಘಟನೆಯನ್ನು ಮಾಡಿಕೊಳ್ಳಬಹುದು. ಈ ಶಾಂತಿಪಥಕದ ಸಂಘಟನೆಯಲ್ಲಿ ನಾನು ಪ್ರತ್ಯಕ್ಷ ಭಾಗ ವಹಿಸಬಹುದೆಂದು ಯಾರೂ ತಿಳಿಯಕೂಡದು. ವೇಳೆ ಶಕ್ತಿ ಆರೋಗ್ಯ ಇವಾವೂ ನನಗಿಲ್ಲ.

# ಹಳ್ಳಿಗಳಲ್ಲಿ ಪ್ರಾಥಮಿಕ ಶಿಕ್ಷಣ.

## ಮುಂಬೈ ಸರಕಾರದ ಯೋಜನೆ.

ಮುಂಬೈ ಸರಕಾರದ ಠರಾವು ಕೆಳಗಿನಂತಿದೆ—

ಮುಂಬೈ ಪ್ರಾಂತದಲ್ಲಿ ೨೧೬೬೮ ಗ್ರಾಮಗಳಿವೆ. ಅವುಗಳಲ್ಲಿ ೧೪೯೩ ಗ್ರಾಮಗಳಲ್ಲಿ ಶಾಲೆಗಳೇ ಇಲ್ಲ. ಈ ಹಳ್ಳಿಗಳಿಗೆ ಶಿಕ್ಷಣ ವ್ಯವಸ್ಥೆಮಾಡುವ ಪ್ರಶ್ನೆಗೆ ಅನೇಕ ಅಡಚಣಿಗಳಿವೆ. ಸುಮಾರು ೩೦೦ ಹಳ್ಳಿಗಳಲ್ಲಿ ಒಂದೊಂದರಲ್ಲಿ ೯೫೦ ಜನರಿರುವರು. ಉಳಿದವುಗಳು ಸಣ್ಣವಿರುವವು. ೮೩೭೧ ಹಳ್ಳಿಗಳ ಜನಸಂಖ್ಯೆಯು ೪೦೦ ಕ್ಕೆ ಕಡಿಮೆ ಇರುವದು. ಇಂಥ ಹಳ್ಳಿಗಳಲ್ಲಿ ಲೋಕಲ್ ಬೋರ್ಡ ಶಾಲೆಗೆ ಬೇಕಾಗುವಷ್ಟು ಹುಡುಗರು ದೊರೆಯುವದು ಕಠಿಣ. ಇದಲ್ಲದೆ ಒಬ್ಬನೇ ಶಿಕ್ಷಕನಿರುವ ಶಾಲೆ ಇರುವದು ಸರಕಾರದ ಮನಸ್ಸಿಗೆ ಬರುವದಿಲ್ಲ.

ಇಷ್ಟೆಲ್ಲ ಅಡಚಣಿಗಳಿದ್ದರೂ ಸರಕಾರವು ಹಳ್ಳಿಗಳನ್ನು ಅಲಕ್ಷಿಸಬಾರದು. ಸರಕಾರವು ಈ ಬಗ್ಗೆ ದೀರ್ಘವಾಗಿ ವಿಚಾರಿಸಿ ಈಗಿರುವ ಸಾಧನಗಳನ್ನೇ ಅವಲಂಬಿಸಲಾಗದೆಂದು ನಿಶ್ಚಯಿಸಿದೆ. ಮೊದಲು ಊರೂರಿಗೆ ಗಾವಠಿಶಾಲೆಗಳಿದ್ದು ಶಿಕ್ಷಣದ ಕಾರ್ಯವನ್ನು ಮಾಡುತ್ತಿದ್ದವು. ಸರಕಾರವು ಈಗ ಅಂಥ ಸ್ವತಂತ್ರ ಶಾಲೆಗಳಿಗೆ ಪ್ರೋತ್ಸಾಹ ಕೊಡಲು ನಿರ್ಧರಿಸಿದೆ, ಅನೇಕ ವ್ಯಕ್ತಿಗಳು ಮತ್ತು ಸಂಸ್ಥೆಗಳು ಸ್ವತಂತ್ರ ಶಾಲೆಗಳನ್ನು ತೆರೆಯುವ ಬಗ್ಗೆ ಸರಕಾರಕ್ಕೆ ಬಿನ್ನಹವಿಸಿಕೊಂಡಿರುವರು. ಆದ್ದರಿಂದ ಸರಕಾರವು ಜನರಿಗೆ ಮತ್ತು ಸ್ಥಳಗಳಿಗೆ ಅವರಿಗೆ ಸಲ್ಲುವಷ್ಟು ಹಳ್ಳಿಗಳಲ್ಲಿ ಶಾಲೆಗಳನ್ನು ತೆಗೆಯಲು ಪ್ರೋತ್ಸಾಹ ಕೊಡಲು ಇಂಥ ಶಾಲೆಗಳಿಗೆ ಧನಸಹಾಯಮಾಡಲಾಗುವದು. ಮತ್ತು ಇಂಥ ಶಾಲೆಗಳಿಗೆ ಆಗಾಗ್ಗೆ ಹೋಗಿ ಪಾಠ ಕಲಿಸುವ ಪದ್ಧತಿ ಮತ್ತು ಸಲಹೆಗಳನ್ನು ಕೊಡಲು ಸುಪರವಾಯಿಜರರಿಗೆ ತಿಳಿಸಲಾಗುವದು. ಆದ್ದರಿಂದ ಶಿಕ್ಷಣಾಭಿಮಾನಿಗಳು ಹಳ್ಳಿಗಳಲ್ಲಿ ಶಾಲೆಗಳನ್ನು ಪ್ರಾರಂಭಿಸಿ ಸ್ಕೂಲ ಬೋರ್ಡಿನ ಒಪ್ಪಿಗೆ ಪಡೆಯಬೇಕು.

ಪ್ರತಿ ವರುಷವೂ ಅನೇಕ ವಿದ್ಯಾರ್ಥಿಗಳು ಮ್ಯಾಟ್ರಿಕ್ ಪರೀಕ್ಷೆಗೆ ಕೂಡ್ರುವರು. ಅನೇಕರು ಸ್ಥಾನಿಕ ಭಾಷೆಯ ಮುಲ್ಕೀ ಪರೀಕ್ಷೆಗೆ ಕೂಡ್ರುವರು. ಮುಲ್ಕೀ ಪರೀಕ್ಷೆಗೆ ೧೯೩೬-೧೯೩೭ ರಲ್ಲಿ ೨೦೪೨೦ ವಿದ್ಯಾರ್ಥಿಗಳು ಕೂತಿದ್ದು ೭೭೧೭ ವಿದ್ಯಾರ್ಥಿಗಳು ಪಾಸಾದರು.

ಇವರಲ್ಲಿ ಶೇಕಡಾ ೫ ಕ್ಕಿಂತ ಕಡಿಮೆ ಜನರಿಗೆ ನೌಕರಿ ದೊರೆಯುವವು. ಉಳಿದವರು ಉದ್ಯೋಗವಿಲ್ಲದೆ ಇರುವರು. ಇವರನ್ನು ನೇಮಿಸಿಕೊಳ್ಳುವುದು ಹಿತಕರವು. ಇವರು ತಮ್ಮ ಊರಲ್ಲಿಯೇ ಇದ್ದುಕೊಂಡು ಉಪಜೀವನಕ್ಕೆ ಕೆಲವು ರೂಪಾಯಿಗಳನ್ನು ದೊರಕಿಸಿದಂತಾಗುವುದು. ಗ್ರ್ಯಾಂಟಿನ ಶಾಲೆಗಳಿಗೆ ಇಂಥ ಶಿಕ್ಷಕರಿಂದ ಬಹಳ ಸಹಾಯವಾಗುವದು. ವಿಶೇಷ ಪ್ರಸಂಗದಲ್ಲಿ ಪರೀಕ್ಷೆ ಪಾಸಾಗದಿದ್ದವರನ್ನು ನೇಮಿಸಿಕೊಂಡರೂ ಸರಕಾರವು ಆಕ್ಷೇಪಿಸುವುದಿಲ್ಲ.

ಶಾಲೆಯ ಕಟ್ಟಡದ ಬಗ್ಗೆ ಹೆಚ್ಚಿನ ಖರ್ಚು ಮಾಡುವ ಅವಶ್ಯಕತೆ ಇಲ್ಲ. ಲೋಕಲ್ ಬೋರ್ಡಿನ ಶಾಲೆಗಳಾಗಲಿ ಅಥವಾ ಗಾವಠಿ ಶಾಲೆಗಳಾಗಲಿ ಯೋಗ್ಯ ಜಾಗೆ ಸಾಕಷ್ಟು ಬೆಳಕು ಮತ್ತು ಮಳೆ ಬಿಸಿಲುಗಳಿಂದ ರಕ್ಷಣೆಯಾಗುವಂತೆ ಇದ್ದರೆ ತೀರಿತು. ಈ ಹಿಂದೆ ಅನೇಕ ಕಟ್ಟುಗಳನ್ನು ಹಾಕಿದ್ದರಿಂದಲೇ ಗಾವಠಿ ಶಾಲೆಗಳು ಮುಗ್ಗಿದವೆಂದು ಸರಕಾರಕ್ಕೆ ಅನ್ನಿಸುವದು.

ಈ ಶಾಲೆಗಳ ಮುಖ್ಯ ಉದ್ದೇಶವು ಅಕ್ಷರ ಜ್ಞಾನವಾದರೂ ಬೇರೆ ಬೇರೆ ಶಾಲೆಗಳು ಬೇರೆ ಬೇರೆ ಕಾರ್ಯಗಳನ್ನು ಸಾಗಿಸಬಹುದು.

ಸಹಕಾರಿ ಅಧಿಕಾರಿಗಳು ಶೈಕ್ಷಣಿಕ ಮತ್ತು ಕಂದಾಯದ ಅಧಿಕಾರಿಗಳು ಸಾಧ್ಯವಿದ್ದ ಪ್ರತಿಯೊಂದು ರೀತಿಯಲ್ಲಿ ಸಹಾಯ ಮಾಡುವದಕ್ಕೆ ಸೂಚಿಸಲ್ಪಡುವರು. ಗಾವಠಿ ಶಾಲೆಗಳಿಗೆ ದೇವಾಲಯಗಳನ್ನು ಕೊಡಲು ಹಳ್ಳಿಯವರಿಗೆ ತಿಳಿಸಲಾಗುವದು. ಜನತೆಯು ಸರಕಾರದ ಈ ಬಿನ್ನಹಕ್ಕೆ ಮಾನ್ಯತೆ ಕೊಡುವದೆಂದು ಆಶಿಸಲ್ಪಡುವದು. ಈ ಬಗ್ಗೆ ಪತ್ರವ್ಯವಹಾರ ಮಾಡುವವರು ಡಾಯರೆಕ್ಟರ ಆಫ್ ಪಬ್ಲಿಕ್ ಇನಸ್ಟ್ರಕ್ಸನ್ ಮುಂಬಯಿ ಪ್ರಾಂತ ಪುಣೆ ಇವರಿಗೆ ಬರೆಯಬೇಕು.

---

## ಹಿಂದೂಮಹಾಸಭೆಯ ಪ್ರಚಾರಕಾರ್ಯ.

ಸಾಂಪ್ರತ ಹಿಂದೂ ಧರ್ಮ, ಹಿಂದೂ ಸಮಾಜಗಳಮೇಲೆ ಆಕ್ರಮಣಗಳು ನಡೆದಿರುವದನ್ನು ದಿನಾಲು ನಾವು ನೋಡುತ್ತೇವೆ. ವಿಧರ್ಮೀಯರ ಕೇವಲ ಅನ್ಯಾಯ ಆಕ್ರಮಣಗಳಿಂದ ಹಿಂದೂ ಸಮಾಜವನ್ನು ಸಂರಕ್ಷಿಸುವದೇ ಹಿಂದೂ ಮಹಾಸಭೆಯ ಮುಖ್ಯ ಕಾರ್ಯವಾಗಿದೆ. ಹಿಂದೂ ಮಹಾಸಭೆಯ ಪ್ರಸಾರವು ಕರ್ನಾಟಕದಲ್ಲಿ ಇಲ್ಲದ ಮೂಲಕ ಮುದ್ದಾಂ ಶ್ರೀ. ಶ್ರೀ. ಮಹಾದೇವ ಶಾಸ್ತ್ರಿ ದಿವೇಕರ ಇವರು ಬೆಂಗಳೂರು, ಹುಬ್ಬಳ್ಳಿ, ಗದಗ, ಧಾರವಾಡ ಭಾಗದಲ್ಲಿ ಕೆಲವು ದಿವಸ ತಿರುಗಾಡಿ ಹಿಂದೂ ಮಹಾಸಭೆಯ ಶಾಖೆಗಳನ್ನು ಸ್ಥಾಪಿಸಬೇಕೆಂದು ಅವರ ವಿಚಾರವಿರುತ್ತದೆ.

### ಬ್ಯಾ. ಸಾವರಕರರ ಆಗಮನ.

ಹಿಂದೂ ಮಹಾಸಭೆಯ ಪ್ರಚಾರಕಾರ್ಯ ನಡೆಯಿಸಲು ಕರ್ನಾಟಕಕ್ಕೆ ಹಿಂದೂ ಮಹಾಸಭಾ ಅಧ್ಯಕ್ಷರಾದ ಶ್ರೀ. ಸಾವರಕರರು ಇಷ್ಟರಲ್ಲೇ ಬರುವವರಿದ್ದಾರೆ.

---

—ಸೊಲ್ಲಾಪುರದಲ್ಲಿ ಜೈನ ಸೇವಾ ಸಂಘದ ಪರವಾಗಿ ಪರಮ ಪೂಜ್ಯ ಆಚಾರ್ಯ ೧೦೮ ಶ್ರೀ. ಶಾಂತಿಸಾಗರ ಇವರ ೬೬ ನೆಯ ವರ್ಷ ವರ್ಧಂತಿಯು ಸಂಭ್ರಮದಿಂದ ಜರುಗಿತು.

—೧೯೩೭ ನೆಯ ಇಸವಿಯಲ್ಲಿ ಕೂಲಿಕಾರರ ಕಟ್ಟು ಒಟ್ಟು ೩೭೯ ನಡೆದವು. ಇವುಗಳಲ್ಲಿ ಒಟ್ಟು ೩, ೬೫, ೬೯ ಕೂಲಿಕಾರರು ಸೇರಿದ್ದರು.

---

ಅಖಿಲ ಭಾರತ ವಸ್ತು ಪ್ರದರ್ಶನದಲ್ಲಿ
ಸುವರ್ಣ ಪದಕಗಳನ್ನು ಮತ್ತು ಸರ್ಟೀಫಿಕೇಟುಗಳನ್ನು ಪಡೆದು ಹೆಸರಾದ
ಇಂಡಿಯಾ ಸರಕಾರದಲ್ಲಿ ರಜಿಸ್ಟರ್ ಆದ

# ಸಿದ್ಧೇಶ್ವರ ಟ್ರೇಝುರಿ ಕಂಪನಿ, ಹುಬ್ಬಳ್ಳಿ.








ನಮ್ಮ "ಸಿದ್ಧೇಶ್ವರ ಟ್ರೇಝುರಿ" ಗಳನ್ನು ಈ ವರೆಗೆ ಕೈಗಾರಿಕೆಯ ಕೆಲಸಗಳಲ್ಲಿ ಹೆಸರಾದ ಯುರೋಪ, ಅಮೇರಿಕಾ ವಗೈರೆ ಪರರಾಷ್ಟ್ರಗಳಲ್ಲಿ ತಯಾರಾಗುವ ಟ್ರೇಝುರಿಗಳ ಪದ್ಧತಿಯ ಮೇರೆಗೆ ಹೊಸ ಉಕ್ಕಿನ ಅಖಂಡ ಒಂದೇ ತಗಡಿನಲ್ಲಿ ೧೨ ಮೂಲೆಗಳನ್ನು ೩೦೦ ಟನ್ ಪ್ರೇಷರ ಕೊಡುವ ಮಶಿನ್ನಿನಿಂದ ಬಗ್ಗಿಸಿ, ರಿಪ್ಪಿಟ್ಸ ಮೊದಲಾದವುಗಳಿಂದ ಜಾಯಿಂಟ ಮಾಡದೆ ಇಲೆಕ್ಟ್ರಿಸಿಟಿಯಿಂದ ಬೆಸೆದು ತಯಾರಿಸುತ್ತೇವೆ.

ಈ ಹೊಸ ಸುಧಾರಣೆಯಿಂದ ಮಾಡಿದ ತಿಜೋರಿಗಳಿಗೂ ಮತ್ತು ಯಾವದೇ ನಮ್ಮ ಸಾಮಾನಕ್ಕೂ ಯಾವ ತರದ ಭಯವಿಲ್ಲ. ಮತ್ತು ಅವು ಒಳ್ಳೇ ಮಜಬೂತವಾಗಿಯೂ ಸುಂದರವಾಗಿಯೂ ಆಗುತ್ತವೆ. ನಾವು ನಮ್ಮ ತಿಜೋರಿಗಳಿಗೂ ಮತ್ತು ನಮ್ಮಲ್ಲಿ ತಯಾರಾಗುವ ಉಕ್ಕಿನ ಕಪಾಟು, ಕ್ಯಾಶಬಾಕ್ಸ, ಸ್ಟ್ರಾಂಗರೂಮ ಡೋರ್ಸು ಗಳಿಗೂ ನಮ್ಮ ಕಾರಖಾನೆಯಲ್ಲಿಯೇ ತಯಾರಾಗುವ ಉತ್ತಮವಾದ ಮತ್ತು ಮಜಬೂತವಾದ ಕೀಲಿಗಳನ್ನು ಹಚ್ಚುತ್ತೇವೆ. ಮತ್ತು ಇದಲ್ಲದೆ ನಮ್ಮಲ್ಲಿ ಹೊಸ ಪದ್ಧತಿಯ ಮೇರೆಗೆ ತಯಾರಾಗುವ ಕಾಂಬಿನೇಶನ್ ಕೀ ಲೆಸ್ಸಾ ಲಾಕ್ಸು (ನಂಬರ ಕೀಲಿ) ಗಳನ್ನು ತಿಜೋರಿಗಳಿಗೆ ಹಚ್ಚಿಸಿದರೆ ಆ ತಿಜೋರಿಗಳನ್ನು ಯಾರೂ ತೆಗೆಯಲು ಸಾಧ್ಯವಿಲ್ಲ. ಯಾರಾದರೂ ತೆಗೆದರೆ ಅವರಿಗೆ

## ೧೦೦೦ ರೂ. ಬಹುಮಾನ ಕೊಡುವೆವು.

ನಮ್ಮ ಫಾಯರ ಪ್ರೂಫ್ ತಿಜೋರಿಗಳು ತುಂಬಾ ಖಾತ್ರಿಯಾದವುಗಳಿರುತ್ತವೆ.

**ಈ ಬಗ್ಗೆ ಅನೇಕ ವಸ್ತು ಪ್ರದರ್ಶನಗಳಲ್ಲಿ ಒಳಗೆ ನೋಟು ವಗೈರೆ ಸಾಮಾನುಗಳನ್ನು ಇಟ್ಟು ಕೆಂಪಗೆ ಕಾಸಿದನಂತರ ಒಳಗಿಟ್ಟ ಸಾಮಾನುಗಳು ಸುಡದೆ ಇದ್ದದ್ದನ್ನು ಖಾತ್ರಿ ಮಾಡಿಕೊಟ್ಟಿದ್ದೇವೆ.**

ಧಾರಣೆಗಳ ಬಗ್ಗೆ ನಮ್ಮ ಸಚಿತ್ರ ಕ್ಯಾಟಲಾಗುಗಳಿಗೆ ಬರೆಯಿರಿ.
ಅಥವಾ
ಸಮಕ್ಷಮ ಬಂದಲ್ಲಿ ತಿಳಿಯುವದು.

ತಮ್ಮ ಕಲಾಭಿಮಾನಿ,
ಸಿದ್ಧೇಶ್ವರ ಮತ್ತು ಕಂಪನಿ
ಟ್ರೇಝುರಿ ಮೇಕರ್ಸ
ಹುಬ್ಬಳ್ಳಿ.

ಫ್ಯಾಕ್ಟರಿ ಮತ್ತು ಹೆಡ್ ಅಫೀಸ್-
ಹುಬ್ಬಳ್ಳಿ.

ಬ್ರ್ಯಾಂಚ ಅಫೀಸುಗಳು-
ಹೈದರಾಬಾದ (ಡೆಕ್ಕನ) ಮತ್ತು ಕೊಲ್ಹಾಪುರ (ಲಕ್ಷ್ಮೀಪುರಿ)

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.



# ಶರಣ ಸಂದೇಶ

# THE SHARANA SANDESHA.



## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ-ಸೋಮವಾರ ತಾರೀಖು ೪ ನೆಯ ಜುಲೈ ೧೯೩೮. | ಸಂಚಿಕೆ ೪೩

## ಮಹತ್ವದ ಸುದ್ದಿಗಳು.

— ಕರ್ನಾಟಕ ಮತ್ತು ಆಂಧ್ರ ಪ್ರಾಂತಗಳ ಪ್ರಮುಖರು ತಮ್ಮ ತಮ್ಮ ಪ್ರಾಂತಗಳ ಏಕೀಕರಣದ ಸಂಬಂಧವಾಗಿ ವಿಚಾರ ವಿನಿಮಯ ಮಾಡಲು ಮಹಾತ್ಮಾ ಗಾಂಧಿಯವರ ಕಡೆಗೆ ಶಿಷ್ಟ ಮಂಡಲವನ್ನು ಇಷ್ಟರಲ್ಲೀ ಕಳಿಸುವವರಾಗಿದ್ದಾರೆ.

—"ಟಿನನ್ಸಿಬಿಲ್" ಮುಂಬೈಪ್ರಾಂತಿಕ ಅಸೆಂಬ್ಲಿಯಲ್ಲಿ ಇಷ್ಟರಲ್ಲೀ ಬರುವುದಿರುವುದರಿಂದ ಈ ವಿಚಾರವಾಗಿ ವಿಧಾಯಕ ಸೂಚನೆಗಳನ್ನು ತಮ್ಮ ಕಡೆಗೆ ಕಳಿಸಬೇಕೆಂದು ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರಾದ ಶ್ರೀ. ದೇಶಪಾಂಡೆ ಗಂಗಾಧರರಾಯರು ಕನ್ನಡಿಗರಿಗೆ ವಿಜ್ಞಾಪಿಸಿಕೊಂಡಿದ್ದಾರೆ.

— ಇಷ್ಟರಲ್ಲೀ ಬರಲಿರುವ ಹಿಂದಿ ಸಂಯುಕ್ತ ಘಟನೆಗೆ ಸಾಂಗಲಿ ಸಂಸ್ಥಾನದ ಪ್ರಜೆಗಳು ವಿರೋಧಾಭಿಪ್ರಾಯವುಳ್ಳವರಾಗಿದ್ದಾರೆಂದು ಶಿರಹಟ್ಟಿಯಲ್ಲಿ ಸಭೆಸೇರಿ ವ್ಯಕ್ತಗೊಳಿಸಿದರು.

— ಹುಬ್ಬಳ್ಳಿ ಮುನಸಿಪಾಲ್ಟಿಯ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷವು ಸೇರಬೇಕೆಂದು ಗೊತ್ತಾಯಿತು.

—ಗಂಡಹೆಂಡರು ಜಗಳಾಡುತ್ತಿದ್ದಾಗ ತಾಯಿಯು ಬಿಡಿಸಲಿಕ್ಕೆ ಹೋಗಲು ಮಗನು ಚೂರಿಯಿಂದ ತಿವಿದು ಮುದುಕಿಯನ್ನು ಕೊಂದು ಹೆಂಡತಿಗೂ ಗಾಯಗೊಳಿಸಿದನು. ಈ ಕ್ರೂರ ಕಾರ್ಯ ಹುಬ್ಬಳ್ಳಿಯಲ್ಲಿ ಕಳೆದ ೨೯ ನೆಯ ತಾರೀಖಿನ ದಿನ ಮಧ್ಯಾಹ್ನ ನಡೆಯಿತು. ಕೊಲೆಮಾಡಿದಾತನು ಒಬ್ಬ ಕೂಲಿಗಾರನು.

—ಕಾಂಗ್ರೆಸ್ ಕಮಿಟಿಯ ಸದಸ್ಯನು ಬೇರೆ ಯಾವ ರಾಜಕೀಯ ಪಕ್ಷದ ಸದಸ್ಯನೂ ಆಗಕೂಡದೆಂದು ಶ್ರೀ. ಸತ್ಯಮೂರ್ತಿಯವರು ಒಂದು ಗೊತ್ತುವಳಿಯನ್ನು ಅಖಿಲ ಭಾರತ ಕಾಂಗ್ರೆಸ್ ಕಮಿಟಿಯ ಮುಂದೆ ಇಡುವವರಿದ್ದಾರೆ.

—ಜಪಾನಿನಲ್ಲಿ ವಿಪರೀತವಾದ ಗಾಳಿ ಮಳೆಗಳಿಂದ ೧೨೦೦೦೦ ಮನೆಗಳು ನೀರಲ್ಲಿ ಮುಳುಗಿಹೋಗಿವೆಯಂತೆ.

— ಮ. ಗಾಂಧಿಯವರ ಯೋಜನೆಯಂತೆ ಜಾತಿಯ ಜಗಳ ನಿವಾರಣೆಗಾಗಿ ಶಾಂತಿಸೇವಕ ಸಂಘವು ಮೊದಲು ಕರಾಚಿಯಲ್ಲಿ ಏರ್ಪಡುವುದಿದೆ. ಇದರಲ್ಲಿ ಹಿಂದು, ಮುಸಲ್ಮಾನ್ ಮತ್ತು ಕ್ರೈಸ್ತರು ಸೇರುವವರಿದ್ದಾರೆ.

—ತ್ರಾವಣಕೋರ ಸಂಸ್ಥಾನದ ಚಂಗಾನಚೇರಿ ಎಂಬಲ್ಲಿ ಆ ಪ್ರಾಂತದ ಕಾಂಗ್ರೆಸ್ ಕಮಿಟಿಯ ಸಭೆ ಕೂಡಿತ್ತು. ಆಗ ಕೆಲವು ಪುಂಡರು ದೊಂಬಿ ಮಾಡಿದ್ದರಿಂದ ಪೋಲಿಸರು ಸಭಿಕರಿಗೆ ಬಡಿಗೆ ಹೊಡೆತ ಹಾಕಿ ೫೦೦ ಜನರನ್ನು ಗಾಯಗೊಳಿಸಿದರು.

—ಗಾಂಧೀಜಿಯವರ ಪ್ರಯತ್ನದಿಂದ ಬಂಗಾಲದಲ್ಲಿ ಸ್ಥಾನಬದ್ಧರಾಗಿದ್ದ ಕೈದಿಗಳನ್ನು ಸರಕಾರವು ಬಿಡಲಾರಂಭಿಸಿದೆ. ತಾ. ೧೯ ನೆಯ ದಿನ ೬೨ ಜನರನ್ನೂ ತಾ. ೨೦ ನೆಯ ದಿನ ೨೭ ಜನರನ್ನೂ ಬಿಟ್ಟರು. ಈ ವರೆಗೆ ಸಾಧಾರಣ ೧೧೦೦ ಜನರನ್ನು ಬಿಟ್ಟಿದ್ದಾಗಿದೆ.

— ಮೈಸೂರು ಸರಕಾರದ ಪ್ರೋತ್ಸಾಹದಿಂದ ಬದನವಾಳದಲ್ಲಿ ನಡೆದಿರುವ ಖಾದಿ ಕಾರ್ಯವು ದಿನೆ ದಿನೆ ಅಭಿವೃದ್ಧಿಯಾಗುತ್ತಾ ಇದೆ. ಕಳೆದ ೧೦ ವರುಷಗಳಲ್ಲಿ ೩೯೭೭೧೬ ರೂ. ಖಾದಿ ಬಟ್ಟೆಯು ನೇಯಲ್ಪಟ್ಟಿತು.

—ಪುಣೆಯಲ್ಲಿ ಒಂದು ಬಿ. ಟಿ. ಕಾಲೇಜ ಏರ್ಪಡುವುದಂತೆ. ಕಾಂಗ್ರೆಸ್ ರಾಜ್ಯದಲ್ಲಿಯೂ ಕರ್ನಾಟಕದ ನೆನಪೇ ಮುಂಬೈ ಸರಕಾರಕ್ಕೆ ಇಲ್ಲವಂತೆ!

—ಜಮಖಂಡಿ ಸಂಸ್ಥಾನಾಧಿಪತಿಗಳು ಮೊನ್ನೆ ನಡೆದ ತಮ್ಮ ರಾಜ್ಯಾರೋಹಣದ ೧೨ ನೆಯ ಸಮಾರಂಭದ ಕಾಲಕ್ಕೆ ಕರ್ನಾಟಕ ಸಾಹಿತ್ಯ ಪರಿಷತ್ತಿಗೆ ೧೧೧ ರೂ. ಗಳನ್ನೂ ಮತ್ತು ವಿಜಾಪುರ ಹಂಜನ ಸೇವಕ ಸಂಘಕ್ಕೆ ೧೧೧ ರೂ. ಗಳನ್ನೂ ಕೊಟ್ಟರು.

# ಮನುಷ್ಯನ ಪ್ರಭಾವಳಿ.

## ಶಾಸ್ತ್ರೀಯ ಹೊಸ ಶೋಧ.

ದೇವರ ಮೂರ್ತಿಯ ಹಿಂದುಗಡೆ ಪ್ರಭಾವಳಿಯನ್ನು ಇಡುವುದು ಹಿಂದುಗಳಲ್ಲಿ ಬಹು ಕಾಲದಿಂದಲೂ ಬಂದಿರುವ ಒಂದು ರೂಢಿಯಾಗಿಯೇ ಇದೆಯಷ್ಟೆ. ದೇವತೆಗಳ ಸುತ್ತಲೂ ಒಂದು ತೇಜೋಮಂಡಲವು ಇದ್ದೇ ಇರುತ್ತದೆಂದು ನಮ್ಮ ಪೂರ್ವಜರ ತಿಳುವಳಿಕೆ. ಅಂತೆಯೇ ದೇವರ ಮೂರ್ತಿಯ ಹಿಂದುಗಡೆ ಪ್ರಭಾವಳಿಯನ್ನು ಇಡುತ್ತಿದ್ದಾರೆ.

ಹೀಗೆ ತಿಳಿಯುವುದೇನೂ ಮೂಢ ಕಲ್ಪನೆಯಲ್ಲವೆಂತಲೂ ಪ್ರತಿಯೊಬ್ಬ ಮನುಷ್ಯನ ಸುತ್ತಲೂ ಪ್ರಭಾವಳಿಯು ಇದ್ದೇ ಇರುತ್ತದೆಂತಲೂ ಯಾವ ವ್ಯಕ್ತಿಯ ಶಾರೀರಿಕ ಮತ್ತು ಬೌದ್ಧಿಕ ಸುಸ್ಥಿತಿಯು ಎಷ್ಟು ಉನ್ನತ ಸ್ಥಿತಿಯಲ್ಲಿರುತ್ತದೆಯೋ ಅಷ್ಟು ಆ ಪ್ರಭಾವಳಿಯು ಸ್ಪಷ್ಟವಾಗಿ ಕಾಣುತ್ತದೆಂತಲೂ ನಾವು ಈ ತೇಜೋಮಂಡಲವನ್ನು ಕಣ್ಣಿನಿಂದಲೂ ನೋಡಬಹುದೆಂತಲೂ ಪದಾರ್ಥ ವಿಜ್ಞಾನಶಾಸ್ತ್ರಜ್ಞರು ಈಗ ಸಪ್ರಯೋಗಗಳಿಂದ ಸಿದ್ಧಗೊಳಿಸಿದ್ದಾರೆ.

ಈ ಶಾಸ್ತ್ರೀಯ ಹೊಸ ಶೋಧದಿಂದ ಹಿಂದುಗಳ ಯೋಗಶಾಸ್ತ್ರದಲ್ಲಿಯ ಅನೇಕ ಸಂಗತಿಗಳು ನಿಜವಾದವುಗಳೆಂತಲೂ ಮನುಷ್ಯನು ತನ್ನ ತೇಜೋಮಂಡಲದ ಶಕ್ತಿಯಿಂದಲೇ ಅನ್ಯ ವ್ಯಕ್ತಿಯ ಶಾರೀರಿಕ ಮತ್ತು ಮಾನಸಿಕ ದೋಷಗಳನ್ನು ಕಳೆಯಬಹುದೆಂತಲೂ ಈಗ ಗೊತ್ತಾಗಿದೆ.

### ಪ್ರಭಾವಳಿಯ ಶೋಧಕರು.

ಈ ವಿಷಯವಾಗಿ ಡಾ. ವಿ. ಮ. ಭಟ. ಬಿ. ಎ. ಎಂ. ಬಿ. ಬಿ. ಎಸ್. ಎಂಬುವವರು ಮನನೀಯವಾದ ಲೇಖನಗಳನ್ನು ಕೇಸರೀ ಪತ್ರಿಕೆಯ ಕಳೆದ ೨೧ ಮತ್ತು ೨೪ ನೆಯ ತಾರೀಖಿನ ಸಂಚಿಕೆಗಳಲ್ಲಿ ಬರೆದಿದ್ದಾರೆ. ಅವುಗಳ ಮುಖ್ಯಾಂಶವನ್ನೇ ಇಲ್ಲಿ ಕೊಟ್ಟಿರುತ್ತದೆ—

"ಡಾ. ಕಿಲ್ನರ್ ಎಂಬ "ಕ್ಷ" ಕಿರಣ-ಶಾಸ್ತ್ರಜ್ಞರು ಮನುಷ್ಯನ ಸುತ್ತಲಿರುವ ಪ್ರಭಾವಳಿಯ ಸಂಶೋಧಕರು, ಇವರು ಕೆಲವು ದಿನಗಳ ಹಿಂದೆ ಮೃತಪಟ್ಟನಂತರ ಇವರ ಶಿಷ್ಯರಾದ ಬೆಗ್‌ನಾಲ್‌ರವರು ತಮ್ಮ ಗುರುಗಳ ಶೋಧವನ್ನೇ ಮುಂದರಿಸಿ ಈಗ ಇದೊಂದು ಪ್ರತ್ಯಕ್ಷ ಶಾಸ್ತ್ರವನ್ನಾಗಿಯೇ ಮಾಡಿದ್ದಾರೆ. ದೇವರ ಕಲ್ಪನೆಯುಳ್ಳವರೇ ಇದನ್ನು ನಂಬಬಹುದೆಂದು ಈಗ ಹೇಳುವಂತಿಲ್ಲ. ನಾಸ್ತಿಕರು ಕೂಡಾ ಇದೊಂದು ಪ್ರತ್ಯಕ್ಷ ಶಾಸ್ತ್ರವೆಂದೇ ಗ್ರಹಿಸಿ ತಿಳಿದುಕೊಳ್ಳುತ್ತಿದ್ದಾರೆ.

### ಪ್ರಭಾವಳಿಯ ರೂಪ ಮತ್ತು ಗುಣಧರ್ಮ.

ಪ್ರತಿಯೊಂದು ವ್ಯಕ್ತಿಯ ಸುತ್ತಲೂ ಮೂರು ತೇಜೋಮಂಡಲಗಳಿರುತ್ತವೆ. ಅವುಗಳಲ್ಲಿ ಗುಲಾಬಿ ಬಣ್ಣದ ಒಂದು ತೇಜೋಮಂಡಲವು ಯಾವಾಗಲೂ ಎಲ್ಲರ ಸುತ್ತಲೂ ಇರುವುದಿಲ್ಲ. ಎರಡು ತೇಜೋಮಂಡಲಗಳಂತೂ ಎಲ್ಲರ ಸುತ್ತಲೂ ಯಾವಾಗಲೂ ಇದ್ದೇ ಇರುತ್ತವೆ. ಅಂತೆಯೇ ಆ ಎರಡರ ಸಂಬಂಧವಾಗಿ ತಿಳಿದುಕೊಳ್ಳುವುದು ಅತ್ಯಗತ್ಯವಾಗಿದೆ.

ಈ ಎರಡು ತೇಜೋ ಮಂಡಲಗಳಲ್ಲಿ ಒಂದು ಒಳಗಿನದು, ಇನ್ನೊಂದು ಹೊರಗಿನದು. ಒಳಗಿನ ತೇಜೋಮಂಡಲ ೩ ಅಂಗುಲ (ಇಂಚ್) ಅಗಲವಾಗಿರುತ್ತದೆ. ಇದು ಕೇವಲ ಪ್ರಕಾಶವೇ ಅಲ್ಲ. ಕೆಲವು ದ್ರವ್ಯವಿಶಿಷ್ಟವಾದುದೇ ಆಗಿದೆ. ಎಂದರೆ ಜಡವಾದ ಅಣುಗಳಿಂದ ಕೂಡಿದುದು. ಅಂತೆಯೇ ಲೋಹಚುಂಬಕ ಶಕ್ತಿಯಿಂದ ಇದು ಆಕರ್ಷಿಸಲ್ಪಡುತ್ತದೆ.

ಇದು ಯಾರ ಶಾರೀರಿಕ ಮತ್ತು ಬೌದ್ಧಿಕ ಸ್ಥಿತಿಯು ಬಹು ಉತ್ತಮವಾದುದಿರುತ್ತದೆಯೋ ಅವರಲ್ಲಿ ಸುಸ್ಪಷ್ಟವಾಗಿ ತೋರುತ್ತದೆ. ಯೇಸುಕ್ರಿಸ್ತನು ಅನೇಕ ರೋಗಿಗಳನ್ನು ತನ್ನ ಹಸ್ತ ಸ್ಪರ್ಶದಿಂದಲೇ ಗುಣಮಾಡಿದನೆಂಬುದೇನೂ ಅತ್ಯುಕ್ತಿಯಲ್ಲ. ಈ ದೇಶದ ಅನೇಕ ಸಾಧು ಸಂತರೂ ತಮ್ಮ ದರ್ಶನ ಸ್ಪರ್ಶನಗಳಿಂದ ಅನ್ಯರ ರೋಗ ನಿವಾರಣೆಮಾಡಿದುದು ಈ ತೇಜೋಮಂಡಲದ ಶಕ್ತಿಯಿಂದಲೇ ಸರಿ.

ಹೊರಗಿನ ತೇಜೋಮಂಡಲವು ಎಂಟು ಅಂಗುಲ ಅಗಲವಿರುತ್ತದೆ. ಇದು ಸ್ವಲ್ಪ ನೀಲಿ ಬಣ್ಣದ್ದಾಗಿರುತ್ತದೆ. ಇದರ ಆಕೃತಿಯು ದೀರ್ಘ ವರ್ತುಲವಾಗಿ ತತ್ತಿಯ ಆಕಾರದಲ್ಲಿ ಇರುತ್ತದೆ. ಮನುಷ್ಯನು ನಿರೋಗಿಯೂ ತೀಕ್ಷ್ಣಬುದ್ಧಿಶಾಲಿಯೂ ಆಗಿದ್ದರೆ ಈ ತೇಜೋಮಂಡಲವು ಬಹು ಸ್ಪಷ್ಟವಾಗಿ ಕಾಣುತ್ತದೆ. ಇದು ಮಾತ್ರ ಅಣುವಿಶಿಷ್ಟವಾದುದಾಗಿರುವುದಿಲ್ಲ. ಆದುದರಿಂದ ಇದರ ಮೇಲೆ ಲೋಹಚುಂಬಕದ ಪರಿಣಾಮವಾಗುವುದಿಲ್ಲ.

ಈ ಬಾಹ್ಯ ಮಂಡಲವು ಪುರುಷರಿಗಿಂತ ಸ್ತ್ರೀಯರಲ್ಲಿ ಬಹು ಸ್ಪಷ್ಟ ಕಾಣುತ್ತದೆ. ಗರ್ಭವತಿಯರಾದಾಗ ಕಟಿ ಪ್ರದೇಶದಲ್ಲಿಯೂ ಸ್ತನಗಳ ಪ್ರದೇಶಗಳಲ್ಲಿಯೂ ಬಹು ಎದ್ದು ಕಾಣುತ್ತದೆ ದಿನ ತುಂಬಿದ ಹೆಣ್ಣುಮಗಳ ತೇಜೋಮಂಡಲವು ಹೀಗೆ ಕಾಣಲು ಗರ್ಭದಲ್ಲಿದ್ದ ಕೂಸಿನ, ತೇಜವೂ ಅದರಲ್ಲಿ ಕೂಡಿರುವುದೇ ಇದಕ್ಕೆ ಕಾರಣವು. ಗರ್ಭದಲ್ಲಿಯೇ ಕೂಸು ಸತ್ತರೆ ಆ ತೇಜೋಮಂಡಲ ನಿಸ್ತೇಜವಾಗುತ್ತದೆ.

ಚಂಚಲವೃತ್ತಿ, ಉದಾಸೀನತೆ, ಮೆದುಳಿನ ವಿಕೃತಿಗಳಿಂದ ಈ ಬಾಹ್ಯತೇಜೋಮಂಡಲದಲ್ಲಿ ವ್ಯತ್ಯಾಸಗಳಾಗುತ್ತವೆ. ಆದುದರಿಂದ ಈ ತೇಜೋಮಂಡಲದ ಮೇಲಿಂದಲೇ ವ್ಯಕ್ತಿಯ ಶಾರೀರಿಕ ಮತ್ತು ಬೌದ್ಧಿಕ ದೋಷಗಳನ್ನು ನಿಸ್ಸಂದೇಹವಾಗಿ ಗೊತ್ತುಮಾಡಬಹುದು.

### ತೇಜೋ ಮಂಡಲವನ್ನು ನೋಡುವುದು.

ಮನುಷ್ಯನು ತನ್ನ ಪ್ರಯತ್ನದಿಂದ ಈ ತೇಜೋಮಂಡಲವನ್ನು ಕಣ್ಣಾರೆ ಕಾಣಬಹುದು. ಕೆಲವು ವ್ಯಕ್ತಿಗಳಿಗೆ ಈ ದಿವ್ಯ ದೃಷ್ಟಿಯು ಸ್ವಾಭಾವಿಕವಾಗಿಯೇ ಇರುವುದುಂಟು. ಅವರು ಮಹಾ ವಿಭೂತಿಗಳು. ಮನುಷ್ಯನು ತನ್ನ ಶಾರೀರಿಕ, ಮಾನಸಿಕ ಮತ್ತು ಬೌದ್ಧಿಕ ಸುಸ್ಥಿತಿಗಳ ಬಲದಿಂದ ತನ್ನ ತೇಜೋಮಂಡಲವು ಹೆಚ್ಚು ಪರಿಣಾಮಕಾರಿಯಾಗುವಂತೆ ಮಾಡಿಕೊಳ್ಳಬಹುದು. ಅಂಥವರು ಅನ್ಯರ ಶಾರೀರಿಕ ಮತ್ತು ಮಾನಸಿಕ ದೋಷಗಳನ್ನು ಬಹು ಸುಲಭವಾಗಿಯೇ ನಿವಾರಣೆಮಾಡಬಹುದು. ಅದರಲ್ಲಿ ಅಂಥ ಆಶ್ಚರ್ಯವಾಗಲಿ ಅಥವಾ ದೇವರ ಕೃಪೆಯಿದೆಯೆಂದಾಗಲಿ ತಿಳಿಯಬೇಕಾದದಿಲ್ಲ. ನಮ್ಮ ಕಣ್ಣಿನಲ್ಲಿ ತ್ರಿಕೋಣ ಜ್ಞಾನ ತಂತು ಮತ್ತು ಸರಳಜ್ಞಾನ ತಂತುಗಳೆಂಬ ಎರಡು ವಿಧವಾದ ಜ್ಞಾನ ತಂತುಗಳಿವೆ. ಇವುಗಳಲ್ಲಿ ಆಕಾಶದ ಕಡೆಗೆ ೨-೩ ನಿಮಿಷ ನೋಡುವ ಪರಿಪಾಠದಿಂದ ತ್ರಿಕೋಣಜ್ಞಾನತಂತುಗಳ ಶಕ್ತಿಯನ್ನು ಕಳೆದು ಸರಳಜ್ಞಾನ ತಂತುವಿನ ಶಕ್ತಿಯನ್ನು ಹೆಚ್ಚಿಸಿಕೊಳ್ಳಬೇಕು. ಹೀಗೆ ಮಾಡಿದರೆ ನಾವು ವ್ಯಕ್ತಿಯ ತೇಜೋಮಂಡಲವನ್ನು

ನೋಡಬಹುದು. (ಈ ಅಭ್ಯಾಸವನ್ನು ಸರಿಯಾದ ಶಿಕ್ಷಣವಿಲ್ಲದೆ ಯಾರೂ ಮಾಡಕೂಡದು.)

ಡಾ. ಕಿಲ್ನರರ ಈ ಶೋಧವು ಅತ್ಯಂತ ಮಹತ್ವದ್ದಾಗಿದೆ. ಹಿಂದುಗಳ ಯೋಗಶಾಸ್ತ್ರದ ಮಹತ್ವವು ಈ ಶೋಧದಿಂದ ಚೆನ್ನಾಗಿ ಗೊತ್ತಾಗುತ್ತದೆ. ಚಿತ್ತಶುದ್ಧಿಯಿಂದ ಸ್ಥಿತಪ್ರಜ್ಞರು ಅದ್ಭುತ ಕಾರ್ಯಗಳನ್ನು ಮಾಡಬಹುದೆಂಬುದು ಇದರಿಂದ ಸ್ಪಷ್ಟವಾಗುತ್ತದೆ."

---

## ಕಾಂಗ್ರೆಸ್ಸಿಗೆ ಮೂರ್ತಿಗಳ ಸಲಹೆ.

### ಜಾತಿ ನಿರ್ಣಯ ಹೋಗಲೇಬೇಕು.

ಕಾಂಗ್ರೆಸ್ಸಿನ ಸುಪ್ರಸಿದ್ಧ ಒಬ್ಬ ಮುಂದಾಳುಗಳಾದ ಶ್ರೀ. ಸತ್ಯಮೂರ್ತಿಯವರು ರಾಮನಾಡ ಜಿಲ್ಲಾ ರಾಜಕೀಯ ಪರಷತ್ತಿನ ಅಧ್ಯಕ್ಷರಾಗಿ ತಾ. ೨೬-೬-೩೮ ನೆಯ ದಿನ ಈ ಕೆಳಗಿನಂತೆ ಭಾಷಣಮಾಡಿದರು—



ಶ್ರೀ ಸತ್ಯಮೂರ್ತಿಯವರು.

"ನಾವೆಲ್ಲರೂ ಹಿಂದಿಯರೆಂದು ತಿಳಿದು ರಾಷ್ಟ್ರೀಯ ಭಾವನೆಯಿಂದ ನಡೆದುಕೊಳ್ಳದಿದ್ದರೆ ಇಂಗ್ಲಿಷರು ಈ ದೇಶದಿಂದ ಹೋದರೂ ನಮಗೆ ಮಾತ್ರ ಸ್ವಾತಂತ್ರ್ಯವೇನೂ ದೊರೆಯುವುದಿಲ್ಲ. ಏಕೆಂದರೆ, ನಮ್ಮ ಸ್ವಾತಂತ್ರ್ಯಕ್ಕೆ ಇಂಗ್ಲಿಷರ ಮದ್ದು ಗುಂಡುಗಳೇನೂ ಪ್ರತಿಬಂಧವನ್ನುಂಟುಮಾಡಿಲ್ಲ. ನಮ್ಮಲ್ಲಿರುವ ಜಾತಿವಿಶಿಷ್ಟ ಮತದಾರ ಪದ್ಧತಿಯೇ ನಮ್ಮ ಪಾರತಂತ್ರ್ಯಕ್ಕೆ ಕಾರಣವಾಗಿದೆ.

ಆದಕಾರಣ ಕಾಂಗ್ರೆಸ್ಸು ಇನ್ನುಮೇಲೆ ಇತ್ತ ಕಡೆ ಲಕ್ಷಿಸಿ ಜಾತಿ ವಿಶಿಷ್ಟ ಮತದಾರ ಸಂಘಗಳು ನಿರ್ಮೂಲವಾಗುವಂತೆ ಮಾಡಬೇಕು. ಹಿಂದು ಮತ್ತು ಮುಸಲ್ಮಾನರ ಒಪ್ಪಂಗದ ವಿಚಾರವಾಗಿ ಈಗ ಪ್ರಯತ್ನ ನಡೆದಿದೆಯಷ್ಟೆ. ಈ ಸಂಬಂಧವಾಗಿ ನಾನು ಈಗ ಏನನ್ನೂ ಹೇಳಲು ಇಚ್ಛಿಸುವುದಿಲ್ಲ. ಆದರೆ ಬ್ಯಾ. ಜಿನ್ನಾರವರ ಸಂಗಡ ಐಕಮತ್ಯದ ಸಂಧಾನ ನಡೆಯಿಸುವುದು ನಿರರ್ಥಕವೇ ಸರಿಯೆಂದು ನಾನು ಹೇಳದಿರಲಾರೆನು. ಏಕೆಂದರೆ ಕಾಂಗ್ರೆಸ್ಸು ಹಿಂದುಗಳ ಸಂಸ್ಥೆಯೆಂದೂ ಮುಸ್ಲಿಂ ಸಂಸ್ಥೆಯೇ ಅಖಿಲ ಮುಸಲ್ಮಾನರ ಪ್ರಾತಿನಿಧಿಕ ಸಂಸ್ಥೆಯಾಗಿದೆಯೆಂದೂ ನಿರ್ಧರಗೊಳಿಸಬೇಕೆಂಬುದೇ ಅವರ ಉದ್ದೇಶವಾಗಿದೆ."

---

## ಶುದ್ಧೀಸಂಸ್ಕಾರದ ನಿರ್ಣಯ.

### ಕಾಶಿ ಪಂಡಿತರ ಅಭಿಪ್ರಾಯ.

(ಲೇಖಕರು— ಶ್ರೀ. ಬಾಲಸ್ವಾಮಿ.)

ಪರಧರ್ಮಗಳಿಗೆ ಹೋದ ಹಿಂದುಗಳನ್ನು ಶುದ್ಧೀ ಸಂಸ್ಕಾರದಿಂದ ಹಿಂದುಧರ್ಮದಲ್ಲಿ ತೆಗೆದುಕೊಳ್ಳಲು ಬರುತ್ತದೆಯೋ ಇಲ್ಲವೋ ಎಂಬುದೊಂದು ಪ್ರಶ್ನೆಯು ಎಷ್ಟೋ ದಿನಗಳಿಂದಲೂ ಕೆಲವರ ಮುಂದೆ ಇದ್ದೇ ಇದೆ. ಇವರು ಹಿಂದುಧರ್ಮ ಶಾಸ್ತ್ರದಲ್ಲಿ ಹೇಳಿರುವುದನ್ನು ಶಾಸ್ತ್ರಜ್ಞರಿಂದ ತಿಳಿದುಕೊಳ್ಳಬೇಕೆಂದೇ ಅಪೇಕ್ಷಿಸುವುದು ಸ್ವಾಭಾವಿಕ. ಹಿಂದುಗಳಿಗೆ ಕಾಶಿಯಲ್ಲಿರುವ ಪಂಡಿತರ ಅಭಿಪ್ರಾಯವೆಂದರೆ ಬಹು ಮಾನ್ಯವಷ್ಟೆ. ಅಂತೆಯೇ ಈ ವಿಚಾರವಾಗಿ ಕಾಶಿಪಂಡಿತರು ೬೦ ವರುಷಗಳ ಹಿಂದೆಯೇ ನಿರ್ಧರಿಸಿದುದನ್ನು ಈ ಕೆಳಗೆ ಕೊಡಲಾಗಿದೆ.

ಕ್ರಿ. ಶ. ೧೮೭೭ ನೆಯ ಇಸವಿ ನವ್ಹಂಬರ್ ೧೯ ನೆಯ ತಾರೀಖಿನ ದಿವಸ ಕಾಶಿ ಪಂಡಿತರು ಮಾಡಿದ ನಿರ್ಣಯವು ಕುರಂದವಾಡದ ಶ್ರೀ. ಮಹದೇವ ಶಾಸ್ತ್ರಿಗಳು ಗಾಡಗಿಳ ಇವರ ಸಂಗ್ರಹಾಲಯದಲ್ಲಿ ದೊರೆತಿದೆ. ಇವರ ತಂದೆಯವರಿಗೆ ಆಗ ಕಾಶಿಯಿಂದ ಈ ಪತ್ರವು ಬಂದಿದ್ದಿತು. ಅದರಲ್ಲಿಯ ಮುಖ್ಯಾಂಶ ಹೀಗಿದ್ದಿತು—

"ಶ್ರೀ ಗಣೇಶಾಯನಮಃ— ಮಹಾರಾಜ ರಣಧೀರಸಿಂಹ ಕಾಶ್ಮೀರ ಸಿಂಹಾಸನಾಧಿಪತಿ ಇವರು ಕಳೆದ ವರುಷ ಕಾಶಿಗೆ ಬಂದಿದ್ದರು. ಅವರು ಇಲ್ಲಿಯ ಪಂಡಿತರಿಗೆ ಹೀಗೆ ಪ್ರಶ್ನೆ ಮಾಡಿದ್ದರು—

"ನಮ್ಮ ದೇಶದಲ್ಲಿ (ಕಾಶ್ಮೀರದಲ್ಲಿ) ಹಿಂದುಗಳು ಮುಸಲ್ಮಾನರಾಗುತ್ತಿದ್ದಾರೆ. ಈ ಮುಂಚೆಯೂ ಬಹು ಜನರು ಮುಸಲ್ಮಾನರಾಗಿದ್ದಾರೆ. ಕಾಬೂಲ, ಕಂದಹಾರಗಳ ಹತ್ತಿರ ನಮ್ಮ ಜನರು ಇದ್ದುದರಿಂದ ಅವರು ಮುಸಲ್ಮಾನರಾಗುವ ಪ್ರಸಂಗ ಬಂದಿತು. ಕಾಬೂಲ ಪಟ್ಟಣವು ಮುಸಲ್ಮಾನರ ಸ್ವಾಧೀನವಾಯಿತು. ಪೂರ್ವದಲ್ಲಿ ಕಾಬೂಲು ಹಿಂದುಗಳದ್ದಾಗಿದ್ದಿತು. ಯಾರು ಬಲಶಾಲಿಗಳೋ ಅವರೇ ಭೂಪಾಲರಾಗುವುದು ಸ್ವಾಭಾವಿಕ. ಅಲ್ಲಿಯ ಕ್ಷತ್ರಿಯರ ವಂಶಗಳು ನಾಶವಾದವು. ಹಿಂದುಗಳು ಹೀಗೆಯೇ ಕಡಿಮೆಯಾದರೆ ಕಾಶ್ಮೀರದ ಕ್ಷತ್ರಿಯರೂ ಇದೇ ಪ್ರಕಾರ ಪದಭ್ರಷ್ಟರಾಗಬೇಕಾದೀತು. ಆದಕಾರಣ ಕುಲಗೆಟ್ಟ ಹಿಂದುಗಳನ್ನು ಹಿಂದುಧರ್ಮದಲ್ಲಿ ತೆಗೆದುಕೊಳ್ಳಲು ಶಾಸ್ತ್ರಾಧಾರವಿದೆಯೋ? ಹೇಗೆ?"

ಈ ಪ್ರಕಾರ ಕಾಶ್ಮೀರದ ಮಹಾರಾಜರು ಇಲ್ಲಿಯ ಪಂಡಿತರನ್ನು ಕೇಳಲು ಇವರು ನಿರ್ಣಯಮಾಡಿದ್ದೇನೆಂದರೆ—

"ಯಾರು ಹಿಂದುಧರ್ಮದಲ್ಲಿ ಬರಲು ಅಪೇಕ್ಷಿಸುತ್ತಾರೆಯೋ ಅವರನ್ನು ತೆಗೆದುಕೊಳ್ಳಬೇಕು. ತಂದೆ ಮತ್ತು ತಾತರ ಕಾಲದಲ್ಲಿ ಕುಲಗೆಟ್ಟವರನ್ನೂ ಶುದ್ಧೀಕರಿಸಿ ತೆಗೆದುಕೊಳ್ಳಬಹುದು."

ಈ ತೀರ್ಮಾನದಂತೆ ಕಾಶ್ಮೀರದಲ್ಲಿ ಶುದ್ಧೀಕರಣ ನಡೆಯಿಸಲು ಇಲ್ಲಿಂದ ಪಂಡಿತರು ಹೋಗಿದ್ದಾರೆ. ೨-೩ ಸಾವಿರ ಕುಲಗೆಟ್ಟ ಹಿಂದುಗಳು ಪುನಃ ಹಿಂದುಧರ್ಮದಲ್ಲಿ ಬಂದರು. ಈ ಸಂಬಂಧ

ವಾದ ಶಾಸ್ತ್ರಾರ್ಥದ ಒಂದು ಪುಸ್ತಕವೂ ಬರೆಯಲ್ಪಟ್ಟು ಅಚ್ಚಾಗುತ್ತಾ ಇದೆ. ಅದನ್ನೂ ಇಷ್ಟರಲ್ಲೇ ಕಳಿಸುತ್ತೇವೆ."

ಈ ಪತ್ರವು ಸಂಸ್ಕೃತದಲ್ಲಿಯೇ ಬರೆಯಲ್ಪಟ್ಟಿದೆ. ೬೦ ವರುಷಗಳ ಹಿಂದೆಯೇ ತೀರ್ಮಾನವಾದುದು ಈಗಲೂ ಆಚರಣೀಯವಾಗಿಲ್ಲವೆ? ಸನಾತನಿಗಳು ಈಗಲಾದರೂ ಎಚ್ಚತ್ತು ಶುದ್ಧೀಕರಣಕ್ಕೆ ವಿರೋಧಿಸುವುದನ್ನು ಬಿಡುವರೆ?

---

## ಒಳಪಂಗಡಗಳ ಏಕೀಕರಣ.

(ಲೇಖಕರು— ಶ್ರೀ. ಡಿ. ಟಿಲ್ಲು ಬಿ. ಎ. ಎಲ್. ಎಲ್. ಬಿ.)

ಹಿಂದು ಸಮಾಜ, ಹಿಂದು ಧರ್ಮ ಮತ್ತು ಹಿಂದು ಸಂಸ್ಕೃತಿಗಳ ಸಂರಕ್ಷಣೆ, ಸಂವರ್ಧನೆ ಮತ್ತು ಸಂಘಟನೆಗಳ ವಿಷಯವಾಗಿ ಇತ್ತೀಚಿಗೆ ಹಿಂದು ಜನರಲ್ಲಿ ಜಾಗೃತಿಯುಂಟಾಗಿರುವುದು ಸಂತೋಷದ ಸಂಗತಿಯು. ರಾಜಕೀಯ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿದ್ದರೂ ಹಿಂದುಗಳ ಸಂಖ್ಯಾಬಲವನ್ನು ಹೆಚ್ಚಿಸುವ ಮತ್ತು ಹಿಂದು ಸಂಸ್ಕೃತಿಯನ್ನು ಸಂರಕ್ಷಿಸುವ ವಿಷಯಗಳಲ್ಲಿ ಹಿಂದುಗಳು ವಿರೋಧಾಭಿಪ್ರಾಯವನ್ನು ಹೊಂದಲಾರರು. ದುರಾಗ್ರಹಿಯಾದ ಸನಾತನಿ ಮೊದಲುಗೊಂಡು ಅತ್ಯುದಾರ ಸುಧಾರಕರ ವರೆಗಿನ ಎಲ್ಲ ಹಿಂದುಗಳೂ ಹಿಂದುಸಂಸ್ಕೃತಿಯ ಸಂಬಂಧವಾಗಿ ಅಭಿಮಾನವುಳ್ಳವರೇ. ಆಗಿದ್ದಾರೆ.

### ಶುದ್ಧೀಕೃತ ಜನರನ್ನು ಹೇಗೆ ಕಾಣಬೇಕು?

ಹಿಂದು ಧರ್ಮದಲ್ಲಿ ತೆಗೆದುಕೊಳ್ಳಲ್ಪಟ್ಟ ಜನರಿಗೆ ಹಿಂದು ಧರ್ಮವು ಅತಿ ಪ್ರೇಮದ್ದಾಗುವಂತೆ ಅವರ ಸಂಗಡ ಇತರ ಹಿಂದುಗಳು ನಡೆದುಕೊಳ್ಳಬೇಕು. ಹೊಸದಾಗಿ ಬಂದವರು ಮತ್ತು ಅನಾದಿಯಿಂದಲೂ ಇದ್ದವರು ಎಂಬ ಭೇದವು ತೋರಕೂಡದು. ಇವರಲ್ಲಿ ಕೀಳುಮೇಲುಗಳ ಕಲ್ಪನೆಯಿರಕೂಡದು. ಹಿಂದು ಧರ್ಮದ ಸಂಸ್ಕಾರವಾದನಂತರ ಅವರು ಹಿಂದು ಸಮಾಜದಲ್ಲಿ ಬೆರೆತು ಹೋಗಬೇಕು. ಊಟೋಪಚಾರಾದಿ ವ್ಯವಹಾರಗಳಲ್ಲಿ ವ್ಯತ್ಯಾಸವನ್ನು ಮಾಡಕೂಡದು.

### ಜಾತಿ ಭೇದ ಮತ್ತು ವರ್ಣವ್ಯವಸ್ಥೆ.

ಕೇವಲ ಊಟೋಪಚಾರಗಳಲ್ಲಿಯೇ ಅಲ್ಲ; ಶರೀರಸಂಬಂಧದ ವಿಷಯದಲ್ಲಿಯೂ ಹಿಂದು ಧರ್ಮದಲ್ಲಿ ಬಂದವರಿಗೆ ಯಾವ ಅನಾನುಕೂಲಗಳೂ ಸಂಭವಿಸಬಾರದು, ಹಾಗಾಗಬೇಕಾದರೆ ಹಿಂದುಗಳೆಲ್ಲರೂ ಒಂದೇ ಜಾತಿಯವರೆಂಬ ದೃಢ ಭಾವನೆಯುಂಟಾಗಬೇಕು. ಜನ್ಮವಿಶಿಷ್ಟ ಜಾತಿ ಅಥವಾ ವರ್ಣಗಳ ಕಲ್ಪನೆಯಿರುವ ವರೆಗೂ ಇದು ಸಾಧ್ಯವಿಲ್ಲ. ಅಂತೆಯೇ ಜನ್ಮವಿಶಿಷ್ಟ ವರ್ಣಕಲ್ಪನೆಯನ್ನು ತೆಗೆದುಹಾಕಬೇಕು. ಜನ್ಮದಿಂದ ಬ್ರಾಹ್ಮಣರೆಂದು ಹೇಳಿಕೊಳ್ಳುವವರು ಈಗ ಗುಣಕರ್ಮಗಳಿಂದ ಕ್ಷತ್ರಿಯ ವೈಶ್ಯ ಮತ್ತು ಶೂದ್ರರು ಕೂಡಾ ಇರುತ್ತಾರೆ. ವರ್ಣ ಅಥವಾ ಜಾತಿಯ ಜಂಬವನ್ನು ಕೊಚ್ಚಿಕೊಳ್ಳುತ್ತಿರುವವರು ತಮ್ಮ ವಂಶ ಎಷ್ಟು ಶುದ್ಧವಿದೆಯೆಂಬುದನ್ನು ಹಿಂದುಸ್ಥಾನದ ಚರಿತ್ರೆಯಲ್ಲಿ ನೋಡಿಕೊಳ್ಳಲಿ.

ಸೈಂಧವಿ, ದ್ರಾವಿಡ, ಆರ್ಯ, ಶಕ, ಯೂಚಿ, ಹೂಣ ಮೊದಲಾದ ಅನೇಕ ವಂಶಗಳ ಜನರ ಸಂಕರದಿಂದಲೇ ಈಗಿನ ಹಿಂದು ಸಮಾಜವಾಗಿದೆ. ಆ ಎಲ್ಲ ಪ್ರಾಚೀನ ಸಂಸ್ಕೃತಿಗಳ ಸುಮಿಶ್ರ ಫಲವೇ ಈಗಿನ ಹಿಂದು ಸಂಸ್ಕೃತಿಯು. ಅನುಲೋಮ ವಿವಾಹವನ್ನು ಸ್ಮೃತಿಕಾರರು ಮಾನ್ಯಮಾಡಿದ್ದಾರೆ. ಪ್ರಾಚೀನ ಕಾಲದಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಮತ್ತು ಶೂದ್ರರು ಪರಸ್ಪರ ಶರೀರ ಸಂಬಂಧವನ್ನು ಮಾಡಿದುದೂ ಉಂಟು. ಆದಕಾರಣ ಈ ಭಿನ್ನ ವರ್ಣಗಳ ಶರೀರ ಸಂಬಂಧವು ಎಷ್ಟು ಹೆಚ್ಚು ಪ್ರಮಾಣದಲ್ಲಿ ನಡೆಯುವುದೋ ಅಷ್ಟು ಹಿಂದುಗಳಲ್ಲಿ ಐಕಮತ್ಯವೂ ಹೆಚ್ಚುವುದೆಂಬುದು ಮೊದಲಿನವರಿಗೆ ಮಾನ್ಯವಿದ್ದಿತು.

ಈ ವಿಧವಾದ ಸಂಘಟನೆಯಾಗಬೇಕಾದರೆ ಒಂದೊಂದು ವರ್ಣ ಅಥವಾ ಜಾತಿಯಲ್ಲಿಯ ಒಳಪಂಗಡಗಳು ಮೊದಲು ನಿವಾರಣೆಯಾಗಬೇಕು. ಬ್ರಾಹ್ಮಣರಿಗಿಂತ ಕ್ಷತ್ರಿಯರಲ್ಲಿ ಒಳಪಂಗಡಗಳನ್ನು ಹೇಳುವವರು ಹೆಚ್ಚು. ಈ ಒಳಪಂಗಡಗಳು ಮೊದಲು ಹೋದವಿನಾ ಹಿಂದುಸಂಘಟನೆಯ ಕಾರ್ಯ ಸುಲಭಸಾಧ್ಯವಿಲ್ಲ. ನಿಜವಾದ ಹಿಂದು ಸಂಘಟನೆಯು ಎಷ್ಟೇ ಅಗತ್ಯವಾದುದಾಗಿದ್ದರೂ ಅದು ಜಾಗ್ರತೆ ಆಗತಕ್ಕದ್ದೇನೂ ಅಲ್ಲ. ವಿಚಾರ ಕ್ರಾಂತಿಯಾದಂತೆಯೇ ಹಿಂದು ಸಂಘಟನೆಯ ಕಾರ್ಯವೂ ನಡೆಯತಕ್ಕದ್ದಾಗಿದೆ. ಆದಕಾರಣ ನಾವು ಮೊದಲು ಒಂದೊಂದು ಜಾತಿಯಲ್ಲಿಯ ಒಳಪಂಗಡಗಳನ್ನು ತೆಗೆದುಹಾಕಲು ಪ್ರಯತ್ನಿಸಬೇಕು.

---

## ಹಿಂದಿ-ಯುರೋಪಿಯನ್ ಅಧಿಕಾರಿಗಳ ಪ್ರಮಾಣ.

ಗುಜರಾಥ ಕಾಲೇಜಿನ ಪ್ರಿನ್ಸಿಪಾಲ ಡಾ. ಫಿಂಡಲೆ ಶಿರಾಸ ಎಂಬುವವರು ಕೆಲವು ದಿನಗಳ ಹಿಂದೆ ಗ್ಲಾಸಗೋ ಪಟ್ಟಣದಲ್ಲಿ ಒಂದು ವ್ಯಾಖ್ಯಾನವನ್ನು ಮಾಡಿದರು. ಆಗ ಈ ಕೆಳಗಿನ ಸಂಗತಿಯನ್ನು ತಿಳಿಸಿದರು. ಇದರಿಂದ ಹಿಂದುಸ್ಥಾನದ ಮೇಲಾಧಿಕಾರಿಗಳಲ್ಲಿ ಯಾರ ಸಂಖ್ಯೆ ಹೇಗಿದೆಯೆಂಬುದು ಗೊತ್ತಾಗುತ್ತದೆ.

**ಇಂಡಿಯನ್ ಸಿವ್ಹಿಲ್ ಸರ್ವಿಸ್.**

| ಇಸವಿ | ೧೯೨೨. | ೧೯೩೨. | ೧೯೩೬ |
|---|---|---|---|
| ಯುರೋಪಿಯನ್. | ೧೧೭೯. | ೮೪೩ | ೬೯೨. |
| ಹಿಂದಿ. | ೨೦೮ | ೪೬೫ | ೫೮೨ |

**ಇಂಡಿಯನ್ ಪೋಲಿಸ್ ಸರ್ವಿಸ್.**

| | | | |
|---|---|---|---|
| ಯುರೋಪಿಯನ್. | ೬೨೭ | ೫೨೮ | ೪೮೧ |
| ಹಿಂದಿ | ೬೬ | ೧೫೨ | ೧೯೨ |

**ಇಂಡಿಯನ್ ಮೆಡಿಕಲ್ ಸರ್ವಿಸ್.**

| | | | |
|---|---|---|---|
| ಯುರೋಪಿಯನ್ | ೩೨೬ | ೧೯೫ | ೧೯೪ |
| ಹಿಂದಿ | ೩೫ | ೯೭ | ೧೧೩ |

---

## ಕಾಂಗ್ರೆಸ್ ಕೆಲಸಗಾರರ ಮಹತ್ವದ ನಿರ್ಣಯ.

ನಾಗಪುರದಲ್ಲಿ ಕಳೆದ ೨೬ ನೆಯ ತಾರೀಖಿನ ದಿವಸ ಕಾಂಗ್ರೆಸ್ ಕೆಲಸಗಾರರು ಸೇರಿ ಈ ಕೆಳಗಿನ ನಿರ್ಣಯಗಳನ್ನು ಮಾಡಿದರು—

(೧) ಬ್ಯಾ. ಜಿನ್ನಾರ ಸಂಗಡ ಕಾಂಗ್ರೆಸ್ ಮುಖಂಡರು ನಡೆಸಿದ ಒಪ್ಪಂದದ ಮಾತುಕಥೆಗಳನ್ನು ಇನ್ನು ನಿಲ್ಲಿಸಿಬಿಡಬೇಕು.

(೨) ೧೮ ವರುಷಗಳಿಗೆ ಮೇಲ್ಪಟ್ಟ ತರುಣ ತರುಣಿಯರಿಗೆ ಯುದ್ಧವಿದ್ಯೆಯನ್ನು ಒತ್ತಾಯವಾಗಿ ಕಲಿಸಬೇಕು.

(೩) ಶಸ್ತ್ರನಿರ್ಬಂಧದ ಶಾಸನವನ್ನು ತೆಗೆದುಹಾಕಲು ಪ್ರಯತ್ನಿಸಬೇಕು. ರಾಯಫಲ್ ಶಿಕ್ಷಣದ ಶಾಲೆಯನ್ನು ಸ್ಥಾಪಿಸಬೇಕು.

(೪) ಕಾಂಗ್ರೆಸ್ ಕೆಲಸಗಾರರು ಚರಕಾಸಂಘದಲ್ಲಿಯ ಖಾದಿಯನ್ನೇ ಧರಿಸಬೇಕೆಂಬ ನಿಯಮವೇನೂ ಇರಕೂಡದು.

# ರಾಷ್ಟ್ರವಾದ ಮತ್ತು ಜಾತಿವಾದ.

## ಸ್ವಾತಂತ್ರ್ಯವೀರ ಸಾವರಕರರ ವಿಚಾರಸರಣಿ.

ಹಿಂದು ಮಹಾಸಭೆಯ ಅಧ್ಯಕ್ಷರಾದ ಸ್ವಾತಂತ್ರ್ಯವೀರ ಸಾವರಕರರಿಗೆ ಕಳೆದ ೨೬ ನೆಯ ತಾರೀಖಿನ ದಿವಸ ಮುಂಬೈಯಲ್ಲಿಯ ೭೪ ಸಂಸ್ಥೆಯವರು ಮಾನಪತ್ರವನ್ನು ಅರ್ಪಿಸಿದರು. ಆಗ ಬ್ಯಾ. ಜಮುನಾದಾಸ ಮೆಹತಾರವರು ಅಧ್ಯಕ್ಷರಾಗಿದ್ದರು. ಡಾ. ಮುಂಜೆ ಮೊದಲಾದ ಪ್ರಮುಖರೂ ಪ್ರಚಂಡವಾದ ಆ ಸಭೆಯಲ್ಲಿದ್ದರು. ಈ ಮಾನಪತ್ರಕ್ಕೆ ಉತ್ತರವಾಗಿ ಬ್ಯಾ. ಸಾವರಕರರು ಅತ್ಯಂತ ಮಹತ್ವವಾದ ಉಜ್ವಲ ಭಾಷಣವನ್ನು ಮಾಡಿದರು. ಅದರ ಮುಖ್ಯಾಂಶ ಹೀಗಿದ್ದಿತು—



### "ಹಿಂದು" ಎಂದು ಹೇಳಿಕೊಳ್ಳುವುದು ಅಪರಾಧ!

ನಾನು ಹಿಂದು ಎಂದು ಹೇಳಿಕೊಳ್ಳುತ್ತಿದ್ದೇನೆ. ಇದು ಅನೇಕರಿಗೆ ಅಪರಾಧವೆಂದೇ ತೋರುತ್ತದೆ. ಈ ದಿನ ನನಗೆ ಮಾನಪತ್ರವನ್ನು ಕೊಟ್ಟವರೆಲ್ಲ ಹಿಂದುತ್ವದ ಅಭಿಮಾನಿಗಳೇ ಇದ್ದೀರಷ್ಟೆ. ಎಂದಮೇಲೆ ನೀವೂ ಅಪರಾಧಿಗಳೇ ಆದಿರಿ. ನಿಮ್ಮಂತಹ ಅಪರಾಧಿಗಳು ಲಕ್ಷಾಂತರ ಜನರು ಮುಂದೆ ಬಂದದ್ದಾದರೆ ಸ್ವಾತಂತ್ರ್ಯದ ವಿಷಯದಲ್ಲಿ ಹೇಗೆ ಮುಂದರಿದದ್ದಾಗಿದೆಯೋ ಹಾಗೆಯೇ ಇನ್ನು ಹತ್ತೇ ವರುಷಗಳಲ್ಲಿ ಹಿಂದುತ್ವದ ಸಂಬಂಧವಾಗಿಯೂ ಮುಂದೆ ಬಂದುದನ್ನು ನೀವು ಕಾಣಬಹುದು.

### ಜನರ ತಪ್ಪು ತಿಳುವಳಿಕೆ.

ರಾಷ್ಟ್ರೀಯತಾ ಮತ್ತು ಜಾತೀಯತಾ ಎಂಬ ಸಂಗತಿಗಳ ಸಂಬಂಧವಾಗಿ ದೇಶದಲ್ಲಿ ಅನೇಕರು ತಪ್ಪು ತಿಳಿದುಕೊಂಡಿದ್ದಾರೆ. ಇದು ಹೋಗಬೇಕು. ಇವೆರಡರಲ್ಲಿ ಯಾವುದೂ ಮೂಲತಃ ಒಳ್ಳೆಯದಾಗಲಿ ಅಥವಾ ಕೆಡಕಾಗಲಿ ಇರುವುದಿಲ್ಲ. ಅವುಗಳ ಉಪಯೋಗ ಮತ್ತು ಸ್ಥಿತಿಗಳ ಮೇಲೆಯೇ ಅವುಗಳ ಹಿತಾಹಿತಗಳು ಅವಲಂಬಿಸಿವೆ.

ಭೂಮಿಯ ಒಂದು ಭಾಗದಲ್ಲಿ ವಾಸವಾಗಿದ್ದ ಮಾತ್ರದಿಂದಲೇ ಇನ್ನೊಂದು ಭಾಗದವರು ಅವರನ್ನು ಗುಂಡು ಹಾಕಿ ಕೊಲ್ಲಬಹುದೋ? ವಿಶ್ವ ಕುಟುಂಬದ ದೃಷ್ಟಿಯಿಂದ ಹಿಂದಿ ರಾಷ್ಟ್ರೀಯತಾ ಎಂಬುದು ಅನಿಷ್ಟವಾದುದಲ್ಲವೆ? ಇತರ ರಾಷ್ಟ್ರಗಳಿಗೆ ಉಪದ್ರವವನ್ನು ಉಂಟುಮಾಡದೆ ಇರತಕ್ಕ ರಾಷ್ಟ್ರೀಯತಾ ಒಳ್ಳೆಯದು. ಆದರೆ ಸಾಮ್ರಾಜ್ಯ ಸ್ಥಾಪನೆಯ ರಾಷ್ಟ್ರೀಯತಾ ಅಹಿತಕರವಲ್ಲವೆ?

ಆದೇ ಪ್ರಕಾರ ಸ್ವಜಾತಿಯ ಮೇಲಾಗತಕ್ಕ ಆಕ್ರಮಣವನ್ನು ತಡೆದು ಸ್ವಜಾತಿಯ ಸಂರಕ್ಷಣೆಯನ್ನು ಮಾಡಿಕೊಳ್ಳುವ ಜಾತೀಯತಾ ಒಳ್ಳೆಯದು. ಆದರೆ ಅನ್ಯ ಜಾತಿಗಳ ಮೇಲೆ ಆಕ್ರಮಣಮಾಡುವ ಜಾತೀಯತಾ ಅಹಿತಕರವಾದುದು. ಈ ತತ್ವವು ನಿಮಗೆ ಯುಕ್ತ ತೋರುತ್ತಿದ್ದರೆ ಕಾಂಗ್ರೆಸ್ಸಿಗಿಂತಲೂ ಹಿಂದು ಮಹಾ ಸಭೆಯೇ ಹೆಚ್ಚಿನ ರಾಷ್ಟ್ರೀಯವಾದುದೆಂದು ಸ್ಪಷ್ಟವಾಗುತ್ತದೆ. ಏಕೆಂದರೆ ರಾಷ್ಟ್ರಸಂಘದ ನಿಯಮದಂತೆ ಯಾವ ದೇಶದಲ್ಲಾದರೂ ಆ ದೇಶದ ಬಹು ಸಂಖ್ಯಾಕರ ಭಾಷೆ, ಲಿಪಿ, ಧ್ವಜ, ಇವೇ ರಾಷ್ಟ್ರ ಭಾಷೆ, ಲಿಪಿ, ಧ್ವಜಗಳೆಂದೇ ಎಣಿಸಲ್ಪಡಬೇಕಾಗುವುದು.

### ಹಿಂದು ಜಾತಿ ಸಂಘಟನೆ.

ರಾಷ್ಟ್ರೀಯರೆಂದು ಹೇಳಿಕೊಳ್ಳುವವರು ಸಂಘಟನೆಯನ್ನು ಮಾಡಿಕೊಳ್ಳುವುದೇಕೆಂದು ಕೇಳಿದರೆ ಅವರು ಹೇಳುವುದೇನು? ಬೇರೆ ಬೇರೆ ರಾಷ್ಟ್ರಗಳು ಸಂಘಟನೆಯ ಮೂಲಕ ತಮ್ಮ ಶಕ್ತಿಯನ್ನು ಹೆಚ್ಚಿಸಿಕೊಳ್ಳುತ್ತಿರುವುದರಿಂದ ನಾವಾದರೂ ನಮ್ಮ ರಾಷ್ಟ್ರೀಯ ಸಂಘಟನೆಯನ್ನು ಮಾಡಿಕೊಳ್ಳಲೇಬೇಕಾಗಿದೆಯೆಂದೇ ಅಲ್ಲವೆ? ಇದೇ ಮಾತು ನಮಗೇಕೆ ಸಂಬಂಧವಿಲ್ಲ? ಹಿಂದುಸ್ಥಾನದಲ್ಲಿ ಬೇರೆ ಜಾತಿಯವರು ತಮ್ಮ ಸಂಘಟನೆಯನ್ನು ಮಾಡಿಕೊಳ್ಳುತ್ತಿರುವುದರಿಂದಲೇ ನಾವಾದರೂ ಹಿಂದುಜಾತಿಯ ಸಂಘಟನೆಗಾಗಿ ಪ್ರಯತ್ನಿಸಲೇಬೇಕಾಗಿದೆ.

ಜಾತೀಯ ಚಟುವಟಿಕೆಯು ಅನಿಷ್ಟವೆಂದು ಹೇಳುವ ರಾಷ್ಟ್ರೀಯರಿಗೆ ನಾನು ಕೇಳುವುದೇನೆಂದರೆ, ನೀವು ಅಸ್ಪೃಶ್ಯರ ಉದ್ಧಾರಕ್ಕಾಗಿ ಚಟುವಟಿಕೆಯನ್ನು ನಡೆಸುತ್ತಿರುವುದೇಕೆ? ಒಂದು ಜಾತಿಯ ಮೇಲೆ ಅನ್ಯಾಯವಾಗುತ್ತಿರುವುದನ್ನು ದೂರ ಮಾಡುವುದಕ್ಕಾಗಿಯೇ ಈ ಪ್ರಯತ್ನ ನಡೆದಿದೆಯೆಂದು ಹೇಳುವಿರಲ್ಲವೆ? ಎಂದಮೇಲೆ ಹಿಂದುಜಾತಿಗಾಗುತ್ತಿರುವ ಅನ್ಯಾಯವನ್ನು ಕಳೆಯಲು ನಾವೇಕೆ ಪ್ರಯತ್ನಿಸಬಾರದು?

### ಹಿಂದು ಜಾತೀಯತಾವದಲ್ಲಿ ದೋಷವೇನಿದೆ?

ನಾವು ಹಿಂದುಜಾತೀಯತಾ ವಾದಿಗಳಾಗಿದ್ದು ನಿಮಗೆ ಮಾಡುತ್ತಿರುವ ಅನ್ಯಾಯವೇನು? ಹಿಂದುಗಳಿಗಾಗಿಯೇ ಬೇರೆ ಸೌಲಭ್ಯವನ್ನೇನಾದರೂ ಕೊಡಿರೆಂದು ಕೇಳುತ್ತೇವೆಯೆ? ಇಲ್ಲವೇ ಇಲ್ಲ. ಆದರೆ ನೀವು ಮಾತ್ರ ಅನ್ಯರಿಗೆ ಅವರು ಇಂಥ ಜಾತಿಯವರೆಂಬ ಮಾತ್ರದಿಂದಲೇ ಹೆಚ್ಚಿನ ಸೌಲಭ್ಯ ಕೊಡಬೇಕೆಂದು ಹೇಳುತ್ತಿದ್ದೀರಿ. ಮುಸಲ್ಮಾನರಿಗಾಗಿಯೇ ನೀವು ಹೆಚ್ಚಿನ ಅನುಕೂಲತೆ

ಯನ್ನು ಕೊಡಬೇಕೆಂದು ಹೇಳುತ್ತಿದ್ದೀರಿ. ಅಲ್ಪ ಸಂಖ್ಯಾಕರೆಂಬುದೇನೋ ತೋರಿಕೆಯ ಮಾತು. ಪಾರ್ಶಿ, ಕ್ರೈಸ್ತ ಮೊದಲಾದ ಅಲ್ಪ ಸಂಖ್ಯಾಕರ ವಿಚಾರದಲ್ಲಿ ನೀವೇನು ನಡೆಸಿದ್ದೀರಿ?

ಹಿಂದುಗಳಿಗೆ ನ್ಯಾಯವಾಗಿ ಸಲ್ಲಬೇಕಾದ ಹಕ್ಕು ಬಾಧ್ಯತೆಗಳ ಅಪಹಾರವಾಗಬಾರದೆಂದೇ ನಾವು ಪ್ರಯತ್ನಿಸುತ್ತಿದ್ದೇವೆ. ನೀವು ಹಿಂದುಗಳಾಗಿರುವುದರಿಂದ ನಿಮ್ಮ ಹಕ್ಕು ಬಾಧ್ಯತೆಗಳ ಕೊರತೆಯಾದರೂ ನೀವು ಸುಮ್ಮನಿರಬೇಕೆಂದು ನಮಗೆ ಹೇಳಿದರೆ ನಾವು ಸುಮ್ಮನಿರುವುದಿಲ್ಲ. ಹೀಗೆ ನಡೆದರೆ ಅದು ಅನ್ಯಾಯವೆ ?

### ಹಿಂದುತ್ವದ ವ್ಯಾಪಕತೆ.

ನಾಳೆ ಸ್ವರಾಜ್ಯ ದೊರೆತರೆ ಕಾಂಗ್ರೆಸ್ಸಿನ ಧ್ಯೇಯ ಪೂರ್ತಿಯಾಯಿತು. ಅದು ಲೋಕನಿಯುಕ್ತ ಪಾರ್ಲಮೆಂಟಿನಲ್ಲಿ ಬೆರೆತು ಹೋಗುತ್ತದೆ. ಹಿಂದು ಸಂಸ್ಥೆಯೇನೂ ಹಾಗಲ್ಲ. ಅದು ಮುಂದೆಯೂ ಇರಲೇಬೇಕಾಗಿದೆ. ನಾಳೆ ಮುಸಲ್ಮಾನಿ ರಾಷ್ಟ್ರದ ಸಂಗಡ ಯುದ್ಧಮಾಡುವ ಪ್ರಸಂಗ ಬಂದರೆ ಆಗ ಹಿಂದಿ ಸೈನ್ಯದಲ್ಲಿರುವ ಮುಸಲ್ಮಾನರು ವೈರಿಗಳ ಕಡೆಗೇನೇ ಸೇರುವರು. ಹಿಂದು ಸೈನ್ಯವೇ ಹಿಂದುಸ್ಥಾನದ ಸಂರಕ್ಷಣೆಗಾಗಿ ಹೋರಾಡುವುದು. ಅಂತೆಯೇ ಹಿಂದುತ್ವದ ರಕ್ಷಣೆಯು ಆಗಲೇಬೇಕಾಗಿದೆ.

ಔರಂಗಜೇಬನು ಹಿಂದುತ್ವದ ಮೂಲವನ್ನೇ ನಾಶಮಾಡಲು ಬಹು ಪ್ರಯತ್ನಿಸಿದನು. ಆದರೆ ಅದು ಸಾಧ್ಯವಾಗಲಿಲ್ಲ. ಹಿಂದು ಧರ್ಮವೃಕ್ಷವು ಬಾಡಬಾರದೆಂದೇ ನಾನು ಅದರ ಮೇಲೆ ನನ್ನ ರಕ್ತವನ್ನು ಎರೆಯುತ್ತಿದ್ದೇನೆ. ಹಿಂದುತ್ವವು ಅಮರವಾದುದು. ಹಿಂದು ಎಂದು ಹೇಳಿಕೊಳ್ಳುವುದು ಪಾಪವೆಂಬ ತಪ್ಪು ತಿಳುವಳಿಕೆಯು ನಾಶವಾಗಬೇಕು.

ನನಗೆ ಕಾಂಗ್ರೆಸ್ಸಿನ ಬಗ್ಗೆ ಹೆಚ್ಚಾದ ಆದರವಿದೆ. ನಾನು ಹಿಂದು ಮಹಾಸಭೆಯಲ್ಲಿದ್ದು ಎಷ್ಟರ ಮಟ್ಟಿಗೆ ಅದರ ಸೇವೆಮಾಡುವುದು ಶಕ್ಯವೋ ಅಷ್ಟು ಸೇವೆ ಮಾಡುವೆನು. ಒಂದು ವ್ಯಕ್ತಿಯು ಒಂದೇ ಸಂಸ್ಥೆಯಲ್ಲಿರಬೇಕೆಂದರೆ ನಾನು ಹಿಂದು ಮಹಾ ಸಭಾ ಸಂಸ್ಥೆಯಲ್ಲಿಯೇ ಇರುವೆನು."

---

## ತುರ್ಕಿ ಟೊಪ್ಪಿಗೆ ಮತ್ತು ಗಾಂಧಿ ಟೊಪ್ಪಿಗೆ.

### ಭಾಯಿ ಪರಮಾನಂದರ ಅಭಿಪ್ರಾಯ.

ಮೌಲಾನಾ ಶೌಕತ ಅಲ್ಲಿಯವರು ಗಡಿನಾಡಿನ ಪ್ರಾಂತಕ್ಕೆ ಹೋಗಿದ್ದಾರೆ. ಅಲ್ಲಿಯ ಮಂತ್ರಿಮಂಡಲವು ಕಾಂಗ್ರೆಸ್ಸಿನ ಹೆಸರಿನಲ್ಲಿದೆ. ಅದನ್ನು ಮುಸ್ಲಿಂಲೀಗಿನ ಕಡೆಗೆ ತೆಗೆದುಕೊಳ್ಳುವುದೇ ಇವರ ಪ್ರಯಾಣದ ಉದ್ದೇಶವೆಂದು ಹೇಳಲಾಗಿದೆ.

ಗಾಂಧಿ ಟೊಪ್ಪಿಗೆ ತೆಗೆದು ತುರ್ಕಿ ಟೊಪ್ಪಿಗೆ ಹಾಕಬೇಕೆಂಬ ಸಾಹಸ ನಡೆದಿದೆ. ಯಾವ ಟೊಪ್ಪಿಗೆಯನ್ನು ಹಾಕಿಕೊಂಡರೂ ನೋಟವು ಬೇರೆಯೇ ವಿನಾ ನಡೆಯೇನೂ ಬೇರೆಯಾಗುವುದಿಲ್ಲ.

ಏಕೆಂದರೆ, ಎಲ್ಲಿಯ ವರೆಗೆ ಮುಸಲ್ಮಾನರಲ್ಲಿ ಜಾತಿನಿರ್ಣಯವು ಆಚರಣೆಯಲ್ಲಿದೆಯೋ ಅಲ್ಲಿಯ ವರೆಗೆ ಮುಸ್ಲಿಂ ಲೀಗಿನ ಕಡೆಗೆ ಹೋದರೇನು ? ಕಾಂಗ್ರೆಸ್ಸಿನ ಅಧೀನದಲ್ಲಿದ್ದರೇನು? ಗಡಿನಾಡು ಸಿಂಧ, ಪಂಜಾಬ, ಮತ್ತು ಬಂಗಾಲ ಇವು ನಾಲ್ಕು ಪ್ರಾಂತಗಳು ಮುಸಲ್ಮಾನ್ ಜಾತಿ ವಿಶಿಷ್ಟ ಆಳಿಕೆಗಳಾಗಿಯೇ ಇರುತ್ತವೆ.

ಡಾ. ಖಾನಸಾಹೇಬರಿಗೂ ಸರ್ ಸಿಕಂದರ ಹಯಾತಖಾನರಿಗೂ ಮಿ. ಫಜಲುಲ್ ಹಕ್ ಇವರಿಗೂ ಪರಸ್ಪರ ಗುಣಸ್ವಭಾವಗಳಲ್ಲಿ ಭಿನ್ನವಿರುವುದರಿಂದ ನಡತೆಯಲ್ಲಿ ಸ್ವಲ್ಪ ಬೇರೆ ತೋರಬಹುದೇ ವಿನಾ ಧೋರಣದಲ್ಲೇನೂ ವ್ಯತ್ಯಾಸವಿರುವುದಿಲ್ಲ.

ಗಡಿನಾಡು ಕಾಂಗ್ರೆಸ್ಸಿನ ಮಂತ್ರಿಮಂಡಲದ ಆಳ್ವಿಕೆಗೆ ಒಳಪಟ್ಟಿದ್ದರೂ ಅಲ್ಲಿಯ ಶಿಕ್ಷಣ ಮಂತ್ರಿಗಳಾದ ಕಾಜಿ ಅತಾ ಉಲ್ಲಾರವರು ತಮ್ಮ ಕಾರ್ಯದ ರೀತಿನೀತಿಗಳನ್ನೆಲ್ಲಾ ಮುಸ್ಲಿಂ ಲೀಗಿನವರಂತೆಯೇ ಇಟ್ಟುಕೊಂಡಿದ್ದಾರೆ. ಇವರಿಗೆ ಗಡಿನಾಡಿನ ಫಜಲುಲ್ ಹಕ್ಕರೆಂದೇ ಜನರು ಹೇಳುತ್ತಿದ್ದಾರೆ.

ಟೊಪ್ಪಿಗೆ ಬೇರೆಯಾದರೇನೂ ಫಲವಿಲ್ಲ. ಜಾತಿನಿರ್ಣಯವು ನಿವಾರಣೆಯಾದಾಗಲೇ ನಿಜವಾದ ರಾಷ್ಟ್ರೀಯವೃತ್ತಿಗೆ ಅವಕಾಶವುಂಟು.

---

## ಹೆಂಡತಿಯಿದ್ದವರು ಲಗ್ನವಾಗ ಕೂಡದು.

### ಅಸೆಂಬ್ಲಿಯಲ್ಲಿ ಬರುವ ಗೊತ್ತುವಳಿ.

ಮಿಸೆಸ್ ರಾಧಾದೇವಿ ಸುಬ್ಬರಾಯನ್ ಇವರು ದಿಲ್ಲಿ ಕೇಂದ್ರ ಶಾಸನ ಸಭೆಯಲ್ಲಿ ಒಂದು ಗೊತ್ತುವಳಿಯನ್ನು ತರುವವರಿದ್ದಾರೆ. ಹೆಂಡತಿಯಿದ್ದವರು ಲಗ್ನವಾಗುವುದನ್ನು ಶಾಸನದಿಂದ ನಿಲ್ಲಿಸಬೇಕೆಂಬುದೇ ಇವರ ಗೊತ್ತುವಳಿಯ ಮುಖ್ಯೋದ್ದೇಶವು.

ಈ ಗೊತ್ತುವಳಿಯಲ್ಲಿ ಏಳೇ ನಿಯಮುಗಳಿವೆ. ಮೊದಲಿನ ಹೆಂಡತಿಯಿರುವಾಗ ಪುನಃ ಲಗ್ನವಾಗಲು ಅವಕಾಶ ಇರಕೂಡದು. ಬಹು ಪತ್ನಿಕತ್ವವು ಅನರ್ಥಕರವಾದುದು.

ಕುಟುಂಬಗಳು ಮೊದಲು ಕೂಡಿರುತ್ತಿದ್ದವು. ಆಗ ಅನೇಕ ಪತ್ನಿಯರಿದ್ದರೆ ಅಷ್ಟು ತೊಂದರೆಯಾಗುತ್ತಿರಲಿಲ್ಲ. ಈಗ ವಿಭಕ್ತ ಕುಟುಂಬಗಳು ಹೆಚ್ಚುತ್ತಲಿವೆ. ಇಂಥ ಸಮಯದಲ್ಲಿ ಬಹು ಪತ್ನಿತ್ವವು ವಿಶೇಷ ದುಃಖಕರವಾಗಿ ಪರಿಣಮಿಸುತ್ತದೆಂದೇ ಇವರ ಅಭಿಪ್ರಾಯ.

---

## ಶ್ರೀ ಕ್ಷಾತ್ರ ಜಗದ್ಗುರುಗಳ ತತ್ತ್ವೋಪದೇಶ.

### ಪದವಿ ಯಾವುದು?

ಕೊಲ್ಹಾಪುರದಲ್ಲಿ ಶ್ರೀ ಕ್ಷಾತ್ರ ಜಗದ್ಗುರುಗಳು ಪೆಟ್ರೋಲ್ ವ್ಯಾಪಾರಿಗಳಾದ ರಾ. ಸಾ. ಮಹಾಗಾವಕರ ಇವರ ಸನ್ಮಾನಾರ್ಥವಾಗಿ ಸೇರಿದ ಸಭೆಯಲ್ಲಿ ಅಧ್ಯಕ್ಷರಾಗಿ ಹೀಗೆ ಬೋಧಿಸಿದರು—

"ಮನುಷ್ಯನಲ್ಲಿರುವ ಸದ್ಗುಣವೇ ಆತನ ನಿಜವಾದ ಪದವಿಯು. ಅದನ್ನು ಸ್ವಪ್ರಯತ್ನದಿಂದಲೇ ಸಂಪಾದಿಸಬೇಕಾಗಿದೆ.

### ಅಧಿಕಾರಿಗಳ ಐದು ಆಯುಧ.

ಸರಕಾರಿ ಅಧಿಕಾರವನ್ನು ನಡೆಯಿಸುವವರಲ್ಲಿ ಐದು ಆಯುಧಗಳಿರಬೇಕು. ಹಾಗಾದರೇನೇ ಅವರು ಜಯಶಾಲಿಗಳಾಗುತ್ತಾರೆ. ಆ ಐದು ಆಯುಧಗಳಾವುವು? (೧) ಕಾರ್ಯ ಕುಶಲತೆ (೨) ನಿಸ್ಪೃಹತೆ (೩) ನ್ಯಾಯಪ್ರಿಯತೆ (೪) ರಾಜನಿಷ್ಠೆ (೫) ಲೋಕಹಿತತತ್ಪರತೆ.

# ಔಂಧದ ಮಹಾರಾಜರ ಮನನೀಯ ವಿಚಾರ.

ಔಂಧದ ಮಹಾರಾಜರಾದ ಪಂತ ಪ್ರತಿನಿಧಿಗಳು ಕಳೆದ ೨೩ ನೆಯ ತಾರೀಖಿನ ದಿವಸ ತಮ್ಮ ಸಂಸ್ಥಾನದ ಪ್ರತಿನಿಧಿ ಸಭೆಯ ಮುಕ್ತಾಯದ ಕಾಲಕ್ಕೆ ಒಂದು ಮಹತ್ವದ ಭಾಷಣವನ್ನು ಮಾಡಿದರು. ಅದರ ಮುಖ್ಯಾಂಶವು ಹೀಗಿದ್ದಿತು—

**ಶ್ರೀಮಂತಿಕೆಯಾವುದು?**

ಔಂಧ ಸಂಸ್ಥಾನದಲ್ಲಿಯ ಕಾರ್ಯಕ್ರಮಗಳು ಈಗಿನಂತೆಯೇ ಪ್ರಗತಿಪರವಾಗಿಯೇ ಸಾಗುತ್ತ ಹೋದರೆ ಇನ್ನು ೫ ವರುಷಗಳ ನಂತರ ಈ ಸಂಸ್ಥಾನದ ಪ್ರತಿಯೊಂದು ವ್ಯಕ್ತಿಗೂ ಮೈ ತುಂಬ ಬಟ್ಟೆ ಮತ್ತು ಹೊಟ್ಟೆ ತುಂಬ ಊಟ ದೊರೆಯಲು ಯಾವ ಅಡ್ಡಿಯೂ ಇಲ್ಲ. ಶ್ರೀಮಂತಿಕೆಯೆಂದರೆ ಯಾವುದು? ಇದೇ ಅಲ್ಲವೆ?

ಪ್ರತಿಯೊಂದು ವ್ಯಕ್ತಿಯೂ ಹಣವನ್ನು ಗಳಿಸುವುದರೊಂದಿಗೆ ಅದನ್ನು ಕೂಡಿಡಬೇಕಾದುದೂ ಅತ್ಯಗತ್ಯ. ಈ ದಿನ ಒಂದು ದುಡ್ಡನ್ನು ಗಳಿಸುವಂತೆಯೇ ಒಂದು ದುಡ್ಡನ್ನು ಕೂಡಿಡುವುದೂ ಅವಶ್ಯಕವು. ಕೂಡಿಡುವುದು ಮಿತವ್ಯಯದಿಂದಲೇ ಶಕ್ಯ. ನಮ್ಮ ಉದಾಹರಣೆಯನ್ನೇ ತೆಗೆದುಕೊಳ್ಳಿರಿ.

ನಮ್ಮ ಮಗನ ಮುಂಜಿಗೆ ನಾವು ಐದೇ ರೂಪಾಯಿಗಳನ್ನು ವೆಚ್ಚಮಾಡಿದೆವು. ನಮ್ಮ ಈ ಮಿತವ್ಯಯಕ್ಕೆ ನಮ್ಮ ಕುಟುಂಬದವರೂ ಗುರುಗಳೂ ಅನುಮತಿಯನ್ನು ಕೊಟ್ಟದ್ದರಿಂದಲೇ ನಮಗೆ ಅದು ಶಕ್ಯವಾಯಿತು. ನಮ್ಮ ಈ ಮಿತವ್ಯಯವನ್ನು ಎಂಟೇ ದಿನಗಳಲ್ಲಿ ಐದು ಮನೆತನದವರು ಅನುಕರಣ ಮಾಡಿದುದು ಅತ್ಯಂತ ಸಂತೋಷದ ಸಂಗತಿಯು.

**ಒಂದು ಲಕ್ಷದಿಂದ ೫ ರೂ. ಗಳಿಗೆ ಇಳಿದುದು.**

ನಮ್ಮ ಮಿತವ್ಯಯವನ್ನು ನೋಡಿ ಕೆಲವರು ೧||-೨ ರೂ. ಗಳಲ್ಲಿ ಮುಂಜಿಯನ್ನು ಮಾಡಿದರು. ಇದನ್ನು ಕೇಳಿ ನನಗಾದ ಸಂತೋಷವು ನೀವೂ ರಾಜರಾದ ವಿನಾ ನಿಮಗೆ ಗೊತ್ತಾಗಲಾರದು.

ನಮ್ಮ ಮುಂಜಿಗೆ ೫೦ ಸಾವಿರ ರೂ. ಗಳು ವೆಚ್ಚವಾಗಿದ್ದವು. ನಮ್ಮ ಹಿರಿಯ ಮಗನ ಮುಂಜಿಗೆ ಒಂದು ಲಕ್ಷ ರೂ. ವೆಚ್ಚವಾಗಿದ್ದಿತು. ಆಗ ನಮ್ಮ ಸಂಸ್ಥಾನದ ಆದಾಯವೂ ಒಂದೇ ಲಕ್ಷ ರೂ. ಇದ್ದಿತು. ಈಗ ಹಾಗೆ ಮುಂದುಗಾರಿಕೆ ಮಾಡಿದರೆ ಹೇಗೆ ನಡೆದೀತು?

**೨ ರೂ. ಗಳಲ್ಲಿ ಮುಂಜಿ; ೧೫ ರೂ. ಗಳಲ್ಲಿ ಲಗ್ನ.**

ನಮ್ಮ ಪ್ರಜೆಗಳಾದರೂ ಈಗಿನ ನಮ್ಮ ಮಿತವ್ಯಯವನ್ನೇ ಅನುಕರಣ ಮಾಡಿ ದುಂದುಗಾರಿಕೆಯನ್ನು ನಿಲ್ಲಿಸಲೇ ಬೇಕು. ನಮಗೆ ಒಬ್ಬ ಶಿಪಾಯಿಯ ಮನೆತನದ ಸ್ಥಿತಿ ಗೊತ್ತಿದೆ. ಅತನು ತನ್ನ ಲಗ್ನಕ್ಕಾಗಿ ಮಾಡಿದ ಸಾಲವನ್ನು ಅತನ ಸಂಬಂಧಿಗಳು ಇನ್ನೂ ತೀರಿಸಿಲ್ಲ. ಹೀಗೆ ದುಂದುಗಾರಿಕೆಯ ಲಗ್ನಾದಿ ಕಾರ್ಯಗಳನ್ನು ಮಾಡಬೇಡಿರಿ. ಶ್ರೀ. ರಸ್ತುಮರಾವ ದೇಶಮುಖ ಇವರು ತಮ್ಮ ಮನೆಯಲ್ಲಿ ೨ ಲಗ್ನಗಳನ್ನು ೨೯ ರೂ. ಗಳಲ್ಲಿ ಮಾಡಿದರು. ಇದು ಅತ್ಯಂತ ಅಭಿನಂದನೀಯವಾದುದು. ಮುಂಜಿಗೆ ೧||-೨ ರೂ. ಲಗ್ನಕ್ಕೆ ೧೫ ರೂ. ವೆಚ್ಚಮಾಡಿದರೆ ಸಾಕು.

ಜನರು ಏನಾದರೂ ಆಡಿಕೊಳ್ಳಬಹುದು. ಅವರ ಮಾತಿನ ಕಡೆಗೆ ಲಕ್ಷಿಸಬೇಡಿರಿ. ನಾವು ಮುಂಜಿಗೆ ೨೦-೩೦ ಸಾವಿರ ರೂ. ಗಳು ಬೇಕೆಂದು ಹೇಳಿದ್ದರೆ ನೀವು ಒಪ್ಪುತ್ತಿದ್ದಿರಷ್ಟೆ. ಮಿತವ್ಯಯವನ್ನು ಕಲಿಸಬೇಕೆಂದೇ ನಾವು ಈ ಪ್ರಕಾರ ಮಾಡಿದ್ದೇವೆ. ದುಡ್ಡನ್ನು ಕೂಡಿಟ್ಟುಕೊಳ್ಳದೆ ಸಂಸಾರವು ಸುಖಕರವಾಗಿ ಸಾಗುವುದಿಲ್ಲ.

**ಒಕ್ಕಲಿಗರೇ ನಮ್ಮ ರಕ್ಷಕರು.**

ಒಕ್ಕಲಿಗರ ಹಿತಕ್ಕಾಗಿ ನಾವೆಲ್ಲರೂ ಪ್ರಯತ್ನಿಸಬೇಕು. ಅದರಿಂದ ಎಲ್ಲರ ಹಿತವೂ ಸಾಧಿಸುತ್ತದೆ. ಪ್ರತಿನಿಧಿಗಳು ತಿಂಗಳಲ್ಲಿ ಒಂದು ದಿವಸವನ್ನಾದರೂ ತಮ್ಮ ನೆರೆಹಳ್ಳಿಯ ಒಕ್ಕಲಿಗರ ಸ್ಥಿತಿಗತಿಗಳನ್ನು ಕಣ್ಣಾರೆ ನೋಡಿ ಅವರಿಗೆ ಯೋಗ್ಯವಾದ ಸಲಹೆ ಕೊಡಬೇಕು.

ಒಕ್ಕಲಿಗರ ಆದಾಯ ಹೆಚ್ಚಿದರೇನೇ ಅವರಿಂದ ದನಕರುಗಳ ಜೋಪಾನ ಶಕ್ಯವು. ದನಗಳ ರಕ್ಷಣೆಯಾದರೇನೇ ಹೈನದ ಸಮೃದ್ಧಿ. ಹೈನದಿಂದಲೇ ಆರೋಗ್ಯ ಆಯುಷ್ಯಗಳ ಅಭಿವೃದ್ಧಿ. ಇವೆಲ್ಲ ಇದ್ದರೇನೇ ಶ್ರೀಮಂತಿಕೆ.

ಆದಕಾರಣ ಪ್ರತಿನಿತ್ಯ ದುಡಿದು ಮಿತವ್ಯಯದಿಂದ ನಡೆದು ನಮ್ಮ ಸಂಸ್ಥಾನದಿಂದ ಒಂದು ದುಡ್ಡಾದರೂ ಹೊರಗೆ ಹೋಗದಂತೆ ಮಾಡಿದರೆ ಇದೇ ಭೂಮಿಯಲ್ಲಿ ಹೊನ್ನು ಮುತ್ತುಗಳನ್ನು ಬೆಳೆಯಬಹುದು.

ಝೂಕೊ ಸ್ಲೋವ್ಹಿಯಾದಂಥ ಚಿಕ್ಕ ದೇಶ (ನಮ್ಮ ದೇಶದ ೫-೬ ಜಿಲ್ಲೆಗಳಷ್ಟು ಮಾತ್ರ ವಿಸ್ತಾರವಾಗಿರತಕ್ಕ ದೇಶ) ಈಗ ಹಿಂದುಸ್ಥಾನಕ್ಕೆ ಪ್ರತಿವರುಷ ೯ ಕೋಟಿ ರೂ. ಗಳ ಉಕ್ಕು ಯಂತ್ರ ಸಾಮಗ್ರಿಗಳನ್ನು ಕಳಿಸುತ್ತದೆ. ಎಂದಮೇಲೆ ಕಿರ್ಲೋಸ್ಕರ ಯಂತ್ರಾಲಯದ ಅಭಿವೃದ್ಧಿಯಾಗಿ ಇಲ್ಲಿಂದ ನಾವು ಮೋಟಾರುಗಳನ್ನು ಬೇರೆ ಕಡೆ ಕಳಿಸಲು ಸಮರ್ಥರಾಗಬಾರದೆ?

---

# ಜಪಾನದ ಮುಸಲ್ಮಾನರ ಪರಮತ ಸಹಿಷ್ಣುತೆ.

ಬಿಹಾರ ಪ್ರಾಂತದ ಪಂಡಿತ ರಾಮಾನುಗ್ರಹ ಎಂಬುವವರು ಜಪಾನ ದೇಶದಲ್ಲಿ ಸಂಚರಿಸಿ ಬಂದರು. ಇವರು ಆ ದೇಶದ ಸಂಬಂಧವಾಗಿ ಮಾಡಿದ ಒಂದು ವ್ಯಾಖ್ಯಾನದಲ್ಲಿ ಹೀಗೆ ಹೇಳಿದರು—

" ಜಪಾನಿಗಳು ಜಡವಾದಿಗಳಾಗಿದ್ದಾರೆಂದು ಹೇಳುವುದು ಸರಿಯಲ್ಲ. ಅವರಲ್ಲಿ ಧಾರ್ಮಿಕ ಭಾವನೆ ಪ್ರಬಲವಾಗಿದೆ. ದೇವರ ಪೂಜೆಮಾಡದೆ ಬೆಳಗ್ಗೆ ಆಹಾರವನ್ನು ತೆಗೆದುಕೊಳ್ಳುವುದಿಲ್ಲ. ಬುದ್ಧನ ಮೂರ್ತಿಯನ್ನು ಅಲ್ಲಿ ಪೂಜಿಸುವುದು ಹೆಚ್ಚು. ಆ ದೇಶದ ಮುಸಲ್ಮಾನರು ಕೂಡಾ ಬುದ್ಧನ ದೇವಾಲಯದ ಮುಂದೆ ಬಂದಾಗ ಬುದ್ಧ ಮೂರ್ತಿಗೆ ತಲೆ ಬಾಗುತ್ತಾರೆ. ಹೀಗೆ ಆ ದೇಶದ ಮುಸಲ್ಮಾನರು ಪರಮತಗಳಿಗೆ ಆದರವನ್ನು ತೋರಿಸುತ್ತಾರೆ.

ಒಂದು ಸಾರೆ ಹಿಂದುಸ್ಥಾನದ ಒಬ್ಬ ಮುಸಲ್ಮಾನ ಗೃಹಸ್ಥನು ಆ ದೇಶದ ಒಬ್ಬ ಮುಸಲ್ಮಾನನ ಈ ನಡತೆಯನ್ನು ನೋಡಿ ಮೂರ್ತಿ ಪೂಜೆಯನ್ನು ನಿಂದಿಸಿದನು. ಆಗ ಅಲ್ಲಿಯ ಮುಸಲ್ಮಾನ ಗೃಹಸ್ಥನು ಅತನಿಗೆ ಪುನಃ ಮಾತನಾಡಲು ಅವಕಾಶವನ್ನೇ ಕೊಡಲಿಲ್ಲ. "

## ದೇವಾಲಯದಲ್ಲಿ ಮುಸಲ್ಮಾನ್ ಅಧ್ಯಕ್ಷ.

### ಸಭೆಯ ಕಾರ್ಯ ನಿಂತಿತು.

ಪುಣೆ ಪಟ್ಟಣದ ಗಣೇಶ ಪೇಟೆಯಲ್ಲಿಯ ಒಂದು ಮಾರುತಿ ಗುಡಿಯಲ್ಲಿ ಕಾಂಗ್ರೆಸ್ ಕಮಿಟಿಯವರು ಮಿ. ವಸ್ತಾದ ಗುಲಾಮ ದಸ್ತಗೀರ ಎಂಬ ಮುಸಲ್ಮಾನ್ ಗೃಹಸ್ಥರ ಅಧ್ಯಕ್ಷತೆಯಲ್ಲಿ ಸಭೆ ಕೂಡಿಸಬೇಕೆಂದು ನಿರ್ಧರಿಸಿ ಆ ಪ್ರಕಾರ ಪ್ರಕಟಿಸಿದ್ದರು.

ದೇವಾಲಯದಲ್ಲಿ ಮುಸಲ್ಮಾನರ ಅಧ್ಯಕ್ಷತೆಯಲ್ಲಿ ಸಭೆ ಸೇರಿದರೆ ಹಿಂದುಗಳ ಮನಸ್ಸಿಗೆ ನೋವಾಗಿ ಶಾಂತತಾಭಂಗವಾಗುವ ಸಂಭವವಿರುವುದರಿಂದ ಅಲ್ಲಿ ಅವರ ಅಧ್ಯಕ್ಷತೆಯಲ್ಲಿ ಸಭೆ ಕೂಡಬಾರದೆಂದು ಧರ್ಮವೀರ ವಿಶ್ವಾಸರಾವ ಡಾವರೆ ಇವರು ಮ್ಯಾಜಿಸ್ಟ್ರೇಟರಿಗೆ ತಿಳಿಸಿದರು. ಈ ಸಭೆಯು ಕಳೆದ ೨೬ ನೆಯ ತಾರೀಖಿನ ದಿನ ಕೂಡುವದಿದ್ದಿತು. ಮ್ಯಾಜಿಸ್ಟ್ರೇಟ ಮಿ. ಫರ್ನಾಂಡೀಸ್ ಇವರು ದೇವಾಲಯದ ಪಂಚರನ್ನೂ ಕಾಂಗ್ರೆಸ್ ಸೆಕ್ರೆಟರಿಗಳನ್ನೂ ಕರೆಯಿಸಿ ವಿಚಾರಣೆಮಾಡಿದರು.

ದೇವಾಲಯವು ಸ್ಪೃಶ್ಯ ಹಿಂದುಗಳದ್ದಾಗಿದೆ. ಅಲ್ಲಿ ಮುಸಲ್ಮಾನರು ಅಧ್ಯಕ್ಷರಾಗಿ ಸಭೆ ನಡೆಯಿಸಲು ನಮ್ಮ ಒಪ್ಪಿಗೆ ಇಲ್ಲವಾಗಿ ಪಂಚರು ತಿಳಿಸಿದರು. ಕಾಂಗ್ರೆಸ್ ಸೆಕ್ರೆಟರಿಗಳು ಕೂಡಾ ತಾವು ಆ ಸ್ಥಳದಲ್ಲಿ ಸಭೆಯನ್ನು ಕೂಡಿಸುವುದಿಲ್ಲವಾಗಿ ಹೇಳಿದರು. ಹೀಗಾಗಿ ಈ ವ್ಯಾಜ್ಯವು ವಿಕೋಪ ಸ್ಥಿತಿಗೆ ಹೋಗದೆ ಪೂರೈಸಿದುದು ಕ್ಷೇಮ.

---

## ಉದ್ಗಿರಿ.

ಅಮರದಾದ ತಾ. ೧೨ ನೆಯ ದಿವಸ ಉದ್ಗಿರಿ ವೀರಶೈವ ಸಮಾಜದ ಸಭೆಯು ಶ್ರೀ. ಮಹದೇವಯ್ಯ ಸ್ವಾಮಿಗಳ ಅಧ್ಯಕ್ಷತೆಯಲ್ಲಿ ಕೂಡಿ ಒಂದು ವರುಷದ ಮಟ್ಟಿಗೆ ಈ ಕೆಳಗಿನವರು ಕಾರ್ಯನಿರ್ವಾಹಕರೆಂದು ಬಹುಮತದಿಂದ ಆರಿಸಲ್ಪಟ್ಟರು.

ಅಧ್ಯಕ್ಷರು— ಶ್ರೀ. ಸಿದ್ಧರಾಮಪ್ಪ ಶೇಟಗಾರ. ಉಪಾಧ್ಯಕ್ಷ- ಶ್ರೀ. ಗುಂಡೇರಾವ ಸಾಹೇಬ ಬಿ. ಎ. ಸೆಕ್ರೆಟರಿ- ಶ್ರೀ. ಮಹೇಶ ಶಂಕರ ನಾಗೂರೆ. ಅ|| ಸೆಕ್ರೆಟರಿ- ಶ್ರೀ. ಶಿವಶಂಕರಪ್ಪ ನಾಗೂರೆ. ಖಜೀನದಾರ- ಶ್ರೀ. ಸಿದ್ಧಪ್ಪ ಆಲಣೆ. ಪುಸ್ತಕಾಧ್ಯಕ್ಷ- ಶ್ರೀ. ವಿಶ್ವನಾಥಪ್ಪ ಶೇಟಗಾರ. ಉಪ ಪುಸ್ತಕಾಧ್ಯಕ್ಷ- ಶ್ರೀ. ವೀರಭದ್ರಪ್ಪ ಚೌಧರಿ. ಸೆಕ್ರೆಟರಿ ವ್ಯಾಯಾಮ ಶಾಲಾ- ಶ್ರೀ. ಬಂಡೆಪ್ಪಾ ಮಜಗೆ. ವ್ಯಾಯಾಮ ಶಾಖೆಯ ಖಜೀನದಾರ- ಲಿಂಗಪ್ಪ ಬಾಗಬಂದೆ.

### ಅಭಿನಂದನ.

ಇಲ್ಲಿಯ ಶ್ರೀ. ಗುಂಡೇರಾವ ಸಾಹೇಬ ಇವರು ಬಿ. ಎ. ಪರೀಕ್ಷೆಯಲ್ಲಿ, ಶ್ರೀ. ಶಂಕರಪ್ಪ ವಾರದ ಇವರು ಎಫ್. ಎ. ಪರೀಕ್ಷೆಯಲ್ಲಿ, ಶ್ರೀ. ವಿಶ್ವನಾಥಪ್ಪ ಶೇಟಕಾರ ಮತ್ತು ಶ್ರೀ. ಸಂಗಪ್ಪ ವಾಣಪುರೆ ಇವರು ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಈ ವರುಷ ತೇರ್ಗಡೆಯಾದುದ್ದರಿಂದ ಇವರನ್ನು ಸಭೆಯು ಅಭಿನಂದಿಸಿತು.

ಇಲ್ಲಿಯ ಶ್ರೀ. ಸಿದ್ಧರಾಮಪ್ಪ ಹನುಮಂತಪ್ಪ ನೆಲೆ ಇವರ ಚಿರಂಜೀವಿ ವಿಶ್ವನಾಥಪ್ಪನ ವಿವಾಹದ ನಿಮಿತ್ತ ವರನ ಕಡೆಯಿಂದ ೧೧ ರೂ. ಶ್ರೀ. ಸಂಭಾಜಪ್ಪ ಸಿದ್ಧ ಆಳಂದಕರ ಇವರಿಂದ ಕನ್ಯೆಯ ಪರವಾಗಿ ೧೧ ರೂ. ಗಳು ಉದ್ಗಿರಿ ವೀರಶೈವ ಸಮಾಜಕ್ಕೆ ಕೊಡಲ್ಪಟ್ಟದ್ದರಿಂದ ಇವರ ಅಭಿನಂದನವನ್ನೂ ಮಾಡಿದ್ದಾಯಿತು.

ಸೆಕ್ರೆಟರಿ.

## ಅಭಿನಂದನೀಯ ಗೊತ್ತುವಳಿ.

ಹಿಂದುಸ್ಥಾನದ ಆರ್ಥಿಕ ಉನ್ನತಿಗೂ ಹಿಂದಿಯರ ಶಾರೀರಿಕ ಸುಸ್ಥಿತಿಗೂ ಗೋ ಸಂರಕ್ಷಣೆಯು ಅತ್ಯಾವಶ್ಯಕವೆಂಬುದು ನಿರ್ವಿವಾದವಾದ ಸಂಗತಿಯಷ್ಟೆ. ಎಂದಮೇಲೆ ಕಾಂಗ್ರೆಸ್ ರಾಜ್ಯದಲ್ಲಾದರೂ ಈ ವಿಷಯದ ಕಡೆಗೆ ಲಕ್ಷಿಸುವುದು ಯೋಗ್ಯವಷ್ಟೆ.

ಗೋವರ್ಧನ ಸಂಸ್ಥೆಯ ನ್ಯಾಯರತ್ನ ಕುಮಾರ ಗಂಗಾನಂದ ಸಿಂಗ ಎಂಬ ಮಹಾಶಯರು ಸಂಯುಕ್ತ ಪ್ರಾಂತದ ಅಸೆಂಬ್ಲಿಯಲ್ಲಿ ಹಿಂಡುವ ಆಕಳುಗಳ ಸಂಹಾರ ಪ್ರತಿಬಂಧಧ ಒಂದು ಗೊತ್ತುವಳಿಯನ್ನು ತರುವವರಿದ್ದಾರೆ. ಇವರು ದರಭಂಗಾ ಮಹಾರಾಜರ ಆಪ್ತಕಾರ್ಯದರ್ಶಿಗಳಾಗಿರುವರಲ್ಲದೆ ಸಂಯುಕ್ತ ಪ್ರಾಂತದ ಒಬ್ಬ ಪ್ರಸಿದ್ಧ ವಿದ್ವಾಂಸರೂ ಆಗಿದ್ದಾರೆ. ಹಿಂಡುವ ದನಗಳ ಸಂಹಾರವಾದರೂ ಶಾಸನದಿಂದಲೇ ಎಲ್ಲ ಪ್ರಾಂತಗಳಲ್ಲಿಯೂ ನಿಂತದ್ದಾದರೆ ಎಷ್ಟೋ ಪ್ರಯೋಜನ.

---

## ನಾಶಿಕ ಬ್ಯಾಂಕ ನಿಂತಿತು.

ನಾಶಿಕ ಜಿಲ್ಲಾ ಸೆಂಟ್ರಲ್‌ಕೊ-ಆಪರೇಟಿವ್ ಬ್ಯಾಂಕ ಕಳೆದ ೨೬ ನೆಯ ತಾರೀಖಿನಿಂದ ನಿಲ್ಲಿಸಲ್ಪಟ್ಟಿತು.

ಹಣವನ್ನು ಇಟ್ಟವರೆಲ್ಲರೂ ತಮ್ಮ ತಮ್ಮ ಹಣವನ್ನು ಒಮ್ಮೆಲೇ ತೆಗೆದುಕೊಳ್ಳಲಾರಂಭಿಸಿದ್ದರಿಂದ ಬ್ಯಾಂಕಿನ ವ್ಯವಹಾರ ನಿಂತುಹೋಯಿತು. ನಾಶಿಕ ಮುನಸಿಪಾಲ್ಟಿಯ ೩೦ ಸಾವಿರ ರೂ. ಗಳು ಈ ಬ್ಯಾಂಕಿನಲ್ಲಿ ಇದ್ದವೆಂದು ತಿಳಿದಿದೆ

---

## ಲಂಡನ್ನಿನಲ್ಲಿ ಪಂಡಿತಜಿ.

ಕಾಂಗ್ರೆಸ್ಸಿನ ರಾಯಭಾರಿಗಳಾದ ಪಂ. ಜವಾಹರಲಾಲ ನೆಹರುರವರು ಲಂಡನ್ನಿನಲ್ಲಿ ಹಿಂದುಸ್ಥಾನದ ಆಕಾಂಕ್ಷೆಯನ್ನು ಕುರಿತು ಅನೇಕ ಪಕ್ಷಗಳ ಪ್ರಮುಖರ ಮುಂದೆ ಸುಸ್ಪಷ್ಟವಾಗಿ ತಿಳಿಸುತ್ತಿದ್ದಾರೆ.

ಹಿಂದುಸ್ಥಾನ ಚರಿತ್ರೆಯು ಕಳ್ಳತನ, ಲಂಚತನ, ಮತ್ತು ದಾಕ್ಷಿಣ್ಯವೃತ್ತಿಗಳಿಂದ ಕೂಡಿದ್ದಾಗಿದೆಯೆಂದೂ ಹಿಂದುಸ್ಥಾನದ ಧ್ಯೇಯಪ್ರಾಪ್ತಿಗೆ ಟ್ರೇಡ್ ಯುನಿಯನ್ ಕಾಂಗ್ರೆಸ್‌ದವರು ತುಂಬಾ ಸಹಾಯಮಾಡುವರೆಂದೂ ಆ ಸಂಘದ ಅಧ್ಯಕ್ಷರಾದ ಮಿ. ಎಲ್ಕಿನ್ ರವರು ಪಂಡಿತಜಿಯವರ ಸನ್ಮಾನಾರ್ಥವಾಗಿ ಸೇರಿದ ಸಭೆಯಲ್ಲಿ ಹೇಳಿದರು!

---

## ಸಿಂಧ ಮಂತ್ರಿಮಂಡಲದ ಸ್ತುತ್ಯ ಪ್ರಯತ್ನ.

ಸಿಂಧ ಪ್ರಾಂತದ ಮಂತ್ರಿಮಂಡಲವು ಹಳ್ಳಿಗಳ ಸುಧಾರಣೆಗಾಗಿ ಆರು ಜಿಲ್ಲೆಗಳಲ್ಲಿ ಒಂದು ಹೊಸ ಯೋಜನೆಯನ್ನು ಆಚರಣೆಯಲ್ಲಿ ತರುವುದಿದೆ.

(೧) ಶಿಕ್ಷಣ ಪ್ರಸಾರಕ್ಕಾಗಿ ಶಾಲೆಗಳನ್ನು ಸ್ಥಾಪಿಸುವುದು ದೊಡ್ಡವರಿಗಾಗಿ ರಾತ್ರಿ ಶಾಲೆಗಳನ್ನು ಏರ್ಪಡಿಸುವುದು.

(೨) ಶುದ್ಧವಾದ ನೀರು ಎಲ್ಲರಿಗೂ ದೊರೆಯುವಂತೆ ಬಾವಿ, ಕೆರೆಗಳನ್ನು ಏರ್ಪಡಿಸುವುದು.

(೩) ಸಂಬಳದ ಪ್ರಚಾರಕರನ್ನು ನಿಯಮಿಸಿ ಜನರ ಆರೋಗ್ಯ ಸುಧಾರಣೆಗೆ ಯೋಗ್ಯ ಉಪದೇಶ ಮಾಡಿಸುವುದು.

# ಗೋವಧೆ ಪ್ರತಿಬಂಧದ ಯೋಜನೆ.

## ಮೌಲಾನಾ ನಜಮುದ್ದೀನ ಸಾಹೇಬರ ದಿವ್ಯ ವಿಚಾರ.

ಗೋಪ್ರಮೋದ ಬಿರುದಾಂಕಿತರಾದ ಮೌಲಾನಾ ನಜಮುದ್ದೀನ ಸಾಹೇಬರು ಗೋ ಸಂರಕ್ಷಣೆಯ ವಿಚಾರವಾಗಿಯೇ ಅವಿಶ್ರಾಂತ ಶ್ರಮಪಡುತ್ತಿದ್ದಾರಷ್ಟೆ. ಈ ಮಹಾಶಯರು ಅತ್ಯಂತ ಮಹತ್ವದ ಒಂದು ಲೇಖನವನ್ನು ಪ್ರಕಟಿಸಿದ್ದಾರೆ. ಅದರ ಮುಖ್ಯಾಂಶ ಈ ಪ್ರಕಾರವಾಗಿದೆ—

ಒಕ್ಕಲಿಗನ ಸುಖವೇ ಜಗತ್ತಿನ ಸುಖ.

ಎಂಬ ಸಿದ್ಧಾಂತ ವಾಕ್ಯವನ್ನು ನಾವು ಜ್ಞಾಪಿಸಿಕೊಂಡರೆ ಒಕ್ಕಲಿಗರು ಮೊದಲು ಹೇಗಿದ್ದರು? ಈಗ ಹೇಗಿದ್ದಾರೆ? ಎಂಬ ಸಂಗತಿಗಳ ಕಡೆಗೆ ಪೂರ್ಣ ಲಕ್ಷಿಸಬೇಕಾಗುವುದು. ಮೊದಲಿನ ಒಕ್ಕಲಿಗರಲ್ಲಿ ದನಕರುಗಳು ವಿಶೇಷವಾಗಿದ್ದವೆಂಬುದನ್ನು ಎಲ್ಲರೂ ಒಪ್ಪುತ್ತಿದ್ದಾರೆ. ಅಂತೆಯೇ ಅವರಲ್ಲಿ ಧಾನ್ಯ, ಹಾಲು, ತುಪ್ಪ ಯಥೇಚ್ಛನಾಗಿದ್ದವು.

ಹಿಂದಿನ ಮುಸಲ್ಮಾನ್ ಬಾದಶಹರ ಆಳ್ವಿಕೆಯಲ್ಲಿಯೂ ಮರಾಠೆಯವರ ಪ್ರಭುತ್ವದಲ್ಲಿಯೂ ದನಗಳಿಗೆ ಮೇವು ಬೇಕಷ್ಟು ದೊರೆಯುತ್ತಿತ್ತು. ಗೋಮಾಳಗಳು ಕಾದಿಡಲ್ಪಟ್ಟು ಅವುಗಳಲ್ಲಿ ಜನರು ತಮ್ಮ ದನಗಳನ್ನು ಮೇಯಿಸಿಕೊಳ್ಳಲು ಅನುಕೂಲ ಮಾಡಿಕೊಟ್ಟಿದ್ದರು. ಬ್ರಿಟಿಶ್ ಸರಕಾರದವರು ಅಂಥ ಗೋಮಾಳಗಳನ್ನು ತಮ್ಮ ಸ್ವಾಧೀನಪಡಿಸಿಕೊಂಡರು. ದನಗಳಿಗೆ ಮೇಯಲು ಸ್ಥಳವೇ ಇಲ್ಲದಂತಾಯಿತು. ಆದುದರಿಂದ ಒಕ್ಕಲಿಗರು ದಿನೆ ದಿನೆ ದನಗಳನ್ನು ಮಾರಲಾರಂಭಿಸಿದರು.

ಪೈಗಂಬರ ಸಾಹೇಬರ ಅಪ್ಪಣೆ.

ಆಕಳು, ಎತ್ತು ಮೊದಲಾದ ದನಗಳು ಎಲ್ಲ ಜನರ ಹಿತಾರ್ಥವಾಗಿಯೇ ಇವೆ. ಅವುಗಳನ್ನು ಕೊಲ್ಲಲೇಬೇಕೆಂದು ಮುಸಲ್ಮಾನ್ ಧರ್ಮದಲ್ಲಿ ಎಲ್ಲೆಲ್ಲಿಯೂ ಹೇಳಿಲ್ಲ. ಯಾವ ದನಗಳು ಹಾಲನ್ನು ಕೊಡುತ್ತವೆಯೋ ಮತ್ತು ಆ ಹಾಲಿನಿಂದ ಮಕ್ಕಳ ಪೋಷಣೆಯಾಗುತ್ತದೆಯೋ ಅಂಥ ದನಗಳನ್ನು ಕೊಲ್ಲಬೇಡಿರೆಂದೇ ಹಜರತ ಮಹಮ್ಮದ ಪೈಗಂಬರ ಸಾಹೇಬರು ಆಜ್ಞಾಪಿಸಿದ್ದಾರೆ. ಆದಕಾರಣ ಗೋವಧೆಯು ನ್ಯಾಯವಾದುದಲ್ಲ.

ಬಾಬರನಿಂದ ಮುಂದಿನ ಎಲ್ಲ ಬಾದಶಹರೂ ತಮ್ಮ ಧರ್ಮಕ್ಕೆ ಕೊರತೆಯನ್ನುಂಟುಮಾಡದೆ ಅದು ಉನ್ನತಿಯಾಗಲೆಂದೂ ಹಿಂದುಸ್ಥಾನವು ಕೃಷಿಪ್ರಧಾನ ದೇಶವಾಗಿರುವುದರಿಂದ ಕೃಷಿಗೆ ಅಗತ್ಯವಾಗಿರತಕ್ಕ ದನಗಳ ಜೋಪಾನವಾಗಲೆಂದೂ ದನಗಳನ್ನು ಕೊಲ್ಲಬಾರದಾಗಿ ಅಪ್ಪಣೆ ಮಾಡಿದ್ದರು. ಅದು ಯುಕ್ತವಾದುದೇ ಆಗಿದ್ದಿತು.

ಆದಕಾರಣ ಆರ್ಥಿಕ ದೃಷ್ಟಿಯಿಂದಾದರೂ ಜನ್ನಾ ಸಾಹೇಬರು ಇತ್ತ ಲಕ್ಷಿಸಬೇಕು. ಇದರಿಂದ ಎಲ್ಲ ಜಾತಿಯ ಒಕ್ಕಲಿಗರ ಹಿತವಾಗುತ್ತದೆ. ಇದೇ ಪ್ರಕಾರ ಎತ್ತು ಆಕಳುಗಳ ಸಂಹಾರವಾಗುತ್ತ ಹೋದರೆ ಮುಂದೆ ಒಕ್ಕಲತನಕ್ಕೆ ಎತ್ತುಗಳೇ ದೊರೆಯದಂತಾಗಿ ಭೂಮಿಯ ಸಾಗುವಳಿಯೇ ನಿಲ್ಲಬಹುದು.

ಕಾಂಗ್ರೆಸ್ ಸರಕಾರಕ್ಕೆ ಸೂಚನೆ.

ಮೊದಲು ಹಿಂದುಸ್ಥಾನದಲ್ಲಿ ೨೭ ಕೋಟಿ ಆಕಳುಗಳಿದ್ದವು. ಈಗ ೪ ಕೋಟಿ ಆಕಳುಗಳಿವೆ. ಇದರಿಂದ ಎತ್ತುಗಳು ಕಡಿಮೆಯಾಗಿ ಭೂಮಿಯ ಸಾಗುವಳಿ ಸರಿಯಾಗಿ ಆಗುತ್ತಾ ಇಲ್ಲ.

ಗೋವಧೆಯನ್ನು ನಿಲ್ಲಿಸಬೇಕೆಂದು ಸರಕಾರಕ್ಕೆ ಅನೇಕ ಸಾರೆ ಕೇಳಿಕೊಂಡರೂ ಅದರ ಉಪಯೋಗವೇ ಆಗಲಿಲ್ಲ. ಈಗ ಕಾಂಗ್ರೆಸ್ ಸರಕಾರವು ಈ ಕೆಳಗಿನ ಸಂಗತಿಗಳ ಕಡೆಗೆ ಲಕ್ಷಿಸಬೇಕು.

(೧) ಒಕ್ಕಲತನಕ್ಕೆ ಬೇಕಾಗುವಷ್ಟು ಎತ್ತುಗಳ ಸಂಖ್ಯೆಯು ಇದೆಯೋ? ಇಲ್ಲವೋ? ಎಂಬುದನ್ನು ಮೊದಲು ನೋಡಬೇಕು. ಅಷ್ಟು ಎತ್ತುಗಳು ಇಲ್ಲದಿದ್ದರೆ ಒಕ್ಕಲಿಗರು ಆಕಳು ಮತ್ತು ಎತ್ತುಗಳನ್ನು ಅಪ್ಪಣೆ ವಿನಾ ಮಾರಕೂಡದೆಂದು ಶಾಸನವನ್ನೇ ಮಾಡಬೇಕು.

(೨) ಎತ್ತುಗಳ ಸಂಖ್ಯೆ ಹೆಚ್ಚಲು ಅಲ್ಲಲ್ಲಿ ದನ ಜೋಪಾನದ ಸಂಸ್ಥೆಗಳನ್ನು ಏರ್ಪಡಿಸಬೇಕು. ಆ ಸಂಸ್ಥೆಯು ತಾಲೂಕು ಮತ್ತು ಜಿಲ್ಲೆಗಳ ವರೆಗೂ ಅನೇಕ ಶಾಖೋಪಶಾಖೆಗಳಾಗಿರಬೇಕು.

(೩) ಒಕ್ಕಲಿಗನು ದನಗಳನ್ನು ಮಾರುವುದಿದ್ದರೆ ಎರಡು ದಿನ ಮುಂಚೆ ಆ ಸಂಸ್ಥೆಗೆ ತಿಳಿಸಬೇಕು. ಆ ಸಂಸ್ಥೆಯವರು ಊರಲ್ಲಿ ಡಂಗುರ ಸಾರಿ ಯಾರಿಗಾದರೂ ಬೇಕಾಗಿದ್ದರೆ ಅಲ್ಲಿಯೇ ಅದನ್ನು ಮಾರಿಸಬೇಕು. ಅಲ್ಲಿ ಮಾರದಿದ್ದರೆ ಬೇರೆ ಕಡೆಗೆ ಮಾರುವುದಕ್ಕಾಗಿ ಅಪ್ಪಣೆ ಕೊಡಬೇಕು. ಎಲ್ಲಿಯೂ ಮಾರಾಟವಾಗದಿದ್ದರೆ ಜಿಲ್ಹಾ ಸಂಸ್ಥೆಯ ಕಡೆಗೆ ಅದನ್ನು ಕಳಿಸಬೇಕು. ಅಲ್ಲಿ ಅವರು ಅದನ್ನು ಜೋಪಾನಮಾಡಬೇಕು. ಅಪ್ಪಣೆ ವಿನಾ ಆಕಳು ಮತ್ತು ಎತ್ತುಗಳನ್ನು ಮಾರುವವರಿಗೆ ಗ್ರಾಮಪಂಚಾಯತಿಯಿಂದ ಶಿಕ್ಷೆ ವಿಧಿಸಲು ಅಧಿಕಾರವಿರಬೇಕು.

(೪) ಜಿಲ್ಹಾ ಸಂಸ್ಥೆಗೆ ದನಗಳನ್ನು ಸಾಕಲು ಉಚಿತವಾಗಿ ಸರಕಾರವು ಮೇವಿನ ಅಡವಿಯನ್ನು ಬಿಟ್ಟುಕೊಡಬೇಕು. ಮೇವು ನೀರುಗಳಿಗೆ ಅನುಕೂಲವಿರತಕ್ಕ ಸ್ಥಳಗಳಲ್ಲಿ ಆ ದನಗಳು ಇರಬೇಕು.

(೫) ಒಳ್ಳೆಯ ಬೀಜದ ಹೋರಿಗಳನ್ನೂ ಈ ಸಂಸ್ಥೆಯವರು ಸಾಕಬೇಕು. ಆಕಳನ್ನು ಕಟ್ಟಿಸುವುದಕ್ಕೆ ಎಂಟಾಣೆ ಅಥವಾ ೧ ರೂ ಆಕಳಿನವರು ಕೊಡಬೇಕು. ಅವರು ಬಡವರಿದ್ದರೆ ಯೋಗ್ಯ ಅಧಿಕಾರಿಗಳಿಂದ ಬಡವನಿದ್ದ ಬಗ್ಗೆ ಚೀಟಿ ತರಬೇಕು.

(೬) ಸುಗ್ಗಿಯ ಕಾಲಕ್ಕೆ ಪ್ರತಿಯೊಬ್ಬ ರೈತನಿಂದ ಅತನು ಬಡವನಿದ್ದರೆ ೧ ರೂ. ಧನಿಕನಿದ್ದರೆ ೨ ರೂ. ತೆಗೆದುಕೊಂಡು ಆ ಹಣದಿಂದ ಮೇಲಿನ ಸಂಸ್ಥೆಯನ್ನು ನಡೆಯಿಸಬೇಕು.

(೭) ಸುಗ್ಗಿಯ ಕಾಲದಲ್ಲಿ ಮೇವನ್ನು ಪ್ರತಿಯೊಬ್ಬ ಒಕ್ಕಲಿಗನೂ ತಾನು ಬೆಳೆದುದರಲ್ಲಿ ೧೦೦ ಕ್ಕೆ ೫ ರಂತೆ ಅಥವಾ ೧೦ ರಂತೆ ಮೇಲಿನ ಸಂಸ್ಥೆಗೆ ಕೊಡುವಂತೆ ಮಾಡಬೇಕು. ಮೇವಿಲ್ಲದ ಒಕ್ಕಲಿಗನಿಗೆ ಅದನ್ನು ಕೊಟ್ಟು ಸುಗ್ಗಿಯ ಕಾಲದಲ್ಲಿ ಅದರ ಒಂದೂಕಾಲುಪಟ್ಟು ಮೇವನ್ನು ಅತನಿಂದ ಪುನಃ ತೆಗೆದುಕೊಳ್ಳಬೇಕು.

(೮) ೧೯೨೭ ನೆಯ ಇಸವಿಯಲ್ಲಿ ಮುಂಬೈ ಗವ್ಹರ್ನರ್ ಸರ್. ಲೆಸ್ಲಿ ಉಯಿಲ್ ಸನ್‌ರವರ ಅಧ್ಯಕ್ಷತೆಯಲ್ಲಿ ಸ್ಥಾಪನೆಯಾದ "ದಿ ಬಾಂಬೆ ಪ್ರೆಸಿಡೆನ್ಸಿ ಕ್ಯಾಟಲ್ ಇಂಪ್ರುಮೆಂಟ್ ಎಂಡ ಡೇರಿ ಫಾರ್ಮಿಂಗ್" ಎಂಬ ಸಂಸ್ಥೆಯು ಈಗಲೂ ಚೆನ್ನಾಗಿ ಕೆಲಸ ನಡೆಸಿದೆ. ಈ ಸಂಸ್ಥೆಯ ಕಡೆಗೆ ಮೇಲಿನ ನನ್ನ ಯೋಜನೆಯನ್ನು ವಿಚಾರಣೆಗಾಗಿ ಕಳಿಸಬೇಕು.

# ವೀರಶೈವ ಗುರುವರ್ಗಕ್ಕೆ

## ಎಚ್ಚರಿಕೆ.

(ಲೇ:— ಶ್ರೀ. ಶಂಕರಲಿಂಗ ಸ್ವಾಮಿಗಳು ಹಂಜಗಿ.)

ವೀರಶೈವ ಸಮಾಜವು ಭಗವಾನ್ ಬಸವೇಶ್ವರನ ಕಾಲಕ್ಕೆ ಬಹಳ ಉಚ್ಚ ಶಿಖರಕ್ಕೇರಿತ್ತು. ಅದೇ ಸಮಾಜವೇ ಈಗ ನೆಲಕ್ಕೆ ಬಿದ್ದು ನರಳಹತ್ತಿದೆ. ಯಾವ ಸಮಾಜವು ಉಚ. ನೀಚವೆಂಬ ಭೇದ ಭಾವವಿಲ್ಲದೆ ಸಕಲರಿಗೂ ವೀರಶೈವ ದೀಕ್ಷೆ ಕೊಟ್ಟು ಲಿಂಗ ಧಾರಿಗಳೆಲ್ಲರೂ ಒಂದೇ ಎಂಬ ಸಿದ್ಧಾಂತವನ್ನು ಯಾವ ಸಮಾಜಕ್ಕೆ ತೋರಿಸಿಕೊಟ್ಟಿತ್ತೋ ಅದೇ ಸಮಾಜವೇ ಈಗ ಲಿಂಗಧಾರಿಗಳಲ್ಲಿ ಅನೇಕ ಭೇದ ಕಲ್ಪನೆ ಮಾಡಿ ಜಾತಿಯ ಜಂಜಾಟದಲ್ಲಿ ಸಿಕ್ಕು ಪರಧರ್ಮದವರ ಅಪಹಾಸ್ಯಕ್ಕೆ ಕಾರಣವಾಗಿದೆ. ಯಾವ ವೀರಶೈವ ಸಮಾಜವನ್ನು ಮಹಾತ್ಮಾ ಬಸವೇಶ್ವರನು ಮಾನವ ಕೋಟಿಯ ಉದ್ಧಾರಕ್ಕಾಗಿ ಪುನರುಜ್ಜೀವನಗೊಳಿಸಿದನೋ ಮತ್ತು ಜಾತಿಯ ಕಟ್ಟನ್ನು ಕತ್ತರಿಸಿ ಎಲ್ಲ ಜಾತಿಯವರನ್ನು ಎತ್ತಿ ಹಿಡಿದಿದ್ದನೋ ಎಲ್ಲ ಜಾತಿಯವರನ್ನು ಬಂಧುತ್ವ ಮಾಲೆಯಲ್ಲಿ ಪೋಣಿಸಿ ಜೋಡಿಸಿ ಬಿಟ್ಟಿದ್ದನೋ ಮತ್ತು ಆಚಾರವೇ ಸ್ವರ್ಗ ಅನಾಚಾರವೇ ನರಕ ವೆಂದು ಯಾವ ಸಮಾಜಕ್ಕೆ ಬೋಧಿಸಿದ್ದನೋ ಅದೇ ಸಮಾಜವೇ ಈಗ ಬಿದ್ದು ಬಾಯ್ಬಿಡಹತ್ತಿದೆ. ದಯವೇ ಧರ್ಮದ ಮೂಲವೆಂದು ಯಾವ ಸಮಾಜಕ್ಕೆ ಬೋಧಿಸಿದ್ದನೋ ಅದೇ ಸಮಾಜವು ಇತ್ತೀಚಿಗೆ ನಿರ್ದಯಸ್ಥಿತಿಗಿಳಿದಿದೆ.

ನಮ್ಮ ಸಮಾಜದಲ್ಲಿ ಮೇಲು ಕೀಳು ಎಂಬ ಮನೋಭಾವನೆ ಹೋಗದ ಹೊರ್ತು ತನ್ನ ಕಳೆದುಕೊಂಡ ಉಚ್ಚ ಸ್ಥಾನವನ್ನು ಸೇರಲಾರದು. ಕಲಹದಿಂದಲೇ ನಮ್ಮ ಸಮಾಜವು ಇಷ್ಟು ಹೀನ ಸ್ಥಿತಿಗಿಳಿದಿದೆ. ಕಲಹದಿಂದಲೇ ನಮ್ಮ ಜ್ಞಾನ ಶಕ್ತಿಯನ್ನು ಅಲ್ಲದ ಕೆಲಸಕ್ಕೆ ಉಪಯೋಗಿಸುತ್ತೇವೆ. ವೇದಗಳನ್ನು ವೇದದ ಇಚ್ಛೆಯ ವಿರುದ್ಧ ಜಗ್ಗಿ ಅರ್ಥಕ್ಕೆ ಅನರ್ಥಮಾಡಿ ಮಂಗಲ ಸ್ವರೂಪವಾದ ಧರ್ಮದಲ್ಲಿ ವೀರಶೈವ ಧರ್ಮಕ್ಕೆ ಸಲ್ಲದ ಯಜ್ಞಯಾಗಾದಿಗಳ ಕುರುಹಾದ ಜುಟ್ಟ ವನ್ನು ಬಿಡಿಸಲು ಸಮಾಜಕ್ಕೆ ಬೋಧಮಾಡುವದೆಂದರೆ ಇದೇ ಜ್ಞಾನಶಕ್ತಿಯನ್ನು ದುರುಪಯೋಗ ಮಾಡಿದ ಲಕ್ಷಣವು. ಮಾನವ ಕೋಟಿಯ ಪಾವನಕ್ಕಾಗಿ ಹುಟ್ಟಿದ ಸಮಾಜದಲ್ಲಿಯೂ ಈ ಪ್ರಕಾರ ಅನ್ಯಾಯವೆ? ಶಿವಶಿವಾ! ಈ ಸಮಾಜಕ್ಕೆ ಗುರುಗಳೆಂದು ಹೇಳಿಸಿಕೊಳ್ಳುವವರಲ್ಲಿಯೂ ಈ ಪ್ರಕಾರ ಅನ್ಯಾಯವೆ? ಮುಖ್ಯವಾಗಿ ಜಾತಿ ಕಲ್ಪನೆಯು ಇವರಿಂದಲೇ ಹುಟ್ಟಿದೆ. ನೋಡಿರಿ ಸಂಸ್ಕೃತ ಬಲ್ಲ ಪಂಡಿತರಿಂದ ಸ್ವಕಲ್ಪಿತ ಶ್ಲೋಕಗಳನ್ನು ಬರೆದು ಅಜ್ಞ ಜನರಿಗೆ ಈ ಗ್ರಂಥವು ಪರಮಾತ್ಮನು ಪಾರ್ವತಿಗೆ ಬೋಧಮಾಡಿದ್ದು ಇರುತ್ತದೆ. ಆದ್ದರಿಂದ ಇದನ್ನು ನೀವು ನಂಬಬೇಕು. ನಂಬದಿದ್ದರೆ ನೀವು ಸೂರ್ಯ ಚಂದ್ರರಿರುವವರೆಗೂ ನರಕದಲ್ಲಿ ಬೀಳಬೇಕಾಗುತ್ತದೆ. ಈ ಪ್ರಕಾರವಾಗಿ ಜನರಲ್ಲಿ ಪ್ರಚಾರವು ಒಳ್ಳೇ ಜೋರಿನಿಂದ ನಡೆದಿದೆ. ಮತ್ತು ನೀವು ವೀರಶೈವ ಲಿಂಗೀ ಬ್ರಾಹ್ಮಣರಾಗಬೇಕಾದರೆ ಜುಟ್ಟ ಬಿಡಬೇಕು.

ನಿಮ್ಮ ಮನೆಯ ಹೆಣ್ಣುಮಕ್ಕಳಿಗೆ ಕಚ್ಚೀ ಹಾಕಿ ಸೀರಿ ಉಡಲಿಕ್ಕೆ ಹೇಳಿರಿ. ಹೆಣ್ಣುಮಕ್ಕಳು ತಲೆಯ ಮೇಲೆ ಶೆರಗು ಹಾಕಬಾರದು. ಇತ್ಯಾದಿ ಬೋಧಗಳು ವಿಜಾಪುರ ಜಿಲ್ಲೆಯ ಉತ್ತರ ಭಾಗಕ್ಕೆ ಒಳ್ಳೇ ಜೋರಿನಿಂದ ನಡೆದಿವೆ. ನೋಡಿರಿ ಗುರುವರ್ಗದಲ್ಲೇ ಇತ್ತಂಡ ವಾದ ನಡೆದ ಮೇಲೆ ಭಕ್ತವರ್ಗವು ಯಾವ ಕಾರ್ಯ ಕೈಕೊಳ್ಳಬೇಕು? ಗುರುವರ್ಗಕ್ಕೆ ಶರಣು ಹೊಡೆಯಬೇಕೋ ಕಿವಿ ಹಿಂಡಿ ದಾರಿಗೆ ತರಬೇಕೊ? ಇದನ್ನು ಭಕ್ತವರ್ಗವೇ ವಿಚಾರಿಸಲಿ. ಅದರಲ್ಲೇನಿದೆ? ಜಗತ್ತಾಳುವ ರಾಜನನ್ನಾದರೂ ಸಿಂಹಾಸನದಿಂದ ಕೆಳಗೆ ಇಳಿಸಲು ಪ್ರಜೆಗಳಿಗೆ ಅಧಿಕಾರವಿದೆ. ತತ್ವಕ್ಕೆ ವಿರುದ್ಧ ನಡೆದರೆ ರಾಜರಾದರೇನು ಗುರುಗಳಾದರೇನು? ಗುರುವು ಆಚಾರಭ್ರಷ್ಟನಾದರೆ ಅವನನ್ನು ನಂಬಲಾಗದೆಂದು ವಚನಕಾರರು ಹೇಳಿಲ್ಲವೆ? ಅಂದಮೇಲೆ ಇನ್ನು ಜಾಗೃತರಾಗಿರಿ. ಇನ್ನೊಂದು ಮಾತು ಏನೆಂದರೆ,

ನಾನು ಸರ್ವ ಸಾಧಾರಣ ಸಣ್ಣ ಸಣ್ಣ ಹಳ್ಳಿಯಲ್ಲಿ ಸಂಚಾರ ಮಾಡುತ್ತೇನೆ. ಕೆಲವು ಹಳ್ಳಿಗಳಲ್ಲಿ ಲಿಂಗಾಯತ ತಳವಾರರು ಹಂಡೆ ಕುರುಬರು, ಇವರಿಗೆ ಲಿಂಗವಿದ್ದರೂ ಊರಲ್ಲಿಯ ಪ್ರಮುಖರು ಮಠಸ್ಥ, ಮಠಪತ್ತಿ ಮೊದಲಾದವರು ಬಳಿಕೆಯಲ್ಲಿ ತಂದಿಲ್ಲ. ಇವರಾದರೂ ಗುರುವರ್ಗಕ್ಕೆ ಬಹಳ ವಿನಂತಿಮಾಡಿಕೊಂಡರು. ಅದೇನೂ ಫಲಕಾರಿಯಾಗಲಿಲ್ಲ. ನಾನು ಪಟ್ಟದ್ದೇವರ ಮಠದಲ್ಲಿ ಊಟಮಾಡುತ್ತಿದ್ದೆ. ಒಂದು ದಿವಸ ಊರಲ್ಲಿಯ ೪-೫ ಪ್ರಮುಖರನ್ನು ಕರೆಯಿಸಿ ನೀವು ನಮ್ಮ ಸಂಗಡ ಲಿಂಗಾಯತ ತಳವಾರರ ಮನೆಗೆ ಭೋಜನಕ್ಕೆ ಬರುತ್ತೀರಾ ಎಂದು ಕೇಳಿದ್ದಕ್ಕೆ ಅವರು ಹೀಗೆ ಉತ್ತರ ಕೊಟ್ಟರು—

"ನಮ್ಮ ಮನಸ್ಸು ಬರಲಿಕ್ಕೆ ಒಪ್ಪಿದೆ. ಆದರೆ ನಮ್ಮ ಗುರುಗಳು ಬೇಡವೆಂದು ನೀನು ಅವರಲ್ಲಿ ನೀರು ಕುಡಿದರೆ ಬಹಿಷ್ಕಾರ ಹಾಕುವೆವೆಂದೂ ಹೇಳಿದ್ದಾರೆ." ಎಂದು ಅಂದರು. ಅಂದಮೇಲೆ ಜಾತಿಯ ಭೂತವು ಇವರನ್ನು ಆಶ್ರಯ ಮಾಡಿದೆಯೆಂದು ನನಗೆ ತೋರಿತು. ನೋಡಿರಿ ಭಕ್ತರೆಂದರೆ ಗುರುಗಳ ಕೈಯಲ್ಲಿಯ ಗೊಂಬಿಯೇ? ಇಂಥ ನಿರ್ದಯ ನಿಷ್ಕರುಣ ಗುರುವರ್ಗಕ್ಕೆ ತಲೆ ಬಾಗುವದಕ್ಕಿಂತಲೂ ಒಬ್ಬ ಸದಾಚಾರ ಸದ್ಗುಣ ಸಂಪನ್ನ ಭಕ್ತನಿಗೆ ತಲೆ ಬಾಗುವದೇ ವಿಹಿತವಲ್ಲವೆ? ಎಂದು ನನ್ನ ಮನಸ್ಸು ನಿರ್ಧರಿಸಿತು. ವೀರಶೈವರೇ ನೀವು ನಿಜವಾಗಿ ವೀರಶೈವಾಚಾರಪರರಾಗಬೇಕಾಗಿದ್ದರೆ ವೀರಶೈವ ಧರ್ಮಕ್ಕೆ ವಿರುದ್ಧರಾದವರನ್ನು ನೀವು ನಂಬಬೇಡಿರಿ.

ನಾನು ಬರೆದ ಲೇಖವು ವೀರಶೈವರಲ್ಲಿ ಅನೇಕ ಕುಕಲ್ಪನೆ ಹುಟ್ಟಿಸಿ ಅನೇಕ ಜಾತಿಕಲ್ಪನೆ ಮಾಡುವವರಿಗೆ ಮತ್ತು ಬಸವೇಶ್ವರ ತತ್ವಕ್ಕೆ ವಿರುದ್ಧವಾಗಿ ಬೋಧಮಾಡುವವರಿಗೆ ಮಾತ್ರ ಸಂಬಂಧಿಸಿದ್ದಾಗಿದೆ.

---

## ಶುದ್ಧೀ ಸಮಾರಂಭ.

ಮಿ. ಶ್ಯಾಂಪಸನ್ ಎಂಬ ಕ್ರಿಸ್ತ ತರುಣನ ಶುದ್ಧೀಕರಣವು ಹುಬ್ಬಳ್ಳಿ ಆರ್ಯ ಸಮಾಜದ ಮಂದಿರದಲ್ಲಿ ಕಳೆದ ವಾರ ಜರುಗಿತು. ಹಿಂದು ಸಂಘಟನೆಗಾಗಿ ಅವಿಶ್ರಾಂತ ಶ್ರಮವಹಿಸುತ್ತಿರುವ ಮಿರ್ಜಿಯ ಶ್ರೀ. ದಿವೇಕರ್ ಶಾಸ್ತ್ರಿಗಳೇ ಪುರೋಹಿತರಾಗಿದ್ದರು. ಇವರು ಹುಬ್ಬಳ್ಳಿಗೆ ಬಂದು ಹಿಂದು ಸಂಘಟನೆಯ ವಿಚಾರವಾಗಿ ತಮ್ಮ ಅದ್ವಿತೀಯ ಬೋಧದಿಂದಲೂ ಕಳಕಳಿಯಿಂದಲೂ ಎಷ್ಟೋ ಜಾಗೃತಿಯನ್ನುಂಟುಮಾಡಿದ್ದಾರೆ.

ಹಿಂದು ಧರ್ಮದಲ್ಲಿ ಬಂದ ಮಿ. ಶ್ಯಾಂಪಸನ್ ಇವರಿಗೆ ಶುದ್ಧೀಕರಣದ ತರುವಾಯ ಶ್ಯಾಮಸುಂದರ ಎಂಬ ಹೆಸರನ್ನು ಇಟ್ಟರು. ಶ್ರೀ. ಡೀಕಪ್ಪನವರು ಶ್ರೀ. ಗಾಂವಕರ ಮೊದಲಾದ ಹಿಂದು ಸಮಾಜ ಸುಧಾರಣಾ ಪ್ರಿಯರಾದ ಇಲ್ಲಿಯ ಅನೇಕ ಪ್ರಮುಖರು ಈ ಶುದ್ಧೀಸಮಾರಂಭದಲ್ಲಿ ಭಾಗವಹಿಸಿದ್ದರು. ಶ್ರೀ. ದಿವೇಕರ ಶಾಸ್ತ್ರಿಗಳು ಹಿಂದುಸಂಘಟನೆಯ ಬಗ್ಗೆ ಜಾಗೃತಿ ಹುಟ್ಟಿಸಲು ಈ ಉತ್ತರ ಕರ್ನಾಟಕದಲ್ಲಿ ಸಂಚರಿಸತಕ್ಕವರಿದ್ದಾರೆ.

ಓರ್ವ ಸಂಘಟನವಾದಿ.

# ಕರ್ನಾಟಕ ಏಕೀಕರಣ ಸಂಘದ
## ಉಪ ಸಮಿತಿಗಳ ಸಭೆ.

ಕರ್ನಾಟಕ ಏಕೀಕರಣ ಸಂಘದ ಉಪಸಮಿತಿಗಳ ಸಭೆಯು ತಾ. ೧೯-೬-೩೮ ನೆಯ ದಿನ ಧಾರವಾಡದ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಕಚೇರಿಯಲ್ಲಿ ಶ್ರೀ. ಬಳವಂತರಾವ ದಾತಾರರ ಅಧ್ಯಕ್ಷತೆಯಲ್ಲಿ ಕೂಡಿತ್ತು. ಸಭೆಗೆ ಉಪಸಮಿತಿಗಳ ಸದಸ್ಯರೂ, ಕಾರ್ಯಕಾರೀ ಮಂಡಲದ ಸದಸ್ಯರೂ ಆಗಮಿಸಿದ್ದರು.

ಶ್ರೀ. ಹುಕ್ಕೇರಿಕರರವರು ಮಂಡಿಸಿದ ಇಂಗ್ಲೀಷ ವಾರ ಪತ್ರಿಕೆಯ ಯೋಜನೆಯು ಕೈಕೊಳ್ಳಲ್ಪಟ್ಟು ಅಗಸ್ಟ ಮೊದಲನೆಯ ತಾರೀಖಿನಿಂದ ಪತ್ರಿಕೆಯನ್ನು ಹೊರಡಿಸಬೇಕಾಗಿ ಗೊತ್ತಾಯಿತು. ಪತ್ರಿಕೆಯ ವ್ಯವಸ್ಥೆಯನ್ನು ಶ್ರೀಯುತರಾದ ಹುಕ್ಕೇರಿಕರ ಮತ್ತು ಕರಮರಕರರು ನೋಡಿಕೊಳ್ಳತಕ್ಕದ್ದು.

ಬರುವ ನಾಡಹಬ್ಬದ ಕಾಲಕ್ಕೆ ಏಕೀಕರಣಕ್ಕೆ ಹಣ ಕೂಡಿಸುವದಕ್ಕಾಗಿ 'ನಿಧಿವಾರ' ವನ್ನಾಚರಿಸಬೇಕಾಗಿ ಗೊತ್ತಾಯಿತು. ಮತ್ತು ಈಗಾಗಲೇ ಏಕೀಕರಣ ಸಂಘಕ್ಕೆ ಸದಸ್ಯರನ್ನು ಮಾಡಲು ಪ್ರಾರಂಭಿಸುವ ಯೋಜನೆಯೂ ಕೈಕೊಳ್ಳಲ್ಪಟ್ಟಿತು. ಹಣ ಕೂಡಿಸಲು ಬೇರೆ ಬೇರೆ ಜಿಲ್ಲೆಗಳ ಪರವಾಗಿ ಬೇರೆ ಬೇರೆ ಜನರು ನಿಯಮಿಸಲ್ಪಟ್ಟಿರುವರು.

ಏಕೀಕರಣ ಪ್ರಚಾರ ಕಾರ್ಯವನ್ನು ಜೋರಿನಿಂದ ಸಾಗಿಸಬೇಕಾಗಿ ನಿರ್ಣಯವಾಗಿದೆ. ಶ್ರೀ. ಕಳ್ಳಿ ತಿಪ್ಪಣ್ಣ ಶಾಸ್ತ್ರಿಗಳು ಬಳ್ಳಾರಿ ಜಿಲ್ಲೆಯಲ್ಲಿಯೂ, ಶ್ರೀ. ಮುದವೀಡು ಕೃಷ್ಣರಾಯರು ಬೆಳಗಾವಿ ಜಿಲ್ಲೆಯಲ್ಲಿಯೂ, ಪ್ರಚಾರಕ್ಕಾಗಿ ಹೊರಡಲಿರುವರು. ಇವರಲ್ಲದೆ ಶ್ರೀ. ವೆಂಕರಡ್ಡಿ ಹೂಲಿ, ಶ್ರೀ. ತಲ್ಲೂರ ರಾಯನಗೌಡರು, ಶ್ರೀ. ಬಿಂದು ಮಾಧವ ಬುರ್ಲಿಯವರು ಪ್ರಚಾರ ಕಾರ್ಯವನ್ನು ಕೈಕೊಳ್ಳಲೊಪ್ಪಿದ್ದಾರೆ.

ಏಕೀಕರಣ ಸಂಘದ ಘಟನೆಯನ್ನು ಶ್ರೀ. ಹುಕ್ಕೇರಿ ರಾಮರಾಯರು ಸಿದ್ಧಪಡಿಸಿದ್ದು ಅದು ಸಾರ್ವಜನಿಕರ ಸಲಹೆ ಸೂಚನೆಗಳಿಗಾಗಿ ಬೇಗನೆ ಪ್ರಕಟಗೊಳಿಸಲಾಗುವದು.

೧. ಕೆ. ಬಿ. ಜನರಾಜ ಹೆಗಡೆ.
೨. ಭೂಸನೂರು ಗುರುಬಸಪ್ಪ.
೩. ಅರವಿಂದ ಜೋಶಿ.

ಕಾರ್ಯದರ್ಶಿಗಳು.

## ನ ರ ಗುಂ ದ .

ಶ್ರೀ ವಿರಕ್ತಮಠದ ಜ್ಯೋತಿಷ್ಯ
ವೈದಿಕ ಪಾಠಶಾಲೆಯ ವಾರ್ಷಿಕ ಪರೀಕ್ಷೆಯ
ಪರಿಣಾಮ.

ಶ್ರೀ ವಿರಕ್ತ ಮಠದ ಟ್ರಸ್ಟ ಜನರೂ ಹಾಗು ಇನ್ನುಳಿದ ಸದ್ಭಕ್ತರೂ ಕೂಡಿ ಶ್ರೀಮದ್ವೀರಶೈವ ಸಮಾಜೋನ್ನತಿ ಸಂಘವೊಂದನ್ನು ಸ್ಥಾಪಿಸಿದ್ದು ಈ ಸಂಘದ ವತಿಯಿಂದ ಶ್ರೀ ವಿರಕ್ತ ಮಠದಲ್ಲಿ ಕಳೆದ ಭಾವನಾಮ ಸಂವತ್ಸರ ಶ್ರಾವಣ ಶು|| ೧೨ ಬುಧವಾರ ತಾ. ೨೨-೮-೩೪ ನೇ ಇತ್ತೆ ದಿವಸ ಧರ್ಮಾರ್ಥ ಜ್ಯೋತಿಷ್ಯ ವೈದಿಕ ಪಾಠಶಾಲೆಯನ್ನು ಸ್ಥಾಪಿಸಿರುವದು ಯಾವತ್ತರಿಗೂ ಗೊತ್ತಿದೆಯಷ್ಟೆ. ಪ್ರತಿವರ್ಷದ ಪದ್ಧತಿಯಂತೆ ಈ ಪಾಠಶಾಲೆಯ ವಾರ್ಷಿಕ ಪರೀಕ್ಷೆಯನ್ನು ಇದೇ ತಿಂಗಳು ೨೪ ಮತ್ತು ೨೫ ತಾರೀಖಿನ ದಿನಗಳಲ್ಲಿ ವೇ. ಬ್ರ. ಶ್ರೀ. ಸಿ. ಶಿವಬಸವ ಶಾಸ್ತ್ರಿಗಳು ಬೃಹನ್ಮಠ ಹೂಲಿ ಪಂಚಾಂಗ ಕರ್ತರು ತೆಗೆದುಕೊಂಡರು. ಪರೀಕ್ಷೆಗೆ ಕೂತ ಯಾವತ್ತೂ ವಿದ್ಯಾರ್ಥಿಗಳು ತೇರ್ಗಡೆ ಹೊಂದಿರುವರೆಂಬುವದನ್ನು ತಿಳುಹಲು ಅತ್ಯಾನಂದವಾಗುತ್ತದೆ. ಈ ಪಾಠಶಾಲೆಯ ವಾರ್ಷಿಕ ಪರೀಕ್ಷೆಯ ಪರಿಣಾಮದ ಮೇಲಿಂದ ಈ ಪಾಠಶಾಲಾಧ್ಯಾಪಕರಾದ ಸಿದ್ಧಾಂತಿ ಗೌರೀಶಂಕರ ಶಾಸ್ತ್ರಿಗಳು ಕೊಂಗವಾಡ ಬೃಹನ್ಮಠ ಇವರು ಅತ್ಯಂತ ಶ್ರಮವಹಿಸಿ ಅಧ್ಯಯನ ಮಾಡಿಸಿರುವರೆಂಬುವದು ಸ್ಪಷ್ಟ ತಿಳಿದುಬರುವದು. ಜಗದೀಶನು ಈ ಪಾಠಶಾಲೆಗೆ ಹೆಚ್ಚೆಚ್ಚು ಅಭಿವೃದ್ಧಿಯನ್ನುಂಟು ಮಾಡಲೆಂದು ಹಾರೈಸುವ,

ಶ್ರೀಮದ್ವೀರಶೈವ ಸಮಾಜೋನ್ನತಿ ಸಂಘ
ಸೆಕ್ರೆಟರಿ ನರಗುಂದ.

## ರಾಜರ್ಷಿಗಳ ರಾಜ್ಯದಲ್ಲಿ ಹೊಟ್ಟೆಗೆ ಹಿಟ್ಟಿಲ್ಲದ ರೈತರು ಮತ್ತು ಮೇವಿಲ್ಲದ ದನಕರುಗಳು.

ಮೈಸೂರು ದೇಶದಲ್ಲಿ ಯುಗಾದಿಯಿಂದ ಇದು ವರೆಗೂ ಮಳೆಯು ಸರಿಯಾಗಿ ಆಗದೆ ರೈತರು ಹಾ ಹಾ ಕಾರ ಪಡುತ್ತಿದ್ದಾರೆ. ಹೋದವರ್ಷ ಅಲ್ಪ ಸ್ವಲ್ಪವಾಗಿ ಬೆಳೆದ ಧಾನ್ಯಗಳು ತೀರಿಹೋಗಿವೆ. ಮೇದೆಯು ಹುಲ್ಲು ತೀರಿಹೋಯಿತು. ಮಳೆಯು ಇಲ್ಲದೆ ಮುಂಗಾರಿಯು ಒಣಗಿ ಹೋಯಿತು. ಎಷ್ಟೋ ರೈತರು ಒಪ್ಪತ್ತು ಊಟ ಮಾಡುತ್ತಿದ್ದಾರೆ. ಅಷಾಢ ಮಾಸ ಹುಟ್ಟಿದರೂ ಹೊರಗೆ ಹಸರಿನ ನೋಟವೇ ಇಲ್ಲ. ದನಕರುಗಳಿಗೆ ಈಚಲಗರಿಯನ್ನು, ಆಲಿ, ಅರಳಿ ಮತ್ತು ಗೋಣಿ ಇವುಗಳ ಸೊಪ್ಪನ್ನು ಹಾಕುತ್ತಿದ್ದಾರೆ. ಒಣಗೊಂತಿನಲ್ಲಿ ರಾತ್ರಿ ಹೊತ್ತು ದನಗಳು ಕಣ್ಣೀರನ್ನು ಸುರಿಸುತ್ತಿವೆ. ಎಷ್ಟೋ ಕಡೆ ದನಕರುಗಳಿಗೆ ಕುಡಿಯುವ ನೀರು ಕೂಡಾ ತೊಂದರೆಯಾಗಿದೆ. ಎಷ್ಟೋ ಕಡೆ ಅಡಿಕೆ ಮರಗಳು ಒಣಗಿ ಹೋಗುತ್ತಿವೆ. ತೆಂಗಿನ ಸೋಗೆಗಳು ಕೆಂಪಾಗುತ್ತಿವೆ. ತೆಂಗಿನ ಹರಳುಗಳು ಉದುರುತ್ತಿವೆ. ತೆಂಗಿನ ಕಾಯಿ ಬಳಲು ಬಂದು ಬೀಳುತ್ತಿವೆ. ತೆಂಗಿನ ಕಾಯಿ ಧಾರಣೆ ಕೂಡ ಇಳಿದುಹೋಗಿದೆ. ಅಡಿಕೆ ರಾಗಿಗಳ ಧಾರಣೆ ಏರುತ್ತಿದೆ. ಕೂಲಿ ಜನರು ಕೂಲಿಯಿಲ್ಲದೆ ಸಂಕಟಪಡುತ್ತಿದ್ದಾರೆ. ಈ ನಮ್ಮ ಘನ ಸರಕಾರದವರು ಇಂಥ ದುರ್ಭಿಕ್ಷ ಕಾಲದಲ್ಲಿಯು ಕೂಡ ಪೂರಾ ಕಂದಾಯವನ್ನು ವಸೂಲು ಮಾಡುತ್ತಿದ್ದಾರೆ.

ಬಡ ರೈತರನ್ನು ಕೇಳುವವರು ಯಾರು? ಅಸೆಂಬ್ಲಿ ಮೆಂಬರುಗಳಿಗಂತು ಪುರುಸತ್ತೇ ಇಲ್ಲ. ಅವರಿಗೆ ಮೀಟಿಂಗುಗಳ ಗಲಾಟೆಯೇ ಗಲಾಟೆ. ಅಸೆಂಬ್ಲಿಗಳಿಗೆ ಹೋಗುವವರೆಲ್ಲಾ ಸಾಹುಕಾರರುಗಳೆ. ಅವರುಗಳು ತಮ್ಮ ಲೇವಾ ದೇವಿಯ ಕಡೆಗೆ ಗಮನವನ್ನು ಇತ್ತಿದ್ದಾರೆ. ಅವರಲ್ಲಿ ಮುಕ್ಕಾಲು ವಾಸಿ ಕಾಂಗ್ರೆಸ್ ವೇಷಧಾರಿಗಳು. ಬಾಯಲ್ಲೇನೋ ಬಹಳ ನೊಂದಹಾಗೆ ಮಾತುಗಳು. ಆದರೆ ಬಡ್ಡಿ ಮಾತ್ರ ೧೨ ರೂ. ಗಳಂತೆ ದಾವ ಹಾಕುತ್ತಿದ್ದಾರೆ. ಇನ್ನು ಕೆಲವು ದಿವಸಗಳು ಇದೇ ಸ್ಥಿತಿ ಆದರೆ ರೈತರ ಬಾಳು ನಾಯಿ ಬಾಳು ಆಗುತ್ತದೆ.

ಓರ್ವ ಬಡ ರೈತ.

## ಗದಗಿನ ಅಕ್ಕಮಹಾದೇವಿ ಬಳಗ.

ವಾರಕ್ಕೊಂದು ಸಲ ಕೂಡುವಂತೆ ಈ ಸಾರೆಯೂ ಆದಿತ್ಯವಾರ ತಾ. ೨೬-೬-೩೬ ನೆಯ ದಿವಸ ಅಕ್ಕನ ಬಳಗ ಕೂಡಿದ್ದಿತು. ಈ ಸಭೆಗೆ ನೂರು ಇನ್ನೂರು ಮಹಿಳೆಯರು ಕೂಡಿದ್ದರು. ಕೆಲವರು ಕೆಲಕೆಲ ವಿಷಯಗಳಮೇಲೆ ಮನನೀಯ ಭಾಷಣಮಾಡಿದರು. ಅವರಲ್ಲಿ ಒಬ್ಬರಾದ ಸೌ|| ಗಂಗವ್ವಾ ಹಿಟ್ನಿನ ಮಠದ ಇವರು ಭಕ್ತನೆಂದರೆ ಹೇಗೆ ಇರಬೇಕು? ಎಂಬ ವಿಷಯದ ಮೇಲೆ ಭಾಷಣಮಾಡಿದರು. ಅದರ ಸಾರಾಂಶ ಕೆಳಗೆ ಕಾಣಿಸಿದೆ—

ಭಕ್ತನೆಂದರೆ ಬಾಳಿಯಹಣ್ಣಿನಂತೆ ಇರಬೇಕಯ್ಯಾ
ಭಕ್ತನಾದರೆ ಬೆಲ್ಲದ ಕುಳ್ಳಿನಂತೆ ಇರಬೇಕಯ್ಯಾ
ಭಕ್ತನಾದರೆ ಮಾವಿನ ಫಲದಂತೆ ಇರಬೇಕಯ್ಯಾ

ಎಂಬ ಬಸವೇಶ್ವರರ ವಚನವನ್ನು ಮುಂದಿಟ್ಟುಕೊಂಡು ಇದರ ಅರ್ಥ ಸಹಿತ ಹೇಳಿದರು. ಶಾಸ್ತ್ರ, ಪುರಾಣ ಕೇಳುವವರು ಬೇರೆ. ಕೇಳದವರು ಬೇರೆ. ಎಂದು ನಾವು ಇಲ್ಲಿಯ ವರೆಗೆ ತಿಳಿದಿದ್ದೆವು. ಆದರೆ ಈಗ ಅಲ್ಲಲ್ಲಿ ಪ್ರೇಮ ಸಹಾನುಭೂತಿ ಇರುವದು ಮತ್ತು ಮಹಿಳೆಯರು ಒಕ್ಕಟ್ಟಾಗಿ ಕೆಲಸ ಮಾಡುತ್ತಿರುವುದನ್ನು ನೋಡಿದರೆ ನನಗೆ ನಮ್ಮ ಅಕ್ಕ ತಂಗಿಯರಲ್ಲಿ ಒಕ್ಕಟ್ಟು ಸಂಘ ಶಕ್ತಿ ಮತ್ತು ಪರಸ್ಪರ ಪ್ರೀತಿಗಳನ್ನು ಬೆಳೆಸುವದು ಅವಶ್ಯವಾಗಿ ತೋರುತ್ತದೆ. ಎಂದು ಹೇಳಿದರು.

ತರುವಾಯ ಸಂಘದ ಸೆಕ್ರೆಟರಿಯಾದಂಥ ಶ್ರೀಮತಿ ಪರವ್ವ ಕಿಣಗಿ ಇವರು "ಮನುಷ್ಯನಿಗೆ ಮಾತಿನ ಚಾತುರ್ಯ ಅವಶ್ಯಕತೆ" ಎಂಬದರ ಮೇಲೆ ಎಲ್ಲರಿಗೂ ಮನನವಾಗುವಂತೆ ಭಾಷಣ ಮಾಡಿದರು. ಅದರ ಸಾರಾಂಶ ಕೆಳಗೆ ಕೊಟ್ಟಿದೆ—

"ಬೇರೆ ಬೇರೆ ಸಾಧನಗಳಿಂದ ದೊರಕಿಸಿಕೊಂಡ ಜ್ಞಾನವನ್ನು ಬಳಕೆಯಲ್ಲಿ ಉಪಯೋಗಿಸುವವರೇ ಜಾಣರು. ಯಾಕೆಂದರೆ ಜ್ಞಾನವಷ್ಟೇ ಬಲವಲ್ಲ. ಆದರೆ ಜ್ಞಾನೋಪಯೋಗವೇ ಬಲವು. ಜಾಣರು ಅರ್ಥಾತ್ ವಿದ್ವಾಂಸರು ಜ್ಞಾನವನ್ನು ಹೂಳಿಟ್ಟ ದ್ರವ್ಯದ ಹಾಗೆ ವ್ಯರ್ಥವಾಗಗೊಡದೆ ಲೋಕ ಹಿತಕ್ಕಾಗಿ ಪ್ರಕಟ ಮಾಡುತ್ತಾರೆ.

ಗ್ರಂಥರಚನೆ ಹಾಗೂ ಜನರ ಮನಸ್ಸನ್ನೊಲಿಸುವ ಮಾತಿನ ಶೈಲಿಗಳೇ ಜ್ಞಾನಪ್ರಚಾರದ ಸಾಧನಗಳು. ಭಾಷಣವು ವ್ಯವಹಾರದಲ್ಲಿ ಸ್ವಲ್ಪಾವಧಿಯೊಳಗೆ ಜನರಿಗೆ ಪ್ರತ್ಯಕ್ಷವಾಗಿ ಲಾಭವನ್ನು ಕೊಟ್ಟಂತೆ ಗ್ರಂಥರಚನೆಯು ಕೊಡಲಾರದು. ವ್ಯವಹಾರದ ಲಾಭವು ಮಾತಿನ ಚಾತುರ್ಯದಿಂದ ಸಿಗುವದು.

"ಮಾತು ಬಲ್ಲವ ಮಾಣಿಕ ತಂದ; ಮಾತನರಿಯದವ ಜಗಳ ತಂದ" ಎಂಬ ನಾಣ್ಣುಡಿಯು ಪ್ರಸಿದ್ಧವಾಗಿದೆ. ಆದ್ದರಿಂದ ಎಲ್ಲರೂ ಮಾತಿನಲ್ಲಿ ಚಾತುರ್ಯವನ್ನರಿಯುವುದು ಅತ್ಯವಶ್ಯಕವಾಗಿದೆ. ಎಂದು ಭಾಷಣವನ್ನು ಮುಕ್ತಾಯಗೊಳಿಸಿದರು. ಆ ಮೇಲೆ ಬಾಲಿಕೆಯರು ಅಕ್ಕನ ಮಂಗಲಗೀತೆಯನ್ನು ಹೇಳಲು ಜಯ ಜಯಕಾರದೊಂದಿಗೆ ಸಭೆಯು ಮುಕ್ತಾಯವಾಯಿತು.

ಪ್ರತ್ಯಕ್ಷದರ್ಶಿ.

## ಬಾಲ್ಯ ವಿವಾಹಕ್ಕೆ ಪ್ರತಿಬಂಧ.

ಹೈದರಾಬಾದ ಶಾಸನ ಮಂಡಲದ ಮುಂದಿನ ಅಧಿವೇಶನದಲ್ಲಿ ಶ್ರೀ. ರಂಗಾರೆಡ್ಡಿ ಎಂಬ ಸದಸ್ಯರು ಹಿಂದುಗಳಲ್ಲಿ ಬಾಲ್ಯ ವಿವಾಹವನ್ನು ತಡೆಯುವದಕ್ಕಾಗಿ ಒಂದು ಮಸೂದೆಯನ್ನು ತರಲಿದ್ದಾರೆ. ಈ ಮಸೂದೆಯು ಬ್ರಿಟಿಶ್ ಹಿಂದುಸ್ಥಾನದ ಸಾರಡಾ ಎಂಬ ಕಾಯದೆಯಂತೆ ಇರುವದು.

ಮದುವೆಯಾಗಲಿರುವ ಹುಡುಗಿಯರ ವಯಸ್ಸು ೧೪ ಮತ್ತು ಹುಡುಗರ ವಯಸ್ಸು ೧೮ ಇರಬೇಕೆಂದು ಈ ಮಸೂದೆಯು ಸೂಚಿಸುತ್ತದೆ. ಈ ಮಿತಿಯ ಕೆಳಗಿನ ವಯಸ್ಸುಳ್ಳವರ ಮದುವೆ ಮಾಡಿದರೆ ಅದನ್ನು ಮಾಡಿದವರು ೫೦೦ ರೂ. ದಂಡ ಕೊಡಬೇಕಾಗುವದು. ಮತ್ತು ಈ ಮದುವೆಗೆ ಸಹಾಯಮಾಡಿದವರೂ ೧೦೦೦ ರೂ. ದಂಡ ತೆರಬೇಕಾಗುವದು.

ಈ ಮಸೂದೆಗೆ ಹೈದರಾಬಾದ ಜನರ ಹೃತ್ಪೂರ್ವಕ ಬೆಂಬಲವಿದೆ. ಯಾಕೆಂದರೆ ೧೯೩೧ ಜನಗಣತಿಯನ್ವಯ ಹೈದರಾಬಾದದಲ್ಲಿ ೫ ವರ್ಷ ವಯಸ್ಸಿನೊಳಗಿನ ೪೦೩೩ ಬಾಲ ವಿಧವೆಯರೂ ೧೭೩೮ ಬಾಲ ವಿಧುರರೂ ಇರುವರೆಂದು ಕಂಡುಬಂದಿದೆ.

REGISTERED No L. 2391.

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರ, ದಾಕ್ಷಿಣ್ಯಪರನಲ್ಲ. ಲೋಕವಿರೋಧಿ. ಶರಣನಾರಿಗೂ ಅಂಜುವವನಲ್ಲ ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೧೧ ನೆಯ ಜುಲೈ ೧೯೩೮. | ಸಂಚಿಕೆ ೪೪

ಜನಸೇವೆಯೇ ದೇವರಸೇವೆ.

## ಸಂಸ್ಥಾನಗಳ ಪ್ರಜೆಗಳಿಗೆ ಎಚ್ಚರಿಕೆ.

### ಗಾಂಧೀಜಿಯವರ ಸೂಚನೆ.



"ಅಹಿಂಸಾತ್ಮಕ ಸತ್ಯಾಗ್ರಹದ ನಿಜವಾದ ಅರ್ಥ
ಮತ್ತು ಶಕ್ತಿಗಳನ್ನು ಸಂಸ್ಥಾನಗಳಲ್ಲಿಯ
ಪ್ರಜೆಗಳು ತಿಳಿದುಕೊಂಡು
ತಮ್ಮ ನುಡಿ, ನಡೆ ಮತ್ತು ಲೇಖನಗಳನ್ನು
ಅಹಿಂಸಾತ್ಮಕವಾಗಿಯೇ ನಡೆಸಿದ್ದಾದರೆ
ಅವರು ಸ್ವಾತಂತ್ರ್ಯವನ್ನು
ಹೊಂದುವರು."

—ಹರಿಜನ ಪತ್ರಿಕೆ ತಾ. ೯-೭-೩೮



### ರಾಷ್ಟ್ರಾಧಿಪತಿಗಳ ವೀರ ಪ್ರತಿಜ್ಞೆ.

"ಮುಂದೆ ಬರಲಿರುವ ಸಂಯುಕ್ತ ಘಟನೆಯನ್ನು
ಕಾಂಗ್ರೆಸ್ ಒಪ್ಪಿದರೆ ನಾನು ಅಧ್ಯಕ್ಷ ಸ್ಥಾನವನ್ನು ಬಿಟ್ಟು
ಪ್ರಚಂಡ ಆಂದೋಲನವನ್ನು ಹೂಡುವೆನು."

—ಶ್ರೀ ಸುಭಾಷಚಂದ್ರ ಬೋಸರು

ದೇಹವೇ ದೇವಾಲಯ.

# ವಿಮರ್ಶಾತ್ಮಕ ಪ್ರಶ್ನೋತ್ತರ.

## ಪಂಚಾಚಾರ್ಯ ಪ್ರಭಾ ಪತ್ರಿಕೆಯ ನಿಂದ್ಯ ಲೇಖಗಳು.

ಪ್ರಶ್ನೆ— ಮೈಸೂರಲ್ಲಿ ಹೊರಡುತ್ತಿರುವ ಪಂಚಾಚಾರ್ಯ ಪ್ರಭಾ ಪತ್ರಿಕೆಯ ತಾ. ೨೦-೬-೩೮ ನೆಯ ಸಂಚಿಕೆಯಲ್ಲಿ "ಸನ್ಯಾಸಿ ವರ್ಗಕ್ಕೆ ಸದ್ಬೋಧೆ" ಎಂಬ ಒಂದು ಲೇಖನ ಪ್ರಕಟವಾಗಿದೆ. ಅದರಲ್ಲಿ ಬರೆದುದನ್ನು ಎತ್ತಿಬರೆದು ನಿಮ್ಮ ಕಡೆಗೆ ಕಳಿಸಿರುತ್ತೇನೆ. ಈ ನಿಂದಕರು ಯಾರನ್ನು ಯಾವ ರೀತಿ ನಿಂದಿಸಿ ಎಂಥ ಪಾಪ ಕಟ್ಟಿಕೊಳ್ಳುತ್ತಿದ್ದಾರೆ! ಈ ಬಗ್ಗೆ ನೀವು ನಿಮ್ಮ ಪತ್ರಿಕೆಯಲ್ಲಿ ನಿಂದಕರಿಗೆ ಸರಿಯಾದ ಬುದ್ಧಿ ಬರುವಂತೆ ಯಾಕೆ ಬರೆಯಬಾರದು?

ಉತ್ತರ— ನೀವು ಕಳಿಸಿದ ಆ ಅತಿ ನಿಂದ್ಯವಾದ ಲೇಖನವು ಅದನ್ನು ಬರೆದವರ ನೀಚ ವೃತ್ತಿಯ ದ್ಯೋತಕವಾದುದು. ಕೇವಲ ವೀರಶೈವ ಸಮಾಜಕ್ಕೇ ಅಲ್ಲ; ಕರ್ನಾಟಕಕ್ಕೇನೇ ಭೂಷಣಪ್ರದರೂ ಹಿಂದು ಧರ್ಮದ ಅನೇಕ ಮಾನ್ಯ ಜಗದ್ಗುರುಗಳಲ್ಲಿ ಒಬ್ಬ ಪ್ರಮುಖರೂ ಎಷ್ಟೋ ಗುರುಪೀಠದವರಿಗೆ ಮಾರ್ಗದರ್ಶಿಗಳೂ ಆದ ಶ್ರೀಮನ್ನಿರಂಜನ ಜಗದ್ಗುರು ಶ್ರೀ ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳವರ ಉದಾರ ಕೃತಿಗಳನ್ನು ನೋಡಿ ಸಹಿಸಲಾರದೆ ತಮಗಾದ ಸಂತಾಪವನ್ನು ಅಂಥ ನಿಂದ್ಯೋಕ್ತಿಗಳ ಮೂಲಕ ಹೊರಗೆಡವಿ ಸಮಾಧಾನಗೊಂಡಿದ್ದಾರೆ.

ಇಂಥ ನಿಂದ್ಯದ ಲೇಖನಗಳಿಗೆ ಉತ್ತರ ಬರೆಯುವುದೆಂದರೆ ನಿಂದಕರಿಗೆ ಒಂದು ರೀತಿಯಲ್ಲಿ ಉತ್ತೇಜನ ಕೊಡುವಂತೆಯೇ ಸರಿ. ಬಸವಾದಿ ಪ್ರಮಥರ ತತ್ವಗಳನ್ನು ಪ್ರಚಾರ ಮಾಡುವುದೂ ಅವುಗಳನ್ನು ಕೃತಿಯಲ್ಲಿ ಬಹು ಜನರು ತರುವಂತೆ ಪ್ರಯತ್ನಿಸುವುದೂ ಇವೇ ಇಂಥ ದೂಷಕರಿಗೆ ಸರಿಯಾದ ಉತ್ತರ.

ಪ್ರಶ್ನೆ— ಇಂಥ ನಿಂದ್ಯದ ಲೇಖನಗಳಿಗೆ ಸರಿಯಾದ ಉತ್ತರಗಳನ್ನು ಬರೆಯದಿದ್ದರೆ ನಮ್ಮ ಸಮಾಜದಲ್ಲಿ ಬಹು ಜನರು ಅವರ ಮಾತೇ ಸರಿಯೆಂದು ತಿಳಿಯಬಹುದು. ನಮ್ಮ ಸಮಾಜದಲ್ಲಿ ಅಜ್ಞರೇ ಹೆಚ್ಚು. ನಾವು ಸುಮ್ಮನಿದ್ದರೆ ಈ ದುಷ್ಟರು ತಮ್ಮದೇ ನಿಜವೆಂದು ಮತ್ತೂ ಹೆಚ್ಚು ಹೆಚ್ಚಾಗಿ ಬರೆಯುವದಿಲ್ಲವೆ?

ಉತ್ತರ— ಈ ನಿಂದಕರು ಕಳೆದ ೨೦ ವರುಷಗಳಿಂದಲೂ ಇದೇ ಕಾರ್ಯವನ್ನು ಮಾಡುತ್ತಾ ಬಂದಿದ್ದಾರೆ. ಇವರದೊಂದು ಗುಂಪೇ ಇದೆ. ಉದ್ದೇಶಪೂರ್ವಕವಾಗಿಯೇ ಪೂರ್ವದ ಆ ಪೂಜ್ಯ ಪಂಚಾಚಾರ್ಯರ ಹೆಸರಿನ ಮರೆಯಲ್ಲಿ ನಿಂತು ಈ ನಿಂದ್ಯ ಕಾರ್ಯವನ್ನು ಮಾಡುತ್ತಿದ್ದಾರೆ. ಅವರು ಹೇಳುವುದೇನೆಂಬುದು ಈಗ ಎಲ್ಲರಿಗೂ ಗೊತ್ತೇ ಆಗಿದೆ.

ಬಸವಾದಿ ಪ್ರಮಥರ ಮತ್ತು ಅವರ ತತ್ವ ಪ್ರಚಾರಕರ ಹಾಗು ವಿರಕ್ತ ಸ್ವಾಮಿಗಳ ನಿಂದೆಯೇ ಅವರ ಮುಖ್ಯ ವಿಷಯ. ಪಂಚಾಚಾರ್ಯ ಪ್ರಭಾ ಪತ್ರಿಕೆಯ ಈ ವರೆಗಿನ ಸಂಚಿಕೆಗಳ ಬಹು ಭಾಗವೆಲ್ಲಾ ಈ ನಿಂದ್ಯಗಳಿಂದಲೇ ತುಂಬಿರುವುದು ಅದನ್ನು ಓದುವವರಿಗೆ ತಿಳಿದ ಸಂಗತಿಯೇ ಆಗಿದೆ.

ಈ ನಿಂದಕರ ಸ್ಥಿತಿಗತಿಗಳೆಲ್ಲಾ ಜನರಿಗೆ ತಿಳಿದುದರಿಂದ ಇವರ ಪಕ್ಷವು ಬಹುಳ ಪಕ್ಷವಾಗುವುದೇ ವಿನಾ ಶುದ್ಧ ಪಕ್ಷವಾಗುವಂತಿಲ್ಲ. ಈಗ ಈ ಲೇಖನದಲ್ಲಿ ಇಷ್ಟೆಲ್ಲಾ ನಿಂದ್ಯೋಕ್ತಿಗಳನ್ನು ಉಪಯೋಗಿಸಿದುದು. ತಮ್ಮ ಪಕ್ಷಕ್ಕೆ ಅಳಿಗಾಲ ಬಂದಿತೆಂಬ ಸಂತಾಪದಿಂದಲೇ ಸರಿ.

ಪ್ರಶ್ನೆ— ಈ ನಿಂದಕರ ಯಾವ ಲೇಖನಗಳಿಗೂ ಉತ್ತರವನ್ನೇ ಬರೆಯದಿದ್ದರೆ ಅವರಿಗೆ ತಿಳುವಳಿಕೆ ಬರುವುದು ಹೇಗೆ? ಜನರಲ್ಲಿ ಉಂಟಾಗುವ ದುರಭಿಪ್ರಾಯ ತಪ್ಪುವುದು ಹೇಗೆ?

ಉತ್ತರ— ಪ್ರಾಮಾಣಿಕವಾದ ಮತಭೇದಗಳಿದ್ದವರು ಬರೆಯುವ ಲೇಖನಗಳಿಗೆ ಉತ್ತರವಾಗಿ ಬರೆಯುವುದರಿಂದ ವಿಚಾರ ವಿನಿಮಯವಾಗಿ ತಪ್ಪು ಸಂಗತಿಗಳು ತಿದ್ದಲ್ಪಡುವವು. ಆದರೆ ಯಾರು ಅನ್ಯರ ಏಳಿಗೆಯನ್ನು ಸಹಿಸಲಾರದೆ ದುರುದ್ದೇಶದಿಂದಲೇ ನಿಂದಿಸುತ್ತಿದ್ದಾರೆಯೋ ಅವರಿಗೆ ಬುದ್ಧಿಯನ್ನು ಕಲಿಸುವುದು ಬರವಣಿಗೆಯಿಂದ ಸಾಧ್ಯವಲ್ಲ. ನ್ಯಾಯಸ್ಥಾನಗಳೇ ಅವರಿಗೆ ಬುದ್ಧಿಯನ್ನು ಕಲಿಸುವಂತೆ ಮಾಡಬೇಕು! ಮೈಸೂರು ಪ್ರಾಂತದ ವೀರಶೈವ ಮಹಾಜನರು ಮುಂದೆ ಬಂದು ಆ ಲೇಖನದ ವಿಚಾರವಾಗಿ ಕೂಡಲೆ ಸರಕಾರಕ್ಕೆ ತಿಳಿಸಿ ಪತ್ರಿಕಾ ಶಾಸನದಂತೆ ಅದರ ಮೇಲೆ ಕ್ರಮ ಜರುಗಿಸುವ ಹಾಗೆ ಮಾಡಬೇಕು. ಈ ಕಾರ್ಯಕ್ಕೆ ಸಕಲ ವೀರಶೈವರೂ ನೆರವಾಗಬೇಕು.

ನಿಂದಕರು ವೀರಶೈವ ತತ್ವಗಳನ್ನು ವಿಪರೀತವಾಗಿ ಬೋಧಿಸುತ್ತಿದ್ದರೆ ಅವುಗಳನ್ನು ಖಂಡಿಸಿ ನಿಜ ತತ್ವಗಳನ್ನು ಪ್ರಚಾರಗೊಳಿಸಬೇಕು.

ಪ್ರಶ್ನೆ— ವೀರಶೈವ ಹಡಪದವರೂ ಮಡಿವಾಳರೂ ದೀಕ್ಷೆ ಹೊಂದಿದ್ದರಿಂದ ಈ ಪಕ್ಷದವರಿಗೆ ಹೊಟ್ಟೆಯಲ್ಲಿ ಬೆಂಕಿ ಬಿದ್ದಿದೆ. ಅದಕ್ಕೇನೇ ಕರೇ ನಾಯಿ ಬಿಳಿ ನಾಯಿ ಆಗಬಹುದೇ ಎಂದು ನಿಂದಿಸಿ ಈ ಪತ್ರಿಕೆಯಲ್ಲಿ ಬರೆದಿದ್ದಾರೆ. ಇವರ ಈ ನಿಂದೆಯನ್ನು ಎಲ್ಲರೂ ನಿಷೇಧಿಸಬಾರದೆ ?

ಉತ್ತರ— ಇವರ ಈ ನಿಂದೆಯನ್ನು ನಿಷೇಧಿಸುವ ಸರಿಯಾದ ರೀತಿಯೆಂದರೆ ವೀರಶೈವ ಸಮಾಜದಲ್ಲಿರುವ ಒಳಪಂಗಡಗಳನ್ನು ಏಕೀಕರಿಸುವುದು. ಎಲ್ಲ ಕಡೆಯ ನಮ್ಮ ಮತ ಬಾಂಧವರಾದ ಹಡಪದವರಿಗೂ ಮಡಿವಾಳರಿಗೂ ದೀಕ್ಷೆಮಾಡಿ ಅವರನ್ನು ಬಳಕೆಯಲ್ಲಿ ತೆಗೆದುಕೊಳ್ಳುವುದೇ ಈ ನಿಂದೆಯ ನಿಜವಾದ ನಿಷೇಧ.

## ಜಪಾನಿನಲ್ಲಿ ಭಯಂಕರ ಜಲ ಪ್ರಳಯ.

ಜಪಾನಿನಲ್ಲಿ ವಿಪರೀತವಾದ ಮಳೆ ಗಾಳಿಗಳಿಂದ ನೆರೆಹಾವಳಿಯುಂಟಾಗಿ ೪ ಲಕ್ಷ ಮನೆಗಳು ಬಿದ್ದವು. ೭೮೮ ಜನರು ಮೃತಪಟ್ಟರು. ೫೯೫ ಜನರು ಎಲ್ಲಿ ಹೋಗಿರುವರೋ ಗೊತ್ತಿಲ್ಲ. ೨೮೭ ಜನರು ಗಾಯ ಹೊಂದಿದ್ದಾರೆ.

— ಮಿ. ಶರೀಫರನ್ನು ಪುನಃ ಮಂತ್ರಿಪಟ್ಟಕ್ಕೆ ತೆಗೆದುಕೊಳ್ಳಬೇಕೆಂದು ನಡೆದಿರುವ ಪ್ರಯತ್ನವನ್ನು ಅಖಿಲ ಭಾರತ ಮಹಿಳಾ ಪರಿಷತ್ತಿನ ಮುಂಬೈ ಶಾಖೆಯ ಕಾರ್ಯಕಾರಿ ಮಂಡಲದವರು ನಿಷೇಧಿಸಿ ಅವರನ್ನು ಕೆಲಸದ ಮೇಲೆ ತೆಗೆದುಕೊಳ್ಳಬಾರದಾಗಿ ರಾಷ್ಟ್ರಾಧಿಪತಿಗಳಿಗೆ ವಿಜ್ಞಾಪಿಸಿಕೊಂಡಿದ್ದಾರೆ.



ಗಾಂಧಿ

ಶಾ. ಶ. ೧೮೬೦ ನೆಯ ಆಷಾಢ ಶು|| ೧೪ ಸೋಮವಾರ.

# ಗಾಂಧೀಜಿಯವರ ಸ್ಪಷ್ಟೀಕರಣ.

ಹಿಂದುಸ್ಥಾನದ ಏಳು ಪ್ರಾಂತಗಳಲ್ಲಿ ಕಾಂಗ್ರೆಸ್ಸಿನ ಪ್ರಭುತ್ವ ಪ್ರಾರಂಭವಾಗಿ ಒಂದು ವರುಷ ಆಗುತ್ತಾ ಬಂದಿತಷ್ಟೆ. ಈ ಅವಧಿಯಲ್ಲಿ ಕಾಂಗ್ರೆಸ್ ಪಕ್ಷದಿಂದ ರಾಷ್ಟ್ರೋನ್ನತಿಯ ಅನೇಕ ಕಾರ್ಯಗಳಾಗಿವೆ. ಮತ್ತು ಇನ್ನುಮುಂದೆ ಆಗುವ ಸಿದ್ಧತೆಗಳೂ ನಡೆದಿವೆ. ಇವೆಲ್ಲವುಗಳಲ್ಲಿ "ವರ್ಧಾ ಶಿಕ್ಷಣ" ಯೋಜನೆಯು ಅತ್ಯಂತ ಮಹತ್ವವಾದುದೆಂದು ನಮಗೆ ತೋರುತ್ತದೆ.

ರಾಷ್ಟ್ರದ ಮುಂದಣ ಉನ್ನತಿಗೆ ಶಿಕ್ಷಣವೇ ಮೂಲವಾದುದು. ಅಂತೆಯೇ ಈ ವಿಷಯದ ಕಡೆಗೆ ಎಲ್ಲ ಪ್ರಾಂತಗಳ ಪ್ರಮುಖರೂ ಹೆಚ್ಚಾಗಿ ಲಕ್ಷಿಸಿದ್ದಾರೆ. ಮೊನ್ನೆ ಮುಂಬೈ ಪ್ರಾಂತದ ಶಿಕ್ಷಣ ಮಂತ್ರಿಗಳಾದ ಶ್ರೀ. ಖೇರ ಇವರ ಅಧ್ಯಕ್ಷತೆಯಲ್ಲಿ ಶಿಮಲಾದಲ್ಲಿ ಕೂಡಿದ ಪರಿಷತ್ತಿನಲ್ಲಿ ವರ್ಧಾ ಶಿಕ್ಷಣ ಯೋಜನೆಯು ಚರ್ಚಿಸಲ್ಪಟ್ಟಿತು. ವರ್ಧಾದಲ್ಲಿ ಬೇರೆ ಬೇರೆ ಪ್ರಾಂತಗಳ ೧೫ ಮಂತ್ರಿಗಳು ಕೂಡಿ ಈ ಶಿಕ್ಷಣದ ಯೋಜನೆಯನ್ನು ಪರಿಶೀಲಿಸಿ ಗಾಂಧೀಜಿಯವರನ್ನು ಎರಡಾವರ್ತಿ ಕಂಡು ವಿಚಾರ ವಿನಿಮಯ ಮಾಡಿದರು.

ಈ ಪ್ರಕಾರ ಕಾಂಗ್ರೆಸ್ ಪ್ರಭುತ್ವ ಪ್ರಾರಂಭವಾದನಂತರ ಹಿಂದುಸ್ಥಾನಕ್ಕೇನೇ ಸಂಬಂಧಪಡುವ ಯಾವ ವಿಷಯವೂ ಹೀಗೆ ಚರ್ಚಿಸಲ್ಪಟ್ಟಿಲ್ಲ. ಇಂಥ ಮಹತ್ವದ ವಿಷಯವು ಚರ್ಚಿಸಲ್ಪಟ್ಟಷ್ಟೂ ಹಿತಕರವೇ ಸರಿಯೆಂದು ಯಾರಾದರೂ ಹೇಳದೆ ಇರಲಾರರು.

ವರ್ಧಾ ಶಿಕ್ಷಣ ಯೋಜನೆಯಲ್ಲಿ ಶಿಕ್ಷಣವು ಸ್ವಾವಲಂಬಿಯಾಗಬೇಕೆಂಬುದರ ಕಡೆಗೇನೇ ಅದರ ಒಲವು ಇದೆ. ಆದರೂ ವಿದ್ಯಾರ್ಥಿಗಳು ಮಾಡುವ ಪದಾರ್ಥಗಳ ವಿಕ್ರಯದಿಂದಲೇ ವಿದ್ಯಾಭ್ಯಾಸದ ವೆಚ್ಚವೇನೂ ಸಾಗಲಾರದೆಂದು ಈ ಯೋಜನಾ ಸಮಿತಿಯ ಅಧ್ಯಕ್ಷರಾದ ಡಾ. ಝಾಕೀರ ಹುಸೇನರವರೇ ಸ್ಪಷ್ಟಪಡಿಸಿದ್ದಾರೆ. ೭ ರಿಂದ ೧೪ ವರುಷಗಳೊಳಗಿನ ವಿದ್ಯಾರ್ಥಿಗಳಿಗೆಲ್ಲಾ ಶಿಕ್ಷಣವು ಉಚಿತವಾಗಿಯೇ ದೊರೆಯಬೇಕೆಂಬ ಈ ಯೋಜನೆಯಲ್ಲಿಯ ಉದ್ದೇಶವು ನೆರವೇರಬೇಕಾದರೆ ವರುಷಕ್ಕೆ ಎಲ್ಲ ಪ್ರಾಂತಗಳಿಗೂ ಸೇರಿ ಸಾಧಾರಣ ೪೦ ಕೋಟಿ ರೂ. ಗಳು ವೆಚ್ಚವಾಗಬಹುದೆಂದು ಶಿಕ್ಷಣ ತಜ್ಞರಾದ ಸರ್. ಜಿಯಾಉದ್ದೀನ ಅಹಮ್ಮದ ಇವರು ಹೇಳಿದ್ದಾರೆ.

ಇಂಥ ಮಹತ್ವದ ವರ್ಧಾ ಶಿಕ್ಷಣ ಯೋಜನೆಯಲ್ಲಿ ಧಾರ್ಮಿಕ ಶಿಕ್ಷಣಕ್ಕೆ ಮಾತ್ರ ಅವಕಾಶವಿಲ್ಲದಿದ್ದುದು ಒಂದು ಕೊರತೆಯೆಂದೇ ಅನೇಕರಿಗೆ ತೋರುವುದು ಸ್ವಾಭಾವಿಕ. ಈ ವಿಚಾರವಾಗಿ ಗಾಂಧೀಜಿಯವರು ಮೊನ್ನೆ ಹೀಗೆ ಸ್ಪಷ್ಟೀಕರಿಸಿದ್ದಾರೆ—

"ಈಗ ದೊರೆಯುತ್ತಿರುವ ಧಾರ್ಮಿಕ ಶಿಕ್ಷಣ ಪದ್ಧತಿಯಿಂದ ಐಕಮತ್ಯವುಂಟಾಗುವುದಕ್ಕೆ ಪ್ರತಿಯಾಗಿ ಕಲಹವೇ ಹೆಚ್ಚುತ್ತಾ ಇದೆ. ಆದುದರಿಂದಲೇ ವರ್ಧಾ ಶಿಕ್ಷಣ ಯೋಜನೆಯಲ್ಲಿ ಧಾರ್ಮಿಕ ಶಿಕ್ಷಣವನ್ನು ತೆಗೆದುಹಾಕಿದೆ. ಎಲ್ಲ ಧರ್ಮಗಳಿಗೂ ಒಪ್ಪಿಗೆಯಾಗಿರತಕ್ಕ ನೀತಿ ತತ್ವಗಳನ್ನು ವಿದ್ಯಾರ್ಥಿಗಳಿಗೆ ಕಲಿಸಲು ಅಡ್ಡಿಯಿಲ್ಲ. ನೀತಿ ತತ್ವಗಳಾದರೂ ಪುಸ್ತಕದಲ್ಲಿಯ ಪಾಠಗಳಿಂದ ಅಥವಾ ವ್ಯಾಖ್ಯಾನಗಳಿಂದ ವಿದ್ಯಾರ್ಥಿಗಳ ಆಚರಣೆಯಲ್ಲಿ ಬಾರದೆ ಅಧ್ಯಾಪಕರು ಸತ್ಯ ಮತ್ತು ನ್ಯಾಯ ತತ್ವಗಳನ್ನು ಅನುಸರಿಸಿ ಆಚರಿಸುವುದರಿಂದಲೇ ಅವು ವಿದ್ಯಾರ್ಥಿಗಳ ನಡತೆಯಲ್ಲಿ ಬರುವವು."

ವರ್ಧಾ ಶಿಕ್ಷಣ ಯೋಜನೆಯಲ್ಲಿ ಧಾರ್ಮಿಕ ಶಿಕ್ಷಣವು ಇಲ್ಲದಿರುವುದರ ಸಂಬಂಧವಾಗಿ ಗಾಂಧೀಜಿಯವರು ಹೇಳಿದ ಸ್ಪಷ್ಟೀಕರಣವು ನಮಗೆ ಸಮಂಜಸವಾಗಿ ತೋರುವುದಿಲ್ಲ. ಈಗ ಕೊಡಲ್ಪಡುತ್ತಿರುವ ಧಾರ್ಮಿಕ ಶಿಕ್ಷಣವು ಕಲಹಕ್ಕೇನೇ ಕಾರಣವಾಗುವಂತಿದ್ದರೆ ಆ ದೋಷವನ್ನು ತೆಗೆದುಹಾಕಬೇಕಾದುದೇ ವಿಹಿತವೇ ವಿನಾ ಆ ಶಿಕ್ಷಣವನ್ನೇ ತೆಗೆದುಹಾಕುವುದು ಯುಕ್ತವಲ್ಲ.

ವಿದ್ಯಾರ್ಥಿಯು ಅಶುದ್ಧವಾಗಿ ಓದುತ್ತಿದ್ದರೆ ಶುದ್ಧವಾಗಿ ಓದುವುದನ್ನು ಕಲಿಸಬೇಕೇ ವಿನಾ ನೀನು ಓದಲೇಕೂಡದೆಂದು ಅಪ್ಪಣೆ ಮಾಡಬಹುದೆ? ಧಾರ್ಮಿಕ ಶಿಕ್ಷಣವು ಈಗ ತಪ್ಪಾಗಿ ಕೊಡಲ್ಪಡುತ್ತಿದ್ದರೆ ಸರಿಯಾದ ರೀತಿಯಲ್ಲಿ ಕೊಡುವಂತೆ ಮಾಡಬೇಕೇ ವಿನಾ ಧಾರ್ಮಿಕ ಶಿಕ್ಷಣವೇ ಬೇಡವೆಂದು ಹೇಳಬಹುದೆ?

ವಿದ್ಯಾರ್ಥಿಗಳಿಗೆ ನೈತಿಕ ಶಿಕ್ಷಣವೊಂದೇ ಸಾಕೆಂತಲೂ, ಧಾರ್ಮಿಕ ಶಿಕ್ಷಣವೇ ಅನಾವಶ್ಯಕವೆಂತಲೂ ಹೇಳಿದ್ದರೆ ಅದಾದರೂ ಒಂದು ರೀತಿ. ಇಲ್ಲವೆ ನಾನಾ ಧರ್ಮ ಮತ ಪಂಥಗಳುಳ್ಳ ಈ ದೇಶದಲ್ಲಿ ಸರ್ವ ಸಮ್ಮತವಾಗುವ ಧಾರ್ಮಿಕ ತತ್ವಗಳನ್ನು ಕಲಿಸಲಿಕ್ಕೆ ಬರುವುದಿಲ್ಲವೆಂದು ಹೇಳಿದ್ದರಾದರೂ ಅದೊಂದು ರೀತಿ. ಇವೆರಡನ್ನೂ ಹೇಳದೆ ಮೇಲಿನಂತೆ ಗಾಂಧೀಜಿಯವರು ಸ್ಪಷ್ಟೀಕರಿಸಿದುದು ತುಂಬಾ ಅತೃಪ್ತಿಕರವಾದುದೆಂದೇ ನಮಗೆ ತೋರುತ್ತದೆ.

ವಿದ್ಯಾರ್ಥಿಗಳಿಗೆ ಧಾರ್ಮಿಕ ಶಿಕ್ಷಣವನ್ನೇ ಕೊಡದಿದ್ದ ಮಾತ್ರದಿಂದ ಅವರಲ್ಲಿ ಈಗ ಕಲಹಕ್ಕೆ ಕಾರಣವಾಗುತ್ತಿರುವ ಧಾರ್ಮಿಕ ತಪ್ಪು ತಿಳುವಳಿಕೆಗಳು ಉಂಟಾಗದೆ ಬಿಡುತ್ತವೆಯೇ? ವಿದ್ಯಾರ್ಥಿಗಳು ಅನ್ಯರ ನಡವಳಿಕೆಯನ್ನೇ ಅನುಸರಿಸುತ್ತಿದ್ದಾರೆಂದೇ ಗಾಂಧೀಜಿಯವರು ನೈತಿಕ ಸಂಗತಿಗಳಲ್ಲಿ ತಿಳಿಸಿದ್ದಾರಷ್ಟೆ. ಧಾರ್ಮಿಕ ವಿಷಯದಲ್ಲಿಯೂ ತಮ್ಮ ಗುರುಹಿರಿಯರ ಈಗಿನ ನಡವಳಿಕೆಯನ್ನೇ ಅವರು ಅನುಸರಿಸುವುದು ಸ್ವಾಭಾವಿಕವಷ್ಟೆ. ಎಂದಮೇಲೆ ಧಾರ್ಮಿಕ ಕಲಹವನ್ನೇನಾದರೂ ನಿಲ್ಲಿಸುವ ಉಪಾಯವನ್ನು ಮಾಡಿದಂತಾಯಿತೆ?

## ನಿಜಾಮು ನಾಡಿನಲ್ಲಿ ಶಹಾಪುರ ತಾಲೂಕದೊಳಗಿನ
# ಬರಗಾಲದ ಭೀಕರತೆ.

ಮಳೆ ಬಂದ ಕೂಡಲೆ ಬೆಳೆ ಬಂದಂತಾಯಿತೆ? ತಕಾವಿ ಕೊಡುತ್ತೇವೆಂದು ಹೇಳಿದ ಕೂಡಲೆ ಕೈಗೆ ಹಣ ಸಿಕ್ಕಂತೆಯಾಯಿತೆ? ಇವೆರಡೂ ಆಶೆಗೆ ಆಶ್ರಯವಿತ್ತಂತಾಯಿತು. ಹೊಟ್ಟೆಗೆ ಮೋಸ ಮಾಡಿದಂತಾಯಿತು.

ಮಳೆ ಬಂದಿತು. ಬೆಳೆಯಬೇಕೆಂಬ ಕುತೂಹಲವು ರೈತನಿಗೆ ಮಿಗಿಲಾಗಹತ್ತಿತು. ದುಡಿಯಬೇಕೆಂದರೆ ಹೊಟ್ಟೆಗೆ ಕೂಳಿಲ್ಲ, ದನಗಳಿಗೆ ಮೇವಿಲ್ಲ. ಸರಕಾರದಿಂದ ತಕಾವಿಯಗೋಸುಗ ಹಳ್ಳಿಗಳಲ್ಲಿ ಸೇರಿ ಕೇರಿಯೊಳಗೆ ಡಂಗುರವನ್ನು ಹೊಡಿಸಿದರು. ಮೇವಿಗೆ ಮತ್ತು ಬೀಜಗಳಿಗೆ ತಕಾವಿ ಕೊಡುತ್ತೇವೆಂದು ಎಷ್ಟೋ ಭರವಸೆಯನ್ನಿತ್ತರು.

ಸಾಹುಕಾರರು ಇವನ್ನು ಕೇಳಿ ಬಿಕ್ಕೊಂಡರು. ರೈತರು ಹಿರಿಹಿರಿ ಹಿಗ್ಗಿದರು. ಅಪ್ಪಣೆಯ ಪ್ರಕಾರವಾಗಿ ರೈತರು ತಾಲೂಕು ಕಚೇರಿಯಲ್ಲಿ ಎಷ್ಟೋ ದರಖಾಸ್ತುಗಳನ್ನು ಕೊಟ್ಟರು. ಪುನಃ ಹಳ್ಳಿ ಹಳ್ಳಿಗೆ ಬಂದು ಗ್ರಾಮಸ್ಥರಿಂದ ರೈತರ ವಿಶ್ವಾಸವನ್ನು ತೆಗೆದುಕೊಂಡು ಸರಕಾರವು ಪೂರ್ಣ ನಂಬಿಕೆಯನ್ನು ಕೊಟ್ಟಿತು. ರೈತರು ಪೂರ್ಣ ಉತ್ಸುಕತೆಯುಳ್ಳವರಾದರು. ಕಡೆಗೆ ನಿರೀಕ್ಷಣೆಯ ನೀಗುವ ಪ್ರಸಂಗವೇ ಬಂತು. ಅಲ್ಲೇನಿದೆ? ಎಲ್ಲವೂ ನಿರರ್ಥ. ಪರಮಾತ್ಮಾ! ರೈತರ ಪಾಡು ಅಗಸರ ನಾಯಿ ಪಾಡಾಯಿತು. ಸಾವುಕಾರರಿಗೆ ಹಂಗಿಸುವದಕ್ಕೆ ಆಸ್ಪದ ಕೊಟ್ಟಂತಾಯಿತು. ಉದರ ಪೋಷಣೆಗೆ ಇಲ್ಲದಾಯಿತು. ಸರಕಾರವೇ! ಇಂಥ ಹೀನ ಸ್ಥಿತಿಯಲ್ಲಾದರು, ಸ್ವಲ್ಪಾದರೂ ಆಶ್ರಯಕೊಡಬಾರದಾಗಿತ್ತೆ? ಸರಕಾರವು ಎಂಥ ದೊಡ್ಡ ದೊಡ್ಡ ಕಾರ್ಯಗಳನ್ನು ಮಾಡಲಿಕ್ಕೆ ಕೈಕೊಂಡಿದೆ. ಹೊಲದಲ್ಲಿ ಬೆವರವನ್ನಿತ್ತು ತೆರಿಗೆಯನ್ನು ತೆತ್ತುವ ಬಡ ರೈತನ ಜೀವನಾಧಾರಕ್ಕೆ ಸ್ವಲ್ಪಾದರು ಲಕ್ಷಕೊಡಬಾರದೆ?

ಸಾಹುಕಾರರಂತೂ ಮಾರುವ ಹೊಲಗಳಿಗೆ ಬಾಯಿ ತೆರೆದ್ದುಕೊಂಡು ಕುಳಿತಿದ್ದಾರೆ. ಬಡ್ಡಿ ದರ ವಸೂಲಿಯ ಸ್ಪರ್ಧೆ ಹೆಚ್ಚಿಸಹತ್ತಿದ್ದಾರೆ. ಸಾಹುಕಾರರಿಂದ ರೈತರು ನುಚ್ಚುನುರಿಯಾಗಹತ್ತಿದ್ದಾರೆ. ಇಂಥ ಕಷ್ಟ ಕಾಲದಲ್ಲಿ ಸದಾ ಸುಲಿಯುತ್ತಿರುವ ಸಾಹುಕಾರರಿಗೆ ಸಂರಕ್ಷಿಸಬೇಕೆಂಬ ಜ್ಞಾನವು ಉತ್ಪತ್ತಿಯಾಗಿದ್ದರೆ ಕೆಟ್ಟದಾಗಬಹುದೆ? ಬರಗಾಲದಿಂದ ಬಳಲುತ್ತಿರುವ ಒಂದೊಂದು ವ್ಯಕ್ತಿಯ ಮುಖವನ್ನು ನೋಡಿದರೆ ಮಾನವನೆನಿಸಿಕೊಳ್ಳುವವನಿಗೆ ನಿಜವಾಗಿ ದುಃಖ ಬರದೆ ಇರದು. ಪರಮಾತ್ಮಾ! ಪ್ರತಿಯೊಬ್ಬನಿಗೂ ಹೀಗೆ ಭೇದಭಾವವೇಕೆ? ಮೈಮುರಿದು ದುಡಿಯುವವನಿಗೆ ಉಡುವುದಕ್ಕೆ ಬಟ್ಟೆ ಬೇಡವೆ? ತಿನ್ನುವುದಕ್ಕೆ ಅನ್ನ ಬೇಡವೆ? ಸಣ್ಣಕ್ಕಿಯ ಅನ್ನ ಉಂಡು ಸುಖಾಸನದ ಮೇಲೆ ವಿರಾಜಿಸುವವಗೆ ಎಲ್ಲ ಸಿರಿಸಂಪತ್ತು, ದಾಸಾನು ದಾಸರು, ಮೋಟಾರು ವಿಮಾನುಗಳು.

ರೈತನಿಗೆ ಇವೆಲ್ಲವು ಬೇಕಿಲ್ಲ. ದುಡಿದ ಹೊಟ್ಟೆಗೆ ತುತ್ತು ನುಚ್ಚು, ಮರ್ಯಾದೆ ಉಳಿಸುವಷ್ಟೆ ಬಟ್ಟೆ ಸಿಕ್ಕರೆ ಸಾಕು. ರೈತರಿಗೆ ಸಹಾಯವನ್ನೀಯುವ ಸಹಕಾರ ಸಂಘವು, ಗ್ರಾಮೋದ್ಧಾರವು, ಒಕ್ಕಲತನ ಖಾತೆಯು ಇಂಥ ಕಷ್ಟ ಕಾಲಕ್ಕೂ ಕೈಬಿಟ್ಟವೆ. ರೈತರು ಅವಿದ್ಯಾವಂತರಿಂದೇ ಎಂಥೆಂಥ ತೊಂದರೆಗಳನ್ನಾದರು ಅನುಭವಿಸಹತ್ತಿದ್ದಾರೆ. ಗ್ರಾಮಸ್ಥರು ಮತ್ತು ಸಾಹುಕಾರರು ರೈತರ ರಕ್ತವನ್ನು ಹೀರಿ ಹಿಪ್ಪಿಮಾಡಹತ್ತಿದ್ದಾರೆ. ಹಾಯ್! ಈ ಬರಗಾಲವಾದರೂ ಎಲ್ಲಿಯ ವರೆಗೆ? ರೈತರ ದೂರು ಕೇಳುವ ಕಾಲವು ಬರಲಿಕ್ಕಿಲ್ಲವೆ?

ಓರ್ವ ಅನುಭವಿಕ.

## ಹುಬ್ಬಳ್ಳಿ
## ಶ್ರೀ ಜಗದ್ಗುರು ಗಂಗಾಧರ
## ಸಂಸ್ಕೃತ ಕಾಲೇಜಿನಲ್ಲಿ
# ಪುಕ್ಕಟೆ ಹಿಂದಿ ವರ್ಗಗಳು

ಈ ಕಾಲೇಜಿನಲ್ಲಿ ದಕ್ಷಿಣ ಭಾರತ ಹಿಂದೀ ಪ್ರಚಾರ ಸಭೆಯು ಪ್ರಾರಂಭಿಕ ಪ್ರಥಮಾ, ಮಧ್ಯಮಾ, ರಾಷ್ಟ್ರಭಾಷಾ ಪರೀಕ್ಷೆಗಳ ವರ್ಗವನ್ನು ಪ್ರಾರಂಭಿಸಿದ್ದಾರೆ. ಶ್ರೀ ಈಶ್ವರ ಮೆಣಸಿನಕಾಯಿ ಸಿದ್ಧಾಂತ ವಿಶಾರದ ಇವರು ಏನೂ ತೆಗೆದುಕೊಳ್ಳದೆ ವರ್ಗಗಳನ್ನು ನಡೆಸಲಿಕ್ಕೆ ಒಪ್ಪಿ ಕೊಂಡರು. ಪರೀಕ್ಷಾ ಕೇಂದ್ರವಾದರೂ ಇಲ್ಲಿಯೇ ಆಗತಕ್ಕದ್ದಿದೆ.

ಆದ್ದರಿಂದ ಕಲಿಯಲಿಚ್ಛಿಸುವವರು ಶ್ರೀ ಜಗದುರ್ಗು ಗಂಗಾಧರ ಸಂಸ್ಕೃತ ಕಾಲೇಜಕ್ಕೆ ಹೋಗಬೇಕು.

---

# ಮಂದಿರ ಕೆಡವಿ ಮಸೀದಿ!

ಪತಿಯಾಲಾ ಸಂಸ್ಥಾನದ ನಾರನೌಲಾ ಎಂಬ ಗ್ರಾಮದಲ್ಲಿ ತಾ. ೨೯-೬-೩೮ ನೆಯ ದಿವಸ ರಾತ್ರಿ ಅನೇಕ ಸಶಸ್ತ್ರ ಮುಸಲ್ಮಾನರು ಹಿಂದುಗಳ ಕೇರಿಯಲ್ಲಿ ಹೋಗಿ ಅವರು ಮಲಗಿರುವಾಗ ಅವರ ಬಾಗಿಲುಗಳನ್ನೆಲ್ಲಾ ಹೊರಗಡೆಯಲ್ಲಿ ಕೊಂಡಿ ಹಾಕಿಕೊಂಡು ಹಿಂದು ದೇವಾಲಯವನ್ನು ಕೆಡವಿ ನೆಲಸಮಮಾಡಿ ಅದನ್ನು ಸ್ಮಶಾನಭೂಮಿಯನ್ನಾಗಿ ಮಾಡಿದರು.

ಒಬ್ಬ ಬ್ರಾಹ್ಮಣ ಮುದುಕನು ಈ ಸಮಾಚಾರವನ್ನು ಪೋಲಿಸ್ ಠಾಣೆಗೆ ಹೋಗಿ ತಿಳಿಸಲು ಪೋಲಿಸರು ಬರುವುದರೊಳಗಾಗಿ ತುಂಟರು ಓಡಿಹೋಗಿದ್ದರು. ಅವರಲ್ಲಿ ೬ ಜನರನ್ನು ಪೋಲಿಸರು ಹಿಡಿದಿದ್ದಾರೆ.

---

## ದೇವಾಸ ಸರಕಾರದ
# ಅಭಿನಂದನೀಯ ಅಪ್ಪಣೆ.

ದೇವಾಸ ಸಂಸ್ಥಾನಾಧಿಪತಿಗಳು ತಮ್ಮ ಸಂಸ್ಥಾನದಲ್ಲಿರುವ ಎಲ್ಲ ದೇವಾಲಯಗಳಲ್ಲಿಯೂ ಆದಿ ಹಿಂದುಗಳು ಪ್ರವೇಶಿಸಲು ಅಡ್ಡಿಯಿಲ್ಲವೆಂದು ಅಪ್ಪಣೆಮಾಡಿದ್ದಾರೆ. ಈ ಅಪ್ಪಣೆಯನ್ನು ಹಿಂದು ಮಹಾಸಭೆಯ ಅಧ್ಯಕ್ಷರಾದ ಬ್ಯಾ. ಸಾವರಕರರು ಅಭಿನಂದಿಸಿ ಆ ಸಂಸ್ಥಾನಾಧಿಪತಿಗಳಿಗೆ ತಂತಿ ಮೂಲಕ ಹೀಗೆ ತಿಳಿಸಿದ್ದಾರೆ—

"ನಿಮ್ಮ ಅಪ್ಪಣೆಯನ್ನು ನಾನು ಹೃದಯಪೂರ್ವಕ ಅಭಿನಂದಿಸುತ್ತೇನೆ. ಹಿಂದು ರಾಜರೆಲ್ಲರೂ ಹೀಗೆ ಹಿಂದುತ್ವದ ರಕ್ಷಣೆಗಾಗಿ ಪ್ರಯತ್ನಿಸಲೆಂದು ಹಾರೈಸುತ್ತೇನೆ."

---

— ಗಾಂಧೀಜಿಯವರ ಸೂಚನೆಯ ಪ್ರಕಾರ ಜಾತಿಯ ಜಗಳವನ್ನು ನಿಲ್ಲಿಸಲು "ಶಾಂತಿ ಸೈನ್ಯ"ವು ಮುಂಬೈಯಲ್ಲಿ ಏರ್ಪಡುವುದಿದೆ. ಶ್ರೀ. ಎಸ್. ಬಿ. ಪರೂಳೆಕರ ಮತ್ತು ಕುಮಾರಿ ಎಸ್. ಬಿ. ನಂಮಾನ ಇವರು ಮುಂದಾಳುಗಳಾಗಿದ್ದಾರೆ.

— ಗಡಿನಾಡಿನ ಕಾಂಗ್ರೆಸ್ ಸರಕಾರದಲ್ಲ ಹಿಂದುಗಳಿಗಾಗುತ್ತಿರುವ ಅನ್ಯಾಯವನ್ನು ಶೀಖರು ಗಾಂಧೀಜಿಯವರಿಗೆ ಒಂದು ಬಹಿರಂಗವಾದ ಪತ್ರ ಮೂಲಕ ತಿಳಿಸಿದ್ದಾರೆ.

# ಮಹಾಸಭಾ ಚಿರಸ್ಥಾಯಿ ನಿಧಿಯ

## ಕಾರ್ಯಕರ್ತರುಗಳಲ್ಲಿ ಬಿನ್ನಹ.

ಅಖಿಲ ಭಾರತೀಯ ವೀರಶೈವ ಮಹಾಸಭೆಯು ವರುಷ ವರುಷವೂ ತಪ್ಪದೇ ನಡೆಯುತ್ತಿರಬೇಕೆಂಬ ಸದುದ್ದೇಶದಿಂದ ಮಹಾಸಭೆಯ ಹಿತೈಷಿಗಳು ಆ ಕಾಲದಲ್ಲಿ ಅತ್ಯಂತ ದೂರಾಲೋಚನೆಯುಳ್ಳವರಾಗಿ "ಅಖಿಲ ಭಾರತೀಯ ವೀರಶೈವ ಮಹಾ ಸಭಾ ಚಿರಸ್ಥಾಯಿ ಫಂಡ್" ಎಂಬ ಹೆಸರಿನ ನಿಧಿಯನ್ನು ಕೂಡಿಸಿ ಆ ನಿಧಿಯ ಮೇಲ್ವಿಚಾರಣಾ ಸಮಿತಿಯೊಂದನ್ನೂ ರಚಿಸಿ ಆ ಸಮಿತಿಯ ಜವಾಬ್ದಾರಿಯ ಮೇಲೆ ಸದರಿ ನಿಧಿಯನ್ನು ಬೆಂಗಳೂರಿನಲ್ಲಿರುವ "ಮೈಸೂರು ಬ್ಯಾಂಕ ಲಿಮಿಟೆಡ್" ಎಂಬ ಲೇವಾದೇವಿ ಸಂಸ್ಥೆಯಲ್ಲಿಟ್ಟು ಬಡ್ಡಿಯನ್ನು ಬೆಳೆಸುತ್ತಿರುವುದು ಸರಿಯಷ್ಟೆ.

ಹಣವನ್ನು ಬ್ಯಾಂಕಿನಲ್ಲಿಟ್ಟು ಬಡ್ಡಿಯನ್ನು ಬೆಳೆಯಿಸಬಾರದೆಂಬುದೇನೂ ನಮ್ಮ ಉದ್ದೇಶವಲ್ಲ. ಆದರೆ ಆ ನಿಧಿಯನ್ನು ಸಂಗ್ರಹಿಸುವಾಗ ಯಾವ ಉದ್ದೇಶದಿಂದ ಸಂಗ್ರಹಿಸಲಾಯಿತೋ ಆ ಉದ್ದೇಶವನ್ನು ಸಾರ್ಥಕಗೊಳಿಸಲು ಪ್ರಯತ್ನಿಸಬೇಕಾದುದು ಆ ನಿಧಿಯ ಜವಾಬ್ದಾರಿಯನ್ನು ವಹಿಸಿಕೊಂಡಿರುವ ಸಮಿತಿಯವರ ಮುಖ್ಯ ಕರ್ತವ್ಯವಾಗಿದ್ದಿತೆಂಬುದು ಮಾತ್ರ ನಮ್ಮ ಅಭಿಪ್ರಾಯ. ಯಾರಾದರೂ ಮಹಾಸಭೆಯನ್ನು ನೆರವೇರಿಸುವೆವೆಂದು ಮುಂದೆ ಬಂದರೆ ಅವರಿಗೆ ಸಹಾಯಮಾಡಬಹುದೇ ಹೊರತು ಯಾರೂ ಬಾರದಿದ್ದರೆ ನಾವೇನು ಮಾಡೋಣ? ಎಂಬುದಾಗಿ ನಿಧಿಯ ಜವಾಬ್ದಾರಿ ಸಮಿತಿಯವರು ಹೇಳಬಹುದು. ಆದರೆ ಹಾಗೆ ಯಾರಾದರೂ ತಾವಾಗಿಯೇ ಮಹಾಸಭೆಯನ್ನು ನೆರವೇರಿಸಲುಬರುವುದನ್ನು ಕಾಯುತ್ತಾ ಕುಳಿತುಕೊಳ್ಳುವುದಕ್ಕಿಂತಲೂ ಈ ನಿಧಿಯ ಸಮಿತಿಯ ಸದಸ್ಯರು ತಾವಾಗಿಯೇ ಬೇರೆ ಬೇರೆ ಪ್ರಾಂತಗಳ ವೀರಶೈವ ಪ್ರಮುಖರುಗಳನ್ನು ಪ್ರೋತ್ಸಾಹಿಸಿ ಅವರ ಮೂಲಕ ಕಾಲಕಾಲಕ್ಕೆ ತಪ್ಪದೆ ಮಹಾಸಭೆಯನ್ನು ನಡೆಯಿಸಬೇಕಾಗಿದ್ದಿತಲ್ಲವೆ?

ಈಗಿನ ಮಹಾಸಭೆಯ ರಚನೆಯಲ್ಲಿ ಹಲವು ತಿದ್ದುಪಾಟುಗಳಾಗಬೇಕೆಂಬುದೂ ಅದರ ಕಾರ್ಯಕಾರೀಮಂಡಲಿಯ ರಚನೆಯಲ್ಲಿಯೂ ಹಲವು ಬದಲಾವಣೆಗಳಾಗುವ ವರೆಗೂ ಮಹಾಸಭೆಯು ಕಾಲಕಾಲಕ್ಕೆ ನಡೆಯಲಾರದೆಂಬುದೂ, ನಡೆದರೂ ಪರಿಣಾಮಕಾರಿಯಾಗುವದಿಲ್ಲವೆಂಬುದೂ ನಿಜ.

ಆದರೂ ಚಿರಸ್ಥಾಯಿ ನಿಧಿಯ ಸಮಿತಿಯ ಪ್ರಮುಖರುಗಳು ಪ್ರಯತ್ನಪಟ್ಟಿದ್ದರೆ ಮಹಾಸಭೆಯ ರಚನೆಯನ್ನೂ ಬದಲಾಯಿಸಬಹುದಾಗಿದ್ದಿತು. ಸಮಾಜದಲ್ಲೊಂದು ದೊಡ್ಡ ಕ್ರಾಂತಿಯನ್ನೆಬ್ಬಿಸಬಹುದಾಗಿದ್ದಿತು. ವೀರಶೈವ ಜನಾಂಗದಲ್ಲಿಯೇ ನವಚೈತನ್ಯವನ್ನು ಹುಟ್ಟಿಸಬಹುದಾಗಿದ್ದಿತು. ಚಿರಸ್ಥಾಯಿ ಫಂಡಿನ ಸಮಿತಿಯ ಸದಸ್ಯರೆಲ್ಲರೂ ಆಯಾ ಪ್ರಾಂತಗಳ ಸಮಾಜ ಪ್ರಮುಖರೇ ಆಗಿಲ್ಲವೆ? ಅವರೆಲ್ಲರೂ ಏಕೆ ಮಹಾಸಭೆಯ ವಿಷಯವಾಗಿ ಶ್ರದ್ಧೆಯನ್ನು ವಹಿಸಬಾರದಾಗಿದ್ದಿತು? ಕೇವಲ ಇರುವ ಧನವನ್ನು ಕಾಯ್ದುಕೊಂಡಿರುವುದೇ ಅವರಿಗೊಂದು ಮಹತ್ಕಾರ್ಯವ್ವವೆ? ಆ ಧನವನ್ನು ಸದ್ವಿನಿಯೋಗಪಡಿಸಬೇಕಾದುದೂ ಅವರ ಕರ್ತವ್ಯವಲ್ಲವೆ?

ಈ ಮಹಾಶಯರುಗಳು ಈಗ ಸಮಾಜದಲ್ಲಿ ಕೆಲ ಸ್ವಾರ್ಥಿಗಳಿಂದ ನಡೆಸಲ್ಪಡುತ್ತಿರುವ "ಧರ್ಮಧ್ವಂಸಕ" ಚಳವಳಿಯ ಬಗ್ಗೆ ಔದಾಸೀನ್ಯ ವಹಿಸಿದುದೂ ಕೆಲ ಮುಖ್ಯರುಗಳು ಆ ಚಳವಳಿಯಲ್ಲಿ ಪರೋಕ್ಷವಾಗಿಯೂ ಪ್ರತ್ಯಕ್ಷವಾಗಿಯೂ ಭಾಗಿಗಳಾದುದೂ ಮಹಾ ಸಭಾ ಸಂಸ್ಥೆಯ ಈಗಿನ ದುರ್ಗತಿಗೆ ಕಾರಣವಲ್ಲವೆ?

ಚಿರಸ್ಥಾಯಿ ನಿಧಿಯಲ್ಲಿ ಸದ್ಯಃ ಎಂಬತ್ತಾರು ಸಹಸ್ರ ರೂ.ಗಳ ವರೆಗೆ ಇದೆಯೆಂದು ಕೇಳುತ್ತೇವೆ. ಮತ್ತು ಶೀಘ್ರದಲ್ಲಿಯೇ ಆ ಸಮಿತಿಯ ಸದಸ್ಯರ ಸಮ್ಮೇಳನವೂ ಬೆಂಗಳೂರಿನಲ್ಲಿ ನೆರೆಯುವುದೆಂದು ಕೇಳುತ್ತೇವೆ. ಇದು ನಿಜವಾದರೆ ಆ ಸಮ್ಮೇಳನಕ್ಕೆ ಸೇರುವ ನಿಧಿಯ ಜವಾಬ್ದಾರಿ ಸದಸ್ಯರೆಲ್ಲರೂ ಕೊಂಚ ತೀಕ್ಷ್ಣಮತಿಯನ್ನು ಹೊಂದಿ ವಿಶಾಲಭಾವನೆಯ ವಿಚಾರವಾದಿಗಳಾಗಿ ಮಂದಸ್ವಭಾವವಿದ್ದರೆ ಅದನ್ನು ಕೊಂದು ಮಹಾಸಭೆಯ ಮೂಲಕ ಆ ನಿಧಿಯನ್ನು ಸಮಾಜಕ್ಕೆ ಒಳ್ಳೆಯದಾಗಬಹುದಾದ ಯಾವ ಯಾವ ಪರಿಣಾಮದಾಯಕ ರೀತಿನೀತಿಗಳನ್ನನುಸರಿಸಬಹುದೆಂಬುದನ್ನು ಚರ್ಚಿಸಿ ಫಲದಾಯಕವಾಗುವಂತೆ ಕಾರ್ಯರೂಪಕ್ಕಿಳಿಸುವರೆಂದು ನಂಬುತ್ತೇವೆ.

ಮುಖ್ಯವಾಗಿ ಈಗ ನಮ್ಮ ಸಮಾಜಕ್ಕೆ ಅಗತ್ಯವಾಗಿರುವ ವೃತ್ತಪತ್ರಿಕೆಯ ವಿಷಯವನ್ನು ಪ್ರಾಮುಖ್ಯವಾಗಿ ಚರ್ಚಿಸಬೇಕಾಗಿದೆ. ವೃತ್ತಪತ್ರಿಕಾ ವಿಷಯವು ಮಹಾಸಭೆಯ ಚಿರಸ್ಥಾಯಿ ನಿಧಿಯ ಆಡಳಿತಗಾರರಿಗೆ ಸಂಬಂಧಪಟ್ಟುದಲ್ಲವಾದರೂ ಮಹಾಸಭೆಯ ಸಮ್ಮೇಳನಗಳಲ್ಲಿ ಆ ವಿಷಯವಾದ ನಿರ್ಣಯಗಳು ಮಹಾಸಭೆಯು ನೆರೆದಾಗಲೆಲ್ಲ ಸರ್ವಾನುಮೋದಿತವಾಗಿರುವುದರಿಂದಲೂ ಆದರೂ ಈ ವರೆಗೂ ಕಾರ್ಯರಂಗಕ್ಕಿಳಿಯದುದರಿಂದಲೂ ಉದಾಹರಣೆಗೆ ಮೈಸೂರು ಪ್ರಾಂತದ ವೀರಶೈವರ ರಾಜಕೀಯಾದಿ ಹಿತರಕ್ಷಣೆಗೆ ಒಂದೂ ಪತ್ರಿಕೆಯಿಲ್ಲದೆ ಮೈಸೂರು ದೇಶದ ವೀರಶೈವ ಜನಾಂಗದ ಸ್ಥಿತಿಯು ದಿನೆ ದಿನೆ ದುರವಸ್ಥೆಗೀಡಾಗುತ್ತಿರುವುದರಿಂದಲೂ ಮಹಸಭೆಯ ನಿಧಿಯಲ್ಲಿ ಸಾಕಷ್ಟು ದ್ರವ್ಯಸಂಪತ್ತು ಇರುವುದರಿಂದಲೂ ನಿಧಿಯ ಸದಸ್ಯರು ಈ ಸಂದರ್ಭವನ್ನು ವಿಶೇಷ ಪರಿಸ್ಥಿತಿಯನ್ನಾಗಿ ಭಾವಿಸಿ ಚರ್ಚಿಸಿ ನಿಧಿಯ ಬಡ್ಡಿ ಹಣದ ಕೊಂಚ ಭಾಗವನ್ನಾದರೂ ಒಂದು ವೃತ್ತಪತ್ರಿಕೆಯನ್ನು ಹೊರಡಿಸುವ ವ್ಯವಸ್ಥೆಗಾಗಿ ಮಂಜೂರುಮಾಡಿಸಿಯಾರೆಂಬ ನಂಬಿಕೆಯಿಂದಲೂ ಈ ಚಿರಸ್ಥಾಯಿಫಂಡ್ ಸಮಿತಿಯ ಸದಸ್ಯರು ವೃತ್ತಪತ್ರಿಕೆಯ ವಿಷಯವನ್ನು ಚರ್ಚಿಸಿ ನಿರ್ಧರಿಸಿಯಾರೆಂದು ಭಾವಿಸಿ ಈ ಸೂಚನೆಯನ್ನು ಈ ಪತ್ರಿಕೆಯ ಮೂಲಕ ಅವರ ಮುಂದೆ ಮಂಡಿಸಲಾಗಿದೆ.

ಶ್ರೀ ವೀರೇಶ್ವರ ಬೆಂಗಳೂರು ನಗರ.

---

## ವಚನ ಸಾಹಿತ್ಯವು

### ಯುರೋಪದಲ್ಲಿ ಪ್ರೀತಿಸಲ್ಪಡಹತ್ತಿತು.

ಫ್ರಾನ್ಸ್ ದೇಶದಲ್ಲಿ ವಾಸಮಾಡಿಕೊಂಡಿದ್ದ ಒಬ್ಬ ಕನ್ನಡಿಗರು ವಚನಸಾಹಿತ್ಯದ ಹಿರಿಮೆಯನ್ನು ತೋರ್ಪಡಿಸುವದಕ್ಕೋಸ್ಕರ ಅವರೂ, ಅವರ ಪತ್ನಿಯವರೂ, ಇಂಗ್ಲೀಷ ಮತ್ತು ಫ್ರೆಂಚ ಭಾಷೆಗಳಲ್ಲಿ ವಚನಗಳ ಭಾಷಾಂತರಗಳನ್ನು ಮಾಸಿಕಗಳಲ್ಲಿ ಪ್ರಕಟಿಸುತ್ತಾರೆ. ಫ್ರಾನ್ಸದ ಜನರು ಅತ್ಯಾದರಪೂರ್ವಕ ಅವುಗಳನ್ನು ಓದಿ ತಮ್ಮ ಆನಂದವನ್ನು ವ್ಯಕ್ತಪಡಿಸುತ್ತಿದ್ದು ಇಂಥ ವಚನ ಸಾಹಿತ್ಯವನ್ನು ಪುನಃ ಪುನಃ ಅಪೇಕ್ಷಿಸುತ್ತಾರೆಂದು ಬರೆದು ಬಂದಿರುತ್ತದೆ.

"ನವ ಕರ್ನಾಟಕ"

---

— ಫ್ರಾನ್ಸ್ ಮತ್ತು ತುರ್ಕಿ ಸರಕಾರಗಳು ಒಡಂಬಡಿಕೆ ಮಾಡಿಕೊಂಡವು. ಯುದ್ಧದ ಕಾಲದಲ್ಲಿ ಒಬ್ಬರಿಗೊಬ್ಬರು ಸಹಾಯ ಮಾಡಬೇಕು. ಭೂಮಧ್ಯಸಮುದ್ರದ ಪೂರ್ವಭಾಗದಲ್ಲಿ ಶಾಂತತೆಯನ್ನು ಸ್ಥಾಪಿಸಲು ಸಹಾಯಮಾಡಬೇಕು. ಇವೇ ಒಪ್ಪಂದದ ಮುಖ್ಯ ನಿಯಮಗಳು.

# ರಾಷ್ಟ್ರೀಯ ಶಿಕ್ಷಣದ ಮನ್ನಣೆ.

ಕಾಂಗ್ರೆಸ್ ಪಕ್ಷವು ಅಧಿಕಾರವನ್ನು ಸ್ವೀಕರಿಸಿದನಂತರ ರಾಷ್ಟ್ರೋನ್ನತಿಯ ಅನೇಕ ಕಾರ್ಯಗಳನ್ನು ಬೇರೆ ಬೇರೆ ಪ್ರಾಂತಗಳಲ್ಲಿ ಮಾಡುತ್ತಾ ಇದೆಯಷ್ಟೆ.

ಮುಂಬೈ ಸರಕಾರವು ಶಿಕ್ಷಣದ ವಿಷಯದಲ್ಲಿ ಒಂದು ಮಹತ್ವದ ನಿರ್ಣಯವನ್ನೇ ಮಾಡಿತು. ಲೋಕಮಾನ್ಯ ಟಿಳಕರ ಕಾಲದಿಂದಲೂ ರಾಷ್ಟ್ರೀಯ ಶಿಕ್ಷಣ ಎಂಬ ಈ ರಾಷ್ಟ್ರಕ್ಕೆ ಹಿತಕರವಾದ ಒಂದು ಶಿಕ್ಷಣ ಪದ್ಧತಿಯು ಏರ್ಪಡುವುದಕ್ಕೋಸ್ಕರ ಪ್ರಯತ್ನವು ನಡೆಯುತ್ತಲೇ ಬಂದಿದೆ. ಗಾಂಧೀಜಿಯವರ ಅದ್ಭುತ ಆಂದೋಲನದ ಕಾಲಕ್ಕೆ ರಾಷ್ಟ್ರೀಯ ಶಿಕ್ಷಣಕ್ಕೆ ಒಂದು ವ್ಯವಸ್ಥಿತ ಸ್ವರೂಪವೇ ಬಂದಿತು.

ಗುಜರಾತ ಮತ್ತು ಮಹರಾಷ್ಟ್ರಗಳಲ್ಲಿ ಗುಜರಾತ ವಿದ್ಯಾಪೀಠ ಮತ್ತು ಟಿಳಕ ಮಹರಾಷ್ಟ್ರ ವಿದ್ಯಾಪೀಠ ಇವು ಏರ್ಪಟ್ಟು ರಾಷ್ಟ್ರೀಯ ಶಿಕ್ಷಣದ ಪವಿತ್ರ ಕಾರ್ಯವನ್ನು ಸಾಗಿಸಿಕೊಳ್ಳುತ್ತಲೇ ಬಂದಿವೆ. ಆದರೆ ಈ ವರೆಗೆ ಅವುಗಳಲ್ಲಿ ತೇರ್ಗಡೆಯಾಗುತ್ತಾ ಇರುವ ಪದವೀಧರರು ಸರಕಾರಿ ವಿದ್ಯಾಪೀಠಗಳಲ್ಲಿ ತೇರ್ಗಡೆಯಾಗುತ್ತಿರುವ ಪದವೀಧರರಿಗಿಂತ ಅನೇಕ ವಿಷಯಗಳಲ್ಲಿ ಬಹು ಬಲ್ಲಿದರಾಗಿದ್ದರೂ ಸರಕಾರಿ ವಿದ್ಯಾಪೀಠಗಳ "ಮ್ಯಾಟ್ರಿಕ್" ಪರೀಕ್ಷೆಯಲ್ಲಿ ಉತ್ತೀರ್ಣರಾದವರಷ್ಟು ಸಹ ಅವರಿಗೆ ಮನ್ನಣೆಯು ಸರಕಾರದಲ್ಲಿ ಇರಲಿಲ್ಲ.

ಈ ದೊಡ್ಡ ಕೊರತೆಯನ್ನು ಮುಂಬೈ ಸರಕಾರದವರು ಈಗ ತೆಗೆದುಹಾಕಿ ಈ ಉಭಯ ರಾಷ್ಟ್ರೀಯ ವಿದ್ಯಾಪೀಠಗಳ ಪದವೀಧರರು ಸರಕಾರಿ ವಿದ್ಯಾಪೀಠಗಳ ಪದವೀಧರರಷ್ಟೇ ಗಣ್ಯರೆಂದು ಪ್ರಕಟಿಸಿರುವುದು ಅತ್ಯಂತ ಅಭಿನಂದನೀಯವಾದುದು. ರಾಷ್ಟ್ರದ ಸರಕಾರವಾದರೆ ಹೀಗೆ ರಾಷ್ಟ್ರಕ್ಕೆ ಹಿತವಾಗುತ್ತದೆ.

## ಸಾಯುವ ಮುಂಚೆಯೇ ಸಂಪೂರ್ಣ ಸ್ವಾತಂತ್ರ್ಯ.

ಕಾಂಗ್ರೆಸ್ಸಿನ ಪ್ರಮುಖ ಮುಂದಾಳುಗಳಾದ ಶ್ರೀ. ಸತ್ಯಮೂರ್ತಿಗಳು ತಿರವಲ್ಲಿ ಜಿಲ್ಲಾ ರಾಜಕೀಯ ಪರಿಷತ್ತಿನ ಅಧ್ಯಕ್ಷರಾಗಿ ಹೀಗೆ ಭಾಷಣ ಮಾಡಿದರು—

"ಮದ್ರಾಸ್ ಅಸೆಂಬ್ಲಿ ಭವನದ ಮೇಲೆ ಮೂರು ಬಣ್ಣಗಳ ನಮ್ಮ ರಾಷ್ಟ್ರೀಯ ಧ್ವಜವೊಂದೇ ಹಾರಾಡುತ್ತಿರುವುದನ್ನು ನಾವು ನೋಡಬೇಕು. ಅದು ಕೇವಲ ಕಾಂಗ್ರೆಸ್ಸಿನ ಧ್ವಜವಲ್ಲ. ಅದು ಅಖಿಲ ಹಿಂದುಸ್ಥಾನದ ಧ್ವಜವೇ ಆಗಿದೆ. ಹಿಂದುಸ್ಥಾನದಲ್ಲಿ ಕಾಂಗ್ರೆಸ್ಸಿನ ವಿನಾ ಇನ್ನಾವ ರಾಜಕೀಯ ಸಂಸ್ಥೆಯು ಅಷ್ಟು ಗಣ್ಯವಾಗಿದೆ?

ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳು ಇದನ್ನೇ ರಾಷ್ಟ್ರಧ್ವಜವೆಂದು ತಿಳಿದು ಹಿಂದಿ ಪ್ರಚಾರಮಾಡಿ ರಾಷ್ಟ್ರಗೀತೆಯನ್ನು ಹಾಡಿ ರಾಷ್ಟ್ರವೀರರ ಸ್ಮರಣೆ ಮಾಡುತ್ತ ಕಾಂಗ್ರೆಸ್ ಸರಕಾರಕ್ಕೆ ಎಲ್ಲ ರೀತಿಗಳಿಂದಲೂ ಸಹಾಯ ಮಾಡಬೇಕು. ಕಾಂಗ್ರೆಸ್ಸಿನಲ್ಲಿಯೇ ಎಲ್ಲರೂ ಸೇರಿ ಕೆಲಸಮಾಡಬೇಕು. ಸಂಪೂರ್ಣ ಸ್ವಾತಂತ್ರ್ಯವನ್ನು ನಾವು ಸಾಯುವ ಮುಂಚೆಯೇ ಖಂಡಿತವಾಗಿ ಸಂಪಾದಿಸುವೆವೆಂಬ ಆತ್ಮವಿಶ್ವಾಸವನ್ನು ಹೊಂದೋಣ."

## ಶಿಕ್ಷಣದ ಹೊಸ ಯೋಜನೆ.

ಮುಂಬೈ ಪ್ರಾಂತದ ಅಧಿಕಾರವು ಕಾಂಗ್ರೆಸ್ಸಿನ ಅಧೀನವಾದನಂತರ ಶಿಕ್ಷಣ ಪದ್ಧತಿಯಲ್ಲಿ ಮಾಡಬೇಕಾದ ಸುಧಾರಣೆಯನ್ನು ಕುರಿತು ಆಲೋಚಿಸಲು ರಾ| ಬ| ಕೆ. ಜಿ. ಜೋಶಿಯವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ಗೊತ್ತುಪಡಿಸಿದ್ದರು. ಆ ಸಮಿತಿಯವರು ತಮ್ಮ ಯೋಜನೆಯನ್ನು ಈಗ ಸರಕಾರಕ್ಕೆ ತಿಳಿಸಿದ್ದಾರೆ. ಅದರ ಮುಖ್ಯಾಂಶ ಹೀಗಿದೆ—

(೧) ಪ್ರಾಥಮಿಕ ಶಿಕ್ಷಣದಲ್ಲಿ ಉತ್ತಮ ಮತ್ತು ಮಧ್ಯಮ ಎಂಬ ಎರಡು ರೀತಿಗಳಿರಬೇಕು. ೧ ರಿಂದ ೪ ತರಗತಿಗಳು ಮಧ್ಯಮ ಶಿಕ್ಷಣಕ್ಕೆ ಸೇರಬೇಕು. ಇದು ಒತ್ತಾಯವಾಗಿಯೇ ಕೊಡಲ್ಪಡಬೇಕು. ೫ ರಿಂದ ೭ ತರಗತಿಗಳು ಉತ್ತಮ ಶಿಕ್ಷಣಕ್ಕೆ ಸೇರಲ್ಪಡಬೇಕು. ಈ ಪ್ರಕಾರ ಪ್ರಾಥಮಿಕ ಶಿಕ್ಷಣವು ಏಳು ವರುಷ ಕೊಡಲ್ಪಡಬೇಕು.

(೨) ಅನಂತರ ಮಾಧ್ಯಮಿಕ (ಹೈಸ್ಕೂಲ್) ಶಿಕ್ಷಣ ಪ್ರಾರಂಭವಾಗಬೇಕು. ಇದರಲ್ಲಿ ನಾಲ್ಕೇ ತರಗತಿಗಳು. ಎಂದರೆ ನಾಲ್ಕು ವರುಷಗಳ ಶಿಕ್ಷಣ. ಇಂಗ್ಲಿಷ್ ಮತ್ತು ಹಿಂದಿ ಇವು ಈ ನಾಲ್ಕು ವರುಷ ಕಲಿಸಲ್ಪಡಬೇಕು. ವ್ಯವಹಾರಕ್ಕೆ ಉಪಯೋಗವಾಗುವ ದೃಷ್ಟಿಯನ್ನಿಟ್ಟುಕೊಂಡೇ ಇಂಗ್ಲಿಷ್ ಶಿಕ್ಷಣವನ್ನು ಕೊಡಬೇಕು.

ಇಂಗ್ಲಿಷ್ ಮತ್ತು ಹಿಂದಿ ಈ ಎರಡು ಭಾಷೆಗಳ ವಿನಾ ಇತರ ಎಲ್ಲ ವಿಷಯಗಳೂ ದೇಶಭಾಷೆಯಲ್ಲಿಯೇ ಕಲಿಸಲ್ಪಡಬೇಕು. ಯಾವ ವಿದ್ಯಾರ್ಥಿಯು ಕಾಲೇಜಿಗೆ ಹೋಗುವವನಿದ್ದಾನೆಯೋ ಆತನು ಮ್ಯಾಟ್ರಿಕ್ ಪರೀಕ್ಷೆಗೆ ಕುಳಿತುಕೊಳ್ಳಲು ಅಪ್ಪಣೆ ಹೊಂದಬೇಕು.

## ಮುನಸಿಪಾಲ್ಟಿ ಸದಸ್ಯರು ಹೀಗಿರಬೇಕು.

ಬದವಾನ ಪಟ್ಟಣದ ೫೦೦ ಭಂಗಿ ಜನರು ಕಟ್ಟು ಮಾಡಿಕೊಂಡು ಕೆಲಸಕ್ಕೆ ಹೋಗಿಲ್ಲ. ಆಗ ಮುನಸಿಪಾಲ್ಟಿ ಸದಸ್ಯರೇ ಆ ಕೆಲಸವನ್ನು ವಹಿಸಿಕೊಂಡು ಪಟ್ಟಣವನ್ನು ಶುಚಿಯಾಗಿಯೇ ಇಟ್ಟರು. ಹಿಂದು-ಮುಸಲ್ಮಾನ್ ಪ್ರಮುಖರೂ ಈ ಕೆಲಸದಲ್ಲಿ ಸೇರಿದ್ದಾರೆ. ಮುನಸಿ ಪಾಲ್ಟಿ ಸದಸ್ಯರು ಹೀಗಿರಬೇಕು. ಅಂದರೇನೇ ಅವರು ನಗರ ನಾಯಕರು.

—ಮಧ್ಯಪ್ರಾಂತ ಸರಕಾರದವರು ತಮ್ಮ ಪ್ರಾಂತದ ಪತ್ರಿಕಾಕರ್ತರ ಸಮ್ಮೇಲನವನ್ನು ೧೫ ದಿನಗಳಿಗೆ ಒಂದಾವರ್ತಿಕೂಡಿಸಿ ಅವರ ಮುಂದೆ ಪ್ರಾಂತದ ಸ್ಥಿತಿಗತಿಗಳನ್ನು ಇಟ್ಟು ಅವರ ಶಂಕೆಯನ್ನು ಸಮಾಧಾನಗೊಳಿಸಿ ತಮ್ಮ ರಾಜ್ಯಭಾರಕ್ಕೆ ಪತ್ರಿಕಾಕರ್ತರ ಸಹಕಾರವನ್ನು ಹೊಂದುವ ಏರ್ಪಾಟು ಮಾಡಿದ್ದಾರೆ. ಅಭಿನಂದನೀಯ ಏರ್ಪಾಟು.

— ಬರುವ ಅಕ್ಟೋಬರ ೩೦ ನೆಯ ತಾರೀಖಿಗೆ ಛಾಯುಪರಮಾನಂದರವರಿಗೆ ೬೨ ನೆಯ ವರುಷ ಪ್ರಾರಂಭವಾಗುವುದರಿಂದ ಆ ದಿನ ಅವರ ಜಯಂತಿಯನ್ನು ಆಚರಿಸಬೇಕಾಗಿ ಹಿಂದು ಯುವಕ ಸಂಘದವರು ನಿರ್ಧರಿಸಿದ್ದಾರೆ.

— ವಿಜಾಪುರ ಜಿಲ್ಲಾ ಬರಗಾಲ ನಿಧಿಗೆ ಮುಂಬೈ ಶೇಠರು ೬೯ ಸಾವಿರ ರೂ. ಗಳನ್ನು ಕೊಡುವುದಾಗಿ ಗೊತ್ತುಮಾಡಿದ್ದಾರೆ.

### ಕಾಶಿಯಲ್ಲಿಯ ಶ್ರೀಮಜ್ಜಗದ್ಗುರು ಜಯದೇವ ಫ್ರೀ ಬೋರ್ಡಿಂಗಿನಲ್ಲಿರತಕ್ಕ ವಿದ್ಯಾರ್ಥಿಗಳು ಕಾಶಿ, ಕಲಕತ್ತಾ, ಗೌರ್ನಮೆಂಟಿನ ಸಂಸ್ಕೃತ ವಿಶ್ವ ವಿದ್ಯಾಲಯಗಳ ಪರೀಕ್ಷೆಗಳಲ್ಲಿ

## ತೇರ್ಗಡೆಯಾದ ವಿವರ.

| ವಿದ್ಯಾರ್ಥಿಗಳ ಹೆಸರು | ಶಾಸ್ತ್ರನಾಮ |
|---|---|
| (೧) ಮೃತ್ಯುಂಜಯ ದೇವರು ಮುಧೋಳ | ವೇದಾಂತಾಚಾರ್ಯ ಖಂಡ ೨ ಶ್ರೇಣಿ ೨ |
| (೨) ಶಿವಲಿಂಗದೇವರು ಮುಳಗುಂದ, | ವ್ಯಾಕರಣಾಚಾರ್ಯ ಖಂಡ ೧ ಶ್ರೇಣಿ ೨ |
| (೩) ಮಲ್ಲಿಕಾರ್ಜುನದೇವರು ಅಥಣಿ, | ವ್ಯಾಕರಣಾಶಾಸ್ತ್ರಿ ಖಂಡ ೩ ಶ್ರೇಣಿ ೨ |
| (೪) ಬಸವಾರ್ಯರು ಹಾವೇರಿ, | ವ್ಯಾಕರಣಾಶಾಸ್ತ್ರಿ ಖಂಡ ೩ ಶ್ರೇಣಿ ೨ |
| (೫) ರುದ್ರಾರಾಧ್ಯರು ಚೂಚನಗುಪ್ಪೆ, | ವ್ಯಾಕರಣಾಶಾಸ್ತ್ರಿ ಖಂಡ ೩ ಶ್ರೇಣಿ ೨ |
| (೬) ಸಿದ್ಧೇಶ್ವರದೇವರು ನಾರಾಯಣಪೇಟೆ | ನವ್ಯ ನ್ಯಾಯಶಾಸ್ತ್ರೀ ಖಂಡ ೧ ಶ್ರೇಣಿ ೧ |
| (೭) ಸಿದ್ಧರಾಮದೇವರು ಸೊಲ್ಲಾಪುರ, | ನವ್ಯ ನ್ಯಾಯಶಾಸ್ತ್ರೀ ಖಂಡ ೧ ಶ್ರೇಣಿ ೨ |
| (೮) ರೇಣುಕಾಚಾರ್ಯ ಬೆಂಗಳೂರು, | ನವ್ಯ ನ್ಯಾಯಶಾಸ್ತ್ರೀ ಖಂಡ ೧ ಶ್ರೇಣಿ ೨ |
| (೯) ಶಂಕರದೇವರು ಆಲಂಪಲ್ಲೀ | ನವ್ಯ ನ್ಯಾಯಶಾಸ್ತ್ರೀ ಖಂಡ ೧ ಶ್ರೇಣಿ೨ |
| (೧೦) ಶಿವಮೂರ್ತಿದೇವರು ಸೊಲ್ಲಾಪುರ | ವೇದಾಂತ ಮಧ್ಯಮಾ |
| (೧೧) ಚನ್ನಬಸವದೇವರು ಹುಬ್ಬಳ್ಳಿ, | ವ್ಯಾಕರಣ ಖಂಡ ೨ |
| (೧೨) ಬಸಪ್ಪ ರಾಣೀಬೆನ್ನೂರ, | ಆಯ್. ಎಸ್. ಸಿ. (ಹಿಂದೂ ವಿಶ್ವವಿದ್ಯಾಲಯ) |
| (೧೩) ರುದ್ರಾರಾಧ್ಯರು ಹಿರೇಕೊಡಗಲಿ, | ಆಯುರ್ವೇದ ಸೆಕೆಂಡ ಪ್ರೋಫೆಶನಲ್ಲಿ, |
| (೧೪) ಶಿವಮೂರ್ತಿ ವಾರದ | ಆಯುರ್ವೇದ ಪ್ರಥಮ ವರ್ಷ ,, ಪ್ರಥಮ ಶ್ರೇಣಿ |

## ಗಾಂಧೀಜಿಯವರ ಅಭಿನಂದನೆ.

ಅಲಹಾಬಾದಿನಲ್ಲಿ ಮುಸಲ್ಮಾನರ ಅತ್ಯಾಚಾರ ನಡೆದಾಗ ಅವರ ಶಾಂತತೆಗಾಗಿ ಹೋಗಿದ್ದ ಶ್ರೀ. ಪಶುಪತಿನಾಥರು ತುಂಟರಿಂದ ಭಯಂಕರ ಗಾಯಹೊಂದಿ ಈ ವರೆಗೂ ವೈದ್ಯಾಲಯದಲ್ಲಿದ್ದರು. ಅವರು ಗುಣಹೊಂದಿ ಬಂದಿದ್ದಾರೆ. ನಿಮಗೆ ಗಾಯಗೊಳಿಸಿದವರ ಹೆಸರನ್ನು ಹೇಳಿರೆಂದು ಪೋಲೀಸರು ಕೇಳಿದರೆ ಅವರ ಹೆಸರನ್ನು ತಿಳಿಸಲಿಲ್ಲ. ಹೊಡೆದವರ ಮೇಲೆ ವ್ಯಾಜ್ಯಮಾಡಲು ಇವರು ಸಿದ್ಧರಿಲ್ಲ.

ಇವರ ಈ ಶಾಂತ ಮಾರ್ಗವನ್ನು ನೋಡಿ ಗಾಂಧೀಜಿಯವರು ಸಂತೋಷಪಟ್ಟು ಇವರಿಗೆ ಒಂದು ಅಭಿನಂದನ ಪತ್ರವನ್ನು ಬರೆದಿದ್ದಾರೆ. ಹಿಂದು-ಮುಸಲ್ಮಾನರ ಐಕ್ಯಕ್ಕೆ ಇದೇ ಮಾರ್ಗವೆಂತಲೂ ಹೇಳಿದ್ದಾರೆ.

### ಮುಸಲ್ಮಾನರು
## ಕಾಂಗ್ರೆಸ್ಸಿನಲ್ಲಿ ಸೇರಬೇಕು.

ಅಹಮ್ಮದಾಬಾದಿನಲ್ಲಿ ಕೂಡಿದ್ದ ರಾಷ್ಟ್ರೀಯ ಮುಸಲ್ಮಾನರ ಸಭೆಯಲ್ಲಿ ಮುಂಬೈ ಸರಕಾರದ ಸಾರ್ವಜನಿಕ ಶಾಖಾ ಮಂತ್ರಿಗಳಾದ ಮಿ. ನೂರಿಯವರು ಹೀಗೆ ಹೇಳಿದರು—

"ಮುಸಲ್ಮಾನರು ಈಗ ಕಾಂಗ್ರೆಸ್ಸಿನಲ್ಲಿಯೇ ಸೇರಬೇಕು. ಜಾತಿ ಕಲ್ಪನೆಯನ್ನು ತೆಗೆದುಹಾಕಬೇಕು. ರಾಷ್ಟ್ರೀಯ ಮುಸಲ್ಮಾನರು ಮುಸಲ್ಮಾನ್ ಸಮಾಜದಲ್ಲಿ ಕಾಂಗ್ರೆಸ್ಸಿನ ಪ್ರಚಾರಮಾಡಿ ಮುಸಲ್ಮಾನರೇ ಕಾಂಗ್ರೆಸ್ಸಿಗೆ ಸೇರುವಂತೆ ಮಾಡಬೇಕು.

—ಸಂಯುಕ್ತ ಪ್ರಾಂತ ಸರಕಾರದವರು ಹಿಂದುಸ್ಥಾನದಲ್ಲಿ ಹುಟ್ಟಿದ ಕಾಗದಗಳನ್ನೇ ಸರಕಾರಿ ಕೆಲಸಗಳಿಗೆ ಉಪಯೋಗಿಸಬೇಕೆಂದು ಅಪ್ಪಣೆಮಾಡಿರುತ್ತಾರೆ. ಆದರೆ ಈ ನಿಯಮವು ಗವ್ಹರ್ನರರಿಗೆ ಮಾತ್ರ ಬಂಧನಕಾರಿಯಾದುದಲ್ಲ. ಸ್ತುತ್ಯ ಪ್ರಯತ್ನ.

—ಬೆಳಗಾವ, ಧಾರವಾಡ, ಹುಬ್ಬಳ್ಳಿ, ಮುನಸಿಪಾಲ್ಟಿಗಳ ಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷವು ಸೇರಿ ಅವುಗಳ ಆಡಳಿತೆಯನ್ನು ವಶಪಡಿಸಿಕೊಳ್ಳಬೇಕೆಂದು ಆಯಾಯ ಜಿಲ್ಲಾ ಕಾಂಗ್ರೆಸ್ ಕಮೀಟಿಗಳು ನಿರ್ಧರಿಸಿವೆ. ಯೋಗ್ಯ ಸಾಹಸ. ಹೀಗೆ ಎಲ್ಲ ಲೋಕ ನಿಯುಕ್ತ ಸಂಸ್ಥೆಗಳೂ ಕಾಂಗ್ರೆಸ್ಸಿನ ವಶವಾಗುವಂತೆ ಸಾಹಸಪಡಬೇಕು. ಆದರೆ ಕಾಂಗ್ರೆಸ್ ಹೆಸರಿನ ಮರೆಯಲ್ಲಿ ಮತ್ತೆ ಜಾತಿಯ ಭೂತವನ್ನು ವಶೀಲಿ ಭಾಗವತರು ಕುಣಿಸಲು ಬಾರದಂತೆ ನೋಡಿಕೊಳ್ಳಬೇಕು.

## ಅಲ್ಪ ಸಂಖ್ಯೆಯವರ ಆಕ್ರಮಣ.

ಬ್ಯಾ. ಜಿನ್ನಾರವರು ಮುಸಲ್ಮಾನರಾದ ತಾವು ಈ ದೇಶದಲ್ಲಿ ಅಲ್ಪ ಸಂಖ್ಯಾಕರೆಂದು ಹೇಳುತ್ತಾ ಅದರ ಮರೆಯಲ್ಲಿ ಹಿಂದುಗಳ ಮೇಲೆ ಹೇಗೆ ಆಕ್ರಮಣ ಮಾಡಲು ಅರಾಷ್ಟ್ರೀಯ ಧೋರಣವನ್ನು ಇಟ್ಟುಕೊಂಡಿದ್ದಾರೆಯೋ ಹಾಗೆಯೇ ಹೇರ್ ಹಿಟ್ಲರನು ಕೂಡಾ ಜೆಕೊಸ್ಲೋವಾಕಿಯಾ ರಾಷ್ಟ್ರದಲ್ಲಿ ತಮ್ಮ ಜರ್ಮನ್ ಜನರು ಅಲ್ಪ ಸಂಖ್ಯಾಕರೆಂದೂ ಅವರ ಹಕ್ಕುಬಾಧ್ಯತೆಗಳನ್ನು ರಕ್ಷಿಸುವುದು ತನ್ನ ಕರ್ತವ್ಯವೆಂದೂ ಹೇಳುತ್ತ ಆ ರಾಷ್ಟ್ರದ ಮೇಲೆ ಆಕ್ರಮಣಮಾಡಬೇಕೆಂದೇ ಹೊಂಚುಹಾಕಿಕೊಂಡು ಕುಳಿತಿದ್ದನು. ಆದರೆ ಜೆಕೊಸ್ಲೋವಾಕಿಯಾ ಚಿಕ್ಕ ರಾಷ್ಟ್ರವು ತನ್ನ ಅದ್ಭುತ ಶಕ್ತಿಯಿಂದ ಹೇರ್ ಹಿಟ್ಲರರನ್ನು ಈಗ ಸುಮ್ಮನಿರಿಸಿಬಿಟ್ಟಿತು.

ಜೆಕೊಸ್ಲೋವಾಕಿಯಾದಲ್ಲಿದ್ದ ಜರ್ಮನ್ ಜನರು ಹಿಟ್ಲರನು ಎಂದು ಬರುವನೋ ಎಂದು ಎದುರು ನೋಡುತ್ತಲೇ ಇದ್ದಾರೆ. ಅಂತೂ ಮಧ್ಯಯುರೋಪದ ಅಶಾಂತತೆಗೆ ಅಲ್ಪ ಸಂಖ್ಯೆಯವರ ಆಕ್ರಮಣವು ಕಾರಣವಾಗುವುದೋ ಏನೋ ಎಂಬ ಸಂಶಯ ಇನ್ನೂ ಇದ್ದೇ ಇದೆ.

## ನಮ್ಮಲ್ಲಿ ಏನಿಲ್ಲ ?

ಉಸ್ಮಾನಿಯಾ ವಿಶ್ವ ವಿದ್ಯಾಲಯದ ಕಾಲೇಜನ್ನು ತೆರೆಯುವ ಸಮಾರಂಭದ ಕಾಲಕ್ಕೆ ಶಿಕಂದರಾಬಾದಿನಲ್ಲಿ ಶ್ರೀಮತಿ ಸರೋಜಿನಿದೇವಿಯವರು ವಿದ್ಯಾರ್ಥಿಗಳನ್ನು ಕುರಿತು ಹೀಗೆ ಹೇಳಿದರು.—

“ಹಿಂದಿಯನರಾದ ನಮ್ಮಲ್ಲಿ ಎಲ್ಲವೂ ಇವೆ. ಆದರೆ ನಮ್ಮಲ್ಲಿ “ಶಿಸ್ತು” ಮಾತ್ರ ಇಲ್ಲವೇ ಇಲ್ಲ. ಇದೇ ದೊಡ್ಡ ಕೊರತೆ. ನಮಗೆ ಸ್ವಾತಂತ್ರ್ಯವು ಬರೆಮಾತಿನಿಂದ ದೊರೆಯುವದಿಲ್ಲ. ಅಥವಾ ಪತ್ರಿಕೆಗಳಲ್ಲಿ ದೊಡ್ಡ ದೊಡ್ಡ ಅಕ್ಷರಗಳಿಂದ ಬರೆದರೆ ದೊರೆಯುವದಿಲ್ಲ. ಇಲ್ಲವೆ ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗುಗಳ ಠರಾವುಗಳಿಂದಲೇ ಸ್ವಾತಂತ್ರ್ಯ ಬರುವುದಿಲ್ಲ. ಸ್ವಾತಂತ್ರ್ಯ ಸಂಪಾದನೆಗೆ ನಮ್ಮಲ್ಲಿ “ಶಿಸ್ತು” ಬೇಕು. ಅದಕ್ಕೆ ಸ್ವಾರ್ಥತ್ಯಾಗವು ಅಂಟಿಕೊಂಡಿರಬೇಕು. ಹಾಗಾದರೆ ಸ್ವಾತಂತ್ರ್ಯ ದೊರೆಯುವುದು.”

## ಜಗದ್ಗುರುಗಳ ಸ್ಪಷ್ಟೋಕ್ತಿ.

ಶ್ರೀ ಜಗದ್ಗುರು ಶಂಕರಾಚಾರ್ಯ ಡಾ. ಕುರ್ತಕೋಟಿಯವರು ಹಿಂದು ಮಹಾಸಭೆಯ ವಿಚಾರವಾಗಿ ಒಂದು ಪ್ರಕಟನೆಯಲ್ಲಿ ಹೀಗೆ ತಿಳಿಸಿದ್ದಾರೆ—

“ಅಖಿಲ ಭಾರತ ಹಿಂದು ಮಹಾಸಭೆಯು ಹಿಂದು ಜಾತಿವಿಶಿಷ್ಟ ಸಂಸ್ಥೆಯೇ ವಿನಾ ಅದೇನೂ ರಾಜಕೀಯ ಸಂಸ್ಥೆಯಲ್ಲ. ಕಾಂಗ್ರೆಸ್ ಸಂಸ್ಥೆಯೇ ರಾಜಕೀಯವಾದುದು. ಕಾಂಗ್ರೆಸ್ಸಿನ ಕಾರ್ಯಕಲಾಪಗಳ ಸಂಬಂಧವಾಗಿ ಟೀಕೆ ಮಾಡಲು ಪ್ರತಿಯೊಂದು ವ್ಯಕ್ತಿಗೂ ಅಧಿಕಾರವಿದೆ. ಬ್ಯಾ. ಸಾವರಕರರೇನೂ ಪಂಡಿತ ಮಾಲವೀಜಿ, ಭಾಯಿ ಪರಮಾನಂದ, ಕೀರ್ತಿಶೇಷ ಲಜಪತರಾವ, ಶ್ರೀ. ರಾಮಾನಂದ ಚಟರ್ಜಿಯವರಿಗಿಂತ ಹಿಂದುತ್ವದ ವಿಷಯದಲ್ಲಿ ಹೆಚ್ಚು ಅಭಿಮಾನಶಾಲಿಗಳೇನೂ ಅಲ್ಲ.”

## ವೀರಶೈವ ತರುಣ ಸಂಘ ಹುನಗುಂದ

### ನಿಜಾಮದ ಅತ್ಯಾಚಾರ ನಿಷೇಧ.

ತಾ. ೩-೭-೩೮ ನೇ ದಿವಸ ವಿ. ತ. ಸಂ. ಕಾರ್ಯಕಾರೀ ಮಂಡಲದ ಸಭೆಸೇರಿ ಕೆಳಗಿನಂತೆ ಠರಾವುಗಳು ಸರ್ವಾನುಮತದಿಂದ ನಿರ್ಣಯಿಸಲ್ಪಟ್ಟವು.

ಠರಾವು (೧) ೧೯೬೦ ನೇ ಸಾಲಿನ ಅಂದಾಜ ಪತ್ರಿಕೆಯು.

ರೂ. ಗಳ ಜಮಾ.

| | |
|---|---|
| ೬೪-೦-೩ | ಆರಂಭದ ಶಿಲ್ಕು |
| ೨೭-೦-೦ | ಟೀಚರ್ಸ ಸೊಸಾಯಿಟಿಯಲ್ಲಿ ಠೇವಿಟ್ಟ ರಕಮಿನ ಬಡ್ಡಿ |
| ೨೫-೦-೦ | ಲಗ್ನ ಮುಂತಾದ ಕಾರ್ಯಗಳಲ್ಲಿ |
| ೧೧೬-೦-೩ | |

ರೂ. ಗಳ ಖರ್ಚು

| | |
|---|---|
| ೫೦-೦-೦ | ಶ್ರೀ ಮಹಾಂತೇಶ ಉ. ಭೋಜನಾಲಯ |
| ೧೦-೦-೦ | ಫೀ |
| ೩೦-೦-೦ | ಸಾದೀಲವಾರ ವರದಿ ವಗೈರೆ ಛಾಪಿಸಿದ್ದು |
| ೫-೦-೦ | ಶ್ರೀ ಮೃತ್ಯುಂಜಯ ವಾಚನಾಲಯ |
| ೫-೦-೦ | ಶ್ರೀ ಬಸವೇಶ್ವರ ಭಜನಾ ಸಂಘ |
| ೧೦-೦-೦ | ಇತರ ಕಾರ್ಯಗಳಿಗೆ |
| ೧೧೦-೦-೦ | |

(೨) ಹೊಸದಾಗಿ ಅರ್ಜಮಾಡಿದಂಥ ೧. ಹನುಮಪ್ಪ ಶಿವಣಗಿ ಜಾಲಕಮಲದಿನ್ನಿ, ೨. ಸಿದ್ರಾಮಯ್ಯಾ ಮಠ ಚಿಕ್ಕಶಿವನಗುತ್ತಿ ೩. ಬಸಪ್ಪ ಹೊಕ್ರಾಣಿ ಗಂಜೀಹಾಳ ಈ ಮೂರು ವಿದ್ಯಾರ್ಥಿಗಳಿಗೆ ಊಟದ ಸಹಾಯಮಾಡಬೇಕೆಂದೂ ಲೋಕಯ್ಯಾ ಚೌಕಿಮಠ ಹಳ್ಳೂರು, ಚನ್ನಯ್ಯಾ ಲಕ್ಷ್ಮೇಶ್ವರ ಅಥಣಿ ಇವರಿಗೆ ಹಣದ ಅಭಾವ ಇದ್ದದರಿಂದ ಧನ ಸಹಾಯ ಸಿಗುವದಿಲ್ಲೆಂದು ಗೊತ್ತಾಯಿತು.

(೩) ರಾವಸಾಹೇಬ ಹಳಕಟ್ಟಿ ವಿಜಾಪುರ ಇವರಿಗೆ ತೀವ್ರವೇ ಮಹಾಸಭೆಯ ಸ್ಟ್ಯಾಂಡಿಂಗ್ ಕಮಿಟಿಯನ್ನು ಕರೆಯಬೇಕೆಂದೂ ಮತ್ತು ರಾಯಚೂರು ಮಹಾಸಭೆಯಲ್ಲಿ ಗೊತ್ತಾದ ನಿರ್ಣಯಗಳನ್ನು ಅಮಲಿನಲ್ಲಿ ತರುವುದಕ್ಕಾಗಿ ಒಬ್ಬ ಯೋಗ್ಯ ಪ್ರಚಾರಕರನ್ನು ನೇಮಿಸಿಕೊಳ್ಳಲಿಕ್ಕೆ ವಿನಂತಿ ಮಾಡಿಕೊಳ್ಳಬೇಕೆಂದು ಗೊತ್ತಾಯಿತು.

(೪) ಕಳೆದ ಕಾರಹುಣ್ಣಿವೆಯ ದಿವಸ ಮಹಾಗಾವದ ವೀರಶೈವ ತರುಣ ಸಂಘದವರು ತಮ್ಮ ಮಠದಲ್ಲಿ ಭಜನೆಯ ಮಾಡುತ್ತಿದ್ದಾಗ್ಗೆ ಕೆಲವು ತುಂಟ ಮುಸಲ್ಮಾನರು ಅನ್ಯಾಯವಾಗಿ ಅತ್ಯಾಚಾರ ಮಾಡಿದ್ದನ್ನು ನಿಷೇಧಿಸಿ ಅಲ್ಲಿಯ ತರುಣ ಸಂಘದ ಕಾರ್ಯದರ್ಶಿಗಳಾದ ಹತ್ತಿ ಗುರಲಿಂಗಪ್ಪನವರು ಮತ್ತು ಇನ್ನುಳಿದ ಮಹಾಜನಗಳು ಆ ಕಾಲಕ್ಕೆ ಧೈರ್ಯದಿಂದ ಅವರನ್ನು ಹಿಂದಕ್ಕಟ್ಟಿದಕ್ಕಾಗಿ ಅವರೆಲ್ಲರನ್ನು ಈ ಸಭೆಯು ಹೃತ್ಪೂರ್ವಕವಾಗಿ ಅಭಿನಂದಿಸುತ್ತದೆ.

(೫) ಗುಲಬರ್ಗಾ ಕಲೆಕ್ಟರ ಸಾಹೇಬರೂ ಮೋಹತ್ಮೀನ ಸಾಹೇಬರೂ ಮಹಾಗಾಂವಕ್ಕೆ ತೀವ್ರವೇ ಹೋಗಿ ಅಲ್ಲಿ ಶಾಂತತೆಯನ್ನುಂಟು ಮಾಡಿದ್ದಕ್ಕಾಗಿ ಅವರನ್ನು ಅಭಿನಂದಿಸುವದಲ್ಲದೆ ನಿಷ್ಪಕ್ಷಪಾತವಾದ ವಿಚಾರಣೆಯಿಂದ ಅಪರಾಧಿಗಳಿಗೆ ಯೋಗ್ಯ ಶಿಕ್ಷೆಯನ್ನು ವಿಧಿಸಿ ಈ ಅತ್ಯಾಚಾರದ ಬೆಂಕಿಯು ಬೇರೆ ಕಡೆಗೆ ಹಬ್ಬದಂತೆ ಮಾಡುವರೆಂದು ಈ ಸಭೆಗೆ ನಂಬಿಕೆ ಇದೆ.

(೬) ಈ ಸಂಘದ ಸಹಾಯದಿಂದ ಕಲಿತು ಈಗ ಕೆಲಸ ಮಾಡುತ್ತಿರುವಂಥ ಯಾವತ್ತರೂ ಸಂಘದಿಂದ ರೋಖು ತೆಗೆದುಕೊಂಡ ಹಣವನ್ನು ತಿಂಗಳೊಂದಕ್ಕೆ ಇಂತಿಷ್ಟು ಮುಟ್ಟಿಸಿ ತಾವು ಸಂಘದಿಂದ ಋಣಮುಕ್ತರಾಗುವರಲ್ಲದೆ ಈಗ ಕಲಿಯುವಂಥ ವಿದ್ಯಾರ್ಥಿಗಳಿಗೆ ತಾವೇ ಸಹಾಯಮಾಡಿದಂತಾಗುವದೆಂದು ಈ ಸಭೆಯು ವಿನಂತಿಮಾಡಿಕೊಳ್ಳುತ್ತದೆ. ಈ ಪ್ರಕಾರ ಕೆಲಸ ನಡೆದು ಸಭೆಯ ಕೆಲಸವು ಮುಕ್ತಾಯವಾಯಿತು.

ಬಸವಶೆಟ್ಟೆಪ್ಪ ಬಳುಟಗಿ
ಕಾರ್ಯದರ್ಶಿ

## ಎರಡು ವಿಚಿತ್ರ ವಿವಾಹಗಳು.

ಬೆಳಗಾವಿಯಲ್ಲಿ ರಾಷ್ಟ್ರವೀರ ಪತ್ರಿಕೆಯ ಸಂಪಾದಕರಾದ ಶ್ರೀ. ಶಾಮರಾವ ದೇಸಾಯಿಯವರು ತಮ್ಮ ೫೬ ನೇ ವಯಸ್ಸಿನಲ್ಲಿ ಮೊದಲಿನ ಪತ್ನಿಯ ಮರಣಾನಂತರ ಮೊನ್ನೆ ಮೊನ್ನೆ ೧೫ ವರುಷದ ನವ ಯುವತಿಯನ್ನು ಲಗ್ನವಾದರು.

ಬೆಳಗಾವಿಯ ವೈದ್ಯಾಲಂಕೃತಿ ಮೊದಲಾದ ಬಿರುದುಗಳಿಂದಲಂಕೃತವಾದ ಶ್ರೀಮತಿ ರಂಗೂಬಾಯಿ ಭೋಸಲೆಯವರು ತಮ ವಯಸ್ಸಿನ ೫೫ ನೇ ವರ್ಷದ ಮುಪ್ಪಿನಕಾಲದಲ್ಲಿ ಯಶವಂತ ಲಕ್ಷ್ಮಣ ಜಾಧವ ಎಂಬ ೨೫ ವರುಷದ ತರುಣರನ್ನು ಖಾನಾಪೂರ ತಾಲೂಕ ಪೈಕಿ ಕರಂಬಾಳದ ಮರಾಠಾ ಆಶ್ರಮದಲ್ಲಿ ಲಗ್ನವಾದರೆಂದು ಪ್ರಸಿದ್ಧ ಮಾಡಲಾಗಿದೆ.

## ತೊಟ್ಟಿಲಿಗೆ ಬಾಸಿಂಗ!

ಆಗ್ರಾ ಜಿಲ್ಲೆಯ ಹಿಂದೋನ ಗ್ರಾಮದಲ್ಲಿ ೪೦ ವರುಷದ ಪುರುಷನು ೧|| ವರುಷದ ಹುಡುಗಿಯೊಂದಿಗೆ ವಿವಾಹವಾಗುವವನಿದ್ದಾನೆ. ಹುಡುಗಿಯ ಪಾಲಕರಿಗೆ ೭೦೦ ರೂ. ಕೊಟ್ಟಿದ್ದಾನೆ.

## ಗಾಂಧಿ ಟೊಪ್ಪಿಗೆಗೆ ೭ ಪೌಂಡು!

ಪಂಡಿತ ಜವಾಹರಲಾಲ ನೆಹರುರವರು ಲಂಡನ್ನಿನಲ್ಲಿ ಒಂದು ಭಾಷಣದಲ್ಲಿ ಬ್ರಿಟಿಶರು ಶಸ್ತ್ರಸಂಗ್ರಹಿಸುವದು ರಶಿಯಾದ ವಿರುದ್ಧವೆಂದು ಹೇಳಿದರು. ಆಗ ಸಭೆಯಲ್ಲಿ ಗೊಂದಲವೆದ್ದಿತು. ಅಧ್ಯಕ್ಷರು ಸಮಾಧಾನಗೊಳಿಸಿದರು.

ಚೀನದ ಸಹಾಯಾರ್ಥವಾಗಿ ಹಣ ಕೂಡಿಸಲು ಪಂಡಿತಜಿಯವರು ಒಂದು ಗಾಂಧಿಟೊಪ್ಪಿಗೆಯನ್ನು ಲಿಲಾವಿಗೆ ಹಿಡಿಯಲು ಅದರ ಕ್ರಯ ೭ ಪೌಂಡು ಬಂದಿತು.

## ನಗರ ಸಭೆಯಲ್ಲಿ ಪುಂಡ ಮುಸಲ್ಮಾನರು.

ಅಹಮ್ಮದಾಬಾದ ನಗರ ಸಭೆಯು ಮೊನ್ನೆ ಗಾಂಧಿ ಭವನದಲ್ಲಿ ಕೂಡಿತ್ತು. ಆರೋಗ್ಯಕ್ಕೆ ಅಡ್ಡಿಯಾಗುವ ಸ್ಥಳದಲ್ಲಿ ಮುಸಲ್ಮಾನರ ಗೋರಿ ಇರಬಾರದಾಗಿ ಒಂದು ಗೊತ್ತುವಳಿ ಬಂದಿತು. ಆಗ ಮೊದಲೇ ಹೊಂಚುಹಾಕಿಕೊಂಡು ಹೊರಗೆ ಕುಳಿತಿದ್ದ ತುಂಟ ಮುಸಲ್ಮಾನರು ಸಭೆಯಲ್ಲಿ ಬಂದು ಪುಂಡಾಟಿಕೆ ನಡೆಸಲು ಅಧ್ಯಕ್ಷರು ಸಭೆಯನ್ನು ನಿಲ್ಲಿಸಬೇಕಾಯಿತು.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

The
Sharana Sandesh.

ನ್ಯಾಯನಿಷ್ಠುರ, ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ, ಶರಣನಾರ ... ಅಂಜುವವನಲ್ಲ ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವ ... ರು.

ಬಿಡಿಸಂಚಿಕೆಗೆ ೧ ಆಣೆ.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೧೮ ನೆಯ ಜುಲೈ ೧೯೩೮. | ಸಂಚಿಕೆ ೪೫ |
|---|---|---|

ಜನಸೇವೆಯೇ ದೇವರಸೇವೆ.

## ಮಂತ್ರಿಮಂಡಲದಲ್ಲಿ ತೊಡಕು.

XOX

ಮಧ್ಯಪ್ರಾಂತ ಮಂತ್ರಿಮಂಡಲದಲ್ಲಿ ಮತಭೇದದಿಂದ
ತೊಡಕು ಬಿದ್ದ ಕಾರಣ ಬಿಡಿಸುವ
ಪ್ರಯತ್ನ ನಡೆದಿದೆ.

## ರಶಿಯಾ ಜಪಾನಿನ ಮೇಲೆ?

ರಶಿಯಾ ದೇಶದ ಸೈನ್ಯವು ಜಪಾನಿನ ಗಡಿಯ ಹತ್ತಿರ
ಬಂದು ಸೇರುತ್ತಲಿದೆ.
ಇದನ್ನು ನೋಡಿ ಜಪಾನವು ಅಂಜಿ, ರಶಿಯಾಕ್ಕೆ
ಹೀಗೆ ಮಾಡಬಾರದಾಗಿ ತಿಳಿಸಿದೆ.

## ಟೆನನ್ಸಿ ಬಿಲ್ಲಿನ ವಿರೋಧ.

ಪುಣೆಯಲ್ಲಿ ತಾ. ೧೬ ನೆಯ ದಿನ ಕೂಡಿದ್ದ ಕಾಂಗ್ರೆಸ್ ಅಸೆಂಬ್ಲಿ
ಸಭಾಸದರ ಸಭೆಗೆ ಟೆನನ್ಸಿ ಬಿಲ್ಲಿನ ವಿರೋಧವನ್ನು
ಪ್ರದರ್ಶಿಸಲು ೨೦೦ ಜಮೀನದಾರರ ಮೆರವಣಿಗೆ
ಹೋಗಿದ್ದಿತು.

ದೇಹವೇ ದೇವಾಲಯ.



# ಶರಣ ಸಂದೇಶ

# THE SHARANA SANDESHA.



## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ-ಸೋಮವಾರತಾರೀಖು ೧೮ ನೆಯ ಜುಲೈ ೧೯೩೮. | ಸಂಚಿಕೆ ೪೫

—ಮಹಾತ್ಮಾ ಗಾಂಧಿಯವರು ಕಾಯಕಲ್ಪದ ಪ್ರಯೋಗವನ್ನು ಹೊಂದಬೇಕಾಗಿ ಅವರ ಅನೇಕ ಅನುಯಾಯಿಗಳು ಆಗ್ರಹಮಾಡಿದುದರಿಂದ ಆ ವಿಚಾರವಾಗಿ ಯೋಚಿಸುತ್ತೇವೆಂದು ಹೇಳಿದ್ದಾರೆ. ಪಂಡಿತ ಮಾಲವೀಜಿಯವರ ಪ್ರಕೃತಿಯು ಈಗ ಬಹುಮಟ್ಟಿಗೆ ಒಳ್ಳೆಯ ಸ್ಥಿತಿಯಲ್ಲಿರುವುದರಿಂದ ಅವರ ಸಲಹೆ ಪ್ರಕಾರ ಇದೇ ಬರುವ ಚಳಿಗಾಲದಲ್ಲಿ ಗಾಂಧೀಜಿಯವರು ಕಾಯಕಲ್ಪ ಪ್ರಯೋಗವನ್ನು ಹೊಂದಬಹುದೆಂದೇ ಊಹಿಸಲಾಗಿದೆ.

—ಗಡಿನಾಡಿನ ಮಂತ್ರಿಮಂಡಲವು ಒಳ್ಳೆಯ ವರ್ತನದ ಪ್ರತಿಯೊಬ್ಬ ಅಸೆಂಬ್ಲಿ ಮತದಾರನಿಗೂ ಬಂದೂಕನ್ನು ಇಟ್ಟುಕೊಳ್ಳಲು ಅಪ್ಪಣೆಯನ್ನು ಕೊಡುವುದಾಗಿ ನಿರ್ಧರಿಸಿದೆ.

—"ಸಂಯುಕ್ತ ಘಟನೆಯು ಸ್ವೀಕಾರವೆಂದರೆ ಅದು ಹಿಂದಿ ರಾಜಕಾರಣದ ಕೊಲೆ. ಇಂಥ ರಾಷ್ಟ್ರೀಯ ಆತ್ಮಹತ್ಯದ ಪಾಪ ಕಾರ್ಯದಲ್ಲಿ ನಾನು ಭಾಗಿಯಾಗುವುದಿಲ್ಲ. ಕಾಂಗ್ರೆಸ್ಸು ವನಗೆ ಉಸುರಿನಂತಿದೆ."

—ರಾಷ್ಟ್ರಾಧಿಪತಿಗಳು.

—ಚೀನ ರಾಷ್ಟ್ರಕ್ಕೆ ಸಹಾಯ ಮಾಡುವ ಕುರಿತು ಲಂಡನ್ನಿನಲ್ಲಿ ಪಂಡಿತ ಜವಾಹರಲಾಲ ನೆಹರುರವರು ಭಾಷಣಮಾಡಲು ಒಂದು ಸಭೆಯಲ್ಲಿ ೨೦೦ ಪೌಂಡುಗಳು ಕೂಡಿದವು.

—ಮುಂದೆ ಬರಲಿರುವ "ಟಿನನ್ಸಿ" ಗೊತ್ತುವಳಿಯ ವಿಚಾರವಾಗಿ ಕರ್ನಾಟಕದ ಪ್ರಮುಖ ಕಾಂಗ್ರೆಸ್ ಕೆಲಸಗಾರರು ತುಂಬಾ ಸಹಾನುಭೂತಿಯನ್ನು ವ್ಯಕ್ತಗೊಳಿಸಿದ್ದಾರೆ.

—ಸರ್. ಶಿವಸ್ವಾಮಿ ಅಯ್ಯರವರು ವರ್ಧಾ ಶಿಕ್ಷಣ ಯೋಜನೆಯು ಯಶಸ್ವಿಯಾಗುವುದಿಲ್ಲವೆಂದೇ ಕಂಠೋಕ್ತವಾಗಿ ಬೆಂಗಳೂರಿನ ಸಭೆಯಲ್ಲಿ ಹೇಳಿದರು.

### ಮಹತ್ವದ ಸುದ್ದಿಗಳು.

—ಹೈದರಾಬಾದ ರಾಜಧಾನಿಯಲ್ಲಿ ಮೊನ್ನೆ ಹಿಂದು-ಮುಸಲ್ಮಾನರ ದೊಂಬಿಯ ಕಾಲಕ್ಕೆ ೩೩ ಹಿಂದುಗಳ ಮೇಲೆ ಹೂಡಿದ ವ್ಯಾಜ್ಯವು ಅಲ್ಲಿಯ ಹೈಕೋರ್ಟ ನ್ಯಾಯಾಧೀಶರಾದ ಖಲೀಲ ಜಮಾ ಇವರ ಹತ್ತಿರ ಕಳೆದ ೧೧ ನೆಯ ತಾರೀಖಿನಿಂದ ಪ್ರಾರಂಭವಾಗಿದೆ. ವೀರ ನಂಮನ್ನರನ್ನು ಬಾರದಂತೆ ಮಾಡಿದ್ದು ಇದೇ ವ್ಯಾಜ್ಯ ಕ್ಕೋಸ್ಕರ. ಈಗ ಶ್ರೀ. ಭುಲಾಭಾಯಿಯವರು ಬಂದಿದ್ದಾರೆ.

—ಮಧ್ಯಪ್ರಾಂತ ಮಂತ್ರಿಮಂಡಲದಲ್ಲಿ ಮತಭೇದವಾದುದರಿಂದ ಶ್ರೀ. ರಾಮರಾವ ದೇಶಮುಖ ಮತ್ತು ಶ್ರೀ. ಗೋಳೆ ಎಂಬ ಇಬ್ಬರು ಮಂತ್ರಿಗಳು ತಮ್ಮ ಕೆಲಸದ ಬಿಡುಗಡೆ ಪತ್ರವನ್ನು (ರಾಜಿನಾಮೆ) ಮುಖ್ಯಮಂತ್ರಿಗಳ ಕಡೆಗೆ ಕೊಟ್ಟಿದ್ದಾರೆಂದು ಸುದ್ದಿ.

—ಬ್ರಿಟಿಶ್ ಸರಕಾರವು ವಿಮಾನುಗಳಿಗೆ ಹೆಚ್ಚು ಹಣ ವೆಚ್ಚ ಮಾಡಿ ಒಟ್ಟು ೭೫ ಸಾವಿರ ವಿಮಾನುಗಳನ್ನು ಮಾಡುವುದು.

—ಸಿಂಧ ಸಂಸ್ಥಾನಾಧಿಪತಿಗಳು ೪೦ ಸಾವಿರ ರೂ. ಭೂಕಂದಾಯವನ್ನು ಈ ಸಾರೆ ಬಿಟ್ಟು ಬಿಟ್ಟರು.

—ಸಂಯುಕ್ತ ಘಟನೆಯ ಸಂಬಂಧವಾಗಿ ರಾಷ್ಟ್ರಾಧಿಪತಿಗಳು ಪ್ರಕಟಿಸಿದ್ದನ್ನು ಕುರಿತು ನಿಮ್ಮ ಅಭಿಪ್ರಾಯವನ್ನು ತಿಳಿಸುವಿರಾ? ಎಂದು ಶ್ರೀ. ಭುಲಾಭಾಯಿ ದೇಸಾಯಿಯವರಿಗೂ ಸರದಾರ ವಲ್ಲಭ ಭಾಯಿಯವರಿಗೂ ವಿಚಾರಿಸಲು, ವರ್ಧಾದಲ್ಲಿ ಕೂಡುವ ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ವರೆಗೆ ತಾಳಿರೆಂದು ಹೇಳಿದರು.

— ದಬ್ಬಾಳಿಕೆಯ ಶಾಸನಗಳನ್ನು ತೆಗೆದುಹಾಕಬೇಕೆಂದು ಗಡಿನಾಡಿನ ಮಂತ್ರಿಮಂಡಲವು ನಿರ್ಧರಿಸಿದೆ. ಆದರೆ ಗವ್ಹರ್ನರರು ಅದಕ್ಕೆ ಒಪ್ಪಿಗೆಯನ್ನು ಕೊಟ್ಟಿಲ್ಲ.

# ಕೀರ್ತಿಶೇಷ ಖಾಪರ್ಡೆಯವರ ಜೀವಿತದಲ್ಲಿಯ ಕೆಲವು ಸಂಗತಿಗಳು.

ಹಿಂದುಸ್ಥಾನದ ಈಗಿನ ರಾಜಕಾರಣವು ಮೂರನೆಯ ಅಂತಸ್ತಿನಲ್ಲಿದೆ. ಈ ಮುಂಚೆ ಇದು ಎರಡು ಅಂತಸ್ತುಗಳನ್ನು ದಾಟಿದೆ. ಮೊದಲನೆಯ ಅಂತಸ್ತಿನಲ್ಲಿದ್ದಾಗ ಅದರ ಸೂತ್ರವು ಗೋಖಲೆ ಮತ್ತು ಮೇಥಾರವರ ಕೈಯಲ್ಲಿದ್ದಿತು. ಅದು ಎರಡನೆಯ ಅಂತಸ್ತಿಗೆ ಬರುವಂತೆ ಮಾಡಿದವರು ಲಾಲ, ಬಾಲ, ಪಾಲ ಎಂಬ ತ್ರಿಮೂರ್ತಿಗಳು. ಆಗ ಅದರ ಸೂತ್ರವು ಲಾಲಾ ಲಜಪತರಾಯ, ಬಾಲ ಗಂಗಾಧರ ಟಿಳಕ ಮತ್ತು ಬಿಪಿನಚಂದ್ರ ಪಾಲ ಈ ತ್ರಿಮೂರ್ತಿಗಳ ಕೈಯಲ್ಲಿದ್ದಿತು. ಈಗಿನ ಮೂರನೆಯ ಅಂತಸ್ತಿಗೆ ತಂದ್ರ ಅದರ ಸೂತ್ರಧಾರಿಗಳಾಗಿರುವವರು ಮಹಾತ್ಮಾ ಗಾಂಧಿಯವರು.

ಎರಡನೆಯ ಅಂತಸ್ತಿನಲ್ಲಿರುವಾಗ ಲೋಕಮಾನ್ಯ ಟಿಳಕರೇ ಆ ತ್ರಿಮೂರ್ತಿಗಳಲ್ಲಿ ಮುಖ್ಯರಾಗಿದ್ದರು. ಅವರಿಗೆ ಬಲಗೈಯಂತಿದ್ದ ಉಮರಾವತಿಯ ಶ್ರೀ. ದಾದಾ ಸಾಹೇಬ ಖಾಪರ್ಡೆಯವರು ಕಳೆದ ೧ ನೆಯ ತಾರೀಖಿನ ರಾತ್ರಿ ೧೦॥ ಗಂಟೆಗೆ ತಮ್ಮ ಮನೆಯಲ್ಲಿ ದೇಹಬಿಟ್ಟರು. ಆಗ ಅವರಿಗೆ ೮೪ ವರುಷಗಳಾಗಿದ್ದವು.

ಈ ಮಹನೀಯರ ಜೀವಿತದಲ್ಲಿಯ ಅನೇಕ ಸಂಗತಿಗಳು ಇವರ ಗುಣ ಸ್ವಭಾವ ಮತ್ತು ರಾಷ್ಟ್ರಸೇವೆಗಳನ್ನು ತೋರಿಸುತ್ತವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಟ್ಟಿದೆ—

ಶ್ರೀ. ಖಾರ್ಪಡೆಯವರು ಸುಪ್ರಸಿದ್ಧ ವಕೀಲರಾಗಿದ್ದರು. ವಕೀಲಿ ಕೆಲಸದಿಂದ ಲಕ್ಷಾಂತರ ರೂ. ಗಳನ್ನು ಗಳಿಸಿದರು. ಆ ಹಣವನ್ನು ಅವರು ಲೋಭದಿಂದ ಕೂಡಿಡಲಿಲ್ಲ. ಬಹು ಉದಾರ ಗುಣದಿಂದ ವೆಚ್ಚಮಾಡಿದರು. ಅನೇಕ ಸಮಯದಲ್ಲಿ ಅದು ದುಂದುಗಾರಿಕೆಯಾಗಿಯೂ ಇರುತ್ತಿತ್ತು. ಅಂತೆಯೇ ಇವರಿಗೆ "ವರ್ಹಾಡದ ನಬಾಬ" ರೆಂದು ಇವರ ಸ್ನೇಹಿತರು ಹೇಳುತ್ತಿದ್ದರು.

ಅನ್ನದಾನ— ಇವರಲ್ಲಿ ಅತಿಥಿಯಾಗಿ ಬಂದು ಊಟಮಾಡುತ್ತಿದ್ದವರ ಸಂಖ್ಯೆ ಹೆಚ್ಚು. ಯಾರು ಎಷ್ಟು ದಿನ ತಮ್ಮಲ್ಲಿ ಬಂದು ಊಟ ಮಾಡುತ್ತಾ ಇದ್ದಾರೆಂಬುದನ್ನು ಕೂಡಾ ಇವರು ವಿಚಾರಿಸುತ್ತಿರಲಿಲ್ಲ. ಟಿಳಕರ ಸಂಬಂಧಿಕನೆಂದು ಒಬ್ಬಾತನು ಇವರಲ್ಲಿ ೬ ತಿಂಗಳು ವಾಸವಾಗಿದ್ದನು! ಆತನು ಆಮೇಲೆ ಒಂದು ದಿನ ಅಲ್ಲಿ ಕಳವು ಮಾಡಿದ್ದರಿಂದ ಹೊರಗೆ ಹಾಕಿದರು.

ಒಬ್ಬ ಭಟ್ಟರು ಇವರಲ್ಲಿ ಪ್ರತಿನಿತ್ಯ ಎರಡೂ ಹೊತ್ತು ಬಂದು ಊಟ ಮಾಡುತ್ತಿದ್ದರು. ಮನೆಯಲ್ಲಿಯ ಯಾರ ಪರಿಚಯದವರಾದರೂ ಇರಬಹುದೆಂದು ಅವರನ್ನು ನೀವು ಯಾರೆಂದು ಯಾರೂ ಕೇಳಲಿಲ್ಲ. ಅವರು ಹೀಗೆ ೨೧ ದಿನ ಪ್ರತಿನಿತ್ಯ ಅವರಲ್ಲಿ ಬಂದು ಊಟಮಾಡಿ ಹೋಗುತ್ತಿದ್ದರು. ೨೨ ನೆಯ ದಿನ ಅವರು ಬಾರದ್ದುದರಿಂದ ಆಗ ಭಟ್ಟರು ಏಕೆ ಬರಲಿಲ್ಲವೆಂದು ವಿಚಾರಿಸಲು ಅವರಿಗೆ ಅಜೀರ್ಣವಾಗಿ ಮಲಗಿದ್ದಾರೆಂದು ತಿಳಿಯಿತು. ಆಗ ನೀವು ಯಾರು? ಇಲ್ಲೇಕೆ ಇದ್ದೀರೆಂದು ಕೇಳಲು "ನನಗೆ ಈ ವರೆಗೂ ಯಾರೂ ಇಲ್ಲಿ ಇರಬೇಡಿರೆಂದು ಹೇಳಿಲ್ಲವಾದುದರಿಂದ ನಾನು ಊಟ ಮಾಡುತ್ತಾ ಇಲ್ಲಿಯೇ ಇದ್ದೇನೆಂದು ಆ ಭಟ್ಟರು ಹೇಳಿದರು!"

ಹೀಗೆ ಇವರಲ್ಲಿ ಅನ್ನದಾನವು ಯಥೇಚ್ಛವಾಗಿ ನಡೆಯುತ್ತಿತ್ತು. ಪ್ರತಿನಿತ್ಯ ೧೦-೧೫ ಬಡ ವಿದ್ಯಾರ್ಥಿಗಳು ಊಟ ಮಾಡುತ್ತಿದ್ದರು.

ಶ್ರೀಮಂತಿಕೆಯ ವೆಚ್ಚ—ಇವರ ಮಕ್ಕಳಾದ (ಈ ಮುಂಚೆ ಮಧ್ಯಪ್ರಾಂತದ ಮಂತ್ರಿಗಳಾಗಿದ್ದ) ಶ್ರೀ. ಬಾಬಾಸಾಹೇಬರ ಲಗ್ನವನ್ನು ಪುಣೆಯಲ್ಲಿ ಮಾಡಿದರು. ಆಗ ಪುಣೆಯಲ್ಲಿ ಬೇರೆಯವರಿಗೆ ತರಕಾರಿ ಮತ್ತು ಮಿಠಾಯಿ ದೊರೆಯದಂತಾಗಿದ್ದವು! ಉಮರಾವತಿಯಿಂದ ಲಗ್ನಕ್ಕಾಗಿ ೩ ಸ್ಪೇಶಲ್ ಟ್ರೇನ್ ಜನರು ಬಂದಿದ್ದರು. ಅವರಲ್ಲಿ ೨೦೦ ಜನರು ನರ್ತಕಿ ಗಾಯಕಿಯರು ಇದ್ದರು!

ಇವರ ಕಡೆಗೆ ಒಮ್ಮೆ ಒಬ್ಬ ಗಂಧದ ಎಣ್ಣೆ ಮಾರುವಾತನು ಒಳ್ಳೆಯ ಗಂಧದ ಎಣ್ಣೆಯನ್ನು ತೆಗೆದುಕೊಂಡು ಬಂದಿದ್ದನು. ಇವರ ಒಬ್ಬ ಸ್ನೇಹಿತರು ಕಾಲು ತೊಲೆ ಮಾತ್ರ ಗಂಧದ ಎಣ್ಣೆಯನ್ನು ತೆಗೆದುಕೊಂಡರು. ಆಗ ವ್ಯಾಪಾರಿಗೆ ಅಸಮಾಧಾನವಾದುದನ್ನು ನೋಡಿ ಆತನಲ್ಲಿದ್ದ ಆ ಎಣ್ಣೆಯನ್ನೆಲ್ಲಾ ಶ್ರೀ. ಖಾಪರ್ಡೆಯವರು ತಮ್ಮ ಕೈಯಲ್ಲಿ ಹಿಡಿಯುವ ಬಡಿಗೆಯ ಮೇಲೆ ಹಾಕಿಸಿ ಅದರ ಕ್ರಯವನ್ನು ಕೊಟ್ಟು ಕಳುಹಿಸಿದರು!

ಗುಣಗೌರವ— ಪಂಢರಪುರದಲ್ಲಿ ಒಬ್ಬ ಕ್ಷೌರಿಕನು ಇವರಿಗೆ ಬಹು ಚೆನ್ನಾಗಿ ಕ್ಷೌರವನ್ನು ಮಾಡಿದನು. ಆಗ ಸಂತೋಷಪಟ್ಟು ಶ್ರೀ. ಖಾಪರ್ಡೆಯವರು ಆತನಿಗೆ ಒಂದು ನೂರು ರೂ. ಗಳನ್ನು ಕೊಟ್ಟರು.

ಇವರು ಒಮ್ಮೆ ಹೈದರಾಬಾದಿಗೆ ವಕೀಲಿ ಕೆಲಸಕ್ಕೆ ಹೋಗಿದ್ದರು. ಆಗ ಇವರ ವ್ಯಾಜ್ಯ ಗೆದ್ದಿತು. ಅದರ ಸಂತೋಷಾರ್ಥವಾಗಿ ಒಂದು ಸಂಗೀತ ಕಚೇರಿ ಏರ್ಪಟ್ಟಿತು. ಆಗ ಖಾಪರ್ಡೆಯವರ ಘನತೆಯನ್ನು ಕುರಿತು ಒಂದು ಪದ್ಯವನ್ನು ರಚಿಸಿ ಒಬ್ಬ ಗಾಯಕಿಯು ಬಹು ಮನೋಹರವಾಗಿ ಹಾಡಿದಳು. ಅದನ್ನು ಕೇಳಿ ಇವರು ಸಂತೋಷಿಸಿ ಆ ವ್ಯಾಜ್ಯದಲ್ಲಿ ಆ ದಿನ ಬಂದಿದ್ದ ಸಾವಿರಾರು ರೂ. ಗಳನ್ನು ಅವಳಿಗೆ ಕೊಟ್ಟುಬಿಟ್ಟರು.

ಪಾಂಡಿತ್ಯ— ಖಾಪರ್ಡೆಯವರು ರಾಜಶಾಸನದಲ್ಲಿ ಬಹು ಪ್ರಸಿದ್ಧ ಪಂಡಿತರಾಗಿದ್ದರು. ಸಂಸ್ಕೃತ ಭಾಷೆಯಲ್ಲಿ ಬಹು ಪ್ರವೀಣರಾಗಿದ್ದರು. ಮರಾಠಿ, ಉರ್ದು, ಹಿಂದಿ, ಗುಜರಾಥಿ, ಸಂಸ್ಕೃತ ಮತ್ತು ಇಂಗ್ಲಿಷ ಭಾಷೆಗಳಲ್ಲಿ ಚೆನ್ನಾಗಿ ಪಾಂಡಿತ್ಯವಿದ್ದಿತು. ಧಾರ್ಮಿಕ ವಿಷಯವು ಇವರಿಗೆ ಪ್ರಿಯವಾದುದು. ಯೋಗವಾಶಿಷ್ಠವು ಇವರ ಪ್ರೀತಿಯ ಗ್ರಂಥ.

ಇವರು ಪ್ರಸಿದ್ಧ ಭಾಷಣಕಾರರೂ ಆಗಿದ್ದರು. ಇವರ ಭಾಷಣವು ವಿನೋದಯುಕ್ತವಾದುದು. ಇಂಗ್ಲಂಡಿಗೆ ಇವರು ಲೋಕಮಾನ್ಯರ ಸಂಗಡ ಹೋದಾಗ ಹಿಂದಿ ರಾಜಕಾರಣದ ಸಂಬಂಧವಾಗಿ ಅಲ್ಲಿ ಅನೇಕ ಭಾಷಣಗಳನ್ನು ಮಾಡಿದರು. ಇವರ ಭಾಷಣ ಶೈಲಿಯನ್ನು ನೋಡಿ ಅಲ್ಲಿಯ ಪತ್ರಿಕೆಯವರು ಇವರಿಗೆ "ಹಿಂದಿ ಮಾರ್ಕಟ್ವೆನ್" ಎಂದು ಹೇಳಿದ್ದರು.

ಕಾರ್ಯನಿಷ್ಠೆ— ಕೈಕೊಂಡ ಕಾರ್ಯವನ್ನು ಬಹು ನಿಷ್ಠೆಯಿಂದ ಮಾಡುವ ಸ್ವಭಾವ. ಪ್ರತಿಯೊಂದು ಕಾರ್ಯವೂ ಸಕಾಲಕ್ಕೆ ಆಗಬೇಕು. ಕಾಲ ಮಿಂಚಿ ನಡೆಯುವ ಸ್ವಭಾವವಲ್ಲ. ಮುಂದಾಲೋಚನೆಯಿಂದ ಮೊದಲೇ ಕೆಲಸವನ್ನು ಕ್ರಮವಾಗಿ ಮಾಡಿಡುವ ಪದ್ಧತಿ.

ಸಾರ್ವಜನಿಕ ಕಾರ್ಯಮಾಡಿ ಜನಾಂಗವನ್ನು ಸುಧಾರಿಸುತ್ತೇವೆಂದು ಹೇಳುವ ಕಾಲ ಕಳೆದು ಹೋಗಿ ಎಷ್ಟೋ ದಿನಗಳಾದವು. ತಮಗೆ ಯುಕ್ತವೆಂದು ಕಂಡ ಯಾವ ಸಾರ್ವಜನಿಕ ಕಾರ್ಯವನ್ನಾದರೂ ಅದು ಪರಿಣಾಮಕಾರಿಯಾಗುವಂತೆ ಮಾಡಬೇಕಾದರೆ ಅದೇ ತಮ್ಮ ಧ್ಯೇಯವೆಂದು ತಿಳಿದ ಕೆಲವರಾದರೂ ಅದರಲ್ಲಿಯೇ ಆಸಕ್ತರಾಗಿರಬೇಕಾದುದು ಅತ್ಯಗತ್ಯ.

ಈಗ ಕಾಂಗ್ರೆಸ್ಸಿಗೆ ಇಂಥ ಅದ್ಭುತವಾದ ಶಕ್ತಿಯು ಹೇಗೆ ಬಂದಿದೆ? ಅದಕ್ಕಾಗಿಯೇ ಹಗಲಿರುಳೂ ತಮ್ಮ ತನು ಮನ ಧನಗಳನ್ನು ಸವೆಸುತ್ತಿರುವ ಲಕ್ಷಾಂತರ ಜನರಿದ್ದಾರೆಂದಲ್ಲವೆ? ಹಿಂದು ಮಹಾಸಭೆ ಮತ್ತು ಮುಸ್ಲಿಂಲೀಗ್ ಈ ಸಂಸ್ಥೆಗಳು ಎಷ್ಟೋ ಪರಿಣಾಮಕಾರಿಯಾದ ಕಾರ್ಯಗಳನ್ನು ಈಗ ಮಾಡುತ್ತಿರುವುದೇಕೆ? ಅವುಗಳಲ್ಲಿ ಸಾವಿರಾರು ಜನರ ಆಯುಸ್ಯವೇ ಆಯಾಯ ಸಂಸ್ಥೆಗಳ ಕಾರ್ಯಗಳಿಗಾಗಿ ಸವೆಯುತ್ತಿರುವುದರಿಂದಲ್ಲವೆ? ಆರ್ಯಸಮಾಜವು ತನ್ನ ವರ್ಚಸ್ಸನ್ನು ಇಷ್ಟು ಸ್ಥಾಪಿಸಿರುವುದು ಹೇಗೆ? ಅದಕ್ಕಾಗಿಯೇ ಸಾವಿರಾರು ಜನರು ಅವಿಶ್ರಾಂತವಾಗಿ ದುಡಿಯುತ್ತಿರುವುದರಿಂದಲ್ಲವೆ?

ವೀರಶೈವ ಮಹಾಸಭೆಯು ಜನ್ಮವೆತ್ತಿ ೩೪ ವರುಷಗಳಾದವು. ಈ ವರೆಗೆ ಅದಕ್ಕಾಗಿಯೇ ದುಡಿಯುತ್ತಿರುವವರು ನೂರಾರು ಜನರಾದರೂ ಇರಬಾರದೆ? ಕಡೆಗೆ ಹತ್ತಾರು ಜನರಾದರೂ ಇರಕೂಡದೆ? ಕೊನೆಗೆ ಒಬ್ಬರಾದರೂ ಇದ್ದಾರೆಯೇ? ಮೇಲಿನ ಬೇರೆ ಸಂಸ್ಥೆಗಳಲ್ಲಿರುವಂತೆ ಮಹಾಸಭೆಯ ಕಾರ್ಯಕ್ಕಾಗಿಯೇ ಒಬ್ಬರಾದರೂ ಸ್ವಂತ ಇಚ್ಛೆಯಿಂದ ದುಡಿಯುವವರು ಇಲ್ಲದಿದ್ದರೂ ಕಡೆಗೆ ಸಂಬಳಕ್ಕಾಗಿಯೇ ದುಡಿಯುವ ಒಂದು ವ್ಯಕ್ತಿಯಾದರೂ ಉಂಟೆ?

ಇಲ್ಲವೇ ಇಲ್ಲವೆಂದು ಅತ್ಯಂತ ವಿಷಾದದಿಂದ ಹೇಳಬೇಕಾಗಿದೆ. ಇದೇ ರೀತಿಯಿಂದಲೇ ಮಹಾಸಭೆಯ ಕಾರ್ಯ ನಡೆಯುವುದಾದರೆ ಅದು ಅನಾವಶ್ಯಕವೆಂದು ಮತ್ತೆ ಹೇಳಬೇಕಾದುದಾದರೂ ಏಕೆ?

### ಹೇಗಿದ್ದರೆ ಅಗತ್ಯ ?

ಮಹಾಸಭೆಯ ಕಾರ್ಯಕ್ಕಾಗಿಯೇ ಕೆಲವರಾದರೂ ಕಂಕಣಬದ್ಧರಾದರೆ ಮಹಾ ಸಭೆಯು ಅಗತ್ಯ.

ಅದರಿಂದ ವೀರಶೈವ ಸಮಾಜದಲ್ಲಿ ಮಹತ್ತರವಾದ ಜಾಗೃತಿಯನ್ನು ಹುಟ್ಟಿಸಬಹುದು. ಆ ಜಾಗೃತಿಯು ರಾಷ್ಟ್ರಕ್ಕೆ ಬಹು ಪ್ರಯೋಜನಕಾರಿಯಾಗಿಯೂ ಪರಿಣಮಿಸುವುದು.

ಸಮಾಜಕ್ಕೆ ಉನ್ನತಿಯ ಮಾರ್ಗವನ್ನು ತೋರಿಸುವ ಕಾರ್ಯ ಮಾಡುವುದಾದರೆ ಮಹಾಸಭೆಯು ಬೇಕು. ಈಗಿನಂತೆ ಒಂದು ತರುಣಸಂಘವು ಮಾಡುವಷ್ಟು ಕಾರ್ಯವನ್ನು ಕೂಡಾ ಮಾಡದೆ ಅದನ್ನು ಹಿಂಬಾಲಿಸುವ ಶಕ್ತಿಯು ಕೂಡಾ ಇಲ್ಲದ ಸ್ಥಿತಿಯಲ್ಲಿಯೇ ಅದುಳಿಯುವುದಾದರೆ ಮಹಾಸಭೆ ಎಂಬ ಭಾರದ ಹೆಸರಾದರೂ ಅದಕ್ಕೆ ಏಕೆ ?

ಮಹಾ ಸಭೆಯ ಕಾರ್ಯಕಾರಿ ಸಮಿತಿಯ ಅಧ್ಯಕ್ಷರು ಹೇಳಿರುವಂತೆ ಈಗ ಈ ದೇಶದ ರಾಜಕಾರಣದಲ್ಲಿ ವ್ಯತ್ಯಾಸವಾಗಿರುವುದರಿಂದ ಮಹಾಸಭೆಯು ಧಾರ್ಮಿಕ ಮತ್ತು ಸಾಮಾಜಿಕ ಈ ಎರಡು ವಿಷಯಗಳನ್ನೇ ನಡೆಸುವುದು ವಿಹಿತ. ಇವು ಸಮಾಜಕ್ಕೂ ರಾಷ್ಟ್ರಕ್ಕೂ ಜೀವನವಾಗಿಯೇ ಇವೆ.

ಕಾಂಗ್ರೆಸ್ಸಿನ ಕಾರ್ಯವು ಎಷ್ಟೇ ಹೆಚ್ಚಲಿ ಅಥವಾ ಇಂದೇ ದೇಶಕ್ಕೆ ಸಂಪೂರ್ಣ ಸ್ವಾತಂತ್ರ್ಯ ದೊರೆಯಲಿ ಈ ಉಭಯ ವಿಷಯಗಳಲ್ಲಿ ಮಾಡಬೇಕಾಗಿರುವ ಮಹತ್ವದ ಕಾರ್ಯಗಳು ಈ ದೇಶದ ಪ್ರತಿಯೊಂದು ಸಮಾಜಕ್ಕೂ ಧರ್ಮಕ್ಕೂ ಇನ್ನೂ ಕೆಲವು ಶತಮಾನಗಳ ವರೆಗಾದರೂ ಇದ್ದೇ ಇರುತ್ತವೆಂಬುದನ್ನು ನಾವು ಲಕ್ಷಿಸಬೇಕು. ಕಾಂಗ್ರೆಸ್ ಕೆಲಸ ಮಾಡಿದರೆ ಅಥವಾ ರಾಜಕೀಯ ಸ್ವಾತಂತ್ರ್ಯ ದೊರೆತರೆ ನಮ್ಮ ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಗಳ ಅಗತ್ಯವೇ ಇಲ್ಲವೆಂದು ಯಾರಾದರೂ ತಿಳಿದಿದ್ದರೆ ಅದು ತಪ್ಪು. ಅದೊಂದು ಅವರ ಭ್ರಮೆಯೆಂದೇ ಹೇಳಬಹುದು.

ಆದಕಾರಣ ವೀರಶೈವ ಮಹಾಸಭೆಯು ಅಗತ್ಯವೆ ? ಎಂಬ ನಮ್ಮ ಪ್ರಶ್ನೆಗೆ ಕಾರ್ಯಕಾರಿ ಸಮಿತಿಯ ಅಧ್ಯಕ್ಷರು ಇಷ್ಟರಲ್ಲಿಯೇ ಕೂಡಿಸುವ ಸಮ್ಮೇಲನವು ಯಾವ ಉತ್ತರವನ್ನು ಕೊಡುವುದೋ ನೋಡೋಣ.

---

## ಆತ್ಮಾಹುತಿಯ ಕಾಲ.

ಚೀನ ದೇಶದಲ್ಲಿ, ಜಪಾನಿನ ನಿಂದ್ಯ ಆಕ್ರಮಣಕ್ಕಾಗ್ನಿಗೆ ಲಕ್ಷಾಂತರ ವೀರರು ಆತ್ಮಾಹುತಿಯನ್ನು ಕೊಟ್ಟು ಮಾತೃಭೂಮಿಯ ಋಣದಿಂದ ಮುಕ್ತರಾಗುತ್ತಿದ್ದಾರೆ. ಸ್ಪೇನದಲ್ಲಿ ಪಕ್ಷಾಭಿಮಾನದ ಘರ್ಷಣಾಗ್ನಿಗೆ ಸಾವಿರಾರು ಶೂರರು ಆತ್ಮಾಹುತಿಕೊಟ್ಟು ಸ್ವ ಪಕ್ಷ ಸ್ಥಾಪನೆಯ ಅಡಿಗಲ್ಲಾಗುತ್ತಿದ್ದಾರೆ.

ಹಿಂದುಸ್ಥಾನದಲ್ಲಾದರೋ ಜಾತಿಯ ಕಲಹಾಗ್ನಿಗೆ ಅನೇಕರು ಆತ್ಮಾರ್ಪಣಮಾಡಿ ಸ್ವಧರ್ಮ ರಕ್ಷಣೆಯ ಕೀರ್ತಿಶಾಲಿಗಳಾಗುತ್ತಿದ್ದಾರೆ. ಈ ಪ್ರಕಾರ ಸ್ವಾತಂತ್ರ್ಯ, ಸ್ವಪಕ್ಷ, ಸ್ವ ಧರ್ಮಗಳ ರಕ್ಷಣೆಗೆ ಆತ್ಮಾಹುತಿ ಕೊಡುವ ಕಾಲವು ಬಂದಂತಾಗಿದೆ.

ಹಿಂದುಸ್ಥಾನದ ರಾಜಕೀಯ ದೋಷವನ್ನು ಕಳೆಯಬೇಕಾದರೆ ಕಾರಾಗೃಹ ವಾಸವೇ ಪರಿಣಾಮಕಾರಿಯಾದ ಉಪಾಯವೆಂದು ಗ್ರಹಿಸಲ್ಪಟ್ಟದ್ದಿತಷ್ಟೆ. ಆದರೆ ಈಗ ಈ ದೇಶದ ಜಾತಿಯ ಕಲಹಾಗ್ನಿಯನ್ನು ಶಮನಗೊಳಿಸಬೇಕಾದರೆ ಆತ್ಮಾಹುತಿ ಕೊಡುವ ವೀರರು ಬೇಕಾಗಿದ್ದಾರೆಂದು ಗಾಂಧೀಜಿಯವರೇ ಸಾರಿರುವುದನ್ನು ನೋಡಿದರೆ ಈ ಜಾತಿಯ ಕಲಹ ಮುಖ್ಯವಾಗಿ ಹಿಂದು-ಮುಸಲ್ಮಾನರ ಕಲಹಾಗ್ನಿ ಎಷ್ಟು ಪ್ರಖರವಾದುದೆಂದೂ ಅದರ ನಿವಾರಣೆಗೆ ಎಂಥ ಹೆಚ್ಚಿನ ಸ್ವಾರ್ಥತ್ಯಾಗಗಳು ಬೇಕಾಗಿದ್ದಾರೆಂದೂ ಸ್ಪಷ್ಟವಾಗುತ್ತದೆ.

ಈಗ ಎಲ್ಲೆಲ್ಲಿಯೂ ಮುಸಲ್ಮಾನರ ಆಕ್ರಮಣವು ಅತ್ಯಧಿಕವಾಗುತ್ತಾ ಇದೆಯಷ್ಟೆ. ಇದನ್ನು ತಡೆಯಲಿಕ್ಕೆ ಪ್ರಯತ್ನಿಸಬೇಕೆಂಬ ವ್ಯಕ್ತಿಯು ಸ್ವ ಸಂತೋಷದಿಂದಲೇ ಆಗಲಿ ಅಥವಾ ಅನ್ಯರ ಆಕ್ರಮಣದಿಂದಲೇ ಆಗಲಿ ಆತ್ಮಾಹುತಿಗೀಡಾಗುತ್ತಾನೆಂದೇ ತಿಳಿಯಬೇಕಾಗಿದೆ. ಅಂಥ ಸಿದ್ಧತೆಯುದ್ದರೇನೇ ಈ ಕಲಹಾಗ್ನಿಯ ಶಮನದ ಕಾರ್ಯದಲ್ಲಿ ಭಾಗಿಯಾಗಬೇಕು. ಇಂಥ ಆತ್ಮ ವೀರರೇ ಹಿಂದು ಸಂಘಟನೆಯ ಮತ್ತು ಜಾತಿಯ ಕಲಹ ನಿವಾರಣೆಯ ಕಾರ್ಯಕ್ಕೆ ಮುಂದಾಗಲೆಂದು ನಾವು ಹಾರೈಸುತ್ತೇವೆ.

---

—ಮಾವಿನ ಹಣ್ಣನ್ನು ಮಾರುವ ಮುಸಲ್ಮಾನನಿಗೂ ಇಬ್ಬರು ಹಿಂದು ಗಿರಾಕಿಗಳಿಗೂ ಲಖನೌದಲ್ಲಿ ಹೊಡೆದಾಟ ಪ್ರಾರಂಭವಾಗಿ ಅದು ಹಿಂದು-ಮುಸಲ್ಮಾನರ ದೊಂಬಿಯಲ್ಲಿ ಪರಿಣಮಿಸಿತು. ೩೦ ಜನರಿಗೆ ಗಾಯಗಳಾಗಿವೆ. ಕರಫ್ಯೂ ಆರ್ಡರ್ ಮತ್ತು ೧೪೪ ನೆಯ ಆಜ್ಞೆ ಆಚರಣೆಯಲ್ಲಿ ತರಲಾಗಿದೆ.

# ವೀರಶೈವ ಮಹಾಸಭೆ.

ವೀರಶೈವ ಮಹಾಸಭೆಯಿಂದ ಕಾರ್ಯಗಳು ಜರುಗಬೇಕೆಂದು ಅನೇಕರು ಈಗ ಇಚ್ಛಿಸುತ್ತಿರುವದು ಸಂತೋಷಕರವಾಗಿದೆ. ರಾಯಚೂರು ಮಹಾಸಭೆಯಲ್ಲಿ ಮಹಾಸಭೆಯ ನಿಯಮಗಳಲ್ಲಿ ಅನೇಕ ಮಹತ್ವದ ಬದಲಾವಣೆಗಳು ಮಾಡಲ್ಪಟ್ಟವು. ಅವುಗಳ ಮೂಲಕ ಮೊದಲಿದ್ದ ಮಧ್ಯವರ್ತೀ ಮಂಡಳವಲ್ಲದೆ ಒಂದು ಕಾರ್ಯಕಾರೀ ಕಮೀಟಿಯ ಏರ್ಪಾಡೂ ಹೊಸದಾಗಿ ಮಾಡಲ್ಪಟ್ಟಿತು. ಈ ಮಧ್ಯವರ್ತಿ ಮಂಡಳದಲ್ಲಿ ಈಗ ೪೪ ಜನ ಸಭಾಸದರೂ, ಕಾರ್ಯಕಾರೀ ಮಂಡಳದಲ್ಲಿ ೧೨ ಜನ ಸಭಾಸದರೂ ಇರುತ್ತಾರೆ. ಕಾರ್ಯಕಾರೀ ಮಂಡಳದ ಸಭಾಸದರ ಹೆಸರುಗಳು ಯಾವವೆಂದರೆ—

೧. ರಾ. ಸಾ. ಪಿ. ಜಿ. ಹಳಕಟ್ಟಿ ೨. ಮಂಜಪ್ಪ ಹರ್ಡೇಕರ ೩. ಮುರಿಗೆಯ್ಯ ಜಂಗಿನ ೪. ಬಸೆಟ್ಟೆಪ್ಪ ಬಳೂಟಗಿ ೫. ಬಿ. ಶಿವಮೂರ್ತಿ ಶಾಸ್ತ್ರಿಗಳು ೬. ಶ್ರೀ. ಮಹದೇವ ಸ್ವಾಮಿಗಳು ೭. ವೇ. ಮೂ. ಚಂದ್ರಶೇಖರ ಶಾಸ್ತ್ರಿಗಳು ಹೊಳಲು ೮ ಎಮ್. ಎಸ್. ಸರದಾರ ಬ್ಯಾರಿಸ್ಟರ ೯ ಎಮ್. ಎಚ್. ಎಮ್. ನಂಜುಂಡಯ್ಯ ಹೊಸಪೇಟೆ ೧೦ ಸಂಗ್ರಾಮಪ್ಪ ವಕೀಲ ಉದ್ಗಿರಿ ೧೧ ಶಿದ್ಧಮಲ್ಲಪ್ಪ ಕಲ್ಯಾಣಶೆಟ್ಟಿ ೧೨ ಶಂಕರಪ್ಪ ಧನಶೆಟ್ಟಿ.

ಈ ಸಭಾಸದರೆಲ್ಲರೂ ಮಹಾಸಭೆಯ ಕಾರ್ಯಗಳನ್ನು ಜರುಗಿಸಲು ಯಾವಾಗಲೂ ಸಿದ್ಧರಿರುತ್ತಾರೆಂದು ನಾವು ಹೇಳುವ ಅವಶ್ಯವಿಲ್ಲ.

೧೯೩೩ ನೆಯ ಇಸ್ವಿಯಲ್ಲಿ ಧಾರವಾಡದಲ್ಲಿ ನೆರೆದ ಮಹಾಸಭೆಯಲ್ಲಿ ನಿರ್ಣಯವಾದ ಮೇರೆಗೆ ಆಯಾ ಪ್ರಾಂತಿಕ ವಿಭಾಗಗಳಲ್ಲಿ ಪ್ರಾಂತಿಕ ಸಭೆಗಳನ್ನೂ ಜಿಲ್ಲಾ ಸಭೆಗಳನ್ನೂ ನೆಂಸಿ, ಒಂದು ಸಂಘಟನೆಯನ್ನುಂಟು ಮಾಡಲು ಮಧ್ಯವರ್ತೀ ಮಂಡಳದ ಪರವಾಗಿ ಅನೇಕ ಸಾರೆ ಮಂಡಳದ ಸಭಾಸದರು ಪ್ರಯತ್ನಿಸಿದರು. ಆದರೆ ದೇಶದಲ್ಲೂ ಸಮಾಜದಲ್ಲೂ ಆಗ ಉಂಟಾಗಿದ್ದ ಒಂದು ವಿಲಕ್ಷಣ ಪರಿಸ್ಥಿತಿಯ ಮೂಲಕ ಇಂಥ ಸಾಮೂಹಿಕ ಪ್ರಯತ್ನಗಳು ಯಶಸ್ಸನ್ನು ಪೊಂದಲಿಲ್ಲ. ಇದಕ್ಕೋಸ್ಕರ ನಾವು ಬಹಳ ವಿಷಾದಿಸಬೇಕಾಗಿದೆ.

ಮುಂದೆ ರಾಯಚೂರು ಮಹಾಸಭೆಯು ೧೯೩೬ ನೇ ಇಸ್ವಿಯಲ್ಲಿ ಏರ್ಪಡಿಸಲ್ಪಟ್ಟಿತು. ಆಗ ನಾವು ಮೇಲೆ ವಿವರಿಸಿದ ಪ್ರಕಾರ ಹೊಸ ತರದ ಘಟನೆಯು ಅಂಗೀಕೃತವಾಯಿತು. ಮತ್ತು ಹೊಸ ಕಾರ್ಯಕರ್ತರುಗಳು ನಿಯೋಜಿತರಾದರು. ಆದರೆ ಅಷ್ಟರಲ್ಲಿ ದೇಶದಲ್ಲಿ ರಾಜಕೀಯ ಕಾರ್ಯಕಲಾಪಗಳು ತೀವ್ರವಾಗಿ ನಡೆದು ಬಹುಜನ ಸಮಾಜದ ಲಕ್ಷವನ್ನು ಹೆಚ್ಚಾಗಿ ಅತ್ತಕಡೆಗೆ ಎಳೆದುಬಿಟ್ಟವು. ಆದರೆ ಈಚೆಗೆ ಕಾಂಗ್ರೆಸ್ಸು ಅಧಿಕಾರಾರೂಢವಾಗಿ ವಿಧಾಯಕ ಕಾರ್ಯಕ್ರಮಗಳನ್ನು ಕೈಕೊಂಡಿದ್ದರಿಂದ ಸಾಮಾಜಿಕ ಮತ್ತು ವಾಙ್ಮಯಾತ್ಮಕ ಪ್ರಯತ್ನಗಳೂ ಧಾರ್ಮಿಕ ಚಟುವಟಿಕೆಗಳೂ ಜನರ ಮನಸ್ಸನ್ನು ಮೊದಲಿನಂತೆ ಆಕರ್ಷಿಸಹತ್ತಿದಲ್ಲಿ ಮತ್ತು ಈಗ ಮಹಾಸಭೆಯಿಂದ ಯಾವವಾದರೂ ಕಾರ್ಯಗಳು ಜರುಗಬೇಕೆಂಬ ಅಭಿಪ್ರಾಯಗಳು ಬಲಗೊಳ್ಳಹತ್ತಿದಲ್ಲಿ ಬಹು ಸಂತೋಷಪಡತಕ್ಕ ಸಂಗತಿಯಾಗಿದೆ.

ಈ ವರೆಗೆ ಮಹಾಸಭೆಯಲ್ಲಿ ಆರ್ಥಿಕ, ಔದ್ಯೋಗಿಕ, ಸಾಮಾಜಿಕ, ವಾಙ್ಮಯಾತ್ಮಕ ಮೊದಲಾದ ಅನೇಕ ಬಗೆಯ ನಿರ್ಣಯಗಳು ಆಗಿರುತ್ತವೆ. ಆದರೆ ಈಗ ಕಾಂಗ್ರೆಸ್ ಮಂತ್ರಿಮಂಡಳವು ಆರ್ಥಿಕ ಔದ್ಯೋಗಿಕ ಶೈಕ್ಷಣಿಕ ಮೊದಲಾದ ವಿಷಯುಗಳನ್ನು ಕೈಕೊಂಡು ಅನೇಕ ಮಹತ್ವದ ಯೋಜನೆಗಳನ್ನು ಪ್ರಚಾರದಲ್ಲಿ ತರಹತ್ತಿರುತ್ತದೆ. ಇಷ್ಟೇ ಅಲ್ಲ; ಅವುಗಳ ಉಪಯೋಗವು ಜನತೆಗೆಲ್ಲ ಉಂಟಾಗುವಂತೆ ಏರ್ಪಾಡುಗಳನ್ನು ಮಾಡುತ್ತಲೂ ಇದೆ. ಇಂಥ ವಿಷಯಗಳ ಸಂಬಂಧವಾಗಿ ವೀರಶೈವರಷ್ಟೇ ತಮ್ಮದೊಂದು ಕಾರ್ಯಕ್ರಮವನ್ನು ಬೇರೆಯಾಗಿ ಕೈಕೊಳ್ಳುವದು ಇಷ್ಟ ತೋರುವದಿಲ್ಲ. ಆದ್ದರಿಂದ ವೀರಶೈವರು ಇಂಥ ವಿಷಯಗಳ ಸಂಬಂಧವಾಗಿ ಎಲ್ಲರೊಡನೆ ಸಹಕರಿಸಿ ಪ್ರಯತ್ನಿಸಿ ಅವುಗಳ ಉಪಯೋಗವನ್ನು ಮಾಡಿಕೊಳ್ಳುವದು ಹೆಚ್ಚಿಗೆ ಹಿತಾವಹವೆಂದು ನಮಗೆ ತೋರುತ್ತದೆ.

ಈ ಸ್ಥಿತಿಯಲ್ಲಿ ವೀರಶೈವರು ತಮ್ಮ ಸಾಮಾಜಿಕ ಸುಧಾರಣೆ ವಾಙ್ಮಯಾತ್ಮಕ ಪ್ರಯತ್ನಗಳು, ಧಾರ್ಮಿಕೋನ್ನತಿಯ ಚಟುವಟಿಕೆಗಳು ಇಂಥವುಗಳಲ್ಲಿ ವಿಶೇಷವಾಗಿ ತೊಡಗುವದು ಹೆಚ್ಚಿಗೆ ಶ್ರೇಯಸ್ಕರವಾಗಿ ತೋರುತ್ತದೆ. ಮತ್ತು ಇದು ವ್ಯವಹಾರ್ಯವೂ ಆಗಿರುತ್ತದೆ.

ರಾಯಚೂರು ಮಹಾಸಭೆಯು ತರುವಾಯ ಅದರ ಕಾರ್ಯಕಾರೀ ಕಮೀಟಿಯು ವಿಜಾಪುರದಲ್ಲಿ ಹೋದ ವರ್ಷ ಸೇರಿತ್ತು. ಆಗ ಕಮೀಟಿಯಲ್ಲಿ ಆದ ನಿರ್ಣಯಗಳಲ್ಲಿ ಸಮಾಜದಲ್ಲಿ ಈ ವರೆಗೆ ಉತ್ಪನ್ನವಾಗಿರುವ ಸಂಸ್ಥೆಗಳು ಅಂದರೆ ಸಂಸ್ಕೃತ ಪಾಠಶಾಲೆಗಳು, ವಿದ್ಯಾವರ್ಧಕ ಸಂಸ್ಥೆಗಳು ಅಲ್ಲದೆ ಧರ್ಮಾದಾವ ಸಂಸ್ಥೆಗಳು, ಬೋರ್ಡಿಂಗಗಳು ಭಜನಾ ಸಂಘಗಳು, ವಾಚನಾಲಯಗಳು, ಶುದ್ಧೀ ಸಂಘಗಳು, ಚರ್ಚಾಕೂಟಗಳು, ಶಿವಾನುಭವ ಸಂಘಗಳು, ಸಮಾಜಸೇವಾ ಸಮಿತಿಗಳು, ಸಮಾಜ ಏಕೀಕರಣ ಸಂಘಗಳು ಇಂಥ ಸಂಘಗಳ ಮಾಹಿತಿಯನ್ನು ಎಲ್ಲ ಕಡೆಯಿಂದ ತರಿಸಿಕೊಂಡು ಅವುಗಳಲ್ಲಿ ಒಂದು ಸಂಘಟನೆಯನ್ನು ಉಂಟುಮಾಡಿ ಕಾರ್ಯಗಳು ಸುವ್ಯವಸ್ಥಿತವಾಗಿ ನಡೆಯುವಂತೆ ಪ್ರಯತ್ನಿಸಬೇಕೆಂಬ ನಿರ್ಣಯವು ಮಹತ್ವದ್ದಾಗಿದೆ. ಸಮಾಜಕ್ಕೆ ಈಗ ಬೇಕಾದುದು ಒಂದು ಬಲವಾದ ಸಂಘಟನೆ, ಮತ್ತು ಕಾರ್ಯಾಸಕ್ತರಿಗೆ ಕಾರ್ಯ ಮಾಡಲು ಅವಶ್ಯಕ ಅನುಕೂಲತೆಗಳು. ಇದು ಸಾಧ್ಯವಾಗಬೇಕೆಂದು ಮೇಲ್ಕಂಡ ಸಂಸ್ಥೆಗಳ ಒಂದು ಸಮ್ಮೇಲನವನ್ನು ಕೂಡಿಸುವ ಯೋಜನೆ ಇರುತ್ತದೆ. ಆದ್ದರಿಂದ ಕಾರ್ಯಕಾರೀ ಮಂಡಲದ ಪರವಾಗಿ ನಾನು ಮಾಡುವ ವಿನಂತಿ ಏನೆಂದರೆ—

ಯಾವ ಸ್ಥಳದಲ್ಲಾದರೂ ಯಾವದೇ ಬಗೆಯ ವೀರಶೈವರ ಅಭ್ಯಾಸ ಕೂಟಗಳು ಶಿವಾನುಭವ ಮಂಟಪಗಳು, ತರುಣ ಸಂಘಗಳು ಅಥವಾ ಇಂಥ ಬೇರೆ ಸಂಸ್ಥೆಗಳು ಇದ್ದದ್ದಾದರೆ ಅವುಗಳ ಕಾರ್ಯಕರ್ತರ ಹೆಸರುಗಳು ಅವುಗಳ ಉದ್ದೇಶಗಳು ಮೊದಲಾದ ವಿವರಗಳನ್ನು ಬರೆದು ನಮ್ಮ ಕಡೆಗೆ ಕಳಿಸಬೇಕು. ಹಾಗೆಯೇ ವಿದ್ಯಾವರ್ಧಕ ಸಂಸ್ಥೆಗಳು, ಪಾಠಶಾಲೆಗಳು, ಸಂಸ್ಕೃತ ಕಾಲೇಜಗಳು, ವಿದ್ಯಾರ್ಥಿ ನಿಲಯಗಳು ಇದ್ದದ್ದಾದರೆ ಇವುಗಳ ಮೇಲ್ವಿಚಾರಕರ ಅಥವಾ ಅಧಿಕಾರಿಗಳ ಹೆಸರುಗಳನ್ನೂ ತಿಳಿಸಬೇಕು.

ಈ ಪ್ರಕಾರ ಮಾಹಿತಿಯು ಬಂದಬಳಿಕ ಇಂಥ ಸಂಸ್ಥೆಗಳ ಪ್ರತಿನಿಧಿಗಳನ್ನು ಒಂದಡೆಗೆ ಬರಮಾಡಿಕೊಂಡು ಒಂದು ಸಮ್ಮೇಲನವನ್ನು ಕೂಡಿಸುವ ಪ್ರಯತ್ನವು ಮಾಡಲ್ಪಡುತ್ತದೆ. ಇಂಥ ಸಮ್ಮೇಲನದ ಉಪಯುಕ್ತತೆಯು ಎಷ್ಟಿರುತ್ತದೆಂಬುದನ್ನು ನಾವು ವಿವರಿಸುವ ಅವಶ್ಯವಿಲ್ಲ.

ಅಲ್ಲದೆ ವೀರಶೈವ ಸಮಾಜದಲ್ಲಿ ಅನೇಕ ಪಂಡಿತರೂ ಶಾಸ್ತ್ರಿಗಳೂ, ವಚನ ವಾಙ್ಮಯದ ಅಭ್ಯಾಸಿಗಳೂ, ಕೀರ್ತನಕಾರರೂ ಬೋಧಕರೂ, ಗ್ರಂಥಕಾರರೂ, ಪತ್ರಿಕಾಕರ್ತರೂ ಸಂಶೋಧಕರೂ ಇರುತ್ತಾರೆ. ಅವರನ್ನೂ ಸಹ ಈ ಸಮ್ಮೇಲನಕ್ಕೆ ಬರಮಾಡಿಕೊಳ್ಳುವದು ಅವಶ್ಯವಾಗಿರುತ್ತದೆ. ಆದ್ದರಿಂದ ಅಂಥವರೂ ಕೂಡ ತಮ್ಮ ಹೆಸರುಗಳನ್ನು ನಮಗೆ ತಿಳಿಸಬೇಕು.

ಈ ತರದ ಸಮ್ಮೇಲನದಲ್ಲಿ ನಿಜವಾದ ಕಾರ್ಯ ಕರ್ತೃಗಳು ಒತ್ತಟ್ಟಿಗೆ ನೆರೆದು ಸಾಮಾಜಿಕ ಸುಧಾರಣೆ, ವಾಙ್ಮಯಾಭಿವೃದ್ಧಿ ಇವೇ ಮೊದಲಾದ ಮಹತ್ವದ ವಿಷಯಗಳನ್ನು ಚರ್ಚಿಸಿ ಅವುಗಳಿಗೋಸ್ಕರ ಮಾಡತಕ್ಕ ಪ್ರಯತ್ನಗಳನ್ನು ನಿರ್ಧರಿಸಲು ಬಹಳ ಅನುಕೂಲವಾಗುತ್ತದೆ.

ಮೇಲ್ಕಂಡ ಮಾಹಿತಿಯು ನಮಗೆ ಅಗಸ್ಟ ೧೫ ನೇ ತಾರೀಖಿನ ಒಳಗಾಗಿ ಮುಟ್ಟತಕ್ಕದ್ದು.

ರಾಯಚೂರು ಮಹಾಸಭೆಯಾದಬಳಿಕ ನಿಜಾಮ ಪ್ರಾಂತದ ಪರವಾಗಿ ಇಷ್ಟರಲ್ಲಿ ಕೆಲವು ಪ್ರಾಂತಿಕ ಸಭೆಗಳು ಆ ಭಾಗದಲ್ಲಿ ನೆರೆದು ಅನೇಕ ಮಹತ್ವದ ಗೊತ್ತುವಳಿಗಳಾಗಿರುತ್ತವೆ. ಇಷ್ಟೇ ಅಲ್ಲ, ಉಪದೇಶಕರೂ ನಿಯಮಿಸಲ್ಪಟ್ಟಿರುತ್ತಾರೆ. ನಿಧಿಯೂ ಸಹ ಕೂಡಿಸಲ್ಪಟ್ಟಿದೆ. ಹಾಗೆಯೇ ಮಹಾರಾಷ್ಟ್ರ ಮತ್ತು ಮಧ್ಯಪ್ರಾಂತಗಳಲ್ಲಿಯೂ ಕೂಡ ಸಮ್ಮೇಲನಗಳು ಜರುಗಿ ವಿದ್ಯಾನಿಧಿಗಳು ಕೂಡಿಸಲ್ಪಟ್ಟಿವೆ. ಹಾಗೆಯೇ ಬೆಳಗಾವ, ಧಾರವಾಡ, ವಿಜಾಪುರ ಜಿಲ್ಲೆಗಳು ಮತ್ತು ಮೈಸೂರ ಪ್ರಾಂತ ಇವುಗಳಲ್ಲಿಯೂ ಸಂಘಟನೆಯ ಕಾರ್ಯಗಳನ್ನು ಕೈಕೊಳ್ಳುವದು ಅವಶ್ಯವಾಗಿದೆ. ಇಲ್ಲಿ ಇಂಥ ಕಾರ್ಯ ಮಾಡಬಲ್ಲ ವಿದ್ಯಾವಂತರು ಬಹುಜನರಿದ್ದು ಅವರು ತಮ್ಮ ತಮ್ಮ ಜಿಲ್ಲೆಗಳಲ್ಲಿ ಮಹಾಸಭೆಯ ಘಟನೆಯ ಮೇರೆಗೆ ಜಿಲ್ಲಾ ಸಂಘಗಳನ್ನು ಏರ್ಪಡಿಸಿದ್ದಾದರೆ ಮಹಾಸಭೆಯ ಕಾರ್ಯಗಳು ಶೀಘ್ರವಾಗಿ ಜರುಗಲು ಶಕ್ಯವಾಗುತ್ತದೆ. ಆದ್ದರಿಂದ ಅವರು ಇತ್ತ ಕಡೆಗೆ ಲಕ್ಷಕೊಡಬೇಕೆಂದು ನಮ್ಮ ಸವಿನಯ ವಿನಂತಿ.

ರಾಯಚೂರು ಮಹಾಸಭೆಯ ನಿರ್ಣಯಗಳೂ ಅಲ್ಲಿ ಪಾಸಾದ ನಿಯಮಗಳೂ ನಮ್ಮಲ್ಲಿ ಇದ್ದು ಬೇಕಾದವರು ಅವುಗಳನ್ನು ನಮ್ಮಿಂದ ತರಿಸಿಕೊಳ್ಳಬಹುದು.

ವಿಜಾಪುರ

ತಾ. ೧೪-೭-೧೯೩೮

ಫ. ಗು. ಹಳಕಟ್ಟಿ,
ಚೇರಮನ್
ವೀರಶೈವ ಮಹಾಸಭೆಯ
ಕಾರ್ಯಕಾರಿ ಕಮಿಟಿ.

## ಯುರೋಪ ಖಂಡದಲ್ಲಿ ವಚನ ವಾಙ್ಮಯವು.

ಫ್ರಾನ್ಸ ದೇಶದಲ್ಲಿರುವ ಒಬ್ಬ ಕನ್ನಡಿಗರು ಶ್ರೀಮಾನ್ ಹಳಕಟ್ಟಿಯ್ಯವರಿಗೆ ಈ ಕೆಳಗಿನಂತೆ ಪತ್ರ ಬರೆದಿದ್ದಾರೆ—

"ನಾನು ನಾಲ್ಕು ವರುಷಗಳಹಿಂದೆ ಹಿಂದುಸ್ಥಾನದಲ್ಲಿದ್ದಾಗ್ಗೆ ತಮ್ಮ ಅತ್ಯುತ್ಕೃಷ್ಟವಾದ ವಚನಗಳ ಸಂಗ್ರಹ ಗ್ರಂಥವು ನನ್ನ ಕೈಗೆ ಬಿತ್ತು. ಆದರೆ ಆದೊಂದು ಬೆಲೆಯುಳ್ಳ ಬೊಕ್ಕಸವಿರುತ್ತದೆಂದು ನನಗೆ ಆಗ ತಿಳಿದಿರಲಿಲ್ಲ. ನಾನು ಇಲ್ಲಿಗೆ ಬಂದಬಳಿಕ ಈ ವಚನಗಳನ್ನು ಓದಿನೋಡಲು ಅವುಗಳ ವಿಷಯದಲ್ಲಿ ನನ್ನಲ್ಲಿ ಅತ್ಯುತ್ಕಟ ಆದರವು ಉತ್ಪನ್ನವಾಯಿತು. ಮತ್ತು ಅವುಗಳಲ್ಲಿ ಅನೇಕವುಗಳನ್ನು ನಾನು ಇಂಗ್ಲಿಷದಲ್ಲಿ ಭಾಷಾಂತರಿಸಿದೆನು. ಫ್ರೆಂಚಳಾದ ನನ್ನ ಹೆಂಡತಿಯು ಫ್ರೆಂಚಭಾಷೆಯಲ್ಲಿಯೂ ಅವುಗಳನ್ನು ಭಾಷಾಂತರಿಸಿದಳು ಮತ್ತು ಫ್ರೆಂಚಿನಲ್ಲಿ ಒಂದು ವಾಙ್ಮಯಾತ್ಮಕ ಪತ್ರಿಕೆಯಾದ 'ಲೆಸ್ ಕಾವೆಏರ್ಸ ಡು ಸೂಡ್' ಎಂಬ ಪತ್ರಿಕೆಯಲ್ಲಿ ಪ್ರಸಿದ್ಧಿಸಿದೆವು. ಅದರದೊಂದು ಪ್ರತಿಯನ್ನು ನಾನು ಬೇರೆಯಾಗಿ ಕಳಿಸಿದ್ದೇನೆ. ಇವುಗಳನ್ನು ನಾನು ಪ್ರತಿವಾರ ಇಲ್ಲಿಯ ಬೇರೆ ಬೇರೆ ಪತ್ರಿಕೆಗಳಲ್ಲಿಯೂ ಪ್ರಸಿದ್ಧಿಸುತ್ತ ಇದ್ದೇನೆ. ಅವುಗಳನ್ನು ಓದಿದ ಫ್ರೆಂಚರು ಈ ವಚನಗಳು ಅಗಾಧವಾದವುಗಳೆಂದು ಅಭಿಪ್ರಾಯಪಡುತ್ತಿದ್ದಾರೆ.

ನಾನು ಒಬ್ಬ ಕನ್ನಡಿಗನಿದ್ದು ಈ ವಚನಗಳು ನಮ್ಮ ತರುಣ ಲೇಖಕರಿಗೆ ಸ್ಫೂರ್ತಿದಾಯಕವಾಗಿ ಪರಿಣಮಿಸಲೆಂದು ನಾನು ಆಶಿಸುತ್ತೇನೆ. ಅವರು ಯುರೋಪ ಖಂಡದ ಗ್ರಂಥಕಾರರನ್ನು ತಮ್ಮ ಮಾದರಿಗಾಗಿ ಇಟ್ಟುಕೊಳ್ಳದೆ ನಿಜವಾದ ಹಿಂದೀ ವಾಙ್ಮಯವಾದ ವಚನಗಳನ್ನು ಅನುಸರಿಸಿದ್ದಾದರೆ ಲೇಸವಾಗುವದೆಂದು ನಾನು ಭಾವಿಸುತ್ತೇನೆ. ಇವುಗಳ ಅರ್ಥ ಬೋಧಕತೆ ಮತ್ತು ಸೌಂದರ್ಯ ಎಷ್ಟಿರುವವೆಂದರೆ ಪೃಥ್ವಿಯಲ್ಲಿರುವ ಅತ್ಯಂತ ಸೌಂದರ್ಯಯುಕ್ತ ವಸ್ತುಗಳಲ್ಲಿ ಇವು ಗಣಿಸಲ್ಪಡದೆ ಇರಲಾರವೆಂದು ನಾನು ಭಾವಿಸಿದ್ದೇನೆ.

ತಾವು ಈ ಗ್ರಂಥದ ೨ನೇ ಭಾಗವನ್ನು ಪ್ರಸಿದ್ಧಿಸಿರುವಿರೋ ಹೇಗೆ ? ತಾವು ಪ್ರಸಿದ್ಧಿಸಿದ್ದರೆ ಅದನ್ನು ತಾವು ನನ್ನ ಕಡೆಗೆ ಕಳಿಸಬೇಕು. ಅಲ್ಲದೆ ಲಿಂಗಾಯತರ ವಿಷಯವಾಗಿ ತಾವು ಪ್ರಸಿದ್ಧಿಸಿದ ಬೇರೆ ಗ್ರಂಥಗಳಿದ್ದರೆ ಅವುಗಳನ್ನೂ ಸಹ ಕಳಿಸಬೇಕು."

## ಜಪಾನಿನಲ್ಲಿ ಬಸವಣ್ಣನವರ ಬೆಳಕು!

ಜಪಾನಿನ ಟೋಕಿಓ ರಾಜಧಾನಿಯಲ್ಲಿ ಬೆಂಗಳೂರಿನ ಶ್ರೀಮಾನ್ ಕೆ. ಎಲ್. ನಂಜಪ್ಪನವರು ವಾಣಿಜ್ಯ ಶಿಕ್ಷಣವನ್ನು ಹೊಂದುತ್ತಿದ್ದಾರೆ. ಅವರ ಕಡೆಗೆ ಬೆಂಗಳೂರಿನ ಶ್ರೀಮಾನ್ ಎಂ. ಎಸ್. ಶಿವಪ್ಪ ಸಹೋದರರು ಬಸವಣ್ಣನವರ ವಚನಗಳ ಇಂಗ್ಲಿಷ್ ಮತ್ತು ಹಿಂದಿ ಪುಸ್ತಕಗಳ ಕೆಲವು ಪ್ರತಿಗಳನ್ನು ಕಳಿಸಿದ್ದರು.

ಶ್ರೀ. ಕೆ. ಎಲ್. ನಂಜಪ್ಪನವರು ಅವುಗಳನ್ನು ಜಪಾನಿನಲ್ಲಿಯ ಕೆಲವು ಜಪಾನಿ ಮತ್ತು ಜರ್ಮನ್ ಪಂಡಿತರಿಗೆ ಅವಲೋಕನಾರ್ಥವಾಗಿ ಕೊಟ್ಟರು. ಆ ಪಂಡಿತರುಗಳು ಅವುಗಳನ್ನು ಓದಿ ಬಹು ಸಂತೋಷಪಟ್ಟಿದ್ದಲ್ಲದೆ ಹಿಂದುಸ್ಥಾನದಲ್ಲಿ ಹಿಂದಕ್ಕೆ ಇಂಥ ಸಮಾಜ ಸುಧಾರಕರು ಆಗಿಹೋದುದು ತಮಗೆ ಗೊತ್ತೇ ಇರಲಿಲ್ಲವೆಂದು ಹೇಳಿದರೆಂತಲೂ "ದಿ ವರಲ್ ಫೆಡರೇಶನ್" ಎಂಬ ಪತ್ರಿಕೆಯ ಕಳೆದ ಜೂನ್ ತಿಂಗಳ ಸಂಚಿಕೆಯಲ್ಲಿ ಬಸವಣ್ಣನವರ ತತ್ವ ಮತ್ತು ವಚನಗಳ ಸಂಬಂಧವಾದ ವಿಮರ್ಶೆಯು ಪ್ರಕಟಿಸಲ್ಪಟ್ಟಿತೆಂತಲೂ ಶ್ರೀ. ಎಂ. ಎಸ್. ಶಿವಪ್ಪನವರಿಗೆ ಜಪಾನಿನಿಂದಬಂದ ಪತ್ರದಿಂದ ಗೊತ್ತಾಗುತ್ತದೆ. ಜಪಾನಿನಲ್ಲಿಯೂ ಬಸವಣ್ಣನ ಬೆಳಕು ಬೆಳಗಲಿ.

ಓರ್ವ ಪರಿಚಿತ.

## ಜಗದ್ಗುರುಗಳ ನಿಂದೆಯ ನಿಷೇಧ.

ಕ್ಷಾತ್ರ ಜಗದ್ಗುರುಗಳು ಹಿಂದು ಜನಾಂಗದ ಉನ್ನತಿಗಾಗಿ ಮಾಡುತ್ತಿರುವ ಮಹನೀಯ ಕಾರ್ಯಗಳು ಸರ್ವಶ್ರುತವಷ್ಟೆ. ಇವರ ಅದ್ವಿತೀಯವಾದ ಬುದ್ಧಿ ವೈಭವ ಮತ್ತು ಅವಿಶ್ರಾಂತವಾದ ಪ್ರಯತ್ನಗಳಿಂದ ಸಂಕಟದಲ್ಲಿ ಸಿಕ್ಕಿಕೊಂಡಿರುವ ಹಿಂದು ಸಮಾಜದ ದುಃಖನಿವಾರಣೆಗೆ ಎಷ್ಟೋ ಸಹಾಯವಾಗುತ್ತಲಿದೆ.

ಇವರ ಇಂಥ ಮಹತ್ಕಾರ್ಯದಿಂದ ಎಲ್ಲೆಲ್ಲಿಯೂ ಇವರು ಘನ ಮನ್ನಣೆಯನ್ನು ಹೊಂದುವುದು ಸ್ವಾಭಾವಿಕವಷ್ಟೆ. ಅಸೂಯಾಪರರಿಗೆ ಇವರ ಘನತೆ ಸಹನವಾಗದೆ ಇವರನ್ನು ನಿಂದಿಸಲು ಪ್ರಾರಂಭಿಸಿದ್ದಾರೆ. ಹಿಂದು ಸಂಘಟನೆಯ ಕಾರ್ಯವನ್ನು ಇವರು ಮಾಡುತ್ತಿದ್ದುದು ಕೆಲವು ರಾಷ್ಟ್ರವೀರರಿಗೆ ಅಸಹ್ಯವಾಗಿ ತೋರಿ ಇವರನ್ನು ನಿಂದಿಸುತ್ತಿದ್ದಾರೆ. ಎಲ್ಲಾ ಹುಳುಕುಗಳೂ ಮುಚ್ಚಬೇಕಾದರೆ ಕಾಂಗ್ರೆಸ್ಸಿನಲ್ಲಿ ಸೇರಬೇಕು. ಇಲ್ಲದ ಹುಳುಕುಗಳನ್ನು ಹಚ್ಚಿಸಿಕೊಳ್ಳಬೇಕಾದರೆ ಹಿಂದು ಮಹಾಸಭೆಯಲ್ಲಿ ಸೇರಬೇಕು. ಎಂದು ಜನರು ತಿಳಿಯುವಂತೆ ಅನೇಕರ ಪ್ರಯತ್ನಗಳು ನಡೆದಿವೆ.

ಬೆಳಗಾವಿಯಲ್ಲಿ "ಆಘಾಡಿ" ಎಂಬ ಪತ್ರಿಕೆಯ ಸಂಪಾದಕರು ಜಗದ್ಗುರುಗಳ ಸಂಬಂಧವಾಗಿ ಒಂದು ಪ್ರತ್ಯೇಕ ಸಂಚಿಕೆಯನ್ನು ಹೊರಡಿಸಿ ಅವರ ಸಂಬಂಧವಾಗಿ ಅನೇಕ ನಿಂದ್ಯ ಆಕ್ಷೇಪಣೆಗಳ ಲೇಖನಗಳನ್ನು ಪ್ರಸಿದ್ಧಿಸಿದ್ದಾರೆ. ಇವರ ಈ ನಿಂದ್ಯ ಪ್ರಯತ್ನವನ್ನು ಮಹಾರಾಷ್ಟ್ರದ ಅನೇಕ ಪ್ರಸಿದ್ಧ ಸ್ಥಳಗಳಲ್ಲಿ ಘನವಾದ ಸಭೆಗಳು ಸೇರಿ ನಿಷೇಧಿಸುತ್ತಲಿವೆ. ಪ್ರಸಿದ್ಧಿಗೆ ಬರಲು ಇಂಥ ನಿಂದೆಯೂ ಒಂದು ಉಪಾಯವೆ?

---

## ಮುಸ್ಲಿಂ ಮಂತ್ರಿಮಂಡಲದಲ್ಲಿ ಹಿಂದುಗಳಿಗೆ ಅನ್ಯಾಯ.

ಮೌಲ್ವಿ ಅಬ್ದುಲ ರಶೀದ ತಾರಕಾಬಾಗೀಶರು ಸಿರಾಜಗಂಜದಲ್ಲಿ ಹಿಂದೂ ದೇವಸ್ಥಾನಗಳಲ್ಲಿ ವಿಗ್ರಹಗಳನ್ನೊಡೆದು ಹಿಂದೂ ಸಂಸ್ಕೃತಿಯ ವಿರುದ್ಧವಾಗಿ ಅಲ್ಲಲ್ಲಿ ಸಭೆ ನಡೆಸಿ ಜಾತಿವಾದ ಕಲಹವನ್ನೆಬ್ಬಿಸಿದ್ದರೆಂಬ ಆರೋಪದಿಂದ ಕೈದು ಮಾಡಲ್ಪಟ್ಟಿದ್ದರೂ, ಗೃಹಮಂತ್ರಿಗಳು ಅವರ ಮೇಲಿದ್ದ ಆರೋಪವನ್ನು ರದ್ದು ಮಾಡಿ ಅವರನ್ನು ಬಿಟ್ಟಿದ್ದಾರೆ. ಹಕ್ಕ ಮಂತ್ರಿಮಂಡಲದ ಆಡಳಿತೆಯಲ್ಲಿ ನ್ಯಾಯಾನ್ಯಾಯದ ವಿಚಾರಣೆಯಾಗುವಂತಿಲ್ಲ. ನಾಟೋರಲ್ಲಿ ಮೌಲ್ವಿಯವರು ಮಾಡಿದ ಅನ್ಯಾಯಗಳು ದೇಶಕ್ಷೋಭೆಗೆ ಕಾರಣವಾಗಿದ್ದರೂ ಮಂತ್ರಿಮಂಡಲದವರು ಆ ಕಡೆಗೆ ಲಕ್ಷ ಕೊಡದೆ ಆರೋಪಿಯನ್ನು ಬಿಟ್ಟಿರುವದರಿಂದ ಬಂಗಾಲದಲ್ಲಿ ಮುಸ್ಲಿಂ ಸ್ವಾಯತ್ತತೆಗೆ ಪ್ರಾಬಲ್ಯವು ದೊರಕಿದೆ. ಈ ಬಗ್ಗೆ ಬಂಗಾಲ ಪ್ರಾಂತಿಕ ಹಿಂದು ಸಭೆಯವರು ತಕರಾರು ಮಾಡಿದ್ದಾರೆ.

---

### ಶ್ರೀ. ಕೇಳಕರರ ನಿರಾಕರಣೆ.

ಶ್ರೀ. ನರಸಿಂಹ ಚಿಂತಾಮಣಿ ಕೇಳಕರರನ್ನು ಕೇಳದೆ ಅವರ ಒಪ್ಪಿಗೆ ಹೊಂದದೆ ಅವರನ್ನು ಮುಂಬೈ ಸರಕಾರದವರು "ಆನರರಿ ಮ್ಯಾಜಿಸ್ಟ್ರೇಟ" ರನ್ನಾಗಿ ನಿಯಮಿಸಿದ್ದಾರಂತೆ!

ಹೀಗೆ ಕಾಂಗ್ರೆಸ್ ಸರಕಾರ ಮಾಡಿದುದು ತನ್ನ ಅವಮಾನ ಮಾಡಿದಂತೆಯೇ ಸರಿಯೆಂದು ಶ್ರೀ. ಕೇಳಕರರು ಸರಕಾರದ ಕೃತಿಯನ್ನು ನಿಷೇಧಿಸಿ ತಮಗೆ ಕೊಟ್ಟ ಕೆಲಸವನ್ನು ನಿರಾಕರಿಸಿದ್ದಾರೆ.

## ದಿವಂಗತ ಶ್ರೀ. ಇ. ಎ. ಭಾಸ್ಕರರಾಯರ ಜ್ಞಾಪಕ ಸ್ಪರ್ಧೆ.

ದಿವಂಗತ ಶ್ರೀ| ಇ. ಎ. ಭಾಸ್ಕರರಾಯರ ಹೆಸರಿನಲ್ಲಿ ಕರ್ನಾಟಕ ಸಾಹಿತ್ಯ ಪರಿಷತ್ತು ಕನ್ನಡ ಸಾಹಿತ್ಯ ಪ್ರೋತ್ಸಾಹದ ಒಂದು ಏರ್ಪಾಟನ್ನು ನಡೆಸಬೇಕೆಂಬ ಉದ್ದೇಶದಿಂದ ಶ್ರೀ| ಭಾಸ್ಕರರಾಯರ ತಾಯಿ ಶ್ರೀಮತಿ ಎ. ಶೇಷಮ್ಮನವರು ಒಂದು ಜ್ಞಾಪಕ ನಿಧಿಯನ್ನು ಪರಿಷತ್ತಿಗೆ ಕೊಟ್ಟಿರುವುದು ಸರಿಯಷ್ಟೆ. ಈ ಜ್ಞಾಪಕ ನಿಧಿಯ ಸಂಬಂಧದಲ್ಲಿ ಈ ವರ್ಷ (೧೯೩೮ ರಲ್ಲಿ) ಕನ್ನಡ ಸಾಹಿತ್ಯ ವಿಚಾರ ಪ್ರಬಂಧದ ಸ್ಪರ್ಧೆಯನ್ನು ಏರ್ಪಡಿಸತಕ್ಕದ್ದೆಂದು ನಿಶ್ಚಯವಾಗಿದೆ.

### ನಿಯಮಗಳು.

೧. ಕನ್ನಡ ಸಣ್ಣ ಕಥೆಯ ಸ್ವರೂಪ ಎಂಬ ವಿಷಯವಾಗಿ ಒಂದು ಪ್ರಬಂಧವನ್ನು ಅಥವಾ ಕನ್ನಡ ಸಾಹಿತ್ಯ ವಿಚಾರಕ್ಕೆ ಸಂಬಂಧಪಟ್ಟ ಮೂರು ಸ್ವತಂತ್ರ ಪ್ರಬಂಧಗಳನ್ನು ಕಳುಹಿಸಬೇಕು.

೨. ಪ್ರಬಂಧವು ಅಥವಾ ಪ್ರಬಂಧಗಳು ಫೂಲ್ಸ್‌ಕ್ಯಾಪ್ ಆಕಾರದ ೨೦ ಪುಟಗಳ ಪರಿಮಿತಿಯಲ್ಲಿ ಇರಬೇಕು; (ಸ್ವತಂತ್ರ ಪ್ರಬಂಧಗಳು ಮೂರೂ ಸೇರಿ ಒಟ್ಟು ೨೦ ಪುಟಗಳನ್ನು ಮೀರಿರತಕ್ಕದ್ದಲ್ಲ.) ಮತ್ತು ಅದನ್ನು ಕಾಗದದ ಒಂದೇ ಪಕ್ಕದಲ್ಲಿ, ಶಾಯಿಯಲ್ಲಿ, ಸ್ಪಷ್ಟಾಕ್ಷರಗಳಲ್ಲಿ ಬರೆದಿರಬೇಕು.

೩. ೧೯೩೮ನೆಯ ಇಸವಿ ಸಪ್ಟೆಂಬರ್ ತಿಂಗಳು ೩೦ನೆಯ ತಾರೀಖಿನೊಳಗಾಗಿ ಪರಿಷತ್ತಿನ ಕಚೇರಿಗೆ ಪ್ರಬಂಧವು ತಲುಪಬೇಕು.

೪. ಅತ್ಯುತ್ತಮವೆಂದು ಪರೀಕ್ಷಾ ಸಮಿತಿ ತೀರ್ಮಾನಿಸಿದ ಪ್ರಬಂಧಕ್ಕೆ ೨೦ ರೂಪಾಯಿಗಳ ಬೆಲೆಯುಳ್ಳ ಬಹುಮಾನವನ್ನು ಕೊಡಲಾಗುವುದು.

೫. ಬಹುಮಾನ ಪಡೆದ ಪ್ರಬಂಧವನ್ನು ಪ್ರಕಟಿಸಲು ಪರಿಷತ್ತಿಗೆ ಹಕ್ಕು ಇರುತ್ತದೆ.

೬. ಬಹುಮಾನಕ್ಕೆ ಅರ್ಹವಾದ ಪ್ರಬಂಧ ಬಾರದಿದ್ದಲ್ಲಿ ಬಹುಮಾನವನ್ನು ಕೊಡದೆ ಇರುವ ಹಕ್ಕೂ ಪರಿಷತ್ತಿಗಿದೆ.

೭. ಸಾಕಷ್ಟು ಸಂಖ್ಯೆಯಲ್ಲಿ ಪ್ರಬಂಧಗಳು ಬಾರದಿದ್ದರೆ ಸ್ಪರ್ಧೆಯನ್ನು ನಿಲ್ಲಿಸಿದರೂ ನಿಲ್ಲಿಸಬಹುದು.

[ವಿಶೇಷ ಸೂಚನೆ:— ಈ ಸ್ಪರ್ಧೆಗೆ ಯಾರು ಬೇಕಾದರೂ ಲೇಖನವನ್ನು ಕಳುಹಿಸಬಹುದು. ಹಾಗೆ ಬಂದ ಲೇಖನಗಳನ್ನು ಹಿಂದಕ್ಕೆ ಕಳುಹಿಸಲಾಗುವುದಿಲ್ಲ. ಆದ್ದರಿಂದ ಸ್ಪರ್ಧಿಗಳು ತಮ್ಮ ಲೇಖನದ ಒಂದು ಪ್ರತಿಯನ್ನು ತಮ್ಮಲ್ಲಿ ಉಳಿಸಿಕೊಳ್ಳಬೇಕೆಂದು ಪ್ರಾರ್ಥನೆ.]

ಕನ್ನಡದ ಅಭಿಮಾನಿಗಳು ಪ್ರಬಂಧವನ್ನು ಬರೆದು ಕಳುಹಿಸಿ ಈ ಸ್ಪರ್ಧೆಯ ಉದ್ದೇಶವನ್ನು ಈಡೇರಿಸಿಕೊಡಬೇಕೆಂದು ಪ್ರಾರ್ಥನೆ.

ಪ್ರಬಂಧಗಳನ್ನೂ ಸ್ಪರ್ಧೆಯ ವಿಚಾರದ ಕಾಗದಗಳನ್ನೂ ಈ ಕೆಳಗಿನ ವಿಳಾಸಕ್ಕೆ ಕಳುಹಿಸತಕ್ಕದ್ದು.

ಎಸ್. ವಿ. ರಂಗಣ್ಣ, ಎಂ. ಎ.
ಗೌರವ ಕಾರ್ಯದರ್ಶಿ,
ಕರ್ನಾಟಕ ಸಾಹಿತ್ಯ ಪರಿಷತ್ತು,
ಹಾರ್ಡಿಂಜ್ ರಸ್ತೆ, ಚಾಮರಾಜ ಪೇಟೆ,
ಬೆಂಗಳೂರು ಸಿಟಿ.

೧ನೆಯ ಜುಲೈ, ೧೯೩೮.

# ಹಿಂದುಸ್ಥಾನದ ಪರರಾಷ್ಟ್ರೀಯ ಧೋರಣ

ಹಿಂದುಸ್ಥಾನವು ಜಗತ್ತಿನ ಎಲ್ಲ ಸ್ವತಂತ್ರ ರಾಷ್ಟ್ರಗಳಂತೆಯೇ ಒಂದು ಸ್ವತಂತ್ರ ರಾಷ್ಟ್ರವಾಗಿಯೇ ಇರಲು ಇಚ್ಛಿಸುತ್ತದೆಯೇ ವಿನಾ ಯಾವುದೊಂದು ಬೇರೆರಾಷ್ಟ್ರದ ಅಧೀನದಲ್ಲಿ ಅಥವಾ ಮರೆಯಲ್ಲಿದ್ದು ಜೀವಿಸುವಂತಿಲ್ಲ.

ಎಂದಮೇಲೆ ಅಂತರರಾಷ್ಟ್ರೀಯ ಪ್ರಶ್ನೆಯಲ್ಲಿ ಇದಕ್ಕೊಂದು ಸ್ವತಂತ್ರವಾದ ಸ್ಥಾನವುಂಟಷ್ಟೆ. ಪರರಾಷ್ಟ್ರಗಳಲ್ಲಿ ಹಿಂದುಸ್ಥಾನದ ಈ ಉದ್ದೇಶವನ್ನು ಸಾರಿ ಪ್ರಪಂಚದ ರಾಜಕಾರಣಕ್ಕೆ ಹಿಂದುಸ್ಥಾನದ ರಾಜಕಾರಣವನ್ನು ಸೇರಿಸಬೇಕೆಂದು ಕೀರ್ತಿಶೇಷ ವಿಠ್ಠಲಭಾಯಿ ಪಟೇಲರು ಯೋಚಿಸಿದ್ದರು. ರಾಷ್ಟ್ರಾಧಿಪತಿ ಬಾಬು ಸುಭಾಷಚಂದ್ರ ಬೋಸ ಮತ್ತು ಪಂಡಿತ ಜವಾಹರಲಾಲರು ಇದೇ ವಿಚಾರಸರಣಿಯವರಾಗಿರುವುದರಿಂದ ಆ ಪ್ರಕಾರ ಈ ವರೆಗೆ ಎಷ್ಟೋ ಪ್ರಯತ್ನಮಾಡಿದ್ದಾರೆ.

ಅಖಿಲ ಭಾರತ ರಾಷ್ಟ್ರಸಂಘದ ಪರರಾಷ್ಟ್ರ ಶಾಖೆಯ ಪ್ರಮುಖ ಕಾರ್ಯನಿರ್ವಾಹಕರಾದ ಡಾ. ರಾಮಮನೋಹರ ಲೋಹಿಯಾ ಎಂಬುವವರು ಹಿಂದುಸ್ಥಾನದ ಪರರಾಷ್ಟ್ರೀಯ ಧೋರಣವನ್ನು ಕುರಿತು ಒಂದು ಮಹತ್ವದ ಗ್ರಂಥವನ್ನು ಬರೆದು ಪ್ರಕಟಿಸಿದ್ದಾರೆ. ಅದಕ್ಕೆ ಪಂಡಿತ ಜವಾಹರಲಾಲರು ಪ್ರಸ್ತಾವನೆಯನ್ನು ಬರೆದಿದ್ದಾರೆ. ಈ ಗ್ರಂಥಕರ್ತರು ಹಿಂದುಸ್ಥಾನದ ಪರರಾಷ್ಟ್ರೀಯ ಧೋರಣವನ್ನು ಕುರಿತು ವಿವರಿಸುವುದರಲ್ಲಿ ಈ ಕೆಳಗಿನ ಕೆಲವು ಮಹತ್ವದ ಸಂಗತಿಗಳನ್ನು ಸೂಚಿಸಿದ್ದಾರೆ—

(೧) ಹಿಂದುಸ್ಥಾನವು ಒಂದು ಸ್ವತಂತ್ರ ರಾಷ್ಟ್ರವೆಂದೇ ಜಗತ್ತಿನ ರಾಜಕಾರಣದಲ್ಲಿ ಪ್ರವೇಶಿಸಲು ಅಪೇಕ್ಷಿಸುತ್ತದೆ. ಸಂಪೂರ್ಣ ಸ್ವಾತಂತ್ರ್ಯವೇ ತನ್ನ ಧ್ಯೇಯವೆಂತಲೂ ಘಟನಾ ಸಮಿತಿಯ ಮೂಲಕ ಏರ್ಪಡುವ ಅಖಿಲ ಭಾರತ ರಾಜ್ಯಾಂಗ !ಪದ್ಧತಿಯನ್ನೇ ಮಾನ್ಯಮಾಡುವುದೆಂತಲೂ ಕಾಂಗ್ರೆಸ್ ಸಾರಿರುವುದೇ ಇದಕ್ಕೆ ದೃಷ್ಟಾಂತವಾಗಿದೆ.

(೨) ಬ್ರಿಟಿಶ್ ಸಾಮ್ರಾಜ್ಯದ ಸ್ವಾಮಿತ್ವವು ಈ ದೇಶದ ಮೇಲೆ ಇರುವ ವರೆಗೂ ಬ್ರಿಟಿಶ್ ರಾಜ್ಯದ ಯುದ್ಧದಲ್ಲಿ ಹಿಂದುಸ್ಥಾನವು ಭಾಗವಹಿಸುವುದಿಲ್ಲ. ಭಾಗವಹಿಸಲು ಬಲಾತ್ಕಾರಮಾಡಿದ್ದಾದರೆ ಸವಿನಯ ಶಾಸನ ಭಂಗದಿಂದ ಅದನ್ನು ವಿರೋಧಿಸುವುದು.

(೩) ಪರರಾಷ್ಟ್ರಗಳಲ್ಲಿ ಬ್ರಿಟಿಶ್ ಸರಕಾರವು ನಡೆಸುವ ಯಾವ ರಾಜಕೀಯ ಹಿಡಿತಗಳಿಗೂ ಹಿಂದುಸ್ಥಾನವು ಸಂಬಂಧಪಟ್ಟಿರುವುದಿಲ್ಲವೆಂದು ಜಗತ್ತಿನ ರಾಷ್ಟ್ರಗಳು ತಿಳಿದಿರಲಿ.

(೪) ಶಾಂತತೆ, ಸ್ವಾತಂತ್ರ್ಯತೆ ಮತ್ತು ಲೋಕಸತ್ತಾತ್ಮಕ ಪ್ರಭುತ್ವ ಇವುಗಳಿಗೆ ಹಿಂದುಸ್ಥಾನವು ಯಾವಾಗಲೂ ಸಹಾಯ ಮಾಡುವುದು. ಆಕ್ರಮಣ ಮಾಡುವ ಯಾವ ರಾಷ್ಟ್ರದ ವಿಚಾರದಲ್ಲಾದರೂ ಅಂತರ ರಾಷ್ಟ್ರೀಯ ಧೋರಣದಂತೆ ಆರ್ಥಿಕ ಅನಾನುಕೂಲತೆಯನ್ನುಂಟುಮಾಡುವ ಯೋಜನೆಗೆ ಹಿಂದುಸ್ಥಾನವು ಸಮ್ಮತಿಯನ್ನು ಕೊಡುವುದು.

(೫) ಹಿಂದುಸ್ಥಾನದ ಈಗಿನ ಸೈನ್ಯವು ಪರಪ್ರಭುತ್ವಕ್ಕೆ ಸಂಬಂಧಪಟ್ಟಿರುವುದರಿಂದ ಅದನ್ನು ಇಲ್ಲಿ ಸ್ಥಿರಗೊಳಿಸಲು ಹಿಂದುಸ್ಥಾನವು ಸಮ್ಮತಿಸುವದಿಲ್ಲ.

(೬) ಹಿಂದುಸ್ಥಾನದ ಎಲ್ಲ ಜನರನ್ನು ಸಶಸ್ತ್ರರನ್ನಾಗಿ ಮಾಡಿ ಪ್ರೌಢರಿಗೆ ಯುದ್ಧವಿದ್ಯೆಯನ್ನು ಕಲಿಸುವುದೇ ಈ ದೇಶದ ಮೇಲೆ ಅನ್ಯರ ಆಕ್ರಮಣವಾಗದಂತೆ ಮಾಡುವ ಮುಖ್ಯೋಪಾಯವೆಂದು ಕಾಂಗ್ರೆಸ್ ಸಾರುತ್ತದೆ.

# ಬೋಸ - ಮೂರ್ತಿಗಳ ವಾದ.

ಸಂಯುಕ್ತ ರಾಜ್ಯಘಟನೆಯನ್ನು ಕಾಂಗ್ರೆಸ್ ಮಾನ್ಯಮಾಡಿದ್ದಾದರೆ ತಾವು ಅಧ್ಯಕ್ಷ ಸ್ಥಾನವನ್ನು ಬಿಟ್ಟು ಅದರ ವಿರುದ್ಧವಾಗಿ ಆಂದೋಲನವನ್ನು ಹೂಡುವೆವೆಂದು ರಾಷ್ಟ್ರಾಧಿಪತಿಗಳಾದ ಬಾಬು ಸುಭಾಷಚಂದ್ರ ಬೋಸರು ಮೊನ್ನೆ ಸಾರಿದರಷ್ಟೆ.

ಇದನ್ನು ನೋಡಿ ಶ್ರೀ. ಸತ್ಯಮೂರ್ತಿಗಳಿಗೆ ಕೋಪಬಂದಿತು. ಅಧ್ಯಕ್ಷರು ಹೀಗೆ ಹೇಳಿದುದು ಅನ್ಯಾಯ. ಕಾಂಗ್ರೆಸ್ಸಿನ ಬಹುಮತದಂತೆಯೇ ಎಲ್ಲರೂ ನಡೆಯಬೇಕಾದುದೇ ಯುಕ್ತ. ಎಂದು ಹೇಳಿ ಪಂಡಿತ ಜವಾಹರಲಾಲರ ದೃಷ್ಟಾಂತ ಕೊಟ್ಟಿದ್ದಾರೆ.

ಮೂರ್ತಿಗಳ ಈ ವಿವೇಚನೆಯನ್ನು ವೀರ ನರಿಮನ್ನರು ಖಂಡಿಸಿದ್ದಾರೆ. ಒಳ್ಳೆಯ ಸಮಯದಲ್ಲಿಯೇ ರಾಷ್ಟ್ರಾಧಿಪತಿಗಳು ಹೀಗೆ ಸಾರಿ ರಾಷ್ಟ್ರಕ್ಕೆ ಎಚ್ಚರಿಕೆ ಕೊಟ್ಟು ಘನತರವಾದ ರಾಷ್ಟ್ರಸೇವೆಯನ್ನು ಇವರು ಮಾಡಿದ್ದಾರೆಂದೇ ವೀರ ನರಿಮನ್ನರ ಹೇಳಿಕೆ.

ಸಂಯುಕ್ತ ರಾಜ್ಯಘಟನೆಯಲ್ಲಿ ಎಷ್ಟರ ಮಟ್ಟಿಗೆ ತಿದ್ದುಪಾಟಾಗುತ್ತದೋ ಅದು ಇನ್ನೂ ತಿಳಿದಿಲ್ಲ. ತಿಳಿದಿದ್ದರೂ ಅದನ್ನು ಕಾಂಗ್ರೆಸ್ ಒಪ್ಪುತ್ತದೋ ಇಲ್ಲವೋ ಎಂಬುದನ್ನು ಗಾಂಧೀಜಿಯವರ ವಿನಾ ಇನ್ನಾರಿಗೆ ಹೇಳುವುದು ಸಾಧ್ಯ? ಅಂತೂ ಈಗಲೇ ಹೀಗೆ ವಿವಾದ ನಡೆಯುವುದು ಬ್ರಿಟಿಶ್ ಮಂತ್ರಿಮಂಡಲದ ಧೋರಣ ನಿರ್ಣಯಕ್ಕೇನೋ ಎಷ್ಟೋ ಅನುಕೂಲ. ಗಾಂಧೀಜಿಯವರಿಗೆ ಕಾಂಗ್ರೆಸ್ಸಿನ ಹೊರಗೆ ಹೋಗಲು ಹೇಗೆ ವ್ಯಕ್ತಿ-ಸ್ವಾತಂತ್ರ್ಯವಿದೆಯೋ ಹಾಗೆಯೇ ಬಾಬೂಜಿಯವರಿಗೂ ಅದೇಕೆ ಇರಬಾರದು. ?

# ಇರಾಣ ದೇಶದ ಜಾಗೃತಿ.

ಏಶಿಯಾ ಖಂಡದ ಮುಸಲ್ಮಾನ್ ರಾಷ್ಟ್ರಗಳಲ್ಲಿ ಇರಾಣ ರಾಷ್ಟ್ರವೂ ಒಂದು ಪ್ರಮುಖವಾದುದು. ಇದರ ವಿಸ್ತಾರ ೬೨೮೦೦೦ ಚದುರು ಮೈಲು. ೯೦ ಲಕ್ಷ ಜನಸಂಖ್ಯೆ. ಇದರ ವಾರ್ಷಿಕ ಆದಾಯ ಸಾಧಾರಣ ೨| ಕೋಟಿ ಪೌಂಡು. ಈ ದೇಶದಲ್ಲಿ ೪೦ ಸಾವಿರ ಸೈನ್ಯವಿದೆ.

ಈ ದೇಶದ ಮುಖ್ಯ ಪಟ್ಟಣವಾದ ತೆಹರಾನ ಪಟ್ಟಣದಲ್ಲಿ ೨೧೦೦೦೦ ಜನ ಸಂಖ್ಯೆಯಿದೆ. ಈ ರಾಷ್ಟ್ರವು ಈಗ ಜಾಗೃತವಾಗಿದೆ. ಜರ್ಮನಿಯ ನೇತೃತ್ವದಲ್ಲಿ ಇದು ತನ್ನ ಎಲ್ಲ ಉನ್ನತಿಗಳಿಗಾಗಿ ಪ್ರಯತ್ನಿಸುತ್ತಲಿದೆ.

ಜರ್ಮನಿಯು ತನ್ನ ಅದ್ಭುತ ಯಾಂತ್ರಿಕ ಶಕ್ತಿ ಮತ್ತು ಆಧುನಿಕ ಸುಧಾರಣೆಗಳ ಮೂಲಕ ಇರಾಣ ರಾಷ್ಟ್ರವು ಶಕ್ತಿಶಾಲಿಯಾಗುವಂತೆ ಮಾಡುತ್ತಾ ಇದೆ. ಆ ರಾಷ್ಟ್ರದಲ್ಲಿರುವ ಕಬ್ಬಿಣದ ಕಣಿಗಳನ್ನು ಶೋಧಿಸಿ ಯಂತ್ರೋಪಕರಣಗಳಿಗಾಗಿ ಕಬ್ಬಿಣವನ್ನು ಹೆಚ್ಚಾಗಿ ಕೂಡಿಸುತ್ತಿದ್ದಾರೆ.

ಅಲ್ಲಲ್ಲಿ ವಿಮಾನ ಗೃಹಗಳು ಏರ್ಪಡುತ್ತಲಿವೆ. ತೆಹರಾನ ಪಟ್ಟಣದಲ್ಲಿ ಮೊದಲು ೨ ಸಾವಿರ ಟೆಲಿಫೋನುಗಳು ಮಾತ್ರವೇ ಇದ್ದವು. ಈಗ ೧೫ ಸಾವಿರ ಟೆಲಿಫೋನುಗಳಾಗಿವೆ. ಲೋಹಮಾರ್ಗವು ರಾಷ್ಟ್ರದಲ್ಲಿ ವಿಸ್ತಾರವಾಗಲಾರಂಭಿಸಿದೆ. ಹೀಗೆ ಎಲ್ಲ ರೀತಿಗಳಿಂದಲೂ ಜರ್ಮನಿಯು ಇರಾಣವನ್ನು ಬಲಪಡಿಸುತ್ತಿರುವುದು ಸೋವಿಯೆಟ್ ರಶಿಯಾಕ್ಕೆ ಸಂಶಯವನ್ನು ಉಂಟುಮಾಡಿದೆ.

|| ಶ್ರೀ ಜಗದ್ಗುರು ಛತ್ರಿಭಂಡಾರಿಯೇ ನಮಃ ||

# ಶ್ರೀ ಬಸವಣ್ಣನವರ ವಚನಗಳಿಗೆ ಸಂಗೀತದಂತೆ ದಾಟಿ.

(ಗೊತ್ತುಪಡಿಸಿದವರು— ಶ್ರೀ ಸಂಗಮೇಶ್ವರ ದೇವರು ಶಿಕಾರಿಪುರ ಶಿವಯೋಗಾಶ್ರಮ.)

ರಾಗ ಭೈರವಿ. ತಾಲ. ತ್ರಿತಾಲ

ಚಾಲಿ (ನೀತಉಟಿಕರತ.) ಎಂಬಂತೆ

ಅರಿಯದೆ ಜನನಿಯ ಜಠರದಲ್ಲಿ | ಬಾರದ ಭವಂಗಳಲ್ಲಿ | ಬರಸಿದೆ ತಂದೆ ||ಪ|| ಹುಟ್ಟಿದ್ದು ತಪ್ಪಾಯಿತೆ | ಎಲೆ ಲಿಂಗವೆ | ಮುನ್ನ ಹುಟ್ಟಿದುದಕ್ಕೆ | ಕೃಪೆ ಮಾಡು ||೧|| ಎಲೆ ಲಿಂಗವೆ | ಇನ್ನು ಹುಟ್ಟಿಂದರೆ | ಕೂಡಲಸಂಗಮದೇವ | ನಿಮ್ಮಾಣೆ ||೨||

ರಾಗ. ಕಾಫಿ. ತ್ರಿತಾಲ.

ಚಾಲಿ (ನಾಲಕ ಹೈರಬತೂಮೇರ.) ಎಂಬಂತೆ.

ಅಂದಣವ ನೇರಿದ ಸೊಣಗನಂತೆ. | ಕಂಡಡೆ ಬಿಡದು ಮುನ್ನಿನ ಸ್ವಭಾವವನು ||ಪ|| ಸುಡು. ಸುಡು. ಮನವಿದು | ವಿಷಯಕ್ಕೆ ಹರಿವುದು | ಮೃಡನಿಮ್ಮನನುದಿನ | ನೆನೆಯಲೀಯದು ||೧|| ಎನ್ನೊಡೆಯ ಕೂಡಲ ಸಂಗಮದೇವ । ನಿಮ್ಮ ಚರಣವ ನೆನೆವಂತೆ | ಕರುಣಿಸು । ಬೇಡುವೇ ||೨||

ರಾಗ. ದುರ್ಗಾ. ; ತಾಲ. ಜಂಪಾ.

ತಾನುಂಬ ಊಟವನು | ತನ್ನಾಶ್ರಯದ ರತಿಸುಖವನು | ಬೇರೆ ಮತ್ತೊಬ್ಬರ । ಕೈಯಿಂದ ಮಾಡಿಸಬಹುದೆ ||ಪ|| ತನ್ನ ಲಿಂಗಕ್ಕೆ ಮಾಡುವ | ನಿತ್ಯನೇಮವನು ತಾ | ಮಾಡಬೇಕಲ್ಲದೆ | ಬೇರೆ ಮತ್ತೊಬ್ಬರ ಕೈಯಿಂದ | ಮಾಡಿಸಬಹುದೇ ||೧|| ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೇ | ನಿಮ್ಮನೆತ್ತ ಬಲ್ಲರೊ | ಕೂಡಲಸಂಗಮದೇವ ||೨||

ರಾಗ. ಭೈರವ ತ್ರಿತಾಲ.

ಚಾಲಿ. (ಗುರುವೆನಿಜಮೋದವ) ಎಂಬಂತೆ.

ಚಂದ್ರೋದಯಕ್ಕೆ | ಅಂಬುಧಿ ಹೆಚ್ಚುವದಯ್ಯ । ಚಂದ್ರ ಕುಂದೆಕುಂದುವದೊ | ಚಂದ್ರಂಗೆ. ರಾಹು ಅಡ್ಡಬಂದಲ್ಲಿ | ಅಂಬುಧಿ | ಬೊಬ್ಬಿಟ್ಟತೇ ||ಪ|| ಅಂಬುಧಿಯಮುನಿಯು | ಸೇವಿಸುವಕಾಲದೊಳು | ಚಂದ್ರಮನಡ್ಡಬಂದನೆ ||೧|| ಅರಿಗಾರು ಇಲ್ಲ | ಕಟ್ಟುವಂಗೆ ಕೆಳೆ ಇಲ್ಲ| ಜಗದನೆಂಟನೀನೆ | ಕೂಡಲ ಸಂಗಮದೇವ ||೨||

ಚಾಲಿ (ಬಾಗಿಶಿರವಾ.) ಎಂಬಂತೆ.

ಬೆಳೆಯ ಭೂಮಿಯುಲೊಂದು ಪ್ರಳಯದ | ಕಸಹುಟ್ಟಿ ತಿಳಿಯ ಲೀಯದೊ | ಎಚ್ಚರಲೀಯದೋ ||ಪ|| ಎನ್ನ ಅವಗುಣವೆಂಬ ಕಸವ | ಕಿತ್ತಿ ಸಲಹಯ್ಯ ಲಿಂಗ ತಂದೆ | ಸುಳಿದೆಗೆದೊ ಬೆಳೆವೆನೋ | ಕೂಡಲಸಂಗಮದೇವ ||೧||

---

# ಯಾರು ಹೊಲೆಯರು?

ಬುದ್ಧನ ಧರ್ಮದಲ್ಲಿ ಮನಮುಟ್ಟುವ ಅನೇಕ ತತ್ವಗಳು ಕಂಡುಬರುತ್ತವೆ. ಬುದ್ಧನಿಗೆ ಉಚ್ಚನೀಚರೆಂಬ ಭೇದಗಳಿರಲಿಲ್ಲ. ತನ್ನ ಜನಾಂಗಕ್ಕೆ ಯಾವನು ನಡೆನುಡಿಗಳಲ್ಲಿ ಅಪಕೀರ್ತಿ ತರುವನೋ ಅವನೇ ಹೊಲೆಯನೆಂಬುದು ಬುದ್ಧನ ಮತ. ಸುತ್ತನಿಪತ (೧.೭) ದಲ್ಲಿ ಹೇಳಿರುವ ಒಂದು ಕಥೆಯಿಂದ ಹೊಲೆಯನಾರೆಂಬುದು ಚೆನ್ನಾಗಿ ವಿಶದವಾಗಿದೆ. ಬುದ್ಧನು ಶ್ರವಸ್ತಿಯಲ್ಲಿ ವಾಸಿಸುತ್ತಿದ್ದಾಗ ಒಂದು ದಿನ ಪ್ರಾತಃಕಾಲ ಎಂದಿನಂತೆ ಭಿಕ್ಷಕ್ಕೆ ಹೊರಟನು. ಅಷ್ಟು ಹೊತ್ತಿನಲ್ಲಿ ಭಾರದ್ವಾಜನೆಂಬ ಬ್ರಾಹ್ಮಣನು ಅಗ್ನಿ ಕಾರ್ಯವನ್ನು ಮಾಡುತ್ತಿದ್ದನು.

ಈ ಬ್ರಾಹ್ಮಣನು ಬುದ್ಧನು ಬರುತ್ತಿರುವುದನ್ನು ನೋಡಿ ಹೀಗೆಂದು ಹೇಳಿದನು. "ಓ ಶ್ರಮಣಕ ಓ ವ್ರಿಷಲ (ಹೊಲೆಯ) ಅಲ್ಲಿಯೇ ನಿಲ್ಲು." ಅದಕ್ಕೆ ಭಗವಾನ್ ಬುದ್ಧನು "ಎಲೈ ಬ್ರಾಹ್ಮಣ, ವ್ರಿಷಲನ್ಯಾರೆಂಬುದನ್ನು ಬಲ್ಲೆಯಾ ? ಏನು ಕರ್ಮಗಳಿಂದ ಒಬ್ಬನು ವ್ರಿಷಲನೆಂದು ಕರೆಸಿಕೊಳ್ಳುತ್ತಾನೆಂಬುದು ಗೊತ್ತೊ" ಎಂದು ಕೇಳಿದನು.

ಅದಕ್ಕೆ ಬ್ರಾಹ್ಮಣನು ತನಗದಾವುದೂ ಗೊತ್ತಿಲ್ಲವೆಂದೂ ಅದನ್ನು ದಯಮಾಡಿ ತಿಳಿಸಬೇಕೆಂದೂ ಬುದ್ಧನನ್ನು ಕೇಳಲು ಗೌತಮನು ಹೀಗೆಂದು ಉತ್ತರ ಕೊಟ್ಟನು—

"ಯಾವನು ಕೋಪದ್ವೇಷಗಳಿಂದ ಕೂಡಿರುವನೋ, ದುರ್ಗುಣಗಳನ್ನು ಮರೆಮಾಡಿರುವನೋ ತಪ್ಪು ತಿಳುವಳಿಕೆಯುಳ್ಳವನೋ ಮೋಸಗಾರನೋ ಅವನೇ ಹೊಲೆಯನು.

"ಪ್ರಾಣಿ ಹಿಂಸೆಮಾಡುವವನೂ, ಪ್ರಾಣಿಗಳಲ್ಲಿ ನಿರ್ದಯನೂ, ಪರರ ಸೊತ್ತನ್ನಪಹರಿಸುವವನೂ ಹೊಲೆಯನು.

"ಸಾಲವನ್ನು ತೀರಿಸದವನೂ, ತನಗಾಗಲೀ ಪರರಿಗಾಗಲೀ ಅಥವಾ ಹಣದ ಸಲುವಾಗಲೀ ಸುಳ್ಳು ಹೇಳುವವನು ಹೊಲೆಯನು.

"ಅನುಮತಿಯಿಂದಾಗಲೀ, ಇಲ್ಲದೇ ಆಗಲಿ ಪರಸ್ತ್ರೀ ಸಂಗ ಮಾಡುವವನು ಹೊಲೆಯನು.

"ಶಕ್ತಿಯಿದ್ದು ವೃದ್ಧ ಮಾತಾಪಿತೃಗಳನ್ನು ಸಲಹದಿರುವವನೂ, ತಾನೇ ಶ್ರೇಷ್ಠನೆಂದು ತಿಳಿದು ಇತರರನ್ನು ಹೀಯಾಳಿಸುವವನೂ ಹೊಲೆಯನು."

"ಕೇವಲ ಹುಟ್ಟಿನಿಂದ ಯಾರೂ ಹೊಲೆಯರಲ್ಲ. ಯಾರೂ ಬ್ರಾಹ್ಮಣರಲ್ಲ, ಆದರೆ ಬ್ರಾಹ್ಮಣ ಹೊಲೆಯರೆಂದೆನಿಸುವದು ಅವರವರ ಕಾರ್ಯದಿಂದ."

ಇಂತಹ ತತ್ವಾನುಸಾರಿಯಾದ ಬುದ್ಧದೇವನಿಗೆ ಅನೇಕ ಆದಿ ಹಿಂದುಗಳು ಶಿಷ್ಯರಿದ್ದರೆಂದರೇನಾಶ್ಚರ್ಯ ?

"ವಿಶ್ವಕರ್ನಾಟಕ."

---

—ಮಧ್ಯಪ್ರಾಂತದ ಮಂತ್ರಿಮಂಡಲದಲ್ಲಿ ಮಂತ್ರಿಗಳ ಕಾರ್ಯಭಾಗವು ಬೇರೆ ಮಾಡಲ್ಪಟ್ಟಿತು. ಮುಖ್ಯ ಮಂತ್ರಿಗಳಾಗಿದ್ದ ಡಾ. ಖರೆಯವರ ಕಡೆಗೆ ಯಾವ ಒಂದು ಶಾಖೆಯನ್ನೂ ಇಡದೆ ಎಲ್ಲಾ ಶಾಖೆಗಳ ಮೇಲ್ವಿಚಾರಣೆಯ ಕೆಲಸವನ್ನು ಕೊಟ್ಟಿತು. ಮಿ. ಶರೀಫರ ಕೆಲಸವನ್ನು ಶ್ರೀ. ಮೆಹತಾರವರಿಗೆ ವಹಿಸಿತು. ಡಾ. ಖರೆಯವರ ವಿಭಾಗವನ್ನು ಶಿಕ್ಷಣ ಮಂತ್ರಿ ಶ್ರೀ ಶುಕ್ಲರವರ ಕಡೆಗೆ ವಹಿಸಿತು.

# ಶ್ರೀಮಂತ ತೊರಗಲ್ಲ ಸರಕಾರದ ಉದಾರ ಧೋರಣ.

ಶ್ರೀಮಂತ ಸೇನಾಧುರಂಧರ ವಿಶ್ವಾಸನಿಧಿ ಶ್ರೀಮಂತ ನರಸೋಜಿರಾವ ಬಾಬಾಸಾಹೇಬ ಸಿಂಧೆ ಸೇನಾಖಾಸಖೇಲ ಸರಕಾರ ತೊರಗಲ್ಲ ಇವರು ಬಾಲ್ಯದಲ್ಲಿ ಪ್ರಾಥಮಿಕ ಶಿಕ್ಷಣವನ್ನು ಅಮೇರಿಕೆಯಲ್ಲಿ ಮುಗಿಸಿ ಒಬ್ಬ ಯುರೋಪಿಯನ್ನ ತಜ್ಞನ ಪಾಲನೆಯಲ್ಲಿ ಉಳಿದ ಶಿಕ್ಷಣವನ್ನು ಹೊಂದಿ ಬೆಂಗಳೂರು ಪಂಚಗಣಿಯಲ್ಲಿ ಕೆಲ ಕಾಲ ನಿಂತು ರಾಜ್ಯಪರಿಪಾಲನೆಯ ಕರ್ತವ್ಯದ ಬಗ್ಗೆ ಸರ್ವ ತರದ ವಿಷಯುಗಳನ್ನು ಮನನಮಾಡಿಕೊಂಡು ೧೯೩೨ ರಲ್ಲಿ ಅಧಿಕಾರ ಸೂತ್ರವನ್ನು ವಹಿಸಿಕೊಂಡರು. ಅಗಿನಿಂದ ಇವರು ತಮ್ಮ ಪ್ರಜೆಗಳ ಹಿತಚಿಂತನೆಯಲ್ಲಿ ತತ್ಪರರಾಗಿ ಅವರ ಪ್ರೇಮಾದರಗಳನ್ನು ಸಂಪಾದಿಸಿದ್ದಾರೆ.

ಇವರ ಪ್ರೇಮ ವರ್ತನವನ್ನು ಸಂಸ್ಥಾನದಲ್ಲಿಯ ಪ್ರಜೆಗಳು ಅರಿತು ಸ್ವಯಂ ಪ್ರೇರಣೆಯಿಂದ ತಮ್ಮ ಪ್ರೇಮಾದರಗಳನ್ನು ವ್ಯಕ್ತಮಾಡುವ ಕುರಿತು ತಾ. ೭-೭-೩೮ ನೆಯ ದಿವಸ ಶ್ರೀಮಂತರ ಜನ್ಮೋತ್ಸವವನ್ನು ನೆರವೇರಿಸಿದರು. ಅಲ್ಲದೇ ತದ್ವಾರ ತಮ್ಮ ರಾಜನಿಷ್ಠೆಯನ್ನು ಸಾರಿ ಅವರಿಗೆ ಅಂತಃಕರಣಪೂರ್ವಕವಾಗಿ ಮಾನಪತ್ರವನ್ನರ್ಪಿಸಿದರು.

ಈ ಶುಭ ಪ್ರಸಂಗದಲ್ಲಿ ಶ್ರೀಮಂತರು ತಮ್ಮ ಜನ್ಮತಃ ಬೆಳೆದು ಬಂದ ಪ್ರಜಾನುರಾಗದಿಂದ ರೈತರ ಈಗಿನ ಹೀನ ಸ್ಥಿತಿಯನ್ನು ಲಕ್ಷ್ಯಕ್ಕೆ ತಂದು ಸರಕಾರಕ್ಕೆ ಸಲ್ಲಬೇಕಾಗಿದ್ದ ಹಿಂದಿನ ಭೂಕಂದಾಯದಲ್ಲಿ ೫೦೦೦ ರೂ. ಗಳನ್ನು ಸೂಟು ಕೊಟ್ಟ ಬಗ್ಗೆ ಜಾಹೀರ ಮಾಡಿದರು. ಮತ್ತು ಒಕ್ಕಲತನದ ಸುಧಾರಣೆಗಾಗಿ ಬಾವಿಗಳನ್ನು ಅಗಿಸಲು ತಗಾಯಿ ಸಾಲವನ್ನು ಕೊಡುವದಾಗಿ ಅಶ್ವಾಸನ ಕೊಟ್ಟಿದ್ದಾರೆ. ಸಾಗುವಳಿ ಇಲ್ಲದೇ ಬಿದ್ದಿರುವ ಭೂಮಿಗಳನ್ನು ಪುನಃ ಸಾಗುವಳಿಮಾಡಲು ಟ್ರ್ಯಾಕ್ಟರ ಯಂತ್ರವನ್ನು ಸಂಸ್ಥಾನದ ಖರ್ಚಿನಿಂದ ತಂದು ರೈತರಿಗೆ ಭಾರವಾಗದಂತೆ ಯೋಗ್ಯ ಬಾಡಿಗೆಯಿಂದ ಅವರ ಉಪಯೋಗಕ್ಕೆ ಒದಗಿಸಿಕೊಡಲು ಒಪ್ಪಿಕೊಂಡು ಇವುಗಳ ಲಾಭ ಪಡೆಯಲು ಬಡ ರೈತರಿಗೆ ಕೇಳಿಕೊಂಡರು.

ಇವರು ಮುಂದಾದರೂ ಇದೇ ತರದ ಧೋರಣವನ್ನಿಟ್ಟು ಸಂಸ್ಥಾನ ಏಳ್ಗೆಯ ಬಗ್ಗೆ ಪ್ರಯತ್ನಮಾಡಿ ಎಲ್ಲ ಹಿಂದೀ ಸಂಸ್ಥಾನಗಳಲ್ಲಿ ತಮ್ಮ ಸಂಸ್ಥಾನವನ್ನು ಮಾದರಿಯನ್ನಾಗಿ ಮಾಡುವರೆಂದು ಪ್ರಜೆಗಳ ವಿಶ್ವಾಸವಿದೆ. ದೇವರು ಅವರಿಗೆ ಪೂರ್ಣ ಆಯುರಾರೋಗ್ಯವನ್ನು ದಯಪಾಲಿಸಲಿ.

ಓರ್ವ ರೈತ.

## ಮುಳಗುಂದದಲ್ಲಿ ಶುದ್ಧೀಕರಣ.

ಶ್ರೀಮನ್ನಿರಂಜನ ಜಗದ್ಗುರು ಮುರಘಾರಾಜೇಂದ್ರ ಮಹಾಸ್ವಾಮಿಗಳು ಚಿತ್ರದುರ್ಗ ಮಹಾ ಸಂಸ್ಥಾನ ಇವರು ಮುಳಗುಂದಕ್ಕೆ ದಯಮಾಡಿಸಿದಾಗ್ಗೆ ಮುಳಗುಂದದ ಮಠಾಧಿಕಾರಿಗಳು ಮತ್ತು ಶೆಟ್ಟರು ಸಮಸ್ತ ದೈವದವರು ಮಹಾ ಸ್ವಾಮಿಗಳಲ್ಲಿ ಹೀಗೆ ಅರಿಕೆ ಮಾಡಿಕೊಂಡರು—

ನಮ್ಮ ಊರ ವೀರಶೈವರಲ್ಲಿ ಹಂಡೆಕುರುಬರು ಅಥವಾ ಸುಂಕದವರು ಎಂಬ ಒಂದು ಒಳಪಂಗಡದವರು ಇದ್ದಾರೆ. ಇವರಿಗೆ ೩೦ ವರುಷಗಳ ಹಿಂದೆಯೇ ಲಿಂಗಧಾರಣವಾಗಿದ್ದು ಶುದ್ಧಾಚಾರಶೀಲರೂ ವೀರಶೈವ ತತ್ವದಂತೆ ನಡೆಯುವವರೂ ಆಗಿದ್ದಾರೆ. ಇವರಿಗೆ ದೀಕ್ಷೆಮಾಡಲು ಅಡ್ಡಿಯಿಲ್ಲ.

ಸುಂಕದವರಾದರೂ ಮ.ಹಾಸನ್ನಿಧಿಗೆ ತಮ್ಮನ್ನು ದೀಕ್ಷೆಯಿಂದ ಬಳಕೆಯಲ್ಲಿ ಬರುವಂತೆ ಮಾಡಿ ಉದ್ಧಾರಮಾಡಬೇಕೆಂದು ಪ್ರಾರ್ಥಿಸಿಕೊಂಡರು. ಆಗ ಮಹಾ ಸ್ವಾಮಿಗಳು ಊರ ಮಠಸ್ಥರ ಮತ್ತು ದೈವದವರ ಅಭಿಪ್ರಾಯ ಕೇಳಿ ಎಲ್ಲರ ಇಷ್ಟದಂತೆ ಶ್ರೀ ಪಟ್ಟದದೇವರ ಕಡೆಯಿಂದ ಸಾಧಾರಣ ೧೫೦ ಜನರಿಗೆ ದೀಕ್ಷೆಮಾಡಿಸಿ ಅವರಲ್ಲಿ ಎಲ್ಲರೂ ಬಳಕೆ ಮಾಡುವಂತೆ ಅಪ್ಪಣೆ ಮಾಡಿದರು.

ಈಗ ಸುಂಕದವರಲ್ಲಿ ಬಳಕೆ ಭೋಜನಮಾಡುವದು ನಡೆದಿದೆ. ಶರೀರಸಂಬಂಧ ಕೂಡಾ ವೀರಶೈವ ತತ್ವದಂತೆ ಅನ್ಯ ವೀರಶೈವ ಪಂಗಡದವರ ಸಂಗಡ ಆಗಲು ಅಡ್ಡಿಯಿಲ್ಲದಾಗಿದೆ.

ಇಲ್ಲಿಯ ಶ್ರೀ ಬಾಲಲೀಲಾ ಮಹಂತಶಿವಯೋಗಿಗಳ ಮಠದಲ್ಲಿ ಶ್ರೀಮನ್ನಿರಂಜನ ಶ್ರೀ ಮೃತ್ಯುಂಜಯ ಮಹಾ ಸ್ವಾಮಿಗಳ ಅನುಗ್ರಹದಿಂದ ಇಂಗ್ಲಿಷ್ ಶಾಲಾ ಸ್ಥಾಪನೆ ಆಗುವದಿದೆ. ಈ ಕಾರ್ಯಕ್ಕೆ ಇಲ್ಲಿಯ ವೀರಶೈವ ತರುಣ ಸಂಘದವರು ಮತ್ತು ಶ್ರೀ. ಬಳ್ಳಾರಿ ನೀಲಪ್ಪನವರೇ ಮೊದಲಾದ ಪ್ರಮುಖರು ಬಹಳ ಶ್ರಮಪಟ್ಟಿದ್ದು ಅಭಿನಂದನೀಯವಾದುದು.

ಓರ್ವ ಸಮಾಜಸೇವಕ.

# ಕಮಲಾಪುರದಲ್ಲಿ ಅತ್ಯಾಚಾರದ ನಿಷೇಧ.

ಗುಲಬರ್ಗಾ ಜಿಲ್ಲಾ ಕಮಲಾಪುರದಲ್ಲಿ ತಾ. ೯-೭-೩೮ ನೇ ದಿವಸ ಸಭೆ ಸೇರಿ ಈ ಕೆಳಗಿನ ಠರಾವು ಪಾಸಾದವು—

(೧) ಮಹಗಾವದಲ್ಲಿ ಕೆಲವು ತುಂಟ ಮುಸಲ್ಮಾನರು ಮಾಡಿದ ಅತ್ಯಾಚಾರವನ್ನು ಈ ಸಭೆಯು ಖಂಡು ತುಂಡಾಗಿ ನಿಷೇಧಿಸುತ್ತದೆ.

(೨) ಗುಲಬರ್ಗಾ ಕಲೆಕ್ಟರರೂ ಮೊಹಿತ್ಮಿನ್ ಸಾಹೇಬರೂ ಕೂಡಲೆ ಬಂದು ಶಾಂತಗೊಳಿಸಿದ್ದಕ್ಕೆ ಅವರನ್ನು ಈ ಸಭೆಯು ಅಭಿನಂದಿಸುತ್ತದೆ.

(೩) ಅತ್ಯಾಚಾರ ಮಾಡಿದವರಿಗೆ ಸರಕಾರದವರು ಯೋಗ್ಯ ಶಿಕ್ಷೆಯನ್ನು ವಿಧಿಸಬೇಕೆಂದು ಸರಕಾರಕ್ಕೆ ಈ ಸಭೆಯು ವಿಜ್ಞಾಪಿಸಿಕೊಳ್ಳುತ್ತದೆ.

(೪) ಈ ದಿನದ ಸಭೆಗೆ ಮಹಾಗಾವದ ಶ್ರೀ ಚಂದ್ರಶೇಖರಗೌಡರು ಆಗಮಿಸಿದ್ದಕ್ಕಾಗಿ ಇವರನ್ನು ಅತ್ಯಾದರದಿಂದ ಈ ಸಭೆಯು ಸ್ವಾಗತಿಸುತ್ತದೆ. ಮತ್ತು ಇವರು ದೊಂಬಿಯ ಕಾಲದಲ್ಲಿ ಬಹು ಧೈರ್ಯದಿಂದ ದೊಂಬೆಗಾರರನ್ನು ಹಿಂದಕ್ಕಟ್ಟಿದ್ದಕ್ಕೋಸ್ಕರ ಇವರಿಗೆ ಈ ಸಭೆಯು ಧರ್ಮವೀರ ಎಂಬ ಬಿರುದನ್ನು ಕೊಡುತ್ತದೆ.

ಈ ಪ್ರಕಾರ ಠರಾವು ಮಾಡಿ ಶ್ರೀ. ಚಂದ್ರಶೇಖರ ಗೌಡರಿಗೆ ಹೂವಿನ ಹಾರವನ್ನು ಅರ್ಪಿಸಿ ಗೌರವಿಸಿದ್ದಾಯಿತು.

ತುಂಟ ಮುಸಲ್ಮಾನರಿಂದಾಗುತ್ತಿರುವ ಅತ್ಯಾಚಾರಗಳನ್ನು ಹಿಂದುಗಳು ಸಂಘಟನೆಯಿಂದ ತಡೆದರೇನೇ ಅವರು ಸುಖದಿಂದ ಬಾಳುವರು.

ಪ್ರತ್ಯಕ್ಷದರ್ಶೀ.

---

## ಬ್ಯಾ. ಸಾವರಕರರು ನಿ ಷೇ ಧಿ ಸಿ ದ ರು.

ಬರುವ ದಿಲ್ಲಿ ಕೇಂದ್ರ ಶಾಸನ ಸಭೆಯಲ್ಲಿ ಮಿ. ಕಜೇಮಿ ಇವರು "ಮುಸ್ಲಿಂ ಲಗ್ನ ವಿಚ್ಛೇದ" ದ ಸಂಬಂಧವಾಗಿ ಒಂದು ಗೊತ್ತುವಳಿಯನ್ನು ತರುವವರಿದ್ದಾರೆ. ಅದರಲ್ಲಿ ಹೀಗೆ ಹೇಳಿದೆ—

"ಒಬ್ಬ ಮುಸಲ್ಮಾನ್ ಸ್ತ್ರೀಯಳು ಧರ್ಮಾಂತರವಾದ ಮಾತ್ರದಿಂದ ಅವಳ ಲಗ್ನವೂ ಬಿಡುಗಡೆಯಾಯಿತೆಂದು ತಿಳಿಯಬಾರದು."

ಇದು ಹಿಂದು ಶುದ್ಧಿಸಂಘಟನೆಗೆ ಘಾತಕವಾಗಿದೆಯೆಂದು ಬ್ಯಾ. ಸಾವರಕರರು ಪ್ರತಿಪಾದಿಸಿದ್ದಾರೆ. ಒಬ್ಬ ಹಿಂದು ಸ್ತ್ರೀಯಳನ್ನು ಬಲಾತ್ಕಾರದಿಂದ ತೆಗೆದುಕೊಂಡು ಹೋಗಿ ಒಬ್ಬ ಮುಸಲ್ಮಾನನ ಸಂಗಡ ನಿಕಾಮಾಡುತ್ತಾರೆ. ಆ ಮೇಲೆ ಅವಳು ಪೂರ್ವದ ಧರ್ಮಕ್ಕೆ ಬಂದರೂ ನಿಕಾ ಮಾತ್ರ ಇದ್ದೇ ಇರಬೇಕೋ ?

ಇದರಿಂದ ಹಿಂದು ಶುದ್ಧಿ ಮತ್ತು ಸಂಘಟನೆಗೆ ಪ್ರತಿಬಂಧವನ್ನು ಮಾಡುವುದೇ ಈ ಗೊತ್ತುವಳಿಯ ಉದ್ದೇಶವೆಂದು ಸ್ಪಷ್ಟವಾಗುತ್ತದೆ. ಆದಕಾರಣ ಈ ಅನ್ಯಾಯವಾದ ಗೊತ್ತುವಳಿಯನ್ನು ನಿಷೇಧಿಸುವುದೇ ವಿಹಿತವು.

—ಹಿಂದಕ್ಕೆ ಮಧ್ಯಪ್ರಾಂತದಲ್ಲಿ ಗವ್ಹರ್ನರರೂ ಆಗಿದ್ದ ಡಾ. ರಾಘವೇಂದ್ರರಾಯರಿಗೂ ಮಹಾತ್ಮಾ ಗಾಂಧಿಯವರಿಗೂ ಪತ್ರವ್ಯವಹಾರ ನಡೆದಿದೆ. ರಾಯರನ್ನು ಕಾಂಗ್ರೆಸ್ಸಿನಲ್ಲಿ ಸೇರಿಸಬೇಕೆಂದು ಅವರ ಅನೇಕ ಹಿತಚಿಂತಕರ ಪ್ರಯತ್ನ. ನಾನು ಕಾಂಗ್ರೆಸ್ಸಿನಲ್ಲಿ ಸೇರುವುದಾದರೆ ನಾನೇ ಮುಖ್ಯಮಂತ್ರಿಯಾಗಿ ನನ್ನ ಸಹಕಾರಿಗಳನ್ನು ನಾನೇ ಆರಿಸಿಕೊಂಡು ವರ್ಕಿಂಗ್ ಕಮಿಟಿಯ ಮತ್ತು ಪ್ರಾಂತಿಕ ಅಸೆಂಬ್ಲಿಯ ಅಭಿಪ್ರಾಯಗಳನ್ನು ಮಾತ್ರ ಮಾನ್ಯ ಮಾಡುವವನಾಗಿರುವೆನೆಂದು ರಾಯರು ಗಾಂಧೀಜಿಯವರಿಗೆ ತಿಳಿಸಿರುವರಾಗಿ ಸುದ್ದಿ.

—ಮಿರತ ಜಿಲ್ಲಾ ಪೋಲಿಸ್ ಅಧಿಕಾರಿಗಳಲ್ಲಿ ಇಬ್ಬರು ಮತ್ತು ಲಖನೌ ಪಟ್ಟಣದ ಅಬಕಾರಿ ಅಧಿಕಾರಿಗಳೊಬ್ಬರು ಲಂಚ ತಿಂದರೆಂಬ ಅಪರಾಧದಿಂದ ಸಂಯುಕ್ತ ಪ್ರಾಂತ ಸರಕಾರವು ಅವರನ್ನು ಕೆಲಸದಿಂದ ತೆಗೆಯಿತು.

— ಸರದಾರ ವಲ್ಲಭಭಾಯಿಯವರ ಹಸ್ತದಿಂದ ಇದೇ ೨೦ ನೆಯ ತಾರೀಖಿನ ದಿನ ಅಹಮದಾಬಾದಿನಲ್ಲಿ ಮದ್ಯಪಾನ ನಿರೋಧದ ಮಹಾ ಕಾರ್ಯ ಪ್ರಾರಂಭವಾಗುವುದು.

—ಸಿಂಧ ಪ್ರಾಂತದ ಈಗಿನ ಮಂತ್ರಿಮಂಡಲವು ಭಿನ್ನಾಭಿಪ್ರಾಯಗಳಿಂದ ಇಷ್ಟರಲ್ಲೇ ಬೇರೆಯಾಗುವುದಾಗಿ ಸುದ್ದಿ.

—ಹಿಂದು ಮಹಾಸಭೆಯ ಕಾರ್ಯವು ಮಧ್ಯಪ್ರಾಂತದಲ್ಲಿ ಪರಿಣಾಮಕಾರಿಯಾಗಿ ಜರುಗಬೇಕೆಂದು ಡಾ. ಮುಂಜೆಯವರು ಆ ಪ್ರಾಂತದಲ್ಲಿ ಈಗ ಸಂಚಾರ ಹೊರಟಿದ್ದಾರೆ.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರಿ. ದಾಕ್ಷಿಣ್ಯಪರನಲ್ಲ. ಲೋಕವಿರೋಧಿ. ಶರಣನಾರಿಗಂಜುವವನಲ್ಲ !
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೨೫ ನೆಯ ಜುಲೈ ೧೯೩೮. | ಸಂಚಿಕೆ ೬

ಜನಸೇವೆಯೇ ದೇವರಸೇವೆ.

## ಮುಖ್ಯಮಂತ್ರಿಗಳ ವಕ್ರಮಾರ್ಗ !

ಮಧ್ಯಪ್ರಾಂತದ ಮುಖ್ಯಮಂತ್ರಿಗಳಾಗಿದ್ದ
ಡಾ. ಖರೆಯವರು ಮುಂದಾಲೋಚನೆಯಿಲ್ಲದೆ
ಎರಡುಸಾರೆ ತಮ್ಮ ಕೆಲಸಕ್ಕೆ ಬಿಡುಗಡೆ
ಪತ್ರ ಬರೆದುಕೊಡಬೇಕಾಯಿತು !

## ಕರ್ನಾಟಕದ ಪಿತಾಮಹರು ಕಣ್ಮರೆಯಾದರು !

ಕರ್ನಾಟಕದ ಪಿತಾಮಹರಾಗಿದ್ದ ಡಾ. ಸರ್. ಕೆ. ಪಿ. ಪುಟ್ಟಣ್ಣಶೆಟ್ಟರು
ತಾ. ೨೩-೭-೩೮ ನೆಯ ಸಾಯಂಕಾಲ ಬೆಂಗಳೂರಲ್ಲಿ
ತಮ್ಮ ೮೨ ನೆಯ ವಯಸ್ಸಿನಲ್ಲಿ ಶಿವೈಕ್ಯರಾದರು.

## ಮುಸಲ್ಮಾನ್ ಪುಂಡನ ಭಯಂಕರ ಅತ್ಯಾಚಾರ!

ಅಹಮದಾಬಾದಿನ ಹಿಂದು ಮಹಾಸಭೆಯ ಕಾರ್ಯದರ್ಶಿಗಳಾದ
ಶ್ರೀ. ಗಂಗಾರಾಮಜಿಯವರನ್ನು ಬಿಸ್ಮಿಲ್ಲಾಖಾನ ಎಂಬ
ಪುಂಡನು ಇರಿದು ಗಾಯಗೊಳಿಸಿದನು.

ದೇವರೇ



# ಶರಣ ಸಂದೇಶ

# THE SHARANA SANDESHA.




## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ-ಸೋಮವಾರ ತಾರೀಖು ೨೫ ನೆಯ ಜುಲೈ ೧೯೩೮. | ಸಂಚಿಕೆ ೪೬


— ಮಹಾತ್ಮಾ ಗಾಂಧಿಯವರು ಮಧ್ಯಪ್ರಾಂತದ ಮಂತ್ರಿ ಮಂಡಲದಲ್ಲಿ ಉಂಟಾದ ತೊಡಕನ್ನು ಬಿಡಿಸಲು ಪ್ರಯತ್ನಿಸುವುದಿಲ್ಲವಾಗಿ ತಿಳಿದಿದೆ. ಕಾಂಗ್ರೆಸ್ ವರ್ಕಿಂಗ್ ಕಮಿಟಿಯೇ ಆ ವಿಷಯವನ್ನು ನಿರ್ಣಯಿಸುವುದು,

— ರಾಷ್ಟ್ರಾಧಿಪತಿ ಸುಭಾಷಚಂದ್ರ ಬೋಸರಿಗೆ ಬರೆದ ಪತ್ರದಲ್ಲಿ ಶ್ರೀ. ಭುಲಾಭಾಯಿ ದೇಸಾಯಿಯವರು ತಾವು ಲಂಡನ್ನಿನಲ್ಲಿ ಸಂಯುಕ್ತ ಘಟನೆಯನ್ನು ಕಾಂಗ್ರೆಸ್ ಒಪ್ಪುವುದೆಂದು ಯಾರಲ್ಲಿಯೂ ಹೇಳಿಲ್ಲವಾಗಿ ತಿಳಿಸಿದ್ದಾರೆ.

— ಮದ್ರಾಸಿನ ಗೊಖಲೆ ಮಂದಿರದಲ್ಲಿ ಮದ್ರಾಸ್ ಸರಕಾರದ ಮುಖ್ಯಮಂತ್ರಿಗಳಾದ ಶ್ರೀ. ರಾಜಗೋಪಾಲಾಚಾರ್ಯರ ಭಾವಚಿತ್ರ ಅನಾವರಣ ಸಮಾರಂಭವು ಸರ್. ಎಸ್. ರಾಧಾಕೃಷ್ಣನ್ ರವರ ಹಸ್ತದಿಂದ ಜರುಗಿತು.

— ಪ್ಯಾಲಿಸ್ಟಾಯಿನ್‌ದಲ್ಲಿ ಅರಬರ ಮತ್ತು ಯಹುದಿಗಳ ಕಲಹ ವಿಕೋಪ ಸ್ಥಿತಿಗೆ ಹೋಗಿದೆ. ಅಲ್ಲಿ ದೊಂಬಿಯೇ ಎದ್ದಿದೆ. ಕಳೆದ ೧೫ ದಿನಗಳಲ್ಲಿ ೭೭ ಜನರು ಮೃತಪಟ್ಟರು. ೨೪೭ ಜನರಿಗೆ ಗಾಯಗಳಾಗಿವೆ.

— ಮ್ಯಾಂಚುಕುವೊ ಮತ್ತು ಜರ್ಮನ್‌ರಲ್ಲಿ ಒಪ್ಪಂದವಾಗಿದೆ. ಜರ್ಮನಿಯು ಮ್ಯಾಂಚುಕುವೊಕ್ಕೆ ೭|| ಕೋಟಿ ಯೆನ್ ಸಾಲಕೊಡುವುದು. ಮತ್ತು ಯಂತ್ರಸಾಮಗ್ರಿಗಳನ್ನೂ ಕೊಡುವುದು.

— ಜಪಾನ. ಮತ್ತು ರಶಿಯಾ ದೇಶಗಳಿಗೆ ಯುದ್ಧ ಪ್ರಾರಂಭವಾಗುವ ಲಕ್ಷಣಗಳು ತೋರುತ್ತಲಿವೆ.

— ಕಾಂಗ್ರೆಸ್ ಪ್ರಭುತ್ವದ ಪ್ರಥಮ ವಾರ್ಷಿಕ ಮಹೋತ್ಸವವನ್ನು ಪುಣೆಯಲ್ಲಿ ಶ್ರೀ. ಜೇಧೆ ಎಂ. ಎಲ್. ಎ. ಇವರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ ಪಕ್ಷದವರು ಸಂಭ್ರಮದಿಂದ ನೆರವೇರಿಸಿದರು.

—ಬೆಳಗಾವ ಶಹಾಪುರದಲ್ಲಿಯ ಶ್ರೀ. ಭುಜಬಲ ಲಿಂಗಪ್ಪ ಲೇಂಗಡೆ ಎಂಬ ೫೫ ವರ್ಷಗಳ ಮುದುಕರು ತಮ್ಮ ಆಪ್ತರಲ್ಲಿಯ ೧೫ ವರುಷದ ಒಬ್ಬ ಬಾಲಕಿಯನ್ನು ಎತ್ತಿಕೊಂಡು ಹೋಗಿ ಅವಳ ಮನಸ್ಸಿನ ವಿರೋಧವಾಗಿ ಮಾಂಗಲ್ಯ ಕಟ್ಟಿ ಲಗ್ನವಾದರಂತೆ!

—ಸರ್. ಕೆ. ಪಿ. ಪುಟ್ಟಣ್ಣಶೆಟ್ಟರು ಉದಾರ ಬುದ್ಧಿಯಿಂದ ಬೆಂಗಳೂರಲ್ಲಿ ಕಟ್ಟಿಸಿರುವ ವೀರಶೈವ ವಿದ್ಯಾರ್ಥಿ ನಿಲಯದ ಪ್ರಾರಂಭೋತ್ಸವವು ತಾ. ೩೦ ನೆಯ ದಿವಸ ದಿವಾನ್ ಸರ್. ಮಿರ್ಜಾರವರ ಹಸ್ತದಿಂದ ಜರುಗಿತು.

## ಮಹತ್ವದ ಸುದ್ದಿಗಳು.

—ಗದ್ವಾಲದಲ್ಲಿ ೫೫ ವರುಷ ವಯಸ್ಸಿನ ಶ್ರೀ ಜಮ್ಮಣ್ಣ ಎಂಬ ಆದಿ ಹಿಂದು ಗೃಹಸ್ಥರು ನೂಲುವ ವಿದ್ಯೆಯಲ್ಲಿ ಬಹು ನಿಪುಣರಿದ್ದಾರೆ. ಇವರು ನೂಲುವುದನ್ನು ಅನ್ಯರಿಗೆ ಕಲಿಸಿ ರಾಟಿಸಂಘದವರಿಂದ ೬೦ ರೂ. ದಲ್ಲಾಲಿ ಹೊಂದಿದ್ದಾರೆ.

— ಗ್ರೀಸ ದೇಶದಲ್ಲಿ ಭೂಕಂಪನದಿಂದ ಬಹಳ ಅನರ್ಥ ಸಂಭವಿಸಿದೆ.

—ದಿಲ್ಲಿ ಪ್ರಾಂತಿಕ ಕಾಂಗ್ರೆಸ್ ಕಮಿಟಿ ಅಧ್ಯಕ್ಷರೇ ಮೊದಲಾದ ೭೦ ಜನ ಕಾಂಗ್ರೆಸ್ ಕೆಲಸಗಾರರನ್ನು ಸರಕಾರದವರು ಹಿಡಿದಿದ್ದಾರೆ. ಹರತಾಳ ಮಾಡಲು ಜನರಿಗೆ ಇವರು ಒತ್ತಾಯಪಡಿಸಿದರೆಂದೇ ಇವರ ಮೇಲೆ ದೋಷಾರೋಪಣೆ. ೭೮ ಜನರಲ್ಲಿ ೧೦ ರಿಂದ ೧೫ ರೂ. ಗಳೊಳಗೆ ದಂಡ ಅಥವಾ ಒಂದು ವಾರದಿಂದ ಒಂದು ತಿಂಗಳ ವರೆಗಿನ ಶಿಕ್ಷೆ ಬೇರೆ ಬೇರೆಯವರಿಗೆ ವಿಧಿಸಲ್ಪಟ್ಟಿತು.

—ಭದ್ರಾವತಿ ಕಬ್ಬಿಣದ ಕಾರ್ಯಾಲಯದಲ್ಲಿ ಪೆಟ್ರೋಲಿಗೆ ಬೆಂಕಿ ತಗಲಿ ನಾಲ್ಕು ಜನರಿಗೆ ಅಪಾಯ ಸಂಭವಿಸಿತು. ಇಬ್ಬರು ಆಗಲೇ ಮೃತಪಟ್ಟರು. ಇಬ್ಬರ ಸ್ಥಿತಿ ಶೋಚನೀಯವಾಗಿದೆ.

# ಯಥಾರ್ಥ ಜ್ಞಾನ.

[ಯಥಾರ್ಥ— ರಚಿಸಿದವರು ಕವಿ= ರಾಮಚಂದ್ರ ಶರ್ಮ ಶಿರಶಿ ಜಿಲ್ಲಾ ಉತ್ತರಕಾನಡಾ ಕ್ರಯ ೧ ಆಣೆ]

ಇದೊಂದು ಪದ್ಯಗಳ ಚಿಕ್ಕ ಪುಸ್ತಕ. ಇದರಲ್ಲಿ ೧೫೬ ಪದ್ಯಗಳಿವೆ. ಕವಿಗಳಾದ ಶ್ರೀ. ರಾಮಚಂದ್ರ ಶರ್ಮ ಇವರು ಈ ಪದ್ಯಗಳನ್ನು ರಚಿಸಿ ಪ್ರಕಟಿಸಿದ್ದಾರೆ.

ಹಿಂದು ಸಮಾಜದಲ್ಲಿರುವ ವಿಧವೆಯರ ಅನಿರ್ವಚನೀಯ ಕಷ್ಟನಷ್ಟಗಳನ್ನು ಇದರಲ್ಲಿ ಕವಿಗಳು ಯಥಾರ್ಥವಾದ ರೀತಿಯಲ್ಲಿ ಚಿತ್ರಿಸಿ ಅಂಧಾನುಕರಣೆಗಳ ಕಣ್ಣಿಗೆ ಅಂಜನವನ್ನು ಹಾಕಿದ್ದಾರೆ. ಇದರಲ್ಲಿಯ ಕೆಲವು ಪದ್ಯಗಳನ್ನು ಈ ಕೆಳಗೆ ಕೊಟ್ಟಿದ್ದೇವೆ.

ಈ ಪುಸ್ತಕವನ್ನು ಹಿಂದುಸಮಾಜ ಸುಧಾರಕರು ಅತ್ಯಗತ್ಯವಾಗಿ ಹೆಚ್ಚು ಪ್ರಚಾರಮಾಡಿ ವಿಧವೆಯರ ಗೋಳನ್ನು ಕಡಿಮೆ ಮಾಡಲು ಪ್ರಯತ್ನಿಸಬೇಕು. ಕವಿ ಶ್ರೀರಾಮಚಂದ್ರ ಶರ್ಮರು ಇಂಥ ಆತ್ಮ್ಯಪಯುಕ್ತ ವಿಷಯವನ್ನು ಪ್ರಚಾರಗೊಳಿಸಿದ್ದಕ್ಕಾಗಿ ನಾವು ಹೃದಯಪೂರ್ವಕ ಇವರನ್ನು ಅಭಿನಂದಿಸುತ್ತೇವೆ. ಅನೇಕ ವಿಧವೆಯರು ಪರಧರ್ಮಗಳಿಗೆ ಕೂಡಾ ಹೋಗುತ್ತಿರುವ ದುರವಸ್ಥೆಯನ್ನು ನೋಡಿಯಾದರೂ ಅಂಧಾನುಕರಣೆಗಳಿಗೆ ಇನ್ನೂ ಬುದ್ಧಿ ಬರಬಾರದೆ?

ಸ್ಮೃತಿಯಾದರು ನಿಜವೆಂದನ್ನುವಿರಾ? ।
ಕೃತಕವೆ ತಾನದು ನೋಡಿ ಹರಹರಾ! ॥
ಸ್ಮೃತಿಸ್ಮೃತಿಗಳಲೇ ಭೇದವಿರುವದು।
ಮತಿಯಿಟ್ಟದ ನೋಡಲು ಕಾಣುವದು ॥೧॥

ಒಂದರಮತ ಮತ್ತೊಂದರೊಳಿಲ್ಲ ।
ಬಂಧುಗಳೇ! ಬಿಡಿ ಹೋಗಲದೆಲ್ಲ ॥
ಒಂದೇ ಸ್ಮೃತಿಯೊಳಗೊಂದಕ್ಕೊಂದು ।
ಸಂವರ್ಥವೆ ಕೂಡುವದಿಲ್ಲೆಂದೂ ॥೨॥

ಸನ್ಮತರೇ! ವಿಧವೆಯರಾ ಬಾಳು ।
ಕುನ್ನಿಯ ಬಾಳುವೆಗಿಂತಲು ಕೀಳು ॥
ಇನ್ನೇನನ್ನುವದಾ ಬಡವೆಯರು ।
ಕಣ್ಣೀರನು ಸುರಿಸುತ ಬದುಕಿಹರು ॥೩॥

ಮಾನವು ಹೆಂಗಸಿಗತಿಶಯವೆಂದು ।
'ಮಾನಿನಿ' ಯೆಂದವಳಿಗೆ ಹೆಸರೆಂದು॥
ನಾನಾಣೆಯ ಮಾಡನ್ನುವೆನೀಗ ।
ಮಾನವರೇ! ನಂಬಿರಿ ಬಹು ಬೇಗ ॥೪॥

ಮಾನಿನಿಯರಿಗಾ ಮಾನವೆ ಪ್ರಾಣ ।
ಪ್ರಾಣವು ನಿಜವಾಗಲ್ಲವು ಪ್ರಾಣ ॥
ಪ್ರಾಣಕ್ಕಿಂತಲು ಹೆಚ್ಚಾಗವರು ।
ಮಾನವನೇ ಬಲು ಪ್ರೀತಿಸುತಿಹರು ॥೫॥

ನಾನಾ ರೀತಿಯ ಕಷ್ಟವಪಟ್ಟು ।
ಪ್ರಾಣವ ಯಜ್ಞೇಶ್ವರನಿಗೆ ಕೊಟ್ಟು ॥
ಮಾನಿನಿಯರನೇಕರು ಬಾಂಧವರೇ! ।
ಮಾನವ ರಕ್ಷಿಸಿಕೊಂಡಿಹರರರೇ! ॥೬॥

ಇನಿಯನು ಸತ್ತರೆ ಮೊದಲಿನ ನಾರೀ-
ತನವದು ಹೋಯಿತೆ ಮರುಳರೆ! ಮಾರಿ? ॥
ಘನ ಮಾನಿನಿತನವೆಂದಿಗು ವನಿತಾ-
ಜನರನು ಬಿಟ್ಟೆಲ್ಲಿಗು ಹೋಗದು ತಾ ॥೭॥

ಗಂಡನು ಸತ್ತರೆ ಹೆಂಡತಿ ತನ್ನ ।
ಮಂಡೆಯ ತೆಗೆಸಲೆಬೇಕೇನಣ್ಣ ॥
ಗಂಡನ ಜೀವಾತ್ಮಕು ಹೆಂಡತಿಯಾ ।
ಮಂಡೆಗು ಸಂಬಂಧವಿದೇನಯ್ಯಾ ? ॥೮॥

ಯಾರಾದರು ಪರಪುರುಷರು ಮುಖವ ।
ದೂರಿಂದಲೆ ನೋಡಿದಕ್ಷಣ ಕೆಡುವ ॥
ನಾರೀ ಧರ್ಮವು ಕೆತ್ತುವ ನೆವದೆ ।
ಕ್ಷೌರಿಕ ತಾ ಮುಟ್ಟಿದರದು ಕೆಡದೆ? ॥೯॥

ನಾಪಿಕನೆಂದರೆ ಯೋಗೀಶ್ವರನೋ ? ।
ನಾಪಿಕನೇನಥವಾ ಸ್ಮರಹರನೋ ? ॥
ಭಾಪು ! ಸನಾತನಿಗಳ ಹೆಬ್ಬಯಿಕೆ ।
ಕಾಪಥದೊಳು ಕಾಲಿಟ್ಟಿತು ಜೋಕೆ ! ॥೧೦॥

ಮಾನಿನಿಯರ ಮಾನವ ಮುಂಡನವು ।
ಹಾನಿಯ ಮಾಡೇಬಿಡುವದು ನಿಜವು ॥
ಏನಿದು ಪುರುಷರ ಹಾಗೆಲೊ ಹರಿಯೇ! ।
ಮಾನಿನಿಯರು ಸಹ ವಪನಕೆ ಗುರಿಯೇ ? ॥೧೧॥

ಯಾವದೊ ಗ್ರಂಥದಿ ಬರೆದಿರುವಂಥ ।
ಯಾವದೊ ಕಾಲದಿ ಬಂದಿರುವಂಥ ॥
ಭಾವನೆಯೇ ಶಾಶ್ವತವೆಂತೆಂದು ।
ಭಾವಿಸಬೇಡಿರಿ ನೀವೆಂದೆಂದೂ ॥೧೨॥

ಸೊಕ್ಕಿಗೆ ಯಾರಾದರು ವಿಧವೆಯರ ।
ಫಕ್ಕನೆ ವಪನವ ಗೈಸಿದರವರ ॥
ಲೆಕ್ಕಿಸದೇ ನೀವೆಲ್ಲರು ಕೂಡಿ ।
ಧಿಕ್ಕರಿಸದೆ ಬಿಡಬೇಡಿರಿ ನೋಡಿ ॥೧೩॥

ವೈದಿಕ ಘನತತ್ವಾತ್ಮಕವಾದ ।
ವಿಧವಾವೃಂದೋದ್ಧಾರಕವಾದ ॥
ಬುಧರೇ! ಸಂಘವನೊಂದನು ಮಾಡಿ ।
ವಿಧವಾ ಜನರುದ್ಧಾರವ ಮಾಡಿ ॥೧೪॥

ನಾನಾವಿಧವಾದೌಷಧಗಳನು ।
ಕಾಣಿಸದೇ ಸೇವಿಸಿ ಗರ್ಭವನು ॥
ಹಾನಿಯ ಮಾಡುತಲಿರುವರು ಜನರೇ ! ।
ಮಾನಕೆ ಹೆದರಾಬಡವೆಯರರರೇ ! ॥೧೫॥

ಭೋಗವು ಸಿಗದಿದ್ದರೆ ಸರಿಯಾಗಿ ।
ಹೋಗುವರೈಯ್ಯೋ! ವೇಶ್ಯೆಯರಾಗಿ ॥
ಆಗ ಸನಾತನ ಧರ್ಮವು ಕೆಡದೆ ।
ಹೋಗುವದಾದರು ಹೇಗದು ಬರದೆ ? ॥೧೬॥

ನುಡಿಯೊಳು ವಿವಿಧ ವಿರಕ್ತಿಯ ಹೇಳಿ ।
ನಡೆಯೊಳು ವಿಷಯಾಸಕ್ತಿಯ ತಾಳಿ ॥
ನಡೆಯುವ ಧಾಂಭಿಕ ನಡತೆಯು ಜಗಕೆ ।
ಕೆಡಕನು ಮಾಡದೆ ಬಿಡದದು ಜೋಕೆ ! ॥೧೭॥

ತಮ್ಮ ಹಿತವ ತಾವೇ ಸಾಧಿಸದೆ ।
ಸುಮ್ಮನೆ ಪರರವಲಂಬಿಸಬಹುದೆ ?
ಹುಮ್ಮಸದಿಂದದಕ್ಕಾಗೀ ಕ್ಷಣವೇ ! ॥೧೮॥
ನಿಮ್ಮಯ ಹಿತಕಾಗೇಳಿರಿ ನೀವೇ

# ಡಾ. ಅಂಬೇಡಕರರ ಆಶ್ವಾಸನ.

ಸ್ವತಂತ್ರ ಕೂಲಿಕಾರರ ಪಕ್ಷದ ಮುಖಂಡರಾದ ಡಾ. ಅಂಬೇಡಕರ ಎಂ. ಎಲ್. ಎ. ಇವರು ಸಂಯುಕ್ತ ರಾಜ್ಯಘಟನೆಯ ಸಂಬಂಧವಾಗಿ ಒಂದು ಪ್ರಕಟನೆಯನ್ನು ಹೊರಡಿಸಿ ಅದರಲ್ಲಿ ಹೀಗೆ ಹೇಳಿದ್ದಾರೆ—



ಡಾ. ಅಂಬೇಡಕರರು.

**ಅಲ್ಪಾಧಿಕಾರಕ್ಕಾಗಿ ರಾಷ್ಟ್ರದ್ರೋಹ ಬೇಡ.**

"ಫೆಡರೇಶನ್ ಸ್ಥಾಪಿಸಲ್ಪಡಲು ವಿರೋಧಿಸುವುದು ಹಿಂದುಸ್ಥಾನದ ಪ್ರತಿಯೊಂದು ರಾಜಕೀಯ ಪಕ್ಷದ ಕರ್ತವ್ಯವೇ ಆಗಿದೆ. ಇದು ಬಹು ಬಿಕ್ಕಟ್ಟಿನ ಸಮಯವಾಗಿದೆ. ಈ ಕಾಲದಲ್ಲಿ ಎಲ್ಲರೂ ಅತ್ಯಧಿಕವಾದ ಸ್ವಾರ್ಥತ್ಯಾಗವನ್ನು ಮಾಡಲೇಬೇಕು.

ಶ್ರೀ. ಸುಭಾಷಚಂದ್ರ ಬೋಸರು ತಮ್ಮ ಹೇಳಿಕೆಯಂತೆ ನಡೆಯಲು ಸಿದ್ಧರಾದರೆ ಮತ್ತು ಕಾಂಗ್ರೆಸ್ ಬಹುಮತದಿಂದ ಸಂಯುಕ್ತ ಘಟನೆಯನ್ನು ವಿರೋಧಿಸಿದ್ದಾದರೆ ಕಾಂಗ್ರೆಸ್ಸಿಗೆ ಸ್ವತಂತ್ರ ಕೂಲಿಕಾರ ಪಕ್ಷದ ಪರವಾಗಿ ನಾನು ಆಶ್ವಾಸನವನ್ನು ಕೊಡುವದೇನೆಂದರೆ—

"ನಾವು ಕಾಂಗ್ರೆಸ್ಸಿನ ಸಂಗಡ ಈ ವಿಷಯದಲ್ಲಿ ಸಹಕರಿಸಿ ನಡೆಯುವೆವು. ಅಲ್ಪಾಧಿಕಾರಕ್ಕೋಸ್ಕರ ನಮ್ಮ ಪಕ್ಷವು ರಾಷ್ಟ್ರದ್ರೋಹವನ್ನು ಮಾಡಲು ಎಂದೂ ಸಿದ್ಧವಾಗುವುದಿಲ್ಲ."

ಈ ಸಂಯುಕ್ತ ರಾಜ್ಯಘಟನೆಯಲ್ಲಿ ಅಲ್ಪ ಸ್ವಲ್ಪ ಸುಧಾರಣೆಯಾದರೂ ಅದರಲ್ಲಿಯ ಮುಖ್ಯ ದೋಷ ನಿವಾರಣೆಯಾಗುವುದು ಶಕ್ಯವಿಲ್ಲ.

---

—ಈ ತಿಂಗಳು ೩೦ ನೆಯ ತಾರೀಖಿನ ದಿವಸ ದಿಲ್ಲಿಯಲ್ಲಿ ಮುಸ್ಲಿಂಲೀಗಿನ ಕೌನ್ಸಿಲ್ ಸಭೆ ಕೂಡುವುದು. ಆಗ ಜಿನ್ನಾ-ಕಾಂಗ್ರೆಸ್ ವಾದದ ವಿಷಯ ಚರ್ಚಿಸಲ್ಪಡುವದು.

—ಡಾ. ಅಂಬೇಡಕರರು ಡಾ. ಖರೆಯವರ ಮುಖ್ಯ ಮಂತ್ರಿತ್ವದ ಸ್ವೀಕಾರವನ್ನು ಅಭಿನಂದಿಸಿದ್ದಾರೆ.

## ಮುಸಲ್ಮಾನ' ಪುಂಡನ ಭಯಂಕರ ಅತ್ಯಾಚಾರ.

**ಹಿಂದು ಪ್ರಮುಖನನ್ನು ಹೊಡೆಯಬೇಕೆಂಬ ನಿರ್ಧಾರ.**

ಅಹಮದಾಬಾದಿನಲ್ಲಿ ಹಿಂದು ಮಹಾಸಭೆಯ ಕಾರ್ಯನಿರ್ವಾಹಕರೂ ಹಿಂದು ಮಿಶನ್ ಸಂಘದ ಕಾರ್ಯದಕ್ಷರೂ ಆದ ಶ್ರೀ. ಗಂಗಾರಾಮಜಿ ಖನ್ನಾ ಇವರು ತಾರೀಖು ೧೮-೭-೩೮ ನೆಯ ದಿವಸ ಮಧ್ಯಾನ್ಹ ಪೇಟೆಯಲ್ಲಿ ಹೋಗುತ್ತಿದ್ದಾಗ ಬಿಸ್ಮಿಲ್ಲಾ ಖಾನ ಎಂಬ ಪುಂಡ ಮುಸಲ್ಮಾನನು ಜಂಬೆಯಿಂದ ಶ್ರೀ. ಗಂಗಾರಾಮಜಿಯವರ ಹೊಟ್ಟೆಗೆ ತಿವಿದು ಅವರು ನೆಲಕ್ಕೆ ಬಿದ್ದೊಡನೆ ೫-೬ ಕಡೆ ಇರಿದು ಅವರನ್ನು ಕೊಂದೆನೆಂದು ಠಾಣೇ ಪೋಲೀಸರ ಹತ್ತಿರ ಹೋಗಿ ಅವರ ಸ್ವಾಧೀನವಾದನು.

ಈಗ ಶ್ರೀ. ಗಂಗಾರಾಮಜಿಯವರು ವೈದ್ಯಾಲಯದಲ್ಲಿದ್ದಾರೆ. ಇವರು ಗುಣಹೊಂದಬಹುದೆಂದೇ ಡಾಕ್ಟರರ ಅಭಿಪ್ರಾಯ. ಈ ಭಯಂಕರವಾದ ಅತ್ಯಾಚಾರ ಮಾಡಿದ್ದನ್ನು ಕುರಿತು ಅಪರಾಧಿಯು ಹೀಗೆ ಹೇಳಿಕೆ ಕೊಟ್ಟಿದ್ದಾನೆ—

"ಅಹಮದಾಬಾದಿನಲ್ಲಿ ಹಿಂದು ಮಹಾಸಭೆಯ ಅಧಿವೇಶನವು ನಡೆದಾಗ ನಾನು ಯಾವನಾದರೂ ಒಬ್ಬ ಹಿಂದು ಪ್ರಮುಖನನ್ನು ಹೊಡೆಯಬೇಕೆಂದೇ ನಿರ್ಧರಿಸಿದೆನು. ಶ್ರೀ. ಗಂಗಾರಾಮಜಿ ಖನ್ನಾ ಇವರ ಪ್ರಯತ್ನದಿಂದಲೇ ಇಲ್ಲಿ ಪರಿಷತ್ತು ನಡೆದದ್ದರಿಂದ ನಾನು ಇವರನ್ನು ಹೊಡೆದಿದ್ದೇನೆ."

ಅಪರಾಧಿ ಬಿಸ್ಮಿಲ್ಲಾಖಾನನ ಮನೆಯನ್ನು ಪರಿಶೋಧಿಸಲಾಗಿ ಮುಸ್ಲಿಂಲೀಗಿನ ಕಾಗದ ಪತ್ರಗಳು ದೊರೆತವು. ಬಿಸ್ಮಿಲ್ಲಾಖಾನನನ್ನು ಮುಸ್ಲಿಂಲೀಗಿನ ಸ್ವಯಂ ಸೇವಕರ ಲೆಫ್ಟನೆಂಟ್‌ನನ್ನಾಗಿ ನಿಯಮಿಸಿದ ಪತ್ರವೂ ದೊರೆತಿದೆ. ಈ ಪುಂಡನ ಮೇಲೆ ೩೦೭ ನೆಯ ನಿಯಮದಂತೆ ವ್ಯಾಜ್ಯ ನಡೆದಿದೆ.

---

## ಬೇರೆ ವ್ಹಾಯಿಸ್‌ರಾಯರೆ?

ಹಿಂದಿ ಸಂಸ್ಥಾನಿಕರನ್ನು ಫೆಡರೇಶನ್ನಿನಲ್ಲಿ ಸೇರಿಸಿಕೊಳ್ಳುವ ವಿಚಾರವಾಗಿ ವ್ಹಾಯಿಸ್‌ರಾಯ ಲಾರ್ಡ ಲಿನ್ ಲಿಥಗೋರವರ ಪ್ರಯತ್ನವು ಬ್ರಿಟಿಶ್ ಪ್ರಧಾನ ಮಂಡಲಕ್ಕೆ ಒಪ್ಪಿಗೆಯಾಗಿಲ್ಲವೆಂತಲೂ ಅದ್ದರಿಂದ ಲಾರ್ಡ ಲಿನ್ ಲಿಥಗೋರವರು ತಮ್ಮ ರಜೆ ಮುಗಿದನಂತರ ಹಿಂದುಸ್ಥಾನಕ್ಕೆ ಬರುವುದಿಲ್ಲವೆಂತಲೂ ಲಂಡನ್ನಿನಲ್ಲಿ ಸುದ್ದಿ.

ಇದು ನಿಜವಾಗಿರುವ ಪಕ್ಷದಲ್ಲಿ ಹಿಂದುಸ್ಥಾನಕ್ಕೆ ಲಾರ್ಡ ಲೋಥಿಯನ್ ಅಥವಾ ಲಾರ್ಡ ಸನ್ಯುಅಲ್ ಇಲ್ಲವೆ ಕಾನಡಾದ ಗವ್ಹರ್ನರ್ ಜನರಲ್ ಲಾರ್ಡ ಟ್ವಿಡಸ್ ಮೂರ್ ಇವರಲ್ಲಿ ಯಾರಾದರೂ ಒಬ್ಬರು ವ್ಹಾಯಿಸ್‌ರಾಯರಾಗಿ ಬರುವರೆಂದು ಊಹೆ.

---

—ಪಂಡಿತ ಜವಾಹರಲಾಲ ನೆಹರುರವರು ತಾ. ೨೨ ನೆಯ ದಿನ ಇಂಗ್ಲಂಡಿನಿಂದ ಫ್ರಾನ್ಸಕ್ಕೆ ಹೋದರು. ಹಿಂದಿ ಜನರು ಸಿದ್ಧಗೊಳಿಸುವ ಘಟನಾ ಸಮಿತಿಯನ್ನು ಬ್ರಿಟಿಶರು ಒಪ್ಪುವುದೇ ಕಾರಣವೆಂದು ಕೊನೆಯಲ್ಲಿ ಇಂಗ್ಲೆಂಡ್ ಮತ್ತು ಹಿಂದುಸ್ಥಾನಗಳ ಸ್ನೇಹ ಸ್ಥಿರತೆಗೆ ಮುಖ್ಯ ಕಾರಣವೆಂದು ಕೊನೆಯಲ್ಲಿ ಬ್ರಿಟಿಶ್ ಜನತೆಗೆ ತಿಳಿಸಿದರು.



ಶಾ. ಶ. ೧೮೬೦ ನೆಯ ಆಷಾಢ ಬ|| ೧೩. ಸೋಮವಾರ.

# ಟೆನನ್ಸಿ ಶಾಸನದಿಂದ ಯಾರಿಗೆ ಹಿತ?

ಮುಂಬೈ ಪ್ರಾಂತಿಕ ಅಸೆಂಬ್ಲಿಯಲ್ಲಿ ಇಷ್ಟರಲ್ಲೇ ಬರಲಿರುವ ಟೆನನ್ಸಿ ಬಿಲ್ ಯಾವ ಸ್ವರೂಪದ್ದಿರುತ್ತದೆಂಬುದನ್ನು ಮೊನ್ನೆ ಪುಣೆಯಲ್ಲಿ ಕೂಡಿದ್ದ ಕಾಂಗ್ರೆಸ್ ಪಕ್ಷದ ಅಸೆಂಬ್ಲಿ ಮೆಂಬರರು ಗೊತ್ತು ಮಾಡಿದರು, ಅದನ್ನು ನಾವು ಬೇರೆ ಕಡೆ ಕೊಟ್ಟದ್ದೇವೆ.

ಈ ವಿಚಾರವಾಗಿ ಅನೇಕರು ಈ ಮುಂಚೆ ಊಹಿಸಿ ಮಾಡಿದ್ದ ಆಕ್ಷೇಪಣೆಗಳೆಲ್ಲಾ ಅಸಂಗತವಾಗಿದ್ದವೆಂದೇ ಸ್ಪಷ್ಟವಾಯಿತು. ಈಗ ಗೊತ್ತಾದ ತತ್ವದ ಮೇರೆಗೆ ಟೆನನ್ಸಿ ಶಾಸನವು ಇಷ್ಟರಲ್ಲೇ ಏರ್ಪಡುತ್ತದೆಂಬುದರಲ್ಲಿ ಸಂದೇಹವೇ ಇಲ್ಲ. ಎಂದಮೇಲೆ ಇದರಿಂದ ಯಾರಿಗೆ ಹಿತವಾಗುವುದೆಂಬುದನ್ನು ಯೋಚಿಸುವುದು ಅಗತ್ಯವಷ್ಟೆ.

ಟೆನನ್ಸಿ ಬಿಲ್ ರೈತನ ಹಿತಾರ್ಥವಾಗಿಯೇ ಏರ್ಪಟ್ಟಿದೆಯೆಂದು ಅದರ ಹೆಸರಿನಿಂದಲೇ ಗೊತ್ತಾಗುತ್ತಿರುವಾಗ ಅದರಿಂದ ಯಾರಿಗೆ ಹಿತವಾಗುತ್ತದೆಂಬ ಪ್ರಶ್ನೆಯೇ ಅನಾವಶ್ಯಕವೆಂದೂ ರೈತನಿಗೆ ಹಿತವಾಗುವುದರಿಂದ ಜಮೀನದಾರನಿಗೆ ಅಹಿತವೇ ಆಗುವುದು ಸ್ವಾಭಾವಿಕವೆಂದೂ ಅನೇಕರು ಹೇಳಬಹುದು.

ರೈತನಿಗೆ ಹಿತವಾಗಬೇಕಾದರೆ ಜಮೀನದಾರನಿಗೆ ಅಹಿತವಾಗಲೇ ಬೇಕೆಂದು ಗ್ರಹಿಸುವುದೇ ಮೊದಲು ತಪ್ಪು. ರೈತನ ಹಿತದಲ್ಲಿ ಕೇವಲ ಅತನ ಹಿತವೊಂದೇ ಇರದೆ ಜಮೀನದಾರನ ಮತ್ತು ದೇಶದ ಹಿತಗಳೂ ಅಡಕವಾಗಿರುತ್ತವೆಂದು ತಿಳಿಯಬೇಕು. ರೈತನ ಹಿತವೇ ರಾಷ್ಟ್ರದ ಹಿತವಾಗಿರುವ ಕಾರಣ ಟೆನನ್ಸಿ ಶಾಸನವು ಯಾವುದೊಂದು ವರ್ಗಕ್ಕೇನೇ ಸಂಬಂಧಿಸಿರದೆ ಅದು ವ್ಯಾಪಕಾರ್ಥದಲ್ಲಿ ಪ್ರಾಂತದ ಎಲ್ಲ ಜನರಿಗೂ ಸಂಬಂಧಿಸಿದ್ದೇ ಆಗಿದೆ. ಅಂತೆಯೇ ಈ ವಿಷಯವನ್ನು ದೇಶ ಹಿತೈಷಿಗಳೆಲ್ಲರೂ ನಿಷ್ಪಕ್ಷಪಾತ ದೃಷ್ಟಿಯಿಂದ ಯೋಚಿಸುವುದು ಅಗತ್ಯವು.

## ಆಕ್ಷೇಪಣೆಗಳು.

ರೈತನ ಕಡೆಗೇನೇ ಜಮೀನದಾರನು ತನ್ನ ಹೊಲಗಳನ್ನು ಕೊಟ್ಟುಬಿಡಬೇಕಾಗುವುದರಿಂದ ಅದರ ಮೇಲೆ ತನ್ನ ಸ್ವಾಮಿತ್ವವೇ ಹೋದಂತಾಗುತ್ತದೆಂಬುದೊಂದು ದೊಡ್ಡ ಆಕ್ಷೇಪಣೆ. ಈ ಶಾಸನದಲ್ಲಿ ಅಂಥ ಅವಕಾಶವನ್ನು ಇಟ್ಟಿಲ್ಲ. ರೈತನು ಲಾವಣಿಯನ್ನು ಸರಿಯಾಗಿ ಕೊಡದಿದ್ದರೆ, ಅಥವಾ ಭೂಮಿಯನ್ನು ಕೆಡಿಸಿದರೆ ಇಲ್ಲವೆ ಜಮೀನದಾರನು ತಾನೇ ವ್ಯವಸಾಯ ಸಾಗಿಸುತ್ತೇನೆಂದರೆ ಆಗ ರೈತನು ಜಮೀನದಾರನಿಗೆ ಜಮೀನನ್ನು ಬಿಟ್ಟುಕೊಡಬೇಕಾಗುವುದು. ಎಂದಮೇಲೆ ಭೂಮಿಯ ಮೇಲಿನ ಸ್ವಾಮಿತ್ವವು ಹೇಗೆ ಹೋಗುವುದು?

ಕಂದಾಯದ ಮೇಲಿಂದ ಲಾವಣಿಯನ್ನು ರೈತನು ಜಮೀನದಾರನಿಗೆ ಇಷ್ಟೇ ಕೊಡಬೇಕೆಂದು ಈ ಶಾಸನದಲ್ಲೇನೂ ನಿರ್ಬಂಧಗೊಳಿಸಿಲ್ಲ. ರೈತ ಮತ್ತು ಜಮೀನದಾರರು ಈಗ ಹೇಗೆ ಪರಸ್ಪರ ಒಪ್ಪಿಗೆಯಿಂದ ಲಾವಣಿ ಗೊತ್ತುಮಾಡಿಕೊಳ್ಳುತ್ತಿದ್ದಾರೆಯೋ ಹಾಗೆಯೇ ಇನ್ನುಮೇಲೂ ಮಾಡಿಕೊಳ್ಳಬಹುದು. ಎಂದಮೇಲೆ ಜಮೀನದಾರನಿಗೆ ನಷ್ಟವೇನಿದೆ?

ರೈತನು ಕಷ್ಟಪಟ್ಟು ಒಂದು ವರುಷ ಹೆಚ್ಚಾಗಿ ಬೆಳೆದರೆ ಮರುವರುಷ ಬೇರೆಯವರಿಗೆ ಕೊಡುತ್ತೇನೆಂದು ಲಾವಣಿಯನ್ನು ಈಗಿನಂತೆ ಏರಿಸಲಿಕ್ಕೆ ಮಾತ್ರ ಬರುವುದಿಲ್ಲ. ಇದೇ ಜಮೀನದಾರನಿಗೆ ನಷ್ಟವೆಂದು ತೋರಬಹುದು. ಪರಿಣಾಮದ ಕಡೆಗೆ ಲಕ್ಷಿಸಿದರೆ ಇದು ಆತನಿಗೆ ನಷ್ಟವೇನೂ ಅಲ್ಲ.

ಏಕೆಂದರೆ, ಈ ಲಾವಣಿಯ ಪೋಟಾ ಪೋಟಿಯಿಂದಲೇ ರೈತನು ಹೆಚ್ಚು ಶ್ರಮಪಟ್ಟು ದುಡಿಯುವುದೂ ನಿಂತಿತು. ತಾನು ಈ ವರುಷ ಹೆಚ್ಚು ದುಡಿದರೆ ಮುಂದಿನ ವರುಷ ಲಾವಣಿ ಏರುತ್ತದೆ. ಅಥವಾ ಜಮೀನೇ ತನ್ನ ಕೈ ಬಿಟ್ಟು ಹೋಗುತ್ತದೆಂದು ಆತನಿಗೆ ಗೊತ್ತು.

ಇದರಿಂದ ವ್ಯವಸಾಯವೇ ತೃಪ್ತಿಕರವಾಗಿ ಸಾಗದೆ ರೈತ ಮತ್ತು ಜಮೀನದಾರ ಇಬ್ಬರೂ ನಷ್ಟಪಡಬೇಕಾಯಿತು. ತಾನು ಹೆಚ್ಚು ದುಡಿದಷ್ಟು ತನಗೆ ಹೆಚ್ಚು ಪ್ರಯೋಜನವಿದೆಯೆಂಬುದು ರೈತನಿಗೆ ಮನವರಿಕೆಯಾಗಬೇಕು. ಹಾಗಾದರೆ ಆತನು ತನ್ನ ಹೊಲವೆಂದೇ ತಿಳಿದು ದುಡಿಯುತ್ತಾನೆ. ಅದರಿಂದ ಜಮೀನದಾರನಿಗೂ ಹೆಚ್ಚಿನ ಆದಾಯ ಬರುವುದು.

## ಪ್ರಯೋಜನಗಳು.

ರೈತರ ದುಡಿತದ ಪೋಟಾ ಪೋಟಿಯ ಮೇಲೆ ಸಂಪತ್ತನ್ನು ಹೆಚ್ಚಿಸಿಕೊಳ್ಳಬೇಕೆಂಬ ಜಮೀನದಾರರಿಗೆ ಮಾತ್ರ ಇದರಿಂದ ತೊಂದರೆಯಾಗಬಹುದು. ಅವರು ಇನ್ನುಮೇಲೆ ರೈತನ ದುಡಿತಕ್ಕೆ ಸರಿಯಾದ ಪ್ರತಿಫಲವನ್ನು ಕೊಡಬೇಕಾಗುವುದು. ಇಲ್ಲವೇ ತಾವೇ ಜಮೀನಿನ ಕಡೆಗೆ ಪೂರ್ಣ ಲಕ್ಷಿಸಿ ದುಡಿಯುವ ಸಾಹಸವನ್ನಾದರೂ ಮಾಡಬೇಕಾಗುವುದು. ಇವುಗಳಲ್ಲಿ ಯಾವುದಾದರೂ ಪ್ರಯೋಜನಕಾರಿಯೇ ಸರಿ.

ಅನೇಕ ಜಮೀನದಾರರು ಈಗ ಭೂಮಿಯ ಕಡೆಗೆ ನಿರ್ಲಕ್ಷಿಸಿದಂತೆ ಇನ್ನು ನಿರ್ಲಕ್ಷಿಸುವುದು ತಪ್ಪುವುದು. 'ರೈತರು ಕೂಡಾ ತಾವು ಹೆಚ್ಚು ದುಡಿದರೆ ತಮಗೆ ಪ್ರಯೋಜನವೂ ಹೆಚ್ಚಾಗಿ ದೊರೆಯುವುದೆಂಬ ನಂಬಿಗೆಯಿಂದ ಅವರು ದುಡಿಯುವುದೂ ಹೆಚ್ಚುವುದು. ಅಂತೆಯೇ ಈ ಟೆನನ್ಸಿ ಶಾಸನವು ರೈತನಿಗೆ ಮಾತ್ರವೇ ಹಿತಕರವಾದುದೆಂದಲ್ಲ. ಇದು ಜಮೀನದಾರನಿಗೂ ದೇಶದ ಇತರ ವರ್ಗದವರಿಗೂ ಪ್ರಯೋಜನಕಾರಿಯಾದುದೇ ಇದೆ.

ಆದಕಾರಣ ಈ ಶಾಸನದ ಸದುದ್ದೇಶವನ್ನು ಲಕ್ಷಿಸಿ ಎಲ್ಲರೂ ಇದನ್ನು ಸ್ವಾಗತಿಸಬೇಕು. ರೈತರೂ ಜಮೀನದಾರರೂ ಪ್ರಾಮಾಣಿಕತನದಿಂದ ಈ ಶಾಸನದ ಪ್ರಕಾರ ನಡೆದುಕೊಳ್ಳಬೇಕು. ರೈತನ ಅಜ್ಞಾನ ಮತ್ತು ಬಡತನಗಳ ಮೂಲಕ ಜಮೀನದಾರರು ಶಾಸನಕ್ಕೆ ವಿರೋಧವಾಗದಂತೆ ಅನೇಕ ಉಪಾಯಗಳನ್ನು ಇದರಲ್ಲೂ ಮಾಡಬಹುದು.

ಅನೇಕ ರೈತರೂ ಜಮೀನದಾರರಿಗೆ ಕೈ ಕೊಡುವ ಉಪಾಯಗಳನ್ನು ಯೋಚಿಸಬಹುದು. ಹಾಗಾದರೆ ಉಭಯರಿಗೂ ಪರಿಣಾಮದಲ್ಲಿ ನಷ್ಟವೇ ಸಂಭವಿಸುವುದರಿಂದ ಅಂಥ ಪ್ರಯತ್ನಗಳಿಗೆ ಅವಕಾಶವಾಗದ ರೀತಿಯಲ್ಲಿಯೇ ಈ ಶಾಸನವು ಏರ್ಪಡುವುದೆಂದೂ ಅದರಿಂದ ಸಕಲರಿಗೂ ಹಿತವುಂಟಾಗುವುದೆಂದೂ ನಾವು ನಂಬಿದ್ದೇವೆ.

# ಹಿಂದು ಸಂಘಟನೆಗೆ
## ಪ್ರಾಣದ ಮುಡುಪು.

ಅಹಮದಾಬಾದ ಹಿಂದು ಮಹಾಸಭೆಯ ಕಾರ್ಯದಕ್ಷರಾದ ಶ್ರೀ. ಗಂಗಾರಾಮಜಿಯವರ ಮೇಲಿನ ಅತ್ಯಾಚಾರವನ್ನು ಬೇರೆ ಕಡೆ ಕೊಟ್ಟಿದ್ದೇವೆ. ಈ ಭಯಂಕರವಾದ ಅತ್ಯಾಚಾರವನ್ನು ನಡೆಸಿದ ಬಿಸ್ಮಿಲ್ಲಾ ಖಾನ ಎಂಬ ಪುಂಡನ ಹೇಳಿಕೆಯನ್ನು ನೋಡಿದರೆ ನಾವು ಕಳೆದ ಸಂಚಿಕೆಯಲ್ಲಿ ತಿಳಿಸಿದಂತೆ ಹಿಂದು ಸಂಘಟನೆಗೆ ಪ್ರಯತ್ನಿಸುವವರು ಆತ್ಮಾಹುತಿಗೆ ಸಿದ್ಧರಾಗಬೇಕಾದ ಕಾಲ ಬಂದಿದೆಯೆಂಬುದು ಸ್ಪಷ್ಟವಾಗುವುದಿಲ್ಲವೆ? ಹುತಾತ್ಮಾ ಸ್ವಾಮಿ ಶ್ರದ್ಧಾನಂದರೆ ಮೊದಲಾದ ಅನೇಕ ಹಿಂದು ಧರ್ಮ ವೀರರು ಈ ವರೆಗೂ ಆತ್ಮಾಹುತಿ ಕೊಟ್ಟಂತೆ ಇನ್ನು ಮುಂದೆಯೂ ಅನೇಕರು ಕೊಡಬೇಕಾಗಬಹುದೆಂದೇ ತೋರುವುದಿಲ್ಲವೆ?

ಪುಂಡ ಮುಸಲ್ಮಾನರು ತಮ್ಮ ಇಂಥ ನೀಚ ಕಾರ್ಯಗಳಿಗೆ ಜನರು ಅಂಜಿ ಹಿಂದು ಧರ್ಮ ರಕ್ಷಣೆಯ ಪವಿತ್ರ ಕಾರ್ಯವನ್ನು ಬಿಡುವರೆಂದು ಅವರು ಗ್ರಹಿಸಿದ್ದರೆ ಅದು ಅವರ ಭ್ರಮೆಯೇ ಸರಿ. ಶ್ರೀ. ಗಂಗಾರಾಮಜಿಯವರಂತೆ ಹಿಂದು ಸಂಘಟನೆಯ ಕಾರ್ಯ ಮಾಡಲು ಈ ಅತ್ಯಾಚಾರದಿಂದ ನೂರಾರು ಗಂಗಾರಾಮಜಿಯವರು ಅಹಮದಾಬಾದಿನಲ್ಲಿ ಮುಂದೆ ಬರುವರೆಂದೇ ನಾವು ತಿಳಿದಿದ್ದೇವೆ.

ಸ್ವರಾಜ್ಯ ಪ್ರಾಪ್ತಿಗೆ ಕಾರಾಗೃಹವಾಸದ ಸಿದ್ಧತೆ ಬೇಕಾಗಿದ್ದರೆ ಹಿಂದುಸಂಘಟನೆಯ ಕಾರ್ಯಕ್ಕೆ ಪ್ರಾಣದ ಮುಡುಪನ್ನು ಕಟ್ಟಿಡುವ ಸಿದ್ಧತೆ ಬೇಕಾಗಿದೆಯೆಂದೇ ಗೊತ್ತಾಗುವುದಿಲ್ಲವೆ?

ಹಿಂದು ಸಂಘಟನೆಯ ಮಹತ್ತರವಾದ ರಾಷ್ಟ್ರೀಯ ಕಾರ್ಯವನ್ನು ಮಾಡುವವರು ಅಲ್ಲಲ್ಲಿ ಸ್ವಲ್ಪ ಜನರಿದ್ದುದರಿಂದಲೇ ಇಂಥ ಪುಂಡರಿಗೆ ಅತ್ಯಾಚಾರ ಮಾಡುವ ಧೈರ್ಯ ಬರುತ್ತಿದೆ. ಆದಕಾರಣ ಎಲ್ಲ ಕಡೆಗೂ ಪ್ರಚಂಡವಾಗಿ ಈ ಕಾರ್ಯವನ್ನು ಪ್ರಾರಂಭಿಸುವುದು ಇಂಥ ಅತ್ಯಾಚಾರಗಳನ್ನು ತಡೆಯುವ ಒಂದು ಸಾಧನವಾಗಿಯೂ ಇದೆ.

ಗಿರಿಗೆ ಅಥವಾ ಶ್ರೀಶೈಲಕ್ಕೆ ಹಣವನ್ನು ಮುಡುಪು ಕಟ್ಟಿಡುವಂತೆ ಹಿಂದು ಸಂಘಟನೆಗಾಗಿ ಪ್ರಾಣದ ಮುಡುಪು ಕಟ್ಟಿಡುವ ನಿಜವಾದ ಹಿಂದು ಧರ್ಮವೀರರು ದಿನೆ ದಿನೆ ಹೆಚ್ಚಿ ಇಂಥ ಪುಂಡರ ಅತ್ಯಾಚಾರಗಳಿಗೆ ಆಹುತಿಯಾಗಿಯಾದರೂ ಹಿಂದು ಸಂಘಟನೆಯ ಕಾರ್ಯವು ಪ್ರಭಾವಶಾಲಿಯಾಗುವಂತೆ ಮಾಡುವರೆಂದೇ ನಾವು ನಂಬಿದ್ದೇವೆ.

# ಮುಖ್ಯ ಮಂತ್ರಿಗಳ ವಕ್ರ ಮಾರ್ಗ.

ಮಧ್ಯಪ್ರಾಂತದ ರಾಜ್ಯಭಾರವು ಕಾಂಗ್ರೆಸ್ಸಿನ ಅಧೀನವಾಗಿದ್ದರೂ ಅಲ್ಲಿಯ ರಾಜ್ಯ ಸೂತ್ರವನ್ನು ವಹಿಸಿದ ಮಂತ್ರಿಗಳಲ್ಲಿ ಮತ್ಯೈಕ್ಯ, ನಿಯಮಬದ್ಧತೆ ಮೊದಲಾದ ಆವಶ್ಯಕ ರೀತಿ ನೀತಿಗಳಿಲ್ಲದಿದ್ದುದರಿಂದ ಆಗಾಗ್ಗೆ ತೊಂದರೆ, ಅಕ್ರಮ, ಅಸಂತೋಷಗಳು ಉಂಟಾಗುತ್ತಲೇ ಬಂದಿವೆಯಷ್ಟೆ. ಅಲ್ಲಿಯ ಮುಖ್ಯ ಮಂತ್ರಿಗಳಾದ ಡಾ. ಖರೆಯವರು ಮೊನ್ನೆ ಸರದಾರ ವಲ್ಲಭಭಾಯಿ ಪಟೇಲ, ಬಾಬು ರಾಜೇಂದ್ರ ಪ್ರಸಾದ ಮೊದಲಾದ ಮುಖಂಡರು ತೋರಿಸಿದ ಸರಳ ಮಾರ್ಗವನ್ನು ಬಿಟ್ಟು ವಕ್ರ ಮಾರ್ಗವನ್ನು ಅನುಸರಿಸಿದ್ದರಿಂದ ಈ ವರೆಗಿನ ಅಲ್ಲಿಯ ಮಂತ್ರಿಮಂಡಲದಿಂದಾದ ತಪ್ಪುಗಳಲ್ಲಿ ಇದು ಹೆಚ್ಚಿನದಾಗಿಯೇ ಪರಿಣಮಿಸಿತು.

ಮುಖ್ಯ ಮಂತ್ರಿಗಳಿಗೂ ಅವರ ಕೆಲವು ಸಹಕಾರಿ ಮಂತ್ರಿಗಳಿಗೂ ಮತ್ಯೈಕ್ಯವಿಲ್ಲದೆ ವಿರೋಧವೇ ದಿನೆ ದಿನೆ ಹೆಚ್ಚುತ್ತ ಬಂದಿತು. ಆಗ ವರ್ಕಿಂಗ್ ಕಮಿಟಿಯ ಕಡೆಗೆ ಎಲ್ಲ ಸ್ಥಿತಿಗಳನ್ನೂ ತಿಳಿಸಿ ಅದರ ಅಪ್ಪಣೆಯಂತೆ ನಡೆದುಕೊಳ್ಳಬೇಕಾಗಿದ್ದುದೇ ಮುಖ್ಯಮಂತ್ರಿಗಳ ಕರ್ತವ್ಯವಾಗಿದ್ದಿತು. ಇನ್ನು ೨-೩ ದಿನಗಳಲ್ಲಿಯೇ ವರ್ಕಿಂಗ್ ಕಮಿಟಿ ಕೂಡುವುದರಿಂದ ಆ ಮುಂಚೆಯೇ ನೀವು ನಿಮ್ಮ ಕೆಲಸಕ್ಕೆ ಬಿಡುಗಡೆ ಪತ್ರ ಕಳಿಸಬೇಡಿರೆಂದೇ ಸರದಾರ ಪಟೇಲರೇ ಮೊದಲಾದ ಪ್ರಮುಖರು ಡಾ. ಖರೆಯವರಿಗೆ ಸ್ಪಷ್ಟ ತಿಳಿಸಿದರು.

ಹಾಗೆ ಸರಳ ಮಾರ್ಗದಲ್ಲಿ ಇವರು ಹೋಗದೆ ಶ್ರೀ. ದೇಶಮುಖ ಮತ್ತು ಶ್ರೀ. ಗೋಳೆ ಎಂಬ ಇಬ್ಬರು ಮಂತ್ರಿಗಳೊಂದಿಗೆ ತಮ್ಮ ಕೆಲಸಕ್ಕೆ ತ್ಯಾಗಪತ್ರವನ್ನು ಕೊಟ್ಟರು. ಮರುದಿನ ಗವ್ಹರ್ನರರು ಮಹಾಕೋಶಲದ ಮೂರು ಮಂತ್ರಿಗಳನ್ನು ತೆಗೆದುಹಾಕಿ ಡಾ. ಖರೆಯವರನ್ನೇ ಮಂತ್ರಿಮಂಡಲ ಏರ್ಪಡಿಸಲು ತಿಳಿಸಿದೊಡನೆ ಮಹಾಕೋಶಲದ ಮೊದಲಿನ ಮೂರು ಮಂತ್ರಿಗಳನ್ನು ಬಿಟ್ಟು ಶ್ರೀ. ಅಗ್ನಿಭೋಜ (ಆದಿಹಿಂದು) ಶ್ರೀ. ಪ್ಯಾರೆಲಾಲಸಿಂಗ ಎಂಬ ಇಬ್ಬರನ್ನು ಆರಿಸಿಕೊಂಡರು.

ಆಮೇಲೆ ತಾ. ೨೨ ನೆಯ ದಿನ ವರ್ಧಾದಲ್ಲಿ ರಾಷ್ಟ್ರಾಧಿಪತಿಗಳು ಮತ್ತು ಪಾರ್ಲಮೆಂಟರಿ ಉಪ ಕಮಿಟಿಯವರು ಸೂಚಿಸಿದ ಸಂಗತಿಗಳನ್ನು ಲಕ್ಷಿಸಿ ತಾ. ೨೩ ನೆಯ ದಿನ ಮತ್ತೆ ತಮ್ಮ ಹೊಸ ಮಂತ್ರಿಮಂಡಲದೊಂದಿಗೆ ತ್ಯಾಗ ಪತ್ರವನ್ನು ಗವ್ಹರ್ನರರ ಕಡೆಗೆ ಕೊಟ್ಟರು. ಮುಖ್ಯಮಂತ್ರಿಗಳು ಮೊದಲು ವಕ್ರ ಮಾರ್ಗದಲ್ಲಿ ಹೋಗದೆ ಇದ್ದಿದ್ದರೆ ಇಂಥ ಸ್ಥಿತಿಯೇ ಬರುತ್ತಿರಲಿಲ್ಲವಷ್ಟೆ.

# ಶೋಚನೀಯ ನಿಧನ.

ಕರ್ನಾಟಕದ ಪಿತಾಮಹರೂ ರಾಜಕಾರ್ಯ ಪ್ರವೀಣರೂ ವೀರಶೈವ ಸಮಾಜದ ಒಬ್ಬ ಪ್ರಮುಖರೂ ಅಭ್ಯುದಾರಿಗಳೂ ಆಗಿದ್ದ ಡಾ. ಸರ್. ಕೆ. ಪಿ. ಪುಟ್ಟಣ್ಣಶೆಟ್ಟರು ಕಳೆದ ೨೩ ನೆಯ ತಾರೀಖಿನ ಸಾಯಂಕಾಲ ತಮ್ಮ ೮೨ ನೆಯ ವರ್ಷದಲ್ಲಿ ಬೆಂಗಳೂರಲ್ಲಿ ಶಿವೈಕ್ಯರಾದರೆಂದು ತಿಳಿಸಲು ತುಂಬಾ ವಿಷಾದಿಸುತ್ತೇವೆ. ಪರಮಾತ್ಮನು ಇವರ ಆತ್ಮಕ್ಕೆ ಚಿರಶಾಂತಿಯನ್ನೀಯಲೆಂದು ಹಾರೈಸುತ್ತೇವೆ.

## ಬ್ರಿಟಿಶ್ ಸರಕಾರಕ್ಕೆ

# ಶ್ರೀ. ಸತ್ಯಮೂರ್ತಿಗಳ ಸಲಹೆ.

ಕಾಂಗ್ರೆಸ್ಸಿನ ಒಬ್ಬ ಪ್ರಮುಖ ಮುಂದಾಳುಗಳಾದ ಶ್ರೀ. ಸತ್ಯಮೂರ್ತಿಯವರು ಇಂಗ್ಲಂಡಿನ "ಮ್ಯಾಂಚೆಸ್ಟರ್ ಗಾರ್ಡಿಯನ್" ಪತ್ರಿಕೆಯಲ್ಲಿ ಒಂದು ಲೇಖನ ಬರೆದು ಫೆಡರೇಶನ್ನಿನಲ್ಲಿ ಕೆಲವು ತಿದ್ದುಪಾಟುಗಳನ್ನು ಮಾಡಬೇಕೆಂದೂ ಹಾಗಾದರೇನೇ ಅದು ಹಿಂದಿಯರಿಗೆ ಸ್ವಲ್ಪಾದರೂ ಗ್ರಾಹ್ಯವಾಗಬಹುದೆಂದೂ ತಿಳಿಸಿದ್ದಾರೆ. ಆ ತಿದ್ದುಪಾಟುಗಳಲ್ಲಿ ಈ ಕೆಳಗಿನ ಸಂಗತಿಗಳೂ ಇವೆ.—

(೧) ಫೆಡರೇಶನ್ ಅಸೆಂಬ್ಲಿಗೆ ಪ್ರತ್ಯಕ್ಷ ಚುನಾವಣೆಯನ್ನು ಇಡಬೇಕು. (೨) ಮೇಲಿನ ಶಾಸನಮಂಡಲದ ಕೈಯಲ್ಲಿರುವ ಆರ್ಥಿಕ ಸ್ವಾಮಿತ್ವವನ್ನು ತೆಗೆದುಹಾಕಬೇಕು. (೩) ಸಂಸ್ಥಾನಗಳ ಪ್ರತಿನಿಧಿಗಳೂ ಚುನಾವಣೆಯ ಮೂಲಕ ಬರುವಂತೆಯೂ ಅಲ್ಲಿ ನಾಗರಿಕ ಸ್ವಾತಂತ್ರ್ಯದ ಹಕ್ಕು ಬಾಧ್ಯತೆಗಳು ಆಚರಣೆಗೆ ಬರುವಂತೆಯೂ ಏರ್ಪಾಟವಾಗಬೇಕು. (೪) ಸಂರಕ್ಷಕ ಬಂಧನಗಳನ್ನು ಉಪಯೋಗಿಸದಿರುವ ವಿಷಯದಲ್ಲಿ ಆಶ್ವಾಸನ ಕೊಡಲ್ಪಡಬೇಕು. (೫) ಸೈನ್ಯ ಶಾಖೆಯು ಕ್ಲುಪ್ತ ಕಾಲದಲ್ಲಿ ಹಿಂದಿಮಯವಾಗಬೇಕು.

---

## ಮುಸ್ಲಿಂ ಲೀಗಿನ ವಿರೋಧ.

ಸಂಯುಕ್ತ ಪ್ರಾಂತದ ಮುಸ್ಲಿಂಲೀಗಿನ ಕಾರ್ಯಕಾರಿ ಮಂಡಲವು ನಿರ್ಣಯಿಸಿದಂತೆ ಲೀಗಿನ ಕಾರ್ಯದರ್ಶಿಗಳು ಎಲ್ಲಾ ಶಾಖಾ ಸಂಘಗಳಿಗೆ ಈ ಕೆಳಗಿನಂತೆ ತಿಳಿಸಿದ್ದಾರೆ—

"ನಮ್ಮ ಪ್ರಾಂತದ ಮುಸಲ್ಮಾನ್ ಮಂತ್ರಿಗಳನ್ನು ಕರಿ ನಿಶಾನೆ ಹಿಡಿದು ಸ್ವಾಗತಿಸಿರಿ. ಅವರ ಮೆರವಣಿಗೆ ಮತ್ತು ಇತರ ಸಮಾರಂಭಗಳ ಮೇಲೆ ಬಹಿಷ್ಕಾರ ಹಾಕಿರಿ. ಅವರು ಮುಸಲ್ಮಾನರ ಪ್ರತಿನಿಧಿಗಳಲ್ಲವೆಂದು ತೋರಿಸಿಕೊಡಿರಿ.

ಸಾರ್ವಜನಿಕ ಕಟ್ಟಡಗಳ ಮೇಲೆ ಬೇರೆ ಯಾವ ನಿಶಾನೆಯನ್ನು ಕಟ್ಟಿದರೆ ಅಲ್ಲಿ ಮುಸ್ಲಿಂಲೀಗಿನ ನಿಶಾನೆಯನ್ನೂ ಕಟ್ಟಿರಿ. ಜಮೀನದಾರ, ಕಿಸಾನ, ಮತ್ತು ಕೂಲಿಕಾರರ ಸಂಘಗಳಲ್ಲಿ ಯಾವ ಅಧಿಕಾರದ ಸ್ಥಳವನ್ನೂ ವಹಿಸಿಕೊಳ್ಳಬೇಡಿರಿ.

ಕಾಂಗ್ರೆಸ್ ಮಂತ್ರಿಮಂಡಲದ ಹೇಳಿಕೆಯಂತೆ ಆನರರಿ ಮ್ಯಾಜಿಸ್ಟ್ರೇಟ್ ಅಧಿಕಾರವನ್ನು ವಹಿಸಿಕೊಳ್ಳಬೇಡಿರಿ. ಈಗ ಸ್ವೀಕರಿಸಿದ್ದರೆ ಅದನ್ನು ಬಿಟ್ಟುಬಿಡಿರಿ. ಉಪಚುನಾವಣೆಯಲ್ಲಿ ಬೇರೆ ಪಕ್ಷಗಳ ಹುರಿಯಾಳುಗಳನ್ನು ನಿಲ್ಲಿಸಿದರೆ ನೀವೂ ಮುಸ್ಲಿಂಲೀಗಿನ ಹುರಿಯಾಳನ್ನು ನಿಲ್ಲಿಸಿರಿ."

---

— ಮುಂಬೈಯಲ್ಲಿ ಶೇವಂತಿಬಾಯಿ ಎಂಬ ೧೮ ವರುಷಗಳ ಒಬ್ಬ ತರುಣಿಯನ್ನು ಇಬ್ಬರು ಮುಸಲ್ಮಾನರು ಓಡಿಸಿಕೊಂಡು ಹೋಗುತ್ತಿದ್ದುದ್ದನ್ನು ಡಾ. ಸಾವರಕರರು ಕಂಡು ಪೋಲಿಸರಿಗೆ ತಿಳಿಸಿದರು. ಅವಳು ಒಬ್ಬ ವೇಶ್ಯಳ ಮಗಳೆಂದೂ ಅವಳನ್ನು ಯಾರಿಗೋ ಮಾರಲು ತೆಗೆದುಕೊಂಡು ಹೋಗುತ್ತಿದ್ದರೆಂದೂ ಗೊತ್ತಾಯಿತು.

— ಫೆಡರೇಶನ್ನಿಗೆ ವಿರೋಧಿಸಬೇಕೆಂಬ ಪಂಡಿತ ಸುಭಾಷಚಂದ್ರ ಬೋಸರವರ ಅಭಿಪ್ರಾಯಕ್ಕೆ ಬಂಗಾಲವು ತುಂಬಾ ಸಹಾನುಭೂತಿಯನ್ನು ತೋರಿಸಿದೆ.

# ನಿಂದೆಯು ನಿಲ್ಲುವ ಉಪಾಯ.

ಶ್ರೀ ಬಸವಾದಿ ಪ್ರಮಥರನ್ನೂ ಅವರ ತತ್ವ ಪ್ರಚಾರಕರನ್ನೂ ನಿಂದಿಸುತ್ತಿರುವವರು ವೀರಶೈವ ಧರ್ಮ ವಿಧ್ವಂಸಕರೆಂದೂ ಅವರ ನಿಂದೆಯು ನಿಲ್ಲಬೇಕಾದರೆ ಇದೊಂದೇ ಉಪಾಯವೆಂದೂ ಒಬ್ಬ ಲೇಖಕರು ಈ ಕೆಳಗಿನ ಸಂಗತಿಯನ್ನು ಬಹು ವಿಸ್ತಾರವಾಗಿ ಬರೆದಿದ್ದಾರೆ. ಅದರ ಮುಖ್ಯಾಂಶವನ್ನು ಇಲ್ಲಿ ಕೊಟ್ಟಿದೆ.

"ಗುರುವರ್ಗದವರೆಂದು ಹೇಳಿಕೊಳ್ಳುವ ಕೆಲವು ಪಾಪಿಗಳು ಬಸವಾದಿ ಪ್ರಮಥರನ್ನೂ ಅವರ ತತ್ವ ಪ್ರತಿಪಾದಿಸುವ ಅನೇಕ ದಿವ್ಯ ವಿಭೂತಿಗಳನ್ನೂ ಈಗ ಇಪ್ಪತ್ತು ವರ್ಷಗಳಿಂದ ಮನಬಂದಂತೆ ನಿಂದಿಸುತ್ತಿದ್ದಾರೆ. ಅನೇಕರು ಅನೇಕ ಸದುಪದೇಶ ಮಾಡಿದರೂ ಅವರಿಗೇನೂ ಬದ್ಧಿ ಬರಲಿಲ್ಲ.

"ದುರಿತದೊಳ್ ಅಧಿಕ ವಾವುದು? ನಿಂದೆ" ಎಂದು ನಿಜಗುಣಶಿವಯೋಗಿಗಳು ಹೇಳಿದ್ದಾರಷ್ಟೆ. ಇಂಥ ಪಾಪ ಕಾರ್ಯ ಮಾಡುವವರನ್ನು ಗುರುಗಳೆಂದು ಯಾರೂ ಮನ್ನಿಸಬಾರದು. ಅವರನ್ನು ಧರ್ಮಕಾರ್ಯಗಳಿಗೆ ಕರಿಸದೆ ಬಹಿಷ್ಕಾರ ಹಾಕಬೇಕು. ಜನ್ಮದಿಂದ ಯಾರೂ ಗುರು ಆಗುವುದಿಲ್ಲ. ಸದ್ಗುಣ ಕಾರ್ಯ ಸದಾಚಾರಗಳಿಂದಲೇ ಗುರುಗಳಾಗುತ್ತಾರೆ. ಅಂಥ ಭಕ್ತರೂ ಕೂಡಾ ಧರ್ಮಕಾರ್ಯ ಮಾಡಿಸಲು ಯೋಗ್ಯರು. ಈ ನಿಂದಕರಿಗೆ ಗುರುತ್ವವನ್ನು ನಾವು ಕೊಡುವುದರಿಂದಲೇ ಅವರು ಹೀಗೆ ಮಾಡುತ್ತಿದ್ದಾರೆ. ಅವರನ್ನು ಬಹಿಷ್ಕರಿಸಿದರೇನೇ ಅವರಿಗೆ ಬುದ್ಧಿ ಬರುತ್ತದೆ. ಈ ಚಳವಳಿಯನ್ನೇ ಪ್ರಚಂಡವಾಗಿ ಸಾಗಿಸಬೇಕು."

---

# ನಿಡಗುಂದಿ ನೀರಿನ ಕಾಮಗಾರಿ.

"ನಿಡಗುಂದಿಯಲ್ಲಿ ನೀರಿನ ತಾಪ ಎಷ್ಟೆಂಬುದು ಎಲ್ಲರಿಗೂ ಗೊತ್ತಿದ್ದ ಸಂಗತಿಯು. ಇಲ್ಲಿಯ ಜನರ ಈ ಕಷ್ಟವನ್ನು ತಪ್ಪಿಸಬೇಕೆಂದು ಪ್ರಾಂತ ಸಾಹೇಬರಾದ ಮೆ|| ಕೆ. ಆರ್. ಸಿತೂಥ ಸಾಹೇಬರು, ಬಾಗೇವಾಡಿ ಮಾಮಲೇದಾರ ಸಾಹೇಬರಾದ ಮೆ|| ಸಿಂಹಾಸನ ಸಾಹೇಬರು ಬಹಳ ಅಂತಃಕರುಣದಿಂದ ಇಲ್ಲಿ ಮೂರು ಕೆರೆ ಕಟ್ಟಿಸುವ ಕೆಲಸ ನಡೆಸಿದ್ದಾರೆ. ಸುತ್ತಲಿನ ಹಳ್ಳಿಗಳಿಂದ ೮-೯ ನೂರು ಬಡಜನರು ಬಂದು ಕೆಲಸಮಾಡಿ ತಮ್ಮ ಹೊಟ್ಟೆ ತುಂಬಿಕೊಳ್ಳುತ್ತಿದ್ದಾರೆ.

ದುಷ್ಕಾಳದ ಕಾಮಗಾರಿ ಮುಗಿಯುವ ಕಾಲ ಬಂದಿತು. ಅಷ್ಟರಲ್ಲಿ ಈ ಕೆಲಸ ಮುಗಿಯುತ್ತದೋ ಇಲ್ಲವೋ ಎಂದು ಇಲ್ಲಿಯ ಅನೇಕ ಜನರು ಕಳಕಳಿಯಿಂದ ಹೆಚ್ಚು ಕೂಲಿಕಾರರನ್ನು ಕೂಡಿಸಿ ಜಾಗ್ರತೆ ಕಾರ್ಯ ಪೂರೈಸುವಂತೆ ಪ್ರಯತ್ನಿಸುತ್ತಿದ್ದಾರೆ. ಈ ಪರೋಪಕಾರದ ಕಾರ್ಯಕ್ಕೆ ಇಲ್ಲಿಯ ಕೆಲವರು ವಿರೋಧ ಮಾಡುತ್ತಿರುವುದು ದುಃಖದ ಸಂಗತಿಯು. ಅವರು ಈಗಲಾದರೂ ಈ ಕಾರ್ಯಕ್ಕೆ ಸಹಾಯಮಾಡಿ ಪುಣ್ಯ ಪಡೆಯಬೇಕು." ಎಂದು ನಿಡಗುಂದಿಯ ಒಬ್ಬ ಲೇಖಕರು ತಿಳಿಸುತ್ತಾರೆ.

---

— ಜಾರ್ಜ ಚಕ್ರವರ್ತಿಗಳು ಈ ವಾರ ಫ್ರಾನ್ಸ್ ದೇಶಕ್ಕೆ ಹೋದರು. ಅಲ್ಲಿ ಬಹು ವೈಭವದಿಂದ ಅವರ ಸ್ವಾಗತವಾಯಿತು. ಪ್ಯಾರಿಸ ಪಟ್ಟಣದ ಮುನಸಿಪಲ್ ಕೌನ್ಸಿಲ್ಲಿಗೆ ಒಂದು ಲಕ್ಷ ಫ್ರ್ಯಾಂಕ್ ಕೊಟ್ಟು ಅಲ್ಲಿಯ ಸುಧಾರಣೆಗೆ ಉಪಯೋಗಿಸಬೇಕೆಂದು ಜಾರ್ಜ ಚಕ್ರವರ್ತಿಗಳು ತಿಳಿಸಿದರು.

## ಸಂಪಗಾಂವ

### ಶ್ರೀ. ಚರಮೂರ್ತಿ ಸ್ವಾಮಿಗಳವರ

## ಅಸ್ಪೃಶ್ಯೋದ್ಧಾರದ ಸ್ತುತ್ಯ ಕಾರ್ಯ.

ತಾ- ೧೬-೭-೩೮ ನೇ ದಿವಸ ಪತ್ರಿ ಮಠದಲ್ಲಿ ಸಾಯಂಕಾಲ ೬ ಗಂಟೆಗೆ ಶ್ರೀ ಚರಮೂರ್ತಿ ಸ್ವಾಮಿಗಳವರು ಯಾವತ್ತು ಹರಿಜನರನ್ನು ಕರೆಯಿಸಿ ಊರಲ್ಲಿಯ ಕೆಲವು ಪ್ರಮುಖ ಜನರೊಂದಿಗೆ ಸಭೆ ಕೂಡಿಸಿದ್ದರು. ಅಲ್ಲದೆ ಈ ಸಭೆಗೆ ಹರಿಜನ ಗುರುಗಳಾದ ಶ್ರೀ. ಲಕ್ಷ್ಮಯ್ಯ ಮಲ್ಲಯ್ಯ ಸೀತಿಮನಿ ಜಿಲ್ಲಾ ವಿಜಾಪುರ (ಹರಿಜನ) ಇವರೂ ಮತ್ತು ಸತತ ತಮ್ಮ ಸಮಾಜವು ಸುಧಾರಿಸಿ ದುಷ್ಟ ದುರಾಚಾರಗಳಿಂದ ದೂರಾಗಬೇಕೆಂದು ಹಗಲಿರಳು ಪ್ರಯತ್ನಿಸುತ್ತಿರುವ ದುರಗಪ್ಪ ಫಕೀರಪ್ಪ ಪೂಜಾರಿ ಗಂದಿಗವಾಡ (ಹರಿಜನ) ಇವರೂ ಬಂದಿದ್ದರು.

ಸಭೆಯ ಅಧ್ಯಕ್ಷ ಸ್ಥಾನವನ್ನು ಶ್ರೀ. ಬಸಪ್ಪ ಶಿವರುದ್ರಪ್ಪ ಶಿಥನಾಳ ಇವರು ವಹಿಸಿದ್ದರು. ಅನಂತರ ಶ್ರೀ. ಗಂಗಪ್ಪಣ್ಣಾ ಮಮದಾಪುರ ಇವರು ಹರಿಜನರಲ್ಲಿ ಅಜ್ಞಾನದಿಂದ ರೂಢಿಯಾಗಿದ್ದ ಹೆಣ್ಣುಮಕ್ಕಳನ್ನು ದೇವರ ಹೆಸರಿನಿಂದ ಬಸವೀ ಬಿಡುವದೂ ಸತ್ತ ದನಗಳ ಮಾಂಸ ತಿನ್ನುವದೂ ಮದ್ಯಪಾನ ಮಾಡುವದೂ ನೀತಿ ಭ್ರಷ್ಟರಾಗಿ ದುಡ್ಡು ಹಾಳುಮಾಡಿಕೊಂಡು ಜಗತ್ತಿನಲ್ಲಿ ಕೀಳರೆನಿಸಿಕೊಳ್ಳುವಂಥ ಕೃತಿಗಳನ್ನೆಲ್ಲ ಬಿಟ್ಟು ಸದಾಚಾರಿಗಳಾಗಿ ಹಗಲಿರಳು ಹರಿಜನೋದ್ಧಾರ ಎಂದು ಚಟಪಡಿಸುತ್ತಿರುವ ಜಗದ್ವಂದ್ಯ ಗಾಂಧೀಜಿಯವರಿಗೆ ಸಂತೋಷವಾಗುವಂತೆ ನಡೆಯಿರಿ ಎಂದು ಪರಿಣಾಮಕಾರಿಯಾಗುವಂತೆ ಭಾಷಣ ಮಾಡಿದರು.

ಆಮೇಲೆ ಇದೇ ಊರ ಕನ್ನಡ ಶಾಲೆಯ ಹೆಡ್ ಮಾಸ್ತರರಾದ ಶ್ರೀ. ದುಂಡಯ್ಯ ರಾಚಯ್ಯ ಹಿರೇಮಠ ಇವರು ಸಮಾಜದೊಳಗೆ ದುಷ್ಟ ರೂಢಿ ದುರಾಚಾರ ದುಶ್ಚಟಗಳು ದೂರಾಗಬೇಕಾದರೆ ಶಿಕ್ಷಣವು ಅವಶ್ಯವಾಗಿ ಬೇಕು. ನೀವು ಶಿಕ್ಷಣ ಹೊಂದದ್ದರಿಂದಲೇ ಹೀಗೆ ಕೀಳು ಸ್ಥಿತಿಯಲ್ಲಿರುವಿರಿ. ಇನ್ನು ಮೇಲಾದರೂ ನಿಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಿ ಜ್ಞಾನವಂತರನ್ನಾಗಿ ಮಾಡಿದರೆ ನಿಮ್ಮ ಸಮಾಜವು ಸುಧಾರಿಸಿ ನೀವು ಉಚ್ಚ ತರಗತಿ ಜನರೊಡನೆ ಕೂಡಿ ನಡೆಯುಲಿಕ್ಕೆ ತಕ್ಕವರಾಗುವಿರಲ್ಲದೆ ಮಾನ ಮರ್ಯಾದೆಗಳನ್ನು ಹೊಂದುವಿರಿ ಮುಂತಾಗಿ ತಿಳಿಸಿಹೇಳಿದರು.

ತದನಂತರ ಶ್ರೀ ಚರಮೂರ್ತಿ ಸ್ವಾಮಿಗಳು ಜಗತ್ತಿನಲ್ಲಿರುವ ಧರ್ಮಗಳಲ್ಲಿ ಹಿಂದೂ ಧರ್ಮದ ಸ್ಥಾನವನ್ನೂ ಅದರ ಮಹತ್ವವನ್ನೂ ವರ್ಣಿಸಿ ಹರಿಜನರಾದರೂ ಬೇರೆ ಇರದೆ ಹಿಂದುಗಳಲ್ಲಿ ಮೊದಲನೆಯವರಿದ್ದು ಅಭಕ್ಷ ಭಕ್ಷಣ ಅಪೇಯ ಪಾನ ಅಸ್ವಚ್ಛತೆ ಮೊದಲಾದ ಕಾರ್ಯಗಳಿಂದ ಆರ್ಯರು ನಿಮ್ಮನ್ನು ಹೊರಗಿಟ್ಟಿರುವರೆಂದೂ ಇವು ಇಲ್ಲವಾದರೆ ಸಹಜವಾಗಿಯೇ ಅಸ್ಪೃಶ್ಯತೆ ಅಳಿಯುವದೆಂದೂ ತಮ್ಮ ಅಧಿಕಾರಯುಕ್ತ ಅಮೃತವಾಣಿಯಿಂದ ಬೋಧಿಸಿದರು. ಇಂಥ ಹೃದಯದ್ರಾವಕ ಭಾಷಣ ಕೇಳಿ ಎಲ್ಲ ಹರಿಜನ ಬಂಧುಗಳು ಎದ್ದು ಇನ್ನು ಮೇಲೆ ಸೂಳಿಯರನ್ನು ಬಿಡುವದಿಲ್ಲವೆಂದೂ ಸತ್ತ ದನಗಳ ಮಾಂಸ ತಿನ್ನುವದಿಲ್ಲವೆಂದೂ ಸೆರೆ ಸಿಂದಿ ಮೊದಲಾದವುಗಳನ್ನು ಕುಡಿಯುವದಿಲ್ಲವೆಂದೂ ಸ್ವಾಮಿಗಳ ಸನ್ನಿಧಿಯಲ್ಲಿ ಪ್ರತಿಜ್ಞೆ ಮಾಡಿದರಲ್ಲದೆ ತಮ್ಮೊಳಗೆ ಪ್ರಮುಖ ಜನರದೊಂದು ಕಮೀಟಿ ನೇಮಿಸಿಕೊಂಡು ಯಾರಾದರೂ ತಪ್ಪು ನಡೆದರೆ ತಮ್ಮ ಧರ್ಮದ ಪ್ರಕಾರ ಬೇಕಾದ ಶಿಕ್ಷೆ ಮಾಡಲೆಂದು ನಿರ್ಧಾರದಿಂದ ಒಪ್ಪಿಕೊಂಡರು. ಆ ಮೇಲೆ ಹರಿಜನ ಗುರುಗಳಾದ ಶ್ರೀ. ಲಕ್ಷ್ಮಯ್ಯ ಮಲ್ಲಯ್ಯ ಸೀತಿಮನಿ ಇವರು ನಮ್ಮ ಹರಿಜನರಲ್ಲಿ ಸೂಳೆ ಬಿಡುವ ದುಷ್ಟ ಚಾಳಿಯು ಹೋಗಬೇಕಾದರೆ ಸರಕಾರದವರು ಒಂದು ಕಾಯದೆ ಮಾಡಬೇಕು. ಹೀಗೆ ಠರಾವು ತಂದರು. ಅದು ಸರ್ವಾನುಮತದಿಂದ ಪಾಸಾಯಿತು. ಸದರಿ ಠರಾವಿನ ನಕಲ ಒಂದನ್ನು ಕಾಂಗ್ರೆಸ್ ಮಂತ್ರಿ ಮಂಡಳ ಕಡೆಗೆ ಕಳಿಸಬೇಕೆಂದು ಗೊತ್ತಾಯಿತು. ಅಧ್ಯಕ್ಷರ ಸಮಾರೋಪ ಭಾಷಣವಾಗಿ ಸಭಾ ವಿಸರ್ಜನೆಯಾಯಿತು.

ಸೆಕ್ರೆಟರಿ.

---

## ಮಹಾಗಾವ.

### ಮಹಾಗಾವ ವೀರಶೈವ ತರುಣ ಸಂಘದ ಮೇಲೆ ತುಂಟರ ಮಿಥ್ಯಾಪವಾದ.

ತಾ. ೬-೧೦-೪೭ ನೆಯ ಮಂಗಳವಾರ ಸಾಯಂಕಾಲ ೬ ಘಂಟೆಗೆ ಸಭೆಸೇರಿದ್ದಕ್ಕೆ ಅಸೂಯೆ ಪಟ್ಟು ಇಲ್ಲಿಯ ಮುಸಲ್ಮಾನರು ಮತ್ತು ಇಲ್ಲಿಯ ಹೆಡ್‌ಮಾಸ್ತರರಾದ ಅಬ್ದುಲ್ ಕರೀಮರು ನಮ್ಮ ಸಂಘದವರ ಮೇಲೆ ಕಲಬುರ್ಗಿಯ ಕಲೆಕ್ಟರರಿಗೆ ದರಖಾಸ್ತು ಕೊಟ್ಟು ಅಲ್ಲಿಯ ತಹಸೀಲದಾರರನ್ನು ಬರಮಾಡಿಕೊಂಡು ಸಂಘಕ್ಕೆ ಇಲ್ಲದ ಆರೋಪ ಕೊಟ್ಟು ಸಂಘವನ್ನು ಕಿತ್ತುಹಾಕಲು ಹೇಳಿದರು.

ಮೇಲ್ಕಂಡ ಹೆಡ್‌ಮಾಸ್ತರರು ಇದಕ್ಕೂ ಮುಂಚೆ ಕಮಲಾಪುರದಲ್ಲಿ ಹಿಂದು-ಮುಸಲ್ಮಾನರ ನಡುವೆ ಕಲಹ ಹುಟ್ಟಿಸಿದಮೂಲಕ ಅಲ್ಲಿಯ ಹಿಂದುಗಳು ತಾಲೀಮಾಕ್ಕೆ ಅರ್ಜಿ ಕೊಟ್ಟು ಅಲ್ಲಿಂದ ತೆಗೆಸಿದರು. ಕಮಲಾಪುರದ ಬೆಂಕಿಯ ಕಿಡಿಗಳನ್ನು ನಮ್ಮಲ್ಲಿ ಹಚ್ಚಿ ಭಯಂಕರ ಕೋಲಾಹಲವೆಬ್ಬಿಸಿದರಲ್ಲದೆ ಹಿಂದುಗಳಿಗೆ ಧಾರ್ಮಿಕ ಕಾರ್ಯ ಮಾಡಲು ಆತಂಕಮಾಡಹತ್ತಿದ್ದಾರೆ. ಇದೇ ಮಹನೀಯರು ಇನ್ನು ಕೆಲವು ದಿವಸ ಇಲ್ಲಿಯೇ ಉಳಿದದ್ದಾದರೆ ಹೆಚ್ಚಿನ ಭಯಂಕರ ಕೋಲಾಹಲ ಏಳುವದಲ್ಲದೆ ಹಿಂದುಗಳ ಗೋಳಾಟಕ್ಕೆ ಸೀಮೆ ಇಲ್ಲದಂತಾಗುವದು. ಕಾರಣ ಸರಕಾರದವರು ತೀವ್ರ ಈ ಮಹನೀಯರನ್ನು ಇಲ್ಲಿಂದ ತಬದಿಲೆ ಮಾಡಿಸಿದರೆ ನಮ್ಮ ತರುಣ ಸಂಘವು ಅತ್ಯಂತ ಹೃತ್ಪೂರ್ವಕ ಅಭಿನಂದಿಸುತ್ತದೆ.

ಇದಕ್ಕು ಮೊದಲೆ ತುಂಟರು ಶಿವಲಿಂಗವನ್ನು ಬಸವಮೂರ್ತಿಯನ್ನು ಒಡೆದದ್ದಕ್ಕೆ ಸರಕಾರವು ಅವರಿಗೆ ಯಾವ ಶಿಕ್ಷೆಯನ್ನೂ ವಿಧಿಸಿಲ್ಲ. ಇದಲ್ಲದೆ ನಮ್ಮ ಸಂಘದ ಮಂದಿರದಲ್ಲಿ ವ್ಯಾಖ್ಯಾನ ಪ್ರವಚನ ನಡೆಯುಬಾರದು. ಇವೆಲ್ಲವುಗಳನ್ನು ಮಾಡಬೇಕಾದರೆ ಊರ ಹೊರಗೆ ಎಲ್ಲಿಯಾದರೂ ಮಾಡಬೇಕೆಂದು ಕಠೋರತನದಿಂದ ಹೇಳಹತ್ತಿದ್ದಾರೆ. ತೀವ್ರವೇ ಸರಕಾರವು ಇಲ್ಲಿಯ ಹಿಂದುಗಳ ದೈನ್ಯಾವಸ್ಥೆಯ ಮೇಲೆ ಕನಿಕರ ಪಟ್ಟು ತಕ್ಕ ವ್ಯವಸ್ಥೆ ಮಾಡುವದೆಂದು ನಮ್ಮ ಸಂಘವು ಪೂರ್ಣ ನಂಬಿರುವದು.

ಮೇಲ್ಕಂಡ ತುಂಟರು ಕೊಟ್ಟ ದರಖಾಸ್ತ ಮೂಲಕ ನಮ್ಮಲ್ಲಿಗೆ ಬಂದ ತಹಸೀಲದಾರರು ಸಮತಾಭಾವನೆಯಿಂದ ನ್ಯಾಯಮಾಡಿಸಿದ್ದಕ್ಕೆ ಮಹನೀಯರಿಗೆ ಆಭಾರಮನ್ನಿಸುತ್ತೇವೆ. ಪ್ರತಿಯೊಬ್ಬ ಹುದ್ದೇದಾರರು ಇದರಂತೆ ಸಮತಾ ನ್ಯಾಯಮಾಡಿದರೆ ಇಡಿ ನಿಜಾಮದ ಹಿಂದುಗಳು ಸುಖ ಮತ್ತು ಶಾಂತಿಗಳಲ್ಲಿ ತೇಲಾಡುವದಕ್ಕೆ ಅಭ್ಯಂತರವಿಲ್ಲವೆಂದು ಕೈ ಎತ್ತಿ ಹೇಳುವೆವು.

ಸೆಕ್ರೆಟರಿ.

# ಶ್ರೀ ಸಿದ್ಧಗಂಗಾ ಗುರುಕುಲಾಶ್ರಮ.

ಶ್ರೀ ಕ್ಷೇತ್ರದಲ್ಲಿ ಸಂಸ್ಕೃತ ಮತ್ತು ವೈದಿಕ ಪಾಠಶಾಲೆಯು ಸುಮಾರು ೨೦ ವರ್ಷಗಳಿಂದ ಅವ್ಯಾಹತವಾಗಿ ನಡೆದುಬಂದಿರುತ್ತದೆ. ಈ ಪಾಠಶಾಲೆಯು ಪ್ರತಿವರ್ಷವೂ ಹೆಚ್ಚು ಹೆಚ್ಚು ಅಭಿವೃದ್ಧಿ ಸ್ಥಿತಿಯಲ್ಲಿದೆಯೆನ್ನಲು ಸಂತೋಷವಾಗುತ್ತದೆ. ಇಲ್ಲಿ ಸದ್ಯಕ್ಕೆ ಸು. ಒಂದು ನೂರು ಮಂದಿ ವಿದ್ಯಾರ್ಥಿಗಳೂ ೮-೧೦ ಮಂದಿ ಉಪಾಧ್ಯಾಯರೂ ಇದ್ದಾರೆ. ಸಂಸ್ಕೃತದ ಪಠ್ಯಕ್ರಮವು ಮೈಸೂರು ಸರಕಾರದ ವಿದ್ಯಾಭ್ಯಾಸ ಇಲಾಖೆಗೆ ಅಧೀನವಾಗಿದೆ. ಇಲ್ಲಿ ಪ್ರಾರಂಭದಿಂದ ಹಿಡಿದು 'ವಿದ್ವಾನ್' ಡಿಗ್ರಿಪರೀಕ್ಷೆಯ ವರೆಗೆ ಸಂಸ್ಕೃತದಲ್ಲಿ ಶಿಕ್ಷಣವು ದೊರೆಯುತ್ತದೆ. ವೀರಶೈವ ಮತಕ್ಕೆ ಉಪಯುಕ್ತವಾದಷ್ಟು ವೈದಿಕ ವಿದ್ಯಾಭ್ಯಾಸವೂ ಸಮರ್ಥರಾದ ಪಂಡಿತರಿಂದ ಕೊಡಲ್ಪಡುತ್ತದೆ. ಸಂಸ್ಕೃತ ಪಾಠಶಾಲೆಯಲ್ಲಿ ಎಲ್ಲಾ ಕೋಮಿನ ವಿದ್ಯಾರ್ಥಿಗಳು ಇರಲವಕಾಶವಿರುವುದರಿಂದ ವೀರಶೈವೇತರ ವಿದ್ಯಾರ್ಥಿಗಳೂ ಇದ್ದಾರೆ, ಎಲ್ಲರಿಗೂ ಶ್ರೀ ಮಠದಿಂದಲೇ ಭೋಜನ ವ್ಯವಸ್ಥೆಯಾಗಿದೆ.

ಪ್ರಕೃತದಲ್ಲಿ ಇಂತಹ ದೊಡ್ಡ ಸಂಸ್ಥೆಯಲ್ಲಿ ತಯಾರಾದ ವಿದ್ಯಾರ್ಥಿಗಳು ತಮ್ಮ ಜೀವನದಲ್ಲಿ ಲೋಕೋಪಕಾರವಾದ ಕಾರ್ಯಗಳನ್ನೆಸಗಿ ಕೀರ್ತಿಶಾಲಿಗಳಾಗಬೇಕೆಂಬ ಮಹಾಕಾಂಕ್ಷೆಯು ಶ್ರೀ ಕ್ಷೇತ್ರಾಧ್ಯಕ್ಷರಾದ ಶ್ರೀ. ನಿ. ಪ್ರ. ಉದ್ದಾನ ಸ್ವಾಮಿಗಳಿಗೂ ಮತ್ತು ಅವರ ಕರಕಂಜಾತರಾದ ಶ್ರೀ. ನಿ. ಪ್ರ. ಶಿವಕುಮಾರ ಸ್ವಾಮಿಗಳಿಗೂ ವಿಶೇಷವಾಗಿರುತ್ತದೆ.

ವಿದ್ಯಾರ್ಥಿಗಳಿಗೆ ಧಾರ್ಮಿಕ ನೈತಿಕ ಮತ್ತು ಸಾಮಾಜಿಕ ವಿಷಯಗಳ ಬೆಳವಣಿಗೆಯು ಅತ್ಯವಶ್ಯಕವೆಂದು ಭಾವಿಸಿ ಶ್ರೀ ಕ್ಷೇತ್ರದಲ್ಲಿ ತಾ. ೬-೭-೩೮ ನೆಯ ಬುಧವಾರ ಸಾಯಂಕಾಲ ೫ ಗಂಟೆಗೆ ಸರಿಯಾಗಿ ಎಲ್ಲಾ ಉಪಾಧ್ಯಾಯರ ಮತ್ತು ವಿದ್ಯಾರ್ಥಿಗಳ ಒಂದು ಸಭೆಯು ಶ್ರೀ. ನಿ. ಪ್ರ. ಶಿವಕುಮಾರ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ನೆರೆದು "ಶ್ರೀ ತೋಂಟದಾರ್ಯ ವಿದ್ಯಾವರ್ಧಿನೀ ಸಭಾ" ಎಂಬ ಹೆಸರಿನ ಒಂದು ಸಂಘವು ಸ್ಥಾಪಿಸಲ್ಪಟ್ಟಿತು. ಅನಂತರ ಒಂದು ಕಾರ್ಯನಿರ್ವಾಹಕ ಸಮಿತಿಯೇರ್ಪಟ್ಟು ಕಾರ್ಯದರ್ಶಿಗಳನ್ನೂ ಕೋಶಾಧ್ಯಕ್ಷರನ್ನೂ ನಿಯಮಿಸಿ ಸಂಘದ ಉದ್ದೇಶಗಳನ್ನೂ ನಡೆಯಿಸಲು ವ್ಯವಸ್ಥೆಯಾಯಿತು.

ಉದ್ದೇಶಗಳು.

೧. ಈ ಸಭೆಗೆ ಸದಸ್ಯನಾಗಿರುವ ಪ್ರತಿಯೊಬ್ಬ ವಿದ್ಯಾರ್ಥಿಯೂ ಧಾರ್ಮಿಕ ನೈತಿಕ ಸಾಮಾಜಿಕ ವಿಷಯಗಳಲ್ಲಿ ನಿಷ್ಕೃಷ್ಟ ಜ್ಞಾನವನ್ನು ಪಡೆದು ಸಮಾಜದ ಹಾಗೂ ದೇಶದ ಸೇವೆಯನ್ನು ಮಾಡಲು ಸಮರ್ಥನಾಗಲು ಚರ್ಚಾಗೋಷ್ಠಿ ಭಾಷಣ ಸ್ಪರ್ಧೆ ಕವನ ಲೇಖನಗಳಲ್ಲಿ ನೈಪುಣ್ಯವನ್ನು ಸಂಪಾದಿಸುವದು.

೨. ವಿದ್ಯಾವಂತರೂ ಯೋಗ್ಯರೂ ಸಂಘಟನಾಪ್ರಿಯರೂ ಆದ ಬೋಧಕರನ್ನು ಗ್ರಾಮಾಂತರಗಳಿಗೆ ಕಳುಹಿಸಿ ಧಾರ್ಮಿಕಾದಿ ವಿಷಯಗಳನ್ನು ಪ್ರಚಾರ ಮಾಡುವದು.

೩. ಸಂಘದ ವತಿಯಿಂದ ಒಂದು ಮಾಸಿಕವನ್ನು ಹೊರಡಿಸುವದಲ್ಲದೆ ಪುರಾತನ ಮತ್ತು ನೂತನ ಗ್ರಂಥಗಳನ್ನು ಪ್ರಕಟಿಸುವದು.

೪ ಶ್ರೀ ಕ್ಷೇತ್ರದಲ್ಲಿ ಸ್ಥಾಪಿತವಾಗಿರುವ ಪಾಠಶಾಲೆಯ ಅಭಿವೃದ್ಧಿಗಾಗಿ ಸಹಾಯ ಮಾಡುವದು.

ಈ ಉದ್ದೇಶಗಳನ್ನು ನೆರವೇರಿಸಲಿಕ್ಕಾಗಿ ಎಲ್ಲ ಸಮಾಜದ ಉದಾರಿಗಳಾದ ಮಹನೀಯರ ಬೆಂಬಲವು ಬೇಕಾಗಿದೆ. ಅದಕ್ಕಾಗಿ ಮಹಾಜನಗಳು ಪ್ರೋತ್ಸಾಹ ಕೊಡಬೇಕೆಂದು ಪ್ರಾರ್ಥಿಸುವದು ಇತ್ಯಾದಿ ನಿರ್ಣಯಗಳು ತೀರ್ಮಾನವಾಗಿ ಸಭೆಯು ಪ್ರಾರ್ಥನೆಯೊಂದಿಗೆ ಮುಕ್ತಾಯವಾಯಿತು.

ಕಾರ್ಯದರ್ಶಿ
ಶ್ರೀ ತೋಂಟದಾರ್ಯ ವಿದ್ಯಾವರ್ಧಿನೀ ಸಭಾ
ಸಿದ್ಧಗಂಗಾ ಗುರುಕುಲಾಶ್ರಮ,

# ನೋಟೀಸ.

ಅಖಿಲ ಭಾರತ ವೀರಶೈವ ಮಹಾ ಸಭಾ
ಚಿರಸ್ಥಾಯಿ ಫಂಡ.

ಅಖಿಲ ಭಾರತ ಶ್ರೀಮದ್ವೀರಶೈವ ಮಹಾ ಸಭೆಯನ್ನು ಭಾರತದ ಯಾವದಾದರೂ ಒಂದು ಮುಖ್ಯವಾದ ಸ್ಥಳದಲ್ಲಿ ಈ ವರುಷ ಡಿಸಂಬರ ತಿಂಗಳಲ್ಲಿ ನೆರೆಯಿಸಲು ಇಷ್ಟವುಳ್ಳ ವೀರಶೈವ ಬಾಂಧವರು ಆಸ್ಥಳದ ಮುಖಂಡರನ್ನು ಸೇರಿಸಿ ಅವರ ಅಭಿಪ್ರಾಯವನ್ನು ಪಡೆದು ಮಹಾಸಭೆಯನ್ನು ನೆರೆಯಿಸಲು ಉದ್ಯುಕ್ತರಾಗುವುದಾದರೆ ಅಖಿಲ ಭಾರತ ವೀರಶೈವ ಚಿರಸ್ಥಾಯಿ ಫಂಡಿನಿಂದ ಆ ಫಂಡಿನ ನಿಯಮಗಳಿಗನುಸಾರವಾಗಿ ಸೂಕ್ತವಾದ ಮೊಬಲಗನ್ನು ಸಹಾಯಮಾಡುತ್ತದೆ. ಮಹಾಸಭೆ ನೆರೆಯಿಸಬೇಕೆಂದಿರುವ ಮಹಾಶಯರು ಕಾಲವಿಳಂಬಿಸದೆ ಮೇಲ್ಕಂಡ ಕ್ರಮದಂತೆ ಅರ್ಜಿಯನ್ನು ಈ ಕೆಳಗೆ ನಮೂದಾಗುವ ಅಧ್ಯಕ್ಷರಿಗೆ ದಯವಿಟ್ಟು ಕಳುಹಿಸಿಕೊಡಬೇಕೆಂದು ಸಮಸ್ತ ವೀರಶೈವರಿಗೂ ಇದರಿಂದ ಶೃತಪಡಿಸಿದೆ.

ಡಾ. ಸರ್. ಕೆ ಪಿ. ಪುಟ್ಟಣ್ಣ ಶೆಟ್ಟಿ
ಅಧ್ಯಕ್ಷ ಅ. ಭಾ. ವೀ. ಮಹಾ ಸಭಾ ಚಿ. ಫಂಡ
ಬೆಂಗಳೂರು.

# ಚೀನ - ಜಪಾನ ಯುದ್ಧದ

## ಒಂದು ವರ್ಷದ ಲಾಭನಷ್ಟ.

ಚೀನದ ಯುದ್ಧವು ಆರಂಭವಾಗಿ ಒಂದು ವರ್ಷವಾಯಿತು. ಈ ಸಮಯದಲ್ಲಿ ಚೀನದ (೧೮ ಪ್ರಾಂತಗಳಲ್ಲಿ) ೪ ಸಂಪೂರ್ಣ ಪ್ರಾಂತಗಳಲ್ಲಿ ಹಾಗೂ ನಾಲ್ಕು ಇತರ ಪ್ರಾಂತಗಳ ಭಾಗಗಳಲ್ಲಿ ಜಪಾನಿನ ಅಧಿಕಾರ ಸ್ಥಾಪಿತವಾಗಿದೆ. ಜಪಾನಿನ ಈ ಸ್ವಾಸ್ಥ್ಯಗಳ ವಿಸ್ತೀರ್ಣ ೩೫೦೦೦೦ ಚದುರ ಮೈಲುಗಳು; ಇದು ಗ್ರೇಟ್‌ಬ್ರಿಟನ್ನಿನ ೪ ಪಾಲಷ್ಟು ದೊಡ್ಡದು. ಆದರೂ ಜಪಾನು ಆಕ್ರಮಿಸಿರುವ ಅಂಶದ ೩ ಪಾಲಿನಷ್ಟು ಪ್ರದೇಶವು ಇನ್ನೂ ಚೀನಿಯರ ವಶದಲ್ಲಿಯೇ ಇದೆ.

ಜಪಾನಿಗೆ ಚೀನದ ೧೦ ಮುಖ್ಯ ಪಟ್ಟಣಗಳೂ, ರೇವುಗಳೂ ಸಿಕ್ಕಿವೆ. ೩೫೦೦ ಮೈಲುಗಳ ರೇಲ್ವೆ, ೧೩೦೦ ಮೈಲುಗಳ ತೀರ ಪ್ರದೇಶವೂ ಚೀನದಲ್ಲಿ ಜಪಾನಿಗೆ ಲಭ್ಯವಾಗಿದೆ.

ಚೀನದ ಸ್ವಾಧೀನದಲ್ಲಿ ಈಗಿರುವ ಮುಖ್ಯ ನಗರಗಳು ೧೩, ೨೪೦೦ ಮೈಲುಗಳ ರೇಲ್ವೆ; ಮತ್ತು ೧೫೦೦ ಮೈಲುಗಳ ತೀರಪ್ರದೇಶ.

ಜಪಾನಿಗೆ ದೊರಕಿದ ಇನ್ನು ಕೆಲವು ಲಾಭಗಳಿವು— ಜಗತ್ತಿನಲ್ಲೆಲ್ಲ ಮೂರನೆಯ ಸ್ಥಾನ ಪಡೆದ, ಉತ್ತರ ಚೀನದ ಬಹುದೊಡ್ಡ ಕಲ್ಲಿದ್ದಲಿ ಗಣಿಗಳು; ಒಳ ಮಂಗೋಲಿಯದ ಉಣ್ಣೆಯ ಕ್ಷೇತ್ರ; ಶಾಂಟಂಗಿನ ಹೊಗೆಸೊಪ್ಪಿನ ಪ್ರದೇಶ; ಶಾಂಘಾಯಿಯು ಅರಳೆಯ ಮತ್ತು ರೇಶ್ಮೆ ಕಾರ್ಖಾನೆಗಳು.

ಚೀನದವರ ವಶದಲ್ಲೀಗ ಇರತಕ್ಕವುಗಳಿವು— ಚೀನದ ಚಾ ಬೆಳೆಯುವ ಹೊಲಗಳು, ಪಶ್ಚಿಮದ ಅರಣ್ಯಗಳ ಮರದೆಣ್ಣೆಯ ಪ್ರದೇಶಗಳು; ಹುನಾನ ಪ್ರಾಂತದ ಸುರ್ಮ ಮತ್ತು ತವರದ ಪ್ರಾಂತಗಳು, ಚೀನದ ೫ ರಲ್ಲಿ, ೪ ಭಾಗಗಳಷ್ಟಿರುವ ಅರಳೆಯ ಕ್ಷೇತ್ರಗಳು; ಚಿಕ್ಕದೊಂದು ಕಲ್ಲಿದ್ದಲಿ ಗಣಿ.

ಇದುವರೆಗೂ ಜಯಾಪಜಯುಗಳನ್ನು ತಿಳಿವಂತಾಗಿಲ್ಲ. ನೆರೆಯ ದೆಸೆಯಿಂದ ಬರುವ ಅಗೋಸ್ತು—ಸಪ್ತಂಬರದಲ್ಲಿ, ಹಾಂಕೊ ನಗರವನ್ನು ಪ್ರವೇಶಿಸುವ ಉದ್ದೇಶ ಜಪಾನಿನದು.

ಈ ಯುದ್ಧದಲ್ಲಿ, ಜಪಾನದಲ್ಲಿ ಕೊಲ್ಲಲ್ಪಟ್ಟವರು, ಈ ೧ ವರ್ಷದಲ್ಲಿ ೧ ಲಕ್ಷ; ಗಾಯುಗೊಂಡವರು ೪ ಲಕ್ಷ. ಚೀನದಲ್ಲಿ ಯಾದರೋ, ಸತ್ತವರೂ, ಗಾಯುಗೊಂಡವರು ಅತ್ಯಧಿಕ ಸಂಖ್ಯೆಯವರು. ಬರೀ ಯುದ್ಧದಲ್ಲಿಯೇ ಅಲ್ಲ. ವಿಮಾನದಾಳಿಯಿಂದ, ನೆರೆಯಿಂದ; ರೋಗಲು ಜನೆಗಳಿಂದ; ಕ್ಷಾಮ ಡಾಮರಗಳಿಂದಲೂ!

ಯುದ್ಧ ಆರಂಭವಾದಾಗ, ಜಪಾನರು ತಮ್ಮ ೪೦ ಸಾವಿರ ಮಂದಿ, ಚೀನವನ್ನು ಸೋಲಿಸಬಲ್ಲರೆಂದು ಧೈರ್ಯವಾಗಿದ್ದರು; ಈಗ ನೌಕಾಪಡೆಯುವರಲ್ಲದೆ ೧೦ ಲಕ್ಷ ಜಪಾನಿ ಸೈನಿಕರು, ಚೀನಾ ರಣರಂಗದಲ್ಲಿ ಇದ್ದಾರೆ. ೩ ಲಕ್ಷ ಮಂದಿ, ಮಂಚೂರಿಯಾದ ಗಡಿಯಲ್ಲಿ ಸೋವಿಯೆಟ್‌ನವರನ್ನು ಕಾಯುತ್ತಿದ್ದಾರೆ.

ಚೀನದಲ್ಲಿ ಜನರಲ್ ಚಾಂಗ್ ಕೈಶೇಕನ ಪಾರ್ಟಿ, ಕಮ್ಯೂನಿಷ್ಟರ ಪಾರ್ಟಿ ಎಂದು ಮುಂತಾಗಿ, ಚೀನದ ೩ ಪಾರ್ಟಿಗಳೂ ಈಗ ಒಂದಾಗಿ, ಜಪಾನಿಗೆ ಎದುರುನಿಂತಿವೆ. ಅಲ್ಲದೆ ೫೦,೦೦೦,೦೦೦ ಮಂದಿ ಚೀನೀ ಮುಸ್ಲಿಮರೂ, ಸಾವಿರಾರು ಮಂದಿ ಚೀನೀ ವಿದ್ಯಾರ್ಥಿಗಳೂ, ಟಿಬೆಟ್-ಬರ್ಮಾ ಪ್ರಾಂತಗಳ ಕಾಡುಜನರೂ ಜನರಲ್ ಚಾಂಗ್ ಕೈಶೇಕರ ಧ್ವಜದ ಕೆಳಗೆ ಹೋರಾಡಲು ಮುಂದೆ ಬಂದಿದ್ದಾರೆ.

ಚೀನದ ದೇವಾಲಯಗಳಲ್ಲಿ ಈಗ ಬದಲಾವಣೆಗಳಾಗಿವೆ. ಅವುಗಳಲ್ಲಿ 'ಸಾರ್ವಜನಿಕ ಆಹಾರ ಧಾನ್ಯಗಳ ಉಗ್ರಾಣಗಳು' ಬಂದಿವೆ. ೫ ಲಕ್ಷ ಅಕ್ಕಿ ಮೂಟೆಗಳು ಅಲ್ಲಿ ಸಂಗ್ರಹವಾಗಿವೆ. ಕೆಲವು ದೇವಾಲಯಗಳಲ್ಲಿ, ವಿಶ್ವವಿದ್ಯಾಲಯುಗಳ ಶಿಕ್ಷಣ ಕಾರ್ಯವು ನಡೆಯುತ್ತಿದೆ. ದೇವಸ್ಥಾನದ ಪವಿತ್ರ ಸಮಾಧಿಗಳ ಭೂಮಿಯಲ್ಲಿ ಅಕ್ಕಿ ಹೊಲಗಳು ಎದ್ದು ಕಾಣುತ್ತಿವೆ. ಅಲ್ಲದೆ ಸಾವಿರಾರು ಮಂದಿ, ಬೌದ್ಧ ಭಿಕ್ಷುಗಳು ಗಾಯುಗೊಂಡವರನ್ನು ಶಿಶ್ರೂಷಿಸಿ, ಸಾಗಿಸುವ ಕಾರ್ಯದಲ್ಲಿ ತರಬೇತು ಹೊಂದುತ್ತಿದ್ದಾರೆ.

ಜನರನ್ ಚಾಂಗ್ ಕೈಶೇಕರ ಮನುಷ್ಯಬಲ ಅಪಾರವಾಗಿದೆ. ಚೀನದ 'ಕೊನೆತನಕದ ಯುದ್ಧ'ದ ನಿರ್ಧಾರ ಪ್ರಭಲವಾಗಿದೆ. ಜಪಾನ್, ಕೆಲವು ತಿಂಗಳಲ್ಲೇ ಚೀನವನ್ನು ನುಂಗಿಬಿಡುವೆನೆಂಬ, ಆ ದರ್ಪವು, ಅಲ್ಲಿಂದಲ್ಲಿಗೇ ತಗ್ಗಿಹೋಗಿದೆ.

"ಲಂಶೀರವ."

---

## ಹೈದರಾಬಾದ ಸೀಮೆಯಲ್ಲಿ ಪುಂಡ ಮುಸಲ್ಮಾನರು ಮಾಡಿದ ಅನೇಕ ಅತ್ಯಾಚಾರಗಳ ನಿಷೇಧ.

ತಾ. ೧೭-೭-೩೮ ನೇ ಆದಿತ್ಯವಾರ ಸಾಯಂಕಾಲ ೭-೩೦ ಗಂಟೆಗೆ ಶ್ರೀ ವೀರಶೈವ ತರುಣ ಸಂಘದ ಕಾರ್ಯನಿರ್ವಾಹಕ ಸಮಿತಿಯು ಸಭೆ ಸೇರಿ ಈ ಕೆಳಗೆ ಕಂಡ ಠರಾವುಗಳನ್ನು ತೀರ್ಮಾನಿಸಿದ್ದಾರೆ.

೧. ಹೈದರಾಬಾದ ಸಂಸ್ಥಾನಕ್ಕೆ ಸೇರಿದ ಮಹಗಾವ, ಹುಮನಾಬಾದ, ಬೇಲೂರು, ಕಲ್ಯಾಣ ಮುಂತಾದ ಸ್ಥಳಗಳಲ್ಲಿ ಹಿಂದೂ ಜನಗಳ ಮೇಲೆ ಅದರಲ್ಲಿಯೂ ವೀರಶೈವರ ಮೇಲೆ ಸಹಿಸಲಸಾಧ್ಯವಾದ ಅನೇಕ ಅತ್ಯಾಚಾರಗಳನ್ನು, ಅಲ್ಲಿಯ ಮುಸಲ್ಮಾನರು ಮಾಡಿರುವುದನ್ನು ಈ ಸಭೆಯು ಸದರಿ ಪುಂಡರ ನೀಚ ಕೃತ್ಯಗಳನ್ನು ಬಹು ಸಂತಾಪದಿಂದ ಖಂಡಿಸುತ್ತದೆ,

೨. ಆ ದೇಶದಲ್ಲಿ ವೀರಶೈವರಾದಿಯಾಗಿ ಸಮಸ್ತ ಹಿಂದುಗಳು ತಮ್ಮ ತಮ್ಮ ಮಾನ ಮರ್ಯಾದೆ ಧರ್ಮಗಳನ್ನು ರಕ್ಷಿಸಲು ಸುಸಂಘಟಿತರಾಗಿ ನೀಚರನ್ನು ಎದುರಿಸಲು ತಕ್ಕ ಶಕ್ತಿ ಸಾಹಸಗಳುಳ್ಳವರಾಗಬೇಕಾಗಿ ಈ ಸಭೆಯು ಅವರನ್ನು ಕೋರುತ್ತದೆ.

೩. ಇಂಥ ನೀಚ ಕೃತ್ಯಗಳಿಗೆ ಅಸ್ಪದ ಕೊಡದಂತೆಯೂ ಮತ್ತು ಪುಂಡರಿಗೆ ತಕ್ಕ ಶಿಕ್ಷೆಯನ್ನು ವಿಧಿಸಬೇಕಾಗಿಯೂ ಅಲ್ಲಿಯ ಸರಕಾರದವರನ್ನು ಈ ಸಭೆಯು ಪ್ರಾರ್ಥಿಸುತ್ತದೆ.

೪. ಈ ಅನರ್ಥ ಪರಂಪರೆಗಳಲ್ಲಿ ಮೃತ ಹೊಂದಿದವರ ಆತ್ಮಕ್ಕೆ ಶಾಂತಿಯನ್ನೂ ಗಾಯುಗೊಂಡವರ ಬಗ್ಗೆ ದುಃಖವನ್ನೂ ಈ ಸಭೆಯು ಸೂಚಿಸುತ್ತದೆ.

೫. ಸದರಿ ಠರಾವುಗಳನ್ನು ಹೈದರಾಬಾದ ಸರಕಾರಕ್ಕೂ, ಬ್ರಿಟಿಶ್ ರೆಸಿಡೆಂಟರಿಗೂ ಅಲ್ಲಿನ ತರುಣ ಸಂಘಕ್ಕೂ; ಇಂಗ್ಲಿಷ್ ಮತ್ತು ಕನ್ನಡ ಪತ್ರಿಕೆಗಳಿಗೆ ಕಳಿಸಬೇಕೆಂದೂ ತೀರ್ಮಾನಿಸಲಾಯಿತು.

ಕಾರ್ಯದರ್ಶಿಗಳು
ಶ್ರೀ ವೀರಶೈವ ತರುಣ ಸಂಘ.
ದಾವಣಗೆರೆ.

## ಚಿತ್ರದುರ್ಗದ ಶ್ರೀಮನ್ನಿರಂಜನ ಜಗದ್ಗುರು ಶ್ರೀ. ಮುರುಘರಾಜೇಂದ್ರ ಮಹಾಸ್ವಾಮಿಗಳಿಗೆ ಕೇಳಿದ
# ಪಂಚವಿಂಶತಿ ಪ್ರಶ್ನೋತ್ತರ ಮಾಲಾ.

ಬೆಂಗಳೂರು ಸುಮತಿ ಪಂಡಿತರಾದ ರೇವಣಾರಾಧ್ಯರೆಂಬುವರೊಬ್ಬರು ಮೇಲ್ಕಂಡ ಮಹಾಸ್ವಾಮಿಗಳಿಗೆ ಅಶಾಸ್ತ್ರೀಯವಾದ ೨೫ ದೂಷಿತ ಪ್ರಶ್ನೆಗಳನ್ನು 'ಪಂಚವಿಂಶತಿ ಪ್ರಶ್ನಮಾಲಾ' ಎಂಬ ಚಿಕ್ಕ ಗ್ರಂಥಮೂಲಕ ಪ್ರಿಂಟುಮಾಡಿಸಿ ಎಲ್ಲಾ ಪ್ರದೇಶಗಳಲ್ಲಿ ಪ್ರಚಾರ ಮಾಡುತ್ತಿರುವರು. ಸದರಿ ಪಂಡಿತರು ಕೇಳಿದ ೨೫ ಪ್ರಶ್ನೆಗಳಿಗೆ ಶಾಸ್ತ್ರಾಧಾರದಿಂದ ಇದುವರೆಗೂ ಯಾರೂ ಸರಿಯಾದ ಉತ್ತರಗಳನ್ನು ಬರೆದು ಪ್ರಿಂಟುಮಾಡಿಸಿ ಪ್ರಚಾರ ಮಾಡದೆ ಇರುವದರಿಂದ ಬಹು ಜನರು ಅವರ ೨೫ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಬರೆದು ಯಾಕೆ ಪ್ರಚಾರ ಮಾಡಲಿಲ್ಲವೆಂದು ಬಹು ಚರ್ಚೆ ಮಾಡುತ್ತಿರುವರು. ಕಾರಣ ನಾವು ಆಯಾ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಬರೆದು ಪ್ರಚಾರ ಮಾಡದಿದ್ದರೆ ಅನೇಕರಿಗೆ ಸಂದೇಹವುಂಟಾಗಿ ಶ್ರೀಮನ್ನಿರಂಜನ ಬಸವಾದಿ ಪ್ರಮಥರಲ್ಲಿ ಭಕ್ತಿ ವಿಶ್ವಾಸಗಳು ಕಡಿಮೆಯಾಗುತ್ತವೆಂದು ಭಾವಿಸಿ ಸದರಿಯವರ ೨೫ ಪ್ರಶ್ನೆಗಳಿಗೆ ಸರಿಯಾದ ಶಾಸ್ತ್ರಾಧಾರಗಳಿಂದಲೂ ಪ್ರತ್ಯಕ್ಷ ಅನುಭವಾಧಾರಗಳಿಂದಲೂ ಸಮಸ್ತರು ಒಪ್ಪುವಂತೆ ಉತ್ತರಗಳನ್ನು ಬರೆದು ಪಂಚವಿಂಶತಿ ಪ್ರಶ್ನೋತ್ತರ ಮಾಲಾ ಎಂಬ ಚಿಕ್ಕ ಗ್ರಂಥವನ್ನು ತಯಾರು ಮಾಡಿರುತ್ತೇವೆ. ಪ್ರತಿಯೊಬ್ಬರು ಈ ಅಪೂರ್ವ ಗ್ರಂಥವನ್ನು ತರಿಸಿಕೊಂಡು ಶ್ರೀಮನ್ನಿರಂಜನ ಬಸವಾದಿ ಪ್ರಮಥರ ಅತ್ಯಂತ ಮಹತ್ವ ಶ್ರೇಷ್ಠತೆ ವಿಷಯಗಳನ್ನು ನೋಡಿ ಸಂತೋಷಭರಿತರಾಗಬೇಕು. ಗ್ರಂಥಾಪೇಕ್ಷೆಯುಳ್ಳವರು ಟಪ್ಪಾಲು ಮೂಲಕ ೫ ಆಣೆ ಸ್ಟಾಂಪು ಕಳಿಸಿದರೆ ಉಚಿತವಾಗಿ ಕಳಿಸುತ್ತೇವೆ.

ಮ್ಯಾನೇಜರ್:—

ವೀರಶೈವ ಪುರಾತನ ಗ್ರಂಥ ಪರಿಶೋಧನಾಲಯ

ಹರಪನಹಳ್ಳಿ (ಜಿಲ್ಲಾ ಬಳ್ಳಾರಿ.)

---

ನಿಂದಕರ ಬಾಯಿ ಬೀಗ

ಎಂಬ

# ಷಟ್ಕಲಶ ಸ್ಥಾಪನಾ ವಿಧಿ ಅಪೂರ್ವ ಗ್ರಂಥ.

ವೀರಶೈವರ ದೀಕ್ಷಾ ವಿವಾಹಾದಿ ಕಾರ್ಯಗಳಲ್ಲಿ ಪಂಚ ಕಲಶಗಳನ್ನು ಸ್ಥಾಪಿಸಬೇಕೆಂದು ಆಗಮ ಶಾಸ್ತ್ರಾಧಾರಗಳದ್ದು ಕಿವಿಯಿಂದ ಕೇಳದೆ ಕಣ್ಣಿನಿಂದ ನೋಡದೆ ಇರುವ ಶಾಸ್ತ್ರಕ್ಕೆ ವಿರೋಧವಾದ ೬ ನೇ ನಿರಂಜನ ಕಲಶವೆಂದು ಪಂಚ ಕಲಶಗಳ ಜೊತೆಗೆ ಈಗೀಗ ಬಲಾತ್ಕಾರವಾಗಿ ಸ್ಥಾಪಿಸುತ್ತಿರುವರು. ಶಾಸ್ತ್ರ ವಿರೋಧವಾದ ೬ ನೇ ಕಲಶವನ್ನು ಸದೆ ಬಡಿದು ಅಡವಿಪಾಲಾಗಿ ಮಾಡುವದು ಯೋಗ್ಯವಾಗಿರುತ್ತದೆಂದು ನಿಂದಕರು ಎಲ್ಲರಿಗೂ ಬೋಧಿಸುತ್ತಾ ೬ ನೇ ನಿರಂಜನ ಕಲಶ ಸ್ಥಾಪನೆ ಮಾಡುವದನ್ನು ನಿಲ್ಲಿಸಿಬಿಡುತ್ತಿರುವರು. ಪರಮ ಪವಿತ್ರ ೬ ನೇ ಕಲಶಕ್ಕೆ ಅಪ್ರತಿಷ್ಠೆ ಮಾಡುವದನ್ನು ಕೋರ್ಟು ದ್ವಾರ ಸ್ಥಿರಪಡಿಸಬೇಕೆಂದು ಘನ ಪ್ರಯತ್ನ ಮಾಡಿರುತ್ತೇವೆ. ಹಾಗೆ ಸುಮ್ಮನೇ ಬಿಟ್ಟರೆ ೬ ನೇ ಕಲಶದ ಹೆಸರಿಲ್ಲದಂತೆ ಮಾಡುತ್ತಾರೆ.

ಈ ಗ್ರಂಥದಲ್ಲಿರುವ ಅಪೂರ್ವ ವಿಷಯಗಳು.

ಶ್ರೀ ಮದುಜ್ಜಯಿನಿ ಸದ್ಧರ್ಮ ಪೀಠಾಧೀಶ ಚರಪಟ್ಟಾಧ್ಯಕ್ಷ ಜಗದ್ಗುರು ಶ್ರೀ. ಮರುಳಸಿದ್ಧ ಸ್ವಾಮಿಗಳು ಪ್ರಣವ ಮಂತ್ರಶಾಸ್ತ್ರ ವಿಧಿ ಪ್ರಕಾರ ದೀಕ್ಷಾ ವಿವಾಹ ಕಾರ್ಯಗಳಲ್ಲಿ ಪಂಚ ಕಲಶಗಳನ್ನು ಬಲ ಭಾಗಕ್ಕೆ ಸಾಕ್ಷಿ ರೂಪವಾಗಿ ೬ ನೇ ನಿರಂಜನ ಕಲಶವನ್ನು ಆಯಾಯ ಪ್ರಣವಾಕ್ಷರಗಳಿಂದಲೂ ಆಯಾಯ ವರ್ಣದ ಕಲಶಗಳಿಂದಲೂ ಆಯಾಯ ದಿಕ್ಕುಗಳಲ್ಲಿ ಸ್ಥಾಪಿಸಬೇಕೆಂದು ಚಕ್ರ ರೂಪವಾಗಿ ಬರೆದು ೬ ನೇ ನಿರಂಜನ ಕಲಶವನ್ನು ಬಿಟ್ಟು ಮಾಡಬಾರದೆಂದು ನಿರೂಪು ಮಾಡಿರುವ ವಿಷಯವನ್ನು ಮತ್ತು ಈ ಮರುಳಸಿದ್ಧ ಸ್ವಾಮಿಗಳು ತಾವು ಗುರು ಗದ್ದಿಗೆಯ ಮೇಲೆ ಕೂತು ಕೊಂಡು ಮುಂಭಾಗದಲ್ಲಿ ಪಂಚ ಕಲಶಗಳನ್ನು ಬಲಭಾಗಕ್ಕೆ ೬ ನೇ ನಿರಂಜನ ಕಲಶ ಸ್ಥಾಪಿಸಿದ ಫೋಟೋವನ್ನು ಹಾಕಿರುತ್ತೆ. ಮತ್ತು ಇದೇ ಪೀಠದ ಜಗದ್ಗುರು ಶ್ರೀ. ಸಿದ್ಧಲಿಂಗ ಸ್ವಾಮಿಗಳು ವೀರಶೈವಾಚಾರ ಪಂಚರತ್ನದಲ್ಲಿ ಹೇಳಿದ ಪ್ರಕಾರ ಷಟ್ಕಲಶ ಸ್ಥಾಪನೆಮಾಡಿ ದೀಕ್ಷಾ ವಿವಾಹ ಕಾರ್ಯಗಳನ್ನು ಜರುಗಿಸಬೇಕೆಂತಲೂ ಗುರುಪಾದ ಪೂಜಾ ಕಾಲದಲ್ಲಿ ಬಸವಾಕ್ಷರ ಮಹಾ ಮಂತ್ರವನ್ನು ಜಪಿಸಬೇಕೆಂತಲೂ ಎಲ್ಲಾ ದೇಶದ ವೀರಶೈವರಿಗೆ ಮಾಡಿರುವ ನಿರೂಪು ಹಕ್ಕನ್ನು ಇನ್ನು ಅನೇಕ ಆಗಮ ಶಾಸ್ತ್ರಾಧಾರಗಳಿಂದ ವಿಸ್ತಾರವಾಗಿ ತಯಾರ ಮಾಡಿರುತ್ತೇವೆ. ಈ ಅಪೂರ್ವ ಗ್ರಂಥವನ್ನು ಪ್ರತಿಯೊಬ್ಬ ವೀರಶೈವರು ನೋಡಿ ತುಂಬಾ ಸಂತೋಷಭರಿತರಾಗುತ್ತಾರೆ. ಪ್ರತಿಯೊಬ್ಬರು ಟಪ್ಪಾಲು ಮೂಲಕ ೪ ಆಣೆ ಸ್ಟಾಂಪ ಕಳಿಸಿದರೆ ಉಚಿತವಾಗಿ ಕಳಿಸುತ್ತೇವೆ.

ಮ್ಯಾನೇಜರ್—

ವೀರಶೈವ ಪುರಾತನ ಗ್ರಂಥ ಪರಿಶೋಧನಾಲಯ.

ಹರಪನಹಳ್ಳಿ (ಜಿಲ್ಲಾ ಬಳ್ಳಾರಿ.)

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಬಿಡಿಸಂಚಿಕೆಗೆ ೧ ಆಣೆ.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೧ ನೆಯ ಅಗಷ್ಟ ೧೯೩೮. | ಸಂಚಿಕೆ ೪೭

ಜನಸೇವೆಯೇ ದೇವರಸೇವೆ.

## ಮಂತ್ರಿಮಂಡಲದ ಉದಯಾಸ್ತ!

XOX

ಮಧ್ಯಪ್ರಾಂತದ ಡಾ. ಖರೆಯವರ ಮಂತ್ರಿಮಂಡಲವು
ತಾ. ೨೯ ನೆಯ ದಿನ ಅಸ್ತವಾಗಿ ಶ್ರೀ. ರವಿಶಂಕರ ಶುಕ್ಲ
ಇವರ ಮಂತ್ರಿಮಂಡಲವು ಉದಯವಾಯಿತು.
ಈ ಮಂಡಲದಲ್ಲಿ
ಶ್ರೀ. ಮಿಶ್ರ, ಶ್ರೀ. ಮೆಹತಾ, ಶ್ರೀ. ಸಂಭಾಜಿರಾವ ಗೋಖಲೆ, ಶ್ರೀ ಭರೂಕಾ
ಈ ನಾಲ್ವರು ಮಂತ್ರಿಗಳಾಗಿದ್ದಾರೆ.

## ಹಿಂದು - ಮುಸಲ್ಮಾನರ ದೊಂಬಿ!

ಭಾಗಲಪುರದಲ್ಲಿ ತಾ. ೨೯ ನೆಯ ದಿನ ಹಿಂದುಗಳ ರಥೋತ್ಸವದ ಕಾಲಕ್ಕೆ
ಹಿಂದು-ಮುಸಲ್ಮಾನರಲ್ಲಿ ದೊಂಬಿಯಾಯಿತು.
೩ ಹಿಂದುಗಳು ಮರಣಹೊಂದಿದರು.

## ಬೌದ್ಧ-ಮುಸಲ್ಮಾನರ ದೊಂಬಿ!

ರಂಗೂನದಲ್ಲಿ ಬೌದ್ಧರಿಗೂ ಮುಸಲ್ಮಾನರಿಗೂ ತಾ. ೨೬ ರಿಂದ
ದೊಂಬಿ ಪ್ರಾರಂಭವಾಗಿ ೫೦ ಜನರು ಮರಣಹೊಂದಿದರು.
೪೦೪ ಜನರಿಗೆ ಗಾಯಗಳಾಗಿವೆ.

ದೇವನೇ



# ಶರಣ ಸಂದೇಶ

THE SHARANA SANDESHA.



## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೭. | ಆಲಮಟ್ಟಿ-ಸೋಮವಾರ ತಾರೀಖು ೧ ನೆಯ ಅಗಸ್ಟ ೧೯೩೮. | ಸಂಚಿಕೆ ೪೭

## ಮಹತ್ವದ ಸುದ್ದಿಗಳು.

* * *

— ಬುಧಗಾವ (ಮಿರಜ ಜ್ಯೂನಿಯರ್) ಸಂಸ್ಥಾನಾಧಿಪತಿಗಳು ಒಂದು ಲಕ್ಷ ರೂ. ಹಿಂದಿನ ಖಂದಾಯವನ್ನು ರೈತರಿಗೆ ಬಿಟ್ಟುಕೊಟ್ಟು ೧೦೦ಕ್ಕೆ ೨೫ ರಂತೆ ಖಂದಾಯವನ್ನು ಕಡಿಮೆಮಾಡಿದ್ದಾರೆ. ಮತ್ತು ಜವಾಬ್ದಾರಿ ಸರಕಾರವನ್ನು ಸ್ಥಾಪಿಸುವುದಾಗಿ ಸಾರಿದ್ದಾರೆ.

—ಗೋಕಾಕ ಗಿರಣಿಯಲ್ಲಿ ಮತ್ತೆ ಕೆಲಸಗಾರರು ಅಸಂತುಷ್ಟರಾಗಿದ್ದಾರೆಂದೂ ಮುಷ್ಕರ ಹಿಡಿಯುವರೆಂದೂ ಸುದ್ದಿ.

—ಈ ಸಾರೆಯ ಡಿಶಂಬರ್ ತಿಂಗಳಲ್ಲಿ ವೀರಶೈವ ಮಹಾಸಭೆಯನ್ನು ಹುಬ್ಬಳ್ಳಿಯಲ್ಲಿ ಕೂಡಿಸಬೇಕಾಗಿ ಅಲ್ಲಿಯ ಕೆಲವು ಮಹಾಶಯರು ಯೋಚಿಸಿದ್ದಾರೆ.

—ಮಹಾತ್ಮಾ ಗಾಂಧಿಯವರು ಡಾ. ಖರೆಯವರ ಅಪ್ರಮಾಣಿಕತನದ ವರ್ತನವನ್ನು ಸಂತಾಪ ಮೂಲಕ ಖಂಡಿಸಿದರೆಂದೂ ಮಧ್ಯಪ್ರಾಂತದ ಗವ್ಹರ್ನರರು ಈ ವಿವಾದದಲ್ಲಿ ನಡೆಸಿದ ರೀತಿನೀತಿಗಳು ಆಕ್ಷೇಪಕರವಾಗಿವೆಯೆಂದು ಸೂಚಿಸಿದರೆಂದೂ ಪ್ರಕಟವಾಗಿದೆ

—ಪ್ಯಾಲಿಸ್ಟಾಯಿನ್ ದೊಂಬಿಯಿಂದ ಕಳೆದ ಮೂರುವಾರಗಳಲ್ಲಿ ೭೬ ಜನರು ಮೃತಪಟ್ಟರು. ೧೭೦ ಜನರಿಗೆ ಗಾಯಗಳಾಗಿವೆ.

—ರಾಷ್ಟ್ರಾಧಿಪತಿಗಳಾದ ಶ್ರೀ. ಸುಭಾಷಚಂದ್ರ ಬೋಸರು ಮಧ್ಯಪ್ರಾಂತದ ಕಾಂಗ್ರೆಸ್ ಮಂತ್ರಿಮಂಡಲವು ಇನ್ನುಮೇಲಾದರೂ ಮತ್ಯೈಕ್ಯದಿಂದ ನಡೆಯಲೆಂದೂ ಅಲ್ಲಿಯ ಕಾಂಗ್ರೆಸ್ ಪಕ್ಷದವರೆಲ್ಲರೂ ಏಕಾಭಿಪ್ರಾಯದಿಂದ ರಾಷ್ಟ್ರಕಾರ್ಯ ಮಾಡಲೆಂದೂ ಸೂಚಿಸಿದ್ದಾರೆ.

— ಪುಣೆಯಲ್ಲಿ "ಮರಾಠವಾಡಾ" ಎಂಬ ವಾರ ಪತ್ರಿಕೆಯು ಹೊರಟು ನಿಜಾಮ ರಾಜ್ಯದ ಸುಧಾರಣೆಗಾಗಿಯೇ ಪ್ರಯತ್ನಿಸುತ್ತಲಿದೆ.

—ಕೊಲ್ಹಾಪುರ ಸಂಸ್ಥಾನದಲ್ಲಿ ನಾಗರಿಕರಿಗೆ ಇರಬೇಕಾಗಿರುವ ಲೇಖನ, ಭಾಷಣ, ಸಂಘಟನೆಯ ಪೂರ್ಣಸ್ವಾತಂತ್ರ್ಯಗಳು ದೊರೆಯಬೇಕೆಂದು ಆ ಸಂಸ್ಥಾನದ ಮುಖ್ಯ ಪ್ರಜೆಗಳು ಮಹಾರಾಜರಲ್ಲಿ ಪ್ರಾರ್ಥಿಸಿಕೊಂಡಿದ್ದಾರೆ

— ಮುಂಬೈಯಲ್ಲಿ ೭ ದೇವಾಲಯಗಳು ಆದಿ ಹಿಂದುಗಳ ಪ್ರವೇಶಕ್ಕೆ ಪಾತ್ರವಾದವು. ಈಗ ಅಲ್ಲಿ ಒಟ್ಟು ೪೧ ದೇವಾಲಯಗಳಲ್ಲಿ ಆದಿಹಿಂದುಗಳು ಪ್ರವೇಶಿಸುವಂತಾಯಿತು.

### ಶರಣ ಸಂದೇಶ

**ಪತ್ರಿಕೆಯು ಪದ್ಧತಿಯ ಪ್ರಕಾರ ತಾ. ೮-೮-೩೮ ನೆಯ ದಿನ ಪ್ರಕಟವಾಗದೆ ತಾ. ೧೫-೮-೩೮ ನೆಯ ದಿನ ಪ್ರಕಟವಾಗುವುದು. ಅದು ೮ ನೆಯ ವರುಷದ ಮೊದಲನೆಯ ಸಂಚಿಕೆಯು.**

—ಮ್ಯಾನೇಜರ್.

—"ಅಮರ ಜ್ಯೋತಿ" ಎಂಬ ಪತ್ರಿಕೆಯು ನಿಜಾಮ ರಾಜ್ಯದ ಕುಂದು ಕೊರತೆಗಳ ನಿವಾರಣೆಗೆ ಜಾಗೃತಿಯನ್ನುಂಟುಮಾಡಲು ನಾಗಪುರದಲ್ಲಿ ಹೊರಡುತ್ತಲಿದೆ.

—ಹಿಂದಿ ಭಾಷೆಯ ವಿರೋಧದ ಚಟುವಟಿಕೆಯ ಮೂಲಕ ಈ ವರೆಗೆ ಮದ್ರಾಸಿನಲ್ಲಿ ೧೭೪ ಜನರನ್ನು ಕೈಸೆರೆ ಹಿಡಿದಿದ್ದಾರೆ.

# ಲಿಂಗರಾಜ ಕಾಲೇಜ್.

ಕರ್ನಾಟಕದಲ್ಲಿ ಅನೇಕ ವರುಷಗಳ ವರಿಗೆ ಪ್ರೌಢ ವಿದ್ಯಾಲಯ (ಕಾಲೇಜ) ಗಳು ಇರಲೇ ಇಲ್ಲ. ಸುಮಾರು ೨೦ ವರುಷಗಳ ಹಿಂದೆ ಮೊದಲನೆಯ ಸಾರೆಗೆ ಸರಕಾರದವರು ಧಾರವಾಡದಲ್ಲಿ ಕರ್ನಾಟಕದ ಜನರಿಂದ ಎರಡು ಲಕ್ಷ ರೂ. ಗಳನ್ನು ತೆಗೆದುಕೊಂಡು ಒಂದು ಕಾಲೇಜನ್ನು ಪ್ರಾರಂಭಿಸಿದರು. ಆಗಲಾದರೂ ಸಹ ಶಾಸ್ತ್ರೀಯ ವಿದ್ಯಾಭ್ಯಾಸಕ್ಕೆ ಸೌಕರ್ಯಗಳನ್ನು ಕಲ್ಪಿಸಲಿಲ್ಲ. ಎಂದರೆ ಶಾಸ್ತ್ರಾಭ್ಯಾಸದ ಬೇರೆ ಬೇರೆ ಶಾಖೆಗಳನ್ನು ಪ್ರಾರಂಭಿಸಲಿಲ್ಲ. ಕೇವಲ ಶಾಸ್ತ್ರ (ಸಾಯನ್ಸ್) ದ ಮೇಲೆಯೇ ಸಂಪೂರ್ಣವಾಗಿ ಅವಲಂಬಿಸಿರುವ ಈಗಿನ ಕಾಲದಲ್ಲಿ ಶಾಸ್ತ್ರೀಯ ಅಭ್ಯಾಸಕ್ಕೆ ಸೌಕರ್ಯಗಳಿಲ್ಲದಿದ್ದರೆ ಬಹಳ ಅನಾನುಕೂಲವೆನ್ನುವುದರಲ್ಲಿ ಸಂದೇಹವೇ ಇಲ್ಲ.

ನಮ್ಮ ಹಿಂದುಸ್ಥಾನದಲ್ಲಿಯೂ ಸಹ ಎಲ್ಲೆಲ್ಲಿಯೂ ಆಕಾಶವಾಣಿ (ರೇಡಿಯೋ ಅಥವಾ ವೈಯರ್‌ಲೆಸ್) ಔಷಧಿಗಳ ಮತ್ತು ಇತರ ಅನೇಕ ರೀತಿಯ ಕಾರಖಾನೆಗಳೂ, ಎಲೆಕ್ಟ್ರಿಕ್ ಕಂಪನಿಗಳೂ, ಕಾರಖಾನೆಗಳೂ, ವಿಮಾನಗಳೂ ಮತ್ತು ಬೇರೆ ಶಾಸ್ತ್ರಜ್ಞಾನದ ಮೇಲೆ ಅವಲಂಬಿಸಿರುವ ಅನೇಕಾನೇಕ ಸಂಸ್ಥೆಗಳೂ ಹರಡುತ್ತಿವೆ. ಇವೆಲ್ಲ ಸಂಸ್ಥೆಗಳು ಸಮರ್ಪಕವಾಗಿ ನಡೆಯುವದಕ್ಕೋಸ್ಕರ ಸರಿಯಾದ ಜನರು ಬೇಕಾಗುತ್ತಾರೆ. ಇಷ್ಟೇ ಅಲ್ಲದೆ ಈಗ ಹಿಂದುಸ್ಥಾನಕ್ಕೆ ಹೆಚ್ಚು ಹೆಚ್ಚಾಗಿ ರಾಜಕೀಯ ಮತ್ತು ಆರ್ಥಿಕ ಹಕ್ಕುಗಳು ಸಿಗುತ್ತಿವೆ. ನಮ್ಮ ಜನರೇ ರಾಜ್ಯಭಾರದಲ್ಲಿ ಮುಖ್ಯ ಭಾಗವಹಿಸಿ ದೇಶದ ಅಭ್ಯುದಯಕ್ಕೋಸ್ಕರ ಪ್ರಯತ್ನಿಸಲಾರಂಭಿಸಿರುವರು. ದೇಶದ ಸಾಂಪತ್ತಿಕ ಸ್ಥಿತಿಯ ಸುಧಾರಣೆಯಾಗಬೇಕಾದರೆ ಸಣ್ಣ ದೊಡ್ಡ ಉದ್ಯೋಗಗಳು, ಕಾರಖಾನೆಗಳು, ಉತ್ಪನ್ನವಾಗಬೇಕು. ಪರದೇಶಗಳಿಂದ ತಯಾರಾದ ಪದಾರ್ಥಗಳನ್ನು ತರಿಸಿಕೊಳ್ಳುವುದಕ್ಕೆ ಪ್ರತಿಯಾಗಿ ಇಲ್ಲಿಯೇ ಎಲ್ಲವನ್ನೂ ತಯಾರಿಸತಕ್ಕದ್ದು ಅವಶ್ಯಗತ್ಯ. ಮತ್ತು ದೇಶದಲ್ಲಿ ಈಗ ಸಾಧಾರಣವಾಗಿ ಎಲ್ಲರೂ ಈ ರೀತಿಯ ಬೆಳವಣಿಗೆಯು ಆಗಬೇಕೆಂದು ಬಹುವಾಗಿ ಇಚ್ಛಿಸುತ್ತಿದ್ದಾರೆ. ಔದ್ಯೋಗಿಕ ಸಂಸ್ಥೆಗಳು, ಕಾರಖಾನೆಗಳು, ಹೆಚ್ಚಬೇಕಾದರೆ ಔದ್ಯೋಗಿಕ ವಿದ್ಯಾಲಯಗಳು ಸ್ಥಾಪಿತವಾಗಬೇಕು. ಆ ವಿದ್ಯಾಲಯಗಳಿಂದ ಶಾಸ್ತ್ರೀಯ ವಿದ್ಯಾಭ್ಯಾಸವನ್ನು ಪಡೆದವರೇ ಪ್ರಯೋಜನ ಹೊಂದಬಲ್ಲರು. ಮುಖ್ಯವಾಗಿ ಶಾಸ್ತ್ರೀಯ ಮತ್ತು ಔದ್ಯೋಗಿಕ ವಿದ್ಯೆಗಳು ಈಗ ದೇಶದಲ್ಲಿ ಅದರಲ್ಲಿಯೂ ವಿಶೇಷವಾಗಿ ಕರ್ನಾಟಕದಲ್ಲಿ ಬಹಳ ಹಿಂದುಳಿದಿವೆ. ಕರ್ನಾಟಕದಲ್ಲಿ ಜನರು ಸರಿಯಾದವರು ಸಿಗದಿದ್ದರೆ ಪುನಃ ಹೊರಗಿನಿಂದ ಜನರನ್ನು ಕರೆಯಿಸಿಕೊಳ್ಳಬೇಕಾಗುವುದು. ಹೀಗಾಗಿ ಅನೇಕ ವರ್ಷಗಳ ವರಿಗೆ ಬಹಳ ಹಿಂದುಳಿದಿರುವ ಈ ಪ್ರಾಂತವು ಇನ್ನೂ ಹಿಂದಕ್ಕೇ ಬೀಳುವುದು. ಇಷ್ಟು ವರುಷಗಳಾದರೂ ಸಹ ಧಾರವಾಡದಲ್ಲಿ ಇನ್ನೂ ವರಿಗೆ ಎಲ್ಲಾ ಶಾಸ್ತ್ರೀಯ ವಿಷಯಗಳಲ್ಲಿ ಪ್ರೌಢ ವಿದ್ಯಾಭ್ಯಾಸಕ್ಕೋಸ್ಕರ ಸರಿಯಾದ ಸೌಕರ್ಯಗಳಿಲ್ಲದಿರುವುದು ಕರ್ನಾಟಕದ ದುರವಸ್ಥೆಯನ್ನು ಸೂಚಿಸುತ್ತದೆ.

ಈಗ ನಾಲ್ಕಾರು ವರುಷಗಳಿಂದ ಬೆಳಗಾವಿಯಲ್ಲಿ ಕಾಲೇಜ್ ಪ್ರಾರಂಭವಾಗಿರುವುದು ಸರಿಯಷ್ಟೆ. ಇಲ್ಲಿಯೂ ಸಹ ಈಗ ಚರಿತ್ರೆ, ತತ್ವಜ್ಞಾನ, ಭಾಷೆಗಳು ಮುಂತಾದ ಇಂತಹ ವಿಷಯಗಳಲ್ಲಿಯೇ ಶಿಕ್ಷಣ ಸೌಕರ್ಯಗಳಿವೆಯೇ ವಿನಾ ಶಾಸ್ತ್ರೀಯ ಶಾಖೆಗಳಲ್ಲಿ ಪದವೀ ಪರೀಕ್ಷೆಯನ್ನು ಹೊಂದಲು ಅನುಕೂಲತೆಗಳಿಲ್ಲ. ಕಾರಣವೇನೆಂದರೆ- ಈ ವಿಷಯಗಳಿಗೆ ಸ್ವಲ್ಪ ಹೆಚ್ಚು ಹಣ ಪ್ರಾರಂಭದಲ್ಲಿ ಬೇಕಾಗುತ್ತದೆ. ಮಹಾರಾಷ್ಟ್ರದಲ್ಲಿ ಅನೇಕ ಪ್ರೌಢ ವಿದ್ಯಾಲಯಗಳಿವೆ. ಪುಣೆಯೊಂದು ಪಟ್ಟಣದಲ್ಲಿಯೇ ಎರಡು ಮೂರು ಕಾಲೇಜುಗಳಿವೆ. ಅಲ್ಲಿ ಎಲ್ಲಾ ಶಾಸ್ತ್ರಗಳಲ್ಲಿ ಹೆಚ್ಚಿನ ಶಿಕ್ಷಣ ದೊರೆಯುತ್ತದೆ. ಅದೇ ಜನರು (ಮಹಾರಾಷ್ಟ್ರೀಯರು) ಹೋದ ವರುಷ ಬೊಂಬಾಯಿ ಪಟ್ಟಣದಲ್ಲಿ ಒಂದು ಕಾಲೇಜವನ್ನು ಪ್ರಾರಂಭಿಸಿರುವರು. ಕೇವಲ ಜಾಗಕ್ಕೋಸ್ಕರ ಮತ್ತು ಕಟ್ಟಡಕ್ಕೋಸ್ಕರ ಆರು ಲಕ್ಷ ರೂ. ಗಳನ್ನು ಖರ್ಚುಮಾಡಬೇಕಾಯಿತು. ಆದರೂ ಹಿಂಜರಿಯದೆ ಈ ವರುಷ ಶಾಸ್ತ್ರೀಯ ವಿದ್ಯಾಭ್ಯಾಸವನ್ನು ಪ್ರಾರಂಭಿಸಿರುವರು.

ಎಂದಮೇಲೆ ಅವರಲ್ಲಿ ಜ್ಞಾನದ ಎಲ್ಲಾ ಶಾಖೆಗಳ ಮೇಲೂ ಎಷ್ಟು ಆದರ ಬುದ್ಧಿ ಇದೆ ಮತ್ತು ಅದಕ್ಕೋಸ್ಕರ ಅವರು ಎಷ್ಟು ಧನ ಸಹಾಯ ಮತ್ತು ಸ್ವಾರ್ಥತ್ಯಾಗ ಮಾಡಲು ಸಿದ್ಧರಿರುವರೆಂಬುದು ವ್ಯಕ್ತವಾಗುತ್ತದೆ. ಮತ್ತು ವಿದ್ಯಾಭ್ಯಾಸದ ಸಂಗತಿಗಳಲ್ಲಿ ಅವರು ಇಷ್ಟು ಮುಂದೆ ಬಂದಿರುವುದೇ ಅವರ ಏಳಿಗೆ ಮತ್ತು ಅಧಿಕಾರಾರೋಹಣಗಳಿಗೆ ಮುಖ್ಯ ಕಾರಣಗಳಾಗಿವೆ ಈಗ ಲಿಂಗರಾಜ ಕಾಲೇಜಿನ ಶಾಸ್ತ್ರೀಯ ಪ್ರೌಢ ಶಿಕ್ಷಣವನ್ನು ಪ್ರಾರಂಭಿಸಲು ದೊಡ್ಡ ಕೊರತೆಯೆಂದರೆ ಧನಸಹಾಯದ ಅಭಾವವೇ ಸರಿ. ಪ್ರಾರಂಭಿಸಲು ಒಂದು ಕಟ್ಟಡ ಬೇಕಾಗುತ್ತದೆ. ಅದಕ್ಕೆ ಸಾಧಾರಣವಾಗಿ ಒಂದು ಲಕ್ಷ ರೂ. ಗಳು ಬೇಕಾಗುವವು. ಮತ್ತು ಆಯಾ ಶಾಖೆಗಳಿಗೆ ಸರಿಯಾದ ಪ್ರಯೋಗಶಾಲೆ (ಲ್ಯಾಬೊರೆಟರಿ) ಗಳನ್ನು ಏರ್ಪಡಿಸಲು ಸುಮಾರು ಇನ್ನೊಂದು ಲಕ್ಷ ರೂ. ಗಳು ಬೇಕಾಗುತ್ತವೆ. ಹೀಗೆ ಸುಮಾರು ಎರಡು ಲಕ್ಷ ರೂ. ಗಳು ಬೇಕಾಗುತ್ತವೆ. ಇಷ್ಟು ಹಣ ವೆಚ್ಚಮಾಡಿ ಎಲ್ಲಾ ಶಾಖೆಗಳಿಗೂ ಇಲ್ಲಿ ಏರ್ಪಾಡು ಮಾಡಿದರೆ ಈ ಲಿಂಗರಾಜ ಕಾಲೇಜು ಸರ್ವಾಂಗ ಸುಂದರವಾಗಿ ಜನರ ಶಿಕ್ಷಣದ ಎಲ್ಲ ಕೊರತೆಗಳೂ ದೂರಾಗುತ್ತವೆ. ಕರ್ನಾಟಕದ ಲಿಂಗಾಯತ ಮಹಾನುಭಾವರು ಈ ದೊಡ್ಡ ಸಂಸ್ಥೆಗೆ ಕಾರಣೀಭೂತರಾಗಿರುವರು. ಅವರ ಉದಾರಾಶ್ರಯದಿಂದಲೇ ಇದು ಪೋಷಿತವಾಗಿ ಆ ಸಮಾಜಕ್ಕೆ ಕೀರ್ತಿದಾಯಕವಾಗಿ ಪರಿಣಮಿಸಿದೆ. ನೂರಾರು ವಿದ್ಯಾರ್ಥಿಗಳು ಈಗ ಇಲ್ಲಿ ಪ್ರತಿ ವರುಷವೂ ಕಲಿಯಲು ಬರುತ್ತಾರೆ. ಆದರೆ ಶಾಸ್ತ್ರೀಯ ಜ್ಞಾನ ಪಡೆಯಲಪೇಕ್ಷಿಸುವವರು ಬೇರೆ ಬೇರೆ ದೂರ ಸ್ಥಳಗಳಿಗೆ ಹೋಗಬೇಕಾಗುತ್ತದೆ.

ಈ ಒಂದು ದೊಡ್ಡ ಕೊರತೆಯನ್ನು ತಪ್ಪಿಸಿದರೆ ಇಲ್ಲಿಯ ಕಾಲೇಜು ಸಂಪೂರ್ಣತೆಯನ್ನು ಪಡೆದಂತಾಗುತ್ತದೆ. ಆಗ ಇದು ಇಡೀ ಸಮಾಜಕ್ಕೆ ಕಿರೀಟಪ್ರಾಯವಾಗಿ ಪರಿಣಮಿಸುವುದರಲ್ಲಿ ಸಂದೇಹವಿಲ್ಲ. ಇಂತಹ ಸಂಪೂರ್ಣತೆಯನ್ನು ಉಂಟುಮಾಡಲು ಉದಾರ ಹಸ್ತದಿಂದ ಸಹಾಯಮಾಡಲು ಕರ್ನಾಟಕದ ಶ್ರೀಮಂತ ಮಹನೀಯರು ಮುಂದೆ ಬರಬೇಕಾಗಿದೆ. ವಂಟಮುರಿಯ ಶ್ರೀ. ರಾಜಾ ಲಖಮನಗೌಡ, ಬಸವಪ್ರಭು ಸರದೇಸಾಯಿ ರಾಜಾಸಾಹೇಬರು ಈ ಸಂಸ್ಥೆಗೆ ಒಂದು ಲಕ್ಷಕ್ಕಿಂತಲೂ ಹೆಚ್ಚು ಧನಸಹಾಯ ಮಾಡಿ ಚಿರಸ್ಮರಣೀಯರಾಗಿರುವರು. ಕರ್ನಾಟಕದಲ್ಲಿ ಶ್ರೀ ರಾಜಾ ಸಾಹೇಬರು ಅನೇಕಾನೇಕ ದಾನಧರ್ಮಗಳನ್ನು ಸತ್ಕಾರ್ಯಗಳಿಗೋಸ್ಕರಮಾಡಿ ಕರ್ನಾಟಕವನ್ನು ಚಿರಋಣಿಯನ್ನಾಗಿಮಾಡಿದ್ದಾರೆ. ಅವರ ಔದಾರ್ಯವನ್ನೂ ಸೌಜನ್ಯವನ್ನೂ ಎಷ್ಟು ಹೇಳಿದರೂ



ಶಾ. ಶ. ೧೮೬೦ ನೆಯ ಶ್ರಾವಣ ಶು|| ೬ ಸೋಮವಾರ.

# ಖರೆಯವರ ಕುಟಿಲ ಮಾರ್ಗ.

ಮಧ್ಯಪ್ರಾಂತದ ಮುಖ್ಯ ಮಂತ್ರಿಗಳಾಗಿದ್ದ ಡಾ. ಖರೆಯವರು ವಕ್ರಮಾರ್ಗವನ್ನು ಅನುಸರಿಸಿದ್ದರಿಂದೂ ಆ ಮೇಲೆ ಸರಳ ಮಾರ್ಗಕ್ಕೆ ಬಂದರೆಂದೂ ಕಳೆದ ವಾರ ನಾವು ತಿಳಿಸಿದ್ದೆವಷ್ಟೆ. ಅನಂತರ ಮತ್ತೆ ಅವರು ಕುಟಿಲ ಮಾರ್ಗವನ್ನೇ ಅನುಸರಿಸಿ ಕಾಂಗ್ರೆಸ್ಸಿನ ರಾಜ್ಯಭಾರಕ್ಕೆ ಎಷ್ಟೋ ಕಲಂಕವನ್ನು ಉಂಟುಮಾಡಿದುದು ಅತ್ಯಂತ ವಿಷಾದದ ಸಂಗತಿಯು.

ಅಧಿಕಾರದ ಆಸೆಗಾಗಿ ತಪ್ಪು ದಾರಿಗೆ ಹೋದ ಇವರ ಈ ರೀತಿಯನ್ನು ಕಾಂಗ್ರೆಸ್ ವರ್ಕಿಂಗ್ ಕಮಿಟಿಯವರು ನಿಷ್ಠುರವಾಗಿ ಖಂಡಿಸಿ ಇವರು ಹೊಣೆಗಾರಿಕೆಯ ಕಾರ್ಯಕ್ಕೆ ಅನರ್ಹರೆಂದು ಸಾರಿದುದು ವಿಹಿತವಾಗಿಯೇ ಇದೆ.

ಪ್ರಾಂತಿಕ ಅಭಿಮಾನದಿಂದಲೋ ಅಥವಾ ಪಕ್ಷಾಂಧತೆಯಿಂದಲೋ ಡಾ. ಖರೆಯವರನ್ನು ಎತ್ತಿಹಿಡಿದು ವರ್ಕಿಂಗ್ ಕಮಿಟಿಯನ್ನು ಅನೇಕರು ದೂಷಿಸುತ್ತಿದ್ದಾರೆ. ಆದರೆ ಸತ್ಯಪ್ರಿಯರು ಡಾ. ಖರೆಯವರ ರೀತಿನೀತಿಗಳನ್ನು ಖಂಡಿಸದೆ ಇರಲಾರರು.

### ಖರೆಯವರು ಹೀಗೆ ನಡೆಯಬೇಕಾಗಿತ್ತು.

ಮಧ್ಯಪ್ರಾಂತದ ಮಂತ್ರಿಮಂಡಲದಲ್ಲಿದ್ದ ಖರೆಯವರ ಪಕ್ಷವಾಗಲಿ ಅಥವಾ ಶುಕ್ಲರ ಪಕ್ಷವಾಗಲಿ ಇಲ್ಲವೆ ಮರಾಠಿ ಪಕ್ಷವಾಗಲಿ ಅಥವಾ ಹಿಂದಿ ಪಕ್ಷವಾಗಲಿ ಸಂಪೂರ್ಣ ನಿರ್ದೋಷಿಯಾಗಿದ್ದಿತೆಂದು ಹೇಳಲು ಸಾಧ್ಯವಿಲ್ಲ. ಈ ಮುಂಚೆ ಸರದಾರ ಪಟೇಲರೇ ಉಭಯ ಪಕ್ಷಗಳ ಸ್ಥಿತಿಗಳನ್ನೂ ತಿಳಿಸಿದ್ದಾರೆ.

ತಮ್ಮ ಸಹಕಾರಿ ಮಂತ್ರಿಗಳಿಗೂ ತಮಗೂ ಭಿನ್ನಾಭಿಪ್ರಾಯವುಂಟಾಗಿ ಅದು ನಿವಾರಣೆಯಾಗದಂತೆ ಅಥವಾ ವರ್ಕಿಂಗ್ ಕಮಿಟಿ ಮೇಲ್ವಿಚಾರಣೆ ಅಯೋಗ್ಯವಾಗಿದ್ದಂತೆ ಡಾ. ಖರೆಯವರಿಗೆ ತೋರಿದ್ದರೆ ಅವರು ವರ್ಕಿಂಗ್ ಕಮಿಟಿಯ ಕಡೆಗೆ ತಮ್ಮ ಕಾರ್ಯದ ಬಿಡುಗಡೆ ಪತ್ರವನ್ನು ಮುಂಚೆಯೇ ಬರೆದುಕೊಡಬೇಕಾಗಿತ್ತು. ಇದೇ ಪ್ರಮಾಣಿಕರ ಮಾರ್ಗ; ಅಧಿಕಾರದ ಆಸೆಗಾಗಿ ಮಂತ್ರಿಗಳಾಗಿರದೆ ಜನಸೇವೆಗಾಗಿಯೇ ಇದ್ದೇವೆಂದು ನುಡಿದ ಮಾತಿಗೆ ತಕ್ಕಂತೆ ನಡೆಯುವವರ ರೀತಿ.

ಡಾ. ಖರೆಯವರಲ್ಲಿ ಇಂಥ ನಿರಪೇಕ್ಷೆಯಿಲ್ಲದೆ ಇದ್ದಿದ್ದರೆ ವರ್ಕಿಂಗ್ ಕಮಿಟಿಯು ಇನ್ನು ೨-೩ ದಿನಗಳಲ್ಲಿಯೇ ಕೂಡುವುದಿರುವುದರಿಂದ ಆ ವರೆಗಾದರೂ ಗವ್ಹರ್ನರರ ಕಡೆಗೆ ಬಿಡುಗಡೆ ಪತ್ರ ಬರೆದುಕೊಡಬೇಡಿರೆಂದು ಶ್ರೀ. ರಾಜೇಂದ್ರ ಪ್ರಸಾದರೇ ಮೊದಲಾದವರು ಹೇಳಿದ ಮಾತನ್ನಾದರೂ ಕೇಳಿ ಆ ವರೆಗೆ ತಡೆಯಬೇಕಾಗಿದ್ದಿತು. ಆದೇ ಹೊಣೆಗಾರಿಕೆಯ ಇಂಥ ಸ್ಥಾನದಲ್ಲಿದ್ದವರು ಅನ್ಯರಿಗೆ ಆಜ್ಞಾಪಾಲನೆಯ ಪದ್ಧತಿಯನ್ನು ಕಲಿಸುವ ರೀತಿ.

ಡಾ. ಖರೆಯವರು ಈ ನ್ಯಾಯವಾದ ಮಾರ್ಗಗಳನ್ನು ಅನುಸರಿಸದೆ ತಮ್ಮ ಕೆಲಸದ ಬಿಡುಗಡೆ ಪತ್ರವನ್ನು ಗವ್ಹರ್ನರರ ಕಡೆಗೆ ಕೊಟ್ಟು, ಭಿನ್ನಾಭಿಪ್ರಾಯದ ತಮ್ಮ ವ್ಯವಸಾಯ ಬಂಧುಗಳನ್ನು ಗವ್ಹರ್ನರರಿಂದ ತಳ್ಳಿಸಿ, ತಾವು ಬೇರೊಂದು ಮಂತ್ರಿಮಂಡಲವನ್ನೇ ನಿರ್ಮಿಸಿಕೊಂಡರು!

ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಒಪ್ಪಿಗೆಯನ್ನು ತೆಗೆದುಕೊಳ್ಳದೆ ಇಂಥ ತಲೆ ಕೆಳಗೆ ಮಾಡುವ ಕಾರ್ಯವನ್ನೂ ಸ್ವೇಚ್ಛೆಯಾಗಿಯೇ ನಡೆಯಿಸಿ ಇಷ್ಟೆಲ್ಲಾ ಕಾಂಗ್ರೆಸ್ಸಿನ ಹಿತಕ್ಕಾಗಿಯೇ ತಾನು ಮಾಡಿದೆನೆಂದು ಡಾ. ಖರೆಯವರು ಹೇಳಬೇಕಾದರೆ ಅವರಲ್ಲಿ ಯಾವ ವಿಧವಾದ ಎದೆಗಾರಿಕೆಯಿದೆಯೆಂದು ತಿಳಿಯಬೇಕು? ಇಂಥವರ ಈ ಕುಟಿಲ ಮಾರ್ಗವೂ ಸರಳ ಮಾರ್ಗವಾಗಿಯೇ ಅನೇಕರಿಗೆ ತೋರುತ್ತಿರಬೇಕಾದರೆ ಅವರ ಪಕ್ಷಾಂಧತೆಯಾದರೂ ಎಷ್ಟು ಘನವಾದುದಾಗಿರಬಹುದು?

ತಮ್ಮ ಅಂತರಾತ್ಮನ ಧ್ವನಿಯು ಹೀಗೆ ಮಾಡಲು ತಮಗೆ ಹೇಳಿತೆಂತಲೂ ಈ ಆತ್ಮಸಂಧಾನ ನಿರತ ಡಾ. ಖರೆಯವರು ಆಗ ಪ್ರಕಟಿಸಿದ್ದರು! ಅಸೆಂಬ್ಲಿಯ ಬಹುಮತವು ತಮ್ಮ ಕಡೆಗೇ ಆಗಬಹುದೆಂಬ ಕಲ್ಪನೆಯು ಆಗ ಅವರಿಗೆ ಇದ್ದಿರಬಹುದು. ಅಂತೆಯೇ ಆಗ ಹಾಗೆ ಧ್ವನಿ ಕೇಳಿಸಿರಬೇಕು! ವರ್ಕಿಂಗ್ ಕಮಿಟಿಯು ಸೇರಿ ಇವರನ್ನು ವಿಚಾರಣೆಗೆ ಗುರಿಮಾಡಲು ಆಗ ತಾವು ಅವಸರದಲ್ಲಿ ಆ ಎಲ್ಲಾ ತಪ್ಪುಗಳನ್ನು ಮಾಡಿದೆವೆಂದು ಹೇಳಿ ಮತ್ತೆ ಮಂತ್ರಿತ್ವಕ್ಕೆ ಬಿಡುಗಡೆ ಪತ್ರವನ್ನು ಗವ್ಹರ್ನರರ ಕಡೆಗೆ ಬರೆದುಕೊಟ್ಟರು.

ಡಾ. ಖರೆಯವರ ಈ ಚಂಚಲ ವೃತ್ತಿಯು ಗವ್ಹರ್ನರರಿಗೆ ಆಶ್ಚರ್ಯವನ್ನು ಉಂಟುಮಾಡಿದುದು ಸ್ವಾಭಾವಿಕವಷ್ಟೆ. ಹೊಣೆಗಾರಿಕೆಯನ್ನು ಸ್ವಲ್ಪಾದರೂ ಅರಿತ ಸಾಮಾನ್ಯ ಮನುಷ್ಯನು ಕೂಡಾ ಹೀಗೆ ವರ್ತಿಸಲಾರನು.

ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಹೇಳಿಕೆಯಂತೆ ಆ ಮೇಲಾದರೂ ಸಂಪೂರ್ಣ ನಡೆದರೆ? ಇಲ್ಲವೇ ಇಲ್ಲ. ಮತ್ತೆ ಮಂತ್ರಿಗಳಾಗಬೇಕೆಂಬ ಹವ್ಯಾಸ. ಪಕ್ಷದ ಪ್ರಮುಖರಾಗಿರಬೇಕೆಂಬ ಆಶೆ. ಅದಕ್ಕಾಗಿ ಏನೇನೋ ಪ್ರಯತ್ನ.

ಇಂಥ ಕುಟಿಲ ಮಾರ್ಗದವರಿಗೆ ಕಾಂಗ್ರೆಸ್ಸಿನಲ್ಲಿ ಹೊಣೆಗಾರಿಕೆಯ ಕಾರ್ಯ ದೊರೆಯಲಾರದೆಂದು ವರ್ಕಿಂಗ್ ಕಮಿಟಿಯು ನಿರ್ಧರಿಸಿದುದು ನ್ಯಾಯವಾಗಿಲ್ಲವೆ? ಆ ಪ್ರಾಂತದ ಅಸೆಂಬ್ಲಿ ಕಾಂಗ್ರೆಸ್ ಸಭಾಸದರಲ್ಲಿ ಬಹು ಭಾಗದವರು ಇವರ ಪಕ್ಷವನ್ನು ಮಾನ್ಯಮಾಡದಿದ್ದುದೂ ವಿಹಿತವಾಗಿಯೇ ಇದೆ.

## ವೀರ ನಾರೀ ಮಣಿ!

### ಮುಸಲ್ಮಾನನ ಅತ್ಯಾಚಾರ.

ಡಾಕಾ ನ್ಯಾಯಾಧೀಶರಲ್ಲಿ ಒಂದು ವ್ಯಾಜ್ಯ ಬಂದಿದ್ದಿತು. ಅದರ ವಿವರ ಹೀಗಿದೆ—

ಕಳೆದ ಚೈತ್ರ ಮಾಸದಲ್ಲಿ ಕೃಷ್ಣ ಕುಮಾರ ಎಂಬುವವರ ಮನೆಯಲ್ಲಿ ರಾತ್ರಿ ರಹಿಮಾನ ಎಂಬುವವನು ನುಗ್ಗಿ ಅವರ ಪತ್ನಿಯಾದ ಸೌ|| ಲಲಿತಾ ಎಂಬುವವರನ್ನು ಭ್ರಷ್ಟಗೊಳಿಸುವ ಪ್ರಯತ್ನ ಮಾಡಿದನು. ಆಗ ಆ ವೀರ ನಾರೀಮಣಿಯು ತೀಕ್ಷ್ಣ ಶಸ್ತ್ರದಿಂದ ಅವನಿಗೆ ಭಯಂಕರ ಗಾಯಗೊಳಿಸಿದಳು. ಆತನು ವೈದ್ಯಾಲಯದಲ್ಲಿ ಮೃತಪಟ್ಟನು.

ಆಮೇಲೆ ಸೌ|| ಲಲಿತಾ ಮತ್ತು ಕೃಷ್ಣಕುಮಾರ ಇವರು ರಹಿಮಾನನನ್ನು ಕೊಲೆ ಮಾಡಿದರೆಂದು ಅವರ ಮೇಲೆ ವ್ಯಾಜ್ಯ ಹೂಡಿದ್ದರು. ನ್ಯಾಯಸ್ಥಾನದಲ್ಲಿ ವಿಚಾರಣೆ ನಡೆದು ಇಬ್ಬರೂ ನಿರಪರಾಧಿಗಳೆಂದು ತೀರ್ಮಾನವಾಯಿತು.

---

## ಅತ್ಯಾಚಾರಿಗಳಿಗೆ ಯಾವ ಗತಿ?

(ಬರೆದವರು— ಕವಿ ಬಸವದಾಸ.)

ಅಯ್ಯಾ ತಮ್ಮ ಶರಣ ಸಂದೇಶದ ೪೫ ನೇ ಸಂಚಿಕೆಯಲ್ಲಿ ಗುಲಬರ್ಗಾ ಶ್ರೀಶರಣ ಬಸವೇಶ್ವರನ ದೇವಾಲಯದಲ್ಲಿ ತುಂಟ ಮುಸಲ್ಮಾನರು ಧರ್ಮಾಂಧತೆಯಿಂದ ಬಸವಣ್ಣನ ಮೂರ್ತಿಯನ್ನು ಒಡೆದು ಗದ್ದುಗೆಯನ್ನು ಕಿತ್ತು ಆ ಪವಿತ್ರ ಸ್ಥಳದಲ್ಲಿ................ ಮಾಡಿದ ವಾರ್ತೆ ಓದಿ ಹೃದಯಕ್ಕೆ ಬರೆ ಕೊಟ್ಟಂತಾದುದಲ್ಲದೆ ನ್ನನವು ಭಯಚಿಂತೆಪಟ್ಟು ಕೆಲ ಹೊತ್ತು ಯೋಚನೆಯೊಳಗಾಯಿತು!

ಹಿಂದೂ ಧರ್ಮಕ್ಕೆ ಧಕ್ಕೆ ಹತ್ತಿದಂತೆ ಪಾಳ್ಪ ಉಪಾಯವು ಇತ್ತಿತ್ತಲಾಗಿ ಮುಖಂಡರಲ್ಲಿ ಜಾಗೃತಿಗೊಂಡ ವಿಚಾರದಂತೆ ಸಂಘಟನೆಯೇ ಸರಿ. ಹಿಂದಕ್ಕೆ ಈ ತರದ ಇದಕ್ಕೂ ಭಯಂಕರವಾದ ಅತ್ಯಾಚಾರಗಳು ಘಟಿಸುವಾಗ್ಗೆ ಶ್ರೀ ಸಮರ್ಥರ ಪ್ರೇರಣೆಯಿಂದ ಶಿವಭೂಪನು ನಿವಾರಣೆ ಮಾಡಿದ್ದು ಇತಿಹಾಸದಿಂದ ಗೊತ್ತಾಗುವದು. ಅಂತೂ ಸಂಘಟನೆಗೆ ಸ್ವಮತದ ರಾಜಬಲ ಇಲ್ಲವೆ ಗುರುಬಲ ಬೇಕು.

ತ್ರಿಪದಿ— ಮಂಗವೃತ್ತಿಯ ಜನಕೆ ಸಂಘಟನೇ ಯಥವಾ|
ತುಂಗ ತಪವುಳ್ಳ ಮಹಾತ್ಮರ ಬಲಬೇಕು|
ಹಿಂಗುವದು ಕಷ್ಟ ದಾಸಾರ್ಯ||

ಶಂಭುವು ಕಣ್ಣು ತೆರೆದಾಗಲ್ಲವೆ ಅಂಥ ರಾಜಬಲ ಗುರುಬಲ ದೊರೆಯುವದು. ಇತ್ತಿತ್ತ ತಪೋನಿಧಿಗಳಂತೂ ಅದೃಶ್ಯರಾಗುತ್ತ ನಡೆದಿರುವರು. ಇನ್ನೇನು ಸಂಘೇಶಕ್ತಿಃ ಕಲೌಯುಗೇ ಎಂಬಂತೆ ಸಂಘಟನೆಯೊಂದೇ ಮೇಲಾದುಪಾಯವು.

ಸಂಘಟನೆಯೂ ತೀವ್ರ ಜರಗದಿದ್ದರೆ ಹೆಣ್ಣುಮಕ್ಕಳಂತೆ ಚಿಟುಕು ಮುರಿಯುವದೊಂದೇ ಕೈಯಲ್ಲಿ ಉಂಟು. ಅದರಿಂದಲೂ ಎಷ್ಟೋ ಸಮಾಧಾನವಾಗುತ್ತದೆ. ಆ ಬಗೆ ಎಂತೆನ್ನೆ—

ಶಾಸ್ತ್ರಗಳು ಹೇಳುತ್ತವಲ್ಲ. 'ಅಸುರೀ ಸ್ವಭಾವದ ಮಾನವರು ತಮ್ಮ ಕರ್ಮದಿಂದ ಅಧೋಗತಿಯನ್ನು ಹೊಂದಿ ನರಕದಲ್ಲಿ ಕೊಳಲಾಡುವರು.' ಮಾನವನು ಮಾಡಿದ ಯಾವತ್ತೂ ಕರ್ಮಗಳಿಗೆ ಭಗವಂತನು ಫಲವನ್ನು ಇಟ್ಟೇ ಇಟ್ಟಿರುವನು. ಯಾರದೇನು ಹೋಗುವದು 'ನಕ್ಕು ನಕ್ಕು ಮಾಡಿದ್ದನ್ನು ಬಿಕ್ಕಿ ಬಿಕ್ಕಿಯಳುತ್ತ ಉಣ್ಣುವರು.'

ತ್ರಿ— ಆಸುರಿ ಸಂಪತ್ತಿನಲಿ ಅಸೂಯೆಯಿಂ ಮನುಜ|
ಹಸನಾದ ಲೋಕ ಹಿತವನ್ನು ಕೆಡಿಸುತ್ತ|
ದೆಸೆ ಪಡೆವ ನರಕ ದಾಸಾರ್ಯ||

ದೆಸೆ—ಗತಿ

---

## ಸಂತಾಪ ಸೂಚಕ ಸಭೆ.

### ಸಿದ್ಧಗಂಗಾಕ್ಷೇತ್ರ.

"ರಾಜಸಭಾಭೂಷಣ ದಿವಾನ್ ಬಹಾದ್ದೂರ್ ಡಾ. ಸರ್. ಕೆ. ಪಿ. ಪುಟ್ಟಣ್ಣ ಶೆಟ್ಟರ ನಿಧನ ಪ್ರಯುಕ್ತ ತಾ. ೨೬-೭-೩೮ ನೇ ಮಂಗಳವಾರ ಪ್ರಾತಃಕಾಲ ೯ ಗಂಟೆಗೆ ಸರಿಯಾಗಿ "ಶ್ರೀ ಸಿದ್ಧಗಂಗಾ ಗುರುಕುಲಾಶ್ರಮದಲ್ಲಿ" ಶ್ರೀ ತೋಂಟದಾರ್ಯ ವಿದ್ಯಾವರ್ಧಿನೀ ಸಭೆಯ ಆಶ್ರಮದಲ್ಲಿ ಶ್ರೀ ಮ. ನಿ. ಪ್ರ. ಶ್ರೀ. ಶಿವಕುಮಾರ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಒಂದು ಸಭೆಯು ಸೇರಿತು. ದಿವಂಗತರಾದ ಶ್ರೀ. ಶೆಟ್ಟರ ವಿಶ್ವಪ್ರೇಮ ಔದಾರ್ಯ ಮುಂತಾದ ವಿಷಯಗಳಲ್ಲಿ ಗುಣಗಾನವಾದ ನಂತರ ಸಂತಾಪ ಸೂಚನಾ ನಿರ್ಣಯವನ್ನು ಓದಲಾಯಿತು.

#### ನಿರ್ಣಯಗಳು,

ರಾಜಸಭಾಭೂಷಣ ದಿವಾನ್ ಬಹಾದ್ದೂರ್ ಸರ್. ಕೆ. ಪಿ. ಪುಟ್ಟಣ್ಣಶೆಟ್ಟರು ತಾ. ೨೩-೭-೩೮ ನೆಯ ಶನಿವಾರ ಸಾಯಂಕಾಲ ಸುಮಾರು ೪ ಘಂಟೆಗೆ ಶಿವಾಧೀನರಾದರೆಂಬುದನ್ನು ತಿಳಿದು ಈ ಸಭೆಯು ಅತ್ಯಂತ ಸಂತಾಪವನ್ನು ಹೊಂದಿದೆ. ಶ್ರೀ. ಶೆಟ್ಟರು ಬಾಲ್ಯಾರಂಭ ಜೀವನಪೂರ್ತಿಯಾಗಿಯೂ ವಿಶ್ವಪ್ರೇಮವನ್ನು ತಮ್ಮ ಆದರ್ಶವನ್ನಾಗಿ ಇಟ್ಟುಕೊಂಡು ನಾನಾಮುಖದಿಂದ ಜನತೆಯ ಸೇವೆಯನ್ನು ಮಾಡಿದ್ದಾರೆ. ಮೊನ್ನೆ ತಾನೆ ಅವರು ವೀರಶೈವ ವಿದ್ಯಾನಿಲಯವನ್ನು ಸ್ಥಾಪಿಸಿರುವದಲ್ಲದೆ ವೀರಶೈವ ಸಮಾಜಕ್ಕೆ ಶಿರೋಮಣಿಪ್ರಾಯರಾಗಿದ್ದು ಸಮಾಜವನ್ನು ಬಹಳ ಅಭಿವೃದ್ಧಿಗೆ ತಂದು ಕೀರ್ತಿಶಾಲಿಗಳಾದರು. ಈ ಮಹಾಪುರುಷರ ದಾನಶೀಲತೆಯು ಅನೇಕ ಧನವಂತರಿಗೆ ಮಾರ್ಗದರ್ಶಕವಾಗಿದೆ.

ಇಂಥ ಮಹಾತ್ಮರು ನಮ್ಮಿಂದ ಅಗಲಿದುದು ನಮ್ಮ ನಾಡಿಗೆ ನಷ್ಟವನ್ನುಂಟುಮಾಡಿದೆ. ಇವರ ಆತ್ಮಕ್ಕೆ ಶಿವನಲ್ಲಿ ಅವಿರಳ ಸಾಯುಜ್ಯವು ದೊರೆಯಲೆಂದು ಈ ಮಹಾದುಃಖವನ್ನು ಅವರ ಪತ್ನಿ ಪುತ್ರ ಕುಟುಂಬ ವರ್ಗವು ಸಹಿಸುವ ಶಕ್ತಿಯನ್ನು ಜಗದೀಶನು ಕರುಣಿಸಲೆಂದೂ ಈ ಸಭೆಯು ಪ್ರಾರ್ಥಿಸುತ್ತದೆ."

ಎಲ್ಲರೂ ಎದ್ದುನಿಂತು ಮೌನದಿಂದ ನಿರ್ಣಯವನ್ನು ಅಂಗೀಕರಿಸಿದರು. ಅನಂತರ ಈ ಸೂಚನೆಯನ್ನು ಅವರ ಧರ್ಮಪತ್ನಿಯವರಿಗೆ ಕಳುಹಿಸಬೇಕೆಂದು ತೀರ್ಮಾನಿಸಿದನಂತರ ಸಭೆಯು ಮುಕ್ತಾಯವಾಯಿತು.

ಕಾರ್ಯದರ್ಶಿ.

---

—ಬಿಹಾರ ಅಸೆಂಬ್ಲಿಯ ಮುಸಲ್ಮಾನ್ ಸಭಾಸದರೆಲ್ಲ ಮುಸ್ಲಿಂ ಸ್ವತಂತ್ರ ಪಕ್ಷದ ಮಿ. ಯೂನಸರ ಇವರ ಮುಖಂಡತ್ವದಿಂದ ಸಭಾತ್ಯಾಗ ಮಾಡಿದರು. ಗೋಮಾಂಸವನ್ನು ತರಲು ಒಂದು ಹಳ್ಳಿಯಲ್ಲಿ ಮುಸಲ್ಮಾನರಿಗೆ ಪೋಲಿಸರು ಪ್ರತಿಬಂಧಿಸಿದರೆಂಬುದರ ನಿಷೇಧಾರ್ಥವಾಗಿಯೇ ಈ ಸಭಾತ್ಯಾಗವು ಸಂಭವಿಸಿತು.

# ಬನ್ನು ಪಟ್ಟಣದ ಮೇಲೆ

## ದೊಂಬೆಗಾರರು.

ಬನ್ನು ಪಟ್ಟಣದ ಮೇಲೆ ಕಳೆದ ೨೪ ನೆಯ ತಾರೀಖಿನ ದಿನ
ಕಾಡ ಜನರು ಏಂಬಂದು ಕೊಲೆ ಸುಲಿಗೆ ಮಾಡಿದ ಭೀಕರ ಸಂಗ
ತಿಯನ್ನು ರಾಷ್ಟ್ರಾಧಿಪತಿ ಶ್ರೀ. ಸುಭಾಷಚಂದ್ರರು ಕೇಳಿ ನಿಜ ಸ್ಥಿತಿ
ಯನ್ನು ತಿಳಿಸಬೇಕಾಗಿ ಗಡಿನಾಡಿನ ಮುಖ್ಯ ಮಂತ್ರಿಗಳಾದ ಡಾ.
ಖಾನಸಾಹೇಬರಿಗೆ ತಂತೀ ಮೂಲಕ ಸೂಚಿಸಿದ್ದರು. ಉತ್ತರವಾಗಿ
ಡಾ. ಖಾನಸಾಹೇಬರು ಹೀಗೆ ತಿಳಿಸಿದ್ದಾರೆ—

"ಕಾಡ ಜನರು ಬನ್ನು ಪಟ್ಟಣದಲ್ಲಿ ನುಗ್ಗಿ ೭ ಜನರನ್ನು
ಕೊಂದರು. ೧೪ ಜನರಿಗೆ ಗಾಯಗಳನ್ನು ಮಾಡಿದ್ದಾರೆ. ಇವರ
ವಿನಾ ನಾಲ್ಕು ಜನ ಪೋಲಿಸರೂ ಗಾಯಗೊಂಡಿದ್ದಾರೆ. ೧೦೦ ಗಜ
ಪ್ರದೇಶದಲ್ಲಿಯ ಅಂಗಡಿಗಳನ್ನು ಸುಟ್ಟಿದ್ದಾರೆ. ದೊಂಬೆಗಾರರಲ್ಲಿ
೫ ಜನರು ಸತ್ತರು. ೭ ಜನರಿಗೆ ಗಾಯಗಳಾಗಿವೆ."

---

# ಕಾಂಗ್ರೆಸ್ ರಾಜ್ಯದಲ್ಲಿಯೂ

## ಕತ್ತಲೆಯ ಕಾರಭಾರ !

ಬಿಹಾರ ಪ್ರಾಂತದ ಪಾಟನಾ ಪಟ್ಟಣದಲ್ಲಿ ಕೆಲಸ ಮಾಡು
ತ್ತಿದ್ದ ಇಬ್ಬರು "ಆನ್‌ರರಿ ಮ್ಯಾಜಿಸ್ಟ್ರೇಟ" ರ ಅವಧಿಯು ಕಳೆದ
ಡಿಶಂಬರ ತಿಂಗಳ ಅಂತ್ಯಕ್ಕೇನೇ ಮುಗಿದುಹೋಗಿದ್ದಿತು. ಅವರನ್ನು
ಪುನಃ ನಿಯಮಿಸಿರಲಿಲ್ಲ. ಹೀಗಿದ್ದರೂ ಅವರು ಕಳೆದ ೫ ತಿಂಗಳು
ಗಳಿಂದ ತಮ್ಮ ಕೆಲಸವನ್ನು ಸಾಗಿಸುತ್ತಲೇ ಬಂದಿದ್ದರು!

ಈ ತಪ್ಪು ಸರಕಾರಕ್ಕೆ ಈಗ ಗೊತ್ತಾಗಿ ಅವರು ಕಳೆದ ೫
ತಿಂಗಳುಗಳಲ್ಲಿ ನ್ಯಾಯ ವಿಚಾರಣೆಮಾಡಿ ಶಿಕ್ಷೆ ವಿಧಿಸಿದ್ದವರನ್ನೆಲ್ಲಾ
ಈಗ ಬಿಡುಗಡೆ ಮಾಡಿದ್ದಾರೆ! ಅವರು ೫ ತಿಂಗಳು ವಿಚಾರಣೆ ಮಾ
ಡಿದ ವ್ಯಾಜ್ಯಗಳನ್ನೆಲ್ಲಾ ಈಗ ಪುನಃ ವಿಚಾರಣೆ ನಡೆಸುವವರಿದ್ದಾರೆ.

---

# ಉಪಾಹಾರ ಗೃಹಗಳಲ್ಲಿ

## ಆದಿ ಹಿಂದುಗಳು.

ಉಪಾಹಾರ ಗೃಹ (ಚಹಾ—ಕಾಫಿ ಅಂಗಡಿ) ಮೋಟಾರ್,
ಬಸ್ಸ ಮೊದಲಾದ ವಾಹನ ಈ ಸಾರ್ವಜನಿಕ ಸೌಕರ್ಯಗಳು ಆದಿ
ಹಿಂದುಗಳ ಉಪಯೋಗಕ್ಕೆ ಅವರು ಇಂಥ ಒಂದು ಜಾತಿಯವ
ರೆಂಬ ಕಾರಣದಿಂದಲೇ ಉಪಯೋಗಿಸಲ್ಪಡದಂತೆ ಅವುಗಳ ವ್ಯವ
ಸ್ಥಾಪಕರು ಪ್ರತಿಬಂಧ ಮಾಡಿದ್ದಾದರೆ ಅವುಗಳಿಗೆ ಕೊಟ್ಟ ಅಪ್ಪಣೆ
ಯನ್ನು ತೆಗೆದುಕೊಳ್ಳಲಾಗುವುದೆಂದು ಮುಂಬೈ ಸರಕಾರದವರು
ಪ್ರಕಟಿಸಿದ್ದಾರೆ.

ಈ ವಿಚಾರದ ಕಡೆಗೆ ಸಾರ್ವಜನಿಕರು ಮತ್ತು ಪೋಲಿಸ್
ಅಧಿಕಾರಿಗಳು ತುಂಬಾ ಲಕ್ಷಿಸಬೇಕಾದುದು ಅಗತ್ಯ.

---

—ರಂಗೂನದಲ್ಲಿ ಮುಸಲ್ಮಾನರು ಬೌದ್ಧರ ವಿರುದ್ಧ ದೊಂಬಿ
ನಡೆಸಿದರು. ದೊಂಬಿಯಲ್ಲಿ ೮೦ ಜನಗಳಿಗೆ ಗಾಯಗಳಾಗಿವೆ

# ವೀರಶೈವ ತರುಣರ ಅಭಿಮಾನದ ಆತ್ಮಾರ್ಪಣ.

ನಿಜಾಮರಾಜ್ಯದ ವೀರಶೈವರು ಶಿಕ್ಷಣದಲ್ಲಿ ಹಿಂದುಳಿದಿರುವು
ದು ನಿಜ. ಇವರಲ್ಲಿ ಬ್ರಿಟಿಶ್ ಭಾಗದ ವೀರಶೈವರಂತೆ ರಾಜಕಾ
ರಣ ಅಥವಾ ಈ ಕಾಲದ ವ್ಯಾಪಾರ ಉದ್ಯೋಗಗಳು ಇಲ್ಲದ್ದೂ
ನಿಜ. ವಿದ್ಯಾಭಿವೃದ್ಧಿಗೆ ಅವರಂತೆ ನಮ್ಮಲ್ಲಿ ದಾನಮಾಡುವವರೂ
ಇಲ್ಲವೆಂಬುದೂ ಒಪ್ಪತಕ್ಕ ಮಾತೇ ಸರಿ. ಆ ಭಾಗದಲ್ಲಿ ಸಮಾ
ಜ ಸೇವಕರು ಇದ್ದಂತೆ ನಮ್ಮಲ್ಲಿ ಇಲ್ಲವೆಂಬುದೂ ನಿರ್ವಿವಾದ.

ಇಷ್ಟೆಲ್ಲಾ ಕಡಿಮೆ ಇದ್ದರೂ ಧರ್ಮಾಭಿಮಾನದಲ್ಲೇನೂ
ನಾವು ಬ್ರಿಟಿಶ್ ಭಾಗದ ವೀರಶೈವರಿಗಿಂತ ಕಡಿಮೆಯಿಲ್ಲ. ನಾವು
ಬ ಸ ವ ಭೂ ಮಿ ಯ ವ ರು. ನಮ್ಮಲ್ಲಿ ಧರ್ಮದ ಬಗ್ಗೆ ವೀರ
ತ್ವವು ಇನ್ನೂ ಬೆಳಗುತ್ತಲೇ ಇದೆ. ನಾವು ಸಮಾಜಕ್ಕೂ ಧರ್ಮ
ಕ್ಕೂ ತನು ಮನ ಧನ ಅರ್ಪಿಸಲು ಬ್ರಿಟಿಶ್ ಭಾಗದ ನಮ್ಮ ಬಂ
ಧುಗಳಿಗಿಂತ ಹಿಂದೆ ಬೀಳುವವರೇನೂ ಅಲ್ಲ. ಆದರೆ ನಮಗೆ ಅಂಥ
ಯೋಗ್ಯ ಮಾರ್ಗದರ್ಶಿಗಳು ಇಲ್ಲಿಲ್ಲ. ನಮ್ಮ ವೀರತ್ವದ ಉಪಯೋ
ಗ ಮಾಡಿಕೊಳ್ಳುವವರು ಇಲ್ಲಿಲ್ಲ.

ಅದಕ್ಕಾಗಿಯೇ ನಮ್ಮ ತರುಣರು ಆರ್ಯಸಮಾಜದಲ್ಲಿ ಕೂಡಿ
ಕೆಲಸಮಾಡುತ್ತಿದ್ದಾರೆ. ಆರ್ಯಸಮಾಜದ ಉತ್ಸಾಹವೇ ನಮ್ಮ
ತರುಣರನ್ನು ಅತ್ತ ಎಳೆದಿದೆ. ಈಗ ಇಲ್ಲಿಯ ಆರ್ಯ ಸಮಾಜಕ್ಕೆ
ಇಷ್ಟು ಶಕ್ತಿ ಬಂದದ್ದು ಕೂಡಾ ನಮ್ಮ ವೀರಶೈವರ ಸಹಾಯ
ಶಕ್ತಿ ಸ್ವಾರ್ಥತ್ಯಾಗಗಳಿಂದಲೇ ಸರಿ.

### ವೇದಪ್ರಕಾಶ ಯಾರು?

ಗುಂಚೋಟಿಯಲ್ಲಿ ಪುಂಡ ಮುಸಲ್ಮಾನರ ಕತ್ತಿಗೆ ಆಹುತಿ
ಯಾದ ವೇದಪ್ರಕಾಶನೆಂಬ ಹುತಾತ್ಮನು ಯಾರು ? ಆತನು ವೀರ
ಶೈವ ತರುಣ. ದಾಸಿಮಯ್ಯ ಎಂಬ ತರುಣನೇ ಆತ್ಮಾಹುತಿಕೊಟ್ಟ
ಮೇಲೆ ವೇದಪ್ರಕಾಶನೆಂಬ ಹೆಸರಿನಿಂದ ಪ್ರಕಾಶಿಸುತ್ತಿದ್ದಾನೆ. ಆರ್ಯ
ಸಮಾಜದವರಲ್ಲಿ ಆ ವೀರನು ಕೆಲಸಮಾಡಿದ್ದರಿಂದಲೇ ಅವನಿಗೆ ಈ
ವೀರ ಸ್ವರ್ಗವು ಸಿಕ್ಕಿತು.

ಇಲ್ಲಿಯ ವೀರಶೈವರು ಆರ್ಯಸಮಾಜದವರಂತೆ ಒಕ್ಕಟ್ಟಿನಿಂ
ದಲೂ ಧೈರ್ಯದಿಂದಲೂ ಸಮಾಜ ಕೆಲಸಕ್ಕೆ ಮುಂದೆ ಬಂದು
ತುಂಟರ ಆಕ್ರಮಣ ತಡೆದರೆ ವೀರಶೈವರಿಗೇನೇ ಕ್ಷೇಮ. ಅದರಿಂದ
ಹಿಂದು ಸಮಾಜಕ್ಕೇನೇ ಬಲ ಬರುತ್ತದೆ. ಸ್ವಧರ್ಮವೂ ರಕ್ಷಣೆ
ಯಾಗುತ್ತದೆ. ಸ್ವ ಸಮಾಜದ ಕೀರ್ತಿ ಬೆಳಗುತ್ತದೆ.

### ಧರ್ಮಪ್ರಕಾಶ ಯಾರು?

ಈಗ ಧರ್ಮಪ್ರಕಾಶನೆಂಬ ಹುತಾತ್ಮನ ವೀರತ್ವ ಮೈಸೂ
ರಿಂದ ಕಾಶ್ಮೀರದ ವರೆಗೆ ಹೊಗಳಲ್ಪಡುತ್ತದಲ್ಲವೆ? ಕಲ್ಯಾಣದಲ್ಲಿ
ತುಂಟ ಮುಸಲ್ಮಾನರ ಘಾಲೆಗೆ ಬಲಿಬಿದ್ದ ನಾಗನಾಥನು ಯಾರು?
ನಾಗಪ್ಪನೆಂಬ ವೀರಶೈವ ತರುಣ. ಆರ್ಯಸಮಾಜದಲ್ಲಿ ಸೇರಿ ಕೆಲ
ಸಮಾಡುತ್ತಿದ್ದ ಈ ವೀರನು ಧರ್ಮಕ್ಕಾಗಿ ಆತ್ಮಾರ್ಪಣಮಾಡಿದ್ದ
ರಿಂದ ಧರ್ಮಪ್ರಕಾಶನೆಂಬ ಹೆಸರನ್ನು ಹೊಂದಿದನು. ನಿಜಾಮದ
ವೀರಶೈವ ತರುಣರಿಗೆ ಇದು. ಅಭಿಮಾನದ ಸಂಗತಿ. ಅಹಿಂಸಾ
ಮಾರ್ಗದಿಂದಲೇ ನಡೆದು ಹೀಗೆ ವೀರಶೈವ ತರುಣರು ಧರ್ಮಕ್ಕೋ
ಸ್ಕರ ಆತ್ಮಾಹುತಿ ಕೊಡಲು ಮುಂದೆ ಬಂದರೆ ಬ್ರಿಟಿಶ್ ಭಾಗದ
ನಮ್ಮ ಬಾಂಧವರಿಗಿಂತ ಇದರಲ್ಲಾದರೂ ನಾವು ಹೆಚ್ಚಿನವರಾಗು
ವುದಿಲ್ಲವೆ?

ಧರ್ಮಾಭಿಮಾನಿ.

ದಿವಸ ಮೈಸೂರಿನ ದಿವಾನರಾದ ಸರ್. ಮಿರ್ಜಾ ಸಾಹೇಬರು ನಡೆಸಿದಾಗ ಸರ್. ಪುಟ್ಟಣ್ಣಶೆಟ್ಟರ ಸಂಬಂಧವಾಗಿ ಈ ಕೆಳಗಿನಂತೆ ಯಥಾರ್ಥವಾದ ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸಿದ್ದರು—

"ಈಗ್ಗೆ ಅನೇಕ ವರುಷಗಳಿಂದಲೂ ಸರ್. ಕೆ. ಪಿ. ಪುಟ್ಟಣ್ಣಶೆಟ್ಟರಗಿಂತ ಶ್ರೇಷ್ಠರಾಗಿರತಕ್ಕ ಸಮಾಹಿತ ಚಿತ್ತರಾದ ಮತ್ತು ರಾಜನೀತಿಜ್ಞರಾದ ಮಂತ್ರಾಲೋಚಕರನ್ನು ನಾನು ಕಂಡುದಿಲ್ಲ. ಸರಕಾರಿ ಇಲಾಖೆಗಳ ಆಡಳಿತದ ಹಕೋಟಿಯು ಸಂಬಂಧವಿಲ್ಲದೆಯೇ ಅವರು ಅವುಗಳ ಆಡಳಿತದ ಸಂಬಂಧವಾಗಿ ಅಮೋಘವಾದ ಸಲಹೆಗಳನ್ನಿತ್ತು ನನಗೆ ಸಹಾಯಮಾಡಿದ್ದಾರೆ. ಸರ್. ಕೆ. ಪಿ. ಪುಟ್ಟಣ್ಣ ಶೆಟ್ಟರು ನನಗೊಬ್ಬನಿಗೇ ಮಾತ್ರವೇ ಅಲ್ಲದೆ ಶ್ರೀಮನ್ಮಹಾರಾಜರವರ ಸರಕಾರಕ್ಕೂ ಸಹ ಸನ್ಮಿತ್ರರಾಗಿದ್ದಾರೆ. ಸಾರ್ವಜನಿಕ ಹಿತಸಾಧನೆಯಲ್ಲಿ ಅವರಿಗಿರುವ ಶ್ರೇಷ್ಠವಾದ ಕರ್ತವ್ಯ ಬುದ್ಧಿ, ಸಂಸ್ಥಾನದ ಮೇಲ್ಮೆಯನ್ನು ಸಾಧಿಸಬೇಕೆಂಬ ವಿಷಯದಲ್ಲಿ ಅವರಿಗಿರುವ ತೀವ್ರಾಭಿಲಾಷೆ, ಸಾರ್ವಜನಿಕ ಕ್ಷೇತ್ರದಲ್ಲಿ ಅವರ ನಿಷ್ಕಳಂಕವಾದ ವರ್ತನೆ ಮತ್ತು ಅವರ ಶುದ್ಧ ಜೀವನ; ಕ್ರಮವಾಗಿಯೂ ಶೀಘ್ರವಾಗಿಯೂ ಕೆಲಸ ಮಾಡುವ ಅವರ ಉದ್ಯೋಗ ಶೀಲತೆ, ವಿನಯಪರತೆಯಿಂದ ತುಂಬಿದ ಅವರ ನಡೆನುಡಿಗಳು ಈ ಗುಣಗಳಿಂದ ಅವರು ಎಲ್ಲರ ಪ್ರೀತಿಗೌರವಗಳಿಗೂ ಪಾತ್ರರಾಗಿದ್ದಾರೆ. ನಮ್ಮ ಸಂಸ್ಥಾನದಲ್ಲಿ ಸಮಸ್ತರ ಗೌರವಕ್ಕೂ ಪಾತ್ರರಾಗಿ ಅವರು ಜನರಿಗೆ ಅಚ್ಚುಮೆಚ್ಚಾಗಿರುವುದು ಈ ಸದ್ಗುಣ ಪ್ರಭಾವದಿಂದಲೇ."

### ಸರ್. ಶೆಟ್ಟರ ಮಾತೃಭಕ್ತಿ.

ಸರ್. ಕೆ. ಪಿ. ಪುಟ್ಟಣ್ಣಶೆಟ್ಟರ ಜೀವನ ಚರಿತ್ರೆಯು ಹೇಗೆ ಆದರ್ಶಪ್ರಾಯವಾಗಿದೆಯೆಂಬುದು ಮೇಲಣ ಸಂಗತಿಗಳಿಂದ ಸ್ಪಷ್ಟ ಗೊತ್ತಾಗುತ್ತದೆ. ಇವರು ನಿಧನ ಹೊಂದುವ ಮೂರೇ ದಿನಗಳ ಮುಂಚೆ ತಾವು ಸಂಕಲ್ಪಿಸಿದ್ದ ವೀರಶೈವ ವಿದ್ಯಾರ್ಥಿ ನಿಲಯದ ಕಾರ್ಯವನ್ನು ಸಾಂಗಗೊಳಿಸಿ ತುಂಬಾ ಸಮಾಧಾನ ಹೊಂದಿದರು.

ತಾವು ಶಿವಾಧೀನರಾಗುವ ಎಂಟು ದಿನಗಳ ಮುಂಚೆಯೇ ತಮ್ಮ ತಾಯಿಯವರ ಸಮಾಧಿಯ ಹತ್ತಿರವೇ ತಮ್ಮ ಸಮಾಧಿಯೂ ಇರಬೇಕೆಂದು ಯೋಚಿಸಿ ಆ ಸ್ಥಳವನ್ನು ಕೂಡಾ ತಾವೇ ನೋಡಿಕೊಂಡು ಬಂದಿದ್ದರಂತೆ. ಇದರಿಂದ ಇವರಲ್ಲಿ ಮಾತೃ ಭಕ್ತಿಯು ಎಷ್ಟಿದ್ದಿತೆಂಬುದೂ ಗೊತ್ತಾಗುತ್ತದೆ.

---

## ನಿಜಾಮ ರಾಜ್ಯದಲ್ಲಿ ಸತ್ಯಾಗ್ರಹ ?

ನಿಜಾಮರಾಜ್ಯದಲ್ಲಿ ತುಂಟ ಮುಸಲ್ಮಾನರ ಅತ್ಯಾಚಾರ ವಿಶೇಷವಾಗುತ್ತಾ ನಡೆದಿದೆ. ಅಲ್ಲಿಯ ಸರಕಾರವು ಈ ಬಗ್ಗೆ ಪಕ್ಷಪಾತ ಧೋರಣದಿಂದ ನಡೆಯುತ್ತದೆ. ಅದರಿಂದ ಅಲ್ಲಿಯ ಪುಂಡರಿಗೆ ಬಹಳ ಪ್ರೋತ್ಸಾಹ ಬಂದಿದೆ. ನಿಜಾಮರಾಜ್ಯದಲ್ಲಿ ಔರಂಗಜೇಬ ರಾಜ್ಯ ನಡೆದಿದೆ. ಅಲ್ಲಿಯ ಅಸಂಖ್ಯ ಹಿಂದುಗಳ ಮಾನ ಪ್ರಾಣ ಧನ ರಕ್ಷಣೆಯಾಗುವಂತಿಲ್ಲ.

ಈ ದುರವಸ್ಥೆಯನ್ನು ದೂರಮಾಡಲು ಆರ್ಯಸಾರ್ವದೇಶಿಕ ಸಭೆಯವರು ನಿಜಾಮ ಸರಕಾರಕ್ಕೆ ೧೪ ವಿಷಯಗಳನ್ನು ತಿಳಿಸಿದ್ದಾರೆಂತಲೂ ಸರಕಾರವು ಮಾನ್ಯಮಾಡದಿದ್ದರೆ ನಿಜಾಮ ರಾಜ್ಯದಲ್ಲಿ ಸತ್ಯಾಗ್ರಹವನ್ನು ಪ್ರಾರಂಭಿಸಲಾಗುವುದೆಂದೂ ನಿಜಾಮರಾಜ್ಯದಲ್ಲಿ ಮೊನ್ನೆ ಸಂಚರಿಸಿಬಂದ ಶ್ರೀ. ವ್ಯಾಸದೇವಜಿ ಎಂ. ಎ. ಇವರು ದಿಲ್ಲಿಯ ತಮ್ಮ ಭಾಷಣದಲ್ಲಿ ಹೇಳಿದರು.

## ಪರಾಕ್ರಮಕ್ಕೆ ಬ್ರಹ್ಮಚರ್ಯವು ಅತ್ಯಗತ್ಯ.

ಮನುಷ್ಯನು ಆತ್ಮವೀರನಾಗಬೇಕಾದರೆ ಇಂದ್ರಿಯಗಳನ್ನು ನಿಗ್ರಹಮಾಡಬೇಕಷ್ಟೆ. ಈಗ ದೇಶದಲ್ಲಿ ನಡೆದಿರುವ ಜಾತಿಜಗಳವನ್ನು ಕಳೆಯಬೇಕಾದರೂ ದೇಶಕ್ಕೆ ಬೇಕಾಗಿರುವ ಸ್ವಾತಂತ್ರ್ಯವನ್ನು ಸಂಪಾದಿಸಬೇಕಾದರೂ ಆತ್ಮವೀರರೇ ಬೇಕಾಗಿದ್ದಾರೆಂದು ಗಾಂಧೀಜಿಯವರು ಸಾರಿಸಾರಿ ಹೇಳುತ್ತಿದ್ದಾರಲ್ಲವೆ? ಈ ಆತ್ಮವೀರತೆಗೆ ಬ್ರಹ್ಮಚರ್ಯ ವ್ರತವು ಅಗತ್ಯವೆಂದೇ ಮೊನ್ನೆ ಗಾಂಧೀಜಿಯವರು ತಮ್ಮ ಲೇಖನದಲ್ಲಿ ತಿಳಿಸಿದ್ದಾರೆ. ಅಹಿಂಸೆಯ ಮೂಲಕ ರಾಷ್ಟ್ರದಲ್ಲಿ ಸುಖಶಾಂತಿಗಳನ್ನು ಸ್ಥಾಪಿಸಬೇಕಾದರೆ ಇಂದ್ರಿಯ ನಿಗ್ರಹಮಾಡಿದ ವೀರರೇ ಬೇಕಾಗಿದ್ದಾರೆ.

### ಆಟಗಾರರಿಗೂ ಬ್ರಹ್ಮಚರ್ಯ ವ್ರತ ಬೇಕು.

ಆಸ್ಟ್ರೇಲಿಯಾದ ಕ್ರಿಕೆಟ್ ಸಂಘದವರು ಪರದೇಶಗಳಿಗೆ ಆಟದ ಸ್ಪರ್ಧೆಗಾಗಿ ಹೋಗುವಾಗ ಸಂಗಡ ತಮ್ಮ ಪತ್ನಿಯನ್ನು ಕರೆದುಕೊಂಡುಹೋಗಬಾರದೆಂದು ಆ ಸಂಘದ ಮುಖ್ಯಾಧಿಕಾರಿಗಳು ಒಂದು ನಿಯಮಮಾಡಿದ್ದಾರಂತೆ. ವೀರ್ಯನಾಶವು ಶಾರೀರಿಕ ಬಲವನ್ನು ಪ್ರದರ್ಶಿಸಲು ವಿಘ್ನಕಾರಿಯಾಗಿದೆಯೆಂದೇ ಅವರು ಯೋಚಿಸಿರಬೇಕು.

ಮಹಾ ಪ್ರವಾಹದಲ್ಲಿ ಈಸುವ, ಕುಸ್ತಿಆಡುವ, ವಿಮಾನುಗಳಲ್ಲಿ ಬಹು ದಿನ ಪ್ರವಾಸಮಾಡುವ, ಕಠಿಣತರವಾದ ಪರ್ವತಗಳನ್ನು ಏರುವ, ಓಡುವ, ಅಂಗಸಾಧನೆಯ ಶಕ್ತಿಯನ್ನು ಪ್ರದರ್ಶಿಸುವ ಈ ಮುಂತಾದ ಸ್ಪರ್ಧೆಯ ಕಾರ್ಯಗಳನ್ನು ಕೈಕೊಳ್ಳುವವರು ಬ್ರಹ್ಮಚರ್ಯವ್ರತಶೀಲರಾಗಿರುವುದು ಅಗತ್ಯವಾಗಿದೆ.

### ಪೌರಾಣಿಕ ದೃಷ್ಟಾಂತಗಳು.

ಹಿಂದಕ್ಕೆ ಅರ್ಜುನನು ಅಂಗಾರಪರ್ಣ ಎಂಬವನನ್ನು ಸೋಲಿಸಿದನು. ಆಗ ತಾನು ಸೋತುದಕ್ಕೆ ಪತ್ನಿಯೊಂದಿಗೆ ಜಲ ಕ್ರೀಡೆಯಲ್ಲಿದ್ದುದೇ ಕಾರಣವೆಂದು ನಿರ್ಧರಿಸಿ ಬ್ರಹ್ಮಚರ್ಯವು ವಿಜಯಕ್ಕೆ ಸಾಧನವೆಂದೇ ಅಂಗಾರಪರ್ಣನು ಸಾರಿಹೇಳಿದನು.

ಸುಧನ್ವನು ಮೊದಲು ಅರ್ಜುನನನ್ನು ಸೋಲಿಸಿದನು. ಆ ಮೇಲೆ ಅರ್ಜುನನಿಗೆ ತಾನೇ ಸೋತು ಮರಣಕ್ಕೊಳಗಾದನು. ಏಕೆಂದರೆ ಯುದ್ಧಕ್ಕೆ ಹೊರಡುವ ಮುಂಚೆ ಆತನ ಪತ್ನಿಯ ಆಗ್ರಹದ ಮೂಲಕ ವೀರ್ಯಭ್ರಷ್ಟನಾಗಿದ್ದನು.

ರಾವಣನ ಮಗನಾದ ಇಂದ್ರಜಿತುನನ್ನುಗೆಲ್ಲುವದು ೧೪ ವರುಷ ಬ್ರಹ್ಮಚರ್ಯ ವ್ರತಧಾರಿಯಾಗಿದ್ದಾತನಿಗೇನೇ ಶಕ್ಯವೆಂದು ಹೇಳಲ್ಪಟ್ಟದ್ದರ ಅರ್ಥವಾದರೂ ಇದೇ ಸರಿ.

ಭೀಷ್ಮನು ಅಂಥ ದೀರ್ಘಾಯುಷ್ಯ, ಪರಾಕ್ರಮ, ಬುದ್ಧಿ ವೈಭವಗಳುಳ್ಳವನಾದುದೂ ಹನುಮಂತನು ಅಸಾಧಾರಣ ಪರಾಕ್ರಮ ಶಾಲಿಯಾಗಿದ್ದುದೂ ಬ್ರಹ್ಮಚರ್ಯದ ಬಲದಿಂದಲೇ ಸರಿ.

ಯಾವ ವಿಧವಾದ ಪರಾಕ್ರಮಕ್ಕೂ ಬ್ರಹ್ಮಚರ್ಯ ವ್ರತವು ಬಹು ಮುಖ್ಯವಾದ ಸಾಧನವಾಗಿರುವುದರಿಂದ ವೀರರಾಗಿ ಜೀವಿಸಬೇಕೆಂಬುವವರು ಈ ವಿಷಯದ ಕಡೆಗೆ ತುಂಬಾ ಲಕ್ಷಿಸುವುದು ಅಗತ್ಯವಾಗಿಲ್ಲವೆ?

---

—ಮುಂಬೈ ಪ್ರಾಂತಿಕ ಅಸೆಂಬ್ಲಿ ಅಧಿವೇಶನವು ಪುಣೆಯಲ್ಲಿ ಇದೇ ತಿಂಗಳು ೧೭ ನೆಯ ತಾರೀಖಿನಿಂದ ಪ್ರಾರಂಭವಾಗುವುದು.

### ಚಿತ್ರದುರ್ಗದ ಶ್ರೀಮನ್ನಿರಂಜನ ಜಗದ್ಗುರು ಶ್ರೀ. ಮುರುಘರಾಜೇಂದ್ರ ಮಹಾಸ್ವಾಮಿಗಳಿಗೆ ಕೇಳಿದ

## ಪಂಚವಿಂಶತಿ ಪ್ರಶ್ನೋತ್ತರ ಮಾಲಾ.

ಬೆಂಗಳೂರು ಸುಮತಿ ಪಂಡಿತರಾದ ರೇವಣಾರಾಧ್ಯರೆಂಬುವರೊಬ್ಬರು ಮೇಲ್ಕಂಡ ಮಹಾಸ್ವಾಮಿಗಳಿಗೆ ಅಶಾಸ್ತ್ರೀಯವಾದ ೨೫ ದೂಷಿತ ಪ್ರಶ್ನೆಗಳನ್ನು 'ಪಂಚವಿಂಶತಿ ಪ್ರಶ್ನಮಾಲಾ' ಎಂಬ ಚಿಕ್ಕ ಗ್ರಂಥಮೂಲಕ ಪ್ರಿಂಟುಮಾಡಿಸಿ ಎಲ್ಲಾ ಪ್ರದೇಶಗಳಲ್ಲಿ ಪ್ರಚಾರ ಮಾಡುತ್ತಿರುವರು. ಸದರಿ ಪಂಡಿತರು ಕೇಳಿದ ೨೫ ಪ್ರಶ್ನೆಗಳಿಗೆ ಶಾಸ್ತ್ರಾಧಾರದಿಂದ ಇದುವರೆಗೂ ಯಾರೂ ಸರಿಯಾದ ಉತ್ತರಗಳನ್ನು ಬರೆದು ಪ್ರಿಂಟುಮಾಡಿಸಿ ಪ್ರಚಾರ ಮಾಡದೆ ಇರುವದರಿಂದ ಬಹು ಜನರು ಅವರ ೨೫ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಬರೆದು ಯಾಕೆ ಪ್ರಚಾರ ಮಾಡಲಿಲ್ಲವೆಂದು ಬಹು ಚರ್ಚೆ ಮಾಡುತ್ತಿರುವರು. ಕಾರಣ ನಾವು ಆಯಾ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಬರೆದು ಪ್ರಚಾರ ಮಾಡದಿದ್ದರೆ ಅನೇಕರಿಗೆ ಸಂದೇಹವುಂಟಾಗಿ ಶ್ರೀಮನ್ನಿರಂಜನ ಬಸವಾದಿ ಪ್ರಮಥರಲ್ಲಿ ಭಕ್ತಿ ವಿಶ್ವಾಸಗಳು ಕಡಿಮೆಯಾಗುತ್ತವೆಂದು ಭಾವಿಸಿ ಸದರಿಯವರ ೨೫ ಪ್ರಶ್ನೆಗಳಿಗೆ ಸರಿಯಾದ ಶಾಸ್ತ್ರಾಧಾರಗಳಿಂದಲೂ ಪ್ರತ್ಯಕ್ಷ ಅನುಭವಾಧಾರಗಳಿಂದಲೂ ಸಮಸ್ತರು ಒಪ್ಪುವಂತೆ ಉತ್ತರಗಳನ್ನು ಬರೆದು ಪಂಚವಿಂಶತಿ ಪ್ರಶ್ನೋತ್ತರ ಮಾಲಾ ಎಂಬ ಚಿಕ್ಕ ಗ್ರಂಥವನ್ನು ತಯಾರು ಮಾಡಿರುತ್ತೇವೆ. ಪ್ರತಿಯೊಬ್ಬರು ಈ ಅಪೂರ್ವ ಗ್ರಂಥವನ್ನು ತರಿಸಿಕೊಂಡು ಶ್ರೀಮನ್ನಿರಂಜನ ಬಸವಾದಿ ಪ್ರಮಥರ ಅತ್ಯಂತ ಮಹತ್ವ ಶ್ರೇಷ್ಠತೆ ವಿಷಯಗಳನ್ನು ನೋಡಿ ಸಂತೋಷಭರಿತರಾಗಬೇಕು. ಗ್ರಂಥಾಪೇಕ್ಷೆಯುಳ್ಳವರು ಟಪ್ಪಾಲು ಮೂಲಕ ೫ ಆಣೆ ಸ್ಟಾಂಪು ಕಳಿಸಿದರೆ ಉಚಿತವಾಗಿ ಕಳಸುತ್ತೇವೆ.

ಮ್ಯಾನೇಜರ್:—

ವೀರಶೈವ ಪುರಾತನ ಗ್ರಂಥ ಪರಿಶೋಧನಾಲಯ

ಹರಪನಹಳ್ಳಿ (ಜಿಲ್ಲಾ ಬಳ್ಳಾರಿ.)

---

### ನಿಂದಕರ ಬಾಯಿ ಬೀಗ ಎಂಬ

## ಷಟ್ಕಲಶ ಸ್ಥಾಪನಾ ವಿಧಿ ಅಪೂರ್ವ ಗ್ರಂಥ.

ವೀರಶೈವರ ದೀಕ್ಷಾ ವಿವಾಹಾದಿ ಕಾರ್ಯಗಳಲ್ಲಿ ಪಂಚ ಕಲಶಗಳನ್ನು ಸ್ಥಾಪಿಸಬೇಕೆಂದು ಆಗಮ ಶಾಸ್ತ್ರಾಧಾರಗಳಿದ್ದು ಕಿವಿಯಿಂದ ಕೇಳದೆ ಕಣ್ಣಿನಿಂದ ನೋಡದೆ ಇರುವ ಶಾಸ್ತ್ರಕ್ಕೆ ವಿರೋಧವಾದ ೬ ನೇ ನಿರಂಜನ ಕಲಶವೆಂದು ಪಂಚ ಕಲಶಗಳ ಜೊತೆಗೆ ಈಗೀಗ ಬಲಾತ್ಕಾರವಾಗಿ ಸ್ಥಾಪಿಸುತ್ತಿರುವರು. ಶಾಸ್ತ್ರ ವಿರೋಧವಾದ ೬ ನೇ ಕಲಶವನ್ನು ಸದೆ ಬಡಿದು ಅಡವಿಪಾಲಾಗಿ ಮಾಡುವದು ಯೋಗ್ಯವಾಗಿರುತ್ತದೆಂದು ನಿಂದಕರು ಎಲ್ಲರಿಗೂ ಬೋಧಿಸುತ್ತಾ ೬ ನೇ ನಿರಂಜನ ಕಲಶ ಸ್ಥಾಪನೆ ಮಾಡುವದನ್ನು ನಿಲ್ಲಿಸಿಬಿಡುತ್ತಿರುವರು. ಪರಮ ಪವಿತ್ರ ೬ ನೇ ಕಲಶಕ್ಕೆ ಅಪ್ರತಿಷ್ಠೆ ಮಾಡುವದನ್ನು ಕೋರ್ಟು ದ್ವಾರ ಸ್ಥಿರಪಡಿಸಬೇಕೆಂದು ಘನ ಪ್ರಯತ್ನ ಮಾಡಿರುತ್ತೇವೆ. ಹಾಗೆ ಸುಮ್ಮನೇ ಬಿಟ್ಟರೆ ೬ ನೇ ಕಲಶದ ಹೆಸರಿಲ್ಲದಂತೆ ಮಾಡುತ್ತಾರೆ.

ಈ ಗ್ರಂಥದಲ್ಲಿರುವ ಅಪೂರ್ವ ವಿಷಯುಗಳು.

ಶ್ರೀ ಮದುಜ್ಜಯಿನಿ ಸದ್ಧರ್ಮ ಪೀಠಾಧೀಶ ಚರಪಟ್ಟಾಧ್ಯಕ್ಷ ಜಗದ್ಗುರು ಶ್ರೀ. ಮರುಳಸಿದ್ಧ ಸ್ವಾಮಿಗಳು ಪ್ರಣವ ಮಂತ್ರಶಾಸ್ತ್ರವಿಧಿ ಪ್ರಕಾರ ದೀಕ್ಷಾ ವಿವಾಹ ಕಾರ್ಯಗಳಲ್ಲಿ ಪಂಚ ಕಲಶಗಳನ್ನು ಬಲ ಭಾಗಕ್ಕೆ ಸಾಕ್ಷಿ ರೂಪವಾಗಿ ೬ ನೇ ನಿರಂಜನ ಕಲಶವನ್ನು ಆಯಾಯ ಪ್ರಣವಾಕ್ಷರಗಳಿಂದಲೂ ಆಯಾಯ ವರ್ಣದ ಕಲಶಗಳಿಂದಲೂ ಆಯಾಯ ದಿಕ್ಕುಗಳಲ್ಲಿ ಸ್ಥಾಪಿಸಬೇಕೆಂದು ಚಕ್ರರೂಪವಾಗಿ ಬರೆದು ೬ ನೇ ನಿರಂಜನ ಕಲಶವನ್ನು ಬಿಟ್ಟು ಮಾಡಬಾರದೆಂದು ನಿರೂಪು ಮಾಡಿರುವ ವಿಷಯುವನ್ನು ಮತ್ತು ಈ ಮರುಳಸಿದ್ಧ ಸ್ವಾಮಿಗಳು ತಾವು ಗುರು ಗದ್ದಿಗೆಯ ಮೇಲೆ ಕೂತುಕೊಂಡು ಮುಂಭಾಗದಲ್ಲಿ ಪಂಚ ಕಲಶಗಳನ್ನು ಬಲಭಾಗಕ್ಕೆ ೬ ನೇ ನಿರಂಜನ ಕಲಶ ಸ್ಥಾಪಿಸಿದ ಫೋಟೋವನ್ನು ಹಾಕಿರುತ್ತೆ. ಮತ್ತು ಇದೇ ಪೀಠದ ಜಗದ್ಗುರು ಶ್ರೀ. ಸಿದ್ಧಲಿಂಗ ಸ್ವಾಮಿಗಳು ವೀರಶೈವಾಚಾರ ಪಂಚರತ್ನದಲ್ಲಿ ಹೇಳಿದ ಪ್ರಕಾರ ಷಟ್ಕಲಶ ಸ್ಥಾಪನೆಮಾಡಿ ದೀಕ್ಷಾ ವಿವಾಹ ಕಾರ್ಯಗಳನ್ನು ಜರುಗಿಸಬೇಕೆಂತಲೂ ಗುರುಪಾದ ಪೂಜಾ ಕಾಲದಲ್ಲಿ ಬಸವಾಕ್ಷರ ಮಹಾ ಮಂತ್ರವನ್ನು ಜಪಿಸಬೇಕೆಂತಲೂ ಎಲ್ಲಾ ದೇಶದ ವೀರಶೈವರಿಗೆ ಮಾಡಿರುವ ನಿರೂಪು ಹಕ್ಕನ್ನು ಇನ್ನು ಅನೇಕ ಆಗಮ ಶಾಸ್ತ್ರಾಧಾರಗಳಿಂದ ವಿಸ್ತಾರವಾಗಿ ತಯಾರ ಮಾಡಿರುತ್ತೇವೆ. ಈ ಅಪೂರ್ವ ಗ್ರಂಥವನ್ನು ಪ್ರತಿಯೊಬ್ಬ ವೀರಶೈವರು ನೋಡಿ ತುಂಬಾ ಸಂತೋಷಭರಿತರಾಗುತ್ತಾರೆ. ಪ್ರತಿಯೊಬ್ಬರು ಟಪ್ಪಾಲು ಮೂಲಕ ೪ ಆಣೆ ಸ್ಟಾಂಪ ಕಳಿಸಿದರೆ ಉಚಿತವಾಗಿ ಕಳಿಸುತ್ತೇವೆ.

ಮ್ಯಾನೇಜರ್—

ವೀರಶೈವ ಪುರಾತನ ಗ್ರಂಥ ಪರಿಶೋಧನಾಲಯು.

ಹರಪನಹಳ್ಳಿ (ಜಿಲ್ಲಾ ಬಳ್ಳಾರಿ.)

## ಹಿಂದು ಸಮಾಜ ಕರಗುವದೆಷ್ಟು?

ಧರ್ಮವೀರ ಡಾ. ಮುಂಜೆಯವರು ಹಿಂದು ಸಮಾಜವು ಒಂದು ಮೇಣಬತ್ತಿಯಂತಿದೆಯೆಂದೂ ಇದರ ಕೆಳಭಾಗಕ್ಕೆ ಕ್ರೈಸ್ತರ ಆಕ್ರಮಣವೆಂಬ ಉರಿ; ಮೇಲ್ಭಾಗಕ್ಕೆ ಮುಸಲ್ಮಾನರ ಆಕ್ರಮಣವೆಂಬ ಉರಿ ಹತ್ತಿ ದಿನೆ ದಿನೆ ಕರಗುತ್ತಲಿದೆಯೆಂದೂ ಸಾರಿ ಸಾರಿ ಹೇಳುತ್ತಿದ್ದಾರಷ್ಟೆ.

ಕ್ರಿ. ಶ. ೧೮೯೧ ರಿಂದ ೧೯೩೧ ರ ವರೆಗಿನ ೪೦ ವರುಷಗಳಲ್ಲಿ ಯಾವ ಯಾವ ಸಮಾಜಗಳು ಎಷ್ಟರಮಟ್ಟಿಗೆ ಬೆಳೆದಿವೆಯೆಂಬುದನ್ನು ನೋಡಿದರೆ ಪರಧರ್ಮದವರ ಆಕ್ರಮಣವೆಂಬ ಉರಿಗೆ ಆರಗಾಗಿ ಕರಗುತ್ತಿರುವ ಹಿಂದು ಸಮಾಜದ ಶೋಚನೀಯ ಸ್ಥಿತಿ ಗೊತ್ತಾಗುವುದು.

ಈ ನಾಲ್ವತ್ತು ವರುಷಗಳಲ್ಲಿ ವರ್ಣವಾದಿ ಹಿಂದುಗಳು ನೂರಕ್ಕೆ ೧೫ ರಂತೆ, ಮುಸಲ್ಮಾನರು ೩೫ ರಂತೆ, ಕ್ರಿಸ್ತರು ೧೪೫ ರಂತೆ, ಶೀಖರು ೧೨೭ ರಂತೆ, ಬೌದ್ಧರು ೭೯ ರಂತೆ ಹೆಚ್ಚಿದರು.

ಸವರ್ಣ ಹಿಂದುಗಳು ಸಂಖ್ಯೆಯಲ್ಲಿ ಅತ್ಯಧಿಕವಿದ್ದರೂ ಬೆಳವಣಿಗೆಯಲ್ಲಿ ಇಷ್ಟು ಕಡಿಮೆಯಾಗಿರುವುದೇಕೆ? ಪರಧರ್ಮಗಳ ಆಕ್ರಮಣದ ಉರಿಗೆ ಕರಗುತ್ತಿರುವುದರಿಂದಲ್ಲವೇ? ಹಿಂದು ಸಂಘಟನೆಯೆಂಬ ಶಕ್ತಿಯಿಂದ ಇದು ಗಟ್ಟಿಯಾಗುವ ವರೆಗೂ ಹೀಗೆಯೇ ಕರಗುತ್ತಾ ಹೋಗುವುದು.

---

## ಅತ್ಯಾಚಾರ ನಿಷೇಧ.

ಧಾರವಾಡ ಜಿಲ್ಲಾ ಬೆಳಗಾಲಪೇಟದ ಶ್ರೀ ನಿಶೀಮೇಶ್ವರ ಪ್ರಸಾದಿಕ ವೀರಶೈವ ತರುಣಸಂಘದಿಂದ ತಾ|| ೧೫-೭-೩೮ನೇ ದಿವಸ ಕೂಡಿದ ಸಭೆಯಲ್ಲಿ ಪಾಸಾದ ಠರಾವುಗಳು.

೧. ನಿಜಾಮು ರಾಜ್ಯದ ಕಲ್ಯಾಣದೊಳಗೆ. ಹಿಂದೂ ಜನರ ಮೇಲೆ ಮುಸಲ್ಮಾನರಿಂದ ಆದ ನೀಚ ಕೃತಿಯ ಅತ್ಯಾಚಾರವನ್ನು ಈ ಸಭೆಯು ನಿಷೇಧಿಸುತ್ತದೆ. ಅಲ್ಲದೆ ನಾಗನಾಥನ ಸ್ಮಶಾನ ಯಾತ್ರೆಗೆ ಬರುತ್ತಿದ್ದ ಹಿಂದುಗಳಿಗೆ ಮತ್ತು ಬೇಲೂರ ಗ್ರಾಮದಲ್ಲಿ ಆದ ಅನಾಚಾರವನ್ನು ಅಲ್ಲದೆ ಮಹಗಾಂವ ಎಂಬ ಊರಲ್ಲಿ ಹಿಂದುಗಳ ಮೇಲೆ ಮಾಡಿದ ಘೋರಕೃತಿಯನ್ನು ಈ ಸಭೆಯು ನಿಷೇಧಿಸಿ ಈ ದುಷ್ಕಾರ್ಯವನ್ನು ಮಾಡಿದ ಮುಸಲ್ಮಾನರ ಬಗ್ಗೆ ಈ ಸಭೆಯು ಸಂತಾಪವನ್ನು ವ್ಯಕ್ತಮಾಡುತ್ತದೆ.

೨. ಈ ತರದ ಅನ್ಯಾಯಗಳು ನಡೆಯಗೊಡದಂತೆ ವ್ಯವಸ್ಥಾ ಮಾಡಲಿಕ್ಕೆ ನಿಜಾಮು ಸರಕಾರಕ್ಕೆ ವಿನಂತಿ ಮಾಡಿಕೊಳ್ಳುತ್ತದೆ.

೩. ನಿಜಾಮು ರಾಜ್ಯದಲ್ಲಿರುವ ಹಿಂದುಗಳು ಅಲ್ಲಿಯ ತುಂಟ ಮುಸಲ್ಮಾನರಿಂದ ಆಗುವ ಅತ್ಯಾಚಾರವನ್ನು ತಡೆಗಟ್ಟಲು ಕೂಡಲೇ ಜಾಗೃತರಾಗಿ ತಕ್ಕ ಉಪಾಯ ಮಾಡಬೇಕೆಂದೂ ಈ ಬಗ್ಗೆ ಸಭೆಯು ಬೆಂಬಲಕೊಡುತ್ತದೆ.

---

—ಶ್ರೀ. ಮರುಳಾರಾಧ್ಯ ಶಾಸ್ತ್ರಿಗಳು ರಾಮದುರ್ಗ ಸಂಸ್ಥಾನದಲ್ಲಿ ಒಪ್ಪಂದದನಂತರ ಚಟುವಟಿಕೆ ನಡೆಸಿದ್ದಾರೆಂದೂ ಅದು ಅನುಚಿತವೆಂದೂ ಶ್ರೀ. ಶಂಕರರಾವ ದೇವ ಇವರು ಒಂದು ವಿಸ್ತಾರವಾದ ಪ್ರಕಟನೆಯನ್ನು ಹೊರಡಿಸಿದ್ದಾರೆ.

—ಗಡಿನಾಡಿನಲ್ಲಿ ಮೌಲಾನಾ ಶೌಕತ ಅಲ್ಲಿಯವರು ಮುಸ್ಲಿಂಲೀಗ್ ಪ್ರಚಾರವನ್ನು ಹೆಚ್ಚಾಗಿ ಮಾಡಿರುವರೆಂದೂ ಲೀಗಿಗೆ ವರದಿ ಒಪ್ಪಿಸಿರುವರೆಂದೂ ಸುದ್ದಿ.

## ಹಿಂದೂ ತರುಣಸಂಘ ಹಾವೇರಿ.

### ಸಂಘ ಸ್ಥಾಪನೆಯ ಉದ್ದೇಶ.

ಯಾರಿಗೆ ಈ ಹಿಂದುಸ್ಥಾನವು ಮಾತೃಭೂಮಿಯು ಮತ್ತು ತಮ್ಮ ಮತ ಸ್ಥಾಪಕರ ಜನ್ಮಭೂಮಿ (ಪುಣ್ಯಭೂಮಿ) ಯು ಆಗಿದೆಯೋ ಅವರೆಲ್ಲರೂ ಹಿಂದುಗಳೆಂದು ತಿಳಿಯದೆ ಧರ್ಮ ತತ್ವಗಳನ್ನು ಬಿಟ್ಟು ಜಾತಿ ಪಂಗಡಗಳಿಂದ ನಮ್ಮ ನಮ್ಮಲ್ಲಿ ಕಲಹ ಮಾಡುತ್ತಿರುವುದರಿಂದಲೇ ನಾವೆಲ್ಲರೂ ಪರತಂತ್ರರೂ ಬಲಹೀನರೂ ಬಡವರೂ ಆಗಿದ್ದೇವೆ. ಆದ್ದರಿಂದಲೇ ಪರಧರ್ಮ ಪರದೇಶದವರು ಹಿಂದುಗಳ ಮೇಲೆ ಈ ರೀತಿ ಧಾರ್ಮಿಕ ರಾಜಕೀಯ ಅನ್ಯಾಯ ಮಾಡುತ್ತಿದ್ದಾರೆ. ಈ ರೀತಿ ಪರರು ನಮ್ಮ ಮೇಲೆ ಮಾಡುವ ಅನ್ಯಾಯಗಳನ್ನು ದೂರ ಮಾಡುವದಕ್ಕಾಗಿಯೂ ಹಿಂದು ದೇಶವೂ ಹಿಂದು ಧರ್ಮವೂ ಹಿಂದು ಸಂಸ್ಕೃತಿಯೂ ಸುಖವಾಗಿ ಬಾಳುವಂತೆ ಪ್ರಯತ್ನಿಸುವುದಕ್ಕಾಗಿಯೂ ಈ ಹಿಂದೂ ತರುಣ ಸಂಘವು ಸ್ಥಾಪನೆಯಾಗಿದೆ.

ಇದರ ಮೊದಲನೆಯ ವಾರ್ಷಿಕ ಸಭೆಯು ಇದೇ ಬರುವ ತಾ. ೩೦-೮-೩೮ ನೆಯ ದಿವಸ ಜರುಗುವದಿದೆ. ಓರ್ವ ಹಿಂದು

---

## ವೀರಶೈವ 'ಚಹಾ' ಅಂಗಡಿಯವರಿಗೆ ಸವಿನಯ ಸೂಚನೆ.

ಶ್ರೀ. ಬಸವರಾಜ ಅಕ್ಕಿ ಮಲ್ಲಸಮುದ್ರ ಇವರು ಒಂದು ಲೇಖನವನ್ನು ಪ್ರಕಟನೆಗಾಗಿ ಕಳಿಸಿ ಅದರಲ್ಲಿ ಹೀಗೆ ಸೂಚಿಸಿದ್ದಾರೆ—

"ವೀರಶೈವರು "ಚಹಾ" ಅಥವಾ "ಕಾಫಿ" ಅಂಗಡಿ ಇಲ್ಲವೆ 'ಖಾನಾವಳಿ" ಗಳನ್ನು ಅನೇಕ ಕಡೆ ಇಟ್ಟಿದ್ದಾರೆ. ಇವರು ಬರೆದು ಹಚ್ಚಿರುವ ಹಲಗಿಗಳಲ್ಲಿ 'ವೀರಶೈವ ಲಿಂಗಾಯತ" ಎಂದು ಇರುತ್ತದೆ. ಇದು ತಪ್ಪು. ವೀರಶೈವ ಎಂಬ ಹೆಸರಾದರೂ ಇರಲಿ. ಅಥವಾ ಲಿಂಗಾಯತ ಎಂಬ ಹೆಸರಾದರೂ ಇರಲಿ. ಎರಡೂ ಹೆಸರನ್ನಿಡಬಾರದು. ಎರಡರ ಅರ್ಥವೂ ಒಂದೇ ಸರಿ."

---

—ಆಂಧ್ರಪ್ರಾಂತದ ಏಕೀಕರಣವು ಕಾಂಗ್ರೆಸ್ಸಿನ ಕೈಯಲ್ಲಿ ಅಧಿಕಾರ ಬಂದನಂತರವೇ ಸರಿಯೆಂದು ವರ್ಕಿಂಗ್ ಕಮಿಟಿಯು ಮಾಡಿದ ತೀರ್ಮಾನವನ್ನು ಆಂಧ್ರ ಪತ್ರಿಕೆಯು ಕಟುವಾಗಿ ನಿಷೇಧಿಸಿದೆ.

---

## ಶೋಚನೀಯ ನಿಧನ.

ಕರ್ನಾಟಕ ಕಾಲೇಜಿನ ಸಂಸ್ಕೃತ ಅಧ್ಯಾಪಕರಾದ ಪಂಡಿತ ಸೇತುಮಾಧವಾಚಾರ್ಯರು ಅರ್ಧಾಂಗವಾಯುವಿನ ಬೇನೆಯಿಂದ ಧಾರವಾಡದಲ್ಲಿ ತಾ. ೨೮ ನೆಯ ದಿನ ವೈಕುಂಠವಾಸಿಗಳಾದರೆಂದು ತಿಳಿಸಲು ತುಂಬಾ ವಿಷಾದಿಸುತ್ತೇವೆ. ಮೃತರ ಆತ್ಮಕ್ಕೆ ಚಿರಶಾಂತಿಯುಂಟಾಗಲಿ.

ಶ್ರೀ. ಎಸ್. ಕೆ. ಅಂಗಡಿ ಬಿ. ಎ. ಎಲ್. ಎಲ್ ಬಿ. ಧಾರವಾಡ ಇವರ ಅಕಾಲ ನಿಧನದಿಂದಾದ ದುಃಖವನ್ನು ವ್ಯಕ್ತಗೊಳಿಸಲು ಕರ್ನಾಟಕ ಕಾಲೇಜಿನಲ್ಲಿ ಸಭೆ ಸೇರಿತ್ತು. ಶ್ರೀ ಸೇತುಮಾಧವಾಚಾರ್ಯರ ನಿಧನದಿಂದ ತಮಗಾದ ದುಃಖವನ್ನೂ ಪ್ರದರ್ಶಿಸಿದರು. ಶ್ರೀ. ಅಂಗಡಿಯವರ ಆತ್ಮಕ್ಕೆ ಚಿರಶಾಂತಿಯುಂಟಾಗಲಿ.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

ಜನ ಸಂಖ್ಯೆಯನ್ನು ಹೆಚ್ಚಿಸಿದರು. ಈ ಆರ್ಯರು ಪಂಜಾಬ ಮತ್ತು ಗಂಗಾ-ಯಮುನಾ ನದಿಗಳ ಪ್ರದೇಶಗಳಲ್ಲಿ ವಾಸವಾಗಿದ್ದರು. ಇವರು ಬೇರೆ ಬೇರೆ ಭಾಗಗಳಲ್ಲಿ ಹೋಗಿ ರಾಜ್ಯವನ್ನು ಸಂಪಾದಿಸಿದರು. ಆದರೆ ಚಕ್ರವರ್ತಿಗಳಾಗಿ ಮಾತ್ರ ಆಳಲಿಲ್ಲ. ಋಗ್ವೇದದಲ್ಲಿರುವ ದಾಶರಾಜ್ಞ ಯುದ್ಧವು ಆರ್ಯರ ಯುದ್ಧವನ್ನೇ ವಿವರಿಸತಕ್ಕದ್ದಾಗಿದೆ.

### ಬ್ರಾಹ್ಮಣರ ಪ್ರಾಬಲ್ಯ.

ಯಜ್ಞ, ಯಾಗ, ವ್ರತ, ಹೋಮ ಮಂತ್ರ, ತಂತ್ರ, ಗ್ರಹ ದೇವತಾ ಪೂಜೆ ಮೊದಲಾದ ನಾನಾ ರೀತಿಗಳಿಂದ ಬ್ರಾಹ್ಮಣರ ವರ್ಚಸ್ಸು ಆರ್ಯರಲ್ಲಿ ದಿನೆ ದಿನೆ ಹೆಚ್ಚಿತು. ಯಜುರ್ವೇದ, ಬ್ರಾಹ್ಮಣ ಗ್ರಂಥ ಮತ್ತು ಮಂತ್ರ, ತಂತ್ರ, ಮಾಟ ಮೊದಲಾದವುಗಳಿಂದ ಕೂಡಿದ ಅಥರ್ವಣ ವೇದ ಇವು ಬ್ರಾಹ್ಮಣರ ಪ್ರಾಬಲ್ಯವನ್ನು ತೋರಿಸತಕ್ಕ ಗ್ರಂಥಗಳಾಗಿವೆ. ಭಾರತೀಯ ಯುದ್ಧದನಂತರ ಕ್ಷತ್ರಿಯರ ವರ್ಚಸ್ಸು ಬಹು ಮಟ್ಟಿಗೆ ಲೋಪವಾಯಿತು. ಇದರಿಂದ ಬ್ರಾಹ್ಮಣರ ಪ್ರಾಬಲ್ಯವು ಪೌರಾಣಿಕ ಕಾಲದಲ್ಲಿ ವಿಶೇಷವಾಗಿ ನಾಲ್ಕು ವರ್ಣಗಳು ಸ್ಥಿರಪಟ್ಟವು. ಶೂದ್ರರೆಂಬ ಮಾನವ ವರ್ಗದ ಬಹು ದೊಡ್ಡ ಭಾಗವು ಕೀಳಾಗಿ ತಿಳಿಯಲ್ಪಟ್ಟು ಬಹು ಹೀನ ವೃತ್ತಿಗೆ ತಳ್ಳಲ್ಪಟ್ಟಿತು. ಜನ್ಮದಿಂದಲೇ ಜಾತಿಯ ಮೇಲು ಕೀಳುಗಳು ಎಣಿಸಲ್ಪಟ್ಟವು. ಬ್ರಾಹ್ಮಣನು ಎಂಥ ಅಪರಾಧವನ್ನು ಮಾಡಿದರೂ ಆತಗೆ ದೇಹ ದಂಡನೆಯ ಶಿಕ್ಷೆಯಿಲ್ಲ. ನ್ಯಾಯ ನಿರ್ಣಯದ ಕಾರ್ಯವನ್ನು ಮೂರ್ಖನಾದ ಬ್ರಾಹ್ಮಣನಾದರೂ ಮಾಡಬಹುದು. ಆದರೆ ಜಾಣನಾದ ಶೂದ್ರನು ಮಾತ್ರ ಮಾಡಕೂಡದೆಂದು ಶಾಸನವೇ ಏರ್ಪಟ್ಟಿತು. ಬುದ್ಧನವರೆಗೆ ಚತುರ್ವರ್ಣಗಳ ರೀತಿ ನೀತಿಗಳು ಬಲಗೊಳ್ಳುತ್ತಲೇ ಇದ್ದವು. ಅನೇಕ ಸ್ಮೃತಿ ಗ್ರಂಥಗಳು ಏರ್ಪಟ್ಟವು. ವರ್ಣಗಳು ವಿಷಮತ್ವದಿಂದಲೇ ಏರ್ಪಟ್ಟವುಗಳಾಗಿವೆ.

### ಪ್ರತಿಕ್ರಿಯೆಯ ಪ್ರಾರಂಭ.

ಆರ್ಯರ ರೀತಿನೀತಿಗಳನ್ನೂ ಆಕ್ರಮಣವನ್ನೂ ತಡೆಯುವಂತಹ ಬೇರೆ ಬೇರೆ ಮಾನವ ವಂಶಗಳು ಈ ದೇಶದಲ್ಲಿ ಇದ್ದೇ ಇದ್ದವು. ಶೂದ್ರರು ಅಥವಾ ಸಂಕರ ಜಾತಿಯವರು ಇಲ್ಲವೇ ವ್ರಾತ್ಯರು ಎಂಬ ಜನರು ಆರ್ಯರಿಂದ ತುಳಿಯಲ್ಪಟ್ಟದ್ದರು. ಕೆಲವರು ಸ್ವತಂತ್ರವಾಗಿಯೂ ಇದ್ದರು. ಅವರಲ್ಲಿ ಕೆಲವರು ಲಿಂಗ ಪೂಜಕರೂ ಮೂರ್ತಿ ಪೂಜಕರೂ ಇದ್ದರು. ಇವರೆಲ್ಲರೂ ಆರ್ಯೇತರರು. ಇವರು ಆರ್ಯರ ಯಜ್ಞ ಸಂಸ್ಕೃತಿಯನ್ನು ವಿರೋಧಿಸುತ್ತಿದ್ದರು. ಪರಶುಪ್ತ ಬ್ರಾಹ್ಮಣರ ವರ್ಚಸ್ಸನ್ನು ಕಡಿಮೆಮಾಡಲು ಪ್ರಯತ್ನಿಸುತ್ತಿದ್ದರು.

ಜೈನ ಧರ್ಮ ಮತ್ತು ಬೌದ್ಧ ಧರ್ಮಗಳು ಈ ವೈದಿಕ ಧರ್ಮದಮೇಲೆ ಬಂದ ಬಲವಾದ ಆಘಾತಗಳು. ಆಯಾಯ ಧರ್ಮಗಳ ಪ್ರಚಾರಕರು ಸನ್ಯಾಸಿಗಳಿರುತ್ತಿದ್ದರು. ಬ್ರಾಹ್ಮಣರಾದರೋ ಗೃಹಸ್ಥಾಶ್ರಮಿಗಳು. ಇವರು ಜನಸಾಮಾನ್ಯರ ನಿತ್ಯ ನೈಮಿತ್ತಿಕ ಆಚಾರ ವ್ರತಾದಿಗಳಿಗೆ ಬೇಕಾಗುತ್ತಿದ್ದರು. ಆದುದರಿಂದ ಜನಸಾಮಾನ್ಯದ ಮೇಲಿದ್ದ ಇವರ ವರ್ಚಸ್ಸು ಅಳಿಯಲಿಲ್ಲ. ಜನರ ಮನೋವೃತ್ತಿಗೆ ತಕ್ಕಂತೆ ಭಕ್ತಿಮಾರ್ಗದ ಪೂಜೆ, ಜಪ, ತಪಾದಿಗಳನ್ನು ಬ್ರಾಹ್ಮಣರು ಅನುಸರಿಸಿ ಅವರ ಮೇಲೆ ತಮ್ಮ ವರ್ಚಸ್ಸನ್ನು ಇಟ್ಟುಕೊಂಡರು.

ಹಿಂದಿನ ಯಜ್ಞಯಾಗ ಮಾರ್ಗಗಳನ್ನು ಬಿಟ್ಟು ಭಕ್ತಿಮಾರ್ಗವನ್ನೇ ಅನುಸರಿಸಿದರು. ಆರ್ಯರ ಇಂದ್ರ, ಸೂರ್ಯ, ವರುಣ, ಉಷಾ, ಇವುಗಳ ಪೂಜೆಯು ನಿಂತು ಶಿವ, ವಿಷ್ಣು ಮೊದಲಾದ ದೇವತೆಗಳ ಪೂಜೆ ಪ್ರಾರಂಭವಾಯಿತು. ಯಜ್ಞ ಮಂಟಪಗಳಿಗೆ ಪ್ರತಿಯಾಗಿ ದೇವಾಲಯಗಳುಂಟಾದವು. ತುಪ್ಪ, ಮಾಂಸ, ಸಮಿಧಾಗಳ ಆಹುತಿಗಳು ಅಡಗಿ ಚಂದನಾದಿ ಗಂಧಲೇಪನ, ಆರತಿ ಮೊದಲಾದವುಗಳು ಉದಯವಾದವು.

ಐಹಿಕ ಸುಖದ ಕಡೆಗಿದ್ದ ಆರ್ಯರ ಆಗಿನ ವಿಚಾರಸರಣಿ ಲೋಪವಾಗಿ ಇಹಲೋಕಸುಖವು ಕ್ಷಣಭಂಗುರವೂ ಪರಲೋಕ ಸುಖವೇ ಶಾಶ್ವತವೂ ಎಂಬ ಕಲ್ಪನೆಗಳುಂಟಾದವು. ಹೀಗೆ ಎಲ್ಲ ದೃಷ್ಟಿಗಳಿಂದಲೂ ಆರ್ಯ ಸಂಸ್ಕೃತಿಯ ಸಮಾಧಿಯಾಗಿ ಸಾವಿರಾರು ವರುಷಗಳಾದವು. ಈಗಿನ ಹಿಂದು ಸಂಸ್ಕೃತಿಯು ಏರ್ಪಟ್ಟು ಮತ್ತೆ ಅದರಲ್ಲಿ ವ್ಯತ್ಯಾಸಗಳಾಗುತ್ತಾ ಇವೆ. ಆರ್ಯ ಸಂಸ್ಕೃತಿಯ ಸಮಾಧಿಯ ಮುಂದೆ ಜೀರ್ಣವಾದ ಹಿಂದು ಸಂಸ್ಕೃತಿಯು ಈಗ ಆರತಿಯನ್ನು ಬೆಳಗುತ್ತಾ ಇದೆ. ಏಕೆಂದರೆ, ನೀನು ಮತ್ತೆ ಸಮಾಧಿಯಿಂದ ಎದ್ದು ಬಾ; ಎಂದು. ಇದು ದೇಶದ ದುರ್ದೈವವಲ್ಲವೆ?

---

## ಪ್ರಚಂಡ ಸಾಹಸ!

ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಅನೇಕ ಸ್ತ್ರೀ ಪುರುಷರು ನಾನಾ ಶೋಧಗಳಿಗಾಗಿ ಮೃತ್ಯುವನ್ನು ಕೂಡಾ ಎದರಿಸುವಂತಹ ಪ್ರಚಂಡ ಸಾಹಸಕ್ಕೆ ಎದೆ ಕೊಡುತ್ತಿದ್ದಾರೆ. ಹಿಮಾಲಯದಲ್ಲಿಯ ನಂಗಾ ಪರ್ವತದ ಶಿಖರವನ್ನು ಹತ್ತಲು ಜರ್ಮನಿಯ ಸಾಹಸಿಗಳು ಮಾಡುತ್ತಿರುವ ಪ್ರಯತ್ನವು ಅತ್ಯದ್ಭುತವಾದುದು.

೧೯೩೪ ನೆಯ ಮಾರ್ಚಿ ತಿಂಗಳಲ್ಲಿ ಜರ್ಮನಿಯ ವಿಲಿಮರ್ಕಲ್ ಎಂಬ ಪ್ರಚಂಡ ಸಾಹಸಿಯು ನಂಗಾ ಪರ್ವತದ ಶಿಖರವನ್ನೇರುವ ಕಾರ್ಯಕ್ಕಾಗಿ ಜರ್ಮನಿಯಿಂದ ಹೊರಟು ಮೇ ತಿಂಗಳಲ್ಲಿ ಹಿಮಾಲಯವನ್ನು ಸೇರಿದನು. ಈ ಪರ್ವತ ಶಿಖರವು ೨೬೬೪೨ ಅಡಿ ಎತ್ತರವಾಗಿದೆ. ಈ ಪ್ರವಾಸಿಯು ೨೫೩೦೦ ಅಡಿಗಳ ವರೆಗೆ ಹೋಗಿ ಜುಲೈ ೧೫ ನೆಯ ತಾರೀಖಿನ ದಿವಸ ಹಿಮಗಡ್ಡೆಯ ಆಘಾತದಿಂದ ಮೃತಪಟ್ಟನು,

ಈ ಪ್ರವಾಸದ ಭೀಕರ ಸ್ಥಿತಿಯು ಗೊತ್ತಿದ್ದರೂ ಕಳೆದ ಮೇ ತಿಂಗಳಲ್ಲಿ ಜರ್ಮನಿಯ ಮತ್ತೊಂದು ಸಾಹಸಿಗಳ ಗುಂಪು ಈ ಪರ್ವತದ ಶಿಖರವನ್ನೇರಲು ಪ್ರಯತ್ನಿಸಿ ಜಯ ಹೊಂದದೆ ಮೃತಪಟ್ಟತಷ್ಟೆ. ಈ ಪ್ರವಾಸಿಗಳಲ್ಲಿ ಪ್ರಾಯಶಃ ಯಾರೂ ತಿರುಗಿ ಬಾರದಿದ್ದುದರಿಂದ ಅವರು ಎಲ್ಲಿಯವರೆಗೆ ಹೋಗಿದ್ದರೆಂಬುದಾಗಲೀ ಅವರಿಗೆ ಯಾವ ವಿಪತ್ತು ಬಂದಿತೆಂಬುದಾಗಲೀ ಗೊತ್ತಾಗಲಿಲ್ಲ. ಇವರ ಈ ಪ್ರಚಂಡ ಸಾಹಸವು ಕೌತುಕಾಸ್ಪದವಾದುದಲ್ಲವೆ?

## ವಿಶ್ವ ವಿದ್ಯಾಲಯಗಳಲ್ಲಿ
# ವಚನ ವಾಙ್ಮಯದ ಅಭ್ಯಾಸ.

(೪)

ಬಸವಾದಿ ಪ್ರಮಥರು ಕರ್ನಾಟಕ ಭಾಷೆಯಲ್ಲಿ ಹೊರಪಡಿಸಿದ ವಚನ ವಾಙ್ಮಯವು ಎಷ್ಟು ಮಹತ್ವದ್ದೆಂಬದು ಈಗ ಎಲ್ಲರಿಗೂ ತಿಳಿದದ್ದೇ ಆಗಿದೆ. ಇದರ ಮೂಲಕ ಕನ್ನಡ ಭಾಷೆಗೆ ಶೋಭೆಯುಂಟಾಗಿದೆಯಷ್ಟೇ ಅಲ್ಲ; ಹಿಂದುಸ್ಥಾನದ ಭಾಷೆಗಳಲ್ಲಿ ಕನ್ನಡಕ್ಕಿರುವ ಇದೊಂದು ವೈಶಿಷ್ಟ್ಯವೆಂದು ಹೇಳಿಸಿಕೊಳ್ಳುವ ಸ್ಥಿತಿಯೂ ಉಂಟಾಗಿದೆ. ಈಚೆಗೆ ಈ ವಾಙ್ಮಯಕ್ಕೆ ವಿಶ್ವವಿದ್ಯಾಲಯಗಳಲ್ಲಿ ಸಹ ಸ್ಥಾನವು ದೊರೆಯಹತ್ತಿದೆಂಬದು ಸಮಾಧಾನಕರವಾದದ್ದು. ಮೈಸೂರು, ಮುಂಬೈ ವಿಶ್ವವಿದ್ಯಾಲಯಗಳ ಉಚ್ಚ ಪರೀಕ್ಷೆಗಳಲ್ಲಿ ವಚನ ಗ್ರಂಥಗಳು ಈಗ ಉಪಯೋಗಿಸಲ್ಪಡುತ್ತಲಿವೆ. ಇದು ಶಿವಾನುಭವ ಪತ್ರಿಕೆಯ ದ್ವಾರಾ ವಚನ ಗ್ರಂಥಗಳು ಹೊರಪಟ್ಟಿದ್ದರ ಪರಿಣಾಮವೇ ಸರಿ.

ಮೈಸೂರು ವಿಶ್ವವಿದ್ಯಾಲಯದ ಈ ವರ್ಷದ ಬಿ. ಎ. ಪರೀಕ್ಷೆಯಲ್ಲಿ ಬಸವೇಶ್ವರನ ವಚನಗಳಲ್ಲಿಯ ಮಹೇಶ್ವರ ಸ್ಥಲದ ವಚನಗಳು ನಿಯಮಿಸಲ್ಪಟ್ಟಿರುತ್ತವೆ.

ಅದೇ ವಿಶ್ವವಿದ್ಯಾಲಯದ ಬಿ ಎ. ಆನರ್ಸ್ ಪರೀಕ್ಷೆಯಲ್ಲಿ ಬಸವೇಶ್ವರನ ವಚನ ಗ್ರಂಥದಲ್ಲಿಯ ೧ ನೇ ಪುಟದಿಂದ ೭೮ ಪುಟಗಳವರೆಗಿನ ಭಾಗವೂ ಅಲ್ಲದೆ ಮಹದೇವಿಯಕ್ಕನ ವಚನಗಳೂ ದೇವರದಾಸಿಮಯ್ಯನ ವಚನಗಳೂ, ಚನ್ನಬಸವೇಶ್ವರನ ವಚನಗಳೂ ನಿಯಮಿಸಲ್ಪಟ್ಟಿವೆ.

ಇದೇ ಪ್ರಕಾರ ಈ ಗ್ರಂಥಗಳು ಮುಂಬೈ ವಿಶ್ವವಿದ್ಯಾಲಯದಲ್ಲಿಯೂ ಕೂಡ ಉಪಯೋಗಿಸಲ್ಪಡುತ್ತಲಿರುವುದು ಕಂಡು ಬರುತ್ತಿದೆ.

ವಚನಶಾಸ್ತ್ರಸಾರ ಭಾಗ ೧ ಇದರಲ್ಲಿಯ ಕೆಲ ಭಾಗಗಳು ಅನೇಕ ವರುಷಗಳಿಂದಲೂ ಬಿ ಎ. ಎಂ. ಎ. ಪರೀಕ್ಷೆಗಳಲ್ಲಿ ನಿಯಮಿಸಲ್ಪಡುತ್ತ ಬಂದಿವೆ.

೧೯೩೬ ನೇ ಇಸವಿಯಲ್ಲಿಯ ಬಿ. ಎ. ಪರೀಕ್ಷೆಗೆ ಮಹಾದೇವಿಯಕ್ಕನ ವಚನಗಳು ಇಡಲ್ಪಟ್ಟಿದ್ದವು. ೧೯೩೮ ನೇ ಇಸ್ವಿಯ ಎಂ. ಎ. ಪರೀಕ್ಷೆಗೆ ಮೊಗ್ಗೆಮಾಯಿದೇವರ ಕನ್ನಡದಲ್ಲಿ ಪರಿವರ್ತಿಸಲ್ಪಟ್ಟ ಶಿವಾನುಭವ ಸೂತ್ರಕ್ಕೆ ಪ್ರಭುದೇವರ ವಚನಗಳೂ ನಿಯಮಿಸಲ್ಪಟ್ಟಿವೆ. ಘನಲಿಂಗನ ವಚನ ಗ್ರಂಥವೂ ನಿಯೋಜಿಸಲ್ಪಟ್ಟಿವೆ.

ಇದರಿಂದ ಈ ಗ್ರಂಥಗಳನ್ನು ವಿಮರ್ಶಾತ್ಮಕ ಬುದ್ಧಿಯಿಂದ ಅಭ್ಯಾಸಿಸಲಿಕ್ಕೂ, ವೀರಶೈವ ಮತದ ತಿರುಳನ್ನು ತಿಳಿಯಲಿಕ್ಕೂ ವಿದ್ಯಾರ್ಥಿಗಳಿಗೂ ಕನ್ನಡ ಪ್ರೊಫೆಸರರಿಗೂ ಬಹಳ ಅನುಕೂಲವಾಗಿರುತ್ತದೆ.

ಮುಂಬೈ ಇಲಾಖೆಯ ಎಮ್. ಎ. ಪರೀಕ್ಷೆಗೆ ಕರ್ನಾಟಕ ಸಂಸ್ಕೃತಿ ಎಂಬ ವಿಷಯವಿದೆ. ೧೯೩೬ ನೇ ವರ್ಷದಲ್ಲಿ ಈ ವಿಷಯದ ಬಗ್ಗೆ ವೀರಶೈವ ಸಂಸ್ಕೃತಿಯು ನಿಯಮಿಸಲ್ಪಟ್ಟಿತ್ತು. ಇದರ ಪ್ರಶ್ನೆಗಳ ಕಾಗದವು ಶಿವಾನುಭವದ ವಾಚಕರಿಗೆ ಬೋಧಪ್ರದವಾಗಬಹುದೆಂದು ಎಣಿಸಿ ಅವುಗಳನ್ನು ನಾವು ಇಲ್ಲಿ ಕೊಟ್ಟಿರುತ್ತೇವೆ. ಇದರ ಮೇಲಿಂದ ವೀರಶೈವ ವಾಙ್ಮಯದಲ್ಲಿಯ ಮಹತ್ವದ ಗ್ರಂಥಗಳನ್ನು ಹೊರಪಡಿಸುವದು ಎಷ್ಟು ಅಗತ್ಯವೆಂಬುದು ವೀರಶೈವರಿಗೆ ಗೋಚರವಾಗದೆ ಇರಲಾರದು. ಆ ಪ್ರಶ್ನೆಗಳು ಯಾವವೆಂದರೆ—

(೧) ಪಿಂಡ ಮತ್ತು ಬ್ರಹ್ಮಾಂಡ ಇವುಗಳ ಉತ್ಪತ್ತಿಯನ್ನು ವಿವರಿಸಿರಿ. ೨ ಶಿವತತ್ವಗಳೆಂದರೆ ಆವವು ? ಆತ್ಮ ಪ್ರಗತಿಯ ಕಾರ್ಯದಲ್ಲಿ ಅವುಗಳ ಮಹತ್ವವೇನು ? ೩ ಶಕ್ತಿ, ಭಕ್ತಿ, ಲಿಂಗ ಇವುಗಳಲ್ಲಿಯ ಉಪಭೇದಗಳಾವವು ? ಷಟ್‌ಸ್ಥಲ ಶಾಸ್ತ್ರದಲ್ಲಿ ಅವುಗಳ ಮಹತ್ವವಾವುದು ? ೪ ಷಟ್‌ಸ್ಥಲಗಳಾವವು? ಅವುಗಳ ರೀತಿಗಳನ್ನು ವಿರೂಪಾಕ್ಷ ಪಂಡಿತನು ಹೇಗೆ ವಿವರಿಸಿದ್ದಾನೆ? ೫ ಲಿಂಗ ಪೂಜೆಯಲ್ಲಿ ಯಾವ ಯಾವ ಭೇದಗಳಿವೆ ? ಅವುಗಳಿಂದ ಮನುಷ್ಯನ ಆತ್ಮಿಕ ಪ್ರಗತಿಯು ಹೇಗೆ ಉಂಟಾಗುತ್ತದೆ? ೬ ಅರ್ಪಣ ಮತ್ತು ಪ್ರಸಾದ ಇವುಗಳ ಧಾರ್ಮಿಕ ಮಹತ್ವವನ್ನು ವಿವರಿಸಿರಿ. ಅವುಗಳಲ್ಲಿಯ ಉಪಭೇದಗಳಾವವು ? ಅವುಗಳನ್ನು ಮಹದೇವಿಯಕ್ಕನು ಹೇಗೆ ಅನುಭವಕ್ಕೆ ತಂದುಕೊಂಡಿದ್ದಳು ? ೭ ವೀರಶೈವ ಧರ್ಮದಲ್ಲಿ ಪಂಚಾಕ್ಷರ ಮಂತ್ರದ ಮಹತ್ವವು ಆವುದಿದೆ ? ೮ ಮಹಾದೇವಿಯಕ್ಕನು ಅನುಭವಿಸಿದ ಶಿವಾನುಭವದ ರೀತಿಯನ್ನು ವಿವರಿಸಿರಿ. ೯ ಭಾವಚಿಂತಾರತ್ನದ ಧಾರ್ಮಿಕ ಮತ್ತು ಸಾಂಸ್ಕೃತಿಕ ಮಹತ್ವವಾವುದು ?

ಈ ಪ್ರಕಾರ ವೀರಶೈವ ಸಂಸ್ಕೃತಿಯ ಅಭ್ಯಾಸವು ವಚನ ಗ್ರಂಥಗಳನ್ನು ಹೊರಪಡಿಸುವದರಿಂದ ಹೇಗೆ ವಿಶ್ವ ವಿದ್ಯಾಲಯದ ಉಚ್ಚ ಪರೀಕ್ಷೆಗಳಲ್ಲಿ ಸಾಗಹತ್ತಿದೆಂಬದರ ಮನವರಿಕೆಯು ವೀರಶೈವರಿಗೆ ಆಗದೆ ಇರದು. ಈ ತರದ ಪ್ರಯತ್ನಗಳಿಂದಲೇ ಸಮಾಜದ ಮತ್ತು ಧರ್ಮದ ಯೋಗ್ಯತೆಯು ಬೆಳೆಯುವುದು ನಿಶ್ಚಯವು.

ವೀರಶೈವ ವಾಙ್ಮಯದಲ್ಲಿ ವಚನಗಳಲ್ಲದೆ ಇನ್ನೂ ಅನೇಕ ಕಾವ್ಯಗಳೂ, ರಗಳೆಗಳೂ, ಶತಕಗಳೂ, ತ್ರಿಪದಿಗಳೂ ಉಂಟು. ಇವೆಲ್ಲವೂ ಬಹು ಮಹತ್ವದ್ದಾಗಿವೆ. ಆದರೆ ಇವು ಇನ್ನೂ ಹೊರಪಟ್ಟಿಲ್ಲ. ಇವುಗಳಲ್ಲಿ ಹರಿಹರನ ೩೦-೪೦ ರಗಳೆಗಳು ಮಾತ್ರ ಶಿವಾನುಭವ ಪತ್ರಿಕೆಯ ಮೂಲಕ ಹೊರಪಟ್ಟಿವೆ. ಈಚೆಗೆ ಅವುಗಳಲ್ಲಿ ಕೆಲವು ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಗಾಗಿ ಸಿದ್ಧಪಡಿಸಿದ ಪಠ್ಯ ಪುಸ್ತಕಗಳಲ್ಲಿ ಆರಿಸಲ್ಪಡುತ್ತಲಿದ್ದುದು ಕಂಡುಬರುತ್ತದೆ. ಈ ರಗಳೆಗಳ ಮೂಲಕ ಕನ್ನಡ ಭಾಷೆಯ ಸೊಬಗನ್ನು ವಿದ್ಯಾರ್ಥಿಗಳು ಬಹು ಚೆನ್ನಾಗಿ ಅರಿಯಬಹುದಾಗಿದೆ. ಇದರಂತೆಯೇ ವೀರಶೈವ ವಾಙ್ಮಯದಲ್ಲಿ ಇನ್ನೂ ಅನೇಕ ಮಹತ್ವದ ಗ್ರಂಥಗಳು ಇದ್ದು ಅವುಗಳನ್ನು ಬೇಗನೆ ಪ್ರಸಿದ್ಧಿಸುವದು ಅವಶ್ಯವು. ಇಲ್ಲದೆ ಹೋದರೆ ಅವು ಬೇಗನೆ ನಷ್ಟವಾಗಿ ಹೋಗುವ ಸಂಭವವಿದೆ.

ವಿಶ್ವವಿದ್ಯಾಲಯದಲ್ಲಿ ಮೇಲೆ ಹೇಳಿದಂತೆ ವೀರಶೈವ ಗ್ರಂಥಗಳು ಸೇರ್ಪಡೆಯಾಗಿದ್ದರೂ, ಇವುಗಳ ಅಭ್ಯಾಸವು ಮಾತ್ರ ವೀರಶೈವ ಪಾಠಶಾಲೆಗಳಲ್ಲಿ ಇನ್ನೂ ವ್ಯವಸ್ಥಿತವಾಗಿ ಮತ್ತು ಹೆಚ್ಚುಒತ್ತರದಿಂದ ನಡೆಯದೆ ಇದ್ದದ್ದು ಬಹು ಶೋಚನೀಯವಾಗಿದೆ. ಅವುಗಳಲ್ಲಿಯೂ ಇಂಥ ಗ್ರಂಥಗಳು ಸೇರ್ಪಡೆಮಾಡುವುದು ಬಹು ಅವಶ್ಯವು. ಇದರಿಂದ ಅಲ್ಲಿ ಕಲಿಯುತ್ತಿರುವ ಅನೇಕ ಮಠಾಧಿಕಾರಿಗಳಾದ ವಿದ್ಯಾರ್ಥಿಗಳಿಗೆ ಬಹು ಉಪಯೋಗವಾಗದೆ ಇರದು. ಇತ್ತಕಡೆ ಈ ಸಂಸ್ಥೆಗಳ ಚಾಲಕರು ಮನಗೊಡುವರೆಂದು ನಾವು ಭಾವಿಸಿದ್ದೇವೆ.

"ಶಿವಾನುಭವ"

---

—ಮುಂಬೈ ಪ್ರಾಂತದ ಹೊಸ ಗವ್ಹರ್ನರರಾದ ಸರ್. ಲಂಬ್ಲೆಯವರು ಸಪ್ಟಂಬರ್ ೧೬ ನೆಯ ತಾರೀಖಿನ ದಿವಸ ಮುಂಬೈಗೆ ಬರುವರು. ತಾ. ೧೮ ನೆಯ ದಿನ ಈಗಿನ ಗವ್ಹರ್ನರರಾದ ಲಾರ್ಡ [illegible] ಹೋಗುವರು.

ಈಗ ಪ್ರತ್ಯಕ್ಷ ವ್ಯವಹಾರದಲ್ಲಿ ನಿರೀಕ್ಷಿಸಿದರೆ ಬಹುಶಃ ಎಲ್ಲ ವೀರಶೈವರು ಶ್ರೀ. ಬಸವಲಿಂಗಪ್ಪನವರು ತೋರಿಸಿದ ಶಾಸ್ತ್ರಾಧಾರಗಳ ವಿರುದ್ಧ ಸ್ಥಿತಿಯವರೇ ಕಂಡುಬರುತ್ತಾರೆ. ಇದಕ್ಕೆ ಪ್ರಬಲವಾದ ಕಾರಣವೆಂದರೆ ಮೇಲ್ವಿಚಾರಕರೂ ಸಮಾಜನೇತಾರರೂ ಆದ ಅಯ್ಯನವರು (ಗುರುಜಂಗಮ ವರ್ಗದವರು) ಕರ್ತವ್ಯಪರಾಙ್ಮುಖರಾದುದೇ! ಆದುದರಿಂದಲೇ ೫೫ ಲಕ್ಷ ವೀರಶೈವರಲ್ಲಿ ಸಹ ಅಂಗಗುಣವಳಿದು ಲಿಂಗಗುಣ ಪಿಡಿದವರನ್ನು ಕಾಣುವುದು ಅಪುರೂಪವಾಗಿದೆ. ಮೂಲತಃ ಮಳೆಯೇ ಇಲ್ಲವಾದರೆ ಬುಗ್ಗೆಗಳಲ್ಲಿ ನೀರು ಅದೆಲ್ಲಿಂದ ಬರುವುದು? ಆದುದರಿಂದಲೇ ಸಮಾಜದಲ್ಲಿ ವಿಪರೀತ ಪರಿಸ್ಥಿತಿಯು ಪಸರಿಸಿ ನೆಲೆಗೊಂಡು ಒಳ್ಳೊಳ್ಳೇ ಬುದ್ಧಿವಂತರು ಕೂಡಾ ದಿಗ್ಭ್ರಾಂತಿಪಟ್ಟು ಶಾಸ್ತ್ರಕ್ಕೂ ವ್ಯವಹಾರಕ್ಕೂ ತಾಳಮೇಳವಿಲ್ಲೆನ್ನುವ ಕಠಿಣ ಕಾಲ ಬಂದೊದಗಿತು. ಇನ್ನಾದರೂ ಸಮಾಜವು ಕಣ್ಣು ತೆರೆಯಲಿ!

ಬಸಪ್ಪ ಚನ್ನಪ್ಪ ಪಟ್ಟೇದ.

## ನೈಜಾಮ ಪ್ರಾಂತದ ವೃತ್ತಾಂತ.

—ಹೈದರಾಬಾದ ಸಂಸ್ಥಾನದ ಮುಖ್ಯಮಂತ್ರಿಗಳಾದ ಸರ್. ಅಕಬರ ಹೈದರಿ ಇವರಿಗೆ ಉಸ್ಮಾನಿಯಾ ವಿಶ್ವವಿದ್ಯಾಲಯದವರು ಒಂದು ಔತಣವನ್ನು ಕೊಟ್ಟರು. ಆಗ ಸರ್. ಅಕಬರ ಹೈದರಿಯವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ನಮ್ಮ ಸಂಸ್ಥಾನವಲ್ಲಿ ಆಳುವವರು ಮತ್ತು ಆಳಲ್ಪಡುವವರು ಎಂಬ ಭೇದ ಭಾವವು ಇಲ್ಲವೇ ಇಲ್ಲ."

—ನಿಜಾಮ ಪ್ರಾಂತದ ಅನೇಕ ಸ್ಥಳಗಳಲ್ಲಿಯ ಆರ್ಯ ಸಮಾಜದ ಕಾರ್ಯಗಳಿಗೆ ಅಲ್ಲಿಯ ಪೊಲೀಸ್ ಅಧಿಕಾರಿಗಳಿಂದ ತೊಂದರೆಯಾಗುತ್ತಲಿದೆಯೆಂದು ಭಾಯಿ ಪರಮಾನಂದರವರಿಗೆ ಒಬ್ಬರು ತಿಳಿಸಿದ್ದಾರೆ.

—ಉದ್ಗಿರಿಯ ಪ್ರಸಿದ್ಧ ವಕೀಲರೂ ನೈಜಾಮ ಪ್ರಾಂತದ ವೀರಶೈವ ಸಮಾಜದ ಪ್ರಮುಖ ಮುಂದಾಳುಗಳೂ ಆದ ಶ್ರೀ. ಶೇಟೆ ಸಂಗ್ರಾಮಪ್ಪನವರು ನೈಜಾಮ ಪ್ರಾಂತದ ವೀರಶೈವ ವಿದ್ಯಾಭಿವೃದ್ಧಿಯ ಫಂಡನ್ನು ಹೆಚ್ಚಿಸಬೇಕಾಗಿ ಪ್ರಾಂತಿಕ ಪರಿಷತ್ತಿನಲ್ಲಿ ಗೊತ್ತಾದಂತೆ ಜಾಗ್ರತೆ ಕಾರ್ಯ ಪ್ರಾರಂಭಿಸಬೇಕೆಂದು ಆ ಭಾಗದವರಲ್ಲಿ ಬಹು ಕಳಕಳಿಯ ವಿಜ್ಞಾಪನೆಯನ್ನು ಮಾಡಿಕೊಂಡಿದ್ದಾರೆ.

—ಅಂಬೆಜೋಗಾಯಿ ಎಂಬಲ್ಲಿಯ ಜೋಗೇಶ್ವರ ವಿದ್ಯಾಲಯದಲ್ಲಿಯ ಹೈಸ್ಕೂಲ್ ವರ್ಗವನ್ನು ನಿಲ್ಲಿಸಿಬಿಡಬೇಕಾಗಿ ಶಿಕ್ಷಣ ಶಾಖೆಯವರು ಆ ವಿದ್ಯಾಲಯದ ವ್ಯವಸ್ಥಾಪಕರಿಗೆ ತಿಳಿಸಿದ್ದಾರೆಂದು ತಿಳಿಯುತ್ತದೆ.

—"ದುನಿಯಾಕೆ ಮಜದೂರ ಏಕ ಹೋಜಾವ" ಎಂಬ ಮರಾಠಿ ಪುಸ್ತಕವು ಈ ಸಂಸ್ಥಾನದಲ್ಲಿ ಬರಕೂಡದೆಂದು ಸರಕಾರದ ಅಪ್ಪಣೆಯಾಗಿದೆ.

—ಗಡಿದಾಟಿಸಲ್ಪಟ್ಟ ಶ್ರೀ. ತುಳಜಾಪುರಕರರ ಸಹಾಯಾರ್ಥವಾಗಿ ಪುಣೆಯಲ್ಲಿ ಪ್ರಕಟವಾದ ಹಸ್ತಪತ್ರಿಕೆಗಳು ಹೈದರಾಬಾದದ ಶ್ರೀ. ವಾಘಮಾರೆ ಎಂಬುವವರ ಮನೆಯಲ್ಲಿ ಪೊಲೀಸರಿಗೆ ೩೦೩ ದೊರೆತವು. ಇನ್ನೂ ಅನೇಕ ಕಡೆ ಶೋಧ ನಡೆದಿದೆ.

—ಬ್ಯಾರಿಸ್ಟರ್ ರಾಮಚಂದ್ರರಾವ ನಾಯಕ ಇವರನ್ನು ಹೈದರಾಬಾದ ಹೈಕೋರ್ಟಿನ ಜಜ್ಜರನ್ನಾಗಿ ನಿಯಮಿಸಿದ್ದಾರೆ.

—ಇಂಜಿನಿಯರಿಂಗ್ ಕಾಲೇಜಿನ ಅಕೌಂಟೆಂಟ್ ಬರಕತ ಉಲ್ಲಾ ಇವರು ೧೨೭೫೪ ರೂ. ಗಳ ಮೋಸ ಮಾಡಿದ್ದರ ಅಪರಾಧಕ್ಕಾಗಿ ೪ ವರುಷ ಕಠಿಣ ಶಿಕ್ಷೆ ಮತ್ತು ಎರಡು ಸಾವಿರ ರೂ. ಗಳ ದಂಡವಾಯಿತು. ಇವರು ಸಾಧಾರಣ ಒಂದು ಲಕ್ಷ ರೂ. ಮೋಸಮಾಡಿದ್ದಾರೆಂದು ವ್ಯಾಜ್ಯವಾಗಿತ್ತು. ಆದರೆ ಅಷ್ಟು ಹಣದ ವಿಚಾರವಾಗಿ ಪ್ರಮಾಣಗಳು ದೊರೆಯಲಿಲ್ಲ.

—ಗುಲಬರ್ಗಾದಲ್ಲಿ ಕಾಲರಾ ಪ್ರಾರಂಭವಾಗಿದೆ. ಪ್ರತಿನಿತ್ಯ ೫-೬ ಮರಣಗಳಾಗುತ್ತಲಿವೆ. ಅಲ್ಲಲ್ಲಿ ಇಲಿಗಳು ಬೀಳುವುದೂ ಹೆಚ್ಚಿದೆ. ಕಾಲರಾ ಮತ್ತು ಪ್ಲೇಗ ಎರಡೂ ಪ್ರಸಾರವಾಗುವ ದುಶ್ಚಿನ್ಹಗಳು ತೋರುತ್ತಲಿವೆ.

—ಕಾಮಾರಡ್ಡಿ ತಾಲೂಕಿನ ಒಂದು ಹಳ್ಳಿಯಲ್ಲಿ ವೆಂಕಯ್ಯ ಎಂಬುವವನು ತನ್ನ ಹೊಲಕ್ಕೆ ಗೊಬ್ಬರವನ್ನು ಹೇರಿಕೊಂಡು ಹೋಗುತ್ತಿರುವಾಗ ರಾಮಕೃಷ್ಣಯ್ಯ ಎಂಬುವವನು ಆತನನ್ನು ತಡೆದು ಬಂದೂಕಿನಿಂದ ಹೊಡೆದು ಕೊಂದನು. ಇದನ್ನು ನೋಡಿ ವೆಂಕಯ್ಯನ ಮಕ್ಕಳಾದ ಪೆದ್ದಬಾಲಯ್ಯ, ಚಿನ್ನಬಾಲಯ್ಯ ಬುಚಯ್ಯ ಎಂಬುವವರು ಬಂದು ರಾಮಕೃಷ್ಣಯ್ಯನನ್ನು ಹೊಡೆದು ಕೊಂದರು.

ಈ ಮೂರು ಅಪರಾಧಿಗಳಮೇಲೆ ಕೊಲೆಯ ವ್ಯಾಜ್ಯ ನಡೆದಿತ್ತು. ತಂದೆಯನ್ನು ಕೊಂದ ಸಂತಾಪದಲ್ಲಿ ಆ ಮೂವರು ಈ ಅಪರಾಧವನ್ನು ಮಾಡಿದ್ದರಿಂದ ಅವರು ನಿರ್ದೋಷಿಗಳೆಂದೇ ಸೆಶನ್ಸ ಜಜ್ಜರು ತೀರ್ಮಾನಮಾಡಿದರು.

# ಇದೊಂದು ಹೊಸ ಡೈರಿ.—

[ ಬಸವದಾಸ ಎಂಬ ಹೆಸರನ್ನಿಟ್ಟುಕೊಂಡ ಶಿವಾನುಭವ ಪ್ರಿಯರಾದ ಒಬ್ಬ ಮಹಾಶಯರು ಪ್ರತಿನಿತ್ಯ ತಮಗೆ ಹೊಳೆದ ಸಂಗತಿಗಳನ್ನು ಗದ್ಯ ಮತ್ತು ಪದ್ಯಗಳಲ್ಲಿ ಬರೆದಿಡಲು ಪ್ರಾರಂಭಿಸಿದ್ದಾರೆ. ಹೀಗೆ ಕಳೆದ ಜನವರಿ ಒಂದು ತಿಂಗಳಲ್ಲಿ ಬರೆದ ಡೈರಿಯನ್ನು ಪ್ರಕಟನೆಗಾಗಿ ನಮ್ಮ ಕಡೆ ಕಳಿಸಿದ್ದಾರೆ. ಇದೊಂದು ಹೊಸರೀತಿ. ಎಷ್ಟೋ ಉಪದೇಶಪರವಾದ ಸಂಗತಿಗಳಿವೆ. ಪ್ರತಿವಾರದಲ್ಲಿಯೂ ಸ್ವಲ್ಪ ಸ್ವಲ್ಪಾಗಿ ಕೊಡುತ್ತಾ ಹೋಗುವೆವು, ಸಂಪಾದಕ. ]

ಶ್ರೀ. ಶಿವ ಚಿದಂಬರಾಯ ನಮಃ

ಶ್ರೀಗುರು ಬಸವಲಿಂಗಾಯ ನಮಃ

[ಬಸವದಾಸ ವಿರಚಿತ ಗದ್ಯ ಪದ್ಯಾತ್ಮಕ ಡಾಯರಿ ಯೆಂಬ ನೂತನ ಕಾವ್ಯವು.]

(ಜಿಲ. ೯ ಬ. ೫ ಶುಕ್ರ. ೧-೧-೩೭.)

ಬಸವ ಲಿಂಗವೇ! ದಾಸನಿಗೆ ಅಜ್ಞೆಯನ್ನು ಕೊಟ್ಟು ಸೇವೆಯನ್ನು ತೆಗೆದುಕೊಳ್ಳುದು !!

ತ್ರಿಪದಿ|| ಬಾಗುವುದು ಬೇಗದೊಳು ಸಾಗಿದ ಜಗತ್ತಿಗೆ|
ನೀಗಿ ಸಂಸಾರ ಚಿದಂಬರ ಲೀಲೆಯೋಳ್|
ಭಾಗ ತೆಗೆದುಕೋ ದಾಸಾರ್ಯ ||೧||

ಅರ್ಥಾತ್ ದಾಸನೆ, ನಿನ್ನ ಧ್ಯೇಯವು ಚಿದ್ರೂಪ ಶಿವ ಲೀಲೆಯೋಳ್ ಪಾಲುಗಾರನಾಗುವದಿರಲಿ.

× × ×

ಶ್ರೀ. ಶಿವ ಚಿದಂಬರಾಯ ನಮಃ

(ಜಿಲ. ೯ ಬ. ೬ ಶನಿ. ೨-೧-೩೭)

ಗದ್ಯ— ಇಹಪರ ಪ್ರಾಪ್ತಿಗೆ ಪ್ರಯತ್ನವೇ ಬೇಕಯ್ಯ.
ಪದ್ಯ— ತಾ ಮಾಡಿರ್ದ ಕರ್ಮಹೇಮಾದಿಗಳಮೂಲ||
ತಾ ಮಾಳ್ಪ ಮನದ ವಾಸನೆಯು ಸಂಹಾರ|
ಧಾಮ ನಿಜಮೂಲ ದಾಸಾರ್ಯ ||೨||

ಧಾಮ—ಪ್ರಕಾಶ, ಪ್ರಧಾನ ನಿಜಧಾಮ—ಶಿವ ಪ್ರಕಾಶ, ಐಕ್ಯಸ್ಥಲ ತಾತ್ಪರ್ಯ— ತನ್ನ ಸುಕೃತ ದುಷ್ಕೃತಂಗಳು ಹೊನ್ನು ಹೆಣ್ಣು ಮಣ್ಣಿಗೆ ಕಾರಣವು ಅರ್ಥಾತ್ ಇಹಲೋಕದ ಸುಖ ದುಃಖಗಳಿಗೆ ಮೂಲವು. ವಾಸನಾ ಕ್ಷಯದ ತನ್ನ ಪ್ರಯತ್ನವು ನಿಜಧಾಮದ ಮೂಲವು ಅಂದರೆ ಸುಸೂತ್ರ ದೇಹ ವಿಸರ್ಜನೆಯಾಗಲಿಕ್ಕೂ ಮುಕ್ತಿಗೂ ಕಾರಣವು.

× × ×

ಶ್ರೀ ಶಿವ ಚಿದಂಬರಾಯ ನಮಃ

(ಜಿಲ. ೯ ಬ. ೬ ರವಿ ೩-೧-೩೭.)

ನಿನ್ನೆ ಆಡಿದ ಸಂಗತಿಗಳಲ್ಲಿ ಒಂದನ್ನು ಬಿಟ್ಟು ಮತ್ತೊಂದು ನಡಿಯುವಂತೆ ಇಲ್ಲ. ಎರಡೂ ಬೇಕು. ಮಾನವನು ಇಹ ಪರಗಳೆರಡನ್ನೂ ಸಾಧಿಸಬೇಕೆಂದೇ ಕಲ್ಯಾಣದಲ್ಲಿ ಶ್ರೀ. ಬಸವಣ್ಣನವರ ಅವತಾರವಾದದ್ದು.

ಆದುದರಿಂದ ಅವರಿಗೇ ಶರಣುಹೋಗಿ ನಾನಿಂತು ಬೇಡಿಕೊಳ್ವೆಂ. ಆ ಯ್ಯಾ ಬಸವಲಿಂಗವೇ, ತನು ಮನ ಧನಂಗಳಂ ಗುರುಲಿಂಗ ಜಂಗಮ ಸೇವೆಗರ್ಪಿಸಿ ಅರ್ಮ ಅಮರಸಿಹನೆಂಬ ನೆನಹು ನೆಲೆಗೊಳ್ಳಲೆಂದು ಮರಣವು ಗೆಲ್ಲಲ್ಪಡುವದೆಂದು ತಿಳಿಯುತ್ತದೆ ಮಾತ್ರ. ಆದರೆ ಸ್ವಾಮಿನ್ ಆ ಸಾಮರ್ಥ್ಯವು ನಿನ್ನ ಕೃಪಾ ದೃಷ್ಟಿಯಲ್ಲುಂಟು.

ತ್ರಿಪದಿ|| ದೇವತವಪಾದಕೆ ಭಾವದಿಂದಲಿ ಶರಣು|
ಕಾವುದೈ ಹೆಜ್ಜೆ ಹೆಜ್ಜೆಗೆ ಪಾಮರನಿಹ|
ಸಾವು ತಪ್ಪಿಸೈ ಬಸವೇಶ ||೩||

× × ×

# ನರಗುಂದದಲ್ಲಿ ಶಿವಕೀರ್ತನ ಸಮಾರಂಭ.

ಶ್ರೀ. ವಿರಕ್ತಮಠದಲ್ಲಿ ಶಿವಭಕ್ತರಿಂದ ಸ್ಥಾಪಿಸಲ್ಪಟ್ಟ ವೀರಶೈವ ಸಮಾಜೋನ್ನತಿ ಸಂಸ್ಥೆಯಿಂದ ಶ್ರೀಧರ್ಮಾರ್ಥ ಜ್ಯೋತಿಷ್ಯ ವೈದಿಕ ಪಾಠಶಾಲೆಯೊಂದು ಪ್ರಾರಂಭವಾಗಿದ್ದು ಯಾವತ್ತರಿಗೂ ಗೊತ್ತಿದ್ದ ಸಂಗತಿಯಷ್ಟೆ. ಹಾಗೂ ಸದರಿ ಸಂಸ್ಥೆಯಿಂದ ಪ್ರತಿವರುಷ ಶ್ರಾವಣ ಮಾಸದಲ್ಲಿ ಈ ಮಠದ ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ ಚನ್ನಬಸವ ಮಹಾಸ್ವಾಮಿಗಳವರ ಕರ್ತೃ ಪೀಠಕ್ಕೆ ಮಹಾ ರುದ್ರಾಭಿಷೇಕವು ಪಂಡಿತರಿಂದ ಪುರಾಣ ಪ್ರವಚನ ಕೀರ್ತನಗಳೂ ಸಾಂಗೋಪಾಂಗವಾಗಿ ಜರುಗಿದಂತೆ ಈ ವರುಷವಾದರೂ ಶ್ರಾವಣ ಶುದ್ಧ ಪ್ರತಿಪದದಿಂದ ಶ್ರೀ. ಕರ್ತೃ ಪೀಠಕ್ಕೆ ಮಹಾ ರುದ್ರಾಭಿಷೇಕವೂ ಸಂಜೆ ೮ ಘಂಟೆಗೆ ವಿರಕ್ತ ಮಠದಲ್ಲಿ ಶಿ|| ಬನಹಟ್ಟಿ ಶಿವಕೀರ್ತನಕಾರ ವೀರಸಂಗಯ್ಯ ಸ್ವಾಮಿಗಳಿಂದ ಧಾರ್ಮಿಕ, ನೈತಿಕ, ಸಾಮಾಜಿಕ ವಿಷಯಗಳಿಂದೊಡಗೂಡಿದ ಕೀರ್ತನವು ಒಳ್ಳೇ ವಿಜೃಂಭಣೆಯಿಂದ ಆಬಾಲ ವೃದ್ಧರಿಗೂ ಪರಿಣಾಮವಾಗುವಂತೆ ಜರುಗಿದನಂತರ ಪಾಠಶಾಲೆಯ ವಿದ್ಯಾರ್ಥಿಗಳ ಮಂಜುಳ ಧ್ವನಿಯುಕ್ತ ಮಂಗಲವಾಗಿ ಮುಕ್ತಾಯವಾಗುವದು. ಈ ಕಾರ್ಯಕ್ರಮಗಳು ಶ್ರಾವಣಮಾಸ ಪೂರ್ತಿಯಾಗುವವರೆಗೂ ಜರುಗುವವು. ಪ್ರತಿಯೊಂದು ಗ್ರಾಮದ ವೀರಶೈವ ಬಾಂಧವರು ಸಮಾಜೋನ್ನತಿ ಸಂಸ್ಥೆಯೊಂದನ್ನು ಸ್ಥಾಪಿಸಿ ಆ ಸಂಸ್ಥೆಯಿಂದ ಧಾರ್ಮಿಕ, ನೈತಿಕ ಸಾಮಾಜಿಕ ಕಾರ್ಯಗಳನ್ನು ಮಾಡಿ ಇಹದಲ್ಲಿ ಕೀರ್ತಿಯನ್ನು ಪರದಲ್ಲಿ ಗತಿಯನ್ನು ಹೊಂದಬೇಕಾಗಿ ನಮ್ಮ ಸಂಸ್ಥೆಯಮೂಲಕ ಅಗ್ರಹದ ಸೂಚನೆ.

ಬಸಲಿಂಗಪ್ಪ ವೀರಭದ್ರಪ್ಪ ಜ್ಯಾಹಟ್ಟಿ.
ಕಾರ್ಯದರ್ಶಿ.
ವೀರಶೈವ ಸಮಾಜೋನ್ನತಿ ನರಗುಂದ.

## ಗಾಂಧೀಜಿಯುವರ ಸೂಚನೆ.

ಮಹಾತ್ಮಾ ಗಾಂಧಿಯವರಿಗೆ ಕೂಲಿಕಾರರ ಪಕ್ಷದ ಪ್ರಮುಖರಾದ ಶ್ರೀ. ನಿಂಬಕರ ಎಂಬುವವರು ಕೆಲವು ಪ್ರಶ್ನೆಗಳನ್ನು ಕೇಳಿದ್ದರು. ಅವುಗಳಿಗೆ ಉತ್ತರವಾಗಿ ತಿಳಿಸಿದ್ದರಲ್ಲಿ ಗಾಂಧೀಜಿಯುವರು ಹೀಗೆ ಹೇಳಿದ್ದಾರೆ.



"ಹೊಸ ರಾಜ್ಯಘಟನೆಯ ಕಾರ್ಯವನ್ನು ನಾನಾಗಿಯೇ ಭಂಗಗೊಳಿಸಲು ಎಂದೂ ಪ್ರಯತ್ನಿಸುವುದಿಲ್ಲ. ಅಂತಹ ಪ್ರಸಂಗವೇನಾದರೂ ಉಂಟಾದರೆ ಅದಕ್ಕೆ ಎದೆಗೊಡಲಿಕ್ಕೂ ನಾನು ಸಿದ್ಧನೇ ಇದ್ದೇನೆ. ಶಾಸನಮಂಡಲಗಳಲ್ಲಿ ಸೇರಿದನಂತರ ನನ್ನ ಪಕ್ಷವನ್ನು ಭದ್ರಗೊಳಿಸಲಿಕ್ಕೂ ನನ್ನ ಶಕ್ತಿಯನ್ನು ಕೇಂದ್ರೀಕರಿಸಲಿಕ್ಕೂ ನಾನು ಸಂಪೂರ್ಣ ಪ್ರಯತ್ನಿಸದೆ ಬಿಡುವುದೆಂದರೆ ನನ್ನ ಮೂರ್ಖತನವೇ ಸರಿ."

ರಾಜ್ಯಘಟನೆಯನ್ನು ಭಂಗಗೊಳಿಸುವುದೇ ಶಾಸನ ಮಂಡಲಗಳಲ್ಲಿ ನಮ್ಮ ಮೊದಲನೆಯ ಕಾರ್ಯವೆಂದು ಕಾಂಗ್ರೆಸ್ ಪಕ್ಷದ ಯಾರಾದರೂ ತಿಳಿದುಕೊಂಡಿದ್ದರೆ ಅದು ಎಷ್ಟು ತಪ್ಪೆಂಬುದು ಗಾಂಧೀಜಿಯವರ ಮೇಲಣ ಅಭಿಪ್ರಾಯದಿಂದ ವ್ಯಕ್ತವಾಗುವುದಿಲ್ಲವೆ?

### ಅನ್ಯ ಪಕ್ಷಗಳ ಸಂಗಡ ಹೇಗಿರಬೇಕು ?

ಕಾಂಗ್ರೆಸ್ ಪಕ್ಷದ ಅನೇಕ ಜನರು ಕಾಂಗ್ರೆಸ್ಸಿನ ತತ್ವಕ್ಕೆ ಕಲಂಕ ಬರುವಂತೆ ಅನ್ಯ ಪಕ್ಷಗಳ ಸಂಬಂಧವಾಗಿ ಅಸಭ್ಯ ರೀತಿಯಲ್ಲಿ ನಡೆಯುತ್ತಿದ್ದಾರೆಂಬುದು ನಿಷ್ಪಕ್ಷಪಾತಿಗಳಿಗೆ ಅನೇಕ ಸಾರೆ ಗೊತ್ತಾಗಿದೆಯಷ್ಟೆ. ಮಹಾತ್ಮಾ ಗಾಂಧಿಯವರು ಕಳೆದ ೧೪ ನೆಯ ತಾರೀಖಿನ ದಿವಸ "ಹರಿಜನ" ಪತ್ರಿಕೆಯಲ್ಲಿ ಒಂದು ಲೇಖನವನ್ನು ಬರೆದು ಅನ್ಯ ಪಕ್ಷಗಳ ವಿಷಯದಲ್ಲಿ ಕಾಂಗ್ರೆಸ್ ಪಕ್ಷದವರು ಹೇಗೆ ನಡೆದುಕೊಳ್ಳಬೇಕೆಂಬುದನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ. ಗಾಂಧೀಜಿಯವರ ಸೂಚನೆಯು ಹೀಗಿದೆ.

"ಮಧ್ಯಪ್ರಾಂತದ ಅಸೆಂಬ್ಲಿ ಅಧಿವೇಶನದ ಕಾಲಕ್ಕೆ ಕೂಡಿದ್ದ ಪ್ರೇಕ್ಷಕರು ಶ್ರೀ. ರಾಘವೇಂದ್ರರಾಯರ (ಹಿಂದಿನ ಮುಖ್ಯಮಂತ್ರಿಗಳ) ಸಂಬಂಧವಾಗಿ ಅಸಭ್ಯ ರೀತಿಯಿಂದ ನಡೆದರೆಂದು ಪ್ರಕಟವಾಗಿದೆ. ಆ ಪ್ರೇಕ್ಷಕರು ಕಾಂಗ್ರೆಸ್ ಪಕ್ಷದವರು ಅಥವಾ ಕಾಂಗ್ರೆಸ್ಸಿಗೆ ಸಹಾನುಭೂತಿವುಳ್ಳವರು ಇದ್ದರೆಂಬುದು ಸ್ಪಷ್ಟವಾದುದು.

ನಾವು ಸಂಪೂರ್ಣ ಸ್ವಾತಂತ್ರ್ಯವನ್ನು ಹೊಂದಿದನಂತರ ಕೂಡಾ ದೇಶದಲ್ಲಿ ಬೇರೆ ಬೇರೆ ರಾಜಕೀಯ ಪಕ್ಷಗಳು ಇದ್ದೇ ಇರುತ್ತವೆ. ಹೀಗಿರುವಾಗ ಬೇರೆ ಪಕ್ಷದವರೊಂದಿಗೆ ಶಿಷ್ಟಾಚಾರಕ್ಕೆ ತಕ್ಕಂತೆ ನಡೆದುಕೊಳ್ಳದಿದ್ದರೆ ರಾಜ್ಯಭಾರವನ್ನು ನಡೆಯಿಸುವುದೇ ಕಷ್ಟವಾಗಬಹುದು. ಅಖಿಲ ಹಿಂದುಸ್ಥಾನದ ಪ್ರಾತಿನಿಧ್ಯವೇ ತನ್ನ ಕಡೆಗಿದೆಯೆಂದು ಹೇಳಿಕೊಳ್ಳುವ ಕಾಂಗ್ರೆಸ್ ಪಕ್ಷವಂತೂ ಅನ್ಯ ಪಕ್ಷಗಳ ವಿಷಯದಲ್ಲಿ ಸಹಿಷ್ಣುತೆಯನ್ನು ಹೊಂದುವುದು ಅತ್ಯಗತ್ಯವಾಗಿದೆ.

ಕಾಂಗ್ರೆಸ್ ಪಕ್ಷವು ಸಮಗ್ರ ಹಿಂದುಸ್ಥಾನವನ್ನೇ ಒಳಕೊಂಡದ್ದಾಗಿದ್ದರೆ— ಈಗ ಆ ಪ್ರಕಾರ ಒಳಕೊಂಡಿದೆ— ಅದರಲ್ಲಿ ಎಲ್ಲ ಪಕ್ಷಗಳ ಅಭಿಪ್ರಾಯಗಳೂ ಪ್ರತಿಬಿಂಬಿತವಾಗಲೇಬೇಕು. ಶ್ರೀ. ರಾಘವೇಂದ್ರರಾಯರು ಮುಂಚೆ ಕಾಂಗ್ರೆಸ್ ಸಂಘಟನೆಯ ಸರ್ವಮಾನ್ಯ ಸಭಾಸದರಾಗಿದ್ದರು. ಆದಕಾರಣ ಕಾಂಗ್ರೆಸ್ ಅವರ ಪ್ರತಿನಿಧಿಯೆಂದು ಹೇಳಬಹುದು. ಅವರ ಚುನಾವಣೆಯಲ್ಲಿ ಏನಾದರೂ ತಪ್ಪು ಸಂಭವಿಸಿದ್ದರೆ ಅದನ್ನು ನಿರ್ಣಯಿಸುವುದು ಸರಕಾರಿ ಶಾಸನದ ಕೆಲಸವು. ಹಾಗೆ ಅವರು ತಪ್ಪುಗಾರರೆಂದು ನಿರ್ಣಯವಾಗುವವರೆಗೂ ಅವರು ಪ್ರಮಾಣಿಕರೆಂದೇ ತಿಳಿಯುವುದು ವಿಹಿತವಾಗಿದೆ.

ಒಂದುವೇಳೆ ಅವರು ತಪ್ಪುಗಾರರೆಂದು ಗೊತ್ತಾದರೂ ಅವರ ವಿಚಾರದಲ್ಲಿ ಹೀಗೆ ಅಸಭ್ಯ ರೀತಿಯಿಂದ ನಡೆಯುವುದು ಯಾರಿಗೂ ಯುಕ್ತವಾದುದಲ್ಲ. ಅಸಹಿಷ್ಣುತೆ, ಅಸಭ್ಯ ರೀತಿ, ಒರಟಾಟ, ಇವೆಲ್ಲಾ ಕಾಂಗ್ರೆಸ್ಸಿನ ಕ್ರಮಕ್ಕೂ, ಶೀಲಕ್ಕೂ ವಿರುದ್ಧವಾಗಿವೆ. ಇಷ್ಟೇ ಅಲ್ಲ. ಸಭ್ಯ ಜನಾಂಗದಲ್ಲಿ ಇವೆಲ್ಲಾ ತ್ಯಾಜ್ಯವಾಗಿಯೇ ಪರಿಣಮಿಸುತ್ತವೆ. ಜನಾಭಿಪ್ರಾಯದ ಪ್ರಭುತ್ವಕ್ಕಂತೂ ಈ ರೀತಿಯು ತುಂಬಾ ವಿರುದ್ಧವಾದುದು."

ಕಾಂಗ್ರೆಸ್ ಪಕ್ಷದ ಅನೇಕ ಪಕ್ಷಾಂಧರೂ, ದುರಭಿಮಾನಿಗಳೂ ಅನ್ಯ ಪಕ್ಷದವರ ವಿಚಾರದಲ್ಲಿ ಸಲ್ಲದ ನಾನಾ ಲೇಖನ, ಭಾಷಣ, ನಡವಳಿಕೆಗಳ ಮೂಲಕ ವಿರೋಧವನ್ನು ಹೆಚ್ಚಿಸುತ್ತಿದ್ದಾರಷ್ಟೆ. ಇಂಥವರು ಗಾಂಧೀಜಿಯವರ ಉಪದೇಶವನ್ನಾದರೂ ಕೇಳಿ ಸಭ್ಯ ನಡೆನುಡಿಗಳಿಂದ ನಡೆಯುವರೆ ?

---

## ಭಾರತೀಯ ನೃತ್ಯಶಾಲಾ.

ಹಿಂದುಸ್ಥಾನವು ಬಹು ಪ್ರಾಚೀನ ಕಾಲದಿಂದಲೂ ಸಂಗೀತ ನೃತ್ಯ ಮೊದಲಾದ ಲಲಿತ ಕಲೆಗಳಲ್ಲಿ ಬಹು ಪ್ರಸಿದ್ಧಿಯನ್ನು ಹೊಂದಿದೆ. ಈ ದೇಶದ ನಾನಾ ನೃತ್ಯಗಳ ರೀತಿನೀತಿಗಳನ್ನು ಶ್ರೀ. ಉದಯಶಂಕರ ಇವರು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಪ್ರದರ್ಶಿಸಿ ಬಹು ಪ್ರಸಿದ್ಧಿಯನ್ನು ಹೊಂದಿದ್ದಾರಷ್ಟೆ.

ಶ್ರೀ. ಉದಯಶಂಕರ ಇವರ ಈ ಜಾಣ್ಮೆಯಿಂದ ಪ್ರಪಂಚದಲ್ಲಿ ಭಾರತೀಯ ನೃತ್ಯಕಲೆಯ ಕೀರ್ತಿಯು ಈಗ ಎಷ್ಟೋ ಬೆಳಗಲು ಕಾರಣವಾಯಿತು. ಅನೇಕ ರಾಷ್ಟ್ರಗಳಿಂದ ಭಾರತೀಯ ನೃತ್ಯಕಲೆಯನ್ನು ಕಲಿಯಲು ಅನೇಕರು ಬರಲುಪಕ್ರಮಿಸಿದ್ದಾರೆ. ಆದುದರಿಂದ ಶ್ರೀ. ಉದಯಶಂಕರ ಇವರು ಮುಂದಣ ವಸಂತ ಕಾಲದಲ್ಲಿ ಒಂದು ಭಾರತೀಯ ನೃತ್ಯ ಶಾಲೆಯನ್ನು ಕಾಶಿಯಲ್ಲಿ ಸ್ಥಾಪಿಸುವವರಿದ್ದಾರೆ. ಈ ದೇಶದ ನಾನಾ ಭಾಗಗಳಲ್ಲಿರುವ ಕುಣಿತಗಳ ರೀತಿನೀತಿಗಳನ್ನೆಲ್ಲಾ ಸಂಗ್ರಹಿಸಿ ಅದಕ್ಕೊಂದು ಶಾಸ್ತ್ರೀಯ ಸ್ವರೂಪವನ್ನು ಕೊಡುವವರಿದ್ದಾರೆ.

---

## ವಿಮರ್ಶಾತ್ಮಕ ಪ್ರಶ್ನೋತ್ತರ.

### ಕಾಂಗ್ರೆಸ್‌ಪಕ್ಷ ಮತ್ತು ಶರಣ ಸಂದೇಶ.

ಪ್ರಶ್ನೆ— ನೀವು ಕಾಂಗ್ರೆಸ್ಸಿನ ವಿರುದ್ಧವಾಗಿ ಇತ್ತೀಚಿಗೆ ಬರೆಯುತ್ತಿದ್ದೀರಿ. ಅದನ್ನೊಂದು ಬಿಟ್ಟರೆ ನಿಮ್ಮ ಪತ್ರಿಕೆಯ ಕಾರ್ಯ ಕರ್ನಾಟಕದಲ್ಲಿ ಎಷ್ಟೋ ಉತ್ತಮವೆಂದು ಹೇಳಬಹುದು. ಇನ್ನು ಮೇಲಾದರೂ ಕಾಂಗ್ರೆಸ್ಸಿಗೆ ವಿರುದ್ಧವಾಗಿ ಬರೆಯುವದನ್ನು ಬಿಡಬಾರದೆ ?

ಉತ್ತರ— ನೀವು ಹೀಗೆ ತಿಳಿದುಕೊಂಡಿರುವಿರಾ ? ಒಳ್ಳೆಯದಾಯಿತು! ಕಾಂಗ್ರೆಸ್ಸಿಗೆ ವಿರುದ್ಧವಾಗಿ ಬರೆಯುವದೆಂದರೇನು? ಕಾಂಗ್ರೆಸ್ಸು ಸ್ವಾತಂತ್ರ್ಯಬೇಕೆಂದು ಹೇಳುತ್ತದೆ. ನಾವು ಸ್ವಾತಂತ್ರ್ಯ ಬೇಡವೆಂತಲೂ ಇಂಗ್ಲಿಷರ ಪ್ರಭುತ್ವವೇ ಇರಲೆಂತಲೂ ಬರೆಯುತ್ತಿದ್ದೇವೆಯೇ ? ಅಥವಾ ಕಾಂಗ್ರೆಸ್ಸು ಸತ್ಯ ಮತ್ತು ಅಹಿಂಸಾ ಮಾರ್ಗಗಳಿಂದ ಸ್ವಾತಂತ್ರ್ಯವನ್ನು ಹೊಂದಬೇಕೆಂದು ಹೇಳುತ್ತಿರುವಾಗ ನಾವು ಅಸತ್ಯ ಮತ್ತು ಹಿಂಸಾ ಮಾರ್ಗಗಳಿಂದ ಸ್ವಾತಂತ್ರ್ಯವನ್ನು ಹೊಂದಬೇಕೆಂದು ಬರೆಯುತ್ತಿದ್ದೇವೆಯೆ ? ಕಾಂಗ್ರೆಸ್ಸಿಗೆ ವಿರುದ್ಧ ಬರೆಯುತ್ತಿದ್ದೇವೆಂದು ನೀವು ತಿಳಿದುಕೊಂಡುದು ಯಾತರಮೇಲಿಂದ ಎಂಬುದನ್ನು ಸ್ಪಷ್ಟ ತಿಳಿಸಿದರೆ ಒಳ್ಳೆಯದು.

ಪ್ರಶ್ನೆ— ನೀವು ಹಾಗೇನೂ ಬರೆಯುವದಿಲ್ಲ. ಆದರೆ ಕರ್ನಾಟಕದ ಎಲ್ಲ ಕಾಂಗ್ರೆಸ್ ಪತ್ರುಗಳೂ ಹೇಗೆ ಬರೆಯುತ್ತವೋ ಹಾಗೆ ಬರೆಯುವದಿಲ್ಲ. ಕಾಂಗ್ರೆಸ್ಸಿನ ಮೇಲೆ ಏನಾದರೂ ಒಂದು ಟೀಕೆ ಮಾಡೇ ಮಾಡುತ್ತೀರಿ. ಆದರಿಂದ ನೀವು ಕಾಂಗ್ರೆಸ್ಸಿನ ವಿರುದ್ಧ ಬರೆಯುತ್ತೀರೆಂದೇ ಜನರ ತಿಳುವಳಿಕೆಯಾಗಿದೆ.

ಉತ್ತರ— ಕಾಂಗ್ರೆಸ್ ಪಕ್ಷಕ್ಕೆ ಸೇರಿದ ಪತ್ರಿಕೆಗಳು ಪ್ರಾಯಶಃ ಆ ಪಕ್ಷದ ಎಲ್ಲ ಕಾರ್ಯಕಲಾಪಗಳನ್ನೂ ಸ್ತುತಿಸುವುದು ಸ್ವಾಭಾವಿಕ. ಕೆಲವು ಸತ್ಯ ಪ್ರಿಯರಾದ ಕಾಂಗ್ರೆಸ್ ಸಭಾಸದರು ಮಾತ್ರ ತಮ್ಮ ಭಿನ್ನಾಭಿಪ್ರಾಯಗಳನ್ನು ಹೇಳುತ್ತಿರುವುದುಂಟು. ಆದರೆ ಅಂಥವರ ಸಂಖ್ಯೆ ಕಡಿಮೆ. ಅಂಥ ಭಿನ್ನಾಭಿಪ್ರಾಯಗಳನ್ನು ಪ್ರಕಟಿಸುವ ಕಾಂಗ್ರೆಸ್ ಪಕ್ಷದ ಪತ್ರಿಕೆಗಳೂ ಕಡಿಮೆ. ಒಟ್ಟಿಗೆ ತಮ್ಮ ಪಕ್ಷದ ಮೇಲನ್ನೇಮಾಡಿ ತೋರಿಸುವವರೇ ಹೆಚ್ಚು. ಒಂದು ಪಕ್ಷಕ್ಕೆ ಸೇರಿದನಂತರ ಹೀಗಾಗುವುದು ಸ್ವಾಭಾವಿಕ. ನಾವು ಕಾಂಗ್ರೆಸ್ ಪಕ್ಷಕ್ಕೆ ಸೇರಿಲ್ಲ. ಅಥವಾ ಇನ್ನಾವ ಒಂದು ಪಕ್ಷದ ಸಭಾಸದರೂ ಅಲ್ಲ. ಎಂದಮೇಲೆ ನಮಗೆ ಅಯುಕ್ತವಾಗಿ ತೋರಿದುದನ್ನು ಅದು ಯಾವ ಪಕ್ಷದಲ್ಲಿದ್ದರೂ ಸ್ಪಷ್ಟವಾಗಿ ಹೇಳುವುದರಲ್ಲಿ ಹೆಚ್ಚೇನು ? ನಿಮ್ಮ ಸ್ವಂತ ವಿಚಾರಗಳನ್ನೆಲ್ಲಾ ಮೂಲೆಗೊತ್ತಿ ಕಾಂಗ್ರೆಸ್ಸಿನ ಕಾರ್ಯಕಲಾಪಗಳನ್ನೇ "ಉಘೋ ! ಉಘೋ !" ಎಂದು ಹೊಗಳುವುದಿಲ್ಲವಲ್ಲಾ! ಎಂದೇ ಶರಣ ಸಂದೇಶವು ಕಾಂಗ್ರೆಸ್ಸಿನ ವಿರೋಧ ಪತ್ರಿಕೆಯೆಂದು ನೀವು ತಿಳದುಕೊಂಡಿದ್ದರೆ ಅದು ಅಂಥ ವಿರೋಧ ಪತ್ರಿಕೆಯಾಗಿಯೇ ಈ ವರೆಗೂ ಇದೆ, ಇನ್ನು ಮೇಲೆಯೂ ಹಾಗೆಯೇ ಅದು ಜೀವಿಸಿರುವವರೆಗೂ ಇರುವದು.

ಪ್ರಶ್ನೆ— ಕಾಂಗ್ರೆಸ್ ಪಕ್ಷದ ಕಾರ್ಯಗಳಲ್ಲಿ ಏನಾದರೂ ಹೆಚ್ಚುಕಡಿಮೆಗಳಾದರೆ ಅದನ್ನು ತಿಳಿಸಬೇಕೆಂದೇ ನಾನಾದರೂ ಹೇಳುತ್ತೇನೆ. ಮೊನ್ನೆ ಮುಂಬೈ ಪ್ರಾಂತದ ಮಂತ್ರಿಮಂಡಲ ನಿರ್ಮಾಣದ ಕುಂದು ಕೊರತೆಗಳನ್ನು ನೀವು ಬರೆದದ್ದರಲ್ಲಿ ವೀರ ನರಿಮಾನರ ಬಗ್ಗೆ ಬರೆದದ್ದು ಯೋಗ್ಯವಾಗಿದೆ. ಹಾಗೆ ಬರೆಯಬೇಕಾದುದು ಯೋಗ್ಯವೇ ಸರಿ. ಕಾಂಗ್ರೆಸ್ ನಮ್ಮದೆಂದು ತಿಳಿದು ಆದರ ಕುಂದು ಕೊರತೆಗಳನ್ನು ಬರೆಯುವುದು ಬೇರೆ. ಕಾಂಗ್ರೆಸ್ಸಿನ ದೋಷವನ್ನೇ ಹುಡುಕಿ ಅದನ್ನೇ ಎತ್ತಿ ಬರೆಯುವದು ಬೇರೆ.

ನೀವು ಅದರ ದೋಷವನ್ನೇ ಹುಡುಕಿ ಬರೆಯುವಂತೆ ನಮಗೆ ತೋರುತ್ತದೆ. ಮೊನ್ನೆ ಝಾಂಸಿ ಭಾಗದ ಉಪಚುನಾವಣೆಯ ಪರಿಣಾಮವನ್ನು ಬರೆಯುವಾಗ ಪಂಡಿತ ಜವಾಹರಲಾಲ ನೆಹರುರವರು ಚುನಾವಣೆ ಪ್ರಚಾರಕ್ಕೆ ಹೋಗಿದ್ದರೆಂದೂ ಕಾಂಗ್ರೆಸ್ ಹುರಿಯಾಳು ಸೋತು ಮುಸ್ಲಿಂಲೀಗಿನ ಹುರಿಯಾಳು ಗೆದ್ದರೆಂದೂ ತಿಳಿಸಿರುವಿರಿ. ಈ ಸಂಗತಿಯನ್ನು ತಿಳಿಸುವಾಗ ಪಂಡಿತಜೀಯವರು ಪ್ರಚಾರಕ್ಕೆ ಹೋಗಿದ್ದರೆಂದು ಏಕೆ ಬರೆಯಬೇಕಾಗಿತ್ತು?

ಉತ್ತರ— ಕಾಂಗ್ರೆಸ್ ಪಕ್ಷದ ಕಾರ್ಯಕಲಾಪಗಳಲ್ಲಿಯ ಕುಂದುಕೊರತೆಗಳನ್ನು ಬರೆಯಬಹುದೆಂದು ನೀವು ತಿಳಿದಿರುವುದು ಅತ್ಯಂತ ಅಭಿನಂದನೀಯವು. ಕಾಂಗ್ರೆಸ್ಸಿನ ಅಂಥ ಭಕ್ತರಾಗಲು ನೀವೂ ಸಿದ್ಧರಿಲ್ಲವಷ್ಟೆ. ಎಂದಮೇಲೆ ಕಾಂಗ್ರೆಸ್ ಪಕ್ಷದ ಪತ್ರಿಕೆಗಳಲ್ಲಿ ಕಾಂಗ್ರೆಸ್ಸಿನ ಕಾರ್ಯಕಲಾಪಗಳು ಎಷ್ಟರಮಟ್ಟಿಗೆ ವಿಮರ್ಶಿಸಿ, ಕುಂದು ಕೊರತೆಗಳು ಬೈಲಿಗೆ ಹಾಕಲ್ಪಡುತ್ತಲಿವೆಯೆಂಬುದನ್ನು ನೀವೇ ನಿಷ್ಪಕ್ಷಪಾತ ದೃಷ್ಟಿಯಿಂದ ನೋಡಿರಿ.

ಕಾಂಗ್ರೆಸ್ಸಿನ ದೋಷಗಳನ್ನೇ ಹುಡುಕಿ ಅವುಗಳನ್ನೇ ಬರೆಯುತ್ತಿರುವುದೇನೂ ನಮ್ಮ ಉದ್ದೇಶವಲ್ಲ. ದೋಷಗಳನ್ನು ಜನರ ಮುಂದಿಡಬಾರದೆಂದು ಅವುಗಳನ್ನು ಪ್ರಸಿದ್ಧಿಸದೆ ಅಥವಾ ಅವುಗಳ ಮೇಲೆ ಟೀಕೆ ಮಾಡದೆ ಸುಮ್ಮನಿರಬೇಕೆಂಬುದೂ ನಮ್ಮ ಧ್ಯೇಯವಲ್ಲ. ಕಾಂಗ್ರೆಸ್ಸಿನ ಅಥವಾ ಕಾಂಗ್ರೆಸ್ ಕಾರ್ಯ ನಿರ್ವಾಹಕರ ಅಭಿಪ್ರಾಯಗಳ ಸತ್ಯಾಸತ್ಯತೆ ಮತ್ತು ಹಿತಾಹಿತಗಳನ್ನು ವಿಮರ್ಶಾತ್ಮಕ ದೃಷ್ಟಿಯಿಂದ ಜನ ಸಾಮಾನ್ಯರೂ ಓದಿ ರಾಜಕಾರಣದಲ್ಲಿಯೂ ಚಿಕಿತ್ಸಕ ಬುದ್ಧಿಯುಳ್ಳವರಾಗಬೇಕೇ ವಿನಾ ಅಂಧಭಕ್ತರಾಗಬಾರದೆಂದೇ ನಮ್ಮ ಉದ್ದೇಶ. ಆದುದರಿಂದ ದೋಷಗಳನ್ನೂ ನಾವು ಪ್ರಕಟಿಸಿ ಟೀಕಿಸುವುದು ಅನೇಕರಿಗೆ ವಿರೋಧವಾಗಿ ತೋರುತ್ತಿರಬಹುದು. ಏಕೆಂದರೆ ಬೇರೆ ಪತ್ರಿಕೆಗಳಲ್ಲಿ ಅವರು ಇಂಥ ಸಂಗತಿಗಳನ್ನು ಓದುವುದು ಕಡಿಮೆ.

ಝಾಂಸಿ ಭಾಗದ ಉಪಚುನಾವಣೆಯ ಕಾಲಕ್ಕೆ ಪಂಡಿತ ಜವಾಹರಲಾಲರು ಪ್ರಚಾರಕ್ಕೆ ಹೋದುದು ಸುಳ್ಳೇ? ಸುಳ್ಳು ಸಂಗತಿಯನ್ನೇನಾದರೂ ಬರೆದು ಕಾಂಗ್ರೆಸ್ಸಿನ ವಿರುದ್ಧ ಪ್ರಚಾರ ಮಾಡಿದ್ದಾಯಿತೆ? ಸತ್ಯ ಸಂಗತಿಯನ್ನು ಬರೆದರೆ ಸತ್ಯವೇ ಧ್ಯೇಯವಾಗಿರುವ ನಿಮಗೆ ಅಸಮಧಾನವೇಕೆ? ಸತ್ಯವನ್ನು ಕೇಳುವುದು ನಿಮ್ಮಂಥವರಿಗೇನೇ ಅಪ್ರಿಯವಾದಮೇಲೆ ಬೇರೆ ಪಕ್ಷದವರ ಸ್ಥಿತಿ ಹೇಗಿರಬಹುದು? ಅನ್ಯ ಪಕ್ಷದವರು ಚುನಾವಣೆಯಲ್ಲಿ ಸೋತರೆ "ಉರುಳಿದರು, ಬಿದ್ದರು" ಎಂದು ದೊಡ್ಡ ದೊಡ್ಡ ಅಕ್ಷರಗಳಲ್ಲಿ ಪ್ರಕಟಿಸುವುದೂ ತಮ್ಮವರು ಸೋತರೆ ಅಪಜಯವಾಯಿತೆಂದು ಎಲ್ಲೋ ಮೂಲೆಯಲ್ಲಿ ಚಿಕ್ಕದಾಗಿ ಪ್ರಕಟಿಸುವುದೂ, ಗೆಲುವಾದರೆ "ಪ್ರಚಂಡ ವಿಜಯ" ಎಂದು ಬರೆಯುವುದೂ, ಯಾರ ರೀತಿನೀತಿಗಳಾಗಿವೆಯೋ ಅವರಿಗೆ ನಾವು ಬರೆದುದು ಕಾಂಗ್ರೆಸ್ಸಿನ ವಿರೋಧವೆಂದು ಕಾಣುವುದು ಸ್ವಾಭಾವಿಕ.

ರಾಷ್ಟ್ರಾಧ್ಯಕ್ಷರು ಪ್ರಚಾರಕ್ಕೆ ಹೋಗಿದ್ದರೂ ಕಾಂಗ್ರೆಸ್ಸಿಗೆ ಅಪಜಯವಾಯಿತೆಂಬುದು ಜನರಿಗೆ ತಿಳಿಯಬಾರದೆಂದೇ ಯಾರಾದರೂ ಹಾಗೆ ಬರೆದಿರಲಿಕ್ಕಿಲ್ಲ. ನಾವಾದರೋ ಮುಸಲ್ಮಾನರಲ್ಲಿ ಜಾತಿನಿಷ್ಠೆಯು ಎಷ್ಟಿದೆಯೆಂಬುದು ಜನರಿಗೆ ಸ್ಪಷ್ಟ ತಿಳಿಯಲೆಂದೇ ಹಾಗೆ ವಿವರವಾಗಿ ಬರೆದುದು. ಇದ್ದ ಸ್ಥಿತಿಯು ಸ್ಪಷ್ಟವಾಗಿ

### ಪ್ರಸಿದ್ಧ ಕ್ರಿಕೆಟ್ ಪಟುವಿನ

## ವಿಷಾದಕರ ವೃತ್ತಾಂತ.

ಜಗತ್ತಿನ ಕ್ರಿಕೆಟ್ ಆಟಗಾರರಲ್ಲಿ ಮೂರನೆಯವರಾದ ಶ್ರೀ. ಪಿ. ಬಾಳು ಎಂಬುವವರು ಮುಂಬೈಯಲ್ಲಿದ್ದಾರೆ. ಇವರಿಗೆ ಈಗ ೬೨ ವರುಷ ವಯಸ್ಸು. ಇವರು ಜನ್ಮದಿಂದ ಚಮ್ಮಗಾರರು. ಆದಿ ಜನಗಳಲ್ಲಿ ಒಬ್ಬ ಪ್ರಸಿದ್ಧ ಮುಂದಾಳುಗಳು. ಇವರ ಜೀವನ ಚರಿತ್ರೆಯಲ್ಲಿಯ ಅನೇಕ ಸಂಗತಿಗಳಿಂದ ಹಿಂದು ಸಮಾಜದಲ್ಲಿರುವ ಅಸ್ಪೃಶ್ಯತಾ ಪಾಪವು ಎಷ್ಟು ಘೋರವಾದುದೆಂಬುದು ಗೊತ್ತಾಗುತ್ತದೆ. ಇವರ ಜೀವನ ಚರಿತ್ರೆಯಲ್ಲಿಯ ಕೆಲವು ಸಂಗತಿಗಳು ಪ್ರಕಟವಾಗಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಟ್ಟಿದೆ—

ಶ್ರೀ. ಬಾಳು ಇವರ ತಂದೆಯವರು ಪುಣೆಯ ಸೈನ್ಯ ಶಾಖೆಯಲ್ಲಿ ಒಬ್ಬ ನೌಕರರಾಗಿದ್ದರು. ಆದುದರಿಂದ ಅನೇಕ ಸಾಹೇಬ ಜನರು ಕ್ರಿಕೆಟ್ ಆಡುವುದನ್ನು ಚಿಕ್ಕಂದಿನಲ್ಲಿಯೇ ಇವರು ನೋಡುತ್ತಿದ್ದರು. ಕೆಲವು ಹುಡುಗರ ಸಂಗಡ ಇವರೂ ಅರವಿಯ ಚಂಡನ್ನು ಮಾಡಿಕೊಂಡು ಆಡುತ್ತಿದ್ದರು. ಇವರು ಬಡವರಾಗಿದ್ದುದರಿಂದ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಕಳಿಸಲು ತಂದೆಗೆ ಶಕ್ಯವಿರಲಿಲ್ಲ. ಆದುದರಿಂದ ಚಿಕ್ಕಂದಿನಲ್ಲಿಯೇ ಒಂದು ಪಾರ್ಶಿ ಜನರ ವ್ಯಾಯಾಮ ಶಾಲೆಯಲ್ಲಿ ಕೂಲಿಯ ಕೆಲಸಕ್ಕಾಗಿ ಇವರು ಸೇರಿಕೊಂಡಿದ್ದರು.

"ಒಂದು ದಿನ ಮಿಲ್‌ಕಿನ್ಸ್ ಎಂಬ ಕಲೇಕ್ಟರರು ತಾವೊಬ್ಬರೇ ಆಡುತ್ತಿದ್ದರು. ಆಗ ಅವರ ಚಂಡು ಹಾರಿ ದೂರಬಿದ್ದಿತು. ನಾನು ಅದನ್ನು ತೆಗೆದುಕೊಂಡು ಅವರ ಕಡೆಗೆ ಎಸೆದೆನು. ಆ ನನ್ನ ಎಸೆಯುವಿಕೆಯು ಅವರಿಗೆ ಬಹು ವಿಸ್ಮಯವನ್ನುಂಟುಮಾಡಿತು. ನನಗೆ ಪ್ರತಿನಿತ್ಯ ಆಡಲಿಕ್ಕೆ ಬರಹೇಳಿದರು. ಆಡಿ ಮನೆಗೆ ಹೋಗುವಾಗ ೪-೬ ಆಣೆಗಳನ್ನು ನನಗೆ ಕೊಡುತ್ತಿದ್ದರು. ನನ್ನ ಆ "ಬೋಲಿಂಗ್" ನೋಡಿ ಅವರು ಹೀಗೆ ಹೇಳಿದರು—

"ಬಾಳು, ನೀವು ಚಿಕ್ಕಂದಿನಲ್ಲಿಯೇ ಇಷ್ಟು ಚೆನ್ನಾಗಿ ಬೋಲಿಂಗ್ ಮಾಡುತ್ತೀರಿ. ದೊಡ್ಡವರಾದಮೇಲೆ ನೀವು ಒಳ್ಳೇ ಬೋಲರ ಆಗುವಿರಿ."

#### ಜಾತಿಯ ಮೇಲುಕೀಳಿನ ಕೊಳೆ.

ಆಮೇಲೆ ನಾನು ಪುಣೆ ಸೈನ್ಯ ಶಾಖೆಯಲ್ಲಿ ನೌಕರನಿರುವಾಗ ಅಲ್ಲೊಂದು ಟೆನಿಸ್ ಆಟದ ಸಂಘವಿತ್ತು. ಅದರಲ್ಲಿ ನನ್ನನ್ನು ಸದಸ್ಯನನ್ನಾಗಿ ಸೇರಿಸಿಕೊಳ್ಳಲು ಒಪ್ಪಲಿಲ್ಲ. ಏಕೆಂದರೆ ನಾನು ಹುಟ್ಟಿದ್ದು ಚಮ್ಮಗಾರರಲ್ಲಿ. ಕಾಮಾಠಿ ಜಾತಿಯ ಶ್ರೀ. ಸಾಯನ್ನಾ ಮೊದಲಾದವರು ನನ್ನ ಪರವಾಗಿ ಬಹು ಪರಿಶ್ರಮಪಟ್ಟಿದ್ದರಿಂದ ಕೊನೆಗೆ ಸದಸ್ಯನಾಗಿ ಸೇರಿಕೊಳ್ಳಲು ಅವಕಾಶದೊರೆಯಿತು.

ನಾನು ಅದರಲ್ಲಿ ಸದಸ್ಯನಾದುದರಿಂದ ಆ ಸಂಘಕ್ಕೆ ಬಹು ಜಯ ದೊರೆಯಿತು. ಸಾತಾರೆಯಲ್ಲಿಯ ಯುರೋಪ್ಯರ ಆಟದ ಸಂಘವನ್ನು ಸೋಲಿಸಿತು. ಆಗಿನ ಆಟದಲ್ಲಿ ನನ್ನ ಕುಶಲತ್ವವನ್ನು ನೋಡಿ ನನಗೊಂದು ಬೆಳ್ಳಿಯ ಬಟ್ಟಲನ್ನು ಬಹುಮಾನವಾಗಿ ಕೊಟ್ಟರು. ಅದನ್ನು ನ್ಯಾ. ರಾನಡೆಯವರು ತಮ್ಮ ಹಸ್ತದಿಂದ ನನ್ನನ್ನು ಮುಟ್ಟಿ ಕೊಟ್ಟರು. ಆ ಬ್ರಾಹ್ಮಣರು ನನ್ನನ್ನು ಮುಟ್ಟಿದ್ದರಿಂದ ಅವರ ವಿರುದ್ಧವಾಗಿ ಅನೇಕ ಪತ್ರಿಕೆಗಳು ಕಟುವಾಗಿ ಅವರನ್ನು ಟೀಕಿಸಿದವು.

ನಾನು ೧೯೧೧ ರಲ್ಲಿ ಹಿಂದು ಆಟಗಾರರ ಸಂಘದಿಂದ ಇಂಗ್ಲೆಂಡಿಗೆ ಹೋದೆನು. ಆಗ ನಮ್ಮ ಸಂಘದವರನ್ನು ಕಳಿಸಲು ಅನೇಕರು ಹಡಗದ ಹತ್ತಿರ ಬಂದಿದ್ದರು. ಎಲ್ಲರಿಗೂ ಹೂಮಾಲೆಗಳನ್ನು ಹಾಕಿ ಸತ್ಕರಿಸಿದರು. ಆದರೆ ನನಗೂ ನನ್ನ ತಮ್ಮನಿಗೂ ಮಾತ್ರ ಹೂಮಾಲೆಗಳನ್ನು ಕೊಡಲಿಲ್ಲ! ಏಕೆಂದರೆ ನಾವು ಅಸ್ಪೃಶ್ಯರು!

ಈ ಅವಮಾನವು ನನ್ನ ಮನಸ್ಸಿಗೆ ಬಹು ನೋವನ್ನುಂಟುಮಾಡಿತು. ನನಗೆ ಯಾವಾಗಲೂ ಅದೇ ಯೋಚನೆ ಬರಲಾರಂಭವಾಯಿತು. ನಾನು ನನ್ನ ಕೌಶಲ್ಯವನ್ನು ಅಲ್ಲಿಯ ಆಟದಲ್ಲಿ ತೋರಿಸಿ ಇದಕ್ಕಿಂತಲೂ ಹೆಚ್ಚಾದ ಮನ್ನಣೆ ಹೊಂದಬೇಕೆಂದೇ ಯೋಚಿಸಿದೆನು. ಕೊನೆಗೆ ಆ ನನ್ನ ಇಚ್ಛೆಯು ಪೂರ್ತಿಯಾಯಿತು."

ಶ್ರೀ ಬಾಳು ಇವರು ಇಂಗ್ಲೆಂಡಿನಲ್ಲಿ ಬಹು ಪ್ರಸಿದ್ಧಿಯನ್ನು ಹೊಂದಿದರು. ಕ್ರಿಕೆಟ್ ಆಟದಲ್ಲಿ ಇವರು ಜಗತ್ತಿನಲ್ಲಿಯೇ ಮೂರನೆಯವರಾದರು. ಹಿಂದುಗಳಲ್ಲಿರುವ ಜನ್ಮ ವಿಶಿಷ್ಟ ಮೇಲುಕೀಳಿನ ಈ ಪಾಪವು ಬಹುಕಾಲದಿಂದಲೂ ಅಸಂಖ್ಯ ವ್ಯಕ್ತಿಗಳನ್ನು ನಾನಾ ದುಃಖಗಳಿಗೀಡುಮಾಡಿ ಅವರ ಶಕ್ತಿಯನ್ನೇ ಹಾಳುಮಾಡಿವೆ. ಅಂತೆಯೇ ಈ ರಾಷ್ಟ್ರಕ್ಕೆ ಇಂದಿನ ಅಧೋಗತಿಯು ಬಂದಿತು. ಇನ್ನಾದರೂ ಈ ಪಾಪಕ್ಕೆ ಹಿಂದುಗಳು ಹೇಸಬಾರದೆ?

---

## ಸ್ತ್ರೀಯರ ಕೈಯಲ್ಲಿ ರಾಜ್ಯಸೂತ್ರ.

ಹಿಂದುಸ್ಥಾನದ ಪ್ರಭುತ್ವವು ದಿನೆ ದಿನೆ ಜನಾಭಿಪ್ರಾಯಕ್ಕೆ ಒಳಪಡಲಾರಂಭವಾಗಿದೆಯಷ್ಟೆ. ಎಂದಮೇಲೆ ಸ್ತ್ರೀಯರ ಕೈಯಲ್ಲಿಯೂ ರಾಜ್ಯಸೂತ್ರಬರುವುದು ಸ್ವಾಭಾವಿಕವು. ಮ್ಯಾಂಟಗೊ-ಚೇಮ್ಸಫರ್ಡ ಸುಧಾರಣೆಯಿಂದ ಹಿಂದುಸ್ಥಾನದ ಪ್ರಾಂತಿಕ ಶಾಸನ ಮಂಡಲಗಳಲ್ಲಿ ನಾಲ್ಕು ಜನ ಸ್ತ್ರೀಯರು ಮಾತ್ರ ಸಮಾವೇಶವಾಗಿದ್ದರು. ಆದರೆ ೧೯೩೫ ನೆಯ ಇಸವಿ ಶಾಸನದಂತೆ ಹತ್ತು ಪ್ರಾಂತಿಕ ಶಾಸನ ಮಂಡಲಗಳಲ್ಲಿ ಒಟ್ಟು ೪೧ ಸ್ಥಳಗಳು ಸ್ತ್ರೀಯರಿಗಾಗಿಯೇ ಕಾದಿಡಲ್ಪಟ್ಟಿವೆ. ಗಡಿನಾಡಿನಲ್ಲಿ ಮಾತ್ರ ಸ್ತ್ರೀ ಸಭಾಸದರಿಲ್ಲ.

ಹತ್ತು ಪ್ರಾಂತಗಳ ೧೫೮೫ ಸಭಾಸದರಲ್ಲಿ ೪೧ ಸಭಾಸದರು ಸ್ತ್ರೀಯರೇ ಇರಬೇಕೆಂದು ಗೊತ್ತಾಗಿರುವುದರಿಂದ ಅಷ್ಟು ಜನ ಸ್ತ್ರೀಯರು ಆರಿಸಲ್ಪಟ್ಟರಲ್ಲದೆ ಪುರುಷರ ಸ್ಥಾನಗಳಲ್ಲಿಯೂ ೧೫ ಸ್ಥಳಗಳನ್ನು ಆಕ್ರಮಿಸಿಕೊಂಡು ಒಟ್ಟು ಹತ್ತು ಪ್ರಾಂತಗಳಲ್ಲಿ ೫೬ ಸ್ತ್ರೀ ಸಭಾಸದರಿದ್ದಾರೆ. ಇವರಲ್ಲಿ ಸೌ|| ವಿಜಯಲಕ್ಷ್ಮಿ ಪಂಡಿತ ಇವರು ಸಂಯುಕ್ತ ಪ್ರಾಂತದಲ್ಲಿ ಒಬ್ಬ ಮಂತ್ರಿಗಳಾಗಿದ್ದಾರೆ. ಸೌ|| ರುಕ್ಮಿಣೀಲಕ್ಷ್ಮೀಪತಿ ಇವರು ಮದ್ರಾಸ್ ಪ್ರಾಂತಿಕ ಮಂಡಲದ ಮತ್ತು ಸೌ|| ಅನುಸೂಯಾದೇವಿ ಕಾಳೆ ಇವರು ಮಧ್ಯ ಪ್ರಾಂತದ ಅಸೆಂಬ್ಲಿಯ ಉಪಾಧ್ಯಕ್ಷರಾಗಿದ್ದಾರೆ. ಆದರೆ ಸ್ತ್ರೀ ಶಿಕ್ಷಣದಲ್ಲಿ ಎಷ್ಟೋ ಮುಂದರಿದಿದ್ದ ಈ ನಮ್ಮ ಮುಂಬೈ ಪ್ರಾಂತದಲ್ಲಿಯೇ ಸ್ತ್ರೀಯರ ಕೈಯಲ್ಲಿ ರಾಜ್ಯಸೂತ್ರವು ಪ್ರತ್ಯಕ್ಷವಾಗಿ ಬಾರದಿದ್ದುದು ಒಂದು ಕೊರತೆಯೆಂದು ನಾವು ಈ ಮುಂಚೆಯೇ ತಿಳಿಸಿದ್ದೆವಷ್ಟೆ. ಆ ಕೊರತೆಯನ್ನು ಶ್ರೀ. ಖೇರ ಮಂತ್ರಿಮಂಡಲವು ಸ್ವಲ್ಪಾದರೂ ನಿವಾರಣೆಮಾಡಲು ಸೌ|| ಹಂಸ ಮೆಹತಾ ಇವರನ್ನು ಉಪಮಂತ್ರಿಗಳನ್ನಾಗಿ ನಿಯಮಿಸಿಕೊಂಡುದು ಅತ್ಯಂತ ಅಭಿನಂದನೀಯವಾದುದು.

### ಸೌ|| ಹಂಸ ಮೆಹತಾರವರ ಹೇಳಿಕೆ.

ಪುಣೆಗೆ ಹೋಗುವ ಮುಂಚೆ ಪತ್ರಿಕಾ ಪ್ರತಿನಿಧಿಗಳಲ್ಲಿ ಸೌ|| ಹಂಸದೇವಿಯವರು ಹೀಗೆ ಹೇಳಿದರು—

"ಹೆಣ್ಣುಮಕ್ಕಳಿಗೆ ಶಿಕ್ಷಣವೇಕೆ? ಎಂದು ಇನ್ನೂ ಬಹು ಜನರು ಕೇಳುತ್ತಿದ್ದಾರೆ. ಹುಡುಗರಿಗೆ ಶಿಕ್ಷಣವನ್ನು ಕೊಡಬೇಕಾದುದು ತಮ್ಮ ಕರ್ತವ್ಯವೆಂದು ಪಾಲಕರೂ ಸರಕಾರದವರೂ ತಿಳಿದುಕೊಂಡಂತೆ ಹುಡುಗಿಯರಿಗೆ ಶಿಕ್ಷಣವನ್ನು ಕೊಡುವುದು ತಮ್ಮ ಕರ್ತವ್ಯವೆಂದು ಇನ್ನೂ ತಿಳಿದುಕೊಂಡಿಲ್ಲ.

ಸ್ತ್ರೀಯರಿಗೆ ಬೇರೆಯಾದ ಶಿಕ್ಷಣವೇ ಬೇಕು. ಹೀಗಿದ್ದರೂ ಈಗಿರುವ ಶಿಕ್ಷಣವಾದರೂ ಅವರಿಗೆ ದೊರೆಯಬಾರದೆ? ಬಾಲ್ಯ ಶಿಕ್ಷಣವನ್ನು ಹುಡುಗ ಹುಡುಗಿಯರು ಕೂಡಿಯೇ ಹೊಂದಲು ಅಡ್ಡಿಯಿಲ್ಲ. ಆದರೆ ಪ್ರೌಢ ಶಿಕ್ಷಣವನ್ನು ಬೇರೆ ಬೇರೆಯಾಗಿಯೇ ಇದ್ದು ಹೊಂದುವುದು ಒಳ್ಳೆಯದು.

ಸ್ತ್ರೀಯರು ಆರ್ಥಿಕ ದೃಷ್ಟಿಯಿಂದ ಸ್ವಾವಲಂಬಿಗಳಾಗುವುದು ಅತ್ಯಗತ್ಯವಾಗಿದೆ. ಆದುದರಿಂದ ಕೈಗಾರಿಕೆಯ ಶಿಕ್ಷಣವೂ ಅವರಿಗೆ ಬೇಕು. ಸರಕಾರಿ ಅಧಿಕಾರಗಳೂ ಅವರಿಗೆ ದೊರೆಯಬೇಕು. ಈಗಿನ ಶಿಕ್ಷಣದಲ್ಲಿ ಸಂಗೀತವನ್ನೂ ಸೇರಿಸಿ ಅದರಲ್ಲಿಯೂ ಪದವಿಯನ್ನು ಕೊಡುವಂತೆ ವಿಶ್ವವಿದ್ಯಾಪೀಠದಲ್ಲಿ ನಾನು ಒಂದು ಗೊತ್ತುವಳಿಯನ್ನು ತರುವವಳಿದ್ದೇನೆ."

[illegible]ಗೆ ಹೆಣ್ಣುಮಕ್ಕಳೇ ತಮ್ಮ ಕಣ್ಣಿಂದ ತಮ್ಮ ಹಿತಾಹಿತಗ[illegible] ಕಂಡುಕೊಳ್ಳಲು ರಾಜಕಾರಣದಲ್ಲಿಯೂ ಅವರಿಗೆ ತುಂಬಾ [illegible]ರಬೇಕಲ್ಲವೆ?

## ಶರಣಮ್ಮನ ಹೇಳಿಕೆ.

ಬಿಶಪ್ ಆಲ್ಮಾ ವ್ಹಾಯಿಟ್ ಎಂಬ ೭೫ ವರ್ಷ ವಯಸ್ಸಿನ ಒಬ್ಬ ಅಮೇರಿಕೆಯ ಧರ್ಮೋಪದೇಶಕಳು "ಫಿಲರ್ ಆಫ್ ಫಾಯರ್" ಎಂಬ ಅಂತರ ರಾಷ್ಟ್ರೀಯ ಧಾರ್ಮಿಕ ಸಂಸ್ಥೆಯ ಚಾಲಕಳು. ಈಗ ಜಗತ್ತಿನ ಕ್ರೈಸ್ತ ಸಮಾಜದಲ್ಲಿ ಇವಳೊಬ್ಬಳೇ ಶರಣಮ್ಮನು. ಈ ಅಮ್ಮನು ಜಗತ್ತಿನ ನಾನಾ ಭಾಗಗಳಲ್ಲಿ ೪೫ ಸಾವಿರ ಮೈಲು ಪ್ರವಾಸಮಾಡಿ ತನಗೆ ಬಂದ ಅನುಭವವನ್ನು ಕುರಿತು ಲಂಡನ್ನಿನ ಪತ್ರಿಕಾ ಪ್ರತಿನಿಧಿಗಳಲ್ಲಿ ಹೀಗೆ ಹೇಳಿದಳು.

### ಅನೀತಿಯ ಪ್ರಚಾರ.

ಈಗ ಜಗತ್ತಿನಲ್ಲ ಅನೀತಿಯು ಹೆಚ್ಚುತ್ತಾಯಿದೆ. ತರುಣ ತರುಣಿಯರು ಸ್ವೇಚ್ಛೆಯಿಂದಿರುವ ಕಡೆಗೇನೇ ಹೆಚ್ಚು ಒಲವು. ಅನೇಕ ಕಡೆ ಅನೀತಿಯನ್ನು ಸ್ತುತಿಸುವುದೂ ಪ್ರಾರಂಭವಾಗಿದೆ. ಅಮೇರಿಕೆಯ ತರುಣಿಯರಲ್ಲಿ ಸ್ವೇಚ್ಛಾಚಾರವು ಹೆಚ್ಚು. ಮನೆಯಲ್ಲಿ ಯೋಗ್ಯ ಶಿಕ್ಷಣ ದೊರೆಯುವುದಿಲ್ಲ. ಹೊರಗಿನ ವಾತಾವರಣವೂ ಪ್ರತಿಕೂಲವಾದುದು. ಪ್ರಾರ್ಥನಾ ಮಂದಿರಗಳು ನಾಟಕ ಶಾಲೆಗಳಂತೆ ಮನೋರಂಜನೆಯ ಸ್ಥಳಗಳಾಗುತ್ತಾ ನಡೆದಿವೆ.

ಈ ವರೆಗೂ ಸ್ತ್ರೀಯರು ಪುರುಷರ ಅತ್ಯಾಚಾರಗಳಿಗೆ ಒಳಗಾಗುತ್ತಿದ್ದರು. ಈಗಲಾದರೋ ಸ್ತ್ರೀಯರೇ ತಮ್ಮ ವ್ಯಾಮೋಹದಿಂದ ಪುರುಷರನ್ನು ಎಳೆದು ತಮ್ಮ ಮತ್ತು ಅವರ ನಾಶಕ್ಕೆ ಕಾರಣರಾಗುತ್ತಿದ್ದಾರೆ. ಆದುದರಿಂದ ತರುಣಿಯರು ಮನೋನಿಗ್ರಹದ ಕಡೆಗೆ ಲಕ್ಷಿಸುವುದು ಅಗತ್ಯವಾಗಿದೆ. ಇವರು ಪುರುಷರಿಗೆ ಉತ್ತೇಜನಗೊಳಿಸದಿದ್ದರೆ ಜಗತ್ತಿನ ಪಾಪಕೃತ್ಯಗಳಲ್ಲಿ ಅರ್ಧದಷ್ಟು ಕೃತ್ಯಗಳು ಕಡಿಮೆಯಾಗಬಹುದು.

ಸಮಾರಂಭ, ನೃತ್ಯ, ಅಪೂರ್ಣ ಉಡುಪು ಇವು ಪಾಶ್ಚಾತ್ಯ ಸ್ತ್ರೀಯರ ಮುಖ್ಯ ದೋಷಗಳಾಗಿವೆ. ಇವರು ಎಷ್ಟು ಮರ್ಯಾದೆ ಶೀಲಗಳುಳ್ಳವರಾಗುವರೋ ಅಷ್ಟು ಪುರುಷರೂ ದಾರಿಗೆ ಬರುತ್ತಾರೆ. ಕಳೆದ ವರ್ಷ ನಾನು ಪ್ಯಾಲಿಸ್ಟಾಯಿನ್ ಪ್ರಾಂತಕ್ಕೆ ಹೋಗುತ್ತಿದ್ದಾಗ ಒಂದು ಹಡಗಿನಲ್ಲಿ ಒಬ್ಬ ಹುಡುಗಿಯನ್ನು ನೋಡಿದೆನು. ಅವಳನ್ನು ನೋಡಿದನಂತರ ಪುನಃ ಅವಳ ಕಡೆ ನೋಡುವ ಮನಸೇ ನನಗಾಗಲಿಲ್ಲ. ಸುಮ್ಮನೆ ಇರುವುದೂ ನನ್ನಿಂದಾಗಲಿಲ್ಲ. ಆಗ ಹತ್ತಿರ ಹೋಗಿ "ರಾಣಿಯವರೆ, ನೀವು ಇನ್ನಿಷ್ಟು ಬಟ್ಟೆಯನ್ನು ಉಟ್ಟುಕೊಂಡರೆ ನಿಮಗಾಗುವ ನಷ್ಟವೇನು?" ಎಂದು ಕೇಳಿದೆನು. ಆಗ ನನ್ನ ಮಾತಿನ ಅಭಿಪ್ರಾಯವನ್ನು ತಿಳಿದು ಬೇರೆ ಕಡೆ ಹೋಗಿ ಸರಿಯಾಗಿ ಬಟ್ಟೆಯನ್ನು ಉಟ್ಟುಕೊಂಡು ಬಂದಳು.

ಕಳೆದ ೫೦ ವರುಷಗಳಲ್ಲಿ ಅನೀತಿಯ ಪ್ರಚಾರವು ಹೆಚ್ಚಾಗಿದೆ. ಈಗ ನೃತ್ಯಕ್ಕೆ ವ್ಯಭಿಚಾರದ ಸ್ವರೂಪವು ಬರಲಾರಂಭವಾಗಿದೆ. ನಾವು ಅಮೇರಿಕೆಯಲ್ಲಿ ಎರಡು ಕಡೆ ನಭೋವಾಣಿ ಭವನಗಳನ್ನು ಏರ್ಪಡಿಸಿದ್ದೇವೆ. ಅವುಗಳ ಮೂಲಕ ಜನಾಂಗದ ಅನೀತಿಯನ್ನು ನಿವಾರಣೆಮಾಡಲು ಆಗಾಗ್ಗೆ ಉಪದೇಶಪರವಾದ ಇಂತಹ ಸಂದೇಶಗಳನ್ನೇ ಕೊಡುತ್ತಿದ್ದೇವೆ."

ಹಿಂದುಸ್ಥಾನದ ಸ್ತ್ರೀಯರ ವಿಷಯವಾಗಿ ಸಲ್ಲದ ನಾನಾ ದೋಷಾರೋಪಣೆಗಳನ್ನು ಮಾಡುತ್ತಿರುವ ಮೇಯೋ ಅಮ್ಮನ ದೇಶದಲ್ಲಿ ನಡೆದಿರುವ ನೀತಿಯನ್ನು ಈ ಶರಣಮ್ಮನ ಮಾತಿನಿಂದ ತಿಳಿದುಕೊಳ್ಳಬಹುದಲ್ಲವೆ? ಪಾಶ್ಚಾತ್ಯ ಸ್ತ್ರೀಯರ ಅನುಕರಣವನ್ನು ಮಾಡುವವರು [illegible]ಯುಳ್ಳವರಾಗಿರುವುದು ಅಗತ್ಯವಲ್ಲವೆ?

REGISTERED No. B. 2891.

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೨ | ಆಲಮಟ್ಟಿ- ಸೋಮವಾರ ತಾರೀಖು ೧೫ ನೆಯ ಅಗಷ್ಟ ೧೯೩೮. | ಸಂಚಿಕೆ ೧

ಜನಸೇವೆಯೇ ದೇವರಸೇವೆ.

## ೪೬ ಜನರು ಮುಳುಗಿ ಸತ್ತರು.

ಸುರತ ನಗರದ ಹತ್ತಿರದಲ್ಲಿರುವ ತಾಪೀ ನದಿಯಲ್ಲಿ
ನಾರಳ ಪೌರ್ಣಿಮೆಯ ಹಬ್ಬದ ನಿಮಿತ್ತವಾಗಿ
ವಿಹಾರಕ್ಕಾಗಿ ಹೊರಟ ೫೦ ಜನಗಳ ಒಂದು
ನಾವೆಯು ನಡು ನೀರಿನಲ್ಲಿ ಬುಡ ಮೇಲಾಗಲು
ಅದರಲ್ಲಿದ್ದ ಸುಮಾರು ೪೬ ಜನರು ಮುಳುಗಿ ಸತ್ತರು.
೪ ಜನ ನಾವಿಕರು ಮಾತ್ರ ಪಾರಾಗಿ ಬಂದಿದ್ದಾರೆ.

ನಾ. ಮುನಶಿಯುವರು ಮುಂಬೈಯಲ್ಲಿಯ ನಿರ್ಗತಿಕ
ಭಿಕ್ಷುಕ ಬಾಲಬಾಲಕಿಯರ ಸಲುವಾಗಿ ಮುಂಬೈ ಹತ್ತಿರ ಒಂದು
ಮಾದರಿಯ ಗ್ರಾಮ ರಚಿಸುವ ಯೋಜನೆಯಲ್ಲಿದ್ದಾರೆ.
ಅಲ್ಲಿ ಬಾಲ-ಬಾಲಕಿಯರ ಸಾಮಾಜಿಕ ಮತ್ತು
ಆರ್ಥಿಕ ಸ್ಥಾನಮಾನಗಳು ಉತ್ತಮಗೊಳ್ಳುವಂತೆ
ಯೋಗ್ಯ ಶಿಕ್ಷಣ ಕೊಡಲಾಗುತ್ತದೆ.

ದೇಹವೇ ದೇವಾಲಯ.

# ನಿಜಾಮ ವೀರಶೈವರಲ್ಲಿ ವಿನಂತಿ.

ಲೇ- ಓರ್ವ ಪದವೀಧರ

೧೦-೧೫ ವರುಷಗಳ ಕೆಳಗೆ ನಿಜಾಮ ವೀರಶೈವ ವಿದ್ಯಾವರ್ಧಕ ಫಂಡ ಕೂಡಿಸಬೇಕೆಂದು ನಿಶ್ಚಯಿಸಿ ಆ ಪ್ರಕಾರ ೧೩. ಸಾವಿರ ರೂ. ಗಳ ವರೆಗೆ ಕೂಡಿಸಿದುದು ನಿಜಾಮ ಭಾಗದ ಎಲ್ಲ ವೀರಶೈವರಿಗೂ ಗೊತ್ತಿರಬಹುದು. ಈ ಯೋಜನೆಯಲ್ಲಿ ಮುಖ್ಯ ಭಾಗ ತೆಗೆದುಕೊಂಡವರು ಗುರುಮಠಕಲ್ಲಿನ ಶ್ರೀ ಶಾಂತವೀರ ಮಹಾ ಸ್ವಾಮಿಗಳವರೊಬ್ಬರು. ಪ್ರತಿ ವರುಷ ಫಂಡನ್ನು ಹೆಚ್ಚಿಸಬೇಕೆಂದು ಸಂಕಲ್ಪಮಾಡಿಕೊಂಡಿದ್ದರೂ ಈ ವರೆಗೂ ಆ ಬಗ್ಗೆ ಪ್ರಯತ್ನವನ್ನೇ ಮಾಡಿಲ್ಲ. ಆದುದರಿಂದ ಫಂಡ ಅಭಿವೃದ್ಧಿ ಹೊಂದದೆ ಯಥಾಸ್ಥಿತಿಯಲ್ಲಿದೆ. ಹಣದ ದೃಷ್ಟಿಯಿಂದ– ಕಾರ್ಯಭಾಗದಿಂದಲ್ಲ.

ಈ ೧೩. ಸಾವಿರ ರೂ. ಗಳಿಂದ ಬರುವ ಬಡ್ಡಿಯನ್ನು ವೇತನ ಮೂಲಕ ಶಾಲೆ ಕಾಲೇಜುಗಳಲ್ಲಿ ಓದುವ ವೀರಶೈವ ಬಡ ವಿದ್ಯಾರ್ಥಿಗಳಿಗೆ ಈ ವರೆಗೂ ಕೊಡುತ್ತಿದ್ದರು. ಇದರಿಂದ ಹೈದರಾಬಾದ ಮತ್ತು ಗುಲಬರ್ಗಾಗಳಲ್ಲಿ ಅಭ್ಯಾಸಮಾಡುವ ಬಡ ವಿದ್ಯಾರ್ಥಿಗಳಿಗೆ ಸ್ವಲ್ಪಮಟ್ಟಿಗಾದರೂ ಪ್ರಯೋಜನವಾಗುತ್ತಿತ್ತು. ನಿಜಾಮ ರಾಜ್ಯದಲ್ಲಿರುವ ವೀರಶೈವ ಸಂಖ್ಯಾ ಬಲವನ್ನು ನೋಡಿದರೆ ಫಂಡು ಅತ್ಯಲ್ಪವಾದರೂ ಕೆಲವರಿಗಾದರೂ ತುಂಬಾ ಅನುಕೂಲವಾಗುತ್ತಿದ್ದಿತೆಂದು, ಧಾರಾಳವಾಗಿ ಹೇಳಬಹುದು. ಆರ್ಥಿಕ ದುಃಸ್ಥಿತಿಯಲ್ಲಿ ಬ್ಯಾಂಕುಗಳ ಬಡ್ಡಿ ದರವೂ ಬಹಳ ಕಡಿಮೆಯಾದುದರಿಂದ ಫಂಡಿನ ಉತ್ಪನ್ನವೂ ಕಡಿಮೆಯಾಗಿದೆ. ಕಳೆದ ಕೆಲವು ದಿವಸಗಳಿಂದಲೂ ವೀರಶೈವ ಬಡ ವಿದ್ಯಾರ್ಥಿಗಳಿಗಾಗುತ್ತಿದ್ದ ಅತ್ಯಲ್ಪ ಸಹಾಯವನ್ನು ಫಂಡಿನ ಈಗಿನ ವ್ಯವಸ್ಥಾಪಕ ಮಂಡಳಿಯವರು ನಿಲ್ಲಿಸಿಬಿಟ್ಟಿದ್ದಾರೆ. ಈ ಸಂಸ್ಥೆಯಲ್ಲಿ ಸಮಾಜದ ಕಳಕಳಿಯಿಂದ ಸ್ವಾರ್ಥವನ್ನು ತೊರೆದು ಕಾರ್ಯದಕ್ಷತೆಯಿಂದ ಕೆಲಸಮಾಡುವ ಕಾರ್ಯಕರ್ತರಿಲ್ಲದಿದ್ದುದರಿಂದ ಈ ಸ್ಥಿತಿಯುಂಟಾಗಿದೆಯೆಂದು ಬೇರೆ ಹೇಳಬೇಕಾಗಿಲ್ಲ.

ಈ ಮೊದಲು ಸೇರಿದ ಜನರಲ್ ಮೀಟಿಂಗಿನಲ್ಲಿ ಪ್ರತಿ ವರ್ಷ ಮ್ಯಾನೇಜಿಂಗ್ ಕಮಿಟಿಯನ್ನು ನಿಯಮಿಸಬೇಕೆಂದಿದ್ದ ಈ ಸಂಸ್ಥೆಯ ಘಟನೆಯನ್ನು ತೆಗೆದುಹಾಕಿ ೩. ವರುಷಗಳ ವರೆಗೂ ಒಮ್ಮೆ ನಿಯಮಿಸಿದ ಮ್ಯಾನೇಜಿಂಗ್ ಕಮಿಟಿ ಕೆಲಸಮಾಡಬೇಕೆಂದು ನಿರ್ಧರಿಸಿರುವುದನ್ನು ನೋಡಿದರೆ ಇದರಲ್ಲಿ ಏನಾದರೂ ಚಪಲತನವಿದೆಯೆಂದೇ ಸ್ಪಷ್ಟ ಹೊಳೆಯುತ್ತದೆ.

ಒಂದು ಒಂದೂವರೆ ವರುಷದಿಂದಲೂ ಬಡ ವಿದ್ಯಾರ್ಥಿಗಳಿಗೆ ಈ ಫಂಡಿನಿಂದ ದೊರೆಯುತ್ತಿದ್ದ ಸಹಾಯವನ್ನು ನಿಲ್ಲಿಸಿಬಿಟ್ಟಿದ್ದಾರೆ. ಹೈದರಾಬಾದ ವೀರಶೈವ ತರುಣ ಸಂಘದವರು ಮೇಲಿನ ಕಮಿಟಿಯವರಿಗೆ ತಮ್ಮ ಉದ್ದೇಶ ತಿಳುಹಿಸಲು ಹಲವು ಸಾರೆ ಪತ್ರದ ಮೂಲಕ ಕೇಳಿಕೊಂಡರೂ ನಿಷ್ಫಲವಾಯಿತು. ಸಂಸ್ಥೆಯವರು ಫಂಡಿನ ಹಣವನ್ನು ಇಟ್ಟ ಬ್ಯಾಂಕೇ ದಿವಾಳಿ ತೆಗೆದಿದೆಯೆ? ಅಥವಾ ಸಂಸ್ಥೆಯ ಚಾಲಕರೇ ಸಂಸ್ಥೆಯ ಧ್ಯೇಯವನ್ನು ಬದಲಾಯಿಸಿ ಬಡ ವಿದ್ಯಾರ್ಥಿಗಳ ಬದಲು ತಾವೇ ಲಾಭ ಹೊಂದಬೇಕೆಂಬ ಹೊಸ ನಿಯಮವನ್ನೇನಾದರೂ ಮಾಡಿಕೊಂಡಿರುವರೋ?

ಇದು ವೀರಶೈವ ಬಡ ವಿದ್ಯಾರ್ಥಿಗಳ ಸಹಾಯ ದೆಶೆಯಿಂದ ವೀರಶೈವರಿಂದಲೇ ಕೂಡಿಸಲ್ಪಟ್ಟ ಹಣ. ಪ್ರತಿ ವರುಷ ಸಂಸ್ಥೆಯ ಉದ್ದೇಶದಂತೆ ಬಂದ ಬಡ್ಡಿಯನ್ನು ಬಡ ವೀರಶೈವ ವಿದ್ಯಾರ್ಥಿಗಳಿಗೆ ಹಂಚುವುದು ಸಂಸ್ಥೆಯ ಚಾಲಕರ ಕರ್ತವ್ಯವಾಗಿದೆ. ಆದುದರಿಂದ ಸಮಾಜ ಹಿತಚಿಂತಕರು, ಮುಂದಾಳುಗಳು, ಉತ್ಸಾಹೀ ತರುಣರು ಈ ವಿಷಯವನ್ನು ಲಕ್ಷಿಸಿ ಫಂಡು ಪ್ರತಿ ವರುಷ ಉದ್ದೇಶದಂತೆ ವಿನಿಯೋಗವಾಗುವಂತೆ ನೋಡಿಕೊಳ್ಳಬೇಕಾಗಿದೆ. ಬಹು ಜನಗಳಲ್ಲಿ ಈ ಫಂಡಿನ ಸಂಬಂಧ ಒಂದು ತಪ್ಪು ತಿಳುವಳಿಕೆ ಇದ್ದಂತೆ ತೋರುತ್ತದೆ. ಇದು ಯಾದಗಿರಿ ಫಂಡ. ಫಂಡಿನ ಆಡಳಿತ ಮತ್ತು ಸೂತ್ರಗಳು ಯಾದಗಿರಿ ಜನರಿಗೇನೇ ಸಂಬಂಧಪಟ್ಟವುಗಳು. ಆದರೆ ಈ ಫಂಡ ಕೇವಲ ಯಾದಗಿರಿಯವರಿಗೇನೇ ಸಂಬಂಧಪಡದೆ ಇಡೀ ನಿಜಾಮ ವೀರಶೈವರಿಗೇನೇ ಸಂಬಂಧಪಟ್ಟಿದೆ. ರಾಯಚೂರು, ಗುಲಬರ್ಗಾ, ಉದಗೀರ, ಹೈದರಾಬಾದ ಮೊದಲಾದ ಸ್ಥಳಗಳಲ್ಲಿಯ ಪ್ರಮುಖರು ಈ ಸಂಸ್ಥೆಯ ಆಡಳಿತವನ್ನು ವಶಪಡಿಸಿಕೊಂಡು ಫಂಡು ಪ್ರತಿ ವರುಷ ಬೆಳೆಯುವಂತೆ ಪ್ರಯತ್ನಿಸುವುದು ಅವರ ಕರ್ತವ್ಯವಾಗಿದೆ. ಸಮಾಜ ಕಳಕಳಿಯುಳ್ಳ ಸ್ವಾರ್ಥತ್ಯಾಗದಿಂದ ಕೆಲಸಮಾಡುವ ಕಾರ್ಯಕರ್ತರ ಅವಶ್ಯಕತೆಯಿದೆ. ಇಲ್ಲದಿದ್ದರೆ ಇನ್ನು ಸ್ವಲ್ಪ ದಿನಗಳಲ್ಲಿಯೇ ಫಂಡನ್ನು ಸ್ಥಾಪಿಸಿದವರ ಉದ್ದೇಶ ಈಡೇರದೆ ಅವರ ಶ್ರಮ ನಿಷ್ಫಲವಾಗುವದೆಂಬುದರಲ್ಲಿ ಸಂದೇಹವಿಲ್ಲ.

ಬ್ರಿಟಿಶ್ ಮತ್ತು ಮೈಸೂರು ಪ್ರಾಂತದ ವೀರಶೈವರು ವಿದ್ಯದ ಮಹತ್ವವನ್ನು ಅರಿತು ಬಡ ವಿದ್ಯಾರ್ಥಿಗಳ ಸಹಾಯ ದೆಶೆಯಿಂದ ಲಕ್ಷಾಂತರ ರೂ. ಗಳನ್ನು ಕೂಡಿಸಿಟ್ಟು ಪ್ರತಿ ವರುಷ ವೇತನ, ಬೋರ್ಡಿಂಗ್ ಮೂಲಕ ತುಂಬಾ ಸಹಾಯಮಾಡುತ್ತಿದ್ದಾರೆ. ಈಗಿನ ಕಾಲದಲ್ಲಿ ಒಂದು ಸಮಾಜವು ಬಾಳಿ ಬದುಕಬೇಕಾದರೆ ಸಂಘಟನ ಶಕ್ತಿಯೂ ರಾಜಕೀಯ ಮುಂಜಾಗ್ರತೆಯೂ ಇರುವುದು ಅವಶ್ಯಕವಿದೆ. ಅಂಥ ಶಕ್ತಿ ಬರಬೇಕಾದರೆ ವಿದ್ಯೆಯು ಸಮಾಜದಲ್ಲಿ ಹೆಚ್ಚುವುದು ಆವಶ್ಯಕ.

ಈಗಿನ ಆರ್ಥಿಕ ಮುಗ್ಗಟ್ಟಿನ ಕಾಲದಲ್ಲಿ ಫಂಡನ್ನು ಬೆಳೆಸುವದು ಸ್ವಲ್ಪ ಕಠಿಣ ತೋರಿದರೂ ಸ್ವಾರ್ಥತ್ಯಾಗದಿಂದ ಕೆಲಸ ಮಾಡಿದರೆ ಬೇಕಾದಷ್ಟು ದುಡ್ಡು ಕೂಡುವುದೆಂಬುದರಲ್ಲಿಯೂ ಸಂದೇಹವಿಲ್ಲ. ಫಂಡಿನಿಂದ ಸಹಾಯ ಹೊಂದಿ ವಿದ್ಯಾಭ್ಯಾಸವನ್ನು ಮುಗಿಸಿ ಜೀವನ ಸಂಗ್ರಾಮದಲ್ಲಿ ಅಡಿಯಿಟ್ಟವರು, ತಮ್ಮ ಕಾಲ ಮೇಲೆ ತಾವು ನಿಲ್ಲುವಷ್ಟು ಶಕ್ತಿಯುಳ್ಳವರು ಅವಶ್ಯವಾಗಿ ತಮ್ಮ ಮೇಲಿದ್ದ ಋಣವೆಂದು ಭಾವಿಸಿ ದುಡ್ಡಿನಿಂದಲೂ ಕಾರ್ಯರೂಪದಿಂದಲೂ ಫಂಡಿಗಾಗಿ ಸಹಾಯಮಾಡಬೇಕು ನಿಜಾಮ ವೀರಶೈವ ಮುಂದಾಳುಗಳೂ, ಧನಿಕರೂ ಈ ವಿಷಯವನ್ನು ತುಂಬಾ ಲಕ್ಷಿಸಿ ಜಾಗ್ರತೆ ವೀರಶೈವ ಬಡ ವಿದ್ಯಾರ್ಥಿಗಳಿಗೆ ಸಹಾಯ ದೊರೆಯುವಂತೆ ಮಾಡುವರೆಂದೇ ನಂಬಿದ್ದೇನೆ.

---

—ಮೈಸೂರು ವಿಶ್ವ ವಿದ್ಯಾಲಯದ ಪದವೀದಾನ ಸಮಾರಂಭವು ಅಕ್ಟೋಬರ್ ೭ ನೆಯ ತಾರೀಖಿನ ದಿವಸ ಜರುಗುವುದು. ಆಗ ಸರ್. ತೇಜಬಹದ್ದೂರ್ ಸಪ್ರುರವರು ಪದವೀದಾನ ಸಮಾರಂಭ ಭಾಷಣ ಮಾಡುವವರಿದ್ದರು. ಆದರೆ ಅವರಿಗೆ ಆ ಕಾಲಕ್ಕೆ ಬರಲು ಶಕ್ಯವಾಗದಿದ್ದುದರಿಂದ ಆ ಸಮಾರಂಭವನ್ನು ದೀನಬಂಧು ಸಿ. ಎಫ್. ಅಂಡ್ರೂಜರವರು ಜರುಗಿಸುವರು.

—ಕಳೆದ ೯-೧೦ ನೆಯ ತಾರೀಖಿನ ದಿವಸ ಮುಂಬೈಯಲ್ಲಿಯ ಎಲ್ಲ ಸೆರೆ ಸಿಂದಿ ಅಂಗಡಿಗಳನ್ನು ಮುಚ್ಚಬೇಕೆಂದು ಸರಕಾರದವರು ಆಜ್ಞಾಪಿಸಿದ್ದರು

# ಶ್ರೀ ಪ್ರಭುಲಿಂಗ ಲೀಲೆ

## ಪುರಾಣ ಪ್ರವಚನ.

ದಾವಣಗೆರೆಯ ಶ್ರೀ ವಿರಕ್ತ ಮಠದಲ್ಲಿ ಶ್ರಾವಣ ಮಾಸದ ಪ್ರಯುಕ್ತ ಪದ್ಧತಿಯ ಮೇರೆಗೆ ಈ ಸಾರೆ ಬೆಂಗಳೂರು ಶ್ರೀ ಸರ್ಪಭೂಷಣ ಮಠದ ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ ಶ್ರೀ ಮಹದೇವ ಸ್ವಾಮಿಗಳವರಿಂದ "ಶ್ರೀ ಪ್ರಭುಲಿಂಗಲೀಲೆ" ಎಂಬ ಪುರಾಣ ಪ್ರವಚನವು ನಡೆಯುತ್ತಲಿದ್ದು ನಿತ್ಯವೂ ಜನರು ಹೆಚ್ಚು ಹೆಚ್ಚಾಗಿ ಸೇರುತ್ತಲಿರುವರು. ಶ್ರೀ. ಮಹಾಸ್ವಾಮಿಗಳ ದಿವ್ಯೋಪದೇಶಾಮೃತದಿಂದ ಸರ್ವರೂ ದೈವಭಕ್ತ ಪರಾಯಣರಾಗಿ ಸದ್ಗುಣ ಸದಾಚಾರ ಸಂಪನ್ನರಾಗುವರೆಂಬುದರಲ್ಲಿ ಅಭ್ಯಂತರವಿಲ್ಲ. ಮಹಾಸ್ವಾಮಿಗಳ ಉಪದೇಶವು ಜನಗಳ ಮೇಲೆ ಹೆಚ್ಚು ಪರಿಣಾಮಕಾರಿಯಾಗಿದ್ದು ಈ ಪುರಾಣ ಶ್ರವಣಕ್ಕೆ ವೀರಶೈವರಷ್ಟೇ ಅಲ್ಲದೆ ಅನ್ಯ ಸಮಾಜದವರೂ ವಿಶೇಷವಾಗಿ ಆಗಮಿಸುತ್ತಲಿರುವರು. ಈ ತಿಂಗಳ ಕೊನೆಯ ವರೆಗೂ ಪುರಾಣ ಪ್ರವಚನ ನಡೆಯುತ್ತಲಿರುವುದರಿಂದ ಸರ್ವ ಮಹನೀಯರೂ ಮಹಿಳೆಯರೂ ಸಕಾಲಕ್ಕೆ ಆಗಮಿಸಿ ಪ್ರಯೋಜನವನ್ನು ಪಡೆಯುವರಾಗಲೆಂದು ಹಾರೈಸುವೆವು.

## ಭಗವಾನ್ ಶ್ರೀ ಬಸವೇಶನ

### ವಿಷಯವಾಗಿ ಭಾಷಣ.

"ಶರಣ ಸಂದೇಶ" ಪತ್ರಿಕಾ ಸಂಪಾದಕರಾದ ಶ್ರೀಮಾನ್ ಹರ್ಡೇಕರ ಮಂಜಪ್ಪನವರು ಇಲ್ಲಿಗೆ ದಯಮಾಡಿಸಿದ್ದುದು ಎಲ್ಲರಿಗೂ ಆನಂದವನ್ನುಂಟುಮಾಡಿತು. ಇಲ್ಲಿಯ ಮಹಾ ಜನರು ಶ್ರೀ. ಮಂಜಪ್ಪನವರನ್ನು ಒಂದು ಭಾಷಣ ಮಾಡಲು ಕೇಳಿಕೊಳ್ಳಲು ಭಗವಾನ್ ಶ್ರೀ ಬಸವೇಶನ ವಿಷಯವಾಗಿ ಭಾಷಣ ಮಾಡಲು ಸರ್ವರ ಅಭಿಪ್ರಾಯದ ಮೇರೆಗೆ ಮಂಜಪ್ಪನವರು ಒಪ್ಪಿಕೊಂಡರು. ತಾ. ೫-೮-೩೮ ನೆಯ ಶುಕ್ರವಾರ ಸಾಯಂಕಾಲ ಶ್ರೀ ವಿರಕ್ತ ಮಠದಲ್ಲಿ ಸ್ವಲ್ಪ ಕಾಲ ಪುರಾಣವು ನಡೆದು ತರುವಾಯ ಭಾಷಣ ನಡೆಯಲು ಏರ್ಪಾಡು ಮಾಡಲಾಯಿತು. ಮಹಿಳೆಯರೂ ಸಹ ಹೆಚ್ಚಾಗಿ ಸೇರಿದ್ದರು. ಪರಮಪೂಜ್ಯರಾದ ಶ್ರೀಮನ್ನಿರಂಜನ ಪ್ರಣವ ಸ್ವರೂಪಿಗಳಾದ, ಶ್ರೀ ಮಹದೇವ ಸ್ವಾಮಿಗಳವರಿಂದ ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ವಾಙ್ಮಯ ಶಾಖೆಯವರಿಂದ ಪ್ರಕಟಿಸಲ್ಪಟ್ಟಿರುವ ಚಾಮರಸ ಕೃತ 'ಶ್ರೀ ಪ್ರಭುಲಿಂಗ ಲೀಲೆ' ಎಂಬ ಪುರಾಣ ಪ್ರವಚನವು ಬಹು ಸ್ವಾರಸ್ಯವಾಗಿ ನಡೆದ ತರುವಾಯ ಶ್ರೀಮಾನ್ ಅನೆಕೊಂಡದ ಮುಪ್ಪಣ್ಣನವರು ಶ್ರೀಮಾನ್ ಹರ್ಡೇಕರ ಮಂಜಪ್ಪನವರ ಪರಿಚಯವನ್ನು ಮಾಡಿಕೊಟ್ಟು ಭಾಷಣವನ್ನು ಮಾಡಬೇಕೆಂದು ಸಭಿಕರ ಪರವಾಗಿ ಪ್ರಾರ್ಥಿಸಿಕೊಂಡರು. ಶ್ರೀಮಾನ್ ಮಂಜಪ್ಪನವರು ಪ್ರಚಂಡ ಕರತಾಡನಗಳ ಮಧ್ಯೆ ಎದ್ದು "ಭಗವಾನ್ ಶ್ರೀ ಬಸವೇಶ"ನ ವಿಷಯವಾಗಿ ೨ ಗಂಟೆಗಳ ಕಾಲ ಅತ್ಯಮೌಲ್ಯವಾದ ಭಾಷಣವನ್ನು ಮಾಡಿದರು. ಭಗವಾನ್ ಶ್ರೀ ಬಸವೇಶನಿಂದ ಸಮಾಜಕ್ಕೂ ರಾಷ್ಟ್ರಕ್ಕೂ ಆದ ಮಹದುಪಕಾರವನ್ನು ವಿವರಿಸಿ ಈಗಿನ ಮಹಾತ್ಮಾ ಗಾಂಧಿಯವರ ತತ್ವಗಳನ್ನು ೮೦೦ ವರ್ಷಗಳ ಹಿಂದೆ ಶ್ರೀ ಬಸವೇಶನು ಹೇಗೆ ಜಾರಿಗೆ ತಂದಿದ್ದನೆಂಬುದನ್ನೂ ಬಸವೇಶನಲ್ಲಿಯ ಗುಣ ವಿಶೇಷಗಳನ್ನೂ ವರ್ಣಿಸಿ ಬಹು ಹೃದಯಂಗಮವಾಗಿ ಭಾಷಣ ಮಾಡಿದರು. ಇವರ ಭಾಷಣದಿಂದ ಸಭಿಕರಿಗಾಗುತ್ತಿದ್ದ ಹರ್ಷವನ್ನು ಪದೇ ಪದೇ ತಾಡನಗಳಿಂದ ವ್ಯಕ್ತಪಡಿಸುತ್ತಿದ್ದರು. ಭಾಷಣವು ಎಲ್ಲರ ಮೇಲೆ ಬಹಳ ಪರಿಣಾಮವನ್ನುಂಟುಮಾಡಿತು. ಇವರ ಭಾಷಣವಾದ ತರುವಾಯ ಧನ್ಯವಾದಗಳಾಗಿ ಅಂದಿನ ಕಾರ್ಯವು ಮುಕ್ತಾಯವಾಯಿತು.

ಪ್ರತ್ಯಕ್ಷದರ್ಶಿ

# ದಾವಣಗೆರೆಯಲ್ಲಿ ಸಾರ್ವಜನಿಕ ಸಭೆ.

### ಹಿಂದೂ ಸಂಘಟನೆಗಾಗಿ ಪ್ರಯತ್ನಿಸುತ್ತಲಿರುವ

### ಶ್ರೀ. ಹರ್ಡೇಕರ ಮಂಜಪ್ಪನವರಿಗೆ

## ದಾವಣಗೆರೆ ಮಹಾಜನರ ಕಾಣಿಕೆ.

ತಾ. ೬-೮-೩೮ ನೆಯ ಸಾಯಂಕಾಲ ೭ ಗಂಟೆಗೆ ಶ್ರೀ ಶಿವಯೋಗ ಮಂದಿರದಲ್ಲಿ ದಾವಣಗೆರೆ ಮಹಾಜನರು ಸಾರ್ವಜನಿಕ ಸಭೆ ಸೇರಿದ್ದರು. ಈ ಸಭೆಗೆ ಎಲ್ಲಾ ಕೋಮಿನ ಮಹನೀಯರೂ ಮಹಿಳೆಯರೂ ಆಗಮಿಸಿದ್ದರು. ಶ್ರೀ. ಬೆಳ್ಳುಳ್ಳಿ ಮುಪ್ಪಣ್ಣನವರು ಚಿತ್ರದುರ್ಗದ ಸುಪ್ರಸಿದ್ಧ ವಕೀಲರೂ ಉತ್ಸಾಹಿ ರಾಷ್ಟ್ರಾಭಿಮಾನಿಗಳೂ ಆದ ಶ್ರೀಯುತ ಒ. ವೀರಬಸಪ್ಪನವರು ಅಧ್ಯಕ್ಷರಾಗಬೇಕೆಂದು ಸೂಚಿಸಿದುದನ್ನು ಸರ್ವರೂ ಅನುಮೋದಿಸಲು ಶ್ರೀ. ವೀರಬಸವಪ್ಪನವರು ಅಧ್ಯಕ್ಷಸ್ಥಾನವನ್ನು ಸ್ವೀಕರಿಸಿ ಶ್ರೀಮಾನ್ ಹರ್ಡೇಕರ ಮಂಜಪ್ಪನವರ ಪರಿಚಯವನ್ನು ಮಾಡಿಕೊಟ್ಟು ಭಾಷಣವನ್ನು ಮಾಡಬೇಕೆಂದು ಕೇಳಿಕೊಂಡರು. ಶ್ರೀ. ಮಂಜಪ್ಪನವರು "ರಾಷ್ಟ್ರೀಯ ಜೀವನ" ಎಂಬ ವಿಷಯವಾಗಿ ಬಹು ಸ್ವಾರಸ್ಯವಾದ ಭಾಷಣವನ್ನು ಮಾಡಿದರು. ವರ್ಣಾಶ್ರಮಗಳು ಹೇಗೆ ಅರಾಷ್ಟ್ರೀಯ ಜೀವನಕ್ಕೆ ಕಾರಣವಾಗಿವೆ ಮತ್ತು ಎಲ್ಲಿಯವರೆಗೆ ನಾವು ಅಸ್ಪೃಶ್ಯರನ್ನು ಸ್ಪೃಶ್ಯ ಮಾಡುವದಿಲ್ಲವೋ ಅಲ್ಲಿಯ ವರೆಗೆ ನಮ್ಮ ದೇಶಕ್ಕೊದಗಿದ ಮತ್ತು ಒದಗಬಹುದಾದ ವಿಪತ್ತುಗಳು ಪರಿಹಾರವಾಗುವುದಿಲ್ಲವೆಂಬುದನ್ನೂ ಬಹು ಯುಕ್ತಾಯುಕ್ತವಾಗಿ ಸಮಂಜಸವಾದ ಅನೇಕ ಉದಾಹರಣೆಗಳ ಮೂಲಕ ರಾಷ್ಟ್ರೀಯ ಜೀವನದ ರಹಸ್ಯವನ್ನು ಬಹು ಸ್ಪಷ್ಟವಾಗಿ ತಿಳುಹಿಸಿದರು. ಇವರ ಭಾಷಣವಾದ ತರುವಾಯ ಅಧ್ಯಕ್ಷರು ಸಮಯೋಚಿತವಾದ ಉಪಸಂಹಾರ ಭಾಷಣವನ್ನು ಮಾಡಿದರು.

ನಂತರ ಶ್ರೀಮಾನ್ ಕೆ. ಎ. ಶ್ರೀನಿವಾಸ ಶೆಟ್ಟರು ಉಪನ್ಯಾಸಕರ ಮತ್ತು ಅಧ್ಯಕ್ಷರ ಆಭಾರ ಮನ್ನಿಸಿ ಶ್ರೀಮಾನ್ ಮಂಜಪ್ಪನವರು ಹಿಂದೂ ಸಂಘಟನೆಗಾಗಿ ಪಡುತ್ತಿರುವ ಶ್ರಮವನ್ನು ವಿವರಿಸಿ ಅವರ ಕಾರ್ಯದಲ್ಲಿ ಸಹಾಯಕರಾಗಲು ದಾವಣಗೆರೆಯ ಮಹಾಜನರು ಶ್ರೀ. ಮಂಜಪ್ಪನವರಿಗೆ ಕಾಣಿಕೆಯಾಗಿ ಅರ್ಪಿಸಲು ಶೇಖರಿಸಿರುವ ೨೫೫ ರೂಪಾಯಿಗಳನ್ನು ಸ್ವೀಕರಿಸಬೇಕೆಂದು ಕೇಳಿಕೊಂಡರು. ನಂತರ ಸಭಿಕರು ಧನ ಸಹಾಯ ಮಾಡಿದವರೇ ಮೊದಲಾದವರಿಗೆ ವಂದನೆಯನ್ನರ್ಪಿಸಿ ಸಭಾ ಕಾರ್ಯವು ಪೂರೈಸಿತು.

ಓರ್ವ ಹಿಂದೂ ಧರ್ಮಾಭಿಮಾನಿ.

---

## ಮುಂಬೈ ಅಸೆಂಬ್ಲಿಯಲ್ಲಿ

### ಶ್ರೀಮತಿ ಮುನಶಿಯವರ ಹೊಸ ಶಾಸನ.

೪೫ ವರ್ಷ ಮೀರಿದ ವರನು ೧೮ ವರುಷದೊಳಗಿನ ವಧೂವನ್ನು ವಿವಾಹವಾಗುವ ಪದ್ಧತಿಯನ್ನು ಖಂಡಿಸಿ ಶ್ರೀಮತಿ ಲೀಲಾವತಿ ಮುನಶಿಯವರು ಮುಂದಿನ ಮುಂಬೈ ಅಸೆಂಬ್ಲಿಯಲ್ಲಿ ಒಂದು ಶಾಸನವನ್ನು ಮಂಡಿಸುವವರಿದ್ದಾರೆ.

ಈ ಶಾಸನದಂತೆ ವರ, ವಧೂವಿನ ರಕ್ಷಕರು ಮತ್ತು ಪುರೋಹಿತರು ಆಪಾದನೆಗೊಳಗಾಗುವರು, ಅಂಥವರಿಗೆ ಒಂದು ವರುಷ ಕಠಿಣ ಶಿಕ್ಷೆ ಇಲ್ಲವೆ ಸಾವಿರ ರೂ. ಗಳ ದಂಡ ಇಲ್ಲವೇ ಎರಡನ್ನೂ ವಿಧಿಸಲಾಗುವುದು.

# ಮಹಾಸಭೆಯ ಪ್ರಮುಖರಿಗೆ

## ಕೆಲವು ಸಲಹೆಗಳು.

(ಲೇ- ವೀರೇಶ್ವರ ಬೆಂಗಳೂರು ನಗರ.)

ಅಖಿಲ ಭಾರತೀಯ ವೀರಶೈವ ಮಹಾಸಭೆಯ ಚಿರಸ್ಥಾಯಿ ಫಂಡ ಸಮಿತಿಯ ಕಾರ್ಯನಿರ್ವಾಹಕ ಸದಸ್ಯರು ಕಳೆದ ತಾ. ೨೩ ನೆಯ ದಿನ ಬೆಂಗಳೂರಿನಲ್ಲಿ ಸೇರಿದ್ದು ಕೆಲವು ವಿಷಯಗಳನ್ನು ಚರ್ಚೆ ಮಾಡುತ್ತಿದ್ದು ಅಷ್ಟರಲ್ಲಿಯೇ ಆ ಸಮಿತಿಯ ಅಧ್ಯಕ್ಷರೂ ಕನ್ನಡ ನಾಡಿನ ಪಿತಾಮಹರೂ ಆಗಿದ್ದ ಡಾ. ಸರ್. ಕೆ. ಪಿ. ಪುಟ್ಟಣ್ಣಶೆಟ್ಟರು ಸಿ. ಐ. ಇ. ಇವರು ಲಿಂಗೈಕ್ಯರಾದ ವಾರ್ತೆಯನ್ನು ಕೇಳಿ ಕಾರ್ಯ ಕಲಾಪಗಳನ್ನು ಅಷ್ಟಕ್ಕೇ ನಿಲ್ಲಿಸಿಬಿಟ್ಟರೆಂದು ತಿಳಿದುಬಂದಿತು. ಸಭೆಯು ಹಾಗೆ ನಿಲ್ಲದೆ ಸಂಪೂರ್ಣವಾಗಿ ನೆರವೇರಿದ್ದರೆ ಅದರಲ್ಲಿ ಯಾವ ಯಾವ ನಿರ್ಣಯಗಳಾಗುತ್ತಿದ್ದವೋ ಹೇಳಲಸಾಧ್ಯ. ಅಂತೂ ನಮಗೆ ತಿಳಿದುಬಂದ ವರದಿಯಂತೆ ಅದಕ್ಕಾಗಿ ಸೇರಿದ್ದ ಸದಸ್ಯರುಗಳಲ್ಲಿ ಅಷ್ಟೇನೂ ಚುರುಕು ಭಾವನೆಯು ಮೂಡಿದ್ದಂತೆ ಕಾಣಲಿಲ್ಲ.

ಹುಬ್ಬಳ್ಳಿಯ ಲಿಂಗಾಯತ ಮುಂದಾಳುಗಳು "ಅಖಿಲ ಭಾರತೀಯ ವೀರಶೈವ ಮಹಾಸಭೆ"ಯನ್ನು ನೆರೆಯಿಸುವ ಮಹತ್ಕಾರ್ಯಕ್ಕೆ ಮುಂದೆ ಬಂದಿದ್ದಾರೆ. ಈಗಿನ ಮಹಾಸಭೆಯ ಕಾರ್ಯನಿರ್ವಾಹಕ ಸಮಿತಿಯ ಅಧ್ಯಕ್ಷ ಮಹಾಶಯರೂ ಸಹ ಈಚೆಗೆ ಕೆಲವು ಪ್ರಕಟನೆಗಳನ್ನು ಹೊರಡಿಸಿ ಮಹಾ ಸಭೆಯ ಪುನರ್ಘಟನಾ ಕಾರ್ಯದಲ್ಲಿ ತೊಡಗಿರುವಂತೆ ಕಾಣುತ್ತದೆ. ಆದುದರಿಂದ ಈ ಸಮಯದಲ್ಲಿ ನಮಗೆ ತೋರಿದ ಕೆಲವು ಸಲಹೆಗಳನ್ನು ಸೂಚಿಸುವದು ಯುಕ್ತವೆಂದರಿತು ಇಲ್ಲಿ ಸೂಚಿಸಲಾಗಿದೆ—

೧ ಈಗ ದೇಶದಲ್ಲಿ ಪ್ರಚಲಿತವಿರುವ ವೀರಶೈವ ಸಮಾಜಕ್ಕೆ ಸಂಬಂಧಿಸಿದ ಸಮಸ್ತ ಸಂಘ ಸಂಸ್ಥೆಗಳನ್ನೂ ಮಹಾಸಭೆಯ ಕಾರ್ಯಕ್ಕಾಗಿ ಉಪಯೋಗಿಸಿಕೊಳ್ಳಲು ಅವುಗಳ ಒಂದು ವ್ಯವಸ್ಥಿತ ಪಟ್ಟಿಯನ್ನು ತಯಾರಿಸುವದು. (ಈಗಿನ ಅಧ್ಯಕ್ಷರು ಈ ಕಾರ್ಯಕ್ಕೆ ಈಗ ಪ್ರಾರಂಭಿಸಿದ್ದಾರೆ.)

೨ ಈಗ ದೇಶದಲ್ಲಿ ಪ್ರಚಲಿತವಿರುವ ವೀರಶೈವ ಸ್ತ್ರೀಯರ ಸಂಸ್ಥೆಗಳನ್ನೂ ಹಾಗೆಯೇ ಒಂದು ವ್ಯವಸ್ಥಿತ ಪಟ್ಟಿಯ ಮೂಲಕ ಶೇಖರಿಸಿ ಮಹಾಸಭೆಯ ಕಾರ್ಯಕ್ಕಾಗಿ ವಿನಿಯೋಗಿಸಿಕೊಳ್ಳುವದು.

೩ ಈಗ ದೇಶದಲ್ಲಿ ರಾಜಕೀಯ ಕೆಲಸಗಾರರಾಗಿರುವ ವೀರಶೈವರನ್ನೆಲ್ಲ ಒಂದುಗೂಡಿಸಿ ಅವರನ್ನು ತಮ್ಮ ಕಾರ್ಯಗಳ ಜೊತೆಗೆ ಸಾಧ್ಯವಾದಷ್ಟು ಸ್ವ ಸಮಾಜದ ರಾಜಹಿತಕ್ಕಾಗಿಯೂ ಶ್ರಮಿಸುವಂತೆ ಮಾಡುವದಕ್ಕಾಗಿ ಒಂದು "ಅಖಿಲಭಾರತ ವೀರಶೈವ ಮಹಾಸಭೆಯ ರಾಜಕೀಯ ಶಾಖೆ"ಯನ್ನು ನಿರ್ಣಯಿಸಬೇಕು. ಇದರಲ್ಲಿ ಒಳ್ಳೇ ಕರ್ತೃತ್ವಶಾಲಿಗಳೂ ಕೆಲಸಗಾರರೂ ಆದ ಉತ್ಸಾಹಿಗಳಿರಬೇಕು. ರಾಜಕೀಯ ಕೆಲಸಗಾರರಾದ ವೀರಶೈವ ಸ್ತ್ರೀಯರೂ ಇದರಲ್ಲಿರಬೇಕು.

೪ ವೀರಶೈವ ಸ್ತ್ರೀಯರ ಸಂಸ್ಥೆಗಳ ಪ್ರಾತಿನಿಧ್ಯವುಳ್ಳ ಒಂದು "ವೀರಶೈವ ಸ್ತ್ರೀಯರ ಧಾರ್ಮಿಕ ಶಾಖೆ"ಯನ್ನು ನಿರ್ಮಿಸಿ ಮಹಾಸಭೆಯ ಮೇಲ್ವಿಚಾರಣೆಯಲ್ಲಿಟ್ಟುಕೊಳ್ಳಬೇಕು.

೫ ಮಹಾಸಭೆಯ ಕಾರ್ಯಕಾರೀ ಮಂಡಲಿಯಲ್ಲಿ ಕೇವಲ ದಾಕ್ಷಿಣ್ಯಕ್ಕಾಗಿ ದೊಡ್ಡ ದೊಡ್ಡ ಹುದ್ದೇದಾರರುಗಳನ್ನೂ ಅಭಿಮಾನಶೂನ್ಯರಾದ ಶ್ರೀಮಂತರುಗಳನ್ನೂ ಸದಸ್ಯರನ್ನಾಗಿ ಸೇರಿಸಿಕೊಳ್ಳಲಾರದೆ ಕಾರ್ಯದಕ್ಷರೂ ಉತ್ಸಾಹಿಗಳೂ ಸೇವಾಕಾಂಕ್ಷಿಗಳೂ ಕೀರ್ತಿ ಪ್ರತಿಷ್ಠೆಗಳ ಮೇಲೆಯೇ ಆಶೆಯನ್ನಿಟ್ಟುಕೊಳ್ಳದೆ ನಿಸ್ವಾರ್ಥಿಗಳಾಗಿ ದುಡಿಯುವವರೂ ಆದ ಜನರನ್ನೇ ಸೇರಿಸಿಕೊಳ್ಳಬೇಕು. ಒಳ್ಳೇ ವರ್ಚಸ್ವಿಗಳೂ ಉದಾರಿಗಳೂ ಸೇವಾಭಾವಕರೂ ಆದ ಕೆಲ ಮಠಾಧಿಪತಿಗಳೂ ಕಾರ್ಯಕಾರೀ ಮಂಡಳಿಯಲ್ಲಿರಬೇಕು. ಮತ್ತು ಮಹಾಸಭೆಯ ಅಧ್ಯಕ್ಷರಾಗುವವರು ಗೃಹ ಕೃತ್ಯಗಳ ತಾಪತ್ರಯಗಳಿಂದ ದೂರರಾಗಿ ಅಧ್ಯಕ್ಷರಾದಾಗಿನಿಂದ ಅದರ ಅವಧಿಯು ಮುಗಿಯುವ ವರೆಗೂ ಮಹಾಸಭೆಯ ಕಾರ್ಯಗಳಿಗೆ ಅವಿಶ್ರಾಂತರಾಗಿ ಕೆಲಸಮಾಡುವವರಾಗಿರಬೇಕು. ಮಹಾ ಸಭೆಯ ಅಧ್ಯಕ್ಷರಾದ ಬಳಿಕ ಅವಧಿಯು ಮುಗಿಯುವ ವರೆಗೂ ಅವರು ಬೇರೆ ಯಾವ ದೊಡ್ಡ ಸಂಸ್ಥೆಗೂ ಖಾಯಂ ಅಧ್ಯಕ್ಷರಾಗದಂತೆ ನಿರ್ಬಂಧವಿರಬೇಕು.

೬ ನಮ್ಮ ನಾಡಿನಲ್ಲಿರುವ ಮಠಗಳನ್ನೆಲ್ಲಾ ಒಂದು ಪಟ್ಟಿ ಮಾಡಿ ಸಂಗ್ರಹಿಸಿ ಅವುಗಳನ್ನು ಮಹಾಸಭೆಯ ಕಾರ್ಯಕ್ಕಾಗಿ ಉಪಯೋಗಿಸಿಕೊಳ್ಳುವದು. ಕಾರ್ಯಕಾರೀ ಮಂಡಲಿಯಲ್ಲಿರುವ ಈಗ ದೇಶದಲ್ಲಿ ಪ್ರಮುಖರೆಂದೆನಿಸಿಕೊಂಡಿರುವ ಉದಾರಿಗಳಾದ ಶ್ರೀಮಂತ ಮಠಾಧಿಪತಿಗಳ ನೇತೃತ್ವದಲ್ಲಿ "ಧರ್ಮಪ್ರಚಾರ ಶಾಖೆ"ಯೊಂದನ್ನು ನಿರ್ಮಿಸಬೇಕು. ಈ ವರ್ಚಸ್ವೀ ಮಠಗಳ ವಿದ್ಯಾಸಂಸ್ಥೆಗಳಲ್ಲಿ ತೇರ್ಗಡೆಯಾಗಿ ಮುಂದೆ ಮಠಾಧಿಕಾರಿಗಳಾಗಲು ಸಿದ್ಧರಾಗುವ ಮೂರ್ತಿಗಳು ಮಠಾಧಿಕಾರಿಗಳಾಗುವ ಮೊದಲು ಕನಿಷ್ಟ ಪಕ್ಷ ಎರಡು ವರ್ಷ ಕಾಲವಾದರೂ ಈ ಮಹಾಸಭೆಯ ಧರ್ಮ ಪ್ರಚಾರ ಶಾಖೆಯಲ್ಲಿ ಕೆಲಸ ಮಾಡಬೇಕು. ಅಂದರೆ ಊರೂರುಗಳನ್ನು ತಿರುಗಿ ಧರ್ಮತತ್ವ ಪ್ರಸಾರ, ಸಮಾಜ ಸುಧಾರಣೆ, ನೈತಿಕ ಪರಿಶುದ್ಧತೆ ಮುಖ್ಯವಾಗಿ ಹಳ್ಳಿಯ ಜನತೆಯಲ್ಲಿ ವಿದ್ಯಾಭ್ಯಾಸಾದಿಗಳನ್ನೂ ಪ್ರಚಾರ ಮಾಡುವಂತೆ ಏರ್ಪಡಿಸತಕ್ಕದ್ದು.

ಈ ಪ್ರಚಾರ ಕಾರ್ಯಕ್ಕೆ ಧನಸಹಾಯವನ್ನೊದಗಿಸುವದಕ್ಕಾಗಿ ಧನ ಸಂಪತ್ತಿಯುಳ್ಳ ಕೆಲ ಮಠಾಧಿಕಾರಿಗಳ ಒಂದು ಸಮಿತಿಯನ್ನು ರಚಿಸಿ ಆ ಮಠಾಧಿಪತಿಗಳೇ ಈ ಪ್ರಚಾರ ಕಾರ್ಯಕ್ಕೆ ಧನಸಹಾಯ ಮಾಡುವಂತೆಯಾಗಲೀ ಅಥವಾ ಆ ಸಮಿತಿಯವರು ನೂತನವಾಗಿ ವರ್ಷಕ್ಕಿಷ್ಟು ಅಥವಾ ಮಾಸಕ್ಕಿಷ್ಟು ಎಂಬುದಾಗಿ ಭಿಕ್ಷಾಟನೆಯ ಮೂಲಕವಾಗಿಯಾಗಲೀ ಸಂಗ್ರಹಿಸಿ ಕೊಡುವಂತೆ ಏರ್ಪಡಿಸಬಹುದು.

ಈ ಧರ್ಮಪ್ರಚಾರ ಶಾಖೆಯು ಮಹಾಸಭೆಯ ಮುಖ್ಯಾಂಗವಾಗಿದ್ದು ಹಿಂದುಸ್ಥಾನದ ಸಮಸ್ತ ಭಾಗಗಳಲ್ಲಿಯೂ ವ್ಯಾಪಿಸಿಕೊಂಡು ಕೆಲಸ ಮಾಡುವಂತಹ ಒಂದು ಮಿಷನರಿಗಳ ಸಂಸ್ಥೆಯಂತಿರಬೇಕು.

ಈ ಬಗೆಯ ಧರ್ಮಪ್ರಚಾರ ಶಾಖೆಯ ಪ್ರಚಾರ ಕಾರ್ಯದಿಂದ ಈಗ ಮುಖ್ಯವಾಗಿ ಹಳ್ಳಿಗಳಲ್ಲಿ ವಾಸಮಾಡುವ ನಮ್ಮ ಮತ ಬಾಂಧವರಿಗೆ ವಿದ್ಯಾಭ್ಯಾಸದ ಅವಶ್ಯಕತೆ ಆಚಾರ ವಿಚಾರಗಳ ಅವಶ್ಯಕತೆ, ನೈತಿಕ ಜೀವನದ ಪರಿಶುದ್ಧತೆ, ನಾಗರಿಕತೆಯ ಲಕ್ಷಣ ಮುಂತಾದವುಗಳ ಪ್ರಚಾರಕ್ಕೆ ಅತ್ಯಾಹಿತ ಅನುಕೂಲವಾಗುವದಲ್ಲದೆ ಮುಂದೆ ಮಠಾಧಿಕಾರಿಗಳಾಗುವ ವ್ಯಕ್ತಿಗಳಿಗೂ ಒಳ್ಳೆಯ ಶಿಕ್ಷಣವು ದೊರೆತಂತಾಗುತ್ತದೆ. ಮತ್ತು ಅವರ ಕರ್ತವ್ಯ ಜ್ಞಾನವೂ ಉಂಟಾಗುತ್ತದೆ.

ಈ ಕಾರ್ಯಕ್ಕೆ ಈಗ ಸಧ್ಯ ಅನುಕೂಲಸ್ಥ ನಾಲ್ಕಾರು ಮಠಗಳಲ್ಲಿಯೇ ಕನಿಷ್ಟಪಕ್ಷ ಸುಮಾರು ಒಂದು ನೂರು ವ್ಯಕ್ತಿಗಳ ಮೇಲ್ಪಟ್ಟು ಸಮರ್ಥರಾದ ಪ್ರಚಾರಕರು ದೊರೆಯುತ್ತಾರೆ. ಆದರೆ ಅವರಲ್ಲಿ ಆರಿಸಿದವರನ್ನೇ ಪ್ರಚಾರ ಕಾರ್ಯಕ್ಕೆ ನಿಯಮಿಸಬೇಕು. ಈ ಬಗೆಯ ಸತ್ಕಾರ್ಯದಲ್ಲಿ ಸಹಕರಿಸಲೊಲ್ಲದ ವ್ಯಕ್ತಿಗಳನ್ನು ಮಠಾಧಿಕಾರಸ್ಥಾನದಿಂದ ಕೆಳಗಿಳಿಸಿ ಯೋಗ್ಯರಾದ ಧರ್ಮರಕ್ಷಕ ವ್ಯಕ್ತಿಗಳನ್ನು ನಿಯಮಿಸುವಂತಹ ಬುದ್ಧಿಯು ಜನತೆಯಲ್ಲಿ ಹುಟ್ಟುವಂತೆಯೂ ಪ್ರಚಾರ ಕಾರ್ಯಕ್ರಮಗಳನ್ನಿಡತಕ್ಕದ್ದು.

ಈ ಸಧ್ಯ ನಡೆಯಲಿರುವ ಮಹಾಸಭೆಯ ಕಾರ್ಯಕ್ರಮಗಳನ್ನು ನಡೆಯುವ ಮೊದಲೂ ನಡೆದ ಬಳಿಕವೂ ನಿಜಾಂ ರಾಜ್ಯದಲ್ಲಿ ಚೆನ್ನಾಗಿ ಪ್ರಚಾರಗೊಳಿಸುವ ವ್ಯವಸ್ಥೆಯಾಗಬೇಕು. ಮಹಾಸಭೆಯ ಅಧಿವೇಶನವೂ ತತ್ಸಂಬಂಧವಾದ ಚುನಾವಣೆಗಳೂ ಅಧ್ಯಕ್ಷರನ್ನು ಗೌರವಿಸುವಿಕೆಯೇ ಮೊದಲಾದ ಕಾರ್ಯಕ್ರಮಗಳೂ ಈಗಿನ ಹಿಂದುಸ್ಥಾನದ ರಾಷ್ಟ್ರೀಯ ಮಹಾಸಭೆಯ ಅಧಿವೇಶನವು ನಡೆಯುವ ಪದ್ಧತಿಯನ್ನೇ ಸ್ವಲ್ಪ ಹೆಚ್ಚುಕಡಿಮೆ ಹೋಲುವಂತಿರಬೇಕು.

ದಕ್ಷಿಣ ಹಿಂದುಸ್ಥಾನದ ಬೇರೆ ಬೇರೆ ಭಾಗಗಳಲ್ಲಿರತಕ್ಕ ಅಂದರೆ ಮುಖ್ಯವಾಗಿ ಕೊಚ್ಚಿ, ತಿರುವಾಂಕೂರು ಮುಂತಾದ ಮುಖ್ಯ ಮುಖ್ಯ ಸ್ಥಳಗಳ ಮತ್ತು ಪಾಟಿಯಾಲ, ಬರೋಡ, ಜಯಪುರ ಮುಂತಾದ ಸಂಸ್ಥಾನಗಳ ಅಲ್ಲದೆ ಗೋವಾ, ಪಾಂಡಿಚೇರಿ ಮುಂತಾದ ಇತರ ಆಧಿಪತ್ಯಗಳಲ್ಲಿರುವ ನಮ್ಮ ಬಾಂಧವರುಗಳು ಅಲ್ಪಸಂಖ್ಯಾಕರಾಗಿದ್ದರೂ ಒಳ್ಳೇ ಅಭಿಮಾನಶಾಲಿಗಳಾಗಿ ಗಣ್ಯತೆಯಿಂದ ಬಾಳುವವರೂ ಬಹಳ ಜನರಿದ್ದಾರೆ. ಅವರಲ್ಲಿ ಸಮಾಜಾಭಿಮಾನವು ತುಂಬಿತುಳುಕುತ್ತದೆ. ಇವರೆಲ್ಲರನ್ನೂ ಈ ಮಹಾಸಭೆಗೆ ತಪ್ಪಬಟ್ಟು ಆಹ್ವಾನಿಸಿರಬೇಕು. ಇವೆಲ್ಲವೂ ಸ್ಥೂಲರೂಪವಾದ ಕೇವಲ ಸಲಹೆಗಳು ಮಾತ್ರವಾಗಿವೆ. ಇವುಗಳಲ್ಲಿ ಸೂಕ್ತವಾದವುಗಳನ್ನು ಮಹಾಸಭೆಯ ಪ್ರಮುಖರುಗಳು ಗಮನಿಸುವರೆಂದು ನಂಬೋಣವೆ?

---

—ಬೆಳಗಾವಿಯಲ್ಲಿ ಬಿ. ಟಿ. ಕಾಲೇಜನ್ನು ಸ್ಥಾಪಿಸುವದಕ್ಕಾಗಿ ನಾ. ಲಕ್ಷ್ಮಿಯವರ ಕಡೆಗೆ ಒಂದು ಶಿಷ್ಟಮಂಡಳವು ಹೋಗಿತ್ತು, ಶಿಷ್ಟಮಂಡಳದ ಹೇಳಿಕೆಯನ್ನು ಶಾಂತರೀತಿಯಿಂದ ಕೇಳಿಕೊಂಡು, ಸಹಾನುಭೂತಿಪರ ವಿಚಾರ ಮಾಡಲಾಗುವುದೆಂದು ಆಶ್ವಾಸನ ಕೊಟ್ಟರೆಂದು ತಿಳಿಯುತ್ತದೆ.

—ಲಖನೌ ನಗರದಲ್ಲಿ ಮೋತೀಲಾಲ ಸ್ಮಾರಕ ಸಂಸ್ಥೆಯವರ ಪರವಾಗಿ ನವ್ಹಂಬರ ೧೯ ನೆಯ ತಾರೀಖಿನಿಂದ ಖಾದಿ ಮತ್ತು ಔದ್ಯೋಗಿಕ ಪ್ರದರ್ಶನವು ಜರುಗಲಿದೆ. ಅದರ ಉದ್ಘಾಟನಾ ಸಮಾರಂಭವನ್ನು ಕಾಂಗ್ರೆಸ್ ಅಧ್ಯಕ್ಷರಾದ ಬಾಬು ಸುಭಾಷಚಂದ್ರ ಬೋಸರವರು ನೆರವೇರಿಸುವವರಿದ್ದಾರೆ. ಲಖನೌಕ್ಕೆ ಶ್ರೀ. ಸುಭಾಷರು ಇದೇ ಮೊದಲನೆಯ ಸಲ ಹೋಗುವದಿದ್ದುದರಿಂದ ಅವರನ್ನು ಯೋಗ್ಯ ರೀತಿಯಿಂದ ಸ್ವಾಗತಿಸಲು ತಕ್ಕ ಏರ್ಪಾಟುಗಳು ನಡೆದಿವೆ.

# ಬಂಗಾಲ ಮಂತ್ರಿಮಂಡಲದ ಸುದೈವ.

ತಾ. ೧೦-೮-೪೬ ನೆಯ ದಿವಸ ಬಂಗಾಲ ಅಸೆಂಬ್ಲಿಯಲ್ಲಿ ಮಂತ್ರಿಗಳ ಮೇಲೆ ಅವಿಶ್ವಾಸ ಗೊತ್ತುವಳಿಯನ್ನು ಚರ್ಚೆಗೆ ತೆಗೆದುಕೊಳ್ಳಲಾಯಿತು. ವಿರೋಧಿ ಪಕ್ಷದ ಕೆಲವು ಸಭಾಸದರು ಮೊದಲನೆಯ ದಿವಸ ರಾತ್ರಿಯೇ ಅಸೆಂಬ್ಲಿ ಭವನಕ್ಕೆ ತಮ್ಮ ಹಾಸಿಗೆ ಮೊದಲಾದವುಗಳನ್ನು ತೆಗೆದುಕೊಂಡು ಹೋಗಿ ಅಲ್ಲಿಯೇ ಮಲಗಿಕೊಂಡಿದ್ದರು. ಏಕೆಂದರೆ ಮರು ದಿನ ತಮ್ಮ ಮೇಲೆ ಹಲ್ಲೆಮಾಡಬಹುದೆಂದೂ ಅಸೆಂಬ್ಲಿ ಅಧಿವೇಶನಕ್ಕೆ ಬರಲು ಯಾರಾದರೂ ಪ್ರತಿಬಂಧಮಾಡಬಹುದೆಂದೂ ತಿಳಿದು ಮೊದಲೇ ಅಸೆಂಬ್ಲಿ ಭವನದಲ್ಲಿಯೇ ಮಲಗಿಬಿಟ್ಟಿದ್ದರು.

ಶ್ರೀ. ಅಘ್ತಾಬಅಲ್ಲಿಯವರು ಕೂಲಿಕಾರ ಮಂತ್ರಿಗಳಾದ ನಾ. ಸುರವರ್ದಿಯವರ ಮೇಲೆ ಒಂದು ಅವಿಶ್ವಾಸದ ಗೊತ್ತುವಳಿಯ ಮಂಡಿಸಿದರು. ಒಂದೇ ಸವನೆ ೩ ತಾಸುಗಳ ವರೆಗೆ ಚರ್ಚೆ ನಡೆದು ಕೊನೆಗೆ ನಾ. ಸುರವರ್ದಿಯವರ ಮೇಲಿನ ಅವಿಶ್ವಾಸ ಗೊತ್ತುವಳಿಯು ನಿರಾಕರಿಸಲ್ಪಟ್ಟಿತು. ನಾ. ಎನ್. ಬಿ. ಮಲಿಕರವರ ಮೇಲೆ ತಂದ ಅವಿಶ್ವಾಸದ ಗೊತ್ತುವಳಿಯೂ ಬಿದ್ದುಹೋಯಿತು. ಅಂತು ಹಕ್ಕ ಮಂತ್ರಿಮಂಡಲವು ವಿಜಯ ಹೊಂದಿ ತನ್ನ ಸ್ಥಾನ ಭದ್ರಪಡಿಸಿಕೊಂಡಿದುದು ಸುದೈವವೆಂದೇ ಹೇಳಬೇಕು.

# ಹೈದರಾಬಾದಿನಲ್ಲಿ ರಾಜಕೀಯ ಸುಧಾರಣೆ.

ನಿಜಾಮ ಸಾಹೇಬರ ಜಯಂತಿಯು ಇದೇ ತಿಂಗಳ ೨೭ ನೇ ತಾರೀಖಿನ ದಿವಸ ಇದೆ. ಅದೇ ದಿವಸವೇ ಹೈದರಾಬಾದ ಸಂಸ್ಥಾನದಲ್ಲಿಯ ರಾಜಕೀಯ ಸುಧಾರಣೆಯ ಬಗ್ಗೆ ಮಹತ್ವದ ಘೋಷಣೆಯನ್ನು ಮಾಡಬಹುದೆಂದೂ ಊಹಿಸಲಾಗಿದೆ.

ಹೈದರಾಬಾದ ಸಂಸ್ಥಾನಿನಲ್ಲಿ ರಾಜಕೀಯ ಸುಧಾರಣೆ ಮಾಡುವದಕ್ಕಾಗಿ ವಿಚಾರಿಸಲು ನಿಯಮಿಸಿದ ಅಯ್ಯಂಗಾರ ಕಮಿಟಿಯು ತನ್ನ ವರದಿಯನ್ನು ಉರ್ದು ಭಾಷೆಯಲ್ಲಿ ತಾ.೧೧-೮ ನೇ ದಿವಸ ಒಪ್ಪಿಸಿದ್ದಾರೆಂದೂ ತಿಳಿದು ಬರುತ್ತದೆ. ಸಂಸ್ಥಾನದ ಶಾಸನ ಸಭೆಯನ್ನು ಹೆಚ್ಚಿಸಬೇಕೆಂದೂ ಪ್ರತಿನಿಧಿಗಳನ್ನು ಪ್ರತ್ಯಕ್ಷವಾಗಿ ಆರಿಸದೆ ಬೇರೆ ಬೇರೆ ಸಂಸ್ಥೆಗಳ ಪ್ರತಿನಿಧಿಗಳನ್ನೇ ನಿಯಮಿಸಿಕೊಳ್ಳಬೇಕೆಂದೂ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳನ್ನು ಸ್ಥಾಪಿಸಬೇಕೆಂದೂ ಕಮಿಟಿಯವರು ಶಿಫಾರಸಮಾಡಿದ್ದಾರೆಂದು ತಿಳಿದು ಬರುತ್ತದೆ.

# ಬ್ರಿಟಿಶ್ ಹಡಗದ ಜಲಸಮಾಧಿ.

ಬ್ರಿಟಿಶರ "ಲೇಕ್ ಲುಗಾನೊ" ಎಂಬ ಹಡಗವು ಜನರಲ್ ಫ್ರಾಂಕೋ ಪಕ್ಷದವರ ದಾಳಿಯಿಂದ ಕಳೆದ ವಾರ ಜಲಸಮಾಧಿ ಹೊಂದಿತು. ಈ ದಾಳಿಗಳು ಬೇಕೆಂದು ಮಾಡಲ್ಪಟ್ಟಿರುವದರಿಂದ ಸರಕಾರವು ತಮಗಾದ ಹಾನಿಯನ್ನು ತುಂಬಿಸಿಕೊಳ್ಳಲು ಪಾತ್ರವಿದೆಯೆಂದು ಅಭಿಪ್ರಾಯಪಟ್ಟಿದ್ದಾರೆ. ಬ್ರಿಟಿಶ್ ಹಡಗಗಳ ಮೇಲಾಗುತ್ತಿರುವ ದಾಳಿಗಳ ಸಂಬಂಧವಾಗಿ ವಿಚಾರಿಸಲು ಸ್ಪೇನಕ್ಕೆ ಹೋಗಲಿರುವ ಕಮಿಟಿಯವರೇ ಈ ವಿಷಯವನ್ನು ವಿಚಾರಿಸುವವರಿದ್ದಾರೆ.

# ಮೋಟರ್ ಕಾರ್ಯಾಲಯ.

ಮುಂಬೈಯಲ್ಲಿ ಸೇರಲಿರುವ ಔದ್ಯೋಗಿಕ ಮಂತ್ರಿಗಳ ಸಭೆಯಲ್ಲಿ ಇಡಲು ಸರ್. ವಿಶ್ವೇಶ್ವರಯ್ಯನವರು ಹಿಂದುಸ್ಥಾನದಲ್ಲಿ ಮೋಟಾರ ಸಿದ್ಧಗೊಳಿಸುವ ಸಂಬಂಧವಾಗಿ ಒಂದು ಯೋಜನೆಯನ್ನು ತಯಾರಿಸಿದ್ದಾರೆ. ಸರ್ ವಿಶ್ವೇಶ್ವರಯ್ಯನವರ ಯೋಜನೆಯಂತೆ ಮೋಟಾರ ಸಿದ್ಧಗೊಳಿಸುವ ಕಂಪನಿಯು ಮೂರು ಅವಸ್ಥೆಗಳನ್ನು ದಾಟಿದನಂತರ ಪೂರ್ಣ ರೂಪಹೊಂದುವುದು. ಮೊದಲು ಮೋಟಾರ ಸಾಮಾನುಗಳನ್ನು ತರಿಸಿ ಅವುಗಳನ್ನು ಇಲ್ಲಿ ಜೋಡಿಸುವದು ಮೊದಲನೆಯ ವರ್ಷ ಮಾಡತಕ್ಕ ಕೆಲಸ. ಎರಡನೆಯ ವರ್ಷದಲ್ಲಿ ಮೋಟರಿಗೆ ಬೇಕಾಗುವ ಬೇರೆ ಬೇರೆ ಭಾಗಗಳನ್ನು ಇಲ್ಲಿಯೇ ಸಿದ್ಧಗೊಳಿಸುವುದು. ಮೂರನೆಯ ವರ್ಷದಲ್ಲಿ ಮೋಟರ್ ಯಂತ್ರಗಳನ್ನು ಸಹ ಇಲ್ಲಿಯೇ ತಯಾರಿಸುವುದು. ಯಂತ್ರವು ಮೋಟರಿನ ಆತ್ಮವಿದ್ದಂತೆ. ಅದನ್ನು ಇಲ್ಲಿ ತಯಾರಿಸದಿದ್ದರೆ ಕಂಪನಿ ಮಾಡಿ ಪ್ರಯೋಜನವಿಲ್ಲವೆಂಬುದೇ ಸರ್. ವಿಶ್ವೇಶ್ವರಯ್ಯನವರ ಮತ.

ಮೇಲಿನ ಯೋಜನೆಗಾಗಿ ಸಾಧಾರಣ ೧೫೦ ಲಕ್ಷ ರೂ. ಬೇಕಾಗಬಹುದೆಂದು ಊಹಿಸಲಾಗಿದೆ. ಇದರಲ್ಲಿ ೯೦ ಲಕ್ಷ ರೂ. ಕಟ್ಟಡ, ಯಂತ್ರ ಮೊದಲಾದವುಗಳಿಗೂ ೬೦ ಲಕ್ಷ ರೂ. ಕಂಪನಿ ನಡೆಯಿಸಲೂ ಬೇಕಾಗುವುದು. ಇಷ್ಟು ಬಂಡವಾಳವನ್ನು ಹಾಕಿದ ಕಂಪನಿಯಲ್ಲಿ ೩ ವರ್ಷಗಳನಂತರ ಪ್ರತಿವರ್ಷ ೧೦೦೦೦ ಕಾರ್‌ಗಳನ್ನೂ ೪೦೦೦ ಟ್ರಾಕ್ಸಗಳನ್ನೂ ತಯಾರಿಸಬಹುದು.

ಈಗಿನ ಬೆಲೆಯಂತೆಯೇ ಹಿಡಿದರೂ ಇಲ್ಲಿ ತಯಾರಾಗುವ ಒಂದು ಬಂಡಿಯಿಂದ ೩೫೦ ರಿಂದ ೫೦೦ ರೂ. ಗಳ ವರೆಗೆ ಲಾಭ ದೊರೆಯಲು ಅಡ್ಡಿಯಿಲ್ಲ. ವರ್ಷದಲ್ಲಿ ಕನಿಷ್ಟ ೧೨೦೦೦ ಬಂಡಿಗಳನ್ನು ತಯಾರಿಸಿದರೆ ೩೦ ರಿಂದ ೬೦ ಲಕ್ಷದ ವರೆಗೆ ಮೂಲ ಧನದ ಮೇಲೆ ಆದಾಯ ದೊರೆಯುವಂತಾಗುವುದು. ಎಂದರೆ ನೂರಕ್ಕೆ ೨೦ ರಿಂದ ೪೦ ರ ವರೆಗೆ ಆದಾಯ ದೊರೆತಂತಾಗುವುದು.

ಪ್ರತಿವರ್ಷ ಹಿಂದುಸ್ಥಾನವು ೧೯೦೦೦ ಮೋಟಾರಗಳನ್ನು ತರಿಸುತ್ತದೆ. ಹಿಂದುಸ್ಥಾನ ಸರಕಾರದವರೂ, ಸಂಸ್ಥಾನಿಕರೂ ತಮಗೆ ಬೇಕಾದ ಬಂಡಿಗಳನ್ನು ಈ ಹೊಸ ಕಂಪನಿಯಿಂದಲೇ ತೆಗೆದುಕೊಂಡರೆ ಬೇರೆ ಜನರು ಕೂಡಾ ತಮಗೆ ಬೇಕಾದ ಮೋಟರ್ ಇಲ್ಲಿಯೇ ಕೊಂಡುಕೊಂಡರೆ ಪ್ರತಿವರ್ಷ ೧೨ ಸಾವಿರ ಕಾರುಗಳನ್ನು ಧೈರ್ಯದಿಂದ ಸಿದ್ಧಗೊಳಿಸಬಹುದು. ಇಲ್ಲಿಯೇ ತಯಾರಾದ ಕಾರು ಹೊರಗಿನಿಂದ ಬರುವವುಗಳಿಗಿಂತ ಕಡಿಮೆ ಬೆಲೆಗೆ ಮಾರಲಾಗುವುದು. ಹೊರಗಿನಿಂದ ಬರುವ ಒಂದು ಕಾರಿಗೆ ೧೪೦೦ ರೂ. ಬೀಳುತ್ತಿದ್ದರೆ ಅದೇ ಕಾರನ್ನೇ ೧೩೫೦ ರೂ. ಗಳಿಗೆ ಇಲ್ಲಿ ವಿಕ್ರಯ ಮಾಡಲು ಶಕ್ಯವಿದೆ. ಅಮೇರಿಕೆಯ ಪ್ರತಿ ೫ ಜನರಿಗೊಂದರಂತೆ, ಇಂಗ್ಲೆಂಡಿನಲ್ಲಿ ಪ್ರತಿ ೩೫ ಜನರಿಗೊಂದರಂತೆ ಮೋಟಾರ ಇವೆ. ಆದರೆ ನಮ್ಮ ಹಿಂದುಸ್ಥಾನದಲ್ಲಿಯಾದರೋ ಪ್ರತಿ ೧೪೩೭ ಜನರಿಗೆ ಒಂದು ಮೋಟಾರ ಇದೆ. ಆದುದರಿಂದ ಮೋಟಾರ ವ್ಯಾಪಾರಕ್ಕೆ ಇಲ್ಲಿ ವಿಶೇಷವಾದ ಕ್ಷೇತ್ರವೂ ಇದೆ.

ಹಿಂದುಸ್ಥಾನದಲ್ಲಿಯೇ ಗಿರಾಕಿ ಇದೆ. ಶಿಕ್ಷಿತ ಕೆಲಸಗಾರರೂ ಬೇಕಾದಷ್ಟು ದೊರೆಯುವರು. ಕಬ್ಬಿಣ, ಉಕ್ಕು, ಮೊದಲಾದ ಸಾಮಾನುಗಳೂ ಕಡಿಮೆ ಬೆಲೆಗೆ ದೊರೆಯುತ್ತವೆ. ಪರದೇಶದ ಮೋಟಾರಗಳಿಗಿಂತ ಬೇಕಾದಂತೆ ಕಡಿಮೆ ಮಾಡಲು ಶಕ್ಯವಿದೆ. ಆದುದರಿಂದ ಹೊಸದಾಗಿ ಮೋಟರ್ ಕಂಪನಿ ಸ್ಥಾಪಿಸಿದರೆ ಖಂಡಿತ ಅದರಲ್ಲಿ ಯಶಸ್ಸು ದೊರೆಯುವದೆಂದೇ ಸರ್. ವಿಶ್ವೇಶ್ವರಯ್ಯನವರಿಗೆ ನಂಬಿಕೆಯಿದೆ.

# ಹರಿಜನ ಅನಾಥ ಮಹಿಲಾಶ್ರಮ.

ಪುಣೆ ಪಟ್ಟಣದಲ್ಲಿ ಭಾರತೀಯ ಹಿಂದುಳಿದ ಸಂಘದ ಹರಿಜನ ಅನಾಥ ಮಹಿಲಾಶ್ರಮವು ಮುಂಬೈ ಅಸೆಂಬ್ಲಿಯ ಅಧ್ಯಕ್ಷರಾದ ನಾ. ದಾದಾಸಾಹೇಬ ಮಾಳವಣಕರ ಇವರ ಅಧ್ಯಕ್ಷತೆಯಲ್ಲಿ ಔಂಧ ಸಂಸ್ಥಾನದ ಲೋಕಪ್ರಿಯ ರಾಜರಾದ ಶ್ರೀಮಂತ ಬಾಳಾಸಾಹೇಬ ಪಂತ ಪ್ರತಿನಿಧಿ ಇವರ ಹಸ್ತದಿಂದ ಅತ್ಯಂತ ಉತ್ಸಾಹದಿಂದ ಸ್ಥಾಪಿಸಲ್ಪಟ್ಟಿತು.

ಮೊದಲು ಸಂಘದ ಅಧ್ಯಕ್ಷರಾದ ಶ್ರೀ. ರಾಮಭಾವು ಅಭ್ಯಂಕರ ಇವರು ಸ್ವಾಗತಪರ ಭಾಷಣ ಮಾಡಿದನಂತರ ಸಂಘದ ಕಾರ್ಯದರ್ಶಿಗಳಾದ ಶ್ರೀ. ಪಾ. ನಾ ರಾಜಭೋಜ ಇವರು ಸಂಸ್ಥೆಯ ಸಂಬಂಧವಾಗಿ ತಿಳುಹಿಸಿಕೊಟ್ಟರು. ಭಾರತ ಸೇವಕ ಸಮಾಜದವರಂತೆಯೇ ತಮ್ಮ ಸಂಘದ ಧ್ಯೇಯವಿದೆಯೆಂದೂ ನಮ್ಮ ಸಮಾಜದಲ್ಲಿಯೇ ಭಾರತಸೇವಕ ಸಮಾಜದವರಂತೆ ಆಜೀವ ಸಮಾಜ ಸೇವಕರನ್ನು ಸಿದ್ಧಗೊಳಸಬೇಕಾಗಿದೆಯೆಂದೂ ನಾನಃ ಇಂದಿನಿಂದಲೇ ಹಿಂದುಳಿದವರ ಉದ್ಧಾರಕ್ಕಾಗಿ ಆಜೀವ ಹೋರಾಡುವ ಪ್ರತಿಜ್ಞೆ ಮಾಡುವೆನೆಂದೂ ಹೇಳಿ ತಮ್ಮ ಭಾಷಣವನ್ನು ಮುಗಿಸಿದರು. ನಾ. ಮಾಳವಣಕರರು ತಮ್ಮ ಭಾಷಣದಲ್ಲಿ ಸಮಾಜಕಾರಣವು ರಾಜಕಾರಣಕ್ಕಿಂತಲೂ ಮಹತ್ವದ್ದಿದೆಯೆಂದು ತಿಳಿಸಿಕೊಟ್ಟರು. ಅನಂತರ ಔಂಧದ ರಾಜೇಸಾಹೇಬರು ಈ ರೀತಿ ಭಾಷಣಮಾಡಿದರು—

"ಔಂಧ ಸಂಸ್ಥಾನದಲ್ಲಿ ಅಸ್ಪೃಶ್ಯತಾ ಇಲ್ಲವೇ ಇಲ್ಲ. ನೀವು ಸ್ವಾವಲಂಬಿಯಾದರೆ ಮಾತ್ರ ನಿಮ್ಮ ಸಮಾಜವನ್ನು ಮತ್ತು ಅಖಿಲ ಭಾರತ ವರ್ಷವನ್ನು ಉದ್ಧಾರಮಾಡಲು ಶಕ್ಯವಾಗುವುದು. ಜಗನ್ಮಾತೆಯು ನಿಮಗೆ ಸದ್ಬುದ್ಧಿಯನ್ನು ದಯಪಾಲಿಸಿ ಸ್ವಾವಲಂಬಿಗಳನ್ನಾಗಿಯೂ ಸತತೋದ್ಯೋಗಿಗಳನ್ನಾಗಿಯೂ ಮಾಡಲಿ." ಎಂದು ಹೇಳಿ ಆಶ್ರಮದ ಉದ್ಘಾಟನ ಸಮಾರಂಭವನ್ನು ನೆರವೇರಿಸಿದರು.

---

# ಮಿ| ಜಾಬವಾಲಾರ ಹೊಸ ಬಿಲ್.

ಹಿಂದುಸ್ಥಾನದಲ್ಲಿ ಸಿದ್ಧವಾಗುವ ವಸ್ತುಗಳ ವಿನಾ ಅನ್ಯ ವಸ್ತುಗಳಿಗೆ 'ಸ್ವದೇಶಿ' ಎಂಬ ಹೆಸರನ್ನಿಡಲಾಗದೆಂದೂ ಹಾಗೆ ಹೆಸರಿಟ್ಟು ತಮ್ಮ ಸರಕುಗಳನ್ನು ಮಾರುವ ಕಂಪನಿಗಳನ್ನು ದಂಡಿಸತಕ್ಕದ್ದೆಂದೂ ಮುಂಬೈ ಶಾಸನ ಸಭೆಯಲ್ಲಿ ಮಿ| ಜಾಬವಾಲಾರವರು ಒಂದು ಮಸೂದೆಯನ್ನು ತರುವವರಿದ್ದಾರೆ.

"ಮೇಡ್ ಇನ್ ಇಂಡಿಯಾ" "ಹಿಂದುಸ್ಥಾನದಲ್ಲಿ ಸಿದ್ಧಗೊಳಿಸಿದುದು" ಎಂಬ ಹೆಸರನ್ನು ಹಾಕಿ ಪರದೇಶದ ಸರಕುಗಳು ಹಿಂದುಸ್ಥಾನದಲ್ಲಿ ಮಾರಾಟ ಮಾರಲ್ಪಡುವುದು ದಿನೇ ದಿನೇ ಹೆಚ್ಚುತ್ತಿರುವುದೆಂದೂ ಅದನ್ನು ಈಗಲೇ ತಡೆಗಟ್ಟುವುದು ಅವಶ್ಯಕವೆಂಬುದೇ ಮಿ| ಜಾಬವಾಲಾರವರ ಮತ. ಸ್ವದೇಶಿ ಎಂಬ ಹೆಸರಿನಿಂದ ಮಾಡಲ್ಪಡುವ ವಸ್ತುಗಳನ್ನು ಪರಿಶೀಲಿಸಿ ಇಂಥವುಗಳೇ ಸ್ವದೇಶಿ ವಸ್ತುಗಳೆಂದು ಶಿಫಾರಸು ಮಾಡುವಂತಹ ಒಂದು ವಿಮರ್ಶಾ ಮಂಡಳವನ್ನು ಸ್ಥಾಪಿಸಬೇಕೆಂದೂ ಅದಕ್ಕೆ ಔದ್ಯೋಗಿಕ ಮಂತ್ರಿಗಳು ಅಧ್ಯಕ್ಷರಾಗಿರಬೇಕೆಂದೂ ಮಿ| ಜಾಬವಾಲಾರವರು ತಮ್ಮ ಮಸೂದೆಯಲ್ಲಿ ನಿರ್ದಿಷ್ಟಗೊಳಿಸಿದ್ದಾರೆ.




ಶಾ. ಶ. ೧೮೬೦ ನೆಯ ಶ್ರಾವಣ ಬ|| ೪ ಸೋಮವಾರ.

## ಶ್ರೀ. ಲಠ್ಠೆಯವರ ದೋಷಾರೋಪಣೆ.

ಮುಂಬೈ ಸರಕಾರದ ಅರ್ಥಸಚಿವರಾದ ಶ್ರೀ. ಲಠ್ಠೆಯವರು ಕರ್ನಾಟಕ ಏಕೀಕರಣದ ವಿಚಾರವಾಗಿ ಮೊನ್ನೆ ತಾನೆ ವ್ಯಕ್ತಗೊಳಿಸಿದ ಅಭಿಪ್ರಾಯವು ಸತ್ಯಪ್ರಿಯರಿಗೆ ತುಂಬಾ ಸಂತಾಪವನ್ನು ಉಂಟುಮಾಡದೆ ಇರಲಾರದು. ಕರ್ನಾಟಕದಿಂದ ಕಾಂಗ್ರೆಸ್ ಪರವಾಗಿ ಆರಿಸಲ್ಪಟ್ಟ ಮಂತ್ರಿಗಳೇ ಹೀಗೆ ಕನ್ನಡ ನಾಡಿಗೆ ವಿಘಾತಕವಾದ ದೋಷಾರೋಪಣೆಯನ್ನು ಮಾಡಿದ್ದರಿಂದ ಈ ವಿಷಯದಲ್ಲಿ ಹೆಚ್ಚು ಲಕ್ಷಿಸಬೇಕಾದುದು ಅತ್ಯಾವಶ್ಯಕ. ಶ್ರೀ. ಲಠ್ಠೆಯವರು ಕರ್ನಾಟಕ ಏಕೀಕರಣವಾಗಬಾರದೆಂಬುದಕ್ಕೆ ಈ ಕೆಳಗಿನ ಎರಡು ಕಾರಣಗಳನ್ನು ಹೇಳಿದ್ದಾರೆ.

(೧) ಕರ್ನಾಟಕ ಏಕೀಕರಣವು ಆರ್ಥಿಕ ದೃಷ್ಟಿಯಿಂದ ಶಕ್ಯವಿಲ್ಲ. ಏಕೆಂದರೆ ಇದು ತನ್ನ ಆದಾಯ ವೆಚ್ಚಗಳನ್ನು ತಾನೇ ಸರಿಪಡಿಸಿಕೊಳ್ಳಲಾರದು. (೨) ಕರ್ನಾಟಕದಲ್ಲಿ ಲಿಂಗಾಯತ ಮತ್ತು ಬ್ರಾಹ್ಮಣ ಎಂಬ ಜಾತಿಯ ಜಗಳವಿರುವುದರಿಂದ ಅಧಿಕಾರದ ಆಸೆಗಾಗಿಯೇ ಈ ಏಕೀಕರಣದ ಪ್ರಯತ್ನವು ನಡೆದಿದೆ.

ಕರ್ನಾಟಕವು ಸ್ವತಂತ್ರ ಪ್ರಾಂತವಾಗಬಾರದೆಂಬುದಕ್ಕೆ ಶ್ರೀ. ಲಠ್ಠೆಯವರು ಹೇಳಿರತಕ್ಕ ಮೇಲಣ ಎರಡು ಕಾರಣಗಳೂ ಸಮಂಜಸವಾಗಿಲ್ಲ. ತಾವು ಅರ್ಥಸಚಿವರಾಗಿರುವುದರಿಂದ ತಮ್ಮ ಲೆಕ್ಕವೇ ಸರಿಯಾದುದೆಂದು ಇವರು ತಿಳಿದಿರಬಹುದು. ಆದರೆ ಅದು ಆದಾಯವೆಚ್ಚಗಳ ಅಂಕೆ ಸಂಖ್ಯೆಗಳಿಂದ ಸಿದ್ಧವಾಗತಕ್ಕ ವಿಷಯವಾಗಿರುವ ಕಾರಣ ಇವರು ಅರ್ಥಸಚಿವರೆಂಬ ಮಾತ್ರದಿಂದಲೇ ಇವರ ಅಭಿಪ್ರಾಯವನ್ನು ನಂಬಲಿಕ್ಕಾಗುವುದಿಲ್ಲ. ಆರ್ಥಿಕ ದೃಷ್ಟಿಯಿಂದಲೂ ಇದು ಸ್ವತಂತ್ರ ಪ್ರಾಂತವಾಗಿರಲು ಶಕ್ಯವಿದೆಯೆಂದೇ ಅನೇಕರು ಪ್ರತಿಪಾದಿಸುತ್ತಿದ್ದಾರೆ. ಶ್ರೀ. ಲಠ್ಠೆಯವರಿಗೆ ಅದು ಸರಿತೋರದೆ ಇದ್ದಿದ್ದರೆ ಈ ವಿಚಾರವಾಗಿ ಪರ್ಯಾಲೋಚಿಸಲು ಒಂದು ಸಮಿತಿಯನ್ನು ಏರ್ಪಡಿಸಬೇಕೆಂದು ಸೂಚಿಸಬಹುದಾಗಿದ್ದಿತು. ಆ ಸಮಿತಿಯವರು ಆರ್ಥಿಕ ದೃಷ್ಟಿಯಿಂದ ಕರ್ನಾಟಕವು ಸ್ವತಂತ್ರ ಪ್ರಾಂತವಾಗಿರಲು ಶಕ್ಯವಿದೆಯೆಂದು ಅಭಿಪ್ರಾಯಪಟ್ಟರೆ ಅದು ತಮಗೂ ಮಾನ್ಯವೆಂದೇ ಶ್ರೀ. ಲಠ್ಠೆಯವರು ಹೇಳಿದ್ದರೆ ಕಾಂಗ್ರೆಸ್ಸಿನ ರೀತಿನೀತಿಗಳನ್ನು ಅನುಸರಿಸಿದಂತಾಗುತ್ತಿದ್ದಿತು.

### ಶ್ರೀ. ಲಠ್ಠೆಯವರು ಹೇಗೆ ಮಂತ್ರಿಗಳಾದರು?

ಕರ್ನಾಟಕ ಏಕೀಕರಣದ ಈಗಿನ ಚಟುವಟಿಕೆಗೆ ಅಧಿಕಾರದ ಆಸೆಯೇ ಮೂಲವಾಗಿದೆಯೆಂದು ಶ್ರೀ. ಲಠ್ಠೆಯವರು ತಿಳಿದಂತೆ ತೋರುತ್ತದೆ. ಇದು ಇವರ ತಪ್ಪು ತಿಳುವಳಿಕೆ. ಇಷ್ಟೇ ಅಲ್ಲ; ಕರ್ನಾಟಕ ಏಕೀಕರಣಕ್ಕಾಗಿ ಪ್ರಯತ್ನಿಸುತ್ತಿರುವ ಅನೇಕ ಮಹಾಶಯರ ಮೇಲೆ ಇವರು ಮಾಡಿರತಕ್ಕ ಭಯಂಕರವಾದ ದೋಷಾರೋಪಣೆ. ಜನ್ಮಸಿದ್ಧವಾದ ಈ ಪ್ರಾಂತೀಯ ಪವಿತ್ರ ಭಾವನೆಯ ಚಟುವಟಿಕೆಗೆ ಜಾತೀಯ ಕಲ್ಪನೆಯೆಂಬ ಕಪ್ಪನ್ನು ಹಚ್ಚುವ ಅಶ್ಲಾಘ್ಯವಾದ ಪ್ರಯತ್ನ.

ಕರ್ನಾಟಕದಲ್ಲಿ ಲಿಂಗಾಯತ ಮತ್ತು ಬ್ರಾಹ್ಮಣ ಎಂಬ ಜಾತಿಭಾವನೆಯಿರುವುದೇನೋ ನಿಜ. ಅನೇಕ ಸಾರ್ವಜನಿಕ ಕಾರ್ಯಗಳಲ್ಲಿ ಇದು ಆಗಾಗ್ಗೆ ತಲೆ ಎತ್ತುತ್ತಿರುವುದೂ ಉಂಟು. ಆದರೆ ಕರ್ನಾಟಕ ಏಕೀಕರಣದ ಪ್ರಯತ್ನವು ಈ ಜಾತೀಯ ಭಾವನೆಯಿಂದಲೇ ನಡೆದಿದೆಯೆಂದೂ ಕರ್ನಾಟಕವು ಸ್ವತಂತ್ರ ಪ್ರಾಂತವಾದರೆ ಜಾತೀಯ ಜಗಳ ಹೆಚ್ಚುವುದೆಂದೂ ಅಧಿಕಾರದ ಆಸೆಗಾಗಿಯೇ ಈ ಚಟುವಟಿಕೆಯನ್ನು ಹೂಡಿದ್ದಾರೆಂದೂ ತಿಳಿಯುವುದು ಮಾತ್ರ ಅನುಚಿತವಾದುದಾಗಿದೆ.

ಕರ್ನಾಟಕದಲ್ಲಿ ರಾಷ್ಟ್ರೀಯ ಭಾವನೆಯು ದಿನೆ ದಿನೆ ಹೆಚ್ಚುತ್ತಾ ರಾಷ್ಟ್ರ ಕಾರ್ಯದಲ್ಲಿ ಜಾತ್ಯಂಧತೆಯು ಕಡಿಮೆಯಾಗುತ್ತಾ ಇದೆ. ಇದಕ್ಕೆ ಶ್ರೀ. ಲಠ್ಠೆಯವರು ಮಂತ್ರಿಗಳಾದುದೇ ದೊಡ್ಡ ದೃಷ್ಟಾಂತ. ಮೊದಲಿನಂತೆಯೇ ಜಾತ್ಯಂಧತೆಯು ಇದ್ದಿದ್ದರೆ ಲಿಂಗಾಯತರಾಗಲಿ ಅಥವಾ ಬ್ರಾಹ್ಮಣರಾಗಲಿ ಕರ್ನಾಟಕದಿಂದ ಮಂತ್ರಿಗಳಾಗಿ ಆರಿಸಲ್ಪಡುತ್ತಿದ್ದರೇ ವಿನಾ ಶ್ರೀ. ಲಠ್ಠೆಯವರಂತಹ ಜೈನರಿಗೆ ಈ ಸ್ಥಾನವು ದೊರೆಯುತ್ತಿರಲಿಲ್ಲ. ಈ ಉಭಯ ಜಾತಿಗಳ ಕಾಂಗ್ರೆಸ್ ಕೆಲಸಗಾರರು ಜಾತೀಯ ವಿಚಾರವನ್ನು ಲಕ್ಷಿಸದೆ ತಮ್ಮನ್ನು ಆರಿಸಿಕೊಟ್ಟದ್ದರ ಕೃತಜ್ಞತೆಗಾದರೂ ಶ್ರೀ. ಲಠ್ಠೆಯವರು ಇಂಥ ಭಯಂಕರವಾದ ದೋಷಾರೋಪಣೆಯನ್ನು ಮಾಡಬಾರದಾಗಿದ್ದಿತು.

### ಇದು ಬ್ರಿಟಿಶ್ ಆಳರಸರ ಹೇಳಿಕೆ !

ಹಿಂದುಸ್ಥಾನದಲ್ಲಿ ಹಿಂದು–ಮುಸಲ್ಮಾನ್, ಸ್ಪೃಶ್ಯ-ಅಸ್ಪೃಶ್ಯ, ಬ್ರಾಹ್ಮಣ–ಬ್ರಾಹ್ಮಣೇತರ ಎಂಬ ಅನೇಕ ಜಾತಿಯ ಜಗಳಗಳಿವೆಯೆಂದೂ ಅಧಿಕಾರದ ಆಸೆಗಾಗಿಯೇ ಕೆಲವು ಸುಶಿಕ್ಷಿತರು ಸ್ವರಾಜ್ಯದ ಚಟುವಟಿಕೆಯನ್ನು ನಡೆಯಿಸಿದ್ದಾರೆಂದೂ ಬ್ರಿಟಿಶ್ ಆಳರಸರು ಹೇಳುತ್ತಿರುವುದುಂಟಷ್ಟೆ. ಅದೇ ಮಾತನ್ನೇ ಶ್ರೀ. ಲಠ್ಠೆಯವರು ಕರ್ನಾಟಕ ಏಕೀಕರಣದ ಚಟುವಟಿಕೆಯನ್ನು ಕುರಿತು ಹೇಳಿದ್ದಾರೆ.

ಕಾಂಗ್ರೆಸ್ಸಿನಿಂದ ಕರ್ನಾಟಕದ ಪರವಾಗಿ ಆರಿಸಿಹೋದ ಜೈನ ಮತದ ಶ್ರೀ. ಲಠ್ಠೆಯವರು ಹೀಗೆ ಭಯಂಕರವಾದ ದೋಷಾರೋಪಣೆ ಮಾಡಿರುವುದನ್ನು ನಾವು ತುಂಬಾ ನಿಷೇಧಿಸದಿರಲಾರೆವು. ಇವರ ಈ ಮಾತುಗಳು ಬ್ರಿಟಿಶ್ ಆಳರಸರಿಗೆ ಒಪ್ಪತಕ್ಕವುಗಳೇ ವಿನಾ ಕಾಂಗ್ರೆಸ್ ಪಕ್ಷದವರಿಗೆ ಶೋಭಿಸತಕ್ಕವುಗಳಲ್ಲ. ಇವರು ಬ್ರಾಹ್ಮಣೇತರ ಪಕ್ಷದ ಪ್ರಮುಖರಾಗಿಯೇ ತಮ್ಮ ಸಾರ್ವಜನಿಕ ಆಯುಷ್ಯದ ಬಹು ಭಾಗವನ್ನು ಕಳೆದಿದ್ದಾರಷ್ಟೆ. ಹೀಗಿದ್ದರೂ

ಇವರ ಪೂರ್ವ ಚರಿತ್ರೆಯ ಕಡೆಗೆ ಲಕ್ಷಿಸದೆ ಅಧಿಕಾರ ಪ್ರಾಪ್ತವಾಗುವ ಕಾಲದಲ್ಲಿ ಕಾಂಗ್ರೆಸ್ಸಿಗೆ ಇವರು ಬಂದರೂ ಇವರನ್ನು ತೆಗೆದುಕೊಂಡು ಮಂತ್ರಿಗಳನ್ನಾಗಿ ಮಾಡಲಿಲ್ಲವೆ?

ಈ ಎಲ್ಲ ಸಂಗತಿಗಳನ್ನು ಶ್ರೀ. ಲಕ್ಮೈಯವರು ಈಗ ಮರೆತು ಬ್ರಿಟಿಶ್ ಆಳರಸರಂತೆ ಹೇಳಿದುದು ಆ ಸ್ಥಾನದ ಮಹಿಮೆಯೋ? ಅಥವಾ ಮರಾಠಿಗರ ಕಡೆಗಿರತಕ್ಕ ಇವರ ಒಲವಿನ ಪ್ರಭಾವವೋ? ಹಗೆಯಲ್ಲಿ ಬಿದ್ದವರ ಮೇಲೆ ಒರಳ ನೂಕಿದವರಂತೆ ಶ್ರೀ. ಲಕ್ಮೈಯವರು ಕರ್ನಾಟಕ ಏಕೀಕರಣದ ಚಟುವಟಿಕೆ ನಡೆಸುತ್ತಿದ್ದವರ ಮೇಲೆ ಈ ಭಯಂಕರವಾದ ದೋಷಾರೋಪಣೆಯನ್ನು ಹೊರಿಸಿ ತುಂಬಾ ವ್ಯಥೆಯನ್ನುಂಟುಮಾಡಿದ್ದಾರೆ. ಅನುಚಿತವಾದ ಇಂಥ ದೋಷಾರೋಪಣೆಗಳ ಕಡೆಗೆ ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಲಕ್ಷಿಸದೆ ಅದು ತಾನು ಅಭಿವಚನ ಕೊಟ್ಟಂತೆಯೇ ವರ್ತಿಸುವುದೆಂದು ನಾವು ತುಂಬಾ ನಂಬಿದ್ದೇವೆ.

---

## ನಗರ ಸಂಸ್ಥೆಗೆ ರಾಷ್ಟ್ರೀಯ ದೀಕ್ಷೆ.

ಮುಂಬೈ ಸರಕಾರವು ನಗರ ಸಂಸ್ಥೆ (ಮುನಸಿಪಾಲ್ಟಿ) ಗಳಲ್ಲಿ ನಡೆದಿರುವ ಕಾರ್ಯಕಲಾಪಗಳನ್ನು ಕುರಿತು ಮೊನ್ನೆ ತಾನೆ ಒಂದು ಪ್ರಕಟನೆಯನ್ನು ಹೊರಡಿಸಿದೆ. ಅನೇಕ ನಗರ ಸಂಸ್ಥೆಗಳ ಕಾರಭಾರವು ಬಹು ಅತೃಪ್ತಿಕರವಾಗಿದೆಯೆಂದೂ ಅವುಗಳ ಸದಸ್ಯರು ಸಾರ್ವಜನಿಕ ಸೇವೆಗಾಗಿ ಬಂದಿರದೆ ಘನತೆಯ ಆಸೆಗಾಗಿಯೂ, ಜಾತೀಯ ಪಕ್ಷಾಭಿಮಾನಕ್ಕಾಗಿಯೂ, ಇವುಗಳಲ್ಲಿ ಸೇರಿಕೊಳ್ಳುತ್ತಿದ್ದಾರೆಂದೂ ಕಾಂಗ್ರೆಸ್ ಸರಕಾರವೇ ಸ್ಪಷ್ಟವಾಗಿ ತಿಳಿಸಿದೆ.

ಈ ಮಾತನ್ನೇ ಬ್ರಿಟಿಶ್ ಆಳರಸರು ಹೇಳಿದ್ದರೆ ನಾವು ಸ್ವರಾಜ್ಯಕ್ಕೆ ಅಪಾತ್ರರೆಂದು ತೋರಿಸಲು ಹೀಗೆ ಹೇಳುತ್ತಿದ್ದಾರೆಂದು ಕೆಲವರು ತಿಳಿಯುತ್ತಿದ್ದರು. ಕಾಂಗ್ರೆಸ್ ಸರಕಾರವೇ ಹೀಗೆ ಹೇಳಿರುವುದರಿಂದ ಅಂಥ ಊಹೆಗೆ ಅವಕಾಶವೇ ಇಲ್ಲವಷ್ಟೆ. ಅನೇಕ ನಗರ ಸಂಸ್ಥೆಗಳ ಕಾರ್ಯಕಲಾಪಗಳನ್ನು ನೋಡಿದರೆ ಅವು ಜಾತಿ ವಿಶಿಷ್ಟ ಅಥವಾ ವ್ಯಕ್ತಿ ವಿಶಿಷ್ಟ ಪಕ್ಷಗಳಿಂದಲೇ ನಡೆಯುತ್ತಲಿವೆಯೆಂದು ಸ್ಪಷ್ಟ ತೋರುತ್ತದೆ. ಧಾರವಾಡ, ಹುಬ್ಬಳ್ಳಿ ಮೊದಲಾದ ಕರ್ನಾಟಕದ ಅನೇಕ ಪ್ರಮುಖ ನಗರ ಸಂಸ್ಥೆಗಳು ಕೂಡಾ ಬಹು ಅಸಮಾಧಾನಕರವಾದ ಸ್ಥಿತಿಯಲ್ಲಿರುವುದಕ್ಕೆ ಅವು ಮೇಲಣ ಪಕ್ಷಾಂಧತೆಗೊಳಗಾಗಿರುವುದೇ ಮುಖ್ಯ ಕಾರಣ.

ಈ ಶೋಚನೀಯ ಸ್ಥಿತಿಯು ನಿವಾರಣೆಯಾಗಬೇಕಾದರೆ ಇವುಗಳಿಗೆ ರಾಷ್ಟ್ರೀಯ ದೀಕ್ಷೆಯನ್ನು ಕೊಡಬೇಕು. ಜನ ಸೇವೆಯಲ್ಲಿ ತತ್ಪರರಾದ ಕಾಂಗ್ರೆಸ್ ಕೆಲಸಗಾರರೇ ಇವುಗಳಲ್ಲಿ ಸೇರಬೇಕು. ಮತ ಕೊಡುವವರು ವ್ಯಕ್ತಿಯ ದಾಕ್ಷಿಣ್ಯಕ್ಕಾಗಲಿ ಅಥವಾ ಜಾತ್ಯಂಧತೆಗಾಗಲಿ ಒಳಗಾಗದೆ ಇಂಥವರನ್ನೇ ಆರಿಸಿಕೊಳ್ಳಬೇಕು. ಮತದಾರರು ನಗರ ಸಂಸ್ಥೆಗಳಿಗೆ ರಾಷ್ಟ್ರೀಯ ದೀಕ್ಷೆಯನ್ನು ಕೊಟ್ಟ ವಿನಾ ಅವುಗಳಿಂದ ಸಾರ್ವಜನಿಕ ಕಾರ್ಯಗಳು ತೃಪ್ತಿಕರವಾಗಿ ಜರುಗುವುದಿಲ್ಲ. ಜನಗಳಲ್ಲಿ ರಾಷ್ಟ್ರೀಯ ಭಾವನೆಯು ಈಗ ಹೆಚ್ಚುತ್ತಿರುವುದರಿಂದ ಇಂಥ ಸ್ಥಿತಿಯು ಜಾಗ್ರತೆ ಬರುವುದೆಂದೇ ನಾವು ನಂಬಿದ್ದೇವೆ.

---

—ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳ ಪರವಾಗಿ ಅಸ್ಪೃಶ್ಯ ವಿದ್ಯಾರ್ಥಿಗಳಿಗೆ ದೊರೆಯುವ ವೇತನವನ್ನು ಆ ವಿದ್ಯಾರ್ಥಿಗಳು ಧರ್ಮಾಂತರ ಹೊಂದಿದರೆ ಕೊಡಲಾಗದೆಂದು ಮದ್ರಾಸ್ ಸರಕಾರವು ಎಲ್ಲ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳಿಗೆ ತಿಳಿಸಿದೆ.

## ಪ್ರಪಂಚದ ಯುವಕ ಸಮ್ಮೇಳನ.

ಇದೇ ತಿಂಗಳ ೧೬ ನೆಯ ತಾರೀಖಿನ ದಿವಸ ಅಮೇರಿಕೆಯ ನ್ಯೂಯಾರ್ಕ ಮಹಾನಗರದಲ್ಲಿ ಪ್ರಪಂಚ ಯುವಕ ಪರಿಷತ್ತು ನಡೆಯುವದಿದೆ. ಪ್ರಪಂಚದ ಯುವಕ ಸಂಘದ ಅಂತರ್ರಾಷ್ಟ್ರೀಯ ಕಾರ್ಯದರ್ಶಿಗಳಾದ ಮಿಸ್. ಎಲಿಜಾಬೆತ್‌ರವರು ಉತ್ಸಾಹದಿಂದ ಪರಿಷತ್ತಿನ ಎಲ್ಲ ಸಿದ್ಧತೆಗಳನ್ನು ಮಾಡಹತ್ತಿದ್ದಾರೆ.

ಪ್ರಪಂಚದ ಎಲ್ಲ ಜನಾಂಗಗಳ ಯುವಕರಲ್ಲಿ ಪರಸ್ಪರ ಪ್ರೇಮವನ್ನುಂಟುಮಾಡುವುದೇ ಈ ಕಾಂಗ್ರೆಸ್ಸಿನ ಮುಖ್ಯ ಧ್ಯೇಯವಾಗಿದೆ. ಬೇರೆ ಬೇರೆ ಧರ್ಮಗಳ ಭಿನ್ನ ಭಿನ್ನ ಅಭಿಪ್ರಾಯವುಳ್ಳ ಯುವಕರಲ್ಲಿ ವಿಶ್ವಪ್ರೇಮವನ್ನುಂಟುಮಾಡುವುದಕ್ಕಾಗಿಯೇ ಈ ಸಂಸ್ಥೆಯು ಏರ್ಪಟ್ಟಿದೆ.

ಈ ಪರಿಷತ್ತಿಗೆ ಪ್ರತಿಯೊಂದು ಜನಾಂಗದಿಂದ ೫೦ ರ ವರೆಗೆ ಪ್ರತಿನಿಧಿಗಳನ್ನು ಸ್ವೀಕರಿಸಲಾಗುತ್ತದೆ. ಅಗಸ್ಟ ೧೩ ನೆಯ ತಾರೀಖಿನೊಳಗಾಗಿಯೇ ಯುರೋಪ ಮತ್ತು ಬೇರೆ ದೇಶಗಳ ಪ್ರತಿನಿಧಿಗಳು ಆಗಮಿಸಬಹುದೆಂದು ನಿರೀಕ್ಷಿಸಿದ್ದಾಗಿದೆ. ನ್ಯೂಯಾರ್ಕ ನಗರದ ಮುನಸಿಪಲ್ ಮಹಾಭವನದಲ್ಲಿ ಕಾಂಗ್ರೆಸ್ ಅಧಿವೇಶನವು ಪ್ರಾರಂಭವಾಗುವುದು. ರೂಜವೆಲ್ಟರ ಪತ್ನಿಯವರು ಈ ಅಧಿವೇಶನದ ಉದ್ಘಾಟನಾ ಸಮಾರಂಭವನ್ನು ಜರುಗಿಸುವರು.

---

## ಜರ್ಮನ್ನರ ಪ್ರಚಂಡ ಯುದ್ಧ ಸನ್ನಾಹ!

ಇತ್ತೀಚಿಗೆ ಜರ್ಮನ್ನರು ಅತಿ ದೊಡ್ಡ ಪ್ರಮಾಣದಲ್ಲಿ ಸೈನ್ಯದ ಸಿದ್ಧತೆ ನಡೆಯಿಸಿದ್ದಾರೆ. ಫ್ರೆಂಚ್ ಗಡಿನಾಡಿನಲ್ಲಿ ಕೋಟೆ ಕೊತ್ತಳುಗಳನ್ನು ಕಟ್ಟುವುದಕ್ಕಾಗಿ ಸುಮಾರು ೫೦೦೦೦ ಜರ್ಮನ್ನರು ಅವ್ಯಾಹತವಾಗಿ ಕೆಲಸ ಮಾಡುತ್ತಿದ್ದಾರೆ. ಇದ್ದ ಬಿದ್ದ ಎಲ್ಲ ಕಟ್ಟಡದ ಮತ್ತು ಟ್ರಾನ್ಸಪೋರ್ಟ ಕೆಲಸಗಾರರನ್ನು ಕೂಡಿಸಿ ಸಾರ ಮತ್ತು ರಾಯನ್‌ಲ್ಯಾಂಡ್‌ಗಳಿಗೆ ಕಳಿಸಿದ್ದಾರೆ. ಆಸ್ಟ್ರೇಲಿಯಾ ಝೆಕೋಸ್ಲೋವೇಕಿಯಾ ಗಡಿಗಳಲ್ಲಿಯೂ ಇನ್ನಿತರ ಎಲ್ಲ ಗಡಿಗಳಲ್ಲಿಯೂ ಕೆಲಸವು ಭರದಿಂದ ಸಾಗಿದೆ. ಮಾರ್ಗ ನಿರ್ಮಾಣ ಕಾರ್ಯವನ್ನಂತೂ ಇಷ್ಟರಲ್ಲಿಯೇ ಮುಗಿಸಿಯೇ ಬಿಟ್ಟಿದ್ದಾರೆ. ಯುದ್ಧವೇನಾದರೂ ಸಂಭವಿಸಿದರೆ ಈ ಮಾರ್ಗಗಳಿಂದ ಹೇಳಲಾರದಷ್ಟು ಸಹಾಯ ದೊರೆಯುತ್ತದೆ. ಈ ತರದ ಯುದ್ಧ ಸಿದ್ಧತೆಯನ್ನು ನೋಡಿ ಗಡಿನಾಡಿನ ಜನತೆಯಲ್ಲಿ ಕಳವಳವುಂಟಾಗಿದೆ

ಜರ್ಮನ್ ಮಿಲಿಟರಿಗೆ ಸೇರಿದ್ದ ಒಂದು ಪಾರಿವಾಳವು ಗಂಟೆಗೆ ೬೦ ಮೈಲುಗಳ ವೇಗದಲ್ಲಿ ೩೩೧ ಮೈಲು ದೂರವಿರುವ ಹಾಲೆಂಡಿನಿಂದ ಬರ್ಲಿನ್ ನಗರಕ್ಕೆ ಹಾರಾಡಿತು.

---

—ಹೈದರಾಬಾದಿನಲ್ಲಿ ಶ್ರೀ. ಭುಲಾಭಾಯಿ ದೇಸಾಯಿರವರ ಭಾಷಣವನ್ನು ಸರಕಾರದವರು ಪ್ರತಿಬಂಧಿಸಿ ಹೊರಡಿಸಿದ ಪ್ರಕಟನೆಯ ಕುರಿತು ವಿಚಾರಮಾಡಲು ಹೈದರಾಬಾದ ವಕೀಲರ ಸಂಘದ ಸಭೆಯು ತಾ. ೧೧ ನೆಯ ದಿವಸ ಕೂಡಿತ್ತು. ಸರಕಾರೀ ಪ್ರಕಟನೆಯನ್ನು ಕೆಲವರು ಕಡುತರವಾಗಿ ಟೀಕಿಸಿದರು. ಕೆಲವರು ವಿರೋಧಿಸಿದರು. ಕೊನೆಗೆ ಮತಗಣನೆಯಾಗಲು ೧೨ ಜನ ಹಿಂದುಗಳು ಟೀಕೆಯ ಪರವಾಗಿಯೂ ೭ ಜನ ಮುಸಲ್ಮಾನರು ವಿರುದ್ಧವಾಗಿಯೂ ಮತ ಕೊಟ್ಟರು. ಇದನ್ನು ಕಂಡು ಅಧ್ಯಕ್ಷರಾದ ನವಾಬ ಅಕಬರ ಯಾರ ಜಂಗರವರು ಸಭೆಯ ಚರ್ಚೆಯಲ್ಲಿ ಜಾತೀಯ ಭಾವನೆಗಳು ತೋರಬರುತ್ತಿರುವುದರಿಂದ ತಾವು ಅಧ್ಯಕ್ಷರಾಗಲು ಶಕ್ಯವಿಲ್ಲವೆಂದು ಹೇಳಿ ಸಭಾತ್ಯಾಗ ಮಾಡಿದರು. ಉಪಾಧ್ಯಕ್ಷರು ಸಭೆಯನ್ನು ಮುಂದುವರಿಸಿದರು.

# ಕರ್ನಾಟಕ ವಣಿಕ ಸಂಘ

## ಬಾಗಲಕೋಟೆ.

ಕರ್ನಾಟಕದಲ್ಲಿ ಹತ್ತಿಯು ಬಹು ಮಹತ್ವದ ಬೆಳೆಯಾಗಿರುತ್ತದೆ. ಕರ್ನಾಟಕದಲ್ಲಿ ಅಜಮಾಸು ೫ ಲಕ್ಷ ಗಂಟೆನ ಮಾಲು ಹೊರಡುತ್ತಿದ್ದರೂ ನಮ್ಮ ಮಾಲಿಗೆ ಯೋಗ್ಯ ಬೆಲೆ ಸಿಗುವದಿಲ್ಲ. ನಮ್ಮ ಹತ್ತಿಯು ಮುಂಬಯಿ ಭ್ರೋಚ ಹೆಚ್ಚದಲ್ಲಿ ಸಮಾವೇಶವಾಗಿದ್ದಿಲ್ಲ. ನಾವು ಬಹು ದಿವಸ ಶ್ರಮಪಟ್ಟು ಈಸ್ಟ ಇಂಡಿಯಾ ಕೋಟನ್ ಅಸೋಸಿಯೇಶನ್ನದವರ ಸಂಗಡ ಬಡಿದಾಡಿ ಇದೇ ಈಗ ೭/೮ ಎಳೆ ಉದ್ದ ಇದ್ದ ನಮ್ಮ ಮಾಲನ್ನು ಭ್ರೋಚ ಹೆಚ್ಚದಲ್ಲಿ ಸಮಾವೇಶ ಮಾಡಿಕೊಳ್ಳಲು ನಿರ್ಣಯಿಸಿಕೊಂಡು ಮುಂದಿನ ಮೋಸಮದಲ್ಲಿ ವ್ಯವಹಾರದಲ್ಲಿ ತರತಕ್ಕವರಿದ್ದಾರೆ. ೭/೮ ಎಳೆ ಉದ್ದ ಇದ್ದ ಹತ್ತಿಯು ಈಗ ನಮ್ಮಲ್ಲಿ ತೀರ ಸ್ವಲ್ಪೇ ಹುಟ್ಟುತ್ತದೆ. ಇನ್ನು ಮುಂದೆ ನಾವು ೧ ಇಂಚು ಎಳೆ ಉದ್ದ ಇದ್ದ ಜಯವಂತಿ ಹತ್ತಿಯನ್ನು ಬಿತ್ತಿ ಭ್ರೋಚ ಹೆಚ್ಚು ಲಾಭವನ್ನು ಪಡೆಯಬೇಕು.

ಈಗ ನಮ್ಮ ಜವಾರಿ ಹತ್ತಿಯ ಎಳೆಯು ೬/೮ ೧೨ ಆಣೆ ಇಂಚಿನಕಿಂತ ಉದ್ದ ಇರುವದಿಲ್ಲ. ಉತಾರವು ೨೫-೨೬ ಇಳಿಯುವದು. ಮಬ್ಬು ಬಣ್ಣ ಶಿಡಿ ರೋಗಕ್ಕೆ ಒಳಗಾಗುವದು. ಹೀಗೆ ನಮ್ಮ ಜವಾರಿ ಹತ್ತಿ ಸ್ಥಿತಿ ಇರುವದರಿಂದ ಬ್ರೋಚ ಹೆಚ್ಚಿದ ಲಾಭವನ್ನು ಕರ್ನಾಟಕಸ್ಥರು ಪಡಕೊಳ್ಳಬೇಕಾದರೆ ೧ ಇಂಚ ಎಳೆ ಉದ್ದ ಇದ್ದ ಈ ಜಯವಂತಿ ಹತ್ತಿಯನ್ನು ಬಿತ್ತಿ ಸಂಪೂರ್ಣ ಲಾಭವನ್ನು ಪಡೆದುಕೊಳ್ಳಬೇಕು.

ಮುಂಬಯಿ ಒಕ್ಕಲತನದ ಖಾತೆಯವರು ಬಹು ದಿವಸಗಳಿಂದ ಕರ್ನಾಟಕದ ಹತ್ತಿ ಸುಧಾರಣೆಯನ್ನು ಕೈಕೊಂಡು ಈ ನಮ್ಮ ಜವಾರಿ ಹತ್ತಿಯಲ್ಲಿಯೇ ಶ್ರಮಪಟ್ಟು ಶೋಧಿಸಿ ತೆಗೆದ ಹತ್ತಿಯೇ ಜಯವಂತಿ ಹತ್ತಿಯು. ಇದರ ಎಳೆ ಒಂದು ಇಂಚ ಉದ್ದ ಬಣ್ಣ ಬಿಳೇದು ಉತಾರು ೨೮-೨೯ ಶಿಡಿರೋಗ ಹಾಯುವದಿಲ್ಲ. ಮತ್ತು ೪೦ ನಂಬರ ನೂಲು ಹೊರಡುವದು. ಇಷ್ಟೆಲ್ಲಾ ಗುಣಗಳಿರುವುದರಿಂದ ಗಿರಣಿಯವರು ವ್ಯಾಪಾರಸ್ಥರು ಈ ಹತ್ತಿಯನ್ನು ಬಹಳವಾಗಿಕೊಂಡುಕೊಳ್ಳುವದರಿಂದ ಇದಕ್ಕೆ ಜಯವಂತಿ ಎಂದು ಹೆಸರು ಕೊಟ್ಟಿದುದು. ಮತ್ತು ನಮ್ಮ ಹಳೇ ಜವಾರಿ ಹತ್ತಿಯು ಬೆಳೆಯುದ ಭೂಮಿಯಲ್ಲಿ ಈ ಜಯವಂತಿ ಹತ್ತಿಯು ಬೆಳೆಯುತ್ತದೆ.

ಈ ವರ್ಷ ಒಕ್ಕಲತನದ ಖಾತೆಯವರು ಈ ಹತ್ತಿಯ ಬೀಜವನ್ನು ಎಲ್ಲಾ ಪೇಟೆಗಳಲ್ಲಿ ಸಿಗುವಂತೆ ವ್ಯವಸ್ಥೆಮಾಡಿದ್ದಾರೆ. ಕಾರಣ ಎಲ್ಲ ವರ್ತಕರೂ ರೈತರೂ, ಪ್ರಮುಖರೂ ಈಗ ಬಿತ್ತುವ ದಿವಸಗಳು ಬಂದಿರುವದರಿಂದ ಈ ಜಯವಂತಿ ಹತ್ತಿಯನ್ನು ಬಿತ್ತುವಂತೆ ಹಳ್ಳಿ ಶಹರಗಳಲ್ಲಿ ಪ್ರಚಾರಮಾಡಿ ಭ್ರೋಚ ಹೆಚ್ಚಾದ ಸಂಪೂರ್ಣ ಲಾಭವನ್ನು ಪಡೆಯಬೇಕೆಂದು ವಿನಂತಿ.

ಗೌ| ಕಾ| ಮುರಿಗೆಯ್ಯ ಜಂಗಿನ ಬಾಗಲಕೋಟೆ.

---

—ಅಲ್ಯುಮಿನಿಯಂ ಎಲ್ಲ ಲೋಹಗಳಲ್ಲಿ ಹಗುರಾದುದು. ಬ್ರಿಟನ್ನಿನಲ್ಲಿ ಕೆಲವು ವಸ್ತ್ರ ನಿರ್ಮಾಣಕರು ಇದರಿಂದ ವಸ್ತ್ರಗಳನ್ನು ತಯಾರಿಸುವ ಪ್ರಯತ್ನದಲ್ಲಿದ್ದಾರೆ. ರೇಶಿಮೆಯಷ್ಟು ಮೆತ್ತಗಾದ ನೂಲನ್ನು ಇದರಿಂದ ತಯಾರಿಸಲು ಸಾಧ್ಯವೆಂದು ಕಂಡು ಹಿಡಿದಿದ್ದಾರೆ.

—ಶ್ರೀ. ಆಗಾಖಾನರ ಅಂಗ್ಲ ಸೊಸೆಯಾದ ರಾಜಕುವರ ಅಲಿ ಖಾನರು ತಮ್ಮ ಇಬ್ಬರು ಚಿಕ್ಕಮಕ್ಕಳ ರಕ್ಷಣೆಗಾಗಿ ಸ್ಕಾಟ್ಲಂಡಿನ ಅಂಗರಕ್ಷಕರನ್ನು ಇಡುವರಂತೆ.

# ಗೋದಿಯ ಮೇಲೆ ಕರ.

ಕರಾಚಿ ಬಂದರಕ್ಕೆ ಆಸ್ಟ್ರೇಲಿಯಾದಿಂದ ಎರಡು ಗೋದಿಯ ಹಡಗಗಳು ಬರತಕ್ಕವುಗಳಿವೆಯಂತೆ. ಅಮೇರಿಕಾ, ರಶಿಯಾ, ಕಾನಡಾ, ಅರ್ಜಂಟಾಯಿನ್, ಇಟಲಿ, ಆಸ್ಟ್ರೇಲಿಯಾ ಮತ್ತು ಹಿಂದುಸ್ಥಾನಗಳಲ್ಲಿ ಗೋದಿಯು ಮುಖ್ಯವಾಗಿ ಬೆಳೆಯುತ್ತದೆ ಈ ಸಾರೆ ಗೋದಿಯ ಬೆಳೆಯು ಚೆನ್ನಾಗಿದ್ದು ಧಾನ್ಯವು ವಿಪುಲವಾಗಿದೆ. ಹಿಂದುಸ್ಥಾನದಲ್ಲಿ ಈ ವರ್ಷ ನೂರಕ್ಕೆ ೧೦ ರಂತೆ ಬೆಳೆಯು ಹೆಚ್ಚಿದೆ. ಈ ವರ್ಷ ಒಂದು ಕೋಟಿ ೫ ಲಕ್ಷ ಟನ್ ಗೋದಿ ಬೆಳೆಯಬಹುದೆಂದು ಊಹಿಸಲಾಗಿದೆ. ಕಳೆದ ವರ್ಷ ೪॥ ಲಕ್ಷ ಟನ್ ಗೋದಿ ಹಿಂದುಸ್ಥಾನದ ಹೊರಗೆ ಕಳುಹಿಸಲ್ಪಟ್ಟಿದೆ. ಈ ವರ್ಷ ಗೋದಿಯು ಇನ್ನು ಹೆಚ್ಚು ಶಿಲ್ಕು ಬೀಳುವ ಸಂಭವವಿದ್ದುದರಿಂದ ಪರದೇಶಗಳಿಂದ ಬರುವ ಗೋದಿಯ ಮೇಲೆ ಕರ ಹೇರಬೇಕೆಂದು ಕರಾಚಿ ವ್ಯಾಪಾರಸ್ಥರು ಹಿಂದುಸ್ಥಾನ ಸರಕಾರಕ್ಕೆ ಕೇಳಿಕೊಂಡಿದ್ದಾರೆ.

---

# ಸಾಕ್ಷರತೆಯ ಪ್ರಸಾರ.

ಸಂಯುಕ್ತ ಪ್ರಾಂತದಲ್ಲಿಯ ಕಾಂಗ್ರೆಸ್ ಮಂತ್ರಿಮಂಡಲದವರು ತಮ್ಮ ಪ್ರಾಂತದಲ್ಲಿರುವ ನಿರಕ್ಷರತೆಯನ್ನು ಹೊಡೆದಟ್ಟಿಸಲು ವಿಶೇಷ ಪ್ರಯತ್ನಿಸುತ್ತಿದ್ದಾರೆ. ವಯಸ್ಕರ ಶಿಕ್ಷಣವನ್ನು ಪ್ರಚಾರದಲ್ಲಿ ತರುವ ಉದ್ದೇಶದಿಂದ ಹಳ್ಳಿಗಳಲ್ಲಿ ೩೦೦೦ ವಾಚನಾಲಯಗಳನ್ನು ಸ್ಥಾಪಿಸಬೇಕೆಂದು ಸರಕಾರವು ನಿರ್ಧರಿಸಿದೆ. ಯೋಗ್ಯ ಪುಸ್ತಕಗಳನ್ನು ಆರಿಸಲು ಒಂದು ತಜ್ಞರ ಸಮಿತಿಯು ಏರ್ಪಟ್ಟಿದೆ. ಈ ಸಮಿತಿಯವರು ಆರಿಸಿದ ಪುಸ್ತಕಗಳನ್ನೇ ಸರಕಾರದವರು ಕ್ರಯಕ್ಕೆ ತೆಗೆದುಕೊಂಡು ವಾಚನಾಲಯಗಳಿಗೆ ಪೂರೈಸುವರು. ಇದರಿಂದ ಸಾಕ್ಷರತೆಯು ಹೆಚ್ಚಾಗುವದಲ್ಲದೆ ಜನಗಳ ಜ್ಞಾನವೂ ವೃದ್ಧಿಯಾಗುವುದು.

---

—ಕಾಂಗ್ರೆಸ್ಸಿನಲ್ಲಿ ಸಧ್ಯ ಬೇರೆ ಬೇರೆ ಉದ್ದೇಶಗಳಿಂದ ಅನೇಕರು ಸೇರಿದ್ದುದರಿಂದ ಕಾಂಗ್ರೆಸ್ಸಿನ ಸಂಖ್ಯಾಬಲವು ಹೆಚ್ಚಿದ್ದರೂ ಮೊದಲಿನಷ್ಟು ಶಿಸ್ತು ಕಾಂಗ್ರೆಸ್ಸಿನಲ್ಲಿಲ್ಲವೆಂದು ಮಹಾತ್ಮಾ ಗಾಂಧಿಯವರಿಗೆ ಕಂಡುಬಂದುದರಿಂದ ಅವರು ಕಾಂಗ್ರೆಸ್ಸಿನ ಕಾರ್ಯ, ಪ್ರತಿಷ್ಠೆ ಹೆಚ್ಚಿಸುವುದಕ್ಕಾಗಿ ಅಹಿಂಸಾಮಯ ಒಂದು ಯೋಜನೆಯನ್ನು ಸಿದ್ಧಗೊಳಿಸಲಿರುವರೆಂದೂ ಅದನ್ನು ಸಪ್ಟಂಬರ್ ೨೦ ನೆಯ ತಾರೀಖಿನ ದಿವಸ ಸೇರಲಿರುವ ವರ್ಕಿಂಗ್ ಕಮೀಟಿಯ ಮುಂದಿಡುವರೆಂದೂ ತಿಳಿದುಬರುತ್ತದೆ. ತಮ್ಮ ಯೋಜನೆ ಸಂಬಂಧವಾಗಿ ಶೇಗಾಂವಿಯಲ್ಲಿ ಶಾಂತರೀತಿಯಿಂದ ಮಹಾತ್ಮಾಜಿಯವರು ವಿಚಾರ ಮಾಡುತ್ತಿದ್ದಾರೆ.

—ಓರಿಸಾ ಪ್ರಾಂತದ ಗವ್ಹರ್ನರರಾದ ಸರ್. ಜಾನಹಬಕರವರು ತಮ್ಮ ಪತ್ನಿಯವರೊಂದಿಗೆ ನಾಲ್ಕು ತಿಂಗಳ ರಜೆ ತೆಗೆದುಕೊಂಡು ಇಂಗ್ಲಂಡಿಗೆ ಹೊರಟರು. ಸರ್. ಜಾನ್‌ಹಬಕ. ಸ್ಥಳದಲ್ಲಿ ಮದ್ರಾಸ ಸರಕಾರದ ಕಾರ್ಯಕಾರೀ ಮಂಡಳದಲ್ಲಿಯ ಮಿ. ಜಿ. ಟಿ. ಬೋಗರವರನ್ನು ಓರಿಸಾ ಪ್ರಾಂತದ ಗವ್ಹರ್ನರರನ್ನಾಗಿ ನಿಯಮಿಸಿದ್ದಾರೆ.

—ಮುಂಬೈಯಿಂದ "ಮುಂಬೈ ಕನ್ನಡಿಗ" ಎಂಬ ಕನ್ನಡ ವಾರ ಪತ್ರಿಕೆಯು ಶ್ರೀ. ಅನಂತ ನಾರಾಯಣ ಮಹಲೆಯವರ ಸಂಪಾದಕತ್ವದಲ್ಲಿ ಹೊರಟಿದೆ.

## " ಕರ್ನಾಟಕ ಆಯುರ್ವೇದ ವಿದ್ಯಾಪೀಠ "ಕ್ಕೆ

ನಾ|| ಡಾ|| ಗಿಲ್ಡರ
ಹಾಗೂ
ನಾ|| ಲಠ್ಠೆಯವರ ಆಗಮನ

ಮೊದಲೇ ನಿಶ್ಚಯವಾದ ಪ್ರಕಾರ ಆರೋಗ್ಯ ಮಂತ್ರಿಗಳಾದ ನಾ|| ಡಾ|| ಗಿಲ್ಡರ ಹಾಗೂ ಅರ್ಥಸಚಿವರಾದ ನಾ|| ಲಠ್ಠೆಯವರು, ಕರ್ನಾಟಕ ಆಯುರ್ವೇದ ವಿದ್ಯಾಪೀಠಕ್ಕೆ ತಾ. ೬-೮-೩೮ಕ್ಕೆ ಶನಿವಾರ ಮುಂಜಾನೆ ೧೧ ಘಂಟೆಗೆ ಸರಿಯಾಗಿ ಆಗಮಿಸಿದರು. ಶ್ರೀಯುತ ಬಸವಪ್ರಭು ಸರದೇಸಾಯಿ ಸಾಹೇಬರು ವಂಟಮುರಿ ಶ್ರೀಯುತರು ಬೆಳವಿ, ಗಂಗಾಧರರಾವ್ ದೇಶಪಾಂಡೆ, ವ್ಹಿ. ಬಿ. ಹಾಲಭಾವಿ; ಪೋತದಾರ, ಎಸ್. ಎನ್. ಅಂಗಡಿ, ಕೆ. ಎಸ್. ಪಾಟೀಲ, ಬಂಥಾರಿ, ಗೊಡಸೇ, ಸಾಖರೆ, ಮಮದಾಪುರ ಮತ್ತು ಉಪಮಂತ್ರಿಗಳಾದ ನಾ|| ಎಮ್. ಪಿ. ಪಾಟೀಲ ಮುಂತಾದ ಪ್ರಮುಖ ಅತಿಥಿಗಳು ಆಗಮಿಸಿದ್ದರು.

ಪ್ರಿನ್ಸಿಪಾಲರಾದ ಡಾ|| ಜೀರಗೆಯವರು ರಜೆಯ ಮೇಲಿದ್ದ ಕಾರಣ ಅವರ ಸ್ಥಾನದಲ್ಲಿ ಪ್ರಿನ್ಸಿಪಾಲರಾದ, ಡಾ|| ಗಿಂಡೆಯವರೂ ವಿದ್ಯಾಪೀಠದ ಪ್ರೆಸಿಡೆಂಟರಾದ ಎಮ್. ಎಸ್. ಬಾಳಿಯವರೂ ಮಂತ್ರಿವರ್ಯರನ್ನು ಬೇರೆ ಬೇರೆ ವರ್ಗಗಳ ನಿರೀಕ್ಷಣೆ ಮಾಡಿಸಿದನಂತರ, ಲಕ್ಚರಹಾಲ, ವನಸ್ಪತಿ ಉದ್ಯಾನವನ ಬೊಟ್ಯನಿಕಲ್‌ಹಾಲ, ಫಾರ್ಮಸಿ, ಔಷಧ ಸಂಗ್ರಹಾಲಯ, ದವಾಖಾನೆಗಳನ್ನು ಸಂದರ್ಶಿಸಿದರು. ನಂತರ ಡಾ|| ಗಿಲ್ಡರರವರಿಗೆ ಪ್ರಮುಖ ಸಭ್ಯಗೃಹಸ್ಥರ ಪರಿಚಯಮಾಡಿಕೊಡಲಾಯಿತು, ಪ್ರೆಸಿಡೆಂಟ ಬಾಳಿಯವರು ವಾರ್ಷಿಕ ವರದಿಯನ್ನು ಓದಿ ವಿದ್ಯಾಪೀಠದ ಮಾಹಿತಿಯನ್ನು ಹಾಗೂ ಅದಕ್ಕಿರುವ ಆರ್ಥಿಕಕೊರತೆ ಮುಂತಾದವನ್ನು ಶೃತ ಪಡಿಸಿದರು,

ಇದಕ್ಕೆ ಉತ್ತರವಾಗಿ ಡಾ|| ಗಿಲ್ಡರರವರು ವಿದ್ಯಾಪೀಠದ ಎಲ್ಲಾ ವ್ಯವಸ್ಥೆಯಬಗ್ಗೆ ಆನಂದವನ್ನು ವ್ಯಕ್ತಪಡಿಸಿದರು, ಹಾಗೂ ಶ್ರೀಯುತ ಬಸಪ್ಪಣ್ಣ ಕಂಕಣವಾಡಿ ಇವರು ಇಡೀ ಜೀವನದಲ್ಲಿ ಗಳಿಸಿದ ದ್ರವ್ಯದ ಉದಾರ ಹಾಗೂ ಯೋಗ್ಯದಾನದ ಬಗ್ಗೆ ಹರ್ಷವನ್ನು ವ್ಯಕ್ತಪಡಿಸಿದರು ಮತ್ತು ತಮ್ಮಿಂದಾದಷ್ಟು ಸಹಾಯ್ಯ ಮಾಡಲು ಅಭಿವಚನವನ್ನಿತ್ತರು.

ಆ ವೇಳೆಯಲ್ಲಿ ಶ್ರೀಯುತ ಬಾಳಿಯವರು, ಸಿದ್ದವ್ವಾ ತಂದಿ ಸಿದ್ದೀರಪ್ಪಾ ಹುಕ್ಕೇರಿ ಸಾ|| ಆಳಣಾವರ ತಾ|| ಧಾರವಾಡ ಇವರು ವಿದ್ಯಾಪೀಠಕ್ಕೆ ಮಾಡಿಸಿಕೊಟ್ಟ ಸುಮಾರು ನಾಲ್ಕುಸಾವಿರ ರೂ. ( ೪೦೦೦ ) ಆಸ್ತಿಯ ವೃತ್ಯುಪತ್ರದ ಬಗ್ಗೆ; .ಹಾಗೂ ಬಿ. ಎಸ್. ನಿಡಗುಂದಿ ಮಾಸ್ತರ ಸಾ|| ಗೋಡಗೇರಿ ಇವರು ಪ್ರತಿ ವರ್ಷದಂತೆ ೫೦ ರೂ. ಗಳನ್ನು, ಯೋಗ್ಯ ಬಡಲಿಂಗಾಯತ ವಿದ್ಯಾರ್ಥಿಗಳಿಗೆ ಶಿಷ್ಯವೃತ್ತಿಗಾಗಿ ಕೊಡಲೊಪ್ಪಿ ಈ ವರ್ಷದ ಹಣವನ್ನು ವಿದ್ಯಾಪೀಠಕ್ಕೆ ಒಪ್ಪಿಸಿದಬಗ್ಗೆಯೂ ಜಾಹೀರು ಮಾಡಿದರು

ಹಾರ ತುರಾಯಿಗಳಾದನಂತರ ವಿದ್ಯಾಪೀಠದ ವಿದ್ಯಾರ್ಥಿನಿಯರು "ವಂದೇಮಾತರಂ" ಗೀತೆಯನ್ನು ಹಾಡಿದರು. ವಿದ್ಯಾರ್ಥಿಗಳ ಜೈ ಜೈ ಕಾರದೊಡನೆ ಕಾರ್ಯಕ್ರಮವು ಸಮಾಪ್ತವಾಯಿತು.

---

—ಗಡಿನಾಡಿನ ಗುಡ್ಡುಗಾಡು ಪ್ರದೇಶದಲ್ಲಿ ಬಾಂಬು ಹಾಕಿದ ಸಂಬಂಧದಲ್ಲಿ ಶ್ರೀ. ಸತ್ಯಮೂರ್ತಿಯವರು ಒಂದು ನಿಲುವಳಿ ಸೂಚನೆಯನ್ನು ಕೊಟ್ಟಿದ್ದರು. ಅದಕ್ಕೆ ವ್ಹಾಯಿಸ್‌ರಾಯರು ಅಪ್ಪಣೆ ಹೀಯಲಿಲ್ಲ.

## ಮೈಂದರಗಿ.

ಭಗವಾನ್ ಬಸವೇಶ್ವರ ಜಯಂತಿಯ ಪುಣ್ಯ ದಿನದಲ್ಲಿ ಶ್ರೀ. ಶಂಕ್ರಪ್ಪ ಧನಶೆಟ್ಟಿ ವಿಜಾಪುರ ಇವರ ಪ್ರೋತ್ಸಾಹದಿಂದ ಇಲ್ಲಿ 'ಶಿವಾನುಭವ ಮಂಟಪ' ಎಂಬ ಹೆಸರಿನ ಸಂಸ್ಥೆಯು ಸ್ಥಾಪಿಸಲ್ಪಟ್ಟದೆ. ಈಗ ಶ್ರಾವಣ ಮಾಸವಿರುವುದರಿಂದ ಸಂಸ್ಥೆಯ ಕಡೆಯಿಂದ ಪ್ರತಿ ಸೋಮವಾರ ನಗರಸಂಕೀರ್ತನೆಯು ಒಳ್ಳೆ ಶಿಸ್ತಿನಿಂದ ಶಿವಶರಣರ ವಚನಗಳನ್ನು ಹಾಡುತ್ತ ಅನ್ನುತ್ತ ಹೊರಡುತ್ತದೆ. ನಗರ ಸಂಕೀರ್ತನೆಯಲ್ಲಿಯೇ ಬಸವೇಶ್ವರರ ಭಾವಚಿತ್ರವನ್ನು ನಂದೀಧ್ವಜವನ್ನು ಮೆರೆಯಿಸಲಾಗುತ್ತದೆ. ಧ್ವಜವಂದನೆಯ ಕಾರ್ಯಕ್ರಮವನ್ನು ಒಳ್ಳೇ ಉತ್ಸಾಹದಿಂದ ಜರುಗಿಸಲಾಗುತ್ತದೆ. ಪ್ರತಿ ರವಿವಾರ ಸಂಸ್ಥೆಯ ಸಭೆಯನ್ನು ಶ್ರೀ ರೇವಣಸಿದ್ಧ ಸ್ವಾಮಿ ಪಟ್ಟದ್ದೇವರು ಇವರ ಮಠದಲ್ಲಿ ಕೂಡಿಸುತ್ತಾ ಇದೆ. ಮಹಾಸಭೆಯ ಆಜ್ಞಾನುಸಾರ ಅವರ ಧ್ಯೇಯದಂತೆ ಜನಜಾಗೃತಿಯ ಕಾರ್ಯವನ್ನು ಅತ್ಯಂತ ಉತ್ಸಾಹದಿಂದ ಮಾಡುತ್ತಾ ಇದೆ. ಸಂಸ್ಥೆಯ ಸಭಾಸದರನ್ನು ಹೆಚ್ಚಿಸುವ ಕೆಲಸವು ನಡೆದಿದೆ. ಕೆಳಗಿನಂತೆ ಸಂಸ್ಥೆಯ ಕಾರ್ಯಕಾರೀಮಂಡಳವನ್ನು ನಿಯಮಿಸಲಾಗಿದೆ.

ಪ್ರೆಸಿಡೆಂಟ- ಶ್ರೀಮಂತ ಮಲ್ಲಪ್ಪ ಸಂಗಪ್ಪ ಹೋಳಿಕಟ್ಟಿ ವ್ಹಾ. ಪ್ರೆಸಿಡೆಂಟ್- ಶ್ರೀ. ಮಲ್ಲಿಕಾರ್ಜುನಪ್ಪ ಸಿದ್ಧಲಿಂಗಪ್ಪ ಪಡಸಲಗಿ, ಚೇಅರಮನ್- ಶ್ರೀಯುತ ಕಲ್ಲಪ್ಪ ಗುರಬಸಪ್ಪ ಬಿಜ್ಜರಗಿ ಸೆಕ್ರೆಟರಿಗಳು- ಶ್ರೀ. ನಾಗಪ್ಪ ಚೆನ್ನಪ್ಪ ತೋಟದ ಮತ್ತು ಶ್ರೀ. ಗುರುಬಸಪ್ಪ ಚನ್ನಮಲ್ಲಪ್ಪ ಜೊಳ್ಳಿ

ಸಭಾಸದರು- ಸಾತಲಿಂಗಪ್ಪ, ವೀರಪ್ಪ ಸಾಬಾ, ಶಂಕರಪ್ಪ ಯಂಕಪ್ಪ ಗೊಬ್ಬೂರ, ಬಸಪ್ಪ ಸಿದ್ಧಪ್ಪ ಕಲ್ಯಾಣಶೆಟ್ಟಿ, ಬಸಲಿಂಗಪ್ಪ ರಾಮಣ್ಣಪ್ಪ ನಾಗೂರ, ಚಂದಪ್ಪ ಗುರಬಸಪ್ಪ ಭೂಸನೂರ ಚನಬಸಪ್ಪ ಅಡಿವೆಪ್ಪ ಹೋಳಿಕಟ್ಟಿ, ನಾಗಪ್ಪ ಸಿದ್ಧಲಿಂಗಪ್ಪ ಪಡಸಲಗಿ, ಗುರುಪಾದಪ್ಪ ವೀರಪ್ಪ ಅಮಾಣೆ, ಶಿವಯೋಗಪ್ಪ ಶರಣಪ್ಪ ಲೋಣಿ.

ಮಹಾಸಭೆಯ ಆಜ್ಞೆಯಂತೆ ಕೆಳಗೆ ಬರೆದ ಮಹನೀಯರನ್ನು ಮಹಾಸಭೆಯ ಮಧ್ಯವರ್ತಿ ವರ್ಕಿಂಗ್ ಕಮಿಟಿಯ ಸಭಾಸದರನ್ನಾಗಿ ಆರಿಸಿ ಮಹಾಸಭೆಯ ಚೇರಮನ್‌ರಾದ ರಾ. ಸಾ. ಪಿ. ಜಿ. ಹಳಕಟ್ಟಿಯವರಿಗೆ ತಿಳಿಸಲಾಗಿದೆ.

(೧) ಶ್ರೀ. ಮಲ್ಲಪ್ಪ ಸಂಗಪ್ಪ ಹೋಳಿಕಟ್ಟಿ (೨) ಮಲ್ಲಿಕಾರ್ಜುನಪ್ಪ ಸಿದ್ಧಲಿಂಗಪ್ಪ ಪಡಸಲಗಿ (೩) ಸಾತಲಿಂಗಪ್ಪ ವೀರಪ್ಪ ಸಾಬಾ (೪) ಗುರುಬಸಪ್ಪ ಚನಮಲ್ಲಪ್ಪ ಜೊಳ್ಳಿ (೫) ಬಸಪ್ಪ ಸಿದ್ಧಪ್ಪ ಕಲ್ಯಾಣಶೆಟ್ಟಿ.

ತಾ. ೧-೮-೩೮ ನೆಯ ದಿವಸ ತರುಣ ಸಂಘ ಮತ್ತು ಶಿವಾನುಭವ ಮಂಟಪ ಸಂಸ್ಥೆಗಳ ಪರವಾಗಿ ಶ್ರೀ. ಚವಡಪ್ಪ ಶಿಖರಿ ಇವರ ಅಧ್ಯಕ್ಷತೆಯಲ್ಲಿ ಸಭೆ ಸೇರಿದ್ದಿತು. ವೀರಶೈವ ಮತತತ್ವದ ಮೇಲೆ ಶ್ರೀ. ಕರಬಸಪ್ಪ ತೋಟದ, ಶ್ರೀ. ಶಂಕರಪ್ಪ ಗೊಬ್ಬೂರ, ಶ್ರೀ. ಗುರುಬಸಪ್ಪ ಜೊಳ್ಳಿ, ಸಾತಲಿಂಗಪ್ಪ ಸಾಬಾ, ಶ್ರೀ. ಮಲ್ಲಿಕಾರ್ಜುನಪ್ಪ ಪಡಸಲಗಿ, ಇವರು ಭಾಷಣಮಾಡಿದರು. ಜನಗಳ ಮನಸ್ಸಿನ ಮೇಲೆ ವಿಶೇಷ ಪರಿಣಾಮವಾಗಿದೆ.

ಸೆಕ್ರೆಟರಿ
ನಾಗಪ್ಪ ಚೆನ್ನಪ್ಪ ತೋಟದ.

## ನಾ. ಗಿಲ್ಡರ ಮತ್ತು ನಾ. ಲಠ್ಠೆಯವರ ಸುಸ್ವಾಗತವು.

ಮೊದಲೇ ಗೊತ್ತುಮಾಡಿದಂತೆ ತಾ. ೬-೮-೩೮ ನೆಯ ದಿವಸ ಸರಿಯಾದ ವೇಳೆಗೆ ರೇಲ್ವೆ ಗಾಡಿಯಿಂದ ಹುಕ್ಕೇರಿ ರೋಡಿಗೆ ಆರೋಗ್ಯ ಖಾತೆಯ ಮಂತ್ರಿಗಳಾದ ನಾ. ಗಿಲ್ಡರ ಮತ್ತು ಅರ್ಥ ಸಚಿವ ನಾ. ಲಠ್ಠೆಯವರು ಆಗಮಿಸಿದರು. ಸ್ಟೇಶನ್ನಿನಲ್ಲಿ ತಮ್ಮನ್ನು ಕಾಯ್ದುಕೊಂಡು ನಿಂತಿರುವ ಜನಸ್ತೋಮವನ್ನು ಕಂಡು ಸಂತೋಷಚಿತ್ತರಾಗಿ ಅವರು ಮಾಡಲ್ಪಟ್ಟ ಪೂಮಾಲೆಯ ಸತ್ಕಾರಗಳನ್ನು ಸ್ವೀಕರಿಸಿ ತಮ್ಮ ಆನಂದ ವಾಣಿಯಿಂದ ಅವರನ್ನೆಲ್ಲ ಸಂತೋಷಗೊಳಿಸಿದರು,

ಆ ಮೇಲೆ ನಾಮದಾರರಿಬ್ಬರೂ "ಕರ್ನಾಟಕ ಹೆಲ್ಥ ಇನ್ಸ್ಟಿಟ್ಯೂಟ"ಕ್ಕೆ ಭೆಟ್ಟಿ ಕೊಟ್ಟು ಅಲ್ಲಿಯ ಚಹಾಪಾನವನ್ನು ತೀರಿಸಿಕೊಂಡು ಶ್ರೀ ಜಗದ್ಗುರು ಗುರುಸಿದ್ಧರಾಜ ಯೋಗೀಂದ್ರ ಮಹಾಸ್ವಾಮಿಗಳವರು ಮೂರು ಸಾವಿರ ಮಠ ಹುಬ್ಬಳ್ಳಿ ಇವರು ಧರ್ಮಾರ್ಥವಾಗಿ ಸಾಗಿಸಿದ ದವಾಖಾನೆಗೆ ಬಂದು ಅಲ್ಲಿಯ ಎರಡು ವರ್ಷಗಳಿಂದಲೂ ಸಾಗಿದ ದವಾಖಾನೆಯ ಕೆಲಸವನ್ನು ಅಲ್ಲೇ ಸ್ಟೇಶನ್ನಿನಲ್ಲಿ ಪಶ್ಚಿಮ ಭಾಗಕ್ಕೆ ಉತ್ತಮವಾದ ಹವೆಯ ಸ್ಥಳದಲ್ಲಿ ಕಟ್ಟುತ್ತಿರುವ ಹೊಸದಾದ ಧರ್ಮಾರ್ಥ ದವಾಖಾನೆಯನ್ನು ಕಂಡು ತಮಗಾದ ಆನಂದವನ್ನು ವ್ಯಕ್ತಮಾಡಿ ಅಲ್ಲಿಯ ಡಾಕ್ಟರರು ಮಾಡಿದ ಹಾರ ಸತ್ಕಾರವನ್ನು ಸ್ವೀಕರಿಸಿ ಮೋಟಾರಿನಿಂದ ಬೆಳಗಾವಿಗೆ ಹೋದರು.

---

## ದುಃಖಪ್ರದರ್ಶನ.

ದಿವಂಗತ ಶ್ರೀ. ಶಾಂತವೀರಪ್ಪ ಕೋಟೂರು ಧಾರವಾಡ ದಿವಂಗತ ಸರ್. ಕೆ. ಪಿ. ಪುಟ್ಟಣ್ಣಶೆಟ್ಟರ ಇವರ ನಿಧನದ ಬಗ್ಗೆ ತಾ. ೩೦-೭-೩೮ ನೆಯ ದಿವಸ ಶ್ರೀ ಮಹಾಂತಸ್ವಾಮಿಗಳವರ ಮಠದಲ್ಲಿ ಕಲ್ಯಾಣದ ಜಡಿಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಸಭೆ ಕೂಡಿ ಕೆಳಗೆ ಬರೆದ ಪ್ರಕಾರ ಠರಾವು ಸರ್ವಾನುಮತದಿಂದ ನಿರ್ಣಯಸಲ್ಪಟ್ಟಿತು.

[೧] ದಿವಂಗತ ಶ್ರೀ. ಶಾಂತವೀರಪ್ಪ ಕೋಟೂರ ರಿಟಾಯರ್ಡ ಸಬ್‌ರಜಿಸ್ಟರ್ ಧಾರವಾಡ ಇವರು ಶಿವೈಕ್ಯರಾದ ಬಗ್ಗೆ ದುಃಖಪ್ರದರ್ಶನ ವ್ಯಕ್ತಪಡಿಸುವದಲ್ಲದೆ ಅವರ ಆತ್ಮಕ್ಕೆ ಪರಮೇಶ್ವರನು ಶಾಂತಿಯನ್ನೀಯಲೆಂದೂ ಮತ್ತು ಅವರ ಮನೆಯವರಿಗಾದ ದುಃಖದಲ್ಲಿ ನಾವೆಲ್ಲರು ಭಾಗಿಗಳಾಗಿರುತ್ತೇವೆಂದು ಈ ಸಭೆಯು ಪ್ರಕಟಿಸುತ್ತದೆ.

[೨] ದಿವಂಗತ ಸರ್. ಕೆ. ಪಿ. ಪುಟ್ಟಣ್ಣ ಶೆಟ್ಟರು ಬೆಂಗಳೂರು ಇವರ ನಿಧನದಿಂದ ನಮ್ಮ ಸಮಾಜಕ್ಕೆ ಮುಖಂಡರೂ ದಾನಶೂರರೂ ವಿಶ್ವಪ್ರೇಮಿಗಳೂ ಉದ್ಯೋಗಕಲಾಪ್ರೇಮಿಗಳೂ ಆದಂಥ ವಂಶರತ್ನವನ್ನು ಕಳೆದಂತೆ ಆಗಿದೆ. ಮೃತರ ಕುಟುಂಬದವರಿಗಾದ ದುಃಖದಲ್ಲಿ ನಾವೆಲ್ಲರು ಭಾಗಿಗಳಾಗಿರುವೆವೆಂದು ಪ್ರಕಟಿಸುತ್ತೇವೆ. ಶ್ರೀ ಪರಮಾತ್ಮನು ಮೃತರ ಆತ್ಮಕ್ಕೆ 'ಶಾಂತಿಯನ್ನೀಯಲೆಂದು ಪ್ರಾರ್ಥಿಸುತ್ತೇವೆ.

ಬಶೆಟ್ಟೆಪ್ಪ ಅಡಿವೆಪ್ಪ ಬಳೂಟಗಿ
ಕಾರ್ಯದರ್ಶಿ ವಿ. ತ. ಸಂಘ ಹುನಗುಂದ.

|| ಓಂ ಶ್ರೀಗುರು ಬಸವಲಿಂಗಾಯನಮಃ ||

## ಜಾಹೀರ ವಿನಂತಿ.

ಬಾಗೇವಾಡಿ ತಾಲೂಕ ಪೈಕಿ ಮೋಜೆ ಯರನಾಳದ ಶ್ರೀ ವಿರಕ್ತಮಠದಲ್ಲಿ ಯರನಾಳ ಭಕ್ತಮಂಡಳಿಯ ಇಚ್ಛಾನುಸಾರವಾಗಿ ಶ್ರೀ ಮನ್ನಿರಂಜನ ಸುಕ್ಷೇತ್ರ ಬಂಥನಾಳ ಶ್ರೀ ಶಿವಯೋಗಿಗಳವರಿಂದ ಶ್ರೀ ಮದ್ವೀರಶೈವ ಆದ್ಯ ಜಗದ್ಗುರು ಪ್ರಭುಲಿಂಗಲೀಲಾ ಪುರಾಣ ಪ್ರವಚನವು ಇದೇ ಶ್ರಾವಣ ಶುದ್ಧ ಪಂಚಮಿ ತಾ. ೩೧-೭-೩೮ ರವಿವಾರದಿಂದ ಪ್ರಾರಂಭವಾಗಿ ಭಾದ್ರಪದ ಶುದ್ಧ ಪಂಚಮಿ ಮಂಗಳವಾರ ದಿವಸ ಮಹಾಗಣಾರಾಧನೆಯೊಡನೆ ಭಾದ್ರಪದ ಶುದ್ಧ ಷಷ್ಠಿ ತಾ. ೩೧-೮-೩೮ ಬುಧವಾರ ದಿವಸ ಸಮಾಪ್ತಿಗೊಳಿಸಲ್ಪಡುವದು. ಪ್ರಯುಕ್ತ ತಾವುಗಳೆಲ್ಲರು ಬಂದು ಈ ಮಂಗಲಕಾರ್ಯದ ಶ್ರವಣಭಾಗಿಗಳಾಗಬೇಕೆಂದು ಅಪೇಕ್ಷಿಸುವ.

ವ್ಯವಸ್ಥಾಪಕ ಮಂಡಳಿ ಯರನಾಳ.

(೧) ಅಪ್ಪಾಸಾಹೇಬ ಪಾಟೀಲ (೨) ಸಿದಗೊಂಡಪ್ಪ ಬು. ಪಾಟೀಲ (೩) ರಾಮಣ್ಣಾ ಜಾಲಗೇರಿ (೪) ಸಿದ್ಧಲಿಂಗಪ್ಪ ಕಾಳಗಿ (೫) ಕಲ್ಲಪ್ಪ ಹಣಮಗೊಂಡ (೬) ಪರುಗೊಂಡಪ್ಪ ಪಾಟೀಲ (೭) ಮದ್ದುರಾವ ಕುಲಕರ್ಣಿ (೮) ರಾಚಪ್ಪ ಮಲಕಶೆಟ್ಟಿ (೯) ಬಸವಪ್ಪ ಪಡಶೆಟ್ಟಿ (೧೦) ಬಾಬಣ್ಣಾ ಶೇಗುಣಸಿ

ಅಧ್ಯಕ್ಷರು,
ಸೋಮನಗೌಡರು ಪಾಟೀಲ
ಮನಗೂಳಿ.

---

## ಗುಳೇದಗುಡ್ಡದಲ್ಲಿ ಶ್ರೀ ವ್ಯಾಸೋಕ್ತ ಸಂಸ್ಕೃತ ಬಸವಪುರಾಣದ ವಿಜೃಂಭಣೆಯು.

ಶ್ರೀ ಮಜ್ಜಗದ್ಗುರು ಗುರುಸ್ಥಲದ ಶ್ರೀ ಗುರುಸಿದ್ಧೇಶ್ವರ ಮಠದಲ್ಲಿ ಇದೇ ಶ್ರಾವಣ ಶುದ್ಧ ೧ ಗುರುವಾರ ದಿವಸ ಶ್ರೀ ವ್ಯಾಸೋಕ್ತ ಸಂಸ್ಕೃತ ಬಸವಪುರಾಣವು ಪ್ರಾರಂಭವಾಗಿ ಇವತ್ತಿನವರೆಗೆ ನಿರ್ವಿಘ್ನವಾಗಿ ಸಾಗಿ ತಾ. ೫-೮-೧೯೩೮ ನೇ ದಿವಸ (ಶುಕ್ರವಾರ) ಶ್ರೀ ಬಸವೇಶ್ವರನ ಜನನವಿದ್ದ ಮೂಲಕ ಇಲ್ಲಿಯ ಸಮಸ್ತ ಭಕ್ತಮಂಡಳಿಯವರು ಕೂಡಿ ಭಕ್ತಿ ಪೂರ್ವಕವಾಗಿ ಶ್ರೀ ಬಸವೇಶ್ವರನ ಜನನ ಕಾರ್ಯವನ್ನು ಬಹು ವಿಜೃಂಭಣೆಯಿಂದ ಸಾಂಗಗೊಳಿಸಿದರು.

ಅದೇ ದಿವಸ ಶ್ರೀ ಗುರುಸಿದ್ಧೇಶ್ವರ ಮಠದಲ್ಲಿ ಪ್ರಾಂತಃ ಕಾಲಕ್ಕೆ ಶ್ರೀ ಮದ್ಗುರುಸಿದ್ಧ ಪಟ್ಟಸ್ವಾಮಿಗಳವರಿಂದ ನೀಲಕಂಠಪ್ಪಾ ಕಲಬುರ್ಗಿ, ಕಾಶೀನಾಥ ಮರಬದ, ಅನ್ನದಾನಪ್ಪಾ ಸಣಪಾ, ಪ್ರಭಣ್ಣಾ ತಿಪ್ಪಾ, ರಾಚಪ್ಪಾ ಶೇಕಾ ಮತ್ತು ಚನಬಸಪ್ಪಾ ಶೇಕಾ ಈ ಆರು ವಟುಗಳು ಮಾಹೇಶ್ವರ ದೀಕ್ಷಾಸಂಸ್ಕಾರ, ಮತ್ತು ಸಂಗಪ್ಪಾ ಮೂರ್ತಿ, ಬಸಪ್ಪಾ ಜವಳಗಿ, ಮತ್ತು ಗಂಗಪ್ಪಾ ಚಳಮರದ ಈ ಮೂವರು ದೀಕ್ಷಾಸಂಸ್ಕಾರವನ್ನು ಹೊಂದಿದರು.

ಇದಲ್ಲದೆ ಶ್ರೀ ಮಜ್ಜಗದ್ಗುರು ಗುರುಸಿದ್ಧೇಶ್ವರ ಮಠದಲ್ಲಿ ಪಾಠಶಾಲೆಯಲ್ಲಿ ಸಂಸ್ಕೃತ ಅಂದರೆ ವ್ಯಾಕರಣ, ವೇದಾಂತ ಸಾಹಿತ್ಯ, ಮತ್ತು ವೇದಾಧ್ಯಯನ, ಇವುಗಳ ಅಭ್ಯಾಸವು ಜರಗುತ್ತಿದ್ದು ಹಿಂದಿ, ಇಂಗ್ಲಿಷ, ಕನ್ನಡ ಮತ್ತು ಮರಾಠಿ ಮೊದಲಾದ ಭಾಷೆಗಳ ಅಭ್ಯಾಸವೂ ಸಹ ದಿನಾಲು ನಡೆಯುತ್ತದೆ. ಅಪೇಕ್ಷೆಯುಳ್ಳ ವಿದ್ಯಾರ್ಥಿಗಳು ಅಭ್ಯಾಸಮಾಡಲಿಕ್ಕೆ ಬರಬಹುದು. ಮತ್ತು ಅನಾಥ ವಿದ್ಯಾರ್ಥಿಗಳಿಗೋಸ್ಕರ ಬೋರ್ಡಿಂಗ ಸಹ ಇರುವದು.

ಸಮಾಜಸೇವಕ,
ತಾ. ೬-೮-೧೯೩೮. ಶ್ರೀ. ಪ. ನೀಲಕಂಠಶಾಸ್ತ್ರಿ ಪುರಾಣಿಕ

---

## ಕವುತಾಳ (ಜಿಲ್ಲೆ ಬಳ್ಳಾರಿ.)

ಶ್ರೀ ಶರಣ ಬಸವಾರ್ಯ ಪುರಾಣ ಪ್ರಾರಂಭ ಸಮಾರಂಭ

ಇಲ್ಲಿಯ ಈಶ್ವರ ಸ್ವಾಮಿ ದೇವಾಲಯದಲ್ಲಿ, ಶ್ರಾವಣ ಶು. ೬ ಶ್ರೀ ಮುರಘರಾಜ ನಿರಂಜನ ಪಂಚಾಕ್ಷರಿ ಸ್ವಾಮಿಗಳವರ ನೇತೃತ್ವದಲ್ಲಿ ಮೇಲಿನ ಪುರಾಣ ಪ್ರಾರಂಭ ಸತ್ಕಾರ್ಯವು ಬಹು ಯಶಸ್ವಿಯಾಗಿ ಶ್ರೀ ಪಂಡಿತ ಗುರುಲಿಂಗದೇವರು ಮತ್ತು ಪೊನ್ನೂರು ಪೊಂಪಯ್ಯ ಸ್ವಾಮಿಗಳವರಿಂದಲೂ ಜರುಗಿಸಲ್ಪಟ್ಟಿತು. ಶ್ರೀಗಳವರ ಮಹಾಸನ್ನಿಧಿಯಲ್ಲಿ ಭಕ್ತವೃಂದವು ನಿತ್ಯವೂ ನೆರೆದು ಪುರಾಣ ಸಂಗೀತ ನೃತ್ಯ ಪ್ರವಚನಂಗಳಲ್ಲಿ ಮಗ್ನವಾಗಿ ಕೃತಕೃತ್ಯವಾಗುತ್ತಿರುವದು. ಇಲ್ಲಿಯ ವೀರಶೈವ ಸಮಾಜ ಬಾಂಧವರು ಏಳಿಗೆಯ ಹೆದ್ದಾರಿಯಲ್ಲಿ ಮುನ್ನಡಿ ಇಟ್ಟಿದುದಕ್ಕೆ ತುಂಬಾ ಸಂತೋಷವಾಗುತ್ತದೆ. ಇನ್ನು ಮುಂದೆಯಾದರೂ ಉಚಿತ ವಾಚಲಾಯ, ಧರ್ಮ ಗ್ರಂಥಾಲಯ ಸ್ಥಾಪನೆ, ಬಡಬಗ್ಗರಾದ ವಿದ್ಯಾರ್ಥಿಗಳಿಗೆ ಉಚಿತ ವೇತನಾನುಕೂಲತೆ, ಬಸವ ಮಹಾನುಭಾವನ ವಚನ ಪ್ರಸಾರ, ವಿದ್ಯಾವ್ಯಾಪ್ತಿ, ಧರ್ಮ ಜಾಗೃತೀಕಾರಕ ಇನ್ನಿತರ ಸಮಾಜೋನ್ನತಿ ಕಾರ್ಯಕಲಾಪಂಗಳಿಗೆ ಮನಸ್ಸು ಕೊಡುವಂತೆ, ಪರಮಾತ್ಮನ ಪ್ರೇರಣೆಯಾಗಲೆಂದು ಹಾರೈಸುತ್ತೇನೆ.

ಕವುತಾಳ (ಬಳ್ಳಾರಿ) ತಾ. ೮-೮-೩೮ ) ಹಂಪಣ್ಣಾ ಕರಿಬಸಪ್ಪ ಕಾರಟಗಿ.
ಸ್ಕೂಲಾಮಾಸ್ತರ

---

## ಕಾನಕಾನಹಳ್ಳಿ.

ಕಾನಕಾನಹಳ್ಳಿ ವೀರಶೈವ ತರುಣ ಸಂಘದವರು ತಾ. ೨೭-೭-೩೮ ನೆಯ ದಿವಸ ಸಭೆಯಲ್ಲಿ ಈ ಕೆಳಗಿನಂತೆ ಗೊತ್ತುವಳಿಮಾಡಿದರು.

ದಾನಶೂರರೆಂದು ಶಾಶ್ವತ ಕೀರ್ತಿಗಳಿಸಿದ ರಾಜಸಭಾಭೂಷಣ ದಿವಾನ್ ಬಹದ್ದೂರ ಡಾಕ್ಟರ್ ಸರ್. ಕೆ. ಪಿ. ಪುಟ್ಟಣ್ಣ ಶೆಟ್ಟರವರು ಕಳೆದ ತಾ. ೨೩-೭-೩೮ ನೇ ಶನಿವಾರ ಸಂಜೆ ನಿಧನರಾದುದು ಈ ಸಂಘಕ್ಕೆ ಅತ್ಯಂತ ವಿಷಾದವನ್ನುಂಟುಮಾಡಿರುತ್ತದೆ. ಮೃತರ ಆತ್ಮಕ್ಕೆ ಶಾಂತಿಯೂ ಅವರ ಕುಟುಂಬವರ್ಗಕ್ಕೆ ದುಃಖ ಸಮಾಧಾನವನ್ನು ಉಂಟಮಾಡಲೆಂದು ಈ ಸಭೆಯು ಜಗದ್ವ್ಯಾಪಕನಾದ ಭಗವಂತನನ್ನು ಪ್ರಾರ್ಥಿಸುತ್ತದೆ. ಈ ಸಂತಾಪ ಸೂಚಕವನ್ನು ಅವರ ಕುಟುಂಬವರ್ಗಕ್ಕೆ ತಿಳುಹಿಸಬೇಕೆಂದು ತೀರ್ಮಾನಿಸಲಾಯಿತು.

ಪಿ. ಎಸ್. ನಂಜಪ್ಪ.
ಸೆಕ್ರೆಟರಿ.

# ಬೀಸುವ ಹಾಡು.

(ಬರೆದವರು— ಗದ್ದಗಿಮಠದ ಬಸವಣ್ಣ ಕೇರೂರು
ಬಸವೇಶ್ವರ ಆಂಗ್ಲ ಶಾಳಾ ಬಾಗಲಕೋಟೆ.)

ನಾವು ಕನ್ನಡ ನಾಡವರ| ತಾಯಿ ಚಳವಳಿಮಾಡವರ ||ಪಲ್ಲ||

ಕನ್ನಡ ನಾಡವರು| ನಾವು ಚಳವಳಿ ಮಾಡವರ। ಮಾತೆಯು ಪರತಂತ್ರ, ನೀಗವರ| ಅಹ ನೀಗವರ| ನಾವು ಕನ್ನಡ ನಾಡವರ ||೧||

ಭರತನಾಳಿದ ದೇಶ | ಹೊನ್ನಿನ ಸೊಬಗುಳ್ಳ ದೇಶ | ಮುತ್ತಿನ ಭಾಂಡರ ನಮ್ಮ ದೇಶ ಕೇಳ ತಂಗಿ| ನಾವು ಕ ನಾಡವರ ||೨||

ವೇದ ಹುಟ್ಟಿದ ನಾಡ। ಆರ್ಯರಾಳಿದ ಭೂಮಿ | ಸೊಬಗೆಲ್ಲ ತುಂಬಿತ್ತು| ತುಂಬಿ ಹೊರಚೆಲ್ಲಿತ್ತು| ನಾವು ಕ. ನಾಡವರ ||೩||

ಸ್ತ್ರೀಯ ರತ್ನಗಳೆಷ್ಟು| ವರಪುರುಷರು ಎಷ್ಟು | ಕಷ್ಟವ ನೆಲ್ಲ ಸಹಿಸಿದರು| ರಾಜ್ಯವನಾಳಿದರ | ನಾವು ಕನ್ನಡ ನಾಡವರ ||೪||

ಕ್ಷತ್ರಿಯರ ವಂಶದ| ಮಿನ್ನ ಮಿನ್ನ ರಾಜರು| ನಮ್ಮ ದೇಶವನಾಳಿದರು| ಕಾಪಾಡಿದರ| ನಾವು ಕನ್ನಡ ನಾಡವರ ||೫||

ಉತ್ತರದಲ್ಲಿ ಹರುಷ| ಮಿಗಿಲಾದ ಚಕ್ರವರ್ತಿ| ಗೆದ್ದಾನ ದಕ್ಷಿಣದ। ಪುಂಡ ಪುಲಕೇಶಿ| ನಾವು ಕನ್ನಡ ನಾಡವರ ||೬||

ಚಾಲುಕ್ಯರ ಕೀರ್ತಿ। ಹಬ್ಬುತ ನಡೆಯಿತ। ಕೇಳೀತ ಜಗವೆಲ್ಲಾ। ದೇಶದ ವೈಭವನ| ನಾವು ಕನ್ನಡ ನಾಡವರ ||೭||

ರಜಪೂತರ ವಂಶ| ಆಳೀತ—ಹಿಂದೂ ದೇಶ| ಶಿಖರಕ್ಕೆ ಮುಟ್ಟಿತ್ತು| ನಾಡಿನ ಐಶ್ವರ್ಯ| ನಾವು ಕನ್ನಡ ನಾಡವರ ||೮||

ಮಧ್ಯ ಏಸಿಯಾದ ಜನರ| ಹೆಸರೀಲೆ ಮೊಗಲರ। ಕೇಳುತ ಬಂದಾರ| ಸಿರಿಸಂಪತ್ತು| ನಾವು ಕನ್ನಡ ನಾಡವರ ||೯||

ಮೊಗಲ ಪಠಾಣರ। ಒಂದಾಗಿ ಕೂಡ್ಯಾರ| ಹಚ್ಚ್ಯಾರ ಜಗಳವಾ| ಅರಸರ ಒಳಗ| ನಾವು ಕನ್ನಡ ನಾಡವರ ||೧೦||

ಗೆದ್ದಾರ ಹಿಂದೂದೇಶಾ| ಮಾಡ್ಯಾರ ತಮ್ಮ ದೇಶಾ| ಕಟ್ಟಿಸ್ಯಾರ ರೊಕ್ಕದಿಂದ| ಮೀನಾರ ಮಸೀದಿಗಳ| ನಾವು ಕ. ನಾಡವರ ||೧೧||

ಮೊಗಲರ ಕಾಲಕ| ಪಶ್ಚಿಮ ನಾಡವರಾ| ಸಂಪತ್ತಿನ ದೇಶವೆಂದು| ಕೇಳಿದರ| ನಾವು ಕನ್ನಡ ನಾಡವರ ||೧೨||

ಫಿರಂಗಿ ಜನರಾ| ವ್ಯಾಪಾರಮಾಡುದಕ| ಕಷ್ಟಬಟ್ಟು ತಗಿದಾರ| ಸಮುದ್ರದ ದಾರಿಯ| ನಾವು ಕನ್ನಡ ನಾಡವರ ||೧೩||

ಅದರೊಳಗೆ ಶ್ರೇಷ್ಠರಾ| ಇಂಗ್ಲೀಷ ಜನರಾ| ಹಂಚಿಕೆ ಇಂದಲೀ| ರಾಜ್ಯವ ಗಳಿಸ್ಯಾರ| ನಾವು ಕನ್ನಡ ನಾಡವರ ||೧೪||

ಕಾಲಾಂತರದಾಗ। ಇಡೀ ದೇಶ ಗೆದ್ದಾರ| ನಿಲಸ್ಯಾರ ತಮ್ಮ ಧ್ವಜವಾ ಇಂದಿನ ವರೆಗ। ನಾವು ಕನ್ನಡ ನಾಡವರ ||೧೫||

ಹೊನ್ನಿನ ದೇಶದ| ಹೊನ್ನೆಲ್ಲಾ ಒಯ್ದ್ಯಾರ| ಕೊಟ್ಟ್ಯಾರ ಕೊಟ್ಟ್ಯಾರ| ಕೈಯಾಗ ಕಾಗದ| ನಾವು ಕನ್ನಡ ನಾಡವರ ||೧೬||

ಧರ್ಮ ಧರ್ಮದೊಳಗ| ಜಗಳವ ಹಚ್ಚ್ಯಾರ| ನಗಲಿಕೆ ಹತ್ಯಾರ| ಇಂಗ್ಲೀಷ ಜನರಾ| ನಾವು ಕನ್ನಡ ನಾಡವರ ||೧೭||

ಮೂವತ್ತಾರು ಕೋಟಿ| ಭಾರತ ಪುತ್ರರೇ। ಜಾತಿಭೇದವಳಿದು ಸ್ವಾತಂತ್ರ ಪಡಿಯರೋ| ನಾವು ಕನ್ನಡ ನಾಡವರ ||೧೮||

ಸರೋಜನಿದೇವಿಯರು। ನಮ್ಮ ಹೆಣ್ಣುಮಕ್ಕಳಲ್ಲಿ। ತುಂಬ್ಯಾರ ತುಂಬ್ಯಾರ| ದೇಶದಭಿಮಾನ| ನಾವು ಕನ್ನಡ ನಾಡವರ ||೧೯||

ಎಂಥಾ ಶ್ಯಾಣಾ ಮಹಾತ್ಮಾ ಗಾಂಧಿ| ಲೋಕಕೆಲ್ಲ ಅವನ ತಂದಿ| ದೇಶದಲ್ಲಿ ಹುಟ್ಟಿದನ। ಚಳವಳಿ ತಂದಾನ| ನಾವು ಕನ್ನಡ ನಾಡವರ ||೨೦||

ಸಿಂದಿ ಸೆರೆಯ ಕುಡಿತ| ಅಫು ಗಾಂಜಾದ ಸೇತಾ| ಚಹಾ ಕಾಫಿ ಕುಡಿಯುದನಾ| ಕಟ್ಟಿಮಾಡ್ಯಾನ। ನಾವು ಕನ್ನಡ ನಾಡವರ ||೨೧||

ನೇಹರು ಪಟೇಲರ। ಹಿಂದುಗಳ ಮುಂದಾಳ| ಸರಕಾರಕ ಕೇಳ್ಯಾರ| ಸ್ವರಾಜ್ಯ ಬೇಕಂತ। ನಾವು ಕನ್ನಡ ನಾಡವರ ||೨೨||

ಕೈಯಲಿ ಟಕಲಿಯ| ಮನಿಯಲ್ಲಿ ರಾಟೆಯ। ಅರ್ಥಾಟ ನಡಿಸಾರ| ನೂಲನ ತಗಿಸ್ಯಾರ| ನಾವು ಕನ್ನಡ ನಾಡವರ ||೨೩||

ಬಿಗಿಲ ಉದ್ಯಾರ ಇವರು। ಸರಕಾರಕ ದಿಗಿಲ! ಸರಕಾರ ಪೇಚಾಡಿ ಬಾಯನ ಬಿಡತಾರ| ನಾವು ಕನ್ನಡ ನಾಡವರ ||೨೪||

ಸರಕಾರದ ದಿಗಿಲ ಹೆಚ್ಚುತಲಿರುವದು| ಒಪ್ಪುತಲಿರುವರ| ಸ್ವರಾಜ್ಯ ಕೊಡತೀವಂತ। ನಾವು ಕನ್ನಡ ನಾಡವರ ||೨೫||

ನಮಿಪೇವು ಕನ್ನಡ ದೇವಿ। ವಂದಿಪೆ ಭಾರತ ದೇವಿ| ಪೂಮಾಲೆ ಹಾಕವ್ವಾ| ನಿನ್ನ ಮಕ್ಕಳಿಗೆ| ನಾವು ಕನ್ನಡ ನಾಡವರ ||೨೬||

ಆಗುವ ಮುಕ್ತಿಗೆ| ಜೈ ಜೈ ಹಿಂದುಮಾತೆ| ಜೈಕಾರ! ಜೈಕಾರ! ನಿನ ಪುತ್ರರಿಗೆ| ನಾವು ಕನ್ನಡ ನಾಡವರ ||೨೭||



—ಹೈದರಾಬಾದಿನಲ್ಲಿರುವ ಗೌಳಿಗುಡಾ ಪೇಟೆಯಲ್ಲಿ ಇಬ್ಬರು ಮುಸಲ್ಮಾನರು ಒಬ್ಬ ಹಿಂದು ಹುಡುಗಿಯ ಮೇಲೆ ಸಾಯಿಕಲ್ ಹಾಯಿಸುವ ಮತ್ತು ಆ ಹುಡುಗಿಯು ಬೇರೆ ಕಡೆಗೆ ಸರಿದೊಡನೆಯೇ ಅವಳ ಹೆಗಲ ಮೇಲೆ ಕೈಯಿಟ್ಟು ಮಾನಭಂಗ ಮಾಡುವ ಪ್ರಯತ್ನಮಾಡಿದರು. ಈ ಪುಂಡರನ್ನು ಆಗಲೇ ಹಿಡಿದು ಪೋಲೀಸರ ಸ್ವಾಧೀನಮಾಡಿದ್ದಾರೆ.

—ಕೊಪ್ಪಳ ತರುಣಸಂಘದವರು ಕೊಪ್ಪಳ ಹನುಮಂತದೇವರ ಗಣಪತಿಯನ್ನು ಗುಡಿಯಲ್ಲಿ ಕೂಡ್ರಿಸಲು ಅಲ್ಲಿಯ ಕಲೆಕ್ಟರರು ನಿರ್ಬಂಧಿಸಿದ್ದಾರೆ. ಈ ವಿಷಯವನ್ನು ತರುಣಸಂಘದವರು ಹೈದರಾಬಾದಿನ ಸರ್. ನವಾಬ ಸಾಲರಜಂಗರಿಗೆ ತಂತಿಯಿಂದ ವಿಜ್ಞಾಪಿಸಿಕೊಂಡಿದ್ದಾರೆ.

ಅಖಿಲ ಭಾರತ ವಸ್ತು ಪ್ರದರ್ಶನದಲ್ಲಿ
ಸುವರ್ಣ ಪದಕಗಳನ್ನು ಮತ್ತು ಸರ್ಟೀಫಿಕೇಟುಗಳನ್ನು ಪಡೆದು ಹೆಸರಾದ
ಇಂಡಿಯಾ ಸರಕಾರದಲ್ಲಿ ರಜಿಸ್ಟರ್ ಆದ

# ಸಿದ್ಧೇಶ್ವರ ಟ್ರೇಝುರಿ ಕಂಪನಿ, ಹುಬ್ಬಳ್ಳಿ.










ನಮ್ಮ "ಸಿದ್ಧೇಶ್ವರ ಟ್ರೇಝುರಿ" ಗಳನ್ನು ಈ ವರೆಗೆ ಕೈಗಾರಿಕೆಯ ಕೆಲಸಗಳಲ್ಲಿ ಹೆಸರಾದ ಯುರೋಪ, ಅಮೇರಿಕಾ ವಗೈರಿ ಪರರಾಷ್ಟ್ರಗಳಲ್ಲಿ ತಯಾರಾಗುವ ಟ್ರೇಝುರಿಗಳ ಪದ್ಧತಿಯ ಮೇರೆಗೆ ಹೊಸ ಉಕ್ಕಿನ ಅಖಂಡ ಒಂದೇ ತಗಡಿನಲ್ಲಿ ೧೨ ಮೂಲೆಗಳನ್ನು ೩೫೦ ಟನ್ ಪ್ರೇಷರ ಕೊಡುವ ಮಶಿನ್ನಿನಿಂದ ಬಗ್ಗಿಸಿ, ರಿವ್ಹಿಟ್ಸ ಮೊದಲಾದವುಗಳಿಂದ ಜಾಯಿಂಟ ಮಾಡದೆ ಇಲೆಕ್ಟ್ರಿಸಿಟಿಯಿಂದ ಬೆಸೆದು ತಯಾರಿಸುತ್ತೇವೆ.

ಈ ಹೊಸ ಸುಧಾರಣೆಯಿಂದ ಮಾಡಿದ ತಿಜೋರಿಗಳಿಗೂ ಮತ್ತು ಯಾವದೇ ನಮ್ಮ ಸಾಮಾನಕ್ಕೂ ಯಾವ ತರದ ಭಯವಿಲ್ಲ. ಮತ್ತು ಅವು ಒಳ್ಳೇ ಮಜಬೂತವಾಗಿಯೂ ಸುಂದರವಾಗಿಯೂ ಆಗುತ್ತವೆ. ನಾವು ನಮ್ಮ ತಿಜೋರಿಗಳಿಗೂ ಮತ್ತು ನಮ್ಮಲ್ಲಿ ತಯಾರಾಗುವ ಉಕ್ಕಿನ ಕಪಾಟು, ಕ್ಯಾಶಬಾಕ್ಸ, ಸ್ಟ್ರಾಂಗರೂಮ ಡೋರ್ಸು ಗಳಿಗೂ ನಮ್ಮ ಕಾರಖಾನೆಯಲ್ಲಿಯೇ ತಯಾರಾಗುವ ಉತ್ತಮವಾದ ಮತ್ತು ಮಜಬೂತವಾದ ಕೀಲಿಗಳನ್ನು ಹಚ್ಚುತ್ತೇವೆ. ಮತ್ತು ಇದಲ್ಲದೆ ನಮ್ಮಲ್ಲಿ ಹೊಸ ಪದ್ಧತಿಯ ಮೇರೆಗೆ ತಯಾರಾಗುವ ಕಾಂಬಿನೇಶನ್ ಕೀ ಲೆಸ್ಸಾ ಲಾಕ್ಸು (ನಂಬರ ಕೀಲಿ) ಗಳನ್ನು ತಿಜೋರಿಗಳಿಗೆ ಹಚ್ಚಿಸಿದರೆ ಆ ತಿಜೋರಿಗಳನ್ನು ಯಾರೂ ತೆಗೆಯಲು ಸಾಧ್ಯವಿಲ್ಲ. ಯಾರಾದರೂ ತೆಗೆದರೆ ಅವರಿಗೆ

**೧೦೦೦ ರೂ. ಬಹುಮಾನ ಕೊಡುವೆವು.**

ನಮ್ಮ ಫಾಯರ ಪ್ರೂಫ್ ತಿಜೋರಿಗಳು ತುಂಬಾ ಖಾತ್ರಿಯಾದವುಗಳಿರುತ್ತವೆ.

**ಈ ಬಗ್ಗೆ ಅನೇಕ ವಸ್ತು ಪ್ರದರ್ಶನಗಳಲ್ಲಿ ಒಳಗೆ ನೋಟು ವಗೈರೆ ಸಾಮಾನು ಗಳನ್ನು ಇಟ್ಟು ಕೆಂಪಗೆ ಕಾಸಿದನಂತರ ಒಳಗಿಟ್ಟ ಸಾಮಾನುಗಳು ಸುಡದೆ ಇದ್ದದ್ದನ್ನು ಖಾತ್ರಿ ಮಾಡಿಕೊಟ್ಟಿದ್ದೇವೆ.**

ಧಾರಣೆಗಳ ಬಗ್ಗೆ ನಮ್ಮ ಸಚಿತ್ರ ಕ್ಯಾಟಲಾಗುಗಳಿಗೆ ಬರೆಯಿರಿ.
ಅಥವಾ
ಸಮಕ್ಷಮ ಬಂದಲ್ಲಿ ತಿಳಿಯುವದು.

ತಮ್ಮ ಕಲಾಭಿಮಾನಿ,
ಸಿದ್ಧೇಶ್ವರ ಮತ್ತು ಕಂಪನಿ
ಟ್ರೇಝುರಿ ಮೇಕರ್ಸ
ಹುಬ್ಬಳ್ಳಿ.

ಫ್ಯಾಕ್ಟರಿ ಮತ್ತು ಹೆಡ್ ಆಫೀಸ್-
ಹುಬ್ಬಳ್ಳಿ.

ಬ್ರ್ಯಾಂಚ ಆಫೀಸುಗಳು-
ಹೈದರಾಬಾದ (ಡೆಕ್ಕನ) ಮತ್ತು ಕೊಲ್ಹಾಪುರ (ಲಕ್ಷ್ಮೀಪುರಿ)

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೪ | ಆಲಮಟ್ಟಿ- ಸೋಮವಾರ ತಾರೀಖು ೨೯ ನೆಯ ಅಗಷ್ಟ ೧೯೩೮. | ಸಂಚಿಕೆ ೨ |
|---|---|---|

ಜನಸೇವೆಯೇ ದೇವರಸೇವೆ.

## ಚೀನಿ ಕ್ರಾಂತಿಕಾರಕರ ಅತ್ಯಾಚಾರ.

ಶಾಂಘಾಯಿ ಮುನಸಿಪಲ್ ಗುಪ್ತಪೋಲೀಸ್ ದಲದ
ಪ್ರಮುಖರಾದ ಮಿ. ಲೋಹ ಲೆಂಗವೈ ಇವರು
ತಾ. ೧೮-೮-೩೮ ನೆಯ ದಿವಸ
ಮಧ್ಯಾನ್ಹ ೩ ಗಂಟೆಯ ಸುಮಾರಕ್ಕೆ
ಹಾಟೇಲಿನಿಂದ ಮೋಟಾರಿನಲ್ಲಿ ಬರುತ್ತಿರುವಾಗ
೩ ಜನ ಕ್ರಾಂತಿಕಾರಕರು ಗುಂಡು ಹಾರಿಸಿ
ಮಿ. ಲೋಹರನ್ನು ಕೊಲೆ ಮಾಡಿದರು.
ಮಿ. ಲೋಹರವರು ಅನೇಕ ಕ್ರಾಂತಿಕಾರರ
ಕಾರ್ಯಗಳನ್ನು ಬೈಲಿಗೆಳೆದುದರ ಸೇಡು ತೀರಿಸಿಕೊಳ್ಳಲು
ಅವರನ್ನು ಕೊಲೆ ಮಾಡಲಾಗಿದೆಯೆಂದು
ಪೋಲೀಸರು ತರ್ಕಿಸಿದ್ದಾರೆ.
ಕೊಲೆಗಡಕರು ಓಡಿಹೋಗಿದ್ದಾರೆ.

ದೇಶಸೇ



# ಶರಣ ಸಂದೇಶ

THE SHARANA SANDESHA.



## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೮. ಆಲಮಟ್ಟಿ-ಸೋಮವಾರ ತಾರೀಖು ೨೨ ನೆಯ ಅಗಸ್ಟ ೧೯೩೮. ಸಂಚಿಕೆ ೨

## ಮಹತ್ವದ ಸುದ್ದಿಗಳು.

—ಮುಂದಿನ ಕಾಂಗ್ರೆಸ್ ಅಧಿವೇಶನದಲ್ಲಿ ಯಾವ ರೀತಿಯ ಊಟ ಉಪಚಾರದ "ಪಲ್ಲೆ, ಸಾರು" ತಯಾರಿಸಬೇಕೆಂದು ಎಲ್ಲಾ ಪ್ರಾಂತಿಕ ಕಮಿಟಿಗಳಿಗೆ ಬರೆದು ಕೇಳಿಕೊಂಡಿದ್ದಾರೆ.

—ಮದ್ರಾಸ ನಗರಸಭೆಯವರು ಬಾಬುರಾಜೇಂದ್ರ ಪ್ರಸಾದರಿಗೆ ಮತ್ತು ಜಮನಾಲಾಲ ಬಜಾಜರಿಗೆ ಬಿನ್ನವತ್ತಳೆಗಳನ್ನರ್ಪಿಸಿದರು.

— ಬಂಗಾಲ ಒಕ್ಕಲತನ ಶಾಸನ ತಿದ್ದುಪಡಿ ಬಿಲ್ಲನ್ನು ಅಲ್ಲಿಯ ಜಮೀನದಾರರು ತುಂಬಾ ವಿರೋಧಿಸುತ್ತಿದ್ದಾರೆ. ಆ ಬಿಲ್ಲಿಗೆ ಈಗಾಗಲೇ ಗವ್ಹರ್ನರರ ಬೆಂಬಲ ದೊರೆತಿದೆ. ಈ ಶಾಸನ ರದ್ದುಗೊಳಿಸುವದಕ್ಕಾಗಿ ವೈಸರಾಯರ ಮುಖಾಂತರ ಬಂಗಾಲ ಜಮೀನದಾರರು ಒಂದು ಶಿಷ್ಟಮಂಡಳವನ್ನು ಜಾರ್ಜ ಸಾರ್ವಭೌಮರ ಕಡೆಗೆ ಕಳುಹಿಸುವವರಾಗಿದ್ದಾರೆ.

—ಜುಲೈ ೫ನೇ ತಾರೀಖಿನಿಂದ ಅಗಷ್ಟ ೮ನೇ ತಾರೀಖಿನಲ್ಲಿ ೧೩೩೦೦೦ ಜನ ಜಪಾನಿಗಳನ್ನು ಸಂಹಾರಮಾಡಿದೆವೆಂದೂ ೪೬೦೦ ಜನರನ್ನು ಗಾಯಗೊಳಿಸಿದೆವೆಂದೂ ಉತ್ತರ ಚೀನದ ಸೈನಾಧಿಕಾರಿಗಳು ಹೇಳುತ್ತಿದ್ದಾರೆ. ೬೦೦೦೦ ಸೈನಿಕರನ್ನು ಸೆರೆಹಿಡಿದುದಾಗಿಯೂ ಹೇಳಿದರು.

— ತ್ರಾವಣಕೋರ ಸಂಸ್ಥಾನದ ಪ್ರವೇಶ ಪ್ರತಿಬಂಧನ ಆಜ್ಞೆಯನ್ನು ಉಲ್ಲಂಘಿಸಿ ಶ್ರೀ. ಕಮಲಾದೇವಿಯವರು ತ್ರಿವೇಂದ್ರಮ್‌ದಲ್ಲಿ ಜರಗುವ ತ್ರಾವಣಕೋರ ಯುವಕ ಪರಿಷತ್ತಿಗೆ ಹೋಗುವವರಿದ್ದಾರೆ.

—ಹುಬ್ಬಳ್ಳಿಯಲ್ಲಿಯ ೪೮ ಸಂಸ್ಥೆಗಳ ೨೧೮ ಜನ ಪ್ರತಿನಿಧಿಗಳುಳ್ಳ ಒಂದು ಸಭೆಯು ಡಾ. ಹರ್ಡೀಕರರ ಅಧ್ಯಕ್ಷತೆಯಲ್ಲಿ ನೆರವೇರಿಸಲ್ಪಟ್ಟು ಹುಬ್ಬಳ್ಳಿ ಮುನಸಿಪಾಲ್ಟಿಯನ್ನು ಸರಕಾರದವರು ಕೂಡಲೇ ರದ್ದುಗೊಳಿಸಬೇಕೆಂದು ಸರ್ವಾನುಮತದಿಂದ ತೀರ್ಮಾನಿಸಲ್ಪಟ್ಟಿತು. ಮುನಸಿಪಾಲ್ಟಿಯನ್ನು ರದ್ದುಗೊಳಿಸುವ ನಿಮಿತ್ತ ಸಾವಿರಾರು ಜನಗಳು ಸಹಿಮಾಡಿದ ಅರ್ಜಿಯೊಂದನ್ನು ಮಂತ್ರಿಗಳ ಕಡೆಗೆ ಕಳುಹಿಸಿಕೊಟ್ಟಿದ್ದಾರೆ.

—ಮದ್ರಾಸ್ ಶಾಸನಮಂಡಲದವರು ಪೂರ್ಣ ವಿಚಾರ ಮಾಡಿ ಹಿಂದಿಯನ್ನು ಶಾಲೆಗಳಲ್ಲಿ ಕಲಿಸಬೇಕೆಂದು ನಿರ್ಧರಿಸಿರುತ್ತಾರೆ. ಅವರ ಈ ನಿರ್ಣಯವನ್ನು ನಾವು ಕಾರ್ಯರೂಪಕ್ಕೆ ತರಲು ಹಿಂಜರಿದರೆ ಸರಕಾರದ ಸ್ಥಾನದಲ್ಲಿರಲು ನಾವು ಅಯೋಗ್ಯರಾಗುವೆವು. ಎಂದು ಶ್ರೀ ಸಿ. ರಾಜಗೋಪಾಲಾಚಾರ್ಯರು ಒಂದು ಪ್ರಚಂಡ ಸಭೆಯಲ್ಲಿ ಹಿಂದಿಯ ಬಗ್ಗೆ ಸರಕಾರದ ಧೋರಣವನ್ನು ಸ್ಪಷ್ಟಗೊಳಿಸಿದರು.

—ಜಾತಿವಾರ ಪ್ರಶ್ನೆಯ ಬಗ್ಗೆ ರಾಷ್ಟ್ರಾಧ್ಯಕ್ಷರಾದ ಬಾಬು ಸುಭಾಷಚಂದ್ರ ಬೋಸರು ಬ್ಯಾ. ಜಿನ್ನಾರವರೊಡನೆ ಈ ವರೆಗೆ ನಡೆಸಿದ ಪತ್ರವ್ಯವಹಾರವನ್ನೆಲ್ಲಾ ಪ್ರಕಟಿಸಿದ್ದಾರೆ.

—ಸರಹದ್ದಿನ ರಾಜಕೀಯ ಪರಿಷತ್ತು ಮೌ. ಅಬ್ದುಲ್ ಅಕ್ಸಿರ್ ಕಸೂರಿಯವರ ಅಧ್ಯಕ್ಷತೆಯಲ್ಲಿ ನೆರವೇರಿಸಲ್ಪಟ್ಟಿತು. ಸಭೆಯಲ್ಲಿ ಬನ್ನು ಗಲಾಟೆಗೆ ಸಂಬಂಧಿಸಿದ ಸ್ಥಾನಿಕ ಅಧಿಕಾರಿಗಳನ್ನು ಬಲವಾಗಿ ಟೀಕಿಸಿ ಈ ಮುತ್ತಿಗೆಯಲ್ಲಿ ನೊಂದವರಿಗೆ ಸಹಾನುಭೂತಿ ವ್ಯಕ್ತಗೊಳಿಸಲಾಯಿತು. ಸಂಕಟಕ್ಕೀಡಾದವರಿಗೆ ಪರಿಹಾರ ಕೊಡಬೇಕೆಂದೂ ಅದರ ಸಲುವಾಗಿ ಸ್ವತಂತ್ರ ವಿಚಾರಣಾ ಸಮಿತಿಯೊಂದನ್ನು ನಿಯಮಿಸಬೇಕೆಂದೂ ತೀರ್ಮಾನವಾಯಿತು. ಕಾಂಗ್ರೆಸ್ ಮಂತ್ರಿಮಂಡಳವನ್ನು ಅಪಮಾನಗೊಳಿಸುವ ದುರುದ್ದೇಶದಿಂದ ಅಲ್ಪಸಂಖ್ಯಾಕರಲ್ಲಿ ಅಸಂತೋಷ ಹುಟ್ಟಿಸಿ ಜಾತೀಯ ಕಲಹ ಬೀಜಬಿತ್ತುವುದೇ ಬನ್ನು ಮುತ್ತಿಗೆಯ ಉದ್ದೇಶವಾಗಿತ್ತೆಂದು ಸಾರಿದರು.

—ಶ್ರೀ. ರವೀಂದ್ರ ಮೋಹನ ಸೇನಗುಪ್ತ, ತ್ರಿಲೋಕ್ಯ ಚಕ್ರವರ್ತಿ ಮತ್ತು ರಾಮೇಶ ಆಚಾರ್ಯ ಎಂಬ ಮೂರು ಜನ ಬಂಗಾಲ ರಾಜಕೈದಿಗಳನ್ನು ಬಿಡುಗಡೆ ಮಾಡಿದ್ದಾರೆ.

# ನಿಜಾಮ ಪ್ರಾಂತಿಕ ವೀರಶೈವ ಪರಿಷತ್ತು.

ನಿಜಾಮ ಪ್ರಾಂತಿಕ ವೀರಶೈವ ಪರಿಷತ್ತಿನ ೩ ನೆಯ ಅಧಿವೇಶನ ಜರುಗಿ ೨|| ತಿಂಗಳಾಗುತ್ತಾ ಬಂದಿತು. ಪರಿಷತ್ತಿನಲ್ಲಿ ತೀರ್ಮಾನವಾದ ಗೊತ್ತುವಳಿಗಳನ್ನು ಕಾರ್ಯರೂಪದಲ್ಲಿ ತರುವುದು ಪರಿಷತ್ತಿನ ಮಧ್ಯವರ್ತಿ ಕಾರ್ಯಕಾರೀ ಮಂಡಳದವರ ಮತ್ತು ಜಿಲ್ಲಾ ಮಂಡಳದವರ ಕರ್ತವ್ಯವಾಗಿದೆ. ಮಧ್ಯವರ್ತಿ ಕಾರ್ಯಕಾರೀ ಮಂಡಳವನ್ನು ಈ ಮೊದಲೇ ಕೂಡಿಸಬೇಕಾಗಿತ್ತು. ಆದರೆ ಕೆಲವು ಕಾರಣಗಳಿಂದ ಈ ವರೆಗೂ ಕಾರ್ಯಕಾರೀ ಮಂಡಳವನ್ನು ಕರೆಯಲು ಶಕ್ಯವಾಗದಿದ್ದುದಕ್ಕಾಗಿ ವಿಷಾದವಾಗುತ್ತದೆ. ಅಧ್ಯಕ್ಷರು ಲಾತೂರಿನಲ್ಲಿ ಬರುವ ಗಣೇಶ ಚತುರ್ಥಿಯ ಬಿಡುವಿನಲ್ಲಿ ಕಾರ್ಯಕಾರೀ ಮಂಡಳವನ್ನು ಕರೆಯಬೇಕೆಂದು ಸೂಚಿಸಿದ್ದರು. ಆದರೆ ಅದನ್ನು ಕೆಲವು ವಿಶೇಷ ಕಾರಣಗಳಿಂದ ನೆರವೇರಿಸಲು ಶಕ್ಯವಿಲ್ಲವೆಂದು ತಿಳಿಸಲು ದುಃಖವಾಗುತ್ತದೆ. ಗಣೇಶ ಚತುರ್ಥಿಯೂ ತೀರ ಹತ್ತಿರ ಬಂದುದರಿಂದ ಎಲ್ಲ ಸಭಾಸದರಿಗೂ ಮೀಟಿಂಗಿನಲ್ಲಿ ಚರ್ಚಿಸಲ್ಪಡುವ ವಿಷಯಗಳನ್ನು ತಿಳುಹಿಸಿ ಆಮಂತ್ರಣ ಕೊಡುವುದು ಶಕ್ಯವಿಲ್ಲವೆಂದು ಭಾವಿಸಿ ತಾ. ೧೭-೧೮ ಆಬಾನ ಸ. ೧೩೪೭ ಮಿ. ಭಾದ್ರಪದ ಕೃ| ೧೪, ೩೦ ಈ ಎರಡು ದಿವಸ ಉದಗೀರ ಇಲ್ಲವೆ ಭಾಲಕಿಯಲ್ಲಿ ಮಧ್ಯವರ್ತಿ ಕಾರ್ಯಕಾರೀ ಮಂಡಳವನ್ನು ಕೂಡಿಸಬೇಕೆಂಬ ವಿಚಾರವಿದೆ. ಉದಗೀರ ಇಲ್ಲವೆ ಭಾಲ್ಕಿಯು ನಿಜಾಮ ಪ್ರಾಂತದ ೩ ಭಾಗಗಳಿಗೂ ಮಧ್ಯವಿರುವುದರಿಂದ ಎರಡರಲ್ಲಿ ಯಾವ ಸ್ಥಳದಲ್ಲಿ ಸೇರಬೇಕೆಂದು ನಿರ್ಧರಿಸುವುದಕ್ಕಾಗಿ ಅಧ್ಯಕ್ಷರೊಡನೆ ಪತ್ರವ್ಯವಹಾರ ನಡೆಯಿಸಿದೆ. ಅವರಿಂದ ತಿಳಿದೊಡನೆಯೇ ಎಲ್ಲ ಸಭಾಸದರಿಗೆ ಆ ಪ್ರಕಾರ ಸೂಚಿಸಲಾಗುತ್ತದೆ.

ಕಾರ್ಯಕಾರೀ ಮಂಡಳದ ಮತ್ತು ಶಿಕ್ಷಣ ಫಂಡಿನ ಎಲ್ಲ ಸಭಾಸದರಿಗೆ (ಅವರ ಹೆಸರುಗಳು ಇದರ ಕೆಳಗೆ ಪ್ರಕಟವಾಗಿವೆ.) ಭಾಲ್ಕಿ ಇಲ್ಲವೆ ಉದಗೀರದಲ್ಲಿ ಮೇಲೆ ಬರೆದ ದಿನಗಳಲ್ಲಿ ಸೇರಲಿರುವ ಕಾರ್ಯಕಾರೀ ಮಂಡಳದ ಸಭೆಯಲ್ಲಿ ಈ ಕೆಳಗಿನ ವಿಷಯಗಳನ್ನು ಚರ್ಚಿಸಲಾಗುವುದೆಂದು ಈ ಮೂಲಕ ತಿಳುಹಿಸಲಾಗಿದೆ.

(೧) ಪರಿಷತ್ತಿನ ಸಭಾಸದರ ಸಂಖ್ಯೆಯನ್ನು ಪುಷ್ಯ ಶುದ್ಧ ೧೫ ರ ವಳಗಾಗಿ ಹತ್ತು ಸಾವಿರದ ವರೆಗೆ ಹೆಚ್ಚಿಸುವುದು.

(೨) ವಿಭಾಗ ಮಂಡಳ, ವಿಭಾಗ ಮಂಡಳ ಪರವಾಗಿ ಜಿಲ್ಲಾ, ತಾಲೂಕ ಮಂಡಳಗಳನ್ನು ಸ್ಥಾಪಿಸುವುದು.

(೩) ಪರಿಷತ್ತಿನ ಗೊತ್ತುವಳಿಯಂತೆ ಎರಡು ಜನ ಪ್ರಚಾರಕರನ್ನು ನಿಯಮಿಸಿದ್ದು ಅವರ ಪಗಾರ ಮತ್ತು ಪ್ರವಾಸಗಳ ವೆಚ್ಚದ ಬಗ್ಗೆ ವ್ಯವಸ್ಥೆ ಮಾಡುವುದು.

(೪) ಅಖಿಲ ಭಾರತ ವೀರಶೈವ ಮಹಾಸಭೆಯವರು ಮಾಡಿದ ಸೂಚನೆಗಳ ಬಗ್ಗೆ ವಿಚಾರ ಮಾಡುವುದು.

(೫) ಶಿಕ್ಷಣ ಫಂಡಿನ ಸಂಬಂಧವಾಗಿ ಕೆಲವು ವಿಧಾಯಕ ಕಾರ್ಯಗಳನ್ನು ನಿರ್ಧರಿಸಿ ವಾಗ್ದಾನ ಫಂಡನ್ನು ಕೂಡಿಸುವುದು.

(೬) ಸದ್ಯ ಲಿಂಗಾಯತರ ಮೇಲೆ ಆಗುತ್ತಿರುವ ಆಕ್ಷೇಪ ಮತ್ತು ಆಕ್ರಮಣ ಸಂಬಂಧವಾಗಿ ವಿಚಾರ ಮಾಡುವುದು.

(೭) ಇದರ ವಿನಾ ಅಧ್ಯಕ್ಷರ ಅನುಮತಿಯಿಂದ ಸಭೆಯ ಮುಂದೆ ಬರುವ ಇತರ ವಿಷಯಗಳ ಬಗ್ಗೆ ವಿಚಾರ.

ಸದ್ಯದ ಸ್ಥಿತಿಯಲ್ಲಿ ಮೇಲಿನ ವಿಷಯಗಳನ್ನು ಚರ್ಚಿಸುವುದು ಎಷ್ಟು ಆವಶ್ಯಕವಿದೆಯೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಅದಕ್ಕಾಗಿ ಎಲ್ಲ ಸಭಾಸದರೂ ಮೇಲಿನ ವಿಷಯಗಳನ್ನು ಪೂರ್ಣ ವಿಚಾರಿಸಿ ಸಭೆಯ ಮುಂದೆ ತಮ್ಮ ವಿಚಾರಗಳನ್ನಿಟ್ಟು ಪರಿಷತ್ತಿನ ಕಾರ್ಯಗಳನ್ನು ಯಶಸ್ವಿಗೊಳಿಸುವಿರೆಂದೇ ನಂಬಿದ್ದೇನೆ.

ವಿ. ಸೂ— ಮತ್ತಾವ ಮಹತ್ವದ ವಿಷಯಗಳನ್ನಾದರೂ ಸಭೆಯಲ್ಲಿ ಚರ್ಚಿಸುವುದು ಅಗತ್ಯವೆಂದು ತೋರಿದರೆ ಅವುಗಳನ್ನು ಉದಗೀರಿಯ ಚಿಟ್ನೀಸರ ವಿಳಾಸಕ್ಕೆ ಕೂಡಲೇ ಕಳುಹಿಸಬೇಕು.

ತಮ್ಮ

ಸಂಗ್ರಾಮಪ್ಪ ಶಿಟಿಗಾರ ವಕೀಲ ಉದಗೀರ

ಚಿಟ್ನೀಸ್— ಮಧ್ಯವರ್ತಿ ಕಾರ್ಯಕಾರೀ ಮಂಡಳ

ನಿಜಾಮ ಪ್ರಾಂತಿಕ ವೀರಶೈವ ಪರಿಷತ್.

---

## ನಿಜಾಮ ಪ್ರಾಂತಿಕ ವೀರಶೈವ ಪರಿಷತ್ತಿನ

### ಕಾರ್ಯಕಾರೀ ಮಂಡಳದ ಸಭಾಸದರು.

(೧) ಅಧ್ಯಕ್ಷರು— ಶ್ರೀ. ರಾಯ ಕಾಶೀರಾಯ ಸಾಹೇಬ ದೇಶಮುಖ ಭಾಲ್ಕಿ.

(೨) ಉಪಾಧ್ಯಕ್ಷರು— ಶ್ರೀ. ತ್ರಿಂಬಕಪ್ಪ ಸಾಹೇಬ ಗಿರವಲಿಕರ್ ಲಾತೂರ.

(೩) ಸೆಕ್ರೆಟರಿ— ಶ್ರೀ. ಸಂಗ್ರಾಮಪ್ಪ ಸಾಹೇಬ ವಕೀಲ ಉದಗೀರ

(೪) ಅಂಡರ್ ಸೆಕ್ರೆಟರಿ— ಮಹೇಶ ಶಂಕರ ನಾಗೂರೆ ಲಾತೂರ

(೫) ಕೋಶಾಧ್ಯಕ್ಷ— ಸಿದ್ರಾಮಪ್ಪ ನೆಲ್ಲೆ ಉದಗೀರ

(೬) ಆಡಿಟರ್— ಮನ್ಮಥಪ್ಪ ಕೇರೊಳ ಲಾತೂರ.

— ಸದಸ್ಯರು —

ಕರ್ನಾಟಕ ವಿಭಾಗ— ೧. ಶ್ರೀ. ದೊಡ್ಡಪ್ಪ ಮಹಾರಾಜ ಗುಲಬರ್ಗಾ. ೨. ರಾಯಚಂದ್ರರಾವ ದೇಶಮುಖ, ಹಿರೊಳ್ಳಿ ಪೋ. ಆಳಂದ (ಗುಲಬರ್ಗಾ) ೩. ಹನುಮಂತರಾವ ಹಾಗರಗಿಕರ್ ವಕೀಲ ಗುಲಬರ್ಗಾ. ೪. ಸಂಗಪ್ಪ ನಂದ್ಯಾಳ ಗುಲಬರ್ಗಾ. ೫. ಮಡಿವಾಳಪ್ಪ ಖೇಣಿ ಸಾಹುಕಾರ, ರಂಜೇರಿ ಪೋ. ಹಾಳಖೇಡ. ೬. ವಿಶ್ವನಾಥಪ್ಪ ಹತ್ತಿ ಸಾಹುಕಾರ,ಸಿಂಧಖೇಡ ಪೋ. ನಿಲಂಗಾ. ೭. ಮಹಾಲಿಂಗರಾವ ಸಾಹೇಬ ದೇಶಮುಖ, ಚಿಟಗುಪ್ಪಾ. ೮. ಶರಣಪ್ಪ ಸಾ| ಛತ್ರೆಪುರ, ದುಬಲಗುಂಡಿ ೯. ಶಿವರಾಜಪ್ಪ ಚೌಂಡಾ ಅಹಮದಪುರ ೧೦ ಗುರಪ್ಪ ಸಾ. ವಕೀಲ ಬೀದರ. ೧೧ ಪ್ರಭುಶೆಟ್ಟಿ ಅಷ್ಟುರೆ ಭಾಲ್ಕಿ. ೧೨. ಶಂಕರಪ್ಪ ಖಳೂರೆ, ಖಡಕಾ. ೧೩. ಶರಣಪ್ಪ ಮಲಿಂಗ, ಉಮರಗಾ ೧೪ ಗಣದಿನ್ನಿ ತಿಮ್ಮಣ್ಣಾ ರಾಯಚೂರು.

ಮಹಾರಾಷ್ಟ್ರ ವಿಭಾಗ— (೧) ಶಂಕರರಾವ ಪಟೇಲ ಹರಂಗುಳ ಪೋ. ಲಾತೂರ (೨) ಶಂಕರಪ್ಪ ಉದಗೆ ಲಾತೂರ (೩) ಮಲ್ಲಿಕಾರ್ಜುನಪ್ಪ ವಕೀಲ ತೋಡಕರಿ ಉಸ್ಮಾನಾಬಾದ (೪) ಪ್ರಭಪ್ಪ ಜವಳೆ ಲಾತೂರ (೫) ಯೋಗಿರಾಜ ಸ್ವಾಮಿ ವಕೀಲ ಬೀಡ (೬) ತಾತ್ಯಾಸಾಹೇಬ ಟಾಲೆ (೭) ಶಾಂತವೀರಪ್ಪ ಬೀದರಕರ ಬೀಡ (೮) ಮಹಾಲಿಂಗಸ್ವಾಮಿ ಪಟ್ಟಾಧಿಕಾರಿ ಬರದಾಪುರ

# ಟೆನನ್ಸಿ ಬಿಲ್.

## ಮುಂಬಯಿ ಸರಕಾರದ ಪ್ರಕಟನೆ.

ಮುಂಬಯಿ ಸರಕಾರದವರು ಸಿದ್ಧಗೊಳಿಸಿದ ಟೆನನ್ಸಿ ಬಿಲ್ ಸಾರ್ವಜನಿಕರ ತಿಳುವಳಿಕೆಗಾಗಿ ಪ್ರಕಟಿಸಲ್ಪಟ್ಟದೆ. ಮುಂಬಯಿ ಇಲಾಖೆಯಲ್ಲಿಯ ಹೊಲ ಸಾಗುವಳಿ ಮಾಡುವವರ ಹಿತದ ದೆಶೆಯಿಂದಲೇ ಈ ಬಿಲ್ಲನ್ನು ರಚಿಸಲಾಗಿದೆಯೆಂದು ಹೇಳಲ್ಪಟ್ಟದೆ.

ಈ ಬಿಲ್ಲಿನಲ್ಲಿ ಮುನ್ನುಡಿ ಸಹಿತ ನಾಲ್ಕು ಭಾಗಗಳಾಗಿ ವಿಂಗಡಿಸಲಾಗಿದೆ. ಮೊದಲನೆಯ ಭಾಗದಲ್ಲಿ ಹೊಲ ಸಾಗುವಳಿ, ಹಸನು ಮಾಡುವುದು, ಲಾವಣಿ ಮೊದಲಾದ ಪದಗಳ ಅರ್ಥವನ್ನು ಕೊಡಲಾಗಿದೆ. ಎರಡನೆಯ ಭಾಗದಲ್ಲಿ ಸಂರಕ್ಷಿತ ಲಾವಣಿದಾರರ ಸಂಬಂಧವಾಗಿ ವಿವೇಚಿಸಲಾಗಿದೆ. ಯಾವನಾದರೊಬ್ಬ ರೈತನು ಈ ಕೆಳಗೆ ಕಂಡ ನಿಯಮಗಳಲ್ಲಿ ಬರುತ್ತಿದ್ದರೆ ಆತನು ಸಂರಕ್ಷಿತ ಲಾವಣಿದಾರನೆಂದು ಭಾವಿಸಲಾಗುತ್ತದೆ.

೧. ೧೯೩೮ ನೆಯ ಜನವರಿ ಮೊದಲನೆಯ ದಿವಸದಿಂದ ಮುಂಚೆ ಆರು ವರ್ಷಗಳ ವರೆಗೆ ಒಂದೇ ಸವನೇ ಲಾವಣಿ ಮಾಡುತ್ತ ಬಂದ ರೈತನು.

೨. ಈ ಆರು ವರ್ಷ ಕಾಲ ರೈತನೇ ಸ್ವತಃ ಆ ಹೊಲ ಸಾಗುವಳಿ ಮಾಡಿರತಕ್ಕದ್ದು.

೩. ಆ ಹೊಲವು ಪರರಾಧೀನವಾದ ಹಳ್ಳಿಯಲ್ಲಿ ಖೋತಿ ಅಥವಾ ತಾಲೂಕದಾರಿ ಹಳ್ಳಿಯಲ್ಲಿರತಕ್ಕದ್ದು.

೪. ಆ ರೈತನ ಧನಿಯು ೧೯೩೮ ನೆಯ ಜನವರಿ ೧ ನೆಯ ತಾರೀಖಿನ ದಿವಸ ೩೩ ಎಕರೆ ನೀರಾವರಿ ಇಲ್ಲವೆ ೧೦೦ ಎಕರೆ ಅಥವಾ ಹೆಚ್ಚು ಹೊಲಗಳಿದ್ದರೆ ಇಲ್ಲವೆ ಪ್ರತಿವರ್ಷ ೧೫೦ ರೂ. ಗಳಿಗಿಂತ ಹೆಚ್ಚು ಭೂಕಂದಾಯ ಕೊಡುವವನು ಆಗಿರತಕ್ಕದ್ದು.

೧೯೩೭ ನೆಯ ಎಪ್ರಿಲ್ ೧ ನೆಯ ತಾರೀಖಿನ ತರುವಾಯ ಹೊಲ ಬಿಡಿಸಲ್ಪಟ್ಟ ರೈತನು ಈ ಶಾಸನದಂತೆ ರಕ್ಷಣೆ ಪಡೆಯಲು ಅರ್ಹನಿರತಕ್ಕದ್ದು. ಆ ಮುಂಚೆ ಆರು ವರ್ಷಗಳ ವರೆಗೂ ರೈತನು ಸ್ವತಃ ಆ ಹೊಲವನ್ನು ಮಾಡಿರಬೇಕಲ್ಲದೆ ಮೇಲಿನ ೨-೩ ನಿಯಮಗಳಂತೆ ನಡೆದುಕೊಂಡಿದ್ದರೆ ಆತನೂ ಸಂರಕ್ಷಿತ ಲಾವಣಿದಾರನಾಗುವನು.

ಈ ಬಿಲ್ಲಿನ ಪ್ರಕಾರ ರಕ್ಷಣೆಗೊಳಗಾಗುವ ರೈತನು ಧನಿಗೆ ಕೊಡತಕ್ಕ ಲಾವಣಿಯು ಈ ರೀತಿ ಗೊತ್ತುಮಾಡಲ್ಪಡತಕ್ಕದ್ದು—

೧. ರೈತ ಮತ್ತು ಧನಿ ಇವರಿಬ್ಬರಲ್ಲಿ ಕರಾರಾಗಿರತಕ್ಕದ್ದು. ಇಲ್ಲವೆ ನೆರೆಹೊರೆಯ ಲಾವಣಿಯ ಸಾಮಾನ್ಯ ಪದ್ಧತಿಯನ್ನನುಸರಿಸಬೇಕು. ಇಂಥ ಲಾವಣಿಯ ಬಗ್ಗೆ ತಕರಾರುಗಳಿದ್ದರೆ ಯೋಗ್ಯ ರೀತಿಯಿಂದ ನ್ಯಾಯವಾದುದನ್ನು ನಿರ್ಧರಿಸಿಕೊಳ್ಳಬೇಕು.

೨. ಸಂರಕ್ಷಿತ ಲಾವಣಿದಾರನು ೧೯೩೮ ನೆಯ ಡಿಶಂಬರ್ ೧ ನೆಯ ತಾರೀಖಿನ ವರೆಗೆ ಬಾಕಿ ಮಾಡಿಕೊಂಡಿದ್ದ ಲಾವಣಿಯನ್ನು ಸಮಾನವಾದ ನಾಲ್ಕು ವಾರ್ಷಿಕ ಕಂತುಗಳ ರೂಪದಲ್ಲಿ ಮುಟ್ಟಿಸತಕ್ಕದ್ದು. ಮೊದಲನೆಯ ಕಂತನ್ನು ೧೯೩೯ ನೆಯ ಮೇ ೩೧ ನೇ ತಾರೀಖಿನೊಳಗಾಗಿ ಕೊಡತಕ್ಕದ್ದು. ಉಳಿದ ಕಂತುಗಳನ್ನು ಮೇ ೩೧ ರೊಳಗಾಗಿ ಕೊಡುತ್ತ ಹೋಗಬೇಕು.

೩. ಈ ಕಂತುಗಳಲ್ಲಿ ಯಾವನಾದರೂ ಒಂದು ಕಂತನ್ನು ಮೇಲೆ ನಿರ್ದೇಶಿಸಲ್ಪಟ್ಟ ಅವಧಿಯಲ್ಲಿ ಕೊಡಲು ತಪ್ಪಿದರೆ ಅಥವಾ ಹೊಸ ವರ್ಷದ ಲಾವಣಿಯನ್ನು ಮೇ ೧೫ ನೇ ತಾರೀಖಿನೊಳಗಾಗಿ ಕೊಡದಿದ್ದರೆ, ಅಥವಾ ಹೊಲವನ್ನು ಹಾಳಗೆಡವಿದ್ದರೆ ಇತರರಿಗೆ ಲಾವಣಿ ಕೊಟ್ಟದ್ದರೆ, ಸ್ವತಃ ಸಾಗಿಸದಿದ್ದರೆ, ಲಾವಣಿ ಬಾಕಿಯಲ್ಲದೆ ಇತರ ಬಂಧನಗಳನ್ನು ತಪ್ಪಿದರೆ ಧನಿಯು ಹೊಲವನ್ನು ಸ್ವಾಧೀನಪಡಿಸಿಕೊಳ್ಳುವ ಅಧಿಕಾರವುಳ್ಳವನಾಗತಕ್ಕದ್ದು.

೪. ಒಕ್ಕಲಿಗನಿಗೆ ಲಾವಣಿ ಕೊಟ್ಟರುವ ಹೊಲವನ್ನು ಧನಿಯು ಸ್ವಂತ ಸಾಗುವಳಿ ಮಾಡಲಿಚ್ಛಿಸಿದರೆ ಅಥವಾ ವಿಶೇಷತರಹದ ಸಾಗುವಳಿ ಮಾಡಲಿಷ್ಟಪಟ್ಟರೆ ಅಥವಾ ಒಕ್ಕಲತನಕ್ಕೆ ಹೊರತಾಗಿ ಬೇರೆ ಕೆಲಸಕ್ಕಾಗಿ ಉಪಯೋಗಿಸಕೊಳ್ಳಬೇಕಾಗಿದ್ದರೆ ಒಂದು ವರ್ಷ ಮೊದಲೇ ರೈತನಿಗೆ ನೋಟೀಸ್ ಕೊಟ್ಟು ತನ್ನ ಹೊಲವನ್ನು ಸ್ವಾಧೀನಪಡಿಸಿಕೊಳ್ಳಲು ಅಧಿಕಾರವಿರತಕ್ಕದ್ದು.

೫ ಹೀಗೆ ಸ್ವಾಧೀನಪಡಿಸಿಕೊಂಡ ಹೊಲವನ್ನು ಧನಿಯು ಸ್ವಾಧೀನಪಡಿಸಿಕೊಂಡಂದಿನಿಂದ ೩ ವರ್ಷಗಳೊಳಗೆ ಬೇರೆ ಯಾರಿಗಾದರೂ ಲಾವಣಿ ಕೊಟ್ಟರೆ ಇಲ್ಲವೆ ಮೂರುವರ್ಷ ಅವಧಿಯ ನಂತರ ಮತ್ತೆ ೩ ವರ್ಷಗಳ ಒಳಗೆ ಮೇಲೆ ಕಾಣಿಸಿದಂತೆ ಸ್ವಂತ ಉಪಯೋಗ ಮಾಡಿಕೊಳ್ಳದಿದ್ದರೆ ರೈತನು ಇಷ್ಟಪಟ್ಟಲ್ಲಿ ಧನಿಗೆ ಲೇಖೀ ಮೂಲಕ ತಿಳುಹಿಸಿ ಪುನಃ ಆ ಹೊಲವನ್ನು ಹಿಡಿಯಲು ಅಧಿಕಾರವಿರತಕ್ಕದ್ದು.

೬. ಧನಿಯ ಸ್ಥಳದಲ್ಲಿ ರೈತನು ತಾನೇ ಆಗಲಿ ತನ್ನ ಹಿಂದಿನವರಾಗಲಿ ಸ್ವಂತ ಖರ್ಚಿನಿಂದ ಕಟ್ಟಿಸಿದ ಮನೆಯಲ್ಲಿ ವಾಸವಾಗಿದ್ದು ಅದರ ಬಾಡಿಗೆಯನ್ನು ಕೊಡಲು ತಪ್ಪಿದರೆ ಧನಿಯು ಆತನನ್ನು ಹೊರತಳ್ಳಲು ಅಧಿಕಾರವಿರತಕ್ಕದ್ದು.

---

ಪೋ. ಮೊಮಿನಾಬಾದ (೯) ವೈಜನಾಥಪ್ಪ ಶೇಟೆ ವಕೀಲ ಮೊಮಿನಾಬಾದ (೧೦) ಪ್ರಭುಅಪ್ಪ ಕಾಪಸೆ ವಕೀಲ ಪರಭಣಿ (೧೧) ವಿರೂಪಾಕ್ಷಸ್ವಾಮಿ ದೇಶಿಕೇಂದ್ರ ಮಹಾರಾಜ ಲಾತೂರ (೧೨) ಪ್ರಭಪ್ಪ ನಿಗ್ಗುಡಗಿ ಲಾತೂರ

ಆಂಧ್ರ ವಿಭಾಗ— ೧. ಶ್ರೀ. ಮಠಂ ವೀರಯ್ಯ ಸಾಹೇಬ ಉಂದಾಬಜಾರ ಹೈದರಾಬಾದ, ೨, ಸೋಮೇಶ್ವರರಾವ ವಕೀಲ ವಿಕಾರಾಬಾದ ೩. ಚನಬಸಪ್ಪ ಸಾ. ವಕೀಲ ಸದಾಶಿವಪೇಟೆ, ೪. ವಿರೂಪಾಕ್ಷಪ್ಪ ಸಾಹೇಬ ದೇಶಮುಖ, ೫. ಶ್ರೀನಿವಾಸರಾವ ಸಾ. ವಕೀಲ ಹೈದರಾಬಾದ ೬. ಖಾಜಾರ ವಿಶ್ವನಾಥ.

### ಶಿಕ್ಷಣ ಫಂಡಿನ ಸದಸ್ಯರು.

(ಕಾರ್ಯಕಾರಿಮಂಡಳದ ಅಧಿಕಾರಿಗಳೇ ಶಿಕ್ಷಣಫಂಡಿಗೂ ಇದ್ದಾರೆ.)

೧. ಶ್ರೀ. ದೊಡ್ಡಪ್ಪ ಸಾಹೇಬ ಗುಲಬರ್ಗಾ, ೨. ರಾಯಚಂದ್ರರಾವ ಸಾ. ದೇಶಮುಖ ಹಿರೊಳ್ಳಿ, ೩. ಮಡಿವಾಳಪ್ಪ ಖೇಣಿ ರಂಜೇರಿ, ೪. ಶರಣಪ್ಪ ಫತ್ತೆಪುರ ದುಬಲಗುಂಡಿ, ೫. ಮಹಾಲಿಂಗರಾವ ಸಾಹೇಬ ದೇಶಮುಖ ಚಿಟಗುಪ್ಪಿ, ೬. ಪ್ರಭುಶೆಟ್ಟಿ ಅಷ್ಟುರೆ ಭಾಲ್ಕಿ, ೭. ಶಂಕರಪ್ಪ ಖಳೂರೆ ಖಡಕಾ, ೮. ಹನುಮಂತರಾವ ಹಾಗರಗಿ ವಕೀಲ ಗುಲಬರ್ಗಾ ೯. ಶಂಕರಪ್ಪ ಸಾಹೇಬ ಉಟಗೆ ಲಾತೂರ, ೧೦. ತಾತ್ಯಾಸಾಹೇಬ ಟೋಲ ಜಾಲನಾ, ೧೧. ವಿಶ್ವನಾಥಪ್ಪ ಹತ್ತಿ ಸಿಂಧಖೇಡ, ೧೨. ಶಿವರಾಜಪ್ಪ ಚೌಂಡಾ ಅಹಮ್ಮದಪುರ, ೧೩. ಕಲಶೆಟ್ಟಿ ಪಟೇಲ ಉಮರಗಾ, ೧೪. ಶ್ರೀನಿವಾಸರಾವ ಸಾಹೇಬ ವಕೀಲ ಮದನೂರಕರ ಹೈದರಾಬಾದ ೧೫. ಗಣದಿನ್ನಿ ತಿಮ್ಮಣ್ಣ ರಾಯಚೂರು.

ಸೆಕ್ರೆಟರಿ
ನಿಜಾಮ ಪ್ರಾಂತಿಕ ವೀರಶೈವ ಪರಿಷತ್ತು.

೭. ಧನಿಯು ಹೊಲ ಬಿಡಿಸಿಕೊಳ್ಳಲು ನೋಟೀಸ್ ಕೊಡುವ ಮೊದಲೇ ಕೆರೆ, ಭಾವಿ, ಮನೆ, ಒಡ್ಡು ಮುಂತಾದ ಕಾರ್ಯ ಮಾಡಿದ್ದರೆ ಆ ಬಗ್ಗೆ ಧನಿಗೆ ನೋಟೀಸ್ ಕೊಟ್ಟು ರೈತನು ಹಣ ಪಡೆಯತಕ್ಕದ್ದು.

೮. ಈ ಕಾಯದೆ ಪ್ರಕಾರ ಕೊಡಲ್ಪಟ್ಟ ಒಕ್ಕಲಿಗನ ಹಕ್ಕುಗಳನ್ನು ಕಸಿದುಕೊಳ್ಳುವುದಕ್ಕಾಗಲೀ ಜಪ್ತ ಮಾಡಲಿಕ್ಕಾಗಲೀ ಕೋರ್ಟಿನ ಹುಕುಮಿನ ಮೇರೆಗೆ ಮಾರುವುದಕ್ಕಾಗಲೀ ಅಧಿಕಾರ ವಿರುವುದಿಲ್ಲ.

೯. ನ್ಯಾಯಸಮಂಜಸವಾದ ಲಾವಣಿಯನ್ನು ಗೊತ್ತುಪಡಿಸುವ ಬಗ್ಗೆ ಒಕ್ಕಲಿಗನಾಗಲೀ ಧನಿಯಾಗಲೀ ತಾಲೂಕಿನ ಮಾಮಲೇದಾರರಿಗೆ ಲೇಖೀ ಮೂಲಕ ಅರ್ಜಿ ಮಾಡಿಕೊಳ್ಳತಕ್ಕದ್ದು. ಮಾಮಲೇದಾರರು ಅರ್ಜಿ ಮಾಡಿಕೊಂಡ ಒಕ್ಕಲಿಗನಿಗಾಗಲೀ ಧನಿಗಾಗಲೀ ನೋಟೀಸು ಕೊಟ್ಟು "ಮುಂಬೈ ಲ್ಯಾಂಡ್ ರೆವಿನ್ಯೂ ಕೋಡ್ [೧೮೭೯]" ಗೆ ಅನುಸರಿಸಿ ಚೌಕಸಿ ಮಾಡಿ ಲಾವಣಿ ಗೊತ್ತುಪಡಿಸಿಕೊಳ್ಳತಕ್ಕದ್ದು. ಈ ತೀರ್ಮಾನದ ವಿರುದ್ಧವಾಗಿ ಒಂದು ತಿಂಗಳೊಳಗೇ ಫಸ್ಟ್ ಕ್ಲಾಸ್ ಸಬ್ ಜಡ್ಜರಲ್ಲಿ ಅಪೀಲು ಮಾಡಲು ಒಕ್ಕಲಿಗನಿಗೂ ಧನಿಗೂ ಅಧಿಕಾರವಿರತಕ್ಕದ್ದು

೧೦. ಲಾವಣಿಯ ಹೊರತು ಇತರ ಕರ ಕಂದಾಯುಗಳನ್ನೆತ್ತಲು ಧನಿಗೆ ಅಧಿಕಾರವಿರುವುದಿಲ್ಲ. ಇದಕ್ಕೆ ತಪ್ಪಿ ನಡಕೊಂಡ ಧನಿಗೆ ೧೦೦೦ ರೂ. ವರೆಗೆ ದಂಡವಿಧಿಸಲು ಅಧಿಕಾರವಿರತಕ್ಕದ್ದು.

ಧನಿಯ ತರಮನ್ನು ಸರಕಾರದವರು ತಹಕೂಬು, ಇಲ್ಲವೆ ಸೂಟು ಬಿಟ್ಟಲ್ಲಿ ಆತನ ಲಾವಣಿದಾರರಿಗೂ ಲಾವಣಿಯನ್ನು ತಹಕೂಬ ಇಲ್ಲವೆ ಸೂಟು ಬಿಡಲು ಕಲೆಕ್ಟರರಿಗೆ ಅಧಿಕಾರವಿರತಕ್ಕದ್ದು. ಹಾಗೆಯೇ ಅರ್ಧಮರ್ಧ ಸೂಟು ಮತ್ತು ತಹಕೂಬ ಕೊಡಲ್ಪಟ್ಟರೆ ಲಾವಣಿದಾರರಿಗೂ ಅದೇ ಪ್ರಮಾಣದಲ್ಲಿ ತಹಕೂಬ, ಮತ್ತು ಸೂಟು ಸಿಗತಕ್ಕದ್ದು.

---

## ಜಗತ್ತಿಗೆ ಅಮೇರಿಕೆಯ ಕಾಣಿಕೆ.

| | |
|---|---|
| ಟೆಲಿವ್ಹಿಜನ್ ಯಂತ್ರಶೋಧಕ | ಗ್ರಾಹಾಮಬೆಲ್ |
| ವಿದ್ಯುತ್ತಿನ ತಾರಾ | ಸ್ಯಾಮ್ಯುಅಲ್ ಮಾರ್ಸ್ |
| ಸಿನೇಮಾ ಗ್ರಾಮಫೋನ | ಟಮ್ಸ ಅಲ್ವಾಯಿಡಲೀನ್ |
| ಉಗಿಹಡಗ | ರಾಬರ್ಟ ಫಲ್ಟನ್ |
| ವಿಮಾನ | ವಿಲ್ಬರ್ ರಾಯಿಟ್ |
| ಲೆನೋಟಾಯಿಪ್ | ಮಾರಿಸನ್ ಡಾಲರ |
| ಕಡ್ಡೀಪೆಟ್ಟಿಗೆ ತಯಾರಿಸುವ | ಅಲ್ಯಾಸ್ ಹಾರ್ಡ |

ಈ ಸಪ್ತಸಂಶೋಧಕರು ಅಮೇರಿಕಾ ದೇಶದವರಾಗಿದ್ದಾರೆ

---

## ಲಕ್ಷದ ಲೆಕ್ಕಗಳು!

ಲಂಡನದ ಬ್ರಿಟಿಶ್ ಮ್ಯೂಜಿಯಂದಲ್ಲಿ ೫೦ ಲಕ್ಷ ಪುಸ್ತಕಗಳಿವೆ. ಪ್ರತಿ ದಿವಸ ೩೦೦೦ ಜನರು ಆ ವಾಚನಾಲಯದಲ್ಲಿ ಓದುತ್ತಾರೆ.

ಜಗತ್ತಿನಲ್ಲೆಲ್ಲಾ ಬೇರೆ ಬೇರೆ ಭಾಷೆಗಳಲ್ಲಿ ಪ್ರತಿ ೫ ನಿಮಿಷಕ್ಕೆ ೫ ಲಕ್ಷ ವರ್ತಮಾನಪತ್ರಗಳು ಮುದ್ರಣವಾಗುತ್ತವೆ.

ಪ್ರತಿ ೫ ನಿಮಿಷಕ್ಕೆ ಜಗತ್ತಿನಲ್ಲೆಲ್ಲ ೨೩೨ ಮಣ ಉಣ್ಣೆಯ ಬಟ್ಟೆ ಹಾಗು ೮೦೦ ಮಣ ನೂಲಿನ ಬಟ್ಟೆ ಸಿದ್ಧವಾಗುತ್ತದೆ.

"ಕ್ರಾಂತಿ"

## ರೇಲ್ವೆ ಯಾವಾಗ ಬಂತು?

ಹಿಂದುಸ್ಥಾನದಲ್ಲಿ ಎಲ್ಲಕ್ಕೂ ಮೊದಲು ರೇಲ್ವೆ ಯಾವ ತಾರೀಖಿಗೆ ಬಂದಿತು? ೧೮೫೫ ನೆಯ ಇಸ್ವಿ ಫೆಬ್ರವರಿ ೧೩ ನೆಯ ತಾರೀಖಿಗೆ ಮೊದಲು ಎಲ್ಲಿ ಪ್ರಾರಂಭವಾಯಿತು? ಕಲಕತ್ತಾ ನಗರದಿಂದ ರಾಣೀಗಂಜ ನಗರದ ವರೆಗೆ. ಉಗಿಬಂಡಿಯ ವೇಗ ವೆಷ್ಟಿದ್ದಿತು? ಗಂಟೆಗೆ ೧೫ ಮೈಲು.

---

## ಹಿಂದುಸ್ಥಾನದ ಹಿರಿಮೆ!

ಹಿಂದುಸ್ಥಾನ ಹಿಂದುಸ್ಥಾನವೆಂದರೆ ಎಲ್ಲಕ್ಕೂ ಹಿಂದೆಯೇ? ಹಾಗಲ್ಲ; ಒಂದು ವಿಷಯದಲ್ಲಿ ಆದು ಉಳಿದ ಎಲ್ಲಾ ಜಗತ್ತನ್ನು ಮೀರಿಸಿದೆ. ಏನೆಂದರೆ ಹಿಂದುಸ್ಥಾನವೊಂದನ್ನು ಬಿಟ್ಟು ಉಳಿದ ಜಗತ್ತಿನಲ್ಲೆಲ್ಲ ನಿರುದ್ಯೋಗಿಗಳು ಮೂರು ಕೋಟಿ ಇರುವರೆಂದು ರಾಷ್ಟ್ರಸಂಘದ ವರದಿಯಲ್ಲಿ ಕಾಣುತ್ತದೆ. ಆದರೆ ಹಿಂದುಸ್ಥಾನ ಒಂದರಲ್ಲಿಯೇ ೪|| ಕೋಟಿ ನಿರುದ್ಯೋಗಿಗಳು ದೊರೆಯುತ್ತಿದ್ದಾರಂತೆ! ಅಂದಮೇಲೆ ದರಿದ್ರ ಲಕ್ಷ್ಮಿಯು ಬೇರೆ ಕಡೆಗೆ ಏಕೆ ಹೋಗುವಳು?

---

## ಮಹಾಯುದ್ಧದ ವೆಚ್ಚ.

ಕಳೆದ ಮಹಾಯುದ್ಧದ ಕಾಲಕ್ಕೆ ೫೭೨೦೦೦೦೦೦೦೦ ಪೌಂಡು ವೆಚ್ಚವಾದವಂತೆ. ಅಷ್ಟು ಹಣವನ್ನು ೮೫ ಲಕ್ಷ ಉಗಿಬಂಡಿಗಳಲ್ಲಿ ಹೇರಿಕಳಿಸಬಹುದಾಗಿದ್ದಿತು. ಆ ಹಣವನ್ನು ಖರ್ಚು ಮಾಡಿ ಹಿಂದುಸ್ಥಾನದ ೩೫ ಕೋಟಿ ಜನರು ೨೦೦೦ ವರುಷಗಳ ವರೆಗೆ ಏನೂ ದುಡಿಯದೆ ಹೊಟ್ಟೆ ತುಂಬಿಸಿಕೊಂಡು ಇರಬಹುದಾಗಿದ್ದಿತು!

---

## ದೂರಿನಲ್ಲಿರುವ ಒಬ್ಬರನ್ನು ಇನ್ನೊಬ್ಬರು ಕಾಣಬಹುದು.

ಟೇಲಿಫೋನಿನಿಂದ ಮಾತನಾಡುವಾಗ ಮತ್ತೊಂದು ಕಡೆಯಿಂದ ಮಾತನಾಡುವವರ ಭಾವಚಿತ್ರವನ್ನು ಸಹ ನೋಡಬಹುದಾದ ಸೌಲಭ್ಯ ಈಗ ಉಂಟಾಗಿದೆ. ಈ ಸಾಧನವನ್ನು ಈಗ ಜರ್ಮನಿಯಲ್ಲಿ ಉಪಯೋಗಿಸುತ್ತಿದ್ದಾರೆ. ಬರ್ಲಿನ್ ಮತ್ತು ಮುನಿಚಕ್ಕೆ ಈ ಸಾಧನ ಏರ್ಪಡಿಸಲಾಗಿದೆ.

---

## ವಿಮಾನಿನಲ್ಲಿ ಸಭೆ.

ಡೆನ್ಮಾರ್ಕ ದೇಶದ ಅಲ್‌ಬರ್ಗ ಎಂಬ ನಗರದ ಪೌರ ಸಭೆ ಸದಸ್ಯರು ವಿಮಾನಿನಲ್ಲಿಯೇ ಕುಳಿತು ಸಭೆಯೊಂದನ್ನು ನೆರೆಯಿಸಿ ೨೭ ವಿಷಯಗಳನ್ನು ಚರ್ಚಿಸಿದರು. ಜಗತ್ತಿನಲ್ಲಿಯೇ ವಿಮಾನಿನಲ್ಲಿ ನಡೆದ ಸಭೆಯೆಂದರೆ ಇದೊಂದೇ. ಈ ವಿಮಾನಿನಲ್ಲಿ ನಡೆದ ಸಭೆಯಲ್ಲಿ ೨೧ ಜನ ಸದಸ್ಯರೂ ಒಬ್ಬ ಕಾರ್ಯದರ್ಶಿ ಮತ್ತು ಮೂರು ಜನ ಪತ್ರಿಕಾಕರ್ತರೂ ಇದ್ದರಂತೆ.

—ಕಿಶನ್‌ಗಾರಾ ಜಿಲ್ಲೆಯ ಡಿ. ಮ್ಯಾಜಿಸ್ಟ್ರೇಟರು ಅದೇ ಜಿಲ್ಲೆಯ ಪೊಲೀಸ್ ಡೆಪ್ಯೂಟಿ ಸುಪರಿಂಟೆಂಡೆಂಟರಾದ ಹರಿಶಂಕರ ಇವರಿಗೆ ಲಂಚ ತಿಂದ ಆರೋಪಕ್ಕಾಗಿ ಪ್ರಥಮ ಆರೋಪಕ್ಕೆ ೬ ತಿಂಗಳ ಶಿಕ್ಷೆಯನ್ನು ಎರಡನೆಯ ಆರೋಪಕ್ಕಾಗಿ ೧ ವರುಷದ ಕಠಿಣ ಶಿಕ್ಷೆಯನ್ನು ವಿಧಿಸಿದ್ದಾರೆ.

# ಮುಂಬೈ ಅಸೆಂಬ್ಲಿ ಅಧಿವೇಶನ.

## ಮಹತ್ವದ ಕಾರ್ಯಗಳು.

ಮುಂಬೈ ಅಸೆಂಬ್ಲಿಯ ಮಳೆಗಾಲದ ಅಧಿವೇಶನವು ಕಳೆದ ೧೭ ನೆಯ ತಾರೀಖಿನ ದಿವಸ ಎರಡು ಗಂಟೆಗೆ ಪುಣೆಯ ಕೌನ್ಸಿಲ್ ಹಾಲಿನಲ್ಲಿ ಶ್ರೀ. ಮಾಳವಣಕರರವರ ಅಧ್ಯಕ್ಷತೆಯಲ್ಲಿ ಪ್ರಾರಂಭಿಸಲ್ಪಟ್ಟಿತು. ಶ್ರೀ. ಮಾಳವಣಕರರವರು ಕಳೆದ ಅಧಿವೇಶನದಲ್ಲಿ ತೀರ್ಮಾನಿಸಲ್ಪಟ್ಟ ಕೆಳಗಿನ ಬಿಲ್ಲುಗಳಿಗೆ ಗವ್ಹರ್ನರರು ಸಮ್ಮತಿ ಕೊಟ್ಟಿದ್ದಾರೆಂದು ಹೇಳಿದರು. ೧. ಡಿ. ಮುನಸಿಪಾಲ್ಟಿ ಆ್ಯಕ್ಟ ತಿದ್ದುಪಡೆ ಬಿಲ್ಲ ೨. ಹರಿಜನ ನಿರ್ಬಂಧ ನಿವಾರಣಾ ಬಿಲ್, ೩. ಪ್ರಾಥಮಿಕ ಶಿಕ್ಷಣ ಶಾಸನ ತಿದ್ದುಪಡೆ ಬಿಲ್. ೪, ರೇಸ್ ಕೋರ್ಸ ಸಂಬಂಧ ಬಿಲ್ ೫. ಮುಂಬಯಿ ಪಟ್ಟಣ ಮು. ಶಾಸನ ತಿದ್ದುಪಡೆ ಬಿಲ್ ೬. ಪೋಲೀಸ್ ಶಾಸನ ತಿದ್ದುಪಡೆ ಬಿಲ್.

### ಸಾವಕಾರ ನಿಯಂತ್ರಣ ಬಿಲ್.

ಕಂದಾಯ ಮಂತ್ರಿಗಳಾದ ಶ್ರೀ. ಮುರಾರಜಿ ದೇಸಾಯಿಯವರು ಸಾವಕಾರ ನಿಯಂತ್ರಣ ಬಿಲ್ಲಿನ ಮೇಲೆ ಶಿಲೆಕ್ಟ ಕಮಿಟಿಯು ರಿಪೋರ್ಟ ಒಪ್ಪಿಸುವ ಅವಧಿಯನ್ನು ನವ್ಹಂಬರ್ ೧೩ ನೆಯ ತಾರೀಖಿನ ವರೆಗೆ ಮುಂದುವರಿಸಬೇಕೆಂದು ಸೂಚನೆ ತಂದರು. ಬ್ಯಾ. ಜಮುನಾದಾಸ ಮೇಥಾರವರು ಶಾಸನ ಸಭೆಯ ನಿಯಮದಂತೆ ಈ ಸೂಚನೆ ತರಲು ಬರುವದಿಲ್ಲವೆಂದೂ, ಶಿಲೆಕ್ಟ ಕಮಿಟಿಯು ೨ ತಿಂಗಳಿನಲ್ಲಿಯೇ ತನ್ನ ರಿಪೋರ್ಟ ತಯಾರಿಸಬೇಕೆಂಬ ನಿಯಮವಿದೆಯೆಂದೂ ೨ ತಿಂಗಳಿನ ಮೇಲೆ ಕಮಿಟಿಯೇ ಅಸ್ತಿತ್ವದಲ್ಲಿರುವದಿಲ್ಲವೆಂದೂ ವಾದಿಸಿದರು. ಶ್ರೀ. ಬಾಳಾಸಾಹೇಬರವರು ಸರ್. ಮೊರಿಸ್ ಹೆವರ್ಡರ ಕಾಲಕ್ಕೂ ಇದೇ ಪ್ರಶ್ನೆ ಉದ್ಭವಿಸಿತ್ತೆಂದೂ ಆಗ ಸಿಲೆಕ್ಟ ಕಮಿಟಿಯ ಅವಧಿಯನ್ನು ಹೆಚ್ಚಿಸಲು ಅಪ್ಪಣೆ ದೊರತಿತ್ತೆಂದೂ ಹೇಳಿದರು. ಶ್ರೀ. ಖೇರ ಮತ್ತು ಬ್ಯಾ. ಜಮುನಾದಾಸ ಮೇಥಾರವರಲ್ಲಿ ಸ್ವಲ್ಪ ವಾಗ್ವಾದವಾದನಂತರ ಸಭಾಪತಿ ಶ್ರೀ. ಮಾಳವಣಕರರು ಮೊದಲಿನ ಆಧಾರದಂತೆ ಕೋರ್ಟಿನ ಕೆಲಸಗಳ ಪದ್ಧತಿಯನ್ನು ಲಕ್ಷಿಸಿ ಬ್ಯಾ. ಮೇಥಾರವರ ಸೂಚನೆಯನ್ನು ತೆಗೆದುಹಾಕಿದರು.

ಭಾಯಿ ಜಾಬವಾಲಾರವರು ಸಾವಕಾರ ನಿಯಂತ್ರಣ ಬಿಲ್ ಜಾಗ್ರತೆ ಕಾರ್ಯರೂಪದಲ್ಲಿ ಬರುವುದು ಅಗತ್ಯವಿದೆಯೆಂದು ಪ್ರತಿಪಾದಿಸಿದರು. ಶ್ರೀ. ಖೇರರವರು ಸರಕಾರದವರು ಈ ವಿಷಯದಲ್ಲಿ ತೀವ್ರ ಕೆಲಸ ಮಾಡುತ್ತಿರುವರೆಂದು ಆಶ್ವಾಸನ ಕೊಟ್ಟನಂತರ ಶಿಲೆಕ್ಟ ಕಮಿಟಿಯ ಅವಧಿಯನ್ನು ಹೆಚ್ಚಿಸುವ ಸೂಚನೆಯು ತೀರ್ಮಾನಿಸಲ್ಪಟ್ಟಿತು.

### ಹಿಂದಿ-ಉರ್ದು ವಾದವಿವಾದ.

ಮುಂಬೈ ಇಲಾಖೆಯಲ್ಲಿಯ ಗುಜರಾಥಿ, ಮರಾಠಿ, ಕನ್ನಡ, ಉರ್ದು ಅಥವಾ ಹಿಂದೀ ಹಿಂದುಸ್ಥಾನಿ ಸರಕಾರ ಮಾನ್ಯ ಭಾಷೆಗಳ ಬಗ್ಗೆ ತುಂಬಾ ವಾದವಿವಾದವಾಯಿತು. 'ಉರ್ದು' ಮತ್ತು 'ಹಿಂದಿ ಹಿಂದುಸ್ಥಾನಿ' ಎಂಬ ಶಬ್ದಗಳನ್ನೇ ತೆಗೆದುಹಾಕಬೇಕೆಂದು ಶ್ರೀ. ರಾಮಭಾವು ಮಂಡಲಿಕರರವರು ಒಂದು ಉಪಸೂಚನೆ ತಂದರು. ಇವರು ತಮ್ಮ ಭಾಷಣದಲ್ಲಿ "ಮುಂಬೈ ಇಲಾಖೆಯಲ್ಲಿ ಹೆಚ್ಚಾಗಿ ಮರಾಠಿ ಭಾಷೆಯ ಪ್ರಸಾರವಿದೆ. ಮುಸಲ್ಮಾನರು ಕೂಡಾ ಮರಾಠಿಯಲ್ಲಿಯೇ ಮಾತನಾಡುತ್ತಾರೆ. ಈ ಶಾಸನ ಮಂಡಳವು ಕೂಡಾ ಮರಾಠಿಯಲ್ಲಿಯೇ ನಡೆಯುವುದು ಅಗತ್ಯವಿದೆ. ಮಂತ್ರಿಗಳು ಸಭಾಪತಿಗಳು ಮರಾಠಿಯಲ್ಲಿಯೇ ಮಾತನಾಡಬೇಕೆಂದು ಹೇಳಿದರು. ಆ ಮೇಲೆ ಮಿ. ಅಲಿಬಹಾದ್ದೂರ್ ಖಾನರವರು ಹಿಂದಿ ಹಿಂದುಸ್ಥಾನಿ ಎಂಬ ಶಬ್ದ ಪ್ರಯೋಗವು ಕಾಂಗ್ರೆಸ್ ಮುಸಲ್ಮಾನರ ಸಂಬಂಧ ಚಳುವಳಿಯನ್ನೆಬ್ಬಿಸಿದಂದಿನಿಂದ ಬಂದಿದೆಯೆಂದೂ 'ಹಿಂದಿ-ಹಿಂದುಸ್ಥಾನಿ' ಎಂದರೆ ಏನೂ ಅರ್ಥವಾಗುವುದಿಲ್ಲವೆಂದೂ ಅದಕ್ಕಾಗಿ ಅದರಲ್ಲಿಯ "ಹಿಂದೀ-ಹಿಂದುಸ್ಥಾನಿ" ಶಬ್ದಗಳನ್ನು ತೆಗೆಯಬೇಕೆಂದು ಸೂಚಿಸಿದರು. ಅನಂತರ ಶ್ರೀ. ಕರಂದೀಕರರು ಮುಂಬೈ ಇಲಾಖೆಯಲ್ಲಿಯ ಬೇರೆ ಬೇರೆ ಭಾಗಗಳ ಮುಸಲ್ಮಾನರು ಆ ಆ ಭಾಗಗಳಲ್ಲಿಯ ಭಾಷೆಯಲ್ಲಿಯೇ ಮಾತನಾಡುವರೆಂದೂ ಉರ್ದುನಲ್ಲಿ ಮಾತನಾಡುವುದಿಲ್ಲವೆಂದೂ ಉರ್ದು ಅವರಿಗೆ ಬರುವದಿಲ್ಲವೆಂದೂ ಪ್ರತಿಪಾದಿಸಿದರು. ಅನಂತರ ಬ್ಯಾ. ಜಮುನಾದಾಸ ಮೆಹಥಾರವರು ಮೇಲಿನ ಅಭಿಪ್ರಾಯವನ್ನೇ ಮನ್ನಿಸಿ "ಮುಂಬೈಯಲ್ಲಿ ಖೋಜಾ ಜಾತಿಯ ಜನಗಳು ಗುಜರಾಥಿಯಲ್ಲಿಯೇ ಮಾತನಾಡುವರು. ಅವರ ಹೆಸರುಗಳು ಕೂಡಾ ವಿಶ್ರಾಮ, ಭಗವಾನ್, ಧರಮಸಿ ಮೊದಲಾದ ಹಿಂದು ಹೆಸರುಗಳೇ ಇವೆ. ಈಗೀಗ ಅವರು ತಮ್ಮ ಹೆಸರುಗಳನ್ನು ಬದಲಿಸಹತ್ತಿದ್ದಾರೆಂದು" ತಿಳುಹಿಸಿದರು.

ಕೊನೆಗೆ ಶ್ರೀ. ಖೇರರವರು 'ಹಿಂದುಸ್ಥಾನ ರಾಷ್ಟ್ರಭಾಷೆಯು ಹಿಂದುಸ್ಥಾನಿ ಇರಬೇಕೆಂದು ಕಾಂಗ್ರೆಸ್ಸಿನ ಇಚ್ಛೆಯಾಗಿದೆ. ಮುಸಲ್ಮಾನರು ಅದನ್ನೇ ಉರ್ದು ಲಿಪಿಯಲ್ಲಿಯೂ ಬಾರದವರು ದೇವನಾಗರಿಲಿಪಿಯಲ್ಲಿಯೂ ಬರೆಯುತ್ತಾರೆ. ಅದಕ್ಕಾಗಿಯೇ ಶಾಸನ ಸಭೆಯ ಕಾರ್ಯಗಳ ನಿಯಮಗಳಲ್ಲಿ 'ಉರ್ದು' ಅಥವಾ 'ಹಿಂದಿ ಹಿಂದುಸ್ಥಾನಿ' ಎಂದು ಉಪಯೋಗಿಸಲಾಗಿದೆಯೆಂದು ಹೇಳಿದರು. ಕೊನೆಗೆ ಶ್ರೀ. ಮಂಡಲೀಕರ ಮತ್ತು ಮಿ. ಅಲಿಬಹಾದ್ದೂರ ಖಾನರ ಸೂಚನೆಗಳು ಬಿದ್ದುಹೋದವು.

### ಅಧ್ಯಕ್ಷರ ಮೇಲೆ ಅವಿಶ್ವಾಸ ಗೊತ್ತುವಳಿ ಚರ್ಚೆ.

ಅಧ್ಯಕ್ಷರ ಮೇಲೆ ಅವಿಶ್ವಾಸ ಗೊತ್ತುವಳಿಯನ್ನು ತರಬೇಕಾದರೆ ಮೊದಲು ಅದಕ್ಕೆ ಕನಿಷ್ಟ ೫೦ ಜನಗಳ ಅಪ್ಪಣೆಯಾದರೂ ಬೇಕೆಂಬ ಮುಖ್ಯ ಮಂತ್ರಿಗಳು ತಂದ ನಿಯಮದ ಬಗ್ಗೆ ತುಂಬಾ ಚರ್ಚೆಯಾಯಿತು. ಶ್ರೀ. ಜಾಬವಾಲಾರವರು ಮೇಲಿನ ನಿಯಮವನ್ನು ವಿರೋಧಿಸಿ ವಿರೋಧಿ ಪಕ್ಷವು ಕೆಲವು ತುಣುಕುಗಳಿಂದ ಕೂಡಿದ್ದು ಕೆಲವು ಪಂಗಡಗಳಂತೂ ಕೇವಲ ಜಾತಿಯ ಪ್ರಶ್ನೆ ಬಂದಾಗ ಮಾತ್ರ ಮತ ಕೊಡುವವೆಂದೂ ಸದ್ಯದ ಪರಿಸ್ಥಿತಿಯಲ್ಲಿ ಪ್ರಜಾಪ್ರಭುತ್ವದ ಹೆಸರಿನಲ್ಲಿ ೫೦ ಜನ ಸದಸ್ಯರು ದೊರೆಯುವದು ಕಠಿಣವೆಂದು ಹೇಳಿದರು. ಶ್ರೀ. ಜಾಬವಾಲಾ ಮತ್ತು ಚಿತ್ರೆಯವರ ಉಪಸೂಚನೆಗಳು ಬಿದ್ದುಹೋಗಿ ಮೇಲಿನ ನಿಯಮವೇ ತೀರ್ಮಾನಿಸಲ್ಪಟ್ಟಿತು.

---

## ಪದವೀದಾನ ಸಮಾರಂಭ.

ಮುಂಬೈ ವಿದ್ಯಾಪೀಠದ ಪದವೀದಾನ ಸಮಾರಂಭವು ಕಳೆದ ೧೭ ನೆಯ ತಾರೀಖಿನ ದಿವಸ ಮುಂಬೈ ವಿದ್ಯಾಪೀಠದ ಚಾನ್ಸಲರರಾದ ಸರ್. ರಾಜರ್ ಲುಮ್ಲೆಯವರ ಹಸ್ತದಿಂದ ನೆರವೇರಿಸಲ್ಪಟ್ಟಿತು ಒಟ್ಟು ೨೦೪೭ ಜನರಿಗೆ ಪದವಿಗಳನ್ನು ಕೊಡಲಾಯಿತು. ೯೪೭ ಬಿ. ಎ., ೫೬೧ ಬಿ. ಕಾಮ, ೮೩ ಬಿ. ಟಿ., ೧೩೪ ಎಂ. ಎ. ೨೯೪ ಬಿ. ಎಸ್. ಸಿ. ೯೭ ಬಿ. ಇ., ೨೭೦ ಎಲ್. ಎಲ್. ಬಿ. ೯೫ ಎಂ. ಬಿ. ಬಿ. ಎಸ್. ೧೪ ಎಂ. ಡಿ. ಪದವೀಧರರಿದ್ದರು.

ಶರಣ ಸಂದೇಶ



ಶಾ. ಶ. ೧೮೬೦ ನೆಯ ಶ್ರಾವಣ ಬ|| ೧೨ ಸೋಮವಾರ.

# ಕಾಂಗ್ರೆಸ್ಸಿನ ಶುದ್ಧೀಕರಣ.

ಕಾಂಗ್ರೆಸ್ಸು ಅಸಹಕಾರ ಮತ್ತು ಶಾಸನೋಲ್ಲಂಘನೆಯ ಕ್ಷೇತ್ರಗಳಲ್ಲಿ ಹದಿನಾರು ವರುಷ ಬ್ರಿಟಿಶ್ ಸರಕಾರದೊಂದಿಗೆ ಬಹು ವೀರತನದಿಂದ ಹೋರಾಡಿ ಎಷ್ಟೋ ವಿಜಯವನ್ನು ಹೊಂದಿ ಕಳೆದ ವರುಷ ಅಧಿಕಾರ ಸೂತ್ರವನ್ನು ಹಿಡಿದಿದೆಯಷ್ಟೆ.

ಸರಕಾರದ ಸಂಗಡ ಕಾಂಗ್ರೆಸ್ಸು ಹೋರಾಡುತ್ತಿದ್ದಾಗ ಅದರಲ್ಲಿ ಸೇರಿ ಕಷ್ಟನಷ್ಟಗಳನ್ನು ಅನುಭವಿಸಿದ ದೇಶಸೇವಕರ ವಿಚಾರವಾಗಿ ಈಗ ಯಾವ ಆಕ್ಷೇಪಗಳಿಗೂ ಅವಕಾಶವಿಲ್ಲವೆಂದಲ್ಲ. ಆದರೆ ಕಾಂಗ್ರೆಸ್ಸು ಅಧಿಕಾರವನ್ನು ಸ್ವೀಕರಿಸಿದನಂತರ ಅದರಲ್ಲಿ ಸೇರಿದ ಅಸಂಖ್ಯ ಕಾಂಗ್ರೆಸ್ ಸದಸ್ಯರ ರೀತಿನೀತಿಗಳ ಸಂಬಂಧವಾಗಿ ಬಹು ಜನರು ಸಾಶಂಕವೃತ್ತಿಯುಳ್ಳವರಾಗಿರುವುದು ಹೆಚ್ಚು.

ಅಧಿಕಾರ ಆಸೆಯಿಂದಲೇ ಬಹು ಜನರು ಈಗ ಕಾಂಗ್ರೆಸ್ಸಿನಲ್ಲಿ ಸೇರಿ ಅದರ ಶಿಸ್ತನ್ನು ಅತಿಕ್ರಮಿಸಿ ಕಾಂಗ್ರೆಸ್ಸಿನಲ್ಲಿಯೂ ಅದರ ಆದರ್ಶಪ್ರಾಯವಾಗಿರತಕ್ಕ ರೀತಿನೀತಿಗಳಿಗೆ ಕಲಂಕ ಬರುವಂತೆ ವರ್ತಿಸುತ್ತಿದ್ದಾರೆಂದು ಅನೇಕರು ಹೇಳುತ್ತಿದ್ದಾರೆ.

ಕಾಂಗ್ರೆಸ್ಸು ಅಧಿಕಾರವನ್ನು ಸ್ವೀಕರಿಸಿದ ಮುಂಚೆ ಅದರಲ್ಲಿದ್ದು ಎಷ್ಟೋ ಕಷ್ಟನಷ್ಟಗಳನ್ನು ಅನುಭವಿಸಿರುವವರಲ್ಲಿ ಕೂಡಾ ಈಗ ಅನೇಕರು ಸ್ವಾರ್ಥಕ್ಕಾಗಿಯೋ ಸ್ವಜನರ ಅಥವಾ ಸ್ವಜಾತಿಯವರ ಹಿತಕ್ಕಾಗಿಯೋ ಸಲ್ಲದ ಅನೇಕ ಕಾರ್ಯಗಳನ್ನು ಕಾಂಗ್ರೆಸ್ಸಿನಲ್ಲಿದ್ದುಕೊಂಡೇ ಮಾಡುತ್ತಾ, ಕಾಂಗ್ರೆಸ್ಸಿಗೆ ಕೆಟ್ಟ ಹೆಸರು ಬರುವಂತೆ ನಡೆಯುತ್ತಿದ್ದಾರೆಂದೂ ಗೊತ್ತಾಗಿದೆ.

## ಕಾಂಗ್ರೆಸ್ಸಿನ ಸಂಖ್ಯಾಬಲ.

ಹೀಗೆ ಕಳೆದೊಂದು ವರುಷದಲ್ಲಿಯೇ ಕಾಂಗ್ರೆಸ್ಸಿನಲ್ಲುಂಟಾಗಿರತಕ್ಕ ಅನೇಕ ದೋಷಗಳನ್ನು ನೋಡಿ ಇದನ್ನು ಶುದ್ಧೀಕರಿಸುವುದು ಅಗತ್ಯವೆಂದು ಅನೇಕರಿಗೆ ತೋರಿದೆ. ಕಾಂಗ್ರೆಸ್ಸಿಗೆ ನಿಜವಾದ ಬಲವು ಅದರಲ್ಲಿರುವ ಸದಸ್ಯರ ಸಂಖ್ಯಾಬಲದಿಂದಲೇ ಬರುವಂತಿಲ್ಲ. ಅದರಲ್ಲಿರುವ ಸದಸ್ಯರು ನಡೆಯುವ ಶಿಸ್ತಿನಿಂದಲೇ ಅದಕ್ಕೆ ಬಲ ಬರುತ್ತಿದೆಯೆಂದು ಕೆಲವರು ಹೇಳಲಾರಂಭಿಸಿದ್ದಾರೆ.

ಇದೆನ್ನೋ ಈಗ ವಿಹಿತವಾದುದಾಗಿಯೇ ತೋರಬಹುದು. ಆದರೆ ಎಲ್ಲ ಕಾಲಗಳಲ್ಲಿಯೂ ಈ ನಿಯಮವು ಫಲಕಾರಿಯಾದುದಲ್ಲ. ಈಗ ಕಾಂಗ್ರೆಸ್ಸು ಏಳು ಪ್ರಾಂತಗಳಲ್ಲಿ ತನ್ನ ಪ್ರಭುತ್ವವನ್ನು ಸ್ಥಾಪಿಸಿರುವುದು ಸಂಖ್ಯಾಬಲದಿಂದಲೇ ವಿನಾ ಶಿಸ್ತಿನ ಬಲದಿಂದಲ್ಲ. ಕಾಂಗ್ರೆಸ್ಸಿನ ಶಿಸ್ತಿನಂತೆಯೇ ನಡೆಯುವವರಿಗೇನೂ ಹೆಚ್ಚು ಮತಗಳ ಅಧಿಕಾರವಿಲ್ಲ. ಕಾಂಗ್ರೆಸ್ಸಿನ ರೀತಿನೀತಿಗಳನ್ನು ತಪ್ಪಿ ನಡೆಯುವವರಿಗೆ ಮತಾಧಿಕಾರವೇ ಇಲ್ಲವೆಂದು ಹೇಳುವಂತಿಲ್ಲ.

ಕಳೆದ ವರುಷ ಚುನಾವಣೆಯ ಕಾಲಕ್ಕೆ ಕಾಂಗ್ರೆಸ್ಸಿನ ಸದಸ್ಯರು ಹೆಚ್ಚಾದಷ್ಟು ಅದಕ್ಕೆ ಹೆಚ್ಚಾದ ಬಲವೇ ಬಂದಿತು. ಶಿಸ್ತಿನ ಒರಿಗೇನೇ ಹಚ್ಚಿ ಸದಸ್ಯರನ್ನು ಮಾಡಿಕೊಂಡಿದ್ದರೆ ಈಗ ಅದಕ್ಕೆ ದೊರೆತಷ್ಟು ಪ್ರಾಂತಗಳು ದೊರೆಯುತ್ತಲೇ ಇರಲಿಲ್ಲ. ಆಗ ಹಾಗೆ ಮಾಡಿದುದೇ ಯುಕ್ತ. ಈಗ ಅಧಿಕಾರ ಕೈಯಲ್ಲಿ ಬಂದ ನಂತರ ಅದನ್ನು ಸ್ವಾರ್ಥಸಾಧನೆಗಾಗಿ ಉಪಯೋಗಿಸಿಕೊಳ್ಳುವವರೂ ಶಿಸ್ತಿಗೆ ವಿರೋಧವಾಗಿ ವರ್ತಿಸುವವರೂ ಅಲ್ಲಲ್ಲಿ ತಲೆ ಎತ್ತಿದುದರಿಂದ ಕಾಂಗ್ರೆಸ್ಸನ್ನು ಶುದ್ಧೀಕರಿಸುವುದೇ ವಿಹಿತ.

ಕಾಂಗ್ರೆಸ್ಸಿಗೆ ಸಂಖ್ಯಾಬಲವಿರಬೇಕಾದುದು ಅಗತ್ಯ. ಮತ್ತು ಅದರ ಸೂತ್ರವು ಮಾತ್ರ ಕಾಂಗ್ರೆಸ್ಸಿನ ರೀತಿನೀತಿಗಳಂತೆಯೇ ವರ್ತಿಸುವ ಪ್ರಾಮಾಣಿಕರ ಕೈಯಲ್ಲಿಯೇ ಬರಬೇಕಾದುದೂ ಅತ್ಯವಶ್ಯಕ.

## ಗಾಂಧೀಜಿಯವರ ಪರಿಶೋಧನೆ.

ಡಾ. ಖರೆಯವರಂತಹ ಹೊಣೆಗಾರಿಕೆಯ ಮಂತ್ರಿಗಳಾಗಿದ್ದವರು ಕಾಂಗ್ರೆಸ್ಸಿನ ಶಿಸ್ತಿಗೆ ಈಗ ವಿರೋಧಿಗಳಾಗಿ ವರ್ತಿಸುತ್ತಿರುವುದು ಮತ್ತು ಕಾಂಗ್ರೆಸ್ಸಿನ ವಿರುದ್ಧವಾಗಿ ಮಹಾರಾಷ್ಟ್ರದಲ್ಲಿ ಅನೇಕ ಕಾಂಗ್ರೆಸ್ಸಿನವರೇ ಕಾಂಗ್ರೆಸ್ಸಿನ ವಿರುದ್ಧ ದೊಂಬಿ ಎಬ್ಬಿಸಿರುವುದು ಕಾಂಗ್ರೆಸ್ಸಿನ ಶುದ್ಧೀಕರಣದ ಕಡೆಗೆ ಅನೇಕರ ಲಕ್ಷ್ಯವನ್ನು ಸೆಳೆದಿದೆ.

ಮಹಾತ್ಮಾ ಗಾಂಧಿಯವರು ಈ ವಿಚಾರವಾಗಿ ತುಂಬಾ ನೊಂದುಕೊಂಡು ಕಾಂಗ್ರೆಸ್ಸಿನ ಶುದ್ಧೀಕರಣದ ವಿಚಾರವಾಗಿ ಬಹು ಯೋಚಿಸುತ್ತಿದ್ದಾರೆಂದು ಪ್ರಕಟವಾಗಿದೆ. ಕಾಂಗ್ರೆಸ್ಸು ಈಗ ಅಧಿಕಾರವನ್ನು ಸ್ವೀಕರಿಸಿದ್ದರೂ ಅದರ ಧ್ಯೇಯವನ್ನೇನೂ ಅದು ಇನ್ನೂ ಮುಟ್ಟಿಲ್ಲ. ಅದು ಈಗಲೂ ರಣಕ್ಷೇತ್ರದಲ್ಲಿಯೇ ಇದೆಯೆಂದು ತಿಳಿಯಬೇಕು. ಅಂತೆಯೇ ತನ್ನ ರೀತಿನೀತಿಗಳನ್ನು ಅದು ಮೊದಲಿನಂತೆಯೇ ನಿಷ್ಕಲಂಕವಾಗಿ ಇಟ್ಟುಕೊಂಡರೇನೇ ಮುಂದರಿದು ಸಂಪೂರ್ಣ ಸ್ವಾತಂತ್ರ್ಯವೆಂಬ ತನ್ನ ಧ್ಯೇಯವನ್ನು ಮುಟ್ಟಲು ಅದು ಅರ್ಹವಾಗುವುದು. ಆದುದರಿಂದ ಈಗ ಕಾಂಗ್ರೆಸ್ಸಿನಲ್ಲುಂಟಾಗಿರುವ ಕೊಳೆಯನ್ನು ಜಾಗ್ರತೆ ತೊಳೆದು ಹಾಕಬೇಕೆಂದು ಮಹಾತ್ಮಾ ಗಾಂಧಿಯವರು ಯೋಚಿಸುತ್ತಿರುವುದು ಸಹಜವಾಗಿದೆ.

ಕಾಂಗ್ರೆಸ್ಸನ್ನು ಯಾವ ರೀತಿಯಾಗಿ ಶುದ್ಧೀಕರಿಸಬೇಕೆಂದು ಗಾಂಧೀಜಿಯವರು ಪರಿಶೋಧನೆ ನಡೆಸಿರುವರೋ ಅದು ಇನ್ನೂ ತಿಳಿದಿಲ್ಲ. ಬರುವ ತಿಂಗಳ ಕೊನೆಯ ವಾರದಲ್ಲಿ ಕೂಡುವ ವರ್ಕಿಂಗ್ ಕಮಿಟಿಯ ಮುಂದೆ ಗಾಂಧೀಜಿಯವರು ತಮ್ಮ ಪರಿಶೋಧನೆಯನ್ನು ಇಡುವರೆಂದು ತಿಳಿದಿದೆ. ಆಗ ಈ ವಿಷಯದ ಮೇಲೆ ಹೆಚ್ಚಿನ ಬೆಳಕು ಬೀಳುವುದು.

## ಸತ್ಯ ಮತ್ತು ಆಜ್ಞಾಪಾಲನೆ.

ಕಾಂಗ್ರೆಸ್ಸಿನ ರೀತಿನೀತಿಗಳಲ್ಲಿ ಸತ್ಯ ಮತ್ತು ಅಹಿಂಸೆಗಳು ಬಹು ಪ್ರಾಮುಖ್ಯವಾದವುಗಳಾಗಿವೆಯಷ್ಟೆ. ಇವುಗಳಲ್ಲಿ ಅಹಿಂಸೆಯೇನೋ ಅಗತ್ಯವಾಗಿಯೂ ಅನಿವಾರ್ಯವಾಗಿಯೂ ಇದೆಯೆಂದು ಅನೇಕರು ಅನುಸರಿಸುತ್ತಿರಬಹುದು. ಆದರೆ ಸತ್ಯವು ಅಷ್ಟೇ ಅಗತ್ಯವಾದುದಾಗಿರಬೇಕಾಗಿದೆಯೇ ? ಕಾಂಗ್ರೆಸ್ಸಿನ ಶಿಸ್ತಿನಲ್ಲಿ ಸತ್ಯವೂ ಒಂದಾಗಿದೆಯೆಂದೇ ಪರಿಗಣಿಸಲ್ಪಡುತ್ತಲಿದೆಯೆ? ಹಾಗೆ ಪರಿಗಣಿಸಲ್ಪಡುತ್ತಿದ್ದರೆ ಸತ್ಯ ಮತ್ತು ಆಜ್ಞಾಪಾಲನೆ ಇವೆರಡೂ ಯಾವಾಗಲೂ ಕೂಡಿರುವುದು ಶಕ್ಯವೆ?

ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಆಜ್ಞೆಯನ್ನು ಕಾಂಗ್ರೆಸ್ಸಿನಲ್ಲಿರುವ ಸಕಲರೂ ಅವರು ಮುಖ್ಯ ಮಂತ್ರಿಗಳಾಗಿದ್ದರು ಕೂಡಾ ಅನುಸರಿಸಲೇಬೇಕೆಂದು ಕಾಂಗ್ರೆಸ್ಸಿನ ಪ್ರಮುಖರು ಹೇಳುತ್ತಿದ್ದಾರಷ್ಟೆ. ಒಂದು ವ್ಯಕ್ತಿಯು ಎಷ್ಟೇ ಹೆಚ್ಚಿನವನಾಗಿದ್ದರೂ ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಆ ವ್ಯಕ್ತಿಗಿಂತ ಹೆಚ್ಚಿನದೆಂದೇ ತಿಳಿದು ಅದರ ಆಜ್ಞೆಯನ್ನು ಮನ್ನಿಸಲೇಬೇಕೆಂದು ಕಾಂಗ್ರೆಸ್ ನಾಯಕರು ಸಾರುತ್ತಿದ್ದಾರೆ.

ಹೀಗೆ ಕಾಂಗ್ರೆಸ್ಸಿನ ಆಜ್ಞೆಯನ್ನು ಪಾಲನೆಮಾಡುವುದು ಕಾಂಗ್ರೆಸ್ಸಿನ ಶಿಸ್ತಿನಲ್ಲಿ ಬಹು ಮುಖ್ಯವಾದುದಷ್ಟೆ. ಈ ಆಜ್ಞಾಪಾಲನೆಗೂ ಸತ್ಯಕ್ಕೂ ಯಾವಾಗಲೂ ಸಂಬಂಧವೇ ಇರುತ್ತದೆಂದು ಹೇಳಲಿಕ್ಕಾಗುವುದೆ?

ಕಾಂಗ್ರೆಸ್ಸು ಈಗ ರಣಕ್ಷೇತ್ರದಲ್ಲಿದೆ. ಕಾಂಗ್ರೆಸ್ಸಿನ ಸದಸ್ಯರೆಲ್ಲರೂ ಸೈನಿಕರು. ವರ್ಕಿಂಗ್ ಕಮಿಟಿಯು ಸೇನಾಧಿಪತಿಯೆಂತಿದೆ. ಸೈನಿಕರು ಯುದ್ಧಭೂಮಿಯಲ್ಲಿ ಸೇನಾಧಿಪತಿಯ ಆಜ್ಞೆಯಂತೆಯೇ ನಡೆಯಬೇಕೇ ವಿನಾ ತಮ್ಮ ಸದಸದ್ವಿವೇಕ ಬುದ್ಧಿಗೆ ಸತ್ಯವಾಗಿ ತೋರಿದಂತೆ ನಡೆಯುತ್ತೇವೆಂದು ಹೇಳಲಿಕ್ಕಾಗುವುದೆ? ಇಲ್ಲವೇ ಇಲ್ಲ. ಅದೇ ಪ್ರಕಾರ ವರ್ಕಿಂಗ್ ಕಮಿಟಿಯ ಆಜ್ಞೆಯಂತೆಯೇ ಕಾಂಗ್ರೆಸ್ಸಿನ ಸೈನಿಕರೆಲ್ಲರೂ ವರ್ತಿಸಬೇಕೇ ವಿನಾ ಡಾ. ಖರೆಯವರಂತೆ ತನ್ನ ಅಂತರಾತ್ಮನ ಧ್ವನಿಯಂತೆ ನಡೆಯುತ್ತೇನೆಂದು ಹೇಳಬಾರದಷ್ಟೆ.

ಎಂದಮೇಲೆ ಸತ್ಯ ಮತ್ತು ಆಜ್ಞಾಪಾಲನೆ ಇವೆರಡೂ ಕಾಂಗ್ರೆಸ್ಸಿನ ಶಿಸ್ತಿನಲ್ಲಿ ಕೂಡಿಕೊಂಡಿರುವುದು ಶಕ್ತವಿಲ್ಲವೆಂದೇ ಸ್ಪಷ್ಟವಾಗುವುದಿಲ್ಲವೆ? ಮಹಾತ್ಮಾ ಗಾಂಧಿಯವರು ತಾವು ಕಾಂಗ್ರೆಸ್ಸಿನಲ್ಲಿ ನಾಲ್ಕಾಣೆ ಸದಸ್ಯರು ಕೂಡಾ ಆಗದಿರುವುದಕ್ಕೆ ಇದೇ ಮುಖ್ಯ ಕಾರಣವಾಗಿರಬೇಕು.

ಸತ್ಯಾಗ್ರಹಿಯು ಅನ್ಯರ ಆಜ್ಞಾಪಾಲಕನಾಗಿಯೇ ಇರುವುದು ಶಕ್ಯವಿಲ್ಲ. ಅನ್ಯರ ಆಜ್ಞಾಪಾಲಕನು ತನಗೆ ಸತ್ಯವಾಗಿ ತೋರಿದಂತೆಯೇ ನಡೆಯಲಿಕ್ಕಾಗುವುದಿಲ್ಲ. ಡಾ. ಖರೆಯವರ ಅಂತರಾತ್ಮನ ಧ್ವನಿಯು ಅವರಿಗೆ ಹಾಗೆಯೇ ಮಾಡಲು ಹೇಳಿರಬಹುದು. ಆದರೆ ಅವರು ವರ್ಕಿಂಗ್ ಕಮಿಟಿಯ ಆಜ್ಞಾಧಾರಕರಾಗಿಯೇ ಮಂತ್ರಿತ್ವವನ್ನು ವಹಿಸಿದ್ದರಾದುದರಿಂದ ಅಂತರಾತ್ಮನ ಧ್ವನಿಯ ಕಡೆಗೆ ಈಗ ಕಿವಿಗೊಡಬಾರದಾಗಿದ್ದಿತು.

ಆಜ್ಞಾಧಾರಕರಿಗೆ ಸತ್ಯಶೋಧನೆಗೆ ಅವಕಾಶವಿಲ್ಲ. ಸತ್ಯ ಶೋಧಕರು ಆಜ್ಞಾಧಾರಕರಾಗಿರಲು ಒಪ್ಪುವುದಿಲ್ಲ. ಕಾಂಗ್ರೆಸ್ ಸಂಸ್ಥೆಯು ಆಜ್ಞಾಧಾರಕರ ಸಂಸ್ಥೆಯಾಗಿರಲು ಯೋಗ್ಯವಾಗಿದೆಯೇ ವಿನಾ ಅದು ಸತ್ಯಶೋಧಕರ ಪ್ರಯೋಗಶಾಲೆಯಾಗಿರಲು ಶಕ್ಯವಿಲ್ಲ. ಕಾಂಗ್ರೆಸ್ಸು ರಾಜಕೀಯ ಸ್ವಾತಂತ್ರ್ಯಕ್ಕಾಗಿಯೇ ಹೋರಾಡುತ್ತಲಿದೆ. ಅದರಲ್ಲಿ ಸೇರುವವರು ಅದೊಂದನ್ನೇ ಧ್ಯೇಯವಾಗಿಟ್ಟುಕೊಂಡು ವರ್ಕಿಂಗ್ ಕಮಿಟಿಯ ಆಜ್ಞಾಧಾರಕರಾಗಿ ವರ್ತಿಸುತ್ತಿರಬೇಕು. ಯಾರು ತಮ್ಮ ಸದಸದ್ವಿವೇಕ ಬುದ್ಧಿಗೆ ಸತ್ಯವಾಗಿ ತೋರಿದಂತೆಯೇ ನಡೆಯುವ ಧ್ಯೇಯವುಳ್ಳವರಾಗಿದ್ದಾರೆಯೋ ಅವರು ಕಾಂಗ್ರೆಸ್ಸಿನಲ್ಲಿ ಸೇರದೆ ಇರಬೇಕಾದುದೇ ವಿಹಿತ.

ಹೀಗಿಲ್ಲದಿದ್ದರೆ ಅಂತರಾತ್ಮನ ಧ್ವನಿಯ ಕಡೆಗೆ ಕಿವಿಗೊಟ್ಟು ಸತ್ಯಶೋಧನೆಗಾಗಿಯೇ ಕಾಂಗ್ರೆಸ್ಸಿನ ಶಿಸ್ತನ್ನು ನಾವು ಅತಿಕ್ರಮಿಸಿದೆವೆಂದು ಅನೇಕರು ಸಮಯ ಸಂದರ್ಭಗಳು ಬಂದಾಗಲೆಲ್ಲಾ ಹೇಳಬಹುದು. ಕಾಂಗ್ರೆಸ್ಸಿನ ಆಜ್ಞಾಧಾರಕರಾಗಿಯೇ ಕಾಂಗ್ರೆಸ್ ಕೆಲಸಗಾರರೆಲ್ಲರೂ ಕೆಲಸ ಮಾಡಬೇಕೆಂದು ಮಹಾತ್ಮಾ ಗಾಂಧಿಯವರು ಕಟ್ಟಪ್ಪಣೆ ಮಾಡುವುದಾದರೆ ಸತ್ಯವು ಕಾಂಗ್ರೆಸ್ಸಿನ ಕಾರ್ಯ ನಿರ್ವಾಹಕರಿಗೆ ಅಡಿಗಲ್ಲಾಗಿರಬೇಕೆಂದು ಅಪೇಕ್ಷಿಸಬಾರದು. ಮತ್ತು ಕಾಂಗ್ರೆಸ್ಸು ಸತ್ಯವನ್ನೇ ಅವಲಂಬಿಸಿ ನಡೆಯುತ್ತದೆಂದು ಅದರ ಕಾರ್ಯನಿರ್ವಾಹಕರು ಸಾರಕೂಡದು. ಏಕೆಂದರೆ ಸತ್ಯ ಮತ್ತು ಆಜ್ಞಾಪಾಲನೆ ಇವು ಕೂಡಿಯೇ ಇರುವುದಿಲ್ಲ.

### ಆಂಧ್ರ ಕಾರ್ಯನಿರ್ವಾಹಕರ ಸೂಚನೆ.

ಕಾಂಗ್ರೆಸ್ಸಿನ ಶುದ್ಧೀಕರಣವಾಗಬೇಕಾದರೆ ಅದರ ರೀತಿ ನೀತಿಗಳಲ್ಲಿ ಸ್ವಲ್ಪ ವ್ಯತ್ಯಸ್ತಗಳಾಗಬೇಕಾದುದು ಈಗ ಅಗತ್ಯವಷ್ಟೆ. ಕಳೆದ ವಾರ ವೆಂಕಟಗಿರಿಯಲ್ಲಿ ಆಂಧ್ರ ಪ್ರಾಂತದ ಕಾಂಗ್ರೆಸ್ ಕೆಲಸಗಾರರು ಸೇರಿ ಕಾಂಗ್ರೆಸ್ಸಿನ ನಿಯಮ ನಿರ್ಬಂಧಗಳಲ್ಲಿ ಆಗಬೇಕಾದ ತಿದ್ದುಪಾಟುಗಳನ್ನು ಕುರಿತು ಯೋಚಿಸಿ ಈ ಕೆಳಗಿನಂತೆ ಸೂಚಿಸಿದ್ದಾರೆ—

"ಕಾಂಗ್ರೆಸ್ ಸದಸ್ಯರಲ್ಲಿ ಸಾಮಾನ್ಯ ಸದಸ್ಯರೆಂದೂ ಕೆಲಸಗಾರರೆಂದೂ ಎರಡು ಪ್ರಕಾರ ವಿಂಗಡಿಸಬೇಕು. ಕಾಂಗ್ರೆಸ್ಸಿನ ಯಾವ ಸಂಸ್ಥೆಯ ಕಾರ್ಯಚಾಲಕನಾಗಲು ಚುನಾವಣೆಗೆ ನಿಲ್ಲಬೇಕಾದರೂ ೧೨ ತಿಂಗಳು ವಿಧಾಯಕ ಕಾರ್ಯಗಳನ್ನು ಮಾಡಿರಬೇಕು. ಹಾಗೆ ವಿಧಾಯಕ ಕಾರ್ಯ ಮಾಡಿದಾತನಿಗೇನೇ ಚುನಾವಣೆಗೆ ನಿಲ್ಲಲು ಅಧಿಕಾರವಿರಬೇಕು. ಆತನು ಚುನಾವಣೆಯಲ್ಲಿ ಬಹುಮತವನ್ನು ಹೊಂದಬೇಕಲ್ಲದೆ ೧೦೦ ಕ್ಕೆ ೪೦ ರಂತೆ ಕೆಲಸಗಾರರ ಮತವನ್ನು ಹೊಂದಬೇಕು."

ಈ ಪ್ರಕಾರ ಕಾಂಗ್ರೆಸ್ಸಿನ ಕಾರ್ಯಸೂತ್ರ ಹಿಡಿಯಬೇಕಾದವರ ಅರ್ಹತೆಯ ವಿಚಾರವಾಗಿ ಯೋಚಿಸಿರುವುದು ಯುಕ್ತವಾಗಿದೆ. ನಿಜವಾದ ಕಾರ್ಯದಕ್ಷರ ಕೈಯಲ್ಲಿಯೇ ಕಾಂಗ್ರೆಸ್ಸಿನ ಕಾರ್ಯಸೂತ್ರ ಹೋಗುವಂತೆ ಕಾಂಗ್ರೆಸ್ಸಿನ ಶುದ್ಧೀಕರಣವಾಗುವುದು ಅತ್ಯಗತ್ಯವಾಗಿದೆ.

ಮಹಾತ್ಮಾ ಗಾಂಧಿಯವರು ಈ ವಿಚಾರವಾಗಿ ತುಂಬಾ ಪರಿಶೋಧಿಸಿ ಕಾಂಗ್ರೆಸ್ಸಿನ ಶುದ್ಧೀಕರಣವನ್ನು ಜಾಗ್ರತೆ ಮಾಡುವರೆಂದೂ ಆ ಮೂಲಕ ಕಾಂಗ್ರೆಸ್ಸಿನ ಶಕ್ತಿಯು ಹೆಚ್ಚಿ ಅದರಲ್ಲಿ ಈಗ ತೋರುತ್ತಿರುವ ಕೊಳೆಯು ತೊಳೆದು ಹೋಗುವುದೆಂದೂ ನಾವು ಪೂರ್ಣ ನಂಬಿದ್ದೇವೆ.

---

—ಸದ್ಯದ ಸಿಂಧಪ್ರಾಂತದ ಮಂತ್ರಿಮಂಡಳದ ಬಗ್ಗೆ ಕಾಂಗ್ರೆಸ್ ಪಕ್ಷದ ಕೊನೆಯ ಧೋರಣವನ್ನು ನಿರ್ಧರಿಸಲು ವಿಚಾರ ವಿನಿಮಯ ಮಾಡುವದಕ್ಕಾಗಿ ಸಿಂಧ ಪ್ರಾಂತ ಕಾಂಗ್ರೆಸ್ ಕಮಿಟಿಯವರು ಸರದಾರ ವಲ್ಲಭ ಭಾಯಿಯವರಿಗೆ ಬರಲು ತಂತಿ ಕೊಟ್ಟಿದ್ದಾರೆ. ಸರದಾರರು ತಾ. ೨೨ ನೆಯ ದಿವಸ ವಿಮಾನದ ಮೂಲಕ ಕರಾಚಿಗೆ ಪ್ರಯಾಣ ಬೆಳೆಸುವವರಿರುವರು.

—ಪಂಜಾಬ ಕಿಸಾನ ಕಮಿಟಿಯ ಜನರಲ್ ಸೆಕ್ರೆಟರಿಗಳಾದ ಸರ್ದಾರ ಕರ್ತಾರಸಿಂಗ ಇವರಿಗೆ ೨೪ ತಾಸುಗಳಲ್ಲಿಯೇ ಅಮೃತಸರವನ್ನು ಬಿಟ್ಟು ಆ ಜಿಲ್ಲೆಯಲ್ಲಿಯ ಇವರ ಸ್ವಂತ ಹಳ್ಳಿಯಾದ ಬಾಸೋರಕಿಯಲ್ಲಿ ವಾಸವಾಗಿರಬೇಕೆಂದು ಡಿಸ್ಟ್ರಿಕ್ಟ ಮ್ಯಾಜಿಸ್ಟ್ರೇಟರು [illegible] ಮಾಡಿದ್ದಾರೆ.

# ಮಹಾತ್ಮಾಜಿಯವರ ಆರೋಗ್ಯ.

ಮಹಾತ್ಮಾಜಿಯವರ ಕಾರ್ಯದರ್ಶಿಗಳಾದ ಶ್ರೀ. ಮಹಾದೇವ ಭಾಯಿ ದೇಸಾಯಿಯವರು ಈ ರೀತಿ ಪ್ರಕಟಿಸಿದ್ದಾರೆ—

“ಶೇಗಾವ ಮತ್ತು ಸುತ್ತುಮುತ್ತಲಿನ ಹಳ್ಳಿಗಳಲ್ಲಿ ಮಾರಿಕಾ ಪ್ರಾರಂಭವಾದುದರಿಂದ ಮಹಾತ್ಮಾ ಗಾಂಧಿಯವರ ಆರೋಗ್ಯವು ಕೆಡಹತ್ತಿದೆ. ಮೂವರು ಒಳ್ಳೇ ಕೆಲಸಗಾರರು ಮಾರಿಕಾ ಬೇನೆಯಿಂದ ಮಡಿದುದರಿಂದ ಮಹಾತ್ಮಾಜಿಯವರಿಗೆ ಒಂದು ಬಗೆಯ ನೋವುಂಟಾಗಿದೆ. ಶ್ರೀ. ಪ್ಯಾರೆಲಾಲರೂ ಈಗ ವಿಷಮಜ್ವರದಿಂದ ಹಾಸಿಗೆ ಹಿಡಿದಿದ್ದಾರೆ.

ಮಹಾತ್ಮಾ ಗಾಂಧಿಯವರ ರಕ್ತದ ಒತ್ತಡವು ಹೆಚ್ಚಾಗಹತ್ತಿದುದರಿಂದ ವಿಶ್ರಾಂತಿಯನ್ನು ಪಡೆಯಲು ಅನಿಯಮಿತ ಅವಧಿಯ ವರೆಗೆ ಸಂಪೂರ್ಣ ಮೌನವ್ರತವನ್ನು ಆಚರಿಸಹತ್ತಿದ್ದಾರೆ. ಯಾವದೇ ರೀತಿಯಿಂದ ಭಯಪಡಲು ಕಾರಣವಿಲ್ಲ.”

---

## ಮಾರ್ಡಿಜೋನ್ಸರ ಅಭಿಪ್ರಾಯ.

ಮಾರ್ಡಿಜೋನ್ಸರು ಮದ್ರಾಸ್ ಪತ್ರಿಕಾ ಪ್ರತಿನಿಧಿಗಳಿಗಿತ್ತ ಸಂದರ್ಶನದ ಕಾಲಕ್ಕೆ ಹಿಂದೀ ಭಾಷೆಯ ಬಗ್ಗೆ ಈ ರೀತಿ ಹೇಳಿದರು—

“ಸಾಮಾನ್ಯವಾದ ಸಾಂಸ್ಕೃತಿಕ ಜೀವನ ಸಾಮಾಜಿಕ ಆಕಾಂಕ್ಷೆಗಳನ್ನು ನೆರವೇರಿಸಿಕೊಳ್ಳುವುದಕ್ಕಾಗಿ ಹಿಂದುಸ್ಥಾನಕ್ಕೆ ಒಂದೇ ಒಂದು ಭಾಷೆಯ ಅತ್ಯಗತ್ಯವಿದೆ. ಹಿಂದೀಯರನ್ನೆಲ್ಲ ಒಂದೆಡೆಗೆ ಸೇರಿಸಿ ಸಂಘಟಿಸಲು ಅದೊಂದೇ ಸಿಮೆಂಟಿನಂತೆ ಭದ್ರವಾದ ಕಾರ್ಯವಾಗಿದೆ. ಈಗ ಹಿಂದಿಯೇ ಹಿಂದುಸ್ಥಾನದ ಭಾಷೆಯಾಗಲು ಅತ್ಯಂತ ಯೋಗ್ಯವಿದೆ. ಹಿಂದಿಯನ್ನು ಒತ್ತಾಯವಾಗಿ ಕಲಿಸುವುದೇ ಮದ್ರಾಸ್ ಸರಕಾರದ ಪ್ರಥಮ ಕರ್ತವ್ಯವಾಗಿದೆ. ಸರಕಾರದವರು ಈ ಮೊದಲೇ ಈ ಕಾರ್ಯ ಕೈಕೊಂಡದ್ದಕ್ಕಾಗಿ ನಾನವರಿಗೆ ಧನ್ಯವಾದಗಳನ್ನರ್ಪಿಸುತ್ತೇನೆ. ಇನ್ನುಳಿದ ಕಾಂಗ್ರೆಸ್ ಪ್ರಾಂತದ ಸರಕಾರಗಳೂ ಕೂಡಲೇ ಮಿಡಲ್ ಸ್ಕೂಲ್‌ಗಳಲ್ಲಿ ಹಿಂದಿಯನ್ನು ಒತ್ತಾಯವಾಗಿ ಕಲಿಸಲು ಪ್ರಾರಂಭಿಸುವಂತೆ ಕಾಂಗ್ರೆಸ್ಸಿನ ಪ್ರಮುಖರು ತಿಳಿಸುವ ಸಮಯವೀಗ ಪ್ರಾಪ್ತವಾಗಿದೆ.”

## ಚೀನಕ್ಕೆ ವೈದ್ಯಕೀಯ ಪಥಕ.

ಡಾ. ರವೀಂದ್ರ ಸೇನ್ ಮತ್ತು ದೇವೇಶ ಮುಕರ್ಜಿಯವರು ಚೀನಕ್ಕೆ ವೈದ್ಯಕೀಯ ಪಥಕವನ್ನು ತೆಗೆದುಕೊಂಡು ಹೋಗುವುದಕ್ಕಾಗಿ ತಾ. ೧೪ ನೆಯ ದಿವಸ ಕಲಕತ್ತಾದಿಂದ ಹೊರಟು ಮುಂಬೈಗೆ ತೆರಳಿದರು. ಅಗಸ್ಟ ೨೯ ನೆಯ ತಾರೀಖಿನ ದಿವಸ ಇವರು ಮುಂಬೈಯಿಂದ ಚೀನಕ್ಕೆ ಪ್ರಯಾಣ ಬೆಳೆಸುವವರಿದ್ದಾರೆ. ವೈದ್ಯಕೀಯಪಥಕದ ಬೀಳ್ಕೊಡುವ ಸಮಾರಂಭವು ರಾಷ್ಟ್ರಾಧ್ಯಕ್ಷರಾದ ಶ್ರೀ. ಸುಭಾಷಚಂದ್ರ ಬೋಸರವರ ಅಧ್ಯಕ್ಷತೆಯಲ್ಲಿ ನೆರವೇರಿಸಲ್ಪಟ್ಟಿತು. ಆಗ ಶ್ರೀ. ಬಾಬು ಸುಭಾಷಚಂದ್ರ ಬೋಸರು ಈ ಪ್ರಕಾರ ಹೇಳಿದರು—

“ನಮ್ಮ ದೇಶದ ಇತಿಹಾಸದಲ್ಲಿ ನಾವೊಂದು ಹೊಸ ಯುಗವನ್ನುಂಟು ಮಾಡುತ್ತಿದ್ದೇವೆ. ನಾವು ನಮ್ಮ ಮತ್ತು ನಮ್ಮ ಮನೆಯ ಬಗ್ಗೆ ಲಕ್ಷ್ಯವನ್ನು ಹೆಚ್ಚಾಗಿ ಹಾಕದೆ ಅಂತರರಾಷ್ಟ್ರೀಯ ಸಂಬಂಧವನ್ನು ಬೆಳೆಸುತ್ತಾ ಇದ್ದೇವೆ. ಸ್ವಾತಂತ್ರ್ಯ ರಕ್ಷಣೆಗಾಗಿ ಇಲ್ಲವೆ ಅದನ್ನು ಪಡೆಯಲು ಹೆಣಗಾಡುವವರ ಕೂಡ ನಾವು ಆಪ್ತತ್ವ ಬೆಳೆಸಲು ಪ್ರಯತ್ನಿಸುವೆವು. ಸ್ವಾತಂತ್ರ್ಯ ಸಂಪಾದಿಸುವವರಿಗೂ ಅದನ್ನು ರಕ್ಷಿಸಿಕೊಳ್ಳುವವರಿಗೂ ಕಾಂಗ್ರೆಸ್ ಇನ್ನು ಮುಂದೆ ಸಹಾಯಮಾಡುತ್ತಾ ಬರುವದು. ಈಗ ಚೀನ ರಾಷ್ಟ್ರಕ್ಕೆ ವೈದ್ಯಕೀಯ ಪಥಕವನ್ನು ಕಳುಹಿಸಿಕೊಡುವುದರ ಉದ್ದೇಶವಾದರೂ ಇದೇ ಇದೆ.”

---

## ಫಿಜಿದ್ವೀಪದಲ್ಲಿ ಹಿಂದೀಯರ ಗೋಳು.

ಬ್ರಿಟಿಶ್ ವಸಾಹತುಗಳಲ್ಲಿ ಹಿಂದೀಯರ ಸ್ಥಿತಿಯು ಹೇಗಿದೆಯೆಂಬುದನ್ನು ದೀನಬಂಧು ಸಿ. ಎಫ್. ಆಂಡ್ರೂಜರವರು ಬೆಂಗಳೂರಿನ ಪ್ರೆಸ್ ಪ್ರತಿನಿಧಿಗಿತ್ತ ಸಂದರ್ಶನದಲ್ಲಿ ಈ ರೀತಿ ಹೇಳಿದರು—

“ಫಿಜಿದ್ವೀಪದ ಸಮಸ್ಯೆಯು ಜಮೀನುಗಳ ಒಡೆತನದ ಸಮಸ್ಯೆಯಾಗಿದೆಯಲ್ಲದೆ ಬೇರೆ ಮತ್ತೇನೂ ಅಲ್ಲ. ಫಿಜಿದ್ವೀಪದ ಕಬ್ಬಿನ ತೋಟಗಳಲ್ಲಿ ಕೆಲಸಮಾಡಲು ಹಿಂದುಸ್ಥಾನದಿಂದ ಹೋದ ಕೂಲಿಕಾರರಿಗೆ ಅವರ ಕೆಲಸದ ಅವಧಿಯು ಮುಗಿದನಂತರ ಅವರಿಗೆ ಸಮಾನಾಧಿಕಾರ ದೊರೆಯುವ ಕರಾರಿತ್ತು. ಆದುದರಿಂದಲೇ ತಮ್ಮ ಕೆಲಸದ ಅವಧಿಯು ಮುಗಿದನಂತರ ಹಿಂದೀಯರು ಫಿಜಿ ಜನಗಳಿಂದ ಹೊಲಗಳನ್ನು ಲಾವಣಿಯ ಮೇಲೆ ತೆಗೆದುಕೊಂಡು ಅಲ್ಲಿಯೇ ನೆಲೆಸಿರುವರು. ಈ ಹೊಲಗಳ ಲಾವಣಿ ಇನ್ನೂ ಸ್ವಲ್ಪ ದಿವಸಗಳಲ್ಲಿಯೇ ಮುಗಿಯತಕ್ಕದ್ದಿದೆ. ಮೊದಲು ಬಂಜೆ ಭೂಮಿಯಾಗಿದ್ದ ಪ್ರದೇಶವನ್ನು ಹಿಂದೀಯರು ತೆಗೆದುಕೊಂಡು ಹಗಲಿರುಳು ಶ್ರಮಪಟ್ಟು ಈಗ ಫಲಭರಿತ ಕಬ್ಬಿನ ತೋಟಗಳನ್ನಾಗಿ ಮಾರ್ಪಡಿಸಿದ್ದಾರೆ. ಹೀಗಿರುವಾಗ ಈಗ ಆ ತೋಟಗಳ ಮೇಲೆ ಅವರ ಒಡೆತನವನ್ನೇ ತಪ್ಪಿಸುವ ಪ್ರಯತ್ನ ನಡೆದಿದೆ. ಅಲ್ಲಿಯ ಹಿಂದೀಯರ ಸ್ಥಿತಿಯು ಸುಧಾರಿಸಬೇಕಾದರೆ ಹೊಲಗಳ ಲಾವಣಿಯ ಅವಧಿಯನ್ನು ಪುನಃ ಬೆಳೆಸಬೇಕು. ಇಲ್ಲದಿದ್ದರೆ ಹಿಂದೀಯರು ಹೊಲಗಳನ್ನು ಕಳೆದುಕೊಂಡು ನಿರ್ಗತಿಕರಾಗಿ ಬಾಳಬೇಕಾಗುವುದು.”

---

## ಹಿಂದುಸ್ಥಾನದಲ್ಲಿ ಪರದೇಶಗಳ ಸಾಮಾನು.

ಕಳೆದ ವರ್ಷ ಹಿಂದುಸ್ಥಾನಕ್ಕೆ ಬಂದ ವಿದೇಶಿ ಸಾಮಾನುಗಳ ಸಂಖ್ಯೆಗಳು ಈಗಾಗಲೇ ಗೊತ್ತಾಗಿವೆ. ಅಮೇರಿಕಾ ಮತ್ತು ಜರ್ಮನಿಯ ಮೋಟಾರುಗಳು ಈ ಸಾರೆ ಹೆಚ್ಚಿಗೆ ಮಾರಾಟವಾಗಿವೆ. ಬ್ರಿಟನ್ನಿನ ವ್ಯಾಪಾರವಾದರೂ ಇದ್ದಂತೆ ಇದೆ. ಜಪಾನ್ ಮತ್ತು ಅಮೇರಿಕಾದ ಯಂತ್ರಗಳು ಈ ಸಾರೆ ಹೆಚ್ಚಿಗೆ ಹಿಂದುಸ್ಥಾನಕ್ಕೆ ಬಂದಿವೆ. ಬ್ರಿಟನ್ನಿನಿಂದ ಹೋದ ಸಾರೆ ೬೩೩೮ ಕಾರುಗಳು ಹಿಂದುಸ್ಥಾನಕ್ಕೆ ಬಂದಿದ್ದವು. ಈ ಸಾರೆ ೬೪೮೯ ಕಾರು ಬಂದಿವೆ. ಈ ವರ್ಷ ಅಮೇರಿಕೆಯ ೪೩೪೦ ಕಾರುಗಳೂ, ಜರ್ಮನಿಯ ೩೦೯೭ ಕಾರುಗಳೂ ಮಾರಾಟವಾಗಿವೆ. ಹೋದ ವರ್ಷ ಅಮೇರಿಕೆಯ ೩೫೭೦, ಜರ್ಮನಿಯ ೮೧೩ ಕಾರುಗಳು ಮಾತ್ರ ಮಾರಾಟವಾಗಿದ್ದವು. ಜರ್ಮನ್ ಮೋಟಾರ ಸೈಕಲ್ಲುಗಳೂ ಈ ವರ್ಷ ೭೮೭ ಮಾರಲ್ಪಟ್ಟಿವೆ.

ಯಂತ್ರಗಳೂ ಉಕ್ಕು ತಾಮ್ರ ಮತ್ತು ಕಬ್ಬಿಣ ತೊಲೆಗಳೂ ಬ್ರಿಟನ್ನಿನಿಂದಲೇ ಬರುವುದು ಹೆಚ್ಚು. ಈ ವರ್ಷ ಜಪಾನಿನ ಬಟ್ಟೆಗಳು ಸ್ವಲ್ಪ ಕಡಿಮೆ ಪ್ರಮಾಣದಲ್ಲಿ ಬಂದಿವೆ. ಆದರೂ ವಿದ್ಯುಚ್ಛಕ್ತಿ ಉಣ್ಣೆಯ ಸಾಮಾನುಗಳು ಹೆಚ್ಚಾಗಿ ವಿಕ್ರಯಿಸಲ್ಪಟ್ಟಿವೆ. ಹಿಂದಿನಕ್ಕಿಂತ ಇಟಾಲಿಯ ಸಾಮಾನುಗಳಾದರೂ ಇಮ್ಮಡಿಯಾಗಿ ಈ ವರ್ಷ ಬಂದಿವೆ.

ನಿಜಾಮು ಸ್ಟೇಟ ಹನಮುಸಾಗರ

## ಶ್ರೀ ಕರಿಸಿದ್ಧೇಶ್ವರ ವಾಚನಾಲಯದ ವಾರ್ಷಿಕೋತ್ಸವ

ತಾ. ೬-೮-೩೮ ನೆಯ ದಿವಸ ಸಂಜೆ ೭ ಗಂಟೆಗೆ ವಾಚನಾಲಯದ ಕಾರ್ಯಕರ್ತರೂ ಊರೊಳಗಿನ ಗೃಹಸ್ಥರೂ ಹಾಗೂ ಪ್ರಮುಖ ವರ್ತಕರೊಂದಿಗೆ ಶ್ರೀಯುತ ಷಡಾಕ್ಷರಯ್ಯನವರು ಸಾಲಿಮಠ ಚೆಳಿಗೇರಿ, ಇವರ ಅಧ್ಯಕ್ಷತೆಯಲ್ಲಿ ಒಳ್ಳೇ ಉತ್ಸಾಹದಿಂದ ಸಭೆ ಕೂಡಿತು.

ನಂತರ ಶ್ರೀಯುತ ಲಿಂಗಪ್ಪ ಇಟಗಿ ಇವರು ಅಧ್ಯಕ್ಷರ ಅಪ್ಪಣೆಯ ಮೇರೆಗೆ ಸದರ ವಾಚನಾಲಯದ ಮೆಂಬರ, ಪ್ರೆಸಿಡೆಂಟ ಮತ್ತು ಅದರ ಕಾರ್ಯಕ್ರಮ ಉದ್ದೇಶ ಮತ್ತು ಅದರ ಅವಶ್ಯಕತೆಗಳನ್ನು ವಿವರಿಸಿದಮೇಲೆ ಅಧ್ಯಕ್ಷರು ಸದರೀ ವಾಚನಾಲಯದ ವಾರ್ಷಿಕ ರಿಪೋರ್ಟನ್ನು ಸಭಿಕರಿಗೆ ವಿವರಿಸಿ ಹೇಳಿದರು. ಮತ್ತು ವಾಚನಾಲಯದ ಬಗ್ಗೆ ಒಳ್ಳೇ ಕಳಕಳಿಯಿಂದ ಈಗಿನ ಪರಿಸ್ಥಿತಿಯಲ್ಲಿ ತರುಣರು ಮಾಡಬೇಕಾದ ಕಾರ್ಯಗಳನ್ನು ಸ್ಫೂರ್ತಿದಾಯಕ ಭಾಷೆಯಲ್ಲಿ ಹೇಳಿದರು. ಮತ್ತು ವಾಚನಾಲಯಕ್ಕೆ ಬಂದು ಓದುವುದರಿಂದಾಗುವ ಲಾಭಗಳನ್ನು ಇತರ ಅನೇಕ ಉದಾಹರಣೆಗಳಿಂದ ಸ್ಪಷ್ಟ ಪಡಿಸಿದರು. ನಂತರ ಶ್ರೀ ಕರಿಸಿದ್ಧೇಶ್ವರ ಜಯ ಜಯಕಾರದೊಡನೆ ಸಭೆಯು ವಿಸರ್ಜನೆಯಾಯಿತು.

ಕಾರ್ಯದರ್ಶಿ.
ಶ್ರೀ ಕರಿಸಿದ್ಧೇಶ್ವರ ವಾಚನಾಲಯ

---

## ಗೋಕಾಕ.

ಶ್ರೀಮನ್ನಿರಂಜನ ಸಂಸ್ಥಾನ ಸಾವಳಗಿ ಮಠದ ಶ್ರೀ ಶಿವಲಿಂಗ ಮಹಾ ಸ್ವಾಮಿಗಳವರ ಶಾಖಾಮಠದ ಗೋಕಾಕ ಶ್ರೀ ಶಿವಲಿಂಗೇಶ್ವರ ಫ್ರೀ ಬೋರ್ಡಿಂಗ್‌ದಲ್ಲಿ ಶ್ರಾವಣ ನಿಮಿತ್ಯವಾಗಿ "ಶರಣ ಬಸವೇಶ್ವರ" ಪುರಾಣ ಪ್ರಾರಂಭಿಸಲ್ಪಟ್ಟದೆ. ಶ್ರೀ ಬಸವಲಿಂಗ ಶಿವಾಚಾರ್ಯರು ತೆಲಸಂಗ ಹಿರೇಮಠ ಇವರು ಪ್ರಸಂಗಾನುಸಾರವಾಗಿ ಕನ್ನಡ ವಚನ ಸಾಹಿತ್ಯದ ಮೇಲೆಯೂ ಆಧುನಿಕ ಸಮಾಜದ ತೊಡಕುಗಳನ್ನು ಬಗೆ ಹರಿಸುವ ವಿಷಯದ ಮೇಲೆಯೂ ಪ್ರವಚನ ಮಾಡುತ್ತಿರುವರು. ಶ್ರೀಗಳು ಸರಸ ಸಂಗೀತ ಶೈಲಿಯಲ್ಲಿ ಪ್ರವಚನ ಮಾಡುತ್ತಿದ್ದುದರಿಂದ ಜನಗಳಲ್ಲಿ ಧಾರ್ಮಿಕ ಜಾಗೃತಿಯಾಗಿ ನವ ಚೈತನ್ಯವುಂಟಾಗಹತ್ತಿದೆ. ತಾಲೂಕ ಅಧಿಕಾರಿಗಳೂ ಎಲ್ಲ ಶಿಕ್ಷಣಾಧಿಕಾರಿಗಳೂ ಬಂದು ವೀರಶೈವ ಮತ ತತ್ವಗಳನ್ನು ಅತ್ಯಾದರದಿಂದ ತಿಳಕೊಳ್ಳುತ್ತಿರುವರು. ಬನ್ನೂರ, ಗೋಕಾಕ ಮಹಾ ಸ್ವಾಮಿಗಳು ದಯಮಾಡಿಸುತ್ತಿರುವದರಿಂದ ಕಾರ್ಯವು ಸರ್ವಾಂಗ ಸುಂದರವಾಗಿ ನಡೆದಿದೆ. ದಿನಾಲು ಜನರ ದಟ್ಟಣೆ ಹೆಚ್ಚಾಗುತ್ತಿದ್ದು ನೂತನ ಮಂಟಪವನ್ನೇರ್ಪಡಿಸಿದ್ದಾರೆ.

ಓರ್ವ ಭಕ್ತ
ರೇವಪ್ಪ ಬಸಪ್ಪ ಹಾಲಭಾವಿ
ಗೋಕಾಕ.

---

## ಲೋಕಾಪುರ (ಮುಧೋಳ ಸಂಸ್ಥಾನ) ದಲ್ಲಿ ಚಳವಳಿಯ ಹೋರಾಟ.

ಲೋಕಾಪುರ ಗ್ರಾಮವು ಮುಧೋಳ ಸಂಸ್ಥಾನ ಪೈಕಿ ಮೇಲ ಪಂಕ್ತಿಯ ಪೇಠಾ ಗ್ರಾಮವಿದೆ. ಈ ಸಂಸ್ಥಾನದಲ್ಲಿ ಅತ್ತ ಇದುವರೆಗೂ ಚಳವಳಿಯ ಆಸ್ಪದವೇ ಇರಲಿಲ್ಲ. ಈಗ ಒಂದೆರಡು ತಿಂಗಳದಿಂದ ಮಾತ್ರ ಈ ಊರಲ್ಲಿ ವಿಜಾಪುರ ದೇ. ಭ. ಹಣಮಂತರಾವ ಕೌಜಲಗಿ ಬಾಗಲಕೋಟೆಯ ಮಿ. ಕಣಬುರ ವಕೀಲ ಇವರ ಆಗಮನ. ವ್ಯಾಖ್ಯಾನಗಳಿಂದ ಮತ್ತು ಸ್ಥಳೀಯ ಮುಂದಾಳುಗಳಾದ ವೇ|| ಜಿ. ಎನ್. ಕೊಣ್ಣೂರಮಠ ಇವರ ಪ್ರಯತ್ನದಿಂದ ಶಾಂತಿ ಚಳವಳಿಯು ಪ್ರಾರಂಭವಾಗಿ ಈಗ ಜನರ ಮೇಲೆ ಒಳ್ಳೇ ಪರಿಣಾಮಕಾರಿಯಾಗಿದೆ. ಯಾವ ಸಂಸ್ಥಾನದಲ್ಲಿ ಗಾಂಧಿ ಟೊಪ್ಪಿಗೆ ಹಾಕಿದರೆ ಭೀತಿಯೋ ಮ. ಗಾಂಧಿಯವರ ಹೆಸರು ತೆಗೆದುಕೊಳ್ಳುವ ಪ್ರತಿಬಂಧವೋ ಅಂಥ ಸಂಸ್ಥಾನದಲ್ಲಿ ಚಳವಳಿಯ ಭರಾಟೆ, ರಾಷ್ಟ್ರಝುಂಡಾ ಸಮೇತ ದಿನಾಲು ಪ್ರಭಾತಫೇರಿ, ರಾಷ್ಟ್ರಪದ್ಯಾವಲಿ, ಖಾದಿ ಉಡುಪು, ಹೆಚ್ಚಿಗೆ ಹೇಳುವದೇನು ಹೆಣ್ಣುಮಕ್ಕಳು ಬಾಲಬಾಲಕಿಯರು ಸಹ ಕುಳಿತಲ್ಲಿ ನಿಂತಲ್ಲಿ ರಾಷ್ಟ್ರಗೀತೆ ಹಾಡುವದು, ರಾಟೆ ನೂಲುವದೇ ಕೈಗಾರಿಕೆಯ ಉದ್ಯೋಗವನ್ನು ಕೈಕೊಂಡದ್ದು ನೋಡಿ ಆನಂದ ಮತ್ತು ಅತ್ಯಾಶ್ಚರ್ಯವನ್ನುಂಟುಮಾಡದೆ ಇರಲಾರದು. ಸ್ವಲ್ಪಾವಧಿಯಲ್ಲಿ ಇಷ್ಟು ಭರದಿಂದ ಇಲ್ಲಿ ಕಾರ್ಯಕ್ರಮ ನಡೆದದ್ದು ಸ್ತುತ್ಯವಾದುದು.

ಇನ್ನೊಂದು ಮಹತ್ವದ ಸಂಗತಿಯೇನೆಂದರೆ ಇಲ್ಲಿ ಜನರ ಒಕ್ಕಟ್ಟನಿಂದ ಚಹಾದ ಅಂಗಡಿಗಳು ಸಂಪೂರ್ಣ ಬಂದುಮಾಡಲ್ಪಟ್ಟವೆ. ಇಷ್ಟೇ ಅಲ್ಲ; ಅಂಗಡಿಗಳಲ್ಲಿ ಚಹಾದ ಪುಡಿ ಸಹ ಮಾರಲಿಕ್ಕೆ ಸಿಗುವದಿಲ್ಲ. ಸ್ತುತ್ಯ. ಇಲ್ಲಿ ಚಹಾದ ಅಂಗಡಿಯವರು ವ್ಯಾಪಾರಿ ಬಂಧುಗಳು ಮತ್ತು ಚಹಾ ಕುಡಿಯುವವರು ಮಾಡಿದ ನಿರ್ಬಂಧನೆಯು ಸ್ತುತ್ಯ ಮತ್ತು ಎಲ್ಲರೂ ಅನುಕರಣ ಮಾಡತಕ್ಕದ್ದಾಗಿದೆ.

ಓರ್ವ ಪ್ರತ್ಯಕ್ಷದರ್ಶಿ.

---

# ಸರ್. ವಿಶ್ವೇಶ್ವರಯ್ಯನವರ ಭಾಷಣ.

ಸೇಲಮ್ಮಿನಲ್ಲಿ ತಾ. ೭-೮—೩೮ ನೇ ದಿನ ಅಖಿಲ ಭಾರತ ಖಾದಿ ಮತ್ತು ಸ್ವದೇಶಿ ಪ್ರದರ್ಶನದ ಉದ್ಘಾಟನಾ ಸಮಾರಂಭವನ್ನು ನೆರವೇರಿಸುವಾಗ ಮೈಸೂರಿನ ನಿವೃತ್ತ ದಿವಾನರಾದ ಸರ್. ವಿಶ್ವೇಶ್ವರಯ್ಯನವರು ಒಂದು ಮನನೀಯ ಭಾಷಣಮಾಡಿದರು. ಅದರ ಸಾರಾಂಶವನ್ನು ಇದರಡಿಯಲ್ಲಿ ಕೊಟ್ಟಿದೆ—

"ಪ್ರಪಂಚದ ಎಲ್ಲಾ ದೇಶಗಳಂತೆಯೇ ನಮ್ಮ ದೇಶದಲ್ಲಿಯೂ ಕೂಡ ಆರ್ಥಿಕ ಪರಿಸ್ಥಿತಿಯು ಬದಲಾವಣೆ ಹೊಂದುತ್ತಲೇ ಇದೆ. ವ್ಯವಸಾಯವು ತನ್ನ ಉಚ್ಚಸ್ಥಾನವನ್ನು ಕೈಗಾರಿಕೆಗೆ ಕೊಡುತ್ತಲಿದೆ. ವ್ಯವಸಾಯವನ್ನೇ ಮುಖ್ಯಾಧಾರವನ್ನಾಗಿ ಹೊಂದಿದ್ದ ದೇಶಗಳೆಲ್ಲಾ ಹಿಂದುಳಿಯುತ್ತಿವೆ. ನಮ್ಮ ದೇಶದಲ್ಲಿ ರೈತನು ವರ್ಷದಲ್ಲಿ ನಾಲ್ಕು ಅಥವಾ ಆರು ತಿಂಗಳ ಕಾಲ ಬಹಳ ಕಷ್ಟಪಟ್ಟು ಕೆಲಸಮಾಡುತ್ತಾನೆ. ಯಾವಾಗಲೂ ಕೆಲಸಮಾಡಲು ಅವನು ಇಷ್ಟಪಟ್ಟರೂ ಕೂಡ ಅವನಿಗೆ ವರ್ಷದ ಉಳಿದಕಾಲದಲ್ಲಿ ವ್ಯವಸಾಯದಲ್ಲಿ ಬೇರಿನ್ನೇನೂ ಕೆಲಸವೇ ಸಿಗುವುದಿಲ್ಲ. ಪ್ರಪಂಚದ ಸ್ಥಿತಿಯು ಬದಲಾಗಿರುವುದರಿಂದ ಸಾಮಾನುಗಳನ್ನು ಮಾರುವುದು ಕಷ್ಟವಾಗಿದೆ. ಪ್ರತಿಯೊಂದು ದೇಶವೂ ಕೂಡ ಒಳಕ್ಕೆ ಕಡಿಮೆ ಸಾಮಾನುಗಳನ್ನು ತರಿಸಿಕೊಂಡು ಹೊರಕ್ಕೆ ಹೆಚ್ಚು ಸಾಮಾನುಗಳನ್ನು ಕೊಡಲು ಇಚ್ಛಿಸುತ್ತಿದೆ. ಸಲಕರಣೆಗಳ ಉಪಯೋಗ ವ್ಯವಸಾಯಕ್ಕೆ ರಸಾಯನ ಶಾಸ್ತ್ರದ ಪ್ರಯೋಗ ಇವುಗಳಿಂದ ಮಾನವ ಶ್ರಮದ ಬೆಲೆಯನ್ನೇ ತಗ್ಗಿಸಿ ಉತ್ಪತ್ತಿಯನ್ನು ಇಳಿಸುತ್ತದೆ.

ಇಂದು ನಿಮ್ಮ ಪ್ರಾಂತ ಸರಕಾರವು ನಿಮ್ಮದೇ ಆಗಿದೆ. ನಿಮ್ಮ ಓಟಿಂಗ್ ಅಧಿಕಾರದಿಂದ ಅದು ನಡೆಯುತ್ತಿದೆ. ನಿರುದ್ಯೋಗ ಮತ್ತು ಕಡಿಮೆ ಉದ್ಯೋಗಗಳ ಈ ಸಮಸ್ಯೆಯಿಂದ ಉಂಟಾಗಿರುವ ತೊಂದರೆಗಳನ್ನು ನಿವಾರಿಸಲು ನೀವೂ ನಿಮ್ಮ ಆಳುವ ಸರಕಾರವೂ ಒಟ್ಟಿಗೆ ಸೇರಿ ಕಾರ್ಯಕ್ರಮ ನಡೆಸಲು ಕಾಲವೊದಗಿದೆ.

ಸದ್ಯದಲ್ಲಿ ಸಾಮೂಹಿಕ ವಿದ್ಯಾಭ್ಯಾಸ ಮತ್ತು ಕೈಗಾರಿಕಾಭಿವೃದ್ಧಿ ಇವೆರಡೂ ಮುಖ್ಯವಾಗಿ ಗಮನಿಸಲ್ಪಡಬೇಕಾದ ಅಂಶಗಳೆಂದು ನಾನು ಅಭಿಪ್ರಾಯಪಡುತ್ತೇನೆ. ಈ ಮುಖ್ಯ ಅಂಶಗಳನ್ನು ನಡೆಸಿದರೆ ಕ್ರಮೇಣ ಗ್ರಾಮಗಳಲ್ಲಿ ಜ್ಞಾನವನ್ನೂ ಕೆಲಸದ ಶಕ್ತಿಯನ್ನೂ ಮತ್ತು ಆದಾಯದ ದರವನ್ನೂ ಹೆಚ್ಚಿಸಬಹುದು.

ಕೈಗಾರಿಕೆ ಮತ್ತು ಉದ್ಯೋಗಗಳನ್ನು ವ್ಯವಸ್ಥೆಗೊಳಿಸಬೇಕಾದರೆ ಆದಾಯ ಮತ್ತು ಇಂತಿಂತಹ ಉದ್ಯೋಗಗಳಲ್ಲಿ ಇಷ್ಟಿಷ್ಟು ಜನರಿದ್ದಾರೆ. ಎಂಬ ಅಂಶಗಳನ್ನೊಳಗೊಂಡ ಲೆಕ್ಕವು ಬಹಳ ಅನುಕೂಲವಾಗುವುವು. ಯಾವ ಕೈಗಾರಿಕೆಗಳಿಗೆ ಗಮನಕೊಡುತ್ತಾರೆ, ಯಾವದಕ್ಕೆ ಗಮನ ಕೊಡುವುದಿಲ್ಲ, ಯಾವ ಹೊಸ ಕೈಗಾರಿಕೆಗಳನ್ನು ಪ್ರಾರಂಭಿಸಬಹುದು. ಈ ಅಂಶಗಳೆಲ್ಲ ಆಗ ಗೊತ್ತಾಗುತ್ತವೆ. ಈ ರೀತಿಯ ಅಂಕಿ ಅಂಶಗಳನ್ನು ನೋಡಿದರೆ ಜನರ ಮುಖಂಡರುಗಳು ತಮಗೆ ತಾವೇ ಈ ವಿಷಯಗಳ ಬಗ್ಗೆ ವ್ಯವಸ್ಥೆ ನಡೆಸಿ ಜಿಲ್ಲೆಯೊಳಗೆ ಯಾವ ಕಾರ್ಯಕ್ರಮ ನಡೆಸಬೇಕೆಂಬುದನ್ನು ನಿರ್ಧರಿಸಬಲ್ಲರು.

ತಯಾರಿಕೆಯ ಜೊತೆಗೆ ಸಾಮೂಹಿಕ ವಿದ್ಯಾಭ್ಯಾಸವು ಮುಖ್ಯವಾದ ಅಂಶ. ಓದುಬರಹ ಲೆಕ್ಕ ಇವುಗಳನ್ನು ಎಲ್ಲ ಜನಸಮುದಾಯವೂ ಅರಿತಿರಬೇಕು. ಪೌರ ನೀತಿ ಮತ್ತು ಆರ್ಥಿಕ ವಿಷಯವಾಗಿಯೂ ಅವರಿಗೆ ತಿಳುವಳಿಕೆ ಬೇಕು. ಈ ಬಗ್ಗೆ ಬ್ರಿಟಿಶ್ ಇಂಡಿಯಾದ ಪ್ರಾಂತಗಳಲ್ಲಿ ಸ್ವಲ್ಪ ಪ್ರಯತ್ನ ನಡೆಯುತ್ತಿದೆ. ಆದರೆ ಅಖಿಲಭಾರತ ವ್ಯವಸ್ಥೆಯೇನೂ ಆಗಿಲ್ಲ. ಈಗ ಇಂಡಿಯಾದಲ್ಲಿರುವ ನೂರಕ್ಕೆ ೧೦ ರಷ್ಟು ಅಕ್ಷರಸ್ಥ ಜನಸಂಖ್ಯೆಯನ್ನು ನೂರಕ್ಕೆ ೮೦, ೯೦ ಕ್ಕೆ ಜಾಸ್ತಿ ಮಾಡಬೇಕು. ಎಲ್ಲಾ ಮುಂದರಿದ ರಾಷ್ಟ್ರಗಳಲ್ಲೂ ಇಷ್ಟು ಸಂಖ್ಯೆಯಲ್ಲಿ ಅಕ್ಷರಸ್ಥರಿದ್ದಾರೆ. ಕೆಲವು ವರ್ಷಗಳ ಹಿಂದೆ ನೂರಕ್ಕೆ ೧೦ ರಷ್ಟು ಅಕ್ಷರಸ್ಥರಿದ್ದ ರಷ್ಯಾದಲ್ಲಿ ಈಗ ನೂರಕ್ಕೆ ೬೦ ಕ್ಕಿಂತ ಹೆಚ್ಚು ಇದ್ದಾರೆ.

ಇಂದಿನ ಸ್ಥಿತಿಯನ್ನು ನಿವಾರಿಸುವುದಕ್ಕೆ ಮುಖ್ಯ ಉಪಾಯವೆಂದರೆ ಆರ್ಥಿಕ ವ್ಯವಸ್ಥೆ. ಈ ಆರ್ಥಿಕ ವ್ಯವಸ್ಥೆಯು ಇಡೀ ಭಾರತದ್ದೂ ಪ್ರಾಂತದ್ದೂ ಅಲ್ಲದೆ ಪ್ರತಿಯೊಂದು ಜಿಲ್ಲೆಗೂ ಇರಬೇಕು. ಆದಾಯವು ಹೆಚ್ಚಬೇಕಾದರೆ ಅಥವಾ ಆರ್ಥಿಕ ಉನ್ನತಿಯಾಗಬೇಕಾದರೆ ಮುಖ್ಯವಾಗಿ ಮೂರು ಅಂಶಗಳು ಆಧಾರವಾಗಿರುತ್ತವೆ, ಕೇಂದ್ರ ಸರಕಾರದ ನೀತಿ ಮತ್ತು ಕಾರ್ಯಕ್ರಮ ಪ್ರಾಂತಸರಕಾರದ ನೀತಿ ಮತ್ತು ಕಾರ್ಯಕ್ರಮ ಮತ್ತು ಜನರು ತಮ್ಮ ಮುಖಂಡರುಗಳ ನಾಯಕತ್ವದಲ್ಲಿ ನಡೆಸುವ ಕೆಲಸ ಅವರ ಉತ್ಸಾಹ ಮತ್ತು ಶಕ್ತಿ.

ಪ್ರಾಂತ ಮತ್ತು ಕೇಂದ್ರ ಸರಕಾರಗಳ ವ್ಯವಸ್ಥೆಯ ಬಗ್ಗೆ ತಿಳಿಸುವುದು ಇಲ್ಲಿ ನನಗೆ ಪ್ರಕೃತವಲ್ಲ. ಇಂಡಿಯಾಕ್ಕೆ ಜೀವನದ ಅಂತಸ್ತು ಜಾಸ್ತಿಯಾಗಬೇಕಾದರೆ ದೇಶವು ಒಂದು ನಿಬಂಧನಾಪೂರ್ವಕವಾದ ವ್ಯವಸ್ಥೆಯಿಂದ ಮುಂದರಿಯಬೇಕು. ಪ್ರಾಂತ ಸರಕಾರಕ್ಕೆ ಒಂದು ಎಕನಾಮಿಕ್ ಕೌನ್ಸಿಲ್ಲ ಇರಬೇಕು. ಒಂದು ೫ ವರ್ಷದ ವ್ಯವಸ್ಥೆಬೇಕು. ಒಂದು ಡೆವಲಪ್ ಮೆಂಟ್ ಬಡ್ ಜೆಟ್, ಈ ವ್ಯವಸ್ಥೆಯನ್ನೆಲ್ಲಾ ನಡೆಸಲು ಎಕನಾಮಿಕ್ ಜನರಲ್ ಸ್ಟಾಫ್ ಇಷ್ಟು ಇರಬೇಕು.

ಪ್ರಾಂತ ಸರಕಾರಗಳು ನಿಸ್ವಾರ್ಥ ದೇಶಭಕ್ತರ ಹತೋಟಿಯಲ್ಲಿವೆ. ಆದರೆ ಜಿಲ್ಲೆಗಳ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಸರಿಪಡಿಸುವಷ್ಟು ಹೆಚ್ಚು ಕಾಲವಿನ್ನೂ ಈ ಸರಕಾರಗಳಿಗೆ ಆಗಿಲ್ಲ. ಅವು ಗ್ರಾಮಗಳ ಪ್ರಶ್ನೆಯನ್ನು ತೆಗೆದುಕೊಂಡಾಗ ಜಿಲ್ಲೆ ಜಿಲ್ಲೆಗಳಲ್ಲಿ ಕೈಗಾರಿಕೆಯನ್ನು ಉತ್ತಮಪಡಿಸುವ ವ್ಯವಸ್ಥೆಗಳನ್ನೆಲ್ಲಾ ನಡೆಸುವವೆಂದು ಆಶಿಸುತ್ತೇನೆ.

ಪ್ರಾಂತ ಸರಕಾರಗಳು ಪ್ರಜಾ ಜನರ ಸಂಪಾದನೆಯ ಶಕ್ತಿಯನ್ನೂ ಕೆಲಸವನ್ನೂ ಜಾಸ್ತಿ ಮಾಡುವುದಕ್ಕೆ ಪ್ರೋತ್ಸಾಹವೀಯುವವೆಂದು ನಾವು ನಿರೀಕ್ಷಿಸುತ್ತೇವೆ. ಜನರಲ್ಲಿ ಈ ಬಗ್ಗೆ ಪ್ರೋತ್ಸಾಹಗಳನ್ನೀಯಬೇಕು. ಪ್ರದರ್ಶನವನ್ನೇರ್ಪಡಿಸುವುದರಿಂದಲೂ ಮ್ಯೂಜಿಯಮಗಳನ್ನೇರ್ಪಡಿಸುವುದರಿಂದಲೂ ಜನರಿಗೆ ಕೈಗಾರಿಕೆ ಪ್ರಾರಂಭಿಸಲು ಹಣದ ಸಹಾಯವನ್ನು ಮಾಡುವುದರಿಂದಲೂ ಪ್ರಾಯೋಗಿಕ ಪ್ರದರ್ಶನಗಳನ್ನೇರ್ಪಡಿಸುವುದರಿಂದಲೂ ಇನ್ನೂ ಅನೇಕ ರೀತಿಗಳಿಂದಲೂ ಸಹಾಯ ಮಾಡಬಹುದು."

ತಾಯಿನಾಡು.

---

—ಸಂಯುಕ್ತಪ್ರಾಂತ ಮಾನ್ಯ ಮಂತ್ರಿಗಳೂ ಪಂಡಿತ ಜವಾಹರಲಾಲರ ಭಗಿನಿಯವರೂ ಆದ ಶ್ರೀ. ವಿಜಯಲಕ್ಷ್ಮಿ ಪಂಡಿತರವರು ತಾ. ೧೮ ನೆಯ ದಿವಸ ಅಲಹಾಬಾದಿನಿಂದ ವಿಮಾನ ಮೂಲಕ ಯುರೋಪ ಖಂಡಕ್ಕೆ ಪ್ರಯಾಣಬೆಳೆಸಿದರು. ತಾ. ೧೮ ರಿಂದ ಅಕ್ಟೋಬರ್ ೧೫ ನೆಯ ತಾರೀಖಿನ ವರೆಗೆ ತಮ್ಮ ದೇಹಾರೋಗ್ಯದ ಸಲುವಾಗಿಯೇ ಅವರು ಯುರೋಪಿನಲ್ಲಿ ಸಂಚರಿಸುವವರಾಗಿದ್ದಾರೆ. ಈ ೭ ವಾರಗಳ ವರೆಗೆ ರಜೆಯಲ್ಲಿರುವಾಗ ಪಗಾರ ಸ್ವೀಕರಿಸಲಾಗುವುದಿಲ್ಲ.

## ಸ್ತುತ್ಯ ಶ್ರಾವಣ ಸಮಾರಂಭ

ಪ್ರತಿ ವರುಷದ ಪದ್ಧತಿಯಂತೆ ಕೊಲ್ಹಾಪುರದ ಆರ್ಯ ಸಮಾಜದವರು ತಮ್ಮ 'ಮಂದಿರದಲ್ಲಿ ಶ್ರಾವಣ ಸಮಾರಂಭವನ್ನು ಜರುಗಿಸಿದರು ಈ ವರುಷ ಕೇವಲ ಸಮಾರಂಭವನ್ನು ಜರುಗಿಸದೆ ಆ ಸಮಾರಂಭದ ಜತೆಯಲ್ಲಿ ಶುದ್ಧಿಸಂಘಟನೆಯ ಕಾರ್ಯವನ್ನು ನೆರವೇರಿಸಿದುದು ತುಂಬಾ ಸ್ತುತ್ಯವಾದುದಾಗಿದೆ. ಈ ಸಾರೆ ನಾಲ್ಕು ಕ್ರಿಸ್ತಿ ಕುಟುಂಬದಲ್ಲಿಯ ಸಾಧಾರಣ ೧೮ ಜನರಿಗೆ ಹಿಂದು ದೀಕ್ಷೆ ಕೊಟ್ಟು ಅವರನ್ನು ಹಿಂದು ಧರ್ಮದಲ್ಲಿ ತೆಗೆದುಕೊಂಡರು.

---

## ಬಾಗಲಕೋಟೆ.

ತಾ. ೧೭-೮-೩೮ ನೆಯ ದಿವಸ ಮುಂಜಾನೆ ೭|| ಗಂಟೆಯ ಸುಮಾರಕ್ಕೆ ಹರಿಜನ ಸಮಾಜದ ಭೀಮಣ್ಣ ಮೊಳ್ಯಾನವರ ಎಂಬುವವನು ಇಲ್ಲಿಯ ಮೋಟಾರಸ್ಟ್ಯಾಂಡಿನ ಹತ್ತಿರ ಪ್ರತಿದಿನದಂತೆ ತನ್ನ ಕೆಲಸಮಾಡುತ್ತ ಕುಳಿತಿದ್ದನು. ಅಲ್ಲಿಯೇ ಸಮೀದಲ್ಲಿದ್ದ ಬ್ರಾಹ್ಮಣ ಚಹಾದ ಅಂಗಡಿಯ ಭೀಮಾಚಾರ್ಯ ಎಂಬವನು ಕೆಲಸಮಾಡುತ್ತಾ ಕುಳಿತ ಹರಿಜನ ಹುಡುಗನನ್ನು ಕರೆದು "ನಮ್ಮ ಅಂಗಡಿಯಲ್ಲಿ ಹರಿಜನರಿಗಾಗಿ ಯೋಗ್ಯ ವ್ಯವಸ್ಥೆ ಮಾಡಿದೆ." ಎಂದು ಹೇಳಿ ಆ ಹರಿಜನ ಹುಡುಗನಿಗೆ ಚಹಾ ಫರಾಳ ಕೊಟ್ಟು ಕಳುಹಿಸಿದನು. ಇದನ್ನು ನೋಡಿ ಈ ಅಂಗಡಿಯ ಎದುರಿಗಿರುವ ಈರಪ್ಪ ನೆಂಬ ಲಿಂಗಾಯತ ಚಹಾದ ಅಂಗಡಿಕಾರನು ಅದೇ ಹರಿಜನ ಹುಡುಗನನ್ನು ಕರೆದು 'ನಾವು ನಿಮ್ಮ ಜನರಿಗೆ ಯೋಗ್ಯ ಸ್ಥಳಕೊಟ್ಟು ಚಹಾ ಕೊಡುತ್ತೇವೆ.' ಎಂದು ಹೇಳಿ ಆ ಹರಿಜನ ಹುಡುಗನನ್ನು ಒಳಗೆ ಕರೆದುಕೊಂಡು ಹೋಗಿ ಆ ಅಂಗಡಿಯಲ್ಲಿದ್ದ ೬-೭ ಜನರು ಕೂಡಿಕೊಂಡು ಆ ಹರಿಜನ ಹುಡುಗನಿಗೆ ಮೈಮೇಲೆ ಬರೆ ಏಳುವಂತೆ ಹೊಡೆದರು. ಆಗ ಸುಮಾರು ೮-೮|| ಗಂಟೆಯಾಗಿರಬಹುದು. ಅಲ್ಲಿಯೇ ಡ್ಯೂಟಿಯ ಮೇಲಿದ್ದ ೪೬೩ ನೆಯ ನಂಬರದ ಪೋಲಿಸನು ನಮ್ಮ ಗಲಾಟೆ ಕೇಳಿ ಅಲ್ಲಿಗೆ ಬರಲು ಆತನಿಗೆ ಪಂಚನಾಮೆಮಾಡಿಕೊಳ್ಳಲು ಹೇಳಿದರೂ ಆ ಪೋಲೀಸನು ಪಂಚನಾಮೆಮಾಡಲಿಲ್ಲ. ಮೇಲಧಿಕಾರಿಗಳು ಹರಿಜನ ಬಾಲಕನ ಮೇಲಾದ ಈ ಅತ್ಯಾಚಾರದ ಬಗ್ಗೆ ಯೋಗ್ಯ ಚವಕಸಿ ಮಾಡಬೇಕಾಗಿ ಪ್ರಾರ್ಥನೆ.

ತಮ್ಮ
ಹರಿಜನ ಸೇವಕ.

---

—ಇಡೀ ಮೈಸೂರು ಸಂಸ್ಥಾನದದ ಚಿತ್ರದುರ್ಗ ಜಿಲ್ಲೆಯು ಹತ್ತಿ ಬೆಳೆಯುವದರಲ್ಲಿ ಸುಪ್ರಸಿದ್ಧವಿದೆ. ಆದುದರಿಂದ ಇಲ್ಲಿ ಖಾದಿ ಕೇಂದ್ರಗಳನ್ನು ತೆರೆಯುವ ಪ್ರಯತ್ನವಾಗಬೇಕು. ಇದರಲ್ಲಿ ನೈತಿಕ ಆರ್ಥಿಕ ಉನ್ನತಿಗಳೆರಡೂ ಅಡಗಿವೆ. ವೈಯಕ್ತಿಕವಾಗಿ ಖಾದಿಯು ತನಗೆ ತುಂಬಾ ಸೇರುತ್ತದೆಂದು ಮೈಸೂರು ಯುವರಾಜರು ಚಿತ್ರದುರ್ಗ ನಗರ ಸಭೆ ಮತ್ತು ಸ್ಥಾನಿಕ ಸಂಸ್ಥೆಗಳ ಬಿನ್ನವತ್ತಳೆಗೆ ಉತ್ತರ ಕೊಡುವಾಗ ನುಡಿದರು.

—೧೫ ದಿವಸಗಳ ವರೆಗೆ ತ್ರಿವೇಂದ್ರಂ ಭಾಗದಲ್ಲಿ ಭಾಷಣ ಮಾಡಕೂಡದೆಂದು ಶ್ರೀಮತಿ ಕಮಲಾದೇವಿಯವರಿಗೆ ಜಿಲ್ಲಾ ಮ್ಯಾಜಿಸ್ಟ್ರೇಟರು ಪ್ರತಿಬಂಧಕಾಜ್ಞೆಯನ್ನು ಹೊರಡಿಸಿದ್ದಾರೆ. ತಾ ೩೦, ೩೧ ದಿನ ಅಖಿಲ ತ್ರಾವಣಕೋರ ಯುವಕ ಪರಿಷತ್ತಿನ ಅಧಿವೇಶನದಲ್ಲಿ ಅಧ್ಯಕ್ಷರಾಗಿ ಭಾಷಣಮಾಡುವವರಿದ್ದರು.

---



---

# ೧೮ ವರುಷದ ಹಿಂದೆ ಓಡಿಹೋಗಿದ್ದರು.

## ಈಗ ಅಮೇರಿಕದಿಂದ ಎಂ. ಡಿ. ಡಿಗ್ರಿ ತಂದಿರುವರು.

### ಕರ್ನಾಟಕ ಯುವಕರೊಬ್ಬರ ವಿಚಿತ್ರ ಕಥೆ.

೧೮ ವರುಷಗಳ ಹಿಂದೆ ದೇಶವನ್ನು ಬಿಟ್ಟು ಓಡಿಹೋಗಿದ್ದ ಒಬ್ಬ ಮಹನೀಯರು ಈಗ ಅಮೇರಿಕಾ ಸಂಯುಕ್ತ ಸಂಸ್ಥಾನದ ಜಾ‌ಹಾಪ್‌ಕಿ ವಿಶ್ವವಿದ್ಯಾಲಯದ ಎಂ. ಡಿ. ಡಿಗ್ರಿಯನ್ನು ಪಡೆದು ಡಾಕ್ಟರರಾಗಿ ಈಗ ದೇಶಕ್ಕೆ ಹಿಂತಿರುಗಿದ್ದಾರೆ.

ಡಾ. ಸಿ. ಜಿ. ಕುಲಕರ್ಣಿಯವರು ಕರ್ನಾಟಕ ದೇಶದವರು. ಬೆಳಗಾವ ಹತ್ತಿರದ ಒಂದು ಗ್ರಾಮವೇ ಅವರ ಜನ್ಮಸ್ಥಳ. ತಮಗೆ ೨೦ ವರುಷ ವಯಸ್ಸಿದ್ದಾಗ ಮೂರು ಒಡನಾಡಿಗಳೊಡನೆ ಅಮೇರಿಕಾಕ್ಕೆ ಹೊರಟು ಹೋದರು. ಆಗ ಇವರು ಬೊಂಬಾಯಿ ವಿಶ್ವವಿದ್ಯಾಲಯದಲ್ಲಿ ಅಂಡರ್ ಗ್ರ್ಯಾಜುಯೇಟ್ ಆಗಿದ್ದರು. ಅಂದರೆ ಡಿಗ್ರಿಯನ್ನೇನೋ ತೆಗೆದುಕೊಳ್ಳದೆ ಡಿಗ್ರಿಗಾಗಿ ಓದುತ್ತಿದ್ದರು.

ಬಡವರಾದರೂ ಪ್ರಯಾಣಕ್ಕೆ ಸಾಕಷ್ಟು ಹಣವಿಲ್ಲದಿದ್ದರೂ ಶ್ರೀ. ಕುಲಕರ್ಣಿಯವರು ಗುಜರಾತಿನಿಂದ ಮೂವರೊಡನೆ ಅಮೇರಿಕಾಕ್ಕೆ ಹೊರಟುಹೋದರು. ಅಲ್ಲಿ ಬಹುವಾಗಿ ಕಷ್ಟಪಟ್ಟರು. "ದವಸಧಾನ್ಯಗಳ, ಪೈರುಪಚ್ಚೆಗಳ, ಜಮೀನುಗಳಲ್ಲಿ ನಾವು ಕೆಲಸ ಮಾಡುತ್ತಿದ್ದೆವು. ಮನೆ ಮನೆಗೂ ಸಾಮಾನುಗಳನ್ನು ತೆಗೆದುಕೊಂಡು ಹೋಗಿ ಮಾರುತ್ತಿದ್ದೆವು." ಎಂಬುದಾಗಿ ಅವರು ಹೇಳಿದರು.

ವರುಷಗಳು ಕಳೆಯುತ್ತಾ ಬಂದವು. ತಮ್ಮ ಮೂವರು ಒಡನಾಡಿಗಳೂ ಹಿಂತಿರುಗಿದರು. ಅವರಲ್ಲಿ ಒಬ್ಬರು ಈಗ ದಕ್ಷಿಣ ಆಫ್ರಿಕಾದಲ್ಲಿ ಡಾಕ್ಟರರಾಗಿದ್ದಾರೆ. ಇನ್ನೊಬ್ಬರು ಬೊಂಬಾಯಿ ಪ್ರಾಂತದಲ್ಲಿ ವ್ಯವಸಾಯ ಇಲಾಖೆಯಲ್ಲಿ ಡೆಪ್ಯೂಟ ಡೈರೆಕ್ಟರರಾಗಿದ್ದಾರೆ. ಇನ್ನೊಬ್ಬರು ವ್ಯವಸಾಯವನ್ನು ಹಿಡಿದಿದ್ದಾರೆ.

ಶ್ರೀ. ಕುಲಕರ್ಣಿಯವರು ಸಂಪಾದನೆ ಮಾಡುತ್ತಾ ಓದುತ್ತಾ ಇದ್ದರು. ಅರ್ಥಶಾಸ್ತ್ರವನ್ನೋದಿ ತಿಳಿದರು. ಮಿಚಿಗನ್ ವಿಶ್ವವಿದ್ಯಾಲಯದಲ್ಲಿ ಒಂದು ಬಹಿರಂಗ ಸ್ಪರ್ಧೆಯಲ್ಲಿ ಭಾಗವಹಿಸಿ ಅದರಲ್ಲಿ ಪ್ರಥಮ ಸ್ಥಾನವನ್ನು ಪಡೆದರು.

ನಂತರ ಅವರ ಅದೃಷ್ಟವೇ ಒಂದು ಹೊಸ ದಾರಿಯನ್ನು ಹಿಡಿಯಿತು. ಒಂದು ವಿಶ್ವವಿದ್ಯಾಲಯದಲ್ಲಿ ಅವರಿಗೆ ಲೆಕ್ಚರರ ಸ್ಥಾನವು ದೊರೆಯಿತು. ಅನೇಕ ಸಾಹಿತ್ಯ ಸಂಬಂಧವಾದ ಬಹುಮಾನಗಳನ್ನು ಅವರು ಪಡೆದರು. ಅನೇಕ ಡಿಗ್ರಿಗಳನ್ನೂ ಪಡೆದರು.

ನಂತರ ಅವರು ವೈದ್ಯಶಾಸ್ತ್ರಕ್ಕೂ ಪ್ರವೇಶಿಸಿದರು. ಜಾ‌ಹಾಪ್‌ಕಿಸ್ ವಿಶ್ವವಿದ್ಯಾಲಯದಿಂದ ಎಂ. ಡಿ. ಡಿಗ್ರಿಯನ್ನು ಪಡೆದ ಭಾರತೀಯರಲ್ಲಿ ಇವರೇ ಮೊದಲನೆಯವರು.

ಇವರಿಗೆ ಈಗ ೩೮ ವರುಷ ವಯಸ್ಸು. ಇನ್ನು ಒಂದು ವರುಷದೊಳಗೆ ಇವರು ಅಮೇರಿಕಾಕ್ಕೆ ಹಿಂತಿರುಗಿದರೆ ಮೇರಿ ಲ್ಯಾಂಡಿನಲ್ಲಿಯ ಸರಕಾರಿ ಆಸ್ಪತ್ರೆಯಲ್ಲಿ ಡಾಕ್ಟರ್ ಸ್ಥಾನವು ಕಾದಿಡಲಾಗಿದೆ. ಆದರೆ ಇವರು ಮುಂದೆ ಏನುಮಾಡುವರೆಂಬುದಿನ್ನೂ ಸರಿಯಾಗಿ ನಿರ್ಧರವಾಗಿಲ್ಲ.

# ದಂಗೆಯ ಪ್ರಕರಣ.

## ಗುಲಬರ್ಗಾದಲ್ಲಿ ನ್ಯಾಯಾಧೀಶರ ನಿರ್ಣಯ.

ನಿಜಾಮ ರಾಜ್ಯಕ್ಕೆ ಸೇರಿದ ಗುಲಬರ್ಗಾದಲ್ಲಿ ಕಳೆದ ಹೋಳೀ ಹುಣ್ಣಿಮೆಯ ಕಾಲಕ್ಕೆ ಹಿಂದೂ ಮುಸಲ್ಮಾನರ ದಂಗೆಯಾಗಿ ಒಬ್ಬ ಮುಸಲ್ಮಾನನು ಮೃತಪಟ್ಟಿರುವ ಸಂಗತಿಯು ಸರ್ವಶ್ರುತವಷ್ಟೆ. ಇದೇ ಪ್ರಕರಣದಲ್ಲಿ ಮೂರು ಜನ ವೀರಶೈವ ತರುಣ ಸಂಘದವರನ್ನೂ ೫ ಜನ ಆರ್ಯ ಸಮಾಜದವರನ್ನೂ ಬಂಧಿಸಿ, ಕೋರ್ಟಿನಲ್ಲಿ ವ್ಯಾಜ್ಯ ನಡೆದಿತ್ತು. ತರುಣಸಂಘದ ಕಡೆಯಿಂದ ಶ್ರೀಮಾನ್ ಹನುಮಂತರಾವ ಹಾಗರಗಿ ವಕೀಲರೂ ಆರ್ಯಸಮಾಜದವರ ಕಡೆಯಿಂದ ಶ್ರೀ. ಖನ್ನಾ ಬಿ. ಎ. ಎಲ್. ಎಲ್. ಬಿ. ವಕೀಲರೂ ಅವಿಶ್ರಾಂತಶ್ರಮಪಟ್ಟು ಹೋರಾಡಿದಾಗಲೂ ಮುಸಲ್ಮಾನ್ ನ್ಯಾಯಾಧೀಶರು ಕೊನೆಗೆ ತಾ. ೧೩-೮-೩೬ ನೆಯ ದಿನ ಶ್ರೀಯುತ ಲಾಲಾ ಈತನಿಗೆ ೧೦ ವರುಷ ಶಿಕ್ಷೆ, ಶರಣಪ್ಪ ಭೇರಜಿ ಈತನಿಗೆ ಮೂರು ವರುಷ ಶಿಕ್ಷೆ, ಶರಣಪ್ಪ ಡೆಂಗಿ ಮತ್ತು ನಾಗಪ್ಪ ಟೆಂಗಳಿ ಇವರಿಗೆ ೨ ವರುಷ ಶಿಕ್ಷೆ, ಉಳಿದವರಿಗೆ ೨ ವರುಷದ ಶಿಕ್ಷೆಯನ್ನು ವಿಧಿಸಿದರು.

---

## ಶ್ರೀಯುತ ಶರಣ ಸಂದೇಶ ಕರ್ತರಿಗೆ-

ಸಪ್ರೇಮ ವಿಜ್ಞಾಪನೆಗಳು. ಇಲಕಲ್ಲ ನಗರ ಸಭೆಗೆ ಹುರಿಯಾಳುಗಳನ್ನು ಆರಿಸುವ ಬಗ್ಗೆ ವಿಜಾಪುರ ಜಿಲ್ಲಾ ಕಾಂಗ್ರೆಸ್ ಸಿಲ್ಹಿಕ ಬೋರ್ಡಿನವರು ತಾ. ೧೦-೮-೩೬ ನೆಯ ದಿವಸ ಇಲ್ಲಿಗೆ ಆಗಮಿಸಿ ತಮ್ಮ ನಿರ್ಣಯವನ್ನು ಕೊಟ್ಟಿದ್ದರಲ್ಲಿ ಪಕ್ಷಪಾತವಾಗಿರುವದು. ಮಿ. ವೀರಪ್ಪ ಬೊಳ್ಳೊಳ್ಳಿ ಇವರ ಹುರಿಯಾಳುತನವನ್ನು ಕಿತ್ತು ಅವರಕಿಂತಲೂ ಕಡಿಮೆಯ ಯೋಗ್ಯತೆಯ ಮನುಷ್ಯರನ್ನು ಆರಿಸಿದ್ದಕ್ಕೆ ಇಲ್ಲಿಯ ಜನತೆಯಲ್ಲಿ ತುಂಬಾ ಕಳವಳವಾಗಿದೆ. ಇದಕ್ಕೆ ಸಿಲ್ಹಿಕ್ ಬೋರ್ಡಿನ ಸದಸ್ಯರಿಗೆ ಇಲ್ಲಿಯ ಸ್ಥಾನಿಕ ರಹಿವಾಸಿಗಳಾದ ಶ್ರೀಯುತ ಶಿವಶಂಕರಪ್ಪ ಸಕ್ಕರಿಯವರೇ ತಪ್ಪು ಗ್ರಹಿಕೆ ಮಾಡಿಕೊಟ್ಟಿರಬೇಕಾಗಿ ಊಹಿಸಬೇಕಾಗಿದೆ. ಶ್ರೀಯುತ ಬೊಳ್ಳೊಳ್ಳಿಯವರು ಕಾರ್ಯದಕ್ಷರೂ ಸತ್ಯಪ್ರೇಮಿಗಳೂ ಅಹಿಂಸಾ ವ್ರತ ಪಾಲಿಸುವವರೂ ಇರುವರಲ್ಲದೆ ಸತ್ಯಾಗ್ರಹ ಸಮರದಲ್ಲಿ ಜೇಲಿನ ಆನಂದಾನುಭವವನ್ನು ಹೊಂದಿದವರಿರುವರು. ಇಂಥವರಿಗೆ ಹುರಿಯಾಳು ಪಟ್ಟದಿಂದ ತಳ್ಳಿದ್ದು ನ್ಯಾಯವೋ ಅನ್ಯಾಯವೋ ಜನತೆಯೇ ಊಹಿಸಲಿ. ಕಾಂಗ್ರೆಸ ಈ ವಿಧವಾದ ತಪ್ಪನ್ನು ಮಾಡುತ್ತ ಹೋದಲ್ಲಿ ಅದರ ಬಗ್ಗೆ ಇದ್ದ ಪ್ರೇಮಾದರಗಳು ದಿನೇ ದಿನೇ ಕ್ಷಯಿಸಬಹುದಲ್ಲವೆ? ಮುಂದಾದರೂ ತಿದ್ದಿಕೊಳ್ಳಲಿ.

ತಮ್ಮ, ಕಾಂಗ್ರೆಸ ಪ್ರೇಮಿ.

---

## ಎಲ್ಲೆಲ್ಲಿ ಏನಿಲ್ಲ?

| | | |
|---|---|---|
| ಆಯರ್ಲಂಡ | ದೇಶದಲ್ಲಿ ಒಂದೂ | ಅಡಿವೆಯಿಲ್ಲ. |
| ಡೆನ್ಮಾರ್ಕ | ,, | ನದಿಯಿಲ್ಲ! |
| ವೇಲ್ಸ | ,, | ಸರೋವರವಿಲ್ಲ? |
| ಹಾಲಂಡ | ,, | ಗುಡ್ಡವಿಲ್ಲ! |
| ಸ್ವಿಟ್ಸರ್ಲಂಡ | ,, | ಬಂದರವಿಲ್ಲ. |

# ತಾಲೂಕು ಕಾಂ. ಕಮಿಟಿ.
## ಹುನಗುಂದ.

ಹುನಗುಂದ ತಾ. ಕಾಂಗ್ರೆಸ್ ಕಮಿಟಿಯು ಯಾವತ್ತೂ ಕೆಲಸಗಾರರಿಗೂ ಮತ್ತು ಉಳಿದ ಕಾಂಗ್ರೆಸ್ ಅಭಿಮಾನಿಗಳಿಗೂ ವಿನಂತಿ. ನಿಮಗೆಲ್ಲರಿಗೂ ನಾವು ಕಾಂಗ್ರೆಸ್ ಪಾವತಿ ಪುಸ್ತಕಗಳನ್ನು ತೆಗೆದುಕೊಂಡು ಕಾಂಗ್ರೆಸ್ ಸದಸ್ಯರನ್ನು ಮಾಡುವ ಬಗ್ಗೆ ತಿಳಿಸಿದ್ದೆವು. ಆ ಪ್ರಕಾರ ಕೆಲವು ಕಾಂಗ್ರೆಸ್ ಕೆಲಸಗಾರರು ಮತ್ತು ಕಾಂಗ್ರೆಸ್ ಅಭಿಮಾನಿಗಳು ಪುಸ್ತಕಗಳನ್ನು ತೆಗೆದುಕೊಂಡು ಸದಸ್ಯರನ್ನು ಮಾಡಿ ಹಣವನ್ನು ಸಹ ಕಳಿಸಿದ್ದಾರೆ. ಮತ್ತು ಈಗಲೂ ಸಹ ಮಾಡಹತ್ತಿದ್ದಾರೆ. ಕೆಲವರು ಮಾತ್ರ ಪುಸ್ತಕಗಳನ್ನು ತರಿಸಿಕೊಂಡಿಲ್ಲ. ನಮಗೂ ಆ ಭಾಗಗಳಿಗೆ ಹೋಗುವದು ಆಗಿಲ್ಲ.

ಕಾರಣ ಇನ್ನು ಸದಸ್ಯರನ್ನು ಮಾಡುವ ದಿವಸಗಳು ಸ್ವಲ್ಪ ಉಳಿದವು. ತಾ. ೩೦-೯-೩೮ ರ ಒಳಗಾಗಿಯೇ ನಾವು ಶಕ್ಯವಿದ್ದಷ್ಟು ಹೆಚ್ಚು ಸದಸ್ಯರನ್ನು ಮಾಡಿಯೇ ತೀರಬೇಕು. ಸದಸ್ಯರನ್ನು ಮಾಡುವಾಗ ಮಾತ್ರ ಸದಸ್ಯರಿಗೆ ಕಾಂಗ್ರೆಸ್ ಧ್ಯೇಯವನ್ನು ತಿಳಿಸಿಹೇಳಬೇಕು. ಮತ್ತು ರೋಖ ಹಣ ತೆಗೆದುಕೊಳ್ಳಬೇಕು. ಯಾವತ್ತು ಕೆಲಸಗಾರರು ತೀವ್ರವೇ ತರಿಸಿಕೊಂಡು ಕೆಲಸ ಸುರುಮಾಡಬೇಕಾಗಿ ವಿನಂತಿ.

ಹುನಗುಂದ ತಾ. ಕಾಂಗ್ರೆಸ್ ಕಚೇರಿಗೆ ಕ. ಪ್ರಾಂ. ಕಾ. ಕಮಿಟಿಯ ಸೆಕ್ರೆಟರಿಯವರ ಭೆಟ್ಟಿ ಮತ್ತು ದೇ. ಭ. ಕಳ್ಳಿ ತಿಪ್ಪಣ್ಣ ಶಾಸ್ತ್ರಿಗಳವರ ಕೀರ್ತನೆ.

ತಾ. ೧೨-೮-೩೮ ನೇ ದಿವಸ ರಾ. ಗುದ್ದೆಪ್ಪ ಹಳ್ಳಿಕೇರಿ ಕ. ಪ್ರಾ. ಕಾ. ಕಮಿಟಿಯ ಸೆಕ್ರೆಟರಿಗಳು ಇಲ್ಲಿಗೆ ಬಂದು ಇಲ್ಲಿಯ ತಾ. ಕಾ. ಕಚೇರಿಗೆ ಭೆಟ್ಟಿಕೊಟ್ಟರು. ಮತ್ತು ಯಾವತ್ತು ಲೆಕ್ಕಪತ್ರಗಳನ್ನು ನೋಡಿ ಕೆಲವು ಸೂಚನೆಗಳನ್ನು ಮಾಡಿದರು. ಮತ್ತು ಹೊಸ ಪದ್ಧತಿಯ ಪುಸ್ತಕಗಳಲ್ಲಿ ಲೆಕ್ಕಪತ್ರಗಳನ್ನು ಇಡಲಿಕ್ಕೆ ತಿಳಿಸಿದರು.

ನಂತರ ಶಾಂತಿದಾಸ ಅನ್ನಛತ್ರದಲ್ಲಿ ಯಾವತ್ತೂ ಕೆಲಸಗಾರರಿಗೂ ಭೆಟ್ಟಿಯಾಗಿ ಅವರಿಗೆ ಕಾಂಗ್ರೆಸ್ ಸದಸ್ಯರನ್ನು ಮಾಡುವ ಬಗ್ಗೆ ತಿಳಿಸಿದರು. ಮತ್ತು ಕಾಂಗ್ರೆಸ್ ಕೆಲಸಗಾರರು ಯಾವ ಜಾತಿ ಮತ್ತು ಧರ್ಮ ಇವುಗಳ ಕಡೆಗೆ ಲಕ್ಷಕೊಡದೇ ಯಾವತ್ತು ಹಿಂದು ಮತ್ತು ಮುಸಲ್ಮಾನರು ಒಂದಾಗಿ ಮತ್ತು ಒಕ್ಕಟ್ಟಾಗಿ ರಾಷ್ಟ್ರೀಯ ಧರ್ಮವೇ ನಮ್ಮ ಧರ್ಮ, ರಾಷ್ಟ್ರೀಯ ಜಾತಿಯೇ ನಮ್ಮ ಜಾತಿಯೆಂಬ ಭಾವನೆಯುಳ್ಳವರಾಗಿ ಶಿಸ್ತಿನಿಂದಲೂ ಮತ್ತು ಸತ್ಯತೆಯಿಂದಲೂ ಕೆಲಸಮಾಡಲಿಕ್ಕೆ ಉಪದೇಶಮಾಡಿದರು. ಅದೇ ದಿವಸ ಸಂಜೆ ೭ ಗಂಟೆಗೆ ಬಾಗಲಕೋಟೆಗೆ ಹೊರಟು ಹೋದರು.

ದೇ|| ಭ|| ತಿಪ್ಪಣ್ಣ ಶಾಸ್ತ್ರಿಗಳು ರಾತ್ರಿ ೧೦ ಗಂಟೆಗೆ ಶ್ರೀ. ಶಂಕರರಾವ ಪಾಟೀಲ ಇಂಗಳಗಿ ಇವರ ಗಿರಣಿಯಲ್ಲಿ ರಾಷ್ಟ್ರೀಯ ಕೀರ್ತನಮಾಡಿದರು. ಕೀರ್ತನದಲ್ಲಿ ಕಾಂಗ್ರೆಸ್ಸಿನ ಧ್ಯೇಯ ಮತ್ತು ಈಗಿನ ಕಾಂಗ್ರೆಸ್ ಮಂತ್ರಿಮಂಡಲವು ಮಾಡಿದ ಕಾರ್ಯ ಮತ್ತು ಮುಂದೆ ಮಾಡಬೇಕಾದ ಕಾರ್ಯದ ಬಗ್ಗೆ ಸಭೆಗೆ ಬಂದಂಥ ಯಾವತ್ತರ ಮೇಲೆ ಪರಿಣಾಮವಾಗುವಂತೆ ೩ ತಾಸಿನ ವರೆಗೆ ಕೀರ್ತನಮಾಡಿದರು. ಕೀರ್ತನ ಕೇಳಲಿಕ್ಕೆ ಊರೊಳಗಿನ ಯಾವತ್ತು ಸ್ತ್ರೀಪುರುಷರು ಬಂದಿದ್ದರು. ಮರು ದಿವಸ ದೇ. ಭ. ಶಾಸ್ತ್ರಿಗಳವರು ಸೂಳಿಭಾವಿಗೆ ಹೋಗಿದ್ದರು. ಅಲ್ಲಿಯ ಕಾರ್ಯದಲ್ಲಿ ಇಲ್ಲಿಯ ಕಾಂಗ್ರೆಸ್ ಕೆಲಸಗಾರರಾದಂಥ ಶ್ರೀ ಪಾಂಡುರಂಗ ಅನಂತಭಟ್ಟ ಶ್ರೀ. ರುದ್ರಯ್ಯನವರು ತೆಗ್ಗಿನಮಠ ಮತ್ತು ಶ್ರೀ. ವೀರಪ್ಪ ರ್‍ಯಾಕಿ ಇವರು ಬಹಳ ಉತ್ಸುಕತೆಯಿಂದ ಭಾಗವಹಿಸಿದ್ದರು.

ಬಸೆಟ್ಟೆಪ್ಪ ಬಳೂಟಗಿ ಹುನಗುಂದ.
ಅಧ್ಯಕ್ಷ ತಾ. ಕಾ. ಕಮಿಟಿ.

---

# ಧರ್ಮೋಪದೇಶ.

ತಾ. ೧೨-೮-೩೮ ನೆಯ ದಿವಸ ನಿಜಾಮ ಪ್ರಾಂತಿಕ ಪರಿಷತ್ತಿನ ಕಡೆಯಿಂದ ವೀರಶೈವಧರ್ಮ ಪ್ರಚಾರವನ್ನೇ ಮುಖ್ಯೋದ್ದೇಶವನ್ನಾಗಿಟ್ಟುಕೊಂಡು ಶ್ರೀ. ಶಂಕರಪ್ಪನವರು ಶ್ರೀ. ಶಿವಮೂರ್ತೆಪ್ಪನವರು ಉದ್ಗೀರ ಈ ಉಭಯ ಮಹಾಶಯರು ತಾಂಡೂರ ಜಹಿರಾಬಾದ ಇವೇ ಮೊದಲಾದ ಗ್ರಾಮಗಳಲ್ಲಿ ಸಂಚರಿಸಿ ಧರ್ಮೋಪದೇಶವನ್ನು ಮಾಡಿ ಚಿತಾಪುರ ಗ್ರಾಮಕ್ಕೆ ಬಂದರು. ಇಲ್ಲಿಯಾದರೂ ಶ್ರೀಮಂತ ಸಿದ್ಧರಾಮಪ್ಪಣ್ಣನವರು ರೇಶ್ಮಿ ಇವರ ಅಂಗಡಿಯಲ್ಲಿ ಶ್ರಾವಣ ಮಾಸದ ಪರ್ಯಂತ ಜನಗಳಲ್ಲಿ ನೀತಿ ಧರ್ಮ ಇವೇ ಮೊದಲಾದ ವಿಷಯಗಳು ಜಾಗೃತವಾಗುವ ಉದ್ದಿಶ್ಯ ಶ್ರೀ ಇಲಕಲ್ಲ ಮಹಾಂತ ಶಿವಯೋಗಿಗಳ ಪುರಾಣ ಪ್ರಾರಂಭವಾಗಿರುವದು,

ಪ್ರವಚನ ಕಾರ್ಯ ಶ್ರೀ. ಚಂದ್ರಶೇಖರ ಶಾಲಾಧ್ಯಾಪಕ ಗುರುಶಾಂತ ಶಾಸ್ತ್ರಿಗಳು ಅಳ್ಳಿಗಿ ಇವರಿಂದ ಮಾಡಿಸುತ್ತಿರುವರು. ಕಾರಣ ಸಭೆಯನ್ನು ಬೇರೆಯಾಗಿ ಕೂಡಿಸುವ ಅಗತ್ಯಬೀಳಲಿಲ್ಲ. ಸದರೀ ಶ್ರೀಮಂತರ ಅಂಗಡಿಯ ಪಟಾಂಗಣದಲ್ಲಿಯೇ ತಾರೀಖು ೧೨-೮-೩೮ ನೆಯ ದಿವಸ ಸಾಯಂಕಾಲ ೬ ಗಂಟೆಯಿಂದ ೭|| ಗಂಟೆಯ ವರೆಗೆ ಶಾಸ್ತ್ರಿಗಳವರು ಪ್ರವಚನ ಕಾರ್ಯವನ್ನು ಮಾಡಿ ಬಂದವರ ಪರಿಚಯವನ್ನು ಮಾಡಿಕೊಟ್ಟಮೇಲೆ ೭|| ಗಂಟೆಯಿಂದ ೯ ಘಂಟೆಯ ಪರ್ಯಂತ ಶ್ರೀ. ಶಂಕರಪ್ಪನವರು ಉದ್ಗೀರ ಇವರು ಹಿಂದಿಯಿಂದ ತಯಾರಿಸಿದ ಬಸವಮಹಾತ್ಮನ ವಾಕ್ಯಗಳನ್ನು ಭಜನಾರೂಪದಲ್ಲಿ ಹಾಡಿ ವೀರಶೈವರಲ್ಲಿರುವ ಒಳಪಂಗಡಗಳ ಏಕೀಕರಣ ಮತ್ತು ಉಚ್ಚನೀಚತಾ ನಿಷೇಧ ಇವೇ ಮೊದಲಾದ ವಿಷಯಗಳ ಮೇಲೆ ಹಿಂದೀ ಭಾಷೆಯಿಂದಲೇ ಮನಾನಂದವಾಗುವಂತೆ ಬೋಧಿಸಿದರು.

ನಂತರ ೯ ಘಂಟೆಯಿಂದ ೧೦ ಘಂಟೆಯ ಪರ್ಯಂತ ಶ್ರೀ. ಶಿವಮೂರ್ತೆಪ್ಪನವರು ಉದ್ಗೀರ ಇವರು ಅನೇಕ ಶಿವಶರಣ ಶಿವಶರಣೆಯರ ವಚನಗಳನ್ನು ಮತ್ತು ಕಲ್ಯಾಣದ ಗತವೈಭವವನ್ನು ಪದ್ಯರೂಪದಲ್ಲಿ ಹೇಳಿ ಅವುಗಳಲ್ಲಿರುವ ನೀತಿತತ್ವಗಳನ್ನು ಮತ್ತು ಅವರು ಮಾಡಿದ ಮಹತ್ಕಾರ್ಯಗಳನ್ನು ಕನ್ನಡ ನುಡಿಯಲ್ಲಿಯೇ ಎಲ್ಲರ ಮನಸ್ಸಿನ ಮೇಲೆ ಬಿಂಬಿಸುವಂತೆ ಬೋಧಿಸಿದರು. ಆ ಮೇಲೆ ಶಾಸ್ತ್ರಿಗಳವರು ಸದರಿಯವರ ಆಭಾರವನ್ನು ಮನ್ನಿಸಿ ಶ್ರೀ ಮಹಾಂತೇಶ್ವರನ ಮಂಗಲದೊಡನೆಯೇ ಸಭೆಯ ಕಾರ್ಯವನ್ನು ಮುಗಿಸಿದರು. ಪ್ರತಿಯೊಂದು ಪ್ರಾಂತದವರಲ್ಲಿಯೂ ಈ ತರದ ಸದ್ಬುದ್ಧಿಯನ್ನು ಕೊಡಲೆಂದು ಪರಮಾತ್ಮನನ್ನು ಪ್ರಾರ್ಥಿಸುವೆವು.

ಸೆಕ್ರೆಟರಿ,
ತರುಣ ಸಂಘ ಚಿತಾಪುರ.

—ಗಜೇಂದ್ರಗಡದಲ್ಲಿ ಒಬ್ಬ ಹೆಣ್ಣುಮಗಳು ಮತ್ತು ಗಂಡಸನು ಭಾವಿಯಿಂದ ನೀರನ್ನು ಸೇದುವಾಗ ಚೌಕಟ್ಟಿನ ಕಂಬಗಳು ಬಿದ್ದುದರಿಂದ ಅದರೊಡನೆ ಅವರೂ ಭಾವಿಯಲ್ಲಿ ಬಿದ್ದು ಸತ್ತರು.

—ಸರಕಾರೀ ಸೈನ್ಯವನ್ನು ಬಿಟ್ಟು ರಾಷ್ಟ್ರೀಯ ಸೈನ್ಯದಲ್ಲಿ ಸೇರಲು ಯತ್ನಿಸಿದುದಕ್ಕಾಗಿ ಫ್ರಾನ್ಸಿನಲ್ಲಿ ೭ ಜನರಿಗೆ ಗಲ್ಲಿನ ಶಿಕ್ಷೆಯನ್ನು ೨೦ ಜನರಿಗೆ ೧೨ ವರ್ಷದಿಂದ ೩೦ ವರುಷಗಳ ವರೆಗಿನ ಶಿಕ್ಷೆಯನ್ನು ವಿಧಿಸಿದ್ದಾರೆ.

—ಮುಂಬಯಿ ಪ್ರಾಂತದಲ್ಲಿ ಒಟ್ಟು ೧೨೨ ಜನ ಆಯ್. ಸಿ. ಎಸ್. ಅಧಿಕಾರಿಗಳಿದ್ದಾರೆ. ಅವರಲ್ಲಿ ೫೫ ಜನರು ಮಾತ್ರ ಹಿಂದೀಯರಿದ್ದಾರೆ.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

## The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೨ | ಆಲಮಟ್ಟಿ- ಸೋಮವಾರ ತಾರೀಖು ೨೯ ನೆಯ ಅಗಷ್ಟ ೧೯೩೮. | ಸಂಚಿಕೆ ೩ |
| --- | --- | --- |

ಜನಸೇವೆಯೇ ದೇವರಸೇವೆ.

# ಮಹಾತ್ಮರ ಕುಟೀರದ ಮುಂದೆ ಆದಿಜನರ ಸತ್ಯಾಗ್ರಹ.

ಮಧ್ಯಪ್ರಾಂತ ಮಂತ್ರಿಮಂಡಳದಲ್ಲಿ ಒಬ್ಬ ಆದಿಜನ
ಮಂತ್ರಿಯನ್ನು ನಿಯಮಿಸಿಕೊಳ್ಳಬೇಕೆಂದು ನಾಗಪುರದ
ಕೆಲವು ಆದಿ ಜನರು ಶೇಗಾಂವಿನಲ್ಲಿ
ಮಹಾತ್ಮಾಜಿಯವರ ಕುಟೀರದ ಮುಂದೆ ಸತ್ಯಾಗ್ರಹ
ಹೂಡುವವರಿದ್ದಾರೆ.

---

ಲಾಹೋರಿನಲ್ಲಿ ಕಾಂಗ್ರೆಸ್ ಮತ್ತು ಮುಸಲ್ಮಾನರಲ್ಲುಂಟಾದ
ತಿಕ್ಕಾಟದ ಫಲವಾಗಿ ಹಿಂದು-ಮುಸಲ್ಮಾನರ ದೊಂಬಿಯಾಗಿದೆ.
ಇದರಲ್ಲಿ ೫೦ ಜನಗಳಿಗೆ ಗಾಯಗಳಾಗಿವೆ.

ದೇಹವೇ



# ಶರಣ ಸಂದೇಶ

THE SHARANA SANDESHA.




ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೮. | ಆಲಮಟ್ಟಿ-ಸೋಮವಾರ ತಾರೀಖು ೨೯ ನೆಯ ಅಗಸ್ಟ ೧೯೩೮. | ಸಂಚಿಕೆ ೩


## ಮಹತ್ವದ ಸುದ್ದಿಗಳು.

—ಮುಂದಿನ ತಿಂಗಳಿನಲ್ಲಿ ರಾಷ್ಟ್ರಾಧ್ಯಕ್ಷರಾದ ಬಾಬು ಸುಭಾಷಚಂದ್ರ ಬೋಸರವರು ದಕ್ಷಿಣ ಭಾರತದ ಪ್ರವಾಸವನ್ನು ಕೈಕೊಳ್ಳುವವರಿದ್ದಾರೆ. ಮುಂಬೈಯಿಂದ ಮದ್ರಾಸಿಗೆ ಹೋಗುವರು. ಅಲ್ಲಿ ಕಾರ್ಪೊರೇಶನ್ನಿನವರು ಅರ್ಪಿಸುವ ಮಾನಪತ್ರವನ್ನು ಸ್ವೀಕರಿಸಿ ಕೊಚ್ಚಿ, ತಿರುವಾಂಕೂರುಗಳ ಪ್ರವಾಸ ಕೈಕೊಳ್ಳುವವರಿದ್ದಾರೆ. ಮಧ್ಯದಲ್ಲಿ ಮೈಸೂರು ಸಂಸ್ಥಾನದಲ್ಲಿಯೂ ಇಳಿದು ದೀರ್ಘವಾದ ಪ್ರವಾಸ ಮಾಡಬೇಕೆಂದು ಮೈಸೂರು ಕಾಂಗ್ರೆಸ್ ಅಧ್ಯಕ್ಷರು ರಾಷ್ಟ್ರಾಧ್ಯಕ್ಷರಿಗೆ ವಿಜ್ಞಾಪಿಸಿಕೊಂಡಿದ್ದಾರೆ.

—ಮುಂದಿನ ಕಾಂಗ್ರೆಸ್ ಅಧಿವೇಶನದ ಕಾರ್ಯವು ಭರದಿಂದ ಸಾಗಿದೆ. ೪ ಮೈಲು ರಸ್ತೆಯ ಸಲುವಾಗಿ ಮಧ್ಯಪ್ರಾಂತದ ಸರಕಾರದವರು ೨೦ ಸಾವಿರ ರೂ. ಗಳನ್ನು ಮಂಜೂರುಮಾಡಿದ್ದಾರೆ. ಈ ವರೆಗೆ ಮಹಾಸಭೆಯ ವ್ಯವಸ್ಥೆಯ ದೆಶೆಯಿಂದ ಒಟ್ಟು ೪೧ ಸಾವಿರ ರೂ. ಗಳು ಮಂಜೂರಾಗಿವೆ

—ಹಿಂದೀ ಚಳವಳಿಯನ್ನು ಕೂಡಲೇ ಅಂತ್ಯಗೊಳಿಸಬೇಕೆಂದೂ ಇಲ್ಲವಾದರೆ ಹಿಂಸೆಯ ಕಾರ್ಯ ಕೈಕೊಳ್ಳಲಾಗುವುದೆಂದೂ ಮದ್ರಾಸಿನ ಕೆಲವು ಮಂತ್ರಿಗಳಿಗೆ ಬೆದರಿಕೆಯ ಪತ್ರಗಳು ಬಂದಿವೆಯಂತೆ. ಪತ್ರದ ಕೆಳ ಭಾಗದಲ್ಲಿ 'ರಿವ್ಹಾಲ್ವರ' ಚಿತ್ರವೂ ತೆಗೆಯಲ್ಪಟ್ಟದೆಯಂತೆ.

—ಹುಬ್ಬಳ್ಳಿಯ ಮುನಸಿಪಾಲ್ಟಿಯನ್ನು ಕೂಡಲೇ ತೆಗೆದುಹಾಕಬೇಕೆಂದು ತಿಳಿಸಲು ಹುಬ್ಬಳ್ಳಿಯ ಎಲ್ಲ ಸಮಾಜದವರ ಪ್ರತಿನಿಧಿಗಳನ್ನೊಳಗೊಂಡ ೧೫ ಜನಗಳ ಒಂದು ಶಿಷ್ಟ ಮಂಡಳವು ಮಂತ್ರಿಗಳ ಕಡೆಗೆ ಹೋಗಿದೆ.

—ಜಪಾನಿನಲ್ಲಿ ಎರಡು ವಿಮಾನಗಳು ಮಂಜು ಮುಸುಕಿದ ಆಕಾಶದಲ್ಲಿ ಒಂದಕ್ಕೊಂದು ತಗಲಿದ್ದರಿಂದ ಅಪಘಾತವಾಗಿ ೧೪ ಜನರು ಸತ್ತರು. ೨೦೦ ಜನರಿಗೆ ಗಾಯಗಳಾಗಿವೆ.

—'ಕ್ಲೆಮೆಂಕೊ' ಎಂಬ ಹೆಸರಿನ ೩೦೦೦೦ ಟನ್ನು ಭಾರವುಳ್ಳ ಒಂದು ಭಯಂಕರವಾದ ಯುದ್ಧದ ಹಡಗವನ್ನು ತಯಾರಿಸಲು ಫ್ರಾನ್ಸ ನೌಕಾಶಾಖೆಯವರು ಆಜ್ಞೆ ಹೊರಡಿಸಿದ್ದಾರೆಂದು ತಿಳಿಯುತ್ತದೆ.

—ಡಾ. ಖರೆಯವರು ಮೌಲಾನಾ ಅಜಾದರು ತಮಗೆ ಬರೆದ ಒಂದು ಪತ್ರವನ್ನು ಪ್ರಕಟಿಸಿ ಅಜಾದರ ಸಲಹೆಯಂತೆ ನಾನು ಮಂತ್ರಿಪದಕ್ಕೆ ರಾಜೀನಾಮೆ ಕೊಟ್ಟೆನೆಂದು ಸೂಚಿಸಿದ್ದಾರೆ.

—ದಿಲ್ಲಿ ಅಸೆಂಬ್ಲಿ ಮೆಂಬರರೂ ರೈತ ಸಂಘದ ಅಧ್ಯಕ್ಷರೂ ಆಗಿರುವ ಪ್ರೊ. ರಂಗಾರವರಿಗೆ ಪಂಜಾಬ ಸರಕಾರವು ಸಿಮ್ಲಾ, ದಿಲ್ಲಿಯ ಯಾವ ಭಾಗದಲ್ಲಿಯೂ ಸಾರ್ವಜನಿಕ ಸಭೆ ಮತ್ತು ಭಾಷಣಗಳಲ್ಲಿ ಭಾಗವಹಿಸಲೇ ಕೂಡದೆಂದೂ ಈ ಆಜ್ಞೆಯನ್ನು ಮೀರಿ ನಡೆದಲ್ಲಿ ಸೆರೆಹಿಡಿಯಲಾಗುವುದೆಂದೂ ಎಚ್ಚರಿಕೆ ಕೊಟ್ಟದೆ.

—ಬನ್ನುದಲ್ಲಾದ ಹಿಂದುಗಳ ಮೇಲಿನ ಕೊಲೆಸುಲಿಗೆಗಳ ಸಂಬಂಧ ಬನ್ನು ರಕ್ಷಣೆಯ ದೆಶೆಯಿಂದ ಘೂರ್ಖ ದಳವನ್ನು ಅಲ್ಲಿಗೆ ಕಳುಹಿಸಿದ್ದಾರೆ.

—ತಿರುವಣಕೋರ ಮಹಾರಾಜರು ಒಂದು ಪ್ರಕಟನೆಯನ್ನು ಹೊರಡಿಸಿ ಅಖಿಲ ತ್ರಾವಣಕೋರ ಯುವಕ ಸಂಘ ಮತ್ತು ಸಂಸ್ಥಾನ ಕಾಂಗ್ರೆಸ್ ನಿಯಮಬಾಹ್ಯವೆಂದು ಸಾರಿದ್ದಾರೆ. ಈ ಆಜ್ಞೆಯನ್ನು ಉಲ್ಲಂಘಿಸಿ ಕಾಂಗ್ರೆಸ್ಸಿನವರು ಒಂದು ಸಭೆಯನ್ನು ಜರುಗಿಸುವವರಿದ್ದಾರೆ.

—ರಾಮದುರ್ಗ ಸಂಸ್ಥಾನಿಕರು ನಿಯಮಿಸಿದ ಭೂಕಂದಾಯ ವಿಚಾರಣಾ ಸಮಿತಿಯವರು ಕೂಡಿ ಸಂಸ್ಥಾನಿನಲ್ಲಿ ಭೂಕಂದಾಯ ಕಡಿಮೆಮಾಡಬೇಕೆಂದು ಸರ್ವಾನುಮತದಿಂದ ಠರಾವು ನಿಸಿದರು. ಸಪ್ಟಂಬರ ೧೨ ನೆಯ ತಾರೀಖಿನ ದಿವಸ ಪುನಃ ಸಮಿತಿಯವರು ಸೇರಿ ಎಷ್ಟು ಕಡಿಮೆ ಮಾಡಬೇಕೆಂಬುದನ್ನು ನಿರ್ಧರಿಸುವವರಿದ್ದಾರೆ.

—ಮುಂಬೈಯಲ್ಲಿ ಕೂಡಲಿರುವ ಕಾಂಗ್ರೆಸ್ ಪ್ರಾಂತಗಳ ಔದ್ಯೋಗಿಕ ಮಂತ್ರಿಗಳ ಪರಿಷತ್ತಿನಲ್ಲಿ ಅಗ್ಗ ದರದ ರೇಡಿಯೊ ಉಪಕರಣಗಳನ್ನು ಸಿದ್ಧಗೊಳಿಸುವ ವಿಷಯವು ಚರ್ಚಿಸಲ್ಪಡುವುದು.

# ಜಗದ್ಗುರು ಶಂಕರಾಚಾರ್ಯರು

## ಭಂಗಿಯ ಚರಣದಲ್ಲಿ.

ಬ್ರಾಹ್ಮಣ— ಎಲೋ, ಕೇಳಿಸುವದಿಲ್ಲವೇನೋ ?

ಭಂಗಿ— ಕಸ ಉಡುಗುತ್ತಿರುವ ಭಂಗಿಯು ಇದನ್ನು ಕೇಳಿ 'ಏನ್ರಿ ಮಹಾರಾಜರೆ' ಎಂದನು

ಬ್ರಾಹ್ಮಣ— ಏನೋ ಕೂಡಲೇ ಇಲ್ಲಿಂದ ಹೊರಟು ಹೋಗಿ ಯಾವುದಾದರೊಂದು ಓಣಿಯಲ್ಲಿ ಅಡಗಿಕೊಂಡು ಕುಳಿತುಕೊಳ್ಳು.

ಭಂಗಿ— ಏಕೆ?

ಬ್ರಾಹ್ಮಣ— ಏಕೇ? ನಿನಗೆ ಗೊತ್ತಿಲ್ಲವೋ, ಜಗದ್ಗುರು ಶಂಕರಾಚಾರ್ಯರು ಇಲ್ಲಿಗೆ ಆಗಮಿಸುತ್ತಾರೆಂಬುದು? ಕೂಡಲೇ ಇಲ್ಲಿಂದ ಮೊದಲು ಮರೆಯಾಗು.

ಭಂಗಿ— ಏನು ಅವರು ನನ್ನನ್ನು ಇಲ್ಲಿಂದ ತಳ್ಳಲು ಆಜ್ಞೆ ಮಾಡಿರುವರೇ?

ಬ್ರಾಹ್ಮಣ— ಹೌದು ಜಾಗ್ರತೆ ಇಲ್ಲಿಂದ ಹೊರಟು ಹೋಗು.

ಭಂಗಿ— ಇಂಥ ಆಜ್ಞೆಯನ್ನು ಅವರು ಏಕೆ ಮಾಡಿದರು?

ಬ್ರಾಹ್ಮಣ— ನೀನು ಶೂದ್ರನಿರುವಿಯೆಂದು.

ಭಂಗಿ— ಹಾಗಾದರೆ ನಾನು ಅವರಿಗೆ ಕೆಲವು ಸಂಗತಿ ಕೇಳಬಯಸುತ್ತೇನೆ.

ಬ್ರಾಹ್ಮಣ— ಇಲ್ಲಿ ಅವರನ್ನು ಕೇಳುವ ಅಧಿಕಾರವೇ ನಿನಗಿಲ್ಲ.

ಭಂಗಿ— ಏಕೆ?

ಬ್ರಾಹ್ಮಣ— ಏಕೇ? ನೀನು ಶೂದ್ರನಿರುವಿ. ನಿನ್ನ ಮುಖವನ್ನೇ ಅವರು ನೋಡದಿರುವಾಗ ನಿನ್ನೊಡನೆ ಅವರು ಮಾತನಾಡುವುದು ಹೇಗೆ?

ಭಂಗಿ— ಓಹೋ ತಿಳಿಯಿತು. ಆದರೆ ಅವರು ಜಗದ್ಗುರುಗಳಾದರೂ ಇದ್ದುದು ನಿಜವೆ?

ಬ್ರಾಹ್ಮಣ— ಎಲೋ, ಇದರಲ್ಲಿ ನಿನಗೆ ಸಂಶಯುವಿದೆಯೋ ? ಇಡೀ ಜಗತ್ತೆ ಅವರನ್ನು ಪೂಜ್ಯಭಾವದಿಂದ ನೋಡುತ್ತಾ ಇದೆ. ದೊಡ್ಡ ದೊಡ್ಡ ನಾಸ್ತಿಕರು ಕೂಡಾ ಅವರ ಮುಂದೆ ತಲೆ ತಗ್ಗಿಸಿ ಹೋಗಿದ್ದಾರೆ. ನಿನಗೆ ಅವರು ಜಗದ್ಗುರು ಎಂಬುದರ ಬಗ್ಗೆ ಸಂಶಯುವಿದೆಯೋ?

ಭಂಗಿ— ಮಹಾರಾಜರೇ, ನಾನು ಅವರಿಗೆ ಜಗದ್ಗುರುವೆಂದು ಹೇಗೆ ಹೇಳಲಿ? ಏಕೆಂದರೆ ಜಗತ್ತಿನಲ್ಲಿಯೇ ಕೂಡಿಕೊಂಡಿರತಕ್ಕ ನಾನೂ ಒಬ್ಬ ವ್ಯಕ್ತಿ. ನನ್ನ ಶಂಕಾಸಮಾಧಾನಮಾಡದಿದ್ದರೆ ಅವರು ಹೇಗೆ ಜಗತ್ತಿಗೆ ಗುರುಗಳಾಗುವರು?

"ಏನು ನಡೆದಿದೆ? ಏನು? ಇದು ವರೆಗೂ ಈತನನ್ನು ಹೊರಗೆ ಹಾಕಿಲ್ಲವೋ? ಜಗದ್ಗುರು ಶಂಕರಾಚಾರ್ಯರು ಇಲ್ಲಿಯೇ ಬರುತ್ತಾ ಇದ್ದಾರೆ. ಎಲೋ ನೀನು ಇನ್ನೂ ಹೋಗಿಲ್ಲವೋ" ಎಂದು ಕಣ್ಣು ಕೆಂಪಗೆ ಮಾಡಿಕೊಂಡ ಮತ್ತೊಬ್ಬ ಬ್ರಾಹ್ಮಣನು ಅಲ್ಲಿಗೆ ಬಂದು ಭಂಗಿಯಮೇಲೆ ಗದ್ದರಿಸಿದನು.

ಭಂಗಿ— ಸ್ವಲ್ಪ ಸಮಾಧಾನ ಹೊಂದಿರಿ ರಾಯರೇ. ಬ್ರಾಹ್ಮಣರಿಗೆ ಸಿಟ್ಟು ಒಳಿತಲ್ಲ.

ಬ್ರಾಹ್ಮಣ— ಎಲೋ, ನೀನು ಬ್ರಾಹ್ಮಣರಿಗೇನೇ ಉಪದೇಶಮಾಡುತ್ತಿರುವಿಯಾ?

ಭಂಗಿ— ತಮಗೆ ಯಾರು ಉಪದೇಶಮಾಡುತ್ತಿದ್ದಾರೆ? ಸ್ವಾಮಿ, ತಮ್ಮ ಮಾತಿಗೇ ಉತ್ತರ ಮಾತ್ರ ಕೊಡುತ್ತಾ ಇದ್ದೇನೆ.

ಬ್ರಾಹ್ಮಣ— ಒಳ್ಳೇದು. ಇಲ್ಲಿಂದ ಹೊರಟು ಹೋಗು. ಜಗದ್ಗುರುಗಳ ಸವಾರಿಯು ಸಮೀಪದಲ್ಲಿಯೇ ಬಂದು ಬಿಟ್ಟಿತು.

ಭಂಗಿ— ನಾನು ಆಚಾರ್ಯರ ದರ್ಶನ ಹೊಂದಬೇಕೆಂದು ಇಚ್ಛಿಸುತ್ತೇನೆ. ಅವರಿಂದ ನನ್ನ ಸಂದೇಹಗಳನ್ನು ನಿವಾರಣೆ ಮಾಡಿಕೊಳ್ಳಬೇಕಾಗಿದೆ.

"ಏನು? ನಡೆದಿದೆ?" ಎಂದು ಘೂರನೆಯುವನೊಬ್ಬನು ಬಂದು ವಿಚಾರಿಸಿದನು.

ಇಷ್ಟರಲ್ಲಿಯೇ ಬಹು ಜನರು ಸೇರಿದರು. ಗಂಟೆ, ಶಂಖಗಳ ನಾದವು ಕೇಳಹತ್ತಿತು. ಜಗದ್ಗುರುಗಳ ಮೆರವಣಿಗೆಯೂ ಹತ್ತಿರದಲ್ಲಿಯೇ ಬಂದುಬಿಟ್ಟಿತು. ಆ ಶೂದ್ರನು ಆಚಾರ್ಯರ ಕಡೆಗೆ ಓಡುತ್ತಾ ನಡೆದನು. ಜನಗಳು ಆತನನ್ನು ತಡೆಯಹತ್ತಿದುದರಿಂದ ಆತನು ಗಟ್ಟಿಯಾಗಿ "ಜಗದ್ಗುರುಗಳ ದರ್ಶನ ತೆಗೆದುಕೊಳ್ಳುವುದು ತನಗೂ ಅಧಿಕಾರವಿದೆ. ದರ್ಶನ ಹೊಂದಲು ತನಗಾರೂ ಪ್ರತಿಬಂಧಗೊಳಿಸರು." ಎಂದು ಗಟ್ಟಿಯಾಗಿ ಚೀರಿದನು.

ಇದು ಆಚಾರ್ಯರಿಗೂ ಕೇಳಿಸಿತು. ಅವರು ಶಿಷ್ಯರನ್ನು ಕುರಿತು 'ಅವರು ಯಾರು? ಅವರನ್ನು ಇಲ್ಲಿಗೆ ಬರಮಾಡಿರಿ' ಎಂದು ಹೇಳಿದರು.

'ಅವನೊಬ್ಬ ಶೂದ್ರ ನಿಮ್ಮನ್ನು ಹಠಾತ್ತಾಗಿ ಕಾಣಲೇಬೇಕೆಂದು ಮಾಡಿದ್ದಾನೆ.' ಎಂದು ಅಲ್ಲಿದ್ದ ಬ್ರಾಹ್ಮಣನೊಬ್ಬನು ಉತ್ತರಕೊಟ್ಟನು.

ಆಚಾರ್ಯರು— ಅಲ್ಲ; ಅವನು ಶೂದ್ರನಲ್ಲವೆಂದು ತೋರುತ್ತದೆ. ಅವನ ಆಚರಣೆ ಶುದ್ಧವಿದೆ. ಅವನನ್ನು ಇಲ್ಲಿಗೆ ಬರಮಾಡಿರಿ.

ಭಂಗಿಯ ಸಲುವಾಗಿ ದಾರಿಯನ್ನು ಬಿಟ್ಟುಕೊಟ್ಟರು. ಆತನು ಆಚಾರ್ಯರ ಹತ್ತಿರ ಬಂದು ನೆಲದ ಮೇಲೆ ದೀರ್ಘದಂಡ ನಮಸ್ಕಾರಮಾಡಿ "ಆಚಾರ್ಯರೇ, ನನ್ನ ಶಂಕಾಸಮಾಧಾನ ಮಾಡದ ವಿನಾ ತಾವು ಜಗದ್ಗುರುಗಳು ಹೇಗಾಗುವಿರಿ? ನಾನೂ ಜಗತ್ತಿನಲ್ಲಿರುವ ಒಂದು ವ್ಯಕ್ತಿ." ಎಂದು ಕೇಳಿದನು.

"ಸುಮ್ಮನೇ ಕೂಡ್ರೋ" ಎಂದು ಅಲ್ಲಿಯ ಒಬ್ಬ ಬ್ರಾಹ್ಮಣನು ಸಿಟ್ಟಿನಿಂದ ಹೇಳಿದನು.

ಆಚಾರ್ಯರು— ತಡೆಯಿರಿ. ಆತನಿಗೆ ಹೇಳಲು ಅವಕಾಶ ಕೊಡಿರಿ. (ಎಲ್ಲ ಜನರೂ ಸ್ತಬ್ಧರಾದರು)

ಭಂಗಿ— ನಾನು ಸ್ವಲ್ಪ ಕೇಳಬೇಕೆಂದು ಇಚ್ಛಿಸುತ್ತೇನೆ.

ಆಚಾರ್ಯರು— ಒಳ್ಳೇದು ಕೇಳು.

ಭಂಗಿ— ತಾವು ನನ್ನನ್ನು ದಾರಿಯಿಂದ ತಳ್ಳಿಬಿಡಲು ಏಕೆ ಆಜ್ಞೆಮಾಡಿದಿರೆಂಬುದನ್ನು ಕೇಳಬಯಸುತ್ತೇನೆ.

ಆಚಾರ್ಯರು ಈತನ ಮಾತನ್ನು ಕೇಳಿ ವಿಚಾರಿಸುತ್ತಿದ್ದರು. ಇವರು ಉತ್ತರವನ್ನು ಕೊಡುವಷ್ಟರಲ್ಲಿಯೇ ಬಾಯಿಹಾಕಿ ಅಲ್ಲಿದ್ದ ಒಬ್ಬ ಬ್ರಾಹ್ಮಣನು ಗಟ್ಟಿಯಾಗಿ 'ನೀನು ಚಾಂಡಾಲನಿರುವಿಯೆಂದು' ಎಂದು ಕೂಗಿದನು.

ಭಂಗಿ— ನಮ್ಮನ್ನು ಕೀಳೆಂದು ತಾವು ತಿಳಿದುದಕ್ಕಾಗಿಯೇ ಹೀಗೆ ಹೇಳುತ್ತಿರುವಿರಲ್ಲವೆ?

ಬ್ರಾಹ್ಮಣ— ಹೌದು. ನೀವು ಕೀಳರೆಂಬುವುದಕ್ಕೆ ಎಳ್ಳಷ್ಟಾದರೂ ಸಂಶಯವೇ?

ಆಚಾರ್ಯರು ಶಾಂತರೀತಿಯಿಂದ ಇದೆಲ್ಲವನ್ನೂ ಕೇಳುತ್ತಿದ್ದರು. ಆಗ ಭಂಗಿಯು ಆಚಾರ್ಯರನ್ನು ಕುರಿತು 'ಶರೀರದಿಂದಲೋ, ಕರ್ಮದಿಂದಲೋ, ಆತ್ಮದಿಂದಲೋ? ಅಥವಾ ಇನ್ನಾವುದರಿಂದ ನನ್ನನ್ನು ಕೀಳೆಂದು ಭಾವಿಸುವಿರಿ?' ಎಂದು ಕೇಳಿದನು. ಆಚಾರ್ಯರು ಪ್ರಶ್ನೆಗಳನ್ನು ಸಮಾಧಾನದಿಂದ ಕೇಳಿಕೊಂಡರು. ಭಂಗಿಯು ಪುನಃ ಆಚಾರ್ಯರನ್ನು ಕುರತು "ಆತ್ಮದಿಂದಲೋ? ಆತ್ಮವಾದರೋ ಶುದ್ಧ, ನಿರ್ವಿಕಾರವಾದುದು ಇದೆ." ಎಂದು ಹೇಳಿದನು.

ಆಚಾರ್ಯರು— ಆತ್ಮದಿಂದ ನಿಮ್ಮನ್ನು ಕೀಳೆಂದು ಭಾವಿಸುವುದಿಲ್ಲ.

ಭಂಗಿ— ಇಲ್ಲದಿದ್ದರೆ ಶರೀರದಿಂದಲೋ. ಶರೀರದಿಂದಲೇ ನಮ್ಮನ್ನು ಕೀಳೆಂದು ಭಾವಿಸುವುದಾದರೆ ಶರೀರವಾದರೋ ಪಂಚಭೂತಗಳಿಂದ ಕೂಡಿದುದಾಗಿದೆ. ಮಣ್ಣು ಅನೇಕ ತರಹದ ಹೊಲಸುಗಳಿಂದ ಕೂಡಿದುದಾಗಿದೆ. ನೀರಿನಲ್ಲಿ ಸಾವಿರಾರು ಜಾತಿಯ ಜೀವರಾಶಿಗಳಿದ್ದು ಅವು ನೀರಿನಲ್ಲಿಯೇ ಮಲಮೂತ್ರ ವಿಸರ್ಜಿಸುತ್ತವೆ. ಬೆಂಕಿಯಾದರೋ ಎಲ್ಲವನ್ನೂ ಭಸ್ಮಮಾಡಿಬಿಡುವುದಾಗಿದೆ. ಹವೆಯಾದರೋ ನೆಲದ ಮೇಲೆ ಬಿದ್ದು ಕೊಳೆತ ಪದಾರ್ಥಗಳ ದುರ್ವಾಸನೆಯಿಂದಲೇ ಕೂಡಿದುದಾಗಿದೆ. ಮತ್ತು ಆಕಾಶವಾದರೂ ಇದರಿಂದ ಬೇರೆಯಿಲ್ಲ. ಇವೇ ಐದು ಪದಾರ್ಥಗಳಿಂದಲೇ ಪ್ರತಿಯೊಬ್ಬರ ಶರೀರವು ತಯಾರಿಸಲ್ಪಟ್ಟದ್ದಿರುತ್ತದೆ. ಇಂಥ ಶರೀರವನ್ನು ಕೀಳೆಂದು ಭಾವಿಸುವುದು ಯೋಗ್ಯವಾಗಿದೆ. ಆದರೆ ಇವೇ ಪಂಚಭೂತಗಳಿಂದಲೇ ತಮ್ಮ ಶರೀರವಾದರೂ ತಯಾರಿಸಲ್ಪಟ್ಟಿದೆಯಲ್ಲವೆ? ಪಂಚಭೂತಗಳ ಬಗ್ಗೆ ಅಸಹ್ಯಪಡುತ್ತಿದ್ದರೆ ಅವುಗಳನ್ನೇಕೆ ಧಾರಣಮಾಡಿರುವಿರಿ?

ಆಚಾರ್ಯರು— ಇಲ್ಲ. ನಾನು ಶರೀರದಿಂದಲೂ ನಿಮ್ಮನ್ನು ಕೀಳೆಂದು ಭಾವಿಸುವದಿಲ್ಲ.

ಭಂಗಿ— ಇನ್ನು ಕರ್ಮದಿಂದ ಕೀಳೆಂದು ತಿಳಿದಿರಬಹುದು. ಕರ್ಮದ ವಿನಾ ಗತಿಯಿಲ್ಲವೆಂಬುದೂ ಆಚಾರ್ಯರಿಗೆ ಗೊತ್ತಿರಬಹುದು. ಕರ್ಮದಿಂದಲೇ ಜೀವನದ ಸಾರ್ಥಕವಾಗುತ್ತದೆ. ನನ್ನ ಹೃದಯವಾದರೋ ಕರ್ಮವು ಕೀಳತರದ್ದೆಂದು ಎಂದು ಭಾವಿಸಲಾರದು. ಕರ್ಮವನ್ನು ಬಿಟ್ಟುಕೊಡುವುದರಿಂದ ಪರಿಣಾಮವು ಕೆಡಕಾಗುತ್ತದೆಂಬುದನ್ನು ನಾನು ಕೇಳಿದ್ದೇನೆ. ನಾನು ನನ್ನ ಕರ್ಮವನ್ನು ಬಿಟ್ಟುಕೊಟ್ಟರೆ ದುರ್ವಾಸನೆ ಹೆಚ್ಚಿ ಹವೆಯೆಲ್ಲ ಕೆಟ್ಟು ಅನೇಕ ರೋಗಗಳು ಉತ್ಪನ್ನವಾಗಿ ಸರ್ವ ಪ್ರಾಣಿಗಳಿಗೂ ತೊಂದರೆಯಾಗಬಹುದು. ಇದಕ್ಕಾಗಿಯೇ ನನ್ನ ಕರ್ಮವನ್ನು ನಾನು ಮಾಡಿಯೇ ತೀರಬೇಕಾಗಿದೆ. ಇದನ್ನು ನಾನು ಕೀಳೆಂದು ಭಾವಿಸುವುದಿಲ್ಲ. ಈ ನನ್ನ ಕರ್ಮವು ಕೀಳೆಂದು ಭಾವಿಸಿ ನಾನು ಇದನ್ನು ಬಿಟ್ಟುಕೊಟ್ಟು ಜನಗಳು ರೋಗಪೀಡಿತರಾಗುವಂತೆ ಮಾಡಬಹುದೆ?

ಆಚಾರ್ಯರು ಭಂಗಿಯ ಮಾತುಗಳನ್ನು ಶಾಂತಚಿತ್ತದಿಂದ ಕೇಳಿದರು. ಅವುಗಳಲ್ಲಿಯ ಗೂಢಾರ್ಥವನ್ನು ತಿಳಿದುಕೊಂಡರು. ಅವರು ಇಂದು ಹೊಸ ಸಂಗತಿಯನ್ನು ಕಂಡಂತಾಯಿತು. ಗಂಗಾಸ್ನಾನಕ್ಕಾಗಿ ಬಂದ ಆಚಾರ್ಯರು ಭಂಗಿಯ ಉದಾತ್ತ ವಿಚಾರ, ಹೃದಯದ ಸರಳತೆಯಲ್ಲಿಯೇ ವಿಚಾರಮಗ್ನರಾಗಿಹೋದರು. 'ಭಂಗಿಗೆ ಇಂಥ ಪಾಂಡಿತ್ಯವು ಎಲ್ಲಿಂದ ಬಂದಿದೆ? ಆದರೆ ಈತನು ಯಾರಾಗಿರಬಹುದು?' ಎಂದು ಆಚಾರ್ಯರು ಯೋಚಿಸಿ ಆ ಭಂಗಿಯ ನಿಜಸ್ವರೂಪವನ್ನು ತಿಳಿದುಕೊಂಡು ಯಾವ ಬ್ರಹ್ಮಜ್ಞಾನಕ್ಕಾಗಿ ನಾನು ಕಷ್ಟಪಡುತ್ತಿದ್ದೆನೋ ಅದೇ ಈಗ ನನಗೆ ದೊರೆಯಿತೆಂದು ಆಚಾರ್ಯರು ಪರವಶರಾಗಲು ಭಂಗಿಯ ಚರಣಗಳಮೇಲೆ ಅವರ ಶಿರಸ್ಸು ಬಿದ್ದುಬಿಟ್ಟಿತು. "ಭಗವಾನ್ ನಾನು ಈವರೆಗೂ ತಪ್ಪು ತಿಳಿದುಕೊಂಡಿದ್ದೆ. ಕರ್ಮದಿಂದ ಕೀಳರೆಂದು ಭಾವಿಸುವುದು ಅಜ್ಞಾನವಾಗಿದೆ. ತಾವು ಇಂದು ನನ್ನ ಅಜ್ಞಾನವನ್ನು ಹೊಡೆದೋಡಿಸಿದಿರಿ. ನಿಜವಾಗಿಯೂ ನಾನು ಜಗದ್ಗುರು ಅಲ್ಲ. ತಾವೇ ಇರುವಿರಿ." ಎಂದು ಆಚಾರ್ಯರು ಭಂಗಿಯನ್ನು ಕುರಿತು ಹೇಳಿದರು.

ಭಂಗಿಯ ಚರಣದ ಮೇಲೆ ಇಂಥ ದೊಡ್ಡ ಪಂಡಿತರು, ಮಹಾತ್ಮರು ಬಿದ್ದುದನ್ನು ಕೂಡಿದ ಜನಗಳೆಲ್ಲರೂ ಅತ್ಯಂತ ಗಾಬರಿಯಾಗಿ ನೋಡುತ್ತಿದ್ದರು.

ಶಂಕರಾಚಾರ್ಯರ ಈ ಸ್ಥಿತಿಯನ್ನು ನೋಡಿ ಅವರ ಶಿಷ್ಯರು "ಗಂಗಾಸ್ನಾನಕ್ಕಾಗಿ ಬಂದ ತಮ್ಮ ಗಂಗಾಸ್ನಾನವು ಇದೇ ಅಲ್ಲವೆ? " ಎಂದು ಕೇಳಿದರು.

"ನಾನೇನೋ ಈಗ ಸ್ನಾನಮಾಡಿಬಿಟ್ಟೆನು. ಸುದೈವದಿಂದ ಎಂದೂ ಕಾಣದ ಅತ್ಯಂತ ಪರಮಾನಂದದ ಸ್ನಾನವನ್ನು ಈ ದಿನ ಮಾಡಿದೆ" ನೆಂದು ಶಂಕರಾಚಾರ್ಯರು ತಮ್ಮ ಶಿಷ್ಯರಿಗೆ ಉತ್ತರ ಕೊಟ್ಟರು.

"ಕ್ರಾಂತಿ"

---

## ಸಂಸ್ಥಾನಿನಲ್ಲಿ ಪತ್ರಿಕೆಗಳಿಗೆ ಗದೆ.

ಹೈದರಾಬಾದಿನ ನಿಜಾಮರ ಇಚ್ಛೆಯ ಮೇರೆಗೆ ಎಗ್ಜಿಕ್ಯೂಟಿವ್ಹ ಕೌನ್ಸಿಲ್ಲದ ಅಧ್ಯಕ್ಷರು ಒಂದು ಆಜ್ಞೆಯನ್ನು ಹೊರಡಿಸಿ ಕೆಳಗಿನ ಪತ್ರಿಕೆಗಳು ನಿಜಾಮ ಸಂಸ್ಥಾನದಲ್ಲಿ ಪ್ರವೇಶಿಸಲು ನಿರ್ಬಂಧಗೊಳಿಸಿದ್ದಾರೆ.

(೧) ಹಿಂದು ಔಟ್‌ಲುಕ್, ದಿಲ್ಲಿ (೨) ಆರ್ಯ ಗ್ಯಾಜೆಟ್, ದಿಲ್ಲಿ (೩) ಪ್ರಕಾಶ (೪) ಆರ್ಯವೀರ (೫) ಮಿಲಾಪ (೬) ವೈದಿಕ ಸಂದೇಶ, ಸೊಲ್ಲಾಪುರ (೭) ಮಸಾವತ, ಮುಂಬೈ (೮) ಝುಂಡಾ (೯) ಮರಾಠವಾಡಾ, ಪುಣೆ (೧೦) ತ್ರಿಕಾಳ, ಪುಣೆ (೧೧) ಅಮರ ಜ್ಯೋತಿ, ನಾಗಪುರ (೧೨) ಮಹಾರಾಷ್ಟ್ರ, ನಾಗಪುರ.

---

## ಭಯಂಕರ ಅಪಘಾತ.

ಸೌಥ ಇಂಡಿಯನ್ ರೇಲ್ವೆಯ ತ್ರಿಚನಾಪಲ್ಲಿ ಮದುರಾ ವಿಭಾಗದಲ್ಲಿಯ ರೇಲ್ವೆ ದಾರಿಯು ಭಯಂಕರ ಮಳೆ, ಬಿರುಗಾಳಿಗಳಿಂದ ಕೆಟ್ಟುಹೋದುದರಿಂದ ತಾ. ೨೦ ನೆಯ ದಿನ ರಾತ್ರಿ ಪ್ಯಾಸೆಂಜರ್ ಗಾಡಿಯು ಅಯ್ಯಲೂರ ಮತ್ತು ವಡಮದುರಾ ಸ್ಟೇಶನ್ನುಗಳ ಮಧ್ಯದಲ್ಲಿ ರೂಳಿನಿಂದ ಸರಿದು ಈ ಅಪಘಾತವುಂಟಾಯಿತು. ಎಂಜಿನ್ ನಾಲ್ಕು ಡಬ್ಬಿಗಳು ರೂಲಿನ ಕೆಳಗೆ ಬಿದ್ದ ಅಪಘಾತದಿಂದ ೪೦ ಜನರು ಸತ್ತಿದ್ದಾರೆಂದೂ ೧೫೦ ಜನರಿಗೆ ಗಾಯಗಳಾಗಿವೆಯೆಂದೂ ಕಂಡು ಬಂದಿದೆ. ೫೦ ಕ್ಕಿಂತಲೂ ಹೆಚ್ಚಾಗಿ ಜನರು ಸತ್ತಿರಬಹುದೆಂದು ಪ್ರವಾಸಿಕರೊಬ್ಬರು ಹೇಳಿದರಂತೆ.

ಎಂಜಿನಿನ ಡ್ರಾಯವ್ಹರನು ಗಾಯಗೊಂಡಿದ್ದರೂ ಸುರಕ್ಷಿತನಾಗಿದ್ದಾನೆ. ಫಾಯರಮನ್, ಇಬ್ಬರು ಬ್ರೆಕ್‌ಮನ್‌ರು ಮತ್ತು ಉಳಿದವರು ಕಾಣದಂತಾಗಿದೆ. ಈ ಗಾಡಿಯಲ್ಲಿ ಮದುವೆ ದೆಶೆಯಿಂದ ಹೊರಟ ೩೦ ಜನರು ಮಾಯವಾಗಿದ್ದಾರೆ. ನಾಗೂರು ಕಾಂಡೂರಿ ಎಂಬಲ್ಲಿ ಉರುಸು ಇದ್ದುದರಿಂದ ಮುಸಲ್ಮಾನ ಪ್ರವಾಸಿಕರೇ ಹೆಚ್ಚಿದ್ದರು. ಇವರೇ ಹೆಚ್ಚಾಗಿ ಸತ್ತಿದ್ದಾರೆಂದೂ ಕಂಡುಬಂದಿದೆ. ಗಾಯಗೊಂಡವರನ್ನು ಮಧುರಾಕ್ಕೆ ಕಳಿಸಿದ್ದಾರೆ.

# ಮಹಾದೇವಿಯಕ್ಕನ ಉಜ್ವಲವಾದ ಜೀವನ.

(ಲೇಖಕ— ಎಸ್. ವ್ಹಿ. ಹಂಜಿ ಬಿ. ಎ.)

[ವಿಜಾಪುರದ 'ಶಿವಾನುಭವ' ಪತ್ರಿಕೆಯಲ್ಲಿ ಪ್ರಕಟವಾದ ಲೇಖನದಲ್ಲಿಯ ಕೆಲವು ಭಾಗಗಳನ್ನು ಇಲ್ಲಿ ಕೊಟ್ಟಿದೆ.]

ಮಹಾದೇವಿಯಕ್ಕನು ಭರತ ಖಂಡದ ಸಾಧ್ವೀಶಿರೋಮಣಿಗಳಲ್ಲಿ ಒಬ್ಬಳೆಂದು ಹೇಳಬಹುದು. ಅವಳ ಜೀವನವು ಇಲ್ಲಿಯ ವರೆಗೆ ಗುಪ್ತವಾಗಿದ್ದು ಅವಳ ವಚನಗಳು ಪ್ರಕಟವಾದಂದಿನಿಂದ ಅವಳ ಕೀರ್ತಿಯು ಎಲ್ಲಡೆಯಲ್ಲಿಯೂ ಹಬ್ಬುತ್ತ ನಡೆದಿರುವುದು. ಕನ್ನಡದ ಉಚ್ಚತರದ ಅಭ್ಯಾಸಕ್ಕೆ ಅವಳ ವಚನಗಳನ್ನು ನಿಯಮಿಸಿದ್ದರಿಂದ ವಿಮರ್ಶಕ ಬುದ್ಧಿಯಿಂದ ಅವಳ ಅಭ್ಯಾಸವು ನಡೆಯಲೇ ಬೇಕಾಯಿತು. ಅಂದಿನಿಂದ ಆಕೆಯ ಜೀವನ ಮತ್ತು ವಚನಗಳ ಮೇಲೆ ವಿಮರ್ಶಾತ್ಮಕ ಲೇಖಗಳು ನಾಟಕ, ಚರಿತ್ರೆಗಳು ಪ್ರಕಟವಾಗುತ್ತಲಿವೆ. ಇಷ್ಟೇ ಅಲ್ಲ: ಅವಳ ಜಯಂತ್ಯುತ್ಸವವು ಕೂಡ ಬಹಳ ಕ್ಶೇ ವಿಜೃಂಭಣೆಯಿಂದ ಇತ್ತಿತ್ತಲಾಗಿ ಕರ್ನಾಟಕದ ಹಲವು ಸ್ಥಳಗಳಲ್ಲಿ ಜರುಗುತ್ತಿರುವುದು. ಈ ಎಲ್ಲ ಕಾರಣಗಳಿಂದ ಮಹಾದೇವಿಯಕ್ಕನು ಒಬ್ಬ ಸಾಮಾನ್ಯ ವ್ಯಕ್ತಿಯಲ್ಲವೆಂದು ಕಂಡುಬರುತ್ತದೆ. ಅವಳು ಸಾಮಾನ್ಯ ಮನೆತನದಲ್ಲಿ ಹುಟ್ಟಿದರೂ ಸಹ ತನ್ನ ಅಸಾಮಾನ್ಯ ಉಜ್ವಲ ಮತ್ತು ದಿವ್ಯ ಚರಿತ್ರದಿಂದ ಕೇವಲ ಕನ್ನಡಿಗರಷ್ಟೇ ಅಲ್ಲದೆ ಇಡೀ ಭರತಖಂಡದ ಮಹಿಳೆಯರಿಗೂ ಮತ್ತು ಪುರುಷರಿಗೂ ಆದರ್ಶಪ್ರಾಯಳಾಗಿರುತ್ತಾಳೆ,

ಉಜ್ವಲವಾದ, ಉದಾತ್ತವಾದ, ಪರಮಪವಿತ್ರವಾದ ಧೀರ ಗಂಭೀರವಾದ, ತೇಜೋಪುಂಜವಾದ ಜೀವನದಿಂದ ಮಹಾದೇವಿಯಕ್ಕನು ಮಹಾ ಪುಣ್ಯಾತ್ಮಳಾಗಿ ಎಲ್ಲರಿಗೂ ಪರಮಪೂಜ್ಯಳಾಗಿದ್ದಾಳೆ. ಆಕೆಯ ಜೀವನದಲ್ಲಿ ಬ್ರಹ್ಮಚರ್ಯದ ತೇಜಸ್ಸು ಓಜಸ್ಸು ಉಕ್ಕುತ್ತಿರುವುದರಿಂದ ಅಂಥ ಅವಳ ಪವಿತ್ರವಾದ ಹೃದಯದಿಂದ ಹೊರಹೊಮ್ಮಿದ ವಚನಗಳಲ್ಲಿಯಾದರೂ ಆ ತೇಜಸ್ಸು ಓಜಸ್ಸು ತುಂಬಿ ತುಳುಕುತ್ತವೆ. ಈ ತರದ ಜೀವನದಿಂದ ಅವಳು ಒಬ್ಬ ಪ್ರತಿಭಾಸಂಪನ್ನಳಾದ ರಸಿಕಳೂ ಆಗಿದ್ದಾಳೆ. ಅವಳ ದಿವ್ಯ ವಚನಗಳೂ ಕನ್ನಡ ಸಾಹಿತ್ಯದಲ್ಲಿ ದಿವ್ಯ ಅಮೃತದ ಬಿಂದುಗಳಂತೆ ಮಾಧುರ್ಯವನ್ನು ಒಳಗೊಂಡಿವೆ. "ಕಲಾರಮಣಿಯು ಅಂತರಂಗದಲ್ಲಿ ತಪಸ್ವಿನಿ ಬಹಿರಂಗದಲ್ಲಿ ತೇಜಸ್ವಿನಿ" ಯೆಂದು ಕರ್ನಾಟಕ ಅಧುನಿಕ ಕವಿವರ್ಯರಾದ ಕೆ. ವಿ. ಪುಟ್ಟಪ್ಪನವರು ಹೇಳಿರುವುದನ್ನು ನೋಡಿದರೆ ಮಹಾದೇವಿಯಕ್ಕನೂ ಸಹ ಕಲೋಪಾಸಕಳಾದ ತಪಸ್ವಿನಿಯು. ಆದರೆ ಕಲೋಪಾಸನೆಯನ್ನು ಮಾಡಬೇಕೆಂದು ಅವಳ ಉದ್ದೇಶವಿರಲಿಲ್ಲ. ಆದರೆ ಅವಳು ಕೈಕೊಂಡ ಉಜ್ವಲವಾದ ಜೀವನವೇ ವಚನಗಳ ಮೂಲಕ ಕಲೋಪಾಸನೆಯನ್ನು ಸಹಜವಾಗಿಯೇ ಮಾಡಿಸಿತು. ಆಕೆಯ ಜೀವನವೆಲ್ಲ ಆಕೆಯ ವಚನಗಳಿಂದ ವ್ಯಕ್ತವಾಗುತ್ತದೆ. ಹೀಗೆ ಆಕೆಯ ದಿವ್ಯ ವಚನಗಳು ಮತ್ತು ಉಜ್ವಲ ಜೀವನವು ಇವು ಎರಡೂ ಕೂಡಿ ಒಂದನ್ನೊಂದು ಅಗಲದಂತೆ ಗಂಗಾ ಯಮುನಾ ನದಿಗಳ ಪ್ರವಾಹಗಳ ಸಂಯೋಗದಂತೆ ಕೂಡಿಯೇ ಸ್ಫೂರ್ತಿಯಿಂದ ಹರಿಯುತ್ತವೆ. ಜೀವನವಿದ್ದಂತೆ ಸಾಹಿತ್ಯ, ಸಾಹಿತ್ಯದಂತೆ ಜೀವನ ಎಂಬ ಮಾತು ಇಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಆಕೆಯ ವಚನಗಳು ತತ್ವ ಗರ್ಭಿತವೂ ಅರ್ಥಗರ್ಭಿತವೂ ಮತ್ತು ಭಾವಗರ್ಭಿತವೂ ಇರುತ್ತವೆ. ಆಕೆಯು ಪರಮಾತ್ಮನ ಮೇಲೆ ಮೋಹವುಳ್ಳವಳಾಗಿ ಆತನನ್ನು ಕಾಣಲು ಇಚ್ಛಿಸಿ, ಹಲುಬಿ ಹಂಬಲಿಸಿ, ಬಳಲಿ ಬೆಂಡಾಗಿ ಮೊರೆಯಿಟ್ಟು ಕರಿಯುವುದನ್ನೂ ಮುಂದೆ ಒಮ್ಮೆ ಅವನ ದರ್ಶನವಾಯಿತೆಂದೂ ತೋರಿಸುವ ಕೆಲವು ಈಕೆಯ ವಚನಗಳು ಡಾ. ರವೀಂದ್ರನಾಥ ಟಾಗೋರರವರ ಗೀತಾಂಜಲಿ [Gitanjali] ಯೊಳಗಿನ ಕವನಗಳಿಗೆ ಹೋಲುತ್ತವೆ. ಬಸವೇಶ್ವರ ಮೊದಲಾದವರ ವಚನಗಳಂತೆ ಈಕೆಯ ವಚನಗಳಾದರೂ ಸರಳವಾದ ಸರಸವಾದ ಮೃದುಮಧುರವಾದ ಶಬ್ದಗಳಿಂದ ಕೂಡಿ ಸಣ್ಣ ಸಣ್ಣ ವಾಕ್ಯಗಳಾಗಿ ಕಾವ್ಯಾಂಶಗಳಿಂದ ಕೂಡಿದ್ದರಿಂದ ಕಾವ್ಯಮಯವಾದ ಗದ್ಯದಲ್ಲಿದ್ದು ಕನ್ನಡ ಗದ್ಯ ಸಾಹಿತ್ಯಕ್ಕೆ ತಳಹದಿಯಾಗಿ ಇಡೀ ಕನ್ನಡ ಸಾಹಿತ್ಯದಲ್ಲಿ ಅಪೂರ್ವವಾದ ದಿವ್ಯ ಕಾಂತಿಯಿಂದ ಹೊಳೆಯುತ್ತವೆ. ಇವುಗಳನ್ನು ಓದುವಾಗ ಶಬ್ದಮಾಧುರ್ಯವು ಸಹಜವಾಗಿಯೇ ಹೊರಡುತ್ತದೆ. ಉಪಮೆಗಳನ್ನು ಉಪಯೋಗಿಸುವಾಗ ಇವಳು ಕವಿ ಕಾಲಿದಾಸನನ್ನು ಕೂಡ ಸರಿಗಟ್ಟುವಳು. ಈ ಎಲ್ಲ ಕಾರಣಗಳಿಂದ ಮಹಾದೇವಿಯಕ್ಕನಿಗೆ ಕನ್ನಡ ಸಾಹಿತ್ಯದಲ್ಲಿ ಒಂದು ವಿಶಿಷ್ಟ ಸ್ಥಾನವು ಅದೆ. ಮಾದರಿಗಾಗಿ ಇನ್ನೂ ಕೆಲವು ವಚನಗಳನ್ನು ನೋಡಬಹುದು,

"ನೆಲದ ಮರೆಯ ನಿಧಾನದಂತೆ, ಫಲದ ಮರೆಯ ರುಚಿಯಂತೆ, ಸಿಲೆಯ ಮರೆಯ ಹೇಮದಂತೆ, ತಿಲದ ಮರೆಯ ತೈಲದಂತೆ, ಭಾವದ ಮರೆಯ ಬ್ರಹ್ಮವಾಗಿಪ್ಪ ಚನ್ನಮಲ್ಲಿಕಾರ್ಜುನನ ನಿಲವನಾರು ಅರಿಯಬಾರದು."

"ಚಂದನವ ಕಡಿದು ಕೊರೆದು ತೇದೊಡೆ, ನೊಂದೆನೆಂದು ಕಂಪ ಬಿಟ್ಟಿತ್ತೆ? ತಂದು ಸುವರ್ಣವ ಕಡಿದೊರೆದೊಡೆ, ಬೆಂದು ಕಳಂಕ ಹಿಡಿದಿತ್ತೆ? ಸಂದು ಸಂದು ಕಡಿದ ಕಬ್ಬನು ಗಾಣದಲಿಕ್ಕಿ ಬೆಂದು ಪಾಕಾಗುಳ್ಳ, ಸಕ್ಕರೆಯಾಗಿ ನೊಂದೆನೆಂದು ಕಂಪಬಿಟ್ಟಿತ್ತೆ? ನಾ ಹಿಂದೆ ಮಾಡಿದ ಹೀನಂಗಳೆಲ್ಲವ ತಂದು ಮುಂದಿಳುಹಲು ನಿಮಗೆ ಹಾನಿಯೇ? ಎನ್ನ ತಂದೆ ಚೆನ್ನ ಮಲ್ಲಿಕಾರ್ಜುನಯ್ಯ ಕೊಂದಡೆ ಶರಣೆಂಬುದ ಮಾಣೆ."

"ಅರಲು ಗೊಂಡ ಕೆರೆಗೆ ತೊರೆ ಬಂದು ಹಾಯ್ದಂತೆ, ಬರಲುಗೊಂಡ ಸಸಿಗೆ ಮಳೆ ಸುರಿವಂತಾಯಿತು ನೋಡಾ. ಇದೆ ಎನಗೆ ಇಹದ ಸುಖ, ಪರದ ಗತಿ, ನಡೆದು ಬಂದಂತಾಯಿತ್ತೆನಗೆ. ಚೆನ್ನಮಲ್ಲಿಕಾರ್ಜುನನೆಂಬ ಗುರುಪಾದವ ಕಂಡು ಧನ್ಯಳಾದೆನು."

"ಬಂಜೆ ಬೇನೆಯನರಿಯಳು. ಬಲದಾಯಿ ಮುದ್ದು ಬಲ್ಲಳೆ? ನೊಂದ ನೋವ ನೋಯದವರೆತ್ತ ಬಲ್ಲರು? ಚೆನ್ನಮಲ್ಲಿಕಾರ್ಜುನ ನೀನಿರಿದ ಅಲಗು ಒಡಲಲ್ಲಿ ಮುರಿದು ಹೊರಳುವಳ ನೀವೆತ್ತ ಬಲ್ಲಿರೆ ಎಲೆ ತಾಯಿಗಳಿರಾ?"

"ಹಣ್ಣು ಮೆದ್ದ ಬಳಿಕ ಆ ಮರವನಾರು ತರಿದರೇನು? ಹೆಣ್ಣು ಬಿಟ್ಟ ಬಳಿಕ ಆಕೆಯನಾರು ಕೂಡಿಕೊಂಡರೇನು? ಮಣ್ಣು ಬಿಟ್ಟ ಬಳಿಕ ಆ ಕೆಯ್ಯಿಯನಾರುತ್ತರೇನು? ಚೆನ್ನಮಲ್ಲಿಕಾರ್ಜುನನರಿದ ಬಳಿಕ ಆ ಕಾಯವ ನಾಯಿ ತಿಂದರೇನು? ನೀರ ಕುಡಿದರೇನು?"

ಆಕೆಯ ವಚನಗಳ ಮಹತ್ವವನ್ನು ಅವಳ ಜೀವಮಾನದಲ್ಲಿಯೇ ಕಂಡ ಚನ್ನಬಸವೇಶ್ವರನು,

# ಬನ್ನು ಮುತ್ತಿಗೆ.

## ಕಣ್ಣಿನಿಂದ ಕಂಡ ಕರುಣಾಜನಕ ಸ್ಥಿತಿ.

ಗಡಿನಾಡಿನಲ್ಲಿರುವ ಭರತಖಂಡದ ಕೊನೆಯ ನಗರವಾದ ಬನ್ನು ನಗರವನ್ನು ಮುತ್ತಿ ಅಲ್ಲಿಯ ಹಿಂದುಗಳ ಮನೆ ಅಂಗಡಿಗಳನ್ನು ಹಾಳುಮಾಡಿ ಲಕ್ಷಾಂತರ ರೂ. ಗಳ ನಷ್ಟವನ್ನುಂಟು ಮಾಡಿದ ಕರುಣ ಕಥೆಯನ್ನು ಸಮಕ್ಷಮ ಅಲ್ಲಿಗೆ ಹೋಗಿ ಅಲ್ಲಿಯ ನಿಜಸ್ಥಿತಿಯನ್ನು ತಿಳಿದುಕೊಂಡು ಬಂದ ಒಬ್ಬ ಮಹಾಶಯರು ಹಿಂದೀ ಮಿಲಾಪ ಪತ್ರಿಕೆಯಲ್ಲಿ ಪ್ರಕಟಿಸಿದ ಸಂಗತಿಗಳನ್ನು ಇದರಡಿಯಲ್ಲಿ ಕೊಟ್ಟಿದೆ.

"ಭಾರತದ ಕೊನೆಯ ನಗರವಾದ ಬನ್ನು ಮೇಲೆ ವಿದೇಶಿ ದಾಳಿಗಾರರು ಮಾಡಿದ ಆಕ್ರಮಣವನ್ನು ಅನೇಕರು ಸೂಕ್ಷ್ಮ ದೃಷ್ಟಿಯಿಂದ ವಿಚಾರಿಸದಿರುವುದು ತುಂಬಾ ವಿಷಾದಕರವಾಗಿದೆ. ದೂರ ಪ್ರಾಂತಗಳಲ್ಲಿರುವ ಅನೇಕರು "ಬನ್ನುದ ಮೇಲೆ ದಾಳಿಯಾದರೆ ನಮಗೇನು? ಅವರ ಕಷ್ಟನಷ್ಟಗಳಿಗೇಕೆ ನಾವು ದುಃಖಿಸಬೇಕು? ನಾವು ಮಾತ್ರ ಸುರಕ್ಷಿತವಾಗಿದ್ದರೆ ಸಾಕು" ಎಂದು ಯೋಚಿಸಬಹುದು. ಭಾರತೀಯರು ಈ ಸಂಕುಚಿತ ವಿಚಾರದಿಂದಲೇ ೧೭೦೦ ವರುಷಗಳಿಂದಲೂ ಸತ್ಯಾನಾಶವಾಗುತ್ತಿದ್ದಾರೆ. ಇಷ್ಟು ದುಃಖ ಪರಂಪರೆಗಳುಂಟಾದರೂ ಇನ್ನೂ ಭಾರತೀಯರಿಗೆ ಬುದ್ಧಿ ಬರದಿರುವುದು ದುಃಖದಾಯಕವು.

ಇಂಗ್ಲಿಷರು ಗಡಿಸೀಮೆಯನ್ನು ತಮ್ಮ ವಶಪಡಿಸಿಕೊಂಡಂದಿನಿಂದ ಬನ್ನು ಮೇಲೆ ಈ ವರೆಗೂ ಸುಲಿಗೆಯಾಗಿದ್ದಿತು. ಬನ್ನು ನಗರವು ಅತ್ಯಂತ ಸುರಕ್ಷಿತವಾದುದಾಗಿದೆ. ನಾಲ್ಕು ಕಡೆಗೂ ಗಟ್ಟಿಮುಟ್ಟಾದ ಕೋಟೆಯಗೋಡೆಗಳಿವೆ. ಸುತ್ತಲೂ ಕಂದಕವಿದೆ. ಅಲ್ಲಿ ಸಶಸ್ತ್ರ ಸಿಪಾಯರು ಯಾವಾಗಲೂ ಕಾಯುತ್ತಿರುವರು. ಎಲ್ಲ ಮಾರ್ಗಗಳ ಮೇಲೆಯೂ ಸಶಸ್ತ್ರ ಕಾವುಲುಗಾರರು ಇದ್ದೇ ಇರುತ್ತಾರೆ. ಯಾವ ಕಡೆಯಿಂದಲೂ ವೈರಿಗಳು ಪ್ರವೇಶಿಸಲು ಅನುಕೂಲವೇ ಇರುವುದಿಲ್ಲ. ಇಷ್ಟು ಸುರಕ್ಷಿತವಾಗಿರುವುದರಿಂದಲೇ ಇಲ್ಲಿ ಹಿಂದು ಶೀಖರು ಬಹು ಸಂಖ್ಯಾಕರಾಗಿ ವಾಸವಾಗಿದ್ದಾರೆ. ಬನ್ನು ನಗರದ ೩೦ ಸಾವಿರ ಜನಸಂಖ್ಯೆಯಲ್ಲಿ ಸಾಧಾರಣ ೨೨ ಸಾವಿರವಾದರೂ ಹಿಂದುಗಳು ಇರಬಹುದು. ಬನ್ನು ಸುತ್ತುಮುತ್ತಲಿನ ಗ್ರಾಮುಗಳಲ್ಲಿಯೂ ಹಿಂದುಗಳೇ ಹೆಚ್ಚಾಗಿ ವಾಸವಾಗಿದ್ದಾರೆ. ನೂರಾರು ವರುಷಗಳಿಂದಲೂ ಅವರು ಅಲ್ಲಿಯೇ ವಾಸವಾಗಿದ್ದಾರೆ. ಬನ್ನುದಲ್ಲಿ ಯಾವ ಪ್ರಕಾರ ಸುಲಿಗೆಯಾಯಿತು ? ಏಕೆ ಆಯಿತು?ಎಂಬುದನ್ನು ಅಲ್ಲಿಯ ನಿಜ ಸ್ಥಿತಿಯನ್ನು ತಿಳಿದುಕೊಳ್ಳಬೇಕೆಂಬ ಉದ್ದೇಶದಿಂದ ಬನ್ನುಕ್ಕೆ ಹೋಗಿದ್ದೆ. ಲಾಹೋರಿನಿಂದ ಬನ್ನು ನಗರವು ೩೭೫ ಮೈಲುಗಳ ಅಂತರದಲ್ಲಿದೆ. ಅಲ್ಲಿ ನಾನು ಕಂಡು ಕೇಳಿದ ಸಂಗತಿಗಳು ಅತ್ಯಂತ ಮಹತ್ವದವುಗಳಿದ್ದು ಅವುಗಳನ್ನು ಸಂಕ್ಷಿಪ್ತವಾಗಿ ಈ ಕೆಳಗೆ ವಿವರಿಸಿದ್ದೇನೆ.—

(೧) ಗಡಿಸೀಮೆಯು ೩೫೦ ಮೈಲು ವಿಸ್ತಾರವಾಗಿದೆ. ಅದರಾಚೆಗೆ ಲಕ್ಷಾಂತರ ಶಸ್ತ್ರಧಾರಿಗಳಾದ ಪಠಾಣರು ವಾಸವಾಗಿದ್ದಾರೆ. ಇವರು ಯಾವ ರಾಜ್ಯದಾಡಳಿತಕ್ಕೂ ಒಳಪಟ್ಟಿರುವುದಿಲ್ಲ. ಅವರೆಲ್ಲರೂ ಸ್ವತಂತ್ರರಾಗಿದ್ದಾರೆ. ಒಂದೊಂದು ಪರಿವಾರದವರು ಒಂದೊಂದು ಆಡಳಿತಕ್ಕೆ ಒಳಗಾಗಿದ್ದಾರೆ. ಇವರ ಹತ್ತಿರ ಬಂದೂಕು, ತೋಫು, ಮೊದಲಾದ ಭಯಂಕರ ಶಸ್ತ್ರಗಳು ಇರುತ್ತವೆ. ಭರತಖಂಡದ ಮೇಲೆ ಈ ವರೆಗಾದ ಪ್ರತಿಯೊಂದು ದಾಳಿಗಳ ಜೊತೆಗೆ ಇವರೂ ಬಂದು ಮನಬಂದಂತೆ ಸುಲಿದುಕೊಂಡು ಹೋಗಿದ್ದಾರೆ. ಇಂಗ್ಲಿಷರ ಆಳ್ವಿಕೆ ಪ್ರಾರಂಭವಾದಂದಿನಿಂದ ಸಣ್ಣ ಸಣ್ಣ ದರೋಡೆ ಮಾಡುತ್ತ ಭಾರತದ ಕೋಟ್ಯಾಂತರ ರೂ. ಗಳ ಭತ್ತೆ, ವೇತನ ಹೊಂದುತ್ತ ಇವರು ಕಾಲಕಳೆಯುತ್ತಿದ್ದಾರೆ.

(೨) ಗಡಿನಾಡು ಪ್ರಾಂತದ ಮುಸಲ್ಮಾನರು ಮೊದಮೊದಲು ತಮ್ಮ ನೆರೆಹೊರೆಯ ಹಿಂದುಗಳ ರಕ್ಷಣೆಮಾಡುವುದು ತಮ್ಮ ಕರ್ತವ್ಯವೆಂದು ಭಾವಿಸುತ್ತಿದ್ದರು. ಮತ್ತು ಆಕ್ರಮಣಮಾಡುವವರಿಂದ ಉಳಿಸಿಕೊಳ್ಳುತ್ತಿದ್ದರು. ಆದರೆ ಈಗಿನ ಸ್ಥಿತಿಯು ವಿಪರೀತವಾಗಿದೆ. ಪರ ಪ್ರಾಂತಗಳಿಂದ ಬರುವ ದರೋಡೆಖೋರರಿಗೆ ಬ್ರಿಟಿಶ್ ಪ್ರಾಂತದ ಅನೇಕ ಮುಸಲ್ಮಾನರೂ ಕೂಡಿಕೊಳ್ಳುತ್ತಿದ್ದಾರೆ. ಅವರಿಗೆ ವಾಸವಾಗಿರಲು ಸ್ಥಳಕೊಟ್ಟು ಊಟಮಾಡಿಸಿ ಎಲ್ಲ ತರಹದ ಸಂಗತಿ ತಿಳಿಸಿಕೊಡುತ್ತಾರೆ. ಸಮಯ ಸಿಕ್ಕಾಗ ಸುಲಿಗೆಯಲ್ಲಿಯೂ ಭಾಗಿಗಳಾಗುತ್ತಾರೆ.

(೩) ಬೇರೆ ಪ್ರಾಂತಗಳಿಂದ ಬರುವ ಸುಲಿಗೆಗಾರರನ್ನು ತಡೆಯುವ ಅನೇಕ ಮುಸಲ್ಮಾನ ಸಂಸ್ಥಾನಗಳನ್ನು ಕಾಂಗ್ರೆಸ್ ಸರಕಾರವು ಪ್ರತಿಬಂಧಗೊಳಿಸಿದೆ. ಕಾಂಗ್ರೆಸ್ ಸರಕಾರದವರ ಮತ್ತು ಖಾನ ಅಬ್ದುಲ್ ಗಫಾರಖಾನರ ಖುದಾಯಿ ಖಿದ್‌ಮತ್‌ಗಾರರ ಸೈನ್ಯದ ಸಂಪೂರ್ಣ ಬೆಂಬಲವೂ ಪರಪ್ರಾಂತದ ಪಠಾಣರ ಮೇಲಿದೆ.

(೪) ಸುಲಿಗೆಗಳಲ್ಲಿ ಕೇವಲ ಹಿಂದು ಮತ್ತು ಶೀಖರನ್ನೇ ಸುಲಿಯುತ್ತಾರೆ. ಮುಸಲ್ಮಾನರನ್ನು ಸ್ವಲ್ಪಾದರೂ ಕೆಣಕುವುದಿಲ್ಲ. ಬನ್ನು ಸುಲಿಗೆಯಲ್ಲಿ ಮತ್ತು ಧರ್ಮಶೀಲ ಬಾಜಾರಿನಲ್ಲಾದ ಸುಲಿಗೆಗಳಲ್ಲಿ ಕೇವಲ ಹಿಂದು ಜನಗಳನ್ನೇ ಕೊಲೆಸುಲಿಗೆಗಳಿಗೀಡು ಮಾಡಿದ್ದಾರೆ.

(೫) ಬನ್ನುವಿನ ಕೊಲೆಸುಲಿಗೆಗಳಿಂದ ಆ ಭಾಗದ ಹಿಂದುಗಳೆಲ್ಲರೂ ಭಯಭೀತರಾಗಿ ಹೋಗಿದ್ದಾರೆ. ಅಲ್ಲಿ ವಾಸವಾಗಿರಲು

---

"ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ, ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ, ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ, ಅಜಗಣ್ಣನ ಐದು ವಚನಕ್ಕೆ ಕೂಡಲ ಚೆನ್ನಸಂಗಯ್ಯನಲ್ಲಿ ಮಹಾದೇವಿಯಕ್ಕಗಳ ಒಂದು ವಚನ ಕಾಣಾ ಸಿದ್ಧರಾಮಯ್ಯ"

ಎಂದು ಹೇಳಿದ ಮಾತು ಆಕೆಯ ಮುಖಸ್ತುತಿಯ ಅತ್ಯುಕ್ತಿಯಲ್ಲ; ಆದರೆ ವಿಮರ್ಶಾತ್ಮಕ ವಿಚಾರಪೂರ್ವಕವಾದ ಅಭಿಪ್ರಾಯವು.

ಮಹಾದೇವಿಯಕ್ಕನು ವಿರಕ್ತಳಾಗಿ ತಪಸ್ವಿನಿಯಾದರೂ ಜೀವನವು ತುಚ್ಛವೆಂಬವಳಲ್ಲ. ಈ ಜಗತ್ತು ಪರಮಾತ್ಮನದು. ಇದರ ಜೀವನವು ಪರಮಾತ್ಮನದು. ಆದುದರಿಂದ ಜೀವನದಲ್ಲಿ ನಮಗೆ ಆದರಗೌರವಗಳಿರಬೇಕು. ಜೀವನವು ಕೆಡುಕಲ್ಲ. ದೇಹವನ್ನೂ ಮನಸ್ಸನ್ನೂ ಪರಿಶುದ್ಧವಾಗಿಟ್ಟುಕೊಂಡು ಪೌರುಷದಿಂದಲೂ ತೇಜಸ್ಸಿನಿಂದಲೂ, ಯಾವಾಗಲೂ ನಗುಮುಖದಿಂದಲೂ ಜೀವಿಸಬೇಕೆಂಬ ಜೀವನೋತ್ಸಾಹವು ಆಕೆಯ ದಿವ್ಯ ವಚನಗಳಿಂದಲೂ ಉಜ್ವಲವಾದ ಜೀವನದಿಂದಲೂ ಧ್ವನಿತವಾಗುತ್ತದೆ.

# ಮೈಸೂರು ಮುಸ್ಲಿಂಮರ ಸಮ್ಮೇಳನದಲ್ಲಾದ ನಿರ್ಣಯಗಳು.

ಅಖಿಲ-ಮೈಸೂರು ಮುಸ್ಲಿಂಲೀಗಿನ ಪ್ರಥಮ ಅಧಿವೇಶನವು ಶ್ರೀ. ಮಹಮ್ಮದ ಷರೀಫರ ಅಧ್ಯಕ್ಷತೆಯಲ್ಲಿ ಕೆಲವು ನಿರ್ಣಯಗಳನ್ನು ಅಂಗೀಕರಿಸಿತು.

ಮುಖ್ಯವಾದ ನಿರ್ಣಯಗಳಿವು—

೧ ಮೈಸೂರಿನ ಶ್ರೀಮನ್ಮಹಾರಾಜರವರಿಗೂ ಅವರ ಸಿಂಹಾಸನಕ್ಕೂ ಅಖಿಲ-ಮೈಸೂರು ಮುಸ್ಲಿಂಲೀಗು ತನ್ನ ರಾಜಭಕ್ತಿಯನ್ನು ವ್ಯಕ್ತಪಡಿಸುತ್ತದೆ. ಮತ್ತು ಶ್ರೀಮನ್ಮಹಾರಾಜರವರು ಸಕಲ ಸೌಲಭ್ಯಗಳೊಡನೆ ದೀರ್ಘ ಕಾಲ ರಾಜ್ಯಭಾರ ಮಾಡಲೆಂದು ಆಶಿಸುತ್ತದೆ.

೨ ಈಗ ಉಂಟಾಗಿರುವ ರಾಜಕೀಯ ಅಲ್ಲೋಲಕಲ್ಲೋಲ ಮತ್ತು ಅಶಾಂತಿಯ ಸಂದರ್ಭದಲ್ಲಿ ಸಂಸ್ಥಾನದ ಮುಸ್ಲಿಂಮರು ವ್ಯವಸ್ಥೆಗೊಂಡು ಐಕ್ಯರಾಗಿ ತಮ್ಮ ಹಿತವನ್ನು ಸಾಧಿಸಿಕೊಳ್ಳುವುದು ಅಗತ್ಯವಾಗಿದೆ. ಅವರೆಲ್ಲರೂ ಮುಸ್ಲಿಂಲೀಗ್ ಆಶ್ರಯದಲ್ಲಿ ಸೇರಿ ತಮ್ಮ ಹಿತವನ್ನು ಸಾಧಿಸಿಕೊಳ್ಳಬೇಕು. ಮುಸ್ಲಿಂಲೀಗಿನ ಕೇಂದ್ರ ಕಚೇರಿಯು ಬೆಂಗಳೂರಿನಲ್ಲಿರಬೇಕು. ಪ್ರತಿ ಜಿಲ್ಲಾ ಕೇಂದ್ರದಲ್ಲಿಯೂ ಮತ್ತು ಪ್ರತಿತಾಲೂಕು ಮತ್ತು ಹೋಬಳಿ ಕೇಂದ್ರದಲ್ಲಿಯೂ ಗ್ರಾಮಗಳಲ್ಲಿಯೂ ಲೀಗಿನ ಶಾಖೆಗಳು ಸ್ಥಾಪಿತವಾಗಬೇಕು. ಜಿಲ್ಲಾ ಲೀಗುಗಳೂ ಕೇಂದ್ರ ಲೀಗುಗಳೂ, ತಾಲೂಕು, ಹೋಬಳಿ ಮತ್ತು ಗ್ರಾಮ ಲೀಗುಗಳೂ ಜಿಲ್ಲಾ ಲೀಗಿಗೂ ನೇರವಾಗಿ ಸಂಬಂಧಪಟ್ಟಿರಬೇಕು.

೩ ರಾಜಕೀಯ ಸುಧಾರಣೆಗೆ ಒಪ್ಪಿಸಲು ಉಪಸಮಿತಿಯು ರಚಿಸಿರುವ ಮೆಮೋರಾಂಡಮ್ಮನ್ನು ಈ ಸಮ್ಮೇಳನವು ಸಮರ್ಥಿಸುತ್ತದೆ. ಈ ಮೆಮೋರಾಂಡಂನಲ್ಲಿರುವ ಅಂಶಗಳು ಮತ್ತು ಪ್ರತ್ಯೇಕ ಚುನಾವಣೆ ವ್ಯವಸ್ಥೆ ಇವು ಮುಸ್ಲಿಂಮರ ಕನಿಷ್ಟ ಅಪೇಕ್ಷೆ ಎಂಬುದನ್ನು ಈ ಸಮ್ಮೇಳನವು ಸೂಚಿಸುತ್ತದೆ.

೪ ಶ್ಯಾಮಗೊಂಡಲು ಪೌರ ಸಭೆಯು ಮುಸ್ಲಿಂಮರು ಮಾಂಸ ಉಪಯೋಗಿಸಿಕೊಳ್ಳುವ ಅಧಿಕಾರವನ್ನು ಸಂಕುಚಿಸಿರುವುದನ್ನು ಈ ಸಮ್ಮೇಳನವು ಆಕ್ಷೇಪಿಸುತ್ತದೆ. ಈ ಅಧಿಕಾರವನ್ನು ಸಂಕುಚಿತಗೊಳಿಸಲು ಮಾಡಿರುವ ನಿರ್ಣಯವನ್ನು ಸರಕಾರದವರಾದರೂ ಪ್ರವೇಶಿಸಿ ರದ್ದುಗೊಳಿಸಬೇಕೆಂದೂ ಇಲ್ಲದಿದ್ದರೆ ಶಾಂತಿಭಂಗವಾಗುವದೆಂಬ ಶಂಕೆಯಿದೆಯೆಂದೂ ಈ ಸಮ್ಮೇಳನವು ಸೂಚಿಸುತ್ತದೆ.

೫ ಈ ಸಮ್ಮೇಳನವು ಚನ್ನಪಟ್ಟಣ, ಕಲ್ಯಾಣಿ ಮುಂತಾದವುಗಳಲ್ಲಿ ಇತ್ತೀಚೆಗೆ ಉಂಟಾದ ಕೋಮುವಾರು ಘರ್ಷಣವನ್ನು ಖಂಡಿಸುತ್ತದೆ. ಈ ಸಂಬಂಧವಾಗಿ ಮುಸ್ಲಿಂಮರಿಗೆ ಉಂಟಾದ ಪ್ರಾಣ ಮತ್ತು ಧನಹಾನಿಗಾಗಿ ವಿಷಾದಪಡುತ್ತದೆ. ಇದಕ್ಕೆ ಕಾರಣರಾದವರನ್ನು ಪರಿಣಾಮವು ಉಗ್ರವಾದೀತೆಂದು ಎಚ್ಚರಿಸುತ್ತದೆ. ಮತ್ತು ಮುಸ್ಲಿಂಮರಿಗೆ ಇರಬಹುದಾದ ಕುಂದುಕೊರತೆಗಳನ್ನು ಮುಸ್ಲಿಂಲೀಗಿನ ಗಮನಕ್ಕೆ ತರಬೇಕೆಂದು ಕೋರುತ್ತದೆ.

೬ ಜನರ ವಿವಾಹ, ಮರಣ ಮುಂತಾದ ಸಮಯಗಳಲ್ಲಿ ಮುಸ್ಲಿಂಮರು ಖರ್ಚು ಮಾಡುತ್ತಿರುವ ಹಣವು ವಿಪರೀತವಾದುದೆಂದೂ ಸಮಾಜದ ಈ ಅಧಿಕ ವ್ಯಯವನ್ನು ನಿಲ್ಲಿಸಬೇಕೆಂದೂ ಈ ಖರ್ಚು ಇಸ್ಲಾಂ ತತ್ವಕ್ಕೆ ವಿರೋಧವೆಂದೂ ಈ ಸಮ್ಮೇಳನವು ಅಭಿಪ್ರಾಯಪಡುತ್ತದೆ.

೭ ಮುಸ್ಲಿಂಮರು ಇಲ್ಲಿಯವರೆಗೆ ಧರಿಸುತ್ತಿರುವ ಬೆಲೆ ಬಾಳುವ ವಸ್ತ್ರಗಳನ್ನು ತೊರೆದು ಸರಳವಾದ ಉಡುಪನ್ನು ಧರಿಸಿ ಕೋಮಿನ ಆರ್ಥಿಕ ಪ್ರಗತಿಗೆ ಕಾರಣರಾಗಬೇಕೆಂದು ಈ ಸಮ್ಮೇಳನವು ಅಪೇಕ್ಷಿಸುತ್ತದೆ.

೮ ಈ ಸಮ್ಮೇಳನವು ಪ್ಯಾಲಸ್ಟೈನಿನಲ್ಲಿ ಅರಬ್ಬರಿಗೆ ಬ್ರಿಟಿಷರಿಂದ ಆಗುತ್ತಿರುವ ತೊಂದರೆಗಾಗಿ ವಿಷಾದಪಡುತ್ತದೆ. ಬ್ರಿಟಿಷರ ನೀತಿಯನ್ನು ಖಂಡಿಸುತ್ತದೆ. ಮತ್ತು ಅಲ್ಲಿಯ ಅರಬ್ಬರಿಗೆ ಸಹಾನುಭೂತಿಯನ್ನು ತೋರಿಸುವ ಸಲುವಾಗಿ ಸಂಸ್ಥಾನದ ಮುಸ್ಲಿಮರು ಅಗಸ್ಟ ೨೮ ರಲ್ಲಿ ಪ್ಯಾಲಸ್ಟೈನ್ ದಿನವನ್ನು ಆಚರಿಸಬೇಕೆಂದು ಸೂಚಿಸುತ್ತದೆ.

೯ ಸಂಸ್ಥಾನದಲ್ಲಿ ಮುಸ್ಲಿಂ ಬಾಲಕರ ಮತ್ತು ಬಾಲಕಿಯರ ಪ್ರೈಮರಿ ಶಾಲೆಗಳಲ್ಲಿ ಕುಳಿತುಕೊಳ್ಳುವ ಸೌಕರ್ಯ ಕಡಿಮೆಯಾಗಿರುವದು. ನೈರ್ಮಲ್ಯದ ವ್ಯವಸ್ಥೆ, ಧಾರಾಳವಾದ ಗಾಳಿ, ಬೆಳಕಿನ ಕೊರತೆ ವಿದ್ಯಾಭ್ಯಾಸದ ಸಾಮಗ್ರಿಗಳು ಸಾಲದಾಗಿರುವವು, ಕಟ್ಟಡಗಳೇ ಶಾಲೆಗಳಿಗೆ ಅಯೋಗ್ಯವಾಗಿರುವವು, ಇಂತಹ ತೊಂದರೆಗಳನ್ನು ಕೂಡಲೇ ಸಂಪಡಿಸಬೇಕೆಂದು ಈ ಸಮ್ಮೇಳನವು ಸರಕಾರವನ್ನು ಪ್ರಾರ್ಥಿಸುತ್ತದೆ.

ಯುನಾನಿ ವೈದ್ಯಕ್ಕೆ ಹೆಚ್ಚು ಸೌಕರ್ಯವಿರಬೇಕೆಂದೂ ಸರಕಾರಿ ಮತ್ತು ಉಪಸರಕಾರಿ ಉದ್ಯೋಗಗಳಲ್ಲಿ ಮುಸ್ಲಿಂಮರಿಗೆ ಇನ್ನೂ ಹೆಚ್ಚಿನ ಸ್ಥಾನಗಳಿರಬೇಕೆಂದೂ ಮಶೀದಿಗಳ ಮುಂಭಾಗದ ಕಲ್ಲಿನ ಮೇಲೆ "ಆತ್ಮಗೌರವಕ್ಕೆ ಕೊರತೆಯಾಗುವಂತಹವನ್ನು" ಕೆತ್ತಬೇಕೆಂದು ಇರುವ ನಿಬಂಧನೆಗಳನ್ನು ವಜಾ ಮಾಡಬೇಕೆಂದೂ ವಿಶ್ವ ವಿದ್ಯಾನಿಲಯದಲ್ಲಿ ಉರ್ದು ಪ್ರೊಫೆಸರರನ್ನು ನೇಮಿಸಬೇಕೆಂದೂ ಉರ್ದು ವ್ಯಾಸಂಗಕ್ಕೆ ವಿಶೇಷ ವಿದ್ಯಾರ್ಥಿ ವೇತನಗಳನ್ನು ಇಡಬೇಕೆಂದೂ ಈಗ ಇರುವ ಭಾರತ ಇತಿಹಾಸ ಪುಸ್ತಕಗಳಲ್ಲಿ ಕೋಮುವಾರು ಭಾವನೆ ಇರುವುದರಿಂದ ಈ ಭಾವನೆ ಇಲ್ಲದಂತಹ ಮತ್ತು ಸತ್ಯಾಂಶಗಳನ್ನೇ ಒಳಕೊಂಡ ಪುಸ್ತಕಗಳಿಗೆ ಸ್ಥಾನವನ್ನು ಕೊಡಬೇಕೆಂದೂ ಬೆಂಗಳೂರು ಪಬ್ಲಿಕ್ ಲೈಬ್ರರಿಯಲ್ಲಿ ಉರ್ದು ಪುಸ್ತಕಗಳನ್ನು ಹೇರಳವಾಗಿಡಬೇಕೆಂದೂ ಮೈಸೂರು ಆಕಾಶವಾಣಿಯಿಂದ ಉರ್ದು ವಿಷಯಗಳು ತಿಳಿಸಲ್ಪಡಬೇಕೆಂದೂ ಈ ಮುಸ್ಲಿಂ ಲೀಗು ಉರ್ದು ಭಾಷೆಯ ಪ್ರಚಾರವನ್ನು ನಡೆಸಲು ಔರಂಗಾಬಾದಿನ ಅಂಜುಮಾನ-ಇ-ತಾರಕ್ಕಿ-ಯೊಡನೆ ವ್ಯವಹಾರ ನಡೆಸಬೇಕೆಂದೂ ನಿರ್ಣಯಗಳಾದವು.

ವಿದ್ಯಾಶಾಖೆಯು ಹೈಸ್ಕೂಲುಗಳಿಗೆ ಹೆಚ್ಚು ಮುಸ್ಲಿಂ ಉಪಾಧ್ಯಾಯರನ್ನು ಸೇರಿಸಬೇಕೆಂದೂ ಮುಸ್ಲಿಂಮರಿಗಾಗಿ ಹೆಚ್ಚು ಮಿಡ್ಲ ಸ್ಕೂಲುಗಳನ್ನು ಸ್ಥಾಪಿಸಬೇಕೆಂದೂ ಮುಸ್ಲಿಂ ಬಾಲಕಿಯರ ಶಾಲೆಗಳಿಗೆ ಮುಸ್ಲಿಂ ಮುಖ್ಯೋಪಾಧ್ಯಾಯರನ್ನೇ ನೇಮಿಸಬೇಕೆಂದೂ ನಿರ್ಣಯಗಳಾದವು.

'ತಾಯಿನಾಡು.'

---

ಕೂಡಾ ತುಂಬಾ ಹೆದರುತ್ತಿದ್ದಾರೆ. ಆದರೆ ಅಲ್ಲಿಂದ ಹೊರಟು ಹೋಗುವುದಾದರೂ ಎಲ್ಲಿಗೆ?

(೬) ಬನ್ನುದಲ್ಲಿ ೨೮ ಅಂಗಡಿಗಳನ್ನು ಸುಲಿದು ಸುಟ್ಟುಬಿಟ್ಟರು. ೬ ಜನ ಹಿಂದುಗಳನ್ನು ಕೊಲೆಮಾಡಿದರು. ಒಟ್ಟು ೫ ಲಕ್ಷ ರೂ. ಗಳ ಹಾನಿಯಾದಂತಾಗಿದೆ. ಬನ್ನುದಲ್ಲಿಯ ಜನಗಳು ೩ ಸಂಗತಿಗಳನ್ನು ಕೇಳಿಕೊಳ್ಳುತ್ತಿದ್ದಾರೆ, ಅವರಿಗಾದ ಹಾನಿಯನ್ನು ತುಂಬಿಕೊಡುವುದು, ಇನ್ನು ಮುಂದೆ ಇಂಥ ದುರ್ಘಟನೆ ಸಂಭವಿಸದಂತೆ ಎಚ್ಚರಿಕೆ ತೆಗೆದುಕೊಳ್ಳುವುದು, ಮತ್ತು ಯಾವ ಗ್ರಾಮದವರು ಸುಲಿಗೆಗಾರರಿಗೆ ಸಹಾಯಮಾಡುವರೋ ಅವರಿಗೆ ಶಿಕ್ಷೆ ವಿಧಿಸುವುದು, ಇವೇ ಮೂರು ಅಲ್ಲಿಯ ಹಿಂದುಗಳ ಬೇಡಿಕೆಗಳಾಗಿವೆ.

# ಜಾಹೀರ ವಿನಂತಿ.

ಶ್ರೀಮನ್ನಿರಂಜನ ಜಗದ್ಗುರು ಮುರಘಾರಾಜೇಂದ್ರ ಫ್ರೀ ಬೋರ್ಡಿಂಗ್ ಹಾವೇರಿಪೇಟೆ ಧಾರವಾಡ ಈ ಸಂಸ್ಥೆಯ ಚೇರ ಮನ್ನರು ತಿಳಿಸುವದೇನೆಂದರೆ---

ಈ ಸಂಸ್ಥೆಯ ವರ್ಷಾಶನ ಭಿಕ್ಷಾ ಧಾನ್ಯ ಇತರ ದೇಣಗಿ ಕೊಡುವ ಯಾವತ್ತೂ ಮಹನೀಯರು ಮೊದಲಿನಂತೆ ಸದರಿ ಸಂಸ್ಥೆಗೆ ಸ್ವ ಹಸ್ತ ಪರ ಹಸ್ತಗಳಿಂದ ಸಹಾಯಮಾಡಿ ಯಶೋಭಾಗಿಗಳಾಗಬೇಕು. ಈ ವಸೂಲಿಯ ಕೆಲಸದ ಮೇಲೆ ನಮ್ಮ ಸಂಸ್ಥೆಯ ವತಿಯಿಂದ ಮ|| ರಾ|| ಸಿದ್ಧರಾಮಯ್ಯ ಮಡಿವಾಳಯ್ಯ ವಡೆಯರಮಠ ಎಂಬುವವರನ್ನು ಕಳಿಸಿರುತ್ತದೆ. ಅವರಿಂದ ಸಂಸ್ಥೆಯ ನೇಮದ ಪ್ರಕಾರ ಕಾಯದೇಶೀರ ಜಾಮೀನ ಪತ್ರ ಸಹ ತೆಗೆದುಕೊಂಡಿರುತ್ತದೆ. ಅವರಿಗೆ ಹಣ ಕೊಟ್ಟು ಅವರ ಕಡೆಗೆ ಉಳಿಯುವ ಪಾವತೀ ಪತ್ರಿಕೆಗೆ ಹಣ ಕೊಟ್ಟ ಬಗ್ಗೆ ತಾವೂ ಸಹಿ ಮಾಡಬೇಕು. ಮತ್ತು ಅವರು ಕೊಡುವಂಥ ಪಾವತಿ ಬುಕ್ಕಿಗೆ ಚೇರಮನ್ನರ ಸಹಿ ಇರುತ್ತದೆ. ಆ ಸಹಿ ಇದ್ದ ಪಾವತಿಯನ್ನು ಅವರ ಕಡೆಯಿಂದ ಪಡೆಯಬೇಕು. ಅಂತಾ ವಿನಂತಿ ಅದೆ.

ಬಸಪ್ಪ ದೊಡ್ಡಫಕೀರಪ್ಪ ಲಕಮನಹಳ್ಳಿ.

---

## ಸಂಪಾದಕ 'ಶರಣ ಸಂದೇಶ' ಇವರ ಸನ್ನಿಧಿಗೆ—

ಸವಿನಯ ವಿಜ್ಞಾಪನೆಗಳು.

ತಮ್ಮ ತಾ. ೨೨-೮-೩೮ ನೇ ವಾರ ಪತ್ರಿಕೆಯಲ್ಲಿ 'ಕಾಂಗ್ರೆಸ್ ಪ್ರೇಮಿ" ಎಂಬೋರ್ವರು ವಸ್ತು ಸ್ಥಿತಿಯನ್ನು ವಿಪರ್ಯಾಸ ಮಾಡಿ ಬರೆದುದನ್ನು ನೋಡಿ ಆಶ್ಚರ್ಯಗೊಂಡು ನಿಜಸ್ಥಿತಿಯ ಸಾರವನ್ನು ಸ್ವಲ್ಪದರಲ್ಲಿಯೇ ಕೆಳಗೆ ಕೊಟ್ಟದೆ. ಅದನ್ನು ಸಂಪೂರ್ಣ ಸರ್ವರೂ ಅವಗಾಹಿಸಬೇಕಾಗಿ ಪ್ರಾರ್ಥನೆ.

ಇಲಕಲ್ಲ ಪುರ ಪ್ರಮುಖರು ನಗರ ಸಭೆಯಲ್ಲಿ ಹೋಗಬೇಕೆಂಬ ಉದ್ದೇಶದಿಂದ ಅವಿಶ್ರಾಂತ ಶ್ರಮಪಡುತ್ತಿರುವ ಕೆಲವು ಕಾಂಗ್ರೆಸ್ ತರುಣರ ಆಗ್ರಹದಿಂದ ದೇ. ಭ. ಸರದಾರ ವೀರನಗೌಡರನ್ನು ಪ್ರಮುಖ ಹಿರಿಯರನ್ನಾಗಿ ಇಟ್ಟುಕೊಂಡು ಅವರನ್ನು ಅಲ್ಲಿಗೆ ಆಗಾಗ್ಗೆ ಬರಮಾಡಿಕೊಂಡು ಅವರ ಮುಖಾಂತರವಾಗಿ ಶ್ರೀ. ಕಂಠಿ, ಶ್ರೀ. ಧೂಪದ ಮೊದಲಾದವರ ಕೂಡ ವಿಚಾರವಿನಿಮಯ ಮಾಡಿ ಸಂಪೂರ್ಣ ಎರಡು ದಿನ ಚರ್ಚೆಯಾದ ಮೇಲೆ ಸರದಾರ ವೀರನಗೌಡರು ಹೇಳಿಹೋದಂತೆ "ಸಿವ್ಹಿಲ್ ಬೋರ್ಡಿನವರು" ಸದರೀಯವರ ಸಲಹೆ ಮೇರೆಗೆ ಠರಾವನ್ನು ತಾರೀಖು ೧೨-೮-೩೮ ನೇ ದಿನ ಮಾಡಿದರು. ಹಾಗೆ ಠರಾವನ್ನು ಮಾಡುವ ಮುನ್ನಾ ದಿನ ಶ್ರೀ· ಸಕ್ರಿಯವರೂ ಸಿವ್ಹಿಲ್ ಬೋರ್ಡಿನ ಅಧ್ಯಕ್ಷರಾದ ಶ್ರೀ ಮರುಳಾರಾಧ್ಯ ಶಾಸ್ತ್ರಿಗಳೂ ಶ್ರೀ. ಧುಬೆ ಮೊದಲಾದವರು ಶ್ರೀ. ಬಳ್ಳೊಳ್ಳಿಯವರನ್ನು ಹುರಿಯಾಳಾಗಿ ನಿಲ್ಲಿಸುವುದು ಅತ್ಯಂತ ಯೋಗ್ಯವೆಂದು ಅಭಿಪ್ರಾಯಪಟ್ಟರು.

ಆದರೆ ಚುನಾವಣೆಗೆ ನಿಂತವರು ತಮ್ಮ ಖರ್ಚನ್ನು ತಾವೇ ವಹಿಸಬೇಕೆಂಬ ಧೋರಣವನ್ನು ಪುರ ಪ್ರಮುಖರು ಇಟ್ಟುಕೊಂಡದ್ದರಿಂದ ಅದಕ್ಕೆ ಮೇಲೆ ನಮೂದಿಸಿದ ಊರ ಹಿರಿಯರು ಒಪ್ಪದ್ದರಿಂದ ಅನಿವಾರ್ಯವಾಗಿ ಹಾಗೆ ನಿರ್ಣಯಮಾಡಿದರೆಂದು ತಿಳಿಯುತ್ತದೆ.

[illegible]

## ಶುದ್ಧೀ ಸಮಾರಂಭ.

ಮಿತಿ ಶ್ರಾವಣ ವ|| ೧೨ ಶಕೆ ೧೮೬೦ ತಾ. ೨೨-೮-೩೮ ನೆಯ ದಿವಸ ಶ್ರೀಮನ್ನಿರಂಜನ ಮಹಾದೇವಸ್ವಾಮಿ ಕರವೀರಮಠ ಬಾಗಲಕೋಟೆ ಇವರ ಸನ್ನಿಧಿಯಲ್ಲಿ ಶ್ರೀಮನ್ನಿರಂಜನ ರುದ್ರಸ್ವಾಮಿಗಳವರು ನಿಡಗುಂದಿ ಮತ್ತು ವಿಜಾಪುರದ ಶ್ರೀ ಮಾಚಿದೇವರು ಇವರು ಕುಂದ್ರಿಗಿ, ಯತ್ನಟ್ಟ, ಬಾಗಲಕೋಟೆ ಮೊದಲಾದ ಸ್ಥಳಗಳಲ್ಲಿಯ ಹಾಲಮತದ ಸಾಧಾರಣ ೨೫ ಕುಟುಂಬದವರಿಗೆ ವೀರಶೈವ ಮತದೀಕ್ಷೆಯನ್ನು ಬಾಗಲಕೋಟೆಯಲ್ಲಿ ಕೊಟ್ಟು ಸಹಭೋಜನ ಸಮಾರಂಭವನ್ನು ನೆರವೇರಿಸಿದರು. ಶ್ರೀ. ಸಿದ್ಧಪ್ಪ ಪಾಗಾದ, ಗಂಗಪ್ಪ ಕುಂದ್ರಿಗಿ, ಮತ್ತು ಪರಪ್ಪ ನಂದ್ಯಾಳ ಬಾಗಲಕೋಟೆ ಇವರೆಲ್ಲರೂ ತಮ್ಮ ಆಪ್ತ ಬಂಧು ಸಮೇತ ಶಿವಮತ ದೀಕ್ಷಾಹೊಂದಿ ತಮ್ಮ ಮನೆಯಲ್ಲಿ ಗಣಾರಾಧನೆ ಕೂಡಾ ಜರುಗಿಸಿದರು. ಸ್ತುತ್ಯ.

ಶ್ರೀ. ಬಸಯ್ಯ ಬಿಜಕಲ್ಲ.

---

## ಉ ದ ಗೀ ರ.

ಪ್ರತಿ ವರುಷದಂತೆ ಈ ವರುಷ ಇಲ್ಲಿಯ ಶ್ರೀಮಂತ ಶಂಕರಪ್ಪ ಚಿಲ್ಲರಗೆ ಇವರು 'ಶ್ರೀ ಶರಣ ಬಸವೇಶ್ವರ' ಪುರಾಣವನ್ನು ಶ್ರಾವಣ ಮಾಸದ ನಿಮಿತ್ತ ಹಚ್ಚಿದ್ದಾರೆ. ಶ್ರೀ. ಶಂಕರಯ್ಯ ಸ್ವಾಮಿಗಳು ಪುರಾಣವನ್ನು ಚೆನ್ನಾಗಿ ಓದುತ್ತಿದ್ದಾರೆ. ಶ್ರೀ ಗುರುಬಸವ ಸ್ವಾಮಿ ಚರಮೂರ್ತಿ ಹುಲಸೂರು ಇವರು ಬಹಳ ರಸವತ್ತಾಗಿ ವಿವರಿಸಿ ಹೇಳುತ್ತಿದ್ದಾರೆ. ದಿನಾಲೂ ಕೇಳಲು ೩೦೦-೪೦೦ ಜನರು ಸೇರುತ್ತಿದ್ದಾರೆ. ಶ್ರೀ. ಶಂಕರಪ್ಪ ಚಿಲ್ಲರಗೆಯವರಂತಹ ದಾನಶೂರ ದಾಸೋಹಪ್ರೇಮಿ ಸದ್ಭಕ್ತರು ಉದಗೀರಿಗೆ ದೊರೆತುದು ಸುದೈವವೇ ಸರಿ. ಈಶ್ವರನು ಇವರಿಗೆ ಇದೇ ರೀತಿ ಧರ್ಮಕಾರ್ಯ ಮಾಡುವಂತೆ ಸದ್ಬುದ್ಧಿಯನ್ನೀಯಲಿ.

ಓರ್ವ ವೀರಶೈವ.

---

## ವಚನ ಸಪ್ತಾಹ.

ಉದಗೀರಿಯ ವೀರಶೈವ ಸಮಾಜದಲ್ಲಿ ಶ್ರಾವಣ ವ|| ೮ ದಿಂದ ವಚನ ಸಪ್ತಾಹವು ಪ್ರಾರಂಭವಾಗಿದೆ. ಈಶ್ವರ, ದೀಕ್ಷಾ, ವೀರಶೈವರಲ್ಲಿ ಸ್ತ್ರೀಯರ ಸ್ಥಾನ, ಮಹೇಶಸ್ಥಲ, ವೀರಶೈವರೆಲ್ಲರೂ ಸಮಾನರು, ಜಾತಿಭೇದ, ಜಂಗಮಾಚರಣೆ ಮೊದಲಾದ ವಿಷಯಗಳನ್ನಿಟ್ಟದ್ದಾರೆ. ಜನರು ಹೆಚ್ಚಾಗಿ ಸೇರುತ್ತಿದ್ದು ವೀರಶೈವ ನಿಜತತ್ವಗಳ ಪ್ರಸಾರವಾಗುತ್ತಲಿದೆ.

ಇಲ್ಲಿಯ ಕೆರೆಯಲ್ಲಿ ಮೊನ್ನೆ ಈಸುವ ಕಾರ್ಯಕ್ರಮವನ್ನಿಟ್ಟದ್ದರು. ಇದರಲ್ಲಿ ಪ್ರೊ. ಸಿದ್ಧರಾಮಪ್ಪ ಫೂಲಾರೆ ಇವರೂ ಭಾಗವಹಿಸಿದ್ದರು. ೦||೦ ಮೈಲು ಸುತ್ತಳತೆಯುಳ್ಳ ಕೆರೆಯನ್ನು ಶ್ರೀ. ಲಿಂಗಪ್ಪ ಬಾಗಬಂದೆ ಇವರು ಮೂರು ಸುತ್ತುಹಾಕಿ ಇಲ್ಲಿಯ ರಿಕಾರ್ಡ ಬೀಟ್ ಮಾಡಿದರು.

ಸೆ- ವೀರಶೈವ ಸಮಾಜ.

## ಅಕ್ಕಮಹಾದೇವಿ

# ಭಗಿನಿ ಸಮಾಜ.

ಬಾಗಲಕೋಟೆಯಲ್ಲಿ ಅಕ್ಕಮಹಾದೇವಿ ಭಗಿನಿ ಸಮಾಜವು ಸ್ಥಾಪನೆಯಾಗಿ ನಾಲ್ಕಾರು ತಿಂಗಳಾಗುತ್ತಾ ಬಂದಿತು. ಹೆಣ್ಣುಮಕ್ಕಳಲ್ಲಿ ವಿದ್ಯಾಪ್ರಸಾರ, ಆರೋಗ್ಯ ರಕ್ಷಣೆ, ಹೆಣಿಕೆ, ಹೊಲಿಗೆ, ಮತ್ತು ಕೈಯಿಂದ ನೂತು ಬಟ್ಟೆ ಮಾಡಿಸಿಕೊಂಡು ಖಾದಿ ಧರಿಸುವುದೇ ಮೊದಲಾದ ಉಚ್ಚ ಧ್ಯೇಯಗಳನ್ನು ಈ ಸಮಾಜವು ಇಟ್ಟುಕೊಂಡಿದೆ. ಕೆಲವು ದಿವಸಗಳ ಹಿಂದೆ ಶ್ರೀಮತಿ ನಾಗವ್ವ ಪಾಟೀಲ ಎಂ. ಎಲ್. ಎ. ಮತ್ತು ಸರದಾರ ವೀರನಗೌಡರು ಇಲ್ಲಿಗೆ ಆಗಮಿಸಿದಾಗ್ಗೆ ಹುಬ್ಬಳ್ಳಿಯ ಆದಿಜನ ಬೋರ್ಡಿಂಗಿಗಾಗಿ ತೊಂಭತ್ತು ರೂ. ದೇಣಿಗೆಯಾಗಿ ಸಮಾಜದವರು ಕೊಟ್ಟರು. ಸರದಾರರು ಮತ್ತು ಶ್ರೀಮತಿಯವರು ನಮ್ಮ ಸಮಾಜಕ್ಕೆ ದರ್ಶನ ಕೊಟ್ಟು ಸ್ತ್ರೀಸಮಾಜ ಜಾಗೃತಿಯ ಬಗ್ಗೆ ಉಪದೇಶಮಾಡಿದರು.

ವಿಜಾಪುರ ಜಿಲ್ಲೆಯ ಕಲೆಕ್ಟರರ ಪತ್ನಿಯವರಾದ ಎಸ್. ಟಿ. ಕೊತವಾಲಾರವರು ನಮ್ಮ ಸಮಾಜಕ್ಕೆ ದರ್ಶನವನ್ನಿತ್ತು ತಮ್ಮ ಸಂತೋಷವನ್ನು ವ್ಯಕ್ತಮಾಡಿದ್ದಲ್ಲದೆ ನಮ್ಮ ಸಮಾಜದ ಮೆಂಬರರಾಗಿ ೮ ರೂ. ಗಳ ಕಾಣಿಕೆಯನ್ನು ಕೂಡಾ ಕೊಟ್ಟರು. ಈ ಬಗ್ಗೆ ಸಮಾಜದವರು ಮಿಸೆಸ್ ಕೊತವಾಲಾರವರಿಗೆ ತುಂಬಾ ಋಣಿಯಾಗಿದ್ದಾರೆ. ಈ ಸಮಾಜ ಸ್ಥಾಪನೆಯ ಕಾಲಕ್ಕೆ ಮಿಸ್ ಲಕ್ಷ್ಮಮ್ಮ ಬಳ್ಳಾರಿ ಇವರು ಬಂದು ಭಾಷಣ ಮೂಲಕ ಉತ್ತೇಜನ ಕೊಟ್ಟಿದ್ದಕ್ಕಾಗಿ ಸಮಾಜವು ಅವರಿಗೆ ಧನ್ಯವಾದಗಳನ್ನರ್ಪಿಸುತ್ತದೆ. ಮಿಸ್ ಲಕ್ಷ್ಮಮ್ಮ ಇವರು ತೀರ ಬಡವರಿದ್ದು ಮದನಪಲ್ಲಿ ಕಾಲೇಜಿನಲ್ಲಿ ಇಂಟರ್‌ದಲ್ಲಿ ಓದುತ್ತಿದ್ದಾರೆ. ಈ ಸಮಾಜ ಚಾಲಕರಾದ ಡಾ. ಬಸಪ್ಪ ಪಾಟೀಲ ಇವರ ಪತ್ನಿಯವರಾದ ಸೌ|| ರತ್ನಾಬಾಯಿಯವರು ಮೊನ್ನೆ ಮಿಸ್ ಲಕ್ಷ್ಮಮ್ಮನವರ ಸಹಾಯಾರ್ಥವಾಗಿ ೨೫ ರೂ. ಗಳನ್ನೂ ಕಳುಹಿಸಿಕೊಟ್ಟಿದ್ದಾರೆ.

ಸಮಾಜದ ವತಿಯಿಂದ ತಾ. ೨೧-೮-೩೮ ನೆಯ ದಿವಸ ಸಾಯಂಕಾಲ ೫ ಗಂಟೆಯ ಸುಮಾರಕ್ಕೆ ಡಾ. ಬಿ. ಎಸ್. ಪಾಟೀಲ ಇವರ ಮನೆಯ ಅಟ್ಟದ ಮೇಲೆ ಸಭೆ ಸೇರಿದ್ದಿತು. ಸಂಘದ ಅಧ್ಯಕ್ಷರಾದ ಸೌ|| ಚನ್ನಬಸಮ್ಮ ತಪಸೆಟ್ಟಿ, ಉಪಾಧ್ಯಕ್ಷರಾದ ಸೌ|| ನೀಲಾಬಾಯಿ ಕಂಠಿ, ಸೆಕ್ರೆಟರಿಗಳಾದ ಸೌ|| ಗಂಗಾಬಾಯಿ ಪಾಟೀಲ, ಸೌ|| ಸಿದ್ಧಲಿಂಗಮ್ಮ ಕಲಬುರ್ಗಿ, ಸೌ|| ಸಾವಿತ್ರಿಬಾಯಿ ಹಿರೇಮಠ ಮತ್ತು ಸೌ|| ತಂಗೆವ್ವ ಮುದಗುಣಿಕೆ ಮೊದಲಾದವರು ಬಂದಿದ್ದರು. ಈ ಸಭೆಯಲ್ಲಿ ಈ ಸಮಾಜದ ಸದಸ್ಯರು ತಮ್ಮ ತಮ್ಮ ಗೃಹ ಕೃತ್ಯಗಳು ತೀರಿದನಂತರ ಪ್ರತಿದಿನ ರಾಟೆಯಿಂದ ನೂಲನ್ನು ತೆಗೆಯಬೇಕೆಂದೂ, ಅನಂತರ ಬಟ್ಟೆಯನ್ನು ನೇಕಾರರಿಂದ ನೆಯಿಸಿ ಅದನ್ನೇ ತಾವೂ ತಮ್ಮ ಮಕ್ಕಳಿಗೂ ಧರಿಸಬೇಕೆಂದೂ ತೀರ್ಮಾನಿಸಿದರು. ಈಗಾಗಲೇ ಸೌ|| ರತ್ನಾಬಾಯಿ ಪಾಟೀಲ ಮತ್ತು ಸೌ|| ತಂಗೆವ್ವ ಮುದಗುಣಿಕೆ ಇವರು ಮನೆಯಲ್ಲಿ ನೂತ ನೂಲನ್ನು ಬಟ್ಟೆಗಾಗಿ ನೇಕಾರರ ಕಡೆಗೆ ಕೊಟ್ಟಿದೆಯೆಂದು ತಿಳಿಸಿದರು. ಎಲ್ಲರೂ ಮೇಲಿನ ನಿಯಮವನ್ನು ಕಾರ್ಯರೂಪದಲ್ಲಿ ತರಬೇಕೆಂದು ಬಿನ್ನವಿಸಿಕೊಂಡರು.

ನಮ್ಮ ಸಮಾಜಕ್ಕಾಗಿ ಮುನಸಿಪಾಲ್ಟಿಯವರು ೨೫ ಸಾವಿರ ಚೌರಸ ಅಡಿಗಳ ಪ್ಲಾಟ್ ಒಂದನ್ನು ಕೊಟ್ಟಿದ್ದಕ್ಕಾಗಿ ಮುನಸಿಪಾಲ್ಟಿಗೆ ಈ ಸಮಾಜದವರು ತುಂಬಾ ಕೃತಜ್ಞರಾಗಿದ್ದಾರೆ.

—ಸೆಕ್ರೆಟರಿ.

## "ಹಿಂದು ಮಾತಾ ಕಿ ಜೈ"

## ಹಿಂದು ತರುಣ ಸಂಘ ವಾರ್ಷಿಕೋತ್ಸವ.

ಹಾವೇರಿಯ ಹಿಂದು ತರುಣ ಸಂಘದವರ ವಾರ್ಷಿಕೋತ್ಸವವು ಶ್ರೀ ಶಿವಾನಂದ ಥಿಯೇಟರಿನಲ್ಲಿ ಇದೇ ತಿಂಗಳ ೨೯,೩೦,೩೧ ಈ ಮೂರು ದಿವಸ ಜರುಗುವುದು. ಈ ಉತ್ಸವಕ್ಕೆ ಶ್ರೀ. ಧರ್ಮವೀರ ಮಂಜಪ್ಪನವರು ಹರ್ಡೆಕರ ಆಲಮಟ್ಟಿ ಮತ್ತು ಶ್ರೀ. ವಿದ್ಯಾವಾಚಸ್ಪತಿ ಧರ್ಮದೇವಜಿ ಬೆಂಗಳೂರ ಇವರು ಬರುವವರಿದ್ದಾರೆ. ಈ ನಮ್ಮ ಕಾರ್ಯದಲ್ಲಿ ಸರ್ವರೂ ಭಾಗ ವಹಿಸಿ ಉತ್ಸವವನ್ನು ಯಶಸ್ವಿಯನ್ನಾಗಿ ಮಾಡಬೇಕಾಗಿ ವಿನಂತಿ.

### ಕಾರ್ಯಕ್ರಮ.

ತಾ. ೨೯-೮-೩೮ ಸೋಮವಾರ, ಅಧ್ಯಕ್ಷರ ಆಗಮನ, ಮೆರವಣಿಗೆ..

ತಾ. ೩೦-೮-೩೮ ಮಂಗಳವಾರ ೮ ಗಂಟೆಗೆ ಧ್ವಜಾರೋಹಣ, ೨ ರಿಂದ ೪ ರ ವರೆಗೆ ಸಂಘದ ಮಾಹಿತಿ, ನಂತರ ಸಾಯಂಕಾಲ ೫ ರಿಂದ ೮ ರ ವರೆಗೆ 'ಆರ್ಯಹಿಂದು ಜನಾಂಗದ ಅಭಿವೃದ್ಧಿ ಮತ್ತು ಸಂಘಟನೆ' ಬಗ್ಗೆ ಶ್ರೀ. ಮಂಜಪ್ಪನವರ ಮತ್ತು ಶ್ರೀ. ಧರ್ಮದೇವಜಿಯವರ ಭಾಷಣಗಳು.

ತಾ. ೩೧-೮-೩೮ ಬುಧವಾರ ಮುಂಜಾನೆ ೮ ರಿಂದ ೯ ರ ವರೆಗೂ ಸ್ವಯಂಸೇವಕರ ಕವಾಯತ ನಿರೀಕ್ಷಣೆ ಮತ್ತು ಅವರಿಗೆ ಉಪದೇಶಪರ ಭಾಷಣ. ಸಾಯಂಕಾಲ ೫ ರಿಂದ ೮ ರ ವರೆಗೆ ಹಿಂದುತ್ವದ ಬಗ್ಗೆ ಶ್ರೀ. ಧರ್ಮದೇವಜಿ ಮತ್ತು ಶ್ರೀ. ಮಂಜಪ್ಪನವರ ಭಾಷಣಗಳು.

ಅಧ್ಯಕ್ಷ,
ಹಿಂದು ತರುಣ ಸಂಘ ಹಾವೇರಿ.

## ನಿಮಗೆ ಗೊತ್ತಿದೆಯೇ?

(೧) ಎರಡು ನೂರು ವರ್ಷಗಳ ಪೂರ್ವದಲ್ಲಿ ೯ ಜನ ಒಕ್ಕಲಿಗರು ೧೦ ಜನರನ್ನು ರಕ್ಷಣೆ ಮಾಡುತ್ತಿದ್ದರು. ಆದರೆ ಈಗ ಒಕ್ಕಲತನದಲ್ಲಿ ಯಂತ್ರ ಸಹಾಯದಿಂದ ಒಬ್ಬನು ೧೨ ಜನರನ್ನು ರಕ್ಷಣೆ ಮಾಡುವಂತಾಗಿದೆ.

(೨) ಜರ್ಮನಿಯಲ್ಲಿ ಒಂದು ವಿಚಿತ್ರವಾದ ಇಂಜೆಕ್ಶನ್ ಕಂಡುಹಿಡಿದಿದ್ದಾರೆ. ಅದನ್ನು ಗಿಡಗಳಿಗೆ ಇಂಜೆಕ್ಶನ್ ಮಾಡಿದರೆ ಗಿಡವು ಎಚ್ಚರತಪ್ಪಿದವರಂತೆ ಬಿದ್ದುಬಿಡುವುದು. ಆಗ ಅದನ್ನು ಕಿತ್ತುಕೊಂಡು ಬೇರೆ ಯಾವ ಸ್ಥಳದಲ್ಲಾದರೂ ಹಚ್ಚಬಹುದು.

(೩) ಅಮೇರಿಕೆಯಲ್ಲಿ ಸದ್ಯ ಶಿವಸಿಂಗ ಎಂಬ ಹೆಸರಿನ ಒಬ್ಬ ಪಂಜಾಬಿ ಗೃಹಸ್ಥನಿದ್ದಾನೆ. ಈತನಿಗೆ ಈಗ ೧೦೫ ವರ್ಷಗಳಾಗಿವೆ. ಈತನು ಇನ್ನೂ ಹೊಲಗಳಲ್ಲಿ ಚೆನ್ನಾಗಿ ಕೆಲಸಮಾಡಿ ದಿನಾಲೂ ೯ ರೂ. ಗಳಿಸುತ್ತಿದ್ದಾನೆ.

(೪) ಇಟಲಿಯಲ್ಲಿ ಒಂದು ಅತ್ಯಂತ ತೀವ್ರವಾಗಿ ಹೋಗುವ ಒಂದು ವಿಮಾನವನ್ನು ತಯಾರಿಸಿದ್ದಾರೆ. ಅದು ಗಂಟೆಗೆ ೨೬೭ ಮೈಲುಗಳ ವೇಗದಲ್ಲಿ ಹೋಗುತ್ತದೆ.

(೫) ಇಂಗ್ಲಂಡದಲ್ಲಿ ಒಂದು ತರಹದ ಹುಲ್ಲಿನಿಂದ ಬೆಣ್ಣೆ ಮತ್ತು ಪನ್ನೀರುಗಳನ್ನು ತೆಗೆಯುವ ಶೋಧವನ್ನು ಮಾಡಿದ್ದಾರೆ. ಕೆಲವು ದಿನಗಳಲ್ಲಿಯೇ ಆಕಳು ಎಮ್ಮೆಗಳ ಅವಶ್ಯಕತೆಯು ತಪ್ಪಬಹುದು.

(೬) ಸ್ವಿಟ್ಸರ್‌ಲಂಡಿನಲ್ಲಿ ಒಂದು ವಿಚಿತ್ರವಾದ ಗಡಿಯಾಲವನ್ನು ಸಿದ್ಧಗೊಳಿಸಿದ್ದಾರೆ. ಬೇಕಾದಾಗ ಆ ಗಡಿಯಾಲಿನಲ್ಲಿರುವ ಗುಂಡಿಯನ್ನು ಒತ್ತಿದರೆ ಸಾಕು. ಅದು ಆಗ ಸರಿಯಾದ ವೇಳೆಯನ್ನು ತೋರಿಸುತ್ತದೆ.

(೭) ಜಪಾನಿನಲ್ಲಿ ಪ್ರತಿ ಗಂಟೆಗೆ ಸಾಧಾರಣ ೨೩೯ ಕೂಸುಗಳು ಹುಟ್ಟುತ್ತವೆ.

(೮) ಅಮೇರಿಕೆಯಲ್ಲಿ ೨೪೮೦ ದೈನಿಕ ಪತ್ರಿಕೆಗಳೂ, ೧೦೬೦೦ ವಾರ ಪತ್ರಿಕೆಗಳೂ ಮತ್ತು ೬೩೨೦ ಮಾಸ ಪತ್ರಿಕೆಗಳೂ ಹೊರಡುತ್ತವೆ.

(೯) ಬರ್ಮಾದಲ್ಲಿ ಒಂದು ಜಾತಿಯ ಹೆಣ್ಣುಮಕ್ಕಳಿದ್ದಾರೆ. ಅವರು ಹಿತ್ತಾಳೆಯ ಒಡವೆಗಳನ್ನೇ ಧರಿಸುತ್ತಾರೆ. ಪ್ರತಿಯೊಬ್ಬರು ಸಾಧಾರಣ ೪೦ ಪೌಂಡು ಭಾರದ ಒಡವೆಗಳನ್ನು ಧರಿಸುವರಂತೆ.

(೧೦) ಚೀನದಲ್ಲಿ ಅಫೀಮನ್ನು ಈ ವರೆಗೂ ಎಲ್ಲರೂ ಸೇವಿಸುತ್ತಿದ್ದರು. ಆದರೆ ಈಗಿನ ಸರಕಾರವು ೫೦ ವರ್ಷಗಳ ವಯಸ್ಸಿನ ಒಳಗಿನವರೆಲ್ಲರೂ ಅಫೀಮನ್ನು ತೆಗೆದುಕೊಳ್ಳಲೇಬಾರದೆಂದು ಶಾಸನ ಮಾಡಿದೆ.

(೧೧) ಕೋಳಿಗಳು ರೇಡಿಯೋ ಮೇಲಿನ ಸಂಗೀತವನ್ನು ಕೇಳಿದರೆ ಅವು ಹೆಚ್ಚಿಗೆ ತತ್ತಿಗಳನ್ನು ಹಾಕುತ್ತವೆ.

(೧೨) ಇಂಗ್ಲಂಡದಲ್ಲಿ ಪ್ರತಿ ಗಂಟೆಗೆ ರೇಲ್ವೆ ಗಾಡಿಯ ವೇಗವು ಸಾಧಾರಣ ೫೨ ಮೈಲು ಇದೆ. ಆದರೆ ಹಿಂದುಸ್ಥಾನದಲ್ಲಿಯಾದರೋ ರೇಲ್ವೆಯ ವೇಗವು ಸಾಧಾರಣ ೨೫ ಮೈಲು ಇದೆ. ಆಲಸ್ಯವುಳ್ಳ ಗುಲಾಮರಿಗಾಗಿ ಆಲಸ್ಯ ಗಾಡಿಗಳು.

(೧೩) ವ್ಹಿಯೆನ್ನಾದಲ್ಲಿ ಪ್ರತಿ ಶುಕ್ರವಾರ ಭಿಕ್ಷುಕರಿಗೆ ಭಿಕ್ಷೆಯನ್ನು ನೀಡುವ ಪದ್ಧತಿಯಿದೆ. ವ್ಯಾಪಾರಸ್ಥರು ಹೊರಗಿನ ಬಾಗಿಲಿನ ಹತ್ತಿರ ಕಡಿಮೆ ಕಿಮ್ಮತ್ತಿನ ಕೆಲವು ನಾಣ್ಯಗಳನ್ನು ಇಟ್ಟುಬಿಡುವರು. ಭಿಕ್ಷುಕರು ಬಂದು ತಾವೇ ಒಂದೊಂದೇ ನಾಣ್ಯ ತೆಗೆದುಕೊಂಡು ಹೋಗುವರು. ಅಲ್ಲಿಯ ಭಿಕ್ಷುಕರಲ್ಲಿಯೂ ಇಷ್ಟು ಪ್ರಾಮಾಣಿಕತನವಿದೆ.

(೧೪) ನ್ಯೂಯಾರ್ಕ ನಗರದಲ್ಲಿ ಎರಡು ನಾಯಿಗಳಿವೆ. ಅವು ಮನುಷ್ಯರಂತೆ ಗಾಯನ ಮಾಡುತ್ತವೆ. ಮತ್ತು ಹಾರ್ಮೋನಿಯಂ ಕೂಡಾ ಬಾರಿಸುತ್ತವೆ.

(೧೫) ಯಹೂದಿ ಜನಗಳ ಸಂಖ್ಯೆಯು ಅತ್ಯಂತ ತೀವ್ರವಾಗಿ ಹೆಚ್ಚುತ್ತಾ ಇದೆ. ಒಂದು ಶತಮಾನದ ಹಿಂದೆ ಕೇವಲ ೪೦೦೦೦೦೦ ಯಹೂದಿಗಳಿದ್ದರು. ಆದರೆ ಈಗ ೧೬೨೯೧೦೦೦ ಜನಗಳಿದ್ದಾರೆ.

(೧೬) ೧೪೦ ಪೌಂಡು ಭಾರವಾಗಿರತಕ್ಕ, ಒಬ್ಬ ಮನುಷ್ಯನ ಶರೀರದಲ್ಲಿ ೧೨ ಸಾಬೂನಿನ ಒಡೆಗಳು ತಯಾರಾಗುವಷ್ಟು ಚರಬಿ ಇರುತ್ತದೆ. ೯೦೦೦ ಪೆನ್ಸಿಲ್‌ಗಳು ತಯಾರಾಗುವಷ್ಟು ಕಾರ್ಬನ್ ಇರುತ್ತದೆ. ೨೨೦೦ ಕಡ್ಡಿ ಪೆಟ್ಟಿಗೆಗಳನ್ನು ತಯಾರಿಸುವಷ್ಟು ಫಾಸ್ಫರಸ್ ಇರುತ್ತದೆ. ಸರ್ವಸಾಧಾರಣವಾದ ಮಳೆಯನ್ನು ತಯಾರಿಸುವಷ್ಟು ಲೋಹವಿರುತ್ತದೆ. ಒಂದು ದೊಡ್ಡ ಕೋಣೆಗೆ ಹಚ್ಚುವಷ್ಟು ಸುಣ್ಣವಿರುತ್ತದೆ. ೧೦ ಗ್ಯಾಲನ್ನಿನ ಡಬ್ಬಿ ತುಂಬುವಷ್ಟು ನೀರು ಇರುತ್ತದೆ.

(೧೭) ಜಗತ್ತಿನಲ್ಲಿ ಚೀನಿ ಭಾಷೆ ಮಾತನಾಡುವವರ ಸಂಖ್ಯೆಯೇ ಅತ್ಯಧಿಕ. ೪೦ ಕೋಟಿ ಜನಗಳು ಆ ಭಾಷೆಯಲ್ಲಿ ಮಾತನಾಡುವವರಿದ್ದಾರೆ. ಇಂಗ್ಲೀಷ್ ಭಾಷೆಯಲ್ಲಿ ಮಾತನಾಡುವವರು ೧೦ ಕೋಟಿ. ಹಿಂದಿಯಲ್ಲಿ ಮಾತನಾಡುವವರು ೧೦ ಕೋಟಿ ಜನಗಳಿದ್ದಾರೆ.

(೧೮) ಜಗತ್ತಿನಲ್ಲಿಯೇ ಲಂಡನ್ ನಗರವು ದೊಡ್ಡದಾಗಿದೆ. ಅಲ್ಲಿಯ ಜನಸಂಖ್ಯೆಯು ೮೩ ಲಕ್ಷ ಇದೆ.

(೧೯) ಸ್ಕಾಟಲಂಡಿನಲ್ಲಿರುವ 'ಟೆ' ಪೂಲ ಜಗತ್ತಿನಲ್ಲಿಯೇ ಉದ್ದವಾದುದು ಅದು ೩೧೧೬ ಮೀಟರ್ ಉದ್ದ ಇದೆ.

(೨೦) ಅಮೇರಿಕೆಯ ಚಿಕಾಗೊ ನಗರದ ಮನೆಯೊಂದರ ಮೇಲ್ಭಾಗದಲ್ಲಿರುವ ದೀಪಸ್ತಂಭವೇ ಜಗತ್ತಿನಲ್ಲೆಲ್ಲಾ ಅತ್ಯಂತ ತೇಜೋಮಾನವಾದ ದೀಪವೆಂದು ನಿರ್ಧರಿಸಲ್ಪಟ್ಟಿದೆ. ಈ ದೀಪದ ಪ್ರಕಾಶವು ೨೦೦ ಕೋಟಿ ಕ್ಯಾಂಡಲ್ ಪಾವರ್ ಇರುತ್ತದೆ. ಒಂದು ದಿನ ವಿಮಾನಿನಲ್ಲಿ ಪ್ರಯಾಣಿಕರು ೭೦೦೦ ಅಡಿಗಳ ಎತ್ತರದಲ್ಲಿ (೨೭ ಮೈಲು) ಸಂಚರಿಸುತ್ತಿದ್ದಾಗ ಈ ದೀಪದ ಬೆಳಕಿನಲ್ಲಿಯೇ ವೃತ್ತ ಪತ್ರಿಕಾ ಕೂಡಾ ಓದುತ್ತಿದ್ದರಂತೆ.

(೨೧) ಪ್ರತಿವರ್ಷ ಬ್ರಿಟನ್ನಿನಲ್ಲಿ ೨೦೦೦೦ ಮಕ್ಕಳು ಸಾಯುತ್ತಿದ್ದಾರೆ. ಇದಕ್ಕೆಲ್ಲ ತಾಯಿಯ ಹಾಲಿನ ಬದಲಾಗಿ ಕೃತಕ ಆಹಾರವನ್ನು ಸೇವಿಸುವುದೇ ಕಾರಣವೆಂದು ಡಾ| ಜೆ. ಸ್ಪೆನ್ಸರ್ ಎಂಬುವವರು ತಿಳಿಸಿರುತ್ತಾರೆ.

(೨೨) ಸ್ತ್ರೀಯರೂ ವ್ಯಾಪಾರ ಮಾಡುವದರಲ್ಲಿಯೂ ಸಾಹಸಿಗರೆಂದು ತೋರಿಸಲು ಮುಂಬೈಯಲ್ಲಿ ೫೦ ಸಾವಿರ ಬಂಡವಾಳಿನ ಒಂದು ಕಂಪನಿಯು ಸ್ಥಾಪಿಸಲ್ಪಟ್ಟಿದೆ. ೧೦ ರೂ. ಗಳ ಒಂದೊಂದು ಶೇರನ್ನಾಗಿ ವಿಂಗಡಿಸಿದ್ದಾರೆ. ಮೊದಲು ಮುಂಬೈ ಗಿರಗಾಂವ ರೋಡಿನಲ್ಲಿ ಒಂದು ಸ್ಟೋರ್ ತೆಗೆಯುವವರಿದ್ದಾರೆ. ಇದರಲ್ಲಿ ವಿಶೇಷವೆಂದರೆ ಎಲ್ಲ ಕೊಡ ತೆಗೆದುಕೊಳ್ಳುವ ವ್ಯವಹಾರವನ್ನೆಲ್ಲಾ ಸ್ತ್ರೀಯರೇ ನಡೆಯಿಸುವರು. ಆದರೆ ವ್ಯಾಪಾರಕ್ಕೆ ಗಂಡಸರು ಹೆಂಗಸರು ಬೇಕಾದವರು ಬರಬಹುದು.

## ಕಾಸಾರ ಸಿರಸಿ.

ಬೀದರ ಜಿಲ್ಲೆಯ ನೀಲಂಗಾ ತಾಲೂಕಿನ ಸಂಸ್ಥಾನ ಕಾಸಾರ ಸಿರಸಿಯಲ್ಲಿ ತಾ. ೮-೮-೧೯೩೮ ನೆಯ ದಿವಸ ವೀರಶೈವ ಮಹಾಜನಗಳ ಸಭೆಯು ಸೇರಿದ್ದಿತು. ಆಗ ವೀರಶೈವ ತರುಣ ಸಂಘ ಎಂಬ ಸಂಸ್ಥೆಯನ್ನು ಸ್ಥಾಪಿಸಿದರು.

| | |
|---|---|
| ಅಧ್ಯಕ್ಷರು– | ಶ್ರೀ. ಬಸವಣ್ಣಪ್ಪ ಕುಕೌರಿ. |
| ಉಪಾಧ್ಯಕ್ಷರು– | ಬಸವಣ್ಣಪ್ಪ ಅರಬಳೆ. |
| ಸೆಕ್ರೆಟರಿ– | ರಾಮಣ್ಣಪ್ಪ ಚಿಂಚನಸೂರ. |
| ಕೋಶಾಧಿಪತಿ- | ಧೂಳಯ್ಯ ಸ್ವಾಮಿ. |
| ಲಾಯಬ್ರರಿ ವ್ಯವಸ್ಥಾಪಕ- | ವೀರಯ್ಯಸ್ವಾಮಿ ಕನಕಟು |
| ಸೈನ್ಯಾಧ್ಯಕ್ಷ- | ಚನ್ನಪ್ಪ ಚಿಂಚನಸೂರು. |
| ಪ್ರಚಾರಕ- | ಶಿವಮೂರ್ತಿಸ್ವಾಮಿ ಸಾಲಿ. |

ಊರಲ್ಲಿಯ ಪ್ರಮುಖ ವೀರಶೈವರನ್ನು ಸಭಾಸದರನ್ನಾಗಿ ಮಾಡಿಕೊಂಡಿದೆ.

ಸೆಕ್ರೆಟರಿ,
ರಾಮಣ್ಣಪ್ಪ ಚಿಂಚನಸೂರು
ವೀ. ತ. ಸಂಘ ಕಾಸಾರಸಿರಸಿ.

## ಮಹಾಗಾವ.

ತಾ. ೧೪-೧೧-೪೭ ನೆಯ ದಿವಸ ಮಹಾಗಾವದಲ್ಲಿ ಶ್ರೀಯುತ ಬಾಬಾಜಿ ಗೋಸಾಯಿ ಇವರ ಅಧ್ಯಕ್ಷತೆಯಲ್ಲಿ ಸಭೆ ಸೇರಿದ್ದಿತು. ಉದಗೀರಿಯ ಧರ್ಮ ಪ್ರಚಾರಕರಾದ ಶ್ರೀ. ದಶಮುಖೆ ಮತ್ತು ಶ್ರೀ. ಸಂಗಪ್ಪ ಇವರು ರಸವತ್ತಾದ ಭಾಷಣ ಮಾಡಿದರು. ಚಿಕ್ಕ ಚಿಕ್ಕ ಬಾಲಕರು ಮಹಾತ್ಮರ ವಚನಗಳನ್ನು ಹೇಳಿದರು.

ಸೆಕ್ರೆಟರಿ– ವೀ. ತ ಸಂಘ ಮಹಾಗಾವ.

## ಮ್ಯೆಂದರಗಿ.

ಪ್ರತಿ ಶ್ರಾವಣ ಸೋಮವಾರದಂತೆ ತಾ. ೧೫-೮-೩೮ ನೆಯ ದಿವಸ ಶ್ರೀ ರೇವಣಸಿದ್ಧಸ್ವಾಮಿ ಪಟ್ಟದ್ದೇವರ ಮಠದಲ್ಲಿ ಶ್ರೀ. ಸಂಗಪ್ಪ ವೀರಭದ್ರಪ್ಪ ಭೂಸನೂರ ಮು. ನಿಂಬರಗಿ ಇವರ ಅಧ್ಯಕ್ಷತೆಯಲ್ಲಿ ಸಭೆ ಸೇರಿದ್ದಿತು. ಶ್ರೀ. ಬಸವರಾಜ ಶಾಸ್ತ್ರಿ ಸಾಲಿಮಠ ಮು. ಮ್ಯೆಂದರಗಿ ಇವರು ಭಾಷಣ ಮಾಡಿದರು. ಶಾಸ್ತ್ರಿಗಳು ತಮ ಭಾಷಣದಲ್ಲಿ 'ವೇದವು ಬಾಜಾರಿನಂತೆ. ತನಗೆ ಒಳಿತು ತೋರಿದ ಸಾಮಾನುಗಳನ್ನು ತೆಗೆದುಕೊಂಡು ಹೋಗಬಹುದು. ಬೇಡವಾದ ಸಾಮಾನುಗಳನ್ನು ಬಿಟ್ಟು ಬಿಡಬಹುದು. ಇದರಂತೆ ವೀರಶೈವರು ವೇದದಲ್ಲಿ ತಮಗೆ ಹಿತ ತೋರಿದುದನ್ನು ತೆಗೆದುಕೊಂಡು ಉಳಿದುದನ್ನು ಬಿಟ್ಟುಕೊಟ್ಟಿದ್ದಾರೆ.' ಮೊದಲಾಗಿ ಹೇಳಿದರು.

ನಂತರ ಅಧ್ಯಕ್ಷರು ವೀರಶೈವರೆಲ್ಲರೂ ಒಕ್ಕಟ್ಟಿನಿಂದ ಇದ್ದು ಕೆಲಸಮಾಡುತ್ತ ಹೋಗುವುದು ಎಷ್ಟು ಅವಶ್ಯಕವಿದೆಯೆಂಬುದನ್ನು ತೋರಿಸಿಕೊಟ್ಟರು.

ಶ್ರೀ ರೇವಣಸಿದ್ಧ ಪಟ್ಟದ್ದೇವರು
ಮ್ಯೆಂದರಗಿ.

## ಗುಳೇದಗುಡ್ಡ.

ಈ ಊರ ಪ್ರಸಿದ್ಧ ವ್ಯಾಪಾರಿಗಳೂ ಶ್ರೀಮಂತರೂ ಮತ್ತು ನಗರ ಸಭೆಯ ಮೆಂಬರರೂ ಇಷ್ಟಲ್ಲದೆ ಮ್ಯಾ. ಕಮಿಟಿಯ ಚೇರಮನ್ನರೂ ಆದಂಥ ಮಿ. ಶಂಕರಲಾಲ ಚುನಿಲಾಲ ಮಾಲ್ಮಾಣಿ ಇವರು ಮತ್ತು ಸ್ಕೂಲ ಕಮಿಟಿಯ ಚೇರಮನ್ನರಾದ ಮಿ. ಝುಮ್ಮರ ಲಾಲಭಗವಾನದಾಸ ರಾಟಿ ಇವರು ಮು| ಗೆ ಕೊಡತಕ್ಕ ಜಕಾತಿ ತಪ್ಪಿಸಿ ಬಂದಿದ್ದರೆಂದೂ ಮತ್ತು ಆ ಬಗ್ಗೆ ಪಂಚನಾಮಾ ವಗೈರೆ ಮಾಡಿದ್ದರೆಂದೂ ಮೆ|| ಕಲೆಕ್ಟರ ಸಾ|| ವಿಜಾಪುರ ಇವರ ಕಡೆಗೆ ಅರ್ಜಿ ಮಾಡಿದ್ದು ಸದರ ಅರ್ಜಿ ಪೂರ್ಣ ಚವಕಸಿ ಮಾಡುವ ಕುರಿತು ಈ ತಾಲೂಕಿನ ಮಾಮಲೇದಾರ ಸಾ|| ಇವರ ಕಡೆಗೆ ಬಂದಿದ್ದು ಮಾಮಲೇದಾರ ಸಾಹೇಬರು ಚೌಕಸಿ ನಡೆಸಿದ್ದಾರೆಂದು ತಿಳಿಯುತ್ತದೆ. ಚೌಕಸಿ ಮಿ. ಶಂಕರಲಾಲ ಚುನಿಲಾಲ ಇವರ ಅಂಗಡಿಯ ರೇಶ್ಮಿ ಚೀಲ ಒಂದು ಜಕಾತಿ ಕೊಡದೇ ಹಾಗೇ ಬಂದಿತ್ತೆಂದೂ ಆ ಬಗ್ಗೆ ಈಗಿನ ಚೀಫ್ ಆಫೀಸರರಾದ ಮಿ. ಇನಾಮದಾರ ಇವರು ಪಂಚನಾಮಾ ಮಾಡಿದ್ದರೆಂದೂ ಮತ್ತು ಪಂಚನಾಮಾ ಮಾಡಿದನಂತರ ಮ್ಯಾ| ಕಮಿಟಿಯ ಚೇರಮನ್ನರು ಶ್ರೀಯುತ ಮಲ್ಲಯ್ಯನವರು ತುಪ್ಪದ ಇವರ ಮಾರ್ಫತ ಕರೆಯಕಳಿಸಿದ್ದರೆಂದೂ ಮತ್ತು ಸದರ ಪಂಚನಾಮಾ ಅವರ ಕಡೆಗೆ ಕೊಟ್ಟರೆಂದೂ ಮತ್ತು ಸದರ ಪಂಚನಾಮಾದ ಸಂಬಂಧಿ ಮುಂದಿನ ಹಕೀಕತ ತಮಗೆ ಗೊತ್ತಿಲ್ಲವೆಂದೂ ಇನಾಮದಾರರು ಮಾಮಲೇದಾರರ ಮುಂದೆ ಲೇಖೀ ಜವಾಬ ಕೊಟ್ಟಿದ್ದಾರೆಂದೂ ತಿಳಿಯುತ್ತದೆ. ಮತ್ತು ಝುಮ್ಮರಲಾಲ ರಾಟಿ ಇವರ ಅಂಗಡಿಯ ರೇಶ್ಮಿ ಗಂಟು ೪ ಜಕಾತಿ ತಪ್ಪಿಸಿ ಬಂದಿದ್ದವೆಂದೂ ಆ ಬಗ್ಗೆ ಪಂಚನಾಮಾ ಮಾಡಿ ಮ್ಯಾ| ಕಮಿಟಿಯ ಕಡೆಗೆ ಕಳಿಸಿತ್ತೆಂದೂ ಮತ್ತು ಮ್ಯಾ| ಕಮಿಟಿಯವರು ಕ್ಷುಲ್ಲಕ ನೆವದಿಂದ ಮತ್ತು ಮೆಂಬರರ ಒಬ್ಬರಿಗೊಬ್ಬರ ಭಿಡೆಯಿಂದ ಜಕಾತಿ ವಸೂಲ ಮಾಡಿ ಸದರ ಪಂಚನಾಮಾ ಫಾಯಿಲ ಮಾಡಿದ್ದಾರೆಂದೂ ಮಿ|| ಕುಪ್ಪಸ್ತ ಅಕ್ಟ್ರಾಯ ಇನಸ್ಪೆಕ್ಟರ ಇವರು ಸಹ ಮಾಮಲೇದಾರ ಸಾ||ರ ಮುಂದೆ ಲೇಖೀ ಜವಾಬ ಕೊಟ್ಟಿರುವರೆಂದೂ ತಿಳಿಯುವುದು.

ನಗರ ಸಭೆಯ ಮೆಂಬರರೂ ಮುಖ್ಯ ಅಧಿಕಾರಸ್ಥರೂ ಕೂಡಿ ಈ ಪ್ರಕಾರ ಸಾರ್ವಜನಿಕ ಸಂಸ್ಥೆಯ ಲುಕ್ಸಾನ ಮಾಡುವದು ಯೋಗ್ಯವೆ? ಮೇಲಾಧಿಕಾರಿಗಳು ಸಾರ್ವಜನಿಕ ಸಂಸ್ಥೆಯ ಲುಕ್ಸಾನವಾಗದಂತೆ ಯೋಗ್ಯ ತಪಾಸಣೆ ಮಾಡುವರೋ? ಮೆಂಬರ ಜನರೂ ಶ್ರೀಮಂತರೂ ಮತ್ತು ಯಾವದೊಂದು ಕಾರಣದಿಂದ ಭಿಡೆಗೆ ಬಿದ್ದ ತಪಾಸಣೆಯ ಆಫೀಸರರೂ ತಮ್ಮ ಕರ್ತವ್ಯವನ್ನು ದುರ್ಲಕ್ಷಿಸುವರೋ? ಕ್ಷಯರೋಗ ನಿವಾರಣಾ ಫಂಡಿಗೆ ಇಲ್ಲಿಯ ನಗರ ಸಭೆಯ ಕೆಲವು ಮೆಂಬರರೂ ಮತ್ತು ಇನ್ನಿತರ ಸಭ್ಯಗೃಹಸ್ಥರೂ ಹಣದ ಮೂಲಕ ಸಹಾಯ ಮಾಡುವೆವೆಂದು ವಾಗ್ದಾನ ಮಾಡಿದ್ದಾರೆಂದು ತಿಳಿಯುತ್ತದೆ. ಇಂಥ ವಾಗ್ದಾನಗಳಿಗೆ ಮಾಮಲೇದಾರ ಸಾಹೇಬರು ಕಿವಿಗೊಟ್ಟು ಜನರ ಭಿಡೆಗೆ ಬೀಳಬಹುದೆಂದೂ ಜನರಲ್ಲಿ ದಟ್ಟವಾರ್ತೆ ಇದೆ. ಹಾಗೆ ಮಾಡಿದಲ್ಲಿ ಮಾಮಲೇದಾರ ಸಾಹೇಬರಾದರೂ ಸ್ವಾರ್ಥಿಗಳೆಂದೇ ತಿಳಿಯಬಹುದಲ್ಲವೆ? ಆದರೆ ಮಾಮಲೇದಾರ ಸಾ||ರು ಇಂಥ ಮಾತುಗಳಿಗೆ ಲಕ್ಷ್ಯಗೊಟ್ಟು ಜನರ ಭಿಡೆಗೆ ಬೀಳಲಾರರೆಂದೂ ಮತ್ತು ಸದರಿಯವರು ನಿಸ್ವಾರ್ಥಿಗಳೂ ನಿಷ್ಪಕ್ಷಪಾತಿಗಳೂ ಸಾರ್ವಜನಿಕ ಸೇವಾ ನಿರತರೂ ಇದ್ದಾರೆಂದಾದರೂ ಜನರಲ್ಲಿ ದಟ್ಟವಾದ ವದಂತಿಯಿದೆ. ತಪಾಸಣೆಯ ಆಫೀಸರರು ತಮ್ಮ ಕರ್ತವ್ಯದಲ್ಲಿ ನಿಷ್ಠುರತೆಯಿಂದ ಮತ್ತು ನಿಷ್ಪಕ್ಷಪಾತದಿಂದ ತಪಾಸಣೆ ಮಾಡಿ ತಮ್ಮ ಯೋಗ್ಯ ಸಲಹೆಯನ್ನು ಕೊಡದಿದ್ದಲ್ಲಿ ಮೆ|| ಕಲೆಕ್ಟರ ಸಾ|| ವಿಜಾಪುರ ಇವರ ಕಡೆಗೂ ಮತ್ತು ಅವರಕಿಂತಲೂ ಹೆಚ್ಚಿನ ಅಧಿಕಾರಸ್ಥರ ಕಡೆಗೂ ದೂರು ಹೇಳಿಕೊಳ್ಳುವ ಪ್ರಸಂಗ ಬರುವದೆಂದು ಜನರ ಅಭಿಪ್ರಾಯವಿದ್ದಂತೆ ತಿಳಿಯುತ್ತದೆ. ಇಂಥ ಸಾರ್ವಜನಿಕ ಸಂಸ್ಥೆಯ ಲುಕ್ಸಾನ ಮಾಡುವಂಥ ಮೆಂಬರರಿಗೂ ಮತ್ತು ಇನ್ನಿತರ ಜನರಿಗೂ ಯೋಗ್ಯ ಶಾಸನ ಮಾಡುವದಕ್ಕೆ ಈಗಿನ ಸರಕಾರದವರಾದರೂ ಹಿಂದುಳಿಯಲಿಕ್ಕಿಲ್ಲೆಂದು ಜನರ ಭರವಸೆ ಇದೆ. ಮತ್ತು ಈ ಬಗ್ಗೆ ನಗರ ಕಾಂಗ್ರೆಸ್ ಕೆಲಸಗಾರರು ಯೋಗ್ಯ ಸಹಾಯಮಾಡುವರೆಂದೂ ಊಹೆಯಿದೆ.

ಗುಳೇದಗುಡ್ಡದಲ್ಲಿ "ದಿ ಗುಳೇದಗುಡ್ಡ ಇಂಡಸ್ಟ್ರಿಯಲ್ ಕೋಆಪರೇಟಿವ್ಹ ಬ್ಯಾಂಕ ಲಿಮಿಟೆಡ್" ಎಂದು ಬ್ಯಾಂಕು ಬಹು ದಿವಸಗಳಲಾಗಾಯಿತು ಇದ್ದದ್ದು ಎಲ್ಲರಿಗೂ ವಿದಿತವಾದ ಸಂಗತಿಯಿದೆ. ಇತ್ತೀಚಿಗೆ ಸದರೀ ಬ್ಯಾಂಕಿನ ಚೇರಮನ್ನರೂ ಮ್ಯಾನೇಜರರೂ ಮತ್ತು ಆಫೀಸ ನೌಕರರೂ ಕೂಡಿ ಬ್ಯಾಂಕಿನ ಹಣ ಅಪರಾತಫರಾ ಮಾಡಿದ ಬಗ್ಗೆ ಮೆ|| ಡಿ|| ಕಲೆಕ್ಟರ ಸಾ|| ದಕ್ಷಿಣ ಭಾಗ ವಿಜಾಪುರ ಇವರ ಕಡೆಗೆ ಕ್ರಿಮಿನಲ್ ಖಟ್ಲೆ ನಡೆದ ಸಂಗತಿಯಾದರೂ ಎಲ್ಲರಿಗೂ ಗೊತ್ತಿದ್ದ ಮಾತಾಗಿದೆ. ಆದರೆ ಬ್ಯಾಂಕಿನ ಹಣಾ ಅಪರಾತಫರಾ ಮಾಡಿದ್ದು ಬ್ಯಾಂಕಿನ ಚೇರಮನ್ನರೂ ಮ್ಯಾನೇಜರರೂ ಮತ್ತು ನೌಕರರೂ ಮತ್ತು ಇತರ ಕೆಲವು ಜನ ಡಾಯರೆಕ್ಟರರೂ ಇದ್ದಾರೆಂದೂ ಮತ್ತು ಈಗ ಮಾಡಿದ ಪೋಲಿಸ್ ತಪಾಸಣೆಯು ಯೋಗ್ಯ ರೀತಿಯಿಂದ ಆಗಿರುವುದಿಲ್ಲವೆಂದೂ ಪುನಃ ಕೆಲವು ಜನರು ಬ್ಯಾಂಕಿನ ಡಾಯರೆಕ್ಟರರ ಮೇಲೆ ಯೋಗ್ಯ ರೀತಿಯಿಂದ ಪೋಲೀಸ್ ತಪಾಸಣೆ ಮಾಡಿ ಖಟ್ಲೆ ಹಾಕಬೇಕೆಂದೂ ಮೆ|| ರಜಿಸ್ಟರ ಸಾ|| ಪುಣೆ ಮೆ|| ಅ|| ರಜಿಸ್ಟರ ಸಾ|| ಧಾರವಾಡ ಮತ್ತು ಮೆ|| ಡಿ|| ಸು|| ಪೋಲಿಸರ ಕಡೆಗೂ ಅರ್ಜಿ ಮಾಡಿದ್ದಾರೆಂದು ತಿಳಿಯುತ್ತದೆ. ಸದರಿ ಅರ್ಜಿ ಮಾಡಿ ಅಜಮಾಸ ೩-೪ ತಿಂಗಳುಗಳಾದರೂ ಇನ್ನೂ ವರೆಗೂ ಪೋಲಿಸ ತಪಾಸಣೆಯು ನಡೆದಿಲ್ಲವೆಂದೂ ಈ ರೀತಿ ದಿನಮೋಕ ಮಾಡಿದಲ್ಲಿ ಗುನ್ಹೆಗಾರರು ಲೆಖ್ಖ ಪತ್ರಗಳನ್ನು ಗಾಳು ಮಾಡುವ ಸಂಭವವಿದೆಯೆಂದೂ ಜನರಲ್ಲಿ ಗಡಿಬಿಡಿ ಬಿದ್ದಿದೆ. ಮೇಲಾಧಿಕಾರಿಗಳು ಇತ್ತ ಗಮನ ಕೊಡುವರೋ? ತಪ್ಪು ಮಾಡಿದವರನ್ನು ಬೈಲಿಗೆಳೆದು ಯೋಗ್ಯ ಶಾಸನ ಮಾಡುವರೋ? ಸದರ ಬ್ಯಾಂಕಿನ ಈಗಿನ ಮ್ಯಾ| ಕಮಿಟಿಯ ಮೆಂಬರರ ಅಥವಾ ಹಿಂದೆ ಇದ್ದ ಡಾಯರೆಕ್ಟರರ ಮಾತಿಗೆ ಮರುಳಾಗಿ ಅವರು ಹೇಳಿದ್ದೇ ನಿಜ ಸಂಗತಿಯೆಂದು ನಂಬದೆ ಮತ್ತು ಜನರ ಭಿಡೆಗೆ ಬೀಳದೆ ಮೇಲಾಧಿಕಾರಿಗಳು ತಮ್ಮ ಕರ್ತವ್ಯದಲ್ಲಿ ನಿಷ್ಪಕ್ಷಪಾತದಿಂದ ಮತ್ತು ನಿಷ್ಠುರತೆಯಿಂದ ನಿರತರಾಗಿ ಯೋಗ್ಯ ತಪಾಸಣೆ ಮಾಡುವರೆಂದೂ ಜನರಲ್ಲಿ ಧೃಡವಾದ ನಂಬಿಗೆಯಿದೆ ಆದರಂತೆ ಮೇಲಾಧಿಕಾರಿಗಳು ಜನರ ಆಸೆಯನ್ನು ಪೂರ್ಣ ಮಾಡುವರೋ? ಸದರ ಬ್ಯಾಂಕಿನ ಮಾಜಿ ಚಾಲಕರು ತಾವು ಮಾಡಿದ ಕುತಂತ್ರಗಳು ಬೈಲಿಗೆ ಬರಬಾರದೆಂದು ಪೌರಜನರ ಹಣವನ್ನು ಅಪಹರಿಸಿದ ಬಗ್ಗೆ ತಾವು ಇಟ್ಟ ಲೆಖ್ಖ ಪತ್ರಗಳನ್ನು ಮುಚ್ಚಿಡುವ ಪ್ರಯತ್ನದಲ್ಲಿ ಇದ್ದಾರೆಂದು ಜನರಲ್ಲಿ ದಟ್ಟವಾದ ವಾರ್ತೆಯಿದೆ. ಮೇಲಾಧಿಕಾರಿಗಳಿಗೆ ಹಣದ ಆಸೆಯನ್ನು ಹಚ್ಚಿ ಕೈಕಾಲು ಬಿದ್ದು ಪಾರಾಗುವ ಹವಣಿಕೆಯಲ್ಲಿದ್ದಂತೆ ಕಾಣುತ್ತದೆಂದೂ ಜನರ ಊಹೆಯಿದೆ. ಆದ್ದರಿಂದ ಮೇಲಾಧಿಕಾರಿಗಳು ಆದಷ್ಟು ಬೇಗನೆ ಯೋಗ್ಯ ರೀತಿಯಿಂದ ತಪಾಸಣೆ ಮಾಡಿ ಜನರು ಟೀಕಾ ಮಾಡದಂತೆ ತಪ್ಪು ಮಾಡಿದವರನ್ನು ಕಂಡುಹಿಡಿದು ಯೋಗ್ಯ ಶಾಸನ ಮಾಡಲಿಕ್ಕೆ ಹಿಂದುಳಿಯಲಿಕ್ಕಿಲ್ಲೆಂದೂ ನಿಷ್ಠುರತೆಯಿಂದ ಮತ್ತು ನಿಷ್ಪಕ್ಷಪಾತದಿಂದ ಕೆಲಸ ಮಾಡಿ ಇಡೀ ಜನಾಂಗದ ವಿಶ್ವಾಸಕ್ಕೆ ಪಾತ್ರರಾಗುವರೆಂದು ಪೂರ್ಣ ನಂಬಿಗೆಯಿದೆ. ಮತ್ತು ನಗರ ಕಾಂಗ್ರೆಸ್ ಕೆಲಸಗಾರರು ಬ್ಯಾಂಕಿನ ಮೆಂಬರರು, ಡಾಯರೆಕ್ಟರರು, ತಮ್ಮ ಕುಲದವರೆಂದು ಭಿಡೆಗೆ ಬೀಳದೆ ಊರ ಜನರ ಕಲ್ಯಾಣದ ಕಡೆಗೆ ಲಕ್ಷ್ಯಗೊಟ್ಟು ಪೋಲಿಸ್‌ಅಧಿಕಾರಿಗಳಿಗೆ ಯೋಗ್ಯ ಸಲಹೆ ಕೊಟ್ಟು ಸಹಾಯಮಾಡುವರೆಂದು ಆಸೆಯಿದೆ.

ಓರ್ವ ಸಮಾಜ ಸೇವಕ.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ...ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

## The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಂಗೂ ಅಂಜುವವನಲ್ಲ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ॥ —ಶ್ರೀ ಬಸವಣ್ಣನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೪ | ಆಲಮಟ್ಟಿ- ಸೋಮವಾರ ತಾರೀಖು ೫ ನೆಯ ಸಪ್ಟೆಂಬರ್ ೧೯೩೮. | ಸಂಚಿಕೆ ೪

ಜನಸೇವೆಯೇ ದೇವರಸೇವೆ.

# ತ್ರಾವಣಕೋರದ ದಬ್ಬಾಳಿಕೆ!

## ಗಾಂಧೀಜಿಯವರ ಬುದ್ಧಿವಾದ.

ತ್ರಾವಣಕೋರ ಸರಕಾರವು ಕ್ವಿಲನ್‌ದಲ್ಲಿ ಜನಗಳ
ಗುಂಪಿನ ಮೇಲೆ ಗುಂಡು ಹಾರಿಸಿ
೬ ಜನರನ್ನು ಗಾಯಗೊಳಿಸಿತು.
ಜನರು ಪೋಲಿಸರ ಮೋಟಾರುಗಳಿಗೆ ಬೆಂಕಿ ಹಚ್ಚಿ,
ಕಲ್ಲು ಹೊಡೆದು ೨೦ ಪೋಲಿಸರಿಗೆ ಗಾಯಗೊಳಿಸಿದರು.
ಗಾಂಧೀಜಿಯವರು ತ್ರಾವಣಕೋರದಲ್ಲಿಯ ದಬ್ಬಾಳಿಕೆಯನ್ನು
ಕೂಡಲೇ ನಿಲ್ಲಿಸಬೇಕೆಂದು ಅಲ್ಲಿಯ ಮಹಾರಾಜರವರಿಗೂ
ದಿವಾನರಿಗೂ ತಿಳಿಸಿದ್ದಾರಲ್ಲದೆ
ಜನರ ಹಿಂಸಾ ಕೃತಿಗಳನ್ನು ನಿಷೇಧಿಸಿ ಅಹಿಂಸಾ ಮಾರ್ಗದಿಂದಲೇ
ಹೋರಾಡಬೇಕಾಗಿ ಜನರಿಗೂ ಸೂಚಿಸಿದ್ದಾರೆ.

ದೇಹವೇ ದೇವಾಲಯ



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೮. | ಆಲಮಟ್ಟಿ-ಸೋಮವಾರ ತಾರೀಖು ೫ ನೆಯ ಸಪ್ಟೆಂಬರ್ ೧೯೩೮. | ಸಂಚಿಕೆ ೪

## ಮಹತ್ವದ ಸುದ್ದಿಗಳು.

—ದಿಲ್ಲಿಯಲ್ಲಿ ಚಾಂದಣೀ ಚೌಕಿನಲ್ಲಿರುವ ಶಿವದೇವಾಲಯದ ಸಂಬಂಧವಾಗಿ ವ್ಯಾಜ್ಯಯುಂಟಾಗಿದೆ. ಆ ಸ್ಥಳವು ಮುನಸಿಪಾಲ್ಟಿಯವರು ತಮ್ಮದಿರುತ್ತದೆಂದೂ ಹಿಂದುಗಳು ತಮ್ಮದಿರುತ್ತದೆಂದೂ ವಾದಿಸುತ್ತಿದ್ದಾರೆ. ಅಲ್ಲಿ ಹಿಂದೂ ಜನಗಳಿಗೆ ಪ್ರವೇಶಕ್ಕೆ ಪ್ರತಿಬಂಧವನ್ನುಂಟುಮಾಡಿದುದರಿಂದ ಹಿಂದುಮಹಾಸಭೆಯವರೂ ಆರ್ಯಸಮಾಜದವರೂ ಸತ್ಯಾಗ್ರಹವನ್ನು ಪ್ರಾರಂಭಿಸಿದ್ದಾರೆ. ಈ ವರೆಗೆ ೮೫ ಜನ ಹಿಂದು ತರುಣರು ಸತ್ಯಾಗ್ರಹವನ್ನಾಚರಿಸಿದುದರಿಂದ ಸೆರೆಹಿಡಿಯಲ್ಪಟ್ಟಿದ್ದಾರೆ.

—ಮಹಾರಾಷ್ಟ್ರ ಚರಖಾಸಂಘದ ಗಾಂಧಿಜಯಂತಿ ಪ್ರಚಾರ ಸಮಿತಿಯವರು ಮಹಾತ್ಮಾ ಗಾಂಧಿಯವರ ೭೦ ನೆಯ ಜಯಂತ್ಯುತ್ಸವದಲ್ಲಿ ಮಹಾರಾಷ್ಟ್ರ ದೇಶದಲ್ಲಿ ೭೦ ಸಾವಿರ ರೂ. ಗಳ ಬೆಲೆಯ ೪ ಲಕ್ಷ ಗಾಂಧಿ ಟೊಪ್ಪಿಗೆಗಳನ್ನು ಮಾರಾಟಮಾಡುವ ಒಂದು ಯೋಜನೆಯನ್ನು ಸಿದ್ಧಗೊಳಿಸಿದ್ದಾರೆ.

—ಅಲಹಾಬಾದ ಹತ್ತರಿರುವ ಸೇಲಿಮ್‌ಸರಾಯಿ ಎಂಬ ಗ್ರಾಮದಲ್ಲಿ ಒಂದು ಹಿಂದೂ ಮೆರವಣಿಗೆಗೆ ಮುಸಲ್ಮಾನರು ಆತಂಕಪಡಿಸಿದ್ದುದರಿಂದ ಹಿಂದು-ಮುಸಲ್ಮಾನರ ದಂಗೆಯಾಗಿದೆ. ಇದರಿಂದ ೩ ಜನರು ಸತ್ತಿದ್ದು ೧೨ ಜನರಿಗೆ ಗಾಯುಗಳಾಗಿವೆ.

—ಪುಣೆಯಲ್ಲಿಯ ಫರ್ಗ್ಯೂಶನ್ ಕಾಲೇಜಿನಲ್ಲಿಯ ಕನ್ನಡಿಗರಾದ ಪ್ರೊ. ಗೋಕಾಕರವರು ಆಕ್ಸಫರ್ಡ ಯುನಿವ್ಹರ್ಸಿಟಿಯಲ್ಲಿ ಮೊದಲನೆಯ ವರ್ಗದಲ್ಲಿ ತೇರ್ಗಡೆಹೊಂದಿ ಅಭೂತಪೂರ್ವವಾದ ಯಶಸ್ಸನ್ನು ಸಂಪಾದಿಸಿ ತಾ. ೨೯ ನೆಯ ದಿನ 'ವ್ಹಿಕ್ಟೋರಿಯಾ' ಹಡಗದಿಂದ ಮುಂಬೈಗೆ ಬಂದು ಇಳಿದರು. ಅನೇಕರು ಆಗ ಅವರನ್ನು ಸ್ವಾಗತಿಸಿದರು, ಸಾಯಂಕಾಲ ಮುಂಬೈಯಲ್ಲಿಯೇ ಕರ್ನಾಟಕ ಸಂಘದ ಪರವಾಗಿ ಒಂದು ಪ್ರಚಂಡ ಸಭೆ ಸೇರಿಸಿ ಪ್ರೊ. ಗೋಕಾಕರವರನ್ನು ಗೌರವಿಸಲಾಯಿತು.

—ಶಿರೋಳದಲ್ಲಿ ತಾ. ೩೧ ನೆಯ ದಿವಸ ಬಸಪ್ಪ ಬೆಟಗೇರಿ ಎಂಬುವವನು ತನ್ನ ನಾಲ್ಕು ಜನ ಅಕ್ಕತಂಗಿಯರನ್ನು ಒಬ್ಬ ತಮ್ಮನನ್ನು ಅಮಾನುಷ ರೀತಿಯಿಂದ ಕೊಲೆಮಾಡಿ ಅಗಸೆಬಾಗಿಲಿಗೆ, ಚಾವಡಿಗೆ ಮತ್ತು ತನ್ನ ಮನೆಗೆ ಒಂದೊಂದು ರುಂಡಗಳನ್ನು ಕಟ್ಟಿ ಅದೇ ದಿನ ರಾತ್ರಿ ಗೌಡರ ಹತ್ತಿರ ಹೋದನಂತೆ! ತನ್ನ ತಪ್ಪನ್ನು ಒಪ್ಪಿಕೊಂಡನಂತೆ!

—ಹಿಂದುಸ್ಥಾನ ಸರಕಾರದವರು ಒಂದು ಪ್ರಕಟನೆ ಹೊರಡಿಸಿ ಜನಸಂಖ್ಯಾಭಿವೃದ್ಧಿಯ ವರದಿಯನ್ನು ಪ್ರಕಟಿಸಿದ್ದಾರೆ. ೧೯೪೧ ನೆಯ ಜನಪರಿಗಣನೆಯ ಕಾಲಕ್ಕೆ ಹಿಂದುಸ್ಥಾನದ ಜನಸಂಖ್ಯೆಯು ೪೦ ಕೋಟಿಯ ವರೆಗೆ ಏರಬಹುದೆಂದು ಊಹಿಸಿದ್ದಾರೆ.

—ಹಿಂದುಸ್ಥಾನ ಮತ್ತು ಬ್ರಹ್ಮ ದೇಶಗಳ ಬ್ರಿಟಿಶ್ ಸರಕಾರದ ಪಾರ್ಲಮೆಂಟರಿ ಅಂಡರ ಸೆಕ್ರೆಟರಿಗಳಾದ ಲೆಫ್ಟನಂಟ್ ಕರ್ನಲ್ ಮೂಅರ್ ಹೆಸ್ನರು ಹಿಂದುಸ್ಥಾನದ ಪರಿಸ್ಥಿತಿಯನ್ನು ಕಣ್ಣಾರೆ ಕಾಣಲು ಇದೇ ತಿಂಗಳಿನ ಮಧ್ಯದಲ್ಲಿ ಲಂಡನ್ನಿನಿಂದ ಹೊರಟು ಹಿಂದುಸ್ಥಾನಕ್ಕೆ ಬರುವವರಿದ್ದಾರೆ.

—ಮಾಂಡಲೆಯಲ್ಲಿರುವ ಮುಸ್ಲಿಂರಿಗೂ ಬೌದ್ಧ ಭಿಕ್ಷುಗಳಿಗೂ ಜಗಳವಾಗುತ್ತ ನಡೆದಿದೆ. ಒಬ್ಬ ಬೌದ್ಧ ಭಿಕ್ಷುಕನನ್ನು ಮುಸಲ್ಮಾನರು ಗಾಯಗೊಳಿಸಿದ್ದುದರಿಂದ ಭಿಕ್ಷುಗಳು ಸಿಟ್ಟಿನಿಂದ ಮುಸಲ್ಮಾನರ ಮೇಲೆ ಹಲ್ಲೆ ಬಲತ್ಕಾರ ನಡೆಸಿದರು. ಸಶಸ್ತ್ರ ಪೋಲಿಸರು ಎಲ್ಲ ಕಡೆಗೆ ಮುಂಜಾಗ್ರತೆ ವಹಿಸಿ ಕಾಯುತ್ತಲಿದ್ದಾರೆ.

—ಹುಬ್ಬಳ್ಳಿ ಮುನಸಿಪಾಲ್ಟಿಯನ್ನು ರದ್ದುಗೊಳಿಸಬಾರದೆಂದು ಹುಬ್ಬಳ್ಳಿಯ ಒಂದು ಶಿಷ್ಟಮಂಡಳವು ಶ್ರೀ. ಎಸ್. ಜಿ. ಬಿಲವೋರಿಯಾರವರ ನಾಯಕತ್ವದಲ್ಲಿ ಪುಣೆಗೆ ಹೋಗಿ ಮಂತ್ರಿಗಳಾದ ಶ್ರೀ. ಎಲ್. ಎಂ. ಪಾಟೀಲರಿಗೆ ತಿಳಿಸಿತು.

# ಬಾಲಕಿಯರ ಆಟದ ಹಾಡು.

[ಬರೆದವರು— ಗದ್ದಗಿಮಠದ ಬಸವಣ್ಣ ಕೇರೂರು ಬಸವೇಶ್ವರ ಅಂಗ್ಲ ಶಾಲಾ ಬಾಗಲಕೋಟ.]

(ದಾಟಿ:— ಗುಜಗುಜಮಾಪಂಗೆಂಬಂತೆ| ಗುಜೀರಮಾಪರಿಗೆಂಬಂತೆ||)

ಬಾಲೆಯರೆಲ್ಲರು ಕೂಡೀರೆ| ನಾವು ಸ್ವರಾಜ್ಯ ಗಳಿಸುನು ಬನ್ನೀರೆ ಸ್ವರಾಜ್ಯ ಗಳಿಸುನು ಬನ್ನೀರೆ| ನಾವು ಸ್ವಾತಂತ್ರ್ಯ ಪಡೆಯುನು ಬನ್ನೀರೆ ||ಪ||

ಮೂವತ್ತಾರು ಕೋಟಿ ಜನರವ್ವಾ| ನಾವು ಭಾರತ ಮಾತೆಯ ಮಕ್ಕಳವ್ವಾ| ಒಂದಾಗಿ ನಾವು ಕೂಡುನವ್ವಾ| ಸ್ವರಾಜ್ಯವನ್ನು ಗಳಿಸೂನವ್ವಾ ||೧||

ನಾರಿಯರೆಲ್ಲರು ಬನ್ನೀರೆ| ನೀವು ಧೀರರಾಗಿ ಕೂಡೀರೆ| ಜಾತೀ ಭೇದವನಳಿಯೀರೆ| ನೀವು ಸ್ವಾತಂತ್ರ್ಯವನ್ನು ಪಡೆಯೀರೆ ||೨||

ಮೇವಾಡ ರಾಣಿ ಪದ್ಮಿನಿಯೇ| ನಲ್ಲನ ಬಂಧನ ಮುರಿದಳೆ ಮಾತೆಯ ಸೇವೆಯ ಮಾಡಿದಳೆ| ಜಗದಲ್ಲಿ ಖ್ಯಾತಿಯ ಪಡೆದಳೆ ||೩||

ಕಿತ್ತೂರ ರಾಣಿ ಚನ್ನಮ್ಮ| ಅವಳೆಂತ ವೀರಳು ಕೇಳಮ್ಮ| ಇಂಗ್ಲಿಷರ ಕೂಡ ಕಾದಿದಳೆ| ಪ್ರಜೆರನೆಲ್ಲ ಕಾಪಾಡಿದಳೆ ||೪||

ಬೆಳವಡಿ ರಾಣಿ ಮಲ್ಲವ್ವ| ಅವಳೆಂತ ಧೀರಳು ನೋಡಮ್ಮ| ಶಿವಾಜಿಯ ಗರ್ವ ಮುರಿದಾಳಮ್ಮ| ಗಂಡುಗಲಿಯೆಂದು ಮೆರದಾಳವ್ವ ||೫||

ಕನ್ನಡ ನಾಡಿನಲ್ಲಿ ಹುಟ್ಟ್ಯಾರ| ಸ್ತ್ರೀಯ ರತ್ನಗಳೆಂದು ಹೊಳೆದಾರ| ಕನ್ನಡ ನಾಡಿನ ಭಾಗ್ಯವನ| ಶಿಖರದ ತುದಿಗೆ ಒಯ್ದ್ಯಾರ ||೬||

ಕನ್ನಡ ಮಾತೆಯ ಮಕ್ಕಳು| ಅಲ್ಲೇನತ್ಲಾ ನೀವೆಲ್ಲ| ಕನ್ನಡ ಮಾತೆಯ ರಕ್ತವು| ಹರಿಯೂದವ್ವಾ ನಿಮ್ಮತ್ಲೆಲ್ಲಾ ||೭||

ಅಂಜುವ ದಿನಗಳು ಹೋದುವವ್ವಾ| ಮುಂದಕ ನೀವು ಬನ್ನೀರವ್ವಾ| ಟೊಂಕವ ನೀವು ಕಟ್ಟೀರವ್ವಾ| ಸತ್ಯಾಗ್ರಹವ ಮಾಡೀರವ್ವಾ ||೮||

ರಾಷ್ಟ್ರಧ್ವಜವನು ಹಿಡಿಯೀರವ್ವಾ| ಪ್ರಭಾತಪೇರಿಯ ಮಾಡೀರವ್ವಾ| ಜನರಲ್ಲಿ ಹುರುಪನು ತುಂಬೀರವ್ವಾ| ಚಳವಳಿಯಲ್ಲಿ ಸೇರೀರವ್ವಾ ||೯||

ರಾಟಿಯು ನಮ್ಮದು ರಾಷ್ಟ್ರದ ಗುರುತು| ಅದರಲ್ಲಿಹುದು ಸ್ವರಾಜ್ಯದ ಗುರುತು| ಮನಿಯಲ್ಲಿ ರಾಟೀ ತಿರುವೀರಿ| ಸ್ವರಾಜ್ಯ ನೀವು ಗಳಿಸುವಿರಿ ||೧೦||

ಪರದೇಶಿ ಬಟ್ಟೆ ಸುಡಿರಮ್ಮ| ಖಾದಿ ಬಟ್ಟೆಯ ಧರಿಸೀರಮ್ಮ| ಮಗ್ಗಗಳನ್ನು ನಡಸೀರಿ| ಖಾದಿಯ ಬಟ್ಟೆಯ ನೇಸೀರಿ ||೧೧||

ಖಾದಿ ಬಟ್ಟೆಯ ನೋಡಮ್ಮ| ಥಳಥಳ ಹೇಗೆ ಹೊಳೆಯುವದಮ್ಮ| ಇದರಲ್ಲಿ ಹುದು ನೋಡಮ್ಮ| ಸ್ವರಾಜ್ಯ ಮಂತ್ರದ ಬೀಜಮ್ಮ ||೧೨||

ಸಮುದ್ರ ದಂಡೆಗೆ ಹೋಗೂನ| ಉಪ್ಪನು ತಯಾರ ಮಾಡೂನ| ಉಪ್ಪಿನ ಕರವನು ಮುರಿಯೂನ| ಸತ್ಯಾಗ್ರಹವನು ಹೂಡೂನ ||೧೩||

ಗಾಂಧಿಯ ಹೆಂಡತಿ ಕಸ್ತೂರಿಬಾಯಿ| ನಾರಿಯರೆಲ್ಲರಿಗ್ಹೇಳಿದಳ| ಜೀವವನ್ನು ಕೊಟ್ಟರು ಕೂಡಾ| ರಾಷ್ಟ್ರಧ್ವಜವನು ಬಿಡಬೇಡಿರವ್ವಾ ||೧೪||

ಸಿಂದಿಯ ಗಿಡಗಳ ಕಡಿಯೀರೆ| ಕಾಯ್ದೆ ಭಂಗವ ಮಾಡೀರೆ| ಸಂಜೆಗೆ ಸಭೆಯನು ಕೂಡಿಸಿರೆ| ಜನರಿಗೆ ಬೋಧವ ಮಾಡೀರೆ ||೧೫||

ವೀರೆಯರೆಲ್ಲರು ಕೂಡೀರೆ| ನೀವು ರಣಾಂಗಣಕೆ ಬನ್ನೀರೆ| 'ಪಿಕೆಟಿಂಗ್' ನೀವು ಮಾಡೀರೆ| ಅತ್ಯಾಚಾರವ ಸಹಿಸಿರೆ [೧೬||

ಬಹಿಷ್ಕಾರವನ್ನು ಹಾಕೀರೆ| ಪರದೇಶೀ ಒಡವೇ ತ್ಯಜಿಸೀರೆ| ದೇಶದ ಮಾಲನು ಉಪಯೋಗಿಸಿರೆ| ದೇಶಕ ಹಿತವ ಮಾಡೀರೆ ||೧೭||

ಕಪ್ಪು ಬಸಿಗಳ ಒಡೆಯೀರೆ| ಚಹಾ ಕಾಫಿ ಬೀದಿಗೆ ಚಲ್ಲೀರೆ| ಕುಡಿಯುವುದಿಲ್ಲೆಂದಾಣೆ ಮಾಡೀರೆ| ಅದರಂತೆ ಸ್ಮರಿಸಿ ನಡಿಯೀರೆ ||೧೮||

ಬೂಟು ಪಾಟ್ಲೂನು ನಮಗ್ಯಾಕೆ| ಕೋಟು ಹ್ಯಾಟುಗಳು ನಮಗ್ಯಾಕೆ| ಉಷ್ಣ ಪ್ರದೇಶ ನಮ್ಮದು| ರುಮಾಲ ಬಗಲಂಗಿ ಪೋಷಾಕ ಒಪ್ಪುವದು ||೧೯||

ಎಡಕ ಬೇತಲೆ ಬ್ಯಾಡವ್ವಾ| ತಲೆಯಾಗ ಹೇರ್ ಪಿನ್ ಸಾಕವ್ವಾ| ಝುಂಪರ್ ಬ್ಲೌಜ ಸುಡಿರೆವ್ವಾ| ಅವುಗಳ ದರ್ಶನ ಬೇಡವ್ವಾ ||೨೦||

ಫೇಶ್ ಪಾವಡರ ಹಚ್ಚುವದು ಬಿಡಿರವ್ವಾ| ಕುಂಕುಮಚಂದನ ಧರಿಸೀರವ್ವಾ| ಫ್ಯಾನ್ಸಿ ಪತ್ತಲ ಮರಿಯೀರವ್ವಾ| ಆದವಾನಿ ಸೀರೆಯ ಮರೆಬೇಡ್ರವ್ವಾ ||೨೧||

ದೇಶೀ ಬಳೆಗಳ ನಿಡಿರವ್ವಾ| ಖಾದಿಯ ಸೀರೆಯನುಡಿರೆವ್ವಾ| ಮೈತುಂಬ ಕುಪ್ಪಸ ತೊಡಿರವ್ವಾ| ಹದಿಬದೆಯಾಗಿ ನಡೆರವ್ವಾ ||೨೨||

"ವಂದೇ ಮಾತರಂ" ಎನ್ನೀರೆ| ಅದರಂತೆ ನೀವು ನಡೆಯೀರೆ| ಗಾಂಧೀ ತತ್ವವ ಪಾಲಿಸಿರಿ| ಸ್ವರಾಜ್ಯ ನೀವು ಗಳಿಸುವಿರಿ ||೨೩||

—ವಂದೇ ಮಾತರಂ—

---

## ಆದಿಜನ ಸೇವಕ ಸಂಘದ ಕಾರ್ಯ.

ಮುಂಬೈ ಪ್ರಾಂತಿಕ ಆದಿಜನ ಸೇವಕ ಸಂಘದವರು ಮುಂಬೈಯಲ್ಲಿರುವ ಈ ಕೆಳಗೆ ವಿವರಿಸಿದ ದೇವಾಲಯಗಳಲ್ಲಿ ಆದಿಜನರು ಪ್ರವೇಶಿಸುವಂತೆ ಅನುಕೂಲಪಡಿಸಿದ್ದಾರೆ. ಮುಂಬೈಯಲ್ಲಿ ಈ ವರೆಗೆ ೪೭ ದೇವಾಲಯಗಳು ಆದಿ ಜನಗಳಿಗಾಗಿ ತೆರೆಯಲ್ಪಟ್ಟಿವೆ.

೧. ಶ್ರೀ ಕೇದಾರೇಶ್ವರ ಮಂದಿರ, ಏರಳಿ
೨. ಶ್ರೀ ಶಿತಲಾದೇವಿ ಮಂದಿರ ಲೇಡಿ ಜಮಶೇಡಜಿ ರೋಡ್ ಮಾಹೀಮ
೩. ಶ್ರೀರಾಮ, ಮಹದೇವ ಮತ್ತು ಮಾರುತಿ ಮಂದಿರ ಆಂಥೇರಿ
೪. ಶ್ರೀ ಮಾರುತಿ ಮಂದಿರ, ಲೇಡಿ ಜಮಶೇಡಜಿ ರೋಡ ಮಾಹೀಮ
೫. ಶ್ರೀ ವಿಠೋಬಾ ರುಕ್ಮಿಣಿ ಮಂದಿರ, ಕಾಮಾಠಿಪುರ
೬. ಶ್ರೀ ವಿಠೋಬಾ ರುಕ್ಮಿಣಿ ಮಂದಿರ, ಮಾಹೀಮ

# ಭೋಸಲೆ ಲಷ್ಕರಿ ಶಾಲೆ.

## ಮುಂಬೈ ಗವ್ಹರ್ನರರ ಸಂದರ್ಶನ.

ಕಳೆದ ತಿಂಗಳ ೨೪ ನೆಯ ತಾರೀಖಿನ ದಿವಸ ಮುಂಬೈ ಗವ್ಹರ್ನರರಾದ ಸರ್. ರಾಜರ್ ಲಮಲಿ ಇವರು ಭೋಸಲೆ ಮಿಲಿಟರಿ ಸ್ಕೂಲಿಗೆ ಸಂದರ್ಶನವನ್ನಿತ್ತರು. ಮೋಟಾರಿನಿಂದ ಗವ್ಹರ್ನರರು ಇಳಿದೊಡನೆಯೇ ಡಾ. ಮುಂಜೆಯವರು ಅವರನ್ನು ಸ್ವಾಗತಿಸಿದನಂತರ ಭೋಸಲೆ ಸ್ಕೂಲಿನ ವಿದ್ಯಾರ್ಥಿಗಳು ಗವ್ಹರ್ನರರಿಗೆ ಲಷ್ಕರೀ ವಂದನೆಗಳನ್ನರ್ಪಿಸಿದರು. ಗವ್ಹರ್ನರರು ವಿದ್ಯಾರ್ಥಿಗಳ ವಾಸಸ್ಥಳ, ಊಟದ ಮನೆ, ಭೋಜನ ಶಾಲೆ ಮೊದಲಾದವುಗಳನ್ನು ನೋಡಿ ತಮ್ಮ ಸಂತೋಷವನ್ನು ವ್ಯಕ್ತಗೊಳಿಸಿದರು. ಡಾ. ಮುಂಜೆಯವರು ಗವ್ಹರ್ನರ ಸಾಹೇಬರನ್ನು ಸ್ವಾಗತಿಸುವಾಗ ಈ ರೀತಿ ಭಾಷಣ ಮಾಡಿದರು—

"ಗವ್ಹರ್ನರ ಸಾಹೇಬರು ಆಕಸ್ಮಿಕವಾಗಿ ನಮ್ಮ ಶಾಲೆಗೆ ಸಂದರ್ಶನವನ್ನಿತ್ತುದಕ್ಕಾಗಿ ನಮ್ಮ ಸಂಸ್ಥೆಯವರಿಗೆ ತುಂಬಾ ಸಂತೋಷವಾಗಿದೆ. ಸ್ವತಃ ಬಂದು ನಮ್ಮ ಶಾಲೆಯನ್ನು ನೋಡಿದುದರಿಂದ ನಮ್ಮ ಈ ಸಣ್ಣ ಉಪಕ್ರಮದ ಬಗ್ಗೆ ತಾವು ಸಹಾನುಭೂತಿಯಿಂದ ನೋಡುವಿರೆಂಬುದರಲ್ಲಿ ಸಂದೇಹವಿಲ್ಲ. ಈಗಲೇ ನಮ್ಮ ಶಾಲೆಗೆ ಅಖಿಲ ಭಾರತೀಯ ಸ್ವರೂಪವು ಪ್ರಾಪ್ತವಾಗಿರುವದೆಂದು ಹೇಳಲು ಅಡ್ಡಿಯಿಲ್ಲ. ಈ ಶಾಲೆಯು ಕೇವಲ ಹಿಂದುಗಳಿಗಾಗಿಯೇ ಏರ್ಪಟ್ಟಿದ್ದರೂ ಬೇರೆ ಯಾವದೇ ಜಾತಿಯ ವಿದ್ಯಾರ್ಥಿಗಳು ಬಂದು ಇಲ್ಲಿಯ ಶಿಸ್ತನ್ನು ಅನುಸರಿಸಿ ನಡೆಯಲು ಸಿದ್ಧರಿದ್ದರೆ ಅವರನ್ನು ಖಂಡಿತ ಸೇರಿಸಿಕೊಳ್ಳಲಾಗುತ್ತದೆ. ಈ ಪ್ರಕಾರ ಒಬ್ಬ ಇಂಡಿಯನ್ ಕ್ರಿಶ್ಚಿಯನ್ ವಿದ್ಯಾರ್ಥಿಯನ್ನು ತೆಗೆದುಕೊಂಡಿದೆ. ಇಲ್ಲಿ ಎಲ್ಲ ಜಾತಿಯ ವಿದ್ಯಾರ್ಥಿಗಳೂ ತಮ್ಮ ಜಾತಿಪಂಥಗಳನ್ನು ಮುಂದು ಮಾಡದೆ ಒಂದೇ ಕಡೆಗೇನೇ ಊಟವನ್ನು ಮಾಡುತ್ತಿದ್ದಾರೆ. ಹಿಂದುಸ್ಥಾನದ ಮೂಲೆ ಮೂಲೆಗಳಿಂದಲೂ ನಮ್ಮ ಶಾಲೆಗೆ ವಿದ್ಯಾರ್ಥಿಗಳು ಬಂದಿದ್ದಾರೆ. ಲಾಹೋರ, ದಿಲ್ಲಿ, ಕರಾಚಿ, ಕಾಠೇವಾಡ, ತ್ರಿಪುರ ಸಂಸ್ಥಾನ (ಬಂಗಾಲ) ಕಟಕ, ವಿಜಗಪಟ್ಟಮ್ ಮೊದಲಾದ ಕಡೆಗಳಿಂದ ವಿದ್ಯಾರ್ಥಿಗಳು ಬಂದಿದ್ದಾರೆ.

ಕಳೆದ ವರುಷ ಮೊದಲಿನ ಮೂರು ತಿಂಗಳುಗಳಲ್ಲಿಯೇ ಪ್ರತಿಯೊಬ್ಬ ವಿದ್ಯಾರ್ಥಿಯ ತೂಕವು ೫ ರಿಂದ ೧೦ ಪೌಂಡುಗಳ ವರೆಗೆ ಹೆಚ್ಚಾದುದು ನಿದರ್ಶನಕ್ಕೆ ಬಂದಿದೆ. ನಾವು ಪ್ರತಿ ದಿನ ಪ್ರತಿಯೊಬ್ಬ ವಿದ್ಯಾರ್ಥಿಗೆ ಒತ್ತಾಯದಿಂದ ಅರ್ಧ ಸೇರು ಹಾಲನ್ನು ಮಜ್ಜಿಗೆ ಬೆಣ್ಣೆಗಳನ್ನು ಕೊಡುತ್ತಿರುವುದರ ಪರಿಣಾಮವೆಂದೇ ಹೇಳಬೇಕಾಗಿದೆ. ಇಲ್ಲಿ ಇಂಗ್ಲೀಷ್ ಮೊದಲನೆಯತ್ತೆಯಿಂದ ಮ್ಯಾಟ್ರಿಕ್‌ದ ವರೆಗೂ ಶಿಕ್ಷಣ ಕೊಡಲಾಗುತ್ತದೆ. ಆದರೆ ಲಷ್ಕರೀ ಶಾರೀರಿಕ ಶಿಕ್ಷಣವನ್ನು ಮಾತ್ರ ಒತ್ತಾಯದಿಂದ ಕಲಿಯಲೇಬೇಕಾಗುತ್ತದೆ. 'ರಾಯಫಲ್' ಉಪಯೋಗಿಸಲು ಸರಕಾರದವರು ಒಪ್ಪಿಗೆ ಕೊಟ್ಟಿದ್ದು ಅದರಲ್ಲಿ ವಿದ್ಯಾರ್ಥಿಗಳು ಪ್ರವೀಣರಾಗಲು ಹಾತೊರೆಯುತ್ತಿದ್ದಾರೆ. ಜಾಗ್ರತೆ ಇಲ್ಲಿ ಒಂದು ಈಸುವ ಕೆರೆಯನ್ನು ಕಟ್ಟಿಸಬೇಕಾಗಿದೆ. ಅಲ್ಲಿ ವಿದ್ಯಾರ್ಥಿಗಳಿಗೆ ಶಾಸ್ತ್ರೀಯ ರೀತಿಯ ಈಸುವುದನ್ನು ಕಲಿಸಬೇಕೆಂದು ನಿರ್ಧರಿಸಿದೆ. ಅದೇ ಪ್ರಕಾರ ಕುದುರೆ ಹತ್ತುವ ಶಿಕ್ಷಣದ ವ್ಯವಸ್ಥೆಯನ್ನೂ ಮಾಡಿದ್ದಾಗಿದೆ.

ನಮ್ಮ ಸಂಸ್ಥೆಗೆ ಈ ವರೆಗೆ ೩|| ಲಕ್ಷ ರೂ. ಗಳ ದೇಣಿಗೆಯ ಆಶ್ವಾಸನ ದೊರೆತಿದೆ. ಇದರಲ್ಲಿ ಸಾಧಾರಣ ೩ ಲಕ್ಷ ರೂ. ಗಳು ಕೈಗೆ ಈ ವರೆಗೆ ಹತ್ತಿದಂತಾಗಿದೆ. ಒಂದು ಲಕ್ಷ ರೂ. ಗಳು ಶಾಲೆಯ ಕಟ್ಟಡ ಮೊದಲಾದವುಗಳಿಗೆ ವೆಚ್ಚವಾಗಿದ್ದು, ೨ ಲಕ್ಷ ರೂ' ಗಳನ್ನು ಠೇವು ಇಟ್ಟಿದೆ. ಮೂರು ದಿವಸಗಳ ಹಿಂದೆಯೇ ಈ ಶಾಲೆಗೆ ಸರಕಾರದವರು ಮಾನ್ಯತೆ ಕೊಟ್ಟಿದ್ದಾರೆಂದು ತಿಳಿಸಲು ಸಂತೋಷವಾಗುತ್ತದೆ. ಉತ್ತರದಲ್ಲಿ ಡೆಹರಾಡೂನ ದಕ್ಷಿಣದಲ್ಲಿ ಉಟಕಮಂಡಗಳ ಮಧ್ಯದಲ್ಲಿ ನಾಶಿಕದಷ್ಟು ಉತ್ತಮ ಹವೆಯ ಸ್ಥಾನವು ಇನ್ನೊಂದಿಲ್ಲ. ಸಮುದ್ರ ಪಾತಳಿಯಿಂದ ಈ ಸ್ಥಳವು ೨ ಸಾವಿರ ಅಡಿಗಳ ಎತ್ತರದಲ್ಲಿದ್ದು ಬೇಸಿಗೆಯ ಕಾಲದಲ್ಲಿಯು ಕೂಡಾ ಇಲ್ಲಿ ಬಿಸಲಿನ ತಾಪವು ಎಳ್ಳಷ್ಟು ಸಹ ಆಗುವುದಿಲ್ಲ.

ಈ ಪ್ರಕಾರ ಡಾ. ಮುಂಜೆಯವರು ಭಾಷಣ ಮಾಡಿದ ನಂತರ ಗವ್ಹರ್ನರ ಸಾಹೇಬರು ಉತ್ತರ ರೂಪವಾಗಿ ಈ ರೀತಿ ಹೇಳಿದರು—

"ಡಾ. ಮುಂಜೆಯವರ ಈ ಶಾಲೆಯು ದೊಡ್ಡ ಹೆಸರನ್ನು ಸಂಪಾದಿಸಿದೆ. ಇಲ್ಲಿಯ ನೀರು ಹವೆ ಸೃಷ್ಟಿಸೌಂದರ್ಯ ಅತ್ಯುತ್ತಮ ಇವೆ. ವಿದ್ಯಾರ್ಥಿಗಳ "ಡ್ರಿಲ್" ನೋಡಿ ನನಗೆ ಅತ್ಯಾನಂದವಾಗಿದೆ. ಶಾರೀರಿಕ ಶಿಕ್ಷಣದಂತೆ ಬೌದ್ಧಿಕ ಶಿಕ್ಷಣವನ್ನಾದರೂ ಕೊಡುವುದು ಅಗತ್ಯವಾಗಿದೆ. ನಾನು ಪುನಃ ಈ ಶಾಲೆಯನ್ನು ಸಂದರ್ಶಿಸಿದಾಗ ಇದರ ಪ್ರಗತಿಯನ್ನು ಕಾಣುವೆನು. ಈ ಶಾಲೆಯಲ್ಲಿ ಕಲಿಯಲು ಅವಕಾಶ ದೊರೆಯುವುದು ವಿದ್ಯಾರ್ಥಿಗಳ ಭಾಗ್ಯವಾಗಿದೆ. ಇಲ್ಲಿ ಅವರು ಮನಸ್ಸುಗೊಟ್ಟು ಕಲಿತರೆ ಮುಂದೆ ಉತ್ತಮ ಶಿಪಾಯಿಗಳಾಗುವರು. ಜಗತ್ತಿನ ಈಗಿನ ಪರಿಸ್ಥಿತಿಯಲ್ಲಿ ಇಂಥ ಲಷ್ಕರೀ ಶಿಕ್ಷಣದ ಆವಶ್ಯಕತೆಯು ಬಹಳ ಇದೆ. ಈ ಶಿಕ್ಷಣದಿಂದ ವಿದ್ಯಾರ್ಥಿಗಳು ತಮ್ಮ ಮಾತೃಭೂಮಿಯ ಸೇವೆಯನ್ನು ಚೆನ್ನಾಗಿ ಮಾಡಬಲ್ಲರು. ಹಿಂದೀ ತರುಣರ ಮೇಲೆಯೇ ಹಿಂದುಸ್ಥಾನದ ಭವಿಷ್ಯ ಅವಲಂಬಿಸಿದೆ. ನಾನು ಅತ್ಯಂತ ಸಂತೋಷದಿಂದ ೨೦೦ ರೂಪಾಯಿಗಳ ದೇಣಿಗೆಯನ್ನು ಈ ಶಾಲೆಗೆ ಅರ್ಪಿಸುತ್ತೇನೆ."

---

## ಶ್ರೀನಗರದಲ್ಲಿ ಗಲಭೆ.

### ೩೦೦ ಜನಗಳ ಕೈಸೆರೆ.

ಕಾಶ್ಮೀರ ಸಂಸ್ಥಾನದವರು ಹೊರಡಿಸಿದ ಪ್ರತಿಬಂಧಕಾಜ್ಞೆಯನ್ನು ಮುರಿದುದರಿಂದ ಶ್ರೀನಗರದಲ್ಲಿ ಈಗಾಗಲೇ ೩೦೦ ಜನರನ್ನು ಸೆರೆ ಹಿಡಿದಿದ್ದಾರೆ. ಬಾರಅಸೋಶಿಏಶನ್‌ದ ಅಧ್ಯಕ್ಷರಾದ ಶ್ರೀ. ಜಯಲಾಲರನ್ನು ಸೆರೆ ಹಿಡಿದಿದ್ದಾರೆ. ತಾ. ೩೧ ನೆಯ ದಿವಸ ಮುಖ್ಯ ಮಂತ್ರಿಗಳು ಗೃಹಮಂತ್ರಿಗಳು ಮೋಟಾರಿನಲ್ಲಿ ಮನೆಗೆ ಹೋಗುವಾಗ ಕೆಲವು ತುಂಟ ಜನರು ಹಲ್ಲೆಮಾಡಿದರು. ಮಂತ್ರಿಗಳಿಗೆ ಚಿಕ್ಕಪುಟ್ಟ ಗಾಯಗಳಾಗಿವೆಯೆಂದು ಕಂಡುಬಂದಿದೆ. ಶ್ರೀನಗರದಲ್ಲೆಲ್ಲ ಜನರು ಗುಂಪುಕಟ್ಟಿಕೊಂಡು ಚೀರಾಡುತ್ತಾ ವ್ಯವಹಾರಕ್ಕೆ ಅಡ್ಡಿಮಾಡುತ್ತಿದ್ದಾರೆ.

ಈ ಪ್ರಕಾರ ಕಾಶ್ಮೀರ ಸಂಸ್ಥಾನದ ಶ್ರೀನಗರದಲ್ಲಿ ಉಂಟಾಗಿರುವ ಪ್ರಕ್ಷುಬ್ಧ ವಾತಾವರಣವನ್ನು ಎದುರಿಸಲು ಸರಕಾರದವರು ಸೈನ್ಯವನ್ನು ಸಿದ್ಧಗೊಳಿಸಿ ಇಟ್ಟಿದ್ದಾರೆ. ಈ ಮೊದಲು ಸೆರೆಹಿಡಿದ ಮುಸ್ಲಿಂಲೀಗಿನ ಮುಂದಾಳುಗಳಾದ ಮಿ. ಎಸ್. ಎಂ. ಅಬ್ದುಲ್ಲರ ವಿಚಾರಣೆಯು ಮ್ಯಾಜಿಸ್ಟ್ರೇಟರ ಕೋರ್ಟಿನಲ್ಲಿ ನಡೆದಿದೆ.

# ಮೈಸೂರು ದಸರಾ ಉತ್ಸವ.

ಹಿಂದುಸ್ಥಾನದಲ್ಲಿಯೇ ಖ್ಯಾತಿಗೊಂಡ ಮೈಸೂರು ದಸರಾ ಮಹೋತ್ಸವವು ಈ ತಿಂಗಳ ಕೊನೆಯ ವಾರದಲ್ಲಿ ಆರಂಭವಾಗುತ್ತದೆ. ಉತ್ಸವದ ಏರ್ಪಾಟುಗಳು ಮೈಸೂರಿನಲ್ಲಿ ಭರದಿಂದ ಸಾಗಿವೆ. ವಿದ್ಯುಚ್ಛಕ್ತಿ ಶಾಖೆಯವರು ಪ್ರತಿ ವರುಷದಂತೆ ರಾಜಬೀದಿಗಳಲ್ಲಿ ವಿದ್ಯುದ್ದೀಪಗಳನ್ನು ಅಂದವಾಗಿ ಹಾಕುತ್ತಿದ್ದಾರೆ. ಜಗತ್ತಿನಲ್ಲಿಯೇ ಪ್ರಖ್ಯಾತವಾದ ಮೈಸೂರು ಉದ್ಯಾನಗಳನ್ನು ಅಂದವಾಗಿ ಕಾಪಾಡಿಕೊಳ್ಳುತ್ತಿದ್ದಾರೆ. ಮೈಸೂರಿನಲ್ಲಿಯೂ ಈ ವರ್ಷ ಚೆನ್ನಾಗಿ ಈಗಾಗಲೇ ಮಳೆಯಾದುದರಿಂದ ಎಲ್ಲ ಉದ್ಯಾನಗಳಲ್ಲಿಯೂ ಸುಂದರವಾದ ಹೂವಿನ ಗಿಡಗಳೂ ಹಸರು ಹುಲ್ಲುಗಳೂ ಬೆಳೆದು ಕಂಗೊಳಿಸುತ್ತಲಿವೆ. ನಗರಸಭೆಯವರೂ ನಗರ ನೈರ್ಮಲ್ಯವನ್ನು ತುಂಬಾ ಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದಾರೆ. ಯಾವ ತರದ ಸಾಂಕ್ರಾಮಿಕ ರೋಗಗಳು ಮೈಸೂರಿನಲ್ಲಿಲ್ಲ. ರೇಲ್ವೆ ಶಾಖೆಯವರೂ ಪದ್ಧತಿಯಂತೆ ರೇಲ್ವೆ ದರದಲ್ಲಿ ಸೌಲಭ್ಯವನ್ನು ಕಲ್ಪಿಸಿಕೊಡುವುದರಿಂದ ಈ ವರ್ಷವೂ ಮೈಸೂರು ದಸರಾ ಮಹೋತ್ಸವಕ್ಕೆ ಲಕ್ಷಾಂತರ ಜನಗಳು ಸೇರುವರೆಂಬುದರಲ್ಲಿ ಸಂದೇಹವಿಲ್ಲ. ಅನೇಕ ಭಾರತೀಯ ಮತ್ತು ಹೊರಗಿನ ಅತಿಥಿಗಳನ್ನು ದಸರಾ ಉತ್ಸವಕ್ಕೆ ಆಹ್ವಾನಿಸುವವರಿದ್ದಾರೆ.

ಸಪ್ಟಂಬರ್ ೨೪ ನೆಯ ತಾರೀಖಿನ ದಿವಸ ನವರಾತ್ರಿಯ ಹಬ್ಬವು ಪ್ರಾರಂಭವಾಗುತ್ತದೆ. ಆ ದಿನ ಪ್ರಾತಃಕಾಲ ಶ್ರೀಮನ್ಮಹಾರಾಜರವರು ಶುಭ ಮುಹೂರ್ತದಲ್ಲಿ ಅರಮನೆಯಲ್ಲಿ ಸಿಂಹಾಸನಾರೂಢರಾಗಿ ದರಬಾರವನ್ನು ನಡೆಯಿಸುತ್ತಾರೆ. ಅಂದಿನಿಂದ ೮ ದಿವಸಗಳವರೆಗೂ ಪ್ರತಿ ಸಾಯಂಕಾಲ ದರಬಾರು ನಡೆಯುತ್ತದೆ. ಸಪ್ಟಂಬರ್ ೩೦ ನೆಯ ತಾರೀಖಿನ ದಿವಸ ಸರಸ್ವತಿ ಪೂಜೆಯೂ ಮರು ದಿನ ದುರ್ಗಾ ಪೂಜೆಯೂ ನಡೆಯುತ್ತದೆ. ಮಹಾನವಮಿಯ ದಿವಸ ಮಹಾರಾಜರವರು ಅರಮನೆಯ ಮುಂಭಾಗದ ಅಂದವಾದ ಮಂಟಪದಲ್ಲಿ ಆಯುಧ, ಗಜಾಶ್ವ ಪೂಜೆಗಳನ್ನು ಮಾಡುತ್ತಾರೆ. ಅದೇ ದಿವಸ ಸಾಯಂಕಾಲ ಯುರೋಪಿಯನ್ ಅತಿಥಿಗಳಿಗಾಗಿ ದರಬಾರ್ ನಡೆಯುತ್ತದೆ! ಮರು ದಿನವೇ ವಿಜಯ ದಶಮಿಯ ಮಹೋತ್ಸವವು ನಡೆಯುತ್ತದೆ.

ಮೈಸೂರಿನ ದಸರಾ ವಸ್ತು ಪ್ರದರ್ಶನವೂ ಸಪ್ಟಂಬರ ೨೪ ನೆಯ ತಾರೀಖಿನ ದಿವಸ ಪ್ರಾರಂಭವಾಗಿ ಮುಂದೆ ೧೫ ದಿವಸಗಳ ವರೆಗೂ ತೆರೆಯಲ್ಪಟ್ಟಿರುತ್ತದೆ. ಅದೇ ಕಾಲಕ್ಕೇನೇ ಮೈಸೂರು ಸಹಕಾರ ಸಮ್ಮೇಲನ, ಮೈಸೂರು ಸ್ಕೌಟ್ ವಾರ್ಷಿಕ ಸಭೆ, ವಿಶ್ವವಿದ್ಯಾಲಯದ ಪದವೀದಾನ ಸಮಾರಂಭ ಮೊದಲಾದವುಗಳು ಜರುಗುತ್ತವೆ.

---

## ಶ್ರೀ ಕುಮಾರ ಸ್ವಾಮಿಗಳ ಸಂಚಾರ.

ಧಾರವಾಡದ ನವಕಲ್ಯಾಣ ಮಠದ ಶ್ರೀ ಕುಮಾರ ಸ್ವಾಮಿಗಳು (ಬಿ. ಎ.) ಇವರು ತಾ. ೧೯-೮-೧೯೩೮ ನೆಯ ದಿವಸ ಅಲ್ಲಲ್ಲಿಯ ಆಮಂತ್ರಣದ ಮೇರೆಗೆ ವಿಜಾಪುರಕ್ಕೆ ಹೊರಟುಹೋಗುವಾಗ ದಾರಿಯಲ್ಲಿ ಬಾಗಲಕೋಟೆಯ ಸ್ಟೇಶನ್‌ದ ಮೇಲೆ ಶ್ರೀ. ಕಲಬುರ್ಗಿ ವಕೀಲರು, ಶ್ರೀ. ಕುಬಸದ ಶಿವಸಂಗಪ್ಪನವರು ತಮ್ಮಲ್ಲಿ ಇಳಿದು ಭಾಷಣಮಾಡಬೇಕಂತಾ ಬಹಳವಾಗಿ ಕೇಳಕೊಂಡ ಕಾರಣ ಮುಂದಿನ ಪಯಣ ತಪ್ಪುತ್ತದೆಂತಲೂ ತಾ. ೨೦, ೨೧, ೨೨ ಆಗಷ್ಟ ೧೯೩೮ ಈ ಮೂರು ದಿವಸ ವಿಜಾಪುರದಲ್ಲಿ ಭಾಷಣ ಇಟ್ಟ ಕಾರಣ ಬರುವಾಗ ಇಳಿಯುತ್ತೇವೆಂತ ಹೇಳಿ ಮುಂದೆ ವಿಜಾಪುರ ಸ್ಟೇಶನ್ನದಲ್ಲಿ ಇಳಿದ ನಂತರ ಪ್ರಮುಖ ಜನರು ಸ್ವಾಮಿಗಳನ್ನು ಆದರದಿಂದ ಬರಮಾಡಿಕೊಂಡು ಸಿದ್ಧೇಶ್ವರ ಸಂಸ್ಥೆಯಲ್ಲಿ ಇಳಿಸಿದರು.

ಮುಂದೆ ಮೇಲೆ ಬರೆದಂತೆ ತಾ. ೨೦, ೨೧, ೨೨ ಈ ಮೂರು ದಿವಸ ಮೊದಲೇ ಸ್ವಾಮಿಗಳು ಮಠಗಳಲ್ಲಿ ವ್ಯಾಖ್ಯಾನಗಳನ್ನು ಮಾಡುವುದಿಲ್ಲವೆಂತ ತಿಳಿಸಿದ ಮೇರೆಗೆ ಅಲ್ಲಿಯವರು ಶೆಫರ್ಡ ಹಾಲಿನಲ್ಲಿ "ಶರಣರ ಸೊಬಗು ಎಲ್ಲಿ" ಎಂಬ ವಿಷಯದ ಮೇಲೆ ಒಳ್ಳೇ ಸ್ಫೂರ್ತಿದಾಯಕ, ಜನರ ಮೇಲೆ ಒಳ್ಳೇ ಪರಿಣಾಮವಾಗುವಂತೆ ಭಾಷಣಮಾಡಿದರು. ಭಾಷಣ ಕೇಳಲಿಕ್ಕೆ ದಿನದಿನಕ್ಕೆ ಹೆಚ್ಚು ಹೆಚ್ಚು ಜನರು ಕೂಡುತ್ತಿದ್ದರು. ಅಂತು ಎಷ್ಟೋ ಜನರು ಸ್ವಾಮಿ ವಿವೇಕಾನಂದರಂತೆ ವ್ಯಾಖ್ಯಾನ ಕೊಡುವರು. ಇವರಂತಹ ಭಾಷಣ ಯಾರದೂ ಕೇಳಿದ್ದಿಲ್ಲ ಎಂತ ಅನ್ನುತ್ತಿದ್ದರು. ಅಂತು ಈ ವರೆಗೆ ಎಷ್ಟೋ ಊರುಗಳಿಂದ ಆಮಂತ್ರಣಗಳು ಬಂದಿದ್ದರೂ ಎಷ್ಟೋ ಜನರು ಸ್ವತಃ ಕರೆಯಲಿಕ್ಕೆ ಬಂದರೂ ಹೋಗದೆ ಇದ್ದು ಈಗ ಈ ಕಡೆಗೆ ಹೋದದ್ದು ಬಹಳೇ ಸಂತೋಷದ ಸಂಗತಿಯಾಗಿದೆ. ಹುಬ್ಬಳ್ಳಿಯಲ್ಲಿ ಮಾತ್ರ ಒಂದು ವರ್ಷಕ್ಕೊಂದೊಂದರಂತೆ ೩ ಸಾರಿ ಒಳ್ಳೇ ಉಜ್ವಲ ಭಾಷಣಗಳು ಆಗಿರುವವು.

ಹೀಗೆಯೇ ಇನ್ನು ಮುಂದೆ ಭಾಷಣಗಳನ್ನು ಇದರಂತೆಯೇ ಕೊಡುತ್ತ ಹೋದರೆ ಜನರಿಗೆ ಬ ಸ ವೇ ಶ್ವ ರ ನ ನಿಜವಾದ ಮಾ ರ್ಗ ವು ಬೋಧವಾಗುತ್ತದೆ. ಇವರ ಸಂಗಡ ಹುಬ್ಬಳ್ಳಿಯ ವ್ಯಾಪಾರಸ್ಥರಾದ ಶ್ರೀ ಗುರುಸಿದ್ಧಪ್ಪ ಭೂಸನವರ ಮತ್ತು ಶ್ರೀ ಮೂರುಸಾವಿರಪ್ಪ ಸಾದರಹಳ್ಳಿ ಇವರು ಹೋಗಿರುವರು. ವಿಜಾಪುರದ ನಂತರ ಮಹೇಂದರಗಿ ಸೋಲಾಪುರಕ್ಕೆ ಹೋಗಿ ಅಲ್ಲಿಯೂ ೩ ದಿವಸಗಳ ವರೆಗೆ ಭಾಷಣಗಳನ್ನು ಮಾಡುವವರಿದ್ದಾರೆ.

---

## ಕಷ್ಟಕ್ಕೀಡಾದ ಬನ್ನು ಜನರಿಗೆ ಸಹಾಯ.

ಬನ್ನು ನಗರದ ಮೇಲೆ ಆದ ಹಲ್ಲೆಯ ಸಂಬಂಧವಾಗಿ ಸರಹದ್ದು ಪ್ರಾಂತ ಸರಕಾರದವರು ಒಂದು ಈ ರೀತಿಯ ಪ್ರಕಟನೆಯನ್ನು ಹೊರಡಿಸಿದ್ದಾರೆ.—

ಬನ್ನು ನಗರದ ಮೇಲೆ ಪುಂಡರು ಮಾಡಿದ ಹಲ್ಲೆಗಳನ್ನು ಕುರಿತು ಸರಕಾರವು ಅನೇಕ ರೀತಿಯಲ್ಲಿ ವಿಚಾರಮಾಡಿತು. ಈ ಹಲ್ಲೆಗಳಿಂದ ಕಷ್ಟಕ್ಕೀಡಾದ ಜನಗಳಿಗೆ ಪರಿಹಾರವೆಂದು ೨೦೦೦೦ ರೂ. ಗಳನ್ನು ತೆಗೆದಿಡಲಾಗಿದೆ. ಈ ಹಣವನ್ನು ಹೇಗೆ ವೆಚ್ಚ ಮಾಡಬೇಕೆಂಬುದನ್ನು ನಿರ್ಧರಿಸಲು ಒಂದು ಸಮಿತಿಯನ್ನು ನಿಯಮಿಸಲಾಗಿದೆ. ಬನ್ನು ನಗರದ ಭದ್ರತೆಯನ್ನು ಬಲಪಡಿಸಲಾಗಿದೆ. ಬನ್ನು ಜಿಲ್ಲೆಯ ಪರಿಸ್ಥಿತಿಯನ್ನು ವಿಚಾರಿಸಲು ಒಂದು ಸಮಿತಿ ನಿಯಮಿಸುವ ಯೋಜನೆ ನಡೆದಿದೆ.

---

## ಕಾಶ್ಮೀರದಲ್ಲಿ ಗಲಭೆ.

ಕಾಶ್ಮೀರ ಸಂಸ್ಥಾನಿನಲ್ಲಿ ರಾಜಕೀಯ ಸಭೆಸಮ್ಮೇಲನಗಳನ್ನು ಕೂಡಿಸಬಾರದೆಂದು ಸರಕಾರದವರು ಆಜ್ಞೆ ಹೊರಡಿಸಿದ್ದಾರೆ. ಇದನ್ನು ಉಲ್ಲಂಘಿಸಿ ಮುಸಲ್ಮಾನರು ಒಂದು ಪರಿಷತ್ತನ್ನು ನೆರೆಯಿಸಿದರು. ಪರಿಷತ್ತಿನ ಅಧ್ಯಕ್ಷರಾದ ಎಸ್. ಎಂ. ಅಬ್ದುಲ್ಲಾರವರನ್ನೂ ಬೇರೆ ಆರು ಜನರನ್ನೂ ಸೆರೆಹಿಡಿಯಲಾಗಿದೆ.

## ಪ್ರಚಂಡ ಮೆರವಣಿಗೆ.

ತಾ. ೨೯-೮-೩೮ ನೆಯ ದಿವಸ ಸಾಯಂಕಾಲ ಬೆಂಗಳೂರು ಪ್ಯಾಸೆಂಜರ ಗಾಡಿಯಲ್ಲಿ ಅಧ್ಯಕ್ಷರೂ ಪ್ರಸಿದ್ಧ ಆರ್ಯಸಮಾಜ ಪ್ರಚಾರಕರಾದ ಶ್ರೀಮಾನ್ ಧರ್ಮದೇವಜಿಯುವರೂ ಬಂದೊಡನೆ ಸ್ಟೇಶನ್ನಿನಿಂದಲೇ ಪ್ರಚಂಡ ಮೆರವಣಿಗೆ ಹೊರಟಿತು. ಸ್ವಯಂ ಸೇವಕರು ಮೆರವಣಿಗೆಯ ಮುಂದೆ ಲಾಠಿ ತಿರುಗಿಸುವ ಅನೇಕ ಪ್ರಯೋಗಗಳನ್ನು ಮಾಡುತ್ತಿದ್ದರು. ತಳಿರು ತೋರಣಗಳಿಂದ ಶೃಂಗರಿಸಲ್ಪಟ್ಟ ಮುಖ್ಯ ಬೀದಿಗಳಲ್ಲಿ ಮೆರವಣಿಗೆಯು ಸಾಗಿ ಸಭಾಸ್ಥಾನವಾದ ಶಿವಾನಂದ ಥೇಟರಿಗೆ ಬಂದಿತು. ಹಿಂದು ಮಾತಾಕಿ ಜೈ. ಹಿಂದು ಧರ್ಮಕಿ ಜೈ. ಮಹಾತ್ಮಾ ಗಾಂಧೀಕಿ ಜೈ. ವಂದೇ ಮಾತರಂ ಎಂಬ ಜಯಘೋಷಗಳು ನಡೆದಿದ್ದವು. ರಾಷ್ಟ್ರಧ್ವಜ ಮತ್ತು ಹಿಂದು ಧರ್ಮಧ್ವಜಗಳಿಂದ ಮೆರವಣಿಗೆಯ ಮೋಟಾರು ಸುಶೋಭಿಸುತ್ತಿತ್ತು. ಮೆರವಣಿಗೆಯು ಥೇಟರಿಗೆ ಬಂದನಂತರ ಇಲ್ಲಿಯ ಪಂ. ಬಸವಲಿಂಗ ಶಾಸ್ತ್ರಿಗಳು ಸಂಘದ ಪರವಾಗಿ ಸ್ವಾಗತಪರ ಭಾಷಣ ಮಾಡಿದರು. ಇಲ್ಲಿಯ ಹಿಂದು ನಾಗರಿಕರು ತೋರಿಸಿದ ಈ ಪ್ರೇಮಾದರಗಳಿಗೆ ನಾವು ಪಾತ್ರರಾಗಿಲ್ಲ. ಹಿಂದು ಧರ್ಮದ ಬಗ್ಗೆ ನಿಮ್ಮಲ್ಲಿರುವ ಪ್ರೇಮಾದರಗಳನ್ನೇ ಇವು ವ್ಯಕ್ತಗೊಳಿಸುತ್ತವೆಂದು ಶ್ರೀ. ಹರ್ಡೇಕರ ಮಂಜಪ್ಪನವರೂ ಶ್ರೀ. ಧರ್ಮದೇವಜಿಯವರೂ ತಮ್ಮ ಭಾಷಣಗಳಲ್ಲಿ ಹೇಳಿದರು. ಆ ಮೇಲೆ ಇಲ್ಲಿಯ ಪ್ರಸಿದ್ಧ ವ್ಯಾಪಾರಿಗಳಾದ ಶೇಟ ಶ್ರೀ. ಅಮೀಚಂದರವರಲ್ಲಿಗೆ ಈ ಅಥಿತಿಗಳನ್ನು ಕಳಿಸಲಾಯಿತು.

### ೯ ಜನರ ಶುದ್ಧೀಕರಣ.

ತಾ. ೩೦ ನೆಯ ಪ್ರಾತಃಕಾಲ ಶ್ರೀ. ಧರ್ಮದೇವಜಿಯುವರ ಹಸ್ತದಿಂದ ಹಿಂದು ಧ್ವಜಾರೋಹಣೆಯ ಸಮಾರಂಭ ಜರುಗಿತು. ಸಾಯಂಕಾಲ ಶ್ರೀ. ಹರ್ಡೇಕರ ಮಂಜಪ್ಪನವರ ಅಧ್ಯಕ್ಷತೆಯಲ್ಲಿ ಸಭೆಯ ಕಾರ್ಯ ಪ್ರಾರಂಭವಾಯಿತು. ಸ್ತ್ರೀಪುರುಷರಿಂದ ಥೇಟರು ತುಂಬಿಹೋಗಿತ್ತು. ಸ್ವಾಗತಾಧ್ಯಕ್ಷರಾದ ಪಂಡಿತ ಚ. ಯ. ಕವಲಿ ಮಾಸ್ತರವರು ತಮ್ಮ ಭಾಷಣದಲ್ಲಿ ಹಿಂದು ಧರ್ಮವನ್ನು ಬಿಟ್ಟು ಪರಮತಕ್ಕೆ ಹೋಗಿದ್ದ ೯ ಜನರಿಗೆ ಈ ಸಂಘದವರು ಶುದ್ಧೀಕರಿಸಿ ಹಿಂದು ಧರ್ಮದಲ್ಲಿ ತೆಗೆದುಕೊಂಡದ್ದನ್ನು ಹೇಳಿದರು.

ಶ್ರೀ. ಧರ್ಮದೇವಜಿಯರು ಹಿಂದು ಸಮಾಜ ಸುಧಾರಣೆಗೆ ಅಸ್ಪೃಶ್ಯತಾ ನಿವಾರಣೆ, ಬಾಲ್ಯವಿವಾಹ ನಿಷೇಧ, ವಿಧವಾ ವಿವಾಹದ ಅವಶ್ಯಕತೆ ಎಷ್ಟು ಅಗತ್ಯವೆಂಬುದನ್ನು ತಮ್ಮ ಭಾಷಣದಲ್ಲಿ ತಿಳಿಸಿದರು. ಅಧ್ಯಕ್ಷರೂ ಇವೇ ಸಂಗತಿಗಳನ್ನು ಪರಿಣಾಮಕಾರಿಯಾಗಿ ಹೇಳಿದರು.

ತಾ. ೩೧ ನೆಯ ದಿನದ ಸಭೆಯಲ್ಲಿ ಉಭಯ ವ್ಯಾಖ್ಯಾತರೂ ಹಿಂದು ಸಂಘಟನೆಯ ಬಗ್ಗೆ ಆವೇಶಪೂರ್ಣ ಭಾಷಣ ಮಾಡಿದರು. ಸಭೆಗೆ ವಿಶೇಷವಾಗಿ ಸ್ತ್ರೀ ಪುರುಷರು ಬಂದಿದ್ದರು. ಹಿಂದು ಸಂಘಟನೆಯು ಈ ದೇಶದ ರಾಜಕೀಯ ಸ್ವಾತಂತ್ರ್ಯಕ್ಕೂ ಅಗತ್ಯವೆಂದು ಶ್ರೀ. ಹರ್ಡೇಕರ ಮಂಜಪ್ಪನವರು ಪ್ರತಿಪಾದಿಸಿದರು. ಹಿಂದುಗಳ ವಿಘಟನೆಯೇ ರಾಜಕೀಯ ಪಾರತಂತ್ರ್ಯಕ್ಕೆ ಮುಖ್ಯ ಕಾರಣವೆಂದು ವಿವರಿಸಿದರು. ತಮಗೆ ಭಯಗೊಳಿಸುವ ಒಂದು ಪತ್ರವು ಬಾಗಲಕೋಟೆ ಮೊಹರ ಇದ್ದದ್ದು ಬಂದುದನ್ನು ಪ್ರಸ್ತಾಪಿಸಿ ನಮ್ಮ ನಿರ್ಬಲತೆಯೇ ಅನ್ಯರ ಅತ್ಯಾಚಾರಕ್ಕೆ ಉತ್ತೇಜನ ಕೊಡುತ್ತದೆಂದು ಹೇಳಿದರು. ಶ್ರೀ. ಗವಾಯಿ ಸದಾಶಿವಯ್ಯನವರು ಪದ್ಯವನ್ನು ಹೇಳಿದಮೇಲೆ ಜಯಘೋಷದೊಡನೆ ಈ ವಾರ್ಷಿಕೋತ್ಸವವು ಮುಗಿಯಿತು.

ಓರ್ವ ಪ್ರೇಕ್ಷಕ.

---



## ಪತ್ರಿಕೆಯ
## ೀಜನೆಗೆ
## ಮಹಾಜನರ
## ಸಹಾಯ.

ಗಳೂರು, ತಿಬಟೂರು,
ಸೂರು, ಅರಸಿಕೆರೆ
ಉತ್ಸಾಹ.

"ಸಮತಾವಾದ" ಎಂಬ ವಿಷಯದಲ್ಲಿ ಉಪನ್ಯಾಸ ಜರುಗಿತು. ಚಿತ್ರದುರ್ಗದ ಮಹಾಜನರ ಪರವಾಗಿ ಶರಣ ಸಂದೇಶದ ಕಾರ್ಯಕ್ಕೆ ೧೦೧ ರೂ. ಗಳ ನಿಧಿಯನ್ನು ಅಧ್ಯಕ್ಷರ ಹಸ್ತದಿಂದ ಕೊಡಲಾಯಿತು.

ಚಿಕ್ಕಮಗಳೂರು— ತಾ. ೧೩-೮-೩೮ ನೆಯ ದಿವಸ ಇಲ್ಲಿಯ ನಗರ ಭವನದಲ್ಲಿ ಕರ್ನಾಟಕ ಸಂಘದ ಪರವಾಗಿ ಸಭೆ ಸೇರಿದ್ದಿತು. ಇಲ್ಲಿಯ ಡೆಪ್ಟಿ ಕಮೀಶನರಾದ ಶ್ರೀಮಾನ್ ಬಿ. ಎಸ್. ರಾಘವೇಂದ್ರರಾಯರವರು ಅಗ್ರಾಸನ
ವಹಿಸಿದ್ದರು. ವಚನ ಸಾಹಿತ್ಯದ ವಿಚಾರವಾಗಿ ಭಾಷಣ
ಗಿತು. ಇಲ್ಲಿಯ ವೀರಶೈವ ಮಹಾಜನಗಳ ಪರವಾಗಿ ಶರಣ
ೇಶದ ಕಾರ್ಯಕ್ಕೆ ೧೦೧ ರೂ. ಗಳ ನಿಧಿಯನ್ನು ಅಧ್ಯಕ್ಷರ
ದಿಂದ ಕೊಡಿಸಲಾಯಿತು.

ತುಮಕೂರು— ತಾ. ೧೬-೮-೩೮ ನೆಯ ದಿನ ಇಲ್ಲಿಯ
ಶೈವ ತರುಣ ಸಂಘದ ಪರವಾಗಿ ಶ್ರೀ ಜಗದ್ಗುರು ಜಯದೇವ
ಶೈವ ವಿದ್ಯಾರ್ಥಿ ಭವನದಲ್ಲಿ ಸಾರ್ವಜನಿಕ ಸಭೆ ಸೇರಿದ್ದಿತು.
ು ಪ್ರಸಿದ್ಧ ಕಾಂಗ್ರೆಸ್ ಕೆಲಸಗಾರರಾದ ಶ್ರೀಮಾನ್ ಟಿ.
ಹ್ಮಣ್ಯರವರು ಬಿ. ಎ. ಎಲ್. ಎಲ್. ಬಿ. ಇವರು ಅಧ್ಯಕ್ಷರಾ
ು. ಹಿಂದು ಸಂಘಟನೆಯ ವಿಚಾರವಾಗಿ ಉಪನ್ಯಾಸ ಜರು
ಇಲ್ಲಿಯ ವೀರಶೈವ ಮಹಾಜನಗಳ ಪರವಾಗಿ ಶರಣ ಸಂ
ದ ಕಾರ್ಯಕ್ಕೆ ಶ್ರೀಮಾನ್ ಜಿ. ಆರ್. ಸಿದ್ಧಬಸವಪ್ಪನವರು
. ಎಲ್. ಎಲ್. ಬಿ. ಇವರು ೧೫೭ ರೂ. ಗಳ ನಿಧಿಯನ್ನು
ಕ್ಷರ ಹಸ್ತದಿಂದ ಕೊಡಿಸಿದರು.

ಶ್ರೀ ಸಿದ್ಧಗಂಗೆಯ ಶ್ರೀಮನ್ನಿರಂಜನ ಶ್ರೀ ಶಿವಕುಮಾರ ಸ್ವಾ
ಅವರು ಶರಣ ಸಂದೇಶದ ಕಾರ್ಯಕ್ಕೆ ೨೫ ರೂ. ಗಳನ್ನು ಆಶೀ
ಕಳುಹಿಸಿದುದೂ ಈ ಸಭೆಯಲ್ಲಿಯೇ ಕೊಡಲ್ಪಟ್ಟಿತು.

ತಾ. ೧೭-೮-೩೮ ನೆಯ ದಿನ ಇಲ್ಲಿಯೇ ಸಾರ್ವಜನಿಕ ಸಭೆ
ತು. "ಇಂದಿನ ರಾಜಕಾರಣ" ಎಂಬ ವಿಚಾರವಾಗಿ ಉಪ
ಜರುಗಿತು.

ತಿಬಟೂರು— ತಾ. ೧೮-೮-೩೮ ನೆಯ ದಿನ ಇಲ್ಲಿಯ ವೀರ
ನಂದಾಶ್ರಮದಲ್ಲಿ ಸಾರ್ವಜನಿಕ ಸಭೆ ಸೇರಿದ್ದಿತು. ಇಲ್ಲಿಯ
ಕಾಂಗ್ರೆಸ್ ಕೆಲಸಗಾರರಾದ ಶ್ರೀಮಾನ್ ಡಿ. ಎಸ್. ಮಲ್ಲ
ರು ಎಂ. ಎಲ್. ಸಿ. ಇವರು ಅಗ್ರಾಸನವನ್ನು ವಹಿಸಿದ್ದರು.
ಮ ಸಂಘಟನೆ" ಎಂಬ ವಿಷಯವಾಗಿ ಭಾಷಣ ಜರುಗಿತು.

ತಾ. ೧೯-೮-೩೮ ನೆಯ ದಿನ ಇಲ್ಲಿಯ ಕರ್ನಾಟಕ ಸಂಘದ
ಗಿ ಆರ್ಯ ಬಾಲಿಕಾ ಪಾಠಶಾಲೆಯಲ್ಲಿ ಸಾರ್ವಜನಿಕ ಸಭೆ
ತು. ಕೋಲಾರದ ಮುನಸೀಫರಾದ ಶ್ರೀಮಾನ್ ಟಿ. ಎನ್.
ನವರು ಬಿ. ಎ. ಎಲ್. ಎಲ್. ಬಿ. ಇವರು ಅಧ್ಯಕ್ಷರಾಗಿದ್ದರು.
ಸಾಹಿತ್ಯದಲ್ಲಿ ವಚನಕಾರರ ಸ್ಥಾನ" ಎಂಬ ವಿಷಯವಾಗಿ
ನ್ಯಾಸ ಜರುಗಿತು.

ತಾ. ೨೦-೮-೩೮ ನೆಯ ದಿನ ಮೇಲಣ ವಿಷಯುವನ್ನೇ ಮುಂ
ಶಿವಾನಂದಾಶ್ರಮದಲ್ಲಿ ಉಪನ್ಯಾಸ ನಡೆಸಿದ್ದಾಯಿತು. ತಿಬ
ಮಹಾಜನಗಳ ಪರವಾಗಿ ಶರಣಸಂದೇಶದ ಕಾರ್ಯಕ್ಕೆ

# ಮೈಸೂರು ದಸರಾ ಉತ್ಸವ.

ಹಿಂದುಸ್ಥಾನದಲ್ಲಿಯೇ ಖ್ಯಾತಿಗೊಂಡ ಮೈಸೂರು ದಸರಾ ಮಹೋತ್ಸವವು ಈ ತಿಂಗಳ ಕೊನೆಯ ವಾರದಲ್ಲಿ ಆರಂಭವಾಗುತ್ತದೆ. ಉತ್ಸವದ ಏರ್ಪಾಟುಗಳು ಮೈಸೂರಿನಲ್ಲಿ ಭರದಿಂದ ಸಾಗಿವೆ. ವಿದ್ಯುಚ್ಛಕ್ತಿ ಶಾಖೆಯವರು ಪ್ರತಿ ವರುಷದಂತೆ ರಾಜಬೀದಿಗಳಲ್ಲಿ ವಿದ್ಯುದ್ದೀಪಗಳನ್ನು ಅಂದವಾಗಿ ಹಾಕುತ್ತಿದ್ದಾರೆ. ಜಗತ್ತಿನಲ್ಲಿಯೇ ಪ್ರಖ್ಯಾತವಾದ ಮೈಸೂರು ಉದ್ಯಾನಗಳನ್ನು ಅಂದವಾಗಿ ಕಾಪಾಡಿಕೊಳ್ಳುತ್ತಿದ್ದಾರೆ. ಮೈಸೂರಿನಲ್ಲಿಯೂ ಈ ವರ್ಷ ಚೆನ್ನಾಗಿ ಈಗಾಗಲೇ ಮಳೆಯಾದುದರಿಂದ ಎಲ್ಲ ಉದ್ಯಾನಗಳಲ್ಲಿಯೂ ಸುಂದರವಾದ ಹೂವಿನ ಗಿಡಗಳೂ ಹಸರು ಹುಲ್ಲುಗಳೂ ಬೆಳೆದು ಕಂಗೊಳಿಸುತ್ತಲಿವೆ. ನಗರಸಭೆಯವರೂ ನಗರ ನೈರ್ಮಲ್ಯವನ್ನು ತುಂಬಾ ಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದಾರೆ. ಯಾವ ತರದ ಸಾಂಕ್ರಾಮಿಕ ರೋಗಗಳು ಮೈಸೂರಿನಲ್ಲಿಲ್ಲ. ರೇಲ್ವೆ ಶಾಖೆಯವರೂ ಪದ್ಧತಿಯಂತೆ ರೇಲ್ವೆ ದರದಲ್ಲಿ ಸೌಲಭ್ಯವನ್ನು ಕಲ್ಪಿಸಿಕೊಡುವುದರಿಂದ ಈ ವರ್ಷವೂ ಮೈಸೂರು ದಸರಾ ಮಹೋತ್ಸವಕ್ಕೆ ಲಕ್ಷಾಂತರ ಜನಗಳು ಸೇರುವರೆಂಬುದರಲ್ಲಿ ಸಂದೇಹವಿಲ್ಲ. ಅನೇಕ ಭಾರತೀಯ ಮತ್ತು ಹೊರಗಿನ ಅತಿಥಿಗಳನ್ನು ದಸರಾ ಉತ್ಸವಕ್ಕೆ ಆಹ್ವಾನಿಸುವವರಿದ್ದಾರೆ.

ಸಪ್ಟಂಬರ್ ೨೮ ನೆಯ ತಾರೀಖಿನ ದಿವಸ ನವರಾತ್ರಿಯ ಹಬ್ಬವು ಪ್ರಾರಂಭವಾಗುತ್ತದೆ. ಆ ದಿನ ಪ್ರಾತಃಕಾಲ ಶ್ರೀಮನ್ಮಹಾರಾಜರವರು ಶುಭ ಮುಹೂರ್ತದಲ್ಲಿ ಅರಮನೆಯಲ್ಲಿ ಸಿಂಹಾಸನಾರೂಢರಾಗಿ ದರಬಾರವನ್ನು ನಡೆಯಿಸುತ್ತಾರೆ. ಅಂದಿನಿಂದ ೮ ದಿವಸಗಳವರೆಗೂ ಪ್ರತಿ ಸಾಯಂಕಾಲ ದರಬಾರು ನಡೆಯುತ್ತದೆ. ಸಪ್ಟಂಬರ್ ೩೦ ನೆಯ ತಾರೀಖಿನ ದಿವಸ ಸರಸ್ವತಿ ಪೂಜೆಯೂ ಮರು ದಿನ ದುರ್ಗಾ ಪೂಜೆಯೂ ನಡೆಯುತ್ತದೆ. ಮಹಾನವಮಿಯ ದಿವಸ ಮಹಾರಾಜರವರು ಅರಮನೆಯ ಮುಂಭಾಗದ ಅಂದವಾದ ಮಂಟಪದಲ್ಲಿ ಆಯುಧ, ಗಜಾಶ್ವ ಪೂಜೆಗಳನ್ನು ಮಾಡುತ್ತಾರೆ. ಅದೇ ದಿವಸ ಸಾಯಂಕಾಲ ಯುರೋಪಿಯನ್ ಅತಿಥಿಗಳಿಗಾಗಿ ದರಬಾರ್ ನಡೆಯುತ್ತದೆ! ಮರು ದಿನವೇ ವಿಜಯ ದಶಮಿಯ ಮಹೋತ್ಸವವು ನಡೆಯುತ್ತದೆ.

ಮೈಸೂರಿನ ದಸರಾ ವಸ್ತು ಪ್ರದರ್ಶನವೂ ಸಪ್ಟಂಬರ ೨೮ ನೆಯ ತಾರೀಖಿನ ದಿವಸ ಪ್ರಾರಂಭವಾಗಿ ಮುಂದೆ ೧೫ ದಿವಸಗಳ ವರೆಗೂ ತೆರೆಯಲ್ಪಟ್ಟಿರುತ್ತದೆ. ಅದೇ ಕಾಲಕ್ಕೇನೇ ಮೈಸೂರು ಸಹಕಾರ ಸಮ್ಮೇಲನ, ಮೈಸೂರು ಸ್ಕೌಟ್ ವಾರ್ಷಿಕ ಸಭೆ, ವಿಶ್ವವಿದ್ಯಾಲಯದ ಪದವೀದಾನ ಸಮಾರಂಭ ಮೊದಲಾದವುಗಳು ಜರುಗುತ್ತವೆ.

---

## ಶ್ರೀ ಕುಮಾರ ಸ್ವಾಮಿಗಳ ಸಂಚಾರ.

ಧಾರವಾಡದ ನವಕಲ್ಯಾಣ ಮಠದ ಶ್ರೀ ಕುಮಾರ ಸ್ವಾಮಿಗಳು (ಬಿ. ಎ.) ಇವರು ತಾ. ೧೯-೮-೧೯೩೮ ನೆಯ ದಿವಸ ಅಲ್ಲಲ್ಲಿಯ ಆಮಂತ್ರಣದ ಮೇರೆಗೆ ವಿಜಾಪುರಕ್ಕೆ ಹೊರಟುಹೋಗುವಾಗ ದಾರಿಯಲ್ಲಿ ಬಾಗಲಕೋಟೆಯ ಸ್ಟೇಶನ್‌ದ ಮೇಲೆ ಶ್ರೀ. ಕಲಬುರ್ಗಿ ವಕೀಲರು, ಶ್ರೀ. ಕುಬಸದ ಶಿವಸಂಗಪ್ಪನವರು ತಮ್ಮಲ್ಲಿ ಇಳಿದು ಭಾಷಣಮಾಡಬೇಕಂತಾ ಬಹಳವಾಗಿ ಕೇಳಿಕೊಂಡ ಕಾರಣ ಮುಂದಿನ ಪಯಣ ತಪ್ಪುತ್ತದೆಂತಲೂ ತಾ. ೨೦, ೨೧, ೨೨ ಅಗಸ್ಟ ೧೯೩೮ ಈ ಮೂರು ದಿವಸ ವಿಜಾಪುರದಲ್ಲಿ ಭಾಷಣ ಇಟ್ಟ ಕಾರಣ ಬರುವಾಗ ಇಳಿಯುತ್ತೇವೆಂತ ಹೇಳಿ ಮುಂದೆ ವಿಜಾಪುರ ಸ್ಟೇಶನ್ನದಲ್ಲಿ ಇಳಿದ ನಂತರ ಪ್ರಮುಖ ಜನರು ಸ್ವಾಮಿಗಳನ್ನು ಆದರದಿಂದ ಬರಮಾಡಿಕೊಂಡು ಸಿದ್ಧೇಶ್ವರ ಸಂಸ್ಥೆಯಲ್ಲಿ ಇಳಿಸಿದರು.

ಮುಂದೆ ಮೇಲೆ ಬರೆದಂತೆ ತಾ. ೨೦, ೨೧, ೨೨ ಈ ಮೂರು ದಿವಸ ಮೊದಲೇ ಸ್ವಾಮಿಗಳು ಮಠಗಳಲ್ಲಿ ವ್ಯಾಖ್ಯಾನಗಳನ್ನು ಮಾಡುವುದಿಲ್ಲವೆಂತ ತಿಳಿಸಿದ ಮೇರೆಗೆ ಅಲ್ಲಿಯವರು ಶೆಘರ್ಡ ಹಾಲಿನಲ್ಲಿ "ಶರಣರ ಸೊಬಗು ಎಲ್ಲಿ" ಎಂಬ ವಿಷಯದ ಮೇಲೆ ಒಳ್ಳೇ ಸ್ಫೂರ್ತಿದಾಯಕ, ಜನರ ಮೇಲೆ ಒಳ್ಳೇ ಪರಿಣಾಮವಾಗುವಂತೆ ಭಾಷಣಮಾಡಿದರು. ಭಾಷಣ ಕೇಳಲಿಕ್ಕೆ ದಿನದಿನಕ್ಕೆ ಹೆಚ್ಚು ಹೆಚ್ಚು ಜನರು ಕೂಡುತ್ತಿದ್ದರು. ಅಂತು ಎಷ್ಟೋ ಜನರು ಸ್ವಾಮಿ ವಿವೇಕಾನಂದರಂತೆ ವ್ಯಾಖ್ಯಾನ ಕೊಡುವರು. ಇವರಂತಹ ಭಾಷಣ ಯಾರದೂ ಕೇಳಿದ್ದಿಲ್ಲ ಎಂತ ಅನ್ನುತ್ತಿದ್ದರು. ಅಂತು ಈ ಸರಿಗೆ ಎಷ್ಟೋ ಊರುಗಳಿಂದ ಆಮಂತ್ರಣಗಳು ಬಂದಿದ್ದರೂ ಎಷ್ಟೋ ಜನರು ಸ್ವತಃ ಕರೆಯಲಿಕ್ಕೆ ಬಂದರೂ ಹೋಗದೆ ಇದ್ದು ಈಗ ಈ ಕಡೆಗೆ ಹೋದದ್ದು ಬಹಳೇ ಸಂತೋಷದ ಸಂಗತಿಯಾಗಿದೆ. ಹುಬ್ಬಳ್ಳಿಯಲ್ಲಿ ಮಾತ್ರ ಒಂದು ವರ್ಷಕ್ಕೊಂದೊಂದರಂತೆ ೩ ಸಾರೆ ಒಳ್ಳೇ ಉಜ್ವಲ ಭಾಷಣಗಳು ಆಗಿರುವವು.

ಹೀಗೆಯೇ ಇನ್ನು ಮುಂದೆ ಭಾಷಣಗಳನ್ನು ಇದರಂತೆಯೇ ಕೊಡುತ್ತ ಹೋದರೆ ಜನರಿಗೆ ಬ ಸ ವೇ ಶ್ವ ರ ನ ನಿಜವಾದ ಮಾ ರ್ಗ ವು ಬೋಧವಾಗುತ್ತದೆ. ಇವರ ಸಂಗಡ ಹುಬ್ಬಳ್ಳಿಯ ವ್ಯಾಪಾರಸ್ಥರಾದ ಶ್ರೀ ಗುರುಸಿದ್ಧಪ್ಪ ಭೂಸನವರ ಮತ್ತು ಶ್ರೀ ಮೂರುಸಾವಿರಪ್ಪ ಸಾದರಹಳ್ಳಿ ಇವರು ಹೋಗಿರುವರು. ವಿಜಾಪುರದ ನಂತರ ಮಹೇಂದರಗಿ ಸೋಲಾಪುರಕ್ಕೆ ಹೋಗಿ ಅಲ್ಲಿಯೂ ೩ ದಿವಸಗಳ ವರೆಗೆ ಭಾಷಣಗಳನ್ನು ಮಾಡುವವರಿದ್ದಾರೆ.

---

## ಕಷ್ಟಕ್ಕೀಡಾದ ಬನ್ನು ಜನರಿಗೆ ಸಹಾಯ.

ಬನ್ನು ನಗರದ ಮೇಲೆ ಆದ ಹಲ್ಲೆಯ ಸಂಬಂಧವಾಗಿ ಸರಹದ್ದ ಪ್ರಾಂತ ಸರಕಾರದವರು ಒಂದು ಈ ರೀತಿಯ ಪ್ರಕಟನೆಯನ್ನು ಹೊರಡಿಸಿದ್ದಾರೆ.—

ಬನ್ನು ನಗರದ ಮೇಲೆ ಪುಂಡರು ಮಾಡಿದ ಹಲ್ಲೆಗಳನ್ನು ಕುರಿತು ಸರಕಾರವು ಅನೇಕ ರೀತಿಯಲ್ಲಿ ವಿಚಾರಮಾಡಿತು. ಈ ಹಲ್ಲೆಗಳಿಂದ ಕಷ್ಟಕ್ಕೀಡಾದ ಜನಗಳಿಗೆ ಪರಿಹಾರವೆಂದು ೨೦೦೦೦ ರೂ. ಗಳನ್ನು ತೆಗೆದಿಡಲಾಗಿದೆ. ಈ ಹಣವನ್ನು ಹೇಗೆ ವೆಚ್ಚ ಮಾಡಬೇಕೆಂಬುದನ್ನು ನಿರ್ಧರಿಸಲು ಒಂದು ಸಮಿತಿಯನ್ನು ನಿಯಮಿಸಲಾಗಿದೆ. ಬನ್ನು ನಗರದ ಭದ್ರತೆಯನ್ನು ಬಲಪಡಿಸಲಾಗಿದೆ. ಬನ್ನು ಜಿಲ್ಲೆಯ ಪರಿಸ್ಥಿತಿಯನ್ನು ವಿಚಾರಿಸಲು ಒಂದು ಸಮಿತಿ ನಿಯಮಿಸುವ ಯೋಜನೆ ನಡೆದಿದೆ.

---

## ಕಾಶ್ಮೀರದಲ್ಲಿ ಗಲಭೆ.

ಕಾಶ್ಮೀರ ಸಂಸ್ಥಾನದಲ್ಲಿ ರಾಜಕೀಯ ಸಭೆಸಮ್ಮೇಲನಗಳನ್ನು ಕೂಡಿಸಬಾರದೆಂದು ಸರಕಾರದವರು ಆಜ್ಞೆ ಹೊರಡಿಸಿದ್ದಾರೆ. ಇದನ್ನು ಉಲ್ಲಂಘಿಸಿ ಮುಸಲ್ಮಾನರು ಒಂದು ಪಂಚಾಯತನ್ನು ನೆರೆಯಿಸಿದರು. ಪಂಚಾಯತಿನ ಅಧ್ಯಕ್ಷರಾದ ಎಸ್. ಎಂ. ಅಬ್ದುಲ್ಲಾರವರನ್ನೂ ಬೇರೆ ಆರು ಜನರನ್ನೂ ಸೆರೆಹಿಡಿಯಲಾಗಿದೆ.

## ಪ್ರಚಂಡ ಮೆರವಣಿಗೆ.

ತಾ. ೨೯-೮-೩೮ ನೆಯ ದಿವಸ ಸಾಯಂಕಾಲ ಬೆಂಗಳೂರು ಸೆಂಜರ ಗಾಡಿಯಲ್ಲಿ ಅಧ್ಯಕ್ಷರೂ ಪ್ರಸಿದ್ಧ ಆರ್ಯಸಮಾಜ ಾರಕರಾದ ಶ್ರೀಮಾನ್ ಧರ್ಮದೇವಜಿಯವರೂ ಬಂದೊಡನೆ ನ್ನಿನಿಂದಲೇ ಪ್ರಚಂಡ ಮೆರವಣಿಗೆ ಹೊರಟಿತು. ಸ್ವಯಂ ಕರು ಮೆರವಣಿಗೆಯ ಮುಂದೆ ಲಾಠಿ ತಿರುಗಿಸುವ ಅನೇಕ ೋಗಗಳನ್ನು ಮಾಡುತ್ತಿದ್ದರು. ತಳಿರು ತೋರಣಗಳಿಂದ ಶೃಂ ಲ್ಪಟ್ಟ ಮುಖ್ಯ ಬೀದಿಗಳಲ್ಲಿ ಮೆರವಣಿಗೆಯು ಸಾಗಿ ಸಭಾ ನವಾದ ಶಿವಾನಂದ ಥೇಟರಿಗೆ ಬಂದಿತು. ಹಿಂದು ಮಾತಾಕಿ ಜೈ. ದು ಧರ್ಮಕಿ ಜೈ. ಮಹಾತ್ಮಾ ಗಾಂಧೀಕಿ ಜೈ. ವಂದೇ ಮಾ ಎಂಬ ಜಯಘೋಷಗಳು ನಡೆದಿದ್ದವು. ರಾಷ್ಟ್ರಧ್ವಜ ಮತ್ತು ದ: ಧರ್ಮಧ್ವಜಗಳಿಂದ ಮೆರವಣಿಗೆಯ ಮೋಟಾರು ಸುಶೋಭಿ ತ್ತು. ಮೆರವಣಿಗೆಯು ಥೇಟರಿಗೆ ಬಂದನಂತರ ಇಲ್ಲಿಯ ಪಂ. ವಲಿಂಗ ಶಾಸ್ತ್ರಿಗಳು ಸಂಘದ ಪರವಾಗಿ ಸ್ವಾಗತಪರ ಭಾಷಣ ಡಿದರು. ಇಲ್ಲಿಯ ಹಿಂದು ನಾಗರಿಕರು ತೋರಿಸಿದ ಈ ಪ್ರೇಮಾ ಗಳಿಗೆ ನಾವು ಪಾತ್ರರಾಗಿಲ್ಲ. ಹಿಂದು ಧರ್ಮದ ಬಗ್ಗೆ ನಿಮ್ಮಲ್ಲಿ ಪ್ರೇಮಾದರಗಳನ್ನೇ ಇವು ವ್ಯಕ್ತಗೊಳಿಸುತ್ತವೆಂದು ಶ್ರೀ. ರ್ಕರ ಮಂಜಪ್ಪನವರೂ ಶ್ರೀ. ಧರ್ಮದೇವಜಿಯವರೂ ತಮ್ಮ ಷಣಗಳಲ್ಲಿ ಹೇಳಿದರು. ಆ ಮೇಲೆ ಇಲ್ಲಿಯ ಪ್ರಸಿದ್ಧ ವ್ಯಾಪಾರಿಗ ದ ಶೇಟ ಶ್ರೀ. ಅಮೀಚಂದರವರಲ್ಲಿಗೆ ಈ ಅಥಿತಿಗಳನ್ನು ಕಳಿಸ ಯಿತು.

### ೯ ಜನರ ಶುದ್ಧೀಕರಣ.

ತಾ. ೩೦ ನೆಯ ಪ್ರಾತಃಕಾಲ ಶ್ರೀ. ಧರ್ಮದೇವಜಿಯವರ ತ್ತದಿಂದ ಹಿಂದು ಧ್ವಜಾರೋಹಣೆಯ ಸಮಾರಂಭ ಜರುಗಿತು. ಯಂಕಾಲ ಶ್ರೀ. ಹರ್ಡೇಕರ ಮಂಜಪ್ಪನವರ ಅಧ್ಯಕ್ಷತೆಯಲ್ಲಿ ಸಭೆ ಕಾರ್ಯ ಪ್ರಾರಂಭವಾಯಿತು. ಸ್ತ್ರೀಪುರುಷರಿಂದ ಥೇಟರು ತುಂ ಹೋಗಿತ್ತು. ಸ್ವಾಗತಾಧ್ಯಕ್ಷರಾದ ಪಂಡಿತ ಚ. ಯ. ಕವಲಿ ಾಸ್ತ್ರರವರು ತಮ್ಮ ಭಾಷಣದಲ್ಲಿ ಹಿಂದು ಧರ್ಮವನ್ನು ಬಿಟ್ಟು ೆಮತಕ್ಕೆ ಹೋಗಿದ್ದ ೯ ಜನರಿಗೆ ಈ ಸಂಘದವರು ಶುದ್ಧೀಕರಿಸಿ ಂದು ಧರ್ಮದಲ್ಲಿ ತೆಗೆದುಕೊಂಡದ್ದನ್ನು ಹೇಳಿದರು.

ಶ್ರೀ. ಧರ್ಮದೇವಜಿಯರು ಹಿಂದು ಸಮಾಜ ಸುಧಾರಣೆಗೆ ಸ್ಪೃಶ್ಯತಾ ನಿವಾರಣೆ, ಬಾಲ್ಯವಿವಾಹ ನಿಷೇಧ, ವಿಧವಾ ವಿವಾಹದ ವಶ್ಯಕತೆ ಎಷ್ಟು ಅಗತ್ಯವೆಂಬುದನ್ನು ತಮ್ಮ ಭಾಷಣದಲ್ಲಿ ತಿಳಿಸಿ ರು. ಅಧ್ಯಕ್ಷರೂ ಇವೇ ಸಂಗತಿಗಳನ್ನು ಪರಿಣಾಮಕಾರಿಯಾಗಿ ೇಳಿದರು.

ತಾ. ೩೧ ನೆಯ ದಿನದ ಸಭೆಯಲ್ಲಿ ಉಭಯ ವ್ಯಾಖ್ಯಾತರೂ ಂದು ಸಂಘಟನೆಯ ಬಗ್ಗೆ ಆವೇಶಪೂರ್ಣ ಭಾಷಣ ಮಾಡಿದರು. ಭೆಗೆ ವಿಶೇಷವಾಗಿ ಸ್ತ್ರೀ ಪುರುಷರು ಬಂದಿದ್ದರು. ಹಿಂದು ಸಂಘಟ ಯು ಈ ದೇಶದ ರಾಜಕೀಯ ಸ್ವಾತಂತ್ರ್ಯಕ್ಕೂ ಅಗತ್ಯವೆಂದು ೀ. ಹರ್ಡೇಕರ ಮಂಜಪ್ಪನವರು ಪ್ರತಿಪಾದಿಸಿದರು. ಹಿಂದುಗಳ ಘಟನೆಯೇ ರಾಜಕೀಯ ಪಾರತಂತ್ರ್ಯಕ್ಕೆ ಮುಖ್ಯ ಕಾರಣವೆಂದು ವರಿಸಿದರು. ತಮಗೆ ಭಯಗೊಳಿಸುವ ಒಂದು ಪತ್ರವು ಬಾಗಲ ೋಟೆ ಮೊಹರ ಇದ್ದದ್ದು ಬಂದುದನ್ನು ಪ್ರಸ್ತಾಪಿಸಿ ನಮ್ಮ ನಿರ್ಬಲ ಯೇ ಅನ್ಯರ ಅತ್ಯಾಚಾರಕ್ಕೆ ಉತ್ತೇಜನ ಕೊಡುತ್ತದೆಂದು ಹೇಳಿ ರು. ಶ್ರೀ. ಗವಾಯಿ ಸದಾಶಿವಯ್ಯನವರು ಪದ್ಯವನ್ನು ಹೇಳಿದಮೇಲೆ ಜಯಘೋಷದೊಡನೆ ಈ ವಾರ್ಷಿಕೋತ್ಸವವು ಮುಗಿಯಿತು.

ಓರ್ವ ಪ್ರೇಕ್ಷಕ.

---



## ಪತ್ರಿಕೆಯ :ಜನೆಗೆ ಮಹಾಜನರ ಸಹಾಯ.

—

ಂಗಳೂರು, ತಿಬಟೂರು, ೈಸೂರು, ಅರಸೀಕೆರೆ ಉತ್ಸಾಹ.

"ಸಮತಾವಾದ" ಎಂಬ ವಿಷಯದಲ್ಲಿ ಉಪನ್ಯಾಸ ಜರುಗಿತು. ಚಿತ್ರದುರ್ಗದ ಮಹಾಜನರ ಪರವಾಗಿ ಶರಣ ಸಂದೇಶದ ಕಾರ್ಯಕ್ಕೆ ೧೦೧ ರೂ. ಗಳ ನಿಧಿಯನ್ನು ಅಧ್ಯಕ್ಷರ ಹಸ್ತದಿಂದ ಕೊಡಲಾಯಿತು.

ಚಿಕ್ಕಮಗಳೂರು— ತಾ. ೧೩-೮-೩೮ ನೆಯ ದಿವಸ ಇಲ್ಲಿಯ ನಗರ ಭವನದಲ್ಲಿ ಕರ್ನಾಟಕ ಸಂಘದ ಪರವಾಗಿ ಸಭೆ ಸೇರಿದ್ದಿತು. ಇಲ್ಲಿಯ ಡೆಪ್ಟಿ ಕಮೀಶನರಾದ ಶ್ರೀಮಾನ್ ಬಿ. ಎಸ್. ರಾಘವೇಂದ್ರರಾಯರವರು ಅಗ್ರಾಸನ ವಹಿಸಿದ್ದರು. ವಚನ ಸಾಹಿತ್ಯದ ವಿಚಾರವಾಗಿ ಭಾಷಣ ಿತು. ಇಲ್ಲಿಯ ವೀರಶೈವ ಮಹಾಜನಗಳ ಪರವಾಗಿ ಶರಣ ೇಶದ ಕಾರ್ಯಕ್ಕೆ ೧೦೧ ರೂ. ಗಳ ನಿಧಿಯನ್ನು ಅಧ್ಯಕ್ಷರ ಿಂದ ಕೊಡಿಸಲಾಯಿತು.

ತುಮಕೂರು— ತಾ. ೧೬-೮-೩೮ ನೆಯ ದಿನ ಇಲ್ಲಿಯ ೈವ ತರುಣ ಸಂಘದ ಪರವಾಗಿ ಶ್ರೀ ಜಗದ್ಗುರು ಜಯದೇವ ೈವ ವಿದ್ಯಾರ್ಥಿ ಭವನದಲ್ಲಿ ಸಾರ್ವಜನಿಕ ಸಭೆ ಸೇರಿದ್ದಿತು. ು ಪ್ರಸಿದ್ಧ ಕಾಂಗ್ರೆಸ್ ಕೆಲಸಗಾರರಾದ ಶ್ರೀಮಾನ್ ಟಿ. ಹ್ಮಣ್ಯರವರು ಬಿ. ಎ. ಎಲ್. ಎಲ್. ಬಿ. ಇವರು ಅಧ್ಯಕ್ಷರಾ ು. ಹಿಂದು ಸಂಘಟನೆಯ ವಿಚಾರವಾಗಿ ಉಪನ್ಯಾಸ ಜರು ಇಲ್ಲಿಯ ವೀರಶೈವ ಮಹಾಜನಗಳ ಪರವಾಗಿ ಶರಣ ಸಂ ಕಾರ್ಯಕ್ಕೆ ಶ್ರೀಮಾನ್ ಜಿ. ಆರ್. ಸಿದ್ಧಬಸವಪ್ಪನವರು . ಎಲ್. ಎಲ್. ಬಿ. ಇವರು ೧೫೭ ರೂ. ಗಳ ನಿಧಿಯನ್ನು ್ಷರ ಹಸ್ತದಿಂದ ಕೊಡಿಸಿದರು.

ಶ್ರೀ ಸಿದ್ಧಗಂಗೆಯ ಶ್ರೀಮನ್ನಿರಂಜನ ಶ್ರೀ ಶಿವಕುಮಾರ ಸ್ವಾ ವರು ಶರಣ ಸಂದೇಶದ ಕಾರ್ಯಕ್ಕೆ ೨೫ ರೂ. ಗಳನ್ನು ಆಶೀ ಕಳುಹಿಸಿದುದೂ ಈ ಸಭೆಯಲ್ಲಿಯೇ ಕೊಡಲ್ಪಟ್ಟಿತು.

ತಾ. ೧೭-೮-೩೮ ನೆಯ ದಿನ ಇಲ್ಲಿಯೇ ಸಾರ್ವಜನಿಕ ಸಭೆ ತು. "ಇಂದಿನ ರಾಜಕಾರಣ" ಎಂಬ ವಿಚಾರವಾಗಿ ಉಪ ಜರುಗಿತು.

ತಿಬಟೂರು— ತಾ. ೧೮-೮-೩೮ ನೆಯ ದಿನ ಇಲ್ಲಿಯ ವೀರ ನಂದಾಶ್ರಮದಲ್ಲಿ ಸಾರ್ವಜನಿಕ ಸಭೆ ಸೇರಿದ್ದಿತು. ಇಲ್ಲಿಯ ್ಧ ಕಾಂಗ್ರೆಸ್ ಕೆಲಸಗಾರರಾದ ಶ್ರೀಮಾನ್ ಡಿ. ಎಸ್. ಮಲ್ಲ ರು ಎಂ. ಎಲ್. ಸಿ. ಇವರು ಅಗ್ರಾಸನವನ್ನು ವಹಿಸಿದ್ದರು. ು ಸಂಘಟನೆ" ಎಂಬ ವಿಷಯವಾಗಿ ಭಾಷಣ ಜರುಗಿತು.

ತಾ. ೧೯-೮-೩೮ ನೆಯ ದಿನ ಇಲ್ಲಿಯ ಕರ್ನಾಟಕ ಸಂಘದ ಿ ಆರ್ಯ ಬಾಲಿಕಾ ಪಾಠಶಾಲೆಯಲ್ಲಿ ಸಾರ್ವಜನಿಕ ಸಭೆ ತು. ಕೋಲಾರದ ಮುನಸೀಫರಾದ ಶ್ರೀಮಾನ್ ಟಿ. ಎನ್. ್ನವರು ಬಿ. ಎ. ಎಲ್. ಎಲ್. ಬಿ. ಇವರು ಅಧ್ಯಕ್ಷರಾಗಿದ್ದರು. ಸಾಹಿತ್ಯದಲ್ಲಿ ವಚನಕಾರರ ಸ್ಥಾನ' ಎಂಬ ವಿಷಯವಾಗಿ ್ಯಾಸ ಜರುಗಿತು.

ತಾ. ೨೦-೮-೩೮ ನೆಯ ದಿನ ಮೇಲಣ ವಿಷಯವನ್ನೇ ಮುಂ ಶಿವಾನಂದಾಶ್ರಮದಲ್ಲಿ ಉಪನ್ಯಾಸ ನಡೆಸಿದ್ದಾಯಿತು. ತಿಬ ಮಹಾಜನಗಳ ಪರವಾಗಿ

# ಶ್ರೀ ಬಾಳೆಹಳ್ಳಿ ಸ್ವಾಮಿಗಳ

# ಅಡ್ಡಪಲ್ಲಕ್ಕಿ ಪ್ರಕರಣ.

## ಆರೋಪಿಗಳಿಗೆ ೨೫೦ ರೂ. ದಂಡ.

### ಇಲ್ಲವೆ ೩ ತಿಂಗಳು ಕಾರಾಗೃಹವಾಸ.

ಶ್ರೀ. ಬಾಳೆಹಳ್ಳಿ ಸ್ವಾಮಿಗಳು ೧೯೩೭ ನೆಯ ಇಸ್ವಿ ಜನವರಿ ತಿಂಗಳಿನಲ್ಲಿ ಹುಬ್ಬಳ್ಳಿಗೆ ಬಂದಿದ್ದರಷ್ಟೆ. ಆಗ್ಗೆ ಹುಬ್ಬಳ್ಳಿಯ ವೀರ ಶೈವ ಮುಂದಾಳುಗಳಾದ ಶ್ರೀಮಾನ್ ಸಿದ್ಧರಾಮಪ್ಪ ಪಾವಟೆ ವಕೀಲರೂ ಮತ್ತು ಶ್ರೀ. ವೀರಬಸವಪ್ಪ ಬಿಳೆ ಅಂಗಡಿ ವಕೀಲರೂ ಶ್ರೀ. ಬಾಳೆಹಳ್ಳಿ ಸ್ವಾಮಿಗಳು ವೀರಶೈವರ ಪೂರ್ವ ಪರಂಪರಾಗತ ಸಾಮಾಜಿಕ ನಿಯಮ ನಿಬಂಧನೆಗಳನ್ನು ವ್ಯತ್ಯಸ್ತಗೊಳಿಸುವ ಧರ್ಮ ವಿರೋಧಿ ಕಾರ್ಯದಲ್ಲಿ ಪ್ರವೃತ್ತರಾಗಿರುವುದರಿಂದ ಇವರು ವೀರ ಶೈವರಿಂದ ಗುರು ಗೌರವವನ್ನು ಹೊಂದಲು ಅನರ್ಹರಿರುವರೆಂದು ಪ್ರಚಂಡ ಚಳವಳಿಯನ್ನೆಬ್ಬಿಸಿದ್ದರು. ಇದನ್ನು ಸ್ವಾಮಿಗಳ ಪಕ್ಷದವರು ಸಹಿಸದೆ ಶ್ರೀ. ಪಾವಟೆ ವಕೀಲರ ಬಗ್ಗೆ ಅಗೌರವ ಮತ್ತು ಅಪಮಾನಕಾರಕವಾದ ಪ್ರಕಟನೆಗಳನ್ನು ಹೊರಡಿಸಿ ಹಂಚುತ್ತಿದ್ದರು. ಸ್ವಾಮಿಗಳ ಪಕ್ಷದವರು ಶ್ರೀ. ಪಾವಟೆ, ಶ್ರೀ. ಬಿಳಿ ಅಂಗಡಿ ಮತ್ತು ಕರುಣ.ಕರ್ನಾಟಕದ ಸಂಪಾದಕರಾದ ಶ್ರೀ. ಎಲ್. ಎಸ್. ಪಾಟೀಲ ಇವರು ಪ್ರಾಣಾಂತ ಹಿಂಸೆಯನ್ನು ಉತ್ತೇಜಿಸಿದರೆಂದು ಪ್ರಕಟನೆ ಹೊರಡಿಸಿ ಆರೋಪಿಸಿದ್ದರು. ಈ ಬಗ್ಗೆ ತೀರ್ಥಪ್ಪ, ಸಿದ್ಧಪ್ಪ, ಈಶ್ವರಪ್ಪ ಇವರ ಮೇಲೆ ಇಂಡಿಯನ್ ಪಿನಲ್‌ಕೋಡಿನ ೫೦೦-೫೦೧ ನೆಯ ಕಲಮಿನ ಪ್ರಕಾರ ಹುಬ್ಬಳ್ಳಿಯ ತಾಲೂಕ ಮಾಮಲೇದಾರ ಮತ್ತು ಮೊದಲನೆಯ ವರ್ಗದ ಮ್ಯಾಜಿಸ್ಟ್ರೇಟರಲ್ಲಿ ವ್ಯಾಜ್ಯ ಹೂಡಿದ್ದರು.

ಕಳೆದ ವಾರ ಮ್ಯಾಜಿಸ್ಟ್ರೇಟರು ತೀರ್ಪನ್ನು ಕೊಟ್ಟರು. ಮ್ಯಾಜಿಸ್ಟ್ರೇಟರು ತಮ್ಮ ತೀರ್ಪಿನಲ್ಲಿ ಪ್ರಕಟನೆಗಳು ಅತ್ಯಂತ ಬೀಭತ್ಸ, ಕುತ್ಸಿತ ಮತ್ತು ಅವಾಚ್ಯ ಶಬ್ದಗಳಿಂದ ಬರೆಯಲ್ಪಟ್ಟವೆಯೆಂದೂ ಶ್ರೀ. ಪಾವಟೆ ಮತ್ತು ಬಿಳಿ ಅಂಗಡಿಯವರಂತಹ ವಯೋವೃದ್ಧ ಗೌರವಿತರಾದ ವಕೀಲರಿಗೆ ತುಂಬಾ ಅಪಮಾನಕಾರಕವಾಗಿವೆಯೆಂದೂ ನಿರ್ಣಯಿಸಿ ಒಂದೊಂದು ಪ್ರಕರಣದಲ್ಲಿ ಒಬ್ಬೊಬ್ಬ ಆರೋಪಿಗೆ ೨೫೦ ರೂ. ಗಳ ದಂಡ ಇಲ್ಲವೆ ೩ ತಿಂಗಳುಗಳ ಕಾರಾಗೃಹವಾಸದ ಶಿಕ್ಷೆಯನ್ನು ವಿಧಿಸಿದರು.

ಈ ವ್ಯಾಜ್ಯದಲ್ಲಿ ಶ್ರೀ. ಅನಂತರಾವ ದೇಸಾಯಿ ವಕೀಲ ಶ್ರೀ. ಮುನವಳ್ಳಿ ವಕೀಲ ಮತ್ತು ಶ್ರೀ. ರಾಮರಾವ ದೇಶಪಾಂಡೆ ವಕೀಲ ಮೊದಲಾದವರ ಸಾಕ್ಷಿ ಆಗಿದ್ದವು. ಆರೋಪಿಗಳ ಪರವಾಗಿ ಶ್ರೀ. ಜಿ. ಸಿ. ಹಿರೇಮಠ ವಕೀಲ ಮತ್ತು ಶ್ರೀ. ಹಳೆವಾಡಿಮಠ ಬಿ. ಎ. ಎಲ್‌ಎಲ್. ಬಿ. ಬ್ಯಾಂಕ್ ಬ್ರ್ಯಾಂಚ್ ಮ್ಯಾನೇಜರ್ ಇವರು ಸಾಕ್ಷಿ ಹೇಳಿದ್ದರು.

---

—ಗೋವುಗಳನ್ನು ಕೊಲ್ಲುವುದು ತಮಗೆ ಹಕ್ಕಿದೆಯೆಂದು ಮೊಂಘೀರದ ೧೭ ಜನ ಮುಸಲ್ಮಾನರು ಜಿಲ್ಲಾ ಮ್ಯಾಜಿಸ್ಟ್ರೇಟರು ಹೊರಡಿಸಿದ ಗೋವಧೆಯ ಪ್ರತಿಬಂಧಕಾಜ್ಞೆಯನ್ನು ಉಲ್ಲಂಘಿಸಿದುದರಿಂದ ಅವರನ್ನು ಬಂಧನಗೊಳಿಸಲಾಗಿದೆ.

# ಶರಣ ಸಂದೇಶ ಪತ್ರಿಕೆಯ ಹೊಸ ಯೋಜನೆಗೆ ಮೈಸೂರು ಪ್ರಾಂತದ ಮಹಾಜನರ ೧೧೪೭ ರೂ. ಗಳ ಸಹಾಯ.

## ದಾವಣಗೆರೆ, ಚಿತ್ರದುರ್ಗ, ಚಿಕ್ಕಮಗಳೂರು, ತಿಬಟೂರು, ತುಮಕೂರು, ಬೆಂಗಳೂರು, ಮೈಸೂರು, ಅರಸೀಕೆರೆ ಈ ಸ್ಥಳಗಳಲ್ಲಿಯ ಉತ್ಸಾಹ.

ಶರಣ ಸಂದೇಶ ಪತ್ರಿಕೆಯು ಕಳೆದ ಏಳು ವರುಷಗಳಿಂದಲೂ ಮಾಡುತ್ತಿರುವ ಸೇವೆಯು ಅತ್ಯುಪಯುಕ್ತವಾದುದೆಂದೇ ತೋರಿದ ಕಾರಣ ಅದನ್ನೇ ಹೆಚ್ಚು ಪ್ರಮಾಣದಲ್ಲಿ ಮುಂದರಿಸಲು ೫೦೦೦ ರೂ. ಗಳ ಅವಶ್ಯಕತೆಯಿದೆಯೆಂದೂ ಈ ಕಾರ್ಯಕ್ಕೆ ಹುಬ್ಬಳ್ಳಿ ಮೂರು ಸಾವಿರ ಮಠದ ಶ್ರೀಮನ್ನಿರಂಜನ ಜಗದ್ಗುರು ಶ್ರೀ ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳವರು ೨೦೦೦ ರೂ. ಗಳ ಸಹಾಯ ಮಾಡುವುದಾಗಿ ಅಪ್ಪಣೆ ಕೊಡಿಸಿ ೫೦೦ ರೂ. ಗಳನ್ನು ಕಳುಹಿಸಿದ್ದಾರೆಂದೂ ಈ ಮುಂಚೆಯೇ ತಿಳಿಸಿದ್ದಾಗಿದ್ದಿತಷ್ಟೆ.

ಈ ಕಾರ್ಯಕ್ಕೋಸ್ಕರ ಹಣ ಕೂಡಿಸಲು ಕೆಲವು ಮಹಾಶಯರ ಕೋರಿಕೆಯ ಪ್ರಕಾರ ಕಳೆದ ೫ ನೆಯ ತಾರೀಖಿನಿಂದ ೨೯ ನೆಯ ತಾರೀಖಿನ ವರೆಗೆ ಮೈಸೂರು ಪ್ರಾಂತದ ೮ ಸ್ಥಳಗಳಲ್ಲಿ ಸಂಚರಿಸಿದೆನು. ಶರಣ ಸಂದೇಶವು ಹಿಂದು ಸಂಘಟನೆಗಾಗಿ ಮಾಡುತ್ತಿರುವ ಸೇವೆಯು ಕರ್ನಾಟಕದಲ್ಲಿಯೇ ಹೊಸದೆಂದೂ ಇದನ್ನು ಹೆಚ್ಚು ಪ್ರಮಾಣದಲ್ಲಿ ಮುಂದರಿಸುವುದು ಈ ಕಾಲಕ್ಕೆ ಬಹು ಅಗತ್ಯವಾಗಿದೆಯೆಂದೂ ಬಹು ಜನರು ಅಭಿಪ್ರಾಯಪಟ್ಟರಲ್ಲದೆ ಈ ಕಾರ್ಯಕ್ಕೆ ತುಂಬಾ ಸಹಾನುಭೂತಿಯನ್ನು ವ್ಯಕ್ತಗೊಳಿಸಿದರೆಂಬುದು ಈ ಕೆಳಗಿನ ಸಂಗತಿಗಳಿಂದ ವಾಚಕರಿಗೆ ವ್ಯಕ್ತವಾಗಬಹುದು.

### ಸಭೆ ಮತ್ತು ಧನ ಸಹಾಯ.

ದಾವಣಗೆರೆ— ತಾ. ೫-೮-೩೪ ನೆಯ ದಿವಸ ಇಲ್ಲಿಯ ಶ್ರೀ ವಿರಕ್ತಮಠದಲ್ಲಿ ಮಹಾಶಿವಾನುಭಾವಿಗಳಾದ ಬೆಂಗಳೂರಿನ ಶ್ರೀಮನ್ನಿರಂಜನ ಶ್ರೀ ಮಹಾದೇವ ಸ್ವಾಮಿಗಳ ಅಧ್ಯಕ್ಷತೆಯಲ್ಲಿ ಸಭೆ ಸೇರಿದ್ದಿತು. ಬಸವ ಸಂದೇಶದ ವಿಚಾರವಾಗಿ ಉಪನ್ಯಾಸ ಜರುಗಿತು.

ತಾ. ೬-೮-೩೪ ನೆಯ ದಿವಸ ಇಲ್ಲಿಯ ಕಾಂಗ್ರೆಸ್ ಕಮಿಟಿಯ ಪರವಾಗಿ ಶ್ರೀ ಶಿವಯೋಗೀಶ ಮಂದಿರದಲ್ಲಿ ಶ್ರೀಮಾನ್ ಉರವಕೊಂಡೆ ವೀರಬಸವಪ್ಪನವರು ಬಿ. ಎ ಎಲ್. ಎಲ್. ಬಿ. ಅಡ್ವೋಕೇಟ್ ಚಿತ್ರದುರ್ಗ ಇವರ ಅಧ್ಯಕ್ಷತೆಯಲ್ಲಿ ಸಭೆ ಸೇರಿದ್ದಿತು. "ರಾಷ್ಟ್ರೀಯ ಜೀವನ" ಎಂಬ ವಿಚಾರವಾಗಿ ಉಪನ್ಯಾಸ ನಡೆಯಿತು. ಅಸ್ಪೃಶ್ಯತಾ ನಿವಾರಣೆಯ ಸಂಬಂಧವಾಗಿ ಸಭೆಯಲ್ಲಿ ಪರಿಣಾಮಕಾರಿಯಾದ ಚರ್ಚೆ ಜರುಗಿತು. ದಾವಣಗೆರೆ ಮಹಾಜನಗಳ ಪರವಾಗಿ ಶರಣ ಸಂದೇಶ ಹೊಸ ಯೋಜನೆಗೆ ೨೫ ರೂ. ಗಳ ನಿಧಿಯನ್ನು ಇಲ್ಲಿಯ ಪ್ರಸಿದ್ಧ ಕಾಂಗ್ರೆಸ್ ಕೆಲಸಗಾರರಾದ ಶ್ರೀಮಾನ್ ಕೆ. ಶ್ರೀನಿವಾಸಶೆಟ್ಟರು ಕೊಟ್ಟರು.

ಚಿತ್ರದುರ್ಗ— ತಾ. ೮-೮-೩೪. ನೆಯ ದಿವಸ ಇಲ್ಲಿಯ ಪ್ರಸಿದ್ಧ ಕಾಂಗ್ರೆಸ್ ಕೆಲಸಗಾರರಾದ ಶ್ರೀಮಾನ್ ಎಸ್. ನಿಜಲಿಂಗಪ್ಪನವರು ಬಿ. ಎ. ಎಲ್. ಎಲ್. ಬಿ. ಇವರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ ಪರವಾಗಿ ಸಭೆ ಸೇರಿದ್ದಿತು. ಅಸ್ಪೃಶ್ಯತಾ ನಿವಾರಣೆಯ ಸಂಬಂಧವಾಗಿ ಭಾಷಣ ಜರುಗಿತು.

ತಾ. ೧೦-೮-೩೪ ನೆಯ ದಿನ ಇಲ್ಲಿಯ ಕಾಂಗ್ರೆಸ್ ಕಮಿಟಿಯ ಪರವಾಗಿ ಸಾರ್ವಜನಿಕ ಸಭೆ ಸೇರಿದ್ದಿತು. ಮೈಸೂರು ಸ್ಟೇಟ್ ಕಾಂಗ್ರೆಸ್ಸಿನ ಪ್ರಸಿದ್ಧ ಕಾರ್ಯಕರ್ತರಾದ ದಾವಣಗೆರೆಯ ಶ್ರೀಮಾನ್ ಡಿ. ಹೆಚ್. ಚಂದ್ರಶೇಖರಯ್ಯನವರು ಬಿ. ಎ. ಎಲ್. ಎಲ್. ಬಿ. ಎಂ. ಎಲ್. ಸಿ. ಇವರು ಅಧ್ಯಕ್ಷ ಸ್ಥಾನವನ್ನು ವಹಿಸಿದ್ದರು. "ಸಮತಾವಾದ" ಎಂಬ ವಿಷಯದಲ್ಲಿ ಉಪನ್ಯಾಸ ಜರುಗಿತು. ಚಿತ್ರದುರ್ಗದ ಮಹಾಜನರ ಪರವಾಗಿ ಶರಣ ಸಂದೇಶದ ಕಾರ್ಯಕ್ಕೆ ೧೧೧ ರೂ. ಗಳ ನಿಧಿಯನ್ನು ಅಧ್ಯಕ್ಷರ ಹಸ್ತದಿಂದ ಕೊಡಲಾಯಿತು.

ಚಿಕ್ಕಮಗಳೂರು— ತಾ. ೧೩-೮-೩೪ ನೆಯ ದಿವಸ ಇಲ್ಲಿಯ ನಗರ ಭವನದಲ್ಲಿ ಕರ್ನಾಟಕ ಸಂಘದ ಪರವಾಗಿ ಸಭೆ ಸೇರಿದ್ದಿತು. ಇಲ್ಲಿಯ ಡೆಪ್ಟಿ ಕಮಿಶನರಾದ ಶ್ರೀಮಾನ್ ಬಿ. ಎಸ್. ರಾಘವೇಂದ್ರರಾಯರವರು ಅಗ್ರಾಸನವನ್ನು ವಹಿಸಿದ್ದರು. ವಚನ ಸಾಹಿತ್ಯದ ವಿಚಾರವಾಗಿ ಭಾಷಣ ಜರುಗಿತು. ಇಲ್ಲಿಯ ವೀರಶೈವ ಮಹಾಜನಗಳ ಪರವಾಗಿ ಶರಣ ಸಂದೇಶದ ಕಾರ್ಯಕ್ಕೆ ೧೧೧ ರೂ. ಗಳ ನಿಧಿಯನ್ನು ಅಧ್ಯಕ್ಷರ ಹಸ್ತದಿಂದ ಕೊಡಿಸಲಾಯಿತು.

ತುಮಕೂರು— ತಾ. ೧೬-೮-೩೪ ನೆಯ ದಿನ ಇಲ್ಲಿಯ ವೀರಶೈವ ತರುಣ ಸಂಘದ ಪರವಾಗಿ ಶ್ರೀ ಜಗದ್ಗುರು ಜಯದೇವ ವೀರಶೈವ ವಿದ್ಯಾರ್ಥಿ ಭವನದಲ್ಲಿ ಸಾರ್ವಜನಿಕ ಸಭೆ ಸೇರಿದ್ದಿತು. ಇಲ್ಲಿಯ ಪ್ರಸಿದ್ಧ ಕಾಂಗ್ರೆಸ್ ಕೆಲಸಗಾರರಾದ ಶ್ರೀಮಾನ್ ಟಿ. ಸುಬ್ರಹ್ಮಣ್ಯರವರು ಬಿ. ಎ. ಎಲ್. ಎಲ್. ಬಿ. ಇವರು ಅಧ್ಯಕ್ಷರಾಗಿದ್ದರು. ಹಿಂದು ಸಂಘಟನೆಯ ವಿಚಾರವಾಗಿ ಉಪನ್ಯಾಸ ಜರುಗಿತು. ಇಲ್ಲಿಯ ವೀರಶೈವ ಮಹಾಜನಗಳ ಪರವಾಗಿ ಶರಣ ಸಂದೇಶದ ಕಾರ್ಯಕ್ಕೆ ಶ್ರೀಮಾನ್ ಜಿ. ಆರ್. ಸಿದ್ಧಬಸವಪ್ಪನವರು ಬಿ. ಎ. ಎಲ್. ಎಲ್. ಬಿ. ಇವರು ೧೫೭ ರೂ. ಗಳ ನಿಧಿಯನ್ನು ಅಧ್ಯಕ್ಷರ ಹಸ್ತದಿಂದ ಕೊಡಿಸಿದರು.

ಶ್ರೀ ಸಿದ್ಧಗಂಗೆಯ ಶ್ರೀಮನ್ನಿರಂಜನ ಶ್ರೀ ಶಿವಕುಮಾರ ಸ್ವಾಮಿಗಳವರು ಶರಣ ಸಂದೇಶದ ಕಾರ್ಯಕ್ಕೆ ೨೫ ರೂ. ಗಳನ್ನು ಆಶೀರ್ವದಿಸಿ ಕಳುಹಿಸಿದುದೂ ಈ ಸಭೆಯಲ್ಲಿಯೇ ಕೊಡಲ್ಪಟ್ಟಿತು.

ತಾ. ೧೭-೮-೩೪ ನೆಯ ದಿನ ಇಲ್ಲಿಯೇ ಸಾರ್ವಜನಿಕ ಸಭೆ ಸೇರಿದ್ದಿತು. "ಇಂದಿನ ರಾಜಕಾರಣ" ಎಂಬ ವಿಚಾರವಾಗಿ ಉಪನ್ಯಾಸ ಜರುಗಿತು.

ತಿಬಟೂರು— ತಾ. ೧೮-೮-೩೪ ನೆಯ ದಿನ ಇಲ್ಲಿಯ ವೀರಶೈವಾನಂದಾಶ್ರಮದಲ್ಲಿ ಸಾರ್ವಜನಿಕ ಸಭೆ ಸೇರಿದ್ದಿತು. ಇಲ್ಲಿಯ ಪ್ರಸಿದ್ಧ ಕಾಂಗ್ರೆಸ್ ಕೆಲಸಗಾರರಾದ ಶ್ರೀಮಾನ್ ಡಿ. ಎಸ್. ಮಲ್ಲಪ್ಪನವರು ಎಂ. ಎಲ್. ಸಿ. ಇವರು ಅಗ್ರಾಸನವನ್ನು ವಹಿಸಿದ್ದರು. "ಹಿಂದು ಸಂಘಟನೆ" ಎಂಬ ವಿಷಯವಾಗಿ ಭಾಷಣ ಜರುಗಿತು.

ತಾ. ೧೯-೮-೩೪ ನೆಯ ದಿನ ಇಲ್ಲಿಯ ಕರ್ನಾಟಕ ಸಂಘದ ಪರವಾಗಿ ಆರ್ಯ ಬಾಲಿಕಾ ಪಾಠಶಾಲೆಯಲ್ಲಿ ಸಾರ್ವಜನಿಕ ಸಭೆ ಸೇರಿದ್ದಿತು. ಕೋಲಾರದ ಮುನಸೀಫರಾದ ಶ್ರೀಮಾನ್ ಟಿ. ಎನ್. ಮಲ್ಲಪ್ಪನವರು ಬಿ. ಎ. ಎಲ್. ಎಲ್. ಬಿ. ಇವರು ಅಧ್ಯಕ್ಷರಾಗಿದ್ದರು. 'ಕನ್ನಡ ಸಾಹಿತ್ಯದಲ್ಲಿ ವಚನಕಾರರ ಸ್ಥಾನ' ಎಂಬ ವಿಷಯವಾಗಿ ಉಪನ್ಯಾಸ ಜರುಗಿತು.

ತಾ. ೨೦-೮-೩೪ ನೆಯ ದಿನ ಮೇಲಣ ವಿಷಯವನ್ನೇ ಮುಂದರಿಸಿ ಶಿವಾನಂದಾಶ್ರಮದಲ್ಲಿ ಉಪನ್ಯಾಸ ನಡೆಸಿದ್ದಾಯಿತು. ತಿಬಟೂರು ಮಹಾಜನಗಳ ಪರವಾಗಿ ಶರಣಸಂದೇಶದ ಕಾರ್ಯಕ್ಕೆ

೧೪೧ ರೂ. ಗಳ ನಿಧಿಯನ್ನು ಅಧ್ಯಕ್ಷರಾಗಿದ್ದ ಶ್ರೀಮಾನ್ ಟ. ಎನ್. ಮಲ್ಲಪ್ಪನವರ ಹಸ್ತದಿಂದ ಕೊಡಿಸಲಾಯಿತು.

ಬೆಂಗಳೂರು— ತಾ. ೨೨-೮-೩೮ ನೆಯ ದಿನ ಇಲ್ಲಿಯ ವೀರಶೈವ ಸೇವಾ ಸಮಾಜದ ಪರವಾಗಿ ಶ್ರೀ. ವೀರಭದ್ರಪ್ಪನವರ ಛತ್ರದಲ್ಲಿ ಸಭೆ ಸೇರಿದ್ದಿತು. ಶ್ರೀಮಾನ್ ಕೆ. ಅಯ್ಯಪ್ಪ ಶಾಸ್ತ್ರಿಗಳವರು ಅಧ್ಯಕ್ಷರಾಗಿದ್ದರು. ವೀರಶೈವ ಸಮಾಜದ ಸದ್ಯಸ್ಥಿತಿ ಎಂಬ ವಿಷಯವಾಗಿ ಭಾಷಣ ಜರುಗಿತು.

ಬೆಂಗಳೂರಿನ ಕೆಲವು ವೀರಶೈವ ಮಹಾಜನರಿಂದ ಶರಣ ಸಂದೇಶದ ಕಾರ್ಯಕ್ಕೆ ೧೫೦ ರೂ. ಗಳು ಕೊಡಲ್ಪಟ್ಟಿವು.

ಮೈಸೂರು— ಇಲ್ಲಿಯ ಕೆಲವು ವೀರಶೈವ ಮಹಾಜನರಿಂದ ಶರಣ ಸಂದೇಶದ ಕಾರ್ಯಕ್ಕೆ ೭೫ ರೂ. ಗಳು ಕೊಡಲ್ಪಟ್ಟವು.

ಅರಸಿಕೆರೆ— ತಾ. ೨೮-೮-೩೮ ನೆಯ ದಿನ ಇಲ್ಲಿಯ ಕರ್ನಾಟಕ ಸಂಘದ ಪರವಾಗಿ ನಗರ ಭವನದಲ್ಲಿ ಸಾರ್ವಜನಿಕ ಸಭೆ ಸೇರಿದ್ದಿತು. ಶ್ರೀಮಾನ್ ಕೃಷ್ಣ ಸ್ವಾಮಿ ಅಯ್ಯಂಗಾರ್ಯರು ಎಂ. ಎ. ಬಿ. ಟ. ಸ್ಕೂಲ್ ಇನಸ್ಪೆಕ್ಟರರು ಇವರು ಅಧ್ಯಕ್ಷರಾಗಿದ್ದರು. ಹಿಂದು ಸಂಘಟನೆಯ ವಿಚಾರವಾಗಿ ಉಪನ್ಯಾಸ ಜರುಗಿತು. ಇಲ್ಲಿಯ ವರ್ತಕ ಮಂಡಳಿಯ ಪರವಾಗಿ ಶರಣ ಸಂದೇಶದ ಕಾರ್ಯಕ್ಕೆ ೭೨ ರೂ. ಗಳ ನಿಧಿಯನ್ನು ಕೊಡಲಾಯಿತು.

ಈ ಪ್ರಕಾರ ಮೇಲಿನ ಸ್ಥಳಗಳ ಅನೇಕ ಮಹಾಶಯರು ಸಭೆ ಸೇರಿಸಿ ಜನರಲ್ಲಿ ವಿಚಾರಜಾಗೃತಿಯನ್ನುಂಟುಮಾಡಿದುದಲ್ಲದೆ ಶರಣ ಸಂದೇಶದ ಹೊಸ ಯೋಜನೆಗೆ ತುಂಬಾ ಧನ ಸಹಾಯ ಮಾಡಿದುದಕ್ಕೋಸ್ಕರ ಆ ಎಲ್ಲಾ ಮಹಾಶಯರಿಗೂ ತುಂಬಾ ಕೃತಜ್ಞನಾಗಿದ್ದೇನೆ.

ಹರ್ಡೇಕರ ಮಂಜಪ್ಪ.

---

# ರಾಷ್ಟ್ರಪತಿಗಳ ಸಂದೇಶ.

## ಶ್ರೀ. ಸರೋಜನಿದೇವಿಯವರ ಭಾಷಣ.

### ಚೀನಕ್ಕೆ ಕಾಂಗ್ರೆಸ್ ಶುಶ್ರೂಷಾಪಥಕದ ಪ್ರಯಾಣ.

ಚೀನ ರಣಭೂಮಿಯಲ್ಲಿ ಗಾಯಗೊಂಡವರನ್ನು ಉಪಚರಿಸುವದಕ್ಕಾಗಿ ತಾ. ೩೧-೮-೩೮ ನೆಯ ದಿನ ಕಾಂಗ್ರೆಸ್ಸಿನವರು ಚೀನ ದೇಶಕ್ಕೆ ಕಾಂಗ್ರೆಸ್ ಶುಶ್ರೂಷಾಪಥಕವನ್ನು ಕಳುಹಿಸಿಕೊಟ್ಟರು. ಈ ಪಥಕದಲ್ಲಿ (೧) ಡಾ. ಎಂ. ಅಟಲ್ ನಾಯಕರು (೨) ಡಾ. ಚೋಳೀಕರ್ (ನಾಗಪುರ) (೩) ಡಾ. ಚಟ್ನೀಸ್, ಸೋಲಾಪುರ (೪) ಡಾ. ಡಿ. ಮುಕರ್ಜಿ, ಕಲಕತ್ತಾ (೫) ಡಾ. ಆರ್. ಎನ್. ಸೇನ್, ಕಲಕತ್ತಾ ಈ ಪ್ರಕಾರ ೫ ಜನರು ಡಾಕ್ಟರರಿದ್ದಾರೆ. ಇವರು ಒಂದು ಅಂಬುಲೆನಸ್ ಕಾರ್, ಒಂದು ಟ್ರಕ್ ಮೆಡಿಕಲ್ ಸ್ಟೋರ್ಸ್‌ಗಳನ್ನು ತೆಗೆದುಕೊಂಡು ಹೋದರು. ಈ ಪಥಕಕ್ಕೆ ಬಂಗಾಲಾ ಕೆಮಿಕಲ್ ವರ್ಕ್ಸ ಕಂಪನಿಯವರು ೧೦೦೦ ರೂ. ಬೆಲೆಯ ಔಷಧದ ಸಾಮಾನುಗಳನ್ನೂ, ಬೊಂಬೆ ಸರ್ಜಿಕಲ್ ಕಂಪನಿಯವರು ೩೦೦ ರೂ. ಗಳ ಬೆಲೆಯ ಶಸ್ತ್ರಚಿಕಿತ್ಸೆಗೆ ಸಂಬಂಧಿಸಿದ ಉಪಕರಣಗಳನ್ನೂ ಅಲೆಂಬಿಕ್ ಕೆಮಿಕಲ್ಸ ಕಂಪನಿಯವರು ೩೦೦ ರೂ. ಗಳ ವೈದ್ಯಕೀಯ ಸಾಮಾನುಗಳನ್ನೂ ಕೊಟ್ಟು ಸಹಾಯಮಾಡಿದ್ದಾರೆ. ಪ್ರತಿಯೊಬ್ಬ ಡಾಕ್ಟರರಿಗೂ ೫ ಸಾವಿರ ರೂ. ಗಳ ಜೀವವಿಮೆ ಇಳಿಸುವ ವ್ಯವಸ್ಥೆ ಮಾಡಿದ್ದಾರೆ. ಡಾ. ಬಿಧನಚಂದ್ರರಾಯರವರು ಈ ಪಥಕಕ್ಕೆ ತಮ್ಮ ಅಮೋಘವಾದ ಸಲಹೆಗಳನ್ನು ಕೊಡುವವರಿದ್ದಾರೆ.

ತಾ. ೩೧ ನೆಯ ದಿವಸವೇ ಮುಂಬೈಯಲ್ಲಿ ಚೀನಾ ಶುಶ್ರೂಷಾಪಥಕದ ಬೀಳ್ಕೊಡುವ ಸಮಾರಂಭವು ಶ್ರೀ. ಸರೋಜನಿದೇವಿಯವರ ಅಧ್ಯಕ್ಷತೆಯಲ್ಲಿ ನೆರವೇರಿಸಲ್ಪಟ್ಟಿತು. ಆಗ ಶ್ರೀ. ಸರೋಜನಿ ದೇವಿಯವರು ಈ ರೀತಿ ಭಾಷಣಮಾಡಿದರು—

"ಚೀನವು ತನ್ನ ರಾಷ್ಟ್ರೀಯ ಸ್ವಾತಂತ್ರ್ಯವನ್ನುಳಿಸಿಕೊಳ್ಳುವುದಕ್ಕಾಗಿ ಜೀವದ ಹಂಗುದೊರೆದು ಹೋರಾಡುತ್ತಿದೆ. ಭಾರತದಲ್ಲಿ ಎಷ್ಟೋ ಜನರಿಗೆ ಸ್ವಾತಂತ್ರ್ಯಕ್ಕಾಗಿ ಘೋರ ಸಂಗ್ರಾಮವನ್ನು ನಡೆಸಿರುವ ಚೀನ ದೇಶದ ಬಗ್ಗೆ ತುಂಬಾ ಸಹಾನುಭೂತಿ ಇದೆ. ನಾವು ಕಳಿಸುತ್ತಿರುವ ಶುಶ್ರೂಷಾ ಪಥಕವು ಚೀನಿಯರಿಗೆ ಒದಗಿರುವ ಪರೀಕ್ಷೆಯ ಕಾಲದಲ್ಲಿ ಅವರು ತೋರಿಸುತ್ತಿರುವ ಸಾಹಸ, ತ್ಯಾಗ ಮತ್ತು ಶೌರ್ಯಗಳಲ್ಲಿ ಸಹಾನುಭೂತಿಪರವಾದ ಸಹಾಯವಾಗಿದೆ. ಜಗತ್ತಿನಲ್ಲಿ ಸ್ವಾತಂತ್ರ್ಯದ ಸಲುವಾಗಿ ಹೋರಾಡುವವರಿಗೆಲ್ಲ ನಮ್ಮ ಸಂಪೂರ್ಣ ಬೆಂಬಲವಿದೆಯೆಂಬುದೇ ನಾವು ನಮ್ಮ ಪಥಕದ ಮೂಲಕ ಚೀನಿಯರಿಗೆ ಕೊಡತಕ್ಕ ಸಂದೇಶವಾಗಿದೆ. ಮಾನವನಿಗೆ ಜಗತ್ತಿನಲ್ಲಿ ಜೀವಿಸುವ ಹಕ್ಕಿರುವದೆಂಬುದನ್ನು ತೋರಿಸುವುದೇ ಚೀನಿಯರ ಹೋರಾಟದ ಹೆಗ್ಗುರುತು. ಆರ್ಥಿಕ, ಸಾಮಾಜಿಕ, ರಾಜಕೀಯ ತಾಪತ್ರಯಗಳಿಂದ ಬಳಲುತ್ತಿರುವವರಿಗೆಲ್ಲ ಭಾರತದ ರಾಷ್ಟ್ರೀಯ ಮಹಾಸಭೆಯು ಯಾವಾಗಲೂ ತನ್ನ ಬೆಂಬಲವನ್ನು ನೀಡುತ್ತದೆ. ಈ ಪಥಕವು ಚೀನಿಯ ಯುದ್ಧ ಭೂಮಿಯಲ್ಲಿ ಮಡಿದರೆ ಅದು ಶೌರ್ಯದಿಂದ ಕೂಡಿದ ಮರಣ. 'ಭದ್ರಂ ಶುಭಂ ಮಂಗಲಂ' ಎಂಬುದೇ ನಾನು ಈ ಪಥಕಕ್ಕೆ ಕೊಡುವ ಸಂದೇಶ"

ಈ ಪ್ರಕಾರ ಭಾಷಣಮಾಡಿ ಶ್ರೀ. ಸರೋಜನಿ ದೇವಿಯವರು ಪಥಕದಲ್ಲಿರುವ ಪ್ರತಿಯೊಬ್ಬ ಸದಸ್ಯನಿಗೆ ತ್ರಿ ವರ್ಣ ಧ್ವಜವನ್ನು ರಾಷ್ಟ್ರೀಯ ಮಹಾಸಭೆಯ ಪ್ರಶಸ್ತಿ ಪತ್ರಿಕೆಯನ್ನು ಬಹುಮಾನವಾಗಿ ಕೊಟ್ಟರು.

ರಾಷ್ಟ್ರಪತಿಗಳಾದ ಬಾಬು ಸುಭಾಷಚಂದ್ರ ಬೋಸರವರು ಈ ಶುಶ್ರೂಷಾಪಥಕದ ಸಂಬಂಧವಾಗಿ ಈ ಪ್ರಕಾರ ಒಂದು ಪ್ರಕಟನೆ ಹೊರಡಿಸಿದ್ದಾರೆ.-

"ಶುಶ್ರೂಷಾಪಥಕವನ್ನು ಕಳುಹಿಸಿಕೊಡುವ ಈ ಸಮಾರಂಭವು ಇತಿಹಾಸಪ್ರಸಿದ್ಧವಾದುದು. ಪುರಾತನ ಕಾಲದಿಂದಲೂ ನಾವು ಪರದೇಶಗಳೊಂದಿಗೆ ಬಾಂಧವ್ಯದಿಂದಲೇ ವರ್ತಿಸುತ್ತಾ ಬಂದಿದ್ದೇವೆ. ಅದರಂತೆಯೇ ಚೀನರಾಷ್ಟ್ರದೊಡನೆಯೂ ನಾವು ಸಹೋದರಭಾವದ ನಿಕಟಸಂಬಂಧವನ್ನಿಟ್ಟುಕೊಂಡಿದ್ದೆವು. ನಮ್ಮ ಎರಡೂ ದೇಶಗಳೂ ಒಂದೇ ಸಂಸ್ಕೃತಿ ಒಂದೇ ಧರ್ಮದಿಂದ ಮೆರೆಯುತ್ತಿದ್ದವು. ಇಂದು ನಾವು ಸಂಕಟಗ್ರಸ್ತ ಚೀನಕ್ಕೆ ಕೊಡುವ ಸಹಾಯವು ಅತ್ಯಲ್ಪವಾಗಿದ್ದರೂ ಅದರ ಜತೆಯಲ್ಲಿ ಹಿಂದೀ ಜನತೆಯ ಪ್ರಚಂಡ ಸಹಾನುಭೂತಿಯು ಅಡಗಿದೆ. ಸಾಮ್ರಾಜ್ಯದಾಹತ್ವ ನಿರಂಕುಶ ಪ್ರಭುತ್ವ ಮತ್ತು ಅಧರ್ಮದ ಆಳ್ವಿಕೆಯನ್ನು ಎದುರಿಸಿ ಭಾರತವು ಅಂತರರಾಷ್ಟ್ರೀಯ ರಾಜಕಾರಣದಲ್ಲಿಯೂ ತಲೆ ಎತ್ತುತ್ತಿರುವುದು ಸಮಾಧಾನದ ಸಂಗತಿಯು. ಅದಕ್ಕಾಗಿಯೇ ಚೀನದ ಸಹಾಯಕ್ಕಾಗಿ ಧಾವಿಸಲಿರುವ ಈ ಪಥಕಕ್ಕೆ ನಾನು ಶುಭಾಶಯವನ್ನು ಕೋರುತ್ತೇನೆ."

---

## ಕೊಪ್ಪಳ ವೀರಶೈವರ ಅಪೂರ್ವ ಉತ್ಸಾಹ.

ತಾ. ೨೮-೮-೩೮ ರವಿವಾರ ಗಣೇಶಚವತಿಯ ದಿವಸ ಪದ್ಧತಿಯ ಪ್ರಕಾರ ಗಜಾನನ ಉತ್ಸವ ನಿಮಿತ್ತವಾಗಿ ಸಾಯುಂಕಾಲ ೬ ಘಂಟೆಗೆ "ವೀರಶೈವಜನರಲ್‌ಲಾಯಬ್ರರಿ" ಯಲ್ಲಿ ಶ್ರೀ ವಿರುಪನಗೌಡರು ಜನಹಳ್ಳಿ ಇವರ ಅಧ್ಯಕ್ಷತೆಯ ಕೆಳಗೆ ಸಭೆಯು ನೆರವೇರಿಸಲ್ಪಟ್ಟಿತು. ಆ ಕಾಲಕ್ಕೆ ಶ್ರೀ. ಸಿದ್ರಾಮಪ್ಪ ಸುರುಪೂರ ಇವರು ತಮ್ಮ ಅಮೌಲ್ಯವಾದ ವಾಣಿಯಿಂದ ಸಮಾಜ ಮತ್ತು ಅದರ ಬೆಳವಣಿಗೆಯ ಬಗ್ಗೆ ಒಳ್ಳೇ ಉತ್ಸಾಹದಾಯಕವಾದ ಭಾಷಣವನ್ನು ಮಾಡಿ ಅಂದಿನ ಮಾನ್ಯ ಅತಿಥಿಗಳಾದ ಶ್ರೀ. ಶಿ|| ವೃಷಭೇಂದ್ರುಸ್ವಾಮಿ ಸಾಲೀಮಠ ಚೆಳಗೇರಿ ಇವರ ಪರಿಚಯವನ್ನು ಸಭಿಕರಿಗೆ ಮಾಡಿಕೊಟ್ಟು ಅವರಿಗೆ ಭಾಷಣಮಾಡಲು ವಿನಂತಿಮಾಡಿಕೊಂಡರು. ಆ ಮೇರೆಗೆ ಶ್ರೀ. ಸಾಲೀಮಠರವರು ತಮ್ಮ ಅಮೃತತುಲ್ಯವಾದ ವಾಣಿಯಿಂದ ಹೃದಯಂಗಮವಾಗಿ ಒಳ್ಳೇ ಜರ್ಝರಿತವಾದ ಭಾಷಣವನ್ನು ಮಾಡುತ್ತ ನಿಜಾಮುಪ್ರಾಂತದ ವೀರಶೈವರ ಚಿಂತಾಜನಕ ಸ್ಥಿತಿಯನ್ನು ಅದರ ಕಾರಣಗಳನ್ನು ಸೂಚಿಸಿ ಇಲ್ಲಿಯ ತರುಣರಿಗೆ ಸಂಘದ ಮೂಲಕವಾಗಿ ಸಮಾಜ ಕಾರ್ಯ ಮಾಡಬೇಕೆಂದು ಆಗ್ರಹವಿನಂತಿ ಮಾಡಿಕೊಂಡರು. ಬಳಿಕ ಶ್ರೀ. ಈಶ್ವರಪ್ಪಾ ಶಿವಶೆಟ್ಟಿ ಇವರು ತರುಣರವತಿಯಿಂದ ತನು ಮನ ಧನದಿಂದ ಸಮಾಜಕಾರ್ಯವನ್ನು ಮಾಡಲಿಕ್ಕೆ ಟೊಂಕಕಟ್ಟಿ ನಿಲ್ಲುತ್ತೇವೆಂದು ಉತ್ಸಾಹದ ಒಪ್ಪಿಗೆಯನ್ನಿತ್ತರು. ನಂತರ ಆಭಾರಮನ್ನಿಸಿ ಸಭೆಯನ್ನು ವಿಸರ್ಜಿಸಲಾಯಿತು.

### ಮೇ|| ಕಲೆಕ್ಟರ ಸಾ|| ಗೆ ಮಾನಪತ್ರ.

ತಾ. ೩೦-೮-೩೮ ಮಂಗಳವಾರ ಇಲ್ಲಿಯ ಮೇ|| ಕಲೆಕ್ಟರ ಸಾ|| ಗೆ ವರ್ಗವಾದ ಮೂಲಕ ಅವರ ಸನ್ಮಾನಾರ್ಥವಾಗಿ ಸಂಜೆ ೪ ಘಂಟೆಗೆ ವೀರಶೈವ ಜನರಲ್ ಲಾಯಬ್ರರಿಯಲ್ಲಿ ಸಂತೋಷಕೂಟವು ಏರ್ಪಟ್ಟು ಕಲೆಕ್ಟರ ಸಾ|| ಗೆ ಲಾಯಬ್ರರಿಯ ಸಂಘದವತಿಯಿಂದ ಮಾನಪತ್ರ ಕೊಡಲ್ಪಟ್ಟಿತು.

ನಂತರ ಕಾರ್ಯಕ್ರಮದ ಪ್ರಕಾರ ಸಂಜೆ ೫ ಘಂಟೆಗೆ ಶ್ರೀ ತಿಮ್ಮನಗೌಡಾ ವಕೀಲ ಇವರ ಅಧ್ಯಕ್ಷತೆಯಲ್ಲಿ ಹೊಸ ವರ್ಷದ ಕಾರ್ಯಕಾರಿ ಮಂಡಲದ ಚುನಾವಣೆಯಾಯಿತು. ಆಗ್ಗೆ ಶ್ರೀ ಸಾಲೀಮಠರವರು ಕಾರ್ಯಕಾರೀ ಮಂಡಲದ ಜವಾಬದಾರಿ ಮತ್ತು ಮಹತ್ವವನ್ನು ಕುರಿತು ಭಾಷಣಮಾಡುತ್ತಾ ಕರ್ತವ್ಯದಕ್ಷರೂ ನಿಸ್ವಾರ್ಥಿಗಳೂ ಸಮಾಜಾಭಿಮಾನಿಗಳೂ ಆದ ಸದಸ್ಯರನ್ನೇ ಕಾರ್ಯಕಾರಿ ಮಂಡಲಕ್ಕೆ ಆರಿಸಬೇಕೆಂದು ಸೂಚಿಸಿ ಜಾಗೃತಿಗೊಳಿಸಿದರು.

### ಶ್ರೀ ಗುರುಬಸವಾರ್ಯ ಗವಾಯಿಗಳಿಗೆ " ವಚನ ಕೇಸರಿ " ಎಂಬ ಬಿರುದು.

ಇದಾದ ಮೇಲೆ ಸುಮಾರು ೬|| ಘಂಟೆಗೆ ಶ್ರೀ ಕೆರೂರ ಗುರುಬಸವಾರ್ಯ ಗವಾಯಿಗಳ ಗಾಯನವು ಪ್ರಾರಂಭವಾಗಿ ೯|| ಘಂಟೆಗೆ ಮುಕ್ತಾಯವಾಯಿತು. ಲಾಯಬ್ರರಿಯು ಸಾಧಾರಣ ೩೦೦—೪೦೦ ಜನರಿಂದ ತುಂಬಿಹೋಗಿ ಉಸುರಾಡಿಸಲಿಕ್ಕೆ ಸಹ ಅವಕಾಶವಿಲ್ಲದಿದ್ದರೂ ಕೆಲವು ಜನರು ಗವಾಯಿಗಳ ದಿವ್ಯಗಾಯನದಿಂದ ಮೈಮರೆತು ಸ್ತಬ್ಧರಾಗಿ ಬೊಂಬೆಗಳಂತೆ ನಿಂತಲ್ಲಿಯೇ ನಿಂತು ಬಿಟ್ಟಿದ್ದರು. ಶ್ರೀಯುತರು ಕೆಲವು ಭಗವಾನ್ ಬಸವೇಶ ಮತ್ತು ಮಹಾದೇವಿಯಕ್ಕನವರ ಅರ್ಥಮಾಧುರ್ಯವನ್ನು ಹೊರಸೂಸುತ್ತಿರುವ ವಚನಗಳನ್ನು ಹಾಡಿ ತೋರಿಸಿದರು.

ನಂತರ ಶ್ರೀ. ವೃಷಭೇಂದ್ರಸ್ವಾಮಿ ಇವರು ಗವಾಯಿಗಳ ಮಧುರಯುಕ್ತವಾದ ಗಾಯನವನ್ನು ಮತ್ತು ವಚನಗಳಿಗೆ ಮತ್ತಿಷ್ಟು ಶೋಭೆಯನ್ನು ಕೊಟ್ಟು ಮಾಧುರ್ಯವನ್ನು ಹೆಚ್ಚಿಸುವಂತಹ ಅವರ ರಾಗಕಲಾವೈಶಿಷ್ಟತೆಯನ್ನು ಶ್ಲಾಘಿಸಿ ಲಾಯಬ್ರರಿಯ ಸಂಘದ ವತಿಯಿಂದ ಗವಾಯಿಗಳಿಗೆ "ವಚನ ಕೇಸರಿ" ಎಂಬ ಬಿರುದನ್ನು ಕೊಟ್ಟರು. ಮತ್ತು ಇದರಂತೆ ಯಾವಾಗಲೂ ತಮ್ಮ ಸಾಹಸದಿಂದ ವಚನ ಶಾಸ್ತ್ರವನ್ನು ಪ್ರಚಾರಗೊಳಿಸಿ ಕನ್ನಡ ಸಾಹಿತ್ಯಕ್ಕೆ ಉಪಕಾರ ಮಾಡಿ ವೀರಶೈವ ಸಮಾಜಕ್ಕೆ ಕೀರ್ತಿಯನ್ನು ತರಬೇಕೆಂದು ಬೇಡಿಕೊಂಡರು. ಆ ಮೇಲೆ ಎಲ್ಲರ ಆಭಾರಮನ್ನಣೆಯಾದನಂತರ ಸಭೆಯು ವಿಸರ್ಜನೆಯಾಯಿತು.

ಕಾರ್ಯದರ್ಶಿ.

ಶಿದ್ರಾಮಪ್ಪ ಸಂಕ್ಲಾಪುರ.

---

—ಜಪಾನಿನಲ್ಲಿ ಕಳೆದ ವಾರ ಭಯಂಕರ ಬಿರುಗಾಳಿ ಬೀಸಿ ಅಪಾರ ನಷ್ಟವಾಗಿದೆ. ೧೯೦೫ ನೆಯ ಇಸ್ವಿಯಿಂದಲೂ ಈ ರೀತಿಯ ಬಿರುಗಾಳಿಯು ಬೀಸಿರಲಿಲ್ಲವಂತೆ. ಈ ಪ್ರಚಂಡವಾದ ಗಾಳಿ ಹೊಡೆತಕ್ಕೆ ಒಟ್ಟು ಜಪಾನಿನಲ್ಲಿ ೨೦ ಸಾವಿರದ ವರೆಗೆ ಮನೆಗಳು ಉರುಳಿ ಬಿದ್ದಿವೆಯೆಂದು ತಿಳಿದುಬಂದಿದೆ. ಅನೇಕರು ಸತ್ತಿದ್ದಾರೆ. ಸಾಧಾರಣ ಇದರಿಂದ ೫೦ ಲಕ್ಷ ಯನ್‌ಗಳಷ್ಟು ನಷ್ಟವಾಗಿದೆ.

—ಭಾರತದಲ್ಲಿರುವ ಚೀನದ ಕೌನ್ಸಿಲ್ ಜನರಲ್ಲರವರು ಕಾಂಗ್ರೆಸ್ ಚೀನಿ ವೈದ್ಯಪಥಕದ ನಾಯಕರಾದ ಡಾ. ಅಟಲರವರಿಗೆ ಈ ರೀತಿ ತಂತಿ ಕಳುಹಿಸಿದ್ದಾರೆ— 'ತಮ್ಮ ಚೀನಾ ಪ್ರಯಾಣವು ಸುಖಕರವಾಗಿ ಜರುಗಲೆಂದು ಹಾರೈಸುತ್ತೇನೆ. ತಮ್ಮ ಉದಾರವಾದ ಕಾರ್ಯವನ್ನು ನೋಡಿ ತುಂಬಾ ಆನಂದವಾಗಿದೆ. ತಮ್ಮ ಪಥಕದ ಕಾರ್ಯವನ್ನು ಚೀನಿಯರು ಎಂದೂ ಮರೆಯರು.'

# ವಿಜಾಪುರ ಜಿಲ್ಹೆಯ ತೋಟಿಗರಿಗೆ ಸುಸಂಧಿಯು.

**ಹಣ್ಣುಹಂಪಲಗಳನ್ನು ಕಾದಿಡುವ ಕುರಿತು ಮಾಹಿತಿಕೊಡುವ ಶಿಕ್ಷಣ ಕ್ಲಾಸು.**

ಹಣ್ಣುಬೆಳೆಯುವ ತೋಟಗರಿಗೆ ಒಂದೇ ಹಂಗಾಮಿನಲ್ಲಿ ಹಣ್ಣುಗಳು ಮಾರ್ಕೆಟಕ್ಕೆ ಬಹಳವಾಗಿ ಬರುವದರಿಂದ ಕೆಲಕೆಲವು ವೇಳೆ ಮಾಲಿಗೆ ಧಾರಣೆಯು ಬಾರದೆ ಇದ್ದಮೂಲಕ ಕೈಗೆ ಬಂದಂತೆ ಮಾಲು ಮಾರಾಟಮಾಡಬೇಕಾಗುವದು. ಇದರಿಂದ ತೋಟಗರಿಗೆ ಬಹಳೇ ಹಾನಿ ತಟ್ಟುವದು. ಇದನ್ನು ದೂರಮಾಡುವ ಸಲುವಾಗಿ ಹಣ್ಣುಗಳು ಬಹಳೇ ಬಂದಕಾಲಕ್ಕೆ ಅವುಗಳನ್ನು ಅಗ್ಗ ದರದಿಂದ ಮಾರಾಟ ಮಾಡದೆ ಪದ್ಧತಿಸೀರ ಕಾದಿಟ್ಟು ಯೋಗ್ಯ ದರಬರುವ ಮಾರ್ಕೆಟಿಗೆ ಕಳಿಸಿ ಫಾಯಿದೆಮಾಡಿಕೊಳ್ಳುವದರ ಮಾಹಿತಿ ಕೊಡುವದರ ಸಲುವಾಗಿ ಮುದ್ದಾಮ ಮುಂಬಯಿ ಸರಕಾರದ ಶೇತಕೀ ಖಾತೆಯ ತಜ್ಞರ ಕಡೆಯಿಂದ ಹಣ್ಣುಹಂಪಲಗಳನ್ನು ಕಾದಿಡುವ ಕುರಿತು ವಿಜಾಪೂರ ಜಿಲ್ಹೆಯ ಬರಗಾಲನಿವಾರಣಾ ಸಂಘದ (ವಿಲ್ಸನ್ ಆ್ಯಂಟಿಫ್ಯಾಮಿನ್ ಇನ್‌ಸ್ಟಿಟ್ಯೂಟ) ವತಿಯಿಂದ ಸಪ್ಟಂಬರ ತಿಂಗಳ ೧೫ ನೇ ತಾರೀಖಿನಿಂದ ಎರಡು ವಾರದ ವರೆಗೆ ಕ್ಲಾಸು ತೆರೆಯುವದು ಗೊತ್ತುಪಡಿಸಿರುತ್ತದೆ. ಕ್ಲಾಸಿನ ಕಾರ್ಯಕ್ರಮವು ಕೆಳಗಿನಂತೆ ಇರುವದು.

ಕ್ಲಾಸಿನ ವೇಳೆ ಪ್ರತಿದಿವಸ ಮುಂಜಾನೆ ೭-೩೦ ರಿಂದ ೧೦ ಗಂಟೆಯುವರೆಗೆ ನಡೆಯುವದು.

ಕ್ಲಾಸ ಸುರುಮಾಡುವ ಮೊದಲನೇ ದಿವಸ ಮುಂಬಯಿ ಸರಕಾರದ ಶೇತಕಿಖಾತೆಯ ತಜ್ಞರು ಹಣ್ಣು ಮತ್ತು ಕಾಯಿಪಲ್ಲೆಗಳನ್ನು ಕಾದಿಡುವದರ ಮಹತ್ವವನ್ನು ಕುರಿತು ಭಾಷಣ ಮಾಡುವರು.

೨ ನೇ ದಿವಸ:— ಪೇರಲಹಣ್ಣುಗಳನ್ನು ಡಬ್ಬಿಯಲ್ಲಿ ಬಹುದಿವಸ ಕೆಡದಂತೆ ತುಂಬಿ ಇಡುವ ಕ್ರಮವನ್ನು ಮಾಡಿತೋರಿಸುವದು.

೩ ನೇ ದಿವಸ:— ಪೇರಲ ಹಣ್ಣಿನ ಪಾಕ ತಯಾರಿಸುವದು.

೪ ನೇ ದಿವಸ:— ಪೇರಲ ಹಣ್ಣಿನ ರಸ ತಯಾರಿಸುವದು.

೫ ನೇ ದಿವಸ:— ಲಿಂಬಿ ಮತ್ತು ದಾಳಿಂಬರ ಹಣ್ಣಿನ ರಸ ತೆಗೆದು ಅದನ್ನು ಕಾದಿಡುವ ಕ್ರಮ ಮಾಡಿತೋರಿಸುವದು.

೬ ನೇ ದಿವಸ:— ಬಾಳೇ ಹಣ್ಣುಗಳನ್ನು ಒಣಗಿಸಿ ಇಡುವದು.

೭ ನೇ ದಿವಸ:— ಲಿಂಬೀ ಹಣ್ಣಿನಿಂದ ಎಣ್ಣಿ ತೆಗೆಯುವದು. ಮತ್ತು ಕುಂಬಳ ಜಾತಿಯ ಹಣ್ಣು ಮತ್ತು ಲಿಂಬೀ ಹಣ್ಣಿನಿಂದ ಉಪ್ಪಿನಕಾಯಿ ತಯಾರಿಸುವದು.

ಉಳಿದ ಏಳು ದಿವಸದ ಅವಧಿಯಲ್ಲಿ ಕ್ಲಾಸಿಗೆ ಬಂದ ವಿದ್ಯಾರ್ಥಿಗಳಕಡೆಯಿಂದ ಮೇಲೆ ಕಾಣಿಸಿದ ವಿಷಯಗಳನ್ನು ಪ್ರತ್ಯಕ್ಷ ಮಾಡಿಸಿಕೊಳ್ಳುವದರಲ್ಲಿ ಬರುವದು. ಕ್ಲಾಸಿಗೆ ಬರುವದಕ್ಕೆ ಅಪೇಕ್ಷಿಸುವ ಜನರು ಮತ್ತು ಹೆಣ್ಣುಮಕ್ಕಳು ಮುಂಚಿತವಾಗಿ ಅಂದರೆ ಸಪ್ಟಂಬರ ೧೦ ನೇ ತಾರೀಖಿನ ಒಳಗಾಗಿ ಅರ್ಜಿಯನ್ನು ಮೆ. ಡಿಸ್ಟ್ರಿಕ್ಟ ಅಗ್ರಿಕಲ್ಚರಲ್ ಓವ್ಹರಸಿಯರ ವಿಜಾಪುರ ಇವರ ಕಡೆಗೆ ಕಳಿಸಿಕೊಡಬೇಕು. ಶಿಕ್ಷಣವನ್ನು ಮೋಫತ ಕೊಡುವದರಲ್ಲಿ ಬರುವದು. ಪರಸ್ಥಳದ ಜನರಿಗೆ ಮುಂಚಿತವಾಗಿ ತಿಳಿಸಿದಲ್ಲಿ ಇಳಕೊಳ್ಳುವದರ ಸಲುವಾಗಿ ಜಾಗಾದ ವ್ಯವಸ್ಥೆ ಮಾಡುವದರಲ್ಲಿ ಬರುವದು. ಬಾಕಿ ಹೋಗಿಬರುವ ಮತ್ತು ಊಟದ ಖರ್ಚು ವಗೈರೆ ತಮ್ಮದು ತಾವೇ ಮಾಡಿಕೊಳ್ಳಬೇಕು.

T. T. Kothawala,
ಕಲೆಕ್ಟರ ಮತ್ತು ಪ್ರೆಸಿಡೆಂಟ
ವಿಲ್ಸನ್ ಆ್ಯಂಟಿಫ್ಯಾಮಿನ್ ಇನ್‌ಸ್ಟಿಟ್ಯೂಟ ವಿಜಾಪುರ.

---

# ತ್ರಾವಣಕೋರಿನಲ್ಲಿ ವಿಶೇಷ ಗಲಭೆ.

ಜಿಲ್ಲಾ ಮ್ಯಾಜಿಸ್ಟ್ರೇಟರವರು ಹೊರಡಿಸಿದ ಪ್ರತಿಬಂಧಕಾಜ್ಞೆಯನ್ನು ಮುರಿಯುವದಕ್ಕಾಗಿ ತ್ರಿವೇಂದ್ರಮ್‌ದಲ್ಲಿ ತಾ. ೨೯ ನೆಯ ದಿವಸ ಸಾಯಂಕಾಲ ಸಮುದ್ರ ತೀರದಲ್ಲಿ ಒಂದು ಪ್ರಚಂಡ ಸಭೆ ಸೇರಿದ್ದಿತು. ಈ ಸಭೆಯಲ್ಲಿ ತುಂಬಾ ಗಲಾಟಿಯಾಗಿ ಜನರ ಒಂದು ಗುಂಪು ಜಿಲ್ಲಾ ಪೋಲೀಸ್ ಸುಪರಿಂಟೆಂಡೆಂಟರವರ ಮೋಟಾರ ಕಾರಿಗೆ ಕಲ್ಲನ್ನೆಸೆದು ಅದನ್ನು ಚೂರು ಚೂರು ಮಾಡಿತಲ್ಲದೆ ಕೊನೆಗೆ ಅದನ್ನೇ ಸುಟ್ಟುಬಿಟ್ಟಿತು.

ಈ ಮೊದಲು ತ್ರಾವಣಕೋರ ಸಂಸ್ಥಾನ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದ ಶ್ರೀ. ಪಟ್ಟಂ ತನ್ನು ಪಿಳ್ಳೆಯವರನ್ನು ಸೆರೆಹಿಡಿದನಂತರ ಕಾಂಗ್ರೆಸ್ಸಿನ ಅಧ್ಯಕ್ಷ ಸ್ಥಾನಕ್ಕೆ ಶ್ರೀ. ಪದ್ಮನಾಭ ಪಿಳ್ಳೆಯವರನ್ನು ಅಧ್ಯಕ್ಷರನ್ನಾಗಿ ನಿಯಮಿಸಿದ್ದರು. ಇವರನ್ನು ಸೆರೆ ಹಿಡಿದುದರಿಂದ ಅಲ್ಲಿಯ ಪರಿಸ್ಥಿತಿಯು ತೀರ ಕೆಟ್ಟು ಹೋಯಿತು. ಜನರ ಸಂತಾಪವು ನೆತ್ತಿಗೇರಿತು. ಶ್ರೀ ಪದ್ಮನಾಭ ಪಿಳ್ಳೆಯವರನ್ನು ಸೆರೆಹಿಡಿದುಕೊಂಡು ಮೋಟಾರಿನಿಂದ ಬರುತ್ತಿದ್ದ ಸಿ. ಆಯ್. ಡಿ. ಸುಪರಿಂಟೆಂಡೆಂಟರ ಕಾರನ್ನು ಜನಗಳು ಮುತ್ತಿ ಕಲ್ಲನ್ನು ಎಸೆದು ಕೊನೆಗೆ ಕಾರನ್ನೇ ಸುಟ್ಟುಬಿಟ್ಟರು. ಅನಂತರ ಆ ಪ್ರಚಂಡ ಜನಸ್ತೋಮವು ಶ್ರೀ. ಪಿಳ್ಳೆಯವರನ್ನು ಸೆರೆ ಹಿಡಿದ ನಿಷೇಧಾರ್ಥವಾಗಿ ಒಂದು ಪ್ರಚಂಡ ಮೆರವಣಿಗೆಯನ್ನು ತೆಗೆಯಿತು.

ತಾ ೩೧-೮-೩೮ ನೆಯ ದಿವಸ ದಕ್ಷಿಣ ತ್ರಾವಣಕೋರಿನ ನೆಯ್ಯಾತಿನ್‌ಕಾರ್ ಎಂಬಲ್ಲಿ ಸಶಸ್ತ್ರ ಸೈನಿಕರು ಸಂತಾಪಗೊಂಡು ಜನಸಂದಣಿಯ ಮೇಲೆ ಗುಂಡುಗಳನ್ನು ಎಸೆದರು. ಇದರಲ್ಲಿ ೫ ಜನರು ಮರಣ ಹೊಂದಿದರಲ್ಲದೆ ೧೩ ಜನರಿಗೆ ಗಾಯಗಳಾಗಿವೆ. ತ್ರಾವಣಕೋರ ಸರಕಾರದವರು ಸಂಸ್ಥಾನಿನಲ್ಲಿ ಉದ್ಭವಿಸಿರುವ ಪರಿಸ್ಥಿತಿಯನ್ನು ಲಕ್ಷಿಸಿ ಪೋಲೀಸರಿಗೆ ಸಹಾಯ ದೊರೆಯಲೆಂದು ಮಿರತ್ ಒಳಸಂಚಿನ ಖಟ್ಲೆಯ ಶೋಧಕರಾದ ಮಿ। ಖಾನ ಬಹದ್ದೂರ ಅಬ್ದುಲ್ ಕರೀಮ ಇವರನ್ನು ಪೋಲೀಸ್ ಖಾತೆಯಲ್ಲಿ ನಿಯಮಿಸಿಕೊಳ್ಳುವವರಿದ್ದಾರೆ.

ಸಂಸ್ಥಾನ ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಮೆಂಬರರಾದ ಮಿ. ರಾಮಚಂದ್ರನ್‌ರವರನ್ನು ಕಾರ್ಯದರ್ಶಿಗಳಾದ ಮಿ. ಕೆ. ಟಿ. ಥಾಮಸ್‌ರವರನ್ನು ತಾ. ೧-೯-೩೮ ನೆಯ ದಿವಸ ಮುಂಜಾನೆ ಸೆರೆ ಹಿಡಿದಿದ್ದಾರೆ.

ಈ ಗಲಭೆಯ ಫಲವಾಗಿ ತ್ರಿವೇಂದ್ರಮ್‌ದಲ್ಲಿ ಕಾಲೇಜ್ ಮೂರು ವಾರಗಳ ವರೆಗೆ ಮುಚ್ಚಲ್ಪಟ್ಟದೆ. ವಿದ್ಯಾರ್ಥಿಗಳಿಗೆ ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸುವಂತೆ ಮನವೊಲಿಸಲಾಗುತ್ತಿದೆಯೆಂದೂ ಇದರಿಂದ ಅಭ್ಯಾಸಕ್ಕೆ ತುಂಬಾ ಅತಂಕವಾಗುತ್ತಿದೆಯೆಂದೂ ಅದಕ್ಕಾಗಿಯೇ ಕಾಲೇಜ ಮುಚ್ಚಲಾಗಿದೆಯೆಂದೂ ಅಧಿಕಾರಿಗಳು ಸಾರಿರುತ್ತಾರೆ.

# ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ. ಜಯದೇವ ಮುರುಘರಾಜೇಂದ್ರ

## ಮಹಾ ಸ್ವಾಮಿಗಳವರ ಶ್ರೀ ಬೃಹನ್ಮಠ ಮಹಾ ಸಂಸ್ಥಾನದಲ್ಲಿ ಕಡೆ ಶ್ರಾವಣ ದಿವಸ ನಡೆದ ಮಹಾಪೂಜಾ ಸಮಾರಂಭ.

ಶ್ರೀ ಬೃಹನ್ಮಠ ಮಹಾ ಸ್ವಾಮಿಗಳವರ ಸನ್ನಿಧಾನದಲ್ಲಿ ನಡೆಯುತ್ತಾ ಇರುವ ನಿತ್ಯ ದಾಸೋಹದ ವ್ಯವಸ್ಥೆ ಸಮರ್ಪಕವಾಗಿಲ್ಲವೆಂಬ ವಿಷಯ ಶ್ರೀ ಮಹಾ ಸ್ವಾಮಿಗಳವರ ಸನ್ನಿಧಿಯ ದಿವ್ಯ ಚಿತ್ತಕ್ಕೆ ವೇದ್ಯವಾದ್ದರಿಂದ ಶ್ರೀ ಮಹಾ ಸಂಸ್ಥಾನದ ದಾಸೋಹ ಮತ್ತು ಆಡಳಿತಗಳನ್ನು ನಿರ್ವಹಿಸುವುದಕ್ಕಾಗಿ ಕೊಡಗು ದೇಶದಲ್ಲಿ ಶ್ರೀ ಮಹಾಸ್ವಾಮಿಗಳವರ ಸಂಸ್ಥಾನದ ಅಧಿಕಾರಕ್ಕೂ ಮತ್ತು ಆಡಳಿತಕ್ಕೂ ಒಳಪಟ್ಟ ಸೋಮವಾರ ಪೇಟೆ ವಿರಕ್ತ ಮಠದಲ್ಲಿದ್ದ ಚರಮೂರ್ತಿಗಳು ಶ್ರೀ. ಶಾಂತದೇವ ಸ್ವಾಮಿಗಳವರನ್ನು ಶ್ರೀ ಬೃಹನ್ಮಠಕ್ಕೆ ನೇಮಕ ಮಾಡಿದ್ದರಿಂದ ಇವರು ಇಲ್ಲಿಯ ನ್ಯೂನತೆಗಳನ್ನೆಲ್ಲಾ ಹೋಗಲಾಡಿಸಿ ಬಹಳ ಮುತವರ್ಜಿಯಿಂದ ಮಠದ ಆಡಳಿತಗಳನ್ನು ನಡೆಸುತ್ತಾ ಶ್ರೀ ಮಠಕ್ಕೆ ಬರುವ ಭಕ್ತಾದಿಗಳಿಗೆಲ್ಲ ಆದರಾತಿಥ್ಯವನ್ನು ನಡೆಸುತ್ತಾ ಇರುವದು ಕೇವಲ ಸ್ತುತ್ಯವಾದ ವಿಷಯವಾಗಿರುತ್ತದೆ.

ಇದೇ ಬಹುಧಾನ್ಯ ನಾಮ ಸಂವತ್ಸರದ ಶ್ರಾವಣ ಶುದ್ಧ ಪ್ರತಿಪದದಿಂದ ಪ್ರತಿನಿತ್ಯವೂ ಭಕ್ತಾದಿಗಳಿಂದ ಶ್ರೀ ಕರ್ತೃ ಮಹಾ ಸನ್ನಿಧಿಗೆ ರುದ್ರಾಭಿಷೇಕ. ನಂತರ ಮಹಾಗಣಾರಾಧನೆಯು ನಡೆಯುತ್ತಾ ಇದ್ದು ಕಡೇ ಶ್ರಾವಣದ ದಿವಸ ಅಂದರೆ ತಾ. ೨೫-೮-೩೮ ನೇ ಗುರುವಾರ ಮಹಾ ಸನ್ನಿಧಿಗೆ ರುದ್ರಾಭಿಷೇಕ ಮಹಾಪೂಜಾ ಸಹಸ್ರ ಬಿಲ್ವಾರ್ಚನೆ, ಮಹಾಮಂಗಳಾರತಿ ನಂತರ ಮಹಾಗಣಾರಾಧನೆಯು ನಡೆಯಬೇಕೆಂದು ಸಂಕಲ್ಪ ಮಾಡಿದ್ದರಿಂದ ಈ ಸತ್ಕಾರ್ಯಕ್ಕಾಗಿ ಚಿತ್ರದುರ್ಗದ ಮಹಾಪೇಟೆ ಮಹಾ ಜನಗಳು ಮತ್ತು ಮಠದಟ್ಟಿಯಾನೆ, ಗೌಳಿಗರ ಹಟ್ಟಿ, ಜಾಲಿ ಕಟ್ಟೆ ಚಿಕ್ಕಪುರ ಮುಂತಾದ ಗ್ರಾಮಗಳಲ್ಲಿರುವ ಭಕ್ತಾದಿಗಳು ಕೇವಲ ಭಕ್ತಿಯಿಂದಲೂ ಮತ್ತು ಉದಾರ ಮನಸ್ಸಿನಿಂದಲೂ ಧನಸಹಾಯ ಮಾಡಿದ್ದರಿಂದ ಮೇಲ್ಕಂಡ ಕಾರ್ಯಕ್ರಮಗಳೆಲ್ಲಾ ವೈಭವದಿಂದ. ನಡೆದು ೮-೧೦ ಸಾವಿರ ಜನಗಳಿಗೆ ಸಂತರ್ಪಣೆಯು ನಡೆದನಂತರ ಸಾಯಂಕಾಲ ೬ ಗಂಟೆಯಿಂದ ೧೦ ಗಂಟೆಯ ವರೆಗೆ ದೊಡ್ಡೇರಿ ಸ್ಕೂಲ್ ಹೆಡ್‌ಮಾಸ್ತರ ವೇ|| ಬಸವಲಿಂಗಯ್ಯನವರು ರಾಜಶೇಖರ ವಿಲಾಸವೆಂಬ ಶಿವಕೀರ್ತನೆಯನ್ನು ಬಹಳ ಸ್ವಾರಸ್ಯವಾಗಿ ಮಾಡಿದ್ದರಿಂದ ಜನಗಳೆಲ್ಲರೂ ಕೇಳಿ ಆನಂದಭರಿತರಾದರು ಈ ಮೊದಲು ಶ್ರೀ ಬೃಹನ್ಮಠ ಮಹಾ ಸಂಸ್ಥಾನದ ಖಾಸಾ ಚರಮೂರ್ತಿಗಳಾಗಿದ್ದ ಚೆನ್ನವೀರ ದೇಶಿಕೇಂದ್ರ ಮಹಾಸ್ವಾಮಿಗಳವರು ಶ್ರೀ ಮಹಾಸಂಸ್ಥಾನದ ಆಡಳಿತಗಳನ್ನು ನಡೆಸಿ ಕೀರ್ತಿಶೇಷರಾಗಿರುವುದು ಸಾಮಾನ್ಯವಾಗಿ ಸರ್ವರಿಗೂ ಗೊತ್ತಿದ್ದ ವಿಷಯವೇ ಆಗಿರುತ್ತೆ. ಶ್ರೀ ಮಹಾ ಸನ್ನಿಧಿ ಅಪ್ಪಣೆ ಪ್ರಕಾರ ಈಗ ಮಹಾ ಸಂಸ್ಥಾನದ ಆಡಳಿತಗಳನ್ನು ನಡೆಸುತ್ತಾ ಇರುವ ಶ್ರೀ. ಶಾಂತದೇವ ಸ್ವಾಮಿಗಳವರು ಖಾಸಾ ಚರಮೂರ್ತಿಗಳವರ ವಂಶಿಕರೇ ಆಗಿರುವುದರಿಂದ ಶ್ರೀ ಮಹಾ ಸನ್ನಿಧಿಯು ಇವರನ್ನೇ ಶ್ರೀ ಬೃಹನ್ಮಠ ಮಹಾ ಸಂಸ್ಥಾನಕ್ಕೆ ಕಾಯಂ ಚರಮೂರ್ತಿಗಳನ್ನಾಗಿ ನೇಮಕ ಮಾಡಿದರೆ ಶ್ರೀ ಬೃಹನ್ಮಠ ಮಹಾ ಸಂಸ್ಥಾನದ ಆಡಳಿತಗಳು ಮತ್ತು ದಾಸೋಹ ವಗೈರೆ ವ್ಯವಸ್ಥೆಯೂ ಬಹಳ ಉತ್ತಮ ರೀತಿಯಿಂದ ನಡೆಯುವವೆಂದು ಹೇಳುವುದರಲ್ಲಿ ಅತಿಶಯೋಕ್ತಿಯಾಗಲಾರದೆಂದು ನಾನು ಭಾವಿಸುತ್ತೇನೆ. ಶ್ರೀ. ಮುರುಘೇಶನು ಶಾಂತದೇವ ಸ್ವಾಮಿಗಳವರಿಗೆ ದೀರ್ಘಾಯುರಾರೋಗ್ಯವನ್ನು ದಯಪಾಲಿಸಿ ಭಕ್ತಕೋಟಿಗೆ ಮಹದುಪಕಾರವನ್ನು ಮಾಡುವ ಸುಯೋಗವನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಪ್ರತ್ಯಕ್ಷದರ್ಶಿ
ನಾಡಿಗ ಮಲ್ಲಪ್ಪ
ಭರಮಣ್ಣನಾಯ್ಕನದುರ್ಗ.

---

## ಕರ್ನಾಟಕದ ಸಕಲ ವೀರಶೈವ ಬಾಂಧವರಲ್ಲಿ ವಿನಂತಿ.

ಕೆಳಗೆ ಸಹಿ ಮಾಡಿರತಕ್ಕವರು ಜಾಹೀರ ರೀತಿಯಿಂದ ಸಕಲ ವೀರಶೈವರಲ್ಲಿ ಪ್ರಸಿದ್ಧಪಡಿಸುವುದೇನೆಂದರೆ- ಶ್ರೀಶೈಲದ ಸ್ವಾಮಿಗಳೆಂದು ಹೇಳಿ ನಮ್ಮ ವಿಜಾಪುರ ಜಿಲ್ಲೆಯ ಬಾಗೇವಾಡಿ ತಾಲೂಕಿನ ಹಳ್ಳಿಗಳಲ್ಲಿ ಬಡ ರೈತರ ಕಣ್ಣೊಳಗೆ ತಾವು ವೀರಶೈವರ ಜಗದ್ಗುರುಗಳೆಂದು ವೇಷಧಾರಿಗಳಾಗಿ ಇಲ್ಲದ ಸಲ್ಲದ ಜಂಭು ಕೊಚ್ಚುತ್ತ ಅಜ್ಞ ಜನರಿಗೆ ಅಂಧ ಶ್ರದ್ಧೆಯನ್ನು ಬೆಳೆಸುತ್ತ ಕೇವಲ ಶ್ರೀ ಬಸವೇಶ್ವರ ತತ್ವಗಳನ್ನಿರೋಧಿಸುತ್ತ ವೀರಶೈವರೊಳಗೆ ಇಬ್ಬಣವನ್ನು ಹುಟ್ಟಿಸಿ ಜಗಳಕ್ಕೆ ಕಾರಣರಿರುವರೆಂದು ನಮಗೆ ಕಂಡುಬಂದಿರುವದು. ಇವರ ಶೃಂಗಾರದ ವಿವರ ಈ ಪ್ರಕಾರ ಇದೆ—

ಜನಸಂಖ್ಯೆ ಸಾಧಾರಣ ೮೦ ಇದ್ದು, ಆನೆ ೧. ಒಂಟೆ ೧. ಡಮಣಿ ಗಾಡಿ ೩. ಸಾದಾ ಗಾಡಿ ೪-೬. ಈ ಪ್ರಕಾರ ವಾಹನಗಳಿದ್ದು, ಇವರೊಳಗೆ ಕೆಲವು ಶಾಸ್ತ್ರಿಗಳನ್ನು ಏಜಂಟರನ್ನು ಮಾಡಿಕೊಂಡು ಪ್ರತಿ ದಿವಸ ನೂರಾರು ರೂಪಾಯಿ ಖರ್ಚು ಘುಜೂಲ ಇಟ್ಟಿರುವರು. ಏಕೆಂದರೆ ಕೆಲವರು ಗಾಂಜ್ಯಾ ಅಫು ಮುಂತಾದ ಚಟಗಳಿಂದ ಆನಂದಭರಿತರಾಗುವರು. ಇವರು ಬಾಗೇವಾಡಿಗೆ ಹೋದ ತಿಂಗಳು ಬಂದಾಗ್ಗೆ ಕಾ. ಕಾರ್ಯಕರ್ತರಾದ ಶ್ರೀ. ಬಸಯ್ಯ ಪುರಾಣಿಕ ಮಠ ಮತ್ತು ಬಾಗೇವಾಡಿ ಸಕಲ ವೀರಶೈವ ಬಾಂಧವರು ಅಧಿಕಾರಿಗಳಾದ ಸಿಂಹಾಸನ ಮಾಮಲೇದಾರರು ಮುಂತಾದವರು ಕೂಡಿ ಇವರನ್ನು ವಿಚಾರಿಸಲು ನಿಜವಾದ ಜಗದ್ಗುರುಗಳಲ್ಲೆಂದು ಕಂಡುಬಂತು. ಅಂತೆಯೇ ನಮ್ಮ ತಾಲೂಕಿನಲ್ಲಿ ಸುದ್ದಿ ಹರಡಿದೆ. ಮತ್ತು ವೃತ್ತ ಪತ್ರಗಳಲ್ಲಿ ಪ್ರಸಿದ್ಧವಾಗಿದೆ. ಕಾರಣ ಯಾವತ್ತೂ ವೀರಶೈವ ಬಾಂಧವರು ಇವರ ಆಡಂಬರಕ್ಕೆ ಬಲೆ ಬೀಳದೆ ಯಾವ ಸಹಾಯವನ್ನೂ ಮಾಡಬಾರದು. ಹುಬ್ಬಳ್ಳಿ ಮತ್ತು ಹಾವೇರಿ ಬಸವೇಶ್ವರ ಪಾರ್ಟಿ ಜನರು ಇತ್ತ ಕಡೆಗೆ ಲಕ್ಷಕೊಟ್ಟು ಎಲ್ಲ ವೃತ್ತ ಪತ್ರಗಳಲ್ಲಿ ಸದರಿ ಮಾಹಿತಿಯನ್ನು ವಿಸ್ತರಿಸಬೇಕೆಂದು ನಮ್ಮ ಕೋರಿಕೆ.

೧. ಯಮನಪ್ಪ ಕಲ್ಲಪ್ಪ ಅವಟಿ ಇಂಗಳೇಶ್ವರ.
೨. ವಿರೂಪಾಕ್ಷಪ್ಪ ಶ್ರೀಶೈಲಪ್ಪ ಮುದ್ದೇಬಿಹಾಳ ಇಂಗಳೇಶ್ವರ
೩. ಚನಗೌಡಾ ಮುಲಕನಗೌಡಾ ಪಾಟೀಲ ರಬಿನಾಳ.
೪. ಬಸಪ್ಪ ಗುರುಪಾದಪ್ಪ ಬಿರಾದಾರ ರಬಿನಾಳ.

---

—ದಿವಂಗತ ಡಾ. ಎಂ. ಎ. ಅನ್ಸಾರಿಯವರ ಧರ್ಮಪತ್ನಿಯವರು ತಮ್ಮ ಹತ್ತಿರ ಇರುವ ತಮ್ಮ ಪತಿಯ ಎಲ್ಲ ಶಸ್ತ್ರ ಚಿಕಿತ್ಸೆಯ ಉಪಕರಣಗಳನ್ನೆಲ್ಲ ಕಾಂಗ್ರೆಸ್ಸಿನ ಪರವಾಗಿ ಚೀನ ದೇಶಕ್ಕೆ ಹೋಗುವ ಶುಶ್ರೂಷಾಪಥಕಕ್ಕೆ ದಾನವಾಗಿ ಕೊಟ್ಟಿರುತ್ತಾರೆ.

—ಬಂಗಾಲಿನ ಹೈಕೋರ್ಟಿಗೆ ಸರ್. ನರಸಿಂಗರಾವ ಆಯ್. ಸಿ. ಎಸ್. ಇವರು ನ್ಯಾಯಾಧೀಶರಾಗಿ ನಿಯಮಿಸಲ್ಪಟ್ಟಿದ್ದಾರೆ.

# ಕಾಂಗ್ರೆಸ್ ಪ್ರಚಾರವು.

(ಬಾಗೇವಾಡಿ ತಾಲೂಕು ಇಂಗಳೇಶ್ವರ ಗ್ರಾ. ಕಾಂ. ಕ. ಕಾರ್ಯದರ್ಶಿಗಳಿಂದ.)

ತಾ. ೨೨-೮-೩೮ ನೆಯ ದಿವಸ ರಬಿನಾಳ ಶ್ರೀ ಬಸವೇಶ್ವರ ಜಾತ್ರೆಯ ವ್ಯವಸ್ಥಾಪಕ ಮಂಡಳಿಯವರ ಆಮಂತ್ರಣದ ಮೇರೆಗೆ ವಿಜಾಪುರದ ದೇ. ಭ. ಬಸಯ್ಯ ಪುರಾಣಿಕ ಮಠ, ಶ್ರೀ. ವಿರೂಪಾಕ್ಷಪ್ಪ ಮುದ್ದೇಬಿಹಾಳ, ಶ್ರೀ. ಯಮನಪ್ಪ ಅವಟಿ ಮೊದಲಾದವರು ರಬಿನಾಳಕ್ಕೆ ಹೋಗಿದ್ದರು, ಜಾತ್ರೆಯಲ್ಲಿ ೨-೩ ದಿವಸಗಳ ವರೆಗೆ ಧ್ವಜವಂದನೆ, ಪ್ರಭಾತಫೇರಿ, ಭಾಷಣಗಳ ಮೂಲಕ ಹಳ್ಳಿಯ ಜನಗಳಿಗೆ ಕಾಂಗ್ರೆಸ್ಸಿನ ಮಹತ್ವವನ್ನು ಚೆನ್ನಾಗಿ ತಿಳಿಹಿಸಿದರು. ತಾ. ೨೪-೮-೩೮ ನೆಯ ದಿವಸ ಯತ್ನಾಳ ಗ್ರಾಮದಲ್ಲಿ ಒಂದು ಸಭೆ ಸೇರಿಸಿ ಭಾಷಣ ಮಾಡಲಾಯಿತು. ಕೆಲವು ಜನರು ಉತ್ಸಾಹದಿಂದ ಕಾಂಗ್ರೆಸ್ಸಿನ ಮೆಂಬರರಾದರು.

### ದಿಂಡವಾರ.

ದಿಂಡವಾರದ ಶ್ರೀ. ಗಚ್ಚಿನಮಠದ ಶ್ರೀಗಳವರಿಂದ ಧ್ವಜವಂದನಾ ಸಮಾರಂಭವು ನೆರವೇರಿಸಲ್ಪಟ್ಟಿತು. ಶ್ರೀ. ಪುರಾಣಿಕ ಬಸಯ್ಯ ಇವರು ಧ್ವಜದ ಮಹತ್ವವನ್ನು ಎಲ್ಲರಿಗೂ ಮನದಟ್ಟಾಗುವಂತೆ ತಿಳಿಸಿಕೊಟ್ಟರು. ನಂತರ ಶ್ರೀ ಪಟ್ಟದ್ದೇವರ ಅಧ್ಯಕ್ಷತೆಯಲ್ಲಿ ಸಭೆ ಸೇರಿತು. ಶ್ರೀ. ಬಸಯ್ಯ ಪುರಾಣಿಕ, ಶ್ರೀ. ಯಮನಪ್ಪ ಅವಟಿ ಶ್ರೀ ಶಿವನಗೌಡರೇ ಮೊದಲಾದವರು ಭಾಷಣ ಮಾಡಿ ಖಾದಿಯ ಮಹತ್ವ, ೧೮ ವರ್ಷಕ್ಕೆ ಮೇಲ್ಪಟ್ಟ ಸ್ತ್ರೀ ಪುರುಷರು ಕಾಂಗ್ರೆಸ್ ಸದಸ್ಯರಾಗುವ ಅವಶ್ಯಕತೆ, ಅಸ್ಪೃಶ್ಯತಾ ನಿವಾರಣೆ, ಗ್ರಾಮೋದ್ಧಾರ, ಮೊಧಲಾದ ವಿಷಯಗಳ ಮಹತ್ವವನ್ನು ಚೆನ್ನಾಗಿ ತಿಳಿಸಿಕೊಟ್ಟು ಕೇವಲ ಬಡ ರೈತರ ಹಿತಕ್ಕಾಗಿ ತಯಾರಿಸಿದ ಟೆನನ್ಸಿ ಬಿಲ್ಲಿನ ಬಗ್ಗೆ ಗೊತ್ತುವಳಿ ಪಾಸುಮಾಡಿ ಶ್ರೀ. ಮುರಾರಜಿ ದೇಸಾಯಿಯವರ ಕಡೆಗೆ ಕಳುಹಿಸಿ ಕೊಡುವುದನ್ನು ನಿರ್ಧರಿಸಿದರು. ಅಧ್ಯಕ್ಷರಾಗಿದ್ದ ಶ್ರೀ. ಪಟ್ಟದ್ದೇವರು ತಾವು ಇನ್ನುಮುಂದೆ ಸದಾ ಖಾದಿ ಧರಿಸುವವೆಂದು ಆಶ್ವಾಸನವನ್ನಿತ್ತು ಕಾಂಗ್ರೆಸ್ಸಿನ ಸದಸ್ಯರಾದರು. ಈ ಪ್ರಕಾರ ಸಂಚರಿಸಿ ೫೫ ಜನರನ್ನು ಕಾಂಗ್ರೆಸ್ ಸದಸ್ಯರನ್ನಾಗಿ ಮಾಡಿತು.

---

## ಪತ್ರಿಕಾಕರ್ತರಿಗೆ ಎಚ್ಚರಿಕೆ.

ಮಧ್ಯಪ್ರಾಂತದ ಸರಕಾರದವರು ಒಂದು ಪ್ರಕಟನೆ ಹೊರಡಿಸಿ ಪತ್ರಿಕಾಕರ್ತರಿಗೆ ಈ ಪ್ರಕಾರ ಎಚ್ಚರಿಕೆ ಕೊಟ್ಟಿದ್ದಾರೆ—

“ಪತ್ರಿಕೆಗಳಿಗೆ ಸ್ವಾತಂತ್ರ್ಯ ಕೊಟ್ಟು ಸೌಮ್ಯತರದ ವಿಮರ್ಶೆಯನ್ನು ಆನಂದದಿಂದ ಸ್ವೀಕರಿಸುವುದು ಸರಕಾರದ ಧೋರಣೆಯಾಗಿದೆ. ಇದನ್ನು ಈ ಮೊದಲೇ ಸ್ಪಷ್ಟಪಡಿಸಲಾಗಿದೆ. ಆದರೆ ಕೆಲವು ವೃತ್ತಪತ್ರಿಕೆಗಳು ಮನಬಂದಂತೆ ವೈಯಕ್ತಿಕ ಟೀಕೆಮಾಡಹತ್ತಿವೆ. ಗಾಂಧಿಯವರಂತಹ ಮಹಾ ಮುಖಂಡರನ್ನು ಕೂಡಾ ಮನಬಂದಂತೆ ಟೀಕಿಸುವುದರಿಂದ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲವೆಂದು ಭಾವಿಸಿ ಪತ್ರಿಕಾಕರ್ತರಿಗೆ ಎಚ್ಚರಿಕೆ ಕೊಟ್ಟಿದೆ.”

---

—ಚೀನ ದೇಶದ ‘ಲಿಯಾನ್’ ಪ್ರದೇಶವನ್ನು ಜಪಾನಿಗಳು ವಶಪಡಿಸಿಕೊಂಡಿದ್ದಾರೆ.

ಈ ಪತ್ರಿಕೆಯು ಆಲಮಟ್ಟೆ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು
[illegible] ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

R EGISTERED No. B. 2891.



# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರ, ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೮ | ಆಲಮಟ್ಟಿ- ಸೋಮವಾರ ತಾರೀಖು ೧೨ ನೆಯ ಸಪ್ಟೆಂಬರ್ ೧೯೩೮. | ಸಂಚಿಕೆ ೫ |
|---|---|---|

ಜನಸೇವೆಯೇ ದೇವರಸೇವೆ.

## ಯುರೋಪದಲ್ಲಿ ಮಹಾಯುದ್ಧವೆ?

### ಝೆಕ್ ಸರಕಾರಕ್ಕೆ ಫ್ರೆಂಚರ ಸಹಾಯ.

**ಈಗಾಗಲೇ ಫ್ರೆಂಚ್ ಸೈನ್ಯವು ಪೂರ್ವಗಡಿಯನ್ನು ಕಾಯುತ್ತಿದೆ.**

ಇಂಗ್ಲಿಷ್ ಸರಕಾರವು ಝೆಕ್‌ರ ಸಹಾಯಕ್ಕೆ ಬರಲಿ ಅಥವಾ ಬರದಿರಲಿ;
ಫ್ರೆಂಚರು ಮಾತ್ರ ತಾವು ಸಹಾಯ ಮಾಡುವೆವೆಂದೇ ಸಾರಿ
ಎಲ್ಲ ಸಿದ್ಧತೆಗಳನ್ನೂ ಮಾಡಿದ್ದಾರೆ.

## ಹೈದರಾಬಾದ ರಾಜಕೀಯ ಸುಧಾರಣೆ!

ನಿಜಾಮ ಸರಕಾರವು ನಿಯಮಿಸಿದ ಅಯ್ಯಂಗಾರ ಸಮಿತಿಯು ವರದಿಯಲ್ಲಿ ಹೀಗೆ ಹೇಳಿದೆ—
೭೫ ಸಭಾಸದರ ಒಂದು ಶಾಸನ ಸಭೆಯು ಏರ್ಪಡಬೇಕು.
ಅದರಲ್ಲಿ ೩೦ ಜನರು ಜನರಿಂದ ಆರಿಸಲ್ಪಟ್ಟವರು,
೪೦ ಜನರು ಸರಕಾರದಿಂದ ಆರಿಸಲ್ಪಟ್ಟವರು.
೧೪ ಜನ ಅಧಿಕಾರಿಗಳು ಇರಬೇಕು.
ಅಧ್ಯಕ್ಷರು ಮಂತ್ರಿಗಳಾಗಲಿ ಅಥವಾ ಕಾರ್ಯಕಾರಿ ಮಂಡಲದ
ಸಭಾಸದರಾಗಲಿ ಇರಬೇಕು.

ದೇಶಸೇವೆ ದೇವಾಲಯ.



# ಶರಣ ಸಂದೇಶ

THE
SHARANA SANDESHA.



## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೮. | ಆಲಮಟ್ಟಿ-ಸೋಮವಾರ ತಾರೀಖು ೧೨ ನೆಯ ಸಪ್ಟೆಂಬರ್ ೧೯೩೮. | ಸಂಚಿಕೆ ೫.

# ಮಹತ್ವದ ಸುದ್ದಿಗಳು.

—ಪಂಡಿತ ಜವಾಹರಲಾಲ ನೆಹರುರವರು ತಮ್ಮ ಮಗಳು ಇಂದಿರಾ. ನೆಹರು ಮತ್ತು ತಂಗಿ ವಿಜಯಲಕ್ಷ್ಮಿ ಪಂಡಿತ ಇವರಿಗೆ ಲಂಡನ್ನಿನಲ್ಲಿ ಔಷಧದ ವ್ಯವಸ್ಥೆ ಮಾಡಿಸಿ ತಾ. ೧೨ ನೆಯ ದಿವಸ ಜಿನೇವಾಕ್ಕೆ ತೆರಳುವವರಿದ್ದಾರೆ.

—ಶೇಗಾಂವಿನಲ್ಲಿ ಮಹಾತ್ಮಾ ಗಾಂಧಿಯವರ ಗುಡಿಸಲಿನ ಮುಂದೆ ನಡೆದಿರುವ ಆದಿಜನ ಸತ್ಯಾಗ್ರಹದಲ್ಲಿ ಸ್ತ್ರೀಯರೂ ಭಾಗ ವಹಿಸುತ್ತಿದ್ದಾರೆ. ತಾ. ೮ ನೆಯ ದಿವಸ ಶ್ರೀಮತಿ ಶಾಂತಾಬಾಯಿ ಬೋರಕರರ ನೇತೃತ್ವದಲ್ಲಿ ೫ ಜನ ಸ್ತ್ರೀಯರು ನಾಗಪುರದಿಂದ ಶೇಗಾಂವ ಕಡೆಗೆ ಹೊರಟರು. ಈಗಾಗಲೇ ೬ ಪುರುಷರ ಗುಂಪುಗಳು ಸತ್ಯಾಗ್ರಹ ಮಾಡಿವೆ. ಇದೇ ೭ ನೆಯ ಗುಂಪು.

—ಪ್ಯಾಲೆಸ್ಟಾಯಿನ್ ಸ್ಥಿತಿಯ ಸಂಬಂಧ ವಿಚಾರಿಸಲು ಕೈರೋದಲ್ಲಿ ಮುಂದಿನ ತಿಂಗಳು ಸೇರಲಿರುವ ಜಾಗತಿಕ ಮುಸ್ಲಿಂ ಕಾಂಗ್ರೆಸ್ಸಿಗೆ ಬರಲು ಪ್ಯಾಲೆಸ್ಟಾಯಿನ್ ಸಂರಕ್ಷಣಾ ಪಾರ್ಲಮೆಂಟ್ ಕಮಿಟಿಯಿಂದ ಹಿಂದುಸ್ಥಾನದ ಅಸೆಂಬ್ಲಿ ಮುಸಲ್ಮಾನ್ ಸದಸ್ಯರೆಲ್ಲರಿಗೂ ಆಮಂತ್ರಣ ಬಂದಿದೆ.

—ಮಧ್ಯಪ್ರಾಂತ ಮುಖ್ಯ ಮಂತ್ರಿಗಳಾದ ಪಂಡಿತ ಶುಕ್ಲರವರು ಒಂದು ಆಜ್ಞೆಯನ್ನು ಹೊರಡಿಸಿ "ಇನ್ನು ಮುಂದೆ ಯಾವುದೇ ಸರಕಾರಿ ಕಾಗದ ಪತ್ರಗಳಲ್ಲಿ ಮಿಸ್ಟರ್ ಗಾಂಧಿ ಎಂದು ಬರೆಯದೆ ಮಹಾತ್ಮಾ ಗಾಂಧಿ ಎಂದು ಬರೆಯತಕ್ಕದ್ದು. ಈಗಿನ ಪ್ರಾಂತಿಕ ಸ್ವಾತಂತ್ರ್ಯಕ್ಕೆ ಹಿಂದುಸ್ಥಾನದ ವಿಭೂತಿಗಳಾದ ಆ ಮಹಾತ್ಯಾಗಿಯವರೇ ಕಾರಣರಾಗಿದ್ದಾರೆ. ಆದಕ್ಕಾಗಿ ಅವರಿಗೆ ಕೃತಜ್ಞತೆಯನ್ನೂ ಗೌರವಾದರಗಳನ್ನೂ ತೋರಿಸುವುದು ಕಾಂಗ್ರೆಸ್ ಸರಕಾರದ ಪ್ರತಿಯೊಬ್ಬ ನೌಕರನ ಕರ್ತವ್ಯವಾಗಿರುವುದರಿಂದ ಈ ಆಜ್ಞೆಯನ್ನು ಇಂದಿನಿಂದಲೇ ಪಾಲಿಸಬೇಕೆಂದು" ಸೂಚಿಸಿದ್ದಾರೆ.

—ಇಜಿಪ್ತ ಅರಸರಾದ ಫರೂಕರವರು ಸ್ನಾನಘಟ್ಟದಿಂದ ಕ್ರೀಡಾ ಭವನಕ್ಕೆ ಹೋಗುತ್ತಿರುವಾಗ ಯಾವನೋ ಒಬ್ಬನು ಗುಂಡಿನಿಂದ ಹೊಡೆದನು. ಇದರಿಂದ ಅರಸರಿಗೇನೂ ಗಾಯಗಳಾಗಿಲ್ಲ. ಕೂಡಲೇ ಆತನನ್ನು ಹಿಡಿದಿದ್ದಾರೆ.

—ಯಾಂಗತ್ಸೀ ನದಿಯ ದಂಡೆಯ ಮೇಲಿರುವ ಮಹವೇಲಿಂಗ ನಗರವನ್ನು ಕಾಪಾಡಿಕೊಳ್ಳುವುದು ಚೀನಿಯರಿಗೆ ಅಸಾಧ್ಯವಾಗಿ ಹೋಯಿತು. ಜಪಾನರ ಪ್ರಚಂಡವಾದ ಶಕ್ತಿಯ ಮುಂದೆ ಚೀನಿಯರ ಆಟ ಸಾಗದಂತಾಯಿತು. ಆಗಸ್ಟ ೨೭ ರಿಂದ ಸಪ್ಟಂಬರ್ ೩ ನೆಯ ತಾರೀಖಿನ ವರೆಗೆ ಸಾಧಾರಣ ೨೫೦೦೦ ಚೀನಿಯರು ಸತ್ತರೆಂದು ಜಪಾನಿಯರು ಹೇಳುತ್ತಿದ್ದಾರೆ. ಜಪಾನಿಯ ಈ ಮುನ್ನಡಿಯನ್ನು ತಡೆಯಲು ಚೀನಿಯರು ಮತ್ತೊಂದು ಸೈನ್ಯ ಬಲವನ್ನು ತಯಾರಿಸಲಾಗಿದೆಯೆಂದು ಅಧಿಕಾರಿಗಳು ಹೇಳುತ್ತಿದ್ದಾರೆ.

—ಕೈಗಾರಿಕೆಯ ಕೇಂದ್ರ ಸ್ಥಳಗಳಲ್ಲಿರುವ ಹಾಯಸ್ಕೂಲಿನ ವಿದ್ಯಾರ್ಥಿಗಳಿಗೆ ಔದ್ಯೋಗಿಕ ಶಿಕ್ಷಣವನ್ನು ಕೊಡುವುದು ಈಗಿನ ಕಾಲದಲ್ಲಿ ಅತ್ಯಂತ ಆವಶ್ಯಕವಾಗಿದೆಯೆಂದು ಕೋಲಾರ ಚಿನ್ನದ ಗಣಿಯ ಹಾಯಸ್ಕೂಲಿನ ಕಟ್ಟಡ ಪ್ರಾರಂಭೋತ್ಸವವನ್ನು ನೆರವೇರಿಸುತ್ತ ಮೈಸೂರು ಯುವರಾಜರು ಹೇಳಿದರು.

—ಅಕ್ಟೋಬರ್ ೨ ನೆಯ ತಾರೀಖು ಮಹಾತ್ಮಾ ಗಾಂಧಿಯವರ ಜಯಂತಿಯ ದಿವಸವಾದುದರಿಂದ ಆ ದಿನ ಸಾರ್ವಜನಿಕ ಸೂಟಿ ಮಧ್ಯಪ್ರಾಂತದಲ್ಲೆಲ್ಲ ಕೊಡಲಾಗಿದೆಯೆಂದು ಮುಖ್ಯ ಮಂತ್ರಿಗಳಾದ ಶ್ರೀ. ಪಂಡಿತ ಶುಕ್ಲರವರು ಒಂದು ಆಜ್ಞೆ ಹೊರಡಿಸಿರುವರೆಂದು ತಿಳಿದಿದೆ.

—ಡಾ. ಖರೆಯವರು ಇತ್ತಿತ್ತಲಾಗಿ ಆತ್ಮಸಮರ್ಥನೆ ಮಾಡಿಕೊಳ್ಳಲು ಸಾರ್ವಜನಿಕ ಸಭೆಗಳಲ್ಲಿ ಸರಕಾರಿ ಗುಪ್ತ ಸಂಗತಿಗಳನ್ನು ಹೊರಗೆಡವುತ್ತಿರುವುದು ಮಧ್ಯಪ್ರಾಂತ ಗವ್ಹರ್ನರರಿಗೆ ಕಂಡುಬಂದುದರಿಂದ ನೀವು ಹಾಗೆ ಮಾಡತಕ್ಕದ್ದಲ್ಲವೆಂದೂ ನೈತಿಕ ಹಾಗೂ ನ್ಯಾಯಧರ್ಮಕ್ಕನುಸರಿಸಿ ನಡೆಯಬೇಕೆಂದೂ ಎಚ್ಚರಿಕೆ ಕೊಟ್ಟಿದ್ದಾರೆಂದು ತಿಳಿದುಬಂದಿದೆ.

# ಶುದ್ಧಿ ಸಂಘಟನೆಯ ಆವಶ್ಯಕತೆ.

## ಶ್ರೀ. ಮಹಾದೇವ ಶಾಸ್ತ್ರಿ ದಿವೇಕರರ ಮನನೀಯ ವಿಚಾರ.

ಅಸ್ಪೃಶ್ಯತಾ ನಿವಾರಣೆಯು ಎಷ್ಟು ಆವಶ್ಯಕವಿದೆಯೋ ಅಷ್ಟೇ ಶುದ್ಧಿ ಕಾರ್ಯದ ಆವಶ್ಯಕತೆಯೂ ಇದೆ. ಅಸ್ಪೃಶ್ಯತಾ ನಿವಾರಣೆ ಮತ್ತು ಶುದ್ಧಿ ಕಾರ್ಯ ಒಂದಕ್ಕೊಂದು ಹೊಂದಿಕೊಂಡಿವೆ. ಮಹಾತ್ಮಾ ಗಾಂಧಿಯವರು ಅಸ್ಪೃಶ್ಯತಾ ನಿವಾರಣೆಗೆ ರಾಷ್ಟ್ರೀಯ ಸ್ವರೂಪವನ್ನು ಕೊಟ್ಟಂತೆ ಶುದ್ಧಿ ಕಾರ್ಯಕ್ಕೆ ಸ್ವಾಮಿ ಶ್ರದ್ಧಾನಂದರವರು ರಾಷ್ಟ್ರೀಯ ಸ್ವರೂಪವನ್ನು ಕೊಟ್ಟರು. ಅವರು ತಮ್ಮ ಜೀವನವನ್ನೇ ಶುದ್ಧಿ ಕಾರ್ಯಕ್ಕಾಗಿ ಧಾರೆಯಾಗಿ ಎರೆದುಬಿಟ್ಟರು. ಹಿಂದು ಸಮಾಜವೆಂಬ ನೀರಿನ ಪಾತ್ರೆಗೆ ಮುಸಲ್ಮಾನ್ ಮತ್ತು ಕ್ರಿಶ್ಚಿಯನ್ ಎಂಬ ಎರಡು ರಂಧ್ರಗಳು ಬಿದ್ದು ಅವುಗಳಿಂದ ಹೋಗುವ ನೀರನ್ನೇ ತಿರುಗಿ ಅವೇ ರಂಧ್ರಗಳಿಂದ ಪಾತ್ರೆಯಲ್ಲಿ ಪ್ರವೇಶಿಸಿ ಪಾತ್ರೆ ತುಂಬುವಂತಹ ಪ್ರಚಂಡ ಮತ್ತು ಆಶ್ಚರ್ಯಕರವಾದ ಕಾರ್ಯವನ್ನು ಸ್ವಾಮಿ ಶ್ರದ್ಧಾನಂದರವರು ಮಾಡಿದರು. ಸ್ವಾಮಿ ಶ್ರದ್ಧಾನಂದರವರು ಹಚ್ಚಿದ ಶುದ್ಧಿಕಾರ್ಯ ವೃಕ್ಷವೇ ಈಗ ಎಲ್ಲರಿಗೂ ಕಲ್ಪವೃಕ್ಷವೆಂದು ತೋರುತ್ತಿರುವುದು ಸಂತೋಷಕರ.

ಹಿಂದು ಸಮಾಜದ ರಕ್ಷಣೆಗಾಗಿ ಅದರ ಸಂಖ್ಯೆಯು ಈಗ ಕರಗುತ್ತಿರುವುದನ್ನು ತಡೆಯಲೇ ಬೇಕು. ಹಿಂದೆ ಒಂದು ಕಾಲದಲ್ಲಿ ೧೦೦ ಕೋಟಿ ಹಿಂದುಗಳಿದ್ದರೆಂಬ ಮಾತನ್ನು ಬಿಟ್ಟುಕೊಟ್ಟರೂ ೩೦ ಕೋಟಿ ಹಿಂದುಗಳಿದ್ದರೆಂಬುದು ಮಾತ್ರ ಎಲ್ಲರಿಗೂ ತಿಳಿದ ಮಾತು. ಆದರೆ ಅದು ದಿನೆ ದಿನೆ ಕ್ಷೀಣವಾಗುತ್ತ ಈಗ ೨೨ ಕೋಟಿ ಮಾತ್ರ ಉಳಿದಿದೆ. ಉಳಿದ ಹಿಂದುಗಳು ಹಿಂದು ಧರ್ಮದಲ್ಲಿಯ ತತ್ವಗಳು ಮನಸ್ಸಿಗೆಬಾರದೆ ಧರ್ಮಾಂತರ ಹೊಂದಿರದೆ ಮುಸಲ್ಮಾನ್ ಮತ್ತು ಕ್ರಿಶ್ಚಿಯನ್‌ರ ಬಲಾತ್ಕಾರಗಳಿಂದಲೂ ಬರಗಾಲ, ಅಜ್ಞಾನಗಳಿಂದಲೂ ಧರ್ಮಾಂತರ ಹೊಂದಿದುದರಿಂದ ಸಂಖ್ಯೆಯು ಕ್ಷೀಣಿಸಿ ಹೋಗಿದೆ. ಮುಸಲ್ಮಾನ್ ಮತ್ತು ಕ್ರಿಶ್ಚಿಯನ್‌ರು ಧರ್ಮಾಂತರಗೊಳಿಸಿದ ಹಿಂದುಗಳನ್ನು ಪುನಃ ಹಿಂದು ಧರ್ಮದಲ್ಲಿ ಸೇರಿಸಿಕೊಳ್ಳುವಂತೆ ಪ್ರಯತ್ನಿಸುವುದು ಪ್ರತಿಯೊಬ್ಬ ಹಿಂದು ಮನುಷ್ಯನ ಮೊದಲನೆಯ ಕರ್ತವ್ಯವಾಗಿದೆ. ಅವರು ಯಾವ ನ್ಯಾಯ ರೀತಿಗಳಿಂದ ಹಿಂದುಗಳನ್ನು ಧರ್ಮಾಂತರಗೊಳಿಸಿದರೋ ಅವೇ ನ್ಯಾಯ ರೀತಿಗಳನ್ನವಲಂಬಿಸಿ ಶುದ್ಧಿ ಕಾರ್ಯ ನಡೆಯಿಸುವುದು ಅತ್ಯಗತ್ಯವಾಗಿದೆ.

ಶುದ್ಧಿ ಕಾರ್ಯದ ಅಭಾವದಿಂದ ಹಿಂದು ಸಮಾಜವು ತುಂಬಾ ಕ್ಷೀಣಿಸಿಹೋಗಿದೆ. ೧೮೭೨ ನೆಯ ಇಸ್ವಿಯಿಂದಲೂ ಹಿಂದು ಸಮಾಜವು ಹೇಗೆ ನಾಶವಾಗುತ್ತ ಬಂದಿತೆಂಬುದು ಅನೇಕ ವಿದ್ವಾನ್ ಜನರು ಅಂಕೆ ಸಂಖ್ಯೆಗಳಿಂದ ತೋರಿಸಿಕೊಟ್ಟಿದ್ದಾರೆ. ಶ್ರೀ. ಯು. ಎನ್. ಮುಕರ್ಜಿಯವರು "ಬಂಗಾಲದಲ್ಲಿ೧೮೭೨ ರಿಂದ ೧೯೧೧ ನೇ ಇಸ್ವಿಯ ವರೆಗೆ ಹಿಂದುಗಳ ಜನಸಂಖ್ಯೆಯು ೧೭೧ ಲಕ್ಷದಿಂದ ೧೯೪ ಲಕ್ಷದ ವರೆಗೆ ಹೆಚ್ಚಾಯಿತು, ಆದರೆ ಇದೇ ಅವಧಿಯಲ್ಲಿಯೇ ಮುಸಲ್ಮಾನರ ಜನಸಂಖ್ಯೆಯು ಮಾತ್ರ ೧೬೭ ಲಕ್ಷದಿಂದ ೨೨೦ ಲಕ್ಷದ ವರೆಗೆ ಹೆಚ್ಚಾಯಿತೆಂದು" ಹೇಳಿದ್ದಾರೆ. ಮಾಡರ್ನರಿವ್ಯೂಕ್ಯದ ಸಂಪಾದಕರಾದ ಶ್ರೀ. ರಾಮಾನಂದ ಚತರ್ಜಿಯವರು ಸೂರತ್ ದಲ್ಲಿಯ ಹಿಂದು ಮ ಹಾ ಸ ಭೆ ಯ ಅಧ್ಯಕ್ಷೀಯ ಭಾಷಣದಲ್ಲಿ "೧೮೮೧ ಇಸ್ವಿಯಿಂದ ೧೯೨೧ ನೆಯ ಇಸ್ವಿಯ ವರೆಗಿನ ಈ ನಾಲ್ವತ್ತು ವರ್ಷಗಳಲ್ಲಿ ೧೭೭ ಲಕ್ಷ ಹಿಂದುಗಳು ಕಡಿಮೆಯಾದರು. ಎಂದರೆ ಪ್ರತಿವರ್ಷ ೪ ಲಕ್ಷ ಹಿಂದುಗಳು ಕಡಿಮೆಯಾದಂತಾಯಿತು." ಎಂದು ಹೇಳಿದ್ದಾರೆ.

೧೮೮೧ ನೆಯ ಇಸ್ವಿಯಲ್ಲಿ ಹಿಂದುಗಳು ಪ್ರತಿ ಹತ್ತು ಸಾವಿರಕ್ಕೆ ೭೪೫೨ ರಂತೆ ಇದ್ದರು. ಆದರೆ ೧೯೨೧ ನೆಯ ಜನ ಪರಿಗಣನೆಯಂತಾದರೋ ಪ್ರತಿ ಹತ್ತು ಸಾವಿರಕ್ಕೆ ಕೇವಲ ೬೮೪೧ ಜನರು ಉಳಿದರು. ಎಂದರೆ ಪ್ರತಿ ಸಾವಿರಕ್ಕೆ ೬೦ ರಂತೆ ಹಿಂದುಗಳು ಕಡಿಮೆಯಾದರು. ೧೯೨೧ ನೆಯ ಇಸ್ವಿ ಪಂಜಾಬಿನ ಜನಪರಿಗಣನೆಯ ಅಧಿಕಾರಿಗಳು ತಮ್ಮ ವರದಿಯಲ್ಲಿ ಕಳೆದ ಹತ್ತು ವರ್ಷಗಳಲ್ಲಿ ಪಂಜಾಬಿನಲ್ಲಿ ೪೦ ಸಾವಿರ ಹಿಂದುಗಳು ಮುಸಲ್ಮಾನರಾದರೆಂದೂ ೧ ಲಕ್ಷ ೨೦ ಸಾವಿರ ಹಿಂದುಗಳು ಕ್ರಿಶ್ಚಿಯನ್‌ರಾದರೆಂದೂ ಸ್ಪಷ್ಟಗೊಳಿಸಿದ್ದಾರೆ. ಈ ವರದಿಯಂತೆ ಸಾಧಾರಣ ೧೦ ವರ್ಷಗಳಲ್ಲಿ ೭ ಲಕ್ಷ ಹಿಂದು ಜನಗಳು ಕ್ರಿಶ್ಚಿಯನ್‌ರಾದರೆಂದೂ ಎಂದರೆ ಪ್ರತಿ ದಿವಸ ೧೯೦ ಜನರು ಹಿಂದುಗಳು ಕ್ರಿಶ್ಚಿಯನ್ನರಾಗುತ್ತಿದ್ದಾರೆಂಬುದೂ ಕಂಡುಬರುತ್ತದೆ. ಕೊಲ್ಹಾಪುರ ರಾಜೇರಾಮ ಕಾಲೇಜಿನ ಪ್ರಿನ್ಸಿಪಾಲರಾದ ಡಾ. ಬಾಳಕೃಷ್ಣ ಶರ್ಮಾರವರು ಹಿಂದು ಲೇಖನದಲ್ಲಿ ಈ ಪ್ರಕಾರ ಅಂಕೆಗಳನ್ನು ಪ್ರಕಟಿಸಿದ್ದಾರೆ.

(ಅಂಕಿಗಳು ಲಕ್ಷದವಿರುತ್ತವೆ.)

| ಇಸ್ವಿ | ಹಿಂದು | ಮುಸಲ್ಮಾನ್ | ಕ್ರಿಶ್ಚಿಯನ್ |
|---|---|---|---|
| ೧೮೮೧ | ೧೮೭೯ | ೫೦೭ | ೧೮ |
| ೧೮೯೧ | ೨೦೭೧ | ೫೭೩ | ೨೨ |
| ೧೯೦೧ | ೨೦೭೧ | ೬೨೪ | ೨೯ |
| ೧೯೧೧ | ೨೧೭೫ | ೬೬೬ | ೩೮ |
| ೧೯೨೧ | ೨೧೬೨ | ೬೮೭ | ೪೩ |

ಈ ಸಂಖ್ಯೆಗಳಿಂದ ಮೊದಲಿನ ಹತ್ತು ವರ್ಷಗಳಲ್ಲಿ ೧೦೦ ಕ್ಕೆ ೧೧೦ ರಂತೆ ಹಿಂದುಗಳೂ, ೧೧೪ ರಂತೆ ಮುಸಲ್ಮಾನರೂ ಮತ್ತು ೧೨೨ ರಂತೆ ಕ್ರಿಶ್ಚಿಯನ್‌ರೂ ಹೆಚ್ಚಾದರು. ಎರಡನೆಯ ಹತ್ತು ವರ್ಷಗಳಲ್ಲಿ ೧೦೦ ಕ್ಕೆ ೧೦೦ ರಂತೆ ಹಿಂದುಗಳೂ, ೧೦೮ ರಂತೆ ಮುಸಲ್ಮಾನರೂ ಮತ್ತು ೧೨೭ ರಂತೆ ಕ್ರಿಶ್ಚಿಯನ್‌ರೂ ಹೆಚ್ಚಾದರು. ೩ ನೆಯ ಹತ್ತು ವರ್ಷಗಳಲ್ಲಿ ೧೦೦ ಕ್ಕೆ ೧೦೫ ರಂತೆ ಹಿಂದುಗಳೂ ೧೦೬॥ ಯಂತೆ ಮುಸಲ್ಮಾನರೂ, ಮತ್ತು ೧೩೨॥ ಯಂತೆ ಕ್ರಿಶ್ಚಿಯನ್ನರೂ ಹೆಚ್ಚಾದರು. ಮತ್ತು ಕೊನೆಯ ಹತ್ತು ವರ್ಷಗಳಲ್ಲಾದರೋ ೧೦೦ ಕ್ಕೆ ೯೯॥ ಹಿಂದುಗಳೂ, ೧೦೫ ರಂತೆ ಮುಸಲ್ಮಾನರೂ ೧೨೨॥ ಯಂತೆ ಕ್ರಿಶ್ಚಿಯನ್‌ರೂ ಆದರು. ಇದರ ಮೇಲಿಂದ ಹಿಂದುಗಳ ಕ್ಷೀಣತೆಯು ಅತಿ ತೀವ್ರಗತಿಯಿಂದ ಆಗುತ್ತಿದೆಯೆಂದೂ ಅಹಿಂದುಗಳ ಸಂಖ್ಯೆಯು ಭರದಿಂದ ಬೆಳೆಯುತ್ತಿದೆಯೆಂದೂ ಸ್ಪಷ್ಟ ತೋರಿಬರುವಂತಿದೆ.

ಕಣ್ಣಿದ್ದು ಕುರುಡರಾಗಿರುವ ಅನೇಕರಿಗೆ ಹಿಂದುಗಳು ಹೇಗೆ ಕಡಿಮೆಯಾಗುತ್ತಿದ್ದಾರೆಂಬುದು ತಿಳಿಯಲೆಂದು ಜನಪರಿಗಣನೆಯ ಸರಕಾರಿ ವರದಿಯಿಂದ ಕೆಲವು ಜಾತಿಯ ಸಂಖ್ಯೆಗಳನ್ನು ಈ ಕೆಳಗೆ ಕೊಟ್ಟಿದೆ. ೧೯೧೧ ನೆಯ ಇಸ್ವಿಗಿಂತಲೂ ೧೯೨೧ ನೆಯ ಇಸ್ವಿಯ ೧೦ ವರ್ಷಗಳ ಅವಧಿಯಲ್ಲಿ ಹಿಂದುಗಳ ಸಂಖ್ಯೆಯು ೧ ಕೋಟಿ ೧೨ ಲಕ್ಷ ಕಡಿಮೆಯಾಗಿದೆ. ಹಿಂದು ಸಮಾಜದ ೬೫ ಜಾತಿಗಳಲ್ಲಿ ೫೨ ಜಾತಿಗಳ ಕ್ಷೀಣತೆಯು ಬಹು ತೀವ್ರತೆಯಿಂದ ಆಗುತ್ತಾ ಇದೆ. ಹಿಂದು ಸಮಾಜದಲ್ಲಿ ಕಡಿಮೆಯಾದ ೧ ಕೋಟಿ ೧೨ ಲಕ್ಷ ಜನಗಳೇ ಮುಸಲ್ಮಾನ್ ಮತ್ತು ಕ್ರಿಶ್ಚಿಯನ್ ಸಮಾಜಗಳಲ್ಲಿ ಹೆಚ್ಚಾಗಿದ್ದಾರೆ.

| ಜಾತಿ | ೧೯೧೧ | ೧೯೨೧ | ೧೦ ವರ್ಷಗಳ ಕ್ಷೀಣತೆ. |
|---|---|---|---|
| ೧ ಬ್ರಾಹ್ಮಣ | ೧೪೫೯೫೭೦೮ | ೧೪೨೫೪೯೯೧ | ೩೪೦೭೧೭ |
| ೨ ಪತ್ತಾರ | ೧೨೬೨೯೭೮ | ೧೧೩೭೬೧೧ | ೧೨೫೩೬೭ |
| ೩ ಲಿಂಗಾಯತ | ೨೯೭೬೬೩೦ | ೨೭೩೮೨೧೪ | ೨೩೮೭೧೬ |
| ೪ ಕ್ಷೌರಿಕ | ೩೦೧೩೩೯೯ | ೨೯೦೫೭೨೪ | ೧೦೭೬೭೫ |
| ೫ ಹೊಲೆಯ | ೩೩೪೨೬೮೦ | ೩೦೦೨೫೧೬ | ೩೪೦೧೬೪ |
| ೬ ಸಮಗಾರ | ೧೧೪೯೩೭೩೩ | ೧೧೨೬೩೬೪೮ | ೨೩೦೦೮೫ |

ಹಿಂದುಗಳ ಪ್ರಮುಖ ಜಾತಿಗಳಲ್ಲಿ ಕೆಲವನ್ನು ಮಾದರಿಗಾಗಿ ಮೇಲೆ ಕೊಟ್ಟಿದೆ. ಅವನ್ನು ನೋಡಿದರೆ ಬ್ರಾಹ್ಮಣರಿಂದ ಹಿಡಿದು ಹೊಲೆಯರವರೆಗೂ ಎಲ್ಲ ಜಾತಿಯ ಹಿಂದು ಜನಗಳೂ ಹೇಗೆ ಕ್ಷೀಣಿಸುತ್ತಾ ಇದ್ದಾರೆಂಬುದು ಸ್ಪಷ್ಟ ಗೊತ್ತಾಗುವಂತಿದೆ. ಪ್ರತಿಯೊಬ್ಬ ಕ್ರಿಶ್ಚಿಯನ್ ಮತ್ತು ಮುಸಲ್ಮಾನರು ಸ್ವತಃ ಧರ್ಮ ಪ್ರಚಾರಕರೆಂದು ಭಾವಿಸಿ ತಮ್ಮ ತಮ್ಮ ಸಂಖ್ಯೆಯನ್ನು ಬೆಳೆಸುವುದರಲ್ಲಿಯೇ ಸದಾ ಪ್ರಯತ್ನಿಸುತ್ತಿರುತ್ತಾರೆ.

ಇಡೀ ಹಿಂದುಸ್ಥಾನದಲ್ಲಿ ಇಂಗ್ಲಂಡ, ಅಮೇರಿಕಾ, ಜರ್ಮನಿ ಸ್ವೀಡನ್, ನಾರ್ವೆ ಮತ್ತು ಕಾನಡಾ ಮೊದಲಾದ ದೇಶಗಳಲ್ಲಿಯ ೭೦೦ ಸಂಸ್ಥೆಗಳು ಕ್ರಿಸ್ತಿ ಧರ್ಮಪ್ರಸಾರ ಮಾಡುತ್ತಾ ಇವೆ. ಈ ಸಂಸ್ಥೆಯವರು ಪ್ರತಿವರ್ಷ ೫೦ ರಿಂದ ೬೦ ಕೋಟಿ ರೂ. ಗಳ ವರೆಗೆ ವೆಚ್ಚ ಮಾಡುತ್ತಿದ್ದಾರೆ. ಹಿಂದುಸ್ಥಾನದಲ್ಲಿ ಸ್ಥಳಿಕ ೭೦೧೦ ಜನರೂ ಸಾಧಾರಣ ೧೯೦೦ ಹೊರಗಿನ ಪಾದ್ರಿ ಜನಗಳೂ ಕೆಲಸ ಮಾಡುತ್ತಿದ್ದಾರೆ. ಇವರಲ್ಲಿ ೧೪೮೧ ವಿವಾಹಿತ ಯುರೋಪಿಯನ್ ಸ್ತ್ರೀಯರೂ, ೨೧೩೧ ಜನರು ಯುರೋಪಿಯನ್ ಪುರುಷರೂ ಮತ್ತು ೨೪೦೮ ಕುಮಾರಿಯರೂ ಇದ್ದಾರೆ. ಕ್ರಿಸ್ತಿ ಧರ್ಮೋಪದೇಶಕರನ್ನು ಸಿದ್ಧಗೊಳಿಸುವ ೬೧ ಶಾಲೆಗಳೂ ೧೪೧ ಅನಾಥಾಲಯಗಳೂ ಇವೆ. ಕೈಗಾರಿಕೆ ಶಿಕ್ಷಣ ಕೊಡುವ ೧೭೦ ವಿದ್ಯಾಲಯಗಳೂ, ಮಾಧ್ಯಮಿಕ ಶಿಕ್ಷಣ ಕೊಡುವ ೬೧೭ ಹಾಯಸ್ಕೂಲಗಳೂ, ದೊಡ್ಡ ಜನರಲ್ಲಿ ಸಾಕ್ಷರತೆಯನ್ನು ಹೆಚ್ಚಿಸುವ ರವಿವಾರದ ೧೫೮೨೦ ಶಾಲೆಗಳೂ, ಮತ್ತು ಒಕ್ಕಲತನ ಶಿಕ್ಷಣ ಕೊಡುವ ೯೮ ಶಾಲೆಗಳು ಇವೆ. ಇವುಗಳಲ್ಲದೆ ೫೦ ಕಾಲೇಜುಗಳು, ೯೪ ಟ್ರೇನಿಂಗ್ ಸ್ಕೂಲಗಳೂ, ೪೩ ಮುದ್ರಣ ಮಂದಿರಗಳೂ, ೯೯ ವೃತ್ತ ಪತ್ರಿಕೆಗಳೂ ಮತ್ತು ೪೮ ಔಷಧಾಲಯಗಳೂ ಇವೆ. ಇವೆಲ್ಲವುಗಳಲ್ಲಿ ಸಾಧಾರಣ ೧೫೦೦ ಡಾಕ್ಟರರೂ, ೫೦೦೦ ಶಿಕ್ಷಕ ಮತ್ತು ಶಿಕ್ಷಕಿಯರೂ ಕೆಲಸ ಮಾಡುತ್ತಿದ್ದಾರೆ. ಇವುಗಳಲ್ಲಿ ಶಿಕ್ಷಣ ಹೊಂದುವ ಹಿಂದು ಹುಡುಗರ ಸಂಖ್ಯೆಯು ೫|| ಲಕ್ಷದ ವರೆಗಿದ್ದು ಕೇವಲ ೨ ಲಕ್ಷದ ವರೆಗೆ ಹೆಣ್ಣು ಹುಡುಗಿಯರೇ ಇದ್ದಾರೆ. ಈ ಎಲ್ಲ ಸಂಸ್ಥೆಗಳ ಸದಸ್ಯರ ಸಂಖ್ಯೆಯು ೮ ಲಕ್ಷದ ವರೆಗಿದ್ದು ಪ್ರತಿವರ್ಷ ೧೯ ಲಕ್ಷ ರೂ. ವರ್ಗಣಿ ರೂಪದಿಂದ ಇವರು ಕೊಡುತ್ತಾ ಇದ್ದಾರೆ. ಒಂದೇ ಹೈದರಾಬಾದ ಸಂಸ್ಥಾನಿನಲ್ಲಿಯೇ ಈ ಸಂಸ್ಥೆಯವರು ಎಂಥ ಪ್ರಚಂಡ ಕಾರ್ಯಮಾಡುತ್ತಿದ್ದಾರೆಂಬುದು ಈ ಕೆಳಗಿನ ಸಂಗತಿಗಳಿಂದ ಸ್ಪಷ್ಟ ಕಾಣುವುದು.

೧೯೨೬ ನೆಯ ಇಸ್ವಿಯಲ್ಲಿ ಈ ಸಂಸ್ಥೆಯವರು ೧೬ ಸಾವಿರ ಚದುರು ಮೈಲುಗಳ ವರೆಗೆ ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತಾರ ಪಡಿಸಿದರು. ಈಗ ೬೧೪ ಹಳ್ಳಿಗಳಲ್ಲಿ ೧೨೯೫ ಪ್ರಚಾರಕರು ಕೆಲಸ ಮಾಡುತ್ತಿದ್ದಾರೆ. ಇವರಲ್ಲಿ ೧೨೩೧ ಪ್ರಚಾರಕರು ಹಿಂದೀಯರಿದ್ದಾರೆ. ೪೬೦ ಶಾಲೆಗಳನ್ನು ಕೇವಲ ಹೈದರಾಬಾದ ಸಂಸ್ಥಾನಿನಲ್ಲಿಯೇ ನಡೆಯಿಸುತ್ತಿದ್ದಾರೆ.

ಈ ಪ್ರಕಾರ ಅನೇಕ ಉಪಾಯಗಳಿಂದ ಹಿಂದುಗಳನ್ನು ಧರ್ಮಾಂತರಗೊಳಿಸುವ ಇವರ ಉದ್ಯೋಗವು ಎಡಬಿಡದೆ ಸಾಗಿದೆ. ನಿಜಾಮ ಸರಕಾರದವರೂ ತಮ್ಮ ರಾಜ್ಯದಲ್ಲಿ ಹಿಂದುಗಳನ್ನು ಧರ್ಮಾಂತರಗೊಳಿಸಿ ಮುಸಲ್ಮಾನರನ್ನು ಮಾಡುವುದಕ್ಕಾಗಿ ಪ್ರತಿವರ್ಷ ೧೫ ಲಕ್ಷ ರೂ. ಗಳನ್ನು ವೆಚ್ಚಮಾಡುತ್ತಿದ್ದಾರೆ.

ಇದು ಪ್ರಜಾ ಪ್ರತಿನಿಧಿತ್ವದ ಕಾಲವಾಗಿದೆ. ಎಲ್ಲ ಧರ್ಮದವರೂ ತಮ್ಮ ತಮ್ಮ ಸಂಖ್ಯಾಬಲಗಳನ್ನು ಹೆಚ್ಚಿಸಿಕೊಳ್ಳಲು ತುಂಬಾ ಪ್ರಯತ್ನಿಸುತ್ತಿದ್ದಾರೆ. ಸಂಖ್ಯಾಬಲದ ಮೇಲಿಂದಲೇ ಅವರವರ ವರ್ಚಸ್ಸು, ಪ್ರತಿನಿಧಿತ್ವಗಳು ಅವಲಂಬಿಸಿರುವುದರಿಂದ ಜಗತ್ತಿನಲ್ಲೆಲ್ಲಾ ಈಗ ಈ ಸ್ಪರ್ಧೆಯುಂಟಾಗಿದೆ. ಹಿಂದುಗಳಾದರೂ ತಮ್ಮ ವರ್ಚಸ್ಸನ್ನು ಕಾಯ್ದುಕೊಂಡು ಸುಖದಿಂದ ಬಾಳಬೇಕಾದರೆ ತಮ್ಮ ಸಂಖ್ಯಾಬಲವು ಕುಗ್ಗದಂತೆ ನೋಡಿಕೊಳ್ಳುವುದು ಎಷ್ಟು ಅವಶ್ಯಕವೊ ಅಷ್ಟೇ ಕುಗ್ಗಿದ ಸಂಖ್ಯೆಯನ್ನು ಪುನಃ ಹೆಚ್ಚಿಸಿಕೊಳ್ಳಲು ಪ್ರಚಂಡವಾದ ಶುದ್ಧಿ ಕಾರ್ಯವನ್ನು ಅವ್ಯಾಹತವಾಗಿ ನಡೆಯಿಸುವುದು ಅವಶ್ಯಕವಾಗಿದೆ. ದೇಶದ ತುಂಬೆಲ್ಲಾ ಅನಾಥಾಲಯ ವಿಧವಾಶ್ರಮ, ಔಷಧಾಲಯ, ಆರ್ಥಿಕಾಲಯ ಮೊದಲಾದ ಸಂಸ್ಥೆಗಳನ್ನು ಸ್ಥಾಪಿಸಿ ಹಿಂದು ಜನಾಂಗದ ಸಂರಕ್ಷಣೆ ಮಾಡಬೇಕು. ಪ್ರತಿಯೊಬ್ಬ ಹಿಂದು ಮನುಷ್ಯನು ತಾನು ಜೀವಿಸಿರುವುದರೊಳಗಾಗಿ ಕನಿಷ್ಟ ೨-೩ ಜನರನ್ನಾದರೂ ಪರಧರ್ಮಕ್ಕೆ ಹೋದ ಹಿಂದುಗಳನ್ನು ಸ್ವಧರ್ಮದಲ್ಲಿ ತೆಗೆದುಕೊಳ್ಳಲು ಪ್ರತಿಜ್ಞೆ ಮಾಡಬೇಕು.

---

## ಕೇಂದ್ರ ಶಾಸನ ಸಭೆ.

ದಿಲ್ಲಿಯ ಕೇಂದ್ರ ಶಾಸನ ಸಭೆಯಲ್ಲಿ ಪ್ರಶ್ನೆಗೆ ಉತ್ತರಕೊಡುತ್ತಾ ಸರ್. ಜೇಮ್ಸ ಗ್ರಿಗ್‌ರವರು ಈ ರೀತಿ ಹೇಳಿದರು—

“ಇಂಗ್ಲಂಡವು ಸುವರ್ಣ ಪರಿಮಾಣವನ್ನು ಪ್ರಾರಂಭಿಸಿದಂದಿನಿಂದ ಈ ವರೆಗೆ ಕಳೆದ ಏಳು ವರುಷಗಳಲ್ಲಿ ಹಿಂದುಸ್ಥಾನದಿಂದ ೩೮೫೨೫೪೨೬ ಔಂಸ್ ಬಂಗಾರವು ಪರದೇಶಗಳಿಗೆ ಕಳುಹಿಸಲ್ಪಟ್ಟಿತು. ಇದರ ಬೆಲೆಯು ೬೨೬ ಕೋಟಿ ರೂ. ಆಗುತ್ತದೆ. ಹಿಂದುಸ್ಥಾನದಲ್ಲಿ ೧೪೯೩ ನೆಯ ಇಸ್ವಿಯಿಂದ ೧೯೩೦ ನೆಯ ಇಸ್ವಿಯ ವರೆಗೆ ಸಂಗ್ರಹಿಸಿದ ಬಂಗಾರವು ಸಾಧಾರಣ ೧೪೫೪ ಕೋಟಿ ರೂ. ಬೆಲೆಬಾಳುವದ್ದಿರಬಹುದೆಂದು ಊಹಿಸಲಾಗಿದೆ. ಎಂದರೆ ಈ ವರೆಗೆ ಹಿಂದುಸ್ಥಾನದಲ್ಲಿರುವ ಬಂಗಾರದ ಐದನೆಯ ಒಂದು ಭಾಗದಷ್ಟು ಮಾತ್ರ ಪರದೇಶಗಳಿಗೆ ಹೋಗಿದೆ. ಆದರೂ ೧೦೦ಕ್ಕೆ ೭೦ ರಂತೆ ಲಾಭ ದೊರಕಿಸಿತು. ಇಂಥ ಸ್ಥಿತಿಯು ಬಹು ಆನಂದಮಯವೆಂದು ತಿಳಿಯಬೇಕೆಂದೂ ಅವರು ಉಪದೇಶಿಸಿದರು!

‘೧೫ ವರುಷಗಳಲ್ಲಿ ಸೈನ್ಯದ ಹಿಂದೀಕರಣವನ್ನು ಸಂಪೂರ್ಣಗೊಳಿಸುವ ಯೋಜನೆ ಸಿದ್ಧಮಾಡಿರಿ.’ ಎಂದು ಕೇಂದ್ರ ಶಾಸನ ಸಭೆಯಲ್ಲಿ ಕಾಂಗ್ರೆಸ್ ಪಕ್ಷದ ಧುರೀಣರಾದ ಶ್ರೀ. ಭೂಲಾಭಾಯಿ ದೇಸಾಯಿಯವರು ಹೇಳುತ್ತಾ ಈ ರೀತಿಯಾಗಿ ಭಾಷಣವನ್ನು ಮಾಡಿದರು—

“ಜಪಾನಿನಲ್ಲಿ ಲೆಫ್ಟನಂಟ್ ಕರ್ನಲ್ಲಗೆ ೨೫೦ ರೂ. ಸಂಬಳ ದೊರೆಯುತ್ತಿದ್ದರೆ ಹಿಂದುಸ್ಥಾನದಲ್ಲಿ ೨೦೦೦ ರೂ. ಸಂಬಳವೇಕೆ? ಬ್ರಿಟಿಶ್‌ರನ್ನು ಹೊರಗೆ ಹಾಕಿದರೆ ದೇಶಾಭಿಮಾನಿಗಳಾದ ಹಿಂದೀ ತರುಣರು ಕಡಿಮೆ ಸಂಬಳದಲ್ಲಿಯೇ ಕೆಲಸಮಾಡಲು ಸಿದ್ಧರಿರುವರು.”

ಡಾ. ದೇಶಮುಖರವರು ತಮ್ಮ ಭಾಷಣದಲ್ಲಿ “ಹಿಂದುಸ್ಥಾನದವರು ಸಾಮ್ರಾಜ್ಯದ ಸಲುವಾಗಿ ಕಳೆದ ಏಳು ವರುಷಗಳಲ್ಲಿ ೧೦ ಲಕ್ಷ ಜನರನ್ನು ಕೊಟ್ಟಿದ್ದಾರೆ. ಹಿಂದಿ ಸೈನ್ಯದಲ್ಲಿ ೨ ಸಾವಿರ ಕ್ಯಾಪ್ಟನ್ನರುಗಳಲ್ಲಿ ಹಿಂದೀ ಕ್ಯಾಪ್ಟನ್ನರು ಮಾತ್ರ ಕೇವಲ ೭ ಜನರು ಇದ್ದಾರೆ!” ಎಂದು ಹೇಳಿದರು.

# ವಿಮರ್ಶಾತ್ಮಕ ಪ್ರಶ್ನೋತ್ತರ.

## ಹಿಂದು ಸಂಘಟನೆ ಮತ್ತು ಕಾಂಗ್ರೆಸ್.

ಪ್ರಶ್ನೆ—ಹಿಂದು ಸಂಘಟನೆಯ ಪ್ರಚಾರವು ಕಾಂಗ್ರೆಸ್ ಕೆಲಸಕ್ಕೆ ಪ್ರತಿಕೂಲವಾಗುವುದಿಲ್ಲವೆ?

ಉತ್ತರ— ಪ್ರತಿಕೂಲವಾಗುವುದಿಲ್ಲ. ಆದರೆ ಅನುಕೂಲವೇ ಆಗುತ್ತದೆ. ಯಾರಿಗೆ ಹಿಂದು ಸಂಘಟನೆಯ ರೀತಿ ನೀತಿಗಳೇ ತಿಳಿದಿಲ್ಲವೋ ಅವರಿಗೆ ಹಿಂದು ಸಂಘಟನೆಯು ಕಾಂಗ್ರೆಸ್ಸಿಗೆ, ವಿರೋಧವಾದ ಕಾರ್ಯವೆಂದು ತೋರಬಹುದು.

ಪ್ರಶ್ನೆ— ಹಿಂದು ಸಂಘಟನೆಯು ಕಾಂಗ್ರೆಸ್ ಕಾರ್ಯಕ್ಕೆ ಹೇಗೆ ಅನುಕೂಲವಾದುದು? ಅದರ ರೀತಿ ನೀತಿಗಳಾದರೂ ಯಾವವು?

ಉತ್ತರ— ಅಸ್ಪೃಶ್ಯತಾ ನಿವಾರಣೆಯು ಕಾಂಗ್ರೆಸ್ಸಿನ ವಿಧಾಯಕ ಕಾರ್ಯಗಳಲ್ಲಿ ಒಂದು ಮುಖ್ಯವಾದುದಾಗಿಲ್ಲವೆ? ಕಾಂಗ್ರೆಸ್ಸಿನವರು ಮಾಡುತ್ತಿರುವ "ಹರಿಜನ" ಸೇವೆಯು ಅದ್ಭುತ ಕಾರ್ಯಗಳು ಕಾಂಗ್ರೆಸ್ಸಿಗೆ ಅನುಕೂಲವಾದವುಗಳೆಂದೇ ಕಾಂಗ್ರೆಸ್ ಸಂಸ್ಥೆಯು ತಿಳಿದಿಲ್ಲವೆ?

ಹಿಂದು ಸಂಘಟನೆಯ ಕಾರ್ಯಗಳಲ್ಲಿ ಈ ನಿಮ್ಮ "ಹರಿಜನ" ಸೇವೆಯ ಕಾರ್ಯವೂ ಒಂದು ಮುಖ್ಯವಾದುದೇ ಆಗಿದೆ. ಎಂದ ಮೇಲೆ ಹಿಂದು ಸಂಘಟನೆಯ ಕಾರ್ಯವು ಕಾಂಗ್ರೆಸ್ಸಿಗೆ ಅದೇಕೆ ವಿರೋಧವಾದುದಾಗಿ ಪರಿಣಮಿಸುತ್ತದೆ? ಕಾಂಗ್ರೆಸ್ಸಿನವರು "ಹರಿಜನ" ಸೇವೆಯ ಕಾರ್ಯಗಳನ್ನು ಮಾಡಿದರೆ ಮಾತ್ರ ಕಾಂಗ್ರೆಸ್ಸಿಗೆ ಅನುಕೂಲ, ಅದೇ ಕಾರ್ಯವನ್ನು ಬೇರೆಯವರು ಮಾಡಿದರೆ ಕಾಂಗ್ರೆಸ್ಸಿಗೆ ಪ್ರತಿಕೂಲವೆ?

ಹಿಂದು ಸಂಘಟನೆಯ ಕಾರ್ಯ ಪ್ರಾರಂಭಿಸಿದವರಲ್ಲಿ ಮಹಾತ್ಮಾ ಗಾಂಧಿಯವರಿಗೆ ಬಹು ಹೆಚ್ಚಿನ ಸ್ಥಾನವಿದೆ. ಮತ್ತು ಹಿಂದು ಸಂಘಟನೆಗಾಗಿ ಪ್ರಯತ್ನಿಸುತ್ತಿರುವ ಸಂಸ್ಥೆಗಳಲ್ಲಿ ಕಾಂಗ್ರೆಸ್ಸಿಗೂ ಎಷ್ಟೋ ಉನ್ನತ ಸ್ಥಾನವಿದೆ. ಹೀಗಿರುವಾಗ ಹಿಂದು ಸಂಘಟನೆಯ ಕಾರ್ಯವು ಕಾಂಗ್ರೆಸ್ಸಿಗೆ ಪ್ರತಿಕೂಲವಾದುದೆಂದು ತಿಳಿಯುವುದು ತಪ್ಪು.

ಸವರ್ಣ ಹಿಂದುಗಳಿಗೂ ಅವರ್ಣೀಯರಾದ ಆದಿ ಹಿಂದುಗಳಿಗೂ ಇರತಕ್ಕ ಭಿನ್ನ ಭೇದಗಳನ್ನು ತೆಗೆದುಹಾಕಿ ಪರಸ್ಪರರಲ್ಲಿ ಸಮಾನವಾದ ಸಾಮಾಜಿಕ ಬಂಧುಭಾವಗಳನ್ನು ಉಂಟುಮಾಡುವುದು ಹಿಂದು ಸಂಘಟನೆಯ ಒಂದಂಗವಾಗಿದೆ. ಇದೇ ಪ್ರಕಾರ ಸ್ಪೃಶ್ಯ ಹಿಂದುಗಳಲ್ಲಿರತಕ್ಕ ಸಾವಿರಾರು ಕೃತ್ರಿಮ ಭೇದ ಭಾವಗಳನ್ನು ತೆಗೆದುಹಾಕಿ ಅವರೆಲ್ಲರೂ ಹಿಂದು ಜನಾಂಗದಲ್ಲಿ ಸಮಾನವಾದ ಸಾಮಾಜಿಕ ಸುಖ ಸೌಲಭ್ಯಗಳುಳ್ಳವರಾಗಿ ಬಂಧು ಪ್ರೇಮದಿಂದ ವರ್ತಿಸುವಂತೆ ಮಾಡುವುದೇ ಹಿಂದು ಸಂಘಟನೆಯು.

ಹಿಂದುಗಳಲ್ಲಿ ಈಗಿರತಕ್ಕ ನಾನಾ ವಿಘಟನೆಗಳನ್ನೆಲ್ಲಾ ತೆಗೆದು ಹಾಕಿ ಅದಕ್ಕೆ ಕಾರಣವಾಗಿರತಕ್ಕ ಅನೇಕ ಪದ್ಧತಿಗಳನ್ನೂ ಕಲ್ಪನೆಗಳನ್ನೂ ನಿವಾರಣೆಮಾಡಿ ಹಿಂದು ಜನಾಂಗವು ಒಂದು ಶಕ್ತಿಶಾಲಿಯಾದ ಜನಾಂಗವಾಗುವಂತೆ ಪ್ರಯತ್ನಿಸುವುದೇ ಹಿಂದು ಸಂಘಟನೆಯು. ಈ ದೇಶದ ೨೪ ಕೋಟಿ ಹಿಂದುಗಳಲ್ಲಿ ಇಂಥ ಸಾಮಾಜಿಕ ಐಕಮತ್ಯದ ಪ್ರಚಂಡ ಶಕ್ತಿಯುಂಟಾದರೆ ಅದು ಕಾಂಗ್ರೆಸ್ಸಿಗೆ ಹಿತಕರವಾಗಿಯೇ ಪರಿಣಮಿಸುವುದಿಲ್ಲವೆ? ಕಾಂಗ್ರೆಸ್ಸಿಗಾದರೂ ರಾಷ್ಟ್ರದ ನಾನಾ ಜನಾಂಗಗಳಲ್ಲಿ ಸಂಘಟನೆ ಬೇಕಾಗಿದೆಯೇ ವಿನಾ ವಿಘಟನೆಯು ಬೇಕಾಗಿಲ್ಲವಷ್ಟೆ? ಏಕೆಂದರೆ ಜನಾಂಗದಲ್ಲಿರುವ ವಿಘಟನೆಯು ಅದರ ನಿರ್ಬಲತೆಕ್ಕೆ ಒಂದು ಮುಖ್ಯ ಕಾರಣವು. ಜನಾಂಗದ ನಿರ್ಬಲವೇ ಪಾರತಂತ್ರ್ಯಕ್ಕೆ ಮೂಲ. ಅದ ಕಾರಣ ಸಂಘಟನೆಯೇ ಸ್ವಾತಂತ್ರ್ಯ. ವಿಘಟನೆಯೇ ಪಾರತಂತ್ರ್ಯ. ನಮ್ಮ ದೇಶದ ಹಿಂದಣ ಚರಿತ್ರೆಯೇ ಈ ಮಾತಿಗೆ ಬಲವಾದ ದೃಷ್ಟಾಂತವಾಗಿದೆ.

ಪ್ರಶ್ನೆ— ಹಿಂದು ಸಂಘಟನೆಗಾಗಿ ಪ್ರಯತ್ನಿಸಿದರೆ ಜನರಲ್ಲಿ ಜಾತಿ ಭಾವನೆ ಬರುತ್ತದೆ. ಅದರಿಂದ ರಾಷ್ಟ್ರೀಯ ಭಾವನೆ ಲೋಪವಾಗುತ್ತದೆ. ಹಿಂದು ಸಂಘಟನೆಯೆಂದರೆ ಜಾತಿವಿಶಿಷ್ಟ ಸಂಕುಚಿತ ಕಾರ್ಯ. ಇದರಿಂದ ಅಹಿಂದುಗಳಾದ ಮುಸಲ್ಮಾನ್ ಮತ್ತು ಕ್ರಿಸ್ತರು ಅಪ್ರಿಯರಾಗಿ ನಮಗೆ ವಿರೋಧಿಸುವರು. ಆದಕಾರಣ ಕಾಂಗ್ರೆಸ್ ಕಾರ್ಯದ ಹೊರತು ಯಾವುದನ್ನೂ ಮಾಡದಿರುವುದೇ ವಿಹಿತವಲ್ಲವೆ?

ಉತ್ತರ— ಹೀಗೆ ನಿಮ್ಮಂತೆಯೇ ಅನೇಕರು ತಪ್ಪು ತಿಳಿದುಕೊಂಡಿದ್ದಾರೆ. ಆದಕಾರಣ ಹಿಂದು ಸಂಘಟನೆಯೆಂದರೆ ಅವರ ಮೈಗೆ ಬೆಂಕಿ ತಾಕಿದಂತಾಗುತ್ತದೆ. ತಾವು ಹಿಂದುಗಳೆಂದು ಹೇಳಿಕೊಳ್ಳಲು ಕೂಡಾ ಅವರು ಒಪ್ಪುವುದಿಲ್ಲ. ತಾವು ಹಿಂದೀ ಅಥವಾ ಕಾಂಗ್ರೆಸ್ ಜಾತಿಯವರೆಂದು ಹೇಳುತ್ತಾರೆ.

ಕಾಂಗ್ರೆಸ್ಸಿನಲ್ಲಿ ಸೇರಿದ ಬಹು ಸಂಖ್ಯಾಕರೆಲ್ಲರೂ ಈಗಲೂ ಜಾತಿಭಾವನೆ ಮತ್ತು ಪ್ರಾಂತಿಕ ಅಭಿಮಾನಗಳಿಂದ ಕೂಡಿದವರೇ ಆಗಿದ್ದಾರೆಂಬುದು ಎಲ್ಲರಿಗೂ ತಿಳಿದ ಸಂಗತಿಯಾಗಿದೆಯಷ್ಟೇ. ಈ ಕೊಳೆಯನ್ನು ತೊಳೆಯಬೇಕೆಂದೇ ಮಹಾತ್ಮಾ ಗಾಂಧಿಯವರು ಈಗ ತುಂಬಾ ಯೋಚಿಸುತ್ತಿರುವುದೂ ಸರ್ವಶ್ರುತವಷ್ಟೆ.

ಈ ಶೋಚನೀಯ ಸ್ಥಿತಿಯಿರಲು ಕಾರಣವೇನು ಬಲ್ಲಿರಾ? ಹಿಂದು ಸಂಘಟನೆಯಿಲ್ಲದಿದ್ದುದು. ಹಿಂದು ಸಂಘಟನೆಯ ಉದಾರ ವಿಚಾರಗಳಿಂದ ಪರಿಶುದ್ಧರಾಗದೆ ಕೇವಲ ರಾಜಕೀಯ ಸ್ವಾತಂತ್ರ್ಯಕ್ಕಾಗಿ ಹಿಂಬಾಲಿಸುವ ವೃತ್ತಿಯಿದ್ದುದು. ಬ್ರಾಹ್ಮಣ, ಬ್ರಾಹ್ಮಣೇತರ, ಲಿಂಗಾಯತ, ಲಿಂಗಾಯತೇತರ ಮರಾಠಾ, ಮರಾಠೇತರ ಈ ಪ್ರಕಾರ ಬಹು ಜನರು ಇನ್ನೂ ಜಾತಿಯ ಕೊಳೆಯನ್ನಿಟ್ಟುಕೊಂಡೇ ಕಾಂಗ್ರೆಸ್ಸಿನ ಮುಖ್ಯಸ್ಥಕಿನಲ್ಲಿ ಮುಂದೆ ಬಂದುದು. ಹಿಂದು ಸಂಘಟನೆಯ ಪ್ರವಾಹದಲ್ಲಿ ಈ ಮತಪಂಗಡದ ವಿಶಿಷ್ಟ ಕೊಳೆಯನ್ನು ತೊಳೆದುಕೊಳ್ಳದಿದ್ದುದು.

ಹಿಂದು ಸಂಘಟನೆಯ ಪ್ರಚಾರದ ವಿನಾ ಹಿಂದುಗಳಲ್ಲಿಯ ಈ ನಾನಾ ಮತಪಂಗಡಗಳ ದ್ವೇಷಾಸೂಯೆಗಳು ನಿವಾರಣೆಯಾಗುವುದಿಲ್ಲ. ಹಿಂದು ಸಂಘಟನೆಯ ದಿವ್ಯ ತತ್ವ ತಿಳಿದ ವಿನಾ ಈಗಿನ ಪ್ರಾಂತಿಕ ದುರಭಿಮಾನವು ಲೋಪವಾಗುವುದಿಲ್ಲ. ಹಿಂದುಗಳೆಲ್ಲರೂ ಅವರು ಯಾವ ಮತಪಂಥದವರೇ ಇರಲಿ, ಅಥವಾ ಕನ್ನಡ, ಮರಾಠಿ ಮೊದಲಾದ ಯಾವ ಪ್ರಾಂತಿಕ ಭಾಷೆಯನ್ನಾಡುವವರೇ ಇರಲಿ ಎಲ್ಲರೂ ಹಿಂದು ಸಂಸ್ಕೃತಿಯ ಸಂರಕ್ಷಣೆ ಮತ್ತು ಸಂವರ್ಧನೆಗಳಿಗಾಗಿಯೇ ಪ್ರಯತ್ನಿಸುತ್ತಿದ್ದಾರೆಂಬ ಪರಸ್ಪರ ಸಹಾನುಭೂತಿಯ ಭಾವನೆಯನ್ನು ಹಿಂದು ಸಂಘಟನೆಯ ವಿನಾ ಇನ್ನಾವುದೂ ಉಂಟು ಮಾಡಲಾರದು.

ಈ ದೇಶದ ಏಳು ಕೋಟಿ ಮುಸಲ್ಮಾನರು ತಮ್ಮ ಭಾಷೆ, ತಮ್ಮ ಸಂಸ್ಕೃತಿ, ತಮ್ಮ ಹಕ್ಕು ಬಾಧ್ಯತೆಗಳಿಗಾಗಿ ಅವರು ಯಾವ

## ಮೈಂದರಗಿಯಲ್ಲಿ
## ಶ್ರೀ ಕುಮಾರ ಸ್ವಾಮಿಗಳ ಭಾಷಣ.

ಧಾರವಾಡ ನವಕಲ್ಯಾಣಮಠದ ಶ್ರೀ. ಶಿವಕುಮಾರ ಸ್ವಾಮಿ ಬಿ. ಎ. ಇವರು ತಾ. ೩-೯-೩೮ ನೆಯ ದಿವಸ ಸೊಲ್ಲಾಪುರದಿಂದ ಇಲ್ಲಿಗೆ ಬಂದರು. ಇಲ್ಲಿಯ ಪ್ರಮುಖರು ಎದುರುಗೊಂಡು ಶ್ರೀ ಸ್ವಾಮಿಗಳನ್ನು ಸ್ವಾಗತಿಸಿದರು. ಇದೇ ದಿವಸ ಶ್ರೀ. ಮಲ್ಲಪ್ಪ ಹೋಳಿಕಟ್ಟಿ ಇವರ ಪಟಾಂಗಣದಲ್ಲಿ "ಭಕ್ತ ಮತ್ತು ಲಿಂಗ" ಈ ವಿಷಯದ ಮೇಲೆ ಭಾಷಣಮಾಡಿದರು. ಮರು ದಿವಸ ರವಿವಾರ 'ಪಂಚಾಚಾರ್ಯ' ರ ಸಂಬಂಧವಾಗಿಯೂ ಸೋಮವಾರ 'ಅಷ್ಟಾವರಣ' ದ ಸಂಬಂಧವಾಗಿಯೂ ಈ ಪ್ರಕಾರ ಮೂರು ದಿವಸ ೩ ವ್ಯಾಖ್ಯಾನಗಳನ್ನು ಮಾಡಿದರು.

ಇವರು ತಮ್ಮ ಭಾಷಣದಲ್ಲಿ ಶಿವಶರಣರ ವಚನಗಳನ್ನು ಆಧುನಿಕ ಪಾಶ್ಚಿಮಾತ್ಯ ತತ್ವಗಳಿಗೆ ತುಲನಾತ್ಮಕ ದೃಷ್ಟಿಯಿಂದ ಹೋಲಿಸಿ ಶಿವಶರಣರ ದಿವ್ಯ ವಚನಗಳ ಮಹತ್ವವು ಎಷ್ಟಿದೆಯೆಂಬುದನ್ನು ಸಪ್ರಮಾಣವಾಗಿ ಸಿದ್ಧಮಾಡಿಕೊಟ್ಟರು. ಸಭೆಗೆ ಊರಲ್ಲಿಯ ಸರ್ವ ಧರ್ಮದ ಜನಗಳೂ ಬರುತ್ತಿದ್ದರು. ಸದ್ಯದ ನಾಮಧಾರೀ ಜಂಗಮರ ಸಹವಾಸ ಬಿಟ್ಟುಬಿಡಬೇಕೆಂದು ಅತ್ಯಂತ ಕಳಕಳಿಯಿಂದ ಹೇಳಿದ್ದಲ್ಲದೆ ನಿಜ ಜಂಗಮರು ಹೇಗಿರುತ್ತಾರೆಂಬುದನ್ನು ಜನಗಳಿಗೆ ತಿಳುಹಿಸಿಕೊಟ್ಟರು. ಈ ನಾಮಧಾರಿ ಜಂಗಮರ ನಾದದಿಂದಲೇ ವೀರಶೈವ ಸಮಾಜವು ಅಧೋಗತಿಗೀಡಾಗಿದೆಯೆಂದು ಸ್ಪಷ್ಟ ಹೇಳಿದರು. ಇಷ್ಟು ಚಿಕ್ಕ ವಯಸ್ಸಿನಲ್ಲಿ ಇವರು ಸಂಪಾದಿಸಿದ ಜ್ಞಾನ ಅನುಭವವನ್ನು ಕಂಡು ಜನಗಳು ಶ್ರೀ ಬಸವೇಶ್ವರ ಅವತಾರ ಮೂರ್ತಿಯೆಂದೇ ಮಾತನಾಡುತ್ತಿದ್ದರು. ಸಭೆಗೆ ಪ್ರತಿದಿವಸ ೨-೩ ಸಾವಿರ ಜನಗಳು ಸೇರುತ್ತಿದ್ದರು.

ಶ್ರೀ ಶಿವಕುಮಾರಸ್ವಾಮಿಗಳು "ಶಿವಾನುಭವ ಮಂಟಪ" ಕ್ಕೂ ದರ್ಶನಕೊಟ್ಟು ಅಲ್ಲಿಯ ವಚನವಾಙ್ಮಯ ಪ್ರಚಾರ ಕಾರ್ಯಕ್ಕಾಗಿ ಸಮಾಧಾನ ಪಟ್ಟರು. ಶುದ್ಧಿ ಸಂಘಟನೆಯ ಅವಶ್ಯಕತೆಯನ್ನು ತಿಳಿಸಿಕೊಟ್ಟು ಸಂಸ್ಥೆಯು ಉತ್ತರೋತ್ತರ ಬೆಳೆಯಲೆಂದು ಹಾರೈಸಿದರು. ಮೈಂದರ್ಗಿಯಿಂದ ತಾ. ೬-೯-೩೮ ನೆಯ ದಿವಸ ಧಾರವಾಡಕ್ಕೆ ತೆರಳಿದರು. ಧಾರವಾಡದಿಂದ ತಂತಿ ಬಂದುದರಿಂದ ಸೊಲ್ಲಾಪುರ, ದುಧನಿ, ಮೊದಲಾದ ಕಡೆಯ ಕಾರ್ಯಕ್ರಮುಗಳ ತೀರಿಸಿಕೊಳ್ಳದೆ ಹಾಗೆಯೇ ಹೊರಟುಹೋದರು.

### ಪುರಾಣ ಸಮಾಪ್ತಿ ಮಹೋತ್ಸವ.

ಇಲ್ಲಿಯ ಶ್ರೀ ರೇವಣಸಿದ್ಧ ಮಠದಲ್ಲಿ ಹಚ್ಚಿದ ಶ್ರೀ ರೇವಣಸಿದ್ಧೇಶ್ವರ ಪುರಾಣ ಸಮಾಪ್ತಿ ಸಮಾರಂಭವು ನೆರವೇರಿಸಲ್ಪಟ್ಟಿತು. ಭಾದ್ರಪದ ಶುದ್ಧ ೭ ಗಣಾರಾಧನೆ ಮತ್ತು ಶು॥ ೭ ಪ್ರಚಂಡ ಮೆರವಣಿಗೆ ಆಯಿತು. ಊರಲ್ಲಿಯ ಸರ್ವ ಒಳಪಂಗಡದವರೂ ಉತ್ಸವದಲ್ಲಿ ಭಾಗಿಗಳಾಗಿ ಸಹಭೋಜನ ಸಮಾರಂಭ ನೆರವೇರಿಸಿದರು. ಆಳಂದ ಗುಲಬರ್ಗಾ ಮೊದಲಾದ ತರುಣಸಂಘದವರೂ ಬಂದಿದ್ದರು. ಶ್ರೀ. ಸತ್ಯಸ್ತು ಎಂಬುವವರು ವೀರಶೈವ ಏಕೀಕರಣ ಶುದ್ಧಿ ಸಂಘಟನೆಯ ಬಗ್ಗೆ ಭಾಷಣಮಾಡಿದರು.

ಅಂತು ಈ ವರುಷದ ಶ್ರಾವಣಮಾಸದಲ್ಲಿ ಶಿವಶರಣರ ವಚನ ಶಾಸ್ತ್ರದ ಸದುಪದೇಶದಿಂದ ಜನಗಳಲ್ಲಿ ತುಂಬಾ ಜಾಗೃತಿಯುಂಟಾಯಿತು. ಈ ಎಲ್ಲ ಶ್ರೇಯಸ್ಸಕ್ಕೂ ಇಲ್ಲಿಯ ಪೂಜ್ಯ ಪಟ್ಟದ ಸ್ವಾಮಿಗಳಾದ ಶ್ರೀ ರೇವಣಸಿದ್ಧ ಸ್ವಾಮಿಗಳವರೇ ಕಾರಣರಾಗಿದ್ದಾರೆ.

ನಾಗಪ್ಪ ಚೆನ್ನಪ್ಪ ತೋಟದ
ಸೆಕ್ರೆಟರಿ— "ಶಿವಾನುಭವ ಮಂಟಪ"

## ಬಾಗಲಕೋಟೆಯಲ್ಲಿ ಆದಿಜನ
## ತರುಣ ಸಂಘದ ಸ್ಥಾಪನೆ.

ತಾ. ೩೧-೮-೩೮ ನೇ ದಿವಸ ಆದಿಜನ ವಸತಿಯಲ್ಲಿ ಇದ್ದ ಕನ್ನಡ ೫ ನೇ ನಂಬರ ಶಾಲೆಯಲ್ಲಿ ಡಾ. ಪಾಟೀಲ ಬಸಪ್ಪನವರ ಅಧ್ಯಕ್ಷತೆಯ ಕೆಳಗೆ ಆದಿಜನರ ಸಭೆಕೂಡಿತ್ತು. ಶ್ರೀ. ಕಂಠಿ ವಕೀಲರು ತಮ್ಮ ಭಾಷಣದಲ್ಲಿ ಆದಿಜನರ ಸುಧಾರಣೆಯು ಸಲುವಾಗಿ ಮಹಾತ್ಮರ ದಯೆ, ಸತ್ಯ, ಶಾಂತಿ, ಅಹಿಂಸೆ, ಸ್ವಚ್ಛತೆ, ಒಕ್ಕಟ್ಟು, ವಿದ್ಯಾಪ್ರಸಾರ, ಸ್ವಾವಲಂಬನ ಇವೇ ಮುಖ್ಯ ಉಪಾಯಗಳೆಂದು ಹೇಳಿದರು. ಶ್ರೀ. ಪರಶುರಾಮಪ್ಪ ಬೆಂಡಿಗೇರಿ (ಆದಿಜನ) ಇವರು ತಮ್ಮ ಭಾಷಣದಲ್ಲಿ ನಮ್ಮ ಜನರ ಉನ್ನತಿಯಾಗಬೇಕಾದರೆ ತರುಣರ ಸಂಘವನ್ನು ಸ್ಥಾಪಿಸಬೇಕೆಂದು ಹೇಳಿದರು. ಇದಕ್ಕೆ ಶ್ರೀ. ಯಲ್ಲಪ್ಪ ಸೊನ್ನ ಇವರು ಅನುಮೋದಿಸಿದರು. ಆ ಪ್ರಕಾರ ಒಂದು ಮಂಡಲವನ್ನು ನಿರ್ಮಿಸಲಾಯಿತು.

ಸಭೆಯ ಸುರುವಿಗೆ ಶ್ರೀಯುತ ರಂಗಪ್ಪ ಕಟಗೇರಿ ಇವರ ಅಸ್ಪೃಶ್ಯತಾ ನಿವಾರಣೆಯ ಲಾವಣಿಗಳಾದವು. ಅಧ್ಯಕ್ಷರು ಸಮಾರೋಪದ ಭಾಷಣದಲ್ಲಿ ಆದಿಜನರಿಗೆ ಮಾಂಸಾಹಾರ ಮದ್ಯಪಾನ ಚಹಾಪಾನಾದಿ ಮಾಡಬಾರದಾಗಿ ಸ್ವಚ್ಛತೆ ಸದಾಚಾರದಿಂದ ಶಾಂತಿಯಿಂದ ಇದ್ದು ವಿದ್ಯಾ ಕಲಿತು ಸುಧಾರಿಸಬೇಕಾಗಿ ಒಳ್ಳೇ ಕಳಕಳಿಯಿಂದ ಪರಿಣಾಮಕಾರಿಯಾಗಿ ತಿಳಿಸಿ ಹೇಳಿದರು. ಶ್ರೀ. ಲಚ್ಚಪ್ಪ ವಿಜಾಪುರ ಇವರು ಅಧ್ಯಕ್ಷರ ಸಭಿಕರ ವ್ಯಾಖ್ಯಾತರ ಆಭಾರಮನ್ನಿಸಿದರು. ಸಭೆಗೆ ಸವರ್ಣಿಯರೂ ಇತರ ಜನರೂ ಹಾಜರಿದ್ದರು. ಆದಿಜನ ವಿದ್ಯಾರ್ಥಿ ವೆಂಕಪ್ಪ ನಾರಾಯಣಿ ಈತನ ಆದಿಜನೋದ್ಧಾರದ ಪದವಾದನಂತರ ಮಹಾತ್ಮರ ಜಯಜಯಕಾರದೊಂದಿಗೆ ಸಭೆಯು ಮುಗಿಯಿತು. ಈ ಕಮಿಟಿಗೆ ಶ್ರೀ. ಯಲ್ಲಪ್ಪ ಸೊನ್ನ ಇವರು ಅಧ್ಯಕ್ಷರಾಗಿದ್ದರು.

—ಕಾರ್ಯದರ್ಶಿ.

# ಕರ್ನಾಟಕ ಸಾಹಿತ್ಯ ಪರಿಷತ್ತು

## ಬೆಂಗಳೂರು.

( ಪರಿಷತ್ತಿನ ಪ್ರಕಟನ ಶಾಖೆಯಿಂದ )

ಕಾರ್ಯನಿರ್ವಾಹಕ ಮಂಡಲಿ

೮ ನೆಯ ಸಾಮಾನ್ಯ ಅಧಿವೇಶನ.

ಬಳ್ಳಾರಿಯಲ್ಲಿ

೨೩ ನೆಯ ಕನ್ನಡ ಸಾಹಿತ್ಯ ಸಮ್ಮೇಳನ.

ತಾ. ೨೭-೮-೧೯೩೮.

೨೩ ನೆಯ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಬರುವ ಡಿಸೆಂಬರಿನ ಕ್ರಿಸ್‌ಮಸ್ ರಜಾ ಕಾಲದಲ್ಲಿ ಬಳ್ಳಾರಿಯಲ್ಲಿ ನಡೆಯಿಸಬೇಕೆಂದು ವಿಶ್ವಾಸದಿಂದ ಕೊಟ್ಟಿರುವ ಬಳ್ಳಾರಿಯ ಕನ್ನಡಿಗರ ಆಹ್ವಾನವನ್ನು ಪರಿಷತ್ತಿನ ಕಾರ್ಯನಿರ್ವಾಹಕ ಮಂಡಳಿ ಸಂತೋಷದಿಂದಲೂ ಕೃತಜ್ಞತೆಯಿಂದಲೂ ಸ್ವೀಕರಿಸುತ್ತದೆ.

ಪರಿಷತ್ತಿಗೆ ಒಂದು ಅಚ್ಚುಕೂಟ.

ತಾ. ೧೮-೮-೧೯೩೮ ರಲ್ಲಿ ನಡೆದ ಅಚ್ಚುಕೂಟ ಸಮಿತಿಯ ವರದಿ—

ವರದಿಯ ತೀರ್ಮಾನಗಳನ್ನು ಗಮನಕ್ಕೆ ತಂದುಕೊಳ್ಳಲಾಯಿತು.

ಪರಿಷತ್ತಿಗೆ ಒಂದು ಅಚ್ಚುಕೂಟ ಅವಶ್ಯಕವಾಗಿದೆಯೆಂಬುದು ಮೇಲೆ ಕಂಡ ವರದಿಯಿಂದ ತಿಳಿದುಬರುವುದರಿಂದ ಅದರ ಏರ್ಪಾಟನ್ನು ಕಾ|| ನಿ|| ಮಂಡಲಿ ಅನುಮೋದಿಸುತ್ತದೆ. ಕನ್ನಡ ನಾಡಿನ ಸರಕಾರಗಳವರೂ ಸಾರ್ವಜನಿಕ ಮತ್ತು ಸ್ಥಳೀಯ ಸಂಸ್ಥೆಗಳೂ ಮಹಾ ಜನರೂ ಈ ಏರ್ಪಾಟಿಗಾಗಿ ತಮ್ಮ ಉದಾರವಾದ ದ್ರವ್ಯ ಸಹಾಯವನ್ನು ನೀಡಿ ಪರಿಷತ್ತಿನ ಈ ಪ್ರಯತ್ನ ಯಶಸ್ವಿಯಾಗುವಂತೆ ಪ್ರೋತ್ಸಾಹಿಸಬೇಕೆಂದು ಕಾ. ನಿ. ಮಂಡಲಿ ಪ್ರಾರ್ಥಿಸುತ್ತದೆ.

ಪರಿಷತ್ತು ಈಗಾಗಲೇ ಸುಮಾರು ೨೦೦೦ ರೂ. ಗಳ ಅಚ್ಚಿನ ಕೆಲಸವನ್ನು ಹೊರಗೆ ಮಾಡಿಸುತ್ತಿದೆ. ಕನ್ನಡಕ್ಕೇ ಮೀಸಲಾದ ಒಂದು ವಾರಪತ್ರಿಕೆ ಹೊರಡಿಸುವ ಮತ್ತು ತನ್ನ ಕನ್ನಡ ಪುಸ್ತಕಗಳನ್ನು ತಾನೆ ಅಚ್ಚುಮಾಡಿಕೊಳ್ಳುವ ಅವಶ್ಯಕತೆ ಪರಿಷತ್ತಿಗೆ ಇದೆ. ಈ ಎಲ್ಲ ಕೆಲಸಗಳೂ ಸಮರ್ಪಕವಾಗಿ ಸುಲಭವಾಗಿ ನಡೆಯಬೇಕಾದರೆ ಒಂದು ಅಚ್ಚುಕೂಟ ಅತ್ಯಾವಶ್ಯಕ ಎಂದು ಈ ವಿಚಾರದ ಪರ್ಯಾಲೋಚನೆಗಾಗಿ ಕಾ. ನಿ. ಮಂಡಲಿಯಿಂದ ನೇಮಕವಾಗಿದ್ದ ಸಮಿತಿ ಅಭಿಪ್ರಾಯಪಟ್ಟು ಪರಿಷತ್ತಿನ ಅವಶ್ಯಕತೆಗಳಿಗೆ ಒದಗಿಬರುವಂಥ ಅಚ್ಚುಕೂಟದ ಏರ್ಪಾಟಿಗಾಗಿ ೨೦೦೦೦ ರೂ. ಗಳು ಬೇಕಾಗಬಹುದೆಂದು ಅಂದಾಜುಮಾಡಿದೆ.

ಪರಿಷತ್ತಿನ ಅವಶ್ಯಕತೆಯನ್ನೂ ಕಾ. ನಿ. ಮಂಡಲಿಯ ಪ್ರಾರ್ಥನೆಯನ್ನೂ ಉದಾರಿಗಳಾದ ಅಭಿಮಾನಿಗಳು ತಮ್ಮ ದಿವ್ಯ ಚಿತ್ತಕ್ಕೆ ತಂದುಕೊಂಡು ಸಹಾಯಮಾಡಬೇಕೆಂದು ಪರಿಷತ್ತು ಈ ಮೂಲಕ ಬೇಡುತ್ತದೆ.

ಕನ್ನಡ ಸಾಹಿತ್ಯ ಪರೀಕ್ಷೆಗಳು.

ಕನ್ನಡ ಸಾಹಿತ್ಯ ಪರೀಕ್ಷೆಗಳ ಸಮಿತಿಯ ವರದಿಯ ವಿಚಾರ—

ತಾ. ೧೭-೩-೧೯೩೮ ರಲ್ಲಿ ನಡೆದ ಕಾರ್ಯನಿರ್ವಾಹಕ ಮಂಡಲಿಯ ಅಧಿವೇಶನ ಮೇಲೆ ಕಂಡ ವರದಿಯನ್ನು ಸಾಮಾನ್ಯವಾಗಿ ಒಪ್ಪಿ ಮುಂದಿನ ಕಾರ್ಯಕ್ರಮವನ್ನು ಕೈಕೊಳ್ಳಬಹುದೆಂದು ಸೂಚಿಸಿ ಮಾಡಿದ್ದ ತೀರ್ಮಾನವನ್ನು ಗಮನಕ್ಕೆ ತಂದುಕೊಳ್ಳಲಾಯಿತು.

ಮೇಲೆ ಕಂಡ ವರದಿಯನ್ನು ಮಂಡಲಿಯ ಎಲ್ಲ ಸದಸ್ಯರಿಗೂ ಕಳುಹಿಸತಕ್ಕದ್ದು. ಮತ್ತು ಅದನ್ನು ಪ್ರಕಟಪಡಿಸಿ ಎಲ್ಲರಿಂದಲೂ ಸಲಹೆ ಸೂಚನೆಗಳನ್ನು ತರಿಸಿಕೊಳ್ಳತಕ್ಕದ್ದು.

[ಮೇಲೆ ಕಂಡ ವರದಿಯನ್ನು ಸದ್ಯದಲ್ಲಿಯೇ ಪ್ರಕಟಪಡಿಸಲಾಗುವುದು.]

# ಶ್ರೀ ಖಟ್ವಾಂಗೇಶ್ವರ ಮಠ

## ಸುಲೇಪೇಟೆ.

ಪ್ರತಿ ವರುಷದ ಪದ್ಧತಿಯಂತೆ ಈ ವರ್ಷ ಶ್ರಾವಣ ಸಮಾಪ್ತಿಯ ಸಮಾರಂಭವು ಭಾದ್ರಪದ ಶು|| ೬ ಬುಧವಾರ ದಿವಸ ವಿಜೃಂಭಣೆಯಿಂದ ಜರುಗಿತು. ಈ ದಿವಸ ಶಿವಭಜನೆ, ಶಿವಕೀರ್ತನ ಮತ್ತು ಪ್ರವಚನಾದಿಗಳಿಂದ ಧರ್ಮಜಾಗೃತಿಯನ್ನು ಮಾಡಲಾಯಿತು. ಗುರುವಾರ ಬಡಬಗ್ಗರಿಗೆ ಅನ್ನಸಂತೃಪ್ತಿಮಾಡಿಸಲಾಯಿತು. ಶುಕ್ರವಾರ ಮಠದ ಒಡೆಯರಾದ ಶ್ರೀ. ಮ. ನಿ. ಪ್ರ. ಸ್ವರೂಪಿಗಳಾದ ಶ್ರೀ ಸದಾಶಿವ ಸ್ವಾಮಿಗಳವರ ಪಲ್ಲಕ್ಕಿ ಮಹೋತ್ಸವವು ನಂದೀಧ್ವಜ ಮೊದಲಾದ ಬಿರುದಾವಳಿಗಳೊಡನೆ ನಗರಕೀರ್ತನೆಯೊಂದಿಗೆ ಮೆರವಣಿಗೆಯನ್ನು ತೆಗೆಯಲಾಯಿತು. ಈ ಮೆರವಣಿಗೆಯಲ್ಲಿ ಕಲ್ಲೂರು, ಸೋಮಲಿಂಗದಹಳ್ಳಿ ಮತ್ತು ಅಣವಾರ ಮೊದಲಾದ ಗ್ರಾಮಗಳ ಜನರು ಭಾಗವಹಿಸಿದ್ದರು. ಮೆರವಣಿಗೆಯ ನಂತರ ಮಠದಲ್ಲಿ ಸಭೆಸೇರಿ ಶ್ರೀ. ಸಂಗಪ್ಪ ಚಿಂಚೋಳಿ ಇವರು ಮಹಾನುಭಾವ ಬಸವಣ್ಣನವರ ವಚನಗಳ ಅರ್ಥವನ್ನು ಎಲ್ಲರಿಗೂ ತಿಳಿಯುವಂತೆ ಸರಸವಾಗಿ ವಿವರಿಸಿದರು.

ವಿರೂಪಾಕ್ಷಪ್ಪ ಮುತಂಗಿ.

# ಶ್ರೀ. ಗಂಗಾಧರರಾವ ದೇಶಪಾಂಡೆ ಇವರ ಪ್ರಕಟನೆ.

ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರಾದ ಶ್ರೀ. ಗಂಗಾಧರರಾವ ದೇಶಪಾಂಡೆ ಇವರು ಮೊನ್ನೆ ಬೆಳಗಾವಿಯಲ್ಲಿ ಸೇರಿದ ಕರ್ನಾಟಕ ಕಾರ್ಯಕರ್ತರ ಸಭೆಯ ಬಗ್ಗೆ ಒಂದು ಪ್ರಕಟನೆಯನ್ನು ಹೊರಡಿಸಿದ್ದಾರೆ: ಅದು ಈ ರೀತಿಯಾಗಿ ಇರುತ್ತದೆ—

ಬೆಳಗಾವಿಯಲ್ಲಿ ಕರ್ನಾಟಕದ ಕೆಲವು ಪ್ರಮುಖ ಕಾರ್ಯಕರ್ತರ ಸಭೆಸೇರಿ ಬಿಚ್ಚು ಮನಸ್ಸಿನಿಂದ ನಿಯಮಿತ ಕಾರ್ಯಕ್ರಮದ ಬಗ್ಗೆ ಚರ್ಚೆಯಾಯಿತು. ಈ ಚರ್ಚೆಯ ಪರಿಣಾಮವು ಪತ್ರಿಕೆಗಳಲ್ಲಿ ಈ ಮೊದಲೇ ಪ್ರಕಟವಾಗಿದೆ. ಇದರ ಮೇಲಿಂದ ಪ್ರಾಂತದಲ್ಲಿ ಸಮಾಧಾನಕಾರಕ ವಾತಾವರಣವು ಉತ್ಪನ್ನವಾಗಿ ಕಾಂಗ್ರೆಸ್ ಮತ್ತು ಸಾರ್ವಜನಿಕ ಕಾರ್ಯಗಳು ಜೋರಿನಿಂದ ಮುಂದೆ ಸಾಗಬಹುದೆಂದು ನನಗೆ ನಂಬಿಗೆ ಇದೆ. ಇಂಥ ಸಭೆಕೂಡಿಸಿ ಚರ್ಚೆಮಾಡುವುದರಿಂದ ಪರಿಣಾಮದಲ್ಲಿ ಏನೂ ಲಾಭವಾಗದೆ ತಿರುಗಿ ಹಾನಿಯಾಗುವುದೆಂದು ಕೆಲವರು ತಮ್ಮ ಪ್ರಾಮಾಣಿಕ ಶಂಕೆಗಳನ್ನು ಪ್ರದರ್ಶಿಸಿದ್ದರು. ಆದರೂ ಜಾತ್ಯಾಂಧತೆಯಿಂದಾಗಲಿ ಅಥವಾ ಇತರ ಯಾವುದೇ ವೈಯಕ್ತಿಕ ಇಲ್ಲವೆ ಸಾರ್ವಜನಿಕ ಮತಭೇದದಿಂದಾಗಲಿ ಕರ್ನಾಟಕದಲ್ಲಿಯ ವಾತಾವರಣವು ಕೆಟ್ಟಿದೆಯೆಂದು ಅನಿಸಿದ್ದರೂ ಕರ್ನಾಟಕದಲ್ಲಿಯ ಕಾರ್ಯಕರ್ತರ ತ್ಯಾಗವೃತ್ತಿ, ದೇಶಸೇವೆಯ ತತ್ಪರತೆ. ಕಾಂಗ್ರೆಸ್ ನಿಷ್ಠೆ, ಯಾವದೇ ಮಹತ್ವದ ಪ್ರಸಂಗದಲ್ಲಿ ಎಲ್ಲ ಮತಭೇದಗಳನ್ನು ಮರೆತು ಒಕ್ಕಟ್ಟಿನಿಂದ ನಡೆಯುವ ಸಿದ್ಧತೆ ಮೊದಲಾದ ಗುಣಗಳ ಪರಿಚಯ ನನಗಿದ್ದುದರಿಂದ ಇಂಥ ಸಭೆಸೇರಿಸಿ ಚರ್ಚೆಮಾಡಿದಲ್ಲಿ ಪರಿಣಾಮವು ಸಮಾಧಾನಕಾರಕವೇ ಆಗುವುದೆಂದು ನನ್ನಲ್ಲಿ ವಿಶ್ವಾಸವಿದ್ದುದರಿಂದಲೇ ನಾನು ಸಭೆಕರೆಯುವ ಧೈರ್ಯಮಾಡಿದೆನು. ಪರಿಣಾಮವನ್ನು ನೋಡಲಾಗಿ ನನ್ನ ಊಹೆ ನಿಜವಾಯಿತು.

ಆದುದರಿಂದ ಕರ್ನಾಟಕದಲ್ಲಿಯ ಯಾವತ್ತೂ ಜನತೆಗೆ ನನ್ನ ಆಗ್ರಹದ ಮತ್ತು ನಮ್ರ ವಿನಂತಿಯೇನೆಂದರೆ— ಜಾತ್ಯಾಂಧತೆಯಿಂದ ಆಗಬಹುದಾದ ದುಷ್ಪರಿಣಾಮದ ಕಡೆಗೆ ಮತ್ತು ವೈಯಕ್ತಿಕ ಮತಭೇದಗಳನ್ನು ವಿಕೋಪಕ್ಕೆ ಒಯ್ಯುವುದರಿಂದ ಪ್ರಾಂತದ ಮತ್ತು ರಾಷ್ಟ್ರದ ಹಾನಿ ಎಷ್ಟಾಗುವುದೆಂಬುದನ್ನೂ ಪೂರ್ಣವಾಗಿ ಲಕ್ಷದಲ್ಲಿ ತಂದು ಇಂಥ ಅನಿಷ್ಟ ಪ್ರಸಂಗ ಬರದಂತೆ ಎಲ್ಲರೂ ಶಕ್ತಿಮೀರಿ ಪ್ರಯತ್ನಿಸಬೇಕು.

ಸಾರ್ವಜನಿಕ ಕೆಲಸಗಳನ್ನು ಪ್ರಜಾಪ್ರಭುತ್ವ ಪದ್ಧತಿಯಿಂದ ಮಾಡುವ ಕಾಲಕ್ಕೆ ಪ್ರಾಮಾಣಿಕ ಮತಭೇದಗಳಾಗುವುದು ಸ್ವಾಭಾವಿಕ. ಆದರೆ ಅದರ ಪರ್ಯವಸಾನವು ವ್ಯಕ್ತಿದ್ವೇಷದಲ್ಲಿ ಮಾರ್ಪಡದಂತೆ ಮಾತ್ರ ಎಚ್ಚರಿಕೆ ತೆಗೆದುಕೊಳ್ಳುವುದು ಅಗತ್ಯ. ಜಾತ್ಯಾಂಧತೆಯನ್ನು ನಷ್ಟಗೊಳಿಸಲು ಹೊಣೆತೊಟ್ಟ ಕಾರ್ಯಕರ್ತರಿಗೆ ಎಲ್ಲರೂ ಸಹಾಯಮಾಡಿ ಅವರ ಸೇವೆ ಹೊಂದಬೇಕಾಗಿ ಪ್ರಾರ್ಥನೆ.

### ಬಹು ಪತ್ನಿತ್ವ ಪ್ರತಿಬಂಧಕ ಬಿಲ್.

ಸಾರ್ವಜನಿಕ ಅಭಿಪ್ರಾಯಾರ್ಥವಾಗಿ ಕೇಂದ್ರ ಶಾಸನ ಸಭೆಯ ಮುಂದೆ ಬರುವ ಕೆಲವು ಶಾಸನಗಳನ್ನು ಪ್ರಕಟಿಸಿದ್ದಾರೆ. ಇವುಗಳಲ್ಲಿ ಶ್ರೀ. ಸುಶೀಲಾ ಕುಮಾರ ರಾಯ ಚೌಧರಿಯವರ ಬಹು ಪತ್ನಿತ್ವ ಪ್ರತಿಬಂಧಕ ಶಾಸನ ಮತ್ತು ಶ್ರೀ. ಮೋತಿಲಾಲರವರ ಬಹು ಪತ್ನಿತ್ವವು ಅಕ್ರಮವೆಂದು ಸಾರುವ ಶಾಸನ ಇವೆ.

# ದಿಲ್ಲಿ ಶಿವ ದೇವಾಲಯದ ಬಗ್ಗೆ ಗಲಭೆ.

ರಾಣಿ ಉದ್ಯಾನದ ಹತ್ತಿರ ಇರುವ ಶಿವ ದೇವಾಲಯದ ಬಗ್ಗೆ ಪುನಃ ಗಲಭೆಯುಂಟಾಗಿದೆ. ದೇವಾಲಯದಲ್ಲಿರುವ ಪೂಜಾರಿಯನ್ನು ಒಬ್ಬ ಪುಂಡ ಮುಸಲ್ಮಾನನು ಚೂರಿಯಿಂದ ಇರಿದುದರಿಂದ ಈ ಗಲಭೆಗೆ ಕಾರಣವಾಯಿತು. ಪೂಜಾರಿಗೆ ಅತ್ಯಂತ ತೀವ್ರತರವಾದ ಗಾಯಗಳಾಗಿದ್ದುದರಿಂದ ಆತನನ್ನು ಆಸ್ಪತ್ರೆಗೆ ಸಾಗಿಸಲಾಗಿದೆ. ಆ ಪುಂಡನನ್ನು ಪೋಲೀಸರು ಸೆರೆ ಹಿಡಿದಿದ್ದಾರೆ.

ಈ ಸುದ್ದಿಯು ಊರಲ್ಲೆಲ್ಲ ಹಬ್ಬಿದೊಡನೆಯೇ ಜಾತೀಯ ವೈಮನಸ್ಸು ಹೆಚ್ಚಾಗತೊಡಗಿತು. ಶಿವದೇವಾಲಯದ ಎದುರಿಗಿರುವ ಮಸೀದೆಯ ಹತ್ತಿರ ೫೦೦ ಹಿಂದು ಜನಗಳು ಸೇರಿ ಪೋಲೀಸರ ಮೇಲೆ ಕಲ್ಲುಗಳನ್ನೆಸೆದುದರಿಂದ ೬ ಜನರಿಗೆ ಗಾಯಗಳಾಗಿವೆ. ದಂಗೆಯಾಗಬಹುದೆಂದು ೧೪೪ ನೆಯ ಶೆಕ್ಸನ್ ನಡವಳಿಕೆಯಲ್ಲಿ ತಂದಿದ್ದಾರೆ. ಊರಲ್ಲೆಲ್ಲ ಸೈನಿಕರನ್ನೊಳಗೊಂಡ ಲಾರಿಗಳು ತಿರುಗುತ್ತಾ ಇವೆ. ಶಿವದೇವಾಲಯದ ಹತ್ತಿರ ೪ ಮಶಿನ್‌ಗನ್ ಕೂಡಾ ಸಿದ್ಧವಾಗಿವೆ.

## ಜೀವನೋಪಾಯಕ್ಕೆ
# ಉಚಿತ ಶಿಕ್ಷಣ.
### ೫ ವಿದ್ಯಾರ್ಥಿಗಳನ್ನು ತೆಗೆದುಕೊಳ್ಳಲಾಗುವದು.

ಇಲ್ಲಿಯ ಶ್ರೀ. ಬಸವಲಿಂಗ ಮುದ್ರಣ ಮಂದಿರದಲ್ಲಿ ಮುದ್ರಣ ಸಂಬಂಧವಾದ ಎಲ್ಲ ಶಿಕ್ಷಣಗಳನ್ನೂ ಕೆಲವು ವಿದ್ಯಾರ್ಥಿಗಳಿಗೆ ಉಚಿತವಾಗಿ ಕೊಟ್ಟು ಅವರ ಜೀವನೋಪಾಯಕ್ಕೆ ಅನುಕೂಲಪಡಿಸುತ್ತಾ ಬಂದಿದೆಯಷ್ಟೆ.

ಈಗ ಐದು ವೀರಶೈವ ವಿದ್ಯಾರ್ಥಿಗಳನ್ನು ತೆಗೆದುಕೊಳ್ಳಬೇಕೆಂದು ಗೊತ್ತುಮಾಡಿದ್ದಾಗಿದೆ. ಅವರಿಗೆ ಊಟ ಬಟ್ಟೆಗಳನ್ನು ಕೊಟ್ಟು ಉಚಿತವಾಗಿ ಒಂದರಿಂದ ಮೂರು ವರ್ಷಗಳ ವರೆಗೆ ಶಿಕ್ಷಣ ಕೊಡಲಾಗುವುದು. ಇಷ್ಟವುಳ್ಳವರು ತಮ್ಮ ಈ ವರೆಗಿನ ಶಿಕ್ಷಣ ಮತ್ತು ವಯಸ್ಸು ತಿಳಿಸಬೇಕು.

ಇದೇ ಸಪ್ಟಂಬರ್ ತಿಂಗಳ ಕೊನೆಯೊಳಗಾಗಿ ಬರುವ ಅರ್ಜಿಗಳನ್ನು ಮಾತ್ರ ಆಲೋಚನೆಗೆ ಇಟ್ಟುಕೊಂಡು ಯೋಗ್ಯ ಕಂಡವರನ್ನು ತೆಗೆದುಕೊಳ್ಳಲಾಗುವುದು.

ಮ್ಯಾನೇಜರ್, ಶ್ರೀ ಬಸವಲಿಂಗ ಮುದ್ರಣ ಮಂದಿರ
ಪೋ. ಆಲಮಟ್ಟಿ

# ವಿಜ್ಞಾಪನೆ.

ಸವಿನಯಪೂರ್ವಕ ಈ ಮೂಲಕ ತಿಳಿಸುವುದೇನೆಂದರೆ— ತಾ. ೧೭, ೧೮ ಅಬಾನ ೧೩೪೭ ಫಸಲಿ ಗುರುವಾರ ಮತ್ತು ಶುಕ್ರವಾರ ಉದಗೀರ ಮುಕ್ಕಾಮಿನಲ್ಲಿ ನಿಜಾಮ ಪ್ರಾಂತಿಕ ವೀರಶೈವ ಪರಿಷತ್ತಿನ ವರ್ಕಿಂಗ್ ಕಮಿಟಿಯು ಕೂಡುವುದು ನಿಶ್ಚಯಿಸಲ್ಪಟ್ಟಿದೆ. ಕಾರ್ಯಕಾರಿ ಮಂಡಳದ ಮತ್ತು ಶಿಕ್ಷಣ ಫಂಡಿನ ಸಭಾಸದರು ಮೇಲಿನ ತಾರೀಖಿಗೆ ಸರಿಯಾಗಿ ಬಂದು ಪರಿಷತ್ತಿನ ಕಾರ್ಯ ಯಶಸ್ವಿಗೊಳಿಸಬೇಕಾಗಿ ವಿನಂತಿ.

ತಮ್ಮ ಸೆಕ್ರೆಟರಿ
ನಿ. ವೀ. ಪ್ರಾ. ಪ. ಉದಗೀರ.



ಶಾ. ಶ. ೧೮೬೦ ನೆಯ ಭಾದ್ರಪದ ಬ|| ೩ ಸೋಮವಾರ.

# ನಾಗರಿಕ ಸ್ವಾತಂತ್ರ್ಯದ ಕೊಲೆ!

ಈ ದೇಶದ ಕೆಲವು ಸಂಸ್ಥಾನಗಳಲ್ಲಿ ದಬ್ಬಾಳಿಕೆಯು ಪ್ರಾರಂಭವಾಗಿದೆಯಷ್ಟೆ. ಆ ಎಲ್ಲಾ ದಬ್ಬಾಳಿಕೆಗಳನ್ನು ಮೀರಿಸುವಂಥ ಕ್ರೂರ ದಬ್ಬಾಳಿಕೆಯು ನಿಜಾಮ ರಾಜ್ಯದಲ್ಲಿ ಪ್ರಾರಂಭವಾದುದು ಅತ್ಯಂತ ದುಃಖದ ಸಂಗತಿಯು. ನಿಜಾಮ ಸರಕಾರದ ದಬ್ಬಾಳಿಕೆಯ ಶಾಸನಗಳ ವಿವರವನ್ನು ಬೇರೆ ಕಡೆಗೆ ಕೊಟ್ಟಿದ್ದೇವೆ. ಅವುಗಳನ್ನು ಓದಿದ ಸ್ವಾತಂತ್ರ್ಯಪ್ರಿಯ ಯಾವ ವ್ಯಕ್ತಿಯಾದರೂ ನಿಜಾಮ ಸರಕಾರವು ತನ್ನ ರಾಜ್ಯದಲ್ಲಿ ನಾಗರಿಕ ಸ್ವಾತಂತ್ರ್ಯದ ಕೊಲೆಯನ್ನೇ ಮಾಡಿತೆಂದು ಹೇಳದೆ ಇರಲಿಕ್ಕಿಲ್ಲ.

ಮೊನ್ನೆ ತಾನೆ ಆಲಾ ಹಜರತ್ ನಿಜಾಮ ಸಾಹೇಬರವರ ತಾವು ಪ್ರಜೆಗಳ ಪ್ರೇಮಾದರ ವಿಶಿಷ್ಟ ಅಂತಃಕರಣದಿಂದಲೇ ಪ್ರಭುತ್ವವನ್ನು ಸಾಗಿಸುವ ಇಚ್ಛೆಯುಳ್ಳವರಾಗಿದ್ದೇವೆಂದು ಸಾರಿದ್ದರಷ್ಟೆ. ಪ್ರಜಾನುರಾಗವನ್ನು ಸಂಪಾದಿಸುವ ಈ ಘೋಷಣೆ ಬರೆಯಲ್ಪಟ್ಟ ಮಸಿಯು ಇನ್ನೂ ಆರದಿರುವಷ್ಟರಲ್ಲೇ ಪ್ರಜೆಗಳ ಜನ್ಮಸಿದ್ಧ ಹಕ್ಕಾದ ಸ್ವಾತಂತ್ರ್ಯದ ಕೊಲೆಯಾದುದು ಯಾರಿಗೆ ತಾನೆ ವಿಷಾದವನ್ನು ಉಂಟುಮಾಡಲಾರದು?

ಬೇರೆ ಕೆಲವು ಸಂಸ್ಥಾನಗಳಲ್ಲಿಯ ಪ್ರಜೆಗಳು ಜವಾಬ್ದಾರಿ ಸರಕಾರವನ್ನು ಸಂಪಾದಿಸಲು ಅಲ್ಪ ಸ್ವಲ್ಪ ಚಟುವಟಿಕೆಗಳನ್ನಾದರೂ ನಡೆಯಿಸಿದ್ದನ್ನು ನೋಡಿ ಆಯಾಯ ಸಂಸ್ಥಾನಗಳಲ್ಲಿ ಸರಕಾರದವರು ದಬ್ಬಾಳಿಕೆಯನ್ನು ಪ್ರಾರಂಭಿಸಿದರು. ನಿಜಾಮ ರಾಜ್ಯದಲ್ಲಾದರೋ ಅಂಥ ಚಟುವಟಿಕೆಯು ಕೂಡಾ ನಡೆದಿರಲಿಲ್ಲ. ಅಲ್ಲಿಯ ಪ್ರಜೆಗಳು ಅತ್ತಿತ್ತ ಸರಿದಾಡದಂತೆ ಮೊದಲಿನಿಂದಲೂ ನಿಜಾಮ ಸರಕಾರವು ಬಲವಾದ ಕಟ್ಟುಗಳನ್ನು ಹಾಕುತ್ತಲೇ ಬಂದಿದೆ. ದೇಶದಲ್ಲುಂಟಾಗಿರುವ ಸ್ವಾತಂತ್ರ್ಯದ ಅದ್ಭುತ ಜಾಗೃತಿಯ ಪರಿಣಾಮವು ಆ ಸಂಸ್ಥಾನದಲ್ಲಿಯೂ ಅತ್ಯಲ್ಪವಾದರೂ ಆಗುವುದು ಸ್ವಾಭಾವಿಕ. ಆದಕಾರಣ ಈಗಾಗಲೇ ನಿಜಾಮ ಸರಕಾರವು ಇಂಥ ಭಯಂಕರವಾದ ದಬ್ಬಾಳಿಕೆ ಪ್ರಾರಂಭಿಸಿರುವುದನ್ನು ನೋಡಿದರೆ ಅಲ್ಲಿಯ ಜನರಲ್ಲಿ ಸ್ವಾತಂತ್ರ್ಯದ ಆಕಾಂಕ್ಷೆಯೇ ಬೆಳೆಯಬಾರದೆಂದು ಸರಕಾರವು ಯೋಚಿಸಿದಂತೆ ತೋರುವುದಿಲ್ಲವೆ?

### ದಬ್ಬಾಳಿಕೆಯು ಸ್ವಾತಂತ್ರ್ಯದ ಜನ್ಮಸ್ಥಾನ.

ನಿಜಾಮ ಸರಕಾರವು ತನ್ನ ರಾಜ್ಯದಲ್ಲಿ ಕಾಂಗ್ರೆಸ್ ಕಮಿಟಿಯೇ ಸ್ಥಾಪನೆಯಾಗಕೂಡದೆಂದು ಕಟ್ಟಪ್ಪಣೆ ಮಾಡಿತು! ಅನ್ಯ ಪ್ರಾಂತದ ಯಾವ ವ್ಯಕ್ತಿಯಾದರೂ ಅಲ್ಲಿಯ ಪೋಲಿಸರಿಗೆ ಅಪ್ರಿಯವಾಗುವ ಸಂಶಯ ಬಂದರು ಕೂಡಾ ವಾರಂಟ್ ಇಲ್ಲದೇನೇ ಆ ವ್ಯಕ್ತಿಯನ್ನು ಪೋಲಿಸರು ಕೈಸೆರೆ ಮಾಡಬಹುದು! ! ಹೀಗೆ ಕೈಸೆರೆ ಮಾಡಲ್ಪಟ್ಟ ವ್ಯಕ್ತಿಯನ್ನು ನ್ಯಾಯಸ್ಥಾನದ ಮುಂದೆ ನಿಲ್ಲಿಸದೇನೇ ಪೋಲಿಸರು ತಮ್ಮ ರಾಜ್ಯದಿಂದ ಹೊರಗೆ ತಳ್ಳಿ ಹಾಕಬಹುದು! ! !

ಇಂಥ ವಿಚಿತ್ರ ದಬ್ಬಾಳಿಕೆಯು ಎಲ್ಲಿ ಪ್ರಾರಂಭವಾಯಿತೋ ಅಲ್ಲಿ ನಾಗರಿಕ ಸ್ವಾತಂತ್ರ್ಯದ ಕೊಲೆಯಾಯಿತೆಂದೇ ಸ್ಪಷ್ಟವಾಗುವುದಿಲ್ಲವೆ? ಇದರಿಂದ ಅಲ್ಲಿಯ ಪ್ರಜೆಗಳು ಸ್ವಲ್ಪವೂ ಅತ್ತಿತ್ತ ಮಿಸುಕದಂತಾಗಬಹುದು. ಸರಕಾರಕ್ಕೆ ತಾನು ಬಹು ಜಾಣ್ಮೆಯ ಸಾಹಸವನ್ನು ಮಾಡಿದೆನೆಂದೂ ಸಂತೋಷವಾಗಬಹುದು. ಏಕೆಂದರೆ, ಅಲ್ಲಿಯ ಪ್ರಜೆಗಳು ಈಗಲೇ ಅಂಥ ಸ್ಥಿತಿಯಲ್ಲಿದ್ದಾರೆ. ಸರಕಾರದ ಈ ಭಯಂಕರ ದಬ್ಬಾಳಿಕೆಯು ಅಲ್ಲಿಯ ಪ್ರಜೆಗಳ ಮೇಲೆ ಇಂಥ ಶೋಚನೀಯ ಸ್ಥಿತಿಯನ್ನು ಈಗ ತಂದಿಟ್ಟರೂ ಅದು ಬಹುಕಾಲ ನಿಲ್ಲುವುದಿಲ್ಲವೆಂಬುದನ್ನು ಸರಕಾರವು ತಿಳಿದಿರಬೇಕು. ಏಕೆಂದರೆ, ದಬ್ಬಾಳಿಕೆಯಿಂದ ಸ್ವಾತಂತ್ರ್ಯದ ಆಕಾಂಕ್ಷೆಯು ನಾಶವಾಗದೆ ಅದು ಬೆಳೆದು ನಾನಾ ಮುಖಗಳಿಂದ ಹೊರಬೀಳದೆ ಬಿಡುವುದೇ ಇಲ್ಲ. ಅಂತೆಯೇ ದಬ್ಬಾಳಿಕೆಯು ಸ್ವಾತಂತ್ರ್ಯಕ್ಕೆ ಜನ್ಮಸ್ಥಾನ.

ನಿಜಾಮ ರಾಜ್ಯದ ನಮ್ಮ ದೇಶಬಾಂಧವರನ್ನು ಸರಕಾರವು ಈ ರೀತಿ ಕಟ್ಟಿಹಾಕಿ, ಮಾತಾಡದಂತೆ ಮಾಡಿ, ಅನ್ಯ ಪ್ರಾಂತದ ತಮ್ಮ ಬಂಧುಗಳ ಮುಖವನ್ನು ಕೂಡಾ ನೋಡದಂತೆ ಮಾಡಿರುವುದು ಅತ್ಯಂತ ದುಃಖದ ಪ್ರಸಂಗವಾದರೂ ಇದನ್ನು ಅವರು ಶಾಂತತೆಯಿಂದಲೇ ಸಹಿಸಿಕೊಂಡು ಅಹಿಂಸಾ ಮೂಲಕವಾಗಿಯೇ ಹೋರಾಡಿ ಈ ಬಲವಾದ ಬಂಧನವನ್ನು ತಪ್ಪಿಸಿಕೊಳ್ಳಬೇಕು. ಅಹಿಂಸಾಮಯವಾದ ಹೋರಾಟದಲ್ಲಿ ಎಂಥ ಬಲವಾದ ಶಕ್ತಿಯಿದೆಯೆಂಬುದನ್ನು ಕಾಂಗ್ರೆಸ್ ಸಂಸ್ಥೆಯು ಜಗತ್ತಿಗೇನೇ ತೋರಿಸಿದೆ. ಆದಕಾರಣ ನಿಜಾಮ ಪ್ರಾಂತದ ಸ್ವಾತಂತ್ರ್ಯಪ್ರಿಯರು ಅಹಿಂಸಾ ಮಾರ್ಗದಿಂದಲೇ ಹೋರಾಡುವರೆಂದು ನಾವು ನಂಬಿದ್ದೇವೆ.

### ಅನ್ಯ ಪ್ರಾಂತದವರ ಕರ್ತವ್ಯ.

ನಿಜಾಮ ಸಂಸ್ಥಾನವು ಆಳ್ವಿಕೆಯ ವಿಭಾಗದಿಂದ ನಮಗೆ ಬೇರೆಯಾಗಿದ್ದರೂ, ರಾಷ್ಟ್ರೀಯ ದೃಷ್ಟಿಯಿಂದ ಅದೇನೂ ನಮ್ಮಿಂದ ಭಿನ್ನವಾದುದಲ್ಲ. ಅಲ್ಲಿಯ ಪ್ರಜೆಗಳು ನಮ್ಮ ದೇಶಬಾಂಧವರು. ಅವರ ಮೇಲೆ ಬಂದಿರುವ ಈ ವಿಪತ್ತು ನಮಗೂ ಸಂಬಂಧಿಸಿದ್ದಾಗಿದೆ.

ಈ ರಾಷ್ಟ್ರದಲ್ಲಿ ಸ್ವಾತಂತ್ರ್ಯದ ಪ್ರಚಂಡ ಆಂದೋಲನ ನಡೆದಾಗ ಒಂದು ಭಾಗದಲ್ಲಿ ನಮಗೆ ಹೋಗಲು ಕೂಡಾ ಸ್ವಾತಂತ್ರ್ಯ ಇಲ್ಲದಂತೆಮಾಡಿದುದನ್ನು ನಾವು ಅನುಸರಿಸಿದ್ದಾದರೆ ನಮ್ಮ ಸ್ವಾತಂತ್ರ್ಯದ ಚಟುವಟಿಕೆಗೆ ಅದೊಂದು ಕಲಂಕವಾಗಲಾರದೆ?

ಬೇರೆ ಪ್ರಾಂತದ ವ್ಯಕ್ತಿಯು ನಿಜಾಮ ರಾಜ್ಯದಲ್ಲಿ ಹೋದ ಮಾತ್ರದಿಂದಲೇ ಅಪರಾಧಿಯಾದನೆ? ಪೋಲಿಸರು ತಮಗೆ ಸಂಶಯಬಂದವರನ್ನೆಲ್ಲ ಕೈಸೆರೆಮಾಡಿ ಹೊರಗೆ ತಳ್ಳಿಬಿಡಬಹುದೆ? ಒಂದು

ವ್ಯಕ್ತಿಯೇ ಅಪ್ರಿಯವೆಂದು ಸಂಶಯದಿಂದಲೇ ಪೋಲಿಸರು ನಿರ್ಧ
ರಿಸುವುದು ಯಾವ ನ್ಯಾಯ? ಒಂದು ವ್ಯಕ್ತಿಯ ವಿಚಾರಗಳು
ಅಪ್ರಿಯವಾಗಬಹುದು. ಅವು ಪ್ರಸಾರವಾಗದಂತೆ ಲೇಖನ ಭಾಷ
ಣಗಳನ್ನು ಪ್ರತಿಬಂಧಗೊಳಿಸಬಹುದು. ಇಷ್ಟೇ ಅಲ್ಲ; ಆ ವ್ಯಕ್ತಿ
ಯ ಇರುವಿಕೆಯೇ ಅಲ್ಲಿಯ ಪ್ರಜೆಗಳ ರಕ್ಷಣೆಗೆ ಅನರ್ಥಕರವೆಂ
ದು ಪೋಲಿಸರ ದಿವ್ಯದೃಷ್ಟಿಗೆ ತೋರಿದರೆ ನ್ಯಾಯಸ್ಥಾನದ ಮುಂದೆ
ತಾವು ಕಂಡ ಆ ದೃಶ್ಯವನ್ನಿಟ್ಟು ಆತನು ಅಪರಾಧಿಯೆಂದು ಸಿದ್ಧ
ಮಾಡಿ ತೋರಿಸಿದರೂ ಆಗಬಹುದು.

ಸ್ವಲ್ಪಾದರೂ ನ್ಯಾಯ ಸಮ್ಮತವಾಗುವ ಈ ಯಾವ ನಿಯ
ಮಗಳನ್ನೂ ಇಡದೆ ಅಲ್ಲಿಯ ಪೋಲಿಸರ ಕಡೆಗೆ ಪರಪ್ರಾಂತದ
ಒಬ್ಬ ವ್ಯಕ್ತಿಯ ಮಾನಮನ್ನಣೆ ಸ್ವಾತಂತ್ರ್ಯಗಳನ್ನೆಲ್ಲಾ ಒಪ್ಪಿಸಿ
ಬಿಡುವುದೆಂದರೆ ಅದಕ್ಕಿಂತಲೂ ಈಗ ಪಾರತಂತ್ರ್ಯಕ್ಕೆ ತಳ್ಳುವ
ಪ್ರವೃತ್ತಿಯೇ ಬೇರೊಂದಿಲ್ಲ. ನಿಜಾಮ ಪ್ರಾಂತವೇನೂ ಅಫಗಾಣಿ
ಸ್ಥಾನ, ಇರಾಣಗಳಂತೆ ಸ್ವತಂತ್ರ ರಾಜ್ಯವಲ್ಲ. ಅಂಥ ಸ್ವತಂತ್ರ
ರಾಜ್ಯದಲ್ಲಿ ಕೂಡಾ ಹಿಂದುಸ್ಥಾನದ ವ್ಯಕ್ತಿಗೆ ಇಂಥ ಮಾನಹಾನಿ
ಕರ ಶಾಸನವಿಲ್ಲ. ಎಂದಮೇಲೆ ನಿಜಾಮ ಸರಕಾರವು ಅನ್ಯ ಪ್ರಾಂ
ತದವರನ್ನು ಈ ದೃಷ್ಟಿಯಿಂದ ನೋಡುವುದು ನ್ಯಾಯವೆ? ಇದ
ನ್ನು ಸ್ವಾತಂತ್ರ್ಯಪ್ರಿಯರು ಮಾನ್ಯಮಾಡುವರೆ?

### ಈ ದಬ್ಬಾಳಿಕೆಯ ಭಯಂಕರ ಸ್ವರೂಪ.

ನಿಜಾಮ ಪ್ರಾಂತವು ಅನ್ಯಪ್ರಾಂತದವರಿಂದೇನೂ ಭಿನ್ನವಾ
ಗಿಲ್ಲವಷ್ಟೆ. ವ್ಯಾಪಾರ ಉದ್ಯೋಗಗಳಿಂದಲೂ ಶರೀರಸಂಬಂಧದಿಂ
ದಲೂ ಅಸಂಖ್ಯ ಜನರು ನಿಜಾಮ ಪ್ರಾಂತಕ್ಕೆ ನಿಕಟ ಸಂಬಂಧವು
ಳ್ಳವರಾಗಿದ್ದಾರೆ. ಮತ್ತು ಇವರಲ್ಲಿ ಅನೇಕರು ಈ ದೇಶದ ರಾಜ
ಕೀಯ ಮತ್ತು ಧಾರ್ಮಿಕ ಚಟುವಟಿಕೆಗಳಲ್ಲಿ ಸೇರಿದವರಿರುವುದೂ
ಸ್ವಾಭಾವಿಕ. ಅಂಥವರು ನಿಜಾಮ ಪ್ರಾಂತದ ತಮ್ಮ ವ್ಯಾಪಾರ
ಅಥವಾ ಬಂಧುತ್ವದ ಸಂಬಂಧವಾಗಿ ಅಲ್ಲಿಗೆ ಹೋದರು ಕೂಡಾ
ಅವರ ವೇಷಭೂಷೆಗಳ ಮೇಲಿಂದಲೇ ಪೋಲಿಸರು ಇವರು ಚಳವ
ಳಿಗಾರರೆಂದೂ ತಮ್ಮ ಪ್ರಜೆಗಳನ್ನು ಇವರಿಂದ ಸಂರಕ್ಷಿಸಬೇಕೆಂ
ದೂ ಕೂಡಲೇ ಹಿಡಿದು ಹೊರಗೆ ತಳ್ಳಿಬಿಡಬಹುದಲ್ಲವೆ?

ಊರಲ್ಲಿ ಹುಲಿ ಮೊದಲಾದ ಮೃಗಗಳು ಬಂದರೆ ಜನರ
ಸಂರಕ್ಷಣೆಗಾಗಿ ಅವುಗಳ ಬೇಟೆಯಾಡುವಂತೆ ಪರಪ್ರಾಂತದ ಕಾಂ
ಗ್ರೆಸ್ ಕೆಲಸಗಾರರಾಗಲಿ ಹಿಂದು ಮಹಾಸಭಾ ಅಥವಾ ಆರ್ಯ
ಸಮಾಜದ ಕೆಲಸಗಾರರಾಗಲಿ ನಿಜಾಮರಾಜ್ಯದಲ್ಲಿ ಹೋದರೆ ಅಲ್ಲಿ
ಯ ಪೋಲಿಸರಿಗೆ ಅವರು ಕ್ರೂರ ಮೃಗಗಳಂತೆ ತೋರಿ ತಮ್ಮ
ಪ್ರಜೆಗಳ ರಕ್ಷಣೆಮಾಡುತ್ತೇವೆಂದು ಅವರನ್ನು ತಮ್ಮ ಪ್ರಾಂತ
ದಿಂದ ತಳ್ಳಿಹಾಕಲು ಈ ದಬ್ಬಾಳಿಕೆಯ ಶಾಸನದಿಂದ ಅವರಿಗೆ
ಅಧಿಕಾರ ದೊರಿತಿದೆಯಲ್ಲವೆ? ಎಂದಮೇಲೆ ಅನ್ಯಪ್ರಾಂತಗಳ ಸ್ವಾ
ತಂತ್ರ್ಯಪ್ರಿಯರಿಗೂ ಮಾನಹಾನಿಕರವಾದ ಈ ಶಾಸನವು ನಿವಾ
ರಣೆಯಾಗುವುದಕ್ಕೋಸ್ಕರ ಯಾವ ಪ್ರಯತ್ನ ನಡೆಯಬೇಕೆಂಬ
ವಿಚಾರವಾಗಿ ಅನ್ಯಪ್ರಾಂತಗಳ ಸ್ವಾತಂತ್ರ್ಯಾಭಿಮಾನಿಗಳೂ ತುಂ
ಬಾ ಯೋಚಿಸುವುದು ಅತ್ಯಗತ್ಯವಾಗಿಲ್ಲವೆ?

---

## ಡಾ. ಖರೆಯುವರ ಅಧಿಕ ಪ್ರಸಂಗ.

ಮಧ್ಯ ಪ್ರಾಂತದ ಹಿಂದಣ ಮುಖ್ಯ ಮಂತ್ರಿಗಳಾಗಿದ್ದ ಡಾ.
ಖರೆಯವರು ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಆಜ್ಞೆಯನ್ನು
ಉಲ್ಲಂಘಿಸಿ ತಾವು ಮೊದಲು ಅನುಸರಿಸಿದ್ದ ಕಾಂಗ್ರೆಸ್ಸಿನ ರೀತಿನೀ
ತಿಗಳನ್ನೂ ಬಿಟ್ಟು ಸ್ವೇಚ್ಛಾಪರರಾಗಿ ವರ್ತಿಸಿದ್ದರಿಂದ ಇವರ ಅಕ್ರ
ಮ ನಡವಳಿಕೆಗಳನ್ನು ವರ್ಕಿಂಗ್ ಕಮಿಟಿಯು ನಿಷೇಧಿಸಿ ಕಾಂ
ಗ್ರೆಸ್ಸಿನ ಹೊಣೆಗಾರಿಕೆಯ ಕಾರ್ಯಕ್ಕೆ ಅನರ್ಹರೆಂದು ತೀರ್ಮಾ
ನಿಸಿರುವುದು ಸರ್ವಶ್ರುತವಷ್ಟೆ. ನಿಷ್ಪಕ್ಷಪಾತಿಗಳೂ ಪ್ರತಿಜ್ಞಾಭಿ
ಮಾನಿಗಳೂ ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಡಾ. ಖರೆಯವ
ರ ವಿಚಾರದಲ್ಲಿ ಮಾಡಿದ ತೀರ್ಮಾನವನ್ನು ಮಾನ್ಯಮಾಡದೆ ಇರ
ಲಾರರು.

ಡಾ. ಖರೆಯವರು ತಮ್ಮ ತಪ್ಪನ್ನು ಒಪ್ಪಿಕೊಂಡು ವರ್ಕಿಂ
ಗ್ ಕಮಿಟಿಯ ಅಪ್ಪಣೆಯಂತೆ ನಡೆಯಲು ಸಿದ್ಧರಾಗಬೇಕಾಗಿ
ದ್ದಿತು. ಇಲ್ಲವೆ ಕಾಂಗ್ರೆಸ್ಸಿನಿಂದ ತಾವೇ ಹೊರಗೆ ಬಂದು ತಮ
ಗೆ ವಿಹಿತ ತೋರಿದ ರೀತಿಯಲ್ಲಿ ರಾಷ್ಟ್ರಸೇವೆಯನ್ನು ಮಾಡಬ
ಹುದಾಗಿದ್ದಿತು. ಈ ಉಭಯ ಮಾರ್ಗಗಳನ್ನೂ ಬಿಟ್ಟು ಕಾಂಗ್ರೆ
ಸ್ ವರ್ಕಿಂಗ್ ಕಮಿಟಿಯೇ ಅನ್ಯಾಯವನ್ನು ಮಾಡಿತೆಂತಲೂ
ತಾವೇ ಸತ್ಯಸಂಧರೂ ಸ್ವಾತಂತ್ರ್ಯದ ನಿಜಭಕ್ತರೂ ಆಗಿದ್ದೇವೆಂ
ತಲೂ ಹೇಳಿಕೊಳ್ಳುತ್ತಾ ತಿರುಗಾಡುತ್ತಿರುವುದು ಇವರ ಅಧಿಕ
ಪ್ರಸಂಗವೇ ಸರಿ. ಇವರ ಈ ಸಲ್ಲದ ನಡವಳಿಕೆಯಿಂದ ವರ್ಕಿಂ
ಗ್ ಕಮಿಟಿಯ ಅಥವಾ ಗಾಂಧೀಜಿಯವರ ಘನತೆಗೇನೂ ಕೊರ
ತೆಯುಂಟಾಗದೆ ಇವರ ಯೋಗ್ಯತೆಗೇನೇ ಕಲಂಕವುಂಟಾಗುವುದು.
ಸೂರ್ಯನಿಗೆ ಮಣ್ಣು ತೂರಿದರೆ ಅದು ನಮ್ಮ ಕಣ್ಣಲ್ಲಿಯೇ ಬೀಳುವು
ದಿಲ್ಲವೆ?

ಮರಾಠಿಗರಲ್ಲಿ ಪ್ರಾಂತದ ದುರಭಿಮಾನವುಳ್ಳವರೂ ಗಾಂಧೀ
ಜಿಯವರ ಮತ್ತು ಕಾಂಗ್ರೆಸ್ಸಿನ ಘನತೆಯನ್ನು ಸಹಿಸಲಾರದ ಕೆಲ
ವರೂ ಡಾ. ಖರೆಯವರನ್ನು ತಮ್ಮ ಕೈಗೊಂಬೆಯನ್ನಾಗಿ ಮಾಡಿ
ಕೊಂಡು ಅತ್ತಿತ್ತ ಕುಣಿಸುತ್ತ ಗಾಂಧೀಜಿಯವರಿಗೂ ವರ್ಕಿಂಗ್
ಕಮಿಟಿಗೂ ಸಲ್ಲದ ದೋಷಾರೋಪಣೆಗಳನ್ನು ಮಾಡುತ್ತಿದ್ದಾರೆ.
ಇವರ ಈ ಚಟುವಟಿಕೆಯು ತನ್ನ ಮೂಗನ್ನು ಕೊಯ್ದುಕೊಂಡು
ಅನ್ಯರಿಗೆ ಅಪಶಕುನಮಾಡಬೇಕೆಂದು ಪ್ರಯತ್ನಿಸುವಂತೆ ಹಾಸ್ಯಾ
ಸ್ಪದವಾದುದಾಗಿದೆ. ವಿಚಾರಪರರಾರೂ ಡಾ. ಖರೆ ಮತ್ತು ಕಂ
ಪನಿಯವರ ಈ ಅಪಪ್ರಚಾರದ ಕಡೆಗೆ ಲಕ್ಷಿಸಿ ಮೋಸ ಹೋಗಲಾ
ರರೆಂದೇ ನಾವು ನಂಬಿದ್ದೇವೆ.

---

## ವಿಜಾಪುರ ಜಿಲ್ಲೆಯ ಪಾಲು ಇಷ್ಟೇ ?

ಮುಂಬೈ ಸರಕಾರವು ನೀರಾವರಿ ವಿಚಾರಣೆ ಸಮಿತಿಯನ್ನು
ಸರ್. ವಿಶ್ವೇಶ್ವರಯ್ಯನವರ ಅಧ್ಯಕ್ಷತೆಯಲ್ಲಿ ನಿಯಮಿಸಿದ್ದಿತಷ್ಟೆ. ಆ
ಸಮಿತಿಯು ತನ್ನ ವರದಿಯನ್ನು ಈಗ ಪ್ರಕಟಿಸಿದೆ. ಮುಂದಿನ ೫
ವರುಷಗಳಲ್ಲಿ ೭೫ ಲಕ್ಷ ರೂ. ಗಳನ್ನು ನಿರಾವರಿಗಾಗಿ ವೆಚ್ಚಮಾ
ಡಬೇಕೆಂದೂ ಅದರಲ್ಲಿ ೨೦ ಲಕ್ಷ ರೂ. ಗಳನ್ನು ಕರ್ನಾಟಕದಲ್ಲಿ
ವಿನಿಯೋಗಿಸಬೇಕೆಂದೂ ಸಮಿತಿಯು ಸೂಚಿಸಿದೆ.

ಈ ೨೦ ಲಕ್ಷ ರೂ. ಗಳ ವೆಚ್ಚದಿಂದ ಕರ್ನಾಟಕದಲ್ಲಿ ೧೫೭೭೩
ಎಕರೆ ಭೂಮಿಗೆ ನೀರನ್ನು ಕೊಡಲು ಶಕ್ಯವಾಗುವುದಂತೆ. ಕರ್ನಾ
ಟಕದಲ್ಲಿ ವಿಜಾಪುರ ಜಿಲ್ಲೆಯು ಹೆಚ್ಚಾಗಿ ಕ್ಷಾಮದಿಂದ ಬಳಲುತ್ತಿ
ದೆಯಲ್ಲವೆ? ಇಂಥ ಜಿಲ್ಲೆಯಲ್ಲಾದರೋ ಮುಚಕಂಡಿ ಕೆರೆಯ ಮೂ
ಲಕ ೧೭ ಎಕರೆ ಭೂಮಿಗೆ ಮಾತ್ರ ನೀರನ್ನು ಕೊಡುವರಂತೆ !
ವಿಜಾಪುರ ಜಿಲ್ಲೆಯ ಪಾಲಿಗೆ ಕೊನೆಗೆ ಇಷ್ಟೇ ಬಂದಿತೆ?

ಸರ್. ವಿಶ್ವೇಶ್ವರಯ್ಯನವರಂತಹ ಕನ್ನಡಿಗರೂ ಅನುಭವಜ್ಞ
ರೂ ಆದ ಅಧ್ಯಕ್ಷರಿರುವ ಸಮಿತಿಯೇ ವಿಜಾಪುರ ಜಿಲ್ಲೆಯ ನೀರಾ
ವರಿಯ ಗ್ರಹಗತಿಯನ್ನು ಹೀಗೆ ತಿಳಿಸಿದ ಮೇಲೆ ಇದರ ಶೋಚನೀ
ಯ ಸ್ಥಿತಿಯನ್ನು ಕಳೆಯುವವರಾರು?

# ಬ್ರಿಟಿಶ್ ಕೂಲಿಕಾರರ ಪ್ರಕಟನೆ.

ಬ್ರಿಟಿಶ್ ಟ್ರೇಡ್ ಯುನಿಯನ್ ಕಾಂಗ್ರೆಸ್, ಪಾರ್ಲಿಮೆಂಟಂ ಲೇಬರ್ ಪಾರ್ಟಿ ಮತ್ತು ನ್ಯಾಶನಲ್ ಲೇಬರ್ ಪಾರ್ಟಿಗಳ ಕಾರ್ಯಕಾರಿ ಮಂಡಳದವರು ಅಂತರಾಷ್ಟ್ರೀಯ ಪರಿಸ್ಥಿತಿಯ ಸಂಬಂಧವಾಗಿ ಈ ಕೆಳಗಿನ ಪ್ರಕಟನೆಯನ್ನು ಹೊರಡಿಸಿದ್ದಾರೆ—

“ಇಡೀ ಜಗತ್ತೇ ಈಗ ಸಮರಸಿದ್ಧತೆಯಲ್ಲಿದೆ. ಒಂದು ಭಯಂಕರ ವಿಪತ್ತು ಸಂಭವಿಸಿ ಜಗತ್ತೇ ಬುಡಮೇಲಾಗುವ ಪ್ರಸಂಗ ಬಂದೊದಗಿದೆ. ಆಕ್ರಮಣಶೀಲ ರಾಷ್ಟ್ರಗಳ ಹಿಂಸೆ ಅತ್ಯಾಚಾರ ಹೆಚ್ಚಿವೆ. ತನ್ನ ಆತ್ಮ ರಕ್ಷಣೆಯ ಸಲುವಾಗಿ ಶಸ್ತ್ರಾಸ್ತ್ರಗಳನ್ನು ಕೊಂಡುಕೊಳ್ಳುವ ಅಧಿಕಾರವನ್ನು ಸ್ಪೇನ ಸರಕಾರಕ್ಕೆ ಕೊಡಬೇಕಾಗಿದೆ. ಫ್ರೆಂಚ್ ಗಡಿನಾಡನ್ನು ತೆರೆಯಬೇಕಾಗಿದೆ. ತನ್ನ ಅಲ್ಪ ಸಂಖ್ಯಾಕರನ್ನು ಸಮಾಧಾನಪಡಿಸುವದಕ್ಕಾಗಿ ಝೆಕ್ ಸರಕಾರವು ಶಕ್ಯವಿದ್ದ ಸವಲತ್ತುಗಳನ್ನೆಲ್ಲ ಕೊಡುತ್ತಿದೆ. ಹೀಗಿದ್ದರೂ ಜರ್ಮನಿಯು ಜಕೊಸ್ಲೊವಾಕಿಯಾ ಮೇಲೆ ಮುತ್ತಿಗೆ ಹಾಕಿದರೆ ಅದು ಇಡೀ ಮಾನವ ಜನಾಂಗಕ್ಕೇ ದ್ರೋಹಿಯಾದಂತಾಗುವುದು. ಸುಡೇಟಾನ ಜರ್ಮನರನ್ನು ನಾಝಿ ಸರಕಾರದಲ್ಲಿ ತಳ್ಳಲು ಆತುರರಾಗಿ ಕೆಲಸಮಾಡಲು ಪ್ರಜಾಪ್ರಭುತ್ವದ ತತ್ವಕ್ಕೆ ತೀರ ವಿರುದ್ಧವಾಗಿದೆ. ಬ್ರಿಟಿಶ್ ಸರಕಾರವು ಈ ವಿಚಾರದಲ್ಲಿ ಕೈಹಾಕಿ ಸುಡೇಟಾನರು ಹೇಳಿದಂತೆ ಕೇಳಲು ಝೆಕ್ ಸರಕಾರವನ್ನು ಒತ್ತಾಯಪಡಿಸಲಿಕ್ಕೆ ಯಾವ ಅಧಿಕಾರವೂ ಇಲ್ಲ. ಒಂದು ವೇಳೆ ಜರ್ಮನಿಯು ಝುಕೊಸ್ಲೊವಾಕಿಯಾದ ಮೇಲೆ ಮುತ್ತಿಗೆ ಹಾಕಿದರೆ ತಾನು ರಶಿಯಾ ಮತ್ತು ಫ್ರಾನ್ಸಗಳ ಜೊತೆಗೆ ಕೂಡಿ ಅದರ ರಕ್ಷಣೆಮಾಡುವುದಾಗಿ ಬ್ರಿಟನವು ಸ್ಪಷ್ಟವಾಗಿ ತಿಳಿಸಬೇಕು.”

---

## ಪುರಾಣ ಸಮಾಪ್ತಿ, ದೇಶನೂರ.

ಶ್ರೀಮನ್ನಿರಂಜನ ಸಿದ್ಧಲಿಂಗ ಸ್ವಾಮಿಗಳು ದೇಶನೂರ ಇವರ ಮಠದಲ್ಲಿ ವೇ|| ಘೋಡಗೇರಿ ಶಾಸ್ತ್ರಿಗಳವರು ಪ್ರೌಢರಾಯ್ಯನ ಕಾವ್ಯವನ್ನು ಸೊಗಸಾಗಿ ಹೇಳುತ್ತಿದ್ದರು.

ದೇಶನೂರ ವೀರಶೈವ ಸಮಾಜದಲ್ಲಿ ಬಹು ದಿನಗಳಿಂದ ಇಬ್ಬಣವಾಗಿ ಯಾವ ಕಾರ್ಯಗಳೂ ಸುರಕ್ಷಿತವಾಗಿ ಮುಗಿಯುತ್ತಿದ್ದಿಲ್ಲ. ಈ ಪ್ರಾಂತದಲ್ಲಿ ವಿಶೇಷತಃ ಸಮಾಜ ಸೇವೆಗಾಗಿಯೇ ಜೀವನವನ್ನು ಸವೆಸುವ ಪೂಜ್ಯ ಶ್ರೀ ಶಿವಬಸವ ಸ್ವಾಮಿಗಳು ನಾಗನೂರು ಇವರು ಸ್ವತಃ ದೇಶನೂರಿಗೆ ದಯಮಾಡಿಸಿ ಅಲ್ಲಿಯ ಭಕ್ತಾದಿಗಳಿಗೆ ಸಮಾಧಾನವಾಗುವಂತಹ ವ್ಯವಸ್ಥೆಯನ್ನೂ ಉಪದೇಶವನ್ನೂ ಮಾಡಿ ಎರಡೂ ಬಣದ ಜನರಲ್ಲಿ ಐಕ್ಯವಾಗಲು ಅಪ್ಪಣೆ ಕೊಡಿಸಿದರು. ರಾ|| ರಾ|| ಶ್ರೀಮಂತ ವೀರಪ್ಪನವರು ಉಪ್ಪಿನ ಇವರೂ ತರುಣ ಸಂಘದವರೂ ಒಕ್ಕಟ್ಟಾಗುವ ವಿಚಾರದಲ್ಲಿ ವಿಶ್ವಪ್ರಯತ್ನವನ್ನು ಮಾಡಿದರು. ಶ್ರೀಗಳವರ ನಿಸ್ವಾರ್ಥ ಬುದ್ಧಿಯನ್ನೂ ನಿರ್ಹೇತುಕ ಪ್ರೇಮವನ್ನೂ ನೋಡಿ ಎಲ್ಲ ಜನರೂ ಒಮ್ಮನಸ್ಸಿನಿಂದೊಪ್ಪಿ ಒಕ್ಕಟ್ಟಾದರು.

ತಾ. ೩-೯-೩೮ ನೇ ದಿವಸ ದೇಶನೂರು ಸ್ವಾಮಿಗಳವರ ಆಂದೋಲಿಕೋತ್ಸವವು ಸಕಲ ವಾದ್ಯವೈಭವದೊಡನೆ ಊರಬೀದಿಗಳಲ್ಲಿ ಹಾಯ್ದು ಮಠಕ್ಕೆ ಬಂದು ತಲ್ಪಿತು. ನಂತರ ೩-೪ ಸಾವಿರ ಜನರಿಗೆ ಮಹಾಗಣಾರಾಧನೆಯಾಗಿ ಸಾಯಂಕಾಲದಲ್ಲಿ ಶ್ರೀ ತೆಲಸಂಗ ಹಿರೇಮಠದ ಪಟ್ಟಾಧ್ಯಕ್ಷಸ್ವಾಮಿಗಳೂ ಮತ್ತು ವ್ಹಿ. ಜಿ. ಪಾಟೀಲ ಸುಪರವಾಯಿಜರವರೂ ಮುಂತಾದವರು ಉತ್ತೇಜನ ರೂಪವಾದ ಉಪನ್ಯಾಸವನ್ನಿತ್ತರು. ಈ ಉತ್ಸವಕ್ಕೆ ಬೆಳವಡಿ, ಖಾನಾಪುರ, ಶಹಾಪುರ, ಇಳಕಲ್ಲ ಮುಂತಾದ ಊರುಗಳ ಶ್ರೀಗಳೂ ದಯಮಾಡಿಸಿದ್ದರು. ಇದರಿಂದ ಕಾರ್ಯವು ಸರ್ವಾಂಗ ಸುಂದರವಾಗಿ ಸಾಗಿ ಜಯಜಯಕಾರದೊಡನೆ ಸಭಾ ವಿಸರ್ಜನೆಯಾಯಿತು.

—ಓರ್ವ ಪ್ರತ್ಯಕ್ಷದರ್ಶಿ.

---

## ಮುಧೋಳ ಸಂಸ್ಥಾನಿನಲ್ಲಿ

### ಹೊಣೆಗಾರಿಕೆಯ ರಾಜ್ಯ.

ಈ ಸಂಸ್ಥಾನಿನಲ್ಲಿ ಚಳವಳಿ ನಡೆದು ೨-೩ ತಿಂಗಳಾಗುತ್ತ ಬಂದಿತು. ಈ ಅಲ್ಪಾವಧಿಯಲ್ಲಿಯೇ ಶ್ರೀಮನ್ಮಹಾರಾಣಿ ಸರಕಾರದವರು ಮೆ. ದಿವಾಣ ಬಹದ್ದೂರರವರು ಪ್ರಜೆಗಳ ಬೇಡಿಕೆಗಳ ಕಡೆಗೆ ಲಕ್ಷಕೊಟ್ಟು ತೀವ್ರವೇ ಕೆಲವು ಬೇಡಿಕೆಗಳನ್ನು ಪೂರೈಸಿ ಕೊಟ್ಟಿದ್ದಾರೆ. ಅದರಲ್ಲಿ ಮುಖ್ಯವಾದವುಗಳು ಈ ರೀತಿ ಇವೆ.—

ಸರಕಾರಿ ತೆರಿಗೆಯನ್ನು ಒಂದು ಮೂರನೆಯ ಅಂಶಕ್ಕೆ ಇಳಿಸಿದ್ದಾರೆ. ಹುಲಬನ್ನಿ ತೆಗೆದುಹಾಕಿ ಈ ವರ್ಷದ ತೆರಿಗೆಯನ್ನು ನಿಲ್ಲಿಸಿದ್ದಾರೆ. ಹಿಂದಿನ ತೆರಿಗೆಯಲ್ಲಿ ೩೦ ಸಾವಿರ ರೂ. ಗಳನ್ನು ಬಿಟ್ಟು ಕೊಟ್ಟಿದ್ದಾರೆ. ಬಿದ್ದ ಹೊಲಗಳನ್ನು ಬಡ ರೈತರಿಗೆ ಕೊಡುವುದು; ೫೦೦ ರೂ. ಗಳ ಮೇಲಿದ್ದ ಉತ್ಪನ್ನದ ಕರವನ್ನು ೧೦೦೦ ರೂ. ಗಳವರೆಗೆ ಹೆಚ್ಚಿಸಿದ್ದಾರೆ. ಸಭೆ ಸಮ್ಮೇಲನಗಳಿಗೆ ಸ್ವಾತಂತ್ರ್ಯ ಮೊದಲಾದವುಗಳನ್ನು ಕೊಟ್ಟಿರುವರಲ್ಲದೆ ಸರಕಾರಿ ಭಾಷೆಯು ಕನ್ನಡವೆಂದು ಸಾರಿದ್ದಾರೆ. ಒಕ್ಕಲತನ, ಕೈಗಾರಿಕೆ ಮತ್ತು ವ್ಯಾಪಾರಕ್ಕೆ ಉತ್ತೇಜನ ಕೊಡುವ ಅಭಿವಚನವನ್ನಿತ್ತಿದ್ದಾರೆ.

ಈ ಪ್ರಕಾರ ೩೨ ಪ್ರಜೆಗಳ ಬೇಡಿಕೆಗಳನ್ನು ಮಾನ್ಯಮಾಡಿರುವುದಲ್ಲದೆ ಉಳಿದ ಬೇಡಿಕೆಗಳ ಬಗ್ಗೆಯೂ ಸಹಾನುಭೂತಿಪೂರ್ವಕ ವಿಚಾರಿಸಲಾಗುವುದೆಂದು ತಿಳಿಸಿದ್ದುದರಿಂದ ಸಂಸ್ಥಾನದ ಪ್ರಜೆಗಳಿಗೆ ತುಂಬಾ ಸಂತೋಷವಾಗಿದೆ. ಸರಕಾರದವರೂ ಕೂಡಲೇ ಪ್ರಜೆಗಳ ಇತರ ಬೇಡಿಕೆಗಳನ್ನು ಮಾನ್ಯ ಮಾಡಿ ಎಲ್ಲ ಸಂಸ್ಥಾನಗಳಲ್ಲಿ ಪ್ರಜಾಹಿತ ಸಂಸ್ಥಾನವೆಂಬ ಹೆಸರನ್ನು ಪಡೆಯಬೇಕಾಗಿ ಹಾರೈಸುತ್ತೇವೆ.

ಇಂಥ ಉದಾರ ಬುದ್ಧಿಯ ಶ್ರೀಮನ್ಮಹಾರಾಣಿಯವರ ಆಳ್ವಿಕೆ ದೊರೆತುದರಿಂದ ಪ್ರಜೆಗಳು ಅವರಿಗೂ ಶ್ರೀಮಂತ ಯುವರಾಜರಿಗೂ ಆಯುರಾರೋಗ್ಯ ಸುಖ ಸಂಪದಗಳು ದೊರೆಯಲೆಂದು ಲೋಕಾಪುರದಲ್ಲಿ ಒಂದು ಸಭೆ ಸೇರಿಸಿ ಪ್ರಾರ್ಥಿಸಲಾಯಿತು.

ಮುಧೋಳ ಸಂಸ್ಥಾನದ<br>ಪ್ರಜಾಸಂಘದ ಪ್ರಜೆಗಳು<br>ಲೋಕಾಪುರ.

---

## ಸಾದರ ಸ್ವೀಕಾರ.

ನಿಜಾಮ ಸ್ಟೇಟ ಕೊರಳಿಯ ಶ್ರೀಮಂತ ತಂಬಾಕದ ಲಿಂಗಪ್ಪನವರು ಪುತ್ರೋತ್ಸವದ ನಿಮಿತ್ತ ಮೊದಲೇ ಮುಡುಪಾಗಿ ತೆಗೆದಿಟ್ಟ ೧೦೦೧ ರೂ. ಗಳನ್ನು ಕಲ್ಲಬುರ್ಗಿ ಶ್ರೀ ಶರಣ ಬಸವೇಶ್ವರ ಸಂಸ್ಥಾನಕ್ಕೆ ಸಲ್ಲಿಸಿದ್ದಾರೆ. ತಮ್ಮ ಸಂತೋಷದ ನಿಮಿತ್ತ ‘ಶರಣ ಸಂದೇಶ’ ಪತ್ರಿಕೆಗೂ ೫ ರೂ. ಗಳನ್ನು ಚಿತ್ತಾಪುರದ ಫೋಟೋ ಗ್ರಾಫರ್ ಶ್ರೀ. ಶಂಕರಪ್ಪನವರ ಮೂಲಕ ಕಳುಹಿಸಿಕೊಟ್ಟದ್ದನ್ನು ಕೃತಜ್ಞತಾಪೂರ್ವಕ ಸ್ವೀಕರಿಸಲಾಗಿದೆ.

—ಮ್ಯಾನೇಜರ್.

# ವನಿತಾ ಸೇವಾ ಸಮಾಜ ಧಾರವಾಡ.

ಮೊದಲೇ ಪ್ರಸಿದ್ಧ ಮಾಡಿದಂತೆ ಗುರುವಾರ ತಾ. ೧-೯-೩೮ ನೇ ದಿವಸ ಸರಿಯಾಗಿ ೫ ಘಂಟೆಗೆ ಧಾರವಾಡ ನಗರ ಸಭೆಯ ಭವ್ಯವಾದ ಭವನದಲ್ಲಿ ಧಾರವಾಡ ಜಿಲ್ಲಾಧಿಕಾರಿಗಳಾದ ಶ್ರೀ. ಡಿ. ಎಸ್. ಮೋಡಕರವರ ಅಧ್ಯಕ್ಷತೆಯುಲ್ಲಿ ವನಿತಾ ಸೇವಾ ಸಮಾಜದ ೧೦ ನೆಯ ವಾರ್ಷಿಕೋತ್ಸವವು ಅತ್ಯಂತ ವಿಜೃಂಭಣೆಯಿಂದ ಸಾಂಗವಾಯಿತು. ಸಭಾಗೃಹವು ಆಮಂತ್ರಿತ ಸ್ತ್ರೀಪುರುಷರಿಂದ ಕಿಕ್ಕಿರಿದು ಹೋಗಿತ್ತು.

ಸಮಾರಂಭಕ್ಕೆ ಸಮಾಜದ ಕುಮಾರಿಯುವರು ತಮ್ಮ ಕೋಮಲಕಂಠದಿಂದ ಸ್ವಾಗತಪದವನ್ನಂದರು. ಬಳಿಕ ಶಿಕ್ಷಿಕೆಯರಾದ ಶ್ರೀಮತಿ ಸಕ್ಕರಿಪಟ್ಟಣ ಸೀತಮ್ಮನವರ ನೇತೃತ್ವದಲ್ಲಿ ಕೋಮಲ ಬಾಲಕಿಯರ ಲೇಝುಮ್‍ದ ಕಾರ್ಯಕ್ರಮವಾಯಿತು. ನಂತರ ಸಮಾಜದ ವಿದ್ಯಾರ್ಥಿನಿಯಾದ ಕುಮಾರಿ ಮಾಲತಿದೇವಿ ಪೈ ಇವರ ಕರ್ಣ ಮನೋಹರ ಗಾಯನ, ಶ್ರೀ. ಸಕ್ಕರಿ ಪಟ್ಟಣ ಸೀತಮ್ಮನವರ ನೇತೃತ್ವದಲ್ಲಿ ವಿದ್ಯಾರ್ಥಿನಿಯರ ಅನೇಕ ಪ್ರಕಾರದ ಆಸನ, ಕುಮಾರಿ ಗಾಣಿಗೇರ ಪಾರ್ವತಿದೇವಿಯುವರ ನೃತ್ಯ, ವಿದ್ಯಾರ್ಥಿನಿಯರ ಕೋಲಾಟ ಜ್ವಾಲಾಮುಖಿ ನಾಟಕದೊಳಗಿನ ಒಂದು ದೃಶ್ಯ ಇವೇ ಮೊದಲಾದ ಕಾರ್ಯಕ್ರಮಗಳು ಜರುಗಿದವು.

ಈ ಕಾರ್ಯಕ್ರಮಗಳೆಲ್ಲವು ಜರುಗಿದ ನಂತರ ಸೌ॥ ಸಿಂಪಿ ಸುಧಾದೇವಿಯುವರು ಕಳೆದ ವರುಷದ ವರದಿಯನ್ನು ಓದಿ ತೋರಿಸಿದರು. ಅದರ ಸಾರಾಂಶವು ಸಧ್ಯಕ್ಕೆ ಸಮಾಜದಲ್ಲಿ ಲಿಂಗಾಯತ ೩೩, ಬ್ರಾಹ್ಮಣ ೫೮, ಇತರ ಜಾತಿಯರು ೩೭, ಮುಸಲ್ಮಾನರು ೧೫ ಹೀಗೆ ೧೪೨ ವಿದ್ಯಾರ್ಥಿನಿಯರು ಧರ್ಮಾರ್ಥವಾಗಿರುವರು. ಈ ಸಮಾಜದ ನಾಲ್ಕು ಜನ ವಿದ್ಯಾರ್ಥಿನಿಯರು ಮುಲ್ಕೀ ಪರೀಕ್ಷೆಯಲ್ಲಿ ತೇರ್ಗಡೆಹೊಂದಿರುವರು. ಸಮಾಜದ ಧರ್ಮಾರ್ಥ ಪ್ರಸೂತಿಗೃಹದಲ್ಲಿ ೨೩ ಬಾಣಂತಿತನಗಳಾಗಿರುವವು. ಧರ್ಮಾರ್ಥ ಆಯುರ್ವೇದ ದವಾಖಾನೆಯಲ್ಲಿ ೧೩೧೫ ರೋಗಿಗಳು ಬಂದಿದ್ದು ಅವರಲ್ಲಿ ೧೦೧೧ ಜನ ರೋಗಿಗಳು ಗುಣಹೊಂದಿರುವರು.

ಸಮಾಜದ ವಾಚನಾಲಯುದಲ್ಲಿ ಕನ್ನಡ, ಮರಾಠಿ, ಹಿಂದಿ, ಇಂಗ್ಲೀಷ ಮೊದಲಾದ ಭಾಷೆಗಳ ೫೨೪೦ ಗ್ರಂಥಗಳಿರುವವು. ೩ ಕನ್ನಡ ದೈನಿಕ, ೧೯ ಸಾಪ್ತಾಹಿಕ (ಇವುಗಳಲ್ಲಿ ೧೩ ಕನ್ನಡ) ೨ ವಾರ್ಷಿಕ, ೧೦ ಮಾಸಿಕ (ಇವುಗಳಲ್ಲಿ ೫ ಕನ್ನಡ) ೩ ಕನ್ನಡ ಗ್ರಂಥಮಾಲೆಗಳು ಬರುತ್ತವೆ. ಇವುಗಳ ಲಾಭವನ್ನು ಸಾವಿರಾರು ಭಗಿನಿಯರು ಪಡೆದುಕೊಂಡಿರುವರು. ಚಿಲ್ಡ್ರನ್ಸ್ ಆ್ಯಕ್ಟ ಪ್ರಕಾರ ೫ ಕೇಸುಗಳು ಬಂದಿದ್ದವು. ಸಮಾಜದಲ್ಲಿ ಅನೇಕ ಬಂಧುಭಗಿನಿಯರ ವಿವಿಧ ವಿಷಯುಗಳ ಬಗ್ಗೆ ನೂರಾರು ಉಪನ್ಯಾಸಗಳು ಜರುಗಿದವು. ಇದಲ್ಲದೆ ಶ್ರೀ ಬಸವಜಯಂತಿ, ಶ್ರೀ ಮಹಮ್ಮದ ಪೈಗಂಬರ ಜಯಂತಿ ಶ್ರೀಕೃಷ್ಣ ಜಯಂತಿ ವಿದ್ಯಾರಣ್ಯರ ಹಾಗು ಅಕ್ಕಮಹಾದೇವಿಯರ ಪುಣ್ಯತಿಥಿ, ವಟಸಾವಿತ್ರಿಯ ಪೂಜೆ, ಗೌರೀಹುಣ್ಣಿಮೆ... ವೀಳ್ಯ, ಪುರಾಣ, ಕುಮಾರವ್ಯಾಸನ ಭಾರತ ವಾಚನ ಮುಂತಾದ ಕಾರ್ಯಕ್ರಮಗಳೂ ಜರುಗಿದವು.

ಹೋದ ವರುಷದ ಸಮಾಜದ ಗಳಿಕೆ ೧೯೩೭-೭-೯ ರೂ. ಗಳಿದ್ದು ಬಳಿಕೆಯು ೧೦೭೩೩-೨-೮ ರೂ. ಇರುವದು. ಕೊಡಕೊಳ್ಳುವದು ಹೋಗಲಾಗಿ ಸಮಾಜದ ಆಸ್ತಿಯು ೨೮೮೮-೧೧-೧॥ ರೂ. ಇರುವದು.

ಪಾರಿತೋಷಕ ಕೊಡುವುದಾದ ಬಳಿಕ ಶ್ರೀ. ಮಳಿಮಠ ವಕೀಲರು ಇಂದಿನ ಸಭಾಧ್ಯಕ್ಷರಾದ ಮೆ॥ ಮೋಡಕರವರ ಪರಿಚಯವನ್ನು ಮಾಡಿಕೊಟ್ಟರು. ಬಳಿಕ ಅಧ್ಯಕ್ಷರವರು ತಮ್ಮ ಆಮೋಘವಾಣಿಯಿಂದ ಈ ರೀತಿಯಾಗಿ ಭಾಷಣವನ್ನು ಮಾಡಿದರು—

"ಪ್ರಿಯ ಬಂಧುಭಗಿನಿಯರೆ, ನನಗಿಂದು ಈ ಉತ್ಸವವನ್ನು ನೋಡಿ ಹಿಡಿಸಲಾರದಷ್ಟು ಹಿಗ್ಗಾಯಿತು. ಮೂಲತಃ ಹೆಣ್ಣುಮಕ್ಕಳ ಹೆಚ್ಚಳಕ್ಕಾಗಿ ಹೆಣಗಾಡುವ ಸಂಸ್ಥೆಗಳೇ ಜಗತ್ತಿನಲ್ಲಿ ವಿರಳ. ಅದರಲ್ಲಿಯೂ ನಮ್ಮ ದೇಶದಲ್ಲಿಯಂತೂ ತೀರ ಅಪರೂಪ. ನನಗೆ ಗೊತ್ತಿದ್ದ ಮಟ್ಟಿಗೆ ಕರ್ನಾಟಕದಲ್ಲಿ ಇದೊಂದೇ ಎಂದು ಅನಿಸುತ್ತದೆ. ಇದರ ಪ್ರತಿಯೊಂದು ಕಾರ್ಯಕಲಾಪಗಳು ನನ್ನ ಮನಸ್ಸಿಗೆ ತುಂಬಾ ಬಂದಿದೆ. ನಮ್ಮ ನಾರಿಯರ ಶಿಕ್ಷಣಕ್ಕಾಗಿ ಉದ್ಧಾರಕ್ಕಾಗಿ ಇಂಥ ಸಂಸ್ಥೆಗಳ ಅವಶ್ಯಕತೆ ಬಹಳದೆ. ಕನ್ನಡ ನಾಡಿನ ನಾರಿಯರಿಗಿದ್ದ ಇಂಥ ಕೊರತೆಯನ್ನು ದೂರಮಾಡುವದಕ್ಕೆ ಹಗಲಿರುಳೆನ್ನದೆ ಹೆಣಗುತ್ತಿರುವ ಶ್ರೀ ಪುರಾಣಿಕ ಭಾಗೀರಥಿಬಾಯಿಯವರ ಸಾಹಸತ್ಯಾಗವನ್ನು ನಾನು ಎಷ್ಟು ವರ್ಣಿಸಿದರೂ ಕಡಿಮೆಯೇ.

ಈ ಸಂಸ್ಥೆಗಳ ವಿಷಯವಾಗಿ ಅನೇಕರು ನಿಂದೆಮಾಡುತ್ತಿರುವುದನ್ನು ನಾನು ಕೇಳಿದ್ದೇನೆ. ಆದರೇನು ಅದರಲ್ಲೇನೂ ಅರ್ಥವಿಲ್ಲ. ಈ ಸಮಾಜದವರಷ್ಟು ಉತ್ತಮ ರೀತಿಯಿಂದ ಕೆಲಸಮಾಡುವವರು ಮತ್ತೊಬ್ಬರಿಲ್ಲವೆಂದು ನಾನು ಒತ್ತಿ ಒತ್ತಿ ಹೇಳುತ್ತೇನೆ. ನಿಂದಕರು ಈ ಮಾತನ್ನು ಮರೆಯದಿರಲಿ. ನಾನು ಇದುವರೆವಿಗೂ ಅದೆಷ್ಟೋ ಸಂಸ್ಥೆಗಳನ್ನು ಸಂದರ್ಶಿಸಿ ಬಂದಿರುವೆನು. ಅದೆಷ್ಟೋ ಸಂಘಗಳನ್ನೂ ನೋಡಿರುವೆನು. ಅದೆಷ್ಟೋ ಸಮಿತಿಗಳನ್ನು ಕಂಡಿರುವೆನು. ಆದರೆ ಇಂಥ ಈ ಮಾದರಿಯ ಸಂಸ್ಥೆಯನ್ನು ಎಲ್ಲಿಯೂ ನೋಡಿಲ್ಲ; ಕಂಡಿಲ್ಲ. ಹೆಣ್ಣುಮಕ್ಕಳಿಗೆ ಕೇವಲ ಅಕ್ಷರಾಭ್ಯಾಸ ಕಲಿಸಿದರೆ ಅವರಿಗೆ ಶಿಕ್ಷಣಕೊಟ್ಟಂತೆ ಆಗುವುದಿಲ್ಲ. ಅವರು ಉತ್ತಮ ಗೃಹಿಣಿಯರಾಗುವಂತೆ ಸ್ವಾವಲಂಬಿಯಾಗುವಂತೆ ಯತ್ನಿಸತಕ್ಕದ್ದು. ಈ ದೃಷ್ಟಿಯಿಂದ ನೋಡಿದರೆ ಈ ಸಂಸ್ಥೆಯಲ್ಲಿ ಕೊಡುತ್ತಿರುವ ಶಿಕ್ಷಣವು ಸರ್ವೋತ್ಕೃಷ್ಟವಾಗಿದೆ. ಆದರ್ಶಭೂತವಾದ ಸಂಸ್ಥೆ ಇದಾಗಿದೆ. ನನ್ನ ಸ್ವಂತ ಅಭಿಪ್ರಾಯವೆಂದರೆ ನೂರಕ್ಕೆ ೨೫ ರಂತೆ ಗಂಡುಮಕ್ಕಳ ಶಾಲೆಗಳನ್ನು ಕಡಿಮೆಮಾಡಿ ಇಂಥ ಹೆಣ್ಣುಮಕ್ಕಳ ಶಾಲೆಗಳನ್ನು ಹೆಚ್ಚಿಸಬೇಕು. ಯಾಕಂದರೆ ಹೆಣ್ಣುಮಕ್ಕಳೇ ಜಗತ್ತಿನ ಜನನಿಯರು. ಜನಾಂಗದ ನಿಜವಾದ ಶಿಕ್ಷಕಿಯರು. ಅವರಿಂದಲೇ ನಾಡಿನ ಆಗುಹೋಗುಗಳು ಅವಲಂಬಿಸಿವೆ. ಈ ಸಂಸ್ಥೆಗೆ ಮುನಸಿಪಾಲಟಿ ಲೋಕಲ್‍ಬೋರ್ಡುಗಳು ಕೊಡುಗೈಯಿಂದ ನೆರವಾಗಬೇಕೆಂದು ನಾನು ಸಾರಿ ಸಾರಿ ಹೇಳುತ್ತೇನೆ. ಹಾಗೂ ಈ ಸಮಾಜಕ್ಕೊಂದು ಸ್ವತಂತ್ರ ಕಟ್ಟಡವು ಬೇಕೇಬೇಕು. ಅದಕ್ಕಾಗಿ ನಾಗರಿಕರು ಉದಾರ ಹಸ್ತದಿಂದ ಸಹಾಯಮಾಡುವದು ಅವರ ಕರ್ತವ್ಯವೆಂದು ನಾನು ತಿಳಿಯುತ್ತೇನೆ. ಇತ್ಯಾದಿ ಇತ್ಯಾದಿ.

ಅಧ್ಯಕ್ಷರ ಭಾಷಣ ಮುಗಿದ ಬಳಿಕ ಶ್ರೀ. ಪಾಟೀಲ ದೇವನಗೌಡರು ಮಾನ್ಯ ಅಧ್ಯಕ್ಷರ ಹಾಗೂ ಅತಿಥಿಗಳ ಆಭಾರಮನ್ನಿಸಿದರು. ನಂತರ ಅಧ್ಯಕ್ಷರಿಗೆ ಸಮಾಜದ ಪತಿಯಿಂದ ಶ್ರೀ. ಎಚ್. ಎಸ್. ಶಿವಲಿಂಗ ಶಾಸ್ತ್ರಿಗಳು ಹಾಗೂ ಆ ಮೇಲೆ ಸೌ॥ ಮೋಡಕರವರಿಗೆ ಸೌ॥ ಮಳಿಮಠ ಶಾಂತಾದೇವಿಯುವರು ಪೂಮಾಲೆಗಳನ್ನು ಅರ್ಪಿಸಿದರು. ಕೊನೆಗೆ ವಂದೇ ಮಾತರಂ ರಾಷ್ಟ್ರಗೀತೆಯಾಗಿ ಸಭೆಯು ಮುಗಿಯಿತು.

## ಮೌಲಾನಾ ನಜಿಮುದ್ದೀನ ಇವರ ಜೀವದಯಾ ಕಾರ್ಯ.

ಮುಂಬೈ ಜೀವದಯಾಮಂಡಳ ಮತ್ತು ಬೊಂಬೆ ಪ್ರೆಸಿಡೆನ್ಸಿ ಕ್ಯಾಟಲ್ ಇಂಪ್ರುವೆಮೆಂಟ್ ಆ್ಯಂಡ್ ಡೆಯರಿ ಫಾರ್ಮಿಂಗ್ ಅಸೋಸಿಏಶನ್ ಈ ಸಂಸ್ಥೆಗಳ ಗೌರವ ಪ್ರಚಾರಕರಾದ ಗೋಪ್ರೇಮಿದ ಮೌಲಾನಾ ನಜಿಮುದ್ದೀನ ಸಾಹೇಬರವರು ಜೀವದಯಾ ಪ್ರಚಾರ ಕಾರ್ಯವನ್ನು ಮಾಡುತ್ತಿದ್ದಾರೆ. ಇವರು ಕಳೆದ ಮೂರು ತಿಂಗಳುಗಳಲ್ಲಿ ಪುಣೆ ಜಿಲ್ಲೆ, ಕೊಲ್ಹಾಪುರ ಸಂಸ್ಥಾನ, ಹುಬ್ಬಳ್ಳಿ, ನಿಪ್ಪಾಣಿ ಮತ್ತು ಸಾಂಗಲಿ ಈ ಭಾಗಗಳಲ್ಲಿ ಸಂಚರಿಸಿ ಸಾರ್ವಜನಿಕ ಭಾಷಣ ಸಂದರ್ಶನ ಮೊದಲಾದವುಗಳ ಮೂಲಕ ಪ್ರಚಾರ ಕಾರ್ಯವನ್ನು ಮಾಡಿದರು. ಗೋರಕ್ಷಣ, ಪಶುಸಂವರ್ಧನ ಆರೋಗ್ಯ, ಪಶುಬಲಿಕೊಡುವ ದುಷ್ಟ ರೂಢಿಯ ಅನಿಷ್ಟತ್ವ, ಮದ್ಯಮಾಂಸಗಳನ್ನು ಸೇವಿಸದಿರುವಿಕೆ ಮೊದಲಾದ ವಿಷಯಗಳ ಮೇಲೆ ಭಾಷಣ ಪ್ರವಚನ ಮಾಡಿ ಜನಜಾಗೃತಿಯನ್ನುಂಟುಮಾಡಿದ್ದಾರೆ. ಹುಬ್ಬಳ್ಳಿಯಲ್ಲಿ ಜರುಗಿದ ಎರಡು ಮುಸಲ್ಮಾನ್ ಪ್ರಚಂಡ ಸಭೆಗಳಲ್ಲಿ ಮಹಮ್ಮದ ಪೈಗಂಬರರ ಅಹಿಂಸಾ ತತ್ವವನ್ನು ಸರಸವಾಗಿ ವಿವರಿಸಿದುದರಿಂದ ಮುಸಲ್ಮಾನ್ ಜನತೆಯ ಮೇಲೆ ತುಂಬಾ ಪರಿಣಾಮವಾಗಿದೆ. ಮಾಲೇಗಾಂವ ಮತ್ತು ಹಣಮಂತಗಾಂವ ಈ ಸ್ಥಳಗಳ ಲಕ್ಷ್ಮಿ ಜಾತ್ರೆಯಲ್ಲಿ ಕಡಿಯಲು ತಂದ ೨೫ ಕೋಣಗಳನ್ನು ಇವರೇ ತಮ್ಮ ಭಾಷಣದಿಂದ ಅವರ ಮನಸ್ಸನ್ನು ತಿರುಗಿಸಿ [illegible] ಕಳಿಸಿದರು. ಅವೇ ಕೋಣಗಳನ್ನು ಮಾರಾಟಮಾಡಿ ಅದರಿಂದ ಬರುವ ಹಣವನ್ನು ಸಾರ್ವಜನಿಕ ಕಾರ್ಯಗಳಿಗಾಗಿ ಉಪಯೋಗಿಸಿಕೊಳ್ಳುವಂತೆ ಅಲ್ಲಿಯ ಜನರಿಗೆ ತಿಳಿಸಿದ್ದಾರೆ.

ಇದೇ ಪ್ರಕಾರ ಇವರು ಇನ್ನೂ ಅನೇಕ ಕಡೆಗೆ ಸಂಚರಿಸಿ ಜೀವದಯಾ ಪ್ರಚಂಡ ಕಾರ್ಯವನ್ನು ಅತ್ಯಂತ ಉತ್ಸಾಹದಿಂದ ಮಾಡಿದ್ದಾರೆ. ಮುಸಲ್ಮಾನ್ ಸಮಾಜದ ಮೇಲೆ ಇವರ ಭಾಷಣದ ಪರಿಣಾಮವು ವಿಶೇಷವಾಗಿ ಆಗಿ ಅವರು ಮದ್ಯಮಾಂಸ ಸೇವನೆ [illegible]ಬಿಡುತ್ತಿದ್ದಾರೆ.

---

## ಡಾ. ಮುಂಜೆಯವರ ಭಾಷಣ.

ಡಾ. ಮುಂಜೆಯವರು ನಾಶಿಕದ ಗಣೇಶೋತ್ಸವದಲ್ಲಿ 'ಎರಡನೆಯವರ ಪರರಾಷ್ಟ್ರೀಯ ಧೋರಣ' ಎಂಬ ವಿಷಯದಲ್ಲಿ ಒಂದು ಮಹತ್ವದ ಭಾಷಣವನ್ನು ಮಾಡಿದರು. ಅವರು ತಮ್ಮ ಭಾಷಣದಲ್ಲಿ "ಹಿಂದುಸ್ಥಾನದ ಹತ್ತಿರ ಚೀನ ಮತ್ತು ಜಪಾನ ಎರಡು ಪ್ರಬಲ ರಾಷ್ಟ್ರಗಳಿವೆ. ಇಂದು ಅವು ಹೊಡೆದಾಡಹತ್ತಿವೆ. ಎರಡೂ ರಾಷ್ಟ್ರಗಳೂ ಸ್ವತಂತ್ರತೆಯಿಂದಿದ್ದರೆ ಚೆನ್ನಾಗಿತ್ತು. ಆದರೆ ಇಂದಿನ ಯುದ್ಧದಲ್ಲಿ ಜಪಾನು ವಿಜಯವನ್ನು ಹೊಂದಲೇಬೇಕು. ಆದರೆ ಅದು ಮಾತ್ರ ವಿಜಯವನ್ನು ಸಂಪಾದಿಸದಿದ್ದರೆ ಇಂಗ್ಲಂಡಿನ ಶಕ್ತಿಯು ಬೆಳೆದು ಹಿಂದುಸ್ಥಾನಕ್ಕೆ ತೊಂದರೆಯಾಗುವುದು ಮಾತ್ರ ಖಂಡಿತ ಹಿಂದುಸ್ಥಾನದ ಹತ್ತಿರ ಯಾವ ಮುಸಲ್ಮಾನ ರಾಷ್ಟ್ರಗಳಿವೆಯೋ ಅವೆಲ್ಲವೂ ಒಂದು ಒಪ್ಪಂದಮಾಡಿಕೊಂಡು ೩೦ ಲಕ್ಷ ಸೈನ್ಯವನ್ನು ಸಜ್ಜುಗೊಳಿಸಿ ಸಿದ್ಧವಾಗಿಡಬೇಕೆಂದು ನಿರ್ಧರಿಸಿವೆ. ಈ ಕಡೆಗೆ ನಾವು ಕಣ್ಣಲ್ಲಿ ಎಣ್ಣೆಹಾಕಿಕೊಂಡು ನೋಡಬೇಕು. ಮತ್ತು ಅದಕ್ಕಾಗಿಯೇ ನಾವೂ ೨೫ ಲಕ್ಷ ಸೈನ್ಯವನ್ನು ತಯಾರಿಸುವ ಸಿದ್ಧತೆಮಾಡಬೇಕು" ಎಂದು ಹೇಳಿದರು.

## ಯರನಾಳ ಪುರಾಣ ಸಮಾರಂಭ.

ಮೊದಲು ಪ್ರಸಿದ್ಧಪಡಿಸಿದ ಪ್ರಕಾರ ಯರನಾಳ ಬೃಹನ್ಮಠದಲ್ಲಿ ಸುಕ್ಷೇತ್ರ ಬಂಥನಾಳ ಶಿವಯೋಗಿಗಳಿಂದ ಜಗದ್ಗುರು ಪ್ರಭುವಿನ ಪುರಾಣ ಪ್ರವಚನವು ಇದೇ ಶ್ರಾವಣ ಶುದ್ಧ ೫ ಪಂಚಮಿ ತಾ. ೩೧-೭-೩೮ ನೇದಿನ ಪಾರಂಭವಾಗಿ ಇದೇ ಭಾದ್ರಪದ ಶುದ್ಧ ಷಷ್ಠಿಯವರೆಗೆ ಅಂದರೆ ೩೭ ದಿವಸ ಒಳ್ಳೇ ಪರಿಣಾಮಕಾರಕವಾಗಿ ಜರುಗಿತು. ಈ ಪ್ರವಚನಕ್ಕೆ ಸ್ವಸ್ಥಳ ಪರಸ್ಥಳಗಳ ಸಾವಿರಾರು ಜನರು ನಿತ್ಯ ಕೇಳುವದಕ್ಕಾಗಿ ಕೂಡುತ್ತಿದ್ದರು. ಪರಗ್ರಾಮಗಳ ಜನರಿಗೆ ಊಟದ ವ್ಯವಸ್ಥೆಯು ಚೆನ್ನಾಗಿ ನಡೆಯಿತು. ಈ ಪುರಾಣ ಶ್ರವಣದಿಂದ ಬಾಗೇವಾಡಿ ತಾಲೂಕದ ಬಹುಭಾಗದ ಜನರಿಗೆ ಧಾರ್ಮಿಕ, ಸಾಮಾಜಿಕ, ನೈತಿಕ ರಾಜಕೀಯ ವಿಷಯಗಳ ಕ್ರಾಂತಿಯೇ ಆಗಿರುವದೆಂದರೆ ಅತಿಶಯೋಕ್ತಿಯೆನಿಸದು. ಈ ಕಾರ್ಯದಲ್ಲಿ ಯರನಾಳ ಸಮಸ್ತ ಭಕ್ತಮಂಡಳಿಯು ಅವಿಶ್ರಾಂತ ಶ್ರಮವಹಿಸಿತು. ಇದು ಸಹಜವದೆ. ಆದರೆ ಶ್ರೀಮಾನ್ ಮನಗೂಳಿ ಸೋಮನಗೌಡರು ತಮ್ಮ ಸಹಸ್ರಾರು ಕೆಲಸಗಳನ್ನು ಬದಿಗಿಟ್ಟು ಈ ತಿಂಗಳಿಂದಲೂ ತನು ಮನ ಧನಗಳಿಂದ ಈ ಕಾರ್ಯದ ಮುಖ್ಯ ಕರ್ತರಾಗಿ ಈ ಮಂಗಲ ಕಾರ್ಯವನ್ನು ಯಥಾರೀತಿ ಸಾಂಗಗೊಳಿಸಿದ್ದು ಅವರ ಧಾರ್ಮಿಕ ಪ್ರವೃತ್ತಿಯನ್ನು ಬೆಳಕಿಗೆ ತರುವದಾಗಿದೆ. ಪ್ರಭುವು ಅವರಿಗೆ ಮತ್ತು ಯರನಾಳದವರಿಗೆ ಸರ್ವ ಸುಖ ಸಮೃದ್ಧಿಯನ್ನು ಕೊಡಲಿ

ಓರ್ವಪ್ರತ್ಯಕ್ಷದರ್ಶಿ.

---

# ಶ್ರೀ. ಮ. ನಿ. ಜಗದ್ಗುರು ಮುರಘಾರಾಜೇಂದ್ರ ಫ್ರೀ ಬೋರ್ಡಿಂಗ್ ಧಾರವಾಡ ಪುರಾಣ ಸಮಾಪ್ತಿಯು.

ಪ್ರತಿ ವರುಷದ ಪದ್ಧತಿ ಪ್ರಕಾರ ಇದೇ ಶ್ರಾವಣ ಶುದ್ಧ ೧ (ತಾ. ೨೮-೭-೩೮) ರಿಂದ ಭಾದ್ರಪದ ಶುದ್ಧ ೧ (ತಾ. ೨೬-೮-೩೮) ರ ವರೆಗೆ ಪ್ರಾತಃಕಾಲ ೫ ಘಂಟೆಯಿಂದ ಭಜನಾ ಸಂಕೀರ್ತನಾ ೮ ರಿಂದ ೧೦ ಘಂಟೆಯ ವರೆಗೆ ವಿದ್ಯಾಲಯದ ವಿದ್ಯಾರ್ಥಿಗಳು ವೇದಪಾಠಗಳಿಂದಲೂ, ವೇದಮಂತ್ರಗಳಿಂದಲೂ ಮಹಾ ತಪಸ್ವಿಗಳ ಪಾದಕ್ಕೆ ರುದ್ರಾಭಿಷೇಕ ಅಷ್ಟೋತ್ತರ ಬಿಲ್ವಾರ್ಚನೆಗಳನ್ನು ಮಾಡುತ್ತಿದ್ದರು. ಶ್ರೀ. ಮ. ನಿ. ಕರ್ಜಗಿ ಹೊಸಮಠದ ರುದ್ರ ಸ್ವಾಮಿಗಳ ಪಾದಪೂಜಾ (ಶುದ್ಧ ೧೩ ರ ವರೆಗೆ) ನಂತರ ಮಹಾ ಗಣಾರಾಧನೆ ನಡೆಯುತ್ತಿತ್ತು. ಸಾಯಂಕಾಲ ಶಿವಾನುಭವ ಕಾಲೇಜಿನಲ್ಲಿ ಪಂಡಿತ ಕಾವ್ಯತೀರ್ಥ ತಾಳೀಕೋಟಿ ಚರಮೂರ್ತಿಗಳವರು ೫॥ ಯಿಂದ ೭॥ ವರೆಗೆ ಶ್ರೀ. ಮ. ನಿ. ಅಥಣಿ ಶಿವಯೋಗಿಗಳ ಪುರಾಣವನ್ನು ಶ್ರೋತೃ ವೃಂದಕ್ಕೆ ಪರಿಣಾಮವಾಗುವಂತೆ ಬೋಧಿಸುತ್ತಿದ್ದರು.

ಈ ಸಮಾರಂಭದಲ್ಲಿ ನಡೆದ ವಿಶೇಷ ಕಾರ್ಯಗಳು— ಪಂ. ಚೆನ್ನಕವಿಗಳು ದ್ಯಾಂಪೂರ, ಮೈಸೂರು ಸಿದ್ಧಲಿಂಗ ಶಾಸ್ತ್ರಿಗಳು, ಗುರ್ಲಹೊಸೂರು ನಾರಾಯಣ ಶಾಸ್ತ್ರಿಗಳು, ಶ್ರೀ. ಮ. ಗೋಡಿಕಟ್ಟಿ ಗುರಪ್ಪನವರು, ದೇವನೂರು ಮಠದ ಮಹಾ ಶಾಂತಯ್ಯನವರು ಶ್ರೀ. ವೇ. ಸಂಪಗಾವ ಚರಮೂರ್ತಿಗಳವರು ಶ್ರೀ. ಮ. ಸದಾಶಿವರಾವ ಗರುಡರವರು, ಗಂಗೂಬಾಯಿ ಫೋಟೋಗ್ರಾಫರ ಸೊಲ್ಲಾಪುರ ಮತ್ತು ಸೌ॥ ವಾಸಂತಿಬಾಯಿ ಬಿಕ್ಕಣ್ಣವರ ಕಿತ್ತೂರು ಮೊದಲಾದ ಮಹನೀಯರೂ ಮಹಿಳಾಮಹನೀಯರೂ ಶಿವಕೀರ್ತನೆ, ಭಜನೆ ಮತ್ತು ಭಾಷಣ ಮೊದಲಾದವುಗಳಿಂದ ಜನರನ್ನು ಸಂತೋಷಪಡಿಸಿದರು. ಮೇಲಾಗಿ ನಮ್ಮ ಗುರುಕುಲದ ವಿದ್ಯಾರ್ಥಿಗಳು ಕೀರ್ತನೆ ಮತ್ತು ಭಾಷಣಗಳಲ್ಲಿ ಭಾಗವಹಿಸಿ ಕಮಿಟಿಯವರಿಗೂ ಮತ್ತು ಬಂದ ಮಹನೀಯರಿಗೂ ಆನಂದವನ್ನುಂಟು ಮಾಡಿ ಪಾರಿತೋಷಕಗಳನ್ನು ಪಡೆದರು.

ಭಾದ್ರಪದ ಶುದ್ಧ ೧ ನೆಯ ದಿವಸವು ಸಮಾಪ್ತಿಯ ದಿವಸವಾದ್ದರಿಂದ ಸಹಸ್ರ ಬಿಲ್ವಾರ್ಚನೆ ಮಹಾಗಣಾರಾಧನೆ, ಸಾಯಂಕಾಲ ೫॥ ಗಂಟೆಯಿಂದ ೯। ಗಂಟೆಯ ವರೆಗೆ ಪುರಾಣ, ಸಭೆ ಇತ್ಯಾದಿ ಕಾರ್ಯಗಳು ಜರುಗಿದವು. ಆ ಸಮಯದಲ್ಲಿ ಬಂದಿರತಕ್ಕ ಎಲ್ಲ ಶಾಸ್ತ್ರಿಗಳಿಗೆ ಸಂಭಾವನೆ ಕೊಟ್ಟನಂತರ ಜಯಘೋಷದೊಡನೆ ಸಭಾ ವಿಸರ್ಜನೆಯಾಯಿತು. ಕೆಲ ಭಕ್ತರು ಮಹಾಪೂಜಾ, ಮಹಾಗಣಾರಾಧನೆಯ ಖರ್ಚನ್ನು ಭಕ್ತಿಯಿಂದ ವಹಿಸಿದರು. ಉಳಿದ ಮಹನೀಯರು ಬಹು ಶ್ರದ್ಧೆಯಿಂದ ಸೇವೆಯನ್ನುಮಾಡಿದರು. ಪ್ರತಿ ವರುಷಕ್ಕಿಂತ ಈ ವರುಷ ಹೆಚ್ಚು ಉತ್ಸಾಹದಿಂದ ಸಮಾಪ್ತಿಯಾಯಿತೆಂದು ತಿಳಿಸಲು ಬಹಳ ಆನಂದವಾಗುತ್ತದೆ. ಆ ಶಿವಯೋಗಿಯು ಎಲ್ಲರಿಗೂ ಸದಾ ಸುಖವನ್ನೀಯಲೆಂದು ಪ್ರಾರ್ಥಿಸುತ್ತೇನೆ.

ಮೊನ್ನೆ ತಾ. ೨೮-೮-೩೮ ನೇ ರವಿವಾರ ಸಾಯಂಕಾಲ ೫ ಘಂಟೆಯಿಂದ ೮ ಘಂಟೆಯ ವರೆಗೆ ಬಿ. ಭೀಮರಾಜರವರ ಕೀರ್ತನ ಕವಿ ಕುಟುಂಬ ಕುಮಾರಿ ಕೌಶಲ್ಯಾದೇವಿಯವರು "ಭಗವಾನ್ ಬಸವನ ಜನನ" ಎಂಬ ಹೊಸ ಮಾದರಿಯ ಕೀರ್ತನವನ್ನೂ ತಾ. ೧-೯-೩೮ ನೆಯ ಗುರುವಾರ ಸಾಯಂಕಾಲ ೫ ಘಂಟೆಯಿಂದ ೮॥ ಘಂಟೆಯ ವರೆಗೆ "ಶಬರ ಶಂಕರ ವಿಲಾಸ" ಎಂಬ ಕೀರ್ತನವನ್ನೂ ತಮ್ಮ ಸಹೋದರ ಮತ್ತು ಸಹೋದರಿಯರ ತಬಲಾ, ಹಾರ್ಮೋನಿಯಮ್ ಮತ್ತು ವೀಣಾ ಮೊದಲಾದವುಗಳಿಂದಲೂ ತಮ್ಮ ಇಂಪಾದ ಗಾಯನದಿಂದಲೂ ನಡುನಡುವೆ ಪ್ರಹಸನ ಕಥೆಗಳಿಂದಲೂ ಸಭಿಕರನ್ನು ರಂಜನಗೊಳಿಸಿದರು. ಇವರ ಕೀರ್ತನಗಳಲ್ಲಿ ಕಾಂಗ್ರೆಸ್ ಪ್ರಚಾರವೂ ನೈತಿಕ ಧಾರ್ಮಿಕ ವಿಚಾರಗಳೂ ತುಂಬಿರುವುದರಿಂದ ಎಲ್ಲ ನಾಡಿನಲ್ಲಿ ಇವರು ಎಲ್ಲ ಜನರ ಪ್ರೇಮಕ್ಕೆ ಪಾತ್ರರಾಗಿರುವರೆಂದು ಧಾರಾಳವಾಗಿ ಹೇಳಬಲ್ಲೆವು. ಇಂಥ ಕುಮಾರಿಯರನ್ನು ಹೆತ್ತ ಭೀಮರಾಜರೇ ಪುಣ್ಯಶಾಲಿಗಳು !

॥ಸರ್ವೇ ಜನಾಃ ಸುಖಿನೋಭವಂತು.॥

ಉತ್ಸವ ಕಾರ್ಯದರ್ಶಿ
ಮುರುಘಾರಾಜೇಂದ್ರ ಫ್ರೀ ಬೋರ್ಡಿಂಗ್
ಧಾರವಾಡ.

---

# ಶ್ರೀ ಬಾಳೆಹಳ್ಳಿ ಸ್ವಾಮಿಗಳ ಪ್ರಕರಣ.

ಶಿವಮೊಗ್ಗಾ ಡಿ. ಬೊ. ವೈಸ್ ಪ್ರೆಸಿಡೆಂಟ್ ಮ। ರಾ। ಜಿ. ಸಿ. ಮಹಲಿಂಗಪ್ಪನವರ ಮೇಲಿನ ಮಾನನಷ್ಟದ ಮೊಕದ್ದಮೆಯು ತಾ. ೫-೯-೩೮ ನೆಯ ದಿವಸ ಚಾರ್ಜಮಾಡಲ್ಪಟ್ಟಿತು.

ಶ್ರೀ ಬಾಳೆಹೊನ್ನೂರು ಸ್ವಾಮಿಗಳು ಶಿವಮೊಗ್ಗಾಕ್ಕೆ ದಯಮಾಡಿಸಿದ್ದ ಕಾಲಕ್ಕೆ ಶ್ರೀ ಬಸವೇಶ್ವರ ದೇವಸ್ಥಾನಕ್ಕೆ ಮೇಲ್ಕಂಡ ಮ। ರಾ। ಮಹಲಿಂಗಪ್ಪನವರು ಶ್ರೀ ಸ್ವಾಮಿಗಳವರನ್ನು ಕರೆಯಿಸುವುದರ ಫಲವಾಗಿ ಟವನ್ನಿನ ಹತ್ತು ಜನ ಮುಖಂಡರುಗಳ ಮೇಲೆ "ಗುರು ದ್ರೋಹಿಗಳು" "ಅಪಪ್ರಚಾರಕರು" "ಕುಹಕರು" ಎಂಬ ಶಬ್ದಗಳನ್ನು ಸೇರಿಸಿ ಅರ್ಜಿಕೊಟ್ಟಿದ್ದರು.

ಮೇಲ್ಕಂಡ ಅರ್ಜಿ ವಿಮರ್ಶೆಯ ಬಗ್ಗೆ ಹತ್ತು ಜನರಲ್ಲೊಬ್ಬರಾದ ಮ। ರಾ। ಸಿ. ಬಸಪ್ಪನವರು ಇಲ್ಲಿಯ ಒಂದನೆಯ ತರಗತಿಯ ಮ್ಯಾಜಿಸ್ಟ್ರೇಟರವರ ಕೋರ್ಟಿನಲ್ಲಿ ಮೊಕದ್ದಮೆ ಹೂಡಿದ್ದರ ಫಲವಾಗಿ ಫಿರ್ಯಾದಿಪರ ಸಾಕ್ಷಿ ವಿಚಾರಣೆ ನಡೆದು ಎರಡೂ ಕಡೆ ವಾದವಿವಾದ ನಡೆದು ತಾ. ೫-೯-೩೮ ನೆಯ ದಿವಸ ಅಪರಾಧಿಯ ಮೇಲಿನ ಆಪಾದನೆಯು ಸ್ಥಿರಪಟ್ಟಿರುತ್ತದೆ. ಇನ್ನು ಕೆಲವರು ಮೊಕದ್ದಮೆ ಹೂಡುವರಾಗಿ ತಿಳಿದು ಬಂದಿರುತ್ತದೆ.

ಫಿರ್ಯಾದಿಪರ ಪ್ರಸಿದ್ಧರಾದ ಮ. ರಾ. ಗಳಾದ ಎಸ್. ರಾಮಚಂದ್ರರಾವ್ ಬಿ. ಎ. ಎಲ್ ಎಲ್. ಬಿ. ಮತ್ತು ಕೆ. ಕೃಷ್ಣಮೂರ್ತಿ ಬಿ. ಎ. ಇವರು ಅಪರಾಧಿತರಪರ ಮ. ರಾ. ಆರ್. ಕೆ. ಜಯತೀರ್ಥಾಚಾರ್ಯ ಬಿ. ಎ. ಎಲ್. ಎಲ್. ಬಿ. ಇವರೂ ವಕಾಲತ್ತು ವಹಿಸಿದ್ದರು.

ರಾಜಕೀಯ ಬಾತ್ಮಿದಾರ
ಬೆಂಗಳೂರು

---

—'ಚೀನವನ್ನು ಜಯಿಸುವುದು ಶಕ್ಯವಿಲ್ಲ. ವೀರ ಚಿಯಂಗ್ ಕೈಶೇಕರ ನಾಯಕತ್ವದಲ್ಲಿ ಅದರ ನಾಗರಿಕತೆಯು ಅಪಾರ ಸಾಧನೆಗಳನ್ನು ತೋರಿಸುತ್ತದೆ. ಆ ದೇಶದ ಪ್ರಜೆಗಳ ನಿಸ್ಸೀಮ ದೇಶಭಕ್ತಿಯಿಂದ ದೇಶವು ಒಂದಾಗಿ ವೈರಿಯನ್ನು ಹೊಡೆದೋಡಿಸಲು ಪಣತೊಟ್ಟಿದೆ. ಕೊನೆಗೆ ಜಯಶ್ರೀಯು ಚೀನದ ಕೊರಳಿಗೇನೇ ಮಾಲೆ ಹಾಕುವುದು ಖಂಡಿತ' ಎಂದು ಕವಿ ರವೀಂದ್ರನಾಥ ಟಾಗೋರರವರು ಜಪಾನಿನ ಸುಪ್ರಸಿದ್ಧ ಕವಿಯೊಬ್ಬರಿಗೆ ಪತ್ರ ಬರೆದಿದ್ದಾರೆ.

## ಲಂಡನ್ನಿನಲ್ಲಿ

### ಸೌ|| ವಿಜಯಲಕ್ಷ್ಮಿ ಪಂಡಿತರವರ ಭಾಷಣ.

ಲಂಡನ್ನಿನಲ್ಲಿ ತಾ. ೬ ನೆಯ ದಿವಸ ಹಿಂದೀ ಪತ್ರಿಕಾ ಪ್ರತಿನಿಧಿಗಳ ಪರಿಷತ್ತಿನಲ್ಲಿ ಕಾಂಗ್ರೆಸ್ಸಿನ ಕಾರ್ಯದ ಸಂಬಂಧವಾಗಿ ಸೌ|| ವಿಜಯಲಕ್ಷ್ಮಿ ಪಂಡಿತರವರು ಈ ರೀತಿ ಭಾಷಣಮಾಡಿದರು-

"ನಾನು ಪರದೇಶಕ್ಕೆ ಬಂದ ಕಾರಣವನ್ನು ಅನೇಕರು ಅನೇಕ ವಿಧವಾಗಿ ಪ್ರಕಟಿಸಿ ಹಿಂದೀಯರು ಪ್ರಾಂತಿಕ ಸ್ವರಾಜ್ಯ ಸುಖಲೋಲುಪ್ತರಾಗಿರುವರೆಂದು ಪ್ರಸಿದ್ಧಿಸಿದ್ದಾರೆ. ಇದರಿಂದ ನನಗೆ ತುಂಬಾ ವ್ಯಸನವಾಗಿದೆ. ಸಂಯುಕ್ತ ಪ್ರಾಂತವು ಹಿಂದುಸ್ಥಾನದಲ್ಲಿಯ ಅತ್ಯಂತ ಹಿಂದುಳಿದ ಪ್ರಾಂತವೆಂದೂ ನಾನು ಆಧ್ಯಾತ್ಮಿಕ ಯೋಗ ಸಾಧನೆಗಾಗಿಯೇ ಸಂಚರಿಸುತ್ತಿರುವೆನೆಂದೂ ಒಂದೆಡೆಗೆ ಪ್ರಸಿದ್ಧವಾಗಿದೆ. ಇದೆಲ್ಲವೂ ವಸ್ತುಸ್ಥಿತಿಯನ್ನರಿಯದ ಮೂರ್ಖತನವೆಂದೇ ನಾನು ಸ್ಪಷ್ಟ ತಿಳಿಯಪಡಿಸುತ್ತೇನೆ.

ರಾಜಮಾರ್ಗಗಳನ್ನು ನಿರ್ಮಿಸುವುದಾಗಲಿ ಶೋಭಾಯಮಾನ ಉದ್ಯಾನಗಳ ರಚನೆಯಾಗಲಿ ಇಂದು ಹಿಂದಿಯರ ಜೀವನ ಸೌಕರ್ಯಗಳಾಗಿಲ್ಲ. ಇಂದು ಕಂಗೆಟ್ಟ ಭಾರತೀಯರಿಗೆ ಸಂಪೂರ್ಣ ಸ್ವರಾಜ್ಯವೂ ಬಡತನಗಳಲ್ಲಿ ಬೆಂಡಾದ ಬಡವರಿಗೆ ತುತ್ತು ರೊಟ್ಟಿಯೂ ಅವಶ್ಯವಾಗಿ ಬೇಕಾಗಿವೆ. ಭಾರತ ಮಾತೆಯು ತನ್ನ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದಾಳೆ."

ಇವರ ಮುಂದಿನ ಕಾರ್ಯಕ್ರಮದ ಬಗ್ಗೆ ವಿಚಾರಿಸಲು ೧೦ ದಿವಸಗಳ ವರೆಗೂ ಔಷಧೋಪಚಾರ ಹೊಂದುವೆನೆಂದೂ ಆ ಅವಧಿಯಲ್ಲಿ ಸಾಮಾಜಿಕ ಕಾರ್ಯಗಳಲ್ಲಿ ಮಾತ್ರ ಭಾಗವಹಿಸುವೆನೆಂದೂ ತಿಳಿಸಿದ್ದಾರೆ.

---

## ನಿಜಾಮು ಸರಕಾರಕ್ಕೆ ವಿನಂತಿ.

ಮಹಾಗಾವ ನದಿಯ ದಂಡೆಯಲ್ಲಿ ಅನಂತ ದಿವಸಗಳಿಂದ ಸ್ಥಾಪಿಸಲ್ಪಟ್ಟ ದಿನಂಪ್ರತಿ ತಪ್ಪದೇ ಪೂಜೆಗೊಳ್ಳುತ್ತಿರುವ ಶ್ರೀ ಹನುಮಂತದೇವರ ಮೂರ್ತಿಯನ್ನು ತುಂಟರು ತಾ. ೪-೧೧-೪೬ ನೇ ದಿವಸ ಮೂರು ತುಂಡುಮಾಡಿರುವರು. ಆದರೆ ಸರಕಾರದವರು ಇದು ವರೆಗೆ ಪಂಚನಾಮೆಮಾಡಿಲ್ಲ. ಅಥವಾ ವಿಚಾರಣೆಯೂ ಕೂಡ ಆಗಿಲ್ಲ. ಹೀಗಾದ ಮೇಲೆ ನಮ್ಮ ಗ್ರಾಮದ ಹಿಂದುಗಳು ಜೀವಿಸುವದೆಂತು? ಇದಕ್ಕೂ ಮುಂಚೆ ಶ್ರೀ ಬಸವಮೂರ್ತಿಯನ್ನು ಒಡೆದರಲ್ಲದೆ ಶ್ರೀ ವೀರಭದ್ರನ ಲಿಂಗಪೀಠವನ್ನು ಕದ್ದಿದ್ದರು. ಆ ಸಮಯದಲ್ಲಿ ನಾವು ಅಂಗಲಾಚಿ ಪರಿಪರಿಯಿಂದ ಬೇಡಿಕೊಂಡೆವು. ಎಲ್ಲಿಯೂ ನಮ್ಮ ಬಡ ಸಮಾಜಕ್ಕೆ ನ್ಯಾಯದೊರೆಯಲಿಲ್ಲ. ಇದು ಬರಿ ಮಹಾಗಾವದ ಪ್ರಶ್ನೆಯಲ್ಲ, ಇಡಿ ನಿಜಾಮು ಹಿಂದುಗಳು ಗೋಳಾಡುವದಿದೆ. ಇತ್ತ ಸರಕಾರದವರು ನಿಜಾಮದ ಹಿಂದುಗಳು ಲಕ್ಷಕೊಡಬೇಕು.

ಸೆಕ್ರೆಟರಿ— 'ತರುಣ ಸಂಘ.'

---

—ಓರಿಸಾ ಪ್ರಾಂತ ಅಸೆಂಬ್ಲಿಯಲ್ಲಿ ವ್ಯಭಿಚಾರ ಪ್ರತಿಬಂಧನೆ ಮತ್ತು ಅವ್ಯವಸ್ಥೆಯ ಆಹಾರ ವಿಕ್ರಯಕ್ಕೆ ತಡೆಯನ್ನುಂಟು ಮಾಡುವ ಎರಡು ಬಿಲ್ ತೀರ್ಮಾನಿಸಲ್ಪಟ್ಟಿವೆ.

---



---

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರ, ದಾಕ್ಷಿಣ್ಯಪರನಾನಲ್ಲ, ಲೋಕವಿರೋಧಿ, ಶರಣನಾರಿಗೂ ಅಂಜುವವನಲ್ಲ!
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೪ | ಆಲಮಟ್ಟಿ- ಸೋಮವಾರ ತಾರೀಖು ೧೯ ನೆಯ ಸಪ್ಟೆಂಬರ್ ೧೯೩೮. | ಸಂಚಿಕೆ ೬ |
|---|---|---|

ಜನಸೇವೆಯೇ ದೇವರಸೇವೆ.

## ಯುರೋಪದಲ್ಲಿ ಯುದ್ಧ ಜ್ವಾಲೆ?

ಝೆಕ್ ಸರಕಾರವು ಸುಡೇಟಿಯನ್ ಜರ್ಮನ್‌ರ ಪ್ರಮುಖನನ್ನು ಕೈಸೆರೆಮಾಡಿ ಎಲ್ಲರನ್ನೂ ಶಸ್ತ್ರ ವಿಹೀನರನ್ನಾಗಿ ಮಾಡಬೇಕೆಂದು ಆಜ್ಞಾಪಿಸಿರುವುದಾಗಿ ಸುದ್ದಿ.

ಝೆಕ್ ಪ್ರಜೆಗಳಲ್ಲಿ ೨೩ ಜನರನ್ನು ಜರ್ಮನ್ ಸರಕಾರವು ಕೈಸೆರೆ ಮಾಡಿದೆಯೆಂದು ಸುದ್ದಿ.

## ಆಸಾಮುದ ಮಂತ್ರಿಮಂಡಲದಲ್ಲಿ ಕಾಂಗ್ರೆಸ್ ಸೇರಿತು.

ಆಸಾಮು ಪ್ರಾಂತದಲ್ಲಿ ಸಮ್ಮಿಶ್ರ ಮಂತ್ರಿಮಂಡಲವು ತಾ. ೧೭-೯-೩೮ ನೆಯ ದಿನ ಏರ್ಪಟ್ಟಿತು. ಕಾಂಗ್ರೆಸ್ ಪಕ್ಷದ ಶ್ರೀ. ಗೋಪಿನಾಥರು ಮುಖ್ಯ ಮಂತ್ರಿಗಳಾದರು.

ದೇಹವೇ ದೇವಾಲಯ.



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೮. | ಆಲಮಟ್ಟಿ-ಸೋಮವಾರ ತಾರೀಖು ೧೯ ನೆಯ ಸಪ್ಟೆಂಬರ್ ೧೯೩೮. | ಸಂಚಿಕೆ ೬.


## ಮಹತ್ವದ ಸುದ್ದಿಗಳು.

—ಕಳೆದ ವಾರ ಆಸಾಮ ಶಾಸನ ಸಭೆಯ ಮುಂದೆ ಶಾಸನ ಸಭೆಯಲ್ಲಿಯ ಕಾಂಗ್ರೆಸ್ ಪಕ್ಷದ ಮುಂದಾಳುಗಳಾದ ಶ್ರೀ. ಬಾರ್ಡೋಲಾಯಿಯವರು ಅಧಿಕಾರದಲ್ಲಿದ್ದ ಶ್ರೀ. ಸಾದುಲ್ಲಾ ಖಾನರವರ ಮಂತ್ರಿಮಂಡಲದ ವಿರುದ್ಧ ಅವಿಶ್ವಾಸದ ಗೊತ್ತುವಳಿಯನ್ನು ತಂದುದರಿಂದ ಅದು ತೀರ್ಮಾನವಾಗುವುದೆಂದು ಭಾವಿಸಿ ಮಂತ್ರಿಮಂಡಳದವರು ರಾಜೀನಾಮೆಕೊಟ್ಟರು. ಕಾಂಗ್ರೆಸ್ಸಿನವರು ಸಂಮಿಶ್ರ ಮಂತ್ರಿಮಂಡಳವನ್ನು ರಚಿಸಲು ಪ್ರಯತ್ನಿಸುತ್ತಿದ್ದಾರೆ. ಶ್ರೀ ಅಬ್ದುಲ್ ಕಲಂ ಅಜಾದರವರೂ ವಿಚಾರವಿನಿಮಯಮಾಡಲು ಆಸಾಮಕ್ಕೆ ತೆರಳಿದ್ದಾರೆ.

—ಮಧ್ಯಪ್ರಾಂತದ ಸುಮಾರು ೮ ಸಾವಿರ ಮುಸಲ್ಮಾನರು ವಿದ್ಯಾಮಂದಿರದ ಬಗ್ಗೆ ತಮ್ಮ ನಿಷೇಧವನ್ನು ವ್ಯಕ್ತಮಾಡುವುದಕ್ಕಾಗಿ ಕರೇ ನಿಶಾನೆಗಳ ಒಂದು ಮೆರವಣಿಗೆಯನ್ನು ಹೊರಡಿಸಿದ್ದರು. ಮುಖ್ಯ ಮಂತ್ರಿಗಳು ಮೆರವಣಿಗೆಯಲ್ಲಿದ್ದ ಮುಸಲ್ಮಾನ್ ಮುಂದಾಳುಗಳನ್ನು ಕಂಡು ಮುಸಲ್ಮಾನರಿಗೆ ವಿದ್ಯಾಮಂದಿರವೆಂಬ ಹೆಸರು ಬೇಡಾಗಿದ್ದರೆ ಧನಿಕರು ಮುಂದೆ ಬಂದು ಉರ್ದು ಶಾಲೆಗಳನ್ನು ಸ್ಥಾಪಿಸಿ ಬೇಕಾದ ಹೆಸರನ್ನಿಟ್ಟುಕೊಳ್ಳಬಹುದೆಂದು ತಿಳಿಸಿದರು.

—ಜರೂಸಲೇಮದಲ್ಲಿ ಅರಬರಿಗೂ ಯಹುದಿಗಳಿಗೂ ದಂಗೆಯಾಗುತ್ತಲೇ ಇದೆ. ಈ ದಂಗೆಯ ಫಲವಾಗಿ ಜರೂಸಲೇಮಿನಲ್ಲಿ ೧೦ ಜನ ಅರಬರೂ ೨ ಜನ ಯಹುದಿಗಳೂ ಕೊಲ್ಲಲ್ಪಟ್ಟಿದ್ದಾರೆ. ಅನೇಕರಿಗೆ ಗಾಯಗಳಾಗಿವೆ.

—ಡಾ. ಅಟಲರವರ ನೇತೃತ್ವದಲ್ಲಿ ಚೀನಕ್ಕೆ ತೆರಳಿದ ಕಾಂಗ್ರೆಸ್ ಶುಶ್ರೂಷಾಪಥಕವು ಪೆನಾಂಗನಲ್ಲಿ ಇಳಿದಾಗ ಚೀನಿಯರು ಪ್ರಚಂಡವಾದ ಸ್ವಾಗತವನ್ನಿತ್ತರು. ಪೆನಾಂಗನಲ್ಲಿರುವ ಚೀನಿ ಸಹಾಯಕನಿಧಿಯ ಅಧ್ಯಕ್ಷರಾದ ಮಿ. ಜಂಗ್ ಕೆಂಗ್‌ರವರು ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನವರು ಸಹಾನುಭೂತಿಪರವಾಗಿ ಶುಶ್ರೂಷಾಪಥಕವನ್ನು ಕಳುಹಿಸಿದುದು ಚೀನಿಯರಲ್ಲಿ ನವಚೈತನ್ಯವನ್ನುಂಟುಮಾಡಿದೆಯೆಂದು ಶ್ಲಾಘಿಸಿದರು.

—ಕೊಲೆಸುಲಿಗೆ ಮೊದಲಾದ ಪ್ರಕರಣಗಳ ವಿಚಾರಣೆ ನಡೆಸಿದಾಗ ಅದಕ್ಕೆ ಸಂಬಂಧಪಟ್ಟ ಪಕ್ಷದವರಿಂದ ಇಲ್ಲವೆ ಅವರ ಮಿತ್ರರಿಂದ ಯಾವದೇ ರೀತಿಯ ಸತ್ಕಾರವನ್ನು ಹೊಂದಲಾಗದೆಂದೂ ಅಲ್ಲಿ ಒದಗಿಸಿದ ಪದಾರ್ಥಗಳ ಬಗ್ಗೆ ಹಣಕೊಟ್ಟು ರಸೀದಿ ಪಡೆಯಬೇಕೆಂದೂ ಎಲ್ಲ ಪೋಲಿಸ್ ಅಧಿಕಾರಿಗಳಿಗೆ ಮುಂಬೈ ಸರಕಾರದವರು ಎಚ್ಚರಿಕೆ ಕೊಟ್ಟಿದ್ದಾರೆ.

—ಆಸಾಮಿನಲ್ಲಿಯ ಶಾಂತಿಪುರ ಎಂಬಲ್ಲಿ ತಾ. ೩೧-೮-೩೮ ನೆಯ ದಿವಸ ಹಿಂದು ಮಿಶನ್ನ ಪರವಾಗಿ ಎರಡು ಜನ ಮುಸಲ್ಮಾನರಿಗೂ ಒಬ್ಬ ಮುಸಲ್ಮಾನ್ ಹೆಣ್ಣುಮಗಳಿಗೂ ಮತ್ತು ೨ ಜನ ಮುಸಲ್ಮಾನ್ ಹುಡುಗರಿಗೂ ಶುದ್ಧಗೊಳಿಸಿ ಹಿಂದು ಧರ್ಮದಲ್ಲಿ ತೆಗೆದುಕೊಂಡರು. ಈ ಶುದ್ಧಿಸಮಾರಂಭವನ್ನು ಶ್ರೀ. ಅವಲದಾಸ ಮತ್ತು ನಂದಕುಮಾರ ಎಂಬುವವರು ನೆರವೇರಿಸಿದರು. ೨೦೦ ವರೆಗೆ ಹಿಂದುಜನಗಳು ಸೇರಿದ್ದರು.

—ಸಿಂಧಪ್ರಾಂತದ ಅಲ್ಲಾಬಕ್ಷ ಮಂತ್ರಿಮಂಡಳದವರು ಪುನಃ ಎರಡು ಜನ ಮಂತ್ರಿಗಳನ್ನು ನಿಯಮಿಸಿ ಬಲ ಹೆಚ್ಚಿಸಿಕೊಂಡು ತಮ್ಮ ಸ್ಥಾನ ಭದ್ರಪಡಿಸಲು ಯೋಚಿಸುತ್ತಿದ್ದಾರೆ.

—ಬೆಂಗಳೂರಿನಿಂದ ಮದ್ರಾಸದ ವರೆಗಿನ ಪ್ರಯಾಣಿಕರಿಗೆ ಸೌಲಭ್ಯವನ್ನು ದೊರಕಿಸಿಕೊಡುವುದಕ್ಕಾಗಿ ಬೆಂಗಳೂರಿನ ಓರ್ವ ಸಂಸ್ಥೆಯವರು ವಿಮಾನ ಪ್ರಯಾಣದ ಬಗ್ಗೆ ಏರ್ಪಾಟುಮಾಡುತ್ತಿದ್ದಾರೆಂದು ತಿಳಿದುಬಂದಿದೆ.

—೧೦ ವರುಷಗಳ ಒಬ್ಬ ಹುಡುಗಿಯ ಲಗ್ನವಾದ ಬಗ್ಗೆ ಶಾರದಾ ಶಾಸನದ ಪ್ರಕಾರ ಮುಂಬೈ ಗಿರಗಾಂವ ಕೋರ್ಟಿನಲ್ಲಿ ಒಂದು ವ್ಯಾಜ್ಯ ಬಂದಿದ್ದಿತು. ನ್ಯಾಯಾಧೀಶರು ಹುಡುಗಿಯ ತಾಯಿತಂದೆಗಳಿಗೆ ೧೦೦ ರೂ. ಗಳ ಮತ್ತು ವರನಿಗೆ ೨೦೦ ರೂ. ಗಳ ದಂಡವನ್ನು ವಿಧಿಸಿದರು.

### ೨೦೦ ವರ್ಷಗಳಲ್ಲಿ

## ಮಾನವಜಾತಿ ನಷ್ಟವಾಗುವುದೆ?

**ವಿಜ್ಞಾನ ಶಾಸ್ತ್ರದ ಪ್ರಗತಿ.**

ವೈದ್ಯಕೀಯ ಶಾಸ್ತ್ರದಲ್ಲಿ ಇಲ್ಲಿಯವರೆಗೆ ಅತ್ಯದ್ಭುತವಾದ ಕ್ರಾಂತಿಕಾರಕ ಶೋಧಗಳಾಗಿವೆ. ಈಗಲೂ ಶೋಧಿಸುವ ಪ್ರಯತ್ನವು ಅವ್ಯಾಹತವಾಗಿ ನಡೆದಿರುತ್ತದೆ. ಮನುಷ್ಯನ ಶರೀರದಲ್ಲ ಅತಿ ಮಹತ್ವದ ಭಾಗಗಳಾದ ಹೃದಯ ಮತ್ತು ಮಿದುಳುಗಳನ್ನು ಕೃತ್ರಿಮವಾಗಿ ರಚನೆ ಮಾಡುವ ಅಗಾಧವಾದ ಶೋಧವನ್ನು ವಿಜ್ಞಾನ ಶಾಸ್ತ್ರಜ್ಞರು ಮಾಡುವುದರಲ್ಲಿಯೇ ತೊಡಗಿದ್ದಾರೆ. ಇವರ ಪ್ರಯತ್ನದಲ್ಲಿ ಯಶಸ್ಸು ಕೂಡಾ ಬರುತ್ತಾ ಇದೆಯೆಂಬ ಸುದ್ದಿಯನ್ನು ಓದುತ್ತಾ ಇದ್ದೇವೆ.

ಇಷ್ಟಿದ್ದರೂ ಜಗತ್ತಿನಲ್ಲಿ ಬೇನೆ ಬೇಸಂಕೆಗಳಿಗೇನೂ ಕೊರತೆಯಿಲ್ಲ. ಜಗತ್ತು ಇಂದು ಮರಣೋನ್ಮುಖ ಸ್ಥಿತಿಯಲ್ಲಿದೆಯೆಂದು ಹೇಳಿದರೂ ತಪ್ಪಾಗಲಾರದು. ಪ್ರತಿನಿತ್ಯವೂ ಹೊರಡುವ ರಾಮಬಾಣ ಔಷಧಗಳಿಗೆ ಬಲಿ ಬೀಳದ ರೋಗಗಳೂ ಹೆಚ್ಚಾಗುತ್ತಾ ಇವೆ. ಆದರೂ ಹೊಸ ಹೊಸ ಡಾಕ್ಟರುಗಳ ಅದ್ಭುತ ಶೋಧಗಳನ್ನು ನೋಡಿ ಕೆಲವರು ಸ್ವಲ್ಪ ದಿವಸಗಳಲ್ಲಿಯೇ ಜಗತ್ತಿನ ಬೇನೆ ಬೇಸಂಕೆಗಳೆಲ್ಲವೂ ಗುಣವಾಗಿ 'ಸರ್ವೇಪಿ ಸುಖಿನಃ ಸಂತು, ಸರ್ವೆ ಸಂತು ನಿರಾಮಯ' ಎಂಬ ಪೂರ್ವಜರ ವಚನದ ಅನುಭವವು ಜಗತ್ತಿನಲ್ಲಿ ಖಂಡಿತ ಬರುವುದೆಂದು ತಿಳಿದುಕೊಂಡಿದ್ದಾರೆ. ಆದರೆ ವಸ್ತುಸ್ಥಿತಿಯು ಮಾತ್ರ ಹೀಗಿಲ್ಲ.

**ಪ್ರತಿ ದಿವಸ ಒಂದು ಲಕ್ಷ ಜನರ ಮರಣ.**

ಜಗತ್ತಿನ ಜನಸಂಖ್ಯೆಯು ಒಟ್ಟು ೧೭೫ ಕೋಟಿಯ ವರೆಗಿದೆ. ಬೇರೆ ಬೇರೆ ದೇಶಗಳ ವೈದ್ಯಕೀಯ ವರದಿಗಳ ಮೇಲಿಂದ ಯಾವಾಗಲೂ ೭ ಕೋಟಿ ಜನರು ಒಂದಿಲ್ಲೊಂದು ರೋಗದಿಂದ ಬಳಲುತ್ತಿದ್ದಾರೆಂದು ಕಂಡುಬರುತ್ತದೆ. ಮತ್ತು ಪ್ರತಿವರ್ಷ ೩ ಕೋಟಿ ೫೦ ಲಕ್ಷ ಜನರು ಸಾಯುತ್ತಿದ್ದಾರೆ. ಎಂದರೆ ಪ್ರತಿ ದಿವಸ ೧೦೦೦೦೦ ಪ್ರತಿಯೊಂದು ತಾಸಿಗೆ ೪೦೦೦ ಇಲ್ಲವೆ ಪ್ರತಿ ನಿಮಿಷಕ್ಕೆ ೬೭ ಜನರು ಸಾಯುತ್ತಿದ್ದಾರೆ. ಕಳೆದ ಮಹಾಯುದ್ಧದಲ್ಲಿ ಮರಣ ಹೊಂದಿದವರಿಗಿಂತಲೂ ಹೆಚ್ಚಾಗಿ ಪ್ರತಿವರ್ಷ ಯುರೋಪಖಂಡದಲ್ಲಿ ಜನಗಳು ಸಾಯುತ್ತಿದ್ದಾರೆ. ಅಮೇರಿಕೆಯಲ್ಲಿ ವಾರ್ಷಿಕ ಮೃತ್ಯು ಸಂಖ್ಯೆಯು ೧೫೦೦೦೦೦ ಇದ್ದು ೪೫೦೦೦೦೦ ಸ್ತ್ರೀ ಪುರುಷರು ಯಾವಾಗಲೂ ಬೇನೆಯಿಂದ ಬಳಲುತ್ತಿರುತ್ತಾರೆ. ಆಸ್ಟ್ರೇಲಿಯಾದಲ್ಲಿಯ ಒಂದು ಸಂಸ್ಥಾನದಲ್ಲಾದರೋ ಕಾಲುಭಾಗಕ್ಕಿಂತ ಹೆಚ್ಚಾಗಿ ಅಲ್ಲಿಯ ನಾಗರಿಕರು ಆಸ್ಪತ್ರೆಗಳಲ್ಲಿಯೇ ಕಾಲ ಕಳೆಯುತ್ತಿದ್ದಾರೆ.

ಈಗ ಜ್ವರ, ಪಿತ್ತಜ್ವರ, ಮಾರಿಕಾ, ಮಲೇರಿಯಾ, ದೇವಿ ಮೊದಲಾದ ರೋಗಗಳಿಂದಾಗುವ ಮರಣ ಸಂಖ್ಯೆಯು ಮಾತ್ರ ಸ್ವಲ್ಪ ತಗ್ಗಿರಬಹುದು. ಬಾಲಮೃತ್ಯು ಸಂಖ್ಯೆಯು ಕಡಿಮೆಯಾಗುತ್ತಾ ಇದೆಯೆಂಬುದೂ ನಿಜ. ಆದರೆ ಇಂದು ಮನುಷ್ಯನಿಗಿರುವ ಬೇನೆ ಬೇಸಂಕೆಗಳಷ್ಟು ಜಗತ್ತಿನ ಯಾವ ಕಾಲದಲ್ಲಿಯೂ ಇದ್ದಿರಲಿಲ್ಲ! ೫೦ ವರ್ಷಗಳ ಹಿಂದೆ ನಮ್ಮ ದೇಶದಲ್ಲಿಯೇ ನೂರು ವರ್ಷಗಳ ಮುಪ್ಪಿನವರು ಹೆಚ್ಚಾಗಿ ಕಾಣುತ್ತಿದ್ದರು. ಆದರೆ ಇಂದು ಶತಾಯುಷಿಗಳ ಪ್ರಮಾಣ ತುಂಬಾ ಕಡಿಮೆಯಾಗಿದೆಯೆಂಬುದು ಎಲ್ಲರಿಗೂ ಗೊತ್ತು. ಇದರ ಮೇಲಿಂದ ಜನಗಳ ಆಯುಷ್ಯ ಪ್ರಮಾಣವು ತುಂಬಾ ಕಡಿಮೆಯಾಗುತ್ತಿದೆಯೆಂಬುದೂ ಕಂಡುಬರುತ್ತದೆ. ೧೦ ರಲ್ಲಿ ಮೂರು ಜನರು ಮಾತ್ರ ನಿರೋಗಿಗಳು.

ಈ ಶಾಸ್ತ್ರೀಯ ಯುಗದಲ್ಲಿ ನಮ್ಮ ಕೆಲವು ಬೇನೆ ಬೇಸಂಕೆಗಳು ಕಡಿಮೆಯಾಗಿದ್ದರೂ ಪ್ರತಿಯೊಂದು ಸುಧಾರಿಸಿದ ರಾಷ್ಟ್ರವು ಶರೀರಸಂಪತ್ತಿಲ್ಲದೆ ಒಂದಿಲ್ಲೊಂದು ಹೊಸ ಹೊಸ ಬೇನೆಗಳಿಂದ ನರಳುತ್ತಾ ಇದೆ. ಮಹಾಯುದ್ಧದ ಕಾಲಕ್ಕೆ ಸೈನ್ಯದಲ್ಲಿ ಸೇರಿಸಿಕೊಳ್ಳುವದಕ್ಕಾಗಿ ಯಾವ ಲಕ್ಷಾವಧಿ ಜನಗಳ ವೈದ್ಯಕೀಯ ಪರೀಕ್ಷೆ ಮಾಡುವುದರಲ್ಲಿ ಬಂದಿತೋ ಅವರಲ್ಲಿ ಮೂರರಲ್ಲಿ ಒಂದು ಪಾಲಿನಷ್ಟು ಜನಗಳು ಶಾರೀರಿಕ ದೋಷಗಳಿಂದ ಸೈನ್ಯದಲ್ಲಿ ಸೇರಿಸಿಕೊಳ್ಳಲ್ಪಡಲಿಲ್ಲ. ಇವರೆಲ್ಲರೂ ೨೦ ರಿಂದ ೩೦ ವರ್ಷಗಳೊಳಗಿನವರೇ ಇದ್ದರೆಂಬುದೂ ಲಕ್ಷಿಸತಕ್ಕ ಸಂಗತಿಯಾಗಿದೆ. ಇಂಗ್ಲಂಡಿನಲ್ಲಿಯೂ ಸೈನ್ಯ ತುಂಬುವುದಕ್ಕಾಗಿ ಜನಗಳನ್ನು ಪರೀಕ್ಷಿಸಿದಾಗ ಒಂಬತ್ತು ಜನಗಳಲ್ಲಿ ೩ ಜನರು ಮಾತ್ರ ನಿರೋಗಿಗಳಾಗಿದ್ದುದು ಕಂಡುಬಂದಿದೆ. ಉಳಿದ ೬ ಜನರಲ್ಲಿ ೨ ಜನ ಸಾಧಾರಣ ರೋಗಿಗಳೂ, ೩ ಜನ ಸಂಪೂರ್ಣ ರೋಗಿಗಳೂ, ಒಬ್ಬರು ಮಾತ್ರ ಅಸಾಧ್ಯ ರೋಗದಿಂದ ಬಳಲುವವರೂ ಇದ್ದರು. ಜ್ವರ, ಕಾಲರಾ, ದೇವಿ ಮೊದಲಾದ ರೋಗಗಳು ಇತ್ತ ಕಡಿಮೆಯಾಗುತ್ತಿದ್ದರೂ ಹೃದಯರೋಗ, ಮಧುಮೇಹ, ಕ್ಯಾನ್ಸರ್ ಮೊದಲಾದ ರೋಗಗಳಿಂದ ಬಳಲುವವರ ಸಂಖ್ಯೆಯು ವಿಪರೀತ ಬೆಳೆಯತೊಡಗಿದೆ. ಕಳೆದ ೩೦ ವರ್ಷಗಳಲ್ಲಿಯೇ ಈ ರೋಗಗಳಿಂದ ಬಳಲುವವರ ಸಂಖ್ಯೆಯು ಎರಡು ಪಟ್ಟು ಹೆಚ್ಚಿದೆ.

**ಮಾನಸಿಕ ರೋಗದ ಪ್ರಾಬಲ್ಯ.**

ಮಾನಸಿಕ ರೋಗದ ಪ್ರಾಬಲ್ಯವೂ ಜಗತ್ತಿನಲ್ಲಿ ಭಯಂಕರವಾಗಿದೆ. ಕಳೆದ ೧೦ ವರ್ಷಗಳಲ್ಲಿ ಹುಚ್ಚರ ಸಂಖ್ಯೆ ಬೆಳೆದ ಪ್ರಮಾಣವನ್ನು ನೋಡಿದರೆ ಮತ್ತು ಇದೇ ಪ್ರಮಾಣದಂತೆ ಬೆಳೆಯುತ್ತ ಹೋದರೆ ೨೦೦ ವರ್ಷಗಳಲ್ಲಿಯೇ ಹುಚ್ಚರ ಬಗ್ಗೆ ಆರೈಕೆ ಮಾಡುವ ಸುಬುದ್ಧ ಜನಗಳೇ ಇರಲಾರರೆಂದು ಒಬ್ಬ ಶಾಸ್ತ್ರಜ್ಞನು ಭವಿಷ್ಯ ನುಡಿದಿದ್ದಾನೆ. ಜಗತ್ತಿನಲ್ಲಿ ಮಾದಕ ಪದಾರ್ಥಗಳ ಸೇವನೆಯು ಭಯಂಕರ ಬೆಳೆದುದರಿಂದಲೇ ಜನಗಳಲ್ಲಿ ಮಾನಸಿಕ ದುರ್ಬಲತೆಯು ಹೆಚ್ಚುತ್ತಾ ಇದೆ. ಇಂಗ್ಲಂಡಿನಲ್ಲಿ ಜನಗಳಿಗೆ ಹಾಲಿನ ಅವಶ್ಯಕತೆಯು ಎಷ್ಟಿದೆಯೋ ಅದಕ್ಕಿಂತಲೂ ಹೆಚ್ಚಾಗಿ ಮೂರುಕೋಟಿ ಗ್ಯಾಲನ್ ಬೀಯರ್ ಬೇಕಾಗುತ್ತದೆ. ಈ ಬೀಯರ್‌ಗಾಗಿ ಪ್ರತಿ ವರ್ಷ ೪೦೦೦೦೦೦೦೦ ಪೌಂಡು ಹಣವನ್ನು ವೆಚ್ಚ ಮಾಡುತ್ತಿದ್ದಾರೆ. ಅಲ್ಲಿ ಶಿಕ್ಷಣಕ್ಕಾಗಿ ವೆಚ್ಚಮಾಡುವ ಹಣದ ನಾಲ್ಕು ಪಟ್ಟು ಬೀಯರ್‌ಗಾಗಿ ಜನಗಳು ವೆಚ್ಚ ಮಾಡುತ್ತಿದ್ದಾರೆ. ಫ್ರಾನ್ಸ ಇಟಲಿಗಳಲ್ಲಿಯೂ ಇದೇ ಸ್ಥಿತಿ ಇದೆ. ದೊಡ್ಡವರು ನೀರಿಗಿಂತಲೂ ಹೆಚ್ಚಾಗಿ ಸೆರೆಯನ್ನೂ ಸಣ್ಣವರು ಹಾಲಿನಕ್ಕಿಂತಲೂ ಹೆಚ್ಚಾಗಿ ಸೆರೆಯನ್ನೂ ಕುಡಿಯುತ್ತಿದ್ದಾರೆ.

**ಒಂದು ಅಬ್ಜ ಪೌಂಡಿನ ಸೆರೆ.**

ಜರ್ಮನಿಯಲ್ಲಿ ಸೆರೆ ಕುಡಿಯುವ ಚಟವು ಎಲ್ಲಕ್ಕೂ ಹೆಚ್ಚಾಗಿದೆ. ಅಲ್ಲಿಯ ಜನರು ಸೆರೆಯನ್ನು ಸಣ್ಣ ಸಣ್ಣ ಬಾಟ್ಲಗಳಲ್ಲಿ ಸೇವಿಸದೆ ಒಮ್ಮೆಲೇ ಗ್ಯಾಲನ್ನಿನ ಪಾತ್ರೆಗಳನ್ನೇ ಬಾಯಿಗೆ ಹಚ್ಚುವರು! ಅಮೇರಿಕೆಯಲ್ಲಿ ಕೆಲವು ದಿವಸಗಳ ವರೆಗೆ ಮದ್ಯಪಾನಕ್ಕೆ ಪ್ರತಿಬಂಧವನ್ನು ಮಾಡಿದ್ದರು. ಆದರೆ ೧೯೩೩ ನೆಯ ಇಸ್ವಿಯಿಂದ ಮದ್ಯಪಾನ ಪ್ರತಿಬಂಧ ಶಾಸನವನ್ನು ತೆಗೆದು ಹಾಕಿದರು. ಅಮೇರಿಕೆಯಲ್ಲಿ ಪ್ರತಿವರ್ಷ ೧೦೦೦೦೦೦೦೦೦ ಪೌಂಡು ಬೆಲೆಯ ಸೆರೆಯನ್ನು ಜನಗಳು ಸೇವಿಸುತ್ತಿದ್ದಾರೆ.

ಸೆರೆಯಂತೆಯೇ ತಂಬಾಕ, ಚಹಾ, ಕಾಫಿ ಮೊದಲಾದ ಅಪಾಯಕಾರಕ ಪದಾರ್ಥಗಳ ಸೇವನೆಯೂ ಜನಗಳಲ್ಲಿ ತುಂಬಾ ಹೆಚ್ಚುತ್ತಾ ಇದೆ. ಇದೇ ಪ್ರಕಾರ ಮಾದಕ ಪದಾರ್ಥಗಳ ಸೇವನೆ ಬೆಳೆಯುತ್ತಾ ಹೋದರೆ ಕೆಲವು ದಿವಸಗಳಲ್ಲಿಯೇ ಜಗತ್ತೇ ಒಂದು ಆಸ್ಪತ್ರೆಯಾಗಿ ಪರಿಣಮಿಸಬಹುದು. ಅದಕ್ಕಾಗಿಯೇ ಸುಜ್ಞರು ಜಗತ್ತಿನಲ್ಲಿಯ ಸೆರೆ ಸೇವನೆಯ ಪ್ರಮಾಣವನ್ನು ನೋಡಿ ಇನ್ನು ೨೦೦ ವರ್ಷಗಳಲ್ಲಿಯೇ ಮಾನವ ವಂಶವು ಎಲ್ಲಿ ನಷ್ಟವಾಗಿ ಹೋಗುವದೋ ಎಂದು ಚಿಂತಿಸುತ್ತಿದ್ದಾರೆ.

# ಸ್ವಿತ್ಸರ್ಲಂಡಿನ ವೈಶಿಷ್ಟ್ಯ.

## ೪೦ ಲಕ್ಷ ಜನಗಳ ಸ್ವತಂತ್ರ ರಾಷ್ಟ್ರ.

ಸ್ವಿತ್ಸರ್ಲಂಡವು ಯುರೋಪಿನ ನಂದನ ವನವಾಗಿದೆ. ನೈಸರ್ಗಿಕ ರಮಣೀಯವಾದ ಸೃಷ್ಟಿ ಸೌಂದರ್ಯವಲ್ಲದೆ ಅನೇಕ ವಿಷಯಗಳಲ್ಲಿಯೂ ಅದು ತನ್ನ ವೈಶಿಷ್ಟ್ಯವನ್ನು ತೋರಿಸುತ್ತಾ ಇದೆ. ಆ ಚಿಕ್ಕ ಸ್ವತಂತ್ರ ರಾಷ್ಟ್ರದ ಕ್ಷೇತ್ರಫಲವು ೧೫೯೪೦ ಚದುರು ಮೈಲುಗಳಿದ್ದು ಜನಸಂಖ್ಯೆಯು ೪೦ ಲಕ್ಷ ಇದೆ. ಎಂದರೆ ಸಾಧಾರಣ ಸಿಂಧ ಪ್ರಾಂತದಷ್ಟಿದೆ. ಇಷ್ಟು ಸಣ್ಣ ದೇಶದಲ್ಲಿಯೂ ೧೦ ಸಾವಿರಕ್ಕಿಂತಲೂ ಹೆಚ್ಚಾದ ಜನವಸತಿಯುಳ್ಳ ೩೦ ಕ್ಕಿಂತಲೂ ಹೆಚ್ಚಾಗಿ ಪಟ್ಟಣಗಳಿವೆ. ಯುರೋಪಿನಲ್ಲಿಯೇ ಅತ್ಯುನ್ನತವಾದ ಆಲ್ಪಸ್ ಪರ್ವತವು ಈ ದೇಶದಲ್ಲಿದೆ. ಒಂದು ಐದನೆಯ ಅಂಶದಷ್ಟು ಪ್ರದೇಶವು ಗುಡ್ಡುಗಾಡುಗಳಿಂದಲೇ ತುಂಬಿಹೋಗಿದೆ. ಉಳಿದ ಭೂಭಾಗವು ಚೆನ್ನಾಗಿದ್ದರೂ ಅಲ್ಲಿಯ ಒಕ್ಕಲತನದಿಂದ ಆ ೪೦ ಲಕ್ಷ ಜನಗಳ ಪೋಷಣೆಯಾಗುವುದು ಶಕ್ಯವಿಲ್ಲ. ಖನಿಜ ಸಂಪತ್ತಾದರೂ ಈ ದೇಶದಲ್ಲಿರುವುದಿಲ್ಲ. ಕಲ್ಲಿದ್ದಲಿ, ಕಬ್ಬಿಣ, ಎಣ್ಣೆ, ಮೊದಲಾದ ಯಾವ ಪದಾರ್ಥಗಳೂ ಅಲ್ಲಿ ದೊರೆಯದಿದ್ದುದರಿಂದ ಒಂದಾದರೂ ಗಣಿಗಳಿಲ್ಲ. ಸ್ವಿತ್ಸರ್ಲಂಡಿಗೆ ಒಂದಾದರೂ ವಸಾಹತ ಇಲ್ಲ. ಸ್ವಂತ ಒಡೆತನದ ಸಮುದ್ರ ದಂಡೆಯೂ ಇದಕ್ಕಿಲ್ಲ. ಇದರ ಮೇಲಿಂದ ಯಾರಾದರೂ ಈ ದೇಶದಲ್ಲಿರುವ ಜನಗಳೆಲ್ಲರೂ ದುರ್ದೈವಿಗಳೂ ಬಡತನದಿಂದ ಬಳಲುವವರೂ ಆಗಿರಬಹುದೆಂದು ಊಹಿಸಬಹುದು. ಆದರೆ ಅಲ್ಲಿಯ ಸ್ಥಿತಿಯು ಮಾತ್ರ ಹಾಗಿರುವುದಿಲ್ಲ. ಇತರ ಯಾವದೇ ದೇಶಕ್ಕಿಂತಲೂ ಅಲ್ಲಿಯ ಜನಗಳು ತುಂಬಾ ಸುಖದಿಂದಿದ್ದಾರೆ. ಅಮೇರಿಕೆಯು ಜಗತ್ತಿನಲ್ಲಿಯೇ ಅತಿ ಸಂಪತ್ತುಳ್ಳ ರಾಷ್ಟ್ರವೆಂದು ಪರಿಗಣಿಸಲ್ಪಡುತ್ತಿದ್ದರೂ ೧೯೩೮ ನೆಯ ಇಸ್ವಿಯಲ್ಲಿ ಪ್ರತಿಯೊಬ್ಬ ಅಮೇರಿಕೆಯ ಮನುಷ್ಯನ ಉತ್ಪನ್ನವು ೩೯೮ ಡಾಲರ್ ಮಾತ್ರ ಇದ್ದಿತು. ಆದರೆ ಸ್ವಿತ್ಸರ್ಲಂಡಿನಲ್ಲಾದರೋ ೧೯೩೮ ನೆಯ ಇಸ್ವಿಯಲ್ಲಿಯೇ ಪ್ರತಿ ಮನುಷ್ಯನ ಉತ್ಪನ್ನವು ೩೧೩೬ ಡಾಲರ್ ಇದ್ದಿತು. ಅಮೇರಿಕೆಯಲ್ಲಿ ನಿರುದ್ಯೋಗಿಗಳ ಸಂಖ್ಯೆಯೇನೂ ಕಡಿಮೆಯಿಲ್ಲ. ಆದರೆ ಸ್ವಿತ್ಸರ್ಲಂಡಿನಲ್ಲಿ ನಿರುದ್ಯೋಗಿಗಳ ಸಂಖ್ಯೆಯು ೧೦೦ ಕ್ಕೆ ೨ ರಂತೆ ಮಾತ್ರ ಇದೆ.

ಪರ್ವತಗಳ ಸಾಲುಗಳಿಂದಲೂ ನದಿಗಳಿಂದಲೂ ಈ ದೇಶವು ಅನೇಕ ಭಾಗಗಳಾಗಿ ವಿಂಗಡಿಸಲ್ಪಟ್ಟಿದೆ. ನೂರಾರು ವರ್ಷಗಳಿಂದಲೂ ಸ್ವಿಸ್ ಜನಗಳು ರಾಷ್ಟ್ರೀಯ ಸ್ವಾತಂತ್ರ್ಯವನ್ನು ಉಪಭೋಗಿಸುತ್ತಿರುವುದರಿಂದ ಶೂರರಾಗಿದ್ದಾರೆ. ಶೂರರಾಗಿದ್ದರೂ ಎರಡನೆಯವರ ಮೇಲೆ ಏರಿಹೋಗುವ ಇಲ್ಲವೆ ಯಾರನ್ನಾದರೂ ಕೆಣಕುವ ಸ್ವಭಾವ ಇವರಲ್ಲಿಲ್ಲ. ಈ ದೇಶವು ಅನೇಕ ಭಾಗಗಳಾಗಿ ವಿಂಗಡಿಸಲ್ಪಟ್ಟಿದ್ದರೂ ಎಲ್ಲರಲ್ಲಿಯೂ ಸ್ವಾತಂತ್ರ್ಯಪ್ರೇಮವು ತುಂಬಿಹೋಗಿರುವುದರಿಂದ ಅದೊಂದು ಜಗತ್ತಿನಲ್ಲಿ ಇಂದು ಮಾದರಿಯ ರಾಷ್ಟ್ರವಾಗಿದೆ. ಇವರು ಲೋಕಸತ್ತಾತ್ಮಕದ ಉಪಾಸಕರಾಗಿದ್ದು ಕಳೆದ ೭ ಶತಮಾನಗಳಿಂದಲೂ ಸಂಯುಕ್ತ ಪದ್ಧತಿಯಿಂದ ರಾಜ್ಯಭಾರವನ್ನು ನಿರ್ವಹಿಸುತ್ತಾ ಬಂದಿದ್ದಾರೆ. ಸ್ವಿತ್ಸರ್ಲಂಡಿನ ಸಂಘಟಿತ ರಾಜ್ಯವ್ಯವಸ್ಥೆಯು ಅಮೇರಿಕೆಯ ರಾಜ್ಯಘಟನೆಯನ್ನವಲಂಬಿಸಿದೆ. ಫೆಡರಲ್ ಶಾಸನಮಂಡಳದಲ್ಲಿ ೨ ಶಾಖೆಗಳಿದ್ದು ಮೊದಲನೆಯ ಶಾಖೆಯಲ್ಲಿ ಪ್ರತಿಯೊಂದು ಭಾಗದಿಂದ ಎರಡೆರಡರಂತೆ ಸಭಾಸದರನ್ನು ನಿಯಮಿಸಿಕೊಳ್ಳುತ್ತಾರೆ. ಮತ್ತು ಎರಡನೆಯದರಲ್ಲಿ ಪ್ರತಿ ಇಪ್ಪತ್ತು ಸಾವಿರ ಜನಸಂಖ್ಯೆಗೆ ಒಬ್ಬರಂತೆ ಪ್ರತಿನಿಧಿಗಳನ್ನು ಆರಿಸಿಕೊಳ್ಳುತ್ತಾರೆ. ಫೆಡರಲ್ ಕೋರ್ಟಿನ ನ್ಯಾಯಾಧೀಶರನ್ನೂ ಶಾಸನಮಂಡಳದವರೇ ನಿಯಮಿಸುತ್ತಾರೆ. ಕಾರ್ಯಕಾರೀ ಅಧಿಕಾರವನ್ನು ಫೆಡರಲ್ ಅಸೆಂಬ್ಲಿಯವರು ನಿಯಮಿಸಿದ ೭ ಜನಗಳ ಒಂದು ಸಮಿತಿಯ ಕಡೆಗೆ ಒಪ್ಪಿಸುತ್ತಾರೆ. ಪ್ರತಿಯೊಬ್ಬ ಪ್ರಧಾನರೂ ಸ್ವತಂತ್ರರಿರುತ್ತಾರೆ.

ಸ್ವಿಸ್ ಜನಗಳು ತಮ್ಮ ರಾಜಕೀಯ ಸ್ವಾತಂತ್ರ್ಯಕ್ಕಾಗಿ ಅಲ್ಲದಿದ್ದರೂ ಉದರ ನಿರ್ವಾಹದದೆಶೆಯಿಂದ ಪರಿಸ್ಥಿತಿಯೊಡನೆ ಹೋರಾಟ ಮಾಡಬೇಕಾಗಿದೆ. ಯಾವಾಗಲೂ ಅತ್ಯಂತ ಶ್ರಮವಹಿಸಿ ಕಾರ್ಯ ಮಾಡುವುದೇ ಅವರ ಸ್ವಭಾವವಾಗಿಬಿಟ್ಟಿದೆ. ಅಲ್ಲಿ ಯಾವ ಪದಾರ್ಥವೂ ದೊಡ್ಡ ಪ್ರಮಾಣದಲ್ಲಿ ಸಿದ್ಧವಾಗುತ್ತಾ ಇರುವುದಿಲ್ಲ. ಅದಕ್ಕಾಗಿಯೇ ಅವರು ಸಿದ್ಧವಾಗುವ ಪದಾರ್ಥಗಳನ್ನೇ ಹೆಚ್ಚೆಚ್ಚು ಆಕರ್ಷಕವಾಗುವಂತೆ ಸುಂದರವಾಗಿ ಮಾಡುತ್ತಿದ್ದಾರೆ. ಇಲ್ಲಿ ದೊಡ್ಡ ದೊಡ್ಡ ಕಾರ್ಯಾಲಯಗಳಿದ್ದರೂ ಸಣ್ಣ ಸಣ್ಣ ಕಾರ್ಯಾಲಯಗಳು ಮಾತ್ರ ವಿಪುಲವಾಗಿವೆ. ಗಡಿಯಾರಗಳನ್ನು ಸಿದ್ಧಗೊಳಿಸುವ ಉದ್ಯೋಗವು ದೇಶದ ತುಂಬೆಲ್ಲ ನಡೆಯುತ್ತಲಿದೆ. ಒಂದೊಂದು ಕಾರ್ಯಾಲಯದಲ್ಲಿ ಗಡಿಯಾರಿನ ಒಂದೊಂದೇ ಭಾಗಗಳನ್ನು ಮಾತ್ರ ತಯಾರಿಸುತ್ತಾರೆ. ಕೇವಲ ಗಡಿಯಾರದ ಸ್ಪ್ರಿಂಗ್‌ಗಳನ್ನೇ ತಯಾರಿಸುವವರು ಗಡಿಯಾರದ ಇತರ ಯಾವದೇ ಭಾಗಗಳನ್ನು ತಯಾರಿಸುವದಿಲ್ಲ. ಪ್ರತಿಯೊಂದು ಮನೆಯಲ್ಲಿಯೂ ಗಡಿಯಾರದ ಕೆಲಸವು ನಡೆದಿರುತ್ತದೆ. ಆಕರ್ಷಕ ಪದಾರ್ಥಗಳನ್ನು ಸಿದ್ಧಗೊಳಿಸುವದರಲ್ಲಿಯೂ ಹೊಸ ಹೊಸ ಡಿಜಾಯಿನ್ಸ್ ಕಂಡು ಹಿಡಿಯುವುದರಲ್ಲಿಯೂ ಅವರು ನಿಪುಣರಾಗಿದ್ದಾರೆ.

ಅಲ್ಲಿಯ ಜನಗಳ ಎರಡನೆಯ ವೈಶಿಷ್ಟ್ಯವೆಂದರೆ ಮಿತವ್ಯಯದಿಂದಿರುವುದು. ಅವರು ತಾವು ಕೂಡಿಸಿದ ಹಣದಲ್ಲಿ ಸ್ವಲ್ಪ ಭಾಗವನ್ನೇ ವೆಚ್ಚಮಾಡಿ ಹೆಚ್ಚಿನ ಭಾಗವನ್ನು ಕಾಯ್ದಿಡುತ್ತಾರೆ. ಅದಕ್ಕಾಗಿಯೇ ೪೦ ಲಕ್ಷ ಜನರಲ್ಲಿ ೨೮ ಲಕ್ಷ ಜನಗಳು ಸೇವಿಂಗ್ಸ ಬ್ಯಾಂಕ್‌ಗಳಲ್ಲಿ ಹಣವನ್ನು ಇಟ್ಟಿದ್ದಾರೆ. ವಿಮೆಯ ಪ್ರಮಾಣವಾದರೂ ಅಲ್ಲಿ ಯಾವದೇ ದೇಶಕ್ಕಿಂತಲೂ ಹೆಚ್ಚಿದೆ.

ಅಲ್ಲಿಯ ಜನಗಳು ಒಂದೇ ಜಾತಿಯವರಲ್ಲ. ಭಾಷೆ ಕೂಡಾ ಭಿನ್ನ ಭಿನ್ನ ಇದೆ. ಆದರೆ ಅದರಿಂದ ಅವರ ರಾಷ್ಟ್ರೀಯತ್ವಕ್ಕೇನೂ ಆತಂಕ ಬರುತ್ತಿರುವುದಿಲ್ಲ. ಜರ್ಮನ್, ಫ್ರೆಂಚ್ ಮತ್ತು ಇಟಾಲಿಯನ್ ಈ ಮೂರು ಭಾಷೆಗಳೂ ರಾಷ್ಟ್ರೀಯ ಭಾಷೆಗಳೆಂದು ಪರಿಗಣಿಸಲ್ಪಟ್ಟಿವೆ. ಸಮೀಪದ ರಾಷ್ಟ್ರಗಳಲ್ಲಿಯ ಫ್ಯಾಸಿಜಮ್, ಕಮ್ಯುನಿಜಮ್‌ಗಳ ಆಘಾತವು ಈ ರಾಷ್ಟ್ರದ ಮೇಲಾಗಿದ್ದರೂ ಅವುಗಳ ಪ್ರವೇಶ ಮಾತ್ರ ಈ ವರೆಗೂ ಆಗಿಲ್ಲ. ಇಲ್ಲಿಯುವರೆಗೂ ಈ ದೇಶವು ತನ್ನ ಸ್ವಾತಂತ್ರ್ಯವನ್ನು ಕಾಯ್ದುಕೊಂಡು ಬಂದಿದ್ದರೂ ಇನ್ನು ಮುಂದೆ ಮಾತ್ರ ಹಾಗೆಯೇ ಉಳಿದೀತೆಂದು ಹೇಳಲು ಶಕ್ಯವಿಲ್ಲ. ಏಕೆಂದರೆ ಈ ದೇಶದಲ್ಲಿ ೧|| ಲಕ್ಷ ಜರ್ಮನ್‌ರು ವಾಸವಾಗಿದ್ದು ನಾಲ್ಕರಲ್ಲಿ ೩ ಪಾಲಿನಷ್ಟು ಜನಗಳು ಜರ್ಮನ್ ಭಾಷೆಯನ್ನೇ ಆಡುತ್ತಿದ್ದಾರೆ. ಜರ್ಮನ್ ನಾಜಿಗಳ ಧೋರಣೆಯಾದರೋ ಎಲ್ಲ ಜರ್ಮನ್ನರನ್ನು ಸಂಘಟಿಸುವುದಾಗಿದೆ. ಜರ್ಮನಿಯು ಆಸ್ಟ್ರಿಯಾವನ್ನು ನುಂಗಿ ಈಗ ಝುಕೊಸ್ಲೊವ್ಹೇಕಿಯಾದ ಕಡೆಗೆ ತನ್ನ ದೃಷ್ಟಿಯನ್ನು ತಿರುಗಿಸಿದಂತೆ ಸ್ವಿತ್ಸರ್ಲಂಡಿನ ಕಡೆಗೂ ತಿರುಗಿಸಲಿಕ್ಕಿಲ್ಲವೆಂದು ಹೇಳಲಾದೀತೆ? ಹಿಟ್ಲರ್ ತನ್ನ ಮೇಲೆ ಬೀಳಬಹುದೆಂಬುದೂ ಸ್ವಿತ್ಸರ್ಲಂಡಿಗೆ ಗೊತ್ತಿದೆ. ಅದಕ್ಕಾಗಿಯೇ ಅವರು ಅಲ್ಲಿಯ ಎಲ್ಲ ತರುಣರಿಗೂ ಲಷ್ಕರಿ ಶಿಕ್ಷಣ ಕೊಟ್ಟಿದ್ದಾರೆ. ಸಮಯುಬಂದಾಗ ೨|| ಲಕ್ಷ ಸೈನಿಕರನ್ನು ರಣಭೂಮಿಯಲ್ಲಿ ಹೋರಾಡುವಂತೆ ಸಿದ್ಧಗೊಳಿಸಿದ್ದಾರೆ. ಆದರೆ ಅವರ ಧೋರಣೆಯು ಎರಡನೆಯವರನ್ನು ಅತಿಕ್ರಮಿಸುವುದಾಗಿರದೆ ತಮ್ಮ ಸಂರಕ್ಷಣೆಗಾಗಿದೆ. ಇಲ್ಲಿಯ ವರೆಗೂ ಅದೇ ಧೋರಣದಿಂದಲೇ ತನ್ನ ಸ್ವಾತಂತ್ರ್ಯ ಕಾಯ್ದುಕೊಂಡು ಸುಖದಿಂದ ಬಾಳುತ್ತಿದ್ದಾರೆ.

# ಅಂತ್ಯಾವಸ್ಥೆಯಲ್ಲಿರುವ ಹಿಂದು ಧರ್ಮ.

## ಬ್ಯಾ. ಜಮುನಾದಾಸ ಮೆಹತಾರವರ ಭಾಷಣ.

ಪುಣೆಯ ವನಿತಾ ವಿಶ್ರಾಮ ಉದ್ಯಾನದ ಸಭಾಗೃಹದಲ್ಲಿ ತಾ. ೩-೯-೩೮ ನೆಯ ದಿವಸ ಸಾಯಂಕಾಲ ಶ್ರೀ. ಅಣ್ಣಾ ಸಾಹೇಬ ಭೋಪಟಕರರ ಅಧ್ಯಕ್ಷತೆಯಲ್ಲಿ ಬ್ಯಾರಿಸ್ಟರ ಜಮುನಾದಾಸ ಮೆಹತಾ ಇವರು "ಅಂತ್ಯಾವಸ್ಥೆಯಲ್ಲಿರುವ ಹಿಂದುಧರ್ಮ" ಎಂಬ ವಿಷಯವಾಗಿ ಒಂದು ವಿಚಾರಪರಿಪ್ಲುತವಾದ ಭಾಷಣವನ್ನು ಮಾಡಿದರು. ಭಾಷಣದ ಸಾರಾಂಶವನ್ನು ಇದರಡಿಯಲ್ಲಿ ಕೊಟ್ಟಿದೆ—

**ಬ್ರಿಟಿಷರ ಹಂಚಿಕೆ**

ಬ್ರಿಟಿಷರು ಹಿಂದುಸ್ಥಾನವನ್ನು ಕಳೆದ ೧೫೦ ವರುಷಗಳಿಂದಲೂ ಸುಖವಾಗಿ ಆಳುತ್ತಿದ್ದಾರೆ. ಈ ಬಗ್ಗೆ ನನಗೇನೂ ಆಶ್ಚರ್ಯವೆನಿಸಿಲ್ಲ. ಬ್ರಿಟಿಷರ ವರ್ಚಸ್ಸು ಈ ದೇಶದ ಮೇಲೆ ಬೀಳಲು ಇರುವ ಅನೇಕ ಕಾರಣಗಳಲ್ಲಿ ಈ ದೇಶದಲ್ಲಿಯ ೩೫ ಕೋಟಿ ಜನಗಳನ್ನು ಶಸ್ತ್ರಹೀನರನ್ನಾಗಿ ಮಾಡಿರುವುದೂ ಒಂದು ಕಾರಣವಾಗಿದೆ. ಇದಕ್ಕಿಂತಲೂ 'ಒಡಕು ಹುಟ್ಟಿಸಿ ಒಡೆತನ ಮಾಡು' ಎಂಬ ಧೋರಣವನ್ನು ಸ್ವೀಕರಿಸಿದುದೂ ಹೆಚ್ಚಿನ ಮಹತ್ವದ ಮತ್ತು ಪ್ರಮುಖ ಕಾರಣವಾಗಿದೆ. ಜಗತ್ತಿನಲ್ಲಿ ಎಲ್ಲ ಪ್ರಬಲ ರಾಷ್ಟ್ರಗಳೂ ಶಸ್ತ್ರಾಸ್ತ್ರಗಳನ್ನು ಮಿತಿಮೀರಿ ಹೆಚ್ಚಿಸತೊಡಗಿವೆ. ಕಳೆದ ಮಹಾಯುದ್ಧದಲ್ಲಿ ನಾಲ್ಕು ವರುಷಗಳ ವರೆಗೆ ಹಾಕಿದಷ್ಟು ಬಾಂಬುಗಳನ್ನು ಈಗ ಒಂದೇ ದಿವಸ ಅಷ್ಟೇ ಬಾಂಬುಗಳನ್ನು ಹಾಕುವ ಸಿದ್ಧತೆಯಲ್ಲಿವೆ. ಆದರೆ ಹಿಂದುಸ್ಥಾನದ ಸ್ಥಿತಿಯು ಮಾತ್ರ ಜಗತ್ತಿನ ವಿರುದ್ಧವಾಗಿದೆ. ಇಲ್ಲಿ ಮಾತ್ರ ಸಂಪೂರ್ಣ ನಿಃಶಸ್ತ್ರೀಕರಣ ಮಾಡಿಬಿಟ್ಟಿದ್ದಾರೆ. ನಿಃಶಸ್ತ್ರೀಕರಣವು ಹಿಂದುಸ್ಥಾನವನ್ನು ತಮ್ಮ ಸ್ವಾಧೀನದಲ್ಲಿಟ್ಟುಕೊಳ್ಳುವ ಬ್ರಿಟಿಷರ ಮೊದಲನೆಯ ಮಾರ್ಗವಾಗಿದೆ. ಜಾತಿಜಾತಿಗಳಲ್ಲಿ ಜಗಳವನ್ನು ಹುಟ್ಟಿಸುವುದು ಎರಡನೆಯದಾಗಿದೆ.

ಹಿಂದುಸ್ಥಾನದಲ್ಲಿ ೨೭ ಕೋಟಿ ಹಿಂದುಗಳೆಂಬುದು ಹೆಸರಿಗೆ ಮಾತ್ರವಲ್ಲದೆ ಅವರೆಲ್ಲರೂ ಭಿನ್ನಭಿನ್ನ ಸಣ್ಣಸಣ್ಣ ಜಾತಿಮತ ಪಂಥಗಳಲ್ಲಿ ಹಂಚಿಹೋಗಿದ್ದಾರೆ. ಕಳೆದ ೩೦ ವರುಷಗಳ ಮುಂಬೈ ಕಾರ್ಪೋರೇಶನ್ನಿನಲ್ಲಿರುವ ನನ್ನ ಅನುಭವದ ಮೇಲಿಂದ ಅಲ್ಲಿ ನೂರಕ್ಕೆ ೮೦ ರಂತೆ ಹಿಂದುಗಳು ತಮ್ಮ ಸ್ಥಳಗಳನ್ನು ಆಕ್ರಮಿಸಬಹುದಾಗಿತ್ತು. ಆದರೆ ಅಲ್ಲಿ ೫೦ ರಂತೆ ಮಾತ್ರ ಸ್ಥಳಗಳು ಸಿಗುತ್ತಾ ಇವೆ. ಏಕೆಂದರೆ ಹಿಂದು ಮತದಾರರು ಹಿಂದು ಎಂದು ಮತವನ್ನು ಕೊಡಲು ಹೋಗುವುದೇ ಇಲ್ಲ. ಅವರು ಬ್ರಾಹ್ಮಣ, ಗುಜರಾಥಿ ಇಲ್ಲವೆ ಬ್ರಾಹ್ಮಣೇತರರೆಂದು ಭಾವಿಸಿಯೇ ತಮ್ಮ ಮತಗಳನ್ನು ಕೊಡುತ್ತಿದ್ದಾರೆ. ಒಂದು ವೇಳೆ ಅವರ ಪಂಗಡದವರು ಯಾರೂ ನಿಂತಿರದಿದ್ದರೆ ಬೇರೆ ಹಿಂದು ಹುರಿಯಾಳುಗಳಿಗೆ ತಮ್ಮ ಮತಗಳನ್ನು ಕೊಡದೆ ಫಾರ್ಶಿ ಜನರಿಗೊ ಇನ್ನಾರಿಗೊ ಮತಗಳನ್ನು ಕೊಟ್ಟುಬಿಡುವರು. ಜಾತಿಭೇದದ ದುಷ್ಪರಿಣಾಮದಿಂದ ಹಿಂದುಜನಾಂಗವೇ ಹಾಳಾಗಿ ಹೋಗಿದೆ. ಹಿಂದುಗಳ ಇಂಥ ಸ್ಥಿತಿಯ ಲಾಭವನ್ನು ಬ್ರಿಟಿಶ್ ಮುತ್ಸದ್ದಿಗಳೂ ಕ್ರಿಶ್ಚಿಯನ್ ಪಾದ್ರಿಗಳೂ ಮುಸಲ್ಮಾನ್ ಮೌಲವಿಗಳೂ ತಮ್ಮ ತಮ್ಮ ಆಸನ ಸ್ಥಿರಪಡಿಸಲು ಉಪಯೋಗಿಸಿಕೊಳ್ಳುತ್ತಿದ್ದಾರೆ.

**ಹಿಂದು ಮತ್ತು ಶೀಖ.**

ಹಿಂದುಗಳೇ ಬಹು ಸಂಖ್ಯಾಕರಾಗಿರತಕ್ಕ ಈ ದೇಶದಲ್ಲಿ ಹಿಂದುಗಳೇ ನಾಶವಾಗುತ್ತಾ ಇದ್ದಾರೆ! ಹಿಂದು ಸ್ತ್ರೀಯರನ್ನೇ ಅಪಹರಿಸುತ್ತಿದ್ದಾರೆ!! ಮತ್ತು ಹಿಂದುಗಳ ಮನೆಯನ್ನೇ ಸುಲಿಯುತ್ತಿದ್ದಾರೆ!!! ಅಲಹಾಬಾದಿನಲ್ಲಿ ಹಿಂದುಗಳೇ ಬಹು ಸಂಖ್ಯಾಕರಾಗಿದ್ದರೂ ಅದನ್ನು ಹಿಂದುಗಳು ಪರಮ ಪವಿತ್ರ ಕ್ಷೇತ್ರವೆಂದು ತಿಳಿಯುತ್ತಿದ್ದರೂ ಅಲ್ಲಿ ರಾಮಲೀಲೆ ಮೆರವಣಿಗೆಯು ಮುಸಲ್ಮಾನರ ದಂಗೆ ಬಡಿದಾಟಗಳಿಲ್ಲದೆ ನಿರ್ವಿಘ್ನತೆಯಿಂದ ಒಂದು ವರುಷವಾದರೂ ಸಾಗಿದೆಯೆ? ಇದಕ್ಕೆಲ್ಲ ಕಾರಣವೇನು? ಈ ಬಗ್ಗೆ ಏನಾದರೂ ವಿಚಾರಮಾಡಿರುವಿರಾ? ಅದೇ ಶೀಖರ ಕಡೆಗೆ ನೋಡಿರಿ. ಹತ್ತು ಜನ ಮುಸಲ್ಮಾನರಿಗೆ ಒಬ್ಬ ಶೀಖನಂತೆ ಪ್ರಮಾಣವಿದ್ದ ಪಂಜಾಬಿನ ಒಂದು ಸಣ್ಣ ಹಳ್ಳಿಯಲ್ಲಿಯು ಕೂಡಾ ಯಾರೂ ಒಬ್ಬ ಶೀಖನ ಒಂದು ಕೂದಲೆಳೆಯನ್ನು ಕೂಡಾ ಮುಟ್ಟಲು ಶಕ್ಯವಿಲ್ಲ. ದುರ್ಬಲರ ಬಹು ಸಂಖ್ಯೆಗಿಂತಲೂ ಸಬಲರ ಅಲ್ಪಸಂಖ್ಯೆಯೇ ಶ್ರೇಷ್ಠವೆಂದು ಇದರಿಂದ ತಿಳಿದುಕೊಳ್ಳಬಹುದಲ್ಲವೆ?

**ಸ್ವಾಭಿಮಾನವಿರಲಿ.**

ನಮ್ಮಲ್ಲಿ ಸ್ವಾಭಿಮಾನವು ನಷ್ಟವಾದುದರಿಂದಲೇ ನಾವು ಈಗ ಇಷ್ಟೊಂದು ದುರ್ಬಲರಾಗಿದ್ದೇವೆ. ಜಗತ್ತಿನ ಇತರ ಯಾವದೇ ದೇಶದಲ್ಲಿಯೂ ಬಹು ಸಂಖ್ಯಾಕರಿಗೆ ಹೆಚ್ಚಿನ ಅಧಿಕಾರ ದೊರೆಯುತ್ತಾ ಇದೆ. ಆದರೆ ಅದರ ವಿರುದ್ಧವಾಗಿ ಬಹುಸಂಖ್ಯಾಕರ ಹಕ್ಕನ್ನೇ ಕಡಿಮೆ ಮಾಡುವ ಚಳವಳಿಯು ಮಾತ್ರ ಈ ದೇಶದಲ್ಲಿ ನಡೆದಿದೆ. ಹಿಂದುಗಳು ಬಹುಸಂಖ್ಯಾಕರಾಗಿರುವುದೂ ಅವರ ಪಾಲಿಗೆ ಒಂದು ಅಪರಾಧವಾದಂತಾಗಿದೆ. ಹಿಂದುಗಳಿಗಾಗಿ ಯಾರು ಬಡಿದಾಡುವರೋ ಅವರು ಮಾತ್ರ ಜಾತೀಯರಂತೆ. ಒಳ್ಳೇ ನ್ಯಾಯ! ದೇಶ ಹಿತಕರ್ತರೆಂದು ಮೆರೆಯುವ ಕೆಲವರು ಗ್ರಾಮಪಂಚಾಯತಿಯ ಬಿಲ್ಲಿನ ವಾದವಿವಾದದಲ್ಲಿ ಹೊಲೆಯರಿಗೆ ಎಷ್ಟು ಸ್ಥಾನಗಳು ದೊರೆತಿವೆ? ಮಾದಿಗರಿಗೆಷ್ಟು? ಎಂಬುದರಲ್ಲಿಯೇ ತಮ್ಮ ವೇಳೆಯನ್ನು ಕಳೆಯುತ್ತಿದ್ದಾರಲ್ಲದೆ ನಿಜವಾಗಿ ಈ ಬಿಲ್ಲಿನಿಂದ ಜನಗಳಿಗೆ ಸುಖಸೌಲಭ್ಯಗಳುಂಟಾಗಬಹುದೆಂಬುದನ್ನು ಯಾರೂ ವಿಚಾರಿಸುತ್ತಲೇ ಇಲ್ಲದಿರುವುದು ಹಿಂದುಗಳ ದುರ್ದೈವವೆಂದೇ ಹೇಳಬೇಕು. ನಮಗೆ ಜಗತ್ತಿನಲ್ಲಿ ಬಾಳಬೇಕಾಗಿದ್ದರೆ ನಾವು ಹಿಂದುತ್ವ (ಜಾತೀಯತ್ವವಲ್ಲ) ದ ಅಭಿಮಾನವಹಿಸಿ ಪ್ರಸಂಗ ಬಂದಾಗ ನಮ್ಮ ಪ್ರಾಣವನ್ನಾದರೂ ಅರ್ಪಿಸಲು ನಾವು ಸಿದ್ಧರಾಗಿರಬೇಕು.

**ಒಂದು ಲಕ್ಷ ಸಾವರಕರರ ಅವಶ್ಯಕತೆ.**

ಈ ದೇಶದಲ್ಲಿ ಹಿಂದುಗಳ ಸಂಖ್ಯೆಯು ೨೭ ಕೋಟಿ ಇದೆ. ಆದರೆ ಇಂಥ ದುರ್ಬಲ ೨೭ ಕೋಟಿ ಹಿಂದುಗಳಿಗಿಂತ ಹಿಂದುತ್ವದ ಕಟ್ಟಾಭಿಮಾನಿಗಳಾದ ಒಂದು ಲಕ್ಷ ಸಾವರಕರರು ಈ ದೇಶದಲ್ಲಿದ್ದರೆ ಸಾಕು. ಅವರು ಈ ದೇಶವನ್ನು, ಹಿಂದುಧರ್ಮವನ್ನು ಮತ್ತು ಹಿಂದುಗಳ ಹಕ್ಕುಬಾಧ್ಯತೆಗಳನ್ನು ರಕ್ಷಿಸಿಕೊಳ್ಳಲು ಸಮರ್ಥರಾಗುತ್ತಾರೆಂದೇ ನನಗೆ ತುಂಬಾ ವಿಶ್ವಾಸವಿದೆ. ಈ ಪುಣೆ ಪಟ್ಟಣದ ಮಾರ್ಗಗಳಲ್ಲಿಯೇ ಹಿಂದುಗಳೇ ಬಹುಸಂಖ್ಯಾಕರಾಗಿರ

# ಹಿಂದುಗಳು ಕಣ್ತೆರೆಯಲಾರರೆ?

ಸ್ವಲ್ಪ ದಿವಸಗಳಿಂದ ಕ್ರಿಶ್ಚಿಯನ್‌ರು ಇಲ್ಲಿ ಎರಡು ಚರ್ಚಗಳನ್ನು ಕಟ್ಟಿಸಿದ್ದು ಆ ಚರ್ಚಗಳಲ್ಲಿ ಉಪದೇಶಕರೇ ಮೊದಲಾದವರನ್ನು ನೇಮಿಸಿರುವರು. ಈಗ ಕ್ರಿಶ್ಚಿಯನ್ ಉಪದೇಶಿಗಳೂ, ಪಾದ್ರಿಗಳೂ ಹಳ್ಳಿ ಹಳ್ಳಿಗೂ ಹೋಗಿ ತಮ್ಮ ಮತಧರ್ಮವನ್ನು ಪ್ರಚಾರಗೊಳಿಸುತ್ತಲಿರುವರು. ಹಿಂದೂ ಸಮಾಜದಲ್ಲಿಯ ಆದಿ ಕರ್ನಾಟಕ, ಚಲವಾದಿ ಮೊದಲಾದವರು ಮತಾಂತರವಾಗಿ ಕ್ರಿಶ್ಚಿಯನ್ ಮತಕ್ಕೆ ಸೇರುತ್ತಲಿರುವರು. ದಾವಣಗೆರೆಯ ಆಜುಬಾಜು ಗ್ರಾಮಗಳಲ್ಲಿ ಪ್ರಚಾರವು ಬಹು ಜೋರಾಗಿ ನಡೆಯುತ್ತಲಿದೆ. ಶಾಗಲಿ ಎಂಬ ಗ್ರಾಮದಲ್ಲಿ ೧೮ ಜನ ಚಲವಾದಿಯರು ಕ್ರಿಶ್ಚಿಯನ್ನರಾದರು. ದೊಡ್ಡಬಾತಿ ಎಂಬ ಗ್ರಾಮದವರೂ ಮತಾಂತರವಾಗಲು ಸಿದ್ಧರಾಗಿದ್ದರು. ಅಷ್ಟರಲ್ಲಿಯೇ ಕೆಲವು ಹಿಂದು ಧರ್ಮಾಭಿಮಾನಿಗಳು ಅಲ್ಲಿಗೆ ಹೋಗಿ ಅವರಿಗೆ ಸರಿಯಾದ ತಿಳುವಳಿಕೆ ಹೇಳಿ ಮತಾಂತರವಾಗುವುದನ್ನು ತಪ್ಪಿಸಿದ್ದರು. ದಾವಣಗೆರೆಯ ಸುಮಾರು ೧೫೦೦ ಜನ ಚಲವಾದಿಯರನ್ನು ಮತಾಂತರಗೊಳಿಸಲು ಪ್ರಯತ್ನವು ಬಹು ಒತ್ತರದಿಂದ ನಡೆದಿದೆ. ಇಲ್ಲಿಯ ಶ್ರೀ. ಜಯಚಾಮರಾಜೇಂದ್ರ ಒಡೆಯರ ಬಡಾವಣೆಯ ಬಳಿ ಕಟ್ಟಿರುವ ಚರ್ಚಿನ ಸುತ್ತಲೂ ಸುಮಾರು ೮೦೦ ಮನೆಗಳನ್ನು ಕಟ್ಟಿಸಿ ಕ್ರಿಶ್ಚಿಯನ್ ಕಲೋನಿ ಮಾಡುವ ಕಾರ್ಯದಲ್ಲಿ ಉದ್ಯುಕ್ತರಾಗಿದ್ದು ಈಗಾಗಲೇ ಚರ್ಚಿನ ಬಳಿ ಬಹು ವಿಸ್ತಾರವಾದ ಜಮೀನನ್ನು ಕೊಂಡುಕೊಂಡಿರುವರು. ಹಿಂದುಗಳು ಇನ್ನಾದರೂ ಕಣ್ತೆರೆಯಲಾರರೆ?

—ದಾವಣಗೆರೆ ಓರ್ವ ಹಿಂದು.

## ಕವುತಾಳ.

### ವೀರಶೈವ ದೀಕ್ಷಾ ಸಂಸ್ಕಾರ.

ಸ್ಥಳೀಯ ಶ್ರೀ. ವಿಶ್ವನಾಥ ಸ್ವಾಮಿಯಾಲಯದಲ್ಲಿ ರಂಗನ ಪೇಟೆ ದಾಸೋಹ ಮಠಾಧ್ಯಕ್ಷ ಶ್ರೀ ಮನ್ನಿರಂಜನ ಪಂಚಾಕ್ಷರ ಮಹಾಸ್ವಾಮಿಗಳವರ ಕೃಪಾ ನೇತೃತ್ವದಲ್ಲಿ ಶರಣವರೇಣ್ಯ ಶ್ರೀ ಶರಣಬಸವೇಶ್ವರ ಪುರಾಣ ಶ್ರವಣವು ಕಾಚಾಪುರ ಮಹಾಸನ್ನಿಧಿ ಆಸ್ಥಾನ ಪಂಡಿತ ಹಿರೇಮಠ ವೇ॥ ಗುರುಲಿಂಗ ಶಾಸ್ತ್ರಿಗಳವರಿಂದ ವಿಪುಲವಾದ ಪುರಾಣ ಪ್ರವಚನ ಮತ್ತು ಹುಲುಗುಂಚಿ ಪೊನ್ನೂರು ಹಿರೇಮಠ ಶ್ರೀ. ಪೊಂಪಯ್ಯನವರಿಂದ ಸರಸ ಸಂಗೀತಾಧ್ಯಯವೂ ನಡೆಯುತ್ತಿರುವ ಸಂಗತಿ ಸರ್ವ ಜನ ಶ್ರುತವಷ್ಟೆ.

ಪ್ರಸಂಗವಶಾತ್ತು ನಾಗರಹಾಳು ಮಠದ ಶ್ರೀ. ದೊಡ್ಡಯ್ಯ ಶಾಸ್ತ್ರಿಗಳವರಿಂದ ನಡೆದ ಪ್ರವಚನವು ಒಂದು ವಿಶಿಷ್ಟವಾದದ್ದು. ಅವರ ಭಾವೋದ್ದೀಪಕ, ನೀತಿಸಂಭರಿತ, ಮನಃಪರಿಣಾಮಕಾರಕ ವಿಪುಲ ವ್ಯಾಖ್ಯಾನವು ಒಂದು ಸಪ್ತಾಹ ಜರುಗಿದುದಕ್ಕೆ ಸಮಾಜದಲ್ಲಿ ಒಂದು ವಿಧವಾದ ನವಚೇತನವನ್ನುಂಟುಮಾಡಿತು. ಇಂತಹ ಮಹದಾಶಯರನ್ನಲ್ಲವೇ ಇಂದಿನ ಸಮಾಜವು ನಿರೀಕ್ಷಣೆಮಾಡುತ್ತಿರುವದು?

ಮಹಾಶಿವಯೋಗಿಗಳ ಸನ್ನಿಧಿಯಲ್ಲಿ ಬಡವರಾದ ವೀರಶೈವ ವಟುಗಳಿಗೆ ದೀಕ್ಷಾ ಸಂಸ್ಕಾರವು(ಅಯ್ಯಾಚಾರ) ಶಾಸ್ತ್ರೋಕ್ತವಾಗಿ ಕೈಕೊಳ್ಳಲ್ಪಡುವದು. ಆದಕಾರಣ ಬರತಕ್ಕ ಬಡ ವಟುಗಳು ಆದವಾನಿ ತಾಲೂಕು ಕುಪ್ಪಗಲ್ಲು ರೈಲು ಸ್ಟೇಶನ್ ಇಳಿದು ಬರಬಹುದು. ಇದೇ ಆಶ್ವೀಜ ಶುದ್ಧ ೨, ೩, ೪ ದಿನಗಳಲ್ಲಿ ಶ್ರೀ. ವಿಶ್ವನಾಥಸ್ವಾಮಿ ದೇವಾಲಯದ ಪಂಚಕಲಶ ಸ್ಥಾಪನೆ, ದೀಕ್ಷಾ, ಗಣಾರಾಧನೆ, ಮೆರವಣಿಗೆ ಮುಂತಾದವು ಬಹು ವಿಜೃಂಭಣೆಯಿಂದ ಜರುಗಿಸಲ್ಪಡುವವು. ವಟುಗಳ ವಿಷಯದಲ್ಲಿ ೪ ದಿನಗಳ ಮುಂಚಿತವಾಗಿ ಬರೆದರೆ ಸುವ್ಯವಸ್ಥೆ ಮಾಡಲ್ಪಡುತ್ತದೆ. ದಾತ ಮಹಾಶಯರಿಗೆ ಪರಶಿವನು ಆಶೀರ್ವದಿಸಲಿ.

ಓರ್ವ ಸಮಾಜ ಸೇವಕ.

## ಬಾಗಲಕೋಟೆ.

ಬಾಗಲಕೋಟೆಯ ವಕೀಲರಾದ ಶ್ರೀ. ಜಯರಾಯರು ನರಗುಂದ ಇವರ ಅಧ್ಯಕ್ಷತೆಯಲ್ಲಿ ತಾ. ೧೧-೯-೩೪ ನೆಯ ದಿವಸ ಹರಳಯ್ಯ ಸಮಾಜದವರ ಸಭೆ ಸೇರಿ "ಶ್ರೀ ಹರಳಯ್ಯ (ಸಮಗಾರ) ಸಮಾಜ ವಿದ್ಯಾವರ್ಧಕ ತರುಣ ಸಂಘ" ಸ್ಥಾಪನೆಯಾಯಿತು. ಶ್ರೀ. ಕಾಳಪ್ಪ ಮಬ್ರೂಮಕರ ಇವರು ಸಂಘದ ಅಧ್ಯಕ್ಷರಾಗಿ ಆರಿಸಲ್ಪಟ್ಟಿದ್ದಾರೆ.

ಲಕ್ಷ್ಮಪ್ಪ ಭೀಮಪ್ಪ ಕುಂದರಗಿ.
ಕಾರ್ಯದರ್ಶಿ.

—ನಿಜಾಮ ಸರಕಾರದವರು ಮುಂಬೈ ಇಲಾಖೆಯಲ್ಲಿ ಪ್ರಕಟವಾಗುತ್ತಿರುವ 'ಸಂಗ್ರಾಮ' ಮತ್ತು 'ವೈದಿಕ ಪಾಠಕ' ಎಂಬೆರಡು ಪತ್ರಿಕೆಗಳು ತಮ್ಮ ಸಂಸ್ಥಾನಿನಲ್ಲಿ ಪ್ರವೇಶಿಸಬಾರದೆಂದು ಪ್ರತಿಬಂಧಗೊಳಿಸಿದ್ದಾರೆ.

—ನಾಗಪುರದ ಹಿಂದಿನ ಮುಖ್ಯ ಮಂತ್ರಿಗಳಾದ ಡಾ. ಖರೆಯವರ ಸಂಬಂಧವಾಗಿ ರಾಷ್ಟ್ರಾಧ್ಯಕ್ಷರಾದ ಶ್ರೀ. ಸುಭಾಷಚಂದ್ರ ಬೋಸರವರು ಒಂದು ವಿಸ್ತೃತವಾದ ಪ್ರಕಟನೆಯನ್ನು ಹೊರಡಿಸಿ ಡಾ. ಖರೆ ಮತ್ತು ಅವರ ಬಳಗದವರು ಕೈಕೊಂಡ ಕಾರ್ಯವನ್ನು ನಿಷೇಧಿಸಿದ್ದಾರೆ.

## ಹಿಂದು ತರುಣ ಸಂಘ ಹಾವೇರಿ.

ತಾ. ೯-೯-೩೮ ನೇ ದಿವಸ ಶ್ರೀ ವಿಠ್ಠಲ ಮಂದಿರದಲ್ಲಿ ಸಂಘದ ಜನರಲ್ ಸಭೆಯು ಶ್ರೀ ಕೃಷ್ಣ ಹವಾಲದಾರ ಇವರ ಅಧ್ಯಕ್ಷತೆಯಲ್ಲಿ ಕೂಡಿ ಕೆಳಗಿನಂತೆ ಠರಾವುಗಳನ್ನು ಮಾಡಿತು.

(೧) ವಾರ್ಷಿಕೋತ್ಸವದ ಲೆಕ್ಕ ಪತ್ರದ ವರದಿಯನ್ನು ಓದಿ ಸರ್ವಾನುಮತದಿಂದ ಪಾಸುಮಾಡಲ್ಪಟ್ಟಿತು.

(೨) ಸಂಘದ ಮೊದಲಿನ ಉದ್ದೇಶದಲ್ಲಿ ಹಿಂದುಗಳೆಂದು ಯಾರಿಗೆ ಅನ್ನಬೇಕೆಂಬುದು ಸ್ಪಷ್ಟವಿಲ್ಲದ್ದರಿಂದ ಈ ದಿವಸ ಅದನ್ನು ಸ್ಪಷ್ಟಮಾಡಿ "ಯಾರಿಗೆ ಈ ಹಿಂದುಸ್ಥಾನವು ಮಾತೃಭೂಮಿಯು ಮತ್ತು ತಮ್ಮ ಮತಸ್ಥಾಪಕರ ಜನ್ಮಭೂಮಿಯು ಆಗಿದೆಯೋ ಅವರೆಲ್ಲರೂ ಹಿಂದುಗಳೆಂದು ತಿಳಿಯತಕ್ಕದ್ದೆಂದು" ಸ್ಪಷ್ಟಮಾಡಿ ಉದ್ದೇಶದ ತಿದ್ದುಪಡಿಯು ಸರ್ವಾನುಮತದಿಂದ ಪಾಸಾಯಿತು.

(೩) ಸಂಘದ ಸದಸ್ಯರಾಗುವವರ ಫೀ ಈ ಮೊದಲು ತಿಂಗಳೊಂದಕ್ಕೆ ೨ ಆಣೆ ಇದ್ದದ್ದನ್ನು ಬದಲಿಸಿ ಮುಂದೆ ಒಂದು ವರುಷಕ್ಕೆ ೫ ಆಣೆ ಇರಬೇಕೆಂದು ಸರ್ವಾನುಮತದಿಂದ ಪಾಸಾಯಿತು.

(೪) ಈಗಿದ್ದ ನಿಯಮಗಳಲ್ಲಿ ಹೆಚ್ಚುಕಡಿಮೆಮಾಡಿ ಸುಧಾರಣೆ ಮಾಡಲಿಕ್ಕೆ ೫ ಜನರ ಒಂದು ಸಬ್ ಕಮಿಟಿಯನ್ನು ಗೊತ್ತುಮಾಡಿತು. ಈ ಕಮಿಟಿಯವರು ತಾವು ತಯಾರಿಸಿದ ನಿಯಮಗಳ ವರದಿಯನ್ನು ಕಾರ್ಯದರ್ಶಿಯ ಕಡೆಗೆ ಇನ್ನು ೮ ದಿವಸಗಳಲ್ಲಿ ಕೊಡತಕ್ಕದ್ದು. ಅದನ್ನು ಜನರಲ್ ಕಮಿಟಿಯಲ್ಲಿ ಇಟ್ಟು ಪಾಸುಮಾಡಬೇಕೆಂದು ಪಾಸಾಯಿತು.

(೫) ವಾರ್ಷಿಕ ಲೆಕ್ಕ, ಕಾರ್ಯ ಮತ್ತು ಉತ್ಸವದ ವರದಿ ಹಾಗೂ ಸದಸ್ಯರ ಪ್ರತಿಜ್ಞಾಯ: ಪತ್ರಿಕೆಗಳನ್ನು ಪ್ರಿಂಟುಮಾಡಿಸತಕ್ಕದ್ದೆಂದು ಸರ್ವಾನುಮತದಿಂದ ಪಾಸಾಯಿತು.

(೬) ಸಂಘದ ಹೊಸ ಚುನಾವಣೆಯನ್ನು ತಾ. ೩೦-೯-೩೮ ನೆಯ ದಿವಸ ಮಾಡತಕ್ಕದ್ದೆಂದು ಸರ್ವಾನುಮತದಿಂದ ಪಾಸಾಯಿತು.

(೭) ಸಂಘದ ಕೆಲವು ಸದಸ್ಯರ ಫೀ ಬಾಕಿ ಇದ್ದು ಅದನ್ನು ಕೂಡಲೆ ಕೊಟ್ಟು ಹೊಸ ಸದಸ್ಯರಾಗತಕ್ಕದ್ದು. ಹಿಂದಿನ ಬಾಕಿಕೊಡದೇ ಇದ್ದವರು ಮುಂದೆ ಸದಸ್ಯರಾಗಲಿಕ್ಕೆ ಬರಲಾರರು. ಎಂದು ಪಾಸಾಯಿತು.

ವಿ. ಸೂಚನೆ— ಹಾವೇರಿಯ ಎಲ್ಲ ಹಿಂದುಗಳೂ ಅದರಲ್ಲಿ ಮುಖ್ಯವಾಗಿ ತರುಣರು ಕೂಡಲೆ ಸದಸ್ಯರಾಗಿ ಈ ಸಂಘವನ್ನು ಪ್ರೋತ್ಸಾಹಿಸಬೇಕೆಂದು, ಬಾಕಿ ಫೀ ಕೊಡತಕ್ಕ ಈಗಿದ್ದ ಸದಸ್ಯರು ಇನ್ನುಮೇಲೆ ರದ್ದಾಗುವದರಿಂದ ತಮ್ಮ ಫೀಯನ್ನು ಕೊಟ್ಟು ಹೊಸ ಸದಸ್ಯರು ಆಗಿ ಇಲ್ಲಿಯ ವರೆಗೆ ಸಂಘಕ್ಕೆ ಉತ್ತೇಜನ ಕೊಟ್ಟಂತೆ ಇನ್ನು ಮುಂದಾದರೂ ಹೆಚ್ಚಾಗಿ ಉತ್ತೇಜನ ಕೊಡುವರೆಂದು ಎಲ್ಲ ಹಿಂದುಗಳಲ್ಲಿ ಬಲವಾದ ವಿನಂತಿಯು.

ಗುರುಲಿಂಗಪ್ಪ ಅಂಕಲಕೋಟಿ.
ಕಾರ್ಯದರ್ಶಿ.

---

—ಪಂಜಾಬ ಪ್ರಾಂತದ ಕಾಂಗ್ರೆಸ್ ಸಮತಾವಾದಿ ಪಕ್ಷದ ಮುಂದಾಳುಗಳಾದ ಶ್ರೀ. ಪಿ. ಬಿ. ಎಲ್. ಬೇದಿಯವರನ್ನೂ 'ಮಿಲಾಪ' ಪತ್ರಿಕೆಯ ಸಂಪಾದಕರಾದ ಶ್ರೀ. ಇಂದ್ರದತ್ತರನ್ನೂ ಪಿನಲ್‌ಕೋಡಿನ ೧೨೬ ನೆಯ ಶಾಸನ ಪ್ರಕಾರ ಸೆರೆಹಿಡಿದಿದ್ದಾರೆ.

## ಯಾದಗಿರಿ.

ಪ್ರತಿ ವರುಷದಂತೆ ಈ ವರುಷವಾದರೂ ಭಾ|| ಶು|| ೪ ರಿಂದ ೧೪ ರ ವರೆಗೆ ಇಲ್ಲಿಯ ಸಾರ್ವಜನಿಕ ಮತ್ತು ವ್ಯಾಪಾರಿ ಮಂಡಳದ ಗಜಾನನ ಉತ್ಸವಗಳು ಜರುಗಿದವು. ಸಾರ್ವಜನಿಕ ಗಜಾನನ ಉತ್ಸವದಲ್ಲಿ ಭಜನೆ, ಕೀರ್ತನೆ, ಗಾಯನ, ಪ್ರವಚನ ಮುಂತಾದ ಕಾರ್ಯಗಳು ಜರುಗುತ್ತಿದ್ದವು. ಅಲ್ಲದೆ ಈ ಉತ್ಸವದ ಮಂಡಳಿಯವರ ವತಿಯಿಂದ "ಯಮನ ಸೋಲು" ಹಾಗು "ವೀರ ಅಭಿಮನ್ಯು" ಎಂಬ ಕನ್ನಡ ಗದ್ಯ ನಾಟಕಗಳು ಅಭಿನಯಿಸಲ್ಪಟ್ಟವು. ಇದರಂತೆ ಪ್ರತಿ ವರುಷ ಇಂತಹ ಉತ್ಸವಗಳನ್ನು ಜರುಗಿಸುವ ಬುದ್ಧಿಯನ್ನು ಗಜಾನನು ದಯಪಾಲಿಸಲೆಂದು ಬೇಡಿಕೊಳ್ಳುತ್ತೇನೆ.

—ಹಿಂದು ಸಮಾಜ ಸೇವಕ.

---

—ಮದ್ರಾಸ್ ಪ್ರಾಂತದ ಕಾರಾಗೃಹ ಮತ್ತು ನ್ಯಾಯ ಶಾಖೆಯ ಮಂತ್ರಿಗಳಾದ ಶ್ರೀ. ರಾಮನ್ ಮೆನನ್‌ರವರು ಕಳೆದ ೧೫ ನೆಯ ತಾರೀಖಿನ ದಿವಸ ಬಳ್ಳಾರಿಗೆ ಸಂದರ್ಶನವನ್ನಿತ್ತರು. ಅದೇ ದಿನ ವೆಲ್ಲಸ್ಲಿ ಸೆಂಟ್ರಲ್ ಜೇಲಿನಲ್ಲಿ ರೇಡಿಯೋ ಉದ್ಘಾಟನ ಸಮಾರಂಭವನ್ನು ಜರುಗಿಸಿದರು. ರಾತ್ರಿ ಟೌನ್ ಹಾಲಿನ ಆವರಣದಲ್ಲಿ ಸೇರಿದ ಸಾರ್ವಜನಿಕ ಸಭೆಯಲ್ಲಿ ಭಾಷಣ ಮಾಡಿದರು.

---

## ದಾವಣಗೆರೆಯಲ್ಲಿ ಪುರಾಣ ಸಮಾಪ್ತಿ.

ಕಳೆದ ಶ್ರಾವಣಮಾಸದಲ್ಲಿ ಬೆಂಗಳೂರು ಶ್ರೀ ಸರ್ಪಭೂಷಣ ಮಠದ ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ ಶ್ರೀ ಮಹದೇವಸ್ವಾಮಿಗಳವರಿಂದ ಇಲ್ಲಿಯ ಶ್ರೀ ವಿರಕ್ತ ಮಠದಲ್ಲಿ ಪ್ರಾರಂಭವಾದ "ಶ್ರೀ ಪ್ರಭುಲಿಂಗಲೀಲೆ" ಎಂಬ ಪುರಾಣವು ತಾರೀಖು ೯-೯-೩೮ ನೇ ಶುಕ್ರವಾರ ಪರಿಸಮಾಪ್ತಿಯಾಯಿತು. ಪುರಾಣ ಸಮಾಪ್ತಿಯ ನಿಮಿತ್ತ ಆ ದಿನ ವೀರಶೈವ ಮಹಾಜನರು ತಮ್ಮ ತಮ್ಮ ಮನೆಗಳಲ್ಲಿ ಮಿಷ್ಟಾನ್ನವನ್ನು ಮಾಡಿ ಬಹು ಭಕ್ತಿಯಿಂದ ಎಡೆಯನ್ನು ಕೊಟ್ಟಿದ್ದರು. ಆದುದರಿಂದ ಸಹಸ್ರಾರು ಜನರ ಅನ್ನ ಸಂತರ್ಪಣೆಯು ಬಹು ಸಮರ್ಪಕವಾಗಿ ನಡೆಯಿತು. ಮಹಾಜನರು ಶ್ರೀ ಮಹಾಸ್ವಾಮಿಗಳ ಪಾದಪೂಜೆಯನ್ನು ವಿಶೇಷ ಭಕ್ತಿಯಿಂದ. ನಡೆಯಿಸಿ ಪುರಾಣ ಪೂಜೆಯನ್ನು ನೆರವೇರಿಸಿದರು. ಒಟ್ಟಿನ ಮೇಲೆ ಈ ದಿನವು ಒಳ್ಳೇ ಆನಂದದಾಯಕವಾಗಿ ಭಕ್ತಿಯಿಂದ ಕೂಡಿದ್ದಿತು.

ಸಾಯಂಕಾಲ ಎಂದಿಗಿಂತಲೂ ಈ ದಿನ ಹೆಚ್ಚಾಗಿ ಮಹನೀಯರೂ ಮಹಿಳೆಯರೂ ಆಗಮಿಸಿದ್ದರಲ್ಲದೆ ಅನ್ಯ ಸಮಾಜದವರೂ ಹೆಚ್ಚಾಗಿ ಸೇರಿದ್ದರು. ಶ್ರೀ ಸ್ವಾಮಿಗಳವರ ಸದ್ಬೋಧೆಯಿಂದ ಜನರಿಗುಂಟಾದ ಆನಂದಕ್ಕೆ ಮೇರೆಯೇ ಇರಲಿಲ್ಲ. ಎಲ್ಲೆಲ್ಲಿಯೂ ಆನಂದವೇ ಆನಂದವಾಗಿ ಜನರು ಭಕ್ತಿ ಪರವಶರಾಗಿ ನಲಿದಾಡುತ್ತಿದ್ದರು. ಆದರೆ ನಾಳೆಯಿಂದ ಇಂತಹ ಸದ್ಬೋಧೆಯ ಸುಕೃತವು ತಪ್ಪುವದಲ್ಲಾ ಎಂಬ ಚಿಂತೆಯು ಜನರನ್ನು ವ್ಯಾಕುಲಗೊಳಿಸದಿರಲಿಲ್ಲ. ಇಂತಹ ಸ್ವಾಮಿಗಳು ಇನ್ನು ಕೆಲವು ಜನರಾದರೆ ಖಂಡಿತವಾಗಿ ಆ ಸಮಾಜವೇ ಏಕೆ? ದೇಶವೇ ಉದ್ಧಾರವಾಗುವದೆಂಬುದರಲ್ಲಿ ಸಂದೇಹವಿಲ್ಲವೆಂಬುದಾಗಿಯೂ ಇಂತಹ ಸದ್ಗುರುಗಳಿಂದಲೇ ಜಗತ್ಕಲ್ಯಾಣವಾಗಬೇಕಾಗಿದೆ ಎಂಬುದಾಗಿಯೂ ಜನರು ಆಡಿಕೊಳ್ಳುತ್ತಿದ್ದರು. ವೀರಶೈವ ಮಹಾ ಜನರು ಸಮಾಜದ ವತಿಯಿಂದ ಶ್ರೀ ಮಹಾಸ್ವಾಮಿಗಳವರಿಗೆ ಕಾಣಿಕೆಯನ್ನೂ ಭಯಭಕ್ತಿಪೂರ್ವಕವಾದ ವಂದನೆಗಳನ್ನೂ ಅರ್ಪಿಸಿದ ತರುವಾಯ ಮಂಗಳಾರತಿಯಾಗಿ ಪ್ರಸಾದ ವಿನಿಯೋಗವಾಯಿತು.

ಆನೆಕೊಂಡದ ಮುಪ್ಪಣ್ಣ.

---

## ಚಿಂಚೋಳಿ.

ಪ್ರತಿ ವರ್ಷದ ಪದ್ಧತಿ ಪ್ರಕಾರ ಈ ವರುಷವಾದರೂ ಶ್ರೀ ಮಲ್ಲಿಕಾರ್ಜುನ ಗಜಾನನೋತ್ಸವ ಕಾರ್ಯಕ್ರಮಗಳು ಮಿತಿ ಭಾ|| ಶು|| ೪ ಯಿಂದ ಭಾದ್ರಪದ ಶುದ್ಧ ೧೪ ಯ ವರೆಗೆ ನಿಯಮಿಸಲ್ಪಟ್ಟ ಪ್ರಕಾರ ವೀರಶೈವ ಧರ್ಮಜಾಗೃತಿಯ ವಿಷಯವಾಗಿ ಪ್ರವಚನಗಳೂ ಜರುಗಿದವು. ಮಿತಿ ಭಾದ್ರಪದ ಶು|| ೧೦ ದಿನ ಶ್ರೀ ಸದಾಶಿವ ಸ್ವಾಮಿ ಸುಲೇಪೇಟೆ ಖಟ್ವಾಂಗೇಶ್ವರ ಮಠ ಇವರು ಆಗಮಿಸಿ ಧಾರ್ಮಿಕ ವಿಷಯದ ಮೇಲೆ ಪ್ರವಚನ ನಡೆಯಿಸಿದರು. ಮತ್ತು ಭಾದ್ರಪದ ಶು|| ೧೧ ದಿನ ಶ್ರೀ ಸದಾಶಿವ ಮಹಾಸ್ವಾಮಿಗಳ ಅಧ್ಯಕ್ಷತೆಯಲ್ಲಿ ಶ್ರೀ. ಎಸ್. ವಿ. ದಶಮುಖಿ (ನಿಜಾಮ ವೀರಶೈವ ಪ್ರಾಂತಿಕ ಪರಿಷತ್ತಿನ ಪ್ರಚಾರಕರಾದ) ಇವರು ಬಸವಾದಿ ಪ್ರಮಥರ ತತ್ವಗಳೂ ವೈದಿಕವೆಂಬ ಬಗ್ಗೆ ಯುಕ್ತಿಯುಕ್ತವಾಗಿ ಭಾಷಣಮಾಡಿ ಜನರಲ್ಲಿ ನವಜಾಗೃತಿಯನ್ನುಂಟುಮಾಡಿದರು. ಆ ಮೇಲೆ ಅಧ್ಯಕ್ಷರು ತಮ್ಮ ಸರಳವಾಣಿಯಿಂದ ಶಾಸ್ತ್ರೋಕ್ತವಾಗಿ ವೀರಶೈವ ಧರ್ಮವು ವೇದೋಪನಿಷತ್ತು ಆಗಮಾದಿಗಳ ಸಾರವೆಂದು ಜನಮನಾನಂದವಾಗುವಂತೆ ಪ್ರತಿಪಾದಿಸಿದನಂತರ ಕಾರ್ಯದರ್ಶಿಗಳಾದ ಶರಣಪ್ಪ ಪಾಟೀಲ ಇವರು ಸರ್ವರ ಆಭಾರಮನ್ನಿಸಿ ಸಭೆಯನ್ನು ಮುಕ್ತಾಯಗೊಳಿಸಿದರು.

ಮಿತಿ ಭಾದ್ರಪದ ಶುದ್ಧ ೧೪ ಯ ದಿನ ಸಾಯಂಕಾಲ ೯ ಗಂಟೆಯಿಂದ ಶ್ರೀ ಗಜಾನನ ಮೆರವಣಿಗೆಯು ಒಳ್ಳೇ ವೈಭವದೊಡನೆ ಭಜನಾ ಮಂಡಳಿ ಸಮೇತವಾಗಿ ಮುಖ್ಯ ಬೀದಿಯಿಂದ ಹೊರಟು ೩ ಗಂಟೆಗೆ ಹಂಪಯ್ಯನ ಮಠಕ್ಕೆ ಮುಟ್ಟಿದನಂತರ ವಿಸರ್ಜನಾದಿ ಕ್ರಿಯೆಗಳು ಜರುಗಿಸಲ್ಪಟ್ಟವು.

—ಕಾರ್ಯದರ್ಶಿ.

---

## ನಿಡಗುಂದಿ.

ಬಾಗೇವಾಡಿ ತಾಲೂಕು ಪೈಕಿ ನಿಡಗುಂದಿ ಬೃಹನ್ಮಠಾಧ್ಯಕ್ಷ ಶ್ರೀ. ಮ. ಚ. ಶ್ರೀ ರುದ್ರಸ್ವಾಮಿಗಳವರ ಮಠದಲ್ಲಿ ಮಹಾಂತೇಶ್ವರ ಪುರಾಣವನ್ನು ಸದರೀ ಶ್ರೀಗಳವರು ಶ್ರಾವಣ ಮಾಸದಿಂದ ಬಹು ಸ್ವಾರಸ್ಯವಾಗಿ ಶ್ರೀ ಬಸವಣ್ಣನವರ ವಚನಗಳನ್ನು ಬೆರಿಸಿ ಆಧುನಿಕ ಪರಿಸ್ಥಿತಿಗನುಸಾರವಾಗಿ ಹೇಳುತ್ತ ಬಂದು ನಿಡಗುಂದಿಯ ಭಕ್ತರೊಡನೆ ಭಾದ್ರಪದ ಶು|| ೧೧ ಸೋಮವಾರ ತಾರೀಖು ೫-೯-೩೮ ನೇ ದಿವಸ ಸಮಾಪ್ತಗೊಳಿಸಲಾಯಿತು. ಸದರೀ ಭಕ್ತರೆಲ್ಲರೂ ಸದರೀ ಶ್ರೀಗಳ ಮಠದಲ್ಲಿ ಶ್ರೀ ಮಡಿವಾಳ ಸ್ವಾಮಿಗಳು ವಿಜಾಪುರ ಇವರು ಬಸವಣ್ಣನವರ ವಚನಗಳನ್ನು ತಾಲ - ರಾಗಬದ್ಧವಾಗ ಹಾಡೋಣದರಿಂದ ಹಾರತುರಾಯಿಗಳನ್ನು ಶ್ರೀ ಮಡಿವಾಳ ಸ್ವಾಮಿಗಳಿಗೆ ಅರ್ಪಿಸಿದರು. ಮತ್ತು ಶ್ರೀ. ಮ. ಚ. ರುದ್ರಸ್ವಾಮಿಗಳವರ ಅಡ್ಡಪಾಲಕಿಯ ಉತ್ಸವವು ಊರೆಲ್ಲ ಮೆರೆದು ಮಠವನ್ನು ಹೊಂದಿದ ಮೇಲೆ ಶ್ರೀಗಳು ಯಾವತ್ತೂ ಭಕ್ತರಿಗೆಲ್ಲ ಆಶೀರ್ವಾದ ಕೊಟ್ಟನಂತರ ಸಭಾವಿಸರ್ಜನೆಮಾಡಲಾಯಿತು.

ಓರ್ವ ಪ್ರತ್ಯಕ್ಷದರ್ಶಿ.

## ಯಾದಗಿರಿ.

"ನಿಜಾಮ ವೀರಶೈವ ವಿದ್ಯಾವರ್ಧಕ ಫಂಡಿನ" ಯಾವತ್ತು ಮೆಂಬರರಿಗೆ ತಿಳಿಸುವದೇನೆಂದರೆ ಫಂಡಿನ ಸೆಕ್ರೆಟರಿಗಳಾದ ರೊಟ್ಟಿ ಶರಣಪ್ಪನವರ ಸಂಬಂಧ ಆಲೋಚನೆ ಮಾಡಲು ತಾ॥ ೩ ಆಜೂರ ಸನ್ ೧೩೪೮ ಫಸಲಿ ಮಿತಿ ಆಶ್ವೀಜ ಶುದ್ಧ ೧೪ ಶಕೆ ೧೮೫೦ ರೋಜ ಶನಿವಾರ ಸಾಯಂಕಾಲ ನಾಲ್ಕು ಘಂಟೆಗೆ ಫಂಡಿನ ಅಧ್ಯಕ್ಷರ ನೇತೃತ್ವದಲ್ಲಿ ನನ್ನ ಜಿನ್ನ ಫ್ಯಾಕ್ಟರಿಯಲ್ಲಿ ಅಕಾಲಿಕ ಜನರಲ್ ಕಮಿಟಿಯನ್ನು ಇಟ್ಟಿರುತ್ತದೆ. ಕಾರಣ ತಾವು ತಪ್ಪದೆ ಸಕಾಲಕ್ಕೆ ಬರಬೇಕೆಂದು ವಿನಂತಿಯು.

ರುದ್ರಪ್ಪ ತಿಣ್ಣೂರ.
ಸಹಾಯ ಸೆಕ್ರೆಟರಿ.

---

### ಶಿವ ಮಂದಿರ ಗಲಭೆ.

ದಿಲ್ಲಿ ಮುನಸಿಪಾಲ್ಟಿಯಲ್ಲಿಯ ಹಿಂದು ಪಕ್ಷದ ಧುರೀಣರಾದ ಅಡ್ವೋಕೇಟ್ ರಾಯ್ ಬಹಾದ್ದೂರ್ ಹರಿಶ್ಚಂದ್ರ ಇವರು ದಿಲ್ಲಿಯಲ್ಲಿಯ ಶಿವಮಂದಿರದ ಬಗ್ಗೆ ಸರಕಾರದವರು ಸ್ವೀಕರಿಸಿದ ಧೋರಣವನ್ನು ನಿಷೇಧಿಸುವುದಕ್ಕಾಗಿ ಈ ಶಿವಮಂದಿರ ಪ್ರಕರಣದ ವಿಚಾರಣೆಯ ಬಗ್ಗೆ ನಿಯಮಿಸಿದ ಸಮಿತಿಗೆ ಶರಣು ಹೊಡೆದಿದ್ದಾರೆ.

---

### ಜೀವನೋಪಾಯಕ್ಕೆ

## ಉಚಿತ ಶಿಕ್ಷಣ.

### ೫ ವಿದ್ಯಾರ್ಥಿಗಳನ್ನು ತೆಗೆದುಕೊಳ್ಳಲಾಗುವದು.

ಇಲ್ಲಿಯ ಶ್ರೀ. ಬಸವಲಿಂಗ ಮುದ್ರಣ ಮಂದಿರದಲ್ಲಿ ಮುದ್ರಣ ಸಂಬಂಧವಾದ ಎಲ್ಲ ಶಿಕ್ಷಣಗಳನ್ನೂ ಕೆಲವು ವಿದ್ಯಾರ್ಥಿಗಳಿಗೆ ಉಚಿತವಾಗಿ ಕೊಟ್ಟು ಅವರ ಜೀವನೋಪಾಯಕ್ಕೆ ಅನುಕೂಲಪಡಿಸುತ್ತಾ ಬಂದಿದೆಯಷ್ಟೆ.

ಈಗ ಐದು ವೀರಶೈವ ವಿದ್ಯಾರ್ಥಿಗಳನ್ನು ತೆಗೆದುಕೊಳ್ಳಬೇಕೆಂದು ಗೊತ್ತುಮಾಡಿದ್ದಾಗಿದೆ. ಅವರಿಗೆ ಊಟ ಬಟ್ಟೆಗಳನ್ನು ಕೊಟ್ಟು ಉಚಿತವಾಗಿ ಒಂದರಿಂದ ಮೂರು ವರ್ಷಗಳ ವರೆಗೆ ಶಿಕ್ಷಣ ಕೊಡಲಾಗುವುದು. ಇಷ್ಟವುಳ್ಳವರು ತಮ್ಮ ಈ ವರೆಗಿನ ಶಿಕ್ಷಣ ಮತ್ತು ವಯಸ್ಸು ತಿಳಿಸಬೇಕು.

ಇದೇ ಸಪ್ಟಂಬರ್ ತಿಂಗಳ ಕೊನೆಯೊಳಗಾಗಿ ಬರುವ ಅರ್ಜಿಗಳನ್ನು ಮಾತ್ರ ಆಲೋಚನೆಗೆ ಇಟ್ಟುಕೊಂಡು ಯೋಗ್ಯ ಕಂಡವರನ್ನು ತೆಗೆದುಕೊಳ್ಳಲಾಗುವುದು.

ಮ್ಯಾನೇಜರ್, ಶ್ರೀ ಬಸವಲಿಂಗ ಮುದ್ರಣ ಮಂದಿರ
ಪೋ. ಆಲಮಟ್ಟಿ.

---

### ಜಾಹೀರಾತು ಕೊಡುವವರು ತ್ವರೆಮಾಡಬೇಕು.

### ನಿಖಿಲ ಕರ್ನಾಟಕ ಆಯುರ್ವೇದ

## ಸಮ್ಮೇಲನ ಪತ್ರಿಕೆ.

ಸಂಪಾದಕರು:— ಆ. ತೀ. ಆದ್ಯಅನಂತಾಚಾರ್ಯ ವಿಜಾಪುರ.

ಮೇಲಿನ ತ್ರೈಮಾಸಿಕವು ತೀವ್ರವೇ ಪ್ರಕಟಿಸಲ್ಪಡುವದು. ಇದರಲ್ಲಿ ಇಡೀ ಭರತಖಂಡದಲ್ಲಿ ವಿಶೇಷತಃ ಕರ್ನಾಟಕದಲ್ಲಿಯ ಆಯುರ್ವೇದ ವಿಷಯವಾಗಿ ನಡೆದಿರುವ, ನಡೆಯಬೇಕಾದ ಚಟುವಟಿಕೆಗಳೂ, ಕಠಿಣ ರೋಗಚಿಕಿತ್ಸೆಗಳೂ, ವೈದ್ಯರ ಸಹಾಯವಿಗದ ಹಳ್ಳಿಪಳ್ಳಿ ಸ್ಟೇಶನ್ ಮುಂತಾದ ಸ್ಥಳಗಳಲ್ಲಿರುವ ಕುಟುಂಬ ವತ್ಸಲರಿಗೆ ಉಪಯುಕ್ತವಾಗುವಂಥ ಸುಲಭ ಔಷಧಗಳೂ, ಬೇರೆ ಬೇರೆ ಅನುಭವಿಕ ವೈದ್ಯರ ಅನುಭವಿಕ ಔಷಧಗಳೂ, ಪ್ರಾಚೀನ ಅರ್ವಾಚೀನ ಹೊಸಹೊಸ ಶೋಧಗಳೂ, ಪ್ರಾಚೀನ ದುರ್ಮಿಳ ಕನ್ನಡ ಸಂಸ್ಕೃತ ಗ್ರಂಥಗಳೂ ಟೀಕೆಗಳೂ, ಭಾಷಾಂತರವೂ ಮತ್ತು ಇನ್ನೂ ಅನೇಕ ವೈದ್ಯರ ವಿಷಯಗಳೂ ಬರುವವು.

| ಚಂದಾ:— | ಆಶ್ರಯದಾತರಿಗೆ | ೧೦ ರೂಪಾಯಿ |
|---|---|---|
| | ಪೋಷಕರಿಗೆ | ೫ ರೂ. |
| | ಉಳಿದವರಿಗೆ ಅಂಚೆವೆಚ್ಚ ಸೇರಿ | ೩ ರೂ. ಮಾತ್ರ |

ಕರ್ನಾಟಕದ ಎಲ್ಲ ವೈದ್ಯ ಮತ್ತು ಸದ್ಗೃಹಸ್ಥರು ಕೂಡಲೇ ಚಂದಾದಾರರಾಗಿ ಸಹಾಯ ಮಾಡಬೇಕಾಗಿ ವಿನಂತಿ.

ಈ ಪತ್ರಿಕೆಯು ನಿ. ಕ. ಆಯುರ್ವೇದ ಮಂಡಳದ ಪರವಾಗಿ ಪ್ರಕಟವಾಗುವುದರಿಂದ ಇಡೀ ಕರ್ನಾಟಕದಲ್ಲಿ ಪ್ರಸಾರವಾಗುವ ಕಾರಣ ಜಾಹೀರಾತದಾರರಿಗೆ ತಮ್ಮ ವಸ್ತು ಪ್ರಕಟನೆಗೆ ಉತ್ತಮ ಸಾಧನವಾಗಿರುವದು. ಆದ್ದರಿಂದ ವ್ಯಾಪಾರಸ್ಥರು ತೀವ್ರವೇ ಬರೆದು ಕೊಳ್ಳಬೇಕು.

ವಿಳಾಸ:—
ವ್ಯವಸ್ಥಾಪಕ, ನಿಖಿಲ ಕರ್ನಾಟಕ ಆಯುರ್ವೇದ
ಸಮ್ಮೇಲನ ಪತ್ರಿಕೆ,
ರಾಜಬೀದಿ, ವಿಜಾಪುರ.

---

## "ಶರಣ ಸಾಹಿತ್ಯ"

ಸಂಪಾದಕ:— ಕೀರ್ತನಕೇಸರಿ. ಬಿ. ಶಿವಮೂರ್ತಿ ಶಾಸ್ತ್ರಿ

ಹಿಂದೂಧರ್ಮ, ಕನ್ನಡ ಸಾಹಿತ್ಯ, ಲಿಂಗವಂತ ಸಂಸ್ಕೃತಿ ಇವುಗಳ ಉನ್ನತಿಗಾಗಿ ಪ್ರಯತ್ನಿಸುವುದೇ ಈ ಪತ್ರಿಕೆಯ ಮುಖ್ಯೋದ್ದೇಶ. ಕನ್ನಡ ಮತ್ತು ಸಂಸ್ಕೃತ ಪ್ರಾಚೀನ ಗ್ರಂಥಗಳ ಪ್ರಕಟನೆಯೂ ಇದರ ಮತ್ತೊಂದು ಉದ್ದೇಶ. ಪ್ರತಿಯೊಬ್ಬ ಕನ್ನಡಿಗನೂ ಓದಬೇಕಾದ ಸಾಹಿತ್ಯ ವಿಮರ್ಶೆ, ತತ್ವಜ್ಞಾನ, ಲಲಿತಕಲೆ, ಸಮಾಜ ಶಾಸ್ತ್ರ ಜೀವನ ಚರಿತ್ರೆ, ಇತಿಹಾಸ ಮೊದಲಾದ ಪ್ರೌಢ ವಿಷಯಗಳ ಮೇಲಿನ ಲೇಖನಗಳ ಮತ್ತು ಕವಿತೆಗಳ ಸುರಿಮಳೆ, ದೇಶ, ಧರ್ಮ, ಭಾಷೆ, ಸಮಾಜ ಇವುಗಳ ಹಿತಕಾಂಕ್ಷಿಗಳೆಲ್ಲರೂ ಈ ಪತ್ರಿಕೆಗೆ ಪ್ರೋತ್ಸಾಹ ಕೊಡಬೇಕೆಂದು ಬಿನ್ನಹ.

ವಿಳಾಸ— ಮ್ಯಾನೇಜರ್ ಶರಣ ಸಾಹಿತ್ಯ ಕಾರ್ಯಾಲಯ,
ಪೋಸ್ಟ್ ಮಲ್ಲೇಶ್ವರಂ ಬೆಂಗಳೂರು.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ... ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರಿ, ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮುವಾರವೂ ಪ್ರಕಟವಾಗುವುದು.

| ಸಂಪುಟ ೪ | ಆಲಮಟ್ಟಿ- ಸೋಮುವಾರ ತಾರೀಖು ೨೬ ನೆಯ ಸಪ್ಟೆಂಬರ್ ೧೯೩೮. | ಸಂಚಿಕೆ ೭ |
|---|---|---|

ಜನಸೇವೆಯೇ ದೇವರಸೇವೆ.

## ಗಾಂಧೀ ಮಹಾರಾಜಕೀ ಜೈ!



ದೇಶಸೇ



# ಶರಣ ಸಂದೇಶ

THE SHARANA SANDESHA.



## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೮. | ಆಲಮಟ್ಟಿ-ಸೋಮವಾರ ತಾರೀಖು ೨೬ ನೆಯ ಸಪ್ಟೆಂಬರ್ ೧೯೩೮. | ಸಂಚಿಕೆ ೭.

# ವರ್ಕಿಂಗ್ ಕಮಿಟಿಯ ಮಹತ್ವದ ನಿರ್ಣಯ.

## ಮಹಾತ್ಮಾ ಗಾಂಧಿಯವರ ಅಹಿಂಸಾ ಸೈನ್ಯ.

ಹೊಸದಿಲ್ಲಿಯ ಬಿರ್ಲಾಭವನದಲ್ಲಿ ಕಳೆದ ೨೨ ನೆಯ ತಾರೀಖಿನ ದಿವಸ ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಕೂಡಿದ್ದಿತು. ರಾಷ್ಟ್ರಾಧ್ಯಕ್ಷರಾದ ಸುಭಾಷಚಂದ್ರ ಬೋಸರವರು ಕಾರ್ಯಬಾಹುಲ್ಯದಿಂದ ಆ ದಿನ ಬಂದಿರಲಿಲ್ಲ. ತಾ. ೨೩ ನೆಯ ದಿನ ವಿಮಾನ ಮೂಲಕ ದಿಲ್ಲಿಗೆ ಹೊರಟಿದ್ದರು. ಕಾನಪುರದಲ್ಲಿ ಇವರಿಗೆ ೧೦೪ ಅಂಶಗಳ ವರೆಗೆ ಜ್ವರ ಬಂದುದರಿಂದ ಆ ದಿನ ಪ್ರವಾಸವನ್ನು ನಿಲ್ಲಿಸಿದರು.

ವರ್ಕಿಂಗ್ ಕಮಿಟಿಗೆ ಸರದಾರ ವಲ್ಲಭಭಾಯಿ ಪಟೇಲ ಶ್ರೀ. ರಾಜೇಂದ್ರ ಬಾಬು ಮೊದಲಾದ ಪ್ರಮುಖರೆಲ್ಲರೂ ಬಂದಿದ್ದರು. ಮಧ್ಯಪ್ರಾಂತದ ಹಿಂದಣ ಮಂತ್ರಿಗಳಾದ ಡಾ. ಖರೆಯವರು ಕಾಂಗ್ರೆಸ್ಸಿನ ರೀತಿನೀತಿಗಳಿಗೆ ವಿರೋಧವಾಗಿ ನಡೆದುದು ನಿಷೇಧಾರ್ಹವೆಂದೇ ಅಖಿಲ ಭಾರತ ಕಾಂಗ್ರೆಸ್ ಕಮಿಟಿಯಲ್ಲಿ ತೀರ್ಮಾನವಾಗುವ ಗೊತ್ತುವಳಿಯು ಮಾಡಲ್ಪಟ್ಟಿತು.

ಹೈದರಾಬಾದ; ಕಾಶ್ಮೀರ, ತ್ರಾವಣಕೋರ ಮೊದಲಾದ ಸಂಸ್ಥಾನಗಳಲ್ಲಿ ನಡೆದಿರುವ ದಬ್ಬಾಳಿಕೆಯನ್ನು ವರ್ಕಿಂಗ್ ಕಮಿಟಿಯು ತೀವ್ರವಾಗಿ ಖಂಡಿಸಿತು.

**ಅಹಿಂಸೆಯ ಸೈನ್ಯ!**

ಕಾಂಗ್ರೆಸ್ಸು ಅಧಿಕಾರವನ್ನು ಸ್ವೀಕರಿಸಿದನಂತರ ಕಾಂಗ್ರೆಸ್ ಜನರಲ್ಲಿ ಅಹಿಂಸೆಯ ವಿಚಾರವಾಗಿ ನಂಬಿಕೆ ಕಡಿಮೆಯಾಗುತ್ತಾ ಇದೆಯೆಂತಲೂ ಎಲ್ಲೆಲ್ಲಿಯೂ ಹಿಂಸೆಯ ಸೈನ್ಯ ಏರ್ಪಡಿಸುವ ಪ್ರವೃತ್ತಿ ಹೆಚ್ಚುತ್ತಿದೆಯೆಂದೂ ಗಾಂಧೀಜಿಯವರಿಗೆ ತಿಳಿದಿದೆ. ಅದಕ್ಕಾಗಿ ಅವರು ಬಹು ನೊಂದುಕೊಂಡು ಅಹಿಂಸೆಯ ಒಂದು ಸೈನ್ಯವನ್ನೇ ಏರ್ಪಡಿಸಬೇಕೆಂದು ಯೋಚಿಸಿದ್ದಾರೆ.

ಹಿಂಸೆಯ ಸೈನ್ಯವನ್ನು ಅಬಸೀನಿಯಾ ಚೀನ, ಝೆಕೊಸ್ಲೋವೇಕಿಯಾ ದೇಶಗಳು ಇಟ್ಟುಕೊಂಡಿದ್ದರೂ ಈಗ ತೊಂದರೆಪಡುತ್ತಾ ಇಲ್ಲವೆ? ಅನ್ಯರ ಆಕ್ರಮಣಕ್ಕೆ ಒಳಗಾಗಿಲ್ಲವೆ? ಎಂದಮೇಲೆ ಹಿಂದುಸ್ಥಾನವು ಅಹಿಂಸಾ ಸೈನ್ಯ ಮೂಲಕವಾಗಿಯೇ ಅನ್ಯರ ಆಕ್ರಮಣವನ್ನು ತಡೆಯಲು ಅದೇಕೆ ಪ್ರಯತ್ನಿಸಬಾರದೆಂದು ಗಾಂಧೀಜಿಯವರು ಕೇಳುತ್ತಿದ್ದಾರೆ.

ಗಾಂಧೀಜಿಯವರು ಅಹಿಂಸಾ ಸೈನ್ಯದ ತಮ್ಮ ಯೋಜನೆಯನ್ನು ಕಾಂಗ್ರೆಸ್ ಪ್ರಮುಖರಿಗೆ ತಿಳಿಸಿದರು. ಕೆಲವರು ನಮಗೇನೂ ಇಂಥ ನಂಬಿಕೆ ಇಲ್ಲವೆಂದೂ, ನಾವು ಬುದ್ಧಿ ಪ್ರಧಾನ್ಯರೆಂದೂ, ಅಹಿಂಸೆಯು ತಾತ್ಕಾಲಿಕವಾದ ತತ್ವವೇ ಸರಿಯೆಂದೂ ಹೇಳಿದರು. ಗಾಂಧೀಜಿಯವರ ಈ ವಿಚಾರಸರಣಿಯು ಈಗಿನ ಕೆಲವು ರಾಜಕಾರಣ ಪಟುಗಳಿಗೆ ಒಪ್ಪಿಗೆಯಿದ್ದಂತೆ ತೋರಲಿಲ್ಲ.

**ಕಾಂಗ್ರೆಸ್ಸಿನ ಶುದ್ಧೀಕರಣ.**

ಕಾಂಗ್ರೆಸ್ಸು ಅಧಿಕಾರವನ್ನು ಸ್ವೀಕರಿಸಿದನಂತರ ಇದರಲ್ಲಿ ಬಹುಜನರು ಸತ್ಯವ್ರತಕ್ಕೆ ವಿರೋಧವಾಗಿ ವರ್ತಿಸುತ್ತಿದ್ದಾರೆಂದೂ ಗಾಂಧೀಜಿಯವರು ತಿಳಿದಿದ್ದಾರೆ. ಹೀಗೆ ಕಾಂಗ್ರೆಸ್ಸು ಸತ್ಯ ಮತ್ತು ಅಹಿಂಸೆಯ ವ್ರತಗಳಿಂದ ದೂರಾಗುತ್ತಾ ಇರುವುದು ಒಳ್ಳೆಯದಲ್ಲವೆಂದೂ ಇದರಿಂದ ಕಾಂಗ್ರೆಸ್ಸಿನ ಘನತೆ ದಿನೆ ದಿನೆ ಕಡಿಮೆಯಾಗುವುದೆಂದೂ ಗಾಂಧೀಜಿಯವರ ಅಭಿಪ್ರಾಯ.



# ವಿದ್ಯಾರ್ಥಿಗಳು ವಿಜಯಶಾಲಿಗಳಾಗುವ ಮಾರ್ಗ.

## ಡಾ. ಆಂಬೇಡಕರರ ಮನನೀಯ ವಿಚಾರ.

**ಕಳೆದ ೧೧ ನೆಯ ತಾರೀಖಿನ ದಿವಸ ಪುಣೆಯಲ್ಲಿ ಆದಿ ಹಿಂದು ವಿದ್ಯಾರ್ಥಿಗಳ ೧೧ ನೆಯ ಸಮ್ಮೇಲನವು ಡಾ. ಆಂಬೇಡಕರರ ಅಧ್ಯಕ್ಷತೆಯಲ್ಲಿ ಜರುಗಿತು. ಆಗ ವಿದ್ಯಾರ್ಥಿಗಳಿಗೆ ಅತ್ಯುಪಯುಕ್ತವಾದ ಅನೇಕ ಸಂಗತಿಗಳನ್ನು ಅಧ್ಯಕ್ಷರು ತಮ್ಮ ಭಾಷಣದಲ್ಲಿ ತಿಳಿಸಿದರು. ಅವರ ಭಾಷಣದ ಮುಖ್ಯಾಂಶಗಳನ್ನು ಇಲ್ಲಿ ಕೊಟ್ಟಿದೆ.-**

### ಬುದ್ಧಿ ವೈಭವವನ್ನು ತೋರಿಸಿರಿ.

ವಿದ್ಯಾರ್ಥಿಗಳು ವಿದ್ಯಾರ್ಜನೆಯೇ ತಮ್ಮ ಮುಖ್ಯ ಗುರಿಯಾಗಿದೆಯೆಂಬುದನ್ನು ಮರೆಯಬಾರದು. ಅನೇಕ ಸಂಗತಿಗಳ ಕಡೆಗೆ ಲಕ್ಷ್ಯಿಸಿ ಮುಖ್ಯವಾದ ಗುರಿಯನ್ನೇ ಮರೆತುಬಿಡಬಾರದು. ಒಬ್ಬ ಮನುಷ್ಯನು ಅನೇಕ ಕಾರ್ಯಗಳನ್ನು ಉತ್ತಮ ರೀತಿಯಲ್ಲಿ ಮಾಡಲಾರನು. ಅಂತೆಯೇ ಒಬ್ಬ ಗ್ರಂಥಕಾರನು ಹೀಗೆ ಹೇಳಿದ್ದಾನೆ— "If you want success you must be narrow minded" ಇದರಲ್ಲಿ ಮಹತ್ವದ ಅರ್ಥವು ಗರ್ಭೀಕೃತವಾಗಿದೆ. ವಿದ್ಯಾರ್ಥಿಗಳು ಜಯಶೀಲರಾಗಬೇಕಾದರೆ ಅವರು ಕೂಡಾ ಒಂದೇ ಕಡೆಗೆ ತಮ್ಮ ಶಕ್ತಿ ಸಾಹಸಗಳನ್ನೆಲ್ಲಾ ಏಕೀಕರಿಸಿ ವಿದ್ಯಾರ್ಜನೆ ಮಾಡಬೇಕು.

ವಿದ್ಯಾರ್ಥಿಯೆಂದರೆ ಕೇವಲ ವಿದ್ಯಾಲಯಗಳಿಗೆ ಹೋಗುವವರೇ ಅಲ್ಲ. ಜಗತ್ತಿನಲ್ಲಿ ಎಲ್ಲರೂ ವಿದ್ಯಾರ್ಥಿಗಳೆ. ನಾನು ಕೂಡಾ ಒಬ್ಬ ವಿದ್ಯಾರ್ಥಿಯು. ನನಗೆ ಓದಲು ಹೆಚ್ಚಾಗಿ ಪುಸ್ತಕಗಳು ಯಾವಾಗಲೂ ಬೇಕೇ ಬೇಕು. ಈಗ ಒಂದು ಸಾವಿರ ರೂ.ಗಳನ್ನು ಪುಸ್ತಕ ವ್ಯಾಪಾರಿಗಳಿಗೆ ನಾನು ಕೊಡಬೇಕಾಗಿದೆ. ಯಾವ ಪುಸ್ತಕ ವ್ಯಾಪಾರಿಯಾದರೂ ನಾನು ಅಪೇಕ್ಷಿಸಿದ ಪುಸ್ತಕವನ್ನು ಉದ್ರಿಯಾಗಿ ಕೊಡುವಷ್ಟು ನಾನು ಅವರಿಗೆ ನಂಬಿಕೆಯುವನಾಗಿಯೂ ಇದ್ದೇನೆ. ಗ್ರಂಥಾಧ್ಯಯನವು ನನ್ನದೊಂದು ದೊಡ್ಡ ಕೆಲಸವಾಗಿಯೇ ಇದೆ.

ಪದವೀಧರರಾದ ಮಾತ್ರದಿಂದ ವಿದ್ಯಾರ್ಜನೆ ಮುಗಿಯಿತೆಂದು ಬಹು ಜನರು ತಿಳಿದಿದ್ದಾರೆ. ಇದು ತಪ್ಪು. ತಾವಾಗಿಯೇ ವಿದ್ಯಾರ್ಜನೆ ಮಾಡಲು ಅಂದಿನಿಂದಲೇ ಅವರು ಸಮರ್ಥರಾದರೆಂದು ತಿಳಿಯಬೇಕು. ಆದಕಾರಣ ಪದವೀಧರರಾದ ಮೇಲೆಯೇ ವಿದ್ಯಾರ್ಜನೆಯ ನಿಜವಾದ ಪ್ರಯತ್ನ ಪ್ರಾರಂಭವಾಗುವುದು.

ಮೊದಲು ಆದಿಹಿಂದುಗಳಲ್ಲಿ ಪದವೀಧರರೇ ಇರಲಿಲ್ಲ. ಆದರೆ ಈಗ ನೂರಾರು ಜನರು ದೊರೆಯುತ್ತಾರೆ. ಈಗ ಪದವೀಧರರಾದ ಮಾತ್ರದಿಂದ ನಿಮ್ಮ ಘನತೆ ಹೆಚ್ಚಲಾರದು. ಸ್ಪೃಶ್ಯ ಹಿಂದುಗಳು ನಮ್ಮನ್ನು ಮೂಲೆಗೊತ್ತುವರು. ಪೂರ್ವದಿಂದಲೂ ನಿಮಗೆ ವಿದ್ಯೆಯನ್ನೇ ಕಲಿಸಿಲ್ಲ. ಈಗ ವಿದ್ಯಾಭ್ಯಾಸಕ್ಕೆ ಅನುಕೂಲವಾಗಿದ್ದರೂ ನೀವು ನಿಮ್ಮ ಬುದ್ಧಿ ವೈಭವವನ್ನು ತೋರಿಸದಿದ್ದರೆ ಮತ್ತೆ ಅವರೇ ಮುಂದರಿದು ನೀವು ಮೂಲೆಯಲ್ಲಿ ಬೀಳುವಿರಿ. ಆದಕಾರಣ ಪದವೀಧರರಾಗುವುದೊಂದೇ ನಿಮ್ಮ ಧ್ಯೇಯವಿರಬಾರದು. ಬುದ್ಧಿ ವೈಭವದಿಂದಲೂ ನೀವು ಸ್ಪೃಶ್ಯ ಹಿಂದುಗಳಿಗಿಂತ ಮುಂದರಿದವರಾಗಬೇಕು.

ನಾನು ಇಂಗ್ಲೆಂಡಿಗೆ ವಿದ್ಯಾಭ್ಯಾಸಕ್ಕೆ ಹೋದಾಗ ೮ ವರುಷಗಳಲ್ಲಿ ಮುಗಿಯಬೇಕಾದಷ್ಟು ಅಭ್ಯಾಸವನ್ನು ೨ ವರುಷ ೩ ತಿಂಗಳುಗಳಲ್ಲಿ ಮುಗಿಸಿದೆನು. ಆಗ ನಾನು ಪ್ರತಿ ದಿನ ೨೧ ತಾಸು ವಿದ್ಯಾಭ್ಯಾಸ ಮಾಡುತ್ತಿದ್ದೆನು. ಈಗ ನನಗೆ ೪೦ ವರುಷ ಮೀರಿದ್ದರೂ ಪ್ರತಿನಿತ್ಯ ೧೮ ತಾಸು ಕುರ್ಚಿಯ ಮೇಲೆಯೇ ಕುಳಿತು ಕೆಲಸ ಮಾಡುವ ರೂಢಿಯೇ ಇದೆ.

### ಆತ್ಮ ವಿಶ್ವಾಸ.

ಬಡತನ, ಅನಾನುಕೂಲ, ಮೊದಲಾದವುಗಳನ್ನೇ ಮುಂದೆ ಮಾಡಿ ನಮ್ಮಿಂದ ಯಾವ ಕಾರ್ಯವೂ ಆಗುವುದಿಲ್ಲವೆಂದು ತಿಳಿಯಬೇಡಿರಿ. ಆತ್ಮ ವಿಶ್ವಾಸವೇ ನಮ್ಮ ಕಾರ್ಯಸಿದ್ಧಿಗೆ ಮೂಲ. ಬೇಕಾದ ಕಾರ್ಯವನ್ನು ಸಾಧಿಸಬಹುದೆಂದೇ ನಾನು ಯಾವಾಗಲೂ ಹೇಳುತ್ತಾ ಇರುವುದು. ಹೀಗೆ ನಾನು ಹೇಳುವುದು ಜಂಭವೆಂದು ಕೆಲವರು ತಿಳಿದುಕೊಂಡಿದ್ದಾರೆ. ಅವರಿಗೆ ಆತ್ಮ ವಿಶ್ವಾಸದ ಮಹತ್ವ ತಿಳಿದಿಲ್ಲ. ನಾನು ಹೇಳುವುದು ಜಂಭದ ಮಾತಲ್ಲ. ನನ್ನ ಜೀವಿತವೇ ಆತ್ಮ ವಿಶ್ವಾಸದಿಂದ ಕೂಡಿದೆ. ನಾನು ಈಗಿನ ಸ್ಥಿತಿಗೆ ಬಂದುದೂ ಆತ್ಮ ವಿಶ್ವಾಸದಿಂದ. ಆದಕಾರಣ ನೀವಾದರೂ ಬೇಕಾದ ಕಾರ್ಯಗಳನ್ನು ಮಾಡುವ ಆತ್ಮ ವಿಶ್ವಾಸಿಗಳಾಗಿರಿ.

ನಾನು ಕೂಡಾ ನಿಮ್ಮಂತೆಯೇ ಒಬ್ಬ ಹೊಲತಿಯ ಹೊಟ್ಟೆಯಲ್ಲಿ ಹುಟ್ಟಿ ಬಡತನದಲ್ಲಿಯೇ ಬೆಳೆದು ಮುರುಕು ಗುಡಿಸಲಿನಲ್ಲಿದ್ದು ಚಿಕ್ಕ ದೀಪವನ್ನಿಟ್ಟುಕೊಂಡು ಓದಿ ವಿದ್ಯಾಭ್ಯಾಸ ಮಾಡಿದವನಾಗಿದ್ದೇನೆ. ನಮ್ಮ ವಿಜಯಕ್ಕೆ ಆತ್ಮ ವಿಶ್ವಾಸವು ಅಗತ್ಯವಾಗಿದೆ.

### ಶೀಲ ಸಂವರ್ಧನೆ.

ಮನುಷ್ಯನಿಗೆ ಶಿಕ್ಷಣವು ಎಷ್ಟು ಅಗತ್ಯವೋ ಅಷ್ಟೇ ಶೀಲವೂ ಅಗತ್ಯ. ಸದ್ಗುಣ ಶೀಲಗಳಿಲ್ಲದ ಶಿಕ್ಷಿತನು ಸಮಾಜಕ್ಕೂ ರಾಷ್ಟ್ರಕ್ಕೂ ಕಂಟಕಪ್ರಾಯನೇ ಸರಿ. ಹಳ್ಳಿಗಳಲ್ಲಿರುವ ಬ್ರಾಹ್ಮಣಾದಿ

# ನಾಳಿನ ಭಾರತ.

ತಾ. ೩-೯-೩೮ ರಲ್ಲಿ ಬೆಂಗಳೂರಿನ ಶ್ರೀ. ಗೌಡರ ವೀರಭದ್ರಪ್ಪನವರ ಪಾಠಶಾಲೆಯ ವಾರ್ಷಿಕೋತ್ಸವವು ನಡೆಯಿತು. ರಾಜಚರಿತವಿಶಾರದ ರಾ. ಸಾ. ಸಿ. ಹಯವದನರಾವ ಬಿ. ಎ. ಬಿ. ಎಲ್. ಎಂ. ಎಲ್. ಸಿ. ಇವರು ಅಧ್ಯಕ್ಷತೆಯನ್ನು ವಹಿಸಿದ್ದರು. ಪ್ರಾರಂಭದಲ್ಲಿ ಶ್ರೀಮಾನ್ ಗಮಕಿ ಎಂ. ರಾಘವೇಂದ್ರರಾಯರು 'ಕುಂತೀಕರ್ಣ ಸಂವಾದ' (ಕುಮಾರ ವ್ಯಾಸಭಾರತ) ವನ್ನು ಸುಶ್ರಾವ್ಯವಾಗಿ ಹಾಡಿದರು. ಅನಂತರ ಸುಪ್ರಸಿದ್ಧ ಸಾಹಿತಿಗಳಾದ ಶ್ರೀ. ವಿ. ಸೀತಾರಾಮಯ್ಯ ಎಂ. ಎ. ಇವರು 'ನಾಳಿನ ಭಾರತ' ಎಂಬ ವಿಷಯದಲ್ಲಿ ವಿಚಾರಪರಿಪ್ಲುತವಾದ ಭಾಷಣವನ್ನು ಮಾಡಿದರು.

### ಭಾಷಣದ ಸಾರಾಂಶ.

ಪ್ರಾರಂಭದಲ್ಲಿ ಅವರು ಪ್ರಾಚೀನ ಭಾರತದ ರೀತಿನೀತಿ ನಿಯಮಗಳ ವಿವೇಚನೆಯನ್ನು ಮಾಡುತ್ತಾ, ಭರತಖಂಡದ ಇತಿಹಾಸವು ಹಿಂದೆ ಒಂದು ತೆರವಾಗಿತ್ತು. ಈಗ ಒಂದು ರೀತಿಯಾಗಿದೆ. ಮುಂದೆ ಒಂದು ವಿಧವಾಗುವುದು. ನಮ್ಮ ಸಂಸ್ಕೃತಿಯ ವಿಮರ್ಶೆಯನ್ನು ರಾಜಕೀಯ ದೃಷ್ಟಿಯಿಂದ, ವ್ಯಾವಹಾರಿಕ ದೃಷ್ಟಿಯಿಂದ ಧಾರ್ಮಿಕ ದೃಷ್ಟಿಯಿಂದ ನೋಡಬಹುದು. ಈ ದಿವಸ ವಿದ್ಯಾಗಣಪತಿಯ ಸಂದರ್ಭದಲ್ಲಿ ಧಾರ್ಮಿಕ ದೃಷ್ಟಿಯಿಂದ ವಿವೇಚಿಸುವುದು ಉಚಿತವೆನಿಸುತ್ತದೆ. ಈ ದಿನ ವೈದಿಕ ವಿದ್ಯಾರ್ಥಿಗಳು ಮಾಡಿದ ಶಾಂತಿ ಪಾಠದಲ್ಲಿ 'ಸಹನಾವವತು ಸಹನೌ ಭುನಕ್ತು' ಇತ್ಯಾದಿ ವಿಷಯಗಳು ಪ್ರಸ್ತುತವಾದವು. ಸಹನೆ, ಶಾಂತಿ, ಕ್ಷಮಾ ದಯದ ಗುಣಗಳು ಭರತಖಂಡದ ಆದರ್ಶ ಸಂಸ್ಕೃತಿಯ ಚಿನ್ಹೆ 'ಕಸ್ಮೈದೇವಾಯ ಹವಿಷಾವಿಧೇಯ' ಎಂಬುದೂ ಬಂತು. ಎಷ್ಟೋ ಧರ್ಮಗ್ರಂಥಗಳೂ ದೇವದೇವಿಯರೂ ಇರುವರೆಂದು ಅಂಗೀಕರಿಸುವ ಈ ನಾಡಿನಲ್ಲಿಯೇ 'ಯಾವ ದೇವರಿಗೆ ಹವಿಯನ್ನರ್ಪಿಸಲಿ?' ಎಂಬ ಭಾವನೆಯು ವಿಚಾರಕ್ರಾಂತಿಗೆ ಎಡೆಗೊಟ್ಟಿದೆ. ಇಂತಹ ವಿಚಾರ ಕ್ರಾಂತಿಯು ಅನುಚಿತವಾದುದು.

೩೩ ಕೋಟಿ ದೇವರುಗಳಿರುವರೆಂದು ನಂಬುವ ಮತಗಳೂ ಇದ್ದವು. ಮಾನವನು ಆದರ್ಶ ಗುಣಗಳನ್ನು ಪಡೆದು ದೇವರಿಗಿಂತ ಮಿಗಿಲಾದ ಸ್ಥಾನವನ್ನು ಪಡೆಯಬಹುದೆಂದೂ 'ಜಿನ' ನಾಗಬಹುದೆಂದೂ ಸಾರಿದುದುಂಟು. ಇದೆಲ್ಲಕ್ಕಿಂತಲೂ ಹೆಚ್ಚಾಗಿ ದೇವರೇ ಇಲ್ಲ. ಇಲ್ಲಿರುವವರೆಗೆ ಉಂಡುಟ್ಟುಮೆರೆಯುವುದೇ ನ್ಯಾಯವಾದುದೆಂದೂ ಸತ್ತಮೇಲೆ ಯಾವುದು ಇಲ್ಲವೆಂದೂ ಸಾರಿದ ಚಾರ್ವಾಕ ಮತವೂ ಇತ್ತು. ಎಲ್ಲವೂ ದೇವರೇ ಎಂದೂ ಜೀವದೇವ ಭೇದ ಉಂಟೆಂದೂ ಇತ್ಯಾದಿ ವಾದವನ್ನು ಹಬ್ಬಿಸಿದ ಕಾಲವೂ ಇತ್ತು. ಇಷ್ಟೊಂದು ಮತಗಳೂ ಪಂಥಗಳೂ ಭರತಖಂಡದಲ್ಲಿ ಅನಂತ ಕಾಲದಿಂದ ಆಚರಣೆಯಲ್ಲಿ ಬಂದಿದ್ದರೂ ಸಹ ಇಷ್ಟು ಸೌಹಾರ್ದದಿಂದ ಪರಸ್ಪರ ಸಹಾನುಭೂತಿಯಿಂದ ಹೊಂದಿಕೊಂಡಿರುವುದು 'ಶಾಂತಿ' ಮಾತ್ರಗಳ ಮಹತ್ವ ವೆಂದೇ ಹೇಳಬಹುದು.

ಅದು ಭರತಖಂಡದ ಸೌಭಾಗ್ಯ. ಈ ವೈದಿಕ ಸಾಂಪ್ರದಾಯಕ್ಕೆ ಸಂಬಂಧಿಸಿದ-ಒಂದು ಮನೋಧರ್ಮವು ಒಂದು ಕಾಲದವರೆಗೆ ಬಂತು. ಈ ಮನೋಧರ್ಮವು ಅನೇಕ ವಿಧವಾಗಿದೆ. ಮತಪಂಥಗಳನುಯಾಯಿಗಳು ಸಂಪ್ರದಾಯಗಳನ್ನು ವಿಪರೀತವಾಗಿ ಬೆಳೆಯಿಸಿ ಎಲ್ಲಕ್ಕೂ ವೇದಾದಿಗಳು ಪ್ರಮಾಣಗಳೆಂದು ಸಾಧಿಸತೊಡಗಿದರು. ಅದು ವಿಪರೀತವಾಗಿ ಕಡೆಕಡೆಗೆ ತಿರುಳುಮಾಯವಾಗಿ ಧರ್ಮಹೆಸರಿನ ಕರಟವು ಉಳಿಯಿತು. ಇದು ಈಚೆಗೆ ಅವತರಿಸಿದ ಮಹಾತ್ಮರಿಗೆ ಅಸಹ್ಯವಾಗಿ ಅವರು ಈ ಅಜ್ಞಾನವನ್ನು ಹೊರದೂಡಿಸಿ ಸತ್ಯಕ್ಕೆ ಹೊಸ ಹೊಸ ಕಳೆಯನ್ನು ಕೊಟ್ಟರು. ಶೈವವೈಷ್ಣವರಲ್ಲಿ ಎಷ್ಟೆಷ್ಟೋ ಭೇದಗಳಿದ್ದರೂ ಅವೂ ಐಕಮತ್ಯದಿಂದ ವರ್ತಿಸುವ ಪ್ರಯತ್ನಗಳು ನಡೆದಿವೆ.

ಕೆಲಕಾಲದನಂತರ ಇಸ್ಲಾಮು ಧರ್ಮವೂ ಬಂದಿತು. ಅದಕ್ಕೂ ಭರತಖಂಡದ ಧರ್ಮಕ್ಕೂ ಘರ್ಷಣವಾಯಿತು. ಧರ್ಮಕ್ಕಾಗಿ ರಕ್ತಪಾತವು ಆಯಿತು. ಕಡೆಗೆ ಅದೂ ಒಂದಾಗಿ ಉಳಿಯಿತು. ಅದರೊಡನೆಯೂ ಸಹಾನುಭೂತಿಯನ್ನು ತೋರಿಸಿ ಒಂದು ಸ್ಥಾನವು ಕೊಡಲ್ಪಟ್ಟಿತು. ಎಷ್ಟೋ ವರುಷಗಳಿಂದ ಇಸ್ಲಾಂ ಮತೀಯರೂ ನಮ್ಮೊಡನೆ ಬೆಳೆದು. ನಮ್ಮ ಸಹೋದರರಂತಿದ್ದಾರೆ. ಸಮಾಜ ಆರ್ಥಿಕ ರಾಜಕೀಯ ಈ ಎಲ್ಲ ದೃಷ್ಟಿಯಿಂದ ನೋಡಿದರೂ ನಾವೆಲ್ಲರೂ ಒಮ್ಮುಖವಾಗಿ ವರ್ತಿಸಬೇಕೆಂಬ ಮನೋಧರ್ಮವು ಮೂಡುತ್ತಿದೆ. ಅಂತಹ ಮನೋಧರ್ಮವು ಬೆಳೆಯಬೇಕು. ಹಿಂದಿನ ಆಚಾರವಿಚಾರಗಳಲ್ಲಿನ ದುರ್ಗುಣಗಳೂ ನೂತನ ಸುಧಾರಣೆಯಲ್ಲಿನ ದುರ್ಗುಣಗಳೂ ಹೋಗಬೇಕು. ಶುದ್ಧವಾದ ತುಪ್ಪವು ನಮಗೆ ಸಿಕ್ಕಬೇಕಾದರೆ ಬೆಣ್ಣೆಯನ್ನು ಕಾಯಿಸುತ್ತೇವೆ. ಆಗ ಅದು ಅಸಾಧ್ಯವಾದ ಗಲಾಟೆಯನ್ನು ಮಾಡುತ್ತದೆ. ಸಿಡಿಯುತ್ತದೆ. ಕಡೆಗೆ ಮಡ್ಡಿಯು ಕೆಳಗುಳಿದು ನೀರಳಿದು ಶುದ್ಧವಾದ ಸಾರವು ಮೇಲೆ ಬರುತ್ತದೆ. ಅದೇ ಧರ್ಮದ ವಿಷಯದಲ್ಲೂ ಆಗಬೇಕು.

ನಮ್ಮ ನಮ್ಮಲ್ಲಿನ ಈರ್ಷೆದ್ವೇಷಗಳು ಅಳಿಯಬೇಕು. ಹಿಂದೆ ಎಷ್ಟೋ ದೋಷಗಳೂ ಯಾರ್‍ಯಾರಿಂದ ನಡೆದಿದ್ದರೂ ಅವೆಲ್ಲವನ್ನು ನಾವಿಂದು ಮರೆತುಬಿಡಬೇಕು. ಪ್ರತಿಯೊಬ್ಬರೂ ತಮ್ಮ ದೋಷಗಳ ಪರಿಮಿತಿಯನ್ನು ಅಳೆದುಕೊಳ್ಳಬೇಕು. ಧರ್ಮನಿಷ್ಠರೆಂದು ಹೆಮ್ಮೆಪಡುವವರೂ ತಮ್ಮ ಆಂತರಿಕ ವ್ಯಾಪಾರಗಳನ್ನು ವಿವೇಚಿಸಿದರೆ ಅವರಿಗೆ ತಿಳಿಯುತ್ತೆ. ಅದನ್ನು ಮರೆಮಾಡಿಕೊಂಡು ಬಾಹ್ಯದ ಅಭಿಮಾನಕ್ಕಾಗಿ ದ್ವೇಷಾಸೂಯೆಗಳನ್ನು ಬೆಳೆಸಬಾರದು. ಅಹರ್ನಿಶೆಯಲ್ಲಿಯೂ ನಾವು ನೂರಾರು ಪಾಪಗಳನ್ನು ಮಾಡುತ್ತೇವೆ. ಇದು ಧಾರ್ಮಿಕ ಜೀವನವೆ?

ನಿಜವಾದ ಧರ್ಮವಿದ್ದರೆ ಈ ಗಲಾಟೆಗಳು ನಡೆಯಲಾರವು. 'ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು' ಎಂಬ ಮನೋಧರ್ಮವೂ ಬಂತು. ಅದು ಬಹಳ ಮಹತ್ವವಾದುದೇ ಸರಿ. ಈ ಲೋಕದಲ್ಲಿ ಒಂದು ಉದಾತ್ತವಾದ ಜೀವನವನ್ನು ನಡೆಯಿಸದಿದ್ದರೆ ನಮಗೆ ಪರದಲ್ಲೇನು ಲಭಿಸೀತು? ಒಬ್ಬ ನೂತನ ಕವಿಯು ಹೇಳಿದಂತೆ "ಇದ್ದೊಡವಗರ್ಪಿತವು ಇಲ್ಲದೊಡೆ ಆತ್ಮತೃಪ್ತಿ" ಎಂಬಂತೆ ಒಮ್ಮೆ ದೇವರಿದ್ದರೆ ಅವನಿಗೆ ಅರ್ಪಿತವಾಗಲಿ ಇಲ್ಲದಿದ್ದರೂ ಉತ್ತಮ ವೃತ್ತಿಯುಳ್ಳವನಿಗೆ ಇದರಲ್ಲಿ ಸೌಖ್ಯವಿರುತ್ತೆ.

ಕೆಲಕಾಲದ ಮೇಲೆ ಕ್ರಿಸ್ತಮತವೂ ಬಂದಿತು. ಅದರ ಪ್ರಭಾವವು ಸಂಪೂರ್ಣವಾಗಿ ನಮ್ಮ ಮೇಲೆ ಬಿದ್ದಿತು. ಹಿಂದೆ ಇಂಥ ಸಂಸ್ಕೃತಿ ಇರಲಿಲ್ಲ. ಕೆಲವರು ಅದಕ್ಕೆ ಪರ್ಯಾಯವಾದ ಹೆಸರುಗಳನ್ನು ತೋರಿಸಿದರೂ ಅದು ಸರಿಯಾಗಿ ಹೋಲುವುದಿಲ್ಲ. ಕೇವಲ ಅಲ್ಪ ಸಂಖ್ಯಾಕರಾದ ಪಾಶ್ಚಾತ್ಯರು ಅವರ ದೇಶ ಜನಸಂಖ್ಯೆಗಿಂತ ಎಷ್ಟೋ ಪಾಲು ಮಿಗಿಲಾದ ಭರತಖಂಡದಲ್ಲಿ ತಮ್ಮ ಪ್ರಭುತ್ವವನ್ನು ಸ್ಥಾಪಿಸಿ ಎಷ್ಟು ದರ್ಪದಿಂದ ಎಷ್ಟೋ ಸೊಗಸಾಗಿ ರಾಜ್ಯಭಾರವನ್ನು ಮಾಡುತ್ತಿದ್ದಾರೆ. ನಮ್ಮ ಮನಸ್ಸಿನಲ್ಲಿ ಮನೆಯಲ್ಲಿ ನಡೆಯುವ ಪ್ರತಿಯೊಂದು ವಿಷಯವನ್ನೂ ಅವರು ಅರಿಯಬಲ್ಲರು. ಇಂತಹ ಶಿಸ್ತು ನಮಗೂ ಬೇಕು. ಇಲ್ಲದಿದ್ದರೆ ನಮ್ಮ ನಾಡಿಗೆ ನಮಗೆ ಬಿಡುಗಡೆಯಿಲ್ಲ.

# ಅಖಿಲ ಕರ್ನಾಟಕ ಏಕೀಕರಣ ಸಂಘ

## ಬೆಳಗಾಂವಿ.

### ತಾ. ೩೦ನೆಯ ದಿನ ಏಕೀಕರಣ ದಿನವನ್ನು ಆಚರಿಸರಿ.

ಮದ್ರಾಸ ಸರಕಾರದವರು ಕರ್ನಾಟಕದ ಪ್ರಶ್ನೆಯನ್ನು ಹಿಂದುಳಿಸಿ ಆಂಧ್ರ ಪ್ರಾಂತಕರಣವನ್ನಷ್ಟೇ ಕೈ ಗೂಡಿಸಬೇಕಾಗಿ ಕೇಂದ್ರ ಸರಕಾರಕ್ಕೆ ಬರೆದು ಕಳಿಸಿದ್ದು ಇದೀಗ ಕನ್ನಡಿಗರಿಗೆಲ್ಲರಿಗೆ ಗೊತ್ತಿರಲಿಕ್ಕೆ ಸಾಕು. ಕರ್ನಾಟಕ, ಆಂಧ್ರ, ಕೇರಳ ಮೊದಲಾದ ಎಲ್ಲ ಪ್ರಾಂತಗಳ ವಿಭಕ್ತೀಕರಣದ ಗೊತ್ತುವಳಿಯನ್ನು ತಾವೇ ಮೊದಲು ಸ್ವೀಕರಿಸಿ ಇದೀಗ ತಮ್ಮ ಗೊತ್ತುವಳಿಯ ವಿರುದ್ಧವೇ ಆಂಧ್ರ ಪ್ರಶ್ನೆಯಷ್ಟೇ ಎತ್ತಿ ಹಿಡಿದು, ಮದ್ರಾಸ ಸರಕಾರದವರು ಭೇದಭಾವವನ್ನು ಬಗೆಯುತ್ತಿದ್ದುದು ಕರ್ನಾಟಕದ ಹಿತಕ್ಕೆ ವಿಘಾತವಾಗಿದೆ. ಆಂಧ್ರ ಪ್ರಾಂತದ ಪ್ರಶ್ನೆಯಂತೆ ಕರ್ನಾಟಕದ ಪ್ರಶ್ನೆಯನ್ನಾದರೂ ಕೂಡಲೇ ಕೈಕೊಳ್ಳಬೇಕಾಗಿ ಮುಂಬೈ ಮತ್ತು ಮದ್ರಾಸ ಸರಕಾರದವರು ಕೇಂದ್ರ ಸರಕಾರಕ್ಕೆ ತಿಳಿಸುವದು ಅತ್ಯವಶ್ಯವಾಗಿದೆ. ನಮ್ಮ ಪ್ರಶ್ನೆಯನ್ನು ಈ ಎರಡೂ ಸರಕಾರಗಳು ಕೂಡಲೇ ಕೈಕೊಳ್ಳುವಂತೆ ನಾವು ಒತ್ತಾಯ ಪಡಿಸಲು ಆಂದೋಲನವನ್ನು ಹೂಡಬೇಕಾಗಿದೆ. ಕನ್ನಡಿಗರು ಅಲ್ಲಲ್ಲಿ ಸಭೆ, ಸಮ್ಮೇಲನಗಳನ್ನು ಕೂಡಿಸಿ ಮತ್ತು ಸಂಘ ಸಂಸ್ಥೆಗಳ ಮುಖಾಂತರ ಮುಂಬಯಿ ಮದ್ರಾಸ ಸರಕಾರದೆದುರು ನಮ್ಮ ಬೇಡಿಕೆಯನ್ನು ಇಡಬೇಕಾಗಿದೆ. ನಾಳಿನ ನಾಡಹಬ್ಬದ ಕಾಲಕ್ಕೆ ತಾ. ೩೦ನೆಯ ದಿನ ಏಕೀಕರಣದ ದಿನವನ್ನು ಆಚರಿಸಿ ಕೆಳಗಿನ ಗೊತ್ತುವಳಿಯನ್ನು ಸ್ವೀಕರಿಸಿ ಮುಂಬಯಿ ಮದ್ರಾಸ ಸರಕಾರಕ್ಕೂ, ಕರ್ನಾಟಕದ ಏಕೀಕರಣದ ಸಂಘದ ಮುಖ್ಯ ಕಚೇರಿಗೂ, ಕಳಿಸಬೇಕಾಗಿ ಬಿನ್ನಹ. ಏಕೀಕರಣ ದಿನವು ಕನ್ನಡನಾಡಿನ ಹಳ್ಳಿ ಹಳ್ಳಿಗಳಲ್ಲಿಯೂ ಸಂಘ ಸಂಸ್ಥೆಗಳ ಪರವಾಗಿಯೂ ಆಚರಿಸಲ್ಪಡಲಾಗುವದೆಂದು ನಂಬಿರುವೆವು.

ಅಂದು ಸ್ವೀಕರಿಸಲ್ಪಡಬೇಕಾದ ಗೊತ್ತುವಳಿಗಳು—

೧. ಮದ್ರಾಸ ಸರಕಾರದವರು ಆಂಧ್ರ ಪ್ರಾಂತೀಕರಣದ ಪ್ರಶ್ನೆಯನ್ನಷ್ಟೇ ಎತ್ತಿಹಿಡಿದು ಅದನ್ನು ಕೈಗೂಡಿಸುವದಕ್ಕಾಗಿ ಕೇಂದ್ರ ಸರಕಾರದಲ್ಲಿ ಪ್ರಯತ್ನವನ್ನು ನಡೆಸಿದ್ದು, ಕರ್ನಾಟಕದ ಪ್ರಶ್ನೆಯನ್ನು ಮಾತ್ರ ಹಿಂದೂಡಿ ಭೇದ ಭಾವವನ್ನು ಬಗೆದ ನೀತಿಯನ್ನು ಈ ಸಭೆಯು ತೀವ್ರವಾಗಿ ಖಂಡಿಸುತ್ತದೆ. ಈ ಬಗೆಯಾದ ಭೇದ ಭಾವಕ್ಕೆ ಆಸ್ಪದ ಕೊಡಲಾಗುವದಿಲ್ಲವೆಂದು ಸರದಾರ ವಲ್ಲಭಭಾಯಿ ಪಟೇಲರು ಕೊಟ್ಟ ಆಶ್ವಾಸನಕ್ಕಾಗಿ ಈ ಸಭೆಯು ಅವರನ್ನು ಅಭಿನಂದಿಸುತ್ತದೆ. ಸರದಾರ ಪಟೇಲರು ಹೀಗೆ ಆಶ್ವಾಸನ ಕೊಟ್ಟಿದ್ದರೂ, ಮದ್ರಾಸ ಸರಕಾರದವರು ಈವರೆಗೆ ಏನೂ ಮಾಡದ್ದನ್ನು ಕಂಡು ಈ ಸಭೆಯು ಆಶ್ಚರ್ಯ ಮತ್ತು ವಿಷಾದವನ್ನು ವ್ಯಕ್ತ ಪಡಿಸುತ್ತದೆ.

೨. ಮದ್ರಾಸ ಸರಕಾರದವರು ಆಂಧ್ರಪ್ರಾಂತೀಕರಣದ ಬಗ್ಗೆ ಕೇಂದ್ರ ಸರಕಾರದಲ್ಲಿ ನಡೆಸಿದ ಪ್ರಯತ್ನಗಳಂತೆ ಮುಂಬೈ ಸರಕಾರದವರು ಸಹ ಕರ್ನಾಟಕ ಪ್ರಾಂತೀಕರಣದ ವಿಷಯವನ್ನು ಅವರ ಪ್ರಶ್ನೆಯೆಂದು ಭಾವಿಸಿ ಕೇಂದ್ರ ಸರಕಾರಕ್ಕೆ ಅದರ ಅವಶ್ಯಕತೆಯನ್ನು ತಿಳುಹಿಸಿಕೊಟ್ಟು ಆಬಗ್ಗೆ ಯೋಗ್ಯವಾದ ಉಪಾಯ ಯೋಜನೆಗಳನ್ನು ಕೈಕೊಳ್ಳಬೇಕೆಂದು ತಿಳಿಸಬೇಕಾಗಿ ಈ ಸಭೆಯು ಮುಂಬಯಿ ಸರಕಾರಕ್ಕೆ ಬಿನ್ನವಿಸಿಕೊಳ್ಳುತ್ತದೆ. ಮದ್ರಾಸ ಸರಕಾರವಾದರೋ ಆಂಧ್ರ ಪ್ರಾಂತೀಕರಣದಷ್ಟೇ ಕರ್ನಾಟಕ ಪ್ರಾಂತೀಕರಣವೂ ಮಹತ್ವದ್ದೆಂದು ಅದನ್ನಾದರೂ ಕೈಗೂಡಿಸುವ ಪ್ರಯತ್ನಗಳನ್ನು ಕೈಕೊಳ್ಳಬೇಕೆಂದು ಈ ಸಭೆಯು ಕೇಳಿಕೊಳ್ಳುತ್ತದೆ.

೩. ಕರ್ನಾಟಕ ಪ್ರಾಂತಿಕರಣದ ಪ್ರಶ್ನೆಯು ಅವಸರದ ಪ್ರಶ್ನೆಯೆಂದು ಭಾವಿಸದೆ ಮುಂಬಯಿ ಮದ್ರಾಸ ಸರಕಾರದವರು ಅದನ್ನು ಈಗ ಹಿಂದೂಡಿ ಬಿಟ್ಟಲ್ಲಿ ಕರ್ನಾಟಕದ ವಾತಾವರಣವು ತೀವ್ರವಾಗಿ ಪ್ರಕ್ಷುಬ್ಧಗೊಳ್ಳುವದೆಂದು ಈ ಸಭೆಯು ಸ್ಪಷ್ಟವಾದ ಅಭಿಪ್ರಾಯವಿದ್ದೆ, ಮತ್ತು ಈ ಎರಡೂ ಸರಕಾರದವರು ನಮ್ಮ ಪ್ರಶ್ನೆಯನ್ನು ಕೈಕೊಳ್ಳುವ ಬಗ್ಗೆ ಒತ್ತಾಯ ಪಡಿಸಲು ಅವಶ್ಯವಾದ ಎಲ್ಲತರಹದ ಯೋಗ್ಯ ಹಾಗು ಶಾಂತಿಮಯ ಆಂದೋಲನವನ್ನು ಕೈಕೊಳ್ಳಬೇಕೆಂದು ಈ ಸಭೆಯು ಕನ್ನಡಿಗರಿಗೆಲ್ಲ ವಿಜ್ಞಾಪಿಸಿಕೊಳ್ಳುತ್ತದೆ.

ತಮ್ಮ

ಕೆ. ಬಿ. ಜಿನರಾಜ ಹೆಗಡೆ,

ಗುರುಬಸವಪ್ಪ ಭೂಸನೂರ

ಅರವಿಂದ ಜೋಶಿ,

ಕಾರ್ಯದರ್ಶಿಗಳು



### ಕ್ರಿಸ್ತರು ಹಿಂದುಗಳಾದರು.

ಕೊಲ್ಹಾಪುರ ಸಂಸ್ಥಾನದ ಪನ್ಹಾಳಾ ಗ್ರಾಮದ ೧೩ ಕುಟುಂಬಗಳ ೪೦ ಜನ ಕ್ರಿಸ್ತರು ಹಿಂದು ಧರ್ಮದಲ್ಲಿ ಬರಲು ಅಪೇಕ್ಷಿಸಿದ್ದರಿಂದ ಕಳೆದ ೧೩ನೆಯ ತಾರೀಖಿನ ದಿನ ಕೊಲ್ಹಾಪುರ ಆರ್ಯಸಮಾಜದವರು ಇವರನ್ನು ಶುದ್ಧಗೊಳಿಸಿ ಹಿಂದು ಧರ್ಮದಲ್ಲಿ ತೆಗೆದುಕೊಂಡರು.

# ಬೆಳಗಾವಿಯಲ್ಲಿ ಜಾತೀಯತೆಯ ಯಜ್ಞಪ್ರತಿಜ್ಞೆ!

## ಎಲ್ಲಾ ಮಾತು ಮುಗಿಯಿತು, ಬೆಲ್ಲದ ಹಾಗೆ ಆಯಿತು!

**ಈಗ ಎಲ್ಲೆಲ್ಲಿಯೂ ಜಾತೀಯತೆ.**

ಈಗ ಕಾಂಗ್ರೆಸ್ ಕೆಲಸಗಾರರಲ್ಲಿ ಬಹು ಜನರಿಗೆ ಕಾಂಗ್ರೆಸ್ಸಿನ ಎಲ್ಲ ಕಡೆಗೂ ಜಾತೀಯತೆ ಕಾಣಲಾರಂಭವಾಗಿದೆ. ಅಂತೆಯೇ ಜಾತೀಯತೆಯ ನಾಶಮಾಡಬೇಕೆಂಬ ಶಬ್ದಗಳು ಎಲ್ಲೆಲ್ಲಿಯೂ ಕೇಳಿಬರುತ್ತಲಿವೆ. ಈ ತಿಂಗಳ ಮೊದಲನೆಯ ವಾರ ಬೆಳಗಾವಿಯಲ್ಲಿಯೂ ಕಾಂಗ್ರೆಸ್ಸಿನ ಕೆಲವು ಕೆಲಸಗಾರರು ಸೇರಿ ಜಾತೀಯತೆಯ ಯಜ್ಞಮಾಡಬೇಕೆಂದು ಪ್ರತಿಜ್ಞೆಮಾಡಿದರಂತೆ.

**ಆಗ ಎಲ್ಲೆಲ್ಲಿಯೂ ರಾಷ್ಟ್ರೀಯತೆ.**

ಕಳೆದ ವರುಷ ಚುನಾವಣೆಯ ಮುಂಚೆ ಕಾಂಗ್ರೆಸ್ಸಿನ ಕೆಲಸಗಾರರಲ್ಲಿ ಬಹು ಜನರಿಗೆ ಎಲ್ಲೆಲ್ಲಿಯೂ ರಾಷ್ಟ್ರೀಯತೆಯೇ ಕಾಣುತ್ತಿತ್ತು. ನಾಲ್ಕಾಣೆ ಕೊಟ್ಟು ಕಾಂಗ್ರೆಸ್ ಸದಸ್ಯರಾದ ಮಾತ್ರದಿಂದಲೇ ಜಾತೀಯತೆಯನ್ನು ಭಸ್ಮಮಾಡಿದ ರಾಷ್ಟ್ರಭಕ್ತರಾಗಿ ತೋರುತ್ತಿದ್ದರು. ಅವರು ಹೇಳುವ ಅಸತ್ಯವು ಸತ್ಯವಾಗಿಯೇ ಪರಿಣಮಿಸುತ್ತಿತ್ತು.

ಕಾಂಗ್ರೆಸ್ಸಿನ ಹೊರಗಿರುವವರು ಜಾತೀಯತೆಯ ಭೂತಪೀಡಿತರೆಂದೇ ಅವರಿಗೆ ಕಾಣುತ್ತಿದ್ದರು. ಅವರ ಸತ್ಯದ ನುಡಿಗಳೂ ಅಸತ್ಯವಾಗಿ ತೋರುತ್ತಿದ್ದವು. ಆಗಿನ ಅಬ್ಬರದಲ್ಲಿ ಅವರನ್ನು ಮನಬಂದಂತೆ ರಾಷ್ಟ್ರದ್ರೋಹಿಗಳೆಂದೂ ಜಾತಿವಾದಿಗಳೆಂದೂ ಮಾರುದ್ದ ಬರೆಯುತ್ತ, ಮೈಲುದ್ದ ಭಾಷಣಮಾಡುತ್ತ, ತಾವು ರಾಷ್ಟ್ರೀಯತ್ವದ ಪುತ್ಥಳಿಗಳೆಂದು ಹೇಳಿಕೊಂಡರು!

**ಹಂಡಬಂಡ ದೇಶಭಕ್ತರು.**

ಕಳೆದ ಒಂದುವರೆ ವರುಷದೊಳಗಾಗಿಯೇ ಕಾಂಗ್ರೆಸ್ಸಿನಲ್ಲಿ ಅನೇಕ ಎಂತೆಂಥ ಹಂಡಬಂಡದ ದೇಶಭಕ್ತರಿದ್ದಾರೆಂಬುದು ಎಷ್ಟೋ ಬೈಲಿಗೆ ಬಂದಿತು. ಇವರ ಜಾತ್ಯಂಧತೆ, ವೈಯಕ್ತಿಕ ದ್ವೇಷಾಸೂಯೆ, ಸ್ವಾರ್ಥತೆ ಮೊದಲಾದ ದುರ್ಗುಣಗಳ ದುರ್ವಾಸನೆಯು ಕಾಂಗ್ರೆಸ್ಸಿನ ಪವಿತ್ರವಾತಾವರಣವನ್ನು ಕೆಡಿಸಲಾರಂಭಿಸಿದೆ. ಅಂತೆಯೇ ಅನೇಕರು ಅದರಿಂದ ದೂರಾಗಬೇಕೆಂದು ಯೋಚಿಸಹತ್ತಿದ್ದಾರೆ.

**ಶ್ರೀ. ದಿವಾಕರರು ಮತ್ತು ಶರಣ ಸಂದೇಶ.**

ಮೊನ್ನೆ ಬೆಳಗಾವಿಯಲ್ಲಿ ಕಾಂಗ್ರೆಸ್ ಕೆಲಸಗಾರರ ಗುಪ್ತ ಚರ್ಚೆಯಾದನಂತರ ಶ್ರೀಮಾನ್ ದಿವಾಕರ ರಂಗನಾಥರಾಯರು ಸಂಯುಕ್ತ ಕರ್ನಾಟಕ ದಿನ ಪತ್ರಿಕೆಯಲ್ಲಿ ಎರಡು ಅತ್ಯಂತ ಮನನೀಯವಾದ ಲೇಖನಗಳನ್ನು ಬರೆದಿದ್ದಾರೆ. ಜಾತೀಯತೆಯ ಸಂಬಂಧವಾಗಿ ಈ ಕರ್ಮವೀರರು ತಾ. ೧೬-೯-೩೮ ನೆಯ ಸಂಚಿಕೆಯಲ್ಲಿ ಬರೆದಿರುವುದನ್ನೇ ನಾವು ಈ ಪತ್ರಿಕೆಯ ಬೇರೆ ಕಡೆಗೆ ಕೊಟ್ಟಿದ್ದೇವೆ.

ಚುನಾವಣೆಯ ಕಾರ್ಯ ಮುಗಿದೊಡನೆಯೇ ಕಳೆದ ವರುಷವೇ ಇದೇ ವಿಚಾರವಾಗಿ ನಾವು ಬರೆದುದನ್ನೂ ಆ ಲೇಖನದ ಪಕ್ಕದಲ್ಲಿಯೇ ಕೊಟ್ಟಿದ್ದೇವೆ. ಇವೆರಡೂ ಲೇಖನಗಳು ಒಂದೇ ಅಭಿಪ್ರಾಯ ದ್ಯೋತಕವಾಗಿವೆಯೆಂದೇ ನಿಷ್ಪಕ್ಷಪಾತಿಗಳಿಗೆ ತೋರದಿರಲಾರದು. ಎಲ್ಲ ಜಾತಿಯವರಲ್ಲಿಯೂ ಜಾತ್ಯಂಧರು (ಶ್ರೀ. ದಿವಾಕರರ ಮಾತಿನಲ್ಲಿ ಜಾತೀಯತೆಯುಳ್ಳವರು) ಇದ್ದೇ ಇದ್ದಾರೆಂದೂ ಅವರು ಕಾಂಗ್ರೆಸ್ಸಿನ ಹೆಸರನ್ನು ಇಟ್ಟುಕೊಂಡ ಮಾತ್ರದಿಂದ ಅವರಲ್ಲಿದ್ದ ಜಾತ್ಯಂಧತೆಯೇನೂ ನಿವಾರಣೆಯಾಗುವದಿಲ್ಲವೆಂದೂ ಆಗ ನಾವು ಹೇಳಿದುದು ಅನೇಕ ರಾಷ್ಟ್ರಭಕ್ತರಿಗೆ ಅಸತ್ಯವಾಗಿ ತೋರಿದ್ದಿತು. ಅದಕ್ಕಾಗಿ ಏನೇನೋ ಹೇಳಿದ್ದರು. ಈಗ ಕಾಂಗ್ರೆಸ್ಸಿನ ಪ್ರಮುಖ ಕಾರ್ಯದಕ್ಷರೇ ಹೀಗೆ ಹೇಳಿದುದನ್ನು ನೋಡಿಯಾದರೂ ಇವರು ಎಚ್ಚತ್ತರೆ ಒಳ್ಳೆಯದು.

**ಜಾತೀಯತೆ ಮತ್ತು ಜಾತ್ಯಂಧತೆ.**

ಜಾತೀಯತೆಯ ಯಜ್ಞಮಾಡುವುದು ಅಶಕ್ಯವೇ ಸರಿ. ಏಕೆಂದರೆ ಅದು ಮನುಷ್ಯನ ಜೀವನದಲ್ಲಿ ಬೆರೆತು ಹೋಗಿರುತ್ತದೆ. ಮನುಷ್ಯನು ತನ್ನ ಹೆಸರನ್ನು ಮರೆಯುವುದು ಹೇಗೆ ಅಶಕ್ಯವೋ ಹಾಗೆಯೇ ಆತನು ತನ್ನ ಜಾತೀಯತೆಯನ್ನು ಬಿಡುವುದೂ ಅಸಾಧ್ಯವೇ ಸರಿ. ಸ್ವಜಾತಿಯ ಆಚಾರವಿಚಾರಗಳಲ್ಲಿರುವ ಪ್ರೇಮಾದರ, ಸ್ವಜಾತಿಯ ಪೂರ್ವಜರಲ್ಲಿರುವ ಭಕ್ತಿವಿಶ್ವಾಸ, ಸ್ವಜಾತಿಯ ಸಂಸ್ಕೃತಿಯಲ್ಲಿ ಆದರಾಭಿಮಾನ ಇವೆಲ್ಲಾ ಒಂದು ವ್ಯಕ್ತಿಯ ಜಾತೀಯತೆಯ ಕುರುಹುಗಳು. ಜಾತಿಯ ಕಲ್ಪನೆ ಇರುವ ವರೆಗೂ ಈ ಜಾತೀಯತೆಯು ಸ್ವಲ್ಪಾದರೂ ಇದ್ದೇ ಇರುವುದು ಸ್ವಾಭಾವಿಕ.

ಇಂಥ ಜಾತೀಯತೆಯು ಯಾರಲ್ಲಿಲ್ಲ? ಗಾಂಧೀಜಿಯವರಾದರೂ ತಾವು ಹಿಂದು ಜಾತಿಯವರೆಂದೇ ಹೇಳಿಕೊಳ್ಳುವುದಿಲ್ಲವೆ? ಅದರಿಂದುಂಟಾಗುವ ಅನರ್ಥವೇನು?

ಈ ಜಾತೀಯತೆಯು ಅನ್ಯ ಜಾತಿಯವರ ಏಳಿಗೆಯನ್ನು ಪ್ರತಿಬಂಧಗೊಳಿಸಬಾರದು. ಸ್ವಜಾತಿಯವರ ಹಿತಕ್ಕಾಗಿ ಅನ್ಯ ಜಾತಿಯವರನ್ನು ಯಾವ ರೀತಿಯಲ್ಲಿಯೂ ಹತ್ತಿಕ್ಕಬಾರದು. ಸಾರ್ವಜನಿಕ ಕಾರ್ಯಗಳಲ್ಲಿ ಗುಣಪಕ್ಷಪಾತಿಗಳಾಗಿರಬೇಕೇ ವಿನಾ ಜಾತಿಪಕ್ಷಪಾತಿಗಳಾಗಬಾರದು. ಯಾರು ಜಾತಿಪಕ್ಷಪಾತಿಗಳೋ ಅವರೇ ಜಾತ್ಯಂಧರೆಂದು ತಿಳಿಯಬೇಕು. ಜಾತಿಯ ಮುಂದೆ ಅವರಿಗೆ ಬೇರೆ ಯಾವುದೂ ತೋರುವುದೇ ಇಲ್ಲ. ಇದು ರಾಷ್ಟ್ರಕ್ಕೆ ಅನರ್ಥಕರ. ಮತ್ತು ಇದನ್ನು ನಾಶಮಾಡಲು ಪ್ರಯತ್ನಿಸಬೇಕಾದುದೂ ವಿಹಿತ. ನಮ್ಮ ಪ್ರಯತ್ನವು ಎಷ್ಟು ನಿಷ್ಪಕ್ಷಪಾತವಾಗಿ ನಡೆಯುವುದೋ ಅಷ್ಟು ಈ ಜಾತ್ಯಂಧತೆಯು ಕಡಿಮೆಯಾಗುವುದೂ ಶಕ್ಯ.

ಸತ್ಯ ಮತ್ತು ಅಹಿಂಸೆಗಳ ಪ್ರತಿಜ್ಞೆಮಾಡಿದ ಕಾಂಗ್ರೆಸ್ ಕೆಲಸಗಾರರು ಈ ಜಾತ್ಯಂಧತೆಯಿಂದ ನಿವೃತ್ತರಾಗುತ್ತೇವೆಂದು ಮತ್ತೊಂದು ಪ್ರತಿಜ್ಞೆಯನ್ನು ಮಾಡಬೇಕಾದ ಅವಶ್ಯಕತೆಯಿದ್ದಂತೆ ನಮಗೆ ತೋರುವುದಿಲ್ಲ. ಸತ್ಯವಂತರು ಗುಣೈಕ ಪಕ್ಷಪಾತಿಯಾಗದೆ ಜಾತಿಪಕ್ಷಪಾತಿಯಾಗುವರೆ? ಸತ್ಯ ವ್ರತದಲ್ಲಿಯೇ ಇದು ಸೇರಿ ಹೋಗಿದೆ. ಹೀಗಿರುವಾಗ ಇನ್ನೊಂದು ಬೇರೆ ಪ್ರತಿಜ್ಞೆಯೇಕೆ? ಹೀಗೆ ಪ್ರತಿಜ್ಞೆ ಪ್ರಾರಂಭವಾಯಿತೆಂದರೆ ಡಂಭಾಚಾರದ ಪ್ರತಿಜ್ಞೆಗಳೂ ಮುಂದೆ ಬರಬಹುದು. ಅದರಿಂದ ಅನೇಕರು ಮೋಸಹೋಗಬಹುದು. ಸತ್ಯ ವ್ರತಪಾಲನೆಯು ನಮ್ಮಲ್ಲಿ ಎಷ್ಟು ಬಲಿಯುವುದೋ ಅಷ್ಟು ಜಾತ್ಯಂಧತೆಯು ತಾನೇ ನಿವಾರಣೆಯಾಗುತ್ತದೆ.

### ಗುಪ್ತ ಚರ್ಚೆಗೆ ಬಹಿರಂಗದ ಮನ್ನಣೆ ಏಕೆ?

ಕಾಂಗ್ರೆಸ್ ಕೆಲಸಗಾರರು ಒಕ್ಕಟ್ಟಿಗೆ ಸೇರಿ ತಮ್ಮ ತಮ್ಮಲ್ಲಿರುವ ಭಿನ್ನಾಭಿಪ್ರಾಯಗಳನ್ನೋ ಅಥವಾ ತಪ್ಪು ತಿಳುವಳಿಕೆಗಳನ್ನೋ ಕುರಿತು ಮಾತನಾಡುವುದು ಅಗತ್ಯ. ಅದು ತುಂಬಾ ಫಲಕಾರಿಯಾದುದು. ಬೆಳಗಾವಿಯಲ್ಲಿ ಅನೇಕ ಮಹಾಶಯರು ಕೂಡಿ ಗುಪ್ತವಾಗಿ ಮಾತನಾಡಿ ತಮ್ಮ ತಮ್ಮ ಸಮಾಧಾನಮಾಡಿಕೊಂಡುದು ನಾಡಿಗೆ ಕ್ಷೇಮಕರವೇ ಸರಿ.

ಆ ಗುಪ್ತ ಚರ್ಚೆಯ ಪರಿಣಾಮವೂ ಗುಪ್ತವಾಗಿಯೇ ಇರಬೇಕಾದುದು ವಿಹಿತವಾಗಿದ್ದಿತು. ಸಾರ್ವಜನಿಕವಾದ ಮನ್ನಣೆಯೇನೂ ಅದಕ್ಕೆ ಬೇಕಾಗಿರಲಿಲ್ಲ. ಹಾಗೆ ಬೇಕಾಗಿದ್ದರೆ ಚರ್ಚೆಯ ಸಂಗತಿಗಳನ್ನೂ ಬಹಿರಂಗಪಡಿಸಬೇಕಾಗಿದ್ದಿತು. ಈ ಮಹಾಶಯರು ಚರ್ಚಿಸಿದ ಸಂಗತಿಗಳು ಸಾರ್ವಜನಿಕವಾದವುಗಳಷ್ಟೆ. ಇವರು ತಿಳಿದಿರುವ ಜಾತೀಯತೆ ಅಥವಾ ತಪ್ಪು ತಿಳುವಳಿಕೆಗಳು ಇವರ ಮಟ್ಟಿಗೇನೇ ಇಲ್ಲ. ಕಾಂಗ್ರೆಸ್ಸಿನ ಸಾವಿರಾರು ಜನರು ಇವರಂತೆಯೇ ತಿಳಿದುಕೊಂಡಿರುವುದೂ ಉಂಟು. ಅವರೆಲ್ಲಾ ಇವರ ಗುಪ್ತ ಚರ್ಚೆಯಲ್ಲಿಯ ಗುಪ್ತ ಪರಿಣಾಮದಿಂದಲೇ ಸಮಾಧಾನ ಹೊಂದಬೇಕೆಂದು ಹೀಗೆ ಪ್ರಕಟನೆಯನ್ನು ತೆಗೆದದ್ದಾಗಿದೆಯೆ ?

ಹೀಗೆ ಮಾಡಿದ್ದರಿಂದ ಇವರ ಉದ್ದೇಶ ನೆರವೇರದೆ ಜನರು ಅನೇಕ ತರ್ಕಗಳನ್ನು ಮಾಡಲು ಇವರೇ ಅವಕಾಶವನ್ನು ಕಲ್ಪಿಸಿಕೊಟ್ಟಂತಾಯಿತು. "ಪ್ರಜಾಮತ" ಪತ್ರಿಕೆಯಲ್ಲಿಯ "ತಲೆಹೋಕ" ರು ಗುಪ್ತ ಚರ್ಚೆಯ ಮೇಲೆ ಎಷ್ಟೋ ಬೆಳಕು ಬೀಳುವಂತೆ ಸಾಹಸಪಡಬೇಕಾಯಿತು. ಗುಪ್ತ ಚರ್ಚೆಯ ಈ ಮುಸುಕಿನ ಪ್ರಕಟನೆಯಿಂದಲೇ ಹೊರಗಿದ್ದ ಕಾಂಗ್ರೆಸ್ ಕೆಲಸಗಾರರಲ್ಲಿಯೂ ಬಹು ಜನರು ಬೇರೆ ಬೇರೆ ಗ್ರಹಿಸಲು ಕಾರಣವಾಯಿತು.

### ಶ್ರೀ ದಿವಾಕರರ ಸ್ಪಷ್ಟೋಕ್ತಿ.

ಬೆಳಗಾವಿ ಗುಪ್ತ ಚರ್ಚೆಯ ಸಂಬಂಧವಾಗಿ ಅಧ್ಯಕ್ಷರಿಂದ ಪ್ರಸಿದ್ಧವಾದ ಪ್ರಕಟನೆಯಾಗಲಿ ಬೇರೆ ಟೀಕೆ ಟಿಪ್ಪಣಿಗಳಾಗಲಿ ಸರಿಯಾದ ತಿಳುವಳಿಕೆಯನ್ನುಂಟುಮಾಡಲು ಸ್ವಲ್ಪವೂ ಸಹಾಯವಾಗಿರಲಿಲ್ಲ. "ಎಲ್ಲಾ ಮಾತು ಮುಗಿಯಿತು, ಬೆಲ್ಲದ ಹಾಗೆ ಆಯಿತು" ಎಂಬುದೊಂದೇ ತಿಳಿದಿದ್ದಿತು.

ಶ್ರೀಯುತ ದಿವಾಕರ ರಂಗನಾಥರಾಯರು "ಸಭೆಗೆ ಮುಖ್ಯವಾಗಿ ಧಾರವಾಡ, ಬೆಳಗಾವಿ ಈ ಎರಡು ಜಿಲ್ಹೆಯವರೇ ಬಂದಿದ್ದರೆಂದು ಹೇಳಬಹುದು." ಎಂಬುದಾಗಿ ಸ್ಪಷ್ಟ ತಿಳಿಸಿದ್ದರಿಂದ ಗುಪ್ತ ಚರ್ಚೆಯಲ್ಲಿ ಎಲ್ಲಾ ಮಾತು ಎಷ್ಟು ಮುಗಿದಿರಬಹುದೆಂಬುದು ಸ್ವಲ್ಪಾದರೂ ಗೊತ್ತಾಯಿತು. ವಿಜಾಪುರ ಜಿಲ್ಹೆ, ಮಂಗಳೂರು, ಬಳ್ಳಾರಿ ಭಾಗಗಳ ಕಡೆಗೆ ಲಕ್ಷಿಸಿದ್ದಾದರೆ ಪಂಚಪಾಂಡವರು ಮಂಚದಕಾಲಿನ ಹಾಗೆ ಮೂರು ಮಂದಿ ಬಂದರೆಂದು ಎರಡು ಬೆರಳುಮಾಡಿ ತೋರಿಸಿದಂತೆ ಮೊದಲಿನ ಪ್ರಕಟನೆಯಿದ್ದಿತೆಂದು ತೋರುವುದಿಲ್ಲವೆ?

ಈ ಗುಪ್ತ ಚರ್ಚೆಯ ಪರಿಣಾಮವನ್ನು ಕರ್ನಾಟಕ ಪ್ರಾಂತಿಕ ಕಮಿಟಿಯ ಮುಂದೆ ಇಡುವರಷ್ಟೆ. ಆಗಲಾದರೂ ಎಲ್ಲ ಭಾಗದವರೂ ಸೇರಿ ಮತ್ತೊಮ್ಮೆ ಬಿಚ್ಚು ಮನಸ್ಸಿನಿಂದ ಮಾತನಾಡಿ ಜಾತ್ಯಂಧತೆಯನ್ನು ಕೃತಿಯಿಂದಲೇ ನಿವಾರಣೆಮಾಡಲು ಸಿದ್ಧರಾಗಲೆಂದೂ ನಿಜವಾಗಿಯೂ ಎಲ್ಲ ಮಾತೂ ಮುಗಿದು ಬೆಲ್ಲದ ಹಾಗೆಯೇ. ಮುಂದಿನ ಕಾರ್ಯಗಳನ್ನು ಎಲ್ಲರೂ ಮಾಡಲೆಂದೂ ನಾವು ಹಾರೈಸುತ್ತೇವೆ.

# ಪಟಾಕ್ಷಿ ಹಾರಿಸಬೇಡಿರಿ.

ದೀಪಾವಳಿ ಹಬ್ಬದಲ್ಲಿ ಪಟಾಕ್ಷಿ ಬಿರುಸು ಬಾಣ ಮೊದಲಾದವುಗಳನ್ನು ಹಾರಿಸಿ ಲಕ್ಷಾಂತರ ರೂ. ಗಳನ್ನು ಸುಟ್ಟುಬಿಡುತ್ತಿದ್ದಾರಷ್ಟೆ. ಈ ಅನರ್ಥಕರ ತಮಾಷೆಯನ್ನು ನಿಲ್ಲಿಸಬೇಕೆಂದು ಮುಂಬೈ ಸರಕಾರದವರು ಯೋಚಿಸುತ್ತಿದ್ದಾರೆಂದು ತಿಳಿದಿದೆ.

ಬಹು ಸ್ತುತ್ಯ ಪ್ರಯತ್ನ. ದೀಪಾವಳಿ ಹಬ್ಬದಲ್ಲಿ ಪಟಾಕ್ಷಿಗಳನ್ನು ಹಾರಿಸಕೂಡದೆಂದೇ ಸರಕಾರದವರು ಒಂದು ಶಾಸನ ಮಾಡುವವರಿದ್ದಾರೆ. ಇಂಥ ಶಾಸನವಾಗಲೇ ಬೇಕು. ಪರದೇಶಗಳಿಗೆ ಈ ಮೂಲಕ ಹೋಗುವ ಹಣವು ನಿಂತಷ್ಟು ಒಳ್ಳೆಯದೇ ಸರಿ.

ಹಬ್ಬದಲ್ಲಿ ಈ ತಮಾಷೆಗಾಗಿ ವ್ಯರ್ಥ ಹಣ ವೆಚ್ಚಮಾಡುವುದಕ್ಕಿಂತ ಅದೇ ದುಡ್ಡನ್ನು ಬಡ ಹುಡುಗರಿಗೆ ಪುಸ್ತಕ, ಮಿಠಾಯಿ ಖಾದಿ ಬಟ್ಟೆಗಳನ್ನು ಹಂಚುವುದರಲ್ಲಿ ವಿನಿಯೋಗಿಸಿದರೆ ಎಷ್ಟೋ ಒಳ್ಳೆಯದು. ಜನರು ಹಿತಾಹಿತಗಳನ್ನು ಅರಿಯದೆ ನಡೆದರೆ ಸರಕಾರದವರು ಹೀಗೆ ಶಾಸನ ಮೂಲಕವಾಗಿ ಅವರು ಸರಿಯಾದ ರೀತಿಯಲ್ಲಿ ನಡೆಯುವಂತೆ ಪ್ರಯತ್ನಿಸಬೇಕಾಗುತ್ತದೆ.

---

## ಆದಿ ಹಿಂದುಗಳ ಮೇಲೆ ಅತ್ಯಾಚಾರ!

ಆದಿಹಿಂದುಗಳ ಮೇಲೆ ಸ್ಪೃಶ್ಯ ಹಿಂದುಗಳು ಅಲ್ಲಲ್ಲಿ ಅನೇಕ ಅತ್ಯಾಚಾರಗಳನ್ನು ನಡೆಸುತ್ತಿದ್ದಾರಷ್ಟೆ. ಈ ಶೋಚನೀಯ ಸ್ಥಿತಿಯು ಹಿಂದು ಸಮಾಜದಿಂದ ದೂರಾದ ವಿನಾ ಹಿಂದು ಸಮಾಜದ ಮೇಲೆ ಅನೇಕ ಮುಸಲ್ಮಾನರಿಂದಾಗತಕ್ಕ ಅತ್ಯಾಚಾರಗಳೂ ನಿಲ್ಲುವುದಿಲ್ಲ. ಸನಾತನಿಗಳೆಂದು ಹೇಳಿಕೊಳ್ಳುವ ಅನೇಕರ ಈ ಪಾಪಾಚರಣೆಯೇ ಮುಸಲ್ಮಾನರ ಅತ್ಯಾಚಾರಗಳ ಮೂಲಕ ಹಿಂದು ಜನಾಂಗವನ್ನು ನೋಯಿಸುತ್ತಲಿದೆ.

ಖುಶಾಲಪುರ— ಸಂಯುಕ್ತ ಪ್ರಾಂತದಲ್ಲಿ ಇದೊಂದು ಗ್ರಾಮ. ಆದಿಹಿಂದುಗಳು ಸಾರ್ವಜನಿಕ ಬಾವಿಯಲ್ಲಿ ನೀರನ್ನು ತಂದುದರಿಂದ ಸ್ಪೃಶ್ಯ ಹಿಂದುಗಳು ಒಟ್ಟುಗೂಡಿ ಹೊಡೆದರು. ಒಬ್ಬ ಆದಿಹಿಂದು ಗೃಹಸ್ಥನನ್ನು ಹೊಡೆದು ಕೊಂದರಂತೆ!

ಕೋಟಿಸರಾಯಿ— ಇದು ಕೂಡಾ ಸಂಯುಕ್ತ ಪ್ರಾಂತದಲ್ಲಿದೆ. ಆದಿ ಹಿಂದು ಹೆಣ್ಣುಮಕ್ಕಳು ಸಾರ್ವಜನಿಕ ಬಾವಿಯಿಂದ ನೀರು ತರಲು ಅವರನ್ನು ಬಹಳ ಹೊಡೆದರು. ಅವರ ಪಾತ್ರೆಗಳನ್ನು ಒಡೆದರು. ಕೆಲವರ ಮನೆಗೆ ಬೆಂಕಿ ಹಚ್ಚಿದರು.

ಬಿಜನೂರ ಜಿಲ್ಲೆ— ಸಂಯುಕ್ತ ಪ್ರಾಂತದ ಈ ಜಿಲ್ಲೆಯ ಅನೇಕ ಕಡೆ ಆದಿ ಹಿಂದುಗಳಿಗೆ ಸ್ಪೃಶ್ಯ ಹಿಂದುಗಳು ನಾನಾ ಹಿಂಸೆಗಳನ್ನು ಕೊಡುತ್ತಿದ್ದಾರೆಂದು ಕಾಂಗ್ರೆಸ್ ಕೆಲಸಗಾರರಾದ ಶ್ರೀ. ಬಿಹಾರಿಲಾಲರು ಪ್ರಕಟಿಸಿದ್ದಾರೆ. ಸ್ಪೃಶ್ಯ ಹಿಂದುಗಳು ಘಾತಕವಾದ ಈ ದುಷ್ಟ ಭಾವನೆಯನ್ನು ತೆಗೆದುಹಾಕಿದರೇನೇ ಇವರಿಗೆ ಕ್ಷೇಮ.

---

—ತ್ರಿವೇಂದ್ರಂ ದ ಹತ್ತಿರ ಅಟ್ಟಿಂಗಾಲ ಎಂಬಲ್ಲಿ ಸಭೆ ಸೇರಿದ್ದಿತು. ಪೋಲಿಸರು ಚದುರಿಸ ಹೋದರು. ಅವರಿಗೆ ಕಲ್ಲಿನ ಏಟು ಬಿದ್ದವಂತೆ. ಆಗ ಅವರು ಗುಂಡು ಹಾರಿಸಿದರು. ಜನರಿಗೆ ಗಾಯಗಳಾದವು. ಇಬ್ಬರು ಸತ್ತರೆಂದು ಸುದ್ದಿ.

# ಹಿಟ್ಲರನಿಗೆ ಹಂಚಿಹೋಗುವ ದೇಶ!

ಹೆರ್ ಹಿಟ್ಲರನು ತನ್ನ ಭುಜಬಲದಿಂದ ಒಂದೊಂದೇ ತನ್ನ ನೆರೆಯ ಪ್ರದೇಶವನ್ನು ಆಕ್ರಮಿಸಿಕೊಳ್ಳುತ್ತಿದ್ದಾನಷ್ಟೆ. ಆಸ್ಟ್ರಿಯಾದೇಶವನ್ನು ಆಕ್ರಮಿಸಿಕೊಂಡನಂತರ ಝುಕೋಸ್ಲೋವ್ಹಾಕಿಯಾ ದೇಶದ ಕೆಲವು ಭಾಗವನ್ನು ನುಂಗಲು ಸಿದ್ಧನಾಗಿದ್ದಾನೆ. ಆಂಗ್ಲ ಮತ್ತು ಫ್ರೆಂಚ ರಾಷ್ಟ್ರಗಳು ಹಿಟ್ಲರನಿಗೆ ಆಹುತಿ ಕೊಡಲು ಝುಕ್ ಸರಕಾರಕ್ಕೆ ಬುದ್ಧಿ ಹೇಳುತ್ತಿದ್ದಾರೆ. ಇಂದಲ್ಲ ನಾಳೆ ಹಿಟ್ಲರನಿಗೆ ಹಂಚಿಹೋಗುವ ಝುಕೊಸ್ಲೋವ್ಹಾಕಿಯಾ ದೇಶದ ಸ್ಥಿತಿಗತಿಗಳನ್ನು ಇಲ್ಲಿ ಕೊಡಲಾಗಿದೆ—

ಅದೊಂದು ಮಧ್ಯಯುರೋಪದಲ್ಲಿರುವ ಚಿಕ್ಕರಾಜ್ಯ. ಅಲ್ಲಿ ಫ್ರಾನ್ಸ್‌ದೇಶದಲ್ಲಿರುವಂತೆ ಲೋಕಸತ್ತಾತ್ಮಕ ಪ್ರಭುತ್ವವಿದೆ. ಅಲ್ಲಿ ಈ ವಿಧವಾದ ಪ್ರಭುತ್ವವು ಸ್ಥಾಪನೆಯಾಗಿ ೧೯ ವರುಷಗಳಾದವು. ಅಲ್ಲಿಯ ಒಟ್ಟು ಜನಸಂಖ್ಯೆ ೧೯೩೦ನೆಯ ಇಸವಿಯಲ್ಲಿ ೧೪೭೨೯೫೩೬. ಎಂದರೆ ನಿಜಾಮ ರಾಜ್ಯಕ್ಕಿಂತ ಸ್ವಲ್ಪ ದೊಡ್ಡದು. ಈ ಜನಸಂಖ್ಯೆಯಲ್ಲಿ ಝುಕ್ ಜನಗಳೇ ವಿಶೇಷ ಎಂದರೆ ೯೬,೮೮,೭೭೦ ಜನರು. ಜರ್ಮನ್ ಜನರಾದರೋ ಆ ರಾಜ್ಯದಲ್ಲಿ ಇವರ ಮೂರನೆಯ ಒಂದು ಭಾಗದಷ್ಟು ಎಂದರೆ ೩೨,೩೧,೬೮೮ ಜನರಿದ್ದಾರೆ.

ಈ ಝುಕ್ ಮತ್ತು ಜರ್ಮನ್ ಜನರು ಬಹುದಿನಗಳಿಂದಲೂ ಪರಸ್ಪರ ಪ್ರೇಮಾದರಗಳಿಂದಲೇ ಇದ್ದರು. ಇವರಲ್ಲಿ ಪರಸ್ಪರ ಶರೀರಸಂಬಂಧ ಕೂಡಾ ನಡೆಯುತ್ತಿತ್ತು.

ಹೀಗಿದ್ದರೂ ಸಹೋದರರಲ್ಲಿ ಒಬ್ಬನು ತಾನು ಝುಕ್ ಎಂದೂ ಇನ್ನೊಬ್ಬನು ಜರ್ಮನ್ ಎಂದೂ ಹೇಳಿಕೊಳ್ಳುತ್ತಿದ್ದ ರೂಢಿ. ಇಂಥ ಪರಸ್ಪರ ಸಂಬಂಧವಿದ್ದ ಈ ಉಭಯ ಜಾತಿಯವರಲ್ಲಿ ದಿನೆ ದಿನೆ ವಿರೋಧ ಹೆಚ್ಚಲಾರಂಭವಾಯಿತು. ಇದಕ್ಕೆ ಆ ಖಂಡದಲ್ಲಿ ಉಂಟಾದ ರಾಷ್ಟ್ರೀಯ ಜಾಗೃತಿಯೇ ಕಾರಣ. ಅಲ್ಲಿಯ ಜರ್ಮನ್ ಜನರು ತಾವು ಪ್ರತ್ಯೇಕ ಜಾತಿಯವರೆಂತಲೂ ತಾವೂ ಸ್ವತಂತ್ರರಾಗಿಯೇ ಇರಬೇಕೆಂತಲೂ ಹವಣಿಸಲಾರಂಭಿಸಿದರು.

ನೆರೆಯಲ್ಲಿಯ ಜರ್ಮನ್ ರಾಷ್ಟ್ರವು ಜಾಗೃತವಾಗಿ ಹಿಟ್ಲರನ ನೇತೃತ್ವದಲ್ಲಿ ಅದ್ಭುತವಾದ ಸಂಘಟನೆ ಹೊಂದುತ್ತಿದ್ದುದನ್ನು ಈ ಝುಕ್ ರಾಜ್ಯದಲ್ಲಿದ್ದ ಸುಡೇಟಾನ್ ಜರ್ಮನ್ ಜನರು ನೋಡಿ ತಾವು ಜರ್ಮನ್ ರಾಷ್ಟ್ರದಲ್ಲಿ ಸೇರಬೇಕೆಂದು ಚಟುವಟಿಕೆಯನ್ನು ನಡೆಯಿಸಿದರು. ಕಳೆದ ೧೦-೧೨ ವರುಷಗಳಿಂದಲೂ ಆ ದೇಶದ ಜರ್ಮನ್ ಜನರಲ್ಲಿ ಸ್ವತಂತ್ರವಾಗಿರಬೇಕೆಂಬ ಆಕಾಂಕ್ಷೆಯು ಹೆಚ್ಚುತ್ತಲೇ ಬಂದಿದೆ.

ಇತ್ತೀಚಿಗೆ ಹಿಟ್ಲರನಿಗೂ ಇವರ ಈ ಜಾಗೃತಿಯು ಬಹು ಅನುಕೂಲವಾಗಿಯೇ ತೋರಿತು. ತನ್ನ ಮಹತ್ವಾಕಾಂಕ್ಷೆಯನ್ನು ಸಾಧಿಸಿಕೊಳ್ಳಲು ಅವರ ಚಟುವಟಿಕೆಗೆ ನೆರವಾಗುತ್ತಲೇ ಬಂದನು.

ಝುಕ್ ರಾಜ್ಯವೇನೂ ಕಾಡುಸ್ಥಿತಿಯಲ್ಲಿಲ್ಲ. ಅಲ್ಲಿಯ ಸಾರ್ವಜನಿಕ ಸಂಸ್ಥೆಗಳು ನಾಗರಿಕ ರಾಷ್ಟ್ರಗಳಿಗೆ ಆದರ್ಶಪ್ರಾಯವಾಗಿವೆ. ಅಲ್ಲಿಯ ಜನರ ರೀತಿನೀತಿಗಳೂ ಸಾರ್ವಜನಿಕ ಕಾರ್ಯ ಪದ್ಧತಿಗಳೂ ಬಹು ಉನ್ನತವಾದವುಗಳು.

ಅಲ್ಲಿಯ ಲೋಕಸತ್ತಾತ್ಮಕ ಪ್ರಭುತ್ವವು ಕೂಡಾ ಮಾದರಿಯಾದುದೇ ಆಗಿದೆ. ಆ ದೇಶದಲ್ಲಿ ಎರಡು ಶಾಸನಮಂಡಲಗಳಿವೆ. ಚೆಂಬರ್ ಎಂಬ ಮಂಡಲದಲ್ಲಿ ೩೦೦ ಜನ ಸಭಾಸದರಿರುತ್ತಾರೆ. ಆರು ವರುಷಗಳಿಗೊಂದು ಸಾರೆ ಆ ಶಾಸನಮಂಡಲದ ಚುನಾವಣೆಯಾಗುತ್ತದೆ. ಸಿನೇಟ್ ಎಂಬ ಇನ್ನೊಂದು ಮಂಡಲದಲ್ಲಿ ೨೦೦ ಜನ ಸಭಾಸದರಿರುತ್ತಾರೆ. ಇದರ ಚುನಾವಣೆಯು ಎಂಟು ವರುಷಗಳಿಗೊಂದು ಸಾರೆ ಆಗುತ್ತದೆ. ಈ ಎರಡೂ ಮಂಡಲದವರು ಕೂಡಿ ತಮ್ಮ ರಾಷ್ಟ್ರದ ಅಧ್ಯಕ್ಷನನ್ನು ಆರಿಸುತ್ತಾರೆ. ಅಧ್ಯಕ್ಷರ ಕಾಲಾವಧಿಯು ಏಳು ವರುಷಗಳ ವರೆಗೆ ಇರುತ್ತದೆ.

ಈ ರಾಜ್ಯದಲ್ಲಿದ್ದ ಜರ್ಮನ್ ಜನರು ಮೊದಲು ರಾಜಕಾರಣದಲ್ಲಿ ವಿಶೇಷ ಪ್ರವೇಶಿಸಿರಲಿಲ್ಲ. ಇತ್ತೀಚಿಗೆ ಇವರು ರಾಜಕಾರಣದಲ್ಲಿ ಬಹು ಮುಂದಾಳುಗಳಾದರು. ೧೯೩೫ ರಲ್ಲಿ ಇವರು ಸಂಘಟಿತರಾಗಿ ಚುನಾವಣೆಯಲ್ಲಿ ಹೋರಾಡಿ ಚೆಂಬರ್ ಎಂಬ ಮಂಡಲದಲ್ಲಿ ೪೪ ಸ್ಥಾನಗಳನ್ನು ಆಕ್ರಮಿಸಿಕೊಂಡರು. ಹೆರ್. ಹೆನಲಿನ್ ಎಂಬಾತನೇ ಈಗ ಸುಡೇಟಾನ್ ಜರ್ಮನ್‌ರ ಮುಂದಾಳು.

ಝುಕ್ ಜನರು ಮಹಾಶೂರರೂ ಇದ್ದಾರೆ. ಇವರ ರಾಜ್ಯದಲ್ಲಿ ಏಳು ಲಕ್ಷ ಸೈನ್ಯವಿದೆ. ಸಮಯ ಬಂದರೆ ಹತ್ತು ಲಕ್ಷದ ವರೆಗೂ ಸೈನ್ಯವನ್ನು ಹೆಚ್ಚಿಸಬಲ್ಲರು.

ಅಫಗಾಣಿಸ್ಥಾನದಲ್ಲಿ ಜಾಗೃತಿಯುಂಟಾದರೆ ಪಂಜಾಬದ ಅನೇಕ ಮುಸಲ್ಮಾನರಿಗೂ ಅದು ಹೇಗೆ ಉತ್ತೇಜಕರವಾಗಿ ತೋರಬಹುದೋ ಹಾಗೆಯೇ ಜರ್ಮನಿಯ ಜಾಗೃತಿಯು ಝುಕ್ ರಾಜ್ಯದಲ್ಲಿದ್ದ ಜರ್ಮನ್‌ರಿಗೆ ಉತ್ಸಾಹದಾಯಕವಾದುದಾಗಿ ಪರಿಣಮಿಸಿತು. ಅಂತೆಯೇ ಅವರು ಝುಕ್ ರಾಜ್ಯವನ್ನು ತುಂಡುಮಾಡಿ ತಮ್ಮ ಭಾಗವನ್ನು ಜರ್ಮನಿಗೆ ಕೂಡಿಸಿರೆಂತಲೂ ಹೇಳಲು ಸಿದ್ಧರಾದರು.

೧೦೦ ಕ್ಕೆ ೨೫ ರಂತೆ ಜರ್ಮನ್ ಜನರಿರತಕ್ಕ ಝುಕ್ ರಾಜ್ಯವನ್ನು ಜರ್ಮನಿಗೆ ಕೂಡಿಸಬೇಕೆಂದು ಈಗ ಇಂಗ್ಲಿಷರೇ ಝುಕ್ ಸರಕಾರಕ್ಕೆ ಬುದ್ಧಿ ಹೇಳಲು ಸಿದ್ಧರಾಗಿದ್ದಾರೆ.

ಜರ್ಮನ್ ಜನರು ಝುಕ್ ರಾಜ್ಯದಿಂದ ಬೇರೆಯಾದರೆ ತಾವೂ ಬೇರೆಯಾಗುವೆವೆಂದು ನೆರೆಯ ಹಂಗೇರಿಯನ್ ಜನರೂ ಹೇಳುತ್ತಿದ್ದಾರೆ. ಝುಕ್ ರಾಜ್ಯದಲ್ಲಿ ಈ ಜನರು ೬,೯೧,೯೨೩ ಜನರಿದ್ದಾರೆ. ಎಲ್ಲರೂ ಹೀಗೆ ತಮ್ಮ ತಮ್ಮ ನೆರೆಯ ರಾಷ್ಟ್ರಗಳಲ್ಲಿ ಸೇರಿಕೊಂಡರೆ ಝುಕ್ ರಾಜ್ಯದ ಗತಿಯೇನಾಗಬಹುದು? ಜನ್ಮಭೂಮಿಯ ಮೇಲೆ ಭಕ್ತಿಯಿಲ್ಲದ ಜನರು ಜಾತ್ಯಾಭಿಮಾನದಿಂದ ಹೀಗೆ ನೆರೆಯ ರಾಷ್ಟ್ರವನ್ನು ಆಶ್ರಯಿಸಿದರೆ ಆಗುವ ಅನರ್ಥವನ್ನು ಝುಕ್‌ರಾಜ್ಯವು ಈಗ ಅನುಭವಿಸುತ್ತಲಿದೆ.

---

# ಕಾಂಗ್ರೆಸ್ಸಿನಲ್ಲಿಯೂ ವಸೀಲಿ ಬಾಜಿ?

ಕಾಂಗ್ರೆಸ್ಸಿನಿಂದ ಒಡೆದು ಹೊರಗೆ ಬಂದು ಸ್ವಾರ್ಥಕ್ಕಾಗಿ ಹೋರಾಡುತ್ತಿರುವ ಡಾ. ಖರೆಯವರು ಹೀಗೆ ಪ್ರಕಟಿಸಿದ್ದಾರೆ.—

ಸೌ|| ಸರೋಜನಿ ದೇವಿಯವರು ತಾ. ೨೧-೬-೩೮ ನೇ ದಿನ ವಾಲ್ಕರ್‌ದಕ್ ಎಂಬವರಿಗೆ ಅಡ್ವೋಕೇಟ್ ಜನರಲ್ ಕೆಲಸಮಾಡಲು ನನಗೆ ವಸೀಲಿ ಪತ್ರ ಬರೆದಿದ್ದರು.

ಸರದಾರ ವಲ್ಲಭಭಾಯಿಯವರು ತಾ. ೨೧-೮-೩೭ ನೇ ದಿನ ಶ್ರೀ. ರತನಚಂದ ಇವರಿಗೆ ಒಂದು ಕಂಟ್ರಾಕ್ಟ ಕೊಡಿಸುವ ಬಗ್ಗೆ ವಸೀಲಿಪತ್ರ ನನಗೆ ಬರೆದಿದ್ದಾರೆ. ಇವರ ಬಂಧುಗಳು ಕಾಂಗ್ರೆಸ್ಸಿನ ಸಹಾಯಕರಿದ್ದಾರೆಂದೂ ಆ ಪತ್ರದಲ್ಲಿ ತಿಳಿಸಿದ್ದಾರೆ.

ಶ್ರೀ. ಜಮನಾಲಾಲ ಬಜಾಜರ ಪರವಾಗಿ ಬಂದ ಪತ್ರದಲ್ಲಿ ಭಯಂಕರ ಅಪರಾಧಮಾಡಿದವನನ್ನು ಕೆಲವು ಕಟ್ಟಳೆ ಮೇಲೆ ಬಿಡುಗಡೆಮಾಡಲು ತಿಳಿಸಿತ್ತು.



ಶಾ. ಶ. ೧೮೬೦ ನೆಯ ಆಶ್ವೀಜ ಶು|| ೩ ಸೋಮವಾರ.

# ಗಾಂಧೀ ಮಹಾರಾಜಕೀ ಜೈ!

ಮಹಾತ್ಮಾ ಗಾಂಧಿಯವರ ೭೦ ನೆಯ ವರ್ಷವು ಬರುವ ಅಕ್ಟೋಬರ್ ೨ ನೆಯ ತಾರೀಖಿನ ದಿನ ಪ್ರಾರಂಭವಾಗುವುದಷ್ಟೆ. ಮಹಾತ್ಮರ ೭೦ ನೆಯ ಈ ವರ್ಷ ವರ್ಧಂತ್ಯುತ್ಸವವು ಅಖಿಲ ಭರತ ಖಂಡದಲ್ಲಿ ಬಹು ಸಂಭ್ರಮದಿಂದ ಜರುಗುವುದಲ್ಲದೆ ಪ್ರಪಂಚದ ಬೇರೆ ಬೇರೆ ರಾಷ್ಟ್ರಗಳಲ್ಲಿಯೂ ಅನೇಕ ಕಡೆ ನಡೆಯುವುದು.

ಗಾಂಧೀಜಿಯುವರ ಜೀವಿತವು ಸತ್ಯ ಮತ್ತು ಅಹಿಂಸೆಗಳಿಗಾಗಿಯೇ ಇದೆ. ಇವೇ ಇವರ ಎರಡು ಶ್ವಾಸಕೋಶಗಳು. ಈಗ ಪ್ರಪಂಚವಾದರೋ ಅಸತ್ಯ ಮತ್ತು ಹಿಂಸೆಗಳ ಕಡೆಗೇನೇ ತಿರುಗಿದೆ. ಇಂಥ ಸಮಯದಲ್ಲಿ ಗಾಂಧೀಜಿಯವರ ಜಯಂತಿಯು ಕೇವಲ ಹಿಂದುಸ್ಥಾನದವರಿಗೇನೇ ಆಚರಣೀಯವಾಗಿದೆಯೆಂದಲ್ಲ; ಪ್ರಪಂಚವೇ ಆಚರಿಸಬೇಕಾದುದು ಅತ್ಯಗತ್ಯ.

ಗಾಂಧೀಜಿಯವರು ಹಿಂದುಸ್ಥಾನವನ್ನೇ ತಮ್ಮ ಕಾರ್ಯಕ್ಷೇತ್ರವನ್ನಾಗಿಟ್ಟುಕೊಂಡು ಸತ್ಯ ಮತ್ತು ಅಹಿಂಸೆಗಳೆಂಬ ಈ ಎರಡು ತತ್ವಗಳಿಗಾಗಿಯೇ ತಮ್ಮ ಜೀವಿತವನ್ನು ಧಾರೆ ಎರೆದಿದ್ದಾರೆ. ಕಳೆದ ೨೦ ವರುಷಗಳ ತಮ್ಮ ಇಲ್ಲಿಯ ಅದ್ಭುತ ಕಾರ್ಯಗಳಿಂದ ಪ್ರಪಂಚವೇ ಹಿಂದುಸ್ಥಾನದ ಕಡೆಗೆ ತಿರುಗುವಂತೆ ಮಾಡಿದ್ದಾರೆ.

ಈ ಹಿಂಸಾ ಯುಗದಲ್ಲಿ ನಿರಾಯುಧವಾದ ರಾಷ್ಟ್ರವು ಶಸ್ತ್ರ ಬಲವುಳ್ಳ ಪ್ರಚಂಡ ರಾಷ್ಟ್ರದೊಂದಿಗೆ ಅಹಿಂಸಾ ಅಸ್ತ್ರವನ್ನು ಧರಿಸಿ ಹೋರಾಡಿದುದೂ, ಅದರಲ್ಲಿ ಎಷ್ಟೋ ವಿಜಯವನ್ನು ಹೊಂದಿದುದೂ ಪ್ರಪಂಚದ ಚರಿತ್ರೆಯಲ್ಲಿಯೇ ಒಂದು ಹೊಸ ಸಂಗತಿಯು. ಈ ಅಭೂತಪೂರ್ವ ಚರಿತ್ರೆಯ ನಾಯಕರೇ ಮಹಾತ್ಮಾ ಗಾಂಧಿಯವರು. ಅಂತೆಯೇ ಇವರ ಜಯಂತಿಯು ಅಹಿಂಸೆಯ ಜಯಂತಿಯಾಗಿಯೂ ಪರಿಣಮಿಸಿದೆ.

### ರಾಜಕಾರಣದ ಶುದ್ಧೀಕರಣ.

ಗಾಂಧೀಜಿಯವರು ರಾಜಕಾರಣದಲ್ಲಿ ಮಾತ್ರವೇ ಅದ್ಭುತವಾದ ಕ್ರಾಂತಿಯನ್ನುಂಟುಮಾಡಿಲ್ಲ. ಇವರು ಧಾರ್ಮಿಕ ವಿಷಯದಲ್ಲಿಯೂ ಮಹತ್ತರವಾದ ವಿಚಾರಕ್ರಾಂತಿಯನ್ನು ಉಂಟುಮಾಡಿದ್ದಾರೆ. ಧರ್ಮಕ್ಕೂ ರಾಜಕಾರಣಕ್ಕೂ ಯಾವ ಸಂಬಂಧವೇ ಇಲ್ಲವೆಂದು ಇವರು ತಿಳಿಯುವುದಿಲ್ಲ. ಶಕ್ಯವಿರುವ ಎಲ್ಲ ರೀತಿ ನೀತಿಗಳಿಂದ ಅನುಕೂಲ ಕಂಡಂತೆ ಪ್ರಯತ್ನಿಸಿ ರಾಜಕಾರಣದಲ್ಲಿ ವಿಜಯ ಹೊಂದುವುದೊಂದೇ ಧ್ಯೇಯವಿರಬೇಕೆಂದು ಇವರು ಹೇಳುವುದಿಲ್ಲ. ಇವರ ರಾಜಕಾರಣಕ್ಕೆ ಧರ್ಮವೂ ಬಲವಾಗಿ ಅಂಟಿಕೊಂಡಿದೆ. ಇವರ ಧರ್ಮವು ಸತ್ಯ ಮತ್ತು ಅಹಿಂಸೆಗಳನ್ನು ಬಿಟ್ಟು ಬೇರೊಂದಿಲ್ಲ.

ಇಂಥ ಧರ್ಮದಿಂದ ಗಾಂಧೀಜಿಯವರು ಈಗಿನ ರಾಜಕಾರಣವನ್ನು ಶುದ್ಧೀಕರಿಸುತ್ತಿದ್ದಾರೆ. ಸತ್ಯವೆಂಬ ಮಡಕೆಯಲ್ಲಿ ಅಹಿಂಸೆಯ ಅಗ್ನಿಯಿಂದ ರಾಜಕಾರಣಕ್ಕೆ ಪುಟ ಕೊಟ್ಟು ಅದನ್ನು ಶುದ್ಧಗೊಳಿಸುವ ಅದ್ವಿತೀಯ ಪ್ರಯೋಗವನ್ನು ನಡೆಸಿದ್ದಾರೆ. ಆದಕಾರಣ ಪ್ರಪಂಚದ ಈ ವರೆಗಿನ ಯಾವ ವಿಭೂತಿಗಳೂ ಕೈಕೊಳ್ಳದಿದ್ದ ರಾಜಕೀಯ ಶುದ್ಧೀಕರಣದ ಈ ಮಹತ್ಕಾರ್ಯವನ್ನು ಗಾಂಧೀಜಿಯವರು ಪ್ರಾರಂಭಿಸಿ ಎಷ್ಟೋ ಮಟ್ಟಿಗೆ ವಿಜಯಶಾಲಿಗಳೂ ಆಗಿರುವುದರಿಂದ ಪ್ರಪಂಚದ ರಾಜಕಾರಣ ಪ್ರವೀಣರಿಗೆ ಇವರೊಂದು ಹೊಸ ಮಾರ್ಗವನ್ನು ತೋರಿಸುವವರೂ ಆಗಿದ್ದಾರೆ.

### ಹಿಂದು ಸಂಸ್ಕೃತಿಯ ಮೂರ್ತಿ.

ಮಹಾತ್ಮಾ ಗಾಂಧಿಯವರು ಸತ್ಯ ಮತ್ತು ಅಹಿಂಸೆಗಳ ದಿವ್ಯ ಮೂರ್ತಿಗಳಾಗಿ ಪ್ರಪಂಚದಲ್ಲಿ ಶೋಭಿಸುತ್ತಿರುವಂತೆ ಇವರು ಹಿಂದು ಸಂಸ್ಕೃತಿಯ ಅದ್ವಿತೀಯ ಮೂರ್ತಿಗಳಾಗಿಯೂ ಪ್ರಕಾಶಿಸುತ್ತಿದ್ದಾರೆ. ಸರ್ವಮತಗಳ ಸಮನ್ವಯವೂ ಪರಮತ ಸಹಿಷ್ಣುತೆಯೂ, ಹಿಂದು ಸಂಸ್ಕೃತಿಯ ಮುಖ್ಯಾಂಗಗಳೇ ಆಗಿವೆ. ಶ್ರೀ. ಸ್ವಾಮಿ ವಿವೇಕಾನಂದರೂ, ಶ್ರೀ. ಸ್ವಾಮಿ ರಾಮತೀರ್ಥರೂ ಹಿಂದು ಧರ್ಮದ ಈ ವೈಶಿಷ್ಟ್ಯಗಳನ್ನೇ ಪ್ರಪಂಚದಲ್ಲಿ ಸಾರಿದ್ದಾರಷ್ಟೆ. ಮಹಾತ್ಮಾ ಗಾಂಧಿಯವರಾದರೋ ಹಿಂದು ಧರ್ಮದ ಈ ದಿವ್ಯ ಸಿದ್ಧಾಂತಗಳನ್ನು ತಮ್ಮ ಆಚರಣೆಯಿಂದಲೇ ಬೋಧಿಸುತ್ತಿದ್ದಾರೆ.

ಹಿಂದು ಸಂಸ್ಕೃತಿಯು ಅನ್ಯ ಸಂಸ್ಕೃತಿಗಳ ಆಕ್ರಮಣಕ್ಕೆ ಆಹುತಿಯಾದರೆ ಆಗಲೆಂದು ಇವರು ಸಂಸ್ಕೃತಿಯನ್ನು ಉಪೇಕ್ಷಿಸುವುದಿಲ್ಲ. ಒಂದು ಮತವು ಇನ್ನೊಂದು ಮತದಮೇಲೆ ಯಾವ ರೀತಿಯ ಆಕ್ರಮಣವನ್ನೂ ನಡೆಯಿಸಕೂಡದೆಂದೇ ಇವರು ಸಾರುತ್ತಿದ್ದಾರೆ. ಎಲ್ಲರಿಗೂ ತಮ್ಮ ತಮ್ಮ ಮತಗಳಂತೆ ಆಚರಿಸಲು ಸ್ವಾತಂತ್ರ್ಯವಿರಬೇಕೆಂದೂ ಮತ ಮತಾಂತರಗಳಲ್ಲಿ ಮೇಲು ಕೀಳುಗಳೇನೂ ಇಲ್ಲವೆಂದೂ ಗಾಂಧೀಜಿಯವರು ಹೇಳುತ್ತಿದ್ದಾರೆ.

ಈ ವಿಧವಾದ ವಿಚಾರ ಸರಣಿಯು ಹಿಂದು ಸಂಸ್ಕೃತಿಯ ದ್ಯೋತಕವಾದುದು.

### ಹಿಂದು ಸಂಘಟನೆಯ ಪ್ರಮುಖರು.

ಮಹಾತ್ಮಾ ಗಾಂಧಿಯವರು ಸತ್ಯ ಮತ್ತು ಅಹಿಂಸೆಗಳು ಜನಜೀವನದಲ್ಲಿ ನೆಲೆಗೊಳ್ಳಬೇಕೆಂಬ ಮುಖ್ಯೋದ್ದೇಶವುಳ್ಳವರಾಗಿ ಕೇವಲ ರಾಜಕೀಯ ಕಾರ್ಯಕ್ಷೇತ್ರದಲ್ಲಿಯೇ ಹೋರಾಡುತ್ತಿದ್ದಾರೆಂದಲ್ಲ. ಹಿಂದುಸ್ಥಾನಕ್ಕೆ ರಾಜಕೀಯ ಸ್ವಾತಂತ್ರ್ಯವೊಂದೇ ದೊರೆತರೆ ಈ ರಾಷ್ಟ್ರದ ಹೀನ ದೀನ ಸ್ಥಿತಿಗಳೆಲ್ಲಾ ನಿವಾರಣೆಯಾಗುತ್ತವೆಂದೇನೂ ಅವರು ಭಾವಿಸಿಲ್ಲ. ಇವರು ಯುಗಪುರುಷರಾಗಿರುವುದರಿಂದ ಇವರ ಕಾರ್ಯಗಳು ರಾಜಕೀಯ, ಧಾರ್ಮಿಕ, ಸಾಮಾ

ಜಿಕ ಮತ್ತು ಆರ್ಥಿಕ ಎಂಬ ಈ ಚತುರ್ಮುಖಗಳುಳ್ಳವುಗಳಾಗಿವೆ. ಅಂತೆಯೇ ರಾಜಕೀಯ ಮತ್ತು ಧಾರ್ಮಿಕ ವಿಷಯಗಳಲ್ಲಿ ಕ್ರಾಂತಿಯನ್ನುಂಟುಮಾಡಿರುವಂತೆ ಸಾಮಾಜಿಕ ವಿಷಯದಲ್ಲಿಯೂ ಪ್ರಚಂಡವಾದ ಆಂದೋಲನವನ್ನು ಹುಟ್ಟಿಸಿದ್ದಾರೆ.

ಯಾವ ವ್ಯಕ್ತಿಯೂ ಜನ್ಮದಿಂದಲೇ ಆತನು ಸಮಾಜದಲ್ಲಿ ಮೇಲು ಕೀಳಾಗಿ ಎಣಿಸಲ್ಪಡಬಾರದೆಂದು ಗಾಂಧೀಜಿಯವರು ಸಾರುತ್ತಿದ್ದಾರೆ. ಹಿಂದು ಸಮಾಜದಲ್ಲಿ ಈ ಸಾಮಾಜಿಕ ವಿಷಮತೆಯು ಬಹು ಪ್ರಖರವಾಗಿದೆ. ಹಿಂದು ಸಮಾಜದಲ್ಲಿ ಈ ವಿಷಮತೆಯ ವಿಷವಿರುವ ವರೆಗೂ ಇದು ಏಳಿಗೆಯನ್ನು ಹೊಂದುವುದು ಶಕ್ಯವೇ ಇಲ್ಲ. ಅಂತೆಯೇ ಗಾಂಧೀಜಿಯವರು ಹಿಂದು ಸಮಾಜದಲ್ಲಿ ಬಹು ಕಾಲದಿಂದ ಇರುವ ಅಸ್ಪೃಶ್ಯತೆಯೆಂಬ ವಿಷಮತೆಯ ವಿಷವನ್ನು ತೆಗೆದುಹಾಕಲು ಪ್ರಚಂಡ ಪ್ರಯತ್ನವನ್ನು ನಡೆಸಿದ್ದಾರೆ. ಇದು ಹಿಂದು ಸಂಘಟನೆಗೆ ಅತ್ಯಾವಶ್ಯಕವಾದ ಮೊದಲನೆಯ ಕಾರ್ಯವು. ಹಿಂದು ಸಂಘಟನೆಗಾಗಿಯೇ ತಮ್ಮ ಜೀವಿತವನ್ನು ಧಾರೆ ಎರೆದ ಎಷ್ಟೋ ವಿಭೂತಿಗಳು ಮಾಡದಿದ್ದಷ್ಟು ಕಾರ್ಯವನ್ನು ಇವರು ಯರವಡಾ ಒಪ್ಪಂದದಿಂದ ಮಾಡಿದ್ದಾರೆ.

ಆದಕಾರಣ ಮಹಾತ್ಮಾ ಗಾಂಧಿಯವರು ಹಿಂದು ಸಂಘಟನೆಗಾಗಿ ಪ್ರಯತ್ನಿಸುತ್ತಿರುವವರಲ್ಲೆಲ್ಲಾ ಅಗ್ರಗಣ್ಯರು. ಅಸ್ಪೃಶ್ಯತೆಯು ಅಳಿದರೇನೇ ಹಿಂದುತ್ವವು ಉಳಿಯುವುದೆಂದೂ ಅಸ್ಪೃಶ್ಯತೆಯು ಉಳಿದರೆ ಹಿಂದುತ್ವವು ಅಳಿಯುವುದೆಂದೂ ಗಾಂಧೀಜಿಯವರು ಸಾರಿ ಸಾರಿ ಹೇಳುತ್ತಿದ್ದಾರೆ. ಈ ಸಾಮಾಜಿಕ ವಿಷಯವು ಈ ದೇಶದ ರಾಜಕಾರಣದಿಂದ ದೂರಾಗಿರಬೇಕೆಂದು ಲೋಕಮಾನ್ಯ ಟಿಳಕ ಮೊದಲಾದವರಂತೆ ಗಾಂಧೀಜಿಯವರು ಹೇಳುವುದಿಲ್ಲ. ರಾಜಕಾರಣಕ್ಕೆ ಇದು ನಿಕಟ ಸಂಬಂಧವಿದೆಯೆಂದೇ ಸಿದ್ಧಾಂತಗೊಳಿಸಿ ಕಾಂಗ್ರೆಸ್ಸಿನ ಕಾರ್ಯಕ್ರಮಗಳಲ್ಲಿಯೇ ಇದನ್ನು ಸೇರಿಸಿದ್ದಾರೆ.

ಗಾಂಧೀಜಿಯವರು ಖಾದಿ ಪ್ರಸಾರದ ಮೂಲಕ ಆರ್ಥಿಕ ಪುನರ್ಘಟನೆಯ ಕಾರ್ಯ ಪ್ರಾರಂಭಿಸಿದ್ದಾರೆ. ಜನ ಜೀವನಕ್ಕೆ ಕೈ ಕಸಬೇ ಮೂಲವಾಗಿರಬೇಕೆಂದೂ ಹಾಗಾದರೇನೇ ಆರ್ಥಿಕ ವಿಷಮತೆಯ ಈಗಿನ ಭೀಕರ ಸ್ಥಿತಿಯು ನಿವಾರಣೆಯಾಗುವುದೆಂದೂ ಗಾಂಧೀಜಿಯವರು ತಿಳಿದಿದ್ದಾರೆ. ಈ ತಮ್ಮ ಸಿದ್ಧಾಂತವನ್ನು ಖಾದಿ ಮೂಲಕ ಜನಜೀವನದಲ್ಲಿ ನೆಲೆಗೊಳಿಸಲು ಮಹತ್ತರವಾದ ಪ್ರಯತ್ನವನ್ನು ಮಾಡಿದ್ದಾರೆ.

ಈ ಪ್ರಕಾರ ಗಾಂಧೀಜಿಯವರು ಮನುಷ್ಯ ಜಾತಿಗೂ ಹಿಂದುಸ್ಥಾನಕ್ಕೂ ಅತ್ಯಗತ್ಯವಾಗಿರತಕ್ಕ ಪ್ರಚಂಡ ಕಾರ್ಯಗಳನ್ನು ಮಾಡುತ್ತ ಯುಗಪುರುಷರಾಗಿ ಪ್ರಕಾಶಿಸುತ್ತಿರುವುದು ಹಿಂದುಸ್ಥಾನಕ್ಕೆ ಬಹು ಹೆಮ್ಮೆಯ ಸಂಗತಿಯು. ಕಾಂಗ್ರೆಸ್ಸು ಈಗ ೮ ಪ್ರಾಂತಗಳಲ್ಲಿ ತನ್ನ ಕಾರ್ಯಕ್ರಮವನ್ನು ನಡೆಸುತ್ತಿರುವುದರಿಂದ ಗಾಂಧೀಜಿಯವರು ಈಗ ಅನಭಿಷಿಕ್ತ ಮಹಾರಾಜರಾಗಿಯೂ ಇದ್ದಾರೆಂದು ಹೇಳಬಹುದು.

ಇವರ ವಿಜಯವೇ ಹಿಂದುಸ್ಥಾನದ ವಿಜಯ. ಹಿಂದುಸ್ಥಾನದ ವಿಜಯವು ಪ್ರಪಂಚದ ಶಾಂತಿಗೆ ಒಂದು ಮುಖ್ಯ ಕಾರಣ. ಆದಕಾರಣ ಜಗತ್ತಿನ ಕ್ಷೇಮಕ್ಕಾಗಿ ಮಹಾತ್ಮಾ ಗಾಂಧಿಯವರು ಚಿರಾಯುರಾರೋಗ್ಯಗಳನ್ನು ಹೊಂದಲೆಂದೂ ಇವರು ಪ್ರಾರಂಭಿಸಿರುವ ಕಾರ್ಯಕಲಾಪಗಳಲ್ಲಿ ಯಾರಿಗೆ ಯಾವುದು ಪ್ರಿಯವೋ ಅದನ್ನು ಅವರು ಮನಃಪೂರ್ವಕ ಆಚರಿಸಿ ಈ ಮಹಾತ್ಮರ ನಿಜವಾದ ಜಯಂತಿ ಉತ್ಸವವನ್ನು ಸಕಲರೂ ಆಚರಿಸಲೆಂದೂ ನಾವು ಹಾರೈಸುತ್ತೇವೆ.

---

## ಝೆಕ್ ಸರಕಾರಕ್ಕೆ ಪ್ರಾಣಸಂಕಟ!

### ಹಿಟ್ಲರನು ಝೆಕ್ ರಾಜ್ಯ ನುಂಗುವನು!!

ಝೆಕ್ ರಾಜ್ಯದಲ್ಲಿ ಯುದ್ಧಾಗ್ನಿಯ ಕಿಡಿಗಳು ಹೊರಡುತ್ತಲಿವೆ. ಹಿಟ್ಲರನು ಝೆಕ್ ಜನರ ಎದೆಗೆ ಶಸ್ತ್ರವನ್ನು ಹಿಡಿದು ಒಪ್ಪಂದದ ಮಾತುಗಳನ್ನು ಬೆಳೆಸಿದ್ದಾನೆ. ಇಂಗ್ಲೆಂಡ್-ಫ್ರಾನ್ಸ್ ರಾಷ್ಟ್ರಗಳು ಝೆಕ್ ರಾಜ್ಯವನ್ನು ಹಿಟ್ಲರನಿಗೆ ಆಹುತಿ ಕೊಟ್ಟು ಯುದ್ಧದ ಭಯಾನಕ ವಿಪತ್ತನ್ನು ಮುಂದೆ ಹಾಕಲು ಪ್ರಯತ್ನಿಸುತ್ತಲಿವೆ.

ಅಂತೂ ಹಿಟ್ಲರನ ಮಹತ್ವಾಕಾಂಕ್ಷೆಗೆ ಝೆಕ್ ರಾಜ್ಯ ಆಹುತಿಯಾಗುವುದು ನಿಶ್ಚಯ. ಆದರಿಂದ ಯುರೋಪದ ಮಹಾ ಯುದ್ಧವು ಪ್ರಾರಂಭವಾಗದಂತೆಯೇ ಇಂಗ್ಲೆಂಡ್ ಪ್ರಯತ್ನಿಸುತ್ತಲಿದೆ. ಝೆಕ್‌ರ ಹಿತಕ್ಕಾಗಿ ಯುದ್ಧಾಗ್ನಿಯಲ್ಲಿ ಬೀಳಲು ಈಗ ಇಂಗ್ಲೆಂಡ್ ಇಷ್ಟಪಡುವುದಿಲ್ಲವೆಂದೇ ತೋರುತ್ತದೆ.

**ಇಂಗ್ಲೆಂಡಿನ ಸಂಧಿ ಪ್ರಸ್ತಾಪ ನಿಂತಿತು.**

ಹಿಟ್ಲರನಿಗೂ ಝೆಕ್ ಸರಕಾರಕ್ಕೂ ಸಂಧಿ ಮಾಡಬೇಕೆಂದು ಇಂಗ್ಲೆಂಡಿನ ಮುಖ್ಯ ಮಂತ್ರಿಗಳಾದ ಚೆಂಬರ್ಲೇನ್‌ರವರು ಪ್ರಯತ್ನಿಸಿದುದು ವಿಫಲವಾಯಿತೆಂದು ಊಹಿಸಲಾಗಿದೆ.

ತಾ. ೨೪ ನೆಯ ದಿನ ಝೆಕ್ ಸರಕಾರವು ಯುದ್ಧಕ್ಕೋಸ್ಕರ ಎಲ್ಲ ಸೈನ್ಯವನ್ನೂ ಒಟ್ಟುಗೂಡಿಸಲಾರಂಭಿಸಿತು. ಝೆಕ್ ಸರಕಾರಕ್ಕೆ ಸಹಾಯ ಮಾಡಲು ಫ್ರಾನ್ಸ್ ಸರಕಾರವು ತನ್ನ ಎಲ್ಲ ಸೈನ್ಯವನ್ನೂ ಸಿದ್ಧಗೊಳಿಸಿದೆ. ಈ ತಿಂಗಳ ಕೊನೆಯೊಳಗಾಗಿಯೇ ಝೆಕ್‌ರ ಶೋಚನೀಯ ಸ್ಥಿತಿಯು ಪ್ರಪಂಚವೇ ಮರುಗುವಂತೆ ಮಾಡುವುದು.

---

## ಕಾಂಗ್ರೆಸ್ಸಿನ ಶುದ್ಧೀಕರಣ.

### ಗಾಂಧೀಜಿಯವರ ಸೂಚನೆ.

ತಾ. ೨೪ ನೆಯ ದಿನ ಮೌಲಾನಾ ಅಬ್ದುಲ್ ಕಲಂ ಅಜಾದರ ಅಧ್ಯಕ್ಷತೆಯಲ್ಲಿ ಅಖಿಲ ಭಾರತ ಕಾಂಗ್ರೆಸ್ ಕಮಿಟಿಯು ಹೊಸ ದಿಲ್ಲಿಯಲ್ಲಿ ಕೂಡಿದ್ದಿತು.

ಡಾ. ಖರೆಯವರ ಸಂಬಂಧದ ಗೊತ್ತುವಳಿಗೆ ಶ್ರೀ. ಅಣೆಯವರು ವಿರೋಧಿಸಿ ಖರೆಯವರ ಪಕ್ಷವನ್ನೇ ಸಮರ್ಥಿಸಿದರು. ಸರದಾರ ಪಟೇಲರು ಅವರ ವಿರೋಧಕ್ಕೆ ಉತ್ತರ ಕೊಟ್ಟರು. ಬಿರುಗಾಳಿಯ ಮೂಲಕ ಮುಂದಿನ ಕಾರ್ಯ ಆ ದಿನ ನಡೆಯಲಿಲ್ಲ.

ಕಾಂಗ್ರೆಸ್ಸಿನ ಶುದ್ಧೀಕರಣಕ್ಕೋಸ್ಕರ ಕಾಂಗ್ರೆಸ್ಸಿನ ಪ್ರತಿಯೊಬ್ಬ ಸದಸ್ಯನೂ ಇಂತಿಷ್ಟು ಗಜ ನೂಲನ್ನು ತಾನೇ ನೂತುಕೊಡಬೇಕೆಂಬ ಒಂದು ಕಟ್ಟನ್ನು ಗಾಂಧೀಜಿಯವರು ಮತ್ತೆ ಸೂಚಿಸಿದ್ದಾರೆಂದು ತಿಳಿದಿದೆ.

## ಮುಂಬೈ ಪ್ರಾಂತದಲ್ಲಿ ಒತ್ತಾಯದ ಹಿಂದಿ ಶಿಕ್ಷಣ.

ಹಿಂದುಸ್ಥಾನದಲ್ಲಿ ಸಂಯುಕ್ತರಾಜ್ಯಪದ್ಧತಿಯು ಪ್ರಾರಂಭವಾಗುವುದಷ್ಟೆ. ಎಂದಮೇಲೆ ಏಕರಾಷ್ಟ್ರೀಯತ್ವಕ್ಕೆ ರಾಷ್ಟ್ರೀಯ ಭಾಷೆಯೂ ಒಂದೇ ಇರಬೇಕಾದುದು ಅಗತ್ಯ. ಹಿಂದುಸ್ಥಾನದಲ್ಲಿ ಹಿಂದಿಯೇ ರಾಷ್ಟ್ರೀಯ ಭಾಷೆಯಾಗಲು ಹೆಚ್ಚು ಅನುಕೂಲವೆಂಬುದು ನಿರ್ವಿವಾದವಾದ ಸಂಗತಿಯು. ಆದಕಾರಣ ಕಾಂಗ್ರೆಸ್ ಪಕ್ಷವು ಅಧಿಕಾರವನ್ನು ವಹಿಸಿದನಂತರ ಹಿಂದಿ ಪ್ರಚಾರಕ್ಕಾಗಿ ವಿಶೇಷ ಪ್ರಯತ್ನಿಸಲಾರಂಭಿಸಿದೆ.

ಮದ್ರಾಸ ಪ್ರಾಂತದಲ್ಲಿ ಹಿಂದಿ ಪ್ರಚಾರಕ್ಕೆ ಕೆಲವರು ವಿರೋಧಿಸುತ್ತಿರುವುದರಿಂದ ಅಲ್ಲಿಯ ಕಾಂಗ್ರೆಸ್ ಸರಕಾರವು ದಬ್ಬಾಳಿಕೆಯ ಶಾಸನದ ಸಹಾಯವನ್ನು ಹೊಂದಿಯೂ ಹಿಂದಿ ಪ್ರಚಾರವನ್ನು ಮಾಡುತ್ತಲಿದೆ. ಹಿಂದುಸ್ಥಾನದಲ್ಲಿ ಹಿಂದಿಯೇ ರಾಷ್ಟ್ರಭಾಷೆಯಾಗುವಂತೆ ಪ್ರಯತ್ನಿಸುವುದು ಆತ್ಯಗತ್ಯ. ಹಿಂದಿಯನ್ನು ಒತ್ತಾಯವಾಗಿ ಕಲಿಸುವುದರಿಂದ ತಮ್ಮ ಪ್ರಾಂತ ಭಾಷೆಗೆ ಅಡ್ಡಿಯಾಗುತ್ತದೆಂದು ಗುಲ್ಲು ಎಬ್ಬಿಸಿ ಅದರ ಮರೆಯಲ್ಲಿ ಕಾಂಗ್ರೆಸ್ ಸರಕಾರಕ್ಕೆ ವಿಘ್ನಗಳನ್ನು ತಂದೊಡ್ಡುವುದು ಸರಿಯಲ್ಲ.

ಮುಂಬೈ ಪ್ರಾಂತದಲ್ಲೇನೂ ಅಂಥ ಸಲ್ಲದ ಪ್ರಯತ್ನ ನಡೆಯುವ ಸಂಭವವಿಲ್ಲ. ಇಲ್ಲಿಯ ಕಾಂಗ್ರೆಸ್ ಸರಕಾರವೂ ಹಿಂದಿಯನ್ನು ಎಲ್ಲ ಸರಕಾರಿ ಮತ್ತು ಸರಕಾರ ಸಹಾಯ ಹೊಂದುವ ಶಾಲೆಗಳಲ್ಲಿ ಒತ್ತಾಯವಾಗಿಯೇ ಕಲಿಸಲಾಗುವುದೆಂದು ನೊನ್ನೆ ಒಂದು ಪ್ರಕಟನೆಯ ಮೂಲಕ ತಿಳಿಸಿದೆ.

**ಸರಕಾರದ ಸ್ತುತ್ಯ ಪ್ರಯತ್ನ.**

ಮುಂಬೈ ಸರಕಾರವು ಹಿಂದಿ ಶಿಕ್ಷಣವನ್ನು ಒತ್ತಾಯವಾಗಿ ಕೊಡುವ ನಿರ್ಧರಮಾಡಿದುದು ಸ್ತುತ್ಯವಾದುದು. ಪ್ರಾಥಮಿಕ ಶಿಕ್ಷಣದ ಕೊನೆಯ ಮೂರು ವರುಷಗಳಲ್ಲಿ ಈ ಹಿಂದಿಯನ್ನು ಕಲಿಸಲಾಗುವುದು. ಹಿಂದಿ ಕಲಿಯುವವರು ದೇವನಾಗರಿಲಿಪಿಯನ್ನು ಉಪಯೋಗಿಸಬೇಕೋ ಅಥವಾ ಉರ್ದು ಲಿಪಿಯನ್ನು ಉಪಯೋಗಿಸಬೇಕೋ? ಎಂಬುದೊಂದು ವಿವಾದಾಸ್ಪದವಾದ ಪ್ರಶ್ನೆ. ಇದನ್ನು ಸರಕಾರದವರು ವಿದ್ಯಾರ್ಥಿಗಳ ಇಚ್ಛೆಯ ಮೇಲೆಯೇ ಬಿಟ್ಟಿದ್ದಾರೆ. ಹಿಂದುಗಳು ದೇವನಾಗರಿಲಿಪಿಯನ್ನು, ಮುಸಲ್ಮಾನರು ಉರ್ದು ಲಿಪಿಯನ್ನು ಕಲಿಯಲು ಇಚ್ಛಿಸುವುದು ಸ್ವಾಭಾವಿಕ. ಹಿಂದು ಮತ್ತು ಮುಸಲ್ಮಾನ್ ವಿದ್ಯಾರ್ಥಿಗಳಲ್ಲಿ ಲಿಪಿಯ ಬಗ್ಗೆ ಅಸಂತೋಷವುಂಟಾಗಬಾರದೆಂದು ಹೀಗೆ ಅವರವರ ಇಷ್ಟವೆಂದು ತಿಳಿಸಿರುವುದು ಯುಕ್ತವಾಗಿಯೇ ಇದೆ.

ಈ ಹಿಂದಿ ಶಿಕ್ಷಣದಿಂದ ಪ್ರಾಂತ ಭಾಷೆಗೇನೂ ಬಾಧಕವಿಲ್ಲವೆಂದೂ ಶಿಕ್ಷಣವೆಲ್ಲಾ ಪ್ರಾಂತ ಭಾಷೆಯಲ್ಲಿಯೇ ಜರುಗುವುದೆಂದೂ ಸರಕಾರದವರು ತಿಳಿಸಿದ್ದಾರೆ. ಹಿಂದಿ ಶಿಕ್ಷಣದ ಕ್ರಮವನ್ನು ಗೊತ್ತುಮಾಡಲು ೧೦ ಜನ ಪಂಡಿತರ ಒಂದು ಸಮಿತಿಯನ್ನು ನಿಯಮಿಸುವವರಿದ್ದಾರೆ. ಈ ಸ್ತುತ್ಯ ಪ್ರಯತ್ನವು ಜಾಗ್ರತೆ ಕಾರ್ಯರೂಪದಲ್ಲಿ ಬಂದು ನಮ್ಮ ಕನ್ನಡನಾಡು ಕೂಡಾ ರಾಷ್ಟ್ರಭಾಷೆಯಲ್ಲಿ ಮುಂದರಿಯಲೆಂದೇ ಹಾರೈಸುತ್ತೇವೆ.

---

—ಯರವಡಾ ತುರಂಗದಲ್ಲಿ ಕಳೆದ ೧೧ ದಿನಗಳಿಂದ ಉಪೋಷಣೆ ಮಾಡುತ್ತಿರುವ ಸೊಲ್ಲಾಪುರದ ದಿನಾಚರಣೆಯ ಕೈದಿಗಳಾದ ಸರದೇಸಾಯಿ ಮತ್ತು ಮೂವರು ಕೈದಿಗಳು ಗೃಹಮಂತ್ರಿಗಳಾದ ಕನ್ನಯ್ಯಲಾಲ ಮುನಶಿಯವರ ಬಿನ್ನಹದ ಮೇರೆಗೆ ಉಪವಾಸ ನಿಲ್ಲಿಸಿರುವರೆಂದು ತಿಳಿಯುತ್ತದೆ.

## ಕರ್ನಾಟಕದಲ್ಲಿ ಲಿಂಗಾಯತ-ಲಿಂಗಾಯತೇತರ.

### ಶ್ರೀ. ಮುನಸಿಯವರ ವಿಚಾರ.

ಮುಂಬೈ ಸರಕಾರದ ನ್ಯಾಯಮಂತ್ರಿಗಳಾದ ಶ್ರೀ. ಮುನಸಿಯವರು ಪುಣೆಯ ಪರುಶರಾಮ ಕಾಲೇಜದ ವಾರ್ಷಿಕೋತ್ಸವದ ಕಾಲದಲ್ಲಿ ಈ ಕೆಳಗಿನಂತೆ ಭಾಷಣಮಾಡಿದರು.—

"ಯುರೋಪ ಖಂಡದಲ್ಲಿ ಹಿಂದಕ್ಕೆ ಮಹಾಯುದ್ಧ ನಡೆದಾಗ ರಾಷ್ಟ್ರೀಯತ್ವವು ಇನ್ನುಮೇಲೆ ಪ್ರಪಂಚದಲ್ಲಿ ಲಯವಾಗಿ ಎಲ್ಲೆಲ್ಲಿಯೂ ಅಂತರ ರಾಷ್ಟ್ರೀಯ ಕಲ್ಪನೆಯೇ ಹೆಚ್ಚಿ ಎಲ್ಲ ಚಿಕ್ಕ ಪುಟ್ಟರಾಜ್ಯಗಳು ಕೂಡಾ ಶಾಂತಿಸಮಾಧಾನಗಳಿಂದ ಕಾಲಕಳೆಯುವವೆಂದೇ ಬಹು ಜನರು ತಿಳಿದಿದ್ದರು. ಆದರೆ ಆ ತಿಳುವಳಿಕೆ ತಪ್ಪಾಯಿತು. ಮಹಾಯುದ್ಧದನಂತರ ರಾಷ್ಟ್ರೀಯತೆಯೇ ಹೆಚ್ಚಿತು. ಜರ್ಮನಿ, ರಶಿಯಾ, ಇಟಲಿ, ಈ ದೇಶಗಳು ಮೊದಲಿಗಿಂತ ಬಲಶಾಲಿಯಾದವು.

ಹಿಂದುಸ್ಥಾನದಲ್ಲಿಯೂ ರಾಷ್ಟ್ರೀಯತೆ ಹೆಚ್ಚಾಗಬೇಕಾಗಿದೆ. ರಾಷ್ಟ್ರೀಯತೆಯ ಮುಖ್ಯಲಕ್ಷಣ ಐಕಮತ್ಯ. ನಮ್ಮದೇಶದಲ್ಲಿ ನಾನಾ ಜಾತಿ ಮತ್ತು ಪ್ರಾಂತಗಳಿರುವುದರಿಂದ ಅನೈಕಮತ್ಯವೇ ಹೆಚ್ಚು; ಇದರಿಂದ ರಾಷ್ಟ್ರೀಯತೆ ಲೋಪವಾಗುತ್ತದೆ.

ಮಹಾರಾಷ್ಟ್ರದಲ್ಲಿ ಬ್ರಾಹ್ಮಣ-ಬ್ರಾಹ್ಮಣೇತರ ಎಂಬ ಜಗಳ. ಕರ್ನಾಟಕದಲ್ಲಿ ಲಿಂಗಾಯತ-ಲಿಂಗಾಯತೇತರವೆಂಬ ಕಲಹ. ನಾವು ಮೊದಲು. ಇಂಗ್ಲಿಷರ ಸಂಗಡ ಹೋರಾಡಬೇಕಾಗಿದೆ. ಆಮೇಲೆ ಈ ನಮ್ಮ ನಮ್ಮಲ್ಲಿಯ ಜಗಳ ಮಾಡಬಹುದೆಂಬುದು ಅವರಿಗೆ ಇನ್ನೂ ತಿಳಿದಿಲ್ಲ. ಪ್ರಪಂಚದಲ್ಲಿ ಹಿಂದುಸ್ಥಾನವು ಬಹು ಪುರಾತನ ರಾಷ್ಟ್ರವಾಗಿದ್ದರೂ ರಾಷ್ಟ್ರೀಯತ್ವದಲ್ಲಿ ಇದು ಇನ್ನೂ ಹಸುಕೂಸು. ನಾವು ರಾಷ್ಟ್ರೀಯತೆಯಿಂದ ಬಲಶಾಲಿಗಳಾದರೇನೇ ಈ ಜಗತ್ತಿನಲ್ಲಿ ಬಾಳುವೆವು."

---

## ಡಾ. ಖರೆಯುವರ ವಿಚಿತ್ರ ವರ್ತನೆ.

ಮಧ್ಯಪ್ರಾಂತದ ಹಿಂದಿನ ಮುಖ್ಯಮಂತ್ರಿಗಳಾದ ಡಾ. ಖರೆಯವರು ಕಾಂಗ್ರೆಸ್ ಆಜ್ಞೆಗೆ ವಿರೋಧವಾಗಿ ವರ್ತಿಸಿದ್ದರಿಂದ ವರ್ಕಿಂಗ್ ಕಮಿಟಿಯವರು ಇವರನ್ನು ಹೊಣೆಗಾರಿಕೆಯ ಕೆಲಸದಿಂದ ಕೆಳಗಿಳಿಸಿದರಷ್ಟೆ. ಅಂದಿನಿಂದ ಇವರು ಕೋಪತಾಪಗಳಿಗೀಡಾಗಿ ಅನೇಕ ಪ್ರಕಾರ ತಮ್ಮ ಘನತೆಗೆ ಸಲ್ಲದ ರೀತಿಯಲ್ಲಿ ನಡೆಯಲಾರಂಭಿಸಿದ್ದಾರೆ.

ಶುಕ್ಲ ಮಂತ್ರಿಮಂಡಲವು ಮೂರುತಿಂಗಳು ಬಾಳಲಾರದೆಂದು ಇವರು ಆಗಲೇ ಹೇಳಿದ್ದನ್ನು ನೋಡಿದರೆ ಇವರು ಒಂದು ಪಕ್ಷ ಏರ್ಪಡಿಸಿ ಕಾಂಗ್ರೆಸ್ಸಿನಲ್ಲಿಯೇ ಕಂಡಿ ಕೊರೆಯಬಹುದೆಂದು ತೋರಿತ್ತು. ಈಗ ಇವರು ಆ ಪ್ರಕಾರ ಪ್ರಸಿದ್ಧಗೊಳಿಸಿದ್ದಾರೆ. ಕಾಂಗ್ರೆಸ್ ರಾಷ್ಟ್ರೀಯ ಪಕ್ಷವೆಂಬ ಒಂದು ಪ್ರತ್ಯೇಕ ಪಕ್ಷವನ್ನು ಸ್ಥಾಪಿಸುವುದಾಗಿ ಪ್ರಸಿದ್ಧ ಮಾಡಿದ್ದಾರೆ. ದುರಭಿಮಾನದ ಪರಮಾವಧಿಯೇ ಇದು.

---

—ಮಹಾತ್ಮಾ ಗಾಂಧಿಯವರು ಅಕ್ಟೋಬರ್ ೧ನೆಯ ತಾರೀಖಿಗೆ ಗಡಿನಾಡಿಗೆ ಹೋಗಿ ಅಲ್ಲಿ ಒಂದು ತಿಂಗಳು ಸಂಚರಿಸುವರು.

# ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳವರ



## ವಿಜಯದಶಮಿ ಸಮಾರಂಭವು.

ಈ ಮೂಲಕ ಸಮಸ್ತ ಮಹಾಜನಗಳಿಗೂ ಪ್ರಸಿದ್ಧಪಡಿಸುವದೇನೆಂದರೆ ಶ್ರೀಮನ್ನೃಪ ಶಾಲಿವಾಹನ ಶಕೆ ೧೮೬೦ ನೆಯ ಪ್ರವರ್ತಮಾನಕ್ಕೆ ಸಲ್ಲಿದ ಬಹುಧಾನ್ಯ ಸಂವತ್ಸರದ ವಿಜಯದಶಮಿ ಸಮಾರಂಭವು ಚಿತ್ರದುರ್ಗದ ಶ್ರೀ ಬೃಹನ್ಮಠಮಹಾ ಸಂಸ್ಥಾನದಲ್ಲಿಯೇ ನಡೆಯಿಸಲು ನಿಶ್ಚಯಿಸಲ್ಪಟ್ಟಿರುವುದರಿಂದ ಅಶ್ವೀಜ ಶುದ್ಧ ಪ್ರತಿಪದ ಮೊದಲ್ಗೊಂಡು ನವಮಿ ಪರ್ಯಂತ ಘಟಸ್ಥಾಪನ ಸರಸ್ವತ್ಯಾವಾಹನ ಆಯುಧ ಗಜಾಶ್ವ ಪೂಜಾದಿಗಳು ನಡೆದು ವಿಜಯದಶಮಿ ಮಂಗಳವಾರ ತಾ. ೪-೧೦-೩೮ ಮಧ್ಯಾಹ್ನ ಪದ್ಧತಿ ಪ್ರಕಾರ ಚಿತ್ರದುರ್ಗದಲ್ಲಿ ಸಮಸ್ತ ರಾಜ ಬಿರುದಾವಳಿಗಳೊಡನೆ ಶ್ರೀಮನ್ಮಹಾಸ್ವಾಮಿಗಳವರ ರಜತಾಂದೋಲಿಕೋತ್ಸವವು ನಡೆದು ಅಲ್ಲಿಂದ ಮೇಲುದುರ್ಗದ ಮಠಕ್ಕೆ ದಯಮಾಡಿಸಿ ಅಲ್ಲಿ ಶಮೀ ಪೂಜಾದಿ ಆದನಂತರ ಸಾಯಂಕಾಲಕ್ಕೆ ಶ್ರೀ ಬೃಹನ್ಮಠಕ್ಕೆ ಚಿತ್ತೈಸಲಾಗುತ್ತೆ.

ಏಕಾದಶಿ ಬುಧವಾರ ಪ್ರಾತಃಕಾಲ ೫ ಗಂಟೆಗೆ ಸಿಂಹಾಸನಾರೋಹಣವೂ ತತ್ಸಮಯದಲ್ಲಿ ಕಪ್ಪು ಕಾಣಿಕೆಗಳನ್ನ ಸ್ವೀಕರಿಸಿಕೊಳ್ಳೋಣವೂ ತದನಂತರ ಸಮಸ್ತ ರಾಜಮರ್ಯಾದೆಗಳೊಡನೆ ರಜತಾಂದೋಲಿಕೋತ್ಸವವೂ ನಡೆದು ಶ್ರೀಮನ್ಮಹಾ ಕರ್ತೃವಿಗೆ ಮಹಾ ಮಂಗಳಾರತಿ ಪೂರೈಸಿದನಂತರ ಭೂರಿಗಣ ಸಂತರ್ಪಣೆಯು ನಡೆಯುತ್ತೆ. ಸಾಯಂಕಾಲ ೪ ಗಂಟೆಗೆ ಕೀರ್ತನೆ ಧಾರ್ಮಿಕ, ನೈತಿಕ ಸಂಬಂಧ ಉಪನ್ಯಾಸಗಳು ನಡೆಯಲು ಏರ್ಪಡಿಸಿರುತ್ತಾದ್ದರಿಂದ ನೀವು ನಿಮ್ಮ ಇಷ್ಟ ಮಿತ್ರರೊಂದಿಗೆ ಸಕಾಲಕ್ಕೆ ಬಂದು ಈ ಸಮಾರಂಭದಲ್ಲಿ ನೀವುಗಳೆಲ್ಲರೂ ಭಾಗಿಗಳಾಗಿ ಆನಂದವನ್ನು ಹೊಂದುವುದಲ್ಲದೆ ಶ್ರೀಮನ್ಮಹಾರಾಜ ಸನ್ನಿಧಿ ದರ್ಶನಾಶೀರ್ವಾದಕ್ಕೆ ಪಾತ್ರರಾಗಬೇಕೆಂದು ಸೂಚಿಸಲಾಗಿದೆ.

ಹಾಸಾ ಚರಮೂರ್ತಿಗಳು
ಶಾಂತದೇವರು.

# ಪುರಾಣ ಸಮಾಪ್ತಿ ಸಮಾರಂಭ.

ಬೆಂಗಳೂರು ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠದ ಪ್ರವಚನ ಮಂಟಪದಲ್ಲಿ. ಕಳೆದ ಎರಡು ತಿಂಗಳುಗಳಿಂದಲೂ ಶ್ರಾವಣ ಮಾಸದ ಪುಣ್ಯ ದಿನಗಳ ಪ್ರಯುಕ್ತ ಭೀಮಕವಿಕೃತ ಶ್ರೀ ಬಸವ ಪುರಾಣವು ಶ್ರೀ ವೀರಶೈವ ಸಮಾಜ ಸೇವಾಸಂಘದ ಆಶ್ರಯದಲ್ಲಿ ವಚನ ವಾಙ್ಮಯ ವಿಶಾರದ ಬ್ರ. ಶ್ರೀ. ವೇ|| ಕಾಳಗಿ ಅಯ್ಯಪ್ಪ ಶಾಸ್ತ್ರಿಗಳವರಿಂದ ನಡೆಯುತ್ತಿದ್ದಿತು. ಶ್ರೀ ಶಾಸ್ತ್ರಿಗಳವರು ತಮ್ಮ ಸ್ವಾನುಭವದಿಂದ ಕೂಡಿದ ಶಿವಾನುಭಾವದ ವಿಚಾರಗಳೊಡನೆ ಪಂಡಿತಪಾಮರರೆಲ್ಲರಿಗೂ ತಿಳಿಯುವಂತೆ ಬಹು ಸರಸವಾಗಿ ಪುರಾಣವನ್ನು ಪ್ರತಿಪಾದಿಸುತ್ತಿದ್ದರು. ಸ್ತ್ರೀಪುರುಷರಾದಿಯಾಗಿ ಬಹು ಜನರು ನಿತ್ಯವೂ ಸೇರುತ್ತಿದ್ದರು.

ಚಿಕ್ಕಪೇಟೆಯ ಶ್ರೀಮತಿ ಎಂ. ಪಾರ್ವತಮ್ಮನವರೇ ಮೊದಲಾದ ಪುರಾಣ ಶ್ರವಣಕ್ಕಾಗಿ ಬಹು ಭಕ್ತಿಯಿಂದ ಬರುತ್ತಿದ್ದ ಕೆಲ ಮಹಿಳೆಯರು ನಿತ್ಯವೂ ಸರ್ವಭಕ್ತ ವೃಂದಕ್ಕೂ ಪ್ರಸಾದವಿನಿಯೋಗದ ವ್ಯವಸ್ಥೆಯನ್ನು ಮಾಡುತ್ತಿದ್ದು ತಮ್ಮ ಭಕ್ತಿಯುಕ್ತವಾದ ಸೇವೆಯನ್ನು ಸಲ್ಲಿಸುತ್ತಿದ್ದರು. ಧನ್ಯ ಮಹಿಳಾಮಣಿಯರೇ! ಈ ಪುರಾಣ ಪ್ರವಚನದ ಪ್ರಾರಂಭೋತ್ಸವವನ್ನು ಆಗ ಮಾಡಿಸಿ ದಾವಣಗೆರೆಯ ಮಹಾಜನಗಳ ಕೋರಿಕೆಯಂತೆ ಪುರಾಣಪ್ರವಚನೋಪದೇಶಕ್ಕಾಗಿ ಆ ಪ್ರಾಂತಕ್ಕೆ ದಯಮಾಡಿಸಿದ ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠಾಧಿಪತಿಗಳಾದ ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ ಶ್ರೀ ಮಹಾದೇವ ಮಹಾಸ್ವಾಮಿಗಳವರು ಕಳೆದವಾರ ದಯಮಾಡಿಸಿದ ಬಳಿಕ ಇಲ್ಲಿಯೂ ಪುರಾಣ ಸಮಾಪ್ತಿಯ ಕಾರ್ಯಕ್ರಮವನ್ನೇರ್ಪಡಿಸಿ ತಾ. ೧೮-೯-೩೮ ನೇ ಭಾನುವಾರ ಸಮಸ್ತ ಭಕ್ತವೃಂದಕ್ಕೂ ಗಣಪರ್ವವನ್ನೇರ್ಪಡಿಸಿ ಮಹಾ ಪಾದಪೂಜಾ ಗಣಾರಾಧನೆಯನ್ನೇರ್ಪಡಿಸಿ ಮರು ದಿನ ಸೋಮವಾರ ಸಂಜೆ ಪುರಾಣವಾಚನವಾಗಿ ಶ್ರೀ ಮಹಾಸ್ವಾಮಿಗಳವರ ಉಪಸಂಹಾರ ಭಾಷಣವಾದ ಬಳಿಕ ಶ್ರೀ ಶಾಸ್ತ್ರಿಗಳವರಿಗೆ ಸಂಭಾವನೆ ಉಡುಗರೆಗಳನ್ನು ಶ್ರೀಗಳವರ ಆಶೀರ್ವಾದದೊಡನೆ ಇತ್ತು ಸನ್ಮಾನಿಸಿದ ಬಳಿಕ ಪ್ರಸಾದ ತಾಂಬೂಲ ವಿನಿಯೋಗವಾಗಿ ಪುರಾಣವು ಸಮಾಪ್ತಗೊಳಿಸಲ್ಪಟ್ಟಿತು. ಈ ಸಂದರ್ಭದಲ್ಲಿ ಶ್ರೀ. ನಿ. ಪ್ರ. ಶ್ರೀ ಈಶ್ವರಸ್ವಾಮಿಗಳವರು ಅತ್ಯಂತ ವಿಚಕ್ಷಣೆಯಿಂದ ಕಾರ್ಯಕಲಾಪಗಳನ್ನು ನಿರ್ವಹಿಸಿದರೆಂಬುದನ್ನು ತಿಳಿಸಲು ಸಂತೋಷವಾಗುತ್ತದೆ.

ಓರ್ವ ಪ್ರೇಕ್ಷಕ.

---

## ಸುಲೇಪೇಟೆ.

ತಾ. ೨-೧೨-೩೮ ಷಷ್ಠಿ ಸೋಮವಾರ ದಿವಸ ಶ್ರೀ. ಖಟ್ವಾಂಗೇಶ್ವರ ಮಠದಲ್ಲಿ ಶ್ರೀ. ಸದಾಶಿವಸ್ವಾಮಿಗಳ ಅಧ್ಯಕ್ಷತೆಯಲ್ಲಿ ನೈಜಾಮ ಪ್ರಾಂತಿಕ ಪರಿಷತ್ತಿನ ಪ್ರಚಾರಕರಾದ ಶ್ರೀ. ಶಿವಮೂರ್ತೆಪ್ಪ ದಶಮುಖೆ ಇವರು ಧಾರ್ಮಿಕ ಪ್ರಚಾರದ ಬಗ್ಗೆ ಭಾಷಣ ಮಾಡಿದರು. ಅದೇ ವಿಷಯದ ಮೇಲೆ ಶ್ರೀ. ಚಿಂಚೋಳಿ ಸಂಗಪ್ಪ ಇವರು ಕೂಡಾ ಭಾಷಣಮಾಡಿದರು. ಭಾಷಣದ ಪರಿಣಾಮವು ಜನಾಂಗದ ಮೇಲೆ ಪರಿಣಮಿಸಿದ್ದರಿಂದಲೂ ಮತ್ತು ಶ್ರೀಗಳವರ ಅಮೃತವಾಣಿಯ ಪಾನದಿಂದಲೂ ಜನಾಂಗವು ಆನಂದ ತುಂದಿಲವನ್ನು ಹೊಂದಿ ಸಮಾಜಸಂಘಟನೆಯನ್ನುಂಟುಮಾಡಬೇಕೆಂದಮೇರೆಗೆ ಶ್ರೀಗಳವರ ಹಸ್ತದಿಂದಲೇ ವೀರಶೈವ ಸಂಘವು ಸ್ಥಾಪಿಸಲ್ಪಟ್ಟಿತು.

—ಸೆಕ್ರೆಟರಿ.

## ಗದಗ ತಾಲೂಕು ಹಳ್ಳಿಕೇರಿ.

ಇದೇ ಭಾದ್ರಪದ ಶುದ್ಧ ೧೧ ಸೋಮವಾರ ದಿವಸ ಇಲ್ಲಿಯ ಎರಡು ಪಕ್ಷಗಳ ಮಹೇಶ್ವರರು ಶ್ರೀ. ಶಿವಯ್ಯನವರು ಮತ್ತು ಶ್ರೀ. ತೋಟಪ್ಪಯ್ಯನವರು ಇವರು ಊರ ಸದ್ಭಕ್ತರಾದ ಶ್ರೀ. ಕರಬಸಪ್ಪ ತುರಕಾಣಿ, ಶ್ರೀ. ಮಲ್ಲೇಶಪ್ಪ ತುರಕಾಣಿ, ಶ್ರೀ. ಲಿಂಗಪ್ಪ ತಳಕಲ್ಲ, ಶ್ರೀ. ಮಹಾಂತಪ್ಪ ಶೀಲವಂತರ, ಶ್ರೀ. ಶಂಕರಪ್ಪ ಕವಲೂರು ಇವರ ಸಹಾಯದಿಂದಲೂ ವೀರಶೈವ ತರುಣಸಂಘದವರ ಸೇವೆಯಿಂದಲೂ ಹಿಂದೆ ಇದೇ ಗ್ರಾಮದಲ್ಲಿ ಅನೇಕ ಪವಾಡಗಳನ್ನು ತೋರಿಸಿದ ಮಹಾಮಹಿಮರಾದ ಶ್ರೀ. ಗಡ್ಡದ ಅಪ್ಪಯ್ಯಸ್ವಾಮಿಗಳವರ ಪುಸ್ತವನ್ನು ಅಗದೀ ಉತ್ಸಾಹದಿಂದ ನೆರವೇರಿಸಿದರು.

ಈಗ ಎರಡೂ ಮಠದವರು ಕೂಡಿಕೊಂಡದ್ದರಿಂದ ಭಕ್ತಾದಿಗಳು ಕೂಡಲೇ ಜಾಗೃತರಾಗಿ ಅವರೂ ಐಕಮತ್ಯ ಹೊಂದಿದರು. "ಎನಗಿಂತ ಕಿರಿಯರಿಲ್ಲ" ಎಂಬ ಬಸವಣ್ಣನವರ ವಚನಂತೆ ವೀರಶೈವ ಮತದ ಆಧಾರಸ್ತಂಭರಾದ ವಿರಕ್ತವರ್ಗ ಮತ್ತು ಗುರುವರ್ಗಗಳ ಸನ್ನಿಧಿಗಳವರು ಯಾರಿಗೂ ಕೇಳದೆ ತಮ್ಮಿಂದ ತಾವೇ ಒಂದಾಗುವುದು ಒಳ್ಳೆಯದು. ಅಂದರೆ ಭಕ್ತಾದಿಗಳು ತಾವೇ ಒಂದಾಗುತ್ತಾರೆ. ಈ ಕಾರ್ಯ ಅವರಿಗೇ ಸಾಧ್ಯ. ರಾಜರಿಬ್ಬರು ಒಂದಾದರೆ ಎರಡೂ ಕಡೆಯ ಪ್ರಜೆಗಳು ಕೂಡಲೇ ಐಕಮತ್ಯರಾಗುತ್ತಾರೆ. ಈಗಿನ ಭಾರತದ ನವಯುಗ ಯಜ್ಞದಲ್ಲಿ ಜಾತಿ ಎಂಬ ಪಿಶಾಚಿಯನ್ನು ಹೋಮಮಾಡಬೇಕೆಂಬ ರಾಷ್ಟ್ರವೀರರ ಅಭಿಪ್ರಾಯಕ್ಕೂ ಬಸವಣ್ಣನವರ ವಚನಕ್ಕೂ ಒಂದೇ ಪಂಗಡದಲ್ಲಿ ನಾ ಹೆಚ್ಚು ತಾ ಹೆಚ್ಚು ಎಂದು ಹೊಗಳಿಸಿಕೊಳ್ಳುವ ನಮ್ಮವರ ಅಭಿಪ್ರಾಯಕ್ಕೂ ಭೂವ್ಯಾಕಾಶಗಳಷ್ಟೇ ಅಂತರವು ಇರಬಹುದಲ್ಲವೆ?

ಈಗಿನ ಕಾಲದಲ್ಲಿ ಜಗತ್ತೇ ಜಾಗೃತವಾಗುತ್ತ ಇದ್ದು ತಮ್ಮ ದೇಶದ ಜನರ ಹಿತಕ್ಕಾಗಿಯೇ ಕೋಟ್ಯಾಂತರ ಪರಪ್ರಜೆಗಳ ಪ್ರಾಣಹರಣ ಮಾಡುತ್ತಿರುವಾಗ ಒಂದು ಹನಿ ರಕ್ತವು ಭೂಪತನವಾಗದಂತೆ ಭಾರತಮಾತೆಯು ಶಾಂತತೆಯಿಂದಲೇ ಮುಕ್ತಳಾಗಬೇಕೆಂದು ಶಾಂತಿಪುತ್ರರತ್ನಗಳನ್ನು ಪಡೆದು ಜಗತ್ತಿಗೇ ಹೊಸ ದಾರಿಯನ್ನು ತೋರಿಸುತ್ತಾಳೆ. ಹೀಗಿದ್ದು ಇಂಥ ಜಾಗೃತ ಕಾಲದಲ್ಲಿ ನಮ್ಮ ವೀರಶೈವ ಸಮಾಜವು ಹಿಂದೋಡುವುದು ಅನ್ಯಾಯವೂ ಅಸಮಂಜಸವೂ ಆಗಿದೆ. ಮುಂದೆ ಕೂಡಲಿರುವ ವೀರಶೈವ ಮಹಾಸಭೆಯ ಅಧಿವೇಶನದೊಳಗಾಗಿ ಗುರುವರ್ಗ ಮತ್ತು ವಿರಕ್ತವರ್ಗಗಳ ಮಹಾಸನ್ನಿಧಿಗಳವರು ಭೇದಭಾವಗಳನ್ನು ಬಿಟ್ಟು ಸಮ್ಮಿಲಿತರಾದರೆ ಸಮಾಜದ ಉನ್ನತಿಗೂ ರಾಷ್ಟ್ರದ ಸೇವೆಗೂ ರಾಜಕಾರಣಕ್ಕೂ ಅನುಕೂಲವಾಗುವುದು. ಕಾರಣ ಈಗಲಾದರೂ ಕೃಪಾದೃಷ್ಟಿಯನ್ನು ವಿಶಾಲವಾಗಿ ತೆಗೆಯುವರೆಂದು ನನ್ನ ಹಾರೈಕೆ.

—ಸಮಾಜ ಹಿತಚಿಂತಕ.

## ಶೇಡಂ.

ಇಲ್ಲಿ ಪ್ರತಿ ವರುಷದಂತೆ ಶ್ರೀ ರೇವಣಸಿದ್ಧೇಶ್ವರ ದೇವಾಲಯದ ಮುಂದೆ ಶ್ರಾವಣ ಮಾಸದಲ್ಲಿ ಪ್ರತಿನಿತ್ಯ ಸಾಯಂಕಾಲ ೯|| ಗಂಟೆಯಿಂದ ೧೧ ಗಂಟೆಯ ವರೆಗೂ ಭಜನೆಯು ನಡೆದು ಭಾ|| ಶು|| ೧೨ ಸೋಮವಾರ ಗಣತೃಪ್ತಿ, ಮಂಗಳವಾರ ಭಜನೆ ಮೇಳದ ಅತಿ ವಿಜೃಂಭಣೆಯಿಂದ ಗ್ರಾಮದಲ್ಲಿ ದೇವರ ಉತ್ಸವ ಸಾಗಿತು.

—ಪ್ರತ್ಯಕ್ಷದರ್ಶಿ.

## ಲಚ್ಯಾಣ.

ಲಚ್ಯಾಣ ಶ್ರೀಶಿದ್ಧಲಿಂಗ ಶಿವಶರಣರವರ ಪುಣ್ಯ ತಿಥಿ ಪ್ರತಿ ವರ್ಷದ ಪದ್ಧತಿಯಂತೆ ಇದೇ ಭಾದ್ರಪದ ವಧಿ ೮ ಶನಿವಾರ ದಿವಸ ಸಿದ್ಧಪ್ಪ ಮಹಾರಾಜರವರ ಲಿಂಗೈಕ್ಯದ ದಿವಸವಿದ್ದುದರಿಂದ ಶುಕ್ರವಾರದಿಂದಲೇ ನೈರಂತರ್ಯ ಭಜನೆಯು ಪ್ರಾರಂಭವಾಗಿ ಶನಿವಾರ ದಿವಸ ಸಾವಿರಾರು ಜನರ ಅನ್ನ ಸಂತರ್ಪಣೆಯಾಗಿ ಶ್ರೀ ಬಂಥನಾಳ ಶಿವಯೋಗಿಗಳ ಹಾಗೂ ತಡವಲಗಿ ಹಂಜಗಿ ಸ್ವಾಮಿಗಳವರ ಭಾಷಣಗಳಾಗಿ ಪುಣ್ಯತಿಥಿ ಅಂದರೇನು ಮತ್ತು ಅದನ್ನು ಹೇಗೆ ಆಚರಿಸಬೇಕು ಎಂಬುದರ ವಿಷಯವಾಗಿ ಪರಿಣಾಮಕಾರವಾದ ಭಾಷಣಗಳು ಜರುಗಿದವು. ಅನಂತರ ಶ್ರೀ ಶಿವಯೋಗಿಗಳ ಅಡ್ಡ ಪಲ್ಲಕ್ಕಿ ಮಹೋತ್ಸವವು ಅತಿ ವೈಭವದಿಂದ ಜರುಗಿತು. ಉತ್ಸವಕ್ಕಾಗಿ ಬಂದ ಗವಾಯಿಗಳ ಗಾಯನವೂ, ವೇದಾಂತಿಗಳ ವೇದಾಂತ ಶ್ರವಣವೂ, ಕೂಡ ಜರುಗಿ ಬಂದ ಜನರು ಅನ್ನದಾನ ಜ್ಞಾನದಾನದಿಂದ ಆನಂದಭರಿತರಾಗಿ ಪ್ರತಿವರ್ಷಕ್ಕಿಂತ ಈ ವರ್ಷ ಉತ್ಸವವು ಒಳ್ಳೇ ಪರಿಣಾಮಕರವಾಗಿ ನಡೆಯಿತೆಂದು ಕೊಂಡಾಡುತ್ತಿದ್ದರೆಂದು ಹೇಳಲು ಸಂತೋಷವೆನಿಸುತ್ತದೆ.

—ಪ್ರತ್ಯಕ್ಷದರ್ಶಿ.

ಎಂಬ ಮನೋಭಾವನೆಯು ಒಡಮೂಡುತ್ತಿದೆ. ದುಷ್ಟರನ್ನು ದಮನಮಾಡುವ ದರ್ಪವು ಪ್ರಭುತ್ವಕ್ಕೆ ಬೇಕು. ಪ್ರಜಾಸರಕಾರಕ್ಕಾದರೂ ಈ ದರ್ಪವು ಅವಶ್ಯಕ. ನಮ್ಮ ದೇಶದ ಹಿತಸಾಧನೆಗಾಗಿ ಬೇಕಾದುದನ್ನು ನಾವು ಮಾಡಲೇಬೇಕು. ಮಹಾತ್ಮಾಜಿಯವರು ಮ್ಯಾಂಚೆಸ್ಟರಿಗೆ ಹೋದಾಗ್ಗೆ ಅಲ್ಲಿಯ ನೌಕರರು ಗಾಂಧೀಜಿಯವರಲ್ಲಿ ಆಗುತ್ತಿರುವ ಕಷ್ಟನಷ್ಟಗಳನ್ನು ಹೇಳಿಕೊಂಡು ಖಾದಿ ಚಳುವಳಿಯನ್ನು ನಿಲ್ಲಿಸಬೇಕೆಂದು ಬೇಡಿಕೊಂಡರು. ಮಹಾತ್ಮರು ಭರತಖಂಡದ ೩೮ ಕೋಟಿ ದಟ್ಟದರಿದ್ರರ ಹಿತಸಾಧನೆಯಲ್ಲಿ ದೃಷ್ಟಿಯುಳ್ಳ ನಾನು ನಿಮಗೇನನ್ನು ಹೇಳಬಲ್ಲೆನೆಂದರು. ಹೀಗೆ ನಮ್ಮ ಮನೋಧರ್ಮವು ಬೆಳೆಯಬೇಕಾಗಿದೆ. ಧರ್ಮವು ಜಗತ್ತಿನ ಹಿತಸಾಧನವಾಗುವಂತೆ ಪರಿವರ್ತನಮಾಡಿಕೊಳ್ಳುವ ಭಾರವು ನಮ್ಮದಾಗಿರುತ್ತೆ.

ಹಾಗೆ ಮಾಡಿದರೆ ಭಾರತಕ್ಕೆ ಬಿಡುಗಡೆಯಾಗುತ್ತೆ. ಧಾರ್ಮಿಕ ದೃಷ್ಟಿಯಿಂದ ರಾಜಕೀಯ ದೃಷಿಯಿಂದ ವ್ಯಾವಹಾರಿಕ ದೃಷ್ಟಿಯಿಂದಲೂ ಬಿಡುಗಡೆಯಾಗಬೇಕಾಗಿದೆ. ಅದೇ "ನಾಳೆಯ ಭಾರತದ" ಮುಕ್ತಿಗೆ ಸಾಧನವಾಗುತ್ತದೆ.

ಅನಂತರ ಪಾಠಶಾಲೆಯ ವರದಿಯು ಓದಲ್ಪಟ್ಟಿತು. ವರದಿಯಿಂದ ಪಾಠಶಾಲೆಯಲ್ಲಿ ಸುಮಾರು ೨೦ ಮಂದಿ ವಿದ್ಯಾರ್ಥಿಗಳಿರುವರೆಂದೂ ಶ್ರೀಮಾನ್ ಗೌಡರ ರುದ್ರಪ್ಪನವರು ತಮ್ಮ ತಂದೆಯವರಿಂದ ೧೯೩೪ ರಲ್ಲಿ ಸ್ಥಾಪಿಸಲ್ಪಟ್ಟ ಈ ಪಾಠಶಾಲೆಯನ್ನು ನಡೆಸುತ್ತಿರುವರಲ್ಲದೆ ಮುಂದೆ ಇದು ಶಾಶ್ವತವಾಗಿ ನಡೆಯುವ ಸಂಸ್ಥೆಯನ್ನಾಗಿ ಮಾಡಬೇಕೆಂಬ ಉತ್ಕಟೇಚ್ಛೆಯುಳ್ಳವರಾಗಿದ್ದಾರೆಂದೂ ತಿಳಿದುಬಂದಿದೆ.

### ಅಧ್ಯಕ್ಷರ ಭಾಷಣ.

ಅನಂತರ ಅಧ್ಯಕ್ಷರು ಪ್ರಕೃತ ಪಾಠಶಾಲೆಯ ಪರಿಸ್ಥಿತಿಗಳನ್ನು ವಿವರಿಸುತ್ತಾ ಅಮೂಲ್ಯವಾದ ಅಭಿಪ್ರಾಯಗಳನ್ನು ಅಪ್ಪಣೆಕೊಡಿಸಿದರು. ಹಿಂದಿನ ನಳ ನಹುಷಾದಿ ಸಾರ್ವಭೌಮರೆಲ್ಲರೂ ಧರ್ಮೋದ್ಧಾರಕರಾಗಿದ್ದರು. ಅವರು ಹಿಂದಿನ ಧರ್ಮವನ್ನೇ ಉದ್ಧಾರಮಾಡಿರುವುದಾಗಿ ಹೇಳಿದರು. ಹೊಸದಾಗಿ ಒಂದು ಧರ್ಮವನ್ನು ಸ್ಥಾಪಿಸುವುದಕ್ಕಿಂತಲೂ ಹಳೆದನ್ನು ಸುಧಾರಿಸಿ ಬೆಳೆಯಿಸುವುದು ಮಹತ್ವವಾಗಿದೆ. ಹಾಗೆ ನಮ್ಮ ಶ್ರೀಮಾನ್ ರುದ್ರಪ್ಪನವರು ತಮ್ಮ ತಂದೆಯವರು ಸ್ಥಾಪಿಸಿದ ಈ ಪಾಠಶಾಲೆಯನ್ನೂ ನಡೆಸುತ್ತಿರುವುದು ಪ್ರಶಂಸನೀಯವಾದ ವಿಷಯವಾಗಿದೆ. ಅವರು ಈ ಪಾಠಶಾಲೆಯನ್ನು ಇತೋಪತಿಶಯವಾಗಿ ಅಭಿವೃದ್ಧಿಪಡಿಸುವ ಹಿರಿಯ ಬಯಿಕೆಯುಳ್ಳವರಾಗಿ ಇರುವರೆಂಬುದು ಸಂತೋಷಕರವಾದುದಾಗಿದೆ.

ಇದೊಂದು ದೊಡ್ಡ ಸಂಸ್ಥೆಯಾಗಿ ಶಾಶ್ವತವಾಗಬೇಕು. ಅಚ್ಚಳಿಯದೆ ಉಳಿಯಬೇಕು. ಮುಂದಿನ ವರುಷ ಈ ಶಾಲೆಯ 'ರಜತಮಹೋತ್ಸವವು' ಬೀಳಬಹುದೆಂದು ತಿಳಿಯುತ್ತದೆ. ಅದು ಯಶಸ್ವಿಯಾಗಿ ನಡೆಯಲೆಂದು ಹಾರೈಸುತ್ತೇನೆ. ವೇದಮಾರ್ಗವು ಭರತಖಂಡದ ಸಂಸ್ಕೃತಿಗೆ ಮೂಲವೆಂದು ಹೇಳಬಹುದು. ಇಂದಿನ ಭಾರತೀಯ ಮತಗಳಿಗೆ ಅದೇ ಮೂಲ. ಎಲ್ಲ ಆಚಾರ್ಯರೂ ವೇದೋಪನಿಷತ್ತುಗಳ ಮೇಲೆಯೇ ತಮ್ಮ ತಮ್ಮ ಧರ್ಮಗಳನ್ನು ಸ್ಥಾಪಿಸಿದ್ದಾರೆ. ವೇದವೂ ಸೂತ್ರಗಳೂ ಚತುರ್ಮುಖನಂತೆ ಸರ್ವತೋಮುಖವಾದವು. ಅವುಗಳಲ್ಲಿ ಇದೇ ಪ್ರಧಾನ ಅದೇ ಮುಖ್ಯ ಎಂದು ಹೇಳಬರುವುದಿಲ್ಲ. ಸತ್ಯವೂ ಬಹು ಮುಖ ವೇದವೆಂದರೆ ಸತ್ಯ. ಕೆಲವರು ವೇದಮಾರ್ಗದಲ್ಲಿ ಅನಾದರಣೆಯನ್ನು ತೋರಿಸಲು ಒಡ್ಡುವ ಭಾವನೆಗಳು ಭ್ರಾಂತಿಜನ್ಯವಾದವು. ವೀರಶೈವ ಮತವು ವೇದೋಪನಿಷತ್ತುಗಳಿಗೆ ಸಮಂಜಸವಾದುದು. ಹಿಂದೆ ಮಲ್ಲಣಾರ್ಯ ಮುಂತಾದ ಕವಿಗಳೂ ಶಾಸ್ತ್ರಕಾರರೂ 'ವೇದೋಪನಿಷತ್ತು ಮಾರ್ಗವಪ್ಪಾ' ಎಂದು ಹೇಳಿದ್ದಾರೆ.

ವೀರಶೈವ ಮತದಲ್ಲಿ ಮತ್ತೊಂದು ಮಹತ್ವದ ವಿಷಯವೆಂದರೆ ವೇದೋಪನಿಷತ್ತುಗಳ ಸಾರವು ಸಂಗ್ರಹಿಸಲ್ಪಟ್ಟಿದೆ. ಮತ್ತು ಇಹ ಪರಗಳೆರಡಕ್ಕೂ ಸಾಧಕವಾದ ತತ್ವಗಳು ಇದರಲ್ಲಿವೆ. ಉಪನ್ಯಾಸಕರು ಹೇಳಿದ ಮಾತುಗಳು ಅಮೂಲ್ಯವಾದವು. ಅದರಂತೆ ಸುಧಾರಣೆಯು ಅವಶ್ಯಕ. ಇಹದಲ್ಲಿ ಚೆನ್ನಾಗಿ ಬಾಳಿ ಗುರುಜಂಗಮಸೇವೆಯನ್ನು ಮಾಡಿ ಮುಕ್ತಿಸಾಧನೆಯನ್ನು ಮಾಡಬೇಕೆಂಬುದನ್ನು ಹಿಂದಿನ ಮಹನೀಯರು ರೂಢಿಮಾಡಿಸಿದ್ದಾರೆ. ವೀರಶೈವ ವೇದಾಂತ ಶಾಸ್ತ್ರದಲ್ಲಿ ಚೆನ್ನಾಗಿ ವಿವರಿಸಿದ್ದಾರೆ. ಅದನ್ನು ಎಲ್ಲರೂ ಮನವರಿಕೆಮಾಡಿಕೊಂಡು ಆಚರಣೆಯಲ್ಲಿ ತರಬೇಕು. ವೈದಿಕ ವಿದ್ಯಾಭ್ಯಾಸವು ಮತದ ಪ್ರತಿಷ್ಠೆಗೆ ಆವಶ್ಯಕವಾದುದು. ಅದರ ಅಭಿವೃದ್ಧಿಯು ಹೆಚ್ಚಾಗಿ ಆಗಬೇಕು. ಇಂತಹ ಸಂಸ್ಥೆಗಳು ಸ್ಥಾಪಿತವಾಗಬೇಕು. ಸಮಾಜದವರು ಅದಕ್ಕೆ ಪ್ರೋತ್ಸಾಹ ಕೊಡಬೇಕು. ವೈದಿಕ ವಿದ್ಯಾಭ್ಯಾಸ ಮಾಡುವ ವಿದ್ಯಾರ್ಥಿಗಳು ಬಹಳ ಕಡಿಮೆ. ಅವರಿಗೆ ಜೀವನ ಸಮಸ್ಯೆಯು ಪ್ರಬಲವಾಗುತ್ತದೆ. ಲೋಕದಲ್ಲಿ ಅವರು ಜೀವಿಸಲಿಕ್ಕೆ ತಕ್ಕ ಅನುಕೂಲತೆಯನ್ನು ನಾವು ಅನುಕೂಲಪಡಿಸಿಕೊಡಬೇಕು. ಅದಕ್ಕಾಗಿ ಯಾವ ಯೋಜನೆಯನ್ನು ಜೋಡಿಸಿದರೆ ಈ ಸಮಸ್ಯೆಯು ಬಗೆಹರಿಯಬಹುದು ಎಂಬ ವಿಷಯದಲ್ಲಿ ನನಗೆ ತಿಳಿದಮಟ್ಟಿಗೆ ಈ ವಿಷಯದಲ್ಲಿ ಸಹಾಯಮಾಡುತ್ತೇನೆ.

ಅದನ್ನು ಯೋಚಿಸಿ ಮುಂದಿನ ರಜತಮಹೋತ್ಸವದ ಹೊತ್ತಿಗೆ ಈ ಸಂಸ್ಥೆಯನ್ನು ಶಾಶ್ವತವಾದ ಸಂಸ್ಥೆಯಾಗಿಮಾಡಲು ಶ್ರೀಮಾನ್ ರುದ್ರಪ್ಪನವರು ಪ್ರಯತ್ನಿಸುವರೆಂದೂ ಅಂತಹ ಶಕ್ತಿಯನ್ನು ದೇವರು ಅನುಗ್ರಹಿಸಲೆಂದೂ ಇಲ್ಲಿ ತಯಾರಾದ ವಿದ್ಯಾರ್ಥಿಗಳು ಅದನ್ನು ಸಾರ್ಥಕಪಡಿಸಿಕೊಂಡು ಸಮಾಜಸೇವೆಯಲ್ಲಿ ನಿರತರಾಗಬೇಕೆಂದೂ ನಾನು ಹಾರೈಸುತ್ತೇನೆ.

ಅನಂತರ ವಿದ್ಯಾಗಣಪತಿಯ ಮಹಾಮಂಗಳಾರತಿ ರಾಜಾಶೀರ್ವಾದಗಳು ನಡೆದು ಸಭೆಯು ಮುಕ್ತಾಯವಾಯಿತು.

ಓರ್ವ ಪ್ರತ್ಯಕ್ಷದರ್ಶಿ.

---

# 'ಕನ್ನಡ ನುಡಿ'

## ಪರಿಷತ್ತಿನ ವಾರಪತ್ರಿಕೆ

### ಪ್ರತಿ ಶುಕ್ರವಾರವೂ ಹೊರಡುತ್ತದೆ.

ಫೂಲ್ಸ್‌ಕ್ಯಾಪ ಕಾಗದದ ೮ ಪುಟಗಳು.

ವಾರ್ಷಿಕ ಚಂದಾ ರೂ. ೧-೮-೦ ಬಿಡಿಸಂಚಿಕೆ ೬ಕಾಸು
(ಅಂಚೆವೆಚ್ಚ ಸೇರಿ) ೨-೪-೦

ಬರುವ ವಿಜಯ ದಶಮಿಯದಿನ ಹೊರಡುತ್ತದೆ.

ಕಳೆದ ವಸಂತ ಸಾಹಿತ್ಯೋತ್ಸವದ ಸಂದರ್ಭದಲ್ಲಿ ಪರಿಷತ್ ಉಪಾಧ್ಯಕ್ಷರು ಶ್ರೀ. ಬಿ. ಎಂ. ಶ್ರೀ ಕಂಠಯ್ಯನವರು "ಕನ್ನಡಕ್ಕಾಗಿಯೇ, ಕನ್ನಡ ಚಳವಳಿಗಾಗಿಯೇ ಮೀಸಲಾದ ಒಂದು ವಾರಪತ್ರಿಕೆ ಬೇಕು. ಕನ್ನಡ ಹಿರಿಮೆಯನ್ನು ಎತ್ತಿಹೇಳಿ, ಕನ್ನಡ ಪ್ರಚಾರಕ್ಕಾಗಿಯೇ ಮೀಸಲಾದ ಒಂದು ಪತ್ರಿಕೆ ಇರುವುದರ ಆವಶ್ಯಕತೆ ಈಗ ತೋರಿಬರುತ್ತದೆ." ಎಂದು ಹೇಳಿದ್ದಾರಷ್ಟೆ. ಈ ಉದ್ದೇಶವನ್ನು ಕಾರ್ಯರೂಪಕ್ಕೆ ತರಬೇಕೆಂದು ಆಲೋಚಿಸಿ, ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿ ಈ ಕೆಳಗಿನಂತೆ ತೀರ್ಮಾನಮಾಡಿದೆ—

"ಕನ್ನಡ ಪ್ರಚಾರಕ್ಕಾಗಿ ಪರಿಷತ್ತಿನಿಂದ ಒಂದು ವಾರಪತ್ರಿಕೆಯನ್ನು ಪ್ರಕಟಿಸತಕ್ಕದ್ದು."

ಈ ಪತ್ರಿಕೆಯ ಮೊದಲನೆಯ ಸಂಚಿಕೆ ಈ ಸಲದ ವಿಜಯ ದಶಮಿಯ ದಿನ ಹೊರಡತಕ್ಕದ್ದು. ಈ ಪತ್ರಿಕೆಗೆ ಶ್ರೀಮಾನ್ ಅ. ನ. ಕೃಷ್ಣರಾಯರವರು ಸಂಪಾದಕರಾಗಿರಬೇಕೆಂದು ಪ್ರಾರ್ಥಿಸಿ ಕೊಳ್ಳತಕ್ಕದ್ದು."

ಮೇಲಿನ ತೀರ್ಮಾನಕ್ಕೆ ಅನುಸಾರವಾಗಿ ಬರುವ ವಿಜಯ ದಶಮಿಯದಿನ ಈ ಪತ್ರಿಕೆಯ ಮೊದಲನೆಯ ಸಂಚಿಕೆಯನ್ನು ಪ್ರಕಟಿಸಲು ಸಿದ್ಧತೆಗಳಾಗುತ್ತಿವೆ.

ಪತ್ರಿಕೆ ಸಂಪೂರ್ಣವಾಗಿ ಕನ್ನಡನುಡಿ. ಅದರ ಪ್ರಚಾರ ಅದರ ಏಳಿಗೆ ಇದಕ್ಕೆ ಮೀಸಲಾಗಿದೆ. ಕನ್ನಡಿಗರಿಗೆ ಕನ್ನಡದ ವಿಷಯವಾಗಿ, ಕನ್ನಡ ಮೂಲಕ, ಎಲ್ಲ ತಿಳುವಳಿಕೆಕೊಡುವುದೇ ಅದರ ಮುಖ್ಯ ಉದ್ದೇಶ. ಅದರಲ್ಲಿ ಬರುವದು ಕನ್ನಡ ಸುದ್ದಿಗಳು, ಭಾಷೆ, ಸಾಹಿತ್ಯ, ಸಂಸ್ಕೃತಿಗಳಿಗೆ ಮಾತ್ರ ಸಂಬಂಧಿಸಿದ ಬರಹಗಳು ಸುದ್ದಿಗಳು.

ಈ ಪತ್ರಿಕೆ ಇದು ಚಿರಕಾಲ ಕನ್ನಡದ ಮತ್ತು ಕನ್ನಡಿಗರ ಸೇವೆ ಮಾಡುವಂತೆ ಎಲ್ಲ ಕನ್ನಡಿಗರೂ ಪರಿಷತ್ತಿನ ಈ ಹೊಸ ಪ್ರಯತ್ನವನ್ನು ಹರಿಸಿ, ಪತ್ರಿಕೆಗೆ ಎಲ್ಲ ಬಗೆಯ ಪ್ರೋತ್ಸಾಹಗಳನ್ನೂ ಕೊಡಬೇಕೆಂದು ಪ್ರಾರ್ಥನೆ. ಇಷ್ಟವುಳ್ಳವರು ಏಜನ್ಸಿಗಾಗಿ ಬರೆದು ಕೊಳ್ಳಬಹುದು.

—ಪರಿಷತ್ತಿನ ಪ್ರಕಟನ ಶಾಖೆಯಿಂದ.

## ನಾಡಹಬ್ಬದ ಉತ್ಸವ ಮಂಡಲ.

ಬಾಗಲಕೋಟೆಯಲ್ಲಿ ನಾಡಹಬ್ಬದ ಉತ್ಸವವನ್ನು ಅಶ್ವಿನ ಶು|| ೫ ಬುಧವಾರ ತಾ. ೨೮-೯-೩೮ ರಿಂದ ಪ್ರಾರಂಭಮಾಡಿ ತಾ. ೩-೧೦-೩೮ ನೇ ಸೋಮವಾರದ ವರೆಗೆ ೫ ದಿವಸ ಕಾರ್ಯಕ್ರಮಗಳನ್ನು ಇಟ್ಟುಕೊಳ್ಳಬೇಕೆಂದು ಸರ್ವಾನುಮತದಿಂದ ಗೊತ್ತಾಗಿದೆ.

ಈ ಪತ್ರಿಕೆಯು ಆಲಮಟ್ಟಿ ಶ್ರೀ ... ಮಂಜಪ್ಪನವರಿಂದ ಮುದ್ರಿಸಲ್ಪಟ್ಟಿತು

REGISTERED No. B. 2891.

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಿಂಗೂ ಅಂಜುವವನಲ್ಲ !
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.


ಸಂಪಾದಕರು:-
ಶ್ರೀ. ಹ[illegible]ರ ವ[illegible]ಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೪ | ಆಲಮಟ್ಟಿ- ಸೋಮವಾರ ತಾರೀಖು ೩ ನೆಯ ಅಕ್ಟೋಬರ್ ೧೯೩೮. | ಸಂಚಿಕೆ ೮ |
|---|---|---|


ಜನಸೇವೆಯೇ ದೇವರಸೇವೆ.

## ಗಾಂಧೀಜಿಯವರ ವರ್ಧಂತ್ಯುತ್ಸವ.



ಜಗದ್ವಂದ್ಯರಾದ ಮ. ಗಾಂಧಿಯವರ ೭೦ ನೆಯ ವರ್ಷ ವರ್ಧಂತ್ಯುತ್ಸವವು ನಿನ್ನಿನ ದಿವಸ ಅಖಿಲ ಭರತಖಂಡದಲ್ಲಿ ಬಹು ಸಂಭ್ರಮದಿಂದ ಜರುಗಿಸಲ್ಪಟ್ಟಿತು.

ದೇಹವೇ ದೇವಾಲಯ.



# ಶರಣ ಸಂದೇಶ

THE SHARANA SANDESHA.



## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೮. | ಆಲಮಟ್ಟಿ-ಸೋಮವಾರ ತಾರೀಖು ೩ ನೆಯ ಅಕ್ಟೋಬರ್ ೧೯೩೮. | ಸಂಚಿಕೆ .೮

## ಮಹತ್ವದ ಸುದ್ದಿಗಳು.

—ನಿನ್ನಿನ ದಿವಸ ಮಹಾತ್ಮಾ ಗಾಂಧಿಯವರ ೭೦ ನೆಯ ವರ್ಷ ವರ್ಧಂತ್ಯುತ್ಸವವು ಅಖಿಲ ಭರತ ಖಂಡದಲ್ಲಿ ಬಹು ಸಂಭ್ರಮದಿಂದ ಜರುಗಿತು.

—ಬನ್ನು ನಗರದಲ್ಲಿಯ ಸಿಡಿಗುಂಡಿನ ಒಳಸಂಚಿನ ಖಟ್ಲೆಯಲ್ಲಿ ಸ್ಫೋಟಕ ಪದಾರ್ಥಗಳ ಶಾಸನದ ಮೇರೆಗೆ ಇಬ್ಬರಿಗೆ ಏಳೇಳು ವರ್ಷಗಳ ಶಿಕ್ಷೆ ವಿಧಿಸಲಾಯಿತು.

—ತ್ರಾವಣಕೋರ ಸಂಸ್ಥಾನ ಕಾಂಗ್ರೆಸ್ಸಿನ ಐದನೆಯ ಅಧ್ಯಕ್ಷರಾದ ಶ್ರೀ. ಸಿ. ಆಯ್. ಕುರುವಿಲ್ಲಾರವರಿಗೆ ಕ್ರಿ. ಶಾಸನ ತಿದ್ದುಪಡೆಯ ಕಾಯಿದೆಗನುಸಾರವಾಗಿ ೧೮ ತಿಂಗಳ ಸಾದ ಶಿಕ್ಷೆಯನ್ನೂ ಮತ್ತು ೨೦೦೦ ರೂ. ಗಳ ದಂಡ ಇಲ್ಲವೆ ೪|| ತಿಂಗಳುಗಳ ಹೆಚ್ಚಿನ ಶಿಕ್ಷೆಯನ್ನೂ ವಿಧಿಸಲಾಗಿದೆ.

—ಶಿಕ್ಷೆಯ ಅವಧಿಯು ಮುಗಿಯುವ ಪೂರ್ವದಲ್ಲಿಯೇ ಡಮಡಮ ಸೆರೆಮನೆಯಿಂದ ೫೦ ರಾಜಕೀಯ ಕೈದಿಗಳನ್ನೂ ಅಲಿಪುರ ಕೇಂದ್ರ ಸೆರೆಮನೆಯಿಂದ ನಾಲ್ವರನ್ನೂ ಬಿಡುಗಡೆಮಾಡಲಾಗಿದೆ. ಸರಕಾರದವರ ಇತ್ತೀಚಿನ ಧೋರಣೆಗನುಸಾರವಾಗಿಯೇ ಈ ಸೆರೆಯಾಳುಗಳನ್ನು ಬಿಡುಗಡೆಮಾಡಲಾಗಿದೆ. ಬಿಡುಗಡೆ ಹೊಂದಿದವರಲ್ಲಿ ಅನೇಕರು ದೀರ್ಘಕಾಲದ ವರೆಗೆ ಉಗ್ರಶರ ಬೇನೆಯಿಂದ ಬಳಲುತ್ತಿರುವರೆಂದು ತಿಳಿದು ಬಂದಿದೆ.

—ಕಳೆದ ಮೂರು ತಿಂಗಳುಗಳಲ್ಲಿ ಜಿ. ಆಯ್. ಪಿ. ರೇಲ್ವೆಯ ಮೇಲೆ ೯೧,೬೪೦ ಜನರು ಟಿಕೀಟು ಇಲ್ಲದೆ ಪ್ರವಾಸ ಮಾಡುವದು ಕಂಡು ಬಂದದ್ದರಿಂದ ೫೧೦೪೮ ಜನರ ಕಡೆಯಿಂದ ದಂಡ ವಸೂಲ ಮಾಡಲ್ಪಟ್ಟಿತಲ್ಲದೆ ೬೫೧ ಜನರ ಮೇಲೆ ಖಟ್ಲೆ ಹಾಕಲ್ಪಟ್ಟಿತು. ೩೯ ಸಾವಿರ ಭಿಕ್ಷುಕರು ಹೊರಗೆ ಹಾಕಲ್ಪಟ್ಟರು.

—ಗೋವಾ ಮತ್ತು ಇತರ ಯಾವದೇ ಲಾಟರಿ ಕಂಪನಿಗಳ ಟಿಕೀಟುಗಳು ತನ್ನ ಪ್ರಾಂತದಲ್ಲಿ ಮಾರಲ್ಪಡಬಾರದಾಗಿ ಸಿಂಧ ಸರಕಾರವು ಪ್ರತಿಬಂಧಿಸಿದೆ.

—ಇಂಗ್ಲೆಂಡಿನಲ್ಲಿ ೬೦,೦೦೦ ಡಾಕ್ಟರ್ ಮಹಾಶಯರುಗಳಿದ್ದಾರೆ. ಪ್ರತಿಯೊಬ್ಬರಿಗೂ ಅಲ್ಲಿ ವರ್ಷಕ್ಕೆ ಕಮ್ಮಿ ಎಂದರೆ ೧೦೦೦ ಪವನಗಳನ್ನು ಸಂಪಾದಿಸುವ ಸಂದರ್ಭಗಳಿವೆ.

—ತಾ. ೧೧ ರಿಂದ ೧೭ ರ ವರೆಗೆ ಒಂದು ವಾರದಲ್ಲಿ ೩,೫೪,೫೮೮ ರೂ. ಗಳ ಬಂಗಾರವು ಮುಂಬೈ ಬಂದರದಿಂದ ಪರದೇಶಕ್ಕೆ ಹೋಯಿತು. ತಾ. ೨೧-೯-೩೧ರಿಂದ ತಾ. ೧೪-೯-೩೮ ರ ವರೆಗೆ ಈ ಏಳು ವರುಷಗಳಲ್ಲಿ ಒಟ್ಟು ೩,೧೯,೫೧,೮೭,೪೮೧ ರೂ. ಗಳ ಬಂಗಾರವು ಪರದೇಶಕ್ಕೆ ಹೋಯಿತು.

—ಇಂಗ್ಲೆಂಡಿನಲ್ಲಿ ೮,೬೬೧,೫೦೦ ರೇಡಿಯೋ ಯಂತ್ರಗಳನ್ನಿಟ್ಟುಕೊಂಡವರಿದ್ದಾರೆ. ಕಳೆದ ವರುಷ ೮,೨೬೯,೬೦೦ ವಾಯರ್ಲೇಸ್ ಯಂತ್ರಗಳಿದ್ದವು. ಅಂದರೆ ಒಂದು ವರುಷದಲ್ಲಿ ೩೯೧೯೦೦ ಯಂತ್ರಗಳು ಹೆಚ್ಚಿದವು.

—ಕರವೀರ ಇಲಾಖೆಯ ಪರಮಾನಂದವಾಡಿಯಲ್ಲಿ ೭-೮ ವರುಷ ಮಳೆಯಿಲ್ಲದೆ ದುಷ್ಕಾಳ ಸ್ಥಿತಿಯಲ್ಲಿ ಚಹಾದ ವ್ಯಸನವು ಮನೆಮನೆಗೆ ಹತ್ತಿ ಜನರನ್ನು ಬಹಳ ದರಿದ್ರ ಸ್ಥಿತಿಗೆ ತಂದಿರುವದು. ಇದನ್ನು ಕಂಡು ಇಲ್ಲಿಯ ಎಲ್ಲ ರೈತರು ವ್ಯಾಪಾರಿ ಜನರಿಗೆ ಅಂಗಡಿಗಳಲ್ಲಿ ಮಾರಲಿಕ್ಕೆ ಚಹಾಪುಡಿ ತರಬಾರದೆಂದು ವಿನಂತಿ ಮಾಡಿಕೊಳ್ಳಲಾಗಿ ವ್ಯಾಪಾರಿ ಜನರು ಸದ್ಯದಸ್ಥಿತಿಗೆ ಲಕ್ಷ್ಯಕೊಟ್ಟು ಚಹಾ ಮಾರುವದನ್ನು ಬಿಟ್ಟುಕೊಟ್ಟರು. ಊರಲ್ಲಿಯೂ ಚಹಾಪಾನವು ತೀರ ನಿಂತುಹೋಗಿದೆ. ಇಲ್ಲಿಯ ಹೊಟೆಲದಲ್ಲಿಯೂ ಚಹಾ ಸಿಗುವದಿಲ್ಲ. ಅವರು ಹಾಲು ಮಾರಲು ಸುರುವುಮಾಡಿದ್ದಾರೆ.

—ವಿಮಾನಗಳ ಮುಖಾಂತರ ೧೦೦೦೦೦೦೦ ಬೆಲೆ ಬಾಳುವ ಪಚ್ಚೆ, ಹವಳ, ವಜ್ರ ಮುಂತಾದವುಗಳನ್ನು ವಿದೇಶಕ್ಕೆ ಕಳಿಸಲಾಯಿತು.

# ವೀರಶೈವ ಮಹಾಸಭೆ
## ಅದರ
## ಆಯುಷ್ಯ ಮತ್ತು ಭವಿಷ್ಯ.

ಲೇಖಕರು— ಶ್ರೀ ಜೀರಿಗೆ ಕ. ಬಸವಪ್ಪ ಬಿ. ಎ.
ಬೆಂಗಳೂರು ನಗರ.

ಜಗತ್ತಿನಲ್ಲಿ ಯಾವ ಸಮಾಜವೇ ಆಗಲಿ ಮುಂದುವರಿಯ ಬೇಕಾದರೆ ಆ ಸಮಾಜದ ಜನರು ಐಕಮತ್ಯವನ್ನು ಸಂಪಾದಿಸಬೇಕು. ಮುಂದುವರಿಯುವುದೆಂದರೆ ಒಂದು ಸಮಾಜದ ಜನರು ಮತ್ತೊಂದು ಸಮಾಜದ ಜನರಿಗೆ ಕಂಟಕರಾಗಿ ತಾವು ಯಾರೆಂಬುದನ್ನೇ ಮರೆತು ಹೀನ ದ್ವೇಷಾಸೂಯೆಗಳಿಗೆ ಇಂಬುಗೊಟ್ಟು ರಾಕ್ಷಸೀ ಕೃತ್ಯಗಳನ್ನೆಸಗುವುದೆಂದಲ್ಲ. ಬಾಳಿನಲ್ಲಿ ಬೆಳಕನ್ನು ಕಂಡು ಜೀವನದಲ್ಲಿ ಸುಖ ಶಾಂತಿಗಳನ್ನು ಪಡೆಯಬೇಕೆಂಬುದೇ ಮಾನವನ ಹೆಗ್ಗುರಿ. ಈ ಹೆಗ್ಗುರಿಯ ಸಾಧನೆಯೇ ಎಲ್ಲ ಸಮಾಜಗಳ ಆದ್ಯ ಕರ್ತವ್ಯ. ಈ ಹೆಗ್ಗುರಿಯ ಸಾಧನೆಗೆ ಐಕಮತ್ಯವು ಅತ್ಯಗತ್ಯ ಐಕಮತ್ಯವು ಮಾನವಕೋಟಿಯ ಕಲ್ಯಾಣವನ್ನು ಸಾಧಿಸತಕ್ಕ ಒಂದು ಮಹಾ ಶಕ್ತಿ. ಐಕಮತ್ಯದ ಬೆಲೆ ಅಮಿತವಾದದ್ದು. ಅದರ ಪ್ರಭಾವ ಅಪಾರವಾದದ್ದು. ಐಕಮತ್ಯವೊಂದಿದ್ದರೆ ಎಂತಹ ಅಸಾಧ್ಯವಾದ ಕೆಲಸವನ್ನಾದರೂ ಸಾಧಿಸಬಹುದು. ಐಕಮತ್ಯದ ಎದುರಿನಲ್ಲಿ ಎಂತಹ ಕ್ರೂರ ಅಸ್ತ್ರ ಶಸ್ತ್ರಗಳೂ ತಣ್ಣಗಾಗುವವು. ಕ್ರೈಸ್ತ ಮತಸ್ಥಾಪಕನಾದ ಏಸೂ ಕ್ರಿಸ್ತನೂ, ಮುಸಲ್ಮಾನ್ ಮತಸ್ಥಾಪಕನಾದ ಮಹಮ್ಮದ ಪೈಗಂಬರನೂ, ಬೌದ್ಧ ಮತಸ್ಥಾಪಕನಾದ ಗೌತಮ ಬುದ್ಧನೂ, ಅಂತೆಯೇ ವೀರಶೈವ ಮತಸ್ಥಾಪಕನಾದ ಬಸವೇಶ್ವರನೂ ಐಕಮತ್ಯ ಶಕ್ತಿಯಿಂದ ಲೋಕಕ್ಕೆ ಅತಿಶಯವಾದ ಕಲ್ಯಾಣವನ್ನುಂಟುಮಾಡಿದ್ದಾರೆ. "ಕಾಗೆ ಒಂದಗುಳ ಕಂಡರೆ ಕರೆಯದೆ ತನ್ನ ಬಳಗವನು! ಕೋಳಿ ಒಂದು ಗುಟುಕವ ಕಂಡರೆ ಕರೆಯದೆ ತನ್ನ ಕುಲವೆಲ್ಲವನು! ಶಿವಭಕ್ತನಾಗಿ ಭಕ್ತ ಪಕ್ಷವಿಲ್ಲದಿದ್ದರೆ ಆ ಕಾಗೆ ಕೋಳಿಗಿಂತ ಕರಕಷ್ಟ" ಎಂದು ಬಸವಣ್ಣನವರು ಐಕಮತ್ಯದ ಆವಶ್ಯಕತೆಯನ್ನು ಮನದಟ್ಟವಾಗುವಂತೆ ಹೇಳಿದ್ದಾರೆ.

ಒಂದಾನೊಂದು ಕಾಲದಲ್ಲಿ ವೀರಶೈವ ಸಮಾಜವು ಅಪಾರವಾದ ಐಕಮತ್ಯವನ್ನು ಸಂಪಾದಿಸಿ ಲೋಕಕ್ಕೆ ಮಹತ್ತರವಾದ ಸೇವೆಯನ್ನು ಸಲ್ಲಿಸಿದುದು ನಿಜ. ಆದರೆ ಅದು ಹಿಂದಿನ ಮಾತು. ಇಂದು ನಮ್ಮ ವೀರಶೈವ ಸಮಾಜವು ಬಹು ಶೋಚನೀಯವಾದ ಸ್ಥಿತಿಯಲ್ಲಿದೆ. ಹಿಂದಣ ಶಕ್ತಿ ಸಾಹಸಗಳು ಕಂದಿ ಕುಂದಿ ಐಕಮತ್ಯವು ಕಣ್ಮರೆಯಾಗಿದೆ. ಐಕಮತ್ಯದ ಅಭಾವದಿಂದ ವೀರಶೈವ ಸಮಾಜವು ರೋಗಗ್ರಸ್ತವಾಗಿ ಹಾಸಿಗೆಯನ್ನು ಹಿಡಿಯಲಿಕ್ಕೆ ಹತ್ತಿದೆ. ಈ ಸಮಯದಲ್ಲಿ ವೀರಶೈವ ಬಾಂಧವರು ಎಚ್ಚೆತ್ತು ರೋಗಕೆ ತಕ್ಕ ಔಷಧಿಯನ್ನು ಕೊಟ್ಟು ಸಮಾಜವನ್ನು ಉಪಚರಿಸದೇ ಇದ್ದಲ್ಲಿ ಸಮಾಜದ ಆಶೆಯನ್ನು ಬಿಟ್ಟುಬಿಡಬೇಕಾಗುತ್ತದೆ.

ಇನ್ನು ರೋಗಕ್ಕೆ ತಕ್ಕ ಔಷಧಿಯಾವುದೆಂಬುದು ಮುಂದಿನ ಪ್ರಶ್ನೆ. ಈ ಪ್ರಶ್ನೆ ಕಠಿಣ ಪ್ರಶ್ನೆಯೇನೂ ಅಲ್ಲ. ನಮ್ಮ ಸಮಾಜದ ಜಾಣ ಹಿರಿಯರು ಈ ಹಿಂದೆಯೇ ರೋಗಕ್ಕೆ ತಕ್ಕ ಔಷಧಿಯನ್ನು ಕಂಡುಹಿಡಿದು ಅದರ ಪ್ರಯೋಗವನ್ನು ಮಾಡಿ ಅದರ ಶಕ್ತಿಯನ್ನು ತೋರಿಸಿಕೊಟ್ಟಿದ್ದಾರೆ. "ವೀರಶೈವ ಮಹಾಸಭಾ" ಕೂಟವೇ ಈ ದಿವ್ಯೌಷಧಿ. ಈ ದಿವ್ಯೌಷಧಿ ಪ್ರಯೋಗದಿಂದ ಛಿನ್ನ ವಿಚ್ಛಿನ್ನವಾಗಿ ಹಂಚಿ ಹರಿದುಹೋಗಿರುವ ವೀರಶೈವ ಸಮಾಜವನ್ನು ಒಂದುಗೂಡಿಸಿ ಕಣ್ಮರೆಯಾಗಿರುವ ಐಕಮತ್ಯವು ಮತ್ತೆ ಸಮಾಜದಲ್ಲಿ ಪ್ರಜ್ವಲಿಸುವಂತೆ ಮಾಡಬಹುದಾಗಿದೆ. ಇಂಥ ದಿವ್ಯೌಷಧಿಯು ಕೈಯಲ್ಲಿ ಇದ್ದರೂ ವೀರಶೈವ ಬಾಂಧವರು ಅದರ ಉಪಯೋಗವನ್ನು ಮಾಡಿಕೊಳ್ಳದೆ ಇರವುದು ಬಹು ವ್ಯ ಸ ನ ಕ ರ.

ಪ್ರಕೃತ ಈ ಲೇಖನದಲ್ಲಿ ವೀರಶೈವ ಮಹಾಸಭೆಯ ಆಯುಷ್ಯ ಭವಿಷ್ಯಗಳನ್ನು ಕುರಿತು ಎರಡು ಮಾತುಗಳನ್ನು ಹೇಳಿ ಇನ್ನುಮೇಲಾದರೂ ವೀರಶೈವ ಬಂಧುಗಳು ಮಹಾಸಭಾ ಕೂಟದ ಕಡೆ ಹೆಚ್ಚು ಲಕ್ಷ ಕೊಟ್ಟು ಮಹಾಸಭೆಯನ್ನು ಪ್ರತಿವರ್ಷವೂ ನಡೆಸಿ ತನ್ಮೂಲಕ ವೀರಶೈವ ಸಮಾಜದ ಪುರೋಭಿವೃದ್ಧಿಯನ್ನು ಸಾಧಿಸಬೇಕಾರೆಂದು ಆಶಿಸಲಾಗಿದೆ.

### ವೀರಶೈವ ಮಹಾಸಭೆಯ ಆಯುಷ್ಯ.

ವೀರಶೈವ ಮಹಾಸಭೆಯನ್ನು ಪ್ರತಿವರ್ಷವೂ ಬೇರೆ ಬೇರೆ ಸ್ಥಳಗಳಲ್ಲಿ ನಡೆಸಲು ಒಂದು ದೊಡ್ಡ ನಿಧಿಯು ಏರ್ಪಟ್ಟಿರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಈ ನಿಧಿಯು ಚಿರಸ್ಥಾಯಿ ಅಂದರೆ ಎಂದೆಂದಿಗೂ ಸ್ಥಿರವಾಗಿ ನಿಲ್ಲತಕ್ಕದ್ದು. ಈ ನಿಧಿಯ ಮೂಲ ಧನಕ್ಕೆ ಮತ್ತಿಷ್ಟು ಹಣವನ್ನು ಸೇರಿಸಿ ನಿಧಿಯನ್ನು ಬೆಳೆಸುತ್ತ ಹೋಗಬೇಕು. ಆದರೆ ಆ ನಿಧಿಯ ಮೂಲ ಧನದಲ್ಲಿ ಯಾವ ವ್ಯಯವನ್ನೂ ಮಾಡುವಂತಿಲ್ಲ. ಆದ್ದರಿಂದಲೇ ಈ ನಿಧಿಗೆ "ಚಿರಸ್ಥಾಯಿ" ಎಂದು ನಾಮಕರಣ ಮಾಡಿದೆ. ಇಂಥ ಶಾಶ್ವತ ನಿಧಿಯ ಹಣದ ಮೇಲೆ ಬರತಕ್ಕ ಬಡ್ಡಿಯು ಮಾತ್ರ ವೀರಶೈವ ಮಹಾಸಭಾ ಕೂಟಕ್ಕೆ ವೆಚ್ಚ ಮಾಡತಕ್ಕದ್ದಾಗಿದೆ. ಇದರಿಂದ ವೀರಶೈವ ಮಹಾಸಭೆಯ ಆಯುಷ್ಯದ ಬಗ್ಗೆ ನಾವು ಯೋಚಿಸಬೇಕಾದುದಿಲ್ಲ. ಚಿರಸ್ಥಾಯಿ ನಿಧಿಯ ಮೇಲೆ ನಿಂತಿರುವ ವೀರಶೈವ ಮಹಾಸಭೆಯು ಚಿರಾಯು. ಚಿರಂಜೀವಿ.

### ವೀರಶೈವ ಮಹಾಸಭೆಯ ಭವಿಷ್ಯ.

ಮಹಾಸಭೆಯು ಚಿರಾಯುವೆಂದ ಮಾತ್ರಕ್ಕೆ ಸಮಾಜಕ್ಕೆ ಯಾವ ಉಪಕಾರವೂ ಉಂಟಾಗಲಾರದು. ಮಹಾಸಭೆಯ ಆಯುಷ್ಯ ಚಿರಸ್ಥಾಯಿ ನಿಧಿಯನ್ನು ಅವಲಂಬಿಸಿದ್ದರೆ ಅದರ ಭವಿಷ್ಯ ಸಮಾಜ ಸೇವಕರನ್ನು ಅವಲಂಬಿಸಿದೆ. ಸಮಾಜ ಸೇವಕರು ನಿದ್ರಿಸಿದರೆ ಮಹಾಸಭೆಯು ನಿದ್ರಿಸುತ್ತದೆ. ಜಾಗೃತರಾದರೆ ಅದೂ ಜಾಗೃತಗೊಳ್ಳುತ್ತದೆ. ಜಾಣರಾದರೆ ಜಾಣ್ಮೆಯ ಕೆಲಸಗಳು ನಡೆಯುತ್ತವೆ. ಸಾಹಸಿಗಳಾದರೆ ಸಾಹಸ ಕೃತ್ಯಗಳು ಜರುಗುತ್ತವೆ. ಎಂದಮೇಲೆ ವೀರಶೈವ ಮಹಾಸಭೆಯ ಅರ್ಥಾತ್ ಇಡೀ ವೀರಶೈವ ಸಮಾಜದ ಭವಿಷ್ಯವು ಸಮಾಜ ಸೇವಕರ ಕೈಯಲ್ಲಿದೆಯೆಂದಂತಾಯಿತು.

ಇನ್ನು ಸಮಾಜ ಸೇವಕರು ಮಹಾಸಭೆಯ ಕೈಯಿಂದ ಯಾವ ಯಾವ ಕೆಲಸಗಳನ್ನು ನಡೆಸಬೇಕೆಂಬುದು ಮುಂದಿನ ಮಾತು. ನಡೆಸಬೇಕಾದ ಕಾರ್ಯಗಳು ಒಂದಲ್ಲ, ಎರಡಲ್ಲ, ನೂರಾರು ಇವೆ. ಅವುಗಳಲ್ಲಿ ಬಹು ಮುಖ್ಯವೆಂದು ತೋರಿದವುಗಳನ್ನು ಮಾತ್ರ ಇಲ್ಲಿ ಸ್ವಲ್ಪ ವಿಸ್ತರಿಸಿ ಹೇಳುತ್ತೇನೆ. ಇವಕ್ಕೂ ಹೆಚ್ಚಾದ ಕಾರ್ಯಕಲಾಪಗಳು ಇರಬಹುದು. ಇವೆಲ್ಲ ಕಾರ್ಯಗಳ ಪಟ್ಟಿಯೊಂದನ್ನು ಸಮಾಜ ಸೇವಕರು ಮೊದಲು ಸಿದ್ಧಪಡಿಸಿಕೊಳ್ಳಬೇಕು. ತರುವಾಯ ಒಂದೊಂದಾಗಿ ಅವುಗಳನ್ನು ಕಾರ್ಯರೂಪಕ್ಕೆ ಇಳಿಸಬೇಕು.

(೧) ಸಾಹಿತ್ಯ ಪ್ರಚಾರ.

ವೀರಶೈವ ಸಾಹಿತ್ಯವು ಅಪಾರವಾದದ್ದೆಂಬುದು ಈಗೀಗ ಜನರಿಗೆ ಮನವರಿಕೆಯಾಗುತ್ತದೆ. ಶರಣರ ವಚನಗಳೇ ಎರಡೆಂಬತ್ತು ಕೋಟಿ ಎಂದಮೇಲೆ ವೀರಶೈವ ಸಾಹಿತ್ಯದ ಅಪಾರತೆ ಎಷ್ಟೆಂಬುದು ಯಾರಿಗಾದರೂ ಗೊತ್ತಾಗದಿರದು. ಇಂಥ ಅಪಾರವಾದ ವೀರಶೈವ ಸಾಹಿತ್ಯವನ್ನು ಬೆಳಕಿಗೆ ತರತಕ್ಕದ್ದು ವೀರಶೈವ ಮಹಾಸಭೆಯ ಮೊದಲನೆಯ ಕೆಲಸವೆಂದು ಭಾವಿಸಿದರೆ ತಪ್ಪಾಗದು. ಸಾಹಿತ್ಯವೇ ನಮ್ಮ ಪ್ರಾಣ. ವೀರಶೈವ ಧರ್ಮವು ಇಂದಿಗೂ ದಿಟ್ಟತನದಿಂದ ನಿಂತಿರುವುದು ಅದರ ಸಾಹಿತ್ಯದ ಬಲದ ಮೇಲೆ. ಆದ್ದರಿಂದ ವೀರಶೈವ ಸಾಹಿತ್ಯ ಪ್ರಚಾರಕ್ಕಾಗಿ ಮಹಾಸಭೆಯು ಒಂದು ಪ್ರತ್ಯೇಕ ನಿಧಿಯನ್ನು ಸಂಗ್ರಹಿಸಬೇಕಾಗಿದೆ. ಈ ನಿಧಿಯ ಸಹಾಯದಿಂದ ಇನ್ನೂ ಗೋಪ್ಯವಾಗಿ ಅಡಗಿರುವ ವೀರಶೈವ ಸಾಹಿತ್ಯವನ್ನು ಹೊರಗೆಡವಿ ಪ್ರಕಾಶಗೊಳಿಸಬೇಕಾಗಿದೆ. ಅಲ್ಲದೆ ವೀರಶೈವ ಧರ್ಮತತ್ವ ಇತಿಹಾಸ ಇವುಗಳ ಬಗ್ಗೆ ಶೋಧನಾತ್ಮಕವಾದ ಗ್ರಂಥಗಳನ್ನು ಪಂಡಿತರಿಂದ ಬರೆಸಿ ಪ್ರಕಟಿಸಬೇಕಾಗಿದೆ. ಕ್ರೈಸ್ತ ಮಿಶನರಿ ಸಂಸ್ಥೆಗಳು ಕ್ರೈಸ್ತ ಶರಣರ ಕಥೆಗಳನ್ನು ಪ್ರಪಂಚದ ನಾನಾ ಭಾಷೆಗಳಲ್ಲಿ ಬರೆಸಿ ಪ್ರಚಾರ ಮಾಡುವಂತೆ ಶಿವಶರಣರ ಕಥೆಗಳನ್ನು ಬೇರೆ ಬೇರೆ ಭಾಷೆಗಳಲ್ಲಿ ಬರೆಸಿ ಪ್ರಚಾರ ಮಾಡಿ ವೀರಶೈವ ಸಾಹಿತ್ಯವನ್ನು ಮತ್ತಿಷ್ಟು ವೃದ್ಧಿಪಡಿಸಬೇಕಾಗಿದೆ.

(೨) ಮತ ಪ್ರಚಾರ.

ಇತ್ತೀಚೆಗೆ ವೀರಶೈವ ಮತಕ್ಕೆ ಪರಮತಗಳಿಂದ ಅನೇಕ ಪೆಟ್ಟುಗಳು ಬೀಳಹತ್ತಿವೆ. ಈ ಪೆಟ್ಟುಗಳಿಂದ ವೀರಶೈವ ಜನಾಂಗದ ಸಂಖ್ಯಾ ಬಲವು ದಿನೆ ದಿನೆ ಕ್ಷೀಣವಾಗುವ ಸಂಭವವಿದೆ. ಆದ್ದರಿಂದ ವೀರಶೈವ ಮಹಾಸಭೆಯು ಈ ವಿಚಾರದಲ್ಲಿ ತಕ್ಕ ಆಲೋಚನೆಯನ್ನು ಮಾಡಿ ಯುಕ್ತ ಕಾರ್ಯಕ್ರಮಗಳನ್ನು ಕೈಕೊಂಡು ವೀರಶೈವ ಮತವು ಕ್ಷೀಣವಾಗದಂತೆ ನೋಡಿಕೊಳ್ಳಬೇಕಾಗಿರುವುದಲ್ಲದೆ ವೀರಶೈವ ಮತದ ಉದಾರ ಮತ್ತು ಪರಿಶುದ್ಧ ತತ್ವಗಳಿಗೆ ಮೆಚ್ಚಿ ವೀರಶೈವ ಮತವನ್ನು ಅವಲಂಬಿಸಲಿಚ್ಛಿಸುವವರಿಗೆ ವೀರಶೈವ ದೀಕ್ಷೆಯನ್ನು ಕೊಡಿಸಿ ವೀರಶೈವರ ಸಂಖ್ಯಾ ಬಲವನ್ನು ಹೆಚ್ಚಿಸತಕ್ಕದ್ದು ಮಹಾಸಭೆಯ ಮುಖ್ಯ ಕೆಲಸಗಳಲ್ಲಿ ಒಂದಾಗಿದೆ. ಹಿಂದೆ ವೀರಶೈವರ ಅಸಂಖ್ಯಾತ ಮಠಗಳು ಈ ಮತ ಪ್ರಚಾರ ಕಾರ್ಯದಲ್ಲಿ ಪ್ರಮುಖ ಭಾಗವನ್ನು ವಹಿಸಿ ಸಮಾಜಕ್ಕೆ ಮಹತ್ತರವಾದ ಸೇವೆಯನ್ನು ಸಲ್ಲಿಸಿದವು. ಆದರೆ ಇತ್ತೀಚೆಗೆ ಅನೇಕ ಮಠಗಳು ತಮ್ಮ ಕರ್ತವ್ಯವನ್ನು ಮರೆತು ತೂಕಡಿಸಲಿಕ್ಕೆ ಹತ್ತಿವೆ. ವೀರಶೈವ ಮಹಾಸಭೆಯು ಈ ಮಠಗಳನ್ನು ಎಚ್ಚರಗೊಳಿಸಿ ಅವುಗಳ ಕೈಯಿಂದ ಆದಷ್ಟು ಮತಪ್ರಚಾರ ಕಾರ್ಯವನ್ನು ನಡೆಸತಕ್ಕದ್ದು ಅವಶ್ಯಕ. ಮುಖ್ಯವಾಗಿ ಮತಸ್ವೀಕಾರ ಮಾಡುವವರಿಂದ ಮಿತಿಮೀರಿ ಕಪ್ಪ ಕಾಣಿಕೆಗಳನ್ನು ಸೆಳೆಯುವ ದುಷ್ಟ ಪದ್ಧತಿಯನ್ನು ವೀರಶೈವ ಮಹಾಸಭೆಯು ಮೊದಲು ಕಿತ್ತೊಗೆಯಬೇಕಾಗಿದೆ. ಈ ದುಷ್ಟ ಪದ್ಧತಿಯು ನಿರ್ಮೂಲವಾದಲ್ಲಿ ಮತ ಪ್ರಚಾರದ ಅರ್ಧ ಕೆಲಸವು ನಡೆದಂತೆಯೇ ಸರಿ. ವೀರಶೈವ ದೀಕ್ಷೆಯನ್ನು ಪಡೆಯಲು ಇಚ್ಛೆಯಿದ್ದರೂ ಮಠಗಳು ಕೇಳುವಷ್ಟು ಹಣವನ್ನು ಕೊಡಲು ಶಕ್ತಿಯಿಲ್ಲದೆ ಸುಮ್ಮನಿರುವ ಎಷ್ಟೋ ಮಂದಿ ಬಡ ಜನರನ್ನು ನಾನು ನೋಡಿದ್ದೇನೆ. ಇದು ಬಹಳ ವ್ಯಸನಕರವಾದ ಸಂಗತಿ. ಈ ಕೊರತೆಯನ್ನು ನೀಗುವುದು ವೀರಶೈವ ಮಹಾಸಭೆಯ ಮಡಲಿಗೆ ಬಿದ್ದದ್ದಾಗಿದೆ.

(೩) ಸಮಾಜ ಸೇವೆಗೆ ಪ್ರೋತ್ಸಾಹ.

ಪ್ರೋತ್ಸಾಹವಿಲ್ಲದೆ ಯಾವ ಕೆಲಸವೂ ಯಶಸ್ವಿಯಾಗಿ ನಡೆಯಲಾರದು. “ಕೊಡಲಿಲ್ಲದಿರ್ದೊಡೊಂದು ಗುಣವಿಲ್ಲದಿದ್ದೊಡೆ ಮೂಗ ಕೊಯ್ಯದೆ ಮಾಣ್ಬನೆ” ಎಂದು ಬಸವಣ್ಣನವರು ಹೇಳುವಂತೆ ಏನು ಕೊಡದಿದ್ದರೂ ಒಳ್ಳೆಯ ಮಾತನ್ನಾದರೂ ಆಡಿದರೆ ಅದು ಎಷ್ಟೋ ಪ್ರೋತ್ಸಾಹವಾಗಿ ಪರಿಣಮಿಸುವುದು. ಸಮಾಜ ಸೇವೆಗೆ ತನು ಮನ ಧನಗಳು ಸವೆಯಬೇಕಾಗುತ್ತದೆ. ತನು ಮನ ಧನಗಳನ್ನು ಸವೆಸುವವರಿಗೆ ಒಂದೆರಡು ಪ್ರೋತ್ಸಾಹದ ಮಾತುಗಳನ್ನಾದರೂ ಆಡದಿದ್ದರೆ ಅವರ ಉತ್ಸಾಹವು ನಂದಿಹೋಗುವುದು. “ನಮ್ಮ ಸಮಾಜದವರಿಗೆ ಉಪಕಾರ ಮಾಡುವುದಕ್ಕಿಂತ ಅನ್ಯ ಸಮಾಜದವರಿಗೆ ಉಪಕಾರ ಮಾಡಿದರೆ ಎಷ್ಟೋ ನೆನಸಿಕೊಳ್ಳುತ್ತಾರೆ.” ಎಂದು ನಮ್ಮ ಸಮಾಜದಲ್ಲಿ ಎಷ್ಟೋ ಮಂದಿ ಹೇಳಿಕೊಂಡಿರುವುದನ್ನು ನಾನು ಕಿವಿಯಿಂದ ಕೇಳಿದ್ದೇನೆ. ಇದಕ್ಕೆ ಪ್ರೋತ್ಸಾಹದ ಅಭಾವವೇ ಕಾರಣ. ಪ್ರೋತ್ಸಾಹದ ಅಭಾವವು ಹಾಗಿರಲಿ; ಪ್ರೋತ್ಸಾಹಿಸುವುದಕ್ಕೆ ಬದಲು ಸಮಾಜ ಸೇವಕರನ್ನು ಮನಸಾರ ಬಾಯಾರ ಆಕ್ಷೇಪಿಸಿ ತೇಜೋವಧೆ ಮಾಡುವುದು ನಮ್ಮ ಸಮಾಜದ ಅನೇಕರ ಪದ್ಧತಿಯಾಗಿದೆ. ಇದು ನನ್ನ ಅನುಭವಕ್ಕೆ ಬಂದಿದೆ. ವೀರಶೈವ ಮಹಾಸಭೆಯು ಪ್ರೋತ್ಸಾಹದ ಬೆಲೆಯನ್ನು ಅರಿತು ಸಮಾಜ ಸೇವಕರಿಗೆ ತಕ್ಕ ಗೌರವ ಮನ್ನಣೆಗಳನ್ನು ಕೊಟ್ಟು ಬೆನ್ನು ತಟ್ಟಿ ಅವರಿಂದ ಇನ್ನೂ ಹೆಚ್ಚಾದ ಸೇವೆಯು ಸಲ್ಲುವಂತೆ ಮಾಡಬೇಕಾಗಿದೆ. ಪಾರಿತೋಷಕಗಳನ್ನು ಬಹುಮಾನಿಸಿಕೊಡುವುದು ಸಮಾಜ ಸೇವಕರನ್ನು ಪ್ರೋತ್ಸಾಹಿಸುವ ಮಾರ್ಗಗಳಲ್ಲಿ ಒಂದಾಗಿದೆ.

ಕೊನೆಯ ನುಡಿ.

ಅಂತೂ ವೀರಶೈವ ಮಹಾಸಭೆಯು ಕೈಕೊಳ್ಳಬೇಕಾಗಿರುವ ಕಾರ್ಯಗಳನ್ನು ಸ್ಥೂಲವಾಗಿ ಈ ಲೇಖದಲ್ಲಿ ವಿವೇಚಿಸಲಾಗಿದೆ. ಸೂಕ್ಷ್ಮವಾಗಿ ನೋಡಿದರೆ ಈ ಕಾರ್ಯಗಳಿಗೆ ಪುಷ್ಟಿಯಾಗಿ ಇನ್ನೂ ನೂರಾರು ಉಪಕಾರ್ಯಗಳು ನಡೆಯಬೇಕಾಗಿದೆ.

ಈ ಎಲ್ಲ ಕಾರ್ಯಗಳನ್ನು ನಡೆಸಲು ವೀರಶೈವ ಮಹಾಸಭೆಯು ಒಂದು ಶಾಶ್ವತಕರಣೀಕ ಸಿಬ್ಬಂದಿಯನ್ನು (Permanent Secretariat) ನಿರ್ಮಿಸಬೇಕು. ಶಾಶ್ವತಕರಣೀಕ ಸಿಬ್ಬಂದಿ ಇಲ್ಲದೆ ಕೆಲಸ ಮಾಡಲಿಕ್ಕೆ ಹೊರಟರೆ ವೀರಶೈವ ಮಹಾಸಭೆಯು ಸಂತೆಯ ಅಂಗಡಿಯಂತಾಗುತ್ತದೆ. ಸಂತೆ ನೆರೆದಾಗ ಅಂಗಡಿಯನ್ನು ಇಡುವುದು ಸಂತೆ ಮುಗಿದಮೇಲೆ ಅಂಗಡಿಯನ್ನು ಎತ್ತುವುದು. ಈ ರೀತಿ ವೀರಶೈವ ಮಹಾಸಭೆಯು ಎತ್ತಂಗಡೆಯಾಗಬಾರದು. ಕಾರ್ಯಗಳು ಸುಸೂತ್ರವಾಗಿಯೂ ಯಶಸ್ವಿಯಾಗಿಯೂ ನಡೆಯಬೇಕಾದರೆ ಒಂದು ದಕ್ಷ ಶಾಶ್ವತಕರಣೀಕ ಸಿಬ್ಬಂದಿ ಬೇಕೇಬೇಕು.

ಮುಖ್ಯವಾಗಿ ನಾನು ಮೊದಲೇ ಹೇಳಿದಂತೆ ಇವೆಲ್ಲಕ್ಕೂ ವೀರಶೈವ ಬಂಧುಗಳ ಉತ್ಸಾಹ ಪ್ರೋತ್ಸಾಹಗಳು ಬೇಕು. ವೀರಶೈವ ಮಹಾಸಭೆಯ ಆಯುಷ್ಯವು ಚಿರಸ್ಥಾಯಿ ನಿಧಿಯ ಕೈಲಿದ್ದರೆ ಭವಿಷ್ಯವು ಸಮಾಜ ಸೇವಾ ತತ್ಪರರಾದ ವೀರಶೈವ ಬಾಂಧವರ ಕೈಯಲ್ಲಿದೆ.

---

## ಬ್ಯಾ. ಜಿನ್ನಾರವರ ಅಭಿನಂದನೀಯ ಜಾತ್ಯಾಭಿಮಾನ.

ಬ್ರಿಟಿಶ್ ಭಾಗದ ವಿನಾ ಬೇರೆ ಕಡೆ ಮುಸ್ಲಿಂಲೀಗ್ ಸ್ಥಾಪನೆಗೆ ಅದರ ಈಗಿನ ರಚನಾಕ್ರಮದಲ್ಲಿ ಅವಕಾಶವಿಲ್ಲವೆಂದು ಭೋಪಾಲ ಸಂಸ್ಥಾನದ ಮುಸ್ಲಿಮರಿಗೆ ಬ್ಯಾ. ಜಿನ್ನಾರವರು ತಿಳಿಸಿ ಹೀಗೆ ಹೇಳಿದ್ದಾರೆ— “ಮುಸಲ್ಮಾನರು ತಮ್ಮ ಹಕ್ಕುಬಾಧ್ಯತೆಗಳನ್ನು ರಕ್ಷಿಸಿಕೊಳ್ಳುವದಕ್ಕಾಗಿ ಎಲ್ಲಿ ಬೇಕಾದರೂ ವ್ಯವಸ್ಥೆ ಮಾಡಿಕೊಳ್ಳಬಹುದು. ಮುಸಲ್ಮಾನರು ಎಲ್ಲಿದ್ದರೂ ಇಸ್ಲಾಂ ಮಕ್ಕಳು ಮಾತ್ರ, ತಾವು ಎಲ್ಲಿಲ್ಲಿದ್ದರೂ ಕೂಡ ಸುಖದುಃಖಗಳಲ್ಲಿ ಸಮತೆಯಿಂದಲೇ ಅನುಭವಿಸಬೇಕಾಗುತ್ತದೆ.

# ದ್ರವಿಡ ಸಂಸ್ಕೃತಿಯ ವ್ಯಾಪಕತೆ ಮತ್ತು ಪ್ರಾಚೀನತೆ.

(ಲೇ:— "ಷಿರ್ವ ಪಂಡಿತ" ಸಂಯುಕ್ತ ಕರ್ನಾಟಕ.)

ಇತ್ತೀಚೆಗೆ ಸಂಶೋಧಕರು ಶೋಧವನ್ನು ನಡಿಸಿ, ಜಗತ್ತಿನಲ್ಲಿ ದ್ರವಿಡ ಸಂಸ್ಕೃತಿಯೇ ಅತೀ ಪ್ರಾಚೀನವಾದುದೆಂದು ನಿರ್ಧರಿಸಿದ್ದಾರೆ. ಅದಕ್ಕೆ ಸಾಕಷ್ಟು ಆಧಾರಗಳಿವೆ. ಕ್ರಿ. ಪೂ. ೮೦ ಶತಮಾನಗಳ ಹಿಂದೆಯೇ ದ್ರವಿಡರು ನಾಗರೀಕರಿದ್ದರೆಂದೂ ವಿದೇಶಗಳೊಡನೆ ವ್ಯಾಪಾರವನ್ನು ಸಾಗಿಸಿಕೊಂಡು ಭೂಮಧ್ಯ ಸಮುದ್ರ ಪರ್ಟಿಸ್ ಹಾಗು ಟಾಯಗ್ರಿಸ್ ನದಿಗಳ ಮಧ್ಯದಲ್ಲಿರುವ ಮೆಸೊಪೊಟೇಮಿಯೊ ಮುಂತಾದ ಭಾಗಗಳಲ್ಲಿ ನೆಲೆಸಿದ್ದರೆಂದೂ ಮುಂತಾಗಿ ತಿಳಿದು ಬಂದಿದೆ. ಯುರೋಪದ ನಾಗರಿಕತೆಯು ದ್ರವಿಡ ಸಂಸ್ಕೃತಿಯುನ್ನು ಬಹಳವಾಗಿ ಅವಲಂಬಿಸಿಕೊಂಡಿದೆಂಬುದು ಸಿದ್ಧಾಂತವಾದದ್ದು. ಅದಕ್ಕೆ ಇಂದಾದರೂ ಯುರೋಪದ ಬೇರೆ ಬೇರೆ ಭಾಗದಲ್ಲಿ ರೂಢವಾಗಿರುವ ಸಿಥಿಯನ್ ಹಾಗೂ ಸೆಮಿಟಿಕ್ ಭಾಷೆಗಳಲ್ಲಿ ಅಡಕವಾದ ದ್ರವಿಡ ಶಬ್ದಗಳು ಹಾಗು ಪರಸ್ಪರ ಸಾಮ್ಯವು ಸ್ಪಷ್ಟಪಡಿಸುತ್ತವೆ. ಗ್ರೀಕ್ ಹಾಗು ರೋಮ ದೇಶದ ಉಚ್ಚಪರಿಸ್ಥಿತಿಯ ನಾಗರಿಕತೆಗಾದರೂ ದ್ರವಿಡ ಸಂಸ್ಕೃತಿಯೇ ಹೊಣೆಯಾಗಿದೆಂಬದನ್ನು ಯಾರೂ ಅಲ್ಲಗಳೆಯಲಾರರು. ಭಾಷಾತಜ್ಞರೂ ಇದನ್ನು ಏಕಕಂಠದಿಂದ ಸಮರ್ಥಿಸುತ್ತಾರೆ.

ಭಾಷೆಯ ಮೇಲಿಂದ ಒಂದು ಜಾತಿಯನ್ನಾಗಲಿ, ಜನಾಂಗವನ್ನಾಗಲಿ ಗೊತ್ತುಹಚ್ಚುವದು ಕಷ್ಟವಾಗುತ್ತದೆ. ಭಾಷೆಯ ವರ್ಚಸ್ಸು ಯಾವಾಗಲೂ ಉಚ್ಚವಾದುದೊಂದು ಸಂಸ್ಕೃತಿಯನ್ನವಲಂಬಿಸಿಕೊಂಡಿದೆ. ಎಷ್ಟೋ ತಡವೆ ಗೆದ್ದ ರಾಷ್ಟ್ರಗಳು ಸೋತು ಅಂಕೆಗೆ ಒಳಪಟ್ಟ ರಾಷ್ಟ್ರಗಳ ಭಾಷೆಗಳನ್ನು ತಮ್ಮದರಲ್ಲಿ ಮಿಲನಮಾಡಿಕೊಂಡು ಸಮ್ಮಿಶ್ರ ಭಾಷೆ ಹಾಗು ಸಂಸ್ಕೃತಿಯು ನೆಲೆಯೂರಿದುದುಂಟು. ಇದೇ ರೀತಿ ಅನೇಕ ಉಪಭಾಷೆಗಳು ಹುಟ್ಟಲನುಕೂಲವಾಯಿತು.

### ದ್ರವಿಡ ಸಂಸ್ಕೃತಿಯ ಏರಿಕೆಯ ಕಾಲ.

ದಕ್ಷಿಣ ಭಾರತವೇ ದ್ರವಿಡ ಸಂಸ್ಕೃತಿಯ ಜನ್ಮಸ್ಥಾನ. ಆರ್ಯರಿಂದ ಮೊದಲು ಇಲ್ಲಿಯ ಮೂಲ ನಿವಾಸಿಗಳಾಗಿದ್ದ ಜನರು ಉಚ್ಚ ಸಂಸ್ಕೃತಿಯನ್ನು ಕಾದುಕೊಂಡಿದ್ದು ನಾಗರೀಕರಾಗಿ ವಿವಿಧ ಕಲಾಪಾರಂಗತರಾಗಿ ಬಹುಕಾಲ ಬಾಳಿದ್ದರು. ಅಲ್ಲದೆ ಉತ್ತಮರಾದ ಸಂಶೋಧಕರಿದ್ದು ನೆಲ, ಜಲ, ವಾಯು ಮಾರ್ಗಗಳಲ್ಲಿ ಸಂಚರಿಸುವವರಿದ್ದರು. ಉತ್ತಮ ಶಿಲ್ಪಿಗಳಾಗಿದ್ದರು. ವಿದ್ಯಾಪಾರಂಗತರಾಗಿದ್ದರು. ಇದಕ್ಕೆ ತಮಿಳರ ಮೂಲ ಪುರುಷನಾದ ಅಗಸ್ತ್ಯನೂ ತೆಲುಗರ ಮೂಲ ಪುರುಷನಾದ ಕಣ್ವನೂ ಸಾಕ್ಷಿಯಾಗಿದ್ದಾರೆ. ಅವರು ಬರೆದ ವ್ಯಾಕರಣಗಳು, ಇವೆರಡು ಸಾಹಿತ್ಯಗಳಲ್ಲಿ ಇಂದಿಗೂ ಪೂಜ್ಯವಾಗಿದ್ದು ಜಗತ್ಪ್ರಸಿದ್ಧವಾಗಿವೆ. ಸಂಸ್ಕೃತ ಹಾಗೂ ಪ್ರಾಕೃತ ಭಾಷೆಗಳ ಮೇಲೂ ದ್ರವಿಡ ಸಂಸ್ಕೃತಿಯು ಒಂದುಕಾಲದಲ್ಲಿ ತನ್ನ ವರ್ಚಸ್ಸನ್ನುಂಟುಮಾಡಿತ್ತು. ಇಂದಿಗಾದರೂ ಸಂಸ್ಕೃತ ಸಾಹಿತ್ಯದಲ್ಲಿ ಇಂಥ ಹಲವು ಶಬ್ದಗಳು ಸ್ವತಂತ್ರವಾಗಿರುವದು ಕಂಡು ಬರುತ್ತದೆ. ದ್ರವಿಡ ಸಂಸ್ಕೃತಿಯು ಎಷ್ಟು ಮಹತ್ವದ್ದಿತ್ತೆಂಬುದನ್ನು ಇಂದಾದರೂ ಫಿನ್‌ಲ್ಯಾಂಡ್ ಹಾಗೂ ಹಂಗೇರಿ ಮುಂತಾದ ಕಡೆಗಳಲ್ಲಿರುವ ಜನಾಂಗದವರಲ್ಲಿ ಉಳಿದ ಕುರುಹಿನಿಂದ ಸ್ಪಷ್ಟ ಮಾಡಿಕೊಳ್ಳಬಹುದು. ದ್ರವಿಡ ಸಂಸ್ಕೃತಿಗೆ ಪ್ರತ್ಯೇಕವಾದುದೊಂದು ಕಳೆಯಿದ್ದು ಅದು ಸರ್ವ ಸ್ವತಂತ್ರವಿದೆ. ಕಾಲದ ಕಟ್ಟುಗ, ಮರಾಠಾ ಟವೂ ಅದನ್ನು ಸಂಪೂರ್ಣ ನಾಶಪಡಿಸಲಿಲ್ಲ. ಮರಾಟರು ಹಾಗು ಗುಜರಾಥಿಗಳು ದ್ರವಿಡರೋ ಎಂಬುದು ಇಂದಿಗೂ ಚರ್ಚಾಸ್ಪದವಾದ ವಿಷಯವಾಗದೆ. ಅಂತೂ ಇವೆರಡೂ ಪಂಗಡದವರು ದ್ರವಿಡ ವರ್ಚಸ್ಸಿಗೆ ಮನಸೋತ ಆರ್ಯ ಪಂಗಡದವರೆಂದರೆ ತಪ್ಪಾಗಲಾರದು.

### ದ್ರವಿಡರ ನಾಗರೀಕತೆ.

ಹಿಂದೂ ಸಾಗರದಲ್ಲಿ ಒಂದು ಕಾಲದಲ್ಲಿ ಭಾರತದ ಭೂಭಾಗವಾಗಿದ್ದು ಈಗ ಮುಳಿಗಿಹೋಗಿರುವ "ಲೆಮೂರಿಯ" ವೆಂಬುದೇ ದ್ರವಿಡರ ಜನ್ಮಭೂಮಿಯೆಂದು ಹಲವರ ತರ್ಕವಿದೆ. ಸಮಗ್ರ ಭಾರತದಲ್ಲಿ ದ್ರವಿಡ ಸಂಸ್ಕೃತಿಯು ವ್ಯಾಪಿಸಿತ್ತಲ್ಲದೆ ಏಶಿಯಾ ಮ್ಯಾನರಶಿಯಾದ ಭೂಭಾಗಗಳು ಹಾಗು ಅರೇಬಿಯಾ, ಆಫ್ರಿಕದ ಮೇಲ್ಭಾಗ ಮತ್ತು ಗ್ರೀಕ್ ರೋಮ ದೇಶಗಳ ವರೆಗೆ ವ್ಯಾಪಿಸಿತ್ತು. ಅಂತೇ ಯುರೋಪದ ನಾಗರೀಕತೆಗೆ ಹಾಗು ಬುದ್ಧಿಶಾಲಿಗಳಾದ ಆರ್ಯರ ನಾಗರೀಕತೆಗೆ ದ್ರವಿಡ ಸಂಸ್ಕೃತಿಯೇ ಮುಖ್ಯವಾದುದೆಂಬುದನ್ನು ಯಾರಾದರೂ ಒಪ್ಪಲೇಬೇಕಾಗಿದೆ. ದ್ರವಿಡ ನಾಗರೀಕತೆಯ ಸಂಬಂಧವಾಗಿ ಡಾ. ಕಾಲ್ಡವೆಲ್ ಸಾಹೇಬರು ಹೀಗೆಂದಿರುವರು—

> "ದ್ರವಿಡರಲ್ಲಿ ರಾಜರಿದ್ದರು. ಅವರು ಭದ್ರವಾದ ಅರಮನೆಗಳಲ್ಲಿ ವಾಸಿಸಿಕೊಂಡಿದ್ದು ಸಣ್ಣ ಸಣ್ಣ ಜಿಲ್ಲೆಗಳನ್ನು ಕಟ್ಟಿಕೊಂಡು ಆಳುತ್ತಿದ್ದರು. ಅವರು ವಂದಿಮಾಗಧರೇ ಮೊದಲಾದವರನ್ನು ತಮ್ಮ ರಾಜ್ಯಸ್ಥಾನದಲ್ಲಿಟ್ಟುಕೊಂಡಿದ್ದರು. ವಿದ್ಯೆಗೆ ವಿಶೇಷ ಮನ್ನಣೆಯಿತ್ತು. ಓಲೆಯಗರಿಯಲ್ಲಿ ಆಗಿನ ಕಾಲದಲ್ಲಿ ಬರೆಯುತ್ತಿದ್ದರು. "ರಾಜಾ ಪ್ರತ್ಯಕ್ಷದೇವತಾ" ಎಂಬುದು ಆಗಿನ ಕಾಲದ ಜನರ ನಂಬುಗೆಯಾಗಿತ್ತು. ದೇವಸ್ಥಾನಗಳನ್ನು ಕಟ್ಟಸಿದ್ದರು. ದೇವರಲ್ಲಿ ಅವರ ವಿಶ್ವಾಸವಿತ್ತು. ಜ್ಯೋತಿಷ್ಯದಲ್ಲಿ ಪಾರಂಗತರಿದ್ದರು. ಲೋಹಗಳ ಪರಿಚಯವಿದ್ದು ಪಂಚಲೋಹಗಳಿಂದ ತಮಗೆ ಬೇಕಾದ ಸಾಮುಗ್ರಿಗಳನ್ನು ತಮ್ಮ ತಮ್ಮಲ್ಲಿಯೇ ತಯಾರಿಸಿಕೊಳ್ಳುತ್ತಿದ್ದರು. ಆಯುರ್ವೇದಕ್ಕೆ ಮನ್ನಣೆಯಿತ್ತು. ಪೇಟಿ, ಪಟ್ಟಣ, ಕೋಟೆ, ಕೊತ್ತಳ, ಚತುರಂಗಬಲ, ನಾವೆಗಳು ಮುಂತಾದವುಗಳೆಲ್ಲ ಸಮೃದ್ಧವಾಗಿದ್ದವು. ಸಿಂಹಳ ದ್ವೀಪಕ್ಕೂ ಭಾರತಕ್ಕೂ ನಿಕಟ ಸಂಬಂಧವಿತ್ತು. ಕೃಷಿಯೇ ಮುಖ್ಯ ಧಂದೆ ಖಡ್ಗ, ಬಿಲ್ಲು, ಬಾಣ, ಕುಂಪ, ಮುದ್ಗರ, ಪರಶು, ಭಲ್ಲೆಯಪಾಶ, ಖಡ್ಗ ಮೊದಲಾದ ೩೨ ಆಯುಧಗಳಿಂದ ಯುದ್ಧಮಾಡುತ್ತಿದ್ದರು. ಅನೇಕ ಕಲೆಗಳಲ್ಲಿ ನುರಿತವರಿದ್ದರು."

ಕ್ರಿ. ಶ. ಪೂರ್ವದಲ್ಲಿ ೧೦೦೦ ಕ್ಕೆ ಮೊದಲೇ ದಕ್ಷಿಣ ಭಾರತದ ದ್ರವಿಡರಿಗೆ ಈಜಿಪ್ತ (ಐಗುಪ್ತ) ಮತ್ತು ಪಶ್ಚಿಮ ಏಶಿಯಾದ ರಾಷ್ಟ್ರಗಳೊಡನೆ ಬಹುವಾಗಿ ಹೊಕ್ಕು ಬಳಕೆಯಿದ್ದಿತು. ಉತ್ತಮ ರೀತಿಯಿಂದ ಅವರೊಡನೆ ವ್ಯಾಪಾರ ವ್ಯವಹಾರಗಳನ್ನು ಮಾಡುತ್ತಿದ್ದರು.

### ಹೊಸ ಶೋಧ.

ರಾವಿ ನದಿಯ ತಟದಲ್ಲಿ ಹೆರಪ್ಪ ಎಂಬಲ್ಲಿ ಮೊದಲು ದ್ರವಿಡರ ರಾಜಧಾನಿಯಿದ್ದಿತೆಂದೂ ಋಗ್ವೇದದ ಕಾಲದಲ್ಲಿ ಅದನ್ನು ಶಬ

'ಅಹಿಂಸಾ ಪರಮೋಧರ್ಮಃ' ಎಂಬ ನೀತಿಯನ್ನನುಸರಿಸಿ ಕೆಲವರು ಮಾಂಸಾಹಾರವನ್ನು ತ್ಯಜಿಸಿದರೆ 'ಜೀವೋ ಜೀವಸ್ಯ ಜೀವನಂ' ಎಂಬ ನೀತಿಯನ್ನು ಕೈಯಲ್ಲಿ ಹಿಡಿದು ಮಾಂಸವನ್ನು ಭುಂಜಿಸುವವರೂ ಕೆಲವರಿದ್ದರು. ಮತ್ತು ನೀತಿಯ ವಧಕ್ಕಾಗಿ 'ನೀತಿ' ಯನ್ನೇ ಯಾರು ತೋರಿಸುತ್ತಿದ್ದರೋ ಅವರು ಧರ್ಮದ್ರೋಹಿಗಳಾಗುತ್ತಿದ್ದಿಲ್ಲ. ಅದೇ ಗತಿಯು ಈಗ ಕಾಯಿದೆಗೂ ಬಂದಿದೆ ಎಂದು ಹೇಳಬಹುದು. ಇದಕ್ಕೆ ಕೆಳಗಿನ ಉದಾಹರಣೆಯೊಂದೇ ಸಾಕು.—

೧೮೫೮ ನೇ ಇಸವಿಯಲ್ಲಿ ವಿಕ್ಟೋರಿಯಾ ಮಹಾರಾಣಿಯವರೂ ೧೯೦೮ ರಲ್ಲಿ ಏಳನೇ ಎಡ್ವರ್ಡಬಾದಶಹರೂ ೧೯೧೧ ರಲ್ಲಿ ೫ ನೆಯ ಬಾದಶಹರೂ ಪ್ರಸಿದ್ಧಿಸಿದ ಸನದಿನಲ್ಲಿ (Proclamation) 'ಜಗತ್ತಿನ ನಮ್ಮ ಇತರ ಪ್ರಜೆಗಳನ್ನು ನಡೆಸಿಕೊಂಡಂತೆಯೇ ನಾವು ಭಾರತೀಯ ಪ್ರಜೆಗಳನ್ನು ನಡೆಯಿಸಿಕೊಳ್ಳುವುದು ನಮ್ಮ ಕರ್ತವ್ಯವೆಂದು ನಾವು ಭಾವಿಸಿದ್ದೇವೆ.' ಎಂಬ ಸಾರಾಂಶವು ಹೊರಡುವದು. ಪ್ರತಿಯೊಬ್ಬ ಬ್ರಿಟಿಶ್ ಪ್ರಜೆಗೂ ತನಗೆ ಸರಿಕಂಡುದನ್ನು ಮಾಡಲಿಕ್ಕೂ ಬಾಯಿಂದ ಆಡಲಿಕ್ಕೂ ಯಾರದೂ ಅಡ್ಡಿ ಇಲ್ಲ. ಅವನ ಆಡುವಿಕೆ ಅಥವಾ ಮಾಡುವಿಕೆಯು ಇತರರಿಗೆ ಹಾನಿಕರವಾಗಿಯೂ ಕಾಯಿದೆಗೆ ವಿರುದ್ಧವಾಗಿಯೂ ಇರದಿದ್ದರಾಯಿತು. ಬ್ರಿಟಿಷ ಸಂಯುಕ್ತಸಾಮ್ರಾಜ್ಯದ ಕಾಯಿದೆಯು ಪ್ರತಿಯೊಬ್ಬ ಬ್ರಿಟಿಶ್ ಪ್ರಜೆಗೂ ಒಂಬತ್ತು ಸ್ವಾತಂತ್ರ್ಯಗಳನ್ನು ಕೊಡುತ್ತದೆ.

(೧) ವ್ಯಕ್ತಿ ಸ್ವಾತಂತ್ರ್ಯ— ಅಂದರೆ ನ್ಯಾಯನಿರ್ಧಾರಕ್ಕಾಗಲಿ ನ್ಯಾಯವಾದ ಶಿಕ್ಷೆಗಾಗಿಯಾಗಲಿ ಒಬ್ಬನನ್ನು ಬಂಧಿಸಬಹುದೇ ಹೊರತು ಬೇರೆ ಯಾವ ಕಾರಣದಿಂದಲೂ ಯಾರನ್ನೂ ಬಂಧಿಸಬಾರದು.

(೨) ಸ್ವತ್ತಿನ ಸ್ವಾತಂತ್ರ್ಯ— ಅಂದರೆ ಕಾಯಿದೆಯನ್ನನುಸರಿಸಿ ನಡೆಸಿದ ನ್ಯಾಯ ತೀರ್ಪಿನ ಹೊರತು ಒಬ್ಬನ ಆಸ್ತಿಯನ್ನು ಅಪಹರಿಸಲಾಗದು.

(೩) ವಿವೇಕ ಸ್ವಾತಂತ್ರ್ಯ— ಪ್ರತಿಯೊಬ್ಬರೂ ತಮಗೆ ಬೇಕಾದ ಧರ್ಮವನ್ನು ಅನುಸರಿಸಬಹುದು. ಧರ್ಮ ವ್ಯತ್ಯಾಸದಿಂದ ಯಾರೂ ಅಧಿಕಾರ ಚ್ಯುತರಾಗಲಾರರು.

(೪) ಮುದ್ರಣ ಸ್ವಾತಂತ್ರ್ಯ— ಜನಾಂಗ ಮತ್ತು ರಾಜ್ಯಕ್ರಮದ ವಿಮರ್ಶೆಯನ್ನು ಯೋಗ್ಯವಾಗಿ ವೃತ್ತಪತ್ರಿಕೆಗಳ ಮೂಲಕ ಮಾಡಬಹುದು.

(೫) ಸಂಚಾರ ಸ್ವಾತಂತ್ರ್ಯ— ಸರಕಾರಿ ರಸ್ತೆಯಲ್ಲಿ ಯಾರು ಬೇಕಾದರೂ ಓಡಾಡಬಹುದು. ಮೆರವಣಿಗೆಯನ್ನು ಹೊರಡಿಸಬಹುದು.

(೬-೭) ನ್ಯಾಯಸ್ವಾತಂತ್ರ್ಯ— ಅಧಿಕಾರಿಯಾಗಲಿ ರಾಜನಾಗಲಿ ಮಾಡಿದ ಅನ್ಯಾಯದ ಕಾಯಿದೆಯನ್ನು ನ್ಯಾಯಸ್ಥಾನದ ಬಲದಿಂದ ಮೀರಬಹುದು. ನ್ಯಾಯಸ್ಥಾನದ ಕಾಯಿದೆಗಳ ವಿರುದ್ಧವಾಗಿ ಅಧಿಕಾರಿಯಾಗಲಿ ರಾಜನಾಗಲಿ ಪಕ್ಷಪಾತವನ್ನು ತೋರಿಸಬಾರದು. ಅವುಗಳಲ್ಲಿ ತಮ್ಮ ಅಧಿಕಪ್ರಸಂಗವನ್ನು ಮಾಡಬಾರದು.

(೮) ವ್ಯಾಖ್ಯಾನ ಸ್ವಾತಂತ್ರ್ಯ— ಅಪಮಾನಕರವಾದ ಇಲ್ಲವೇ ರಾಜದ್ರೋಹಕರವಾದ ವಿಷಯಗಳನ್ನು ಬಿಟ್ಟು ಬೇಕಾದ ವಿಷಯವನ್ನು ಮಾತಾಡಬಹುದು, ಮತ್ತು ಬರೆಯಬಹುದು.

(೯) ಸಂಘ ಅಥವಾ ಸಭಾಸ್ವಾತಂತ್ರ್ಯ— ವ್ಯಕ್ತಿಯ ಸ್ವಾತಂತ್ರ್ಯಕ್ಕೂ ಕಾಯಿದೆಗೂ ವಿರುದ್ಧವಾಗದಂತೆ ಈ ಸ್ವಾತಂತ್ರ್ಯವನ್ನು ಉಪಯೋಗಿಸಬಹುದು.

ಪಾರ್ಲಿಮೆಂಟಿನಲ್ಲಿ ನಿರ್ಧರಿಸಲ್ಪಟ್ಟ ಈ ಸ್ವಾತಂತ್ರ್ಯಗಳನ್ನು ವಸ್ತುತಃ ಯಾರೂ ಕಸಿದುಕೊಳ್ಳಲಾಗದು. ಹಾಗೆ ಕಸಿದುಕೊಳ್ಳುವವರು ಆ ಕಾಯಿದೆಯ ದೃಷ್ಟಿಯಲ್ಲಿಯೇ ರಾಜದ್ರೋಹಿಗಳಾದಂತಲ್ಲವೆ? ಹಾಗಾದರೆ ಹಿಂದೆ ನಡೆದ ಸತ್ಯಾಗ್ರಹ ಸಮರವನ್ನು ನಿಲ್ಲಿಸುವಾಗ ಮೇಲಿನ ಸ್ವಾತಂತ್ರ್ಯಗಳನ್ನು ಅಪಹರಿಸಿ ಎಷ್ಟು ಅಧಿಕಾರಿಗಳು ಕಾಯಿದೆಯ ದೃಷ್ಟಿಯಿಂದಲೇ ರಾಜದ್ರೋಹಿಗಳಾಗಿರುವರೆಂಬುದನ್ನು ವಾಚಕರೇ ಯೋಚಿಸಲಿ.

ಕಾಯಿದೆಯನ್ನು ಕಾಯಿದೆಯ ಸಹಾಯದಿಂದಲೇ ಮೀರಿದರೆ ದ್ರೋಹವಲ್ಲ. ವೈಸ್‌ರಾಯರ ಆರ್ಡಿನೆನ್ಸ್‌ಗಳೆಲ್ಲ ಕಾಯಿದೆಗಳನ್ನು ಮೀರುವದಕ್ಕೆ ಸಹಾಯಕ್ಕೆ ತೆಗೆದುಕೊಂಡ ಕಾಯಿದೆಗಳೆಂದು ಹೇಳಬಹುದು. ಮೊದಲಿದ್ದ ಕಾಯಿದೆಗಳು ಪ್ರಜೆಗಳನ್ನು ಪೀಡಿಸುವದಕ್ಕೆ ಸಾಕಷ್ಟು ಅನುಕೂಲವಾಗಿರಲಿಲ್ಲವೋ ಏನೋ. ಸುಖಕ್ಕೆಂದು ನಿರ್ಮಿಸಿದ ನಿಯಮಗಳು ದುಃಖಕ್ಕೂ ಹೇಗೆ ಕಾರಣವಾದವು? ಮತ್ತು ದುಃಖ ಹೊಂದಲಿಕ್ಕೆಂದೇ ಯಾರಾದರು ಕಾಯಿದೆಗಳನ್ನು ನಿರ್ಮಿಸುವರೋ? ನೀತಿಯಾಗಲಿ ಕಾಯಿದೆಯಾಗಲಿ ಹುಟ್ಟಲಿಕ್ಕೆ ಕಾರಣವೇನು? ಎಲ್ಲರಿಗೂ ಸುಖಸಿಕ್ಕಬೇಕೆಂಬುದೇ ಅವುಗಳ ಉದ್ದೇಶವಿರಬೇಕಲ್ಲವೆ? ಆದ್ದರಿಂದ ಸುಖವನ್ನು ನಾಶಗೊಳಿಸುವ ಯಾವ ನಿಯಮವೂ ನೀತಿಯಾಗಲಿ ಕಾಯಿದೆಯಾಗಲಿ ಆಗಲಾರದು. ಅಂಥ ನೀತಿಕಾಯಿದೆಗಳು ಸುಖೇಚ್ಛುಗಳಾದ ಜನರಿಂದ ಹೆಚ್ಚುದಿನ ಸಹಿಸಲ್ಪಡುವುದೂ ಇಲ್ಲ. ಮತ್ತು ಹಾಗೆ ಸುಖಕ್ಕೂ ಸ್ವಾಭಾವಿಕ ಮಾನಕ್ಕೂ ಅಡ್ಡಿಯಾಗುವ ನೀತಿಕಾಯಿದೆಗಳನ್ನು ಯಾವಾಗ ಜನರು ಆನಂದದಿಂದ ಸಹಿಸುವರೋ ಆಗ ಅವರ ನಾಶವು ಸಮೀಪಿಸಿದೆಯೆಂದು ತಿಳಿಯಬೇಕು.

ಯಾಕೆಂದರೆ ಯೋಗಿಗಳ ಮಾತಂತಿರಲಿ; ಸಾಮಾನ್ಯವಾಗಿ ಎಲ್ಲ ಜೀವಿಗಳು ಹೆಣಗುತ್ತಿರುವುದೂ ಒಂದು ಸುಖಕ್ಕಾಗಿ. ಸುಖದ ವ್ಯಾಖ್ಯೆಯನ್ನು ಯಾರು ಹೇಗೆ ಬೇಕಾದರೂ ಮಾಡಲಿ; ಸ್ವಾತಂತ್ರ್ಯವಿಲ್ಲದೆ ಸುಖವಿಲ್ಲ ಎಂಬ ಮಾತನ್ನು ಎಲ್ಲರೂ ಒಪ್ಪುತ್ತಾರೆ. ಸ್ವಾತಂತ್ರ್ಯವೆಂದರೆ ಮನೊವಾಕ್ಕಾಯಗಳ ಕಾರ್ಯಕ್ಕೆ ಯಾರದೂ ತಡೆಯಿರಬಾರದೆಂದರ್ಥ. ಜಗತ್ತಿನೊಳಗಿನ ಎಲ್ಲ ಜೀವಿಗಳ ಮನಸ್ಸು ಒಂದೇ ವಿಧವಾಗಿದ್ದರೆ ಈ ವಿಧದ ಸ್ವಾತಂತ್ರ್ಯವು ನಿರಾತಂಕವಾಗಿ ಸಾಗಬಹುದಾಗಿತ್ತು. ಆದರೆ ನಿಜಸ್ಥಿತಿಯು ಹಾಗಿಲ್ಲದ್ದರಿಂದಲೇ ಪೂರ್ಣ ಸ್ವತಂತ್ರ ಜೀವಿಯನ್ನು ಕಾಣುವದು ಸಾಧ್ಯವೇ ಇಲ್ಲ. ವಿಶ್ವವ್ಯಾಪಕಕಾಲ ಪರಿಸ್ಥಿತಿಗಳ ನಿಯಮಗಳಲ್ಲದೆ ಧರ್ಮ, ಸಮಾಜ, ರಾಜ್ಯಗಳ ಕಟ್ಟಳೆಗಳೂ ಪ್ರತಿಯೊಬ್ಬನನ್ನೂ ತಡೆದು ನಿಲ್ಲಿಸುತ್ತವೆ.

ಮನುಷ್ಯರಿದ್ದಷ್ಟು ಮನಸ್ಸುಗಳು. ಒಂದಕ್ಕೆ ಸುಖಕರವಾದದ್ದು ಇನ್ನೊಂದಕ್ಕೆ ದುಃಖಕರವಾಗಬಹುದು. ಒಂದು ಗಿರಿ, ನದಿ, ಅರಣ್ಯಗಳ, ಸಮುದ್ರದಲ್ಲಿ ಪ್ರತಿಫಲವಾಗುವ ಸೂರ್ಯನ ಉದಯಾಸ್ತಗಳ, ಸಹಜ ಮಧುರವಾದ ಪಶುಪಕ್ಷಿ ಸುಸ್ವರಗಳ ಪ್ರಕೃತಿಯ ಚಿತ್ತಾಕರ್ಷಕ ಅನುಭವದಲ್ಲಿ ಮೈಮರೆತಿದೆ. ಇನ್ನೊಂದು ಉದ್ಯಾನೋಪವನ ಮಾರ್ಗಗಳಿಂದ ಶೋಭಿಸುವ ಉನ್ನತಹರ್ಮ್ಯ ಪ್ರಸಾದಗಳ, ಸಂಗೀತ ನೃತ್ಯಗಳ, ಭೋಜನ ದಾನಗಳ ಅನ್ಯ ಭೋಗಾನಂದದಲ್ಲಿ ತೇಲಾಡಲೆಳಸುವದು. ಪ್ರತಿ ವ್ಯಕ್ತಿಗೂ ತನ್ನ ಸುಖಸಾಧನಕ್ಕಾಗಿ ಬೇರೊಂದು ವಿಶ್ವವೇ ಇರುತ್ತಿದ್ದರೂ ಚನ್ನಾಗಿತ್ತು. ಆದರೆ ನಾವೆಲ್ಲರೂ ಇರುವದು ಒಂದೇ ವಿಶ್ವದಲ್ಲಿ. ನಮ್ಮೆಲ್ಲರ ಆಯುಷ್ಯವೂ ಒಂದೇ ಕಾಲದ ಅಂಗವಾಗಿದೆ. ಹೀಗಿರುವದರಿಂದ ನಮ್ಮ ಪ್ರತಿಯೊಂದು ಕರ್ಮವೂ ಒಂದಿಲ್ಲೊಂದು ವ್ಯಕ್ತಿಯ

( ೧೮ ನೇ ಪುಟಕ್ಕೆ ಮುಂದೆ ಸಾಗಿದೆ. )



ಶಾ. ಶ. ೧೮೬೦ ನೆಯ ಆಶ್ವೀನ ಶು|| ೯ ಸೋಮವಾರ.

# ಯುರೋಪದಲ್ಲಿ ಯುದ್ಧದ ಜ್ವಾಲೆ ಸದ್ಯಕ್ಕೆ ಶಾಂತವಾಯಿತು.

ಸುಡೇಟನ್ ಜರ್ಮನ್ ಸಮಸ್ಯೆಯನ್ನು ತೀರ್ಮಾನಿಸಲು ಮಂಡಿಸಲ್ಪಟ್ಟ ಆಂಗ್ಲ ಫ್ರೆಂಚ್ ಯೋಜನೆಯನ್ನು ಝೆಕ್ ಸರಕಾರವು ಅಲ್ಪಸ್ವಲ್ಪ ಅಧಿಕಾರವನ್ನಿಟ್ಟುಕೊಂಡು ಸ್ವೀಕರಿಸುವುದೆಂದು ಅಧಿಕೃತ ಹೇಳಿಕೆಯನ್ನು ಪ್ರಕಟಿಸಲಾಗಿದೆ.

ಮ್ಯೂನಿಕ್ ಪರಿಷತ್ತು ಜರುಗಿಸಲ್ಪಡುವ ಮೊದಲೇ ಈ ನಿರ್ಧಾರವನ್ನು ಬ್ರಿಟಿಶ್ ಸರಕಾರಕ್ಕೆ ತಿಳಿಸಲಾಗಿದೆಯಂತೆ.

ಮ್ಯೂನಿಕ್ ಪರಿಷತ್ತು ಸೇರುವ ಮೊದಲು ಝೆಕ್ ಸರಕಾರವು ಈ ಕೆಳಗಿನ ಸೌಕರ್ಯಗಳನ್ನು ಕೊಡಲು ಒಪ್ಪಿದೆಯೆಂದು ವರದಿ ಮಾಡಲ್ಪಟ್ಟಿದೆ.—

(೧) ಸುಡೇಟನ್ ಪ್ರದೇಶಗಳಲ್ಲಿ ೧೦೦ ಕ್ಕೆ ೫೦ ಕ್ಕಿಂತ ಹೆಚ್ಚು ಜರ್ಮನರಿರುವ ಸ್ಥಳಗಳನ್ನು ಜರ್ಮನರಿಗೆ ಬಿಟ್ಟು ಕೊಡಲು ಸಿದ್ಧವಿದೆ. ಆದರೆ ನೂತನ ಝೆಕ್ ರಾಷ್ಟ್ರದ ಸಂರಕ್ಷಣೆ ಮತ್ತು ಭದ್ರತೆಗೆ ಯೋಗ್ಯವಿರುವ ಗಡಿಪ್ರದೇಶವನ್ನು ಕೊಡಬೇಕೆಂದು ಕೇಳಿಕೊಂಡಿದೆ.

(೨) ಸಾರ್ವತ್ರಿಕ ಮತಗಣನೆಗೆ ಝೆಕ್ ಸರಕಾರವು ಒಪ್ಪಲಾರದು. ಮತ್ತು ಝೆಕ್‌ರು ಬಹ್ವಂಶವಿರುವ ಪ್ರದೇಶಗಳಲ್ಲೂ ಮಿಲಿಟರಿ ಕಾರಣಗಳಿಂದ ಸಾಧ್ಯವಿಲ್ಲ.

(೩) ಕೊನೆಯ ತೀರ್ಮಾನಕ್ಕಾಗಿ ಕೊಟ್ಟ ಸಮಯಾವಧಿಗೆ ಝೆಕ್ ಸರಕಾರವು ಒಪ್ಪುತ್ತದೆ.

(೪) ಎಲ್ಲಾ ಅನುಕೂಲತೆಗಳೂ ಡಿಶೆಂಬರ ತಾರೀಖು ೧೫ ರ ಒಳಗಾಗಿ ಮುಗಿಯಬೇಕು. ಆದರೆ ಅಕ್ಟೋಬರ್ ೩೧ ರ ಒಳಗಾಗಿ ತೀರ್ಮಾನಿಸಲು ಸಮ್ಮತಿಸುತ್ತದೆ.

(೫) ಅಂತರರಾಷ್ಟ್ರೀಯ ಸಮಿತಿಯ ಮೇಲ್ತನಿಖೆಗೆ ಝೆಕ್ ಸರಕಾರದ ಅಡ್ಡಿಯಿಲ್ಲ. ಜರ್ಮನರಿಗೆ ಈ ಪ್ರದೇಶವನ್ನು ಕೊಡುವ ಮೊದಲು ಬ್ರಿಟಿಶ್ ಸೈನಿಕರು ಇದನ್ನು ತಮ್ಮ ವಶದಲ್ಲಿಟ್ಟುಕೊಳ್ಳಲು ಆಕ್ಷೇಪವಿಲ್ಲ.

ಆಂಗ್ಲೊ-ಫ್ರೆಂಚ್ ಯೋಜನೆಯಲ್ಲಿ ನಮೂದಿಸಿದ ಸ್ಥಳಗಳವರೆಗೆ ಅಕ್ಟೋಬರ್ ೧ ಕ್ಕೆ ಜರ್ಮನ್ ಸೈನ್ಯವು ಸುಡೇಟನ್ ಪ್ರದೇಶಕ್ಕೆ ಪ್ರವೇಶಿಸಲು ಮ್ಯೂನಿಕ್‌ದಲ್ಲಿ ಸೇರಿದ ಪರಿಷತ್ತಿನಲ್ಲಿ ಒಪ್ಪಲಾಗಿದೆಯೆಂದು ಜರ್ಮನ್ ಅಧಿಕೃತ ಕ್ಷೇತ್ರಗಳಲ್ಲಿ ತಿಳಿಯಲಾಗಿದೆ.

## ಗಾಂಧೀಜಿಯವರು ಸರ್ವಾಧಿಕಾರಿಗಳು?

ಯುರೋಪ ಖಂಡದಲ್ಲಿ ಯುದ್ಧ ಪ್ರಾರಂಭವಾದರೆ ಹಿಂದುಸ್ಥಾನವು ಆ ವಿಷಯವಾಗಿ ಮುಂದೆ ಹೇಗೆ ಮಾಡಬೇಕೆಂಬುದನ್ನು ನಿರ್ಧರಿಸಲು ಕಾಂಗ್ರೆಸ್ಸು ವರ್ಕಿಂಗ್ ಕಮಿಟಿಗೆ ಸರ್ವಾಧಿಕಾರವನ್ನು ಕೊಡುವದಂತೆ. ವರ್ಕಿಂಗ್ ಕಮಿಟಿಯಾದರೊ ಮಹಾತ್ಮಾ ಗಾಂಧಿಯವರಿಗೆ ಸರ್ವಾಧಿಕಾರವನ್ನು ಕೊಡುವುದಂತೆ. ಯುದ್ಧಕಾಲದಲ್ಲಿ ಹೀಗೆ ಗಾಂಧೀಜಿಯವರ ಕಡೆಗೆ ಸರ್ವಾಧಿಕಾರವಿರಬೇಕಾದುದೇ ವಿಹಿತ.

## ಸರಕಾರಕ್ಕೆ ಬಂಗಾಲ ಮುಖಂಡರ ಎಚ್ಚರಿಕೆ.

"ಬಂಗಾಲದಲ್ಲಿ ಜಾತಿನಿರ್ಣಯದ ಬೀಜವು ಒಂದು ದೊಡ್ಡ ಅಂತಃಕಲಹದ ಸಮರಕ್ಕೆ ಸಿದ್ಧವಾಗಿದೆ" ಯೆಂದು ಬಂಗಾಲದ ಕೆಲವು ಹಿಂದೂ ಮುಖಂಡರು ಒಂದು ವಿಸ್ತೃತ ಹೇಳಿಕೆಯನ್ನು ಕೊಟ್ಟು ಈಗಾಗಲೇ ಎಚ್ಚರಿಕೆ ಕೊಟ್ಟಿರುವರು. ಈ ಹೇಳಿಕೆಗೆ ಸರ್. ಪಿ. ಸಿ. ರಾಯ್, ಸರ್. ನೀಲರತ್ನನ್ ಸರಕಾರ, ಶ್ರೀ. ರಮಾನಂದ ಚಟರ್ಜಿ, ಶ್ರೀ. ವಿ. ಸ. ಚಟರ್ಜಿ, ರಾಯಿ ಜತೀಂದ್ರನಾಥ ಚೌಧರಿ ಮೊದಲಾದ ಬಂಗಾಲದ ಮಹಾ ಮುಖಂಡರೆಲ್ಲರೂ ಸಹಿಯಿತ್ತಿರುವರು.

# ಹೊಗಳುವಂಥ ಹಿರಿಯ ಬಯಕೆ.

[ಕರ್ನಾಟಕದ ಪತ್ರಿಕೆಗಳ ವಿಚಾರವಾಗಿ ಒಬ್ಬ ನಮ್ಮ ಮಿತ್ರರು ಒಂದು ಪತ್ರವನ್ನು ಬರೆದಿದ್ದು ಅದರಲ್ಲಿ ಈ ಕೆಳಗಿನಂತೆ ಅಭಿನಂದನೀಯವಾದ ತಮ್ಮ ಅಭಿಲಾಷೆಯನ್ನು ತಿಳಿಸಿದ್ದಾರೆ. ಅದನ್ನು ಕನ್ನಡ ನಾಡಿನ ಉತ್ಸಾಹಿ ಸೇವಕರು ವಿಚಾರಮಾಡುವಂತಿದೆಯಾದುದರಿಂದ ಇಲ್ಲಿ ಪ್ರಕಟಿಸಲಾಗಿದೆ.

—ಸಂಪಾದಕ.]

"ಈಗ ವರ್ತಮಾನ ಪತ್ರಿಕೆಗಳಲ್ಲಿ ದೈನಿಕ ಮತ್ತು ವಾರ ಪತ್ರಿಕೆಗಳೆಂಬ ಭಾಗಗಳಾಗಿರುತ್ತವೆ. ನಿಜವಾಗಿ ದಿನ ಪತ್ರಿಕೆಗಳು ಬರಿಯ ಸುದ್ದಿಗಳನ್ನು ಮುದ್ರಿಸುವ ಪತ್ರಿಕೆಗಳಾಗಿರುತ್ತವೆಂದರೆ ತಪ್ಪಾಗಲಾರದು. ಮಾಸ ಪತ್ರಿಕೆಗಳು ತಿಂಗಳಿಗೊಮ್ಮೆ ಹೊರಬೀಳುವುದರಿಂದ ಈಗಿನ ಜನರಿಗೆ ಒಂದು ತಿಂಗಳ ವರೆಗೆ ಏನನ್ನೂ ಓದದೆ ಇರುವುದಾಗುವುದಿಲ್ಲ. ಇದಲ್ಲದೆ ಹಿಂದುಸ್ಥಾನವು ಅದರಲ್ಲಿಯೂ ಕರ್ನಾಟಕವು ಬರಿಯ ಚಿಕ್ಕ ಚಿಕ್ಕ ಊರುಗಳ ದೇಶವಾಗಿರುವುದರಿಂದ ದಿನ ಪತ್ರಿಕೆಗಳನ್ನು ಅವರಿಗೆ ಕೊಳ್ಳುವುದಾಗುವುದಿಲ್ಲ. ಒಂದು ವೇಳೆ ಕೊಂಡರೂ ಅವು ದಿನಂಪ್ರತಿ ಸರಿಯಾಗಿ ಮುಟ್ಟುವದಿಲ್ಲ. ಹೀಗಾಗುವುದರಿಂದ ಅವುಗಳನ್ನು ಚಿಕ್ಕ ಚಿಕ್ಕ ಊರುಗಳ ಜನರು ಕೊಳ್ಳುವುದಿಲ್ಲ.

ಕಾರಣ ಒಂದು ಒಳ್ಳೆಯ ವಾರ ಪತ್ರಿಕೆಯ ಅಭಾವವು ಕರ್ನಾಟಕಕ್ಕೆ ಅದೆ. ಕರ್ನಾಟಕದಲ್ಲಿ ಹಲ ಕೆಲವು ವಾರ ಪತ್ರಿಕೆಗಳು ಅವೆ. ಆದರೆ ಹಲ ಕೆಲವು ವಾರ ಪತ್ರಿಕೆಗಳು ಎಷ್ಟೋ ಅಶ್ಲೀಲ ವಿಷಯಗಳನ್ನು ಬರೆಯುವುದರಲ್ಲಿ ತೊಡಗಿವೆ. ಆದರೂ ಅವುಗಳ ಬೆಳವಣಿಗೆಯು ಚೆನ್ನಾಗಿದೆಯೆಂದೂ ಕೇಳುತ್ತೇನೆ.

ಇನ್ನು ಇತರ ವಾರ ಪತ್ರಿಕೆಗಳು ಬರಿಯ ಕಾಂಗ್ರೆಸ್ಸು ಕಾಂಗ್ರೆಸ್ಸು ಎಂದು ಬರೆಯುತ್ತ ಕೂಡ್ರುತ್ತವೆ. ಅವುಗಳ ಸ್ಥಿತಿಯು ನೆಟ್ಟಗಿಲ್ಲ. ಇನ್ನುಳಿದ ಪತ್ರಿಕೆಗಳು ಬರಿಯ ತಮ್ಮ ತಮ್ಮ ಧರ್ಮದ ಪತ್ರಿಕೆಗಳಾಗಿವೆ. ಅವುಗಳ ಸ್ಥಿತಿಯೂ ನೆಟ್ಟಗಿಲ್ಲ. ಇದು ನಿಮಗೂ ಗೊತ್ತಿದೆ. ಇಡೀ ಕರ್ನಾಟಕದಲ್ಲಿ ಸಮಾಜದ ನಾಲ್ಕು ಮುಖಗಳಿಂದ ಪ್ರಯತ್ನಪಡಿಸಿ ಅದನ್ನು ಊರ್ಜಿತ ಸ್ಥಿತಿಗೆ ಒಯ್ಯುವ, ವ್ಯರ್ಥವಾಗಿ ಸಮಾಜದಲ್ಲಿ ಕಲಹಗಳನ್ನು ಹುಟ್ಟಿಸದೆ ಇರತಕ್ಕ, ಸಮಾಜದಲ್ಲಿ ಧಾರ್ಮಿಕ ಸಾಮಾಜಿಕ ರಾಜಕೀಯ ಆರ್ಥಿಕ ಮತ್ತು ವ್ಯಾಪಾರ ಉದ್ಯೋಗ ಒಕ್ಕಲತನಗಳ ವಿಷಯಕ್ಕೆ ಉಪಯುಕ್ತ ಮತ್ತು ಬೋಧಪರವಾಗಿ ಬರೆಯತಕ್ಕ ವಾರಪತ್ರಿಕೆಯೊಂದು ಬೇಕಾಗಿದೆ. ಎಂದರೆ ಅದು ಸತ್ಯವೆಂದು ತಮಗೆ ಅನಿಸದೆ ಇರದು. ಇಂಥ ವಾರ ಪತ್ರಿಕೆಯು ಹೊರಡಲಿಕ್ಕೆ ಧಾರವಾಡವು ಯೋಗ್ಯವಾದ ಸ್ಥಳವು. ಧಾರವಾಡದಲ್ಲಿ ಬಹು ಉತ್ತಮವಾದ ಪ್ರೆಸ್ಸುಗಳು ಉಂಟು. ಮ. ರಾ. ರಾ. ಮಧುಲಿಂಗಪ್ಪಣ್ಣನವರಂತಹ ನುರಿತ ಪ್ರಿಂಟರರು ಉಂಟು.

ಈಗ ಕರ್ನಾಟಕದಲ್ಲಿ ನುರಿತ ಲೇಖಕರೂ ಉಂಟು. ಮತ್ತು ಈ ಸಂಧಿಯು ತೀರ ಉತ್ತಮವಾದ ಸಂಧಿಯು. ಎಷ್ಟೋ ಜನರು ಬಹು ಕಷ್ಟಪಟ್ಟು ಪತ್ರಿಕಾ ಉದ್ಯೋಗವನ್ನು ಮಾಡುತ್ತಾ ಬಂದಿರುತ್ತಾರೆ. ಆದರೆ ಹಣದ ಅಭಾವದ ಮೂಲಕ ಅವರ ಪ್ರಯತ್ನದ ಫಲವು ಅವರಿಗೂ ದೊರೆಯುವದಿಲ್ಲ. ದುಡ್ಡು ಕೊಟ್ಟವರಿಗೂ ಸಿಗುವದಿಲ್ಲ. ಕರ್ನಾಟಕಕ್ಕೂ ದೊರೆಯುವುದಿಲ್ಲ. ಆದರೆ ಸಂಘಟಿತ ಸ್ವರೂಪದಿಂದ ಈ ಕೆಲಸವನ್ನು ಕೈಕೊಂಡರೆ ಇದು ಸಾಧ್ಯವಾಗದೆ ಇರದು.

ಒಂದೇ ಮನಸ್ಸಿನಿಂದಲೂ ಶುದ್ಧ ಬುದ್ಧಿಯಿಂದಲೂ ಕೆಲಸ ಮಾಡಿದರೆ ಅವುಗಳಿಗೆ ಏನೇ ವಿಘ್ನಗಳು ಬಂದರೂ ಅವು ಕಡೆಗೆ ಫಲಿಸುವವೆಂದು ನನ್ನ ಆಯುಷ್ಯದಲ್ಲಿ ನನಗೆ ಮನವರಿಕೆಯಾಗಿದೆ. ಒಂದುವೇಳೆ ಅದರಲ್ಲಿ ಹಲಕೆಲವರಿಗೆ ಗೈರ ತಿಳುವಳಿಕೆಗಳಾದರೂ ಕೆಲವು ಕಾಲದ ಮೇಲೆ ಅವು ದೂರಾಗಿ ಮಾಡಿದ ಕೆಲಸಗಳು ನೆಲೆಗೆ ಮುಟ್ಟೇ ಮುಟ್ಟುವವು."

---

ಷ್ಣಿಯೆಂದು ಕರೆಯುತ್ತಿದ್ದರೆಂದೂ ಮುಂತಾಗಿ ಹೊಸ ಶೋಧದ ಮೇಲಿಂದ ತಿಳಿದುಬಂದಿದೆ. ಲಾರಖಾನಾ ಜಿಲ್ಲೆಯ ಡೊಕ್ರಿಯ ಬಳಿ ಮಹೆಂಜೊದಾರೊದಲ್ಲಿ ಬೌದ್ಧರ ಕಾಲಕ್ಕೆ ಮೊದಲೇ ಉತ್ತಮ ಸ್ಥಿತಿಯಲ್ಲಿದ್ದ ದ್ರವಿಡ ರಾಜ್ಯವೊಂದು ವ್ಯಾಪಿಸಿತ್ತೆಂದೂ ಮುಂತಾಗಿ ಸ್ಪಷ್ಟವಾಗುತ್ತದೆ. ಅಲ್ಲದೆ ಮಹೆಂಜೋದಾರೊ ಮತ್ತು ತಿನ್ನವೆಲ್ಲ ಜಿಲ್ಲೆಯ ಆದಿಪ್ತ ನಲ್ಲೂರಲ್ಲಿ ದೊರಕಿದ ಅವಶಿಷ್ಟಕ್ಕೂ ಬಲುಚಿಸ್ಥಾನ, ಬಾಬಿಲೋನ, ಚಾಲ್ಡಿಯಾ ಸೂಮರ್ ಮತ್ತು ಕ್ರೀಟದಲ್ಲಿ ದೊರಕಿರುವ ಅವಶಿಷ್ಟಕ್ಕೂ ಸಾಮ್ಯವಿದೆಯೆಂಬುದನ್ನು ಡಾ. ಹಾಲ್ ಇವರು ಸಮರ್ಥಿಸಿದ್ದಾರೆ.

ಇವೆಲ್ಲ ದಾಖಲೆಗಳನ್ನು ಒಟ್ಟುಗೂಡಿಸಿ ವಿಚಾರಮಾಡಿದರೆ ಕ್ರಿ. ಪೂ. ಸುಮಾರು ೮೦೦೦ ವರುಷಕ್ಕೆ ಮೊದಲೇ ದ್ರವಿಡ ಸಂಸ್ಕೃತಿಯು ಉಚ್ಚತರದ್ದಿತ್ತೆಂದೂ ಏಜಿಯನ್ ಹಾಗು ರೋಮನ್ ನಾಗರಿಕತೆಗೆ ದ್ರವಿಡ ನಾಗರಿಕತೆಯೇ ಮುಖ್ಯವಾದುದೆಂದೂ ಗೊತ್ತಾಗುವುದು.

ಒಟ್ಟಿನಲ್ಲಿ ಸಮಗ್ರ ಏಶಿಯಾ ಹಾಗೂ ಜಾವಾ ಸುಮಾತ್ರಾ ಮೊದಲಾದ ದ್ವೀಪಕಲ್ಪಗಳು ಮಧ್ಯಯುರೋಪ, ಅರಬಿಯಾ, ಆಫ್ರಿಕದ ಉತ್ತರ ಭಾಗದ ಪ್ರದೇಶಗಳು ಮುಂತಾದ ಕಡೆಗಳಲ್ಲೆಲ್ಲ ದ್ರವಿಡ ಸಂಸ್ಕೃತಿಯು ವ್ಯಾಪಿಸಿ ಅಲ್ಲಲ್ಲಿಯ ಜನಾಂಗಗಳನ್ನು ಎಚ್ಚರಿಸಿ ಅವರ ಮುನ್ನಡಿಗೆ ಸಹಕಾರಿಯಾಯಿತೆಂಬುದು ನಿರ್ವಿವಾದ. ಇದನ್ನು ದ್ರವಿಡ ಸಾಹಿತ್ಯ ಹಾಗು ಅದರ ವ್ಯಾಪಕವಾದ ವರ್ಚಸ್ಸು ಸ್ಪಷ್ಟಪಡಿಸುತ್ತದೆ.

---

## ಡಾ. ಖರೆಯವರ ವಕ್ರಮಾರ್ಗ.

ಡಾ. ಖರೆಯವರು ಕಾಂಗ್ರೆಸ್ಸಿನಲ್ಲಿಯೇ ಕಂಡಿ ಕೊರೆದು ತಮ್ಮದೊಂದು ಪಕ್ಷವನ್ನು ಏರ್ಪಡಿಸುವುದಾಗಿ ತಿಳಿಸಿದ್ದಾರಷ್ಟೆ. ಇವರ ಪಕ್ಷಕ್ಕೆ ಮಧ್ಯಪ್ರಾಂತದ ಅಸೆಂಬ್ಲಿ ಕಾಂಗ್ರೆಸ್ ಸಭಾಸದರಲ್ಲಿ ೨೪ ಜನರು ಸೇರುವರೆಂದು ಸುದ್ದಿ. ಅಂತೂ ಈ ಘಾತಕವಾದ ವಕ್ರಮಾರ್ಗದಿಂದ ಅಲ್ಲಿ ಕಾಂಗ್ರೆಸ್ಸಿಗಿರುವ ಈಗಿನ ಬಹುಮತವನ್ನು ಕಳೆದು ಅಲ್ಲಿಯೂ ಸಮ್ಮಿಶ್ರ ಮಂತ್ರಿಮಂಡಲವು ಏರ್ಪಡುವಂತೆಯೂ ತಾವೂ ಮಂತ್ರಿಗಳಾಗಿರುವಂತೆಯೂ ಇವರು ಸಾಹಸಪಡುವಂತೆ ತೋರುತ್ತದೆ.

---

—ಅಸಾಮ ಹಿಂದು ಮಿಶನ್ನಿನ ಬ್ರಹ್ಮಚಾರಿ ಸ್ವರೂಪಾನಂದಜಿಯವರು ನಾಲ್ಕು ವರುಷಗಳ ಹಿಂದೆ ಮುಸಲ್ಮಾನ್ ಮತಕ್ಕೆ ಹೋಗಿದ್ದ ಒಬ್ಬ ಹಿಂದು ತರುಣಿಯನ್ನು ಕಳೆದ ೧೯ ನೆಯ ತಾರೀಖಿನ ದಿವಸ ಶುದ್ಧಗೊಳಿಸಿ ಹಿಂದುಧರ್ಮದಲ್ಲಿ ತೆಗೆದುಕೊಂಡರು.

# ನೀತಿಯ ಮೂಲಾಗ್ರ.

[ಪಂಡಿತ ತಾರಾನಾಥರು ತಮ್ಮ ಪ್ರೇಮ ವಿದ್ಯಾ ಪೀಠದ 'ಪತ್ರಿಕೋದ್ಯಮ' ಶಾಲೆಯಲ್ಲಿ ಮಾಡಿದ ಭಾಷಣದ ಸಾರವನ್ನು ಆ ಶಾಲೆಯ ವ್ಯವಸ್ಥಾಪಕರ ಉದಾರ ಸಹಾಯದಿಂದ ಇಲ್ಲಿ ಕೊಡಲಾಗಿದೆ.

—ಸಂಪಾದಕ.]

ಒಂದು ಕಾಲವಿತ್ತು ಹಿಂದುಸ್ಥಾನದಲ್ಲಿ; ಆಗ ಪ್ರತಿಯೊಂದು ವ್ಯಕ್ತಿಯ ಆಚಾರ ವಿಚಾರಗಳ ಯೋಗ್ಯಾಯೋಗ್ಯತೆಯನ್ನು ನೀತಿಯ ಒರೆಗಲ್ಲಿಗೆ ಹಚ್ಚಿ ನೋಡುತ್ತಿದ್ದರು. ನೀತಿಗೆ ಸಂಕಂಡುದನ್ನು ಕಾಯಿದೆಯು (Law) ಮನ್ನಿಸಬೇಕಾಗಿತ್ತು. ಆದರೆ ನೀತಿಯ ನಿರ್ಮಾಣಕರುಕ್ರಮೇಣದೇಶಹಿತಕ್ಕಿಂತ ಆತ್ಮಹಿತವನ್ನೇ ಹೆಚ್ಚಾಗಿ ಲಕ್ಷಿಸಹತ್ತಿದರು. ತಾವು ನಿರ್ಮಿಸಿದ ನೀತಿಗಿಂತ ತಮಗೇ ಹೆಚ್ಚಿನ ಗೌರವವನ್ನು ಜನರು ಕೊಡಬೇಕೆಂದು ಅಪೇಕ್ಷಿಸಹತ್ತಿದರು. ಅಥವಾ ತಮಗೆ ಅನುಕೂಲವಾಗುವಂತೆ ನೀತಿಯನ್ನು ರೂಪಿಸಲಿಕ್ಕೆ ಹತ್ತಿದರೆಂದು ಹೇಳಬಹುದು. ಮತ್ತು ನೀತಿ ಕೆಟ್ಟರೂ ಕಾಯಿದೆಯು ನೀತಿಯನ್ನೇ ಅನುಸರಿಸಬೇಕು. ಎಂಬ ಹಟವು ಉತ್ಪನ್ನವಾಯಿತು. ಆದರೆ ಸ್ವಾರ್ಥದಿಂದ ಪಾರಾದವರು ಎಷ್ಟು ಜನ? ನೀತಿಗೃಹದಲ್ಲಿ ಯಾವಾಗ ಹುಳುಕು ಹುಟ್ಟಿತೋ ಆಗ ಕಾಯಿದೆಯ ರಾಜ್ಯದಲ್ಲಿಯೂ ಅರಾಜಕತೆಯು ಹುಟ್ಟಿತು. ಕಾಯಿದೆಯ ಪ್ರಭುಗಳಿಗೂ ಸ್ವಾರ್ಥವು ಹೆಚ್ಚಿ ನೀತಿಯನ್ನೇ ಬಗ್ಗಿಸಿ ಕಾಯಿದೆಯನ್ನು ಹಿಗ್ಗಿಸಬೇಕೆಂದು ಯತ್ನಿಸಲಾರಂಭಿಸಿದರು. ಹೀಗೆ ನೀತಿಗೂ ಕಾಯಿದೆಗೂ ಜಗಳ ಹುಟ್ಟಿದ ಮೇಲೆ ಅವುಗಳನ್ನೇ ನಂಬಿಕೊಂಡಿದ್ದ ಪ್ರಜೆಗಳ ಗತಿ ಏನಾಗಬೇಕು? ಅವರೂ ಒಂದು ಜಾಣ್ಮೆಯನ್ನು ತೋರಿಸಿದರು. ಏನೆಂದರೆ- ಇತ್ತ ನೀತಿಗೂ ನಮಸ್ಕರಿಸಬೇಕು. ಅತ್ತ ಕಾಯಿದೆಗೂ ಕೈಮುಗಿಯಬೇಕು. ಮತ್ತು ಮನದಲ್ಲಿ ಮಾತ್ರ ಇಬ್ಬರನ್ನೂ ಬಯ್ಯುತ್ತಿರಬೇಕು. ಈ ತರದ ವೇಷಗಾರಿಕೆಗೆ ಯಾವಾಗ ಜನರು ಬಲಿಬಿದ್ದರೋ ಆಗ 'ಹಿಂದುಸ್ಥಾನ ನಾಟಕ' ದಲ್ಲಿ ಖೇದಾಂತ (Tragic) ಪ್ರವೇಶವೊಂದು ಪ್ರಾರಂಭವಾಯಿತೆಂದು ಹೇಳಬಹುದು. ಇದೇ ಪ್ರವೇಶದಲ್ಲಿ ಬ್ರಿಟಿಷರೂ ಹಿಂದುಸ್ಥಾನದಲ್ಲಿ ಪ್ರವೇಶಿಸಿದ್ದು.

ನಮ್ಮಲ್ಲಿಯೇ ಅಲ್ಲ; ಜಗತ್ತಿನ ಎಲ್ಲ ದೇಶಗಳಲ್ಲಿಯೂ ಈ ನೀತಿ ಕಾಯಿದೆಗಳ ಜಗಳಗಳು ಉತ್ಪನ್ನವಾಗಿವೆ. ಮತ್ತು ಒಂದರ ಮೇಲೊಂದು ಸೇಡು ತೀರಿಸಿಕೊಳ್ಳುತ್ತಲೇ ಇವೆ. ಸುದೈವದಿಂದಲೋ ದುರ್ದೈವದಿಂದಲೋ ಹಿಂದುಸ್ಥಾನದಲ್ಲಿ ಮಾತ್ರ ಈ ಜಗಳವು ಎಲ್ಲಕ್ಕಿಂತ ತಡವಾಗಿ ಪ್ರಾರಂಭವಾಯಿತು. ಇದರಿಂದ ನಾವು 'ನೀತಿಸಂಪನ್ನ' ರೆಂದು ಹೊಗಳಿಕೊಳ್ಳಲೂ ಬಹುದು. ಬೇರೆಯವರಿಂದ 'ವಿವೇಕ ರಹಿತ' ರೆಂದು ಬೈಸಿಕೊಳ್ಳಲೂ ಬಹುದು.

ನಮ್ಮ ದೇಶಕ್ಕೆ ಬ್ರಿಟಿಶರ ಪ್ರವೇಶವಾದಾಗ ಹೆಚ್ಚಾಗಿ ಪಾಶ್ಚಾತ್ಯರಲ್ಲಿ ಮೇಲೆ ಹೇಳಿದಂತೆ ನೀತಿಕಾಯಿದೆಗಳ ಜಗಳವು ಹುಟ್ಟಿ ಬಹು ದಿನವಾಗಿತ್ತು. ಕ್ರಮೇಣ ಕಾಯಿದೆಯು ನೀತಿಯನ್ನು ಅಂಕೆಯೊಳಗೆ ತರಲಾರಂಭಿಸಿತ್ತು. ಆ ಜಗಳದ ಶಾಲೆಯಲ್ಲಿ ಕಲಿತ ಬ್ರಿಟಿಶರು 'ಗೆದ್ದೆತ್ತಿನ ಬಾಲಹಿಡಿಯುವ' ವರಂತೆ ಕಾಯಿದೆಯ ಕೈಯನ್ನೇ ಮೇಲೆ ಮಾಡಲು ಇಲ್ಲಿ ಯತ್ನಿಸಿದ್ದರಲ್ಲಿ ವಿಶೇಷವೇನೂ ಇಲ್ಲ. ಅಂದರೆ ಬ್ರಿಟಿಷರೆಲ್ಲ ಜಗಳಗಂಟಿಗರೆಂದಾಗಲಿ ನೀತಿರಹಿತರೆಂದಾಗಲಿ ನನ್ನ ಅಭಿಪ್ರಾಯವಲ್ಲ. ಎಲ್ಲ ಮನುಷ್ಯರಂತೆ ಅವರಿಗೂ ತಮ್ಮ ಪರಿಸ್ಥಿತಿಯ ಪರಿಣಾಮವು ಮನದಲ್ಲಿ ಮೂಡಿತ್ತು ಎಂದು ಹೇಳಿದೆಯಷ್ಟೆ. ಇದರ ನಿಜಾಂಶವು ಇತಿಹಾಸದ ಪಾಠಕರಿಗೆ ಮನಗಾಣದೆ ಹೋಗದು. ಕೆಲವರು ಹೇಳುವದುಂಟು ಬ್ರಿಟಿಶ್ ಸಾಮ್ರಾಜ್ಯವನ್ನು ಕುರಿತು- 'ಇವರು ಬಂದದ್ದು ನಿಜವಾಗಿಯೂ ಅಮಾವಾಸೆಯ ದಿನ ಪೂರ್ಣಚಂದ್ರನುದಯಿಸಿದಂತೆ ಆ ಪರಮಾತ್ಮನೇ ಹಿಂದುಗಳಕಷ್ಟಗಳನ್ನು ನೋಡಲಾರದೆ ಇವರನ್ನು ಕಳಿಸಿದನೆಂದು ಅನ್ನಬಹುದು. ಇವರ ರಾಜ್ಯದಲ್ಲಿ ನೋಡಿ, ಒಂದು ಮಣ ಬಂಗಾರವನ್ನು ಬೇಕಾದರೆ ಹಾಕಿಕೊಂಡು ಒಬ್ಬ ಹೆಂಗಸು ಎಲ್ಲಿ ಹೋದರೂ ಯಾರಾದರೂ ಅವಳ ಕಡೆಗೆ ಕಣ್ಣೆತ್ತಿ ನೋಡುವರೋ ? ಏನು ವ್ಯವಸ್ಥೆ! ಏನು ವಿಚಿತ್ರ ರಾಜ್ಯಪದ್ಧತಿ! ಹೀಗೆ ಹೇಳುವವರೇ ಅದೇ ಬಾಯಿಂದ 'ಇನ್ನು ಸಂಪೂರ್ಣ ಸ್ವರಾಜ್ಯವೊಂದೇ ಸಿಕ್ಕಲಿ; ಆ ಮೇಲೆ ನೋಡಿ; ಹೊನ್ನು ಹೆಣ್ಣುಗಳೆರಡೂ ಆಕಾಲದ ಹಿರಿಯ ಮುಂದಾಳುಗಳ ಪಾಲಾಗುತ್ತವೆ. ಪುನಃ ಮೊಗಲಾಯಿ ದರ್ಬಾರು ಪ್ರಾರಂಭವಾಗುವದು' ಎಂದು ಹೇಳುವರು. ಅವರ ಸತ್ಯಾಸತ್ಯತೆಯನ್ನು ನಿರ್ಣಯಿಸುವ ಕಾಲವೂ ಹಿಂದುಸ್ಥಾನಕ್ಕೆ ಒಮ್ಮೆ ಬರದಿರದು. ಆದರೆ ಅವರ ಮಾತಿನಿಂದಲೇ ನಮಗೇನು ತಿಳಿಯುವದೆಂದರೆ- ಬ್ರಿಟಿಷರಂಥ ಸುಧಾರಕರ ಸಾಮ್ರಾಜ್ಯದಲ್ಲಿಯೂ ಅದೇಕೆ ಇಂದಿನ ಕಾಂಗ್ರೆಸ್ ರಾಜ್ಯದಲ್ಲಿ ಸಹ ನೀತಿಯು ಬಲಗೊಳ್ಳಲಿಲ್ಲ, ನೆಲೆಗೊಳ್ಳಲಿಲ್ಲ. ಏಕೆಂದರೆ ನೀತಿಯು ಪ್ರಜೆಗಳ ಹೃದಯವನ್ನೇ ಗೆದ್ದು ತ್ರಿಕಾಲಾ ಬಾಧಿತವಾಗಿ ನಿಲ್ಲುವಂತೆ ಈ ರಾಜ್ಯದಲ್ಲಿ ಸನ್ನಿವೇಶಗಳಿದ್ದರೆ ರಾಜ್ಯವು ಹಾಳಾದರೂ ನೀತಿಯು ಕೀಳಾಗುವ ಭಯವು ಯಾರಿಗೂ ಹುಟ್ಟಲಾರದು. ಆದರೆ ವಸ್ತುತಃ ಕಾಯಿದೆಯ ಒಡ್ಡಿನಿಂದ ನೀತಿಯ ಪ್ರವಾಹವು ತಕ್ಕಮಟ್ಟಿಗೆ ತಡೆದು ಹಿಡಿಯಲ್ಪಟ್ಟಿತೇ ಹೊರತು ಶುದ್ಧಿತವಾಗಿ ಜೀವನೀಯವಾದ ಪೇಯವಾಗಲಿಲ್ಲ. ವೇಷವು ಬದಲಾಯಿತೇ ಹೊರತು ಮನವು ಬದಲಾಗಲಿಲ್ಲ. ಕಾಯಿದೆಯ ವಸ್ತ್ರವನ್ನು ಧರಿಸಿಕೊಂಡು ಅನೀತಿಯು ಎಲ್ಲೆಲ್ಲಿಯೂ ಪ್ರವೇಶಿಸುವಂತಾಯಿತು. ಯಾರು ಯಾರನ್ನೂ ಹೊಡೆಯಬಹುದು; ಯಾರು ಯಾರನ್ನೂ ಸುಲಿದುಕೊಳ್ಳಬಹುದು. ಅದಕ್ಕೆ ತಕ್ಕ ಕಾಯಿದೆಯೊಂದನ್ನು ಜೋಡಿಸಿ ಕೂಡಿಸಿ ತೋರಿಸಿದರಾಯಿತು. ನೀತಿಯ ಸೂತ್ರದಲ್ಲಿಯೇ ನೇತಾಡುತ್ತಿರುವೆವೆಂದು ಜಂಭಕೊಚ್ಚುವ ನಿಕಟಕರ್ಮಠರೂ ಕಾಯಿದೆಯನ್ನು ಮನಸಾ ಪೂಜಿಸುವರು. ಅಲ್ಲದೆ ನೀತಿಯು ನೀತಿಯ ರೂಪದಲ್ಲೇ ಬಂದಾಗ ಅದಕ್ಕೆ ಮಾನವು ಅವರಿಂದ ಸಿಕ್ಕಲಾರದು. ಹಿಂದೆ ಶಾರದಾಬಿಲ್ಲು ನೀತಿಸಮ್ಮತವಾದುದಲ್ಲವೆಂದು ಹೇಳುವ "ಧರ್ಮಿಷ್ಠ"ರಲ್ಲಿ 'ಅದು ಪ್ರಚಾರದಲ್ಲಿ ಬಂದರೆ ಪ್ರಾಣವನ್ನು ಕೊಟ್ಟಾದರೂ ಅದನ್ನು ನಿಲ್ಲಿಸದೆ ಬಿಡೆವು.' ಎಂದು ಎದೆ ತಟ್ಟಿದವರು ಎಷ್ಟು ಜನರಿದ್ದರು?

ಅಲ್ಲಲ್ಲಿ ಕೆಲವು ಸಭೆಗಳಾಗಿ ಹಲವು ಪ್ರತಿಜ್ಞೆಗಳು ಕಾರ್ಯರೂಪವನ್ನು ತಾಳಬಹುದೆಂದು ನಾವು ನಂಬಿಕೆಯನ್ನಿಟ್ಟುಕೊಳ್ಳಬಹುದೋ? ಹಾಗಾದರೆ 'ಸತಿ' ಪದ್ಧತಿಯನ್ನು ಸರಕಾರದವರು ನಿಲ್ಲಿಸಿದಾಗ ಅವರ ಪುನರುದ್ಧಾರಕ್ಕಾಗಿ ಎಷ್ಟು ಜನ ಆಚಾರ್ಯರು ಪ್ರಾಣಕೊಟ್ಟಿರುವರು? ಈಗ ಅಲ್ಲಲ್ಲಿ ನಡೆಯುತ್ತಿರುವ ವಿಧವಾ ವಿವಾಹಗಳನ್ನು ನಿಲ್ಲಿಸುವದರಲ್ಲಿ ಎಷ್ಟು ಜನ ಶಾಸ್ತ್ರಿಗಳು ಜೀವ ಕೊಟ್ಟಿರುವರು? ಬಹುಶಃ ಇವರೆಲ್ಲ ದೇವರ ಅವತಾರಕ್ಕಾಗಿ ಎದುರು ನೋಡುತ್ತಿರಬಹುದು. ಇರಲಿ. ನೀತಿಯ ಕೈ ಯಾವಾಗ ಮೇಲಾಗಿತ್ತೋ ಆಗ ಸ್ವಾರ್ಥ ಸಾಧುಗಳು ನೀತಿಯ ಬಲದಿಂದಲೇ ನೀತಿಯನ್ನು ಮುರಿಯುತ್ತಿದ್ದರು.

# ಕರ್ನಾಟಕದಲ್ಲಿಯ ಸ್ಥಳಿಕ ವ್ಯಾಪಾರೀ ಸಂಸ್ಥೆಗಳೂ, ವ್ಯಾಪಾರಸ್ಥರೂ ಮತ್ತು ಕಾಟನ್ ಮಾರ್ಕೇಟ ಆಕ್ಟು.

(ಲೇಖಕರು— ಶ್ರೀ. ಬ. ಮ. ಬಣಗಾರ ಬಾಗಲಕೋಟಿ.)

ಕಾಟನ್ ಮಾರ್ಕೇಟ್ ಕಾಯಿದೆಯನ್ನು ಸರಕಾರದವರು ಬೈಲಹೊಂಗಲಕ್ಕೆ ಲಾಗು ಮಾಡಿ ಈಗ ೨-೩ ವರ್ಷಗಳಾದವಷ್ಟೆ. ಈ ಕಾಯಿದೆಯಿಂದ ವ್ಯಾಪಾರಸ್ಥರಿಗೂ ರೈತರಿಗೂ ಕೂಡಿಯೇ ಹಾನಿ ಇದೆ ಎಂಬುದು ಗದಗಿನ ಶ್ರೀಮಾನ್ ಗುರುಸಿದ್ಧಪ್ಪನವರು ಬಳ್ಳಾರಿ ಮತ್ತು ಹಣಮಂತಸಾ ಬೇವಿನಕಟ್ಟಿ ಇವರ ಲೇಖನಗಳಿಂದ ಎಲ್ಲರಿಗೂ ಗೊತ್ತಿರಲಿಕ್ಕೆ ಸಾಕು. ಕೇವಲ ಗೊತ್ತಾಗುವುದರಿಂದ ಪ್ರಯೋಜನವೇನು? ಈಗ ಸರಕಾರದವರು ಏನಾದರೂ ಹಂಚಿಕೆಯಿಂದ ಎಲ್ಲ ಪೇಟೆಗಳಿಗೂ ಕ್ರಮೇಣ ಲಾಗೂ ಮಾಡಬೇಕೆಂಬ ಇಚ್ಛೆಯುಳ್ಳವರಿದ್ದಾರೆ. ಮತ್ತು ಈ ಕಾಯಿದೆಯನ್ನು ಎಲ್ಲ ಪೇಟೆಗಳಿಗೂ ಒಮ್ಮೆಲೇ ಅನ್ವಯಿಸಿದರೆ ಏಕಕಾಲಕ್ಕೆ ಭಯಂಕರ ಚಳವಳಿಯಾಗಿ ತಮ್ಮ ಉದ್ದೇಶವು ಸಾಧಿಸಲಿಕ್ಕಿಲ್ಲವೆಂದು ಮೊದಲು ಬೈಲಹೊಂಗಲ ಮಾರ್ಕೇಟೊಂದಕ್ಕೆ ಲಾಗು ಮಾಡಿದರು. ಈಗ ನರಗುಂದ ಮತ್ತು ವಿಜಾಪುರಗಳಿಗೆ ಲಾಗು ಮಾಡಬೇಕೆಂದು ಪ್ರಸಿದ್ಧಿಸಿದ್ದಾರೆ. ಬೈಲಹೊಂಗಲಕ್ಕೆ ಲಾಗು ಮಾಡಿದಾಗ ಕೇವಲ ಬೈಲಹೊಂಗಲದವರೊಬ್ಬರೇ ಆದರಲ್ಲಿಯೂ ಅರ್ಧ ವ್ಯಾಪಾರಿ ಜನರು ಮಾತ್ರ ವಿರೋಧಿಸಿದರು. ಉಳಿದ ಅರ್ಧ ವ್ಯಾಪಾರಿಗಳು ಲಾಗೂ ಮಾಡಬೇಕೆಂದು ಅಭಿಪ್ರಾಯಪಟ್ಟರು. ಬೈಲಹೊಂಗಲದಲ್ಲಿಯ ಸ್ಥಳಿಕ ದಲಾಲರಲ್ಲಿಯ ಈ ಒಡಕಿನ ಫಾಯದೆ ತಕ್ಕೊಂಡು ಸರಕಾರದವರು ಸದರ ಕಾಯಿದೆಯನ್ನು ಲಾಗೂ ಮಾಡಿಬಿಟ್ಟರು. ಬೈಲಹೊಂಗಲಕ್ಕೆ ಕಾಯಿದೆಯು ಅನ್ವಯಿಸುವಾಗ ಕರ್ನಾಟಕದಲ್ಲಿಯ ಹತ್ತಿ ಅರಳಿಯ ವ್ಯಾಪಾರದ ಊರುಗಳಾದ ಗದಗ, ಹುಬ್ಬಳ್ಳಿ, ವಿಜಾಪುರ, ಬಾಗಲಕೋಟಿ, ನರಗುಂದ, ಧಾರವಾಡ ಮೊದಲಾದ ಯಾವ ಊರಿನ ವ್ಯಾಪಾರಸ್ಥರಾಗಲೀ, ವ್ಯಾಪಾರೀ ಸಂಘಗಳಾಗಲಿ ಈ ಕಡೆಗೆ ತಮ್ಮ ಲಕ್ಷವನ್ನೇ ಕೊಡಲಿಲ್ಲ. ಬೈಲಹೊಂಗಲದವರ ಸುಖದುಃಖ ಬೈಲಹೊಂಗಲದವರಿಗೆ ಎಂದು ಸುಮ್ಮನೇ ಕುಳಿತುಬಿಟ್ಟರು. ಈಗ ಬೈಲಹೊಂಗಲದ ವ್ಯಾಪಾರಸ್ಥರಿಗೂ ಮತ್ತು ರೈತರಿಗೂ ಈ ಕಾಯಿದೆಯಿಂದ ಎಷ್ಟು ತೊಂದರೆ ಅನಾನುಕೂಲಗಳಾಗುತ್ತವೆಂಬುದು ಅಲ್ಲಿಗೆ ಒಮ್ಮೆ ಹೋಗಿ ನೋಡಿದರೆ ತಿಳಿಯುತ್ತದೆ. ಹೆಚ್ಚಿನ ಮಾಹಿತಿ ಬೇಕಾದವರು ಈ ಬಗ್ಗೆ ಬೈಲಹೊಂಗಲದ ಶ್ರೀಮಾನ್ ಕಾಮತರನ್ನು ಬರೆದು ಕೇಳಬಹುದು.

ನರಗುಂದದ ವ್ಯಾಪಾರಸ್ಥರಿಗೆ ೧೫ ಮೈಲು ಏರಿಯಾ ನಿಮಗೆ ಮಾಡಿಕೊಡುತ್ತೇವೆಂದು ಆಶೆ ತೋರಿಸಿ ಅಧಿಕಾರಿಗಳು ವ್ಯಾಪಾರಸ್ಥರ ಮನ ಒಲಿಸಿದ್ದರಿಂದ ಹುಬ್ಬಳ್ಳಿ ಪೇಟೆಗೆ ಹೋಗುವ ಕೆಲವು ಹಳ್ಳಿಗಳ ಮಾಲು ಈ ಕಾಯಿದೆಯಿಂದ ಆ ಪೇಟೆಗೆ ಹೋಗದೆ ತಮ್ಮ ಪೇಟೆಗೆ ಬರುತ್ತವೆಂಬ ಸ್ವಾರ್ಥೀ ಸಮಜೂತಿನಿಂದ ಸದರ ಕಾಯಿದೆಯನ್ನು ತಮ್ಮ ಊರಿಗೆ ಲಾಗೂ ಮಾಡಲು ಅಡ್ಡಿಯಿಲ್ಲವೆಂದು ನರಗುಂದದ ವ್ಯಾಪಾರಸ್ಥರು ಕಬೂಲ ಮಾಡಿದರೆಂದು ತೋರುತ್ತದೆ. ಆಕ್ಟ ಲಾಗೂ ಮಾಡಬೇಕೆನ್ನುವ ಬಗ್ಗೆ ಸರಕಾರದವರು ಆಗಸ್ಟ ತಿಂಗಳ ಗ್ಯಾಝಿಟನಲ್ಲಿ ಪ್ರಸಿದ್ಧಮಾಡಿದಂತಿದೆ. ಹೀಗೆ ಎಲ್ಲ ವ್ಯಾಪಾರಸ್ಥರು ತಮ್ಮ ತಮ್ಮ ಊರುಗಳ ಹಿತವೊಂದನ್ನೇ ಲಕ್ಷಿಸಿ ಕೇವಲ ಸ್ವಾರ್ಥ ಪ್ರೇರಿತರಾಗಿ ಈ ವರೆಗೆ ಆಕ್ಟ ಲಾಗೂ ಆಗಲು ಕಾರಣೀಭೂತರಾಗಿದ್ದಾರೆ. "ಒಡಕು ಹುಟ್ಟಿಸು ಮತ್ತು ಒಡೆತನ ಮಾಡು" ಎಂಬುದು ಸರಕಾರದವರ ನೀತಿಯಾಗಿದೆ. ಆದ್ದರಿಂದ ಕರ್ನಾಟಕದಲ್ಲಿಯ ಎಲ್ಲ ವ್ಯಾಪಾರಸ್ಥರು ಕೂಡಿ ಒಕ್ಕಟ್ಟಾಗಿ ಪ್ರಯತ್ನಿಸಬೇಕು. ಅಂದರೇನೇ ಸರಕಾರದವರು ಈ ವಿಷಯದಲ್ಲಿ ಗಮನಕೊಡುತ್ತಾರೆ. ಸರಕಾರದವರು ರೈತರ ಹಿತಸಾಧನೆಗಂತೆಯೇ ಈ ಕಾಯಿದೆಯನ್ನು ಮಾಡಿದ್ದಾರಷ್ಟೆ. ನಾವು ಕೂಡಾ ಅವರು ಮಾಡಬೇಕೆನ್ನುವ ಸುಧಾರಣೆಗಳನ್ನು ನಾವೆಲ್ಲರೂ ಒಕ್ಕಟ್ಟಾಗಿ ಒಂದೇ ಪದ್ಧತಿಯಿಂದ ಮಾಡಲುಪಕ್ರಮಿಸಿದರೆ ಸರಕಾರದವರು ಈ ವಿಷಯದಲ್ಲಿ ಕೈಹಾಕಲಿಕ್ಕಿಲ್ಲ. ಆದುದರಿಂದ ಎಲ್ಲ ಊರುಗಳ ಸ್ಥಳಿಕ ವರ್ತಕ ಸಂಘಗಳು ಒಟ್ಟಿಗೆ ಸೇರಿ ರೈತರಿಗೂ ವರ್ತಕರಿಗೂ ಒಪ್ಪುವಂಥ ಯೋಗ್ಯ ಸುಧಾರಣೆಗಳನ್ನು ತಾವೇ ಅಮಲಿನಲ್ಲಿ ತರುವುದು ವಿಹಿತ.

ನಮ್ಮ ಕರ್ನಾಟಕದಲ್ಲಿ "ಕರ್ನಾಟಕ ಚೆಂಬರ್ ಆಫ್ ಕಾಮರ್ಸ" ಈ ಸಂಸ್ಥೆಯು ಈಗ ಹತ್ತು ವರ್ಷಗಳಿಂದ ಕೇವಲ ರೈತರ, ವ್ಯಾಪಾರಸ್ಥರ ಮತ್ತು ಕೈಗಾರಿಕೆ ಮೊದಲಾದ ಉದ್ಯೋಗ ವ್ಯವಸಾಯಗಾರರ ಅಡಚಣಿಗಳನ್ನೇ ದೂರ ಮಾಡುವದಕ್ಕಾಗಿ ಟೊಂಕ ಕಟ್ಟಿ ಪ್ರಯತ್ನಿಸುವದು ತಮ್ಮೆಲ್ಲರಿಗೂ ಗೊತ್ತಿದ್ದ ಸಂಗತಿಯಾಗಿದೆ. "ಫೆಡರೇಶನ್ ಆಫ್ ಇಂಡಿಯನ್ ಚೆಂಬರ ಆಫ್ ಕಾಮರ್ಸ" ಈ ಸಂಸ್ಥೆಗೆ ಕರ್ನಾಟಕ ಚೆಂಬರ್ ಆಫ್ ಕಾಮರ್ಸ ಸಂಬಂಧಿಸಿದೆ. ಸರಕಾರದಲ್ಲಿ ಈ ಸಂಘಕ್ಕೆ ಸಾಕಷ್ಟು ಮಾನ್ಯತೆಯೂ ಅದೆ.

ಈ ಪ್ರಕಾರ ಅಖಿಲ ಕರ್ನಾಟಕದ ಏಕಮಾತ್ರ ವ್ಯಾಪಾರೀ ಸಂಸ್ಥೆಯಿದ್ದರೂ ವಿಜಾಪುರ, ಗದಗ, ಹುಬ್ಬಳ್ಳಿ, ನರಗುಂದ, ಧಾರವಾಡ, ಬಾಗಲಕೋಟಿ ಮೊದಲಾದ ಊರಲ್ಲಿಯ ಸ್ಥಳಿಕ ವ್ಯಾಪಾರಿ ಸಂಘಗಳು ಸರಕಾರದವರೊಡನೆ ಈ ಬಗ್ಗೆ ಪ್ರತ್ಯೇಕವಾಗಿ ಪತ್ರವ್ಯವಹಾರ ಮಾಡಿದರು. ವಿಜಾಪುರದವರು ತಮ್ಮ ಊರಿನವರದೊಂದು ಶಿಷ್ಟಮಂಡಳವನ್ನು ಒಯ್ದಿದ್ದರು. ಆದರೂ ಈ ಪ್ರತ್ಯೇಕವಾದ ಪತ್ರವ್ಯವಹಾರಗಳಿಂದ ಮತ್ತು ಶಿಷ್ಟಮಂಡಳದಿಂದ ಯಾವ ಲಾಭವೂ ಆದಂತೆ ಕಾಣುವುದಿಲ್ಲ. ಮತ್ತು ಸರಕಾರದವರ ಕೈವಾರಿಗಳಾದರೋ ಆಕ್ಟ ಲಾಗೂ ಮಾಡಬೇಕೆಂಬ ಹಟವನ್ನು ಸಾಧಿಸಲು ಅಹೋರಾತ್ರಿ ಪ್ರಯತ್ನಿಸುತ್ತಿದ್ದಾರೆ.

ಸಾಧಾರಣವಾಗಿ ಈ ಹತ್ತಿ ಅರಳಿಯ ಪೇಟೆಯ ರೀತಿ ರಿವಾಜುಗಳು ಸ್ವಲ್ಪ ಸ್ವಲ್ಪ ಭಿನ್ನವಿರುತ್ತವೆ. ಎಲ್ಲ ಊರಿನವರೂ ತಮ್ಮ ಪತ್ರವ್ಯವಹಾರದಲ್ಲಿ ಅಥವಾ ಶಿಷ್ಟಮಂಡಲಗಳಲ್ಲಿ ತಮ್ಮ ರೀತಿ ರಿವಾಜುಗಳನ್ನೇ ಉಲ್ಲೇಖಿಸುವವರಾದ್ದರಿಂದ ಸರಕಾರದವರಿಗೆ ಇವರಲ್ಲಿ ಒಂದೇ ತೆರನಾದ ಪದ್ಧತಿಯಿಲ್ಲವೆಂದು ತಿಳಿದು ಇವರ ಕೇಳಿಕೆಗಳಿಗೆ ಅಷ್ಟೊಂದು ಮಹತ್ವ ಕೊಟ್ಟಿಲ್ಲ. ಮತ್ತು ಕೊಡುವುದಿಲ್ಲ. ಹೀಗೆ ತಮ್ಮ ಊರಿನ ಸುಖದುಃಖ ತಮಗೆ ಎಂದು ವೈಯಕ್ತಿಕವಾಗಿ ಆಯಾ ಊರುಗಳ ಸ್ಥಳಿಕ ವ್ಯಾಪಾರಿ ಸಂಘಗಳು ಪ್ರತ್ಯೇಕವಾಗಿ ಈ ಬಗ್ಗೆ ಪ್ರಯತ್ನಿಸುವದರಿಂದ ಪ್ರಯೋಜನವಿಲ್ಲ. ಇಷ್ಟೇ ಅಲ್ಲ; ಈ ಪದ್ಧತಿಯು ತೀರಾ ಘಾತಕತನದ್ದಾಗಿ ಪರಿಣಮಿಸುತ್ತದೆ.

ಮೇಲೆ ತಿಳಿಸಿದಂತೆ ಸರಕಾರದ ಕೈವಾರಿಗಳಾದ ನಮ್ಮ ಜನರೇ ನಮ್ಮ ಹಕ್ಕುಬಾಧ್ಯತೆಗಳಿಗೆ ಗದೆ ತರಲು ಅಹೋರಾತ್ರಿ ಪ್ರಯತ್ನಿಸುತ್ತಿರುವಾಗ ನಮ್ಮ ಸ್ಥಳಿಕ ವ್ಯಾಪಾರಿ ಸಂಸ್ಥೆಗಳು ಇನ್ನೂ ಗಾಢನಿದ್ರೆಯಲ್ಲಿವೆ. ಹುಬ್ಬಳ್ಳಿ, ನರಗುಂದ, ವಿಜಾಪುರ, ಬಾಗಲಕೋಟೆ ಮೊದಲಾದ ಊರುಗಳ ವ್ಯಾಪಾರಸ್ಥರು ಕಾಯಿದೆಯನ್ನು ಲಾಗೂ ಮಾಡುವ ಬಗ್ಗೆ ಮೇಲಾಧಿಕಾರಿಗಳಿಂದ ಒತ್ತಾಯದ ಪತ್ರಗಳು ಬಂದಾಗ ಈಗ ಎಚ್ಚೆತ್ತು ಏನು ಮಾಡಬೇಕು? ಹ್ಯಾಗೆ ಮಾಡಬೇಕು? ಎಂದು ಮಂತ್ರ ಜಪಿಸುತ್ತ ನಶೀಬವನ್ನೂ ಕಾಲವನ್ನೂ ಹಳಿಯುತ್ತ ಅಸಹಾಯರಂತೆ ಕೂತುಬಿಡುತ್ತಾರೆ. ಇದು ಜಾಗೃತಿಯ ಲಕ್ಷಣವೆ?

ಬಾಧೆ ಬರುವ ಹಕ್ಕುಗಳಿಗಾಗಿ ಸುಮ್ಮನೆ ಮನೆಯಲ್ಲಿ ಕುಳಿತು ಅಳುವ ಕಾಲವಿದಲ್ಲ. ಇದು ಸಂಘಟನೆಯುಳ್ಳವರ ಕಾಲ, ಸಾಹಸಿಗಳ ಕಾಲ, ಚಳವಳಿಯ ಕಾಲ. ನಮ್ಮ ವ್ಯಾಪಾರಕ್ಕೆ ಧಕ್ಕೆ ಬಂದಿತೆಂದು ಮನೆಯಲ್ಲಿ ಕುಳಿತು ಗೋಳಾಡಿದರೆ ಆ ಗೋಳಾಟವನ್ನು ಕೇಳುವವರಾರು?

ಇನ್ನು ನಮ್ಮ ಸ್ಥಳಿಕ ವ್ಯಾಪಾರೀ ಸಂಘಗಳಾದರೋ ಜನ್ಮವೆತ್ತಿ ೧೦-೧೫ ವರ್ಷಗಳಾಗುತ್ತ ಬಂದಿವೆ. ಈ ಕಾಯಿದೆಯನ್ನು ಲಾಗು ಮಾಡುವ ಪ್ರಯತ್ನವು ಕಳೆದ ೮-೧೦ ವರುಷಗಳಿಂದಲೂ ನಡೆದಿದೆ. ಈ ೨-೩ ವರುಷಗಳಂತೂ ತೀರ ಜೋರಾಗಿದೆ. ತಮ್ಮ ಹಕ್ಕುಗಳಿಗೆ ಮುಂದೆ ಬಾಧೆ ಬರತಕ್ಕುದು ಈ ಸಂಘಗಳಿಗೆ ಗೊತ್ತಿದ್ದರೂ ಪರಸ್ಪರ ಸಂಘಟನೆಯ ಅಭಾವದ ಮೂಲಕ ಜೀವನ್ಮೃತಾವಸ್ಥೆಯಲ್ಲಿ ಸುಮ್ಮನೆ ಕುಳಿತುಬಿಟ್ಟಿವೆ. ಆದುದರಿಂದ ಇನ್ನಾದರೂ ಈ ಎಲ್ಲ ಊರೊಳಗಿನ ಸ್ಥಳಿಕ ವ್ಯಾಪಾರಿ ಸಂಸ್ಥೆಯವರು ಕರ್ನಾಟಕದ ವ್ಯಾಪಾರಿಗಳೆಲ್ಲರ ಸಂಸ್ಥೆಯಾದ ಕರ್ನಾಟಕ ಚೆಂಬರ ಆಫ್ ಕಾಮರ್ಸ ಈ ಸಂಸ್ಥೆಗೆ ಸಂಬಂಧವಿಟ್ಟುಕೊಂಡು (ಅಫಲಿಯೇಶನ್ ಮಾಡಿಕೊಂಡು) ಎಲ್ಲ ಊರುಗಳ ವ್ಯಾಪಾರಿ ಸಂಘಗಳ ಪ್ರತಿನಿಧಿಗಳು ಯಾವುದಾದರೊಂದು ಊರಲ್ಲಿ ಸಭೆಕೂಡಿ ಒಂದೇ ಪದ್ಧತಿಯ ವ್ಯಾಪಾರದ ನಿರ್ಣಯವನ್ನು ಮಾಡಿಕೊಂಡು ಸರಕಾರದವರೊಡನೆ ಈ ಬಗ್ಗೆ ಎಲ್ಲ ಕೆಲಸವನ್ನು ಮಾಡಲು ಈ ಕರ್ನಾಟಕ ಚೆಂಬರ್ ಆಫ್ ಕಾಮರ್ಸದವರಿಗೆ ಒಪ್ಪಿಸಿಬಿಡಬೇಕು. ಈಗ ಉಳಿದಿರುವುದು ಇದೊಂದೇ ಮಾರ್ಗ.

ಸರಕಾರದವರು ಈಗ ಮುಕ್ಕಾಲು ಪಾಲು ತಮ್ಮ ಕೆಲಸವನ್ನು ಮಾಡಿಕೊಂಡಿದ್ದಾರೆ. ಇನ್ನು ಉಳಿದಿರುವುದು ಕೇವಲ ನಾಲ್ಕಾಣೆ ಭಾಗಕೆಲಸ. ಅದಷ್ಟು ಆದರಂತೂ ತೀರೇಹೋಯಿತು. ಕಾರಣ ಈಗಲಾದರೂ ಎಲ್ಲರೂ ಎಚ್ಚೆತ್ತು ಸರಕಾರದವರು ಪ್ರತ್ಯೇಕವಾಗಿ ಯಾವ ಊರಿನವರಿಗಾದರೂ ಏನನ್ನಾದರೂ ಕೇಳಿದರೆ ಅದನ್ನು ಚೆಂಬರಕ್ಕೆ ಕಳಿಸಿ ಅವರಿಂದಲೆ ಕೆಲಸ ನಡೆಸುವುದು ವಿಹಿತ. ಸರಕಾರದವರೊಡನೆ ಒಂದೊಂದೇ ಪೇಟೆಯವರು ಪ್ರತ್ಯೇಕವಾಗಿ ಪ್ರಯತ್ನಸುವದಕ್ಕಿಂತ ಎಲ್ಲ ಊರ ವ್ಯಾಪಾರಸ್ಥರು ಒಂದೇ ಒಂದು ಸಂಸ್ಥೆಯಾದ "ಕರ್ನಾಟಕ ಚೆಂಬರ್ ಆಫ್ ಕಾಮರ್ಸ" ಈ ಸಂಸ್ಥೆಯವರೊಡನೆ. ಸಹಕರಿಸಿ ಕೂಡಲೇ ಅವರ ಮುಖಾಂತರ ಕೆಲಸ ನಡೆಸುವುದು ಅತ್ಯಂತ ಅವಶ್ಯವಾಗಿದೆ.

ಈ ಕಾಯಿದೆಯು ಇಡೀ ಮುಂಬಯಿ ಇಲಾಖೆಗೆ ಸಂಬಂಧಿಸಿದ್ದರೂ ಇದನ್ನು ಲಾಗುಮಾಡುವಿಕೆಯು ಮಹಾರಾಷ್ಟ್ರ ಗುಜರಾಥಗಳನ್ನು ಬಿಟ್ಟು ಕರ್ನಾಟಕದಲ್ಲಿಯೇ ಏಕೆ ಇಷ್ಟು ಜೋರಿನಿಂದ ನಡೆದಿದೆ ಎಂಬುದರ ತಥ್ಯಾಂಶವೇನು? (ಮಹಾರಾಷ್ಟ್ರದಲ್ಲಿ ಎಲ್ಲಿಯೋ ಒಂದು ಕಡೆಗೆ ಮಾತ್ರ ಲಾಗೂ ಆಗಿದೆ.) ನಮ್ಮ ಊರುಗಳಲ್ಲಿಯ ವ್ಯಾಪಾರಸ್ಥರ ಮತ್ತು ವ್ಯಾಪಾರಿ ಸಂಸ್ಥೆಗಳಲ್ಲಿಯ ಸಂಘಟನೆ, ಚಟುವಟಿಕೆಗಳ ಅಭಾವವೇ ಕಾರಣವಲ್ಲವೆ? ಗುಜರಾಥ ಮಹಾರಾಷ್ಟ್ರಗಳಲ್ಲಿ ಏಕೆ ಇಷ್ಟು ಜೋರಿನಿಂದ ಸಾಗಿಲ್ಲ? ಸಂಘಟನೆ, ಚಳವಳಿ, ಸಾಹಸಕ್ಕೆ ಹೆಸರಾದ ಮಹಾರಾಷ್ಟ್ರ ಗುಜರಾಥಗಳಲ್ಲಿ ಈ ಒಡಕಿಗೆ ಎಡೆಯೇ ಇಲ್ಲ. ಆದುದರಿಂದಲೇ ಅಲ್ಲಿ ಅತ್ಯಂತ ಸಾವಕಾಶವಾಗಿ ಕೆಲಸ ಸಾಗಿರಬಹುದು. ನಮ್ಮ ಕರ್ನಾಟಕವಾದರೋ ಅನೈಕ್ಯತೆಯ ತವರುಮನೆ. ಸಂಘಟನೆಯೂ ಇಲ್ಲ; ಸಾಹಸವೂ ಇಲ್ಲ. ನಮ್ಮ ವ್ಯಾಪ್ಯಾರಿ ಸಂಘಗಳ ಈ ರೀತಿಯಾದ ಅನೈಕ್ಯತೆಯ ಹೀನ ದೆಶೆಯನ್ನು ನೋಡಿಯೇ ಸರಕಾರದವರು ಜಾಗೃತಾವಸ್ಥೆಯಲ್ಲಿಯ ಮಹಾರಾಷ್ಟ್ರ ಗುಜರಾಥಗಳ ಗೊಡವೆಯನ್ನು ಸಧ್ಯಕ್ಕೆಬಿಟ್ಟು ಎಲ್ಲ ದೃಷ್ಟಿಯಿಂದಲೂ ತಮ್ಮ ಕಾರ್ಯಕ್ಕೆ ಅನುಕೂಲವುಳ್ಳದ್ದೆಂದು ತಿಳಿದು ಈ ಕರ್ನಾಟಕ ಪ್ರಾಂತದ ಕಡೆಗೇ ಹೆಚ್ಚು ಗಮನಿಸಿದ್ದಾರೆ. ಇದು ಅವರ ತಪ್ಪೇ? ಈಗಲಾದರೂ ಗಾಢನಿದ್ರೆಯಿಂದ ಏಳಿರಿ! ಎಚ್ಚೆತ್ತು ಎಲ್ಲರೂ ಸುಸಂಘಟಿತರಾಗಿರಿ! ಕರ್ನಾಟಕದ ಏಕಮಾತ್ರ ಸಂಸ್ಥೆಯಾದ "ಕರ್ನಾಟಕ ಚೆಂಬರ್ ಆಫ್ ಕಾಮರ್ಸ" ದವರೊಡನೆ ತೀವ್ರವೇ ಸಂಬಂಧ ಬೆಳೆಯಿಸಿಕೊಂಡು ಕಾರ್ಯತತ್ಪರರಾಗಿರಿ. ೪-೮ ದಿವಸಗಳಲ್ಲಿಯೇ ಗದಗ, ಹುಬ್ಬಳ್ಳಿ ಎಲ್ಲಿಯಾದರೂ ಎಲ್ಲ ಊರುಗಳ ಸಂಘಗಳ ಚಾಲಕರು ಮತ್ತು ಜವಾಬದಾರಿ ವ್ಯಾಪಾರಸ್ಥರು ಒತ್ತಟಿಗೆ ಕೂಡಿ ಎಲ್ಲರಿಗೂ ಒಪ್ಪಿಗೆಯಾಗುವಂಥ ಪೇಟೆಯ ಪದ್ಧತಿಯನ್ನು ತಯಾರ ಮಾಡಲಿಕ್ಕೆ ಪ್ರಯತ್ನಿಸಿರಿ. ಅಂದರೆ ಉಳಿಯುವಿರಿ. ಇಲ್ಲದಿದ್ದರೆ ಅಳಿಯುವಿರಿ. ಎಲ್ಲರೂ ಸಂಘಟಿತರಾಗಿ ಇನ್ನುಮೇಲೆಯಾದರೂ ಪ್ರಯತ್ನಿಸುತ್ತೀರೆಂದು ಆಶಿಸುತ್ತೇನೆ.

---



—ಮಹಾತ್ಮಾ ಗಾಂಧಿಯವರ ಜಯಂತಿ ಸಪ್ತಾಹದಲ್ಲಿ ಸಿಂಧದ ಮಂತ್ರಿಗಳೂ ಮತ್ತು ಕರಾಚಿ ನಗರಾಧ್ಯಕ್ಷರೂ ಸೇರಿ ೯೦೦೦ ರೂ. ಗಳ ಖಾದಿಯನ್ನು ಮಾರಿದರು.

—ಬೆಳಗಾವ ಜಿಲ್ಲಾ ಮುಸ್ಲಿಂಲೀಗಿನವರು ಈ ವರೆಗೆ ೬೦೦೦ ಸಭಾಸದರನ್ನು ಮಾಡಿದ್ದಾರೆ.

# ಸಂಯುಕ್ತಘಟನೆಯು ತ್ಯಾಜ್ಯ.

## ಮ. ಗಾಂಧಿಯವರ ಲೇಖ.

### ಗಾಂಧಿ-ನೆಹರುಗಳಲ್ಲಿ ಭಿನ್ನಾಭಿಪ್ರಾಯವಿಲ್ಲ.

ಮ. ಗಾಂಧಿಯವರು "ಹರಿಜನ" ಪತ್ರಿಕೆಯಲ್ಲಿ ಹೀಗೆ ಬರೆದಿದ್ದಾರೆ—

"ಕಾಂಗ್ರೆಸ್ ಸಂಸ್ಥೆಯಾಗಲಿ ಕಾಂಗ್ರೆಸ್ ಕಾರ್ಯಕರ್ತರಾಗಲಿ ಮುಖ್ಯವಲ್ಲ. ಗಾಂಧಿಯವರೇ ಮುಖ್ಯ ಎಂಬುದಾಗಿ ಲಂಡನ್ನಿನಲ್ಲೆಲ್ಲರೂ ಮಾತಾಡಿಕೊಳ್ಳುತ್ತಿದ್ದಾರೆ. ಎಂದು ಪ್ರಸಿದ್ಧ ಸುದ್ದಿಗಾರರೊಬ್ಬರು ನನಗೆ ಪತ್ರ ಬರೆದಿದ್ದಾರೆ. ಪಂಡಿತ ಜವಾಹರಲಾಲರಿಗೂ ನನಗೂ ಬಹಳ ಭಿನ್ನಾಭಿಪ್ರಾಯ ಉಂಟೆಂದೂ ಜವಾಹರಲಾಲರು ಸಂಯುಕ್ತಘಟನೆಯನ್ನು ಕಣ್ಣೆತ್ತಿಕೂಡಾ ನೋಡಲಾರರೆಂದೂ ನಾನು ಮಾತ್ರ ಅದನ್ನು ಅಲ್ಪ ಸ್ವಲ್ಪ ಬದಲಾವಣೆಯಿಂದ ಸ್ವೀಕರಿಸುವೆನೆಂದೂ ನನ್ನ ಟೀಕಾಕಾರರು ಅಲಂಕಾರಯುಕ್ತವಾಗಿ ಮಾತಾಡುತ್ತಾರಂತೆ.

ಅಂತೂ ಈ ಟೀಕಾಕಾರರಿಗೆ ನನ್ನ ವಿಷಯವಾಗಿ ನನಗಿಂತಲೂ ಹೆಚ್ಚಿಗೆ ಗೊತ್ತಿದೆಯೆಂತಾಯಿತು. ಕಾಂಗ್ರೆಸ್ ಮನುಷ್ಯರ ಮೇಲೆ ನನ್ನ ಪ್ರಭಾವ ಎಷ್ಟು ಸ್ವಲ್ಪವಿದೆಯೆಂಬುದು ನನಗೆ ಗೊತ್ತಿದೆ. ಆದರೆ ಅವರ ಮೇಲೆ ನನಗೆ ಪೂರ್ಣ ಪ್ರಭಾವವಿದೆಯೆಂದು ಈ ಟೀಕಾಕಾರರು ಭಾವಿಸುತ್ತಾರೆ. ಕಾಂಗ್ರೆಸ್ ಮನುಷ್ಯರ ಮೇಲೆ ನನಗೇನಾದರೂ ಪ್ರಭಾವವಿರುವುದಾದರೆ ಅದು ಅಧಿಕಾರದಿಂದ ಪ್ರಾಪ್ತವಾದದ್ದಲ್ಲ. ಅವರ ಮನಸ್ಸಿಗೆ ಸರಿದೋರುವಂತೆ ನಾನು ಮಾಡಿಕೊಳ್ಳುವ ವಿನಂತಿಯಿಂದ ಪಡೆದದ್ದಾಗಿದೆ. ಈ ಟೀಕಾಕಾರರು ಹೇಳುವಂಥಾ ರೀತಿಯ ಪ್ರಭಾವವು ನನಗಿರುತ್ತಿದ್ದರೆ ಹಿಂದುಸ್ಥಾನಕ್ಕೆ ಯಾವ ದಬ್ಬಾಳಿಕೆಯೂ ಇಲ್ಲದೆ ಇಷ್ಟರಲ್ಲೇ ಪೂರ್ಣ ಸ್ವರಾಜ್ಯ ಸಿಕ್ಕುತ್ತಿತ್ತು. ಮತ್ತು ಕೆಲವು "ಸಂಸ್ಥಾನಗಳಲ್ಲಿ ತಡೆಯಿಲ್ಲದೆ ನಡೆಯುತ್ತಿರುವಂತಹ ದಬ್ಬಾಳಿಕೆಗೆ ಆಸ್ಪದವೇ ಇಲ್ಲದಂತಾಗುತ್ತಿತ್ತು. ಕಾಂಗ್ರೆಸ್ ಮನುಷ್ಯರ ಮೇಲೆ ನನಗೆ ನಿಜವಾಗಿಯೂ ಪ್ರಭಾವವಿರುತ್ತಿದ್ದರೆ ಅವರಲ್ಲಿ ಶಿಸ್ತುಭಂಗ, ಅಸತ್ಯ, ಹಿಂಸೆ ಮುಂತಾದವುಗಳು ತಲೆದೋರುತ್ತಿದ್ದಿಲ್ಲ. ಅವರೆಲ್ಲರೂ ಖಾದೀಧಾರಿಗಳಾಗುತ್ತಿದ್ದರು. ಖಾದಿ ಭಂಡಾರದಲ್ಲಿ ಮಾರಾಟವಾಗದೆ ಖಾದಿ ಉಳಿಯುತ್ತಿದ್ದಿಲ್ಲ.

ಈ ವಿಷಯ ಇಷ್ಟೇ ಸಾಕು. ಸಂಯುಕ್ತಘಟನೆಯ ಬಗ್ಗೆ ಬರೆಯುವೆನು. ನಾನೇನು ಈ ಕುರಿತು ಹಲವರೊಡನೆ ಮಾತಾಡಿಲ್ಲ. ಮಾತಾಡಿದವರೊಡನೆ ಕೂಡಾ ನಾನು ಪ್ರತಿನಿಧಿಯಾಗಿಯೂ ಮಾತಾಡುವದಿಲ್ಲವೆಂದು ಹೇಳಿದ್ದೆನಲ್ಲದೆ ನನ್ನ ಅಭಿಪ್ರಾಯವನ್ನು ಯಾವ ಕಾಂಗ್ರೆಸ್ ಮನುಷ್ಯನಿಗೆ ಕೂಡಾ ತಿಳಿಸಿದ್ದಿಲ್ಲ. ಕಾಂಗ್ರೆಸ್ಸಿನ ಅಂಬೋಣವೇ ಮುಖ್ಯವೇ ಹೊರತು ನನ್ನ ಅಭಿಪ್ರಾಯವಲ್ಲ. ಕಾಂಗ್ರೆಸ್ಸು ಸಂಯುಕ್ತಘಟನೆಯನ್ನು ಬಲಾತ್ಕಾರವಾಗಿ ಸ್ವೀಕರಿಸಲಾರದೆಂದೂ ಸ್ವಾತಂತ್ರ್ಯ ದೊರೆಯುವವರೆಗೆ ಹಿಂದುಸ್ಥಾನದಲ್ಲಿ ಶಾಂತಿಯುಂಟಾಗಲಾರದೆಂದೂ ನಾನು ಹೇಳಿದ್ದೆನು. ಮತ್ತು ಕ್ರಮಬದ್ಧವಾಗಿ ಕೂಡಿಸಲ್ಪಡುವ ಘಟನಾತ್ಮಕ ಸಭೆಯು ಸಿದ್ಧಗೊಳಿಸುವ ರಾಜ್ಯಘಟನೆಯಿಂದಲೇ ಈ ಸ್ವಾತಂತ್ರ್ಯವು ದೊರೆಯತಕ್ಕದ್ದೆಂದು ನಾನು ಹೇಳಿದ್ದೆನು. ಪಂಡಿತ ಜವಾಹರಲಾಲರೂ ನಾನೂ ಪರಸ್ಪರ, ಭಿನ್ನವಾದ ಶಬ್ದಗಳಿಂದ ಮಾತಾಡಿದರೂ ಹಿಂದುಸ್ಥಾನದ ಸಮಸ್ಯೆಗಳ ಕುರಿತು ನಮ್ಮಿಬ್ಬರ ಅಭಿಪ್ರಾಯವೂ ಒಂದೇ ಆಗಿದೆ. ಸಂಯುಕ್ತಘಟನೆಯದ ವಿಷಯದಲ್ಲಿ ನಾವಿಬ್ಬರೂ ಒಂದೇ ಅಭಿಪ್ರಾಯವಿಟ್ಟುಕೊಂಡಿದ್ದೇವೆ. ಕಾಂಗ್ರೆಸ್ಸಿನ ವಿಷಯದಲ್ಲಿ ನನಗೂ ಅವರಿಗೂ ಭಿನ್ನಾಭಿಪ್ರಾಯವುಂಟಾದರೆ ಅವರ ಅಭಿಪ್ರಾಯವೇ ಅನುಸರಿಸಲ್ಪಡತಕ್ಕದ್ದೆಂದು ನಾನು ನಿಶ್ಚಯಿಸಿಕೊಂಡಿರುವೆನು. ಇದಕ್ಕೆ ಕಾರಣವಿಷ್ಟೆ. ಅವರು ಕಾಂಗ್ರೆಸ್ಸಿನ ಕೇಂದ್ರವಾಗಿದ್ದು ಅದಕ್ಕೆ ಸಂಬಂಧಿಸಿದ ಎಲ್ಲ ವಿಚಾರವನ್ನೂ ಬಲ್ಲರು. ನಾನು ಅದರಲ್ಲಿರುವದಿಲ್ಲ."

---

# ಬ್ರಿಟನ್-ಜರ್ಮನಿಗಳ ಒಡಂಬಡಿಕೆ.

ಯುರೋಪದ ಭವಿತವ್ಯಕ್ಕೆ ಅತ್ಯಂತ ಮಹತ್ವದ್ದಾಗಿರುವ ಒಂದು ಘೋಷಣೆಯನ್ನು ಮಿ. ಚೇಂಬರಲೇನರು ಮ್ಯುನಿಚವನ್ನು ಬಿಡುವುದಕ್ಕಿಂತ ಮುಂಚೆ ಮಾಡಿದರು. ಅವರು ಹೇಳಿದ್ದೇನೆಂದರೆ—

"ಝೆಕೊಸ್ಲೊವಾಕಿಯಾದ ಸಮಸ್ಯೆಯನ್ನು ಬಿಡಿಸಿದರೆ ಇಡೀ ಯುರೋಪವನ್ನೇ ಶಾಂತಪಡಿಸಿದಂತಾಗುವುದೆಂದು ನಾನು ಮೊದಲಿನಿಂದಲೂ ನಂಬಿದ್ದೆನು. ತಾ. ೩೦ ನೆಯ ಪ್ರಾತಃಕಾಲ ನಾನು ಹಿಟ್ಲರನೊಡನೆ ಮಾತನಾಡಿದೆ. ಬಳಿಕ ನಾವಿಬ್ಬರೂ ಈ ಕೆಳಗಿನ ಘೋಷಣೆಗೆ ಸಹಿ ಮಾಡಿದೆವು.

"ಜರ್ಮನಿಯ ಸರ್ವಾಧಿಕಾರಿ ಮತ್ತು ಬ್ರಿಟಿಶ್ ಮುಖ್ಯ ಪ್ರಧಾನರಾದ ನಾವು ತಾ. ೩೦ ನೆಯ ದಿನ ಮತ್ತೆ ಕೂಡಿ ಪರಸ್ಪರ ವಿಚಾರವಿನಿಮಯ ಮಾಡಿ ಬ್ರಿಟನ್-ಜರ್ಮನಿಗಳ ಸ್ನೇಹಸಂಬಂಧವು ಈ ಎರಡು ದೇಶಗಳ ಮತ್ತು ಯುರೋಪದ ದೃಷ್ಟಿಯಿಂದ ಅತ್ಯಂತ ಮಹತ್ವದ್ದಿರುವುದೆಂದು ನಿರ್ಣಯಿಸಿದೆವು. ನಾವಿಬ್ಬರೂ ಇನ್ನು ಮುಂದೆ ಒಬ್ಬರ ಮೇಲೊಬ್ಬರು ಯುದ್ಧ ಮಾಡಬಾರದೆಂಬ ಇಚ್ಛೆಗೆ ನಿನ್ನೆ ರಾತ್ರಿ ಆದ ಒಪ್ಪಂದ ಮತ್ತು ಬ್ರಿಟನ್ ಜರ್ಮನಿ ನೌಕಾ ಒಪ್ಪಂದಗಳೆ ಸಾಕ್ಷಿಯಾಗಿವೆಯೆಂದು ನಮ್ಮ ಅಭಿಪ್ರಾಯ. ನಮ್ಮೆರಡು ದೇಶಗಳಿಗೆ ಸಂಬಂಧಿಸಿದ ಯಾವುದೇ ಪ್ರಶ್ನೆಯು ಇನ್ನುಮುಂದೆ ಬಂದರೆ ಆಗ ನಾವಿಬ್ಬರೂ ಪರಸ್ಪರ ಆಲೋಚನೆ ನಡೆಸಬೇಕೆಂದು ಇಂದು ನಾವು ಗೊತ್ತುಮಾಡುತ್ತೇವೆ. ನಮ್ಮ ನಡುವೆ ಇರುವ ಎಲ್ಲ ಮತಭೇದಗಳನ್ನೂ ದೂರ ಮಾಡಿಕೊಂಡು ಯುರೋಪದ ಶಾಂತಿಯ ಸಲುವಾಗಿ ಕೆಲಸ ಮಾಡಬೇಕೆಂದು ನಾವು ನಿರ್ಧರಿಸುತ್ತೇವೆ."

---

# ಕಾವೇರಿ ನದಿಯಲ್ಲಿ ೧೮ ಜನರ ಮರಣ.

ಈರೋಡಿನ ಹತ್ತಿರ ಕಾವೇರಿ ನದಿಯಲ್ಲಿ ಒಂದು ಡೋಣಿಯು ಮುಳುಗಿ ೧೮ ಜನರು ಸತ್ತರೆಂದು ಸುದ್ದಿ ಬಂದಿದೆ. ಡೋಣಿಯಲ್ಲಿದ್ದ ಉಳಿದ ೧೭ ಜನರನ್ನು ಈ ಅನಾಹುತದಿಂದ ತಪ್ಪಿಸಿಕೊಂಡು ಹೋಗಿರುವರೆಂದೂ ಗೊತ್ತಾಗಿದೆ.

---

—ಮೊನ್ನೆ ಮೊನ್ನೆ ಪಾರ್ಲಿಮೆಂಟನಲ್ಲಿ ಝೆಕ್-ಜರ್ಮನ್ ಸಮಸ್ಯೆ ಕುರಿತು ಚೆಂಬರ್ಲೇನರು ಕರುಣಾಜನಕ ಭಾಷಣಮಾಡಿದ್ದರಷ್ಟೆ. ಅದನ್ನು ಕೇಳಲು ಬಂದಿದ್ದ ಮೇರಿ ರಾಣಿಯವರು ಭಾಷಣ ಮುಗಿಸಿಕೊಂಡು ಹೊರಗೆ ಹೋಗುವಾಗ ಕಣ್ಣೀರು ಸುರಿಸುತ್ತಿದ್ದರಂತೆ.

# ಧಾರವಾಡದ ನವಕಲ್ಯಾಣ ಮಠದ ಶ್ರೀ ಕುಮಾರ ಸ್ವಾಮಿಗಳ ಭಾಷಣದ ಸಾರಾಂಶ.

ಧಾರವಾಡದ ನವಕಲ್ಯಾಣ ಮಠದ ಶ್ರೀ ಕುಮಾರ ಸ್ವಾಮಿಗಳು ತಾ. ೧೯-೮-೩೮ ನೇ ದಿವಸ ಧಾರವಾಡದಿಂದ ಹೊರಟು ತಾ. ೨೦, ೨೧, ೨೨ ಈ ಮೂರು ದಿವಸ ವಿಜಾಪುರ ಸೆಫರ್ಡ್ ಹಾಲಿನಲ್ಲಿ "ಶರಣರ ಸೊಬಗು ಎಲ್ಲಿ" ಎಂಬ ವಿಷಯದ ಮೇಲೆ ಒಳ್ಳೇ ಸ್ಫೂರ್ತಿದಾಯಕವಾಗಿ ಜನರು ತಲ್ಲೀನವಾಗುವಂತೆ ಭಾಷಣ ಮಾಡಿದರು. ಗುರುವಿರಕ್ತರ ನ್ಯಾಯದಲ್ಲಿ ನೀವು ಹೋಗಬೇಡಿರಿ ಅವರೇ ಬೇಕಾದರೆ ಬಡಿದಾಡಲಿ. ಅವರ ಕೂಡ ಕೆಲವು ಜನರು ಇವರ ಕೂಡ ಕೆಲವು ಜನರು ಹೀಗೆ ಪಕ್ಷ ಕಟ್ಟಿಕೊಂಡು ಬಡಿದಾಡಲಿಕ್ಕೆ ಹೋಗದೆ ಶ್ರೀಗುರು ಬಸವೇಶ್ವರನ ನೀತಿಯ ವಚನಗಳನ್ನು ಪಾಲಿಸಿ ಧರ್ಮನಿಷ್ಠರಾಗಿ ನಡೆಯಲಿಕ್ಕೆ ಕಲಿಯಿರಿ ಎಂದು ತಿಳಿಸಿದರು. ಮತ್ತೆ ತಾ. ೨೩ ನೇ ದಿವಸ ವಿಜಾಪುರ ಹಾಯಸ್ಕೂಲಿನಲ್ಲಿ ಎಲ್ಲ ಮಾಸ್ತರರ ಮುಂದೆ ಒಳ್ಳೇ ಪರಿಣಾಮಕಾರಕ ಭಾಷಣ ಮಾಡಿದರು. ಮಾಸ್ತರರೆಲ್ಲರು ಸ್ವಾಮಿಗಳನ್ನು ಒಳ್ಳೇ ಶ್ಲಾಘನೆಮಾಡಿದರು. ಸಿದ್ಧೇಶ್ವರ ಸಂಸ್ಥೆಯವರು ಸ್ವಾಮಿಗಳನ್ನು ಸೆಫರ್ಡ ಹಾಲಿನಲ್ಲಿ ಇಳಿಸಿದ್ದರು. ಅಲ್ಲಿಂದ ಮುಂದೆ ಲೋಣಿಗೆ ಹೋಗಿ ಅಲ್ಲಿ ೩-೪ ದಿವಸ ಜನರು ಮನದಣಿಯುವಂತೆ ತಮ್ಮ ಅಮೃತವಾಣಿಯಿಂದ ವಾಖ್ಯಾನ ಮಾಡಿದರು. ಇಲ್ಲಿಯ ಜನರಂತೂ ಒಳ್ಳೇ ಭಕ್ತಿಯಿಂದ ಶಿವಶರಣರು ಬಂದರೆಂದು ತಿಳಿದು ಬಹಳೇ ಆದರದಿಂದ ಕಾಣುತ್ತಿದ್ದರು. ಅಲ್ಲಿಂದ ಮುಂದೆ ತಾ. ೩೦, ೩೧, ೧ ಈ ಮೂರು ದಿವಸ ಸೊಲ್ಲಾಪುರದಲ್ಲಿ "ವೀರಶೈವ ಸಂಸ್ಕೃತಿ" ಎಂಬ ವಿಷಯದ ಮೇಲೆ ಶ್ರೀಮತಿ ಗಂಗಾಬಾಯಿ ಕಾಡಾದಿ ಇವರ ದವಾಖಾನೆಯಲ್ಲಿ ಭಾಷಣ ಮಾಡಿದರು. ಇಲ್ಲಿ ಶ್ರೀ ಸರದಾರ ಬ್ಯಾರಿಸ್ಟರರು ಶ್ರೀ. ಕಾಡಾದಿಯವರು ಶ್ರೀ. ಅಬ್ದುಲ್‌ಪುರಕರರವರು ಶ್ರೀ. ವಾರದವರು ಮುಂತಾದ ಪ್ರಮುಖ ಎಲ್ಲ ಮಹನೀಯರು ದಿನಾಲು ಭಾಷಣಕ್ಕೆ ಬರುತ್ತಿದ್ದರು. ಭಾಷಣವಂತೂ ಇಲ್ಲಿಯ ಜನರ ಮೇಲೆ ಪರಿಣಾಮವನ್ನು ಮಾಡಿದೆ. ಎಲ್ಲ ವಿದ್ವಾಂಸ ಜನರು ಇವರ ಭಾಷಣವನ್ನು ಕೇಳಿ ಕೊಂಡಾಡಿದರು. ಇದನ್ನು ಸೊಲ್ಲಾಪುರ ಸುದರ್ಶನ ಪತ್ರದ ತಾ. ೫-೯-೩೮ ರಲ್ಲಿ ನೋಡಬಹುದು. ಇಲ್ಲಿಯಾದರೂ ಬಸವೇಶ್ವರಾದಿ ಶರಣರ ವಚನಗಳನ್ನು ಹೇಳಿದ್ದಲ್ಲದೆ ಗುರುವಿರಕ್ತರ ಜಗಳದಲ್ಲಿ ನೀವಾರೂ ಹೊಗಬೇಡಿರಿ. ಶರಣರ ವಚನಗಳನ್ನು ಅನನ್ಯಭಾವದಿಂದ ಪಾಲಿಸಿ ನಡೆಯಿರಿ. ಶರಣರಾದರೂ ನಮ್ಮ ಸಲುವಾಗಿಯೇ ವಚನಗಳನ್ನು ಬರೆದಿಟ್ಟಿದ್ದಾರೆ.

ಅದರ ಕಡೆಗೆ ಲಕ್ಷ್ಯವಿಟ್ಟು ನಡೆದಲ್ಲಿ ಇಡೀ ಮಾನವಕೋಟಿಗೇನೇ ಸುಖವಾಗುವದೆಂಬದರಲ್ಲಿ ಸಂಶಯವಿಲ್ಲ. ಅಂತಾ ಹೇಳಿದರು. ಇಲ್ಲಿ ಮೂರು ದಿವಸ ಭಾಷಣವಾದನಂತರ ಅಲ್ಲಿಯ ಪ್ರಮುಖ ಜನರು ಇಲ್ಲಿ ಇನ್ನೂ ನಿಧಾನ ೮ ದಿವಸಗಳ ತನಕಾ ಭಾಷಣ ಮಾಡಲಿಕ್ಕೆ ಕೇಳಿಕೊಂಡರು. ಸ್ವಾಮಿಗಳು ಮಹೈಂದರಗಿಗೆ ಹೋಗಿ ತಿರುಗಿ ಬರುತ್ತೇವಂತಾ ಹೇಳಿಹೋಗುವಾಗ ಸೊಲ್ಲಾಪುರದಲ್ಲಿ ವಾರದವರ ಓಣಿಯಲ್ಲಿರುವ ಕನ್ನಡ ಹೆಣ್ಣುಮಕ್ಕಳ ಶಾಲೆಯಲ್ಲಿ ಕನ್ನಡ ಭಾಷೆಯ ಸಲವಾಗಿ ಶ್ರೀಮತಿ ಪಂಚವ್ವಾ ಸರದಾರ ಇವರ ಅನುಮತಿಯ ಮೇರೆಗೆ ಭಾಷಣಮಾಡಿ ಮುಂದೆ ಮಹೈಂದರಗಿಗೆ ಹೋದರು. ಅಲ್ಲಿ ಅಂತು ಜನರಿಗೆ ಆದ ಆನಂದವನ್ನು ಬಣ್ಣಿಸಲು ಬರುವಂತಿಲ್ಲ. ಊರೊಳಗೆ ಹೋಗುವ ಮುಂದೆ ಎಷ್ಟೋ ಜನರು ಇವರನ್ನು ಆದರ ಸತ್ಕಾರದಿಂದ ಎದುರುಗೊಂಡು ಕರಕೊಂಡು ಹೋದರು. ಆ ಕಾಲಕ್ಕೆ ಬ್ಯಾಂಡ ಹಚ್ಚಲಿಕ್ಕೆ ಹೋದರೆ ಸ್ವಾಮಿಗಳು ಬ್ಯಾಂಡ ಹಚ್ಚಗೊಡಲಿಲ್ಲ. ಮತ್ತು ನಡೆಯುತ್ತಲೇ ಹೋದರು. ತಾ. ೩-೪-೫ ಸಪ್ಟಂಬರ್ ೧೯೩೮ ಈ ಮೂರು ದಿವಸ ಮಹೈಂದರಗಿಯಲ್ಲಿ ಭಾಷಣಗಳಾದವು. ಇಲ್ಲಿ ಆದಂಥ ಜನ ಜಾಗೃತಿ ಹೇಳಲಸದಳವಲ್ಲ. ಅಲ್ಲಿ ಸಣ್ಣ ಹಳ್ಳಿಯವರು ಎರಡ್ರು ಎರಡುವರೆ ಸಾವಿರ ಜನರು ಕೂಡುತ್ತಿದ್ದರೂ ಇಲ್ಲಿ ಆದ ಭಾಷಣದಲ್ಲಿ ಗುರು ಜಂಗಮ ಯಾರಿಗೆ ಅನ್ನಬೇಕು ಎಂಬುವದನ್ನು ಒಳ್ಳೇ ಸರಸವಾಗಿ ತಿಳಿಸಿ ಹೇಳಿದರು. ಅಲ್ಲಿಂದ ಮುಂದೆ ಹೊರಟು ಹೋಗುವಾಗ ಅಲ್ಲಿಯ ಜನರು ಬಹಳೇ ಬೇಡಿಕೊಂಡರು. ಹೆಚ್ಚಿಗೆ ದಿವಸ ಭಾಷಣಮಾಡಲಿಲ್ಲ. ಹೊರಟುಹೋಗುವಾಗ ಒಂದ ಒಂದೂವರೆ ಮೈಲಿನ ವರೆಗೆ ಸಾವಿರಾರು ಜನರು ಕಳಿಸಲಿಕ್ಕೆ ಬಂದಿದ್ದರು. ಅವರು ಹೋಗುವಾಗಿನ ದೃಶ್ಯವು ಬಲು ನೋಡತಕ್ಕಂಥಾದ್ದಿತ್ತು. ಮುಂದೆ ೨೫-೩೦ ಜನರು ನಾಲ್ಕು ಐದು ಮೈಲು ದೂರ ಇರುವ ಸ್ಟೇಶನ್ ತನಕ ಕಳಿಸಲಿಕ್ಕೆ ಬಂದಿದ್ದರು. ಅಲ್ಲೇ ಸ್ಟೇಶನ್ನದಲ್ಲಿ ಒಂದು ತಾರು ಬಂದದ್ದರಿಂದ ತಿರುಗಿ ಊರಿಗೆ ಹೋಗಬೇಕಾಯಿತು.

ಅಕ್ಕಲಕೋಟೆ ವಳಸಂಗ ವಗೈರೆ ಕಡೆಯ ಜನರು ಕರೆಯಲಿಕ್ಕೆ ಬಂದವರೆಲ್ಲರೂ ನಿರಾಶರಾಗಿ ತಿರುಗಿ ಊರಿಗೆ ಹೋಗಬೇಕಾಯಿತು. ಇನ್ನೊಂದು ವಿಶೇಷವೇನಂದರೆ ಪತ್ರಿಕಾಕರ್ತರು ಇವರ ಭಾಷಣವು ತತ್ವಜ್ಞಾನದ ವಿಷಯವಿರುವದರಿಂದ ಬರೆಯಲು ಶಕ್ಯವಿಲ್ಲವೆಂದು ಅನ್ನುತ್ತಾರೆ. ಹಿಂದಿ ಇಂಗ್ಲಿಷ ಭಾಷಣಮಾಡಿದರೂ ಸಹ ನಾವು ಭಾಷಾಂತರಿಸಬಲ್ಲೆವು. ಆದರೆ ಇವರ ಭಾಷಣವನ್ನು ಬರೆಯುವದು ನಮಗೆ ಶಕ್ಯವಿಲ್ಲ. ಎಂದು ಅನ್ನುತ್ತಾರೆ. ಮತ್ತು ವಿಶೇಷವೇನಂದರೆ ಇವರು ಹೋದ ಹೋದಲ್ಲಿ ಯಾವ ಮಠಗಳಲ್ಲಿಯೂ ಭಾಷಣವನ್ನು ಮಾಡುತ್ತಿರಲಿಲ್ಲ. ಇವರ ವ್ಯಾಖ್ಯಾನದನಂತರ ಅನರು ಎಷ್ಟೋ ಅನನ್ಯಭಾವನೆಯಿಂದ ಮಾಲೆಯನ್ನು ಹಾಕಲಿಕ್ಕೆ ಬಂದರೂ ಇವರಿಗೆ ಸೇರುತ್ತಿದ್ದಿಲ್ಲ. ಇವರು ಸ್ವತಃ ಪಾಕ ಮಾಡಿ ಉಣ್ಣುತ್ತಿದ್ದರು. ಯಾರ ಕಡೆಯಿಂದಲೂ ಖರ್ಚು ಶೀದಾ ವಗೈರೆ ಏನನ್ನೂ ತಕ್ಕೊಳ್ಳುತ್ತಿದ್ದಿಲ್ಲ. ಭಾಷಣದ ಕಾಲಕ್ಕೆ ಸ್ವಲ್ಪು ಎತ್ತರದ ಮೇಲೆ ಒಂದು ಖುರ್ಚಿಯನ್ನು ಇಡಿಸಿ ಅದು ಬಸವನ ಪೀಠವೆಂದು ಅದರ ಮೇಲೆ ಯಾರನ್ನೂ ಕೂಡ್ರಗೊಡುತ್ತಿದ್ದಿಲ್ಲ. ಭಾಷಣದ ಸುರುವಿಗೆ ಬಸವೇಶ್ವರನನ್ನು ಅನನ್ಯಭಾವದಿಂದ ಅಂತಃಕರಣಪೂರ್ವಕವಾಗಿ ಪ್ರಾರ್ಥನೆ ಮಾಡಿ ಭಾಷಣವನ್ನು ಸುರುಮಾಡುವರು. ನಡು ನಡುವೆ ಬಸವೇಶ್ವರಾದಿ ಶಿವಶರಣರ ಒಳ್ಳೇ ಮಹತ್ವದ ಪರಿಣಾಮಕಾರಕ ನೀತಿಯ ಮತ್ತು ಸದ್ಬೋಧ ವಚನಗಳನ್ನು ಒಳ್ಳೇ ಸ್ಫೂರ್ತಿಯಿಂದ ಜನರ ಮನಸ್ಸಿನ ಮೇಲೆ ಬಿಂಬಿಸುವಂತೆ ಹೇಳುವರು. ಅಲ್ಲಲ್ಲಿ ಇಂಗ್ಲಿಷ ತತ್ವಜ್ಞಾನಿಗಳ ಟೀಕೆಟಿಪ್ಪಣಿಗಳನ್ನು ಉದಾಹರಣೆಗಾಗಿ ಹೇಳುವಾಗ ಇವರ ಮಾತೃ ಭಾಷೆಯು ಇಂಗ್ಲಿಷವೋ ಏನೋ? ಎಂಬಂತೆ ಒಳ್ಳೇ ಸರಸವಾಗಿ ಹೇಳುವರು. ಸೊಲ್ಲಾಪುರದಲ್ಲಿ ಶ್ರೀಯುತ ಅಣ್ಣಾರಾವ ಥಂಗೆ ಇವರ ಮನೆಯಲ್ಲಿ ಇಳಿದಿದ್ದರು. ಇವರಾದರೂ ಸ್ವಾಮಿಗಳನ್ನು ಬಹಳ ಪರಾಮರಿಕೆ ಮಾಡಿದರು. ಹುಟಗಿಯ ತನಕ ಸ್ವಾಮಿಗಳನ್ನು ಕಳಿಸಲಿಕ್ಕೆ ಬಂದಿದ್ದರು. ಸ್ವಾಮಿಗಳ ಸಂಗಡ ಶ್ರೀ ಗುರುಸಿದ್ಧಪ್ಪ ಭೂಸನವರ ಹುಬ್ಬಳ್ಳಿ ಹಾಗು ಶ್ರೀ ಮೂರುಸಾವಿರಪ್ಪಾ ಸಾದರಹಳ್ಳಿ ಹುಬ್ಬಳ್ಳಿ ಇವರು ಹೋಗಿದ್ದರು. ಇವರಲ್ಲಿ ಶ್ರೀ ಮೂರುಸಾವಿರಪ್ಪ ಸಾದರಹಳ್ಳಿ ಇವರು ಸೊಲ್ಲಾಪುರಕ್ಕೆ ಹೋಗುವ ಮುಂಚೆ ಕೆಲಸದ ನಿಮಿತ್ತವಾಗಿ ತಿರುಗಿ ಬಂದರು.

ಓರ್ವ ಪ್ರತ್ಯಕ್ಷದರ್ಶಿ.

# ಶ್ರೀ ಭುವನೇಶ್ವರೀ ಸ್ತವನ.

[ಲೇಖಕರು– ಶ್ರೀ. ಹರ್ವಿ. ವಿರೂಪಾಕ್ಷಗೌಡ ವಕೀಲ
ಹೈಕೋರ್ಟ ರಾಯಚೂರು.]

ಸ್ಮರಿಪೆವು ನಿನ್ನನು ಶ್ರೀ ಭುವನೇಶ್ವರಿ|
ಮರೆಯದೆ ವಿಜಯದ ಹಸ್ತವ ಇಡು ತಾಯಿ ||ಪ||

ಹೊನ್ನಿನ ಮಳೆಯನು ನಾಡೊಳ್ಸುರಿಸಿದ|
ಪನ್ನಗಧರನರ್ಧಾಂಗಿಯೆ ಬಾರೌ||
ಬನ್ನ ಕಳೆಯುವ ಗೌರೀಶ್ವರಿಯೆ|
ಕನ್ನಡ ನಾಡೊಳು ಪ್ರೇಮವ ತೋರೌ ||೧||

ಕನ್ನಡ ನಾಡೊಳು ಮಳೆಬೆಳೆಯಿಲ್ಲದೆ|
ಕನ್ನಡಿಗರು ಮರಗುವದನು ಕಳೆದು||
ಕನ್ನಡಿಗರಿಗೆ ಅನ್ಯರ ನಾಡೊಳು|
ಮನ್ನಣೆಯಿತ್ತು ಸಲಹೌ ಶಂಕರಿ ||೨||

ದುರವಸ್ಥೆಯೊಳ್ಮುಳಗಿದ ಮಾನ್ಯರ|
ಚಿರಕಾಲದಿ ಧನ್ಯರನುಮಾಡಿ||
ಧರೆಯೊಳ್ನಾಡಿನ ಶಕ್ತಿಯ ಬೆಳೆಸಿ|
ಸ್ಥಿರವಾಗಿರಿಸೌ ಕನ್ನಡ ರಾಜ್ಯವ ||೩||

ಸತ್ಯವಂತರನು ಪೋಷಿಸುತಲಿ|
ಮಾತೃಭೂಮಿ ನಿಂದ್ಯರಶೀಳುತಲಿ||
ದೈತ್ಯರನ್ನು ಸದೆಬಡೆಯುತಲಿ|
ಮಾತೆ ವಾಸಿಪೆ ವಿಜಯ ನಗರದಲಿ ||೪||

ಸಿರಿಗನ್ನಡ ಗೆಲ್ಲೆಂಬೋ ಮಂತ್ರವು|
ಮರೆಯದೆ ಸ್ಮರಿಪೆವು ಪಗಲಿರುಳು||
ಭರದೀ ಮಂತ್ರದ ಬೆಳಕನು ತೋರು ಶ್ರೀ|
ವಿರೂಪಾಕ್ಷನ ಪ್ರೇಮದ ಸಖಿಯಳೆ ||೫||

# ಮಹಾಸಭೆಯ ಬಗ್ಗೆ ಮತ್ತೆ

## ಕೆಲವು ಸಲಹೆಗಳು.

ಎರಡನೆಯ ಬರಹ.

(ಲೇಖಕ— ಶ್ರೀ. ವೀರೇಶ್ವರ ಬೆಂಗಳೂರು ನಗರ)

ಅಖಿಲ ಹಿಂದುಸ್ಥಾನದ ವೀರಶೈವ ಮಹಾಸಭೆಯ ಚಿರಸ್ಥಾಯಿ ಫಂಡ್ ಸಮಿತಿಯು ಬೆಂಗಳೂರಿನಲ್ಲಿ ಎರಡನೆಯ ಸಾರೆ ನೆರೆದದ್ದು ಹೊಸ ಅಧ್ಯಕ್ಷರನ್ನು ಚುನಾಯಿಸಿಕೊಳ್ಳುವುದೇ ಮೊದಲಾದ ತನ್ನ ಸ್ವಂತ ಕಾರ್ಯಕ್ರಮಗಳಲ್ಲಿ ಕೆಲವನ್ನು ಮುಗಿಯಿಸಿ ಈ ಸಾರೆ ಹುಬ್ಬಳ್ಳಿಯ ಬಂಧುಗಳಿಗೆ ಮಹಾಸಭೆಯ ಸಹಾಯ ದ್ರವ್ಯವನ್ನು ಕೊಡುವಂತೆ ತೀರ್ಮಾನಿಸಿ ಅಂದಿನ ಸಭೆಯನ್ನು ಮುಗಿಸಿದಂತೆ ನಮಗೆ ವರದಿಯಾಗಿದೆ.

ನಾವು ಮೊದಲೇ ನಿರೀಕ್ಷಿಸಿದಂತೆ ಅಂದು ನೆರೆದಿದ್ದ ಸದಸ್ಯರುಗಳಲ್ಲಿ ಚುರುಕುಮನೋಭಾವವು ಮೂಡಿದ್ದಂತೆ ಕಂಡುಬರಲಿಲ್ಲ. ತತ್ಫಲವಾಗಿ ಚಿರಸ್ಥಾಯಿ ನಿಧಿಯ ಬಡ್ಡಿಯ ಹಣವನ್ನು ಸಮಾಜದ ಅಭ್ಯುದಯಕ್ಕೆ ಸಾಧಕವಾಗುವ ಬೇರೆ ಯಾವ ಕಾರ್ಯಕ್ಕಾದರೂ ವಿನಿಯೋಗಿಸಬೇಕೆ? ಬೇಡವೆ? ಎಂಬ ವಿಚಾರವನ್ನೇ ಚರ್ಚೆಗೆ ತೆಗೆದುಕೊಳ್ಳಲಿಲ್ಲ. ದಾವಣಗೆರೆಯ ಪ್ರಮುಖರೊಬ್ಬರು ಈ ವಿಷಯವನ್ನು ಅಂದಿನ ಸಭೆಯಲ್ಲಿ ಚರ್ಚಿಸಲು ಮೊದಲೇ ಪತ್ರಮುಖೇನ ಸೂಚಿಸಿದ್ದರೆಂತಲೂ ಕೇಳಿದೆವು. ಆದರೂ ಆ ಸಂಬಂಧವಾದ ಯಾವ ಚರ್ಚೆಯೂ ನಡೆಯಲಿಲ್ಲ. ಅಂತೂ ನಮ್ಮ ನಿರೀಕ್ಷೆಯಂತೆ ಅಂದಿನ ಕಾರ್ಯಕಲಾಪಗಳು ಬಹು ಸಪ್ಪೆಯಾಗಿಯೇ ನಡೆದವು. ಮುಖ್ಯವಾಗಿ ಹುಬ್ಬಳ್ಳಿಯ ಬಾಂಧವರಿಗೆ ಮಹಾಸಭೆಗಾಗಿ ಸಹಾಯದ್ರವ್ಯವನ್ನು ಕೊಡುವಂತೆ ನಿರ್ಣಯಿಸಿದುದೊಂದು ಸಂತೋಷದ ಸುದ್ದಿ.

ಹುಬ್ಬಳ್ಳಿಯ ಬಂಧುಗಳು ಈಗ ಸಾಧ್ಯವಾದಷ್ಟು ಮುಂಜಾಗರೂಕತೆಯಿಂದ ಕಾರ್ಯಕಲಾಪಗಳನ್ನು ಪ್ರಾರಂಭಿಸಬೇಕಾಗಿದೆ. ಈಗಿನಿಂದಲೇ ಹುಬ್ಬಳ್ಳಿಯ ಒಂದು ಗೊತ್ತಾದ ಸ್ಥಳದಲ್ಲಿ 'ಮಹಾಸಭೆಯ ಕಛೇರಿ' ಯನ್ನು ಪ್ರಾರಂಭಿಸಿ ಸಂಬಳದ ಮೇಲೆ ಗುಮಾಸ್ತರನ್ನೂ ಕಾರ್ಯದರ್ಶಿಗಳನ್ನೂ ನಿಯಮಿಸಿಕೊಂಡು ಹಿಂದುಸ್ಥಾನದ ಸಮಸ್ತ ಪ್ರಾಂತಗಳಲ್ಲಿಯ ವೀರಶೈವ ಸಂಘ ಸಂಸ್ಥೆಗಳೊಡನೆಯೂ ಪತ್ರವ್ಯವಹಾರವನ್ನು ನಡೆಯಿಸಿ ಕಾರ್ಯಸಿದ್ಧತೆಗಳನ್ನು ಮಾಡಿಕೊಳ್ಳಬೇಕು. ಹಾಗಲ್ಲದೆ ಸಂಬಳವಿಲ್ಲದೆ ದಾಕ್ಷಿಣ್ಯದ ದೊಡ್ಡ ಮನುಷ್ಯರುಗಳಿಗೆ ಮಹಾಸಭೆಯ ಕಛೇರಿಯ ಕೆಲಸಗಳನ್ನು ವಹಿಸಿದರೆ ಶ್ರದ್ಧೆಯಿಂದಲೂ ವ್ಯವಸ್ಥಿತವಾಗಿಯೂ ಕೆಲಸಗಳು ನಡೆಯುವದಿಲ್ಲವೆಂಬುದೂ ನಡೆದರೂ ನಿರ್ದಾಕ್ಷಿಣ್ಯವಾಗಿರುವುದಿಲ್ಲವೆಂಬುದೂ ಈ ವರೆಗಿನ ಎಲ್ಲ ಭಾಗಗಳ ಅನುಭವದ ವಿಷಯವೇ ಆಗಿರುತ್ತದೆ.

ಈ ಸಂದರ್ಭದಲ್ಲಿ ಹುಬ್ಬಳ್ಳಿಯಲ್ಲಿರುವ ವೀರಶೈವ ತರುಣ ಸಂಘಗಳ ಸಂಯುಕ್ತ ಸಂಘದ ಕಾರ್ಯಕರ್ತರುಗಳು ಕೊಂಚ ಹೆಚ್ಚಿನ ಚಟುವಟಿಕೆಯನ್ನು ನಡೆಯಿಸಬೇಕಾಗಿದೆ. ಏಕೆಂದರೆ, ಹುಬ್ಬಳ್ಳಿಯಲ್ಲಿ ಮಹಾಸಭೆಯನ್ನು ನೆರೆಯಿಸಿ ಅದನ್ನು ಈಗಿರುವದಕ್ಕಿಂತಲೂ ಚಟುವಟಿಕೆಯ ಸುವ್ಯವಸ್ಥಿತ ಸಂಸ್ಥೆಯಾಗುವಂತೆ ಮಾಡಬೇಕೆಂಬ ಅಭಿಲಾಷೆಯು ಹುಬ್ಬಳ್ಳಿಯ ಬಂಧುಗಳಲ್ಲಿ ಹುಟ್ಟಿದುದು ಈ ತರುಣ ಸಂಘಗಳ ಸಂಯುಕ್ತ ಸಂಘದ ಕೆಲಸಗಾರರ ಇಚ್ಛೆ ಮತ್ತು ಪ್ರಯತ್ನ ವಿಶೇಷಗಳ ಫಲವಾಗಿಯೇ ಎಂದು ಹೇಳಬಹುದು. ಈಗಲೂ ಮಹಾಸಭೆಯನ್ನು ನೆರೆಯಿಸುವ ಮತ್ತು ಅದು ನೆರೆದು ನಿರ್ಣಯಿಸುವ ಕಾರ್ಯಕ್ರಮಗಳನ್ನು ಕಾರ್ಯಕ್ಷೇತ್ರಕ್ಕಿಳಿಸುವ ಮುಖ್ಯ ಹೊಣೆಗಾರಿಕೆಯನ್ನು ಈ ಸಂಯುಕ್ತಸಂಘದ ಕಾರ್ಯಕರ್ತರುಗಳೇ ವಹಿಸಬೇಕಾಗಿದೆ. ಆದುದರಿಂದ ಈ ಸಂದರ್ಭದಲ್ಲಿ ಈ ಹುಬ್ಬಳ್ಳಿಯ ಸಂಯುಕ್ತ ಸಂಘವು ತನ್ನ ವರ್ಚಸ್ಸನ್ನು ಚೆನ್ನಾಗಿ ಉಪಯೋಗಿಸಿಕೊಂಡು ದೇಶದ ಮೇಲಿರುವ ಎಲ್ಲಾ ತರುಣ ಸಂಘ ಮತ್ತು ಇನ್ನಿತರ ವೀರಶೈವ ಸಂಸ್ಥೆಗಳಲ್ಲಿಯೂ ಪತ್ರವ್ಯವಹಾರವನ್ನು ನಡೆಯಿಸಿ ಎಲ್ಲ ಭಾಗದ ಸಂಘಗಳೂ ತಮ್ಮ ತಮ್ಮ ಭಾಗದ ಜನತೆಯಲ್ಲಿ ಮಹಾಸಭೆಯ ಬಗ್ಗೆ ಅಧ್ಯಕ್ಷರನ್ನು ಆರಿಸುವಿಕೆ ಪ್ರತಿನಿಧಿಗಳನ್ನು ಚುನಾಯಿಸುವಿಕೆ ಇನ್ನಿತರ ಪ್ರಚಾರಕಾರ್ಯವನ್ನು ಮಾಡುವಿಕೆ ಮುಂತಾದ ಮಹಾಸಭೆಗೆ ಸಂಬಂಧಿಸಿದ ಎಲ್ಲ ಕಾರ್ಯಗಳ ಸಂಬಂಧವಾಗಿ ಎಲ್ಲ ಭಾಗದ ವೀರಶೈವರೂ ಒಮ್ಮತ ಸಮ್ಮತವಾಗಿ ವರ್ತಿಸುವಂತೆ ಆಯಾ ಭಾಗದ ಜನತೆಯನ್ನು ಸಿದ್ಧಗೊಳಿಸಲು ಪ್ರಯತ್ನಿಸುವಂತೆ ಏರ್ಪಡಿಸಬೇಕು. ತರುಣ ಸಂಘಗಳ ಸಂಯುಕ್ತ ಸಂಘವು ಈ ಕಾರ್ಯವನ್ನು ಆದಷ್ಟು ಶೀಘ್ರವಾಗಿ ಕೈಕೊಳ್ಳಬೇಕು.

ಇನ್ನು ಮಹಾಸಭೆಯ ಕಾರ್ಯಕರ್ತರುಗಳು ಮಹಾಸಭೆಗಾಗಿ ಬೇರೆ ಬೇರೆ ಭಾಗಗಳಿಂದ ಮಹಾ ಜನರನ್ನು ಆಹ್ವಾನಿಸುವಾಗಲೂ ಮಹಾಸಭೆಯ ಪ್ರಾತಿನಿಧ್ಯವನ್ನು ವಹಿಸುವಾಗಲೂ ವೈಯಕ್ತಿಕವಾಗಿ ಒಬ್ಬೊಬ್ಬ ವ್ಯಕ್ತಿಗಳನ್ನೇ ಕಳಿಸಿ ಆಹ್ವಾನಿಸುವುದಾಗಲೀ ಒಂದು ಭಾಗದ ಪ್ರಾತಿನಿಧ್ಯವನ್ನು ವೈಯಕ್ತಿಕವಾಗಿ ಒಬ್ಬ ವ್ಯಕ್ತಿಗೆ ವಹಿಸುವುದಾಗಲೀ ಮಾಡದೆ ಆಯಾ ಭಾಗದ ಸಂಘಸಂಸ್ಥೆಗಳ ಮೂಲಕ ಜನತೆಯನ್ನು ಸಾಮೂಹಿಕವಾಗಿಯೇ ಆಹ್ವಾನಿಸಬೇಕು. ಆಯಾ ಭಾಗದ ಸಂಘ ಸಂಸ್ಥೆಗಳಿಗೇ ಉಚಿತವರಿತು ಪ್ರತಿನಿಧಿತ್ವವನ್ನು ವಹಿಸಿ ಸಂಘ ಸಂಸ್ಥೆಗಳನ್ನು ಗೌರವಿಸಬೇಕು. ಹೀಗೆ ಮಾಡುವುದರಿಂದ ಆಯಾ ಭಾಗದ ಕಾರ್ಯಕರ್ತರುಗಳೂ ಮುಖಂಡರೂ ಶ್ರೀಮಂತರೂ ಸಂಘಸಂಸ್ಥೆಗಳಲ್ಲಿ ಸೇರಲೇಬೇಕಾಗುತ್ತದೆ. ಸಂಘಗಳಿಲ್ಲದ ಭಾಗಗಳಲ್ಲಿ ಈ ಸಂದರ್ಭದಲ್ಲಿಯಾದರೂ ಸಂಘಗಳನ್ನು ಸ್ಥಾಪಿಸಿಕೊಳ್ಳಲು ಸಹಾಯವನ್ನು ಮಾಡಿದಂತಾಗುತ್ತದೆ.

ಈ ಸಂದರ್ಭದಲ್ಲಿ ಹುಬ್ಬಳ್ಳಿಯ ಬಾಂಧವರಲ್ಲಿ ಬಿನ್ನಹವೇನೆಂದರೆ— ಹುಬ್ಬಳ್ಳಿಯ ಸಾರ್ವಜನಿಕ ಪ್ರಮುಖರೂ ಮುಖಂಡರೂ ಅಲ್ಲಿಯ ಬಾಲಕಾಶ್ರಮದ ಅಧ್ಯಕ್ಷರೂ ವೀ. ತ. ಸಂಘ ಸಂಯುಕ್ತ ಸಂಘದ ಅಧ್ಯಕ್ಷರೂ ಆದ ಶ್ರೀಮಾನ್ ಚಿಕ್ಕವೀರಯ್ಯ ಚಿಕ್ಕವೀರಮಠ ಇವರು ತುಂಬಾ ಉತ್ಸಾಹಿಗಳೂ ಉದಾರಿಗಳೂ ಆಗಿರುವರೆಂಬುದೂ ಸಾಮಾಜಿಕ ಕೆಲಸಗಳಲ್ಲಿ ಅವರೆಷ್ಟು ಶ್ರದ್ಧೆಯಿಂದ ಅಭಿಮಾನದಿಂದ ಕೈಹಾಕುತ್ತಿರುವರೆಂಬುದೂ ತಮ್ಮೆಲ್ಲರಿಗೂ ತಿಳಿದೇ ಇದೆ. ಆದುದರಿಂದ ಈಗ ನಡೆಯಲಿರುವ ಮಹಾಸಭೆಯ ಸ್ವಾಗತಾಧ್ಯಕ್ಷಪೀಠಕ್ಕೆ ಅವರನ್ನು ಆರಿಸಿಕೊಳ್ಳಬೇಕು. ಕಾಲವು ಸಮೀಪಿಸುತ್ತಿದೆಯಾದುದರಿಂದ ಆದಷ್ಟು, ಶೀಘ್ರವಾಗಿ ಸ್ವಾಗತ ಸಮಿತಿಯನ್ನೇರ್ಪಡಿಸಿಕೊಂಡು ಆ ಮೂಲಕ ದ್ರವ್ಯಸಂಗ್ರಹ ಕಾರ್ಯ, ಅಧ್ಯಕ್ಷರ ಆಯ್ಕೆಗೆ ಸಂಬಂಧಿಸಿದ ಕಾರ್ಯ ಮುಂತಾದ ಸಿದ್ಧತೆಗಳನ್ನು ಮಾಡಿಕೊಳ್ಳಬೇಕಾಗಿದೆ. ಅಲ್ಲದೆ ಈ ಸಾರೆಯ ಮಹಾಸಭೆಯ ಅಂಗವಾಗಿ ವೀರಶೈವ ಕೈಗಾರಿಕೆ ಪ್ರದರ್ಶನ, ಒಕ್ಕಲತನದ ಪ್ರದರ್ಶನ, ವೀರಶೈವ ಸಂಗೀತಗಾರರ ಸಮ್ಮೇಳನ, ರಾಜಕೀಯ ಸಮ್ಮೇಳನ ಮುಂತಾದ ವಿವಿಧ ಕಾರ್ಯಕ್ರಮಗಳನ್ನೇರ್ಪಡಿಸಬೇಕು. ಮುಖ್ಯವಾದ ಸೂಚನೆ ಏನೆಂದರೆ- ಮಹಾಸಭೆಗೆ ಸಂಬಂಧಿಸಿದ ಸಮಸ್ತ ಕಾರ್ಯಕಲಾಪಗಳಲ್ಲಿಯೂ ವೀರಶೈವರ ಕೈವಾಡವೇ ಇರಬೇಕು. ಇವೆಲ್ಲವೂ ಸ್ಥೂಲರೂಪದ ಸಲಹೆಗಳು ಮಾತ್ರ. ಯುಕ್ತ ಕಂಡವುಗಳನ್ನು ಸಂಬಂಧಪಟ್ಟವರೆಲ್ಲರೂ ಸಂಗ್ರಹಿಸಬೇಕಾಗಿ ಕೋರಿಕೆ.

# ಕರ್ನಾಟಕ ಸಾಹಿತ್ಯ ಪರಿಷತ್ತು

## ಷಡಕ್ಷರಿ ಮತ್ತು ಅವನ ಕಾವ್ಯಗಳ ಸೌಂದರ್ಯ.

(ಪರಿಷತ್ತಿನ ಪ್ರಕಟನೆಯ ಶಾಖೆಯಿಂದ)

ಇದೇ ೨೧ ನೆಯ ತಾ. ಬುಧವಾರ ಸಂಜೆ ಪರಿಷನ್ಮಂದಿರದಲ್ಲಿ ಕೀರ್ತನಕೇಸರಿ ಶ್ರೀ. ಶಿವಮೂರ್ತಿಶಾಸ್ತ್ರಿಗಳು ಷಡಕ್ಷರ ಕವಿ ಮತ್ತು ಅವನ ಕಾವ್ಯಗಳನ್ನು ಕುರಿತು ಉಪನ್ಯಾಸಮಾಡಿದರು. ಶ್ರೀ. ಸಿ. ಪಿ. ಸುಬ್ಬರಾಯಪ್ಪನವರು ಉಪನ್ಯಾಸಕರನ್ನು ಸಭೆಗೆ ಪರಿಚಯಮಾಡಿಕೊಡುತ್ತ "ಅವರು ಕೀರ್ತನಕಾರರು, ಪ್ರಸಿದ್ಧ ಪಂಡಿತರು, ಸಾಹಿತಿಗಳು, ಪತ್ರಿಕೆಯ ಸಂಪಾದಕರು ಮತ್ತು ಸ್ವತಃ ಕವಿಗಳು ಅಲ್ಲದೆ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರು" ಎಂದು ತಿಳಿಸಿ ವೀರಶೈವ ಕವಿಗಳಲ್ಲಿ ಪ್ರಸಿದ್ಧನಾದ ಷಡಕ್ಷರ ಕವಿಯ ವಿಚಾರವಾಗಿ ಉಪನ್ಯಾಸ ಕೊಡಬೇಕೆಂದು ಅವರನ್ನು ಪ್ರಾರ್ಥಿಸಿದರು. ಬಳಿಕ ಶ್ರೀ. ಶಾಸ್ತ್ರಿಗಳು ಸುಮಾರು ಎರಡು ಗಂಟೆಯ ಹೊತ್ತು ಸ್ವಾರಸ್ಯವಾಗಿ ಉಪನ್ಯಾಸಮಾಡಿದರು.

**ಉಪನ್ಯಾಸದ ಸಾರಾಂಶ.**

ಯಾವ ದೇಶದಲ್ಲಿಯಾದರೂ ಕವಿಗೆ ಪ್ರಾಶಸ್ತ್ಯ ಹೆಚ್ಚು. ದೇಶದ ಜನರ ಯೋಗ್ಯತೆಯನ್ನು ಅಲ್ಲಿನ 'ಕವಿಗಳಿಂದ ತಿಳಿದುಕೊಳ್ಳಬಹುದು. 'ಕವಿಯೇ ಲೋಕದ ಕಣ್ಣು' ಎಂದರೂ ಸಲ್ಲುತ್ತದೆ. ನಮ್ಮ ನಾಡಿನಲ್ಲಿ ಕವಿಗೆ ಬಹಳ ಮರ್ಯಾದೆ ಇತ್ತು. ರಾಜರೂ ಕವಿಗಳಿಗೆ ಸನ್ಮಾನ ಮಾಡುತ್ತಿದ್ದರು. ಎಷ್ಟೋ ಕವಿಗಳು ರಾಜಕಾರಣಪಟುಗಳಾಗಿ ದಂಡನಾಯಕರಾಗಿ ಇದ್ದರು. ಕವಿ ಜನಾಂಗದ ಸಂಸ್ಕೃತಿಯ ನಾಡಿನ ಉದ್ಧಾರಕ. ಎಲ್ಲರೂ ಕವಿಯನ್ನು ಗೌರವಿಸಬೇಕು.

ಷಡಕ್ಷರದೇವ ವೀರಶೈವ ಸಾಹಿತ್ಯದಲ್ಲಿ ಮಾತ್ರ ಪ್ರಸಿದ್ಧನೆಂದು ತಿಳಿಯಬಾರದು. ಕನ್ನಡ ಸಾಹಿತ್ಯ ಸಂಸ್ಕೃತ ಸಾಹಿತ್ಯಗಳೆರಡರಲ್ಲಿಯೂ ಅವನಿಗೆ ಮನ್ನಣೆಯ ಸ್ಥಾನವುಂಟು. ಭಾರತೀಯ ತತ್ವ ಶಾಸ್ತ್ರದಲ್ಲಿ ಕೂಡ ಉತ್ತಮಸ್ಥಾನ ಸಲ್ಲಬೇಕು. ಆದರೆ ಅನೇಕರು ಅವನ ಹೃದಯವನ್ನು ಸರಿಯಾಗಿ ತಿಳಿದಿಲ್ಲ. ಅವನ ವಿಷಯದಲ್ಲಿ ಹಲವು ತಪ್ಪು ಭಾವನೆಗಳನ್ನಿಟ್ಟುಕೊಂಡಿದ್ದಾರೆ. ಒಳಹೊಕ್ಕು ನೋಡಿ ಅವನ ನಿಜವಾದ ಯೋಗ್ಯತೆಯನ್ನು ಅರಿತುಕೊಳ್ಳುವುದು ಅಗತ್ಯ.

ಷಡಕ್ಷರದೇವ ಈಗ್ಗೆ ಸುಮಾರು ೨೫೦ ವರುಷಗಳ ಹಿಂದೆ ಬಾಳಿದನು. ಮೈಸೂರು ಜಿಲ್ಲೆಯಲ್ಲಿ ಮಳವಳ್ಳಿ ತಾಲೂಕಿನ ದನಗೂರು ಅವನು ಹುಟ್ಟಿದ್ದು. ಯಳಂದೂರಿನಲ್ಲಿ ವಾಸಮಾಡಿದನು. ದನಗೂರಿನ ಚಿಕ್ಕವೀರ ದೇಶಿಕರೆಂಬ ಗುರುಗಳ ಶಿಷ್ಯನಾಗಿ ಕಲಿತು ಗುರುವನ್ನೂ ಮೀರಿಸಿದನು. ನೈಷ್ಠಿಕ ಬ್ರಹ್ಮಚಾರಿಯಾಗಿ ಮಠಾಧಿಪತಿಯಾಗಿ ಬಹು ಮೇಲಾದ ಬಾಳು ಬಾಳಿದನು. ಪ್ರಖ್ಯಾತ ಪಂಡಿತನಾಗಿ ರಾಜಸನ್ಮಾನಿತನಾಗಿ ಕೀರ್ತಿ ಗಳಿಸಿದನು. ವೇದ, ಆಗಮ, ಶಾಸ್ತ್ರ, ತರ್ಕ, ವಾದ ಇವುಗಳಲ್ಲಿ ಇವನಿಗೆ ಅದ್ಭುತ ಪಾಂಡಿತ್ಯ. ಭಾಷೆ ಇವನಿಗೆ ಸಂಪೂರ್ಣ ವಶವಾಗಿದೆ. ಇಂಥ ಭಾಷಾ ಪ್ರಭುತ್ವ ಬಹು ವಿರಳ. ಬೇರೆ ಯಾರೂ ಉಪಯೋಗಿಸದ ಅನೇಕ ಅಪೂರ್ವ ವೃತ್ತಗಳನ್ನು ಇವನ ಗ್ರಂಥಗಳಲ್ಲಿ ಕಾಣಬಹುದು. ವರ್ಣನೆ, ಸಂವಾದ, ಕಥೆ, ಸ್ತೋತ್ರ, ಎಲ್ಲದರಲ್ಲಿಯೂ ಇವನ ಪ್ರತಿಭೆ ಅದ್ಭುತವಾಗಿದೆ. ಷಡಕ್ಷರ ದೇವನ ದೃಷ್ಟಿ ಬಹು ಸೂಕ್ಷ್ಮ. ಪ್ರಕೃತಿಯನ್ನು ನಾನಾ ಭಾಗಗಳಲ್ಲಿ ಬಹು ಸೂಕ್ಷ್ಮವಾಗಿ ವಿಮರ್ಶಿಸಿ ನೋಡಿದ್ದಾನೆ. ಇವನಂತೆ ಇಷ್ಟು ವಿವಿಧ ರೀತಿಯಲ್ಲಿ ಹೊಸ ಹೊಸದಾಗಿ ಪ್ರಕೃತಿ ವರ್ಣನೆ ಮಾಡಿರುವ ಬೇರೊಬ್ಬ ಕನ್ನಡ ಕವಿಯಿಲ್ಲವೆಂದೇ ನನ್ನ ಭಾವನೆ. ಇವನು ಹರಿಹರನ "ಮೃದು ಮಧುರವಾದ ಉದಾತ್ತ ಕಾವ್ಯ ಮಾರ್ಗದಲ್ಲಿ ಹೊರಟವನು. ಕಾವ್ಯ ಮಾಧುರ್ಯ ನಾದ ಮಾಧುರ್ಯ ಇವನ ಕಾವ್ಯಗಳಲ್ಲಿ ವಿಶೇಷವಾಗಿ ತೋರಿಬರುತ್ತವೆ. ಇದು ಇವನ ವೈಶಿಷ್ಟ್ಯವೆಂದೇ ಹೇಳಬಹುದು. ಪ್ರೌಢ ವರ್ಣನೆಯಲ್ಲಿ ಇವನನ್ನು ಮೀರಿಸುವವರು ವಿರಳ. ಕರುಣಾರಸವನ್ನು ಚಿತ್ರಿಸುವುದರಲ್ಲಿ ಭಕ್ತಿಪರವಶತೆಯಲ್ಲಿ ಇವನು, ರನ್ನ, ರಾಘವಾಂಕ, ಹರೀಶ್ವರ ಮತ್ತು ನಾರಣಪ್ಪ ಇವರ ಪಂಕ್ತಿಗೆ ಸೇರತಕ್ಕವನು. ಇದರ ಜೊತೆಗೆ ಅರ್ಥಾಲಂಕಾರ ಶಬ್ದಾಲಂಕಾರ ಮಾತಿನ ಚಮತ್ಕಾರ ಇವನ ಗ್ರಂಥಗಳಲ್ಲಿ ಬೇಕಾದಷ್ಟು ಸಿಕ್ಕುತ್ತವೆ. ನೀತಿಪದ್ಯಗಳೂ ಹೇರಳವಾಗಿವೆ. ಇವನ ಮಾತು ಬಹು ಅಚ್ಚುಕಟ್ಟು. ಅಲಂಕಾರ ಪ್ರಿಯ. ಕಾವ್ಯಗಳನ್ನು ನೋಡಿದರೆ ಇವನು ರಸಿಕ ಶಿಖಾಮಣಿಯಾಗಿದ್ದನೆಂದು ತೋರುತ್ತದೆ. ಇವನಿಗೆ ಶೃಂಗಾರದಲ್ಲಿ ಒಲವು ಹೆಚ್ಚು. ಈ ಶೃಂಗಾರ ಸಾಮಾನ್ಯ ರೀತಿಯದಲ್ಲ. ಒಳ್ಳೆಯ ರಾಜ ಶೃಂಗಾರ. ಆ ಕಾಲದ ಜನರ ಮನೋಭಾವಕ್ಕೆ ತಕ್ಕಂತೆ ಕಾವ್ಯರಚನೆಮಾಡಿದ್ದಾನೆ. ಬರೆದ ಕಾಲ ಆಗಿನ ಜನರ ಮನೋಭಾವಗಳನ್ನು ಗಣನೆಗೆ ತಂದುಕೊಳ್ಳದೆ ಈತನ ಹೊಸ ದೃಷ್ಟಿಯಿಂದ ವಿಮರ್ಶಿಸುವುದು ಸರಿಯಲ್ಲ. ಅದು ವಿಮರ್ಶೆಯ ಆಭಾಸ ಸಹಾನುಭೂತಿಯಿಂದ ನೋಡಿದರೆ ಕವಿ ಹೃದಯವರಿತು ಓದಿದರೆ ಸ್ವಾರಸ್ಯ ತಿಳಿದು ಆನಂದ ದೊರೆಯುವುದರಲ್ಲಿ ಸಂದೇಹವಿಲ್ಲ.

ಇವನು ರಾಜಶೇಖರವಿಲಾಸ, ವೃಷಭೇಂದ್ರ ವಿಜಯ, ಶಬರ ಶಂಕರ ವಿಲಾಸ ಎಂಬ ಮೂರು ಕನ್ನಡ ಕಾವ್ಯಗಳನ್ನೂ, ಕವಿಕರ್ಣರಸಾಯನ, ಶಿವಸ್ತವಮಂಜರಿ ಎಂಬ ಎರಡು ಸಂಸ್ಕೃತ ಕಾವ್ಯಗಳನ್ನೂ ಬಸವೇಶ್ವರ ಮೊದಲಾದ ಮಹಾತ್ಮರ ಮತ್ತು ತನ್ನ ಇಷ್ಟದೇವತೆಯ ಸ್ತೋತ್ರರೂಪವಾದ ೧೫ ಭಕ್ತಿ ಗೀತಗಳನ್ನೂ ಶಿವಾಧಿಕ್ಯ, ಭಕ್ತಾಧಿಕ್ಯ ಎಂಬ ಎರಡು ಶಾಸ್ತ್ರ ಗ್ರಂಥಗಳನ್ನೂ ಹೀಗೆ ಒಟ್ಟು ೨೨ ಗ್ರಂಥಗಳನ್ನು ಕನ್ನಡ ಸಂಸ್ಕೃತ ಭಾಷೆಗಳಲ್ಲಿ ರಚಿಸಿದ್ದಾನೆ. ಶಬರ ಶಂಕರ ವಿಲಾಸ ಪ್ರಬುದ್ಧ ವಯಸ್ಸಿನಲ್ಲಿ ಬರೆದದ್ದು. ರಾಜಶೇಖರ ವಿಳಾಸ ಮೊದಲಾದವುಗಳನ್ನು ತನ್ನ ಪಾಂಡಿತ್ಯವನ್ನು ಮೆರಸಿ ಕೀರ್ತಿ ಸಂಪಾದಿಸುವುದಕ್ಕೆ ಬರೆದನು. ವೃಷಭೇಂದ್ರ ವಿಜಯ, ಬಸವರಾಜ ವಿಜಯ, ಎಂಬುದು ಅವನಿಟ್ಟ ಹೆಸರು ಮನಸ್ಸು ಹಣ್ಣಾಗಿ ಜೀವನ ಪರಿಪಕ್ವವಾದಾಗ ಬರೆದದ್ದು. ಈ ಕಾವ್ಯವನ್ನು ಷಡಕ್ಷರ ದೇವ ಭಕ್ತಿಯಿಂದ ತನ್ನ ಆತ್ಮ ಶಾಂತಿಗಾಗಿ ಬರೆದನು. ಇದರಲ್ಲಿ ಕಥೆ ಹೆಚ್ಚು. ವರ್ಣನೆ ಕಡಿಮೆ. ಭಕ್ತಿ ಉಕ್ಕುತ್ತದೆ, ಪ್ರೌಢವಾಗಿದ್ದರೂ ತಿಳಿಯಾಗಿದೆ.

ಶ್ರೀ ಶಾಸ್ತ್ರಿಗಳು ಷಡಕ್ಷರದೇವನ ಗ್ರಂಥಗಳಿಂದ ಹಲವು ಭಾಗಗಳನ್ನು ಓದಿ ವಿವರಿಸಿ ಕಡೆಯಲ್ಲಿ 'ಇಂಥ ಮಾನ್ಯ ಕವಿಗ್ರಂಥಗಳನ್ನು ವೀರಶೈವರಿಗೆ ಮಾತ್ರ ಸೇರಿದ್ದೆಂದು ಬಿಟ್ಟುಬಿಡದೆ ಎಲ್ಲ ಕನ್ನಡಿಗರೂ ಓದಿ ಆನಂದಿಸಬೇಕು.' ಎಂದು ಹೇಳಿ ಭಾಷಣವನ್ನು ಮುಗಿಸಿದರು. ಬಳಿಕ ಶ್ರೀ. ಡಿ. ಸಿ. ಸುಬ್ಬರಾಯಪ್ಪನವರು ವಂದನೆ ಅರ್ಪಿಸಿದ ಮೇಲೆ ಸಭೆ ಕೊನೆಗೊಂಡಿತು.

( ೯ ನೇ ಪುಟದಿಂದ ಬಂದುದು. )

ಮನಸ್ಸಿನ ಮೇಲಾಗಲಿ, ದೇಹದ ಮೇಲಾಗಲಿ ಪರಿಣಾಮವನ್ನುಂಟುಮಾಡದೆ ಬಿಡದು. ಸೂಕ್ಷ್ಮವಾಗಿ ನೋಡಿದರೆ ಪ್ರತಿಯೊಂದು ಕಾರ್ಯದ ಪರಿಣಾಮವೂ ವಿಶ್ವವ್ಯಾಪಕವಾಗಿಯೇ ಇರುವದು. ಇಷ್ಟೇ ಅಲ್ಲ; ಸೂಕ್ಷ್ಮವಾಗಿ ಯಾವ ವ್ಯಕ್ತಿಗೂ ಸಂಬಂಧಿಸದ ಒಂದು ಕೆಲಸವನ್ನು ಮಾಡುವದೂ ನಮಗೆ ಕಷ್ಟವಾಗಿದೆ, ಮತ್ತು ನಮ್ಮ ಎಲ್ಲ ಕೆಲಸಗಳೂ ಇತರರಿಗೆ ಸುಖವನ್ನೇ ಕೊಡಬಹುದೆಂದು ಹೇಳಲಿಕ್ಕಾಗುವುದಿಲ್ಲ. ಹೀಗಿದ್ದ ಮೇಲೆ ಸುಖಕ್ಕಾಗಿಯೇ ಯತ್ನಿಸುವ ಪ್ರತಿಜೀವಿಯೂ ತನ್ನ ಸುಖಕ್ಕೆ ತಡೆಯಾಗುವ ವ್ಯಕ್ತಿಯನ್ನಾಗಲಿ ವಸ್ತುವನ್ನಾಗಲಿ ನಾಶಿಸಲು ಯತ್ನಿಸುವುದು ಸ್ವಾಭಾವಿಕವಾಗಿದೆ. ಅದೇಕೆ ತನ್ನ ವಿರೋಧಿಯನ್ನು ನಾಶಿಸುವದರಲ್ಲೇ ಆತ್ಮ ನಾಶವನ್ನು ಕೂಡಾ ಲೆಕ್ಕಿಸದ ಎಷ್ಟೋ ವಕ್ತಿಗಳನ್ನು ನಾವು ನೋಡುವದಿಲ್ಲವೆ? ಪ್ರಾಣಿಗಳ ಸುಖೇಚ್ಛೆಯು ಎಷ್ಟು ತೀವ್ರವಾಗಿದೆಯೆಂಬುದು ಅದರಿಂದ ತಿಳಿಯುವಂತಿದೆ.

ಸಾರಾಂಶ, ಸುಖವು ಪ್ರತಿಯೊಬ್ಬರಿಗೂ ಬೇಕು. ಆದರೆ ಆ ಸುಖದ ಸಾಧನೆಯಲ್ಲಿ ಕೆಲವರಿಗೆ ದುಃಖವೂ ಆಗುವದರಿಂದ ವಿಶ್ವನಿಯಮಕ್ಕನುಸರಿಸಿ ಆ ದುಃಖವು ತನಗೂ ತಗಲದಿರದು. ಈ ವಿಶ್ವನಿಯಮವು ಹೆಚ್ಚು ಜನರಿಗೆ ಗೊತ್ತಿರುವದಾದರೂ ಅದು ಮನಸ್ಸಿಗೆ ಅನಿಸಿಲ್ಲ. ಆದ್ದರಿಂದ ತನ್ನ ನಾಶವನ್ನು ಕೂಡ ಲೆಕ್ಕಿಸದ ಮನುಷ್ಯನು ಸುಖಕ್ಕಾಗಿ ಹೆಣಗುತ್ತಾನೆ. ಇದೀಗ ವಿಶ್ವ ಸಮಸ್ಯೆ- ಪ್ರತಿಯೊಬ್ಬನಿಗೂ ತನಗೆ ಬೇಕಾದಂತೆ ನಡೆಯುವ ಸ್ವಾತಂತ್ರ್ಯವಿದ್ದರೆ ಯಾರಿಗೂ ಸ್ವಾತಂತ್ರ್ಯವಿರುವದಿಲ್ಲ ಎಂಬ ಮಾತು ವಿಚಿತ್ರವಾಗಿದ್ದರೂ ಸತ್ಯ ಸ್ಥಿತಿಯನ್ನು ತಿಳಿಸುವದಾಗಿದೆ.

ಹೀಗೆ ಹೋರಾಡುತ್ತಾ ಜಗತ್ತಿನಲ್ಲಿ ಸುಖದ ಸಮಸ್ಯೆಯನ್ನು ಬಿಡಿಸುವದು ಯಾವಾಗ ಬಿಕ್ಕಟ್ಟಾಯಿತೊ, ಆಗಲೇ ನಿಜವಾದ ಸುಖದ ಸುಳಿವು ಸಿಕ್ಕಿತೆಂದು ಹೇಳಬಹುದು. ನೀತಿ ಮತ್ತು ಕಾಯಿದೆಗಳೂ ಆದಾಗಲೇ ಆರಂಭವಾದವು. ಸುಖಕ್ಕಾಗಿ ಎಲ್ಲರೂ ಹೆಣಗಾಡಿ ಎಲ್ಲರೂ ತಮ್ಮ ಸುಖವನ್ನು ತಡೆದುಕೊಳ್ಳುವದಕ್ಕಿಂತ ಪರರಿಗಾಗಿ ಪ್ರತಿಯೊಬ್ಬರೂ ತಮ್ಮ ಅಲ್ಪ ಸ್ವಲ್ಪ ಸುಖವನ್ನು ಬಿಡಬೇಕೆಂದು ಆಗ ಜನರಿಗೆ ಹೊಳೆಯಿತು. ವಿಶ್ವವೆಲ್ಲವೂ ಒಂದೇ ಆಗಿದ್ದರೂ ಅದರಲ್ಲಿಯೂ ಪ್ರತಿ ವ್ಯಕ್ತಿಯ ವ್ಯವಹಾರಕ್ಕೆ ಬೇರೆ ಬೇರೆಯಾಗಿ ಕ್ಷೇತ್ರಗಳನ್ನು ವಿಂಗಡಿಸಿಕೊಂಡರು. ಮತ್ತು ಎಲ್ಲರಿಗೂ ಸಾಕಾಗಿ ಉಳಿದ ಸ್ಥಳವು ಸರಕಾರಕ್ಕೆ (ಎಲ್ಲರ ಪ್ರತಿನಿಧಿರೂಪವಾಗಿರುವ ಒಂದು ಗುಂಪಿಗೆ ಅಥವಾ ವ್ಯಕ್ತಿಗೆ) ಸೇರಿತು. ತಮ್ಮ ತಮ್ಮ ಕ್ಷೇತ್ರದಲ್ಲಿ ತಾವು ಬೇಕಾದಷ್ಟು ಕುಣಿಯಬಹುದು. ಇನ್ನೊಬ್ಬರ ಕ್ಷೇತ್ರದಲ್ಲಿ ಅವರಿಗೆ ದುಃಖವಾಗುತ್ತಿದ್ದರೆ ಕಾಲಿಡಕೂಡದು. ಸರಕಾರೀ ಕ್ಷೇತ್ರಕ್ಕೆ ಬಂದಾಗ ಅವರ ನಿಯಮಗಳನ್ನು ಪಾಲಿಸಬೇಕು. ಈ ಪ್ರಕಾರ ಇನ್ನೂ ಬಹು ವಿಧವಾಗಿ ನಿರ್ಧರಿಸಿಕೊಂಡು ಸುಖದ ಸಮಸ್ಯೆಯನ್ನು ಬಿಡಿಸಿಕೊಂಡರು. ಇದಕ್ಕೆ ಸೇರಿದ ನಿಯಮಗಳು ವ್ಯಕ್ತಿಗೆ ಸಂಬಂಧಿಸಿದಾಗ ನೀತಿಯೆಂದೂ ಸರಕಾರಕ್ಕೆ ಸೇರಿದಾಗ ಕಾಯಿದೆಯೆಂದೂ ಹೆಸರುಗೊಂಡವು. ನೀತಿಗಳ ಸಮುದಾಯವೇ ಧರ್ಮವಾಯಿತು. ಮತ್ತು ಧರ್ಮೋಪದೇಶಕರೂ, ಗುರುಗಳೂ ಕಾಯಿದೆಯ ನಿರ್ಮಾಣಕರೂ ರಾಜರೂ ಆದರು. ಆದರೆ ವ್ಯಕ್ತಿಗಳೆಲ್ಲ ತಮ್ಮ ಸುಖದ ಸ್ವಲ್ಪ ಸ್ವಲ್ಪ ಭಾಗವನ್ನು ಪರರಿಗಾಗಿ ಬಿಡಲು ಸಿದ್ಧರಿದ್ದುದರಿಂದ ನೀತಿಯೂ ಕಾಯಿದೆಯೂ ಸಮರಸಭಾವದಿಂದ ಇದ್ದವು. ತ್ಯಾಗದಲ್ಲೇ ಭೋಗವಿದೆ ಎಂಬ ತತ್ವವನ್ನು ಜನರು ಹೀಗೆಯೇ ಕಲಿತರು. ಮತ್ತು ಅದರಂತೆ ನಡೆದು ಸುಖವಾಗಿರುತ್ತಿದ್ದರು.

ಬರುಬರುತ್ತ ತಮ್ಮಿಂದಲೇ ಆರಿಸಲ್ಪಟ್ಟ ಸರಕಾರಕ್ಕೆ ಧರ್ಮದ ಗುರುಗಳಿಗೂ ಜನರು ವಿಧೇಯರಾಗಿ ನಡೆಯಲಾರಂಭಿಸಿದರು. ರಕ್ಷಕರೊಬ್ಬರಿದ್ದರೆ ರಕ್ಷಿತರಿಗೆ ಜಾಗರೂಕತೆ ಕಡಿಮೆ. ಮತ್ತು ಕೃತಜ್ಞತೆಯಿಂದ ರಕ್ಷಿತರು ರಕ್ಷಕರ ತಪ್ಪುಗಳನ್ನು ಅಲ್ಲಗಳೆಯುವದೂ ಉಂಟು. ಅಥವಾ ಪರರ ರಕ್ಷಣೆಯಲ್ಲೇ ಬೆಳೆದುದರಿಂದ ಮಂದವಾದ ಬುದ್ಧಿಯು ರಕ್ಷಕರೆನಿಸುವ ಕುಂದನ್ನು ಕಂಡುಹಿಡಿಯಲಾರದೆಂದೂ ಹೇಳಬಹುದು. ತಾಯಿಯ ಮೇಲೆ ಭಾರಹಾಕಿದ ಯಾವ ಕಂದಮ್ಮನಿಗೂ ಕಷ್ಟವಾಗುವದಲ್ಲವೆ? ಹೌದು. ರಕ್ಷಕರಿಗೆ ರಕ್ಷಿತರಲ್ಲಿ ಅದೇ ವಾತ್ಸಲ್ಯವಿದ್ದರೆ ಅದೇ ಆತ್ಮಾರ್ಪಿತ ಪ್ರೇಮವಿದ್ದರೆ ಎಲ್ಲವೂ ಸುಗಮವಾಗಿ ಸಾಗಬಹುದು. ಆದರೆ ಅಧಿಕಾರ ಬಂದರೆ ಎಲ್ಲರಿಗೂ ಕೋಡುಗಳು ಮೂಡುವವು. ತಮ್ಮ ಅಧಿಕಾರದ ಮೇರೆಯನ್ನು ಅವರು ಮರೆಯುವರು. ತಮಗೆ ಸಿಕ್ಕ ಅಧಿಕಾರವು ಜನರ ತ್ಯಾಗದ ಫಲವೆಂದೂ, ತಾವೂ ಅದೇ ತ್ಯಾಗದಿಂದಲೇ ಕೆಲಸಮಾಡುವದು ತಮ್ಮ ಅಧಿಕಾರಕ್ಕೆ ಯೋಗ್ಯವೆಂದೂ ಅವರು ಅರಿತಿರಬಹುದಾದರೂ ಅದರಂತೆ ಆಚರಿಸುವಷ್ಟು ವಿನೀತ ಭಾವವು ಅವರಲ್ಲಿ ಉಳಿಯುವದಿಲ್ಲ.

ಇದೇ ಅವಸ್ಥೆಯೇ ನಮ್ಮ ನೀತಿ ಧರ್ಮೋಪದೇಶಕರಾದ ಗುರುಗಳಿಗೆ ಸಂಭವಿಸಿತು. ಪೂರ್ವದಲ್ಲಿ ಅವರ ನಿಸ್ವಾರ್ಥತೆಗೂ ತಪಶ್ಶಕ್ತಿಗೂ ಪ್ರಖರವಾದ ಮೇಧಾ ಶಕ್ತಿಗೂ ಮೆಚ್ಚಿ ಸರಕಾರವೂ ಕೂಡ ಅವರಿಗೆ ತಲೆಬಾಗುತ್ತಿತ್ತು. ಆದರೆ ಅಗೌರವಾಮೃತವು ಅವರಿಗೆ ಹೆಂಡವಾಗಿ ಪರಿಣಮಿಸಿತು. ಅದರ ನಿಶೆಯಲ್ಲಿ ಅವರು ಮಾಡಿದ ಮತ್ತು ಈಗಲೂ ಅಲ್ಲಲ್ಲಿ ನಡೆಸುತ್ತಿರುವ ಕೆಲವು ಅನಾಹುತಗಳನ್ನು ನಿಜವಾಗಿ ಮನದಿಂದ ನೆನೆಸುವದಕ್ಕೂ ಅಸಹ್ಯವಾಗಿದೆ. ಈ ವೈರಾಗ್ಯವೇ ಜನರ ಸುಖವನ್ನು ಪುನಃ ಮಣ್ಣುಗೂಡಿಸಿತು. ಆದ್ದರಿಂದ ನಮಗೆ ನೀತಿಯೂ ಬೇಡ. ಕಾಯಿದೆಯೂ ಬೇಡ. ಆತ್ಮ ಸುಖಸಾಧನೆಯಲ್ಲಿ ಅನುಕೂಲತೆಗಳ ಉನ್ನತಿಯಲ್ಲಿ ಪರರನ್ನು ಕೆಳಕ್ಕೆ ತುಳಿಯದಂತೆಯೇ ವ್ಯಕ್ತಿಯ ಪ್ರತಿಷ್ಠೆ ಬೆಳೆಯದೆ ಸರ್ವರಿಗೂ ಸಮ ಸುಖವು ಸಿಕ್ಕುವ ಸಮರಸಭಾವನೆಯನ್ನೇ ಬೆಳಗುವಂತೆಯೂ ಕಾಲಪರಿಸ್ಥಿತಿಗಳಿಗನುಸರಿಸಿ ಬದಲಾಗುವಂತೆಯೂ ಕೆಲವು ನಿಯಮಗಳು ನಮಗೆ ಬೇಕು. ಅದಕ್ಕೆ ಕಾಯಿದೆಯೆಂದಾದರೂ ಅನ್ನಿರಿ; ನೀತಿಯೆಂದಾದರೂ ಅನ್ನಿರಿ.

---

# ಜಾಹೀರ ನೋಟೀಸು.

ಸಮಸ್ತ ಜನರಿಗೆ ಕೆಳಗೆ ಸಹಿಮಾಡುವವರ ಕಡೆಯಿಂದ ತಿಳಿಸುವದೇನಂದರೆ—

ವಿಜಾಪುರ ಜಿಲ್ಲೆಯ ಪೈಕಿ ಗುಳೇದಗುಡ್ಡ ಗ್ರಾಮದಲ್ಲಿ ಗುರುಸಂಗಪ್ಪ ರೇವಪ್ಪ ಮೋಟಗಿ ಗುಳೇದಗುಡ್ಡ ಈ ನಾಮೇದಿಂದ ನಮ್ಮ ಉಭಯತರದು ಪಾತಿಯಿಂದ ಅಂಗಡಿ ನಡೆದದ್ದು ಅದರಲ್ಲಿ ಉಭಯತರ ನಡುವೆ ಬೇಬನಾವ ಬಂದದ್ದರಿಂದ ನಾವು ನಮ್ಮ ಪಾತಿ ಮುರಕೊಂಡಿರುತ್ತೇವೆ. ಇವತ್ತಿನ ದಿವಸ ಉಭಯತರು ಲೆಕ್ಕಾಮಾಡಿಕೊಂಡು, ಜಮಾಖರ್ಚುಮಾಡಿಕೊಂಡು ಲುಕ್ಸಾನವ ನಫಾ ಈ ಬಗ್ಗೆ ನಿಕಾಲಿ ಮಾಡಿಕೊಂಡು ಸಹಿಮಾಡಿ ನಿಕಾಲಿಮಾಡಿಕೊಂಡಿರುತ್ತೇವೆ. ಇವತ್ತಿನಿಂದ ಮುಂದೆ ಸದರ ಅಂಗಡಿ ಇಲ್ಲದಂತೆ ಆಗಿರುತ್ತದೆ. ಮುಂದೆ ಯಾರಾದರೂ ಯಾವದೇ ಆಸಾಮಿಗಳ ಸಂಗಡ ವ್ಯವಹಾರಮಾಡಿದರೆ ಸದರ ವ್ಯವಹಾರ ಅವರವರ ಜ್ಯಾತಿನಿಶೆ ಇರುತ್ತದೆ. ಒಬ್ಬರ ವ್ಯವಹಾರ ಒಬ್ಬರ ಸಂಬಂಧ ಇಲ್ಲ. ಈ ಪ್ರಕಾರ ಸಮಸ್ತರಿಗೆ ತಿಳಿಸಿರುತ್ತದೆ.

ತಾ. ೨೬ ಮಾಹೆ ಸಪ್ಟಂಬರ ಸನ್ ೧೯೩೮ ಇಸ್ವಿ.

ಗುರುಲಿಂಗಪ್ಪ ಗುರುಸಂಗಪ್ಪ ಮೋಟಗಿ.

ಗಂಗಯ್ಯನವರು ವೀರಸಂಗಯ್ಯನವರು ಪಾರ್ವತಿಮಠ ದ|| ಖು|

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ, [illegible] ಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

## The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ ।
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೭ | ಆಲಮಟ್ಟಿ- ಸೋಮವಾರ ತಾರೀಖು ೧೦ ನೆಯ ಅಕ್ಟೋಬರ್ ೧೯೩೮. | ಸಂಚಿಕೆ ೬

ಜನಸೇವೆಯೇ ದೇವರಸೇವೆ.

# ದಸರೆಯಲ್ಲಿ ಮುಸಲ್ಮಾನರ ದೊಂಬೆ!

ಸಿಲ್ಹೆಟ, ಬರದ್ವಾನ, ಜಬಲಪುರ, ಚಿಕ್ಕೋಡಿ
ಈ ಸ್ಥಳಗಳಲ್ಲಿ ದಸರೆ ಉತ್ಸವದ ಕಾಲಕ್ಕೆ
ಮುಸಲ್ಮಾನರು ದೊಂಬೆ ಮಾಡಿದರು.

## ಮತ್ತೆ ಮುಂಡಲಾಕಾರ ಪರಿಷತ್ತು?

ಹಿಂದುಸ್ಥಾನದ ಸಂಯುಕ್ತ ರಾಜ್ಯ ಘಟನೆಯ ಚರ್ಚೆಗೆ
ಬ್ರಿಟಿಶ್ ಸರಕಾರವು ಹಿಂದುಸ್ಥಾನದಲ್ಲಿ
ಒಂದು ಮುಂಡಲಾಕಾರ ಪರಿಷತ್ತನ್ನು
ಕೂಡಿಸುವ ವಿಚಾರದಲ್ಲಿದೆಯಂತೆ.

## ಅಹಿಂಸೆಯ ಬಲ ಝೆಕ್ಕರಿಗೆ ತಿಳಿದಿಲ್ಲ.

ಅಹಿಂಸೆಯ ಬಲವು ಝೆಕ್ಕರಿಗೆ ತಿಳಿದಿದ್ದರೆ
ಜರ್ಮನಿಯನ್ನು ಅವರು ಎದುರಿಸಬಹುದಾಗಿತ್ತೆಂದು
ಗಾಂಧೀಜಿಯವರು ಹೇಳಿದ್ದಾರೆ.

ದೇಹವೇ ದೇವಾಲಯ.



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೮. | ಆಲಮಟ್ಟಿ-ಸೋಮವಾರ ತಾರೀಖು ೧೦ ನೆಯ ಅಕ್ಟೋಬರ್ ೧೯೩೮. | ಸಂಚಿಕೆ ೯


# ದಸರೆ ಹಬ್ಬದಲ್ಲಿ ಮುಸಲ್ಮಾನರ ದೊಂಬೆ!

## ಹಿಂದುಗಳ ಅಂಗಡಿ ಸುಲಿಗೆ!!

### ಸಿಲ್ಹೆಟ್‌ದಲ್ಲಿ ದೊಂಬಿ.

ಪದ್ಧತಿ ಪ್ರಕಾರ ಸಿಲ್ಹೆಟದಲ್ಲಿ ತಾ. ೪-೧೦-೩೮ ನೆಯ ದಿನ ಹಿಂದುಗಳ ದಸರೆ ಹಬ್ಬದ ಉತ್ಸವವು ಹೊರಟಾಗ ಫಕರುಲ್ಲಾ ಮಸೀದಿಯ ಮುಂದೆ ಮುಸಲ್ಮಾನರು ಉತ್ಸವದ ಮೇಲೆ ಅತ್ಯಾಚಾರ ನಡೆಸಿದರು. ಮಸೀದಿಯ ಮೇಲುಪ್ಪರಿಗೆಯಿಂದ ಕಲ್ಲುಗಳನ್ನು ಎಸೆದರು. ಮುಸಲ್ಮಾನರು ಬಡಗಿಯಿಂದ ಬಹು ಮಂದಿಗೆ ಹೊಡೆದರು. ೫೦ ಹಿಂದುಗಳಿಗೆ ಗಾಯಗಳಾಗಿವೆ. ಈ ದೊಂಬೆಯಾದ ಮೇಲೆ ಅನೇಕ ಮುಸಲ್ಮಾನರು ಕೆಲವು ಹಿಂದುಗಳ ಅಂಗಡಿಯನ್ನು ಸುಲಿಗೆ ಮಾಡಿದರು.

ಬಂದರ ಬಜಾರದ ಕುದ್ರುತ ಉಲ್ಲ ಮಸೀದಿಯ ಮುಂದೆ ಉತ್ಸವ ಬಂದಾಗ ಮುಸಲ್ಮಾನರು ಇಟ್ಟಂಗಿಗಳಿಂದ ಹೊಡೆದರು. "ಅಲ್ಲಾಹೊ ಅಕಬರ. ಮುಸ್ಲಿಂಲೀಗ ಝಿಂದಾಬಾದ" ಎಂದು ಮುಸಲ್ಮಾನ ಸಮೂಹವು ಕೂಗುತ್ತಾ ಮೆರವಣಿಗೆಯಲ್ಲಿ ನುಗ್ಗಿ ಅನೇಕ ಹಿಂದುಗಳನ್ನು ಹೊಡೆದರು.

ಆ ದಿನ ನಡೆದ ದೊಂಬೆಯಲ್ಲ ಹಿಂದಿನ ನ್ಯಾಯಾಧೀಶರಾದ ಶ್ರೀ. ಉಪೇಂದ್ರ ಚಂದ್ರಕಾರ ಎಂಬುವವರಿಗೆ ಬಲವಾಗಿ ಗಾಯಗಳಾಗಿವೆ. ಅವರು ಆಸ್ಪತ್ರೆಯಲ್ಲಿ ಬಹು ಚಿಂತಾಜನಕ ಸ್ಥಿತಿಯಲ್ಲಿದ್ದಾರೆ.

### ಬರದ್ವಾನದಲ್ಲಿ ದೊಂಬೆ.

ಬರದ್ವಾನದಲ್ಲಿ ದಸರೆ ಉತ್ಸವವು ತಾ. ೪-೧೦-೩೮ ನೆಯ ದಿನ ಬಡಾಬಜಾರ ಮಸೀದಿ ಹತ್ತಿರ ಬರಲು ವಾದ್ಯಗಳನ್ನು ನಿಲ್ಲಿಸಬೇಕಾಗಿ ಮುಸಲ್ಮಾನರು ಹೇಳಿದರು. ಸವಾದ್ಯ ಮೆರವಣಿಗೆಯು ನಮ್ಮ ಕರಾರಿನಂತೆಯೇ ನಾವು ನಡೆಯುವೆವೆಂದು ಹೇಳಿದರು. ಆಗ ಬಡಗಿ ಹಿಡಿದುಕೊಂಡ ಮುಸಲ್ಮಾನರು ಉತ್ಸವದಲ್ಲಿ ನುಗ್ಗಿ ಅನೇಕರಿಗೆ ಹೊಡೆದರು. ಇಬ್ಬರಿಗೆ ಬಲವಾದ ಗಾಯಗಳಾಗಿವೆ.

### ಜಬಲಪುರದಲ್ಲಿ ದೊಂಬೆ.

ಇಲ್ಲಿಯ ದಸರೆ ಹಬ್ಬದ ಉತ್ಸವವನ್ನು ಶಾಂತರೀತಿಯಿಂದ ನಡೆಯಿಸಬೇಕೆಂದು ಪೋಲಿಸರು ಮೊದಲಿನಿಂದಲೂ ಏರ್ಪಾಟು ಇಟ್ಟುಕೊಂಡಿದ್ದರು. ಮುಸಲ್ಮಾನರು ದೊಂಬೆ ಮಾಡಿದ್ದರಿಂದ ಪೋಲಿಸರ ಉದ್ದೇಶ ನೆರವೇರಲಿಲ್ಲ. ೫ ಹಿಂದುಗಳಿಗೆ ಗಾಯಗಳಾಗಿವೆ. ಒಬ್ಬನು ಚಿಂತಾಜನಕ ಸ್ಥಿತಿಯಲ್ಲಿದ್ದಾನೆ. ೮೦೦ ಸಶಸ್ತ್ರ ಪೋಲಿಸರು ಪಟ್ಟಣವನ್ನು ಕಾಯುತ್ತಿದ್ದಾರೆ.

### ಚಿಕ್ಕೋಡಿಯಲ್ಲಿ ದೊಂಬೆ.

ಬೆಳಗಾವ ಜಿಲ್ಲಾ ಚಿಕ್ಕೋಡಿಯಲ್ಲಿ ದಸರೆ ಉತ್ಸವವು ಹೋಗುವಾಗ ಮಸೀದಿ ಮುಂದೆ ಲೇಜಿಂ ಆಡುವುದನ್ನೂ ನಿಲ್ಲಿಸಬೇಕೆಂದು ಮುಸಲ್ಮಾನರು ಹಟಹಿಡಿದರು. ಅದು ವಾದ್ಯವೇನೂ ಅಲ್ಲ. ಲೇಜಿಂ ಆಡಬಹುದೆಂದು ಸರಕಾರದವರು ತೀರ್ಮಾನಮಾಡಿದರು. ಈ ಮಧ್ಯ ಕೆಲವರು ಉತ್ಸವದಲ್ಲಿ ಸೇರಿ ದೊಂಬೆ ಮಾಡಿದ್ದರಿಂದ ಕೆಲವರಿಗೆ ಗಾಯಗಳಾಗಿವೆಯೆಂದೂ ಉತ್ಸವ ಹೋಗುವಾಗ ಕಲ್ಲುಗಳಿಂದ ಹೊಡೆದ ಕಾರಣ ಕೆಲವರಿಗೆ ಬಲವಾದ ಪೆಟ್ಟು ತಾಕಿದೆಯೆಂದೂ ಶ್ರೀ. ಮಜಲಿ ವಕೀಲರಿಗೆ ಹೆಚ್ಚಾದ ಪೆಟ್ಟು ತಾಕಿದೆಯೆಂದೂ ಪ್ರಕಟವಾಗಿದೆ.

# ಬುದ್ಧದೇವನ ದಿವ್ಯ ಸಂದೇಶ.

(ಲೇಖಕರು— ಶ್ರೀ. ಅನ್ನದಾನೀಶ್ವರ ವಿರಕ್ತಮಠ.)

ಎರಡೂವರೆ ಸಾವಿರ ವರುಷಗಳ ಪೂರ್ವದಲ್ಲಿ ಪುರಾಣ ಮತವಾದಿಗಳ ಪ್ರಾಬಲ್ಯವು ಅಧಿಕವಾಗಿದ್ದಿತು. ನಾನಾ ದೇವತೋಪಾಸನೆಯ ಹೆಸರಿನಿಂದ ಅನಾಚಾರಗಳು ನಡೆಯುತ್ತಿದ್ದವು. ಪೌರಾಣಿಕ ದೇವತೆಗಳು ನರಬಲಿ-ಪಶುಬಲಿಗಳನ್ನು ಬೇಡುತ್ತಿದ್ದವು. ರಾಜರು ಮೇಜವಾನಿ ಸಮಯಗಳಲ್ಲಿ ಪ್ರಾಣಿಗಳನ್ನು ಹಿಂಸಿಸಿ ಮಾಂಸ ಭಕ್ಷಿಸುತ್ತಿದ್ದರು.

ಯಜುರ್ವೇದದ ಶತಪಥ ಬ್ರಾಹ್ಮಣದಲ್ಲಿ ಮಾಂಸಭಕ್ಷಣಮಾಡಬೇಕೆಂಬ ಆಧಾರಗಳಿವೆ. ಈ ಆಧಾರದಿಂದ ಅನೇಕ ಅನಾಹುತಗಳು ನಡೆಯುತ್ತಿದ್ದವು. ವೇದದ ಯಾಜ್ಞಿಕ ಹಿಂಸೆಯಂತೂ ಅತ್ಯಂತ ಕ್ರೌರ್ಯದಿಂದ ತುಂಬಿತ್ತು. ವೇದದ ಹೆಸರಿನಿಂದ ಮೂಢ ಭಾವನೆಯು ಬೆಳೆದಿತ್ತು. ಸ್ವತಂತ್ರ ವಿಚಾರಶಕ್ತಿಯು ನಾಸ್ತಿಕತೆಯೆಂದು ತಿಳಿಯಲ್ಪಡುತ್ತಿತ್ತು. ಜನಗಳು ವಿನೋದಕ್ಕಾಗಿಯೂ ಚೈನಿಯ ಚಲ್ಲಾಟಕ್ಕಾಗಿಯೂ ಪ್ರಾಣಿಗಳನ್ನು ಕೊಲ್ಲುತ್ತಿದ್ದರು. ಅಂತಃಕರಣದಲ್ಲಿ ದಯಾ ಜಲವು ಹಿಂಸೆಯ ವಾತಾವರಣದಿಂದ ಬತ್ತಿ ಹೋಗಿತ್ತು. ಇಂತಹ ಕಾಲದಲ್ಲಿ ಭಗವಾನ್ ಬುದ್ಧದೇವನು ಜನ್ಮತಾಳಿದನು. ೪೫ ವರುಷಗಳ ವರೆಗೆ ತನ್ನ ಕಾರುಣ್ಯಮಯ ವಾಣಿಯಿಂದ ಪ್ರೇಮದ ಜ್ಯೋತಿ ಕಿರಣಗಳನ್ನು ಸುತ್ತಲೂ ಹರಡಿಸಿದನು. ಮನ, ವಚನ, ಕಾಯಗಳಲ್ಲಿ ಅಹಿಂಸೆಯಿಂದಿರುವದೇ ಆ ಮಹಾತ್ಮನ ದಿವ್ಯ ಸಂದೇಶವು. ಬುದ್ಧದೇವನು ಸಾವಿರಾರು ಬೌದ್ಧ ಭಿಕ್ಷುಗಳಿಗೂ, ಗೃಹಸ್ಥರಿಗೂ, ಸ್ತ್ರೀಯರಿಗೂ ಹೀಗೆ ಎಲ್ಲರಿಗೂ ಅಹಿಂಸಾಧರ್ಮದಿಂದ ಹೊಸ ಬೆಳಕನ್ನು ತೋರಿದನು. ಬುದ್ಧದೇವನು ತನ್ನ ಪಂಚ "ಶೀಲಗಳಲ್ಲಿ" ಅಹಿಂಸೆಗೆ ಪ್ರಥಮ ಸ್ಥಾನವನ್ನಿತ್ತನು. ಅಹಿಂಸೆಯಿಲ್ಲದೇ ನಿರ್ವಾಣ ಅಥವಾ ಮೋಕ್ಷವಿಲ್ಲ. ಬುದ್ಧದೇವನಲ್ಲಿ ದೈವೀಸ್ಫೂರ್ತಿಯಿತ್ತು. ದೈವೀ ಪ್ರೇರಣೆಇತ್ತು. ಹಿಂಸೆಯಿಂದಲೇ ಜಗತ್ತಿನಲ್ಲಿ ದುಃಖ. ಜ್ಞಾನ, ಪ್ರೇಮಗಳೇ ನಿಜವಾದ ತಾರಕ ಮಂತ್ರಗಳು. ಇದನ್ನರಿತ ಬುದ್ಧದೇವನು ರಾಜ್ಯವನ್ನೇ ತ್ಯಜಿಸಿ ಅರಣ್ಯದಲ್ಲಿದ್ದು ಘೋರ ಕಷ್ಟಗಳನ್ನನುಭವಿಸಿ 'ಬುದ್ಧನಾಗಿ' ಜಗತ್ತಿಗೆ ಬುದ್ಧಿಕೊಟ್ಟನು. ನಿಜವಾದ ಆಧ್ಯಾತ್ಮಿಕ ತೇಜಸ್ಸು ತೋರದ್ದರಿಂದಲೇ ಜಗತ್ತು ಕರ್ಮಕಾಂಡದಿಂದ ಕ್ರೌರ್ಯದ ಕತ್ತಲೆಯಲ್ಲಿದೆಯೆಂಬುದನ್ನು ಕೃತಿಯಿಂದ ಬುದ್ಧದೇವನು ತೋರಿಸಿದನು. ಸಮಾಜದಲ್ಲಿ ಜಾತಿಭೇದದ ಭೂತವು ಅಸಹ್ಯಕರವಾದ ನಾಟ್ಯವನ್ನಾಡುತ್ತಿದ್ದಿತು. ಬುದ್ಧದೇವನುಇದರಮುಲೋತ್ಪಾಟನೆಯನ್ನೇ ಮಾಡಿದನು. ದೇವರ ರಾಜ್ಯದಲ್ಲಿ ಜಾತಿಕೊಲೆಗಳಿಗೆ ಸ್ಥಳವಿಲ್ಲ: ನೀತಿಧರ್ಮಗಳಿಗೆ ಮಹತ್ವವಿದೆಯೆಂದು ಸಾರಿದನು. ಸ್ತ್ರೀ ಶೂದ್ರರು ವೈದಿಕ ಕರ್ಮಕಾಂಡದ ಕ್ರೌರ್ಯದಿಂದ ಬಿಡುಗಡೆಯಾದರು.

ಬುದ್ಧದೇವನು ಬಿಂಬಿಸಾರ ರಾಜನಿಗೆ ಉಪದೇಶಮಾಡಿದ ಭಾಷಣವಂತೂ ಅಮೋಘಶಕ್ತಿಯುಳ್ಳದ್ದಾಗಿದೆ. ಆ ಅಮೋಘವಾದ ಉಪದೇಶವು ಈಗ ಸರಕಾರದಿಂದಲೂ ಹಿಂದುಸ್ಥಾನದವರಿಂದಲೂ ನಡೆಯುತ್ತಿರುವ ದೈನಂದಿನ ಹಿಂಸೆಯನ್ನು ತಪ್ಪಿಸಲು ಎಷ್ಟೋ ಸಹಕಾರಿಯಾದೀತು.

ಬುದ್ಧದೇವನ ಪ್ರಭಾವದಿಂದ ಫಲಾಹಾರ, ವನಸ್ಪತ್ಯಾಹಾರ ಸಾದಾಜೀವನ, ಪ್ರೇಮಜೀವನ ಪರೋಪಕಾರ ಬುದ್ಧಿ ಇವೆಲ್ಲ ಆ ಕೃತಿಕವಾಗಿ ಪ್ರಚಾರದಲ್ಲಿ ಬಂದವು. ಬುದ್ಧದೇವನ ಮತಗಳೂ ಅವನ ಶಿಷ್ಯರೂ ಎಷ್ಟೋ ಧರ್ಮಜಾಗೃತಿ ಕ್ರಾಂತಿಗಳನ್ನುಂಟುಮಾಡಿದರು. ಜನಾಂಗದಲ್ಲಿ ಶಾಂತಿಯನ್ನು ನೆಲೆಗೊಳಿಸಿದರು. ಬಿಂಬಿಸಾರ ರಾಜನು ಬುದ್ಧದೇವನ ವಾಕ್ಯಗಳಿಂದ ಪರಿಣಾಮ ಹೊಂದಿ ಕಲ್ಲುಗಳಲ್ಲಿ ಈ ಪ್ರಕಾರ ಕೆತ್ತಿಸಿದನು—

"ನಾಲಿಗೆಯ ರುಚಿಗಾಗಿಯೂ ದೇವತೆಗಳ ಪ್ರೀತ್ಯರ್ಥವಾಗಿಯೂ ನಡೆಯುತ್ತಿರುವ ಹಿಂಸೆಗಳು ನಿಲ್ಲಬೇಕು. ಎಲ್ಲ ಜೀವಿಗಳಲ್ಲಿಯೂ ಸುಖ-ದುಃಖಗಳನ್ನು ಅನುಭವಿಸುವ ಜೀವಾತ್ಮನೊಬ್ಬನೇ ಇದ್ದಾನೆ. ದಯೆಯುಳ್ಳವರಿಗೆ ದಯವು ಆಶೀರ್ವದಿಸುವುದು."

೨೦೦ ವರುಷಗಳ ತರುವಾಯ ಅಶೋಕ ಮಹಾರಾಜನೂ ತಾನು ಪ್ರಾಣಿವಧೆ ಪ್ರಾಣಿ ಭಕ್ಷ್ಯಗಳನ್ನು ತ್ಯಜಿಸಿರುವೆನೆಂದೂ ಬೇಟೆಯಾಡುವದನ್ನು ನಿಲ್ಲಿಸಿರುವೆನೆಂದೂ ಕಲ್ಲುಗಳ ಮೇಲೆ ಕೆತ್ತಿಸಿದ್ದಾನೆ. ಪ್ರಾಣಿಗಳ ದುಃಖಕಳೆಯಲು ಅಶೋಕ ಮಹಾರಾಜನು ಧರ್ಮಶಾಲೆ ವೈದ್ಯಶಾಲೆಗಳನ್ನು ಕಟ್ಟಿಸಿದನು. ಬಾವಿ ಕೆರೆಗಳನ್ನು ನಿರ್ಮಿಸಿದನು. ಅನೇಕ ತರುಮರಾದಿಗಳನ್ನು ಹಚ್ಚಿಸಿದನು. ಅದೇ ಪ್ರಕಾರ ಹರ್ಷವರ್ಧನ ಕನಿಷ್ಕ ಮತ್ತು ಇನ್ನುಳಿದ ಕೆಲಪಾಲಿರಾಜರೂ ನಡೆದರು. ಈಗಿನ ಹಿಂದುಸ್ಥಾನದ ಸಂಸ್ಥಾನಿಕರು ಹೀಗೆ ನಡೆಯುವರೆ?

ಅಹಿಂಸೆಯು ವಿಚಾರಾತ್ಮಕ ದೃಷ್ಟಿಯಿಂದಲೂ ವ್ಯಾವಹಾರಿಕ ದೃಷ್ಟಿಯಿಂದಲೂ ಅತಿ ಉದಾತ್ತ ತತ್ವವಾಗಿದೆಯೆಂದು ಬುದ್ಧದೇವನು ಸಾರಿದನು. ಯಾರೂ ಯಾವ ಕಾಲಗಳಲ್ಲಿಯೂ ಯಾವ ಅವಸ್ಥೆಗಳಲ್ಲಿಯೂ ಯಾವುದೇ ಕಾರಣದಿಂದಲೂ ಯಾವ ಪ್ರಾಣಿಗಳನ್ನೂ ಕೊಲ್ಲಬಾರದು. ಪರರಿಗೆ ಕೊಲ್ಲಲು ಹೇಳಬಾರದು. ಕೊಲ್ಲಲು ಪ್ರೋತ್ಸಾಹ ಕೊಡಬಾರದು. ಕೊಂದ ಪ್ರಾಣಿಗಳನ್ನು ಸ್ವೀಕರಿಸಬಾರದು. ಅಂಥ ಸ್ಥಾನಗಳಲ್ಲಿ ನಿಲ್ಲಬಾರದು. ತನ್ನ ಪ್ರಾಣ ಹೋದರೂ ಪ್ರಾಣಿ ವಧೆಯನ್ನು ನಿಲ್ಲಿಸಲು ಯತ್ನಿಸಬೇಕು. ವಿಶ್ವವ್ಯಾಪಕ ಪ್ರೇಮ ಮಿತ್ರತ್ವ ಭ್ರಾತೃತ್ವಗಳಿಂದಲೇ ಮಾನವನು ವರ್ತಿಸಬೇಕು. ಬುದ್ಧದೇವನು ಜನಸಾಮಾನ್ಯರ ಭಾಷೆಯಲ್ಲಿ ಬೋಧಮಾಡಿದ್ದರಿಂದ ಅದ್ಭುತ ಜಾಗೃತಿಯಾಯಿತು. ಸಾಮಾನ್ಯರೂ ವಿಚಾರಿಗಳಾಗಲು ಆಸ್ಪದವಾಯಿತು. ಮೂಢ ನಂಬಿಕೆಯು ಹರಿದು ಹೋಯಿತು. ಉಚ್ಚ ನೀಚ ಭೇದಬುದ್ಧಿಯು ನಾಶವಾಗಲು ಸಹಾಯವಾಯಿತು. ವೈದಿಕ ಕರ್ಮಕಾಂಡಿಗಳೂ ಅವರ ವರ್ಣಾಶ್ರಮವೂ ಇಲ್ಲದಿದ್ದರೆ ಹಿಂದುಸ್ಥಾನದಲ್ಲಿ ಬುದ್ಧನ ಬೆಳಕು ಚಿರಸ್ಥಾಯಿಯಾಗಿ ಸತ್ಯ ಯುಗವೆ ಸ್ಥಾಪಿಸಲ್ಪಡಬಹುದಾಗಿತ್ತು. ಆದರೆ ಮಾಡುವದೇನು? ಬೌದ್ಧಿಕ ವಿಕಾಸಕ್ಕೂ ಉದ್ಯೋಗಾಭಿವೃದ್ಧಿಗೂ ಆತ್ಮೋನ್ನತಿಗೂ ಸಮಾಜ ಸುವ್ಯವಸ್ಥೆಗೂ ಕಂಟಕವಾದ ಜಾತಿಭೇದವು ಮೂಢ ಭಾವಿಕತನದ ಹಿಂದುಸ್ಥಾನದಲ್ಲಿ ನಾಶವಾಗಲೊಲ್ಲದು.

ಮಾದಕ, ತಾಮಸಿಕ, ಉತ್ತೇಜಕ, ಮೋಹಕ ವಸ್ತುಗಳನ್ನು ಉಪಯೋಗಿಸಬಾರದೆಂದೇ. ಬೌದ್ಧ ಧರ್ಮಗ್ರಂಥಗಳಲ್ಲಿ ಸ್ಪಷ್ಟವಾಗಿ ಹೇಳಿದೆ. ಬುದ್ಧನ ಶಾಂತಿ-ಸಾತ್ವಿಕ ತತ್ವಗಳು ಪ್ರಚಾರವಾದಾಗ್ಗೆ ಎಷ್ಟೋ ರೋಗಗಳು ಕಡಿಮೆಯಾಗಿದ್ದವು. ಅಶಾಸ್ತ್ರೀಯ ಅಸ್ವಾಭಾವಿಕ ಜೀವನದಿಂದಲೂ ಅಸ್ವಾಭಾವಿಕ ಆಹಾರದಿಂದಲೂ ಅನೇಕ ರೋಗಾದಿಗಳು ಬೆಳೆದಿವೆಯೆಂದು ಈಗಿನ ವೈದ್ಯರು ಹೇಳುತ್ತಾರೆ. ಬೌದ್ಧಧರ್ಮದವರಾದರೂ ಬುದ್ಧದೇವನ ತತ್ವಗಳಂತೆ ನಡೆದು ಪ್ರಚಾರಮಾಡಿ ವಿಶ್ವಶಾಂತಿಗೆ ಸಹಾಯಕರಾಗುವರೆ?

# ಮಹಾತ್ಮರ ೭೦ ನೆಯ ಜಯಂತಿ.

ಪದ್ಯ. (ವಾ. ಷ.)

ಬಂದಿಹುದು ಭಾರತಕೆ ಪರಮ ಮಂಗಲ ದಿವಸ |
ವಿಂದು ಜಗದೀಶ್ವರನ ಪರಿಪೂರ್ಣ ಕೃಪೆಯಿಂದ |
ಇಂದು ಪರತರ ಮಹಾತ್ಮಾ ಗಾಂಧಿಯವರು ಹುಟ್ಟಿದ ದಿನದ ಹಬ್ಬ ವಿಹುದು ||

ಹೊಂದಿಹರು ಸರ್ವ ಜನರೆಲ್ಲ ಬಹು ಸಂತೋಷ |
ವಿಂದು ಮನೆ ಮನೆಗೆ ರಾಷ್ಟ್ರಧ್ವಜವ ನಿಲ್ಲಿಸಿಹ |
ರಿಂದು ನರ ನಾರಿಯರು ಮಂಗಲ ಸ್ನಾನಮಂ ಗೈದು ನವ ವಸ್ತ್ರಂಗಳ || ೧ ||

ಧರಿಸಿಹರು ಮಿಷ್ಟಾನ್ನ ಭೋಜನವ ಮಾಡಿಹರು |
ಪುರದ ಗ್ರಾಮದ ಸಕಲವೀಥಿಯೊಳು ತಳಿಹಾಕಿ |
ತೆರತೆರದ ತಳಿರುತೋರಣಗಳಿಂದೂರ ಸಿಂಗಾರ ಮಾಡಿರುವರಿಂದು ||
ಭರದಿಂದೆ ಸಭೆಗೂಡಿಸೀ ಜಗದ್ಭೂಷಣನ |
ಹರುಷದಿಂ ಮಾಡಿದರು ದಿವ್ಯ ಗುಣಗಾನವನು |
ಮೆರೆಸಿದರು ಪಲ್ಲಕ್ಕಿಯೊಳಗಿಟ್ಟು ಪರಮ ಪುರುಷನ ಭಾವಚಿತ್ರ ವಿಂದು || ೨ ||

ನಗುನಗುತೆ ಸಾಗಿದನು ಹಗಲೊಡೆಯ ತಾನಿಂದು |
ಖಗವೃಂದ ಮುದವಾಂತು ಹಾಡತೊಡಗಿಹುದಿಂದು |
ಜಗದೊಡೆಯನಾಲಯದಿ ಬೆಳಗುವವು ದೀಪಗಳು ಹಗಲಲ್ಲಿನಾಡೆಲ್ಲವು||
ಬಗೆಬಗೆಯ ಖಾದಿ ಬಟ್ಟೆಯ ಹೊತ್ತು ಮಾರುವರು |
ಜಗದೆನುತ ಗಾಂಧಿಯರ ಭಾರತಾಂಬೆಯ ನಾಮ |
ಮಿಗಿಲಾದ ಭಕ್ತಿಯಿಂ ಜಯಘೋಷ ಮಾಡುವರು ಕಾಂಗ್ರೆಸದಾಸ ರಿಂದು || ೩ ||

ಬಲು ಹುರುಪು ಕಡು ಹಿಗ್ಗು ತುಂಬಿಹುದು ನಾಡೆಲ್ಲ |
ತುಲವಿರದ ಗಾಂಧಿಯರಿಗಾಯುಷ್ಯವೀಯೆಂದು |
ಬಲವಾದ ಭಕ್ತಿಯಿಂ ಬೇಡಿದರು ದೇವರಲಿ ಭಾರತದ ಸಕಲ ಜನರು||
ತಳೆದಿರುವರೆಲ್ಲರೂ ಕೈನೂಲ ಬಟ್ಟೆಯನು |
ಕೊಳುವರೈ ಸರ್ವರಾ ಪಾವಿತ್ರ್ಯ ವಸ್ತ್ರವನು |
ಕೆಳೆತನದೆ ಕೈ ಹಿಡಿದು ಕರೆದೊಯ್ಯುತಿಹರಿಂದು ಗುಡಿಗಳಲಿ ಹರಿ ಜನರನು || ೪ ||

ಭಾರತದ ದೇಶದೊಳಗಿದು ವರೆಗೆ ಜನಿಸದಿಹ |
ತೋರುವದು ಮುಂದೆಯೂ ಜನಿಸದೋಲಿಹದಲ್ಲಿ |
ವೀರಾತ್ಮ ಧೀರಾತ್ಮ ಪುಣ್ಯಾತ್ಮ ಜನಿಸಿದನು ಭಾರತಾಂಬೆಯ ಸುಕೃತದೆ ||
ಆರಿಲ್ಲ ಜಗದೊಳಗೆ ಮುಂದಾಳು ಸರಿಯಿವ ನಿ |
ಗಾರಿಲ್ಲ ಬುದ್ಧಿಯೊಳು ಸರಿಯಾದವರು ಜಗದೊ |
ಳಾರು ಸರಿಗಟ್ಟುವರು ಭೂಮಿ ಪರಮೇಶ್ವರನ ಕರಮಚಂದನ ತನಯನ || ೫ ||

ಬಡವರೇ ದೇವರೆಂದರಿತು ನಡೆಯುವನಿವನು |
ಬಡ ಜನರ ಸೇವೆಯೊಳು ದೇಹ ಸವೆಸಿದನಿವನು |
ಬಡ ಜನರ ಕಲ್ಯಾಣ ಮಾರ್ಗಶೋಧಕನಿವನು ಬಡವರೇಳ್ಗೆಯ ಮಾಡಲು ||
ಕಡು ಜಾಣನೈ ಮಹಾ ಸಾಮರ್ಥ್ಯವುಳ್ಳವನು |
ಎಡರಿಗಂಜದೆ ಸತ್ಯ ಪಥದಿಂದೆ ನಡೆಯುವನು |
ದುಡಿವನೈ ಯುವಕರೊಲು ತನ್ನಯೆಪ್ಪತ್ತನೆಯ ವರ್ಷ ವಯದೊಳಗೆ ಸಹಿತ || ೬ ||

ತರುಣರೋಲುತ್ಸಾಹ ಭರಿತ ಮನದವನಿವನು |
ಪರಮ ಶಾಂತಿಯ ಮೂರ್ತಿ ನಿಜವಾಗಿ ತಾನಿಹನು |
ಅರುಹುವನು ಸತ್ಯ ನಿರ್ಹಿಂಸೆಗಳ ಬೋಧವನು ಪರಮ ಧರ್ಮಾತ್ಮ ನಿವನು ||

ಒರೆಯಲಿಕೆ ಬಾರದೊಲು ಶ್ರೇಷ್ಠ ಕೃತಿಯೆಸಗಿಹನು |
ಪರಿಪರಿಯ ಗುಣ ರತ್ನಗಳ ಖನಿಯು ತಾನಿಹನು |
ಕರುಣಸಾಗರನಿವನು ರಾಜಕಾರಣ ಗುರುವು ಮುತ್ಸದ್ದಿ ಮಣಿಯೀತನು || ೭ ||

ಇಳೆಯ ಮೇಲಿರುವೆಲ್ಲ ಮಾನವರ ಮನಗಳ |
ನ್ನೆಳಕೊಂಡನೈ ತನ್ನ ಗುಣದ ತನಿಗಂಪಿನಿಂ |
ಗಳಿಸಲಿಲ್ಲಿವನನಿತು ಸರ್ವ ವರ್ಗದ ಪ್ರೀತಿ ಮತ್ತಾರು ಭಾರತದೊಳು||
ತಿಲಮಾತ್ರ ಪಕ್ಷಪಾತತೆಯಿಲ್ಲವೀತನೊಳು |
ನೆಲೆಸದಿವನೊಳು ಭೇದ ಧರ್ಮ ಜಾತ್ಯಾದಿಗಳು |
ನೆಲೆಸದೈ ಮತ್ತಾವ ಭೇದ ಭಾವವು ಪೂಜ್ಯ ಲಕ್ಷ್ಮೀಸುತನ ಮನದೊಳು || ೮ ||

ಎದುರಾಳಿಗಳ ಕೂಡ ಪ್ರೇಮದಿಂ ವರ್ತಿಪನು |
ಹೃದಯಮಂ ಸ್ಪರ್ಶಿಸದು ವೈರತ್ವತಾನಿವನ |
ಕದನವನು ಮಾಡುವನು ನಿಃಶಸ್ತ್ರದಿಂದಿವನು ಪ್ರೇಮಮಯ ಮಾರ್ಗದಿಂದೆ ||
ಎದುರಾಳಿಗಳ ಮನದ ದ್ವೇಷಗಳೆಯುವನಿವನು |
ಕದಲಲಾರನು ತನ್ನ ಧ್ಯೇಯವನು ಬಿಟ್ಟೀನು |
ಹೆದರನೈ ವಿಪದಿನಲಿ ಲೀಲೆಯಿಂನುಸುಳುವನು ಯುಕ್ತಿನಿಂದೀಮಹಿಮನು || ೯ ||

ನೆಲೆಸಿದೆ ಮಹಾವೀರ ಬುದ್ಧರೋಲ್ ಪ್ರಾಣಿದಯೆ |
ನೆಲೆಸಿರುವದೀತನಲ್ಲಸ್ಪೃಶ್ಯರುದ್ಧಾರ |
ಗೊಳಿಪ ಪ್ರಬಲೇಚ್ಛೆಮೇಣ್ ಕರ್ತೃತ್ವ ಘನಶಕ್ತಿ ಧರ್ಮಾತ್ಮ ಬಸವನಂತೆ ||
ನೆಲೆಸಿಹುದು ಹಿಂದೂ ಮಹಮ್ಮದೀಯರೊಳು ಕೆಳೆ |
ನೆಲೆಗೊಳಿಪ ಸಾಮರ್ಥ್ಯ ನಾನಕ ಶಹನ ಹಾಗೆ |
ಉಳಿದವರು ಸರಿಯಲ್ಲವೀತನಿಗೆ ಭಾರತದ ದೇಶದೊಳು ನೈಜವಾಗಿ || ೧೦ ||

ಹದಿನೆಂಟು ವರ್ಷ ಕಾಂಗ್ರೆಸ ಸೂತ್ರವ ಹಿಡಿದು |
ಅಧಿಕತರ ರಾಷ್ಟ್ರದುನ್ನತಿಯಗೊಳಿಸಿದನಿವನು |
ಚದುರತನದಿಂ ಕಳೆಯ ತೊಡಗಿಹನು ದೇಶಪರತಂತ್ರವೀ ವೀರವರನು ||
ಹೃದಯದೊಳು ನಂಬಿಹಳು ಭಾರತಾಂಬೆಯು ತಾನು |
ಎದೆಗಾರನಿವನಿಂದೆ ಬಂಧವಳಿಯುವದೆಂದು |
ಸದಮಲಚರಿತನುಮೇಣ್ ರಾಷ್ಟ್ರ ಭಕ್ತಾಗ್ರಣಿಯು ಭಾರತದ ಪ್ರಾಣನಿವನು || ೧೧ ||

ಭಾರತೀಯರ ಧರ್ಮವರ ಜಗದ್ಗುರುವಿವನು |
ಘೋರ ವೈಷಮ್ಯ ವಿಷ ಸುಡಲು ನಡು ಕಟ್ಟಿಹನು |
ಭೂರಿವಿಳ್ನದಿ ನುಸುಳಿ ಹರಿಜನಗಳುನ್ನತಿಯಗೈದಿಹ ಮಹಾ ಪುರುಷನು ||
ತೋರಿಸುವನೈನಿಂತು ಕೈಮಾಡಿ ಹಣ ದೊರೆವ |
ಸಾರಪಥವಿದುವೆಂದು ಖಾದಿ ಧರಿಸುವದೆಂದು |
ಚಾರು ಭಾರತದೇವಿ ಕಂಠಮಣಿಯಾಗಿರುವ ಪುಣುತ ಮೋಹನದಾಸನು || ೧೨ ||

ದೇಶಸಾಂಸಾರಿಕನು ರಾಷ್ಟ್ರಕಂಟಿದ ರುಜೆಯ |
ನಾಶಮಾಡಲು ಬಲ್ಲ ಧನ್ವಂತರಿಯು ತಾನು |
ಬೇಸರದೆ ಹಗಲಿರುಳು ದೇಹ ಮನ ಸವೆಸುವನು ಭಾರತೋದ್ಧಾರ
ಕಾಗಿ ||

ಭೂಷಿತನು ಪರಮೋಚ್ಚನೀತಿಯಿಂ ಷಡರಿಗಳು |
ವಾಸಮಾಡದ ಪೂತ ಚೇತಸುಳ್ಳವನಿವನು |
ಭಾಷೆಯಾಡದ ಸಟೆಯ ಪರರನ್ನು ನಿಂದಿಸದ ಪಾವಿತ್ರ್ಯವಾಣಿಯು
ತನು || ೧೩ ||

ಇವನ ಕೀರ್ತಿಯ ಭೇರಿ ಜಗವೆಲ್ಲ ಮೊಳಗುತಿಹು |
ದಿವನ ಕೀರ್ತಿಯ ಗಂಧ ವಿಶ್ವವನು ಮೋಹಿಸುವ |
ದಿವನ ಕೀರ್ತಿ ಪ್ರಭಾಕರನು ಲೋಕವನೆಲ್ಲ ಬೆಳಗುವನು ಬೆಳಗು
ಬೈಗು ||

ಇವನಂಥ ಮುಂದಾಳು ಹುಟ್ಟಿಲ್ಲ ಭಾರತದೊ |
ಳಿವನು ಕೋಟ್ಯಾವಧಿ ಜನರನುಯಾಯಿಯುಳ್ಳವನು |
ಇವನು ಭಾರತದನಭಿಷಿಕ್ತ ಸಮ್ರಾಜ ಮೇಣ್ ಭಾರತದ ಪರಮ
ಗುರುವು || ೧೪ ||

ಹೊಗಳಲಾರನು ಮಹಾ ಶೇಷನೀತನ ಸರ್ವ |
ಸುಗುಣಗಳ ಕಾರ್ಯಗಳ ಯೋಗ್ಯತೆಯ ನಿಜವಾಗಿ |
ಹೊಗಳಬಲ್ಲೆನೆ? ಮಹಾತ್ಮರ ಸಕಲ ಕಾರ್ಯಗಳ ನಾನು ಪಾಮರ
ಮನುಜನು ||

ಒಲವಿನೊಳು ಬೇಡುವೊಲು ಸರ್ವ ರಾಷ್ಟ್ರದ ಜನರು |
ಬಲು ನಮ್ರತನದಿಂದೆ ಬೇಡುವೆನು ದೇವರಲಿ |
ಇಳೆಯನುದ್ಧರಿಸಲಿಕೆ ಭವಿಸಿದೀ ಪರಮನಿಗೆ ಪೂರ್ಣಾಯುವೀಯ
ಲೆಂದು || ೧೫ ||

ಬನಹಟ್ಟಿ.
ತಾ. ೨-೧೦-೧೯೩೮. } ತುಕಾರಾಮಪ್ಪ ರತ್ನಪ್ಪ ಕೋಪರಡೆ.

# ಶುದ್ಧಿ ಸಮಾಚಾರ.

ಆರ್ಯಸಮಾಜ ಆರಾ ಎಂಬಲ್ಲಿ ಯವನ ಮತದಿಂದ ವಾಸು ಸಿಂಹನನ್ನು 'ಶುದ್ಧಿ' ಮಾಡಿ ಸ್ವಾಮಿ ರಮಾನಂದಜಿಯವರು ಹಿಂದು ಸಮಾಜಕ್ಕೆ ಸೇರಿಸಿದರು.

❂ ❂ ❂

ಮುಝಫರಪುರ್ ಎಂಬಲ್ಲಿ ಸನಾತನ ಬ್ರಾಹ್ಮಣರಾಗಿದ್ದು ಗೃಹಕಲಹದಿಂದ ಎಂಟು ವರ್ಷಗಳ ಮೊದಲು ಮಹಮ್ಮದೀಯರಾಗಿದ್ದ ವಿಖ್ಯಾತ ಡಾಕ್ಟರ್ ಮಹಮ್ಮದ ಅಬ್ದುಲ್ ಅಜೀಜ್ ಎಂಬವರನ್ನು ಆರ್ಯಸಮಾಜ ಸೋನ್‌ಪುರ್ ಎಂಬಲ್ಲಿ 'ಶುದ್ಧಿ' ಮಾಡಿ ವೈದಿಕ ಧರ್ಮ ದೀಕ್ಷೆಯಿಂದ ಹಿಂದೂಧರ್ಮಕ್ಕೆ ಸ್ವೀಕರಿಸಲಾಯಿತು. ಅವರ ಕುಟುಂಬದವರು ಈಗಲೂ ಸನಾತನಿ ಬ್ರಾಹ್ಮಣರಾಗಿಯೇ ಇದ್ದಾರೆ.

❂ ❂ ❂

ಬಿಕಾನೇರ್ ಆರ್ಯಸಮಾಜದವರು ಗಂಗಾ ಎಂಬ ಹಿಂದೂ ಸ್ತ್ರೀಯನ್ನು ಬಲಾತ್ಕಾರದಿಂದ ಮುಸಲ್ಮಾನಳನ್ನಾಗಿ ಮಾಡುತ್ತಿದ್ದಾಗ ತಪ್ಪಿಸಿ ಮುಸಲ್ಮಾನರನ್ನು ಪೋಲೀಸರ ವಶಪಡಿಸಿ ಅವಳನ್ನು ರಕ್ಷಿಸಿದರು.

❂ ❂ ❂

ಆರ್ಯಸಮಾಜ ಕಾಂಕಿನಾಡಾ ಎಂಬಲ್ಲಿ ಒಬ್ಬ ಬಂಗಾಳಿ ಯುವಕನನ್ನು ಮುಸಲ್ಮಾನ ಮತದಿಂದ 'ಶುದ್ಧಿ' ಮಾಡಿ ಹಿಂದೂ ಧರ್ಮದೀಕ್ಷೆ ಕೊಡಲಾಯಿತು.

❂ ❂ ❂

ಮೈನ್‌ಪುರಿ ಆರ್ಯಸಮಾಜದವರು ಕ್ರಿಸ್ತರಾಗಿದ್ದ ಹಲವು ಹರಿಜನರನ್ನು ಹಿಂದೂ ಧರ್ಮಕ್ಕೆ ಸೇರಿಸಿದರು. ಹತ್ತು ಹರಿಜನ ಕ್ರಿಸ್ತ ಬಾಲಕರನ್ನು ಆರ್ಯ ಪ್ರೈಮರಿ ಸ್ಕೂಲಿಗೆ ಸೇರಿಸಿ ಶಿಕ್ಷಣ ಕೊಡುತ್ತಾರೆ.

"ರಾಷ್ಟ್ರಬಂಧು."

# ಬಾಗಲಕೋಟೆ.

ತಾ. ೨೯-೯-೩೮ ನೇ ಗುರುವಾರ ಸಂಜೆ ೬ ಘಂಟೆಗೆ ಬಾಗಲಕೋಟೆ ೧ ನೇ ನಂಬರ ಕನ್ನಡ ಗಂಡುಹುಡುಗರ ಶಾಲೆಯಲ್ಲಿ ೧. ಶ್ರೀ. ಸುಬುದ್ಧಿ ಹಿರೇಮಠ ಬಿ. ಎ. ಇವರು 'ಶರಣ ಸಾಹಿತ್ಯ' ಈ ವಿಷಯದ ಮೇಲೆ ಭಾಷಣ ೨. ವಿಜಾಪುರ ವಿದ್ಯಾರಣ್ಯ ಹಾಯಸ್ಕೂಲಿನ ಹೆಡ್‌ಮಾಸ್ತರರಾದ ಶ್ರೀ. ಎಚ್. ಬಿ. ಕೊಣ್ಣೂರ ಎಂ. ಎ. ಇವರ ಭಾಷಣಗಳಿದ್ದವು.

ಬಾಗಲಕೋಟೆಯ ನಾಡಹಬ್ಬದ ಕಾರ್ಯದರ್ಶಿಗಳಾದ ಶ್ರೀ. ಬ. ಮ. ಬಣಗಾರ ಮತ್ತು ಶ್ರೀ. ವಾಸುದೇವ ಬುರ್ಲಿ ಇವರೀರ್ವರು ಹರಿಜನರಿಗೆ ಕನ್ನಡ ೧ ನೇ ನಂಬರ ಶಾಲೆಯಲ್ಲಿ ಭಾಷಣಗಳಿರುವವು, ನೀವು ಎಲ್ಲ ಹರಿಜನರು ಬರಬೇಕೆಂದು ಹೇಳಿಹೋದರು. ಅವರು ಹೇಳಿದ ಪ್ರಕಾರ ನಾವೆಲ್ಲರೂ ಹೋದೆವು. ಸದರಿಯವರ ಭಾಷಣ ಕನ್ನಡ ೧ ನೇ ನಂಬರ ಶಾಲೆಯಲ್ಲಿ ಮಳೆ ಬಂದು ಸೋರಿದ್ದರ ಮೂಲಕ ಅಲ್ಲಿ ಇಡದೆ ಶ್ರೀ ಕೊತಲಪ್ಪನ ಗುಡಿಯ ಮಗ್ಗಲಿರುವ ದೊಡ್ಡ ಹಾಲಿನಲ್ಲಿ ಇಟ್ಟಿದ್ದರು. ಈ ಎಲ್ಲ ಹರಿಜನ ಬಾಂಧವರು ಅಲ್ಲಿಗೆ ಹೋದರು. ಸದರಿ ಕಾರ್ಯದರ್ಶಿಗಳು ಹರಿಜನರೇ, ಬ್ರಾಹ್ಮಣರು ನಮ್ಮ ಹಾಲದಲ್ಲಿ ಹರಿಜನರನ್ನು ಬಿಡಬಾರದು. ಅಂದರೆ ನಿಮಗೆ ಈ ಸ್ಥಳವನ್ನು ಕೊಡುವೆವು. ಮತ್ತು ಈ ಹಾಲದಲ್ಲಿ ಹರಿಜನರನ್ನು ಪ್ರವೇಶಮಾಡಗೊಡಬಾರದೆಂದು ಕಟ್ಟಪ್ಪಣೆ ಮಾಡಿಕೊಟ್ಟಿರುವರು. ಎಂದು ಹೇಳಿದರು. ಅವರ ಮಾತುಗಳನ್ನು ಕೇಳಿ ಹರಿಜನ ಬಂಧುಗಳು ಇಲ್ಲಿಗೆ ಬಂದು ಅಪಮಾನಹೊಂದಿದೆವೆಂದು ಹೇಳಿಕೊಳ್ಳುತ್ತಾ ಹಿಂದಿರುಗಿ ಹೋದರು. ಮತ್ತು ವ್ಯಾಖ್ಯಾತರ ಸ್ಥಳ ಕೊತಲಪ್ಪನ ಗುಡಿಯಲ್ಲಿ ಅಲ್ಲ. ಜಾಹೀರ ಸ್ಥಳದಲ್ಲಿ ಇಟ್ಟಿದ್ದರು.

ವಾಚಕ ಮಹನೀಯರೇ ನೋಡಿರಿ ಅನೇಕ ಬ್ರಾಹ್ಮಣರು ಮತ್ತು ಲಿಂಗಾಯತರು ಬಾಯಲ್ಲಿ ಬೆಲ್ಲ, ಎದೆಯಲ್ಲಿ ವಿಷ, ಇಟ್ಟಿರುವರೆಂಬುದು ಸ್ಪಷ್ಟವಾಗುವದೋ ಇಲ್ಲವೋ ಎಂಬದನ್ನು ನೀವೇ ವಿಚಾರಮಾಡಿರಿ. ಮೇಲಿನ ಸಂಗತಿಯಿಂದ ಕರ್ನಾಟಕದ ಏಕೀಕರಣವು ತೀವ್ರವೇ ಆಗುವದೆಂದು ತಿಲಮಾತ್ರವೂ ಸಂಶಯವಿಲ್ಲವೆಂದು ತೋರುತ್ತದೆ. ಅಯ್ಯೋ! ಶಿವ!! ಶಿವ!!! ಹರಿಜನ ಬಂಧುಗಳು ಹಿಂದುಗಳಲ್ಲವೆ? ಮತ್ತು ಹಿಂದೂಧರ್ಮದವರಲ್ಲಿ ಜನ್ಮ ತಾಳಿದವರಲ್ಲವೆ? ಮಹನೀಯರೆ ನೀವೇ ವಿಚಾರಿಸಿರಿ.

ತಮ್ಮ ನಮ್ರ ಸೇವಕ
ಓರ್ವ ಹರಿಜನ ತರುಣ.

—ಕಾರವಾರ ಜಿಲ್ಲಾ ಭಟಕಳ ಪೇಟಾದಲ್ಲಿ ಕಳೆದ ವಾರ ವಿಪರೀತ ಮಳೆಯಾಗಿ ನೆರೆಹಾವಳಿಯಿಂದ ಸಾವಿರಾರು ಜನರು ಹೊಟ್ಟೆ ಬಟ್ಟೆಗಳಿಗಿಲ್ಲದೆ ಬಳಲುತ್ತಿದ್ದಾರೆ.

ವಿಮರ್ಶಾತ್ಮಕ

# ಪ್ರಶ್ನೋತ್ತರ.

## ಅಸ್ಪೃಶ್ಯತೆ ಮತ್ತು ಧರ್ಮ.

ಪ್ರಶ್ನೆ— ಅಸ್ಪೃಶ್ಯತಾ ನಿವಾರಣೆಯ ಬಗ್ಗೆ ನಿನ್ನೆ ನೀವು ಭಾಷಣಮಾಡಿದ್ದರಲ್ಲಿ ಕೆಲವು ಸಂಶಯಗಳುಂಟಾಗಿವೆ. ಅವುಗಳ ನಿವಾರಣೆಗಾಗಿ ಈಗ ನಿಮ್ಮ ಸಂಗಡ ಪ್ರಸ್ತಾಪಿಸಬಹುದೆ?

ಉತ್ತರ— ಅಗತ್ಯವಾಗಿ ಪ್ರಸ್ತಾಪಿಸಿರಿ. ನಿಮ್ಮ ಸಂಶಯ ನಿವಾರಣೆ ಮಾಡುತ್ತೇನೆಂದೇನೂ ಹೇಳಲಾರೆ. ಆದರೆ ನನಗೆ ತಿಳಿದುದನ್ನು ನಾನು ಹೇಳುತ್ತೇನೆ.

ಪ್ರಶ್ನೆ— ರಾಜಕೀಯ ದೃಷ್ಟಿಯಿಂದ ಅಸ್ಪೃಶ್ಯತೆ ನಿವಾರಣೆಯಾಗಬೇಕೆಂದು ಕೆಲವರು ಹೇಳುತ್ತಿದ್ದಾರೆ. ಆದರೆ ನೀವು ಧಾರ್ಮಿಕ ದೃಷ್ಟಿಯಿಂದಲೇ ಅಸ್ಪೃಶ್ಯತೆಯು ಪಾಪವೆಂದು ಹೇಳಿದಿರಿ. ಇದು ಹೇಗೆ?

ಉತ್ತರ— ಈಗ ಹಿಂದು ಸಮಾಜದಲ್ಲಿ ಅಸ್ಪೃಶ್ಯತೆಯು ಧಾರ್ಮಿಕ ದೃಷ್ಟಿಯಿಂದಲೇ ಇದೆ. ಇದರ ನಿವಾರಣೆಯಾದರೂ ಧಾರ್ಮಿಕ ದೃಷ್ಟಿಯಿಂದಲೇ ಆಗಬೇಕು. ಅದಕ್ಕಾಗಿಯೇ ಇದು ಹಿಂದು ಧರ್ಮಕ್ಕೆ ಒಂದು ಕಲಂಕವೆಂದು ಗಾಂಧೀಜಿಯವರೇ ಮೊದಲಾದವರು ಹೇಳುತ್ತಿದ್ದಾರೆ.

ಪ್ರಶ್ನೆ— ಈ ಜಾತಿಗಳನ್ನು ನಾವೇನೂ ಈಗ ಮಾಡಿಲ್ಲ. ಅನಾದಿ ಕಾಲದಿಂದಲೂ ಅವೆ. ಎಲ್ಲ ಜಾತಿಯವರಿಗೂ ವಿಜಯದಶಮಿ ಹಬ್ಬದಲ್ಲಿ ಅವರವರ ಕರ್ತವ್ಯಗಳು ಇದ್ದೇ ಇವೆ. ಎಲ್ಲರೂ ಈ ಹಬ್ಬವನ್ನು ಮಾಡೇ ಮಾಡುತ್ತಾರೆ. ಆದರೆ ಅವರನ್ನು ಮುಟ್ಟಬೇಕೆಂದೇನೂ ಶಾಸ್ತ್ರದಲ್ಲಿ ಹೇಳಿಲ್ಲ. ರೂಢಿಯೂ ಇಲ್ಲ.

ಉತ್ತರ— ಪ್ರಾಚೀನ ಕಾಲದಲ್ಲಿ ಈಗಿನಂತೆ ಈ ದೇಶದಲ್ಲಿ ಜಾತಿಗಳಿರಲಿಲ್ಲ. ಆರ್ಯರು ಈ ದೇಶಕ್ಕೆ ಬಂದನಂತರ.....

ಪ್ರಶ್ನೆ— ಆರ್ಯರು ಈ ದೇಶಕ್ಕೆ ಬಂದರೆಂದು ವೇದಗಳಲ್ಲಿ ಎಲ್ಲಿ ಹೇಳಿದೆ? ವೇದವೇ ಮೊದಲನೆಯ ಗ್ರಂಥ. ಮುಸಲ್ಮಾನರು ಈ ದೇಶಕ್ಕೆ ಬಂದರೆಂದು ಬೇರೆ ಇತಿಹಾಸಗಳಿಂದ ಗೊತ್ತಾಗುವಂತೆ ಆರ್ಯರು ಈ ದೇಶಕ್ಕೆ ಬಂದರೆಂದು ಯಾತರಿಂದ ಗೊತ್ತಾಗುತ್ತದೆ?

ಉತ್ತರ— ಸ್ವಲ್ಪ ನಿಧಾನಿಸಿರಿ. ಹೇಳುವುದಾದರೂ ಪೂರ್ತಿಯಾಗಲಿ. ಅನಂತರ ನೀವು ಮಾತನಾಡಬಹುದು. ಆರ್ಯರು ಈ ದೇಶಕ್ಕೆ ಬಂದರೆಂಬುದು ವೇದಗಳಲ್ಲಿಯೇ ಉಕ್ತವಾದ ಅನೇಕ ಸಂಗತಿಗಳಿಂದ ಗೊತ್ತಾಗುತ್ತದೆ. ವೇದಗಳನ್ನು ಕೇವಲ ಧಾರ್ಮಿಕ ದೃಷ್ಟಿಯಿಂದಲೇ ನೋಡುವವರು ಕೆಲವರು. ಅವುಗಳನ್ನು ಐತಿಹಾಸಿಕ ದೃಷ್ಟಿಯಿಂದಲೂ ಇತ್ತೀಚಿಗೆ ಅನೇಕರು ಅಧ್ಯಯನ ಮಾಡಿದ್ದಾರೆ. ನೀವು ಆ ದೃಷ್ಟಿಯಿಂದ ನೋಡಿದರೆ ಗೊತ್ತಾಗುತ್ತದೆ.

ಪ್ರಶ್ನೆ— ನೀವು ಶಾಸ್ತ್ರವನ್ನು ಪ್ರಮಾಣವಾಗಿಟ್ಟುಕೊಂಡು ನಡೆಯುವಿರೋ? ಅಥವಾ ನಿಮ್ಮ ಬುದ್ಧಿಗೆ ತೋರಿದಂತೆ ನಡೆಯುವಿರೋ?

ಉತ್ತರ— ವೇದ ಮೊದಲುಗೊಂಡು ಎಲ್ಲ ಧರ್ಮಗ್ರಂಥಗಳೂ ಮನುಷ್ಯ ಕೃತವೆಂದೇ ನಾನು ತಿಳಿದಿದ್ದೇನೆ. ಅವುಗಳಲ್ಲಿ ಅನೇಕ ಭಿನ್ನಾಭಿಪ್ರಾಯಗಳಿವೆ. ಅವುಗಳನ್ನೆಲ್ಲಾ ನೋಡಿ ನನ್ನ ಸದಸದ್ವಿವೇಕ ಬುದ್ಧಿಗೆ ಯಾವುದು ಯುಕ್ತವೆಂದು ತೋರುವುದೋ ಅದನ್ನೇ ನಾನು ಅನುಸರಿಸುವೆನು.

ಪ್ರಶ್ನೆ— ನಿಮಗೆ ಯುಕ್ತಕಂಡದ್ದನ್ನೇ ಅನುಸರಿಸಿದರೂ ಅದಾದರೂ ಒಂದು ಗ್ರಂಥದಲ್ಲಿ ಉಕ್ತವಾದದ್ದೇ ಇರುತ್ತದಷ್ಟೆ. ಅಂದ ಮೇಲೆ ನೀವೂ ಒಂದು ಶಾಸ್ತ್ರವನ್ನೇ ಅನುಸರಿಸುತ್ತಿದ್ದೀರೆಂದೇ ಹೇಳಿದಂತಾಯಿತು.

ಉತ್ತರ— ಹಾಗಲ್ಲ. ಯಾವ ಗ್ರಂಥದಲ್ಲಿ ಇಲ್ಲದಿದ್ದುದೂ ನನಗೆ ಒಮ್ಮೆ ಹೊಳೆದರೂ ಹೊಳೆಯಬಹುದು. ನವರಾತ್ರಿ ಹಬ್ಬದ ಸಂಗತಿಗಳೇನೋ ಗ್ರಂಥಗಳಲ್ಲಿವೆ. ಆದರೆ ಅದರಿಂದ ನವರಾತ್ರಿ, ದೀಪ, ಘಟಸ್ಥಾಪನೆ ಮೊದಲಾದವುಗಳನ್ನು ಕುರಿತು ನಿನ್ನೆ ವಿವೇಚನೆ ಮಾಡಿದ ರೀತಿ ನನಗೆ ಹೊಳೆದುದು. ನಾನು ಯಾವ ಗ್ರಂಥದಲ್ಲಿಯೂ ಆ ವಿವೇಚನೆಯನ್ನು ನೋಡಿಲ್ಲ. ಹೀಗೆ ಮನುಷ್ಯನಿಗೆ ಅನೇಕ ಹೊಸ ಸಂಗತಿಗಳೂ ಗೊತ್ತಾಗುವುದುಂಟು.

ಜಗತ್ತಿನಲ್ಲಿ ಈ ಪ್ರಕಾರ ಈ ವರೆಗೂ ವಿಚಾರಕ್ರಾಂತಿಯಾಗುತ್ತಾ ಬಂದಿದೆ. ಒಂದು ಕಾಲದಲ್ಲಿ ಕೆಲವರಿಂದ ಹೇಳಲ್ಪಟ್ಟ ಸಂಗತಿಗಳ ಸಂಗ್ರಹವೇ ವೇದ. ಅದರಲ್ಲಿರುವ ಸಂಗತಿಗಳಿಂದಲೇ ಆ ಜನರು ಉತ್ತರ ಧ್ರುವ ಪ್ರದೇಶದಲ್ಲಿದ್ದರೆಂದು ಸ್ಪಷ್ಟವಾಗುತ್ತದೆ. ಲೋಕಮಾನ್ಯ ಟಿಳಕರು "The Arctic Home in the Vedas" ಎಂಬ ಗ್ರಂಥದಲ್ಲಿ ನೂರಾರು ವೇದ ವಾಕ್ಯಗಳಿಂದ ಈ ಅಭಿಪ್ರಾಯವನ್ನು ಸಿದ್ಧಾಂತಗೊಳಿಸಿದ್ದಾರೆ.

ಡಾ. ವಾರನ್ ಮೊದಲಾದ ಪಾಶ್ಚಾತ್ಯ ಸಂಶೋಧಕರು ಉತ್ತರ ಧ್ರುವ ಪ್ರದೇಶದಲ್ಲಿ ಮಾರ್ಚಿಯಿಂದ ಸೆಪ್ಟೆಂಬರದ ವರೆಗೆ ಆರು ತಿಂಗಳು ಹಗಲು, ಅನಂತರ ಆರು ತಿಂಗಳು ರಾತ್ರಿ ಇರುತ್ತದೆಂದು ಸಪ್ರಮಾಣವಾಗಿ ತೋರಿಸಿದ್ದಾರೆ. ಹೀಗೆ ಆರು ತಿಂಗಳು ಸೂರ್ಯನು ಆಕಾಶದಲ್ಲಿ ಚಕ್ರಾಕಾರವಾಗಿ ತಿರುಗುತ್ತಿದ್ದುದನ್ನು ವೇದಕಾಲದ ಜನರು ನೋಡಿದ್ದರು. ಅಂತೆಯೇ ಋಗ್ವೇದದ ೧೦-೮೯-೨ ನೆಯ ಋಕ್ಕಿನಲ್ಲಿ ಸೂರ್ಯನು ಚಕ್ರಾಕಾರವಾಗಿ ನಭೋಮಂಡಲದಲ್ಲಿ ತಿರುಗುತ್ತಿದ್ದುದನ್ನು ಸ್ಪಷ್ಟವಾಗಿ ತಿಳಿಸಿದೆ. ಅಂಥ ನೂರಾರು ಋಕ್ಕುಗಳಿವೆ. ಲೋಕಮಾನ್ಯರ ಅದ್ವಿತೀಯವಾದ ಆ ಗ್ರಂಥವನ್ನು ನೋಡಿದರೆ ಆರ್ಯರು ಈ ದೇಶಕ್ಕೆ ಬೇರೆ ಕಡೆಯಿಂದ ಬಂದರೆಂದು ಸ್ಪಷ್ಟವಾಗುತ್ತದೆ.

ಒಬ್ಬ ಲೋಕಮಾನ್ಯರೇ ಅಲ್ಲ; ಪ್ರೊಫೆಸರ್ ರುದ್ರದೇವ ಶಾಸ್ತ್ರಿ ವೇದಶಿರೋಮಣಿ, ಡಾ. ಶ್ರೀಧರ ವೆಂಕಟೇಶ ಕೇತಕರ, ಭಾರತಾಚಾರ್ಯ ವೈದ್ಯ ಮೊದಲಾದ ಅನೇಕ ವೇದಜ್ಞರು ವೇದಗಳಲ್ಲಿರುವ ಸಂಗತಿಗಳಿಂದಲೇ ಆರ್ಯರು ಈ ದೇಶಕ್ಕೆ ಬೇರೆ ಭಾಗಗಳಿಂದ ಬಂದರೆಂಬುದನ್ನು ಸ್ಪಷ್ಟಗೊಳಿಸಿದ್ದಾರೆ.

ಪ್ರಶ್ನೆ— ಇದೇನೂ ನಮ್ಮ ಈಗಿನ ವಿಷಯವಲ್ಲ. ಇದು ಹಾಗಿರಲಿ. ನೀವು ಲಿಂಗವಂತ ಮತದವರಷ್ಟೆ. ಎಂದ ಮೇಲೆ ನಿಮ್ಮ ಮತದಲ್ಲಿ ಅಸ್ಪೃಶ್ಯತೆ ಇಲ್ಲವೆ?

ಉತ್ತರ— ಲಿಂಗವಂತ ಮತದ ಅಸ್ಪೃಶ್ಯತೆಯ ರೀತಿ ಹೇಗೆಂದರೆ, ಲಿಂಗವಂತರಿಗೆ ಭಕ್ತ ಮತ್ತು ಭವಿ ಎಂಬೆರಡೇ ಜಾತಿಗಳು. ಲಿಂಗಧಾರಿಗಳಲ್ಲದ ಬ್ರಾಹ್ಮಣಾದಿ ಅಂತ್ಯಜರ ವರೆಗಿನ ಎಲ್ಲರೂ ಅವರಿಗೆ ಭವಿಗಳು. ಅವರೆಲ್ಲರೂ ಒಂದೇ.

ಪ್ರಶ್ನೆ— ಇದಕ್ಕೆ ಪ್ರಮಾಣ ಅದೆಯೆ?

ಉತ್ತರ— ಉಂಟು, ದೇವ ದೇವ ಬಿನ್ನಪವ ಅವಧಾರು. ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರೆಲ್ಲರನು

ಒಂದೆ ಎಂಬೆ. ಹಾರುವ ಮೊದಲು ಶ್ವಪಚಕಡೆಯಾಗಿ ಭವಿಯಾದವರನೆಲ್ಲರನು ಒಂದೆ ಎಂಬೆ.

ಪ್ರಶ್ನೆ— ನಮ್ಮ ಭಾಗವತದಲ್ಲಿ ವಿಪ್ರನಿಗಿಂತ ಭಗವದ್ಭಕ್ತನಾದ ಅಂತ್ಯಜನು ಹೆಚ್ಚಿನವನೆಂದು ಹೇಳಿದೆ. ನಿಮ್ಮಲ್ಲಿ ಒಂದೇ ಎಂದು ಮಾತ್ರ ಹೇಳಿದೆ. ಆದರೆ ಹಾಗೆ ಹೆಚ್ಚೆಂದು ಹೇಳಿದ ಶಾಸ್ತ್ರಕಾರರೇ ಮತ್ತೊಂದು ಕಡೆ ಅಂತ್ಯಜರನ್ನು ಮುಟ್ಟದರೆ ಸ್ನಾನಮಾಡಬೇಕೆಂದೂ ಹೇಳಿದ್ದಾರೆ. ಆದಕಾರಣ ಹೆಚ್ಚು ಎಂಬುದು ಎಲ್ಲಿ ಹೇಗೆ ಎಂಬುದರ ಅರ್ಥ ಮಾಡುವುದರಲ್ಲಿ ಜಾಣತನವಿದೆ. ನೀವು ಆ ವಚನದ ಅರ್ಥ ಹಾಗೆ ಮಾಡಿದ್ದು ಸರಿಯಲ್ಲ. ಬಸವಣ್ಣನವರು ಬಿಜ್ಜಳನ ಮಂತ್ರಿಯಾಗಿದ್ದರು. ಹರಳಯ್ಯನವರು ಶಿವಭಕ್ತರಿದ್ದುದರಿಂದ ಅವರ ಪ್ರಸಂಗವು ಮಾತ್ರ ಅವರ ಪುರಾಣದಲ್ಲಿ ಬಂದಿದೆಯೇ ವಿನಾ ಇನ್ನಿತರ ಅಂತ್ಯಜರಿಗೆ ಅವರು ಅಧಿಕಾರವನ್ನು ಕೊಟ್ಟು ದರ್ಬಾರದಲ್ಲಿ ಕೂಡಿಯೇ ಇದ್ದರೆಂದು ಎಲ್ಲಿಯೂ ಹೇಳಿಲ್ಲ.

ಉತ್ತರ— ಲಿಂಗಾಂಗಿಗಳಲ್ಲದ ಬ್ರಾಹ್ಮಣಾದಿ ಅಂತ್ಯಜರವರೆಗಿನ ಇತರರೆಲ್ಲರನ್ನೂ ಸಾಮಾಜಿಕ ದೃಷ್ಟಿಯಲ್ಲಿ ಸಮಾನರೆಂದೇ ಬಸವಣ್ಣನವರು ತಿಳಿಯುತ್ತಿದ್ದರೆಂದು ಮೇಲಿನ ವಚನದ ನಿಜಾರ್ಥವು. ಅವರ ಬೇರೆ ಅನೇಕ ವಚನಗಳಿಂದ ಇದೇ ಅರ್ಥವು ಸ್ಪಷ್ಟವಾಗುತ್ತದೆ.

ಈಗ ನೀವು ಕೇಳಿರುವ ಪ್ರಶ್ನೆಯೇ ಬಸವಣ್ಣನವರ ಮುಂದೆಯೂ ಒಮ್ಮೆ ಬಂದಿತ್ತು. ಭವಿಯಾದ ಬಿಜ್ಜಳನ ಗದ್ದುಗೆಯ ಕೆಳಗೆ ಬಸವಣ್ಣ ಕುಳಿತುಕೊಳ್ಳಬಹುದೆ ? ಎಂದು ಶರಣರು ಕೇಳಿದ್ದರು. ಆಗ ಬಸವಣ್ಣನವರು ಹೀಗೆ ಹೇಳಿದರು—

"ಹೊಲೆ ಹೊಲೆಯರ ಮನೆಯ ಹೊಕ್ಕಾದರೆಯೂ
ಸಲೆ ಕೈಕೂಲಿಯ ಮಾಡಿಯಾದರೆಯೂ ನಿಮ್ಮ ನಿಲುವಿಂಗೆ
ನಿಲುವೆನಲ್ಲದೆ ಎನ್ನೊಡಲವಸರಕ್ಕೆ ಕುದಿದೆನಾದರೆ ತಲೆ
ದಂಡ ಕೂಡಲಸಂಗಮ ದೇವ"

ಎಂದಮೇಲೆ ಬಿಜ್ಜಳನ ಗದ್ದುಗೆಯ ಕೆಳಗೇ ಏಕೆ? ಹೊಲೆಯರ ಮನೆಯಲ್ಲಿ ಕೈಕೂಲಿಯ ಕೆಲಸವನ್ನು ಕೂಡಾ ಅವರು ಮಾಡಲು ಸಿದ್ಧರಿದ್ದರೆಂದೇ ಸ್ಪಷ್ಟವಾಗುತ್ತದೆ. ಅವರ ದೃಷ್ಟಿಯಲ್ಲಿ ಮಂತ್ರಿತ್ವ ಹೆಚ್ಚಲ್ಲ. ಕೈಕೂಲಿ ಕಡಿಮೆಯಲ್ಲ. ಬಿಜ್ಜಳ ಹೆಚ್ಚಿನ ಕುಲದವನಲ್ಲ. ಹೊಲೆಯ ಕಡಿಮೆ ಕುಲದವನಲ್ಲ. ಲಿಂಗಾಂಗಿಗಳಲ್ಲದವರೆಲ್ಲಾ ಅವರಿಗೆ ಒಂದೇ ಎಂದು ಕಾಣುತ್ತಿದ್ದರೆಂದೇ ಇದರಿಂದ ಸ್ಪಷ್ಟವಾಗುತ್ತದೆ.

ಬಿಜ್ಜಳನ ದರ್ಬಾರಿಗೆ ಹೋಗಿ ಬಂದನಂತರ ಸ್ನಾನಮಾಡಿ....

ಪ್ರಶ್ನೆ— ಸಾಕು. ಸಂತೋಷ. ಸ್ನಾನಮಾಡುತ್ತಿದ್ದರಷ್ಟೆ. ಅಷ್ಟೇ ನಮಗೆ ಬೇಕು. ನಿಮಗೆ ಅದು ಮಾನ್ಯವಷ್ಟೆ?

ಉತ್ತರ— ತಾಳಿರಿ. ಪೂರ್ಣ ಮಾತಾಡಲಿಕ್ಕಾದರೂ ಅವಕಾಶಕೊಡಿರಿ. ಸ್ನಾನ, ಪೂಜೆ, ಊಟ ಇವು ನಮ್ಮ ಮನೆಯಲ್ಲಿ ನಡೆಯತಕ್ಕವು. ಇವು ಮನೆಯ ಹೊರಗೆ ಸಾರ್ವಜನಿಕವಾಗಿ ನಡೆಯತಕ್ಕ ಕಾರ್ಯಗಳಲ್ಲ. ಈಗ ಪ್ರಶ್ನೆ ಬಂದುದು ಸಾರ್ವಜನಿಕ ಅಸ್ಪೃಶ್ಯತೆಯ ವಿಷಯ.

ಬಸವಣ್ಣನವರು ಬಿಜ್ಜಳನ ದರ್ಬಾರಿನಿಂದ ಬಂದನಂತರ ಸ್ನಾನ ಮಾಡಿಯೇ ಪೂಜೆಮಾಡಿ ಪ್ರಸಾದ ಸ್ವೀಕರಿಸುತ್ತಿದ್ದರೆಂದು ತಿಳಿಯುವುದೇ ವಿಹಿತವಾಗಿದೆ. ಏಕೆಂದರೆ, ಸ್ನಾನ, ಪೂಜೆ, ಪ್ರಸಾದ ಸ್ವೀಕಾರ ಇವು ಲಿಂಗಾಂಗಿಗಳಿಗೆ ಒಂದು ಬಿಟ್ಟು ಒಂದಿಲ್ಲ. ಪ್ರಸಾದಸ್ವೀಕಾರದ ಮುಂಚೇ ಎಂದರೆ ಊಟಮಾಡುವ ಮುಂಚೆ ಲಿಂಗಪೂಜೆಯಾಗಲೇಬೇಕು. ಲಿಂಗಪೂಜೆಯ ಮುಂಚೆ ಸ್ನಾನವಾಗಲೇಬೇಕು. ಎಂದಮೇಲೆ ಬಿಜ್ಜಳನ ದರ್ಬಾರಿನಿಂದ ಬಂದಮೇಲೆ ಅವರು ಸ್ನಾನಮಾಡುತ್ತಿದ್ದರೆಂದೇ ತಿಳಿಯುವುದು ವಿಹಿತ. ಅದೇ ಪ್ರಕಾರ ಹೊಲೆಯರ ಮನೆಗೆ ಹೋಗಿದ್ದರೆ ಅಲ್ಲಿಂದ ಬಂದನಂತರವೂ ಸ್ನಾನಮಾಡುತ್ತಿದ್ದರು.

ಅವರಿಗೆ ಲಿಂಗಾಂಗಿಗಳಲ್ಲದ ಇತರ ಸಮಾಜದವರೆಲ್ಲರೂ ಸಾರ್ವಜನಿಕ ದೃಷ್ಟಿಯಲ್ಲಿ ಸಮಾನರಿದ್ದರೆಂದೇ ಅವರ ವಚನಗಳಿಂದ ಗೊತ್ತಾಗುತ್ತದೆ.

ಇನ್ನು, ಸ್ನಾನದ ವಿಷಯ. ಇದು ಅವರವರು ಇಟ್ಟುಕೊಂಡ ವ್ರತಾಚಾರಗಳಿಗೆ ಸಂಬಂಧಪಟ್ಟುದು. ಅಲಿಂಗಿಗಳನ್ನು ಮುಟ್ಟದೇ ಇದ್ದರೂ, ಲಿಂಗಾಂಗಿಗಳನ್ನು ಮುಟ್ಟದರೂ, ಸ್ನಾನಮಾಡಿಯೇ ಪೂಜಾದಿಗಳನ್ನು ಮಾಡುವವರೂ ಇದ್ದಾರೆ. ಆದಕಾರಣ ಇದು ವೈಯಕ್ತಿಕವಾದ ಸಂಗತಿಯು.

ಪ್ರಶ್ನೆ— ಪರಧರ್ಮದ ಮುಸಲ್ಮಾನ್ ಕ್ರಿಸ್ತ ಮೊದಲಾದವರನ್ನು ಬೇಕಾದ ಹಾಗೆ ಇವರು ಮುಟ್ಟುತ್ತಾರೆ. ಆದರೆ ಹಿಂದು ಧರ್ಮದವರಾದ ಹರಿಜನರನ್ನು ಮುಟ್ಟಲು ಇವರು ಇಷ್ಟೆಲ್ಲಾ ಶಾಸ್ತ್ರ ಹೇಳುತ್ತಾರಲ್ಲಾ!

ಉತ್ತರ— ಮುಸಲ್ಮಾನರೂ, ಕ್ರಿಸ್ತರೂ ನಮ್ಮ ಮೇಲೆ ರಾಜ್ಯಮಾಡಿದ್ದಾರೆ. ಎಂದಮೇಲೆ ಅವರು ನಮ್ಮನ್ನು ಮುಟ್ಟಿದರೆ ನಾವೇ ಧನ್ಯರೆಂದೂ ಒಂದು ಕಾಲದಲ್ಲಿ ನಮ್ಮಲ್ಲಿ ಅನೇಕರು ತಿಳಿದದ್ದುಂಟು. ಹಾಗೆಯೇ ಆದಿ ಜನರೂ (ಅಸ್ಪೃಶ್ಯರೂ) ನಮ್ಮ ಮೇಲೆ ಪ್ರಭುತ್ವ ನಡೆಸಿದ್ದರೆ ಈ ಅಸ್ಪೃಶ್ಯತೆಯು ಇರುತ್ತಿದ್ದಿಲ್ಲ. ಬಲವಂತರಿಗೆ ಬಾಗುವುದೂ ಬಲಹೀನರನ್ನು ಬಾಗಿಸುವುದೂ ಜನಸಾಮಾನ್ಯದ ಸ್ವಭಾವವೇ ಆಗಿದೆ. ಆದಿಜನರು ವಿದ್ಯೆ ಅಧಿಕಾರ ಸಂಪತ್ತುಗಳಿಂದ ಬಲವಂತರಾದ ವಿನಾ ಈ ಅಸ್ಪೃಶ್ಯತೆಯು ಅಳಿಯುವುದಿಲ್ಲ.

ಒಂದು ಕಾಲದಲ್ಲಾದ ಶಾಸ್ತ್ರವನ್ನು ಎಲ್ಲಾ ಕಾಲಗಳಲ್ಲಿಯೂ ಎಲ್ಲರೂ ಆಚರಿಸಲೇಬೇಕೆಂದೂ ಇಲ್ಲದಿದ್ದರೆ ಅವರು ಪಾಪಿಗಳಾಗುತ್ತಾರೆಂದೂ ತಿಳಿದವರೇ ಹೆಚ್ಚು. ಪಾಪ! ಅವರಿಗೆ ಧರ್ಮಶಾಸ್ತ್ರಗಳು ಕಾಲಮಾನದಂತೆ ಭಿನ್ನವಾಗುತ್ತವೆಂಬುದು ಗೊತ್ತೇ ಇಲ್ಲ. ಹಾಗೆ ಕಾಲಮಾನಕ್ಕೆ ತಕ್ಕಂತೆ ನಡೆಯುವುದೇ ಧರ್ಮವೆಂಬುದೂ ಅವರಿಗೆ ತಿಳಿಯದು. ಅವರು ರೂಢಿಗೆ ಬದ್ಧರಾಗಿರುತ್ತಾರೆ.

ಮನುಸ್ಮೃತಿಕಾರರ ಮತ, ಯಾಜ್ಞವಲ್ಕ್ಯರಿಗೆ ಮಾನ್ಯವಿಲ್ಲ. ಶಂಕರಾಚಾರ್ಯರ ಭಾಷ್ಯ, ಮಧ್ವಾಚಾರ್ಯರಿಗೆ ಮಾನ್ಯವಿಲ್ಲ. ಇವರೆಲ್ಲರೂ ಕಾಲಮಾನಕ್ಕೆ ತಕ್ಕಂತೆ ಆಗಿನ ಜನರ ಹಿತದ ಕಡೆಗೆ ನೋಡಿಯೇ ಶಾಸ್ತ್ರಗಳನ್ನು ಬರೆದರು. ಅವು ಆಗಿನ ಜನರಿಗೆ ಹಿತಕರವಾಗಿಯೂ ಪರಿಣಮಿಸಿರಬಹುದು.

ಆದರೆ ಈಗಿನ ಕಾಲ ಬೇರೆ. ಜಗತ್ತಿನಲ್ಲಿ ಅಭೂತಪೂರ್ವ ವಿಚಾರಕ್ರಾಂತಿಯಾಗಿದೆ. ಕಾಲು ನಡಿಗೆಯ ಕಾಲದ ಕೆಲವು ಆಚಾರ ವಿಚಾರಗಳು ಈಗಿನ ವಿಮಾನ ಯುಗದಲ್ಲಿ ಹೇಗೆ ಮಾನ್ಯವಾಗುವವು? ಓಲೆಯಕಾರನಿಂದ ಸಮಾಚಾರವನ್ನು ತಿಳಿದುಕೊಳ್ಳುವ ಕಾಲದ ವಿಚಾರಸರಣಿಯು ಈಗಿನ ರೇಡಿಯೋ ಕಾಲದಲ್ಲಿ ಹೇಗೆ ಸರಿಬರುವುದು? ಈಗಿನ ಜನರು ಈ ಆದಿ ಭೌತಿಕ ಶಾಸ್ತ್ರದಲ್ಲಿ ಮುಂದಾಗಿದ್ದಾರೆಯೇ ವಿನಾ ಆಧ್ಯಾತ್ಮಿಕ ಶಾಸ್ತ್ರದಲ್ಲಿ ಮೂಢರಿದ್ದಾರೆಂದೇ ಇವರ ಗ್ರಹಿಕೆ. ಧಾರ್ಮಿಕ ವಿಷಯದಲ್ಲಿಯೂ ಈಗ ಎಂಥ ವಿಚಾರಕ್ರಾಂತಿಯಾಗಿದೆಯೆಂಬುದರ ಕಲ್ಪನೆ ಕೂಡಾ ಇವರಿಗೆ ಬರಲು ಶಕ್ಯವೇ ಇಲ್ಲ. ಏಕೆಂದರೆ ಅಂಥ ವಿಚಾರಗಳ ಗಾಳಿ ಕೂಡಾ ಇವರಿಗೆ ಸೋಂಕಿಲ್ಲ. ಎಂದಮೇಲೆ ಇವರದೇನು ತಪ್ಪು?

ಹಿಂದಿನ ಭಾಷ್ಯಕಾರರಷ್ಟೇ ಯೋಗ್ಯತೆಯ ವೇದಜ್ಞರಾದ ಈಗಿನ ಶ್ರೀ ಸ್ವಾಮಿ ವಿವೇಕಾನಂದ, ಶ್ರೀ ಸ್ವಾಮಿ ದಯಾನಂದ, ಶ್ರೀ ಸ್ವಾಮಿ ರಾಮತೀರ್ಥ ಮೊದಲಾದ ವಿಭೂತಿಗಳು ಈ ಅಸ್ಪೃಶ್ಯತೆಯ ವಿಚಾರವಾಗಿಯಾಗಲಿ ಹಿಂದು ಧರ್ಮದ ಆಚಾರ ವಿಚಾರಗಳ ಸಂಬಂಧವಾಗಿಯಾಗಲಿ ಏನು ಹೇಳಿದ್ದಾರೆಂಬುದು ಅವರಿಗೆ ಗೊತ್ತೇ ಇಲ್ಲ.

ಹಿಂದು ಧರ್ಮವೇ ಜೀವನವಾಗಿರುವ ಮಹಾತ್ಮಾ ಗಾಂಧಿ, ಧರ್ಮಾತ್ಮಾ ಮಾಲವೀಜಿ, ಶ್ರೀ ಜಗದ್ಗುರು ಶಂಕರಾಚಾರ್ಯ ಡಾ. ಕುರ್ತಕೋಟಿ ಮೊದಲಾದ ವಿಭೂತಿಗಳೇನು ಹಿಂದು ಧರ್ಮ ಶಾಸ್ತ್ರಗಳನ್ನು ಅರಿಯದವರೆ? ಹಿಂದು ಧರ್ಮವನ್ನು ನಾಶಮಾಡುವವರೆ? ಹಿಂದುಗಳೆಲ್ಲಾ ಪಾಪಿಗಳಾಗಲೆಂದು ಪ್ರಯತ್ನಿಸುವವರೆ ?

ಹಿಂದಿನ ಸ್ಮೃತಿಕಾರರಿಗೆ ಇವರೆಲ್ಲರೂ ಸಮಾನರಾದವರೇ ಇದ್ದಾರೆ. ಇವರೆಲ್ಲರೂ ಈ ಕಾಲದ ಧರ್ಮಶಾಸ್ತ್ರವನ್ನು ಬೋಧಿಸುವವರು. ಯಾರಿಗೆ ಬೇರೆ ಬೇರೆ ಕಾಲಗಳ ಶಾಸ್ತ್ರಗಳನ್ನು ಪರಿಶೀಲಿಸಿ ನ್ಯಾಯಮಾರ್ಗವನ್ನು ಕಂಡುಹಿಡಿಯುವುದು ಶಕ್ಯವಿಲ್ಲವೋ ಅವರು ಮಹಾಜನರಾದ ಇಂಥ ಧರ್ಮಜ್ಞರ ಅಪ್ಪಣೆಯನ್ನೇ ಶಾಸ್ತ್ರ ವಚನವೆಂದು ತಿಳಿದಾದರೂ ನಡೆಯಬೇಕು. ಯಾರು ರೂಢಿಗೇನೇ ಬದ್ಧರಾಗಿ ವಿಮರ್ಶಕ ಬುದ್ಧಿಯಿಂದ ಯಾವುದನ್ನೂ ಅನುಸರಿಸಲು ಇಷ್ಟಪಡುವುದಿಲ್ಲವೋ ಅವರಿಗೆ ನಿಮ್ಮ ಮಾರ್ಗ ನಿಮಗೆ, ನಮ್ಮ ಮಾರ್ಗ ನಮಗೆ, ಎಂದು ಹೇಳಬೇಕೇ ವಿನಾ ಅವರ ಸಂಗಡ ಚರ್ಚಿಸುವುದು ಫಲಕಾರಿಯಲ್ಲ.

---

# ಮುಸ್ಲಿಂಲೀಗಿನ ನಿಜರೂಪ.

ಸಿಂಧ ಮುಸ್ಲಿಂಲೀಗಿನ ಪರಿಷತ್ತು ನೊನ್ನೆ ೮ನೆಯ ತಾರೀಖಿನ ದಿವಸ ಬ್ಯಾ. ಜಿನ್ನಾರವರ ಅಧ್ಯಕ್ಷತೆಯಲ್ಲಿ ಸೇರಿ ಒಂದು ಗೊತ್ತುವಳಿಯನ್ನು ಚರ್ಚಿಸುವುದೆಂದು ಪ್ರಕಟವಾಗಿದೆ. ಆ ಗೊತ್ತುವಳಿಯ ಮುಖ್ಯಾಂಶ ಹೀಗಿದೆ—

"ಹಿಂದುಸ್ಥಾನದಲ್ಲಿ ಎರಡು ಫೆಡರೇಶನ್ ಎಂದರೆ ಸಂಯುಕ್ತಘಟನೆಗಳು ಏರ್ಪಡಬೇಕು. ಒಂದು ಮುಸ್ಲಿಂ ಸಂಯುಕ್ತಘಟನೆ. ಇನ್ನೊಂದು ಹಿಂದು ಸಂಯುಕ್ತಘಟನೆ. ಮುಸ್ಲಿಂ ಸಂಯುಕ್ತಘಟನೆಯಲ್ಲಿ ಹಿಂದುಸ್ಥಾನದ ಎಲ್ಲಾ ಮುಸಲ್ಮಾನ್ ಸಂಸ್ಥಾನಗಳೂ, ಮುಸಲ್ಮಾನ್ ಬಹುಸಂಖ್ಯಾಕರಿರುವ ಭಾಗಗಳೂ ಕೂಡಬೇಕು. ಹಿಂದುಸಂಘಟನೆಯಲ್ಲಿ ಹಿಂದು ಸಂಸ್ಥಾನಗಳೂ, ಹಿಂದು ಬಹುಸಂಖ್ಯಾಕರ ಪ್ರದೇಶಗಳೂ ಸೇರಬೇಕು.

ಈ ಪ್ರಕಾರ ಮುಸ್ಲಿಂಲೀಗಿನವರು ಹಿಂದುಸ್ಥಾನದಲ್ಲಿ ಎರಡು ಸಂಯುಕ್ತ ಘಟನೆಗಳ ಮೇರೆಗಳನ್ನು ಗೊತ್ತುಮಾಡಿ ಹಿಂದುಸ್ಥಾನದ ಹೊರಗಿರುವ ಯಾವುದೊಂದು ಮುಸ್ಲಿಂ ರಾಜ್ಯವು ಈ ಘಟನೆಯಲ್ಲಿ ಸೇರಲು ಇಷ್ಟಪಟ್ಟರೆ ಆ ಪ್ರಕಾರ ಸೇರಿಸಿಕೊಳ್ಳುವ ಹಕ್ಕನ್ನು ಅದು ಇಟ್ಟುಕೊಳ್ಳಬೇಕು."

ಹಿಂದುಸ್ಥಾನದಲ್ಲಿಯೇ ಒಂದು ಮುಸ್ಲಿಂ ಸ್ಥಾನವನ್ನು ಏರ್ಪಡಿಸುವ ಪಾಕಿಸ್ಥಾನದ ಚಟುವಟಿಕೆಯನ್ನು ನಡೆಯಿಸುವುದೇ ಮುಸ್ಲಿಂಲೀಗಿನ ಉದ್ದೇಶವೆಂದು ಈ ಮುಂಚೆ ನಾವು ಅನೇಕ ಸಾರೆ ತಿಳಿಸಿದ್ದೇವಷ್ಟೆ. ಈಗಲಾದರೂ ಮುಸ್ಲಿಂಲೀಗಿನ ನಿಜರೂಪವನ್ನು ನೋಡಿ ಅನೇಕರು ಎಚ್ಚರತ್ತರೆ ರಾಷ್ಟ್ರಕ್ಕೆ ಎಷ್ಟೋ ಹಿತವಾಗುತ್ತದೆ.

ಝೆಕೊಸ್ಲೋವ್ಹಾಕಿಯಾದಲ್ಲಿ ಈಗ ನಡೆದ ಸ್ವಯಂನಿರ್ಣಯ ತತ್ವದ ಪ್ರಯೋಗವನ್ನೂ ಇಂಗ್ಲಿಷರು ಈ ಸಂದರ್ಭದಲ್ಲಿ ವಹಿಸಿದ ರೀತಿನೀತಿಗಳನ್ನೂ ಮುಸ್ಲಿಂಲೀಗು ನೋಡಿ ತನ್ನ ನಿಜರೂಪವನ್ನು ಪ್ರಕಟಿಸಲು ಇದೇ ಸಮಯವೆಂದು ಯೋಚಿಸಿರಬೇಕು. ಇಷ್ಟೇ ಅಲ್ಲ; ಯುರೋಪದ ಈಗಿನ ರಾಜಕಾರಣದ ಮೇಲಿಂದ ತನ್ನ ಆಶೆ ಆಕಾಂಕ್ಷೆಗಳು ಫಲಿಸುವ ಕಾಲ ಜಾಗ್ರತೆ ಬರುವುದೆಂದೇ ಬಹು ಉತ್ಸಾಹಗೊಂಡಿರಬೇಕು.

ಹೀಗೆ ಮುಸ್ಲಿಂ ಸ್ಥಾನವನ್ನು ಏರ್ಪಡಿಸಬೇಕೆಂಬ ಚಟುವಟಿಕೆಯು ಸಂಘಟಿತವಾಗಿ ಪ್ರಚಂಡ ರೀತಿಯಲ್ಲಿಯೇ ನಡೆಯುವದೆಂದೂ ಅದಕ್ಕೂ ಎದೆಗೊಡುವ ಪ್ರಸಂಗವು ಈ ದೇಶದ ನಿಜರಾಷ್ಟ್ರೀಯ ಹಿಂದುಗಳಿಗೆ ಬಂದೇಬರುವುದೆಂದೂ ಅನೇಕರು ಚೆನ್ನಾಗಿ ತಿಳಿದುಕೊಂಡಿದ್ದಾರೆ. ಅಂಥ ಪ್ರಸಂಗದಲ್ಲಿ ಇಂಗ್ಲಿಷ ಸರಕಾರವು ಯಾವ ಪ್ರಕಾರ ನಡೆಯುವುದೆಂಬುದು ಅದರ ಭೇದ ರೀತಿಯಿಂದಲೂ ಈಗ ಝೆಕ್‌ರ ವಿಷಯದಲ್ಲಿ ಅದು ತೋರಿಸಿದ ರೀತಿನೀತಿಗಳಿಂದಲೂ ಮುಂದಾಲೋಚನೆಯುಳ್ಳ ರಾಜಕಾರಣಪಟುಗಳು ಅರಿತವರೂ ಆಗಿದ್ದಾರೆ.

ಸಿಂಧ ಮುಸ್ಲಿಂ ಲೀಗಿನಲ್ಲಾಗುವ ಚರ್ಚೆಗಳಿಂದ ಈ ವಿಷಯದ ಮೇಲೆ ಹೆಚ್ಚಾದ ಬೆಳಕು ಬೀಳಬಹುದು. ಇಂದಲ್ಲ ನಾಳೆ ಮುಸ್ಲಿಂ ಲೀಗಿನ ಈ ಚಟುವಟಿಕೆಯು ಹೆಚ್ಚುತ್ತದೆಂದೂ ನೆರೆಯ ಮುಸ್ಲಿಂ ರಾಜ್ಯಗಳು ಈ ಚಟುವಟಿಕೆಗೆ ಸಹಾನುಭೂತಿಯನ್ನು ತೋರಿಸಬಹುದೆಂದೂ ತಿಳಿದೇ ಈ ದೇಶದ ರಾಜಕಾರಣವನ್ನು ನಡೆಸುವುದು ಕ್ಷೇಮಕರವಲ್ಲವೆ?

---

## ದಸರೆ ಉತ್ಸವಕ್ಕೆ ಅಡ್ಡಿ.

ನಿಜಾಮ ಇಲಾಖಾ ಕಾಸಾರ ಶಿರಸಿಯಲ್ಲಿ ಪದ್ಧತಿ ಪ್ರಕಾರ ಅಶ್ವೀನ ಶುದ್ಧ ೧೦ ಸೋಮವಾರ ದಿವಸ ವೀರಶೈವ ತರುಣ ಸಂಘದವರೂ ಎಲ್ಲಾ ಹಿಂದು ಬಾಂಧವರೂ ಬಾಜಾಬಜಂತ್ರಿ ಸಹಿತ ಓಂಕಾರಧ್ವಜ ಹಿಡಿದುಕೊಂಡು ಬನ್ನಿ ಪೂಜೆಗೆ ಹೊರಟರು. ನಮ್ಮ ಈ ಉತ್ಸವವನ್ನು ನೋಡಿ ಸಹಿಸಲಾರದೆ ಇಲ್ಲಿಯ ಕೆಲವು ತುಂಟ ಮುಸಲ್ಮಾನರು ನಮ್ಮ ಉತ್ಸವ ಬರುವದರೊಳಗಾಗಿ ಪೋಲಿಸ ಅಮೀನಸಾಹೇಬರಿಗೆ ತಿಳಿಸಿದರು. ಅವರು ೩೦ ಪೋಲಿಸರ ಸಮೇತ ಬಂದು ಉತ್ಸವವನ್ನು ನಿಲ್ಲಿಸಿದರು. ಆಗ ಸಂಜೆ ೫ ಗಂಟೆ ಆಗಿತ್ತು.

ನಾವು ಈಗ ಬಂದ ದಾರಿಯಿಂದಲೇ ಹೋಗುತ್ತೇವೆ. ಇದು ನಮ್ಮ ಯಾವಾಗಿನಿಂದಲೂ ಬಂದ ಪದ್ಧತಿ ಎಂದು ಎಷ್ಟು ಹೇಳಿದರೂ ಪೋಲಿಸರು ಬಿಡಲಿಲ್ಲ. ದಂಗೆ ಆಗುತ್ತದೆ. ಅದಕ್ಕಾಗಿ ಈಗ ಉತ್ಸವ ನಿಲ್ಲಿಸಿ ಬಿಡಿರಿ. ನಾಳೆ ಹತ್ತುಗಂಟೆಯ ಮೇಲೆ ಮಾಡಿರಿ. ನಾವೇ ನಿಂತು ಮಾಡಿಸುತ್ತೇವೆಂದು ಕೈಜೋಡಿಸಿ ಆಣೆಮಾಡಿ ಹೇಳಿದರು. ನಾವು ನಂಬಿ ಓಂಕಾರ ಧ್ವಜವನ್ನು ಅವರ ಕಡೆಗೆಕೊಟ್ಟು ಉತ್ಸವ ನಿಲ್ಲಿಸಿ ಮನೆಗೆ ಬಂದೆವು.

ಮರುದಿನ ೧೨ ಗಂಟೆಗೆ ಪೋಲಿಸ ಮದತಗಾರ ಸಾಹೇಬರು ನಮ್ಮನ್ನು ಕರೆಯಿಸಿ ನಿಮಗೆ ಧ್ವಜಮೆರಿಸಲು ಹುಕುಂ ಇದ್ದದ್ದನ್ನು ತಂದು ಕೊಡಿರಿ ಆಮೇಲೆ ನಿಮ್ಮ ಉತ್ಸವ ನಡೆಸುತ್ತೇವೆಂದು ಹೇಳಿದರು. ಹೀಗೆ ನಮ್ಮ ದಸರೆ ಉತ್ಸವಕ್ಕೆ ಅಡ್ಡಿ ಮಾಡಿದರು. ನಮ್ಮ ದುಃಖವನ್ನು ಇಲ್ಲಿ ಕೇಳುವವರೆ ಇಲ್ಲ.

ಸೆಕ್ರೆಟರಿ.


ಗಾಂಧಿ

ಶಾ. ಶ. ೧೮೬೦ ನೆಯ ಅಶ್ವೀನ ಬ|| ೧ ಸೋಮವಾರ.

# ಸಂಸ್ಥಾನಗಳಲ್ಲಿ ಸತ್ಯಾಗ್ರಹ.

ಹಿಂದುಸ್ಥಾನವು ಪಾರತಂತ್ರ್ಯ ಪಾಶದಿಂದ ಬಂಧಿತವಾಗಿ ನಾನಾ ಯಾತನೆಗಳನ್ನು ಅನುಭವಿಸುತ್ತಲಿದೆಯಷ್ಟೆ. ಅಂತೆಯೇ ಈ ಪಾರತಂತ್ರ್ಯ ದುಃಖದಿಂದ ಬಿಡುಗಡೆ ಹೊಂದಬೇಕೆಂದು ಅಹಿಂಸಾತ್ಮಕವಾದ ಶಾಂತಿಯುದ್ಧವನ್ನು ಹಿಂದಿ ರಾಷ್ಟ್ರವು ಗಾಂಧೀಜಿಯವರ ನೇತೃತ್ವದಲ್ಲಿ ಪ್ರಾರಂಭಿಸಿದೆ. ಇಷ್ಟೇ ಅಲ್ಲ; ಈ ಯುದ್ಧದಲ್ಲಿ ಇದು ಎಷ್ಟೋ ಮಟ್ಟಿಗೆ ಈಗ ವಿಜಯವನ್ನೂ ಹೊಂದಿದೆ. ಕಾಂಗ್ರೆಸ್ಸು ಈಗ ಎಂಟು ಪ್ರಾಂತಗಳಲ್ಲಿ ತನ್ನ ಪ್ರಭುತ್ವವನ್ನು ಎಷ್ಟೋ ಮಟ್ಟಿಗೆ ನಡೆಸುತ್ತಲಿರುವುದೇ ಇದಕ್ಕೆ ದೃಷ್ಟಾಂತವಾಗಿದೆ.

ಹಿಂದಿ ಜನರ ಈ ನ್ಯಾಯವಾದ ಹೋರಾಟವನ್ನು ಪರದೇಶದವರಾದ ಇಂಗ್ಲಿಷರು ಎಷ್ಟು ಮಟ್ಟಿಗೆ ಮಾನ್ಯಮಾಡಿ ಇದಕ್ಕೆ ಅವಕಾಶವನ್ನು ಕೊಟ್ಟಿದ್ದಾರಿಯೋ ಅಷ್ಟನ್ನು ಕೂಡಾ ಈ ದೇಶದ ಕೆಲವು ಸಂಸ್ಥಾನಿಕರು ತಮ್ಮಲ್ಲಿಯ ಪ್ರಜೆಗಳಿಗೆ ಕೊಡದೆ ಇರುವುದು ಲಾಂಛನಾಸ್ಪದವಾದುದಲ್ಲವೆ? ಪರದೇಶದ ಇಂಗ್ಲಿಷರು ಈ ದೇಶದ ಹಿಂದಿ ಜನ ಸ್ವಾತಂತ್ರ್ಯಾಪೇಕ್ಷೆಗೆ ಮನ್ನಣೆ ಕೊಡುತ್ತಿದ್ದಾಗ ಈ ಹಿಂದಿ ಸಂಸ್ಥಾನಿಕರು ಹಿಂದಿ ಜನಗಳ ಸ್ವಾತಂತ್ರ್ಯಾಪೇಕ್ಷೆಗೆ ಪ್ರತಿಬಂಧಗೊಳಿಸುತ್ತಿರುವುದು ಅತ್ಯಂತ ದುಃಖದ ಸಂಗತಿಯಲ್ಲವೆ?

ಈ ಹಿಂದಿ ಸಂಸ್ಥಾನಿಕರು ಹಿಂದಿನ ಹಿಂದಿ ಜನರು ತಮ್ಮ ರಕ್ತವನ್ನು ಸೂರೆಮಾಡಿದ್ದರಿಂದಲೇ ಈಗ ಈ ಸ್ಥಿತಿಯಲ್ಲಿದ್ದಾರಷ್ಟೆ. ಎಂದಮೇಲೆ ಪರದೇಶದವರು ಈ ದೇಶದವರಿಗೆ ಎಷ್ಟು ಸ್ವಾತಂತ್ರ್ಯವನ್ನು ಕೊಟ್ಟಿದ್ದಾರಿಯೋ ಅಷ್ಟನ್ನು ಕೂಡಾ ಸ್ವದೇಶದ ಈ ಸಂಸ್ಥಾನಾಧಿಪತಿಗಳು ತಮ್ಮ ದೇಶ ಬಾಂಧವರಿಗೆ ಕೊಡದಿರುವುದು ಎಂಥ ಕೃತಘ್ನತನ? ತಾವು ಈ ದೇಶದಲ್ಲಿಯೇ ಈ ದೇಶ ಬಾಂಧವರ ನೆರೆಯಲ್ಲಿಯೇ ವಾಸವಾಗಿರಬೇಕಾಗಿಲ್ಲವೆ? ಇವರ ಸುಖದುಃಖಗಳೇ ತಮ್ಮ ಮತ್ತು ತಮ್ಮ ಮುಂದಣ ಸಂತತಿಯವರ ಸುಖದುಃಖಗಳಿಗೆ ಸಂಬಂಧಪಟ್ಟಿಲ್ಲವೆ?

**ಸಂಸ್ಥಾನಿಕರ ಪ್ರಥಮ ಕರ್ತವ್ಯ.**

ದೇಶದಲ್ಲಿ ಉಂಟಾಗಿರುವ ಸ್ವಾತಂತ್ರ್ಯಾಪೇಕ್ಷೆಯನ್ನು ನೋಡಿ ಸಂಸ್ಥಾನಾಧಿಪತಿಗಳು ತಾವೇ ಮುಂದೆ ಬಂದು ತಮ್ಮ ಪ್ರಜೆಗಳಿಗೆ ಜವಾಬ್ದಾರಿ ಸರಕಾರವನ್ನು ಕೊಟ್ಟು ಇಂಗ್ಲಿಷ ಸರಕಾರಕ್ಕೆ ಮಾರ್ಗವನ್ನು ತೋರಿಸಬೇಕಾಗಿದ್ದಿತು. ಹೀಗೆ ಮಾಡಿದ್ದರೆ ಅದೇ ಅವರಿಗೆ ಬಹು ಭೂಷಣವಾಗಿರುತ್ತಿದ್ದಿತು. ತಮ್ಮ ಪ್ರಜೆಗಳ ಪೂರ್ವಜರು ತಮ್ಮ ಸಿಂಹಾಸನವನ್ನು ರಕ್ಷಿಸಲು ತಮ್ಮ ತನು ಮನ ಧನಗಳನ್ನು ಸೂರೆಮಾಡಿದ್ದಕ್ಕೆ ಈಗ ಇವರು ತೋರಿಸಬೇಕಾಗಿದ್ದ ಕೃತಜ್ಞತಾ ಬುದ್ಧಿಯ ಕಾರ್ಯವೇ ಅದಾಗಿದ್ದಿತು. ಹಾಗೆ ಜವಾಬ್ದಾರಿ ಸರಕಾರವನ್ನು ಕೊಡಲು ಮುಂದೆ ಬರದೆ ತಮ್ಮ ಪ್ರಜೆಗಳಿಗೆ ಬ್ರಿಟಿಶ್ ಭಾಗದ ನಾಗರಿಕರಿಗಿರುವಷ್ಟು ಸ್ವಾತಂತ್ರ್ಯವು ಕೂಡಾ ಇರಕೂಡದೆಂದು ಅವರನ್ನು ನಾನಾ ರೀತಿಗಳಿಂದ ಹತ್ತಿಕ್ಕಲು ನಾ ಮುಂದೆ ತಾ ಮುಂದೆ ಎಂದು ಕೆಲವು ಸಂಸ್ಥಾನಾಧಿಪತಿಗಳು ಮುಂದರಿಯುತ್ತಿರುವುದು ನಾಚಿಕೆಯ ಸಂಗತಿಯಲ್ಲವೆ?

ಹಿಟ್ಲರನು ಝೆಕೊಸ್ಲೋವ್ಹಾಕಿಯಾದಲ್ಲಿರುವ ತನ್ನ ಜನಗಳ ಸ್ವಾತಂತ್ರ್ಯಕ್ಕಾಗಿ ಈಗ ಅತ್ಯದ್ಭುತವಾದ ಅತ್ಮಯಜ್ಞವನ್ನೇ ರಾಷ್ಟ್ರವು ಮಾಡುವಂತೆ ಮುಂದರಿದಿರುವುದನ್ನು ನಮ್ಮ ಸಂಸ್ಥಾನಾಧಿಪತಿಗಳು ನೋಡಿಯಾದರೂ ತಮ್ಮ ಪ್ರಜೆಗಳಿಗೆ ತಮ್ಮ ಕೈಯಲ್ಲಿರುವ ಅಧಿಕಾರವನ್ನು ಕೊಟ್ಟು ಬ್ರಿಟಿಶರು ಬ್ರಿಟಿಶ್ ಹಿಂದುಸ್ಥಾನದ ಪ್ರಜೆಗಳಿಗೆ ಜಾಗ್ರತೆ ಸ್ವಾತಂತ್ರ್ಯ ಕೊಡುವಂತೆ ಮಾಡುವುದು ಧರ್ಮವಾಗಿಲ್ಲವೆ? ಯುರೋಪದಲ್ಲಿ ಯುದ್ಧ ಪ್ರಾರಂಭವಾಗಿ ಇಂಗ್ಲಿಷರು ಯುದ್ಧದಲ್ಲಿ ಸೇರಿದರೆ ಅವರ ಸಹಾಯಾರ್ಥವಾಗಿ ತಮ್ಮ ಸರ್ವಸ್ವವನ್ನೂ ಸೂರೆಮಾಡಲು ನಾ ಮುಂದೆ ತಾ ಮುಂದೆ ಎಂಬುದಾಗಿ ಹೇಗೆ ಅನೇಕ ಸಂಸ್ಥಾನಾಧಿಪತಿಗಳು ಮುಂದೆ ಬಂದರೋ ಹಾಗೆಯೇ ಇಂಗ್ಲಿಷ ಸರಕಾರವು ತನ್ನ ಭಾಗದ ಹಿಂದಿ ಜನರಿಗೆ ಪ್ರಾಂತಿಕ ಪ್ರಭುತ್ವವನ್ನು ಅಲ್ಪ ಪ್ರಮಾಣದಲ್ಲಿ ಕೊಡಲು ಪ್ರಾರಂಭಿಸಿದೊಡನೆ ಈ ಸಂಸ್ಥಾನಾಧಿಪತಿಗಳೂ ಜವಾಬ್ದಾರಿ ಸರಕಾರವನ್ನು ತಮ್ಮ ಪ್ರಜೆಗಳಿಗೆ ಕೊಡಲು ನಾ ಮುಂದೆ ತಾ ಮುಂದೆ ಎಂದು ಬರಬೇಕಾಗಿರಲಿಲ್ಲವೆ? ಹಾಗೆ ಮಾಡಿದ್ದರೆ ಇವರಿಗೆ ಎಷ್ಟು ಘನತೆ ಬರುತ್ತಿದ್ದಿತೋ? ಈಗಲಾದರೂ ಯಾವ ಸಂಸ್ಥಾನಾಧಿಪತಿಗಳು ತಮ್ಮ ಪ್ರಜೆಗಳಿಗೆ ಮೊದಲು ಜವಾಬ್ದಾರಿ ಸರಕಾರವನ್ನು ಕೊಡುತ್ತಾರಿಯೋ ಅವರ ಹೆಸರು ಈ ದೇಶದ ಸ್ವಾತಂತ್ರ್ಯ ಚರಿತ್ರೆಯಲ್ಲಿ ಮೊದಲನೆಯದಾಗಿ ಸುವರ್ಣಾಕ್ಷರಗಳಿಂದ ಬರೆಯಲ್ಪಡುವುದಿಲ್ಲವೆ?

ಹೀಗೆ ಮಾಡದೆ ಈ ದೇಶದ ಸ್ವಾತಂತ್ರ್ಯ ಚರಿತ್ರೆಯಲ್ಲಿ ತಮ್ಮ ಹೆಸರಿಗೆ ದೊಡ್ಡ ಕಲಂಕವನ್ನೇ ಹಚ್ಚಿಕೊಳ್ಳುವುದಕ್ಕೆ ನಾ ಮುಂದೆ ತಾ ಮುಂದೆ ಎಂದು ಹೆಚ್ಚಾದ ದಬ್ಬಾಳಿಕೆಯನ್ನು ಪ್ರಜೆಗಳ ಮೇಲೆ ಮಾಡುವುದಕ್ಕಾಗಿಯೇ ಕೆಲವು ಸಂಸ್ಥಾನಾಧಿಪತಿಗಳು ಸ್ಪರ್ಧೆಯನ್ನೇ ನಡೆಸಿದ್ದಾರಲ್ಲಾ!

**ನಿಜಾಮ ಸರಕಾರದ ಮುಂದಡಿ.**

ಈ ದೇಶದಲ್ಲಿ ಚಿಕ್ಕ ದೊಡ್ಡ ಎಲ್ಲ ಸಂಸ್ಥಾನಗಳ ಸಂಖ್ಯೆಯು ೨೫ ವರುಷಗಳ ಹಿಂದೆ ಸಾಧಾರಣ ೭೦೦ ಇದ್ದಿತು. ಅವುಗಳಲ್ಲಿ ಚಿಕ್ಕ ಪುಟ್ಟ ೨೦೦-೨೫೦ ಸಂಸ್ಥಾನಗಳನ್ನು ಬೇರೆ ಬೇರೆ ದೊಡ್ಡ ಸಂಸ್ಥಾನಗಳಲ್ಲಿ ಇತ್ತಿತ್ತಲಾಗಿ ಸೇರಿಸಿದ್ದರಿಂದ ಈಗ ಸಾಧಾ

ರಣ ೫೬೨ ಸಂಸ್ಥಾನಗಳು ಉಳಿದಿವೆ. ಇವುಗಳಲ್ಲಿ ಅನೇಕ ಸಂಸ್ಥಾನಗಳು ಈಗ ನಡೆಸಿರುವ ದಬ್ಬಾಳಿಕೆಯನ್ನು ನೋಡಿ ಅಲ್ಲಿಯ ಪ್ರಜೆಗಳು ನಮ್ಮ ಸಂಸ್ಥಾನವನ್ನೂ ಮುಂಚೆಯೇ ಬ್ರಿಟಿಶ್ ಭಾಗಕ್ಕೆ ಸೇರಿಸಿಕೊಂಡುಬಿಟ್ಟಿದ್ದರೆ ಒಳ್ಳೆಯದಾಗುತ್ತಿದ್ದಿತಲ್ಲಾ ! ಎಂದು ಯೋಚಿಸುತ್ತಿರಬಹುದು. ಏಕೆಂದರೆ, ನೆರೆಯ ಬ್ರಿಟಿಶ್ ಭಾಗದ ತಮ್ಮ ಬಾಂಧವರು ಹೊಂದುತ್ತಿರುವಷ್ಟು ಕೂಡಾ ಸ್ವಾತಂತ್ರ್ಯ ಸುಖಶಾಂತಿಗಳು ಅವರಿಗಿಲ್ಲ.

ಮೈಸೂರು ಸಂಸ್ಥಾನಾಧಿಪತಿಗಳೇ ತಮ್ಮ ಪ್ರಜೆಗಳ ಮೇಲೆ ಹೆಚ್ಚು ದಬ್ಬಾಳಿಕೆಯನ್ನು ನಡೆಯಿಸಿದ್ದಾರೆಂದು ಮೊದಲು ಕೆಲವರಿಗೆ ತೋರಿತು. ತ್ರಾವಣಕೋರ ಸಂಸ್ಥಾನಾಧಿಪತಿಗಳು ಅವರಿಗಿಂತ ಮುಂದರಿದರು. ನಿಜಾಮ ಸರಕಾರದವರಾದರೋ ನಾವು ಎಲ್ಲಾ ಸಂಸ್ಥಾನಗಳಲ್ಲಿ ಮೊದಲನೆಯವರಾಗಿರುವುದರಿಂದ ದಬ್ಬಾಳಿಕೆಯಲ್ಲಿಯೂ ತಮ್ಮದೇ ಮೊದಲನೆಯ ಸ್ಥಾನವಿರಬೇಕೆಂದು ಬಯಸಿರುವರೋ ಏನೋ ಎಂಬಂತೆ ಅತ್ಯಂತ ಭಯಂಕರವಾದ ದಬ್ಬಾಳಿಕೆಯನ್ನು ಪ್ರಾರಂಭಿಸಿ ದಬ್ಬಾಳಿಕೆಯಲ್ಲಿ ಮುಂದಡಿಯಿಟ್ಟಿದ್ದಾರೆ.

ದಬ್ಬಾಳಿಕೆಯ ಅನ್ಯಾಯವಾದ ಮಾರ್ಗದಲ್ಲಿರುವ ಈ ಸಂಸ್ಥಾನಾಧಿಪತಿಗಳನ್ನು ನ್ಯಾಯವಾದ ಹಾದಿಗೆ ತರಲು ಸತ್ಯಾಗ್ರಹವೊಂದೇ ಮುಖ್ಯೋಪಾಯವು. ಸಂಸ್ಥಾನಗಳಲ್ಲಿಯ ಪ್ರಜೆಗಳು ಸತ್ಯಾಗ್ರಹವನ್ನು ಹೂಡುವುದು ಎಷ್ಟು ಅಗತ್ಯವಾಗಿದೆಯೋ ಅಷ್ಟೇ ಸೇನಾಪತಿ ಬಾಪಟರವರ ಅಭಿನಂದನೀಯವಾದ ಅಭಿಪ್ರಾಯದಂತೆ ಬ್ರಿಟಿಶ್ ಭಾಗದ ಜನರೂ ಸಂಸ್ಥಾನಗಳಲ್ಲಿ ಸತ್ಯಾಗ್ರಹವನ್ನು ಅಹಿಂಸಾ ತತ್ವದಂತೆ ಪ್ರಾರಂಭಿಸುವುದು ಅವಶ್ಯವಾಗಿದೆ.

---

## ಖಾದಿ ಮತ್ತು ಕೌಜಲಗಿಯವರು.

ಕರ್ನಾಟಕದಲ್ಲಿ ಖಾದಿ ಪ್ರಸಾರಕ್ಕೋಸ್ಕರ ಪ್ರಯತ್ನಿಸುವವರಲ್ಲಿ ಶ್ರೀಯುತ ಕೌಜಲಗಿ ಹನುಮಂತರಾಯರು ಪ್ರಮುಖರು. ಈ ಮಹಾಶಯರು ಈ ರಾಷ್ಟ್ರಕಾರ್ಯದಲ್ಲಿಯೇ ನಿರತರಾಗಿರುವುದು ತುಂಬಾ ಅಭಿನಂದನೀಯವಾದುದು. ಅಖಿಲ ಭಾರತ ಚರಖಾ ಸಂಘದ ಕರ್ನಾಟಕ ಶಾಖೆಯ ಕಾರ್ಯದರ್ಶಿತ್ವವು ಇವರ ಕಡೆಗೇ ಇದ್ದು ಈ ಕಾರ್ಯವನ್ನು ಇವರು ಬಹು ಸಮರ್ಥತೆಯಿಂದಲೂ ಸಾಗಿಸಿಕೊಂಡು ಬಂದಿದ್ದಾರೆ. ಇಂಥವರ ಸಂಬಂಧವಾಗಿ ಖಾದಿ ಪ್ರಸಾರದ ಕಾರ್ಯವನ್ನೇ ಮುಖ್ಯವಾಗಿಟ್ಟುಕೊಂಡ ಶ್ರೀ. ಮೈಲಾರ ದಂಪತಿಗಳು ಮತ್ತು ಶ್ರೀ. ಜಿಗಜಿನ್ನಿ ಓಂಕಾರಪ್ಪನವರು ಪ್ರಕಟನೆಗಾಗಿ ನಮ್ಮ ಕಡೆಗೆ ಕಳುಹಿಸಿದ ಪ್ರಸಿದ್ಧ ಪತ್ರಿಕೆಗಳನ್ನು ಇದೇ ಸಂಚಿಕೆಯ ಬೇರೊಂದು ಕಡೆಗೆ ಪ್ರಕಟಿಸಲಾಗಿದೆ.

ತಾವು ಸಿದ್ಧಗೊಳಿಸುತ್ತಿರುವ ಖಾದಿಯು ಅನಧಿಕೃತ ಖಾದಿಯೆಂದು ಪ್ರಕಟವಾಗಿರುವುದು ಸರಿಯಲ್ಲವೆಂತಲೂ ಅಧಿಕೃತ ಖಾದಿಯಾಗುವುದಕ್ಕೆ ಶ್ರೀ. ಕೌಜಲಗಿ ಹನುಮಂತರಾಯರು "ಸರ್ಟಿಫಿಕೀಟ್" ಕೊಟ್ಟಿಲ್ಲವೆಂತಲೂ ಮೇಲಿನ ಉಭಯ ಮಹಾಶಯರು ತಮ್ಮ ತಮ್ಮ ಪ್ರಕಟನೆಗಳಲ್ಲಿ ತಿಳಿಸಿದ್ದಾರೆ. ಶ್ರೀ. ಕೌಜಲಗಿಯವರು ಏಕೆ "ಸರ್ಟಿಫಿಕಿಟ್" ಕೊಡುವುದಿಲ್ಲವೆಂದು ಹೇಳದರೆಂಬುದು ಮಾತ್ರ ಆ ಪ್ರಕಟನೆಯಿಂದ ಗೊತ್ತಾಗುವುದಿಲ್ಲ.

ಖಾದಿ ಕಾರ್ಯವು ಸ್ವಾವಲಂಬನೆಯ ಕಾರ್ಯವಾಗಬೇಕಾದುದೇ ಅಗತ್ಯವೂ ಹಿತಕರವೂ ಆಗಿದೆ. ಅದಕ್ಕೋಸ್ಕರ ಯಾರು ಎಷ್ಟು ಪ್ರಯತ್ನಿಸಿದರೂ ಆ ಪ್ರಯತ್ನವು ಅಭಿನಂದನೀಯವಾದುದೇ ಸರಿ. ರಾಷ್ಟ್ರಹಿತಚಿಂತಕರೆಲ್ಲರೂ ಅಂಥ ಪ್ರಯತ್ನಗಳನ್ನು ತುಂಬಾ ಪ್ರೋತ್ಸಾಹಿಸಬೇಕಾದುದೇ ವಿಹಿತವಾಗಿದೆ. ಆದರೆ ಆ ಖಾದಿಯು ಮಾತ್ರ ಶುದ್ಧವಾದುದಾಗಿಯೇ ಇರಬೇಕಾದುದೆಂಬುದನ್ನು ಮಾತ್ರ ನಾವು ಮರೆಯಕೂಡದು.

ಶ್ರೀ. ಮೈಲಾರ ದಂಪತಿಗಳಾಗಲಿ ಅಥವಾ ಶ್ರೀ ಜಿಗಜಿನ್ನಿಯವರಾಗಲಿ ಶುದ್ಧ ಖಾದಿಯನ್ನೇ ಸಿದ್ಧಗೊಳಿಸುತ್ತಿದ್ದಾರೆಂದು ನಂಬಬಹುದಾಗಿದೆ. ಈ ವಿಚಾರದಲ್ಲಿ ಏನಾದರೂ ಲೋಪದೋಷಗಳಿದ್ದರೆ ಅವುಗಳನ್ನು ಶ್ರೀ. ಕೌಜಲಗಿ ಹನುಮಂತರಾಯರಾಗಲಿ ಅಥವಾ ಖಾದಿ ಅಭಿಮಾನಿಗಳಾದ ಇತರರಾಗಲಿ ಅವರಿಗೆ ತಿಳಿಸಿ ಅವುಗಳನ್ನು ಸರಿಪಡಿಸಿಕೊಳ್ಳಲು ಹೇಳುವುದು ಅಗತ್ಯವೇ ಸರಿ.

ಅಖಿಲ ಭಾರತ ಚರಖಾ ಸಂಘದ ಅಧಿಕೃತ ಖಾದಿಯಾಗಿ ಪರಿಗಣಿಸಲ್ಪಡಬೇಕಾದರೆ ಆ ಸಂಘದ ನಿಯಮಗಳನ್ನು ಅನುಸರಿಸಲೇಬೇಕಾದುದು ಅಗತ್ಯ. ಖಾದಿ ಹುಟ್ಟುವಳಿ ಮತ್ತು ಅದರ ಪ್ರಸಾರಕ್ಕಾಗಿಯೇ ಪ್ರಯತ್ನಿಸುತ್ತಿರುವ ಶ್ರೀ. ಮೈಲಾರ ದಂಪತಿಗಳೂ ಶ್ರೀ. ಜಿಗಜಿನ್ನಿ ಓಂಕಾರಪ್ಪನವರೂ ಆ ನಿಯಮಗಳನ್ನನುಸರಿಸಲು ಸಿದ್ಧರಿದ್ದಾರೆಂದೇ ಅವರ ಪ್ರಕಟನೆಗಳಿಂದ ಗೊತ್ತಾಗುತ್ತದೆ. ಶ್ರೀ. ಕೌಜಲಗಿ ಹನುಮಂತರಾಯರಾದರೋ ಖಾದಿ ಹುಟ್ಟುವಳಿ ಮತ್ತು ಪ್ರಸಾರಗಳಿಗಾಗಿಯೇ ಪ್ರಯತ್ನಿಸುವವರಾಗಿದ್ದಾರೆ. ಹೀಗಿರುವಾಗ ಅವರು ಏಕೆ ಅಧಿಕೃತ ಖಾದಿಯನ್ನಾಗಿ ಮಾಡಿಕೊಳ್ಳಲಿಲ್ಲವೋ ತಿಳಿಯದಾಗಿದೆ. ಅಖಿಲ ಭಾರತ ಚರಖಾ ಸಂಘದ ನಿಯಮಗಳೇನಾದರೂ ನಿರ್ಬಂಧಗೊಳಿಸಿದ್ದರೆ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯವರು ಅವುಗಳನ್ನು ನಿವಾರಣೆ ಮಾಡಲು ಅಖಿಲ ಭಾರತ ಚರಖಾ ಸಂಘದವರಿಗೆ ತಿಳಿಸಿ ಕರ್ನಾಟಕದಲ್ಲಿ ಖಾದಿ ಪ್ರಸಾರ ಹೆಚ್ಚಾಗುವಂತೆ ಮಾಡಬೇಕಾದುದು ಅತ್ಯಗತ್ಯ. ಖಾದಿ ಕಾರ್ಯವು ಕಾಂಗ್ರೆಸ್ಸಿನ ಒಂದು ಮುಖ್ಯ ಕಾರ್ಯವಾಗಿಯೇ ಇದೆಯಲ್ಲವೆ?

ಅಂತೂ, ಈ ಖಾದಿ ಪ್ರಸಾರಕರಲ್ಲಿಯೇ ಮತ್ಯೈಕ್ಯವಿಲ್ಲದೆ ಈ ಪ್ರಕಾರ ಖಾದಿಯ ಕಾರ್ಯಕ್ಕೆ ಅಡ್ಡಿಯಾಗಿರುವುದು ತುಂಬಾ ವಿಷಾದದ ಸಂಗತಿಯು, ಕರ್ನಾಟಕದ ಖಾದಿ ಅಭಿಮಾನಿಗಳು ಮುಖ್ಯವಾಗಿ ಕಾಂಗ್ರೆಸ್ ಕೆಲಸಗಾರರು ಇತ್ತ ಕಡೆಗೆ ಜಾಗ್ರತೆ ಲಕ್ಷಿಸಿ ಈಗಿನ ಅನಾನುಕೂಲತೆಗಳನ್ನು ನಿವಾರಣೆಮಾಡುವರೆಂದು ನಾವು ಪೂರ್ಣ ನಂಬಿದ್ದೇವೆ.

---

## ಬ್ಯಾ. ಜಿನ್ನಾರ ಸಾಹಸ !

ತಾ. ೮-೧೦-೩೮ ನೆಯ ದಿನ ಬ್ಯಾ. ಜಿನ್ನಾರವರು ಕರಾಚಿಯಲ್ಲಿ ಸಿಂಧ ಮುಸ್ಲಿಂ ಲೀಗಿನ ಅಧ್ಯಕ್ಷರಾಗಿ ಭಾಷಣಮಾಡಿದ್ದರಲ್ಲಿ ಹೀಗೆ ಹೇಳಿದರು—

(೧) ಕಾಂಗ್ರೆಸ್ಸು ೭ ಪ್ರಾಂತಗಳಲ್ಲಿಯೂ ಮುಸಲ್ಮಾನರನ್ನು ಹಿಂಸಿಸುತ್ತದೆ!

(೨) ಮುಸಲ್ಮಾನರು ಸಂಘಟಿತರಾಗಿ ಮುಂದೆ ನುಗ್ಗಲಿ. ನ್ಯಾಯದಿಂದ ಸಾಧಿಸದಿದ್ದರೆ ಶಕ್ತಿಯನ್ನು ಉಪಯೋಗಿಸಲಿ!!

(೩) ಪ್ಯಾಲಿಸ್ಟಾಯಿನ್ ಮೊದಲಾದ ಪರ ರಾಷ್ಟ್ರಗಳ ಮುಸಲ್ಮಾನರೂ ನಾವು ಒಂದೇ ಎಂಬುದನ್ನು ಬ್ರಿಟಿಶ್ ಸರಕಾರವು ತಿಳಿದಿರಲಿ!!!

ಹಿಂದುಸ್ಥಾನದಲ್ಲಿ ಮುಸ್ಲಿಂರಾಜ್ಯಸ್ಥಾಪಿಸಲು ಬೇಕಾಗುವ ಮನೋಭಾವಗಳನ್ನು ಹುಟ್ಟಿಸುವ ಇವರ ಈ ಸಾಹಸವು ಹೆಚ್ಚಿನದಲ್ಲವೆ?

# ಕರ್ನಾಟಕ ಖಾದಿಭಕ್ತರಿಗೆ ಸವಿನಯ ವಿನಂತಿ.

## ಜಿಗಜಿನ್ನಿ ಖಾದಿಭಾಂಡಾರಕ್ಕಾದ ಅನ್ಯಾಯ.

ಉಪ್ಪಿನ ಬೇಟಗೇರಿಯಲ್ಲಿರುವ ಜಿಗಜಿನ್ನಿ ಖಾದಿಭಾಂಡಾರವು ಅನಧಿಕೃತ ಖಾದಿಯೆಂದು ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿ ಪ್ರಧಾನ ಕಾರ್ಯದರ್ಶಿಗಳು ವರ್ತಮಾನಪತ್ರಗಳಲ್ಲಿ ಜಾಹೀರಮಾಡಿದ್ದಾರೆ. ಮತ್ತು ಅಖಿಲ ಭಾರತ ಚರಖಾಸಂಘದ ಕರ್ನಾಟಕ ಶಾಖೆಯ ಕಾರ್ಯದರ್ಶಿಗಳನ್ನು ಎಷ್ಟು ಸಾರೆ ಕೇಳಿದರೂ ನಮ್ಮ ಖಾದಿ ಭಾಂಡಾರವನ್ನು ಅಧಿಕೃತ ಖಾದಿಯಾಗಿ ಮಾಡಿಕೊಳ್ಳಲು ಸರ್ಟಿಫಿಕಿಟ್ ಕೊಡಲಿಲ್ಲ. ಆದಕ್ಕಾಗಿ ಕರ್ನಾಟಕದ ಖಾದಿಭಕ್ತರ ಮುಂದೆ ಈ ಮೂಲಕ ಇದ್ದ ಸ್ಥಿತಿಯನ್ನು ತಿಳಿಸುವ ಭಾಗ ಬಿತ್ತು.

ನಾನು ೧೯೩೨ ನೇ ಇಸವಿಯಲ್ಲಿಯೇ ನನ್ನ ಮೈಮೇಲಿನ ಪರದೇಶಿ ಬಟ್ಟೆಯನ್ನು ಸುಟ್ಟು ಅಂದಿನಿಂದ ಖಾದಿಭಕ್ತನಾಗಿದ್ದೇನೆ. ಆಗಿನಿಂದ ನಾನು ಖಾದಿ ಕೆಲಸವನ್ನು ಕೈಯಲ್ಲಿ ತೆಗೆದುಕೊಂಡೆನು. ೧೯೩೧ ರಲ್ಲಿ ಅಖಿಲ ಭಾರತ ಚರಖಾ ಸಂಘದ ಸರ್ಟಿಫಿಕಿಟ್ ಹೊಂದಿ ಉಪ್ಪಿನಬೆಟಗೇರಿಯಲ್ಲಿ ಜಿಗಜಿನ್ನಿ ಖಾದಿ ಭಾಂಡಾರದ ಕಾರ್ಯ ಉತ್ತಮ ರೀತಿಯಿಂದ ನಡೆಸುತ್ತಾ ಬಂದಿರುತ್ತೇನೆ.

ಅಖಿಲ ಭಾರತ ಚರಖಾ ಸಂಘದ ಕರ್ನಾಟಕ ಶಾಖೆಯ ಕಾರ್ಯದರ್ಶಿಗಳಾದ ಶ್ರೀ. ಕೌಜಲಗಿಯವರು ನನಗೆ ಹೊಸದಾಗಿ ಸರ್ಟಿಫಿಕಿಟ್ ಹೊಂದಬೇಕೆಂದು ತಿಳಿಸಿದರು. ಆ ಪ್ರಕಾರ ಸರ್ಟಿಫಿಕಿಟಗಾಗಿ ನಾನು ಅರ್ಜಿಮಾಡಿದೆನು. ಆಗ ನಿಮಗೆ ಸರ್ಟಿಫಿಕೀಟ್ ಸಿಗಲಾರದೆಂದು ಶ್ರೀ. ಕೌಜಲಗಿಯವರು ತಿಳಿಸಿದರು.

ಆ ಮೇಲೆ ತಾ. ೨೩-೩-೩೮ ನೇ ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಸರ್ಟಿಫಿಕಿಟ್ ಪಡೆದುಕೊಳ್ಳುವವರು ನಡೆದುಕೊಳ್ಳಬೇಕಾದ ನೇಮಗಳನ್ನು ಶ್ರೀ. ಕೌಜಲಗಿಯವರು ಪ್ರಸಿದ್ಧಮಾಡಿ ಆದಕ್ಕೂ ಮೊದಲು ಸರ್ಟಿಫಿಕಿಟ್ ಪಡೆದುಕೊಂಡವರಿದ್ದರೆ ಅವರಿಗೆ ಸರ್ಟಿಫಿಕಿಟ್ ದೊರೆಯುವದೆಂದು ತಿಳಿಸಿದ್ದರು. ಆಗ ನಾನು ನಿಮ್ಮ ಬರಹದಂತೆ ನಡೆದುಕೊಳ್ಳುತ್ತೇನೆ. ನನಗೆ ಸರ್ಟಿಫಿಕೀಟ್ ಕೊಡಬೇಕೆಂದು ಶ್ರೀ. ಕೌಜಲಗಿಯವರಿಗೆ ಅರ್ಜಿಮಾಡಿಕೊಂಡೆನು. ಅದಕ್ಕೂ ಸರ್ಟಿಫಿಕೀಟ್ ಸಿಗಲಾರದೆಂದು ಉತ್ತರ ಬಂತು.

ಚರಖಾ ಸಂಘದವರು ಕೀಳನ್ನು ಯಾವ ಧಾರಣೆಗೆ ತೆಗೆದುಕೊಳ್ಳುತ್ತಾರೋ ಮತ್ತು ನೇಯುವವರಿಗೆ ಹ್ಯಾಗೆ ಕೂಲಿ ಕೊಡುತ್ತಾರೋ ಹಾಗೇ ನಾನು ಮಾಡುತ್ತಿದ್ದೇನೆ. ಹೀಗಿದ್ದು ನನಗೆ ಯಾಕೆ ಸರ್ಟಿಫಿಕೀಟು ಕೊಡಬಾರದು? ಜಿಗಜಿನ್ನಿ ಖಾದಿಭಾಂಡಾರ ಯಾಕೆ ಅನಧಿಕೃತ ಖಾದಿ ಆಗಬೇಕು? ಇದರಲ್ಲಿ ಏನಾದರೂ ಅವರ ನೇಮಕ್ಕೆ ವಿರುದ್ಧ ಇದ್ದರೆ ನನಗೆ ತೋರಿಸಿಕೊಡಲಿ. ಖಾದಿ ಉತ್ಪತ್ತಿ ಹೆಚ್ಚಾಗಿ ಅದರ ಪ್ರಸಾರವು ಹೆಚ್ಚಾಗುವದು ಅಗತ್ಯವಲ್ಲೆ? ಇತ್ತೀಚಿಗೆ ಕೀಳು ಬರುವದು ಹೆಚ್ಚಾಗಿದ್ದು ಚರಖಾ ಸಂಘದವರು ತೆಗೆದುಕೊಳ್ಳದಿದ್ದರೆ ಹಳ್ಳಿ ಹೆಣ್ಣುಮಕ್ಕಳು ಕೀಳನ್ನು ಹಾಗೇ ತಿರುಗಿ ತೆಗೆದುಕೊಂಡು ಹೋಗಬೇಕಾಗುತ್ತದೆ.

ಹೀಗೆ ಮಾಡಿದರೆ ಖಾದಿ ಪ್ರಸಾರ ಹ್ಯಾಗಾದೀತು? ಒಂದು ಕಡೆ ಖಾದಿ ಪ್ರಸಾರವಾಗಬೇಕೆಂದು ಹೇಳುವದು ಇನ್ನೊಂದು ಕಡೆಯಿಂದ ಅದರ ಪ್ರಸಾರಕ್ಕೆ ಅಡ್ಡಿಮಾಡುವದು ನ್ಯಾಯವೆ?

ಈ ನನ್ನ ತಕರಾರನ್ನು ಕರ್ನಾಟಕದ ಕೆಲವು ಕಾಂಗ್ರೆಸ್ ಪುಢಾರಿಗಳ ಮುಂದೆ ಹೇಳಿದ್ದೇನೆ. ಅವರಿಂದಲೂ ಈ ಬಗ್ಗೆ ನನಗೆ ನ್ಯಾಯ ಈ ವರೆಗೂ ದೊರೆಯಲಿಲ್ಲ. ಆದಕ್ಕಾಗಿ ಕರ್ನಾಟಕದ ಎಲ್ಲಾ ಖಾದಿಭಕ್ತರ ಮುಂದೆ ಇದನ್ನು ಇಟ್ಟಿದ್ದೇನೆ. ಈಗಲಾದರೂ ಈ ಬಗ್ಗೆ ಯೋಗ್ಯ ಚೌಕಸಿ ನಡೆದು ಜಿಗಜಿನ್ನಿ ಖಾದಿಭಾಂಡಾರ ಅಧಿಕೃತ ಖಾದಿ ಆಗುವಂತೆ ಕರ್ನಾಟಕದ ಖಾದಿಭಕ್ತರು ನನಗೆ ಸಹಾಯಮಾಡಿ ಬಡ ಜನರ ಈ ನನ್ನ ಅಲ್ಪ ಸೇವೆಗೆ ಪ್ರೋತ್ಸಾಹ ಕೊಡಬೇಕೆಂದು ಸವಿನಯ ವಿನಂತಿ.

ಉಪ್ಪಿನಬೆಟಗೇರಿ.<br>ತಾ. ೮-೧೦-೩೮ } ಓಂಕಾರಪ್ಪ<br>ಜಿಗಜಿನ್ನಿ ಖಾದಿಭಾಂಡಾರ ಚಾಲಕ.

## ನವಲಗುಂದ.

ಪ್ರತಿ ವರ್ಷದ ಪದ್ಧತಿಯಂತೆ ಶ್ರೀ ಗವಿಮಠದಲ್ಲಿ ನಾಡಹಬ್ಬದ ಒಂಬತ್ತು ದಿನಗಳಲ್ಲಿ ನಡೆದ ಕಾರ್ಯಕ್ರಮವು ಹೀಗಿದೆ.—

ತಾ. ೨೪-೯-೩೮ ನೇ ಶನಿವಾರ ಮುಂಜಾನೆ "ಶ್ರೀನಾಡತಾಯಿಯ" ಉತ್ಸವವು ೨೧ ಜೋಡಿ ಎತ್ತುಗಳನ್ನು ಹೂಡಿದ ಹಳಿಯ ಬಂಡಿಯ ಮೇಲೆ ಅತ್ಯಂತ ವೈಭವದಿಂದ ಆಯಿತು. ಇದರಲ್ಲಿ ಈ ಊರು ಹಾಗು ಸುತ್ತುಮುತ್ತಲಿನ ಗ್ರಾಮಗಳ ಜನರು ಭಾಗವಹಿಸಿದ್ದರಲ್ಲದೆ ತಿರ್ಲಾಪುರದ ರಾಷ್ಟ್ರೀಯ ಭಜನಾಸಂಘಗಳು ಸೇರಿದ್ದರಿಂದ ಉತ್ಸವಕ್ಕೆ ಬಹಳ ಕಳೆಯೇರಿದ್ದಿತು.

ಸಂಜೆಯ ೭ ಘಂಟೆಗೆ ಶ್ರೀಮಾನ್ ಎಸ್. ಬಿ. ಹಿರೇಮಠ ಎಲ್, ಎಲ್, ಬಿ, ವಕೀಲ ಜಿ. ಕಾಂ. ಕ. ಪ್ರೆಸಿಡೆಂಟ ಧಾರವಾಡ ಇವರಿಂದ ನಾಡ ಹಬ್ಬದ ಉದ್ಘಾಟನಾ ಸಮಾರಂಭವು ಜರುಗಿತು. ಮರುದಿವಸದಿಂದ ಮೊದಲೇ ಪ್ರಸಿದ್ಧಮಾಡಿದ ಪ್ರಕಾರ ಮಾನ್ಯರಾದ ಶ್ರೀ ಪಾಂಡೇಶ್ವರ, ಶ್ರೀ ಜೋಶಿ, ಶ್ರೀ ಚನ್ನಕವಿಗಳು ಶ್ರೀ ಭೂಸನೂರಮಠ, ಶ್ರೀ ಸುಬುದ್ಧಿ, ಶ್ರೀ ರಾಜಪುರೋಹಿತರು, ಶ್ರೀ ಕಟಗೇರಿ, ಶ್ರೀ ಪಾಟೀಲ, ಶ್ರೀ ಮತಿ ಮಾಳವಾಡ, ಶ್ರೀ ಮಾಳವಾಡರವರು, ಇವರು ಕನ್ನಡ ನಾಡಿನ ಹೆಗ್ಗಳಿಕೆ ಹಾಗು ಇಂದಿನ ಕರ್ತವ್ಯಕ್ಕೆ ಸಂಬಂಧಿಸಿದ ಬೇರೆ ಬೇರೆ ವಿಷಯಗಳಲ್ಲಿ ಅಮೋಘವಾದ ಭಾಷಣಗಳನ್ನು ಮಾಡಿ ಜನ ಜಾಗೃತಿಯನ್ನುಂಟುಮಾಡಿದರು.

ತಾ. ೨-೧೦-೩೮ ನೇ ರವಿವಾರ ದಿವಸ ಭಾರತ ಭಾಗ್ಯ ರವಿಯಾದ ಮಾಹಾತ್ಮಾ ಗಾಂಧೀಜಿಯವರ ಜಯಂತ್ಯುತ್ಸವದೊಡನೆ ಇಲ್ಲಿಯ ಬಾಲ ಬಾಲಕಿಯರ ಆಟಪಾಟಗಳಾದವು.

ತಾ. ೩-೧೦-೩೮ ನೇ ಸೋಮವಾರ ಮಧ್ಯಾಹ್ನ ಮೂರು ಘಂಟೆಯಿಂದ ಸತತ ನಾಲ್ಕು ತಾಸುಗಳವರೆಗೆ ಇಲ್ಲಿಯ ಗೌಡರ ಓಣಿಯವರ ಸರಕಸ್ (ಕಸರತ್ತಿನ ಆಟವು) ಚಿತ್ತಾಕರ್ಷಕವಾಗಿ ಮಹತ್ವದ್ದಾಯಿತು.

ಈ ಮೊದಲಾದ ಕಾರ್ಯಗಳಿಂದ ಈ ವರ್ಷದ ನಾಡತಾಯಿಯ ಸೇವೆಯು ಅಳಿಲು ಭಕ್ತಿಯಿಂದ ಆಚರಿಸಲ್ಪಟ್ಟಿತು.

ತಾ. ೭-೧೦-೩೮. ಕಾರ್ಯದರ್ಶಿ.<br>ಎಮ್. ಸಿ. ಪಾಟೀಲ.

## ಚಿಕ್ಕೋಡಿಯಲ್ಲಿ ಮುಸಲ್ಮಾನರ ದೊಂಬೆ.

ಪ್ರತಿವರ್ಷದಂತೆ ಈಸಲವಾದರೂ ದಸರೆಯ ಬಗ್ಗೆ ಇಲ್ಲಿಯ ಶೀಲಬಲವರ್ಧಕ ವ್ಯಾಯಾಮ ಮಂಡಲದವರು ಲೇಜಿಮ ಮೇಳ ದಿಂದೊಡಗೂಡಿ ಮೆರವಣಿಗೆ ತೆಗೆದಿದ್ದರು. ಮೆರವಣಿಗೆಯು ಮಸೀದಿಯ ಸಮೀಪಕ್ಕೆ ಬಂದೊಡನೆ ಮುಂಭಾಗದಲ್ಲಿದ್ದ ಬ್ಯಾಂಡಿ ನವರು ವಾದನವನ್ನು ನಿಲ್ಲಿಸಿದರು. ಹಾಗು ಮೆರವಣಿಗೆಯು ಲೇಜಿಮದ ಆಟದೊಂದಿಗೆ ಮಸೀದೆಯ ಎದುರಿಗೆ ಬರುವಷ್ಟರಲ್ಲಿ "ಬಂದಳರೋ" "ಅಲ್ಲಾಹೊ ಅಕಬರ" ಎಂದು ಕೂಗುತ್ತ ಮುಸಲ್ಮಾನರು ಮೆರವಣಿಗೆಯಮೇಲೆ ಬಿದ್ದರು. ಕೆಲ ಮುಸಲ್ಮಾನರು ಡೊಣ್ಣೆಗಳನ್ನು ಬೀಸುತ್ತಿದ್ದರಲ್ಲದೆ ಇನ್ನೂ ಹಲವು ಕಟುಕರು ಕೊಡ್ಲಿ ಚಪಕೊಡ್ಲಿಗಳನ್ನು ಮೇಲಕ್ಕೆತ್ತಿ ಜನರನ್ನು ದೂಡುತ್ತಿದ್ದರು. ಇವರಲ್ಲಾದ ನುಗ್ಗಾಟದಲ್ಲಿ ಮುಸಲ್ಮಾನನೊಬ್ಬನ ತಲೆಯೊಡೆಯಿತು. ಇಷ್ಟರಲ್ಲಿ ಪೋಲೀಸರು ಬಂದು ಉಭಯತರನ್ನು ಹಿಂದಕ್ಕೆ ಸರಿಸಿದರು. ಹಿಂದೂ ಸಮಾಜವು ಬೆಳೆದು ೩-೪ ಸಾವಿರಕ್ಕೆ ತಲ್ಪಿತು. ಮುಸಲ್ಮಾನರೂ ಹಾಹಾ ಅನ್ನುವಷ್ಟರಲ್ಲಿ ಕೂಡಿದರು.

**ಹೆಚ್ಚಿಗೆ ಪೋಲೀಸರನ್ನು ತರಿಸಿದರು.**

—೦—

ಕೂಡಲೇ ಹೆಚ್ಚಿಗೆ ಪೋಲಿಸರನ್ನು ತರಿಸಿದರು. ೧ ನೇ ವರ್ಗದ ಮ್ಯಾಜಿಸ್ಟ್ರೇಟರು ಸ್ವತಃ ಬಂದು ಉಭಯತರ ಹೇಳಿಕೆಯನ್ನು ಕೇಳಿದರು. ಹಿಂದುಗಳು ಲೇಜಿಮ ವಾದ್ಯವಲ್ಲವಾದುದರಿಂದ ಆ ಆಟವನ್ನು ನಾವು ಆಡುತ್ತಲೇ ಹೋಗುವೆವೆಂದು ಹಟ ಹಿಡಿದರು. ಮುಸಲ್ಮಾನರು ಮಸೀದೆಯೆದುರಿಗೆ ಯಾವ ಸಪ್ಪಳವನ್ನೂ ಮಾಡಗೊಡಲಿಕ್ಕಿಲ್ಲೆಂದು ಹಟ ಹಿಡಿದರು. ಈ ಬಗೆಯಾಗಿ ಉಭಯಪಕ್ಷದ ಮುಖಂಡರು ತಮ್ಮ ತಮ್ಮ ಪಕ್ಷದ ಹೇಳಿಕೆಯನ್ನು ಮ್ಯಾಜಿಸ್ಟ್ರೇಟರ ಎದುರಿಗೆ ಹೇಳಿದ ಮೇಲೆ ಮ್ಯಾಜಿಸ್ಟ್ರೇಟರು ಲೇಜಿಮು ಆಡುತ್ತ ಹೋಗುವ ಹಿಂದುಗಳ ಪರಂಪರ ಪದ್ಧತಿಗೆ ಮುಸಲ್ಮಾನರು ವಿರೋಧಿಸಲು ಬಾರದೆಂದೂ ಅದು ವಾದ್ಯ ವಿರದೆ ಆಟವಿರುವದೆಂದೂ ಹೇಳಿ ಮೆರವಣಿಗೆಗೆ ಹೋಗಲಿಕ್ಕೆ ಅಪ್ಪಣೆ ಕೊಟ್ಟರು. ಹಾಗೂ ದೊಂಬೆ ಮಾಡಲೆಂದು ಮುಸಲ್ಮಾನರು ಮುಂಚಿತವಾಗಿ ಮಸೀದೆಯಲ್ಲಿ ಕೂಡಿಟ್ಟ ಡೊಣ್ಣೆಗಳನ್ನು ಕಸಿಯಿರೆಂದು ಮ್ಯಾಜಿಸ್ಟ್ರೇಟರು ಹೇಳಿದ್ದರಿಂದ ಪೋಲೀಸರು ಡೊಣ್ಣೆಗಳನ್ನೆಲ್ಲಾ ಕಸಿದರು. ಹಾಗೂ ಅಡ್ಡಗಟ್ಟಿ ನಿಂತ ಮುಸಲ್ಮಾನರನ್ನು ಬದಿಗೆ ಸರಿಸಿದ ಮೇಲೆಯು ಮಸೀದೆಯೆದುರಿಗೆ ಲೇಜಿಮುದ ಮೆರವಣಿಗೆಯು ಬಜರಂಗ ಬಲಿಯ ಜಯ ಜಯಕಾರದೊಂದಿಗೆ ಸಾಗಿತು. ಮ್ಯಾಜಿಸ್ಟ್ರೇಟರಾದ ಶ್ರೀ. ಗುಹಾಗಾರಕರರೂ ಪರೊಳಕರರೂ ಸಬ್ ಇನಸ್ಪೆಕ್ಟರರಾದ ಶ್ರೀ. ರಾಯಚೂರರೂ ಅತ್ಯಂತ ಜಾಗರೂಕತೆಯಿಂದ ವರ್ತಿಸಿದ್ದರಿಂದ ಅನಿಷ್ಟ ಪ್ರಕಾರವೇನೂ ಸಂಭವಿಸದೆ ಪರಿಸ್ಥಿತಿಯು ಒಳ್ಳೇ ಹಿಡಿತದಲ್ಲುಳಿಯಿತು.

**ಮೆರವಣಿಗೆಯ ಮೇಲೆ ಕಲ್ಲು.**

—

ಮಸೀದೆ ದಾಟಿ ಮೆರವಣಿಗೆ ಮುಂದೆ ಹೋದಮೇಲೆ ಅದರ ಮೇಲೆ ೪-೫ ಕಲ್ಲು ತೂರಲ್ಪಟ್ಟವು. ಶ್ರೀ. ಮಜಲಿ ವಕೀಲರಿಗೂ ಮತ್ತೆ ಕೆಲವರಿಗೂ ಪೆಟ್ಟು ತಗಲಿವೆಯೆಂದು ತಿಳಿದು ಬರುತ್ತದೆ. ಆದರೂ ಮೆರವಣಿಗೆಯು ಗಡಿಬಿಡಿ ಇಲ್ಲದೆ ದಾಟಿತು. ವ್ಯಾಯ್ಯಾಮ ಮಂಡಲದವರು ಸುಸಂಘಟಿತರಿದ್ದುದರಿಂದ ಯಾರಿಗೂ ಏನೂ ಅಪಾಯವಾಗಿಲ್ಲ.

## ಶಿವದೀಕ್ಷಾ ಸಮಾರಂಭ.

ಇದೇ ಬಹುಧಾನ್ಯ ಸಂ|| ರದ ಆಶ್ವೀನ ಶು|| ೯ ಸೋಮವಾರ ಸಾಯಂಕಾಲ ೩ ಘಂಟೆಯ ಸುಮುಹೂರ್ತ ಕಾಲದಲ್ಲಿ ಹರಪನಹಳ್ಳಿ ತಾಲೂಕು ಪ್ರಸಿದ್ಧ ಪುಣ್ಯಕ್ಷೇತ್ರವೆನಿಸಿದ ಕೂಲಹಳ್ಳಿ ಗ್ರಾಮದಲ್ಲಿ ವೀರಶೈವ ಹಡಪದ ಮಲ್ಲಿಕಾರ್ಜುನಪ್ಪನವರ ಸ್ವಗೃಹದಲ್ಲಿ ಹಾಲಪ್ಪ, ಸಂಣ ಮಲ್ಲಿಕಾರ್ಜುನಪ್ಪ, ವಡ್ಡಿನದಾದಾಪುರದ ಮಲ್ಲಪ್ಪ ಮತ್ತು ದೊಡ್ಡ ಮಲ್ಲಿಕಾರ್ಜುನಪ್ಪ ಈ ನಾಲ್ಕು ಮನೆತನದ ೧೦ ಮಂದಿ ಗಂಡು ಮಕ್ಕಳಿಗೂ ೨೦ ಮಂದಿ ಹೆಣ್ಣು ಮಕ್ಕಳಿಗೂ ಶಾಸ್ತ್ರೋಕ್ತವಿಧಿಪ್ರಕಾರ ವೀರಶೈವ ದೀಕ್ಷೆಯನ್ನು ಹರಪನಹಳ್ಳಿ ವೇ|| ತೆಲಿಗಿ ಹರಪನಹಳ್ಳಿ ಮಠದ ಜಗದೇವಯ್ಯನವರ ಅಧಿಕಾರವಹಿಯಿಂದ ಮತ್ತು ವೇ|| ಮೋಡ್ಲೀರಿ ಹಿರೇಮಠದ ಶ್ರೀಕಂಠಯ್ಯನವರ ಪೌರೋಹಿತ್ಯದಿಂದ ಅತ್ಯಂತ ವಿಜೃಂಭಣೆಯಿಂದ ಸಾಂಗವಾಗಿ ಜರುಗಿಸಿದ್ದಾಯಿತು. ಈ ಘನ ಕಾರ್ಯಕ್ಕೆ ಹರಪನಹಳ್ಳಿಯ ಬಳ್ಳಾರಿ ಜಿಲ್ಲಾ ವೀರಶೈವ ಹಡಪದ ಮಹಾಜನ ಸಮಾಜ ಸಂಘದ ಅಧ್ಯಕ್ಷರಾದ ಇಟ್ಟಿಗುಡಿ ಧರ್ಮಪ್ಪನವರು ಕಾರ್ಯದರ್ಶಿಗಳಾದ ಹ. ಶಿವಣ್ಣ, ಉಳ್ಳೇಗಡ್ಡಿ ಮಲ್ಲಪ್ಪ, ಹಾಲಪ್ಪ, ವೀರಪ್ಪ, ಮುಂತಾದ ಸಂಘದ ಮೆಂಬರರು ಆಗಮಿಸಿ ಒಳ್ಳೇ ದಕ್ಷತೆಯಿಂದ ಕಾರ್ಯವನ್ನು ಸಾಂಗವಾಗಿ ನೆರವೇರಿಸಿದನಂತರ ಗಣಾರಾಧನೆಯು ಜರುಗಿ ಸಕಲರಿಗೂ ಮಿಷ್ಟಾನ್ನ ಭೋಜನದಿಂದ ಸಂತೃಪ್ತಿಗೊಳಿಸಿದರು.

ಮತ್ತು ಇನ್ನೂ ಇದೇ ಆಶ್ವೀನ ಮಾಸದಲ್ಲಿ ಕಡ್ಡಿಬಾಳು, ಬ್ಯಾಲಾಳ, ಹೊಸಹಳ್ಳಿ ವಗೈರೆ ಗ್ರಾಮಗಳಲ್ಲಿ ದೀಕ್ಷಾಕಾರ್ಯಗಳು ನಡೆಯುತಕ್ಕವಿವೆ. ಈ ಕಾರ್ಯಭಾಗದಲ್ಲಿ ಸಂಘದ ಅಧ್ಯಕ್ಷರು, ಕಾರ್ಯದರ್ಶಿಗಳು ತಮ್ಮ ಗೃಹಕೃತ್ಯಗಳನ್ನೆಲ್ಲಾ ಬದಿಗೊತ್ತಿ ಅಹೋರಾತ್ರಿ ತುಂಬಾ ಶ್ರಮವಹಿಸಿ ಸಮಾಜಾಭಿವೃದ್ಧಿಯ ಕಾರ್ಯಗಳನ್ನು ಜರುಗಿಸುತ್ತಲಿರುವರು. ಇವರಿಗೆಲ್ಲಾ ದಯಾಮಯನಾದ ಭಗವಂತನು ಚಿರಾಯುರಾರೋಗ್ಯವನ್ನು ಐಶ್ವರಾಭಿವೃದ್ಧಿಯನ್ನು ದಯಪಾಲಿಸಲೆಂದು ಅನನ್ಯ ಭಕ್ತಿಯಿಂದ ಹಾರೈಸುವ,

ಓರ್ವ ಹಿತಚಿಂತಕ.

---

## ಸ್ವದೇಶಿ ಮೋಟಾರ ಕಾರಖಾನೆ.

ಸರ್. ಎಂ. ವಿಶ್ವೇಶ್ವರಯ್ಯನವರ ಯೋಜನೆ ಪ್ರಕಾರ ಮುಂಬೈಯಲ್ಲಿ ಮೋಟಾರ ಕಾರಖಾನೆ ಸ್ಥಾಪಿಸುವುದು ಲಾಭಕರವೆಂದು ವರದಿಯಾಗಿದೆ. ಮಶಿನರಿಗೆ ೯೦ ಲಕ್ಷ ರೂ. ಮತ್ತು ಕೆಲಸಕ್ಕೆ ೬೦ ಲಕ್ಷ ರೂ. ಒಟ್ಟು ೧|| ಕೋಟಿ ರೂ. ಈ ಕಾರಖಾನೆಗೆ ಬೇಕು. ಇಷ್ಟು ಬಂಡವಾಳದಿಂದ ಮೂರು ವರುಷಗಳಲ್ಲಿ ವರುಷಕ್ಕೆ ೧೨ ಸಾವಿರ ಮೋಟಾರ ತಯಾರಮಾಡಬಹುದು.

ಈಗ ಈ ಕಾರಖಾನೆಗೆ ೧೦೦ ಕ್ಕೆ ೩೦ ರಷ್ಟು ಸಾಮಾನುಗಳನ್ನು ಪರದೇಶಗಳಿಂದ ತರಿಸಿಕೊಳ್ಳಬೇಕಾಗುವುದು. ಈ ದೇಶಕ್ಕೆ ಹೋದ ವರುಷ ೧೬೯೪೬ ಕಾರುಗಳೂ ೧೩೦೪ ಲಾರಿಗಳೂ ಬಂದವು. ಇವುಗಳ ಒಟ್ಟು ಬೆಲೆ ೮ ಕೋಟಿ ರೂ. ಈ ದೇಶದಲ್ಲಿಯೇ ಮೋಟಾರ ಕಾರಖಾನೆಯಾದರೆ ಈ ಹಣವು ನಮ್ಮಲ್ಲೇ ಉಳಿಯುತ್ತದೆ. ಆದಕಾರಣ ಬಡ ಜನರು ಕೂಡಾ ಶೇರ ತೆಗೆದುಕೊಳ್ಳಲು ಅನುಕೂಲವಾಗುವಂತೆ ೫ ರೂ. ಗಳ ಒಂದು ಶೇರ ಗೊತ್ತುಮಾಡಿ ಕಾರಖಾನೆಯನ್ನು ಸ್ಥಾಪಿಸಬೇಕೆಂದು ಯೋಜನೆಮಾಡಿದ್ದಾರೆ.

ತತ್ವ ನಿಷ್ಠ ಸೇವಕರ ಸ್ಪಷ್ಟೀಕರಣ

**ಶ್ರೀ ಮಹದೇವಪ್ಪ ಮೈಲಾರ ಮತ್ತು ಶ್ರೀಮತಿ ಸಿದ್ಧಮ್ಮ**

## ಇವರ ಮಹತ್ವದ ಪ್ರಕಟನೆಯು.

೨೩-೯-೩೬ ತಾರೀಖಿನ ಸಂಯುಕ್ತ ಕರ್ನಾಟಕದಲ್ಲಿ ಪ್ರಾಂತಿಕ ಕಾಂಗ್ರೆಸ ಕಮೀಟಿಯ ಒಂದು ಅ ನ ಧಿ ಕೃ ತ ಖಾದಿ ಎಂಬ ವಿಷಯವಾಗಿ ಹೊರಟಿರುವ ಪ್ರಕಟನೆಯನ್ನು ನಾವಿಬ್ಬರೂ ಓದಿ ನೋಡಿದೆವು. ತತ್ವ ನಿಷ್ಠೆಯಿಂದ ಸೇವೆ ಮಾಡುವ ನಮ್ಮ ಖಾದಿ ಉತ್ಪತ್ತಿ ಕೇಂದ್ರದ ಖಾದಿಗೆ ಸಹ ಅನಧಿಕೃತವೆಂಬ ಹೆಸರು ಕೊಟ್ಟ ಬಗ್ಗೆ ನಮಗೆ ವಿಷಾದವೆನಿಸಿ ಜನತೆಯಲ್ಲಿ ತಪ್ಪು ತಿಳುವಳಿಕೆಯಾಗಬಾರದೆಂದು ಈ ಕೆಳಗಿನಂತೆ ಸ್ಪಷ್ಟೀಕರಿಸುತ್ತೇವೆ.

ನಾವಿಬ್ಬರು ಸಾಬರಮತಿ ಆ ಶ್ರ ಮ ದ ಲ್ಲಿ ಹಂಜಿ ಹಾಕುವ ಕಲೆಯಲ್ಲಿಯೂ ನೂಲುವ ನೇಯುವ ಕಲೆಯಲ್ಲಿಯೂ ಪ್ರಾವಿಣ್ಯತೆಯನ್ನು ಪಡೆದು ಗಾಂಧೀಜಿಯವರ ಸಲಹೆಯಂತೆ ಧಾರವಾಡ ಜಿಲ್ಲೆಯಲ್ಲಿಯ ಕೊರಡೂರಲ್ಲಿ ಖಾದಿ ಸ್ವಾವಲಂಬನ ಕಾರ್ಯವನ್ನು ಸುರುವುಮಾಡಿದೆವು. ಕರ್ನಾಟಕದಲ್ಲಿ ಸ್ವಾವಲಂಬನದಿಂದ ಖಾದಿ ಕೆಲಸ ನಡೆದದ್ದು ನಮ್ಮದೇ ಮೊದಲಿನದು. ಇದಕ್ಕೆ ಅಖಿಲ ಭಾರತ ಚರಖಾ ಸಂಘದವರೇ ಪ್ರತಿ ತಿಂಗಳು ಕೆಲಸ ನಡಿಸುವದರ ಸಲುವಾಗಿ ಹಣದ ಪುರವಠೆ ಮಾಡುತ್ತಿದ್ದರು. ಮತ್ತು ನಮ್ಮ ಸ್ವಾವಲಂಬನ ಕೆಲಸವು ಚರಖಾ ಸಂಘದ ಒಂದು ಅಂಗವಾಗಿತ್ತು. ಇದರ ಯಾವತ್ತು ಸಂಚಾಲಕತ್ವವು ನಾನು ಅಂದರೆ ಮಹಾದೇವ ಮೈಲಾರ ಇವರ ಕೈಯಲ್ಲಿಯೇ ಇತ್ತು. ಮುಂದೆ ಸ್ವಾವಲಂಬನ ಯೋಜನೆಯನ್ನು ಅ. ಭಾ. ಚ. ಸಂಘವು ಬಂದು ಮಾಡಿದನಂತರ ಹಳ್ಳಿಗಳಲ್ಲಿ ಆದ ಈ ಹೊಸ ಜಾಗೃತೆಯನ್ನು ಕುಂದಿಸಬಾರದೆಂದು ತಿಳಿದು ನಾವಿಬ್ಬರೂ ಸ್ವತಃ ಜವಾಬ್ದಾರಿಯಿಂದ ಈ ಸ್ವಾವಲಂಬನದ ಖಾದಿ ಕಾರ್ಯವನ್ನು ಹಾಗು ಖಾದಿ ಉತ್ಪತ್ತಿ ಕೇಂದ್ರದ ಕೆಲಸವನ್ನು ಮುಂದು ವರಿಸಿದೆವು. ಮುಂದೆ ಚರಖಾ ಸಂಘದಂತೆಯೇ ನಮ್ಮ ಈ ಉತ್ಪತ್ತಿ ಕೇಂದ್ರವು ಸಹ ಜನತೆಯ ಸೇವೆಯನ್ನು ಮಾಡಬೇಕೆಂಬುದೇ ನಮ್ಮ ಗುರಿ ಇದ್ದ ಕಾರಣ ಕರ್ನಾಟಕ ಚರಖಾ ಸಂಘದ ಮುಖ್ಯ ಸಂಚಾಲಕರಾದ ಶ್ರೀ ಕೌಜಲಗಿಯವರಿಗೆ ನಾವೊಂದು ಪತ್ರಬರೆದೆವು. ಅದರ ಸಾರಾಂಶದ ಮುಖ್ಯ ಭಾಗವು ಕೆಳಗಿನಂತಿದೆ.

ಶ್ರೀಯುತ ಕೌಜಲಗಿಯವರಿಗೆ.—

ನಾವು ತತ್ವನಿಷ್ಠರೆಂಬುದು ನಿಮಗೆ ಗೊ ತ್ತಿ ದೆ. ನಾವು ನಡೆಸಿದ ಖಾದಿ ಉತ್ಪತ್ತಿ ಕೆಲಸವು ಲಾಭಕ್ಕಾಗಿ ಇಲ್ಲವೆ ವ್ಯಾಪಾರ ಧಂದೆಗಾಗಿ ನಡಿಸಿಲ್ಲಾ. ಹಳ್ಳಿಯ ಕೈಗಾರಿಕೆಗಳು ಬೆಳೆದು ಹಳ್ಳಿಯ ಬಡವರಿಗೆ ಉದ್ಯೋಗ ದೊರೆಯಬೇಕೆಂಬುದೇ ನಮ್ಮ ಮುಖ್ಯ ಆಶೆಯು. ನಾವು ಚರಖಾ ಸಂಘದಂತೆಯೇ ಹಂಜಿ ಹಾಕುವವರಿಗೂ ನೂಲುವವರಿಗೂ ನೇಯುವವರಿಗೂ ಪೂರ್ಣ ಕೂಲಿಯನ್ನು ಕೊಡುತ್ತೇವೆ. ಇದೆಲ್ಲವನ್ನು ನಮ್ಮ ಮೇಲೆ ಚಕ್ಕ ಇಟ್ಟು ನಮ್ಮ ಸಂಸ್ಥೆಯನ್ನು ಚರಖಾ ಸಂಘದ ಮನ್ನಣೆ ಪಡೆದ ಉತ್ಪತ್ತಿ ಕೇಂದ್ರವನ್ನಾಗಿ ಮಾಡಿಕೊಳ್ಳಬೇಕು.

ಈ ಪತ್ರುಕ್ಕೆ ಯಾವ ಉತ್ತರವೂ ಇವತ್ತಿನವರೆಗೂ ಬಂದಿಲ್ಲಾ. ಆದರೂ ನಾವು ಚರಖಾ ಸಂಘದ ನೇ ಮ ಗ ಳ ನ್ನು ಅಂದರೆ ಪೂರ್ತಿ ಕೂಲಿಯನ್ನು ಕೊಟ್ಟು ಶುದ್ಧ ಕೈನೂಲಿನ ಅರಿವೆಗಳನ್ನು ತಯಾರ ಮಾಡುವ ಪೂರ್ಣ ನೇಮುಗಳನ್ನು ಪಾಲಿಸುತ್ತಿದ್ದೇವೆ. ಈಗ ಸಹ ಚರಖಾ ಸಂಘದವರು ಈ ನಮ್ಮ ಖಾದಿ ಉತ್ಪತ್ತಿ ಕೇಂದ್ರವನ್ನು ಮನ್ನಣೆ ಪಡೆದ ಸಂಸ್ಥೆಯಾಗಿ ಮಾಡಿಕೊಳ್ಳುವದಿದ್ದರೆ ನಮ್ಮ ಪೂರ್ಣ ಒಪ್ಪಿಗೆ ಇರುತ್ತದೆ.

ಇನ್ನು ಕೆಲವು ಮಹಾ ಜನರು ನಮ್ಮಲ್ಲಿ ಗಿರಣಿ ಅರಳಿಯನ್ನು ಉಪಯೋಗಿಸುತ್ತೇವೆಂದು ಚರಖಾ ಸಂಘದವರಂತೆ ಪೂರ್ಣ ಕೂಲಿಯನ್ನು ಕೊಡುವದಿಲ್ಲೆಂದೂ ಅಪಪ್ರಚಾರವನ್ನು ಮಾಡುತ್ತಿರುವರು. ಕೂಲಿಯನ್ನು ಚರಖಾ ಸಂಘದಷ್ಟೆ ಪೂರ್ತಿಯಾಗಿ ಕೊಡುತ್ತಿದ್ದೇವೆಂಬುದನ್ನು ಮನವರಿಕೆ ಮಾಡಿಕೊಳ್ಳಲು ಬೇಕಾದವರು ಬಂದರೂ ಖಾತ್ರಿ ಮಾಡಿ ಕೊಡುತ್ತೇವೆ. ಆದರೆ ಅರಳಿಯನ್ನು ಕರ್ನಾಟಕ ಶಾಖೆಯ ಎಲ್ಲ ಚರಖಾ ಸಂಘದ ಕೇಂದ್ರಗಳು ಗಿರಣಿ ಅರಳಿಯನ್ನೇ ಉಪಯೋಗಿಸುತ್ತಿರುವದನ್ನು ಇವರು ತಿಳಿದುಕೊಂಡು ತಮ್ಮ ತಪ್ಪನ್ನು ತಿದ್ದಿಕೊಳ್ಳಬೇಕು.

ಈ ಪ್ರಕಾರ ತತ್ವ ಪಾಲನೆಯಿಂದ ನಾವಿಬ್ಬರೂ ನಡೆಸಿದ ಖಾದಿ ಉತ್ಪತ್ತಿ ಕೇಂದ್ರವನ್ನು ಚರಖಾ ಸಂಘದವರು ಮನ್ನಣೆಯ ಪಡೆದ ಕೇಂದ್ರವನ್ನಾಗಿ ಮಾಡಬೇಕು. ನಮ್ಮ ಪವಿತ್ರ ಸೇವೆಯ ಪರಿಚಯವಿದ್ದ ಎಲ್ಲ ತತ್ವನಿಷ್ಠ ಸೇವಕರೂ ಚರಖಾ ಸಂಘಕ್ಕೆ ನಮ್ಮ ಕೇಂದ್ರವನ್ನು ಮನ್ನಣೆಯ ಕೇಂದ್ರವನ್ನಾಗಿ ಮಾಡಲು ವಿನಂತಿ ಮಾಡಿಕೊಳ್ಳಬೇಕು. ಮತ್ತು ನಮ್ಮ ಕೇಂದ್ರದಲ್ಲಿ ತತ್ವಶಃ ಹಂಜಿ ಹಾಕುವವರಿಗೂ, ನೂಲುವವರಿಗೂ, ನೇಯುವವರಿಗೂ ಚರಖಾ ಸಂಘದಷ್ಟೇ ಕೂಲಿಯನ್ನು ಕೊಡುತ್ತಿರುವ ಸತ್ಯ ವ್ಯವಹಾರವನ್ನು ಚರಖಾ ಸಂಘದವರೂ ಮತ್ತು ಜನತೆಯೂ ಅವಶ್ಯವಾಗಿ ತಿಳಕೊಂಡು ಈ ನಮ್ಮ ಪವಿತ್ರ ಕಾರ್ಯದಲ್ಲಿ ನಮಗೆ ಮನಃಪೂರ್ವಕವಾಗಿ ಪ್ರೋತ್ಸಾಹಿಸುವಿರಾಗಿ ನಂಬಿ ನಿಮ್ಮೆಲ್ಲರ ಸೇವಾ ಕಾರ್ಯದಲ್ಲಿ ತೊಡಗಿದ್ದೇವೆ.

ಕೊರಡೂರ — ತಮ್ಮೆಲ್ಲರ ಸೇವಕರು

ತಾ. ೨೬-೯-೧೯೩೬. ಮಹಾದೇವ ಮೈಲಾರ, ಸಿದ್ಧಮತಿ ಮೈಲಾರ.

# ಪ್ರಕಟನೆ.

ನಿಖಿಲ ಕರ್ನಾಟಕ ಪ್ರಾಂತೀಯ ಆಯುರ್ವೇದ ಮಂಡಲ ಮತ್ತು ವಿದ್ಯಾಪೀಠ ಕಾರ್ಯಾಲಯದ ಅಧಿಕಾರಿಗಳಿಗೆ—

ಕೆಳಗಿನ ಪ್ರ ಶ್ನೆ ಗ ಳಿ ಗೆ ಕೂಡಲೇ ಉತ್ತರಕೊಡಬೇಕಾಗಿ ವಿ ನಂ ತಿ.—

( ಪ್ರಶ್ನೆ ೧ ನೇದು ಅ ) ಹತ್ತನೆಯ ನಿಖಿಲ ಕರ್ನಾಟಕ ಪ್ರಾಂತೀಯ ಆಯುರ್ವೇದ ವೈದ್ಯ ಸಮ್ಮೇಲನ ಬಳ್ಳಾರಿ ಈ ಅಧಿವೇಶನಕ್ಕೆ ಅಧ್ಯಕ್ಷರನ್ನು ಆರಿಸುವ ಅಧಿಕಾರವುಳ್ಳವರು ನಿಖಿಲ ಕರ್ನಾಟಕ ಪ್ರಾಂತೀಯ ಆಯುರ್ವೇದ ಮಂಡಲದ ಈ ವರ್ಷದ ಸಭಾಸದರಿರಲೇ ಬೇಕೋ ? ಹೇಗೆ ? ( ಬ ) ಅಧ್ಯಕ್ಷರಾಗಲು ೩ ಜನರ ಹೆಸರುಗಳನ್ನು ೧೫-೧೧-೩೬ ರ ಒ ಳ ಗಾ ಗಿ ಯಾರು ಸೂಚಿಸಬೇಕು ? ( ಕ )ಸ್ವಾಗತ ಸಭಾಸದರೂ ಸಹ ಅಧ್ಯಕ್ಷರನ್ನು ಆರಿಸುವಿಕೆಗೆ ಮತಕೊಡಬಹುದೇ ? (ಡ) ಅಧ್ಯಕ್ಷ ಸ್ಥಾನಕ್ಕೆ ವೈದ್ಯರೋ ? ಹಕೀಮರೋ ? ಡಾಕ್ಟರರೋ ? ಅಥವಾ ಮತ್ತಾರಾದರೂ ಆಗಬಹುದೆ ?

(ಪ್ರಶ್ನೆ ೨ ನೇದು.) ಈ ವರೆಗೆ ಎಷ್ಟು ಜನ ವೈದ್ಯರು ನಿ. ಕ. ಪ್ರಾಂತೀಯ ಆ. ಮಂ. ಸಭಾಸದರಾಗಿದ್ದಾರೆ ? ಅದರಲ್ಲಿ ಮುಂಬೈ ಕರ್ನಾಟಕದ ಸಭಾಸದರೆಷ್ಟು ? ಮದ್ರಾಸ ಕರ್ನಾಟಕದ ಸಭಾಸದರೆಷ್ಟು ? ಮೈಸೂರು ಕರ್ನಾಟಕದ ಸಭಾಸದರೆಷ್ಟು ? ನಿಜಾಮ ಕರ್ನಾಟಕದ ಸಭಾಸದ ಜನ ವೈದ್ಯರು ಎಷ್ಟು ?

ದಯವಿಟ್ಟು ಕೂಡಲೇ ಜಾಹೀರ ಪಡಿಸಬೇಕಾಗಿ ವಿನಂತಿ.

ಡಾ. ಅ. ಹಲಸೀಕರ ವೈದ್ಯ

ಹುಬ್ಬಳ್ಳಿ.

ಅಖಿಲ ಭಾರತ ವಸ್ತು ಪ್ರದರ್ಶನದಲ್ಲಿ
ಸುವರ್ಣ ಪದಕಗಳನ್ನು ಮತ್ತು ಸರ್ಟಿಫಿಕೇಟುಗಳನ್ನು ಪಡೆದು ಹೆಸರಾದ
ಇಂಡಿಯಾ ಸರಕಾರದಲ್ಲಿ ರಜಿಸ್ಟರ್ ಆದ

# ಸಿದ್ಧೇಶ್ವರ ಟ್ರೇಝುರಿ ಕಂಪನಿ, ಹುಬ್ಬಳ್ಳಿ.










ನಮ್ಮ "ಸಿದ್ಧೇಶ್ವರ ಟ್ರೇಝುರಿ" ಗಳನ್ನು ಈ ವರೆಗೆ ಕೈಗಾರಿಕೆಯ ಕೆಲಸಗಳಲ್ಲಿ ಹೆಸರಾದ ಯುರೋಪ, ಅಮೇರಿಕಾ ವಗೈರೆ ಪರರಾಷ್ಟ್ರಗಳಲ್ಲಿ ತಯಾರಾಗುವ ಟ್ರೇಝುರಿಗಳ ಪದ್ಧತಿಯ ಮೇರೆಗೆ ಹೊಸ ಉಕ್ಕಿನ ಅಖಂಡ ಒಂದೇ ತಗಡಿನಲ್ಲಿ ೧೨ ಮೂಲೆಗಳನ್ನು ೫೦೦ ಟನ್ ಪ್ರೇಷರ ಕೊಡುವ ಮಶಿನ್ನಿನಿಂದ ಬಗ್ಗಿಸಿ, ರಿವ್ಹಿಟ್ಸ ಮೊದಲಾದವುಗಳಿಂದ ಜಾಯಿಂಟ ಮಾಡದೆ ಇಲೆಕ್ಟ್ರಿಸಿಟಿಯಿಂದ ಬೆಸೆದು ತಯಾರಿಸುತ್ತೇವೆ.

ಈ ಹೊಸ ಸುಧಾರಣೆಯಿಂದ ಮಾಡಿದ ತಿಜೋರಿಗಳಿಗೂ ಮತ್ತು ಯಾವದೇ ನಮ್ಮ ಸಾಮಾನಕ್ಕೂ ಯಾವ ತರದ ಭಯವಿಲ್ಲ. ಮತ್ತು ಅವು ಒಳ್ಳೇ ಮಜಬೂತವಾಗಿಯೂ ಸುಂದರವಾಗಿಯೂ ಆಗುತ್ತವೆ. ನಾವು ನಮ್ಮ ತಿಜೋರಿಗಳಿಗೂ ಮತ್ತು ನಮ್ಮಲ್ಲಿ ತಯಾರಾಗುವ ಉಕ್ಕಿನ ಕಪಾಟು, ಕ್ಯಾಶಬಾಕ್ಸ, ಸ್ಟ್ರಾಂಗರೂಮ ಡೋರ್ಸುಗಳಿಗೂ ನಮ್ಮ ಕಾರಖಾನೆಯಲ್ಲಿಯೇ ತಯಾರಾಗುವ ಉತ್ತಮವಾದ ಮತ್ತು ಮಜಬೂತವಾದ ಕೀಲಿಗಳನ್ನು ಹಚ್ಚುತ್ತೇವೆ. ಮತ್ತು ಇದಲ್ಲದೆ ನಮ್ಮಲ್ಲಿ ಹೊಸ ಪದ್ಧತಿಯ ಮೇರೆಗೆ ತಯಾರಾಗುವ ಕಾಂಬಿನೇಶನ್ ಕೀ ಲೆಸ್ಸಾ ಲಾಕ್ಸು (ನಂಬರ ಕೀಲಿ) ಗಳನ್ನು ತಿಜೋರಿಗಳಿಗೆ ಹಚ್ಚಿಸಿದರೆ ಆ ತಿಜೋರಿಗಳನ್ನು ಯಾರೂ ತೆಗೆಯಲು ಸಾಧ್ಯವಿಲ್ಲ. ಯಾರಾದರೂ ತೆಗೆದರೆ ಅವರಿಗೆ

## ೧೦೦೦ ರೂ. ಬಹುಮಾನ ಕೊಡುವೆವು.

ನಮ್ಮ ಫಾಯರ ಪ್ರೂಫ್ ತಿಜೋರಿಗಳು ತುಂಬಾ ಖಾತ್ರಿಯಾದವುಗಳಿರುತ್ತವೆ.

**ಈ ಬಗ್ಗೆ ಅನೇಕ ವಸ್ತು ಪ್ರದರ್ಶನಗಳಲ್ಲಿ ಒಳಗೆ ನೋಟು ವಗೈರೆ ಸಾಮಾನುಗಳನ್ನು ಇಟ್ಟು ಕೆಂಪಗೆ ಕಾಸಿದನಂತರ ಒಳಗಿಟ್ಟ ಸಾಮಾನುಗಳು ಸುಡದೆ ಇದ್ದದ್ದನ್ನು ಖಾತ್ರಿ ಮಾಡಿಕೊಟ್ಟಿದ್ದೇವೆ.**

ಧಾರಣೆಗಳ ಬಗ್ಗೆ ನಮ್ಮ ಸಚಿತ್ರ ಕ್ಯಾಟಲಾಗುಗಳಿಗೆ ಬರೆಯಿರಿ.
ಅಥವಾ
ಸಮಕ್ಷಮ ಬಂದಲ್ಲಿ ತಿಳಿಯುವದು.

ತಮ್ಮ ಕಲಾಭಿಮಾನಿ,
ಸಿದ್ಧೇಶ್ವರ ಮತ್ತು ಕಂಪನಿ
ಟ್ರೇಝುರಿ ಮೇಕರ್ಸ
ಹುಬ್ಬಳ್ಳಿ.

ಫ್ಯಾಕ್ಟರಿ ಮತ್ತು ಹೆಡ್ ಆಫೀಸ್-
ಹುಬ್ಬಳ್ಳಿ.

ಬ್ರ್ಯಾಂಚ ಆಫೀಸುಗಳು-
ಹೈದರಾಬಾದ (ಡೆಕ್ಕನ) ಮತ್ತು ಕೊಲ್ಹಾಪುರ (ಲಕ್ಷ್ಮೀಪುರಿ)

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ!
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೪ | ಆಲಮಟ್ಟಿ- ಸೋಮವಾರ ತಾರೀಖು ೧೭ ನೆಯ ಅಕ್ಟೋಬರ್ ೧೯೩೮. | ಸಂಚಿಕೆ೧೦

ಜನಸೇವೆಯೇ ದೇವರಸೇವೆ.

## ಹಂಗರಿಯಲ್ಲಿ ಯುದ್ಧದ ಸಿದ್ಧತೆಯೆ?

**ಹಂಗರಿ-ಜೆಕ್ ಒಪ್ಪಂದದ**
**ಮಾತು ಕತೆಗಳು ಬಿದ್ದುಹೋದವು!**

ಹಂಗರಿ-ಜೆಕ್ ಸರಕಾರಗಳಲ್ಲಿ ಗಡಿಪ್ರದೇಶದ ಬಗ್ಗೆ
ಸರಿಯಾದ ಒಪ್ಪಂದವಾಗದೆ ಹೋದುದರಿಂದ
ಹಂಗರಿಯ ಸರಕಾರವು ಯುದ್ಧಸಿದ್ಧತೆಯನ್ನು ನಡೆಸಿದೆ.
ಹಂಗರಿಯು ಜಕೋಸ್ಲೋವ್ಹಾಕಿಯಾದ ಮೇಲೆ ದಂಡೆತ್ತಿಹೋದರೆ
ಇಟಲಿ ಪೋಲಂಡಗಳು ಅದಕ್ಕೆ ಸಹಾಯ ಮಾಡುವುದಾಗಿ
ಅಭಿವಚನವನ್ನಿತ್ತಿರುವವಂತೆ!
ಹಂಗರಿಯ ಹಿಂದಿನ ಮಂತ್ರಿಗಳಾದ ಡಾ. ಡಾರಿಯವರು
ಹಿಟ್ಲರನನ್ನು ಕಾಣಲು ಮ್ಯುನಿಕ್ಕಿಗೆ ಹೋಗಿದ್ದಾರೆ.
ಅಲ್ಲಿಯೇ ಕೊನೆಯ ತೀರ್ಮಾನವಾಗಬಹುದೆಂದು ತೋರುತ್ತದೆ.

ದೇಹವೇ ದೇವಾಲಯ.

# ಸಾದರ ಸ್ವೀಕಾರ.

ಕಂಠೀರವ— ಮಂಗಳೂರಲ್ಲಿ ಹೊರಡುತ್ತಿರುವ ದ್ವಿ ಸಪ್ತಾಹಿಕ ಕಂಠೀರವ ಪತ್ರಿಕಾಕರ್ತರು ಪ್ರತಿ ವರುಷದಂತೆ ಈ ಸಾರೆಯೂ "ದಸರಾ ಸಂಚಿಕೆ" ಎಂಬ ವಿಶೇಷ ಸಂಚಿಕೆಯನ್ನು ಪ್ರಕಟಿಗೊಳಿಸಿ ಕನ್ನಡ ನಾಡಿಗೆ ಹಿರಿದಾದ ಸೇವೆಮಾಡಿದ್ದಾರೆ.

ಈ ವಿಶೇಷ ಸಂಚಿಕೆಯಲ್ಲಿ ಕನ್ನಡ ನಾಡು ಒಂದಾಗಬೇಕೆಂದು ಶ್ರೀ. ಮುದವೀಡು ಕೃಷ್ಣರಾಯರು ಬರೆದುದೂ, "ಸಮಾಜ ರಕ್ಷಕರೂ ಭಕ್ಷಕರೂ" ಎಂಬ ವಿಷಯವಾಗಿ ಶ್ರೀ. ಕಡೆಂಗೋಡ್ಲು ಶಂಕರಭಟ್ಟರು ಬರೆದುದೂ, ಪಂಡಿತ ತಾರಾನಾಥರು "ಎಚ್ಚರಿಕೆ" ಎಂಬ ಲೇಖನದಲ್ಲಿ ಎಚ್ಚರಿಸಿದುದೂ, "ಕರ್ಣಾಟಕವೋ? ಕರ್ನಾಟಕವೋ" ಎಂಬ ವಾದವನ್ನು ಕುರಿತು ಶ್ರೀ. ಗೋವಿಂದ ಪೈ ಅವರು ಸಪ್ರಮಾಣಗಳಿಂದ ವಿವೇಚಿಸಿರುವುದೂ, ಕೀರ್ತನಕೇಸರಿ ಶ್ರೀ. ಶಿವಮೂರ್ತಿಶಾಸ್ತ್ರಿಗಳು "ಕರ್ನಾಟಕವೂ ಕೀರ್ತನಕಾರರೂ" ಎಂಬ ಲೇಖನದಲ್ಲಿ ವಿವೇಚಿಸಿರುವುದೂ ಅವಶ್ಯವಾಗಿ ಓದತಕ್ಕವುಗಳಾಗಿವೆ.

ಈಗಿನ ಶಿಕ್ಷಣವು ಹೆಣ್ಣುಮಕ್ಕಳಿಗೆ ಎಷ್ಟರಮಟ್ಟಿಗೆ ಫಲಕಾರಿಯಾಗಿದೆಯೆಂಬುದನ್ನು ಶ್ರೀಮತಿ ಸರಸ್ವತಿದೇವಿ ರಾಜವಾಡೆ ಇವರು ಬಹು ಚೆನ್ನಾಗಿ ಚರ್ಚಿಸಿದ್ದಾರೆ. ನಮ್ಮ ಹೆಣ್ಣುಮಕ್ಕಳು ಶಾರೀರಿಕ ವ್ಯಾಯಾಮವನ್ನು ಹೊಂದಬೇಕಾದ ವಿಚಾರವಾಗಿ ಕುಮಾರಿ ಪದ್ಮಾವತಿ ಚಿನ್ನಪ್ಪ ಕೊಡಗು ಇವರು ಬಹು ಮಹತ್ವದ ಲೇಖನವನ್ನು ಬರೆದಿದ್ದಾರೆ.

ಶ್ರೀ. ಆರ್. ಎಸ್. ಆರಾಧ್ಯ ಇವರು ವಿದೇಶಗಳಲ್ಲಿ ನಡೆದಿರುವ ವೃತ್ತಪತ್ರಿಕಾ ವ್ಯವಸಾಯದ ಸಂಬಂಧವಾಗಿ ಮನನೀಯವಾದ ಒಂದು ಲೇಖನವನ್ನು ಬರೆದಿದ್ದಾರೆ. ಪ್ರೊಫೆಸರ್-ಕುಂದಣಗಾರರು "ಕಣ್ಣು" ಎಂಬ ವಿಚಾರವಾಗಿ ಬರೆದ ಸಂಗತಿಗಳು ಹೊಸ ಕಣ್ಣನ್ನೇ ಕೊಡತಕ್ಕವುಗಳಾಗಿವೆ.

ಶ್ರೀ. ಗುರುರಾವ ವಾಳವೆಕರರು ಬರೆದ ಪ್ರಾಪ್ತಿಯ ಮೇಲಿನ ಕರ ಮತ್ತು ಶ್ರೀ. ಬಿ. ವಿ. ಚಲಂ ಇವರು ಬರೆದ ಜೀವವಿಮೆಯ ಅವಶ್ಯಕತೆ ಮೊದಲಾದ ಆರ್ಥಿಕ ವಿಷಯ ಲೇಖನಗಳೂ ಬಹು ಮಹತ್ವದವುಗಳಾಗಿವೆ. ಸರ್. ಶ್ರೀನಿವಾಸ ಶರ್ಮರವರು ಇಂದಿನ ಮೈಸೂರು ಎಂಬ ಲೇಖನದಲ್ಲಿ ಅಲ್ಲಿಯ ಕಾಂಗ್ರೆಸ್ ಪಕ್ಷದ ಕಾರ್ಯಕಲಾಪಗಳನ್ನು ಬಹು ಕಟುವಾಗಿ ಖಂಡಿಸಿದ್ದಾರೆ.

ಈ ಪ್ರಕಾರ ಈ ಮಹತ್ವದ ವಿಶೇಷ ಸಂಚಿಕೆಯಲ್ಲಿ ಧಾರ್ಮಿಕ, ಸಾಮಾಜಿಕ, ರಾಜಕೀಯ ಆರ್ಥಿಕ ಮೊದಲಾದ ಜನ ಜೀವನಕ್ಕೆ ಆವಶ್ಯಕವಾದ ಅನೇಕ ಸಂಗತಿಗಳ ಕುರಿತು ಬರೆಯಲ್ಪಟ್ಟ ೪೩. ಲೇಖನಗಳು ಪ್ರಕಟವಾಗಿವೆ. ನಾಡಹಬ್ಬದ ಸಂತೋಷ ಕಾಲದಲ್ಲಿ ನಾಡಿನ ಅನೇಕ ವಿದ್ವಾಂಸರ ವಿವಿಧ ವಿಷಯಗಳ ಜ್ಞಾನಾಮೃತವನ್ನು ನಾಡನುಡಿಯ ಮೂಲಕ ಹೀಗೆ ನಾಡಿಗರಿಗೆ ನೀಡುತ್ತಿರುವ ಕಂಠೀರವಕಾರರ ಪ್ರಯತ್ನವನ್ನು ನಾವು ಹೃದಯ ಪೂರ್ವಕ ಅಭಿನಂದಿಸುತ್ತೇವೆ.

ಕನ್ನಡ ನುಡಿ— ಇದು ಕರ್ನಾಟಕ ಸಾಹಿತ್ಯ ಪರಿಷತ್ತಿನ ಪರವಾಗಿ ಬೆಂಗಳೂರಲ್ಲಿ ಪ್ರತಿ ಮಂಗಳವಾರ ಹೊರಡುವ ಪತ್ರಿಕೆ. ಇದರ ಸಂಪಾದಕರು ಪ್ರಸಿದ್ಧಸಾಹಿತಿಗಳಾದ ಶ್ರೀ. ಅ. ನ. ಕೃಷ್ಣರಾಯರು. ನಮ್ಮ ನಾಡಹಬ್ಬದಲ್ಲಿ ವಿಜಯದಶಮಿಯ ದಿನ ಈ "ಕನ್ನಡ ನುಡಿ" ಪ್ರಕಟವಾಯಿತು.

"ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಸರ್ವತೋಮುಖವಾದ ಬೆಳವಣಿಗೆಯನ್ನು ತೋರುವುದೇ "ಕನ್ನಡನುಡಿ" ಯ ಗುರಿ." ಎಂದು ಸಂಪಾದಕ ಮಹಾಶಯರು ತಮ್ಮ ಅರಿಕೆಯಲ್ಲಿ ಹೇಳಿದ್ದಾರೆ. ಇದರಿಂದ ಈ ಪತ್ರಿಕೆಯ ಮುಖ್ಯೋದ್ದೇಶವು ಸ್ಪಷ್ಟವಾಗುತ್ತದೆ.

"ಪ್ರತಿ ಮನೆಯ ಬಾಗಿಲಿಗೂ ತಿಳಿವಿನ ಬೆಳಕನ್ನು ಕನ್ನಡ ನುಡಿಯ ಹಣತೆಯ ಮೂಲಕ ಒಯ್ಯಲು ಪರಿಷತ್ತಿನ "ಕನ್ನಡ ನುಡಿ" ಪ್ರಯತ್ನಿಸುತ್ತದೆ" ಎಂದು ಸಂಪಾದಕ ಮಹಾಶಯರು ತಮ್ಮ ಅಗ್ರಲೇಖನದಲ್ಲಿ ಸಾರಿದ್ದಾರೆ.

ಈ ಮೊದಲನೆಯ ಸಂಚಿಕೆಯಲ್ಲಿ ಪ್ರಕಟವಾದ ಅನೇಕ ಸಂಗತಿಗಳ ಮೇಲಿಂದಲೇ ಕನ್ನಡ ನುಡಿ ಹೀಗೆ ಸಾರಿದ್ದರ ಸತ್ಯತೆಯನ್ನು ಕಾಣಬಹುದು. ತಿಳಿವಿನ ಬೆಳಕನ್ನು ಕೊಡುವ ಈ ಹಣತೆ ಮನೆ ಬಾಗಿಲಿಗೆ ಬರುವಂತಿದ್ದರೂ ಅದರ ಬೆಳಕು ಎಲ್ಲಿ ಒಳಗೆ ಬಿದ್ದೀತೋ ಎಂದು ಬಾಗಿಲನ್ನೇ ಮುಚ್ಚಿಕೊಳ್ಳುವ ಬುದ್ಧಿ ನಮ್ಮ ಸುಶಿಕ್ಷಿತರಿಗೆ ಬರದಿರಲಿ. ಅವರ ಮನೆಯೊಳಗೂ ಈ ಕನ್ನಡ ನುಡಿಯ ಹಣತೆಯ ಬೆಳಕು ಬೆಳಗಲಿ. ಪರಸಂಸ್ಕೃತಿಯ ಕತ್ತಲೆ ಹರಿಯಲಿ. ತಾಯಿನುಡಿಯ ಸೇವೆಗಾಗಿ ತನು, ಮನ, ಧನಗಳನ್ನು ಸವಿಸುತ್ತಿರುವ ಪರಿಷತ್ತಿನವರ ಬಯಕೆ ಕೈಗೂಡಲಿ.

ಕನ್ನಡ ಕುಲಗುರುಗಳಾದ ಶ್ರೀ. ಶ್ರೀಕಂಠಯ್ಯನವರು ಕನ್ನಡಕ್ಕಾಗಿಯೇ ಹೊಸಲಾದ ಒಂದು ವಾರಪತ್ರಿಕೆ ಬೇಕೆಂದು ಅಪೇಕ್ಷಿಸಿದ್ದನ್ನು ಪರಿಷತ್ತಿನವರು ಇಷ್ಟು ಜಾಗ್ರತೆ ನೆರವೇರಿಸಿ ಕನ್ನಡ ತಾಯಿಯ ಸೇವೆಗೆ ಮತ್ತೊಂದು ಹೆಜ್ಜೆ ಮುಂದೆ ಬಂದುದಕ್ಕೋಸ್ಕರ ನಾವು ಹದಯಪೂರ್ವಕ ಪರಿಷತ್ತಿನವರನ್ನು ಅಭಿನಂದಿಸುತ್ತೇವೆ.

ವಾರ್ಷಿಕ ಚಂದಾ ಅಂಚೆಯ ವೆಚ್ಚಸೇರಿ ರೂ. ೨-೪-೦ ಮಾತ್ರ. ಸಕಲ ಸುಶಿಕ್ಷಿತ ಕನ್ನಡಿಗರೂ ಅಗತ್ಯವಾಗಿ ಇದನ್ನು ತರಿಸಿ ತಾಯಿನುಡಿಯ ಸೇವೆಯ ಪ್ರಯೋಜನಗಳಿಗೆ ಭಾಗಿಗಳಾಗುವರೆಂದು ನಂಬಿದ್ದೇವೆ.

---

## ದೇವಾಲಯದಲ್ಲಿ ಗೋಮಾಂಸ !

ಮಧ್ಯಪ್ರಾಂತದ ಎಲಿಚಪುರ ಎಂಬಲ್ಲಿ ಒಂದು ದೇವಾಲಯದಲ್ಲಿ ಗೋಮಾಂಸವನ್ನು ಯಾರೋ ಹಾಕಿದ್ದರು. ಈ ಅತ್ಯಾಚಾರ ನಡೆದ ೧೫ ದಿನಗಳೊಳಗಾಗಿಯೇ ಮೂರ್ತಿಜಾಪುರ ಎಂಬಲ್ಲಿಯ ಒಂದು ದೇವಾಲಯದ ಗಂಟೆಗೆ ಮಾಂಸವನ್ನು ಕಟ್ಟಿದ್ದರು.

— ಸಂಯುಕ್ತಪ್ರಾಂತದ ಅಸೆಂಬ್ಲಿಗೆ ಮುಸಲ್ಮಾನಮತದಾರರ ಒಂದು ಉಪಚುನಾವಣೆ ಕಳೆದ ವಾರ ನಡೆಯಿತು. ಅದರಲ್ಲಿ ಕಾಂಗ್ರೆಸ್ ಪಕ್ಷದವರಿಗೆ ೧೨೩೫ ಮತಗಳು ಮುಸ್ಲಿಂಲೀಗಿನವರಿಗೆ ೩೦೧೧ ಮತಗಳು ದೊರೆತು ಮುಸ್ಲಿಂಲೀಗು ಗೆದ್ದಿತು.

—ಠಾಣೆ ಜಿಲ್ಲಾ ಆಗಾಶಿ ಎಂಬಲ್ಲಿ ಕಳೆದ ೧೧ ನೇ ತಾರೀಖಿನ ದಿವಸ ಶ್ರೀ. ತಾತ್ಯಾರಾವ ಗದ್ರೆಯವರ ಅಧ್ಯಕ್ಷತೆಯಲ್ಲಿ ಒಂದು ಕ್ರಿಶ್ಚನ್ ಕುಟುಂಬಕ್ಕೆ ಹಿಂದು ಧರ್ಮ ದೀಕ್ಷೆಯನ್ನು ಕೊಟ್ಟರು. ಆಗ ಋತ್ವಿಜ ಕಾರ್ಯವನ್ನು ಪಂಡಿತ ಹೋರಾಭೂಷಣ ಶಾಸ್ತ್ರಿಗಳು ಮಾಡಿದರು.

# ವಿದೇಶಗಳಲ್ಲಿ ವೃತ್ತಪತ್ರಿಕಾ ಪ್ರಸಾರ.

## ಜಪಾನ, ಬ್ರಿಟನ್, ಜರ್ಮನಿ ಮತ್ತು ರಷ್ಯಾಗಳಲ್ಲಿ ವೃತ್ತ ಪತ್ರಿಕೋದ್ಯಮ ಪ್ರಗತಿ.

ದೇಶದ ಪುರೋಭಿವೃದ್ಧಿಗೆ ಮತ್ತು ಜನಾಂಗದ ಬುದ್ಧಿ ಬೆಳವಣಿಗೆಗೆ ಪತ್ರಿಕೆಗಳು ಒಂದು ಮುಖ್ಯ ಕಾರಣ. ಜನತೆಯಲ್ಲಿ ಮೌಢ್ಯವನ್ನು ಹೋಗಲಾಡಿಸಿ ನವಚೈತನ್ಯವನ್ನು ಹುಟ್ಟಿಸುವುದೇ ಅವುಗಳ ಕರ್ತವ್ಯ.

ಗಳಲ್ಲಿ ಅವುಗಳ ಪ್ರಯೋಜನ ಅಷ್ಟಿಷ್ಟಲ್ಲ. ಇತರ ಪ್ರಯಾಣದ ಮತ್ತು ವಾರ್ತಾವಾಹನ ಸಾಧನಗಳು ಎಲ್ಲವೂ ಕೆಲಸಕ್ಕೆ ಬಾರದೆ ಹೋಗಿರುವಾಗ ಈ ಪಾರಿವಾಳಗಳ ಸಹಾಯ್ಯ ಬಹಳ ಹೆಚ್ಚಿನದು.

ಲೇಖಕ:— ಶ್ರೀ. ಆರ್. ಎಸ್. ಆರಾಧ್ಯ ಬೆಂಗಳೂರು.

'ಆಡಳಿತವು ಜನಾಭಿಪ್ರಾಯದ ತಳಹದಿಯ ಮೇಲೆ ಕಟ್ಟಲ್ಪಟ್ಟ ಕಟ್ಟಡ. ಈ ಜನಾಭಿಪ್ರಾಯವನ್ನು ಪೋಷಿಸಿ ಬೆಳೆಸುವ ಶಕ್ತಿ ವೃತ್ತಪತ್ರಿಕೆಗಳಿಗಿದೆ.' ಎಂದು ಸುಪ್ರಸಿದ್ಧ ಆಂಗ್ಲ ಸಾಮ್ಯವಾದಿ ಸರ್ ನಾರ್ಮನ್ ಏಂಜಲ್ಸ್‌ರ ಅಭಿಪ್ರಾಯ. ಅದು ನಿಶ್ಚಯವಾದುದೆಂದು ಮತ್ತೊಮ್ಮೆ ಹೇಳಬೇಕಾದುದಿಲ್ಲ.

ಕ್ರಾಂತಿಯ ಕಾಲದಲ್ಲಿ ಶಾಂತಿಯನ್ನುಂಟುಮಾಡಬಲ್ಲ ಶಕ್ತಿಯಿದ್ದಂತೆ ದೇಶದಲ್ಲಿ ದಂಗೆಯನ್ನು ಏಳಿಸಬಲ್ಲ ಶಕ್ತಿ, ಸಿಂಹಾಸನಗಳನ್ನುರುಳಿಸಬಲ್ಲ ಶೌರ್ಯ ವೃತ್ತಪತ್ರಿಕೆಗಳ ಕೈಯಲ್ಲಿವೆ. ಹಾಗೆಂದ ಮಾತ್ರಕ್ಕೆ ಅದರಿಂದ ಪ್ರಯೋಜನಕ್ಕಿಂತ ಹಾನಿಯು ಹೆಚ್ಚೆಂದು ಭಾವಿಸಬಾರದು. ಅವುಗಳ ಪ್ರತಿಭೆಯನ್ನು ಮೆಚ್ಚಬೇಕು. ರಾಷ್ಟ್ರದ ಆಧುನಿಕ ಪಂಚಬಲಗಳಲ್ಲಿ ವೃತ್ತಪತ್ರಿಕೆಗಳಿಗೂ ಒಂದು ಸ್ಥಾನವಿದೆ. ಅಂತಹ ಶಕ್ತಿ ಅಸಮಾನ ಬಲ ಪಡೆದ ವೃತ್ತಪತ್ರಿಕೆಗಳು ವಿದೇಶಗಳಲ್ಲಿ ಹೇಗೆ ನಡೆಯುತ್ತಿವೆಯೆಂಬುದನ್ನು ಸ್ವಲ್ಪಮಟ್ಟಿಗೆ ಓದುಗರ ಮುಂದಿಡುವುದೇ ಈ ಲೇಖನದ ಉದ್ದೇಶ.

**ಜಪಾನು.** ಇಂದಿನ ಜಪಾನಿನ ವೃತ್ತಪತ್ರಿಕೋದ್ಯಮದ ಮುಖ್ಯ ಧ್ಯೇಯವೆಂದರೆ ವೇಗ. ವರ್ತಮಾನ ಪತ್ರಗಳನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಒಯ್ಯಲು ಜಪಾನಿನವರು ಪ್ರಯೋಗಿಸುತ್ತಿರುವ ವಿಧಾನ ಪ್ರಪಂಚದಲ್ಲಿ ಮತ್ತೆಲ್ಲಿಯೂ ಪ್ರಯೋಗಿಸುತ್ತಿಲ್ಲ. ವರ್ತಮಾನಗಳನ್ನು ಬರೆದು ಬರೆದು ಪಾರಿವಾಳದ ಕಾಲಿಗೆ ಕಟ್ಟಿ ನೂರಾರು ಮೈಲು ದೂರದಲ್ಲಿರುವ ತಮ್ಮ ಪತ್ರಿಕೆಯ ಕಚೇರಿಗೆ ಕಳಿಸುವದು ಜಪಾನಿನ ಪತ್ರಿಕಾ ಪ್ರತಿನಿಧಿಗಳಿಗೆ ಪದ್ಧತಿಯಾಗಿ ಹೋಗಿದೆ.

ಜಪಾನಿನ ಜನಸಂಖ್ಯೆ 6¼ ಕೋಟಿ. ಅಲ್ಲಿ ಸುಮಾರು ೧೧೩೭ ದೈನಿಕ ಪತ್ರಿಕೆಗಳೂ ೨೮೫ ವಾರ ಪತ್ರಿಕೆಗಳೂ ಹೊರಡುತ್ತಿವೆ. ಕೆಲವು ದೈನಿಕ ಪತ್ರಿಕೆಗಳಿಗೆ ೨೦-೪೦ ಲಕ್ಷ ಚಂದಾದಾರರಿರುವರು. ಅಲ್ಲಿನ ವೃತ್ತಪತ್ರಿಕಾ ಕಾರ್ಯಾಲಯಗಳ ಕಲ್ಪನೆ ಬರಬೇಕಾದರೆ 'ಓಸಾಕಾ ಮೈನಿಚಿ.' 'ಟೋಕಿಓನಿಚಿ' ಮುಂತಾದ ಕಾರ್ಯಾಲಯಗಳನ್ನು ನೋಡಿದರೆ ಸಾಕು.

ಈ ವೃತ್ತಪತ್ರಿಕೆಗಳವರು ಅತ್ಯಂತ ನವೀನವಾದ 'ಟೆಲಿಫೋಟೊ' ಯಂತ್ರಗಳನ್ನಿಟ್ಟುಕೊಂಡಿದ್ದಾರೆ. ಒಂದೊಂದು ಕಾರ್ಯಾಲಯವೂ ೩೫-೪೦ ಲಕ್ಷ ರೂಪಾಯಿಗಳ ಆಸ್ತಿವುಳ್ಳದ್ದು. ಸುಮಾರು ೨೦೦೦-೨೫೦೦ ಜನರು ಪ್ರತಿದಿನವೂ ಕೆಲಸಮಾಡುತ್ತಿದ್ದಾರೆ. ಇವರುಗಳು ತಮ್ಮ ಸ್ವಂತ ಆಕಾಶ ವಿಮಾನುಗಳನ್ನಿಟ್ಟುಕೊಂಡಿದ್ದಾರೆ. ಇವುಗಳಲ್ಲದೆ ಒಂದೊಂದರಲ್ಲಿ ಸುಮಾರು ೬೦೦ ಪಾರಿವಾಳಗಳನ್ನು ವರ್ತಮಾನ ಸಾಗಿಸಲು ಸಾಕಿಕೊಂಡಿದ್ದಾರೆ.

ಈ ಪಾರಿವಾಳಗಳು ಈ ವೃತ್ತಪತ್ರಿಕಾ ಉದ್ಯಮದಲ್ಲಿ ಎಷ್ಟರಮಟ್ಟಿಗೆ ನೆರವಾಗುತ್ತಿವೆಯೆಂಬುದು ವರ್ಣನಾತೀತವಾದುದು. ಜಪಾನಿನಲ್ಲಿ ಸರ್ವಸಾಮಾನ್ಯವಾದ ಭೂಕಂಪ ಮುಂತಾದ ವೇಳೆ

ಜಪಾನು ವೃತ್ತಪತ್ರಿಕೆಗಳಲ್ಲಿ ಎಷ್ಟೋ ವರ್ಣ ಚಿತ್ರ, ಭಾವ ಚಿತ್ರಗಳು, ವ್ಯಂಗ ಚಿತ್ರಗಳೂ ಬರುತ್ತಿರುತ್ತವೆ. ಅವುಗಳಿಂದ ನಿಜವಾದ ಜಪಾನಿಯರ ಜೀವನವನ್ನೂ ದೇಶದ ಪರಿಸ್ಥಿತಿಯನ್ನೂ ಅರಿತುಕೊಳ್ಳಬಹುದು. ಜಪಾನು ಎಷ್ಟು ಮುಂದುವರಿದಿದೆಯೆಂಬುದು ಅಲ್ಲಿನ ವೃತ್ತಪತ್ರಿಕೆಗಳಿಂದ ಸ್ಪಷ್ಟವಾಗುತ್ತದೆ.

**ಬ್ರಿಟನು.** ಸಾಮಾಜಿಕ ಮತ್ತು ಅರ್ಥಶಾಸ್ತ್ರ ವಿಶಾರದರ ಸಮೂಹವೊಂದು ಎಡೆಬಿಡದೆ ಮೂರು ವರ್ಷಗಳ ಕಾಲ ಕೂತು ಒಂದು ವರದಿಯನ್ನು ಮೊನ್ನೆ ತಾನೆ ಸಿದ್ಧಗೊಳಿಸಿದೆ. ಈ ವರದಿಯ ಅಂಕಿ ಮತ್ತು ಅಂಶಗಳಿಂದ ವೃತ್ತಪತ್ರಿಕೋದ್ಯಮಕ್ಕೆ ಔದ್ಯೋಗಿಕ ಮತ್ತು ಸಾಮಾಜಿಕ ಕ್ಷೇತ್ರದಲ್ಲಿ ಒಂದು ಸ್ಥಾನವನ್ನು ಕೊಟ್ಟಿದ್ದಾರೆ.

ಬ್ರಿಟನಿನ ಉದ್ಯೋಗಗಳ ಉತ್ಪತ್ತಿಯಲ್ಲಿ ವೃತ್ತಪತ್ರಿಕೋದ್ಯಮವು ಹನ್ನೆರಡನೆ ಸ್ಥಾನವನ್ನು ಪಡೆದಿದೆ. ಗ್ರೇಟಬ್ರಿಟನ್ನಿನಲ್ಲಿ ಪ್ರತಿ ದಿನವೂ ಬೆಳಗಿನ ಹೊತ್ತು ಎಲ್ಲ ದೈನಂದಿನ ಪತ್ರಿಕೆಗಳಿಂದ ಒಟ್ಟು ೨ ಕೋಟಿ ಪತ್ರಿಕೆಗಳು ಅಚ್ಚಾಗಿ ಮಾರಾಟವಾಗುತ್ತವೆ. ಇದು ಪ್ರತಿದಿನವೂ ಹೆಚ್ಚುತ್ತಿದೆಯೋ ಹೊರತು ಕಡಿಮೆಯಾಗುತ್ತಿಲ್ಲ. ೧೯೩೦ ಮತ್ತು ೧೯೩೭ರ ನಡುವೆ ಎಲ್ಲ ದೈನಿಕ ಪತ್ರಿಕೆಗಳ ಸಂಖ್ಯೆಯೂ ೧೪೪೦೦೦೦ ದಿಂದ ಹೆಚ್ಚಿ ೧೯೦೫೦೦೦೦ ಆಗಿದೆ.

ಇದೇ ಸಮಯದಲ್ಲಿ ವಾರಪತ್ರಿಕೆಗಳು ೪೮೦೦೦೦ ದಿಂದ ೧೪೪೪೦೦೦೦ ವಾಗಿವೆ. ಖಾಸಗಿ ಪ್ರೆಸ್‌ಗಳಲ್ಲಿ ಕೆಲಸ ಮಾಡುತ್ತಿರುವ ಸಂಬಳದವರ ಸಂಖ್ಯೆ ೮೦ ಸಾವಿರಕ್ಕೆ ಮೇಲ್ಪಟ್ಟಿದೆ. ಇದರಲ್ಲಿ ಬಹಳ ಜನರು ಉಚ್ಚ ಶ್ರೇಣಿಯ ವಿದ್ವಾಂಸರು. ಇಲ್ಲಿ ವೃತ್ತಪತ್ರಿಕಾ ಸ್ವಾತಂತ್ರ್ಯವಿರುವ ಪ್ರಯುಕ್ತ ಸರ್ಕಾರಕ್ಕೆ ಹೆದರದೆ ಟೀಕೆ ಟಿಪ್ಪಣಿಗಳನ್ನು ಮಾಡುತ್ತಾರೆ. ಅಧಿಕಾರಿಗಳ ವ್ಯಂಗಚಿತ್ರಗಳಂತೂ ಪ್ರತಿ ದಿನವೂ ಪತ್ರಿಕೆಗಳಲ್ಲಿ ಪ್ರಕಟವಾಗುವದನ್ನು ನೋಡಬಹುದು.

ಒಂದು ಪೆನ್ನಿ ಬೆಲೆಯಿರುವ ವೃತ್ತಪತ್ರಿಕೆಯನ್ನು ಮುದ್ರಿಸಿ ಮಾರಲು ನ್ಯಾಯವಾಗಿ ೨ ಪೆನ್ನಿ ಖರ್ಚು ಬೀಳುತ್ತದೆ. ಆದರೆ ಪತ್ರಿಕೆಗೆ ಬರತಕ್ಕ ಜಾಹೀರಾತುಗಳಿಂದ ಅದನ್ನು ಸಂಪಾದಿಸಿಕೊಳ್ಳುವರು. ಇಲ್ಲಿನ ವೃತ್ತಪತ್ರಿಕೆಗಳಲ್ಲಿ ಒಂದು ವಿಶೇಷವುಂಟು. ಬೆಳಗ್ಗೆ ಒಂದು ಸಲ ಮತ್ತು ಮಧ್ಯಾಹ್ನ ಒಂದು ವೇಳೆ ಸಾಯಂಕಾಲ ಒಂದು ವೇಳೆ ಹೀಗೆ ೩ ಸಲ ಮುದ್ರಿಸಿ ಪ್ರಕಟಿಸುತ್ತಾರೆ. ಸಮಯ ಒದಗಿದಲ್ಲಿ ಗಂಟೆಗೊಂದರಂತೆ ೮ ಸಲ ಪ್ರಕಟಿಸುವದೂ ಉಂಟು.

ಪಾರ್ಲಿಮೆಂಟಿನಲ್ಲಿ ಆದ ಚರ್ಚೆಗಳನ್ನು ಅದು ಮುಗಿದ ಹತ್ತು ನಿಮಿಷಗಳಲ್ಲಿ ಪ್ರಕಟಿಸಿ ಪತ್ರಿಕೆಗಳನ್ನು ಸದಸ್ಯರು ಭವನದಿಂದ ಈಚೆಗೆ ಬರುವ ವೇಳೆಗೆ ಅವರ ಕೈಗೆ ಕೊಡುತ್ತಾರೆ. ಬ್ರಿಟನಿನ ಪತ್ರಿಕೆಗಳೆಂದರೆ ಪ್ರಭುತ್ವವನ್ನು ನಡುಗಿಸುವಂತಹವುಗಳು.

## ಲೋಕಾಪುರ ಸಂಸ್ಥಾನ ಮುಧೋಳ.

ಇಲ್ಲಿ ತಾ. ೨೪-೯-೩೮ ರಿಂದಲೇ ಗಾಂಧೀ ಸಪ್ತಾಹ ಪ್ರಾರಂಭವಾಗಿ ಪ್ರತಿ ದಿವಸ ಪ್ರಾತಃಕಾಲ ಮತ್ತು ಸಾಯಂಕಾಲ ನಗರ ಸಂಕೀರ್ತನ ಶ್ರೀ ಬಸವೇಶ್ವರ ಚೌಕಿನಲ್ಲಿ ರಾಷ್ಟ್ರ ಮತ್ತು ಸಂಸ್ಥಾನ ಧ್ವಜಗಳ ವಂದನೆ ನಡೆಯುತ್ತಿದ್ದವು. ತಾ. ೨ ನೆಯ ದಿವಸ ಪ್ರಜಾಸಂಘದ ಅಧ್ಯಕ್ಷರಾದ ಶ್ರೀ. ಗುರುಸಿದ್ಧಯ್ಯ ಕೊಣ್ಣೂರು ಇವರ ಅಧ್ಯಕ್ಷತೆಯಲ್ಲಿ ಸಭೆ ಸೇರಿಸಲ್ಪಟ್ಟಿದ್ದಿತು. ಸಭೆಗೆ ಅಸ್ಪೃಶ್ಯರು ಸಹಿತ ಯಾವ ಭೇದಭಾವವಿಲ್ಲದೆ ಬಂದಿದ್ದರು. ವಿಜಾಪುರದ ಶ್ರೀ. ಕಾಕಾಕಾರಖಾನಿಸ ಇವರು ಮಹಾತ್ಮಾಜಿಯವರ ದಿವ್ಯತತ್ವ, ಅಸ್ಪೃಶ್ಯತಾ ನಿವಾರಣೆಯ ಆವಶ್ಯಕತೆ, ಖಾದಿಪ್ರಸಾರ ಮೊದಲಾದ ಸಂಗತಿಗಳ ಬಗ್ಗೆ ೨ ಗಂಟೆಯ ವರೆಗೆ ನಡುನಡುವೆ ಶ್ರೀ ಬಸವೇಶ್ವರ ವಚನಗಳನ್ನು ಉದಾಹರಿಸುತ್ತ ಸಭಿಕರ ಮನಸ್ಸಿನ ಮೇಲೆ ಅತ್ಯಂತ ಪರಿಣಾಮವಾಗುವಂತೆ ಸ್ಫೂರ್ತಿದಾಯಕವಾದ ಭಾಷಣಮಾಡಿದರು.

ಸಾಯಂಕಾಲ ೨೦ ಜತಿ ಎತ್ತುಗಳನ್ನು ಹೂಡಿದ ತಳಿರು ತೋರಣ ರಾಷ್ಟ್ರಧ್ವಜಗಳಿಂದ ಸುಶೋಭಿಸುತ್ತಿರುವ ರಥದಲ್ಲಿ ಮಹಾತ್ಮಾಜಿಯವರ ಭಾವಚಿತ್ರವನ್ನಿಟ್ಟು ಮೆರವಣಿಗೆಯು ಬಸವೇಶ್ವರ ಸಂಘದಿಂದ ಹೊರಟು ಪ್ರಮುಖ ಮಾರ್ಗಗಳಲ್ಲಿ ಹಾಯ್ದು ನಂತರ ವಂದೇಮಾತರಂ ರಾಷ್ಟ್ರಗೀತೆಯಾದನಂತರ ಜಯಘೋಷದೊಡನೆ ಮೆರವಣಿಗೆಯು ವಿಸರ್ಜಿಸಲ್ಪಟ್ಟಿತು.

ನಮ್ಮ ಸಂಸ್ಥಾನದ ಅಧಿಪತಿಗಳಾದ ಶ್ರೀಮಂತ ಬಾಲರಾಜ ಭೈರವಸಿಂಹ ಮಹಾರಾಜರ ಜಯಂತ್ಯುತ್ಸವವಾದರೂ ತಾ. ೬ ನೇ ದಿವಸ ೨೫ ಜತಿ ಎತ್ತುಗಳನ್ನು ಹೂಡಿದ ರಥದಲ್ಲಿ ತುಂಬಾ ವಿಜೃಂಭಣೆಯಿಂದ ನೆರವೇರಿಸಲ್ಪಟ್ಟಿತು.

ವೀರಪ್ಪ ಹುರಕಡ್ಲಿ
ಪ್ರಜಾಸಂಘ

## ಜಕ್ಕಲಿ.

ತಾ. ೪-೧೦-೩೮ ನೆಯ ದಿವಸ ಮಧ್ಯಾಹ್ನದ ೨॥ ಘಂಟೆಗೆ ಇಲ್ಲಿಯ ಶ್ರೀ ಕುಮಾರ ಸೇವಾಸಂಘದ ವಾರ್ಷಿಕ ಮಿಟಿಂಗ (ಜನರಲ್ ಮಿಟಿಂಗ್) ಮ॥ ರಾ॥ ಶಂಕರಗೌಡ್ರು ಡಾಕ್ಟರ್ ಅಬ್ಬಿಗೇರಿ ಇವರ ಅಧ್ಯಕ್ಷತೆಯಲ್ಲಿ ಕೂಡಲ್ಪಟ್ಟಿತು.

ನಂತರ ಅಧ್ಯಕ್ಷರ ಅಪ್ಪಣೆಯ ಮೇರೆಗೆ ಕಾರ್ಯಕ್ರಮದಂತೆ ಶ್ರೀ ಬಸಪ್ಪ ಲಿಂಗಪ್ಪ ಮೇಟಿ ಇವರು ಸಂಘವು ಸ್ಥಾಪಿತವಾದಂದಿನಿಂದ ಇವತ್ತಿನ ವರೆಗೂ ಯಾವ ರೀತಿಯಿಂದ ಅದು ತನ್ನ ಕಾರ್ಯಕ್ರಮಗಳನ್ನು ಕೊನೆಗಾಣಿಸಲು ಪ್ರಯತ್ನಿಸಿತೆಂಬುದನ್ನು ಮನನೀಯವಾಗಿ ವರ್ಣಿಸಿದರು. ಆ ಮೇಲೆ ಸಂಘದ ವಾರ್ಷಿಕ ರಿಪೋರ್ಟು ಸಭಿಕರೆದುರಿಗೆ ಓದಲ್ಪಟ್ಟಿತು.

ರಿಪೋರ್ಟಿನ ವಿವರ.

| ಶಿಲ್ಕು ಮಾಲು | ಕೊಡತಕ್ಕದ್ದು | ಬರತಕ್ಕದ್ದು | ಧರ್ಮಾದಾವ |
|---|---|---|---|
| ೩೨೬॥\|- ಔಷಧ | ೧೦೦-೦-೦ | ೯೦-೦-೦ | ೭೦-೦-೦ |
| ೧೦೦-೦-೦ ಕಟ್ಟಿಗೆ ಬಾಬತ | | | |
| ೪೦೬॥\|- | | | |

ಅಂತು ಈ ಪ್ರಕಾರ ರಿಪೋರ್ಟು ಓದಿದನಂತರ ಸಭೆಯಲ್ಲಿ ವಿಶೇಷ ಚರ್ಚೆ ನಡೆದು ಸಂಘದ ಮ್ಯಾನೇಜಿಂಗ್ ಕಮಿಟಿಯಲ್ಲಿ ಕೆಲವು ಬದಲಾವಣೆಗಳು ಮಾಡಲ್ಪಟ್ಟವು. ಮತ್ತು ಕೆಲವು ಸಂಘೋನ್ನತಿಯ ಅವಶ್ಯಕ ಠರಾವುಗಳು ಪಾಸುಮಾಡಲ್ಪಟ್ಟವು. ನಂತರ ಅಧ್ಯಕ್ಷರ ಆಭಾರ ಮನ್ನಿಸಿ ಸಭೆಯು ಮುಕ್ತಾಯವಾಯಿತು.

ಕಾರ್ಯದರ್ಶಿ
ಅಂದಪ್ಪ ಪಲ್ಲೇದ.

## ಗದಗ ತಾಲೂಕ ಹಳ್ಳೀಕೇರಿ.

ಇಲ್ಲಿ ವೀರಶೈವ ತರುಣ ಸಂಘದ ವತಿಯಿಂದ ವಾಚನಾಲಯವು ಸ್ಥಾಪನವಾಗಿ ಇಂದಿಗೆ ಹದಿಮೂರು ವರುಷಗಳಾದವು. ಇದರ ಆಫೀಸು ಸಹಕಾರಿ ಸಂಘದ ಮಹಡಿಯ ಮೇಲೆ ಇದ್ದು, ಓದುವ ಜನರ ದಟ್ಟಣೆಯಿಂದಲೂ ಇತರೆ ಕೆಲವು ಅಡಚಣೆಗಳಿಂದಲೂ ಆಗುವ ತೊಂದರೆಗಳನ್ನು ನಿರೀಕ್ಷಿಸಿ ನಮ್ಮ ಊರ ಪಿತಾಮಹರಂತೆ ಇರುವ ಶ್ರೀಯುತ ವೀರಭದ್ರಪ್ಪನವರು ಬ್ಯಾಳಿ ಇವರು ಜನಸಂದಣಿಯ ಮಧ್ಯದಲ್ಲಿಯೂ ಊರ ಪ್ರಮುಖ ಭಾಗದಲ್ಲಿಯೂ ಇರುವ ತಮ್ಮ ಮಳಿಗೆಯನ್ನು ನಮ್ಮ ವಾಚನಾಲಯಕ್ಕೆ ಕೊಟ್ಟಿದ್ದಾರೆ. ಇವರು ೬೫ ೯೦ ವರ್ಷದ ವಯೋವೃದ್ಧರಿದ್ದರೂ ತರುಣರಂತೆ ಮುಂದೆ ಬಂದು ವಾಚನಾಭಿರುಚಿ ಜನಗಳಲ್ಲಿ ಹೆಚ್ಚಾಗಲೆಂದು ಅಗದೀ ಹುರುಪಿನಿಂದ ನಮಗೆ ಸಹಾಯ ಮಾಡಿದ್ದಕ್ಕಾಗಿ ನಮ್ಮ ಸಂಘದವರು ಋಣಿಯಾಗಿದ್ದಾರೆ.

ಈ ವಾಚನಾಲಯವು ಆಶ್ವೀನ ಶು॥ ವಿಜಯಾದಶಮಿ ದಿವಸ ಶುಭ ವೇಳೆಯಲ್ಲಿ ಇಲ್ಲಿಗೆ ಸ್ಥಳಾಂತರಿಸಿದೆ. ಇದೇ ವೇಳೆಯಲ್ಲಿ ಶ್ರೀಯುತ ಮಡಿವಾಳಪ್ಪನವರು ತುರಕಾಣಿ ಇವರು ಗದಗ ಮುಕ್ಕಾಮಿನಲ್ಲಿ "ಕರ್ನಾಟಕ ಬಂಧು" ವಾರಪತ್ರಿಕೆಯನ್ನು ನಮ್ಮ ವಾಚನಾಲಯಕ್ಕೆ ಪ್ರತಿವರ್ಷವೂ ಕೊಡಿಸುವದಕ್ಕೆ ವಾಗ್ದಾನ ಮಾಡಿದ್ದು ನಮ್ಮ ಸಂಘದ ಪ್ರಚಾರಕರಿಂದ ತಿಳಿಯಿತು. ಮತ್ತು ಇಲ್ಲಿಯ ವೀರಪ್ಪ ರೊಟ್ಟಿ, ಇವರು "ಲೋಕಮತ" ವಾರಪತ್ರಿಕೆಯನ್ನು ಕೊಡಿಸುವದಕ್ಕೆ ವಾಗ್ದಾನ ಮಾಡಿರುತ್ತಾರೆ. ಮತ್ತು ವಿರೂಪಾಕ್ಷಪ್ಪ ಗೌಡ್ರು ಪಾಟೀಲ್ ಇವರು ಎಂಟು ಆಣೆ ನಮ್ಮ ಸಂಘದ ಉತ್ತೇಜನಕ್ಕೆ ಕೊಟ್ಟಿದ್ದಾರೆ. ಮೇಲ್ಕಂಡ ಮಹನೀಯರುಗಳಿಗೆ ಸಂಘದವರಾದ ನಾವುಗಳು ಅಭಿವಂದಿಸುತ್ತೇವೆ

ಈ ಸಂತೋಷದ ಶುಭವೇಳೆಯಲ್ಲಿ "ಶರಣ ಸಂದೇಶ" ಆಲಮಟ್ಟಿ ವಾರಪತ್ರಿಕೆಯ ಉತ್ತೇಜನಾರ್ಥವಾಗಿ ಎರಡು ರೂಪಾಯಿ ಕಳಿಸಿರುತ್ತದೆ. ಮೇಲ್ಕಂಡ ಮಹನೀಯರಂತೆ ಯಾವತ್ತೂ ಮಹನೀಯರು ತನು ಮನ ಧನಗಳಿಂದ ಸಹಾಯಮಾಡಿ ನಮ್ಮ ಸಂಘವನ್ನು ಉತ್ತೇಜನ ಸ್ಥಿತಿಗೆ ತರಬೇಕೆಂದು ಆಶಿಸುವ,

ತಾರೀಖು
೧೨-೧೦-೧೯೩೮.

ವೀರಶೈವ ತರುಣ ಸಂಘ
ಪ್ರಚಾರಕ
ವಿರೂಪಾಕ್ಷಪ್ಪ ಮೆಣಶಿನಕಾಯಿ.

---

—ಪ್ಯಾಲಿಸ್ಟಾಯಿನದ ಅರಬರ ಪ್ರಶ್ನೆಗಳನ್ನು ವಿಚಾರಿಸಲು ನೆರೆಯಲಿರುವ ಮುಸಲ್ಮಾನ್ ಕಾಂಗ್ರೆಸ್ಸಿಗೆ ಬೇರೆ ಬೇರೆ ದೇಶಗಳಿಂದ ೨೦೦ ಜನ ಪ್ರತಿನಿಧಿಗಳು ಸೇರಿದ್ದಾರೆ.

—ಮುಂಬೈ ಸರಕಾರದ ಸಾರ್ವಜನಿಕ ಖಾತೆಯ ಮಂತ್ರಿಗಳಾದ ಶ್ರೀ ನೂರಿಯವರು ಇದೇ ಬರುವ ಡಿಶೆಂಬರ್ ತಿಂಗಳಿನಲ್ಲಿ ಜೋಗದ ಜಲಪಾತವನ್ನು ಸಂದರ್ಶಿಸುವವರಿದ್ದಾರೆ. ಅಲ್ಲಿ ವಿದ್ಯುಚ್ಛಕ್ತಿಯನ್ನುಂಟುಮಾಡಿ ಆ ಭಾಗದಲ್ಲಿ ಹಳ್ಳಿ ಪಟ್ಟಣಗಳ ಔದ್ಯೋಗಿಕ ಪ್ರಗತಿಯನ್ನುಂಟುಮಾಡುವ ಧೋರಣವನ್ನಿಟ್ಟುಕೊಂಡಿರುವುದಾಗಿ ತಿಳಿದು ಬಂದಿದೆ.

—ಗೋವಾ ಲಾಟರಿಯ ಮೇಲೆ ಪ್ರತಿಬಂಧ ಹಾಕುವ ಸಂಬಂಧವಾಗಿ ಸರಕಾರದವರು ವಿಚಾರಿಸುತ್ತಾ ಇದ್ದಾರೆಂದು ಶ್ರೀ ಮುನ್ಷಿಯವರು ಒಂದು ಪ್ರಶ್ನೆಗೆ ಉತ್ತರವಾಗಿ ಹೇಳಿದರು.

## ಅಕ್ಕಮಹಾದೇವಿಯ ಬಳಗ ಗದಗ.

ವಾರಕ್ಕೊಂದು ಸಲ ಕೂಡುವಂತೆ ಈ ವಾರವು ಜನರು ಹೆಚ್ಚಾಗಿ ಕೂಡಿದ್ದರು. ಈ ವಾರ ಧಾರವಾಡದಿಂದ ಸೌ|| ಶಾಮಲಾ ಬಾಯಿ, ಬೆಳಗಾವಕರ ಸೆಕ್ರೆಟರಿ, ಮತ್ತು ಸ್ಕ್ಯಾ. ಕ. ವೆಂಬರ, ಕರ್ನಾಟಕ ಮಹಿಳಾ ಮಂಡಳ ಧಾರವಾಡ ಇವರು ಇವತ್ತಿನ ದಿವಸ ನಮ್ಮ ಅಕ್ಕನಬಳಗದ ಸಂಸ್ಥೆಯನ್ನು ಅಖಿಲಭಾರತೀಯ ಮಹಿಳಾ ಪರಿಷತ್ತಿನ ಕರ್ನಾಟಕದ ಕೇಂದ್ರಶಾಖೆಯಾದ ಮಹಿಳಾಮಂಡಳ ಧಾರವಾಡ ಸಂಸ್ಥೆಗೆ ಸೌ|| ಗಂಗವ್ವಾ ಎಳಮಲಿ. ಇವರ ಅಧ್ಯಕ್ಷತೆಯಲ್ಲಿ ಜೋಡಿಸಿ ಕೊಟ್ಟಿರುವರು. ಕೋಶಾಧ್ಯಕ್ಷರಾದ ಸೌ|| ಶಕುಂತಲಾದೇವಿ ಅಂಗಡಿ, ಮತ್ತು ಬಳಗದ ಸೆಕ್ರೆಟರಿಯಾದಂಥಾ ಸೌ|| ಪರವ್ವಾ ಕಿಣಗಿ ಮತ್ತು ನೂರಾರು ಜನರು ಕೂಡಿದ್ದರು.

ಆ ಮೇಲೆ ಸೆಕ್ರೆಟರಿಯಾದ ಪರವ್ವಾ ಕಿಣಗಿ ಇವರು "ನಾವು ಮಾಡಬೇಕಾದದ್ದು ಏನು ?" ಇದರ ಮೇಲೆ ಭಾಷಣ ಮಾಡಿದರು. ಭಾಷಣದ ಸಾರಾಂಶ:—

ಇವತ್ತಿನ ದಿವಸ ನಿಮ್ಮೆಲ್ಲರ ಅನುಮತಿಯಿಂದ ಈ ನಮ್ಮ ಅಕ್ಕನ ಬಳಗವು ಕರ್ನಾಟಕ ಮಹಿಳಾಮಂಡಳ ಧಾರವಾಡ ಈ ಸಂಘಕ್ಕೆ ಶಾಖೆಯಾದದ್ದು ಬಹಳ ಸಂತೋಷದ ಸಂಗತಿಯಾಗಿದೆ.

ಇನ್ನು ಮೇಲೆ ನಾವು ಬಹಳ ಚಟುವಟಿಕೆಯಿಂದ ಕೆಲಸವನ್ನು ಕೈಕೊಳ್ಳಬೇಕು. ಚಟುವಟಿಕೆಯೆಂದರೆ ನಮ್ಮ ಸಮಾಜದ ಮತ್ತು ಗೃಹದ ಉತ್ತೇಜನಕ್ಕೆ ತಳಹದಿಯಾಗಿದೆ. ಚಟುವಟಿಕೆಯಿಂದ ಆಲಸ್ಯ, ಅಸೂಯೆ, ದ್ವೇಷ, ಮನಸಿನ ಹೀನತೆ ಇವೆಲ್ಲವು ಹೋಗುತ್ತವೆ. ಇದು ಸತ್ಯವಾದ ಮಾತಾಗಿದೆ. ಮತ್ತು ಧರ್ಮ ಅಂದರೇನು ? ಮಡಿ, ಮೈಲಿಗೆ ಇಷ್ಟೇ ಅಲ್ಲ, ಘಂಟಾನಾದಮಾತ್ರ ಅಲ್ಲ. ಆದರೆ ವಿನಯ, ಗೃಹಕೃತ್ಯಗಳಲ್ಲಿಯೂ ಆಚಾರವಿಚಾರಗಳೆರಡರಲ್ಲಿಯೂ ಆಯುಶವಾಗಿರುವದೇ ಧರ್ಮ.

ನಮ್ಮ ಮನಸ್ಸನ್ನು ಯಾವಾಗಲೂ ಶಾಂತರೀತಿಯಿಂದ ಇಟ್ಟುಕೊಳ್ಳಬೇಕು. ಆದರೆ ಸಾಧನೆಯು ಕಠಿಣ. ಹಿಡಿದರೆ ಕಡಿಯುದು ಬಿಟ್ಟರೆ ಓಡುವದು. ಆದಕಾರಣ ಸರ್ವಶಕ್ತನಾದ ಪ್ರಭುವು ಸರ್ವರಿಗೂ ಶಕ್ತಿಯನ್ನು ಇತ್ತಿರುವನು. ಆದಕಾರಣ ಎಲ್ಲರೂ ತಮ್ಮ ಶಕ್ತಿಪೂರ್ವಕ ಸಾಧನೆಗಳನ್ನು ಸಾಧಿಸಬೇಕು. ಬಹಿರಂಗದ ಗಾಳಿಯಿಂದ ಅಂತರಂಗವನ್ನು ಅಲ್ಲಾಡಿಸಕೊಡಬಾರದು. ದೃಢ ಉತ್ಸಾಹವು ಅಸ್ವಾಸ್ಥ್ಯವನ್ನೆಲ್ಲಾ ಹೋಗಲಾಡಿಸುವದು. ಸುಖಲೋಲುಪ್ತ ಸಂಸಾರಿಗಳೇನನ್ನುವರೋ ಅದನ್ನು ಎಳ್ಳಷ್ಟು ಲಕ್ಷಿಸದೆ ಸತ್ಯದ ಸಾಕ್ಷಾತ್ಕಾರಕ್ಕಾಗಿಯೂ, ಆತ್ಮೋದ್ಧಾರಕ್ಕಾಗಿಯೂ ಕರ್ಮ ಮಾಡುವವನ ಎದೆಯು ವಜ್ರಕ್ಕೂ ಅಭೇದ್ಯವು. ಆದಕಾರಣ ಎಲ್ಲರೂ ಧರ್ಮೋದ್ಧಾರರಾಗಲಿಕ್ಕೇಬೇಕು.

ಕಟ್ಟಿರಿ ! ಇಗಿಂದೀಗಲೇ ಟೊಂಕ ಕಟ್ಟಿಕೊಳ್ಳಿರಿ ! ಹೊತ್ತನ್ನು ಹೋಗಗೊಡಬೇಡಿರಿ ! ಸಾವೇನು ? ನಮ್ಮ ಜನ್ಮವೇನು ? ಇಂದೇ ಹೊನ್ನು ಮುಂದೇ ಮಣ್ಣು ? ಏಳಿರಿ; ನೆಲ್ಲು ಬೆಳೆಯಬೇಕಾದಲ್ಲಿ ಹುಲ್ಲು ಬೆಳೆಸಗೊಡಬೇಡಿರಿ. ಬ್ರಹ್ಮಾಂಡ ಕೆಲಸಮಾಡಬೇಕಾಗಿದೆ. ಕರ್ಮದಿಂದ ಜ್ಞಾನವು ಲಭಿಸುವದು. ಜ್ಞಾನವೇ ಧನ. ಆ ಧನವನ್ನು ವೆಚ್ಚಮಾಡಿರಿ. ಕೈ ಕಟ್ಟಿಕೊಂಡು ಕೂಡಬೇಡಿರಿ. ಜ್ಞಾನ ಕರ್ಮಗಳ ಸಂಗವಾಗಲಿ.

ನೀವು ಅರ್ಥಾತ್ ನಾವು ನೂರಾರು ಭಾರತೆಯ ಮಹಿಳೆಯರು ಒಂದೇ ಹೊಡತಕ್ಕೆ ಎರಡು ಗುರಿಗಳನ್ನು ಹೊಡೆಯಲು ಕಲಿಯಬೇಕಾಗಿದೆ. ನಮ್ಮ ಉದ್ಧಾರಮಾಡಿಕೊಳ್ಳಬೇಕು. ನಮ್ಮ ದೇಶ ಉದ್ಧಾರಮಾಡಬೇಕು. ಇತ್ಯಾದಿ. ಇತ್ಯಾದಿ.

ಈ ಪ್ರಕಾರ ಸ್ಫೂರ್ತಿದಾಯಕ ಭಾಷಣ ಮಾಡಿದರು. ತರುವಾಯ ಬಂದಂಥಾ ಅಥಿತಿಗಳ ಆಭಾರ ಮನ್ನಿಸಿದರು. ಆ ಮೇಲೆ ಬಾಲಕಿಯರು ಬಸವನ ಗೀತೆಯನ್ನು ಒಳ್ಳೇ ವಿಜೃಂಭಣೆಯಿಂದ ಹಾಡಿದಮೇಲೆ ಸಭೆಯು ಮುಕ್ತಾಯವಾಯಿತು.

ಪ್ರತ್ಯಕ್ಷದರ್ಶಿ.

---

## ಜಾತ್ಯಂಧತೆಗೆ ಮದ್ದೇನು?

ಜಯಕರ್ನಾಟಕದ ಮಾನ್ಯ ಸಂಪಾದಕ ಮಹಾಶಯರು ಈ ತಿಂಗಳ ಸಂಚಿಕೆಯಲ್ಲಿ "ಅಥಾತೋ ರೋಗಮಿೂ ಮಾಂಸಾ" ಎಂಬ ಲೇಖನದಲ್ಲಿ ಹೀಗೆ ತಿಳಿಸಿದ್ದಾರೆ—

"ಜಾತ್ಯಂಧತೆಗೆ ಮದ್ದೇನು?— ಎಂಬ ಪ್ರಶ್ನೆಗೆ "ಜಾತಿ ಹೋಗಬೇಕು." ಎಂಬುದೇ ನಮ್ಮ ಉತ್ತರವಾಗಿದೆ....

ಜಾತಿ ಹೋಗುವುದರಿಂದ ಹಿಂದುತ್ವವು ಅಳಿಯುವುದಿಲ್ಲವಷ್ಟೇ ಅಲ್ಲ, ಅದು ತೊಳಗಿ ಬೆಳಗುವುದು. ಬ್ರಾಹ್ಮಣ, ವೀರಶೈವ ಜೈನ, ಕ್ಷಾತ್ರ, ಮೊದಲಾದ ಕರ್ನಾಟಕದಲ್ಲಿಯ ಸಂಪ್ರದಾಯಗಳು ತಮ್ಮ ತಮ್ಮ ವೈಶಿಷ್ಟ್ಯವನ್ನೇ ಮುಂದು ಮಾಡದೆ ಎಲ್ಲರಿಗೂ ಸಾಮಾನ್ಯವಾದ ತತ್ವಪುಂಜಕ್ಕೆ ಒಪ್ಪಿಗೆ ಕೊಡುತ್ತ ಅವನ್ನು ಆಚರಣೆಯಲ್ಲಿ ತರುವುದು ಅಗತ್ಯವಾಗಿದೆ. ಆದರೆ ಅದರ ಜತೆಗೆ ಈ ಸಂಪ್ರದಾಯಗಳನ್ನು ವಿಂಗಡಿಸುವ ವಿಶಿಷ್ಟ ಲಕ್ಷಣಗಳನ್ನು— ಅವಕ್ಕೆ ಜಾತಿಯೆಂದು ಹೆಸರು— ತೊಡೆದುಹಾಕುವುದೂ ಅಗತ್ಯ. ಇದು ಕ್ರಾಂತಿಕಾರಿಯಾಗಿ ತೋರಬಹುದು. ಆದರೆ ಗತ್ಯಂತರವಿಲ್ಲ. ಬೇರೆ ಪ್ರಾಂತಗಳನ್ನು ನೋಡುತ್ತಿರಲಾಗಿ ವಿಚಾರೋದಯ ಮೂಲಕ ಹುಟ್ಟುವ ಸಾಮಾಜಿಕ ಘರ್ಷಣೆಯು ನಮ್ಮಲ್ಲಿ ಇನ್ನೂ ತಲೆದೋರಿಯೇ ಇಲ್ಲವೆಂದು ಹೇಳಬಹುದು. ಅದನ್ನು ಆದಷ್ಟು ತ್ವರಿತವಾಗಿ ನಮ್ಮಲ್ಲಿ ಬರಮಾಡಿಕೊಳ್ಳುವುದು ಒಳಿತು. ಸಾಮಾಜಿಕ ಜಾಗೃತಿಯೇ ರಾಜಕೀಯ ಜೀವನಕ್ಕೆ ಪುಷ್ಟಿಯನ್ನೀಯುವುದು. ಸಾಮಾಜಿಕ ಜಾಗೃತಿ ವಿರಹಿತ ರಾಜಕೀಯ ಚಟುವಟಿಕೆಯು ಬರಿದು, ಬರಡು. ಅಂತಹ ರಾಜಕೀಯ ಚಟುವಟಿಕೆಯು ಕರ್ನಾಟಕದಲ್ಲಿ ಬೇಕಾದಷ್ಟಿದೆ. ಆದರೆ ಈ ವಂಧ್ಯ ಜೀವನವು ನಮಗಿನ್ನು ಬೇಡ.

ನಮ್ಮ ರಾಜಕೀಯ ಮುಂದಾಳುಗಳು ಈ ಸಾಮಾಜಿಕ ಪುನರ್ಘಟನೆಯ ಆಂದೋಲನದಲ್ಲಿ ಹೆಚ್ಚಾಗಿ ಭಾಗವಹಿಸಬೇಕಾದುದು ಈಗಿನ ಸಂದುಕಟ್ಟಿನಲ್ಲಿ ಕೇವಲ ಅವರ ಕರ್ತವ್ಯವಾಗಿದೆ. ಮೇಗರಿಯ ಸುಧಾರಣೆಗಳಿಗಿಂತಲೂ ಜಾತೀಯ ಐಕ್ಯದ ಪ್ರತಿಜ್ಞಾವಿಧಿಗಿಂತಲೂ ಈ ಕಾರ್ಯವು— ಸಮಾಜವನ್ನು ತಳಸೋಸಿ ಕಟ್ಟುವ ಕೆಲಸವು— ಮಹತ್ತರವಾದುದು. ನಮ್ಮ ಮುಖಂಡರು ಇತ್ತ ಗಮನಕೊಡುವರೇ?

---

—ಬ್ಯಾ. ಜಿನ್ನಾರವರು ಸಿಂಧ ಮುಸ್ಲಿಂ ಮಂತ್ರಿ ಮಂಡಲದವರೊಡನೆ ದೀರ್ಘಾಲೋಚನೆ ನಡೆಸಿದುದರ ಪರಿಣಾಮವಾಗಿ ಈಗಿನ ಮಂತ್ರಿಮಂಡಲದ ಪ್ರಧಾನರಾದ ಅಲ್ಲಾಬಕ್ಸ ಮತ್ತು ಇನ್ನಿತರ ಶಾಸನ ಸಭಾ ಮುಸಲ್ಮಾನರೆಲ್ಲರೂ ಮುಸ್ಲಿಂ ಲೀಗಿನ ಸದಸ್ಯರಾಗಲು ಒಪ್ಪಿಕೊಂಡಿರುವರೆಂದು ತಿಳಿದು ಬಂದಿದೆ.

—ಜನರಲ್ ಫ್ರಾಂಕೊನಿಗೆ ಪತ್ರಿಕಾಪ್ರತಿನಿಧಿಗಳು ಕಂಡಾಗ ಯುದ್ಧ ವಿಷಯಕವಾಗಿ ಮಾತುಕತೆ ನಡೆದಾಗ ಯಾವ ಶರ್ತುಗಳಿಲ್ಲದೆ ಸರಕಾರ ಪಕ್ಷದವರು ಶರಣಾಗತರಾದರೆ ಮಾತ್ರ ಯುದ್ಧವು ನಿಲ್ಲಿಸಲ್ಪಡುವುದೆಂದು ತಿಳಿಸಿದನಂತೆ.



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೮. | ಆಲಮಟ್ಟಿ- ಸೋಮವಾರ ತಾರೀಖು ೧೭ ನೆಯ ಅಕ್ಟೋಬರ್ ೧೯೩೮. | ಸಂಚಿಕೆ೧೦

## ಮಹತ್ವದ ಸುದ್ದಿಗಳು.

—ಮ್ಯುನಿಕ್ ಒಪ್ಪಂದವು ಬ್ರಿಟಿಶ್ ಮತ್ತು ಫ್ರೆಂಚ್ ಜನತೆಯ ಅಭಿಪ್ರಾಯದ ವಿರುದ್ಧವಾಗಿ ಹೇರಲ್ಪಟ್ಟದೆಯಾದುದರಿಂದ ಜನರು ಅದಕ್ಕಾಗಿ ಈಗಾಗಲೇ ತುಂಬಾ ಸಿಟ್ಟಾಗಿದ್ದಾರೆಂಬುದನ್ನು ಹೇರ್ ಹಿಟ್ಲರನು ಮರೆಯದಿರಲಿ ಎಂದು "ಫ್ರೆಂಚ್ ಲಿಜೋರ್" ಎಂಬ ಪತ್ರಿಕೆಯು ಎಚ್ಚರಿಕೆ ಕೊಟ್ಟಿದೆ.

—ಹುಬ್ಬಳ್ಳಿಯಲ್ಲಿ ಕಳೆದ ೧೧ ನೆಯ ತಾರೀಖಿನ ದಿವಸ ರಾತ್ರಿ ಮನೆಯಲ್ಲಿ ಮಲಗಿರುವಾಗ ಗೋಡೆಯು ಬಿದ್ದು ಒಬ್ಬನು ಸತ್ತನು.

—ನಗರ ಸಭೆಯ ಸೀಮೆಯನ್ನು ಪ್ರವೇಶಿಸಬಾರದೆಂಬ ಪ್ರತಿಬಂಧಕ ಆಜ್ಞೆಯನ್ನು ಮೀರಿ ನಡೆದುದರಿಂದ ದಿಲ್ಲಿಯ ಶಿವದೇವಾಲಯ ಚಳವಳಿಯ ಪ್ರಮುಖರಾದ ಶ್ರೀ ಶ್ಯಾಮಪುರಿಯವರಿಗೆ ೯ ತಿಂಗಳುಗಳ ಸಾದಾ ಶಿಕ್ಷೆಯನ್ನು ವಿಧಿಸಿದ್ದಾರೆ. ಇವರ ಮೇಲೆಯೇ ಈ ಮೊದಲು ಒಬ್ಬ ಮುಸಲ್ಮಾನ ತರುಣನು ಕತ್ತಿಯಿಂದ ಇರಿದು ಇವರನ್ನು ಗಾಯಗೊಳಿಸಿದ್ದನು.

—ಧುಲಿಯಾ ಕೂಲಿಕಾರರ ಬಿಕ್ಕಟ್ಟನ್ನು ಜಾಗ್ರತೆ ಬಗೆಹರಿಸದಿದ್ದರೆ ತಾವು ನೀರಿನಲ್ಲಿ ಮುಳುಗಿ ಸಾಯುವುದಾಗಿ ಅಮಳನೇರದ ಕಾಂಗ್ರೆಸ್ ಕೆಲಸಗಾರರಾದ ಶ್ರೀ. ಸಾನೆಗುರೂಜಿಯವರು ಪ್ರಕಟಿಸಿದ್ದಾರೆ. ಮಹಾರಾಷ್ಟ್ರ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರಾದ ಶ್ರೀ. ಜೇಧೆ ಇವರು ಇಂಥ ಕಾರ್ಯ ಕೈಕೊಳ್ಳಬಾರದೆಂದೂ ಮಧ್ಯಸ್ಥಿಕೆಯಿಂದ ಈ ಪರಿಸ್ಥಿತಿಯನ್ನು ನಿವಾರಿಸಲಾಗುವುದೆಂದೂ ತಿಳಿಸಿದ್ದಾರೆ.

—ವ್ಹಿಯನ್ನಾದ ಯಾವ ಉದ್ಯಾನದಲ್ಲಿಯೂ ಯಹೂದಿಯರು ಪ್ರವೇಶಿಸಬಾರದೆಂದು ಪೋಲಿಸರು ಕಟ್ಟಪ್ಪಣೆಯನ್ನು ಮಾಡಿದ್ದಾರೆ.

—೧೩ ನೆಯ ಅಖಿಲ ಭಾರತ ಮಹಿಳಾ ಪರಿಷತ್ತು ಡಿಶೆಂಬರ್ ತಿಂಗಳಿನಲ್ಲಿ ತಾ. ೨೭ ರಿಂದ ತಾ. ೩೧ ರ ವರೆಗೆ ದಿಲ್ಲಿಯಲ್ಲಿ ಜರುಗುತ್ತದೆ. ಪರಿಷತ್ತಿನ ಸ್ವಾಗತಸಮಿತಿಯವರು ಈಗಾಗಲೇ ಸಿದ್ಧತೆ ನಡೆಸಿದ್ದಾರೆ.

—ಆಸಾಮ ಕಾಂಗ್ರೆಸ್ ಮಂತ್ರಿಮಂಡಳದ ಮಹಾಪ್ರಧಾನರಾದ ಶ್ರೀ. ಬಾರ್ಡೋಲಾಯಿಯವರು ಪ್ರಾಂತದಲ್ಲಿರುವ ಎಲ್ಲ ರಾಜಕೀಯ ಕೈದಿಗಳ ಬಿಡುಗಡೆಯ ಸಂಬಂಧವಾಗಿ ತುಂಬಾ ಶ್ರಮವಹಿಸುತ್ತಿದ್ದಾರೆ. ಒಟ್ಟು ೧೨ ಜನ ರಾಜಕೀಯ ಕೈದಿಗಳಿರುವರೆಂದು ತಿಳಿದುಬಂದಿದೆ. ೨ ತಿಂಗಳುಗಳಲ್ಲಿಯೇ ಎಲ್ಲರನ್ನೂ ಬಿಡುಗಡೆ ಮಾಡಬಹುದು.

—ಸೋಮವಾರ ತಾ. ೩ ನೆಯ ದಸರೆಯ ಶುಭ ದಿವಸ ಮುಂಬೈಯಲ್ಲಿ ಮಿಸೆಸ್ ಎಮಿಡೊರೊಥಿ ಮತ್ತು ಅವಳ ಎರಡು ಜನ ಮಕ್ಕಳು ಶೀಲಾ ಮತ್ತ ಜ್ಯುನಿ ಇವರನ್ನು ಶ್ರೀ. ಸುಂದರರಾವ ಭಾಸ್ಕರ ವೈದ್ಯ ಇವರು ಹಿಂದು ಮಿಶನರಿ ಸೊಸಾಯಿಟಿಯ ವಿಧಿಯಂತೆ ಹಿಂದು ಧರ್ಮದಲ್ಲಿ ತೆಗೆದುಕೊಂಡರು. ಇವರಿಗೆ ಹೊಸದಾಗಿ ಸೌ|| ಮೀರಾಬಾಯಿ ಕು. ಶೀಲಾಬಾಯಿ ಮತ್ತು ಕು. ಲೀಲಾಬಾಯಿ ಎಂದು ಹೆಸರಿಡಲಾಯಿತು.

—ಬರುವ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷ ಪದವಿಯನ್ನು ಪುನಃ ಶ್ರೀ. ಸುಭಾಷಚಂದ್ರ ಬೋಸರಿಗೆ ಕೊಡಬೇಕೆಂದು ಕೆಲವರ ಮತವಂತೆ. ಶ್ರೀ. ಬೋಸರೇ ಅಧ್ಯಕ್ಷರಾದರೆ ಟ್ರೇಡ್‌ಯೂನಿಯನ್ ಕಾರ್ಯಗಳನ್ನು ಮತ್ತು ಫೆಡರೇಶನ್ ಸಂಬಂಧ ಯುದ್ಧವನ್ನು ಮುಂದುವರಿಸಲು ಅನುಕೂಲವಾಗುವುದೆಂಬುದೇ ಕೆಲವರ ಅಭಿಪ್ರಾಯ. ಇನ್ನು ಕೆಲವರು ಸರದಾರ ವಲ್ಲಭಭಾಯಿ ಪಟೇಲರು ಈ ಸಾರೆ ಕಾಂಗ್ರೆಸ್ ಅಧ್ಯಕ್ಷರಾಗುವುದು ಹೆಚ್ಚು ಅತ್ಯಗತ್ಯವೆಂದೂ ಅವರು ಅಧ್ಯಕ್ಷರಾದರೆ ಶಿಸ್ತಿನಿಂದ ರಾಜಕಾರಣ ನಡೆಸಬಹುದೆಂದೂ ಹೇಳುತ್ತಿದ್ದಾರೆ. ಮೌಲಾನಾ ಅಜಾದರ ಹೆಸರನ್ನೂ ಕೆಲವರು ಸೂಚಿಸುತ್ತಿದ್ದರೂ ಅವರಿಗೇನು ಅಷ್ಟು ಬೆಂಬಲವಿರುವಂತೆ ತೋರುವುದಿಲ್ಲ.

# ವೀರಶೈವ ಮಹಾಸಭೆಯ ಅಧ್ಯಕ್ಷರ ಕೆಲಸಗಳು.

(ಲೇಖಕ– ಜೀರಗೆ ಕ. ಬಸವಪ್ಪ ಬಿ. ಎ. ಬೆಂಗಳೂರು ನಗರ.)

ಹಿಂದಿನ ಲೇಖನಗಳಲ್ಲಿ ವೀರಶೈವ ಮಹಾಸಭೆಯ ಆಯುಷ್ಯ ಭವಿಷ್ಯಗಳನ್ನು ಕುರಿತು ಸ್ಥೂಲವಾಗಿ ವಿವೇಚಿಸಲಾಯಿತು. ಸೂಕ್ಷ್ಮವಾಗಿ ಮತ್ತು ವಿವರವಾಗಿ ಕೆಲವು ವಿಚಾರಗಳನ್ನು ವಿವೇಚಿಸುವುದು ಅವಶ್ಯ. ಪ್ರಕೃತ ಈ ಲೇಖನದಲ್ಲಿ ವೀರಶೈವ ಮಹಾಸಭೆಯ ಅಧ್ಯಕ್ಷರು ತಮ್ಮ ಅಧ್ಯಕ್ಷಪದವಿಯ ಅವಧಿಯಲ್ಲಿ ನಡೆಸಬೇಕಾದ ಕೆಲಸಗಳಾವುವೆಂಬುದನ್ನು ಸ್ವಲ್ಪ ವಿಸ್ತರಿಸಿ ತಿಳಿಸಲು ಇಚ್ಛಿಸುತ್ತೇನೆ. ನಾನು ಮೊದಲೇ ಹೇಳಿದಂತೆ ಇಡೀ ವೀರಶೈವ ಸಮಾಜದ ಭವಿಷ್ಯವು ವೀರಶೈವ ಮಹಾಸಭೆಯ ಕೈಯಲ್ಲಿದೆ ಎಂಬುದನ್ನು ಅರಿತರೆ ಆ ಮಹಾಸಭೆಯ ಸೂತ್ರಗಳನ್ನು ಹಿಡಿದು ಸಭೆಯ ಕಾರ್ಯಕಲಾಪಗಳನ್ನು ನಡೆಯಿಸತಕ್ಕ ಮಹಾಸಭೆಯ ಅಧ್ಯಕ್ಷರ ಜವಾಬ್ದಾರಿಯು ಎಷ್ಟೆಂಬುದು ಯಾರಿಗಾದರೂ ಸುಲಭವಾಗಿ ತಿಳಿಯಲಿಕ್ಕೇ ಬೇಕು. ಅಧ್ಯಕ್ಷರ ಮುಂದೆ ನೂರಾರು ಕೆಲಸಗಳಿವೆ. ಅವೆಲ್ಲವುಗಳೂ ಮುಖ್ಯವಾದವುಗಳೇ. ಅವೆಲ್ಲವುಗಳೂ ಪರಿಣಾಮಕಾರಿಯಾದವುಗಳೇ. ಅವೆಲ್ಲವುಗಳೂ ಶ್ರಮಸಾಧ್ಯವಾದವುಗಳೇ. ಸಾವಧಾನಚಿತ್ತದಿಂದಲೂ ದೃಢಮನಸ್ಸಿನಿಂದಲೂ ಕೆಲಸಗಳನ್ನು ಒಂದೊಂದಾಗಿ ತೆಗೆದುಕೊಂಡು ಖಚಿತವಾದ ರೀತಿಯಲ್ಲಿ ಪೂರ್ಣಮಾಡುತ್ತಾ ಹೋಗಬೇಕು. ಮುಂದಿನ ಮಹಾಸಭೆಯ ಅಧ್ಯಕ್ಷರು ಚುನಾಯಿತರಾಗಿ ಮುಂದಿನ ಮಹಾಸಭೆಯು ಕೂಡುವ ವರೆಗೂ ಹಿಂದಿನ ಮಹಾಸಭೆಯ ಅಧ್ಯಕ್ಷರ ಕರ್ತವ್ಯವು ಮುಗಿಯುವುದಿಲ್ಲ. ವರುಷದಲ್ಲೆಲ್ಲ ಅಧ್ಯಕ್ಷರು ವಿಧವಿಧವಾದ ಕಾರ್ಯಕಲಾಪಗಳನ್ನು ನಡೆಸಬೇಕಾಗುತ್ತದೆ. ಅವುಗಳಲ್ಲಿ ಮುಖ್ಯವಾದ ಕೆಲವನ್ನು ಈ ಮುಂದೆ ಕೊಡಲಾಗಿದೆ.—

(೧) ವೀರಶೈವ ಮಹಾಸಭೆಯಲ್ಲಿ ಅಂಗೀಕೃತವಾಗುವ ನಿರ್ಧಾರಗಳನ್ನು ಹಸ್ತಪತ್ರಿಕೆ ವೃತ್ತಪತ್ರಿಕೆಗಳ ಮೂಲಕ ಪ್ರಕಟಿಸಿ ಆ ನಿರ್ಧಾರಗಳು ಎಲ್ಲ ವೀರಶೈವರಿಗೂ ಗೊತ್ತಾಗುವಂತೆ ಮಾಡುವುದಲ್ಲದೆ ಆ ನಿರ್ಧಾರಗಳನ್ನು ಕಾರ್ಯರೂಪಕ್ಕಿಳಿಸಲು ಅನುವಾಗಬೇಕೆಂದು ಎಲ್ಲ ವೀರಶೈವ ಬಂಧುಗಳನ್ನು ಬಿನ್ನೈಸಿಕೊಳ್ಳಬೇಕು.

(೨) ವೀರಶೈವ ಮಹಾಸಭೆಯ ಅಧ್ಯಕ್ಷರು ತಮ್ಮ ಅಧ್ಯಕ್ಷಪದವಿಯ ಅವಧಿಯಲ್ಲಿ ಒಂದು ಅಖಿಲ ಭಾರತ ಪ್ರವಾಸವನ್ನು "All India Tour" ಏರ್ಪಡಿಸಿಕೊಳ್ಳಬೇಕು. ಆ ಪ್ರವಾಸದಲ್ಲಿ ಭರತಖಂಡದ ನಾನಾ ಪ್ರಾಂತ್ಯಗಳ ವೀರಶೈವ ಬಂಧುಗಳನ್ನು ಸಂಧಿಸಿ ಅವರ ಯೋಗಕ್ಷೇಮವನ್ನು ಕಷ್ಟಸುಖಗಳನ್ನು ವಿಚಾರಿಸಿ ಅವರಿಗೆ ಕೊಡಬಹುದಾದ ಸಲಹೆಗಳನ್ನು ಕೊಟ್ಟು ಅವರಿಂದ ಸಲಹೆಗಳನ್ನು ತೆಗೆದುಕೊಳ್ಳಬೇಕು. ವೀರಶೈವರಿರುವ ಬೇರೆ ಬೇರೆ ಪ್ರಾಂತ್ಯಗಳ ಸರಕಾರಿ ಅಧಿಕಾರಿಗಳನ್ನು ಅಂದರೆ, ಗವ್ಹರ್ನರ್, ರೆಸಿಡೆಂಟ್, ಮಿನಿಸ್ಟರ್ ಮುಂತಾದವರನ್ನು ಕಂಡು ಅವರೊಡನೆ ವೀರಶೈವ ಪ್ರಜೆಗಳ ಪುರೋಭಿವೃದ್ಧಿಯ ವಿಷಯದಲ್ಲಿ ಆಲೋಚನೆ ಮಾಡಬೇಕು.

(೩) ಮಠಗಳು ವೀರಶೈವ ಮಹಾಸಭೆಯ ಅಧ್ಯಕ್ಷರ ದೃಷ್ಟಿಯಲ್ಲಿ ಬಹು ಮುಖ್ಯವಾದವುಗಳಾಗಿವೆ. ಕಾರಣ ಮಠಗಳು ವೀರಶೈವ ಸಮಾಜದ ಅಡಿಗಲ್ಲುಗಳು. ಸಮಾಜದ ಅಭಿವೃದ್ಧಿಯು ಬಹುಮಟ್ಟಿಗೆ ಮಠಗಳಿಂದಲೇ ನಡೆಯಬೇಕಾಗಿದೆ. ಮಠಗಳ ವಿಚಾರದಲ್ಲಿ ಎಲ್ಲರೂ ಹೆಚ್ಚು ಲಕ್ಷ್ಯಕೊಡಬೇಕಾಗಿದೆ. ಮುಖ್ಯವಾಗಿ ವೀರಶೈವ ಮಹಾಸಭೆಯು ಮಠಗಳ ವಿಚಾರದಲ್ಲಿ ಬಹಳ ಮುತುವರ್ಜಿ ವಹಿಸಬೇಕಾಗಿದೆ. ವೀರಶೈವ ಮಹಾಸಭೆಯ ಅಧ್ಯಕ್ಷರು ತಮ್ಮ ಪ್ರವಾಸದಲ್ಲಿ ಬೇರೆ ಬೇರೆ ಪ್ರಾಂತ್ಯಗಳಲ್ಲಿ ಇರುವ ಪ್ರತಿಯೊಂದು ಮಠಕ್ಕೂ ಹೋಗಿ ಆ ಮಠಗಳ ಆಡಳಿತ ವ್ಯವಹಾರಗಳನ್ನೂ ಪರಿಶೀಲಿಸಿ ಮಠಾಧ್ಯಕ್ಷರುಗಳಿಗೆ ತಕ್ಕ ಉತ್ಸಾಹ ಪ್ರೋತ್ಸಾಹಗಳನ್ನೂ ಕೊಟ್ಟು ಅವರ ಚಿತ್ತವನ್ನು ಸಮಾಜ ಸೇವೆಯ ಕಡೆಗೆ ಎಳೆಯಬೇಕು. ಕೊರತೆಗಳಿದ್ದಲ್ಲಿ ಅವುಗಳನ್ನು ವಿನಯದಿಂದ ತೋರಿಸಿಕೊಟ್ಟು ಮುಂದೆ ಅವರಿಂದ ಸಮಾಜಕ್ಕೆ ಉಪಕಾರವಾಗುವಂತೆ ಬಿನ್ನೈಸಿಕೊಳ್ಳಬೇಕು.

(೪) ಇತ್ತೀಚೆಗೆ ಅಲ್ಲಲ್ಲಿ ತರುಣ ಸಂಘಗಳು ಹುಟ್ಟಿಕೊಂಡು ಹಿಂದೆ ಮಠಗಳು ಯಾವ ಕೆಲಸಗಳನ್ನು ಮಾಡುತ್ತಿದ್ದವೋ ಆ ಕೆಲಸಗಳನ್ನು ಈಗ ಮಾಡುತ್ತಿರುವಂತೆ ಕಂಡುಬರುತ್ತಿದೆಯಷ್ಟೆ. ಇಂಥ ತರುಣ ಸಂಘಗಳು ಮಠಗಳಂತೆ ಅಧ್ಯಕ್ಷರ ದೃಷ್ಟಿಯಲ್ಲಿ ಮುಖ್ಯವಾದವುಗಳಾಗಿವೆ. ಅಧ್ಯಕ್ಷರು ಈ ತರುಣ ಸಂಘಗಳ ಕಾರ್ಯನಿರ್ವಾಹಕರೊಡನೆ ಪತ್ರವ್ಯವಹಾರವನ್ನು ಇಟ್ಟುಕೊಳ್ಳಬೇಕು. ಸಲಹೆಗಳನ್ನು ಕೊಟ್ಟು ತೆಗೆದುಕೊಳ್ಳಬೇಕು. ಸಮಾಜ ಸುಧಾರಣಾ ಕಾರ್ಯಗಳಲ್ಲಿ ತರುಣ ಸಂಘಗಳಿಗೆ ಉಚಿತ ಸಹಾಯಸಹಾನುಭೂತಿಗಳನ್ನೀಡಬೇಕು. ಅದರಂತೆ ತರುಣ ಸಂಘಗಳೂ ಮಹಾಸಭೆಯ ಅಧ್ಯಕ್ಷರೊಡನೆ ಸಹಕರಿಸಬೇಕು. ತರುಣ ಸಂಘಗಳಿಗೆ ಎಷ್ಟು ಉತ್ಸಾಹ ಪ್ರೋತ್ಸಾಹಗಳು ಅವಶ್ಯಕವೋ ಅಷ್ಟೇ ಉತ್ಸಾಹ ಪ್ರೋತ್ಸಾಹಗಳು ಮಹಾಸಭಾಧ್ಯಕ್ಷರಿಗೂ ಅವಶ್ಯವೆಂಬುದನ್ನು ಈ ತರುಣ ಸಂಘಗಳು ಮರೆಯಬಾರದು.

(೫) ಈ ನಮ್ಮ ದಿನಗಳನ್ನು 'ಹೇಳಿಕೆಗಳ ದಿನಗಳೆಂ' ದರೆ ತಪ್ಪಾಗದು. ಯಾವ ಸರಕಾರವೇ ಆಗಲಿ, ಯಾವ ಸಂಸ್ಥೆಯೇ ಆಗಲಿ ಯಾವ ವ್ಯಕ್ತಿಯೇ ಆಗಲಿ, ಯಾವ ಸಾರ್ವಜನಿಕ ಕೆಲಸವನ್ನು ಮಾಡಬೇಕಾದರೂ ಮೊದಲು ಹೇಳಿಕೆಗಳನ್ನು ಕೊಟ್ಟು ಜನರಿಗೆ ತಿಳಿಯನ್ನುಂಟುಮಾಡಿ ಅವರ ಒಲವನ್ನು ಸಂಪಾದಿಸಿ ತರುವಾಯ ಕಾರ್ಯಗಳನ್ನು ಹಿಡಿಯುತ್ತಾರೆ. ಇದು ಈಗಿನ ಪದ್ಧತಿಯಾಗಿದೆ. ವೀರಶೈವ ಮಹಾಸಭೆಯ ಅಧ್ಯಕ್ಷರೂ ಸಹ ಈ ಪದ್ಧತಿಯನ್ನು ಅನುಸರಿಸಬೇಕು. ಹೋದ ಕಡೆಗಳಲ್ಲೆಲ್ಲ ಹೇಳಿಕೆಗಳನ್ನು ಹೊರಡಿಸಬೇಕು. ಸತ್ಯವನ್ನು ಸೂಸುವ ಉತ್ಸಾಹವನ್ನು ಬೀರುವ ಆವೇಶವನ್ನು ತರುವ ಹೇಳಿಕೆಗಳಿಂದ ಜನತೆಯ ಮೇಲೆ ಒಳ್ಳೇ ಪರಿಣಾಮವಾಗುವುದು. ಜನರು ಹೇಳಿಕೆಗಳನ್ನು ಓದಿ ಕೇಳಿ ನಿಜವನ್ನು ಅರಿತುಕೊಳ್ಳುವರು. ಸುಳ್ಳು ಸಂಗತಿಗಳನ್ನೂ ಜೊಳ್ಳು ನಂಬಿಕೆಗಳನ್ನೂ ಬಿಟ್ಟು ಸತ್ಯದ ಕಡೆಗೆ ತಿರುಗುವರು.

(೬) ಹೇಳಿಕೆಗಳನ್ನು ಹೊರಡಿಸುವುದಲ್ಲದೆ ಅಲ್ಲಲ್ಲಿ ಭಾಷಣಗಳನ್ನೂ ಮಾಡಬೇಕು. ಭಾಷಣಗಳಿಂದ ಜನರು ಜಾಗೃತರಾಗುವರು. ಹುರಿದುಂಬುವರು. ಸಮಾಜ ಸೇವೆಯ ಕಡೆಗೆ ಗಮನ ಕೊಡುವರು. ಈಗಿನ ಯುಗದಲ್ಲಂತೂ ಹೇಳಿಕೆ ಭಾಷಣಗಳು (Press and Platform) ಜನಜಾಗೃತಿಗೆ ಮುಖ್ಯ ಸಾಧನ ಸಂಪತ್ತುಗಳಾಗಿವೆ. ವೀರಶೈವ ಮಹಾಸಭೆಯ ಅಧ್ಯಕ್ಷರು ಇವುಗಳ ಉಪಯೋಗವನ್ನು ಸಂಪೂರ್ಣವಾಗಿ ಮಾಡಿಕೊಳ್ಳಬೇಕು. ಈ ರೀತಿಯಾಗಿ ವಿಧವಿಧವಾದ ಕಾರ್ಯಕಲಾಪಗಳು ವೀರಶೈವ ಮಹಾಸಭೆಯ ಅಧ್ಯಕ್ಷರ ಮುಂದೆ ಇವೆ. ಅಪಾರವಾದ ಈ ಎಲ್ಲ ಕಾರ್ಯಕಲಾಪಗಳ ಸಾಧನಕ್ಕೆ ದಕ್ಷತೆ ಬೇಕು. ವಿರಾಮ ಬೇಕು. ಎಲ್ಲಕ್ಕೂ ಮಿಗಿಲಾಗಿ ಅಭಿಮಾನ ಬೇಕು.

ಅವರಿಗೆ ತಿಳಿಯದ ಗೂಢ ವಿಚಾರಗಳಿಲ್ಲ. ಸಂಬಂಧಪಟ್ಟ ಅಧಿಕಾರಿಗಳಿಗೆ ತಿಳಿಯಬೇಕಾದ ಕೆಲವು ವಿಷಯಗಳು ಅಲ್ಲಿಗೆ ಹೋಗುವುದರೊಳಗಾಗಿ ಪತ್ರಿಕೆಗಳಲ್ಲಿ ಪ್ರಕಟವಾಗಿರುತ್ತವೆ.

ಇಲ್ಲಿನ ಪತ್ರಿಕಾಪ್ರತಿನಿಧಿಗಳೆಂದರೆ ಗುಪ್ತಪೋಲಿಸರಿಗಿಂತಲೂ ಬಹಳ ಚುರುಕು. ಬಹಿರಂಗವಾಗಲಿ ಗೂಢವಾಗಲಿ ಅವನ ಕಿವಿಗೆ ಬಿದ್ದರೆ ಸಾಕು. ಅದು ಸಾರ್ವಜನಿಕರಿಗೆ ಬೇಕಾದ ಸಮಾಚಾರವಾದರೆ ತಪ್ಪದೆ ಪ್ರಕಟಿತವಾಗಿ ಬಿಡುತ್ತದೆ.

### ಜರ್ಮನಿ.

ಜರ್ಮನಿಯವರಿಗೆ ವೃತ್ತಪತ್ರಿಕೆಗಳೆಂದರೆ ಬಹಳ ಆಶೆ. ಪ್ರಾತಃಕಾಲ ಕೆಲಸಕ್ಕೆ ಹೋಗುವಾಗ ಪತ್ರಿಕೆಗಳನ್ನು ಓದುತ್ತಾ ಹೋಗುತ್ತಾರೆ. ಸಾಯಂಕಾಲ ಮನೆಗೆ ಬರುವಾಗಲೂ ಓದಿಕೊಂಡು ಬರುತ್ತಾರೆ.

ಊಟಮಾಡುವಾಗ ವೃತ್ತಪತ್ರಿಕೆ. ಉಪಹಾರ ಕಾಲದಲ್ಲಿ ವೃತ್ತಪತ್ರಿಕೆ. ರಾತ್ರಿ ಮಲಗುವಾಗಲೂ ವೃತ್ತಪತ್ರಿಕೆ. ಮನೆಯಲ್ಲಿಯೂ ಅದೇ, ಫಲಾಹಾರ ಮಂದಿರದಲ್ಲಿಯೂ ಅದೇ ಮತ್ತು ಆಟದ ಮೈದಾನದಲ್ಲಿಯೂ ಅದೇ.

ಜರ್ಮನಿಯವರಿಗೆ ಕ್ಷಣಕ್ಷಣಕ್ಕೂ ವರ್ತಮಾನಗಳು ಬೇಕು. ಇದಕ್ಕೆ ತಕ್ಕಂತೆ ಜರ್ಮನಿಯಲ್ಲಿ ೮೦ ದೈನಂದಿನ ಪತ್ರಿಕೆಗಳಿವೆ. ಇದರಲ್ಲಿ ೧೧ ಪತ್ರಿಕೆಗಳು ದಿನಕ್ಕೆ ಎರಡು ಬಾರಿಯೂ ಒಂದು ಪತ್ರಿಕೆಯು ಮೂರು ಬಾರಿಯೂ ಮುದ್ರಿಸಲ್ಪಡುವುದು. ಮಿಕ್ಕ ೬೮ ಪತ್ರಿಕೆಗಳು ದಿನಕ್ಕೆ ಒಂದು ಬಾರಿ ಮುದ್ರಿಸಿ ಪ್ರಕಟಿಸಲ್ಪಡುತ್ತವೆ.

ಇವುಗಳಲ್ಲಿ ೪೦ ಪತ್ರಿಕೆಗಳು ಜರ್ಮನಿಯ ಸುದ್ದಿಗಳಿಗೆ ಮಾತ್ರ ಮೀಸಲಾಗಿವೆ. ಎಲ್ಲವೂ ಜರ್ಮನಿ ಭಾಷೆಯಲ್ಲಿ ಪ್ರಕಟವಾಗುತ್ತಿಲ್ಲ. ಎರಡು ಇಂಗ್ಲಿಷಿನಲ್ಲೂ, ಒಂದು ರಷ್ಯನ್ ಭಾಷೆಯಲ್ಲೂ, ಒಂದು ಪೋಲಿಸ್ ಭಾಷೆಯಲ್ಲೂ ಪ್ರಕಟಿಸಲ್ಪಡುವವು. ಇವುಗಳಲ್ಲಿ ಕೆಲವು ವಾರಕ್ಕೆ ಎರಡಾವರ್ತಿ ಮತ್ತೆ ಕೆಲವು ಮೂರಾವರ್ತಿಯೂ ಮುದ್ರಿಸಲ್ಪಡುವವು.

ಜರ್ಮನಿಯಲ್ಲಿ ಪತ್ರಿಕೆಗಳು ಪ್ರಾತಃಕಾಲ ೬ ಗಂಟೆಯಿಂದ ರಾತ್ರಿ ಹತ್ತು ಗಂಟೆಯ ವರೆವಿಗೂ ಒಂದರ ಹಿಂದೊಂದು ಪ್ರಕಟವಾಗುತ್ತಲೇ ಇರುತ್ತವೆ. ಪ್ರಾತಃಕಾಲ ೬ ರಿಂದ ೭ ಗಂಟೆಯ ವರೆವಿಗೆ ಸುಮಾರು ೫೦ ಪತ್ರಿಕೆಗಳು ಒಂದಾದ ಮೇಲೊಂದು ಹೊರಡುವವು. ಎಂಟು ಗಂಟೆಯ ಹೊತ್ತಿಗೆ ನಡುಹಗಲಿನ ಪತ್ರಿಕೆಗಳು ಸಿದ್ಧವಾಗಿರುವವು.

ಹನ್ನೆರಡರಿಂದ ಎರಡು ಗಂಟೆಯೊಳಗಾಗಿ ಸಾಯಂಕಾಲದ ಪತ್ರಿಕೆಗಳು ಸಿದ್ಧವಾಗುವುವು. ಮೂರು ಗಂಟೆಯ ಹೊತ್ತಿಗೆ ದೈನಿಕ ಪತ್ರಿಕೆಗಳಲ್ಲಿ ಅತ್ಯಂತ ದೊಡ್ಡದಾದ ಪತ್ರಿಕೆಯೊಂದು ಸಿದ್ಧವಾಗುವುದು. ಸಾಯಂಕಾಲ ೪ ರಿಂದ ೮ ಗಂಟೆಯ ಒಳಗೆ ಎಲ್ಲಿ ನೋಡಿದರೂ ವೃತ್ತಪತ್ರಿಕೆಗಳ ಕೂಗು ಮತ್ತು ಅವುಗಳ ಮಾರಾಟ.

ಇಷ್ಟಿದ್ದರೂ ಜರ್ಮನಿಯಲ್ಲಿ ಹೊಸ ಪತ್ರಿಕೆಗಳು ಹುಟ್ಟುತ್ತಲಿವೆ. ಒಟ್ಟಿನಲ್ಲಿ ದಿನ ಒಂದಕ್ಕೆ ೩೫ ಲಕ್ಷ ದಿನ ಪತ್ರಿಕೆಗಳು ಮಾರಾಟವಾಗುವುವೆಂದು ತಿಳಿದುಬರುತ್ತದೆ. ಇದರಲ್ಲಿ ವಾರ ಮತ್ತು ಮಾಸ ಪತ್ರಿಕೆಗಳು ಸೇರಿಲ್ಲ. ಇವುಗಳು ಸುಮಾರು ೨೦ ಲಕ್ಷ ಪತ್ರಿಕೆಗಳು. ವಿದ್ಯಾಭ್ಯಾಸ ಮತ್ತು ಕೈಗಾರಿಕೆಗೆ ಸಂಬಂಧಿಸಿದ ಸುಮಾರು ೧೦ ಲಕ್ಷ ಪತ್ರಿಕೆಗಳೂ ಪ್ರಕಟವಾಗುತ್ತಿವೆ.

### ರಷ್ಯಾ.

ರಷ್ಯಾ ದೇಶದಲ್ಲಿ ವೃತ್ತಪತ್ರಿಕೆಗಳಿಗಿರುವಷ್ಟು ಸ್ವಾತಂತ್ರ್ಯವು ಮತ್ತಿನ್ನಾವ ದೇಶದಲ್ಲಿಯೂ ಇಲ್ಲವೆಂದು ಹೇಳಬಹುದು. ಆದ್ದರಿಂದಲೇ ರಷ್ಯಾದ ಪತ್ರಿಕೆಗಳು ಯಾವ ವಿಚಾರವನ್ನೇ ಆಗಲಿ ನಿರ್ಭೀತಿಯಿಂದ ಚರ್ಚಿಸುತ್ತಲಿವೆ. ಅಷ್ಟೇ ಅಲ್ಲ; ಪ್ರತಿ ಪತ್ರಿಕೆಯ ಪ್ರತಿ ಸಂಚಿಕೆಯಲ್ಲಿಯೂ ವಿವಿಧ ವ್ಯಕ್ತಿ ಮತ್ತು ವಿಚಾರಗಳ ಮೇಲೆ ವ್ಯಂಗ್ಯ ಲೇಖನಗಳೂ ವ್ಯಂಗ್ಯ ಚಿತ್ರಗಳೂ ಇದ್ದೇ ಇರುತ್ತವೆ. ಇಂತಹ ವ್ಯಂಗ್ಯ ಚಿತ್ರ ವ್ಯಂಗ್ಯ ಲೇಖನ ರಚನೆಯಲ್ಲಿ ಮತ್ತಿನ್ನಾವ ರಾಜ್ಯದ ಪತ್ರಿಕೆಗಳೂ ರಷ್ಯಾದ ಪತ್ರಿಕೆಗಳಿಗೆ ಸರಿ ತೂಗಲಾರವು. ವ್ಯಂಗ್ಯ ನಿರೂಪಣೆಯು ರಷ್ಯಾದ ವೃತ್ತಪತ್ರಿಕೆಗಳ ವೈಶಿಷ್ಟ್ಯವೆನ್ನಬಹುದು. ಈ ಪತ್ರಿಕೆಗಳು ನಿರ್ಭಯವಾಗಿ ವಿಚಾರವಿನಿಮಯಮಾಡಿ ಅಂಜಿಕೆ ಇಲ್ಲದೆ ಮರೆಮುಚ್ಚಿಲ್ಲದೆ ಯಾವ ವಿಷಯವನ್ನೇ ಆಗಲಿ ಕೂಲಂಕುಷವಾಗಿ ಚರ್ಚಿಸುವುದರಿಂದ ಈ ಪತ್ರಿಕೆಗಳ ಶಕ್ತಿಯೂ ಪ್ರಚಾರವೂ ಬಹಳವಾಗಿ ಬೆಳೆದಿದೆ. ೧೯೧೦ ರಲ್ಲಿ ರಷ್ಯಾದಲ್ಲಿ ಕೇವಲ ೮೫೦ ಪತ್ರಿಕೆಗಳಿದ್ದವು. ಆದರೆ ಈಗ ಎರಡು ಸಾವಿರಕ್ಕೆ ಮೇಲ್ಪಟ್ಟಿದೆ. ಇಲ್ಲಿನ ಪತ್ರಿಕೆಗಳು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಸಮಾಚಾರಗಳನ್ನು ಬಹು ಸ್ಪಷ್ಟವಾಗಿ ಜನರು ಸುಲಭವಾಗಿ ಅರಿತುಕೊಳ್ಳುವಂತೆ ಬರೆಯುವವು.

ರಷ್ಯಾದ ಪತ್ರಿಕಾ ಪ್ರಪಂಚವನ್ನು ಅರಿತುಕೊಳ್ಳಬೇಕಾದರೆ ಅಲ್ಲಿನ ವೃತ್ತಪತ್ರಿಕೆಗಳ ಪ್ರಚಾರ ಅರಿತರೆ ಸಾಕು. ಕಮ್ಯುನಿಷ್ಟ ಪಕ್ಷದ ಪತ್ರಿಕೆಯಾದ ಪ್ರವಾಡ ಎಂಬ ಪತ್ರಿಕೆಯ ಪ್ರಚಾರ ದಿನ ೧ಕ್ಕೆ ೧ ಕೋಟಿ ೫೦ ಲಕ್ಷವೆಂದ ಮೇಲೆ ಪತ್ರಿಕೆಯ ವರ್ಣನೆ ತೀರಾ ಅನಾವಶ್ಯಕ. 'ಇಜ್' ಎಂಬ ಇನ್ನೊಂದು ಪತ್ರಿಕೆ. ಅದರ ಪ್ರಚಾರ ಒಂದು ಕೋಟಿಗೆ ಮೀರಿದೆ. ಇವೆರಡು ಕೇವಲ ೪ ಮತ್ತು ೬ ಪುಟಗಳ ಪತ್ರಿಕೆಗಳು.

ಹೀಗೆ ರಷ್ಯನ್ ಭಾಷೆಯಲ್ಲಿ ಹೊರಡುವ ಪತ್ರಿಕೆಗಳಲ್ಲದೆ ಇಂಗ್ಲಿಷ್ ಮತ್ತು ಫ್ರೆಂಚ್ ಭಾಷೆಗಳಲ್ಲಿ ಹೊರಡುವ ಪತ್ರಿಕೆಗಳೂ ಉಂಟು. ವಾರ, ಪಕ್ಷ ಮತ್ತು ಮಾಸ ಪತ್ರಿಕೆಗಳು ಉಂಟು. ಇವುಗಳಲ್ಲದೆ ರೈತರ ಮತ್ತು ಕೂಲಿಕಾರರ ಹಿತಕೋರುವ ಪತ್ರಿಕೆಗಳು ಪ್ರಚಾರದಲ್ಲಿವೆ. ವರ್ಷ ವರ್ಷವೂ ವೃತ್ತ ಪತ್ರಿಕಾ ಪ್ರಚಾರವು ರಷ್ಯಾದಲ್ಲಿ ಇನ್ನೂ ಹೆಚ್ಚುತ್ತಲೇ ಇದೆ.

### ಕೊನೆಯ ಮಾತು.

ವಿದೇಶ ವೃತ್ತಪತ್ರಿಕೆಗಳ ಪ್ರಚಾರ ದೃಷ್ಟಿಯಿಂದ ನಮ್ಮ ಕನ್ನಡ ಪತ್ರಿಕೆಗಳನ್ನು ತುಲನೆಮಾಡಿ ನೋಡಿದರೆ ನಾವು ತಲೆಬಾಗಿಸಬೇಕಾಗುತ್ತದೆ. ಆ ಪತ್ರಿಕೆಗಳಿಗೂ ನಮಗೂ ಅಜಗಜಾಂತರ. ನಮ್ಮಲ್ಲಿ ಅಂತಹ ಪತ್ರಿಕೆಗಳನ್ನು ನಡೆಯಿಸುವ ಮಹನೀಯರಿಲ್ಲವೆಂದಲ್ಲ. ಅಂತಹವುಗಳನ್ನು ಓದುವ ಯೋಗ್ಯತೆಯುಳ್ಳ ಜನಗಳಿಲ್ಲ. ಇತರರ ಸುದ್ದಿ ನಮಗೇಕೆ ಎಂದು ಮನೆಯ ಮೂಲೆಯಲ್ಲಿ ಕುಳಿತಿರುವ ಮನುಷ್ಯರೇ ನಮ್ಮಲ್ಲಿ ಹೆಚ್ಚು ಜನರಿದ್ದಾರೆ. ಜಗತ್ತಿನ ವಿಚಾರವನ್ನು ತಿಳಿದುಕೊಳ್ಳಬೇಕೆಂಬ ಕುತೂಹಲಗಳಿಲ್ಲ. ವೃತ್ತಪತ್ರಿಕೆಗಳ ಬೆಲೆಯನ್ನರಿತಿರುವವರು ಶೇಕಡ ಇಬ್ಬರು ಸಿಗುವುದೂ ಕಷ್ಟ. ಅದಕ್ಕೋಸ್ಕರವೇ ನಮ್ಮಲ್ಲಿ ೩-೪ ಸಾವಿರ ಪ್ರತಿಗಳ ಪ್ರಚಾರವಿರುವ ಪತ್ರಿಕೆಯೆಂದರೆ ಬಹಳ ದೊಡ್ಡದೆಂದು ಪರಿಗಣಿತವಾಗಿರುವುದು.

ಈ ಮೂಢ ಜನರ ಅಸಡ್ಡೆ ಅನಾದರಣೆಗಳ ಜೊತೆಗೆ ನಮ್ಮ ಸರಕಾರದ ಕ್ರೂರ ಕಾನೂನುಗಳು. ಮಾತನಾಡಿದರೆ ಮುಟ್ಟುಗೋಲು. ಕೊಂಚ ಹೆಚ್ಚುಕಡಿಮೆಯಾಗಲಿಕ್ಕಿಲ್ಲ. ಆಗಲೇ ಪತ್ರಿಕೆಗಳ ಮೇಲೆ ಗದಪ್ರಹಾರಗಳು ನಡೆಯುತ್ತವೆ. ಎಷ್ಟೋ ಪತ್ರಿಕೆಗಳು ಹುಟ್ಟಿ ಬೆಳೆಯುವುದಕ್ಕೆ ಪ್ರಾರಂಭಿಸಿದಾಗಲೇ ಸರಕಾರದ ಕತ್ತಿಯ ಪೆಟ್ಟಿಗೆ ಕೊಲೆಯಾಗಿವೆ. ಇಂತಹ ಇಕ್ಕಟ್ಟಿನ ಕಾನೂನಗಳ ಮತ್ತು ಸುಸ್ವಾಗತರಹಿತ ವಾತಾವರಣದಲ್ಲಿ ಕನ್ನಡ ಪತ್ರಿಕೆಗಳು ತಲೆ ಎತ್ತಲು ಸಾಧ್ಯವಿಲ್ಲ.

"ಕಂಠೀರವ."

# ವೇದದ ತಿರುಳನ್ನು ತಿಳಿಸಿದ

## ಮೊದಲನೇ ಹಿಂದು ಪಂಡಿತರು.

ವೇದಗಳು ಮನುಷ್ಯ ಜಾತಿಯ ಅತಿ ಪ್ರಾಚೀನ ಸಂಗತಿಗಳನ್ನು ತಿಳಿಸುವ ಜಗತ್ತಿನ ಆದ್ಯ ಗ್ರಂಥಗಳೆಂಬುದು ಈಗ ನಿರ್ವಿವಾದವಾದ ಸಂಗತಿಯಾಗಿದೆಯಷ್ಟೆ. ಇಂಥ ಪ್ರಾಚೀನ ಗ್ರಂಥಗಳಲ್ಲಿಯ ಅನೇಕ ನಿಜ ಸಂಗತಿಗಳು ಬಹುಕಾಲದಿಂದಲೂ ವೇದಜ್ಞರಿಗೆ ತಿಳಿದಿರಲಿಲ್ಲ. ಏಕೆಂದರೆ ವೇದಗಳನ್ನು ಬಲ್ಲ ಮೊದಲಿನ ಭಾರತೀಯರಿಗೆ ಪ್ರಪಂಚದ ಬೇರೆ ಬೇರೆ ಭಾಗಗಳ ಪರಿಜ್ಞಾನವೇ ಇರಲಿಲ್ಲ. ವೇದಗಳು ದೇವರಿಂದ ಬಂದ ಗ್ರಂಥಗಳೆಂಬ ನಂಬಿಕೆಯೇ ಅವರಲ್ಲಿದ್ದುದರಿಂದ ಐತಿಹಾಸಿಕ ದೃಷ್ಟಿಯಿಂದ ಅವುಗಳನ್ನು ನೋಡುವ ಕಲ್ಪನೆಯು ಕೂಡಾ ಅವರಲ್ಲಿ ಬರಲಿಲ್ಲ. ಹೀಗಿದ್ದುದರಿಂದ ವೇದಗಳಲ್ಲಿಯ ಅನೇಕ ಸಂಗತಿಗಳ ನಿಜಸ್ಥಿತಿಯೇ ೧೯ ನೆಯ ಶತಮಾನದ ವರೆಗೂ ಪ್ರಪಂಚಕ್ಕೆ ಗೊತ್ತಾಗಿರಲಿಲ್ಲ.

ಇತ್ತೀಚಿಗೆ ಜಗತ್ತಿನ ಸಕಲ ಭಾಗಗಳ ಮತ್ತು ಜನಾಂಗಗಳ ಪರಿಚಯವು ಹೆಚ್ಚುತ್ತಾ ಬಂದಿತು. ಅನೇಕ ಪ್ರಾಚೀನ ವಸ್ತು ಸಂಶೋಧನಗಳಿಂದ ಮನುಷ್ಯಜಾತಿಯ ಪೂರ್ವೇತಿಹಾಸದ ಮೇಲೆ ಎಷ್ಟೋ ಬೆಳಕು ಬಿದ್ದಿತು. ಆದುದರಿಂದ ವೇದಗಳಲ್ಲಿಯ ಅನೇಕ ಸಂಗತಿಗಳ ನಿಜ ಸ್ಥಿತಿಯನ್ನರಿತುಕೊಳ್ಳಲು ಐತಿಹಾಸಿಕ ದೃಷ್ಟಿಯಿಂದ ಅವುಗಳನ್ನು ಅಧ್ಯಯನಮಾಡುವ ಪ್ರವೃತ್ತಿಯೂ ಪಂಡಿತರಲ್ಲಿ ಉಂಟಾಯಿತು. ವೇದಗಳು ದೇವರಿಂದ ಬಂದ ಗ್ರಂಥಗಳೆಂಬ ಮೂಢ ನಂಬಿಕೆಯು ಮಾಯವಾಯಿತು. ಅವು ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆಯವರಿಂದ ತಿಳಿಸಲ್ಪಟ್ಟ ಸಂಗತಿಗಳ ಸಂಗ್ರಹಗಳೆಂದೇ ಸ್ಪಷ್ಟವಾಯಿತು.

**ವೇದಜ್ಞ ಕುಂತೆಯವರು.**

ಸಾಯಣಾಚಾರ್ಯರಿಂದ ಸ್ವಾಮಿ ದಯಾನಂದಜಿಯವರ ವರೆಗಿನ ಭಾರತೀಯ ವೇದಜ್ಞರೆಲ್ಲರೂ ವೇದಗಳನ್ನು ಐತಿಹಾಸಿಕ ದೃಷ್ಟಿಯಿಂದ ನೋಡಿದವರಲ್ಲ. ಅಂತೆಯೇ ಅವುಗಳಲ್ಲಿಯ ಅನೇಕ ಸಂಗತಿಗಳ ನಿಜಾರ್ಥವು ಅವರಿಗೆ ಗೊತ್ತಾಗಲಿಲ್ಲ. ಪಾಶ್ಚಾತ್ಯ ಶಿಕ್ಷಣ ಪ್ರಸಾರದಿಂದ ಹಿಂದುಗಳಿಗೆ ಒಂದು ಹೊಸ ದೃಷ್ಟಿಯೇ ಬಂದಿತು. ಹಾಗೆ ಹೊಸ ದೃಷ್ಟಿಯಿಂದ ವೇದಗಳನ್ನು ನೋಡಿ ಅವುಗಳ ತಿರುಳನ್ನು ಪ್ರಪಂಚಕ್ಕೆ ತೋರಿಸಿದ ಹಿಂದುಗಳಲ್ಲಿ ಕೀರ್ತಿಶೇಷ ಮಹಾದೇವ ಮೋರೇಶ್ವರ ಕುಂತೆಯವರು ಮೊದಲನೆಯವರು.

ಭಾರತೀಯ ಆರ್ಯರ ಸ್ಥಿತ್ಯಂತರ (Vicissitudes of Aryan Civilisation in India) ಎಂಬ ಗ್ರಂಥವನ್ನು ೧೮೮೦ ನೆಯ ಇಸವಿಯಲ್ಲಿ ಬರೆದು ಜಗತ್ತಿನ ಮಹಾ ಮಹಾ ವಿದ್ವಾಂಸರ ವಿಚಾರದಲ್ಲಿಯೇ ಕ್ರಾಂತಿಯನ್ನು ಉಂಟುಮಾಡಿದರು. ಆರ್ಯರು ಹಿಂದುಸ್ಥಾನಕ್ಕೆ ಬಂದನಂತರ ಅವರ ಸಂಸ್ಕೃತಿಯಲ್ಲಿ ಯಾವ ಯಾವ ವ್ಯತ್ಯಾಸಗಳಾದವೆಂಬುದನ್ನು ಸಾಧಾರಣ ೩೦೦ ಬೇರೆ ಬೇರೆ ಗ್ರಂಥಗಳ ಆಧಾರಗಳಿಂದ ದೃಢೀಕರಿಸಿದ್ದಾರೆ. ಆರ್ಯರ ಯಜ್ಞಸಂಸ್ಥೆಗೂ ಪ್ರಾಚೀನ ಗ್ರೀಕ, ರೋಮನ್, ಸ್ಕಾಟ್ಚ ಜನರ ಧಾರ್ಮಿಕ ಸಂಸ್ಥೆಗಳಿಗೂ ಇದ್ದ ಸಂಬಂಧವನ್ನು ಆ ಗ್ರಂಥದಲ್ಲಿ ಸ್ಪಷ್ಟೀಕರಿಸಿದ್ದಾರೆ.

ಇವರ ಅದ್ವಿತೀಯವಾದ ವಿಚಾರಸರಣಿಯನ್ನು ಮಾನವ ವಂಶ ಶಾಸ್ತ್ರಜ್ಞರೂ, ಧರ್ಮ ಶಾಸ್ತ್ರಜ್ಞರೂ ಆದ ಅನೇಕ ಪಾಶ್ಚಾತ್ಯ ಪಂಡಿತರು ಬಹು ಶ್ಲಾಘಿಸಿದ್ದಾರೆ. ಇಂಥ ಸುಪ್ರಸಿದ್ಧ ವೇದಜ್ಞರು ದೇಹಬಿಟ್ಟು ಕಳೆದ ೮ ನೆಯ ತಾರೀಖಿಗೆ ೫೦ ವರುಷಗಳಾದವೆಂದು ಅವರ ಅರ್ಧಶತಮಾನದ ಸ್ಮೃತಿ ದಿನವನ್ನು ಮಹಾರಾಷ್ಟ್ರದ ಅನೇಕ ಪ್ರಸಿದ್ಧ ಪಟ್ಟಣಗಳಲ್ಲಿ ಆಚರಿಸಿದರು.

**ಆರ್ಯರು ಪರದೇಶದವರು.**

ವೇದಗಳು ಆರ್ಯರ ಅತಿ ಪ್ರಾಚೀನ ಗ್ರಂಥಗಳು. ಅವರು ಹಿಂದುಸ್ಥಾನಕ್ಕೆ ಬೇರೆ ಭಾಗಗಳಿಂದ ಬಂದು ಮೊದಲು ಪಂಜಾಬ ಪ್ರಾಂತದಲ್ಲಿ ನೆಲೆಸಿದರೆಂಬುದು ಐತಿಹಾಸಿಕ ಸತ್ಯ ಸಿದ್ಧಾಂತವು. ಇದನ್ನು ಮೊದಲು ಸಾರಿದ ಹಿಂದು ಪಂಡಿತರೆಂದರೆ ಕೀರ್ತಿಶೇಷ ಕುಂತೆಯವರು. ಅನಂತರ ಲೋಕಮಾನ್ಯ ಟಿಳಕರು ಆರ್ಯರು ಉತ್ತರ ಧ್ರುವ ಪ್ರದೇಶದಿಂದ ಪಂಜಾಬ ಪ್ರಾಂತಕ್ಕೆ ಬಂದರೆಂಬುದನ್ನು ವೇದಗಳಲ್ಲಿಯ ನೂರಾರು ಋಕ್ಕುಗಳಿಂದಲೇ ಸಿದ್ಧಮಾಡಿದ್ದಾರೆ.

---

# ಬಂಗಾಲದಲ್ಲಿ ಮುಸಲ್ಮಾನರ ರಾಜ್ಯ.

ಇಂಗ್ಲಿಷ್ ಸರಕಾರವು ಹಿಂದುಸ್ಥಾನದ ಹೊಸ ರಾಜಕೀಯ ಆಡಳಿತದಲ್ಲಿ ಜಾತಿ ನಿರ್ಣಯವೆಂಬ ವಿಷವನ್ನು ಬೆರೆಸಿದ್ದರಿಂದ ಬಂಗಾಲದ ಹಿಂದುಗಳಿಗಾಗುತ್ತಿರುವ ಅನ್ಯಾಯವು ಭಯಂಕರವಾದುದಾಗಿದೆ. ಅಲ್ಲಿಯ ಮುಸಲ್ಮಾನರ ಜಾತ್ಯಂಧತೆಯಿಂದ ಬಂಗಾಲದಲ್ಲಿ ಮುಸಲ್ಮಾನ್ ರಾಜ್ಯವೇ ಪ್ರಾರಂಭವಾದಂತಾಗಿದೆ. ಈ ವಿಚಾರವಾಗಿ ಬಂಗಾಲದ ಸುಪ್ರಸಿದ್ಧ ಹಿಂದು ಮುಂದಾಳುಗಳಾದ ಶ್ರೀ. ರಾಮಾನಂದ ಚಟರ್ಜಿ, ಆಚಾರ್ಯ ಪ್ರಫುಲ್ಲ ಚಂದ್ರರಾಯ, ಸರ್. ನೀಲರತ್ನ ಸರಕಾರ ಮೊದಲಾದವರು ಒಂದು ಪ್ರಕಟನೆಯನ್ನು ಹೊರಡಿಸಿ ಬಂಗಾಲದಲ್ಲಿ ಹಕ್ ಮಂತ್ರಿಮಂಡಲವು ಮುಸಲ್ಮಾನ್ ಪ್ರಭುತ್ವವನ್ನೇ ನಡೆಸಿದೆಯೆಂದು ಸ್ಪಷ್ಟ ತಿಳಿಸಿದ್ದಾರೆ.

ಪ್ರತಿಯೊಂದು ಸಾರ್ವಜನಿಕ ಸಂಸ್ಥೆಗಳಲ್ಲಿಯೂ ಜಾತ್ಯಂಧತೆಯ ನಗ್ನ ನರ್ತನವೇ ನಡೆದಿದೆ. ಇಸ್ಲಾಮಿ ವರ್ಚಸ್ಸು ಎಲ್ಲೆಲ್ಲಿಯೂ ಸ್ಥಾಪನೆಯಾಗುವಂತೆ ಕ್ರಮಬದ್ಧವಾದ ಪ್ರಯತ್ನ ನಡೆದಿದೆ. ಬಂಗಾಲ ಪ್ರಾಂತದ ಅಧಿಕಾರ ಸ್ಥಾನಗಳಲ್ಲೆಲ್ಲಾ ೧೦೦ ಕ್ಕೆ ೬೦ ರಂತೆ ಮುಸಲ್ಮಾನರೇ ಇರಬೇಕೆಂದೂ ೩೦ ರಂತೆ ಆದಿ ಹಿಂದುಗಳಿರಬೇಕೆಂದೂ ಮಂತ್ರಿಮಂಡಲವು ಶಾಸನವನ್ನೇ ಮಾಡಿ ಉಳಿದ ೩೦ ಸ್ಥಾನಗಳಲ್ಲಿ ಸ್ಪೃಶ್ಯ ಹಿಂದುಗಳು, ಕ್ರಿಸ್ತರು, ಯುರೋಪಿಯನ್‌ರು ಇರಬೇಕೆಂದು ಗೊತ್ತುಮಾಡಿದ್ದಾರೆ!

ಈ ಅನ್ಯಾಯವಾದ ಜಾತಿವಿಶಿಷ್ಟ ಅಧಿಕಾರ ವಿಭಾಗದಿಂದ ಬಂಗಾಲದಲ್ಲಿ ಮುಸ್ಲಿಂ ರಾಜ್ಯವೇ ಪ್ರಾರಂಭವಾಗಿದೆಯೆಂದೂ ಕಾಂಗ್ರೆಸ್ಸು ಜಾತಿನಿರ್ಣಯ ನಿವಾರಣೆಗಾಗಿ ಪ್ರಚಂಡ ಪ್ರಯತ್ನ ನಡೆಸದೆ ಇದ್ದುದು ಅನ್ಯಾಯವೂ ಅನರ್ಥಕರವೂ ಆಗಿದೆಯೆಂದೂ ಬಂಗಾಲದ ಶ್ರೀ. ಸುಭಾಷಚಂದ್ರರವರೇ ಕಾಂಗ್ರೆಸ್ಸಿನ ಅಧ್ಯಕ್ಷರಿರುವಾಗ ಹೀಗೆ ಈ ವಿಷಯವು ಉಪೇಕ್ಷಿಸಲ್ಪಟ್ಟಿರುವುದು ಬಂಗಾಲದ ದುರ್ದೈವವೆಂದೂ ಬಂಗಾಲದ ಹಿಂದು ಮುಖಂಡರ ಈ ಪ್ರಕಟನೆಯಲ್ಲಿ ಹೇಳಲಾಗಿದೆ.

---

—ಆಸಾಮ ಮಂತ್ರಿ ಮಂಡಲದಲ್ಲಿ ಫಕರುದ್ದೀನ ಅಲ್ಲಿ ಅಹಮ್ಮದ ಮತ್ತು ಖಾನಬಹದ್ದೂರ ಮೌಲವಿ ಅಹಮದ ಅಲ್ಲಿ ಇವರನ್ನು ಮುಸಲ್ಮಾನ್ ಮಂತ್ರಿಗಳಾಗಿ ನಿಯಮಿಸಿಕೊಂಡಿದ್ದಾರೆ. ಸರಕಾರಿ ಭವನದಲ್ಲಿ ಇವರ ರಾಜನಿಷ್ಠೆಯ ಪ್ರತಿಜ್ಞೆಯು ಪೂರೈಸಿತೆಂದು ತಿಳಿದು ಬಂದಿದೆ.

## ಬ್ಯಾ. ಜಿನ್ನಾರವರಿಗೆ ಅಲ್ಲಾಬಕ್ಸರ ಬುದ್ಧಿವಾದ.

### ಜಾತೀಯ ಭಾವನೆ ಬೆಳೆದು ಶಾಂತತಾಭಂಗವಾದರೆ ಅದಕ್ಕೆ ಕಾರಣರು ನೀವೇ!

ಬ್ಯಾ. ಜಿನ್ನಾ ಸಾಹೇಬರು ಕಳೆದ ವಾರ ಸಿಂಧ ಪ್ರಾಂತದಲ್ಲಿ ಮುಸ್ಲಿಂಲೀಗಿನ ಪರಿಷತ್ತನ್ನು ಕೂಡಿಸಿ ಸಿಂಧ ಶಾಸನಸಭೆಯ ಮುಸ್ಲಿಂ ಪ್ರತಿನಿಧಿಗಳನ್ನು ತಮ್ಮ ಲೀಗಿನ ಬಲೆಯಲ್ಲಿ ಸೇರಿಸಿಕೊಳ್ಳಬೇಕೆಂದೂ ಆನಂತರ ಈಗಿದ್ದ ಮಂತ್ರಿಮಂಡಳವನ್ನು ತಳ್ಳಿ ಮುಸ್ಲಿಂ ಲೀಗ ಮಂತ್ರಿಮಂಡಳವನ್ನೇರ್ಪಡಿಸಿಕೊಳ್ಳಬೇಕೆಂದೂ ವಿಶ್ವಪ್ರಯತ್ನಪಟ್ಟರು. ಪಂಜಾಬದ ಮಹಾಪ್ರಧಾನ ಸರ್ ಸಿಕಂದರ್ ಹಯಾತಖಾನರನ್ನೂ ಬಂಗಾಲದ ಹುಲಿಯೆಂದು ಹೇಳಿಕೊಳ್ಳಲು ಇಷ್ಟಪಡುವ ಮಹಾಪ್ರಧಾನ ಫಜಲುಲ್ ಹಕ್ಕರನ್ನು ಪರಿಷತ್ತಿಗೆ ಕರೆಯಿಸಿಕೊಂಡು ಅವರಿಂದ ಉದ್ದುದ್ಧವಾದ ಭಾಷಣ ಮಾಡಿಸಿ ಸಿಂಧ ಪ್ರಾಂತದ ಮುಸ್ಲಿಂ ಪ್ರತಿನಿಧಿಗಳು ಲೀಗಿನ ಜಾಲದಲ್ಲಿ ಬೀಳುವಂತೆ ಬುದ್ಧಿವಾದ ಹೇಳಿಸಿದರು. ಇದರ ಫಲವಾಗಿ ಸಿಂಧದಲ್ಲಿ ಮುಸ್ಲಿಂಲೀಗ್ ಮಂತ್ರಿಮಂಡಳ ಏರ್ಪಡಬಹುದೆಂದು ಅನೇಕರು ಭಾವಿಸಿದ್ದರು. ಕೆಲವು ಜನ ಪ್ರತಿನಿಧಿಗಳು ಲೀಗಿನ ಬಲೆಯಲ್ಲಿ ಬಿದ್ದರೂ ಲೀಗಿನ ಧ್ಯೇಯ, ಕಾರ್ಯಸಾಧನೆ, ಜಾತ್ಯಂಧತೆಯ ದೃಷ್ಟಿಗಳನ್ನು ಕಂಡ ಕೆಲವು ರಾಷ್ಟ್ರೀಯ ವೃತ್ತಿಯ ಮುಸ್ಲಿಂಮರು ಇವರು ಒಡ್ಡಿದ ಜಾಲದಲ್ಲಿ ಬೀಳಲಿಲ್ಲ. ಹೀಗಾಗಿ ಬ್ಯಾ. ಜಿನ್ನಾರವರ ಪ್ರಯತ್ನವೆಲ್ಲ ವಿಫಲವಾಯಿತು. ಈ ಸಂಬಂಧವಾಗಿ ಬ್ಯಾ. ಜಿನ್ನಾರವರು ಒಂದು ಪ್ರಕಟನೆ ಹೊರಡಿಸಿ ಈ ಪ್ರಕಾರ ತಿಳಿಸಿದ್ದಾರೆ—

"ಸಿಂಧ ಶಾಸನ ಸಭೆಯ ಮುಸ್ಲಿಂ ಪ್ರತಿನಿಧಿಗಳ ಸಂಗಡ ವಿಚಾರ ವಿನಿಮಯ ಮಾಡಲಾಯಿತು. ಈ ಚರ್ಚೆಯಲ್ಲಿ ಸಿಂಧ, ಪಂಜಾಬ ಮತ್ತು ಬಂಗಾಲಗಳ ಮಹಾ ಪ್ರಧಾನರೂ ಭಾಗವಹಿಸಿದ್ದರು. ಒಂದು ತಾತ್ಪೂರ್ತಿಕ ಒಪ್ಪಂದ ಮಾಡಿಕೊಂಡು ಸಿಂಧದಲ್ಲಿ ಒಂದು ಬಲವಾದ ಮುಸಲ್ಮಾನ ಪಕ್ಷವನ್ನು ಸ್ಥಾಪಿಸಬೇಕೆಂದು ನಿರ್ಧರಿಸಲಾಯಿತು. ಈ ಪಕ್ಷದ ಸದಸ್ಯರೆಲ್ಲರೂ ಮುಸ್ಲಿಂಲೀಗಕ್ಕೆ ಸಹಿ ಹಾಕಿ ಅದರ ಕಾರ್ಯಕ್ರಮ ಒಪ್ಪಿಕೊಳ್ಳಬೇಕು. ಸದ್ಯದ ಮಂತ್ರಿಮಂಡಳ ರಾಜೀನಾಮೆ ಕೊಟ್ಟು ಲೀಗದ ಮುಂದಾಳುಗಳಿಗೆ ಹೊಸ ಮಂತ್ರಿಮಂಡಳ ರಚಿಸಲು ಗವ್ಹರ್ನರರು ಸೂಚಿಸಬೇಕು. ಅಲ್ಲಾಬಕ್ಸರು ಒಪ್ಪಂದಕ್ಕೆ ತಮ್ಮ ಅಸಮ್ಮತಿ ಸೂಚಿಸಿ ಹೊರಗಾಗಿ "ನನ್ನನ್ನು ಲೀಗ ಪಕ್ಷದ ನಾಯಕನನ್ನಾಗಿ ಆರಿಸಿದರೆ ನಾನು ನನ್ನ ಪಕ್ಷ ಸಹಿತ ಲೀಗ ಸೇರುವೆನು." ಎಂದು ತಿಳಿಸಿದರು. ಐಕ್ಯತೆಯನ್ನುಂಟುಮಾಡುವುದಕ್ಕಾಗಿ ಅಲ್ಲಾಬಕ್ಸರ ಸೂಚನೆಯನ್ನೂ ಒಪ್ಪಿಕೊಳ್ಳಲಾಯಿತು. ಅವರು ವಿಚಾರಿಸಿ ತಿಳಿಸುವುದಾಗಿ ಅಭಿವಚನ ಕೊಟ್ಟರು. ಆದರೆ ತಮ್ಮ ನಿರ್ಣಯ ತಿಳಿಸದೆ ತಲೆ ತಪ್ಪಿಸಿದರು. ಸದ್ಯಕ್ಕೆ ಇದೆಲ್ಲ ಸಂತೆಯ ಸಂಗತಿಯಾಗಿ ಹೋಗಿದೆ. ಅಲ್ಲಾಬಕ್ಸರು ಕಾಂಗ್ರೆಸ್ಸಿನ ಕೈಗೊಂಬೆಗಳಾಗಿರುವರು."

ಇದಕ್ಕೆ ಉತ್ತರವಾಗಿ ಸಿಂಧ ಪ್ರಾಂತದ ಮಹಾಪ್ರಧಾನರಾದ ಅಲ್ಲಾಬಕ್ಸರವರು ಒಂದು ಪ್ರಕಟನೆ ಹೊರಡಿಸಿ ಬ್ಯಾ. ಜಿನ್ನಾರವರಿಗೆ ಚೆನ್ನಾಗಿ ಬುದ್ಧಿ ಹೇಳಿದ್ದಾರೆ. ಅದರಲ್ಲಿ ಅವರು ಈ ಪ್ರಕಾರ ಬರೆದಿದ್ದಾರೆ—

"ಮುಸ್ಲಿಂಲೀಗ್ ಪರಿಷತ್ತಿನಲ್ಲಿ ಸಿಂಧ ಮಂತ್ರಿಮಂಡಳವನ್ನು ಬೆದರಿಸುವಂತಹ ಮತ್ತು ಅದನ್ನು ಬಹಿಷ್ಕರಿಸಬೇಕೆನ್ನುವ ಭಾಷಣಗಳಾದವು. ಜಾತೀಯ ಭಾವನೆಯು ಉದ್ವೇಗವಾಗುವಂತೆ ಎಷ್ಟೋ ಜನರು ಮಾತನಾಡಿದರು. ಇದು ನಿಜವಾಗಿಯೂ ಶೋಚನೀಯವಾದುದು. ಈ ಬಗೆಯ ಭಾಷಣಗಳಿಂದ ಶಾಂತತಾಭಂಗವಾಗುವ ಪ್ರಸಂಗಗಳೇನಾದರೂ ಉದ್ಭವಿಸಿದರೆ ಅದಕ್ಕೆ ಬ್ಯಾ. ಜಿನ್ನಾ ವೊದಲಾದ ಲೀಗಿನ ಮುಂದಾಳುಗಳೇ ಕಾರಣರಾಗುವರು. ದೇಶದಲ್ಲಿ ಅನೇಕ ಜಾತಿಗಳು ನೆಲೆಸಿವೆ. ಅವು ಸಹೋದರರಂತೆ ಪರಸ್ಪರ ಪ್ರೇಮದಿಂದಿದ್ದು ತಾಯಿನಾಡಿನ ಏಳ್ಗೆಗಾಗಿ ದುಡಿಯಬೇಕಾಗಿದೆಯೆಂಬುದನ್ನು ನಾವು ಮರೆಯಬಾರದು. ಆದುದರಿಂದ ಈ ಸಂಬಂಧವನ್ನು ಭಂಗಮಾಡಲೆಳಸಿದವರು ವಿಶೇಷ ದೂಷಣೆಗೆ ಪಾತ್ರರಾಗದೆ ಇರಲಾರದು."

## ಪ್ಯಾಲಿಸ್ಟಾಯಿನ್ ಬಗ್ಗೆ ಮುಸ್ಲಿಂ ಕಾಂಗ್ರೆಸ್ಸಿನ ಎಚ್ಚರಿಕೆ.

ಕೈರೋದಲ್ಲಿ ಸೇರಿದ ಮುಸ್ಲಿಂ ಪಾರ್ಲಮೆಂಟರಿ ಮಹಾ ಪರಿಷತ್ತಿನಲ್ಲಿ ಪ್ಯಾಲಿಸ್ಟಾಯಿನ್ ಸಮಸ್ಯೆಯನ್ನು ಸೂಕ್ಷ್ಮವಾಗಿ ವಿಚಾರಿಸಿ ಈ ಕೆಳಗಿನ ಗೊತ್ತುವಳಿಗಳನ್ನು ಸ್ವೀಕರಿಸಲಾಯಿತು.

(೧) ಯಹೂದಿ ಜನಗಳಿಗೆ ಪ್ಯಾಲಿಸ್ಟಾಯಿನ್‌ದಲ್ಲಿ ವಸತಿ ಮಾಡಿಕೊಡಲಾಗುವಂತೆ ಮಿ. ಬಾಲ್ಫರರವರು ಬ್ರಿಟಿಷ್ ಸರಕಾರದ ಪರವಾಗಿ ಕೊಟ್ಟಿರುವ ವಚನವನ್ನು ಕೂಡಲೇ ಹಿಂದಕ್ಕೆ ತೆಗೆದುಕೊಳ್ಳಬೇಕೆಂದು ಈ ಕಾಂಗ್ರೆಸ್ ಅಭಿಪ್ರಾಯಪಡುತ್ತಿದೆ.

(೨) ಪ್ಯಾಲಿಸ್ಟಾಯಿನ್‌ದಲ್ಲಿ ಯಹೂದಿಗಳನ್ನು ಬಿಡುವದನ್ನು ಕೂಡಲೇ ನಿಲ್ಲಿಸಬೇಕು. (೩) ಪ್ಯಾಲಿಸ್ಟಾಯಿನ್ನಿನ ವಿಭಜನೆಯನ್ನು ಈ ಕಾಂಗ್ರೆಸ್ಸು ಒಪ್ಪುವುದಿಲ್ಲ. (೪) ಪ್ಯಾಲಿಸ್ಟಾಯಿನ್‌ದಲ್ಲಿ ನ್ಯಾಯಬದ್ಧ ಸರಕಾರವನ್ನು ಸ್ಥಾಪಿಸಬೇಕು. (೫) ಅರಬ್-ಬ್ರಿಟನ್ ಒಪ್ಪಂದವಾಗಬೇಕು. (೬) ಎಲ್ಲ ರಾಜಕೀಯ ಕೈದಿಗಳನ್ನು ಬಿಟ್ಟುಬಿಡಬೇಕು.

ಈ ಪ್ರಕಾರ ಮಾಡುವುದೇ ಈ ಸಮಸ್ಯೆಯನ್ನು ಬಿಡಿಸುವ ಯೋಗ್ಯ ಉಪಾಯವೆಂದು ಸಲಹೆ ಕೊಡಲಾಗಿದೆ. ಈ ಪ್ರಕಾರ ಮಾಡದೆ ಹೋದರೆ ಅರಬ ಜನಾಂಗವೇ ಬ್ರಿಟಿಷ್‌ರನ್ನೂ ಯಹೂದಿಗಳನ್ನೂ ತಮ್ಮ ವೈರಿಗಳೆಂದು ತಿಳಿಯುವದೆಂದು ಎಚ್ಚರಿಕೆ ಕೊಡಲಾಗಿದೆ. ಎಲ್ಲಾ ಅರಬ ಸ್ವತಂತ್ರ ಸರಕಾರಗಳೂ ಈ ನಿರ್ಧಾರಕ್ಕೆ ಸಂಪೂರ್ಣ ಒಪ್ಪಿಗೆ ಕೊಟ್ಟಿವೆಯೆಂದು ತಿಳಿಸಲಾಗಿದೆ. ಪ್ಯಾಲೆಸ್ಟಾಯಿನ್ ಪರಿಸ್ಥಿತಿಯನ್ನು ನಿರೀಕ್ಷಿಸಲು ಒಂದು ಸಮಿತಿಯನ್ನು ಕೈರೋ ಮಹಾನಗರದಲ್ಲಿ ನಿಯಮಿಸಲಾಗಿದೆ.

---

—ಅಲೀಗಡದಲ್ಲಿ ತಾ. ೯-೧೦-೩೮ ನೆಯ ದಿವಸ ಮುಸಲ್ಮಾನರು ಒಂದು ಹಬ್ಬದ ನಿಮಿತ್ತವಾಗಿ ಮದ್ದನ್ನು ಹಾರಿಸುವುದಕ್ಕೆ ಹಿಂದು ಅಂಗಡಿಕಾರರು ಅಡ್ಡಿ ಮಾಡಿದ್ದರಿಂದ ದಂಗೆಯಾಗಿ ೧೧ ಜನಗಳಿಗೆ ಗಾಯಗಳಾಗಿವೆ.

—ಜಮಿಯತ-ಉಲ್-ಮುಸಲಿಮೀನ್ ಸೊಸಾಯಿಟಿಯ ಪರವಾಗಿ ಮುಸಲ್ಮಾನರ ಸಲುವಾಗಿ ಲಂಡನ್ನಿನಲ್ಲಿ ಒಂದು ಮಸೀದೆಯನ್ನು ಕೂಡಲೇ ಕಟ್ಟುವವರಿದ್ದಾರೆ.

—ಸುಪ್ರಸಿದ್ಧ ಕ್ರಿಕೆಟ್ ಪಟುಗಳಾದ ಲಾರ್ಡ ಹಾಕ್‌ರವರು ತಮ್ಮ ೭೮ ನೆಯ ವಯಸ್ಸಿನಲ್ಲಿ ಮರಣಹೊಂದಿದರು.

ಶರಣ ಸಂದೇಶ



ತಾ. ಶ. ೧೮೬೦ ನೆಯ ಅಶ್ವೀನ ಬ|| ೯ ಸೋಮವಾರ.

## ಹಿಂದುಸ್ಥಾನದಲ್ಲಿ ಝೆಕೊಸ್ಲೋವ್ಹಾಕಿಯಾ!

ಕರಾಚಿಯಲ್ಲಿ ಕಳೆದ ವಾರ ಅಖಿಲ ಭಾರತ ಮುಸ್ಲಿಂಲೀಗಿನ ಸಿಂಧ ಪ್ರಾಂತಿಕ ಪರಿಷತ್ತು ಬ್ಯಾ. ಜಿನ್ನಾರವರ ಅಧ್ಯಕ್ಷತೆಯಲ್ಲಿ ಕೂಡಿದ್ದಿತಷ್ಟೆ. ಆ ಪರಿಷತ್ತಿನಲ್ಲಾದ ಠರಾವು ಮತ್ತು ಪ್ರಮುಖರ ಭಾಷಣಗಳ ಮೇಲಿಂದ ಹಿಂದುಗಳು ಈಗಲಾದರೂ ಎಚ್ಚರಿಯುವುದು ಅಗತ್ಯ. ರಾಜಕಾರಣದಲ್ಲಿ ಸೇರಿರುವ ಹಿಂದುಗಳು ಹಿಂದುಸ್ಥಾನಕ್ಕೆ ಉಂಟಾಗಬಹುದಾದ ಮುಂದಣ ವಿಪತ್ತಿನ ಕಡೆಗೆ ಈಗಲಾದರೂ ಲಕ್ಷಿಸುವುದು ಕ್ಷೇಮಕರ. ಈಗಿನ ಹಿಂದುಸ್ಥಾನವು ಅಖಂಡವಾದುದಾಗಿಯೇ ಇದ್ದು ಇದು ಹಿಂದುಗಳಿಗೆ ನಿಜವಾದ ಸುಖಸ್ವಾತಂತ್ರ್ಯಗಳನ್ನು ಅನುಭವಿಸುವ ಪುಣ್ಯ ಭೂಮಿಯಾಗಿಯೇ ಇರಬೇಕೆಂದು ಯಾವ ರಾಷ್ಟ್ರೀಯರು ಅಪೇಕ್ಷಿಸುತ್ತಿದ್ದಾರೆಯೋ ಅವರು ಮುಸ್ಲಿಂಲೀಗಿನ ಕಾರ್ಯಕಲಾಪಗಳನ್ನು ಈಗಲಾದರೂ ನೋಡಿ ಜಾಗ್ರತರಾಗಿ ತಮ್ಮ ಕಾರ್ಯ ಪದ್ಧತಿಯನ್ನು ಗೊತ್ತುಮಾಡಿಕೊಳ್ಳುವುದು ವಿಹಿತವಾಗಿದೆ.

ಹಿಂದುಸ್ಥಾನದಲ್ಲಿಯೇ ಒಂದು ಪಾಕಿಸ್ಥಾನವನ್ನು ಏರ್ಪಡಿಸಬೇಕೆಂದು ಮುಸ್ಲಿಂಲೀಗಿನವರು ಪ್ರಯತ್ನಿಸುತ್ತಿದ್ದಾರೆಂದು ನಾವು ಅನೇಕ ಸಾರೆ ಹೇಳಿದ್ದೇವೆ. ಈ ಸಂಬಂಧವಾದ ಇವರ ಉದ್ದೇಶವು ಕರಾಚಿ ಪರಿಷತ್ತಿನಲ್ಲಿ ಜರುಗುವ ಕಾರ್ಯಕಲಾಪಗಳ ಮೇಲಿಂದ ಎಷ್ಟೋ ಮಟ್ಟಿಗೆ ಬೆಳಕಿಗೆ ಬರುವುದೆಂದೂ ನಾವು ಕಳೆದ ವಾರ ತಿಳಿಸಿದ್ದೆವು. ಅದಕಾರಣ ಮುಸ್ಲಿಂಲೀಗಿನ ಕರಾಚಿ ಪರಿಷತ್ತಿನಲ್ಲಾದ ಠರಾವು ಮತ್ತು ಭಾಷಣಗಳನ್ನು ಕುರಿತು ನಾವು ಈಗ ವಿವರವಾಗಿಯೇ ಪ್ರಸ್ತಾಪಿಸಿದ್ದೇವೆ.

### ಒಂದು ರಾಷ್ಟ್ರದಲ್ಲಿ ಎರಡು ಫೆಡರೇಶನ್.

ಸಿಂಧ, ಪಂಜಾಬು, ಗಡಿನಾಡು ಮತ್ತು ಬಂಗಾಲ ಈ ಪ್ರಾಂತಗಳಲ್ಲಿ ಮುಸಲ್ಮಾನರ ಸಂಖ್ಯಾಧಿಕ್ಯವಿರುವುದರಿಂದ ಇವುಗಳೆಲ್ಲ ಸೇರಿ ಒಂದು ಪ್ರತ್ಯೇಕವಾದ ಮುಸ್ಲಿಂರಾಜ್ಯವಾಗಬೇಕೆಂಬುದೇ ಮುಸ್ಲಿಂಲೀಗಿನ ಮುಖ್ಯೋದ್ದೇಶವು. ಈ ಪರಿಷತ್ತಿನಲ್ಲಿ ಪಾಕಿಸ್ಥಾನದ ಆ ಉದ್ದೇಶವನ್ನು ಸ್ಪಷ್ಟ ಶಬ್ದಗಳಲ್ಲಿಡದೆ ಹಿಂದುಸ್ಥಾನದಲ್ಲಿ ಒಂದು ಮುಸ್ಲಿಂ ಫೆಡರೇಶನ್ ಮತ್ತು ಒಂದು ಹಿಂದು ಫೆಡರೇಶನ್ ಏರ್ಪಡಬೇಕೆಂದು ಸೂಚಿಸಿದ್ದಾಯಿತು. ಝೆಕೊಸ್ಲೋವ್ಹಾಕಿಯಾ ದೇಶವನ್ನು ಸುಡೆಟಾನ್ ಜರ್ಮನ್ ಮತ್ತು ಝೆಕ್ ಜನರಿಗಾಗಿ ಹೇಗೆ ವಿಭಾಗಿಸಲ್ಪಟ್ಟಿತೋ ಹಾಗೆಯೇ ಹಿಂದುಸ್ಥಾನವನ್ನು ಹಿಂದು ಮತ್ತು ಮುಸಲ್ಮಾನರಿಗಾಗಿ ವಿಭಾಗಿಸಬೇಕೆಂಬುದೇ ಈ ಎರಡು ಫೆಡರೇಶನ್‌ಗಳ ವಿಚಾರಸರಣಿಯು ಹೇಳುತ್ತದಲ್ಲವೆ?

### ಹಿಂದುಗಳಿಗೆ ಎಚ್ಚರಿಕೆ.

ಕರಾಚಿಯಲ್ಲಿ ಸೇರಿದ ಮುಸ್ಲಿಂ ಪರಿಷತ್ತಿನ ಸ್ವಾಗತಾಧ್ಯಕ್ಷರಾದ ಸರ್. ಅಬ್ದುಲ್ ಹರೂನ ಇವರು ತಮ್ಮ ಭಾಷಣದಲ್ಲಿ ಹೀಗೆ ಸ್ಪಷ್ಟ ತಿಳಿಸಿದರು—

> "ಹಿಂದುಸ್ಥಾನದಲ್ಲಿಯ ಬಹುಸಂಖ್ಯಾಕರಾದ ಹಿಂದುಗಳು ಅಲ್ಪಸಂಖ್ಯಾಕರಾದ ಮುಸಲ್ಮಾನರ ಆಶೆ ಆಕಾಂಕ್ಷೆಗಳನ್ನು ನೆರವೇರಿಸದಿದ್ದರೆ ಹಿಂದುಸ್ಥಾನದಲ್ಲಿ ಝೆಕೋಸ್ಲೊವ್ಹಾಕಿಯಾ ನಿರ್ಮಾಣವಾದೀತೆಂದು ಅವರು ತಿಳಿದಿರಲಿ."

ಮುಸ್ಲಿಂಲೀಗಿನ ಹೊಣೆಗಾರಿಕೆಯು ಇಂಥ ಪ್ರಮುಖರು ಹೀಗೆ ಹೇಳಿದುದರಮೇಲಿಂದಲಾದರೂ ಮುಸ್ಲಿಂಲೀಗಿನ ಉದ್ದೇಶವೇನೆಂಬುದನ್ನು ನಮ್ಮ ರಾಜಕಾರಣ ಪ್ರವೀಣರು ಅರಿತುಕೊಳ್ಳಬಾರದೆ? ಹಿಂದುಗಳು ಈಗಲಾದರೂ ಜಾಗ್ರತರಾಗಿ ತಮ್ಮ ಪವಿತ್ರ ಭೂಮಿಯು ವಿಭಾಗಿಸಲ್ಪಡದಂತಹ ಅಭೇದ್ಯವಾದ ಸಂಘಟನೆಯನ್ನು ಹೊಂದುವುದು ಅಗತ್ಯವಾಗಿಲ್ಲವೆ?

### ಕಾಂಗ್ರೆಸ್ಸಿಗೂ ಎಚ್ಚರಿಕೆ.

ಮುಸ್ಲಿಂಪರಿಷತ್ತಿನ ಅಧ್ಯಕ್ಷರಾದ ಬ್ಯಾ. ಜಿನ್ನಾರವರು ಕೂಡಾ ತಮ್ಮ ಭಾಷಣದಲ್ಲಿ ಇದೇ ಗರ್ವೋಕ್ತಿಯನ್ನು ವ್ಯಕ್ತಗೊಳಿಸಿ ಕಾಂಗ್ರೆಸ್ಸಿಗೆ ಎಚ್ಚರಿಕೆಯನ್ನು ಕೊಟ್ಟಿದ್ದಾರೆ. ಬ್ಯಾ. ಜಿನ್ನಾರವರು ಹೀಗೆ ತಿಳಿಸಿದರು—

> "ಕಾಂಗ್ರೆಸ್ಸು ಮುಸ್ಲಿಂ ಲೀಗಿನ ಇಷ್ಟವನ್ನು ಮಾನ್ಯ ಮಾಡದಿದ್ದರೆ ಝೆಕೋಸ್ಲೊವ್ಹಾಕಿಯಾ ತುಂಡು ತುಂಡು ಆದಂತೆ ಹಿಂದುಸ್ಥಾನವೂ ವಿಭಾಗಿಸಲ್ಪಡುವ ಸಮಯ ಬರಬಹುದೆಂಬುದನ್ನು ತಿಳಿದಿರಲಿ."

ಮುಸ್ಲಿಂಲೀಗಿನ ಮುಖಂಡರು ಝೆಕೊಸ್ಲೋವ್ಹಾಕಿಯಾ ರಾಷ್ಟ್ರದ ಸ್ಥಿತಿಯನ್ನು ನೋಡಿ ಬಹು ಹುರುಪುಗೊಂಡಿದ್ದಾರೆ. ಅವರ ಅಂತರ್ಯೋಜನೆಯು ಉಕ್ಕೇರಿ ಹೊರಗೆ ಬರಲಾರಂಭವಾಗಿದೆ. ಇವರಿಗೆ ಈಗ ಬೇಕಾದವರು ಒಬ್ಬ ಹಿಟ್ಲರ! ಅಫಗಾನಿಸ್ಥಾನದಲ್ಲಿ ಒಬ್ಬ ಹಿಟ್ಲರ ಉದಯವಾದರೆ ಇಂದೇ ಇವರು ಸುಡೆಟಾನ್ ಜರ್ಮನರಾಗುವರು! ಹಿಂದುಸ್ಥಾನದಲ್ಲಿ ಝೆಕೊಸ್ಲೋವ್ಹಾಕಿಯಾ ನಿರ್ಮಾಣಮಾಡುವರು! ಬ್ಯಾ. ಜಿನ್ನಾರಂತಹ ಪ್ರಸಿದ್ಧ ರಾಜಕಾರಣ ಪಟುಗಳೇ ಈ ರೀತಿಯಾಗಿ ಹೇಳುತ್ತಿದ್ದಾರೆಂದ ಮೇಲೆ ಈ ವಿಚಾರಸರಣಿಯ ಮೂಲವು ಎಲ್ಲಿಯ ವರೆಗೆ ಹೋಗಿರಬಹುದೆಂಬುದನ್ನು ಯೋಚಿಸಬಾರದೆ?

### ಹಿಂದುಗಳು ಗುಲಾಮಗಿರಿಯಲ್ಲಿ ಬೆಳೆದವರು.

ಮುಸ್ಲಿಂಲೀಗಿನಲ್ಲಿ ನಡೆದ ಭಾಷಣಗಳನ್ನು ನೋಡಿದರೆ ಸ್ವಾಭಿಮಾನವುಳ್ಳ ಯಾವ ಹಿಂದುವಾದರೂ ತನ್ನ ಮಂದತ್ವವನ್ನು ಬಿಟ್ಟು ಜಾಗ್ರತನಾಗದಿರಲಾರನು. ರಾಷ್ಟ್ರೀಯ ಭಾವನೆಯುಳ್ಳ

ಯಾವ ಹಿಂದುವಾದರೂ ಮುಸ್ಲಿಂಲೀಗಿನವರಲ್ಲಿ ಬೆಳೆಯುತ್ತಿರುವ ಜಾತ್ಯಂಧತೆಯು ಭಯಂಕರವಾದ ಅನರ್ಥದ ಕಡೆಗೆ ಲಕ್ಷಿಸದೆ ಇರಲಾರನು. ಈ ಪರಿಷತ್ತಿನಲ್ಲಿ ಮಿ. ಜಮಾಲಮಿಯಾ ಎಂಬುವವರು ಹೀಗೆ ಹೇಳಿದರು—

"ಕಾಂಗ್ರೆಸ್ಸಿನ ಹಿಂದುಗಳು ಗುಲಾಮಗಿರಿಯಲ್ಲಿಯೇ ಬೆಳೆದವರಾಗಿದ್ದಾರೆ. ಅವರಿಗೆ ಸ್ವಾತಂತ್ರ್ಯದ ಪಾಠವನ್ನು ನಾವೇ ಕಲಿಸಬೇಕಾಗಿದೆ."

ಹಿಂದುಗಳ ಸಂಬಂಧವಾಗಿ ಮುಸಲ್ಮಾನರಲ್ಲಿ ಉಂಟುಮಾಡುತ್ತಿರುವ ಇಂಥ ದುಷ್ಟ ಭಾವನೆಗಳ ಪರಿಣಾಮವು ಹೇಗಾಗಬಹುದೆಂಬುದನ್ನು ಕಾಂಗ್ರೆಸ್ಸಿನವರು ಈಗಲಾದರೂ ಯೋಚಿಸಬಾರದೆ? ಬ್ರಿಟಿಶ್ ಮಂತ್ರಿಮಂಡಲವು ಅನುಸರಿಸಿದ ಹೇಡಿತನದ ಧೋರಣದಿಂದಲೇ ಹಿಟ್ಲರನಿಗೆ ಇಂಥ ಶಕ್ತಿ ಬಂದು ಝೆಕ್ ರಾಜ್ಯ ಆತನಿಗೆ ಆಹುತಿಯಾಯಿತೆಂದು ಚೆಂಬರಲೆನ್‌ರನ್ನು ಆಕ್ಷೇಪಿಸುತ್ತಿರುವ ರಾಷ್ಟ್ರವೀರರು ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಕಡೆಗೆ ನೋಡುವರೆ? ಜಾತಿನಿರ್ಣಯದ ವಿಷಯದಲ್ಲಿ ಅದು ಅನುಸರಿಸಿದ ಘಾತಕವಾದ ಧೋರಣದಿಂದಲೇ ಮುಸ್ಲಿಂಲೀಗ್ ಇಷ್ಟು ಮೇರೆ ದಪ್ಪಿ ಮಾತಾಡುತ್ತದೆಂದು ಇವರು ವರ್ಕಿಂಗ್ ಕಮಿಟಿಯನ್ನು ಆಕ್ಷೇಪಿಸುವರೆ?

**ಹಿಂದುಸ್ಥಾನವನ್ನು ನಾವು ಗೆಲ್ಲುವೆವು.**

ಬಂಗಾಲದ ಮುಖ್ಯ ಮಂತ್ರಿಗಳಾದ ಮಿ. ಹಕ್ಕರವರು ಆ ಪರಿಷತ್ತಿನಲ್ಲಿ ಹೇಳಿದ ಈ ಕೆಳಗಿನ ಗರ್ವೋಕ್ತಿಯಂತೂ ಹಿಟ್ಲರನ ಹೆಮ್ಮೆಯನ್ನೂ ಮೀರಿಸುವುದು. ಇವರು ಬಂಗಾಲ ಪ್ರಾಂತವನ್ನು ಹೇಗೆ ಆಳುತ್ತಿರಬಹುದೆಂಬುದನ್ನು ಬೇರೆ ಹೇಳಬೇಕಾದುದೇ ಇಲ್ಲ. ಇವರ ಗರ್ವೋಕ್ತಿ ಹೀಗಿದೆ—

"ಮಹಮ್ಮದ ಕಾಶೀಮನೆಂಬ ಒಬ್ಬ ತರುಣನು ೧೮ ಸಾವಿರ ಸೈನ್ಯ ತೆಗೆದುಕೊಂಡು ಬಂದು ಸಿಂಧ ಪ್ರಾಂತವನ್ನು ಗೆದ್ದುಕೊಂಡನು. ಎಂದ ಮೇಲೆ ೯ ಕೋಟಿ ಮುಸಲ್ಮಾನರಾದ ನಾವು ಹಿಂದುಸ್ಥಾನವನ್ನು ಗೆಲ್ಲಲಾರೆವೆ?"

ಹಿಂದುಗಳು ಸುಸಂಘಟಿತರಾಗಿ ತಮ್ಮ ರಾಷ್ಟ್ರದ ಸ್ವಾತಂತ್ರ್ಯಕ್ಕೆ ತಾವೇ ಹೋರಾಡಲು ಸಿದ್ಧರಾಗಬೇಕಾದುದೇ ಈ ಗರ್ವೋಕ್ತಿಗೆ ಸರಿಯಾದ ಉತ್ತರ. ಹಿಂದುಗಳ ಈಗಿನ ವಿಘಟನೆಯೇ ಉಳಿದರೆ ಮುಸ್ಲಿಂಲೀಗಿನ ಇಂದಿನ ಹಿಂದುಸ್ಥಾನದಲ್ಲಿಯ ಝುಕೋಸ್ಲೋವ್ಹಾಕಿಯಾದ ಕಲ್ಪನೆಯು ಮುಂದೆ ಕೃತಿಯಲ್ಲಿಯೇ ಬರದೆ ಇರಲಾರದು.

---

—ಕಾಂಗ್ರೆಸ್ಸಿನ ಮೇಲಿನ ಅಧಿಕಾರಿಗಳು ಸರಹದ್ದ ಪ್ರಾಂತದ ವಿನಾ ಉಳಿದ ಎಲ್ಲ ಪ್ರಾಂತಗಳ ಕಾಂಗ್ರೆಸ್ ಮಂತ್ರಿಮಂಡಲಗಳಲ್ಲಿ ಒಬ್ಬೊಬ್ಬ ಆದಿಜನ ಮಂತ್ರಿಗಳನ್ನು ನಿಯಮಿಸಿಕೊಳ್ಳಲು ಎಲ್ಲ ಮಂತ್ರಿಮಂಡಳದವರಿಗೂ ತಿಳಿಸಿದ್ದಾರೆಂದು ಸುದ್ದಿಯಿದೆ. ಹೀಗಾದರೆ ಮುಂಬೈ ಮಂತ್ರಿಮಂಡಳದಲ್ಲಿ ಡಾ. ಆಂಬೇಡಕರರು ಮಂತ್ರಿಗಳಾಗುವ ಸಂಭವವಿದೆ.

—ಜತ್ತ ಸಂಸ್ಥಾನದ ಅಧಿಪತಿಗಳು ಕಳೆದ ೧೨ ನೆಯ ತಾರೀಖಿನ ದಿವಸ ಹಿಂದು ಲೋಕ ಪ್ರತಿನಿಧಿಗಳ ಸಭೆ ಸೇರಿಸಿ ಪ್ರಜೆಗಳಿಗೆ ಅನೇಕ ಸವಲತ್ತುಗಳನ್ನು ಕೊಟ್ಟಿದ್ದಾರೆ.

—ಭಾರತದ ಉಪಮಂತ್ರಿಗಳಾದ ಕರ್ನಲ್‌ಮೂರ ಹೆಡ್ಡರು ಕಳೆದ ವಾರ ಹಿಂದುಸ್ಥಾನಕ್ಕೆ ಬಂದರು. ಅವರು ಸರಹದ್ದ ಪ್ರಾಂತದಲ್ಲಿ ಮಹಾತ್ಮಾ ಗಾಂಧಿಯವರನ್ನು ಕಾಣುವವರಿದ್ದಾರೆ.

# ಮಹರಾಷ್ಟ್ರದ ಹಿಂದುಗಳ ಜಾಗ್ರತಿ.

ಹಿಂದು ಜಾತಿಯ ಮೇಲೆ ಅನೇಕ ಮುಸಲ್ಮಾನ್ ಮತ್ತು ಕ್ರಿಸ್ತರ ಆಕ್ರಮಣವು ಬಹು ಕಡೆ ನಡೆದಿದೆಯಷ್ಟೆ. ಮುಸಲ್ಮಾನರು ಸಂಘಟಿತರಾಗಿಯೇ ನಡೆಸಿರುವ ಆಕ್ರಮಣವನ್ನು ತಡೆಯಲು ಹಿಂದುಗಳು ಈಗ ಸಂಘಟಿತರಾಗಿ ಪ್ರಯತ್ನಿಸಬೇಕಾದುದು ಅತ್ಯಗತ್ಯವಾಗಿದೆ. ಮಹರಾಷ್ಟ್ರ ದೇಶವು ಹಿಂದಕ್ಕೆ ಮುಸಲ್ಮಾನರ ಆಕ್ರಮಣವನ್ನು ತಡೆದುದಾಗಿದೆಯಲ್ಲವೆ? ಅಂತೆಯೇ ಅದರಲ್ಲಿ ಎಷ್ಟೋ ಮಟ್ಟಿಗೆ ಹಿಂದುತ್ವದ ಅದರಾಭಿಮಾನಿಗಳು ಇನ್ನೂ ಜಾಗೃತವಾಗಿಯೇ ಇವೆ. ಅದಕ್ಕೋಸ್ಕರ ಮುಸಲ್ಮಾನರ ಅನ್ಯಾಯದ ಆಕ್ರಮಣಗಳನ್ನು ತಡೆಯಲು ಮಹರಾಷ್ಟ್ರದ ಹಿಂದುಗಳು ಜಾಗೃತರಾಗಿ ಸಂಘಟಿತರಾಗಲಾರಂಭಿಸಿದ್ದಾರೆ.

ಪೂರ್ವ ಮಹರಾಷ್ಟ್ರ ಭಾಗದ ಹಿಂದು ಮಹಾಸಭೆಯು ನಾಂದಗಾಂವ ಎಂಬಲ್ಲಿ ಸೊಲ್ಲಾಪುರದ ಪ್ರಸಿದ್ಧ ಹಿಂದು ಮುಂದಾಳುಗಳಾದ ಶ್ರೀ. ಶೇಟಗುಲಾಬಚಂದರವರ ಅಧ್ಯಕ್ಷತೆಯಲ್ಲಿ ಜರುಗುವುದಿದೆ. ಲೋಣಾವಳದಲ್ಲಿ ಪುಣೆ ಜಿಲ್ಲಾ ಹಿಂದು ಮಹಾಸಭೆ ಕೂಡುವುದಿದೆ. ಸಾತಾರೆಯಲ್ಲಿ ದಕ್ಷಿಣ ಮಹಾರಾಷ್ಟ್ರ ಹಿಂದು ಮಹಾಸಭೆ ಸೇರತಕ್ಕದ್ದೆಂದು ಗೊತ್ತಾಗಿದೆ. ಹೀಗೆ ಮಹರಾಷ್ಟ್ರದ ಹಿಂದುಗಳು ಜಾಗೃತರಾದುದು ಅಭಿನಂದನೀಯವು. ಕರ್ನಾಟಕದ ಹಿಂದುಗಳೆಂದು ಎಚ್ಚರಿಯುವರು?

---

# ಅರಳದ ಮುನ್ನ

## ಮೊಗ್ಗೆಯನರ್ಪಿಸಿಕೊಂಡ ಶಿವನು.

ಗದಗಿನ ಪ್ರಸಿದ್ಧ ಡಾಕ್ಟರರಾದ ಡಿ. ವಿ. ಕೊಲೊಳಗಿ ಇವರ ಜ್ಯೇಷ್ಠ ಪುತ್ರರಾದ ಸಿದ್ಧರಾಯಪ್ಪ ಇವರು ತಾ. ೬-೧೦-೩೮ ನೇ ದಿನ ಮುಂಬೈ ಮೆಡಿಕಲ್ ಕಾಲೇಜಿನಲ್ಲಿ ವಿಷಮಜ್ವರದಿಂದ ತಮ್ಮ ೨೩ ನೇ ವಯಸ್ಸಿನಲ್ಲಿ ಲಿಂಗೈಕ್ಯರಾದರೆಂದು ತಿಳಿಸಲು ಅತ್ಯಂತ ದುಃಖವಾಗುತ್ತದೆ. ಇವರು ಇನ್ನೊಂದು ವರ್ಷೊಪ್ಪತ್ತಿನಲ್ಲಿ ಎಂ. ಬಿ. ಬಿ. ಎಸ್. ಪಾಸಾಗಿ ಡಾಕ್ಟರರಾಗಿ ಬರುವವರಿದ್ದರು. ಇವರು ವಿದ್ಯೆಯಿಂದ, ಬುದ್ಧಿಯಿಂದ, ಗುಣದಿಂದ ಎಲ್ಲರ ಪ್ರೇಮಕ್ಕೆ ಪಾತ್ರರಾಗಿದ್ದರು. ಇಂಥ ಸುಕುಮಾರನನ್ನು ಅವರ ಮನೆಯವರಿಂದ ಅಗಲಿಸಿ ಅಕಾಲದಲ್ಲಿ ತನ್ನಲ್ಲಡಗಿಸಿಕೊಂಡ ನಿಷ್ಕರುಣಿ ಶಿವನು.

ಈ ಆಘಾತದಿಂದ ಇವರ ಸ್ನೇಹಿತರಿಗೆ ಬಂಧು ಬಾಂಧವರಿಗೆ ಅಪಾರ ದುಃಖವಾಗಿರುವಾಗ ಅವರ ಮನೆಯವರಿಗದೆಷ್ಟಾಗಿರಬೇಡ! ಆದರೂ ತಿಳಿದವರಾದ ಅವರ ಮನೆಯವರು ಸೃಷ್ಟಿಯ ನಿಯಮದ ಕಡೆಗೆ ಲಕ್ಷಗೊಟ್ಟು ಅದಷ್ಟು ಧೈರ್ಯ ತಂದುಕೊಳ್ಳುವರೆಂದು ನಂಬಿರುವೆವು.

—ಓರ್ವ ಸಮದುಃಖಿ.

---

—ಪ್ಯಾಲಿಸ್ಟಾಯಿನ್ನದ ಜೆರೂಸಲೇಮದ ರಾಮಲ್ಲಾದ ಹತ್ತಿರ ಅಕ್ಟೋಬರ್ ಪ್ರಾರಂಭದಲ್ಲಿ ಬ್ರಿಟಿಶ್ ಪೋಲೀಸ್ ಇನ್ಸ್ಪೆಕ್ಟರ್‌ರನ್ನು ಕೊಲೆಮಾಡಿದುದಕ್ಕಾಗಿ ನ್ಯಾಯಾಧೀಶರು ೩ ಜನ ಅರಬರಿಗೆ ಮರಣ ದಂಡನೆ ಶಿಕ್ಷೆ ವಿಧಿಸಿದ್ದಾರೆ.

—ಮುಂಬೈ ಸರಕಾರವು ಒಂದು ಪ್ರಕಟನೆ ಹೊರಡಿಸಿ ದೇವನಾಗರಿ ಅಥವಾ ಉರ್ದುಲಿಪಿಯ ಹಿಂದುಸ್ಥಾನೀ ಭಾಷೆಯನ್ನು ಮುಂಬೈ ಪ್ರಾಂತದ ಒಂದು ಭಾಷೆಯೆಂದು ಮಾನ್ಯ ಮಾಡಿದೆ.

# ಕಾಂಗ್ರೆಸ್ಸಿನ ಮೇಲಾಧಿಕಾರಿಗಳು

## ಇತ್ತಕಡೆ ಲಕ್ಷಿಸುವರೆ?

ಇಲಕಲ್ಲ ನಗರಾಧ್ಯಕ್ಷ ಚುನಾವಣೆಯಲ್ಲಿ ಗೊಂದಲ.

## ಶ್ರೀ. ಕರಡಿ, ಕೋಡಿಹಾಳ, ಬಿಜ್ಜಲ

ಸಾಕಾ ಇವರ ಮೇಲೆ

## ಕಾಂಗ್ರೆಸ್ ಶಿಸ್ತುಭಂಗ ಆರೋಪ?

### ಜಿಲ್ಲಾ ಶಿಸ್ತಿಕ್ ಬೋರ್ಡಿನವರ ವಿಚಾರಣೆ

ಈ ಸಲ ಇಲ್ಲಿಯ ಮುನಸಿಪಾಲ್ಟಿ ಚುನಾವಣೆಯಲ್ಲಿ ಕಾಂಗ್ರೆಸ್ಸಿನವರು ಭಾಗವಹಿಸಬೇಕೆಂದು ಶಿಸ್ತಿಕ್ ಬೋರ್ಡಿನವರು ನಿರ್ಣಯಿಸಿದ್ದರು. ಎಲ್ಲ ಕಡೆಗೂ ಇರುವಂತೆ ಇಲ್ಲಿಯೂ ಪಾರ್ಟಿ ಪಂಗಡಗಳು ಇರುವುದು ಸ್ವಾಭಾವಿಕವಷ್ಟೆ! ಇಲ್ಲಿ ಪ್ರಮುಖ ಮೂರು ಪಾರ್ಟಿಗಳಿದ್ದು ಆ ಆ ಪಾರ್ಟಿಯ ಮುಖಂಡರಾದ ಶ್ರೀ. ಧೂಪದ ಶ್ರೀ. ಕಂಠಿ, ಶ್ರೀ. ಸಕ್ರಿ ಮೊದಲಾದವರಿಗೆ ಸರದಾರ ವೀರನಗೌಡರೂ ದೇಶಭಕ್ತ ಹಳ್ಳಿಕೇರಿಯವರೂ ದೇ. ಭ. ಕಳ್ಳಿ ಶಾಸ್ತ್ರಿಗಳೂ ಎಲ್ಲರಿಗೂ ಕಾಂಗ್ರೆಸ್ಸಿನ ತತ್ವಕ್ಕೆ ಅಂಟಕೊಂಡು ನಡೆಯಬೇಕಾಗಿ ಚೆನ್ನಾಗಿ ಹೇಳಿ ನಿರ್ಣಯ ಕೊಟ್ಟಿದ್ದರು. ಇಲೆಕ್ಶನ್ನಿನಲ್ಲಿ ಶ್ರೀ. ಧೂಪದ, ಶ್ರೀ. ಕಂಠಿಯವರ ೭ ಜನ ಶ್ರೀ. ಸಕ್ರಿಯವರ ೪ ಜನ ಬಂದು ೨೦ ಜಾಗೆಗಳಲ್ಲಿ ೧೧ ಜನ ಕಾಂಗ್ರೆಸ್ಸಿನವರು ಬಂದು ಕಾಂಗ್ರೆಸ್ಸಿನ ಬಹುಮತವಾದದ್ದು ವಾಚಕರಿಗೆ ಇಷ್ಟರಲ್ಲಿಯೇ ಗೊತ್ತಿರಲಿಕ್ಕೆ ಸಾಕು. ಮುಂದೆ ಪ್ರೆಸಿಡೆಂಟ ಇಲೆಕ್ಶನ್ನಿನಲ್ಲಿ ದೇಶ ಭಕ್ತ ಶಿವಶಂಕರಪ್ಪ ಸಕ್ರಿ ಬಿ. ಎ. ಕೆ. ಪಿ. ಸಿ. ಸಿ. ಮತ್ತು ಎ. ಆಯ್. ಸಿ. ಸಿ. ಮೆಂಬರರ ಆಗ್ರಹದಿಂದ ನಿಲ್ಲಿಸಿದ ನಾಲ್ಕು ಜನರು ಶ್ರೀ. ಮಾನಪ್ಪ ಕರಡಿ, ಶ್ರೀ. ಭೀಮಾಚಾರ್ಯ ಕೋಡಿಹಾಳ, ಶ್ರೀ. ಸಣ್ಣ ಅಮರಪ್ಪ ಬಿಜ್ಜಲ, ಶ್ರೀ. ವೆಂಕಪ್ಪ ಸಾಕಾ ಇವರು ಶಿಸ್ತಿಕ್ ಬೋರ್ಡಿನವರು ಕರೆದ ಪಾರ್ಟಿ ಮೀಟಿಂಗಿಗೆ ಬುದ್ಧ್ಯಾಪೂರ್ವಕ ಹಾಜರಾಗದೆ ಪಾರ್ಟಿ ಮೀಟಿಂಗಿನಲ್ಲಿ ಆದ ಠರಾವಿಗೆ ವಿರೋಧವಾಗಿ ಬೇರೆ ಸ್ವತಂತ್ರ ಪಕ್ಷದ ೭ ಜನರನ್ನು ಕೂಡಿಕೊಂಡು ಕರಡಿಯವರನ್ನು ಆರಿಸಿದರು.

ಈ ರೀತಿ ಕಾಂಗ್ರೆಸ್ ಶಿಸ್ತ ಭಂಗಮಾಡಿದ ಕಾರಣವೇನೆಂಬ ವಿಚಾರಣೆಗಾಗಿ ಸಿಸ್ತಿಕ್ ಬೋರ್ಡಿನ ಚೇರಮನ್ನರಾದ ವೇ. ಮರುಳಾರಾಧ್ಯ ಶಾಸ್ತ್ರಿಗಳೂ ದೇಶಭಕ್ತ ದುಭೆಯವರೂ ಬಂದು ಕೇಳಲಾಗಿ ಶಿಸ್ತುಭಂಗಮಾಡಿದ ನಾಲ್ಕು ಜನರು ಲೇಖಿಯಿಂದ ಆ ೭ ಜನರೇ ವಿರೋಧಿಸಿದರೆಂದೂ ಅವರ ಮೇಲೆಯೇ ಕ್ರಮ ತಕ್ಕೊಳ್ಳಬೇಕೆಂದೂ ತಿಳಿಸಿರುವರಂತೆ! ಇದಕ್ಕನ್ನಬೇಕು ರಾಜಕಾರಣ ನೀತಿ! ! ಬಹುಸಂಖ್ಯಾಕರೇ ಅಲ್ಪಸಂಖ್ಯಾಕರ ಬೆನ್ನು ಹತ್ತಬೇಕಂತೆ. ಇವರ ಬುದ್ಧಿ ಶಕ್ತಿಯನ್ನು ವಾಚಕರೇ ಊಹಿಸಲಿ. ಇಲೆಕ್ಶನ್ನಿಗೆ ಮೊದಲು ಕಾಂಗ್ರೆಸ್ ಶಿಸ್ತ ಪಾಲಿಸುತ್ತೇವೆ. ಶಿಸ್ತಿಕ್ ಬೋರ್ಡಿನ ಆಜ್ಞೆಯನ್ನು ಶಿರಸಾವಹಿಸಿ ಮನ್ನಿಸುತ್ತೇವೆ. ಎಂದು ಉದ್ದುದ್ದಾಗಿ ಜಾಹೀರಾತು ಹಂಚಿ ಪ್ರತಿಜ್ಞೆ ಪತ್ರ ಬರೆದುಕೊಟ್ಟು ಸಭೆಯಲ್ಲಿ ಕೂಗಿ ಕೂಗಿ ಹೇಳಿ ಪೇಪರಿನಲ್ಲಿ ಬ್ಲಾಕ್ ಕೊಟ್ಟು ಮತದಾರರನ್ನು ಮೋಸ ಮಾಡಿ ಹೋಟು ಹಾಕಿಸಿಕೊಂಡು ಇಂದು ತಮ್ಮ ಪಾರ್ಟಿ ಪಂಗಡದ ದುರಭಿಮಾನಕ್ಕೆ ಬಿದ್ದು ಪವಿತ್ರವಾದ ಕಾಂಗ್ರೆಸ್ಸಿನ ಹೆಸರು ಕೆಡಿಸುವದು ಎಂಥ ಕೆಲಸ? ಇದಕ್ಕೆ ಹೊಣೆಗಾರರಾರು? ನಿರ್ಣಯಿಸುವ ಕಾಲಕ್ಕೆ ಬಂದ ಮುಖಂಡರು ಈ ಬಗ್ಗೆ ವಿಚಾರಿಸುವರೊ? ... ಪಾರ್ಟಿ ಸಂಗಡನೇ ... ಬೇಕಾಗದರೆ ತಾವು ಕೂರ ... ಬಂಟರಾದರೆ ಈಗಲೇ ಕಾಂಗ್ರೆಸ್ ಹೆಸರಿನಿಂದ ಆರಿಸಿಬಂದುದಕ್ಕೆ ರಾಜಿನಾಮೆ ಕೊಟ್ಟು ಪುನಃ ಸ್ವತಂತ್ರವಾಗಿ ಆರಿಸಿಬಂದು ಬೇಕಾದಷ್ಟು ಕುಣಿದಾಡಲಿ ಕೇಳುವವರಾರು? ಈ ರೀತಿ ಗೋಡೆಯ ಮರೆಗೆ ನಿಂತು ಕಲ್ಲು ಒಗೆಯುವದೇಕೆ? ಕೆ. ಪಿ. ಸಿ. ಸಿ. ಯ ಮತ್ತು ಶಿಸ್ತಿಕ್ ಬೋರ್ಡಿನ ಮೇಲಾಧಿಕಾರಿಗಳೇ ಭಿಡೆ, ಮುರವತ್ತು ವಶೀಲಿಗೆ ಬೀಳದೆ ಇಂಥವರಿಗೆ ಯೋಗ್ಯ ಶಿಕ್ಷೆಯನ್ನು ಕೊಟ್ಟು ದಂಡಿಸಲೇ ಬೇಕು. -ಲಕ್ಷಿಸಿದಲ್ಲಿ ಈ ತರದ ಕಾಂಗ್ರೆಸ್ ದ್ರೋಹಿಗಳ ಸಂಖ್ಯೆ ಹೆಚ್ಚಲು ನೀವೇ ಕಾರಣರಾಗುವಿರಿ. ಈ ಬುದ್ಧಿಯನ್ನೇ ಇನ್ನು ಅನೇಕರು ಕಲಿತು ಕಾಂಗ್ರೆಸ್ಸಿನ ಹೆಸರನ್ನೇ ಅಳಿಸಿಬಿಟ್ಟಾರು. ಈಗಲೇ ಯೋಗ್ಯ ವಿಚಾರಣೆ ಮಾಡುವಿರಾ? ಇಲಕಲ್ಲ ಮತದಾರಬಂಧುಗಳೇ ಶಾಂತರಾಗಿರಿ. ಡಾ. ಖರೆ, ನರಿಮಾನರನ್ನೇ ಬಿಡದ ಕಾಂಗ್ರೆಸ್ಸು ಇಂಥವರನ್ನು ಸುಮ್ಮನೇ ಬಿಟ್ಟೀತೆ?

—ಓರ್ವ ಮತದಾರ.

---

ಮುಲ್ತಾನದಲ್ಲಿ

## ಹಿಂದು-ಮುಸ್ಲಿಂರಲ್ಲಿ ಬಡಿದಾಟ.

ಹಿಂದುಗಳು ಓರ್ವ ಮುಸ್ಲಿಂ ಸ್ತ್ರೀಯಳನ್ನು ಅಪಮಾನಗೊಳಿಸಿದರೆಂಬ ಸುದ್ದಿಯನ್ನು ನಂಬಿ ಮುಸಲ್ಮಾನರು ಮುಲ್ತಾನದಲ್ಲಿ ತಾ. ೧೩-೧೦-೩೯ ನೆಯ ದಿವಸ ದಂಗೆಮಾಡಿದರು. ಮುಸಲ್ಮಾನರು ಗುಂಪು ಗುಂಪಾಗಿ ಸೇರಿ ಒಂದು ಮೆರವಣಿಗೆಯನ್ನು ಹೊರಡಿಸಿದರು. ಕಾಂಗ್ರೆಸ್ ಭವನದ ವರೆಗೂ ಮೆರವಣಿಗೆಯಿಂದ ಸಾಗಿದನಂತರ ಕಾಂಗ್ರೆಸ್ ಭವನಕ್ಕೇನೇ ಬೆಂಕಿ ಇಟ್ಟು ಸುಟ್ಟುಬಿಟ್ಟರು. ಹಿಂದು ಡಾಕ್ಟರರೊಬ್ಬರ ಮನೆಯನ್ನು ಸಂಪೂರ್ಣ ಸುಟ್ಟುಬಿಟ್ಟರು. ಹರಿಚಂದಲಾಲ ಮತ್ತು ಕನ್ಯಾಲಾಲ ಗಾಂಧಿ ಇವರ ಮನೆಗಳನ್ನು ಸುಟ್ಟುಬಿಡಲಾಯಿತು. ಮುಸ್ಲಿಮರು ಹಿಂದುಗಳ ಅನೇಕ ಅಂಗಡಿಗಳನ್ನು ಸುಟ್ಟು ಅಪಾರವಾದ ನಷ್ಟಮಾಡಿದ್ದಾರೆ. ಶಾಂತತೆಯನ್ನು ಸ್ಥಾಪಿಸಲು ಸೈನಿಕರನ್ನು ಕರೆಯಿಸಿದ್ದಲ್ಲದೆ ೧೪೪ ಸೆಕ್ಸನ್ ನಡುವಳಿಕೆಯನ್ನು ತಂದಿದ್ದಾರೆ. ಈ ದಂಗೆಯು ಫಲವಾಗಿ ಈ ವರೆಗೆ ೩ ಜನರು ಸತ್ತಿರುವರಲ್ಲದೆ ಅನೇಕರಿಗೆ ಗಾಯಗಳಾಗಿವೆ.

---

## ಹಿಟ್ಲರನ ಭಾಷಣ.

ಕಳೆದ ವಾರ ಹಿಟ್ಲರನು ತನ್ನ ವಿಜಯಯಾತ್ರೆಯ ಸಂಬಂಧವಾಗಿ ಒಂದು ಭಾಷಣಮಾಡಿ ಈ ರೀತಿ ತಿಳಿಸಿದನು—

“ವರ್ಸೇಲ್ಸ ಒಪ್ಪಂದದಲ್ಲಿ ಅನುಸರಿಸಿದ ಧೋರಣವನ್ನು ಬ್ರಿಟನ್ ಬಿಟ್ಟುಬಿಡುವುದು ಹಿತ. ಬ್ರಿಟಿಶ್ ಮುತ್ಸದ್ದಿಗಳು ಹೀಗೆ ಮಾಡಿರಿ ಹಾಗೆ ಮಾಡಿರಿ ಎಂದು ಹೇಳಿದರೆ ನಾವು ಕೇಳಲಾರೆವು. ಕೆಲವು ರಾಷ್ಟ್ರಗಳಲ್ಲಿ ಶಾಂತತಾಪ್ರೇಮಿಗಳಾದ ಮುತ್ಸದ್ದಿಗಳು ತಳ್ಳಲ್ಪಟ್ಟು ಯುದ್ಧಪ್ರಿಯರಾದವರು ಆ ಸ್ಥಾನಗಳನ್ನು ಆಕ್ರಮಿಸಿಕೊಳ್ಳಬಹುದು. ಚೆಂಬರ್ಲೇನರ ಬದಲಾಗಿ ಈಡನ್ ಇಲ್ಲವೆ ಡಫ್ ಕೂಪರ್ ರು ಬಂದರೆ ಯುದ್ಧ ಹೂಡುವುದೇ ಅವರ ಉದ್ದೇಶವೆಂಬುದನ್ನು ನಾವು ಅರಿತಿರುವೆವು. ಈ ವರ್ಷ ಜರ್ಮನ್ ಐಕ್ಯದ ಮಹಾಕಾರ್ಯ ಸಿದ್ಧಿಸಿದಂತಾಯಿತು. ಇತ್ತೀಚೆಗೆ ನಾವು ಅದೃಷ್ಟಶಾಲಿಗಳಾಗಿರುವೆವು. ಒಬ್ಬ ಜರ್ಮನನ ನಷ್ಟ ಕೂಡಾ ಒದಗದೆ ನಾವು ನಮ್ಮ ಸಾಹಸದ ಕಾರ್ಯದಲ್ಲಿ ವಿಜಯ ಸಂಪಾದಿಸಿರುವೆವು.”

## ಸವದತ್ತಿಯ ಪುರಾಣ ಸಮಾಪ್ತಿಯ ಮಹೋತ್ಸವವು.

ಈ ಮೊದಲು ಶ್ರಾವಣ ಮಾಸದಿಂದ ಇಲ್ಲಿ (ಕಲ್ಲಮಠದಲ್ಲಿ) ಮಹಾತಪಸ್ವಿ ಶ್ರೀ. ಮ. ನಿ. ಶಿವಬಸವ ಮಹಾಸ್ವಾಮಿಗಳು ಹುಕ್ಕೇರಿಮಠ ಹಾವೇರಿ ಇವರ ಸನ್ನಿಧಿಯಲ್ಲಿ ಪ್ರಾರಂಭಮಾಡಿದ ೬೩ ಮಂದಿ ಪುರಾತನರ ಪುರಾಣ ಸಮಾಪ್ತಿಯು ಶ್ರೀ. ಗಂಗಾಧರಸ್ವಾಮಿ ಹೊಸಮಠ ಇವರ ಮಂಜುಳ ಗಾಯನ ಮತ್ತು ರಸಭರಿತವಾದ ಪುರಾಣ ಹೇಳುವಿಕೆಯಿಂದಲೂ ಮತ್ತು ಶ್ರೀ ಸಂಗಮೇಶ್ವರದೇವರು ಶಿವಯೋಗಾಶ್ರಮ ಶಿಕಾರಿಪುರ ಇವರ ಇಂಪಾದ ಗಾನಯುಕ್ತ ಶಿವಶರಣರ ವಚನ ಅನ್ನುವಿಕೆಯಿಂದಲೂ ಇದೇ ಆಶ್ವೀನ ಶುದ್ಧ॥ ದ್ವಾದಶಿ ಮಿತಿಗೆ ಮುಗಿಯಿತು. ಆ ಕಾಲಕ್ಕೆ ಪುರಾಣ ಸಮಾಪ್ತಿಯ ಮಹಾ ಗಣಾರಾಧನೆಯನ್ನು ಬೆಳ್ಳುಬ್ಬಿ ಮಾತೋಶ್ರೀ ಪರಮ್ಮನವರು ಮಾಡಿಸಿದರಲ್ಲದೇ ಯಥಾಶಕ್ತಿದಾನ ಮಾಡಿದರು. ಪುರಾಣ ಸಮಾಪ್ತಿಯ ಮಂಗಲಾನಂತರ ರಾತ್ರಿ ೭ ಗಂಟೆಗೆ ಶ್ರೀ. ಮ. ನಿ. ಸಿದ್ಧರಾಮ ಮಹಾಸ್ವಾಮಿಗಳು ವಿರಕ್ತಮಠ ಯಕ್ಕುಂಡಿ ಇವರ ಪಾಲಕಿ ಮಹೋತ್ಸವವು ಬಿರುದಾವಳಿಗಳಿಂದಲೂ ಮತ್ತು ಪುರಾಣ ಮೆರವಣಿಗೆಯು ಭಜನಾಮೇಳದಿಂದಲೂ ಜಯ ಜಯಕಾರದಿಂದಲೂ ಭೋರ್ಗರೆಯುವ ವಾದ್ಯಧ್ವನಿಯಿಂದಲೂ ಮೆರವಣಿಗೆಯು ಊರ ಪ್ರಮುಖ ಬೀದಿಗಳಲ್ಲಿ ಹಾಯ್ದು ಕಲ್ಲಮಠಕ್ಕೆ ೧೦ ಗಂಟೆಗೆ ತಲ್ಪಿ ಮಂಗಲವಾಯಿತು. ಈ ಪುರಾಣ ಸಮಾಪ್ತಿಯ ವಿಷಯದಲ್ಲಿ ಸವದತ್ತಿಯ ಶೆಟ್ಟಿ ಸಾವುಕಾರ ಮೊದಲಾದ ದೈವದವರು ವಿಶೇಷ ಭಕ್ತಿಯಿಂದ ಕಾರ್ಯ ಮಾಡಿದರು. ಪುರಾಣ ಸಮಾಪ್ತಿಯ . ಉಪಸಂಹಾರ ಭಾಷಣವನ್ನು ಯಕ್ಕುಂಡಿ ಮಹಾಸ್ವಾಮಿಗಳು ಜನ ಮನರಂಜನೆಯಾಗುವಂತೆ ಮಾಡಿದರು. ಸದರಿ ಪುರಾಣ ಸಮಾಪ್ತಿಕಾಲದ ಮಹಾ ಗಣಾರಾಧನೆಯನ್ನು ಭಕ್ತಿಪೂರ್ವಕವಾಗಿ ಮಾಡಿದ ಮಾತೋಶ್ರೀ ಪರಮ್ಮನವರಿಗೂ ಅವರ ವಂಶಜರಿಗೂ ಇನ್ನುಳಿದ ಪುರಾಣಕಾಲದಲ್ಲಿಯೂ ಉತ್ಸವದಲ್ಲಿಯೂ ಭಾಗವಹಿಸಿದ ಸದ್ಭಕ್ತರಿಗೂ ಮಹಾಸ್ವಾಮಿಗಳವರು ಮಂಗಲಾಶೀರ್ವಾದ ಮಾಡಿದರು. ಸದರಿಯವರಿಗೆ ಪರಮಾತ್ಮನು ಚಿರಸುಖಶಾಂತಿಯನ್ನೀಯಲೆಂದು ಪ್ರಾರ್ಥಿಸುತ್ತೇವೆ. ಓರ್ವ ಸದ್ಭಕ್ತ.

---

## ಕರ್ನಾಟಕದಲ್ಲಿ ಫಿಲ್ಮ ಕಂಪನಿಯ ಅವಶ್ಯಕತೆ

### ಬಿನ್ನಹಪತ್ರ.

ಸದ್ಯದ ಯುಗದಲ್ಲಿ ರಾಷ್ಟ್ರಾಭಿವೃದ್ಧಿಗೆ ಅವಶ್ಯಕವಿದ್ದ ಉದ್ಯೋಗಗಳಲ್ಲಿ ವಾಕ್ ಚಿತ್ರವು (Talkie) ಒಂದಾಗಿರುವದೆಂದು ಹೇಳವದು ಅಷ್ಟೇನೂ ಅವಶ್ಯಕವಿಲ್ಲ. ಸಿನೇಮದ್ವಾರ ಪರರಾಷ್ಟ್ರದವರು ಆರ್ಥಿಕ ರೀತಿಯಿಂದ ಫಾಯದೆಯನ್ನು ತೆಗೆದುಕೊಳ್ಳುವದಲ್ಲದೆ ತಮ್ಮ ತಮ್ಮ ಸಂಸ್ಕೃತಿಯನ್ನು ಸಹ ಬೇರೆ ಕಡೆಗೆ ಪಸರಿಸುತ್ತಲಿದ್ದಾರೆ. ಹಿಂದುಸ್ಥಾನದಲ್ಲಿ ಈ ಉದ್ಯೋಗವು ಇತ್ತಿತ್ತಲಾಗಿ ತೆಗೆದುಕೊಳ್ಳಲ್ಪಟ್ಟು ಇಷ್ಟರಲ್ಲಿಯೇ ಎಷ್ಟೋ ಕಂಪನಿಗಳು ಅಸ್ತಿತ್ವದಲ್ಲಿ ಬಂದಿವೆ. ಆದರೆ ನಮ್ಮ ಕರ್ನಾಟಕದಲ್ಲಿ ಮಾತ್ರ ಇದರ ಕಡೆಗೆ ಸಾಕಷ್ಟು ಲಕ್ಷ ಹಾಕಿರುವದಿಲ್ಲೆಂದು ತಿಳಿಸಲು ವಿಷಾದವೆನಿಸುತ್ತದೆ. ಕರ್ನಾಟಕವು ಸಿನೇಮಾ ಧಂದೆಕ್ಕೆ ಬೇಕಾದ ಸೌಕರ್ಯಗಳನ್ನು ಒದಗಿಸಿಕೊಡುವದರಲ್ಲಿ ಉಳಿದ ಪ್ರಾಂತಗಳಿಗಿಂತ ಕಡಿಮೆ ತರಗತಿಯಲ್ಲಿ ಬಾರದಿದ್ದರೂ ಇದರ ಪ್ರಗತಿಯ ಸಲುವಾಗಿ ಸಾಕಷ್ಟು ಉತ್ಸಾಹಪೂರ್ವಕ ಇನ್ನೂ ಕೆಲಸವಾಗಿರುವದಿಲ್ಲ. ಪ್ರಯುಕ್ತ ಕರ್ನಾಟಕದಲ್ಲಿ ಇಂಥ ಒಂದು ಸಿನೇಮಾ ಫಿಲ್ಮ ಕಂಪನಿಯನ್ನು ತೆಗೆಯುವದರ ಸಂಬಂಧ ವಿಚಾರವಿನಿಮಯ ಮಾಡುವದರ ಸಲುವಾಗಿ ಧಾರವಾಡದೊಳಗೆ 'ರೀಗಲ್' ಥೇಟರಿನಲ್ಲಿ ತಾ. ೧೬—೧೦-೧೯೩೪ ರವಿವಾರ ಮುಂಜಾನೆ ೧೦ ಘಂಟೆಗೆ ಸರಿಯಾಗಿ ಒಂದು ಸಾರ್ವಜನಿಕ ಸಭೆಕೂಡುವ ವ್ಯವಸ್ಥೆ ಮಾಡಿದೆ. ಸದರೀ ಸಭೆಗೆ ತಾವು ಬಂದು ತಮ್ಮ ಸಲಹೆಗಳನ್ನು ಕೊಡಬೇಕಾಗಿ ವಿನಂತಿ. ಸದರೀ ಸಭೆಗೆ ತಮ್ಮ ಕಡೆಯಿಂದ ಸ್ವತಃ ಬರುವದಾಗದಿದ್ದಲ್ಲಿ ತಮ್ಮ ಅಭಿಪ್ರಾಯಗಳನ್ನು ಲೇಖಿಯ ಮೂಲಕವಾದರೂ ಸದರೀ ತಾರೀಖಿನೊಳಗೆ "ಪ್ರೊಪ್ರಾಯಿಟರ, ರೀಗಲ್ ಥೇಟರ, ಧಾರವಾಡ" ಈ ವಿಳಾಸಕ್ಕೆ ಕಳಿಸಿಕೊಡುವಿರೆಂದು ಆಶಿಸುವ,

ತಮ್ಮ

ಚಿಕ್ಕವೀರಯ್ಯ ಚಿಕ್ಕವೀರಮಠ, ಹುಬ್ಬಳ್ಳಿ.<br>
ಎಸ್. ಆರ್ ಕಿತ್ತೂರ, ಧಾರವಾಡ.<br>
ಧಾರವಾಡ ಎಸ್. ಸಿ. ಪಾಟೀಲ, ಧಾರವಾಡ.<br>
ತಾ. ೧೦-೧೦-೩೪. ಜಿ. ಎಸ್ ಯಾವಗಲ್, ಹುಬ್ಬಳ್ಳಿ.<br>
ಟಿ. ಡಿ. ಶಿವಲಿಂಗಯ್ಯ, ಧಾರವಾಡ.<br>
ಕಂಠಿ, ಇಲಕಲ್.

---

### ಹನಮಸಾಗರದ

## "ಶ್ರೀ ಕರಿಸಿದ್ಧೇಶ್ವರ ವಾಚನಾಲಯ"ಕ್ಕೆ

# ಉದಾರ ದೇಣಗಿ.

ತಾ. ೯-೧೦-೩೮ ನೆಯ ದಿವಸ ಶ್ರೀಯುತ ಶಿವಲಿಂಗಪ್ಪನವರು ಹವಾಲ್ದಾರ ಹಿರೇ ಕೊಡಗಲಿ ಇವರು "ಶ್ರೀ ಕರಿಸಿದ್ಧೇಶ್ವರ ವಾಚನಾಲಯ"ಕ್ಕೆ ದೇಣಗಿ ರೂಪವಾಗಿ ೬ ರೂಪಾಯಿಗಳನ್ನು ಕೊಟ್ಟಿದ್ದಾರೆ. ಇದಲ್ಲದೆ ಪ್ರತಿವರ್ಷ ತಪ್ಪದೇ ೬ ರೂಪಾಯಿಗಳನ್ನು ದೇಣಗಿ ರೂಪವಾಗಿ ಕೊಡಲು ವಾಗ್ದಾನ ಮಾಡಿದ್ದಾರೆ.

ಸದರಿ ಹವಾಲ್ದಾರರು ಸಮಾಜಾಭಿಮಾನಿಗಳೂ ತರುಣರ ಉತ್ಸಾಹಕರೂ, ದಾನ ಶೂರರೂ ಇರುವರೆಂಬುದಕ್ಕೆ ಬೇರೆ ವಿವರಿಸಿ ಹೇಳಬೇಕೆಂಬುವ ಕಾರಣವಿಲ್ಲ. ಹನಮಸಾಗರ ವಾಚನಾಲಯದ ತರುಣ ಸಂಘದವರು ಸದರಿ ಮಹಾಶಯರಿಗೆ ದೀರ್ಘಾಯುರಾರೋಗ್ಯಸಂಪದವನ್ನು ಕೊಟ್ಟು ಚಿರಕಾಲ ಕಾಪಾಡಲೆಂದೂ ಮತ್ತು ಇದರಂತೆ ಇನ್ನಿತರ ಸಮಾಜದ ಕೆಲಸಗಳಲ್ಲಿ ಸಹಾಯ ಮಾಡಲು ಸದ್ಬುದ್ಧಿಯನ್ನು ಕೊಡಲೆಂದೂ ಶ್ರೀ. ಕರಿಸಿದ್ಧೇಶ್ವರನನ್ನು ಅನನ್ಯ ಭಾವದಿಂದ ಪ್ರಾರ್ಥಿಸುತ್ತೇವೆ.

ಸೆಕ್ರೆಟರಿ,
ಶ್ರೀ ಕರಿಸಿದ್ಧೇಶ್ವರ ವಾಚನಾಲಯ
ಹನಮಸಾಗರ.

---

## ಸುಲೇಪೇಟೆ ಶ್ರೀ. ಮ. ಪ್ರ.

### ಶ್ರೀ. ಸದಾಶಿವ ಸ್ವಾಮಿಗಳವರ ಸಂಚಾರ.

ತಾ. ೧೧-೧೩-೪೭ ನೆಯ ದಿವಸ ಹೈದರಾಬಾದಿನಲ್ಲಿ ವೀರಶೈವ ಸಮಾಜದ ಅಧ್ಯಕ್ಷರಾದ ಶ್ರೀ. ಶ್ರೀನಿವಾಸರಾವ ವಕೀಲರನ್ನೂ ಮತ್ತು ಕಾರ್ಯದರ್ಶಿಗಳಾದ ಶ್ರೀ. ವೀರಯ್ಯನವರನ್ನೂ ಶ್ರೀ. ಮ. ಸದಾಶಿವ ಸ್ವಾಮಿಗಳವರು ಕಂಡರು. ಶುದ್ಧಿ ಸಂಘಟನೆಯ ಕಾರ್ಯಕ್ಕೆ ಸರ್ವ ರೀತಿಯಿಂದ ಸಹಾಯ ಮಾಡುವುದಾಗಿ ಮೇಲಿನವರು ತಿಳಿಸಿದರು. ಅಲ್ಲಿಂದ ಕೊಲ್ಲಿಪಾಕಿಗೆ ಹೋಗಿ ಸೋಮೇಶ್ವರ ಮತ್ತು ಇತರ ದೇವಾಲಯುಗಳನ್ನು ಸಂದರ್ಶಿಸಿದರು. ಎಲ್ಲ ದೇವಾಲಯುಗಳೂ ತೀರ ಹಾಳಾಗಿ ಮಣ್ಣು ಕೂಡುವ ಸ್ಥಿತಿಯಲ್ಲಿವೆ. ಪಂಚಾಚಾರ್ಯರು ಈ ಬಗ್ಗೆ ಕಾಳಜಿ ತೆಗೆದುಕೊಳ್ಳದೆ ಇರುವುದು ಅನ್ಯಾಯವು. ಅಲ್ಲಿಂದ ಉದ್ಗೀರಿಯ ಕಮಿಟಿಗೆ ಹೋಗಿ ವೀರಶೈವ ಧರ್ಮವು ವೈದಿಕವೊ? ಅವೈದಿಕವೊ? ಎಂಬ ಬಗ್ಗೆ ವಾದವಿವಾದ ಮಾಡಲಾಯಿತು. ಶ್ರೀಗಳು ಅಲ್ಲಿಯ ಸಭೆಯಲ್ಲಿಯೂ ಭಾಷಣ ಮಾಡಿದರು.

—ಶರಣಪ್ಪ ವಿದ್ಯಾರ್ಥಿ.

---

—ಸುಡೆಟನ್ ಜರ್ಮನಿಯ ಸಮಸ್ಯೆಯನ್ನು ಮಾತ್ರ ತೀರ್ಮಾನಿಸಿದರೆ ಯುರೋಪಿನಲ್ಲಿ ಶಾಂತಿಯೇ ನೆಲೆಗೊಳ್ಳುವುದೆಂದು ಭಾವಿಸಿದ ಮುತ್ಸದ್ದಿಗಳನ್ನು ಹಿಟ್ಲರನ ಮೊನ್ನಿನ ಭಾಷಣವು ಎಚ್ಚರಿಸದೆ ಇರಲಾರದೆಂದು "ನ್ಯೂಯಾರ್ಕ ಟಾಯಿಮ್ಸ್" ಪತ್ರಿಕೆಯು ಬರೆದಿದೆ.



---

—ಯಾಂಗತ್ಸಿ ರಣ ಭೂಮಿಯ ತೇಹಾನದ ಹತ್ತಿರ ಚೀನಿಯರು ಘನಘೋರ ಯುದ್ಧ ಮಾಡಿ ೨೦ ಸಾವಿರ ಜಪಾನಿ ಸೈನಿಕರನ್ನು ನಾಶಗೊಳಿಸಿದ್ದಾರೆ.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು

REGISTERED No. B. 2891.

# ಶರಣಸಂದೇಶ

The Sharana Sandesh.

ನ್ಯಾಯನಿಷ್ಠುರ, ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ, ಶರಣನಾರಿಗೂ ಅಂಜುವವನಲ್ಲ!
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೪ | ಆಲಮಟ್ಟಿ- ಸೋಮವಾರ ತಾರೀಖು ೭ ನೆಯ ನವ್ಹಂಬರ್ ೧೯೩೮. | ಸಂಚಿಕೆ ೧೨

ಜನಸೇವೆಯೇ ದೇವರಸೇವೆ.

## ನಿಜಾಮ ರಾಜ್ಯದಲ್ಲಿ ಸತ್ಯಾಗ್ರಹ ಯುದ್ಧ.

ಹೈದರಾಬಾದ ಸ್ಟೇಟ್ ಕಾಂಗ್ರೆಸ್ ಕಮಿಟಿ, ಆರ್ಯ ಸಂರಕ್ಷಕ ಸಂಘ, ಹಿಂದು ನಾಗರಿಕ ಸ್ವಾತಂತ್ರ್ಯಸಂಘಗಳ ವೀರ ಸತ್ಯಾಗ್ರಹಿಗಳು ಶಾಂತಿ ಯುದ್ಧವನ್ನು ಪ್ರಾರಂಭಿಸಿದರು.

## ರಾಷ್ಟ್ರಾಧಿಪತಿಗಳ ಭಾಷಣದಲ್ಲಿ ಗೊಂದಲ.

ರಾಜಶಾಹಿ ಕಾಲೇಜಿನಲ್ಲಿ ರಾಷ್ಟ್ರಾಧ್ಯಕ್ಷರಾದ ಬಾಬು ಸುಭಾಷಚಂದ್ರ ಬೋಸರು ಭಾಷಣ ಮಾಡುತ್ತಿದ್ದಾಗ ಮುಸಲ್ಮಾನ್ ವಿದ್ಯಾರ್ಥಿಗಳು ಬಹು ಪುಂಡಾಟಿಕೆ ನಡೆಸಿ ಭಾಷಣ ನಡೆಯದಂತೆ ಮಾಡಿದರು.

## ಹಿಂದು ಮಹಾ ಸಭೆ.

ಡಿಸೆಂಬರ್ ೨೮ ನೆಯ ತಾರೀಖಿನಿಂದ ನಾಲ್ಕು ದಿವಸ ನಾಗಪುರದಲ್ಲಿ ಅಖಿಲ ಭಾರತ ಹಿಂದು ಮಹಾಸಭೆ ಜರುಗುವುದು.

ದೇಹವೇ ದೇವಾಲಯ.



# ಶರಣ ಸಂದೇಶ

THE SHARANA SANDESHA.




ಪ್ರಮುಖ . ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೮. | ಆಲಮಟ್ಟಿ- ಸೋಮವಾರ ತಾರೀಖು ೬ ನೆಯ ನವ್ಹಂಬರ ೧೯೩೮. | ಸಂಚಿಕೆ೧೨


## ಹುಬ್ಬಳ್ಳಿಯಲ್ಲಿ ಕೂಡತಕ್ಕ ೧೩ನೇ ಅಖಿಲಭಾರತ ವೀರಶೈವ ಮಹಾ ಸಭೆಗೆ

### ಅಧ್ಯಕ್ಷರು ಎಂಥವರಿರಬೇಕು?

೧೯೦೪ ನೇ ಇಸ್ವಿಯಲ್ಲಿ ಈ ಮಹಾಸಭೆಯು ಹುಟ್ಟಿ ಇಂದಿಗೆ ೩೪ ವರ್ಷಗಳಾದಾಗ್ಯೂ ಇದು ವರೆಗೆ ಕೇವಲ ೧೨ ಅಧಿವೇಶನಗಳು ಮಾತ್ರ ಜರುಗಿರುತ್ತವೆ. ೧೯೧೭ ನೇ ಇಸ್ವಿಯಲ್ಲಿ ಮಹಾಸಭೆಯು ಪ್ರತಿವರ್ಷ ಜರುಗಲೆಂದು ಮಹಾಸಭಾ ಚಿರಸ್ಥಾಯಿ ಫಂಡನ್ನು ಕೂಡಿಸಿದ್ದಾಯಿತು. ಮತ್ತು ಈ ಫಂಡು ಈಗ ಅಜಮಾಸು ೮೦ ಸಾವಿರ ರೂ. ಆಗಿರುವದೆಂದು ತಿಳಿಯುತ್ತದೆ. ಇಷ್ಟು ಅನುಕೂಲತೆಯು ಆದಾಗ್ಯೂ ೧೯೧೭ ನೇ ಇಸ್ವಿಯ ನಂತರ ಬೀರೂರ, ಬೆಂಗಳೂರ, ಧಾರವಾಡ ಮತ್ತು ರಾಯಚೂರುಗಳಲ್ಲಿ ಕೇವಲ ನಾಲ್ಕೇ ಅಧಿವೇಶನಗಳು ಮಾತ್ರ ಜರುಗಿರುವುದು ನಮ್ಮ ಸಮಾಜದ ದುರ್ದೈವ.

ಮಹಾಸಭೆಯು ಪ್ರತಿವರ್ಷ ನಡೆದು ನಮ್ಮ ಸಮಾಜ ಮತ್ತು ದೇಶಕ್ಕೆ ಹಿತವಾಗಬೇಕಾದರೆ ಸುಶಿಕ್ಷಿತ ಸ್ವಾರ್ಥತ್ಯಾಗಿಗಳಾದ ಮತ್ತು ಸೇವಾ ತತ್ಪರರಾದ ಯೋಗ್ಯ ಮುಂದಾಳುಗಳೇ ಅಧ್ಯಕ್ಷರಾಗುವದು ಅವಶ್ಯ.

ಈ ಮಹಾಸಭೆಯನ್ನು ಜರುಗಿಸುವ ಬಗ್ಗೆ ಇಷ್ಟು ಧನ ನಿಧಿಯು ಅದೆ. ಮತ್ತು ನಮ್ಮ ಸಮಾಜದಲ್ಲಿ ಈಗ ಸ್ವಾರ್ಥತ್ಯಾಗ ಮತ್ತು ಸೇವಾ ಬುದ್ಧಿಯಿಂದ ಸಮಾಜ ಮತ್ತು ದೇಶಸೇವಾ ಮಾಡಬೇಕೆಂಬುವ ಎಷ್ಟೋ ಸುಶಿಕ್ಷಿತ ತ್ಯಾಗಿಗಳು ಸಹ ಇರುತ್ತಾರೆ. ಇಂಥ ಪರಿಸ್ಥಿತಿಯಲ್ಲಿ ನಮ್ಮ ಸಮಾಜದಲ್ಲಿರತಕ್ಕ ಇಂಥ ಉತ್ಸಾಹಿ ಕೆಲಸಗಾರರನ್ನು ಏಕೀಕರಿಸಿ ಒಂದು ಸಂಘಟನೆಯನ್ನು ಮಾಡಿ ನಮ್ಮ ವೀರಶೈವ ಸಮಾಜದ ಸರ್ವತೋಮುಖ ಸುಧಾರಣೆ ಮಾಡುವ ಬಗ್ಗೆ ಮತ್ತು ರಾಷ್ಟ್ರದ ಏಳಿಗೆಗಾಗಿ ವರ್ಷಾನುಗಟ್ಟಲೆ ಕೆಲಸ ಮಾಡುವಂತೆ ಈ ಮಹಾಸಭೆಯನ್ನು ನಡೆಸಿಕೊಂಡು ಹೋಗಿ ಇದುವರೆಗೆ ನಿದ್ರಾವಸ್ಥೆಯಲ್ಲಿದ್ದ ಈ ಮಹಾಸಭೆಯನ್ನು ಒಂದು ಜಾಗೃತ ಸಂಸ್ಥೆಯನ್ನಾಗಿ ಮಾಡಲು ಸಮರ್ಥರಾದ ಒಬ್ಬ ಯೋಗ್ಯ ಶಾಂತ, ಸುಶಿಕ್ಷಿತ, ಸ್ವಾರ್ಥತ್ಯಾಗಿ ನಿಷ್ಪಕ್ಷಪಾತ ಮತ್ತು ಸೇವಾತತ್ಪರರಾದವರೇ ಅಧ್ಯಕ್ಷರಾಗಬೇಕೆಂದು ನಮ್ಮ ಅಭಿಪ್ರಾಯ.

ಮಹಾಸಭೆಯ ಈಗಿನ ನಿಯಮಗಳ ಪ್ರಕಾರ ಮಧ್ಯವರ್ತಿ ಮಂಡಳದವರು ಅಧ್ಯಕ್ಷಸ್ಥಾನಕ್ಕೆ ತಾವು ಸೂಚಿಸಬೇಕಾದ ಹೆಸರುಗಳನ್ನು ಸ್ವಾಗತ ಸಮಿತಿಗೆ ತಿಳಿಸಬೇಕಾಗಿದೆ. ನಂತರ ಸ್ವಾಗತ ಮಂಡಳದವರು ಅವರಲ್ಲಿ ಒಬ್ಬರನ್ನು ಆರಿಸಬೇಕಾಗುತ್ತದೆ.

ಆದ್ದರಿಂದ ನಮ್ಮ ವೀರಶೈವ ಸಮಾಜ ಬಾಂಧವರು ಮೇಲಿನ ನಮ್ಮ ಸೂಚನೆಗಳನ್ನು ಅವಶ್ಯವಾಗಿ ಲಕ್ಷದಲ್ಲಿ ತಕ್ಕೊಂಡು ಹುಬ್ಬಳ್ಳಿಯಲ್ಲಿ ಕೂಡುವ ಮಹಾಸಭೆಗೆ ಯೋಗ್ಯ ಮುಂದಾಳುಗಳ ಹೆಸರುಗಳನ್ನು ತೀವ್ರವಾಗಿ ಇದೇ ೧೫ ನೇ ತಾರೀಖಿನೊಳಗಾಗಿ ವರ್ತಮಾನ ಪತ್ರದದ್ವಾರ ತಿಳಿಸಬೇಕಾಗಿ ಆಗ್ರಹದ ವಿನಂತಿ.

ಚಿಕ್ಕವೀರಯ್ಯ ಚಿಕ್ಕವೀರಯ್ಯನವರ<br>
ಸ್ವಾಗತ ಸಂಘಾಧ್ಯಕ್ಷರು<br>
೧೩ನೇ ಅಖಿಲಭಾರತ ವೀರಶೈವ ಮಹಾಸಭೆ<br>
ಹುಬ್ಬಳ್ಳಿ.

---

೧೩ ನೆಯ ವೀರಶೈವ ಮಹಾಸಭೆಯು ಇದೇ ಡಿಶಂಬರ್ ತಿಂಗಳ ೨೬ ನೆಯ ತಾರೀಖಿನಿಂದ ಮೂರು ಅಥವಾ ನಾಲ್ಕು ದಿನ ಹುಬ್ಬಳ್ಳಿಯಲ್ಲಿ ಕೂಡುವುದೆಂದು ಅದರ ಕಾರ್ಯದರ್ಶಿಗಳು ಪ್ರಕಟಿಸಿದ್ದಾರೆ.

### ಗಾಂಧಿ-ವ್ಹಾಯಿಸ್‌ರಾಯರ ಸಂಭಾಷಣೆ.

ಇದೇ ತಿಂಗಳು ೧೦ ನೆಯ ತಾರೀಖಿನ ದಿನ ಮಹಾತ್ಮಾ ಗಾಂಧಿಯವರು ವ್ಹಾಯಿಸ್‌ರಾಯರನ್ನು ಕಂಡು ಸಂಯುಕ್ತ ಘಟನೆಯ ಬಗ್ಗೆ ಸಂಭಾಷಿಸುವರೆಂದು ಸುದ್ದಿ.

# ಶ್ರೀ. ಹತ್ತಿನೂರು ಸಕ್ರೆಪ್ಪ ಗೌಡರ ಉದಾರ ದಾನ.

### ರಾಯಚೂರು ವೀರಶೈವ ಬೋರ್ಡಿಂಗಿನಲ್ಲಿರುವ ರಾಜಕೀಯ ವಿದ್ಯಾರ್ಥಿಗಳ ಅನ್ನಾಹಾರ ವ್ಯವಸ್ಥೆಗಾಗಿ ಇಪ್ಪತ್ತೈದು ಸಾವಿರ ರೂ. ಗಳ ದಾನ.

ನಿಜಾಮು ಕರ್ನಾಟಕದ ವೀರಶೈವರ ಅವಿದ್ಯಾವಂತಿಕೆಯ ನಿವಾರಣೆಗೆ ಮೊದಲನೆಯ ಮಾರ್ಗ ಪ್ರದರ್ಶನ. ಹೊಟ್ಟೆಗೆ ಹಿಟ್ಟಿಲ್ಲದೆ ಹೊದೆಯಲು ಬಟ್ಟೆಯಿಲ್ಲದೆ ಓದುವ ಕಾಲದಲ್ಲಿ ತಮಗೆ ಬರುತ್ತಿರುವ ತೊಂದರೆಗಳನ್ನು ತಡೆದುಕೊಳ್ಳುವ ಸಾಮರ್ಥ್ಯವಿಲ್ಲದೆ ಓದುವದನ್ನು ಮಧ್ಯದಲ್ಲಿಯೇ ಬಿಟ್ಟು ಮನೆ ಸೇರುತ್ತಿದ್ದ ಬಡ ವಿದ್ಯಾರ್ಥಿಗಳ ಉದ್ಧಾರ. ಬಡ ವಿದ್ಯಾರ್ಥಿಗಳ ಗೋಳನ್ನು ಕೇಳಿ ತಳಮಳಗೊಂಡವರಾಗಿ ಕರುಣಗೊಂಡು ಏನು ಸಂಪದವಿದ್ದರೇನು ಸಮಾಜದ ಸಹಸ್ರ ಜನರು ಅನ್ನ ಜ್ಞಾನಗಳಿಲ್ಲದೆ ಸುತ್ತಲೂ ಬಳಲುತ್ತಿರುವದನ್ನು ಕಂಡು ಕೇಳಿ ಅವರಿಗೆ ಯಾವ ವಿಧದ ಸಹಾಯ ಹಸ್ತವನ್ನೀಯದೆ ಕೇವಲ ನಮ್ಮಂತಹ ಕೆಲ ಜನರು ಮಾತ್ರ ಉತ್ತಮಾಹಾರವನ್ನು ತಿಂದು ನಿಶ್ಚಿಂತೆಯಿಂದ ಗುಡುಕು ಹಾಕುತ್ತಿರುವದು ಎಂತಹ ನಾಚಿಕೆಗೇಡಿತನ? ನಿಜವಾಗಿ ನೋಡಿದಲ್ಲಿ ಆ ಬಡವರ ದೀನ ದುಃಖಿಗಳ ಉದ್ಧಾರವೇ ನಮ್ಮ ಉದ್ಧಾರ. ಅವರ ಉದ್ಧಾರದಿಂದಲೇ ನಮ್ಮ ದುಡ್ಡಿನ ಸಾರ್ಥಕ್ಯತೆ ಎಂದು ತಿಳಿದು ದೈವ ಪ್ರೇರಿತ ತ್ಯಾಗಬುದ್ಧಿಯಿಂದ ಸಕ್ರೆಪ್ಪ ಗೌಡರು ಈ ಕಾರ್ಯವನ್ನು ಮಾಡಿದರು. ಬೋರ್ಡಿಂಗ ಪ್ರಾರಂಭ ದಿನದಲ್ಲಿ ಬೋರ್ಡಿಂಗ ಹಾಲಿನಲ್ಲಿ ಊರಿನ ಪ್ರಮುಖ ಶ್ರೀಮಂತರೆಲ್ಲರು ನೆರೆದಿದ್ದರು. ಅವರೆಲ್ಲರ ಮುಖಗಳು ಆನಂದದಿಂದ ಪ್ರಫುಲ್ಲಿತಗಳಾಗಿದ್ದವು. ಬೋರ್ಡಿಂಗ ಸುಂದರವಾಗಿ ಅಲಂಕರಿಸಲ್ಪಟ್ಟಿತ್ತು. ನೆರೆದ ಶ್ರೀಮಂತರೆಲ್ಲರು ಸಕ್ರೆಪ್ಪನವರ ಈ ಕಾರ್ಯಕ್ಕಾಗಿ ತೆರೆದ ಮನಸ್ಸಿನಿಂದ ಅವರಿಗೆ ಧನ್ಯವಾದಗಳನ್ನರ್ಪಿಸಿದರು. ತಾವೆಲ್ಲರು ಈ ಕಾರ್ಯದಿಂದ ಸಂತುಷ್ಟರಾಗಿರುವದಾಗಿಯೂ ಸರ್ವದಾ ಮನಃಪೂರ್ವಕವಾಗಿ ಈ ಕಾರ್ಯಕ್ಕೆ ಸಹಾಯ ಪ್ರೋತ್ಸಾಹಗಳನ್ನು ಕೊಡುವೆವೆಂಬುದಾಗಿಯೂ ವಾಗ್ದಾನವನ್ನಿತ್ತರು. ಬಡ ವಿದ್ಯಾರ್ಥಿಗಳು ಆನಂದಾತಿಶಯದಿಂದ ತಮ್ಮ ಪಾಲಿಗೆ ಬಂದ ದೇವರೇ ಇವರೆಂದು ಹೇಳಿದರು.

ತಾ. ೨೪-೧೦-೩೮ ನೆಯ ಸೋಮವಾರ ಪ್ರಾತಃಕಾಲ ಹತ್ತು ಗಂಟೆಗೆ ಸರಿಯಾಗಿ ಶ್ರೀಮಂತರಾದ ಸಕ್ರೆಪ್ಪ ಗೌಡರಿಂದ. ಬೋರ್ಡಿಂಗ್ ತೆರೆಯಲ್ಪಟ್ಟಿತು. ಆ ಕಾಲದಲ್ಲಿ ಇತ್ತ ಆಹ್ವಾನದ ಮೇರೆಗೆ ಊರಿನ ಶ್ರೀಮಂತರೆಲ್ಲರು ಉತ್ಸಾಹದಿಂದ ಬಂದು ಸೇರಿದ್ದರು. ಗೌಡರು ನೆರೆದ ಜನರಲ್ಲಿ ನಮ್ರತೆಯಿಂದ ಹಸನ್ಮುಖದೊಡನೆ ತಮ್ಮ ಅಭಿಪ್ರಾಯವನ್ನು ಹೀಗೆ ಹೊರಗೆಡಹಿದರು—

“ನಾನು ಈಗ ಕೆಲವು ವರ್ಷಗಳ ಹಿಂದೆ ಬಡ ಜನರಿಗೆ ಓದುವ ವಿಷಯದಲ್ಲಿ ಉಂಟಾಗುತ್ತಿದ್ದ ತೊಂದರೆಗಳನ್ನು ಕಂಡು ಇದರ ನಿವಾರಣೆಗೆ ಉಪಾಯವೇನು? ಎಂದು ಆಲೋಚಿಸಿದೆನು. ಕಡೆಯಲ್ಲಿ ಇವರಿಗೆ ನಿಶ್ಚಿಂತೆಯಿಂದ ಅನ್ನಾಹಾರಗಳು ದೊರೆಯುವ ವ್ಯವಸ್ಥೆ ಮಾಡುವದೇ ಉತ್ತಮೋಪಾಯವೆಂದು ತಿಳಿದು ಈ ಕಾರ್ಯಕ್ಕಾಗಿ ಬೋರ್ಡಿಂಗಿಗೆ ೨೫ ಸಾವಿರ ರೂ. ಗಳನ್ನು ಕೊಡುವ ನಿರ್ಧಾರವನ್ನು ಮಾಡಿದೆನು. ಕೆಲ ತೊಂದರೆಗಳಿಂದ ಆ ನನ್ನ ನಿರ್ಧಾರವು ನೆರವೇರದೆ ತಡೆದುದಕ್ಕಾಗಿ ವ್ಯಥೆಪಡುತ್ತೇನೆ. ಆದರೂ ದೇವರ ಇಷ್ಟದ ಮೇರೆಗೆ ಇದೀಗ ಸಿದ್ಧಿಸಿದುದಕ್ಕಾಗಿ ನನಗೆ ಬಹು ಸಂತೋಷವೆನಿಸುತ್ತದೆ.

ಸದರಿ ದುಡ್ಡನ್ನು ನನ್ನ ಹತ್ತಿರವೇ ಇಟ್ಟುಕೊಂಡು ಪ್ರತಿ ತಿಂಗಳು ಬರುವ ಬಡ್ಡಿಯನ್ನು ಮಾತ್ರ ತಪ್ಪದೇ ಬೋರ್ಡಿಂಗಿನ ಖರ್ಚಿಗಾಗಿ ಅರ್ಪಿಸುತ್ತ ಹೋಗುತ್ತೇನೆ. ಮುಂದೆ ಬೋರ್ಡಿಂಗ ಸುವ್ಯವಸ್ಥೆಯಿಂದ ನಡೆದು ವ್ಯವಸ್ಥಾಪಕ ಮಂಡಲಿಯೊಂದು ನಿಶ್ಚಿತವಾದ ನಂತರ ಸದರಿ ದುಡ್ಡನ್ನು ಬೋರ್ಡಿಂಗ ವ್ಯವಸ್ಥಾಪಕ ಮಂಡಳಿಯವರ ಸ್ವಾಧೀನಗೊಳಿಸುವೆನು.

ನನ್ನಿಂದ ಅರ್ಪಿಸಲ್ಪಟ್ಟ ಈ ದುಡ್ಡು ರಾಜಕೀಯ ವಿದ್ಯಾಭ್ಯಾಸ ಮಾಡುವ ಬಡ ವಿದ್ಯಾರ್ಥಿಗಳ ಅನ್ನಾಹಾರ ವ್ಯವಸ್ಥೆಗಾಗಿ ವಿನಿಯೋಗಿಸಲ್ಪಡತಕ್ಕದ್ದು. ಆದರೆ ಮೂಲ ನಿಧಿಯಿಂದ ಒಂದು ಪೈಯನ್ನು ಸಹ ತೆಗೆಯದೆ ಕೇವಲ ಬರುವ ಬಡ್ಡಿಯನ್ನು ಮಾತ್ರ ವಿನಿಯೋಗಿಸಬಹುದೆಂಬುದನ್ನು ಯಾರೂ ಮರೆಯಕೂಡದು. ನಾನು ಹೀಗೆ ಹೇಳಲು ಒಂದು ಮಹತ್ತರ ಕಾರಣವಿದೆ ಮೂಲ ನಿಧಿಯನ್ನು ಉಪಯೋಗಿಸಿದಲ್ಲಿ ಕೆಲ ದಿನಗಳಲ್ಲಿಯೇ ಮೂಲ ನಿಧಿ ಮುಗಿದು ನಡೆಯಬೇಕಾದ ಬೋರ್ಡಿಂಗಿನ ಕಾರ್ಯಕಲಾಪಗಳೆಲ್ಲವು ನಿಂತು ಹೋಗಬಹುದು. ಹೀಗಾಗಬಾರದೆಂಬ ಉದ್ದೇಶದಿಂದಲೇ ನಾನು ಹೀಗೆ ಹೇಳುತ್ತಿರುವುದು. ಆದುದರಿಂದ ಸರ್ವರು ಸರ್ವ ವಿಧದಿಂದ ಈ ಮೂಲ ದ್ರವ್ಯವು ಬೆಳೆಯುತ್ತ ಹೋಗುವ ವ್ಯವಸ್ಥೆಯನ್ನು ಮಾಡಬೇಕೆಂಬುದಾಗಿ ನನ್ನ ಪ್ರಾರ್ಥನೆ ಇದೆ.

ಈ ಮೂಲ ದ್ರವ್ಯವನ್ನು ಬೆಳೆಸಲು ಸಮಾಜದ ಸಮಸ್ತ ಜನರಿಗೂ ಹಕ್ಕಿದೆ. ಮೂಲ ದ್ರವ್ಯವು ಬೆಳೆದು ಸಮಾಜದ ಸಮಸ್ತ ಬಡ ಜನರ ಕಷ್ಟಗಳನ್ನು ದೂರಮಾಡಲೆಂಬುದೇ ನನ್ನ ನಿಜೋದ್ದೇಶವು. ಕಾರಣ ಸಮಾಜದ ಪ್ರತಿ ವ್ಯಕ್ತಿಗಳು ತಮ್ಮ ಕೈಲಾದ ಮಟ್ಟಿಗೆ ಈ ಮೂಲ ದ್ರವ್ಯದ ಬೆಳವಣಿಗೆಗೆ ಸಹಾಯ ಮಾಡಿ ಇದನ್ನೊಂದು ಮಾದರಿಯ ಸಂಸ್ಥೆಯನ್ನಾಗಿ ಮಾಡಬೇಕೆಂದು ಇಚ್ಛಿಸುತ್ತೇನೆ.” ಹೀಗೆಂದು ಹೇಳಿ ಕಡೆಯಲ್ಲಿ ತಮಗೆ ಈ ಕಾರ್ಯದಲ್ಲಿ ನೆರವಾದ ಕೆಲ ಮಿತ್ರರಿಗೆ ಧನ್ಯವಾದಗಳನ್ನರ್ಪಿಸಿದರು.

ಗೌಡರ ಈ ಕಾರ್ಯದಿಂದ ಜನರಲ್ಲುಂಟಾದ ಆನಂದವು ಹೇಳತೀರದು. ಪ್ರತಿಯೋರ್ವರು ಧನ್ಯವಾದಗಳನ್ನರ್ಪಿಸಿದರು. ಮತ್ತೊಂದು ವಿಶೇಷವೇನೆಂದರೆ- ಇಲ್ಲಿಯ ವರೆಗೆ ಇವರಿಗಿಂತಲೂ ಸಹಸ್ರ ಪಟ್ಟು ಹೆಚ್ಚಾದ ತ್ಯಾಗವೀರರು ಹುಟ್ಟಿಹೋಗಿದ್ದಾರೆ. ಆದರೆ ಬಹುಮಟ್ಟಿಗೆ ಅವರೆಲ್ಲರು ತಮಗೆ ಪುತ್ರಸಂತತಿ ಇಲ್ಲದೆ ಇದ್ದುದರಿಂದ ತಮ್ಮ ಸಂಪದವನ್ನು ಸಮಾಜಕ್ಕೆ ದಾನ ಮಾಡಿದವರು. ಇವರ ವಿಷಯ ಹೀಗಲ್ಲ, ಇವರಿಗೆ ಇತರರಂತೆ ಅಪಾರ ಧನ ಸಂಪತ್ತಿದೆ. ಸಾಮಾನ್ಯವಾಗಿ ಧನ ಸಂಪನ್ನರಿಗೆ ಮಕ್ಕಳ ಸಂಪತ್ತಿಯು ಬಹು ಕಡಿಮೆ. ಭಗವಂತನು ಇವರನ್ನು ಈ ಮಾಲಿಕೆಯಲ್ಲಿ ಸೇರಿಸದೆ ಇವರಿಗೆ ವಿಪುಲವಾದ ಮಕ್ಕಳ ಸಂಪತ್ತಿಯನ್ನು ಕೊಟ್ಟಿದ್ದಾನೆ. ಶುಭಾಂಗರು, ಸಹಜ ಸುಂದರರು, ಸನ್ಮಾರ್ಗ ಗಾಮಿಗಳು ಆದ ಆರು ಜನ ಗಂಡುಮಕ್ಕಳಿದ್ದಾರೆ. ಸುಶೀಲೆಯರಾದ ಮೂರು ಜನ ಪುತ್ರಿಯರಿದ್ದಾರೆ. ಒಟ್ಟು ಒಂಬತ್ತು ಜನ ಮಕ್ಕಳು ಇರುವರು ಈ ಶ್ರೀಮಂತರಿಗೆ. ಇವರಿಗೆ ಬಡ ಮಕ್ಕಳಲ್ಲಿರುವ ದಯಾ ಗುಣದಿಂದಲೇ ಭಗವಂತನು ಇಷ್ಟು ಪುತ್ರಸಂತತಿಯನ್ನಿತ್ತಿರುವನೆಂಬುದರಲ್ಲಿ ಯಾವ ಅಭ್ಯಂತರವಿಲ್ಲ.

ಗೌಡರ ಹಿರಿಯ ಮಕ್ಕಳ ಹೆಸರು ಪಂಪನಗೌಡರು. ಇವರು ಹೈದರಾಬಾದಿನಲ್ಲಿದ್ದಾರೆ. ಬಿ. ಎ. ಎಲ್. ಎಲ್. ಬಿ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವರು. ಇವರು ಆಗಾಗ್ಗೆ ಶರಣ ಸಂದೇಶ ಪತ್ರಿಕೆಯಲ್ಲಿ ಲೇಖನಗಳನ್ನು ಬರೆಯುವದರಿಂದ ಶರಣ ಸಂದೇಶ ವಾಚಕರಿಗೆ ವಿಶೇಷ ಪರಿಚಿತರಾಗಿರುವರು. ಸಾಮಾನ್ಯವಾಗಿ ಅವಿದ್ಯಾವಂತ ನಾಡಾದ ನಿಜಾಮಿನಲ್ಲಿಯ ಹುಡುಗರು ಶಾಲೆಯ ಮೆಟ್ಟಿಲನ್ನು ಹತ್ತಿ ನಾಲ್ಕು ಆರು ಕ್ಲಾಸುಗಳನ್ನು ಮುಗಿಸಿದರೆ ತೀರಿತು. ತಾವು

# ಧರ್ಮವೀರರ ಜಯಂತಿ.



(ಭಾಯಿ ಪರಮಾನಂದ.)

ಧರ್ಮವೀರ ಭಾಯಿ ಪರಮಾನಂದರ ೬೩ ನೆಯ ವರ್ಷವರ್ಧಂತಿಯು ಕಳೆದ ೩೦ ನೆಯ ತಾರೀಖಿನ ದಿನ ಉತ್ತರ ಹಿಂದುಸ್ಥಾನದ ಅನೇಕ ಪ್ರಮುಖ ಸ್ಥಳಗಳಲ್ಲಿ ಬಹು ಸಂಭ್ರಮದಿಂದ ಜರುಗಿತು.

ಹಿಂದು ಜನಾಂಗದ ಮತ್ತು ಹಿಂದುಸ್ಥಾನದ ಸರ್ವತೋಮುಖ ಸ್ವಾತಂತ್ರ್ಯಕ್ಕಾಗಿ ಭಾಯೀಜಿಯವರು ಈ ವರೆಗೆ ಮಾಡಿರುವ ಅಸಾಧಾರಣವಾದ ಸ್ವಾರ್ಥತ್ಯಾಗವನ್ನೂ ಈಗ ಈ ಧರ್ಮವೀರರು ಹಿಂದುಸ್ಥಾನದ ಉನ್ನತಿಗಾಗಿ ಮಾಡುತ್ತಿರುವ ಮಹತ್ಕಾರ್ಯಗಳನ್ನೂ ಜಯಂತಿಯ ಸಭೆಗಳಲ್ಲಿ ವ್ಯಾಖ್ಯಾತರು ತಿಳಿಸಿದರು. ಭಾಯೀಜಿಯವರಿಗೆ ದೀರ್ಘವಾದ ಆಯುರಾರೋಗ್ಯಗಳು ಲಭಿಸಿ ಇವರಿಂದ ಇದೇ ಪ್ರಕಾರ ಹಿಂದು ಜಾತಿಯ ಮತ್ತು ಹಿಂದುಸ್ಥಾನದ ಸೇವೆ ನಡೆಯಲೆಂದು ಸಭೆಗಳಲ್ಲಿ ಹಾರೈಸಲ್ಪಟ್ಟಿತು.

ಆ ದಿನ ಲಾಹೋರಿನ ತಮ್ಮ ಭಾಷಣದಲ್ಲಿ ಭಾಯೀಜಿಯವರು ಹೀಗೆ ಹೇಳಿದರು— "ಜಿನ್ನಾ ಮತ್ತು ಕಂಪನಿಯವರ ಜಾತೀಯತೆಯನ್ನು ವಿರೋಧಿಸಲು ಯಾವ ರಾಷ್ಟ್ರೀಯರಿಗೆ ಭಯವುಂಟಾಗುತ್ತದೆಯೋ ಅಂಥ ರಾಷ್ಟ್ರೀಯರಿಗಿಂತ ನಾನು ಹೆಚ್ಚು ರಾಷ್ಟ್ರೀಯ ವೃತ್ತಿಯವನಿದ್ದೇನೆ."

---

ಒಬ್ಬ ದೊಡ್ಡ ಸಾಹೇಬರಾದೆವೆಂದು ತಿಳಿದುಕೊಳ್ಳುತ್ತಾರೆ. ಅವರ ತಲೆಯೇ ಸರಿಯಾದ ಸ್ಥಲದಲ್ಲಿ ನಿಲ್ಲುವದಿಲ್ಲ. ಈ ಭಾವನೆ ಎಲ್ಲ ಪ್ರಾಂತಗಳಲ್ಲಿ ಹೋಗಿದ್ದರೂ ನಿಜಾಮ ಪ್ರಾಂತದಲ್ಲಿ ಖಾಯಂ ಆಗಿ ನಿಂತುಕೊಂಡಿದೆ.

ಪಂಪನಗೌಡರು ಈ ಆಚರಣೆಗಳಿಗೆ ಬದ್ಧ ವಿರೋಧಿಗಳು. ಅವರು ಸಾಮಾಜಿಕ ಧಾರ್ಮಿಕ ವಿಚಾರಗಳಲ್ಲಿ ಉತ್ತಮ ಅಭಿಪ್ರಾಯಗಳಿಂದ ಕೂಡಿದವರಾಗಿದ್ದಾರೆ. ಸಮಾಜದಲ್ಲಿರುವ ಕುಂದುಕೊರತೆಗಳನ್ನೂ ಮೂಢಾಚರಣೆಗಳನ್ನೂ ಬಡತನವನ್ನೂ ನೆನೆದು ಮಿಡುಕುವ ಸ್ವಭಾವದವರಾಗಿದ್ದಾರೆ. ಈ ವಿಧದ ಸದ್ಭಾವನೆಯ ಸಹೃದಯ ಪುತ್ರನನ್ನು ಭಗವಂತನು ಸಕ್ರೆಪ್ಪ ಗೌಡರಿಗೆ ಕರುಣಿಸಿದುದು ಗೌಡರಿಗೂ ಸಮಾಜಕ್ಕೂ ಅತಿ ಭೂಷಣ, ಸಂತೋಷ, ಹೆಮ್ಮೆಯ ಮಾತಾಗಿದೆ. ಗೌಡರಿಂದ ಅರ್ಪಿಸಲ್ಪಟ್ಟ ಈ ನಿಧಿಯು ಇತೋಪ್ಯತಿಶಯ ಅಭಿವೃದ್ಧಿಯನ್ನು ಹೊಂದಿ ಸಮಾಜದ ಬಡ ವಿದ್ಯಾರ್ಥಿಗಳ ಕಷ್ಟ ನಿವಾರಣೆಗೆ ಸಹಾಯಕವಾಗಲೆಂದು ಆಶಿಸುತ್ತೇನೆ.

ತಮ್ಮ ಸಮಾಜ ಬಂಧು
ಬೋರ್ಡಿಂಗ್ ಸೆಕ್ರೆಟರಿ
ವಿರೂಪಾಕ್ಷಗೌಡ ವಕೀಲ.

# ವಾರದ ಕೈ. ಬಸವ್ವನವರ ಪುಣ್ಯ ತಿಥಿ.

## ಸೋಲಾಪೂರ.

ತಾ. ೯-೧೦-೩೮ ನೇ ದಿವಸ ಸೋಲಾಪೂರ ಕೈ. ರಾವಬಹಾದ್ದೂರ ಧರ್ಮವೀರ ವಾರದ ಅಪ್ಪಾಸಾಹೇಬರ ಧರ್ಮಪತ್ನಿಯವರಾದ ಬಸವ್ವನವರ ಪುಣ್ಯ ತಿಥಿಯು ಗಂಗಾಬಾಯಿ ಕಾಡಾದಿಯವರ ದವಾಖಾನೆಯಲ್ಲಿ ಸರ್ವ ಮತದ ಪ್ರತಿಷ್ಠಿತ ಸ್ತ್ರೀ ಸಮುದಾಯದೊಡನೆ ಸಭೆಯು ನೆರವೇರಿತು. ಪ್ರಥಮದಲ್ಲಿ ಈಶಸ್ತವನವನ್ನು ಬಾಲಕಿಯರು ಮಾಡಿದ ನಂತರ ರೈಲ್ವೆ ಟ್ರಾಫಿಕ್ ಸುಪರಿಂಟೆಂಡೆಂಟರ ಧರ್ಮಪತ್ನಿ ಸೌ|| ಪ್ರಮಿಲಾದೇವಿ ಸೇನ ಆನರರಿ ಮ್ಯಾಜಿಸ್ಟ್ರೇಟ ಇವರು ಈ ಸಭೆಗೆ ಅಧ್ಯಕ್ಷರಾಗಲು ಯೋಗ್ಯರೆಂಬ ವಿಷಯವನ್ನು ಲೀಲಾಬಾಯಿ ಪರದೇಶಿಯವರು ಹೇಳಿದರು. ಇದೇ ವಿಷಯವನ್ನೇ ಪುಷ್ಟೀಕರಿಸಿ ಶ್ರೀಮತಿ ಲಕ್ಷ್ಮೀಬಾಯಿ ಜೋಶಿಯವರು ಅನುಮೋದನವನ್ನಿತ್ತರು. ಅನಂತರ ಅಧ್ಯಕ್ಷರು ಸ್ಥಾನಾಪನ್ನರಾದರು. ಆ ಮೇಲೆ ವೀರಶೈವ ಮಹಿಳಾ ಜ್ಞಾನಮಂದಿರದ ಕನ್ಯಾಶಾಲೆಯ ವಿದ್ಯಾರ್ಥಿನಿಯರು ಕೋಲು ಹಾಕಿ ಬಸವ್ವನವರ ಗುಣಗಾನದಿಂದ ಕೂಡಿದ ಪದಗಳನ್ನು ಹೇಳಿದರು. ತರುವಾಯ ಗಂಗೂಬಾಯಿ ಕಲ್ಯಾಣಶೆಟ್ಟಿ ಇವರು ನಿಬಂಧವನ್ನು ಓದಿಹೇಳಿದರಲ್ಲದೆ ಶ್ರೀಮತಿ ಗುರುಬಾಯಿ ಮಠಪತ್ರಿ ಇವರು ಕೈ. ಬಸವ್ವನವರಲ್ಲಿದ್ದ ಜಂಗಮಾರ್ಚನೆಯ ನಿತ್ಯಾಚಾರದ ವಿಷಯವಾಗಿಯೂ ಮತ್ತು ಸೌ|| ಪಂಚವ್ವಾಬಾಯಿ ಸರದಾರ ಇವರು ಬಸವ್ವನವರ ಸತ್ಸಂಗತಿಯಿಂದ ಅನೇಕ ಸ್ತ್ರೀಯರು ಸುಧಾರಿಸಿದರೆಂಬ ಸಂಗತಿಯನ್ನೂ ಹೇಳಿದರು.

ನಂತರ ಕು|| ಸೌ|| ಜಯದೇವಿಬಾಯಿ ಲಿಗಾಡೆ ಇವರು ಬಸವ್ವನವರ ಸಂಕ್ಷಿಪ್ತ ಜೀವನ ಚರಿತ್ರೆಯನ್ನು ಹೃದಯಂಗಮವಾಗಿ ಹೇಳಿದರು. ಆ ಮೇಲೆ ಶ್ರೀಮತಿ ಕೌಶಲ್ಯಾಬಾಯಿ ಇಟಾಯಿ ಇವರು ಅವರಲ್ಲಿದ್ದ ಸಮತಾಭಾವದ ವಿಷಯವಾಗಿಯೂ ಶ್ರೀಮತಿ ಯಶೋಧಾಬಾಯಿಯವರು ಅವರಲ್ಲಿದ್ದ ಸ್ವದೇಶ ಪ್ರೇಮದ ವಿಷಯವಾಗಿಯೂ ಭಾಷಣಮಾಡಿದರು. ಆ ಮೇಲೆ ಅಧ್ಯಕ್ಷರು ಉಪಸಂಹಾರಪರ ಭಾಷಣದಲ್ಲಿ ಹೇಳಿದ್ದೇನೆಂದರೆ- 'ಈ ದಿವಸದ ಸಭೆಯಲ್ಲಿ ಜಾತಿಭೇದವಿಲ್ಲದೆ ಎಲ್ಲ ಸಮಾಜದವರು ಬಂದಿರುವುದನ್ನು ನೋಡಿದರೆ ಮತ್ತು ಅವರು ಗತಿಸಿ ಅನೇಕ ವರ್ಷಗಳಾದರೂ ಅವರ ಸದ್ಗುಣಗಳು ನಿತ್ಯಪ್ರಕಾಶವಾಗಿರಲೆಂದು ಈ ಸ್ಮೃತಿ ದಿನದ ನಿಮಿತ್ತವಾಗಿ ಬಹುಜನ ಸಮೂಹವು ಹಾರೈಸುತ್ತಿರುವುದನ್ನು ನೋಡಿದರೆ ಬಸವ್ವನವರಲ್ಲಿ ಸದ್ಗುಣಗಳು ಎಷ್ಟಿದ್ದವೆಂಬುದು ಸಹಜವಾಗಿ ಕಾಣುವಂತಿದೆ.' ಎಂಬುದಾಗಿ ಹೇಳಿದರು. ಆ ಮೇಲೆ ಸೌ|| ಸಂಗವ್ವಾಬಾಯಿ ಮಡಕಿ ಇವರು ಆಭಾರ ಮನ್ನಣೆಯಪರ ಭಾಷಣವನ್ನು ಸೌ|| ಜಯದೇವಿಬಾಯಿ ಲಿಗಾಡೆ ಇವರು ಸ್ವತಃ ಮಾಡಿದ ಆಭಾರಪರ ಪದವನ್ನು ಮಂಜುಳವಾದ ಧ್ವನಿಯಿಂದ ಹಾಡಿದ ನಂತರ ಮಂಗಲವಾಗಿ ಸಭೆಯು ವಿಸರ್ಜಿಸಲ್ಪಟ್ಟಿತು.

ವೀರಶೈವ ಮಹಿಲಾ ಜ್ಞಾನ ಮಂದಿರದ ಸೆಕ್ರೆಟರಿ
ಕು|| ಸೌ|| ಸಂಗವ್ವಾಬಾಯಿ ಮಡಕಿ
ಸೋಲಾಪೂರ.

---

—ಪುಣೆಯಲ್ಲಿ ತಾ. ೩೦-೧೦-೩೮ ನೆಯ ದಿವಸ ಆರ್ಯಸಮಾಜದ ಮಂದಿರದಲ್ಲಿ ಡಾ. ಜಿ. ಎಸ್. ಗೋರೆ ಎಂಬುವವರ ಅಧ್ಯಕ್ಷತೆಯಲ್ಲಿ ಆಜಗರ ಅಲ್ಲಿ ಎಂಬುವವರಿಗೆ ಹಿಂದು ಧರ್ಮದ ದೀಕ್ಷೆಯನ್ನು ಕೊಡಲಾಯಿತು. ದೀಕ್ಷೆಯನಂತರ ಅವರಿಗೆ ವಿಚಿತ್ರಸಿಂಗ ಎಂಬ ಹೆಸರನ್ನು ಇಟ್ಟರು.

# ಕರ್ನಾಟಕ ಸಾಮ್ರಾಜ್ಯದ ಪುನರ್ನಿರ್ಮಾಣ!

ಕಳೆದ ೨೭ ನೆಯ ತಾರೀಖಿನ ದಿನ ಕರ್ನಾಟಕ ಸಾಹಿತ್ಯಾಚಾರ್ಯರಾದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರಿಗೆ ಬೆಂಗಳೂರು ವೀರಶೈವ ಮಹಾಜನರು ಅಭಿನಂದನ ಪತ್ರಿಕೆಯನ್ನು ಅರ್ಪಿಸಿದ ನಂತರ ಶ್ರೀ. ಶ್ರೀಕಂಠಯ್ಯನವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ನನ್ನ ಅಲ್ಪಸ್ವಲ್ಪ ಗುಣಗಳನ್ನು ಬಹು ದೊಡ್ಡದನ್ನಾಗಿ ಮಾಡಿಕೊಂಡು, ನನ್ನ ಕೀರ್ತಿಯನ್ನು ಹರಡಿದ್ದೀರಿ. ಈ ಉಪನ್ಯಾಸದ ಸಮಯದಲ್ಲಿ ನನ್ನಿಂದ ಮಾತೇ ಹೊರಡುವುದು ಕಷ್ಟವಾಗಿದೆ" ಎಂದರು. "ವೀರಶೈವ ಸಮಾಜ ಸೇವಕರಲ್ಲಿ ನಾನೂ ಒಬ್ಬ. ವೀರಶೈವ ಸಮಾಜಸೇವೆ ನನಗೆ ಬಹು ಕಾಲದಿಂದ ಬಂದದ್ದು. ವೀರಶೈವ ವಾಙ್ಮಯಕ್ಕೆ ಅದರಲ್ಲಿರುವ ಶಕ್ತಿ ಮತ್ತು ಧರ್ಮಕ್ಕೆ ನಾನು ಪೂರ್ಣವಾಗಿ ಮನಸೋತಿರುವೆನು. ನನ್ನನ್ನು ತಮ್ಮ ಮನೆಯವನೆಂದು ತಿಳಿದಿರುವುದು ನನ್ನ ಸೌಭಾಗ್ಯ. ಕನ್ನಡದ ಏಳಿಗೆಗಾಗಿ, ಕನ್ನಡದ ಬಾವುಟದ ಹಿರಿಮೆಯನ್ನು ಎತ್ತಿ ಹಿಡಿಯುವದಕ್ಕಾಗಿ ಕಂಕಣತೊಟ್ಟಿರುವ ನನಗೆ ನೀವೆಲ್ಲರೂ ಬೆಂಬಲರಾಗಿರುವಿರೆಂದು ಹೇಳಿದ್ದು ಎಷ್ಟು ಸಂತೋಷವಾಗಿದೆ ಎಂಬುದನ್ನು ನಾನು ಹೇಗೆ ಹೇಳಲಿ! ಇಂಗ್ಲಿಷ್ ವ್ಯಾಸಂಗ ಮಾಡುವ ನನಗೆ ಕನ್ನಡದಲ್ಲಿ ಪ್ರೀತಿ ವಿಶ್ವಾಸವು ಸಾಲದೆಂದು ಕೆಲವರು ಇನ್ನೂ ಭಾವಿಸಿರುವರು. ಆದರೆ ನನಗೆ ಕನ್ನಡದಲ್ಲಿ ಪೂರ್ಣ ವಿಶ್ವಾಸವಿದೆ. ಕನ್ನಡದಲ್ಲಿರುವ ಕೊಳಕನ್ನು ಕಿತ್ತೊಗೆದು, ಅದಕ್ಕೆ ಹೊರಗಣ ಸಾಹಿತ್ಯಗಳಿಂದ ಒಳ್ಳೆಯದನ್ನು ಆಯ್ದು ತರುವುದು ಅಗತ್ಯವಾಗಿ ನಡೆಯಬೇಕಾಗಿದೆ. ಇಂಗ್ಲಿಷಿನಲ್ಲಿರುವ ತೇಜಸ್ಸು, ವೈಶಾಲ್ಯ, ಮನಸ್ಸನ್ನು ಚಿಮ್ಮಿಸುವ ಯೋಗ್ಯತೆ-ಇವನ್ನು ಕನ್ನಡದಲ್ಲಿ ಎತ್ತಿ ತೋರಿಸಬೇಕು. ಜೀವಕ್ಕೆ ಜೀವವನ್ನೂ ಆತ್ಮಕ್ಕೆ ಆತ್ಮವನ್ನೂ ತುಂಬುವ ಕಾರ್ಯವು ಸರ್ವದಾ ನಡೆಯುತ್ತಿರಬೇಕು. ಅದನ್ನು ಅರಸುವುದೇ ನನಗೊಂದು ಸಂತೋಷ. ಕನ್ನಡದ ಪೋಷಣೆಗೆ ತಕ್ಕ ಯೋಗ್ಯತೆಯನ್ನು ಪಡೆಯಲು ಗ್ರೀಕ್, ಇಂಗ್ಲಿಷ್ ಮತ್ತು ಸಂಸ್ಕೃತ ಸಾಹಿತ್ಯಗಳಲ್ಲಿರುವ ಅತ್ಯುತ್ತಮವಾದವುಗಳನ್ನು ಚೆನ್ನಾಗಿ ತಿಳಿಯಬೇಕೆಂದು ನಾನು ಅರಿತಿದ್ದೇನೆ. ಎಲ್ಲವನ್ನೂ ಸಂಕುಚಿತ ಬುದ್ಧಿಯಿಲ್ಲದೆ ವ್ಯಾಸಂಗ ಮಾಡಿ, ಸಾರವನ್ನು ಹೀರಿ, ಕನ್ನಡವನ್ನು ಪೋಷಿಸಬೇಕೆಂದು ನಾನು ಅರಿತಿದ್ದೇನೆ" ಎಂದು ಅವರು ಹೇಳಿದರು.

ಮುಂದುವರಿಯುತ್ತ ಶ್ರೀ. ಶ್ರೀಕಂಠಯ್ಯನವರು "ಕನ್ನಡ ನಾಡಿನ ಮುಂದಕ್ಕೆ ನನ್ನ ದೃಷ್ಟಿ ಹೋಗಿಲ್ಲ. ಆದರೆ ನಾನು ಇತರ ಭೂಪಟಗಳನ್ನು ನೋಡಿದ್ದೇನೆ! (ನಗು) ನನಗೆ ಇಷ್ಟು ಸಾಕು. ಈ ಸಂಕುಚಿತ ದೃಷ್ಟಿ ಬೇಕಾಗಿದೆ. ನಮ್ಮ ಮನೆಯನ್ನು ಮೊದಲು ಚೊಕ್ಕಟವಾಗಿಟ್ಟುಕೊಂಡು ಹೊರಗಿನಿಂದ ಹೊಸ ಸಸಿಗಳನ್ನು ತಂದು ನೆಟ್ಟು ಹೂ ಹಣ್ಣುಗಳನ್ನು ಕಂಡು ಆನಂದಿಸೋಣ. ಕನ್ನಡದಲ್ಲಿರುವ ಕಶ್ಮಲ ಹೋಗಿ ಶುದ್ಧವಾಗಬೇಕು. ತನ್ನ ಬೇರಿನ ಮೇಲೆ ನಿಂತು ಸ್ವತಂತ್ರವಾಗಿ ಬೆಳೆಯಬೇಕು. ಕನ್ನಡದ ಹೋರಾಟ ಇತರರಾರನ್ನೂ ತರುಬುವುದಕ್ಕಲ್ಲ. ನಾವು ಬಿಡುಗಡೆ ಹೊಂದಲು ಮಾತ್ರ ಪ್ರಯತ್ನಿಸುತ್ತಿದ್ದೇವೆ. ಕನ್ನಡ ನಲಿದು ಹರಿದು ಓಡಾಡಬೇಕು. ಮುಖ್ಯವಾಗಿ ಒಕ್ಕಟ್ಟು ಬರಬೇಕು, ಕನ್ನಡ ಶುದ್ಧವಾದರೆ ಕನ್ನಡ ದೇವಿಯನ್ನು ಆರಾಧಿಸಲು ಪ್ರಸಾದಿಕ ಕವಿಗಳು ಹುಟ್ಟುವುದರಲ್ಲಿ ಅಡ್ಡಿಯೇನು? ಆ ಸನ್ನಿವೇಶವನ್ನು ಕಲ್ಪಿಸುವದು ನಮ್ಮ ಕಾರ್ಯ. ಕನ್ನಡ ನಾಡು ಶ್ರೀಮನ್ಮಹಾರಾಜರವರ ಕಾಲದಲ್ಲಿಯೇ ಒಂದಾಗುವದೆಂದೂ ಕರ್ನಾಟಕ ಸಾಮ್ರಾಜ್ಯ ಪುನಃ ನಿರ್ಮಾಣವಾಗುವುದೆಂದೂ ನನಗೆ ತೋರುತ್ತದೆ. ಹಾಗೆ ಪುನಃ ನಿರ್ಮಾಣವಾದುದು ಇನ್ನುಮುಂದೆ ಖಂಡಿತವಾಗಿಯೂ ಅಳಿಸಿಹೋಗುವುದಿಲ್ಲ" (ಹರ್ಷಧ್ವನಿ) ಎಂದರು.

---

# ಮುಸಲ್ಮಾನರ ಅತ್ಯಾಚಾರ.

ಕಳೆದ ೨೭ ನೆಯ ತಾರೀಖಿನ ರಾತ್ರಿ ೧೦ ಗಂಟೆಯ ಸಮಯದಲ್ಲಿ ಸಾಂಗಲಿಯಲ್ಲಿ ಕೆಲವು ಪುಂಡ ಮುಸಲ್ಮಾನರು ಭಯಂಕರ ಅತ್ಯಾಚಾರವನ್ನು ನಡೆಯಿಸಿದರು. ಅಲ್ಲಿಯ ಕೃಷ್ಣಾ ತೀರದಲ್ಲಿರುವ ಒಂದು ಹನುಮಂತದೇವರ ಗುಡಿಯಲ್ಲಿ ಕೆಲವು ತುಂಟ ಮುಸಲ್ಮಾನರು ಸೇರಿ ಆ ಮೂರ್ತಿಯನ್ನು ತುಂಡುತುಂಡಾಗಿ ಒಡೆದುಹಾಕಿದರು. ಅಲ್ಲಿಂದ ಸ್ವಲ್ಪ ದೂರದಲ್ಲಿ ೧೮-೧೯ ವರುಷಗಳ ಚಿತಳೆ ಎಂಬ ಒಬ್ಬ ತರುಣನು ಕುಳಿತಿದ್ದನು. ಈ ವೀರ ತರುಣನು ಹಿಂದು ಸಂಘಟನೆಯ ಕಾರ್ಯದಲ್ಲಿ ಬಹು ಮುಂದಾಳು. ಹೈದರಾಬಾದದಲ್ಲಿಯ ಅಸಹಾಯ ಹಿಂದುಗಳ ಸಹಾಯಾರ್ಥವಾದ ನಿಧಿಗೆ ಹಣ ಕೂಡಿಸಲು ಬಹು ಪ್ರಯತ್ನಿಸಿದ ವಿದ್ಯಾರ್ಥಿಯು. ಈ ತರುಣನು ಹೈಸ್ಕೂಲಿನಲ್ಲಿ ಕಲಿಯುತ್ತಿದ್ದಾನೆ. ವಿದ್ಯಾರ್ಥಿಗಳಲ್ಲಿ ಬಹು ಜಾಗೃತಿಯನ್ನು ಉಂಟುಮಾಡಿದ್ದಾನೆ.

ಆ ತುಂಟರು ಈತನು ರಾತ್ರಿ ಒಬ್ಬನೇ ಅಲ್ಲಿ ಕುಳಿತುದನ್ನು ನೋಡಿ ಆತನ ಮೇಲೆ ಅತ್ಯಾಚಾರ ನಡೆಸಿದರು. ಆ ತರುಣನ ಹೊಟ್ಟೆಯಲ್ಲಿ ಚೂರಿಯನ್ನು ಹಾಕಬೇಕೆಂದು ಚೂರಿಯಿಂದ ಇರಿಯಲು ಆತನು ತಪ್ಪಿಸಿಕೊಂಡನು. ಅದು ಆತನ ತೋಳಿಗೆ ತಾಕಿತು. ನಿನ್ನ ಮುಂದಾಳು ಲಿಮಯೆ ಎಂಬುವವನಿಗೂ ಇದೇ ಗತಿಯೆಂದು ತುಂಟರು ಹೇಳಿದರು. ಬೆನ್ನಿನ ಮೇಲೆ ಬಲವಾದ ಏಟುಗಳನ್ನು ಹಾಕಿದರು. ವಿದ್ಯಾರ್ಥಿಯು ಮೂರ್ಛೆ ಹೊಂದಿ ಬಿದ್ದನು. ತುಂಟರು ಓಡಿಹೋದರು. ಸ್ವಲ್ಪ ಹೊತ್ತಿನ ಮೇಲೆ ಎಚ್ಚತ್ತು ಬಹು ಕಷ್ಟದಿಂದ ಊರ ಕಡೆ ಬರಲು ಜನರು ಕಂಡು ಈತನನ್ನು ವೈದ್ಯಾಲಯಕ್ಕೆ ತೆಗೆದುಕೊಂಡುಹೋದರು. ಈ ವಿಷಾದದ ಸುದ್ದಿಯು ಪಟ್ಟಣದಲ್ಲೆಲ್ಲಾ ಸ್ವಲ್ಪ ಹೊತ್ತಿನಲ್ಲಿಯೇ ವ್ಯಾಪಿಸಿತು.

ಹಿಂದು ಮಹಾಸಭೆಯ ಅಧ್ಯಕ್ಷರು ರಾತ್ರಿಯೇ ಪ್ರಸಿದ್ಧ ಪತ್ರಿಕೆಯನ್ನು ಹೊರಡಿಸಿ ಮರುದಿನ ಪಟ್ಟಣದಲ್ಲಿ ಹರತಾಳವನ್ನು ಆಚರಿಸಲು ವಿಜ್ಞಾಪಿಸಿಕೊಂಡರು. ತಾ. ೨೮ ನೆಯ ದಿನ ಪಟ್ಟಣವೆಲ್ಲಾ ಹರತಾಳವನ್ನು ಆಚರಿಸಿ ಈ ಘೋರ ಕೃತ್ಯವನ್ನು ನಿಷೇಧಿಸಿತು. ಬೆಳಗ್ಗೆ ೧೦ ಗಂಟೆ ಸಮಯಕ್ಕೆ ಕರಿ ನಿಶಾನೆಯ ಪ್ರಚಂಡ ಮೆರವಣಿಗೆ ಹೊರಟಿತು. ಅದರಲ್ಲಿ ೮-೧೦ ಸಾವಿರ ಜನರು ಸೇರಿದ್ದರು. ತುಂಟ ಮುಸಲ್ಮಾನರ ಈ ಕೃತಿಯನ್ನು ಎಲ್ಲರೂ ನಿಷೇಧಿಸಲು ಈ ಮೆರವಣಿಗೆಯಲ್ಲಿ ಸೇರಿದ್ದರು.

ಸಾಯಂಕಾಲದಲ್ಲಿ ಪ್ರಚಂಡ ಸಭೆ ಸೇರಿ ಈ ಅತ್ಯಾಚಾರವನ್ನು ಸಾಂಗಲಿ ನಾಗರಿಕರು ಕಟುತರವಾಗಿ ನಿಷೇಧಿಸಿದರು. ಪೋಲಿಸರು ಪುಂಡರನ್ನು ಶೋಧಿಸುವ ಕೆಲಸ ನಡೆಸಿದ್ದಾರೆ. ಅತ್ಯಾಚಾರ ನಡೆದ ಸ್ಥಳದಲ್ಲಿ ಎಂ. ಎ. ಹನ್ನಾನ ಎಂದು ಇಂಗ್ಲಿಷಿನಲ್ಲಿ ಹೆಸರಿರುವ ಒಂದು ಕರವಸ್ತ್ರವು ದೊರೆತಿದೆ.

ಹಿಂದು ಸಂಘಟನೆಯ ಕಾರ್ಯವು ದಕ್ಷಿಣ ಹಿಂದುಸ್ಥಾನದಲ್ಲಿಯೂ ಬಹು ಕಠಿಣವಾದುದಾಗಿಯೇ ಪರಿಣಮಿಸಲಾಗುವಂತೆ ತೋರುತ್ತದೆಂದು ಅನೇಕರು ಯೋಚಿಸುತ್ತಿದ್ದಾರೆ. ಪುಣೆ ಮೊದಲಾದ ಮಹರಾಷ್ಟ್ರದ ಅನೇಕ ಪ್ರಮುಖ ಸ್ಥಳಗಳಲ್ಲಿ ಸಾಂಗಲಿಯ ಈ ಅತ್ಯಾಚಾರವನ್ನು ನಿಷೇಧಿಸುವ ಸಭೆಗಳು ಕೂಡಿದವು.

# ವೀರಶೈವ ಧಾರ್ಮಿಕ ಸಂಸ್ಥೆಗಳು ಮತ್ತು ವಚನ ಶಾಸ್ತ್ರ.

(ಲೇ:— 'ಸೇವಕ', ವೀರಶೈವ ತರುಣ ಸಂಘ ಕಾನಕಾನಹಳ್ಳಿ.

## ಮೊದಲ ಮಾತು.

ವೀರಶೈವ ಮತದಲ್ಲಿ ಧಾರ್ಮಿಕ ಸಂಸ್ಥೆಗಳು ಏರ್ಪಟ್ಟಿರುವುದು ಆದರ ಏಳಿಗೆಗಾಗಿ ಎಂಬುದನ್ನು ಎಲ್ಲರೂ ಒಪ್ಪುವರು. ಮತದ ಏಳಿಗೆಯು ಹೇಗೆ ಸಾಧಿಸಲ್ಪಡಬೇಕು ? ಎಂಬ ಒಂದು ಜಟಿಲವಾದ ಪ್ರಶ್ನೆ ನಮ್ಮ ಮುಂದೆ ಎದ್ದುನಿಲ್ಲುವುದು. ಸಮಾಜವು ಸೃಜವಾದ ಸಂಸ್ಕಾರವನ್ನು ಹೊಂದುವುದೇ ಅದರ ಏಳಿಗೆಗೆ ಅಡಿಗಲ್ಲು. ಸಮಾಜವು ಸುಸಂಸ್ಕೃತವಾಗ ಬೇಕಾದರೆ ಅದು ಒಂದು ನಿಷ್ಕೃಷ್ಟವಾದ ಮಾರ್ಗವನ್ನು ಅನುಸರಿಸಬೇಕು. ಅಂತಹ ಮಾರ್ಗವಾವುದು? ಎಂಬ ಪ್ರಶ್ನೆ ಸಮಾಜಹಿತ ದೃಷ್ಟಿಯಿಂದ ಬಹಳ ಮುಖ್ಯವಾದುದಾಗಿದೆ. ಈ ಮಾರ್ಗವನ್ನು ಬೋಧಿಸುವುದಕ್ಕೆ ಮತ ತತ್ವಗಳನ್ನು ಪ್ರತಿಪಾದಿಸುವ ಧಾರ್ಮಿಕ ಗ್ರಂಥಗಳು ಪ್ರಮಾಣವಾಗಿರುವವು. ಈ ಬಗೆಯ ಧಾರ್ಮಿಕ ಗ್ರಂಥಗಳು ವೀರಶೈವ ಮತದ ಇತಿಹಾಸದಲ್ಲಿ ಅನೇಕವಿವೆ. ಈ ಧಾರ್ಮಿಕ ಗ್ರಂಥಗಳನ್ನು ಅಗತ್ಯವಾಗಿ ಸಂಗ್ರಹಿಸಿಡಬೇಕಾದುದು ಪ್ರತಿ ಧಾರ್ಮಿಕ ಸಂಸ್ಥೆಯ ಅತಿ ಮುಖ್ಯವಾದ ಒಂದು ಭಾಗ. ಇವುಗಳನ್ನು ಸಂಗ್ರಹಿಸಿಡದಿದ್ದರೆ ಮತ ತತ್ವ ಪ್ರತಿಪಾದಕವಾದ ಅಂತಹ ಉದ್ಗ್ರಂಥಗಳು ಉಪಲಬ್ಧವಾಗಿವೆ ಎಂಬ ಅಂಶವೂ ಸಮಾಜದ ವ್ಯಕ್ತಿಗಳನೇಕರಿಗೆ ಗೋಚರವಾಗದಿರಬಹುದು. ಸಮಾಜ ಅಥವಾ ಧರ್ಮಸಂಸ್ಥೆಯು ವ್ಯಕ್ತಿಯ ಜೀವನೋನ್ನತಿಯನ್ನು ಸಾಧಿಸಲು ಎರವಾಗುವುದು. ಅಂತಹ ಸಮಾಜ ಅಥವಾ ಧಾರ್ಮಿಕ ಸಂಸ್ಥೆಗೆ ಮತತತ್ವ ಪ್ರತಿಪಾದಕ ಮತ್ತು ನೈತಿಕ ಗ್ರಂಥಗಳೇ ಕೇಂದ್ರ ಜ್ಞಾನದಾಯಕವಾದವುಗಳು. ಇಂತಹ ಗ್ರಂಥ ಭಂಡಾರದ ಅವಶ್ಯಕತೆಯು ಎಷ್ಟು ಮುಖ್ಯವಾದ ಅಂಶವೆಂಬುದು ಇದರಿಂದ ಸ್ಪಷ್ಟವಾಗುವುದು.

ಇಂತಹ ಧಾರ್ಮಿಕ ಗ್ರಂಥಗಳು ಯಾವವು? ಎಂಬುದನ್ನು ವಿವೇಚಿಸುವುದು ಅಗತ್ಯವಾಗಿದೆ. ವೇದಾಗಮಗಳು ಸಂಸ್ಕೃತ ಭಾಷೆಯಲ್ಲಿರುವುದು ಸರ್ವರಿಗೂ ತಿಳಿದ ವಿಷಯವಷ್ಟೆ. ವೀರಶೈವ ಮತವು ವೈದಿಕ ತಾಂತ್ರಿಕ ಮತವೆಂದೂ ಹೇಳಲ್ಪಟ್ಟದೆಯಾಗಿ, ಶಿವಾಗಮಗಳೇ ಅದರ ಉಗಮಸ್ಥಾನವಾಗಿವೆ. ಆ ಶಿವಾಗಮಗಳಂತೆಯೇ ಅವುಗಳಿಂದ ಜನ್ಯವಾದ ಕೆಲವು ಗ್ರಂಥಗಳೂ ಸಂಸ್ಕೃತ ಭಾಷೆಯಲ್ಲಿಯೇ ಇವೆ.

### ೧ ವಚನ ಶಾಸ್ತ್ರದ ಮಹತ್ವ.

ಆದರೆ ಮತತತ್ವಗಳು ಸಂಸ್ಕೃತ ಭಾಷೆಯಲ್ಲಿರುವುದಾದರೂ ಆ ಭಾಷೆಯು ಜನಸಾಮಾನ್ಯರ ಭಾಷೆಯಲ್ಲದೆ ಹೋದುದು ತುಂಬಾ ತೊಂದರೆಗೆ ಕಾರಣವಾಗಿರಬೇಕು. ಈ ಕೊರತೆಯನ್ನು ನಿವಾರಿಸಬಲ್ಲ ಧರ್ಮಪ್ರಚಾರಕರು ಅತ್ಯಂತ ಅವಶ್ಯವಾಗಿ ಬೇಕಾಗಿದ್ದರು. ಜನ ಸಾಮಾನ್ಯರಿಗೆ ಅಲಭ್ಯವಾದ ಭಾಷೆಯಲ್ಲಿ ಅಡಗಿರುವ ತತ್ವಗಳನ್ನು ನಾಡಿನ ತಾಯ್ನುಡಿಯಲ್ಲಿ ಜನಸಾಮಾನ್ಯರಿಗೆ ಪರಿಚಯ ಮಾಡಿಕೊಡುವ ಪ್ರಯತ್ನವು ಕ್ರಿ. ಶ. ಹನ್ನೆರಡನೆಯ ಶತಮಾನದಲ್ಲಿ ಬಸವೇಶ್ವರನೇ ಮೊದಲಾದ ಶಿವಶರಣರಿಂದ ನಡೆಯಿತು. ಆಗಿನ ಶಿವಶರಣರು ತತ್ವವೇತ್ತರೂ ಮಹಾನುಭಾವಿಗಳೂ ಆಗಿದ್ದುದರಿಂದ ವೀರಶೈವ ಮತತತ್ವಗಳು ನವ ಚೈತನ್ಯವನ್ನು ಹೊಂದಿ ಜನಸಾಮಾನ್ಯದ ಅರಿವಿಗೆ ನಿಲುಕುವಂತಾದವು. ಧಾರ್ಮಿಕ ವಿಚಾರಗಳನ್ನು ಜನರ ಮಾತಿನಲ್ಲಿ ಸಣ್ಣ ಮತ್ತು ಸುಲಭ ಸ್ಫೂರ್ತಿಯುಕ್ತ ಸುಲಭ ವಾಕ್ಯಗಳಿಂದ ವಚನ ರೂಪವಾಗಿ ಹರಿಸಿದರು. ಅದರ ವಿವಿಧವಾದ ಅನುಭಾವಗಳಿಂದ ಪರಿಪಕ್ವವಾಗಿ ಹೊರಟ ವಚನಗಳೇ 'ವಚನಶಾಸ್ತ್ರ' ಎಂಬ ಹೆಸರಿನಿಂದ ಶೋಭಿಸುತ್ತವೆ. ವಚನ ಶಾಸ್ತ್ರದ ಯೋಗ್ಯತೆಯನ್ನು ಕುರಿತು ಒಂದೆರಡು ವಿಷಯಗಳನ್ನು ಇಲ್ಲಿ ಹೇಳುವುದು ಅಪ್ರಾಸಂಗಿಕವೆನಿಸಲಾರದು.

ವಚನ ಶಾಸ್ತ್ರವು ಕೇವಲ ವೇದಾಗಮಗಳಿಗೆ ವಿರೋಧವೆಂದೂ ಅಪ್ರಮಾಣವೆಂದೂ ವೀರಶೈವ ಮತಕ್ಕೆ ಆದರಿಂದ ಏನೂ ಪ್ರಯೋಜನವಿಲ್ಲವೆಂದೂ ವಾದಿಸುವವರು ಕೆಲವರಿದ್ದಾರೆ. ಅಂತಹವರು ವಚನ ಶಾಸ್ತ್ರದ ತಿರುಳನ್ನು ಅರಿಯುರೆಂದೇ ಹೇಳಬಹುದು. ಈ ಸಮಯದಲ್ಲಿ ವಚನಶಾಸ್ತ್ರವನ್ನು ವಿಮರ್ಶನಾದೃಷ್ಟಿಯಿಂದ ಪರಿಶೀಲಿಸಿರುವ ಇಬ್ಬರು ವಿದ್ವನ್ಮಣಿಗಳ ಅಭಿಪ್ರಾಯವನ್ನು ಉಲ್ಲೇಖಿಸುವುದು ಅಗತ್ಯವಾಗಿದೆ. ವಚನಶಾಸ್ತ್ರವು ವೇದಾಗಮಗಳ ಸಾರಭೂತವಾದುದೆಂಬ ಅಂಶವನ್ನು ಕರ್ನಾಟಕದ ಪ್ರಸಿದ್ಧ ವಿದ್ವಾಂಸರಾದ ರಾವಸಾಹೇಬ ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಯವರು 'ವಚನ ಶಾಸ್ತ್ರಸಾರ' ಎಂಬ ಗ್ರಂಥದ ಮುನ್ನುಡಿಯಲ್ಲಿ ಹೀಗೆ ಬರೆದಿದ್ದಾರೆ—

"ಇವುಗಳಲ್ಲಿ (ವಚನಗಳಲ್ಲಿ) ವೇದೋಪನಿಷತ್ತುಗಳಲ್ಲಿಯ ಮಹತ್ವದ ತತ್ವಗಳೇ ಅಡಕವಾಗಿವೆ............ಆಗಮ ಗ್ರಂಥಗಳಿಗೂ ವಚನಕಾರರ ತತ್ವಗಳಿಗೂ ಪ್ರತ್ಯಕ್ಷ ಸಂಬಂಧವುಂಟು. ಅವರ ತತ್ವಗಳೆಲ್ಲ ವೇದಾಗಮೋಪನಿಷತ್ತುಗಳೊಳಗಿಂದಲೇ ತೆಗೆದುಕೊಂಡವಿರುತ್ತವೆ. ಮತ್ತು ಅವರ ವಚನಗಳಲ್ಲಿ ಅವುಗಳಲ್ಲಿಯ ಅವತರಣಗಳು ತುಂಬಿಹೋಗಿರುತ್ತವೆ. ಒಂದು ವೇಳೆ ಅವರು ಈ ಗ್ರಂಥಗಳನ್ನು ಅವಿಶ್ವಸಿಸುತ್ತಿದ್ದರೆ ಅವುಗಳಲ್ಲಿಯ ಉಕ್ತಿಗಳನ್ನು ಹೀಗೆ ತಮಗೆ ಆಧಾರವಾಗಿಟ್ಟುಕೊಂಡು ಎಂದೂ ಅವುಗಳನ್ನು ಉದಾಹರಿಸುತ್ತಿದ್ದಿಲ್ಲ."

ಕನ್ನಡ ನಾಡಿನ ಸುಪ್ರಸಿದ್ಧ ವಿದ್ವಾಂಸರೂ ದೇಶಭಕ್ತರೂ ಆದ ಶ್ರೀಮಾನ್ ರಂಗನಾಥ ದಿವಾಕರ ಎಂ. ಎ. ಎಲ್. ಎಲ್. ಬಿ. ಇವರು "ವಚನಶಾಸ್ತ್ರ ರಹಸ್ಯ"ವೆಂಬ ತಮ್ಮ ಸುಪ್ರಸಿದ್ಧ ಗ್ರಂಥದಲ್ಲಿ ಹೇಳಿರುವ ಮಾತುಗಳಿವು— "ವೇದಾಗಮ ಗ್ರಂಥಗಳಲ್ಲಿ ಹೇಳಲ್ಪಟ್ಟ ತತ್ವಗಳನ್ನು ತಮ್ಮ ಅಂತರಾತ್ಮನ ಪಡಿಯಚ್ಚಿನಲ್ಲಿ ಒತ್ತಿ, ಅವುಗಳಿಗೆ ಒಂದು ವಿಶಿಷ್ಟರೂಪವನ್ನು ಕೊಟ್ಟು ತಿಳಿಗನ್ನಡ ಉಡುಪನ್ನು ತೊಡಿಸಿ, ಪಂಡಿತ ಪಾಮರರಿಗೆ ಮನೋಹರ ಮತ್ತು ಮನದಟ್ಟಾಗುವಂತೆ ಶಿವಶರಣರು ಈ ವಚನ ಶಾಸ್ತ್ರವನ್ನು ರಚಿಸಿದ್ದಾರೆ. ವೇದ, ಉಪನಿಷತ್ತು, ಮತ್ತು ಆಗಮಾದಿಗಳಲ್ಲಿ ಉಕ್ತವಾದ ಅಬಾಧಿತ, ಸನಾತನ, ಉದಾತ್ತವಿಚಾರಗಳೇ ಈ ಶಾಸ್ತ್ರಕ್ಕೆ ಆಧಾರಭೂತವಾದವುಗಳು. ನಿರ್ಮಲಾಂತಃಕರಣಿಗಳಾದ ಅನನ್ಯಭಕ್ತರ ಆತ್ಮಾನುಭಾವವೇ ಇವರ ಒರೆಗಲ್ಲು; ಸರ್ವಜನ ಸುಲಭವಾಗುವಂತೆ ಶರಣರು ಇದನ್ನು ಮೂರ್ತಿಸಿದ್ದೇ ಇದರ ರೂಪವು. ಮತ್ತು ಸರಲ ಸ್ಫೂರ್ತ ಕನ್ನಡ ನುಡಿಯೇ ಇದರ ಬಾಹ್ಯ ವೇಷವು. ಮೋಕ್ಷವು ವೇದಾಗಮಗಳ ಗುರಿಯಿರುವಂತೆ ವಚನ ಶಾಸ್ತ್ರದ ಗುರಿಯಾದರೂ ಇರುವುದು. ಆ ಗುರಿಯನ್ನು ಸಾಧಿಸುವು

ದಕ್ಕಾಗಿ ವೇದಾದಿ ಗ್ರಂಥಗಳು ವಿವಿಧ ಮಾರ್ಗಗಳನ್ನು ಹೇಳಿರುವಂತೆ ವಚನ ಶಾಸ್ತ್ರವು ಶರಣ ಮಾರ್ಗವೆಂಬ ಒಂದೇ ಒಂದು ರಾಯಬೀದಿಯನ್ನು ಕಟ್ಟಿರುವುದು. ಈ ರೀತಿ ವೇದಾಂತದಂತೆ ವಚನ ಶಾಸ್ತ್ರವೂ ಮೋಕ್ಷಶಾಸ್ತ್ರ ಅಥವಾ ಅಧ್ಯಾತ್ಮ ಶಾಸ್ತ್ರ ಎನಿಸುವುದು." ಈ ಮೊದಲಾದ ಅಭಿಪ್ರಾಯಗಳಿಂದ ವಚನಶಾಸ್ತ್ರದ ಸ್ಥಾನ ಮಹತ್ವವು ನಿರ್ದಿಷ್ಟವಾಗುವುದು. ಶಿವಶರಣರು "ವಿಚಾರಕ್ಕಿಂತ ಅನುಭಾವಕ್ಕೆ, ನುಡಿಗಿಂತ ನಡೆಗೆ, ಬುದ್ಧಿಗಿಂತ ಭಾವಕ್ಕೆ, ತರ್ಕಕ್ಕಿಂತ ಅನುಭಾವಕ್ಕೆ ಕುಲಕ್ಕಿಂತ ಶೀಲಕ್ಕೆ ಹೆಚ್ಚು ಮಹತ್ವವನ್ನು ಕೊಡುವವರು." ಒಟ್ಟಿನಲ್ಲಿ ವಚನ ಶಾಸ್ತ್ರದಲ್ಲಿ ಅಖಿಲ ಮಾನವಕೋಟಿಗೆ ಸಮ್ಮತವಾಗುವಂಥ ಮತ್ತು ಉಪಯೋಗವಾಗುವಂಥ ತತ್ವಜ್ಞಾನವೂ ನೀತಿವಿಚಾರವೂ ಇರುವವು. ಆದುದರಿಂದ ಇದು ಇಡೀ ಮಾನವ ಸಮಾಜಕ್ಕೇ ಅತ್ಯವಶ್ಯಕವಾದುದೆಂದು ಹೇಳಬಹುದು.

ಇಡೀ ಮಾನವ ಕುಲಕ್ಕೇ ಸಾಮಾನ್ಯವಾದ ತಾತ್ವಿಕ ವಿಷಯಗಳನ್ನಲ್ಲದೆ ವೀರಶೈವ ಮತಕ್ಕೆ ವಿಶಿಷ್ಟವಾದ ಶಕ್ತಿ ವಿಶಿಷ್ಟಾದ್ವೈತ, ಷಟ್‌ಸ್ಥಲ, ಅಂಗ ಲಿಂಗ ಸಂಬಂಧ, ಲಿಂಗಧಾರಣಾದಿ ವೀರಶೈವಾಚಾರ ಅಷ್ಟಾವರಣ ಮತ್ತು ಪಂಚಾಚಾರ ಇವುಗಳನ್ನು ವಚನಗಳು ವಿವರವಾಗಿ ವಿವೇಚಿಸುವವು. ವೀರಶೈವ ಸಂಪ್ರದಾಯದ ತತ್ವಗಳನ್ನು ತಿಳಿದುಕೊಳ್ಳಬೇಕಾದರೆ ವಚನಗಳನ್ನುಳಿದು ಬೇರೆ ಗ್ರಂಥಗಳನ್ನು ಓದುವ ಅಷ್ಟೊಂದು ಅವಶ್ಯಕತೆಯೇ ಇಲ್ಲವೆಂದು ಹೇಳಬಹುದು. ಇದರಿಂದ ವಚನಶಾಸ್ತ್ರವು ವೀರಶೈವ ಧಾರ್ಮಿಕ ಗ್ರಂಥಗಳ ಪ್ರಥಮ ಶ್ರೇಣಿಗೆ ಸೇರಿದುದೆಂಬುದು ವ್ಯಕ್ತವಾಗುತ್ತದೆ.

**೨ ವೀರಶೈವ ಧರ್ಮಸಂಸ್ಥೆಗಳು ಮತ್ತು ವಚನ ಶಾಸ್ತ್ರ.**

ಇನ್ನು ವೀರಶೈವ ಧಾರ್ಮಿಕ ಸಂಸ್ಥೆಗಳಿಗೂ ವಚನಶಾಸ್ತ್ರಕ್ಕೂ ಇರುವ ಸಂಬಂಧವನ್ನು ಪರಿಶೀಲಿಸೋಣ. ಧಾರ್ಮಿಕ ಸಂಸ್ಥೆಗಳಿಗೂ ಸಾಮಾಜಿಕ ಸಂಸ್ಥೆಗಳಿಗೂ ನಿಕಟಸಂಬಂಧವಿದೆ. ಈ ಸಂಸ್ಥೆಗಳನ್ನು ಮುಖ್ಯವಾಗಿ ಐದು ಭಾಗಗಳಾಗಿ ವಿಂಗಡಿಸಬಹುದು. ೧ ಮಠಗಳು ೨ ಸಂಸ್ಕೃತ ಮತ್ತು ವೇದಪಾಠಶಾಲೆಗಳು ೩ ವಿದ್ಯಾರ್ಥಿ ನಿಲಯಗಳು ೪ ವಿದ್ಯಾವರ್ಧಕ ಸಂಸ್ಥೆಗಳು ೫ ತರುಣ ಸಂಘಗಳು.

**ಮಠಗಳು.**

ಮಠಗಳೂ, ಸಂಸ್ಕೃತ ಮತ್ತು ವೇದಪಾಠಶಾಲೆಗಳೂ ಕೇವಲ ಧಾರ್ಮಿಕ ಸಂಸ್ಥೆಗಳು. ಮಠಗಳು ಗುರುಜಂಗಮರಿಗೆ ಹೆಚ್ಚು ಸಂಬಂಧಿಸಿದ್ದು ತತ್ವಾಭ್ಯಾಸಕ್ಕೆ ಕೇಂದ್ರ ಸ್ಥಾನಗಳೆನಿಸಿವೆ. ಆದುದರಿಂದ ಮಠಾಧಿಪತಿಗಳು ಧಾರ್ಮಿಕ ಗ್ರಂಥಗಳ ಅದರಲ್ಲಿಯೂ ವಚನಶಾಸ್ತ್ರದ ಪೂರ್ಣ ಅನುಭವವನ್ನು ಪಡೆಯುವುದು ಅತ್ಯವಶ್ಯಕವಾಗಿದೆ. ಸಮಾಜದ ಧಾರ್ಮಿಕ ಜೀವನದ ಮಾರ್ಗದರ್ಶಕರಾದ ಮಠಾಧಿಪತಿಗಳು ತಕ್ಕಷ್ಟು ಇವುಗಳ ಪರಿಶ್ರಮಹೊಂದಿದ್ದರೆ ಸಾಮಾಜಿಕರನ್ನು ಧರ್ಮಮಾರ್ಗಕ್ಕೆ ಎಳೆಯುವ ಕೆಲಸವು ಬಹು ಸುಲಭವಾಗಿ ನಡೆಯುವುದು. ಮಠಗಳು ವಚನಶಾಸ್ತ್ರದಂತಹ ಧಾರ್ಮಿಕ ಗ್ರಂಥಗಳನ್ನೂ ಮತ್ತು ವೀರಶೈವ ಮತಸಂಬಂಧವಾದ ಇತರ ಗ್ರಂಥಗಳನ್ನೂ ಮತ್ತು ಪುರಾತನ ಓಲೆಗರಿಯ ಹೊತ್ತಿಗೆಗಳನ್ನು ಸಂಗ್ರಹಿಸಬೇಕಾದುದು ಅಗತ್ಯವಾಗಿದೆ. ಅಲ್ಲದೆ ಆಗಾಗ್ಗೆ ಅನುಭವಿಗಳಾದ ಪಂಡಿತೋತ್ತಮರ ವ್ಯಾಖ್ಯಾನಗಳನ್ನೂ ಪ್ರವಚನಗಳನ್ನೂ ಏರ್ಪಡಿಸಿ ಸಮಾಜಕ್ಕೆ ಹೆಚ್ಚು ಪ್ರಯೋಜನವನ್ನುಂಟುಮಾಡಿಕೊಡಬೇಕಾಗಿದೆ.

**ಸಂಸ್ಕೃತ ಮತ್ತು ವೇದ ಪಾಠ ಶಾಲೆಗಳು.**

ನಮ್ಮಲ್ಲಿರುವ ಸಂಸ್ಕೃತ ಮತ್ತು ವೇದ ಪಾಠಶಾಲೆಗಳು ಕೇವಲ ಮತತತ್ವಗಳನ್ನು ಗೌಣವಾಗಿಯೂ, ಸಾಹಿತ್ಯ ವ್ಯಾಕರಣಾದಿ ಶಾಸ್ತ್ರಗಳನ್ನೂ ವೇದಾಧ್ಯಯನವನ್ನೂ ಮುಖ್ಯವಾಗಿಯೂ ಬೋಧಿಸತಕ್ಕವಾಗಬೇಕು. ಆದರೆ ಇತ್ತೀಚೆಗೆ ಮತತತ್ವಗಳ ಬೋಧನೆಯು ಇಂತಹ ಪಾಠಶಾಲೆಗಳಲ್ಲಿ ಗೌಣಪಾಠವಾಗಿಯೂ ಪರಿಗಣಿಸಲ್ಪಡದೇ ಹೋಗಿರುವುದು ತುಂಬಾ ಶೋಚನೀಯವಾಗಿದೆ. ಸಮಾಜ ಬಂಧುಗಳೂ ಆಯಾ ಪಾಠಶಾಲೆಗಳ ವ್ಯವಸ್ಥಾಪಕರೂ ವಚನಶಾಸ್ತ್ರದಂತಹ ಧಾರ್ಮಿಕ ಗ್ರಂಥಗಳನ್ನು ಪಠ್ಯ ಪುಸ್ತಕಗಳನ್ನಾಗಿಟ್ಟು ಅವುಗಳ ವ್ಯಾಸಂಗವನ್ನು ಪುನರುಜ್ಜೀವನಗೊಳಿಸಬೇಕಾಗಿದೆ. ಈ ಸಂಸ್ಥೆಗಳಲ್ಲಿ ಇಂತಹ ಧಾರ್ಮಿಕ ಗ್ರಂಥಗಳ ಭಂಡಾರವು ಅವಶ್ಯಕವಾಗಿದೆ.

**ವಿದ್ಯಾರ್ಥಿ ನಿಲಯಗಳು.**

ವಿದ್ಯಾರ್ಥಿ ನಿಲಯಗಳು (ಫ್ರೀಬೋರ್ಡಿಂಗ್ ಹೋಂ ಮತ್ತು ಹಾಸ್ಟಲುಗಳು) ಹೆಚ್ಚು ಲೌಕಿಕ ವಿದ್ಯಾವ್ಯಾಸಂಗಕ್ಕೆ ಸಂಬಂಧಿಸಿದುವಾದರೂ ಅವುಗಳಲ್ಲಿ ಧಾರ್ಮಿಕ ಭಾವನೆಗಳಿಗೆ ಕೊಂಚಮಟ್ಟಿಗಾದರೂ ಸ್ಥಳವಿರಲೇ ಬೇಕಾಗಿದೆ. ಆದರೆ ಸದ್ಯದ ಪರಿಸ್ಥಿತಿಯಲ್ಲಿ ಈ ಧಾರ್ಮಿಕ ಮನೋಭಾವನೆಗಳು ಒಟ್ಟಿನಲ್ಲಿ ಲೌಕಿಕ ವಿದ್ಯಾವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಸ್ವಲ್ಪವೂ ದೊರೆಯದೇ ಹೋಗಿರುವುದರಿಂದ ಅದರಲ್ಲಿ ಬಹುಮಂದಿಗೆ ಮತತತ್ವದ ತಿಳುವಳಿಕೆಯಾಗಲೀ ಸಮಾಜ ಸೇವೆಯಲ್ಲಿ ಅಭಿರುಚಿಯಾಗಲೀ ಹುಟ್ಟದಿರುವುದು ಸ್ವಾಭಾವಿಕವಾಗಿದೆ. ಸಮಾಜ ಬಂಧುಗಳು (ಮುಖ್ಯವಾಗಿ ಆಯಾ ಸಂಸ್ಥೆಗಳಿಗೆ ಹೆಚ್ಚು ಸಂಬಂಧಪಟ್ಟವರು) ಈ ಕಡೆಗೆ ತಮ್ಮ ಲಕ್ಷ್ಯವನ್ನು ಕೊಡಬೇಕಾದುದು ಅತ್ಯಗತ್ಯವಾಗಿದೆ. ಇಂತಹ ವಿದ್ಯಾರ್ಥಿ ನಿಲಯಗಳಲ್ಲಿ ವಾರಕ್ಕೊಮ್ಮೆಯಾದರೂ ಮತಧರ್ಮಬೋಧಕಗಳಾದ ವಚನ ಶಾಸ್ತ್ರದಂತಹ ಧಾರ್ಮಿಕ ಗ್ರಂಥಾವಲೋಕನಕ್ಕೆ ಅವಕಾಶವನ್ನುಂಟುಮಾಡುವುದು ಸೂಕ್ತವಾಗಿದೆ.

**ತರುಣ ಸಂಘಗಳು ಮತ್ತು ಮಹಿಳಾ ಸಂಘಗಳು.**

ವೀರಶೈವ ತರುಣ ಸಂಘಗಳೂ ಮತ್ತು ಮಹಿಳಾ ಸಂಘಗಳೂ (ಮಹಾದೇವಿಯಕ್ಕನ ಬಳಗ ಮುಂತಾದವು) ಸಮಾಜಕ್ಕೆ ನಿಕಟ ಸಂಬಂಧವುಳ್ಳ ಸಂಸ್ಥೆಗಳು. ಸಮಾಜದ ಕುಂದು ಕೊರತೆಗಳನ್ನು ಹೋಗಲಾಡಿಸುವ ಅಥವಾ ಸಮಾಜರಚನೆಯ ಕಾರ್ಯಪಟ್ಟಿಯನ್ನು ಗೊತ್ತುಪಡಿಸಿ ಅದನ್ನು ಕಾರ್ಯರೂಪಕ್ಕೆ ತರುವುದು ಈ ಸಂಸ್ಥೆಗಳಿಗೆ ಬಹುಮಟ್ಟಿಗೆ ಸಾಧ್ಯ. ಸಮಾಜದ ಉನ್ನತಿಯು ಧರ್ಮ ಮತ್ತು ನೀತಿಗಳಿಂದ ಸಾಧಿಸಲ್ಪಡತಕ್ಕದ್ದು. ಆದುದರಿಂದ ಈ ಸಂಸ್ಥೆಗಳು ವಾಚನಾಲಯ ವ್ಯಾಖ್ಯಾನಗಳ ಏರ್ಪಾಟು ಇವುಗಳನ್ನು ಮುಖ್ಯವೆಂದು ಪರಿಗಣಿಸಿರುವಂತೆಯೇ ಆಗಾಗ್ಗೆ ಧಾರ್ಮಿಕ ತತ್ವ ವಿವೇಚನೆಯ ವ್ಯಾಸಂಗಗೋಷ್ಠಿಗಳನ್ನು ಏರ್ಪಡಿಸುವದು ಯುಕ್ತವಾಗಿದೆ. ಅಲ್ಲದೆ ವಚನ ಶಾಸ್ತ್ರದಂತಹ ಧಾರ್ಮಿಕ ಗ್ರಂಥಗಳ ಪುಸ್ತಕ ಭಂಡಾರವನ್ನು ಏರ್ಪಡಿಸತಕ್ಕದ್ದೂ ಅವುಗಳ ವಿಷಯದಲ್ಲಿ ವ್ಯಾಖ್ಯಾನಗಳನ್ನು ಏರ್ಪಡಿಸತಕ್ಕದ್ದೂ ಯೋಗ್ಯವಾಗಿದೆ.

**ವಿದ್ಯಾವರ್ಧಕ ಸಂಸ್ಥೆಗಳು.**

ವಿದ್ಯಾವರ್ಧಕ ಸಂಸ್ಥೆಗಳು ಈಗ ಕೈಕೊಂಡಿರುವ ಮಾರ್ಗವು ಇನ್ನೂ ವಿಸ್ತೃತವಾಗಬೇಕು. ಧಾರ್ಮಿಕ ತತ್ವಗಳ ವ್ಯಾಸಂಗಕ್ಕೆ ತಕ್ಕ ಪ್ರೋತ್ಸಾಹವನ್ನು ಕೊಡುವ ಸಲುವಾಗಿ ವಚನಶಾಸ್ತ್ರ ಮತ್ತು ಇನ್ನಿತರ ಧಾರ್ಮಿಕ ಗ್ರಂಥಗಳ ವಿಷಯಗಳಲ್ಲಿ ಆಗಾಗ್ಗೆ ಸ್ಪರ್ಧೆಗಳನ್ನಿಡಿಸಿ ಅವುಗಳಲ್ಲಿ ಯಶಸ್ವಿಗಳಾದವರಿಗೆ ತಕ್ಕ ಬಹುಮಾನಗಳನ್ನು ಏರ್ಪಡಿಸತಕ್ಕದ್ದು ಉತ್ತಮವಾಗಿದೆ

**ಮಹಾಸಭೆಯ ಕರ್ತವ್ಯ.**

ಆಗಾಗ್ಗೆ ನೆರೆಯುವ ವೀರಶೈವ ಮಹಾಸಭೆಯಲ್ಲಿ ಅಖಿಲ ಭಾರತ ವೀರಶೈವರಿಗೆ ಸಂಬಂಧಿಸಿದ ಸಂಸ್ಥೆಗಳೆಲ್ಲವುಗಳ ವರದಿಯನ್ನು ಶೇಖರಿಸಿ ಅವುಗಳಿಂದ ಸಮಾಜದಲ್ಲಿ ಧಾರ್ಮಿಕ ಗ್ರಂಥಗಳ ವ್ಯಾಸಂಗವು ಎಷ್ಟರ ಮಟ್ಟಿಗೆ ನಡೆದಿದೆಯೆಂಬ ಅಂಶವನ್ನು ಪರಿಶೀಲಿಸುವುದೂ ಉಪಯುಕ್ತವಾದ ಸಲಹೆಗಳನ್ನು ಸೂಚಿಸುವುದೂ ಯುಕ್ತವಾಗಿದೆ. ಒಟ್ಟಿನ ಮೇಲೆ ಹೇಳುವುದಾದರೆ ಈ ಎಲ್ಲ ದೃಷ್ಟಿಗಳಿಂದ ವೀರಶೈವ ಮತತತ್ವ ನಿರೂಪಿತವಾದ ವಚನಶಾಸ್ತ್ರದಂತಹ ಧಾರ್ಮಿಕ ಗ್ರಂಥ ವ್ಯಾಸಂಗಕ್ಕೂ ಧರ್ಮ ಸಂಸ್ಥೆಗಳಿಗೂ ಎಷ್ಟು ಹತ್ತಿರದ ಸಂಬಂಧವಿರುವುದೆಂಬುದು ವಿದಿತವಾಗುವುದು.

# ನಿಜಾಮ ರಾಜ್ಯದಲ್ಲಿಯ ಸತ್ಯಾಗ್ರಹ ಯುದ್ಧ.

## ವೀರ ಸತ್ಯಾಗ್ರಹಿಗಳ ಪ್ರಭಾವ.

ನಿಜಾಮ ಸರಕಾರದ ಅನೇಕ ಭಯಂಕರ ಅನ್ಯಾಯಗಳನ್ನು ತಾಳಲಾರದೆ ಕೊನೆಗೆ ಅಲ್ಲಿಯ ಸ್ವಾತಂತ್ರ್ಯವೀರರು ಸತ್ಯಾಗ್ರಹ ಯುದ್ಧವನ್ನು ಕಳೆದ ೨೧ ನೆಯ ತಾರೀಖಿನ ದಿವಸ ಪ್ರಾರಂಭಿಸಿದರು. ಧರ್ಮವೀರ ವಾಮನರಾವ ನಾಯಿಕರ ಎರಡನೆಯ ಪುಣ್ಯತಿಥಿಯ ಉತ್ಸವವನ್ನು ಸರಕಾರವು ಹೈದರಾಬಾದಿನಲ್ಲಿ ಪ್ರತಿಬಂಧಿಸಿದ್ದಿತು. ಈ ಭಯಂಕರವಾದ ಅನ್ಯಾಯವನ್ನು ತಾಳಲಾರದೆ ಸರಕಾರದ ಆ ಕ್ರೂರ ಅಪ್ಪಣೆಯನ್ನು ತಾ. ೨೭-೧೦-೩೮ ನೆಯ ದಿವಸ ಪಂಚಮಹಾವೀರರು ಉಲ್ಲಂಘಿಸಿ ಉತ್ಸವವನ್ನು ಪ್ರಾರಂಭಿಸಿದರು.

ಮೊದಲನೆಯ ಮಹಾಯೋದ್ಧರು— ಹಿಂದು ನಾಗರಿಕ ಸ್ವಾತಂತ್ರ್ಯ ಸಂಘದ ಶ್ರೀ. ಯ. ದಿ. ಜೋಶಿ, ಶ್ರೀ. ಜುಕ್ಕಲಕರ ಮೊದಲಾದ ಐದು ಜನ ವೀರರು ಸರಕಾರದ ಶಾಸನವನ್ನು ಉಲ್ಲಂಘಿಸಿ ಸ್ವಾತಂತ್ರ್ಯಪ್ರೇಮವನ್ನು ವ್ಯಕ್ತಗೊಳಿಸಿದರು. ಸರಕಾರವು ತನ್ನ ಕ್ರೂರ ಶಾಸನದಂತೆ ಈ ಐದು ಜನರ ಮೇಲೆ ವ್ಯಾಜ್ಯ ಹೂಡಿತು. ಶ್ರೀ. ಜೋಶಿಯವರಿಗೆ ೧|| ವರುಷಗಳ ಶಿಕ್ಷೆ ಮತ್ತು ೨೦೦ ರೂ. ದಂಡವನ್ನು ಇತರರಿಗೆ ಆರಾರು ತಿಂಗಳ ಶಿಕ್ಷೆ ಮತ್ತು ೫೦ ರೂ. ಗಳ ದಂಡವನ್ನು ತಾ. ೨೬-೧೦-೩೮ ನೆಯ ದಿವಸ ನ್ಯಾಯಾಧೀಶರು ವಿಧಿಸಿದರು. ನಿಜಾಮ ರಾಜ್ಯದ ಪ್ರಜಾ ಸ್ವಾತಂತ್ರ್ಯದ ಈ ಪವಿತ್ರ ಶಾಂತಿಯುದ್ಧದಲ್ಲಿ ಈ ಪ್ರಕಾರ ಐದು ಜನ ಮಹಾಯೋಧರು ಮೊದಲು ತಮ್ಮ ಪ್ರಭಾವವನ್ನು ತೋರಿಸಿದರು.

**ಸ್ಟೇಟ್ ಕಾಂಗ್ರೆಸ್ ಯುದ್ಧದಲ್ಲಿ ಸೇರಿತು.**

ಹಿಂದು ನಾಗರಿಕ ಸ್ವಾತಂತ್ರ್ಯ ಸಂಘದವರು ಸತ್ಯಾಗ್ರಹ ಯುದ್ಧವನ್ನು ಪ್ರಾರಂಭಿಸಿದೊಡನೆ ಹೈದರಾಬಾದ ಸ್ಟೇಟ್ ಕಾಂಗ್ರೆಸ್ ಸಂಸ್ಥೆಯವರೂ ಮುಂದೆ ಬಂದು ಈ ಸತ್ಯಾಗ್ರಹ ಯುದ್ಧವನ್ನು ಪ್ರಜ್ವಲಗೊಳಿಸಿದರು. ತಮ್ಮ ಸಂಸ್ಥೆಯು ಅಕ್ರಮವಾದುದೆಂದು ಸರಕಾರವು ಗೊತ್ತುಮಾಡಿದ್ದ ಅನ್ಯಾಯವನ್ನು ನಿವಾರಣೆಮಾಡಲು ಸ್ಟೇಟ್ ಕಾಂಗ್ರೆಸ್ ಕಮಿಟಿಯು ತಾ. ೨೪-೧೦-೩೮ ನೆಯ ದಿವಸ ಸತ್ಯಾಗ್ರಹವನ್ನು ಪ್ರಾರಂಭಿಸಿತು.

ಹೈದರಾಬಾದದ ರೆಸಿಡೆನ್ಸಿ ಬಜಾರಿನ ತಂತೀ ಆಫೀಸಿನ ಹತ್ತಿರ ಸಾವಿರಾರು ನಾಗರಿಕರ ಮಧ್ಯದಲ್ಲಿ ಸ್ಟೇಟ್ ಕಾಂಗ್ರೆಸ್ ಕಮಿಟಿಯನ್ನು ಸ್ಥಾಪಿಸಿ ಸರಕಾರದ ಕ್ರೂರ ಶಾಸನವನ್ನು ಉಲ್ಲಂಘಿಸಿದರು.

ಈ ಕಾಂಗ್ರೆಸ್ ಕಮಿಟಿಯವರು ಶಾಸನೋಲ್ಲಂಘನೆಯನ್ನು ವೈಯಕ್ತಿಕವಾಗಿಯೇ ಸಾಗಿಸಬೇಕೆಂದು ಗೊತ್ತುಮಾಡಿ ಶ್ರೀ. ಗೋವಿಂದ ನಾನಲ ವಕೀಲ (ಅಧ್ಯಕ್ಷ) ಶ್ರೀ. ರಾಮಕೃಷ್ಣ ಧೂಮ, ಶ್ರೀ. ಜನಾರ್ದನರಾವ ದೇಸಾಯಿ (ಕಾರ್ಯದರ್ಶಿ) ಶ್ರೀ. ನಾರಾಯಣ ರೆಡ್ಡಿ ಮತ್ತು ಶ್ರೀ. ಬೋರಿಕರ ವಕೀಲ (ಸಭಾಸದರು) ಈ ಪ್ರಕಾರ ಐದು ಜನ ದೇಶಭಕ್ತರು ಶಾಸನಭಂಗಗೊಳಿಸಲು ಮುಂದೆಬಂದರು.

**ಆರ್ಯಸಮಾಜದ ಸತ್ಯಾಗ್ರಹ.**

ಹಿಂದು ನಾಗರಿಕ ಸ್ವಾತಂತ್ರ್ಯ ಸಂಘ ಮತ್ತು ಸ್ಟೇಟ್ ಕಾಂಗ್ರೆಸ್ ಕಮಿಟಿಗಳು ಶಾಸನಭಂಗದ ವೀರ ಮಾರ್ಗವನ್ನು ಅನುಸರಿಸಿದನಂತರ ವೀರ ಆರ್ಯಸಮಾಜದವರೂ ಶಾಸನ ಭಂಗವನ್ನು ಪ್ರಾರಂಭಿಸಿದರು. ಈ ಸಮಾಜದವರಿಗೆ ನಿಜಾಮ ರಾಜ್ಯದಲ್ಲಿ ಆಗುತ್ತಿರುವ ಭಯಂಕರ ಅನ್ಯಾಯವು ಸರ್ವಶ್ರುತವಷ್ಟೆ. ಸಹಿಸಲಸಾಧ್ಯವಾದ ಸರಕಾರದ ಅನ್ಯಾಯಗಳನ್ನು ಈ ಸಮಾಜದವರೂ ವಿರೋಧಿಸಿ ತಮ್ಮ ವೀರ ಪ್ರಭೆಯನ್ನು ವ್ಯಕ್ತಗೊಳಿಸಿದರು.

ಉದಗಿರಿಯ ದೊಂಬಿಯಲ್ಲಿ ಗಾಯಹೊಂದಿದ್ದ ಶ್ರೀ. ಮಾಣಿಕರಾವ ಎಂಬುವವರು ಹೈದರಾಬಾದಿನಲ್ಲಿ ತಾ. ೨೭ ನೆಯ ದಿವಸ ಮೃತಪಟ್ಟರು. ಇದರಿಂದ ಅಲ್ಲಿಯ ಆರ್ಯಸಮಾಜದವರ ದುಃಖವು ವಿಶೇಷವಾಯಿತು. ಮಾಣಿಕರಾಯರ ಶವವನ್ನು ಪೋಲಿಸರು ಜನರ ಸ್ವಾಧೀನಪಡಿಸಲಿಲ್ಲ. ಅದನ್ನು ಎಲ್ಲಿ ತೆಗೆದುಕೊಂಡು ಹೋದರೆಂಬುದೂ ಗೊತ್ತಾಗಲಿಲ್ಲ. ಆಗ ಉದ್ವೇಗಗೊಂಡ ೫ ಸಾವಿರ ಜನರು ಮೆರವಣಿಗೆ ಹೊರಟು ಸರಕಾರದ ಈ ಅನ್ಯಾಯವನ್ನು ನಿಷೇಧಿಸಿದರು. ಮೆರವಣಿಗೆಯಲ್ಲಿಯ ೨೦ ಪ್ರಮುಖ ಆರ್ಯ ಸಮಾಜದವರನ್ನು ಪೋಲಿಸರು ಹಿಡಿದರು.

ತಾ. ೨೭–೧೦–೩೮ ನೆಯ ಸಾಯಂಕಾಲ ಆರ್ಯ ಸಂರಕ್ಷಕ ಸಂಘದವರು ಹವನಕುಂಡ ಸತ್ಯಾಗ್ರಹವನ್ನು ಪ್ರಾರಂಭಿಸಿದರು. ಪಂಡಿತ ದೇವಿಲಾಲಜಿಯವರು ಪ್ರಮುಖರಾಗಿದ್ದರು. ಈ ಸತ್ಯಾಗ್ರಹದಲ್ಲಿ ಆ ದಿನ ಆರು ಜನ ಆರ್ಯವೀರರು ಸೆರೆಹಿಡಿಯಲ್ಪಟ್ಟರು.

**ಸ್ಟೇಟ ಕಾಂಗ್ರೆಸ್ಸಿನ ಮುಂದಡಿ.**

ತಾ. ೨೭–೧೦–೩೮ ನೆಯ ದಿವಸ ಸ್ಟೇಟ ಕಾಂಗ್ರೆಸ್ಸಿನ ಎರಡನೆಯ ಸತ್ಯಾಗ್ರಹ ಪ್ರಾರಂಭವಾಯಿತು. ಪಂಡಿತ ರಾಮಾನಂದ ತೀರ್ಥರವರು ಮುಂದಾಳುಗಳಾಗಿ ಶಾಸನಭಂಗಮಾಡಿದರು. ಇವರು ಸೆರೆಮನೆಗೆ ಹೋಗುವಾಗ ಹೀಗೆ ವೀರ ಸಂದೇಶವನ್ನು ಕೊಟ್ಟರು.–

"ಬಲಾತ್ಕಾರವನ್ನು ವಿರೋಧಿಸುವುದೇ ಪರಮಾತ್ಮನ ಪೂಜೆಯು. ಮನುಷ್ಯನ ಪ್ರಾಥಮಿಕ ಹಕ್ಕಿಗಾಗಿ ಪ್ರಾರಂಭವಾದ ಈ ಶಾಂತಿ ಯುದ್ಧದಲ್ಲ ಸಾವಿರಗಟ್ಟಲೇ ವೀರರು ಸೇರಿರಿ. ಸೆರೆಮನೆ ಪ್ರವೇಶದ ಈ ಜ್ಯೋತಿಯು ಅಖಂಡವಾಗಿ ಬೆಳಗುವಂತೆ ಮಾಡಿರಿ."

ಸ್ಟೇಟ ಕಾಂಗ್ರೆಸ್ ಕಮಿಟಿಯ ಮೊದಲನೆಯ ಅಧ್ಯಕ್ಷರಾದ ಶ್ರೀ. ಗೋವಿಂದರಾವ ನಾನಲರವರು ತಾವು ಶಾಸನ ಭಂಗವನ್ನು ಮಾಡುವ ಮುಂಚೆಯೇ ತಮ್ಮ ವಕೀಲಿ ವೃತ್ತಿಗೆ ಶರಣು ಹೊಡೆದ ತ್ಯಾಗಪತ್ರವನ್ನು ಹೈಕೋರ್ಟಿಗೆ ಕಳಿಸಿ ದೇಶ ಸೇವೆಯ ನಿಜಮಾರ್ಗವನ್ನು ತೋರಿಸಿದ್ದರು.

ಆರ್ಯ ಸಮಾಜದ ಪಂಡಿತ ನರೇಂದ್ರಜಿಯವರನ್ನು ವಿಚಾರಣೆ ಮಾಡದೆ ಸೆರೆಹಿಡಿದ ಅನ್ಯಾಯವನ್ನು ನಿಷೇಧಿಸಲು ಶ್ರೀ. ಕೆ ಎಸ್. ವೈದ್ಯ, ಶ್ರೀ. ಎಂ. ಹನುಮಂತರಾವ, ಶ್ರೀ. ಗೋಪಾಳರಾವ, ಮಿ. ಸಿರಜುಲ್ ಹಸನ, ಶ್ರೀ. ಎಚ್. ನರಸಿಂಗರಾವ ಮೊದಲಾದವರು ಒಂದು ಪ್ರಕಟನೆಯನ್ನು ಹೊರಡಿಸಿ ಪಂಡಿತಜೀಯವರನ್ನು ಕೂಡಲೇ ಬಿಡಬೇಕೆಂದು ಕೇಳಿಕೊಂಡಿದ್ದರು.

(೧೨ ನೇ ಪುಟಕ್ಕೆ ಸಾಗಿದೆ.)



ಶಾ. ಶ. ೧೮೬೦ ನೆಯ ಕಾರ್ತಿಕ ಶು|| ೧೫ ಸೋಮವಾರ.

# ನಿಜಾಮ ಸರಕಾರಕ್ಕೆ ಎಚ್ಚರಿಕೆ.

ನಿಜಾಮ ಸರಕಾರವು ತನ್ನ ಪ್ರಜೆಗಳನ್ನು ಅನೇಕ ಬಲಾತ್ಕಾರದ ಶಾಸನಗಳಿಂದ ಕಟ್ಟಿ ಅವರನ್ನು ಹೀನ ದೀನ ಸ್ಥಿತಿಗಳಿಗೀಡು ಮಾಡಿದೆಯಷ್ಟೆ.. ಅದರ ಈ ಭಯಂಕರವಾದ ದಬ್ಬಾಳಿಕೆಯನ್ನು ಪ್ರಜೆಗಳು ಸಹಿಸಲಾರದೆ ಕೊನೆಗೆ ರಾಜಧಾನಿಯಲ್ಲಿಯೇ ಸತ್ಯಾಗ್ರಹದ ಪ್ರಜ್ವಲ ಜ್ಯೋತಿಯನ್ನು ಕಳೆದ ೨೧ ನೆಯ ತಾರೀಖಿನ ದಿನ ಉಂಟುಮಾಡಿ ಅಖಿಲ ಹಿಂದುಸ್ಥಾನವೇ ನಿಜಾಮ ಸರಕಾರದ ಕಡೆಗೆ ತಿರುಗುವಂತೆ ಮಾಡಿದರು.

ದಬ್ಬಾಳಿಕೆಯ ಸರಕಾರವನ್ನು ಸರಿಯಾದ ದಾರಿಗೆ ತರಲು ಸತ್ಯಾಗ್ರಹವೇ ಮುಖ್ಯ ಸಾಧನವು. ನಿಜಾಮ ರಾಜ್ಯದ ಪ್ರಜೆಗಳು ಶಿಕ್ಷಣದಲ್ಲಿ ಬಹು ಹಿಂದುಳಿದಿರುವುದರಿಂದಲೂ ಬ್ರಿಟಿಶ್ ಹಿಂದುಸ್ಥಾನದ ಈ ವರೆಗಿನ ಅನೇಕ ಚಟುವಟಿಕೆಗಳ ಗಾಳಿಯು ಕೂಡಾ ಆ ರಾಜ್ಯದಲ್ಲಿ ಬಾರದಂತೆ ಸರಕಾರವು ಪ್ರತಿಬಂಧಿಸಿರುವುದರಿಂದಲೂ ಮೈಸೂರು ಮೊದಲಾದ ಸುಧಾರಿಸಿದ ಸಂಸ್ಥಾನಗಳಲ್ಲಿಯ ಪ್ರಜೆಗಳಂತೆ ಅಲ್ಲಿಯ ಪ್ರಜೆಗಳು ಸರಕಾರದ ಸಂಗಡ ಸತ್ಯಾಗ್ರಹದ ಹೋರಾಟವನ್ನು ಪ್ರಚಂಡವಾಗಿ ಒಮ್ಮೆಲೇ ನಡೆಯಿಸಲು ಸಮರ್ಥರಾಗಲಾರರು.

ಸರಕಾರದ ಈಗಿನ ದಬ್ಬಾಳಿಕೆಯಿಂದ ಈ ಸತ್ಯಾಗ್ರಹದ ಜ್ಯೋತಿಯು ಮಂದವಾದಂತೆಯೂ ತೋರಬಹುದು. ಆದರೆ ಅದರಿಂದ ಸರಕಾರದ ಉದ್ದೇಶವೇನೂ ನೆರವೇರಲಾರದು. ಪ್ರಜೆಗಳ ಅಸಂತೋಷವೂ ಕಡಿಮೆಯಾಗಲಾರದು ಸತ್ಯಾಗ್ರಹದ ಜ್ಯೋತಿಯು ದಿನೆ ದಿನೆ ಹೆಚ್ಚು ಹೆಚ್ಚಾಗಿಯೇ ಪ್ರಕಾಶಿಸುತ್ತ ಕ್ರೂರ ಶಾಸನಗಳ ಪ್ರಭುತ್ವದ ಕತ್ತಲೆಯಲ್ಲಿ ನಡೆದಿರುವ ನಿಜಾಮ ಸರಕಾರವನ್ನು ಜವಾಬ್ದಾರಿ ಪ್ರಭುತ್ವದ ಬೆಳಕಿಗೆ ಅದು ಇಂದಲ್ಲ, ನಾಳೆ ತಂದೇ ತರುವುದು ಖಂಡಿತ.

ಅಂತೆಯೇ ನಿಜಾಮ ಸರಕಾರಕ್ಕೂ ಅಲ್ಲಿಯ ಪ್ರಜೆಗಳಿಗೂ ಕ್ಷೇಮಕರವಾದ ಈ ಸತ್ಯಾಗ್ರಹವನ್ನು ಪ್ರಾರಂಭಿಸಿದ ಎಲ್ಲ ವೀರರನ್ನೂ ಸ್ವಾತಂತ್ರ್ಯಪ್ರಿಯರು ಹೃದಯಪೂರ್ವಕ ಅಭಿನಂದಿಸದಿರಲಾರರು. ಈಗ ಹೈದರಾಬಾದಿನಲ್ಲಿ ಮಾತ್ರವೇ ಪ್ರಾರಂಭವಾದ ಈ ಸತ್ಯಾಗ್ರಹವು ಆ ರಾಜ್ಯದ ಬೇರೆ ದೊಡ್ಡ ದೊಡ್ಡ ಪಟ್ಟಣಗಳಲ್ಲಿಯೂ ಜಾಗ್ರತೆ ಪ್ರಾರಂಭವಾಗಿ ಸಾವಿರಾರು ಸತ್ಯಾಗ್ರಹಿಗಳು ಶಾಂತಿಯುಕ್ತರಾಗಿ ಸೆರೆಮನೆಯನ್ನು ಸೇರಲು ಮುಂದೆ ಬರಲೆಂದೇ ಹಾರೈಸದಿರಲಾರರು.

**ಸರಕಾರವು ಈಗಲಾದರೂ ಎಚ್ಚರಿಯಲಿ.**

ದಬ್ಬಾಳಿಕೆಯ ಸರಕಾರವನ್ನು ಎಚ್ಚರಿಸಲು ಸತ್ಯಾಗ್ರಹವೇ ಪರಿಣಾಮಕಾರಿಯಾದ ಉಪಾಯವು. ಪ್ರಜೆಗಳು ಸತ್ಯಾಗ್ರಹದ ಶಸ್ತ್ರವನ್ನು ಹಿಡಿದೊಡನೆಯೇ ಸರಕಾರವು ಎಚ್ಚತ್ತು ತನ್ನ ತಪ್ಪನ್ನು ತಿದ್ದಿಕೊಳ್ಳಬೇಕು. ಹಾಗೆ ಮಾಡದೆ ದಬ್ಬಾಳಿಕೆಯನ್ನೇ ಹೆಚ್ಚುಮಾಡಿ ಪ್ರಜೆಗಳನ್ನು ಹೆಚ್ಚು ಹಿಂಸಿಸಿದರೆ ಸತ್ಯಾಗ್ರಹಕ್ಕೆ ಪ್ರಚಂಡ ಸ್ವರೂಪ ಪ್ರಾಪ್ತವಾಗುತ್ತದೆಂಬುದು ಈ ವರೆಗಿನ ಅನುಭವದಿಂದ ಗೊತ್ತಾದ ಸಂಗತಿಯು. ಆದಕಾರಣ ನಿಜಾಮ ಸರಕಾರವು ಈಗಲೇ ಎಚ್ಚತ್ತು ತನ್ನ ದಬ್ಬಾಳಿಕೆಯ ಶಾಸನಗಳನ್ನೆಲ್ಲಾ ಹಿಂದಕ್ಕೆ ತೆಗೆದುಕೊಳ್ಳುವದುತ್ತಮ. ಇದರಿಂದ ಆ ಸರಕಾರಕ್ಕೇನೇ ಕ್ಷೇಮ. ನಿಜಾಮ ಸರಕಾರಕ್ಕೆ ಅಲ್ಲಿಯ ಪ್ರಜೆಗಳು ಕೊಟ್ಟ ಈ ಎಚ್ಚರಿಕೆಯನ್ನು ಅದು ಜಾಗ್ರತೆ ಲಕ್ಷಿಸುವುದೋ ?

---

# ಶುದ್ಧ ಖಾದಿ ಮತ್ತು ಚರಕಾ ಸಂಘ.

ಅಖಿಲ ಭಾರತ ಚರಕಾ ಸಂಘದಿಂದ ಮಾನ್ಯತೆ ಹೊಂದದೆ ಇರುವ ಖಾದಿಯ ಸಂಬಂಧವಾಗಿ ಮಹಾತ್ಮಾ ಗಾಂಧಿಯವರು ಬರೆದಿರುವುದನ್ನೂ ಖಾದಿ ಏಜನ್ಸಿ ನಿಯಮಗಳನ್ನು ಕುರಿತು ಚರಕಾ ಸಂಘದ ಕಾರ್ಯದರ್ಶಿಗಳಾದ ಶ್ರೀ. ಕೌಜಲಗಿ ಹನುಮಂತರಾಯರು ಪ್ರಕಟಿಸಿರುವುದನ್ನೂ ನಾವು ಇದೇ ಸಂಚಿಕೆಯ ಬೇರೆ ಕಡೆಗೆ ಕೊಟ್ಟಿದ್ದೇವೆ.

“ಕೈ ನೂಲಿನಿಂದ ಕೈ ಮಗ್ಗದ ಮೇಲೆ ಅಖಿಲ ಭಾರತ ಚರಖಾ ಸಂಘದವರು ಗೊತ್ತುಪಡಿಸಿದ ಕೂಲಿ ದರಗಳನ್ನು ಕೊಟ್ಟು ಸಿದ್ಧಗೊಳಿಸಿದ ಖಾದಿಯೇ ಶುದ್ಧ ಖಾದಿ” ಎಂದು ಮಹಾತ್ಮಾ ಗಾಂಧಿಯವರು ತಮ್ಮ ಲೇಖನದಲ್ಲಿ ತಿಳಿಸಿದ್ದಾರೆ. ಈ ನಿಯಮಗಳ ಪ್ರಕಾರ ಖಾದಿ ಹುಟ್ಟುವಳಿಯನ್ನು ಯಾರು ಮಾಡಿದರೂ ಅದು ಶುದ್ಧ ಖಾದಿಯಾಗುತ್ತದೆಂದೇ ಗಾಂಧೀಜಿಯವರ ಅಭಿಪ್ರಾಯವೇ ವಿನಾ ಅಖಿಲಭಾರತ ಚರಖಾ ಸಂಘದ ವಿನಾ ಬೇರೆ ಯಾರೂ ಖಾದಿಯನ್ನೇ ಹುಟ್ಟಿಸಕೂಡದೆಂದೂ ಬೇರೆ ಯಾರ ಖಾದಿಯೂ ಶುದ್ಧ ಖಾದಿಯೇ ಅಲ್ಲವೆಂದೂ ಅವರ ಅಭಿಪ್ರಾಯವೇನೂ ಅಲ್ಲ.

ಶ್ರೀ. ಕೌಜಲಗಿ ಹನುಮಂತರಾಯರು ತಮ್ಮ ಪ್ರಕಟನೆಯಲ್ಲಿ ಹೀಗೆ ಹೇಳಿದ್ದಾರೆ—

“ನಮ್ಮ ಶಾಖೆಯ ಹುಟ್ಟುವಳಿಯು ಸಾಕಷ್ಟು ಇಲ್ಲದ್ದರಿಂದಲೂ ಖಾದಿ ಹುಟ್ಟವಳಿ ಹಾಗೂ ಮಾರಾಟಗಳ ಬಗ್ಗೆ ನಡೆಯುತ್ತಿರುವ ವೈಯಕ್ತಿಕ ಪ್ರಯತ್ನಗಳಿಗೆ ಪ್ರೋತ್ಸಾಹನ ಕೊಡಕೂಡದೆಂದು ಚರಕ ಸಂಘದ ನಿಯಮವಿದ್ದುದರಿಂದಲೂ ಇದು ವರೆಗೆ ಈ ತರದ ಪ್ರಯತ್ನಗಳಿಗೆ ನಾವು ಉತ್ತೇಜನ ಕೊಡಲಿಲ್ಲ.”

ನಮ್ಮ ಕರ್ನಾಟಕಕ್ಕೆ ಬೇಕಾಗುವಷ್ಟು ಖಾದಿಯನ್ನು ಚರಖಾ ಸಂಘದವರು ಹುಟ್ಟಿಸುತ್ತಾ ಇಲ್ಲವೆಂಬುದು ಮೇಲಣ ಹೇಳಿಕೆಯಿಂದ ಸಿದ್ಧವಾಗುತ್ತದೆ. ಮತ್ತು ವೈಯಕ್ತಿಕವಾಗಿ ಖಾದಿ ಹುಟ್ಟುವಳಿ

ಕಾರ್ಯಕ್ಕೆ ಪ್ರೋತ್ಸಾಹ ಕೊಡಕೂಡದೆಂಬ ಚರಖಾಸಂಘದ ನಿಯಮವಿದೆಯೆಂಬೂ ಗೊತ್ತಾಗುತ್ತದೆ. ಎಂದರೆ, ನಾವೂ ಖಾದಿಯನ್ನು ಹುಟ್ಟಿಸುವುದಿಲ್ಲ; ಖಾದಿ ಹುಟ್ಟಿಸುವವರಿಗೂ ಅವಕಾಶವನ್ನು ಕೊಡುವುದಿಲ್ಲ; ಎಂದೇ ಹೇಳಿದಂತಾಯಿತಷ್ಟೆ. ಹೀಗಾದರೆ ನಮ್ಮ ನಾಡಿನಲ್ಲಿ ಖಾದಿ ಹುಟ್ಟುವಳಿಯು ಹೆಚ್ಚುವುದು ಹೇಗೆ? ಬಡ ಜನಗಳಿಗೆ ಕೂಲಿಯು ದೊರೆಯುವುದು ಹೇಗೆ?

ಅಖಿಲ ಭಾರತ ಚರಖಾ ಸಂಘದವರು ವೈಯಕ್ತಿಕವಾದ ಖಾದಿ ಹುಟ್ಟುವಳಿಗೆ ಪ್ರತಿಬಂಧಗೊಳಿಸುವುದಾಗಿದ್ದರೆ ಒಂದು ನಾಡಿನಲ್ಲಿ ನೂಲುವವರ ಎಲ್ಲಾ ನೂಲನ್ನೂ ತಾವೇ ಕೊಂಡು, ಅದರ ಬಟ್ಟೆಯನ್ನು ಆ ನಾಡಿನಲ್ಲಿ ತಾವೇ ಮಾಡಿಸುವ ಹೊಣೆಗಾರಿಕೆಯನ್ನು ಹೊರಬೇಕಾಗಿದ್ದಿತು. ಅಷ್ಟು ಹಣವಿನ ಬಲವು ತಮ್ಮಲ್ಲಿರದಿದ್ದರೆ ವೈಯಕ್ತಿಕ ಪ್ರಯತ್ನಕ್ಕೆ ತಮ್ಮ ನಿಯಮಗಳಂತೆ ಪ್ರೋತ್ಸಾಹವನ್ನು ಕೊಡಬೇಕಾಗಿದ್ದಿತು. ಗಾಂಧೀಜಿಯವರ ಲೇಖನದಿಂದ ವೈಯಕ್ತಿಕ ಪ್ರಯತ್ನ ನಡೆಯಲೇ ಕೂಡದೆಂಬ ಅಭಿಪ್ರಾಯವೇನೂ ತೋರುವುದಿಲ್ಲ. ಕೈ ನೂಲು, ಕೈ ಮಗ್ಗ, ಕೂಲಿಯ ದರ ಈ ಮೂರು ನಿಯಮಗಳನ್ನು ಅನುಸರಿಸಿ ವೈಯಕ್ತಿಕವಾಗಿ ಖಾದಿ ಹುಟ್ಟುವಳಿಯಾದರೂ ಅದು ಶುದ್ಧ ಖಾದಿಯೆಂಬ ಮಾನ್ಯತೆಯನ್ನು ಪಡೆಯಬಹುದೆಂದೇ ಅವರ ಅಭಿಪ್ರಾಯ.

ಶ್ರೀ. ಮೈಲಾರ ದಂಪತಿಗಳು ಮತ್ತು ಶ್ರೀ. ಜಿಗಜಿನ್ನಿಯವರು ಖಾದಿ ಹುಟ್ಟುವಳಿಯ ಕಾರ್ಯವನ್ನು ನಡೆಯಿಸಿದ್ದಾರಷ್ಟೆ. ಈ ಕಾರ್ಯವು ವೈಯಕ್ತಿಕ ಪ್ರಯತ್ನವೆಂದೇ ಶ್ರೀ. ಕೌಜಲಗಿಯವರು ಅವರಿಗೆ ಚರಖಾ ಸಂಘದ ನಿಯಮದಂತೆ ಒಪ್ಪಿಗೆ ಪತ್ರವನ್ನು ಕೊಟ್ಟಿಲ್ಲವೆಂದು ಅವರ ಈ ಹೇಳಿಕೆಯಿಂದ ಸ್ಪಷ್ಟವಾಗುತ್ತದೆ. ಆದಕಾರಣ ನಮ್ಮ ನಾಡಿನ ಖಾದಿ ಪ್ರಸಾರಕ್ಕೆ ಶ್ರೀ. ಕೌಜಲಗಿಯವರೇನೂ ಪ್ರತಿಬಂಧಗೊಳಿಸಿರದೆ ಅಖಿಲ ಭಾರತ ಚರಖಾ ಸಂಘದವರೇ ಅಡ್ಡಿಯನ್ನು ಮಾಡಿದ್ದಾರೆಂದು ತಿಳಿಯಬೇಕು. ಅಖಿಲ ಭಾರತ ಚರಖಾ ಸಂಘದವರ ಈ ಅನ್ಯಾಯವಾದ ನಿಯಮವನ್ನು ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಮಂಡಲದವರು ದೂರ ಮಾಡಲು ಮುಂದೆ ಬಂದರೆಂದು ಶ್ರೀ. ಕೌಜಲಗಿಯವರ ಪ್ರಕಟನೆಯಿಂದ ತೋರುತ್ತದೆ. ಆದರೆ "ತತ್ವ ನಿಷ್ಠ ಖಾದಿ ಪ್ರೇಮಿಗಳು ಮುಂದೆ ಬಂದರೆ ಅವರನ್ನು ಪ್ರೋತ್ಸಾಹಿಸಬಹುದು." ಎಂಬುದು ಖಾದಿ ಮಾಡುವವರಿಗೇನೇ ಸಂಬಂಧಿಸಿದುದೆ? ಅಥವಾ ಖಾದಿ ಹುಟ್ಟುವಳಿಯನ್ನು ನಡೆಯಿಸಿರುವವರಿಗೂ ಸಂಬಂಧಿಸಿದುದೆ?

ಖಾದಿ ಹುಟ್ಟುವಳಿಯು ನಮ್ಮ ನಾಡಿನಲ್ಲಿ ಇನ್ನೂ ಎಷ್ಟೋ ಹೆಚ್ಚಾಗಿಯೇ ನಡೆಯಲು ಶಕ್ಯವಿದೆಯೆಂಬುದು ನಿರ್ವಿವಾದವಷ್ಟೆ. ಚರಖಾ ಸಂಘದಿಂದ ಸಾಕಷ್ಟು ಹುಟ್ಟುವಳಿಯ ಕಾರ್ಯವು ನಡೆಯುತ್ತಾ ಇಲ್ಲವೆಂಬುದೂ ನಿಜವಲ್ಲವೆ? ಎಂದಮೇಲೆ ಖಾದಿ ಹುಟ್ಟುವಳಿಗಾಗಿ ಪ್ರಯತ್ನಿಸುತ್ತಿರುವ ತತ್ವ ನಿಷ್ಠ ಖಾದಿ ಪ್ರೇಮಿಗಳಿಗೆ ಚರಖಾ ಸಂಘದವರು ಏಕೆ ಪ್ರೋತ್ಸಾಹಿಸಬಾರದು? ಗಾಂಧೀಜಿಯವರು ಸೂಚಿಸಿರುವಂತೆ ಕೈ ನೂಲು, ಕೈ ಮಗ್ಗ ಕೂಲಿಯ ದರ ಈ ಮೂರು ನಿಯಮಗಳನ್ನು ಅನುಸರಿಸುವ ಖಾದಿ ಹುಟ್ಟುವಳಿಗಾರರ ಪ್ರಯತ್ನವು ನಮ್ಮ ನಾಡಿನ ಖಾದಿ ಪ್ರಸಾರಕ್ಕೆ ಬಹು ಸಹಾಯವಾಗುವುದಿಲ್ಲವೆ? ನೂಲುವ ಮತ್ತು ನೇಯುವವರ ಕೆಲಸ ಹೆಚ್ಚಿ ಅವರಿಗೆ ಆದಾಯವು ದೊರೆಯುವಂತಾಗುವುದಿಲ್ಲವೆ? ಎಂದಮೇಲೆ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯವರೂ ಶುದ್ಧ ಖಾದಿ ಪ್ರೋತ್ಸಾಹಕರೂ ಚರಖಾ ಸಂಘದ ಈಗಿನ ಅನ್ಯಾಯದ ಪ್ರತಿಬಂಧವನ್ನು ತೆಗೆದು ಹಾಕಿಸಿ ಗಾಂಧೀಜಿಯವರ ಸೂಚನೆಯ ಪ್ರಕಾರ ಶುದ್ಧ ಖಾದಿಯ ಹುಟ್ಟುವಳಿಯು ವೈಯಕ್ತಿಕವಾಗಿಯೂ ನಮ್ಮ ನಾಡಿನಲ್ಲಿ ನಡೆಯುವಂತೆ ಜಾಗ್ರತೆ ಪ್ರಯತ್ನಿಸುವುದು ಅಗತ್ಯವಾಗಿಲ್ಲವೆ?

# ಹೈದರಾಬಾದ ಸತ್ಯಾಗ್ರಹ.

## ಕಾಂಗ್ರೆಸ್ಸಿನ ಮುಂದಡಿ.

ಹೈದರಾಬಾದ ಸ್ಟೇಟ ಕಾಂಗ್ರೆಸ್ಸಿನ ಮೂರನೆಯ ಸರ್ವಾಧಿಕಾರಿಗಳಾದ ಶ್ರೀ. ನಂದಾಪುರಕರ ವಕೀಲರು ಮತ್ತು ಯುದ್ಧ ಮಂಡಲದ ಸಭಾಸದರಾದ ಶ್ರೀ. ಕಾಮತಿಕರ, ಶ್ರೀ. ರಾಮಲು ಈ ಪ್ರಕಾರ ಮೂರು ವೀರರು ತಾ. ೨-೧೧-೩೮ನೆಯ ದಿನ ನಿಜಾಮ ಸರಕಾರದ ಶಾಸನ ಭಂಗಮಾಡಿ ಪೋಲಿಸರ ವಶರಾದರು. "ಕಾಂಗ್ರೆಸ್ ಝಿಂದಾಬಾದ" ಎಂದು ಧ್ವನಿಮಾಡಿದ ನಾಲ್ವರನ್ನು ಪೋಲಿಸರು ಹಿಡಿದರು.

## ಆರ್ಯ ಸಂರಕ್ಷಕ ಸಂಘ.

ಆರ್ಯ ಸಂರಕ್ಷಕ ಸಂಘದ ೫ ಜನ ವೀರರು ಹೈದರಾಬಾದ ಸುಲತಾನ ಬಜಾರಿನ ಹತ್ತರ ತಾ. ೩-೧೧-೩೮ ನೆಯದಿನ ಸಂಕಾರದ ಶಾಸನವನ್ನು ಉಲ್ಲಂಘಿಸಿ ಪೋಲಿಸರ ಸೆರೆಯಾಳುಗಳಾದರು.

## ಸತ್ಯಾಗ್ರಹಿಗಳಿಗೆ ಕಠಿಣ ಶಿಕ್ಷೆ.

ಸ್ಟೇಟ ಕಾಂಗ್ರೆಸ್ಸಿನ ಮೊದಲನೆಯ ಸರ್ವಾಧಿಕಾರಿಗಳಾದ ದೇಶಭಕ್ತ ಸ್ವಾಮಿ ರಾಮಾನಂದರವರಿಗೆ ತಾ. ೩-೧೧-೩೮ನೆಯದಿನ ಹೈದರಾಬಾದ ಸಿಟಿ ಮ್ಯಾಜಿಸ್ಟ್ರೇಟರು ೧|| ವರುಷದ ಕಠಿಣ ಶಿಕ್ಷೆ ಮತ್ತು ೫೦ ರೂ. ದಂಡವನ್ನು ವಿಧಿಸಿದರು. ಅವರ ಸಂಗಡಿಗರಾದ ಇತರ ದೇಶಭಕ್ತರಿಗೆ ೯ ತಿಂಗಳ ಶಿಕ್ಷೆ ೨೫ ರೂ. ದಂಡವನ್ನು ವಿಧಿಸಿದರು.

## ಸತ್ಯಾಗ್ರಹಿಗಳ ಪ್ರವಾಸ.

ಹೈದರಾಬಾದಿನ ಸತ್ಯಾಗ್ರಹದಲ್ಲಿ ಸೇರಲು ಪುಣೆಯಲ್ಲಿ ಹಿಂದುತ್ವ ನಿಷ್ಠ ಸತ್ಯಾಗ್ರಹಿಗಳೆಂತಲೂ ಕಾಂಗ್ರೆಸ್ ನಿಷ್ಠ ಸತ್ಯಾಗ್ರಹಿಗಳೆಂತಲೂ ಎರಡು ದಲಗಳು ಏರ್ಪಟ್ಟಿವೆ. ಹಿಂದುತ್ವ ನಿಷ್ಠ ಸತ್ಯಾಗ್ರಹಿ ದಲದ ಮೊದಲನೆಯ ಗುಂಪು ತಾ. ೭-೧೧-೩೮ ನೆಯದಿನ ಸಾಯಂಕಾಲ ಪುಣೆಯಿಂದ ನಿಜಾಮರಾಜ್ಯಕ್ಕೆ ಹೊರಡುವುದು.

ಈ ಸತ್ಯಾಗ್ರಹಿಗಳ ಗುಂಪು ದೌಂಡ, ಕುರ್ಡವಾಡಿ, ಬಾರ್ಶಿ ವೈರಾಗ, ಪಂಢರಪುರ, ಮೂಢೆ, ಮೊಹೋಳೆ ಮಾರ್ಗವಾಗಿ ಹೋಗುವುದು.

## ಕೊಪ್ಪಳದ ಕನ್ನಡಿಗರ ಸತ್ಯಾಗ್ರಹ.

ಹೈದರಾಬಾದಿನ ಸತ್ಯಾಗ್ರಹದಲ್ಲಿ ಸೇರಲು ಕೊಪ್ಪಳದ ಕನ್ನಡ ತರುಣರಾದ ಶ್ರೀ. ಬಸವಂತರಾವ, ಶ್ರೀ. ವಿಜಯರಾವ ದೇಸಾಯಿ, ಶ್ರೀ. ವಿರೂಪಾಕ್ಷರಾವ ಪಡಕಿ, ಶ್ರೀ. ಚಿದಂಬರ ದೀಕ್ಷಿತ ಮತ್ತು ಶ್ರೀ. ಮಾರ್ತಾಂಡರಾವ ಇವರು ತಾ. ೨-೧೧-೩೮ ನೆಯ ದಿನ ಹೊರಟಿದ್ದಾರೆ.

## ಹರದ್ವಾರದಿಂದ ಸತ್ಯಾಗ್ರಹಿಗಳು.

ಕಾಂಗಡಿ ಹರದ್ವಾರ ಗುರುಕುಲದಿಂದ ೩೦ ವಿದ್ಯಾರ್ಥಿಗಳೂ ಒಬ್ಬ ಪ್ರೊಫೆಸರರೂ ಹೈದರಾಬಾದ ಸತ್ಯಾಗ್ರಹಕ್ಕೆ ಬರುವರೆಂದು ತಿಳಿಯುತ್ತದೆ.

ಔರಂಗಾಬಾದ ಮತ್ತು ನಾಂದೇಡಗಳಲ್ಲಿ ಸತ್ಯಾಗ್ರಹವು ತಾ. ೭-೧೧-೩೮ ರಿಂದ ಪ್ರಾರಂಭವಾಗುವುದೆಂದು ತಿಳಿದಿದೆ.

ಹಿಂದು ನಾಗರಿಕ ಸ್ವಾತಂತ್ರ್ಯ ಸಂಘದ ಶ್ರೀ. ಶಾಮಾ ದೇಸಾಯಿ ಮೊದಲಾದ ನಾಲ್ವರು ತಾ. ೪-೧೧-೩೮ ನೆಯ ದಿನ ಧರ್ಮವೀರ ವಾಮನ ನಾಯಕರ ಭಾವಚಿತ್ರ ಮೆರವಣಿಗೆ ಮಾಡಿ ಶಾಸನಭಂಗದಿಂದ ಸೆರೆಯಾಳುಗಳಾದರು.

( ೯ ನೇ ಪುಟದಿಂದ ಬಂದುದು. )

**ಪೋಲಿಸರ ಬಡಗಿ ಹೊಡೆತ.**

ತಾ. ೨೮-೧೦-೩೮ ನೆಯ ದಿವಸ ಹಿಂದು ಸ್ವಾತಂತ್ರ್ಯಸಂಘದವರು ಶಾಸನಭಂಗದ ತಮ್ಮ ಹೋರಾಟವನ್ನು ಮುಂದರಿಸಿದರು. ಶ್ರೀ. ವೈದ್ಯ ಮತ್ತು ಶ್ರೀ. ಬಾಲಯ್ಯ ಇವರ ನೇತೃತ್ವದಲ್ಲಿ ಪ್ರಚಂಡ ಮೆರವಣಿಗೆಯು ಹೊರಟಿತು. ಸರಕಾರದ ಅನ್ಯಾಯವನ್ನು ನೋಡಿ ಜನರು ಸತ್ಯಾಗ್ರಹದಲ್ಲಿ ಹೆಚ್ಚು ಹೆಚ್ಚಾಗಿ ಸೇರಲಾರಂಭಿಸಿದರು. ಹೈದರಾಬಾದಿನ ಗೌಳಿಗುಡ್ಡದ ರಾಮಮಂದಿರದಿಂದ ಈ ಮೆರವಣಿಗೆಯು ಹೊರಟಿತು. ಮೆರವಣಿಗೆಯಲ್ಲಿ ಸಾಧಾರಣ ಹತ್ತು ಸಾವಿರ ಜನರು ಸೇರಿದ್ದರು.

ಜನರು ಶಾಂತವೃತ್ತಿಯುಳ್ಳವರಾಗಿದ್ದರೂ ಅವರ ಜಯಘೋಷ, ಉತ್ಸಾಹಗಳನ್ನು ನೋಡಿ ಪೋಲಿಸರು ಸಹಿಸಲಾರದೆ ಬಡಗಿಯಿಂದ ಹೊಡೆದು ಜನರನ್ನು ಚದುರಿಸಲು ಪ್ರಯತ್ನಿಸಿದರು. ಕೆಲವರಿಗೆ ಗಾಯಗಳಾದವು. ಒಬ್ಬನಿಗೆ ಮಾತ್ರ ಹೆಚ್ಚಾದ ಗಾಯವಾಯಿತು.

ತಾ. ೩೧-೧೦-೩೮ ನೆಯ ದಿನ ಸ್ಟೇಟ್ ಕಾಂಗ್ರೆಸ್ಸಿನ ಎರಡನೆಯ ಸರ್ವಾಧಿಕಾರಿ ಶ್ರೀ. ಲಕ್ಷ್ಮೀನೃಸಿಂಹ ರೆಡ್ಡಿಯವರನ್ನು ಸುಲ್ತಾನ ಬಜಾರದ ಬಳಿ ಪೋಲಿಸರು ಹಿಡಿದರು. ಜನರು ಆಗ ಜಯಧ್ವನಿ ಮಾಡಿದರೆಂದು ಪೋಲಿಸರು ಬಡಗಿಯಿಂದ ಹೊಡೆದರು. ಆರು ಜನರಿಗೆ ಗಾಯವಾಯಿತು. ಈ ಪ್ರಕಾರ ಪೋಲಿಸರ ಅತ್ಯಾಚಾರವೂ ನಡೆದುದರಿಂದ ಹೈದರಾಬಾದಿನಲ್ಲಿ ಹೆಚ್ಚಾದ ಅಸಂತೋಷವುಂಟಾಯಿತು. ಸತ್ಯಾಗ್ರಹದಲ್ಲಿ ಹೆಣ್ಣುಮಕ್ಕಳೂ ಸೇರಬಹುದೆಂದು ಸರಕಾರದವರು ಒಂದು ಸ್ತ್ರೀ ಪೋಲಿಸ ದಳವನ್ನೂ ಏರ್ಪಡಿಸಿದ್ದಾರೆ.

**ಸೇನಾಪತಿ ಬಾಪಟರ ಸತ್ಯಾಗ್ರಹ.**

ಹೈದರಾಬಾದಿನಲ್ಲಿ ಸತ್ಯಾಗ್ರಹವು ಈ ಮುಂಚೆ ವಿವರಿಸಿದಂತೆ ಮೂರು ಬೇರೆ ಬೇರೆ ಸಂಘಗಳಿಂದ ಪ್ರಾರಂಭವಾಗಿ ಅದು ದಿನೆ ದಿನೆ ಹೆಚ್ಚುತ್ತ ಬಂದಿತು. ಆ ಎಲ್ಲಾ ಸತ್ಯಾಗ್ರಹಿಗಳೂ ನಿಜಾಮ ರಾಜ್ಯದಲ್ಲಿ ವಾಸವಾಗಿದ್ದರು. ಆ ಸರಕಾರದ ಅನ್ಯಾಯವನ್ನು ವಿರೋಧಿಸುವುದು ಸ್ವಾತಂತ್ರ್ಯಪ್ರಿಯರಾದ ಬ್ರಿಟಿಶ್ ಭಾಗದವರ ಕರ್ತವ್ಯವೂ ಆಗಿದೆಯೆಂದೇ ಸೇನಾಪತಿ ಬಾಪಟರವರು ಪ್ರಕಟಗೊಳಿಸಿದರು. ನಾಗರಿಕರ ಹಕ್ಕು ಬಾಧ್ಯತೆಗಳನ್ನು ಸಂರಕ್ಷಿಸುವುದು ತಮ್ಮ ಕರ್ತವ್ಯವೆಂದೂ ಅದಕ್ಕೋಸ್ಕರ ತಾ. ೧-೧೧-೩೮ ನೆಯ ದಿನ ತಾವು ಹೈದರಾಬಾದಿನಲ್ಲಿ ಶಾಸನ ಭಂಗವನ್ನು ಮಾಡುವೆವೆಂದೂ ಸಾರಿದರು.

ಪುಣೆಯಲ್ಲಿ ಪ್ರಚಂಡ ಸಭೆಸೇರಿ ಸೇನಾಪತಿ ಬಾಪಟರವರ ನೇತೃತ್ವದಲ್ಲಿ ಸತ್ಯಾಗ್ರಹ ಮಂಡಲ ಸ್ಥಾಪನೆಯಾಗಿ ನಾಗರಿಕ ಸ್ವಾತಂತ್ರ್ಯ ರಕ್ಷಣೆಗೆ ಸೈನಿಕರು ಮುಂದೆ ಬಂದರು. ಸ್ವಾತಂತ್ರ್ಯ ವೀರ ಸಾವರಕರರು ಸೇನಾಪತಿ ಬಾಪಟರವರ ಪವಿತ್ರ ಕಾರ್ಯಕ್ಕೆ ಮಹಾರಾಷ್ಟ್ರವು ನೆರವಾಗಬೇಕೆಂದು ತಿಳಿಸಿದರು.

ಹೀಗೆ ಪರ ಪ್ರಾಂತಗಳಿಂದಲೂ ಸತ್ಯಾಗ್ರಹಿಗಳು ಬರುವರೆಂಬುದನ್ನು ನಿಜಾಮ ಸರಕಾರವು ತಿಳಿದು ಚಂಚಲಗುಡ್ಡ ಸೆಂಟ್ರಲ್ ಜೈಲಿನಲ್ಲಿದ್ದ ಸೆರೆಯಾಳನ್ನು ಬೇರೆ ಕಡೆ ಕಳುಹಿಸಿ ಆ ಸೆರೆಮನೆಯನ್ನು ಸತ್ಯಾಗ್ರಹಿಗಳಿಗಾಗಿ ಕಾದಿಡುವ ಸಿದ್ಧತೆ ನಡೆಸಿದರು. ಪಂಡಿತ ರಾಮಚಂದ್ರಜಿ ದೆಹಲವಿ, ಸೇನಾಪತಿ ಬಾಪಟ ಪಂಡಿತ ವ್ಯಾಸವೇದಶಾಸ್ತ್ರಿ (ದಿಲ್ಲಿ) ಶಿವಚಂದ (ದಿಲ್ಲಿ) ಶ್ರೀ. ಸಿ. ವ್ಹಿ. ಮೋನಯ್ಯ ಇವರು ತಮ್ಮ ಸಂಸ್ಥಾನ ಪ್ರವೇಶಿಸಬಾರದೆಂದೂ ಸರಕಾರದವರು ಪ್ರಕಟಿಸಿದರು.

ತಾ. ೩೦-೧೦-೩೮ ನೆಯ ದಿವಸ ಬಾಗಲಕೋಟೆಯ ಶ್ರೀ. ವಾಸುದೇವಾಚಾರ್ಯ ಅಣ್ಣಾಚಾರ್ಯ ಅರಳಿಕಟ್ಟಿ ಎಂಬ ತರುಣರನ್ನು ಹೈದರಾಬಾದಿನಲ್ಲಿ ಪೋಲಿಸರು ಹಿಡಿದು ಅವರ ಮೇಲೆ ವ್ಯಾಜ್ಯಹೂಡಿದರು.

ಸೇನಾಪತಿ ಬಾಪಟರವರು ಮುಂಚೆಯೇ ಪ್ರಕಟ ಮಾಡಿದಂತೆ ತಾ. ೧-೧೧-೩೮ ನೆಯ ದಿವಸ ೫ ಜನ ಸಂಗಡಿಗರೊಂದಿಗೆ ನಿಜಾಮ ಸರಕಾರದ ಅನ್ಯಾಯವಾದ ಶಾಸನವನ್ನು ಉಲ್ಲಂಘಿಸಲು ನಿಜಾಮ ರಾಜ್ಯದಲ್ಲಿ ಪ್ರವೇಶಿಸಿದರು. ಆಗ ಪೋಲಿಸರು ವಕಾರಾಬಾದ ಸ್ಟೇಶನ್ನಿನಲ್ಲಿ ಈ ಸತ್ಯಾಗ್ರಹಿಗಳನ್ನು ಸೆರೆಹಿಡಿದು ಸೊಲ್ಲಾಪುರಕ್ಕೆ ಕಳುಹಿಸಿದರು. ಸೇನಾಪತಿ ಬಾಪಟರನ್ನು ಸೆಪ್ಟೆಂಬರ್ ೨೪ ನೆಯ ತಾರೀಖಿನ ದಿವಸ ಇದೇ ಪ್ರಕಾರ ನಿಜಾಮ ಸರಕಾರವು ಗಡಿ ದಾಟಿಸಿತ್ತು. ಇದು ಎರಡನೆಯ ಸಾರೆ.

ನಿಜಾಮ ಸರಕಾರದ ಅನ್ಯಾಯವನ್ನು ನಿಷೇಧಿಸಲು ಸೊಲ್ಲಾಪುರದಲ್ಲಿ ತಾ. ೧-೧೧-೩೮ ನೆಯ ದಿನ ಶ್ರೀ. ಬರ್ವೆ ವಕೀಲರ ಅಧ್ಯಕ್ಷತೆಯಲ್ಲಿ ರಾತ್ರಿ ಸಭೆ ಸೇರಿತು. ಸೇನಾಪತಿ ಬಾಪಟರವರು ತಮ್ಮ ಭಾಷಣದಲ್ಲಿ ನಾಗರಿಕ ಸ್ವಾತಂತ್ರ್ಯ ರಕ್ಷಣೆಯ ಮಹತ್ವವನ್ನೂ ನಿಜಾಮ ಸರಕಾರದ ಬಲಾತ್ಕಾರವನ್ನೂ ಸಭಿಕರಿಗೆ ಸರಿಯಾಗಿ ತಿಳಿಸಿದರು. ಸೇನಾಪತಿ ಬಾಪಟರ ಸಂಗಡ ಹೊರಟಿದ್ದ ೫ ಜನ ಸತ್ಯಾಗ್ರಹಿಗಳಲ್ಲಿ ಶ್ರೀ. ಬಿ. ಎಸ್ ಗೋರೆ ಎಂಬುವವರು ನಿಜಾಮ ರಾಜ್ಯದವರಾಗಿದ್ದುದರಿಂದ ಅವರನ್ನು ಮಾತ್ರ ಪೋಲಿಸರು ಹೈದರಾಬಾದಿಗೆ ತೆಗೆದುಕೊಂಡುಹೋದರು.

# ಔಂಧ ಸಂಸ್ಥಾನದ ಪ್ರಜೆಗಳಿಗೆ ಸ್ವರಾಜ್ಯ ದೊರೆತಿತು.

ಔಂಧ ಸಂಸ್ಥಾನಾಧಿಪತಿಗಳಾದ ರಾಜೆ ಬಾಳಾಸಾಹೇಬ ಪಂತ ಪ್ರತಿನಿಧಿಗಳು ಬಹು ಉದಾರ ಗುಣಶೀಲರು. ಈ ದೇಶದ ಸಂಸ್ಥಾನಾಧಿಪತಿಗಳಲ್ಲಿ ಬಹು ಪ್ರಸಿದ್ಧಿಯನ್ನು ಹೊಂದಿದವರು. ಪ್ರಜೆಗಳ ಹಿತಾರ್ಥವಾಗಿ ಬಹು ಪರಿಯಿಂದ ಪ್ರಯತ್ನಿಸುವವರು. ಈ ಪ್ರಜಾರಂಜಕರಾದ ಸಂಸ್ಥಾನಾಧೀಶರು ತಮ್ಮ ೭೧ ನೆಯ ವರ್ಷವರ್ಧಂತಿಯ ಮಹೋತ್ಸವದ ಕಾಲಕ್ಕೆ ಎಂದರೆ ತಾ. ೧-೧೧-೩೮ ನೆಯ ದಿನ ತಮ್ಮಲ್ಲಿಯ ಪ್ರಜೆಗಳಿಗೆ ಸ್ವರಾಜ್ಯವನ್ನು ಕೊಟ್ಟ ಶುಭ ಸಂದೇಶವನ್ನು ಸಾರಿದರು.

ಹಿಂದುಸ್ಥಾನದ ಸಾಧಾರಣ ಆರು ನೂರು ಸಂಸ್ಥಾನಾಧಿಪತಿಗಳಲ್ಲಿ ಔಂಧದ ರಾಜೆ ಶ್ರೀ ಬಾಳಾ ಸಾಹೇಬರವರೇ ತಮ್ಮ ಪ್ರಜೆಗಳಿಗೆ ಜವಾಬ್ದಾರಿ ಸರಕಾರವನ್ನು ಕೊಡುವುದರಲ್ಲಿ ಮೊದಲನೆಯವರಾದರು. ಹೀಗೆ ಇವರು ತಮ್ಮ ಪ್ರಜೆಗಳಿಗೆ ಸ್ವರಾಜ್ಯ ಕೊಡುವುದರಲ್ಲಿ ಮೊದಲನೆಯವರಾದುದರಿಂದ ಸ್ವರಾಜ್ಯಪ್ರೇಮಿಗಳೆಲ್ಲರೂ ಇವರನ್ನು ಹೃದಯಪೂರ್ವಕ ಅಭಿನಂದಿಸದಿರಲಾರರು.

ಔಂಧ ಸಂಸ್ಥಾನವು ದಕ್ಷಿಣ ಸಂಸ್ಥಾನಗಳಲ್ಲಿ ಒಂದು. ಇದು ೫೦೧ ಚದುರು ಮೈಲು ವಿಸ್ತಾರವುಳ್ಳದ್ದಾಗಿದೆ. ಇದರ ಜನಸಂಖ್ಯೆ ೭೬,೫೦೭ ಇದೆ. ಈ ಸಂಸ್ಥಾನದ ವಾರ್ಷಿಕ ಉತ್ಪನ್ನವು ಸಾಧಾರಣ ೫ ಲಕ್ಷ ರೂಪಾಯಿ ಇದೆ. ಈ ಸಂಸ್ಥಾನವು ಯಾರಿಗೂ ಪೊಗದಿಯನ್ನು ಕೊಡುವುದಿಲ್ಲ. ಇದರ ಪ್ರಭುತ್ವವು ಹಿಂದುಸ್ಥಾನ ಸರಕಾರದ ಮೇಲ್ವಿಚಾರಣೆಗೆ ಒಳಪಟ್ಟದೆಯೇ ವಿನಾ ಮುಂಬಯಿ ಪ್ರಾಂತಿಕ ಸರಕಾರಕ್ಕೆ ಸಂಬಂಧಪಟ್ಟಿಲ್ಲ.

**ಸಂಸ್ಥಾನದ ಸ್ಥಿತಿ.**

ಈ ಸಂಸ್ಥಾನದಲ್ಲಿ ೧೯೩೩ ನೆಯ ಇಸವಿಯಲ್ಲಿ ಶಿಕ್ಷಣ ಪ್ರಸಾರಕ್ಕಾಗಿ ೪೪೯೦೧ ರೂ. ವೆಚ್ಚವಾಗಿದ್ದವು. ಅಲ್ಲಿ ೧ ಹೈಸ್ಕೂಲು ೪೦ ಶಾಲೆಗಳು ಇವೆ. ಒಟ್ಟು ೪೪೪೬ ವಿದ್ಯಾರ್ಥಿಗಳಿದ್ದಾರೆ. ಸಂಸ್ಥಾನಾಧಿಪತಿಗಳು ಸೂರ್ಯ ನಮಸ್ಕಾರ ಪ್ರಚಾರಕರಾಗಿರುವುದರಿಂದ ಇವರ ಸಂಸ್ಥಾನದಲ್ಲಿ ಇಂಥ ವ್ಯಾಯಾಮ ಶಾಲೆಗಳು ವಿಶೇಷವಾಗಿವೆ.

ಕಿರ್ಲೋಸ್ಕರ ವಾಡಿ, ಓಗಲೆ ವಾಡಿ, ಔಂಧ ಸೋಪ್ ವರ್ಕ್ಸ್, ಮೊದಲಾದ ಔದ್ಯೋಗಿಕ ಕಾರ್ಯಾಲಯಗಳಿಗೆ ತುಂಬಾ ಪ್ರೋತ್ಸಾಹಕೊಟ್ಟು ಸಂಸ್ಥಾನದ ಸಾಂಪತ್ತಿಕ ಅಭಿವೃದ್ಧಿಗೆ ತುಂಬಾ ಸಹಾಯ ಮಾಡಿದ್ದಾರೆ.

**ಜವಾಬ್ದಾರಿ ಸರಕಾರ.**

ಔಂಧ ಸಂಸ್ಥಾನಾಧಿಪತಿಗಳು ತಮ್ಮ ಪ್ರಜೆಗಳಿಗೆ ಕೊಟ್ಟ ಜವಾಬ್ದಾರಿ ಸರಕಾರದ ರೀತಿನೀತಿಗಳನ್ನು ಈ ಕೆಳಗಿನಂತೆ ಸೂಚಿಸಿದರು.

(೧) ಔಂಧ ಸಂಸ್ಥಾನದ ಪ್ರತಿಯೊಂದು ಹಳ್ಳಿಯ ಕಾರಭಾರವು ಅಲ್ಲಿಯ ಪ್ರಜೆಗಳಿಂದ ಆರಿಸಲ್ಪಟ್ಟ ಗ್ರಾಮ ಪಂಚಾಯತಿಯಿಂದಲೇ ಸಾಗಬೇಕು. (೨) ಸಂಸ್ಥಾನದ ಉತ್ಪನ್ನದಲ್ಲಿಯ ಅರ್ಧಭಾಗವು ಈ ಗ್ರಾಮಪಂಚಾಯತಿಗಳ ಕಾರಭಾರದ ಕಡೆಗೇನೇ ವಿನಿಯೋಗಿಸಲ್ಪಡಬೇಕು. (೩) ಗ್ರಾಮ ಪಂಚಾಯತಿಯ ಅಧ್ಯಕ್ಷ, ಸ್ಥಾನಿಕ ಸಂಸ್ಥೆಗಳ ಅಧ್ಯಕ್ಷ ಇವರುಗಳಿಂದ ಕೂಡಿದ ಒಂದು ನಿಯಮನಿರ್ಮಾಣಸಭೆಯು ಇರಬೇಕು. (೪) ಸಂಸ್ಥಾನದ ಆದಾಯ ವೆಚ್ಚಗಳ ಮೇಲೆ ಈ ನಿಯಮ ನಿರ್ಮಾಣಸಭೆಯು ಪೂರ್ಣ ಸ್ವಾತಂತ್ರ್ಯ ಉಳ್ಳದ್ದಾಗಿರಬೇಕು.

(೫) ನ್ಯಾಯಶಾಖೆ, ಆಯವ್ಯಯಗಳ ಪರಿಶೋಧನ ಶಾಖೆ ಮತ್ತು ಸಾರ್ವಭೌಮ ಸರಕಾರಕ್ಕೆ ಸಂಬಂಧಿಸಿದ ಶಾಖೆ ಇವು ಮಾತ್ರ ಸಂಸ್ಥಾನಾಧಿಪತಿಗಳಿಗೆ ಸಂಬಂಧಪಟ್ಟವುಗಳಾಗಿರಬೇಕು.

(೬) ಸಂಸ್ಥಾನದ ಆದಾಯದಲ್ಲಿ ಈ ಕೆಳಗಿನಂತೆ ವ್ಯಯವಾಗಬೇಕು. ೧ ಆದಾಯದ ಅರ್ಧ ಭಾಗವು ಗ್ರಾಮಪಂಚಾಯತಿಗಳ ಕಡೆಗಿರಬೇಕು. ೨ ಆದಾಯದ ಮೂರನೆಯ ಒಂದು ಭಾಗವು ದಿವಾನರೇ ಮೊದಲಾದ ಅಧಿಕಾರಿಗಳಿಗೆ ಸಲ್ಲಬೇಕು. ದಿವಾನರೇ ಮೊದಲಾದ ಅಧಿಕಾರಿಗಳು ನಿಯಮ ನಿರ್ಮಾಣ ಸಭೆಗೆ ಜವಾಬ್ದಾರರಾಗಬೇಕು. ೩ ಸಂಸ್ಥಾನಾಧಿಪತಿಗಳಿಗೆ ಆದಾಯದ ಹತ್ತನೆಯ ಒಂದು ಭಾಗ ಅಥವಾ ವರ್ಷಕ್ಕೆ ೩೬ ಸಾವಿರ ರೂ.ಗಳಿಗಿಂತ ಹೆಚ್ಚಿಲ್ಲದಷ್ಟು ಅವರ ಸ್ವಂತ ವೆಚ್ಚಕ್ಕೆ ಸಲ್ಲಬೇಕು.

---

## ಪ್ಯಾಲಿಸ್ಟಾಯಿನ್‌ದಲ್ಲಿ ಪ್ರಾಣಹಾನಿ.

ಪ್ಯಾಲಿಸ್ಟಾಯಿನ್‌ದಲ್ಲಿ ಅರಬರು ನಡೆಸಿರುವ ದೊಂಬಿಯಿಂದ ಕಳೆದ ಅಕ್ಟೋಬರ ತಿಂಗಳಲ್ಲಿ ಒಟ್ಟು ೫೨೫ ಜನರು ಮೃತಪಟ್ಟರೆಂದು ತಿಳಿದಿದೆ. ಈ ದೊಂಬಿಯಿಂದ ಕಳೆದ ನಾಲ್ಕು ತಿಂಗಳುಗಳಲ್ಲಿ ೧೯೪೬ ಅರಬರು ೨೧೯ ಯಹೂದಿಯರು ೨೪೨ ಬ್ರಿಟಿಶರು ಮೃತಪಟ್ಟರು. ಈ ಪ್ರಕಾರ ಪ್ರಚಂಡ ಪ್ರಾಣಹಾನಿಯಾದಂತಾಗಿದೆ. ೫೭೦ ಅರಬರು ೪೫೪ ಯಹೂದಿಗಳು ೧೪೮ ಬ್ರಿಟಿಶರು ಗಾಯ ಹೊಂದಿದ್ದಾರೆ.

---

## ಪುಂಡ ಮುಸಲ್ಮಾನರ ಪ್ರಭುತ್ವವೆ?

ದಿಲ್ಲಿಯ ಶಿವಾಲಯದ ಸತ್ಯಾಗ್ರವನ್ನು ಕುರಿತು ಹಿಂದು ಮಹಾಸಭೆಯ ಕಾರ್ಯದರ್ಶಿಗಳಾದ ಶ್ರೀ. ಗಣಪತಿರಾಯ ಮತ್ತು ಶ್ರೀ. ಬಾನರ್ಜಿಯವರು ಈ ಕೆಳಗಿನಂತೆ ಪ್ರಕಟಗೊಳಿಸಿದ್ದಾರೆ–

"ದಿಲ್ಲಿಯ ಶಿವಾಲಯದಲ್ಲಿ ಸತ್ಯಾಗ್ರಹ ಪ್ರಾರಂಭವಾದ ನಂತರ ಇದಕ್ಕೆ ಜಾತಿ ವಿಶಿಷ್ಟ ಜಗಳದ ಸ್ವರೂಪ ಬಂದಿದೆ. ಪೋಲಿಸರು ಶಾಂತತಾ ರಕ್ಷಣೆಯಕಾರ್ಯವನ್ನು ತೃಪ್ತಿಕರವಾಗಿ ಸಾಗಿಸದೆ ಇದ್ದುದರಿಂದ ಹಿಂದುಸ್ಥಾನದ ರಾಜಧಾನಿಯಾದ ದಿಲ್ಲಿಯಲ್ಲಿ ಪುಂಡ ಮುಸಲ್ಮಾನರ ಪ್ರಭುತ್ವ ಪ್ರಾರಂಭವಾದಂತೆ ಭಾಸವಾಗುತ್ತದೆ. ಅವರ ಪುಂಡಾಟಕೆಗೆ ಪ್ರೋತ್ಸಾಹ ದೊರಕಿದೆ.

ಶಿವಾಲಯದ ಪೂಜಾರಿ ಶಾಮಪುರಿಯವರಿಗೆ ಮುಸಲ್ಮಾನ್ ಪುಂಡರು ಹೊಡೆದನಂತರವಾದರೂ ನಾಗರಿಕ ಸ್ವಾತಂತ್ರ್ಯದ ಹಕ್ಕು ಸಂರಕ್ಷಿಸಲ್ಪಡಬಹುದೆಂದು ತಿಳಿಯಲ್ಪಟ್ಟಿತು. ಆದರೆ ಅದು ನೆರವೇರಲಿಲ್ಲ. ಆ ಪೂಜಾರಿಯೇ ಸೆರೆಮನೆಯನ್ನು ಸೇರಬೇಕಾಯಿತು.

ಈಗ ಪ್ರಾರಂಭವಾಗಿರುವ ಶಿವಾಲಯ ಸತ್ಯಾಗ್ರಹದಲ್ಲಿ ಸ್ವಯಂ ಸೇವಕರನ್ನು ಅಧಿಕಾರಿಗಳು ಕೈಸೆರೆ ಮಾಡದೆ ಅವರಿಗೆ ಹೊಡೆಯುತ್ತಿದ್ದಾರೆ. ಅದರಿಂದ ಪುಂಡ ಮುಸಲ್ಮಾನರ ಪುಂಡಾಟಿಕೆ ಹೆಚ್ಚಿದೆ. ಕಳೆದ ೧೩ ನೆಯ ತಾರೀಖಿನ ದಿನ ಸತ್ಯಾಗ್ರಹದ ಒಂದು ಗುಂಪು ಶಿವಾಲಯಕ್ಕೆ ಬಂದಿತು. ಆ ಸತ್ಯಾಗ್ರಹಿಗಳು ಬರುವ ಮುಂಚೆಯೇ ಅಲ್ಲಿಗೆ ಕೆಲವು ತುಂಟ ಮುಸಲ್ಮಾನರು ಬಂದಿದ್ದರು. ಅವರು ಸತ್ಯಾಗ್ರಹಿಗಳಿಗೆ ಹೊಡೆಯಲಾರಂಭಿಸಿದರು. ಆಗ ಪೋಲಿಸರು ಬಂದರು. ಅವರು ಆ ತುಂಟರನ್ನ ಮೊದಲು ಹಿಡಿಯಬೇಕಾದುದೇ ಕರ್ತವ್ಯವಾಗಿದ್ದಿತು. ಹಾಗೆ ಮಾಡದೆ ಸತ್ಯಾಗ್ರಹಿಗಳಿಗೇನೇ ಹೊಡೆದರು. ಅನೇಕ ಚಮ್ಮಗಾರರಿಗೆ ಮುಸಲ್ಮಾನರು ಹೊಡೆದಿದ್ದಾರೆ. ಟಾಂಗಾ, ಟ್ರಾಮುಗಳಲ್ಲಿ ತಿರುಗಾಡುತ್ತಿರುವ ಅನೇಕ ಹಿಂದುಗಳಿಗೆ ಪುಂಡ ಮುಸಲ್ಮಾನರು ಹೊಡೆಯುತ್ತಿದ್ದಾರೆ."

## ಶಿವಾಲಯದಲ್ಲಿ ಗೋಮಾಂಸ!

ಸಿಲ್ಹೆಟದಲ್ಲಿಯ ಗೋಟಾಟ ಶಿವಾಲಯವು ಬಹು ಪ್ರಸಿದ್ಧವಾದದ್ದು. ಪಾರ್ವತಿದೇವಿಯ ೫೧ ಪವಿತ್ರ ಕ್ಷೇತ್ರಗಳಲ್ಲಿ ಇದೊಂದು. ಈ ಶಿವಾಲಯದಲ್ಲಿ ಗೋಮಾಂಸವು ಎಸೆಯಲ್ಪಟ್ಟು ಅಪವಿತ್ರಗೊಳಿಸಲಾಗಿದೆ. ಶಿವನ ಮೂರ್ತಿಯ ಪಾದದಲ್ಲಿ ಸಂಹಾರ ಮಾಡಲ್ಪಟ್ಟ ಗೋವಿನ ಶಿರಸ್ಸನ್ನು ಯಾರೋ ನೀಚರು ಇಟ್ಟಿದ್ದಾರೆ.

ಈ ಹೃದಯದ್ರಾವಕ ಸಂಗತಿ ತಿಳಿದೊಡನೆ ಪಟ್ಟಣದಲ್ಲೆಲ್ಲಾ ಕೋಲಾಹಲವೆದ್ದಿತು. ದೇವಾಲಯವನ್ನು ವಿಧಿ ಪೂರ್ವಕ ಶುದ್ಧಗೊಳಿಸಿದರು. ಈ ಶುದ್ಧಿ ಸಮಾರಂಭಕ್ಕೆ ನೆರೆಯ ಅನೇಕ ಗ್ರಾಮಗಳ ಜನರು ಬಂದಿದ್ದರು. ಅಧಿಕಾರಿಗಳು ಈ ಅತ್ಯಾಚಾರವನ್ನು ನೋಡಿ ಅಪರಾಧಿಗಳ ಶೋಧದಲ್ಲಿದ್ದಾರೆ. ಈ ಘೋರ ಕೃತ್ಯ ನಡೆದುದನ್ನು ಕೇಳಿ ಅನೇಕರು ಉಪವಾಸ ವ್ರತವನ್ನು ಆಚರಿಸಿದರು.

ಶ್ರೀ. ಪುರೇಶ ಚಂದ್ರ ದಾಸರ ಅಧ್ಯಕ್ಷತೆಯಲ್ಲಿ ಪ್ರಚಂಡ ಸಭೆಸೇರಿ ಈ ದುಷ್ಟಕಾರ್ಯವನ್ನು ನಿಷೇಧಿಸಲಾಯಿತು. ಶ್ರೀ. ಸ್ವಾಮಿ ಸತ್ಯಾನಂದ ಮತ್ತು ಶ್ರೀಮತಿ ಸಾವಿತ್ರಿದೇವಿ ಮೊದಲಾದವರು ಈ ನೀಚ ಕಾರ್ಯವನ್ನು ನಿಷೇಧಿಸಿ ಭಾಷಣ ಮಾಡಿದರು.

## ಮುಸಲ್ಮಾನರ ದೊಂಬಿ.

ಕಳೆದ ೯ ನೆಯ ತಾರೀಖಿನ ದಿನ ನಿಜಾಮ ರಾಜ್ಯದ ಚಿಟ್ಟಗೊಪ್ಪಾ ಎಂಬಲ್ಲಿ ನಡೆದ ದೊಂಬಿಯ ಸಂಬಂಧವಾಗಿ ಈ ಕೆಳಗಿನಂತೆ ಪ್ರಕಟವಾಗಿದೆ–

"ಪದ್ಧತಿಯ ಪ್ರಕಾರ ಕಳೆದ ೯ ನೆಯ ತಾರೀಖಿನ ರಾತ್ರಿ ೮ ಗಂಟೆಗೆ ಭವಾನಿ ದೇವಿಯ ಪಾಲಕಿ ಉತ್ಸವವು ಪ್ರಾರಂಭವಾಯಿತು. ಉತ್ಸವಕ್ಕೋಸ್ಕರ ಸರಕಾರದಿಂದ ಅಪ್ಪಣೆಯನ್ನ ಹೊಂದಿದ್ದರು. ಪಾಲಕಿಯ ಸಂಗಡ ಸಾವಿರಾರು ಜನರಿದ್ದರು. ಅನೇಕರ ಕೈಯಲ್ಲಿ ಬಡಿಗೆಗಳೂ ಇದ್ದವು. ಉತ್ಸವವು ತಿರುಗಿ ಬರುವಾಗ ಜುಮ್ಮಾ ಮಸೀದಿಯ ಹಿಂದಿನ ದಾರಿಯಲ್ಲಿ ಹೋಗುತ್ತಿದ್ದಿತು. ಮಸೀದಿಯ ಹತ್ತಿರ ಬಂದನಂತರ ಉತ್ಸವದವರು ವಾದ್ಯಬಾರಿಸುವುದನ್ನು ನಿಲ್ಲಿಸಿದರು.

ಆ ಕಾಲಕ್ಕೆ ಮಸೀದಿಯಲ್ಲಿ ಪ್ರಾರ್ಥನೆಗಾಗಿ ಅನೇಕ ಮುಸಲ್ಮಾನರು ಸೇರಿದ್ದರು. ಉತ್ಸವದಲ್ಲಿಯ ಕೆಲವು ಜನರು ಜಯಧ್ವನಿಯನ್ನು ಮಾಡಿದರು. ಅಷ್ಟರಿಂದಲೇ ಅವರ ಪ್ರಾರ್ಥನೆಯ ಶಾಂತತೆಗೆ ಭಂಗವಾಯಿತೆಂದು ದೊಂಬಿ ಮಾಡಿದರು.

ಆ ದೊಂಬಿಯಲ್ಲಿ ಎರಡೂ ಪಕ್ಷಗಳ ಅನೇಕ ಜನರು ಗಾಯಹೊಂದಿದರು. ಒಬ್ಬ ಮುಸಲ್ಮಾನನು ಮರಣ ಹೊಂದಿದನು. ತಹಶೀಲದಾರರು ಪೋಲಿಸರೊಂದಿಗೆ ದೊಂಬಿಯ ಸ್ಥಳಕ್ಕೆ ಬಂದು ದೊಂಬಿಯನ್ನು ಶಾಂತಗೊಳಿಸಲು ಪ್ರಯತ್ನಿಸಿದರು. ರಾತ್ರಿ ಎಲ್ಲಾ ಕಲ್ಲುಗಳು ಎಸೆಯಲ್ಪಡುತ್ತಿದ್ದವು. ಒಬ್ಬ ಹಿಂದು ಗೃಹಸ್ಥರ ಅಂಗಡಿಯು ಸುಲಿಗೆ ಮಾಡಲ್ಪಟ್ಟಿತು. ಈ ದೊಂಬಿಯಲ್ಲಿ ನಾಲ್ಕು ಜನರಿಗೆ ಭಯಂಕರ ಗಾಯಗಳಾಗಿವೆ. ಗುಲಬರ್ಗಾ ಮತ್ತು ಬೀದರಗಳಿಂದ ಕೂಡಲೇ ಹೆಚ್ಚಿಗೆ ಪೋಲಿಸರನ್ನು ಕರೆಯಿಸಿದರು. ಊರಲ್ಲಿ ೧೪೪ ನೆಯ ಶಾಸನವನ್ನು ಸಾರಲಾಯಿತು."

# ಖಾದಿ ಏಜನ್ಸಿ ಬಗ್ಗೆ ನಿಯಮಗಳು.

## ಅ. ಭಾ. ಚರಖ ಸಂಘ ಕರ್ನಾಟಕ ಶಾಖೆಯ ಪ್ರಕಟನೆಯು.

( ಹ. ಶ್ರೀ. ಕೌಜಲಗಿ ಕಾರ್ಯದರ್ಶಿಗಳಿಂದ )

ಜನತೆಯಲ್ಲಿ ಜಾಗೃತಿಯು ಹೆಚ್ಚಾದಂತೆ ಹಳ್ಳಿ ಪಳ್ಳಿಗಳಲ್ಲಿ ಸಹ ಕಾಂಗ್ರೆಸ್ ಕಮಿಟಿಗಳು ಸ್ಥಾಪಿತವಾಗಹತ್ತಿವೆ. ಕಾಂಗ್ರೆಸ್ ಸಂಸ್ಥೆಗಳ ಆಡಳಿತೆಗಾರರು ಶುದ್ಧ ಖಾದಿಯನ್ನೇ ಯಾವಾಗಲೂ ಧರಿಸತಕ್ಕದ್ದೆಂದು ನಿಯಮವಿರುವದರಿಂದ ಆ ಮಟ್ಟಿಗಾದರೂ ಚರಖ ಸಂಘದಿಂದ ಮನ್ನಣೆ ಪಡೆದ ಖಾದಿಯನ್ನು ಎಲ್ಲೆಡೆಯಲ್ಲಿಯೂ ಒದಗಿಸಿ ಕೊಡುವದು ಅತ್ಯವಶ್ಯವಾಗಿರುವದು. ಅ. ಭಾ. ಚರಖ ಸಂಘದಿಂದ ಮನ್ನಣೆ ಪಡೆಯದಿದ್ದ ಖಾದಿಯ ಪ್ರಸಾರಕ್ಕೆ ತಡೆ ಹಾಕಲು ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯವರು ಬದ್ಧಕಂಕಣರಾಗಿರುವರು. ಚರಖ ಸಂಘದ ಕರ್ನಾಟಕ ಶಾಖೆಯವರು ಪ್ರಾಂತದಲ್ಲೆಲ್ಲ ತಮ್ಮ ಮಾರಾಟದ ಕೇಂದ್ರಗಳನ್ನು ಸ್ಥಾಪಿಸುವದು ಅಶಕ್ಯ. ನಮ್ಮ ಶಾಖೆಯ ಹುಟ್ಟುವಳಿಯು ಸಾಕಷ್ಟು ಇಲ್ಲದ್ದರಿಂದಲೂ ಖಾದಿ ಹುಟ್ಟುವಳಿ ಹಾಗೂ ಮಾರಾಟಗಳ ಬಗ್ಗೆ ನಡೆಯುತ್ತಿರುವ ವೈಯಕ್ತಿಕ ಪ್ರಯತ್ನಗಳಿಗೆ ಪ್ರೋತ್ಸಾಹನ ಕೊಡಕೂಡದೆಂದು ಚರಖ ಸಂಘದ ನಿಯಮವಿದ್ದುದರಿಂದಲೂ ಇದು ವರೆಗೆ ಈ ತರದ ಪ್ರಯತ್ನಗಳಿಗೆ ನಾವು ಉತ್ತೇಜನ ಕೊಡಲಿಲ್ಲ. ಆದರೆ ತತ್ವನಿಷ್ಠ ಖಾದಿ ಪ್ರೇಮಿಗಳು ಮುಂದೆ ಬಂದರೆ ಅವರನ್ನು ಪ್ರೋತ್ಸಾಹಿಸಬಹುದೆಂದು ಕ. ಪ್ರಾ. ಕಾಂಗ್ರೆಸ್ ಮಂಡಲದವರು ಈ ಶಾಖೆಗೆ ಸಲಹೆ ಕೊಟ್ಟಿರುವದರಿಂದ, ತತ್ವನಿಷ್ಠರಾದ ಖಾದಿ ಪ್ರೇಮಿಗಳು ಖಾದೀ ಮಾರಾಟ ಮಾಡಲು ನಮ್ಮ ಶಾಖೆಯ ಏಜೆಂಟರಾಗಲಿಚ್ಛಿಸಿದರೆ ಅವರು ಶಾಖೆಯ ಹಳೇ ಹುಬ್ಬಳ್ಳಿಯ ಕಚೇರಿಯಿಂದ ಅರ್ಜಿಯ ನಮೂನೆಯನ್ನು ತರಿಸಿಕೊಂಡು, ಅದರಲ್ಲಿ ಅಡಕವಾಗಿರುವ ನಿಯಮಗಳನ್ನು ಸಹಿ ಮಾಡಿ ಕಳಿಸಿದರೆ, ಅವರ ಯೋಗ್ಯತೆಯನ್ನು ಪರೀಕ್ಷಿಸಿ ಅವರಿಗೆ ಏಜನ್ಸಿ ಸರ್ಟಿಫಿಕೇಟ ಕೊಡುವ ಏರ್ಪಾಟು ಮಾಡುವೆವು. ಏಜೆಂಟರ ಹಾಗು ನೌಕರರ ಅರ್ಜಿಯ ನಮೂನೆಗಳು ಚರಖ ಸಂಘದ ಹುಟ್ಟುವಳಿ ಹಾಗು ಮಾರಾಟದ ಕೇಂದ್ರಗಳಲ್ಲಿಯೂ ದೊರೆಯುವವು. ಒಂದೊಂದು ಪ್ರತಿಯನ್ನು ಇದರ ಜೊತೆಯಲ್ಲಿ ಪ್ರಸಿದ್ಧ ಮಾಡಿದ್ದೇವೆ.

ಕರ್ನಾಟಕದಲ್ಲಿಯ ಖಾದೀ ಪ್ರೇಮಿಗಳು ಮುಂದೆ ಬಂದು ಏಜಂಟರಾಗಿ ಶುದ್ಧ ಖಾದೀ ಪ್ರಚಾರಕಾರ್ಯದ ಈ ಪ್ರಯೋಗವನ್ನು ಯಶಸ್ವಿ ಮಾಡಬೇಕೆಂದು ನಮ್ರ ವಿನಂತಿಯದೆ.

### ಏಜನ್ಸಿಯ ನಿಯಮಗಳು.

೧. ಏಜೆಂಟರು ಸ್ವತಃ ಸಂಪೂರ್ಣ ಖಾದೀ ಧರಿಸಬೇಕು. ಬೇರೆ ಯಾವ ಬಟ್ಟೆಯನ್ನು ಧರಿಸತಕ್ಕದ್ದಲ್ಲ.

೨. ಗಿರಣಿಯ ನೂಲು ಅಥವಾ ಬಟ್ಟೆಯನ್ನು ಏಜೆಂಟರು ಮಾರತಕ್ಕದ್ದಲ್ಲ.

೩. ನಗದು ಹಣವನ್ನು ಕೊಟ್ಟೇ ಏಜೆಂಟರು ಖಾದೀ ಖರೀದಿ ಮಾಡಬೇಕು.

೪. ತಮ್ಮ ಖಾದಿ ಬೇಡಿಕೆಗಳನ್ನು ಏಜೆಂಟರು ಈ ಕಚೇರಿಗೆ ತಿಳಿಸಬೇಕು. ಪರಪ್ರಾಂತದಿಂದ ಮಾಲನ್ನು ತರಿಸಬೇಕಾದರೆ ಸಹಾ ಈ ಕಚೇರಿಯ ಪರವಾಗಿಯೇ ತರಿಸಲಿಕ್ಕೇ ಬೇಕು.

೫. ನಮ್ಮ ಮುಖ್ಯ ಭಾಂಡಾರ ಅಥವಾ ಕರ್ನಾಟಕ ಭಾಂಡಾರಗಳಿಂದ ಕೊಂಡ ಮಾಲನ್ನು ಅದು ಏಜೆಂಟರಿಂದ ಮಾರಾಟವಾಗದಿದ್ದರೆ ಖರೀದಿ ಮಾಡಿದಂದಿನಿಂದ ಎರಡು ತಿಂಗಳುಗಳಲ್ಲಿ ತಿರುಗಿ ತೆಗೆದುಕೊಳ್ಳಲಾಗುವದು. ಆದರೆ ಅದು ಒಳ್ಳೆ ಸ್ಥಿತಿಯಲ್ಲಿ ಇರಬೇಕು. ತುಂಡುಗಳನ್ನು ತಿರುಗಿ ತೆಗೆದುಕೊಳ್ಳಲಾರೆವು.

೬. ಈ ಕಚೇರಿಯವರು ಗೊತ್ತುಪಡಿಸಿದ ದರಗಳಂತೆಯೇ ಏಜೆಂಟರು ಖಾದಿಯನ್ನು ಮಾರತಕ್ಕದ್ದು.

೭. ಮಾರಾಟ ಮಾಡುವಾಗ ಈ ಕಚೇರಿಯವರು ಬೆಲೆಗೆ ಪೂರೈಸುವ ನಗದು ಪಟ್ಟಿಯನ್ನು ಪುಸ್ತಕಗಳನ್ನೇ ಉಪಯೋಗ ಮಾಡತಕ್ಕದ್ದು. ಪ್ರತಿಯೊಂದು ನಗದು ಪಟ್ಟಿಯ ಮೂರು ನಕಲುಗಳಲ್ಲಿ ಒಂದನ್ನು ಗಿರಾಕಿಗಳಿಗೆ ಕೊಡಬೇಕು. ಇನ್ನೊಂದನ್ನು ತಿಂಗಳ ಕೊನೆಗೆ ಅಥವಾ ಮರುತಿಂಗಳ ೩ ನೇ ತಾರೀಖಿನೊಳಗಾಗಿ ಆಯಾತಿಂಗಳ ಖರೀದಿ ಹಾಗೂ ಮಾರಾಟದ ಪತ್ರಿಕೆಯೊಂದಿಗೆ ಈ ಕಚೇರಿಗೆ ತಿಳಿಸತಕ್ಕದ್ದು. ಒಂದು ಪ್ರತಿಯು ಏಜೆಂಟರ ಹತ್ತರ ಉಳಿಯುವದು.

೮. ಈ ಕಚೇರಿಯಿಂದ ಸರ್ಟಿಫೀಕೇಟ ಪಡೆಯದೇ ಇದ್ದ ವ್ಯಾಪಾರಸ್ಥರಿಗೆ ಏಜೆಂಟರು ಖಾದಿಯನ್ನು ಮಾರತಕ್ಕದ್ದಲ್ಲ.

೯. ನಮ್ಮ ಮುಖ್ಯ ಭಾಂಡಾರದಲ್ಲಿ ಅಥವಾ ಕರ್ನಾಟಕದ ಭಾಂಡಾರಗಳಲ್ಲಿ ಖರೀದಿಮಾಡಲ್ಪಡುವ ಖಾದಿಯ ಮೇಲೆ ಏಜೆಂಟರಿಗೆ ೧೦೦ ಕ್ಕೆ ರೂ. ೬-೪-೦ ಕಮಿಶನ್ ಕೊಡಲಾಗುವದು.

೧೦. ಏಜನ್ಸಿಯು ಒಂದು ವರ್ಷಮಾತ್ರ ಅಂದರೆ ಜನೇವರಿ ೧ ರಿಂದ ಡಿಸೆಂಬರ ೩೧ ರ ವರೆಗೆ ಅಮಲಿನಲ್ಲಿರುವದು. ಮರು ವರ್ಷ ಏಜನ್ಸಿಯು ನಡೆಯಬೇಕಾದರೆ ಏಜೆಂಟರು ಡಿಸೆಂಬರ ೧೫ ನೇ ತಾರೀಖಿನೊಳಗಾಗಿ ಈ ಪತ್ರಿಕೆಯ ಮೇಲೆ ಸಹಿ ಮಾಡಿ ಅರ್ಜಿ ಮಾಡತಕ್ಕದ್ದು.

೧೧. ಎರಡು ನೂರು ರೂಪಾಯಿಗಳಿಗೆ ಮೇಲ್ಪಟ್ಟ ಒಂದೇ ಆರ್ಡರಿನ ಮಾಲನ್ನು ಏಜೆಂಟರಿಗೆ ಅವರವರ ಸ್ಟೇಶನ್ನಿಗೆ ಒದಗಿಸಿ ಕೊಡುವ ರೇಲ್ವೆ ಗೂಡ್ಸ ಅಥವಾ ಮೋಟರಿನ ವೆಚ್ಚವನ್ನು ನಾವೇ ವಹಿಸುವೆವು. ಇದಲ್ಲದೆ ಇತರ ಖರ್ಚನ್ನು ಹಾಗೂ ಮಾಲು ತಿರುಗಿ ತರುವ ಖರ್ಚನ್ನು ಏಜಂಟರೇ ವಹಿಸತಕ್ಕದ್ದು.

೧೨. ಮೇಲ್ಕಂಡ ಕರಾರುಗಳನ್ನು ಒಪ್ಪಿ ಇದರ ಮೇಲೆ ಒಪ್ಪಿಗೆಯ ಬಗ್ಗೆ ಸಹೀ ಮಾಡುವವರಿಗೆ ಏಜನ್ಸಿ ಸರ್ಟಿಫೀಕೇಟನ್ನು ಕೊಡುವೆವು. ಭಾಂಡಾರಗಳಿಂದ ಮಾಲು ಖರೀದಿ ಮಾಡುವಾಗ ಅದನ್ನು ತೋರಿಸಬೇಕಾಗುವದು.

---

## ಹಿಂದುಗಳ ಬಿಡುಗಡೆ.

ಗಡಿನಾಡಿನಲ್ಲಿ ಅನೇಕ ಪುಂಡರು ಹಿಂದುಗಳನ್ನು ಓಡಿಸಿಕೊಂಡು ಹೋಗುತ್ತಿದ್ದಾರಷ್ಟೆ. ಕಳೆದ ಅಕ್ಟೋಬರ್ ತಿಂಗಳಲ್ಲಿ ಓಡಿಸಿಕೊಂಡು ಹೋಗಿದ್ದ ೧೦ ಹಿಂದುಗಳನ್ನು ಸರಕಾರದವರು ಬಿಡಿಸಿದ್ದಾರೆ. ಮುಸಲ್ಮಾನರ ಭಾಗದಲ್ಲಿ ಓಡಿಸಿಕೊಂಡು ಹೋಗಿದ್ದ ೬ ಹಿಂದು ಸೆರೆ ಆಳುಗಳ ಬಿಡುಗಡೆಯೂ ಆಯಿತು.

—ಬಡೋದಾ ಸಂಸ್ಥಾನದ ಪ್ರಜಾ ಮಂಡಲದ ೨೫ ನೆಯ ಅಧಿವೇಶನವು ಸರದಾರ ಪಟೇಲರ ಅಧ್ಯಕ್ಷತೆಯಲ್ಲಿ ಜರುಗಿತು. ಜವಾಬ್ದಾರಿ ಸರಕಾರವನ್ನು ಕೊಡಬೇಕೆಂಬ ಗೊತ್ತುವಳಿಯು ಠರಾವಾಯಿತು.

—ಪಂಢರಪುರದಲ್ಲಿ ಭಾಯಿ ಪರಮಾನಂದರ ಜಯಂತಿಯು ಸಂಭ್ರಮದಿಂದ ಜರುಗಿತು. ಹೈದರಾಬಾದಿನಲ್ಲಿ ನಡೆದಿರುವ ಸತ್ಯಾಗ್ರಹಕ್ಕೆ ಒಪ್ಪಿಗೆ ಕೊಡುವ ಠರಾವೂ ಆ ದಿನದ ಸಭೆಯಲ್ಲಿ ಆಯಿತು.

# ಹಿಂದೂ ಜನರ ಇಂದಿನ ಕರ್ತವ್ಯ.

ಹಿಂದುಸ್ಥಾನವು ಹಿಂದೂ ಧರ್ಮದವರಾದ ನಮ್ಮ ಜನ್ಮಭೂಮಿಯು. ಇಲ್ಲಿ ಎಷ್ಟೋ ಶತಮಾನಗಳಿಂದಲೂ ನಮ್ಮ ಪೂರ್ವಜರು ವಾಸಿಸುತ್ತ ಬಂದಿದ್ದಾರೆ. ೭-೮ ಶತಮಾನಗಳ ಪೂರ್ವದಲ್ಲಿ ಸಹ ಇಲ್ಲಿ ನಮ್ಮ ವಂಶಜರೇ ಅರಸರಾಗಿ ಕಡುಗಲಿತನದಿಂದ ಆಳಿ ಅಳಿದುಹೋಗಿದ್ದಾರೆ. ಅಂದು ನಮ್ಮ ಧರ್ಮಪತಾಕೆಯು ಆಸೇತುಹಿಮಾಚಲದ ವರೆಗೂ ನಿರಾತಂಕವಾಗಿ ಮೆರೆಯುತ್ತಿತ್ತು. ಆಗ್ಗೆ ಅದನ್ನು ಸಂಗಟ್ಟುವ ಮತ್ತಾವ ಧರ್ಮ ಪತಾಕೆಗಳೂ ಹಿಂದುಸ್ಥಾನದಲ್ಲಿರಲಿಲ್ಲ. ಆದರೆ ೭-೮ ಶತಮಾನಗಳಿಂದೀಚೆಗೆ ನಮ್ಮವರಲ್ಲಿ ದ್ವೇಷಾಸೂಯೆಗಳು ಬೆಳೆದು ತಮ್ಮೊಳಗೆ ಕಾದಾಡಹತ್ತಿದರು. ಇದೇ ವೇಳೆಗೆ ಪರರಾಷ್ಟ್ರಗಳಲ್ಲಿಯ ಧರ್ಮಗಳು ನಮ್ಮಲ್ಲಿಯ ಒಳ ಜಗಳಗಳ ಸಮಯವನ್ನು ಸಾಧಿಸಿ ನಮ್ಮ ಜನ್ಮಭೂಮಿಯ ಮೇಲೆ ಸಾಗಿಬಂದು ತಮ್ಮ ಧರ್ಮದ ಕಸುವನ್ನು ಹಿಂದುಸ್ಥಾನದ ಮೇಲೆ ಏರಹತ್ತಿದವು. ಬರಬರುತ್ತ ನಮ್ಮಲ್ಲಿಯ ಧರ್ಮಾಭಿಮಾನವೂ ಐಕ್ಯತೆಯೂ ಕುಗ್ಗಿ ಪರಧರ್ಮದ ಸೇವೆಯಂಥ ನೀಚ ಕೃತ್ಯಕ್ಕೆ ಹೇಸದೆ ಗುಲಾಮಗಿರಿಯನ್ನು ಸ್ವೀಕರಿಸಿ ಅಸ್ವತಂತ್ರರಾದೆವು. ನಮ್ಮ ಒಡೆತನವನ್ನೆಲ್ಲ ಕಸಗೊಂಡು ಕಡೆಗೆ ನಮ್ಮನ್ನು ತಮ್ಮ ಗುಲಾಮರನ್ನಾಗಿ ಮಾಡಿದ ಪರಧರ್ಮಿಗಳು ಅಷ್ಟಕ್ಕೇ ಸಂತುಷ್ಟರಾಗದೆ ನಮ್ಮ ಧರ್ಮದ ಬೊಡ್ಡೆಯನ್ನೂ ತುಂಡರಿಸತೊಡಗಿದರು. ಮೇಲು ಕೀಳೆಂಬ ಇಲ್ಲದ ಕಲ್ಪನೆಗಳ ಒಳ್ಳುರಿಗೆ ಮತ್ತಿಷ್ಟು ಸೆದೆಯನ್ನು ಹಾಕಿ ತಮ್ಮ ಬೇಳೆಯನ್ನು ಬೇಯಿಸಿಕೊಳ್ಳಹತ್ತಿದರು.

ಹಿಂದುಸ್ಥಾನದಲ್ಲಿ ಈಗ ನೆಲೆಸಿರುವ ಇಸ್ಲಾಂ, ಕ್ರೈಸ್ತ ಜನಾಂಗಗಳು ಅರಬಸ್ಥಾನದಿಂದಾಗಲೀ ಯುರೋಪ ಖಂಡದಿಂದಾಗಲೀ ಬಂದಿರದೆ ಇಲ್ಲಿಯ ನಮ್ಮ ಬಡ ಬಾಂಧವರನ್ನೇ ಬಲಾತ್ಕಾರದಿಂದಲೂ ಅನೇಕ ಆಶೆ ಮೋಸಗಳಿಂದಲೂ ಸೆಳೆದು ಈಗಿನ ಮೆಟ್ಟಿಲನ್ನು ಮುಟ್ಟಿವೆ. ಅಂದು ನಮ್ಮ ಬಂಧುಗಳಾದ ಜನಗಳು ಇಂದು ನಮ್ಮನ್ನೂ ನಮ್ಮ ಧರ್ಮವನ್ನೂ ನಾಶಗೊಳಿಸಿ ರಸಾತಲಕ್ಕೆ ತುಳಿಯುವವರಾಗಿದ್ದಾರೆ. ಈಗಿನಂಥ ಕಠಿಣ ಪ್ರಸಂಗವು ನಮ್ಮಲ್ಲಿಯ ಜಾತ್ಯಾಂಧತೆಯಿಂದಲೇ ಬಂದೊದಗಿದೆ. ಈ ವರೆಗೂ ನಮ್ಮ ಧರ್ಮದಲ್ಲಿ ಆಗಬೇಕಾದ ಸುಧಾರಣೆಯು ಆಗದ್ದರಿಂದ ಪರಧರ್ಮಿಗಳಿಗೆ ಅಸ್ಪದ ದೊರೆತು 'ನೆರೆ ಮನೆ ಹಾಳಾದರೆ ಕರಾ ಕಟ್ಟಲಿಕ್ಕೆ ಇಂಬಾಯಿತೆಂಬಂತೆ' ತಮ್ಮ ಧರ್ಮ ದರ್ಪಗಳ ವೃಕ್ಷದ ಬೇರುಗಳನ್ನು ಹಿಂದುಸ್ಥಾನದಲ್ಲಿ ದೂರದ ವರೆಗೂ ಇಳಿಸಿ ನಮ್ಮ ಅಹಿತಕ್ಕಾಗಿ ತಮ್ಮ ತನು ಮನ ಧನಗಳನ್ನು ಅರ್ಪಿಸಹತ್ತಿದ್ದಾರೆ. ಆದರೆ ಈಗಂತೂ ಜಗತ್ತಿಗಾದ ಜಾಗೃತಿಯು ನಮ್ಮ ಹಿಂದುಸ್ಥಾನದಲ್ಲೂ ಉದಯವಾಗಿದೆ. ಪಿತಾಮಹರಾದ ಮಹಾತ್ಮಾಜಿಯವರಂಥ ಜಗದ್ವಂದ್ಯರೂ ರಾಷ್ಟ್ರೋದ್ಧಾರಕರಾದ ಜವಾಹಿರಲಾಲ ಸುಭಾಷಚಂದ್ರರಂಥ ಮುತ್ಸದ್ದಿಗಳೂ ಸಾವರಕರರಂಥ ಧರ್ಮೋಪದೇಶಕರೂ ಟೊಂಕಕಟ್ಟಿ ನಮ್ಮ ಧರ್ಮೋದ್ಧಾರಕ್ಕೂ ಭಾರತಾಂಬೆಯ ಸ್ವಾತಂತ್ರ್ಯಕ್ಕೂ ಯತ್ನಿಸಹತ್ತಿದ್ದಾರೆ.

ಈ ಮಹತ್ಕಾರ್ಯಗಳು ಬೇಗನೆ ಸಿದ್ಧಿಸಿ ನಮ್ಮ ಪಾಲಿಗೆ ಲಾಭ ದೊರೆಯಬೇಕಾದರೆ ನಮ್ಮ ಬಾಂಧವರೆಲ್ಲರೂ ತಮ್ಮೊಳಗೆ ಐಕ್ಯತೆಯನ್ನು ಬೆಳೆಸಿ ಮೇಲು ಕೀಳೆಂಬ ಕುಕಲ್ಪನೆಯ ಸಸಿಯನ್ನು ಕಿತ್ತಿ ಬ್ರಾಹ್ಮಣಾದಿಯಾಗಿ ಅಂತ್ಯಜರ ವರೆಗೂ ಸಮತಾಭಾವನೆಯುಳ್ಳವರಾಗಬೇಕು. ಭಾರತಾಂಬೆಯ ಪ್ರೇಮಪುತ್ರರೂ ನಮ್ಮ ಪ್ರೀತಿಯ ಸಹೋದರರೂ ಆದ ಆದಿ ಹಿಂದುಗಳ ಮೇಲೆ ಅನ್ಯಾಯವಾಗಿ ಹೊರಿಸಿದ ಅಸ್ಪೃಶ್ಯತೆಯನ್ನು ದೂರಮಾಡಿ ಅವರಿಗೂ ಸಾರ್ವಜನಿಕ ಕೆರೆ, ಬಾವಿ, ದೇವಾಲಯಗಳಲ್ಲಿ ಪ್ರವೇಶಿಸುವದಕ್ಕೆ ಅಪ್ಪಣೆ ಕೊಡಬೇಕು. ಅಂದರೆ ನಮ್ಮೆಲ್ಲರ ಈಗಿನ ದುರ್ದೆಶೆಯು ದೂರಾಗಬಹುದು. ನಾವು ಈ ವರೆಗೂ ಅಸ್ಪೃಶ್ಯರನ್ನು ಅಲಕ್ಷ ಮಾಡಿದ್ದರಿಂದಲೇ ಅವರು ಇಸ್ಲಾಂ, ಕ್ರೈಸ್ತ, ಧರ್ಮದವರಾಗಹತ್ತಿದ್ದಾರೆ. ಆದರೆ ಇಲ್ಲಿಯ ವರೆಗೂ ತಮಗಾಗುವ ಅನೇಕ ಕಷ್ಟ ನಷ್ಟಗಳನ್ನು ಸಹಿಸಿ ಧರ್ಮಚ್ಯುತರಾಗದೆ ಹಿಂದು ಧರ್ಮಾವಲಂಬಿಗಳಾಗಿಯೇ ಉಳಿದು ಈಗಿನ ಅಮೌಲ್ಯ ಸಂಧಿಯನ್ನು ಅವಲೋಕಿಸುತ್ತಿರುವ ನಮ್ಮ ಬಡ ಬಂಧುಗಳಾದ ಹರಿಜನರ ಉಪಕಾರವನ್ನು ಸ್ಮರಿಸಬೇಕಾಗಿದೆ. ಇಂದು ಹರಿಜನೋದ್ಧಾರದ ಹೊರತು ಹಿಂದೂ ಧರ್ಮದ ಉದ್ಧಾರವಾಗಲಾರದು. ಅಸ್ಪೃಶ್ಯತೋದ್ಧಾರವೇ ನಮ್ಮ ಮುಖ್ಯ ಕರ್ತವ್ಯವು. ಅಸ್ಪೃಶ್ಯತಾ ನಿವಾರಣೆಯು ಪ್ರತಿಯೊಬ್ಬ ಹಿಂದುವಿನ ಪವಿತ್ರ ಕಾರ್ಯವು. ಕಾರಣ ಸಹೋದರರೇ, ಈಗಲಾದರೂ ಜಾಗೃತರಾಗಿರಿ. ಈ ಸಮಯವು ತಿರುಗಿ ದೊರೆಯದು. ಪೂರ್ವದ ಪುರಾಣವನ್ನೆಲ್ಲ ಬದಿಗಿಟ್ಟು ಮಹಾತ್ಮಾ ಗಾಂಧಿಯವರ ತತ್ವದಂತೆ ಅಹಿಂಸಾವ್ರತವುಳ್ಳವರಾಗಿ ಸ್ವದೇಶಿ ಪದಾರ್ಥಗಳನ್ನೇ ಉಪಯೋಗಿಸುತ್ತ, ಅಸ್ಪೃಶ್ಯತೆಯನ್ನು ಅಳಿದು ಸರ್ವರಲ್ಲಿ ಸಮತಾಭಾವನೆಯು ನೆಲೆಸುವದಕ್ಕೆ ಹೋರಾಡುವ ಕಾಂಗ್ರೆಸ್ಸಿನ ಧ್ವಜದಡಿಯಲ್ಲಿ ಸೇರಿ ಅಹೋರಾತ್ರಿ ಕಾಯಾ, ವಾಚಾ, ಮನಸ್ಸುಗಳಿಂದ ದುಡಿದು ಜಗತ್ತಿಗೆ ನಮ್ಮ ಧರ್ಮದ ಬೆಳಕನ್ನು ಬೆಳಗಿರಿ. ಅಂದರೆ ಆಗಲೇ ಹಿಂದೂ ಧರ್ಮದ ಪುನರುಜ್ಜೀವನ! ಭಾರತದ ಉದ್ಧಾರ!!

ಓರ್ವ ಹಿಂದೂ ಧರ್ಮಸೇವಕ.

---

# ಮಾನ್ಯತೆ ಪಡೆಯದೇ ಇರುವ ಖಾದಿ.

## ಮಹಾತ್ಮರ ತೀವ್ರ ನಿಷೇಧವು.

ಮಾನ್ಯತೆ ಪಡೆಯದೇ ಇರುವ ಖಾದಿಯ ಬಗ್ಗೆ ಮಹಾತ್ಮಾ ಗಾಂಧಿಯವರು ೧೫-೧೦-೩೮ ರ "ಹರಿಜನ" ಪತ್ರಿಕೆಯಲ್ಲಿ ಕೆಳಗಿನಂತೆ ಬರೆಯುತ್ತಾರೆ—

ಮಾನ್ಯತೆ ಇಲ್ಲದ ಭಾಂಡಾರಗಳಲ್ಲಿ ದೊರೆಯುವ ಖಾದಿಯನ್ನು ಹೊಣೆಗಾರ ಕಾಂಗ್ರೆಸ್ ಸದಸ್ಯರು ಸಹ ಉಪಯೋಗಿಸುವರೆಂದು ನಾನು ಕೇಳುತ್ತೇನೆ. ಮಾನ್ಯತೆಪಡೆಯದ ಭಾಂಡಾರಗಳಲ್ಲಿ ದೊರೆಯುವ ಖಾದಿಯು ಶುದ್ಧ ಖಾದಿಯಲ್ಲ. ಅ. ಭಾ. ಚರಖಾಸಂಘದವರು ನೂಲುವವರಿಗೆ ವಿಶೇಷ ಹೆಚ್ಚಿನ ಕೂಲಿಯನ್ನು ಕೊಡುತ್ತಿರುವಂದಿನಿಂದ ಇಂಥ ಮಾನ್ಯತೆ ಪಡೆಯದ ಭಾಂಡಾರಗಳು ನಮ್ಮ ದುರ್ದೈವದಿಂದ ಬಹಳವಾಗಿವೆ.

ತಾವೇ ಬೇಡದ ವಿನಃ ಕೂಲಿಕಾರರಿಗೆ ಹೆಚ್ಚಿನ ಕೂಲಿಯನ್ನು ವಾಡಿಕೆಯಾಗಿ ಯಾರೂ ಕೊಡುವದಿಲ್ಲ. ಅ. ಭಾ. ಚರಖಾಸಂಘದವರು ಮಾತ್ರ ಗೊತ್ತುಪಡಿಸಿದ ಹೆಚ್ಚಿನ ಕೂಲೀ ದರಗಳನ್ನು ಕೊಡುವರು. ಹಲವು ಸ್ವಾರ್ಥಸಾಧಕರಾದ ವ್ಯಾಪಾರಸ್ಥರು ಕೆಲಸಗಾರರ ಅಜ್ಞಾನದ ಲಾಭಪಡೆದು ಹಿಂದಿನ ಕಡಿಮೆ ಕೂಲೀದರಗಳನ್ನು ಕೊಟ್ಟು ಖಾದಿಯನ್ನು ತಯಾರಿಸುವರು. ಇಂಥ ಲಾಭದ ಖಾದಿಯನ್ನು ಅವರು ಚರಖಾಸಂಘದಿಂದ ಮಾನ್ಯತೆ ಪಡೆದ ಖಾದಿಗಿಂತ ಕಡಿಮೆ ಬೆಲೆಗೆ ಹಣವನ್ನು ಗಳಿಸುವರು. ಉದ್ದ ಎಳೆ ಅಥವಾ ಉಂಕಿಯ ನೂಲಿಗೆ ಗಿರಣಿಯ ನೂಲನ್ನು ಉಪಯೋಗಿಸಿಯೂ "ಖಾದಿ" ಎಂದು ಮಾರುವರು.

ಶುದ್ಧವಾದ ಖಾದಿ ಯಾವುದೆಂಬದನ್ನು ಎಲ್ಲರೂ ಚೆನ್ನಾಗಿ ತಿಳಿಯಬೇಕು. ಕೈನೂಲಿನಿಂದ ಕೈಮಗ್ಗದ ಮೇಲೆ ಹಾಗೂ ಅ. ಭಾ. ಚರಖಾಸಂಘದವರು ಗೊತ್ತುಪಡಿಸಿದ ಕೂಲೀ ದರಗಳನ್ನು ಕೊಟ್ಟು ಸಿದ್ಧವಾದ ಖಾದಿಯೇ ಶುದ್ಧವಾದ ಖಾದಿಯು. ಇಂಥ ಖಾದಿಯು ಅ. ಭಾ. ಚರಖಾ ಸಂಘದಿಂದ ಮಾನ್ಯತೆ ಪಡೆದ ಭಾಂಡಾರಗಳಲ್ಲಿ ಮಾತ್ರ ದೊರೆಯುವದು.

ಕಾಂಗ್ರೆಸ್ ಜನರು ಸಹ ಅಜ್ಞಾನದಿಂದ ಅಥವಾ ಖಾದಿಯಲ್ಲಿ ವಿಶ್ವಾಸವಿಲ್ಲದೇ ಕೇವಲ ತೋರಿಕೆಗಾಗಿ ಮಾನ್ಯತೆ ಪಡೆಯದ ಅಗ್ಗವಾದ ಅಶುದ್ಧ ಖಾದಿಯನ್ನು ಕೊಳ್ಳುವುದುಂಟು. ಇದರಿಂದ ಖಾದಿಯ ವಿಷಯಕ್ಕಿರುವ ಕಾಂಗ್ರೆಸ್ ಧೋರಣೆಯನ್ನು ಅವರು ಅಲ್ಲಗಳೆಯುವದಲ್ಲದೇ ತಾವು ಮಾಡುವ ಖಾದಿ ಖರೀದಿಮಟ್ಟಿಗಾದರೂ ನೂಲುವವರೇ ಮುಂತಾದ ಖಾದೀ ಕೆಲಸಗಾರರ ಹೆಚ್ಚಿನ ಕೂಲಿಯನ್ನು ಅಪಹರಿಸುವರು. ಖಾದಿಯ ಬೆಲೆಯು ಹೆಚ್ಚಾದಂತೆ ನೂಲುವವರಿಗೆ ಹೆಚ್ಚಿನ ಕೂಲಿ ದೊರೆಯುವದೆಂಬದನ್ನು ಎಲ್ಲರೂ ತಿಳಿಯಬೇಕು. ಹೆಚ್ಚಿನ ಕೂಲೀ ಕೊಟ್ಟದ್ದನ್ನೆಲ್ಲ ಖಾದಿ ಖರೀದಿಮಾಡುವವರಿಂದಲೇ ವಸೂಲ ಮಾಡುವದಿಲ್ಲವೆಂಬದನ್ನಾದರೂ ನಾನು ಹೇಳಲಪೇಕ್ಷಿಸುತ್ತೇನೆ.

ಅ. ಭಾ. ಚರಖಾ ಸಂಘದ ಅನುಮತಿ ಪಡೆಯದೆ ಖಾದಿ ಭಾಂಡಾರಗಳನ್ನು ತೆರೆಯುವಂಥ ಕಾಂಗ್ರೆಸ್ ಮುಂದಾಳುಗಳು ಖಂಡಿತವಾಗಿ ತಮ್ಮ ಸಂಸ್ಥೆಗೆ ಕೇಡುಬಗೆಯುವರಲ್ಲದೆ, ಮೋಸಗಾರಿಕೆಗೆ ಉತ್ತೇಜನ ಕೊಟ್ಟು ಕಾಂಗ್ರೆಸ್ ಧೋರಣವನ್ನೇ ಅಲ್ಲಗಳೆಯುತ್ತಿರುವರು. ಅ. ಭಾ. ಚರಖಾಸಂಘದವರು ಅಸಹಾಯರಾದ ಖಾದೀ ಕೆಲಸಗಾರರ ಸ್ಥಿತಿಯನ್ನು ಸುಧಾರಿಸಲು ಮಾಡುವ ಪ್ರಯತ್ನದಲ್ಲಿ ಸಹಾಯಮಾಡುವದು ಪ್ರತಿಯೊಬ್ಬ ಕಾಂಗ್ರೆಸ್ ಅಭಿಮಾನಿಯ ಕರ್ತವ್ಯವೂ ಹೆಮ್ಮೆಯ ವಿಷಯವೂ ಆಗಿರಬೇಕು.

**ಸೂಚನೆ:—** ಮಹಾತ್ಮರ ಮೇಲಿನ ಹೇಳಿಕೆಯಂತೆ ಕರ್ನಾಟಕದಲ್ಲಿ ಅ. ಭಾ. ಚರಖಾಸಂಘದಿಂದ ಮಾನ್ಯತೆಪಡೆದ ಭಾಂಡಾರಗಳ ಪಟ್ಟಿಯನ್ನು ಇಲ್ಲಿಕೊಟ್ಟಿದೆ.

### A. I. S. A.

೧ ಸುದರ್ಶನ ಚರಕಾಲಯ ಬೆಳಗಾವಿ ೨ ಖಾದೀ ಭಾಂಡಾರ ನಿಪ್ಪಾಣಿ ೩ ಖಾದಿ ವಸ್ತ್ರಾಲಯ ಬಳ್ಳಾರಿ ೪ ಖಾದಿ ಭಾಂಡಾರ ಬಾಗಲಕೋಟ ೫ ಖಾದಿ ಭಾಂಡಾರ ವಿಜಾಪುರ ೬ ಖಾದೀ ಭಾಂಡಾರ ಧಾರವಾಡ ೭ ಶುದ್ಧ ಖಾದೀ ನಿಧಿ, ಗದಗ ೮ ಖಾದಿ ಭಾಂಡಾರ ಹಾವೇರಿ ೯ ಖಾದೀ ಭಾಂಡಾರ ಹುಬ್ಬಳ್ಳಿ ೧೦ ಖಾದೀ ಭಾಂಡಾರ ಸಿರಸಿ ೧೧ ಖಾದೀ ಭಾಂಡಾರ ಸಿದ್ದಾಪುರ ೧೨ ಖಾದೀ ಭಾಂಡಾರ ಅಂಕೋಲಾ ೧೩ ಖಾದೀ ಭಾಂಡಾರ ಕುಮಟಾ ೧೪ ಖಾದೀ ಭಾಂಡಾರ ಮಂಗಳೂರು ೧೫ ಖಾದೀ ವಸ್ತ್ರಾಲಯ ಬೆಂಗಳೂರು ೧೬ ಖಾದೀ ವಸ್ತ್ರಾಲಯ ಚಿಕ್ಕಮಗಳೂರು ೧೭ ಖಾದೀ ಭಾಂಡಾರ ತುಮಕೂರು ೧೮ ಸೆಂಟ್ರಲ್ ಡಿಪೋ ಹುಬ್ಬಳ್ಳಿ

### ಖಾದೀ ಹೊತ್ತು ಮಾರುವವರು.

೧ ಬಿ. ಸಿದ್ಧಲಿಂಗಪ್ಪಾ (ಎ. ಆಯ. ಎಸ್. ಎ.)
೨ ಜಿ. ಕಸ್ತೂರಿರಂಗ ಅಯ್ಯಂಗಾರ, ಹಾಸನ (ರಜಿಸ್ಟರ್ಡ)

### ಸರ್ಟಿಫಿಕೇಟ ಪಡೆದ ಭಾಂಡಾರಗಳು

೧ ಖದ್ದರ ಕೋಆಪರೇಟಿವ್ಹ ಸೊಸಾಯಿಟಿ, ಮೈಸೂರು
೨ ಸುದರ್ಶನ ಖಾದಿ ನಿಲಯ ಶಿವಮೊಗ್ಗ
೩ ಖದ್ದರ ಕೋಆಪರೇಟಿವ್ಹ ಸೊಸಾಯಿಟಿ ಹೊಳೆನರಸಿಪುರ

ಇದಲ್ಲದೆ, ಹುದಲಿ ಗುರ್ಲಹೊಸೂರ, ಹೊಸಕೋಟೆ, ಉಪ್ಪಿನ ಬೆಟಗೇರಿ, ಹೊಸರಿತ್ತಿ, ಗಲಗಲಿ, ಕಲಾದಗಿ, ಗದ್ವಾಲ, ಕೆಂಭಾವಿಗಳಲ್ಲಿ, ಅ. ಭಾ. ಚರಖಾಸಂಘದ ಹುಟ್ಟುವಳಿ ಕೇಂದ್ರಗಳೂ, ಬದನವಾಳ, ಅಜ್ಜಂಪೂರ, ಹೊಸೂರ, ಐಮಂಗಳ, ಕಾನಕಾನಹಳ್ಳಿ (ಮೈಸೂರ ಸಿಲ್ಕಸೆಂಟರ), ಬಿ. ಡಿ. ವಿಶ್ವನಾಥರಾವ ಬೆಂಗಳೂರ ಈ ಮೈಸೂರ ಸಂಸ್ಥಾನದಲ್ಲಿಯ ಸರ್ಟಿಫಿಕೇಟ ಪಡೆದ ಹುಟ್ಟುವಳಿ ಕೇಂದ್ರಗಳೂ ಖಾದೀ ಉತ್ಪತ್ತಿ ಹಾಗೂ ಮಾರಾಟದ ಕೆಲಸಗಳನ್ನು ಮಾಡುತ್ತವೆ.

ಕರ್ನಾಟಕದಲ್ಲಿ ಯಾವದೇ ಮಾರಾಟ ಕೇಂದ್ರದವರು ಪರಪ್ರಾಂತದಿಂದ ಖಾದಿಯನ್ನು ತರಿಸಬೇಕಾದರೆ ಅ. ಭಾ. ಚರಖಾ ಸಂಘದ ಕರ್ನಾಟಕ ಶಾಖೆಯ ಹುಬ್ಬಳ್ಳಿಯಲ್ಲಿಯ ಪ್ರಾಂತಿಕ ಕಚೇರಿಯ ಪರವಾಗಿಯೇ ತರಿಸುವರು. ಆದ್ದರಿಂದ ಇಂಥ ಭಾಂಡಾರಗಳಲ್ಲಿ ದೊರೆಯುವ ಎಲ್ಲ ಖಾದಿಯೂ ಶುದ್ಧ ಖಾದಿ ಇರುವದು.

ಹಳೇಹುಬ್ಬಳ್ಳಿ. ಹ. ಶ್ರೀ. ಕೌಜಲಗಿ
೧೬-೧೦-೧೯೩೮. ಕಾರ್ಯದರ್ಶಿ
ಅ.ಭಾ. ಚರಖಾಸಂಘ, ಕರ್ನಾಟಕ ಶಾಖೆ.

---

### ಶ್ರೀಮಾನ್ ಶ್ರೀಕಂಠಯ್ಯನವರ ಅಭಿನಂದನೆ.

ಕನ್ನಡ ಸಾಹಿತ್ಯಾಚಾರ್ಯರಾದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರಿಗೆ ಮೈಸೂರು ಸರಕಾರದವರು "ರಾಜ ಸೇವಾಸಕ್ತ" ಎಂಬ ಪದವಿಯನ್ನು ಸುವರ್ಣ ಪದಕದೊಡನೆ ಇತ್ತು ಸನ್ಮಾನಿಸಿದ ಪ್ರಯುಕ್ತ ಬೆಂಗಳೂರು ವೀರಶೈವ ಮಹಾಜನರಿಗಾದ ಸಂತೋಷವನ್ನು ಪ್ರದರ್ಶಿಸಲು ಶ್ರೀಮನ್ನಿರಂಜನ ಶ್ರೀ ಮಹಾದೇವ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಕಳೆದ ೨೭ ನೆಯ ತಾರೀಖಿನ ದಿವಸ ಒಂದು ಅಭಿನಂದನಪರವಾದ ಸಭೆ ಸೇರಿದ್ದಿತು.

# ನಿಖಿಲ ಕರ್ನಾಟಕ ಆಯುರ್ವೇದ ಸಮ್ಮೇಲನ ಪತ್ರಿಕೆ.

ಸಂಪಾದಕರು:— ಆ. ತೀ. ಆದ್ಯಅನಂತಾಚಾರ್ಯ ವಿಜಾಪುರ.

ಮೇಲಿನ ತ್ರೈಮಾಸಿಕವು ಶೀಘ್ರವೇ ಪ್ರಕಟಿಸಲ್ಪಡುವದು ಇದರಲ್ಲಿ ಇಡೀ ಭರತಖಂಡದಲ್ಲಿ ವಿಶೇಷತಃ ಕರ್ನಾಟಕದಲ್ಲಿಯ ಆಯುರ್ವೇದ ವಿಷಯವಾಗಿ ನಡೆದಿರುವ, ನಡೆಯಬೇಕಾದ ಚಟು ವಟಿಕೆಗಳೂ, ಕಠಿಣ ರೋಗಚಿಕಿತ್ಸೆಗಳೂ, ವೈದ್ಯರ ಸಹಾಯಸಿ ಗದ ಹಳ್ಳಿಪಳ್ಳಿ ಸ್ಟೇಶನ್ ಮುಂತಾದ ಸ್ಥಳಗಳಲ್ಲಿರುವ ಕುಟುಂಬ ವತ್ಸಲರಿಗೆ ಉಪಯುಕ್ತವಾಗುವಂಥ ಸುಲಭ ಔಷಧಗಳೂ, ಬೇರೆ ಬೇರೆ ಅನುಭವಿಕ ವೈದ್ಯರ ಅನುಭವಿಕ ಔಷಧಗಳೂ, ಪ್ರಾಚೀನ ಅರ್ವಾಚೀನ ಹೊಸಹೊಸ ಶೋಧಗಳೂ, ಪ್ರಾಚೀನ ದುರ್ಮಿಳ ಕನ್ನಡ ಸಂಸ್ಕೃತ ಗ್ರಂಥಗಳೂ ಟೀಕೆಗಳೂ, ಭಾಷಾಂತರವೂ ಮತ್ತು ಇನ್ನೂ ಅನೇಕ ವೈದ್ಯರ ವಿಷಯಗಳೂ ಬರುವವು.

| | | |
|---|---|---|
| ಚಂದಾ:— | ಆಶ್ರಯದಾತರಿಗೆ | ೧೦ ರೂಪಾಯಿ |
| | ಪೋಷಕರಿಗೆ | ೫ ರೂ. |
| | ಉಳಿದವರಿಗೆ ಅಂಚೆವೆಚ್ಚ ಸೇರಿ | ೨ ರೂ. ಮಾತ್ರ |

ಕರ್ನಾಟಕದ ಎಲ್ಲ ವೈದ್ಯ ಮತ್ತು ಸದ್ಗೃಹಸ್ಥರು ಕೂಡಲೇ ಚಂದಾದಾರರಾಗಿ ಸಹಾಯ ಮಾಡಬೇಕಾಗಿ ವಿನಂತಿ.

ಈ ಪತ್ರಿಕೆಯು ನಿ. ಕ. ಆಯುರ್ವೇದ ಮಂಡಳದ ಪರವಾಗಿ ಪ್ರಕಟವಾಗುವುದರಿಂದ ಇಡೀ ಕರ್ನಾಟಕದಲ್ಲಿ ಪ್ರಸಾರವಾಗುವ ಕಾರಣ ಜಾಹೀರಾತದಾರರಿಗೆ ತಮ್ಮ ವಸ್ತು ಪ್ರಕಟನೆಗೆ ಉತ್ತ ಮ ಸಾಧನವಾಗಿರುವದು. ಆದ್ದರಿಂದ ವ್ಯಾಪಾರಸ್ಥರು ಶೀಘ್ರವೇ ಬರೆದುಕೊಳ್ಳಬೇಕು.

ವಿಳಾಸ:—

ವ್ಯವಸ್ಥಾಪಕ, ನಿಖಿಲ ಕರ್ನಾಟಕ ಆಯುರ್ವೇದ
ಸಮ್ಮೇಲನ ಪತ್ರಿಕೆ,
ರಾಜಬೀದಿ, ವಿಜಾಪುರ.



# ಲಿಂಗಧಾರಣ ದೀಕ್ಷೆ

## ಸುಲೇಪೇಟೆ.

ಸುಲೇಪೇಟೆ ಗ್ರಾಮವಾಸಿಯಾದ ರಾಜಾಪುರದ ಸಿದ್ದಪ್ಪ ಎಂಬಾತನು "ನಾನು ಅತ್ಯಾಚಾರಗಳನ್ನು ತ್ಯಜಿಸಿ, ಸದಾಚಾರ, ಮತ್ತು ವೀರಶೈವ ಧರ್ಮತತ್ವಗಳಿಗನುಸಾರವಾಗಿ ಇದುವರೆಗೂ ನಡೆದುಕೊಂಡು ಬಂದಿರುತ್ತೇನೆ. ಅಂಥ ಯಾವ ನನ್ನನ್ನು ಈಗ ಲಿಂಗಧಾರಣ ದೀಕ್ಷೆಯನ್ನಿತ್ತು ಉದ್ಧರಿಸಬೇಕು." ಎಂದು ಈ ಗ್ರಾಮದ ವೀರಶೈವ ಸಮಾಜಕ್ಕೆ ಅರ್ಜಿಮಾಡಿಕೊಳ್ಳಲಾಗಿ, ಸಮಾ ಜದವರೆಲ್ಲರೂ ಆ ಅರ್ಜಿಯನ್ನು ಪರಾಂಬರಿಸಿ ಒಪ್ಪಿ ಇದೇ ಬಹು ಧಾನ್ಯ ಸಂವತ್ಸರ ಕಾರ್ತಿಕ ಶುದ್ಧ ೧ ಸಾಯಂಕಾಲ ೫ ಘಂಟೆಯ ಸುಮುಹೂರ್ತದಲ್ಲಿ ಸದರಿ ಸಿದ್ದಪ್ಪನಿಗೂ ಮತ್ತು ಆತನ ಕುಟುಂ ಬದ ೪ ಜನರಿಗೂ ಶಾಸ್ತ್ರೋಕ್ತ ಪ್ರಕಾರ ಲಿಂಗಧಾರಣದೀಕ್ಷೆಯು ಶ್ರೀ ಖಟ್ವಾಂಗೇಶ್ವರ ಮಠದಲ್ಲಿ, ಉಮನಬಾ್ ಕೆಳಗಿನ ಪೇಟೆ ಹಿರೇಮಠದ ರೇವಣಸಿದ್ಧ ದೇಸಿಕೇಂದ್ರರ ಅಧಿಕಾರವತಿಯಿಂದ ಮತ್ತು ಈ ಗ್ರಾಮದ ಹಿರೇಮಠದ ಪುರಾಣೀಕ ಶರಣಯ್ಯ ನವರ ಮತ್ತು ಮಠಪತ್ತಿ ಚಂದ್ರಯ್ಯ, ಚೆನ್ನಯ್ಯನವರ ಪೌರೋ ಹಿತ್ಯದಿಂದ ಅತ್ಯಂತ ವಿಜೃಂಭಣೆಯಿಂದ ಸಾಂಗವಾಗಿ ಜರುಗಿ ಸಿದ್ದಾಯಿತು. ಮತ್ತು ಈ ಕಾರ್ಯಕ್ಕೆ ಶೆಟ್ಟಿ ಅಣವೀರಪ್ಪನವರು ಬಹಳ ಮುತುವರ್ಜಿವಹಿಸಿ ನಿಂತಿದ್ದರಲ್ಲದೆ. ಈ ಸಮಾರಂಭಕ್ಕೆ ಅನೇಕ ಪುರ ಪ್ರಮುಖರು ತಮ್ಮ ತಮ್ಮ ಗೃಹಕೃತ್ಯಗಳನ್ನೆಲ್ಲ ಬದಿಗೊತ್ತಿ ತುಂಬಾ ಶ್ರಮವಹಿಸಿ ಸಮಾಜಾಭಿವೃದ್ಧಿಯ ಕಾರ್ಯ ವನ್ನು ನೆರವೇರಿಸಿದುದು ತುಂಬಾ ಸ್ತುತ್ಯಕರವಾದದ್ದು. ಇವ ರಲ್ಲದೆ ಅನೇಕ ಜಂಗಮ ಪುಂಗವರು ಚಿಂಚೋಳಿ ಮೊದಲಾದ ಗ್ರಾಮದ ಕೆಲವು ಸದ್ಭಕ್ತರು ಸಹ ಭೋಜನ ಸಮಾರಂಭದಲ್ಲಿ ಎಲ್ಲರೂ ಭಾಗವಹಿಸಿದ್ದರು.

ಇದರಂತೆಯೇ ಇನ್ನು ಮುಂದಾದರೂ ಈ ಸಮಾಜದ ವತಿ ಯಿಂದ ಎಷ್ಟೋಜನರಿಗೆ ವೀರಶೈವ ದೀಕ್ಷೆಯನ್ನು ಕೊಡುವ ಸಮಾರಂಭಗಳು ನಡೆಯತಕ್ಕವುಗಳೇ ಇರುತ್ತವೆ.

ವೀರಶೈವ ಧರ್ಮಶಾಸ್ತ್ರಕ್ಕೆ ವಿರುದ್ಧವಾಗಿ ಮದ್ಯ ಮಾಂಸಾ ದಿಗಳನ್ನು ಸೇವಿಸತಕ್ಕ ಜನರಿಗೆ ಮಾತ್ರ ಈ ವೀರಶೈವ ಸಮಾ ಜದಲ್ಲಿ ಲಿಂಗಧಾರಣದೀಕ್ಷೆಯನ್ನು ಕೊಡಲಿಕ್ಕೆ ಎಂದಿಗೂ ಅವ ಕಾಶವಿಲ್ಲವೆಂಬುವನ್ನು ಪ್ರತಿಯೊಬ್ಬರೂ ಯಾವಾಗಲೂ ನೆನಪಿನಲ್ಲಿ ಡತಕ್ಕ ಸಂಗತಿಯಾಗಿರುವದು.

ವೀರಶೈವ ಸಮಾಜದ ಸೆಕ್ರೆಟರಿ.
ಬಸವಣ್ಣಪ್ಪ ಭಾಳ್ಕಿ.

## ಕಾಂಗ್ರೆಸ್‌ವರ್ಕಿಂಗ್ ಕಮಿಟಿ.

ಈ ತಿಂಗಳ ಮೂರನೆಯ ವಾರದಲ್ಲಿ ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಕೂಡುವುದಿದೆ. ಗಾಂಧೀಜಿಯವರೂ ಬರುವರು.

ಅಖಿಲ ಭಾರತ ವಸ್ತು ಪ್ರದರ್ಶನದಲ್ಲಿ
ಸುವರ್ಣ ಪದಕಗಳನ್ನು ಮತ್ತು ಸರ್ಟೀಫಿಕೇಟುಗಳನ್ನು ಪಡೆದು ಹೆಸರಾದ
ಇಂಡಿಯಾ ಸರಕಾರದಲ್ಲಿ ರಜಿಸ್ಟರ್ ಆದ

# ಸಿದ್ಧೇಶ್ವರ ಟ್ರೇಝುರಿ ಕಂಪನಿ, ಹುಬ್ಬಳ್ಳಿ.








ನಮ್ಮ "ಸಿದ್ಧೇಶ್ವರ ಟ್ರೇಝುರಿ" ಗಳನ್ನು ಈ ವರೆಗೆ ಕೈಗಾರಿಕೆಯ ಕೆಲಸಗಳಲ್ಲಿ ಹೆಸರಾದ ಯುರೋಪ, ಅಮೇರಿಕಾ ವಗೈರೆ ಪರರಾಷ್ಟ್ರಗಳಲ್ಲಿ ತಯಾರಾಗುವ ಟ್ರೇಝುರಿಗಳ ಪದ್ಧತಿಯ ಮೇರೆಗೆ ಹೊಸ ಉಕ್ಕಿನ ಅಖಂಡ ಒಂದೇ ತಗಡಿನಲ್ಲಿ ೧೨ ಮೂಲೆಗಳನ್ನು ೩೫೦ ಟನ್ ಪ್ರೇಷರ ಕೊಡುವ ಮಶಿನ್ನಿನಿಂದ ಬಗ್ಗಿಸಿ, ರಿವ್ಹಿಟ್ಸ ಮೊದಲಾದವುಗಳಿಂದ ಜಾಯಿಂಟ ಮಾಡದೆ ಇಲೆಕ್ಟ್ರಿಸಿಟಿಯಿಂದ ಬೆಸೆದು ತಯಾರಿಸುತ್ತೇವೆ.

ಈ ಹೊಸ ಸುಧಾರಣೆಯಿಂದ ಮಾಡಿದ ತಿಜೋರಿಗಳಿಗೂ ಮತ್ತು ಯಾವದೇ ನಮ್ಮ ಸಾಮಾನಕ್ಕೂ ಯಾವ ತರದ ಭಯವಿಲ್ಲ. ಮತ್ತು ಅವು ಒಳ್ಳೇ ಮಜಬೂತವಾಗಿಯೂ ಸುಂದರವಾಗಿಯೂ ಆಗುತ್ತವೆ. ನಾವು ನಮ್ಮ ತಿಜೋರಿಗಳಿಗೂ ಮತ್ತು ನಮ್ಮಲ್ಲಿ ತಯಾರಾಗುವ ಉಕ್ಕಿನ ಕಪಾಟು, ಕ್ಯಾಶಬಾಕ್ಸ, ಸ್ಟ್ರಾಂಗರೂಮ ಡೋರ್‍ಸು ಗಳಿಗೂ ನಮ್ಮ ಕಾರಖಾನೆಯಲ್ಲಿಯೇ ತಯಾರಾಗುವ ಉತ್ತಮವಾದ ಮತ್ತು ಮಜಬೂತವಾದ ಕೀಲಿಗಳನ್ನು ಹಚ್ಚುತ್ತೇವೆ. ಮತ್ತು ಇದಲ್ಲದೆ ನಮ್ಮಲ್ಲಿ ಹೊಸ ಪದ್ಧತಿಯ ಮೇರೆಗೆ ತಯಾರಾಗುವ ಕಾಂಬಿನೇಶನ್ ಕೀ ಲೆಸ್ಸಾ ಲಾಕ್ಸು (ನಂಬರ ಕೀಲಿ) ಗಳನ್ನು ತಿಜೋರಿಗಳಿಗೆ ಹಚ್ಚಿಸಿದರೆ ಆ ತಿಜೋರಿಗಳನ್ನು ಯಾರೂ ತೆಗೆಯಲು ಸಾಧ್ಯವಿಲ್ಲ. ಯಾರಾದರೂ ತೆಗೆದರೆ ಅವರಿಗೆ

**೧೦೦೦. ರೂ. ಬಹುಮಾನ ಕೊಡುವೆವು.**

ನಮ್ಮ ಫಾಯರ ಪ್ರೂಫ್ ತಿಜೋರಿಗಳು ತುಂಬಾ ಖಾತ್ರಿಯಾದವುಗಳಿರುತ್ತವೆ.

**ಈ ಬಗ್ಗೆ ಅನೇಕ ವಸ್ತು ಪ್ರದರ್ಶನಗಳಲ್ಲಿ ಒಳಗೆ ನೋಟು ವಗೈರೆ ಸಾಮಾನುಗಳನ್ನು ಇಟ್ಟು ಕೆಂಪಗೆ ಕಾಸಿದನಂತರ ಒಳಗಿಟ್ಟ ಸಾಮಾನುಗಳು ಸುಡದೆ ಇದ್ದದ್ದನ್ನು ಖಾತ್ರಿ ಮಾಡಿಕೊಟ್ಟಿದ್ದೇವೆ.**

ಧಾರಣೆಗಳ ಬಗ್ಗೆ ನಮ್ಮ ಸಚಿತ್ರ ಕ್ಯಾಟಲಾಗುಗಳಿಗೆ ಬರೆಯಿರಿ.
ಅಥವಾ
ಸಮಕ್ಷಮ ಬಂದಲ್ಲಿ ತಿಳಿಯುವದು.

ತಮ್ಮ ಅಭಿಮಾನಿ,
ಸಿದ್ಧೇಶ್ವರ ಮತ್ತು ಕಂಪನಿ
ಟ್ರೇಝುರಿ ಮೇಕರ್ಸ
ಹುಬ್ಬಳ್ಳಿ.

ಫ್ಯಾಕ್ಟರಿ ಮತ್ತು ಹೆಡ್ ಆಫೀಸ್-
ಹುಬ್ಬಳ್ಳಿ.

ಬ್ರ್ಯಾಂಚ ಆಫೀಸುಗಳು-
ಹೈದರಾಬಾದ (ಡೆಕ್ಕನ) ಮತ್ತು ಕೊಲ್ಹಾಪುರ (ಲಕ್ಷ್ಮೀಪುರಿ)

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891

# ಶರಣ ಸಂದೇಶ

## The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ!
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ‖ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೪ | ಆಲಮಟ್ಟಿ- ಸೋಮವಾರ ತಾರೀಖು ೧೪ ನೆಯ ನವ್ಹಂಬರ್ ೧೯೩೮. | ಸಂಚಿಕೆ೧೩ |
|---|---|---|

ಜನಸೇವೆಯೇ ದೇವರಸೇವೆ.

# ತುರ್ಕಸ್ಥಾನದಲ್ಲಿ ಕತ್ತಲು!

## ತುರ್ಕಸ್ಥಾನದ ಸೂರ್ಯ ಕೆಮಾಲ ಪಾಶಾ

**ತಾ. ೧೦-೧೧-೩೮ನೆಯ ದಿನ ಮಧ್ಯಾನ್ಹ ಅಸ್ತನಾದನು!**

# ಸತ್ಯಾಗ್ರಹ ಯುದ್ಧ!

**ನಿಜಾಮ ರಾಜ್ಯದ ಸತ್ಯಾಗ್ರಹ ಯುದ್ಧವು ಈ ವಾರದಲ್ಲಿ ಹೆಚ್ಚಾಗಿ ಪ್ರಜ್ವಲವಾಯಿತು.**

## ತಾ. ೧೦ ರ ವರೆಗೆ ೧೦೫ ಜನ

**ಸತ್ಯಾಗ್ರಹಿಗಳು ಸೆರೆಮನೆ ಸೇರಿದರು.**

**ಸರ್. ಅಕಬರ್ ಹೈದರಿಯವರು ಶ್ರೀ. ಜಮುನಾಲಾಲ ಬಜಾಜರ ಸಂಗಡ ಸಂಧಾನ ನಡೆಸಿರುವರಂತೆ.**

ದೇವನೇ ದೇವಾಲಯ.



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೮ || ಆಲಮಟ್ಟಿ- ಸೋಮವಾರ ತಾರೀಖು ೧೪ ನೆಯ ನವ್ಹಂಬರ ೧೯೩೮. | ಸಂಚಿಕೆ ೩೩

# ಕೆಮಾಲ ಪಾಶಾರವರ ಶೋಚನೀಯ ನಿಧನ.

ಇಂದಿನ ತುರ್ಕಸ್ಥಾನದ ಜನಕರಾದ ಸ್ವಾತಂತ್ರ್ಯ ವೀರ ಕೆಮಾಲ ಪಾಶಾರವರು ತಾ. ೧೦-೧೧-೩೮ ನೆಯ ಮಧ್ಯಾನ್ಹ ಇಸ್ತಂಬೂಲ ಪಟ್ಟಣದಲ್ಲಿ ನಿಧನಹೊಂದಿದರೆಂದು ತಿಳಿಸಲು ಅತ್ಯಂತ ವಿಷಾದಿಸುತ್ತೇವೆ. ಇವರ ನಿಧನದಿಂದ ಪ್ರಪಂಚವೇ ಶೋಕಿಸಿತು.

ಕೆಮಾಲರ ನಿಧನವು ತುರ್ಕಸ್ಥಾನಕ್ಕೆ ಎಂದೂ ನಿವಾರಣೆಯಾಗದಂತಹ ನಷ್ಟವೆಂದು ಮಹಾತ್ಮಾ ಗಾಂಧಿಯವರು ತಿಳಿಸಿದ್ದಾರೆ. ನೂರಾರು ವರುಷಗಳಿಂದ ದಾಸ್ಯಪಂಕದಲ್ಲಿ ಬಿದ್ದಿದ್ದ ತುರ್ಕಸ್ಥಾನವನ್ನು ಮೇಲಕ್ಕೆತ್ತಿ ಸ್ವಾತಂತ್ರ್ಯ ಶಿಖರದ ಮೇಲಿಟ್ಟ ಕೆಮಾಲರ ಜಡದೇಹವು ಇಂದು ಅಳಿದರೂ ಅವರ ಕೀರ್ತಿ ದೇಹವು ಚಿರಕಾಲ ಉಳಿಯುವುದೆಂದು ದೇವಿ ಸರೋಜನಿಯವರು ಹೇಳಿದ್ದಾರೆ.

## ಕೆಮಾಲರ ದಿವ್ಯ ಜೀವನ.

ಕೆಮಾಲರು ಅಲ್ಲಿ ರೀಝಾ ಎಂಬ ಒಬ್ಬ ಬಡ ಕಾರಕೂನನ ಮಕ್ಕಳು. ಇವರು ೧೮೮೧ ರಲ್ಲಿ ಜನ್ಮವೆತ್ತಿದ್ದರು, ಚಿಕ್ಕಂದಿನಲ್ಲಿಯೇ ತಂದೆಯು ಮೃತಪಟ್ಟಿದ್ದರಿಂದ ತಾಯಿಯ ಜೋಪಾನದಿಂದಲೇ ಬೆಳೆದು ವಿದ್ಯೆಯನ್ನು ಕಲಿತು ೨೧ ನೆಯ ವರುಷದಲ್ಲಿ ಸೈನ್ಯ ಶಾಖೆಯಲ್ಲಿ ಸೇರಿದರು.

ಹಿಂದುಗಳಂತೆ ತುರ್ಕಿಗಳು ಜನ್ಮವಿಶಿಷ್ಟವಾದ ಸಾಮಾಜಿಕ ಮೇಲು ಕೀಳುಗಳ ಬಲೆಯಲ್ಲಿ ಬಿದ್ದು ಒದ್ದಾಡುತ್ತಿರುವವರಲ್ಲ. ಆದ ಕಾರಣ ಗುಣಕ್ಕೆ ತಕ್ಕ ಯೋಗ್ಯತೆಯು ಅಲ್ಲಿ ದೊರೆತು ತರುಣ ಕೆಮಾಲರ ವೀರತ್ವವು ಬ್ರಿಟಿಶರೊಡನೆ ಗ್ಯಾಲಿಪೋಲಿಯಾದ ಪರ್ಯಾಯ ದ್ವೀಪಗಳಲ್ಲಿ ನಡೆದ ಯುದ್ಧದಿಂದ ೧೯೧೫ ರಲ್ಲಿ ಪ್ರಕಾಶಕ್ಕೆ ಬಂದಿತು. ಮುಂದೆ ಯುರೋಪದ ಮಹಾಯುದ್ಧದಲ್ಲಿ ಬ್ರಿಟಿಶರು ತುರ್ಕಸ್ಥಾನದ ಮೇಲೆ ಬೀಳಲು ವೀರ ಕೆಮಾಲರ ಪರಾಕ್ರಮವು ಮತ್ತಷ್ಟು ತೇಜೋಮಯವಾಗಿ ತೋರಿತು. ತುರ್ಕಸ್ಥಾನದ ಉದ್ಧಾರಕ್ಕಾಗಿಯೇ ಕೆಮಾಲರು ಜನ್ಮವೆತ್ತಿದ ಮಹಾವಿಭೂತಿಯೆಂಬುದು ಆಗ ಅನೇಕರಿಗೆ ಹೊಳೆಯಿತು.

## ಸಾಮಾಜಿಕ ಕ್ರಾಂತಿಕಾರಕ.

ಕೆಮಾಲ ಪಾಶಾರವರು ಕೇವಲ ರಾಜಕೀಯ ಸ್ವಾತಂತ್ರ್ಯ ಪ್ರಿಯರೇ ಅಲ್ಲ. ಇವರು ಧಾರ್ಮಿಕ ಮತ್ತು ಸಾಮಾಜಿಕ ಸ್ವಾತಂತ್ರ್ಯ ಪ್ರಿಯರೂ ಆಗಿದ್ದರು. ಆದುದರಿಂದ ರಾಜಕಾರಣಕ್ಕೆ ಪೋಷಕವಾಗಬೇಕೆಂದು ಸಾಮಾಜಿಕ ಮತ್ತು ಧಾರ್ಮಿಕ ಕ್ರಾಂತಿಯನ್ನೂ ಉಂಟುಮಾಡಿದರು. ಇವರು ೧೯೨೧ ರಲ್ಲಿ ತುರ್ಕಿಸ್ಥಾನದ ಸರ್ವಾಧಿಕಾರಿಗಳಾದನಂತರ ತುರ್ಕಿಯರಲ್ಲಿದ್ದ ಇಸ್ಲಾಮಿನ ಧಾರ್ಮಿಕ ಮತ್ತು ಸಾಮಾಜಿಕ ಅನೇಕ ಅಂಧ ಪರಂಪರೆಗಳನ್ನೆಲ್ಲಾ ಶಾಸನಗಳಿಂದಲೇ ತೆಗೆದುಹಾಕಿದರು. ನೆರೆಯ ಕ್ರಿಸ್ತ ಜನಾಂಗದಂತೆ ತುರ್ಕಿ ಜನಾಂಗವೂ ತೇಜೋಮಯವಾಗುವಂತೆ ಮಾಡಿದರು. ಪ್ರಜಾ ಪ್ರಭುತ್ವವನ್ನು ಸ್ಥಾಪಿಸಿ ಖಲೀಫತ್ತನ್ನು ನಿವಾರಣೆಮಾಡಿದರು. ಘೋಷಾ ಪದ್ಧತಿಯನ್ನು ತೆಗೆದುಹಾಕಿದರು. ಫೆಜ್ ಟೊಪ್ಪಿಗೆ ಹೋಗಿ ಹ್ಯಾಟ್ ಬಂದಿತು.

ಕೆಮಾಲರು ಸರ್ವಾಧಿಕಾರಿಗಳಾಗಿ ಮೊದಲು ತುರ್ಕಿ ಜನಾಂಗದಲ್ಲಿದ್ದ ಸಾಮಾಜಕ ಮತ್ತು ಧಾರ್ಮಿಕ ದೋಷಗಳನ್ನು ತೆಗೆದು ಹಾಕಿದರು. ಆ ಜನಾಂಗದಲ್ಲಿ ವಿಚಾರ ಜಾಗೃತಿಯನ್ನುಂಟುಮಾಡಿ ಹೊಸ ತುರ್ಕಿ ರಾಷ್ಟ್ರವನ್ನೇ ನಿರ್ಮಾಣ ಮಾಡಿದರು.

ಕಳೆದ ೧೫ ವರುಷ ಸರ್ವಾಧಿಕಾರಿಗಳಾಗಿದ್ದು ತುರ್ಕಿ ರಾಷ್ಟ್ರವು ಸಕಲ ಸಂಗತಿಗಳಲ್ಲಿಯೂ ಮುಂದರಿಯುವಂತೆ ಮಾಡಿದರು. ಹಿಟಲರ್, ಮುಸೋಲಿನಿ, ಸ್ಟ್ಯಾಲಿನ್‌ರಿಗಿಂತ ಇವರ ಮಾರ್ಗವು ತೀರ ಭಿನ್ನವಾಗಿದ್ದಿತು.

# ವೀರಶೈವ ಮಹಾ ಸಭೆಯಲ್ಲಿ

## ನಿರ್ಣಯಿಸತಕ್ಕ ವಿಷಯ.

**ಹುಬ್ಬಳ್ಳಿಯಲ್ಲಿ ಜರಗುವ ೧೫ ನೆಯ ವೀರಶೈವ ಮಹಾ ಸಭೆಯಲ್ಲಿ ನಿರ್ಣಯಿಸತಕ್ಕ ಮುಖ್ಯ ವಿಷಯಗಳಲ್ಲಿ ಒಂದಾದ ಗುರು-ವಿರಕ್ತರ ಕಲಹ ನಿವಾರಣೋಪಾಯದ ಯೋಜನೆ.**

[ಈ ಯೋಜನೆಯು ತಿದ್ದುಪಡಿಗೆ ಒಳಪಟ್ಟಿದೆ. ಕಾರಣ ಸೂಚನೆ ಕಳಿಸುವ ಮಹನೀಯರು ವರ್ತಮಾನಪತ್ರದಲ್ಲಿ (ಅದರ ಪ್ರತಿಯೊಂದನ್ನು ಕಳಿಸಬೇಕು.) ಪ್ರಸಿದ್ಧಿಸಿರಿ.]

---

**ಈ ಮುಖ್ಯಗದ್ದುಗೆಗಳಾದ**

(೧) ಶೂನ್ಯಸಿಂಹಾಸನಾಧೀಶ್ವರರೂ ಗುರುಪೀಠಗಳಾದ ಪಂಚ ಸಿಂಹಾಸನಾಧೀಶ್ವರರೂ ಸ್ವಹಸ್ತಾಂಕಿತದಿಂದ ಅಧಿಕೃತವಾದ ಬರಹ ಮೂಲಕ ಒಪ್ಪಿಕೊಂಡಲ್ಲಿ ಕೆಳಗಿನ ಯೋಜನೆಗಳನ್ನು ಕೈಕೊಳ್ಳತಕ್ಕದ್ದು. ಮತ್ತು ಆ ಯೋಜನೆಯ ಎಲ್ಲ ವೆಚ್ಚವನ್ನು ಸರಿಯಾಗಿ ಎರಡೂ ಪಕ್ಷದವರು ವಹಿಸತಕ್ಕದ್ದು. ಹಾಗು ಅದನ್ನು ಆ ಬಗ್ಗೆ ನಿಯಮಿಸಲ್ಪಟ್ಟ ಕಮಿಟಿಯೊಂದರ ವಶಕ್ಕೆ ಕೊಡತಕ್ಕದ್ದು.

(೨) ಅ. ಈ ವಾದವಿವಾದವನ್ನು ಪೂರ್ತಿಯಾಗಿ ಕೇಳಿ ನಿಷ್ಕರ್ಷಿಸಲಿಕ್ಕೆ ಮೂರು ಅಥವಾ ಐದು ನ್ಯಾಯಮೂರ್ತಿಗಳನ್ನೊಳಗೊಂಡ ಒಂದು ಕೋರ್ಟನ್ನು ನಿಯಮಿಸತಕ್ಕದ್ದು.

ಬ. ಒಂದೊಂದು ಪಕ್ಷದವರು ಒಬ್ಬೊಬ್ಬ ನ್ಯಾಯಮೂರ್ತಿಗಳನ್ನು (ಮೂರು ಜನರಿದ್ದಲ್ಲಿ) ಇಬ್ಬಿಬ್ಬರನ್ನು (ಐದು ಜನ ನ್ಯಾಯಾಧೀಶರಿದ್ದಲ್ಲಿ) ನಿಯಮಿಸಿಕೊಡತಕ್ಕದ್ದು. ಮುಖ್ಯ ನ್ಯಾಯಮೂರ್ತಿಯನ್ನು ಮಹಾಸಭೆಯವರಿಂದ ನಿರ್ಧರಿಸಲ್ಪಟ್ಟ ಉಪಮಂಡಲದವರು ನಿಯಮಿಸತಕ್ಕದ್ದು.

ಕ. ಪ್ರತಿಯೊಬ್ಬ ನ್ಯಾಯಮೂರ್ತಿಗಳು ಇಂಗ್ಲೀಷ ಹಿಂದಿ ಹಾಗೂ ಸಂಸ್ಕೃತ ಭಾಷೆಗಳನ್ನು ಬಲ್ಲ ತತ್ವಜ್ಞಾನ ಪಂಡಿತ (ಫಿಲಾಸಫರ) ರಿರತಕ್ಕದ್ದು. ನ್ಯಾಯಮೂರ್ತಿಗಳಲ್ಲಿ ಈ ಯೋಗ್ಯತೆಗಳಿದ್ದು ಕನ್ನಡ ಹಾಗು ತೆಲಗು ಭಾಷಾ ಬಲ್ಲವರಿದ್ದರೆ ಒಳಿತು. ನ್ಯಾಯಮೂರ್ತಿಗಳಲ್ಲಿ ಯಾರೂ ವೀರಶೈವರಿರತಕ್ಕದ್ದಲ್ಲ.

(೩) ಈ ನ್ಯಾಯಸ್ಥಾನದಲ್ಲಿ ಮೂವರು ಗುಮಾಸ್ತರೂ (ಶಿರಸ್ತೆದಾರರು) ಒಬ್ಬ ರಜಿಸ್ಟ್ರಾರರೂ ಇರತಕ್ಕದ್ದು. ಶಿರಸ್ತೆದಾರರೂ ದ್ವಿಭಾಷಾ (ಕನ್ನಡ-ಇಂಗ್ಲಿಷ, ತೆಲಗು-ಇಂಗ್ಲಿಷ, ಮರಾಠಿ-ಇಂಗ್ಲಿಷ) ಬಲ್ಲ ಕಾಯಿದೆಜ್ಞಾನಿಗಳಿರಬೇಕು. ರಜಿಸ್ಟ್ರಾರನು ಕಾಯಿದೆ ಪಂಡಿತನಿರತಕ್ಕದ್ದು. ಇವರಲ್ಲದೆ ಈ ನ್ಯಾಯಮಂಡಲಕ್ಕೆ ತಕ್ಕ ಎಲ್ಲ ಸಿಬ್ಬಂದಿ ಇರತಕ್ಕದ್ದು.

(೪) ನ್ಯಾಯಮಂಡಲವು ಕೆಳಗೆ ಕಂಡ ಮುದ್ದೆಗಳ (Issues) ನಿರ್ಣಯವನ್ನು ಕೊಡತಕ್ಕದ್ದು.

ಅ. ಗುರುಗಳ ಸ್ಥಾನವಾವುದು? ಜಂಗಮರ (ವಿರಕ್ತರ) ಸ್ಥಾನವಾವುದು?

ಬ. ವೀರಶೈವರಲ್ಲಿ ವರ್ಣಾಶ್ರಮಗಳಾಗಲಿ ಅಥವಾ ಭಕ್ತ ಮಹೇಶ್ವರ ಹುಟ್ಟುಭೇದವಾಗಲಿ ಅವೆಯೊ?

ಕ. ಗುರುಗಳ ಅಧಿಕಾರವಾವು? ಹಾಗು ಜಂಗಮರ ವಿರಕ್ತರ ಅಧಿಕಾರಗಳಾವು? ಇತ್ಯಾದಿ. ಇವುಗಳಲ್ಲದೆ ಎರಡೂ ಪಕ್ಷದವರ ತಕರಾರುಗಳ ಮೇಲಿಂದ ಹೊರಡಬಹುದಾದ ಬೇಕಾದ ಮುದ್ದೆಗಳನ್ನು ತೆಗೆಯಬಹುದು

(೫) ನ್ಯಾಯಮೂರ್ತಿಗಳು ಮೇಲ್ಕಂಡ ವಿಷಯಗಳನ್ನು ನಿರ್ಣಯಿಸುವ ಬಗ್ಗೆ

ಅ. ವೀರಶೈವ ಧರ್ಮದ ಆಧಾರ ಗ್ರಂಥಗಳಾದ ವೇದ ಶಿವಾಗಮ ವಚನಶಾಸ್ತ್ರ ಮೊದಲಾದವುಗಳನ್ನು ನೋಡತಕ್ಕದ್ದು. [ಪ್ರಿಂಟಾದವುಗಳಿದ್ದರೆ ಅವುಗಳ ಮೂಲ ಪ್ರತಿ ಸಹ ತರಿಸಿ ನೋಡತಕ್ಕದ್ದು.] ಈಗ ಚಳವಳಿಕಾರರು ಸ್ವತಃ ಬರೆದ ಯಾವುದೇ ಗ್ರಂಥವನ್ನು ಆಧಾರವಾಗಿ ತೆಗೆದುಕೊಳ್ಳತಕ್ಕದ್ದಲ್ಲ.

ಬ. ೧೯೦೧ ನೇ ಇಸವಿಯ ವರೆಗೆ ಬಂದ ವೀರಶೈವಾಚಾರ ರೂಢಿಯನ್ನು [ಪರಂಪರೆ] ನೋಡಬಹುದು.

ಕ. ಸಮಾಜದ ನಿಜತತ್ವಗಳ ಪ್ರಕಾರ ನಿಜಐಕ್ಯತೆಗೂ ಬಂಧುರತ್ವಕ್ಕೂ ಯಾವ ಮಾರ್ಗವು ಯೋಗ್ಯ ಎಂಬುದನ್ನು ಗಮನಿಸತಕ್ಕದ್ದು.

(೬) ಗುರು-ವಿರಕ್ತರು ತಮ್ಮ ತಮ್ಮ ಪಕ್ಷದ ಸಮರ್ಥನೆಯನ್ನು ಮಾಡುವದಕ್ಕೆ ಶಾಸ್ತ್ರಿಗಳನ್ನೂ ತತ್ವಜ್ಞಾನಿಗಳನ್ನೂ ಕಾಯಿದೆ ಪಂಡಿತರನ್ನೂ ಸಕಲ ಸಿದ್ಧತೆಯೊಡನೆ ಕಳುಹಿಸತಕ್ಕದ್ದು. ಆ ಬಗ್ಗೆ ಆಗುವ ಯಾವತ್ತೂ ವೆಚ್ಚವನ್ನು ಅವರವರೇ ವಹಿಸತಕ್ಕದ್ದು. ಹಾಗು ಅವರು ಕೆಳಗೆ ಕಂಡಂತೆ ಸಮರ್ಥನೆ ಮಾಡಿಕೊಳ್ಳತಕ್ಕದ್ದು.

ಅ. ತಮ್ಮ ತಮ್ಮ ಪಕ್ಷದ ಸಮರ್ಥನೆಯನ್ನು ಮಾಡುವ ಗ್ರಂಥಗಳನ್ನು ತರತಕ್ಕದ್ದು. ಅವು ಇತ್ತಿತ್ತಲಾಗಿ ಅಚ್ಚಾದವುಗಳಿದ್ದರೆ ಅವುಗಳ ಮೂಲ ಪ್ರತಿಗಳನ್ನು 'ತಾಡಓಲೆ ಅಥವಾ ಹಳೆ ಕೋರೆ ಕಾಗದ ಪ್ರತಿಗಳನ್ನು' ತರತಕ್ಕದ್ದು.

ಬ. ವೃದ್ಧಾಚಾರವನ್ನು ತೋರಿಸತಕ್ಕದ್ದಿದ್ದರೆ ಯೋಗ್ಯ ಅನುಭವಿಕ ಸಾಕ್ಷಿದಾರರ ಕಡೆಯಿಂದ ಸಾಕ್ಷಿಗಳನ್ನು ಹೇಳಿಸತಕ್ಕದ್ದು.

ಕ. ಶಕ್ತಿವಿಶಿಷ್ಟಾದ್ವೈತ ತತ್ವದ ಪ್ರಕಾರ ವೀರಶೈವ ಸಮಾಜವು ಬಂಧುರವೂ ಸುಸಂಘಟಿತವೂ ಆಗುವಂತೆ ಯಾವ ಮಾರ್ಗಗಳನ್ನು ಅನುಸರಿಸಬೇಕೆಂಬುದನ್ನು ಸಹ ವಾದಿಸಬಹುದು.

೭. ನ್ಯಾಯಮೂರ್ತಿಗಳು ಬಹುಮತದಿಂದಾಗಲಿ ಸರ್ವಾನುಮತದಿಂದಾಗಲಿ ಕೊಟ್ಟ ನಿರ್ಣಯವನ್ನು ಕೂಡಲೆ ಒಮ್ಮನಸಿನಿಂದ ಅಮಲಿನಲ್ಲಿ ತರತಕ್ಕದ್ದು.

೮. ಈ ನ್ಯಾಯಾಧೀಶರು ಕೊಟ್ಟ ನಿರ್ಣಯದ ಮೇಲೆ ನಮ್ಮ ಸಮಾಜಕ್ಕೆ ಬೇಕಾಗಿರುವ ಸ್ವತಂತ್ರ ಸರಕಾರಿ ಯೋಗ್ಯ ಕಾಯಿದೆಗಳನ್ನು ಮಾಡಿಸಲು ಪ್ರಯತ್ನಿಸತಕ್ಕದ್ದು.

**ಖರ್ಚಿನ ಅಂದಾಜು.**

(೯) ೧. ಮೂರು ಜನ ಜಡ್ಜರ ಸಂಬಳ (ತಿಂಗಳಿಗೆ ೫೦೦ ರೂ. ಗಳಂತೆ ೧೫೦೦

೨. ಒಬ್ಬ ರಜಿಸ್ಟ್ರಾರನ ಸಂಬಳ ತಿಂಗಳಿಗೆ ೨೦೦ ರೂ. ಗಳಂತೆ ೨೦೦

೩. ಮೂವರು ಶಿರಸ್ತೆದಾರರ ಸಂಬಳ ತಿಂಗಳಿಗೆ ೭೫ ರೂಪಾಯಿಯಂತೆ ೨೨೫

ಸಿಬ್ಬಂದಿ ವ ಸಾದಿಲವಾರ ತಿಂಗಳಿಗೆ ೧೫೦

ಕೋರ್ಟಿನ ಆಫೀಸ ಬಾಡಿಗೆ ತಿಂಗಳಿಗೆ ೫೦

ಈ ಕೋರ್ಟು ಸುಮಾರು ೮ ತಿಂಗಳು ನಡೆಯಬಹುದು ಅಂದರೆ ೨೧೨೫×೮ ೧೭೦೦೦

ಈ ಕೋರ್ಟಿನ ತೀರ್ಮಾನ ಹಾಗು ನಡವಳಿಕೆ
[ಪ್ರೊಸಿಡಿಂಗ್ಸ] ಮುದ್ರಿಸಲಿಕ್ಕೆ ಅಂದಾಜು ೪೦೦೦

ಅಂತು ೨೧೦೦೦

೩. ಸೂಚನೆ— ಮೇಲೆ ನಮೋದಿಸಲ್ಪಟ್ಟ ಕೋರ್ಟು ೮ ತಿಂಗಳಗಳೊಳಗಾಗಿ ಪೂರ್ತಿ ತನ್ನ ಕೆಲಸವನ್ನು ಮುಗಿಸಿದರೆ ಖರ್ಚಾಗಿ ಉಳಿದ ಹಣವು ಹಿಂತಿರುಗಿ ಕೊಡಲ್ಪಡುವದು. ಒಂದು ವೇಳೆ ಹೆಚ್ಚಿನ ದಿವಸಗಳ ವರೆಗೆ ನಡೆಯಬೇಕಾದರೆ ಮುಂದೆ ಬರಬಹುದಾದ ಖರ್ಚನ್ನು ಕೊಡಲು ಎರಡೂ ಪಕ್ಷದವರು ಬದ್ಧರಿದ್ದಾರೆ.

ಸ್ವಾಗತಸಮಿತಿ ಕಾರ್ಯಕಾರಿ ಮಂಡಲಿಯಿಂದ.

---

## ೧೩ ನೇ ಅಖಿಲ ಭಾರತ ವೀರಶೈವ ಮಹಾ ಸಭೆ ಹುಬ್ಬಳ್ಳಿ.

### ಮಧ್ಯವರ್ತಿ ವಾಚನಾಲಯದ ಯೋಜನೆ.

ಇಂಥ ವಾಚನಾಲಯವು ಅವಶ್ಯವೆಂಬ ಹಿಂದಿನ ಎಲ್ಲ ಮಹಾ ಸಭೆಗಳು ಠರಾಯಿಸಿದ್ದರೂ ಕೂಡ ಇಲ್ಲಿಯ ವರೆಗೆ ಯಾವ ಯೋಜನೆಯೂ ಮುಂದೆ ಬಾರದ್ದರಿಂದ ಕೆಳಗೆ ಕಂಡ ಯೋಜನೆಯನ್ನು ಸಮಾಜದ ಮುಂದೆ ಇಟ್ಟಿದೆ.

ಹೆಸರು— ಅ. ಭಾರತ ವೀರಶೈವ ಮಧ್ಯವರ್ತಿ ವಾಚನಾಲಯ

ಸ್ಥಳ— ವೀರಶೈವರು ಬಹು ಸಂಖ್ಯಾಕರಾಗಿರುವ ಪ್ರದೇಶದ ಮಧ್ಯಸ್ಥಳದಲ್ಲಿ ಈ ವಾಚನಾಲಯವು ಇರತಕ್ಕದ್ದು.

ಉದ್ದೇಶ— ಅ. ವೀರಶೈವರ (ಶಕ್ತಿವಿಶಿಷ್ಟಾದ್ವೈತ ಮತ ಪ್ರತಿಪಾದನ ಮಾಡುವ ಹಾಗು ಅದಕ್ಕೆ ಪೂರಕವಾದ ಗ್ರಂಥಗಳನ್ನೆಲ್ಲ ಕೂಡಿಸಿಡುವದು.

ಬ. ವೀರಶೈವರು ಬರೆದ ಹಾಗು ಇನ್ನು ಮುಂದೆ ಬರೆಯಬಹುದಾದ ಎಲ್ಲ ಗ್ರಂಥಗಳನ್ನು ಕೂಡಿಸುವದು.

ಕ. ವೀರಶೈವ ಸಮಾಜದ ಸಾಮಾಜಿಕ ಧಾರ್ಮಿಕ, ಐತಿಹಾಸಿಕ ಔದ್ಯೋಗಿಕ ಶಾಸ್ತ್ರೀಯ ಮೊದಲಾದ ಗ್ರಂಥಗಳನ್ನು ಕೂಡಿಸಿಡುವದು.

ಡ. ಇದರ ಮೂಲಕ ಸಂಶೋಧನ ಕೆಲಸಮಾಡುವದು.

ಇ. ಬೇರೆ ಯೋಗ್ಯ ಪುಸ್ತಕಗಳನ್ನು ಕೂಡಿಸುವದು.

ಇದನ್ನು ಇದೇ ಮಹಾಸಭೆಯ ಕಾಲಕ್ಕೆ ಪ್ರಾರಂಭಿಸುವ ವ್ಯವಸ್ಥೆ ಮಾಡತಕ್ಕದ್ದು. ಇದರ ಎಲ್ಲ ವ್ಯವಸ್ಥೆಯನ್ನು ಚಿರಸ್ಥಾಯಿ ಫಂಡಿನವರು ನೋಡತಕ್ಕದ್ದು. ಅದಕ್ಕೆ ಸದ್ಯಕ್ಕೆ ಕೆಳಗೆ ಕಂಡ ಖರ್ಚು ಒಂದು ವರುಷಕ್ಕೆ ಬರಬಹುದು.

ಅ. ಒಬ್ಬ ಗುಮಾಸ್ತನ ಪಗಾರ ತಿಂಗಳಿಗೆ
೩೦×೧೨=೩೬೦ ರೂ.

ಬ. ಒಬ್ಬ ಸಿಪಾಯಿ ಪಗಾರ ,, ೧೦×೧೨=೧೨೦ ರೂ:

ಕ. ಒಂದು ಇಮಾರತಿನ ಬಾಡಿಗೆ ೧೫×೧೨=೧೮೦ ರೂ,

ಡ. ಪುಸ್ತಕವನ್ನು ಕೊಳ್ಳುವದು ಯೋಗ್ಯ ಮಾಸಿಕ ಮುಂತಾದವುಗಳನ್ನು ತರಿಸುವ ಬಗ್ಗೆ ಒಂದು ವರ್ಷದಲ್ಲಿ ೩೦೦ ರೂ.

ಇ. ಪುಸ್ತಕ ಬಾಯಿಂಡ ವ ಸಾದಿಲವಾರಗಳ ೧೦೦. ರೂ. ಗಳಲ್ಲದೆ ಮೊದಲಿಗೆ ಮೇಜು ಬಾಕು ಕಪಾಟು ಮುಂತಾದ ಡೆಡ್ ಸ್ಟಾಕ್ ಸಾಮಾನುಗಳ ಬಗ್ಗೆ ಒಂದು ಸಾವಿರ ರೂಪಾಯಿ ಅಂತು ಎರಡು ಸಾವಿರ ರೂ. ಗಳು

### ದುಡ್ಡು ಕೂಡಿಸುವ ಯೋಜನೆ.

ಅ. ವರ್ಗಣಿ ದೇಣಿಗೆ ಮುಂತಾದವುಗಳ ರೂಪದಿಂದ

ಬ. ಚಿರಸ್ಥಾಯಿ ಫಂಡಿನಿಂದ ಉತ್ಪನ್ನದಲ್ಲಿ ಕಡಿಮೆ ಬಿದ್ದಷ್ಟು ಹಣವನ್ನು ಪಡೆಯತಕ್ಕದ್ದು.

ಕ. ಯಾರಾದರೂ ಮಹನೀಯರು ಈ ಬಗ್ಗೆ ಸಾಕಷ್ಟು ಹಣವನ್ನು ಕೊಟ್ಟಲ್ಲಿ ಅವರ ಹೆಸರಿನಲ್ಲಿ ಈ ಗ್ರಂಥಾಲಯವನ್ನು ನಡೆಯಿಸಬಹುದು.

೩. ಸೂಚನೆ— ಈ ಯೋಜನೆಯ ಬಗ್ಗೆ ಯಾರಾದರೂ ಏನಾದರೂ ಸೂಚನೆ ಮಾಡುವದಿದ್ದರೆ ಮಾಡಬೇಕಾಗಿ ವಿನಂತಿ.
ಸ್ವಾಗತ ಸಮಿತಿ ಕಾರ್ಯಕಾರಿಮಂಡಲದಿಂದ.

---

## ಅಮೇರಿಕೆಯಲ್ಲಿ ಯುದ್ಧಸನ್ನಾಹ.

ಜಗತ್ತಿನ ಎಲ್ಲಾ ರಾಷ್ಟ್ರಗಳೂ ಯುದ್ಧಸಿದ್ಧತೆಯಲ್ಲಿವೆ. ಅಮೇರಿಕೆಯು ಪ್ರಜಾಪ್ರಭುತ್ವದ ಬೆಳವಣಿಗೆಗಾಗಿ ಯುರೋಪದ ರಾಜಕಾರಣದಲ್ಲಿ ಸೇರಲು ಯುದ್ಧೋಪಕರಣಗಳನ್ನು ಹೆಚ್ಚಿಸಲಾರಂಭಿಸಿದೆ. ೭೦೦೦ ವಿಮಾನಗಳನ್ನು ಸಿದ್ಧಗೊಳಿಸಿ ೧೦ ಲಕ್ಷ ಸೈನ್ಯವು ರಣಭೂಮಿಗೆ ಬರುವ ಏರ್ಪಾಟು ನಡೆಸಿದೆ. ಈ ಕಾರ್ಯಗಳಿಗೆ ೯೦ ಕೋಟಿ ರೂ. ಗಳನ್ನು ವೆಚ್ಚಮಾಡುವುದು. ಹಿಟ್ಲರನು ನಡೆಸಿದ ಆಕ್ರಮಣವನ್ನು ತಡೆಯುವದಕ್ಕಾಗಿಯೇ ಈಗ ಈ ಸಿದ್ಧತೆ ನಡೆದಿದೆ.

---

## ಇಲಕಲ್ಲ.

ಶ್ರೀ. ಕರಡಿ, ಕೋಡಿಹಾಳ, ಬಿಜ್ಜಲ, ಸಾಕಾ ಇವರು ಪುನಃ ಕಾಂಗ್ರೆಸ್ ಸಿಸ್ತುಭಂಗ ಮಾಡಿದರು.

ತಾ. ೩೦-೧೦-೩೮ ನೇ ದಿನ ಮುನಸಿಪಲ್ ಕಾಂಗ್ರೆಸ್ ಪಾರ್ಟಿ ಮೀಟಿಂಗ್ ಕರೆದಿತ್ತು. ೧೧ ಜನರಲ್ಲಿ ೪ ಜನ ಬಂದಿರಲಿಲ್ಲ. ಮಾರನೇ ದಿನ ಮುನಸಿಪಲ್ ಹಾಲಿನಲ್ಲಿ ಕಾಂಗ್ರೆಸ್ ಪಾರ್ಟಿ ಮೀಟಿಂಗಿನಲ್ಲಿ ಸರ್ವಾನುಮತದಿಂದ ಪಾಸಾದಂತೆ ಸೂಚನೆಗಳನ್ನು ತರಲು ಪ್ರತಿಯೊಂದಕ್ಕೂ ವ್ಹಾಯಿಸ್ ಪ್ರೆಶಿಡೆಂಟ ಚೇರಮನ್ ಶ್ಯಾನಿಟರಿ ಚೇರಮನ್ ಎಲೆಕ್ಷನ್ ಕಮಿಟಿ ಚೇರಮನ್ ಡಿಸ್ಪೆನ್ಸರಿ ಕಮಿಟಿ ಚೇರಮನ್ ಕಾಮುಗಾರಿ ಚೇರಮನ್ ಎಲ್ಲಕ್ಕೂ ಕಾಂಗ್ರೆಸ್ಸಿನ ಹೆಸರಿನಿಂದ ಆರಿಸಿಬಂದ ಶ್ರೀ. ಭೀಮಾಚಾರ್ಯ ಕೋಡಿಹಾಳ ಇವರು ಸ್ವತಂತ್ರ ಪಕ್ಷದವರನ್ನೇ ಸೂಚಿಸಿದರು. ಕಾಂ. ಹೆಸರಿನಿಂದ ಚುನಾಯಿತರಾದ ಶ್ರೀ. ಸಣ್ಣ ಅಮರಪ್ಪ ಬಿಜ್ಜಲ ಇವರು ಅನುಮೋದನ ಕೊಟ್ಟರು. ಇನ್ನೀರ್ವ ಕಾಂ. ಪಾರ್ಟಿ ಮೆಂಬರರಾದ ಶ್ರೀ. ಕರಡಿ, ಸಾಕಾ ಇವರೂ ಕೋಡಿಹಾಳರವರ ಸೂಚನೆಗೆ ಮತಕೊಟ್ಟರು. ಕಾಂಗ್ರೆಸ್ಸಿನ ೭ ಜನರು ತಂದ ಸೂಚನೆಗೆ ಸ್ವತಂತ್ರ ಪಕ್ಷದ ೩ ಜನರು ಮತಕೊಟ್ಟರು. ಆದರೆ ಪ್ರೆಶಿಡೆಂಟರು ಪ್ರತಿಯೊಂದಕ್ಕೂ ಕಾಸ್ಟಿಂಗ ಹೋಟು ಹಾಕಿ ಪಾಸುಮಾಡಿಕೊಂಡರು. ಇಲ್ಲಿ ಕಾಂಗ್ರೆಸ್ಸಿನ ಬಹುಮತವಿದ್ದರೂ ಇಲ್ಲದಂತಾಗಿ ಎಲ್ಲ ಅಧಿಕಾರ ಸ್ಥಾನಗಳೂ ಸ್ವತಂತ್ರ ಪಕ್ಷದವರಿಗೇ ದೊರೆತವು. ಕಾಂಗ್ರೆಸ್ಸಿನವರೇ ಆದ ಶ್ರೀ. ಕರಡಿ, ಕೋಡಿಹಾಳ, ಬಿಜ್ಜಲ, ಸಾಕಾ ಇವರೇ ಕಾರಣರೆಂದು ಬೇರೆ ಹೇಳಬೇಕಾಗಿಲ್ಲ. ಮೇಲಾಧಿಕಾರಿಗಳು ಇತ್ತ ಲಕ್ಷಿಸುವರೇ?

ಯಾಪಪ್ಪ ರಾಜಪ್ಪ ಗುಳೇದ
ಲೀಡರ
ಮುನಸಿಪಲ್ ಕಾಂಗ್ರೆಸ್ ಪಾರ್ಟಿ ಇಲಕಲ್ಲ.

# ಜಗದ್ಗುರುಗಳ ಮನನೀಯ ಭಾಷಣ.

## ಸ್ವರಾಜ್ಯ ಸಾಧನ. ಸ್ವಧರ್ಮ ಸಾಧ್ಯ.

ಲೋಣಾವಳದಲ್ಲಿ ಪುಣೆ ಮತ್ತು ಠಾಣೆ ಜಿಲ್ಲೆಗಳ ಹಿಂದು ಮಹಾಸಭಾ ಸಂಯುಕ್ತ ಅಧಿವೇಶನವು ಕಳೆದ ೫ ನೆಯ ತಾರೀಖಿನ ದಿವಸ ಶ್ರೀ. ಕ್ಷಾತ್ರ ಜಗದ್ಗುರುಗಳ ಅಧ್ಯಕ್ಷತೆಯಲ್ಲಿ ಜರುಗಿತು. ಆಗ ಅಧ್ಯಕ್ಷರು ತಮ್ಮ ಮನನೀಯವಾದ ಭಾಷಣದಲ್ಲಿ ಹೀಗೆ ಹೇಳಿದರು.—



ಶ್ರೀ. ಕ್ಷಾತ್ರ ಜಗದ್ಗುರುಗಳು

**ಬ್ರಾಹ್ಮಣೇತರರು ಮತ್ತು ಹಿಂದುಮಹಾಸಭೆ.**

ದಕ್ಷಿಣ ಹಿಂದುಸ್ಥಾನದ ಕೆಲವು ಅಹಿಂದುಗಳು ಹಿಂದು ಮಹಾಸಭೆಯು ಕೇವಲ ಬ್ರಾಹ್ಮಣರ ಸಭೆಯೆಂದು ಸುಳ್ಳು ಪ್ರಚಾರ ನಡೆಸಿದ್ದಾರೆ. ಹಿಂದು ಮಹಾಸಭೆಯು ಬ್ರಾಹ್ಮಣರಗಿಂತ ಇತರ ಹಿಂದುಗಳಿಗೇನೇ ಹೆಚ್ಚು ಸಂಬಂಧವುಳ್ಳದ್ದಾಗಿರುವುದರಿಂದ ಬ್ರಾಹ್ಮಣೇತರರು ಅದರಲ್ಲಿ ಹೆಚ್ಚಾಗಿ ಸೇರಿ ತಮ್ಮ ಉನ್ನತಿಯನ್ನು ಮಾಡಿಕೊಳ್ಳಬೇಕು.

ಧರ್ಮದ ಪ್ರಾಣವೆಂದರೆ ತತ್ವಜ್ಞಾನವು. ಹಿಂದು ತತ್ವಜ್ಞಾನಕ್ಕಾದರೋ ಉಪನಿಷತ್ತುಗಳೇ ಮೂಲ. ಉಪನಿಷತ್ತುಗಳನ್ನು ಕೇವಲ ಬ್ರಾಹ್ಮಣರೇ ಉಂಟು ಮಾಡಿಲ್ಲ. ಜನಕ ಮೊದಲಾದ ಕ್ಷತ್ರಿಯರೂ ಜಾಬಾಲ ಮೊದಲಾದ ಶೂದ್ರರೂ ಉಪನಿಷತ್ತುಗಳನ್ನು ರಚಿಸಿದ್ದಾರೆ. ಐತಿಹಾಸಿಕ ಕಾಲದಲ್ಲಿ ಕೂಡಾ ತುಕಾರಾಮ, ನಾಮದೇವ, ಚೋಖಾಮೇಳಾ ಮೊದಲಾದ ಬ್ರಾಹ್ಮಣೇತರರೂ ಹಿಂದು ಧರ್ಮದ ಅಪೂರ್ವ ಸೇವೆಯನ್ನು ಮಾಡಿದ್ದಾರೆ. ಆದಕಾರಣ ಬ್ರಾಹ್ಮಣರೇ ಹಿಂದು ಧರ್ಮ ರಕ್ಷಣೆಯ ಕಾರ್ಯ ಮಾಡುವವರೆಂದೂ ಹಿಂದು ಮಹಾಸಭೆಯು ಅ ಒಂದೇ ಜಾತಿಯವರದೆಂದೂ ಅಪಪ್ರಚಾರ ಮಾಡುತ್ತಿರುವವರ ಮಾತಿಗೆ ಯಾವ ಬ್ರಾಹ್ಮಣೇತರರೂ ಮೋಸ ಹೋಗದೆ ಅವರು ಹಿಂದು ಮಹಾಸಭೆಯಲ್ಲಿ ಸೇರಿ ಅದು ಪ್ರಭಾವಶಾಲಿಯಾಗುವಂತೆ ಮಾಡಬೇಕು.

**ಕಾಂಗ್ರೆಸ್ಸಿನಲ್ಲಿರುವ ಸ್ವಾರ್ಥ ಸಾಧಕರು.**

ಕಾಂಗ್ರೆಸ್ಸಿನ ಕೈಯಲ್ಲಿ ಈಗ ಅಧಿಕಾರ ಬಂದುದರಿಂದ ಸ್ವಾರ್ಥ ಸಾಧಕರು ಅದರಲ್ಲಿ ವಿಶೇಷವಾಗಿದ್ದಾರೆ. ಬಹು ರೂಪಿಗಳಂತೆ ನಾನಾ ವೇಷಗಳನ್ನು ಹಾಕಿಕೊಳ್ಳುವವರಿಗೆ ಈಗ ಕಾಂಗ್ರೆಸ್ಸು ಆಶ್ರಯ ಸ್ಥಾನವಾಗಿದೆ. ಆರು ಆಣೆಗಳಲ್ಲಿ ಮಹಾ ದೇಶಭಕ್ತರಾಗಲು ಬರುವಂತಾಗಿದೆ. (೪ ಆಣೆ ಕಾಂಗ್ರೆಸ್ ಮೆಂಬರರ ಫೀ: ೨ ಆಣೆ ಗಾಂಧಿ ಟೊಪ್ಪಿಗೆ) ಲೋಕಲ್ ಬೋರ್ಡುಗಳಲ್ಲಿಯೂ ಕಾಂಗ್ರೆಸ್ ಕಮಿಟಿಗಳಲ್ಲಿಯೂ ಅಧಿಕಾರ ಸ್ಥಾನವನ್ನು ಹೊಂದಲು ಸ್ವಾರ್ಥ ಸಾಧಕರಿಗೆ ಕಾಂಗ್ರೆಸ್ಸಿನಲ್ಲಿ ಬಹು ಅನುಕೂಲವಿದೆ.

ಹಿಂದು ಮಹಾಸಭೆಯಲ್ಲಿ ಇಂಥ ಯಾವ ಅನುಕೂಲಗಳೂ ಇಲ್ಲ. ಅದರ ಕೈಯಲ್ಲಿ ಅಧಿಕಾರವಿಲ್ಲ. ಧನ ರಾಶಿಯಿಲ್ಲ. ಜನಸೇವೆಯನ್ನು ಮಾಡುವ ಇಚ್ಛೆವುಳ್ಳವರಿಗೆ ಮಾತ್ರ ಅಲ್ಲಿ ಅವಕಾಶವಿದೆ. ಹಿಂದುಸಮಾಜ ಸೇವೆಯಲ್ಲಿ ಪ್ರೇಮವುಳ್ಳವರೇ ಅದರಲ್ಲಿ ಬರಬೇಕಾಗಿದೆ.

**ವೇಶ್ಯಾ ಸ್ತ್ರೀಯಳು ಸಾವಿತ್ರಿಗೆ ಬೈದಂತೆ !**

ಹಿಂದು ಮಹಾಸಭೆಯು ಅರಾಷ್ಟ್ರೀಯವೆಂದು ಕೆಲವರು ಆಕ್ಷೇಪಿಸುತ್ತಿದ್ದಾರೆ. ಪೂರ್ಣ ಸ್ವಾತಂತ್ರ್ಯ ಸಂಪಾದನೆಯೇ ತನ್ನ ಧ್ಯೇಯವೆಂದು ಹಿಂದು ಮಹಾ ಸಭೆಯು ಪ್ರಕಟಿಸಿದೆ. ಇಂಥ ಸಭೆಯಲ್ಲಿ ಸ್ವಾತಂತ್ರ್ಯಕ್ಕೋಸ್ಕರವೇ ಸರ್ವಸ್ವವನ್ನೂ ಅರ್ಪಿಸಿ ತಮ್ಮ ಜೀವಿತವನ್ನೇ ರಾಷ್ಟ್ರಕ್ಕಾಗಿ ಮುಡುಪಾಗಿಟ್ಟ ಸ್ವಾತಂತ್ರ್ಯವೀರ ಸಾವರಕರ ಮತ್ತು ಭಾಯಿ ಪರಮಾನಂದರಂಥ ದೇಶಭಕ್ತರು ಕಾರ್ಯ ಮಾಡುತ್ತಿದ್ದಾರೆ.

ಪರ ಸರಕಾರಕ್ಕೆ ಈ ವರೆಗೂ ಬಾಗಿ ಯಾರ ನಡ ಮುಂದು ಹೋಗಿದೆಯೋ ಸರಕಾರದ ಪದವಿಗಳನ್ನು ಈ ವರೆಗೂ ಹೊತ್ತುಕೊಂಡು ಯಾರ ಕತ್ತು ಬಾಗಿ ಹೋಗಿದೆಯೋ ಅಂಥವರೆಲ್ಲಾ ಹಿಂದು ಮಹಾಸಭೆಗೆ ಅರಾಷ್ಟ್ರೀಯ ಸಭೆಯೆಂದು ಹೇಳುತ್ತಿರುವುದು ಒಬ್ಬ ವೇಶ್ಯಾ ಸ್ತ್ರೀಯಳು ಸತಿ ಸಾವಿತ್ರಿಗೆ ಬಾಜಾರ ಬಸವಿ ಎಂದು ಹೇಳುತ್ತಿರುವಂತೆಯೇ ಸರಿ.

**ಸ್ವ ಧರ್ಮ ಮತ್ತು ಸ್ವರಾಜ್ಯ.**

ಕೇವಲ ರಾಜಕಾರಣವೊಂದೇ ಸಾಕೆಂದು ತಿಳಿದವರಿಗೆ ನಾನು ಸೂಚಿಸುವುದೇನೆಂದರೆ— ಸ್ವರಾಜ್ಯವು ಸಾಧನವೆಂದೂ ಸ್ವ ಧರ್ಮವು ಸಾಧ್ಯವೆಂದೂ ಅವರು ತಿಳಿದಿರಬೇಕು. ಶಿವಾಜಿ ಮಹಾರಾಜರು ಸ್ವಧರ್ಮಕ್ಕೋಸ್ಕರವೇ ಸ್ವರಾಜ್ಯವನ್ನು ಸ್ಥಾಪಿಸಿದರು.

ಈಗ ಜಗತ್ತಿನಲ್ಲಿ ಹಿಂದು ಮತ್ತು ಇಸ್ಲಾಂ ಈ ಎರಡೂ ಧರ್ಮದವರು ೩೦ ಕೋಟಿಗಳಂತೆ ಸಮಾನ ಸಂಖ್ಯೆಯುಳ್ಳವರಾಗಿದ್ದಾರೆ. ಈಗ ಈ ಉಭಯ ಧರ್ಮದವರಲ್ಲಿಯೇ ಸ್ಪರ್ಧೆ ನಡೆದಿದೆ. ಇಸ್ಲಾಂ

ಧರ್ಮ ಪ್ರಸಾರಕ್ಕೆ ಹಿಂದುಸ್ಥಾನದ ವಿನಾ ಜಗತ್ತಿನಲ್ಲಿ ಇನ್ನೆಲ್ಲಿಯೂ ಅವಕಾಶವಿಲ್ಲ.

ಹೈದರಾಬಾದ ಸಂಸ್ಥಾನಾಧಿಪತಿಗಳು ತಮ್ಮ ರಾಜ್ಯದಲ್ಲಿಯೂ ಹೊರಗಡೆಯಲ್ಲಿಯೂ ಇಸ್ಲಾಮಿ ಧರ್ಮ ಪ್ರಚಾರದ ಕಾರ್ಯವನ್ನು ಬಹು ತೀವ್ರತರವಾಗಿ ನಡೆಸಿದ್ದಾರೆ. ಮುಸಲ್ಮಾನರ ಆಕ್ರಮಣವು ಕ್ರಿಸ್ತರ ಆಕ್ರಮಣಕ್ಕಿಂತ ಬಹು ಹೆಚ್ಚಾಗಿದೆ.

ಹಿಂದು ಸಮಾಜವು ಈ ಆಕ್ರಮಣದಿಂದ ಪಾರಾಗಿ ಸಂರಕ್ಷಿಸಲ್ಪಡಬೇಕಾದರೆ ಶುದ್ಧಿ ಮತ್ತು ಸಂಘಟನೆಗಳು ಅತ್ಯಗತ್ಯ. ಪರ ಧರ್ಮದಲ್ಲಿ ಹೋದವರನ್ನು ನಾವು ನಮ್ಮ ಧರ್ಮದಲ್ಲಿ ತೆಗೆದುಕೊಳ್ಳಬೇಕು. ಇಷ್ಟೇ ಅಲ್ಲ; ನಮ್ಮಲ್ಲಿರತಕ್ಕ ಅನೇಕ ಜಾತಿ ಭೇದಗಳನ್ನು ತೆಗೆದುಹಾಕಿ ಸಂಘಟಿತರಾಗಬೇಕು.

ಹೊರಗಿನ ಶತ್ರುಗಳಿಗಿಂತ ನಮ್ಮಲ್ಲಿರುವ ನಮ್ಮ ವೈರಿಗಳಿಂದಲೇ ಹಿಂದು ಸಮಾಜಕ್ಕೆ ಹೆಚ್ಚಾದ ಅನರ್ಥ ಸಂಭವಿಸುತ್ತಲಿದೆ. ಅಂಧಾನುಕರಣವು ನಮ್ಮ ನಾಶಕ್ಕೆ ಕಾರಣವಾಗಿದೆ. ಇದು ಈ ದೇಶದಲ್ಲಿ ಬಹು ಕಾಲದ ರೋಗವು. ನಾವು ಈ ವರೆಗೂ ಇಂಗ್ಲಿಷರ ಅನುಕರಣವನ್ನು ಮಾಡಿದೆವು. ಈಗ ರಶಿಯಾ ದೇಶದ ಅನುಕರಣ ಮಾಡಲು ಹೋಗುತ್ತಿದ್ದೇವೆ. ಈ ದೇಶದ ಸಂಸ್ಕೃತಿಯನ್ನು ಕಣ್ಣುತೆರೆದು ನೋಡುವುದಿಲ್ಲ. ಧರ್ಮವು ಅಂತಃಕರಣಕ್ಕೆ ಸೇರಿದ್ದೇ ವಿನಾ ಶಸ್ತ್ರ ಬಲದಿಂದ ಗೊತ್ತಾಗುವುದಿಲ್ಲ.

**ಸನಾತನ ಧರ್ಮವೆಂದರೇನು?**

ನಮ್ಮ ಧರ್ಮದಲ್ಲಿ ಯಾವ ವ್ಯತ್ಯಾಸವೂ ಆಗುವುದಿಲ್ಲವೆಂತಲೂ ವ್ಯತ್ಯಾಸ ಮಾಡಲು ಪ್ರಯತ್ನಿಸಬಾರದೆಂತಲೂ ಕೆಲವರು ತಿಳಿದಿದ್ದಾರೆ. ಇವರು ತಮಗೆ ಸನಾತನಿಗಳೆಂದು ಹೇಳಿಕೊಳ್ಳುತ್ತಾರೆ. ಕಾಲಮಾನಕ್ಕೆ ತಕ್ಕಂತೆ ಪರಿವರ್ತನೆಯನ್ನು ಹೊಂದುವುದೇ ಸನಾತನ ಧರ್ಮವು. ನಮ್ಮ ಸನಾತನ ಧರ್ಮವು ಹೀಗೆ ಯಾವಾಗಲೂ ಪರಿವರ್ತನೆಯನ್ನು ಹೊಂದುತ್ತ ಬಂದಿದ್ದರಿಂದಲೇ ಇದು ಕಳೆದ ೫ ಸಾವಿರ ವರುಷಗಳಿಂದಲೂ ಬದುಕಿದೆ. ಮನುಷ್ಯ ಜಾತಿಗೆ ಅಗತ್ಯವಾಗಿರತಕ್ಕ ಎಲ್ಲ ಧರ್ಮತತ್ವಗಳು ಹಿಂದು ಧರ್ಮದಲ್ಲಿರುವುದರಿಂದಲೇ ಜಗತ್ತಿನಲ್ಲಿ ಇದು ಶ್ರೇಷ್ಠ ಧರ್ಮವಾಗಿದೆ."

---

## ಹಿಂದು ಮಹಾ ಸಭೆಯ ನಿರ್ಣಯ.

ಲೋಣಾವಳದಲ್ಲಿ ಕೂಡಿದ್ದ ಪುಣೆ ಮತ್ತು ಠಾಣೆ ಜಿಲ್ಲೆಗಳ ಸಂಯುಕ್ತ ಹಿಂದುಮಹಾಸಭಾ ಅಧಿವೇಶನದಲ್ಲಿ ಅನೇಕ ಮಹತ್ವದ ಗೊತ್ತುವಳಿಗಳಾದವು. ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಟ್ಟಿದೆ —

(೧) ಶ್ರೀ. ನರಸಿಂಹ ಚಿಂತಾಮಣಿ ಕೇಳಕರವರು ತಂದ ಈ ಕೆಳಗಿನ ಗೊತ್ತುವಳಿಯು ಮೊದಲು ತೀರ್ಮಾನವಾಯಿತು.

"ಮುಸ್ಲಿಂಲೀಗಿನ ಕರಾಚಿ ಅಧಿವೇಶನದಲ್ಲಿ ಹಿಂದುಗಳಿಂದ ಬೇರೆಯಾಗಿರುವ ಒಂದು ಸ್ವತಂತ್ರ ಮುಸ್ಲಿಂ ಫೆಡರೇಶನ್ ಬೇಕೆಂದು ಕೇಳಲಾಗಿದೆ. ಅಗತ್ಯ ಕಂಡರೆ ಸುಡೇಟನ್ ಜರ್ಮನ್‌ದಂತೆ ಹಿಂದುಸ್ಥಾನದಲ್ಲಿಯೇ ಮುಸಲ್ಮಾನರ ಒಂದು ಪ್ರತ್ಯೇಕ ವಿಭಾಗ ಇರಬೇಕೆಂಬ ತಮ್ಮ ಮಹತ್ವಾಕಾಂಕ್ಷೆಯನ್ನೂ ಮುಸ್ಲಿಂಲೀಗಿನವರು ವ್ಯಕ್ತಗೊಳಿಸಿದ್ದಾರೆ.

ಮುಸ್ಲಿಂಲೀಗಿನ ಈ ವಿಧವಾದ ಘೋಷಣದಿಂದ ಹಿಂದುಗಳ ಮೇಲೆ ಎರಡು ಹೊಣೆಗಾರಿಕೆಗಳು ಬಂದಿವೆ. (೧) ಮುಸಲ್ಮಾನರ ಸಹಾಯವಿಲ್ಲದೆ ಇಷ್ಟೇ ಅಲ್ಲ; ವಿರೋಧವುಂಟಾದರೂ ಹಿಂದುಗಳು ತಾವೇ ಸ್ವಾತಂತ್ರ್ಯವನ್ನು ಸಂಪಾದಿಸುವುದು. (೨) ಹಿಂದುಸ್ಥಾನವನ್ನು ವಿಭಾಗಗೊಳಿಸದೆ ಈಗಿನಂತೆ ಅಖಂಡವಾಗಿಡುವುದು.

ಅಹಿಂಸಾ ತತ್ವದ ಗಾಂಧೀವಾದದಲ್ಲಿ ತೊಡಗಿಕೊಂಡಿರುವ ಕಾಂಗ್ರೆಸ್ಸಿನಿಂದ ಈ ಉಭಯ ಹೊಣೆಗಾರಿಕೆಯನ್ನೂ ಹೊತ್ತುಕೊಳ್ಳುವುದು ಶಕ್ಯವಿಲ್ಲದ ಕಾರಣ ಹಿಂದು ಮಹಾಸಭೆಯೇ ಈ ಹೊಣೆಗಾರಿಕೆಗಳನ್ನು ನಿರ್ವಹಿಸಲು ಪ್ರಯತ್ನಿಸಬೇಕೆಂದು ಈ ಸಭೆಯು ಅಭಿಪ್ರಾಯಪಡುತ್ತದೆ"

(೨) ಅಖಿಲ ಹಿಂದುಗಳಲ್ಲಿ ಸಂಘಟನೆಯುಂಟಾಗಲು ಎಲ್ಲರೂ ಸೇರಿ ಮಾಡುವ ಪ್ರಾರ್ಥನೆಗೆ ಅಗತ್ಯವಾದ ಒಂದು ಪ್ರಾರ್ಥನಾ ಗೀತೆಯನ್ನು ಸಿದ್ಧಗೊಳಿಸಲು ಈ ಮುಂಚೆ ಗೊತ್ತಾದ ಸಮಿತಿಗೆ ಈ ಸಭೆಯು ತನ್ನ ಒಪ್ಪಿಗೆಯನ್ನು ಕೊಡುತ್ತದೆ.

(೩) ಮುಸಲ್ಮಾನರ ಅತ್ಯಾಚಾರ ಮತ್ತು ಆಕ್ರಮಣಗಳನ್ನು ಈ ಸಭೆಯು ತೀವ್ರತರವಾಗಿ ನಿಷೇಧಿಸುತ್ತದೆ. ಇವರ ಈ ಅತ್ಯಾಚಾರಗಳನ್ನು ಆರ್ಥಿಕ ಬಹಿಷ್ಕಾರಗಳ ಮೂಲಕ ಪ್ರತಿಬಂಧಗೊಳಿಸಬೇಕೆಂದು ಈ ಸಭೆಯು ಅಭಿಪ್ರಾಯಪಡುತ್ತದೆ. ಹಿಂದುಗಳೆಲ್ಲರೂ ಹಿಂದುಗಳ ಸಂಗಡಲೇ ತಮ್ಮ ವ್ಯಾಪಾರ ಉದ್ಯೋಗಗಳನ್ನು ನಡೆಯಿಸಬೇಕೆಂದು ಈ ಸಭೆಯು ಸೂಚಿಸುತ್ತದೆ.

(೪) ಹಿಂದುಸ್ಥಾನದಲ್ಲಿ ನಡೆದಿರುವ ಭಯಂಕರ ಗೋ ಸಂಹಾರದಿಂದ ಹಿಂದುಗಳ ಧರ್ಮಭಾವನೆಗೆ ಬಲವಾದ ನೋವುಂಟಾಗಿದೆ ಗೋ ಸಂಹಾರದಿಂದ ರಾಷ್ಟ್ರದ ಆರೋಗ್ಯಾಭಿವೃದ್ಧಿಗೂ ಒಕ್ಕಲತನಕ್ಕೂ ಪ್ರತಿಬಂಧವಾಗಿದೆ. ಆದಕಾರಣ ಗೋವಧೆಯನ್ನು ಸರಕಾರವು ನಿಲ್ಲಿಸಬೇಕು.

(೫) ಅಸ್ಪೃಶ್ಯತೆಯನ್ನು ನಾಶಗೊಳಿಸಿ ಅದಕ್ಕೊಳಗಾಗಿದ್ದವರ ಸಾಮಾಜಿಕ ಅಂತಸ್ತನ್ನು ಬೆಳೆಸಿ ಅವರು ಇತರ ಹಿಂದುಗಳಲ್ಲಿ ಬೆರೆಯುವಂತೆ ಅವರಿಗೆ ಬೇರೆ ಬೇರೆ ಉದ್ಯೋಗಗಳನ್ನು ವಹಿಸಬೇಕು.

(೬) ಭಾಗಾನಗರ (ಹೈದರಾಬಾದ) ಸಂಸ್ಥಾನಾಧಿಪತಿಗಳು ಅಲ್ಲಿಯ ಹಿಂದು ಸಮಾಜವನ್ನೂ ಹಿಂದು ಸಂಸ್ಕೃತಿಯನ್ನೂ ನಷ್ಟಗೊಳಿಸುವುದಕ್ಕಾಗಿ ಸಂಘಟಿತವಾದ ಪ್ರಯತ್ನವನ್ನು ನಡೆಸಿದ್ದಾರೆ. ಅವರ ಈ ಕೃತಿಯನ್ನು ಈ ಸಭೆಯು ನಿಷೇಧಿಸುತ್ತದೆ. ಮತ್ತು ಅಲ್ಲಿಯ ಹಿಂದು ಪ್ರಜೆಗಳು ಸರಕಾರದ ದಬ್ಬಾಳಿಕೆಯನ್ನು ವಿರೋಧಿಸಲು ಸತ್ಯಾಗ್ರಹ ಹೂಡಿರುವುದನ್ನು ಈ ಸಭೆಯು ಅಭಿನಂದಿಸುತ್ತದೆ.

(೭) ಎಲ್ಲ ಹಿಂದು ಸಂಸ್ಥಾನಾಧಿಪತಿಗಳೂ ರಾಜಮನೆತನದವರೂ ಧನಿಕರೂ ಹಿಂದು ಧರ್ಮ ಪ್ರಸಾರಕ್ಕಾಗಿಯೂ ಹಿಂದು ಸಂಘಟನೆಗಾಗಿಯೂ ಪ್ರಚಾರಕರನ್ನು ನಿಯಮಿಸಬೇಕೆಂದೂ ಶಕ್ಯವಿದ್ದ ಎಲ್ಲ ರೀತಿಗಳಿಂದ ಹಿಂದು ಜನಾಂಗದ ರಕ್ಷಣೆಗೆ ಸಹಾಯ ಮಾಡಬೇಕೆಂದೂ ಈ ಸಭೆಯು ವಿಜ್ಞಾಪಿಸಿಕೊಳ್ಳುತ್ತದೆ.

(೮) ಸ್ವಾತಂತ್ರ್ಯವೀರ ಸಾವರಕರರು ಬಂಧವಿಮೋಚನೆ ಹೊಂದಿದ ನಂತರ ಕಳೆದ ೧॥ ವರುಷಗಳಲ್ಲಿ ವಿಶೇಷವಾದ ಪ್ರವಾಸವನ್ನು ಮಾಡಿ ಹಿಂದು ಸಂಘಟನೆಗೆ ಬಲವಾದ ಶಕ್ತಿಯನ್ನುಂಟು ಮಾಡಿದುದಕ್ಕೋಸ್ಕರ ಹೃದಯಪೂರ್ವಕ ಅವರನ್ನು ಈ ಸಭೆಯು ಅಭಿನಂದಿಸಿ ನಾಗಪುರದ ಹಿಂದು ಮಹಾಸಭೆಗೆ ಇವರನ್ನೇ ಅಧ್ಯಕ್ಷರನ್ನಾಗಿ ಆರಿಸಬೇಕೆಂದು ಇಚ್ಛಿಸುತ್ತದೆ.

(೯) ಹಿಂದು ಸಮಾಜವು ಶಾರೀರಿಕ ಬಲವುಳ್ಳದ್ದಾಗಲು ಎಲ್ಲಾ ಕಡೆಗೆ ಬಾಲ ಬಾಲಕಿಯರಿಗಾಗಿ ವ್ಯಾಯಾಮ ಮಂದಿರಗಳು ಏರ್ಪಡಬೇಕು. ತರುಣ ತರುಣಿಯರು ಬಲಶಾಲಿಗಳೂ ತೇಜಸ್ವಿಗಳೂ ಆಗಬೇಕು.

# ನಿಜಾಮರಾಜ್ಯದ ಸತ್ಯಾಗ್ರಹ ಯುದ್ಧ.

ನಿಜಾಮ ಸರಕಾರದ ದಬ್ಬಾಳಿಕೆಯನ್ನು ವಿರೋಧಿಸಲು ಬೇರೆ ಭಾಗಗಳಿಂದ ವೀರಸತ್ಯಾಗ್ರಹಿಗಳೂ ನಿಜಾಮರಾಜ್ಯದ ಶೂರಸತ್ಯಾಗ್ರಹಿಗಳೂ ಭಾಗಾನಗರ (ಹೈದರಾಬಾದ)ದ ಕಡೆಗೆ ತಂಡ ತಂಡಾಗಿ ಹೊರಟಿದ್ದಾರೆ. ನಿಜಾಮ ರಾಜ್ಯದ ಬೇರೆ ಬೇರೆ ಪ್ರಮುಖ ಸ್ಥಳಗಳಲ್ಲಿಯೂ ಸತ್ಯಾಗ್ರಹ ಯುದ್ಧವು ಪ್ರಾರಂಭವಾಗುವ ಲಕ್ಷಣಗಳು ತೋರುತ್ತಲಿವೆ. ಆದಕಾರಣ ಸತ್ಯಾಗ್ರಹಿಗಳ ವಿಚಾರಣೆಗಾಗಿಯೇ ಶ್ರೀ. ಬಾನಾಜಿ ಎಂಬುವವರನ್ನು ಸ್ಪೇಶಲ್ ಮ್ಯಾಜಿಸ್ಟ್ರೇಟರನ್ನಾಗಿ ನಿಯಮಿಸಿದ್ದಾರೆ.

### ಸತ್ಯಾಗ್ರಹಿಗಳಿಗೆ ಸಂದೇಶ.

ತಾ. ೭-೧೧-೩೮ ನೆಯ ದಿವಸ ಪುಣೆಯಿಂದ ಹೊರಟ ಹಿಂದು ಸತ್ಯಾಗ್ರಹ ದಲಕ್ಕೆ ಶ್ರೀ. ರಾಮಾನಂದ ಚತರ್ಜಿ ಕಲಕತ್ತಾ, ಶ್ರೀ. ಗೋಕುಳಚಂದ ನಾರಂಗ ಲಾಹೋರ, ಪಂಡಿತ ತಾರಾನಾಥ ತುಂಗಭದ್ರಾ, ಮೊದಲಾದ ಪ್ರಮುಖರು ಶುಭಸಂದೇಶವನ್ನು ಕಳಿಸಿ ಸತ್ಯಾಗ್ರಹಿಗಳು ಜಯಶಾಲಿಗಳಾಗಲೆಂದು ಹಾರೈಸಿದ್ದಾರೆ.

ಸೇನಾಪತಿ ಬಾಪಟರವರು ಮುಂಬೈಯಿಂದ ಈ ಹಿಂದುತ್ವನಿಷ್ಠ ಸತ್ಯಾಗ್ರಹಿಗಳಿಗೆ ಶುಭ ಸಂದೇಶವನ್ನು ಕಳಿಸಿದ್ದರು. ಇವರು ಇಷ್ಟರಲ್ಲೇ ಒಂದು ನೂರ ಜನ ಸತ್ಯಾಗ್ರಹಿಗಳೊಡನೆ ಭಾಗಾನಗರದ ಕಡೆಗೆ ಹೊರಡುವರೆಂದು ತಿಳಿದಿದೆ.

### ಐದನೆಯ ಸರ್ವಾಧಿಕಾರಿಗಳ ಸಂದೇಶ.

ಸಂಸ್ಥಾನ ಕಾಂಗ್ರೆಸ್ ಕಮಿಟಿಯ ಐದನೆಯ ಸರ್ವಾಧಿಕಾರಿಗಳಾದ ದೇಶಭಕ್ತ ಎಲ್ಲರಡ್ಡಿಯವರು ತಮ್ಮ ನಾಲ್ಕು ಜನ ಕಾರ್ಯನಿರ್ವಾಹಕರಾದ ಶ್ರೀ. ಮುರಲೀಧರರಾವ, ಶ್ರೀ. ನರಸಿಂಹ, ಶ್ರೀ. ಭೂಮಕರ ಮತ್ತು ಶ್ರೀ. ಶಂಕರರಾವ ಇವರೊಡನೆ ತಾ. ೮-೧೧-೩೮ ನೆಯ ದಿನ ಶಾಸನಭಂಗವನ್ನು ಮಾಡಿ ಪೋಲಿಸರ ಕೈಸೆರೆಯಾದರು. ಆಗ ಇವರು ಕೊಟ್ಟ ವೀರ ಸಂದೇಶವು ಈ ಪ್ರಕಾರವಾಗಿದ್ದಿತು—

"ಹೈದರಾಬಾದಿನಲ್ಲಿ ಹಿಂದೆ ಎಂದೂ ಉಂಟಾಗದೆ ಇದ್ದಂತಹ ಚಳವಳಿಯ ಅಡಿಗಲ್ಲನ್ನು ನಿಜಾಮ ರಾಜ್ಯದ ಪ್ರಜೆಗಳು ಈಗ ಇಟ್ಟಿದ್ದಾರೆ. ಕಾಂಗ್ರೆಸ್ಸಿನ ಉಳಿಗಾಲ ಅಥವಾ ಅಳಿಗಾಲವು ನಮ್ಮ ಈಗಿನ ಚಳವಳಿಯ ಮೇಲೆಯೇ ಇದೆ. ನಾವು ಸುಸಂಘಟಿತವಾಗಿ ಇದನ್ನು ಅಖಂಡ ನಡೆಯಿಸತಕ್ಕದ್ದು. ಸಂಸ್ಥಾನದ ಸರ್ವತೋಮುಖ ಸುಧಾರಣೆಯಾಗಬೇಕಾದರೆ ರಾಜ ಪ್ರಜೆಗಳಲ್ಲಿ ಪರಸ್ಪರ ಸಹಕಾರವು ಬೇಕೇಬೇಕು. ಹೀಗೆ ಸಹಕಾರವಿರಬೇಕಾದರೆ ಪ್ರಜೆಗಳಿಗೆ ರಾಜ್ಯಭಾರದಲ್ಲಿ ಸರಿಯಾದ ಪ್ರಾತಿನಿಧ್ಯವು ಇರಬೇಕಾಗಿದೆ. ಈಗಿನ ರಾಜಕೀಯ ಚಳವಳಿಗೆ ಜಾತಿಯ ಬಣ್ಣವನ್ನು ಹಚ್ಚುತ್ತಿರುವುದು ಅನ್ಯಾಯವಾದುದಾಗಿದೆ. ಸತ್ಯಾಗ್ರಹಿಯು ಮಾನವನ ಸದ್ಗುಣಗಳ ಮೇಲೆಯೇ ವಿಶ್ವಾಸವಿಟ್ಟು ನಿರ್ಭೀತನಾಗಿ ಆಶಾ ಪೂರ್ತಿಯಿಂದ ಹೋರಾಡಬೇಕು."

### ಶ್ರೀ ಕೃಷ್ಣ ಶರ್ಮರ ಸೀಮಾಂತರ.

ನಿಜಾಮ ಸರಕಾರವು ತನ್ನ ಪ್ರಜೆಗಳು ರಾಜಕಾರಣದ ಬೆಳಕನ್ನು ಹೊಂದದೆ ಕತ್ತಲಲ್ಲಿಯೇ ಇದ್ದು ತನ್ನ ದಬ್ಬಾಳಿಕೆಗೆ ತಲೆ ಬಾಗಿಸಿರಬೇಕೆಂದು ಪ್ರಯತ್ನಿಸಿರುವಂತೆಯೇ ತನ್ನ ದಬ್ಬಾಳಿಕೆಯ ರೀತಿಯು ಹೊರಗಿನವರಿಗೆ ತಿಳಿಯಬಾರದೆಂತಲೂ ಪ್ರಯತ್ನಿಸಲಾರಂಭಿಸಿತು. ಇದೇ ದಬ್ಬಾಳಿಕೆಯ ಅತಿರೇಕ ತನ್ನ ಪ್ರಜೆಗಳ ಕಣ್ಣು ಬಾಯಿಗಳನ್ನು ಕಟ್ಟಿ ಅವರಿಗೆ ಕೊಡುವ ಹಿಂಸೆ.

ಶ್ರೀ. ಕೃಷ್ಣ ಶರ್ಮ ಎಂಬುವವರು ಭಾಗಾನಗರ (ಹೈದರಾಬಾದ)ದಲ್ಲಿ ಹತ್ತು ವರುಷಗಳಿಂದಲೂ ಇದ್ದುಕೊಂಡು ಕರ್ನಾಟಕ ಮತ್ತು ಪ್ರಜಾ ಪರಿಷತ್ತುಗಳ ಕಾರ್ಯ ಸಾಗಿಸಿದ್ದರು. ಅನೇಕ ಪತ್ರಿಕೆಗಳಿಗೆ ಸುದ್ದಿಯನ್ನು ಕಳಿಸುವುದೇ ಇವರ ಮುಖ್ಯ ಉದ್ಯೋಗವಾಗಿದ್ದಿತು. ತನ್ನ ದಬ್ಬಾಳಿಕೆಯ ರೀತಿಯು ಹೊರಗಡೆಯಲ್ಲಿ ಗೊತ್ತಾಗಬಾರದೆಂದು ಶ್ರೀ. ಶರ್ಮರಿಗೆ ಸೀಮಾಂತರದ ಶಿಕ್ಷೆಯನ್ನು ವಿಧಿಸಿದರು. ತಾ. ೯-೧೧-೩೮ ನೆಯ ದಿನ ಶ್ರೀ ಶರ್ಮರನ್ನು ಬೀಳ್ಕೊಡುವುದಕ್ಕಾಗಿ ಭಾಗಾನಗರ ಸ್ಟೇಶನ್ನಿನಲ್ಲಿ ಸಾವಿರಾರು ಜನರು ಸೇರಿದ್ದರು. ಅವರಿಗಾಗುವ ಈ ಗೌರವವನ್ನು ನೋಡಿ ಸಹಿಸಲಾರದೆ ಪೋಲಿಸರು ಅಲ್ಲಿಂದ ಎಂಟು ಮೈಲು ದೂರದಲ್ಲಿರುವ ಫಲಕನುಮಾ ಸ್ಟೇಶನ್ನಿನಿಂದಲೇ ಶ್ರೀ. ಶರ್ಮರನ್ನು ಕಳುಹಿಸಿಕೊಟ್ಟರು. ಅಲ್ಲಿಯೂ ಕೆಲವು ಗೆಳೆಯರು ಇವರಿಗೆ ಸನ್ಮಾನ ಮಾಡಿದರು. ಚಳವಳಿಯ ಫೋಟೋಗಳನ್ನು ತೆಗೆದು ಪತ್ರಿಕೆಗೆ ಕಳಿಸುವರೆಂದು ಶ್ರೀ. ಗೋವರ್ಧನ ಶರ್ಮರನ್ನೂ ಬಂಧಿಸಿ ಇವರ ಸಂಗಡ ಕಳುಹಿಸಿದರು.

ಈ ಪ್ರಕಾರ ನಿಜಾಮ ರಾಜ್ಯದಲ್ಲಿ ದಬ್ಬಾಳಿಕೆಯ ಅತಿರೇಕವಾಗಿದೆ. ಶ್ರೀ. ಬಾಜಿ ಕೃಷ್ಣರಾಯರೆಂಬ ಆರ್ಯ ಸಮಾಜದ ಪ್ರಮುಖರು ಶ್ರೀ. ಶರ್ಮರ ಸೀಮಾಂತರವನ್ನು ನಿಷೇಧಿಸಿ ಅವರ ಅಗಲುವಿಕೆಯಿಂದಾದ ಅನುತಾಪವನ್ನು ವ್ಯಕ್ತಗೊಳಿಸಿ ಜವಾಬ್ದಾರಿ ಸರಕಾರವು ಇಷ್ಟರಲ್ಲೇ ಪ್ರಾರಂಭವಾಗುವುದೆಂದೂ ಸರ್. ಅಕಬರ್ ಹೈದರಿಯವರು ರಾಜಕೀಯ ಸುಧಾರಣೆಯನ್ನು ಕುರಿತು ಇಷ್ಟರಲ್ಲೇ ಒಂದು ಪ್ರಕಟನೆ ಹೊರಡಿಸುವ ಸಂಭವ ಇದೆಯೆಂದೂ ತಿಳಿಸಿದ್ದಾರೆ.

### ವೀರ ಧನಿಕರ ಕೈಸೆರೆ.

ಸಂಸ್ಥಾನ ಕಾಂಗ್ರೆಸ್ ಕಮಿಟಿಗೆ ಸಹಾಯ ಮಾಡುತ್ತಾರೆಂದು ಕ್ಯಾಂಟೋನಮೆಂಟಿನ ಒಬ್ಬ ಧನಿಕ ಮಾರ್ವಾಡಿಗಳ ಕೈಸೆರೆ ಮಾಡಿ ೧೦೦೦ ರೂ. ಹೊಣೆಗಾರಿಕೆಯನ್ನು ಕೇಳಿದರು. ಆ ವೀರ ಧನಿಕರು ಹೊಣೆಗಾರಿಕೆಯನ್ನು ಕೊಡದೆ ಜೈಲಿಗೆ ಹೋದರು.

ಬಾರ್ಶಿಯಿಂದ ಸೊಲ್ಲಾಪುರ ಮಾರ್ಗದಲ್ಲಿ ನಿಜಾಮ ಸೀಮೆಯನ್ನು ಸೇರಬೇಕಾದ ಪ್ರವಾಸಿಗಳಿಗೆ ಅನೇಕ ತೊಂದರೆ ಕೊಡುತ್ತಿದ್ದಾರೆ. ಸಂಸ್ಥಾನದಲ್ಲಿಯ ೧೨ ಪ್ರಮುಖರನ್ನು ಸ್ಥಾನಬದ್ಧ ಕೈದಿಗಳನ್ನಾಗಿ ಮಾಡುವರೆಂಬ ಸುದ್ದಿ. ಒಬ್ಬ ಪ್ರಮುಖ ಅಧಿಕಾರಿಗಳು ಹಿಂದು ನಾಗರಿಕ ಸ್ವಾತಂತ್ರ್ಯದ ಸತ್ಯಾಗ್ರಹವನ್ನು ಸಮರ್ಥಿಸಲು ತಮ್ಮ ಅಧಿಕಾರವನ್ನು ಬಿಡುವವರಿದ್ದಾರೆಂದು ತಿಳಿದಿದೆ.

### ಕ್ರೂರ ಶಿಕ್ಷೆ.

ಹಿಂದು ನಾಗರಿಕ ಸ್ವಾತಂತ್ರ್ಯ ಸಂಘದ ಪ್ರಮುಖರಾದ ಶ್ರೀ. ಯಶವಂತರಾವ ಜೋಶಿ ಎಂಬುವವರ ಮೇಲೆ ರಾಜದ್ರೋಹದ ವ್ಯಾಜ್ಯ ಹೂಡಿದ್ದಾರೆ. ಇವರ ವ್ಯಾಜ್ಯ ನಡೆಯಿಸಲು ಪುಣೆಯಿಂದ ಶ್ರೀ. ಅಣ್ಣಾಸಾಹೇಬ ಭೋಪಟಕರರು ಭಾಗಾನಗರಕ್ಕೆ ಹೋಗುವರು. ಶ್ರೀ. ಜೋಶಿಯವರಿಗೆ ಜೈಲಿನಲ್ಲಿ ನಾನಾ ತೊಂದರೆಗಳನ್ನು ಉಂಟು ಮಾಡಿದರೆಂದೂ ಅವರಿಗೆ ಬೆತ್ತದ ಏಟನ್ನು (ಫಟಕಿ ಹೊಡೆತ) ಕೊಟ್ಟರೆಂದೂ ಜನರಿಗೆ ತಿಳಿಯಲು ಜನರು ಬಹು ಅಸಂತುಷ್ಟರಾದರು.

ವಿದ್ಯಾರ್ಥಿಗಳಲ್ಲಿ ಈ ಸತ್ಯಾಗ್ರಹವು ವ್ಯಾಪಿಸಬಾರದೆಂದು ಸರಕಾರದವರು ಉಸ್ಮಾನಿಯಾ ವಿಶ್ವವಿದ್ಯಾಲಯದ ಹಿಂದು ವಿದ್ಯಾರ್ಥಿಗಳ ಮೇಲೆ ಅನೇಕ ನಿರ್ಬಂಧಗಳನ್ನು ಮಾಡಲಾರಂಭಿಸಿದ್ದಾರೆ. ಇದೆ. ವಿದ್ಯಾರ್ಥಿಗಳಲ್ಲಿಯೂ ಸತ್ಯಾಗ್ರಹದ ಚೇತನವುಂಟಾಗುತ್ತಾ

## ೧೫ ದಿನಗಳಲ್ಲಿ ೯೬ ಸತ್ಯಾಗ್ರಹಿಗಳು.

ತಾ. ೯-೧೧-೩೮ ರ ವರೆಗೆ ಒಟ್ಟು ೯೬ ವೀರ ಸತ್ಯಾಗ್ರಹಿಗಳು ಸೆರೆಮನೆ ಸೇರಿದರು. ಇವರಲ್ಲಿ ಹಿಂದು ನಾಗರಿಕ ಸ್ವಾತಂತ್ರ್ಯಸಂಘದವರು ೨೫ ವೀರರು, ಕಾಂಗ್ರೆಸ್ಸಿನ ೨೬ ವೀರರು, ಆರ್ಯಸಂರಕ್ಷಕ ಸಂಘದ ೧೫ ವೀರರು ಮತ್ತು ಇಸ್ಲಾಮದ ೩೦ ವೀರರು. ಪುಣೆಯ ಸತ್ಯಾಗ್ರಹ ಮತ್ತು ಮುಂಬೈಯಿಯ ಇನ್‌ಸಾಫ್ ಎಂಬ ಪತ್ರಿಕೆಗಳು ನಿಜಾಮ ರಾಜ್ಯದಲ್ಲಿ ಬಾರದಂತೆ ಅಪ್ಪಣೆಯಾಗಿದೆ.

## ೩೦೦೦ ಸತ್ಯಾಗ್ರಹಿಗಳು.

ಅಜಮೀರದಲ್ಲಿ ಆರ್ಯ ಪ್ರತಿನಿಧಿ ಸಭೆ ಕೂಡಿದ್ದಿತು. ಹೈದರಾಬಾದಿನಲ್ಲಿ ನಡೆದ ಸತ್ಯಾಗ್ರಹವನ್ನು ಅಭಿನಂದಿಸುವ ಗೊತ್ತುವಳಿಯಾಯಿತು. ಸತ್ಯಾಗ್ರಹದಲ್ಲಿ ಭಾಗವಹಿಸಲು ೩೦೦೦ ಸ್ವಯಂಸೇವಕರು ಸಿದ್ಧರಾಗಿದ್ದಾರೆಂದು ಪ್ರಕಟವಾಗಿದೆ. ಸಿಂಧ ಪ್ರಾಂತದ ಆರ್ಯ ಪ್ರತಿನಿಧಿ ಸಭೆಯವರು ಕೂಡಾ ಶ್ರೀ. ನಾರಾಯಣ ಸ್ವಾಮಿಯವರ ನೇತೃತ್ವದಲ್ಲಿ ಸತ್ಯಾಗ್ರಹಿಗಳನ್ನು ಭಾಗಾ ನಗರಕ್ಕೆ ಕಳಿಸುವರು.

## ೬ ನೆಯ ಸರ್ವಾಧಿಕಾರಿಯ ಬಂಧನ.

ಹೈದರಾಬಾದ ಸ್ಟೇಟ್ ಕಾಂಗ್ರೆಸ್ಸಿನ ೬ ನೆಯ ಸರ್ವಾಧಿಕಾರಿಗಳಾದ ಶ್ರೀ. ಶ್ರೀನಿವಾಸರಾವ ಹವಾಲದಾರ ಇವರು ಶ್ರೀ. ಎಚ್. ಆರ್. ನಾಥ, ಶ್ರೀ. ವ್ಹಿ ಎಸ್. ದೇಸಾಯಿ, ಶ್ರೀ. ವಿನಾಯಕ ಪ್ರಯಾಗ, ಶ್ರೀ. ಕೆ. ಹಿರೂರಕರ ಮತ್ತು ಶ್ರೀ ತ್ರಿಯಂಬಕನಾಯಕ ಈ ಸಂಗಡಿಗರೊಂದಿಗೆ ತಾ. ೧೧-೧೧-೩೮ ನೆಯ ದಿನ ಶಾಸನಭಂಗ ಮಾಡಿ ಪೋಲಿಸರ ಸ್ವಾಧೀನವಾದರು.

ಇವರನ್ನು ಬೀಳ್ಕೊಡುವಾಗ ಪೋಲಿಸರು ಎಷ್ಟು ಕಾವಲಿದ್ದರೂ ಸಾಧಾರಣ ೨ ಸಾವಿರ ಜನರು ಸೇರಿ ಜಯಘೋಷದೊಡನೆ ಕಾರಾಗೃಹಕ್ಕೆ ಕಳುಹಿಸಿಕೊಟ್ಟರು. ಕಾಂಗ್ರೆಸ್ಸಿನ ಜಯಘೋಷ ಮಾಡಿದವರಲ್ಲಿ ಇಬ್ಬರನ್ನು ಪೋಲಿಸರು ಕೈಸೆರೆ ಮಾಡಿದರು.

## ರಾಷ್ಟ್ರಭಕ್ತರ ಸಂದೇಶ.

ದೇಶಭಕ್ತ ಶ್ರೀನಿವಾಸರಾಯರು ತಾವು ಕಾರಾಗೃಹಕ್ಕೆ ಹೋಗುವಾಗ ಹೀಗೆ ಸಂದೇಶ ಕೊಟ್ಟರು—

"ಕಾಂಗ್ರೆಸ್ಸು ಯಾವುದೊಂದೇ ಜಾತಿಯ ಸಂಸ್ಥೆಯಲ್ಲ. ಇದು ಎಲ್ಲ ಜಾತಿಯವರ ಹಿತಕ್ಕಾಗಿ ಹೋರಾಡುವ ಸಂಸ್ಥೆ. ಮನುಷ್ಯನ ಜನ್ಮಸಿದ್ಧ ಹಕ್ಕಿಗಾಗಿ ಹೋರಾಡುವ ಸಂಸ್ಥೆ. ಇದು ಅಲ್ಪಸಂಖ್ಯಾಕರನ್ನೂ ಬಹು ಸಂಖ್ಯಾಕರನ್ನೂ ಸಮಾನವಾಗಿ ನೋಡುವ ಸಂಸ್ಥೆ. ಇದು ಜಾತಿವಿಶಿಷ್ಟ ಸಂಸ್ಥೆಯೆಂದು ಕೆಲವು ಸ್ವಾರ್ಥಿಗಳು ಹೇಳುತ್ತಿದ್ದಾರೆ. ಆದಕಾರಣ ಅವರ ಮಾತಿಗೆ ಮೋಸ ಹೋಗದೆ ಇದರಲ್ಲಿ ಎಲ್ಲರೂ ಸೇರಬೇಕಾಗಿ ಬಿನ್ನಹ."

ಸಂಘಟನಾ ಕಾರ್ಯದರ್ಶಿಗಳಾದ ಶ್ರೀ. ಸಿಂಗೂರಕರರು ತಮ್ಮ ಸಂದೇಶದಲ್ಲಿ ಹೀಗೆ ಹೇಳಿದರು—

"ನಮ್ಮ ಈ ಹೋರಾಟವು ಯಾವುದೊಂದೇ ಜಾತಿಗಾಗಿ ಇಲ್ಲ. ಇದು ಒಂದು ಜಾತಿಯ ಅಥವಾ ವ್ಯಕ್ತಿಯ ವಿರುದ್ಧವಾಗಿ ನಡೆದಿಲ್ಲ. ಈಗಿನ ರಾಜ್ಯದಾಳ್ವಿಕೆಯ ಪದ್ಧತಿಯಲ್ಲಿ ಬೇರೆಯಾಗಬೇಕೆಂದೇ ಈ ಹೋರಾಟ ನಡೆದಿದೆ. ಜವಾಬ್ದಾರಿ ಸರಕಾರವನ್ನು ಇಚ್ಛಿಸುವ ಸಕಲರೂ ಈ ಹೋರಾಟದಲ್ಲಿ ಸೇರಬೇಕೆಂದು ನನ್ನ ಪ್ರಾರ್ಥನೆ."

ತಾ. ೧೧-೧೧-೩೮ ನೆಯ ಶುಕ್ರವಾರದ ವರೆಗೆ ಹೈದರಾಬಾದ ಸತ್ಯಾಗ್ರಹದಲ್ಲಿ ಒಟ್ಟು ೧೦೫ ಸತ್ಯಾಗ್ರಹಿಗಳು ಸೆರೆ ಮನೆಗೆ ಹೋದರು.

# ಜವಾಬ್ದಾರಿ ಸರಕಾರ ಬೇಡ!

ಮೈಸೂರು ಸರಕಾರದ ರಾಜಕೀಯ ಸುಧಾರಣಾ ಸಮಿತಿಯು ಸಾಕ್ಷಿಗಳನ್ನು ತೆಗೆದುಕೊಳ್ಳುವ ಕಾರ್ಯ ಪ್ರಾರಂಭಿಸಿದೆ. ಆ ಸಂಸ್ಥಾನದ ಯುರೋಪಿಯನ್ ಸಂಘವು ಸಮಿತಿಗೆ ಹೀಗೆ ಸೂಚಿಸಿದೆ-

"ಮೈಸೂರು ರಾಜ್ಯದಲ್ಲಿ ಜವಾಬ್ದಾರಿ ಸರಕಾರ ಬೇಕಾಗಿಲ್ಲ. ಮಹಾರಾಜರಿಗೆ ಹೊಣೆಗಾರರಾಗಿರತಕ್ಕ ಮಂತ್ರಿಗಳೇ ಇರಬೇಕು. ಯುರೋಪಿಯನ್‌ರಿಗೆ ಪ್ರತ್ಯೇಕ ಪ್ರಾತಿನಿಧ್ಯವಿರಬೇಕು. ಭಾರತ ಸಂಯುಕ್ತ ಶಾಸನಮಂಡಲಕ್ಕೆ (ಫೆಡರಲ್ ಅಸೆಂಬ್ಲಿಗೆ) ಮಹಾರಾಜರಿಂದ ನಿಯಾಮಕರಾದ ಪ್ರತಿನಿಧಿಗಳೇ ಹೋಗಬೇಕು. ೨೧ ವರುಷಗಳಿಗೆ ಮೇಲ್ಪಟ್ಟ ಎಲ್ಲ ಐರೋಪ್ಯ ಸ್ತ್ರೀ ಪುರುಷರಿಗೂ ಮತಕೊಡುವ ಅಧಿಕಾರವಿರಬೇಕು."

ಹಿಂದಿಯರು ಪ್ರಜಾ ಪ್ರಭುತ್ವ ಪ್ರಿಯರಾಗಿ ಎಲ್ಲ ಕಡೆಗೂ ಅಂಥ ಪ್ರಭುತ್ವವನ್ನೇ ಸ್ಥಾಪಿಸಿದರೆ ತಮಗಿರುವ ಈಗಿನ ವಿಶೇಷ ಸೌಕರ್ಯಗಳೆಲ್ಲಾ ಮಾಯವಾಗುವವೆಂದೇ ಇವರು ಹೀಗೆ ಹೇಳುತ್ತಿದ್ದಾರೆ. ಈ ಸ್ವಾರ್ಥಿಗಳ ಕೂಗು ಸ್ವಾತಂತ್ರ್ಯಪ್ರಿಯರ ಜಯಧ್ವನಿಯಲ್ಲಿ ಅಡಗಿ ಹೋಗುವ ಕಾಲವು ಸಮೀಪಿಸಿದೆ.

# ನಿಜಾಮ ರಾಜ್ಯ ಮುಸ್ಲಿಂ ರಾಜ್ಯ.

ಮಿ. ಸಿ. ಈ. ಗಿಬನ್ ಎಂಬುವವರು ನಿಜಾಮ ರಾಜ್ಯದಲ್ಲಿ ಅಧಿಕಾರಿಗಳಾಗಿದ್ದರು. ಇವರು ಮೊದಲು ವ್ಹಾಯಿಸ್‌ರಾಯರ ಕಚೇರಿಯಲ್ಲಿಯೂ ಅಧಿಕಾರಿಗಳಿದ್ದರು. ಮಿ. ಗಿಬನ್ ಇವರು ನಿಜಾಮ ಸ್ಟೇಟ ಕಾಂಗ್ರೆಸ್ಸಿಗೆ ಪ್ರೋತ್ಸಾಹಕರೆಂದು ಇವರನ್ನು ನಿಜಾಮ ಸರಕಾರವು ಸೀಮಾಂತರಗೊಳಿಸಿದೆ.

ಮಿ. ಗಿಬನ್‌ರವರು ಈಗ ಕಲಕತ್ತಾದಿಂದ ನಿಜಾಮ ರಾಜ್ಯದ ಸಂಬಂಧವಾಗಿ ಒಂದು ಪ್ರಕಟನೆಯನ್ನು ಹೊರಡಿಸಿದ್ದಾರೆ. ಆದರಲ್ಲಿ ಅವರು ಹೀಗೆ ತಿಳಿಸಿದ್ದಾರೆ—

"ಹೈದರಾಬಾದ ಸಂಸ್ಥಾನವು ಹಿಂದುಸ್ಥಾನದ ಎಲ್ಲಾ ಬಲಾತ್ಕಾರದ ಸಂಸ್ಥಾನಗಳಲ್ಲಿ ಹೆಚ್ಚಿನ ದಬ್ಬಾಳಿಕೆಯ ಸಂಸ್ಥಾನವೆಂದು ನನ್ನ ದೃಢವಾದ ಅನುಭವವು. ಇತ್ತೀಚಿಗೆ ಹೈದರಾಬಾದ ಸರಕಾರದಲ್ಲಿ ಜಾತ್ಯಂಧತೆಯು ಹೆಚ್ಚಿದೆ. ನಿಜಾಮ ರಾಜ್ಯವು ಇಸ್ಲಾಂ ರಾಜ್ಯವೆಂದು ಸರಕಾರಿ ಪ್ರಕಟನೆಯಲ್ಲಿಯೇ ಒಂದು ಕಡೆ ಹೇಳಿದೆ. ಮುಸಲ್ಮಾನೇತರರಿಗೆ ಅಸಂತೋಷ ಉಂಟಾಗುವ ಹೇಳಿಕೆಗಳು ಸರಕಾರಿ ಪತ್ರಿಕೆಗಳಲ್ಲಿಯೂ ಇರುವುದುಂಟು."

# ವನಶಿಗ್ಗಿಯ ಸತ್ಯಾಗ್ರಹಿಗಳು.

ಹೈದರಾಬಾದದ ಸತ್ಯಾಗ್ರಹದಲ್ಲಿ ಸೇರಲು ವನಶಿಗ್ಗಿಯಿಂದ ಇದೇ ೨೨ ನೆಯ ತಾರೀಖಿನ ದಿವಸ ೧೦ ಜನ ಸತ್ಯಾಗ್ರಹಿಗಳು ಹೊರಡುವರೆಂದು ಪ್ರಕಟವಾಗಿದೆ.

—ನಂದುರಬಾರ ಎಂಬಲ್ಲಿ ಒಬ್ಬ ಕ್ರಿಸ್ತನನ್ನು ಹಿಂದು ಧರ್ಮ ಪ್ರಚಾರಕ ಸಂಘದವರು ಶುದ್ಧಗೊಳಿಸಿ ಹಿಂದು ಧರ್ಮದಲ್ಲಿ ತೆಗೆದುಕೊಂಡರು.




ಶಾ. ಶ. ೧೮೬೦ ನೆಯ ಕಾರ್ತಿಕ ಬ|| ೭ ಸೋಮವಾರ.

# ಸರದಾರರ ಅಹಿಂಸೆ.

ಕಳೆದ ೭ ನೆಯ ತಾರೀಖಿನ ದಿವಸ ಮುಂಬೈಯಲ್ಲಿ ಕೂಲಿಕಾರರ ಪ್ರಚಂಡ ಕಟ್ಟು ನಡೆದಾಗ ಮೂರು ಸಾರೆ ಗುಂಡು ಹಾರಿಸಲ್ಪಟ್ಟಿತು. ಅದರಿಂದ ಅನೇಕರು ಗಾಯ ಹೊಂದಿ ಒಬ್ಬ ನಿರಪರಾಧಿ ಕೂಲಿಕಾರನು ಮೃತಪಟ್ಟನು. ಸರಕಾರದಿಂದ ಇಂತಹ ಅತ್ಯಾಚಾರ ನಡೆದಾಗ ಅದರ ಯುಕ್ತಾಯುಕ್ತತೆಗಳನ್ನು ಕುರಿತು ಜನರು ಚರ್ಚಿಸುವುದು ಸ್ವಾಭಾವಿಕ. ಎಂದಮೇಲೆ ಅಹಿಂಸೆಯ ವ್ರತವನ್ನು ಅಂಗೀಕರಿಸಿರುವ ಕಾಂಗ್ರೆಸ್ ಪಕ್ಷದ ಕೈಯಲ್ಲಿ ಅಧಿಕಾರವಿರುವಾಗ ಇಂತಹ ಹಿಂಸೆಗಳು ನಡೆದರಂತೂ ಜನರು ಹೆಚ್ಚು ಲಕ್ಷಿಸಿ ಸರಕಾರವನ್ನು ಆಕ್ಷೇಪಿಸಿದ್ದಾದರೆ ಅದರಲ್ಲಿ ಆಶ್ಚರ್ಯವೇನು ?

ಸರಕಾರವು ಗುಂಡು ಹಾರಿಸಿದ್ದನ್ನು ಸರದಾರ ವಲ್ಲಭಭಾಯಿ ಪಟೇಲರು ಸಮರ್ಥಿಸಿ ತಮ್ಮ ಪ್ರಕಟನೆಯಲ್ಲಿ ಈ ಪ್ರಕಾರ ತಿಳಿಸಿದ್ದಾರೆ:—

"ಕಾಂಗ್ರೆಸ್ ಪಕ್ಷವು ಎಲ್ಲಿಯ ವರೆಗೆ ನಿರಪರಾಧಿಗಳ ರಕ್ಷಣೆಗೆ ಗುಂಡು ಹಾರಿಸುತ್ತದೆಯೋ ಅಲ್ಲಿಯ ವರೆಗೆ ಅದು ಅಹಿಂಸೆಯ ಉದಾತ್ತ ಧ್ಯೇಯವನ್ನು ಸಾಧಿಸಿದಂತಾಗುವುದಿಲ್ಲ. ನಾವು ಈಗ ಈ ಧ್ಯೇಯವನ್ನು ಮುಟ್ಟಿಲ್ಲವೆಂದು ಹೇಳಲು ನಾಚಬೇಕಾದುದೂ ಇಲ್ಲ."

ಸರದಾರರು ತಮ್ಮ ಪ್ರಕಟನೆಯಲ್ಲಿ ಇಷ್ಟನ್ನೇ ಹೇಳಿದ್ದರೆ ನಾವು ಈ ವಿಷಯವನ್ನು ಪ್ರಸ್ತಾಪಿಸುವ ಪ್ರಸಂಗವೇ ಬರುತ್ತಿರಲಿಲ್ಲ. ತಮ್ಮ ಪ್ರಕಟನೆಯ ಕೊನೆಯಲ್ಲಿ ಸರದಾರರು ಈ ಕೆಳಗಿನಂತೆ ಎಚ್ಚರಿಕೆ ಕೊಟ್ಟದ್ದರಿಂದ ಇವರ ಅಹಿಂಸೆಯ ವ್ಯಾಖ್ಯೆಯನ್ನು ಕುರಿತು ಸ್ವಲ್ಪ ವಿವೇಚಿಸಬೇಕಾಯಿತು. ಸರದಾರರ ಎಚ್ಚರಿಕೆ ಹೀಗಿದೆ:—

"ನಿರಪರಾಧಿಗಳ ಧನ ಪ್ರಾಣಗಳನ್ನು ರಕ್ಷಿಸಲು ಗುಂಡು ಹಾರಿಸುವ ಪ್ರಸಂಗವೇ ಪ್ರಾಪ್ತವಾದರೆ ಕಾಂಗ್ರೆಸ್ಸು ಅದನ್ನೂ ಮಾಡುವುದು."

ಅಹಿಂಸೆಯ ಧ್ಯೇಯವು ನುಡಿಯಲಿಕ್ಕೂ ಕಣ್ಣು ಮುಂದಿಇಲಿಕ್ಕೂ ಬರುವಂತಹದಾಗಿದೆಯೇ ವಿನಾ ನಡೆಯಲಿಕ್ಕೆ ಬರುವಂತಹದಲ್ಲವೆಂದೇ ಸರದಾರರ ಅಭಿಪ್ರಾಯವೆ?

ದುಷ್ಟನಿಗ್ರಹ, ಶಿಷ್ಟಪರಿಪಾಲನೆಗಾಗಿಯೇ ಶಸ್ತ್ರವನ್ನು ಹಿಡಿಯಬೇಕೆಂದು ಭಾರತೀಯ ಕ್ಷಾತ್ರಧರ್ಮವು ಬಹುಕಾಲದಿಂದಲೂ ಸಾರುತ್ತ ಬಂದಿದೆ ರಕ್ತದ ಕಾಲುವೆಯನ್ನು ಹರಿಸಿದ ಅನೇಕ ಪರಾಕ್ರಮಿಗಳು ದೇವರ ಅವತಾರವೆಂದು ಈಗ ಪೂಜೆಗೊಳ್ಳುತ್ತಿರುವುದು ಕೂಡಾ ಇದೇ ತತ್ವದಿಂದಲೇ ಅಲ್ಲವೆ? ಎಂದಮೇಲೆ ನಿರಪರಾಧಿಗಳ ರಕ್ಷಣೆಗೆ ಸಮಯ ಬಂದರೆ ಗುಂಡು ಹಾರಿಸುವ ಕಾಂಗ್ರೆಸ್ ಸರಕಾರದ ಅಹಿಂಸೆಯಲ್ಲಿ ಯಾವ ವೈಶಿಷ್ಟ್ಯವುಂಟು? ಅದು ಕೂಡಾ ಸಮಯ ಬಂದರೆ ರಕ್ತದ ಕಾಲುವೆಯನ್ನು ಹರಿಸಲು ಸಿದ್ಧವಿದೆಯೆಂದೇ ಸರದಾರರು ವೀರ್ಯವತ್ತಾಗಿ ಹೇಳಬಹುದಲ್ಲವೆ?

ರಾಜಕೋಟ ಮೊದಲಾದ ಸರಕಾರಗಳು ಗುಂಡು ಹಾರಿಸಿದುದನ್ನು ಇದೇ ಸರದಾರರು ನಿಷೇಧಿಸಿದ್ದಾರಷ್ಟೆ. ಆಯಾಯ ಸರಕಾರಗಳು ಕೂಡಾ ಈಗ ಮುಂಬೈ ಪ್ರಾಂತದ ಕಾಂಗ್ರೆಸ್ ಸರಕಾರವು ಹೇಳುವಂತೆಯೇ ಪ್ರಜಾಪ್ರಮುಖರ ಮೇಲೂ ಜನಸ್ತೋಮದ ಮೇಲೂ ತಪ್ಪನ್ನು ಹೊರಿಸಿವೆ. ಗುಂಡು ಹಾರಿಸಲೇಬೇಕಾದ ಪ್ರಸಂಗವಿದ್ದಿತೆಂದೇ ಗುಂಡು ಹಾರಿಸಿದವರು ಹೇಳುವ ರೂಢಿ.

ಗುಂಡು ಹಾರಿಸಿ ಜನರನ್ನು ಹಿಂಸೆಗೊಳಿಸಿದನಂತರ ಅಂತಹ ಪ್ರಸಂಗವಿದ್ದಿತೋ ಅಥವಾ ಇಲ್ಲವೋ? ಎಂಬ ವಿಚಾರಣೆಯಷ್ಟೆ. ಅನೇಕ ಕಡೆಗೆ ವಿಚಾರಣೆಯ ಸಮಿತಿಗಳು ಏರ್ಪಟ್ಟಂತೆ ಈಗ ಮುಂಬೈ ಸರಕಾರವೂ ಒಂದು ವಿಚಾರಣಾಸಮಿತಿಯನ್ನು ಏರ್ಪಡಿಸಿದೆ. ಎಂದಮೇಲೆ ಬೇರೆ ಸರಕಾರಗಳಿಗೂ ಅಹಿಂಸೆಯ ಬಿರುದನ್ನು ಧರಿಸಿದ ಕಾಂಗ್ರೆಸ್ ಸರಕಾರಕ್ಕೂ ವ್ಯತ್ಯಾಸವೇನು?

ವ್ಯತ್ಯಾಸವಿಷ್ಟೆ. ಅವು ದುಷ್ಟನಿಗ್ರಹ ಶಿಷ್ಟ ಪರಿಪಾಲನೆಗಾಗಿ ಶಸ್ತ್ರವನ್ನು ಧರಿಸುವುದಾಗಿ ಹೇಳಿ ಆ ಪ್ರಕಾರ ನಡೆಯುತ್ತವೆ. ಆದರೆ ಕಾಂಗ್ರೆಸ್ ಸರಕಾರವಾದರೋ ಅಹಿಂಸೆಯಿಂದ ಹಿಂಸೆಯನ್ನು ಜಯಿಸಬೇಕೆಂದು ಹೇಳಿ ಹಿಂಸೆಯಿಂದ ಹಿಂಸೆಯನ್ನು ಗೆಲ್ಲುತ್ತದೆ.

ಸರದಾರರ ಮೇಲಣ ಅಭಿಪ್ರಾಯಗಳನ್ನು ನಿಷ್ಪಕ್ಷಪಾತ ದೃಷ್ಟಿಯಿಂದ ವಿವೇಚಿಸುವವರಿಗೆ ಅವರ ಅಹಿಂಸೆಯ ಅಂತಸ್ತು ಮಾತಿನಲ್ಲಿ ಮಾತ್ರವೇ ಹೆಚ್ಚಾಗಿದೆಯೇ ವಿನಾ ನಡೆಯಲ್ಲಿ ಬೇರೆ ಸರಕಾರಗಳಂತೆಯೇ ಇದೆಯೆಂಬುದು ಸ್ಪಷ್ಟವಾಗದೆ ಇರಲಾರದು.

# ನೈಜಾಮ ಸರಕಾರ ಹಾದಿಗೆ ಬಂತೆ?

ಸರ್. ಅಕಬರ ಹೈದರಿಯವರು ಶ್ರೀ. ಜಮನಾಲಾಲ ಬಜಾಜರನ್ನು ಮುಂಬೈಯಲ್ಲಿ ಕಂಡು ಕಾಂಗ್ರೆಸ್ ಸಂಸ್ಥೆ ಮತ್ತು ಕಾಂಗ್ರೆಸ್ ಮಂತ್ರಿಮಂಡಲಗಳ ಮೂಲಕ ಹೈದರಾಬಾದಿನ ಸತ್ಯಾಗ್ರಹ ಯುದ್ಧವನ್ನು ನಿಲ್ಲಿಸಬೇಕೆಂದು ಪ್ರಯತ್ನಿಸಿರುವರಾಗಿ ಪ್ರಕಟವಾಗಿದೆ.

ನಿಜಾಮ ಸರಕಾರದಿಂದ ಮೊದಲು ಪ್ರವೇಶ ಪ್ರತಿಬಂಧಕ್ಕೊಳಗಾಗಿದ್ದ ಡಾ. ಪಟ್ಟಾಭಿ ಸೀತಾರಾಮಯ್ಯನವರಿಗೇನೇ ಈಗ ನಿಜಾಮ ಸರಕಾರವು ಆಮಂತ್ರಣ ಕೊಟ್ಟು ತನ್ನ ರಾಜ್ಯದ ಸ್ಥಿತಿಯನ್ನು ಕಣ್ಣಾರೆ ನೋಡಬೇಕಾಗಿ ವಿಜ್ಞಾಪಿಸಿಕೊಂಡಿದೆಯೆಂದೂ ಪ್ರಸಿದ್ಧವಾಗಿದೆ. ಇದು ಸರಕಾರ ಹಾದಿಗೆ ಬರುವ ರೀತಿ.

# ಅಸಮಂಜಸವಾದ ಯೋಜನೆ.

ಹುಬ್ಬಳ್ಳಿಯಲ್ಲಿ ಕೂಡುವ ೧೩ ನೆಯ ಅಖಿಲ ಭಾರತ ವೀರಶೈವ ಮಹಾಸಭೆಯ ಸ್ವಾಗತ ಸಂಘದವರು ಉತ್ಸಾಹದಿಂದ ಕಾರ್ಯವನ್ನು ಸಾಗಿಸಿದ್ದಾರೆ. ಸಮಾಜಕ್ಕೆ ಹಿತಕರವಾಗುವ ಅನೇಕ ಸಂಗತಿಗಳನ್ನು ಯೋಚಿಸಿ ತಮ್ಮ ಅಭಿಪ್ರಾಯವನ್ನು ಸಮಾಜದ ಮುಂದಿಟ್ಟು ವಿಚಾರಜಾಗೃತಿಗೆ ಅವಕಾಶವನ್ನು ಕಲ್ಪಿಸಿದ್ದಾರೆ. ಇದು ಅಭಿನಂದನೀಯವಾದ ಪ್ರಯತ್ನವು.

ಮಹಾಸಭೆಯಲ್ಲಿ ನಿರ್ಣಯವಾಗಲು ಎರಡು ಯೋಜನೆಗಳನ್ನು ಗೊತ್ತುಮಾಡಿ ಅವುಗಳನ್ನು ಪ್ರಕಟನೆಗೆ ಕಳುಹಿಸಿದ್ದಾರೆ. ಆವುಗಳನ್ನು ನಾವು ಇದೇ ಸಂಚಿಕೆಯಲ್ಲಿ ಪ್ರಕಟಿಸಿದ್ದೇವೆ. ಅವುಗಳಲ್ಲಿ ಮಧ್ಯವರ್ತಿ ವಾಚನಾಲಯದ ವಿಷಯವು ಸಮಂಜಸವಾಗಿದೆ. ಮಧ್ಯವರ್ತಿ ವಾಚನಾಲಯವು ಅತ್ಯಗತ್ಯವಾದುದು. ಆ ವಿಚಾರವಾಗಿ ಸ್ವಾಗತ ಸಂಘದವರು ಸೂಚಿಸಿರುವ ಯೋಜನೆಯನ್ನು ವಿಚಾರಣೆಗಿಟ್ಟುಕೊಂಡು ಮಹಾಸಭೆಯಿಂದ ನಿಯಾಮಕವಾಗುವ ಒಂದು ಸಮಿತಿಯ ಸೂಚನೆಯ ಮೇರೆಗೆ ಮಧ್ಯವರ್ತಿ ವಾಚನಾಲಯವು ಆದಷ್ಟು ಜಾಗ್ರತೆ ಏರ್ಪಡಬೇಕಾದುದು ಅವಶ್ಯಕ.

ಸ್ವಾಗತ ಸಂಘದವರು ತಿಳಿಸಿರುವ "ಗುರು–ವಿರಕ್ತರ ಕಲಹ ನಿವಾರಣೋಪಾಯ" ಎಂಬ ಎರಡನೆಯ ಯೋಜನೆಯು ಮಾತ್ರ ತುಂಬಾ ಅಸಮಂಜಸವಾಗಿದೆ. ಗುರು–ವಿರಕ್ತರ ಕಲಹವೆಂದು ಇವರು ಯಾವುದಕ್ಕೆ ಹೆಸರಿಟ್ಟಿದ್ದಾರೆಯೋ ತಿಳಿಯದು. ಯಾವ ಯಾವ ಗುರುಗಳಿಗೂ ವಿರಕ್ತರಿಗೂ ಯಾವ ಯಾವ ವಿಚಾರಗಳಲ್ಲಿ ಎಲ್ಲಿ ಕಲಹವಾಗಿದೆ? ಅದನ್ನು ಯಾರು ಯಾರ ಮುಂದಿಟ್ಟಿದ್ದಾರೆ? ಎಂದು ಗುರುವಿರಕ್ತರಲ್ಲಿ ಯಾರಾದರೂ ಕೇಳಿದರೆ ಇವರು ಯಾವ ಆಧಾರಗಳನ್ನು ತೋರಿಸುವರು?

ಸ್ವಾಗತಸಂಘದವರ ಈ ಯೋಜನೆಯಲ್ಲಿ ಸೂಚಿಸಿರುವ "ಮುದ್ದೆಗಳು" ವೀರಶೈವ ಮತತತ್ವಗಳಿಗೆ ಸಂಬಂಧಪಟ್ಟವುಗಳೇ ವಿನಾ ಕೇವಲ ಗುರುಗಳಿಗಾಗಲಿ ಅಥವಾ ವಿರಕ್ತರಿಗಾಗಲಿ ಸಂಬಂಧಿಸಿದವುಗಳಲ್ಲ. ಈ ಯೋಜನೆಯ ರೀತಿನೀತಿಯೂ ಸರಿಯಾಗಿಲ್ಲ. ಆದಕಾರಣ ಯಾವ ಜಗದ್ಗುರುಗಳೂ ಈ ಯೋಜನೆಯನ್ನು ಮಾನ್ಯ ಮಾಡಲಾರರು.

**ಯೋಜನೆಯು ಹೀಗಿರಬೇಕು.**

ಕಳೆದ ೨೦ ವರುಷಗಳಿಂದ ವೀರಶೈವ ಸಮಾಜದಲ್ಲಿ ಬಸವಾದಿ ಪ್ರಮಥರ ಕೆಲವು ತತ್ವಗಳನ್ನು ಅಲ್ಲಗಳೆಯುವವರು ಹೆಚ್ಚುತ್ತಿದ್ದಾರೆ. ಆದರಿಂದ ಸಮಾಜದಲ್ಲಿ ಎರಡು ಮೂರು ಪಂಗಡಗಳೇರ್ಪಟ್ಟು ಅನೈಕಮತ್ಯವುಂಟಾಗಿದೆ. ಇದು ನಿವಾರಣೆ ಹೊಂದಿ ಸಮಾಜವು ಮತವಿಚಾರಗಳಲ್ಲಿ ಏಕಮುಖವಾಗಿರುವುದು ಅಗತ್ಯ. ಹಾಗಾಗಬೇಕಾದರೆ ಮತಸಿದ್ಧಾಂತಗಳನ್ನು ಅಧಿಕಾರಯುಕ್ತವಾಗಿ ಪ್ರತಿಪಾದಿಸುವ ಗುರು ಜಂಗಮರಲ್ಲಿ ಮೊದಲು ಏಕಾಭಿಪ್ರಾಯವುಂಟಾಗಬೇಕಲ್ಲವೆ?

ಆದಕಾರಣ ಮಹಾಸಭೆಯಿಂದ ಮೂರು ಜನಗಳ ಒಂದು ವಿಚಾರಣಾ ಸಮಿತಿಯು ಏರ್ಪಡಬೇಕು. ಆ ಮೂವರೂ ವೀರಶೈವರೇ ಆಗಿದ್ದು ನ್ಯಾಯಶಾಖೆಯಲ್ಲಿ ಕೆಲಸ ಮಾಡಿದವರಿರಬೇಕು. ವೀರಶೈವರಲ್ಲಿ ಈಗ ವಿವಾದಾಸ್ಪದವಾದ ಮತ ತತ್ವಗಳ ಒಂದು ಪಟ್ಟಿಯನ್ನು ಮಾಡಿ ಅವುಗಳ ವಿಷಯದಲ್ಲಿ ಶೂನ್ಯ ಸಿಂಹಾಸನಾಧಿಪತಿಗಳ, ಪಂಚ ಸಿಂಹಾಸನಾಧಿಪತಿಗಳ, ವೀರಶೈವ ಮತ ತತ್ವಗಳನ್ನು ಅರಿತ ಸ್ವಮತೀಯ ಮತ್ತು ಪರಮತೀಯ ಕೆಲವು ವಿದ್ವಾಂಸರ, ಅಭಿಪ್ರಾಯಗಳನ್ನು ಆ ಸಮಿತಿಯವರು ಪ್ರತ್ಯಕ್ಷವಾಗಿ ವಿಚಾರಿಸಿ ಕ್ರಮವಾಗಿ ಒಂದು ವರದಿಯನ್ನು ಸಿದ್ಧಗೊಳಿಸಿ ಮಹಾಸಭೆಗೆ ಒಪ್ಪಿಸಬೇಕು.

ಆ ವರದಿಯನ್ನು ಮಹಾಸಭೆಯವರು ಪ್ರಕಟಿಸಿ ಭಿನ್ನಾಭಿಪ್ರಾಯಗಳನ್ನು ನಿವಾರಣೆಮಾಡಲು ಮಹಾಜನರ ಸೂಚನೆಯ ಪ್ರಕಾರ ಯುಕ್ತಕಂಡ ಪ್ರಯತ್ನವನ್ನು ಆ ಮೇಲೆ ಮಾಡುವುದೇ ವಿಹಿತವಾಗಿದೆ. ಈಗ ವಿವಾದಾಸ್ಪದವಾದ ವಿಷಯಗಳಲ್ಲಿ ಯಾರ ಯಾರ ಅಭಿಪ್ರಾಯ ಹೇಗೆ ಹೇಗೆ ಇದೆಯೆಂಬುದು ಅವರವರ ವಾಙ್ಮಾಲದಿಂದಲೇ ಮೊದಲು ಸ್ಪಷ್ಟ ಗೊತ್ತಾಗಬೇಕು. ಅದಕ್ಕೋಸ್ಕರ ಈ ಸಾರೆಯ ಹುಬ್ಬಳ್ಳಿ ಮಹಾ ಸಭೆಯಲ್ಲಿ ಇದನ್ನು ಗೊತ್ತುಪಡಿಸುವುದಕ್ಕೋಸ್ಕರವಾಗಿಯೇ ಒಂದು ವಿಚಾರಣಾ ಸಮಿತಿಯನ್ನು ನಿಯಮಿಸಬೇಕು. ಈಗ ಸಮಾಜದಲ್ಲುಂಟಾಗಿರುವ ಮತ ಸಂಬಂಧವಾದ ಅನೈಕಮತ್ಯವನ್ನು ನಿವಾರಣೆಮಾಡಲು ಇದೇ ಸಕ್ರಮವಾದ ಪ್ರಯತ್ನವೆಂದು ನಮಗೆ ತೋರುತ್ತದೆ.

---

## ವಿಚಾರಣಾ ಸಮಿತಿ.

ಕಳೆದ ೭ ನೆಯ ತಾರೀಖಿನ ದಿವಸ ಮುಂಬೈಯಲ್ಲಿ ಗುಂಡು ಹಾರಿಸಿದ್ದರ ನ್ಯಾಯಾನ್ಯಾಯಗಳನ್ನು ನಿರ್ಣಯಿಸಲು ಮುಂಬೈ ಹೈಕೋರ್ಟಿನ ನ್ಯಾಯಮೂರ್ತಿ ಕಾನಿಯಾ ಇವರ ಅಧ್ಯಕ್ಷತೆಯಲ್ಲಿ ಒಂದು ವಿಚಾರಣಾಸಮಿತಿಯು ಏರ್ಪಟ್ಟಿದೆ.

ಇದರಲ್ಲಿ ಬ್ಯಾ. ತಾರಾಪೋರವಾಲಾ (ಹೈಕೋರ್ಟಿನ ಹಿಂದಿನ ನ್ಯಾಯಾಧೀಶರು) ಬ್ಯಾ. ಭಗಲಾ, ಮಿ. ಜೈನಾನಿ ಈ ಪ್ರಕಾರ ಮೂರು ಜನರಿದ್ದಾರೆ. ಮುಂಬೈ ಸರಕಾರವು ಈ ಪ್ರಕಾರ ವಿಚಾರಣಾ ಸಮಿತಿಯನ್ನು ಏರ್ಪಡಿಸಿದುದು ಬಹು ಒಳ್ಳೆಯದಾಯಿತು.

## ಯಹುದಿಯರ ಸಂಹಾರ!

ಜರ್ಮನ್ ರಾಯಭಾರಿ ಫಾನ್‌ರಾಥ ಎಂಬುವವರನ್ನು ಒಬ್ಬ ಯಹುದಿಯು ಕೊಲೆಮಾಡಿದ್ದರಿಂದ ಜರ್ಮನ್ ರಾಷ್ಟ್ರವೇ ಯಹುದಿಗಳ ಸಂಹಾರಕ್ಕೆ ಸಿದ್ಧವಾಗಿದೆ. ಜರ್ಮನ್ ಮತ್ತು ಆಸ್ಟ್ರಿಯಾಗಳಲ್ಲಿಯ ಯಹುದಿಗಳನ್ನು ಭಯಂಕರ ಹಿಂಸೆಗೊಳಿಸುತ್ತಿದ್ದಾರೆ. ಅವರ ದೇವಾಲಯಗಳನ್ನು ಸುಟ್ಟು ಅಂಗಡಿಗಳ ಸುಲಿಗೆ ನಡೆಸಿದ್ದಾರೆ. ವ್ಹಿಯನ್ನಾ ಒಂದೇ ಪಟ್ಟಣದಲ್ಲಿ ಐದು ಸಾವಿರ ಯಹುದಿಗಳನ್ನು ಕೈಸೆರೆ ಹಿಡಿದಿದ್ದಾರೆ.

## ಹಿಂದುಗಳ ಶೋಚನೀಯ ಸ್ಥಿತಿ.

ಹಿಂದುಸ್ಥಾನದ ಗಡಿನಾಡಿನಲ್ಲಿ ಹಿಂದುಗಳ ಮೇಲೆ ಅನೇಕ ಅತ್ಯಾಚಾರಗಳು ನಡೆಯುತ್ತಲೇ ಇವೆಯಷ್ಟೆ. ಅಲ್ಲಿ ಕಾಂಗ್ರೆಸ್ ಸರಕಾರವು ಸ್ಥಾಪನೆಯಾದನಂತರ ಈ ದೊಂಬಿಯು ಮತ್ತೂ ಹೆಚ್ಚಿದೆಯೆಂದು ಗಡಿನಾಡಿನ ಗಾಂಧಿಗಳೇ ಹೇಳಿದ್ದಾರೆ. ಗಾಂಧೀಜಿಯವರಿಗೂ ಇದು ಮಾನ್ಯವಾಗಿದೆ.

ಜುಲೈ ೩೩ ನೆಯ ತಾರೀಖಿನ ದಿನ ಬನ್ನೂ ಪಟ್ಟಣದ ಮೇಲೆ ೨೦೦ ಜನ ದೊಂಬೆಗಾರರು ವಾದ್ಯ ಬಾರಿಸುತ್ತ ಬಂದರು. ಈ ದೊಂಬೆಗಾರರ ಸಮಾಚಾರವನ್ನು ಶ್ರೀ. ಬಿಹಾರಿಲಾಲ ಮತ್ತು ಶ್ರೀ. ಭಗತರಾಮ ಇವರು ಮುಖ್ಯ ಮಂತ್ರಿಗಳಿಗೆ ಮುಂಚೆಯೇ ತಿಳಿಸಿದ್ದರು. ಸೈನ್ಯದ ಮೇಲೆ ನನ್ನ ಅಧಿಕಾರವಿಲ್ಲವೆಂದು ಮುಖ್ಯ ಮಂತ್ರಿಗಳು ಕೈಚೆಲ್ಲಿಕೊಂಡು ಕುಳಿತರು!

## ಸಂತಾನ ನಿಯಂತ್ರಣ ಚರ್ಚೆ.

ಮಕ್ಕಳ ಹೆಂಗೆಯನ್ನು ಕೃತ್ರಿಮ ರೀತಿಯಿಂದ ತಡೆಯಬೇಕೆಂಬ ವಿಚಾರವಾಗಿ ಮುಂಬೈ ಅಸೆಂಬ್ಲಿಯಲ್ಲಿ ಒಂದು ಗೊತ್ತುವಳಿ ಬಂದಿದ್ದಿತು. ಇದನ್ನು ಡಾ. ಗಿಲ್ಡರವರು ವಿರೋಧಿಸುವಾಗ ಹೀಗೆ ಹೇಳಿದರು—

“ಈ ದೇಶದಲ್ಲಿ ಸಾಮಾನ್ಯವಾಗಿ ಒಂದು ಕುಟುಂಬದಲ್ಲಿ ಳ ಮಕ್ಕಳು ಜನಿಸುತ್ತಿದ್ದಾರೆಂದು ಸಂಖ್ಯೆಯಿಂದ ಗೊತ್ತಾಗುತ್ತದೆ. ಇದನ್ನು ಕೂಡಾ ಕೃತ್ರಿಮವಾಗಿ ತಡೆಯಬೇಕೆ? ನಮ್ಮ ದೇಶದಲ್ಲಿ ಜನಸಂಖ್ಯೆ ಹೆಚ್ಚಾಗಿ ವಿಪತ್ತೇನೂ ಉಂಟಾಗಿಲ್ಲ. ಆಹಾರ ಸಾಮಗ್ರಿಗಳೆಲ್ಲಾ ಜನಸಂಖ್ಯೆಗೆ ಬೇಕಾಗಿರುವುದಕ್ಕಿಂತ ಹೆಚ್ಚಾಗಿಯೇ ಬೆಳೆಯಲ್ಪಡುತ್ತವೆ. ಎಲ್ಲ ಮಕ್ಕಳಿಗೂ ಶಕ್ತಿವರ್ಧಕ ಆಹಾರವು ಮಾತ್ರ ಬೇಕಾಗಿರುವಷ್ಟು ದೊರೆಯುತ್ತಾ ಇಲ್ಲ.”

ಮಂತ್ರಿಗಳಾದ ಶ್ರೀ. ದೇಸಾಯಿಯವರೂ ಈ ಗೊತ್ತುವಳಿಯನ್ನು ವಿರೋಧಿಸಿದರು. ಕೃತ್ರಿಮವಾಗಿ ಸಂತಾನವನ್ನು ತಡೆಯಲು ಪ್ರಾರಂಭಿಸಿದರೆ ಅದೊಂದು ಚಟವಾಗಿಯೇ ಪರಿಣಮಿಸಿ ರಾಷ್ಟ್ರಕ್ಕೆ ಅನರ್ಥವೇ ಸಂಭವಿಸುವುದು. ಆತ್ಮನಿಗ್ರಹದಿಂದಲೇ ಸಂತಾನನಿರೋಧಮಾಡುವುದು ಕ್ಷೇಮಕರ. ಎಂದು ಶ್ರೀ. ದೇಸಾಯಿಯವರು ತಮ್ಮ ಭಾಷಣದಲ್ಲಿ ಸೂಚಿಸಿದರು.

ಶ್ರೀ. ಜಮುನಾದಾಸರವರು ತಮ್ಮ ಭಾಷಣದಲ್ಲಿ ಆತ್ಮನಿಗ್ರಹವೇನೋ ಶ್ರೇಯಸ್ಕರವಾಗಿದ್ದರೂ ಜನಸಾಮಾನ್ಯಕ್ಕೆ ಅದು ಸಾಧ್ಯವಿಲ್ಲದ್ದರಿಂದ ಕೃತ್ರಿಮೋಪಾಯವು ಅಗತ್ಯವೆಂದು ಆರ್ಥಿಕದೃಷ್ಟಿಯಿಂದ ಗೊತ್ತುವಳಿಯನ್ನು ಸಮರ್ಥಿಸಿದರು.

ಈ ಗೊತ್ತುವಳಿಗೆ ೧೦ ಮತಗಳು ಮಾತ್ರವೇ ದೊರೆತು ೪೯ ಮತಗಳು ವಿರೋಧವನ್ನು ಸೂಚಿಸಿದ್ದರಿಂದ ಅದು ಬಿದ್ದುಹೋಯಿತು. ಅಸೆಂಬ್ಲಿಯಲ್ಲಿ ಈ ಗೊತ್ತುವಳಿಯು ತೀರ್ಮಾನವಾಗದಿದ್ದರೂ ಈ ವಿಚಾರಸರಣಿಯು ರಾಷ್ಟ್ರದಲ್ಲಿ ಬೆಳೆಯುತ್ತಾ ಇದೆಯೆಂದೇ ತೋರುತ್ತದೆ. ಅನೇಕ ಮಹಿಳಾಪರಿಷತ್ತುಗಳಲ್ಲಿಯೂ ಈ ವಿಧವಾದ ವಿಚಾರವು ಇತ್ತೀಚಿಗೆ ಪ್ರಕಟವಾಗುತ್ತಾ ಇದೆ. ಪಾಶ್ಚಾತ್ಯ ಶಿಕ್ಷಣ ಪ್ರಸಾರದಿಂದಾದ ಕೇಡುಗಳಲ್ಲಿ ಇದೂ ಒಂದು.

## ಕಾಂಗ್ರೆಸ್ಸಿನ ಬಲ.

ಮಹರಾಷ್ಟ್ರ ಭಾಗದ ಮುನಸಿಪಾಲ್ಟಿ ಚುನಾವಣೆಯಲ್ಲಿ ಕಾಂಗ್ರೆಸ್ಸಿಗೆ ಎಷ್ಟು ಬಲವಿದೆಯೆಂಬುದು ಈ ಕೆಳಗಿನ ಸಂಖ್ಯೆಯಿಂದ ಗೊತ್ತಾಗುವುದು—

| ಸ್ಥಳ. | ಒಟ್ಟುಸಂಖ್ಯೆ. | ಆರಿಸಿ ಬಂದವರು |
|---|---|---|
| ಪುಣೆ | ೬೦ | ೩೨ |
| ವಾಯಿ | ೧೫ | ೮ |
| ಇಸಲಾಮಪುರ | ೧೫ | ೮ |
| ಸೊಲ್ಲಾಪುರ | ೫೨ | ೨೫ |
| ಠಾಣೆ | ೩೯ | ೧೦ |
| ಸಾತಾರಾ | ೩೩ | ೧೦ |
| ಕಲ್ಯಾಣ | ೨೪ | ೮ |
| ಪನವೇಲ | ೧೭ | ೭ |
| ಕರ್ಹಾಡ | ೧೭ | ೫ |
| ತಾಸಗಾಂವ | ೧೫ | ೫ |
| ಸಾವಡೆ | ೧೬ | ೩ |

ಕರ್ನಾಟಕದಲ್ಲಿ ಈ ವರೆಗಾದ ಧಾರವಾಡ, ಹಾವೇರಿ, ಬಾಗಲಕೋಟೆ, ಗುಳೇದಗುಡ್ಡ ಈ ಮುನಸಿಪಾಲ್ಟಿಗಳಲ್ಲಿ ಕಾಂಗ್ರೆಸ್ಸಿಗೆ ಬಹುಮತವಿಲ್ಲ. ಇಳಕಲ್ಲ ಸ್ಥಿತಿಯು ಬಹುಮತವಿದ್ದರೂ ಅದು ಕಲಂಕವನ್ನುಂಟುಮಾಡುವುದೇ ಆಗಿದೆ.

## ಹಿಂದುಸ್ಥಾನಕ್ಕೆ ಸ್ವರಾಜ್ಯ ಕೊಡಿರಿ.

ಹಿಂದುಸ್ಥಾನಕ್ಕೆ ಸ್ವಯಂ ನಿರ್ಣಯದ ತತ್ವದಂತೆ ಸ್ವರಾಜ್ಯವನ್ನು ಕೊಟ್ಟು ಅವರ ಸ್ನೇಹ ಸಂಪಾದಿಸಬೇಕೇ ವಿನಾ ಅಲ್ಲಿ ದಬ್ಬಾಳಿಕೆ ನಡೆಸಬೇಡಿರೆಂದು ಬ್ರಿಟಿಶ್ ಪಾರ್ಲಿಮೆಂಟಿನಲ್ಲಿ ಕೂಲಿಕಾರರ ಪಕ್ಷದ ಸರ್. ಕೃಪ್ಸರವರು ಹೇಳಿದರು.

ಜಾರ್ಜ ಪ್ರಭುಗಳು ತಮ್ಮ ಭಾಷಣದಲ್ಲಿ ಹಿಂದುಸ್ಥಾನದ ವಿಷಯವನ್ನೇ ಎತ್ತಿಕೊಂಡಿಲ್ಲ. ಇದು ಸರಿಯಲ್ಲ. ಹಿಂದಿ ಜನರನ್ನು ನಮ್ಮ ವೈರಿಗಳನ್ನಾಗಿ ಮಾಡಿಕೊಳ್ಳಬಾರದು. ನಮಗೆ ವಿಪತ್ತು ಬಂದಾಗ ಅವರ ಸಹಾಯ ಬೇಕಾಗುವುದು. ಆದಕ್ಕಾಗಿ ಸರಕಾರವು ತನ್ನ ಈಗಿನ ಧೋರಣವನ್ನು ತೆಗೆದು ಹಾಕಿ ಹಿಂದಿಗರನ್ನು ಶಾಂತಗೊಳಿಸಬೇಕೆಂದೂ ಸರ್. ಕೃಪ್ಸರವರು ತಮ್ಮ ಭಾಷಣದಲ್ಲಿ ಹೇಳಿದರು.

## ಕೆಮಾಲ ಪಾಶಾರ ದಿನವನ್ನಾಚರಿಸಿರಿ.

ಈಗಿನ ತುರ್ಕಸ್ಥಾನದ ಜನಕರಾದ ಕೆಮಾಲ ಪಾಶಾರವರು ನಿಧನಹೊಂದಿದ್ದರಿಂದ ಅವರ ದಿನವನ್ನು ಹಿಂದುಸ್ಥಾನದಲ್ಲಿರುವ ಎಲ್ಲ ಮುಸ್ಲಿಂಲೀಗಿನವರೂ ಇದೇ ತಾ. ೧೮ ನೆಯ ಶುಕ್ರವಾರ ದಿವಸ ಆಚರಿಸಬೇಕೆಂದು ಮುಸ್ಲಿಂಲೀಗಿನ ಅಧ್ಯಕ್ಷರಾದ ಬ್ಯಾ. ಜಿನ್ನಾರವರು ಸೂಚಿಸಿದ್ದಾರೆ.

## ರಾಷ್ಟ್ರಾಧ್ಯಕ್ಷರ ವಿಜ್ಞಾಪನೆ.

ತುರ್ಕಸ್ಥಾನದ ಸರ್ವಾಧಿಕಾರಿಗಳಾಗಿದ್ದ ಕೆಮಾಲ ಪಾಶಾರವರು ಪೈಗಂಬರವಾಸಿಗಳಾದ ಕಾರಣ ಹಿಂದುಸ್ಥಾನವೇ ಶೋಕಿಸುತ್ತಿದೆಯಷ್ಟೆ. ಹುಬ್ಬಳ್ಳಿ, ಬೆಳಗಾವ ಮೊದಲಾದ ಕರ್ನಾಟಕದ ಅನೇಕ ಸ್ಥಳಗಳಲ್ಲಿಯೂ ಹರತಾಳವು ಆಚರಿಸಲ್ಪಟ್ಟಿತು.

ರಾಷ್ಟ್ರಾಧ್ಯಕ್ಷರಾದ ಶ್ರೀ. ಸುಭಾಷಚಂದ್ರ ಬೋಸರವರು ತಾ. ೧೯ ನೆಯ ದಿನ ಕೆಮಾಲ ಪಾಶಾರವರ ದಿನವೆಂದು ರಾಷ್ಟ್ರವು ಆಚರಿಸಬೇಕಾಗಿ ವಿಜ್ಞಾಪಿಸಿಕೊಂಡಿದ್ದಾರೆ.

## ಮುಸೋಲಿನಿಯ ಕಪಟ!

ಹಿಟಲರನು ಹೊತ್ತಿಗೆ ತಕ್ಕಂತೆ ಬಣ್ಣ ಹಚ್ಚಿಕೊಳ್ಳುವಂತೆಯೇ ಇಟಲಿಯ ಮುಸೋಲಿನಿಯೂ ಬಹು ರೂಪಿಗಳಂತೆ ಕಾಲಕ್ಕೆ ತಕ್ಕ ವೇಷ ಹಾಕುವನು. ಸ್ಪೇನಿನಲ್ಲಿ ತನ್ನ ಎಲ್ಲ ಭಟರನ್ನೂ ಗುಪ್ತವಾಗಿಯೇ ಕಳಿಸಿ ಫ್ರಾಂಕೋನಿಗೆ ಬೆಂಬಲ ಕೊಟ್ಟಿದ್ದಾನೆಂದು ಸ್ಪೇನ್ ಸರಕಾರಕ್ಕೆ ಗೊತ್ತಾಗಿದೆ.

ಅಬಸೀನಿಯಾದಲ್ಲಿ ವಿಜಯ ಹೊಂದಿದ ಮಹಾ ಮಹಾ ಪರಾಕ್ರಮಶಾಲಿಗಳೂ ಸ್ಪೇನಕ್ಕೆ ಹೋಗಿದ್ದಾರಂತೆ. ಒಟ್ಟು ೯೦ ಸಾವಿರ ಜನರನ್ನು ಮುಸೋಲಿನಿಯು ದೊಂಬೆಗಾರರ ಕಡೆಗೆ ಕಳುಹಿಸಿದ್ದಾನೆಂದು ಸ್ಪೇನ್ ಸರಕಾರವು ಪ್ರಕಟಿಸಿದೆ.

—ಜಪಾನವು ಚೀನ ದೇಶವನ್ನು ದಿನೆ ದಿನೆ ಹೆಚ್ಚಾಗಿ ನುಂಗಲಾರಂಭಿಸಿದೆ. ಚೀನಕ್ಕೆ ಜಯ ದೊರೆಯಲಾರದು. ಅಬಸೀನಿಯಾ ಇಟಲಿಗೆ ಸೋತಂತೆ ಚೀನ ಜಪಾನಿಗೆ ಸೋಲುವುದೆಂದು ಕೆಲವರು ಊಹಿಸಿದ್ದಾರೆ.

# ಯುರೋಪದ ರಾಜಕೀಯ ಕಲಹಾಗ್ನಿ!

ಯುರೋಪಖಂಡದಲ್ಲಿ ಉಂಟಾಗಿರುವ ರಾಜಕೀಯ ಕಲಹಾಗ್ನಿಯು ಪೃಥ್ವಿಯನ್ನೇ ವ್ಯಾಪಿಸುವಂತೆ ತೋರುತ್ತದೆ. ಇಷ್ಟರಲ್ಲೇ ಅನೇಕ ರಾಷ್ಟ್ರಗಳು ಯುದ್ಧಾಗ್ನಿಗೆ ಆಹುತಿಕೊಡಲು ಮುಂದೆ ಬರುವ ಭೀಕರ ದೃಶ್ಯಗಳು ತೋರುತ್ತಲಿವೆ. ಮುಂದಿನ ವರುಷ ಯುರೋಪದಲ್ಲಿ ಯುದ್ಧಾಗ್ನಿ ಪ್ರಜ್ವಲಿಸುವಂತೆ ಕಾಣುತ್ತದೆ.

## ಹಿಟಲರನ ವಿರಾಟರೂಪ!

ಜರ್ಮನಿಯ ಸರ್ವಾಧಿಕಾರಿ ಹೆರ್. ಹಿಟ್ಲರರು ಮೊನ್ನೆ ತಮ್ಮ ಭಾಷಣದಲ್ಲಿ ಇಂಗ್ಲೆಂಡ್ ಮತ್ತು ಫ್ರಾನ್ಸ್‌ಗಳಿಗೆ ಎಚ್ಚರಿಕೆ ಕೊಟ್ಟರು. ಅನ್ಯಾಯವಾಗಿ ತೆಗೆದುಕೊಂಡಿರುವ ನಮ್ಮ ವಸಾಹತುಗಳನ್ನೆಲ್ಲಾ ನಮಗೆ ಬಿಟ್ಟುಕೊಡಬೇಕು. ನ್ಯಾಯವಾದ ರೀತಿಯಲ್ಲಿ ಒಪ್ಪಂದದ ಮೂಲಕ ಹೀಗೆ ಬಿಟ್ಟುಕೊಡದಿದ್ದರೆ ನಾನು ನನ್ನ ಭುಜಬಲದಿಂದ ಅವುಗಳನ್ನು ತೆಗೆದುಕೊಳ್ಳಬೇಕಾಗಬಹುದೆಂದು ಅವರು ಸೂಚಿಸಿದರು.

೧೯೩೯ ರಲ್ಲಿ ಹಂಗೇರಿ ಮತ್ತು ಪೋಲಂಡಗಳನ್ನು ಹಿಟಲರರು ತಮ್ಮ ಅಧೀನ ಮಾಡಿಕೊಳ್ಳುವರು. ೧೯೪೦ ರಲ್ಲಿ ರೂಮಾನಿಯಾ, ಬಲ್ಗೇರಿಯಾ ಜೋಗೋಸ್ಲಾವ್ಹಿಯಾ ರಾಷ್ಟ್ರಗಳನ್ನು ಜರ್ಮನಿಗೆ ಸೇರಿಸಿಕೊಳ್ಳುವರು. ೧೯೪೧ ರಲ್ಲಿ ಸ್ವಿತ್ಸರ್ಲಂಡ್, ಬೆಲ್ಜಿಂ, ಹಾಲಂಡ್, ಡೆನ್ಮಾರ್ಕ ದೇಶಗಳನ್ನು ಜರ್ಮನಿಯು ಆಕ್ರಮಿಸಿಕೊಂಡು ೧೯೪೩ ರಲ್ಲಿ ರಶಿಯಾ ಮತ್ತು ಫ್ರಾನ್ಸಗಳ ಗಡಿನಾಡಿನ ವರೆಗೆ ಮಧ್ಯಯುರೋಪದಲ್ಲಿ ತನ್ನ ವಿರಾಟ ರೂಪವನ್ನು ಪ್ರದರ್ಶಿಸುವ ಮಹತ್ವಾಕಾಂಕ್ಷೆಯು ಹಿಟಲರನಲ್ಲಿದೆಯೆಂದು ಕೆಲವರ ಊಹೆ.

## ರಶಿಯಾ ದೇಶದ ಆಹ್ವಾನ.

ರಶಿಯಾ ದೇಶದ ಸೊವ್ಹಿಯಟ್ ಸರಕಾರವು ಮೊನ್ನೆ ತನ್ನ ೨೦ ನೆಯ ವಾರ್ಷಿಕೋತ್ಸವದ ಕಾಲಕ್ಕೆ ಪ್ರಪಂಚಕ್ಕೇನೇ ಆಹ್ವಾನ ಕೊಟ್ಟಿತು. ಸೊವ್ಹಿಯಟ್ ಸರಕಾರವು ಸಕಲ ಯುದ್ಧಸನ್ನಾಹಗಳಿಂದ ಸಿದ್ಧವಾಗಿದೆ. ಅದು ತನ್ನನ್ನು ಯಾರೂ ಕೆಟ್ಟದೃಷ್ಟಿಯಿಂದ ನೋಡಲು ಅವಕಾಶ ಕೊಡುವುದಿಲ್ಲ. ಇದರ ಬಲದ ವಿಷಯದಲ್ಲಿ ಯಾರಿಗಾದರೂ ಸಂಶಯವಿದ್ದರೆ ಇದನ್ನು ಒಮ್ಮೆ ಕೆಣಕಿ ನೋಡಲೆಂದು ಸೊವ್ಹಿಯಟ್ ಸರಕಾರದ ಮುಖ್ಯ ಮಂತ್ರಿಗಳು ಸಾರಿ ಹೇಳಿದರು.

## ಇಂಗ್ಲೆಂಡಿನ ಸಿದ್ಧತೆ.

ಬ್ರಿಟಿಶ್ ಸರಕಾರವು ಮುಂದರಿದು ಯುದ್ಧದಲ್ಲಿ ಸೇರಲು ಸಿದ್ಧತೆಗಳಿರಲಿಲ್ಲ. ಅಂತೆಯೇ ಅದು ಅನೇಕ ಸಾರೆ ಜರ್ಮನಿ, ಇಟಲಿಗಳ ಅನ್ಯಾಯಗಳನ್ನು ಸಹಿಸಿಕೊಂಡಿತು. ಮಿ. ಚೆಂಬರ್ಲೆನ್ನರು ಜರ್ಮನಿಯ ಆಕ್ರಮಣ ಪ್ರವೃತ್ತಿಗಳಿಗೆಸಮ್ಮತಿಸಬೇಕಾಯಿತು ರಶಿಯಾ ಸೊವ್ಹಿಯಟ್ ಸರಕಾರವೂ ಯುದ್ಧಸನ್ನಾಹಗಳನ್ನು ಇಟ್ಟುಕೊಂಡಿಲ್ಲವಾದುದರಿಂದ ಈಗ ಜರ್ಮನಿಯ ಕಾಲು ಕಟ್ಟಲು ಹೋಗಬಾರದಾಗಿಯೇ ಚೆಂಬರ್ಲೆನ್ ಮೊದಲಾದ ಮುತ್ಸದ್ದಿಗಳು ಹೇಳಿ ಮ್ಯುನಿಚ್ ಒಪ್ಪಂದವನ್ನು ಮಾಡಿಕೊಂಡು ಹಿಟಲರನ ಬಲವನ್ನು ಹೆಚ್ಚಿಸಿದರು.

ಇಂಗ್ಲೆಂಡಿನ ಈ ತಪ್ಪು ತಿಳುವಳಿಕೆಯನ್ನು ದೂರಮಾಡಲಿಕ್ಕಾಗಿಯೇ 'ಸೊವ್ಹಿಯಟ್' ಸರಕಾರವು ಮೊನ್ನೆ ಆ ಪ್ರಕಾರ ಪ್ರಪಂಚಕ್ಕೇನೇ ಆಹ್ವಾನಕೊಟ್ಟಿರಬೇಕು. ಮಿ. ಚೆಂಬರ್ಲೆನ್‌ರ ಮೊದಲಿನ ಧೋರಣವು ಈಗ ಉಳಿದಿಲ್ಲ. ಮುಂದಿನ ವರುಷ ಅವರು ಮಂತ್ರಿಪದದಿಂದ ನಿವೃತ್ತರಾಗುವ ಪ್ರಸಂಗ ಬಂದೇಬರುವುದು. ಬ್ರಿಟಿಶ್ ಸರಕಾರವು ತನ್ನ ಸಾಮ್ರಾಜ್ಯದ ಎಲ್ಲ ಮೂಲೆಗಳಲ್ಲಿಯೂ ಯುದ್ಧಸನ್ನಾಹವನ್ನೇ ನಡೆಸಿದೆ. ಮುಂದಿನ ವರುಷ ಅದು ಪ್ರಬಲವಾದ ಯುದ್ಧೋಪಕರಣಗಳಿಂದ ಪ್ರಕಾಶಿಸುವದು. ಆಗ ಜಗತ್ತಿನ ಯುದ್ಧವು ಅಪರಿಹಾರ್ಯವಾಗಿಯೇ ಪರಿಣಮಿಸುವುದು.

## ಪ್ಯಾಲಿಸ್ಟಾಯಿನ್‌ದಲ್ಲಿ ಒಳಸಂಚು.

ಪ್ಯಾಲಿಸ್ಟಾಯಿನ್‌ದಲ್ಲಿ ಅರಬರ ದೊಂಬಿ ಚಿಕ್ಕದಾಗಿತೋರಿದರೂ ಅದರ ಸ್ವರೂಪವು ಭಯಂಕರ ವಾದುದು. ಇಟಲಿ ಮತ್ತು ಜರ್ಮನಿಗಳು ಅರಬರಿಗೆ ಹಣದಿಂದಲೂ ಶಸ್ತ್ರಾಸ್ತ್ರಗಳಿಂದಲೂ ಸಹಾಯಮಾಡುತ್ತಲಿವೆಯೆಂದು ಗೊತ್ತಾಗಿದೆ. ಅಂತೆಯೇ ಅಲ್ಲಿನ ದೊಂಬಿಯು ಅಂತರಾಷ್ಟ್ರೀಯವಾದುದು. ನಾನಾ ಮುಖಗಳಿಂದ ಮುಸಲ್ಮಾನರಲ್ಲಿ ಕೋಪೋದ್ರೇಕಗೊಳಿಸುವ ಪ್ರಯತ್ನಗಳು ನಡೆದಿವೆ.

## ಜಪಾನಿನ ಆಕ್ರಮಣ.

ಜಪಾನ ರಾಷ್ಟ್ರವು ಯುರೋಪದಲ್ಲಿ ನಡೆದ ಅಂತಃಕಲಹದ ಉಪಯೋಗವನ್ನು ತನ್ನ ಆಕ್ರಮಣಕ್ಕೆ ಅನುಕೂಲ ಪಡಿಸಿಕೊಂಡಿತು. ಇದೇ ತನಗೆ ಅನುಕೂಲ ಸಮಯವೆಂದು ಚೀನರಾಷ್ಟ್ರವನ್ನು ನುಂಗಲಾರಂಭಿಸಿದೆ. ರಾಷ್ಟ್ರಸಂಘವು ತನ್ನ ಮೇಲೆ ಸಲ್ಲದ ನಡವಳಿಕೆನಡೆಯಿಸಿದರೆ ತಾನು ಸಹಿಸುವುದಿಲ್ಲವಾಗಿ ಮೊನ್ನೆ ಎಚ್ಚರಿಕೆ ಕೊಟ್ಟಿದೆ. ಜಪಾನವು ಚೀನವನ್ನು ಹಣ್ಣಿಗೆ ತಂದಿದೆ. ಅದು ಸಿಂಗಾಪುರದ ವರೆಗೆ ತನ್ನ ವರ್ಚಸ್ಸನ್ನು ಈಗ ಸ್ಥಾಪಿಸಿದೆ. ಇದರಿಂದ ಬ್ರಿಟಿಶ್ ಸರಕಾರಕ್ಕೆ ಜಪಾನಿನ ಜಳತಾಕುವುದು. ಹಿಂದುಸ್ಥಾನದಮೇಲೆ ಜಪಾನಿನ ಆಕ್ರಮಣವು ಸಂಭವಿಸಿದರೂ ಸಂಭವಿಸಬಹುದು.

## ಅಮೇರಿಕೆಯ ಸಿದ್ಧತೆ.

ಜಪಾನದ ಆಕ್ರಮಣವು ರಶಿಯಾಕ್ಕೆ ಚಿಂತೆಯನ್ನುಂಟುಮಾಡಿದೆ. ಜರ್ಮನಿಯು ಜಪಾನಿನ ಕಡೆಗೆ ತಿರುಗುವುದು. ರಶಿಯಾ ಅಮೇರಿಕೆಗಳ ಸಹಾಯವು ಇಂಗ್ಲೆಂಡಿಗೆ ಅಗತ್ಯವಿದೆ. ಆದುದರಿಂದ ಮುಂದಿನ ಜಗದ್ವ್ಯಾಪಿ ಯುದ್ಧದಲ್ಲಿ ರಶಿಯಾ, ಫ್ರಾನ್ಸ್, ಇಂಗ್ಲೆಂಡ್, ಅಮೇರಿಕೆ ಒಂದಾಗುವವು. ಅಂತೂ ಯುರೋಪ, ಏಶಿಯಾ, ಅಮೇರಿಕಾ ಮೂರೂ ಖಂಡಗಳಲ್ಲಿ ಯುದ್ಧಾಗ್ನಿಯು ಪ್ರಜ್ವಲಗೊಂಡು ಮಹದನರ್ಥವನ್ನೇ ಉಂಟುಮಾಡುವುದೆಂದು ಈಗಿನ ಯುರೋಪದ ಕಲಹಾಗ್ನಿಯ ಕಿಡಿಗಳು ಸೂಚಿಸುತ್ತಲಿವೆ.

---

## ಪ್ಯಾಲಿಸ್ಟಾಯಿನ್ ವಿಭಾಗಿಸಕೂಡದು.

ಪ್ಯಾಲಿಸ್ಟಾಯಿನ್‌ದಲ್ಲಿ ಅರಬರಿಗೂ ಯಹುದಿಗಳಿಗೂ ನಡೆದ ಹೋರಾಟವನ್ನು ಶಾಂತಗೊಳಿಸುವ ಉಪಾಯವನ್ನು ಕಂಡುಹಿಡಿಯಲು ಬ್ರಿಟಿಶ್ ಸರಕಾರವು ಮಂಡಲಾಕಾರ ಪರಿಷತ್ತನ್ನು ಕೂಡಿಸಿ ಅರಬ ಮತ್ತು ಯಹುದಿ ಪ್ರತಿನಿಧಿಗಳನ್ನು ಕರೆಯಿಸಿ ಅವರ ಸಲಹೆ ಕೇಳಬೇಕೆಂದು ನಿರ್ಧರಿಸಿ ಆ ಪ್ರಕಾರ ಪ್ರಕಟಿಸಿದೆ.

ಈ ಮಂಡಲಾಕಾರ ಪರಿಷತ್ತಿಗೆ ಅರಬರು ಬಹಿಷ್ಕಾರಹಾಕಬೇಕೆಂದು ಕೆಲವು ಅರಬ ಪ್ರತಿನಿಧಿಗಳು ಸೂಚಿಸಿದ್ದಾರೆ.

# ಮುಂಬೈಯಲ್ಲಿ ಮೂರು ಸಾರೆ ಗುಂಡು ಹಾರಿಸಿದರು!

## ೭೫ ಜನರಿಗೆ ಗಾಯ. ಒಬ್ಬನ ಮರಣ.

## ಒಂದುಲಕ್ಷ ಕೂಲಿಕಾರರ ಕಟ್ಟು!

ಮುಂಬೈಅಸೆಂಬ್ಲಿಯಲ್ಲಿ ಬಹು ವಿವಾದಕ್ಕೆ ಆಸ್ಪದವಾದ ಔದ್ಯೋಗಿಕ ಕಲಹನಿವಾರಣೆಯ ಗೊತ್ತುವಳಿಯು ಕೊನೆಗೆ ತೀರ್ಮಾನವನ್ನು ಹೊಂದಿತಷ್ಟೆ. ಅದು ಕೂಲಿಕಾರರ ಸ್ವಾತಂತ್ರ್ಯಕ್ಕೂ ಉನ್ನತಿಗೂ ವಿಘಾತಕವಾದುದೆಂದು ಕೂಲಿಕಾರ ಪ್ರಮುಖರು ಸಾರುತ್ತಿದ್ದಾರೆ. ಕಾಂಗ್ರೆಸ್ ಮಂತ್ರಿಮಂಡಲವಾದರೋ ಕೂಲಿಕಾರರ ಹಿತಕ್ಕಾಗಿಯೇ ಈ ಶಾಸನವನ್ನು ಮಾಡಿದ್ದಾಗಿದೆಯೆಂದು ಪ್ರತಿಪಾದಿಸುತ್ತಿದ್ದಾರೆ. ಹೀಗೆ ಈ ಶಾಸನದ ವಿಷಯದಲ್ಲಿ ಸಂಪೂರ್ಣ ಭಿನ್ನಾಭಿಪ್ರಾಯವುಂಟಾಗಿ ಕೂಲಿಕಾರರು ತಮ್ಮ ನಿಷೇಧವನ್ನು ವ್ಯಕ್ತಗೊಳಿಸಲು ಕಳೆದ ೭ ನೆಯ ತಾರೀಖಿನ ದಿವಸ ತಾವು ಕೆಲಸಕ್ಕೆ ಹೋಗಕೂಡದೆಂದು ಕಟ್ಟುಮಾಡಿಕೊಂಡಿದ್ದರು.

ಮುಂಬೈಯಲ್ಲಿ ಆ ದಿನ ಈ ಕೂಲಿಕಾರರ ಕಟ್ಟು ಬಹು ಪ್ರಚಂಡವಾಗಿ ಜರುಗಿತು. ಅದರಲ್ಲಿ ಸಾಧಾರಣ ಒಂದು ಲಕ್ಷ ಕೂಲಿಕಾರರು ಸೇರಿದ್ದರು. ಕೂಲಿಕಾರರ ಪ್ರಮುಖರಾದ ಬ್ಯಾ. ಜಮನಾದಾಸ ಡಾ. ಆಂಬೇಡಕರ್ ಮೊದಲಾದವರು ಕಟ್ಟು ಶಾಂತಿಯುಕ್ತವಾಗಿ ಜರುಗಬೇಕೆಂದು ಕೂಲಿಕಾರರಿಗೆ ಉಪದೇಶ ಮಾಡುತ್ತಾ ಪಟ್ಟಣದಲ್ಲಿ ತಿರುಗಾಡಿದರು.

ಡಾ. ಆಂಬೇಡಕರರು ಕೂಲಿಕಾರರ ಕಟ್ಟು ಯಶಸ್ವಿಯಾಗಿ ಜರುಗಲು ೩ ಸಾವಿರ ಸ್ವಯಂಸೇವಕರ ಏರ್ಪಾಟುಮಾಡಿದ್ದರು. ನ್ಯಾಯ ಮಂತ್ರಿಗಳಾದ ಶ್ರೀ. ಮುನಶಿಯವರು, ಸರದಾರ ಪಟೇಲರು ಕೂಲಿಕಾರರ ಕಟ್ಟಿನ ಸ್ಥಿತಿಗತಿಗಳನ್ನು ನೋಡಲು ಪಟ್ಟಣದಲ್ಲಿ ಸಂಚರಿಸುತ್ತಿದ್ದರು. ಆಗ ಕೂಲಿಕಾರರು ಇವರ ಮೋಟಾರಿಗೆ ಕಲ್ಲುಗಳಿಂದ ಹೊಡೆದು ಅದನ್ನು ಕೆಡಿಸಿದರು.

ಕೂಲಿಕಾರರು ದೊಂಬಿ ಮಾಡಿದರೆಂದೂ ಶಾಂತತೆಯಿಂದ ವರ್ತಿಸಲಿಲ್ಲವೆಂದೂ ಮೂರು ಸಾರೆ ಕೂಲಿಕಾರರ ಮೇಲೆ ಗುಂಡು ಹಾರಿಸಲು ಕಾಂಗ್ರೆಸ್ ಸರಕಾರವು ಅಪ್ಪಣೆಯನ್ನು ಕೊಟ್ಟಿತು. ಅದರಿಂದ ೭೫ ಜನರಿಗೆ ಗಾಯಗಳಾಗಿವೆ. ಗಿರಣಿಯ ಕೆಲಸಕ್ಕೆ ಹೋಗಿ ತಿರುಗಿ ಬರುತ್ತಿದ್ದ ಒಬ್ಬ ನಿರಪರಾಧಿ ಕೂಲಿಕಾರನಿಗೆ ಗುಂಡು ತಾಕಿ ಆತನು ಆಸ್ಪತ್ರೆಯಲ್ಲಿ ಮರಣಹೊಂದಿದನು.

**ಸರದಾರರ ಪ್ರಕಟನೆ.**

ಸರದಾರ ಪಟೇಲರು ಒಂದು ಪ್ರಕಟನೆಯನ್ನು ಹೊರಡಿಸಿ ಕೂಲಿಕಾರರ ಕಟ್ಟಿನಲ್ಲಿ ೧೦೦ ಕ್ಕೆ ೨೫ ರಂತೆ ಮಾತ್ರ ಕೂಲಿಕಾರರು ಸೇರಿದ್ದರಿಂದ ಕಾಂಗ್ರೆಸ್ ಸರಕಾರದಲ್ಲಿ ಕೂಲಿಕಾರರಿಗೆ ವಿಶ್ವಾಸವಿದೆಯೆಂದೇ ಸಿದ್ಧವಾಯಿತೆಂದು ಹೇಳಿದ್ದಾರೆ. ಕೂಲಿಕಾರರ ಪ್ರಮುಖರ ಚಟುವಟಿಕೆಯೇ ಈಗಿನ ಅಸಂತೋಷಕ್ಕೆ ಕಾರಣವೆಂತಲೂ ಕೂಲಿಕಾರರು ದೊಂಬಿಮಾಡಿದ್ದರಿಂದ ಗುಂಡು ಹಾರಿಸಲ್ಪಟ್ಟಿತೆಂದೂ ತಿಳಿಸಿದ್ದಾರೆ.

**ಕೂಲಿಕಾರ ಪ್ರಮುಖರು ಹೇಳುವುದೇನು?**

ಡಾ. ಆಂಬೇಡಕರ ಮತ್ತು ಬ್ಯಾ. ಜಮನಾದಾಸ ಇವರು ಪ್ರಕಟನೆ ಹೊರಡಿಸಿ ಸರದಾರರ ತಪ್ಪು ವಿಧಾನಗಳನ್ನು ಖಂಡಿಸಿದ್ದಾರೆ. ಸತ್ಯ ಮತ್ತು ಅಹಿಂಸೆಯ ವೇಷ ಧರಿಸಿದ ಕಾಂಗ್ರೆಸ್ಸಿನಿಂದ ಇಂಥ ಹಿಂಸೆ ಮತ್ತು ಸುಳ್ಳು ಕೃತಿಗಳು ನಡೆದುದು ಲಾಂಛನಾಸ್ಪದವೆಂದು ಸಾರಿದ್ದಾರೆ. ಸರದಾರರು ಸುಳ್ಳು ಹೇಳಿ ಜನರಿಗೆ ಕೂಲಿಕಾರರ ವಿಷಯದಲ್ಲಿ ತಪ್ಪು ತಿಳುವಳಿಕೆಯನ್ನುಂಟುಮಾಡುತ್ತಿದ್ದಾರೆಂದು ಪ್ರತಿಪಾದಿಸಿದ್ದಾರೆ. ಗುಂಡು ಹಾರಿಸಬೇಕಾದ ಅಗತ್ಯವಿದ್ದಿತೋ? ಇಲ್ಲವೋ? ಎಂಬುದನ್ನು ನಿರ್ಣಯಿಸಲು ಒಂದು ವಿಚಾರಣಾ ಸಮಿತಿಯನ್ನು ನಿಯಮಿಸಬೇಕಾಗಿ ಸರಕಾರಕ್ಕೆ ಆಹ್ವಾನ ಕೊಟ್ಟಿದ್ದಾರೆ.

**ಮುಖ್ಯಾಂಶವೇನು?**

ಕೂಲಿಕಾರರಿಗೆ ಶಾಂತಿಯುಕ್ತವಾದ ಕಟ್ಟನ್ನು ಮಾಡಿಕೊಳ್ಳಲು ಸಂಪೂರ್ಣವಾದ ಅಧಿಕಾರವಿದೆ. ಅದನ್ನು ತಡೆಯುವುದು ಯಾವ ಸರಕಾರಕ್ಕೂ ಯೋಗ್ಯವಲ್ಲ. ಅಹಿಂಸೆಯ ಪುರಾಣವನ್ನು ಹೇಳಬಹುದೇ ವಿನಾ ಅಧಿಕಾರ ಕೈಯಲ್ಲಿ ಬಂದಾಗ ಅದರಂತೆ ಕೃತಿಯು ಮಾತ್ರ ಸಂಭವಿಸುವುದಿಲ್ಲವೆಂಬುದು ಕಾಂಗ್ರೆಸ್ ಸರಕಾರದ ಈ ಗುಂಡಿನ ಗಾಯಗಳೇ ಸಾರಿದವು. ಸರಕಾರದ ಈ ಅತ್ಯಾಚಾರವು ಅದರ ಘನತೆಯನ್ನು ಕಡಿಮೆ ಮಾಡದೆ ಇರಲಾರದು.

ಮಹಾತ್ಮಾ ಗಾಂಧಿಯವರು ಗಡಿನಾಡಿನಲ್ಲಿ ಅಹಿಂಸೆಯ ಪಾಠವನ್ನು ಕಲಿಸುತ್ತಿದ್ದಾರೆ. ಅವರ ಅನುಯಾಯಿಗಳೆಂದು ಹೇಳಿಕೊಳ್ಳುವ ಮುಂಬೈ ಮಂತ್ರಿಮಂಡಲದವರು ನಿರಾಯುಧರಾದ ಕೂಲಿಕಾರರ ಮೇಲೆ ಗುಂಡು ಹಾರಿಸಲು ಅಪ್ಪಣೆಮಾಡುತ್ತಿದ್ದಾರೆ. ಎಂದ ಮೇಲೆ ಅಹಿಂಸೆಯು ಅಧಿಕಾರ ಬಂದ ಮೇಲೆ ಎಷ್ಟು ಸಾಧ್ಯ?

---

## ವೀರಶೈವ ದೀಕ್ಷಾ ಸಮಾರಂಭ.

ವೀರಶೈವರಲ್ಲಿ ಗುಣಶೀಲಾಚಾರಗಳಿಂದ ಹೆಚ್ಚು ಕಡಿಮೆಯುಂಟೇ ಹೊರತು ಕಾಯಕದಿಂದ ಮೇಲುಕೀಳುಗಳಿಲ್ಲ. ಜನಜೀವನಕ್ಕೆ ಅಗತ್ಯವಾದ ಯಾವಕಾಯಕವನ್ನಾದರೂ ವೀರಶೈವರು ಮಾಡಬಹುದು. ಅದು ಅವನ ಆತ್ಮೋನ್ನತಿಗಾಗಲಿ ಶೀಲಾಚಾರಗಳಿಗಾಗಲಿ ಬಾಧೆ ತರುವದಿಲ್ಲ. ಅದ್ದರಿಂದ ಲಿಂಗವಂತ ಹಡಪದವರ ಕಾಯಕವು ಕೂಡಾ ಯೋಗ್ಯವಾದುದೇ ಸರಿ. ಅವರಿಗೆ ದೀಕ್ಷೆಕೊಟ್ಟು ಬಳಿಕೆಯಲ್ಲಿ ತೆಗೆದುಕೊಳ್ಳಬೇಕು.

ಬೆಳಗಾವ ಜಿಲ್ಲಾ ನಂದಗಡದಲ್ಲಿ ಕಾರ್ತಿಕಶುದ್ಧ ೯ನೇ ದಿವಸ ನಂದಗಡದ ಶ್ರೀಮನ್ನಿರಂಜನ ಶ್ರೀ. ಮಹಾಂತ ಸ್ವಾಮಿಗಳ ನೇತೃತ್ವದಲ್ಲಿ ಶ್ರೀ. ಜನಕಪ್ಪ ಮೊದಲಾದ ೧೫ ಜನ ಹಡಪದವರಿಗೆ ದೀಕ್ಷೆ ಕೊಟ್ಟು ಅವರನ್ನು ಬಳಿಕೆಯಲ್ಲಿ ತೆಗೆದುಕೊಂಡದ್ದಾಯಿತು. ಅವರ ಮನೆಗೆ ಎಲ್ಲರೂ ಭೋಜನಕ್ಕೆ ಬಂದಿದ್ದರು. ದೀಕ್ಷಾಕಾರ್ಯವು ಶ್ರೀ. ಶಿವಲಿಂಗಯ್ಯ ಹಿರೇಮಠ ಇವರಿಂದ ನಡೆಯಿತು.

ಈ ಕಾರ್ಯದಲ್ಲಿ ಶ್ರೀ. ಶಿವಪುತ್ರಪ್ಪ ಮುತಗಿ, ಶ್ರೀ. ಚೆನ್ನವೀರಯ್ಯ ದಿನ್ನಿಮನಿ, ಶ್ರೀ. ಬಸವಂಣೆಪ್ಪ ಕಾಪಸೆ, ಶ್ರೀ. ಶಾಂತವೀರಪ್ಪ ಪಾಟೀಲ, ಶ್ರೀ. ಬಸಪ್ಪ ಅರಗಾಂವಿ ಶ್ರೀ. ಗಂಗಾಧರ ಗಿರಗೊಂಡ ಮುಂತಾದವರು ಅತಿ ಉತ್ಸಾಹದಿಂದ ಭಾಗ ತೆಗೆದುಕೊಂಡಿದ್ದರು.

ಕಾರ್ಯದರ್ಶಿ,

ಶಿವಲಿಂಗಪ್ಪ ಕೊಡೊಳ್ಳಿ ನಂದಗಡ.

## ಶುದ್ಧೀ ಸಮಾರಂಭ.

ಇದೇ ಬಹುಧಾನ್ಯ ಸಂವತ್ಸರ ಕಾರ್ತಿಕ ಶು|| ೬ ತಾ|| ೨೯-೧೦-೩೪ ನೇ ಶನಿವಾರ ಸಾಯಂಕಾಲ ಶುಭ ಮುಹೂರ್ತದಲ್ಲಿ ಸೊಂಡೂರು ಸಂಸ್ಥಾನಕ್ಕೆ ಸೇರಿದ ಭುಜಂಗನಗರ (ಹೊಸಹಳ್ಳಿ) ದ ಹಡಪದ ಯಜಮಾನ್ ಶಂಕರಪ್ಪ, ಹಂಪಣ್ಣ, ಕೊಮಾರಪ್ಪ, ಕರಿವೀರಪ್ಪ, ವೀರಭದ್ರಪ್ಪ ಬಿಸಾಟಿಗುಡ್ಡದ ವೀರಭದ್ರಪ್ಪ ಈ ಐದು ಮಂದಿ ಕುಟುಂಬದ ಮತ್ತು ಯಶವಂತನಗರ (ಕಣ್ಣೆಹಣ್ಣಿ) ದ ಹಡಪದ ಹೊನ್ನಪ್ಪನವರ ಕುಟುಂಬದವರಿಗೂ ೪೦ ಜನರಿಗೆ ವೀರಶೈವ ಸಂಪ್ರದಾಯಕವಾಗಿ ಶಿವದೀಕ್ಷೆ ಸಂಸ್ಕಾರವನ್ನು ಸಂಸ್ಥಾನದ ಹಿರೇಮಠದ ಶ್ರೀಗಳು ಮಠಾಧಿಕಾರಿಗಳು ಭಕ್ತಮಹೇಶ್ವರರು ಏಕೀಭವಿಸಿ ನಡೆಸಿದರು. ಪ್ರಮುಖರ ಪೈಕಿ ಮಾಳಿಗಿ ಎದ್ದರಾಮಪ್ಪನವರು ಸ್ಟೇಟ್‌ಕೌನ್ಸಿಲರರು ಅಂಕರನಾಳು ಶ್ರೀಯುತ ಷಣ್ಮುಖಪ್ಪನವರು ಶ್ರೀಯುತ ಚಿತ್ರಿಕೆ ತೋಟಪ್ಪನವರು ಬೆಂಚ್ ಮ್ಯಾಜಿಸ್ಟ್ರೇಟರು ಮೊದಲಾದವರು ಒಪ್ಪಿಗೆಯನ್ನಿತ್ತರು. ಹರಪನಹಳ್ಳಿಯ ಬಳ್ಳಾರಿಜಿಲ್ಲೆ ಹಡಪದ ಮಹಾಜನ ಸಂಘದ ಕಾರ್ಯದರ್ಶಿಗಳಾದ ತೆಲಿಗಿ ಹರಪನಹಳ್ಳಿ ಮಠದ ಶ್ರೀ ಜಗದೇವಯ್ಯನವರು ಈ ಕಾರ್ಯವು ಸಾಂಗವಾಗಿ ನೆರವೇರುವಂತೆ ಸಹಾಯಕರಾದರು.

ಓರ್ವ ಸಮಾಜಸೇವಕ.

---

## ಸಂಗನಾಳ.

ಈ ಕ್ರಾಂತಿಯುಗದಲ್ಲಿ ಮನುಷ್ಯನ ಉನ್ನತಿಗೆ ಅವಶ್ಯವಾದ ಸಾಧನಗಳಲ್ಲಿ ವಾಚನಾಲಯವೇ ಅಗ್ರಸ್ಥಾನವನ್ನು ಪಡೆದಿರುವದೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಇಂಥ ವಾಚನಾಲಯಗಳ ಸಹಾಯದಿಂದ ಎಷ್ಟೋ ವ್ಯಕ್ತಿ ಹಾಗು ರಾಷ್ಟ್ರಗಳು ಮುಂದೆ ಬಂದದ್ದನ್ನು ನಾವು ಪ್ರತ್ಯಕ್ಷ ನೋಡುತ್ತೇವೆ. ಆದರೆ ಇಂಥ ವಾಚನಾಲಯಗಳ ಕೊರತೆಯು ನಮ್ಮ ದೇಶದಲ್ಲಿ ಅದರಲ್ಲಿಯೂ ನಮ್ಮ ನೈಜಾಮ ಇಲಾಖೆಯಲ್ಲಿ ವಿಶೇಷ ಇದ್ದ ಮೂಲಕ ನಾವು ತೀರ ಅವನತ ಸ್ಥಿತಿಯಲ್ಲಿಯೇ ಉಳಿದಿರುವೆವು. ಈ ಹೀನ ಪರಿಸ್ಥಿತಿಯನ್ನು ನೋಡುತ್ತ ಕಾಲಕಳೆಯುವುದು ದೇಶಾಭಿಮಾನಿಗಳ ಕರ್ತವ್ಯಕ್ಕೆ ಕಲಂಕವು. ಈ ತತ್ವವನ್ನೇ ನಾವು ಗುರಿಯಾಗಿಟ್ಟುಕೊಂಡು ವಿಚಾರಿಸುವ ಸಮಯದಲ್ಲಿ ಸ್ವಧರ್ಮನಿಷ್ಠರೂ ಪಂಡಿತವರ್ಯರೂ ಆದ ಶ್ರೀ ನಾಗಭೂಷಣ ಶಾಸ್ತ್ರಿಗಳು ಸಂಗನಾಳ ಅನ್ನದಾನೀಶ್ವರ ಸಂ. ವಿದ್ಯಾಲಯಾಧ್ಯಾಪಕ ಗದಗ ಇವರು ನಮ್ಮ ಗ್ರಾಮಕ್ಕೆ ಆಗಮಿಸಿ ನಮ್ಮವರಿಗೆ ಪರಿಪುಷ್ಟಿಕೊಟ್ಟು ಪ್ರತಿಯೊಬ್ಬರ ಮನಸ್ಸಿನ ಮೇಲೆ ಪರಿಣಾಮವಾಗುವಂತೆ ಬೋಧಿಸಿದರು. ಅದರಂತೆ ಇಲ್ಲಿಯ ಶ್ರೀ. ಬಂಡೆರಂಗದೇವಸ್ಥಾನದಲ್ಲಿ ಶ್ರೀ ವೇ|| ನಾಗಯ್ಯನವರು ಶಾಸ್ತ್ರಿಮಠ ಇವರ ಅಧ್ಯಕ್ಷತೆಯ ಕೆಳಗೆ ಕಾ|| ಶು|| ೧ ಸೋಮವಾರ ದಿವಸ ಕೊಪ್ಪಳ ಜಿಲ್ಲಾ ಸಂಗನಾಳದಲ್ಲಿ ಶ್ರೀ ಸಂಗಮೇಶ್ವರ ವಾಚನಾಲಯವು ಸರ್ವಾನುಮತದಿಂದ ಸ್ಥಾಪಿಸಲ್ಪಟ್ಟಿತು. ಹಳ್ಳಿಗರಾದ ನಮ್ಮನ್ನು ಈ ರೀತಿ ಸಮಾಜಸೇವೆಮಾಡಲು ಹಚ್ಚಿದ ಇವರಿಗೆ ನಾವು ತುಂಬಾಕೃತಜ್ಞರಾಗಿದ್ದೇವೆ. ಸದ್ಯ ವಾಚನಾಲಯಕ್ಕೆ ಶರಣ ಸಂದೇಶ, ಲೋಕಮತ, ಕರ್ನಾಟಕ ಬಂಧು ಮೊದಲಾದ ಸಾಪ್ತಾಹಿಕ ಪತ್ರಗಳನ್ನೂ ಶಿವಾನುಭವ ಶರಣಸಾಹಿತ್ಯ ಜಯಕರ್ನಾಟಕ ಮೊದಲಾದ ಮಾಸಿಕ ಪತ್ರಿಕೆಗಳನ್ನೂ ಉಪಯುಕ್ತ ಕೆಲವು ಗ್ರಂಥಗಳನ್ನೂ ತರಿಸಲು ನಿಶ್ಚಯಿಸಿದೆ.

—ಸೆಕ್ರೆಟರಿ.

---

# ಲಠ್ಠೆಯವರಿಗೆ ರಾಯರ ಉತ್ತರ.

ಮುಂಬೈ ಸರಕಾರದ ಅರ್ಥಸಚಿವರಾದ ಶ್ರೀ. ಲಠ್ಠೆಯವರು ಕರ್ನಾಟಕ ಏಕೀಕರಣದ ವಿರುದ್ಧವಾಗಿ ಕೆಲವು ಆಕ್ಷೇಪಣೆಗಳನ್ನು ಮಾಡಿದ್ದರಷ್ಟೆ. ಅವುಗಳಿಗೆ ಶ್ರೀಮಾನ್ ಬೆನಗಲ್ಲ ರಾಮರಾಯರು ಸರಿಯಾದ ಉತ್ತರಗಳನ್ನು ಕೊಟ್ಟಿದ್ದಾರೆ. ಅವುಗಳಲ್ಲಿಯ ಕೆಲವು ಭಾಗವನ್ನು ಇದರಡಿಯಲ್ಲಿ ಕೊಟ್ಟದೆ.—

"ಭಾಷಾವಾರು ಪ್ರಾಂತ್ಯಗಳನ್ನೇರ್ಪಡಿಸುವ ಪಕ್ಷದಲ್ಲಿ ಅವು ಆರ್ಥಿಕ ದೃಷ್ಟಿಯಿಂದ ಸ್ವಾವಲಂಬಿಗಳಾಗಿ ನಿಲ್ಲಲಾರವೆಂಬ ಆಕ್ಷೇಪಣೆಯ 'ಗುಮ್ಮ'ನನ್ನು ನಮ್ಮ ಪ್ರತಿಪಕ್ಷಿಗಳು ನಮ್ಮ ಇದಿರಿಗೆ ಒಡ್ಡಿ ಜನರ ಮನಸ್ಸುಗಳಲ್ಲ ಭಯವನ್ನೂ ಸಂದೇಹವನ್ನೂ ಉಂಟು ಮಾಡುತ್ತಿರುವರು, ಮತ್ತು ಈ ಮಾತಿಗೆ ಉತ್ಕಲ, ಸಿಂಧು ದೇಶಗಳನ್ನು ಆಧಾರವಾಗಿ ಹೇಳುತ್ತಿರುವರು. ಆದರೆ ಇಂತಹ ದುರವಸ್ಥೆಯು ಆಯಾ ಭಾಷಾಪ್ರದೇಶಗಳಿಗೆ ಉಂಟಾಗಿರವದು ಆ ಆ ಪ್ರದೇಶಗಳಲ್ಲಿರುವ ನೈಸರ್ಗಿಕವಾದ ಕುಂದೇವಲ್ಲ. ಮನಸ್ವಿಯಾಗಿ ದೇಶವನ್ನು ವಿಂಗಡಿಸಿ ಪ್ರಾಂತಗಳನ್ನೇರ್ಪಡಿಸಿ (ಉದ್ದೇಶಪೂರ್ವಕವಾಗಿ ಎಂದೂ ನಾನು ಹೇಳುವುದಿಲ್ಲ.) ಆ ಆ ಸರ್ಕಾರದ ಮುಖ್ಯ ಠಾಣ್ಯವಾಗಿರುವ ಪಟ್ಟಣಗಳ ಮತ್ತು ಅದರ ಸುತ್ತುಮುತ್ತಲಿನ ಪ್ರದೇಶಗಳ ಸಂಪದಭಿವೃದ್ಧಿಗೆ ಹೆಚ್ಚು ಗಮನಕೊಟ್ಟುದೇ, ಉಳಿದ ಜನರ, ಪಟ್ಟಣಗಳ ಮತ್ತು ಪ್ರದೇಶಗಳ ಅವನತಿಗೆ ಕಾರಣವಾಗುವುದಾಯಿತು. ಈ ಪರಿಸ್ಥಿತಿಯು ತೊಲಗಿ ಸರ್ವ ಉಪಜನಾಂಗಗಳಿಗೂ ಏಕಪ್ರಕಾರವಾದ ಉನ್ನತಿ ಮಾರ್ಗವು ಲಭಿಸಬೇಕಾದರೆ ಅದಕ್ಕೆ ಸ್ವತಂತ್ರ ಆಡಳಿತದ ಭಾಷಾವಾರು ಪ್ರಾಂತ್ಯ ನಿರ್ಮಾಣವೊಂದೇ ರಾಮಬಾಣ ಔಷಧವೆಂದು ನಾನು ನೆನೆಸುತ್ತೇನೆ. ಕಾಂಗ್ರೆಸ್ಸು ಆಡಳಿತದಲ್ಲಿ ಇಂತಹ ಪಕ್ಷಪಾತಕ್ಕೆ ಅವಕಾಶವಿಲ್ಲವೆಂದೂ, ಎಲ್ಲ ಪ್ರಾಂತಗಳಿಗೂ ಈ ಮುಂದೆ ಸಮಾನವಾದ ಲಕ್ಷ್ಯ ಕೊಡಲ್ಪಡುವುದೆಂದೂ ಶ್ರೀ. ಲಠ್ಠೆಯವರು ಆಶ್ವಾಸನ ಕೊಡುತ್ತಲಿದ್ದಾರೆ. ನಿಜ. ಆದರೆ ಇಂಥ ಆಶ್ವಾಸನದಿಂದ ತಕ್ಕಷ್ಟು ಪ್ರಯೋಜನವಾಗುವುದೆಂದು ನನಗೆ ತೋರುವುದಿಲ್ಲ ಈಗಿನ ಪದ್ಧತಿಯೇ ಸದೋಷವಾಗಿರುವಲ್ಲಿ ನಿಷ್ಪಕ್ಷಪಾತದ ವರ್ತನ ಮಾತ್ರದಿಂದ ಕುಂದಕಗಳು ಚೆನ್ನಾಗಿ ಪರಿಹಾರ ವಾಗುವಂತಿದೆಯೇ? ಪ್ರತ್ಯೇಕ ಪ್ರಾಂತ್ಯ ನಿರ್ಮಾಣವೊಂದರಿಂದಲೇ ಹೋಗಗೊಳಿಸಲು ಸಾಧ್ಯವಾದ, ಅನ್ಯಥಾ ಸಾಧ್ಯವಲ್ಲದ ಪ್ರಬಲವಾದ ಎಷ್ಟೋ ಸಂಗತಿಗಳನ್ನು ನಾನು ವಾಚಕರ ಮುಂದಿಡ ಬಲ್ಲೆನು ಮತ್ತು ಕ್ಷಿಪ್ರದಲ್ಲಿಯೇ ಮುಂದಿಡಲು ಕೈಕೊಂಡಿರುವೆನು.

ಆರ್ಥಿಕ ನಿರ್ಬಲತೆಯ ವಿಚಾರವೂ ನಮ್ಮನ್ನು ಬೆದರಿಸಬೇಕಾಗಿಲ್ಲ. ಈ ಭೂಲೋಕದಲ್ಲಿ ಆದಾಯದ ವಿಷಯದಲ್ಲಿ ಎಲ್ಲ ಜನರೂ ಎಲ್ಲ ದೇಶಗಳೂ ಒಂದೇ ರೀತಿಯಾಗಿರುವುದಿಲ್ಲ. ಆದರೆ ಆ ಒಂದು ಕಾರಣಕ್ಕಾಗಿಯೇ ತಮ್ಮ ವ್ಯಕ್ತಿ ಸ್ವಾತಂತ್ರ್ಯವನ್ನು ಕಳೆದುಕೊಳ್ಳಲು ಯಾವ ದೇಶವೂ, ಪ್ರತ್ಯೇಕ ಸಂಸಾರ ಹೂಡಲ, ಯಾವ ಮನುಷ್ಯನೂ ಹಿಂಜರಿಯುವದಿಲ್ಲ. ಪ್ರತಿಯೊಬ್ಬರೂ ತಮ್ಮ ತಮ್ಮ ಅಂತಸ್ತಿಗೆ ಸರಿಹೋಗುವಂತೆ ತಮ್ಮ ತಮ್ಮ ಆದಾಯ ವೆಚ್ಚಗಳನ್ನು ಹೊಂದಿಸಿಕೊಂಡು ಜೀವನವನ್ನು ನಡೆಯಿಸುವರು. ಕರ್ನಾಟಕದ ಜನತೆಗೆ ತಮ್ಮ ಜನಪದಕ್ಕೆ ಮಾತ್ರ ಇದು ಸಾಧ್ಯವಲ್ಲವೇನು? ೫೦ ರಿಂದೆ ೫೦ ಸಾವಿರ ಚಚ್ಚೌಕ ಮೈಲಿಯಷ್ಟು ವಿಸ್ತಾರವುಳ್ಳ ಎಷ್ಟೋ ದೇಶೀಯ ರಾಜ್ಯಗಳು ಇಂಡಿಯದಲ್ಲಿಯೇ ಇರುವದಿಲ್ಲವೆ? ಇವೆಲ್ಲ ಆಡಳಿತ ನಡೆದುಕೊಂಡು ಬರುತ್ತಿಲ್ಲವೆ? ಆಡಳಿತದ ವೆಚ್ಚವನ್ನು ನಮ್ಮ ಧನಬಲಕ್ಕೆ ಸರಿಹೋಗುವಂತೆ ಹೊಂದಿಸಿಕೊಂಡು, ನಮ್ಮ ಈಗಿನ ಸ್ಥಿತಿಯಲ್ಲಿ ಕೂಡ ಆತ್ಮಾವಲಂಬಿಯಾಗಿ ಬಾಳಿಕೊಂಡಿರಲು ಕರ್ನಾಟಕ ದೇಶಕ್ಕೆ ಸಾಧ್ಯವಲ್ಲದಿಲ್ಲವೆಂದು ನನಗೆ ದೃಢವಾದ ನಂಬುಗೆಯಿದೆ. ಮುಂದಿನ ಬೆಳವಣಿಗೆಯ ಅವಕಾಶಗಳಂತೂ ಬೇಕಾದಷ್ಟು ಇದ್ದೇ ಇವೆ. ಈಗಿನ ಮದ್ರಾಸು ಬೊಂಬಾಯಿ ಪ್ರಾಂತಗಳೊಡನೆ ಹೋಲಿಸಿದರೆ ಕರ್ನಾಟಕ ಪ್ರಾಂತ್ಯವು ಎಷ್ಟೋ ಚಿಕ್ಕದಾಗುವುದೆಂಬುದು ನಿಜ. ಆದರೆ ಅದರಲ್ಲಿಯೂ ಒಂದು ಲಾಭವಿದೆ. ನಮ್ಮ ದೇಶದ ಹಿತಾಹಿತಗಳನ್ನು ಸೂಕ್ಷ್ಮವಾಗಿ ನೋಡಿಕೊಂಡು ಪರಿಹಾರಗಳನ್ನು ಕಲ್ಪಿಸಲು ಸಾಧ್ಯವಾಗುತ್ತದೆ.

ನಮ್ಮ ನಮ್ಮ ದೇಶದ ದೊಡ್ಡ ದೊಡ್ಡ ಹುದ್ದೆಗಳು ನಮ ನಮಗೇ ಸಿಕ್ಕಬೇಕು. ಮತ್ತು ಅಧಿಕಾರಸೂತ್ರಗಳೆಲ್ಲ ತಮ್ಮ ಕೈಯ್ಯಲ್ಲಿಯೇ ಇರಬೇಕೆಂದು ಕನ್ನಡಿಗರು ಬಯಸಿದರಾದರೆ ಅದೊಂದು ಅಕ್ಷಮ್ಯವಾದ ಅಪರಾಧವಾಗುವುದೆಂದು ನನಗೆ ತೋರುವುದಿಲ್ಲ. ಪ್ರತ್ಯೇಕ ಪ್ರಾಂತ್ಯವೇರ್ಪಟ್ಟುದಾದರೆ ಕೆಲಕೆಲವು ಪಂಗಡಗಳು ಮಾತ್ರ ಮುಂದೆ ಬಂದು ಅಲ್ಪ ಸಂಖ್ಯಾತರಾದ ಇತರರನ್ನು ತುಳಿಯುವರೆಂಬ ಭೀತಿಯು ಕೂಡ ಕೆಲವರನ್ನು ಪೀಡಿಸುತ್ತಿರುವಂತಿದೆ. ಆದರೆ ಇದು ಅಷ್ಟೊಂದು ಪ್ರಬಲವಾದ ಭಯಮೂಲವೆಂದು ನಾನು ಎಣಿಸುವುದಿಲ್ಲ. ಮದ್ರಾಸಿನಲ್ಲಿ ಉತ್ಪನ್ನವಾದ ಅಬ್ರಾಹ್ಮಣರ ತೀವ್ರವಾದ ಚಳುವಳಿಯೂ ಬ್ರಾಹ್ಮಣರ ಹುಟ್ಟಡಗಿಸಬೇಕೆಂಬ ದುರ್ಬುದ್ಧಿಯೂ ಕಾಲಾಂತರದಲ್ಲಿ ತಾನಾಗಿ ಬಲಗುಂದಿ ಸರಿಮಾರ್ಗಕ್ಕೆ ಬರುತ್ತಲಿಲ್ಲವೆ? ಕರ್ನಾಟಕದಲ್ಲಿಯೆ ಒಂದು ವೇಳೆಗೆ ಕೆಲವು ಪಂಗಡಗಳು ಮಾತ್ರ ಕೊಂಚ ಕಾಲ ಪರ್ಯಂತ ಮುಂದೆ ಬರುವುವೆಂದೆಣಿಸಿದರೂ ಒಂದಲ್ಲ ಒಂದು ದಿನ ಇತರರೂ ಮುಂದೆ ಬರಲು ಸಾಧ್ಯವಿದೆ. ಆದರೆ ಇಂತಹ ನಿರರ್ಥಕಭೀತಿಯಿಂದ ನಾವು ಪರಾಧೀನರಾಗಿಯೇ ಇರೋಣವೆಂದು ಬಯಸಿದೆವಾದರೆ, ಕಲ್ಪಾಂತದ ವರೆಗೂ ನಾವು ದಾಸ್ಯಪಂಕದಲ್ಲಿಯೇ ಕೊಳೆಯುತ್ತ ಬೀಳಬೇಕಾಗುವುದು. ಲಿಂಗಾಯತರು ಪ್ರಬಲವಾಗುವರೆಂಬ ವಾದವು ಗೊಡ್ಡು ಬೆದರಿಕೆಯೇ ಸರಿ. ಆ ಜನರೇ ಕರ್ನಾಟಕದಲ್ಲಿ ಬಹು ಸಂಖ್ಯಾತರಾಗಿದ್ದ ಬಳಿಕ, ಅವರೇ ಹೆಚ್ಚು ಹೆಚ್ಚಾಗಿ ಅಧಿಕಾರ ಸ್ಥಾನಗಳನ್ನು ಅಪೇಕ್ಷಿಸಿದರೂ, ಪಡೆದರೂ, ಅದರಲ್ಲಿ ಅನ್ಯಾಯವೇನಿದೆ? ಅದಕ್ಕಾಗಿ ಇತರರೂ ಏತಕ್ಕೆ ಕರುಬಬೇಕು? ಲಿಂಗಾಯತರಿಗೂ ಇತರರಿಗೂ ಮೊದಲಿಂದ ಅಂಥ ರಕ್ತಗತವಾದ ದ್ವೇಷವೇನೂ ಇರುವುದೆಂದು ನನಗೆ ತೋರುವುದಿಲ್ಲ. ಇರುವ ದ್ವೇಷವೂ, ಪೈಪೋಟಿಯೂ ಮುಖ್ಯವಾಗಿ ಸರ್ಕಾರದ ಹುದ್ದೆಗಳಿಗೆ ಸಂಬಂಧಪಟ್ಟುದು, ಮತ್ತು ಕೇವಲ ಇತ್ತೀಚಿನದೆಂದು ನಾನು ಎಣಿಸುತ್ತೇನೆ. ಸರ್ಕಾರದ ನವುಕರಿಗಳಿಗೂ ಮತ್ತು ಅವುಗಳ ಮಿತಿಮೀರಿದ ದೊಡ್ಡ ಸಂಬಳಸಾರಿಗಳಿಗೂ ಪ್ರಜೆಗಳ ಮೇಲೆ ನಡೆಸಬರುವ ನಿರಂಕುಶಾಧಿಕಾರಗಳಿಗೂ ನಮ್ಮ ಜನರು ಮರುಳಾಗಿ, ಬಲಬಿದ್ದು ಕುಲಗೆಟ್ಟು ಹೋಗಿರುವರು ಆದರೆ, ಪ್ರಜಾಮತವೇ ರಾಜನೀತಿಯಾಗಿಯೂ ಜೀವನಕ್ಕೆ ಸಾಕಾಗುವಷ್ಟು ಅತ್ಯಲ್ಪ ಸಂಬಳ ಪಡೆದು ಮಾಡುವ ಪ್ರಜಾಸೇವೆಯೇ ಸರ್ಕಾರದ ಹುದ್ದೆಯೆಂಬುದು ತಿಳಿಯತಕ್ಕ ಇಂತಹ ದ್ವೇಷಾಸೂಯೆಗಳಿಗೆ ಅವಕಾಶವು ಬಹಳಮಟ್ಟಿಗೆ ಕಡಿಮೆಯಾಗುವುದೆಂದು ನನ್ನ ಭಾವನೆ.

ಇತರ ಪಂಗಡದವರಂತೆಯೇ ಲಿಂಗಾಯತರು ಕೂಡ ಕನ್ನಡ ಜನರೊಳಗಣ ಒಂದು ಪಂಗಡದವರು. ಕುಟಿಲಾತ್ಮರ ದುರ್ಬೋಧನೆಗಳಿಗೆ ಕಿವಿಗೊಟ್ಟು ಅವರು ತಮ್ಮವರಲ್ಲವೆಂದು ಇತರರು ಭ್ರಮಿಸಲಾಗದು. ಪರ ಪ್ರಾಂತ್ಯಗಳಲ್ಲಿರುವ ಸ್ವಜನರಿಗಿಂತ ಸ್ವದೇಶದಲ್ಲಿರುವ ಲಿಂಗಾಯತರೇ ತಮಗೆ ಅಧಿಕ ಆಪ್ತ ಬಂಧುಗಳೆಂದು ಬ್ರಾ

ಹ್ಮಣರು ತಿಳಿಯಬೇಕು. ಲಿಂಗಾಯತರು ಇತರ ಪಂಗಡಗಳ ವಿಷಯದಲ್ಲಿ ತಮ್ಮ ಉತ್ಕರ್ಷೆಯ ಕಾಲದಲ್ಲಿ ಕೂಡ ಕ್ರೂರವಾಗಿ ನಡೆದ ಉದಾಹರಣೆಗಳು ಪೂರ್ವ ಚರಿತ್ರೆಯಲ್ಲಿ ಎಲ್ಲಿಯೂ ಸಿಕ್ಕವುದಿಲ್ಲ. ಪಕ್ಷಾಂತರದಲ್ಲಿ ಬ್ರಾಹ್ಮಣನಾದ ಪೇಶ್ವೆಯ ಕಡೆಯವರು ಶೃಂಗೇರಿಯ ಶ್ರೀಜಗದ್ಗುರುಗಳ ಮಠವನ್ನು ಕೊಳ್ಳೆ ಹೊಡೆದು ಶ್ರೀಸ್ವಾಮಿಗಳನ್ನು ದೇಶಭ್ರಷ್ಟರಾಗಿ ಮಾಡಿದುದನ್ನು ಕೇಳಿ ವ್ಯಸನಪಟ್ಟು ಇಕ್ಕೇರಿಯ ಲಿಂಗಾಯತ ರಾಜನು ಅವರನ್ನು ಗೌರವಪುರಸ್ಸರವಾಗಿ ಸ್ವದೇಶಕ್ಕೆ ಬರಮಾಡಿಸಿ ಯಥೇಷ್ಟವಾದ ದ್ರವ್ಯವನ್ನು ಕೊಟ್ಟು ಶ್ರೀಮಠದ ಸಾಂಪತ್ತಿಕ ಸ್ಥಿತಿಯನ್ನು ಉತ್ತಮಗೊಳಿಸಿದ ಬಗ್ಗೂ ಇನ್ನಿತರ ಬ್ರಾಹ್ಮಣ ದೇವಾಲಯಗಳಿಗೆ ಉದಾರವಾದ ಉಂಬಳಿ ದತ್ತಿಗಳನ್ನು ಬಿಟ್ಟು ಬ್ರಾಹ್ಮಣ ವಿದ್ವಾಂಸರನ್ನು ಅಗ್ರಹಾರಾದಿ ದಾನಗಳಿಂದ ಸಂತುಷ್ಟಗೊಳಿಸಿದ ಬಗ್ಗೂ ಬೇಕಾದಷ್ಟು ಆಧಾರಗಳು ಶಾಸನಗಳಲ್ಲಿಯೂ ಇತಿಹಾಸ ಗ್ರಂಥಗಳಲ್ಲಿಯೂ ದೊರಕುತ್ತವೆ. ಹಿಂದೆ ಲಿಂಗಾಯತರು ಚಿಕ್ಕ ದೊಡ್ಡ ರಾಜ್ಯಗಳನ್ನು ಕಟ್ಟಿ ರಾಜಪುರುಷರಾಗಿಯೂ ವಿದ್ವಾಂಸರಾಗಿಯೂ ಕವಿಗಳಾಗಿಯೂ ಕಲಾಕುಶಲರಾಗಿಯೂ ಲಕ್ಷ್ಮೀಪುತ್ರರಾಗಿಯೂ ವರ್ತಕರಾಜರಾಗಿಯೂ ಸಮಾಜ ನಾಯಕರಾಗಿಯೂ ಮೆರೆದು ದೇಶದ ಮುಂದಾಳುಗಳಾಗಿ ಕರ್ನಾಟಕ ರಾಷ್ಟ್ರಕ್ಕೆ ತುಂಬಾ ಕೀರ್ತಿಯನ್ನು ತಂದರು. ಕಾಲಾಂತರದಲ್ಲಿ ದೈವಗತಿಯಿಂದ ಇವರ ಪ್ರಾಬಲ್ಯವು ಕುಂದಿ ವಾಣಿಜ್ಯವೊಂದೇ ಇವರ ಮುಖ್ಯ ಕಾಯಕವಾಗಿ ನಿಂತಿತು. ಈಗ ಸುಮಾರು ೨೫ ವರ್ಷಗಳಿಂದೀಚೆಗೆ ಈ ಜನರಲ್ಲಿ ಬಲವಾದ ಜಾಗೃತಿಯುಂಟಾಗಿ ಪೂರ್ವದ ತಮ್ಮ ಪ್ರಾಮುಖ್ಯತೆಯನ್ನು ಪುನಃ ಪಡೆದುಕೊಳ್ಳಲು ಪ್ರಯತ್ನಗಳು ನಡೆಯುತ್ತಲಿವೆ. ನನಗಾದರೆ ಇದೊಂದು ಸಂತೋಷದ ವಿಷಯವೇ ಸರಿ. ಎಷ್ಟೋ ಕಾಲದಿಂದ ಇದನ್ನೇ ನಾನು ಇದಿರು ನೋಡುತ್ತಿದ್ದೆನು. ವೀರಶೈವರ ಸರ್ವತೋಮುಖವಾದ ಉನ್ನತಿಯೇ ಕರ್ನಾಟಕದ ಉನ್ನತಿಯೆಂದು ನಾನು ತಿಳಿದಿದ್ದೇನೆ. ಹೆಚ್ಚೇಕೆ? ಕರ್ನಾಟಕ ಏಕೀಕರಣದ ಈ ಚಳುವಳಿಯು ಕೂಡ ಲಿಂಗಾಯತರ ಕೈಗೆ ಬಂದ ಬಳಿಕವೇ ಅವರ ಬೆಂಬಲದಿಂದಲೇ ತುಂಬ ಪುಷ್ಟವಾಗಿ ಬೆಳೆದಿದೆಯೆಂದು ನಾನು ಎಣಿಸುತ್ತೇನೆ.

---

## ನರಗುಂದದಲ್ಲಿ ವ್ಯಾಖ್ಯಾನ.

ಇಲ್ಲಿಯ ಶ್ರೀಮದ್ವೀರಶೈವ ಸಮಾಜೋನ್ನತಿ ಸಂಘದ ವತಿಯಿಂದ ತಾ. ೨೨-೧೦-೩೮ ನೇ ಶನಿವಾರ ಸಾಯಂಕಾಲಕ್ಕೆ ವಿರಕ್ತ ಮಠದಲ್ಲಿ ಶ್ರೀಮನ್ನಿರಂಜನ ಬಸವಲಿಂಗ ಸ್ವಾಮಿಗಳವರು ಗವಿಮಠ ಇವರು ಹಿಂದು ಸಂಘಟನೆಯ ಬಗ್ಗೆ ಮಾತನಾಡುತ್ತ ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಇಡೀ ಜಗತ್ತಿನಲ್ಲಿ ೧೫೦ ಕೋಟಿ ಜನ ಸಂಖ್ಯೆಯುಂಟು. ಇದರಲ್ಲಿ ೫ ಕೋಟಿ ಜನರು ಕಾಡುಜನರುಂಟು. ಒಟ್ಟು ಜನಸಂಖ್ಯೆಯಲ್ಲಿ ೪೮ ಕೋಟಿ ಗೌತಮ ಬುದ್ಧನ ಅನುಯಾಯಿಗಳು, ೪೦ ಕೋಟಿ ಕ್ರಿಶ್ಚಿಯನ್ನರು, ೨೫ ಕೋಟಿ ಇಸ್ಲಾಮಿ ಧರ್ಮದವರು ೨೫ ಕೋಟಿ ಹಿಂದುಗಳು ಇರುತ್ತಾರೆಂದು ನಾವೆಲ್ಲರು ತಿಳದುಕೊಂಡಿರುತ್ತೇವೆ. ಆದರೆ ಹಿಂದುಗಳ ಸಂಖ್ಯೆಯು ಇತ್ತಿತ್ತಲಾಗಿ ಕ್ಷೀಣವಾಗುತ್ತ ಬಂದಿದೆ. ಇದಕ್ಕೆ ಕಾರಣ ನಮ್ಮ ಹಿಂದುಗಳಲ್ಲಿಯ ಅನೈಕ್ಯತೆಯೇ ಮುಖ್ಯವಾದದ್ದು. ಈ ಅನೈಕ್ಯತೆಗೆ ನಮ್ಮಲ್ಲಿರುವ ೨೧೭ ಜಾತಿಗಳ ಹಾಗು ಉಪಜಾತಿಗಳ ಕಲಹವೇ ಮುಖ್ಯ ಹೇತುವಾಗಿದೆ. ಈ ಜಾತಿಗಳ ಕಲಹ ಹೋಗಿ ನಮ್ಮಲ್ಲಿ ಐಕ್ಯತೆಯುಂಟಾಗಬೇಕಾದರೆ ನಮ್ಮಲ್ಲಿ ಸಂಘ ಶಕ್ತಿಯೇ ಬೇಕೆಂದು ನಮ್ಮ ಹಿರಿಯರು ಕಲಿಯುಗದಲ್ಲಿ ಸಂಘಶಕ್ತಿಗೆ ಹೆಚ್ಚು ಪ್ರಾಧಾನ್ಯ ಕೊಟ್ಟಿರುತ್ತಾರೆ. ಈ ಹಿಂದುಗಳಲ್ಲಿ ಬ್ರಾಹ್ಮಣರ ಮತ್ತು ಲಿಂಗಾಯತರೂ ಮತಾಂತರ ಹೊಂದುತ್ತಿದ್ದಾರೆ. ಈ ಜಾತಿಯ ಧರ್ಮಗುರುಗಳು ಸುಮ್ಮನೆ ಕೂತು ಆರಾಮ ಚೈನಿಗಳಲ್ಲಿ ಪ್ರವರ್ತರಾಗಿ ಹಿಂದು ಧರ್ಮದ ಅಭಿಮಾನ ಶೂನ್ಯರಾಗಿರುವರು. ಇನ್ನು ಕೆಲವು ದಿವಸಗಳಲ್ಲಿ ಹೀಗೆಯೇ ಹೋದದ್ದಾದರೆ ಹಿಂದು ಸಮಾಜವು ರಸಾತಳಕ್ಕೆ ಹೋಗುವುದು ನಿಶ್ಚಯ. ಅದೇ ಕ್ರಿಶ್ಚನ್ ಸಮಾಜದಲ್ಲಿ ೨೦೦ ಸಂಘಗಳೂ ೨೬ ಸಾವಿರ ಜನರು ಕಾರ್ಯ ಮಾಡುವವರಿರುವುದರಿಂದ ದಿನೇ ದಿನೇ ರಕ್ತ ಬೀಜನವಂಶವು ವೃದ್ಧಿಯಾದಂತೆ ಕ್ರಿಶ್ಚನ್ ಸಮಾಜವು ಬೆಳೆಯುಹತ್ತಿದೆ. ಇದು ಅವರಲ್ಲಿರುವ ಸಂಘಶಕ್ತಿ ಕಾರ್ಯದಕ್ಷತೆಯೇ ಕಾರಣವಾಗಿದೆ. ಹಿಂದುಗಳಾದ ನಾವು ಇವರಲ್ಲಿರುವ ಸಮಾಜದ ಅಭಿಮಾನವನ್ನು ತಾಳುವದುತ್ತಮವೆಂದು ಎಂದೂ ಮರೆಯತಕ್ಕದ್ದಲ್ಲ. ಪ್ರಯುಕ್ತ ಹಿಂದುಗಳೆಲ್ಲರೂ ಸುಸಂಘಟಿತರಾಗಿ ನಮ್ಮ ಸಮಾಜದ ಏಳಿಗೆಯಾಗುವಂತೆ ಪ್ರಯತ್ನಿಸಿರೆಂದು ೨-೩ ತಾಸುಗಳ ವರೆಗೆ ತಿಳಿಸಿಹೇಳಿದರು. ನಂತರ ಕೆ. ಎಸ್. ಹುಡೇದ ಇವರು ಸಮಾರೋಪಣ ಭಾಷಣ ಮಾಡಿ ಶ್ರೀಗಳ ಆಭಾರ ಮನ್ನಿಸಿ ಅಂದಿನ ಕಾರ್ಯ ಪೂರ್ತಿಗೊಳಿಸಿದರು.

ತಾ. ೨೩-೧೦-೩೮ ನೆಯ ದಿವಸ ಸಂಜೆ ೫ ಗಂಟೆಗೆ ವಿರಕ್ತ ಮಠದಲ್ಲಿ ಕೂಡಿದ ಜನ ಸಂದೋಹಕ್ಕೆ ಶ್ರೀಗಳು ಲಕ್ಷ್ಮೀ ಪೂಜೆಯ ಬಗ್ಗೆ ಮಾತನಾಡುತ್ತ ಆರ್ಥಿಕ ಸುಧಾರಣೆಯು ಆಗಬೇಕಾದರೆ ನಮ್ಮಲ್ಲಿ ಉದ್ಯೋಗವು ನೆಲೆಗೊಳ್ಳಬೇಕು, ಉದ್ಯೋಗದಿಂದ ಸಂಪತ್ತು ಶಾರೀರಕ ಸುಖ ಬೆಳೆಯುವದಲ್ಲದೆ ಮನಸ್ಸು ಶುದ್ಧಿಯಾಗುವದು. ಅಂತೇ ಶಿವಶರಣರು ಈ ಉದ್ಯೋಗಕ್ಕೆ ಧರ್ಮರೂಪ ಕೊಟ್ಟು ಕಾಯಕವೇ ಕೈಲಾಸವೆಂದು ನಂಬಿ ೮೦೦ ವರ್ಷಗಳ ಹಿಂದೆ ಅನೇಕ ರಾಜಾಧಿರಾಜರು ತಮ್ಮ ರಾಜವೈಭವದಲ್ಲಿದ್ದು ಮೆರೆಯುವದು ಸದಾಚಾರವಲ್ಲವೆಂದರಿತು ರಾಜ ವೈಭವವನ್ನು ತ್ಯಜಿಸಿ ಕಲ್ಯಾಣಕ್ಕೆ ಬಂದು ಕಾಯಕದಿಂದಲೇ ಅತಿಥಿ ಸತ್ಕಾರ ಮಾಡುತ್ತ ಕಡೆಗೆ ನೈಜಸುಖಕ್ಕೆ ಭಾಗಿಗಳಾಗಿಹೋದರು. ಇತ್ತಿತ್ತಲಾಗಿ ನಮ್ಮಲ್ಲಿಯ ನಿರುದ್ಯೋಗಿತನಕ್ಕೆ ಕೈಕೆಲಸಗಳು ಹಾಳಾಗಿಹೋಗಿ ಗಿರಣಿಗಳ ಬಾಯಿಗೆ ತುತ್ತಾಗಿ ಹೆಸರಿಗೆ ಮಾತ್ರ ಉಳಿದವು. ಎಂದಿಗೆ ಕೈಕೆಲಸಗಳು ಮುಗ್ಗಿದವೋ ಅಂದಿನಿಂದ ದೇಶಿ ವಸ್ತುಗಳಲ್ಲಿರುವ ಪ್ರೇಮವು ಹಾಳಾಗಿ ಹೋಗಿ ಪರದೇಶಿ ವಸ್ತುಗಳಲ್ಲಿಯ ಪ್ರೇಮವು ಹೆಚ್ಚಾಗಿ ಅವುಗಳಗಾಗಿ ನಮ್ಮಲ್ಲಿಯ ದುಡ್ಡು ಗಂಗಾ ನದಿಯಂತೆ ಹರಿದು ಪರದೇಶಕ್ಕೆ ಹೋಗಹತ್ತಿದ್ದರಿಂದ ನಾವು ನಿರ್ಧನಿಕರಾಗಿ ಈ ದಿವಸವುಂಟಾದ ಲಕ್ಷ್ಮೀ ಪೂಜಾದಲ್ಲಿ ಧನಿಕರಾಗಿ ಹಣವನ್ನು ಪೂಜಿಸದೆ ಲಕ್ಷ್ಮಿಯ ತಿದ್ದಿನ ಫೋಟೋ ಪೂಜಿಸುವುದು ನಮ್ಮ ಪಾಲಿಗೆ ಬಂದಿದೆ. ಇದೆಲ್ಲಕ್ಕೂ ನಾವೇ ಕಾರಣರೆಂಬುವದನ್ನು ಯಾರೂ ಮರೆಯತಕ್ಕದ್ದಲ್ಲ. ಇಂದು ನಾವೆಲ್ಲರು ಪರದೇಶಿ ವಸ್ತುಗಳಿಗೆ ಮೋಸಹೋಗದೆ ಉದ್ಯೋಗಿಗಳಾಗಿ ಕೈಗಾರಿಕೆಯ ಕಾರ್ಯಗಳನ್ನು ಮುಂದೆ ತರಲು ಪ್ರತಿಯೊಬ್ಬ ಭಾರತೀಯನು ತನು ಮನ ಧನದಿಂದ ಸಾಹಸಪಟ್ಟರೆ ಹಿಂದೆ ನಮಗುಂಟಾದ ಸ್ಥಿತಿಯೇ ಈಗ ನಮಗುಂಟಾಗಿ ಸುಖಿಗಳಾಗುತ್ತೇವೆಂದು ಆಬಾಲ ವೃದ್ಧರಿಗೂ ತಿಳಿಯುವಂತೆ ಬೋಧಿಸಿದರು. ನಂತರ ಗೌರೀ ಶಂಕರ ಶಾಸ್ತ್ರಿಗಳು ಸಮಾರೋಪಣ ಮಾಡಿ ಶ್ರೀಗಳ ಆಭಾರ ಮನ್ನಿಸಿ ಅಂದಿನ ಕಾರ್ಯ ಪೂರ್ತಿಗೊಳಿಸಿದರು. ತಾ. ೨೫ ನೇ ದಿವಸ ಸಂಜೆ ೫ ಗಂಟೆಗೆ ವಿರಕ್ತ ಮಠದಲ್ಲಿ ಕೂಡಿದ ಜನಸಂದಣಿಗೆ ಶ್ರೀಗಳು ಭಕ್ತಿ ಜ್ಞಾನ ವೈರಾಗ್ಯ ಈ ಬಗ್ಗೆ ಹೇಳುತ್ತಾ ಈ ಮೂರರಲ್ಲಿ ಭಕ್ತಿಯೇ ಕಲಿಯುಗದಲ್ಲಿ ಪ್ರಾಧಾನ್ಯವೆಂದು ಹೇಳಿ ಯಾವತ್ತರನ್ನು ಸಂತೋಷಪಡಿಸಿದರು. ನಂತರ ಈ ಸಂಘದ ಪಾಠಶಾಲಾಧ್ಯಾಪಕರಾದ ಗೌರಿ ಶಂಕರ ಶಾಸ್ತ್ರಿಗಳು ಈ ಸಂಘದ ವತಿಯಿಂದ ಶ್ರೀಗಳವರ ಆಭಾರ ಮನ್ನಿಸಿ ಆ ದಿನ ಕಾರ್ಯ ಪೂರ್ತಿಗೊಳಿಸಿದರು.

ಓರ್ವ ಸಭಿಕ.

# ಲಠ್ಠೆಯವರಿಗೆ ರಾಯರ ಉತ್ತರ.

ಮುಂಬೈ ಸರಕಾರದ ಅರ್ಥಸಚಿವರಾದ ಶ್ರೀ. ಲಠ್ಠೆಯವರು ಕರ್ನಾಟಕ ಏಕೀಕರಣದ ವಿರುದ್ಧವಾಗಿ ಕೆಲವು ಆಕ್ಷೇಪಣೆಗಳನ್ನು ಮಾಡಿದ್ದರಷ್ಟೆ. ಅವುಗಳಿಗೆ ಶ್ರೀಮಾನ್ ಬೆನಗಲ್ಲ ರಾಮರಾಯರು ಸರಿಯಾದ ಉತ್ತರಗಳನ್ನು ಕೊಟ್ಟಿದ್ದಾರೆ. ಅವುಗಳಲ್ಲಿಯ ಕೆಲವು ಭಾಗವನ್ನು ಇದರಡಿಯಲ್ಲಿ ಕೊಟ್ಟಿದೆ.—

"ಭಾಷಾವಾರು ಪ್ರಾಂತ್ಯಗಳನ್ನೇರ್ಪಡಿಸುವ ಪಕ್ಷದಲ್ಲಿ ಅವು ಆರ್ಥಿಕ ದೃಷ್ಟಿಯಿಂದ ಸ್ವಾವಲಂಬಿಗಳಾಗಿ ನಿಲ್ಲಲಾರವೆಂಬ ಆಕ್ಷೇಪಣೆಯ 'ಗುಮ್ಮ'ನನ್ನು ನಮ್ಮ ಪ್ರತಿಪಕ್ಷಿಗಳು ನಮ್ಮ ಇದಿರಿಗೆ ಒಡ್ಡಿ ಜನರ ಮನಸ್ಸುಗಳಲ್ಲಿ ಭಯವನ್ನೂ ಸಂದೇಹವನ್ನೂ ಉಂಟು ಮಾಡುತ್ತಿರುವರು, ಮತ್ತು ಈ ಮಾತಿಗೆ ಉತ್ಕಲ, ಸಿಂಧು ದೇಶಗಳನ್ನು ಆಧಾರವಾಗಿ ಹೇಳುತ್ತಿರುವರು. ಆದರೆ ಇಂತಹ ದುರವಸ್ಥೆಯು ಆಯಾ ಭಾಷಾಪ್ರದೇಶಗಳಿಗೆ ಉಂಟಾಗಿರುವದು ಆ ಆ ಪ್ರದೇಶಗಳಲ್ಲಿರುವ ನೈಸರ್ಗಿಕವಾದ ಕುಂದಲ್ಲ. ಮನಸ್ವಿಯಾಗಿ ದೇಶವನ್ನು ವಿಂಗಡಿಸಿ ಪ್ರಾಂತಗಳನ್ನೇರ್ಪಡಿಸಿ (ಉದ್ದೇಶಪೂರ್ವಕವಾಗಿ ಎಂದೂ ನಾನು ಹೇಳುವುದಿಲ್ಲ.) ಆ ಆ ಸರ್ಕಾರದ ಮುಖ್ಯ ಠಾಣ್ಯವಾಗಿರುವ ಪಟ್ಟಣಗಳ ಮತ್ತು ಅದರ ಸುತ್ತು ಮುತ್ತಲಿನ ಪ್ರದೇಶಗಳ ಸಂಪದಭಿವೃದ್ಧಿಗೆ ಹೆಚ್ಚು ಗಮನಕೊಟ್ಟುದೇ, ಉಳಿದ ಜನರ, ಪಟ್ಟಣಗಳ ಮತ್ತು ಪ್ರದೇಶಗಳ ಅವನತಿಗೆ ಕಾರಣವಾಗುವುದಾಯಿತು. ಈ ಪರಿಸ್ಥಿತಿಯು ತೊಲಗಿ ಸರ್ವ ಉಪಜನಾಂಗಗಳಿಗೂ ಏಕಪ್ರಕಾರವಾದ ಉನ್ನತಿ ಮಾರ್ಗವು ಲಭಿಸಬೇಕಾದರೆ ಅದಕ್ಕೆ ಸ್ವತಂತ್ರ ಆಡಳಿತದ ಭಾಷಾವಾರು ಪ್ರಾಂತ್ಯ ನಿರ್ಮಾಣವೊಂದೇ ರಾಮಬಾಣ ಔಷಧವೆಂದು ನಾನು ನೆನೆಸುತ್ತೇನೆ. ಕಾಂಗ್ರೆಸ್ಸು ಆಡಳಿತದಲ್ಲಿ ಇಂತಹ ಪಕ್ಷಪಾತಕ್ಕೆ ಅವಕಾಶವಿಲ್ಲವೆಂದೂ, ಎಲ್ಲ ಪ್ರಾಂತಗಳಿಗೂ ಈ ಮುಂದೆ ಸಮಾನವಾದ ಲಕ್ಷ್ಯ ಕೊಡಲ್ಪಡುವುದೆಂದೂ ಶ್ರೀ. ಲಠ್ಠೆಯವರು ಆಶ್ವಾಸನ ಕೊಡುತ್ತಲಿದ್ದಾರೆ. ನಿಜ. ಆದರೆ ಇಂಥ ಆಶ್ವಾಸನದಿಂದ ತಕ್ಕಷ್ಟು ಪ್ರಯೋಜನವಾಗುವುದೆಂದು ನನಗೆ ತೋರುವುದಿಲ್ಲ ಈಗಿನ ಪದ್ಧತಿಯೇ ಸದೋಷವಾಗಿರುವಲ್ಲಿ ನಿಷ್ಪಕ್ಷಪಾತದ ವರ್ತನ ಮಾತ್ರದಿಂದ ಕುಂದಕಗಳು ಚೆನ್ನಾಗಿ ಪರಿಹಾರವಾಗುವಂತಿದೆಯೇ? ಪ್ರತ್ಯೇಕ ಪ್ರಾಂತ್ಯ ನಿರ್ಮಾಣವೊಂದರಿಂದಲೇ ಹೋಗಗೊಳಿಸಲು ಸಾಧ್ಯವಾದ, ಅನ್ಯಥಾ ಸಾಧ್ಯವಲ್ಲದ ಪ್ರಬಲವಾದ ಎಷ್ಟೋ ಸಂಗತಿಗಳನ್ನು ನಾನು ವಾಚಕರ ಮುಂದಿಡ ಬಲ್ಲೆನು ಮತ್ತು ಕ್ಷಿಪ್ರದಲ್ಲಿಯೇ ಮುಂದಿಡಲು ಕೈಕೊಂಡಿರುವೆನು.

ಆರ್ಥಿಕ ನಿರ್ಬಲತೆಯ ವಿಚಾರವೂ ನಮ್ಮನ್ನು ಬೆದರಿಸಬೇಕಾಗಿಲ್ಲ. ಈ ಭೂಲೋಕದಲ್ಲಿ ಆದಾಯದ ವಿಷಯದಲ್ಲಿ ಎಲ್ಲ ಜನರೂ ಎಲ್ಲ ದೇಶಗಳೂ ಒಂದೇ ರೀತಿಯಾಗಿರುವುದಿಲ್ಲ. ಆದರೆ ಆ ಒಂದು ಕಾರಣಕ್ಕಾಗಿಯೇ ತಮ್ಮ ವ್ಯಕ್ತಿ ಸ್ವಾತಂತ್ರ್ಯವನ್ನು ಕಳೆದುಕೊಳ್ಳಲು ಯಾವ ದೇಶವೂ, ಪ್ರತ್ಯೇಕ ಸಂಸಾರ ಹೂಡಲ, ಯಾವ ಮನುಷ್ಯನೂ ಹಿಂಜರಿಯುವದಿಲ್ಲ. ಪ್ರತಿಯೊಬ್ಬರೂ ತಮ್ಮ ತಮ್ಮ ಅಂತಸ್ತಿಗೆ ಸರಿಹೋಗುವಂತೆ ತಮ್ಮ ತಮ್ಮ ಆದಾಯ ವೆಚ್ಚಗಳನ್ನು ಹೊಂದಿಸಿಕೊಂಡು ಜೀವನವನ್ನು ನಡೆಯಿಸುವರು. ಕರ್ನಾಟಕದ ಜನತೆಗೆ ತಮ್ಮ ಜನಪದಕ್ಕೆ ಮಾತ್ರ ಇದು ಸಾಧ್ಯವಲ್ಲವೇನು? ೫೦ ರಿಂದೆ ೫೦ ಸಾವಿರ ಚಚ್ಚೌಕ ಮೈಲಿಯಷ್ಟು ವಿಸ್ತಾರವುಳ್ಳ ಎಷ್ಟೋ ದೇಶೀಯ ರಾಜ್ಯಗಳು ಇಂಡಿಯದಲ್ಲಿಯೇ ಇರುವದಿಲ್ಲವೆ? ಇವೆಲ್ಲ ಆಡಳಿತ ನಡೆದುಕೊಂಡು ಬರುತ್ತಿಲ್ಲವೆ? ಆಡಳಿತದ ವೆಚ್ಚವನ್ನು ನಮ್ಮ ಧನಬಲಕ್ಕೆ ಸರಿಹೋಗುವಂತೆ ಹೊಂದಿಸಿಕೊಂಡು, ನಮ್ಮ ಈಗಿನ ಸ್ಥಿತಿಯಲ್ಲಿ ಕೂಡ ಆತ್ಮಾವಲಂಬಿಯಾಗಿ ಬಾಳಿಕೊಂಡಿರಲು ಕರ್ನಾಟಕ ದೇಶಕ್ಕೆ ಸಾಧ್ಯವಲ್ಲದಿಲ್ಲವೆಂದು ನನಗೆ ದೃಢವಾದ ನಂಬುಗೆಯಿದೆ. ಮುಂದಿನ ಬೆಳವಣಿಗೆಯ ಅವಕಾಶಗಳಂತೂ ಬೇಕಾದಷ್ಟು ಇದ್ದೇ ಇವೆ. ಈಗಿನ ಮದ್ರಾಸು ಬೊಂಬಾಯಿ ಪ್ರಾಂತಗಳೊಡನೆ ಹೋಲಿಸಿದರೆ ಕರ್ನಾಟಕ ಪ್ರಾಂತ್ಯವು ಎಷ್ಟೋ ಚಿಕ್ಕದಾಗುವುದೆಂಬುದು ನಿಜ. ಆದರೆ ಅದರಲ್ಲಿಯೂ ಒಂದು ಲಾಭವಿದೆ. ನಮ್ಮ ದೇಶದ ಹಿತಾಹಿತಗಳನ್ನು ಸೂಕ್ಷ್ಮವಾಗಿ ನೋಡಿಕೊಂಡು ಪರಿಹಾರಗಳನ್ನು ಕಲ್ಪಿಸಲು ಸಾಧ್ಯವಾಗುತ್ತದೆ.

ನಮ್ಮ ನಮ್ಮ ದೇಶದ ದೊಡ್ಡ ದೊಡ್ಡ ಹುದ್ದೆಗಳು ನಮ ನಮಗೇ ಸಿಕ್ಕಬೇಕು. ಮತ್ತು ಅಧಿಕಾರಸೂತ್ರಗಳೆಲ್ಲ ತಮ್ಮ ಕಯ್ಯಲ್ಲಿಯೇ ಇರಬೇಕೆಂದು ಕನ್ನಡಿಗರು ಬಯಸಿದರಾದರೆ ಅದೊಂದು ಅಕ್ಷಮ್ಯವಾದ ಅಪರಾಧವಾಗುವುದೆಂದು ನನಗೆ ತೋರುವುದಿಲ್ಲ. ಪ್ರತ್ಯೇಕ ಪ್ರಾಂತ್ಯವೇರ್ಪಟ್ಟುದಾದರೆ ಕೆಲಕೆಲವು ಪಂಗಡಗಳು ಮಾತ್ರ ಮುಂದೆ ಬಂದು ಅಲ್ಪ ಸಂಖ್ಯಾತರಾದ ಇತರರನ್ನು ತುಳಿಯುವರೆಂಬ ಭೀತಿಯು ಕೂಡ ಕೆಲವರನ್ನು ಪೀಡಿಸುತ್ತಿರುವಂತಿದೆ. ಆದರೆ ಇದು ಅಷ್ಟೊಂದು ಪ್ರಬಲವಾದ ಭಯಮೂಲವೆಂದು ನಾನು ಎಣಿಸುವುದಿಲ್ಲ. ಮದ್ರಾಸಿನಲ್ಲಿ ಉತ್ಪನ್ನವಾದ ಅಬ್ರಾಹ್ಮಣರ ತೀವ್ರವಾದ ಚಳುವಳಿಯೂ ಬ್ರಾಹ್ಮಣರ ಹುಟ್ಟಡಗಿಸಬೇಕೆಂಬ ದುರ್ಬುದ್ಧಿಯೂ ಕಾಲಾಂತರದಲ್ಲಿ ತಾನಾಗಿ ಬಲಗುಂದಿ ಸರಿಮಾರ್ಗಕ್ಕೆ ಬರುತ್ತಲಿಲ್ಲವೆ? ಕರ್ನಾಟಕದಲ್ಲಿಯೆ ಒಂದು ವೇಳೆಗೆ ಕೆಲವು ಪಂಗಡಗಳು ಮಾತ್ರ ಕೊಂಚ ಕಾಲ ಪರ್ಯಂತ ಮುಂದೆ ಬರುವುವೆಂದೆಣಿಸಿದರೂ ಒಂದಲ್ಲ ಒಂದು ದಿನ ಇತರರೂ ಮುಂದೆ ಬರಲು ಸಾಧ್ಯವಿದೆ. ಆದರೆ ಇಂತಹ ನಿರರ್ಥಕಭೀತಿಯಿಂದ ನಾವು ಪರಾಧೀನರಾಗಿಯೇ ಇರೋಣವೆಂದು ಬಯಸಿದೆವಾದರೆ, ಕಲ್ಪಾಂತದ ವರೆಗೂ ನಾವು ದಾಸ್ಯಪಂಕದಲ್ಲಿಯೇ ಕೊಳೆಯುತ್ತ ಬೀಳಬೇಕಾಗುವುದು. ಲಿಂಗಾಯತರು ಪ್ರಬಲವಾಗುವರೆಂಬ ವಾದವು ಗೊಡ್ಡು ಬೆದರಿಕೆಯೇ ಸರಿ. ಆ ಜನರೇ ಕರ್ನಾಟಕದಲ್ಲಿ ಬಹು ಸಂಖ್ಯಾತರಾಗಿದ್ದ ಬಳಿಕ, ಅವರೇ ಹೆಚ್ಚು ಹೆಚ್ಚಾಗಿ ಅಧಿಕಾರ ಸ್ಥಾನಗಳನ್ನು ಅಪೇಕ್ಷಿಸಿದರೂ, ಪಡೆದರೂ, ಅದರಲ್ಲಿ ಅನ್ಯಾಯವೇನಿದೆ? ಅದಕ್ಕಾಗಿ ಇತರರೂ ಏತಕ್ಕೆ ಕರುಬಬೇಕು? ಲಿಂಗಾಯತರಿಗೂ ಇತರರಿಗೂ ಮೊದಲಿಂದ ಅಂಥ ರಕ್ತಗತವಾದ ದ್ವೇಷವೇನೂ ಇರುವುದೆಂದು ನನಗೆ ತೋರುವುದಿಲ್ಲ. ಇರುವ ದ್ವೇಷವೂ, ಪೈಪೋಟಿಯೂ ಮುಖ್ಯವಾಗಿ ಸರ್ಕಾರದ ಹುದ್ದೆಗಳಿಗೆ ಸಂಸಂಧಪಟ್ಟುದು, ಮತ್ತು ಕೇವಲ ಇತ್ತೀಚಿನದೆಂದು ನಾನು ಎಣಿಸುತ್ತೇನೆ. ಸರ್ಕಾರದ ನವುಕರಿಗಳಿಗೂ ಮತ್ತು ಅವುಗಳ ಮಿತಿಮೀರಿದ ದೊಡ್ಡ ಸಂಬಳಸಾರಿಗಳಿಗೂ ಪ್ರಜೆಗಳ ಮೇಲೆ ನಡೆಸಬರುವ ನಿರಂಕುಶಾಧಿಕಾರಗಳಿಗೂ ನಮ್ಮ ಜನರು ಮರುಳಾಗಿ, ಎಲಬಿದ್ದ ಕುಲಗೆಟ್ಟು ಹೋಗಿರುವರು ಆದರೆ, ಪ್ರಜಾಮತವೇ ರಾಜನೀತಿಯಾಗಿಯೂ ಜೀವನಕ್ಕೆ ಸಾಕಾಗುವಷ್ಟು ಅತ್ಯಲ್ಪ ಸಂಬಳ ಪಡೆದು ಮಾಡುವ ಪ್ರಜಾಸೇವೆಯೇ ಸರ್ಕಾರದ ಹುದ್ದೆಯೆಂದೂ ತಿಳಿಯುತ್ತ ಇಂತಹ ದ್ವೇಷಾಸೂಯೆಗಳಿಗೆ ಅವಕಾಶವು ಬಹಳಮಟ್ಟಿಗೆ ಕಡಿಮೆಯಾಗುವುದೆಂದು ನನ್ನ ಭಾವನೆ.

ಇತರ ಪಂಗಡದವರಂತೆಯೇ ಲಿಂಗಾಯತರು ಕೂಡ ಕನ್ನಡ ಜನರೊಳಗಣ ಒಂದು ಪಂಗಡದವರು. ಕುಟಿಲಾತ್ಮರ ದುರ್ಬೋಧನೆಗಳಿಗೆ ಕಿವಿಗೊಟ್ಟು ಅವರು ತಮ್ಮವರಲ್ಲವೆಂದು ಇತರರು ಭ್ರಮಿಸಲಾಗದು. ಪರ ಪ್ರಾಂತ್ಯಗಳಲ್ಲಿರುವ ಸ್ವಜನರಿಗಿಂತ ಸ್ವದೇಶದಲ್ಲಿರುವ ಲಿಂಗಾಯತರೇ ತಮಗೆ ಅಧಿಕ ಆಪ್ತ ಬಂಧುಗಳೆಂದು ಬ್ರಾ

ಹ್ಮಣರು ತಿಳಿಯಬೇಕು. ಲಿಂಗಾಯತರು ಇತರ ಪಂಗಡಗಳ ವಿಷಯದಲ್ಲಿ ತಮ್ಮ ಉತ್ಕರ್ಷೆಯ ಕಾಲದಲ್ಲಿ ಕೂಡ ಕ್ರೂರವಾಗಿ ನಡೆದ ಉದಾಹರಣೆಗಳು ಪೂರ್ವ ಚರಿತ್ರೆಯಲ್ಲಿ ಎಲ್ಲಿಯೂ ಸಿಕ್ಕುವುದಿಲ್ಲ. ಪಕ್ಷಾಂತರದಲ್ಲಿ ಬ್ರಾಹ್ಮಣನಾದ ಪೇಶ್ವೆಯ ಕಡೆಯವರು ಶೃಂಗೇರಿಯ ಶ್ರೀಜಗದ್ಗುರುಗಳ ಮಠವನ್ನು ಕೊಳ್ಳೆ ಹೊಡೆದು ಶ್ರೀಸ್ವಾಮಿಗಳನ್ನು ದೇಶಭ್ರಷ್ಟರಾಗಿ ಮಾಡಿದುದನ್ನು ಕೇಳಿ ವ್ಯಸನಪಟ್ಟು ಇಕ್ಕೇರಿಯ ಲಿಂಗಾಯತ ರಾಜನು ಅವರನ್ನು ಗೌರವಪುರಸ್ಸರವಾಗಿ ಸ್ವದೇಶಕ್ಕೆ ಬರಮಾಡಿಸಿ ಯಥೇಷ್ಟವಾದ ದ್ರವ್ಯವನ್ನು ಕೊಟ್ಟು ಶ್ರೀಮಠದ ಸಾಂಪತ್ತಿಕ ಸ್ಥಿತಿಯನ್ನು ಉತ್ತಮಗೊಳಿಸಿದ ಬಗ್ಗೂ ಇನ್ನಿತರ ಬ್ರಾಹ್ಮಣ ದೇವಾಲಯಗಳಿಗೆ ಉದಾರವಾದ ಉಂಬಳಿ ದತ್ತಿಗಳನ್ನು ಬಿಟ್ಟು ಬ್ರಾಹ್ಮಣ ವಿದ್ವಾಂಸರನ್ನು ಅಗ್ರಹಾರಾದಿ ದಾನಗಳಿಂದ ಸಂತುಷ್ಟಗೊಳಿಸಿದ ಬಗ್ಗೂ ಬೇಕಾದಷ್ಟು ಆಧಾರಗಳು ಶಾಸನಗಳಲ್ಲಿಯೂ ಇತಿಹಾಸ ಗ್ರಂಥಗಳಲ್ಲಿಯೂ ದೊರಕುತ್ತವೆ. ಹಿಂದೆ ಲಿಂಗಾಯತರು ಚಿಕ್ಕ ದೊಡ್ಡ ರಾಜ್ಯಗಳನ್ನು ಕಟ್ಟಿ ರಾಜಪುರುಷರಾಗಿಯೂ ವಿದ್ವಾಂಸರಾಗಿಯೂ ಕವಿಗಳಾಗಿಯೂ ಕಲಾಕುಶಲರಾಗಿಯೂ ಲಕ್ಷ್ಮೀಪುತ್ರರಾಗಿಯೂ ವರ್ತಕರಾಜರಾಗಿಯೂ ಸಮಾಜನಾಯಕರಾಗಿಯೂ ಮೆರೆದು ದೇಶದ ಮುಂದಾಳುಗಳಾಗಿ ಕರ್ನಾಟಕ ರಾಷ್ಟ್ರಕ್ಕೆ ತುಂಬಾ ಕೀರ್ತಿಯನ್ನು ತಂದರು. ಕಾಲಾಂತರದಲ್ಲಿ ದೈವಗತಿಯಿಂದ ಇವರ ಪ್ರಾಬಲ್ಯವು ಕುಂದಿ ವಾಣಿಜ್ಯವೊಂದೇ ಇವರ ಮುಖ್ಯ ಕಾಯಕವಾಗಿ ನಿಂತಿತು. ಈಗ ಸುಮಾರು ೨೫ ವರ್ಷಗಳಿಂದೀಚೆಗೆ ಈ ಜನರಲ್ಲಿ ಬಲವಾದ ಜಾಗೃತಿಯುಂಟಾಗಿ ಪೂರ್ವದ ತಮ್ಮ ಪ್ರಾಮುಖ್ಯತೆಯನ್ನು ಪುನಃ ಪಡೆದುಕೊಳ್ಳಲು ಪ್ರಯತ್ನಗಳು ನಡೆಯುತ್ತಲಿವೆ. ನನಗಾದರೆ ಇದೊಂದು ಸಂತೋಷದ ವಿಷಯವೇ ಸರಿ. ಎಷ್ಟೋ ಕಾಲದಿಂದ ಇದನ್ನೇ ನಾನು ಇದಿರು ನೋಡುತ್ತಿದ್ದೆನು. ವೀರಶೈವರ ಸರ್ವತೋಮುಖವಾದ ಉನ್ನತಿಯೇ ಕರ್ನಾಟಕದ ಉನ್ನತಿಯೆಂದು ನಾನು ತಿಳಿದಿದ್ದೇನೆ. ಹೆಚ್ಚೇಕೆ? ಕರ್ನಾಟಕ ಏಕೀಕರಣದ ಈ ಚಳುವಳಿಯು ಕೂಡ ಲಿಂಗಾಯತರ ಕೈಗೆ ಬಂದ ಬಳಿಕವೇ ಅವರ ಬೆಂಬಲದಿಂದಲೇ ತುಂಬ ಪುಷ್ಟವಾಗಿ ಬೆಳೆದಿದೆಯೆಂದು ನಾನು ಎಣಿಸುತ್ತೇನೆ.

## ನರಗುಂದದಲ್ಲಿ ವ್ಯಾಖ್ಯಾನ.

ಇಲ್ಲಿಯ ಶ್ರೀಮದ್ವೀರಶೈವ ಸಮಾಜೋನ್ನತಿ ಸಂಘದ ವತಿಯಿಂದ ತಾ. ೨೨-೧೦-೩೮ ನೇ ಶನಿವಾರ ಸಾಯಂಕಾಲಕ್ಕೆ ವಿರಕ್ತ ಮಠದಲ್ಲಿ ಶ್ರೀಮನ್ನಿರಂಜನ ಬಸವಲಿಂಗ ಸ್ವಾಮಿಗಳವರು ಗವಿಮಠ ಇವರು ಹಿಂದು ಸಂಘಟನೆಯ ಬಗ್ಗೆ ಮಾತನಾಡುತ್ತ ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು—

"ಇಡೀ ಜಗತ್ತಿನಲ್ಲಿ ೧೫೦ ಕೋಟಿ ಜನ ಸಂಖ್ಯೆಯುಂಟು. ಇದರಲ್ಲಿ ೫ ಕೋಟಿ ಜನರು ಕಾಡುಜನರುಂಟು. ಒಟ್ಟು ಜನಸಂಖ್ಯೆಯಲ್ಲಿ ೪೮ ಕೋಟಿ ಗೌತಮ ಬುದ್ಧನ ಅನುಯಾಯಿಗಳು, ೪೦ ಕೋಟಿ ಕ್ರಿಶ್ಚಿಯನ್‌ರು, ೨೫ ಕೋಟಿ ಇಸ್ಲಾಮಿ ಧರ್ಮದವರು ೨೫ ಕೋಟಿ ಹಿಂದುಗಳು ಇರುತ್ತಾರೆಂದು ನಾವೆಲ್ಲರು ತಿಳದುಕೊಂಡಿರುತ್ತೇವೆ. ಆದರೆ ಹಿಂದುಗಳ ಸಂಖ್ಯೆಯು ಇತ್ತಿತ್ತಲಾಗಿ ಕ್ಷೀಣವಾಗುತ್ತ ಬಂದಿದೆ. ಇದಕ್ಕೆ ಕಾರಣ ನಮ್ಮ ಹಿಂದುಗಳಲ್ಲಿಯ ಅನೈಕ್ಯತೆಯೇ ಮುಖ್ಯವಾದದ್ದು. ಈ ಅನೈಕ್ಯತೆಗೆ ನಮ್ಮಲ್ಲಿರುವ ೨೧೭ ಜಾತಿಗಳ ಹಾಗು ಉಪಜಾತಿಗಳ ಕಲಹವೇ ಮುಖ್ಯ ಹೇತುವಾಗಿದೆ. ಈ ಜಾತಿಗಳ ಕಲಹ ಹೋಗಿ ನಮ್ಮಲ್ಲಿ ಐಕ್ಯತೆಯುಂಟಾಗಬೇಕಾದರೆ ನಮ್ಮಲ್ಲಿ ಸಂಘ ಶಕ್ತಿಯೇ ಬೇಕೆಂದು ನಮ್ಮ ಹಿರಿಯರು ಕಲಿಯುಗದಲ್ಲಿ ಸಂಘಶಕ್ತಿಗೆ ಹೆಚ್ಚು ಪ್ರಾಧಾನ್ಯ ಕೊಟ್ಟಿರುತ್ತಾರೆ. ಈ ಹಿಂದುಗಳಲ್ಲಿ ಬ್ರಾಹ್ಮಣರ ಮತ್ತು ಲಿಂಗಾಯತರೂ ಮತಾಂತರ ಹೊಂದುತ್ತಿದ್ದಾರೆ. ಈ ಜಾತಿಯ ಧರ್ಮಗುರುಗಳು ಸುಮ್ಮನೆ ಕೂತು ಆರಾಮ ಚೈನಿಗಳಲ್ಲಿ ಪ್ರವರ್ತರಾಗಿ ಹಿಂದು ಧರ್ಮದ ಅಭಿಮಾನ ಶೂನ್ಯರಾಗಿರುವರು. ಇನ್ನು ಕೆಲವು ದಿವಸಗಳಲ್ಲಿ ಹೀಗೆಯೇ ಹೋದದ್ದಾದರೆ ಹಿಂದು ಸಮಾಜವು ರಸಾತಳಕ್ಕೆ ಹೋಗುವುದು ನಿಶ್ಚಯ. ಅದೇ ಕ್ರಿಶ್ಚನ್ ಸಮಾಜದಲ್ಲಿ ೭೦೦ ಸಂಘಗಳೂ ೨೭ ಸಾವಿರ ಜನರು ಕಾರ್ಯ ಮಾಡುವವರಿರುವುದರಿಂದ ದಿನೇ ದಿನೇ ರಕ್ತ ಬೀಜನವಂಶವು ವೃದ್ಧಿಯಾದಂತೆ ಕ್ರಿಶ್ಚನ್ ಸಮಾಜವು ಬೆಳೆಯುಹತ್ತಿದೆ. ಇದು ಅವರಲ್ಲಿರುವ ಸಂಘಶಕ್ತಿ ಕಾರ್ಯದಕ್ಷತೆಯೇ ಕಾರಣವಾಗಿದೆ. ಹಿಂದುಗಳಾದ ನಾವು ಇವರಲ್ಲಿರುವ ಸಮಾಜದ ಅಭಿಮಾನವನ್ನು ತಾಳುವದುತ್ತಮವೆಂದು ಎಂದೂ ಮರೆಯತಕ್ಕದ್ದಲ್ಲ. ಪ್ರಯುಕ್ತ ಹಿಂದುಗಳೆಲ್ಲರೂ ಸುಸಂಘಟಿತರಾಗಿ ನಮ್ಮ ಸಮಾಜದ ಏಳಿಗೆಯಾಗುವಂತೆ ಪ್ರಯತ್ನಿಸಿರೆಂದು ೨-೩ ತಾಸುಗಳ ವರೆಗೆ ತಿಳಿಸಿಹೇಳಿದರು. ನಂತರ ಕೆ. ಎಸ್. ಹುಡೇದ ಇವರು ಸಮಾರೋಪಣ ಭಾಷಣ ಮಾಡಿ ಶ್ರೀಗಳ ಆಭಾರ ಮನ್ನಿಸಿ ಅಂದಿನ ಕಾರ್ಯ ಪೂರ್ತಿಗೊಳಿಸಿದರು.

ತಾ. ೨೩-೧೦-೩೮ ನೆಯ ದಿವಸ ಸಂಜೆ ೫ ಗಂಟೆಗೆ ವಿರಕ್ತ ಮಠದಲ್ಲಿ ಕೂಡಿದ ಜನ ಸಂದೋಹಕ್ಕೆ ಶ್ರೀಗಳು ಲಕ್ಷ್ಮೀ ಪೂಜೆಯ ಬಗ್ಗೆ ಮಾತನಾಡುತ್ತ ಆರ್ಥಿಕ ಸುಧಾರಣೆಯು ಆಗಬೇಕಾದರೆ ನಮ್ಮಲ್ಲಿ ಉದ್ಯೋಗವು ನೆಲೆಗೊಳ್ಳಬೇಕು, ಉದ್ಯೋಗದಿಂದ ಸಂಪತ್ತು ಶಾರೀರಕ ಸುಖ ಬೆಳೆಯುವದಲ್ಲದೆ ಮನಸ್ಸು ಶುದ್ಧಿಯಾಗುವದು. ಅಂತೇ ಶಿವಶರಣರು ಈ ಉದ್ಯೋಗಕ್ಕೆ ಧರ್ಮರೂಪ ಕೊಟ್ಟು ಕಾಯಕವೇ ಕೈಲಾಸವೆಂದು ನಂಬಿ ೮೦೦ ವರ್ಷಗಳ ಹಿಂದೆ ಅನೇಕ ರಾಜಾಧಿರಾಜರು ತಮ್ಮ ರಾಜವೈಭವದಲ್ಲಿದ್ದು ಮೆರೆಯುವದು ಸದಾಚಾರವಲ್ಲವೆಂದರಿತು ರಾಜ ವೈಭವವನ್ನು ತ್ಯಜಿಸಿ ಕಲ್ಯಾಣಕ್ಕೆ ಬಂದು ಕಾಯಕದಿಂದಲೇ ಅತಿಥಿ ಸತ್ಕಾರ ಮಾಡುತ್ತ ನಿಜೈಕ್ಯ ಸುಖಕ್ಕೆ ಭಾಗಿಗಳಾಗಿಹೋದರು. ಇತ್ತಿತ್ತಲಾಗಿ ನಮ್ಮಲ್ಲಿಯ ಸದ್ಯೋಗಿತನಕ್ಕೆ ಕೈಕೆಲಸಗಳು ಹಾಳಾಗಿಹೋಗಿ ಗಿರಣಿಗಳ ಬಾಯಿಗೆ ತುತ್ತಾಗಿ ಹೆಸರಿಗೆ ಮಾತ್ರ ಉಳಿದವು. ಎಂದಿಗೆ ಕೈಕೆಲಸಗಳು ಮುಗ್ಗಿದವೋ ಅಂದಿನಿಂದ ದೇಶಿ ವಸ್ತುಗಳಲ್ಲಿರುವ ಪ್ರೇಮವು ಹಾಳಾಗಿ ಹೋಗಿ ಪರದೇಶಿ ವಸ್ತುಗಳಲ್ಲಿಯ ಪ್ರೇಮವು ಹೆಚ್ಚಾಗಿ ಅವುಗಳಿಗಾಗಿ ನಮ್ಮಲ್ಲಿಯ ದುಡ್ಡು ಗಂಗಾ ನದಿಯಂತೆ ಹರಿದು ಪರದೇಶಕ್ಕೆ ಹೋಗಹತ್ತಿದ್ದರಿಂದ ನಾವು ನಿರ್ಧನಿಕರಾಗಿ ಈ ದಿವಸವುಂಟಾದ ಲಕ್ಷ್ಮೀ ಪೂಜಾದಲ್ಲಿ ಧನಿಕರಾಗಿ ಹಣವನ್ನು ಪೂಜಿಸದೆ ಲಕ್ಷ್ಮಿಯ ೨ ದುಡ್ಡಿನ ಫೋಟೋ ಪೂಜಿಸುವುದು ನಮ್ಮ ಪಾಲಿಗೆ ಬಂದಿದೆ. ಇದೆಲ್ಲಕ್ಕೂ ನಾವೇ ಕಾರಣರೆಂಬುವದನ್ನು ಯಾರೂ ಮರೆಯತಕ್ಕದ್ದಲ್ಲ. ಇಂದು ನಾವೆಲ್ಲರು ಪರದೇಶಿ ವಸ್ತುಗಳಿಗೆ ಮೋಸಹೋಗದೆ ಉದ್ಯೋಗಿಗಳಾಗಿ ಕೈಗಾರಿಕೆಯ ಕಾರ್ಯಗಳನ್ನು ಮುಂದೆ ತರಲು ಪ್ರತಿಯೊಬ್ಬ ಭಾರತೀಯನು ತನು ಮನ ಧನದಿಂದ ಸಾಹಸಪಟ್ಟರೆ ಹಿಂದೆ ನಮಗುಂಟಾದ ಸ್ಥಿತಿಯೇ ಈಗ ನಮಗುಂಟಾಗಿ ಸುಖಿಗಳಾಗುತ್ತೇವೆಂದು ಆಬಾಲ ವೃದ್ಧರಿಗೂ ತಿಳಿಯುವಂತೆ ಬೋಧಿಸಿದರು. ನಂತರ ಗೌರೀ ಶಂಕರ ಶಾಸ್ತ್ರಿಗಳು ಸಮಾರೋಪಣ ಮಾಡಿ ಶ್ರೀಗಳ ಆಭಾರ ಮನ್ನಿಸಿ ಅಂದಿನ ಕಾರ್ಯ ಪೂರ್ತಿಗೊಳಿಸಿದರು. ತಾ. ೨೫ ನೇ ದಿವಸ ಸಂಜೆ ೫ ಗಂಟೆಗೆ ವಿರಕ್ತ ಮಠದಲ್ಲಿ ಕೂಡಿದ ಜನಸಂದಣಿಗೆ ಶ್ರೀಗಳು ಭಕ್ತಿ ಜ್ಞಾನ ವೈರಾಗ್ಯ ಈ ಬಗ್ಗೆ ಹೇಳುತ್ತಾ ಈ ಮೂರರಲ್ಲಿ ಭಕ್ತಿಯೇ ಕಲಿಯುಗದಲ್ಲಿ ಪ್ರಾಧಾನ್ಯವೆಂದು ಹೇಳಿ ಯಾವತ್ತರನ್ನು ಸಂತೋಷಪಡಿಸಿದರು. ನಂತರ ಈ ಸಂಘದ ಪಾಠಶಾಲಾಧ್ಯಾಪಕರಾದ ಗೌರಿ ಶಂಕರ ಶಾಸ್ತ್ರಿಗಳು ಈ ಸಂಘದ ವತಿಯಿಂದ ಶ್ರೀಗಳವರ ಆಭಾರ ಮನ್ನಿಸಿ ಆ ದಿನ ಕಾರ್ಯ ಪೂರ್ತಿಗೊಳಿಸಿದರು.

ಓರ್ವ ಸಭಿಕ.

## ಕಲ್ಕತ್ತಾ ಸಂಸ್ಕೃತ ಪರೀಕ್ಷೆಗಳು.

### ಕೇಂದ್ರ ಯಾದಗಿರಿ.

ಕಲಕತ್ತಾ ಗವ್ಹರ್ನ ಮೆಂಟಿನ ಆಡಳಿತಕ್ಕೆ ಒಳಪಟ್ಟ ಸಂಸ್ಕೃತ ಅಸೋಸಿಏಶನ್ನಿನ . ಆದ್ಯ ಮತ್ತು ಮಧ್ಯಮ ಎಲ್ಲಾ ವಿಷಯಗಳ ಕೇಂದ್ರವು ಶಂಕರ ಸಂಸ್ಕೃತ ಕಾಲೇಜಿನಲ್ಲಿ ಆಗಿರುತ್ತದೆ. ಫಾರ್ಮುಗಳನ್ನು ತುಂಬುವ ಅವಧಿಯು ನವ್ಹಂಬರ ೩೦ ನೇ ತಾರೀಖಿನ ವರೆಗೆ ಇರುತ್ತದೆ. ಬೇಕಾದವರು ಆವೇದನ ಪತ್ರವನ್ನು ತರಿಸಿಕೊಳ್ಳಬಹುದು. ಎಲ್ಲಾ ಜಾತಿಯವರಿಗೂ ಊಟದ ಮತ್ತು ವಸತಿಯವ್ಯವಸ್ಥೆಯನ್ನು ಮಾಡಲಾಗಿದೆ. ಹೆಚ್ಚಿನ ಮಾಹಿತಿ ಬೇಕಾದವರು ಕೆಳಗಿನ ಹೆಸರಿಗೆ ಬರೆದು ತಿಳಕೊಳ್ಳಬಹುದು.

ಪ್ರಿನ್ಸಿಪಾಲ ಚಂದ್ರಶೇಖರ ಶಾಸ್ತ್ರಿ.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ, ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

# The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಿಗೂ ಅಂಜುವವನಲ್ಲ!
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೮ | ಆಲಮಟ್ಟಿ- ಸೋಮವಾರ ತಾರೀಖು ೨೭ ನೆಯ ನವ್ಹಂಬರ್ ೧೯೩೮. | ಸಂಚಿಕೆ೧೪

ಜನಸೇವೆಯೇ ದೇವರಸೇವೆ.

## 'ಪಾರತಂತ್ರ್ಯದ ಪಾಶ ಹರಿಯಿರಿ.'

### ಪಂಡಿತ ಜವಾಹರಲಾಲ ನೆಹರುರವರು

**ಸಂಸ್ಥಾನಗಳ ಸತ್ಯಾಗ್ರಹಿಗಳಿಗೆ ಹೀಗೆ ಹೇಳಿದರು-**

**"ಪಾರತಂತ್ರ್ಯದ ಪಾಶ ಹರಿಯಲು ಹೋರಾಡುವುದು ಮಾನವನ ಕರ್ತವ್ಯವಾಗಿದೆ."**

### ಸೇನಾಪತಿ ಬಾಪಟರ ವೀರ ಸೈನ್ಯ.

**ನಿಜಾಮ ರಾಜ್ಯದ ಸತ್ಯಾಗ್ರಹಕ್ಕೆ ಸೇನಾಪತಿ ಬಾಪಟರವರು**
**ಮಹಾರಾಷ್ಟ್ರದಿಂದ ಆರು ತಿಂಗಳುಗಳಲ್ಲಿ**
**೧೪೪೦೦ ಸತ್ಯಾಗ್ರಹಿಗಳನ್ನು ಕಳಿಸುವ**
**ಸಿದ್ಧತೆಯನ್ನು ನಡೆಸಿದ್ದಾರೆ.**

### ಹುಬ್ಬಳ್ಳಿ ಮುನಸಿಪಾಲ್ಟಿ ಇದೇ ಡಿಶೆಂಬರ್‌ದಿಂದ

**ಒಂದು ವರುಷದ ವರೆಗೆ ರದ್ದಾಯಿತು.**

ದೇಶಸೇ



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೮ | ಆಲಮಟ್ಟಿ- ಸೋಮವಾರ ತಾರೀಖು ೨೧ ನೆಯ ನವ್ಹಂಬರ ೧೯೩೮. | ಸಂಚಿಕೆ೧೪

## ಮಹತ್ವದ ಸುದ್ದಿಗಳು.

—ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಡಿಶಂಬರ್ ೮ ನೆಯ ತಾರೀಖಿನಿಂದ ವರ್ಧಾದಲ್ಲಿ ಕೂಡುವುದು. ಅನಂತರ ರಾಷ್ಟ್ರಾಧಿಪತಿಗಳಾದ ಬಾಬು ಸುಭಾಷಚಂದ್ರ ಬೋಸರು ಮದ್ರಾಸ ಪ್ರಾಂತದ ಸಂಚಾರ ಹೊರಡುವರು.

—ಹುಬ್ಬಳ್ಳಿ ಮುನಸಿಪಾಲ್ಟಿಯು ಇದೇ ಡಿಶಂಬರ್ ತಿಂಗಳಿಂದ ಒಂದು ವರ್ಷದ ವರೆಗೆ ರದ್ದಾಯಿತು. ಇದರ ಕಾರಭಾರವು ಶ್ರೀ. ವೆಂಕಟಪತಿ ಐ. ಸಿ. ಎಸ್. ಇವರ ನೇತೃತ್ವದಲ್ಲಿ ಜರುಗುವುದು.

—ರಾಜಕೋಟೆ ಸಂಸ್ಥಾನದಲ್ಲಿ ಸತ್ಯಾಗ್ರಹವು ಹಳ್ಳಿಗಳಲ್ಲಿ ಕೂಡಾ ಪ್ರಾರಂಭವಾಗಿದೆ. ಬೇರೆ ಬೇರೆ ಹಳ್ಳಿಗಳಲ್ಲಿ ಒಟ್ಟು ೩೦ ಸ್ವಯಂಸೇವಕರನ್ನು ಸೆರೆ ಹಿಡಿದಿದ್ದಾರೆ.

—ಜಪಾನವು ಚೀನ ದೇಶದ ದಕ್ಷಿಣ ಭಾಗವನ್ನು ಹೆಚ್ಚಾಗಿ ಆಕ್ರಮಿಸಿಕೊಳ್ಳುತ್ತಲಿದೆ. ಚೀನಿ ಸೈನಿಕರು ತಾವು ಓಡಿ ಹೋಗುವಾಗ ಹಳ್ಳಿಗಳಿಗೆ ಬೆಂಕಿ ಹಚ್ಚಿ ಹೋಗುತ್ತಿದ್ದಾರೆ. ಹೀಗೆ ೧೫೦ ಮೈಲು ವಿಸ್ತಾರವಾದ ಪ್ರದೇಶದಲ್ಲಿರುವ ಹಳ್ಳಿಗಳೆಲ್ಲಾ ಸುಟ್ಟು ಹೋಗಿ ಆ ಪ್ರದೇಶವು ಜಪಾನಿನ ಅಧೀನವಾಯಿತು.

—ವಿದುರಾಶ್ವತ್ಥದ ಅನಾಹುತಕ್ಕೆ ಜಿಲ್ಲಾ ಮ್ಯಾಜಿಸ್ಟ್ರೇಟರಾದ ಶ್ರೀ. ಅಪ್ಪಾಜಿ ಗೌಡರ ಅಂಧ ಪ್ರಭುತ್ವವೇ ಕಾರಣವೆಂದೂ ಅಜ್ಞ ಜನರನ್ನು ಹುರಿದುಂಬಿಸುವ ಕಾಂಗ್ರೆಸ್ಸಿನವರ ಭಾಷಣಗಳೂ ಕಾರಣವೆಂದೂ ವಿದುರಾಶ್ವತ್ಥ ವಿಚಾರಣಾ ಸಮಿತಿಯ ವರದಿಯಲ್ಲಿ ಹೇಳಲಾಗಿದೆ.

—ವಿಜಾಪುರ ಜಿಲ್ಲೆಯಲ್ಲಿ ಈ ತಿಂಗಳ ೨೦ ನೆಯ ತಾರೀಖಿನಿಂದ ೨೯ ನೆಯ ತಾರೀಖಿನ ವರೆಗೆ ಮುಂಬೈ ಸರಕಾರದ ಕಂದಾಯ ಶಾಖೆಯ ಉಪಮಂತ್ರಿಗಳಾದ ಶ್ರೀ. ಎಂ. ಪಿ. ಪಾಟೀಲರು ಸಂಚಾರಮಾಡುವರು.

—ಆರ್ಯ ಸಮಾಜದ ಒಬ್ಬ ಪ್ರಮುಖ ವ್ಯಕ್ತಿಗಳಾದ ಮಹಾತ್ಮಾ ಹಂಸರಾಜ ಇವರು ಕಳೆದ ೧೫ ನೆಯ ತಾರೀಖಿನ ದಿವಸ ನಿಧನ ಹೊಂದಿದರೆಂದು ತಿಳಿಸಲು ತುಂಬಾ ವಿಷಾದವಾಗುತ್ತದೆ. ಇವರು ಲಾಲಾ ಲಜಪತರಾವ, ಸ್ವಾಮಿ ಶ್ರದ್ಧಾನಂದರೊಂದಿಗೆ ಆರ್ಯಸಮಾಜದ ಮಹತ್ಕಾರ್ಯಗಳನ್ನು ಮಾಡಿದವರು. ಮರಣ ಸಮಯದಲ್ಲಿ ಇವರಿಗೆ ೮೦ ವರುಷಗಳಾಗಿದ್ದವು.

—ಪ್ಯಾಲಿಸ್ಟಾಯಿನ್ ರಕ್ಷಣೆಗಾಗಿ ಬ್ರಿಟಿಶ್ ಸರಕಾರದಿಂದ ೭೩೦೦ ವೈಮಾನಿಕರು ೭೭೦ ಪೋಲಿಸರು ೧೫೫೦೦ ಸೈನಿಕರು ಇದ್ದಾರೆಂದೂ ವೈಮಾನಿಕ ದಲಕ್ಕೆ ತಿಂಗಳಿಗೆ ಮೂರು ಸಾವಿರ ಪೌಂಡು ಮತ್ತು ಸೈನ್ಯ ಶಾಖೆಗೆ ೧||| ಲಕ್ಷ ಪೌಂಡು ವೆಚ್ಚವಾಗುತ್ತವೆಂದೂ ಕಾಮನ್ಸ ಸಭೆಯಲ್ಲಿ ಮಿ. ಮಾಲ್ಕಂ ಮೆಕಡೊನೆಲ್ಡರರವರು ಹೇಳಿದರು.

—ಬಳ್ಳಾರಿಯಲ್ಲಿ ಕೂಡುವ ಕನ್ನಡ ಸಾಹಿತ್ಯ ಸಮ್ಮೇಲನಕ್ಕೆ ಪ್ರಸಿದ್ಧ ಸಾಹಿತಿಗಳೂ ರಾಷ್ಟ್ರಭಕ್ತರೂ ಆದ ಶ್ರೀ. ರಂಗನಾಥರಾವ ದಿವಾಕರರನ್ನು ಅಧ್ಯಕ್ಷರನ್ನಾಗಿ ಆರಿಸಿದ್ದಾರೆ.

—ವರ್ಧಾ ಶಿಕ್ಷಣ ಯೋಜನೆಯ ಪ್ರಕಾರ ಸೇಗಾವದಲ್ಲಿ ಕಳೆದ ೧೪ ನೆಯ ತಾರೀಖಿನ ದಿವಸ ಪ್ರಾಥಮಿಕ ಟ್ರೇನಿಂಗ್ ಸ್ಕೂಲಿನ ಉದ್ಘಾಟನ ಸಮಾರಂಭ ಜರುಗಿತು. ಈಗ ಈ ಶಾಲೆಯಲ್ಲಿ ೧೨ ವಿದ್ಯಾರ್ಥಿಗಳಿದ್ದಾರೆ.

—ಮುಖ್ಯ ಮಂತ್ರಿಗಳಾದ ಶ್ರೀ. ಖೇರರು ಡಿಶಂಬರ್ ೪ ನೆಯ ತಾರೀಖಿನಿಂದ ಕರ್ನಾಟಕದ ಪ್ರವಾಸವನ್ನು ಪ್ರಾರಂಭಿಸುವರೆಂದು ತಿಳಿದಿದೆ.

—ಮುಂಬೈ ಅಸೆಂಬ್ಲಿಯಲ್ಲಿ ಶ್ರೀ. ಜಕಾತಿಯವರು ಕನ್ನಡದಲ್ಲಿ ಕೇಳಿದ ಪ್ರಶ್ನೆಗೆ ಮುಖ್ಯ ಮಂತ್ರಿಗಳಾದ ಶ್ರೀ. ಖೇರರು ಕನ್ನಡದಲ್ಲಿಯೇ ಉತ್ತರ ಕೊಟ್ಟರು.

—ಗಡಿನಾಡಿನ ಬನ್ನು ಜಿಲ್ಲೆಯಲ್ಲಿ ನಡೆದ ಅತ್ಯಾಚಾರಗಳ ವಿಚಾರಣೆಗಾಗಿ ಒಂದು ಸಮಿತಿಯನ್ನು ಏರ್ಪಡಿಸಬೇಕೆಂಬ ಗೊತ್ತುವಳಿಯು ಗಡಿನಾಡಿನ ಅಸೆಂಬ್ಲಿಯಲ್ಲಿ ಬಿದ್ದು ಹೋಯಿತು.

# ಮುಸ್ಲಿಂಲೀಗಿನ ಪಾಕಿಸ್ಥಾನದ ವಿರೋಧ.

## "ನಾನು ಸರ್ಪವನ್ನು ಜೋಪಾನ ಮಾಡಿದೆ."

—ಮಹಾತ್ಮಾ ಗಾಂಧಿ.

ಲೋಣಾವಳದಲ್ಲಿ ಕೂಡಿದ್ದ ಹಿಂದು ಮಹಾಸಭೆಯ ಜಿಲ್ಲಾ ಸಂಯುಕ್ತ ಅಧಿವೇಶನದ ಕಾಲಕ್ಕೆ ಮುಸ್ಲಿಂಲೀಗಿನ ಕರಾಚಿ ಅಧಿವೇಶನದಲ್ಲಾದ ಮುಸಲ್ಮಾನ್ ಫೆಡರೇಶನ್ನಿನ ಗೊತ್ತುವಳಿಯನ್ನು ಖಂಡಿಸುವ ಒಂದು ನಿರ್ಣಯವು ಶ್ರೀಯುತ ನರಸಿಂಹ ಚಿಂತಾಮಣ ಕೇಳಕರರಿಂದ ತರಲ್ಪಟ್ಟಿತು. ಆ ಕಾಲಕ್ಕೆ ಶ್ರೀ. ಕೇಳಕರರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು.—

"ಬ್ಯಾ. ಜಿನ್ನಾರವರು ಈಗ ಮುಸಲ್ಮಾನರಿಗಾಗಿಯೇ ಒಂದು ಪ್ರತ್ಯೇಕ ಫೆಡರೇಶನ್ ಬೇಕೆಂದು ಹೇಳುತ್ತಿರುವುದು ಹೊಸದೇನೂ ಅಲ್ಲ. ಮುಸಲ್ಮಾನರ ಧೋರಣ ಮೊದಲಿನಿಂದಲೂ ಹೀಗೆಯೇ ಇದೆ. ಅವರು ಹಿಂದುಸ್ಥಾನದಲ್ಲಿ ಒಂದು ಪಾಕಿಸ್ಥಾನವನ್ನು ನಿರ್ಮಾಣ ಮಾಡಬೇಕೆಂದೇ ಮೊದಲಿನಿಂದಲೂ ಪ್ರಯತ್ನಿಸುತ್ತಿದ್ದಾರೆ. ಪೇಶಾವರದ ಮುಖ್ಯ ಮಂತ್ರಿಗಳಾಗಿದ್ದ ದಿವಂಗತ ಸರ್. ಅಬದುಲ್ ಕಾಯೂಮ ಇವರು ಮುಸಲ್ಮಾನರಿಗಾಗಿ ಒಂದು ಪ್ರತ್ಯೇಕ ಫೆಡರೇಶನ್ ಬೇಕೆಂದು ಹೇಳಿದ್ದರು.

**ಹಿಂದುಗಳ ದಡ್ಡತನ.**

ಮುಸಲ್ಮಾನರ ಕಾರಸ್ಥಾನವು ಬಹು ಜನ ಹಿಂದುಗಳಿಗೆ ತಿಳಿದಿಲ್ಲ. ಮುಸಲ್ಮಾನರಿಗೆ ನಾವೇ ಮೊದಲಿನಿಂದಲೂ ಸುಮ್ಮನೇ ಮಹತ್ವವನ್ನು ಕೊಡುತ್ತಾ ಬಂದಿದ್ದೇವೆ. ಅದರಿಂದಲೇ ಅವರು ಇಷ್ಟು ಮೇಲಕ್ಕೆ ಬಂದಿದ್ದಾರೆ. ಮೊದಲು ಕಾಂಗ್ರೆಸ್ ಕೂಡುತ್ತಿದ್ದಾಗ ಮುಸಲ್ಮಾನರಿಗೆ ಪ್ರಾರ್ಥನೆಯ ಸಮಯವೆಂದು ಕಾಂಗ್ರೆಸ್ಸಿನ ಕಾರ್ಯಕ್ರಮಗಳನ್ನು ಆಗ ನಿಲ್ಲಿಸುತ್ತಿದ್ದರು. ಖಿಲಾಫತ್ತಿನ ಚಟುವಟಿಕೆಯಲ್ಲಿ ಹಿಂದುಗಳು ಮುಸಲ್ಮಾನರ ಹಿಂಬಾಲಿಸಿ ಅವರನ್ನು ಬಲಪಡಿಸಿದರು. ಅಲ್ಲಿಬಂಧುಗಳು ಗಾಂಧೀಜಿಯವರ ಎರಡು ಹಸ್ತಗಳಾಗಿಯೇ ಇದ್ದರು! ನೀವು ಹುಲಿ ಮರಿಗಳನ್ನು ಅಪ್ಪಿಕೊಂಡಿರುವಿರೆಂದು ಆಗ ನಾವು ಅವರಿಗೆ ತಿಳಿಸಿದೆವು. ನಮ್ಮ ಮಾತು ಅವರಿಗೆ ಆಗ ಸರಿತೋರಲಿಲ್ಲ.

ಗಾಂಧೀಜಿಯವರು ಸ್ವರಾಜ್ಯವನ್ನು ದೂರಮಾಡಿ ಮೌ. ಮಹಮ್ಮದ ಅಲ್ಲಿ ಮೌ. ಶೌಕತ ಅಲ್ಲಿಗಳನ್ನು ಹತ್ತಿರ ಮಾಡಿಕೊಂಡರು. ಮುಸಲ್ಮಾನರು ನಮ್ಮಿಂದ ಶಕ್ಯವಿದ್ದ ಎಲ್ಲ ಸಹಾಯಗಳನ್ನೂ ಹೊಂದಿ ಬಲಪಟ್ಟು ನಮ್ಮ ಮೇಲೆ ಆಕ್ರಮಣ ಮಾಡಲಾರಂಭಿಸಿದರು. ಮೋಪಲ್ಲಾ ದೊಂಬಿಯೇ ಇದಕ್ಕೆ ಸಾಕ್ಷಿ. ಆಗ ಅನೇಕ ಹಿಂದುಗಳ ಕುಲ ಕೆಡಿಸಿದರು. ಕೋಕೋನಾಡಾ ಕಾಂಗ್ರೆಸ್ಸಿಗೆ ಮೌ. ಮಹಮ್ಮದ ಅಲ್ಲಿಯವರು ಅಧ್ಯಕ್ಷರಾಗಿದ್ದರಷ್ಟೆ. ಅವರು ದಿವಂಗತ ಪಂಡಿತ ವಿಷ್ಣು ದಿಗಂಬರ ಇವರಿಗೆ ಈಶಸ್ತವನ ಮಾಡಲು ಅಡ್ಡಿ ಮಾಡಿದ್ದರು. ಆದರೆ ಅವರೇನೂ ಈಶಸ್ತವನ ಮಾಡದೆ ಬಿಡಲಿಲ್ಲ.

**ನಾನು ಹಾವನ್ನು ಸಾಕಿದೆನು!**

ಅಲ್ಲಿಬಂಧುಗಳೆಂಬ ಹುಲಿ ಮರಿಗಳನ್ನು ಗಾಂಧೀಜಿಯವರು ಅಪ್ಪಿಕೊಂಡಿರುವುದರಿಂದ ಅವು ಇವರ ಹೊಟ್ಟೆಯನ್ನು ಬಗಿಯದೆ ಬಿಡುವುದಿಲ್ಲವೆಂದು ನಾವು ಮೊದಲು ಹೇಳಿದ್ದ ಮಾತು ಅವರ ಅನುಭವಕ್ಕೂ ಬಂದಂತೆ ತೋರಿತು. ಅಲ್ಲಿಬಂಧುಗಳು ಕಾಂಗ್ರೆಸ್ಸಿನಲ್ಲಿ ಏಕೆ ಸೇರಿದ್ದರೆಂಬುದರ ಉದ್ದೇಶವು ಗಾಂಧೀಜಿಯವರಿಗೆ ಅನಂತರ ಗೊತ್ತಾಗಿ ಅವರು ಒಂದು ಪ್ರಸಂಗದಲ್ಲಿ ಹೀಗೆ ಹೇಳಿದರು—

"ನಾನು ಹಾವುಗಳಿಗೆ ಹಾಲು ಹಾಕಿ ಜೋಪಾನ ಮಾಡಿದೆನೆಂದು ಈಗ ನನಗೆ ಅನಿಸಹತ್ತಿದೆ."

**ಅಫಗಾಣಿಸ್ಥಾನದ ಆಕ್ರಮಣ.**

ಮುಸಲ್ಮಾನರು ಅಫಗಾಣಿಸ್ಥಾನದ ಸಹಾಯದಿಂದ ಈ ದೇಶದಲ್ಲಿ ಒಂದು ಮುಸಲ್ಮಾನ್ ರಾಜ್ಯವನ್ನು ಸ್ಥಾಪಿಸುವ ಯೋಚನೆಯುಳ್ಳವರಾಗಿದ್ದಾರೆಂಬುದು ಒಮ್ಮೆ ಸ್ಪಷ್ಟ ಗೊತ್ತಾಯಿತು. ಅಲ್ಲಿಬಂಧುಗಳು ಜೈಲಿನಲ್ಲಿದ್ದರು. ಆಗ ಒಬ್ಬ ಹಿಂದು ವಕೀಲರು ನಾವು ಮುಂಬೈಯಲ್ಲಿ ಇದ್ದಾಗ ಅಲ್ಲಿಬಂಧುಗಳ ಹೇಳಿಕೆಯನ್ನು ತೆಗೆದುಕೊಂಡು ಬಂದು ಹೀಗೆ ತಿಳಿಸಿದರು—

"ಅಫಗಾಣಿಸ್ಥಾನದವರು ಹಿಂದುಸ್ಥಾನದ ಮೇಲೆ ದಂಡೆತ್ತಿ ಬರುವವರಿದ್ದಾರೆ. ನೀವು ಅವರನ್ನು ಸ್ವಾಗತಿಸಿರಿ. ಏಕೆಂದರೆ, ಅವರು ನಿಮಗೆ ಸ್ವಾತಂತ್ರ್ಯವನ್ನು ಸಂಪಾದಿಸಿ ಕೊಡುವರು."

ನಾವು ಅವರಿಗೆ ಯಾವ ಉತ್ತರವನ್ನು ಹೇಳಿರಬಹುದೆಂಬುದು ನಿಮಗೇನೇ ಗೊತ್ತಾಗಿರಬಹುದು. ಆಗಿನ ಹಿಂದುಸ್ಥಾನ ಸರಕಾರದ ವರದಿಯಲ್ಲಿ ಹೀಗೆ ಹೇಳಿದೆ—

"ಅಫಗಾಣಿಸ್ಥಾನವು ಹಿಂದುಸ್ಥಾನದ ಮೇಲೆ ದಂಡೆತ್ತಿ ಬಂದಿತ್ತು. ಆದರೆ ಅದಕ್ಕೆ ಹಿಂದುಸ್ಥಾನದಿಂದ ಪ್ರೋತ್ಸಾಹ ದೊರೆಯದಿದ್ದುದರಿಂದ ತಿರುಗಿ ಹೋಯಿತು."

**ಮುಸಲ್ಮಾನ್ ಫೆಡರೇಶನ್ ಎಂದು?**

ಮುಸಲ್ಮಾನ್ ಫೆಡರೇಶನ್ನಿನ ವಿವರವೇನೂ ಪ್ರಕಟವಾಗಿಲ್ಲ. ಹಿಂದುಸ್ಥಾನದಲ್ಲಿ ಮುಸಲ್ಮಾನರ ಪ್ರತ್ಯೇಕ ರಾಜ್ಯವು ಎಂದು ಹೇಗೆ ಏರ್ಪಡುವುದೋ ತಿಳಿಯದಾಗಿದೆ. ಇಂಗ್ಲಿಷರು ನಮ್ಮ ಮೇಲೆ ಆಳುತ್ತಿರುವಾಗಲೇ ಮುಸಲ್ಮಾನ್ ಫೆಡರೇಶನ್ ಏರ್ಪಡುವುದೋ? ಅಥವಾ ಹಿಂದುಸ್ಥಾನಕ್ಕೆ ಸ್ವರಾಜ್ಯ ದೊರೆತನಂತರ ಏರ್ಪಡುವುದೋ? ಪಂಜಾಬ, ಸಿಂಧ, ಪೇಶಾವರ ಇವೇನೋ ಹೊಂದಿಕೊಂಡಿವೆ. ಬಂಗಾಲ ಮಹಾರಾಷ್ಟ್ರ, ನಿಜಾಮ ರಾಜ್ಯ ಇವೆಲ್ಲಾ ಬೇರೆ ಬೇರೆಯಾಗಿ ದೂರದಲ್ಲಿವೆ. ಅಲ್ಲಿರುವ ಹಿಂದುಗಳ ಸ್ಥಿತಿ ಹೇಗೆ? ಈಗಲೇ ಈ ಸ್ವತಂತ್ರ ಫೆಡರೇಶನ್ ಅಶಕ್ಯವಾದುದು. ಸ್ವಾತಂತ್ರ್ಯ ಬಂದನಂತರ ದೊರೆಯುವುದಾಗಿದ್ದರೆ ಅದರ ಮಾತು ಈಗೇಕೆ?

ಪಾಕಿಸ್ಥಾನ ನಿರ್ಮಾಣ ಮಾಡುವ ಈ ಪ್ರಯತ್ನವನ್ನು ನಾವು ತೀವ್ರತರವಾಗಿ ವಿರೋಧಿಸಲೇಬೇಕು. ಕಾಂಗ್ರೆಸ್ಸಿನಿಂದ ಇಂಥ ವಿರೋಧ ಶಕ್ಯವಿಲ್ಲ. ಆದಕಾರಣ ಅದರ ಕಡೆಗೆ ನೋಡಬೇಡಿರಿ. ಹಿಂದು ಮಹಾಸಭೆಯೇ ಈ ವಿಘಾತಕವಾದ ಪ್ರಯತ್ನವನ್ನು ತಡೆಯಲು ಸಾಮರ್ಥ್ಯವುಳ್ಳದ್ದು. ಆದಕಾರಣ ಅದರಲ್ಲಿ ಸೇರಿ ಅದರ ಬಲವನ್ನು ಹೆಚ್ಚಿಸಿರಿ.

**ಹಿಂದುತ್ವ ಉಳಿಸಿ ಸ್ವರಾಜ್ಯ.**

ಹಿಂದುಸ್ಥಾನಕ್ಕೆ ಸ್ವಾತಂತ್ರ್ಯ ಬೇಕಾದುದು ಹಿಂದುತ್ವ ರಕ್ಷಣೆಗಾಗಿಯೇ ವಿನಾ ಹಿಂದುತ್ವದ ಸಮಾಧಿಯ ಮೇಲೆ ಸ್ವಾತಂತ್ರ್ಯದ ಮಂದಿರ ಬೇಕಾಗಿಲ್ಲ. ಎಂತಹ ಪ್ರತಿಕೂಲ ಪರಿಸ್ಥಿತಿಯಲ್ಲಿ ಕೂಡಾ ಶಿವಾಜಿ ಮಹಾರಾಜರು ಹೇಗೆ ಸ್ವರಾಜ್ಯವನ್ನು ಸ್ಥಾಪಿಸಿದರೆಂಬುದನ್ನು ಲಕ್ಷಿಸಿರಿ. ಹಿಂದುಗಳು ಸಂಘಟಿತರಾಗಿ ತಮ್ಮ ರಾಷ್ಟ್ರದ ಸ್ವಾತಂತ್ರ್ಯವನ್ನು ತಾವೇ ಸಂಪಾದಿಸಲು ಸಿದ್ಧರಾಗಬೇಕು. ಈ ವಿಧವಾದ ಕಾರ್ಯಕಲಾಪಗಳು ಹಿಂದು ಮಹಾಸಭೆಯಿಂದಲೇ ನಡೆಯುತ್ತಲಿವೆ. ಆದಕಾರಣ ಅದನ್ನೇ ಬಲಪಡಿಸಿರಿ."

# ಈ ವರ್ಷದ ಅ. ಭಾ. ವೀ. ಮಹಾಸಭೆಗೆ ಅಧ್ಯಕ್ಷರು ಯಾರು ?

### ವಂಟಮುರಿ ವೀರಶೈವ ಸಂಘದ ಠರಾವು.

ಈ ವರ್ಷದ ೧೩ ನೇ ಅಖಿಲ ಭಾರತ ವೀರಶೈವ ಮಹಾಸಭೆಯು ಬರುವ ಡಿಶೆಂಬರ್ ೨೭ ನೆಯ ತಾರೀಖಿನಿಂದ ಹುಬ್ಬಳ್ಳಿಯಲ್ಲಿ ಜರುಗತಕ್ಕದ್ದಿರುವುದರಿಂದ ಅದರ ಸ್ವಾಗತ ಸಂಘಾಧ್ಯಕ್ಷರು "ಇದೇ ತಿಂಗಳ ೧೫ ನೇ ತಾರೀಖಿನೊಳಗಾಗಿ ಸದರಿ ಮಹಾಸಭೆಗಾಗಿ ಆರಿಸುವ ಅಧ್ಯಕ್ಷ ಮಹಾಶಯರ ಹೆಸರು ಸೂಚಿಸಬೇಕು." ಎಂದು ತರುಣ ಕರ್ನಾಟಕಾದಿ ವರ್ತಮಾನ ಪತ್ರಗಳ ದ್ವಾರವಾಗಿ ಸಮಾಜಕ್ಕೆ ಅರಿಕೆ ಮಾಡಿಕೊಂಡಿರುವರಷ್ಟೆ. ಆ ಪ್ರಕಾರ ನಿನ್ನೆ ಸಾಯಂಕಾಲ ವಂಟಮುರಿಯ ವೀ. ಶೈ. ನಾಗರಿಕರ ಸಭೆಯು ಇಲ್ಲಿಯ ಸಂಘದ ಆಮಂತ್ರಣದ ಮೇರೆಗೆ ರವಿವಾರ ಪೇಟೆಯೊಳಗೆ ವೇ|| ಪಂಡಿತ ಕಲಿಗಣನಾಥ ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ಕೂಡಿತ್ತು. ಆಗ ಸ್ವಾಗತಾಧ್ಯಕ್ಷರು ಕೋರಿದಂತೆ ಸಕಲ ಗುಣ ಸಮೇತರಾದವರನ್ನು ನೆನೆದು ಪುಷ್ಕಳ ಚರ್ಚೆಯಾಗಿ ಕಡೆಗೆ ಶ್ರೀಯುತ ಡಾಂಗ ಬಸವಣ್ಣೆಪ್ಪನವರು ಹೀಗೆ ಹೇಳಿದರು—

"ಶರಣ ಸಂದೇಶ ಪತ್ರಿಕೆಯ ಮಾನ್ಯ ಸಂಪಾದಕರಾದ ಶ್ರೀ ಹರ್ಡೇಕರ ಮಂಜಪ್ಪನವರು ಹುಬ್ಬಳ್ಳಿಯ ಮಹಾ ಸಭಾಧ್ಯಕ್ಷತೆಗೆ ಸರ್ವ ರೀತಿಯಿಂದಲೂ ತಕ್ಕವರಿರುವುದರಿಂದ ಅವರ ಹೆಸರನ್ನೇ ಈ ಸಭೆಯು ಉತ್ಸಾಹಪೂರ್ವಕವಾಗಿ ಸೂಚಿಸುತ್ತದೆ." ಎಂಬ ಠರಾವು ಮುಂದಿಟ್ಟು ಅವರ ಯೋಗ್ಯತೆಯನ್ನು ಕುರಿತು ಪ್ರಸ್ತಾಪಿಸುತ್ತ "ಇವರು ಬಹುಶ್ರುತರೂ ನುರಿತ ಅನುಭವಿಕರೂ ಅಲ್ಲದೆ ಒಂದು ಸರ್ವಮಾನ್ಯ ವಾರ ಪತ್ರದ ನಿಷ್ಪಕ್ಷಪಾತ ಸಂಪಾದಕರಿದ್ದಾರೆ. ಅವರ ಮುಖದಿಂದ ಈಗ ಅನೇಕ ವರುಷಗಳಿಂದಲೂ ಸಮಾಜ ಹಾಗೂ ದೇಶದ ಬಹು ಅಮೂಲ್ಯವಾದ ಸೇವೆಯನ್ನು ಜರುಗಿಸಿದ್ದಾರೆ. ಇವರ ಸಾಮಾಜಿಕ ಕಳಕಳಿ ಮಾತೂ ಅವರ್ಣನೀಯವಾಗಿದೆ. ನಿರ್ದಾಕ್ಷಿಣ್ಯದಿಂದ ತಮ್ಮ ಸ್ಪಷ್ಟ ಮತವನ್ನು ಪ್ರಕಟಿಸುವದರಲ್ಲಿ ಧೀರೋದಾತ್ತರಾಗಿದ್ದಾರೆ. ತಮ್ಮ ಇಡೀ ಜನ್ಮವನ್ನೇ ಸಮಾಜ ಸೇವೆಗಾಗಿ ಮುಡುಪಾಗಿಟ್ಟದ್ದಾರೆ. ಸರ್ವತ್ರ ಸಂಚರಿಸಿ ಸಮಾಜವನ್ನು ಹೊಡೆದೆಬ್ಬಿಸಿ ಕಾಲಪರಿಸ್ಥಿತ್ಯನುರೂಪವಾಗಿ ಅದನ್ನು ಕರ್ತವ್ಯ ಪರಾಯಣವನ್ನಾಗಿ ಮಾಡುವದಕ್ಕೆ ಸಮರ್ಥರಿದ್ದಾರೆಂದು ನನ್ನ ಪೂರ್ಣ ನಂಬಿಗೆಯಿದೆ." ಇತ್ಯಾದಿ ಸ್ಫೂರ್ತಿದಾಯಕ ಭಾಷಣವನ್ನು ಮಾಡಿದರು. ಅದಕ್ಕೆ ಶ್ರೀಯುತ ಬೀಳಗಿ ಕಾಡಪ್ಪನವರು ಒಳ್ಳೇ ಪ್ರಸನ್ನ ಹೃದಯದಿಂದ ಶ್ಲಾಘಿಸಿ ತಮ್ಮ ಅನುಮೋದವನ್ನಿತ್ತರು. ಹಾಗೂ ಅಂಗಸಿಗಿ ಪಾಟೀಲ ಶ್ರೀಯುತ ಸಿದ್ಧಗೌಡಪ್ಪನವರು ಬೆಂಬಲ ಕೊಟ್ಟರು. ಸಭಿಕರೆಲ್ಲರು ತಮ್ಮ ರಭಸದ ಕರತಾಡನಗಳಿಂದ ಸಮ್ಮತಿಸಿದರು. ಹೀಗೆ ಠರಾವು ಅವಿರೋಧವಾಗಿ ಸ್ವೀಕರಿಸಲ್ಪಟ್ಟಕೂಡಲೆ ಅಧ್ಯಕ್ಷರಾದ ಶಾಸ್ತ್ರಿಗಳವರು ಈ ಠರಾವು ಸರ್ವಾನುಮತದಿಂದ ಪಾಸಾಯಿತೆಂದು ಸಾರಿದರು.

೨ ನೇದ್ದು— ಇದನ್ನು ಶ್ರೀಯುತ ಬಸಾಪುರಿ ಮಲ್ಲಪ್ಪನವರು ಮುಂದಿಟ್ಟರು. ಅದರ ಆಶಯವೇನೆಂದರೆ "ಮಹಾಸಭೆಯ ಠೀರ್ಮಾನಗಳನ್ನು ಸಮಾಜದಲ್ಲಿ ಆಚರಣೆಗೆ ಬರುವಂತೆ ಪ್ರಚಾರಗೊಳಿಸುವ ಕಾರ್ಯ ಮಾಡುವವರಿಗೆ ಹಣದ ಪೂರೈಕೆಯು ಮಹಾಸಭೆಯ ಚಿರಸ್ಥಾಯಿ ಫಂಡಿನಿಂದಲೇ ಆಗಬೇಕು." ಇದನ್ನು ಸಮರ್ಥಿಸುವಾಗ ಅವರು— ಈ ಚಿರಸ್ಥಾಯಿ ಫಂಡು ಮಹಾಸಭೆಯ ಅಧಿವೇಶನಕ್ಕೆ ಇರುತ್ತದೆಯಾದರೂ ಅದರ ವಿನಿಯೋಗವು ಪ್ರಚಾರ ಕಾರ್ಯಕ್ಕೂ ಆಗುವುದು ನ್ಯಾಯವೂ ವಿಹಿತವೂ ಆಗಿದೆ. ಬರೇ ವಾಚಾಲತ್ವ ಸಭೆಯ ಅಧಿವೇಶನಕ್ಕಿಂತಲೂ ಅದರ ನಿರ್ಣಯಗಳನ್ನು ಸಮಾಜದಲ್ಲೂ ಹರಡಿ ಕರ್ತವ್ಯೋನ್ಮುಖ ಮಾಡುವ ಕಾರ್ಯವು ಅದಕ್ಕಿಂತಲೂ ಹೆಚ್ಚು ಮಹತ್ವದ್ದಿರುವದೆಂಬುದನ್ನು ಯಾರೂ ಮರೆಯಬಾರದೆಂದು ಹೇಳಿದರು. ಇದಕ್ಕೆ ಶ್ರೀಯುತ ಮಜತಿ ಮಲ್ಲಪ್ಪಣ್ಣನವರೂ ಖಡಖಡಿ ಚನಬಸಪ್ಪನವರೂ ಬೆಂಬಲ ಕೊಟ್ಟ ಮೇಲೆ ಇದಾದರೂ ಸರ್ವಾನುಮತದಿಂದಲೇ ಪಾಸಾಯಿತು. ಆ ಮೇಲೆ ಅಧ್ಯಕ್ಷರು ಸಮಯೋಚಿತವಾದ ತಮ್ಮ ಭಾಷಣವನ್ನು ಮಾಡಿ ಸಭೆಯನ್ನು ವಿಸರ್ಜನೆಗೊಳಿಸಿದರು.

ವಂಟಮುರಿ — ಸಿ. ಚ. ಬಸಾಪುರಿ.
ತಾ. ೧೧-೧೧-೩೮. — ಸೆಕ್ರೆಟರಿ.

---

# ಹಿಂದುಗಳ ಕರ್ತವ್ಯ.

(ಲೇ— ವೆಂಕಟೇಶ ರಾಘವೇಂದ್ರ ಕುಲಕರ್ಣಿ ಸೂಗೂರು.)

ಹಿಂದು ಸಮಾಜವು ಬಹಳ ಶೋಚನೀಯ ಸ್ಥಿತಿಯಲ್ಲಿದೆ. ಒಂದೇ ಒಂದು ಸಮಾಜದಲ್ಲಿ ಸಾವಿರಾರು ಪಂಗಡಗಳಾಗಿ ಒಕಟ್ಟೆಂಬ ಮಾತೇ ಇಲ್ಲದಂತಾಗಿ ಮೇಲು ಕೀಳುಗಳೆಂಬ ಭಾವನೆಗಳುಂಟಾಗಿವೆ.

ಹಿಂದುಸ್ಥಾನವು ಹಿಂದಕ್ಕೆ ಹಿಂದುಗಳದ್ದಾಗಿದ್ದಿತು. ಅನಂತರ ಹಿಂದುಗಳಿಗೆ ಹಿಂದುಗಳೇ ಶತ್ರುಗಳಾದದ್ದರಿಂದ ಮಹಮ್ಮದೀಯರಿಗೆ ಹಿಂದುಸ್ಥಾನದಲ್ಲಿ ಕಾಲು ಚಾಚಲು ಅವಕಾಶ ದೊರೆಯಿತು. ಮುಸಲ್ಮಾನ ಮತ್ತು ಹಿಂದುಗಳ ಬಡಿದಾಟದಿಂದ 'ಇಬ್ಬರ ನಡುವೆ ಮೂರನೆದವನಿಗೆ ಲಾಭ' ಎಂಬಂತೆ ಇಂಗ್ಲಿಷರ ಪ್ರಭುತ್ವವು ಹಿಂದುಸ್ಥಾನದಲ್ಲಿ ನೆಲೆಗೊಂಡಿತು. ಹಿಂದುಗಳಲ್ಲಿ ಪರಸ್ಪರ ಪ್ರೇಮ ಮತ್ತು ಒಕ್ಕಟ್ಟು ಇದ್ದಿದ್ದರೆ ಮುಸಲ್ಮಾನರಿಗೆ ನಮ್ಮ ದೇಶದಲ್ಲಿ ಕಾಲಿಡಲು ಅವಕಾಶ ದೊರೆಯುತ್ತಿದ್ದಿಲ್ಲ. ಮತ್ತು ಇಂದಿನ ಭಾರತಮಾತೆಯು ಪಾರತಂತ್ರ್ಯದಲ್ಲಿ ಸಿಲುಕಿ ಬಳಲುತ್ತಿದ್ದಿಲ್ಲ. 'ಅಂತು ಇಂತು ಕುಂತಿ ಮಕ್ಕಳಿಗೆ ರಾಜ್ಯವಿಲ್ಲ' ವೆಂಬಂತೆ ನಮ್ಮ ಸ್ಥಿತಿಯಾಯಿತು. ಆಗಿದ್ದು ಆಗಿ ಹೋಗಿದೆ. ಹಿಂದಿನದನ್ನು ಮರೆತು ಮುಂದಾದರೂ ಹಿಂದುಸಮಾಜದ ಏಳಿಗೆಗಾಗಿ ಪ್ರಯತ್ನಿಸುವದು ನಮ್ಮ ಕರ್ತವ್ಯವಲ್ಲವೆ?

ಹಿಂದುಗಳಾದ ನಾವು ಎಲ್ಲ ರೀತಿಗಳಿಂದಲೂ ಎಲ್ಲರಿಗಿಂತಲೂ ಹಿಂದುಳಿದಿದ್ದೇವೆ. ನಮ್ಮ ಆರ್ಥಿಕ ಸ್ಥಿತಿಯಂತೂ ಹೇಳತೀರದು. ಅದನ್ನು ನಿವಾರಿಸುವ ಉಪಾಯವೇನೆಂದರೆ— ನಮ್ಮ ಸಮಾಜದ ವ್ಯಾಪಾರ ಉದ್ಯೋಗಸ್ಥರಿಗೆ ಪ್ರೋತ್ಸಾಹ ಕೊಟ್ಟು ಅವರವರ ಕಸಬುಗಳಲ್ಲಿ ಅವರಿಗೆ ಹೆಚ್ಚು ಲಾಭವಾಗುವಂತೆ ಮಾಡಬೇಕು. ಅದು ಹೇಗೆಂದರೆ— ಪ್ರತಿಯೊಬ್ಬ ಹಿಂದು ಹಿಂದುಗಳಲ್ಲೇ ವ್ಯಾಪಾರ ಉದ್ಯೋಗ ಮಾಡಬೇಕು. ಮರೆತಾದರೂ ನಾವು ನಮ್ಮ ಸಮಾಜದವರ ಹೊರತು ಇನ್ನಿತರರಲ್ಲಿ ಅಂದರೆ ಕ್ರೈಸ್ತ, ಮುಸಲ್ಮಾನ್ ಮುಂತಾದವರಲ್ಲಿ ಸಾಮಾನನ್ನು ಖರೀದಿಮಾಡಬಾರದು. ನಮ್ಮ ಹಿಂದುಗಳ ಅಂಗಡಿಗಳಲ್ಲಿ ನಮಗೆ ಬೇಕಾಗಿರುವ ಪದಾರ್ಥಗಳು ದೊರೆಯದಿದ್ದರೆ ಮತ್ತು ನಮ್ಮ ವ್ಯವಹಾರ ನಿಲ್ಲುವ ಪ್ರಸಂಗ ಬಂದಲ್ಲಿ ಅನ್ಯ ಮತದವರಲ್ಲಿ ಸಾಮಾನುಗಳನ್ನು ಕೊಂಡುಕೊಳ್ಳಬಹುದು. ನಾವು ಬಯಸುವ ಒಂದೇ ಪದಾರ್ಥವು ಹಿಂದುಗಳ ಅಂಗಡಿಗಳಲ್ಲಿ ಹೆಚ್ಚು ಬೆಲೆಗೆ ದೊರೆಯುತ್ತಿದ್ದರೆ ಮತ್ತು ಇತರರಲ್ಲಿ ಕಡಿಮೆ ಬೆಲೆಗೆ ದೊರೆಯುತ್ತಿದ್ದರೆ ಶ್ರೀಮಂತರಾದವರು ಹಾನಿ

ಯನ್ನು ಲಕ್ಷಿಸದೆ ಹಿಂದುಗಳಲ್ಲೇ ಕೊಂಡುಕೊಳ್ಳಬೇಕು. ಇದು ಉತ್ತಮ ಪಕ್ಷ. ಯಾಕೆಂದರೆ, ನಾವು ಕೊಡುವ ದುಡ್ಡು ನಮ್ಮ ಸಮಾಜಕ್ಕೇನೇ ಸೇರುವದು.

ನಮಗೆ ಬೇಕಾಗಿರುವ ಪದಾರ್ಥವು ಇತರರ ಅಂಗಡಿಗಳಲ್ಲಿ ಸಮ ಬೆಲೆಗೆ ದೊರೆಯುತ್ತಿದ್ದಲ್ಲಿ ಹಿಂದುಗಳ ಅಂಗಡಿ ಸ್ವಲ್ಪ ದೂರವಿದ್ದರೂ ಅಡ್ಡಿ ಇಲ್ಲ. ಸಮಾಜದ ಸಲುವಾಗಿಯಾದರೂ ಅಷ್ಟು ದೂರ ನಡೆದು ನಮ್ಮ ಜನರಲ್ಲೇ ಕೊಂಡುಕೊಳ್ಳಬೇಕು. ಇದು ಮಧ್ಯಮ ಪಕ್ಷ. ಹಿಂದೂ ವ್ಯಾಪಾರಿಗಳು ನಮ್ಮ ಶತ್ರುಗಳೇ ಆಗಿರಲಿ ಇತರ ವ್ಯಾಪಾರಸ್ಥರು ಮಿತ್ರರೇ ಆಗಿರಲಿ ನಾವು ಇಂತಹ ಪ್ರಸಂಗದಲ್ಲಿಯೂ ನಮ್ಮ ಜನರಲ್ಲೇ ವ್ಯಾಪಾರಮಾಡಬೇಕು. ಇತರ ಜಾತಿಯ ಮಿತ್ರರಿಗಿಂತಲೂ ನಮಗೆ ಶತ್ರುಗಳಾದ ಹಿಂದುಗಳೇ ನಿಜವಾದ ಹಿತಚಿಂತಕರೆಂದು ತಿಳಿಯಬೇಕು.

ಜಗಳಾಡುವ ಪ್ರಸಂಗ ಬಂದಲ್ಲಿ ಜಗಳವಾಡಬೇಕು. ಅನ್ಯರನ್ನು ಎದುರಿಸುವ ಪ್ರಸಂಗ ಬಂದಲ್ಲಿ ನಾವು ದ್ವೇಷಾಸೂಯೆಗಳನ್ನು ಮರೆತು ಒಂದಾಗಿ ಅವರ ಸಂಗಡ ಕಾದಬೇಕು. ಹೀಗೆ ಮಾಡುವುದರಿಂದ ಹಿಂದುಗಳು ಪರಧರ್ಮದವರನ್ನು ದ್ವೇಷಿಸಿದಂತಾಯಿತೆಂದು ತಿಳಿಯಬಹುದು. 'ಮನೆ ಗೆದ್ದು ಮಾರ ಗೆಲಿಯಬೇಕು' ಎಂಬ ನಾಣ್ಣುಡಿಯನ್ನು ಇಂತಹ ಪ್ರಸಂಗದಲ್ಲಿ ನೆನಪಿಗೆ ತಂದುಕೊಳ್ಳಬೇಕು. ಒಬ್ಬನು ಬೇನೆಯಿಂದ ಬಳಲುತ್ತಿದ್ದಾನೆ. ಅವನು ತನಗೆ ಗುಣವಾಗಬೇಕೆಂದು ಔಷಧೋಪಚಾರವನ್ನು ಕೈಕೊಂಡರೆ ಅವನ ಶತ್ರುಗಳು 'ನೀನು ಆರೋಗ್ಯವಂತನಾಗಿ ನಮ್ಮನ್ನು ಎದುರಿಸಲು ಪ್ರಯತ್ನಿಸುತ್ತಿರುವಿ' ಎನ್ನುವದು ವಿಹಿತವೆ?

ಹಿಂದುಗಳು ಬಡವರಿದ್ದುದರಿಂದ ತಮ್ಮ ಆರ್ಥಿಕ ಸ್ಥಿತಿಯನ್ನು ಸುಧಾರಿಸಿಕೊಳ್ಳಲು ಪ್ರಯತ್ನಿಸಿದಲ್ಲಿ ಅನ್ಯ ಮತದವರಿಗೆ ಹಾನಿ ಏನು? ಹೀಗೆ ಮಾಡುವದರಿಂದ ಅವರನ್ನು ದ್ವೇಷಿಸಿದಂತಾಯಿತೆ? ನಮ್ಮ ಜನರಲ್ಲೇ ವ್ಯಾಪಾರಮಾಡುವುದರಿಂದ ಒಂದೇ ಸಮಾಜದಲ್ಲೇ ದುಡ್ಡು ಓಡ್ಯಾಡುತ್ತದೆ. ನಮ್ಮ ಬಡತನವು ಸ್ವಲ್ಪಾದರೂ ಹಿಂಗುವದು. ಹಿಂದುಗಳ ಜನಸಂಖ್ಯೆ ದಿನ ದಿನಕ್ಕೆ ಕಡಿಮೆಯಾಗುತ್ತ ನಡೆದಿದೆ. ಸಾವಿರಾರು ತಿಳಿಗೇಡಿ ಹಿಂದುಗಳು ಕ್ರೈಸ್ತ ಮತ್ತು ಮುಸಲ್ಮಾನ್ ಧರ್ಮಕ್ಕೆ ಆಹುತಿಯಾಗುತ್ತಿದ್ದಾರೆ. ಅಸ್ಪೃಶ್ಯರನ್ನು ಮುಟ್ಟಿಸಿಕೊಳ್ಳದಿದ್ದುದರಿಂದಲೇ ಮತ್ತು ಅವರನ್ನು ಕಾಡ ಸ್ಥಿತಿಯಲ್ಲಿಟ್ಟದ್ದರಿಂದಲೇ ಅವರು ಪರಧರ್ಮಕ್ಕೆ ಸೇರುತ್ತಿದ್ದಾರೆ. ಅವರನ್ನು ಒಳ್ಳೇ ಸ್ಥಿತಿಗೆ ತಂದು ಪರಧರ್ಮಕ್ಕೆ ಸೇರದಂತೆ ಮಾಡಬೇಕು. ಶಾರೀರಿಕ ಸಂಪತ್ತಿನಲ್ಲಿಯೂ ನಾವು ಹಿಂದುಳಿದಿದ್ದೇವೆ. ಬಹು ಸಂಖ್ಯಾಕರಾದ ನಾವು ಅಲ್ಪ ಸಂಖ್ಯಾಕರಾದ ನಮ್ಮ ವಿರೋಧಿಗಳನ್ನು ಜಯಸುವಷ್ಟು ಸಹ ನಮ್ಮಲ್ಲಿ ಶಕ್ತಿ ಇಲ್ಲದಂತಾಗಿದೆ. ಆದುದರಿಂದ ಶಾರೀರಿಕ ಶಕ್ತಿ ಸಂಪಾದಿಸುವದು ಪ್ರತಿಯೊಬ್ಬ ಹಿಂದುವಿನ ಕರ್ತವ್ಯವಲ್ಲವೆ? ಒಟ್ಟಿಗೆ ಹೇಳುವದೇನೆಂದರೆ ನಾವು ನಮ್ಮಲ್ಲಿರುವ ಮೇಲುಕೀಳೆಂಬ ಕಲ್ಪನೆಗಳನ್ನು ತೆಗೆದು ಹಾಕಿ ಸಂಘಟಿತರಾಗಿ ನಮ್ಮ ಆರ್ಥಿಕ ಸ್ಥಿತಿಯನ್ನು ಮತ್ತು ಶಾರೀರಿಕ ಸ್ಥಿತಿಯನ್ನು ಸುಧಾರಿಸಿಕೊಳ್ಳಬೇಕು.

---

## ಅಸ್ಪೃಶ್ಯ ಜನರ ಮೇಲೆ ಸ್ಪೃಶ್ಯ ಜನರ ಅಮಾನುಷ ಅನ್ಯಾಯ!

ಇಂಡಿ ತಾಲೂಕು ಪೈಕಿ ಬಬಲಾದಿಯಲ್ಲಿ ಈ ಹೊತ್ತಿಗೆ ೨ ತಿಂಗಳ ಹಿಂದೆ ಅಸ್ಪೃಶ್ಯರು ಮೃತಮಾಂಸವನ್ನು ತಿನ್ನುವದು ಬಿಟ್ಟು ಆ ಮಾಂಸವನ್ನು ಹುಗಿಯಬೇಕೆಂದು ಕಟ್ಟು ಮಾಡಿದರು. ಈ ಕಟ್ಟು ಸ್ಪೃಶ್ಯ ಹಿಂದುಗಳಿಗೆ ಸಹನವಾಗದೆ ಅಸ್ಪೃಶ್ಯರು ಸೊಕ್ಕಿಗೆ ಬಂದರು. ಇವರ ಸೊಕ್ಕು ಇಳಿಸಬೇಕಾದರೆ ಇವರನ್ನು ಊರೊಳಗೆ ಬರಗೊಡಬಾರದು. ಆಯಾ (ಬಲೂತಿ) ಕೊಡಬಾರದು. ಅಡವಿಯಲ್ಲಿ ಬರಗೊಡಬಾರದು. ಕೂಲಿಗೆ ಹಚ್ಚಬಾರದು. ಅವರು ಬಾವಿಯಿಂದ ನೀರು ತರಬೇಕಾದರೆ ತ್ರಾಸಕೊಡುವದು. ಈ ಪ್ರಕಾರ ಕಟ್ಟು ತಮ್ಮಲ್ಲಿ ಮಾಡಿಕೊಂಡು ಅಸ್ಪೃಶ್ಯರನ್ನು ಕಾಡಲಿಕ್ಕೆ ಸುರುವುಮಾಡಿದರು. ಹೊಲ ಒಗ್ಯೆರೆ ಮಾಡಿದ ಹೊಲಿಯರಿಂದ ಹೊಲವನ್ನು ಬಿಡಿಸಬೇಕು. ತಮ್ಮಲ್ಲಿ ವರುಷದ ವರೆಗೆ ದುಡಿಯಲಿಕ್ಕೆ ಇದ್ದವನನ್ನು ಜೀತದಿಂದ ಕಡಿಮೆ ಮಾಡಬೇಕು. ಈ ಎಲ್ಲ ಪಾಶವಿಯ ಕರಾರು ತಮ್ಮಲ್ಲಿ ಮಾಡಿಕೊಂಡು ಆ ನಿರಪರಾಧಿ ಬಂಧುಗಳನ್ನು ಕಾಡಲಿಕ್ಕೆ ಸುರುವುಮಾಡಿದರು. ಸೋಮಪ್ಪ ಸಿದ್ಧಪ್ಪ ಹೊಲೇರ ಈತನು ಮಾಡಿದ ಎರಡು ಹೊಲಗಳನ್ನು ಬಿಡಿಸಿ ಬಹು ಕಷ್ಟಕ್ಕೀಡುಮಾಡಿದ್ದಾರೆ. ಅವನು ಕಷ್ಟಪಟ್ಟು ಬೆಳೆದದ್ದು ಅವನಿಗೆ ಸಿಗದಂತಾಯಿತು.

ಈ ಎಲ್ಲ ವಿಚಾರವನ್ನು ಊರೊಳಗಿನ ಸಭ್ಯಗೃಹಸ್ಥರಿಗೂ ಸಮೀಪಿನ ಹಳ್ಳಿಯ ರೈತರಿಗೆ ಕರೆಯಿಸಿ ವಿನಂತಿಮಾಡಿಕೊಂಡರು. ಅದಕ್ಕೂ ಜಮೀನಿನವರು ಒಪ್ಪಿಗೆಯನ್ನು ಕೊಡಲಿಲ್ಲ. ಮುಂದೆ ಆ ರೈತರು ನಮ್ಮ ಜಿಲ್ಲೆಯ ಅಸ್ಪೃಶ್ಯರ ವತಿಯಿಂದ ಆರಿಸಿಬಂದ ಮೆ|| ರೇವಪ್ಪ ಕಾಳೆ ಎಂ. ಎಲ್. ಎ. ಇವರಲ್ಲಿಯಾದರೂ ವಿನಂತಿಮಾಡಿಕೊಳ್ಳಬೇಕೆಂದು ಇಂಡಿಗೆ ಹೋಗಿ ವಿನಂತಿಮಾಡಿಕೊಂಡರು. ಅವರು ಅವರ ವಿನಂತಿಗೆ ಮಾನ್ಯಮಾಡಿ ಸ್ವತಃ ಬಬಲಾದಿಗೆ ತಾ. ೯-೧೧-೩೮ ನೇ ದಿವಸ ಹೋಗಿ ಅಲ್ಲಿರುವ ಕೆಲವು ಸಭ್ಯ ಗೃಹಸ್ಥರಿಗೆ ಭೆಟ್ಟಿಯಾದರು.

ಹೊಲೆಯರ ವಿಷಯಕ್ಕೆ ತಿರಸ್ಕಾರ ಆಡುವದನ್ನು ಕೇಳಿ ನನ್ನ ಕಿವಿಗಳು ಗಡಚಿಕ್ಕಿದವು. ಈ ಎಲ್ಲ ಅನ್ಯಾಯವನ್ನು ಮೆ|| ಎಂ. ಎಲ್. ಎ. ಇವರು ಸಾವಧಾನದಿಂದ ಕೇಳುತ್ತ ಕುಳಿತಿದ್ದರು. ಆ ಸ್ಪೃಶ್ಯ ರೈತರು ಆ ಬಡ ಹೊಲಿಯರಿಗೆ ಅವಾಚ್ಯ ಶಬ್ದಗಳಿಂದ ಬೈದರೂ ಶಾಂತದೃಷ್ಟಿಯಿಂದ ಕೇಳುತ್ತ ಬಡ ರೈತರನ್ನು ಕೊಲ್ಲಬೇಡಿರಿ ಎಂದು ವಿನಯದಿಂದ ಹೇಳುತ್ತಿದ್ದರು. ಎಷ್ಟು ವಿನಯದಿಂದ ಹೇಳಿಕೊಂಡರೂ ಇವರ ಮಾತಿಗೆ ಲಕ್ಷವೇ ಕೊಡಲಿಲ್ಲ. ಮೆ|| ಎಂ. ಎಲ್. ಎ. ಸಾಹೇಬರು ನಮ್ಮ ದುಃಖದ ಸ್ಥಿತಿಯನ್ನು ಸ್ವತಃ ಕೇಳಿರುವರು. ಏನು ಮಾಡುವರೋ ನೋಡುವಾ.

ಓರ್ವ ಪ್ರತ್ಯಕ್ಷದರ್ಶಿ.

---

# ಹುಬ್ಬಳ್ಳಿಯಲ್ಲಿ ಕೂಡಲಿರುವ ಅಖಿಲ ಭಾರತ ವೀರಶೈವ ಮಹಾಸಭೆಯ ೧೩ ನೇ ಅಧಿವೇಶನದಲ್ಲಿ ವಿಷಯಗಳೇನಿರಬೇಕು?

ಸದ್ಯಸ್ಥಿತಿಯಲ್ಲಿ ದೇಶಕ್ಕೆ ಮುಖ್ಯವಾಗಿ ವೀರಶೈವ ಸಮಾಜಕ್ಕೆ ಸಂಬಂಧಪಟ್ಟ ಪ್ರಚಲಿತ ಮಹತ್ವದ ಎಲ್ಲ ವಿಷಯಗಳನ್ನು ಕೂಲಂಕುಶವಾಗಿ ವಿಚಾರಮಾಡಿ, ಒಂದು ನಿಶ್ಚಿತವಾದ ಯೋಗ್ಯ ಕಾರ್ಯಕ್ರಮವನ್ನು ನಿರ್ಧರಿಸುವದಕ್ಕೆ, ಮೇಲ್ಕಂಡ ಮಹಾಸಭೆಯು ಇದೇ ಡಿಶಂಬರ ಕ್ರಿಸ್‌ಮಸದ ರಜೆಯದಿವಸಗಳಲ್ಲಿ ಹುಬ್ಬಳ್ಳಿಯಲ್ಲಿ ಕೂಡುವದು.

ಆದ್ದರಿಂದ ಯಾವತ್ತೂ ವೀರಶೈವ ಬಂಧು ಭಗಿನಿಯರು, ಈ ಮಹಾಸಭೆಯಲ್ಲಿ ಮಂಡಿಸತಕ್ಕ ವಿಷಯಗಳ ಬಗ್ಗೆ ತಮ್ಮ ನಿಶ್ಚಿತ ಸೂಚನೆಗಳನ್ನು ಇದೇ ತಿಂಗಳ ೨೮ ನೇ ತಾರೀಖಿನೊಳಗಾಗಿ ನಮ್ಮ ಕಡೆಗೆ ಕಳಿಸಬೇಕೆಂದು ವಿನಂತಿ. ಸೂಚನೆಗಳು ಕೇವಲ ಔಪಚಾರಿಕ ಅಥವಾ ಸಂದಿಗ್ಧವಿರದೆ, ಸ್ಪಷ್ಟ ಮತ್ತು ನಿಶ್ಚಿತವಿದ್ದು, ಮಹಾಸಭೆಯು ತನ್ನ ಇಚ್ಛಿತ ಧ್ಯೇಯವನ್ನು ಸಾಧಿಸಲಿಕ್ಕೆ ಎಲ್ಲ ರೀತಿಯಿಂದಲೂ ಸಹಾಯಮಾಡುವಂಥವುಗಳು ಆಗಿರಬೇಕು.

ಮಹಾಸಭೆಯು ಸದ್ಯದ ಘಟನೆಯಿಂದ ಮಹಾಸಭೆಯು ಕೈಕೊಂಡ ಕೆಲಸವನ್ನು ವರ್ಷಾನುಗಟ್ಲೆ ಹಿಂದುಸ್ಥಾನದ ಎಲ್ಲ ಭಾಗದಲ್ಲಿ ನಡೆಸಲು ಸಾಧ್ಯವಿಲ್ಲ. ಆದ್ದರಿಂದ ಈ ಘಟನೆಯನ್ನು ಸರಿಪಡಿಸಿ, ಎಲ್ಲ ರೀತಿಯಿಂದಲೂ ಅನುಕೂಲವಾಗುವಂತೆ ತಿದ್ದುವದರ ಸಲುವಾಗಿ ಸೂಚನೆಗಳನ್ನು ನಮ್ಮ ಕಡೆಗೆ ಇದೇ ಡಿಶಂಬರ್ ೧ ನೇ ತಾರೀಖಿನೊಳಗಾಗಿ ಕಳಿಸಬೇಕೆಂದು ವಿನಂತಿ.

| | |
|---|---|
| ಮಹಾಸಭಾ ಕಚೇರಿ<br>ತಾ. ೧೪ ನವ್ಹಂಬರ ೩೪ ನೇ ಇಸ್ವಿ | ಚಂದ್ರಶೇಖರಪ್ಪ ಕೆಂಪಣ್ಣನವರ<br>ಕಾರ್ಯದರ್ಶಿ,<br>ವಿಷಯಸೂಚಕ ಕಮೀಟಿ,<br>೧೩ ನೇ ಅಖಿಲ ಭಾರತ ವೀರಶೈವ<br>ಮಹಾಸಭಾ. |

---

## ವೀ. ತರುಣ ಸಂಘದ ಸ್ತುತ್ಯ ಕಾರ್ಯ. ಹಿಂದೂ ತ. ಸಂಘದ ಸಾಹಸ.

ಹಾವೇರಿ ವೀರಶೈವ ತರುಣ ಸಂಘದವರು ಹಾವೇರಿ ತಾಲೂಕು ದೇವಿಹೊಸೂರಿಗೆ ಹೋಗಿ ಅಲ್ಲಿಯ ವ್ಯಾಪಾರಿ ತರುಣರಾದ ಶ್ರೀ. ಶಂಕರಪ್ಪ ಮಲಕಪ್ಪ ಗುತ್ತಲ ಹಾಗೂ ಇವರ ಸಹೋದರರಾದ ಶ್ರೀ. ಗಂಗಾಧರಪ್ಪ ಮಲಕಪ್ಪ ಗುತ್ತಲ ಇವರಿಗೂ ಶ್ರೀಮತಿ ನೀಲವ್ವ (ಮೊದಲಿನ ಹೆಸರು ಶೇಷವ್ವ) ಇವರಿಗೂ ವೀರಶೈವ ದೀಕ್ಷೆಯನ್ನು ಕೊಡಿಸಿದರು. ಈ ಮೂರೂ ಜನರು ದೇವಾಂಗ ಸಮಾಜದವರಿದ್ದು ತಮ್ಮ ಇಚ್ಛೆಯ ಮೇರೆಗೆ ವೀರಶೈವ ತರುಣ ಸಂಘದವರಿಂದ ದೀಕ್ಷೆ ಹೊಂದಿದ ಮೇಲೆ ಹಾವೇರಿ ಹಿಂದೂ ತರುಣ ಸಂಘದವರು ಮೇಲೆ ಹೇಳಿದ ಶ್ರೀ. ಗಂಗಾಧರಪ್ಪನಿಗೂ ಶ್ರೀ ನೀಲವ್ವನಿಗೂ ತಮ್ಮ ಸಂಘದಲ್ಲಿ ವಿಧಿಪ್ರಕಾರ ಪುನರ್ವಿವಾಹ ಸಮಾರಂಭವನ್ನು ಒಳ್ಳೇ ವಿಜೃಂಭಣೆಯಿಂದ ನೆರವೇರಿಸಿದರು. ತರುಣಿಯ ವಯಸ್ಸು ೧೭. ತರುಣನ ವಯಸ್ಸು ೨೨.

ವೀರಶೈವ ತರುಣ ಸಂಘದವರೂ ಹಿಂದು ತರುಣ ಸಂಘದವರೂ ದೇವೀಹೊಸೂರ ನಾಗರಿಕರನ್ನೂ ವಧುವರರನ್ನೂ ಎದುರ್ಗೊಂಡು ಕರೆದುಕೊಂಡು ಬಂದರು. ಈ ಮಹಾ ಸಮಾರಂಭವನ್ನು ನೋಡಲು ಸಾವಿರಾರು ಸ್ತ್ರೀಪುರುಷರು ನೆರೆದಿದ್ದರು. ಸಭಾಮಂಟಪದಲ್ಲಿ ಶ್ರೀ. ಚೆನ್ನಬಸಪ್ಪ ಹಾಲಪ್ಪನವರ ಇವರು ಹಿಂದೂ ಧರ್ಮದ ಬಗ್ಗೆ ಕೆಲವು ಮಾತುಗಳನ್ನು ಹೇಳಿದನಂತರ ಮಂಗಲಕಾರ್ಯವು ೬-೩೦ ಕ್ಕೆ ಕೊನೆಗಂಡಿತು. ಆ ಮೇಲೆ ವಧೂವರರನ್ನು ಪುರದಲ್ಲೆಲ್ಲ ಮೆರವಣಿಗೆಯಿಂದ ದೇವೀಹೊಸೂರಿಗೆ ಬೀಳ್ಕೊಟ್ಟರು. ದೇವೀಹೊಸೂರಲ್ಲಿಯೂ ವಧೂವರರನ್ನು ಎದುರ್ಗೊಂಡು ಕರೆದುಕೊಂಡರು. ಶ್ರೀ. ಶೇಷವ್ವನನ್ನು ಒಬ್ಬ ಮುಸಲ್ಮಾನನು ಓಡಿಸಿಕೊಂಡು ಹಾವೇರಿಗೆ ಬಂದಿದ್ದನು.

ಓರ್ವ ಪ್ರತ್ಯಕ್ಷದರ್ಶಿ.

---

## ವೀರಶೈವ ಮಹಿಳೆಯರಲ್ಲಿ ಜಾಗೃತಿಯಾಗಬೇಕು. ಹುಬ್ಬಳ್ಳಿ ಅಧಿವೇಶನದಲ್ಲಿ ಮಧ್ಯವರ್ತಿ ಸಂಘ ಸ್ಥಾಪಿಸಬೇಕು.

[ಲೇ— ಶ್ರೀಮತಿ ನಾಗಮ್ಮ ಪಾಟೀಲ ಎಂ. ಎಲ್. ಎ.]

ರಾಜಕೀಯ ಸಾಮಾಜಿಕ ಕಾರ್ಯಗಳಲ್ಲಿ ವೀರಶೈವ ಮಹಿಳೆಯರು ಇನ್ನೂ ಎಷ್ಟರ ವರೆಗೆ ಕಾರ್ಯ ಕೈಕೊಳ್ಳಬೇಕಾಗಿದೆಯೋ ಅಷ್ಟು ಕೈಕೊಂಡಿರುವುದಿಲ್ಲ. ಇದು ವಿಷಾದದ ಸಂಗತಿಯು. ಸಮಾಜರಥವು ಸ್ತ್ರೀಯರು ಪುರುಷರು ಹೀಗೆ ಉಭಯರಿಂದ ಎಳೆಯಲ್ಪಡುತ್ತದೆ. ಪುರುಷರು ಮುಂದುವರಿದು ಕೆಲಸಮಾಡುವಾಗ ಸ್ತ್ರೀಯರು ಹಿಂದುಳಿದರೆ ಸಮಾಜ ರಥಗತಿಯು ಮಂದವಾಗುತ್ತದೆ. ಆದುದರಿಂದ ಯಾವ ಯಾವ ಕಾರ್ಯಗಳಲ್ಲಿ ಪುರುಷರು ಹೇಗೆ ಮುಂದುವರಿದು ಕಾರ್ಯಮಾಡುತ್ತಿದ್ದಾರೋ ಹಾಗೆಯೇ ಸ್ತ್ರೀಯರು ತಮ್ಮ ಪಾಲಿನ ಕಾರ್ಯಗಳನ್ನು ಅದೇ ಗತಿಯಲ್ಲಿ ಮಾಡಬೇಕು.

ವೀರಶೈವ ಮಹಿಳಾ ಚಟುವಟಿಕೆಗೆ ಇನ್ನೂ ಮೂರ್ತಸ್ವರೂಪವು ಬಂದಿಲ್ಲ. ಅಲ್ಲಲ್ಲಿ ರಾಜಕೀಯ ಸಾಮಾಜಿಕ ಕಾರ್ಯಗಳನ್ನು ಮಾಡುವಂಥ ಅನೇಕ ಉತ್ಸಾಹಿ ಮಹಿಳೆಯರು ಕಂಡುಬರುತ್ತಿದ್ದರೂ ಅವರೆಲ್ಲರೂ ಏಕೀಭವಿಸುವಂತಹ ಒಂದಾದರೂ ಮಹಿಳಾ ಸಂಘವು ಇನ್ನೂ ವರೆಗೆ ಉಂಟಾಗಿರುವುದಿಲ್ಲ. ಹಲಕೆಲವು ನಗರಗಳಲ್ಲಿ ವೀರಶೈವ ಮಹಿಳಾ ಸಂಸ್ಥೆಗಳಿರುವುದು ನಿಜ. ಆದರೆ ಅವೆಲ್ಲವುಗಳನ್ನು ಒಂದೇ ಸೂತ್ರದಲ್ಲಿ ತಂದು ಕಾರ್ಯಮಾಡಲಿಕ್ಕೆ ಹಚ್ಚುವಂತಹ ವೀರಶೈವ ಮಹಿಳಾ ಮಧ್ಯವರ್ತಿ ಸಂಘವೊಂದು ಬೇಕು. ಈ ಸಾರೆ ಹುಬ್ಬಳ್ಳಿಯಲ್ಲಿ ಕೂಡಲಿರುವ ವೀರಶೈವ ಮಹಿಳಾ ಪರಿಷತ್ತಿನ ಕಾಲಕ್ಕೆ ಅಲ್ಲಲ್ಲಿಯ ಸಂಘಗಳ ಕಾರ್ಯಕರ್ತೆಯರೆಲ್ಲರೂ ಕೂಡಿ ತಮ್ಮ ಸಲುವಾಗಿ ವರ್ಷಂಪ್ರತಿ ಕಾರ್ಯಮಾಡುವಂಥ ಒಂದು ಸ್ವತಂತ್ರ ಮಧ್ಯವರ್ತಿ ಸಂಘವನ್ನು ಸ್ಥಾಪಿಸಿಕೊಳ್ಳುವರೆಂದು ನಾನು ನಂಬಿದ್ದೇನೆ. ಸ್ತ್ರೀಯರ ಉನ್ನತಿಗೆ ಬಾಧೆ ತರುವಂತಹ ಯಾವ ಸಾಮಾಜಿಕ ವಿಘ್ನಗಳೂ ತಮ್ಮ ಸಮಾಜದಲ್ಲಿ ಇಲ್ಲದಿದ್ದರೂ ನಮ್ಮ ವೀರಶೈವ ಭಗಿನಿಯರು ಪರಸ್ಪರ ಪರಿಚಯಮಾಡಿಕೊಂಡು ತಮ್ಮ ಮಧ್ಯವರ್ತಿ ಸಂಘದ ಮೂಲಕ ಕಾರ್ಯತತ್ಪರರಾಗದಿದ್ದುದು ಖೇದಕರವಾಗಿದೆ. ವೀರಶೈವ

ಮಹಿಳೆಯರಲ್ಲಿ ಈಗ ಸಾಕಷ್ಟು ವಿದ್ಯಾಪ್ರಸಾರವಾಗಿದೆ. ತಮ್ಮ ಸಮಾಜಕ್ಕೆ ಹಿತವಾಗುವಂಥ ಏನಾದರೂ ಕಾರ್ಯಮಾಡಬೇಕೆಂಬ ಉತ್ಸಾಹಭರಿತೆಯರೂ ನಮ್ಮ ಸಮಾಜದಲ್ಲಿ ಅನೇಕರಿದ್ದಾರೆ. ಆದರೆ ಅವರ ಪ್ರಯತ್ನಗಳೆಲ್ಲ ಏಕಮುಖವಾಗಿಲ್ಲ. ಎಲ್ಲರೂ ಕಾಲ ಕಾಲಕ್ಕೆ ಕೂಡಿ ಗೊತ್ತುವಳಿಗಳನ್ನು ಮಾಡಿಕೊಂಡು ಒಂದೇ ವಿಧ ಕಾರ್ಯಗಳನ್ನು ಕೈಕೊಳ್ಳುವದು ಕಂಡುಬರುವದಿಲ್ಲ. ಆದುದರಿಂದಲೇ ವೀರಶೈವ ಮಹಿಳೆಯರು ಇಲ್ಲಿಯ ವರೆಗೆ ಮಾಡಿದ ಯಾವ ಕಾರ್ಯಗಳೂ ಹೇಳಿಕೊಳ್ಳತಕ್ಕಂಥವಾಗಿರುವದಿಲ್ಲ.

ಈ ಕ್ರಾಂತಿಯ ಯುಗದಲ್ಲಿ ನಿಜವಾಗಿಯೂ ನಮ್ಮ ಭಗಿನಿಯರಿಗೆ ನಮ್ಮ ಬಂಧುಗಳಂತೆಯೇ ಸರಿಸಮಾನವಾಗಿ ಕಾರ್ಯಮಾಡಬೇಕೆಂದು ಅನಿಸುತ್ತದೆ. ಹಾಗು ತಮ್ಮೊಳಗೆ ವಿಶೇಷ ಸಂಘಟನೆಯುಂಟಾಗಬೇಕೆಂದು ತೋರುತ್ತದೆ. ಕಾರ್ಯಕರ್ತರೆಲ್ಲರೂ ಈ ಸಾರೆಯ ಹುಬ್ಬಳ್ಳಿ ಅಧಿವೇಶನಕ್ಕೆ ತಪ್ಪದೇ ಬರಬೇಕು. ಮತ್ತು ತಮ್ಮ ಪರಿಷತ್ತಿನಲ್ಲಿ ಸ್ಪಷ್ಟವಾದ ಹಾಗು ಹಿತಕರವಾದ ನಿರ್ಣಯಗಳನ್ನು ಮಾಡಿಕೊಂಡು ಕಾರ್ಯತತ್ಪರರಾಗಬೇಕು. ವರ್ಷವೆಲ್ಲವೂ ಮಹಿಳಾ ಸಂಘದ ಕಾರ್ಯಗಳು ಸುಗಮವಾಗಿ ನಡೆಯಬೇಕಾದರೆ ಹಣದ ಅವಶ್ಯಕತೆಯು ಇದ್ದೇ ಇರುತ್ತದೆ. ಅದಕ್ಕಾಗಿ ಸಾಕಷ್ಟು ಧನನಿಧಿಯನ್ನು ಕೂಡಿಸಬೇಕು. ಧನಸಂಗ್ರಹವಿಲ್ಲದೆ ಯಾವ ಸಂಸ್ಥೆಯೂ ಕಾರ್ಯಮಾಡಲಾರದು. ಅದಕ್ಕಾಗಿ ಸುಶಿಕ್ಷಿತ ಕಾರ್ಯಶೀಲ ಮಹಿಳೆಯರು ತಮ್ಮ ಸ್ವತಂತ್ರ ಸಂಘದ ಮೂಲಕವೇ ಸಮಾಜ ಕಾರ್ಯಗಳನ್ನು ಮಾಡಲು ಸಮರ್ಥರಾಗಬೇಕೆಂದು ಹಾರೈಕೆ.

---

## ಝೆಕ್ ರಾಜ್ಯದ ಗತಿ!

ಹಿಟಲರನ ರಾಕ್ಷಸೀ ವೃತ್ತಿಯಿಂದ ಝೆಕ್ ರಾಜ್ಯವು ತುಂಡು ತುಂಡಾಗಿ ಹೋಯಿತು. ಈ ರಾಜ್ಯವು ಮ್ಯುನಿಕ್ ಒಪ್ಪಂದದ ಮುಂಚೆ ೫೪೬೦೦ ಚದುರು ಮೈಲು ವಿಸ್ತಾರವಾದುದಾಗಿಯೂ ೧ ಕೋಟಿ ೫೦ ಲಕ್ಷ ಜನಸಂಖ್ಯೆಯುಳ್ಳದ್ದಾಗಿಯೂ ಇದ್ದಿತು. ಹಿಟಲರನ ಆಕ್ರಮಣದಿಂದ ೧೦೮೦೦ ಚದುರು ಮೈಲು ಪ್ರದೇಶವು ಜರ್ಮನಿಯ ಪಾಲಾಯಿತು. ಅಷ್ಟು ಪ್ರದೇಶದಲ್ಲಿ ವಾಸವಾಗಿರುವ ೩೬ ಲಕ್ಷ ಜನರು ಜರ್ಮನಿಯ ಪ್ರಜೆಗಳಾದರು.

ಈ ಸುಡೇಟಾನ್ ಜರ್ಮನ್ ಭಾಗವು ಜರ್ಮನಿಗೆ ಸೇರಿದ್ದರಿಂದ ಹಂಗೇರಿಯನ್ ರಾಜ್ಯವೂ ಝೆಕ್ ರಾಜ್ಯದಲ್ಲಿಯ ತನ್ನ ಪಾಲನ್ನು ತೆಗೆದುಕೊಂಡಿತು. ೪೬೦೦ ಚದರು ಮೈಲು ಪ್ರದೇಶ ಮತ್ತು ೧೦ ಲಕ್ಷ ೬೦ ಸಾವಿರ ಜನರು ಹಂಗೇರಿಯ ಪಾಲಾದರು.

ಹೀಗೆ ಜರ್ಮನ್ ಮತ್ತು ಹಂಗೇರಿಯನ್ ರಾಜ್ಯಗಳು ಝೆಕ್ ರಾಜ್ಯವನ್ನು ತುಂಡುಮಾಡಿ ತೆಗೆದುಕೊಂಡನಂತರ ಪೋಲೆಂಡ್ ರಾಜ್ಯವೂ ತನ್ನ ಭಾಗವನ್ನು ಕೇಳಿತು. ಈಗ ಅದಕ್ಕೆ ೬೬೦ ಚದುರು ಮೈಲು ಪ್ರದೇಶ ಮತ್ತು ೨ ಲಕ್ಷ ೪೦ ಪ್ರಜೆಗಳು ದೊರೆತರು.

ಹೀಗೆ ಝೆಕ್ ರಾಜ್ಯದ ಮೂರು ತುಂಡುಗಳು ಪರರ ಪಾಲಾದುದರಿಂದ ಈಗ ಅದು ೩೮೪೩೦ ಚದುರು ಮೈಲು ಪ್ರದೇಶದಲ್ಲಿ ೧ ಕೋಟಿ ೧ ಲಕ್ಷ ಜನಸಂಖ್ಯೆ ಮಾತ್ರ ಉಳ್ಳ ಚಿಕ್ಕ ರಾಷ್ಟ್ರವಾಗಿ ಉಳಿಯಿತು. ಬಲಹೀನರ ಗತಿಯು ಕಡೆಗೆ ಹೀಗೆಯೇ ಆಗುವುದು.

---

## ಜಗತ್ತಿನ ಮಹಾ ರಾಕ್ಷಸ!

ಈಗ ಜಗತ್ತಿನಲ್ಲಿ ಒಬ್ಬ ಮಹಾ ರಾಕ್ಷಸನಿದ್ದಾನೆ. ಆತನ ನಾಶವಾಗದೆ ಜಗತ್ತಿಗೆ ಸುಖಶಾಂತಿಗಳಿಲ್ಲ. ಹಿಂದಕ್ಕೆ ಅನೇಕ ರಾಕ್ಷಸರಿದ್ದರೆಂದು ಪುರಾಣಗಳಲ್ಲಿ ಹೇಳಿದ್ದುಂಟು. ಆ ಎಲ್ಲಾ ರಾಕ್ಷಸರಿಗಿಂತ ಈಗಿನ ಜರ್ಮನಿಯ ರಾಕ್ಷಸ ರಾಜ್ಯವು ಹೆಚ್ಚು ಕ್ರೂರವಾದುದು. ಇಂಥ ರಾಕ್ಷಸ ರಾಜ್ಯವನ್ನು ಕೊಂಡಾಡುವ ಜನರು ರಾಕ್ಷಸ ಬಳಗದವರು.

ಅಮೇರಿಕೆಯ ಸಿನಟರ್‌ಕಿಂಗ್ ಎಂಬುವವರು ಕಳೆದ ವಾರ ಒಂದು ಮಹತ್ವದ ವ್ಯಾಖ್ಯಾನಮಾಡಿದರು. ಅದರಲ್ಲಿ ಹೀಗೆ ಹೇಳಿದರು—

"ಈಗ ಜಗತ್ತಿನಲ್ಲಿ ಹಿಟಲರನಂತಹ ಮಹಾ ರಾಕ್ಷಸ ಯಾರೂ ಇಲ್ಲ. ಆತನ ರಾಕ್ಷಸೀ ಕೃತ್ಯದ ನಿಷೇಧಕ್ಕೋಸ್ಕರ ಅಮೇರಿಕೆಯು ಜರ್ಮನಿಯ ಸಂಗಡ ಯಾವ ವಿಧವಾದ ಸಂಬಂಧವನ್ನೂ ಇಟ್ಟುಕೊಳ್ಳಬಾರದು."

ಜರ್ಮನಿಯ ನಾಝಿ ಸರಕಾರವು ತನ್ನ ಉನ್ನತಿಗಾಗಿ ಬೇರೆ ಸರಕಾರಗಳ ಸಂಗಡ ಈ ವರೆಗೂ ಅನೇಕ ಕಪಟೋಪಾಯಗಳಿಂದಲೂ ಬಲಾತ್ಕಾರದಿಂದಲೂ ಹೋರಾಡುತ್ತಾ ಬಂದಿದೆ. ಆಸ್ಟ್ರೀಯಾ, ಝೆಕೊಸ್ಲೊವ್ಹಾಕಿಯಾಗಳ ಮೇಲೆ ಅನ್ಯಾಯವಾದ ಆಕ್ರಮಣವನ್ನು ನಡೆಯಿಸಿತು. ಇವುಗಳೆಲ್ಲಾ ರಾಜಕೀಯ ದೃಷ್ಟಿಯಿಂದ ಒಂದು ವೇಳೆ ಕ್ಷಮ್ಯವಾಗಬಹುದು. ಏಕೆಂದರೆ ಇವೆಲ್ಲಾ ಒಂದು ಸರಕಾರದ ಸಂಗಡವಾದರೂ ನಡೆದ ಹೋರಾಟ.

ನಾಝಿ ಸರಕಾರದ ಸೂತ್ರಧಾರನಾದ ಹಿಟಲರನ ರಾಕ್ಷಸೀ ಕೃತ್ಯಗಳು ಹೀಗೆ ಅವ್ಯಾಹತವಾಗಿ ನಡೆಯುತ್ತಿರುವುದಕ್ಕೆ ಬ್ರಿಟಿಶ್ ಮೊದಲಾದ ಬೇರೆ ರಾಷ್ಟ್ರಗಳು ಬಲಹೀನವಾಗಿರುವುದೇ ಮುಖ್ಯ ಕಾರಣ. ಜಗತ್ತಿನಲ್ಲಿ ಯುದ್ಧಗಳಾಗಬಾರದೆಂಬ ಉದಾತ್ತ ಧ್ಯೇಯವನ್ನು ಇಟ್ಟುಕೊಂಡು ಇವು ಸುಖ ಶಾಂತಿಯ ಸೌಲಭ್ಯಗಳ ಕಡೆಗೇನೇ ಹೆಚ್ಚು ಲಕ್ಷಿಸಿದವು. ರಾಕ್ಷಸ ಹಿಟಲರನಾದರೋ ಯುದ್ಧ ಸಿದ್ಧತೆಯಲ್ಲಿಯೇ ತನ್ನ ಶಕ್ತಿಯನ್ನು ಉಪಯೋಗಿಸಿ ನಾಝಿ ಸರಕಾರವು ರಾಕ್ಷಸ ಸರಕಾರವಾಗುವಂತೆ ಮಾಡಿದನು.

ಈ ದುಷ್ಟನ ನೀಚ ಕೃತ್ಯಗಳನ್ನು ನಿಲ್ಲಿಸಲು ಈಗಲೇ ಬೇರೆ ರಾಷ್ಟ್ರಗಳು ಪ್ರತಿಭಟಿಸುವಂತಿಲ್ಲ. ಇವು ಬಲಹೀನವಾಗಿರುವುದರಿಂದ ಈಗ ಪ್ರತಿಬಂಧಗೊಳಿಸಹೋದರೆ ಆತನ ದುಷ್ಟತನವೇ ಗೆಲ್ಲುವ ಸಂಭವವಿದೆಯೆಂದು ಉಪಾಯಾಂತರಗಳಿಂದ ರಾಕ್ಷಸ ಹಿಟಲರನ ಕಾಲು ಕಟ್ಟಬೇಕಾಗಿ ಪ್ರಯತ್ನಿಸಿವೆ. ಹೀಗೆ ಮಾಡಿದ್ದರಿಂದ ಚೆಂಬರ್ಲೇನ್ ಮೊದಲಾದವರು ಬಹು ಹೇಡಿಗಳೆಂದು ಅನೇಕರು ಹೀಯಾಳಿಸುತ್ತಿದ್ದಾರೆಯೇ ವಿನಾ ರಾಕ್ಷಸ ಹಿಟಲರನ ಕೃತಿಯನ್ನು ಅಷ್ಟು ತೀಕ್ಷ್ಣವಾಗಿ ಖಂಡಿಸುತ್ತಾ ಇಲ್ಲ.

ಅನೇಕರಿಗೆ ಇಂಗ್ಲಿಷರ ಬಗ್ಗೆ ತಿರಸ್ಕಾರವನ್ನು ಹುಟ್ಟಿಸಿ ಜರ್ಮನಿಯ ಶಕ್ತಿಯನ್ನು ಹೊಗಳಬೇಕಾಗಿದೆ. ಜರ್ಮನಿಯ ಸಂಗಡ ಇಂಗ್ಲೆಂಡ್ ಯುದ್ಧಕ್ಕೆ ಹೋಗಿ ಸೋಲುವ ಹೊತ್ತು ಬರಬೇಕೆಂದೂ ಹಾಗಾದರೆ ತಮಗೆ ಕೂಡಲೆ ಸ್ವಾತಂತ್ರ್ಯ ದೊರೆಯುವದೆಂದೂ ಕೆಲವು ಹಿಂದಿಗಳು ಹಾರೈಸುತ್ತಿದ್ದಾರೆ. ಇವರು ಮಹಾ ರಾಜಕಾರಣಪಟುಗಳಂತೆ. ಇವರ ಶೂರತ್ವ ರಾಷ್ಟ್ರಭಕ್ತಿಗಳು ಬಹು ಉಜ್ವಲ!

ಇಂಗ್ಲಿಷರು ಶಾಂತಿ ಕಾಲದಲ್ಲಿ ಯುದ್ಧೋಪಕರಣಗಳ ಸಿದ್ಧತೆ ಮಾಡಿದರೆ ಅವರನ್ನು ಸಾಮ್ರಾಜ್ಯದಾಹವುಳ್ಳವರೆಂದು ನಿಂದಿಸಲು ಇದೇ ರಾಷ್ಟ್ರವೀರರು ಮುಂದೆ ಬರುತ್ತಾರೆ. ರಾಕ್ಷಸ ಹಿಟ

ಲರನಂಥಹ ನೀಚರು ದುರ್ಮಾರ್ಗದಲ್ಲಿ ನಡೆದಾಗ ಅವರನ್ನು ಹಾದಿಗೆ ತರದಿದ್ದರೆ ಹೇಡಿಗಳೆಂದು ಹೀಯಾಳಿಸಲು ಈ ಶೂರರ ನಾಲಿಗೆ ಬಹು ಉದ್ದ. ಇಂಥ ಇಂಗ್ಲಿಷ ದ್ವೇಷಿಗಳ ಮಾತು ಹಾಗಿರಲಿ. ನ್ಯಾಯಪರರು ರಾಕ್ಷಸ ಹಿಟಲರನ ನೀಚ ಕೃತಿಯನ್ನೇ ನಿಷೇಧಿಸಿ ಇಂಗ್ಲಿಷರ ಈಗಿನ ಧೋರಣವನ್ನೇ ಅನುಮೋದಿಸದಿರಲಾರರು.

**ಯಹುದಿಗಳ ಸಂಹಾರ!**

ಹಿಟಲರನಿಗೆ ರಾಕ್ಷಸನೆಂಬ ಬಿರುದು ಬಂದುದು ಈಗ ಆತನು ನಡೆಸಿದ ಯಹುದಿ ಜನರ ಸಂಹಾರದಿಂದ. ನಾಝಿ ರಾಜ್ಯವು ರಾಕ್ಷಸ ರಾಜ್ಯವಾಗಿದೆ. ಈಗ ಜಗತ್ತಿನಲ್ಲಿ ಇಂಥ ಕ್ರೂರ ರಾಜ್ಯವೇ ಇಲ್ಲ. ಜರ್ಮನಿಯಲ್ಲಿರುವ ೪ ಲಕ್ಷ ಯಹುದಿಗಳನ್ನು ಜರ್ಮನರು ಬೇಟೆಯಾಡುತ್ತಿದ್ದಾರೆ. ಇಂಥ ಸುಧಾರಿಸಿದ ಕಾಲದಲ್ಲಿ ಸುಧಾರಿಸಿದ ರಾಷ್ಟ್ರವೆಂದು ಹೇಳಿಕೊಳ್ಳುವ ಜರ್ಮನಿಯು ಯಹುದಿಗಳ ಸಂಹಾರ ನಡೆಸಿದುದನ್ನು ಕೇಳಿದರೆ ಈ ನಾಝಿ ರಾಜ್ಯ ನಾಶವಾದ ವಿನಾ ಜಗತ್ತಿಗೆ ಕ್ಷೇಮವಿಲ್ಲವೆಂದೇ ಗೊತ್ತಾಗದಿರಲಾರದು.

ಒಬ್ಬ ತಲೆತಿರುಕ ಯಹುದಿಯು ಒಬ್ಬ ಜರ್ಮನ್ ರಾಯಭಾರಿಯ ಕೊಲೆ ಮಾಡಿದರೆ ಆ ತಲೆ ತಿರುಕನಿಗೆ ಶಿಕ್ಷೆ ವಿಧಿಸುವುದು ನ್ಯಾಯವೇ ವಿನಾ ನಿರಪರಾಧಿಗಳಾದ ಆ ಜಾತಿಯ ಲಕ್ಷಾಂತರ ಜನರನ್ನು ಹಿಂಸಿಸುವುದು ಯಾವ ನ್ಯಾಯ:? ಜರ್ಮನಿಯ ಈ ನೀಚ ಕೃತಿಯನ್ನು ನಿಲ್ಲಿಸಲು ಶಾಂತತಾಪ್ರಿಯ ಎಲ್ಲ ರಾಷ್ಟ್ರಗಳೂ ಒಂದಾಗಬೇಕಾದುದು ಅಗತ್ಯವಲ್ಲವೆ?

ಜರ್ಮನಿಯಲ್ಲಿರುವ ಯಹುದಿಗಳ ದೇವಾಲಯಗಳನ್ನು ಸುಟ್ಟರು. ಅವರ ಅಂಗಡಿಗಳನ್ನು ಸುಲಿಗೆ ಮಾಡಿದರು. ಹುಲಿಯ ಬೇಟೆಗೆ ಹೋಗುವಂತೆ ಯಹುದಿಗಳ ಸಂಹಾರಕ್ಕೆ ಜರ್ಮನ್ ಜನರು ತಂಡುತಂಡಾಗಿ ಹೋದರು. ಯಹುದಿಗಳ ಮಾನ ಪ್ರಾಣ ಧನಗಳ ಸಂಹಾರವು ಜರ್ಮನಿಯಲ್ಲಿ ಪುಣ್ಯ ಕಾರ್ಯವಾಗಿದೆ!

ನಾಝಿ ಸರಕಾರವು ಈ ನೀಚ ಕಾರ್ಯಗಳನ್ನು ಪ್ರೋತ್ಸಾಹಿಸುತ್ತದೆ. ಡಾ. ಗೋಬಲ್ಸನು ನಾಚಿಕೆಯಿಲ್ಲದೆ ಈ ಕಾರ್ಯಗಳನ್ನು ಸಮರ್ಥಿಸುತ್ತಿದ್ದಾನೆ. "ಜರ್ಮನ್ ದೊಂಬಿಗಾರರ ಮೇಲೆ ಗುಂಡು ಹಾಕಲು ನಾನು ಪೋಲಿಸರಿಗೆ ಅಪ್ಪಣೆಮಾಡಲಾರೆನು. ಏಕೆಂದರೆ, ಅವರ ಬಗ್ಗೆ ನನಗೆ ಸಹಾನುಭೂತಿಯಿದೆ." ಎಂದು ನಾಝಿ ಸರಕಾರದ ಪೋಲಿಸ್ ಮುಖ್ಯಾಧಿಕಾರಿಯೇ ನಿರ್ಲಜ್ಜನಾಗಿ ಹೀಗೆ ಹೇಳಿದ್ದಾನೆ.

**ಅಮಾನುಷ ಅತ್ಯಾಚಾರ.**

ಯಹುದಿಗಳಿಗೆ ಒಂದು ದೇಶವಿಲ್ಲ. ಅವರು ನಿರಪರಾಧಿಗಳು. ಎಲ್ಲೆಲ್ಲಿಯೂ ಅವರನ್ನು ಹಿಂಸಿಸುವವರೇ ಹೆಚ್ಚಿದ್ದಾರೆ. ಅವರ ಮೇಲೆ ನಡೆದಿರುವ ಅಮಾನುಷ ಅತ್ಯಾಚಾರಗಳನ್ನು ತಡೆಯಲು ಯಾರೂ ಮುಂದೆ ಬಂದಿಲ್ಲ. ಬಲಹೀನರ ಬಾಳು ಈ ಕಾಲದಲ್ಲಿ ಹೇಗಾಗುವುದೆಂಬುದನ್ನು ಯಹುದಿಗಳು ಪ್ರಪಂಚಕ್ಕೆ ಆರ್ತಸ್ವರದಿಂದ ಸೂಚಿಸುತ್ತಿದ್ದಾರೆ.

ಜರ್ಮನಿಯ ಒಬ್ಬ ರಾಯಭಾರಿಯು ಕೊಲೆಮಾಡಲ್ಪಟ್ಟದ್ದರಿಂದ ಜರ್ಮನಿಯಲ್ಲಿರುವ ೪ ಲಕ್ಷ ಯಹುದಿಗಳು ಒಂದು ಲಕ್ಷ ಜರ್ಮನ್ ಮಾರ್ಕನಾಣ್ಯವನ್ನು ದಂಡವಾಗಿ ಕೊಡಬೇಕೆಂದು ನಾಝಿ ಸರಕಾರದ ಅಪ್ಪಣೆಯಾಗಿದೆ. ಯಾರೋ ಒಬ್ಬ ಯಹುದಿ ತಲೆತಿರುಕನು ಕೊಲೆಮಾಡಿದ್ದರಿಂದ ಆ ಜಾತಿಯ ಪ್ರತಿಯೊಂದು ತಲೆಗೂ ೨|| ಸಾವಿರ ಮಾರ್ಕ ನಾಣ್ಯದ ದಂಡ! ಇದು ರಾಕ್ಷಸ ನ್ಯಾಯಕ್ಕೂ ಮಿಗಿಲಾದದ್ದು. ಬೇರೆ ಶಬ್ದಗಳಿಲ್ಲದ್ದರಿಂದ ರಾಕ್ಷಸ ಹಿಟಲರ ಮತ್ತು ರಾಕ್ಷಸ ರಾಜ್ಯ ಎಂದು ಹೇಳುತ್ತಿದ್ದಾರೆ. ಇವರ ನಾಶಕ್ಕೆ ಎಲ್ಲರೂ ಶಕ್ಯವಿದ್ದ ಎಲ್ಲ ಪ್ರಯತ್ನಗಳನ್ನೂ ಮಾಡುವರು.

## ನಿಜಾಮ ರಾಜ್ಯದಲ್ಲಿ ಸತ್ಯಾಗ್ರಹ ಯುದ್ಧ!

ಈ ವರೆಗೂ ಹೈದರಾಬಾದಿನಲ್ಲಿ ನಡೆದಿದ್ದ ಧೂಳಪೇಟೆ ಕೊಲೆಯ ವ್ಯಾಜ್ಯದಲ್ಲಿ ಶ್ರೀ. ಉಮರಾವಸಿಂಗ್ ಮೊದಲಾದ ೨೪ ಜನರಿಗೂ ನ್ಯಾಯಾಧೀಶರಾದ ಖಲೀಲ ಉಜಮನ ಸಿದ್ದಿಕ ಇವರು ಮರಣಾಂತ್ಯದ ವರೆಗಿನ ದ್ವೀಪಾಂತರ ಶಿಕ್ಷೆಯನ್ನು ವಿಧಿಸಿದರು. ಈ ವ್ಯಾಜ್ಯವನ್ನು ನಡೆಯಿಸಲು ವೀರ ನರಿಮನ್ನರಿಗೆ ಅಪ್ಪಣೆಯನ್ನೇ ಸರಕಾರವು ಕೊಡಲಿಲ್ಲ. ಆ ಮೇಲೆ ಶ್ರೀ. ಭುಲಾಭಾಯಿಯವರು ನಿಜಾಮ ರಾಜ್ಯದ ನಾಗರಿಕ ಸ್ವಾತಂತ್ರ್ಯ ಹರಣ ಶಾಸನದ ನಿಷೇಧಾರ್ಥವಾಗಿ ಈ ವ್ಯಾಜ್ಯ ನಡೆಯಿಸುವುದನ್ನು ಮಧ್ಯದಲ್ಲೇ ಬಿಟ್ಟುಹೋಗಿದ್ದರು.

ಸರಕಾರದ ದಬ್ಬಾಳಿಕೆ ಈ ವಾರ ಹೆಚ್ಚಾಗಿದೆ. ಅದೇ ಪ್ರಕಾರ ಸತ್ಯಾಗ್ರಹಿಗಳ ವೀರ ಪ್ರಭೆಯೂ ಹೆಚ್ಚಿದೆ. ಸತ್ಯಾಗ್ರಹದ ಸುದ್ದಿಯನ್ನು ಮಾತ್ರ ಅಲ್ಲಿಯ ಪತ್ರಿಕೆಗಳು ಪ್ರಕಟಿಸಬೇಕೇ ವಿನಾ ಅದರ ಮೇಲೆ ಟೀಕೆ ಟಿಪ್ಪಣೆಗಳನ್ನು ಬರೆದರೆ ಶಿಕ್ಷೆಗೊಳಗಾಗಬೇಕಾದೀತೆಂದು ಸರಕಾರದ ಅಪ್ಪಣೆಯಾಗಿದೆ.

೮ ನೆಯ ಸರ್ವಾಧಿಕಾರಿಗಳಾದ ಶ್ರೀ. ಕೋದಂಡ ರಾಮರಾಯರು ಕಾಂಗ್ರೆಸ್ಸಿನ ವಿರುದ್ಧವಾಗಿ ನಡೆಸಿರುವ ಕೆಲವು ಪತ್ರಿಕೆಗಳ ರೀತಿಯನ್ನು ಖಂಡಿಸಿದರು.

ಔರಂಗಾಬಾದ ಕಾಲೇಜಿನ ವಸತಿಗೃಹದಲ್ಲಿ ವಂದೇಮಾತರಂ ಗೀತೆಗೆ ಅಡ್ಡಿಮಾಡಲಾಗಿದೆ. ಪೈಠಣದ ರಮಣಿಕಲಾಲ ಪಟೇಲ ಎಂಬ ತರುಣನನ್ನು ಪೋಲಿಸರು ಹಿಡಿಯಲು "ಸ್ಟೇಟ್ ಕಾಂಗ್ರೆಸ್ ಝಿಂದಾಬಾದ" ಎಂದು ಜನರು ಜಯಧ್ವನಿಮಾಡಿ ಆ ತರುಣನನ್ನು ಗೌರವಿಸಿದರು.

ಪಿಂಜಳವಾಡಿಯ ಜಮೀನದಾರ ಶ್ರೀ. ಶಂಕರರಾವ, ಶ್ರೀ. ಸೊಂಡೆ ಎಂಬುವವರನ್ನೂ ವಿಜಾಪುರದ ಒಬ್ಬ ಕಾಲೇಜ ವಿದ್ಯಾರ್ಥಿಯನ್ನೂ ಪೋಲಿಸರು ಹಿಡಿದರು.

ಬಾರ್ಶಿ ಹತ್ತಿರದ ಯರವಾಳ್ಯಾ ಎಂಬಲ್ಲಿ ಕಳಂಬದ ರಾಮಕಿಶನ ಎಂಬ ತರುಣನು ಶಾಸನಭಂಗಮಾಡಿ ಸೆರೆಯಾಳಾದನು. ಪುಣೆಯಿಂದ ಸತ್ಯಾಗ್ರಹಿಗಳ ಇನ್ನೊಂದು ತಂಡವು ತಾ. ೨೧ ಕ್ಕೆ ಹೈದರಾಬಾದಿಗೆ ಹೋಗುವುದು. ಲಾಹೋರದಿಂದ ೨೦ ವಿದ್ಯಾರ್ಥಿಗಳ ಒಂದು ಸತ್ಯಾಗ್ರಹ ಗುಂಪು ಒಬ್ಬ ಪ್ರೊಫೆಸರರ ನೇತೃತ್ವದಲ್ಲಿ ಬರುವುದಿದೆ.

ಆರ್ಯ ಸಂರಕ್ಷಕ ಸಂಘದ ಶ್ರೀ. ರಾಮೇಶ್ವರರಾವ ಮತ್ತು ಅನಂತರಾವ ಇವರು ಶಾಸನ ಭಂಗಮಾಡಿ ಸೆರೆಯಾಳಾದರು.

---

## ಜರ್ಮನಿಗೆ ಸೂಚನೆ.

ಜರ್ಮನಿಯಲ್ಲಿರುವ ಅಮೇರಿಕೆಯ ಯಹುದಿ ಜನರಿಗೆ ಎಷ್ಟು ನಷ್ಟವಾಗಿದೆಯೆಂಬುದನ್ನು ಕೂಡಲೆ ತಿಳಿಸಬೇಕಾಗಿ ಅಮೇರಿಕೆಯ ಸರಕಾರವು ಜರ್ಮನ್ ಸರಕಾರಕ್ಕೆ ಸೂಚಿಸಿದೆ. ಅಮೇರಿಕೆಯ ಯಹುದಿ ಜನರ ಹಕ್ಕು ಬಾಧ್ಯತೆಗಳಿಗೆ ಲೋಪ ಬಂದಿದ್ದಾದರೆ ಆ ವಿಚಾರದಲ್ಲಿ ಮುಂದಿನ ಕ್ರಮ ನಡೆಸಲು ಅಮೇರಿಕೆಯು ಸಿದ್ಧವಾಗಿದೆ.




ಶಾ. ಶ. ೧೮೬೦ ನೆಯ ಕಾರ್ತಿಕ ಬ|| ೩೦ ಸೋಮವಾರ.

# ವೀರಶೈವ ಮಹಾಸಭೆಯ ಕಾರ್ಯ ಪದ್ಧತಿ.

ಅಖಿಲ ಭಾರತ ವೀರಶೈವ ಮಹಾಸಭೆಯು ಕಳೆದ ೩೩ ವರುಷಗಳಲ್ಲಿ ೧೨ ಸಾರಿ ಕೂಡಿದೆಯಷ್ಟೆ! ಈ ೧೨ ಅಧಿವೇಶನಗಳಲ್ಲಿ ಒಟ್ಟು ೩೩ ದಿವಸ ಇದು ತನ್ನ ಕಾರ್ಯವನ್ನು ಮಾಡಿತು! ಹೀಗೆ ಅನುಕೂಲವಾದಾಗ ಸೇರಿ, ಸೇರಿದಾಗ ಮೂರು ದಿನ ಕೆಲಸ ಮಾಡುವುದೇ ಈ ವರೆಗಿನ ಇದರ ಪದ್ಧತಿ. ಇಂತಹ ಇದರ ಕಾರ್ಯ ಪದ್ಧತಿಯನ್ನು ಹುಬ್ಬಳ್ಳಿಯಲ್ಲಿ ಕೂಡುವ ೧೩ ನೆಯ ವೀರಶೈವ ಮಹಾಸಭೆಯು ಮೀರುವ ಶುಭ ಲಕ್ಷಣ ತೋರುತ್ತಿದೆ. ಇದು ಮೂರು ದಿನಗಳ ಮಹಾಸಭೆಯಾಗದೆ ೩೬೦ ದಿನಗಳ ಮಹಾಸಭೆಯಾಗಬೇಕೆಂದು ಹುಬ್ಬಳ್ಳಿಯ ಉತ್ಸಾಹಿ ವೀರಶೈವ ಬಂಧುಗಳು ಪ್ರಯತ್ನಿಸುತ್ತಿರುವುದು ಅಭಿನಂದನೀಯವಾದುದು.

**ಇವೆರಡು ಮುಖ್ಯ ದೋಷಗಳು.**

ಸ್ವಾಗತ ಸಂಘದವರು ಮಹಾಸಭೆಗೆ ಈ ಕಾಲಕ್ಕೆ ತಕ್ಕಂತಹ ಸಮರ್ಥರನ್ನೇ ಅಧ್ಯಕ್ಷರನ್ನಾಗಿ ಆರಿಸುವರಷ್ಟೆ. ಆಗ ಒಂದು ವರುಷ ಮಹಾಸಭೆಯ ಕಾರ್ಯವನ್ನು ಮಾಡಲು ಸಿದ್ಧವಾಗಿದ್ದವರನ್ನೇ ಆರಿಸಬೇಕು. ಹಾಗೆ ಕಾರ್ಯ ಮಾಡಲು ಯಾರಿಗೆ ಇಷ್ಟವಿಲ್ಲವೋ ಅಥವಾ ತಕ್ಕವಿಲ್ಲವೋ ಅವರನ್ನು ಅಧ್ಯಕ್ಷರನ್ನಾಗಿ ಆರಿಸಿ ಆ ಮೇಲೆ ಅವರಿಂದ ಯಾವ ಕಾರ್ಯವೂ ಆಗಲಿಲ್ಲವೆಂದು ಆಕ್ಷೇಪಿಸಿದರೆ ಆಗುವುದೇನು?

ಮಹಾಸಭೆಯ ಕಾರ್ಯ ನಿರ್ವಾಹಕ ಮಂಡಳಿಯನ್ನು ಗೊತ್ತು ಮಾಡಬೇಕಾದರೂ ಪ್ರತಿನಿಧಿಗಳು ಈ ವಿಷಯವನ್ನು ಚೆನ್ನಾಗಿ ಲಕ್ಷಿಸಬೇಕು. ಯಾರು ಮಹಾಸಭೆಯ ಅಧ್ಯಕ್ಷರ ಸೂಚನೆಯಂತೆ ಒಂದು ಕಾರ್ಯ ನಿರ್ವಹಿಸಲು ಸಿದ್ಧರಿಲ್ಲವೋ ಅಂಥವರನ್ನು ಕಾರ್ಯಕಾರಿ ಮಂಡಲದಲ್ಲಿ ಸೇರಿಸಿ ಆ ಮೇಲೆ ಮಹಾಸಭೆಯಿಂದ ಯಾವ ಕಾರ್ಯವಾಯಿತೆಂದು ಟೀಕಿಸುವುದರಲ್ಲಿ ಅರ್ಥವೇನು?

ಈ ವರೆಗಿನ ಮಹಾಸಭೆಯ ಕಾರ್ಯಪದ್ಧತಿಯಲ್ಲಿದ್ದ ಈ ಎರಡು ಮುಖ್ಯ ದೋಷಗಳಿಂದಲೇ ಮಹಾಸಭೆಯು ಮೂರು ದಿನಗಳ ಮಹೋತ್ಸವವಾಗಿ ಪರಿಣಮಿಸಿದೆ. ಹುಬ್ಬಳ್ಳಿಯ ಮಹಾಸಭೆಯವರು ಈ ಸಾರಿಯಾದರೂ ಈ ಮುಖ್ಯ ದೋಷಗಳನ್ನು ಕೆಲವು ಮಟ್ಟಿಗಾದರೂ ನಿವಾರಣೆ ಮಾಡದಿದ್ದರೆ ಇದು ಕೂಡಾ ಕೊನೆಗೆ ಮೂರು ದಿನಗಳ ಸಮಾರಂಭವೆಂದೇ ಹೇಳಿಸಿಕೊಳ್ಳದಿರಲಾರದು.

**ಚರ್ಚಿಸತಕ್ಕ ವಿಷಯಗಳು.**

ಮಹಾಸಭೆಯ ಈ ವರೆಗಿನ ಅಧಿವೇಶನಗಳಲ್ಲಿ ವೀರಶೈವ ಸಮಾಜದ ಉನ್ನತಿಗೆ ಅಗತ್ಯವಾಗಿರತಕ್ಕ ಅನೇಕ ವಿಷಯಗಳು ಚರ್ಚಿಸಲ್ಪಟ್ಟಿವೆ. ಅವುಗಳನ್ನು ಕಾರ್ಯರೂಪದಲ್ಲಿ ತರುವುದೇ ಈಗ ಮುಖ್ಯವೇ ವಿನಾ ಅನ್ಯ ಸಭೆಗಳಲ್ಲಿ ಮಾಡುವ ಗೊತ್ತುವಳಿಗಳನ್ನು ನೋಡಿ ನಮ್ಮ ಸಭೆಯಲ್ಲಿಯೂ ಅಂತಹ ಗೊತ್ತುವಳಿಯನ್ನು ಮಾಡಬೇಕೆಂದು ಹವ್ಯಾಸಪಡುವುದರಲ್ಲೇನೂ ಫಲವಿಲ್ಲ. ಆದ ಕಾರಣ ಚರ್ಚಿಸತಕ್ಕ ವಿಷಯಗಳು ಯಾವುವೆಂಬುದನ್ನು ಹುಡುಕುವುದಕ್ಕಿಂತ ಸಾರ್ವತ್ರಿಕ ಆಚರಣೆಯಲ್ಲಿ ಈಗ ಬರಲೇಬೇಕಾದ ಸಂಗತಿಗಳು ಯಾವುವೆಂಬುದನ್ನೂ ಅವು ಹೇಗೆ ಕಾರ್ಯರೂಪಕ್ಕೆ ತರಲ್ಪಡಬೇಕೆಂಬುದನ್ನೂ ಯೋಚಿಸುವುದು ಅಗತ್ಯ.

(೧) ವೀರಶೈವ ಮತತತ್ವ ಸಂಬಂಧವಾಗಿ ಈಗ ಸಮಾಜದಲ್ಲುಂಟಾಗಿರುವ ಭಿನ್ನಾಭಿಪ್ರಾಯಗಳ ನಿವಾರಣೆಗೆ ಮಾಡಬೇಕಾದ ಏರ್ಪಾಟು. (೨) ವೀರಶೈವ ಒಳಪಂಗಡಗಳ ಏಕೀಕರಣ. (೩) ವೀರಶೈವರ ಶಿಕ್ಷಣ ಸಂಸ್ಥೆ, ಮಠ, ಧರ್ಮಾದಾಯ ಫಂಡುಗಳ ಕಾರ್ಯಗಳು ಪರಿಣಾಮಕಾರಿಯಾಗುವಂತೆ ಪ್ರಯತ್ನಿಸುವುದು. (೪) ಒಂದು ಮಧ್ಯವರ್ತಿ ವೀರಶೈವ ಗ್ರಂಥಭಾಂಡಾರವನ್ನು ಸ್ಥಾಪಿಸುವುದು.

ಈ ನಾಲ್ಕು ವಿಷಯಗಳ ಸಂಬಂಧವಾಗಿ ಈ ಸಾರಿಯ ಸಭೆಯಲ್ಲಿ ಚೆನ್ನಾಗಿ ಚರ್ಚೆ ನಡೆದು ನಿಶ್ಚಿತವಾದ ಕಾರ್ಯಕ್ರಮವು ಏರ್ಪಟ್ಟು ಒಂದು ವರುಷ ಆ ಕಾರ್ಯಕ್ರಮದಂತೆ ಪ್ರಯತ್ನ ನಡೆದದ್ದಾದರೆ ಸಮಾಜಕ್ಕೆ ಎಷ್ಟೋ ಪ್ರಯೋಜನವಾಗುವುದರಲ್ಲಿ ಅಭ್ಯಂತರವಿಲ್ಲ.

**ರಾಜಕೀಯ ಚರ್ಚೆ.**

ವೀರಶೈವ ಮಹಾಸಭೆಯಲ್ಲಿ ರಾಜಕೀಯ ವಿಷಯಗಳು ಚರ್ಚಿಸಲ್ಪಡಬೇಕೆಂದೂ ಮಹಾಸಭೆಯು ಕಾಂಗ್ರೆಸ್ಸಿಗೆ ಸೇರಬೇಕೆಂದೂ ಅನೇಕರ ಅಪೇಕ್ಷೆ. ಹಾಗಾಗದಿದ್ದರೆ ಇದೊಂದು ಜಾತೀಯ ಸಂಸ್ಥೆಯಾಗಿಯೇ ಉಳಿದು ಜಾತ್ಯಂಧರ ಸಮ್ಮೇಲನವಾಗುವುದೆಂದೇ ಅವರ ತಿಳುವಳಿಕೆ. ಅಂತೆಯೇ ಹುಬ್ಬಳ್ಳಿಯ ಮಹಾಸಭೆಯಲ್ಲಿ ಕಾಂಗ್ರೆಸ್ಸಿನ ಧ್ಯೇಯ ಮತ್ತು ಕಾರ್ಯಕ್ರಮಗಳನ್ನು ಇಟ್ಟು ಅವು ಒಪ್ಪಿಗೆಯಾಗುವಂತೆ ಪ್ರಯತ್ನಿಸಬೇಕಾಗಿ ಕೆಲವರ ಯೋಚನೆ.

ಈ ವಿಧವಾದ ವಿಚಾರಸರಣಿಯು ಸಮಂಜಸವಾದುದಲ್ಲ. ಇದೊಂದು ಜಾತಿ ವಿಶಿಷ್ಟವಾದ ಸಭೆಯೆಂಬುದನ್ನೇ ಇವರು ಮರೆಯುತ್ತಾರೆ. ರಾಜಕಾರಣವು ಯಾವುದೊಂದು ಜಾತಿಗೇನೇ ಈಗ ಸಂಬಂಧಪಟ್ಟದ್ದಾಗಿಲ್ಲ. ಅದು ಹಿಂದುಸ್ಥಾನದ ಎಲ್ಲ ಜಾತಿಯವರಿಗೂ ಸಮಾನವಾಗಿಯೇ ಸಂಬಂಧಿಸಿದ್ದಾಗಿದೆ. ಹೀಗಿರುವಾಗ ವೀರಶೈವರಿಗೇನೇ ಸಂಬಂಧಿಸಿರುವ ರಾಜಕಾರಣವು ಯಾವುದು?

ವೀರಶೈವ ಮಹಾಸಭೆಯಲ್ಲಿ ವೀರಶೈವರು ಕಾಂಗ್ರೆಸ್ಸಿಗೆ ಸೇರಬಾರದೆಂದಾಗಲಿ ಅಥವಾ ಸ್ವಾತಂತ್ರ್ಯವು ವೀರಶೈವರ ಧ್ಯೇಯ

ವಲ್ಲವೆಂದಾಗಲಿ ತೀರ್ಮಾನವಾಗಿಲ್ಲವಷ್ಟೆ. ಎಂದಮೇಲೆ ಮಹಾಸಭೆಯಲ್ಲಿ ಒಂದು ವಿಶಿಷ್ಟವಾದ ರಾಜಕೀಯ ಪಕ್ಷವನ್ನುಂಟುಮಾಡುವುದರಿಂದ ಪ್ರಯೋಜನವೇನು? ಮಹಾಸಭೆಯಲ್ಲಿ ತೀರ್ಮಾನವಾಗಿಲ್ಲವೆಂದು ವೀರಶೈವರೇನೂ ಕಾಂಗ್ರೆಸ್ಸಿಗೆ ಸೇರದೆಬಿಟ್ಟಿರುವರೇ? ಈಗ ಅಂಥ ಒಂದು ಗೊತ್ತುವಳಿಯಾದ ಮಾತ್ರದಲ್ಲಿ ವೀರಶೈವರೆಲ್ಲರೂ ಕಾಂಗ್ರೆಸ್ಸಿನಲ್ಲಿ ಸೇರುವರೆ?

ಕಾಂಗ್ರೆಸ್ಸಿನ ವಿಧಾಯಕ ಕಾರ್ಯಗಳಾದ ಖಾದಿ ಪ್ರಸಾರ, ಅಸ್ಪೃಶ್ಯತಾ ನಿವಾರಣೆ, ಗ್ರಾಮೋದ್ಯೋಗ ಮೊದಲಾದ ವಿಷಯಗಳು ಮಹಾಸಭೆಯಲ್ಲಿ ಈ ಮುಂಚೆಯೇ ತೀರ್ಮಾನವಾಗಿಲ್ಲವೆ? ಅವುಗಳನ್ನು ಸಾರ್ವತ್ರಿಕ ಆಚರಣೆಯಲ್ಲಿ ತರಲು ಏಕೆ ಪ್ರಯತ್ನಿಸಬಾರದು?

ವೀರಶೈವ ಮಹಾಸಭೆಯಲ್ಲಿ ಕಾಂಗ್ರೆಸ್ಸಿನ ಗೊತ್ತುವಳಿಗಳನ್ನು ತರುವುದೇನೋ ಈಗ ಸುಲಭವಾಗಬಹುದು. ಆದರೆ ಮುಂದೆ ಕಾಂಗ್ರೆಸ್ಸು ಶಾಸನಭಂಗವನ್ನು ಪ್ರಾರಂಭಿಸಿದಾಗ ಮಹಾಸಭೆಯೂ ಅದರಲ್ಲಿ ಸೇರಲೇ ಬೇಕಾಗುವುದೆಂಬುದನ್ನು ಮರೆಯಕೂಡದು. ಆಗ ಈ ಸಂಸ್ಥೆಯ ಜಾತಿವಿಶಿಷ್ಟ ಏರ್ಪಾಟುಗಳೆಲ್ಲಾ ಯಾವ ಸ್ಥಿತಿಗೆ ಬರಬಹುದೆಂಬುದನ್ನೂ ಈಗಲೇ ಯೋಚಿಸಬಾರದೆ?

ಆದಕಾರಣ ಜಾತಿವಿಶಿಷ್ಟ ಸಭೆಯಲ್ಲಿ ಇಂಥ ವಿಷಯಗಳನ್ನು ತರುವುದು ಯುಕ್ತವಲ್ಲವೆಂದೇ ನಮಗೆ ತೋರುತ್ತದೆ. ರಾಷ್ಟ್ರಕ್ಕೆ ಅಹಿತಕರವಾದ ಯಾವ ವಿಷಯವೂ ಪ್ರಸ್ತಾಪಿಸಲ್ಪಡದೆ ಒಂದು ಜಾತಿಗೇನೇ ಸಂಬಂಧಿಸಿದ ಸಂಗತಿಗಳು ಕಾರ್ಯರೂಪದಲ್ಲಿ ಬಂದರೆ ಅದು ಜಾತ್ಯಂಧತೆಯನ್ನು ಹುಟ್ಟಿಸುವುದಿಲ್ಲವೆಂದೇ ನಮ್ಮ ತಿಳುವಳಿಕೆ.

**ಪತ್ರಿಕಾಕರ್ತರ ಸಮ್ಮೇಲನ.**

ವೀರಶೈವ ಪತ್ರಿಕಾಕರ್ತರ ಸಮ್ಮೇಲನವು ವೀರಶೈವ ಮಹಾಸಭೆಯ ಕಾಲದಲ್ಲಿ ನಡೆಯಬೇಕಾಗಿ ಗೊತ್ತಾಗಿದೆಯಷ್ಟೆ. ಇದು ಯುಕ್ತವಾಗಿದೆಯೆಂದು ನಮಗೆ ತೋರುವುದಿಲ್ಲ. ವೀರಶೈವ ಮಹಾಸಭೆಯು ಇಂಥ ಸಾರ್ವಜನಿಕ ಕಾರ್ಯನಿರ್ವಾಹಕರನ್ನು ಜಾತಿವಿಶಿಷ್ಟವಾಗಿ ಕೂಡಿಸಿದ್ದಾದರೆ ಅದು ಜಾತ್ಯಂಧತೆಗೆ ಅವಕಾಶವನ್ನು ಕೊಟ್ಟಂತಾಗಬಹುದು.

ವೀರಶೈವ ಪತ್ರಿಕಾಕರ್ತರ ಉನ್ನತಿಗಾಗಿ ಪ್ರಯತ್ನಿಸಬೇಕಾದರೆ ಅವರೊಂದು ಜಾತಿಯವರೆಂದೇ ಲಕ್ಷಿಸಿ ಅವರಿಗಾಗಿಯೇ ವಿಶೇಷ ಸೌಲಭ್ಯವನ್ನುಂಟುಮಾಡಿಕೊಡಲು ಮಹಾಸಭೆಯು ವೀರಶೈವರಿಗೆ ಸೂಚಿಸಬೇಕಾಗುವುದು. ಇದರಿಂದ ಪತ್ರಿಕಾಕರ್ತರಲ್ಲಿ ಜಾತಿಭಾವನೆಯು ಹೆಚ್ಚುವುದಿಲ್ಲವೆ? ವೀರಶೈವ ಮಹಾಸಭೆಯ ಪರವಾಗಿ ಇಂಥ ಕಾರ್ಯ ನಡೆಯಬಾರದೆಂದೇ ನಮಗೆ ತೋರುತ್ತದೆ.

ವೀರಶೈವ ಮಹಾಸಭೆಯು ಜಾತ್ಯಂಧತೆ ಹುಟ್ಟಲು ಅವಕಾಶವಾಗದಂತೆಯೂ, ರಾಜಕೀಯ ವಿಷಯದಲ್ಲಿ ಪ್ರತಿಯೊಬ್ಬ ವೀರಶೈವನಿಗೂ ಆತನ ಇಷ್ಟದಂತೆ ನಡೆಯಲು ಸ್ವಾತಂತ್ರ್ಯವಿರುವಂತೆಯೂ ರಾಷ್ಟ್ರ ಕಾರ್ಯಕ್ಕೆ ಯಾವ ಪ್ರತಿಬಂಧವೂ ಉಂಟಾಗದೆ ಪೋಷಕವಾಗುವ ರೀತಿಯಲ್ಲಿಯೂ, ತನ್ನ ಕಾರ್ಯಪದ್ಧತಿಯನ್ನು ಇಟ್ಟುಕೊಳ್ಳಬೇಕು. ಹಾಗಾದರೇನೇ ಅದರಿಂದ ಸಮಾಜಕ್ಕೂ ರಾಷ್ಟ್ರಕ್ಕೂ ಹಿತವಾಗುವುದು.

---

—ಪಂಡಿತ ಜವಾಹರಲಾಲ ನೆಹರುರವರು ತಾ. ೧೭ ನೇ ದಿನ ತಮ್ಮ ಮಗಳೊಂದಿಗೆ ಮುಂಬೈಗೆ ಬಂದರು. ಪ್ರಚಂಡ ಸ್ವಾಗತವಾಯಿತು.

# ಪಂಡಿತಜಿಯವರ ಮನನೀಯ ವಿಚಾರ.

ಪಂಡಿತ ಜವಾಹರಲಾಲ ನೆಹರುರವರು ಯುರೋಪದ ತಮ್ಮ ಮಹತ್ವದ ಪ್ರವಾಸವನ್ನು ತೀರಿಸಿಕೊಂಡು ತಾರೀಖು ೧೭ ನೆಯ ದಿನ ಈ ದೇಶಕ್ಕೆ ಬಂದರು. ಮುಂಬೈಯಲ್ಲಿಯ ೨೦೦ ಕ್ಕಿಂತ ಹೆಚ್ಚು ಸಂಸ್ಥೆಗಳು ಪಂಡಿತಜಿಯವರಿಗೆ ಪುಷ್ಪಮಾಲೆಯನ್ನು ಅರ್ಪಿಸಿ ಸುಸ್ವಾಗತ ಮಾಡಿದವು. ಆ ದಿನದ ಪ್ರಚಂಡ ಸಭೆಯಲ್ಲಿ ಭಾಷಣ ಮಾಡುತ್ತ ಪಂಡಿತಜಿಯವರು ಹೀಗೆ ಹೇಳಿದರು—

**ಅಂತರ ರಾಷ್ಟ್ರೀಯ ಪ್ರಶ್ನೆ.**

"ಅಂತರ ರಾಷ್ಟ್ರೀಯ ಪ್ರಶ್ನೆಯು ಈಗ ಬಹು ಮಹತ್ವದ್ದಾಗಿದೆ. ಹಿಂದುಸ್ಥಾನವು ಈಗ ಅಂತರ ರಾಷ್ಟ್ರೀಯ ಸ್ಥಿತಿಗಳನ್ನು ನೋಡಿಯೇ ತನ್ನ ಸ್ವಾತಂತ್ರ್ಯದ ಹೋರಾಟವನ್ನು ನಡೆಯಿಸಬೇಕಾಗಿದೆ. ಪ್ರಬಲ ಮತ್ತು ಸಂಘಟಿತ ರಾಷ್ಟ್ರಗಳೇ ಈಗ ಸ್ವಾತಂತ್ರ್ಯವನ್ನು ಸಂಪಾದಿಸಿಕೊಳ್ಳುವುದು ಶಕ್ಯ. ಸ್ಪೇನ್, ಚೀನ, ಪ್ಯಾಲಿಸ್ಟಾಯಿನ್‌ಗಳಲ್ಲಿ ನಡೆದಿರುವ ಹೋರಾಟವನ್ನು ನಾವು ನಿರ್ಲಕ್ಷಿಸಕೂಡದು. ಏಕೆಂದರೆ ಅವುಗಳ ಪರಿಣಾಮವು ನಮ್ಮ ಹೋರಾಟದ ಮೇಲೆಯೂ ಆಗುವುದು. ಸ್ಪೇನಕ್ಕೆ ಆಹಾರ ಪದಾರ್ಥಗಳನ್ನು ಹಿಂದುಸ್ಥಾನದ ಧನಿಕರು ಕಳುಹಿಸಿ ಸಹಾಯಮಾಡಬೇಕು."

**ರಾಷ್ಟ್ರಕ್ಕೆ ಬೇಕಾದ ಮೂರು ಸಂಗತಿಗಳು.**

ತಾ. ೧೮ ನೆಯ ದಿನ ಕೂಡಿದ ಆಜಾದ ಮೈದಾನಿನ ಸಭೆಯಲ್ಲಿ ಪಂಡಿತಜಿಯವರು ಹೀಗೆ ಹೇಳಿದರು—

"ರಾಷ್ಟ್ರ ರಕ್ಷಣೆಗೆ ಸೈನ್ಯ, ಆರ್ಥಿಕ ಸ್ವಾತಂತ್ರ್ಯ ಮತ್ತು ಪರರಾಷ್ಟ್ರಗಳ ಧೋರಣದ ಮೇಲೆ ಸಂಪೂರ್ಣಾಧಿಕಾರ ಇವು ಮೂರು ನಮಗೆ ಬೇಕಾಗಿವೆ. ಇವುಗಳನ್ನು ಸಾಧಿಸಲು ನಾವು ಮತಪಂಥ ಜಾತಿಗಳನ್ನೆಣಿಸದೆ ಸಂಘಟಿತವಾಗಿ ಪ್ರಯತ್ನಿಸಬೇಕು. ಝೆಕ್ ಸರಕಾರದ ಸ್ವಾತಂತ್ರ್ಯಹರಣವಾದಂತಹ ಸಂಗತಿಯನ್ನು ನಾನು ಜಗತ್ತಿನ ಈ ವರೆಗಿನ ಚರಿತ್ರೆಯಲ್ಲಿಯೇ ನೋಡಿಲ್ಲ."

**ಸಂಸ್ಥಾನಗಳಲ್ಲಿಯ ಹೋರಾಟ.**

ಸಂಸ್ಥಾನಗಳಲ್ಲಿ ನಡೆದಿರುವ ಹೋರಾಟವನ್ನು ಕುರಿತು ಹೀಗೆ ಹೇಳಿದರು—

"ಹೈದರಾಬಾದ, ತ್ರಾವಣಕೋರ, ರಾಜಕೋಟ ಮೊದಲಾದ ಸಂಸ್ಥಾನಗಳಲ್ಲಿ ನಡೆದಿರುವ ಜವಾಬದಾರಿ ಸರಕಾರ ಸ್ಥಾಪನೆಯ ಹೋರಾಟವನ್ನು ನೋಡಿ ನನಗೆ ತುಂಬಾ ಸಮಾಧಾನವಾಗಿದೆ. ಸಂಸ್ಥಾನಗಳಲ್ಲಿಯ ಪ್ರಜೆಗಳು ಜಾಗೃತರಾಗಿದ್ದಾರೆ. ಸ್ವಾತಂತ್ರ್ಯದ ಕೂಗು ಅವರನ್ನೂ ಎಚ್ಚರಗೊಳಿಸಿತು."

ಪ್ರಜೆಗಳನ್ನು ಕಟ್ಟಿಹಾಕಿರುವ ಪಾರತಂತ್ರ್ಯದ ಪಾಶವನ್ನು ಹರಿದುಹಾಕುವುದೇ ಸಂಸ್ಥಾನದ ಪ್ರಜೆಗಳ ಪ್ರಥಮ ಕರ್ತವ್ಯವೆಂದು ರಾಜಕೋಟಕ್ಕೆ ಹೋಗುವ ಸತ್ಯಾಗ್ರಹಿಗಳನ್ನು ಬೀಳ್ಕೊಡುವಾಗ ಪಂಡಿತಜಿಯವರು ಹೇಳಿದರು.

ಹಿಂದಿ ಸಂಸ್ಥಾನಗಳಲ್ಲಿ ನಡೆದಿರುವ ರಾಜಕೀಯ ಹೋರಾಟವು ಯಾವುದೊಂದು ವ್ಯಕ್ತಿ ಅಥವಾ ಜಾತಿಗೆ ಸಂಬಂಧಿಸಿರದೆ ಅಲ್ಲಿ ನಡೆದಿರುವ ಬಲಾತ್ಕಾರದ ರಾಜ್ಯಪದ್ಧತಿಯ ವಿರುದ್ಧವಾಗಿಯೇ ಇದೆಯೆಂದು ತಿಳಿಯಬೇಕು. ಅಲ್ಲಿಯ ಚಳವಳಿಯನ್ನು ಯಾರೂ ಹತ್ತಿಕ್ಕಲಾರರೆಂದೂ ತಿಳಿಸಿದರು.

# ಮೊಗಲಾಯಿ ಮುಸಲ್ಮಾನರ ಭಯಸೂಚನೆಗೆ ಸಾವರಕರರ ಉತ್ತರ.

ನಿಜಾಮ ರಾಜ್ಯದ ಮುಸಲ್ಮಾನರಲ್ಲಿ ತಾವು ರಾಷ್ಟ್ರೀಯ ಮುಸಲ್ಮಾನರೆಂದು ತಿಳಿದುಕೊಂಡಿರುವ ಮಿ. ಮೀರ ಅಕಬರ ಅಲ್ಲಿ ಖಾನ ಮೊದಲಾದ ಕೆಲವು ಪ್ರಮುಖರು ಒಂದು ಪ್ರಕಟನೆಯ ಮೂಲಕ ಹೀಗೆ ತಿಳಿಸಿದ್ದಾರೆ—

"ಈಗ ಹಿಂದುಗಳು ಇಲ್ಲಿ ಸತ್ಯಾಗ್ರಹವನ್ನು ಪ್ರಾರಂಭಿಸಿರುವುದರಿಂದ ಅನೇಕ ಶತಮಾನಗಳಿಂದ ಹಿಂದು ಮುಸಲ್ಮಾನರಲ್ಲಿದ್ದ ಐಕಮತ್ಯವು ನಷ್ಟವಾಗಿ ಶಾಂತತೆಯು ಭಂಗವಾಗುವುದು."

ಇವರ ಈ ಭಯಸೂಚನೆಗೆ ಸ್ವಾತಂತ್ರ್ಯವೀರ ಸಾವರಕರರು ಹೀಗೆ ಉತ್ತರವಾಗಿ ಪ್ರಕಟಿಸಿದ್ದಾರೆ—

"ಈ ಸಭ್ಯಗೃಹಸ್ಥರು ಶಾಂತತಾಭಂಗದ ವಿಚಾರವಾಗಿ ಪ್ರಕಟಿಸಿದ್ದು ತೋಳವು ಆಡಿನ ಹೊದಿಕೆಯನ್ನು ಹಾಕಿಕೊಂಡು ಕುರಿಯ ಹಿಂಡಿನಲ್ಲಿ ಹೋಗಿ ಶಾಂತತಾಭಂಗದ ಸಂಬಂಧವಾಗಿ ಹೇಳಿದಂತೆಯೇ ಸರಿ. ತೋಳವು ವೇಷ ಹಾಕಿಕೊಂಡು ಬಂದುದನ್ನು ಒಂದು ಕುರಿ ಮರಿಯು ತಿಳಿದು ಅದರ ಕಪಟತನವನ್ನು ಬೈಲಿಗೆಳೆದರೆ ಆಗ ಆ ಕುರಿ ಮರಿಯ ಸೂಚನೆಯು ಶಾಂತತಾಭಂಗವನ್ನುಂಟು ಮಾಡುವುದೆಂದು ತೋಳವು ಹೇಳುವುದು ಎಷ್ಟು ಯುಕ್ತವಾದುದೋ ಅಷ್ಟೇ ಹಿಂದುಗಳ ಈಗಿನ ಸತ್ಯಾಗ್ರಹವು ಹಿಂದು ಮುಸಲ್ಮಾನರ ಶಾಂತತಾ ಭಂಗಕ್ಕೆ ಕಾರಣವಾಗುವುದೆಂದು ಹೇಳುವುದು ಯುಕ್ತವಾದುದಾಗಿದೆ.

ಹಿಂದುಗಳು ಸಭೆ ಸೇರಲು, ಮೆರವಣಿಗೆ ಹೊರಡಿಸಲು, ದೇವಾಲಯಗಳನ್ನು ಸಂಪಡಿಸಿಕೊಳ್ಳಲು, ವ್ಯಾಯಾಮ ಶಾಲೆ, ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿಕೊಳ್ಳಲು ನಿಜಾಮ ರಾಜ್ಯದಲ್ಲಿ ಸ್ವಾತಂತ್ರ್ಯವುಳ್ಳವರಾಗಿಲ್ಲವೆಂಬುದು ಈ ರಾಷ್ಟ್ರೀಯ ಮುಸಲ್ಮಾನರಿಗೆ ಗೊತ್ತಿಲ್ಲವೆ?

ಮುಸಲ್ಮಾನರು ೧೦೦ ಕ್ಕೆ ೧೨ ರಂತೆ ಸಂಖ್ಯೆಯುಳ್ಳವರಾಗಿದ್ದರೂ ಸರಕಾರಿ ಅಧಿಕಾರಗಳಲ್ಲಿ ೧೦೦ ಕ್ಕೆ ೮೦ ರಂತೆ ಸ್ಥಾನಗಳನ್ನು ಆಕ್ರಮಿಸಿಕೊಂಡಿರುವುದು ಇವರಿಗೆ ತಿಳಿದಿಲ್ಲವೆ? ಹಿಂದು ಜನರ ಕಂದಾಯದ ಹಣವನ್ನೇ ಅವರ ಧರ್ಮಬಾಂಧವರ ಕುಲ ಕೆಡಿಸಲು ಸರಕಾರವು ಉಪಯೋಗಿಸುತ್ತಲಿದೆಯೆಂಬುದು ಈ ರಾಷ್ಟ್ರೀಯ ಮುಸಲ್ಮಾನರಿಗೆ ಗೊತ್ತಿಲ್ಲವೆ?

ಪುಂಡ ಮುಸಲ್ಮಾನರು ಹಿಂದು ಸ್ತ್ರೀ ಪುರುಷರ ಮೇಲೆ ನಡೆಸಿರುವ ಅತ್ಯಾಚಾರಗಳೂ ಹಿಂದು ಮುಖಂಡರ ಕೊಲೆ ಮಾಡುತ್ತಿರುವುದೂ ಈ ಮುಸಲ್ಮಾನ್ ಪ್ರಮುಖರಿಗೆ ಗೊತ್ತಿಲ್ಲವೆ?

ಹೀಗೆ ಹಿಂದುಗಳು ನಿಜಾಮ ರಾಜ್ಯದಲ್ಲಿರುವುದೇ ಹಿಂದು ಮುಸಲ್ಮಾನರ ಐಕಮತ್ಯದ ದ್ಯೋತಕವಾಗಿದ್ದರೆ ಇಂಥ ಐಕಮತ್ಯವನ್ನು ಭಂಗಗೊಳಿಸಲು ಹಿಂದು ಮಹಾಸಭೆಯು ಶಕ್ಯವಿರುವ ಎಲ್ಲಾ ನ್ಯಾಯ ಪದ್ಧತಿಗಳನ್ನೂ ಅನುಸರಿಸುವುದೆಂದೇ ನಾನು ಅವರಿಗೆ ಸಾರಿ ಹೇಳುತ್ತೇನೆ.

ಈ ರಾಷ್ಟ್ರೀಯ ಮುಸಲ್ಮಾನರು ಹಿಂದುಗಳ ಸತ್ಯಾಗ್ರಹವು ಜಾತೀಯವಾದುದೆಂದು ಹೇಳಿದ್ದಾರೆ. ಒಂದು ಜಾತಿಯು ಇನ್ನೊಂದು ಜಾತಿಯ ಮೇಲೆ ಇಂಥ ಅತ್ಯಾಚಾರ ನಡೆಸಿರುವಾಗ ಅದರ ವಿರೋಧವು ಕೂಡಾ ಜಾತಿವಿಶಿಷ್ಟವಾದುದೇ ಇರುವುದು ಸಹಜವಲ್ಲವೆ? ಅಸ್ಪೃಶ್ಯತಾ ನಿವಾರಣೆಯ ಚಟುವಟಿಕೆಯು ಜಾತೀಯವಾದುದೆಂದೂ ಅರಾಷ್ಟ್ರೀಯವೆಂದೂ ಯಾರಾದರೂ ಹೇಳಿದರೆ ಅದು ಅವರ ಭ್ರಮೆಯೆಂದು ತಿಳಿಯಬೇಕು.

ಅಸ್ಪೃಶ್ಯರ ಮೇಲೆ ಆಗುತ್ತಿರುವ ಅತ್ಯಾಚಾರಗಳು ಜಾತಿವಿಶಿಷ್ಟವಾಗಿಯೇ ಆಗುತ್ತವೆ. ಎಂದಮೇಲೆ ಅವುಗಳ ನಿವಾರಣೆಗಾಗಿ ಹೋರಾಡುವುದು ಕೂಡಾ ಜಾತೀಯವಾದುದಾಗಿಯೇ ಇರುವುದು ಸ್ವಾಭಾವಿಕ. ನಿಜಾಮ ರಾಜ್ಯದಲ್ಲಿ ಹಿಂದುಗಳ ಮೇಲಾಗುತ್ತಿರುವ ಅತ್ಯಾಚಾರ ಮತ್ತು ಅನ್ಯಾಯಗಳು ಮುಸಲ್ಮಾನ್ ಜಾತಿಯವರಿಂದಲೇ ಅಲ್ಲವೆ? ಎಂದ ಮೇಲೆ ಅವುಗಳ ನಿವಾರಣೆಗೆ ಹಿಂದುಗಳೇ ಹೋರಾಡುವುದು ಸ್ವಾಭಾವಿಕ. ಹೀಗೆ ಹಿಂದುಗಳೇ ಹೋರಾಡಿದರೆ ಅದು ಜಾತಿವಿಶಿಷ್ಟವಾದುದೆಂದೂ ಅರಾಷ್ಟ್ರೀಯವೆಂದೂ ಯಾರು ಹೇಳಿದರೂ ಅವರ ಮಾತಿಗೆ ನಾನು ಕವಡಿಯಷ್ಟು ಕೂಡಾ ಬೆಲೆ ಕೊಡುವುದಿಲ್ಲ.

ಒಂದೇ ರಾತ್ರಿಯಲ್ಲಿ ತಾವು ರಾಷ್ಟ್ರೀಯರೆಂದು ಹೇಳಿಕೊಳ್ಳಲು ಮುಂದೆ ಬಂದ ಈ ಮುಸಲ್ಮಾನ ಪ್ರಮುಖರಿಗೆ ನಿಜವಾದ ಹಿಂದು ಮುಸಲ್ಮಾನರ ಐಕಮತ್ಯ ಬೇಕಾಗಿದ್ದರೆ ಅವರು ತಮ್ಮ "ಖಾಕಸಾರ" ಎಂಬ ಧಾರ್ಮಿಕರ ಹುಚ್ಚರ ಪಕ್ಷವನ್ನು ತೆಗೆದು ಹಾಕಿಸಲು ನಿಜಾಮರಿಗೆ ಬೇಡಿಕೊಳ್ಳಬೇಕು. ಮತ್ತು ನೂರಕ್ಕೆ ೮೫ ರಂತೆ ಹಿಂದುಗಳಿಗೆ ಸರಕಾರಿ ಅಧಿಕಾರಗಳು ದೊರೆಯುವಂತೆಯೂ ಜವಾಬ್ದಾರಿ ಸರಕಾರವನ್ನು ಸ್ಥಾಪಿಸುವಂತೆಯೂ ನಿಜಾಮರು ಪ್ರಯತ್ನಿಸಬೇಕಾಗಿ ಕೇಳಿಕೊಳ್ಳಬೇಕು. ಹಾಗೆ ಮಾಡದೆ ಹೀಗೆ ಹಿಂದುಗಳಿಗೆ ಭಯಸೂಚನೆಯನ್ನು ಮಾಡಿದರೆ ಈಗಿನ ಸತ್ಯಾಗ್ರಹವೇನೂ ಶಾಂತವಾಗಲಾರದು."

---

## ಮುಂಬೈಯಲ್ಲಿ ಗುಂಡಿನೇಟಿನಿಂದ ಮತ್ತೊಂದು ಮರಣ.

ಕಳೆದ ೭ ನೆಯ ತಾರೀಖಿನ ದಿವಸ ಮುಂಬೈಯಲ್ಲಿ ಕೂಲಿಕಾರರು ಕಟ್ಟನ್ನು ಮಾಡಿಕೊಂಡು ಪ್ರಚಂಡ ಮೆರವಣಿಗೆ ಹೊರಡಿಸಿದಾಗ ಸರಕಾರದವರು ಗುಂಡು ಹಾರಿಸಿದ್ದರಷ್ಟೆ. ಅದರಿಂದ ಗಾಯ ಹೊಂದಿದ್ದ ಶ್ರೀ. ಭಾಗೋಜಿ ವಾಘಮಾರೆ ಎಂಬ ಕೂಲಿಯವರು ತಾ. ೧೫ ನೆಯ ರಾತ್ರಿ ಮರಣಹೊಂದಿದರು. ಅವರ ಶವವನ್ನು ಅವರ ಬಂಧುಗಳ ಕಡೆಗೆ ಕೊಡಲು ಬಹು ನಿಧಾನಮಾಡಿದರು.

ಡಾ. ಆಂಬೇಡಕರರ ನೇತೃತ್ವದಲ್ಲಿ ೪೦೦೦ ಕೂಲಿಕಾರರು ಸೇರಿ ಮೆರವಣಿಗೆಯಿಂದ ಶವವನ್ನು ತೆಗೆದುಕೊಂಡು ಹೋಗಿ ಅಂತ್ಯವಿಧಿಯನ್ನು ಜರುಗಿಸಿದರು. ಡಾ. ಆಂಬೇಡಕರರು ಮೃತರ ಗೌರವಪರವಾದ ಭಾಷಣ ಮಾಡಿದ ಮೇಲೆ ಸಕಲರೂ ದುಃಖ ಹೃದಯದಿಂದ ತಿರುಗಿಬಂದರು.

---

—ಜರ್ಮನಿಯ ನಾಝಿ ರಾಕ್ಷಸ ಸರಕಾರವು ಕಳೆದ ಒಂದೇ ವಾರದಲ್ಲಿ ೩೫ ಸಾವಿರ ಯಹುದಿಗಳನ್ನು ಹಿಡಿದು ಸೆರೆಮನೆಗೆ ಹಾಕಿತು.

—ತಾ. ೨೧-೧೧-೩೮ ನೆಯ ದಿವಸ ತುರ್ಕಸ್ಥಾನದ ಸರ್ವಾಧಿಕಾರಿಗಳಾಗಿದ್ದ ಕೆಮಾಲ ಪಾಶಾರ ಅಂತ್ಯವಿಧಿ ಜರುಗುವುದು. ಅದಕ್ಕೆ ೧೫ ಲಕ್ಷ ರೂಪಾಯಿಗಳನ್ನು ತುರ್ಕಿ ಸರಕಾರವು ವೆಚ್ಚ ಮಾಡುವುದು.

—ಹುಬ್ಬಳ್ಳಿ ಆರ್ಯಸಮಾಜದವರು ತಾ. ೧೩-೧೧-೩೮ನೆಯ ದಿನ ಮಿ. ಪುತ್ರಪ್ಪ ಮತ್ತು ಶ್ರೀಮತಿ ಭಾಗ್ಯವಂತೆವ್ವ ಎಂಬ ಕ್ರಿಸ್ತಮತದವರಿಗೆ ವೈದಿಕ ಧರ್ಮ ದೀಕ್ಷೆ ಕೊಟ್ಟರು.

# ಚಿತ್ರವಾಡಿಗಿ ಶ್ರೀಗುರು ಕಲ್ಮಠೇಶ್ವರ ರಥೋತ್ಸವಾಹ್ವಾನ ಪತ್ರಿಕಾ.

**ಸಕಲ ಮಹಾಜನರಲ್ಲಿ ಪ್ರಾರ್ಥನೆ.**

ಪದ್ಧತಿಯಂತೆ ಇದೇ ಬಹುಧಾನ್ಯ ಸಂವತ್ಸರದ ಮಾರ್ಗಶಿರ ಶು|| ೧ ದಿಂದ ಮಾರ್ಗಶಿರ ಶು|| ೯ ಯ ವರೆಗೆ (ತಾ. ೨೨-೧೧-೩೮ ರಿಂದ ೧-೧೨-೩೮ ರವರೆಗೆ) ದೇವಸ್ಥಾನದ ಸಭಾ ಮಂಟಪದಲ್ಲಿ ಪ್ರತಿ ದಿವಸವು ಶ್ರೀಮನ್ನಿರಂಜನ ಮಹದೇವ ಸ್ವಾಮಿಗಳವರು ಸರ್ಪಭೂಷಣ ಮಠ ಬೆಂಗಳೂರು ಇವರ ಅಧ್ಯಕ್ಷತೆಯಲ್ಲಿ ಜರುಗುವ ಯಾವತ್ತು ಕಾರ್ಯಕ್ರಮಗಳಿಗೆ ತಾವುಗಳೆಲ್ಲರೂ ದಯಮಾಡಿಬಂದು ಕಾರ್ಯಕ್ರಮವನ್ನು ಯಶಸ್ವಿಯಾಗಿ ಮಾಡಬೇಕೆಂದು ಪ್ರಾರ್ಥಿಸುತ್ತೇನೆ.

**ತಾ. ೨೨-೧೧-೩೮ ನೇ ಮಂಗಳವಾರ.**

ಸಾಯಂಕಾಲ ೫ ರಿಂದ ೫-೩೦ ರ ವರೆಗೆ— ಧ್ವಜಾರೋಹಣ.

ಸಾಯಂಕಾಲ ೫-೩೦ ಗಂಟೆಯಿಂದ.

೧ ಸ್ವಾಗತಾಧ್ಯಕ್ಷರ ಭಾಷಣ.

೨ ಅಧ್ಯಕ್ಷರ ಪ್ರಾರಂಭೋತ್ಸವದ ಭಾಷಣ.

೩ ಶ್ರೀ. ಮಲ್ಲಾಬಾದಿ ವೀರಭದ್ರಪ್ಪನವರು ದಾವಣಗೇರಿ ಇವರು ವಚನಗಳನ್ನು ಹೇಳುವುದು.

೪ ಶ್ರೀಮಾನ್ ಹರ್ಡೇಕರ ಮಂಜಪ್ಪನವರ ಭಾಷಣ.
ವಿಷಯ— ಧರ್ಮದ ಮಹತ್ವ ಮತ್ತು ಧಾರ್ಮಿಕ ಕ್ರಾಂತಿಯ ಅವಶ್ಯಕತೆ.

**ತಾ. ೨೩-೧೧-೩೮ ನೇ ಬುಧವಾರ.**

೧ ವಕ್ತೃತ್ವಸ್ಪರ್ಧೆ.

೨ ಶ್ರೀಯುತ ಅ. ನ. ಕೃಷ್ಣರಾವು ಬೆಂಗಳೂರು ಮತ್ತು ಶ್ರೀಮಾನ್ ಹರ್ಡೇಕರ ಮಂಜಪ್ಪ ಇವರ ಭಾಷಣ.

ವಿಷಯ— ವಿಶ್ವಪ್ರೇಮಿ ಬಸವಣ್ಣನವರು.

**ತಾ. ೨೪ ನೆಯ ಗುರುವಾರ.**

೧ ಚಿತ್ರವಾಡಿಗಿ ಕರ್ನಾಟಕ ವ್ಯಾಯಾಮ ಶಾಲೆಯ ಬಾಲಕರ ವ್ಯಾಯಾಮ ಪ್ರದರ್ಶನ.

೨. ಶ್ರೀಯುತ ಅ. ನ. ಕೃಷ್ಣರಾವು ಬೆಂಗಳೂರು ಮತ್ತು ಪ್ರೊ. ಮಾಳವಾಡ ಇವರ ಭಾಷಣಗಳು.
ವಿಷಯ— ಶರಣ ಸಾಹಿತ್ಯ.

**ತಾ. ೨೫ ನೆಯ ಶುಕ್ರವಾರ.**

ಪ್ರಾತಃಕಾಲ ಬ್ರಾಹ್ಮೀಮುಹೂರ್ತದಲ್ಲಿ ವೀರಶೈವ ಧರ್ಮಾರ್ಥ ದೀಕ್ಷಾ ವಿವಾಹಗಳು (ಯಾರಾದರೂ ಬಂದಲ್ಲಿ.)

ಸಾಯಂಕಾಲ ೫ ಗಂಟೆಗೆ ಅನ್ನಸಂತರ್ಪಣ.

**ತಾ. ೨೬ ನೆಯ ಸ್ಥಿರವಾರ.**

ಪ್ರಾತಃಕಾಲ ೮ ಗಂಟೆಯಿಂದ—
ಶ್ರೀಮಾನ್ ಹರ್ಡೇಕರ ಮಂಜಪ್ಪನವರಿಂದ ಖಾದಿ ಪ್ರದರ್ಶನದ ಉದ್ಘಾಟನ ಸಮಾರಂಭವು ಮತ್ತು ಒಕ್ಕಲತನ ಪ್ರದರ್ಶನದ ಉದ್ಘಾಟನ ಸಮಾರಂಭವು.

ಸಾಯಂಕಾಲ ೫-೩೦ ಗಂಟೆಯಿಂದ—

೧ ಚಿತ್ರವಾಡಿಗಿ ಕರ್ನಾಟಕ ವ್ಯಾಯಾಮ ಶಾಲೆಯ ತರುಣರ ವ್ಯಾಯಾಮ ಪ್ರದರ್ಶನ.

೨ ಶ್ರೀಮಾನ್ ಬಿ. ಯಂ. ಶ್ರೀಕಂಠಯ್ಯನವರು ಬೆಂಗಳೂರು ಇವರ ಭಾಷಣ.
ವಿಷಯ— ಕನ್ನಡ ಸಾಹಿತ್ಯ.

**ತಾ. ೨೭ ನೆಯ ಭಾನುವಾರ.**

ಸಾಯಂಕಾಲ ೪-೩೦ ಗಂಟೆಯಿಂದ ೫-೩೦ ಗಂಟೆಯ ವರೆಗೆ— ಮಹಾರಥೋತ್ಸವ.

ಸಾಯಂಕಾಲ ೬ ಗಂಟೆಯಿಂದ—
ಶ್ರೀಮಾನ್ ಸಂಪತ್ಕುಮಾರಾಚಾರ್ಯ ಬೆಂಗಳೂರು ಇವರ ಭಾರತ ವಾಚನ.

**ತಾ. ೨೮ ನೆಯ ಸೋಮವಾರ.**

ಸಾಯಂಕಾಲ ೫-೩೦ ಗಂಟೆಯಿಂದ—

೧ ವೇದಮೂರ್ತಿ ಪಂಚಾಕ್ಷರಿಗವಾಯಿಗಳ ಮಂಡಳಿಯವರಿಂದ ವಚನ ಪಠಣ. [ಸಂಗೀತದಲ್ಲಿ]

೨ ಶ್ರೀಮಾನ್ ಸಂಪತ್ಕುಮಾರಾಚಾರ್ಯ ಬೆಂಗಳೂರು ಇವರಿಂದ ದಾಸಸಾಹಿತ್ಯ.

**ತಾ. ೨೯ ನೆಯ ಮಂಗಳವಾರ.**

೧ ಚಿತ್ರವಾಡಿಗಿ ಕರ್ನಾಟಕ ವ್ಯಾಯಾಮ ಶಾಲೆಯ ಬಾಲಕಿಯರ ವ್ಯಾಯಾಮ ಪ್ರದರ್ಶನ.

೨ ಶ್ರೀಮತಿ ಬಳ್ಳಾರಿ ಸಿದ್ಧಮ್ಮನವರು ದಾವಣಗೇರಿ ಇವರ ಭಾಷಣ.
ವಿಷಯ= ಸ್ತ್ರೀಯರ ಏಳ್ಗೆ ಮತ್ತು ಕರ್ತವ್ಯ.

ಸೂಚನೆ.... ಈ ವರ್ಷದ ಕಾರ್ಯಕ್ರಮದಲ್ಲಿ ಸ್ತ್ರೀಯರು ಕೂಡ ಹೆಚ್ಚಾಗಿ ಭಾಗ ತೆಗೆದುಕೊಳ್ಳಬೇಕೆಂಬ ಉದ್ದೇಶದಿಂದ ಈ ದಿವಸ ಸ್ತ್ರೀಯರ ಬಗ್ಗೆ ಹೆಚ್ಚಿನ ಕಾರ್ಯಕ್ರಮವನ್ನು ಏರ್ಪಡಿಸಿರುವದಲ್ಲದೆ ಪ್ರತಿ ದಿವಸವೂ ಸ್ತ್ರೀಯರಿಗಾಗಿ ಪ್ರತ್ಯೇಕ ಸ್ಥಳವನ್ನು ಏರ್ಪಡಿಸಲಾಗಿದೆ.

**ತಾ. ೩೦ ನೆಯ ಬುಧವಾರ.**

ಚಿತ್ರವಾಡಿಗಿ ಕರ್ನಾಟಕ ವ್ಯಾಯಾಮ ಶಾಲೆಯ ವಾರ್ಷಿಕೋತ್ಸವ.

ಅಧ್ಯಕ್ಷರು= ಶ್ರೀ. ಟಿ. ಆರ್ ನೇಸ್ವಿ M. L. A. Parliamentary Secretary P. W. D. Bombay.

೧ ಸ್ವಾಗತಾಧ್ಯಕ್ಷರ ಭಾಷಣ.

೨ ಕರ್ನಾಟಕ ತರುಣರ ವ್ಯಾಯಾಮ ಪ್ರದರ್ಶನ.

೩. ವರದಿಯನ್ನು ಓದುವುದು.

೪ ಬಹುಮಾನ ಹಂಚುವದು.

೫ ಅಧ್ಯಕ್ಷರ ಭಾಷಣ.

**ತಾ. ೧-೧೨-೩೮ ನೆಯ ಗುರುವಾರ.**

೧. ವೇ|| ಪಂಚಾಕ್ಷರಿಗವಾಯಿಗಳ ಮಂಡಳಿಯವರ ಸಂಗೀತ.

೨ ದೇಶಭಕ್ತ ದೊಡ್ಡಮೇಟಿ ಅಂದಾನಪ್ಪ ಇವರ ಭಾಷಣ.
ವಿಷಯ= ಈಗಿನ ತರುಣರ ಕರ್ತವ್ಯ.

೩. ಅಧ್ಯಕ್ಷರ ಮುಕ್ತಾಯ ಭಾಷಣ.

**ಸೂಚನೆಗಳು.**

೧ ವೇದಮೂರ್ತಿ ಪಂಚಾಕ್ಷರಿ ಗವಾಯಿಗಳ ಮಂಡಳಿಯವರಿಂದ ಪ್ರತಿ ದಿವಸವೂ ಅರ್ಧ ಗಂಟೆ ಸಂಗೀತವು ಜರುಗುವುದು.

೨ ಹೊಸೂರು ಗ್ರಾಮೋದ್ಯೋಗ ಸಂಘದ ತರುಣರಿಂದ ರಾಷ್ಟ್ರೀಯ ೧೧. ೧೧. ಪದಗಳು ಮತ್ತು ಶ್ರೀಮಾನ್ ಕಳ್ಳಿ ತಿಪ್ಪಣ್ಣಶಾಸ್ತ್ರಿಗಳವರ ರಾಷ್ಟ್ರೀಯ ಕೀರ್ತನೆಯು ಸಹ ಸಾಯಂಕಾಲ ೧೦ ಗಂಟೆಯಿಂದ ಏರ್ಪಡಿಸಲ್ಪಡುವದು.

ಚಿತ್ರವಾಡಗಿ. **ಬೆಲ್ಲದ ಚನ್ನಪ್ಪ.**

## ಅ. ಭಾ. ವೀರಶೈವ ತರುಣರ ಸಂಘದ ಕರ್ತವ್ಯವೇನು?

(ಲೇ— ಚನಬಸಪ್ಪ ಅಳಗವಾಡಿ.)

[ಚೆನ್ನಬಸವಣ್ಣನು ಪ್ರಸಿದ್ಧ ಕಾಂಗ್ರೆಸ್ ಭಕ್ತ. ವೀರಶೈವ ತರುಣ ಸಂಘದ ಪರವಾಗಿ ಕಾರ್ಯ ಮಾಡುತ್ತಿರುವ ಗಂಗಾಧರನು ಆತನ ಕೇವಲ ಮಿತ್ರ.]

ಚೆನ್ನಬಸವಣ್ಣ— ಮಿ. ಗಂಗಾಧರ ಏನು ನಿಮ್ಮ ತರುಣ ಸಂಘದ ಕಾರ್ಯ ಎಲ್ಲಿಯವರೆಗೆ ಬಂದಿತು?

ಗಂಗಾಧರ— ನಡೆದಿದೆ ಹಾಗೆಯೇ ಯಥಾನುಕೂಲ. ನಿಮ್ಮಂಥ ಹುರುಪಿನ ಕಾರ್ಯಕರ್ತರು ಕೂಡಿದರಲ್ಲವೇ ಅದಕ್ಕೆ ಕಳೆ ಬರುವುದು?

ಚೆನ್ನಬಸವಣ್ಣ— ಜಾತೀಯ ಸಂಸ್ಥೆಗಳಲ್ಲಿ ನಾವು ಕೂಡಿ ಕೆಲಸಮಾಡುವುದು ಹೇಗೆ? ರಾಷ್ಟ್ರೀಯ ಕಾರ್ಯವು ಇದಕ್ಕಿಂತ ಶ್ರೇಷ್ಠವಾಗಿಲ್ಲವೆ?

ಗಂಗಾಧರ— ಜಾತೀಯ ಕಾರ್ಯಕ್ಕಿಂತಲೂ ರಾಷ್ಟ್ರೀಯ ಕಾರ್ಯವು ಶ್ರೇಷ್ಠವಾದದ್ದು ನಿಜ. ಆದರೆ ಆ ರಾಷ್ಟ್ರೀಯ ಕಾರ್ಯಗಳು ಸಹಜವಾಗಿ ಕೈಗೂಡಿದರಲ್ಲವೇ ಶ್ರೇಷ್ಠತ್ವದ ಪ್ರಾಪ್ತಿಯಾಗುವುದು?

ಚೆನ್ನಬಸವಣ್ಣ— ಸರಿ, ಸರಿ. ಅವು ಕೈಗೂಡಬೇಕೆಂದೇ ನಾವು ರಾಷ್ಟ್ರೀಯ ಕಾರ್ಯಗಳನ್ನು ಮಾಡುತ್ತಿದ್ದೇವೆ. ರಾಷ್ಟ್ರೀಯ ಹಿತದಲ್ಲಿ ವೀರಶೈವರ ಹಿತವೂ ಬಂದುಹೋಗುವದಿಲ್ಲವೆ? ಇಂಥವುಗಳನ್ನು ಬಿಟ್ಟು ನನ್ನ ಜಾತಿ ಇನ್ನೊಬ್ಬನ ಜಾತಿ ಎಂದು ನಾವು ಸುಶಿಕ್ಷಿತ ತರುಣರು ತಲೆ ಕೆರೆದುಕೊಳ್ಳುತ್ತ ಕುಳಿತರೆ ರಾಷ್ಟ್ರೀಯ ಕಾರ್ಯವೇ ಮರೆತುಹೋಗುವುದು.

ಗಂಗಾಧರ— ನೀವು ಹೇಳುವುದು ತಾತ್ವಿಕ ಮಾತಾಯಿತು. ಆದರೆ ರಾಷ್ಟ್ರೀಯ ಕಾರ್ಯಗಳು ಕೃತಿಯಲ್ಲಿ ಬರಬೇಕಾದರೆ ಯಾವ ಸಾಧನಗಳನ್ನು ಉಪಯೋಗಿಸಬೇಕೆಂಬುದನ್ನು ಆಲೋಚಿಸಬೇಡವೆ? ಉದಾಹರಣಾರ್ಥವಾಗಿ ಅಸ್ಪೃಶ್ಯತಾ ನಿವಾರಣೆಯ ಪ್ರಶ್ನೆಯನ್ನೇ ತೆಗೆದುಕೊಳ್ಳೋಣ. ಅದು ರಾಷ್ಟ್ರೀಯ ಕಾರ್ಯವೂ ಅಹುದು. ಜಾತೀಯ ಕಾರ್ಯವೂ ಅಹುದು. ಧಾರ್ಮಿಕ ಕಾರ್ಯವೂ ಅಹುದು. ಆದರೆ ಅಸ್ಪೃಶ್ಯತಾ ನಿವಾರಣೆಯನ್ನು ಕುರಿತು ನೀವು ಇಲ್ಲಿಯ ಜನರಿಗೆ ಉಪದೇಶ ಮಾಡಹತ್ತಿದರೆ ಧಾರ್ಮಿಕ ಮನೋಭಾವದವರಿಗೆ ಪರಕೀಯರು ಬಂದು ಹೇಳುವಂತೆ ಅನಿಸುವುದು. ಆದರೆ ನಾವು ಅದೇ ಧರ್ಮದವರು, ನಮ್ಮ ಧರ್ಮದಲ್ಲಿ ಅಸ್ಪೃಶ್ಯತಾ ಪಾಲನೆ ಮಾಡಬೇಕೆಂದು ಹೇಳಿಲ್ಲ. ಎಲ್ಲರನ್ನೂ ಸಮನಾಗಿ ಕಾಣುವದು ನಮ್ಮ ಶ್ರೇಷ್ಠ ಧರ್ಮವಾಗಿದೆ, ಎಂದು ಹೇಳಿದರೆ ಅದರ ಪರಿಣಾಮವೇ ಬೇರೆಯಾಗುತ್ತದೆ.

ಚೆನ್ನಬಸವಣ್ಣ— ನೀವು ಹೇಳಿದಂತೆ ಆ ರೀತಿಯಿಂದ ಕೆಲವೊಂದು ರಾಷ್ಟ್ರೀಯ ಕಾರ್ಯಗಳೂ ಕೈಗೂಡಬಹುದು. ಆದರೆ ಒಂದೇ ಒಂದು ವಿಶಿಷ್ಟ ಜಾತಿಯ ಮೇಲೆಯೇ ನಾವು ದೃಷ್ಟಿಯನ್ನಿಟ್ಟಂತಾಗುವದಿಲ್ಲವೆ? ಕಾಂಗ್ರೆಸ್ಸಿನ ಪರವಾಗಿ ಇದ್ದರೆ ಎಲ್ಲ ಜಾತಿಗಳಿಗೂ ಸಮನಾಗಿ ಬೋಧಿಸಲು ಶಕ್ಯವಿದೆ.

ಗಂಗಾಧರ— ಸಮವಾಗಿ ಬೋಧಿಸುವದೆಂದರೆ ಜುಬ್ಬರ ಮಳೆಯಂತೆ ಎಂದು ನನ್ನ ಅಭಿಪ್ರಾಯ. ಮರುಕ್ಷಣದಲ್ಲಿಯೂ ನೆಲವು ಆರಿ ಹೋಗುವದು. ಅದು ಬೇಡೆಂದು ನನ್ನ ಅಭಿಪ್ರಾಯವಲ್ಲ. ಆದರೆ ರಾಷ್ಟ್ರೀಯ ವಿಚಾರಗಳು ಜನರ ಮನಸ್ಸಿನಲ್ಲಿ ಬಿಂಬಿಸಬೇಕಾದರೆ ಮತ್ತು ರಾಷ್ಟ್ರೀಯ ಉದ್ದೇಶವು ಸುಲಭವಾಗಿ ಸಾಧಿಸಬೇಕಾದರೆ ಈ ಮಾರ್ಗವು ಸರಿಯೆಂದು ತೋರುತ್ತದೆ. ರಾಷ್ಟ್ರೀಯ ಗುಣ ಪೋಷಕ ಧರ್ಮವಾಗಲಿ ಜಾತಿಯಾಗಲಿ ಕಾರ್ಯತತ್ಪರವಾದರೆ ಅದಕ್ಕೆ ರಾಷ್ಟ್ರೀಯರು ಬೆಂಬಲ ಕೊಡಬೇಕಲ್ಲವೆ? ರಾಷ್ಟ್ರೀಯ ವಿಘಾತಕ ಗುಣವುಳ್ಳ ಜಾತಿಯಾಗಲಿ ಧರ್ಮವಾಗಲಿ ಇದ್ದರೆ ಅದು ಯಾರದಿದ್ದರೂ ನಾವು ಅವಶ್ಯವಾಗಿ ತಿರಸ್ಕರಿಸಬೇಕು.

ಚೆನ್ನಬಸವಣ್ಣ— ಒಳ್ಳೇದು. ಹಾಗಾದರೆ ನಿಮ್ಮ ತರುಣ ಸಂಘಗಳು ಇನ್ನು ಮೇಲೆ ರಾಷ್ಟ್ರೀಯ ಕಾರ್ಯವನ್ನೇ ಕೈಕೊಳ್ಳಬಹುದೆ?

ಗಂಗಾಧರ— ವೀರಶೈವ ತತ್ವಗಳಿಗೂ ರಾಷ್ಟ್ರೀಯ ತತ್ವಗಳಿಗೂ ಅಂತರವೇ ಇಲ್ಲ. ಅಸ್ಪೃಶ್ಯತಾನಿವಾರಣೆಗಾಗಿ ಸಂಚಾರ ಹೊರಡಿರಿ. ನಾವೂ ನೀವೂ ಕೂಡಿಯೇ ಆ ಕಾರ್ಯ ಮಾಡೋಣ. ಸದ್ಯಕ್ಕೆ ಮದ್ರಾಸು, ಮೈಸೂರು, ಮುಂಬೈ ಸರಕಾರದವರು ಮದ್ಯಪಾನ ನಿರೋಧಕ ಕಾರ್ಯವನ್ನು ಕೈಕೊಂಡಿದ್ದಾರಷ್ಟೆ. ಆ ಕಾರ್ಯವೇನು ನಮಗೆ ಬೇಡಾಗಿರುವದೇ? ಅದನ್ನು ನಾವು ಕೂಡಿಯೇ ಮಾಡಲು ಶಕ್ಯವಿಲ್ಲವೆ? ಹಾಗೆಯೇ ಹಿಂದುಗಳಲ್ಲಿರುವ ವರ್ಣ ವೈಷಮ್ಯ ವ್ಯವಸಾಯ ವೈಷಮ್ಯವನ್ನು ಕಳೆಯಲು ವೀರಶೈವ ತರುಣ ಸಂಘಗಳು ಒಮ್ಮನಸ್ಸಿನಿಂದ ನಮಗೆ ಸಹಾಯ ಮಾಡುವವು.

ಚೆನ್ನಬಸವಣ್ಣ— ಹಾಗಿದ್ದರೆ ನಾವು ರಾಷ್ಟ್ರೀಯ ವಿಚಾರದವರು ಅವುಗಳಲ್ಲಿ ಸೇರಿ ಕೆಲಸ ಮಾಡಲು ಅಡ್ಡಿಯಿಲ್ಲ. ನೀವು ಹೇಳಿದಂತೆ ತರುಣ ಸಂಘಗಳ ಮೂಲಕ ಸಾಮಾನ್ಯ ಜನತೆಯಲ್ಲಿ ಬಹು ಸಂಖ್ಯಾಕರಾದ ವೀರಶೈವ ಜನತೆಯಲ್ಲಿ ಸುಧಾರಿಸಲು ಶಕ್ಯವಿದೆ.

ಗಂಗಾಧರ— ಕರ್ನಾಟಕದಲ್ಲಿಯ ವೀರಶೈವರಲ್ಲಿ ರಾಷ್ಟ್ರೀಯ ವಿಚಾರಗಳು ಪ್ರಬಲವಾದರೆ ಸಮಗ್ರ ಕರ್ನಾಟಕವೇ ಸುಧಾರಿಸುವದು. ಪಾನನಿರೋಧಕಾರ್ಯದಲ್ಲಾಗಲಿ ಅಹಿಂಸಾಪಾಲನೆಯಲ್ಲಾಗಲಿ ಅಥವಾ ಧರ್ಮಸಮಾನತೆಯಲ್ಲಾಗಲಿ ಹಿಂದುಸ್ಥಾನದ ಎಲ್ಲ ಪ್ರಾಂತಗಳಲ್ಲಿ ಕರ್ನಾಟಕವೇ ಮುಂದುವರಿಯುವುದು. ಹುಬ್ಬಳ್ಳಿಯಲ್ಲಿ ನೆರೆಯಲಿರುವ ವೀರಶೈವ ತರುಣ ಸಂಘದ ಅಧಿವೇಶನದಲ್ಲಿ ನಾವೆಲ್ಲ ತರುಣರು ಸೇರಿ ಇಂಥ ರಾಷ್ಟ್ರೀಯ ಕಾರ್ಯಗಳನ್ನೇ ನಿರ್ಧರಿಸುವಾ.

---

## ನಿಡಗುಂದಿ.

ಬಾಗೇವಾಡಿ ತಾಲೂಕು ಪೈಕಿ ನಿಡಗುಂದಿಯಲ್ಲಿರುವ ಶ್ರೀ ರುದ್ರಮುನಿಸ್ವಾಮಿಗಳವರ ಮಠದಲ್ಲಿ ತಾ. ೧೫-೧೦-೩೮ ಮಂಗಳವಾರ ಸಾಯಂಕಾಲ ೭ ಘಂಟೆಗೆ ಶ್ರೀ ಸಂಗಮೇಶ್ವರ ದೇವರು ಶಿವಯೋಗಾಶ್ರಮ, ಶಿಕಾರಿಪೂರ ಮಾಸ್ತರ ತಿಪ್ಪಣ್ಣ, ಮಾಸ್ತರ ಬಸವಣ್ಣೆಪ್ಪ ಈ ಮೂರು ಜನ ಮಹನೀಯರ ಗಾಯನವು ಇಟ್ಟಿತ್ತು. ಆ ಸಮಯದಲ್ಲಿ ಈ ಮೂರು ಜನರು ಒಬ್ಬರಿಗಿಂತ ಒಬ್ಬರು ಮಿಗಿಲಾಗಿ ಹಾಡಲಾಗಿ ಶ್ರೀ ಸಂಗಮೇಶ್ವರ ದೇವರ ಗಾಯನವೇ ಸಮಸ್ತ ಜನರ ಮನಸ್ಸಿಗೆ ಬಂದದ್ದಲ್ಲದೆ ಆ ಊರಲ್ಲಿರುವ ಹವಾಲದಾರ ಮತ್ತು ದೊಡ್ಡ ದೊಡ್ಡ ಶೆಟ್ಟರು ಮೊದಲಾದ ಮಹಾಶಯರಿಗೆ ಸಂತೋಷವನ್ನುಂಟುಮಾಡಿತು.

ಶ್ರೀ ಬಸವಣ್ಣನವರ ವಚನಗಳನ್ನೂ ತತ್ವಪದವನ್ನೂ ಸೊಗಸಾಗಿ ಶ್ರೀ ಸಂಗಮೇಶ್ವರದೇವರು ಹಾಡಲು ಜನರು ವೇಳೆ ತೆಗೆದುಕೊಳ್ಳದೆ ಒಳ್ಳೇ ಆನಂದದಿಂದ ಕೇಳುತ್ತಲಿದ್ದರು. ೯|| ಗಂಟೆಗೆ ಸಂಗೀತ ಕಚೇರಿಯು ಮುಗಿಯಿತು. ಪರಮಾತ್ಮನು ಸದರಿ ದೇವರಿಗೆ ಇದಕ್ಕಿಂತಲೂ ಹೆಚ್ಚಿಗೆ ಸಲಕರಣೆಗಳನ್ನು ಕೊಡಲೆಂದು ಪ್ರಾರ್ಥಿಸುತ್ತೇನೆ.

ಓರ್ವ ಸಂಗೀತ ಪ್ರಿಯ.

## ಕಲ್ಕತ್ತಾ ಸಂಸ್ಕೃತ ಪರೀಕ್ಷೆಗಳು.

ಕೇಂದ್ರ ಯಾದಗಿರಿ.

ಕಲಕತ್ತಾ ಗವ್ಹರ್ನಮೆಂಟಿನ ಆಡಳಿತಕ್ಕೆ ಒಳಪಟ್ಟ ಸಂಸ್ಕೃತ ಅಶೋಸಿಏಶನ್ನಿನ ಆದ್ಯ ಮತ್ತು ಮಧ್ಯಮ ಎಲ್ಲಾ ವಿಷಯಗಳ ಕೇಂದ್ರವು ಶಂಕರ ಸಂಸ್ಕೃತ ಕಾಲೇಜಿನಲ್ಲಿ ಆಗಿರುತ್ತದೆ. ಫಾರ್ಮುಗಳನ್ನು ತುಂಬುವ ಅವಧಿಯು ನವ್ಹಂಬರ ೨೫ ನೇ ತಾರೀಖಿನ ವರೆಗೆ ಇರುತ್ತದೆ. ಬೇಕಾದವರು ಆವೇದನ ಪತ್ರವನ್ನು ತರಿಸಿಕೊಳ್ಳಬಹುದು. ಎಲ್ಲಾ ಜಾತಿಯವರಿಗೂ ಊಟದ ಮತ್ತು ವಸತಿಯವ್ಯವಸ್ಥೆಯನ್ನು ಮಾಡಲಾಗಿದೆ. ಹೆಚ್ಚಿನ ಮಾಹಿತಿ ಬೇಕಾದವರು ಕೆಳಗಿನ ಹೆಸರಿಗೆ ಬರೆದು ತಿಳಕೊಳ್ಳಬಹುದು.

ಪ್ರಿನ್ಸಿಪಾಲ ಚಂದ್ರಶೇಖರ ಶಾಸ್ತ್ರಿ.

# ಅ. ಭಾ. ವೀರಶೈವ ತರುಣರ ಸಂಘದ ಕರ್ತವ್ಯವೇನು?

(ಲೇ— ಚನಬಸಪ್ಪ ಅಳಗವಾಡಿ.)

[ಚೆನ್ನಬಸವಣ್ಣನು ಪ್ರಸಿದ್ಧ ಕಾಂಗ್ರೆಸ್ ಭಕ್ತ. ವೀರಶೈವ ತರುಣ ಸಂಘದ ಪರವಾಗಿ ಕಾರ್ಯ ಮಾಡುತ್ತಿರುವ ಗಂಗಾಧರನು ಆತನ ಕೇವಲ ಮಿತ್ರ.]

ಚೆನ್ನಬಸವಣ್ಣ— ಮಿ. ಗಂಗಾಧರ ಏನು ನಿಮ್ಮ ತರುಣ ಸಂಘದ ಕಾರ್ಯ ಎಲ್ಲಿಯವರೆಗೆ ಬಂದಿತು?

ಗಂಗಾಧರ— ನಡೆದಿದೆ ಹಾಗೆಯೇ ಯಥಾನುಕೂಲ. ನಿಮ್ಮಂಥ ಹುರುಪಿನ ಕಾರ್ಯಕರ್ತರು ಕೂಡಿದರಲ್ಲವೇ ಅದಕ್ಕೆ ಕಳೆ ಬರುವುದು?

ಚೆನ್ನಬಸವಣ್ಣ— ಜಾತೀಯ ಸಂಸ್ಥೆಗಳಲ್ಲಿ ನಾವು ಕೂಡಿ ಕೆಲಸ ಮಾಡುವುದು ಹೇಗೆ? ರಾಷ್ಟ್ರೀಯ ಕಾರ್ಯವು ಇದಕ್ಕಿಂತ ಶ್ರೇಷ್ಠವಾಗಿಲ್ಲವೆ?

ಗಂಗಾಧರ— ಜಾತೀಯ ಕಾರ್ಯಕ್ಕಿಂತಲೂ ರಾಷ್ಟ್ರೀಯ ಕಾರ್ಯವು ಶ್ರೇಷ್ಠವಾದದ್ದು ನಿಜ. ಆದರೆ ಆ ರಾಷ್ಟ್ರೀಯ ಕಾರ್ಯಗಳು ಸಹಜವಾಗಿ ಕೈಗೂಡಿದರಲ್ಲವೇ ಶ್ರೇಷ್ಠತ್ವದ ಪ್ರಾಪ್ತಿಯಾಗುವುದು?

ಚೆನ್ನಬಸವಣ್ಣ— ಸರಿ. ಸರಿ. ಅವು ಕೈಗೂಡಬೇಕೆಂದೇ ನಾವು ರಾಷ್ಟ್ರೀಯ ಕಾರ್ಯಗಳನ್ನು ಮಾಡುತ್ತಿದ್ದೇವೆ. ರಾಷ್ಟ್ರೀಯ ಹಿತದಲ್ಲಿ ವೀರಶೈವರ ಹಿತವೂ ಬಂದುಹೋಗುವದಿಲ್ಲವೆ? ಇಂಥವುಗಳನ್ನು ಬಿಟ್ಟು ನನ್ನ ಜಾತಿ ಇನ್ನೊಬ್ಬನ ಜಾತಿ ಎಂದು ನಾವು ಸುಶಿಕ್ಷಿತ ತರುಣರು ತಲೆ ಕೆರೆದುಕೊಳ್ಳುತ್ತ ಕುಳಿತರೆ ರಾಷ್ಟ್ರೀಯ ಕಾರ್ಯವೇ ಮರೆತುಹೋಗುವುದು.

ಗಂಗಾಧರ— ನೀವು ಹೇಳುವುದು ತಾತ್ವಿಕ ಮಾತಾಯಿತು. ಆದರೆ ರಾಷ್ಟ್ರೀಯ ಕಾರ್ಯಗಳು ಕೃತಿಯಲ್ಲಿ ಬರಬೇಕಾದರೆ ಯಾವ ಸಾಧನಗಳನ್ನು ಉಪಯೋಗಿಸಬೇಕೆಂಬುದನ್ನು ಆಲೋಚಿಸಬೇಡವೆ? ಉದಾಹರಣಾರ್ಥವಾಗಿ ಅಸ್ಪೃಶ್ಯತಾ ನಿವಾರಣೆಯ ಪ್ರಶ್ನೆಯನ್ನೇ ತೆಗೆದುಕೊಳ್ಳೋಣ. ಅದು ರಾಷ್ಟ್ರೀಯ ಕಾರ್ಯವೂ ಅಹುದು. ಜಾತೀಯ ಕಾರ್ಯವೂ ಅಹುದು. ಧಾರ್ಮಿಕ ಕಾರ್ಯವೂ ಅಹುದು. ಆದರೆ ಅಸ್ಪೃಶ್ಯತಾ ನಿವಾರಣೆಯನ್ನು ಕುರಿತು ನೀವು ಇಲ್ಲಿಯ ಜನರಿಗೆ ಉಪದೇಶ ಮಾಡಹತ್ತಿದರೆ ಧಾರ್ಮಿಕ ಮನೋಭಾವದವರಿಗೆ ಪರಕೀಯರು ಬಂದು ಹೇಳುವಂತೆ ಅನಿಸುವುದು. ಆದರೆ ನಾವು ಅದೇ ಧರ್ಮದವರು, ನಮ್ಮ ಧರ್ಮದಲ್ಲಿ ಅಸ್ಪೃಶ್ಯತಾ ಪಾಲನೆ ಮಾಡಬೇಕೆಂದು ಹೇಳಿಲ್ಲ. ಎಲ್ಲರನ್ನೂ ಸಮನಾಗಿ ಕಾಣುವದು ನಮ್ಮ ಶ್ರೇಷ್ಠ ಧರ್ಮವಾಗಿದೆ. ಎಂದು ಹೇಳಿದರೆ ಅದರ ಪರಿಣಾಮವೇ ಬೇರೆಯಾಗುತ್ತದೆ.

ಚೆನ್ನಬಸವಣ್ಣ— ನೀವು ಹೇಳಿದಂತೆ ಆ ರೀತಿಯಿಂದ ಕೆಲವೊಂದು ರಾಷ್ಟ್ರೀಯ ಕಾರ್ಯಗಳೂ ಕೈಗೂಡಬಹುದು. ಆದರೆ ಒಂದೇ ಒಂದು ವಿಶಿಷ್ಟ ಜಾತಿಯ ಮೇಲೆಯೇ ನಾವು ದೃಷ್ಟಿಯನ್ನಿಟ್ಟಂತಾಗುವದಿಲ್ಲವೆ? ಕಾಂಗ್ರೆಸ್ಸಿನ ಪರವಾಗಿ ಇದ್ದರೆ ಎಲ್ಲ ಜಾತಿಗಳಿಗೂ ಸಮನಾಗಿ ಬೋಧಿಸಲು ಶಕ್ಯವಿದೆ.

ಗಂಗಾಧರ— ಸಮವಾಗಿ ಬೋಧಿಸುವದೆಂದರೆ ಜುಬ್ಬರ ಮಳೆಯಂತೆ ಎಂದು ನನ್ನ ಅಭಿಪ್ರಾಯ. ಮರುಸ್ಥಳದಲ್ಲಿಯೂ ನೆಲವು ಆರಿ ಹೋಗುವದು. ಅದು ಬೇಡೆಂದು ನನ್ನ ಅಭಿಪ್ರಾಯವಲ್ಲ. ಆದರೆ ರಾಷ್ಟ್ರೀಯ ವಿಚಾರಗಳು ಜನರ ಮನಸ್ಸಿನಲ್ಲಿ ಬಿಂಬಿಸಬೇಕಾದರೆ ಮತ್ತು ರಾಷ್ಟ್ರೀಯ ಉದ್ದೇಶವು ಸುಲಭವಾಗಿ ಸಾಧಿಸಬೇಕಾದರೆ ಈ ಮಾರ್ಗವು ಸರಿಯೆಂದು ತೋರುತ್ತದೆ. ರಾಷ್ಟ್ರೀಯ ಗುಣ ಪೋಷಕ ಧರ್ಮವಾಗಲಿ ಜಾತಿಯಾಗಲಿ ಕಾರ್ಯತತ್ಪರವಾದರೆ ಅದಕ್ಕೆ ರಾಷ್ಟ್ರೀಯರು ಬೆಂಬಲ ಕೊಡಬೇಕಲ್ಲವೆ? ರಾಷ್ಟ್ರೀಯ ವಿಘಾತಕ ಗುಣವುಳ್ಳ ಜಾತಿಯಾಗಲಿ ಧರ್ಮವಾಗಲಿ ಇದ್ದರೆ ಅದು ಯಾರದಿದ್ದರೂ ನಾವು ಅವಶ್ಯವಾಗಿ ತಿರಸ್ಕರಿಸಬೇಕು.

ಚೆನ್ನಬಸವಣ್ಣ— ಒಳ್ಳೇದು. ಹಾಗಾದರೆ ನಿಮ್ಮ ತರುಣ ಸಂಘಗಳು ಇನ್ನು ಮೇಲೆ ರಾಷ್ಟ್ರೀಯ ಕಾರ್ಯವನ್ನೇ ಕೈಕೊಳ್ಳಬಹುದೆ?

ಗಂಗಾಧರ— ವೀರಶೈವ ತತ್ವಗಳಿಗೂ ರಾಷ್ಟ್ರೀಯ ತತ್ವಗಳಿಗೂ ಅಂತರವೇ ಇಲ್ಲ. ಅಸ್ಪೃಶ್ಯತಾನಿವಾರಣೆಗಾಗಿ ಸಂಚಾರ ಹೊರಡಿರಿ. ನಾವೂ ನೀವೂ ಕೂಡಿಯೇ ಆ ಕಾರ್ಯ ಮಾಡೋಣ. ಸದ್ಯಕ್ಕೆ ಮದ್ರಾಸು, ಮೈಸೂರು, ಮುಂಬೈ ಸರಕಾರದವರು ಮದ್ಯಪಾನ ವಿರೋಧಕ ಕಾರ್ಯವನ್ನು ಕೈಕೊಂಡಿದ್ದಾರಷ್ಟೆ. ಆ ಕಾರ್ಯವೇಕೆ ನಮಗೆ ಬೇಡಾಗಿರುವದೇ? ಅದನ್ನು ನಾವು ಕೂಡಿಯೇ ಮಾಡಲು ಶಕ್ಯವಿಲ್ಲವೆ? ಹಾಗೆಯೇ ಹಿಂದುಗಳಲ್ಲಿರುವ ವರ್ಣ ವೈಷಮ್ಯ ವ್ಯವಸಾಯ ವೈಷಮ್ಯವನ್ನು ಕಳೆಯಲು ವೀರಶೈವ ತರುಣ ಸಂಘಗಳು ಒಮ್ಮನಸ್ಸಿನಿಂದ ನಮಗೆ ಸಹಾಯ ಮಾಡುವವು.

ಚೆನ್ನಬಸವಣ್ಣ— ಹಾಗಿದ್ದರೆ ನಾವು ರಾಷ್ಟ್ರೀಯ ವಿಚಾರದವರು ಅವುಗಳಲ್ಲಿ ಸೇರಿ ಕೆಲಸ ಮಾಡಲು ಅಡ್ಡಿಯಿಲ್ಲ. ನೀವು ಹೇಳಿದಂತೆ ತರುಣ ಸಂಘಗಳ ಮೂಲಕ ಸಾಮಾನ್ಯ ಜನತೆಯಲ್ಲಿ ಬಹು ಸಂಖ್ಯಾಕರಾದ ವೀರಶೈವ ಜನತೆಯಲ್ಲಿ ಸುಧಾರಿಸಲು ಶಕ್ಯವಿದೆ.

ಗಂಗಾಧರ— ಕರ್ನಾಟಕದಲ್ಲಿಯ ವೀರಶೈವರಲ್ಲಿ ರಾಷ್ಟ್ರೀಯ ವಿಚಾರಗಳು ಪ್ರಬಲವಾದರೆ ಸಮಗ್ರ ಕರ್ನಾಟಕವೇ ಸುಧಾರಿಸುವದು. ಪಾನನಿರೋಧಕಾರ್ಯದಲ್ಲಾಗಲಿ ಅಹಿಂಸಾಪಾಲನೆಯಲ್ಲಾಗಲಿ ಅಥವಾ ಧರ್ಮಸಮಾನತೆಯಲ್ಲಾಗಲಿ ಹಿಂದುಸ್ಥಾನದ ಎಲ್ಲ ಪ್ರಾಂತಗಳಲ್ಲಿ ಕರ್ನಾಟಕವೇ ಮುಂದುವರಿಯುವುದು. ಹುಬ್ಬಳ್ಳಿಯಲ್ಲಿ ನೆರೆಯಲಿರುವ ವೀರಶೈವ ತರುಣ ಸಂಘದ ಅಧಿವೇಶನದಲ್ಲಿ ನಾವೆಲ್ಲ ತರುಣರು ಸೇರಿ ಇಂಥ ರಾಷ್ಟ್ರೀಯ ಕಾರ್ಯಗಳನ್ನೇ ನಿರ್ಧರಿಸುವಾ.

## ನಿಡಗುಂದಿ.

ಬಾಗೇವಾಡಿ ತಾಲೂಕು ಪೈಕಿ ನಿಡಗುಂದಿಯಲ್ಲಿರುವ ಶ್ರೀ ರುದ್ರಮುನಿಸ್ವಾಮಿಗಳವರ ಮಠದಲ್ಲಿ ತಾ. ೧೫-೧೦-೩೬ ಮಂಗಳವಾರ ಸಾಯಂಕಾಲ ೭ ಘಂಟೆಗೆ ಶ್ರೀ ಸಂಗಮೇಶ್ವರ ದೇವರು ಶಿವಯೋಗಾಶ್ರಮ, ಹಿರಾಪೂರ ಮಾಸ್ತರ ತಿಪ್ಪಣ್ಣ, ಮಾಸ್ತರ ಬಸವಣ್ಣೆಪ್ಪ ಈ ಮೂರು ಜನ ಮಹನೀಯರ ಗಾಯನವು ಇಡಲ್ಪಟ್ಟಿತ್ತು. ಆ ಸಮಯದಲ್ಲಿ ಈ ಮೂರು ಜನರು ಒಬ್ಬರಿಗಿಂತ ಒಬ್ಬರು ಮಿಗಿಲಾಗಿ ಹಾಡಲಾಗಿ ಶ್ರೀ ಸಂಗಮೇಶ್ವರ ದೇವರ ಗಾಯನವೇ ಸಮಸ್ತ ಜನರ ಮನಸ್ಸಿಗೆ ಬಂದದ್ದಲ್ಲದೆ ಆ ಊರಲ್ಲಿರುವ ಮಹಾ ಹವಾಲದಾರ ಮತ್ತು ದೊಡ್ಡ ದೊಡ್ಡ ಶೆಟ್ಟರು ಮೊದಲಾದ ಮಹಾಶಯರಿಗೆ ಸಂತೋಷವನ್ನುಂಟುಮಾಡಿತು.

ಶ್ರೀ ಬಸವಣ್ಣನವರ ವಚನಗಳನ್ನೂ ತತ್ವಪದವನ್ನೂ ಸೊಗಸಾಗಿ ಶ್ರೀ ಸಂಗಮೇಶ್ವರದೇವರು ಹಾಡಲು ಜನರು ಬೇಸರ ತೆಗೆದುಕೊಳ್ಳದೆ ಒಳ್ಳೇ ಆನಂದದಿಂದ ಕೇಳುತ್ತಲಿದ್ದರು. ೯|| ಗಂಟೆಗೆ ಸಂಗೀತ ಕಚೇರಿಯು ಮುಗಿಯಿತು. ಪರಮಾತ್ಮನು ಸದರಿ ದೇವರಿಗೆ ಇದಕ್ಕಿಂತಲೂ ಹೆಚ್ಚಿಗೆ ಸಲಕರಣೆಗಳನ್ನು ಕೊಡಲೆಂದು ಪ್ರಾರ್ಥಿಸುತ್ತೇನೆ.

ಓರ್ವ ಸಂಗೀತ ಪ್ರಿಯ.

## ಕಲ್ಕತ್ತಾ ಸಂಸ್ಕೃತ ಪರೀಕ್ಷೆಗಳು.

ಕೇಂದ್ರ ಯಾದಗಿರಿ.

ಕಲಕತ್ತಾ ಗವ್ಹರ್ನಮೆಂಟಿನ ಆಡಳಿತಕ್ಕೆ ಒಳಪಟ್ಟ ಸಂಸ್ಕೃತ ಅಶೋಸಿಏಶನ್ನಿನ ಆದ್ಯ ಮತ್ತು ಮಧ್ಯಮ ಎಲ್ಲಾ ವಿಷಯಗಳ ಕೇಂದ್ರವು ಶಂಕರ ಸಂಸ್ಕೃತ ಕಾಲೇಜಿನಲ್ಲಿ ಆಗಿರುತ್ತದೆ. ಫಾರ್ಮುಗಳನ್ನು ತುಂಬುವ ಅವಧಿಯು ನವ್ಹಂಬರ ೩೦ ನೇ ತಾರೀಖಿನ ವರೆಗೆ ಇರುತ್ತದೆ. ಬೇಕಾದವರು ಅವೇದನ ಪತ್ರವನ್ನು ತರಿಸಿಕೊಳ್ಳಬಹುದು. ಎಲ್ಲಾ ಜಾತಿಯವರಿಗೂ ಊಟದ ಮತ್ತು ವಸತಿಯವ್ಯವಸ್ಥೆಯನ್ನು ಮಾಡಲಾಗಿದೆ. ಹೆಚ್ಚಿನ ಮಾಹಿತಿ ಬೇಕಾದವರು ಕೆಳಗಿನ ಹೆಸರಿಗೆ ಬರೆದು ತಿಳಕೊಳ್ಳಬಹುದು.

ಪ್ರಿನ್ಸಿಪಾಲ ಚಂದ್ರಶೇಖರ ಶಾಸ್ತ್ರಿ.

## ಯುದ್ಧ ವಿರೋಧಿ ದಿನವೆಂದರೇನು?

ಕಳೆದ ೧೧ ನೆಯ ತಾರೀಖಿನ ದಿವಸ ರಾಷ್ಟ್ರಾಧಿಪತಿಗಳ ಅಪ್ಪಣೆಯಂತೆ ಅನೇಕ ಕಡೆ ಯುದ್ಧ ವಿರೋಧಿ ದಿನವು ಆಚರಿಸಲ್ಪಟ್ಟಿತಷ್ಟೆ. ಆ ಕಾಲಕ್ಕೆ ಕಾಂಗ್ರೆಸ್ಸಿನ ಕೆಲವು ವ್ಯಾಖ್ಯಾತರು ಹೇಳಿದುದನ್ನು ನೋಡಿದರೆ ಯುದ್ಧವಿರೋಧಿ ದಿನದ ಅರ್ಥವನ್ನು ಹೇಗೆ ಮಾಡಿಕೊಂಡಿರುವರೆಂಬುದು ಗೊತ್ತಾಗುವುದು.

ಯಾರೂ ಯಾರ ಮೇಲೆಯೂ ಯುದ್ಧವನ್ನು ಮಾಡಕೂಡದೆಂದೂ ಒಂದು ವೇಳೆ ಯುದ್ಧ ಮಾಡಿದ್ದಾದರೆ ಯುದ್ಧಕ್ಕೆ ಹಿಂದುಸ್ಥಾನವು ಸಹಾಯವನ್ನು ಮಾಡುವುದಿಲ್ಲವೆಂದೂ ಹೇಳುವುದೇ ಯುದ್ಧ ವಿರೋಧಿ ದಿನದ ನಿಜಾರ್ಥ. ಇಂಗ್ಲಿಷರು ಈಗ ನಿರ್ಬಲರಾಗಿದ್ದಾರೆ. ಜರ್ಮನಿಯು ಬಲಶಾಲಿಯಾಗಿದೆ. ಅದು ಬ್ರಿಟಿಶ್ ಸಾಮ್ರಾಜ್ಯದ ಮೇಲೆ ದಂಡೆತ್ತಿ ಬರಬೇಕು. ಆಗ ಇಂಗ್ಲಿಷರು ನಮ್ಮ ಸಹಾಯ ಕೇಳಿದರೆ ನಾವು ಸಹಾಯ ಮಾಡಬಾರದು. ಇಂಗ್ಲಿಷರು ಸೋಲುವ ಹೊತ್ತು ಬಂದರೆ ನಮಗೆ ಸ್ವಾತಂತ್ರ್ಯ ದೊರೆಯುತ್ತದೆ! ಆದಕ್ಕಾಗಿ ಇಂಗ್ಲಿಷರ ಮೇಲೆ ಯುದ್ಧಮಾಡುವ ಪ್ರಸಂಗ ಬರಲೆಂದು ಪ್ರಾರ್ಥಿಸುವುದೇ ಯುದ್ಧ ವಿರೋಧಿ ದಿನದ ಅರ್ಥವಾದರೆ ಹೆಸರಿಗೂ ಉದ್ದೇಶಕ್ಕೂ ಯಾವ ಸಂಬಂಧ?

---

## ವೀರಶೈವ ಮಹಾಸಭೆಯ ಅಧ್ಯಕ್ಷಸ್ಥಾನ.

ಮುಂದಿನ ತಿಂಗಳಿನಲ್ಲಿ ಕೂಡುವ ವೀರಶೈವ ಮಹಾ ಸಭೆಯ ಅಧ್ಯಕ್ಷಸ್ಥಾನವನ್ನು ವಹಿಸಲು ಸರ್ವ ವಿಧದಿಂದ ನೋಡಲಾಗಿ ಸಧ್ಯಕ್ಕೆ ಶ್ರೀಮಾನ್ ಬಸಪ್ಪನವರು ಕಂಕಣವಾಡಿಯವರೇ ಯೋಗ್ಯರಿದ್ದಾರೆ. ಅವರು ಶಾಂತ ಮನಸ್ಸಿನವರೂ ಸರಳ ಹೃದಯದವರೂ ಮತ್ತು ಉದಾರ ಬುದ್ಧಿಯವರಿರುವರೆಂದು ಅವರು ಸಮಾಜಕ್ಕೆ ಮಾಡಿದ ಮತ್ತು ಮಾಡುತ್ತಿರುವ ಕಾರ್ಯಗಳಿಂದ ಎಲ್ಲರಿಗೂ ಗೊತ್ತಾಗುವುದು. ಕೆಲವು ವರುಷಗಳ ಹಿಂದೆ ೫೦೦೦೦ ರೂ. ಗಳನ್ನು ಆಯುರ್ವೇದ ಅಭಿವೃದ್ಧಿಗಾಗಿ ಕೊಟ್ಟದ್ದು ಮತ್ತು ಈಗ ಅದೇ ಹಣದಿಂದಲೇ ಬೆಳಗಾವಿಯಲ್ಲಿ ಲಿಂಗರಾಜ ಆಯುರ್ವೇದಿಕ ಕಾಲೇಜವನ್ನು ನಡೆಸಿರುವುದು ಎಲ್ಲರಿಗೂ ಗೊತ್ತುಂಟು. ಇವರಿಗೆ ತಿಂಗಳೊಂದಕ್ಕೆ ೧೧೫ ರೂ. ಗಳ ಪೆನ್‌ಶನ್ ಸಿಗುವುದು. ಅದರಲ್ಲಿ ತಮ್ಮ ಜೀವನದ ಖರ್ಚಿಗೆ ಕೇವಲ ೧೫ ರೂ. ಗಳನ್ನು ಇಟ್ಟು ಉಳಿದ ೧೦೦ ರೂ. ಗಳನ್ನು ಈಗ್ಗೆ ನಡೆಯುತ್ತಿರುವ ಕಾಲೇಜಿಗೆ ಕೊಡುವರು. ಇದರಿಂದ ತಮ್ಮ ಸ್ವಂತ ಸುಖಕ್ಕಿಂತ ಸಮಾಜ ಹಿತವೇ ಮೇಲೆಂದು ಗೊತ್ತಾಗುವದಿಲ್ಲವೆ?

ಇಷ್ಟೇ ಅಲ್ಲದೆ ಪ್ರತಿಯೊಂದು ಕಡೆ ಪ್ರವಾಸಮಾಡಿ ಆ ಸಂಸ್ಥೆಗೆ ಹಣವನ್ನು ಕೂಡಿಸುತ್ತಾರೆ. ಇವರು ಇನ್ನುಳಿದವರಂತೆ ಸಮಾಜದ ಸಹಾಯವನ್ನು ತೆಗೆದುಕೊಂಡು ಸ್ವಾರ್ಥವನ್ನು ಬಯಸಿದವರಲ್ಲ. ಪಂಗಡ ಪಾರ್ಟಿ (Party) ಗಳನ್ನು ಹುಟ್ಟಿಸಿದವರಲ್ಲ. ಇವರ ಸರಳ ಜೀವನ ವೃತ್ತಿಯು ಮತ್ತು ಉದಾತ್ತ ವಿಚಾರವು (Plain living and high thinking) ಪ್ರತಿಯೊಬ್ಬರೂ ಕಲಿಯತಕ್ಕಂತಹದಿದೆ. ಇಂಥವರನ್ನು ಆರಿಸುವದರಿಂದ ಮಹಾಸಭೆಯ ಕಾರ್ಯಕಲಾಪಗಳು ಸುರಕ್ಷಿತವಾಗಿ ನಡೆದು ಮಹಾಸಭೆಗೆ ಒಂದು ಕಳೆ ಏರುವದು.

ಬಸವರಾಜ ಅಕ್ಕಿ-ತುಂಗಭದ್ರ.

## ಅ. ಭಾ. ವೀ. ಪತ್ರಿಕೋದ್ಯಮಿಗಳ ಪರಿಷತ್ತು.

ಈ ಪರಿಷತ್ತಿನ ಮೊದಲನೆಯ ಅಧಿವೇಶನವು ಹುಬ್ಬಳ್ಳಿಯಲ್ಲಿ ವೀರಶೈವ ಮಹಾಸಭೆಯ ಕಾಲಕ್ಕೇನೇ ಕೂಡುವುದನ್ನು ಯೋಚಿಸಿದ್ದಾಗಿದೆ. ಸಮಾಜದಲ್ಲಿ ಜಾಗೃತಿಯನ್ನುಂಟುಮಾಡಿ ಹವಣ್ಣ ತನ್ಯವನ್ನು ತುಂಬುವಂಥವುಗಳೆಂದರೆ ಪತ್ರಿಕೆಗಳೇ ಸರಿ. ನಮ್ಮ ವೀರಶೈವ ಸಮಾಜ ಬಂಧುಗಳು ನಡೆಯಿಸಿಕೊಂಡು ಬಂದ ವರ್ತಮಾನಪತ್ರಗಳ ಪರಿಸ್ಥಿತಿ ಯಾವ ಪ್ರಕಾರವಾಗಿದೆ? ಅವುಗಳ ಉಚಿತಾವಸ್ಥೆಯನ್ನು ಹೊಂದಬೇಕಾದರೆ ಯಾವರೀತಿ ಸಹಾಯಮಾಡಲು ಶಕ್ಯವಿದೆಯೆಂಬುದನ್ನು ಆಲೋಚಿಸುವದಕ್ಕಾಗಿ ಈ ಪರಿಷತ್ತನ್ನು ಕರೆದದ್ದಾಗಿದೆ. ಇದಲ್ಲದೆ ನಮ್ಮ ವೀರಶೈವರಿಂದ ನಡೆಯಿಸಲ್ಪಟ್ಟ ವೃತ್ತಪತ್ರಿಕೆಗಳು ಎಷ್ಟು? ಅವುಗಳಲ್ಲಿ ಈಗ ಅಸ್ತಿತ್ವದಲ್ಲಿರುವಂಥವುಗಳು ಎಷ್ಟು? ನಿಂತುಹೋಗಿರುವವು ಎಷ್ಟು? ಅವುಗಳ ಸಂಪಾದಕರು ಯಾರು? ಎಂಬ ಸಂಗತಿಗಳನ್ನು ಬಲ್ಲವರು ನಮ್ಮ ಕಡೆಗೆ ತೀವ್ರವೇ ಹೆಸರುಗಳ ಪಟ್ಟಿಯನ್ನು ಹಾಗು ನಿಂತು ಹೋದ ಪತ್ರಿಕೆಗಳ ಹಿಂದಿನ ಸಂಚಿಕೆಗಳನ್ನು ಕಳುಹಿಸಿಕೊಡಬೇಕಾಗಿ ವಿನಂತಿ.

ಇದೇ ಕಾಲಕ್ಕೆ ಇನ್ನು ವರೆಗೆ ಅಚ್ಚಾಗದೆ ಇದ್ದಂಥ ವೀರಶೈವ ವಾಙ್ಮಯ ಗ್ರಂಥಗಳು ಕಾಗದದಲ್ಲಿ ಬರೆಯಲ್ಪಟ್ಟವುಗಳಿರಲಿ ಅಥವಾ ತಾಡ ಓಲೆಯಲ್ಲಿರಲಿ ಅವುಗಳನ್ನು ಕಳುಹಿಸಿಕೊಟ್ಟರೆ ಓರಣವಾಗಿ ಪ್ರದರ್ಶನದಲ್ಲಿ ಇರಿಸಲು ಅನುಕೂಲವಾಗುವುದು. ಅಂಥ ಗ್ರಂಥಗಳು ಯಾರ ಕಡೆಗೆ ಇರುತ್ತವೆಯೋ ಅಂಥ ಮಹಾಶಯರು ತೀವ್ರವೇ ಕೆಳಗಿನ ವಿಳಾಸಕ್ಕೆ ಕಳುಹಿಸಿಕೊಡಬೇಕಾಗಿ ವಿನಂತಿ.

ಕಾರ್ಯದರ್ಶಿಗಳು.

---

## ಕೊಪ್ಪಳ.

ಈಗ ಮೂರು ವರುಷಗಳಿಂದ ಇಲ್ಲಿ ಒಂದು "ವೀರಶೈವ ಜನರಲ್ ಲೈಬ್ರರಿ" ಯು ನಡೆಯುತ್ತಿದ್ದು ಮೊನ್ನೆ ಗಣೇಶಚವತಿಯಲ್ಲಿ ಶ್ರೀ. ವ್ಹಿ. ಎಸ್. ಸಾಲಿಮಠ ಇವರ ವಿಶ್ವ ಪ್ರಯತ್ನದಿಂದ "ವೀರಶೈವ ತರುಣ ಸಂಘ" ವು ಸ್ಥಾಪಿಸಲ್ಪಟ್ಟು ಲೈಬ್ರರಿಯನ್ನು ಆದರ ವತಿಯಿಂದ ನಡೆಯುವಂತೆ ಏರ್ಪಾಟನ್ನು ಮಾಡಲ್ಪಟ್ಟಿತು.

ತಾ. ೪-೧೦-೩೮ ನೇ ವಿಜಯ ದಶಮಿಯ ದಿವಸ ಶ್ರೀ ಗವಿಮಠ ಮಹಾಸ್ವಾಮಿಗಳ ಸನ್ನಿಧಿಯಲ್ಲಿ ಪದ್ಧತಿಪ್ರಕಾರ ಯಾವತ್ತೂ ವೀರಶೈವ ನಾಗರಿಕರು ನೆರೆದ ಕಾಲಕ್ಕೆ ಇಲ್ಲಿಯ ವೀರಶೈವ ತರುಣ ಸಂಘದವರು ತಮ್ಮ ಲೈಬ್ರರಿಯು ಚೆನ್ನಾಗಿ ಅಭಿವೃದ್ಧಿ ಹೊಂದುವಂತೆ ನಿಧಿಯನ್ನು ಕೂಡಿಸಿಕೊಡಬೇಕೆಂದು ಪ್ರಾರ್ಥಿಸಿಕೊಂಡರು. ಆಗ್ಗೆ ಶ್ರೀ. ವೀರಣ್ಣನವರು ಆಗಡಿ ಇವರು ಎಲ್ಲರ ವತಿಯಿಂದ ಅಂದಿನ ಕಾರ್ಯಭಾಗವು ಬೇರೆ ಇದ್ದ ಮೂಲಕ ಈ ಬಗ್ಗೆ ಕೆಲವು ದಿವಸಗಳ ಆವಧಿಕೊಟ್ಟಲ್ಲಿ ತಾವೆಲ್ಲರೂ ವಿಚಾರಮಾಡಿಕೊಂಡು ತಕ್ಕ ವ್ಯವಸ್ಥೆ ಮಾಡಲಾಗುವದೆಂದು ವಚನವಿತ್ತರು. ಆದರೆ ಅಂದಿನ ದಿವಸವೇ ಶ್ರೀ. ತಮ್ಮನಗೌಡ್ರು ವಕೀಲ ಇವರು ತಮ್ಮ ಉದಾರ ಹಸ್ತದಿಂದ ಸಂಘಕ್ಕೆ ೧೦ ರೂ. ಗಳನ್ನು ಮತ್ತು ಸಿ. ಆರ್. ಹಿರೇಮಠ ಇವರು ೫ ರೂಪಾಯಿ ದೇಣಿಗೆಯನ್ನು ಕೊಟ್ಟದ್ದಲ್ಲದೆ ವಿದ್ಯಾರ್ಥಿಗಳಿಗಾಗಿ ಕೆಲವು ಎಕ್ಸರಸೈಜು, ಟಾಳು, ಪೆನಸಿಲ್ ಮುಂತಾದವುಗಳನ್ನು ಉಚಿತವಾಗಿ ಕೊಟ್ಟರು. ನಂತರ ಸಂಘದವರು ಯಾವತ್ತೂ ಸ್ವಯಂಸೇವಕರಿಗೆ ಪುಸ್ತಕ ಹೋಲ್ಡರ ಕ್ಲಿಪ್ ಮುಂತಾದವುಗಳನ್ನು ಇನಾಮಾಗಿ ಹಂಚಿದರು. ಶ್ರೀ. ಸಂಗಪ್ಪನವರು ಮುದಗಲ್ಲ ಇವರು ಸ್ವಯಂಸೇವಕರ ಶಿಸ್ತು ನೋಡಿ ಸಂತೋಷಬಟ್ಟು ಕೇವಲ ಅವರಿಗಾಗಿ ಐದು ರೂ. ಗಳನ್ನು ಇನಾಮು ಕೊಟ್ಟರು.

ತಾ. ೭-೧೧-೩೮ ನೇ ದಿವಸ ಸಾಯಂಕಾಲ ೫ ಘಂಟೆಗೆ ಯಾವತ್ತೂ ವೀರಶೈವ ಪ್ರಮುಖರು ತಮ್ಮ ಹೇಳಿಕೆಯ ಪ್ರಕಾರ ಶ್ರೀ ಗವಿಸ್ವಾಮಿಗಳ ಸನ್ನಿಧಿಯಲ್ಲಿ ನೆರೆದಿದ್ದರು. ಸ್ವಯಂಸೇವಕರ "ವೀರಶೈವಧ್ವಜ" ವಂದನೆಯಾದ ಮೇಲೆ ಕಾರ್ಯದರ್ಶಿಗಳು ವರದಿಯನ್ನು ಓದಿದರು. ನಂತರ ಶ್ರೀ. ಸಿ. ಆರ್. ಹಿರೇಮಠ ಮತ್ತು ಶ್ರೀ. ವ್ಹಿ. ಎಸ್. ಸಾಲೀಮಠ ಚಳಗೇರಿ ಇವರು ಸಂಘದ ಉದ್ದೇಶಗಳನ್ನು ಹೇಳಿ, ಸಮಾಜೋನ್ನತಿಗಾಗಿ ಹೆಣಗಾಡುವ ತರುಣ ಸಂಘದವರಿಗೆ ಹಣದ ಸಹಾಯವನ್ನು ಕೊಟ್ಟು ಪ್ರೋತ್ಸಾಹಿಸಬೇಕೆಂದು ಪ್ರಾರ್ಥಿಸಿಕೊಂಡರು. ಆ ಮೇರೆಗೆ ಶ್ರೀ. ಗವಿಮಠ ಸ್ವಾಮಿಗಳ ಆಶೀರ್ವಾದಪೂರ್ವಕವಾಗಿ ೧೦ ರೂ. ಗಳ ವಾಗ್ದಾನವಾದ ಮೇಲೆ ಶ್ರೀ. ಸಂಗಪ್ಪನವರು ಮುದಗಲ್ಲ ೧೫ ರೂ. ಶ್ರೀ. ಪಂಪಣ್ಣನವರು ಗಡದಶಟ್ರು ೧೦ ರೂ. ಶ್ರೀ. ಸಿದ್ಧರಾಮಪ್ಪನವರು ಸಂಕ್ಲಾಪುರ ಇವರು ೧೦ ರೂ. ಶ್ರೀ. ವೀರಣ್ಣನವರು ಅಗಡಿ ೮ ರೂ. ಶ್ರೀ. ವೀರಭದ್ರಪ್ಪನವರು ಬೊಳ್ಳೊಳ್ಳಿ ೮ ರೂ. ಶ್ರೀ. ಸಿದ್ಧಲಿಂಗಪ್ಪನವರು ಹೆಸರೂರ ೮ ರೂಪಾಯಿ. ಶ್ರೀ. ವೀರಭದ್ರಪ್ಪನವರು ಅಗಡಿ ಇವರು ೮ ರೂ. ಶ್ರೀ. ಗುರುಸಿದ್ಧಪ್ಪನವರು ನಿಡಸೇಸಿ ೫ ರೂ. ಶ್ರೀ. ದಾನಪ್ಪನವರು ಬೊಮ್ಮನಾಳ ೫ ರೂ. ಶ್ರೀ. ದಾನಪ್ಪನವರು ಇಟಗಿ ೪ ರೂ. ಶ್ರೀ. ಅಂದಾನಪ್ಪನವರು ಕರಡಕಲ್ಲ ೪ ರೂ. ಶ್ರೀ. ಮರಿಗುಂಡಪ್ಪನವರು ಅರಳಿ ೪ ರೂ. ಶ್ರೀ. ಸಂಗಪ್ಪನವರು ತಳಗೇರಿ ೪ ರೂ.

ಈ ಪ್ರಕಾರ ಸರ್ವರೂ ತಮ್ಮ ಉದಾರ ಹಸ್ತದಿಂದ ಸುಮಾರು ೧೦೦ ರೂ. ಗಳ ನಿಧಿಯನ್ನು ಕೇವಲ ಲೈಬ್ರರಿಯ ಗ್ರಂಥ ಸಂಗ್ರಹಕ್ಕೋಸ್ಕರವಾಗಿ ದೇಣಿಗೆಯನ್ನು ಕೊಟ್ಟದ್ದಲ್ಲದೆ ಸಂಘದ ಲೈಬ್ರರಿಯ ಯಾವತ್ತೂ ಕಾರ್ಯಗಳ ವೆಚ್ಚಕ್ಕಾಗಿ ಪ್ರತಿ ತಿಂಗಳ ೩೦ ರೂ. ಗಳು ಕೂಡುವಂತೆ ವರ್ಗಣಿದಾರರ ಸಂಖ್ಯೆಯನ್ನು ನೇಮಿಸಿಕೊಟ್ಟರು. ಇನಲ್ಲದೆ ಶ್ರೀ. ಸಂಗಪ್ಪನವರು ಮುದಗಲ್ಲ ಇವರು ಲೈಬ್ರರಿಗಾಗಿ ಎಲೆಕ್ಟ್ರಿಕ್ ಲೈಟನ್ನು ಪೂರೈಸಿಕೊಡುತ್ತೇವೆಂದು ಒಪ್ಪಿಕೊಂಡರೆಂದು ಹೇಳಲು ನಮಗೆ ಬಹಳ ಸಂತೋಷವಾಗುತ್ತದೆ. ಈ ಮೇಲ್ಕಾಣಿಸಿದ ಯಾ[illegible]ಗೂ ಮತ್ತು ವರ್ಗಣಿದಾರರಿಗೂ ಸಂಘವು [illegible]ಯಾಗಿರುವದಲ್ಲದೆ ಅವರ ದೇಣಿಗೆಯನ್ನು ಕೃತಜ್ಞತಾಪೂರ್ವಕವಾಗಿ ಸ್ವೀಕರಿಸುತ್ತದೆ.

ಇದೇ ಪ್ರಕಾರವಾಗಿ ಯಾವತ್ತೂ ಸಮಾಜಾಭಿಮಾನಿಗಳು ಸಾಧ್ಯವಿದ್ದ ಮಟ್ಟಿಗೆ ನಮ್ಮ ಸಂಘಕ್ಕೆ ಸಹಾಯವನ್ನಿತ್ತು ಪ್ರೋತ್ಸಾಹಿಸಿ ತಮ್ಮ ಪಾಲಿಗೆ ಕೀರ್ತಿಯನ್ನು ಪಡೆಯಬೇಕೆಂದು ಪ್ರಾರ್ಥಿಸುತ್ತೇವೆ.

ಎಸ್. ಎಂ. ಸಂಕ್ಲಾಪುರ
ಕಾರ್ಯದರ್ಶಿ.

---



---

—ಶ್ರಾಮೋಡ ಎಮ್. ಎನ್. ರಾಯರು ಬುಲಂದ ಶಹರದಲ್ಲಿ ಕೂಡಲಿರುವ ಜಿಲ್ಲಾ ರಾಜಕೀಯ ಪರಿಷತ್ತಿನ ಅಧ್ಯಕ್ಷತೆ ವಹಿಸಲು ಹೋಗುವರು. ತಾರೀಖು ೨೧ ಮತ್ತು ೨೨ ರಲ್ಲಿ ಕೂಡಲಿರುವ ರಾಜಪುತನಾ ಮತ್ತು ಮಧ್ಯ ಭಾರತ ಸಂಸ್ಥಾನಗಳ ಪ್ರಜಾಪರಿಷತ್ತಿನ ಅಧ್ಯಕ್ಷ ಸ್ಥಾನವನ್ನು ವಹಿಸುವುದರ ಸಲುವಾಗಿ ಛತ್ರಪುರ ಸಿಕ್ರಿಗೆ ಹೋಗುವರು.

—ನರೇಂದ್ರ ಮಂಡಳದ ಮುಂದಿನ ಅಧಿವೇಶನವು ಹೊಸ ದಿಲ್ಲಿಯಲ್ಲಿ ೧೯೩೯ ನೆಯ ಇಸ್ವಿಯ ಮಾರ್ಚ ೧೩ ನೆಯ ತಾರೀಖಿನ ದಿವಸ ಪ್ರಾರಂಭವಾಗುವುದು.

# ಕಲಕತ್ತಾದಲ್ಲಿ ಕೂಲಿಕಾರರ ಕಟ್ಟು!

## ಹಿಂದು-ಮುಸಲ್ಮಾನರ ದೊಂಬಿ!

ಕಲಕತ್ತಾದ ನಾರಿನ ಗಿರಣಿಗಳಲ್ಲಿಯ ಕೂಲಿಕಾರರ ಕಟ್ಟು ಅತ್ಯಗತ್ಯವೆಂದು ಶ್ರೀ. ಮುಜುಮದಾರ ಎಂ. ಎಲ್. ಎ. ಇವರು ಪ್ರಕಟಿಸಿದ್ದಾರೆ.

ಟಿಟಾಘರ ಗಿರಣಿಯಲ್ಲಿ ಕೂಲಿಕಾರರ ಕಟ್ಟು ಪ್ರಾರಂಭವಾಯಿತು. ಒಬ್ಬ ಹಿಂದು ಕೂಲಿಕಾರನು ಒಬ್ಬ ಫಕೀರನಿಗೆ ಹೊಡೆದುದರಿಂದ ಹಿಂದು-ಮುಸಲ್ಮಾನರಲ್ಲಿ ದೊಂಬಿ ಪ್ರಾರಂಭವಾಯಿತು. ತಾ. ೧೫ ನೆಯ ದಿನದ ದೊಂಬಿಯಲ್ಲಿ ೨೩ ಜನರಿಗೆ ಗಾಯಗಳಾಗಿವೆ. ಇವರಲ್ಲಿ ಮುಸಲ್ಮಾನರು ಹೆಚ್ಚಾಗಿದ್ದಾರೆ. ೨೦ ಜನರನ್ನು ಸರಕಾರದವರು ಹಿಡಿದಿದ್ದಾರೆ.

---

## ಯಹುದಿಗಳ ಯಮಯಾತನೆ.

ಕಳೆದ ಒಂದೂವರೆ ಸಾವಿರ ವರುಷಗಳಿಂದ ಸ್ವದೇಶವನ್ನು ಕಳೆದುಕೊಂಡು ಅಲ್ಲಲ್ಲಿ ವಾಸವಾಗಿರುವ ಅಲ್ಪಸಂಖ್ಯಾಕರಾದ ಯಹುದಿಗಳ 'ಗೋಳನ್ನು ಕೇಳುವವರೇ ಇಲ್ಲ. ರಾಕ್ಷಸ ಹಿಟಲರನು ಅವರಿಗೆ ಯಮನಾಗಿ ಹಿಂಸಿಸುತ್ತಿದ್ದಾನೆ. ಅಮೇರಿಕಾ, ಇಂಗ್ಲೆಂಡ್ ರಾಷ್ಟ್ರಗಳು ಯಹುದಿಗಳ ಯಮಯಾತನೆಯನ್ನು ನಿವಾರಣೆಮಾಡಲು ಈಗ ಯೋಚನೆ ನಡೆಸಿವೆ !

---

## ಇಲಕಲ್ಲ.

### ಮುನಸಿಪಾಲ್ಟಿಯಲ್ಲಿ ಅನ್ಯಾಯದ ಅತಿರೇಕ.

ಸ್ವತಂತ್ರ ಆರಿಸಿಬಂದ ಅಸ್ಪೃಶ್ಯ ಮೆಂಬರರಾದ ಶ್ರೀ. ಮಹಾದೇವಪ್ಪ ಬೇಗಾರ ಇವರು ವ್ಹಾಯಿಸ್ ಪ್ರೆಸಿಡೆಂಟ್ ಮತ್ತು ಚೇರಮನ್ ಮುಂತಾದ ಸಬ್ ಕಮಿಟಿಗಳಲ್ಲಿ ಕಾಂಗ್ರೆಸ್‌ದ ೭ ಜನರ ಪಾರ್ಟಿಯ ಅನುಕೂಲ ಹೋಟು ಕೊಟ್ಟರೆಂದು ಈಗಿನ ಅಂತರಾಳ ಮೆಜಾರಟಿ ಪಾರ್ಟಿಯ ಶ್ಯಾನಿಟರಿ ಚೇರಮನ್ನರು ೬ ಜನ ಕಸಗುಡಿಸುವ ಬೇಗಾರರನ್ನು ನಿಷ್ಕಾರಣ ಕೆಲಸದಿಂದ ತೆಗೆದಿದ್ದಾರೆ. ಈ ಮೊದಲೇ ಹೊಲಸಿನ ತವರೂರಾದ ನಮ್ಮೂರು ಈಗಂತೂ ಕೇಳುವುದೇನು? ಕೆಲವು ಓಣಿಗಳಲ್ಲಿ ಕಸವು ಹಾಗೇ ಬಿದ್ದಿದೆ. ಇಷ್ಟಕ್ಕೂ ತೃಪ್ತರಾಗದೆ ಶ್ರೀ. ಮಹಾದೇವಪ್ಪನವರು ಪರ ಊರಿಗೆ ಹೋದವರನ್ನು ಹಿಡಿದು ತಂದು ತಮ್ಮ ಪಾರ್ಟಿಯ ವಿರುದ್ಧ ಯಾಕೆ ಮತ ಕೊಟ್ಟರೆಂದು ಅವರನ್ನು ಹೊಡೆದು ಕಾಗದಗಳ ಮೇಲೆ ಸಹಿ ತೆಗೆದುಕೊಂಡರೆಂದು ಇಲ್ಲಿಯ ಪ್ರಮುಖ ಸಾಹುಕಾರರಾದ ಶ್ರೀ. ವೆಂಕಪ್ಪ ಸಕ್ರಿ ಮುಂತಾದ ಜನರ ಮೇಲೆ ಹುನಗುಂದ ೧ನೇ ವರ್ಗ ಮ್ಯಾಜಿಸ್ಟ್ರೇಟರ ಕೋರ್ಟಿನಲ್ಲಿ ಫಿರ್ಯಾದಿಯಾಗಿರುತ್ತದಾಗಿ ತಿಳಿಯುತ್ತದೆ.

ಪಾಪ! ನಿರಾಶ್ರಿತ ಹರಿಜನರ ಗೋಳನ್ನು ಕೇಳುವವರೇ ಇಲ್ಲವೆಂಬ ಭಾವನೆಯಿಂದ ಇಂಥ ಕೃತಿಗಳು ಜರುಗದಂತೆ ಹರಿಜನ ಹಿತಚಿಂತಕ ಸಂಸ್ಥೆಯವರೂ ಈಗಿನ ಕಾಂಗ್ರೆಸ್ ಸರಕಾರವೂ ಲಕ್ಷಕೊಡದಿದ್ದ ಪಕ್ಷಕ್ಕೆ ಹರಿಜನರ ಪಾಲಿನ ಹೆಚ್ಚಿನ ಸವಲತ್ತುಗಳು ವ್ಯರ್ಥವಾಗುವುದರಲ್ಲಿ ಸಂದೇಹವಿಲ್ಲ.

ಓರ್ವ ಹರಿಜನ ಹಿತಚಿಂತಕ.

# ನಿಜಾಮರಾಜ್ಯದ ಸತ್ಯಾಗ್ರಹ ಯುದ್ಧ.

ಹೈದರಾಬಾದ ಸ್ಟೇಟ್ ಕಾಂಗ್ರೆಸ್ಸಿನ ೮ ನೆಯ ಸರ್ವಾಧಿಕಾರಿಗಳಾದ ಶ್ರೀ. ವಕೀಲ ಕೋದಂಡರಾಯರು ಒಂದು ಪ್ರಕಟನೆ ಹೊರಡಿಸಿ ಸುರಾಜ್ಯವು ಸ್ವರಾಜ್ಯಕ್ಕೆ ಸರಿಬರಲಾರದೆಂದೂ ಹೈದರಾಬಾದ ಸಂಸ್ಥಾನದಲ್ಲಿ ಆ ಸುರಾಜ್ಯವು ಕೂಡಾ ಇಲ್ಲವೆಂದೂ ಸ್ಪಷ್ಟ ತಿಳಿಸಿದ್ದಾರೆ.

ತಾ. ೧೭ ನೇ ದಿನ ಶ್ರೀ. ಕೋದಂಡರಾಯರು ತಮ್ಮ ಸಹಕಾರಿಗಳೊಂದಿಗೆ ಶಾಸನಭಂಗಮಾಡಿ ಸೆರೆಯಾಳುಗಳಾದರು. ಕಿಷ್ಮಲ್ ಸೀನೆಮಾ ಗೃಹದ ಮುಂದೆ ಪ್ರಚಂಡ ಜನಸಮೂಹವಿದ್ದಿತು. ಶ್ರೀ. ಕೋದಂಡರಾಯರ ಸನ್ಮಾನಾರ್ಥವಾಗಿ ಕೂಡಿದ ಜನರಲ್ಲಿ ಏಳೆಂಟು ನಿರಪರಾಧಿಗಳನ್ನೂ ಪೋಲಿಸರು ಹಿಡಿದರು.

ತಾ. ೧೮ ನೆಯ ದಿನ ೪ ನೆಯ ಸರ್ವಾಧಿಕಾರಿಗಳಾದ ಶ್ರೀ. ಬಸವಂತರಾಯರಿಗೆ ೨ ವರುಷಗಳ ಕಠಿಣ ಶಿಕ್ಷೆಯಾಯಿತು. ಹಿಂದು ಸ್ವಾತಂತ್ರ್ಯಸಂಘದ ಧುರೀಣರಾದ ಶ್ರೀ. ದೇಶಪಾಂಡೆ ಕೇಶವರಾಯರು ತಮ್ಮ ಸಂಗಡಿಗರೊಂದಿಗೆ ಶಾಸನಭಂಗಮಾಡಿ ಸೆರೆಯಾಳುಗಳಾದರು. ಆ ದಿನ ಒಟ್ಟು ೧೩ ಜನರು ಸೆರೆಹಿಡಿಯಲ್ಪಟ್ಟರು.

**ಸತ್ಯಾಗ್ರಹದ ಪ್ರಚಂಡ ಸೈನ್ಯ.**

ಭಾಗಾನಗರದಲ್ಲಿ ನಡೆದಿರುವ ಸತ್ಯಾಗ್ರಹಕ್ಕೆ ಮುಂಬೈ, ಕರಾಚಿ ಲಾಹೋರ, ದಿಲ್ಲಿ, ಡೇರಾಡೂನ, ಫತ್ತೇಪುರ, ಬರೇಲಿ ಮೊದಲಾದ ಸ್ಥಳಗಳಿಂದ ಆರ್ಯ ಸಂರಕ್ಷಕ ಸಂಘದ ಸತ್ಯಾಗ್ರಹಿ ವೀರರು ಸಹಾಯಮಾಡಲು ಬರುವರೆಂದು ಪ್ರಕಟವಾಗಿದೆ.

**ಸತ್ಯಾಗ್ರಹ ದಿನವನ್ನಾಚರಿಸಿರಿ.**

ನಿಜಾಮ ರಾಜ್ಯದಲ್ಲಿ ಸತ್ಯಾಗ್ರಹ ಪ್ರಾರಂಭವಾಗಿ ಈ ತಿಂಗಳ ೨೧ ನೇ ತಾರೀಖಿಗೆ ಒಂದು ತಿಂಗಳಾಯಿತು. ಆದಕಾರಣ ಆ ದಿನ ಆ ರಾಜ್ಯದ ಎಲ್ಲಾ ಕಡೆಗೂ ಈ ಸತ್ಯಾಗ್ರಹ ದಿನವನ್ನು ಆಚರಿಸಿ ರಾಜ್ಯದಲ್ಲೆಲ್ಲಾ ಸತ್ಯಾಗ್ರಹವು ವ್ಯಾಪಿಸುವಂತೆ ಮಾಡಬೇಕೆಂದು ಶ್ರೀ. ಕೇತಕರವರು ತಿಳಿಸಿದ್ದಾರೆ.

ಪುಣೆಯಿಂದ ಹೊರಟದ್ದ ಹಿಂದುತ್ವ ನಿಷ್ಠ ಸತ್ಯಾಗ್ರಹಿಗಳ ದಲಕ್ಕೆ ಶ್ರೀ. ನಥುರಾಮ ಗೋಡಸೆಯವರು ಪ್ರಮುಖರಾಗಿದ್ದರು. ಈ ದಲವು ಹೈದರಾಬಾದಕ್ಕೆ ಹೋಗುವಾಗ ಶಹಬಾದ ಸ್ಟೇಶನ್ನಿನಲ್ಲಿ ಸಂಸ್ಥಾನದಿಂದ ಸಂರಕ್ಷಿಸಲ್ಪಡುತ್ತಿರುವ ಕೆಲವು ಪುಂಡ ಮುಸಲ್ಮಾನರು ಸತ್ಯಾಗ್ರಹಿಗಳಿಗೆ ಮನಬಂದಂತೆ ಬೈದು ಜಗಳ ಹೂಡಲು ಪ್ರಯತ್ನಿಸಿದರು. ಸತ್ಯಾಗ್ರಹಿಗಳು ಇದನ್ನು ಅರಿತವರಾಗಿದ್ದುದರಿಂದ ಅವರು ಶಾಂತವೃತ್ತಿಯಿಂದಲೇ ನಡೆದು ಹೈದರಾಬಾದಿಗೆ ಹೋಗಿ ತಮ್ಮ ಶಾಸನಭಂಗದ ಕಾರ್ಯ ನೆರವೇರಿಸಿದರು. ಅಲ್ಲಿ ಪೋಲಿಸರು ಇವರನ್ನು ಹಿಡಿದು ಸೆರೆಮನೆಗೆ ಕರೆದುಕೊಂಡು ಹೋದರು.

ಧುಳೆ, ನಾಗಪುರ, ಜುನ್ನರ, ವಹಾದೆ ಈ ಸ್ಥಳಗಳಲ್ಲಿ ಭಾಗಾನಗರ ಸತ್ಯಾಗ್ರಹ ಸಂಘ ಸ್ಥಾಪನೆಯಾಗಿ ಸತ್ಯಾಗ್ರಹಿಗಳ ದಲ ಏರ್ಪಟ್ಟು ಈ ಕಾರ್ಯಕ್ಕೆ ಹಣವು ಕೂಡಾ ಸೇಖರಿಸಲ್ಪಟ್ಟಿತು.

---

## ಪಂಡಿತಜಿಯವರು ಅಧ್ಯಕ್ಷರು.

ಬರುವ ಜನವರಿ ತಿಂಗಳ ಕೊನೆಯಲ್ಲಿ ಲುಧಿಯಾನದಲ್ಲಿ (ಪಂಜಾಬ) ಕೂಡುವ ಹಿಂದಿ ಸಂಸ್ಥಾನಗಳ ಪ್ರಜಾ ಪರಿಷತ್ತಿಗೆ ಪಂಡಿತ ಜವಾಹರಲಾಲ ನೆಹರುರವರು ಅಧ್ಯಕ್ಷರಾಗಲು ಒಪ್ಪಿದರು.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ... ನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

## The Sharana Sandesh.

ನ್ಯಾಯನಿಷ್ಠುರ, ದಾಕ್ಷಿಣ್ಯಪರನಲ್ಲ, ಲೋಕವಿರೋಧಿ, ಶರಣನಾರಿಗೂ ಅಂಜುವವನಲ್ಲ !
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ! —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೮ | ಆಲಮಟ್ಟಿ- ಸೋಮವಾರ ತಾರೀಖು ೨೮ ನೆಯ ನವ್ಹಂಬರ್ ೧೯೩೮. | ಸಂಚಿಕೆ ೧

ಜನಸೇವೆಯೇ ದೇವರಸೇವೆ.

## ವ್ಹಾಯಿಸ್‌ರಾಯರ
# ಸಂಸ್ಥಾನ ಸಂರಕ್ಷಣ ಶಾಸನ.

### ಸಂಸ್ಥಾನ ವಿರೋಧವಾದ
### ಚಳವಳಿಯನ್ನು ಪ್ರತಿಬಂಧಿಸುವ ಪ್ರಯತ್ನ.

ಬ್ರಿಟಿಶ್ ಹಿಂದುಸ್ಥಾನದ ಚಳವಳಿಗಾರರಿಂದ ತಮ್ಮನ್ನು ರಕ್ಷಿಸಬೇಕೆಂದು ಹೈದರಾಬಾದಿನ ಮುಖ್ಯ ಮಂತ್ರಿಗಳಾದ ಸರ್. ಅಕ್ಬರ್ ಹೈದರಿಯವರು ಬೇಡಿಕೊಂಡ ಪ್ರಕಾರ ವ್ಹಾಯಿಸ್‌ರಾಯರು ಹೈದರಾಬಾದ ಸಂಸ್ಥಾನ ದೆಸೆಯಿಂದ ಸಂಸ್ಥಾನ ಸಂರಕ್ಷಣಾ ಶಾಸನವನ್ನು ನಡವಳಿಕೆಯಲ್ಲಿ ತಂದಿದ್ದಾರೆಂದು ತಿಳಿದುಬಂದಿದೆ. ಈ ಶಾಸನದಂತೆ ಬ್ರಿಟಿಶ್ ಹಿಂದುಸ್ಥಾನದಿಂದ ಸಂಸ್ಥಾನದಲ್ಲಿ ಚಳವಳಿಮಾಡಲು ಕಾಲಿಡುವ ಸಂಘ, ಸಂಸ್ಥೆ, ವ್ಯಕ್ತಿಗಳನ್ನು ಪ್ರತಿಬಂಧಿಸಲು ಬರುವಂತಿದೆ. ಮತ್ತು ಮ್ಯಾಜಿಸ್ಟ್ರೇಟರಿಗೆ ಸಭೆ ಸಮ್ಮೇಲನಗಳನ್ನು ತಡೆಯಲು ವಿಶೇಷಾಧಿಕಾರ ಕೊಡಲಾಗಿದೆ.

ದೇಹವೇ ದೇವಾಲಯ.




## ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೮ | ಆಲಮಟ್ಟಿ- ಸೋಮವಾರ ತಾರೀಖು ೨೮ ನೆಯ ನವ್ಹಂಬರ ೧೯೩೮. | ಸಂಚಿಕೆ ೧೫

# ಮಹತ್ವದ ಸುದ್ದಿಗಳು.

—ಕಲಕತ್ತಾದ ಹತ್ತಿರ ಬರದ್ವಾನದಲ್ಲಿ ಕಳೆದ ೨೩ ನೆಯ ತಾರೀಖಿನ ದಿವಸ ಶ್ರೀ. ಕಾಳಿಕಾದೇವಿ ಉತ್ಸವವು ಅತಿ ವಿಜೃಂಭಣೆಯಿಂದ ನೆರವೇರಿಸಲ್ಪಟ್ಟಿತು. ಇದಕ್ಕೆ ಬಹುಕಾಲದಿಂದಲೂ ಮುಸಲ್ಮಾನರು ಮಸೀದೆಗಳ ಮುಂದೆ ವಾದ್ಯ ಬಾರಿಸಬಾರದೆಂದು ಹಟ ಹಿಡಿದುದರಿಂದ ಅಪ್ಪಣೆ ದೊರೆತಿರಲಿಲ್ಲ. ಈ ಉತ್ಸವದಲ್ಲಿ ೧೧ ಉತ್ಸವ ಮೂರ್ತಿಗಳಿದ್ದವಲ್ಲದೆ ೫೦೦ ಜನ ವಾದ್ಯ ಬಾರಿಸುವವರೂ ಅನೇಕ ಆನೆ ಒಂಟೆಗಳೂ ಶೃಂಗರಿಸಿದ ದೀಪಗಳೂ ಇದ್ದವು. ಸಶಸ್ತ್ರ ಪೋಲಿಸರ ನೇತೃತ್ವದಲ್ಲಿ ಮೆರವಣಿಗೆಯು ಮಸೀದೆಯ ಮುಂದೆ ಯಾವ ಆತಂಕವಿಲ್ಲದೆ ಸಾಗಿತು.

—ಈ ವರ್ಷ ಬಂಗಾಲದಲ್ಲಿ ೪ ಲಕ್ಷ ೫೦ ಸಾವಿರಕ್ಕಿಂತ ಹೆಚ್ಚಾಗಿ ಕಾಂಗ್ರೆಸ್ ಸಭಾಸದರಾಗಿದ್ದಾರೆಂದು ತಿಳಿದುಬಂದಿದೆ. ಕಳೆದ ವರ್ಷ ಕೇವಲ ೨ ಲಕ್ಷ ೫೬ ಸಾವಿರ ಜನರು ಮಾತ್ರ ಸಭಾಸದರಾಗಿದ್ದರು.

—ಸಕ್ಕರದಲ್ಲಿ ಜರುಗಿದ ಜಮೀನದಾರ ಪರಿಷತ್ತಿನಲ್ಲಿ ಭಾಷಣಮಾಡುತ್ತ ಸಿಂಧ ಪ್ರಾಂತದ ಕಂದಾಯಮಂತ್ರಿಗಳಾದ ಪೀರ್ ಇಲಾಹಿ ಬಕ್ಷ್‌ರವರು ನಾನು ಎಲ್ಲಿಯವರೆಗೆ ಮಂತ್ರಿಪದದಲ್ಲಿರುವೆನೋ ಅಲ್ಲಿಯವರೆಗೂ ನಾನು ಮುಸಲ್ಮಾನನೂ ಅಲ್ಲ. ಹಿಂದೂ ಅಲ್ಲ, ಎಲ್ಲರನ್ನೂ ಸಮನಾಗಿ ಕಾಣುವ ದೇವರ ಪ್ರತಿನಿಧಿಯಾಗಿದ್ದೇನೆ ಎಂದು ಹೇಳಿದರು.

—ಕವಿಸಮ್ರಾಟ ಡಾ. ರವೀಂದ್ರನಾಥ ಟಾಗೋರರವರು ಕೆಮಾಲ ಪಾಶಾರವರ ನಿಧನದ ಬಗ್ಗೆ ಅಭಿಪ್ರಾಯಪಡುತ್ತಾ "ಇವರ ಮರಣದಿಂದ ಕೇವಲ ತುರ್ಕಸ್ಥಾನಕ್ಕಲ್ಲದೆ ಇಡೀ ಏಸಿಯಾ ಖಂಡಕ್ಕೇನೇ ಹಾನಿ ತಗಲಿದೆ. ಕೆಮಾಲರು ಯುದ್ಧದಲ್ಲಷ್ಟೇ ಶೂರರಾಗಿರದೆ ಮೂಢ ಭಾವನೆಗಳನ್ನು ಕಿತ್ತಿಹಾಕುವ ಯುದ್ಧದಲ್ಲಿಯೂ ತುಂಬಾ ಯಶಸ್ಸು ಹೊಂದಿದರೆಂದು" ಸಾರಿದ್ದಾರೆ.

—ಮುಂಬೈಯಲ್ಲಿ ಫಾರ್ಸಿ ಯುರೋಪಿಯನ್ನರಲ್ಲಿ ನಡೆದ ಕ್ರಿಕೆಟ್ ಪಂದ್ಯಾಟದಲ್ಲಿ ಯುರೋಪಿಯನ್ನರು ೧೯ ಓಟಗಳಿಂದ ಜಯ ಸಂಪಾದಿಸಿದರು.

—ಪಂಜಾಬ ವಿಶ್ವವಿದ್ಯಾಲಯದ ಪದವೀದಾನ ಸಮಾರಂಭವು ಡಿಶಂಬರ್ ೨೨ ನೆಯ ತಾರೀಖಿನ ದಿವಸ ವಿಶ್ವವಿದ್ಯಾನಿಲಯ ಭವನದಲ್ಲಿ ಫೆಡರಲ್ ಕೋರ್ಟಿನ ನ್ಯಾಯಾಧೀಶರಾದ ಸರ್. ಮಾರಿಸ್ ರವರ ಅಧ್ಯಕ್ಷತೆಯಲ್ಲಿ ಜರುಗುವುದು.

—ಕಾಶ್ಮೀರ ಸಂಸ್ಥಾನದ ಪ್ರಮುಖ ಮುಂದಾಳುಗಳಾದ ಶ್ರೀ. ಜಿ. ಎಂ ಬಕ್ಷಿಯವರು ರಾಷ್ಟ್ರಾಧ್ಯಕ್ಷರಾದ ಶ್ರೀ. ಸುಭಾಷಚಂದ್ರ ಬೋಸರನ್ನು ಕಂಡು ಕಾಶ್ಮೀರದಲ್ಲಿ ಜವಾಬದಾರಿ ಸರಕಾರದ ಸಲುವಾಗಿ ನಡೆದಿರುವ ಚಳವಳಿಯ ಸಂಬಂಧವಾಗಿ ವಿಚಾರವಿನಿಮಯ ಮಾಡಿದರು. ಶ್ರೀ. ಬಕ್ಷಿಯವರು ಮಹಾತ್ಮಾಜಿಯವರನ್ನು ಕಾಣಲು ವರ್ಧಾದ ಕಡೆಗೆ ತೆರಳಿದರು.

—ಮಹಾತ್ಮಾ ಗಾಂಧೀಜಿಯವರ ಆಂಗ್ಲ ಶಿಷ್ಯಳಾದ ಶ್ರೀಮತಿ ಮೀರಾಬೆನ್‌ರವರು ಮಹಾತ್ಮರ ಸಲಹೆಯಂತೆ ಗಡಿನಾಡಿನಲ್ಲಿ ಕೆಲವು ಕಾರ್ಯಗಳನ್ನು ಕೈಕೊಳ್ಳಲು ತಾ. ೨೪ ನೆಯ ದಿವಸ ಪೇಶಾವರದ ಕಡೆಗೆ ಹೋದರು.

—ಕಾಂಗ್ರೆಸ್ ಅಧ್ಯಕ್ಷರಾದ ಶ್ರೀ. ಸುಭಾಷಚಂದ್ರ ಬೋಸರವರು ಪಂಜಾಬ ಪ್ರಾಂತದಲ್ಲಿ ಸಂಚರಿಸುವುದಕ್ಕಾಗಿ ತಾ. ೨೪ ನೆಯ ದಿವಸ ಬೆಳಗ್ಗೆ ಲಾಹೋರಿಗೆ ಹೋದರು.

—ಹೊಸದಾಗಿ ಮುಂಬೈ ಹೈಕೋರ್ಟ ಜಜ್ಜರಾಗಿ ನಿಯಮಿಸಲ್ಪಟ್ಟ ಶ್ರೀ.ಲೋಕೂರವರನ್ನು ಮುಂಬೈ ಸರಕಾರವು ವಿಸಾಪುರ ಜೈಲಿನಲ್ಲಿ ನಡೆದ ದ್ರವ್ಯಾಪಹಾರದ ಬಗ್ಗೆ ವಿಚಾರಣೆ ನಡೆಯಿಸಲು ನಿಯಮಿಸಿದೆಯಂತೆ

—ಹುಬ್ಬಳ್ಳಿ ಮುನಿಸಿಪಾಲ್ಟಿಯು ರದ್ದಾದ ಬಗ್ಗೆ ಈ ವರೆಗೂ ಸರಕಾರದಿಂದ ಅಧಿಕೃತ ಪ್ರಕಟನೆ ಹೊರಟಿರುವದಿಲ್ಲ.

# ಕ್ರಾಂತಿಯು ಚಿರಾಯುವಾಗಲಿ.

## ನೈಜಾಮ ರಾಜ್ಯದಲ್ಲಿಯ

### ಸತ್ಯಾಗ್ರಹ ಯುದ್ಧ.

ನಿಜಾಮರ ರಾಜ್ಯದಲ್ಲಿ ಸರಕಾರದ ಅನೇಕ ಭಯಂಕರ ಅನ್ಯಾಯಗಳನ್ನು ತಾಳಲಾರದೆ ತಾ. ೨೧-೧೦-೩೮ ನೆಯ ದಿನ ಹಿಂದೂ ನಾಗರಿಕ ಸ್ವಾತಂತ್ರ್ಯ ಸಂಘದ ಶ್ರೀ. ಜೋಶಿ ಮೊದಲಾದ ರಾಷ್ಟ್ರವೀರರು ಸರಕಾರದ ಕ್ರೂರ ಅಪ್ಪಣೆಯನ್ನು ಉಲ್ಲಂಘಿಸಿ ಸತ್ಯಾಗ್ರಹ ಯುದ್ಧವನ್ನು ಪ್ರಾರಂಭಿಸಿ ಈಗಾಗಲೇ ಅವರು ಮತ್ತು ಅವರ ಅನುಯಾಯಿಗಳನೇಕರು ನಿಜಾಮರ ಅತಿಥಿಗಳಾಗಿದ್ದಾರೆ. ಹೈದರಾಬಾದ ಸಂಸ್ಥಾನವು ಹಿಂದುಸ್ಥಾನದ ದೇಶೀಯ ಸಂಸ್ಥಾನಗಳಲ್ಲಿ ಜನಸಂಖ್ಯೆಯಿಂದಲೂ ವಿಸ್ತೀರ್ಣದಿಂದಲೂ ಉತ್ಪತ್ತಿಯಿಂದಲೂ ಸಂಪತ್ತು, ಗೌರವ ಹಾಗು ದರ್ಪಗಳಿಂದಲೂ ಒಂದನೆಯದಾಗಿರುವಂತೆ ತನ್ನ ಪ್ರಜೆಗಳನ್ನು ರಾಜಕೀಯದಲ್ಲಿಯೂ ವಿದ್ಯೆಯಲ್ಲಿಯೂ ತೀರಾ ಅಜ್ಞ ಸ್ಥಿತಿಯಲ್ಲಿಟ್ಟಿರುವಲ್ಲಿ ಮತ್ತು ಪ್ರಜೆಗಳನ್ನು ಗುಲಾಮರಂತೆ ನಡೆಸಿಕೊಳ್ಳುವಲ್ಲಿಯೂ ಒಂದನೆಯದೇ ಆಗಿರುತ್ತದೆ.

(೧) ಹೈದರಾಬಾದಿನ ವಿಸ್ತೀರ್ಣ ೮೨೬೯೮ ಚದುರ ಮೈಲುಗಳು. (೨) ನಿಜಾಮರ ಸ್ವಂತ ಜಮೀನು ೮೧೧೨ ಚದುರ ಮೈಲುಗಳು. (೩) ಹೈ ದ ರಾ ಬಾ ದ ಸಂಸ್ಥಾನದ ವರ್ಷಾದಾಯ ೮೦೦೮೦೦೦೦ ರೂ. ಗಳು. (೪) ನೈಜಾಮರ ಸ್ವಂತ ಉತ್ಪನ್ನ ೩೦೦೦೦೦೦೦ ರೂ. ಗಳು. ಹೀಗೆ ಹೈದರಾಬಾದ ಸಂಸ್ಥಾನವು ಎಷ್ಟೇ ದೊಡ್ಡದಾಗಿರಲಿ, ಉತ್ಪನ್ನವುಳ್ಳದ್ದಾಗಿರಲಿ ಬ್ರಿಟಿಶರ ಅಧೀನ ರಾಜ್ಯ. ಬ್ರಿಟಿಶರ ಕೈಕೆಳಗಿನವರಾದ ಈ ನಿಜಾಮರಿಗೆ ಗದ್ವಾಲ, ಸುರಪುರ (ಇದು ಈಗಾಗಲೇ ಹಾಳಾಗಿದೆ.) ಗುಡುಗುಂಟೆ, ವ್ಯಾಗೇರಿ ಮೊದಲಾದ ಆಶ್ರಿತರಾಜರು, ಕೊಪ್ಪಳ, ಶಹಾಬಾದ ಮುಂತಾದ ಜಹಗೀರದಾರರೂ ಇರುತ್ತಾರೆ.

ಈಗಿನ ನಿಜಾಮರು ಆಳ್ವಿಕೆಯನ್ನು ನಡೆಯಿಸಲು ಪ್ರಾರಂಭಿಸಿ ಇಪ್ಪತ್ತೈದು ವರುಷಗಳು ಕಳೆದು, ಹೋದ ವರುಷ ರಜತ ಮಹೋತ್ಸವವನ್ನು ಅತ್ಯಂತ ವಿಜೃಂಭಣೆಯಿಂದ ನಡೆಯಿಸಿಕೊಂಡರು. ಇವರ ಆಳ್ವಿಕೆಯಲ್ಲಿ ಹಿಂದುಗಳಿಗಾಗುತ್ತಿರುವ ಗೋಳು ಹೇಳತೀರದು. ಅಖಿಲ ಜಗತ್ತನ್ನೇ ವ್ಯಾಪಿಸಿರುವ ಇಂಥ ಕ್ರಾಂತಿಯ ನವಯುಗದಲ್ಲಿ ಹೈದರಾಬಾದಿನ ಅಲ್ಪಸಂಖ್ಯಾಕರಾದ ಮುಸಲ್ಮಾನರು ಬಹುಸಂಖ್ಯಾಕರಾದ ಹಿಂದುಗಳಿಗೆ ಕೊಡುತ್ತಿರುವ ಹಿಂಸೆಯನ್ನು ನೋಡಿದರೆ ಹಿಂದುಗಳ ಜನ್ಮದ್ವೇಷಿಯಾದ ಔರಂಗಜೇಬನ ಆಳ್ವಿಕೆಯ ಪ್ರತ್ಯಕ್ಷ ಅನುಭವವಾದಂತಾಗುವದಲ್ಲದೆ ಹಿಂದುಗಳನ್ನು ಕೇಳುವವರೇ ದಿಕ್ಕಿಲ್ಲದೆ ಹಿಂದುಗಳು ಅನುಭವಿಸುತ್ತಿರುವ ಯಾತನೆಯ ಕಲ್ಪನೆ ಸಹ ಆಗುವಂತಿಲ್ಲವೆಂದು ಹೇಳಿದಲ್ಲಿ ಅತಿಶಯೋಕ್ತಿಯಾಗಲಾರದು.

ವಾಚಕರೇ, ನಿಜಾಮರು ತಮ್ಮ ಪ್ರಜೆಗಳಲ್ಲಿ ಹಿಂದೂ ಮುಸಲ್ಮಾನರೆಂದು ವಿಭಾಗಿಸಿ (ಬ್ರಿಟಿಶರು ಯುರೋಪಿಯನ್ ಹಾಗು ಅಮೇರಿಕೆಯ ನಿಗ್ರೋ ಜನಗಳನ್ನು ವಿಭಾಗಿಸಿರುವಂತೆ) ಹಿಂದುಗಳನ್ನು ಗುಲಾಮರಿಗಿಂತಲೂ ಕಡೆಯಾಗಿ ನಡೆಯಿಸಿಕೊಳ್ಳುತ್ತಿರುವಾಗ ಇವರ ಕೈಗೊಂಬೆಯಂತಿರುವ. ಗದ್ವಾಲ್ ಮುಂತಾದ ಆಶ್ರಿತ ರಾಜ್ಯದ ಹಾಗು ಜಹಾಗೀರದಾರರ ಅಧೀನ ಪ್ರಜೆಗಳ ಹೀನ ದುರ್ದೆಶೆಯನ್ನು ವರ್ಣಿಸಲಿಕ್ಕೆ ಬೇಕಿಲ್ಲ. ಅಖಿಲ ರಾಜ್ಯಭಾರದಲ್ಲಿ ಪ್ರವೇಶಿಸಲು ನನಗೆ ಅಷ್ಟು ಯೋಗ್ಯತೆ ಇಲ್ಲವಾದರೂ ನನಗೆ ತಿಳಿದಿರುವ ಮಟ್ಟಿಗೆ ಒಂದೆರಡು ವಿಷಯಗಳನ್ನು ಉದಾಹರಿಸುತ್ತೇನೆ. ಇದರಿಂದಲೇ ನಿಜಾಂ ರಾಜ್ಯದ ಪ್ರಜೆಗಳ ಪ್ರತ್ಯಕ್ಷ ಜೀವನದ ಅನುಭವವಾಗಬಹುದು.

ಮುಂಬೈ ಇಲಾಖೆಯ ವಿಜಾಪುರ ಜಿಲ್ಲೆಯು ಮದ್ರಾಸ ಇಲಾಖೆಯ ಬಳ್ಳಾರಿ ಜಿಲ್ಲೆಯು ಬರಗಾಲದ ತವರೂರಾದಂತೆ ನಿಜಾಮ ರಾಜ್ಯದಲ್ಲಿ ರಾಯಚೂರು ಗುಲ್ಬರ್ಗಾ ಹಾಗೂ ಕೊಪ್ಪಳ ಜಿಲ್ಲೆಯ ಬಹುಭಾಗವು ಬರಗಾಲದ ಬೀಡಾಗಿದೆಯೆಂದು ನನಗೆ ೧೦-೧೨ ವರುಷಗಳಿಂದ ಅನುಭವಕ್ಕೆ ಬಂದ ಮಾತಾಗಿರುತ್ತದೆ. ಮಳೆಯಾಗಲಿ ಬಿಡಲಿ, ಬೆಳೆ ಬರಲಿ ಬರದಿರಲಿ, ಪ್ರಜೆಗಳು ಬದುಕಲಿ ಸಾಯಲಿ, ಸರಕಾರಕ್ಕೆ ಕಂದಾಯವನ್ನು ಮಾತ್ರ ಕೊಟ್ಟೇ ತೀರಬೇಕು.

ಈ ರಾಜ್ಯದಲ್ಲಿ ಬ್ರಿಟಿಶರ ರಾಜ್ಯಕ್ಕಿಂತಲೂ ಅಷ್ಟೇಕೆ ಇತರ ದೇಶೀಯ ಸಂಸ್ಥಾನಗಳಿಗಿಂತಲೂ ಕಡಿಮೆ ಇಲ್ಲದಷ್ಟು ಕಂದಾಯವನ್ನು ಸರಕಾರಕ್ಕೆ ಬಹಳ ವರುಷಗಳಿಂದಲೂ ಪ್ರಜೆಗಳು ಸಲ್ಲಿಸುತ್ತಾ ಬಂದಿರುತ್ತಾರೆ. ಆದರೆ ನಿಜಾಮರಿಗೆ ಇದರಿಂದ ತೃಪ್ತಿಯಾಗದೆ ೧೯೩೦ ನೆಯ ಇಸ್ವಿ ಸುಮಾರಿನಲ್ಲಿ ರಾಯಚೂರು ಮೊದಲಾದ ಜಿಲ್ಲೆಗಳಲ್ಲಿ ೧ ರೂಪಾಯಿಗೆ ಸರಾಸರಿ ಐದು ಆಣೆಯಂತೆ ಕಂದಾಯವನ್ನು ಹೆಚ್ಚು ಮಾಡಿರುತ್ತಾರೆ. ಅಂದರೆ ಇತರ ದೇಶೀಯ ಸಂಸ್ಥಾನಗಳ ಕಂದಾಯಕ್ಕಿಂತಲೂ ಒಂದು ರೂಪಾಯಿಗೆ ಎಂಟು ಆಣೆ ಕಂದಾಯ ಹೆಚ್ಚೆಂದು ಹೇಳಬಹುದು. ಇಲ್ಲಿ ಕಂದಾಯವನ್ನು ವಸೂಲು ಮಾಡತಕ್ಕ ಪದ್ಧತಿಯಾದರೂ ವಿಚಿತ್ರವಾದದ್ದೆಂದೇ ಹೇಳಬಹುದು. ಬ್ರಿಟಿಶ್ ರಾಜ್ಯದಲ್ಲಿಯೂ ಮೈಸೂರು ಮುಂತಾದ ದೇಶೀಯ ಸಂಸ್ಥಾನಗಳಲ್ಲಿಯೂ ಪ್ರತಿವರುಷ ಕಂದಾಯವನ್ನು ಕಂತುಗಳಾಗಿ ವಸೂಲು ಮಾಡುವದಲ್ಲದೆ (ಮೈಸೂರು ಸಂಸ್ಥಾನದಲ್ಲಿ ನಾಲ್ಕು ಕಂತುಗಳಾಗಿ ವಸೂಲು ಮಾಡುತ್ತಾರೆ.) ತೀರಾ ನಿರ್ಗತಿಕರಾದ ಪ್ರಜೆಗಳಿಗೆ ಮಾಫೀ ಸಹ ಮಾಡುತ್ತಾರೆ. ಇಲ್ಲಿ ಮಾತ್ರ ಹಾಗಲ್ಲ. ಹೊಲಮನೆಗಳನ್ನು ವತ್ತಿಹಾಕಿ ದನಕರಗಳನ್ನು ಮಾರಿ ಸಾಲದ್ದಕ್ಕೆ ಹೆಂಗಸರ ಕೊರಳಲ್ಲಿಯ ಮಂಗಲಸೂತ್ರಗಳನ್ನಾದರೂ ಮಾರಿ ಒಂದೇ ಗಂಟಿಗೆ ಕಂದಾಯವನ್ನು ಕೊಡಲಿಕ್ಕೇಬೇಕು.

ಇಲ್ಲವಾದರೆ ಎಂಥಾ ದೊಡ್ಡ ಮನೆತನದವರ ಮರ್ಯಾದೆಯೂ ಅಂದು ಮಾರಾಟವಾಯಿತೆಂದೇ ತಿಳಿಯಬೇಕು. ಅಲ್ಲಿಯ ಅಧಿಕಾರಿಗಳಾದರೊ ಪ್ರಜೆಗಳಿಗೆ ತೀರಾ ಹೀನವಾಗಿ ಬಯ್ಯುವುದು ಕಂದಾಯಕ್ಕಾಗಿ ಸ್ಥಿರಚರಾಸ್ತಿಗಳನ್ನು ಜಪ್ತಿಮಾಡಿ ಹರಾಜು ಹಾಕುವುದಲ್ಲದೆ ಕೊನೆಗೆ ಲಾಕಪ್ಪಿಗೆ ಹಾಕುವದೂ ತಮಗೆ ಸರಕಾರದಿಂದಲ್ಲ ದೇವರಿಂದ ಸಿಕ್ಕ ಅಧಿಕಾರವೆಂದು ತಿಳಿದಿರುತ್ತಾರೆ. ಅರ್ಥಾತ್ ಭೂತದಯ ಪಶ್ಚಾತ್ತಾಪಗಳು ಇವರಿಗಿರುವುದಿಲ್ಲ. ಹೀಗೆ ಪ್ರಜೆಗಳು ಬರಗಾಲದಿಂದ ಪೀಡಿತರಾಗಿ ಈಗ ೮-೧೦ ವರ್ಷಗಳಿಂದ ದುಸ್ಸಾಧ್ಯವಾದ ಕರಭಾರವನ್ನು ಹೊತ್ತು ಉಸಿರೆತ್ತದೆ ಕಂದಾಯವನ್ನು ತರಬೇಕಾದದ್ದೂ ತಮ್ಮ ಸಂಸಾರವನ್ನು ನಡೆಸುವುದೂ ಕಡುಕಷ್ಟವಾಗಿ ಪ್ರಜೆಗಳ ಬಡತನ ಹಾಗು ದುಃಖಗಳು ಹೆಚ್ಚಿ ಸಹಸ್ರಗಟ್ಟಲೆಯಾದ ಮಾನವಂತ ಪ್ರಜೆಗಳು ಇಂದು ಅನ್ನಾನ್ನಗತಿಕರಾಗಿರುವರೆಂದು ಹೇಳಿದರೆ ನೈಜಾಂ ದೇಶದ ಪ್ರಜೆಗಳ ಗೋಳಿನ ಬಾಳು ಎಷ್ಟು ಕನಿಕರವಾಗಿರಬಹುದೆಂಬುದನ್ನು ವಾಚಕರೇ ಊಹಿಸಲಿ. ಪ್ರಿಯ ವಾಚಕರೇ, ಅಖಿಲ ಭಾರತದಲ್ಲಿ ಕರಭಾರವು ಹೆಚ್ಚಿರುವುದೆಂದು ಇದನ್ನು ಪ್ರಜೆಗಳಿಗೆ

ಕೊಡಲು ಅಶಕ್ಯವಾಗಿದೆಯಾಗಿ ಭಯಂಕರ ಚಳವಳಿಯು ನಡೆಯುತ್ತಿರುವ ಕಾಲದಲ್ಲಿ ನಿಜಾಂ ದೇಶದಲ್ಲಿ ಒಂದು ರೂಪಾಯಿಗೆ ಐದು ಆಣೆಯಂತೆ ಕಂದಾಯವನ್ನು ಹೆಚ್ಚುಮಾಡಿರುವರಲ್ಲದೆ ಅದನ್ನು ಪ್ರಜೆಗಳ ತಲೆಯ ಮೇಲೆ ಹೇರುವಾಗ ಸರಕಾರದವರು "ದಯಾಘನರಾದ ನಿಜಾಮರವರು ಇನ್ನು ಮೂವತ್ತು ವರುಷಗಳ ವರೆಗೆ ಕಂದಾಯವನ್ನು ಹೆಚ್ಚುಮಾಡುವುದಿಲ್ಲೆಂದು ಫರ್ಮಾನಾ ಹೊರಡಿಸಿರುತ್ತಾರೆಂದು" ಪ್ರಜೆಗಳಿಗೆ ಸೂಚನೆ (Notice) ಕೊಟ್ಟಿರುತ್ತಾರೆ. ನೋಡಬೇಕು ಮುಂದಿನ ಕರಭಾರ ಎಷ್ಟೆಂಬುದನ್ನು? ಆದರೆ ಧರಂಗಧರ ಸಂಸ್ಥಾನದಲ್ಲಿರುವಂತೆ ಕಂದಾಯ ಬಾಕಿಗೆ ಪ್ರತಿಯಾಗಿ ಯುವತಿಯರನ್ನು ಜಪ್ತಿಮಾಡದಿರುವದು ಪ್ರಜೆಗಳ ಪುಣ್ಯ.

ಇನ್ನು ಈ ಮೊಗಲಾಯಿ ರಾಜ್ಯದಲ್ಲಿ ಇರುವ ಸುಂಕದ (ಕರೋಡಗಿರಿ) ವಿಚಾರವಾಗಿ ಸ್ವಲ್ಪ ಬರೆಯುತ್ತೇನೆ. ಈ ಸುಂಕದ ವಿಚಾರ ಸ್ವಾರಸ್ಯವಾದದ್ದೇ. ಈ ನಿಜಾಮ ರಾಜ್ಯದಲ್ಲಿ ಓರ್ವ ಗೋಮಾಜಿ ಗಣೇಶನೆಂಬ ಬ್ರಾಹ್ಮಣನಿದ್ದನಂತೆ. ಅವನು ಉದ್ಯೋಗವಿಲ್ಲದೆ ಸ್ವಂತ ಬುದ್ಧಿಯಿಂದ ನಾಲ್ಕು ರಸ್ತೆಗಳು ಕೂಡುವಲ್ಲಿಗೆ ಹೋಗಿ ಊರಿಂದೂರಿಗೆ ಸಾಮಾನುಗಳನ್ನು ತೆಗೆದುಕೊಂಡು ಹೋಗತಕ್ಕ ಮಾಲಿನ ಮೇಲೆ ಸರಕಾರದ ಸುಂಕವೆಂತಾ ವಸೂಲುಮಾಡಲಿಕ್ಕೆ ಪ್ರಾರಂಭಿಸಿ ಅನೇಕ ವರುಷಗಳ ವರೆಗೆ ಅದೇ ಕಾಯಕದಿಂದ ಲಕ್ಷಾಂತರ ರೂಪಾಯಿ ಸಂಪಾದಿಸಿದನಂತೆ. ಇವನು ಸ್ವಂತವಾದ ಮುದ್ರೆಹಾಕುತ್ತಿದ್ದನಂತೆ. ಒಂದಾನೊಂದು ಸಂದರ್ಭದಲ್ಲಿ ಈ ವಿಷಯವು ಸರಕಾರಕ್ಕೆ ಗೊತ್ತಾಗಿ ಸುಂಕವನ್ನು ಯಾವ ರೀತಿ ವಸೂಲು ಮಾಡುತ್ತಿದ್ದನೆಂಬುದನ್ನು ಅವನಿಂದ ತಿಳಿದುಕೊಂಡು ಆ ಬ್ರಾಹ್ಮಣನನ್ನು ಕ್ಷಮಿಸಿಬಿಟ್ಟರಂತೆ.

ಅಂದಿನಿಂದ ಸರಕಾರದವರೇ ಈ ಸುಂಕವನ್ನು ವಸೂಲು ಮಾಡಲು ಇಡೀ ತಮ್ಮ ರಾಜ್ಯದಲ್ಲಿ ಪ್ರಾರಂಭಿಸಲಾಗಿ ಇದರಿಂದ ಸರಕಾರಕ್ಕೆ ಸ್ವಲ್ಪೇ ವರುಷಗಳಲ್ಲಿ ಕೋಟ್ಯಾಂತರ ರೂಪಾಯಿಗಳು ಆದಯುವಾದ್ದರಿಂದ ಇದಕ್ಕೆ "ಕರೋಡಗಿರಿ" ಎಂಬ ಬಹು ಮರ್ಯಾದೆಯುಳ್ಳ ನಾಮವನ್ನು ಕೊಟ್ಟಿರುತ್ತಾರೆಂದು ಹೇಳುತ್ತಾರೆ. ಅದು ಏನೇ ಇರಲಿ; ಯಾರಾದರೂ ಹೊರದೇಶದಿಂದ ನೈಜಾಂ ರಾಜ್ಯದಲ್ಲಿ ಪ್ರವೇಶಿಸಿದೊಡನೆ ಅವರಲ್ಲಿ ಯಾವದೇ ಹೊಸ ಸಾಮಾನಿರಲಿ (ಹಾಲು ಮೊಸರು ಬೆಣ್ಣೆ ಕಾಯಪಲ್ಲೆಗೆ ಸಹ) ಅದನ್ನು ಮನೆಯ ಉಪಯೋಗಕ್ಕೆ ತೆಗೆದುಕೊಂಡು ಹೋಗಲಿ ಇಲ್ಲವೆ ಮಾರಾಟಕ್ಕಾಗಿ ತೆಗೆದುಕೊಂಡು ಹೋಗಲಿ ಅದಾವುದನ್ನು ಕೇಳುವುದಿಲ್ಲ.

ಆ ಮಾಲಿನ ಪ್ರತಿಯೊಂದು ರೂಪಾಯಿಗೆ ಒಂದಾಣೆಯಂತೆ ಹಾಲೀ ನಾಣ್ಯದ (ಅಂದರೆ ನೈಜಾಮ ರಾಜ್ಯದ ನಾಣ್ಯ) ಸುಂಕವನ್ನು ತೆರಲೇಬೇಕು. ಈ ಸುಂಕದ ಕಛೇರಿಯಲ್ಲಿ ಹಾಲೀ ಗಾಡೀ ನಾಣ್ಯಗಳ ಬದಲಾವಣೆಯಲ್ಲಿ ಅಜ್ಞ ಜನಗಳಿಂದ ಭಾರೀ ಲಾಭವನ್ನು ಹೊಂದುತ್ತಾರೆ. ಈ ಹೊರಗಿನಿಂದ ಬರುವ ಮಾಲು ಭಾರಿಯಾಗಿದ್ದರೆ ೧೦೦ ಕ್ಕೆ ೫ ರೂ. ಗಳಂತೆ ವಸೂಲುಮಾಡುತ್ತಾರೆ. ಇದರಲ್ಲಿ ಗಮನಿಸತಕ್ಕ ಮುಖ್ಯ ಸಂಗತಿ ಏನಂದರೆ ನಿಜಾಂ ಹದ್ದಿನಲ್ಲಿ ಪ್ರವೇಶಿಸಿದೊಡನೆ ಪ್ರಯಾಣಿಕರ ಸಾಮಾನುಗಳನ್ನು ಜಪ್ತಿ ಮಾಡುವ ವಿಚಾರ. ಉದಾಹರಣೆಗಾಗಿ ಯಾರಾದರೂ ಪ್ರಯಾಣಿಕರು ಹಾಸಿಗೆ ಪೆಟ್ಟಿಗೆ ಸಹ ತಂದಿರುತ್ತಾರೆ. ರೈಲಿನಿಂದ ಇಳಿದೊಡನೆ ಟಾಂಗಾದಲ್ಲಿ ಊರೊಳಗೆ ಹೋಗಬೇಕಾದರೆ ಕರೋಡಗಿರಿ ಕಛೇರಿ ಹತ್ತಿರ ಟಾಂಗಾ ನಿಲ್ಲಿಸುತ್ತಾರೆ. ಗಂಡಸರ ಹತ್ತಿರ ಇರುವ ಸಾಮಾನುಗಳನ್ನು ಜಪ್ತಿಮಾಡಲು ಜವಾನರೂ, ಹೆಂಗಸರಲ್ಲಿಯ ಸಾಮಾನುಗಳನ್ನು ತಪಾಸುಮಾಡಲು ಸ್ತ್ರೀ ಜವಾನರೂ ಇರುತ್ತಾರೆ. ಇವರಿಗೆ ಹಾಸಿಗೆ ಪೆಟ್ಟಿಗೆಗಳನ್ನು ಬಿಚ್ಚಿ (ತೆರೆದು) ಒಂದು ಮುರುಕ ಸೂಜಿಯನ್ನು ಸಹ ತೋರಿಸಬೇಕಾಗುತ್ತದಲ್ಲದೆ ಮೈಮೇಲಿನ ಕೋಟು ಶರಟುಗಳ ಜೇಬನ್ನೂ ಸಹ ಪರೀಕ್ಷೆಮಾಡುತ್ತಾರೆ. ಪ್ರಸಂಗದಲ್ಲಿ ಸ್ತ್ರೀಯರ ಪರೀಕ್ಷೆಯೂ ಸಹ ಮೇಲ್ಕಂಡಂತೆಯೇ ಆಗುತ್ತದೆ.

ಹೀಗೆ ಈ ನಿಜಾಂ ರಾಜ್ಯದಲ್ಲಿ ಅತಿ ಅವಮಾನಕಾರಕವಾದ ಸುಂಕದ ವಸೂಲಿಯ ರೀತಿಯು ನಿಜಾಂ ದೇಶಕ್ಕೆ ಹೋದ ಪ್ರತಿಯೊಬ್ಬ ಪ್ರಯಾಣಿಕರಿಗೂ ಗೊತ್ತಿರಲು ಸಾಕು. ಪ್ರಿಯ ವಾಚಕರೇ, ನಿಜಾಂ ರಾಜ್ಯದಲ್ಲಿ ಇಂತಹ ವರ್ಣಿಸಲಸದಳವಾದ ಕೇಳಲು ಹೇಯವಾದ ದುಃಖ ಹಾಗೂ ಸಂತಾಪವನ್ನು ಕೆರಳಿಸುವ ಅತ್ಯಂತ ಕರುಣಾಜನಕ ಸಂದರ್ಭಗಳನ್ನು ಬರೆಯುತ್ತಾ ಹೋದರೆ ಆದ್ಯಂತವಿಲ್ಲದಂತಾಗುತ್ತದೆ. ಹಿಂದುಗಳೇ ಬಹುಸಂಖ್ಯಾಕರಾಗಿರುವ ಈ ಮುಸಲ್ಮಾನರ ರಾಜ್ಯದಲ್ಲಿ (ಕಾಶ್ಮೀರದಂತೆ) ಮುಸಲ್ಮಾನ್ ಅಧಿಕಾರಿಗಳೇ ಹೆಚ್ಚೆಂಬ ವಿಷಯವು ಜಗತ್ತಿಗೆ ತಿಳಿದ ಮಾತಾಗಿರುತ್ತದೆ. ಈ ಸರಕಾರಿ ಅನೇಕ ಅಧಿಕಾರಿಗಳ ಮನೋವೃತ್ತಿಯು ಎಂತಹ ನಿರಂಕುಶವೂ ಹೇಯವೂ ಆದದ್ದೆಂಬ ವಿಷಯವನ್ನು ಅನುಭವಪೂರ್ಣ ಸಂಗತಿಯಿಂದ ತಿಳಿಸುತ್ತೇನೆ. ನಾನು ಒಂದು ನಾಟಕ ಕಂಪನಿಯಲ್ಲಿ ನೌಕರನಾಗಿದ್ದೆ. ಯಾವುದಾದರೂ ಗ್ರಾಮಕ್ಕೆ ಅಥವಾ ಪೇಟೆಗೆ ನಾಟಕವು ಹೋಯಿತೆಂದರೆ ಪೋಲಿಸರೇ ಆದಿಯಾಗಿ ಅವ್ವಲ್ ತಾಲೂಕದಾರರ ವರೆಗೆ ಒಂದೇ ಸಮನಾದ ಭಯ ಮತ್ತು ಮರ್ಜಿಯಿಂದ ನಡೆದುಕೊಳ್ಳಬೇಕಾಗುತ್ತಿತ್ತು. ಪೋಲೀಸರಾಗಲಿ ಪೋಲಿಸ ಗೌಡನಾಗಲಿ ಕೊನೆಗೆ ತುಂಟ ಮುಸಲ್ಮಾನರಾಗಲಿ ಯಾವಾಗ್ಗೆ ಬೇಕು ಆಗ್ಗೆ ನಾಟಕವನ್ನು ಬಂದು ಮಾಡಲು ಪ್ರಯತ್ನಿಸುತ್ತಿದ್ದರು. ಹೀಗೆ ಎಷ್ಟೋ ಸಾರೆ ನಾಟಕಗಳನ್ನು ನಿಲ್ಲಿಸಿಯೇ ಬಿಡುತ್ತಿದ್ದರು. ಇಂಥ ಸಂದರ್ಭದಲ್ಲಿ ಇವರಿಗೆನಿರ್ವಾಹವಿಲ್ಲದೆ ಲಂಚಾಕೊಡಬೇಕಾಗುತ್ತಿತ್ತು. ಮತ್ತು ಯಾವನಾದರೂ ಅಧಿಕಾರಿಯು ನಾಟಕವನ್ನ ನೋಡಲಿಕ್ಕೆ ಬರುವನೆಂದರೆ ಅವನಿಗಾಗಿ ಎರಡೆರಡು ತಾಸು ನಾಟಕವನ್ನು ಸುರುವು ಮಾಡದೆ ನಿಲ್ಲಿಸಬೇಕಾಗುತ್ತಿತ್ತು. ಹಾಗೇನಾದರೂ ಸುರುವು ಮಾಡಿದರೆ ಪೋಲಿಸರು ನಾಟಕವನ್ನು ನಿಲ್ಲಿಸಿಬಿಡುತ್ತಿದ್ದರು. ಇಲ್ಲವಾದರೆ ಅಧಿಕಾರಿಯು ಬಂದೊಡನೆ ಮತ್ತೆ ಮೊದಲಿನಿಂದ ನಾಟಕ ಸುರುವು ಮಾಡಬೇಕಾಗುತ್ತದೆಂದು ದಕಾಯಿಸುತ್ತಿದ್ದರು. ಇಲ್ಲವೇ ನಾಟಕದ ದಿವಸ ಅಪೇಕ್ಷಿತ ಅಧಿಕಾರಿಯ ಮನೆಗೆ ಹೋಗಿ ಅವನು ಅಪ್ಪಣೆ ಕೊಡುವ ವರೆಗೆ ಅವನ ಮನೆಯಲ್ಲಿ ನಟ ನಟಿಯರು ಸಂಗೀತಕಛೇರಿ ನಡೆಸಿ ಅವನ ದಿಲ್ ಖುಷ್ ಮಾಡಿ ಬಂದು ಆ ಮೇಲೆ ನಾಟಕವನ್ನು ಪ್ರಾರಂಭಿಸಬೇಕಾಗುತ್ತಿತ್ತು. ನಾಟಕ ಪ್ರಾರಂಭಕ್ಕೆ ಸರಕಾರದ ಲೈಸನ್ಸು ಪಡೆಯುವದಂತೂ ಭಯಂಕರ ಗಂಡಾಂತರ ಪ್ರಸಂಗವೆಂದೇ ಹೇಳಬೇಕು. ಇಲ್ಲಿಗೆ ಹೋಗಿರುವ ಪ್ರತಿಯೊಬ್ಬ ನಾಟಕ ಕಂಪನಿಯ ಮಾಲಕರಿಗೆ ಆ ಫಜೀತಿ ಗೊತ್ತಿರಬಹುದು.

ಹೀಗೆ ಅಧಿಕಾರಿ ವರ್ಗದವರ ಉನ್ಮಾತ್ತ ರೀತಿನೀತಿಗಳು ತೀರಾ ನಿಂದ್ಯವಾದವುಗಳಿರುತ್ತವೆ. ಇಂಥ ರಾಜ್ಯದಲ್ಲಿ ಅಶಿಕ್ಷಿತರಾದ ಪ್ರಜೆಗಳ ಸ್ಥಿತಿಗತಿಗಳು ಎಷ್ಟು ಕರುಣಾಜನಕವಾಗಿರುವವೆಂಬುದನ್ನು ಬರೆಯಲು ನನ್ನ ಲೇಖನಿಗೆ ಶಕ್ತಿ ಸಾಲದು. ವಾಚಕರೇ ಊಹಿಸಲಿ.

ಹಿಂದುಸ್ಥಾನದ ಕಾಂಗ್ರೆಸ್ ಮಾಜೀ ಅಧ್ಯಕ್ಷರಾದ ಪಂಡಿತ ಜವಾಹರಲಾಲರು ಸಂಸ್ಥಾನಗಳನ್ನು ಕತ್ತಲೆ ಕೋಣೆಗಳೆಂದು ಸಂಬೋಧಿಸಿರುತ್ತಾರೆ. ಆದರೆ ಈ ನಿಜಾಂ ರಾಜ್ಯವನ್ನು ಏನೆಂದು ಸಂಬೋಧಿಸುವುದು ಸೂಕ್ತವೋ ತಿಳಿಯದಾಗಿದೆ. ಇಂಥ ಭಯಂಕರ ರಾಜ್ಯದಲ್ಲಿ ಪ್ರಜೆಗಳ ಭಾಗ್ಯವಶಾತ್ ಅಖಿಲ ಜಗತ್ತಿನಲ್ಲಿ ತಾಂಡವವಾಡುತ್ತಿರುವ ಪ್ರಜೆಗಳ ಕ್ರಾಂತಿಕಾರಕ ಚಳವಳಿಯು (ಸತ್ಯ ಅಹಿಂಸೆಗಳಿಂದೊಡಗೂಡಿ) ಒಮ್ಮಿಂದೊಮ್ಮೆ ಜಾಜ್ವಲ್ಯಮಾನವಾಗಿ ಹಬ್ಬಿದೆ. ಭೂಕಂಪವನ್ನು ನಿಲ್ಲಿಸಲು ಶಕ್ಯವಿರುವುದಾದರೆ ನಿಜಾಮು

ರಿಗೂ ಈ ಚಳವಳಿಯನ್ನು ತಡೆಯಲು ಶಕ್ಯವೆಂದು ಹೇಳಬೇಕು. ನಿಜಾಂ ಪ್ರಜೆಗಳು ಈ ವರೆಗಿನ ಅತಿ ಘೋರವಾದ ಯಾತನೆಯನ್ನು ಅನುಭವಿಸಿ ಅದರಿಂದ ಮುಕ್ತರಾಗಬೇಕೆಂದು ಎಚ್ಚತ್ತಿದ್ದಾರೆ. ಈಗ ಅವರು ಸ್ವ ಸ್ವರೂಪ ಜ್ಞಾನವನ್ನು ಪಡೆದು ಕೆರಳಿದ ಕೇಸರಿಗಳಾಗಿದ್ದಾರೆ. ಈಗಾಗಲೇ ಅನೇಕ ರಾಷ್ಟ್ರವೀರರು ಸೆರೆಮನೆಯ ಸುಖವನ್ನು ಅನುಭವಿಸುತ್ತಿದ್ದಾರೆ. ಈ ರಾಷ್ಟ್ರವೀರರಿಗೆ ನನ್ನ ಅನಂತ ವಂದನೆಗಳನ್ನು ಅರ್ಪಿಸುವೆನಲ್ಲದೆ ಈ ಸಂದರ್ಭದಲ್ಲಿ ಪ್ರತಿಯೊಬ್ಬ ಪ್ರಜಾಸತ್ತಾತ್ಮಕ ರಾಜ್ಯಪ್ರೇಮಿಯು ತನು ಮನ ಧನಗಳಿಂದ ಈ ನಿಜಾಂ ರಾಜ್ಯದಲ್ಲಿ ನಡೆದಿರುವ ಸತ್ಯ ಅಹಿಂಸಾ ಪೂರ್ಣವಾದ ಚಳವಳಿಗೆ ಸಂಪೂರ್ಣ ಬೆಂಬಲವನ್ನೀಯಬೇಕೆಂದು ಪ್ರಾರ್ಥಿಸುತ್ತೇನೆ. ಮತ್ತು ಗಾಢ ನಿದ್ರೆಯಿಂದ ಎಚ್ಚತ್ತಿರುವ ಪ್ರಜೆಗಳಿಗೆ ಮುಂದಿನ ಎದುರು ತೊಡರುಗಳನ್ನು ಹೇಗೆ ಶಾಂತರೀತಿಯಿಂದ ಎದುರಿಸಬೇಕು? ಚಳವಳಿಯ ಉದ್ದಿಶ್ಯ ಹಾಗೂ ಕರ್ತವ್ಯವೇನೆಂಬುದನ್ನು ನಿಜಾಂ ದೇಶದ ಮೂಲೆ ಮೂಲೆಗಳಲ್ಲಿರುವ ಪ್ರಜೆಗಳಿಗೆ ರಚನಾತ್ಮಕ ಕಾರ್ಯದೊಡನೆ ತಿಳಿಸಿ ಎಲ್ಲ ಕಡೆಯಿಂದಲೂ ಜವಾಬ್ದಾರಿ ಸರಕಾರದ ಬೇಡಿಕೆಯು ಪ್ರಬಲವಾಗುವಂತೆ ಮಾಡುವದು ನಿಜಾಂ ದೇಶದ ಪ್ರತಿಯೊಬ್ಬ ಶ್ರೀಮಂತ ಹಾಗು ವಿದ್ಯಾವಂತನ ಕರ್ತವ್ಯವಾಗಿದೆ. ನಿಜಾಂ ವೀರಶೈವರು ನಿಜಾಂ ದೇಶದಲ್ಲಿದ್ದಿರುವ ಈ ಐತಿಹಾಸಿಕ ಬದಲಾವಣೆಯ ಕ್ರಾಂತಿಯಲ್ಲಿ ತಮ್ಮ ಪಾಲಿನ ಸೇವೆ ಯಾವುದೆಂಬುದನ್ನು ನಿರ್ಧರಿಸಿ ಬೇಗನೆ ದೇಶ ಸೇವೆಗೆ ಸಿದ್ಧರಾಗಬೇಕಾಗಿ ಬೇಡುತ್ತೇನೆ. ಸತ್ಯ ಅಹಿಂಸೆಗಳಿಂದೊಡಗೂಡಿದ ನ್ಯಾಯಬದ್ಧವಾದ ಪ್ರಜೆಗಳ ಕ್ರಾಂತಿಗೆ ವಿಜಯವನ್ನು ದೊರಕಿಸಿಕೊಡಲು ಅನಾಥನಾಥನಾದ ಪರಮಾತ್ಮನನ್ನು ಪ್ರಾರ್ಥಿಸಿ ಈ ಲೇಖನವನ್ನು ಮುಗಿಸುತ್ತೇನೆ.

ಸರ್ವೇಜನಾಃ ಸುಖಿನೋಭವಂತು.

ಅನ್ನದಾನಯ್ಯ ಹಿರೇಮಠ ಶಿವಮ್ಮಾಪುರ,
ಅಥಣಿ.

---

## ನಿಜಾಮ ರಾಜ್ಯದಲ್ಲಿ ಹಿಂದುಗಳ ವ್ಯಾಪಾರದ ಮೇಲೆ ಆಕ್ರಮಣ.

ನಿಜಾಮು ರಾಜ್ಯದ ಪ್ರಜೆಗಳಲ್ಲ ೧೦೦ಕ್ಕೆ ೮೫ ರಂತೆ ಹಿಂದುಗಳಿದ್ದರೂ ಅದು ಇಸ್ಲಾಂ ರಾಜ್ಯವೆಂದೇ ಸರಕಾರವು ತಿಳಿದಿದೆ. ಆದಕಾರಣ ಅಲ್ಲಿಯ ಹಿಂದುಗಳ ನ್ಯಾಯವಾದ ಅಧಿಕಾರಸ್ಥಾನ ಹಕ್ಕು ಬಾಧ್ಯತೆಗಳ ಮೇಲೆ ಸರಕಾರವೇ ಹೇಗೆ ಆಕ್ರಮಣ ನಡೆಯಿಸಿ ಮುಸಲ್ಮಾನರ ಸ್ವಾಧೀನಪಡಿಸಿದೆಯೆಂಬುದು ಸರ್ವಶ್ರುತವಷ್ಟೆ.

ಈಗ ಅಲ್ಲಿಯ ಮುಸಲ್ಮಾನರು ಹಿಂದುಗಳ ವ್ಯಾಪಾರ ಉದ್ಯೋಗಗಳ ಮೇಲೆಯೂ ಹೇಗೆ ಸಂಘಟಿತವಾದ ಆಕ್ರಮಣ ಮಾಡುತ್ತಿದ್ದಾರೆಂಬುದನ್ನು ನೋಡಿದರೆ ಹಿಂದುಗಳು ಈಗಲಾದರೂ ಎಚ್ಚತ್ತು ತಾವು ಬಾಳಬೇಕಾದ ಮಾರ್ಗವನ್ನು ಕಂಡುಹಿಡಿಯುವುದು ಅಗತ್ಯವೆಂದೇ ಗೊತ್ತಾಗದಿರಲಾರದು.

ಮುಂಬೈಯಲ್ಲಿ ಹೊರಡುವ 'ಪ್ರಭಾತ' ಎಂಬ ದೈನಿಕ ಪತ್ರಿಕೆಯ ಪ್ರತಿನಿಧಿಗಳು ನಿಜಾಮ ರಾಜ್ಯದಲ್ಲಿ ಸಂಚರಿಸಿ ತಾವು ಕಣ್ಣಾರೆ ಕಂಡ ಸಂಗತಿಗಳನ್ನು ಆ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಅವರು ಬರೆದಿರುವುದೇನೆಂದರೆ—

"ಹೈದರಾಬಾದದ ಪ್ರತಿಯೊಂದು ಓಣಿಯಲ್ಲಿಯೂ ಹಿಂದುಗಳ ಅಂಗಡಿಯ ಹೊಂದಿಗೆ ಮುಸಲ್ಮಾನರು ಅಂಗಡಿಗಳನ್ನು ಸ್ಥಾಪಿಸಿದ್ದಾರೆ. ಕಳೆದ ನಾಲ್ಕು ತಿಂಗಳುಗಳಲ್ಲಿಯೇ ಇವರು ಈ ತಮ್ಮ ಆಕ್ರಮಣ ಕಾರ್ಯವನ್ನು ಪರಿಣಾಮಕಾರಿಯಾಗಿ ಮಾಡಿದ್ದಾರೆ. ಆರು ಲಕ್ಷ ರೂ. ಗಳ ಬಂಡವಾಳವನ್ನು ಈ ಕಾರ್ಯಕ್ಕೆ ಈಗ ಉಪಯೋಗಿಸಿದ್ದಾರೆ.

ಮುಸಲ್ಮಾನರು ಆ ತಮ್ಮ ಮುಸಲ್ಮಾನ್ ಅಂಗಡಿಗಳಲ್ಲಿಯೇ ಸಾಮಾನುಗಳನ್ನು ಕೊಂಡುಕೊಳ್ಳಬೇಕೆಂದು ಸ್ವಯಂಸೇವಕರು ಮುಸಲ್ಮಾನರಿಗೆ ಬೀದಿಗಳಲ್ಲಿ ಹೇಳುತ್ತಾ ಹಿಂದು ಅಂಗಡಿಗಳ ಮುಂದೆ ಪಿಕೇಟಿಂಗ್ ನಡೆಸಿದ್ದಾರೆ.

ಬೇರೆ ಕಡೆಯಿಂದಲೂ ಮುಸಲ್ಮಾನ್ ವ್ಯಾಪಾರಿಗಳನ್ನು ಕರೆಯಿಸಿ ಹಿಂದುಗಳ ವ್ಯಾಪಾರ ನಿಲ್ಲುವ ಪ್ರಯತ್ನವನ್ನೂ ಮಾಡುತ್ತಿದ್ದಾರೆ. ಇದಕ್ಕೆ ಮುಸಲ್ಮಾನ್ ಅಧಿಕಾರಿಗಳೂ ಅಂತರ್ಯಾವಾಗಿ ತುಂಬಾ ಪ್ರೋತ್ಸಾಹಿಸುತ್ತಿರಬೇಕೆಂದೇ ತೋರುತ್ತದೆ."

### ಮುಸಲ್ಮಾನರ ಘಾತಕ ರೀತಿ.

ಈ ಪ್ರಕಾರ ವ್ಯಾಪಾರದಲ್ಲಿಯೂ ಮುಸಲ್ಮಾನರು ಒಂದು ಪಾಕಿಸ್ಥಾನವನ್ನು ನಿರ್ಮಾಣಮಾಡಲು ಪ್ರಯತ್ನಿಸುತ್ತಿರುವುದು ಅವರಿಗೆ ಕೊನೆಯಲ್ಲಿ ಅನರ್ಥಕರವಾಗಿಯೇ ಪರಿಣಮಿಸದಿರಲಾರದು.

ಹೈದರಾಬಾದ ಪಟ್ಟಣದಲ್ಲೇನೋ ಮುಸಲ್ಮಾನರ ಸಂಖ್ಯೆ ಹೆಚ್ಚಾಗಿರಬಹುದು. ಆದರಿಂದ ಅವರಿಗೆ ಇದು ಹಿತಕರವಾಗಿ ತೋರಬಹುದು. ಇಂಥ ಜಾತ್ಯಂಧತೆಯನ್ನು ವ್ಯಾಪಾರ ಉದ್ಯೋಗಗಳಲ್ಲಿಯೂ ಅವರು ಹುಟ್ಟಿಸಿದರೆ ಹಿಂದುಗಳೂ ಅದೇ ಮಾರ್ಗವನ್ನು ಅನುಸರಿಸಬೇಕಾಗುವುದು. ಈಗ ಅನೇಕ ಹಿಂದುಗಳು ಮುಸಲ್ಮಾನರ ಸಂಗಡ ವ್ಯಾಪಾರ ನಡೆಯಿಸಬಾರದಾಗಿ ಹೇಳುತ್ತಿರುವುದಕ್ಕೆ ಇಂಥ ಜಾತ್ಯಂಧ ಮುಸಲ್ಮಾನರು ಮಾಡುತ್ತಿರುವ ಕಾರ್ಯಗಳೇ ಕಾರಣವಾಗಿವೆ.

ಹಿಂದುಗಳು ಯಾವ ಮುಸಲ್ಮಾನರ ಅಂಗಡಿಯಲ್ಲಿಯೂ ವ್ಯಾಪಾರಮಾಡಕೂಡದೆಂತಲೂ ಯಾವ ಮುಸಲ್ಮಾನನನ್ನೂ ಕೆಲಸಕ್ಕೆ ಇಟ್ಟುಕೊಳ್ಳಕೂಡದೆಂತಲೂ ಎಲ್ಲ ಕಡೆಗೂ ಕಟ್ಟುಮಾಡಿಕೊಂಡರೆ ಅನೇಕ ಸ್ಥಳಗಳ ಮುಸಲ್ಮಾನರು ಹೊಟ್ಟೆಗಿಲ್ಲದೆ ಬಹಳ ಬಳಲುವ ಪ್ರಸಂಗ ಬಾರದೆ ಇರಲಾರದು.

---

## ನಿಜಾಮ ರಾಜ್ಯದಲ್ಲಿಯ ವೀರಶೈವರ ಆತ್ಮಾರ್ಪಣೆ.

ಕಳೆದ ಕೆಲವು ವರ್ಷಗಳಿಂದಲೂ ನಿಜಾಮು ರಾಜ್ಯದಲ್ಲಿ ಆರ್ಯಸಮಾಜದವರು ಹಿಂದುಗಳ ಸಾಮಾಜಿಕ, ಧಾರ್ಮಿಕ, ನೈತಿಕ ಉನ್ನತಿಗಾಗಿಯೂ ಅವರ ಶ್ರೇಯಸ್ಸಿಗಾಗಿಯೂ ಎಡಬಿಡದೆ ಪ್ರಯತ್ನಿಸುತ್ತಾ ಇದ್ದಾರೆ. ಸರ್ವ ಹಿಂದುಗಳ ಬೆಂಬಲವೂ ಇವರಿಗಿದ್ದುದರಿಂದ ಇವರು ಈ ವರೆಗಿನ ತಮ್ಮ ಕಾರ್ಯಗಳಲ್ಲಿ ತುಂಬಾ ಯಶಸ್ಸನ್ನು ಸಂಪಾದಿಸುತ್ತ ಬಂದಿದ್ದಾರೆ. ಈ ಪ್ರಕಾರ ಹಿಂದುಗಳು ಸುಧಾರಣೆ ಹೊಂದಿ ಬಲಶಾಲಿಗಳಾಗುತ್ತಿರುವುದು ನಿಜಾಮು ಸ್ಟೇಟಿನಲ್ಲಿರುವ ಕೆಲವು ಪುಂಡ ಮುಸಲ್ಮಾನರಿಗೆ ಸಂಬೇಳದೆ ಹಿಂದುಗಳ ಹಿತಕ್ಕಾಗಿ ಬಡಿದಾಡುವ ಕೆಲವು ಪ್ರಮುಖ ವ್ಯಕ್ತಿಗಳಮೇಲೆ ಅವರು ಅತ್ಯಾಚಾರ ಮಾಡುವದನ್ನು ಪ್ರಾರಂಭಿಸಿದರು. ಮೊದಲು ಗುಂಜೋಟಿಯಲ್ಲಿಯ ವೀರಶೈವವೀರ ರತ್ನಪ್ರಾಯವಾಗಿದ್ದ ಶ್ರೀ ದಾಸಮಯ್ಯನವರನ್ನು ಪುಂಡ ಮುಸಲ್ಮಾನರು ಅಮಾನುಷ ರೀತಿಯಿಂದ ಕೊಲೆ ಮಾಡಿದರು. ಮುಸಲ್ಮಾನರ ಈ ಅತ್ಯಾಚಾರದಿಂದ ಹಿಂದುಗಳು ಸುಮ್ಮನೆ ಕುಳಿತುಕೊಳ್ಳದೆ ತಮ್ಮ ಶಕ್ತಿಯನ್ನು ಬೆಳೆಯಿಸಿಕೊಳ್ಳುವುದು ಅವಶ್ಯಕವೆಂದು ಕಂಡು

ಕೊಂಡರು. ಈ ಪ್ರಕಾರದ ಜಾಗೃತಿಯು ನಿಜಾಮ ರಾಜ್ಯದ ಹಿಂದುಗಳಲ್ಲಿಯೇ ಆಗಹತ್ತಿತು. ಆನಂತರ ಮುಸಲ್ಮಾನರು ಪುನಃ ಕಲ್ಯಾಣದ ವೀರ ವೀರಶೈವ ಶ್ರೀ. ನಾಗಪ್ಪ ಇವರನ್ನು ಕೊಲೆಮಾಡಿ ತಮ್ಮ ದುಷ್ಟ ಪ್ರವೃತ್ತಿಯನ್ನು ಹೊರಗೆಡವಿದರು.

ಈ ಪ್ರಕಾರ ಹಿಂದು ಕಾರ್ಯಕರ್ತರ ಕೊಲೆಗಳಿಂದ ಹಿಂದುಗಳಲ್ಲಿಯ ಉತ್ಸಾಹವು ಕಡಿಮೆಯಾಗದೆ ಅದು ದಿನೆ ದಿನೆ ಹೆಚ್ಚಾಗಹತ್ತಿತು. ಹಿಂದುಗಳ ಮೇಲೆ ಮುಸಲ್ಮಾನರು ನಡೆಯಿಸಿದ ಭಯಂಕರ ಅತ್ಯಾಚಾರದ ಸ್ಮರಣೆಯು ಎಲ್ಲ ಹಿಂದುಗಳನ್ನೂ ಜಾಗೃತಗೊಳಿಸಿತು. ತಮ್ಮ ಕಾಲಮೇಲೆ ತಾವು ನಿಲ್ಲುವವರೆಗೂ ತಮ್ಮ ಜೀವನದ ಸಂರಕ್ಷಣೆಯಾಗುವುದು ಶಕ್ಯವಿಲ್ಲವೆಂದು ಮನಗಂಡು ಸಂಘಟನೆಯ ಕಾರ್ಯವನ್ನು ಬಲವಾಗಿ ಪ್ರಾರಂಭಿಸಿದರು. ಮುಸಲ್ಮಾನರೂ ಇದಕ್ಕೆ ತುಂಬಾ ವಿರೋಧಮಾಡುತ್ತಿದ್ದರು. ಇದರ ಪರಿಣಾಮವಾಗಿಯೇ ಪುಂಡ ಮುಸಲ್ಮಾನರಿಂದಲೇ ಶ್ರೀ. ಮಹಾದೇವಯ್ಯ ಎಂಬ ಮೂರನೆಯ ವೀರಶೈವ ತರುಣನು ಕೊಲೆಮಾಡಲ್ಪಟ್ಟನು. ಪುಂಡ ಮುಸಲ್ಮಾನರು ಈ ಪ್ರಕಾರ ಅಲ್ಲಲ್ಲಿ ಕೊಲೆಮಾಡಿ ಹಿಂದುಗಳನ್ನು ಹತ್ತಿಕ್ಕಲು ಎಷ್ಟೇ ಪ್ರಯತ್ನಿಸಿದರೂ ಹಿಂದುಗಳು ಮಾತ್ರ ಭಯಭ್ರಾಂತರಾಗಿ ಕುಳಿತುಕೊಳ್ಳದೆ ತಮ್ಮ ಕಾರ್ಯವನ್ನು ಹೆಚ್ಚಾಗಿ ಮುಂದುವರಿಸಿದರು.

ದಸರೆಯ ದಿವಸ ಮುಸಲ್ಮಾನರು ಉದ್ಗಿರಿಯಲ್ಲಿ ಪುನಃ ನಾಲ್ಕನೆಯ ಅತ್ಯಾಚಾರವನ್ನು ಮಾಡಿದರು. ಶ್ರೀ. ಮಾಣಿಕರಾವ ಗೌಳಿ (ವೀರಶೈವ) ಎಂಬುವವರು ಆ ದಿವಸ ರಾತ್ರಿ ೯ ಗಂಟೆಯ ಸುಮಾರಕ್ಕೆ ತಮ್ಮ ಮನೆಯ ಕಡೆಗೆ ಬರುತ್ತಿರುವಾಗ ಹಾದಿಯಲ್ಲಿ ೧೨ ಜನ ಮುಸಲ್ಮಾನರು ಅವರನ್ನು ಮುತ್ತಿ ಹಿಂದಿನಿಂದ ಒಬ್ಬನು ಗುಂಡುಹಾರಿಸಿ ಗಾಯಗೊಳಿಸಿದನು. ಅಷ್ಟಕ್ಕೇನೇ ಬಿಡದೆ ನಿರ್ದಯವಾಗಿ ಅವರಿಗೆ ಕಂಡಕಂಡಲ್ಲಿಯೇ ಚೂರಿಯಿಂದ ಗಾಯಗೊಳಿಸಿ ಗಟಾರಿನ ಕೆಸರಿನಲ್ಲಿ ಅವರನ್ನು ಒಗೆದು ಹೋದರು. ವೈದ್ಯರು ಇವರನ್ನು ಎಷ್ಟೇ ಉಪಚರಿಸಿದರೂ ಇವರು ೧೫—೨೦ ದಿವಸಗಳನಂತರ ಈ ಬೇನೆಯ ಬಾಧೆಯಿಂದಲೇ ಮರಣಹೊಂದಿದರು. ನಿಜಾಮ ರಾಜ್ಯದ ಹಿಂದುಗಳ ರಕ್ಷಣೆಗಾಗಿ ಅವರ ಮಾನ ಮರ್ಯಾದೆ ಕಾಯುವುದಕ್ಕಾಗಿ ವೀರಶೈವ ನಾಲ್ಕು ಜನ ತರುಣರು ಆತ್ಮಾಹುತಿ ಕೊಟ್ಟು ಸ್ವರ್ಗಸುಖವನ್ನು ಅನುಭವಿಸುತ್ತಿದ್ದಾರೆ. ನಿಜಾಮ ರಾಜ್ಯದಲ್ಲಿಯ ಹಿಂದುಗಳ ಅಸ್ತಿತ್ವ ಕಾಯ್ದುಕೊಳ್ಳಲು ಇನ್ನೆಷ್ಟು ಜನ ವೀರ ತರುಣರು ತಮ್ಮ ಆತ್ಮಾರ್ಪಣೆ ಮಾಡಬೇಕಾಗುತ್ತದೆಂಬುದನ್ನು ಈಗಲೇ ಹೇಳುವುದು ಶಕ್ಯವೆ?

—ಓರ್ವ ನಿಜಾಮು ವೀರಶೈವ ತರುಣ.

---

## ಕನ್ನಡತಿಗೆ ಕುಂದೆ?

### ಸಾಹಸಿಯರ ಶೌರ್ಯವೆಲ್ಲಿದೆ?

(ಲೇ— ನಿರೀಕ್ಷಕ ಪ್ರಸಾದ ಪುಣೆ.)

ಹಿಂದೆ ತನ್ನೆದೆಯ ಹೊಟ್ಟೆಯಿಂದ ವೀರ ಕನ್ನಡಿಗರು ಉದಯಿಸಿದ್ದರು. ಕನ್ನಡ ಮಾತೆಯ ಗುಣಗಾನಗಳನ್ನು ದಶದಿಕ್ಕುಗಳಲ್ಲೆಲ್ಲಾ ಹರಡಿಸಿದರು. ವೀರ ಪುಲಿಕೇಶಿ ಕನ್ನಡ ನಾಡನ್ನು ಹಬ್ಬಿಸಿದ. ಆದರೆ ಇಂದು? "ವೀರ ಕನ್ನಡಿಗರು ನಾವು, ನಾವೆಲ್ಲಾ ಒಂದು, ನಮಗೆ ಕನ್ನಡ ಪ್ರಾಂತ ಬೇಕು, ಸ್ವಾತಂತ್ರ್ಯ ಬೇಕು." ಎಂದು ಗರ್ಜಿಸಬೇಕೆನ್ನುವ ನಾವು ನಮ್ಮ ನಾಡುಗಳನ್ನೇ ಸ್ವಲ್ಪ ನೋಡಿಕೊಳ್ಳಿ. ಹಾಗೆ ನಾವು ನಮ್ಮ ಅಂತರಂಗವನ್ನು ಪರೀಕ್ಷಿಸಿಕೊಂಡರೆ ನಾವೆಲ್ಲಿದ್ದೇವೆನ್ನುವದು ಗೊತ್ತಾಗುವುದು.

ಇಂದು ಇಡೀ ನಿಜಾಮ ರಾಜ್ಯದಲ್ಲಿ ಕ್ಷೋಭೆ. ಕನ್ನಡ, ತೆಲಗು ಮರಾಟೆಯರ ಮೇಲೆ ಅನ್ಯಾಯ ಅತ್ಯಾಚಾರಾತಿರೇಕಗಳಾಗುತ್ತಲಿವೆ. ಲೆಕ್ಕಾಚಾರ "Statistics" ತಕ್ಕೊಂಡು ಹೇಳಬೇಕೆಂದರೆ ಇಲ್ಲಿಯ ವರೆಗೂ ಆದ ಅನ್ಯಾಯಗಳು ಕನ್ನಡಿಗರ ಮೇಲೆಯೇ ಹೆಚ್ಚು. ಇದರ ಪ್ರತಿಕಾರಕ್ಕಾಗಿ ಎಷ್ಟು ಜನ ಕನ್ನಡ ವೀರರು ಮುಂದೆ ಬಂದಿದ್ದಾರೆ? ಹಾಗೇ ಮರಾಟಿಗರನ್ನೂ ನೋಡಿರಿ. ಸೇನಾಪತಿ ಬಾಪಟರು ಅದಕ್ಕಾಗಿ ಕಟುಬದ್ಧರಾಗಿದ್ದಾರೆ. ಲಕ್ಷಾಂತರ ರೂಪಾಯಿಗಳು ಕೂಡಿಬಿದ್ದಿವೆ. ಸಾವಿರಾರು ಕೆಚ್ಚೆದೆಯ ಶೂರ ಮರಾಟೆ ಯುವಕರು ಹೋರಾಡಲು ಮುಂದೆ ಬಂದಿದ್ದಾರೆ. ಆದರೆ ಈ ಅಪಮಾನ ಹೊಂದಿದ ಅತ್ಯಾಚಾರದಿಂದ ಪೀಡಿತರಾದ ಕನ್ನಡಿಗರೆಲ್ಲಿದ್ದಾರೆ ?

ಅದರಲ್ಲಿ ಅನ್ಯಾಯಗಳು ಹೆಚ್ಚಾಗಿ ವೀರಶೈವರ ಮೇಲೆ ನಡೆದವು. ಕಲಬುರ್ಗಿ ಶರಣಬಸಪ್ಪನ ಪ್ರಾಚೀನ ದೇವಾಲಯದಲ್ಲಿ ವರ್ಣಿಸಲಸಾಧ್ಯವಾದ ಅನ್ಯಾಯ ಜರುಗಿತು. ಆದರೆ ಎಷ್ಟು ಜನ ವೀರಶೈವರು ಮುಂದೆ ಬಂದಿದ್ದಾರೆ? ಮೇಲೆ ನೋಡಿದರೆ ವೀರಶೈವರಿಗೆ ಕರ್ನಾಟಕದಲ್ಲಿ ವೈಶಿಷ್ಟ್ಯ. ಅವರ ಜನಸಂಖ್ಯೆ ಹೆಚ್ಚು. ವರ್ತಕರು ಅವರೇ, ಧನಿಕರು ಅವರೇ, ಬೇಸಾಯಿಗಾರರು ಅವರೇ, ಹೀಗೆ ಧನಬಲ, ಧಾನ್ಯಬಲ, ಸಂಖ್ಯಾಬಲ ಮೂರೂ ಇರುವಾಗ ಇವರ ಗೋಳನ್ನು ದೂರ ಮಾಡಲಿಕ್ಕೆಂದು ಮರಾಟಿಗರು ಮುಂದೆ ಮುಂದೆ ಧುಮುಕುತ್ತಿರುವಾಗ ಇವರೇಕೆ ಮೋರೆ ಮುಚ್ಚಿಕೊಂಡು ಮೂಲೆ ಮೂಲೆ ಸೇರಬೇಕು? ಇವರು ಕನ್ನಡ ತಾಯಿಯ ಶೂರ ಮಕ್ಕಳಲ್ಲವೆ? ವೀರಕೇಸರಿಯಂತಿದ್ದ ಬಸವ ಮಹಾತ್ಮನ ಅನುಯಾಯಿಗಳಲ್ಲವೆ?

ಕನ್ನಡತಿಗೆ ಕುಂದು.

ಕುಂದು ತರುವ ಇನ್ನೊಂದು ಮಾತು ಹೇಳಬೇಕೆಂದಿರುವೆ. ಈಗ ಮರಾಟರು ಸತ್ಯಾಗ್ರಹ ಯುದ್ಧ ಹೂಡಿ ನಿಜಾಮರನ್ನು ಹಣ್ಣುಗೊಳಿಸುತ್ತಿರುವಾಗ ನಿಜಾಮ ಸೇವೆಯಲ್ಲಿ ಸರಕಾರೀ ನೌಕರಿಯಲ್ಲಿ ಪರಂಪರಾಗತರಾಗಿ ಸದಾ ದುಡಿಯುತ್ತಿದ್ದ ಗಾಢ, ಅಭಿಮಾನಿಗಳಾದ ವೀರ ಮರಾಟರು ತಮ್ಮ ನೌಕರಿಗೆ ರಾಜೀನಾಮೆ ಕೊಟ್ಟರು. ಸತ್ಯಾಗ್ರಹಕ್ಕೆ ಸೇರಿದರು. ಸೇರುತ್ತಲಿದ್ದಾರೆ.

ಆದರೆ ಕನ್ನಡಿಗರು? ರಾಜೀನಾಮೆ ಕೊಟ್ಟ ಜಾಗೆಗಳಿಗೆ ಅರ್ಜಿ ಹಿಡಕೊಂಡು ಅಭಿಮಾನಧನರಾದ ವೀರ ಮಾರಾಟರ ನೌಕರಿಗಾಗಿ ಈ ಕನ್ನಡಿಗರು ತಿರುಗುತ್ತಲಿದ್ದಾರೆ. ಬರೇ ಸಿ. ಆಯ್. ಡಿ. ಡಿಪಾರ್ಟಮೆಂಟನಲ್ಲಿ ಈ ಮೂರು ತಿಂಗಳ ಅವಧಿಯೊಳಗೆ ನೂರಾರು ಕನ್ನಡ ಯುವಕರು ಸೇರಿಕೊಂಡಿದ್ದಾರೆಂದು ತಿಳಿದು ಬಂದಿದೆ. ಇದು ಕನ್ನಡತಿಗೆ ಕುಂದೋ? ಚಂದೋ?

ಕಾರ್ಯಮಾಡದೆ ಫಲ ಸಿಗಲಾರದು. ನಮ್ಮಲ್ಲಿ ತ್ಯಾಗವಿಲ್ಲ. ಶೌರ್ಯವಿಲ್ಲ, ವಿದ್ಯೆವಿಲ್ಲ, ರಾಷ್ಟ್ರಾಭಿಮಾನವಿಲ್ಲ, ಜಾತ್ಯಾಭಿಮಾನವಿಲ್ಲ. ನಮಗೆ ಸ್ವಾತಂತ್ರ್ಯ ಸಿಗಬೇಕೆಂದರೆ ಅದೇನು ಹುಚ್ಚೋ ? ಮರಾಟರು ಏಕೆ ಮುಂದೆ ಬಂದಿರುವರೆಂಬುದನ್ನು ಅವರ ತ್ಯಾಗ ಶೌರ್ಯ, ಸಾಹಸ, ಅಭಿಮಾನ ಕೃತ್ಯಗಳಿಂದ ತಿಳಿದುಕೊಳ್ಳಬಹುದು. ಈಗಾಗಲೇ ಹಿಂದುಳಿದ ಕನ್ನಡಿಗರು ಬರುವ ಸುವರ್ಣ ಸಮಯವನ್ನು ಕಳೆದುಕೊಂಡರೆ ದೇವರೇ ಗತಿ! ಶೌರ್ಯ ಸಾಹಸಗಳಿಲ್ಲದೆ ಕನ್ನಡಿಗರನ್ನು ಮಾತಾಡಿಸುವವರಾರು? ಆ ಮೇಲೆ ನಡೆಯುವ ಕಾಲಿಗೆ ನಮಸ್ಕಾರ ಹಾಕುತ್ತಾ ಹೊರಳುವದು ಕನ್ನಡ ತಾಯಿಯ ಹಣೆಬರೆಹವೋ ಏನೋ ?

—ಬೆಂದೆದೆಯಿಂದ ಬರೆದುದು.

# ಅ. ಭಾ. ವೀರಶೈವ ಮಹಾಸಭೆಯ ಮಧ್ಯವರ್ತಿ ಮಂಡಳ.

## ಸಭಾಸದರಲ್ಲಿ ವಿಜ್ಞಾಪನೆ.

ಇದೇ ಡಿಸೆಂಬರ ತಿಂಗಳಿನಲ್ಲಿ ಹುಬ್ಬಳ್ಳಿಯಲ್ಲಿ ಅಖಿಲ ಭಾರತ ವೀರಶೈವ ಮಹಾಸಭೆಯ ೧೩ ನೆಯ ಅಧಿವೇಶನವು ಕೂಡತಕ್ಕದ್ದಿರುವದಷ್ಟೆ. ಇದಕ್ಕೋಸ್ಕರ ಯೋಗ್ಯರಾದ ಕೆಲವು ಮಹಾನುಭಾವರ ಹೆಸರಗಳನ್ನು ಸೂಚಿಸಲು ಸತ್ಕಾರಕ ಸಂಘಾಧ್ಯಕ್ಷರು ಮಹಾಸಭೆಯ ನಿಯಮಗಳ ಪ್ರಕಾರ ಮಧ್ಯವರ್ತೀ ಮಂಡಳದ ಸಭಾಸದರಿಗೆ ಈಗ ಕೇಳಿಕೊಂಡಿದ್ದಾರೆ. ಆದ್ದರಿಂದ ಹಿಂದಿನ ರಾಯಚೂರು ಮಹಾಸಭೆಯ ಕಾಲದಲ್ಲಿ ಕೈಕೊಂಡ ಪದ್ಧತಿಯ ಪ್ರಕಾರ ತಾವು ೮ ಜನ ಮಹಾಶಯರ ಹೆಸರುಗಳನ್ನು ೩೦ ನೆಯ ನವ್ಹೆಂಬರ ೧೯೩೮ ನೆಯ ತಾರೀಖಿನೊಳಗಾಗಿ ಸೂಚಿಸಿ ನನ್ನ ಕಡೆಗೆ ಕಳಿಸಲು ನನ್ನ ವಿನಂತಿ ಇದೆ.

ತಾವು ಸೂಚಿಸುವ ಹೆಸರುಗಳಲ್ಲಿ ಯಾವ ೮ ಜನರಿಗೆ ಎಲ್ಲಕ್ಕೂ ಹೆಚ್ಚಿಗೆ ಮತಗಳು ಬೀಳುತ್ತವೆಯೋ ಅವರ ಹೆಸರುಗಳು ಸತ್ಕಾರಕ ಸಂಘದ ಅಧ್ಯಕ್ಷರಿಗೆ ತಿಳಿಸಲ್ಪಡುವವು.

ಮಧ್ಯವರ್ತೀ ಮಂಡಳದಲ್ಲಿ ಈಗ ೪೪ ಜನ ಸಭಾಸದರಿದ್ದು ಕೋರಮ್ಮಕ್ಕೆ ¼ ಜನರ ಮತಗಳು ಬೇಕಾಗುತ್ತವೆ. ಆದ್ದರಿಂದ ೧೨ ಜನರ ಅಭಿಪ್ರಾಯಗಳು ಮೇಲಿನ ಅವಧಿಯೊಳಗೆ ಬಂದ ಕೂಡಲೆ ಮತಗಳ ಎಣಿಕೆಯು ಮಾಡಲ್ಪಡುವದು. ಮತ್ತು ಆ ಹೆಸರುಗಳು ಸತ್ಕಾರಕ ಸಂಘದ ಅಧ್ಯಕ್ಷರಿಗೆ ತಿಳಿಸಲ್ಪಡುವವು. ಈ ಅವಧಿಯಲ್ಲಿ ಮತ ಕಳಿಸದೆ ಇದ್ದವರು ತಟಸ್ಥರಾಗಿರುವರೆಂದು ಭಾವಿಸಲ್ಪಡುವದು.

ಸಭಾಸದರು ಈ ಕಾರ್ಯದ ಮಹತ್ವವನ್ನು ಲಕ್ಷಿಸಿ ತಮ್ಮ ಮತಗಳನ್ನು ಸಕಾಲದಲ್ಲಿ ಕಳಿಸಿಕೊಡಲೇಬೇಕೆಂದು ನನ್ನ ವಿನಂತಿ ಇದೆ. ಯಾಕೆಂದರೆ ೧೨ ಮತಗಳು ಬಾರದೇ ಇದ್ದಲ್ಲಿ ಮಹಾಸಭೆಯ ಅಧ್ಯಕ್ಷರನ್ನು ನಿಯಮಿಸುವ ಕಾರ್ಯವೇ ನಿಂತುಹೋಗುವುದು.

ಸತ್ಕಾರಕ ಸಂಘದವರು ಯೋಗ್ಯರಾದ ಹೆಸರುಗಳನ್ನು ಸೂಚಿಸಲಿಕ್ಕೆ ವೃತ್ತಪತ್ರಿಕೆಗಳ ದ್ವಾರಾ ಸಾರ್ವಜನಿಕವಾಗಿ ಈ ಮೊದಲಿಗೆ ವಿನಂತಿ ಮಾಡಿಕೊಂಡಿದ್ದರು. ಪತ್ರಿಕೆಗಳಲ್ಲಿ ಬಂದ ಹೆಸರುಗಳೂ ಸತ್ಕಾರಕ ಸಂಘಾಧ್ಯಕ್ಷರು ಮತ್ತು ಇನ್ನಿತರು ಸೂಚಿಸಿದ ಹೆಸರುಗಳೂ ಕೆಳಗೆ ಕೊಡಲ್ಪಟ್ಟಿವೆ. ಅವರನ್ನೂ ತಮಗೆ ಯೋಗ್ಯ ಕಂಡು ಬಂದ ಇತರರನ್ನೂ (ಅವರ ಹೆಸರುಗಳು ಕೆಳಗಿನ ಪಟ್ಟಿಯಲ್ಲಿ ಇರದಿದ್ದರೂ ಚಿಂತೆ ಇಲ್ಲ.) ಸೇರಿಸಿಕೊಂಡು ಅವರಲ್ಲಿ ತಮಗೆ ಯೋಗ್ಯರೆಂದು ಕಂಡು ಬಂದ ಎಂಟು ಜನರ ಹೆಸರುಗಳನ್ನು ಸೂಚಿಸಿ ನನ್ನ ಕಡೆಗೆ ಕಳಿಸಬೇಕೆಂದು ನನ್ನ ವಿನಂತಿ ಇದೆ.

ಹೀಗೆ ಸೂಚಿಸಲ್ಪಟ್ಟ ಹೆಸರುಗಳಲ್ಲಿ ನಾವು ಐದು ವಿಭಾಗಗಳನ್ನು ಮಾಡಬಹುದಾಗಿದೆ. ೧. ಇವರಲ್ಲಿ ಹಲವರು ವಿದ್ಯೆ ಅಥವಾ ವ್ಯಾಪಾರೋದ್ಯೋಗಗಳಲ್ಲಿ ಮುಂದುವರಿದಿರುವವರು. ಕೆಲವರು ಮಹತ್ವದ ದೇಣಿಗೆಗಳನ್ನು ಕೊಟ್ಟಿರುವವರು. ಮತ್ತು ಕೆಲವರು ಬಹಳ ದಿವಸದಿಂದಲೂ ಅನೇಕ ಸಮಾಜ ಕಾರ್ಯಗಳನ್ನು ಮಾಡುತ್ತಲೂ ಬಂದಿರುವರು. ೨. ಅನೇಕ ತರದ ಸಮಾಜ ಕಾರ್ಯಗಳಿಗೋಸ್ಕರ ವಿಶೇಷ ಚಟುವಟಿಕೆಗಳನ್ನು ತೋರಿಸುತ್ತಾ ಸಮಾಜದಲ್ಲಿ ಜಾಗೃತಿಯನ್ನುಂಟುಮಾಡಲು ಯತ್ನಿಸುತ್ತಲಿದ್ದವರು. ೩. ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳು, ಕೌನ್ಸಿಲು, ಅಸೆಂಬ್ಲಿಗಳಲ್ಲಿದ್ದುಕೊಂಡು ಅನೇಕ ಬಗೆಯ ಸಾರ್ವಜನಿಕ ಕಾರ್ಯಗಳಲ್ಲಿ ವಿಶೇಷ ಲಕ್ಷ್ಯಹಾಕಿದವರು. ೪. ಕಾಂಗ್ರೆಸ್ಸಿನ ರಾಜಕೀಯ ಚಟುವಟಿಕೆಗಳಲ್ಲಿ ಇದ್ದುಕೊಂಡು ವಿಶೇಷವಾಗಿ ಪ್ರಯತ್ನಿಸಿ ಈಗಲೂ ಅನೇಕ ಬಗೆಯಿಂದ ದೇಶ ಸೇವೆಯನ್ನು ಮಾಡುತ್ತಲಿರುವವರು. ೫. ಸರಕಾರಿ ಅಧಿಕಾರಗಳಾಗಿ ಶಕ್ಯವಿದ್ದಷ್ಟರ ಮಟ್ಟಿಗೆ ಸಮಾಜ ಸೇವೆ ಮಾಡುತ್ತಿರುವವರು. ಈ ಪ್ರಕಾರ ನಾನು ಸ್ಥೂಲವಾಗಿ ಇವರನ್ನು ವಿಂಗಡಿಸಿದ್ದೇನೆ. ಈ ವರ್ಗಗಳಲ್ಲಿ ಯಾವ ವರ್ಗದವರಿಂದ ಹೆಚ್ಚಿಗೆ ಸಮಾಜಕ್ಕೆ ಸಹಾಯವಾಗಬಹುದೆಂದು ತಾವು ಎಣಿಸುತ್ತೀರೋ ಅವರಿಗೆ ತಾವು ಮತ ಕೊಡಬೇಕು. ಇವರಲ್ಲಿ ಯಾರು ನಿಮ್ಮ ಅಭಿಪ್ರಾಯದ ಪ್ರಕಾರ ೧ ಕ್ಕಿಂತ ಹೆಚ್ಚು ವರ್ಗಗಳಲ್ಲಿ ಬರುತ್ತಾರೋ ಅವರು ಮಹಾಸಭೆಯ ಅಧ್ಯಕ್ಷ ಸ್ಥಾನಕ್ಕೂ ಮುಂದಿನ ಕಾರ್ಯನಿರ್ವಾಹಣಕ್ಕೂ ಹೆಚ್ಚಿಗೆ ಯೋಗ್ಯರೆಂದು ನಾನು ಹೇಳುವ ಅವಶ್ಯವಿಲ್ಲ.

ವೀರಶೈವ ಸಮಾಜದವರು ಮುಂದೆ ಮಾಡತಕ್ಕ ಕಾರ್ಯಗಳು ಮುಖ್ಯವಾಗಿ ಕೆಳಗೆ ಕಾಣಿಸಿದಂತೆ ಇವೆ. ಈ ವರೆಗೆ ಅನೇಕರು ಸೂಚಿಸಿದ ಕಾರ್ಯಗಳನ್ನು ಇವುಗಳಲ್ಲಿ ಸಮಾವೇಶ ಮಾಡಬಹುದಾಗಿದೆ. ಈ ಕಾರ್ಯಗಳು ಯಾವವೆಂದರೆ— ೧. ವೀರಶೈವ ಸಂಸ್ಕೃತಿಯ ಶೋಧ ಮತ್ತು ಅದರ ಪ್ರಸಾರ. ಇದರಿಂದ ನಮ್ಮ ಸಮಾಜದಲ್ಲಿ ಈಗ ಉಂಟಾದ ಅನೇಕ ಬಗೆಯ ಧಾರ್ಮಿಕ ಮತ್ತು ಸಾಮಾಜಿಕ ಕಲಹಗಳು ದೂರಾಗಬಹುದು, ೨. ಈಗ ವೀರಶೈವ ಸಮಾಜವು ಅರ್ಥಾತ್ ಕರ್ನಾಟಕವು ಔದ್ಯೋಗಿಕ ಮತ್ತು ಆರ್ಥಿಕ ಸ್ಥಿತಿಯಲ್ಲಿ ಅತ್ಯಂತ ನಿಕೃಷ್ಟಸ್ಥಿತಿಯನ್ನು ಹೊಂದಿದೆ. ಇದನ್ನು ನಿವಾರಣೆಮಾಡಲು ಉಪಾಯಗಳನ್ನು ಯೋಜಿಸುವದು. ೩. ವೀರಶೈವರಲ್ಲಿ ಅನೇಕ ತರದ ಮಹತ್ವದ ಸಂಸ್ಥೆಗಳಿದ್ದು ಅವುಗಳ ಸ್ಥಿತಿಯನ್ನು ಸುಧಾರಿಸಿ ಬಲಪಡಿಸುವುದು. ೪. ಸಮಾಜದಲ್ಲಿ ಸಂಘಟನೆ- ಈಚೆಗೆ ರಾಜಕೀಯ ಮತ್ತು ಸಾಮಾಜಿಕ ವ್ಯಕ್ತಿಗತ ಕಲಹಗಳು ಬಹಳ ಹೆಚ್ಚಿದ ಮೂಲಕ ಸಂಘಟನೆಯು ಅಶಕ್ಯವಾಗಿದೆ. ಆದರೂ ಈ ಸ್ಥಿತಿಯನ್ನು ದೂರಮಾಡಲು ಯತ್ನಿಸುವದು ವೀರಶೈವರಲ್ಲಿಯ ಈ ಸಂಘಟನೆಯು ರಾಷ್ಟ್ರದ ಉನ್ನತಿಗೆ ಪರಿಪೋಷಕವಾಗಿ ಪರಿಣಮಿಸಬೇಕು.

ಈ ಎಲ್ಲ ಕಾರ್ಯಗಳನ್ನು ಮುಂದೆ ನಿಯಮಿಸತಕ್ಕ ಮಧ್ಯವರ್ತಿಮಂಡಳ ಮತ್ತು ಕಾರ್ಯಕಾರೀ ಕಮಿಟಿ ಇವುಗಳ ಸಭಾಸದರು ಮುಖ್ಯವಾಗಿ ಜರುಗಿಸಬೇಕಾಗುತ್ತದೆ. ಆದ್ದರಿಂದ ಯಾರು ಇಂತಹ ಸಭಾಸದರ ಆಯಾ ಸಂಸ್ಥೆಗಳ ಮತ್ತು ಜನತೆಯ ವಿಶ್ವಾಸಕ್ಕೆ ಹೆಚ್ಚಿಗೆ ಪಾತ್ರರಾಗಬಹುದೋ ಅಂಥವರ ಹೆಸರುಗಳನ್ನು ತಾವು ಸೂಚಿಸಬೇಕೆಂಬ ನನ್ನ ಸವಿನಯ ವಿನಂತಿ ಇರುತ್ತದೆ.

### ಅಧ್ಯಕ್ಷಸ್ಥಾನಕ್ಕೋಸ್ಕರ ಸೂಚಿಸಲ್ಪಟ್ಟ ಹೆಸರುಗಳು.

I ೧. ಶ್ರೀ. ನಾಗಪ್ಪ ಕಾಡಾದಿ ಸೊಲ್ಲಾಪುರ, ೨. ಶ್ರೀ ವೀರಭದ್ರಪ್ಪ ಹಾಲಭಾವಿ ಧಾರವಾಡ, ೩. ಶ್ರೀ. ಬಸಪ್ಪ ಕಂಠಣವಾಡಿ, ೪. ಬ್ಯಾ. ಎಂ. ಎಸ್. ಸರವಾರ ಸೊಲ್ಲಾಪುರ, ೫. ರಾ. ಬ. ಶಿ. ಜೆ. ದೇಶಮುಖ ಆಲಮೇಲ, II ೬. ಡಾ. ಎಸ್. ಸಿ. ನಂದೀಮಠ ಬೆಳಗಾವ, ೭. ಶ್ರೀ. ಮಹಾದೇವಸ್ವಾಮಿಗಳು ಸರ್ಪಭೂಷಣಮಠ ಬೆಂಗಳೂರು, ೮. ಶ್ರೀ. ಮಂಜಪ್ಪ ಹರ್ಡೀಕರ ಆಲಮಟ್ಟಿ, ೯. ವೇ|| ಮುರಿಗಯ್ಯ ಜಂಗಿನ ಬಾಗಲಕೋಟೆ, ೧೦. ರಾ. ರಾ. ಸಂಗ್ರಾಮಪ್ಪ ವಕೀಲ ಉದಗೀರ, ೧೧. ಶ್ರೀ. ಬಾಮಣಗಾವಕರ ಉಮರಾವತಿ, ೧೨ ಡಾ. ಹುಮ್ಮನಕಟ್ಟಿ ಗದಗ, ೧೩. ಶ್ರೀ. ಕುಮಾರ ಸ್ವಾಮಿಗಳು ಧಾರವಾಡ, III ೧೪. ಮಿ. ಎಸ್. ಎಸ್. ಅಂಗಡಿ ಬಿ. ಎ. ಎಲ್‌ಎಲ್. ಬಿ,

# ಹೈದರಾಬಾದಿನ ಸತ್ಯಾಗ್ರಹ ಸಮರ.

## ಕಾಂಗ್ರೆಸ್ ದಿನಾಚರಣೆ! ಜನಗಳಲ್ಲಿ ಪ್ರಚಂಡ ಜಾಗೃತಿ!!

ತಾ. ೨೧-೧೧-೩೮ ನೆಯ ದಿವಸ ಮುಶೀರಾಬಾದದ ಹತ್ತಿರ ೯ ನೆಯ ಸರ್ವಾಧಿಕಾರಿಗಳಾದ ಶ್ರೀ ಗೋಪಾಳರಾಯರೂ ಅವರ ನಾಲ್ಕು ಜನ ಕಾರ್ಯದರ್ಶಿಗಳೂ ಸತ್ಯಾಗ್ರಹ ಮಾಡಿದುದರಿಂದ ಅವರನ್ನು ಪೋಲಿಸರು ಸೆರೆಹಿಡಿದರು. ಶ್ರೀ. ಗೋಪಾಳರಾಯರು ಒಂದು ದೀರ್ಘವಾದ ಪ್ರಕಟನೆ ಹೊರಡಿಸಿ 'ನೈಜಾಮರ ದಬ್ಬಾಳಿಕೆ ಧೋರಣವನ್ನು ಇನ್ನು ಮುಂದೆ ಕ್ಷಣ ಸಹ ಸಹಿಸಲಾರೆವೆಂದೂ ನಿಜಾಮರ ಎಲ್ಲ ಭಾಗದ ಜನರಲ್ಲಿಯೂ ಅಪೂರ್ವವಾದ ಜಾಗೃತಿಯುಂಟಾಗಿದೆಯೆಂದೂ ನಮ್ಮ ಹೋರಾಟವು ನಿಜಾಮ ಪ್ರಭುಗಳ ವಿರುದ್ಧವಾಗಿರದೆ ಸಂಸ್ಥಾನದಲ್ಲಿ ಜವಾಬದಾರಿ ರಾಜ್ಯಪದ್ಧತಿಯನ್ನು ಸ್ಥಾಪಿಸುವುದಾಗಿದೆಯೆಂದೂ ಸಾರಿದರು.'

ಹೈದರಾಬಾದಿನ ರೆಸಿಡೆಂಟರು ಒಂದು ಪ್ರಕಟನೆ ಹೊರಡಿಸಿ ದಿಲ್ಲಿಯ ರಿಯಾಸತ, ಮುಂಬೈ ಪ್ರಾಂತದಲ್ಲಿಯ ಫತೇಹ, ದಿವಾಕರ, ಮರಾಠಾ ಹೈದರಾಬಾದ, ಸ್ವರಾಜ್ಯ, ಮೊಗಲಾಯಿ ಸುಧಾಕಾರ, ಸತ್ಯಾಗ್ರಹ ಮೊದಲಾದ ಪತ್ರಿಕೆಗಳು ಒಂದು ವರ್ಷದ ವರೆಗೂ ಬ್ರಿಟಿಶ್ ಹದ್ದಿನಲ್ಲಿ ಕೂಡಾ ಬರಬಾರದೆಂದು ಅಪ್ಪಣೆ ವಿಧಿಸಿದ್ದಾರೆ.

**ಕಾಂಗ್ರೆಸ್ ದಿನಾಚರಣೆ.**

ಹೈದ್ರಾಬಾದ ಸಂಸ್ಥಾನ ಕಾಂಗ್ರೆಸ್ಸಿನವರು ಸತ್ಯಾಗ್ರಹವನ್ನು ಪ್ರಾರಂಭಿಸಿ ಒಂದು ತಿಂಗಳಾದುದರಿಂದ ತಾ. ೨೪-೧೧-೩೮ ನೆಯ ದಿನವನ್ನು ಕಾಂಗ್ರೆಸ್ ದಿನವನ್ನಾಗಿ ಸಂಸ್ಥಾನದ ಎಲ್ಲ ಭಾಗಗಳಲ್ಲಿಯೂ ಎಲ್ಲ ಜನರೂ ಆಚರಿಸಬೇಕೆಂದು ಸಂಸ್ಥಾನ ಕಾಂಗ್ರೆಸ್ಸಿನವರು ಒಂದು ವಿಸ್ತೃತವಾದ ಪ್ರಕಟನೆ ಹೊರಡಿಸಿದ್ದರು. ಎಲ್ಲ ಕಡೆಗೂ ನಗರ ಸಂಕೀರ್ತನ, ಕಾಂಗ್ರೆಸ್ ಧ್ವಜಾರೋಹಣ, ಧ್ವಜಗಳ ಮಾರಾಟ, ಕಾಂಗ್ರೆಸ್ಸಿನ ಪರಿಚಯ ಮಾಡಿಕೊಡುವುದು, ಸಾಯಂಕಾಲ ಸಭೆ ಸೇರಿಸುವುದೇ ಮೊದಲಾದ ಕಾರ್ಯಗಳು ನಡೆಯಬೇಕೆಂದು ವಿಜ್ಞಾಪಿಸಿಕೊಂಡಿದ್ದರು.

ಕೂಲಿಕಾರರಿಗೂ, ವ್ಯಾಪಾರಸ್ಥರಿಗೂ, ಟಾಂಗಾ ಟ್ಯಾಕ್ಸಿಯವರಿಗೂ ಸಂಪೂರ್ಣ ಹರತಾಳವನ್ನಾಚರಿಸಬೇಕೆಂದು ಬೇಡಿಕೊಂಡಿದ್ದರಲ್ಲದೆ ಸರಕಾರಿ ಅಧಿಕಾರಿಗಳು, ವ್ಯಾಪಾರಸ್ಥರು ತಮ್ಮ ಒಂದು ದಿವಸದ ಉತ್ಪನ್ನವನ್ನು ಕಾಂಗ್ರೆಸ್ಸಿಗೆ ಕೊಟ್ಟು ಸಹಾಯ ಮಾಡಬೇಕೆಂದು ಕೇಳಿಕೊಂಡಿದ್ದರು.

**ಕಾಂಗ್ರೆಸ್ ದಿನಾಚರಣೆಯಲ್ಲಿ ದಬ್ಬಾಳಿಕೆ.**

ತಾ. ೨೪-೧೧-೩೮ ನೆಯ ದಿವಸ ಸಂಸ್ಥಾನದ ತುಂಬೆಲ್ಲ ಕಾಂಗ್ರೆಸ್ ದಿನಾಚರಣೆಯು ಆಚರಿಸಲ್ಪಟ್ಟಿತು. ಕಾಂಗ್ರೆಸ್ಸಿನ ಕಾರ್ಯಕ್ರಮಗಳಲ್ಲಿ ಜನಗಳು ಹೆಚ್ಚು ಆಸಕ್ತಿಯಿಂದ ಭಾಗವಹಿಸಿ ಸಂಸ್ಥಾನ ಕಾಂಗ್ರೆಸ್ಸಿಗೆ ತಮ್ಮ ಸಹಾನುಭೂತಿಯನ್ನು ತೋರಿಸಿ ಸರಕಾರದ ದಬ್ಬಾಳಿಕೆಯ ಧೋರಣವನ್ನು ನಿಷೇಧಗೊಳಿಸಿದರು. ಮಹಬೂಬ ನಗರ ಜಿಲ್ಲೆಯ ಬಾಂದೆಪಲ್ಲಿಯಲ್ಲಿಯೂ ವರಂಗಲ್ ಜಿಲ್ಲೆಯ ಹನುಮಕೊಂಡದಲ್ಲಿಯೂ, ನಿಜಾಮಾಬಾದ, ಲಾತೂರ, ಭೋನಗೀರ, ಕಾಚೀಗುಡ್ಡ ಮೊದಲಾದ ಕಡೆಗೆ ಸರಕಾರದ ಸಾರ್ವಜನಿಕ ಸಭೆಯನ್ನು ಸೇರಿಸಬಾರದೆಂಬ ನಿಯಮವನ್ನು ಉಲ್ಲಂಘಿಸಿ ಅನೇಕರು ಸೆರೆಯಾಳಾದರು. ನಿಜಾಮಾಬಾದದಲ್ಲಿ ೨ ಸಾವಿರ ಜನಗಳು ಸೇರಿದ ಪ್ರಚಂಡ ಸಭೆಯಲ್ಲಿ ಶ್ರೀ. ಅಪ್ಪಾಜಿ ಗಂಗಾಜಿಯವರು ಭಾಷಣ ಮಾಡಿದರು. ಪೋಲಿಸರು ಕೂಡಿದ ಜನಗಳನ್ನು ಚದುರಿಸುವುದಕ್ಕಾಗಿ ಬಡಿಗೆಯಿಂದ ಹೊಡೆದರಂತೆ!

**ಕಾಂಗ್ರೆಸ್ ಶಿಷ್ಟಮಂಡಳ.**

ಹೈದರಾಬಾದ ಸಂಸ್ಥಾನ ಕಾಂಗ್ರೆಸ್ ಪ್ರತಿನಿಧಿಗಳು ತಾ. ೨೧ ನೆಯ ದಿವಸ ಮುಂಬೈಯಲ್ಲಿ ತಾವು ಮುಂದೆ ಕೈಕೊಳ್ಳತಕ್ಕ ಕಾರ್ಯಕ್ರಮದ ಬಗ್ಗೆ ಪಂಡಿತ ಜವಾಹರಲಾಲ ನೆಹರು, ಜಮನಾಲಾಲ ಬಜಾಜ, ವಲ್ಲಭ ಭಾಯಿ ಪಟೇಲ, ಡಾ. ಪಟ್ಟಾಭಿ ಸೀತಾರಾಮಯ್ಯ ಮೊದಲಾದವರನ್ನು ಕಂಡು ವಿಚಾರವಿನಿಮಯ ಮಾಡಿದರು. ಇವರು ಶಿಷ್ಟಮಂಡಳದವರಿಗೆ ಗಾಂಧೀಜಿಯವರನ್ನು ಕಂಡು ವಿಚಾರ ವಿನಿಮಯ ಮಾಡಬೇಕೆಂದು ಸಲಹೆ ಕೊಟ್ಟಿರುವರೆಂದು ತಿಳಿದುಬಂದಿದೆ.

ಲಾತೂರಿನಲ್ಲಿಯೂ ಸಂಸ್ಥಾನಿ ಕಾಂಗ್ರೆಸ್ಸಿನ ಪತ್ರಿಕೆಗಳನ್ನು ಗೋಡೆಗಳ ಮೇಲೆ ಅಂಟಿಸಲಾಗಿತ್ತು. ಡಾ. ನಾರಾಯಣರಾವ ಕುಲಕರ್ಣಿ ಇವರ ಮನೆಯನ್ನು ಪೋಲಿಸರು ಶೋಧಿಸಿದರು. ಆಕ್ಷೇಪಾರ್ಹವಾದ ಯಾವ ವಸ್ತುವೂ ದೊರೆಯಲಿಲ್ಲ. ತುಳಜಾಪುರದಲ್ಲಿಯೂ ಮೂವರು ಕಾಂಗ್ರೆಸ್ ಪತ್ರಿಕೆಗಳನ್ನು ಓದಿ ಸತ್ಯಾಗ್ರಹವನ್ನಾಚರಿಸಿದರು. ಪೋಲಿಸರು ಅವರನ್ನು ಸೆರೆಹಿಡಿಯಲು ಎಲ್ಲ ವ್ಯಾಪಾರಸ್ಥರು ತಮ್ಮ ತಮ್ಮ ಅಂಗಡಿಗಳನ್ನು ಮುಚ್ಚಿ ಹರತಾಳವನ್ನಾಚರಿಸಿದರು.

---

ಬೆಳಗಾವ. ೧೫. ಶ್ರೀ. ಪಂಡಿತಪ್ಪ ಚಿಕ್ಕೋಡಿ ಬಿ. ಎ. ಬೆಳಗಾವ ೧೬. ಮಿ. ಡಿ. ಎಸ್. ಮಲ್ಲಪ್ಪ ಎಂ. ಎಲ್. ಸಿ. ತಿಪಟೂರ. ೧೭ ಶ್ರೀ. ಎಚ್. ಸಿದ್ದಯ್ಯ ಬಿ. ಎ. ಎಲ್ಎಲ್. ಬಿ. (ಎಂ. ಎಲ್. ಸಿ.) ಶಿವಮೊಗ್ಗ, ೧೮. ರಾ. ಬ. ಬಿ. ಎಲ್. ಪಾಟೀಲ ಬಿ. ಎ. ಎಲ್. ಎಲ್. ಬಿ. ಧಾರವಾಡ, ೧೯. ಮಿ. ವೈ. ಮಹಾಬಳೇಶ್ವರಪ್ಪ ಬಳ್ಳಾರಿ. IV ೨೦. ಮಿ. ಎಸ್. ಬಿ. ಹಿರೇಮಠ ಬಿ. ಎ. ಎಲ್ಎಲ್. ಬಿ. ಹಾವೇರಿ, ೨೧. ಸರದಾರ ವೀರನಗೌಡ ಪಾಟೀಲ ಬಿ. ಎ. ಹುಬ್ಬಳ್ಳಿ, ೨೨. ಶ್ರೀ. ಮರುಳಾರಾಧ್ಯ ಶಾಸ್ತ್ರಿಗಳು ವಿಜಾಪುರ ೨೩. ಹಾಗೂ ಮುಂಬೈ ಅಸೆಂಬ್ಲಿಯಲ್ಲಿ ಈಗ ಇರುವ ಕಾಂಗ್ರೆಸ್ ಪಕ್ಷದ ಸಭಾಸದರು, V ೨೪. ಮಿ. ಸಿ. ಸಿ. ಹುಲಕೋಟಿ ಬಿ. ಎ. ಎಲ್ಎಲ್. ಬಿ. ಡಿಸ್ಟ್ರಿಕ್ಟ ಜಜ್ಜ, ೨೫ ಮಿ. ಜಿ. ಪರಮಶಿವಯ್ಯ ಬಿ. ಎ. ಬಿ. ಎಲ್. ಡಿಸ್ಟ್ರಿಕ್ಟ ಜಜ್ಜ ಬೆಂಗಳೂರು.

ನಮಗೆ ಸೂಚಿಸಲ್ಪಟ್ಟ ಹೆಸರುಗಳೆಲ್ಲವೂ ಇಲ್ಲಿ ಕಾಣಿಸಲ್ಪಟ್ಟವೆ. ಅಭಿಪ್ರಾಯಗಳು ೩೧-೧೧-೩೮ ರ ಒಳಗಾಗಿ ತಲ್ಪುವಂತೆ ಕಳಿಸಬೇಕೆಂದು ವಿನಂತಿ.

ತಮ್ಮ ವಿಧೇಯ,<br>
ಫ. ಗು. ಹಳಕಟ್ಟಿ.<br>
ಚೇರಮನ್

ವಿಜಾಪುರ<br>
ತಾ. ೧೮-೧೧-೧೯೩೮.



ಶಾ. ಶ. ೧೮೬೦ ನೆಯ ಮಾರ್ಗಶಿರ ಶು|| ೬ ಸೋಮವಾರ.

# ನಿಜಾಮ ರಾಜ್ಯದ ಸತ್ಯಾಗ್ರಹ.

ನಿಜಾಮ ರಾಜ್ಯದಲ್ಲಿಯ ಭಯಂಕರವಾದ ದಬ್ಬಾಳಿಕೆಯನ್ನು ನಿವಾರಣೆ ಮಾಡಲು ಸತ್ಯಾಗ್ರುಹವು ಅಲ್ಲಿ ಪ್ರಾರಂಭವಾಗಿ ಕಳೆದ ೨೧ ನೆಯ ತಾರೀಖಿಗೆ ಒಂದು ತಿಂಗಳಾಯಿತು. ಅಲ್ಲಿಯ ಸ್ಟೇಟ್ ಕಾಂಗ್ರೆಸ್ಸಿನವರು ಕಳೆದ ತಿಂಗಳು ೨೩ ನೆಯ ತಾರೀಖಿನ ದಿವಸ ಶಾಸನ ಭಂಗವನ್ನು ಪ್ರಾರಂಭಿಸಿದ್ದರಿಂದ ಈ ತಿಂಗಳ ೨೩ ನೆಯ ತಾರೀಖಿನ ದಿವಸ ಅವರು ತಮ್ಮ ಮೊದಲನೆಯ ತಿಂಗಳ ಯುದ್ಧ ದಿನವನ್ನು ಬಹು ಪರಿಣಾಮಕಾರಿಯಾಗಿ ಆಚರಿಸಿದರು. ಇದು ಅವರಿಗೆ ತುಂಬಾ ಭೂಷಣಪ್ರದವಾದುದು. ನಿಜಾಮ ರಾಜ್ಯದ ಸತ್ಯಾಗ್ರಹವು ಮೂರು ಮುಖಗಳುಳ್ಳದ್ದಾಗಿದೆ. ಹಿಂದುಸ್ಥಾನದ ಇನ್ನಾವ ಸಂಸ್ಥಾನಗಳಲ್ಲಿಯೂ ಸತ್ಯಾಗ್ರಹಕ್ಕೆ ಇಷ್ಟು ಮುಖಗಳಿಲ್ಲ. ಏಕೆಂದರೆ, ಬೇರೆ ಸಂಸ್ಥಾನಗಳಲ್ಲಿ ಕೇವಲ ರಾಜಕೀಯ ದಬ್ಬಾಳಿಕೆಯೊಂದೇ ಇದೆ. ಈ ನಿಜಾಮ ರಾಜ್ಯದಲ್ಲಾದರೋ ಅದರೊಂದಿಗೆ ನಾಗರಿಕ ಸ್ವಾತಂತ್ರ್ಯಹರಣ ಮತ್ತು ಹಿಂದು ಜಾತಿಯ ಮೇಲಿನ ಆಕ್ರಮಣ ಇವೆರಡೂ ನಡೆದಿರುವುದರಿಂದ ಅವುಗಳ ನಿವಾರಣೆಗಾಗಿಯೂ ಸತ್ಯಾಗ್ರಹ ಯುದ್ಧವು ಪ್ರಾರಂಭವಾಗಿದೆ.

ಹಿಂದುಗಳ ಮೇಲೆ ಮುಸಲ್ಮಾನ್ ಸಮಾಜದ "ಖಾಕಸಾರ" ಎಂಬ ಒಂದು ಪ್ರಬಲ ಪಕ್ಷವು ಆಕ್ರಮಣವನ್ನು ನಡೆಯಿಸಿ ಸರಕಾರದಿಂದ ಪ್ರೋತ್ಸಾಹವನ್ನು ಹೊಂದುತ್ತಿರುವುದರಿಂದ ಅದರ ಆಕ್ರಮಣ ನಿವಾರಣೆಗೆ ಆರ್ಯಸಮಾಜ ಮತ್ತು ಹಿಂದು ಮಹಾಸಭೆಗಳು ಮುಂದೆ ಬಂದಿವೆ.

ಪಂಜಾಬ, ದಿಲ್ಲಿ, ಮಹಾರಾಷ್ಟ್ರ ಭಾಗಗಳಿಂದ ನೂರಾರು ಹಿಂದು ವೀರ ಸತ್ಯಾಗ್ರಹಿಗಳು ನಿಜಾಮ ರಾಜ್ಯದ ಸತ್ಯಾಗ್ರಹ ಯುದ್ಧದಲ್ಲಿ ಸೇರಲು ತಂಡುತಂಡಾಗಿ ಬರುತ್ತಿದ್ದಾರೆ. ನಿಜಾಮ ರಾಜ್ಯದಲ್ಲಿ ಹಿಂದುಗಳು ೧೦೦ ಕ್ಕೆ ೮೫ ರಂತೆ ಇದ್ದರೂ ಅವರ ಮೇಲಾಗುತ್ತಿರುವ ಭಯಂಕರವಾದ ಅನ್ಯಾಯಗಳ ನಿವಾರಣೆಗಾಗಿ ಬೇರೆ ಭಾಗದ ಹಿಂದುಗಳೂ ಪ್ರಯತ್ನಿಸಬೇಕಾಗಿದೆ.

**ಹಿಂದುಗಳು ಮುಂದೆ ಬರಲಿ.**

ಪ್ಯಾಲಿಸ್ಟಾಯಿನ್‌ದಲ್ಲಿರುವ ಅರಬರಿಗೆ ಅನ್ಯಾಯವಾಗುತ್ತದೆಂದು ಅದರ ನಿವಾರಣೆಗೆ ಹಿಂದುಸ್ಥಾನದ ಮುಸಲ್ಮಾನರು ಪ್ರಯತ್ನಿಸುತ್ತಿರುವುದು ಯುಕ್ತವಾದ ಮೇಲೆ ತಮ್ಮ ನೆರೆಯಲ್ಲಿರುವ ನಿಜಾಮ ರಾಜ್ಯದಲ್ಲಿಯ ಹಿಂದುಗಳ ದುಃಖ ನಿವಾರಣೆಗೆ ಬೇರೆ ಭಾಗಗಳ ಹಿಂದುಗಳು ಹೋರಾಡುವುದು ಯುಕ್ತವಲ್ಲವೆ? ಮುಸಲ್ಮಾನ್ ಬಂಧುಗಳಲ್ಲಿರುವ ಸ್ವಜನ ದುಃಖ ನಿವಾರಣೆಯ ಆ ಅಭಿನಂದನೀಯವಾದ ಗುಣವನ್ನು ಹಿಂದುಗಳೂ ಕಲಿತು ಆ ಪ್ರಕಾರ ಆಚರಣೆಯಲ್ಲಿ ತರುವುದು ಅಗತ್ಯವಾಗಿಲ್ಲವೆ?

ಬಹುಸಂಖ್ಯಾಕರಾದ ಹಿಂದುಗಳ ಮೇಲೆ ಅಲ್ಪಸಂಖ್ಯಾಕರಾದ ಮುಸಲ್ಮಾನರೇ ಅನೇಕ ಕಡೆ ಅನೇಕ ಅತ್ಯಾಚಾರಗಳನ್ನು ನಡೆಯಿಸುತ್ತಿರುವುದೇಕೆ? ಅನೇಕ ಪುಂಡ ಮುಸಲ್ಮಾನರು ಹಿಂದುಗಳಮೇಲೆ ಸಲ್ಲದ ಬಲಾತ್ಕಾರಗಳನ್ನು ಮಾಡಿ ಮುಸಲ್ಮಾನ್ ಸಮಾಜಕ್ಕೇನೇ ಕಲಂಕ ಬರುವಂತೆ ವರ್ತಿಸುತ್ತಿರುವುದೇಕೆ? ಹಿಂದುಗಳು ಸ್ವಜನಾಭಿಮಾನ ಶೂನ್ಯರಾಗಿರುವುದರಿಂದಲ್ಲವೆ ? ಹಿಂದುಗಳಲ್ಲಿ ಸಂಘಟನೆ ಇಲ್ಲದಿದ್ದುದರಿಂದಲೇ ತುಂಟರಿಗೆ ಆಕ್ರಮಣದ ಆವೇಶವುಂಟಾಗುತ್ತದಲ್ಲವೆ? ಯಾವ ಭಾಗದ ಹಿಂದುಗಳಾದರೇನು? ಅವರೆಲ್ಲರೂ ತಮ್ಮ ಧರ್ಮಬಾಂಧವರೆಂದೂ ಅವರ ದುಃಖವೇ ತಮ್ಮ ದುಃಖವೆಂದೂ ಹಿಂದುಗಳು ತಿಳಿದು ಅವರ ದುಃಖನಿವಾರಣೆಗೆ ಮುಂದೆಬಂದರೆ ಆಗ ತುಂಟರ ತುಂಟತನವು ತಾನೇ ನಿಂತು ಹೋಗುವುದಿಲ್ಲವೆ? ಹಾಗೆ ಮಾಡದೆ ಅಲ್ಲಿಯ ಹಿಂದುಗಳಿಗಾಗುವ ದುಃಖದ ಸುದ್ದಿಯನ್ನು ನಮ್ಮ ತಲೆಯಲ್ಲಿ ಹಾಕಿಕೊಂಡು ನಾವೇಕೆ ಚಿಂತಿಸಬೇಕೆಂದು ಅಭಿಮಾನ ಶೂನ್ಯರಾಗಿ ನಡೆದರೆ ಈ ದಿವಸ ಅವರಿಗೆ ಬಂದ ವಿಪತ್ತೇ ನಾಳೆ ನಮಗೂ ಬರುವುದಿಲ್ಲವೆ? ಆದಕಾರಣ ಬೇರೆ ಭಾಗಗಳ ವಿಚಾರಪರರಾದ ಹಿಂದುಗಳು ನಿಜಾಮದ ಹಿಂದುಗಳಿಗೆ ಬಂದೊದಗಿದ ಈಗಿನ ವಿಪತ್ತನ್ನು ನಿವಾರಣೆ ಮಾಡಲು ಮುಂದೆ ಬರುತ್ತಿದ್ದಾರೆ. ಕರ್ನಾಟಕದ ಹಿಂದುಗಳೂ ಈಗ ಜಾಗೃತರಾಗಿ ತಮ್ಮ ನೆರೆಯ ಹಿಂದು ಬಾಂಧವರಿಗಾಗುತ್ತಿರುವ ಧಾರ್ಮಿಕ ಅನ್ಯಾಯಗಳ ನಿವಾರಣೆಗೆ ಸತ್ಯಾಗ್ರಹದಲ್ಲಿ ತಂಡುತಂಡಾಗಿ ಸೇರಲು ಮುಂದೆಬರಬೇಕು.

**ಸ್ವಾತಂತ್ರ್ಯವೀರರು ಮುಂದೆ ಬರಲಿ.**

ನಿಜಾಮ ರಾಜ್ಯದಲ್ಲಿ ನಾಗರಿಕ ಸ್ವಾತಂತ್ರ್ಯದ ಕೊಲೆಯಾಗಿದೆ. ಅಲ್ಲಿಯ ಜನಗಳ ಕೈಕಾಲುಗಳನ್ನು ಕಟ್ಟಿ ಬಾಯಿ ಬಿಗಿದು ಪೋಲಿಸರ ಸ್ವಾಧೀನಪಡಿಸಿದಂತಾಗಿದೆ. ಬೇರೆ ಭಾಗದ ಯಾವ ವ್ಯಕ್ತಿಯು ಆ ಪ್ರಾಂತದಲ್ಲಿ ಕಾಲಿಟ್ಟರೂ ಪೋಲಿಸರು ಯಾವ ವಿಚಾರಣೆಗೂ ಗುರಿ ಮಾಡದೆ ಆ ವ್ಯಕ್ತಿಯನ್ನು ಆ ಪ್ರಾಂತದಿಂದ ತಳ್ಳಿ ಹಾಕಿಬಿಡಬಹುದು !

ನಮ್ಮ ರಾಷ್ಟ್ರದಲ್ಲಿಯೇ ಒಂದು ಕಡೆ ಈ ಪ್ರಕಾರ ಜನರನ್ನು ಪಾರತಂತ್ರ್ಯ ಪಾಶದಿಂದ ಕಟ್ಟಿಹಾಕಿರುವಾಗ ಅವರನ್ನು ಬಿಡಿಸಲು ಪ್ರಯತ್ನಿಸಬೇಕಾದುದು ಸ್ವಾತಂತ್ರ್ಯಾಪೇಕ್ಷಿಗಳ ಕರ್ತವ್ಯವಾಗಿಲ್ಲವೆ? ಸ್ಪೇನ್, ಚೀನ, ಪ್ಯಾಲಿಸ್ಟಾಯಿನ್‌ಗಳಲ್ಲಿ ನಡೆದ ಅತ್ಯಾಚಾರಗಳ ನಿವಾರಣೆಗಾಗಿ ಪ್ರಯತ್ನಿಸುವ ನಾವು ನಮ್ಮ ದೇಶಬಂಧುಗಳಾದ ಸಂಸ್ಥಾನಗಳಲ್ಲಿಯ ಪ್ರಜೆಗಳ ಮೇಲಿನ ಬಲಾತ್ಕಾರಗಳನ್ನು ನಿವಾರಣೆ ಮಾಡಲು ಸಾಹಸಪಡಬಾರದೆ?

ಗುಜರಾಥದ ವೀರರು ರಾಜಕೋಟದ ಸತ್ಯಾಗ್ರಹದಲ್ಲಿ ವಿಶೇಷವಾಗಿ ಸೇರುತ್ತಿದ್ದಾರೆ, ಮಹಾರಾಷ್ಟ್ರದ ವೀರರು ನಿಜಾಮ ರಾಜ್ಯದ ಸತ್ಯಾಗ್ರಹ ಯುದ್ಧದಲ್ಲಿ ಹೆಚ್ಚಾಗಿ ಭಾಗವಹಿಸುತ್ತಿದ್ದಾರೆ. ಕನ್ನಡ

ಗರು ಕೂಡಾ ಈ ಕಾಲದಲ್ಲಿ ತಮ್ಮ ವೀರತನಕ್ಕೆ ಶೋಭಿಸುವಂತೆ ನಿಜಾಮ ರಾಜ್ಯದ ಸತ್ಯಾಗ್ರಹ ಯುದ್ಧದಲ್ಲಿ ಹೆಚ್ಚಾಗಿ ಸೇರಿ ನಾಗರಿಕ ಸ್ವಾತಂತ್ರ್ಯದ ವಿಷಯದಲ್ಲಿರುವ ತಮ್ಮ ಪ್ರೇಮಾದರಗಳನ್ನು ವ್ಯಕ್ತಗೊಳಿಸಬಾರದೆ? ಸರದಾರ ವಲ್ಲಭಭಾಯಿಯವರು ರಾಜಕೋಟ ಸತ್ಯಾಗ್ರಹದ ಕಡೆಗೆ ವಿಶೇಷ ಲಕ್ಷಿಸಿರುವಂತೆ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿ ಅಧ್ಯಕ್ಷರು ನಿಜಾಮ ರಾಜ್ಯದ ಸತ್ಯಾಗ್ರಹದ ಕಡೆಗೆ ಹೆಚ್ಚು ಲಕ್ಷಿಸುವುದು ಅಗತ್ಯವಾಗಿಲ್ಲವೆ?

**ನಿಜಾಮುದ ಬಂಧುಗಳ ಜಾಗೃತಿ.**

ನಿಜಾಮುದಲ್ಲಿಯ ನಮ್ಮ ದೇಶದ ಬಾಂಧವರು ಈಗ ಜಾಗೃತರಾಗಿ ಸತ್ಯಾಗ್ರಹದಲ್ಲಿ ಸಾವಿರಗಟ್ಟಲೆ ಜನರು ಸೇರಬೇಕು. ಪರಪ್ರಾಂತದವರಿಂದ ತಮಗೆ ಸಹಾಯವಾಗುವುದೆಂದು ಅವರು ಹಾರೈಸಲೇಬಾರದು. ತಮ್ಮ ಕಾಲಮೇಲೆ ತಾವು ನಿಲ್ಲಲು ಸಿದ್ಧರಾಗಬೇಕು. ಅಲ್ಲಿಯ ಪ್ರಜೆಗಳಿಂದಾದ ಸತ್ಯಾಗ್ರಹದ ಪ್ರಚಂಡ ಚಟುವಟಿಕೆಯೇ ಅವರಿಗೆ ಹೆಚ್ಚು ಫಲವನ್ನು ಕೊಡುವುದು.

ಆ ರಾಜ್ಯದ ಹಳ್ಳಿಗಳಲ್ಲಿ ಕೂಡಾ ಸ್ಟೇಟ್ ಕಾಂಗ್ರೆಸ್ಸಿನ ಮೂಲಕ ಶಾಸನಭಂಗದ ಕಾರ್ಯ ನಡೆಯಬೇಕು. ಈ ಕಾಲದಲ್ಲಿ ಈ ಚಟುವಟಿಕೆಯು ಎಷ್ಟು ಪ್ರಚಂಡವಾಗಿ ನಡೆಯುವುದೋ ಅಷ್ಟು ಜಾಗೃತಿ ಅದು ಫಲಕಾರಿಯಾಗುವದು. ಈಗ ಚಟುವಟಿಕೆ ಹಿಂದೆ ಬಿದ್ದರೆ ಮುಂದೆ ಬಹುದಿನಗಳ ವರೆಗೆ ದಬ್ಬಾಳಿಕೆಯು ಹೆಚ್ಚಾಗುವುದು. ಆದಕಾರಣ ಅಹಿಂಸೆಯ ಪವಿತ್ರ ವ್ರತವನ್ನು ಅನುಸರಿಸಿ ನಿಜಾಮದ ನಮ್ಮ ದೇಶಬಾಂಧವರು ಈ ಸ್ವಾತಂತ್ರ್ಯದ ಹೋರಾಟವನ್ನು ಪ್ರಚಂಡವಾಗಿ ಸಾಗಿಸುವರೆಂದೇ ನಾವು ನಂಬಿದ್ದೇವೆ.

---

## ಖಾದಿ ಮತ್ತು ರಾಷ್ಟ್ರಧ್ವಜ.

ಮಹಾತ್ಮಾ ಗಾಂಧಿಯವರು ಹಿಂದುಸ್ಥಾನದ ಉನ್ನತಿಗಾಗಿ ಉಂಟುಮಾಡಿರುವ ಅನೇಕ ಅದ್ಭುತ ಕಾರ್ಯಗಳಲ್ಲಿ ಖಾದಿ ಮತ್ತು ರಾಷ್ಟ್ರಧ್ವಜ ಇವುಗಳ ನಿರ್ಮಾಣವು ಕೂಡಾ ಮುಖ್ಯವಾದುದೇ ಆಗಿದೆ. ಇವುಗಳೇನೋ ರಾಜಕೀಯ ಸ್ವಾತಂತ್ರ್ಯ ದೊರೆಯುವ ವರೆಗೆ ಹಾಗೂ ಹೀಗೂ ತೋರಿಕೆಗಾಗಿ ನಡವಳಿಕೆಯಲ್ಲಿಟ್ಟುಕೊಳ್ಳತಕ್ಕವುಗಳಲ್ಲ.

ಇತ್ತೀಚಿಗೆ ಖಾದಿ ಮತ್ತು ರಾಷ್ಟ್ರಧ್ವಜಗಳ ಸಂಬಂಧವಾಗಿ ಬಹು ಜನರು ಅನೇಕ ತಪ್ಪು ತಿಳುವಳಿಕೆಯುಳ್ಳವರಾಗಿ ತೋರಿಕೆಗೋಸ್ಕರ ಇವುಗಳ ಉಪಯೋಗವನ್ನು ಬೇರೆ ಬೇರೆ ರೀತಿಯಲ್ಲಿ ಮಾಡುತ್ತಿರುವುದು ಹೆಚ್ಚಿದೆ. ಆದಕಾರಣ ಮಹಾತ್ಮಾ ಗಾಂಧಿಯವರು ಹರಿಜನ ಪತ್ರಿಕೆಯಲ್ಲಿ ಇವುಗಳ ಸಂಬಂಧವಾಗಿ ವಿವೇಚಿಸಿ ಜನರನ್ನು ಎಚ್ಚರಗೊಳಿಸಿದ್ದಾರೆ.

ಕಾಂಗ್ರೆಸ್ ಪಕ್ಷವು ಅಧಿಕಾರವನ್ನು ವಹಿಸಿದನಂತರ ಕಾಂಗ್ರೆಸ್ಸಿನಲ್ಲಿ ಸೇರುವವರ ಸಂಖ್ಯೆ ಹೆಚ್ಚಾಗಿದೆಯಷ್ಟೆ. ಅನೇಕರು ಸ್ವಾರ್ಥಸಾಧಿಸಿಕೊಳ್ಳಲು ನಾಲ್ಕಾಣೆ ಕೊಟ್ಟು ಕಾಂಗ್ರೆಸ್ ಸದಸ್ಯರಾಗಿ ತಾವು ಕಾಂಗ್ರೆಸ್ಸಿನವರೆಂದು ಮೆರೆಯಲು ಮುಂದೆ ಬರುತ್ತಿದ್ದಾರೆ. ಇಂಥ ಸ್ವಾರ್ಥ ಸಾಧಕರು ಇತ್ತೀಚಿಗೆ ಕಾಂಗ್ರೆಸ್ಸಿನಲ್ಲಿ ಹೆಚ್ಚುತ್ತಿರುವುದರಿಂದಲೇ ಅದರ ಅನೇಕ ಕಾರ್ಯಗಳಿಗೆ ಕಲಂಕ ಬರಲಾರಂಭವಾಗಿದೆ.

**ಖಾದಿ ವ್ರತಧಾರಿಗಳು,**

ಕಾಂಗ್ರೆಸ್ಸಿನ ಶುದ್ಧೀಕರಣಕ್ಕೆ ಖಾದಿಯೂ ಒಂದು ಮುಖ್ಯೋಪಾಯವಾಗಿದೆ. ಅಂತೆಯೇ ಗಾಂಧೀಜಿಯವರು ಮೊನ್ನೆ ಹರಿಜನ ಪತ್ರಿಕೆಯಲ್ಲಿ ಹೀಗೆ ತಿಳಿಸಿದ್ದಾರೆ-

"ಕಾಂಗ್ರೆಸ್ ಮೆಂಬರರಾಗತಕ್ಕವರು ಶುದ್ಧ ಖಾದಿಯನ್ನೇ ಸಂಪೂರ್ಣವಾಗಿ ಧರಿಸಲೇಬೇಕು. ಸಂಪೂರ್ಣವಾಗಿ ಖಾದಿಯನ್ನು ಧರಿಸದೆ ತಾವು ಕಾಂಗ್ರೆಸ್ಸಿನವರೆಂದು ಹೇಳಿಕೊಳ್ಳುವುದು ಕಾಂಗ್ರೆಸ್ಸಿಗೆ ಒಂದು ದ್ರೋಹಮಾಡಿದಂತೆಯೇ ಸರಿ."

ಮಹಾತ್ಮಾಜಿಯವರ ಈ ಮುಖ್ಯ ಸಿದ್ಧಾಂತವನ್ನು ಕಾಂಗ್ರೆಸ್ಸಿನಲ್ಲಿರುವ ಬಹು ಜನರು ಚೆನ್ನಾಗಿ ಲಕ್ಷಿಸಬೇಕು. ಕಾಂಗ್ರೆಸ್ಸಿನ ಸದಸ್ಯರನ್ನು ಮಾಡುವವರೂ ಕಾಂಗ್ರೆಸ್ ಕೆಲಸಗಾರರೂ ಈ ವಿಷಯವನ್ನು ಉಪೇಕ್ಷಿಸಬಾರದು.

ಎರಡಾಣೆ ಗಾಂಧಿಟೊಪ್ಪಿಗೆ ನಾಲ್ಕಾಣೆ ಕಾಂಗ್ರೆಸ್ ಚಂದಾ ಇವುಗಳಿಂದಲೇ ಈಗ ಕಾಂಗ್ರೆಸ್ ಸದಸ್ಯರಾಗುತ್ತಿರುವ ಪದ್ಧತಿ ಹೋಗಬೇಕು. ಕಾಂಗ್ರೆಸ್ಸಿಗೆ ಸೇರಬೇಕಾದರೆ ಸೇರುವವರು ಸಂಪೂರ್ಣ ಖಾದಿಯನ್ನೇ ಧರಿಸಬೇಕು. ಏನೋ ಕಾರ್ಯ ನಡೆದಾಗ ಅಥವಾ ಯಾರೋ ಪ್ರಮುಖರು ಬಂದಾಗ ತೋರಿಕೆಗಾಗಿ ಖಾದಿ ಧರಿಸಿದರೆ ಅವರು ಕಾಂಗ್ರೆಸ್ಸಿಗೆ ಮೋಸಮಾಡಿದಂತೆಯೇ ಸರಿ.

ಶುದ್ಧವಾದ ಖಾದಿಯನ್ನು ಯಾವಾಗಲೂ ಸಂಪೂರ್ಣವಾಗಿ ಧರಿಸುವ ವ್ರತವನ್ನು ಯಾರು ಕೈಕೊಳ್ಳುವರೋ ಅವರೇ ಕಾಂಗ್ರೆಸ್ಸಿನ ಸದಸ್ಯರಾಗಲು ಯೋಗ್ಯರೆಂದು ತಿಳಿಯಬೇಕು. ಹೀಗೆ ಕಾಂಗ್ರೆಸ್ ಸದಸ್ಯರಿಗೆ ಖಾದಿಯ ಒಂದು ಕಟ್ಟು ಇರಬೇಕಾದುದು ಅವಶ್ಯಗತ್ಯ. ಇದರಿಂದ ಖಾದಿ ಪ್ರಸಾರವು ಹೆಚ್ಚುವುದಲ್ಲದೆ ಕಾಂಗ್ರೆಸ್ಸಿನ ಶುದ್ಧೀಕರಣವೂ ಎಷ್ಟೋ ಪ್ರಮಾಣದಲ್ಲಿ ಜರುಗುವುದು.

ಕಾಂಗ್ರೆಸ್ಸಿನವರೆಂದರೆ ರಾಜಕಾರಣದ ಒಂದು ಸೈನ್ಯದವರೆಂದೇ ತಿಳಿಯದೆ ಬಡ ಜನಗಳ ಹೊಟ್ಟೆಗೆ ಒಂದು ತುತ್ತು ರೊಟ್ಟಿ ಹೆಚ್ಚಾಗಿ ದೊರೆಯುವಂತೆ ತಮ್ಮ ಕೃತಿಯನ್ನೂ ಇಟ್ಟುಕೊಂಡ ಬಡ ಭಾರತೀಯರ ಸೇವಕರ ಒಂದು ತಂಡದವರೆಂದೂ ತಿಳಿಯುವಂತಾಗಬೇಕು. ಹೀಗಾಗಬೇಕಾದರೆ ಕಾಂಗ್ರೆಸ್ಸಿನ ನಾಲ್ಕಾಣೆ ಸದಸ್ಯರು ಕೂಡಾ ಸಂಪೂರ್ಣವಾಗಿ ಶುದ್ಧ ಖಾದಿಯನ್ನೇ ಉಪಯೋಗಿಸುವ ಖಾದಿವ್ರತಧಾರಿಗಳಾಗಬೇಕು.

**ರಾಷ್ಟ್ರಧ್ವಜವೆಲ್ಲಿ?**

ಗಾಂಧೀಜಿಯವರು ಹೇಗೆ ಖಾದಿಯ ಜನ್ಮದಾತರೋ ಹಾಗೆಯೇ ರಾಷ್ಟ್ರೀಯ ಧ್ವಜದ ಜನಕರೂ ಆಗಿದ್ದಾರೆ. ಆದುದರಿಂದಲೇ ರಾಷ್ಟ್ರಧ್ವಜದ ಉಪಯೋಗವನ್ನು ಕುರಿತು ತಿಳಿಸಲು ತಮಗೆ ವಿಶೇಷವಾದ ಅಧಿಕಾರವಿದೆಯೆಂದು ಅವರು ತಿಳಿಸಿದ್ದಾರೆ. ಅದು ಯುಕ್ತವಾಗಿಯೂ ಇದೆ.

ರಾಷ್ಟ್ರಧ್ವಜವು ಹಿಂದುಸ್ಥಾನದ ಎಲ್ಲಾ ಜನಾಂಗಗಳಿಗೂ ಮಾನ್ಯವಾದುದು. ಅದು ಯಾವುದೊಂದೇ ಜನಾಂಗದ ಗುರುತಲ್ಲ; ಮತ್ತು ಅದು ಧಾರ್ಮಿಕ ಚಿನ್ಹವಲ್ಲ. ಎಂದಮೇಲೆ ಅದರ ಉಪಯೋಗಮಾಡತಕ್ಕವರು ಸಮಯ ಸಂದರ್ಭಗಳನ್ನು ಯೋಚಿಸಬೇಕಾದುದು ಯುಕ್ತವಾಗಿದೆ. ಬಹು ಜನರು ಈಗ ಅದನ್ನು ತಪ್ಪು ರೀತಿಯಲ್ಲಿಯೂ ಉಪಯೋಗಿಸುತ್ತಿದ್ದಾರೆ. ಆದುದರಿಂದ ರಾಷ್ಟ್ರಧ್ವಜದ ವಿಷಯದಲ್ಲಿ ಭಿನ್ನಾಭಿಪ್ರಾಯಗಳು ಹೆಚ್ಚಲು ಅವಕಾಶವಾಗಿದೆ. ಗಾಂಧೀಜಿಯವರ ಕಡೆಗೆ ಈ ಸಂಬಂಧವಾದ ಚರ್ಚೆ ಬಂದುದರಿಂದಲೇ ಅವರು ಹೀಗೆ ತಿಳಿಸಿದ್ದಾರೆ—

"ರಾಷ್ಟ್ರಧ್ವಜವನ್ನು ಧಾರ್ಮಿಕ ಕಾರ್ಯಗಳಲ್ಲಿ ಉಪಯೋಗಿಸುವುದು ವಿಹಿತವಲ್ಲ. ಮತ್ತು ಒಬ್ಬರ ವಿರೋಧವಿದ್ದರು ಕೂಡಾ ಸಾರ್ವಜನಿಕ ಸ್ಥಳದಲ್ಲಿ ಅದನ್ನು ಇರಿಸುವುದು ಯುಕ್ತವಲ್ಲ. ಎಲ್ಲರಲ್ಲಿಯೂ ಪರಸ್ಪರ ಪ್ರೇಮ ಮತ್ತು ಏಕಮತ್ಯಗಳಿವೆಯೆಂಬು

(೧೪ ನೇ ಪುಟಕ್ಕೆ ಸಾಗಿದೆ.)

# ಸಾವರಕರರ ಸ್ಪಷ್ಟೋಕ್ತಿ.

ಹಿಂದೀ ರಾಜಕೀಯ ಪ್ರಶ್ನೆಗಳ ಬಗ್ಗೆ ವಿಚಾರವಿನಿಮಯ ಮಾಡಲು ಯಾವದಾದರೊಂದು ದುಂಡುಮೇಜಿನ ಪರಿಷತ್ತು ಕೂಡಿದರೆ ಅದರಲ್ಲಿ ಪ್ರತಿನಿಧಿಯೆಂದು ಭಾಗ ವಹಿಸಲು ಕಾಂಗ್ರೆಸ್ಸೊಂದೇ ಸಂಸ್ಥೆಯಿದೆಯೆಂದು ರಾಷ್ಟ್ರೀಯ ಸಭೆಯ ಅಧ್ಯಕ್ಷರಾದ ಶ್ರೀ. ಸುಭಾಷಚಂದ್ರ ಬೋಸರವರು ಅಭಿಪ್ರಾಯ ಪಟ್ಟಿದ್ದಾರೆ. ಇದನ್ನು ಹಿಂದು ಮಹಾಸಭೆಯ ಅಧ್ಯಕ್ಷರಾದ ಬ್ಯಾ. ವಿನಾಯಕರಾವ ಸಾವರಕರರು ಒಂದು ಪ್ರಕಟನೆ ಹೊರಡಿಸಿ ಅಲ್ಲಗಳೆದಿದ್ದಾರೆ. ಇವರು ತಮ್ಮ ಪತ್ರಿಕೆಯಲ್ಲಿ ಈ ರೀತಿ ಪ್ರಕಟಿಸಿದ್ದಾರೆ—

"ಹಿಂದುಗಳ ಹಿತ ಸಂರಕ್ಷಣೆಯನ್ನು ನೋಡುವ ಭಾರವು ಹಿಂದು ಮಹಾಸಭೆಗಿದೆ. ಈ ಕೆಲಸವು ಕಾಂಗ್ರೆಸ್ಸಿನದಲ್ಲ. ಜಾತೀಯ ನಿರ್ಣಯ ನಿರ್ಮೂಲಗೊಳಿಸುವೆವು, ಜಾತೀಯ ಪ್ರಶ್ನೆಗಳನ್ನು ನ್ಯಾಯದೃಷ್ಟಿಯಿಂದ ನೋಡುವೆವೆಂಬ ಪೊಳ್ಳು ಆಶ್ವಾಸನೆಗಳಿಂದಲೇ ಕಾಂಗ್ರೆಸ್ಸು ಇಲೆಕ್ಶನ್ನಿನಲ್ಲಿ ಜಯಶೀಲವಾಯಿತು. ಇಲೆಕ್ಶನ್ನಿನ ನಂತರ ಹಿಂದುಗಳ ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ ಮತ್ತು ರಾಜಕೀಯ ದೃಷ್ಟಿಯಿಂದ ಮಾನಹಾನಿಮಾಡಿ ಕಾಂಗ್ರೆಸ್ಸು ಹಿಂದು ಸಮಾಜವನ್ನು ಸಿಕ್ಕುರವಂಚಿಸಿದೆ. ಮುಸಲ್ಮಾನರ ಪರವಾಗಿ ಮಾತ ನಾಡಲು ಕಾಂಗ್ರೆಸ್ಸಿಗೆ ಯಾರಾದರೂ ಅಧಿಕಾರ ಕೊಟ್ಟಿರುವರೇ ? ಹಿಂದು ಮಹಾಸಭೆಯ ಒಪ್ಪಿಗೆಯಿಲ್ಲದೆ ಮುಸ್ಲಿಂ ಲೀಗಿನೊಡನೆ ಯಾವದೇ. ಬಗೆಯ ಒಪ್ಪಂದವನ್ನು ಮಾಡಿಕೊಂಡರೂ ಹಿಂದುಗಳು ಖಂಡಿತ ಅದಕ್ಕೆ ಒಪ್ಪುವುದಿಲ್ಲವೆಂಬುದನ್ನು ಕಾಂಗ್ರೆಸ್ಸು ಮತ್ತು ಸರಕಾರವು ಚೆನ್ನಾಗಿ ಲಕ್ಷದಲ್ಲಿಡತಕ್ಕದ್ದು."

---

# ಉದಾರ ದಾನಕ್ಕೆ ಧನ್ಯವಾದ.

ತಾ. ೧೮-೨-೩೮ ರ. ಈ ದಿನ ವೀರಶೈವ ಬೋರ್ಡಿಂಗ ಹೈದರಾಬಾದದ ಹಾಲಿನಲ್ಲಿ ಶ್ರೀಯುತ ಶ್ರೀನಿವಾಸರಾವ ಮದನೂರಕರ್ ವಕೀಲ ಹೈಕೋರ್ಟ ಇವರ ಅಧ್ಯಕ್ಷತೆಯಲ್ಲಿ ನಿ. ವಿ. ತ. ಸಭೆ ಜರುಗಿತು. ಕೆಳಗೆ ಕಂಡ ಸೂಚನೆಗಳು ಸರ್ವಾನುಮತದಿಂದ ಪಾಸಾದವು.

೧ ಸೂಚಕರು— ಶ್ರೀ. ಮಠಂ ವೀರಯ್ಯನವರ ಕಡೆಯಿಂದ- ಶ್ರೀಮಾನ್ ಸಕ್ರಪ್ಪ ಗೌಡರು ಹತ್ತನೂರರವರು ೨೫೦೦೦ ರೂ. ವೀರಶೈವ ಬಡ ವಿದ್ಯಾರ್ಥಿಗಳ ತೊಂದರೆಗಳನ್ನು ಕಂಡು ನಿವಾರಿಸುವದಕ್ಕೂ ಮತ್ತು ರಾಜಕೀಯ ವಿದ್ಯಾಭಿರುಚಿಯನ್ನು ಪ್ರೋತ್ಸಾಹಿಸುವದಕ್ಕೂ ಉದಾರ ದಾನ ಮಾಡಿದ ಬಗ್ಗೆ ಸಂಘವು ಸರ್ವಾನುಮತದಿಂದ ಮಹನೀಯ ಉದಾರ ದಾನಿಗಳಿಗೆ ಧನ್ಯವಾದಗಳನ್ನರ್ಪಿಸುತ್ತದೆ."

೨ ಶ್ರೀ. ವಿರೂಪಾಕ್ಷಪ್ಪ ಯರಮರಸ ಇವರ ಕಡೆಯಿಂದ— ರಾಯಚೂರಲ್ಲಿ ಭದ್ರವಾದ ಬೋರ್ಡಿಂಗ ಕಟ್ಟಡವಿರುವದಲ್ಲದೆ. ವೀರಶೈವ ಜನಸಂಖ್ಯೆ ಸಾಕಷ್ಟು ಇದ್ದುದರಿಂದ ವಿದ್ಯಾರ್ಥಿಗಳಿಗೆ ಸೌಕರ್ಯವುಂಟು. ಆದರೆ ಹೈದರಾಬಾದಿನಲ್ಲಿ ವಿಶ್ವ ವಿದ್ಯಾಲಯದ ವಿದ್ಯಾರ್ಜನೆ ಮಾಡುವವರಿಗೆ ಅನೇಕ ಅನಾನುಕೂಲತೆಗಳಿರುವಕಾರಣ ಹೈದರಾಬಾದ ವೀ. ಬೋರ್ಡಿಂಗಿಗಾಗಿ ಆ ಧನವನ್ನು ವೆಚ್ಚಮಾಡಬೇಕೆಂದು ಈ ಸಂಘವು ಸದರಿ ಮಹನೀಯರಿಗೆ ಸೂಚಿಸುತ್ತದೆ.

೩. ಅಧ್ಯಕ್ಷರ ಕಡೆಯಿಂದ—

ಈ ಮೇಲ್ಕಂಡ ಸೂಚನೆಗಳನ್ನು ಶ್ರೀ. ಸಕ್ರಪ್ಪನವರಿಗೂ ಮತ್ತು ವೃತ್ತ ಪತ್ರಿಕೆಗಳಿಗೂ ಕಳಿಸುವುದಕ್ಕಾಗಿ ಸಂಘದ ಸೆಕ್ರೆಟರಿಯವರಿಗೆ ನಿಯಮಿಸಿರುತ್ತದೆ.

ಅನಂತರ ಸಭಾಧ್ಯಕ್ಷರ ಮತ್ತು ಸಭಿಕರ ಆಭಾರಮನ್ನಿಸಿ ಸಭಾ ವಿಸರ್ಜನೆಯಾಯಿತು.

ಕಾರ್ಯದರ್ಶಿ
ನಿಜಾಮ ವೀರಶೈವ ತರುಣ ಸಂಘ
ಹೈದರಾಬಾದ.

---

ಶಿವಮೊಗ್ಗಾ

# ಬಾಳೆಹಳ್ಳಿ ಸ್ವಾಮಿಗಳ ಪ್ರಕರಣ.

ರಾಜಿಯಲ್ಲಿ ಪರಿಸಮಾಪ್ತಿ.

ಶ್ರೀ ಬಾಳೆಹೊನ್ನೂರು ಸ್ವಾಮಿಗಳು ಶಿವಮೊಗ್ಗಾ ಸರ್ಕೀಟಿನ ಫಲವಾಗಿ ಸ್ವಾಗತ ಸಂಘದ ಅಧ್ಯಕ್ಷರಾದ ಮ| ರಾ| ಜಿ. ಸಿ. ಮಹಲಿಂಗಪ್ಪನವರಮೇಲೆ ಸದರಿ ಶಿವಮೊಗ್ಗಾವಾಸಿ ಮ. ರಾ. ಸಿ. ಬಸಪ್ಪನವರು ಒಂದು ಕ್ರಿಮಿನಲ್ ಮೊಖದ್ದೊಮೆ ಮಾಡಿದ್ದರಲ್ಲಿ ಅದು ಚಾರ್ಜಮಾಡಲ್ಪಟ್ಟದ್ದು ಸರಿಯಷ್ಟೆ.

ಈಚೆಗೆ ಅದರ ಸಂಮ್ಮಂಧವಾಗಿ ಇದೆ ಟೌನ್ ವಾಸಿಗಳಾದ ಮ|| ರಾ|| ಎಂ. ಸಿ. ಕೊಟ್ರೂರಪ್ಪ ಮತ್ತು ಮ|| ರಾ|| ಕೆ. ಚಂದಪ್ಪ ಎಂಬುವವರೂ ಸಹ ಈ ಬಗ್ಗೆ ಶಿವಮೊಗ್ಗಾ ಮುನ್ಸೀಫ್ ಕೋರ್ಟನಲ್ಲಿ ಎರಡು ಸಿವಿಲ್ ದಾವಾಗಳನ್ನು ದಾಖಲೆ ಮಾಡಿದರು.

ಆದರೆ ಈಚೆಗೆ ಈ ಊರಿನ ಕೆಲವರು ಪ್ರಮುಖರುಗಳ ಪ್ರಯತ್ನದ ಫಲವಾಗಿ ಅಪಾದಿತರು ಫಿರ್ಯಾದಿಗೆ, ತಾವು ಅರ್ಜಿಯಲ್ಲಿ ಉಪಯೋಗಿಸಿದ ಶಬ್ದಗಳನ್ನು ಯಾವ ಷರತ್ತುಯಿಲ್ಲದೆ (ಅನ್. ಕ್ವಾಲಿಫೈಡ) ವಾಪಸ ತೆಗೆದುಕೊಂಡಿರುವುದಾಗಿ ಹೇಳಿದ್ದಲ್ಲದೆ ರಾಜಿ ಅರ್ಜಿಯಲ್ಲಿಯೂ ನಮೂದಿಸಿದ್ದರಿಂದ ಮೇಲಿನ ಎಲ್ಲಾ ಮೊಖದ್ದೊಮೆಗಳು ಉಭಯತರುಗಳಿಂದ ತಾ.೧-೧೧-೩೮ರಲ್ಲಿ ರಾಜಿಮಾಡಲ್ಪಟ್ಟಿರುತ್ತದೆ.

ವಿ. ಸೂ.— ಆದರೆ ಇಂಥ ಸನ್ನಿವೇಶವು ಸಮಾಜೋನ್ನತಿಗಾಗಿ ಸಂಚಾರ ಹೊರಡುತ್ತೇವೆಂದು ಹೇಳುವವರ ಸಂಮ್ಮಂಧವಾಗಿಯೇ ಅನೇಕ ಕಡೆಗಳಲ್ಲಿ ಒದಗುತ್ತಿರುವದರಿಂದ ಸಮಾಜೋನ್ನತಿಯ ಎಷ್ಟರಮಟ್ಟಿಗೆ, (ಎರಡು ಪಕ್ಷದವರ ದುಡ್ಡು ನಷ್ಟವಾಗಿ) ಆಗುತ್ತದೆ ಎಂದು ಹೇಳಲು ವ್ಯಸನವಾಗುತ್ತದೆ. ಆದ್ದರಿಂದ ಮುಂದಿನ ವೀರಶೈವ ಮಹಾಸಭೆಯಲ್ಲಿ ಇದರ ನಿರ್ಣಯವಾಗಿ ಸಮಾಜ ಸ್ವತಂತ್ರವನ್ನು ಕಾಪಾಡಬೇಕಾಗಿ ಸೂಚನೆ.

---

—ಹಿಂದು ಧರ್ಮ ಪ್ರಚಾರಕರಾದ ಶ್ರೀ. ಆನಂದಮೂರ್ತಿ ಡಿಗ್ರಜಕರ ಮತ್ತು ಅವರ ಧರ್ಮಪತ್ನಿಯವರಾದ ಸೌ|| ಸುಶೀಲಾಬಾಯಿ ಡಿಗ್ರಜಕರ ಇವರು ಕೊಲ್ಹಾಪುರ ಸಂಸ್ಥಾನಿನ ಕೆಲವು ಹಳ್ಳಿಗಳಲ್ಲಿ ಸಂಚರಿಸಿ ಹಿಂದುಸಂಘಟನೆಯ ಕಾರ್ಯ ಜರುಗಿಸಿದರು. ಸೌ|| ಸುಶೀಲಾಬಾಯಿಯವರು ತಮ್ಮ ಭಿಕ್ಷೆಯ ಧಾನ್ಯಗಳನ್ನು ಮಾರಿ ಬಂದ ಹಣವನ್ನು ಹೈದ್ರಾಬಾದ ಸತ್ಯಾಗ್ರಹ ಮಂಡಳದವರಿಗೆ ಅರ್ಪಿಸಿದರು.

—ಹಿಂದುಸ್ಥಾನದಲ್ಲಿ ಒಟ್ಟು ೧೭ ಹುಚ್ಚರ ಆಸ್ಪತ್ರೆಗಳಿದ್ದು ಅವುಗಳಲ್ಲಿ ಒಟ್ಟು ೮೮೨೫ ಜನ ಹುಚ್ಚರು ಔಷಧೋಪಚಾರ ಹೊಂದುವಷ್ಟು ಅನುಕೂಲವಿದೆ. ಆದರೆ ಕಳೆದ ವರ್ಷ ೧೧೭೦೧ ಜನ ಹುಚ್ಚರಿದ್ದರು. ಮದ್ರಾಸ್ ಮತ್ತು ಸಂಯುಕ್ತ ಪ್ರಾಂತಗಳಲ್ಲಿಯೂ ಹುಚ್ಚರ ಪ್ರಮಾಣವು ಮಿತಿಮೀರಿ ಹೆಚ್ಚಾಗಿದೆ. ೨೦ ರಿಂದ ೪೦ ವರ್ಷ ವಯಸ್ಸಿನೊಳಗಿನವರೇ ಹುಚ್ಚರಲ್ಲಿ ಬಹು ಸಂಖ್ಯಾಕರಾಗಿದ್ದಾರೆ.

## ೨೪ ನೆಯ ಕನ್ನಡ ಸಾಹಿತ್ಯ ಸಮ್ಮೇಳನ
## ಬಳ್ಳಾರಿ

ಈ ವರ್ಷ ಡಿಸೆಂಬರ್ ತಿಂಗಳಲ್ಲಿ ನಡೆಯಬೇಕಾಗಿರುವ ೨೪ ನೆಯ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಬಳ್ಳಾರಿ ನಗರಕ್ಕೆ ಆಹ್ವಾನಿಸಬೇಕೆಂದು ಅಲ್ಲಿನ ಕನ್ನಡ ಮುಂದಾಳುಗಳು ಉದ್ದೇಶ ಪಟ್ಟ ಮೇರೆಗೆ, ತಾ|| ೩೦-೭-೧೯೩೮ ರಲ್ಲಿ ಬಳ್ಳಾರಿಯ ಶ್ರೀಮಾನ್ ಕೆ. ಗುರುರಾಜಾರಾವ್, ಬಿ. ಎ.ಬಿ. ಎಲ್., ಅವರ ಅಧ್ಯಕ್ಷತೆಯಲ್ಲಿ ಒಂದು ಸಾರ್ವಜನಿಕ ಸಭೆ ನಡಿಯಿತು. ಬಳ್ಳಾರಿಯ ಪ್ರಮುಖ ಕನ್ನಡಿಗನೇಕರು ಈ ಸಭೆಯಲ್ಲಿ ಭಾಗವಹಿಸಿದ್ದರು. ಸಭೆ ಸರ್ವಾನುಮತದಿಂದ ತೀರ್ಮಾನಿಸಿದ ಮೇರೆಗೆ ಸಭೆಯ ಪರವಾಗಿ ಶ್ರೀ|| ಎನ್. ಆರ್. ಗಂಗಾವತಿಯವರು ತಾ|| ೧೨-೮-೩೮ ರಲ್ಲಿ ಪರಿಷತ್ತಿಗೆ ಲಿಖಿತಮೂಲಕ ಸಮ್ಮೇಳನದ ಆಹ್ವಾನವನ್ನು ಕಳಿಸಿದರು. ಹಾಗೆ ವಿಶ್ವಾಸಪೂರ್ವಕವಾಗಿ ಬಳ್ಳಾರಿಯವರು ಕಳಿಸಿ ಕೊಟ್ಟ ಆಹ್ವಾನವನ್ನು ಪರಿಷತ್ತಿನ ಕಾರ್ಯವಾಹಕ ಮಂಡಲಿ ತಾ|| ೨೭-೮-೩೮ ರಲ್ಲಿ, ಸಂತೋಷ ಕೃತಜ್ಞತೆಗಳೊಡನೆ ಸ್ವೀಕರಿಸಿತು.

ಈಗ ಸುಮಾರು ೫೦ ಮಂದಿ ಮಹನೀಯರನ್ನೊಳಗೊಂಡ ಸ್ವಾಗತ ಮಂಡಲಿ ಏರ್ಪಾಟಾಗಿದೆ; ಶ್ರೀ|| ಎನ್. ಆರ್. ಗಂಗಾವತಿಯವರು ಗೌ|| ಕಾರ್ಯದರ್ಶಿಯವರಾಗಿಯೂ ಶ್ರೀ|| ತೊಗರಿ ವೀರಮಲ್ಲಪ್ಪನವರು ಕೋಶಾಧ್ಯಕ್ಷರಾಗಿಯೂ ಇದ್ದಾರೆ.

ಈ ಸಲದ ಸಮ್ಮೇಳನವನ್ನು ಬಳ್ಳಾರಿಯಲ್ಲಿ ನಡೆಸಬೇಕೆಂದು ಅಲ್ಲಿನ ಕನ್ನಡಿಗರು ೨ ವರ್ಷಗಳಿಂದಲೂ ಬಹಳ ಉತ್ಸಾಹದಿಂದ ಕೆಲಸಮಾಡುತ್ತಿದ್ದಾರೆ. ಸುತ್ತಮುತ್ತಲಿನ ಕನ್ನಡಿಗರು ಬೆಂಬಲವಾಗಿ ನಿಂತಿದ್ದಾರೆ. ಈ ಸಮ್ಮೇಳನ ಬಹು ಯಶಸ್ವಿಯಾಗಿ ನಡೆಯುವದರಲ್ಲಿ ಯಾವ ಸಂದೇಹವೂ ಇಲ್ಲ.

ಈ ಸಲದ ಸಮ್ಮೇಳನದಲ್ಲಿ ಕನ್ನಡ ಭಾಷಾ ಸಾಹಿತ್ಯ ಸಂಸ್ಕೃತಿಗಳ ಏಳಿಗೆಗೂ ಕನ್ನಡಿಗರ ಒಕ್ಕಟ್ಟಿಕ್ಕೂ ಸಂಬಂಧಪಟ್ಟ ಅನೇಕ ಪ್ರಶ್ನೆಗಳು ಪರ್ಯಾಲೋಚಿತವಾಗಿ ಬಹು ಮುಖ್ಯವಾದ ತೀರ್ಮಾನಗಳಾಗತಕ್ಕದ್ದಿವೆ; ಆದುದರಿಂದ ಕರ್ನಾಟಕ ಎಲ್ಲ ಭಾಗಗಳಿಂದಲೂ ಅಭಿಮಾನಿಗಳು ದಯಮಾಡಿ ಬಂದು ಸಮ್ಮೇಳನವನ್ನು ಅತ್ಯಂತ ಯಶಸ್ವಿಯಾಗಿ ಮಾಡಬೇಕೆಂದು ಪರಿಷತ್ತು ವಿನಯದಿಂದ ಪ್ರಾರ್ಥಿಸುತ್ತದೆ.

### ತಾರೀಖುಗಳು.

ಸಮ್ಮೇಳನ ೧೯೩೮ ನೆಯ ಡಿಸೆಂಬರ್ ತಿಂಗಳ ೨೮, ೨೯ ಮತ್ತು ೩೦ ನೆಯ ತಾರೀಖುಗಳಲ್ಲಿ (ಕ್ರಿಸ್‌ಮಸ್ ರಜಾ ಕಾಲದಲ್ಲಿ) ಸೇರುವಂತೆ ನಿಶ್ಚಯವಾಗಿದೆ.

### ಅಧ್ಯಕ್ಷರು

ಬಹುಕಾಲದಿಂದ ಕನ್ನಡ ನಾಡು ನುಡಿಗಳ ಸೇವೆಯಲ್ಲಿ ನಿರತರಾಗಿದ್ದುಕೊಂಡು ಅವುಗಳ ಏಳಿಗೆಗಾಗಿ ಅಪೂರ್ವ ಭಕ್ತಿ ತ್ಯಾಗಗಳಿಂದ ಬಹುಮುಖವಾಗಿ ಕೆಲಸ ಮಾಡುತ್ತಿರುವ ಕನ್ನಡದ ಪ್ರಮುಖ ಮುಂದಾಳುಗಳಲ್ಲಿ ಒಬ್ಬರಾದ ಹುಬ್ಬಳ್ಳಿಯ ಆಧ್ಯಾತ್ಮ ಕಾರ್ಯಾಲಯದ ಒಡೆಯರಾದ ಶ್ರೀಮಾನ್ ಆರ್. ಆರ್. ದಿವಾಕರ್ ಎಂ. ಎ. ಎಲ್. ಎಲ್. ಬಿ. ಅವರು ದಯವಿಟ್ಟು ಪರಿಷತ್ತಿನ ಮತ್ತು ಸ್ವಾಗತ ಮಂಡಲಿಯವರ ಬೇಡಿಕೆಯನ್ನು ಮನ್ನಿಸಿ ಈ ಸಲದ ಸಮ್ಮೇಳನದ ಅಧ್ಯಕ್ಷಸ್ಥಾನವನ್ನು ಅಲಂಕರಿಸಲು ಒಪ್ಪಿರುವದು ವಿಶೇಷ ಸಂತೋಷದ ಸಂಗತಿಯಾಗಿದೆ.

### ಕವಿಗೋಷ್ಠಿ, ನಾಟ್ಯ ಸಮ್ಮೇಳನ.

ಕಳೆದ ವರ್ಷ ನಡೆಸಿದಂತೆ ಈ ವರ್ಷವೂ ಕವಿಗೋಷ್ಠಿಯನ್ನು ನಡೆಸಲು ಅವಕಾಶವಾಗಬಹುದು. ಇದರ ಜೊತೆಗೆ ನಾಟ್ಯಸಮ್ಮೇಳನವೊಂದನ್ನೂ ನಡೆಸುವ ಉದ್ದೇಶ ಸ್ವಾಗತ ಮಂಡಲಿಗೆ ಇದೆ.

### ಪ್ರಬಂಧ, ಭಾಷಣ, ನಿರ್ಣಯಗಳು ಇತ್ಯಾದಿ.

ಕನ್ನಡ ಭಾಷಾ ಸಾಹಿತ್ಯ ವಿಚಾರಗಳಿಗೆ ಸಂಬಂಧಪಟ್ಟ ಭಾಷಣಗಳು ಕನ್ನಡ ಸಾಹಿತ್ಯ ವಾಚನ ಮುಂತಾದ ಕಾರ್ಯಗಳಿಗೆ ಎಂದಿನಂತೆ ಅವಕಾಶವಿದೆ. ಮೇಲೆ ಕಂಡ ಕಾರ್ಯಗಳಲ್ಲಿ ಭಾಗವಹಿಸಲಿಚ್ಛಿಸುವ ಮಹನೀಯರು ತಮ್ಮ ಉದ್ದೇಶವನ್ನೂ ತಾವು ಮಾಡಬೇಕೆಂದಿರುವ ಭಾಷಣದ ಅಥವಾ ಓದಬೇಕೆಂದಿರುವ ಸಾಹಿತ್ಯ ವಿಭಾಗದ ಹೆಸರು ವಿಷಯ ಮುಂತಾದ ವಿವರಗಳನ್ನೂ ಮತ್ತು ಸಮ್ಮೇಳನದಲ್ಲಿ ನಿರ್ಣಯಗಳನ್ನು ಸೂಚಿಸಬೇಕೆಂದಿರುವವರು ಆ ನಿರ್ಣಯಗಳನ್ನೂ ಪರಿಷತ್ತಿನ ಗೌ|| ಕಾರ್ಯದರ್ಶಿಗಳಿಗಾಗಲಿ ಸ್ವಾಗತಮಂಡಲಿಯ ಕಾರ್ಯದರ್ಶಿಗಳಿಗಾಗಲಿ ತಾ. ೩೦-೧೧-೩೮ರೊಳಗಾಗಿ ಬರಹದ ಮೂಲಕ ತಿಳಿಸಬೇಕೆಂದು ಪ್ರಾರ್ಥನೆ. ಕನ್ನಡ ನಾಡಿನ ವಿದ್ವಾಂಸರೂ ಸಾಹಿತಿಗಳೂ ಕಲಾಭಿಜ್ಞರೂ ಅಭಿಮಾನಿಗಳೂ ಈ ಮೂಲಕ ಪರಿಷತ್ತು ಕೊಟ್ಟಿರುವ ಆಹ್ವಾನವನ್ನು ಸ್ವೀಕರಿಸಿ ಸಮ್ಮೇಳನದಲ್ಲಿ ಭಾಗವಹಿಸುವ ಮೂಲಕ ಅದನ್ನು ನಡೆಸಿಕೊಡಬೇಕೆಂದು ಪರಿಷತ್ತು ಬೇಡುತ್ತದೆ.

### ನಾಟಕ, ಯಕ್ಷಗಾನ, ಲಾವಣಿ.

ಸಮ್ಮೇಳನದಲ್ಲಿ ಈ ತರಹದ ಪ್ರದರ್ಶನಗಳಿಗೂ ಅವಕಾಶ ಕೊಡಬೇಕೆಂಬ ಉದ್ದೇಶವಿದೆ. ಕನ್ನಡ ನಾಡಿನ ನಾಟಕ ಸಂಘಗಳವರೂ ಯಕ್ಷಗಾನ ಮಂಡಲಿಯವರೂ ಲಾವಣಿಕಾರರೂ ಮುಂದಾಗಿ ತಾ. ೩೦-೧೧-೩೮ ರೊಳಗೆ ಪರಿಷತ್ತಿನ ಗೌ|| ಕಾರ್ಯದರ್ಶಿಗಳಿಗಾಗಲಿ ಅಥವಾ ಸ್ವಾಗತ ಮಂಡಲಿಗಾಗಲಿ ದರಖಾಸ್ತುಗಳನ್ನು ಕಳಿಸಬೇಕೆಂದು ಬೇಡಿಕೆ. ಸಮ್ಮೇಳನಕ್ಕೆ ಸುಮಾರು ಒಂದು ವಾರ ಮುಂಚಿತವಾಗಿ ಪರಿಷತ್ತು ಒಪ್ಪಿದ ದರಖಾಸ್ತುದಾರರಿಗೆ ಮಾತ್ರ ಉತ್ತರ ಬರೆಯಲಾಗುವದು ಹಾಗೆ ಪರಿಷತ್ತು ಒಪ್ಪಿದ ದರಖಾಸ್ತುದಾರರು ತಮ್ಮ ಪ್ರಯಾಣದ ವೆಚ್ಚ ಮುಂತಾದ ವಿಶಿಷ್ಟ ಖರ್ಚುಗಳನ್ನೂ ತಾವೇ ವಹಿಸಿಕೊಳ್ಳಲು ಸಿದ್ಧರಾಗತಕ್ಕದ್ದು. ಮತ್ತು ಕೂಡಿದ ಮಟ್ಟಿಗೂ ತಮ್ಮ ತಮ್ಮ ಸಲಕರಣೆ ಸಾಮಗ್ರಿಗಳನ್ನು ತಾವೇ ಒದಗಿಸಿಕೊಳ್ಳಬೇಕು. ಸ್ವಾಗತ ಮಂಡಲಿಯವರು ಸಂದರ್ಭ ಸನ್ನಿವೇಶಗಳ ಅನುಸಾರ ತಮ್ಮ ಅನುಕೂಲವಿರುವಷ್ಟು ಮಾತ್ರ ಸಹಕರಿಸಬಹುದು ನಾಟಕ ಸಂಘದವರಾಗಲಿ ಯಕ್ಷಗಾನ ಮಂಡಲಿಯವರಾಗಲಿ ಇತರ ಬಗೆಯ ಪ್ರದರ್ಶನಕಾರರಾಗಲಿ ತಮ್ಮ ಪ್ರದರ್ಶನಗಳಿಗೆ ಸ್ವಾಗತ ಮಂಡಲಿಯ ಅಥವಾ ಪರಿಷತ್ತಿನ ಒಪ್ಪಿಗೆ ಪಡೆದು ಪ್ರವೇಶ ಶುಲ್ಕವನ್ನು ಹಾಕಬಹುದು.

ಒಟ್ಟು ಕರ್ನಾಟಕದ ನಾನಾ ಭಾಗಗಳಲ್ಲಿರುವ ದೇಶಭಕ್ತರೂ ಭಾಷಾಭಿಮಾನಿಗಳೂ, ಸಾಹಿತ್ಯ ಪ್ರೇಮಿಗಳೂ, ಕಲಾಭಿಜ್ಞರೂ, ಸಮ್ಮೇಳನಕ್ಕೆ ಬರುವರೆಂದು ಬಳ್ಳಾರಿಯ ಸ್ವಾಗತಮಂಡಳಿ ನಿರೀಕ್ಷಿಸಿಕೊಂಡಿದೆ. ಎಲ್ಲರೂ ಬಂದು ಸಮ್ಮೇಳನ ಕಾರ್ಯಗಳಲ್ಲಿ ಭಾಗವಹಿಸಿ ತಾಯ್ನುಡಿಯ ಏಳಿಗೆಯ ಕೆಲಸಕ್ಕೆ ತಮ್ಮ ಬೆಂಬಲ ಕೊಡಬೇಕೆಂದು ಕರ್ನಾಟಕ ಸಾಹಿತ್ಯ ಪರಿಷತ್ತು ತನ್ನ ಪರವಾಗಿಯೂ ಬಳ್ಳಾರಿಯ ಸ್ವಾಗತ ಮಂಡಲಿಯ ಪರವಾಗಿಯೂ ಮತ್ತೊಮ್ಮೆ ಮನಃಪೂರ್ವಕವಾಗಿ ಪ್ರಾರ್ಥಿಸಿಕೊಳ್ಳುತ್ತದೆ.

ಸಿ. ಕೆ. ವೆಂಕಟರಾಮಯ್ಯ,
ಎಂ. ಎ. ಎಲ್ಎಲ್. ಬಿ.
ಗೌ|| ಕಾರ್ಯದರ್ಶಿ ಕ. ಸಾ. ಪರಿಷತ್ತು

# 'ಸಂಘೇ ಶಕ್ತಿ ಕಲಿಯುಗೇ.'

ವೀರಶೈವ ಮಹಾಸಭೆಯು ಹುಟ್ಟಿ ಇಂದಿಗೆ ೩೪ ವರ್ಷಗಳಾದಾಗ್ಯೂ ೧೯೧೭ ರಲ್ಲಿ ೮೭ ಸಾವಿರ ರೂ. ಗಳ ಚಿರಸ್ಥಾಯಿ ಫಂಡ ಕೂಡಿದಾಗ್ಯೂ ಕೇವಲ ೧೨ ಅಧಿವೇಶನಗಳು ಜರುಗಿದ್ದು ನಮ್ಮ ದುರ್ದೈವವೇ ಸರಿ. ಹಾಗು ಅಧಿವೇಶನಗಳ ಪ್ರತಿಫಲವು ಸಾಕಷ್ಟು ನಮ್ಮ ಸಮಾಜದಲ್ಲಿ ಉಂಟಾಗಿಲ್ಲ. ೧೨ ನೇ ಶತಮಾನದಲ್ಲಿ ಅಂದರೆ ಮಹಾನುಭಾವರಾದ ಬಸವಣ್ಣನವರ ಕಾಲದಲ್ಲಿ ಸರ್ವ ಧರ್ಮಗಳ ಶಿಖರವಾದ ವೀರಶೈವ ಧರ್ಮವು ಅಗ್ರಸ್ಥಾನದಲ್ಲಿದ್ದು ಈಗ ನಮ್ಮ ಸಮಾಜವು ಒಡಕುಗಳಿಗೆ ತುತ್ತಾಗಿ ಎಲ್ಲ ಧರ್ಮಗಳಿಂದ ನಿಂದಿಸಲ್ಪಡುವಂಥಾದ್ದಾಗಿದೆ.

ಭರತ ಖಂಡದ ಸರ್ವಸಮಾಜಗಳು ತೀವ್ರವಾಗಿ ಸುಧಾರಿಸುತ್ತಿರುವಲ್ಲಿ ವೀರಶೈವ ಸಮಾಜವು ಸುಪ್ತಾವಸ್ಥೆಯಲ್ಲಿರುವದು ಲಜ್ಜಾಸ್ಪದವೇ ಸರಿ. ಇದನ್ನು ಸುಧಾರಿಸುವದು ಈ ಮತದ ವಿದ್ಯಾವಂತರ ಹಾಗು ಮಠಾಧಿಪತಿಗಳನ್ನು ಅವಲಂಬಿಸಿದೆ. ಹೀಗೆ ಸಮಾಜಕ್ಕೂ ಮಠಗಳಿಗೂ ಅತಿ ನಿಕಟ ಸಂಬಂಧವಿದೆ. ಸಮಾಜದ ಸಂಸ್ಕರಣಕ್ಕಾಗಿ ಮಠಗಳು ನಿರ್ಮಿತವಾಗಿರುವವಲ್ಲದೆ ಕೆಲವು ವ್ಯಕ್ತಿಗಳ ಧೋರಣಕ್ಕಾಗಿ ಮಠಗಳು ಅಲ್ಲವೆಂಬುದು ಯಥಾರ್ಥವಾದುದು. ಒಂದಾನೊಂದು ಕಾಲಕ್ಕೆ ಭರತಖಂಡದ ಮಠಗಳೂ ಮಠಾಧಿಪತಿಗಳೂ ಜಗತ್ತಿಗೆ ಮಾದರಿಯಾಗಿಯೂ ಸರ್ವಮಾನ್ಯರಾಗಿಯೂ ಇದ್ದರೆಂದು ಹೇಳಲು ಹೆಮ್ಮೆಪಡುವಂಥಾದ್ದಾಗಿತ್ತು.

ಆದರೆ 'ನೀಚೈರ್ಗಚ್ಛತು ಪರಿಜದಶಾ ಚಕ್ರನೇ ಮಿಕ್ರಮೇಣ' (ಚಕ್ರದ ಅಂಚು ಕೆಳಕ್ಕೂ ಮೇಲಕ್ಕೂ ಹೋಗುತ್ತಿರುವವು' ಎಂಬ ಕವಿರತ್ನ ಕಾಳಿದಾಸನ ಉಕ್ತಿಯಂತೆ ಭಾರತೀಯರ ಮಠಗಳು ಶೋಚನೀಯಾವಸ್ಥೆಯನ್ನು ಹೊಂದಿವೆ. ಹೀಗಾಗಿ ಹಿಂದು ಧರ್ಮದ ಅಧಃಪತನವು ಆವಿರ್ಭವಿಸಿತು. ಅನೇಕ ಮತಾಂಧ, ಕರ್ತವ್ಯ ವಿಮುಖ ವಿಲಾಸಪ್ರೇಮಿಗಳು ಆದ ವ್ಯಕ್ತಿಗಳು ಹೆಚ್ಚಿ ಇಂದಿನ ನಮ್ಮ ಸಮಾಜವು ಅನೈಕಮತ್ಯದ ಗ್ರಂಥಿಯಾಗಿ ಬಿಡಿಸಲಸದಳವಾಗಿದೆ. ಇಡೀ ಭಾರತರಲ್ಲಿ ಏಕೆ? ವಿಶ್ವದಲ್ಲಿ ಅನೇಕ ಮಹಾತ್ಮರು ತಮ್ಮ ಸರ್ವಸ್ವಕ್ಕೆ ತಿಲಾಂಜಲಿ ಎರೆದು ಐಕಮತ್ಯವನ್ನು ಸ್ಥಾಪಿಸಲು ಬದ್ಧಕಂಕಣರಾಗಿ ನಿಂತಿರಲು ನಮ್ಮ ವೀರಶೈವ ಪ್ರಮುಖರು ಅಂಥರಂತೆ ಪಂಗಡಗಳನ್ನು ಸ್ಥಾಪಿಸಿ ವೀರಶೈವ ಕಲ್ಪತರುವಿನ ಮೂಲವನ್ನು ಭೇದಿಸುತ್ತಿರುವದು ವಿಷಾದಕರವೂ ಹೇಯವೂ ಆಗಿದೆಯೆನ್ನಲು ಸಂದೇಹವಿಲ್ಲ. ಎಲ್ಲಿಯ ವರೆಗೆ ಈ ಸ್ವಾಮಿಗಳೂ ವಿದ್ವಾಂಸರೂ ನೇತೃಗಳೂ ಮೂಲಭೂತವಾದ ತಾಯಿ ಬೇರನ್ನು ಭೇದಿಸಲು ಯೋಗ್ಯವಾದ ಶಿಕ್ಷಣವನ್ನು ಸಮಾಜದಲ್ಲಿ ಸ್ಥಾಪಿಸುವದಿಲ್ಲವೋ ಅಲ್ಲಿಯ ವರೆಗೆ ವೀರಶೈವ ಸಮಾಜವು ತನ್ನ ಗತವೈಭವದ ಶಿಖರವನ್ನು ಕಾಣಲು ಸಹ ಸಮರ್ಥವಾಗದು.

ವಿಶ್ವಧರ್ಮದ ವಿಚಾರವಿದ್ದ ವೀರಶೈವ ಧರ್ಮವನ್ನು ಪುನಃ ಸಜೀವಗೊಳಿಸಿ ಸರ್ವ ಶ್ರೇಷ್ಠ ಧರ್ಮವೆಂದು ಎಲ್ಲ ಪರಧರ್ಮಿಗಳು ಒಪ್ಪುವಂತೆ ಮಾಡಬೇಕಾದರೆ ನಮ್ಮಲ್ಲಿಯ ಅನೈಕತ್ವವು ಹೋಗಿ ಐಕ್ಯತ್ವವುಂಟಾಗಬೇಕು. ಇನ್ನು ಹುಬ್ಬಳ್ಳಿಯಲ್ಲಿ ಜರುಗುವ ೧೩ನೇ ಮಹಾಸಭಾಧ್ಯಕ್ಷರು ಕೆಳಗಿನ ನನ್ನ ಬೇಡಿಕೆಗಳನ್ನು ಸಭೆಯಲ್ಲಿ ತರಬೇಕಾಗಿ ಪ್ರಾರ್ಥನೆ. ಸಮಾಜ ಉನ್ನತಿಗೆ ಮುಖ್ಯ ಕಾರಣರಾದ ಎಲ್ಲ ಹಳ್ಳಿಹಳ್ಳಿಗಳಲ್ಲಿಯ ಮಠಾಧ್ಯಕ್ಷರುಗಳು ಆಮಂತ್ರಿಸಲ್ಪಡಬೇಕು. ಈ ಎಲ್ಲ ಮಹಾಸ್ವಾಮಿಗಳು ಒಂದೇ ಈಶ್ವರ ಸ್ವರೂಪಿಯೆಂದು ಭಾವಿಸಿ ತಮ್ಮ ತಮ್ಮಲ್ಲಿ ಮೇಲು ಕೀಳು ಎಂಬ ಸಂಕಲ್ಪ ತಿಲಮಾತ್ರ ತರದೆ ಸಮಾಜೋದ್ಧಾರದ ತಮ್ಮ ಆದ್ಯ ಕರ್ತವ್ಯವನ್ನು ಕೈಕೊಳ್ಳಬೇಕು. ಪ್ರತಿಯೊಂದು ಪಟ್ಟಣದಲ್ಲಿ ವೀರಶೈವ ಧರ್ಮೋದ್ಧಾರ ಸಂಘಗಳನ್ನು ಸ್ಥಾಪಿಸಬೇಕು. ಹಾಗು ಸಭಾಧ್ಯಕ್ಷರು ಸಹ ಈ ಕೆಲಸಕ್ಕೆ ಹೆಚ್ಚಾಗಿ ಉತ್ತೇಜನ ಕೊಡಬೇಕು.

**ಇಂಥ ಸಂಘಗಳ ಕರ್ತವ್ಯ ಕರ್ಮಗಳು.**

೧ ಬಹುತರ ಪ್ರತಿಯೊಬ್ಬ ವೀರಶೈವನು ಗೊತ್ತುಮಾಡಿದ ವರ್ಗಣಿ ಕೊಟ್ಟು ಮೆಂಬರರಾಗಬೇಕು (ಇದರಲ್ಲಿ ಲಿಂಗವಂತರಾದ ಚಲವಾದಿ ಡೋಹರ ಮೊದಲಾದ ಎಲ್ಲ ಕೀಳ ಉದ್ಯೋಗದವರು ಮುಖ್ಯವಾಗಿ ಸೇರಬೇಕು) ಚೇರಮನ್ನರು ಒಳ್ಳೇ ಧರ್ಮಾಭಿಮಾನಿ ಸುಶಿಕ್ಷಿತರಿರಬೇಕು. ಸುಶಿಕ್ಷಿತ ಸ್ವಾಮಿಗಳಿದ್ದರೆ ಹೆಚ್ಚು ನೆಟ್ಟಗೆ.

೨ ಸಂಘಗಳು ವೀರಶೈವರಲ್ಲಿ ಒತ್ತಾಯದ ಶಿಕ್ಷಣ, ಖಾದಿ ಪ್ರಸಾರ, ಅಸ್ಪೃಶ್ಯತಾನಿವಾರಣೆ ಮತ್ತು ವೀರಶೈವಾಗ್ರಣಿಗಳಿಂದ ಕೀರ್ತನ, ಪುರಾಣ ರೂಪವಾಗಿ ಧರ್ಮ ಬೋಧಿಸುವದು. ಒಳಭೇದಗಳನ್ನು ಮಹಾತ್ಮಾ ಬಸವಣ್ಣನವರ ತತ್ವದಂತೆ ಆಮೂಲಾಗ್ರವಾಗಿ ಕಿತ್ತೊಗೆಯಬೇಕು. ಯಾವ ಉದ್ಯೋಗವೂ ಕೀಳೆಂದು ಭಾವಿಸದೆ ಸನ್ಮಾರ್ಗಿ ವೀರಶೈವರಲ್ಲಿ ಹೆಣ್ಣು ಕೊಟ್ಟು ಹೆಣ್ಣು ತೆಗೆದುಕೊಂಡರೂ ಹೆಚ್ಚು ನೆಟ್ಟಗೆ. ಇದರಿಂದ ವೀರಶೈವರಲ್ಲಿ ವಿಶ್ವಬಂಧುತ್ವ ಉಂಟಾಗಿ ಮೇಲು ಕೀಳು ಎಂಬ ಉದ್ಯೋಗದ ಒಡಕು ಹುಟ್ಟುವುದಿಲ್ಲ. ಕಾಯಕವೇ ಕೈಲಾಸವೆಂಬುದನ್ನು ಎಲ್ಲರೂ ಅರಿಯಬೇಕು.

೩ ವೀರಶೈವರಲ್ಲಿ ಎಲ್ಲ ತರದ ಹೋರೆಗಳು ಪುನಃ ಸಜೀವಗೊಳ್ಳಬೇಕು. ಹಾಗು ವೀರಶೈವರಲ್ಲಿ ಹೆಚ್ಚು ವ್ಯವಹಾರ ಸಾಗಿಸಬೇಕು.

೪ ಸನ್ಮಾರ್ಗಿಗಳಾದ ಅನ್ಯ ಮತದವರು ನಮ್ಮ ಸಮಾಜದಲ್ಲಿ ಸೇರಲು ಇಚ್ಛಿಸಿದರೆ ಮಹಾಸಭೆಯ ಅಧ್ಯಕ್ಷರ ಒಪ್ಪಿಗೆಯನ್ನು ಪಡೆದು ಯಾವದೇ ಮಹಾಸ್ವಾಮಿಗಳ ಮುಖಾಂತರ ಶುದ್ಧೀಕರಿಸಬೇಕು. ಹೀಗೆ ಮಾಡುವದರಿಂದ ವೀರಶೈವ ಧರ್ಮವು ಬೆಳೆದು ಕಾಲಾಂತರದ ಮೇಲೆ ಪ್ರಬಲ ಸಮಾಜವಾಗುವದು. ರಾಷ್ಟ್ರೋನ್ನತಿಗೆ ಮಹಾತ್ಮಾ ಗಾಂಧಿಯವರು ಕೈಕೊಂಡ ಎಲ್ಲ ತತ್ವಗಳು ಪೂರ್ವದಲ್ಲಿ ಮಹಾನುಭಾವರಾದ ಬಸವಣ್ಣನವರು ವೀರಶೈವ ಧರ್ಮದಲ್ಲಿಯೇ ಅಡಕವಿರಿಸಿ ಸರ್ವಸಮ್ಮತವಾದ ಧರ್ಮ ಸ್ವರೂಪದಲ್ಲಿ ತಂದ ಮೂಲಕ ಇದರಲ್ಲಿ ಗುಣಗ್ರಾಹಿಗಳು ಸೇರಿ ಪುನೀತರಾಗುವದರಲ್ಲಿ ಸಂದೇಹವಿಲ್ಲ.

೫ ತಾಲೂಕಿಗೊಂದರಂತೆ ಶಾಖೆಯನ್ನು ಸ್ಥಾಪಿಸಿ ಒಬ್ಬ ಪಗಾರಿ ಇಲ್ಲವೆ ಸ್ವಾರ್ಥತ್ಯಾಗಿ ಒಳ್ಳೇ ಧರ್ಮಾಭಿಮಾನಿಯನ್ನು ನೇಮಿಸಿಕೊಂಡು ತಮ್ಮ ಸಂಘಗಳಲ್ಲಿ ಧರ್ಮಬೋಧೆ ಮಾಡುವದು ಒಡಕುಗಳು ಹುಟ್ಟದಂತೆ ಒಕ್ಕಟ್ಟಾಗಿ ವೀರಶೈವರು ಕೆಲಸ ತತ್ಪರರಾಗುವಂತೆ ಉಪದೇಶಿಸಬೇಕು.

೬ ಇವೆಲ್ಲ ಸಂಘಗಳ ಮೇಲ್ವಿಚಾರಣೆ ಇಲ್ಲವೇ ಯಾವದೇ ಮಹತ್ವದ ನಿರ್ಣಯ ಮಹಾಸಭೆಯ ಸಭಾಸದರ ಕಡೆಗಿರಬೇಕು.

'ಸಂಘೇ ಶಕ್ತಿ ಕಲಿಯುಗೇ' ಎಂಬಂತೆ ಕಲಿಯುಗದಲ್ಲಿ ಕೇವಲ ಸಂಘಶಕ್ತಿಯಿಂದಲೇ ಮಹತ್ವದ ಕಾರ್ಯಗಳಾಗುತ್ತಿದ್ದ ಮೂಲಕ 'ವೀರಶೈವ ಧರ್ಮ' ಬಕುಳದ ಮಧುರವು ಮೂಲೆ ಮೂಲೆಗಳಲ್ಲಿ ಮಂದಮಾರುತನಿಂದ ಅಲೆದಾಡಿ ಸರ್ವಧರ್ಮ ಶಿರೋಮಣಿಯಾಗಿ ಮೆರೆಯುವದು. ಇಲ್ಲದಿದ್ದರೆ ಮಹಾಸಭೆಯಲ್ಲಿ ವಾಕ್ ಚಾತುರ್ಯವನ್ನು ತೋರಿಸಿ ಕೆಲಸ ಕೈಕೊಳ್ಳದೆ ಹೆಮ್ಮೆಯಿಂದ ಹೋದರೆ ಹೇರಳ ಹಣ ಹಾನಿ ಮಾಡಿ ಭರತಖಂಡದ ಬಡಮಾತೆಯ ಒಂದು ಅಂಗ ಮುರಿದ ದೋಷವು ತಪ್ಪದು.

ಸಮಾಜ ಸೇವಕ,
ಗಂಗಾಧರ ಮ. ಹನಗಂಡಿ.
ಟೀಚರ ಗೋಕಾಕ.

# ವೀರಶೈವ ತರುಣ ಸಂಘ
## ಹಳ್ಳೀಕೇರಿ.

ಯಾವದಾದರೊಂದು ಸಮಾಜದ ಉನ್ನತಿಗೆ ಆ ಸಮಾಜದ ತರುಣರ ಉತ್ಸಾಹ ಚಟುವಟಿಕೆಗಳೇ ಕಾರಣವು. ಅಂಥ ತರುಣರ ಸಂಘಟನೆಯನ್ನು ಮಾಡಿ ಅವರ ಉತ್ಸಾಹ, ಚಟುವಟಿಕೆಗಳು ಏಕಮುಖವಾಗಿ ಹರಿಯುವಂತೆ ಮಾಡಿದರೆ ನಿಜವಾಗಿಯೂ ಸಮಾಜದ ಹೆಚ್ಚಳವು ಬೇಗನೆ ಆಗುವದು. ಈ ಮಾತು ವೀರಶೈವ ಸಮಾಜಕ್ಕೂ ಅಷ್ಟೇ ರೀತಿಯಲ್ಲಿ ಅನ್ವಯಿಸುತ್ತದೆ. ನಮ್ಮ ಸಮಾಜದಲ್ಲಿ ಕಂಡುಬರುವ ಈಗಿನ ಸಾರ್ವಜನಿಕ ಕಾರ್ಯಕಲಾಪಗಳು ಹಿಂದು ಕಾಲದಲ್ಲಿ ತರುಣರು ಕೂಡಿ ನಿಶ್ಚಯ ಮಾಡಿದ ಪ್ರಯತ್ನಗಳ ಫಲಗಳಾಗಿರುತ್ತವೆ. ಸಮಾಜವು ಬೆಳೆಯುತ್ತ ಬಂದಹಾಗೆ ಸಮಾಜದ ಹಿತವನ್ನು ಬೇರೆ ಬೇರೆ ರೀತಿಯಿಂದ ಯೋಚಿಸಬೇಕಾಗುತ್ತದೆ. ಹಿಂದಿನವರು ಮಾಡಿದ ಕೆಲಸಗಳು ಇಂದು ನಮ್ಮನ್ನು ಆಯಾ ದೃಷ್ಟಿಯಿಂದ ಮುಂದೆ ತಂದಿರುತ್ತವೆ. ಇಂದು ನಾವು ಮತ್ತೆ ನವಯುಗದ ವಾತಾವರಣಕ್ಕನುಸರಿಸಿ ಸಮಾಜೋತ್ಕರ್ಷರಾಗಿ ಕೈಕೊಳ್ಳಬಹುದಾದ ಕಾರ್ಯಕ್ರಮಗಳನ್ನು ನಿಶ್ಚಯಿಸಿಕೊಂಡು ಮುಂದುವರಿಯಬೇಕಾಗಿದೆ. ಈ ಕೆಲಸಕ್ಕೆ ಈಗಿನ ತರುಣರೇ ಮುಂದೆ ಬರಬೇಕೆಂಬುದನ್ನು ಮತ್ತೆ ಹೇಳಲವಶ್ಯವಿಲ್ಲ.

ಈ ಉದ್ದೇಶವನ್ನರಿತು ನಮ್ಮ ಸಂಘವಾದರೂ ಲಿಂಗ ಭಕ್ತರಲ್ಲಿ ಸದಾಚಾರ ಸಮಾನತೆ ಐಕ್ಯತೆಯನ್ನುಂಟುಮಾಡುವದು ಲಿಂಗ ಭಕ್ತರ 'ನೋವೇ ಲಿಂಗದ ನೋವು' 'ಲಿಂಗಭಕ್ತರ ಸೇವೆಯೇ ಲಿಂಗದ ಸೇವೆ' ಎಂಬುದನ್ನರಿತು ಆಚರಿಸುವುದು ವೀರಶೈವರ ಕಾಯಕಗಳಲ್ಲಿ ಕಳೆ ತುಂಬುವದು ಕನ್ನಡ ನಾಡು ಕನ್ನಡ ನುಡಿಯ ಬಗ್ಗೆ ಆದರಾಭಿಮಾನಗಳನ್ನು ಹುಟ್ಟಿಸುವದು, ಊರ ಸ್ವಚ್ಛತೆ, ಆರೋಗ್ಯಗಳ ಕಡೆಗೆ ಲಕ್ಷ ಕೊಡುವದು, ಜನರಲ್ಲಿ ವಾಚನಾಭಿರುಚಿಯನ್ನು ಹುಟ್ಟಿಸುವದು, ಭಜನಾ ಸಂಘದ ಮೂಲಕ ಜನರಲ್ಲಿ ಭಕ್ತಿ, ಸದಾಚಾರ ಸದ್ವರ್ತನೆಗಳುಂಟಾಗುವಂತೆ ಶಿವಶರಣ—ಶರಣೆಯರ ವಚನಗಳನ್ನು ಅನ್ನುವದು ತ್ಯಾಗಿಗಳೂ ಯೋಗಿಗಳೂ ಘನವಿರಾಗಿಗಳೂ ಆದವರಿಂದ ರಚಿಸಲ್ಪಟ್ಟ ಪದಗಳನ್ನು ಹಾಡುವದು ಜಗತ್ತಿನ ವಿಭೂತಿಗಳಲ್ಲಿ ಅಗ್ರಸ್ಥಾನವನ್ನು ಪಡೆದ ಬಸವ ಮಹಾನುಭಾವನ ಜಯಂತ್ಯುತ್ಸವವನ್ನು ತಪ್ಪದೇ ಆಚರಿಸಿ ಸಮಾಜದಲ್ಲಿ ಜೀವಕಳೆ ತುಂಬುವದು ಇವೇ ಮೊದಲಾದ ಉಪಯುಕ್ತ ಕಾರ್ಯಗಳನ್ನು ಮಾಡುತ್ತ ಬಂದ ಈ ಸಂಘದ ೧೨ ಮತ್ತು ೧೩ ನೇ ವರ್ಷದ ವರದಿಯನ್ನು ಜನತೆಯ ಮುಂದಿಡುವ ಸುಯೋಗವು ಇಂದು ದೊರೆತುದಕ್ಕಾಗಿ ತರುಣರಾದ ನಮ್ಮೆಲ್ಲರಿಗ ಪರಮಾನಂದವಾಗಿದೆ.

೧೯೩೫ ನೇ ಇಸ್ವಿಯಲ್ಲಿ ಶ್ರೀ. ಬಸವೇಶ್ವರ ಭಜನಾಸಂಘವೂ ೧೯೩೬ ರಲ್ಲಿ ವಾಚನಾಲಯವೂ ಸ್ಥಾಪಿತವಾಗಿ ಅವುಗಳ ಉದ್ದೇಶಕ್ಕನುಸರಿಸಿ ಕಾರ್ಯ ಮಾಡಲಾರಂಭಿಸಿವೆ.

೧೯೨೭ ನೇ ಇಸ್ವಿಯಿಂದ ಇಲ್ಲಿಯ ವರೆಗೆ ಶ್ರೀ ಜಗದ್ಗುರು ಬಸವೇಶನ ಜಯಂತ್ಯುತ್ಸವವು ತಪ್ಪದೆ ಆಚರಿಸಲ್ಪಡುತ್ತದೆ. ಇದರಲ್ಲಿ ಪಂಡಿತ ಜನರನ್ನು ಕರೆಯಿಸಿ. ಧಾರ್ಮಿಕ ಸಾಮಾಜಿಕ ಮತ್ತು ರಾಷ್ಟ್ರೀಯ ವಿಷಯಗಳ ಮೇಲೆ ಅವರ ಭಾಷಣವನ್ನು ಕೇಳುವ ಸುಯೋಗವನ್ನು ಒದಗಿಸಿಕೊಟ್ಟು ವಿಚಾರಕ್ರಾಂತಿಯಾಗುವಂತೆ ಯಥಾಶಕ್ತಿ ಪ್ರಯತ್ನಿಸುತ್ತ ಬಂದಿದೆ.

ಊರವರಾದರೂ ಇದುವರೆಗೆ ಸಹಾನುಭೂತಿಯಿಂದ ಸಹಾಯ ಮಾಡುತ್ತ ಬಂದಂತೆ ಮುಂದಾದರೂ ಮಾಡಿ ನಮ್ಮ ಸೇವೆಯನ್ನು ಸ್ವೀಕರಿಸಿ ಊರಿಗೆ ಕೀರ್ತಿಯನ್ನು ತರಲೆಂದು ಅವರಲ್ಲಿ ನಮ್ಮ ನಮ್ರ ವಿನಂತಿಯು.

ಇದುವರೆಗೆ ಭಾಷಣ ಲೇಖನಗಳ ಮೂಲಕ ಸಹಾಯಮಾಡಿದ ಪಂಡಿತರಿಗೂ ಸ್ವಹಸ್ತ ಪರಹಸ್ತಗಳಿಂದ ಸಹಾಯಮಾಡಿದ ಸ್ಥಳ ಪರಸ್ಥಳದ ಮಹಾಶಯರಿಗೂ ದಯಾನಿಧಿಯೂ, ಭಕ್ತವತ್ಸಲನೂ ಆದ ಪರಮಗುರು ಬಸವೇಶನು ಅವರವರ ಅಪೇಕ್ಷೆಯನ್ನು ಪೂರೈಸಲೆಂದು ಬೇಡಿಕೊಳ್ಳುವೆವು.

ನಾಮದಾರ ದಿವಾಣ ಬಹಾದ್ದೂರ್ ಎಸ್. ಟಿ. ಕಂಬಳಿಯವರು ನಮ್ಮ ಸಂಘಕ್ಕೆ ತಾ. ೯-೧೧-೩೬ ನೇ ದಿವಸ ಆಗಮಿಸಿದ್ದಕ್ಕೆ ಸಂಘದವರಾದ ನಾವು ಅವರಿಗೆ ಬಹಳ ಕೃತಜ್ಞತಾಪೂರ್ವಕವಾಗಿ ಅಭಿನಂದಿಸುತ್ತೇವೆ.

| ಅಧ್ಯಕ್ಷರು | ಗೌ\| ಕಾರ್ಯದರ್ಶಿ |
|---|---|
| ಲಿಂಗಶೆಟ್ಟಿ ಮಲ್ಲಪ್ಪನವರು. | ವೀರಭದ್ರಯ್ಯ ಗವ್ಡರಮಠ. |

# ವೀರಶೈವ ಮಹಾ ಸಭೆಯ

## ಸ್ವಾಗತ ಸಂಘದವರ ಪ್ರಯತ್ನವು ಫಲಿಸುವದೇ ?

( ಲೇಖಕರು— ಪಂಡಿತ ನಾಗಭೂಷಣ ಶಾಸ್ತ್ರಿ
ಶ್ರೀ ಅ. ಸಂ. ವಿದ್ಯಾಲಯಾಧ್ಯಾಪಕ ಗದಗ. )

ಈ ಸಾರೆ ಹುಬ್ಬಳ್ಳಿಯಲ್ಲಿ ಬರುವ ಡಿಶೆಂಬರ ತಿಂಗಳ ಕೊನೆಗೆ ೧೩ ನೇ ವೀರಶೈವ ಮಹಾಸಭೆಯು ಕೂಡಲಿರುವದು ಸರ್ವಶ್ರುತವಷ್ಟೆ. ಅಲ್ಲಿಯ ಮಹಾಜನರು ಈಗಾಗಲೇ ಮಹಾಸಭೆಯು ಯಶಸ್ವಿಯಾಗಬೇಕೆಂಬ ಸದಿಚ್ಛೆಯಿಂದ ಭರದಿಂದ ಕಾರ್ಯಾಸಕ್ತರಾಗಿರುವುದಾಗಿಯೂ ತಿಳಿದುಬಂದಿದೆ. ಇಷ್ಟರಲ್ಲಿಯೇ ಸ್ವಾಗತ ಸಂಘದವರು ಗುರು ವಿರಕ್ತ ವರ್ಗದ ಕಲಹ ನಿವಾರಣೆಗಾಗಿ ಸಿದ್ಧಪಡಿಸಿದ ಯೋಜನೆಯ ಪ್ರಕಟನೆಯನ್ನು ನೋಡಿದರೆ ಈ ಸಲ ಮಹಾಸಭೆಯು ಸಮಾಜ ಪುರುಷನಿಗಂಟಿಕೊಂಡ ಒಂದು ಮಹಾರೋಗಕ್ಕೆ ಚಿಕಿತ್ಸೆ ಮಾಡುವ ಸಾಹಸದಲ್ಲಿರುವದೆಂದು ಸಮಾಜಾಭ್ಯುದಯಾಕಾಂಕ್ಷಿಗಳೆಲ್ಲರೂ ಸಂತೋಷಪಡುವಂತಿದೆ. ಆದರೆ ಗುರುವಿರಕ್ತ ವರ್ಗದವರು ತಮ್ಮ ಅಂತಃಕಲಹವನ್ನು ದೂರಮಾಡಿಕೊಂಡು ಸಮಾಜಾಭ್ಯುನ್ನತಿಗೆ ನೆರವಾಗಬೇಕೆಂದು ಬಯಸಿದರಲ್ಲವೆ?

ಸಮಾಜ ಸೇವಾಸಕ್ತರೇ ಗುರುಗಳಾಗಿ ತಿಳಿಯಲ್ಪಡುವ ಈ ಕಾಲದಲ್ಲಿ ಗುರುಪೀಠವನ್ನಲಂಕರಿಸಿದ್ದರೂ ಸಮಾಜದ ಕಲ್ಯಾಣಕ್ಕಾಗಿ ಪ್ರಯತ್ನಿಸದೆ ತಾವು ಗುರುಗಳೆಂದು ಹೆಮ್ಮೆಪಡುವಲ್ಲಿ ಅರ್ಥವಿಲ್ಲ. ಗುರುಗಳು ತಮ್ಮ ಗುರುತ್ವವನ್ನು ಸಮಾಜ ಸೇವೆಯಿಂದಲೇ ರಕ್ಷಿಸಿಕೊಳ್ಳತಕ್ಕದ್ದು. ಈಗ ವೀರಶೈವ ಸಮಾಜವು ಉಭಯ ಗುರುಗಳ ಅಂತಃಕಲಹದಿಂದ ದುರವಸ್ಥೆಗೀಡಾಗಿದ್ದ ಕಾರಣ ತೀವ್ರವಾಗಿ ತಮ್ಮ ಕಲಹ ದೂರಮಾಡಿಕೊಳ್ಳುವದು ಶ್ರೇಯಸ್ಕರ. ಆದರೆ ಸ್ವಾಗತ ಸಂಘದವರು ಪ್ರಕಟಿಸಿದಂತೆ ೧೦–೨೦ ಸಾವಿರ ರೂ. ಗಳಷ್ಟು ವೆಚ್ಚ ಮಾಡಿ ಕಲಹ ದೂರಮಾಡಿಕೊಳ್ಳುವದು ಗುರುಪೀಠಾಲಂಕಾರಮಾಡಿದವರಿಗೆ ಅಷ್ಟು ಭೂಷಣವೆನಿಸಲಿಕ್ಕಿಲ್ಲ. ಉಭಯರೂ ತಮ್ಮಲ್ಲಿರುವ ಸ್ವಾರ್ಥ ದುರಭಿಮಾನಗಳನ್ನು ಸಮಾಜ ಕಲ್ಯಾಣೇಚ್ಛೆಯಿಂದ ಕಿತ್ತೆಸೆಯಲು ಸಿದ್ಧರಾದಲ್ಲಿ ತಮ್ಮಲ್ಲಿಯೇ ಸಂಘಟನೆ ಮಾಡಿಕೊಂಡು ಕಲಹ ದೂರಮಾಡಿಕೊಳ್ಳುವದು ಮೇಲು. ಹಾಗಾಗದಿದ್ದಲ್ಲಿ ಸಮಾಜದ ನಿಷ್ಪಕ್ಷಪಾತಿ ಪ್ರಮುಖರಲ್ಲಿ ನಿವಾರಣೆ ಮಾಡಿಕೊಳ್ಳಲು ಅಡ್ಡಿಯಿಲ್ಲ. ಒಂದುವೇಳೆ ಉಭಯ ಜಗದ್ಗುರುಗಳು ತಮ್ಮ ಅಂತಃಕಲಹವನ್ನು ದೂರ ಮಾಡಿಕೊಳ್ಳಲು ಯತ್ನಿಸದಿದ್ದಲ್ಲಿ ಸಮಾಜದ ಹಿತೈಷಿಗಳು ಸಮಾಜದ ದುರ್ದೈವವೆಂದು ಕೇವಲ ಹಣೆಗೆ ಕೈ ಹಚ್ಚಿ ವ್ಯಥೆಪಡಬೇಕಾಗುವದೆಂದು ಯಾರೂ ತಿಳಿಯಕೂಡದು. ಆ ವ್ಯಥೆಯು ಗುರು ವಿರಕ್ತ ಮಠಗಳ ಪುನರುದ್ಧಾರದ ಪೂರ್ವ ಸಿದ್ಧತೆಗೆ ಪ್ರಧಾನ ಸಾಧನವಾಗುವಲ್ಲಿ ಸಂದೇಹವಿಲ್ಲ. ಪ್ರಗತಿಯ ಕಾಲದಲ್ಲಿ ವಿಷಯಸುಖದಲ್ಲಿ ಮೈಮರೆತು ಸ್ವ ಕರ್ತವ್ಯ ಚ್ಯುತರಾಗಿ ಕುಳಿತುಕೊಂಡಿದ್ದ ರಶಿಯಾ ದೇಶದ ಮಠಾಧಿಕಾರಿಗಳ ವಿಷಯದಲ್ಲಿ ಅಲ್ಲಿಯ ಮುತ್ಸದ್ದಿಗಳಿಗುಂಟಾದ ವಿಷಾದದ ಪರಿಣಾಮವೇನಾಯಿತೆಂಬುದನ್ನು ಇಲ್ಲಿಯ ಮಠಾಧಿಕಾರಿಗಳು ಲಕ್ಷ್ಯಕ್ಕೆ ತೆಗೆದುಕೊಳ್ಳುವದುತ್ತಮ. ಅಲ್ಲಿಯ ಸಾಧನ ಮಾರ್ಗದಲ್ಲಿ ವ್ಯತ್ಯಾಸವಾಗಬಹುದಾದರೂ ಸಾಧ್ಯದಲ್ಲಿ ವ್ಯತ್ಯಾಸವಾಗುವದಿಲ್ಲವೆಂಬುದು ಖಂಡಿತ. ಆ ಕಾರಣ ಉಭಯ ಜಗದ್ಗುರುಗಳು ಶೀಘ್ರವಾಗಿ ತಮ್ಮ ಗುರುಪೀಠಕ್ಕುಚಿತವಾದ ಕಾರ್ಯದಲ್ಲಿ ತೊಡಗಬೇಕೆಂದು ನಮ್ಮ ಬಲವಾದ ಆಶೆ.

ಈ ಸಾರೆ ಮಹಾಸಭೆಯ ಅಧ್ಯಕ್ಷ ಪೀಠವನ್ನಲಂಕರಿಸುವ ಸುಯೋಗವು ಯಾರಿಗೊದಗುವದೋ ಎಂದು ಕೆಲವರ ಚಿಂತೆ. ಅಧ್ಯಕ್ಷರಾಗುವದೆಂದರೆ ಅದೊಂದು ಜೀವನದಲ್ಲಿ ಗಳಿಸಬೇಕಾದ ದೊಡ್ಡಸಿಕೆಯ ಕುರುಹು ಎಂದು ತಿಳಿದು ಅದಕ್ಕಾಗಿ ನಾನಾ ರೀತಿಯಿಂದ ಪ್ರಯತ್ನ ಮಾಡುವವರು ಅನೇಕ ಜನರಿದ್ದಾರೆ. ಆದರೆ ಆ ಸ್ಥಾನದಲ್ಲಿದ್ದವರು ಸ್ಥಾನಕ್ಕುಚಿತವಾದ ಕಾರ್ಯದಕ್ಷರಾಗದಿದ್ದಲ್ಲಿ ಎಷ್ಟು ಅವಮಾನಕ್ಕೀಡಾಗಬೇಕಾಗುವದೆಂಬುದನ್ನು ಮರೆಯಕೂಡದು. ಅಧ್ಯಕ್ಷರಾಗುವವರು ಕಾರ್ಯಮಾಡುವಲ್ಲಿ ಹಾಗು ಮಾಡಿಸುವಲ್ಲಿಯೂ ಸಬಲರಾಗಿರಬೇಕಾಗುವದು. ಅಧ್ಯಕ್ಷ ಪೀಠವು ಹಂಸತೂಲದಿಂದ ಮೃದುವಾಗಿರುವದೆಂದು ತಿಳಿಯುವದಕ್ಕಿಂತ ತೀಕ್ಷ್ಣ ಕಂಟಕಮಯವಾಗಿರುವದೆಂದು ಬಲ್ಲವರು ತಿಳಿಯದಿರರು. ಅಧ್ಯಕ್ಷರಾಗುವದಕ್ಕಿಂತ ಸ್ವಯಂಸೇವಕರಾಗಿ ಕೆಲಸ ಮಾಡುವಲ್ಲಿ ಹೆಚ್ಚು ಆನಂದವಿರುವದು. ಅಂತು ಈ ಸಾರೆ ಮಹಾಸಭೆಗೆ ಎಲ್ಲರನ್ನೂ ತನ್ನ ಕಡೆಗೆ ಎಳೆದುಕೊಂಡು ಮಹಾಸಭೆಯ ನಿರ್ಣಯಗಳನ್ನು ಅವಿರೋಧವಾಗಿ ಕಾರ್ಯರಂಗಕ್ಕಿಳಿಸುವಂತೆ ಸಮಾಜ ಬಾಂಧವರನ್ನೆಲ್ಲಾ ಪ್ರೋತ್ಸಾಹಿಸುವಂಥ ಅಧ್ಯಕ್ಷರು ದೊರೆತು ವೀರಶೈವ ಸಮಾಜವು ಮುಂದಡಿಯಿಡುವಂತಾಗಲೆಂಬುದೇ ನಮ್ಮ ಹಬ್ಬಯಿಕೆಯು.

---

# ವೀರಶೈವ ಮಹಿಳಾ ಪರಿಷತ್ತಿಗೆ

## ಅಧ್ಯಕ್ಷರು ಯಾರು ?

ಶ್ರೀ. ಗೌರವ್ವಾಬಾಯಿ ವಾರದ ಇವರ ಅಧ್ಯಕ್ಷತೆಯ ಕೆಳಗೆ ತಾ. ೧೭-೧೧-೩೬ ನೆಯ ದಿವಸ ಸೊಲ್ಲಾಪುರ ಮಹಿಳಾ ಜ್ಞಾನ ಮಂದಿರದ ಮಹಿಳೆಯರೆಲ್ಲರೂ ಕೂಡಿ ಕೆಳಗೆ ವಿವರಿಸಿದ ಠರಾವನ್ನು ಸರ್ವಾನುಮತದಿಂದ ಪಾಸು ಮಾಡಲಾಯಿತು.

ಹುಬ್ಬಳ್ಳಿಯಲ್ಲಿ ಈ ಸಾರೆ ಆಗಲಿರುವ ಅಖಿಲ ಭಾರತ ವೀರಶೈವ ಮಹಿಳಾ ಮಹಾಸಭೆಗೆ ಅಧ್ಯಕ್ಷರಾಗಲು ಸೊಲ್ಲಾಪುರ ಸುಪ್ರಸಿದ್ಧ ಶ್ರೀಮಂತರೂ ಕೈ. ವಾರದ ಅಪ್ಪಾಸಾಹೇಬರವರ ಮೊಮ್ಮಕ್ಕಳೂ ಆದ ವಿದ್ಯಾಭೂಷಣೆ ಸೌ|| ಜಯದೇವಿ ಬಾಯಿ ಲಿಗಾಡೆ ಇವರು ಎಲ್ಲ ರೀತಿಯಿಂದಲೂ ಯೋಗ್ಯರಾಗಿದ್ದಾರೆ. ಇವರು ಕನ್ನಡ, ಮರಾಠಿ ಸಾಧಾರಣ ಇಂಗ್ಲಿಷ, ಹಿಂದಿ ಬಲ್ಲವರಾಗಿಯೂ ಉತ್ತಮ ವ್ಯಾಖ್ಯಾನಕಾರರಾಗಿಯೂ ಕವಯಿತ್ರಿಗಳಾಗಿಯೂ ಇದ್ದಾರೆ. ಮತ್ತು ನಿಗರ್ವಿಗಳೂ ಸಮಾಜ ಸೇವಾ ಧುರೀಣರೂ ಸದಾಚಾರ ಸಂಪನ್ನರೂ ಆಗಿದ್ದಾರಲ್ಲದೆ ಅಕ್ಕನ ಬಳಗವೆಂಬ ಅನೇಕ ಸಂಸ್ಥೆಗಳನ್ನು ಸ್ಥಾಪಿಸಿ ಸ್ತ್ರೀಯರನ್ನು ಜಾಗೃತಮಾಡಿದ್ದಾರೆ. ಆದ್ದರಿಂದ ಇವರೇ ಸರ್ವವಿಧದಿಂದಲೂ ಯೋಗ್ಯರಾಗಿರುವದರಿಂದ ಇವರನ್ನೇ ಅಧ್ಯಕ್ಷರನ್ನಾಗಿ ನೇಮಿಸಿಕೊಳ್ಳಬೇಕೆಂದು ಠರಾವು ಪಾಸು ಮಾಡಲ್ಪಟ್ಟಿತು.

ಸೆಕ್ರೆಟರಿ
ಮಹಿಳಾ ಜ್ಞಾನ ಮಂದಿರ
ಸೊಲ್ಲಾಪುರ.

---

—ಬಡೋದಾ ಮಹಾರಾಜರ ರೌಪ್ಯ ಮಹೋತ್ಸವದ ಸ್ಮರಣಾರ್ಥವಾಗಿ ಮಾಡಿದ್ದ ಹಣದ ಮೇಲಿನ ೬೩೭೦೦೦ ರೂ. ಗಳ ಬಡ್ಡಿಯ ರಕಮನ್ನು ಹಳ್ಳಿಗಳಲ್ಲಿ ರೆಡಿಯೋ ಸೌಕರ್ಯ ಒದಗಿಸಿಕೊಡುವ ಬಗ್ಗೆ. ವೆಚ್ಚಮಾಡತಕ್ಕದ್ದೆಂದು ಮಹಾರಾಜರು ಅಪ್ಪಣೆಮಾಡಿದ್ದಾರೆ.

—ಮುಂಬೈಯಿಂದ ಪೋರ ಬಂದರಕ್ಕೆ ವಿಮಾನಾರೋಹಣರಾಗಿ ನಾಲ್ಕು ತಾಸುಗಳಲ್ಲಿ ಹೋಗುವ ವ್ಯವಸ್ಥೆಯಾಗಿದೆ.

(೧೧ ನೇ ಪುಟದಿಂದ ಬಂದುದು.)

ದನ್ನು ವ್ಯಕ್ತಗೊಳಿಸುವುದೇ ಈ ಧ್ವಜದ ಉದ್ದೇಶಗಳಲ್ಲಿ ಒಂದು ಮುಖ್ಯವಾದುದು. ಎಂದಮೇಲೆ ಕೇವಲ ಬಹುಮತದ ಬಲದಿಂದ ಇದನ್ನು ಯಾವ ಕಾರ್ಯದಲ್ಲಿ ಉಪಯೋಗಿಸುವುದೂ ನ್ಯಾಯವಾದುದಲ್ಲ.

ರಾಷ್ಟ್ರಧ್ವಜ ಉಪಯೋಗ ಮಾಡುವವರು ಈ ಸಂಗತಿಗಳನ್ನು ಲಕ್ಷಿಸುವುದು ಅಗತ್ಯವಾಗಿದೆ ಧಾರ್ಮಿಕ ಉತ್ಸವಗಳಲ್ಲಿಯೂ ದೇವಾಲಯ ಮೊದಲಾದ ಧಾರ್ಮಿಕ ನಿಲಯಗಳ ಮೇಲೆಯೂ ಲಗ್ನಾದಿವಿಶಿಷ್ಟ ಧಾರ್ಮಿಕ ಕಾರ್ಯಗಳಲ್ಲಿಯೂ ರಾಷ್ಟ್ರಧ್ವಜವನ್ನು ಉಪಯೋಗಿಸಿ ಅದರ ವಿಷಯದಲ್ಲಿ ಮಹಾಭಕ್ತಿ ವಿಶ್ವಾಸಗಳಿವೆಯೆಂಬುದನ್ನು ತೋರಿಸುವುದು ಕೆಲವರಲ್ಲಿ ಹೆಚ್ಚಿದೆ. ಇದು ಸರಿಯಲ್ಲ. ಹೀಗಾದರೆ ಅದೊಂದು ಧಾರ್ಮಿಕಧ್ವಜವಾಗಿಯೂ ಪರಿಣಮಿಸಿ ಕೆಲವು ಮತದವರಿಗೆ ಅದು ತಮ್ಮದಲ್ಲವೆಂಬ ತಿಳುವಳಿಕೆ ಹುಟ್ಟಬಹುದು. ರಾಷ್ಟ್ರಕಾರ್ಯದಲ್ಲಿಯೇ ಯಾರ ವಿರೋಧವೂ ಇಲ್ಲದಾಗ ಮಾತ್ರ ಇದನ್ನು ಉಪಯೋಗಿಸುವುದೇ ವಿಹಿತ.

---

### ಶ್ರೀ ಶಿವಯೋಗ ಮಂದಿರಕ್ಕೆ

## ಮುಂಬೈ ಇಲಾಖೆಯ

### ಉಪ ಮಂತ್ರಿಗಳಾದ ಶ್ರೀ ಎಮ್. ಪಿ. ಪಾಟೀಲರ ಭೆಟ್ಟಿ.

ತಾ ೨೪-೧೦-೩೮ ನೇ ದಿವಸ ಪ್ರಾತಃಕಾಲ ೮ ಘಂಟೆಗೆ ದೇ.ಭ. ಹಳ್ಳಿಕೇರಿ ಗುದ್ಲೆಪ್ಪನವರು ದೇ. ಭ. ಮರುಳಾರಾಧ್ಯ ಶಾಸ್ತ್ರಿಗಳು ಮುಂತಾದವರೊಡನೆ ಶ್ರೀ ಎಮ್. ಪಿ. ಪಾಟೀಲರು ಆಗಮಿಸಿದರು. ಮೊದಲು ಚಿಕ್ಕವಟುಗಳು ಸ್ವಾಗತ ಪದ್ಯವನ್ನು ಇಂಪಾಗಿ ಹಾಡಿ ಸ್ವಾಗತಿಸಿ ಯೋಗಾಸನಗಳನ್ನು ತೋರಿಸಿದರು. ನಂತರ ತೆಲಸಂಗದ ಸ್ವಾಮಿಗಳು ಶ್ರೀ ಶಿವಯೋಗಮಂದಿರ ಸಂಸ್ಥೆಯ ಪರಿಚಯ ಮಾಡಿಕೊಟ್ಟು ಸನ್ಯಾಸ ರಾಜಕಾರಣ ಇವೆರಡರ ಏಕದೇಶೀಯತೆಯನ್ನು ಐತಿಹಾಸಿಕ ಉದಾಹರಣೆಗಳಿಂದ ಸಿದ್ಧಮಾಡಿ ಹೇಳಿದರು. ನಂತರ ಉಪಮಂತ್ರಿಗಳು—

ನನ್ನ ಪ್ರವಾಸದಲ್ಲಿ ಎಷ್ಟೋ ಸಂಸ್ಥೆಗಳನ್ನು ನೋಡಿರುವೆನು. ಆದರೂ ಇಂಥ ಆದರ್ಶಭೂತ ಸಂಸ್ಥೆಯನ್ನು ಮಾತ್ರ ಕಂಡಿಲ್ಲ ಸಂಸ್ಥೆಯನ್ನು ನೋಡಬೇಕೆಂಬ ಕುತೂಹಲ ಬಹು ದಿವಸದಿಂದಿದ್ದು ಈ ದಿನ ನೋಡುವ ಸಮಯ ಸಿಕ್ಕಿದ್ದು ನನ್ನ ಭಾಗ್ಯವೇಸರಿ. ಇಲ್ಲಿಯ ಕೈಗಾರಿಕೆ, ಯೋಗಾಸನ ಮೊದಲಾದ ಕಾರ್ಯಕ್ರಮಗಳನ್ನು ನೋಡಿ ಅತ್ಯಂತ ಸಂತೋಷವಾಗಿದೆ.

ಇಲ್ಲಿಯ ಸ್ವಾಮಿಗಳಾದರೂ ರಾಷ್ಟ್ರಕಾರ್ಯ ಧರ್ಮಕಾರ್ಯ ಇವೆರಡು ಸಮನ್ವಯ ಮಾಡಿಕೊಂಡು ಹೋಗಬೇಕು. ದೇಶಕ್ಕೆ ಸ್ವಾತಂತ್ರ್ಯವಿಲ್ಲದೆ ಹೋದರೆ—ಧರ್ಮವು ಕೇವಲ ಮಾತಿನಲ್ಲಿಯೇ ಉಳಿಯುವದು. ಸ್ವರಾಜ್ಯವೇ ಸ್ವಧರ್ಮದ ಪ್ರಥಮ ಪೀಠವು. ಇಂಥ ಪವಿತ್ರ ಕಾರ್ಯದಲ್ಲಿ ತಾವೆಲ್ಲರೂ ಮುಂದಡಿ ಇಡಬೇಕು. ಎಂದು ಮುಂತಾಗಿ ಹೇಳಿದರು. ತರುವಾಯ—

ಅಭಾರ ಮನ್ನಣೆಯಾಗಿ ಫಲಾಶೀರ್ವಾದದೊಡನೆ ಸಭಾ ಮುಕ್ತಾಯ ವಾಯಿತು.

---

—ಪಂ. ಜವಾಹರಲಾಲ ನೆಹರುರವರ ಆಮಂತ್ರಣದ ಮೇರೆಗೆ ಇಜಿಪ್ತದ ಹಿಂದಿನ ಮುಖ್ಯ ಪ್ರಧಾನರಾದ ನೆಹಾಸ ಪಾಶಾರವರು ತ್ರಿಪುರಿ ಕಾಂಗ್ರೆಸ್ ಅಧಿವೇಶನಕ್ಕೆ ಬರುವವರಿದ್ದಾರೆಂದು ತಿಳಿಯುತ್ತದೆ.

## ಮಾದನಹಿಪ್ಪರಗಿ.

ತಾ. ೨೭-೧೭-೩೮ ನೇ ದಿವಸ ಮ್ಯೆಂದರಗಿಯ ತರುಣ ಸಂಘದ ೧೦-೧೨ ಜನರು ಇಲ್ಲಿಗೆ ಬಂದು ಇಲ್ಲಿಯ ಶ್ರೀ ಶಿವಲಿಂಗೇಶ್ವರ ಮಠದಲ್ಲಿ ಶ್ರೀ. ವೀರಭದ್ರಪ್ಪ ಗುರುಬಸಪ್ಪ ಆರಳಿಮೋರೆ ಇವರ ಅಧ್ಯಕ್ಷತೆಯಲ್ಲಿ ಸಭೆಸೇರಿಸಿ ಕೆಳಗಿನ ವಿಷಯಗಳ ಮೇಲೆ ಇವರೂ ಮತ್ತು ಇಲ್ಲಿಯ ಶ್ರೀ. ವೀರಭದ್ರಯ್ಯಸ್ವಾಮಿ ಮಠಪತಿ, ವೆಂಕಪ್ಪ ಪುಲಾರಿ, ಶ್ರೀ. ಸಿದ್ರಾಮಪ್ಪ ಬಟ್ಟೆ, ಶಿವಲಿಂಗಪ್ಪ ಅಷ್ಟಗಿ ಮೊದಲಾದವರು ಭಾಷಣಮಾಡಿದರು. ಮ್ಯೆಂದರಗಿಯ ಶಿವಾನುಭವ ಮಂಟಪದ ಸೆಕ್ರೆಟರಿಗಳಾದ ಶ್ರೀ. ಗುರುಬಸಪ್ಪ ಜೋಳ್ಳಿ ಇವರು ಸ್ಫೂರ್ತಿದಾಯಕವಾದ ಭಾಷಣಮಾಡಿದರು. ೧. ವೀರಶೈವ ಏಕೀಕರಣ, ೨. ವೀರಶೈವ ಸಮಾಜೋನ್ನತಿ, ೩. ಶುದ್ಧಿ ಸಂಘಟನೆ, ೪. ಪುನರ್ವಿವಾಹ ಈ ಮೇಲಿನ ನಾಲ್ಕು ಕಾರ್ಯಗಳನ್ನು ಕೂಡಲೆ ಆಚರಣೆಯಲ್ಲಿ ತರಬೇಕೆಂಬ ಗೊತ್ತುವಳಿಯು ಪ್ರಚಂಡ ಬಹುಮತದಿಂದ ತೀರ್ಮಾನಿಸಲ್ಪಟ್ಟಿತು.

ಶ್ರೀ. ವೀರಭದ್ರಯ್ಯ ಮಹಾಂತಯ್ಯ ಸ್ವಾಮಿ ಮಠಪತಿ.

---

## ಮ್ಯೆಂದರಗಿ.

ಇಲ್ಲಿಯ ಶಿವಾನುಭವ ಮಂಟಪ ಈ ಸಂಸ್ಥೆಯ ಸಭಾಸದರು ಬಿನ್ನವಿಸಿಕೊಂಡ ಮೇರೆಗೆ ಮ್ಯೆಂದರಗಿ ತಾಲೂಕಿನ ಅಧಿಪತಿಗಳಾದ ರಾಜಾ ಬಾಪುಸಾಹೇಬ ಸರಕಾರ ಕುರುಂದವಾಡ ಜ್ಯುನಿಯರ್ ಇವರು ಭಗವಾನ್ ಶ್ರೀ. ಬಸವೇಶ್ವರ ಜಯಂತಿಯ ದಿವಸ ಸಂಸ್ಥಾನದಲ್ಲಿ ಸರ್ವ ಶಾಲೆಗಳಿಗೂ ಕಚೇರಿಗಳಿಗೂ ಸೂಟಿಕೊಡುವದಾಗಿ ಗ್ಯಾಜೆಟ್ಟನಲ್ಲಿ ಪ್ರಕಟಿಸಿದ್ದಾರೆ. ಕಾರಣ ಮಹಾರಾಜರವರನ್ನು ಅಭಿನಂದಿಸುವುದಕ್ಕಾಗಿ ತಾ. ೨೦-೧೦-೩೮ ನೇ ದಿವಸ ಶ್ರೀ. ಮಾಮಲೇದಾರ ಬಾಂದೇವಾಡಿಕರ ಇವರ ಅಧ್ಯಕ್ಷತೆಯಲ್ಲಿ ವಿರಶೈವರ ಪ್ರಚಂಡ ಸಭೆಸೇರಿ ಮಹಾರಾಜರನ್ನು ಅಭಿನಂದಿಸಲಾಯಿತು.

—ಸೆಕ್ರೆಟರಿ, ಶಿವಾನುಭವ ಮಂಟಪ ಮ್ಯೆಂದರಗಿ.

---

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ [illegible] ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

## The Sharana Sandesh.

ನ್ಯಾಯನಿಷ್ಠುರ, ದಾಕ್ಷಿಣ್ಯಪರನಲ್ಲ. ಲೋಕವಿರೋಧಿ, ಶರಣನಾರಿಗೂ ಅಂಜುವವನಲ್ಲ !
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ --ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇ... ...

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೪ | ಆಲಮಟ್ಟಿ- ಸೋಮವಾರ ತಾರೀಖು ೫ ನೆಯ ಡಿಶೆಂಬರ್ ೧೯೩೮. | ಸಂಚಿಕೆ ೧೩

ಜನಸೇವೆಯೇ ದೇವರಸೇವೆ.

# ವಿದ್ಯಾರ್ಥಿಗಳ ವೀರ ಸತ್ಯಾಗ್ರಹ!

## ನಿಜಾಮ ರಾಜ್ಯದಲ್ಲಿ ಸರಕಾರದ ದಬ್ಬಾಳಿಕೆ ಹೆಚ್ಚಿತು.

**ವೀರ ಸತ್ಯಾಗ್ರಹಿಗಳು ತಂಡುತಂಡಾಗಿ ಸೆರೆಮನೆ ಸೇರುತ್ತಿದ್ದಾರೆ.**

ಹೈದರಾಬಾದ ಹಿಂದು ವಿದ್ಯಾರ್ಥಿಗಳಿಗೆ
"ವಂದೇ ಮಾತರಂ" ಗೀತೆ ಹೇಳಲು ಪ್ರತಿಬಂಧಿಸಿದ್ದರಿಂದ
ಈ ಪ್ರತಿಬಂಧವನ್ನು ತೆಗೆದು ಹಾಕುವ ವರೆಗೆ
ತಾವು ಶಾಲೆಗೆ ಹೋಗುವುದಿಲ್ಲವೆಂದು
ವೀರ ಸತ್ಯಾಗ್ರಹ ಹೂಡಿದ್ದಾರೆ.

# ಮಂತ್ರಿಗಳಿಗೆ ಸುಸ್ವಾಗತ.

ಮುಖ್ಯ ಮಂತ್ರಿಗಳಾದ ಮಾನ್ಯ ಖೇರರವರೂ
ಅರ್ಥಸಚಿವರಾದ ಮಾನ್ಯ ಲಠ್ಠೆಯವರೂ
ತಾ. ೪ ರಿಂದ ಕರ್ನಾಟಕದ ಸಂಚಾರವನ್ನು
ಪ್ರಾರಂಭಿಸಿದ್ದಾರೆ.

ದೇಹವೇ ದೇವಾಲಯ.




# ಶರಣ ಸಂದೇಶ

THE SHARANA SANDESHA.

ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೮ | ಆಲಮಟ್ಟಿ- ಸೋಮವಾರ ತಾರೀಖು ೫ ನೆಯ ಡಿಶೆಂಬರ ೧೯೩೮. | ಸಂಚಿಕೆ೧೩




# ಮಹತ್ವದ ಸುದ್ದಿಗಳು.

—ಹಿಂದು ಧರ್ಮಪ್ರಚಾರಕರಾದ ಶ್ರೀ ಆನಂದಮೂರ್ತಿ ಡಿಗ್ರ ಜಕರ ಇವರು ಕೊಲ್ಹಾಪುರ ಸಂಸ್ಥಾನದ ಪೋಖಸ ಕಿಡೋಲಿ ಎಂಬಲ್ಲಿ ಕ್ರಿಶ್ಚಿಯನ್ನರಾದ ೨ ಜನರನ್ನು ಶುದ್ಧಮಾಡಿ ಹಿಂದು ಧರ್ಮದಲ್ಲಿ ತೆಗೆದುಕೊಂಡರು ಈ ಸಮಾರಂಭಕ್ಕೆ ಪುರ ಪ್ರಮುಖ ರೆಲ್ಲರೂ ಆಗಮಿಸಿದ್ದರು.

—ಬಂಗಾಲ ಪ್ರಾಂತದಲ್ಲಿಯ ಸರ್ವ ಹಿಂದೂ ಸಂಸ್ಥೆಗಳ ಒಂದು ಸಂಯುಕ್ತ ಸಭೆಯು ಕಲಕತ್ತೆಯಲ್ಲಿ ಜರುಗಿ ವಂಗೀಯ ಹಿಂದು ಹಿತಸಂರಕ್ಷಣೆಯ ಬಗ್ಗೆ ವಿಚಾರಮಾಡಲಾಯಿತು. 'ವಂಗ ಹಿಂದು ಸಂಯುಕ್ತ ಸಂಘ' ವೆಂಬ ಸಮಿತಿಯನ್ನೇರ್ಪಡಿಸಿ ಅದರ ಕಡೆಗೆ ಒಂದು ಯೋಜನೆಯುನ್ನು ಸಿದ್ಧಗೊಳಿಸುವ ಅಧಿಕಾರ ಕೊಡಲಾಯಿತು.

—ಅಮೇರಿಕೆಯ ಅದ್ವಿತೀಯ ದಾನಶೂರರೆಂದೂ ಕೋಟ್ಯಾಧೀಶರೆಂದೂ ಕೀರ್ತಿ ಪಡೆದ ದಿವಂಗತ ಜೆ. ಡಿ. ರಾಕ್‌ಫೆಲ್ಲರ್‌ರವರು ತಮ್ಮ ಜೀವಮಾನದಲ್ಲಿ ಒಟ್ಟು ೧೦ ಕೋಟಿ ೬೦ ಲಕ್ಷ ಪೌಂಡುಗಳನ್ನು ಸಾರ್ವಜನಿಕ ಧರ್ಮಕಾರ್ಯಗಳಿಗಾಗಿ ದಾನಮಾಡಿರುತ್ತಾರೆ.

—ಮದ್ರಾಸ ಪ್ರಾಂತದ ಮಚ್ಛಲಿ ಪಟ್ಟಣದಲ್ಲಿ ಪ್ರಚಂಡ ಬಿರುಗಾಳಿ ಬೀಸಿದುದರಿಂದ ಸುಮಾರು ೧೨೦೦೦ ಸೇಂಗಾದ ಚೀಲಗಳು ಮುಳುಗಿ ಬಹು ತೊಂದರೆಯಾಗಿದೆಯೆಂದು ತಿಳಿದುಬಂದಿದೆ. ಇದರಿಂದ ಸುಮಾರು ೧೦ ಲಕ್ಷ ರೂಪಾಯಿಗಳಷ್ಟು ನಷ್ಟವಾಗಿದೆಯಂತೆ.

—ಹೈದರಾಬಾದ ಚಟುವಟಿಕೆಯ ನಿಜ ಸಂಗತಿಗಳನ್ನು ತಿಳಿದುಕೊಂಡು ತಮಗೆ ವರದಿ ಒಪ್ಪಿಸಲು ಮಹಾತ್ಮಾ ಗಾಂಧಿಯವರು ಶ್ರೀ. ಸರೋಜಿನಿ ದೇವಿ ನಾಯಡುರವರ ಮಗಳಾದ ಶ್ರೀ. ಪದ್ಮಜಾ ನಾಯಡುರವರಿಗೆ ತಿಳುಹಿಸಿದ್ದಾರೆ. ಅವರು ಸಂಸ್ಥಾನದ ಮುಂದಾಳುಗಳನ್ನೂ ಸರ್. ಅಕಬರ್ ಹೈದರಿಯವರನ್ನೂ ಕಂಡು ಮಾತನಾಡಿ ಮಹಾತ್ಮಾ ಗಾಂಧಿಯವರಿಗೆ ವರದಿಯನ್ನು ಒಪ್ಪಿಸುವವರಿದ್ದಾರೆಂದು ತಿಳಿದುಬಂದಿದೆ.

—ಕರ್ನಾಟಕ ಕಾಲೇಜದಲ್ಲಿಯ ಪರ್ಶಿಯನ್ ಪ್ರೊಫೆಸರರಾದ ಮೌಲ್ವಿ ಸಾಹೇಬರವರು ಮುಂಬೈ ಕರ್ನಾಟಕ ಸಂಘದಲ್ಲಿ ಭಾಷಣ ಮಾಡುತ್ತಾ "ಕರ್ನಾಟಕದಲ್ಲಿ ಮುಸಲ್ಮಾನರು ಉರ್ದು ಭಾಷೆಯನ್ನು ಕಲಿಯುವುದು ಅವಶ್ಯಕವಿಲ್ಲವೆಂದೂ ಉರ್ದು ಶಾಲೆಗಳಿದ್ದುದರಿಂದಲೇ ಮುಸಲ್ಮಾನರು ಶಿಕ್ಷಣದಲ್ಲಿ ಹಿಂದುಳಿದಿದ್ದಾರೆಂದೂ" ಹೇಳಿದರು.

—ಹುಬ್ಬಳ್ಳಿಯಲ್ಲಿಯ ಶಿವಯೋಗಿ ಸಿದ್ಧಪ್ಪ ಲಿಗಾಡೆ ಎಂಬ ೨೦ ವರ್ಷ ವಯಸ್ಸಿನ ತರುಣನು ತನಗೆ ಹಣ ಕೊಡದಿದ್ದುದರಿಂದ ತನ್ನ ಅಜ್ಜಿ ಶಿದ್ಲಿಂಗವ್ವನ ಕುತ್ತಿಗೆ ಹಿಚುಕಿ ಕೊಂದು ತಾನೂ ಆತ್ಮಹತ್ಯ ಮಾಡಿಕೊಂಡನಂತೆ!

—ಬಾಗಲಕೋಟೆಯ ಮುನಸಿಪಾಲ್ಟಿಗೆ ಶ್ರೀ. ರಾಮಣ್ಣ ನಾಯಕ ಸೊಲ್ಲಾಪುರ ಇವರು ಸರ್ವಾನುಮತದಿಂದ ಅಧ್ಯಕ್ಷರಾಗಿ ಆರಿಸಲ್ಪಟ್ಟಿದ್ದಾರೆ.

—ಸಂಯುಕ್ತ ಪ್ರಾಂತ ಕಾಂಗ್ರೆಸ್ ಕಮಿಟಿಯವರು ತಮ್ಮ ಪ್ರಾಂತದಲ್ಲಿ ಕಾಂಗ್ರೆಸ್ ರಾಷ್ಟ್ರೀಯ ಸೈನ್ಯವನ್ನು ಸಿದ್ಧಗೊಳಿಸಲು ಪ್ರಯತ್ನಿಸುತ್ತಿದ್ದಾರೆ. ಪ್ರಾಂತದಲ್ಲಿರುವ ಒಟ್ಟು ೫೫೦ ಲಕ್ಷ ಜನಗಳಲ್ಲಿ ಕನಿಷ್ಟ ೫ ಲಕ್ಷ ಜನಗಳನ್ನಾದರೂ ಈ ಕಾಂಗ್ರೆಸ್ ರಾಷ್ಟ್ರೀಯ ಸೈನ್ಯದಲ್ಲಿ ಸೇರಿಸಿಕೊಳ್ಳಬೇಕೆಂದು ನಿರ್ಧರಿಸಿದ್ದಾರೆ.

—ಲಾಹೋರಿನಲ್ಲಿ ಪ್ರಕಟವಾಗುತ್ತಿರುವ ಜಾತಪಾತ ತೋಡಕ ಮಂಡಲದ ಮುಖಪತ್ರವಾದ ಉರ್ದು ಭಾಷೆಯ 'ಕ್ರಾಂತಿ' ಮಾಸ ಪತ್ರಿಕೆಯ ಮುದ್ರಕ ಮತ್ತು ಪ್ರಕಾಶಕರಿಂದ ಒಂದು ಸಾವಿರ ರೂ. ಆಡುವು ಕೇಳಿದ್ದಾರೆ. ಪ್ರೆಸ್ಸಿನಿಂದಲೂ ಇಷ್ಟೇ ರೂ. ಗಳ ಅಡುವು ಕೇಳಿದ್ದಾರೆ. ಹಿಂದು ಐಕ್ಯತೆಯ ಬಗ್ಗೆ ಲೇಖನ ಬರೆಯುತ್ತಿರುವುದೇ ಇದಕ್ಕೆ ಕಾರಣವೆಂದು ತಿಳಿದುಬಂದಿದೆ.

# ಹೈದರಾಬಾದ ಸಂಸ್ಥಾನದಲ್ಲಿಯ ಹಿಂದುಗಳ ಶೈಕ್ಷಣಿಕ ದೈನ್ಯಾವಸ್ಥೆ.

ಹೈದರಾಬಾದ ಸಂಸ್ಥಾನದಲ್ಲಿ ಒಟ್ಟು ೧೪೪೩೬೧೪೮ ಜನರಿದ್ದಾರೆ. ಅವರಲ್ಲಿ ೬೯ ಲಕ್ಷ ೭೩ ಸಾವಿರ ಜನರು ತೆಲುಗರೂ, ೩೮ ಲಕ್ಷ ಜನರು ಮಹಾರಾಷ್ಟ್ರೀಯರೂ ಮತ್ತು ೧೭ ಲಕ್ಷ ಜನರು ಕನ್ನಡಿಗರೂ ಇದ್ದಾರೆ. ಕೇವಲ ೧೫ ಲಕ್ಷ ಮುಸಲ್ಮಾನರ ಮಾತೃ ಭಾಷೆಯು ಮಾತ್ರ ಉರ್ದು ಇದೆ. ಹಿಂದುಸ್ಥಾನದಲ್ಲಿ ಸಾಕ್ಷರತೆಯ ಪ್ರಮಾಣವು ೯.೫ ಇದೆ. ಆದರೆ ಹೈದರಾಬಾದಿನಲ್ಲಾದರೋ ಇದೇ ಪ್ರಮಾಣವು ೪.೯ ಇದೆ. ೧೮೮೧ ನೆಯ ಇಸ್ವಿಯಲ್ಲಿಯೇ ಸಾಕ್ಷರತೆಯ ಪ್ರಮಾಣವು ೩.೭ ಇದ್ದಿತು. ಆ ಕಾಲಕ್ಕೆ ಶಿಕ್ಷಣಕ್ಕಾಗಿ ಪ್ರತಿ ವರ್ಷ ೩ ಲಕ್ಷ ರೂ. ಗಳನ್ನು ಮಾತ್ರ ವೆಚ್ಚಮಾಡುತ್ತಿದ್ದರು. ಆದರೆ ಕಳೆದ ೫೦ ವರ್ಷಗಳಲ್ಲಿ ಸಾಕ್ಷರತೆಯ ಪ್ರಮಾಣವು ಮಾತ್ರ ಸಾಧಾರಣ ಅಷ್ಟೇ ಇದ್ದು ಶಿಕ್ಷಣಕ್ಕೆ ವೆಚ್ಚಮಾಡುವ ಹಣವು ಮಾತ್ರ ಭಯಂಕರ ಬೆಳೆದು ೧ ಕೋಟಿಗಿಂತ ಹೆಚ್ಚಾಗಿದೆ. ಕಳೆದ ೫೦ ವರ್ಷಗಳ ಹಿಂದೆ ೩ ಲಕ್ಷ ರೂ. ವೆಚ್ಚ ಮಾಡಿದಾಗ ಸಾಕ್ಷರತೆಯ ಪ್ರಮಾಣವು ೩.೭ ಇದ್ದಿತು. ಆದರೆ ಇಂದು ಮೊದಲಿನಕ್ಕಿಂತ ೩೫ ಪಟ್ಟು ಹೆಚ್ಚಾಗಿ ವೆಚ್ಚ ಮಾಡಿದರೂ ಸಾಕ್ಷರತೆಯ ಪ್ರಮಾಣವು ಮಾತ್ರ ಅಷ್ಟೇ ಇರುವುದಕ್ಕೆ ಕಾರಣವೇನು? ರಾಜನೆಂದು ಹಿಂದು ಪ್ರಜೆಗಳ ರಕ್ತ ಹೀರಿ ಕೂಡಿಸಿದ ದುಡ್ಡು ಜಗತ್ತಿನ ತೋರಿಕೆಗೆ ಮಾತ್ರ ಶಿಕ್ಷಣಕ್ಕಾಗಿ ವೆಚ್ಚವಾಗುತ್ತದೆಂದು ಭಾಸವಾಗುತ್ತದೆಯೇ ವಿನಾ ನಿಜವಾಗಿ ಆ ಹಣವೆಲ್ಲವೂ ಮುಸಲ್ಮಾನರ ಶೇರವಾನಿಯ ಕಿಸೆಯಲ್ಲಿ ಬೀಳುತ್ತಾ ಇದೆ.

---

### ಸಂಸ್ಥಾನದ ಹೊರಗಿರುವ ಇಸ್ಲಾಮ ಶಾಲೆಗಳಿಗೆ ನಿಜಾಮ ಸಾಹೇಬರ ಆರ್ಥಿಕ ಸಹಾಯ.

| ಸಂಸ್ಥೆಗಳ ಹೆಸರು. | ಪ್ರತಿವರ್ಷದ ಸಹಾಯ. |
|---|---|
| ಮುಸ್ಲಿಮ್ ಯುನಿವ್ಹರ್ಸಿಟಿ | ರೂ. ೭೦೦೦೦ |
| ಮುಸ್ಲಿಮ್ ಗರ್ಲ್ಸ ಸ್ಕೂಲ್ ಅಲಿಗಡ | ೨೧೦೦ |
| ಇಸ್ಲಾಮ ಸ್ಕೂಲ್ ಮಾಲೇಗಾವ | ೭೦೦ |
| ,, ,, ಕಡಪ್ಪಾ | ೭೦೦ |
| ,, ,, ಬರೇಲಿ | ೨೮೦೦ |
| ,, ,, ರಾಮಪುರ | ೭೦೦ |
| ,, ಹಾಯಸ್ಕೂಲ ಕಟಕ | ೭೦೦ |
| ,, ,, ಫರುಕಾಬಾದ | ೭೦೦ |
| ಮುಸ್ಲಿಂ ,, ಅಂಬಾಲಾ | ೨೮೦೦ |
| ಇಸ್ಲಾಮಿಯಾ ,, ಕುರನೋಳ | ೭೦೦ |
| ,, ,, ಇಲಿಚಪುರ | ೭೦೦ |
| ಇಸ್ಲಾಮಿಯಾ ಸ್ಕೂಲ್ ಆಗ್ರಾ | ೭೫೦ |
| ಮದರೆ ಆಹೆಲಸಂತುಲ ಝುಮಾಯತ | ೨೮೦೦ |
| ಹಾತೀಮ ಹಾಯಸ್ಕೂಲ್ ಕಾನಪುರ | ೭೦೦ |
| ಹಾಯಸ್ಕೂಲ್ ನಾಗಪುರ | ೩೫೦೦ |
| ,, ಶಹಾರಣಪುರ | ೧೪೦೦ |
| ,, ಕಂಗಡಾ | ೭೦೦ |
| ,, ಅಮೃತಸರ | ೧೪೦೦ |
| ,, ಮದ್ರಾಸ | ೭೦೦ |
| ,, ,, | ೧೪೦೦ |
| ಪರ್ಶಿಯನ್ ಶಬ್ದಕೋಶ ಮಂಡಳ | ೩೪೮೦ |
| ಕುರಾನ ಭಾಷಾಂತರ ಮಂಡಳ | ೧೮೦೦ |
| ಕಿತಾಬುಲ್ ಮಹಾವೀರತ್ ಭಾಷಾಂತರ | ೨೪೦೦ |
| ದಕ್ಷಿಣದ ಉರ್ದು ಇತಿಹಾಸ | ೬೧೭೦ |
| ಡಾ. ಇಕ್‌ಬಲ್ ಗ್ರಂಥ | ೨೩೪ |
| ಪರ್ಶಿಯನ್ ಶಬ್ದಕೋಶ | ೧೦೦೦ |

ಪ್ರತಿವರ್ಷ ಒಟ್ಟು ೧ ಲಕ್ಷ ೨೮ ಸಾವಿರ ರೂ. ಗಳನ್ನು ನಿಜಾಮರು ಮುಸಲ್ಮಾನರ ಬೇರೆ ಬೇರೆ ಶಾಲೆಗಳಿಗೆ ಕೊಡುತ್ತಿದ್ದಾರೆ.

---

### ಹೈದರಾಬಾದ ಹಿಂದು ನಾಗರಿಕ ಸ್ವಾತಂತ್ರ್ಯ ಸಂಘದವರ ಬೇಡಿಕೆಗಳು.

ಹೈದರಾಬಾದಿನಲ್ಲಿ ನಿಜಾಮರು ನಡೆಯಿಸಿದ ದಬ್ಬಾಳಿಕೆಯನ್ನು ಸಹಿಸದೆ ಅಲ್ಲಿಯ ಸ್ಟೇಟ್ ಕಾಂಗ್ರೆಸ್ಸಿನವರು ಹೂಡಿದ ಸತ್ಯಾಗ್ರಹ ಯುದ್ಧದಲ್ಲಿ ಹೈದರಾಬಾದಿನ ಹಿಂದು ನಾಗರಿಕ ಸ್ವಾತಂತ್ರ್ಯ ಸಂಘದವರೂ ಭಾಗವಹಿಸುತ್ತಿದ್ದಾರೆ. ನಿಜಾಮರೊಡನೆ ಒಪ್ಪಂದ ಮಾಡಿಕೊಳ್ಳಬೇಕಾದರೆ ತಮ್ಮ ಬೇಡಿಕೆಗಳಾವವೆಂಬುದನ್ನು ತಾರೀಖು ೨೧-೧೧-೩೮ ನೆಯ ದಿವಸ ಸಂಸ್ಥೆಯ ಸರ್ವಾಧಿಕಾರಿಗಳು ಒಂದು ಪ್ರಕಟನೆ ಹೊರಡಿಸಿ ಈ ರೀತಿ ತಿಳಿಸಿದ್ದಾರೆ—

(೧) ಹಿಂದುಗಳ ಮೇಲೆ ಮುಸಲ್ಮಾನರು ಬೇರೆ ಬೇರೆ ಸ್ಥಾನಗಳಲ್ಲಿ ಮಾಡಿದ ಆಕ್ರಮಣ, ದಂಗೆಗಳಲ್ಲಿ ಮತ್ತು ಈಗ ನಡೆದ ಸತ್ಯಾಗ್ರಹದಲ್ಲಿ ಸೆರೆ ಹಿಡಿದ ಮತ್ತು ಶಿಕ್ಷೆ ವಿಧಿಸಲ್ಪಟ್ಟ ಸರ್ವರನ್ನೂ ಕೂಡಲೇ ಬಿಡುಗಡೆ ಮಾಡಬೇಕು.

(೨) ಇಲ್ಲಿಯ ವರೆಗೆ ಮುಸಲ್ಮಾನ ಪುಂಡರು ರಾಜ್ಯದಲ್ಲಿಯ ಹಿಂದುಗಳ ಮೇಲೆ ನಡೆಯಿಸಿದ ಅತ್ಯಾಚಾರ, ಅನ್ಯಾಯ, ಕೊಲೆ, ಸುಲಿಗೆಗಳ ಮತ್ತು ಹೈದರಾಬಾದಿನಲ್ಲಿ ಮೊನ್ನೆ ನಡೆದ ಹತ್ಯಾಕಾಂಡದ ನಿಷ್ಪಕ್ಷಪಾತತನದಿಂದ ವಿಚಾರಣೆ ಮಾಡಲು ಸಂಸ್ಥಾನದ ಹೊರಗಿನ ಪ್ರತಿಷ್ಠಿತ ಮತ್ತು ಸರ್ವಮಾನ್ಯರಾದ ೫ ಜನ ಹಿಂದು ಮುಂದಾಳುಗಳ ಸಮಿತಿಯನ್ನೇರ್ಪಡಿಸಬೇಕು. ಅವರು ಸಿದ್ಧಗೊಳಿಸಿದ ವರದಿಯನ್ನು ವೃತ್ತ ಪತ್ರಿಕೆಗಳಲ್ಲಿ ಪ್ರಕಟಿಸಬೇಕು. ದಂಗೆಯಲ್ಲಿ ನಷ್ಟಹೊಂದಿದವರ ನಷ್ಟಾಂಶವನ್ನು ತುಂಬಿಕೊಡಬೇಕು.

(೩) ಬ್ರಿಟಿಶ್ ಹಿಂದುಸ್ಥಾನಕ್ಕೆ ಅನ್ವಯಿಸಲಾಗುವ ಫೆಡರೇಶನ್ ಹಿಂದೂ ಸೇಫ್ ಗಾರ್ಡ್ಸ ಇಲ್ಲದೆ ಕೂಡಲೆ ಹೈದರಾಬಾದ ಸಂಸ್ಥಾನಕ್ಕೆ ಅನ್ವಯಿಸಬೇಕು.

(೪) ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಸ್ವಾತಂತ್ರ್ಯವನ್ನೂ ಭಾಷಣ, ಮುದ್ರಣ, ಸಂಘ, ಸಂಸ್ಥೆ ಸ್ವಾತಂತ್ರ್ಯವನ್ನೂ ಸರ್ವ ಪ್ರಕಾರದ ನಾಗರಿಕ ಹಕ್ಕುಗಳನ್ನೂ ಸರ್ವ ಪ್ರಜೆಗಳಿಗೂ ವಿಶೇಷವಾಗಿ ಹಿಂದು ಪ್ರಜೆಗಳಿಗೂ ಪ್ರತ್ಯಕ್ಷ ಅನುಭವಿಸುವಂತೆ ನಡವಳಿಕೆಯಲ್ಲಿ ತರಬೇಕು

(೫) ಅಲ್ಪಸಂಖ್ಯಾಕ ಮುಸಲ್ಮಾನ ಜಾತಿಯ ಭಾಷಾ, ಧರ್ಮ ಮತ್ತು ಸಂಸ್ಕೃತಿ ಮೊದಲಾದವುಗಳನ್ನು ಬಹುಸಂಖ್ಯ ಹಿಂದು ಪ್ರಜೆಗಳ ಮೇಲೆ ಹೊರಿಸಿದ ಆಕ್ರಮಣವನ್ನು ಕೂಡಲೇ ನಿಲ್ಲಿಸಬೇಕು.

(೬) ಹಿಂದುಗಳ ಉತ್ಸವ, ಮೆರವಣಿಗೆ, ಸಭೆ, ವೃತ್ತ ಪತ್ರ ಮತ್ತು ವಾಙ್ಮಯ ಮೇಲಿರುವ ಒತ್ತಾಯ, ನಿಯಂತ್ರಣ ಮತ್ತು ಪ್ರತಿಬಂಧ ಶಾಸನಗಳನ್ನೂ ಒಕ್ಕಲಿಗರ ಮತ್ತು ಸಾವಕಾರ ಶಾಸನದಿಂದ ಹಿಂದುಗಳಿಗೆ ಅಪರಿಮಿತ ಹಾನಿಯಾಗುತ್ತಿರುವುದರಿಂದ ಈ ಅನ್ಯಾಯದ ಶಾಸನವನ್ನು ನಷ್ಟಗೊಳಿಸಬೇಕು.

(೭) ಸಂಸ್ಥಾನದ ನೌಕರರಲ್ಲಿ ಗ್ಯಾಜಿಟೆಡ್, ನಾನ್‌ಗ್ಯಾಜಿಟೆಡ್ ಮತ್ತು ಎಕ್ಝಿಕ್ಯೂಟಿವ್ಹ ಕೌನ್ಸಿಲ್‌ನಲ್ಲಿಯ ಎಲ್ಲ ಸ್ಥಳಗಳಲ್ಲಿಯೂ

ಹಿಂದುಗಳಿಗೆ ಸಂಖ್ಯೆಯ ಪ್ರಮಾಣದಂತೆ ಸ್ಥಳಗಳನ್ನು ಕಾಯ್ದಿಡ ತಕ್ಕದ್ದು.

(೮) ಸರಕಾರಿ ಕಾಗದ ಪತ್ರಗಳನ್ನು ಪ್ರಾಂತಿಕ ಭಾಷೆಯಲ್ಲಿಡಬೇಕು. ಮಧ್ಯವರ್ತಿ ಸರಕಾರದ ಕಾಗದ ಪತ್ರಗಳನ್ನು ಮಾತ್ರ ಹಿಂದಿಯಲ್ಲಿಡಬೇಕು. ರಾಜ್ಯದಾಡಳಿತೆಯ ಭಾಷೆಯಾದರೂ ಹಿಂದಿಯೇ ಇರಬೇಕು.

(೯) ಪ್ರಾಥಮಿಕ ಮಧ್ಯಮ ಮತ್ತು ಉಚ್ಚ ಶಿಕ್ಷಣವನ್ನು ಮಾತೃ ಭಾಷೆಯಲ್ಲಿಯೇ ಕೊಡಬೇಕು.

(೧೦) ಗೋವಧೆಯನ್ನು ಶಾಸನದಿಂದ ಪ್ರತಿಬಂಧಗೊಳಿಸಬೇಕು.

(೧೧) ಮಸೀದೆಯ ಮುಂದೆ ವಾದ್ಯ ಪ್ರತಿಬಂಧ ಶಾಸನವನ್ನು ಕೂಡಲೇ ತೆಗೆದು ಹಾಕಬೇಕು.

(೧೨) ಮುಸಲ್ಮಾನರ ಹಬ್ಬದಂತೆಯೇ ಹಿಂದುಗಳಿಗೂ ಹಬ್ಬದ ದಿವಸ ತಮ್ಮ ಹಬ್ಬದ ವಿಧಿಗಳನ್ನು ಯೋಗ್ಯ ರೀತಿಯಿಂದ ಪಾಲಿಸುವಂತೆ ಶಾಲೆಗಳಿಗೂ, ಕಚೇರಿಗಳಿಗೂ ಸೂಟಿಗಳನ್ನು ಕೊಡಬೇಕು:

(೧೩) ಹಿಂದು ಮಂದಿರಗಳ ಜಪ್ತಮಾಡಿದ ವರ್ಷಾಶನಗಳನ್ನು ತಿರುಗಿ ಕೊಡಲು ಪ್ರಾರಂಭಿಸಬೇಕು.

(೧೪) ಹಿಂದು ಮಂದಿರದ ಸ್ಥಳಗಳಲ್ಲಿ ಕಟ್ಟಿಸಿದ ಮಸೀದೆಗಳನ್ನೂ ಅವುಗಳ ಉತ್ಪನ್ನ, ಸ್ಥಳ ಮೊದಲಾದವುಗಳನ್ನೂ ತಿರುಗಿಕೊಟ್ಟು ಅವುಗಳ ಸ್ಥಳಗಳಲ್ಲಿ ಪುನಃ ಮಂದಿರ ಕಟ್ಟಿಸಿಕೊಡಬೇಕು.

(೧೫) ಆಶೆಯಾಮಿಷಗಳಿಂದಲೂ ಒತ್ತಾಯದಿಂದಲೂ ತೆಗೆದುಕೊಂಡುಹೋದ ಸ್ತ್ರೀಯರನ್ನು ಹಿಂದುಗಳ ಅಧೀನಕ್ಕೆ ಕೊಡಬೇಕು.

(೧೬) ಮುಸಲ್ಮಾನ ಧರ್ಮ ಪ್ರಚಾರಕ್ಕಾಗಿ ಸರಕಾರಿ ಟ್ರೆಝರಿಯಿಂದ ಕೊಡುವ ಹಣದ ಸಹಾಯವನ್ನು ನಿಲ್ಲಿಸಬೇಕು. ಮತ್ತು ಈ ವರೆಗೆ ಈ ಕೆಲಸಕ್ಕೆಕೊಟ್ಟಷ್ಟೆಹಣವನ್ನು ಹಿಂದುಗಳಿಗೂ ಕೊಡಬೇಕು.

ಸ್ಟೇಟ್ ಹಿಂದು ಸಭೆಯ ಬೇಡಿಕೆಗಳು ಇ ದ ರ ಲ್ಲಿ ಸಮಾವೇಶವಾಗಿರುವದಿಲ್ಲ. 'ಪ್ರಭಾತ'

---

## ಆದಿಜನಗಳಿಗಾಗಿ ಆಗುವ ವೆಚ್ಚ.

ಆದಿಜನ ವಿದ್ಯಾರ್ಥಿಗಳಿಗಾಗಿ ಕಾಂಗ್ರೆಸ್ ಸರಕಾರದವರು ಈ ವರೆಗೂ ಏನೂ ಮಾಡಿಲ್ಲವೆಂದು ಕೆಲವು ಆದಿಜನ ಕಾರ್ಯಕರ್ತರು ಕಾಂಗ್ರೆಸ್ ಮಂತ್ರಿಮಂಡಳವನ್ನು ಆರೋಪಿಸುತ್ತಿದ್ದಾರೆ. ಕಾಂಗ್ರೆಸ್ ಅಧಿಕಾರಾರೂಢವಾದಂದಿನಿಂದ ಆದಿಜನಗಳ ಹಿತಕ್ಕಾಗಿ ಯಾವ ಪ್ರಯತ್ನ ನಡೆಸುತ್ತಾ ಬಂದಿದೆಯೆಂಬುದು ಈ ಕೆಳಗಿನ ಸಂಗತಿಗಳಿಂದ ಸ್ಪಷ್ಟ ಗೊತ್ತಾಗಬಹುದು.

ಕಾಂಗ್ರೆಸ್ಸಿನವರು ಅಧಿಕಾರವನ್ನು ಸ್ವೀಕರಿಸುವ ಪೂರ್ವದಲ್ಲಿ ಆದಿಜನ ವಿದ್ಯಾರ್ಥಿಗಳಿಗೆ ಶಿಷ್ಯವೃತ್ತಿ ಕೊಡುವುದಕ್ಕಾಗಿ ಮತ್ತು ವಸತಿ ಗೃಹಗಳಿಗಾಗಿ ೧೮೦೦೦ ರೂ. ಗಳನ್ನು ಮುಂಬೈ ಸರಕಾರವು ವೆಚ್ಚಮಾಡುತ್ತ ಇದ್ದಿತು. ಆದರೆ ಕಾಂಗ್ರೆಸ್ಸಿನವರು ಅಧಿಕಾರವನ್ನು ಸ್ವೀಕರಿಸಿದನಂತರ ೧೯೩೭-೩೮ ನೆಯ ಒಂದು ವರ್ಷಕ್ಕಾಗಿ ಆದಿಜನರಿಗಾಗಿ ಮೇಲಿನ ಹಣವಲ್ಲದೆ ಹೆಚ್ಚಿಗೆ ೩೭೦೦೦ ರೂ. ವೆಚ್ಚ ಮಾಡಲು ನಿರ್ಧರಿಸಿದರು. ಇದಲ್ಲದೆ ೨೬೫೮೮ ರೂ. ಗಳನ್ನು ಹೆಚ್ಚಿಗೆ ವೆಚ್ಚಮಾಡಲು ಸರಕಾರದವರು ವಿಚಾರಿಸುತ್ತಾ ಇದ್ದಾರೆ. ಇದರ ಮೇಲಿಂದಲೇ ಹಿಂದುಳಿದ ವರ್ಗದವರ ಶಿಕ್ಷಣ ದೆಶೆಯಿಂದ ಮೊದಲಿನ ಸರಕಾರವು ಪ್ರತಿವರ್ಷ ೧೮೦೦೦ ರೂ. ವೆಚ್ಚಮಾಡುತ್ತಿದ್ದರೆ ಈಗಿನ ಕಾಂಗ್ರೆಸ್ ಸರಕಾರವು ೮೧೫೮೮ ರೂ. ವೆಚ್ಚಮಾಡುತ್ತಿದೆಯೆಂಬುದು ಕಂಡುಬರುವುದು.

ಆದಿ ಜನ ಸಹಿತ ಸರ್ವ ಹಿಂದುಳಿದವರ ಸಲುವಾಗಿ ೧೯೩೭-೩೮ ನೆಯ ವರ್ಷ ೬೬೦೦೦ ರೂ. ಗಳನ್ನು ದೇಣಿಗೆ ರೂಪವಾಗಿ ಕೊಟ್ಟಿದ್ದಾರೆ. ಈ ದೇಣಿಗೆಯ ಸಂಖ್ಯೆಯು ಮುಂದಿನ ವರ್ಷ ೧೧೬೦೦೦ ರೂ. ಗಳಿಗೆ ಏರಬಹುದು. ಇವುಗಳಲ್ಲಿ ನೂರಕ್ಕೆ ೬೦ ಕ್ಕಿಂತಲೂ ಹೆಚ್ಚಾಗಿ ಆದಿಜನಗಳ ದೆಶೆಯಿಂದ ವೆಚ್ಚ ಮಾಡುತ್ತಿದ್ದಾರೆ. ಎರಡು ವರ್ಷಗಳಲ್ಲಿಯೇ ಆದಿಜನಗಳ ದೇಣಿಗೆಯಲ್ಲಿ ಎರಡು ಪಟ್ಟು ಹೆಚ್ಚಾಗಿದೆ. ಆದಿಜನಗಳ ಹಿತಚಿಂತಕರೆಂದು ಹೇಳಿಕೊಳ್ಳುವ ಕಾಂಗ್ರೆಸ್ ವಿರೋಧಿಗಳು ಮೇಲಿನ ಸಂಗತಿಗಳನ್ನು ಲಕ್ಷಪೂರ್ವಕ ಓದಿಕೊಳ್ಳಬೇಕು.

ಮುಸಲ್ಮಾನರಲ್ಲಿಯೂ ಕೆಲವು ಮುಂದಾಳುಗಳು "ಕಾಂಗ್ರೆಸ್ಸು ಈ ವರೆಗೂ ನಮ್ಮ ಸಲುವಾಗಿ ಏನು ಮಾಡಿದೆ? ಕಾಂಗ್ರೆಸ್ಸು ನಮ್ಮ ಹಿತಮಾಡುವ ಬದಲು ಹಿತಕ್ಕೆ ವಿರೋಧವಾಗಿ ವರ್ತಿಸುತ್ತಾ ಇದೆ." ಎಂದು ಕಾಂಗ್ರೆಸ್ಸನ್ನು ಆರೋಪಿಸುತ್ತಿದ್ದಾರೆ. ಮುಸಲ್ಮಾನರ ಸಲುವಾಗಿಯೇ ಈ ವರ್ಷ ಸರಕಾರದವರು ೫೦೦೦೦ ರೂ. ವೆಚ್ಚಮಾಡುವುದನ್ನು ನಿರ್ಧರಿಸಿದ್ದಾರೆ. ಇದರಲ್ಲಿಯ ೧೬೫೬೦ ರೂ. ಗಳನ್ನು ಮುಸಲ್ಮಾನ್ ಬಾಲಿಕೆಯರ ಶಿಕ್ಷಣಕ್ಕಾಗಿಯೇ ವೆಚ್ಚಮಾಡುವವರಿದ್ದಾರೆ. ಮುಂದರಿದ ವರ್ಗದವರಷ್ಟೇ ಹಿಂದುಳಿದ ಆದಿಜನರು ಮುಸಲ್ಮಾನರೇ ಮೊದಲಾದವರು ಶಿಕ್ಷಣದಲ್ಲಿ ಪ್ರಗತಿ ಹೊಂದುವಂತೆ ಕಾಂಗ್ರೆಸ್ ಮಂತ್ರಿಗಳು ಹೇಗೆ ಪ್ರಯತ್ನಿಸುತ್ತಾ ಇದ್ದಾರೆಂಬುದು ಮೇಲಿನ ಸಂಗತಿಗಳ ಮೇಲಿಂದ ಸ್ಪಷ್ಟ ತೋರಿಬರುವುದು. ಜನತೆಯ ಕಲ್ಯಾಣದೆಶೆಯಿಂದ ಶಕ್ಯವಿದ್ದಷ್ಟು ಕೆಲಸ ಮಾಡಲು ಕಾಂಗ್ರೆಸ್ ಮಂತ್ರಿಗಳು ಹಗಲು ರಾತ್ರಿ ಪ್ರಯತ್ನಿಸುತ್ತಿದ್ದಾರೆ.

---

## ಸಾರ್ವದೇಶಿಕ ಆರ್ಯ ಸಮ್ಮೇಲನ.

ಹೈದರಾಬಾದ ಸಂಸ್ಥಾನಿನಲ್ಲಿ ಅನೇಕ ವರ್ಷಗಳಿಂದಲೂ ಹಿಂದುಗಳ ವಿಶೇಷವಾಗಿ ಆರ್ಯಸಮಾಜಿಗಳ ಮೇಲಾಗುತ್ತಿರುವ ಅತ್ಯಾಚಾರ, ಬಲಾತ್ಕಾರಗಳನ್ನು ವಿರೋಧಿಸುವುದಕ್ಕಾಗಿ ಸೊಲ್ಲಾಪುರದಲ್ಲಿ ಬರುವ ಡಿಶಂಬರ ತಿಂಗಳಿನ ೨೫-೨೬-೨೭ ನೆಯ ತಾರೀಖುಗಳಲ್ಲಿ ಆಲ್ ಇಂಡಿಯಾ ಆರ್ಯನ್ ಕಾಂಗ್ರೆಸ್ ಕೂಡುವುದಿದೆ. ಈಗಾಗಲೇ ಅದರ ಸಿದ್ಧತೆಯು ಭರದಿಂದ ಸಾಗಿದೆ. ಮಹಾತ್ಮಾ ನಾರಾಯಣಸ್ವಾಮಿ ಮಹಾರಾಜ, ಸಾರ್ವದೇಶಿಕ ಆರ್ಯ ಪ್ರತಿನಿಧಿ ಸಭೆಯ ಉಪಪ್ರಧಾನರಾದ ಶ್ರೀ. ಸ್ವಾಮಿ ಸ್ವಾತಂತ್ರ್ಯಾನಂದಜಿ ಮಹಾರಾಜ, ಅಖಿಲ ಭಾರತೀಯ ಆರ್ಯ ರಕ್ಷಾ ಸಮಿತಿಯ ಪಂಡಿತ ಶಿವಚಂದಜಿ, ನಿಜಾಮ ರಾಜ್ಯ ಆರ್ಯ ಪ್ರತಿನಿಧಿ ಸಭೆಯ ಮಂತ್ರಿಗಳಾದ ಪಂ. ಬನ್ಸಿಲಾಲಜಿ, ಸೊಲ್ಲಾಪುರದ ಸುಪ್ರಸಿದ್ಧ ಸಮಾಜ ಪ್ರೇಮಿಗಳಾದ ಶ್ರೀ. ವಿಶ್ವನಾಥಜಿ ಕನಾಳೆ ಮತ್ತು ಸ್ಥಳೀಯ ಅನೇಕ ಕಾರ್ಯಕರ್ತರೂ ಆರ್ಯನ್ ಕಾಂಗ್ರೆಸ್ ಯಶಸ್ವಿಯಾಗಿ ಜರುಗಿಸಲು ವಿಶೇಷವಾಗಿ ಪ್ರಯತ್ನಿಸುತ್ತಿದ್ದಾರೆ. ಸೊಲ್ಲಾಪುರದ ಮುನಸಿಪಾಲ್ಟಿಯವರೂ ಸರ್ವಪ್ರಕಾರದ ಸಹಾಯ ಮಾಡಲು ಮುಂದೆಬಂದಿದ್ದಾರೆ. ಬೇರೆ ಬೇರೆ ಭಾಗಗಳಿಂದ ಈ ಸಮ್ಮೇಳನಕ್ಕೆ ಸಾಧಾರಣ ೨೫ ಸಾವಿರದ ವರೆಗೆ ಜನಗಳು ಸೇರಬಹುದೆಂದು ಊಹಿಸಲಾಗಿದೆ. ಪರಮ ಪೂಜ್ಯ ಪಂ. ಮಾಲವೀಜಿ, ಬಾಪೂಜಿ ಅಣೆ, ಸ್ವಾತಂತ್ರ್ಯವೀರ ಬ್ಯಾ. ಸಾವರಕರ, ಜಗದ್ಗುರು ಶಂಕರಾಚಾರ್ಯ ಡಾ. ಕುರ್ತಕೋಟಿ, ಡಾ. ಮುಂಜೆ, ಭಾಯಿ ಪರಮಾನಂದ, ಸರ್. ಗೋಕುಳಚಂದ ನಾರಂಗ, ಶ್ರೀ ಜುಗಲಕಿಶೋರ ಬಿರಲಾ, ಮನನೀಯ ಶ್ರೀ ಘನಶ್ಯಾಮಸಿಂಹಜಿ ಗುಪ್ತ ಮೊದಲಾದವರು ಈ ಆರ್ಯನ್ ಕಾಂಗ್ರೆಸ್ಸಿಗೆ ಬರುವವರಿದ್ದಾರೆ.

# ಮೌಲಾನಾ ಶೌಕತ ಅಲ್ಲಿಯವರ ಶೋಚನೀಯ ನಿಧನ.

ಮುಸಲ್ಮಾನ್ ಸಮಾಜದಲ್ಲಿಯ ಸುಪ್ರಸಿದ್ಧ ಮುಂದಾಳುಗಳಾದ ಮೌಲಾನಾ ಶೌಕತ್ ಅಲ್ಲಿಯವರು ದಿಲ್ಲಿಯಲ್ಲಿ ತಮ್ಮ ವಯಸ್ಸಿನ ೬೫ ನೇ ವರುಷದಲ್ಲಿ ಗಂಟಲು ಬೇನೆಯಿಂದ ನರಳುತ್ತಿರುವಾಗ ಒಮ್ಮೆಲೇ ಹೃದಯಕ್ರಿಯೆ ನಿಂತು ತಾ. ೨೬-೧೧-೩೮ ನೆಯ ದಿವಸ ಮುಂಜಾನೆ ನಿಧನಹೊಂದಿದರೆಂದು ತಿಳಿಸಲು ತುಂಬಾ ವಿಷಾದವಾಗುತ್ತದೆ. ರವಿವಾರ ಮುಂಜಾನೆಯೇ ಇವರು ತಮ್ಮ ಆಪ್ತ ಮಿತ್ರರಿಗೆ ೨-೩ ಪತ್ರಗಳನ್ನು ಬರೆದು ಮಿತ್ರರೊಡನೆ ಮಾತುಕತೆಗಳನ್ನು ಕೂಡಾ ಆಡಿದ್ದರು. ೯ ಗಂಟೆಯ ಸುಮಾರಕ್ಕೆ ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಬೇಕೆಂದು ಹಾಸಿಗೆಯ ಮೇಲೆ ಮಲಗಿಕೊಂಡವರೇ ಪುನಃ ಮೇಲಕ್ಕೆ ಏಳಲಿಲ್ಲ. ಒಮ್ಮಿಂದೊಮ್ಮೆ ಇವರ ಹೃದಯಕ್ರಿಯೆ ನಿಂತುದರಿಂದ ಮರಣ ಸಂಭವಿಸಿರಬೇಕೆಂದು ಊಹಿಸಿದರು. ಸ್ವಲ್ಪ ಹೊತ್ತಿನಲ್ಲಿಯೇ ಮೌ. ಶೌಕತ ಅಲ್ಲಿಯವರ ಶೋಚನೀಯ ನಿಧನದ ಸುದ್ದಿಯು ಎಲ್ಲ ಕಡೆಗೂ ಪಸರಿಸಿತು. ಕೇಂದ್ರಶಾಸನ ಸಭೆಯ ಮುಸಲ್ಮಾನ್ ಸದಸ್ಯರೇ ಮೊದಲಾದವರು ಇವರ ಅಂತ್ಯದರ್ಶನಕ್ಕಾಗಿ ಬಂದು ಹೋದರು. ಮರು ದಿವಸ ಇವರ ಶವಕ್ಕೆ ದಿಲ್ಲಿಯ ಜುಮ್ಮಾ ಮಸೀದೆಯ ಹತ್ತಿರ ಅಂತ್ಯಸಂಸ್ಕಾರ ಕೊಡಲಾಯಿತು. ಇವರ ಪ್ರೇತಯಾತ್ರೆಯಲ್ಲಿ ಅನೇಕ ಹಿಂದು-ಮುಸಲ್ಮಾನರು ಭಾಗವಹಿಸಿದ್ದರು.



ಮೌ. ಶೌಕತ ಅಲ್ಲಿಯವರು.

ಮೌ. ಶೌಕತ ಅಲ್ಲಿಯವರು ಅಲ್ಲಿಬಂಧುಗಳಲ್ಲಿಯೇ ಹಿರಿಯರು. ಇವರು ರಾಮಪುರ ಸಂಸ್ಥಾನಿನಲ್ಲಿ ತಾ. ೧೦-೩-೧೮೭೩ ನೆಯ ದಿವಸ ಜನ್ಮ ತಾಳಿದರು. ಇವರು ಅಲಿಗಡ ಕಾಲೇಜಿನಲ್ಲಿ ಶಿಕ್ಷಣಹೊಂದಿದರು. ಆಲಿಗಡ ಕಾಲೇಜಿನಲ್ಲಿರುವಾಗ ಆಟದಲ್ಲಿ ಉತ್ಸಾಹದಿಂದ ಭಾಗವಹಿಸುತ್ತಿದ್ದರು. ೧೮೯೩ ನೆಯ ಇಸವಿಯಲ್ಲಿ ಇವರು ಅಲಿಗಡ ಕ್ರಿಕೆಟ್ ಸಂಘದ ನಾಯಕರಾಗಿದ್ದರು. ೧೮೯೫ ರಲ್ಲಿ ಗ್ರಾಜ್ಯುಏಟರಾಗಿ ೧೮೯೬ ನೆಯ ಇಸ್ವಿಯಲ್ಲಿ ಸಂಯುಕ್ತ ಪ್ರಾಂತ ಸರಕಾರದಲ್ಲಿ ಅಫು ಶಾಖೆಯಲ್ಲಿ ವರಿಷ್ಠ ಅಧಿಕಾರಿಗಳಾಗಿ ೧೭ ವರುಷ ಸರಕಾರಿ ನೌಕರಿಮಾಡಿದರು. ಅನಂತರ ಇವರು ನಾ. ಆಗಾಖಾನರ ಸೆಕ್ರೆಟರಿಗಳಾಗಿ ಕೆಲಸಮಾಡಿದರು. ಅಲಿಗಡ ವಿಶ್ವವಿದ್ಯಾಲಯಕ್ಕಾಗಿ ದುಡ್ಡನ್ನು ಕೂಡಿಸುವುದರ ದೆಸೆಯಿಂದ ಹಿಂದುಸ್ಥಾನದಲ್ಲೆಲ್ಲ ಸಂಚರಿಸಿದರು. ಇದೇ ಕಾಲಕ್ಕೇನೇ ದಿಲ್ಲಿಯಲ್ಲಿ "ಖುದಾಮ ಈ ಕಾಬಾ" ಎಂಬ ಸಂಸ್ಥೆಯನ್ನು ಸ್ಥಾಪಿಸಿ ಆ ಮೂಲಕ ಖಿಲಾಫತ ಚಳವಳಿಯನ್ನು ನಡೆಸಿದರು.

೧೯೧೪ ನೆಯ ಇಸವಿಯಲ್ಲಿ ಮಹಾಯುದ್ಧವು ಪ್ರಾರಂಭವಾದೊಡನೆ ಹಿಂದುಸ್ಥಾನ ಸರಕಾರದವರು ಮೌ. ಶೌಕತ ಅಲ್ಲಿ ಮತ್ತು ಇವರ ಬಂಧುಗಳಾದ ಮೌ. ಮಹಮ್ಮದ ಅಲ್ಲಿ ಇವರನ್ನು ಸೆರೆಹಿಡಿದು ಬಂಧನದಲ್ಲಿಟ್ಟರು. ೧೯೧೬ ರಲ್ಲಿ ಲಖನೌ ನಗರದಲ್ಲಿ ಕಾಂಗ್ರೆಸ್ಸಿಗೂ ಮುಸ್ಲಿಂ ಲೀಗಿಗೂ ಸಂಧಾನವಾಯಿತು. ೧೯೧೯ ರಲ್ಲಿ ಅಲ್ಲಿಬಂಧುಗಳ ಬಿಡುಗಡೆಯಾದುದರಿಂದ ಅಮೃತಸರದಲ್ಲಿ ಜರುಗಿದ ಕಾಂಗ್ರೆಸ್ಸಿನಲ್ಲಿ ಇವರು ಉಪಸ್ಥಿತರಾಗಿದ್ದರು. ಸ್ವಲ್ಪಾವಧಿಯಲ್ಲಿಯೇ ಜಾಲಿಯಾನವಾಲಾಬಾಗಿನಲ್ಲಿ ಭಯಂಕರ ಕೊಲೆಯಾಯಿತು. ಇದರಿಂದ ದೇಶದಲ್ಲಿ ಭಯಂಕರ ಕ್ಷೋಭೆಯುಂಟಾಯಿತು. ಇದೇ ಸಮಯದಲ್ಲಿಯೇ ಇರಾಕ್, ಸಿರಿಯಾ, ಪ್ಯಾಲಿಸ್ಟಾಯಿನ್ ಮೊದಲಾದ ರಾಷ್ಟ್ರಗಳ ಮೇಲೆ ಯುರೋಪಿಯನ್ ರಾಷ್ಟ್ರಗಳ ವರ್ಚಸ್ಸು ಬೆಳೆದುದರಿಂದ ಲೋಕಮಾನ್ಯ ಟಿಳಕರವರ ಮೃತ್ಯುವಿನ ದಿವಸ ಮಹಾತ್ಮಾ ಗಾಂಧಿಯವರು ಮತ್ತು ಅಲ್ಲಿಬಂಧುಗಳು ಸ್ವರಾಜ್ಯ, ಜಾಲಿಯಾನವಾಲಾಬಾಗಿನಲ್ಲಾದ ಕೊಲೆ, ತುರ್ಕಸ್ಥಾನದ ಸಂರಕ್ಷಣೆ ಮತ್ತು ಖಿಲಾಫತ ಈ ನಾಲ್ಕು ಕಾರಣಗಳಿಗಾಗಿ ಅಸಹಕಾರದ ಮೊದಲನೆಯ ಚಳವಳಿಯನ್ನು ಪ್ರಾರಂಭಿಸಿದರು. ಇದರಲ್ಲಿ ೧೯೨೧ ನೆಯ ಇಸವಿಯಲ್ಲಿ ಅಲ್ಲಿಬಂಧುಗಳಿಗೆ ಕರಾಚಿಯಲ್ಲಿ ೨ ವರುಷಗಳ ಕಠಿಣ ಶಿಕ್ಷೆಯು ವಿಧಿಸಲ್ಪಟ್ಟಿತು. ಮುಂದೆ ೧೯೨೩ ನೆಯ ಇಸ್ವಿಯಲ್ಲಿ ಇವರ ಬಿಡುಗಡೆಯಾದ ನಂತರ ೧೯೨೮ ನೆಯ ಇಸ್ವಿಯ ವರೆಗೂ ಮೌ. ಶೌಕತ ಅಲ್ಲಿಯವರು ಕಾಂಗ್ರೆಸ್ಸಿನಲ್ಲಿಯೇ ಸೇರಿಕೊಂಡಿದ್ದರು. ಆದರೆ ಸರ್ವಪಕ್ಷೀಯ ಸಮಿತಿಯವರು ಸಿದ್ಧಗೊಳಿಸಿದ ನೆಹರು ವರದಿಯು ಪ್ರಕಟವಾದಂದಿನಿಂದ ಕಾಂಗ್ರೆಸ್ಸಿನಲ್ಲಿ ಮತಭೇದವಾಗಿ ಮೌಲಾನಾ ಶೌಕತ ಅಲ್ಲಿಯವರು ಕಾಂಗ್ರೆಸ್ಸಿನಿಂದ ಹೊರಬಿದ್ದರು. ೧೯೧೯ ರಲ್ಲಿ ಜರುಗಿದ ಮೊದಲನೆಯ ಖಿಲಾಫತ ಪರಿಷತ್ತಿಗೆ ಇವರನ್ನು ಅಧ್ಯಕ್ಷರನ್ನಾಗಿ ಆರಿಸಿದ್ದರು. ಕಾರಾಗೃಹದಿಂದ ಬಿಡುಗಡೆಹೊಂದಿದ ಕೂಡಲೇ ಹಾಗೆಯೇ ಖಿಲಾಫತ್ತಿನ ಅಧ್ಯಕ್ಷಸ್ಥಾನ ಸ್ವೀಕರಿಸಲು ಅಮೃತಸರಕ್ಕೆ ಹೋಗಿದ್ದರು. ಆ ಕಾಲಕ್ಕೇನೇ ಅಮೃತಸರದಲ್ಲಿ ಜರುಗಿದ ಕಾಂಗ್ರೆಸ್ಸಿನಲ್ಲಿಯೂ ಇವರು ಉಪಸ್ಥಿತರಾಗಿದ್ದರು. ಅಮೃತಸರದ ಖಿಲಾಫತ ಪರಿಷತ್ತಿನನಂತರ ಇವರು ಖಿಲಾಫತ ಕಮಿಟಿಯ ಜನರಲ್ ಸೆಕ್ರೆಟರಿಗಳಾಗಿಯೂ ಮತ್ತು ಚೀಫ್ ಎಗ್ಜಿಕ್ಯೂಟಿವ್ ಆಫೀಸರರಾಗಿಯೂ ಕೆಲಸಮಾಡಿದರು. ೧೯೨೩ ನೆಯ ಕೊಕನಾಡ ಖಿಲಾಫತ ಪರಿಷತ್ತಿಗೂ ಇವರೇ ಅಧ್ಯಕ್ಷರಾಗಿದ್ದರು. ೧೯೨೭ ನೆಯ ಇಸ್ವಿಯ ವರೆಗೂ ಖಿಲಾಫತ ಮತ್ತು ಕಾಂಗ್ರೆಸ್ ಒಂದೇ ಕಡೆಗೆ ಜರುಗುತ್ತಿದ್ದವು. ಆದರೆ ೧೯೨೭ ನೆಯ ಮದ್ರಾಸ ಕಾಂಗ್ರೆಸ್ಸಿನಲ್ಲಿ ನೆಹರು ವರದಿಗೆ ಮಾನ್ಯತೆ ದೊರೆತುದರಿಂದ ಖಿಲಾಫತ ಮತ್ತು ಕಾಂಗ್ರೆಸ್ಸಿನಲ್ಲಿ ತೀವ್ರತರವಾದ ಮತಭೇದವುಂಟಾಯಿತು.

೧೯೨೮ ನೆಯ ಇಸವಿಯಲ್ಲಿ ಸಾಯಮನ್ ಕಮಿಶನ್ನಿಗೆ ಬಹಿಷ್ಕಾರ ಹಾಕುವವರಲ್ಲಿ ಮೌ. ಶೌಕತ ಅಲ್ಲಿಯವರೂ ಒಬ್ಬರಾಗಿದ್ದರು. ಮುಂದೆ ಲಂಡನ್ನಿನಲ್ಲಿ ಕೂಡಿದ ಮಂಡಲಾಕಾರ ಪರಿಷತ್ತಿಗೆ ಮುಸಲ್ಮಾನ್ ಪ್ರತಿನಿಧಿಗಳೆಂದು ಉಪಸ್ಥಿತರಾಗಿದ್ದರು. ೧೯೩೫ ನೆಯ ಇಸ್ವಿಯಲ್ಲಿ ಕೇಂದ್ರ ಶಾಸನ ಸಭೆಗೆ ಆರಿಸಿಬಂದಿದ್ದರು. ಇತ್ತಿತ್ತಲಾಗಿ ಇವರು ಬ್ಯಾ. ಜಿನ್ನಾರವರ ಸಹಕಾರದಿಂದ ಮುಸ್ಲಿಂಲೀಗಿನಲ್ಲಿ ಸೇರಿಕೊಂಡು ಕೆಲಸಮಾಡುತ್ತಿದ್ದರು. ೧೯೩೩ ನೆಯ ಇಸ್ವಿಯಲ್ಲಿ ಇಸ್ಲಾಮ ಧರ್ಮದ ಮೇಲೆ ವ್ಯಾಖ್ಯಾನಮಾಡುವುದಕ್ಕಾಗಿ ಅಮೇರಿಕೆಗೆ ಹೋಗಿದ್ದರು. ಇವರ ನಿಧನದಿಂದ ಕಾಂಗ್ರೆಸ್ ಮತ್ತು ಮುಸಲ್ಮಾನ್ ಮುಂದಾಳುಗಳಿಗೆ ತುಂಬಾ ದುಃಖವಾಗಿದೆ.

ರಾಷ್ಟ್ರಾಧ್ಯಕ್ಷರಾದ ಬಾಬು ಸುಭಾಷಚಂದ್ರ ಬೋಸರವರು ಮೌಲಾನಾ ಶೌಕತ ಅಲ್ಲಿಯವರ ಶೋಚನೀಯ ನಿಧನದ ಬಗ್ಗೆ ತಮ್ಮ ವಿಷಾದವನ್ನು ವ್ಯಕ್ತಗೊಳಿಸಿ 'ಮೌಲಾನಾ ಶೌಕತ ಅಲ್ಲಿಯವರು ದೊಡ್ಡ ಮುಂದಾಳುಗಳೂ, ರಾಷ್ಟ್ರಕ್ಕಾಗಿ ಬಡಿದಾಡುವವರೂ" ಆಗಿದ್ದರೆಂದು ಹೇಳಿದ್ದಾರೆ.

# ಹೈದರಾಬಾದ ಸ್ವಾತಂತ್ರ್ಯಸಂಗ್ರಾಮದಲ್ಲಿ ೭೫ ಜನರ ಬಂಧನ.

## ಬಜಾಜ-ಹೈದರಿ ಮಾತುಕತೆ ಅಯಶಸ್ವಿಯಾಯಿತು.

ಸೇಟ ಜಮುನಾಲಾಲ ಬಜಾಜರು ಮತ್ತು ಸರ್. ಅಕ್ಬರ್ ಹೈದರಿಯವರಲ್ಲಿ ಮುಂಬೈಯಲ್ಲಿ ನಡೆದ ಮಾತುಕತೆಯು ಅಯಶಸ್ವಿಯಾಯಿತೆಂಬುದಾಗಿ "ಮಹಾರಾಷ್ಟ್ರ" ಪತ್ರದಲ್ಲಿ ಪ್ರಸಿದ್ಧವಾಗಿದೆ. ಸರ್. ಅಕಬರ್ ಹೈದರಿಯವರು ರಾಜಕೀಯ ಕೈದಿಗಳನ್ನು ಬಿಡುಗಡೆ ಮಾಡುವ ಒಂದೇ ಒಂದು ಸಂಗತಿ ಮಾನ್ಯಮಾಡಿದರೆಂದೂ ಜಮುನಾಲಾಲರಿಗೆ ಅದು ಮಾನ್ಯವಾಗಲಿಲ್ಲವೆಂದೂ ತಿಳಿಯುತ್ತದೆ.

ವರ್ಧಾಕ್ಕೆ ತಿರುಗಿ ಬಂದ ಮೇಲೆ ಸೇಟ ಜಮುನಾಲಾಲರು ಸರ್. ಹೈದರಿಯವರಿಗೆ ಒಪ್ಪಂದದ ಪ್ರಸ್ತಾವನೆಯೆಂದು ಕೆಳಗಿನ ಎರಡು ಕರಾರುಗಳನ್ನು ಲೇಖಿಯಿಂದ ತಿಳಿಸಿದರು. (೧) ನಿಜಾಮ ಸರಕಾರದವರು ಸಂಸ್ಥಾನ ಕಾಂಗ್ರೆಸ್ ಮೇಲಿನ ನಿರ್ಬಂಧಕ ಹುಕುಮನ್ನು ತೆಗೆದೊಗೆಯಬೇಕು. (೨) ಪ್ರಜೆಗಳಿಗೆ ಮುದ್ರಣ ಸ್ವಾತಂತ್ರ್ಯ, ಭಾಷಣ ಸ್ವಾತಂತ್ರ್ಯ ಮೊದಲಾದ ಪ್ರಾಥಮಿಕ ಹಕ್ಕುಗಳನ್ನು ಕೊಡಬೇಕು. ಶೇಠಜಿಯವರಿಗೆ ಇನ್ನೂ ನಿಜಾಮರಿಂದ ಉತ್ತರ ಬಂದಿಲ್ಲ.

ಸಂಸ್ಥಾನ ಸಂರಕ್ಷಣೆ ಕಾಯದೆಯನ್ನು ಮಧ್ಯಪ್ರಾಂತ ಸರಕಾರದವರು ಮಧ್ಯಪ್ರಾಂತದಲ್ಲಿ ಜಾರಿಮಾಡಬೇಕೆಂದು ಸರ್. ಅಕಬರ್ ಹೈದರಿಯವರು ಪ್ರಯತ್ನಮಾಡಿದರು. ಆದರೆ ಸರದಾರ ಪಟೇಲರು ಮುಂಬಯಿ, ಮದ್ರಾಸ, ಮತ್ತು ಮಧ್ಯಪ್ರಾಂತದ ಮುಖ್ಯ ಮಂತ್ರಿಗಳಿಗೆ ಆ ಕಾಯದೆಯನ್ನು ಕಾಂಗ್ರೆಸ್ ಪ್ರಾಂತದಲ್ಲಿ ಜಾರಿಯಲ್ಲಿ ತರತಕ್ಕದ್ದಲ್ಲವೆಂದು ಸ್ಪಷ್ಟವಾಗಿ ತಿಳಿಸಿರುವರೆಂದು ಗೊತ್ತಾಗುತ್ತದೆ.

**ಸತ್ಯಾಗ್ರಹ ದಿನಾಚರಣೆ.**

ಸತ್ಯಾಗ್ರಹ ದಿನಾಚರಣೆಯ ಸಂಬಂಧದಲ್ಲಿ ೨೭ ನೇ ತಾರೀಖಿನ ದಿವಸ ಬೇರೆ ಬೇರೆ ಕಡೆಗೆ ಕೂಡಿ ೭೫ ಜನರು ಸೆರೆಹಿಡಿಯಲ್ಪಟ್ಟರು.

**ಔರಂಗಾಬಾದ**— ಮುಂಜಾನೆ ದಿಗಂಬರ ದಾಸ ಇವರ ಮನೆಯಿಂದ ಪ್ರಭಾತಫೇರಿ ಹೊರಟಿತ್ತು. ಅದರಲ್ಲಿ ಪುರುಷೋತ್ತಮ ಕಿರ್ಲೋಸ್ಕರ, ಮೋಹನಿರಾಜ, ಬಳವಂತ ಶಾಹುರಾವ ಅಜಾದ ಇವರು ಇದ್ದರು. ಅವರೆಲ್ಲರೂ ಮಾಣಿಕಚಂದ ಪಹಾಡೆ ಇವರ ಮನೆಯ ಎದುರಿನಲ್ಲಿ ಹಿಡಿಯಲ್ಪಟ್ಟರು. ಎರಡನೆಯ ಫೇರಿಯು ಡಾ. ಸೀಮಂತ ಇವರ ಮನೆಯಿಂದ ಹೊರಟು ಕಿರಾಣಿ ಚಾವಡಿ ಬಳಿಯಲ್ಲಿ ಹಿಡಿಯಲ್ಪಟ್ಟಿತು. ಈ ಫೇರಿಯಲ್ಲಿ ವಿಷ್ಣು ಅಹಿರವಾಡಕರ, ವಾಮನರಾವ ಮತ್ತು ಗಣಪತರಾವ ಅರಾಣಕೆ ಇವರಿದ್ದರು. ಸಂಜೆಯಲ್ಲಿ ಜಾಹೀರಸಭೆಯಾಗಿ ಮೋತಿಲಾಲ ಮಂತ್ರಿ ವಕೀಲ, ಬಾಪುರಾವ ಪಿಂಪರಕರ, ರಾಜಾರಾಮ ಕೋಕಿಳ, ದಿಗಂಬರರಾವ ಮೊದಲಾದ ಜನರು ಸೆರೆಹಿಡಿಯಲ್ಪಟ್ಟರು.

**ವೈಜಾಪುರ**— ಮೆರವಣಿಗೆಯಾಗಿ ಸಭೆ ಜರುಗಿತು. ಅನಂತರಾವ ಭಾಲೇರಾವ ಇವರು ಠರಾವು ಓದಿ ತೋರಿಸಿ ಭಾಷಣ ಮಾಡಿದರು. ಈ ಬಗ್ಗೆ ೪ ಜನರು ಸೆರೆ ಹಿಡಿಯಲ್ಪಟ್ಟರು.

**ಜಾಲನಾ**— ಸಭೆ ಪ್ರಾರಂಭವಾದಾಗ್ಗೆ ಪೋಲಿಸರು ಗೋಪಾಳ ಏಕನಾಥ ಶಾಸ್ತ್ರಿ ಸಾತುಣಗಾವಕರ, ಎಲ್. ಎಂ. ದೇಶಪಾಂಡೆ, ಭಗವಾನರಾವ ಮಾಂಜಲಗಾವಕರ ಮತ್ತು ರಘುನಾಥರಾವ ಬಾಕಳೀಕರ ಇವರನ್ನು ಸೆರೆಹಿಡಿದರು. ಪ್ರತಿಷ್ಠಿತ ನಾಗರಿಕರು ಅವರಿಗೆ ಮಾಲೆಗಳನ್ನರ್ಪಿಸಿದರು. ಮಾಲೆಗಳನ್ನರ್ಪಿಸಿದ್ದೊಂದೇ ತಡ ಅದೇ ಅಪರಾಧವೆಂದು ಗಣಿಸಲ್ಪಟ್ಟು ಜಗನ್ನಾಥ ಅಗ್ರವಾಲ, ಕೇಸರಿಮಲಜಿ, ಹರಿ ಸಾಕ್ಷತ್ರಿಯ, ಗುಲಾಬ ಕಲಾಲ, ನಂದಲಾಲ ಕಲಾಲ ಈ ಐವರು ಕೈದುಮಾಡಲ್ಪಟ್ಟರು.

**ಪರಭಣಿ**— ನಾರಾಯಣ ರಾಮಚಂದ್ರ, ವಾಘಮಾರೆ ಗಣಪತ ಸೋನೂಸಿಂಗ, ರಘುನಾಥ ಚಿತೂರಕರ, ಸೀತಾರಾಮಪಂತ ಕೋದಂಡೆ ಇವರು ಸಭೆ ಕೂಡಿಸಿದ್ದಕ್ಕಾಗಿ ಬಂಧಿಸಲ್ಪಟ್ಟರು.

**ಪೈಠಣ**— ವಿಠ್ಠಲ ಪಂಡಿತ ಮಹಾಜನ ವೈದ್ಯ ಇವರ ಅಧ್ಯಕ್ಷತೆಯಲ್ಲಿ ಸಭೆಯಾಗಿ ಠರಾವು ಓದಲಾಯಿತು. ಮಹಾಜನರೊಂದಿಗೆ ಬೇರೆ ಮೂವರೂ ಸೆರೆ ಹಿಡಿಯಲ್ಪಟ್ಟರು.

**ಬೀಡ**— ವಾಮನರಾವ ವಝೆ ವಕೀಲರು ಕಾಂಗ್ರೆಸ್ ದಿನದ ಕಾರ್ಯಕ್ರಮವನ್ನು ಜರುಗಿಸಲು ಹೋಗುತ್ತಿರುವಾಗ ಹಾದಿಯಲ್ಲಿಯೇ ಸೆರೆಹಿಡಿದರು.

**ನಾಂದೇಡ**— ಕಾಂಗ್ರೆಸ್ ದಿನದ ಕಾರ್ಯಕ್ರಮ ಪತ್ರಿಕೆ ಹಂಚುತ್ತಿರುವಾಗ ಭಗವಾನರಾವ ಖೋಡವೆ ಮತ್ತು ರಾಮಚಂದ್ರರಾವ ಇವರು ಹಿಡಿಯಲ್ಪಟ್ಟರು.

**ಕಳಂಬ**— ರಾತ್ರಿ ೮|| ಗಂಟೆಗೆ ಸಭೆಯಾಗಿ ನಾಗೂರಾವ ರೇಣಾಪುರಕರ ಜಿನ ಜೋಶಿ ಮತ್ತು ಒಬ್ಬ ಸ್ವಯಂಸೇವಕ ಹೀಗೆ ಮೂವರು ಬಂಧಿಸಲ್ಪಟ್ಟರು.

**ತುಳಜಾಪೂರ**— ಗೋವಿಂದರಾವ ಸರಾಫ ರಂಗನಾಥರಾವ ಮತ್ತು ಇಬ್ಬರು ಸ್ವಯಂಸೇವಕರು ಬಾಜಾರದಲ್ಲಿ ಬಂದು ಕಾಂಗ್ರೆಸದ ಜಯಘೋಷಮಾಡುತ್ತಾ ಮೆರವಣಿಗೆ ತೆಗೆದರು. ನಂತರ ಪೋಲಿಸ್ ಚೌಕಿಯ ಹತ್ತಿರ ಸಭೆಯಾಯಿತು. ಪೋಲಿಸರು ಸತ್ಯಾಗ್ರಹಿಗಳನ್ನು ಹಿಡಿದುಕೊಂಡು ಹೋದರು.

**ಚಿಂಚೋಳಿ**— ಶ್ರೀ. ರಂಗನಾಥರಾವ ವಕೀಲ ಕಾಲಿದಾಸರಾವ ದೇಶಪಾಂಡೆ ಮತ್ತು ಬೇರೆ ಮೂವರು ಕಾಂಗ್ರೆಸ್ ಪ್ರಚಾರದ ಸಂಬಂಧದಲ್ಲಿ ಹಿಡಿಯಲ್ಪಟ್ಟರು.

**ಬಾಡೇಪಲ್ಲಿ**— ನಂದಗಿರಿ ವೆಂಕಟರಾವ, ಹನಮಂತರಾವ ಮತ್ತು ರಾಮಚಂದ್ರರಾವ ಇವರು ಸಭೆಸೇರಿದ ನಿಮಿತ್ತ ಸೆರೆಹಿಡಿಯಲ್ಪಟ್ಟಿದ್ದಾರೆ.

**ಹನುಮಕೊಂಡಾ**— ಸಭೆಕೂಡಿಸಿದ ಸಲುವಾಗಿ ಹಯಗ್ರಿವಾಚಾರ ಮತ್ತು ರಾಮರಾವ ಮಧುಸೂದನರಾವ ಇವರ ಕೈದು ಆಯಿತು.

**ಭೋಂಗೀರ**— ಗೋಪಾಳರೆಡ್ಡಿ ವೆಂಕಟರಾಮಿನ ಮತ್ತು ರಾಮಚಂದ್ರರಾವ ಇವರ ಬಂಧನವಾಯಿತು.

# ಅಖಿಲ ಭಾರತ ವೀರಶೈವ ಮಹಾಸಭೆಯ

## ಸ್ಥಿರಕಾರ್ಯಕರ್ತರ ನಿಯೋಜನೆಯ

### ಹಾಗು ಸ್ಥಿರಕಚೇರಿಯ ಯೋಜನೆ.

ಸ್ಥಳ— ಕಚೇರಿಯು ಗೌರವ ಕಾರ್ಯದರ್ಶಿಗಳ ಸ್ಥಳದಲ್ಲಿಯಾಗಲಿ ಅಥವಾ ಯಾವದೇ ಮಧ್ಯವರ್ತಿಸ್ಥಳದಲ್ಲಿಯಾಗಲಿ ಇರತಕ್ಕದ್ದು.

ಘಟನೆಯ ಪ್ರಕಾರ ಕಾರ್ಯಕಾರಿ ಮಂಡಲವಿರುವುದಷ್ಟೆ. ಅದಕ್ಕೆ ಒಬ್ಬ ಚೇರಮನ್ನರೂ ಒಬ್ಬ ಗೌರವ ಕಾರ್ಯದರ್ಶಿಯೂ ಇರಬೇಕು. ಇವರ ಕೆಳಗೆ ಕನಿಷ್ಟ ಮೂವರು ಸಹಾಯಕ ಕಾರ್ಯದರ್ಶಿಗಳಿರತಕ್ಕದ್ದು. ಇವರ ಕೆಳಗೆ ಕೆಲಸಕ್ಕೆ ತಕ್ಕ, ಸಿಬ್ಬಂದಿ ಇರತಕ್ಕದ್ದು.

ಚೇಅರಮನ್ನರೂ ಗೌರವ ಕಾರ್ಯದರ್ಶಿಗಳೂ ಪ್ರತಿ ಮಹಾಸಭೆಯ ಕಾಲಕ್ಕೆ ಆರಿಸಲ್ಪಟ್ಟವರಿರಬೇಕು. ಅವರು ವರ್ಷಾನುವರ್ಷ ಮಹಾಸಭಾ ಉದ್ದೇಶದ ಮೇರೆಗೆ ಕೆಲಸಮಾಡಲು ಶಕ್ತಿ ಹಾಗು ಮನಸುಳ್ಳವರಿರಬೇಕು. ಅವರಿಗೆ ಎಲ್ಲಾದರೂ ಹೋಗಿ ಬರುವ ಪ್ರಸಂಗದಲ್ಲಿ ದಾರಿಯ ಖರ್ಚು ದಿವಸದ ಭತ್ತೆಯೂ ಕೊಡಲ್ಪಡಬೇಕು.

ಸಹಾಯಕ ಕಾರ್ಯದರ್ಶಿಗಳು ತಮ್ಮ ಜೀವಮಾನದ ವರೆಗೆ ಸಮಾಜಸೇವೆಯನ್ನು ಮಾಡಲು ಸಿದ್ಧರಿದ್ದ ಯೋಗ್ಯ ಜನರಿರಬೇಕು. ಅವರಿಗೆ ಸಾಧಾರಣ ಮನೆತನ ನಡೆಸುವಷ್ಟು ಪ್ರತಿತಿಂಗಳ ವೇತನ ಕೊಡಬೇಕು. ಅವರಿಗೆ ಇರಲಿಕ್ಕೆ ಪುಕ್ಕಟೆಯಾಗಿ ವಸತಿ ಗೃಹಗಳನ್ನು ಕೊಡಬೇಕು. ಅವರ ಮಕ್ಕಳಿಗೆ ತಕ್ಕ ಶಿಕ್ಷಣ ಪುಕ್ಕಟೆ ಸಿಗುವ ವ್ಯವಸ್ಥೆಯಾಗಬೇಕು. ಹಾಗು ಅವರ ಜೀವ ವಿಮಾ ಇಳಿಸಬೇಕು. ಅದರ ಖರ್ಚನ್ನು (ಪ್ರೀಮಿಯಂ) ಸಮಾಜದವರೇ (ಮಹಾಸಭೆಯು) ಕೊಡಬೇಕು. ಇವರು ಮಹಾಸಭೆಯ ಘಟನೆಯ ಮೇರೆಗೆ ಮಹಾಸಭಾದ ಉದ್ದೇಶಗಳನ್ನು ನಡವಳಿಕೆಯಲ್ಲಿ ತರಲಿಕ್ಕೆ ಎಲ್ಲ ರೀತಿಯಿಂದ ಪ್ರಯತ್ನಿಸಬೇಕು. ಇವರ ಕೆಳಗೆ ಇರತಕ್ಕ ಸಿಬ್ಬಂದಿಯ ಬಗ್ಗೆ ಮಧ್ಯವರ್ತಿ ಮಂಡಲದವರು ನಿಯಮ ಮಾಡಿಕೊಂಡು ನಿಯಮಿಸಿಕೊಳ್ಳಬೇಕು.

### ಇದರ ಅಂದಾಜು ಖರ್ಚು ವರ್ಷಕ್ಕೆ.

| | |
|---|---|
| ಅ. ಚೇರಮನ್ ಹಾಗು ಗೌ॥ ಕಾ॥ ದರ್ಶಿಗಳ ಪ್ರವಾಸ ಖರ್ಚು ವ ಭತ್ತೆ | ರೂ. ೫೦೦ |
| ಆ. ಸಹಾಯಕ ಕಾರ್ಯದರ್ಶಿಗಳ ಪಗಾರ (ಮೂವರು) | ೧೦೮೦ |
| ಇ. ಸಿಬ್ಬಂದಿ ಇಬ್ಬರು ಕಾರಕೂನರು ವ (ಒಬ್ಬ ಸಿಪಾಯಿ) | ೬೨೦ |
| ಈ. ಆಫೀಸಿನ ಬಾಡಗಿ ವಗೈರೆ | ೧೨೦ |
| ಉ. ಸಾದಿಲವಾರ ಒಗೈರೆ. | ೨೦೦ |
| ಊ. ಸಹಾಯಕ ಕಾರ್ಯದರ್ಶಿಗಳ ಪ್ರವಾಸ ಖರ್ಚು (ಮೂವರದು.) | ೩೦೦ |
| ಋ. ಕಾರ್ಯದರ್ಶಿಗಳ ವಿಮಾಖರ್ಚು | ೩೦೦ |
| ೠ. ಕಾ॥ ದ. ಗಳ ಮನಿ ಭಾಡೆ ವ ಹುಡುಗರ ಎಲ್ಲಾ ಖರ್ಚು | ೩೬೦ |
| | ೩೪೮೦ |

ಇದರ ಮೊದಲಿನ ಮೂರು ವರುಷಗಳ ಖರ್ಚನ್ನು ಚಿರಸ್ಥಾಯಿ ಫಂಡಿನವರು ನೋಡಬೇಕು. ಆ ಮೇಲೆ ಕೆಳಗಿನ ಯೋಜನೆಯಂತೆ ನಡೆಯಬೇಕು.

### ಉತ್ಪನ್ನ.

ಅ ಇದರ ಅರ್ಧ ಖರ್ಚನ್ನು ಚಿರಸ್ಥಾಯಿ ಫಂಡಿನವರು ಕೊಡಬೇಕು.

ಬ. ಉಳಿದ ಅರ್ಧ ಖರ್ಚನ್ನು ದೇಶದ ತುಂಬೆಲ್ಲ ಸದಸ್ಯರನ್ನು ಮಾಡಿ ಮಧ್ಯವರ್ತಿಮಂಡಲಕ್ಕೆ ಬರತಕ್ಕ ಹಿಸೇದಲ್ಲಿ ತುಂಬತಕ್ಕದ್ದು.

ಕ. ಮಹಾಸಭಾ ಕರೆದ ಕಾಲಕ್ಕೆ ಉಳಿದರೆ (ಚಿರಸ್ಥಾಯಿ ಕಮಿಟಿಯವರು ಕೊಡುವ ಭಾಗಕ್ಕಿಂತ ಹೆಚ್ಚಾದರೆ) ಅದನ್ನು ಸಹ ಇದರ ಬಗ್ಗೆ ಉಪಯೋಗಮಾಡಿಕೊಳ್ಳಬಹುದು.

(ಈ ಯೋಜನೆಯು ತಿದ್ದುಪಡಿಗೆ ಒಳಪಟ್ಟಿದೆ. ಕಾರಣ ವಿನಾದರೂ ತಿದ್ದುಪಡಿ ಸೂಚಿಸುವುದಿದ್ದಲ್ಲಿ ಕೂಡಲೇ ವರ್ತಮಾನ ಪತ್ರದಲ್ಲಿ ಪ್ರ ಸಿ ದ್ಧ ಸಿ ನಮ್ಮ ಕಡೆಗೆ ಕಳುಹಿಸಿಕೊಡಬೇಕಾಗಿ ವಿನಂತಿ.)

ಅ. ಭಾ. ವೀ. ಮಹಾಸಭಾ ಸ್ವಾಗತ ಸಮಿತಿ
ಹುಬ್ಬಳ್ಳಿ.
ಇವರ ಕಾರ್ಯಕಾರಿ ಮಂಡಲದ ಪರಿಯಿಂದ.

---

ನಿಜಾಮಾಬಾದ— ಶ್ರೀ. ನಾರಾಯಣರೆಡ್ಡಿ, ಅಪ್ಪಾಜಿ ಮತ್ತು ಗಂಗಾವತಿಯವರು ಕೈದುಮಾಡಲ್ಪಟ್ಟರು.

### ಹರತಾಳ ಬಗ್ಗೆ ವ್ಯಾಪಾರಿಗಳಿಗೆ ನೋಟೀಸು.

ಕಾಂಗ್ರೆಸ್ ದಿನದ ದಿವಸ ಹರತಾಳ ಪಾಲಿಸಿದ ಬಗ್ಗೆ ಹೈದರಾಬಾದ ಸುಲ್ತಾನ ಬಜಾರದಲ್ಲಿಯ ೧೪ ವ್ಯಾಪಾರಿಗಳಿಗೆ ನಿಮ್ಮ ಮೇಲೆ ಖಟ್ಲೆ ಯಾಕೆ ಹಾಕಬಾರದೆಂದು ನೋಟೀಸು ಕೊಟ್ಟಿರುವರು.

### ವಿನಾಯಕರಾವ ಕೋರಟಿಕರರಿಗೆ ಹದ್ದುಪಾರು.

ಹೈದರಾಬಾದಪಲ್ಲಿಯ ಪ್ರಸಿದ್ಧ ಆರ್ಯಸಮಾಜ ಮುಂದಾಳುಗಳಾದ ಶ್ರೀ. ವಿನಾಯಕರಾವ ಕೋರಟಿಕರರಿಗೆ ಹೈದರಾಬಾದದಿಂದ ಹೊರಬೀಳಲು ಹುಕುಮು ವಿಧಿಸಲ್ಪಟ್ಟದ್ದರಿಂದ ಅವರು ಪುಣೆಗೆ ಹೋಗಿರುವರೆಂದು ತಿಳಿಯುತ್ತದೆ.

"ಕಾಯಕಲ್ಪ" ದ ವಿಶೇಷ ಸಂಚಿಕೆಯನ್ನು ಮಾರಾಟಮಾಡಿದ ಬಗ್ಗೆ ನಾಂದೇಡದಲ್ಲಿ ಇಬ್ಬರು ಬಂಧಿಸಲ್ಪಟ್ಟರು.

ಸ್ಟೇಟ್ ಕಾಂಗ್ರೆಸ್ಸಿನ ೯ ನೇ ಡಿಕ್ಟೇಟ ಆದ ಶ್ರೀ. ರಾಜಗೋಪಾಲರಾಯರಿಗೆ ೪ ನೇ ಸಿಟಿ ಮ್ಯಾಜಿಸ್ಟ್ರೇಟರು ೧೮ ತಿಂಗಳ ಕಠಿಣ ಶಿಕ್ಷೆಯನ್ನೂ ೧೦೦ ರೂ. ಗಳ ದಂಡವನ್ನೂ ದಂಡಕ್ಕೆ ತಪ್ಪಿದರೆ ಮತ್ತೆ ಒಂದು ತಿಂಗಳ ಶಿಕ್ಷೆಯನ್ನೂ ವಿಧಿಸಿದರು. ಅವರ ೪ ಮಂದಿ ಕಾರ್ಯದರ್ಶಿಗಳಿಗೆ ೧ ವರ್ಷ ಕಠಿಣ ಶಿಕ್ಷೆ ೫೦ ರೂ. ಗಳ ದಂಡ, ದಂಡಕ್ಕೆ ತಪ್ಪಿದರೆ ೧೫ ದಿನಗಳ ಕಠಿಣ ಶಿಕ್ಷೆ ವಿಧಿಸಲಾಯಿತು.

ಕಾಯಕಲ್ಪ ಎಂಬ ಪತ್ರವನ್ನು ಹಂಚಿದ್ದಕ್ಕಾಗಿ ಹೈದರಾಬಾದ ಮೊಟರಗೇಜ ರೇಲ್ವೆ ಸ್ಟೇಶನ್ನದ ಹತ್ತಿರ ಬಂಧಿಸಲ್ಪಟ್ಟ ಶ್ರೀ. ರಂಗನಾಥರಾಯರಿಗೆ ಸಿಟಿ ಮ್ಯಾಜಿಸ್ಟ್ರೇಟರು ಒಂದು ವರ್ಷ ಕಠಿಣ ಕೈದು ೨೫ ರೂ. ದಂಡ ಇಲ್ಲದಿದ್ದರೆ ಮತ್ತೆ ಒಂದು ತಿಂಗಳ ಶಿಕ್ಷೆವಿಧಿಸಿದರು.

—ಸಂ. ಕ.

# ಜನಿವಾರವನ್ನು ಕಿತ್ತುಕೊಂಡರು!

## ನಿಜಾಮ ರಾಜ್ಯದಲ್ಲಿ ಅತ್ಯಾಚಾರ.

ನಿಜಾಮ ರಾಜ್ಯದಲ್ಲಿ ಸ್ಟೇಟ ಕಾಂಗ್ರೆಸ್ಸಿನವರು ಪ್ರಾರಂಭಿಸಿರುವ ಸತ್ಯಾಗ್ರಹ ಚಳವಳಿಯು ದಿನೇ ದಿನೇ ಹೆಚ್ಚಾಗುತ್ತ ನಡೆದಿದೆ. ಮೊದಲು ಹೈದರಾಬಾದಿನಲ್ಲಿಯೇ ಪ್ರಾರಂಭವಾದ ಈ ಶಾಸನೋಲ್ಲಂಘನೆಯು ಎಲ್ಲ ಜಿಲ್ಲೆಗಳಲ್ಲಿಯೂ ಹಳ್ಳಿಹಳ್ಳಿಗಳಲ್ಲಿಯೂ ಹಬ್ಬಿಕೊಂಡಿದೆ. ಇಷ್ಟು ದಿವಸಗಳ ವರೆಗೂ ನೈಜಾಮರ ಒತ್ತಾಯ ಬಲತ್ಕಾರಗಳಲ್ಲಿ ಕುಗ್ಗಿ ಹೋದ ಪ್ರಜೆಗಳು ಸ್ಟೇಟ ಕಾಂಗ್ರೆಸ್ಸಿನ ಕಾರ್ಯಕ್ರಮಗಳಲ್ಲಿ ಉತ್ಸಾಹದಿಂದ ಸೇರುತ್ತಲಿದ್ದಾರೆ. ಇತ್ತ ಪೋಲಿಸಿನವರೂ ಪ್ರಜೆಗಳ ಮೇಲೆ ಸಲ್ಲದ ಅತ್ಯಾಚಾರಗಳನ್ನು ನಡೆಸಿದ್ದಾರೆ.. ಆರ್ಯರಕ್ಷಕ ಸಮಿತಿಯ ಮಂತ್ರಿಗಳಾದ ಶ್ರೀ. ಶಿವಚಂದ್ರಜಿಯವರು ಒಂದು ಪ್ರಕಟನೆಯನ್ನು ಹೊರಡಿಸಿ ಈ ರೀತಿ ಹೇಳಿದ್ದಾರೆ—

"ಹೈದರಾಬಾದ ರಾಜ್ಯದಲ್ಲಿ ಆರ್ಯನ್ ಡಿಫೆನ್ಸ್ ಲೀಗಿನಿಂದ ಸತ್ಯಾಗ್ರಹ ಪ್ರಾರಂಭವಾಗಿದೆ. ಸತ್ಯಾಗ್ರಹದಲ್ಲಿ ಸೆರೆಹಿಡಿದ ಎಲ್ಲ ಕೈದಿಗಳನ್ನೂ ಬೇರೆ ಬೇರೆ ಕಾರಾಗೃಹಗಳ ಕೋಣೆಯಲ್ಲಿ ಇಡುತ್ತಿದ್ದಾರೆ. ಅಲ್ಲಿ ಬೇರೆ ಬೇರೆ ರೀತಿಯ ಆಶೆ, ಭಯ, ಬಲಾತ್ಕಾರಗಳಿಂದ ಅವರನ್ನು ಹೆದರಿಸಿ ಬಿಳೀ ಕಾಗದ ಮೇಲೆ ಹಸ್ತಾಕ್ಷರಗಳನ್ನೂ ಇಲ್ಲವೆ ಹೆಬ್ಬೆಟ್ಟಿನ ಗುರುತನ್ನೂ ಜೋರಿನಿಂದ ತೆಗೆದುಕೊಳ್ಳುತ್ತಿದ್ದಾರೆ. ಸರಕಾರದವರು ಇದರ ಉಪಯೋಗಮಾಡಿಕೊಂಡು ಜನರ ಕಣ್ಣಲ್ಲಿ ಮಣ್ಣನ್ನೆರಚುವುದರ ದೆಶೆಯಿಂದ ಇಂಥವರು ಸರಕಾರಕ್ಕೆ ಕ್ಷಮಾಬೇಡಿಕೊಂಡರೆಂದು ವೃತ್ತಪತ್ರಗಳಲ್ಲಿ ಪ್ರಕಟಿಸುತ್ತಿದ್ದಾರೆ. ಆರ್ಯನ್‌ಡಿಫೆನ್ಸ್ ಲೀಗಿನವರು ಸತ್ಯಾಗ್ರಹ ನಿಲ್ಲಿಸಿದರೆಂಬ ಸುಳ್ಳು ಸುದ್ದಿಯನ್ನು ಹರಡುತ್ತಿದ್ದಾರೆ. ಯಾರೂ ಇಂಥ ಮೋಸದ ಮಾತಿಗೆ ಬಲಿಬೀಳಬಾರದು. ಆರ್ಯನ್‌ಡಿಫೆನ್ಸ್ ಲೀಗಿನ ಪರವಾಗಿ ಸತ್ಯಾಗ್ರಹವು ನಿರಂತರವಾಗಿ ನಡೆಯುವುದು.

ಕಳೆದ ದೀಪಾವಳಿ ಸಮಯದಲ್ಲಿ ನಿಗ್ಗುಡಗಿ ಗ್ರಾಮದಲ್ಲಿ ಆರ್ಯರು ಕೇವಲ 'ಓಂ' ಧ್ವಜ ಸಹಿತ ಮೆರವಣಿಗೆಯನ್ನು ತೆಗೆದುದಕ್ಕಾಗಿಯೇ ಅಲ್ಲಿಯ ೨೮ ಜನ ಆರ್ಯರನ್ನು ಸೆರೆಹಿಡಿದಿದ್ದಾರೆ. ಕಾರಾಗೃಹಗಳಲ್ಲಿ ಆರ್ಯ ಸತ್ಯಾಗ್ರಹಿಗಳ ಯಜ್ಞೋಪವೀತವನ್ನು ಬಲತ್ಕಾರಗಳಿಂದ ಕಿತ್ತುಕೊಂಡಿದ್ದಾರೆ. ಆರಮೂರದ ಮಾಮಲೇದಾರರು ಸಿಪಾಯಿಯ ಕಡೆಯಿಂದ ಚಿಟಪಲ್ಲಿ ಗ್ರಾಮದ ರಾಮಚಂದ್ರ ಪಟೇಲ ಮತ್ತು ಕಮರಪಲ್ಲಿ ಗ್ರಾಮದ ಗಂಗಾರಡ್ಡಿ ಪಟವಾರಿ ಇವರ ಜನಿವಾರಗಳನ್ನು ಒತ್ತಾಯದಿಂದ ಹರಿಸಿ ಹಾಕಿಸಿದರಂತೆ! ಅಲ್ಲಿಯ ಪಾಟೀಲ ಪಟವಾರಿಯವರಿಗೂ ಮಾಮಲೇದಾರರು ನಿಮ್ಮ ಶರೀರದ ಮೇಲಿರುವ ಯಜ್ಞೋಪವೀತವನ್ನು ತೆಗೆದು ಹಾಕದಿದ್ದರೆ ನಿಮ್ಮನ್ನು ನೌಕರಿಗಳಿಂದ ತೆಗೆದುಹಾಕಿ ಜೇಲನ್ನು ಕಾಣಿಸಲಾದೀತೆಂದು ಹೆದರಿಸಿದರಂತೆ.

ಲಾತೂರಿನ ಕೆಲವು ವ್ಯಾಪಾರಸ್ಥರು ತಮ್ಮ ಅಂಗಡಿ ಕಾಯಲು ಶೀಖ ಜನರನ್ನು ಇಟ್ಟುಕೊಂಡಿದ್ದರು. ಅಲ್ಲಿಯ ಕಲೆಕ್ಟರ್ ಸಾಹೇಬರು ಆ ಅಂಗಡಿಕಾರರಿಗೆ ಶೀಖ ನೌಕರರನ್ನು ತೆಗೆದುಹಾಕುವಂತೆ ಹೆದರಿಕೆಹಾಕಿದ್ದಾರೆ. ಕಲೆಕ್ಟರರೇ ಅಂಗಡಿಗಳಲ್ಲಿದ್ದ ಶೀಖ ನೌಕರರನ್ನು ಕರೆಯಿಸಿ ಪೋಲಿಸರ ಸಹಾಯದಿಂದ ಬಲಾತ್ಕರಿಸಿ ಅವರ ಕೃಪಾಣಗಳನ್ನು ಕಿತ್ತುಕೊಂಡರಂತೆ!"

---

## ಪುನಃ ಸೇನಾಪತಿ ಬಾಪಟರ ಪ್ರಯಾಣ.

ಸೇನಾಪತಿ ಬಾಪಟರವರು ಹೈರಾಬಾದ ಸತ್ಯಾಗ್ರಹ ಸಮರದಲ್ಲಿ ಸೇರುವುದಕ್ಕಾಗಿ ಪುನಃ ಹೈದರಾಬಾದಿನ ಕಡೆಗೆ ತಾ. ೧ ನೇ ದಿನ ಸೊಲ್ಲಾಪುರದಿಂದ ಹೊರಟಿದ್ದರು. ಅವರ ಜತೆಗೆ ೨೨ ಜನ ವೀರ ಸತ್ಯಾಗ್ರಹಿಗಳೂ ಇದ್ದರು. ರೇಲ್ವೆ ಪೋಲೀಸರು ನಿಜಾಮ ಪೋಲೀಸರ ಸಹಾಯದಿಂದ ಗುಲಬರ್ಗಾದಲ್ಲಿಯೇ ಇವರನ್ನು ಇಳಿಸಿಬಿಟ್ಟರು.

೧೧ನೆಯ ಸರ್ವಾಧಿಕಾರಿಗಳ ಕೈಸೆರೆ.

ಸಂಸ್ಥಾನ ಕಾಂಗ್ರೆಸ್ಸಿನ ೧೧ ನೆಯ ಸರ್ವಾಧಿಕಾರಿಗಳಾದ ಶ್ರೀ. ರಾಮಾರಡ್ಡಿಯವರು, ರಾಜಾರಡ್ಡಿ, ರತನರಡ್ಡಿ, ಕೊಂಡಾರಡ್ಡಿ ಮುಕುಂದರಡ್ಡಿ, ಮತ್ತು ರಂಗಾರಡ್ಡಿಯವರೊಡನೆ ತಾ ೨೯ ನೇ ದಿವಸ ಅಜೀಬಿ ಬೀದಿಯಲ್ಲಿ ಸತ್ಯಾಗ್ರಹವನ್ನಾಚರಿಸಿದರು. ಭಾಷಣಮಾಡುತ್ತಿರುವಾಗ್ಗೆ ಪೋಲಿಸರು ಇವರನ್ನು ಸೆರೆಹಿಡಿದರು.

ಸುಲ್ತಾನ ಬೀದಿಯಲ್ಲಿ ಆರ್ಯನ್ ಲೀಗಿನ ಮೂರು ಜನ ಸತ್ಯಾಗ್ರಹಿಗಳು ಶಾಸನೋಲ್ಲಂಘಿಸಿದರು. ಲಾತೂರಿನ ಶ್ರೀ. ಸೀತಾರಾಮಯ್ಯ, ಶ್ರೀನಿವಾಸರಾವ, ವಿನಾಯಕರಾವ ಮತ್ತು ಕಿಸಾನರಾವ ಇವರು ನಗರ ಸಂಕೀರ್ತನ ಮಾಡಿದುದರಿಂದ ಸೆರೆಹಿಡಿಯಲ್ಪಟ್ಟರು. ಹಿಂದೂ ನಾಗರಿಕ ಸ್ವಾತಂತ್ರ್ಯ ಸಂಘದ ೬ ನೇ ಸರ್ವಾಧಿಕಾರಿಗಳಾದ ಶ್ರೀ. ಲಕ್ಷ್ಮಣರಾವ ಕುಲಕರ್ಣಿ ಇವರಿಗೆ ೧ ವರುಷ ಕಠಿಣ ಶಿಕ್ಷೆ ೫೦ ರೂ. ಗಳ ದಂಡ ಮತ್ತು ಉಳಿದ ಇಬ್ಬರಿಗೆ ೯ ತಿಂಗಳ ಕಠಿಣ ಶಿಕ್ಷೆ ಮತ್ತು ೨೨ ರೂ. ಗಳ ದಂಡ ವಿಧಿಸಿದರು.

ಮಹಬೂಬ ನಗರ ಹಾಯಸ್ಕೂಲಿನ ಹೆಡ್‌ಮಾಸ್ತರರು ವಂದೇಮಾತರಂ ಗೀತೆ ಹಾಡಲು ಪ್ರತಿಬಂಧಗೊಳಿಸಿದ್ದಾರೆ. ಆದರೆ ೧೨೫ ಜನ ವಿದ್ಯಾರ್ಥಿಗಳು ಹೆಡ್‌ಮಾಸ್ತರರ ಈ ಆಜ್ಞೆಯನ್ನು ಮುರಿದು ವಂದೇಮಾತರಂ ಹಾಡಿದರೆಂದು ತಿಳಿಯುತ್ತದೆ.

---

—ಅಕೋಲೆಯ ಹತ್ತಿರ ಒಂದು ಮೋಟಾರಿನ ಪೆಟ್ರೋಲ್ ಟಾಕಿಯು ಒಡೆದು ಬೆಂಕಿ ತಗಲಿದ್ದರಿಂದ ೧೮ ಜನರು ಕೂಡಲೆ ಮರಣಹೊಂದಿದರು. ನಾಲ್ವರು ಗಾಯಗೊಂಡರು.

—ಅಮೇರಿಕೆಯ ಹಡಗುಪಡೆಯ ಶಾಖೆಯುವರು ೩೫ ಟನ್ ಸಾವಿರ ಭಾರವಾದ ಒಂದು ಯುದ್ಧದ ಹಡಗವನ್ನು ಕಟ್ಟಲು ೫೨೯೦೦೦೦ ಡಾಲರುಗಳಿಗೆ ಗುತ್ತಿಗೆ ಕೊಟ್ಟಿದ್ದಾರೆ.



ಶಾ. ಶ. ೧೮೬೦ ನೆಯ ಮಾರ್ಗಶಿರ ಶು|| ೧೩ ಸೋಮವಾರ.

## ಮುಖ್ಯ ಮಂತ್ರಿಗಳಿಗೆ ಸುಸ್ವಾಗತ!

ಕಾಂಗ್ರೆಸ್ ಪಕ್ಷವು ಅಧಿಕಾರವನ್ನು ವಹಿಸಿ ಇಂದಿಗೆ ಒಂದೂವರೆ ವರುಷ ಆಗಿಹೋಯಿತು. ಈ ಅವಧಿಯಲ್ಲಿ ನಮ್ಮ ಪ್ರಾಂತದ ಮುಖ್ಯ ಮಂತ್ರಿಗಳಾದ ಮಾನ್ಯ ಬಾಲಗಂಗಾಧರ ಖೇರರವರು ಕನ್ನಡ ನಾಡಿನಲ್ಲಿ ನಿನ್ನೆ ೪ ನೆಯ ತಾರೀಖಿನ ದಿನ ಕಾಲಿಟ್ಟದ್ದು ಇದೇ ಮೊದಲು.

ಮಾನ್ಯ ಖೇರರವರು ಚಿಕ್ಕಂದಿನಲ್ಲಿ ಹುಬ್ಬಳ್ಳಿಯ ಹತ್ತಿರಿರುವ ಕುಂದಗೋಳದಲ್ಲಿದ್ದವರಾದುದರಿಂದ ಇವರು ಕನ್ನಡಿಗರಾಗಿಯೂ ಇದ್ದಾರೆ. ಮೊನ್ನೆ ಅಸೆಂಬ್ಲಿಯಲ್ಲಿ ಒಂದು ಪ್ರಶ್ನೆಗೆ ಕನ್ನಡದಲ್ಲಿಯೇ ಉತ್ತರವನ್ನು ಕೊಟ್ಟು ಕನ್ನಡ ನುಡಿಯ ವಿಷಯದಲ್ಲಿರುವ ತಮ್ಮ ಪ್ರೀತಿಯನ್ನೂ ವ್ಯಕ್ತಗೊಳಿಸಿದ್ದಾರೆ.

ಈ ಎಲ್ಲ ಕಾರಣಗಳಿಂದ ಮಾನ್ಯ ಮುಖ್ಯ ಮಂತ್ರಿಗಳನ್ನು ಕನ್ನಡಿಗರು ಈಗ ಹೆಚ್ಚಾದ ಪ್ರೇಮಾದರ ಪೂರ್ವಕ ಸ್ವಾಗತಿಸುವುದು ಸ್ವಾಭಾವಿಕವಷ್ಟೆ.

**ಕನ್ನಡಿಗರ ರಾಷ್ಟ್ರಸೇವೆ.**

ಕನ್ನಡಿಗರು ಆದರಸತ್ಕಾರಗಳಲ್ಲಿ ಬಹು ಮುಂದರಿದವರು. ತಮಗೆ ಎಷ್ಟೇ ಕಷ್ಟನಷ್ಟಗಳಿದ್ದರೂ ಅವುಗಳನ್ನೆಲ್ಲಾ ನುಂಗಿಕೊಂಡು ಬಂದವರ ಉಪಚಾರವನ್ನೇ ಬಹು ಉತ್ಸಾಹದಿಂದ ಮಾಡಿ ನಲಿನಲಿದಾಡುವವರು. ತಮ್ಮ ಕುಂದುಕೊರತೆಗಳನ್ನೇ ಮುಂದೆ ಮಾಡಿ ಬಂದವರ ಮನಸ್ಸನ್ನು ನೋಯಿಸುವವರಲ್ಲ. ತಾವೇ ನೊಂದುಕೊಂಡು ಬಂದವರನ್ನು ಆನಂದಗೊಳಿಸುವವರು.

ಇದರಿಂದ ಇವರಿಗೆ ಯಾವ ಕುಂದು ಕೊರತೆಗಳೂ, ಆಸೆ ಆಕಾಂಕ್ಷೆಗಳೂ ಇಲ್ಲವೆಂದು ಮಾತ್ರ ಬಂದವರು ತಿಳಿಯಬಾರದು. ಮಾನ್ಯ ಮುಖ್ಯ ಮಂತ್ರಿಗಳು ಕನ್ನಡಿಗರ ಈ ಸೌಜನ್ಯವನ್ನು ಅಂತವರಿದ್ದಾರೆಂದೇ ನಾವು ಎಣಿಸುತ್ತೇವೆ. ಕಾಂಗ್ರೆಸ್ ಪಕ್ಷಕ್ಕೆ ಈ ಪ್ರಾಂತದ ಅಧಿಕಾರ ಸೂತ್ರ ದೊರೆಯಲು ಈ ಕನ್ನಡ ನಾಡು ತನ್ನ ಪಾಲನ್ನು ಹೆಚ್ಚಾಗಿ ಕೊಟ್ಟದೆಯೆಂಬುದನ್ನೂ ಮಾನ್ಯ ಮಂತ್ರಿಗಳು ಅಂತವರೇ ಆಗಿದ್ದಾರೆ. ಶಾಸನಭಂಗದ ಹೋರಾಟದಲ್ಲಿ ಕನ್ನಡ ನಾಡು ಗುಜರಾತದಂತೆಯೇ ಹೆಚ್ಚಾದ ಸ್ವಾರ್ಥತ್ಯಾಗಮಾಡಿದೆಯೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಎಂದಮೇಲೆ ಕನ್ನಡಿಗರ ಆಕಾಂಕ್ಷೆಯ ಕಡೆಗೆ ಮುಖ್ಯ ಮಂತ್ರಿಗಳು ಹೆಚ್ಚು ಲಕ್ಷಿಸುವುದು ಅವರ ಪವಿತ್ರ ಕರ್ತವ್ಯವೇ ಆಗಿದೆಯಲ್ಲವೆ?

**ಕನ್ನಡಿಗರ ಜೀವಾಳ.**

ಮಾನ್ಯ ಮುಖ್ಯ ಮಂತ್ರಿಗಳು ಈ ಕನ್ನಡ ನಾಡಿನ ಅನೇಕ ಕಡೆ ಸಂಚರಿಸಿ, ಅನೇಕ ಆದರ ಸತ್ಕಾರಗಳನ್ನು ಹೊಂದಿ, ಅನೇಕ ಲೋಪ ದೋಷಗಳನ್ನು ಕಂಡು, ಅನೇಕ ಕಾರ್ಯಕಲಾಪಗಳನ್ನು ಅಭಿನಂದಿಸಿ, ಅನೇಕ ಪ್ರಶ್ನೆಗಳಿಗೆ ಸಹಾನುಭೂತಿಯ ಉತ್ತರಗಳನ್ನು ಕೊಟ್ಟುಹೋಗುವುದು ರಾಜ್ಯ ಭಾರ ನಡೆಯಿಸುವವರ ರೀತಿನೀತಿಗಳಿಗೆ ಒಪ್ಪತಕ್ಕವುಗಳೇ ಆಗಿವೆ. ಇಷ್ಟು ಮಾತ್ರ ನಡೆದರೆ ಕನ್ನಡಿಗರ ಜೀವಾಳದ ಪ್ರಶ್ನೆಯು ಮಾನ್ಯ ಖೇರರವರಿಗೆ ತಿಳಿಯಿತೆಂದಾಗಲಿ ಅಥವಾ ಕನ್ನಡಿಗರ ಸಮಾಧಾನಗೊಳಿಸುವ ಮುಖ್ಯ ಕಾರ್ಯವನ್ನು ಅವರು ಮಾಡಿದರೆಂದಾಗಲಿ ಹೇಳಲಿಕ್ಕಾಗದು.

ಕರ್ನಾಟಕ ಏಕೀಕರಣವು ಕನ್ನಡಿಗರ ಜೀವಾಳದ ಪ್ರಶ್ನೆಯು. ಅದು ನೆರವೇರುವ ವರೆಗೆ ಕನ್ನಡಿಗರಿಗೆ ಸಮಾಧಾನವಿಲ್ಲ. ಅಂತಹ ಸಮಾಧಾನವನ್ನುಂಟುಮಾಡದ ಯಾವ ಮಂತ್ರಿಮಂಡಲವೂ ಕನ್ನಡಿಗರಿಗೆ ಚಿರಸ್ಮರಣೀಯವಾದುದಾಗಿರಲು ಶಕ್ಯವಿಲ್ಲ. ಆದಕಾರಣ ಮಾನ್ಯ ಮಂತ್ರಿವರ್ಯರು ಕನ್ನಡಿಗರ ಜೀವಾಳದ ಈ ಏಕೀಕರಣ ಕ್ಕೋಸ್ಕರ ತುಂಬಾ ಪ್ರಯತ್ನಿಸುವ ದೃಢ ಸಂಕಲ್ಪವುಳ್ಳವರಾಗಿ ಈ ತಮ್ಮ ಶುಭಾಗಮನವು ಕನ್ನಡಿಗರಿಗೆ ಒಂದು ಐತಿಹಾಸಿಕ ಪ್ರಸಂಗವಾಗುವಂತೆ ಮಾಡಬೇಕೆಂದು ನಾವು ವಿಜ್ಞಾಪಿಸಿಕೊಳ್ಳದಿರಲಾರೆವು.

ಕನ್ನಡ ನಾಡಿನ ಮುಂದಾಳುಗಳು ಈಗ ಮಾನ್ಯ ಮಂತ್ರಿವರ್ಯರಲ್ಲಿ ಕರ್ನಾಟಕ ಏಕೀಕರಣದ ಅಗತ್ಯವನ್ನೂ ಅದು ಸಾಧಿಸದಿದ್ದರಾಗುವ ಅನರ್ಥವನ್ನೂ ಅವರಿಗೆ ಸಂಖ್ಯೆ, ಸಾಮ್ಯ, ಸಪ್ರಮಾಣಗಳಿಂದ ಮನವರಿಕೆ ಮಾಡಿಕೊಡುವುದು ಅತ್ಯಗತ್ಯವಾಗಿದೆ. ಈ ಮಹತ್ಕಾರ್ಯವನ್ನು ಈ ಸುಸಮಯದಲ್ಲಿ ಪರಿಣಾಮಕಾರಿಯಾಗುವಂತೆ ನಮ್ಮ ಮುಂದಾಳುಗಳು ಮಾಡಲೆಂದೂ ಮಾನ್ಯ ಮಂತ್ರಿವರ್ಯರ ಈ ಕರ್ನಾಟಕ ಸಂಚಾರವು ಯಶಸ್ವಿಯಾಗಲೆಂದೂ ಹಾರೈಸುತ್ತೇವೆ.

---

## ಶ್ರೀ. ಲತ್ಮೆಯವರ ಅಹಿಂಸೆ.

ಮಹಾತ್ಮಾ ಗಾಂಧಿಯವರ ಅಹಿಂಸಾ ತತ್ವವು ಸರ್ವಶ್ರುತವಷ್ಟೆ. ಆದರೆ ಅವರ ಮುಖ್ಯ ಅನುಯಾಯಿಗಳೆಂದು ತಿಳಿಯಲ್ಪಡುವ ವಲ್ಲಭಭಾಯಿ ಪಟೇಲರ ಅಹಿಂಸೆಯು ಮಾತ್ರ ಗಾಂಧೀಜಿಯವರ ಅಹಿಂಸಾ ತತ್ವಕ್ಕೆ ಸಮಾನವಾದುದಾಗಿಲ್ಲವೆಂಬುದನ್ನು ಮೊನ್ನೆ ಮುಂಬೈಯಲ್ಲಿ ಗುಂಡು ಹಾರಿಸಿದ್ದರ ಸಮರ್ಥನಪರವಾದ ಅವರ ಭಾಷಣದ ಮೇಲಿಂದ ನಾವು ಈ ಮುಂಚೆಯೇ ವಿವೇಚಿಸಿದ್ದೇವೆ. ಅನಂತರ ತಾ. ೧೯-೧೧-೩೮ ನೆಯ 'ಹರಿಜನ' ಪತ್ರಿಕೆಯಲ್ಲಿ ಗಾಂಧೀಜಿಯವರು ಅಹಿಂಸೆಯ ವಿಚಾರವಾಗಿ ಪುನಃ ಹೀಗೆ ಹೇಳಿದ್ದಾರೆ—

"ಒಬ್ಬ ದುಷ್ಟನು ಒಬ್ಬ ಸ್ತ್ರೀಯಳ ಮೇಲೆ ಅತ್ಯಾಚಾರ ನಡೆಯಿಸಬಂದರೆ ಆತನಿಗೆ ಬುದ್ಧಿವಾದವನ್ನು ಹೇಳಿರಿ. ಕೊನೆಗೆ ನೀವೇ ಪ್ರಾಣವನ್ನಾದರೂ ಬಿಡಿರಿ. ಆದರೆ ಆತನನ್ನು ಮಾತ್ರ ಕೊಲ್ಲಬೇಡಿರಿ."

ಇದು ಗಾಂಧೀಜಿಯವರ ಅಸಾಧಾರಣವಾದ ಅಹಿಂಸಾ ತತ್ವವು. ಈ ತತ್ವವು ಗಾಂಧೀಜಿಯುವರ ಅನುಯಾಯಿಗಳೆಂದೇ ತಿಳಿಯಲ್ಪಡುವ ನಮ್ಮ ಅರ್ಥಸಚಿವರಾದ ಮಾನ್ಯ ಲಕ್ಷ್ಮಿಯವರಿಗೆ ಎಷ್ಟರ ಮಟ್ಟಿಗೆ ಮಾನ್ಯವಿದೆಯೆಂಬುದು ಅವರ ಈ ಕೆಳಗಿನ ಅಭಿಪ್ರಾಯದಿಂದ ಗೊತ್ತಾಗುವುದು.

ಅಹಮದಾಬಾದಿನಲ್ಲಿ ಜೈನಾಚಾರ್ಯ ಶ್ರೀ ಹೇಮಚಂದ್ರ ಉತ್ಸವ ಸಮಾರಂಭದ ಕಾಲಕ್ಕೆ ಮಾನ್ಯ ಲಕ್ಷ್ಮಿಯವರು ಅಧ್ಯಕ್ಷರಾಗಿ ಮಾಡಿದ ವ್ಯಾಖ್ಯಾನದಲ್ಲಿ ಅಹಿಂಸೆಯ ಸಂಬಂಧವಾಗಿ ಹೀಗೆ ಹೇಳಿದರೆಂದು ಪ್ರಕಟವಾಗಿದೆ—

"ಅಹಿಂಸಾ ತತ್ವದ ಅರ್ಥವನ್ನು ನಾವು ವ್ಯವಹಾರಕ್ಕೆ ಸರಿಹೊಚ್ಚಿಯೇ ಮಾಡಬೇಕು. ಪ್ರತಿಯೊಂದು ತತ್ವಕ್ಕೂ 'ಸಾಪೇಕ್ಷತಾ' ಇರುವಂತೆ ಈ ಅಹಿಂಸಾ ತತ್ವಕ್ಕಾದರೂ ಇದೆ. ಅಹಿಂಸಾ ತತ್ವ ಪಾಲನೆಯಲ್ಲಿ ನಾವು ಈ ತಾರತಮ್ಯವನ್ನು ಮಾಡದಿದ್ದುದರಿಂದಲೇ ಜೈನ ತತ್ವ ಜ್ಞಾನವು ಹಾಸ್ಯಾಸ್ಪದವಾಗಿದೆ."

ಶ್ರೀ. ಲಕ್ಷ್ಮಿಯವರಿಗೆ ಗಾಂಧೀಜಿಯವರ ಅಹಿಂಸಾ ತತ್ವವು ಒಪ್ಪಿಗೆಯಿಲ್ಲವೆಂದೇ ತೋರುವುದಿಲ್ಲವೆ?

---

## ವೀರಶೈವ ಮಹಾ ಸಭೆಯ

### ಸ್ವಾಗತ ಸಮಿತಿ ಕಾರ್ಯ.

ಹುಬ್ಬಳ್ಳಿಯಲ್ಲಿ ಕೂಡುವ ೧೩. ನೆಯ ವೀರಶೈವ ಮಹಾಸಭೆಯ ಸ್ವಾಗತ ಸಮಿತಿಯವರು ತಮ್ಮ ಕಾರ್ಯಗಳನ್ನು ಬಹು ವಿಧವಾಗಿ ಬಹು ಉತ್ಸಾಹದಿಂದ ಪ್ರಾರಂಭಿಸಿದ್ದಾರೆ. ಮಹಾಸಭೆಯಲ್ಲಿ ನಿರ್ಣಯವಾಗಬೇಕಾದ ಕೆಲವು ಮಹತ್ವದ ವಿಷಯಗಳನ್ನು ಕುರಿತು ತಾವು ಈಗಾಗಲೇ ಯೋಚಿಸಿ ಜನರು ಕೂಡಾ ಯೋಚಿಸಲು ಅನುಕೂಲವಾಗುವಂತೆ ಯೋಜನೆಗಳನ್ನು ಪ್ರಕಟಿಸಿ ವಿಚಾರವಿನಿಮಯದ ಪೂರ್ವ ಸಿದ್ಧತೆಯನ್ನು ಮಾಡಿಕೊಡುತ್ತಿದ್ದಾರೆ. ಇದು ಈ ವರೆಗಿನ ಯಾವ ಮಹಾಸಭೆಯಲ್ಲಿಯೂ ನಡೆಯದೆ ಇರತಕ್ಕ ಅಭಿನಂದನೀಯವಾದ ಪದ್ಧತಿಯು. ಈ ರೀತಿಯಲ್ಲಿಯಾದರೂ ಮಹಾಸಭೆಯು ಒಂದು ಹುಟ್ಟಿದನಂತರ ಒಂದು ಹೆಜ್ಜೆ ಮುಂದೆ ಬಂದುದು ಸಂತೋಷಕರವಾದುದೇ ಸರಿ.

**ನಿರಂತರ ಕಾರ್ಯ ನಡೆಯುವ ಯೋಜನೆ.**

ಈ ಮುಂಚೆ ಮಧ್ಯವರ್ತಿ ಗ್ರಂಥಾಲಯದ ವಿಚಾರವಾಗಿ ಒಂದು ಯೋಜನೆಯನ್ನು ಪ್ರಕಟಿಸಿದ್ದರಷ್ಟೆ. ಈಗ ಮಹಾಸಭೆಯ ಕಾರ್ಯವು ನಿರಂತರ ನಡೆಯುವುದಕ್ಕೋಸ್ಕರ ಒಂದು ಯೋಜನೆಯನ್ನು ಗೊತ್ತುಮಾಡಿ ಸ್ವಾಗತ ಸಮಿತಿಯವರು ಪ್ರಕಟಿಸಿದ್ದಾರೆ. ಅದನ್ನು ಇದೇ ಪತ್ರಿಕೆಯ ಬೇರೊಂದು ಕಡೆ ಪ್ರಕಟಿಸಿದ್ದಾಗಿದೆ. ಆ ಪ್ರಕಾರ ಕಾರ್ಯ ನಿರ್ವಾಹಕರನ್ನು ಗೊತ್ತುಮಾಡುವುದು ಅತ್ಯಗತ್ಯವು. ಮಹಾಸಭೆಯ ಗೊತ್ತುವಳಿಗಳು ಕಾರ್ಯರೂಪದಲ್ಲಿ ಬರಬೇಕಾದರೆ ಇಂತಹ ಏರ್ಪಾಟು ಇರಲೇಬೇಕು.

ಆದರೆ ವೇತನದ ಕಾರ್ಯದರ್ಶಿಗಳು ಇಂತಿಷ್ಟೇ ಇರಬೇಕೆಂದೂ ಅವರು ಇಂತಿಷ್ಟು ವೇತನದಿಂದ ಯಾವಾಗಲೂ ಮಹಾಸಭೆಯ ಕಾರ್ಯದರ್ಶಿಗಳಾಗಿಯೇ ಇರಬೇಕೆಂದೂ ನಿರ್ಣಯಿಸುವುದು ಹಿತಕರವಲ್ಲ. ಕಾರ್ಯದ ಇರುವಿಕೆ, ಅದನ್ನು ನಿರ್ವಹಿಸುವವರ ಸಾಮರ್ಥ್ಯ ಮೊದಲಾದವುಗಳನ್ನೆಲ್ಲಾ ನೋಡಿಕೊಂಡು ಕಾಲ ಕಾಲಕ್ಕೆ ಹೆಚ್ಚು ಕಡಿಮೆ ಮಾಡಲು ಅವಕಾಶವಿರುವಂತೆ ಯೋಜನೆಯಲ್ಲಿ ತಿದ್ದುಪಾಟಾಗಬೇಕು. ಮತ್ತು ಚಿರಸ್ಥಾಯಿ ಫಂಡಿನಿಂದ ಈ ಕಾರ್ಯಕ್ಕೆ ಹಣ ದೊರೆಯುತ್ತದೆಂದು ನಂಬಿ ಈ ಯೋಜನೆಯನ್ನು ಮಾಡದೆ ಮಹಾಸಭೆಯ ಅಧ್ಯಕ್ಷರೇ ಈ ಕಾರ್ಯಕ್ಕೋಸ್ಕರ ಸಂಚರಿಸಿ ಹಣ ಕೂಡಿಸಬೇಕಾಗುತ್ತದೆಂದು ತಿಳಿದೇ ಯೋಜನೆಯು ಏರ್ಪಡಬೇಕು.

**ಸೇವಾಗಣ ಅನವಶ್ಯಕ.**

ವೀರಶೈವ ಸೇವಾಗಣದ ಒಂದು ಯೋಜನೆಯನ್ನೂ ಸ್ವಾಗತ ಸಮಿತಿಯವರು ಪ್ರಕಟಿಸಿದ್ದಾರೆ. ಮಹಾಸಭೆಗೆ ಒಂದು ಪ್ರತ್ಯೇಕವಾದ ಸೇವಾಗಣವು ಅಗತ್ಯವೆಂದು ನಮಗೆ ತೋರುವುದಿಲ್ಲ. ವೀರಶೈವ ತರುಣ ಸಂಘಗಳೇ ಸೇವಾಗಣದ ಕಾರ್ಯವನ್ನು ಮಾಡಲು ಅರ್ಹವಾಗಿವೆ. ತರುಣ ಸಂಘಗಳನ್ನೆಲ್ಲಾ ಒಂದೇ ಸೂತ್ರದಲ್ಲಿರಿಸಿ ಅವುಗಳ ಕಾರ್ಯ ಮಹಾಸಭೆಯ ಮೇಲ್ವಿಚಾರಣೆಯಲ್ಲಿ ನಡೆಯುವಂತೆ ಮಾಡಿದ್ದಾದರೆ ವಿಶೇಷ ಪ್ರಯೋಜನವಾಗುತ್ತದೆ.

**ವೀರಶೈವ ವೈದ್ಯರ ಸಮ್ಮೇಲನ.**

ವೀರಶೈವ ಮಹಾಸಭೆಯ ಕಾಲದಲ್ಲಿ ವೀರಶೈವ ವೈದ್ಯರ ಒಂದು ಸಮ್ಮೇಲನವು ಕೂಡಬೇಕೆಂದು ಸ್ವಾಗತ ಸಮಿತಿಯವರು ಗೊತ್ತುಮಾಡಿದ್ದಾರೆ. ಇದು ಉಚಿತವೆಂದು ನಮಗೆ ತೋರುವುದಿಲ್ಲ. ಹೀಗೆ ವೀರಶೈವರು ಸಾರ್ವತ್ರಿಕವಾದ ವಿದ್ಯೆ ಕಲೆ ಮೊದಲಾದವುಗಳ ವಿಚಾರವಾಗಿ ಜಾತಿವಿಶಿಷ್ಟ ಕಾರ್ಯ ಮಾಡುವುದು ಹಿತಕರವಲ್ಲ. ಕರ್ನಾಟಕ ವೈದ್ಯರ ಸಮ್ಮೇಲನದಲ್ಲಿಯೇ ಸೇರಬೇಕಲ್ಲದೆ ಅಂಥ ಸಮ್ಮೇಲನದ ಕಾರ್ಯಗಳಿಗಾಗಿಯೇ ಪ್ರಯತ್ನಿಸಿ ಮುಂದಾಳುಗಳಾಗಬೇಕು. ಹೀಗೆ ಮಾಡುವುದೇ ಅವರ ವಿದ್ಯಾಭಿವೃದ್ಧಿಗೂ ಕನ್ನಡ ನಾಡಿಗೂ ಅನುಕೂಲ.

ಹೀಗೆ ವೀರಶೈವರು ತಮ್ಮಲ್ಲಿಯ ವೈದ್ಯರ ಸಮ್ಮೇಲನ, ಕೀರ್ತನಕಾರರ ಸಮ್ಮೇಲನ, ಸಂಗೀತಗಾರರ ಸಮ್ಮೇಲನ, ಚಿತ್ರಗಾರರ ಸಮ್ಮೇಲನ, ಎಂದು ಬೇರೆ ಬೇರೆ ವಿದ್ಯೆ ಕಲೆಗಳನ್ನು ಬಲ್ಲವರ ಒಂದೊಂದು ಪ್ರತ್ಯೇಕ ಸಮ್ಮೇಲನ ಮಾಡುತ್ತ ಹೋದರೆ ಸಮ್ಮೇಲನಗಳ ಸಂಖ್ಯೆಯೇನೋ ಹೆಚ್ಚಾಗಬಹುದೇ ವಿನಾ ಪ್ರಯೋಜನವೇನೂ ಆಗಲಾರದು. ಶಕ್ತಿಯ ವೃಥಾವ್ಯಯ. ಕರ್ನಾಟಕದ ಇಂಥ ಸಮ್ಮೇಲನಗಳಿಗೆ ಸಹಾಯ ಉತ್ಸಾಹಗಳ ಕೊರತೆಯಾಗಿ ಒಟ್ಟಿನಲ್ಲಿ ಉನ್ನತಿಗೇನೇ ಪ್ರತಿಬಂಧವಾಗುವುದು.

---

## ವೀರಶೈವ ಮಹಾ ಸಭೆಯ

### ಅಧ್ಯಕ್ಷರ ಹೆಸರುಗಳು.

ಹುಬ್ಬಳ್ಳಿಯಲ್ಲಿ ಕೂಡುವ ೧೩. ನೆಯ ವೀರಶೈವ ಮಹಾಸಭೆಗೆ ಅಧ್ಯಕ್ಷರನ್ನು ಆರಿಸಲು ಮಧ್ಯವರ್ತಿಮಂಡಲದವರಿಗೆ ಆ ಮಂಡಲದ ಚೇಅರಮನ್‌ರು ತಿಳಿಸಿದ ಪ್ರಕಾರ ಈ ಕೆಳಗಿನಂತೆ ಮತಗಳು ಕೊಡಲ್ಪಟ್ಟವೆಯೆಂದು ಗೊತ್ತಾಗಿದೆ.

| | |
|---|---|
| ಬ್ಯಾರಿಸ್ಟರ್ ಎಂ. ಎಸ್. ಸರದಾರರು. | ೧೪ |
| ಶ್ರೀ. ಹರ್ಡೇಕರ ಮಂಜಪ್ಪನವರು | ೧೧ |
| ಶ್ರೀಮನ್ನಿರಂಜನ ಮಹಾದೇವ ಸ್ವಾಮಿಗಳು | ೮ |
| ಶ್ರೀ. ಸಿ. ಸಿ. ಹುಲಕೋಟಿಯವರು | ೮ |
| ಶ್ರೀ. ಕಾಡಾದಿ ನಾಗಪ್ಪನವರು | ೮ |
| ಶ್ರೀ. ವಕೀಲ ಸಂಗ್ರಾಮಪ್ಪನವರು | ೭ |
| ರಾ. ಸಾ. 'ಹಳಕಟ್ಟಿಯವರು | ೭ |
| ಶ್ರೀ. ಪಿ. ಆರ್. ಚಿಕ್ಕೋಡಿಯವರು | ೭ |

ಏಳರಿಗಿಂತ ಕಡಿಮೆ ಮತ ಬಿದ್ದ ಹತ್ತಿಪ್ಪತ್ತು ಹೆಸರುಗಳೂ ಅವೆಯೆಂದು ತಿಳಿದಿದೆ. ಈ ಸಾರೆಯ ಮಹಾಸಭೆಗೆ ಬ್ಯಾ. ಸರದಾರರು ಅಧ್ಯಕ್ಷರಾಗುವುದು ಬಹು ಯೋಗ್ಯ.

ಶಿವ ಪ್ರಕಾಶ.

## ಡಿಶಂಬರ ೬ ನೆಯ ತಾರೀಖಿಗೆ ಮಹಾರಾಷ್ಟ್ರದಲ್ಲಿ ಹೈದರಾಬಾದ ದಿನ.

### ಶ್ರೀ. ಶಂಕರರಾವ ದೇವ ಇವರ ಕಳಕಳಿಯ ಬಿನ್ನಹ.

ಮಹಾರಾಷ್ಟ್ರ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರೂ ಆಲ್ ಇಂಡಿಯಾ ಕಾಂಗ್ರೆಸ್ ಕಮಿಟಿಯ ಸದಸ್ಯರೂ ಆದ ಶ್ರೀ. ಶಂಕರರಾವ ದೇವ ಇವರು ಈ ಕೆಳಗಿನಂತೆ ಪ್ರಕಟನೆ ಹೊರಡಿಸಿದ್ದಾರೆ-

"ನಿಜಾಮ ಸರಕಾರದ ದಬ್ಬಾಳಿಕೆಯ ಧೋರಣದ ವಿರುದ್ಧ ಸಂಸ್ಥಾನ ಕಾಂಗ್ರೆಸ್ ಸತ್ಯಾಗ್ರಹವನ್ನು ಕೈಕೊಂಡು ಒಂದು ತಿಂಗಳ ಮೇಲಾಯಿತು. ಸಂಸ್ಥಾನ ಪ್ರಜೆಗಳಿಗೆ ನಾಗರಿಕ ಸ್ವಾತಂತ್ರ್ಯ ವಿರಬೇಕೆಂದು ಕಾಂಗ್ರೆಸ್ಸು ಕೇಳುತ್ತದೆ. ಕಾಂಗ್ರೆಸ್ಸಿನ ಈ ಸತ್ಯಾಗ್ರಹ ಹೋರಾಟವು ಈಗ ಇಡೀ ಸಂಸ್ಥಾನವನ್ನೆಲ್ಲ ವ್ಯಾಪಿಸಿದೆ. ಹೈದರಾಬಾದ ಸಂಸ್ಥಾನ ಕಾಂಗ್ರೆಸ್ಸಿಗೆ ನಿಶ್ಚಯವಾಗಿ ಜಯ ದೊರೆಯುವದೆಂದು ನಾನು ನಿಃಸಂದೇಹವಾಗಿ ಹೇಳಬಲ್ಲೆನು.

ಹೈದರಾಬಾದ ಸಂಸ್ಥಾನ ಪ್ರಜೆಗಳು ನಡೆಯಿಸಿದ ಸ್ವಾತಂತ್ರ್ಯ ಸಮರದಲ್ಲಿ ಅವರಿಗೆ ಮಹಾರಾಷ್ಟ್ರ ಕಾಂಗ್ರೆಸ್ ಕಮಿಟಿಯು ಈಗಾಗಲೇ ತನ್ನ ಸಂಪೂರ್ಣ ಸಹಾನುಭೂತಿಯನ್ನು ವ್ಯಕ್ತಪಡಿಸಿದೆ. ಅದರಂತೆ ಆರ್ಯ ಸಮಾಜವು, ಹಿಂದು ಮಹಾಸಭೆಯು ಕಾಂಗ್ರೆಸ್‌ದಲ್ಲಿ ಸೇರ್ಪಡೆಯಾಗಬೇಕೆಂದೂ ಬಿನ್ನವಿಸಲಾಗಿದೆ.

ನಾನು ಹೈದರಾಬಾದ ಹೋರಾಟದ ಬಗ್ಗೆ ಎಲ್ಲ ಸಮಾಚಾರಗಳನ್ನು ತಿಳಿದುಕೊಳ್ಳುತ್ತಲಿದ್ದೇನೆ. ಆಂದೋಲನವು ಪ್ರತಿದಿನವೂ ಭರದಿಂದ ಬೆಳೆಯಹತ್ತಿದೆಯೆಂದು ನನಗೆ ಕಂಡುಬಂದಿದೆ.

ಇಡೀ ಮಹಾರಾಷ್ಟ್ರ ಪ್ರಾಂತದಲ್ಲಿ ಇದೇ ಡಿಶಂಬರ ೬ ನೇ ತಾರೀಖಿಗೆ ಹೈದರಾಬಾದ ದಿನವನ್ನಾಚರಿಸಬೇಕೆಂದು ನಾವು ನಿರ್ಧರಿಸಿದ್ದೇವೆ. ಆ ಮೇರೆಗೆ ಜಿಲ್ಹಾ ಕಾಂಗ್ರೆಸ್ ಕಮಿಟಿಗಳಿಗೂ ಕರಪತ್ರಗಳನ್ನು ಕಳಿಸಿದ್ದೇವೆ. ಅಂಥ ಎಲ್ಲೆಡೆಗೆ ಸಭೆ ಮೊದಲಾದವುಗಳನ್ನು ಕೂಡಿಸಿ ಹೈದರಾಬಾದ ಪ್ರಜೆಗಳ ಹೋರಾಟಕ್ಕೆ ನಮ್ಮ ಸಹಾನುಭೂತಿಯನ್ನು ವ್ಯಕ್ತಪಡಿಸಬೇಕಲ್ಲದೆ ನಿಧಿ ಸಂಗ್ರಹವನ್ನು ಮಾಡಬೇಕು.

ನಮ್ಮ ಹೈದರಾಬಾದ ಬಾಂಧವರು ನಡೆಯಿಸಿದ ಈ ಹೋರಾಟವು ಕಾಂಗ್ರೆಸ್ಸು ನಡೆಯಿಸಿರುವ ಸ್ವಾತಂತ್ರ್ಯಯುದ್ಧದ ಭಾಗವೇ ಆಗಿದೆ. ಸ್ವಾತಂತ್ರ್ಯಯುದ್ಧವು ವೈಯಕ್ತಿಕವಿರದೆ ನಾವು ಎಲ್ಲರೂ ಕೂಡಿ ಸಾಗಿಸಬೇಕು.

ಎಲ್ಲ ಕಾಂಗ್ರೆಸ್ ಭಕ್ತರೂ ಹೈದರಾಬಾದ ನಿಧಿಗೆ ಸಹಾಯ ಮಾಡಬೇಕೆಂದೂ ಸಂಸ್ಥಾನ ಕಾಂಗ್ರೆಸ್ಸಿಗೆ ಸಂಪೂರ್ಣ ಬೆಂಬಲ ಕೊಡಬೇಕೆಂದೂ ನಾನು ಪ್ರಾರ್ಥಿಸುತ್ತೇನೆ."

---

—ದಿಲ್ಲಿಯ ಶಿವಮಂದಿರದ ಬಗ್ಗೆ ಸ್ಥಳಿಕ ಅಧಿಕಾರಿಗಳು ತೋರಿಸುತ್ತಿರುವ ಧೋರಣವನ್ನು ನಿಷೇಧಿಸುವುದಕ್ಕಾಗಿ ಶ್ರೀ. ಶಿವಪುರಿ ಸಾಧು ಇವರು ಯಮುನಾ ನದಿಯ ದಂಡೆಯ ಮೇಲೆ ಸಾಯುವ ವರೆಗಿನ ಉಪವಾಸ ವ್ರತವನ್ನು ಕೈಕೊಂಡಿದ್ದಾರೆ.

## ರಾಷ್ಟ್ರಧ್ವಜಕ್ಕೆ ಅಪಮಾನ!

ಲಾಯಿಲಾಪುರ ಜಿಲ್ಹೆಯ ಮಾಮಲೇದಾರರು ಅಲ್ಲಿಯ ಸರಕಾರದ ಬೈಲು ಪ್ರದೇಶದ ಮೇಲೆ ಹಾಕಿರುವ ಕಟ್ಟೆಯ ಮೇಲೆ ಕಾಂಗ್ರೆಸ್ಸಿನ ಅಧ್ಯಕ್ಷರು ಏರಿಸಿದ ರಾಷ್ಟ್ರಧ್ವಜವನ್ನು ಕಿತ್ತೊಗೆಯಬೇಕೆಂದು ಆಜ್ಞಾಪಿಸಿದ್ದಾರಂತೆ. ಅನಂತರ ಬಲಾತ್ಕಾರಗಳಿಂದಲೇ ಆ ಧ್ವಜವನ್ನು ಕೀಳಲಾಯಿತು. ಈ ಬಗ್ಗೆ ಸರದಾರ ಕೃಷ್ಣಸಿಂಗರು ಪಂಜಾಬ ಅಸೆಂಬ್ಲಿಯಲ್ಲಿ ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡುತ್ತ ಉಪಮಂತ್ರಿಗಳಾದ ಗಜನಾಪುರ ಅಲಿಖಾನರು ಈ ರೀತಿ ಹೇಳಿದರು— "ಸರಕಾರಿ ಸ್ಥಳಗಳಲ್ಲಿ ರಾಷ್ಟ್ರಧ್ವಜಗಳನ್ನು ಏರಿಸಬಾರದೆಂದು ಅಪೇಕ್ಷಿಸಿರುವುದೇನೋ ನಿಜ. ಆದರೆ ಅಲ್ಲಿ ಯಾವದೇ ತರಹದ ಬಲಪ್ರಯೋಗ ಮಾತ್ರ ಮಾಡಿಲ್ಲ. ಮೇಲಾಗಿ ಕಾಂಗ್ರೆಸ್ ಅಧ್ಯಕ್ಷರಾದರೂ ಅದನ್ನು ಕೀಳಲು ನಿರಾಕರಿಸಿಲ್ಲ. ಸರಕಾರಿ ಕಟ್ಟಡಗಳಲ್ಲಿ ಧ್ವಜವನ್ನು ಏರಿಸಲಾಗದು." ಹೇಗಿದೆ ಪಂಜಾಬ ಸರಕಾರ!

---

## ಕೆಮಾಲ ಪಾಶಾರವರ ಔದಾರ್ಯ.

ಪರಲೋಕವಾಸಿಗಳಾದ ಕೆಮಾಲ ಅತಾತುರ್ಕರವರ ಕೊನೆಯ ಮೃತ್ಯುಪತ್ರವು ಪ್ರಕಟವಾಗಿದೆ. ಅವರು ತಮ್ಮ ಹಿಂದೆ ೧೦ ಲಕ್ಷ ಪೌಂಡುಗಳ ಆಸ್ತಿಯನ್ನು ಬಿಟ್ಟುಕೊಟ್ಟಿರುವರೆಂದು ತಿಳಿದು ಬಂದಿದೆ. ತಮ್ಮ ಎಲ್ಲ ಆಸ್ತಿ ಪಾಸ್ತಿಗಳನ್ನೂ ತುರ್ಕಿಯ ಲೋಕಸತ್ತಾಕ ಪಕ್ಷದವರಿಗೆ ಕೊಟ್ಟುಬಿಡಬೇಕೆಂದು ಅವರು ತಮ್ಮ ಮೃತ್ಯುಪತ್ರದಲ್ಲಿ ಸ್ಪಷ್ಟ ಬರೆದಿದ್ದಾರೆ. ತಮ್ಮ ಭಗಿನಿಗೂ ಮತ್ತು ಐದು ಜನ ದತ್ತಕ ಹೆಣ್ಣುಮಕ್ಕಳಿಗೂ ವಿಪುಲವಾದ ದೇಣಿಗೆ ಕೊಟ್ಟಿದ್ದಾರೆ. ಮತ್ತು ತುರ್ಕಿ ವೈಮಾನಿಕ ದಲದಲ್ಲಿಯ ಸ್ತ್ರೀ ವೈಮಾನಿಕಾಧಿಕಾರಿಗಳಾದ ಕ್ಮಿಗ್‌ವೆನ್ ಎಂಬ ಸ್ತ್ರೀಯಳಿಗೆ ಒಂದು ಮನೆಯನ್ನು ಕೊಟ್ಟಿದ್ದಾರೆ. ತುರ್ಕಿಯ ರಾಷ್ಟ್ರಾಧ್ಯಕ್ಷರಾದ ಇನೋನು ರವರ ೨ ಜನ ಮಕ್ಕಳಿಗೂ ಕೆಲವು ದೇಣಿಗೆ ಕೊಟ್ಟಿರುವರಲ್ಲದೆ ತುರ್ಕಿ ಭಾಷಾ ಮತ್ತು ಇತಿಹಾಸ ಮಂಡಳದವರಿಗೂ ದೊಡ್ಡ ದೇಣಿಗೆ ಕೊಟ್ಟಿದ್ದಾರೆಂದು ತಿಳಿದುಬರುತ್ತದೆ.

---

## ವರ್ತಮಾನಪತ್ರಿಕೆ ಓದಲು ಪ್ರತಿಬಂಧ!

ಹೈದರಾಬಾದ ಸತ್ಯಾಗ್ರಹ ಚಳವಳಿಯು ಹೆಚ್ಚುತ್ತಿರುವಂತೆ ಪೋಲೀಸರು ಪ್ರಜೆಗಳನ್ನು ನಾನಾ ರೀತಿಯಿಂದ ಹಿಂಸೆಗೊಳಿಸುತ್ತಿದ್ದಾರೆ. ರಾಜಕೀಯ ಚಳವಳಿಯ ಸುದ್ದಿಗಳನ್ನು ಓದಲು ಜನರು ಆತುರರಾಗಿರುವಾಗ ಪೋಲೀಸರು ಜನಗಳಿಗೆ ಹೆದರಿಕೆ ಹಾಕಿ ಪತ್ರಿಕೆ ಓದುವುದನ್ನು ಪ್ರತಿಬಂಧಗೊಳಿಸುತ್ತಿದ್ದಾರೆ. ಯಾವದೇ ಪತ್ರಿಕೆ ತರಿಸಕೂಡದೆಂದು ಬಲಾತ್ಕಾರಗೊಳಿಸುತ್ತಿದ್ದಾರಂತೆ. ಇದೇ ಪ್ರಕಾರ ಕುಷ್ಟಗಿ, ಕನಕಗಿರಿ ಮೊದಲಾದ ಸ್ಥಳಗಳಲ್ಲಿ ಪೋಲೀಸರು ಪತ್ರಿಕೆ ತರಿಸುವವರಿಗೆ ಹೆದರಿಕೆ ಹಾಕಿದ್ದಾರೆಂದು ತಿಳಿದು ಬಂದಿದೆ.

---

—ಧನಕನಾಲ ಸತ್ಯಾಗ್ರಹದಲ್ಲಿ ಭಾಗವಹಿಸುವುದರ ಸಲುವಾಗಿಯಿಂದ ಓಡಿಸಾ ಅಸೆಂಬ್ಲಿ ಕಾಂಗ್ರೆಸ್ ಪಕ್ಷದ ಸದಸ್ಯರಾದ ಶ್ರೀ. ನಾಭಾಕೃಷ್ಣ ಚೌಧರಿಯವರು ತಮ್ಮ ಸದಸ್ಯತ್ವಕ್ಕೆ ರಾಜೀನಾಮೆ ಕಳುಹಿಸಿಕೊಟ್ಟಿದ್ದಾರೆಂದು ತಿಳಿದು ಬಂದಿದೆ.

## ತುಮ್ಮಿನಕಟ್ಟೆ.

ಈ ನಮ್ಮ ತುಮ್ಮಿನಕಟ್ಟೆ ಗ್ರಾಮದಲ್ಲಿ ಒಂದು ತರುಣಸಂಘ ವನ್ನು ಸ್ಥಾಪಿಸಬೇಕೆಂಬ ಕುತೂಹಲವು ಬಹು ದಿವಸಗಳಿಂದಲೂ ನಮ್ಮಲ್ಲಿತ್ತು. ಅದಕ್ಕೆ ದೇವತಾನುಗ್ರಹವು ಪ್ರಾಪ್ತವಾಯಿತೊ ಏನೋ ಎನ್ನುವಂತೆ ತಾ. ೨೮-೧೦-೩೮ ನೆಯ ದಿವಸ ಶ್ರೀಮನ್ನಿರಂಜನ ಹಿರೇಮಾಗಡಿ ವಿರಕ್ತಮಠದ ಸ್ವಾಮಿಗಳವರೂ, ಶ್ರೀಮನ್ನಿರಂಜನ ರಾಣೆಬೆನ್ನೂರ ವಿರಕ್ತಮಠದ ಸ್ವಾಮಿಗಳವರೂ; ಶ್ರೀಮನ್ನಿರಂಜನ ಕುರವತ್ತಿ ವಿರಕ್ತಮಠದ ಸ್ವಾಮಿಗಳವರೂ, ಶ್ರೀಮಹಾಕಾಳಿಕಾ ಉಜ್ಜಯನಿ ಹಾಂಸಭಾವಿ ಮಠದ ಪಟ್ಟದ ಚೆನ್ನಬಸವಸ್ವಾಮಿಗಳೂ ಏಕಕಾಲಕ್ಕೆ ಆಗಮಿಸಿದ್ದರಿಂದ ಹೊಸ ಹುರುಪು ಬಂದಂತಾಗಿ ಈ ನಾಲ್ವರು ಸ್ವಾಮಿಗಳ ಆಶೀರ್ವಾದ ಬಲದಿಂದಲೂ ಆ ಹೊತ್ತೇ ಈ ಊರಲ್ಲಿ "ಶ್ರೀ ಜಯದೇವ ತರುಣ ಸಂಘ" ಎಂಬ ಹೆಸರಿನಿಂದ ಒಂದು ತರುಣಸಂಘವನ್ನು ಸ್ಥಾಪಿಸಿರುವೆವು. ಇದರಲ್ಲಿ ಸ್ವಾಗತ ಸಂಘವೆಂಬುದನ್ನೂ ಅನೇಕ ಪರಮತೀಯ ಸಭ್ಯಗೃಹಸ್ಥರ ಒಂದು ಸಹಾನುಭೂತಿಪರ ಸಂಘವನ್ನೂ ಸಹಾಯಕ ಸಂಘವನ್ನೂ, ಭಜನಾ ಸಂಘವನ್ನೂ ಉಪಸಂಘಗಳನ್ನಾಗಿ ಮಾಡಿಕೊಂಡಿರುವೆವು. ಇದರ ಆಡಳಿತಕ್ಕಾಗಿ ೧೫ ಮಂದಿಯ ಒಂದು 'ಮ್ಯಾನೇಜಿಂಗ್ ಕಮಿಟಿ'ಯನ್ನು ಒಬ್ಬ ಕೋಶಾಧ್ಯಕ್ಷರನ್ನೂ ಒಬ್ಬ ಸೆಕ್ರೆಟರಿಯನ್ನೂ ನೇಮಿಸಿಕೊಂಡಿರುವೆವಲ್ಲದೆ ಯಾವತ್ತೂ ತಪಾಸಣೆಯನ್ನು ಮಾಡುವುದಕ್ಕಾಗಿ ಒಬ್ಬ ಪರಮತೀಯರೂ ಮುತ್ಸದ್ದಿಗಳೂ ಆದಂಥ ಆಡಿಟರರನ್ನು ನೇಮಿಸಿಕೊಂಡಿರುವೆವು.

ಇದರಲ್ಲಿ "ಶ್ರೀ ಚೆನ್ನಬಸವೇಶ್ವರ ವಾಚನಾಲಯ" ವನ್ನು ಸ್ಥಾಪಿಸಿಕೊಂಡು ಇದರಲ್ಲಿ ಒಂದು ಡೇಲಿ ಪತ್ರವೂ ೬ ವಾರಪತ್ರಗಳೂ ೩ ಮಾಸಿಕ ಪತ್ರಗಳೂ ಬರುತ್ತವೆ. ಅನೇಕ ಉದಾರಿಗಳು ಅತ್ಯುಪಯುಕ್ತ ಪುಸ್ತಕಗಳನ್ನು ಈ ವಾಚನಾಲಯಕ್ಕೆ ಮೋಫತ್ತಾಗಿ ಕೊಟ್ಟಿರುವರು.

ಈ ಸಂಘದ ಉದ್ದೇಶಗಳು ಸಾಮಾಜಿಕ, ನೈತಿಕ ಬೆಳವಣಿಗೆಯಾಗಬೇಕೆಂದಿರುತ್ತದಲ್ಲದೆ ಯಾವತತ್ತು ತರುಣರಿಗೆ ಮಾರ್ಗದರ್ಶಕವಾಗಬೇಕೆಂದಿರುವವು. ಇಲ್ಲಿ ವಾರಕ್ಕೊಮ್ಮೆ "ವಕ್ತೃತ್ತೇಜಕ" ಸಭೆಯನ್ನು ಕರೆದು ಅನೇಕ ಹುರುಪಿನ ತರುಣರು ಭಾಷಣಮಾಡುತ್ತಿರುವರು. ಈಗಾಗಲೇ ಒಕ್ಕಟ್ಟು, ಚಟಗಳು ಅಸ್ಪೃಶ್ಯತಾನಿವಾರಣೆಗಳ ಬಗ್ಗೆ ಭಾಷಣಗಳು ನಡೆದು ಸಂಘದಲ್ಲಿ ಆದಿಜನ ಪ್ರವೇಶ ನಡೆಯಿತು. ನಮ್ಮಲ್ಲಿ ತರುಣರಿಗೆ ಒಬ್ಬ ಮಾರ್ಗದರ್ಶಕರು ಬೇಕಾದ್ದರಿಂದ ಜ್ಞಾನವೃದ್ಧರೂ ಉತ್ಸಾಹಿಗಳೂ ಆದಂಥ ಈ ಊರ ಕನ್ನಡ ಶಾಲೆಯ ಹೆಡ್ ಮಾಸ್ತರರನ್ನು ಈ ಸಂಘದ ಅಧ್ಯಕ್ಷರನ್ನಾಗಿ ಮಾಡಿಕೊಂಡಿರುವೆವು.

ಸಂಘ ಸ್ಥಾಪನೆಯಾದ ದಿವಸ ಮೇಲಿನ ಸ್ವಾಮಿಗಳೆಲ್ಲರೂ ನಮಗೆ ಉಪದೇಶಾಮೃತವನ್ನು ಪಾನಮಾಡಿಸಿದರು. ಅದರಲ್ಲಿಯೂ ಹಿರೇಮಾಗಡಿಯ ಶ್ರೀಗಳವರು ಸಭೆಯಲ್ಲಿ ಭಗವಾನ್ ಬಸವೇಶ್ವರನ ವಚನಗಳ ಪ್ರವಚನ ಮಾಡಿ ಅವುಗಳನ್ನು ವ್ಯವಹಾರಕ್ಕೆ ಹೋಲಿಸಿ ಸರ್ವರಿಗೆ ಸಮಂಜಸವಾಗುವಂತೆಯೂ ೨ ತಾಸಿನ ವರೆಗೆ ಉಪದೇಶ ಮಾಡಿದ್ದಂತೂ ಎಂದೆಂದಿಗೂ ಮರೆಯದಂತಾಗಿದೆ. ಬಾಲ್ಯಾವಸ್ಥೆಯಲ್ಲಿರುವ ಈ ಸಂಘವು ಉತ್ತರೋತ್ತರ ಅಭಿವೃದ್ಧಿಯಾಗಲೆಂದು ತ್ರಿಕಾಲದಲ್ಲಿ ಆ ಪರಮಾತ್ಮನನ್ನು ಬೇಡಿಕೊಳ್ಳುವೆವು.

ಸೆಕ್ರೆಟರಿ—
"ಜಯದೇವ ತರುಣ ಸಂಘ"
ತುಮ್ಮಿನಕಟ್ಟೆ.

## ಉಸ್ಮಾನಿಯಾ ವಿಶ್ವ ವಿದ್ಯಾಲಯದಲ್ಲಿ ದಬ್ಬಾಳಿಕೆ.

### ೧೦೦ ಹಿಂದು ವಿದ್ಯಾರ್ಥಿಗಳನ್ನು ಕಾಲೇಜಿನಿಂದ ಹೊರಗೆ ಹಾಕಿದರು.

ಉಸ್ಮಾನಿಯಾ ವಿಶ್ವ ವಿದ್ಯಾಲಯದ ವಸತಿ ಗೃಹದಲ್ಲಿರುವ ಹಿಂದು ವಿದ್ಯಾರ್ಥಿಗಳು ತಮ್ಮ ಪ್ರಾರ್ಥನೆಯ ಕಾಲಕ್ಕೆ "ವಂದೇ ಮಾತರಂ" ಗೀತೆ ಹಾಡಿದ್ದರಿಂದ ವಿಶ್ವವಿದ್ಯಾಲಯದ ವ್ಹಾಯಿಸ್ ಚಾನ್ಸಲರರು ತಾ. ೩೦ ನೆಯ ದಿವಸ ಸುಮಾರು ೧೦೦ ಹಿಂದು ವಿದ್ಯಾರ್ಥಿಗಳನ್ನು ವಿದ್ಯಾಲಯದಿಂದ ಹೊರತಳ್ಳಿದ್ದಾರೆ.

ಹಿಂದುಗಳಿಗೂ ಮುಸಲ್ಮಾನರಿಗೂ ವಸತಿ ಗೃಹಗಳಿದ್ದು ಪ್ರಾರ್ಥನೆ ಮಾಡಲು ಮುಸಲ್ಮಾನರಿಗೆ ಮಸೀದೆಯನ್ನೂ ಹಿಂದುಗಳಿಗೆ ಪ್ರಾರ್ಥನಾ ಮಂದಿರಗಳನ್ನೂ ಏರ್ಪಡಿಸಲಾಗಿದೆ. ಇತ್ತೀಚೆಗೆ ಹಿಂದು ವಿದ್ಯಾರ್ಥಿಗಳು ತಮ್ಮ ಪ್ರಾರ್ಥನೆಯ ಕಾಲಕ್ಕೆ ವಂದೇ ಮಾತರಂ ಗೀತೆಯನ್ನು ಹಾಡುತ್ತಿದ್ದರು. ಇದರಿಂದ ಮುಸಲ್ಮಾನ ವಿದ್ಯಾರ್ಥಿಗಳಿಗೆ ಅಸಮಾಧಾನವಾಗುವುದೆಂದು ಅಧಿಕಾರಿಗಳು ವಂದೇ ಮಾತರಂ ಅನ್ನಲು ಪ್ರತಿಬಂಧಗೊಳಿಸಿದ್ದರು. ಆದರೆ ವಿದ್ಯಾರ್ಥಿಗಳು ಆ ಪ್ರತಿಬಂಧವನ್ನು ಮೀರಿ ವಂದೇ ಮಾತರಂ ಗೀತೆ ಹಾಡಿದುದರಿಂದಲೇ ಕಾಲೇಜಿನಲ್ಲಿಯ ೧೦೦ ಹಿಂದು ವಿದ್ಯಾರ್ಥಿಗಳನ್ನು ತಳ್ಳಿಬಿಡಲಾಗಿದೆಯಂತೆ!

---

—ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಪ್ರಧಾನ ಕಾರ್ಯದರ್ಶಿಗಳ ಅಪ್ಪಣೆಯಂತೆ ತಾ. ೩ ನೇ ದಿವಸ ಕರ್ನಾಟಕದ ಅನೇಕ ಭಾಗಗಳಲ್ಲಿ ಹೈದರಾಬಾದ ದಿನವು ಆಚರಿಸಲ್ಪಟ್ಟಿತು. ಅನೇಕ ಕಡೆ ಸಭೆ ಜರುಗಿ ಹೈದರಾಬಾದ ನೈಜಾಮರು ನಡೆಯಿಸಿದ ಕ್ರೂರ ದಬ್ಬಾಳಿಕೆಯನ್ನು ಕಟುತರವಾಗಿ ನಿಷೇಧಿಸಿ ಧೈರ್ಯದಿಂದ ಮುಂದೆ ಬಂದ ಸ್ಟೇಟ್ ಕಾಂಗ್ರೆಸ್ ಕಮಿಟಿಯನ್ನು ಅಭಿನಂದಿಸಲಾಯಿತು.

# ವಿಜಾಪುರದಲ್ಲಿ ಮುಸಲ್ಮಾನರ ಅತ್ಯಾಚಾರ.

## ಹೈದರಾಬಾದಿಗೆ ಹೊರಟ ವನಸಿಗ್ಲಿ ಸತ್ಯಾಗ್ರಹಿಗಳಿಗೆ ಹೊಡೆತ.

ಕಳೆದ ೨೬-೧೧-೩೮ ನೆಯ ದಿವಸ ಹೈದರಾಬಾದ ಸತ್ಯಾಗ್ರಹಕ್ಕೆಂದು ಹೊರಟ ಮಿರಜ ಸಂಸ್ಥಾನದಲ್ಲಿಯ ವನಶಿಗ್ಲಿಯ ಸತ್ಯಾಗ್ರಹಿಗಳನ್ನು ವಿಜಾಪುರದಲ್ಲಿ ಮೆರವಣಿಗೆಯಿಂದ ಕರೆದುಕೊಂಡು ಬರುತ್ತಿರುವಾಗ ಕೆಲವು ಪುಂಡ ಮುಸಲ್ಮಾನರು ಅವರಮೇಲೆ ಏಂಹೋಗಿ ಹೊಡೆದರು. ಕೂಡಲೇ ಜನರು ನೆರೆಯಲು ಅವರು ಓಡಿಹೋದರು. ಮೆರವಣಿಗೆಯು ಹಾಗೆಯೇ ಸಿದ್ಧೇಶ್ವರ ದೇವಸ್ಥಾನದ ವರೆಗೆ ಸಾಗಿ ಅಲ್ಲಿ ನಾಗರಿಕರ ಪ್ರಚಂಡ ಸಭೆ ಸೇರಿತು. ಶ್ರೀ. ಧುಬೆ, ಆದ್ಯ ಅನಂತಾಚಾರ್ಯ, ಪವಾರ ಮೊದಲಾದವರು ಭಾಷಣ ಮಾಡಿದ ನಂತರ ಕೆಳಗಿನ ಗೊತ್ತುವಳಿಗಳು ಸರ್ವಾನುಮತದಿಂದ ಸ್ವೀಕರಿಸಲ್ಪಟ್ಟವು.

(೧) ವಿಜಾಪುರದ ನಾಗರಿಕರ ಈ ಸಭೆಯು ವನಶಿಗ್ಲಿಯ ವೀರ ಸತ್ಯಾಗ್ರಹಿಗಳನ್ನು ಅಭಿನಂದಿಸುತ್ತದೆ. ಮತ್ತು ನಿಜಾಮ ಸರಕಾರವು ನಡೆಯಿಸಿದ ದಬ್ಬಾಳಿಕೆಯನ್ನು ನಿಷೇಧಿಸುತ್ತದೆ.

(೨) ಇಲ್ಲಿಯ ಕೆಲವು ಮುಸಲ್ಮಾನ ಪುಂಡರು ಸತ್ಯಾಗ್ರಹಿಗಳ ಮೇಲೆ ಮಾಡಿದ ಹಲ್ಲೆಯನ್ನು ಈ ಸಭೆಯು ನಿಷೇಧಿಸುವುದಲ್ಲದೆ ಆಗಾಗ್ಗೆ ಇಂಥ ಕೃತಿಗಳು ಜರುಗುತ್ತಿರುವುದರಿಂದ ಇವುಗಳ ಬಗ್ಗೆ ಯೋಗ್ಯ ಉಪಾಯ ಕೈಕೊಳ್ಳಬೇಕೆಂದು ನಿರ್ಣಯಿಸುತ್ತದೆ.

## ಪ್ರಾಚೀನ ಭಾರತದಲ್ಲಿ ವ್ಯಾಯಾಮ ಶಿಕ್ಷಣ.

### ರೀವಾ ಸಂಸ್ಥಾನದಲ್ಲಿ ಪುರಾತನ ಶೋಧನೆಗಳು

ರೀವಾ ಸಂಸ್ಥಾನದ ಬಂದೋಘರ್ ಎಂಬ ಪ್ರದೇಶದಲ್ಲಿ ಪುರಾತನ ಕಾಲದ ಕೆಲವು ಶಾಸನ ಲಿಪಿಗಳನ್ನು ಇಂಡಿಯಾ ಸರಕಾರದ ಪ್ರಾಚ್ಯಲಿಪಿ ಸಂಶೋಧಕ ಇಲಾಖೆಯವರು ಹೊಸದಾಗಿ ಶೋಧಿಸಿ ಕಂಡುಹಿಡಿದಿದ್ದಾರೆ. ಈ ಕಾರ್ಯದಲ್ಲಿ ರೀವಾ ಸಂಸ್ಥಾನದವರು ಸಹ ಸಹಾಯಮಾಡಿದರು. ಹೀಗೆ ಕಂಡುಹಿಡಿಯಲ್ಪಟ್ಟ ಶಾಸನಗಳು ಈಗ ೧೬೦೦ ವರ್ಷದ ಹಿಂದಿನ ಭಾರತೀಯ ಇತಿಹಾಸಕ್ಕೆ ಸಂಬಂಧಪಟ್ಟವು. ಪ್ರಾಚೀನ ಭಾರತದಲ್ಲಿ ಕುಷಾಣರ ಸಾಮ್ರಾಜ್ಯವು ಮುಗಿದ ನಂತರ, ಗುಪ್ತರ ಸಾಮ್ರಾಜ್ಯವು ಪ್ರವರ್ಧಮಾನಕ್ಕೆ ಬರುವ ವರೆಗೆ ಇಂಡಿಯಾದಲ್ಲಿ ಒಂದು ರೀತಿಯ ರಾಜಕೀಯ ಅಧಿಕಾರವಿತ್ತು. ಆ ಮಧ್ಯಕಾಲದಲ್ಲಿ ದೇಶದ ಪರಿಸ್ಥಿತಿಯು ಬೇಗತ್ತೆಂದು ಸರಿಯಾದ ಆಧಾರಗಳು ದೊರಕಿಲ್ಲ. ಈಗ ದೊರೆತಿರುವ ಶೋಧನೆಗಳಿಂದ ಅನೇಕ ಹೊಸ ವಿಷಯಗಳು ಗೊತ್ತಾಗಿವೆ.

ಈ ಶಾಸನಗಳು ಪ್ರಾಕೃತ ಮತ್ತು ಸಂಸ್ಕೃತ ಮಿಶ್ರ ಭಾಷೆಯಲ್ಲಿ ಬರೆಯಲ್ಪಟ್ಟವೆ. ಬ್ರಾಹ್ಮಿಲಿಪಿಯಲ್ಲಿವೆ. ೧೬೦೦ ವರ್ಷದ ಹಿಂದಿನವು. ಶಾಸನಗಳ ಮೇಲೆ ಈ ಲಿಪಿಗಳಲ್ಲಿ ಯಾವದೋ ಒಂದು ನಿರ್ದಿಷ್ಟವಾಗದಿರುವ ಶಕದ ೫೧ ನೇ ಮತ್ತು ೯೦ ನೇ ವರ್ಷಗಳು ಹೇಳಲ್ಪಟ್ಟವೆ. ಋತುಗಳು, ಪಕ್ಷಗಳು ಮತ್ತು ದಿವಸಗಳು ಕುಷಾಣರ ಕಾಲಕ್ಕೆ ಸಂಬಂಧಪಟ್ಟ ಮಥುರಾ ಶಾಸನಗಳಲ್ಲಿರುವಂತೆ ಹೇಳಲ್ಪಟ್ಟವೆ.

ಈ ಶಾಸನಗಳಲ್ಲಿ ರಾಜರುಗಳ, ಮಂತ್ರಿಗಳ, ವಿದೇಶಾಂಗ ಮಂತ್ರಿಯ, ದೂರ ದೇಶಗಳಲ್ಲಿರುವ, ಕೌಶಾಂಬಿ, ಮಥುರಾ ಮತ್ತು ಪರ್ವಾಲ ಮೊದಲಾದ ನಗರಗಳ ವರ್ತಕ ಮತ್ತು ಕೈಗಾರಿಕೆ ಸಂಸ್ಥೆಗಳ ದಾನ ಧರ್ಮಗಳು ಉಕ್ತವಾಗಿವೆ. ದಾನಕರ್ತರು ಅನೇಕ ಮಹಾ ಉದ್ದೇಶಗಳಿಂದ ತಾವು ನಡೆಸಿದ ಧರ್ಮಕಾರ್ಯಗಳನ್ನು ವಿವರಿಸಿದ್ದಾರೆ. ಗುಹಾಂತರ ಆಲಯಗಳನ್ನು ನಿರ್ಮಿಸುವುದು ಭಾವಿಗಳನ್ನೂ ಕೆರೆ, ಕಟ್ಟೆ ಕಾರಂಜಿಗಳನ್ನೂ ನಿರ್ಮಿಸುವುದು ತೋಟಗಳನ್ನು ಏರ್ಪಡಿಸುವುದು ಮೊದಲಾಗಿ ಉಲ್ಲೇಖವಿರುತ್ತದೆ. ಎಲ್ಲಕ್ಕಿಂತ ಆಶ್ಚರ್ಯಕರವಾದ ವಿಷಯವೇನೆಂದರೆ ವ್ಯಾಯಾಮ ಶಾಲೆಯನ್ನು ನಿರ್ಮಿಸುವ ಬಗ್ಗೆ ದಾನಮಾಡಿರುವ ವಿಷಯವು ಗಮನಾರ್ಹವಾದುದು. ಪ್ರಾಚೀನ ಭಾರತೀಯರು ವ್ಯಾಯಾಮ ಶಿಕ್ಷಣ ಕಲೆಯಲ್ಲಿ ಬಹಳ ಉತ್ಸುಕತರಾಗಿದ್ದರೆಂದು ಈ ಶಾಸನಗಳಿಂದ ಗೊತ್ತಾಗುತ್ತದೆ.

## ಹೊಸನು ಕಂಡೀರಾ.

ರಾಗ— ಕಲ್ಯಾಣಿ. ಆದಿತಾಳ.

(ಜನಪದಸಾಹಿತ್ಯದಂತೆ.)

ಹೊಸನು ಕಂಡೀರಾ। ಭಾರತ ಹೊಸನು ಕಂಡೀರಾ
ಅಹಿಂಸಾ ಧರ್ಮದಿ ನಡೆಯುವ ಹೊಸ
ಶಾಂತಿಸಮರದಿ ಹೋರಾಡು ಹೊಸ
ಆಂಗ್ಲರಿಗೆ ಮತಿ ಕಲಿಸುವ ಹೊಸ
ಕಾಂಗ್ರೆಸ್ಸಿನಿಂ ರಾಜ್ಯ ನಡೆಸುವ ಹೊಸ
ಭಾರತ ಪುತ್ರನು ಮೋಹನ ದಾಸ
ಶಿಸ್ತಿಲಿ ನಡೆಯುವ ಕಸ್ತೂರಿದೇವಿಯು
ವಸ್ತ್ರಾದಿ ಗಾಂಧಿಯ ಮಡದಿಯು ಹೊಸ
ಗಡಿನಾಡ ಗಾಂಧಿಯು ಪಡಗರ ಹೊಸ
ಬಡಗಿನ ಭಾರತ ಮಾತೆಯ ಹೊಸ
ಭಾರತ ಕೋಕಿಲೆ ಕವಿಯಿತ್ರಿದೇವಿ
ವೀರ ಸರೋಜಿನಿ ಸುಂದರ ಹೊಸ
ಕಮಲಾದೇವಿಯು ಮಮತೆಯ ಹೊಸ
ಸಮತಾಭಾವದಿ ನಡೆಯುವ ಹೊಸ
ವಿಜಯಲಕ್ಷ್ಮಿ ಮೇಲಾದ ಹೊಸ
ಜಯ ಜಯಭಾರತ ಗೌರವಹೊಸ
ರಾಷ್ಟ್ರೀಯ ವೀರನ ಜವಾಹಿರ ಹೊಸ
ಗತವೈಭವನೆ ತರುತಿಹ ಹೊಸ
ಖ್ಯಾತಿಯ ಪೊಂದಿದ ವಲ್ಲಭ ಹೊಸ
ಮೈಸೂರು ಸಂಧಾನ ಎಸಗಿದ ಹೊಸ
ಸ್ವಾತಂತ್ರ್ಯಕೀಗಲೆ ಹೋರಾಡು ಹೊಸ
ಪರರಾಷ್ಟ್ರದಿ ಖ್ಯಾತಿಪೊಂದಿದ ಹೊಸ
ಹರಿಪುರ ಕಾಂಗ್ರೆಸ್ ಅಧ್ಯಕ್ಷ ಬೋಸ
ವೀರ ರಾಜೇಂದ್ರರು ಮೇಲಾದ ಹೊಸ
ವೀರಪ್ಪಗೌಡರು ಕರುನಾಡ ಹೊಸ
ಸರದಾರ ವೀರಪ್ಪಗೌಡರ ಪತ್ನಿಯು
ಶ್ರೀ ನಾಗಮ್ಮನವರು ಕನ್ನಡ ಹೊಸ
ಹದಿಬದೆ ಧರ್ಮದಿ ಹೆಸರಾದ ಹೊಸ
ಆದಿ ಹಿಂದೂ ಜನ ಸೇವೆಯ ಹೊಸ

—ಮೋಘ ತನಯ ಬಸವಪುರ.

# ಅಖಿಲ ವೀರಶೈವ ಮಹಾಸಭಾ

## ಸ್ವಾಗತ ಸಮಿತಿಯ ಕಾರ್ಯ

### ಹುಬ್ಬಳ್ಳಿ.

[ಶಿವಮೊಗ್ಗ ಚೆನ್ನಬಸವೇಶ್ವರ ಸಂಘದಿಂದ.]

ಈ ವರುಷ ಅಖಿಲ ವೀರಶೈವ ಮಹಾಸಭೆಯನ್ನು ನಡೆಯಿಸಲು ಹುಬ್ಬಳ್ಳಿಯ ವೀರಶೈವರು ಕೈಕೊಂಡದ್ದಕ್ಕಾಗಿ ಅವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುವುದಲ್ಲದೆ ಈ ಮಹಾಸಭೆಯ ಕಾರ್ಯವನ್ನು ಯಶಸ್ವಿಯಾಗಿ ನಡೆಯಿಸಿಕೊಡಬೇಕೆಂದು ಭಗವಂತನನ್ನು ಪ್ರಾರ್ಥಿಸುತ್ತೇವೆ.

ಸಮಾಜಕ್ಕೆ ಅವಶ್ಯಕವಾದ ಎರಡು ತೀರ್ಮಾನವನ್ನು ಸ್ವಾಗತ ಸಮಿತಿಯವರು ಇಟ್ಟುಕೊಂಡು ಅದನ್ನು ಕಾಲಕ್ಕೆ ಮುಂಚೆ ಪ್ರಚಾರಮಾಡಿದ್ದಕ್ಕೆ ಸಂತೋಷಪಡುವುದಲ್ಲದೆ ಸದರಿ ಗೊತ್ತುವಳಿಗಳು ಅವಶ್ಯಕವಾಗಿ ತೀರ್ಮಾನಮಾಡಬೇಕೆಂದು ವ್ಯಕ್ತಪಡಿಸುತ್ತೇವೆ.

ಈಚೆಗೆ ಸಮಾಜ ಸೇವಾಕಾರ್ಯದಲ್ಲಿ ಅತ್ಯಂತ ಉತ್ಸಾಹದಿಂದ ಪ್ರಚಾರಮಾಡುತ್ತ ಜನಜಾಗೃತಿಮಾಡುತ್ತಿರುವಂಥ ಧಾರವಾಡದ ನವಕಲ್ಯಾಣಮಠದ ಶ್ರೀ ಶಿವಕುಮಾರ ಸ್ವಾಮಿಗಳನ್ನು ಮಹಾಸಭೆಯ ಅಧ್ಯಕ್ಷರನ್ನಾಗಿ ಆರಿಸಬಹುದೆಂದು ತೀರ್ಮಾನಿಸಿರುತ್ತೆ.

ವಿಮರ್ಶೆ— ಸ್ವಾಗತ ಸಮಿತಿಯವರು ಸೂಚಿಸಿರುವ ಗುರು-ವಿರಕ್ತರ ಕಲಹವೆಂಬ ಅಂಶವು ಕೆಲವರಿಗೆ ಬಹಿರಂಗವಾಗಿಯೂ ಕೆಲವರಿಗೆ ಅಂತರಂಗವಾಗಿಯೂ ತಿಳಿದುಬಂದಿದ್ದರೂ ಸಹ ಪ್ರತ್ಯಕ್ಷವಾಗಿ ಈ ವಿಚಾರವನ್ನು ಬಹಿರಂಗವಾಗಿ ತೋರಿಸಲು ಸಾಕಷ್ಟು ಅವಕಾಶವಿರುವುದಿಲ್ಲ.

ಆದಾಗ್ಯೂ ಈಗಿನ ಚಳವಳಿಗಳೂ ಮತ್ತು ಇದು ವರೆಗೂ ಪ್ರಚಾರವಾಗಿರುವ ಪುಸ್ತಕಗಳೂ ಅಲ್ಲಲ್ಲಿ ನಡೆದಿರುವ ವ್ಯವಹಾರಗಳೂ ಮತ್ತು ಇತರೆ ಮನಸ್ತಾಪಗಳೂ ಇವುಗಳನ್ನೆಲ್ಲಾ ದೂರದೃಷ್ಟಿಯಿಂದ ನೋಡಿದರೆ ಯಾರೋ ಪ್ರಚಂಡ ವ್ಯಕ್ತಿಗಳು ಪರದೆಯ ಹಿಂದೆ ನಿಂತು ಕೆಲವು ಕೆಲಸಕ್ಕೆ ಬಾರದವರನ್ನೋ ಅಥವಾ ಇನ್ನೊಬ್ಬರನ್ನೋ ಮುಂದೆ ತಳ್ಳಿ ತಾವು ಏನೂ ತಿಳಿಯದವರಂತೆ ವರ್ತಿಸುತ್ತಿದ್ದಾರೆಂಬ ಅಂಶವು ಯಾರಿಗೂ ತಿಳಿಯದಿರಲಾರದು.

ಈ ಸಂದರ್ಭಗಳಲ್ಲಿ ಸಮಾಜದವರಾದ ನಾವುಗಳು ಎಂಥ ತಪ್ಪು ಮಾಡುತ್ತಿದ್ದೇವೆಂಬುದನ್ನು ಆಲೋಚಿಸಬೇಕಾಗಿದೆ. ನಾವುಗಳು ಚಳವಳಿಗೆ ಸಹಾಯವಾಗುವಂಥ ವ್ಯಕ್ತಿಗಳಿಗೆ ಆ ಮೂಲಕ ವಿಷಯಗಳಿಗೆ ಹೇರಳವಾಗಿ ಧನಸಹಾಯಮಾಡುತ್ತಾ ಇದ್ದು ಆ ಮೂಲಕ ಒದಗಬಹುದಾದ ಅವಮಾನಗಳನ್ನೂ ಹಣನಷ್ಟವನ್ನೂ ಮತ್ತು ನಮ್ಮಗಳಲ್ಲೇ ಉಂಟಾಗಿರತಕ್ಕ ನಿಷ್ಪ್ರಯೋಜನವಾದ ಮನಸ್ತಾಪಗಳನ್ನೂ ನಾವುಗಳೇ ಹೊಂದುತ್ತಿರುವುದು ನಮ್ಮಲ್ಲಿರುವ ಅನೈಕಮತ್ಯವನ್ನೂ ಅಶಕ್ತತೆಯನ್ನೂ ತೋರಿಸುತ್ತದೆ.

ನಮ್ಮ ಸಮಾಜದಲ್ಲಿ ಎಷ್ಟೋ ಜನ ಉದಾರಿಗಳೂ ವಿದ್ವಾಂಸರೂ ಜ್ಞಾನಿಗಳೂ ಅಭಿಮಾನಿಗಳೂ ಇದ್ದು ಇಂಥ ಸ್ಥಿತಿ ಒದಗುತ್ತಿರುವುದು ನಮ್ಮಗಳ ದೌರ್ಭಾಗ್ಯವಲ್ಲದೆ ಮತ್ತೇನು? ಆದಾಗ್ಯೂ ಸಹ ಹಿಂದಿನದೆಲ್ಲಾ ತಿದ್ದಿಕೊಂಡು ಇನ್ನು ಮುಂದೆ ಸಂಪಡಿಸಿಕೊಂಡು ಯಾರ ಸಹಾಯವೂ ಇಲ್ಲದೆ ನಮ್ಮ ಸಮಾಜದಲ್ಲಿರುವ ಕೆಲವು ಕಸಕಡ್ಡಿಗಳನ್ನು ತೆಗೆದುಹಾಕಿ ಆದಿಯಿಂದ ಬಂದಂತೆ ಉತ್ತಮವಾದ ನಮ್ಮ ಸಮಾಜರಚನೆ ಮಾಡಿಕೊಂಡು ಇತರ ಸಮಾಜದವರಂತೆ ನಾವುಗಳೂ ಸಹ ಮಾರ್ಗದರ್ಶಿಗಳಾಗಿ ಬಾಳಬೇಕೆಂಬುದೇ ಎಲ್ಲರ ಅಪೇಕ್ಷೆಯಾಗಿದೆ.

ಈಗ ನಮ್ಮ ಸಮಾಜಕ್ಕೆ ಒದಗಿರತಕ್ಕ ಸನ್ನಿವೇಶದಲ್ಲಿ ಯಾವ ಶೂನ್ಯಸಿಂಹಾಸನದವರೇ ಆಗಲಿ ಪಂಚಸಿಂಹಾಸನದವರಾಗಲಿ ತಾವುಗಳು ಸ್ವತಃ ಮುಂದೆ ಬಂದು ಸ್ವಂತ ಖರ್ಚಿನಿಂದ (ಅದೂ ಸಹ ಭಕ್ತಾದಿಗಳದ್ದು) ತೀರ್ಮಾನಮಾಡಿಕೊಳ್ಳುವಂಥವರಿರುವುದಿಲ್ಲ. ಅವರಿಗೆ ಅದು ಬೇಕಾಗಿಯೂ ಕಂಡುಬರುವುದಿಲ್ಲ. ಒಂದು ವೇಳೆ ಉಭಯತ್ರರೂ ಸೇರಿ ಹಾಗೆ ಸಮಾಜದ ಹಿತಬಯಸುವುದಾದರೆ ನಾವುಗಳೆಲ್ಲಾ ಯಾವಾಗಲೂ ಅವರಿಗೆ ಋಣಿಗಳೇ ಸರಿ.

ಆದ್ದರಿಂದ ಮುಂದೆ ಸೇರುವ ಮಹಾಸಭೆಯಲ್ಲಿ ಈ ಗೊತ್ತುವಳಿಯು ಬಂದು ಅದಕ್ಕಾಗಿ ಅಲ್ಲಿ ಸೇರಿರುವ ಮಹಾಜನಗಳಿಂದ ಸಾಧ್ಯವಾದಷ್ಟು ಹಣಸೇಖರಿಸಿ ನಂತರ ಹಣ ಸೇಖರಿಸಲು ಅಧ್ಯಕ್ಷರನ್ನೊಳಗೊಂಡ ಐದು ಜನರ ಒಂದು ಕಮಿಟಿ ರಚನೆಯಾಗಿ ಜನಾಂಗದ ನಾನಾ ಭಾಗಗಳಿಂದ ಸಾಧ್ಯವಾದಷ್ಟು ಹಣ ಸಂಗ್ರಹಮಾಡಬೇಕು. ಒಂದು ವೇಳೆ ಕಡಿಮೆ ಏನಾದರೂ ಬಿದ್ದಲ್ಲಿ ಚಿರಸ್ಥಾಯಿ ಫಂಡಿನಿಂದ ಬರತಕ್ಕ ಬಡ್ಡಿಯಲ್ಲಿ ಕೆಲವು ಭಾಗ ಉಪಯೋಗಿಸಿಕೊಳ್ಳಬೇಕು.

ಮೇಲ್ಕಂಡ ಕಮಿಟಿಯವರು ಎಲ್ಲಾ ಖರ್ಚುವೆಚ್ಚಗಳ ಪಟ್ಟಿ ಮಾಡಬೇಕು. ಸದರಿ ಐದು ಜನಗಳಲ್ಲಿ ಅಧ್ಯಕ್ಷರ ವಿನಹ ನಾಲ್ಕು ಜನರು ಮೈಸೂರುಸೀಮೆ, ಬೊಂಬಾಯಿ, ಹೈದರಾಬಾದ, ಮದ್ರಾಸ ಹೀಗೆ ಒಬ್ಬೊಬ್ಬರು ಇದ್ದರೆ ಉತ್ತಮ. ಹಣ ವಸೂಲಿಯು ಮಹಾಸಭೆ ಮುಗಿದ ಮೂರು ತಿಂಗಳು ಒಳಗಾಗಿ ಮುಗಿಯುವದು. ಅಷ್ಟರಲ್ಲಿ ವರ್ಕಿಂಗ್ ಕಮಿಟಿಯವರು ಮೂರು ಜನ ಜಡ್ಜಿಗಳನ್ನು ಚುನಾಯಿಸಿಕೊಡಬೇಕು. ಅವರಲ್ಲಿ ಒಬ್ಬರು ಇತರೆ ಮತಸ್ಥರಾಗಿದ್ದರೆ ಉತ್ತಮ. ಜಡ್ಜಿಗಳು ಹೈಕೋರ್ಟಿನಿಂದ ನಿವೃತ್ತರೂ ಕನ್ನಡ, ಸಂಸ್ಕೃತ ಇಂಗ್ಲೀಷ ಅನುಭವಿಗಳೂ ನ್ಯಾಯವಾದಿಗಳೂ ಆಗಿರಬೇಕು.

ಮೇಲ್ಕಂಡ ನ್ಯಾಯವಾದಿಗಳೂ ಅವರ ಪರಿವಾರದವರೂ ಕ್ರಮವಾಗಿ ಬೊಂಬಾಯಿ, ಮೈಸೂರು, ಮದ್ರಾಸ್ ಹೈದರಾಬಾದ ಈ ಸೀಮೆಗಳ ಕೇಂದ್ರ ಸ್ಥಳಗಳಲ್ಲಿ ಆಫೀಸ ಮಾಡಿ ಒಂದೊಂದು ಕಡೆ ಒಂದೊಂದು ತಿಂಗಳಿಗೆ ಮೀರದಂತೆ ಕಾರ್ಯಕ್ರಮಗಳನ್ನು ಇಟ್ಟುಕೊಂಡು ಐದು ತಿಂಗಳೊಳಗಾಗಿ ಪೂರೈಸಬೇಕು. ಆಯಾ ಕೇಂದ್ರಗಳಲ್ಲಿರತಕ್ಕ ಎಲ್ಲಾ ವೀರಶೈವರೂ ತಮ್ಮ ತಮ್ಮ ಅಭಿಪ್ರಾಯಗಳನ್ನು ಕೊಡಬಹುದು. ಅದರಲ್ಲಿ ಮುಖ್ಯವಾಗಿ ಸಿಂಹಾಸನಾಧಿಪತಿಗಳು ತಾವು ಪ್ರತ್ಯಕ್ಷಯಾಗಲಿ ತಮ್ಮಿಂದ ಅಧಿಕಾರ ಹೊಂದಿದವರಿಂದಾಗಲಿ ತಮ್ಮ ತಮ್ಮ ತತ್ವಗಳನ್ನು ಸಮರ್ಥನೆಮಾಡಬೇಕು. ಆಗ ಸಾಕ್ಷಿ ಕೊಡುವವರನ್ನು ಸಂಸ್ಥಾನಿಕರೂ ಮೊದಲೇ ಪಟ್ಟಿಕೊಡಬೇಕು. ಸಾಕ್ಷಿ ಕೊಡುವಾಗ ಪರಸ್ಪರ ಪರೀಕ್ಷೆಗಳು ಮೂಲ ಆಧಾರ ಗ್ರಂಥಗಳಿಂದ ನಡೆಯಬಹುದು.

ಅನಂತರದಲ್ಲಿ ಮೂರು ತಿಂಗಳು ಒಳಗೆ ಸಮಿತಿಯವರ ರಿಪೋರ್ಟು ಮಹಾಸಭಾಧ್ಯಕ್ಷರಿಗೆ ಮಾಡಬೇಕು. ಅನಂತರ ವರ್ಕಿಂಗ್ ಕಮಿಟಿಯವರು ಅದನ್ನು ಸಮಾಜಕ್ಕೆ ಬಹಿರಂಗಪಡಿಸಬೇಕು. ನಂತರ ಮುಂದಿನ ಮಹಾಸಭೆಯಲ್ಲಿ ಅದು ರಿಕಾರ್ಡುಮಾಡಿ ಅದರಂತೆ ಸಮಾಜವು ನಡೆದುಕೊಳ್ಳಬೇಕು. ವಾಯದೆ ಮುಗಿದನಂತರ ಯಾವ ಸಾಕ್ಷಿಗಳನ್ನೇ ಆಗಲಿ ತಕರಾರುಗಳನ್ನೇ ಆಗಲಿ ಸಮಿತಿಯು ಅಂಗೀಕರಿಸಲಾಗದು. ಸಮಾಜ ಹಿತಕ್ಕೆ ಅನಾನುಕೂಲವಾಗಿ ವರ್ತಿಸುವಂಥ ಯಾವ ವ್ಯಕ್ತಿಗಳನ್ನೇ ಆಗಲಿ ಉಚಿತ

ಗ್ರಂಥಗಳನ್ನೇ ಆಗಲಿ ಸಂಸ್ಥಾನಿಕರನ್ನೇ ಆಗಲಿ ಸಮಾಜವು ದೂರೀಕರಿಸಬಹುದು. ಈ ಸಂದರ್ಭದಲ್ಲಿ ಸಂಸ್ಥಾನಿಕರುಗಳು ಸಾಧ್ಯವಾದಷ್ಟು ಉದಾರ ಧನಸಹಾಯಮಾಡಿದಲ್ಲಿ ಕೃತಜ್ಞತೆಯಿಂದ ತೆಗೆದುಕೊಳ್ಳಬಹುದು.

೧. ಸಮಿತಿಯವರು ನಿರ್ಣಯಿಸತಕ್ಕ ವಿಷಯಗಳು. ಎ. ಸಮಾಜದಲ್ಲಿ 'ಗುರು–ವಿರಕ್ತ' ರಿಗೆ ಸಮಾನ ಪೂಜ್ಯತೆ ಇದೆಯೆ? ಇಲ್ಲವೆ? ವ್ಯತ್ಯಾಸವಿದೆಯೆ? ಬಿ. ಪರಸ್ಪರ ಅವರುಗಳಲ್ಲಿ ಅಧಿಕ ಪೂಜ್ಯರು ಯಾರು? ಇಲ್ಲವೇ ಸಮಾನ ಉಳ್ಳವರೆ?

೨. ಎ. ನಮ್ಮ ಮತದಲ್ಲಿ ಪ್ರಜ್ವಲಿಸಿದ ಶ್ರೀ ಬಸವೇಶ್ವರನಿಗೆ ಸಮಾಜದವರು ಪೂಜ್ಯತೆಯಿಂದ ನಡೆದುಕೊಳ್ಳಬಹುದೇ ಹೇಗೆ? ಬಿ. ಅದರಲ್ಲಿ ಪೀಠಾಚಾರ್ಯರು ಅವರಿಗೆ ಪೂಜ್ಯತೆ ಕೊಡಬಹುದೇ ಹೇಗೆ?

೩. ಎ. ಸಮಾಜದಲ್ಲಿ ಚಾತುರ್ವರ್ಣಗಳುಂಟೇ ಇಲ್ಲವೆ? ಬಿ. ಪ್ರತಿಯೊಂದು ವರ್ಣ ಅಂದರೆ ಕಾಯಕದವರಿಗೆ ಮತ ಸಿದ್ಧಾಂತ ರೀತಿಯಿಂದ ಪಟಸ್ಥಲಗಳಲ್ಲಿ ಕಂಡಂತೆ ಮೇಲೆ ಏರುವ ಅಧಿಕಾರವಿದೆಯೆ? ಇಲ್ಲವೆ?

ವಿ. ಸೂಚನೆ— ಮೇಲ್ಕಂಡ ಎಲ್ಲಾ ಸಮಸ್ಯೆಗಳು ಸಮಾಜದವರ ತಿದ್ದುಪಡೆಗೆ ಒಳಪಟ್ಟಿರುತ್ತವೆ.

ಮಹಾಸಭೆಯವರು ಮಾಡತಕ್ಕ ಕಾರ್ಯಗಳು.

೧. ವೀರಶೈವರ ಜನಸಂಖ್ಯೆ, ದೇಶ, ಅಲ್ಲಿನ ಮುಖಂಡರುಗಳ ಹೆಸರಿನ ಬುಕ್ಕು, ೨. ವೀರಶೈವರಿಗೆ ಅವಶ್ಯಕವಾದ ಕೇಂದ್ರ ಬ್ಯಾಂಕು ಗ್ರಂಥಭಾಂಡಾರ ಮತ್ತು ಬ್ಯಾಂಕಿನ ಬ್ರ್ಯಾಂಚಗಳು ೩. ನಿಜವಾದ ಮತತತ್ವಗಳ ಪ್ರಚಾರ, ಆ ಮೂಲಕ ಶುದ್ಧೀಸಂಘಟನೆ, ವರ್ತಮಾನಪತ್ರಿಕೆಗಳು ವಿದ್ಯಾಭ್ಯಾಸ, ಅಲ್ಲಲ್ಲಿ ಚಳವಳಿಮಾಡುವವರ ಮೇಲಿನ ಕಾರ್ಯಕ್ರಮ, ಅಧ್ಯಕ್ಷರ ಸಂಚಾರಕ್ರಮ

ಮೇಲಿನ ಎಲ್ಲಾ ಅಧಿಕಾರಿಗಳೂ ಮತಸಂಬಂಧ ವಿಚಾರಗಳೂ ಇನ್ನು ಮುಂದೆ ಮಹಾ ಸಭೆಗೆ ಅಧೀನವಾಗಿರಬೇಕು.

ಶ್ರೀ. ಎನ್. ಎಸ್. ಟಿ. ಶ್ರೀ ಚೆನ್ನಬಸವೇಶ್ವರ ಸಂಘ.

---

## ಗುಳೇದಗುಡ್ಡದಲ್ಲಿ ಗುರುಸಿದ್ಧೇಶ್ವರ ಮಠದಲ್ಲಿ

### ತಾಂಬೂಲ ಸಮಾರಂಭವು.

ತಾ. ೨೪ ನವ್ಹಂಬರ ೧೯೩೮ ನೇ ಇಸ್ವಿ ಗುರುವಾರ ದಿವಸ ಶ್ರೀಮಜ್ಜಗದ್ಗುರು ಗುರುಸಿದ್ಧೇಶ್ವ[illegible] ವತಿಯಿಂದ ಶ್ರೀಮಂತ ಮ|| ರಾ|| ಝುಮರಲಾಲ ಭಗವಾನದಾಸ ರಾಟಿ ಇವರಿಗೆ ಮಾನಪತ್ರವು ಅರ್ಪಿಸಲ್ಪಟ್ಟಿತು.

ತಾ. ೨೨–೧೧-೩೮ ನೇ ಮಂಗಳವಾರ ದಿವಸ ಇಲ್ಲಿಯ ಸಿಟಿ ಮುನಸಿಪಾಲ್ಟಿಯಲ್ಲಿ ಸರ್ವಾನುಮತದಿಂದ ಇಲ್ಲಿಯ ದೊಡ್ಡ ವ್ಯಾಪಾರಿಗಳೂ, ಉತ್ಸಾಹಶಾಲಿಗಳೂ ಮತ್ತು ಧಾರ್ಮಿಕರೂ ಆದ ಶ್ರೀ. ಮ|| ರಾ|| ಝುಮರಲಾಲ ಭಗವಾನದಾಸ ಇವರಿಗೇನೇ ಪ್ರೆಸಿಡೆಂಟ ಅಧಿಕಾರವು ಕೊಡಲ್ಪಟ್ಟಿತು.

ತಾ. ೨೪-೧೧-೩೮ ನೇ ಗುರುವಾರ ದಿವಸ ಸಾಯಂಕಾಲ ೫ ಘಂಟೆಗೆ ಶ್ರೀ ಗುರುಸಿದ್ಧೇಶ್ವರ ಮಠದಲ್ಲಿ ಯಾವತ್ತೂ ನಗರ ಮುನಸಿಪಾಲ್ಟಿ ಮೆಂಬರ ಜನರೂ ಹಾಗು ಗ್ರಾಮಸ್ಥರೂ ಕೂಡಿ ಸಭಾಮಾಡಿ ಸಭಾಧ್ಯಕ್ಷಸ್ಥಾನಕ್ಕೆ ಶ್ರೀ. ಸಂಗನಬಸಪ್ಪ ಕಲಬುರ್ಗಿ ಚೀಫ್ ಆಫೀಸರ್ ಇವರು ಶ್ರೀ. ರಾಚಪ್ಪ ಮಂಟಾ ಇವರನ್ನು ಸೂಚಿಸಿದರು. ಇದಕ್ಕೆ ಶ್ರೀ. ನಿಜಪ್ಪಣ್ಣ ನಿಡಗುಂದಿ ಇವರು ಅನುಮೋದನ ಕೊಟ್ಟನಂತರ ಸಭಾಧ್ಯಕ್ಷಸ್ಥಾನವು ಸ್ವೀಕರಿಸಲ್ಪಟ್ಟಿತು.

ಆ ಮೇಲೆ ಗುಳೇದಗುಡ್ಡ ಸಿಟಿ ಮುನಸಿಪಾಲ್ಟಿ ಪ್ರೆಸಿಡೆಂಟರಾದ ಶ್ರೀ. ಝುಮರಲಾಲ ಭಗವಾನದಾಸ ರಾಟಿ ಇವರಿಗೆ ಶ್ರೀಮಜ್ಜಗದ್ಗುರು ಗುರುಸಿದ್ಧಪಟ್ಟಾಧಿಕಾರ ಸ್ವಾಮಿಗಳವರಿಂದ ಪೂಮಾಲೆಗಳೂ ಮತ್ತು ಬಹುಮಾನ ಪತ್ರಿಕೆಗಳೂ ಅರ್ಪಿಸಲ್ಪಟ್ಟನಂತರ ತಾಂಬೂಲವು ಅರ್ಪಿಸಲ್ಪಟ್ಟಿತು.

ನಂತರ ಶ್ರೀ ಅಕ್ಕಲಕೋಟಿ ಶಿವಶರಣ ಸ್ವಾಮಿ ಮಹಾಶಿವಯೋಗಿಗಳು ತಮ್ಮ ಅಮೃತವಾಣಿಯಿಂದ ಭಕ್ತಿ, ಜ್ಞಾನ, ಮತು ವೈರಾಗ್ಯ ಈ ವಿಷಯಗಳ ಮೇಲೆ ಯಾವತ್ತೂ ಜನಗಳ ಮನಸ್ಸಿನ ಮೇಲೆ ಪರಿಣಾಮಕರವಾಗುವಂತೆ ಉಪನ್ಯಾಸಮಾಡಿದರು.

ಬಳಿಕ ಸಭಾಧ್ಯಕ್ಷ ಹಾಗೂ ಪ್ರೆಸಿಡೆಂಟರವರ ಭಾಷಣಗಳಾದನಂತರ ಶ್ರೀ. ಸಂಗಪ್ಪ ಕಲಬುರ್ಗಿ ಚೀಫ್ ಆಫಿಸರ್ ಇವರ ಸಭಾ ಆಭಾರಿ ವಿಷಯಕ ಭಾಷಣವು ಮುಗಿದನಂತರ ಸ್ವಲ್ಪ ಹೊತ್ತು ಶ್ರೀ ಸಂಸ್ಕೃತ ಬಸವ ಪುರಾಣವು ಸಾಗಿತು. ಆ ಮೇಲೆ ಮಂಗಳಾರತಿ ಮುಗಿದ ತರುವಾಯ ಸಭಾ ವಿಸರ್ಜನೆಮಾಡಲ್ಪಟ್ಟಿತು.

ಈ ಸಭೆಯಲ್ಲಿ ಯಾವತ್ತೂ ಸರ್ವ ಸಮಾಜ ಬಾಂಧವರೂ ಹಾಗೂ ಶ್ರೀ ದತ್ತಾತ್ರೆಯ ವ್ಯಾಯಾಮ ಮಂದಿರದ ಪ್ರಮುಖರೂ ಮತ್ತು ಮುಖ್ಯ ವ್ಯಾಪಾರಿಗಳೂ ಬಂದಿದ್ದರಿಂದ ಈ ತಾಂಬೂಲ ಸಮಾರಂಭವು ಅತ್ಯಂತ ಆನಂದದಾಯಕವಾಗಿ ಜರುಗಿತು.

—ಓರ್ವ ಸಮಾಜ ಹಿತಚಿಂತಕ.

---



---

—ಈ ಸಾರೆ ರಾಷ್ಟ್ರೀಯ ಮಹಾಸಭೆ ಸೇರಲಿರುವ ಮಹಾಕೋಸಲ ಪ್ರಾಂತದಲ್ಲಿ ಈ ವರ್ಷ ೧೫೫೩೭ ಜನ ಕಾಂಗ್ರೆಸ್ ಸದಸ್ಯರಾಗಿದ್ದಾರೆ. ಮಹಾಕೋಸಲ ಪ್ರಾಂತಿಕ ಕಾಂಗ್ರೆಸ್ ಕಮಿಟಿಯವರು ಮುಂದಿನ ಕಾಂಗ್ರೆಸ್ ಅಧಿವೇಶನವನ್ನು ಫೆಬ್ರವರಿ ೨೧ ರಿಂದ ಮಾರ್ಚ ೫ ರೊಳಗಾಗಿ ಸೇರಿಸಬೇಕೆಂದು ಅಖಿಲಭಾರತ ಕಾಂಗ್ರೆಸ್ ಕಮೀಟಿಗೆ ವಿಜ್ಞಾಪಿಸಿಕೊಂಡಿದ್ದಾರೆ.

# ಮುಸಲ್ಮಾನ್ ವಿದ್ಯಾರ್ಥಿಗಳಿಗೆ ಬುದ್ಧಿವಾದ.

## ಪ್ರೊ. ಹುಮಾಯುನ ಕಬೀರರ ಭಾಷಣ.

ಮುಂಬೈಯಲ್ಲಿಯ ಮುಸಲ್ಮಾನ್ ವಿದ್ಯಾರ್ಥಿಗಳ ಪರಿಷತ್ತಿನಲ್ಲಿ ಭಾಷಣ ಮಾಡುತ್ತಾ ಪ್ರೊ. ಹುಮಾಯುನ್ ಕಬೀರರು ಈ ರೀತಿ ನುಡಿದರು.—

"ಈಗಿನ ಪರಿಸ್ಥಿತಿಯಲ್ಲಿ ರಾಜಕಾರಣವು ತರುಣರಿಗೆ ಜೀವಾಳವಾಗಿದೆ. ಸ್ವಾತಂತ್ರ್ಯವೇ ನಮ್ಮ ಗುರಿಯಾಗಿರಬೇಕು. ಅಲ್ಲಿಯವರೆಗೂ ಹಸಿವೆ, ಬಡತನ, ಸಾಮಾಜಿಕ ಅಸಮಾನತೆ ಮೊದಲಾದವುಗಳ ಬಗ್ಗೆ ಬಡಿದಾಡುತ್ತ ಇರುವುದು ಒಳ್ಳೆಯದಲ್ಲ. ಸ್ವಾತಂತ್ರ್ಯ ಸಂಪಾದಿಸಿದ ಮೇಲೆ ಇವೆಲ್ಲವೂ ತಾನಾಗಿಯೇ ಒಂದೊರಹಿಂದೊಂದು ನಾಶವಾಗುವವು. ನಮ್ಮ ಶಿಕ್ಷಣ ಪದ್ಧತಿಯಾದರೂ ಮೊದಲಿನಿಂದ ಕೊನೆಯ ವರೆಗೂ ಬದಲಾಗಬೇಕು. ಇಂದು ಸ್ಫೂರ್ತಿ ಸ್ವಾತಂತ್ರ್ಯಾಭಿಮಾನ ಹುಟ್ಟಿಸುವ ಶಿಕ್ಷಣಬೇಕು. ಜಾತೀಯ ಭಾವನೆಗೆ ಅದರಲ್ಲಿ ಎಳ್ಳಷ್ಟು ಅವಕಾಶವಿರಕೂಡದು. ಈ ದೃಷ್ಟಿಯಿಂದ ನೋಡಿದರೆ ವರ್ಧಾ ಶಿಕ್ಷಣ ಯೋಜನೆಯು ಅನುಕೂಲವಾಗಿದೆ.

ನಾವು ಇದೀಗ ಹೆಸರಿನ ಸಲುವಾಗಿ ಬಡಿದಾಡುತ್ತಿರುವುದು ತುಂಬಾ ವಿಷಾದಕರವು. ವಿದ್ಯಾಮಂದಿರದ ಹೆಸರಿನ ಬಗ್ಗೆ ಸುಮ್ಮನೇ ವಾದವಿವಾದ ಎಬ್ಬಿಸುವುದರಲ್ಲಿ ಅರ್ಥವಿಲ್ಲ. ಧಾರ್ಮಿಕ ಸಂಬಂಧವನ್ನು ಶಿಕ್ಷಣದಲ್ಲಿ ತರಲೇ ಕೂಡದು. ತಂದರೆ ಕೆಟ್ಟವೆಂದೇ ತಿಳಿಯಬೇಕು. ಲಿಪಿಗಳ ಬಗ್ಗೆಯೂ ಹೆಚ್ಚಾಗಿ ವಾದವಿವಾದ ನಡೆದಿದೆ. ರೋಮನ್ ಲಿಪಿಯನ್ನು ನಾವೇಕೆ ಸ್ವೀಕರಿಸಬಾರದು? ಆಧುನಿಕ ಜಗತ್ತಿನ ಅಂತರರಾಷ್ಟ್ರೀಯ ಲಿಪಿಯಾದ ರೋಮನ್ ಲಿಪಿಯನ್ನು ಸ್ವೀಕರಿಸಲು ನಾಚಿಕೆಯೇ? ಭಾಷೆಯು ಲಿಪಿಯನ್ನವಲಂಬಿಸಿಲ್ಲ. ಭಾಷೆಯು ನಿಸರ್ಗವಾದುದು. ಲಿಪಿಯಾದರೋ ಕೃತ್ರಿಮವಾದುದು."

---

## ಬೌದ್ಧ ಭಿಕ್ಷುಕರ ಅಪೂರ್ವ ಕಟ್ಟು.

ಯಾವ ಬರ್ಮಿ ಸ್ತ್ರೀಯಳೂ ಮುಸಲ್ಮಾನರ ಅಂಗಡಿಗಳಲ್ಲಿ ಯಾವದೇ ಸಾಮಾನುಗಳನ್ನು ಕೊಳ್ಳದಂತೆಯೂ ನಯವಾದ ವಸ್ತ್ರಗಳನ್ನು ತೊಡದಂತೆಯೂ ನೋಡಿಕೊಳ್ಳುವದಕ್ಕಾಗಿ ಬರ್ಮಾ ದೇಶದಲ್ಲಿಯ ಬೌದ್ಧ ಭಿಕ್ಷುಕರು ಒಂದು ಸಂಘವನ್ನೇರ್ಪಡಿಸಿಕೊಂಡಿದ್ದಾರೆಂದು ರಂಗೂನಿನ ಒಂದು ಪತ್ರಿಕೆಯಲ್ಲಿ ಪ್ರಕಟವಾಗಿದೆ. ಈ ಮೂಲಕ ಬರ್ಮಿ ಜನಗಳ ಆಚಾರ, ವಿಚಾರ ನೀತಿ ನಡವಳಿಕೆ ನಿತ್ಯದ ಕಾರ್ಯ ಇವುಗಳ ಬಗ್ಗೆ ಆಜ್ಞೆ ಹೊರಡಿಸುವರಂತೆ. ಕೆಲವು ಸ್ತ್ರೀಯರು ಮುಸಲ್ಮಾನರ ಅಂಗಡಿಗಳಲ್ಲಿ ಸಾಮಾನು ತೆಗೆದುಕೊಂಡದ್ದರಿಂದ ಇದು ಅಪರಾಧವೆಂದು ಪರಿಗಣಿಸಿ ಅವರಿಗೆ ಏಟು ಕೊಟ್ಟದ್ದಲ್ಲದೆ ಮುಂದೆ ಎಂದೂ ಈ ಸಂಸ್ಥೆಯ ಆಜ್ಞೆಗಳನ್ನು ಮುರಿಯುವದಿಲ್ಲವೆಂದು ಅಭಿವಚನ ತೆಗೆದುಕೊಂಡರು.

---

—ಮುಂಬೈಯಲ್ಲಿ ಹಿಂದುಗಳಿಗೂ–ಇತರ ಜನಗಳಿಗೂ ಜರುಗಿದ ಕ್ರಿಕೆಟ ಪಂದ್ಯಾಟದಲ್ಲಿ ಹಿಂದುಗಳು ಪ್ರಚಂಡವಾದ ಯಶಸ್ಸನ್ನು ಸಂಪಾದಿಸಿದರು.

# ಕರೋಡಗಿರಿಯ ತೊಂದರೆ.

ನಿಜಾಮ ರಾಜ್ಯದಲ್ಲಿ ಕರೋಡಗಿರಿಯವರು ವ್ಯಾಪಾರಸ್ಥರಿಗೆ ಕೊಡುವ ತೊಂದರೆಯು ಅಷ್ಟಿಷ್ಟೆಂದು ಹೇಳಲು ಬರುವಂತಿಲ್ಲ. ನಿಜಾಮ ಪ್ರಾಂತದ ಓರ್ವ ವ್ಯಾಪಾರಸ್ಥರು ತಮ್ಮ ಅನುಭವವನ್ನು ಈ ರೀತಿ ಬರೆದುಕೊಂಡಿದ್ದಾರೆ—

"ಮುದಗಲ್ಲ ಕಡೆ ಹೋಗಿಬರುವ ಸಾಮಾನುಗಳಿಗೆ ಬೆಳ್ಳಿಹಾಳ ಎಂಬುದು ಕರೋಡಗಿರಿ ಸ್ಥಳವಾಗಿದೆ. ಬಾಗಲಕೋಟೆಯಿಂದಲೂ ಇಲಕಲ್ಲಿನಿಂದಲೂ ಇದೇ ಮಾರ್ಗವಾಗಿ ಮಾಲು ಹೋಗಿ ಬರುತ್ತಾ ಇರುತ್ತದೆ. ಅಲ್ಲಿಯ ಕರೋಡಗಿರಿಯವರು ತಮ್ಮ ನಿಯಮದಂತೆ ಸರಿಯಾಗಿ ಕರೋಡಗಿರಿಯನ್ನು ವ್ಯಾಪಾರಸ್ಥರಿಂದ ತೆಗೆದುಕೊಳ್ಳದೆ ರಸೀದಿಯಲ್ಲಿ ಬರೆಯುವುದೊಂದು ತಾವು ತೆಗೆದುಕೊಳ್ಳುವುದೊಂದು ಹೀಗೆ ಮಾಡುತ್ತಿದ್ದಾರೆ. ಮಾಲಿನಕ್ಕಿಂತಲೂ ಕಡಿಮೆ ರಸೀದಿಮಾಡಿ ಮಾಲಿನಷ್ಟು ಕರೋಡಗಿರಿ ಜನರಿಂದ ವಸೂಲುಮಾಡಿ ಹೆಚ್ಚಿನದನ್ನು ತಮ್ಮ ಕಿಸೆಯಲ್ಲಿ ಹಾಕಿಕೊಳ್ಳುವರು. ಇದರಿಂದಲೂ ವ್ಯಾಪಾರಸ್ಥರಿಗೇನೂ ಬಾಧಕವಿರಲಿಲ್ಲ. ಆದರೆ ಪ್ರತಿಯೊಂದು ಬಾಡಿಗೆಗೆ ಒಂದೊಂದು ರೂಪಾಯಿ ಕೊಡುವಂತೆ ವ್ಯಾಪಾರಸ್ಥರಿಗೆ ಒತ್ತಾಯಗೊಳಿಸುತ್ತಿದ್ದಾರೆ. ವ್ಯಾಪಾರಸ್ಥರು ಕೊಡಲು ನಿರಾಕರಿಸಿದರೆ ಅವರಿಗೆ ಮನಬಂದಂತೆ ಬಯ್ಯುತ್ತಾರೆ. ಅವರು ಸರ್ವಸಾಧಾರಣ ಜನರಿದ್ದರೆ ಅವರಿಗೆ ಹೊಡೆಯಲು ಕೂಡಾ ಹಿಂದು ಮುಂದೆ ನೋಡುವುದಿಲ್ಲ. ಈ ಪ್ರಕಾರ ನಡೆದಿದೆಯೆಂದು ಯಾರಾದರೂ ಮೇಲೆ ಬರೆದುಕೊಂಡರೆ ತೀರಿತು. ಮೇಲಿನವರೂ ಕೇಳುವುದೇ ಇಲ್ಲ. ಹೀಗಾಗಿ ನಿಜಾಮ ರಾಜ್ಯದಲ್ಲಿ ಬಡವರ ಗೋಳನ್ನು ಕೇಳುವವರೇ ಇಲ್ಲದಂತಾಗಿದೆ.

ಟಪಾಲ ಆಫೀಸಿನಲ್ಲಿಯೂ ಇದೇ ಹಣೆಬರಹ. ಮನಿಯಾರ್ಡರ್, ರಜಿಸ್ಟರ್ ಮೊದಲಾದವುಗಳನ್ನು ತಂದವರಿಗೆ ಏನಾದರೂ ಕೊಡಬೇಕಾಗುತ್ತದೆ. ಸರಕಾರದವರು ಈಗಲಾದರೂ ಎಚ್ಚೆತ್ತು ಬಡಜನರ ಗೋಳನ್ನು ನಿವಾರಿಸಲು ಮುಂದೆ ಬರಬೇಕೆಂಬುದೇ ನಮ್ಮ ಬೇಡಿಕೆ."

---

## ಔದ್ಯೋಗಿಕ ಕಲಾಪ್ರದರ್ಶನ.

ಇದೇ ಡಿಶೆಂಬರ್ ತಿಂಗಳಿನ ಕೊನೆಯ ವಾರದಲ್ಲಿ ನಾಗಪುರ ನಗರದಲ್ಲಿ ಹಿಂದು ಮಹಾಸಭೆಯ ೨೦ ನೆಯ ಅಧಿವೇಶನ, ಹಿಂದು ಮಹಿಳಾ ಪರಿಷತ್ತು, ಹಿಂದು ಯುವಕ ಸಮ್ಮೇಲನವೇ ಮೊದಲಾದ ಪರಿಷತ್ತುಗಳು ಜರುಗುತ್ತವೆ. ಆ ಕಾಲಕ್ಕೆ ಹಿಂದುಸ್ಥಾನದ ಬೇರೆ ಬೇರೆ ಪ್ರಾಂತಗಳಿಂದ ಸಾವಿರಾರು ಜನ ಪ್ರತಿನಿಧಿಗಳು ಲಕ್ಷಾಂತರ ಜನರು ಪ್ರೇಕ್ಷಕರಾಗಿಯೂ ನಾಗಪುರಕ್ಕೆ ಬರುವದರಿಂದ ಇದೆ ಕಾಲಕ್ಕೇನೇ ಹಿಂದು ಔದ್ಯೋಗಿಕ ಕಲಾಪ್ರದರ್ಶನವನ್ನೇರ್ಪಡಿಸಬೇಕೆಂದು ಹಿಂದು ಮಹಾಸಭೆಯ ಕಾರ್ಯಕರ್ತರು ನಿಶ್ಚಯಿಸಿದ್ದಾರೆ.

ಈ ಔದ್ಯೋಗಿಕ ಕಲಾಪ್ರದರ್ಶನವು ಡಿಶೆಂಬರ ತಿಂಗಳ ೨೦ ನೇ ತಾರೀಖಿನ ದಿವಸ ತೆರೆಯಲ್ಪಟ್ಟು ಮುಂದೆ ೧೫ ದಿವಸಗಳವರೆಗೆ ನಡೆಯುತ್ತದೆ. ಪ್ರದರ್ಶನದ ಕಾಲಕ್ಕೆ ಬೇರೆ ಬೇರೆ ಮನೋರಂಜಕವಾದ ಕಾರ್ಯಕ್ರಮ ಜರಗುವಂತೆ ಪ್ರದರ್ಶನ ಮಂಡಳದವರು ಏರ್ಪಡಿಸಿಕೊಂಡಿದ್ದಾರೆ. ದೇಶೀಯ ಆಟಗಳಿಗೆ ಪ್ರೋತ್ಸಾಹ ಕೊಡುವುದಕ್ಕಾಗಿ ಹುಡುತುತು, ನಮಸ್ಕಾರ, ಶಸ್ತ್ರಪ್ರಯೋಗ ಮೊದಲಾದ ಕಾರ್ಯಕ್ರಮಗಳನ್ನಿಟ್ಟುಕೊಂಡಿದ್ದಾರೆ.

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

## The Sharana Sandesh.

ನ್ಯಾಯನಿಷ್ಠುರ, ದಾಕ್ಷಿಣ್ಯಪರ ನಾನಲ್ಲ. ಲೋಕವಿರೋಧಿ, ಶರಣನಾರಿಗೂ ಅಂಜುವನಲ್ಲ !
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ.

ಪ್ರತಿ ಸೋಮವಾರವೂ ಪ್ರಕಟವಾಗುವುದು.

ಸಂಪುಟ ೪ | ಆಲಮಟ್ಟಿ- ಸೋಮವಾರ ತಾರೀಖು ೧೮ ನೆಯ ಡಿಶೆಂಬರ್ ೧೯೩೮. | ಸಂಚಿಕೆ ೨೭

ಜನಸೇವೆಯೇ ದೇವರಸೇವೆ.

# ವಂದೇ ಮಾತರಂ ಗೀತೆಗೆ ಪ್ರತಿಬಂಧ!

ನಿಜಾಮ ಸರಕಾರವು ಯಾವ ಸರಕಾರಿ ಸಂಸ್ಥೆಗಳಲ್ಲಿಯೂ
'ವಂದೇ ಮಾತರಂ' ಗೀತೆಯನ್ನು ಹೇಳಕೂಡದಾಗಿ
ಅಪ್ಪಣೆಯನ್ನು ಮಾಡಿತು !

---

'ತುಕಾರಾಮ' ಸಿನೇಮಾದಲ್ಲಿ 'ವಂದೇ ಮಾತರಂ' ಎಂದೂ
'ಗೃಹಲಕ್ಷ್ಮಿ' ಸಿನೇಮಾದಲ್ಲಿ 'ಗಾಂಧೀಕಿ ಜೈ' ಎಂದೂ
ಇರುವುದರಿಂದ
ನಿಜಾಮ ರಾಜ್ಯದಲ್ಲಿ ಇವುಗಳ ಆಟವನ್ನು
ನಿಲ್ಲಿಸಿದರು.

---

ಹೈದರಾಬಾದ ಸತ್ಯಾಗ್ರಹಕ್ಕೆ ಕನ್ನಡ ನಾಡಿನಿಂದ
ಅನೇಕರು ಇಷ್ಟರಲ್ಲಿಯೇ
ಹೊರಡುವರು.

ದೇಹವೇ ದೇವಾಲಯವು.




# ಶರಣ ಸಂದೇಶ

THE SHARANA SANDESHA.






ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೮ | ಆಲಮಟ್ಟಿ- ಸೋಮವಾರ ತಾರೀಖು ೧೨ ನೆಯ ಡಿಶೆಂಬರ ೧೯೩೮. | ಸಂಚಿಕೆ.೨೭


# ಮಹತ್ವದ ಸುದ್ದಿಗಳು.

—ಕೊಲ್ಹಾಪುರ ಸಂಸ್ಥಾನದಲ್ಲಿಯೂ ಸಾರ್ವಜನಿಕ ಕಾರ್ಯನಿರ್ವಾಹಕರ ಮೇಲೆ ದಬ್ಬಾಳಿಕೆ ಪ್ರಾರಂಭವಾಯಿತು. ಕೊಲ್ಹಾಪುರ, ರಾಯಭಾಗ, ತಿರೋಳ ಈ ಮೂರು ಸ್ಥಳಗಳಲ್ಲಿ ೬ ಜನರನ್ನು ಸೆರೆಹಿಡಿದಿದ್ದಾರೆಂದು ಪ್ರಕಟವಾಗಿದೆ.

—ರಾಜಕೋಟ ಸತ್ಯಾಗ್ರಹವು ಭೀಕರ ಸ್ಥಿತಿಯನ್ನು ಹೊಂದಿದೆ. ಸರದಾರ ವಲ್ಲಭಭಾಯಿ ಪಟೇಲರ ಮಗಳು ಮಣಿಬೆನ್ ಮೊದಲಾದ ವೀರ ಮಹಿಳೆಯರು ಕೂಡಾ ಸತ್ಯಾಗ್ರಹದಲ್ಲಿ ಸೇರಿದ್ದಾರೆ.

—ರಾಷ್ಟ್ರಪತಿ ಸುಭಾಷಚಂದ್ರ ಬೋಸರು ಭಾರತ ಉಪಮಂತ್ರಿಗಳಾದ ಲೆ. ಕ. ಮ್ಯೂರ್‌ಹೆಡ್‌ರ ಸಂಗಡ ಕಲಕತ್ತಾದ ಸರಕಾರಿ ಭವನದಲ್ಲಿ ರಾಜಕಾರಣವನ್ನು ಕುರಿತು ಸಂಭಾಷಣೆ ನಡೆಸಿದರೆಂದೂ ಆ ಕಾಲಕ್ಕೆ ಬಂಗಾಲದ ಗವ್ಹರ್ನರರೂ ಇದ್ದರೆಂದೂ ಪ್ರಕಟವಾಗಿದೆ.

—ಮೇವಾಡ ಸಂಸ್ಥಾನದಲ್ಲಿಯ ಸತ್ಯಾಗ್ರಹವೂ ಹೆಚ್ಚುತ್ತಲಿದೆ. ಕಾಂಕ್ರೋಲಿ ಎಂಬಲ್ಲಿ ಪ್ರಜಾಮಂಡಲದ ಕೆಲಸಮಾಡಿದರೆಂದು ೩೨ ಜನರನ್ನು ಸೆರೆಹಿಡಿದಿದ್ದಾರೆ.

—ಅಸ್ಟ್ರೇಲಿಯಾ ಮೊದಲಾದ ಪರದೇಶಗಳಿಂದ ಬರುವ ಗೋದಿಯ ಮೇಲೆ ಒಂದು ಟನ್ನಿಗೆ ೧-೮-೦ ರೂ. ಗಳ ಪ್ರಕಾರ ಸುಂಕವನ್ನು ಹೇರುವುದಾಗಿ ಹಿಂದುಸ್ಥಾನ ಸರಕಾರದ ವಾಣಿಜ್ಯ ಶಾಖೆಯ ಮಂತ್ರಿಗಳು ದಿಲ್ಲಿ ಅಸೆಂಬ್ಲಿಯಲ್ಲಿ ತಿಳಿಸಿದರು.

—ಮದ್ರಾಸ್ ಅಸೆಂಬ್ಲಿಯಲ್ಲಿ ಮಲಬಾರ ದೇವಾಲಯ ಪ್ರವೇಶದ ಗೊತ್ತುವಳಿಯು ಗಾಂಧಿಯವರ ಜಯಜಯಕಾರದೊಂದಿಗೆ ತೀರ್ಮಾನವಾಯಿತು.

—ಮಾನ್ಯ ಮಂತ್ರಿವರ್ಯರಾದ ಖೇರರವರು ನಾಲ್ಕು ದಿನ ಕರ್ನಾಟಕದಲ್ಲಿ ಸಂಚರಿಸಿ ಬೆಳಗಾವಿಯಿಂದ ಪುಣೆಗೆ ಹೋಗುವಾಗ ಬಹು ದಿನ ಪರದೇಶಕ್ಕೆ ಹೋದ ಮಗನು ತಾಯಿಯನ್ನು ಕಂಡು ಸಂತೋಷಿಸುವಂತೆ ನಾನು ಕರ್ನಾಟಕವನ್ನು ಸಂಚರಿಸಿ ಸಂತೋಷಪಟ್ಟೆನೆಂದು ಹೇಳಿದರು.

—ಮಾನ್ಯ ಖೇರರು ಕುಂದಗೋಳ ಸ್ಟೇಶನ್ನಿನ ಮೇಲೆ ೫ ನಿಮಿಷ ಭಾಷಣ ಮಾಡಿ ತಾವು ಚಿಕ್ಕಂದಿನಲ್ಲಿ ಓದಿದ ಶಾಲೆ, ಆಡಿದ ಸ್ಥಳಗಳನ್ನು ಕಂಡು ಸಂತೋಷ ವ್ಯಕ್ತಗೊಳಿಸಿದರು. ಶಾಲೆಯ ಮತ್ತು ತಮ್ಮ ಮನೆಯ ಭಾವಚಿತ್ರ ಕಳಿಸಲು ತಿಳಿಸಿದರು.

—ಮರಾಠಿ ಮಾತೃಭಾಷೆಯುಳ್ಳ ಬ್ರಾಹ್ಮಣರನ್ನು ಪೋಸ್ಟ ಮತ್ತು ತಂತೀ ಶಾಖೆಗಳಲ್ಲಿ ಸೇರಿಸಿಕೊಳ್ಳಲು ೩೮ ವರುಷಗಳಿಂದ ಇದ್ದ ಪ್ರತಿಬಂಧವು ಈಗಿನ ಕಾಂಗ್ರೆಸ್ ಸರಕಾರದಿಂದ ದೂರಾಯಿತು.

—ಹಿಂದು ಮಹಾಸಭಾಧ್ಯಕ್ಷ ಬ್ಯಾ. ಸಾವರಕರರಿಗೆ ಠಾಣೆ ಮುನಸಿಪಾಲ್ಟಿಯವರು ಮಾನಪತ್ರವನ್ನು ಅರ್ಪಿಸಬೇಕೆಂದು ಬಹುಮತದಿಂದ ನಿರ್ಣಯಿಸಿದರು. ಅನುಕೂಲು ೧೭ ಪ್ರತಿಕೂಲು ೧೦ ಮತಗಳು ದೊರೆತವು. ಪ್ರತಿಕೂಲು ಮತ ಕೊಟ್ಟವರೆಲ್ಲ ಕಾಂಗ್ರೆಸ್ ಪಕ್ಷದವರು.

—ಗಾಂಧೀಜಿಯವರು ಯಹುದಿ ಜನಗಳ ಸಂಬಂಧವಾಗಿ ಜರ್ಮನ್ ಸರಕಾರದ ಧೋರಣವನ್ನು ನಿಷೇಧಿಸಿದ್ದಕ್ಕೆ ಜರ್ಮನ್ ಪತ್ರಿಕೆಗಳು ಗಾಂಧೀಜಿಯವರನ್ನು ನಿಂದಿಸಹತ್ತಿವೆ.

—ಕಾಲೇಜಿನ ವಿದ್ಯಾರ್ಥಿಗಳಿಗೂ ಬೇರೆ ನಾಗರಿಕರಿಗೂ ಯುದ್ಧ ವಿದ್ಯೆ ಕಲಿಸಬೇಕೆಂದು ಮದ್ರಾಸ್ ಅಸೆಂಬ್ಲಿಯಲ್ಲಿ ಕಾಂಗ್ರೆಸ್ ಪಕ್ಷದ ಸದಸ್ಯರು ತಂದ ಒಂದು ಗೊತ್ತುವಳಿಯು ಸರ್ವಾನುಮತದಿಂದ ಒಪ್ಪಿಗೆಯಾಯಿತು.

—ನಾಗಪುರದಲ್ಲಿ ಕೂಡುವ ಅಖಿಲ ಭಾರತ ಹಿಂದು ಮಹಿಳೆಯರ ೩ ನೆಯ ಮಹಾಸಭೆಗೆ ಸೌ|| ಗಿರಿಜಾದೇವಿ ಕೇಳಕರ ಇವರು ಅಧ್ಯಕ್ಷರಾಗಿದ್ದಾರೆ.

# ನಿಜಾಮ ರಾಜ್ಯದ ಶಿಕ್ಷಣ ಸಂಸ್ಥೆಗಳಲ್ಲಿ ಮುಸಲ್ಮಾನರ ಪ್ರಾಬಲ್ಯ.

| ಸಂಸ್ಥೆಗಳು | ಒಟ್ಟು ಅಧಿಕಾರಿಗಳು | ಮುಸಲ್ಮಾನರು | ಹಿಂದುಗಳು | ಒಟ್ಟು ಸಂಬಳ ರೂ. | ಮುಸಲ್ಮಾನರ ಸಂಬಳ ರೂ. | ಹಿಂದುಗಳ ಸಂಬಳ ರೂ. |
|---|---|---|---|---|---|---|
| (೧) ಡಾಯರೆಕ್ಟರ್ ಶಾಖೆ. | ೫ | ೪ | ೧ | ೪೮೦೦ | ೪೧೩೫ | ೬೬೫ |
| (೨) ಡಾಯರೆಕ್ಟರ್ ಶಾರೀರಕಶಿಕ್ಷಣ | ೧ | ೧ | ೦ | ೧೫೨೫ | ೧೫೨೫ | ೦ |
| (೩) ಶಾಲಾ ಇನಸ್ಪೆಕ್ಟರ್ | ೫ | ೫ | ೦ | ೪೮೧೦ | ೪೮೧೦ | ೦ |
| (೪) ಸ್ತ್ರೀ ಇನಸ್ಪೆಕ್ಟರ್ | ೧ | ೧ | ೦ | ೧೦೦೦ | ೧೦೦೦ | ೦ |
| (೫) ಡಿ॥ ಇನಸ್ಪೆಕ್ಟರ್ | ೧೬ | ೧೩ | ೪ | ೫೬೨೫ | ೪೨೫೫ | ೧೬೫೦ |
| (೬) ನಿಜಾಮ ಕಾಲೇಜ | ೧೬ | ೯ | ೭ | ೯೨೯೫ | ೩೮೮೫ | ೩೭೯೫ |
| (೭) ಮದರಸೆ ಅಲಿಅ | ೨ | ೨ | ೦ | ೧೦೫೦ | ೧೦೫೦ | ೦ |
| (೮) ಉಸ್ಮಾನಿಯಾ ಯು. ಆಫೀಸ್ | ೩ | ೩ | ೦ | ೧೯೩೦ | ೧೯೩೦ | ೦ |
| (೯) ಟ್ರಾನ್ಸ್ಲೇಶನ್ ಬ್ಯೂರೋ | ೨೧ | ೨೦ | ೧ | ೧೦೫೧೫ | ೧೦೦೯೦ | ೪೨೫ |
| (೧೦) ಉ. ಯು. ಕಾಲೇಜ | ೭೫ | ೫೬ | ೧೧ | ೩೯೦೦೦ | ೩೧೬೯೦ | ೫೬೧೦ |
| (೧೧) ಉ. ಮೆ. ಕಾಲೇಜ | ೧೫ | ೬ | ೬ | ೮೦೦೨ | ೩೯೫೦ | ೩೩೩೨ |
| (೧೨) ಇಂಜನಿಯರಿಂಗ್ ಕಾಲೇಜ | ೯ | ೮ | ೧ | ೪೩೫೦ | ೩೮೨೫ | ೫೨೫ |
| (೧೩) ಸಿಟಿ ಇಂಟರ್ ಕಾಲೇಜ | ೮ | ೬ | ೧ | ೨೪೯೫ | ೨೨೬೫ | ೨೯೫ |
| (೧೪) ಝುನಾನಾ | ೫ | ೫ | ೦ | ೧೮೨೫ | ೧೮೨೫ | ೦ |
| (೧೫) ಬೇರೆ ಶಾಲೆ ಕಾಲೇಜುಗಳು | ೯೦ | ೬೨ | ೧೮ | ೩೬೫೯೫ | ೨೮೪೬೫ | ೬೦೫೦ |
| ಒಟ್ಟು | ೨೭೭ | ೨೧೬ | ೫೩ | ೧೩೨೧೧೮ | ೧೦೮೮೯೦ | ೨೩೬೦೨ |

ಕೆಲವು ಅಧಿಕಾರ ಸ್ಥಾನಗಳು ಬರಿದಾಗಿವೆ. ಕೆಲವು ಸ್ಥಾನಗಳ ಮೇಲೆ ಯುರೋಪಿಯನ್ ಮತ್ತು ಪಾರ್ಶಿಗಳು ಇದ್ದಾರೆ. ಆದರೆ ಅವರ ಸಂಖ್ಯೆ ಅತ್ಯಲ್ಪವಿರುವುದರಿಂದ ಇಲ್ಲಿ ಕೊಟ್ಟಿಲ್ಲ.

ಮುಖ್ಯಾಂಶ— ನಿಜಾಮ ರಾಜ್ಯದಲ್ಲಿ ಹಿಂದುಗಳು ೧೦೦ ಕ್ಕೆ ೮೫ ರಂತೆ ಇದ್ದಾರೆ. ಸರಕಾರದ ಬೊಕ್ಕಸಕ್ಕೆ ೧೦೦ ಕ್ಕೆ ೮೫ ರಷ್ಟಾದರೂ ಹಿಂದುಗಳು ಕಷ್ಟಪಟ್ಟು ದುಡಿದ ಹಣವೇ ಹೋಗುತ್ತದೆ. ಆದರೆ ಅದು ಅಧಿಕಾರಿಗಳ ಸಂಬಳದ ಮೂಲಕ ತಿರುಗಿಬರುವಾಗ ಮಾತ್ರ ಹಿಂದುಗಳಿಗೆ ೧೦೦ ಕ್ಕೆ ೧೫ ರಂತೆ ಮುಸಲ್ಮಾನರಿಗೆ ೮೫ ರಂತೆ, ತಿರುವುಮುರುವಾಗಿ ಬರುತ್ತದೆ.

# ವಿಶ್ವವೆಲ್ಲ ಆರ್ಯಮಯ.

ಆರ್ಯ ಸಮಾಜದವರು "ಕೃಣ್ವಂತೋ ವಿಶ್ವಮಾರ್ಯಮ್" ಎಂಬ ಋಗ್ವೇದದಲ್ಲಿಯ ವಾಕ್ಯವನ್ನು ಇತ್ತೀಚಿಗೆ ಹೆಚ್ಚಾಗಿ ಉಪಯೋಗಿಸುತ್ತಿದ್ದಾರೆ. ಇದೇ ತಮ್ಮ ಧ್ಯೇಯವೆಂದೂ ಅನೇಕರು ತಿಳಿದುಕೊಂಡಿರುವುದುಂಟು. ವಿಶ್ವವೆಲ್ಲ ಆರ್ಯಮಯ ಎಂದರೆ ಆರ್ಯ ಸಮಾಜದವರಿಂದ ತುಂಬುವಂತೆ ಮಾಡಬೇಕೆಂದೇ ಈ ಋಗ್ವೇದದ ಮಂತ್ರ ಮೂಲಕ ದೇವರು ತಮಗೆ ಅಪ್ಪಣೆಮಾಡಿದ್ದಾನೆಂದೇ ಇವರು ತಿಳಿದುಕೊಂಡಂತೆ ಕಾಣುತ್ತದೆ. ಅಂತೆಯೇ ಈ ಮಂತ್ರದ ಅರ್ಥವನ್ನು ಇವರು ಇದೇ ಪ್ರಕಾರ ಸಾರುತ್ತಿದ್ದಾರೆ.

ಶ್ರೀ. ಚಿಂತಾಮಣಿ ಗಣೇಶ ಕಾಶೀಕರ ವಾಙ್ಮಯ ಪಾರಂಗತ ಎಂ. ಎ. ಪುಣೆ ಇವರು ಈ ವೇದಮಂತ್ರದ ಅರ್ಥವನ್ನು ಕುರಿತು ಅತ್ಯಂತ ಮನನೀಯವಾದ ಒಂದು ಲೇಖನವನ್ನು ತಾ. ೨-೧೨-೩೮ ನೆಯ ಜ್ಞಾನಪ್ರಕಾಶ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಅದರ ಮುಖ್ಯಾಂಶವು ಕೆಳಗಿನಂತಿದೆ.—

"ಋಗ್ವೇದದ ೯ ನೆಯ ಮಂಡಲದಲ್ಲಿ ಒಂದು ಮಂತ್ರವು ಈ ಕೆಳಗಿನಂತಿದೆ—

ಇಂದ್ರಂ ವರ್ಧಂತೀ ಅಪ್ತುರಃ ಕೃಣ್ವಂತೋ ವಿಶ್ವ
ಮಾರ್ಯಮ್ ಅಪಘ್ನಂತಿ ಜರಾಣ್ಣೀಃ|| ೯-೬೩-೫.

ಋಗ್ವೇದದ ೯ ನೆಯ ಮಂಡಲದ ಈ ಮಂತ್ರವು ಸೋಮ ಸಂಬಂಧವಾದುದು. ಸೋಮ ವನಸ್ಪತಿಯ ರಸವನ್ನು ತೆಗೆದು ಅದನ್ನು ಯಜ್ಞದಲ್ಲಿ ಹಾಕಿ ದೇವತೆಗಳಿಗೆ ಅರ್ಪಿಸಬೇಕೆಂಬುದೇ ಈ ಮಂಡಲದಲ್ಲಿರುವ ಮುಖ್ಯ ವಿಷಯ. ಈ ಮಂತ್ರವು ಯಾವ ಸೂಕ್ತದಲ್ಲಿದೆಯೋ ಅದರ ದೇವತೆ ಪವಮಾನ (ಶುದ್ಧಗೊಳಿಸುವ) ಸೋಮ.

ಋಗ್ವೇದದಲ್ಲಿಯ ಅನೇಕ ಮಂತ್ರಗಳ ನಿಜವಾದ ಅರ್ಥವೇ ಆಗುವಂತಿಲ್ಲ. ಆದುದರಿಂದಲೇ ಅವುಗಳ ಅರ್ಥವನ್ನು ಅನೇಕರು ಅನೇಕ ಪ್ರಕಾರ ಮಾಡುತ್ತಿದ್ದಾರೆ. ಶ್ರುತಿಬೋಧ ಎಂಬ ಋಗ್ವೇದದ ಭಾಷ್ಯ ಗ್ರಂಥವನ್ನು ಕೈ. ಕೊಲ್ಹಟಕರ ಮೊದಲಾದವರು ಬರೆದಿದ್ದಾರಷ್ಟೆ. ಅದರಲ್ಲಿ ಅವರು ಈ ಮಂತ್ರದ ಅರ್ಥವನ್ನು ಈ ಕೆಳಗಿನಂತೆ ಮಾಡಿದ್ದಾರೆ.—

"ಈ ಸೋಮರಸವು ಇಂದ್ರನ ಮಹತ್ವವನ್ನು ಹೆಚ್ಚಿಸುವುದಾಗಿಯೂ ಜಾಗ್ರತೆ ಕಾರ್ಯಮಾಡುವುದಾಗಿಯೂ ಸರ್ವ ಜಗತ್ತು ಆರ್ಯಧರ್ಮಮಯವಾಗುವಂತೆ ಮಾಡುವುದಾಗಿಯೂ ಕೃಪಣ ದುಷ್ಟನನ್ನು ನಾಶಮಾಡುವುದಾಗಿಯೂ ಇದೆ."

ಸೋಮರಸವು ಜಗತ್ತೆಲ್ಲ ಆರ್ಯಧರ್ಮಮಯವಾಗುವಂತೆ ಹೇಗೆ ಮಾಡುವುದೆಂಬ ಪ್ರಶ್ನೆಯು ಸ್ವಾಭಾವಿಕವಾಗಿಯೇ ಉಂಟಾಗುವುದಿಲ್ಲವೆ? ಆ ರಸದಲ್ಲಿ ಅಂಥ ಯಾವ ಶಕ್ತಿಯಿದೆ?

ಕೃಣ್ವಂತೊ-ವಿಶ್ವ-ಆರ್ಯಮ್ ಎಂಬ ಈ ಮೂರು ಶಬ್ದಗಳಲ್ಲಿಯ ವಿಶ್ವ ಮತ್ತು ಆರ್ಯ ಎಂಬ ಎರಡು ಶಬ್ದಗಳ ವಿಕೃತ ಅರ್ಥವನ್ನು ಮಾಡಿಯೇ ಮೇಲಣ ಈ ಅಭಿಪ್ರಾಯವನ್ನು ವ್ಯಕ್ತಗೊಳಿಸಿದ್ದಾರೆ.

ವಿಶ್ವ ಎಂಬುದಕ್ಕೆ ಆಧುನಿಕ ಸಂಸ್ಕೃತದಲ್ಲಿ ಹೇಗೆ ಜಗತ್ತು ಎಂಬ ಅರ್ಥವಾಗುತ್ತದೆಯೋ ಹಾಗೆ ವೇದಕಾಲದ ಸಂಸ್ಕೃತ ಭಾಷೆಯಲ್ಲಿ ಅರ್ಥವಾಗುವುದಿಲ್ಲ. ವಿಶ್ವ ಎಂಬುದಕ್ಕೆ ಜಗತ್ತು ಎಂದು ಎಲ್ಲಿಯೂ ಅರ್ಥಮಾಡಿಲ್ಲ. ವಿಶ್ವ ಎಂಬುದಕ್ಕೆ ಸರ್ವ ಮತ್ತು ಪ್ರತ್ಯೇಕ ಎಂದೇ ಆ ಕಾಲದ ಅರ್ಥವಿದ್ದಿತು. ತಮ್ಮ ಮನಸ್ಸಿನ ಅಭಿಪ್ರಾಯವನ್ನು ಹೇಳುವುದಕ್ಕಾಗಿಯೇ ವಿಶ್ವ ಶಬ್ದಕ್ಕೆ ಜಗತ್ತು ಎಂದು ಈಗ ಅರ್ಥಮಾಡಿದ್ದಾರೆ.

ಇದೇ ಪ್ರಕಾರ ಆರ್ಯ ಎಂಬ ಶಬ್ದದ ಅರ್ಥವೂ ವಿಪರ್ಯಾಸವಾದುದು. ಆರ್ಯ ಶಬ್ದವು ವಿಶೇಷಣವಾಗಿ ಇದ್ದಾಗ ಮಾನಾರ್ಹ, ಶ್ರೇಷ್ಠ ಎಂಬುದಾಗಿಯೂ ನಾಮವಾಚಕವಿದ್ದಾಗ ಮಾನ್ಯ ಪುರುಷ ಅಥವಾ ಆರ್ಯ ಎಂಬ ಜಾತಿ ವಾಚಕವಾಗಿಯೂ ಅರ್ಥ ಮಾಡಲ್ಪಡುತ್ತಿತ್ತು. ಆರ್ಯ ಧರ್ಮ ಎಂದು ಎಲ್ಲಿಯೂ ಅದರ ಅರ್ಥ ಮಾಡಲ್ಪಟ್ಟಿಲ್ಲ. ವೇದಕಾಲದ ಆರ್ಯರು ಒಂದು ಧರ್ಮವನ್ನು ಅನುಸರಿಸಿಯೇ ಇದ್ದರು. ಅವರಿಗೆ ಅಫಗಾಣಿಸ್ಥಾನ, ಪಂಜಾಬ, ಮೊದಲಾದ ಸುತ್ತಲಿನ ಪ್ರದೇಶಗಳ ವಿನಾ ಬೇರೆ ಭಾಗಗಳ ಜ್ಞಾನವೇ ಇರಲಿಲ್ಲ. ಎಂದಮೇಲೆ ವಿಶ್ವದಲ್ಲೆಲ್ಲ ಆರ್ಯ ಧರ್ಮವನ್ನು ಸ್ಥಾಪಿಸಬೇಕೆಂಬ ಈಗಿನವರ ಕಲ್ಪನೆ ಅವರಲ್ಲಿ ಉಂಟಾಗುವುದಾದರೂ ಹೇಗೆ?

ಈ ವರೆಗಿನ ಅನೇಕ ವೇದಜ್ಞರು ಈ ಮಂತ್ರದ ಅರ್ಥವನ್ನು ಹೇಗೆ ಮಾಡಿರುವರೆಂಬುದನ್ನಾದರೂ ಸ್ವಲ್ಪ ನೋಡೋಣ.

ಸಾಯಣಾಚಾರ್ಯನು "ಸರ್ವಸೋಮನಿಗೆ ಕಲ್ಯಾಣವನ್ನುಂಟುಮಾಡುವ" ಎಂಬುದಾಗಿಯೂ, ವಿಲ್ಸನ್‌ನು "ನಮ್ಮ ಸಕಲ ಕೃತ್ಯಗಳನ್ನು ಕಲ್ಯಾಣಪ್ರದಮಾಡುವ" ಎಂಬುದಾಗಿಯೂ, ಗ್ರಿಫಿತ್‌ನು "ಪ್ರತ್ಯೇಕ ಶ್ರೇಷ್ಠಕಾರ್ಯಮಾಡುವ" ಎಂಬುದಾಗಿಯೂ, ಗ್ರಾಸ್‌ಮನ್‌ನು "ಆರ್ಯರು ಯಾವುದನ್ನು ಅಪೇಕ್ಷಿಸುವರೋ ಅದನ್ನು ಕೊಡುವ" ಎಂಬುದಾಗಿಯೂ, ಲುಡ್‌ವಿಗ್‌ನು "ಕೇವಲ ಮಾನಾರ್ಹವಾದುದನ್ನೇ ಉಂಟುಮಾಡುವ" ಎಂಬುದಾಗಿಯೂ ಅರ್ಥಮಾಡಿದ್ದಾರೆ.

ವಿಶ್ವವೆಲ್ಲಾ ಆರ್ಯಧರ್ಮಮಯ ಮಾಡಬೇಕೆಂಬ ಅರ್ಥವನ್ನು ಯಾವ ವೇದಜ್ಞರೂ ಮಾಡಿಲ್ಲ. ಆದಕಾರಣ ಈಗ ತಮ್ಮ ಇಚ್ಛೆ ಇದ್ದುದನ್ನು ವೇದ ವಾಕ್ಯದಲ್ಲಿ ಹೀಗೆ ಸೇರಿಸಿ ಹೇಳುವುದು ಯುಕ್ತವಲ್ಲ. ಆಗಿನ ಋಷಿಗಳಿಗೆ ಆ ಮಂತ್ರದಿಂದ ಯಾವ ಅರ್ಥವನ್ನು ಸೂಚಿಸಬೇಕಾಗಿದ್ದಿತೋ ಅದು ಅವರಿಗೇ ಗೊತ್ತು. ಈಗ ಅವರ ಅಭಿಪ್ರಾಯವು ಹೀಗೆಯೇ ಇದ್ದಿತೆಂದು ತಮ್ಮ ಇಷ್ಟದಂತೆ ಹೇಳುವುದು ಅನುಚಿತವಾದುದು."

---

## ಖಾಕಸಾರ ಪಕ್ಷದ ಸಂಘಟನೆ.

ನಿಜಾಮ ರಾಜ್ಯದಲ್ಲಿ ಖಾಕಸಾರ ಎಂಬ ಒಂದು ಮುಸಲ್ಮಾನ್ ಪಕ್ಷವು ಪ್ರಚಂಡ ಸಂಘಟನೆಯುಳ್ಳದ್ದಾಗಿ ಹಿಂದುಗಳ ಮೇಲೆ ಆಗಾಗ್ಗೆ ಅತ್ಯಾಚಾರ ನಡೆಸುತ್ತಿರುವ ಸಂಗತಿ ಸರ್ವಶ್ರುತವಷ್ಟೆ. ಈ ಪಕ್ಷವು ಕಳೆದ ೨೬ ನೆಯ ತಾರೀಖಿನ ದಿನ ನಾಂದೇಡದಲ್ಲಿ ತನ್ನ ಶಕ್ತಿಯನ್ನು ಪ್ರದರ್ಶಿಸಿತು.

ಆ ದಿನ ಸಾಧಾರಣ ೨|| ಸಾವಿರ ಮುಸಲ್ಮಾನರು ಕೈಯಲ್ಲಿ ಕತ್ತಿಯನ್ನು ಹಿಡಿದುಕೊಂಡು ನಾಂದೇಡದಲ್ಲಿ ಮೆರವಣಿಗೆ ಹೊರಟಿದ್ದರು. ಬಹು ಜನರು ಮದ್ದು ತುಂಬಿದ ಬಂದೂಕನ್ನೂ ಹಿಡಿದುಕೊಂಡಿದ್ದರು. "ನಿಜಾಮ ಝಿಂದಾಬಾದ" "ಖಾಕಸಾರ ಪಾರ್ಟಿ ಝಿಂದಾಬಾದ" ಹಿಂದು ಸಭಾ, ಸ್ಟೇಟ್ ಕಾಂಗ್ರೆಸ್ ಸತ್ಯಾಗ್ರಹ ಮುರ್ದಾಬಾದ ಎಂದು ಕೂಗುತ್ತಾ ಅಲ್ಲಲ್ಲಿ ನಿಂತು ಟೊಂಬೆಗೆ ಪ್ರೋತ್ಸಾಹಿಸುವ ಭಾಷಣಮಾಡುತ್ತಾ ಇದ್ದರು. ಈ ಮೆರವಣಿಗೆಯಲ್ಲಿ ಪೋಲೀಸರೂ ಮುಸಲ್ಮಾನ್ ವಕೀಲ ವ್ಯಾಪಾರಿಗಳೂ ಇದ್ದರು. ಮರುದಿನದ ಈ ಮೆರವಣಿಗೆಯ ಕಾಲಕ್ಕೆ ಹಿಂದು ಅಂಗಡಿಕಾರರು ಅಂಜಿ ಅಂಗಡಿಗಳನ್ನು ಮುಚ್ಚಿದ್ದರು.

# ಹೈದರಾಬಾದ ಸಂಸ್ಥಾನದ ಅಂತರಂಗ.

## ನಾಗರಿಕ ಸ್ವಾತಂತ್ರ್ಯದ ಅಪಹರಣ!

### ನಿಜಾಮ ಸರಕಾರದ ನಿರಂಕುಶ ಪ್ರಭುತ್ವ.

(ಕೆ. ಪಿ. ಸಿ. ಸಿ. ಸಂಸ್ಥಾನ ಸಮಿತಿಯ ಪ್ರಕಟಣಾಧಿಕಾರಿಗಳಿಂದ.)

ಹೈದರಾಬಾದ ಸಂಸ್ಥಾನದಲ್ಲಿ ಸತ್ಯಾಗ್ರಹ ಚಳವಳಿಯು ಶುರುವಾಗಿ ಒಂದು ತಿಂಗಳ ಮೇಲಾಯಿತು. ಜವಾಬದಾರಿ ಸರಕಾರವು ಸಿಗುವ ವರೆಗೆ ಸುಮ್ಮನೆ ಕೂಡುವುದಿಲ್ಲೆಂದು ಪ್ರತಿಜ್ಞೆ ಮಾಡಿರುವ ನಿಜಾಮ ಪ್ರಜೆಗಳು ಸಂಸ್ಥಾನ ಕಾಂಗ್ರೆಸ್ಸಿನ ನಾಯಕತ್ವದಲ್ಲಿ ಘೋರ ಹೋರಾಟವನ್ನು ಹೂಡಿರುವರು. ಹರಿಪುರದಲ್ಲಿ ಕಾಂಗ್ರೆಸ್ಸು ಸಂಸ್ಥಾನಗಳ ಬಗ್ಗೆ ತಟಸ್ಥವೃತ್ತಿಯ ಠರಾವನ್ನು ಪಾಸುಮಾಡಿದ್ದರಿಂದಲೇ ಸಂಸ್ಥಾನ ಪ್ರಜೆಗಳು ಎಚ್ಚತ್ತು ತಮ್ಮ ಉದ್ಧಾರವಾಗಬೇಕಾದರೆ ಜವಾಬದಾರಿ ಸರಕಾರವೇ ಬೇಕೆಂದು ಭಾವಿಸಿ ಅದನ್ನು ಪಡೆಯಲು ಸ್ವಸಾಮರ್ಥ್ಯದಿಂದ ಹೋರಾಡುತ್ತಿರುವರು. ಮೈಸೂರ ತ್ರಾವಣಕೋರ, ರಾಜಕೋಟ, ಧೇನಕನಾಲ, ಬಡೋದೆ, ಹೈದರಾಬಾದ ಮೊದಲಾದ ಸಂಸ್ಥಾನಗಳಲ್ಲಿ ಇಂದು ನಡೆಯುತ್ತಿರುವ ಚಳವಳಿಗಳು ನಿಜವಾಗಿಯೂ ಅತ್ಯಂತ ಮಹತ್ವದ್ದಾಗಿವೆ. ಈ ಚಳವಳಿಗಳು ಆಯಾ ಸಂಸ್ಥಾನದ ಭವಿತವ್ಯವನ್ನೇ ಬದಲಾಯಿಸುವವಲ್ಲದೆ ಹಿಂದುಸ್ಥಾನದ ಭಾವೀ ಪರಿಸ್ಥಿತಿಯ ಮೇಲೆಯೂ ವಿಶೇಷ ಪರಿಣಾಮವನ್ನುಂಟುಮಾಡುವವು.

**ನಿಜಾಮ ಕರ್ನಾಟಕ.**

ಸದ್ಯಕ್ಕೆ ನಾವು ಹೈದರಾಬಾದ ಸಂಸ್ಥಾನದ ಅಂತರಂಗವನ್ನು ಹೊಕ್ಕು ಅಲ್ಲಿ ಏನು ನಡೆಯುತ್ತಿದೆಯೆಂಬುದನ್ನು ಸ್ವಲ್ಪ ನೋಡೋಣ ಹೈದರಾಬಾದ ಸಂಸ್ಥಾನವು ದಕ್ಷಿಣ ಹಿಂದುಸ್ಥಾನದ ಒಂದು ದೊಡ್ಡ ಸಂಸ್ಥಾನವು. ಇದರ ವಿಸ್ತಾರವು ೮೨,೬೯೮ ಚೌ. ಮೈಲುಗಳಿರುವುದು. ಇಂಗ್ಲಂಡ ಮತ್ತು ಆಯರ್ಲಂಡ ದೇಶಗಳನ್ನು ಒಟ್ಟಿಗೆ ಕೂಡಿಸಿದರೆ ಆಗುವಷ್ಟು ಪ್ರದೇಶವು ಹೈದರಾಬಾದ ಸಂಸ್ಥಾನದಲ್ಲಿರುವದು. ಇಲ್ಲಿನ ಜನಸಂಖ್ಯೆ ೧೯೩೩ ನೇ ಜನಗಣತಿಯ ಪ್ರಕಾರ ೧೪೪,೩೬,೧೪೮ ಇರುತ್ತದೆ. ಭಾಷಾಮಾನದಿಂದ ಸಂಸ್ಥಾನವನ್ನು ೧ ಕರ್ನಾಟಕ. ೨ ಮರಾಠವಾಡಾ. ೩ ತೆಲಂಗಾಣಾ ಎಂದು ಮೂರು ಭಾಗಗಳನ್ನಾಗಿ ಮಾಡಬಹುದು. ಆಯಾ ವಿಭಾಗದಲ್ಲಿ ಈ ಕೆಳಗೆ ಕಂಡಂತೆ ಜನರಿರುವರು.

| | |
|---|---|
| ಕನ್ನಡಿಗರು | ೧೬,೨೦,೯೪೮ |
| ತೆಲುಗರು | ೬೯೭೨,೫೩೪ |
| ಮಹಾರಾಷ್ಟ್ರರು | ೩,೭೫೬,೭೫೩ |
| ಮುಸಲ್ಮಾನರು | ೧೫೦,೭೭೨ |

ರಾಯಚೂರ ಮತ್ತು ಕಲಬುರ್ಗಿ ಜಿಲ್ಲೆಗಳೂ ಬೀದರ ಜಿಲ್ಲೆಯ ರಾಜೂರು, ಚಿಂಚೋಳಿ, ಚಿಟಗುಪ್ಪಿ, ತಾಲೂಕುಗಳೂ ಕೊಪ್ಪಳ ಮಾದಿನೂರ, ಎಲಬುರ್ಗಿ, ಕುಕನೂರು, ಇಟಗಿ, ಆನೆಗುಂದಿ ಮೊದಲಾದ ಜಹಗೀರುಗಳೂ ರಾಮದುರ್ಗ, ಗುಡಗುಂಟಿ, ಗದ್ವಾಲ, ತಳವಾರಗೇರಿ, ಹನಮಸಾಗರ ಮೊದಲಾದ ಸಂಸ್ಥಾನಗಳೂ ಸಂಪೂರ್ಣವಾಗಿ ಕರ್ನಾಟಕ ದೇಶದಲ್ಲಿ ಸೇರುತ್ತವೆ. ಇದಲ್ಲದೆ ಉಸ್ಮಾನಾಬಾದ ಜಿಲ್ಲೆಯ ಅವರಂಗಾಬಾದ, ಬೀಡ, ನಾಂದೇಡ, ಆದಿಲಾಬಾದಗಳೂ ನಿಜಾಮಾಬಾದ ಜಿಲ್ಲೆಯ ಮಹಬೂಬನಗರ, ಅತರಾಫಬಲ್ದಾ ಜಿಲ್ಲೆಗಳಲ್ಲಿಯೂ ಸಾವಿರಾರು ಕನ್ನಡಿಗರಿದ್ದಾರೆ. ಮರಾಠವಾಡ ಮತ್ತು ತೆಲಂಗಾಣಗಳ ಜನರಂತೆಯೇ ಕನ್ನಡಿಗರೂ ನಿಜಾಮ ಸರಕಾರದ ತಾಳಗೆಟ್ಟ ಆಡಳಿತೆಗೆ ಗುರಿಯಾಗಿರುವದರಿಂದ ಈ ಲೇಖನದಲ್ಲಿ ನಾನು ನಿಜಾಮ ಕನ್ನಡಗರೆಂದು ಪ್ರತ್ಯೇಕವಾಗಿ ಉದ್ದೇಶಿಸದೆ ನಿಜಾಮ ಪ್ರಜೆಗಳೆಂದೇ ಉಲ್ಲೇಖಿಸಿ ಹೈದರಾಬಾದ ಸಂಸ್ಥಾನದ ಅಂತರಂಗದ ಭಯಾನಕ ದೃಶ್ಯಗಳನ್ನು ತೋರಿಸಲು ಪ್ರಯತ್ನಪಡುವೆನು.

**ವಿಚಿತ್ರ ಆಡಳಿತೆ.**

ಹೈದರಾಬಾದದ ಆಡಳಿತೆಯು ಬಹಳ ವಿಚಿತ್ರವಾಗಿರುವದೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಇಲ್ಲಿ ನಿಜಾಮ ಸಾಹೇಬರು ಅರಸರಾಗಿದ್ದರೂ ಸಂಸ್ಥಾನದ ಆಡಳಿತೆಯು ದಿವಾಣರ ಮೂಲಕವಾಗಿಯೇ ನಡೆಯುತ್ತದೆ. ಮಂತ್ರಿಮಂಡಲದ ಪದ್ಧತಿಯು ೧೯೯೨ ರಲ್ಲಿ ಆಚರಣೆಗೆ ತರಲ್ಪಟ್ಟರೂ ಮಂತ್ರಿಗಳೆಲ್ಲರೂ ನಿಜಾಮರಿಂದಲೇ ಆರಿಸಲ್ಪಡತಕ್ಕವರು. ಮೇಲಾಗಿ ಮಂತ್ರಿಮಂಡಲವು ಕೇವಲ ಸಲಹಾ ಮಂಡಲವು ಕಾಯಿದೆಗಳನ್ನು ಮಾಡುವ ಅಧಿಕಾರವು ಕಾಯದೇಶೀರ ರೀತಿಯಲ್ಲಿ ಇದಕ್ಕೆ ಇಲ್ಲ. ೧೮೯೪ ರಲ್ಲಿ ಲೆಜಿಸ್ಲೇಟಿವ್ಹ ಕೌನ್ಸಿಲವು ರಚಿಸಲ್ಪಟ್ಟಿತು. ಆದರಲ್ಲಿ ೧೫ ಜನ ಸದಸ್ಯರಿರುವರು. ಅವರಲ್ಲಿ ೬ ಜನರು ಸರಕಾರಿ ಅಧಿಕಾರಿಗಳೂ ೩ ಜನ ಮಂತ್ರಿಗಳೂ ೬ ಜನ ನವಾಬ-ಜಹಾಗೀರದಾರರೂ ಇರುತ್ತಾರೆ. ಈ ಕೌನ್ಸಿಲವು ವರ್ಷಕ್ಕೆ ಒಂದು ಸರ್ತಿ, ಅದೂ ಒಂದೆರಡು ದಿನಗಳ ಮಟ್ಟಿಗೆ ಕೂಡುವುದು. ನಿಜಾಮರ ಸಮ್ಮತಿಯಿಲ್ಲದೆ ಒಂದು ಸೂಚನೆಯೂ ಇಲ್ಲಿ ಚರ್ಚೆಗೆ ಬರುವುದಿಲ್ಲ. ಎಷ್ಟೋ ಸಲ ಅನೇಕ ಕಾಯದೆಗಳೂ ಕೌನ್ಸಿಲಕ್ಕೆ ಬರುವದಕ್ಕೆ ಮೊದಲೇ ಆಗುತ್ತವೆ. ಸಂಸ್ಥಾನಕ್ಕೆ ಸುಮಾರು ೮೪೨೧೦೦೦ ರೂ. ಉತ್ಪನ್ನವಿದೆ. ೭೪೧೩೦೦೦೦ ರೂ. ಖರ್ಚಿದೆ, ನಿಜಾಮರ ಮತ್ತು ರಾಜಕುಮಾರರ ಸಲುವಾಗಿ ಪ್ರತಿವರ್ಷ ೬೬ ಲಕ್ಷ ರೂಪಾಯಿಗಳನ್ನು ಕೊಡಲಾಗುವದು. ಇದಲ್ಲದೆ ಕೋಟ್ಯಾಂತರ ರೂ. ಬಾಳುವ ಖಾಸಗಿ ಜಹಗೀರುಗಳು ಅವರಿಗೆ ಕೊಡಲ್ಪಟ್ಟವೆ. ಸಂಸ್ಥಾನದಲ್ಲಿ ಸ್ಥಾನಿಕ ಸ್ವರಾಜ್ಯದ ನೆರಳು ಸಹ ಇಲ್ಲ ಅಲ್ಲಲ್ಲಿ ಲೋಕಲ ಕಮಿಟಿಗಳೆಂಬವು ಕೆಲಸ ಮಾಡುತ್ತಿದ್ದರೂ ಅವುಗಳಲ್ಲಿ ಅಧಿಕಾರಿಗಳೇ ತುಂಬಿರುವರು.

ನ್ಯಾಯಖಾತೆಯು ಸರಕಾರದ ಒಂದು ಭಾಗವೇ ಆಗಿರುವದರಿಂದ ಅನೇಕ ಸಮಯದಲ್ಲಿ ನ್ಯಾಯ ಸಿಗುವದು ಬಹಳ ಕಷ್ಟವಾಗುವದು. ಹೈದರಾಬಾದ ಸಂಸ್ಥಾನದಲ್ಲಿ ೧೨೭೦೩೫೦೦ ಹಿಂದುಗಳೂ ೧೫೩೪೩೬ ಮುಸಲ್ಮಾನರೂ ಇದ್ದಾರೆ. ಆದರೆ ಸರಕಾರಿ ಅಧಿಕಾರಿವರ್ಗದಲ್ಲಿ ಅವರವರ ಪ್ರಾತಿನಿಧ್ಯವು ಆಶ್ಚರ್ಯ ಜನಕವಾಗಿದೆ. ಒಂದೇ ಜಾತಿಯವರಿಗೆ ಅಧಿಕಾರಿಗಳ ಗುತ್ತಿಗೆ ಕೊಡಲ್ಪಟ್ಟಂತಿರುವದು. ಈ ಕೆಳಗಿನ ಅಂಕೆ ಸಂಖ್ಯೆಗಳಿಂದ ಈ ಸಂಗತಿಯು ಹೆಚ್ಚು ಸ್ಪಷ್ಟವಾಗುವದು.

(೧೫ ನೇ ಪುಟಕ್ಕೆ ನೋಡಿ.)

# ಮಾನ್ಯ ಮಂತ್ರಿವರ್ಯರ ಮನನೀಯ ಅಭಿಪ್ರಾಯ.

[ಮಾನ್ಯ ಮುಖ್ಯ ಮಂತ್ರಿಗಳಾದ ಜೇರರವರು ಕರ್ನಾಟಕದ ಸಂಚಾರದಲ್ಲಿ ವ್ಯಕ್ತಗೊಳಿಸಿದ ಕೆಲವು ಅಭಿಪ್ರಾಯಗಳನ್ನು ಇಲ್ಲಿ ಕೊಡಲಾಗಿದೆ.]

## ಬೆಳಗಾವಿಯಲ್ಲಿ—

ಜಿಲ್ಲಾ ಬೋರ್ಡ ಭವನದಿಂದ ಮಂತ್ರಿಗಳು ಸಾರ್ವಜನಿಕ ಸಭೆಗೆ ಬಂದರು. ಸಭೆಯ ಅಧ್ಯಕ್ಷತೆಯನ್ನು ಶ್ರೀ. ಗಂಗಾಧರರಾವ ದೇಶಪಾಂಡೆಯವರು ವಹಿಸಿದ್ದರು. ಅಧ್ಯಕ್ಷರು ಮಂತ್ರಿಗಳ ಪರಿಚಯ ಮಾಡಿಕೊಡುವುದಕ್ಕಾಗಿ ಕನ್ನಡದಲ್ಲಿ ಮಾತನಾಡಲು ಪ್ರಾರಂಭಿಸಿದ ಕೂಡಲೆ ಮರಾಠಿ ಜನರು ಗೊಂದಲವನ್ನೆಬ್ಬಿಸಿದರು. ತಾವು ಮುಂದೆ ಮರಾಠಿಯಲ್ಲಿಯೂ ಮಾತನಾಡುವುದಾಗಿ ಶ್ರೀ. ಗಂಗಾಧರರಾಯರು ಎಷ್ಟು ಹೇಳಿದರೂ ಅವರು ಕೇಳಲಿಲ್ಲ. ಮರಾಠಿಯಲ್ಲಿ ಮಾತನಾಡಿದಾಗ ಕನ್ನಡಿಗರು ಸುಮ್ಮನಿದ್ದರೂ ಕನ್ನಡದಲ್ಲಿ ಮಾತನಾಡುವಾಗ ಮಾತ್ರ ಮರಾಠಿ ಜನರು ಮತ್ತೆ ಮತ್ತೆ ಗೊಂದಲವನ್ನೆಬ್ಬಿಸುತ್ತಿದ್ದರು.

ಇದನ್ನು ನೋಡಿ ಶ್ರೀ. ಗಂಗಾಧರರಾಯರು ಸಭಿಕರನ್ನುದ್ದೇಶಿಸಿ "ನೀವು ಮಾಡುತ್ತಿರುವುದೇನು? ನಾನು ಮರಾಠಿಯಲ್ಲಿ ಮಾತನಾಡುವಾಗ ಕನ್ನಡಿಗರು ಸುಮ್ಮನಿದ್ದಾರೆ. ಆದರೆ ನಾನು ಕನ್ನಡದಲ್ಲಿ ಮಾತನಾಡುವಾಗ ಮಾತ್ರ ನೀವು ಮರಾಠಿ ಜನರು ಗೊಂದಲ ಮಾಡುತ್ತಿರುವಿರಿ. ಇದರಿಂದ ಹೀನ ಮನೋವೃತ್ತಿಯ ಪ್ರದರ್ಶನವಾಗುವುದಲ್ಲದೆ ಮತ್ತೇನೂ ಆಗದು.

ಮುಖ್ಯ ಮಂತ್ರಿಗಳನ್ನು ನಾನು ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮೀಟಿಯ ಪರವಾಗಿ ಸ್ವಾಗತಿಸುತ್ತಿದ್ದೇನೆ. ಆದುದರಿಂದ ಕರ್ನಾಟಕದ ಅಧಿಕೃತ ಭಾಷೆಯಾದ ಕನ್ನಡದಲ್ಲಿಯೇ ನಾನು ಮಾತನಾಡಬೇಕು. ಬೆಳಗಾವಿ ಜಿಲ್ಲೆಯು ಕರ್ನಾಟಕದಲ್ಲಿರುವುದರಿಂದ ಇಲ್ಲಿ ಕನ್ನಡಕ್ಕೇ ಪ್ರಾಧಾನ್ಯವು ದೊರೆಯಬೇಕು. ನಾನು ಪ್ರಾಂತಿಕ ಕಾಂಗ್ರೆಸ್ ಕಮಿಟೆಯ ಅಧ್ಯಕ್ಷನಾಗಿರುವುದರಿಂದ ಕನ್ನಡ ನುಡಿಯ ಸೇವೆ ಮಾಡುವುದು ನನ್ನ ಕರ್ತವ್ಯವು. ಅದರ ಗೌರವವನ್ನು ಕಾಯಲು ನಾನು ಪ್ರಯತ್ನಿಸಲೇಬೇಕು.

ಮುಖ್ಯ ಮಂತ್ರಿಗಳೂ ತಮ್ಮ ಬಾಲ್ಯವನ್ನು ಕರ್ನಾಟಕದಲ್ಲಿ ಕಳೆದಿದ್ದಾರೆ. ಆದ್ದರಿಂದ ಅವರೂ ಸಹ ಮೊದಲು ಕನ್ನಡದಲ್ಲಿಯೇ ಮಾತನಾಡಿ ಕನ್ನಡಕ್ಕೆ ಪ್ರಾಧಾನ್ಯ ಕೊಡಬೇಕು ಸ್ವಲ್ಪ ಹೊತ್ತಿನವರೆಗಾದರೂ ಅವರು ಕನ್ನಡದಲ್ಲಿ ಮಾತನಾಡಿ ಮುಂದೆ ಬೇಕಾದರೆ ಮರಾಠಿಯಲ್ಲಿ ಮಾತನಾಡಲಿ" ಎಂದು ಹೇಳಿದರು.

ಮುಖ್ಯ ಮಂತ್ರಿ ಸನ್ಮಾನ್ಯ ಜೇರರು ಕನ್ನಡದಲ್ಲಿ ಮಾತನಾಡಲುಪಕ್ರಮಿಸಿದ ಕೂಡಲೆ ಮರಾಠಿ ಜನರು ಮತ್ತೆ ಗೊಂದಲವನ್ನೆಬ್ಬಿಸಿದರು.

ಆದರೂ ಮುಖ್ಯ ಮಂತ್ರಿಗಳು ೧೫ ಮಿನಿಟುಗಳ ವರೆಗೆ ಕನ್ನಡದಲ್ಲಿ ಮಾತನಾಡಿ ಪ್ರತಿಯೊಂದು ಕನ್ನಡ ಹಳ್ಳಿಯಲ್ಲಿಯೂ ತಾವು ಕನ್ನಡದಲ್ಲಿಯೇ ಮಾತನಾಡುವದಾಗಿ ಹೇಳಿದರು. ಇನ್ನು ೧೫ ದಿನಗಳ ವರೆಗೆ ತಾವು ಕರ್ನಾಟಕದಲ್ಲಿದ್ದರೆ ಕನ್ನಡ ಮಾತನಾಡಲು ತಮಗೆ ಸಂಪೂರ್ಣ ಬರುವದೆಂಬ ವಿಶ್ವಾಸವು ಇರುವುದಾಗಿ ಹೇಳಿದರಲ್ಲದೆ ಕರ್ನಾಟಕವನ್ನು ಬಿಟ್ಟು ೪೦ ವರ್ಷಗಳಾಗಿದ್ದರೂ ಇನ್ನೂ ಕನ್ನಡ ಮಾತಾಡಲು ಬರುತ್ತಿರುವುದನ್ನು ನೋಡಿ ತಮಗೇ ಆಶ್ಚರ್ಯವಾಗಿದೆಯೆಂದು ಹೇಳಿದರು.

ಕನ್ನಡ ಜನರಲ್ಲಿ ಕೆಲಸ ಮಾಡಬೇಕೆಂಬ ಇಚ್ಛೆ ನಿಮಗೆ ಇದ್ದರೆ ನೀವು ಕನ್ನಡವನ್ನು ಕಲಿಯಲೇ ಬೇಕು. ಗುಜರಾತಕ್ಕೆ ಹೋದಾಗ ನಾನು ಗುಜರಾತಿಯನ್ನು ಕಲಿತೆನು. ಜನತೆಯ ಭಾಷೆಯನ್ನು ಕಲಿತೆನು. ಜನತೆಯ ಭಾಷೆಯು ಗೊತ್ತಿಲ್ಲದವನು ಎಂದಿಗೂ ನಿಜವಾದ ಕೆಲಸಗಾರನಾಗಲಾರನು. ಎಷ್ಟೋ ವರ್ಷಗಳಿಂದ ನೀವು ಕರ್ನಾಟಕದಲ್ಲಿದ್ದೀರಿ. ಮುಂದೆಯೂ ಇರುವಿರಿ. ಆದ್ದರಿಂದ ನೀವೆಲ್ಲರೂ ಕನ್ನಡವನ್ನು ಕಲಿಯಲೇ ಬೇಕು.

## ಧಾರವಾಡದಲ್ಲಿ—

ಕುಸ್ತಿ ಆಡುವದನ್ನು ನೋಡಿ ಅದರಲ್ಲಿ ಗೆದ್ದ ಜುವ್ವಾ ಮತ್ತು ಉಳಿದ ಕುಸ್ತಿಗಳಲ್ಲಿ ಜಯಶೀಲರಾದವರಿಗೆ ಮೆಚ್ಚುಗೆ ಕೊಟ್ಟರು. ಮೆಚ್ಚುಗೆ ಕೊಡುವದಕ್ಕಿಂತ ಮೊದಲು ಅಲ್ಲಿ ಕೂಡಿದ ಜನರನ್ನುದ್ದೇಶಿಸಿ ಮೊದಲು ೫ ನಿಮಿಷ ಕನ್ನಡದಲ್ಲೇ ಭಾಷಣಮಾಡಿ ಆ ಮೇಲೆ ಹಿಂದಿಯಲ್ಲಿ ಭಾಷಣ ಮಾಡುತ್ತ ನಿಮ್ಮ ಕುಸ್ತಿ ನೋಡಿ ನನಗೆ ಆನಂದವಾಯಿತು. ಎಲ್ಲರೂ ನಿಮ್ಮ ಹಾಗೆ ಸಶಕ್ತರಾಗಬೇಕು. ಈ ಕುಸ್ತಿಗಳು ಬಾದಶಹರ ಕ್ಷಯರೋಗನಿವಾರಣ ಫಂಡಿನ ಸಹಾಯಾರ್ಥವಾಗಿ ಇಡಲ್ಪಟ್ಟವೆ. ನಿಮ್ಮ ಬಂಧುಗಳಿಗೆ ಅಂಟಿಕೊಳ್ಳುವ ಈ ರೋಗ ಪರಿಹಾರಕ್ಕಾಗಿ ನೀವು ಈ ರೀತಿ ಸಹಾಯಮಾಡಿದ್ದು ನೋಡಿ ಆನಂದವಾಗುತ್ತದೆ. ಮತ್ತು ಇದೇ ರೀತಿ ಮುಂದೆಯಾದರೂ ಸಹಾಯ ಮಾಡಬೇಕು.

ಕೆ. ಪಿ. ಸಿ. ಸಿಯಲ್ಲಿ ಇವತ್ತು ನೀವೆಲ್ಲರೂ ನನ್ನನ್ನು ಮಂತ್ರಿಯ ಸ್ಥಳದಲ್ಲಿ ನೋಡುತ್ತಿದ್ದರೆ ನಾಳೆ ಶಿಸ್ತಿನ ಸಲುವಾಗಿ ಹಿಂಡಲಗಿ ಜೇಲಿನಲ್ಲಿ ನೋಡಬಹುದು. ಇದೊಂದು ನಾಟಕವಿದ್ದ ಹಾಗೆ ಇದೆ. ರಾಜನ ಪಾತ್ರವನ್ನು ಧರಿಸಿದವನು ನಾಟಕವಾದ ಮೇಲೆ ಓರ್ವ ಸಾಮಾನ್ಯ ಮನುಷ್ಯನು ಎಂದು ಹೇಗೆ ತಿಳಿದುಕೊಳ್ಳುತ್ತಿರೋ ಇದಾದರೂ ಹಾಗೆಯೇ ಇರುತ್ತದೆ. ಇವತ್ತು ನಾನು ಮಂತ್ರಿಯಾದರೆ ನಾಳೆ ನಾನು ಹಿಂಡಲಗಿ ಜೇಲಿನ ಕೈದಿ ಆಗಬಹುದು. ಆದ್ದರಿಂದ ಸ್ಥಾನ ಮಾನಗಳನ್ನೆಣಿಸದೆ ಕಾಂಗ್ರೆಸ್ ತತ್ವವನ್ನು ಅನುಸರಿಸಿ ಕೆಲಸ ಮಾಡುವುದು ಮಾತ್ರ ನಮ್ಮೆಲ್ಲರ ಕರ್ತವ್ಯವಾಗಿದೆ ಎಂದು ಹೇಳಿದರು.

ಶ್ರೀಗಳಾದ ದಾತಾರ, ಕರಮರಕರ ನೇತೃತ್ವದಲ್ಲಿ ಒಂದು ಶಿಷ್ಟ ಮಂಡಲವು ಅವರ ಸಂದರ್ಶನ ತಕ್ಕೊಂಡಿತು. ಸನ್ಮಾನ್ಯ ಮಂತ್ರಿಗಳಿಗೆ ಈ ವಿಷಯವು ನಿಚ್ಚಳವಾಗಿ ತಿಳಿಯಲೆಂದು ಶ್ರೀ. ದಾತಾರರು ಮರಾಠಿಯಲ್ಲಿ ಮಾತನಾಡಲು ಸುರು ಮಾಡಿದ ಕೂಡಲೆ ಮಾನ್ಯ ಜೇರರು ನಡುವೆ ಬಾಯಿ ಹಾಕಿ ನನಗೆ ಕನ್ನಡ ಬರುತ್ತದೆ. ಮನೆಯಲ್ಲಿ ಬೇಕಾದಷ್ಟು ಕನ್ನಡ ಮಾತನಾಡಬಲ್ಲೆ. ಸಾರ್ವಜನಿಕ

ಭಾಷಣ ಮಾಡಲು ಬರುವದಿಲ್ಲ. ಕನ್ನಡದಲ್ಲಿ ಹೇಳಿರಿ' ಎಂದೆಂದರು. ಆ ಮೇಲೆ ದಾತಾರರು ಕನ್ನಡದಲ್ಲಿ ಹೇಳುವದನ್ನೆಲ್ಲ ಕೇಳಿಕೊಂಡು ಈ ವಿಷಯದ ಬಗ್ಗೆ ಅವಶ್ಯ ವಿಚಾರ ಮಾಡುವೆನೆಂದು ಆಶ್ವಾಸನ ಕೊಟ್ಟರು.

"ಧಾರವಾಡ ಮುನಸಿಪಾಲ್ಟಿ ಅಧ್ಯಕ್ಷರೇ, ಸದ್ಗೃಹಸ್ಥರೇ, ಭಗಿನಿಯರೇ, ನಿಮ್ಮ ಮಾನ ಪತ್ರಕ್ಕೆ ಕನ್ನಡದಲ್ಲಿ ಉತ್ತರ ಕೊಡ ಬೇಕಿತ್ತು. ಕನ್ನಡ ಮಾತನಾಡುವುದು ಬಿಟ್ಟು ೪೦ ವರ್ಷವಾಯಿತು. ನಮ್ಮ ಮನಸ್ಸಿನಲ್ಲಿದ್ದದ್ದನ್ನು ಕನ್ನಡದಲ್ಲಿ ಹೇಳುವ ಸಾಮರ್ಥ್ಯ ನಮ್ಮ ಲ್ಲಿಲ್ಲ. ಕಾರಣ ಹಿಂದುಸ್ಥಾನದ ರಾಷ್ಟ್ರ ಭಾಷೆಯಾದ ಹಿಂದಿಯಲ್ಲಿ ಹೇಳುವೆ, ಕ್ಷಮಿಸಬೇಕು." ಎಂದು ಹೇಳಿ ಹಿಂದಿಯಲ್ಲಿ ಭಾಷಣ ಪ್ರಾರಂಭಿಸಿದರು.

ಕರ್ನಾಟಕ ಏಕೀಕರಣ ಪ್ರಶ್ನೆಯನ್ನೆತ್ತಿ ಇದಕ್ಕೆ ನಮ್ಮ ಸಂ ಪೂರ್ಣ ಒಪ್ಪಿಗೆ ಇದೆ. ಇದರ ಬಗ್ಗೆ ಗೊತ್ತುವಳಿ ಪಾಸಾಗಿದ್ದು ಅದನ್ನು ಭಾರತ ಮಂತ್ರಿಗಳಿಗೆ ಕಳಿಸಿದೆ. ಸನ್ಮಾನ್ಯ ರಾಜಾಜಿಯವರು ಆಂಧ್ರಕ್ಕೆ ಮಾಡಿದುದನ್ನೆಲ್ಲ ನಾವೂ ಮಾಡುತ್ತಿದ್ದೇವೆ. ನೀವು ನಿಮ್ಮ ಸಾಹಿತ್ಯ ಮತ್ತು ಸಂಸ್ಕೃತಿ ಹೆಚ್ಚಿಸಲು ಪ್ರಯತ್ನಿಸಬೇಕು. ಕರ್ನಾ ಟಕವು ಸ್ವತಂತ್ರವಾದರೂ ಅದು ಹಿಂದುಸ್ಥಾನದ ಭಾಗವಿದ್ದುದ ರಿಂದ ರಾಷ್ಟ್ರಭಾಷೆಯಾದ ಹಿಂದಿಯನ್ನೂ ನೀವು ಕಲಿಯತಕ್ಕದ್ದು.

## ಹುಬ್ಬಳ್ಳಿಯಲ್ಲಿ—

ಹುಬ್ಬಳ್ಳಿ ಮುನಸಿಪಾಲ್ಟಿಯ ಆಡಳಿತದ ಕಡೆಗೆ ಹೊರಳಿ ೮೦ ಸಾವಿರ ಜನಸಂಖ್ಯೆ ಇದ್ದ ಈ ದೊಡ್ಡ ನಗರದಲ್ಲಿ ಕುಡಿಯಲಿಕ್ಕೆ ನೀರು ಇಲ್ಲ. ಓಣಿಗಳಲ್ಲಿ ಬೆಳಕು ಇಲ್ಲ. ಇದರಿಂದ ನೀವು ಮುನಸಿ ಪಾಲ್ಟಿಯ ಆಡಳಿತೆಯನ್ನು ಸಾಗಿಸಲಿಕ್ಕೆ ಅಸಮರ್ಥರಾಗಿರುವಿರೆಂದು ಹೇಳಿದರು.

ನಡುವೆ ಒಂದು ಗೂಳಿಯು ಬಂದದ್ದರಿಂದ ಜನರು ಗದ್ದಲವ ನ್ನೆಬ್ಬಿಸಿದರು. ಆಗ ಮಂತ್ರಿವರ್ಯರು, ಒಂದು ಗೂಳಿಗೆ ಹೆದರುವ ನೀವು ಹುಲಿ, ಸಿಂಹಗಳು ಬಂದರೆ ಏನು ಮಾಡುವಿರೋ!

## ಗೋಕಾಕದಲ್ಲಿ—

ಮತದಾನವೇ ರಾಜ್ಯಾಧಿಕಾರದ ಸೂತ್ರವು. ಪ್ರಜಾಸತ್ತಾತ್ಮಕ ರಾಷ್ಟ್ರದಲ್ಲಿ ಮತದಾನಕ್ಕೆ ಪ್ರಾಧಾನ್ಯವಿದೆ. ಮತದಾನವು ಕರ ತೆತ್ತು ವದನ್ನು ಅವಲಂಬಿಸಿದೆ. ಕರಭಾರದ ತತ್ವದ ಮೇಲೆಯೇ ಪ್ರಾತಿನಿ ಧಿತ್ವದ ಕಟ್ಟಡದ ಆಧಾರಸ್ತಂಭವಿದೆ. ಈಗಿನ ನವೀನ ಯುಗದಲ್ಲಿ ಭಗಿನಿಯರು ರಾಜ್ಯಕಾರಭಾರದಲ್ಲ ಮನಸ್ಸು ಹಾಕುತ್ತಿರುವುದು ಹಿತದ ಮಾತು. ಸ್ತ್ರೀ ಪುರುಷರಿಬ್ಬರೂ ರಾಜ್ಯಶಕಟವನ್ನು ಸಾಗಿಸಲು ಅವಶ್ಯವು.

ಮಂತ್ರಿಪದವು ಮುಳ್ಳಿನ ಕಿರೀಟವಿದೆ. ನಿಮ್ಮ ಮಂತ್ರಿಗಳ ಮೇಲೆ ನಿಮ್ಮ ವಿಶ್ವಾಸವಿದ್ದರೆ ಕಾರ್ಯವಾಗುವುದು. ನೀವು ಬೇಡೆಂ ದರೆ ನಾ. ಲಠ್ಠೆಯವರು ಬೆಳಗಾವಿಗೆ ಬಂದು ಸುಖದಿಂದಿರುವರು. ನಾನಾದರೂ ದೇವರು ಇಟ್ಟಲ್ಲಿ ತುತ್ತು ರೊಟ್ಟಿ ತಿಂದು ವಿಠ್ಠಲ ವಿಠ್ಠಲ ಎನ್ನುತ ಕಾಲಹರಣ ಮಾಡುವೆನು.

---

## ಹೈದರಾಬಾದ ಬುಲೆಟಿನ್.

ಹೈದರಾಬಾದ ಸಂಸ್ಥಾನದಲ್ಲಿ ನಡೆದ ಸತ್ಯಾಗ್ರಹ ಯುದ್ಧವನ್ನು ಕುರಿತು ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಸಂಸ್ಥಾನ ಸಮಿತಿಯ ವರು ಬುಲೆಟಿನ್ ಹೊರಡಿಸಲು ಪ್ರಾರಂಭಿಸಿದ್ದಾರೆ. ಅದರ ಪ್ರತಿಯು ನಮ್ಮ ಕಡೆ ಬಂದಿದೆ. ಈ ಪ್ರಯತ್ನವನ್ನು ನಾವು ಹೃದಯಪೂರ್ವಕ ಅಭಿನಂದಿಸುತ್ತೇವೆ.

# ಹಿಂದೂ ಸಂದೇಶ.

ಬೆಳಗಾವ ಜಿಲ್ಲಾ ಅರಭಾವಿ ಶ್ರೀ ದುರದುಂಡೀಶ್ವರ ಮಠ ದಿಂದ "ಹಿಂದೂ ಸಂದೇಶ" ಎಂಬ ಒಂದು ವಾರ ಪತ್ರಿಕೆಯು ಕಳೆದ ೧ ನೆಯ ತಾರೀಖಿನಿಂದ ಪ್ರಕಟವಾಗಲಾರಂಭಿಸಿ ಅದರ ಮೊದಲನೆಯ ಸಂಚಿಕೆಯು ನಮ್ಮ ಕಡೆಗೆ ಬಂದಿದೆ. ಇದು ಹಿಂದೂ ಸನ್ಯಾಸಿಗಳ ಮುಖಪತ್ರವೆಂದು ಹೇಳಲಾಗಿದೆ. ಇದು ನಾಲ್ಕು ಪುಟ ಗಳ ಪತ್ರಿಕೆ. ವಾರ್ಷಿಕ ಚಂದಾ ಅಂಚೆ ವೆಚ್ಚ ಸೇರಿ ರೂ. ೧-೫-೦.

ಹಿಂದು ಧರ್ಮದಲ್ಲಿ ಸನ್ಯಾಸಿಗಳಿಗೆ ಬಹು ಹೆಚ್ಚಿನ ಸ್ಥಾನವಿದೆ. ಜನಾಂಗದ ಉನ್ನತಿಗಾಗಿ ಅವರು ಪರಿಶ್ರಮಪಡಬೇಕಾದುದು ಅವರ ಮುಖ್ಯ ಕರ್ತವ್ಯವೂ ಆಗಿದೆ. ಏಕೆಂದರೆ ಜನಾಂಗ ವೃಕ್ಷಕ್ಕೆ ಬೇರಿ ನಂತಿದ್ದ ಗೃಹಸ್ಥರಿಂದಲೇ ಇವರು ಪೋಷಿಸಲ್ಪಡುತ್ತಿದ್ದಾರೆ. ಜನಾಂ ಗಕ್ಕೆ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ವಿಪತ್ತುಗಳು ಸಂಭ ವಿಸದಂತೆ ನೋಡಿಕೊಳ್ಳುವುದು ಇವರ ಪವಿತ್ರ ಕರ್ತವ್ಯ. ಅಂತಹ ವಿಪತ್ತುಗಳು ಸಂಭವಿಸಿದಾಗ ಅವುಗಳ ನಿವಾರಣಾರ್ಥವಾಗಿ ಆತ್ಮ ಯಜ್ಞವನ್ನಾದರೂ ಮಾಡುವುದು ಇವರ ಪ್ರಥಮ ಧರ್ಮ.

ಈಗ ಹಿಂದು ಜನಾಂಗಕ್ಕೆ ಧಾರ್ಮಿಕಾದಿ ಮಹಾ ವಿಪತ್ತುಗಳು ಸಂಭವಿಸಿವೆಯಷ್ಟೆ. ಇಂತಹ ಕಷ್ಟ ಕಾಲದಲ್ಲಿ ಸನ್ಯಾಸಿಗಳಲ್ಲಿ ಜಾಗೃ ತಿಯನ್ನುಂಟುಮಾಡಲು ಈ ಪತ್ರಿಕೆ ಉದಯವಾದುದು ಬಹು ಯುಕ್ತವಾಗಿದೆ. ಅರಭಾವಿ ಶ್ರೀ ದುರದುಂಡೀಶ್ವರ ಮಠದ ಶ್ರೀಮ ನ್ನಿರಂಜನ ಶ್ರೀ ಶಿವಾನಂದ ಸ್ವಾಮಿಗಳೇ ಈ ಪತ್ರಿಕೆಯ ಸಂಪಾದಕ ರಾದುದು ಅಭಿನಂದನೀಯವು. ಈ ಮೊದಲನೆಯ ಸಂಚಿಕೆಯಲ್ಲಿ ಹಿಂದು ಸನ್ಯಾಸಿಗಳಿಗೆ ಮಾರ್ಗದರ್ಶಕ ಸ್ವಾಮಿ ವಿವೇಕಾನಂದರ ದಿವ್ಯ ಸಂದೇಶ ಕೊಡಲಾಗಿದೆ. ಹಿಂದುಗಳೆಲ್ಲರೂ ಈ ಪತ್ರಿಕೆಯನ್ನು ತುಂಬಾ ಪ್ರೋತ್ಸಾಹಿಸಲೆಂದೂ ಇದು ತನ್ನ ಉದ್ದೇಶವನ್ನು ನೆರವೇ ರಿಸಲೆಂದೂ ಹಾರೈಸುತ್ತೇವೆ.

---

## ಮುಸಲ್ಮಾನರ ಗೊಂದಲ.

ಬಾಗಲಕೋಟೆಯಲ್ಲಿ ತಾರೀಖು ೭ ನೆಯ ದಿನ ಆರ್ಯಸಮಾ ಜದವರ ಸಭೆ ಕಾಲಕ್ಕೆ ಕೆಲವು ಮುಸಲ್ಮಾನರು ಗೊಂದಲಮಾಡ ಲು ಪೋಲಿಸರ ಕಾವಲಿನಿಂದ ಸಭೆ ಜರುಗಿತು.

---

# ತ್ವರೆಮಾಡಿರಿ!

ನೈಜಾಂ ಇಲಾಖಾ ಕೊಪ್ಪಳ ಜಿಲ್ಲಾ ಕಲ್ಲೂರು ಗ್ರಾಮದ ಕೊಂಡದಕಟ್ಟಿ ಹಿರೇಮಠದ ಪಟ್ಟಾಧ್ಯಕ್ಷರಾದ ಷಡಕ್ಷರಿ ದೇವರು ಈಗ ಆರು ವರುಷಗಳಿಂದಲೂ ಸೋಲಾಪುರದ ಪಾಠಶಾಲೆಯಲ್ಲಿ ಓದುತ್ತಿದ್ದು ಈಗ ಎಂಟು ತಿಂಗಳುಗಳ ಹಿಂದೆ ಎಲ್ಲಿಯೋ ಪತ್ತೆಯಿ ಲ್ಲದೆ ಹೋಗಿರುತ್ತಾರೆ. ಆದ್ದರಿಂದ ಅವರನ್ನು ಸಮಕ್ಷಮ ಭೆಟ್ಟಿ ಯಾದವರಾಗಲೀ ಇಲ್ಲವೇ ಅವರ ನಿಜವಾದ ಪತ್ತೆಯು ಗೊತ್ತಿ ದ್ದವರಾಗಲೀ ಈ ಕೆಳಗಿನ ವಿಳಾಸಕ್ಕೆ ಬರೆದು ತಿಳಿಸಿದ್ದಾದರೆ ಅವರಿಗೆ ಉಚಿತ ಇನಾಮು ಕೊಡಲ್ಪಡುವದು. ಗೊತ್ತಿದ್ದವರು ತ್ವರೆಮಾಡಿರಿ.

ಗುರುಶಾಂತಯ್ಯ ಇಂಟರ್ ವಿದ್ಯಾರ್ಥಿ
ಉಸ್ಮಾನಿಯಾ ಕಾಲೇಜ್, ಗುಲಬರ್ಗಾ.

# ನಿಜಾಮ ರಾಜ್ಯದ ಸತ್ಯಾಗ್ರಹ ಯುದ್ಧ.

## ಈ ವಾರದಲ್ಲಿ ಪ್ರಚಂಡ ಜಾಗೃತಿ.

### ಸೇನಾಪತಿ ಬಾಪಟರಿಗೆ ಶಿಕ್ಷೆ.

ಗುಲಬರ್ಗಾದಲ್ಲಿ ಹಿಡಿಯಲ್ಪಟ್ಟ ಸೇನಾಪತಿ ಬಾಪಟರಿಗೆ ತಾ. ೬ ನೆಯ ದಿವಸ ೨ ವರುಷ ಕಠಿಣ ಶಿಕ್ಷೆ ಮತ್ತು ೨೦೦ ರೂ. ದಂಡ ವಿಧಿಸಿದರು. ದಂಡ ಕೊಡದಿದ್ದರೆ ಮತ್ತೆ ಮೂರು ತಿಂಗಳ ಶಿಕ್ಷೆಯೆಂದು ತಿಳಿಸಿದರು. ಸೇನಾಪತಿಗಳ ಸಹಕಾರಿಗಳಾಗಿ ಬಂದಿದ್ದ ೧೯ ಜನ ಸತ್ಯಾಗ್ರಹಿಗಳಿಗೆ ೬ ತಿಂಗಳ ಕಠಿಣ ಶಿಕ್ಷೆ ವಿಧಿಸಿದ್ದಾರೆ. ಇವರಲ್ಲಿ ೫ ಜನರಿಗೆ ನೀವು ೫೦೦ ರೂ. ಗಳ ಹೊಣೆಗಾರಿಕೆ ಕೊಟ್ಟರೆ ಬಿಡುವುದಾಗಿ ತಿಳಿಸಿದರು. ಆದರೆ ಆ ವೀರ ಸತ್ಯಾಗ್ರಹಿಗಳು ಇದಕ್ಕೆ ಒಪ್ಪದೆ ತಮಗೆ ಶಿಕ್ಷೆಯನ್ನೇ ಕೊಡಿರೆಂದು ಹೇಳಿದರು.

ಗುಲಬರ್ಗಾ ಕಾಲೇಜಿನ ಹಿಂದು ವಿದ್ಯಾರ್ಥಿಗಳೆಲ್ಲಾ ಕಟ್ಟು ಮಾಡಿ ಕಾಲೇಜಿಗೆ ಹೋಗದಿದ್ದುದರಿಂದ ವಿಶೇಷ ಜಾಗೃತಿಯುಂಟಾಯಿತು. ಉಸ್ಮಾನಿಯಾ ವಿಶ್ವವಿದ್ಯಾಲಯದ ಹೈದರಾಬಾದ ಹಿಂದು ವಿದ್ಯಾರ್ಥಿಗಳ ನ್ಯಾಯವಾದ ಪ್ರಾರ್ಥನೆಯ ಹಕ್ಕನ್ನು ಅಪಹಾರಮಾಡಿದ್ದರ ನಿಷೇಧಕ್ಕಾಗಿ ವಿದ್ಯಾರ್ಥಿಗಳು ಕಾಲೇಜಿಗೆ ಹೋಗದೆ ಕಟ್ಟು ಮಾಡಿಕೊಂಡಿದ್ದಾರೆ. ಮಹಾತ್ಮಾ ಗಾಂಧಿಯವರು ಹೈದರಾಬಾದ ವಿದ್ಯಾರ್ಥಿಗಳ ಕಟ್ಟಿನ ಬಗ್ಗೆ ಸಹಾನುಭೂತಿತೋರಿಸಿದ್ದಾರೆಂದು ಸುದ್ದಿ

**ಬೀದರ—**

ಇಲ್ಲಿಯ ಆರ್ಯ ಸಮಾಜದ ೧೪ ಜನರನ್ನು ಪಬ್ಲಿಕ್ ಸೇಫ್ಟಿ ಕಾನೂನಿನಂತೆ ಸೆರೆಹಿಡಿದರು. ಆರ್ಯೋಪದೇಶಕ ಪಂಡಿತ ಮಾಧವರಾವಜಿಯವರಿಗೆ ೧ ವರುಷದ ಕಠಿಣ ಶಿಕ್ಷೆ ೨೦೦ ರೂ. ದಂಡ ವಿಧಿಸಲಾಯಿತು.

**ಹೈದರಾಬಾದ—**

ಸಂಸ್ಥಾನ ಕಾಂಗ್ರೆಸ್ಸಿನ ಶ್ರೀ. ವಾಸುದೇವರಾವ ಮತ್ತು ಶ್ರೀ. ರಾಮಚಂದ್ರರಾವ ಇವರಿಗೆ ಪಬ್ಲಿಕ್ ಸೇಫ್ಟಿ ಕಾನೂನಿನಂತೆ ೧ ವರುಷ ಕಠಿಣ ಶಿಕ್ಷೆ ೧೦೦ ದಂಡ ವಿಧಿಸಿದರು.

ಆರ್ಯ ಡಿಫೆನ್ಸ್ ಲೀಗದ ಶ್ರೀ. ದೇವದಾಸರಾವ ಮತು ಶ್ರೀ. ಬಾಜೀರಾವ ಇವರಿಗೆ ಎ. ಪಿ. ಸಿ. ೧೨೨ ನೇ ಕಲಂ ಪ್ರಕಾರ ಒಂದು ತಿಂಗಳ ಸಾದಾ ಶಿಕ್ಷೆ ೧೦೦ ರೂಪಾಯಿ ದಂಡ ವಿಧಿಸಲಾಯಿತು.

**ನೀಲಂಗ—**

ಬೀದರ ಜಿಲ್ಲಾ ನೀಲಂಗದಲ್ಲಿ ಆರ್ಯಸಮಾಜದ ಮುಂದಾಳುಗಳಾದ ಶ್ರೀ. ಶೇಷೋರಾವ ಇವರನ್ನು ನಿಷ್ಕಾರಣವಾಗಿ ಸೆರೆಹಿಡಿದಿದ್ದಾರೆ.

**ಅಂದೂರಾ—**

ಉಸ್ಮಾನಾಬಾದ ಜಿಲ್ಲಾ ಅಂದೂರಾ ಗ್ರಾಮದ ಜಿಂದವಾಲಿ ಮತ್ತು ಇಸ್ಮಾಯಿಲ್ ಎಂಬುವವರು ಕಾಂಗ್ರೆಸ್ ಸರ್ವಾಧಿಕಾರಿಗಳು ತಮಗೆ ಮೋಸಮಾಡಿ ಸತ್ಯಾಗ್ರಹದಲ್ಲಿ ಸೇರುವಂತೆ ಮಾಡಿದರೆಂದೂ ತಮ್ಮನ್ನು ಬಿಟ್ಟರೆ ತಾವು ಇನ್ನು ಮೇಲೆ ಸತ್ಯಾಗ್ರಹದಲ್ಲಿ ಸೇರುವುದಿಲ್ಲವೆಂದೂ ಕೋರ್ಟಿನಲ್ಲಿ ಹೇಳಿದರು. ಮ್ಯಾಜಿಸ್ಟ್ರೇಟರು ಆಗ ಅವರನ್ನು ಪೋಲೀಸರ ಸ್ವಾಧೀನದಲ್ಲಿ ಇಡಲು ತಿಳುಹಿಸಿದರು.

**ಕೊಪ್ಪಳ—**

ಹೈದರಾಬಾದ ಸತ್ಯಾಗ್ರಹಕ್ಕೆ ಹೋಗಲು ಇಟಗಿಯ ನಾಲ್ಕು ಸತ್ಯಾಗ್ರಹಿಗಳು ಮತ್ತು ಸಾಂತಗೆರೆಯ ಇಬ್ಬರು ಇಲ್ಲಿಗೆ ತಾರೀಖು ೩ ನೆಯ ದಿನ ಬಂದಿದ್ದರು. ಅವರು ಊಟದ ಮನೆಯಲ್ಲಿ ಫಲಹಾರಕ್ಕೆ ಕುಳಿತಾಗ ಪೋಲೀಸರು ಸೆರೆಹಿಡಿದರು. ಅವರ ಸಂಗಡ ನೂರಾರು ಜನರು ಜಯಜಯಕಾರಮಾಡುತ್ತ ಹೋದರು. ಆಬಳಿಕ ಇವರನ್ನು ಮ್ಯಾಜಿಸ್ಟ್ರೇಟರ ಮುಂದೆ ನಿಲ್ಲಿಸಲು ತಾವು ಸತ್ಯಾಗ್ರಹಕ್ಕೆ ಹೋಗುವದು ನಿಜವೆಂದು ಹೇಳಿದರು.

ತಾ. ೩ ನೆಯ ದಿನ ಇಲ್ಲಿ ಸ್ಟೇಟ್ ಕಾಂಗ್ರೆಸ್ ಕಮಿಟಿಯನ್ನು ಸ್ಥಾಪಿಸಿದರು. ಅದರ ಅಧ್ಯಕ್ಷರೇ ಮೊದಲಾದ ೬ ಜನರನ್ನು ಸೆರೆಹಿಡಿದು ೧೫ ತಿಂಗಳ ಕಠಿಣ ಶಿಕ್ಷೆ ಮತ್ತು ೧೫ ರೂ. ದಂಡ ವಿಧಿಸಿದರು. ಈ ಕಾಂಗ್ರೆಸ್ ಕಮಿಟಿಯಲ್ಲಿದ್ದ ಸತ್ಯಾಗ್ರಹ ವೀರರು ಈ ಕೆಳಗಿನಂತೆ—

ಅಧ್ಯಕ್ಷರು ಅಳುಗುಂದಿ ಶ್ರೀ. ಶಿವಕುಮಾರಪ್ಪನವರು, ಕಾರ್ಯದರ್ಶಿಗಳು ಶ್ರೀಯುತರುಗಳಾದ ಮಡನಪ್ಪ, ಶಾಂತಗಿರಿ, ವೀರಪ್ಪ ಇಟಗಿ, ಅಣ್ಣಪ್ಪ ಇಟಗಿ, ವಿರೂಪಾಕ್ಷಯ್ಯ ಇಟಗಿ ಮತ್ತು ಕರಿಬಸಪ್ಪ ಇಟಗಿ.

**ಹೈದರಾಬಾದ-**

ಸಂಸ್ಥಾನ ಕಾಂಗ್ರೆಸ್ಸಿನ ೧೩ ನೆಯ ಸರ್ವಾಧಿಕಾರಿಗಳಾದ ಶ್ರೀ. ಘೋತ್ರಿಕರ್ ಇವರು ತಮ್ಮ ೫ ಜನ ಸಹಕಾರಿಗಳೊಂದಿಗೆ ತಾ. ೪ ನೆಯ ದಿನ ಸತ್ಯಾಗ್ರಹಮಾಡಿ ಸೆರೆಯಾಳುಗಳಾದರು. ಶ್ರೀಯುತರುಗಳಾದ ಆನಂದರಾವ, ರಾಮಸಿಂಗ, ದಿಗಂಬರರಾವ, ಪಾಂಡುರಂಗರಾವ ಮತ್ತು ಮನೋಹರರಾವ ಈ ಐದು ಸತ್ಯಾಗ್ರಹಿಗಳು ೧೩ ನೆಯ ಸರ್ವಾಧಿಕಾರಿಗಳ ಸಂಗಡ ಇದ್ದರು.

**ಸತ್ಯಾಗ್ರಹಿಗಳಿಗೆ ಹೊಡೆತ!**

ಕಾಂಗ್ರೆಸ್ ಸಂಸ್ಥೆಯ ೧೨ ನೆಯ ಸರ್ವಾಧಿಕಾರಿಗಳಾದ ಶ್ರೀ. ಗೋಪಾಲರಾಮಯ್ಯ ರೆಡ್ಡಿಯವರಿಗೂ ಅವರ ಸಹಕಾರಿಗಳಿಗೂ ಜೈಲಿನಲ್ಲಿ ಪೋಲಿಸರು ಬಹು ಹಿಂಸೆಪಡಿಸಿ ಹೊಡೆದರೆಂದು ವ್ಯಾಜ್ಯ ಹೂಡಲಾಗಿದೆ. ಇದು ವಿಚಾರಣೆಗಾಗಿ ಹೈದರಾಬಾದ ಸಿಟಿಮ್ಯಾಜಿಸ್ಟ್ರೇಟ್ ಬಾನಾಜಿಯವರಕಡೆ ಕಳುಹಿಸಲ್ಪಟ್ಟಿದೆ.



ಶಾ. ಶ. ೧೮೬೦ ನೆಯ ಮಾರ್ಗಶಿರ ಬ|| ೬ ಸೋಮವಾರ.

## ಅತ್ಯಾಚಾರಿ ಮುಸಲ್ಮಾನ ಬಂಧುಗಳಿಗೆ ಪ್ರೇಮದ ಸೂಚನೆ.

ಹಿಂದು-ಮುಸಲ್ಮಾನರಲ್ಲಿ ಪರಸ್ಪರ ಪ್ರೇಮಾದರಗಳುಂಟಾಗುವುದು ಉಭಯ ಸಮಾಜಗಳಿಗೂ ಹಿತ. ಅಂತೆಯೇ ಅನೇಕ ಹಿಂದು ಮುಸಲ್ಮಾನ್ ಮುಂದಾಳುಗಳು ಈ ಉಭಯ ಸಮಾಜಗಳಲ್ಲಿ ಐಕಮತ್ಯ ಉಂಟಾಗಲು ಬಹು ದಿನಗಳಿಂದಲೂ ಪ್ರಯತ್ನಿಸುತ್ತಿದ್ದಾರೆ. ಇನ್ನು ಮುಂದೆಯೂ ಇಂಥ ಪ್ರಯತ್ನಗಳು ನಡೆಯುವವು. ಹಾಗೆ ನಡೆಯಲೇಬೇಕು. ಏಕೆಂದರೆ, ಈ ವರೆಗಿನ ಪ್ರಯತ್ನದಿಂದ ಏನ್ನೋ ಪ್ರಯೋಜನವೂ ಆಗಿದೆ.

ಎಂದಮೇಲೆ, ಹಿಂದುಗಳ ಮೇಲೆ ಇತ್ತೀಚಿಗೆ ಮುಸಲ್ಮಾನರ ಅತ್ಯಾಚಾರ ಹೆಚ್ಚುರುವುದೇಕೆ? ಎಂಬ ಪ್ರಶ್ನೆಯುಂಟಾಗುವುದು ಸ್ವಾಭಾವಿಕವಷ್ಟೆ. ಹಿಂದುಗಳ ಸಂಗಡ ಮುಸಲ್ಮಾನ್ ಸಮಾಜವು ಸಮಾನತ್ವದಿಂದಲೂ, ಸಖ್ಯತ್ವದಿಂದಲೂ ಇರಬೇಕೆಂದು ಕೆಲವು ಮುಸಲ್ಮಾನ್ ಮುಂದಾಳುಗಳು ಇಚ್ಛಿಸಿ ಆ ತಮ್ಮ ಉದ್ದೇಶಸಾಧನೆಗೆ ಪ್ರಯತ್ನಿಸುತ್ತಿರುವಂತೆಯೇ ಕೆಲವು ಮುಸಲ್ಮಾನ್ ಮುಂದಾಳುಗಳು ಹಿಂದುಗಳಿಂದ ಮುಸಲ್ಮಾನ್ ಸಮಾಜವು ಭಿನ್ನವಾಗಿದ್ದುಕೊಂಡು ಅದು ಹಿಂದುಗಳ ಮೇಲೆ ತನ್ನ ವರ್ಚಸ್ಸನ್ನು ಸ್ಥಾಪಿಸಬೇಕೆಂಬ ಉದ್ದೇಶವುಳ್ಳವರಾಗಿ ಆ ಉದ್ದೇಶಸಾಧನೆಗೆ ಅನುಕೂಲವಾಗುವಂತೆ ಪ್ರಯತ್ನಿಸುವವರಾಗಿದ್ದಾರೆ.

ಇಂತಹ ಉದ್ದೇಶದ ಮುಂದಾಳುಗಳೂ ಅವರ ಅನುಯಾಯಿಗಳೂ ಅತ್ಯಲ್ಪವಾಗಿಲ್ಲ. ಮುಸಲ್ಮಾನ್ ಸಮಾಜದಲ್ಲಿ ಇಂಥವರ ಸಂಖ್ಯೆಯೇ ಅತ್ಯಧಿಕವಾಗಿದೆಯೆಂದು ಹೇಳಬಹುದು. ಇಂಥ ಮುಸಲ್ಮಾನ್ ಮುಂದಾಳುಗಳ ನಾನಾ ವಿಧ ಚಟುವಟಿಕೆಗಳೇ ಈಗಿನ ಅತ್ಯಾಚಾರಗಳಿಗೆ ಮೂಲ ಕಾರಣ.

### ಈ ವರೆಗಿನ ಅತ್ಯಾಚಾರ.

ಹಿಂದು-ಮುಸಲ್ಮಾನರಲ್ಲಿ ನ್ಯಾಯ ಸಮ್ಮತವಾದ ರೀತಿಯಿಂದ ರಾಜಕೀಯ ಹೋರಾಟ ನಡೆಯುವದೇನೂ ಅಸ್ವಾಭಾವಿಕವಾದುದಲ್ಲ. ಈ ಉಭಯ ಸಮಾಜದವರು ತಾತ್ಕಾಲಿಕವಾದ ಧಾರ್ಮಿಕ ಕೋಪತಾಪಗಳಿಗೀಡಾಗಿ ಎಲ್ಲಿಯಾದರೂ ದೊಂಬಿ ಕೊಲೆಸುಲಿಗೆಗಳನ್ನು ನಡೆಯಿಸಿದರೆ ಅದು ಸಾರ್ವತ್ರಿಕ ವ್ಯಾಪಿಸಿದ ರೋಗವಲ್ಲವೆಂದೇ ಕ್ಷಮ್ಯವೆಂದು ಹೇಳಬಹುದು. ಆದರೆ ನಿರಪರಾಧಿ ಹಿಂದು ಮುಖಂಡರ, ಮಹಿಳೆಯರ, ಹುಡುಗರ ಮೇಲೆ ಪೂರ್ವಸಿದ್ಧತೆಯಿಂದ ಅನೇಕ ಮುಸಲ್ಮಾನರು ಅತ್ಯಾಚಾರ ನಡೆಸುತ್ತಿರುವುದು ಬಹು ಭಯಂಕರವಾದುದಲ್ಲವೆ? ಇದರ ಕಡೆಗೆ ನಿರ್ಲಕ್ಷಿಸುವುದು ಹಿಂದು ಮತ್ತು ಮುಸಲ್ಮಾನ್ ಈ ಉಭಯ ಸಮಾಜಗಳಿಗೂ ಮಹದನರ್ಥಕರವಾದುದಲ್ಲವೆ?

ಹುತಾತ್ಮಾ ಸ್ವಾಮಿ ಶ್ರದ್ಧಾನಂದರಿಂದ ಮೊನ್ನೆ ಇಂದೂರಲ್ಲಿ ಕೊಲ್ಲಲ್ಪಟ್ಟ ಶ್ರೀ. ಬಾಬುಲಾಲರ ವರೆಗಿನ ಅನೇಕ ಹಿಂದು ಮುಂದಾಳುಗಳು ಎಂಥ ಅತ್ಯಾಚಾರಗಳಿಗೆ ಆಹುತಿಯಾದರು? ಬಂಗಾಲ, ಪಂಜಾಬ ಮೊದಲಾದ ಮುಸಲ್ಮಾನ ಬಹುಸಂಖ್ಯಾಕವಾದ ಪ್ರಾಂತಗಳಲ್ಲಿ ಹಿಂದು ಸ್ತ್ರೀಯರ ಮೇಲೆ ಎಂಥ ಅತ್ಯಾಚಾರ ನಡೆಯುತ್ತಲಿವೆ? ಅನೇಕ ಹಿಂದು ಹುಡುಗರ ಅಪಹಾರದ ದುಷ್ಟ ಕೃತಿ ನಡೆಯುತ್ತಿರುವುದೇಕೆ? ಈ ವಿಧವಾದ ಅತ್ಯಾಚಾರಗಳು ತಾತ್ಕಾಲಿಕವಾದ ಕೋಪತಾಪಗಳಿಂದುಂಟಾಗುವವೆ? ಉದ್ದೇಶಪೂರ್ವಕವಾಗಿ ಸಂಘಟಿತ ರೀತಿಯಿಂದಲೇ ಈ ಅತ್ಯಾಚಾರಗಳನ್ನು ನಡೆಯಿಸಲು ಬಹು ವಿಸ್ತಾರವಾದ ಗುಪ್ತ ಯೋಜನೆ ಏರ್ಪಟ್ಟಿದೆಯೆಂದೇ ಸ್ಪಷ್ಟವಾಗುವುದಿಲ್ಲವೆ? ಮನುಷ್ಯತ್ವಕ್ಕೇನೇ ನಾಚಿಕೆಯು ಇಂಥ ಅತ್ಯಾಚಾರಗಳನ್ನು ಹಿಂದುಗಳು ಮಾಡಿದ್ದಾರೆಯೆ? ಬಹು ಸಂಖ್ಯಾಕ ಹಿಂದುಗಳಿರುವ ಪ್ರಾಂತಗಳಲ್ಲಿ ಮುಸಲ್ಮಾನ್ ಸ್ತ್ರೀಯರ ಮೇಲಾಗಲಿ ಅಥವಾ ಹುಡುಗರ ಮೇಲಾಗಲಿ ಇಂಥ ಅತ್ಯಾಚಾರಗಳಾದ ದೃಷ್ಟಾಂತವಿದೆಯೆ?

### ಗಾಂಧೀಜಿಯವರ ಕರ್ತವ್ಯ.

ಮಹಾತ್ಮಾ ಗಾಂಧಿಯವರು ಅಹಿಂಸಾಮೂರ್ತಿಗಳು. ಹಿಂಸೆಯಷ್ಟು ಅನರ್ಥಕರವಾದ ಕೃತಿಯು ಬೇರೊಂದಿಲ್ಲವೆಂದೇ ಅವರು ಸಾರುವವರು. ರಾಜಕೀಯ ದೃಷ್ಟಿಯಿಂದ ಸರಕಾರಿ ಅಧಿಕಾರಿಗಳನ್ನು ಕೊಲೆಮಾಡುತ್ತಿದ್ದ ಕ್ರಾಂತಿಕಾರಕರಿಗೆ ಆಗಾಗ್ಗೆ ಸಾರ್ವಜನಿಕವಾಗಿ ಎಚ್ಚರಿಕೆ ಕೊಟ್ಟು ಅವರ ಕೃತಿಯಿಂದಾಗುವ ಅನರ್ಥಗಳನ್ನು ತಿಳಿಸಿ ಆ ಘೋರ ಕೃತ್ಯವನ್ನು ಅವರು ಬಿಡುವಂತೆ ಪ್ರಯತ್ನಿಸಿದ್ದರಷ್ಟೆ.

ಅದೇ ಪ್ರಕಾರ ಹಿಂದು ಮುಂದಾಳುಗಳನ್ನು ಕೊಲೆಮಾಡುವ ಮುಸಲ್ಮಾನ್ ಅತ್ಯಾಚಾರಿಗಳಿಗೆ ಈಗಲಾದರೂ ಸಾರ್ವಜನಿಕವಾಗಿ ಎಚ್ಚರಿಕೆ ಕೊಟ್ಟು ಅವರ ಕೃತಿಯಿಂದಾಗುವ ಅನರ್ಥವನ್ನು ತೋರಿಸಿ ಅವರು ಇಂಥ ಅತ್ಯಾಚಾರಗಳಿಂದ ದೂರಾಗುವಂತೆ ಪ್ರಯತ್ನಿಸುವುದು ಮಹಾತ್ಮರ ಕರ್ತವ್ಯವಲ್ಲವೆ? ಹಿಂದು ಮುಸಲ್ಮಾನರಲ್ಲಿ ದ್ವೇಷಾಸೂಯೆಗಳು ಹೆಚ್ಚಲಿಕ್ಕೂ ಆದರಿಂದ ರಾಷ್ಟ್ರವು ಅನೇಕ ಅನರ್ಥಗಳಿಗೆ ಗುರಿಯಾಗಲಿಕ್ಕೂ ಇಂಥ ಅತ್ಯಾಚಾರಗಳು ಕಾರಣವಾಗಿಲ್ಲವೆ?

### ಕರ್ನಾಟಕದಲ್ಲಿ ದುಶ್ಚಿನ್ಹ.

ಉತ್ತರ ಹಿಂದುಸ್ಥಾನದಲ್ಲಿಯೇ ಇಂಥ ಅತ್ಯಾಚಾರಗಳು ನಡೆಯುತ್ತಿದ್ದುದನ್ನು ನಾವು ಈ ವರೆಗೆ ಕೇಳುತ್ತಿದ್ದೆವು. ಈಗ ಕರ್ನಾಟಕದಲ್ಲಿಯೂ ಅಂತಹ ಅತ್ಯಾಚಾರಗಳು ಅಲ್ಪ ಪ್ರಮಾಣದಲ್ಲಿ ಪ್ರಾರಂಭವಾಗಿರುವುದು ದುಶ್ಚಿನ್ಹವೇ ಸರಿ.

ಮೊನ್ನೆ ವಿಜಾಪುರದಲ್ಲಿ ಸತ್ಯಾಗ್ರಹಿಗಳ ಮೇಲೆ ಮುಸಲ್ಮಾನರು ಮಾಡಿದ ಅತ್ಯಾಚಾರ, ಬಾಗಲಕೋಟೆಯಲ್ಲಿ ಈ ಮುಂಚೆ ನಾಟಕದ ಕಾಲಕ್ಕೂ ಮೊನ್ನೆ ಆರ್ಯ ಸಮಾಜದವರ ವ್ಯಾಖ್ಯಾನದ ಕಾಲಕ್ಕೂ ನಡೆದ ಗೊಂದಲ, ಇವು ಮುಂದಿನ ಅನರ್ಥದ ದುಶ್ಚಿನ್ಹೆಗಳಾಗಿವೆ. ಈಗಲೇ ವಿಚಾರಪರರು ಇತ್ತ ಲಕ್ಷಿಸಿ ಇಂಥ ಪುಂಡಾಟಿಕೆ ನಡೆಯದಂತೆ ಪ್ರಯತ್ನಿಸುವುದು ಅಗತ್ಯವಾಗಿದೆ.

ಅತ್ಯಾಚಾರ ನಡೆಸುವ ಮುಸಲ್ಮಾನ ಬಂಧುಗಳು ತಮ್ಮ ಸಮಾಜಕ್ಕೆ ಬಹು ಕೇಡನ್ನೇ ಮಾಡುತ್ತೇವೆಂದು ಅವರು ಖಂಡಿತವಾಗಿ ತಿಳಿಯಬೇಕು. ತಮ್ಮ ದುಷ್ಟ ಕಾರ್ಯದ ಪರಿಣಾಮವು ಮುಂದೆ ಹೇಗಾಗಬಹುದೆಂಬುದನ್ನು ಯೋಚಿಸಬೇಕು. ಹಿಂದುಗಳು ಹೇಗೆ ತಮ್ಮ ನೆರೆಯಲ್ಲಿರಬೇಕಾಗಿದೆಯೋ ಹಾಗೆಯೇ ತಾವಾದರೂ ಅವರ ನೆರೆಯಲ್ಲಿಯೇ ಜೀವಿಸಬೇಕಾಗಿದೆಯೆಂಬುದನ್ನು ಯಾವಾಗಲೂ ಲಕ್ಷ್ಯದಲ್ಲಿಟ್ಟಿರಬೇಕು. ಇಂಥ ಅತ್ಯಾಚಾರಗಳಿಗೆ ಅಂಜಿ ಸ್ವಧರ್ಮದ ಮತ್ತು ಸ್ವರಾಷ್ಟ್ರದ ನ್ಯಾಯಕಾರ್ಯಗಳನ್ನು ಬಿಟ್ಟುಬಿಡುವ ಕಾಲವು ಇದಲ್ಲವೆಂಬುದನ್ನು ಅವರು ಯೋಚಿಸಬೇಕು. ಕರ್ನಾಟಕದಲ್ಲಿರುವ ಈಗಿನ ಹಿಂದು-ಮುಸಲ್ಮಾನರ ಐಕಮತ್ಯಕ್ಕೆ ಭಂಗವುಂಟಾಗುವ ಇಂಥ ಅತ್ಯಾಚಾರಗಳಿಗೆ ಅವರು ಮನಸು ಕೊಡಬಾರದಾಗಿ ನಾವು ಆ ನಮ್ಮ ಮುಸಲ್ಮಾನ್ ಬಂಧುಗಳಿಗೆ ಪ್ರೇಮಪೂರ್ವಕ ತಿಳಿಸದಿರಲಾರೆವು.

---

## ವೀರಶೈವ ತರುಣ ಪರಿಷತ್ತಿನ

### ಕಾರ್ಯ ಪದ್ಧತಿ.

ಅಖಿಲ ಭಾರತ ವೀರಶೈವ ಮಹಾಸಭೆಯ ೧೩ ನೆಯ ಅಧಿವೇಶನವು ಈ ಸಾರಿ ಹುಬ್ಬಳ್ಳಿಯಲ್ಲಿ ಕೂಡುವ ಕಾಲಕ್ಕೆ ವೀರಶೈವ ತರುಣ ಪರಿಷತ್ತಿನ ೩ ನೆಯ ಅಧಿವೇಶನವನ್ನೂ ಅಲ್ಲಿ ಕೂಡಿಸಬೇಕೆಂದು ಗೊತ್ತುಮಾಡಿರುವುದು ಅಭಿನಂದನೀಯವಾದುದು. ವೀರಶೈವ ತರುಣರಲ್ಲಿ ಸಮಾಜದ ಮತ್ತು ರಾಷ್ಟ್ರದ ಹಿತಕ್ಕೋಸ್ಕರ ಪ್ರಯತ್ನಿಸತಕ್ಕ ಪ್ರವೃತ್ತಿಯು ಹೆಚ್ಚುವುದಕ್ಕೆ ಇಂತಹ ಪರಿಷತ್ತುಗಳು ಅಗತ್ಯವಾಗಿವೆ.

ವೀರಶೈವ ತರುಣರ ಸಮ್ಮೇಲನವು ೧೯೧೭ ರಲ್ಲಿ ಮೊದಲು ಏರ್ಪಟ್ಟಿತು. ಅನಂತರ ನಾಲ್ಕಾರು ವರುಷ ತಪ್ಪದೇ ಅದರ ಅಧಿವೇಶನಗಳು ಬೇರೆ ಬೇರೆ ಕಡೆ ಕೂಡಿ ವೀರಶೈವ ತರುಣರಲ್ಲಿ ಎಷ್ಟೋ ಜಾಗೃತಿಯನ್ನುಂಟುಮಾಡಿದವು. ಈಗ ವೀರಶೈವ ಸಮಾಜದ ಕರ್ನಾಟಕ ಮತ್ತು ಮಹಾರಾಷ್ಟ್ರ ಭಾಗಗಳಲ್ಲಿ ಅನೇಕ ತರುಣ ಸಂಘಗಳು ಅಲ್ಪ ಸ್ವಲ್ಪ ಸಮಾಜ ಕಾರ್ಯ ಮಾಡುತ್ತಿರುವುದಾದರೂ ಆಗಿನ ಜಾಗೃತಿಯ ಫಲವೇ ಸರಿ. ಆಗಿನ ತರುಣ ಸಂಘವು ತನ್ನ ಒಂದು ಮಾಸ ಪತ್ರಿಕೆಯನ್ನು ಕೂಡಾ ಹೊರಡಿಸಿ ಆಗ ಅತ್ಯಲ್ಪ ಸೇವೆ ಮಾಡಿದ್ದಿತು.

ಕಳೆದ ಹತ್ತಾರು ವರುಷಗಳಿಂದ ವೀರಶೈವ ತರುಣ ಸಂಘದ ಆಗಿನ ಕಾರ್ಯಕಲಾಪಗಳೆಲ್ಲಾ ದಿನೆ ದಿನೆ ಕಡಿಮೆಯಾಗುತ್ತಾ ಬಂದವು. ಆ ಮೇಲೆ ಮಹಾಸಭೆಯ ಕಾಲಕ್ಕೇನೇ ತರುಣರ ಪರಿಷತ್ತನ್ನು ಕೂಡಿಸುವ ಪದ್ಧತಿಯುಂಟಾದುದರಿಂದ ಇದು ಅಂತಹ ಮೂರನೆಯ ಪರಿಷತ್ತಾಗಿ ಪರಿಣಮಿಸಿದೆ. ಈ ಪರಿಷತ್ತು ಒಂದು ನಿಶ್ಚಿತವಾದ ಧ್ಯೇಯವನ್ನಿಟ್ಟುಕೊಂಡು ವಿಧಾಯಕ ಕಾರ್ಯಕ್ರಮಗಳನ್ನು ಗೊತ್ತುಮಾಡಿ ಆ ಪ್ರಕಾರ ನಡೆಯುತ್ತಾ ಇಲ್ಲ. ಮಹಾಸಭೆಯು ಹೇಗೆ ಮೂರು ದಿನಗಳ ಉತ್ಸವವಾಗಿ ಪರಿಣಮಿಸಿದೆಯೋ ಹಾಗೆಯೇ ಈ ತರುಣರ ಪರಿಷತ್ತು ಕೂಡಾ ಒಂದೆರಡು ದಿನ ಕೂಡಿ ಮಾಯವಾಗುವುದಾಗಿದೆ. ಹೀಗೆ ಈ ಕಾಲದಲ್ಲಿ ತರುಣರ ಪರಿಷತ್ತು ಎಷ್ಟು ವರುಷ ಕೂಡುತ್ತಾ ಹೋದರೂ ಅದರಿಂದ ಸಮಾಜಕ್ಕೆ ಯಾವ ಪ್ರಯೋಜನವೂ ಇಲ್ಲ.

**ಹುಬ್ಬಳ್ಳಿಯಲ್ಲಿಯೂ ಹೀಗೆಯೆ ?**

ಹುಬ್ಬಳ್ಳಿಯಲ್ಲಿ ಈ ಸಾರಿ ಕೂಡುವ ವೀರಶೈವ ತರುಣರ ಪರಿಷತ್ತೂ ಹೀಗೆಯೇ ಕೂಡಿ ಮಾಯವಾಗುವುದೆ? ಹುಬ್ಬಳ್ಳಿಯ ವೀರಶೈವ ತರುಣರು ತಮ್ಮ ಕಾರ್ಯೋತ್ಸಾಹವನ್ನು ಈ ಮುಂಚೆ ಎಷ್ಟೋ ತೋರಿಸಿದ್ದಾರೆ. ಎಲ್ಲಾ ತರುಣ ಸಂಘಗಳ ಒಂದು ಸಂಯುಕ್ತ ಸಂಘವನ್ನು ಸ್ಥಾಪಿಸಿ ಆ ಮೂಲಕ ಪ್ರಚಾರಕರನ್ನು ನಿಯಮಿಸಿ ಎಷ್ಟೋ ಸಮಾಜ ಸೇವೆಯನ್ನು ಮಾಡಿದ್ದಾರೆ. ತರುಣ ಸಂಘಗಳಿಂದ ಎಷ್ಟು ಪರಿಣಾಮಕಾರಿಯಾದ ಕಾರ್ಯ ಮಾಡಬಹುದೆಂಬುದೂ ಅವರಿಗೆ ಗೊತ್ತಾಗಿದೆ. ಹೀಗಿರುವಾಗ ಈ ಸಾರಿ ತಮ್ಮ ಸ್ಥಳದಲ್ಲಿಯೇ ಕೂಡುವ ಈ ತರುಣ ಪರಿಷತ್ತು ಈ ಮುಂಚಿನ ಪರಿಷತ್ತುಗಳಂತೆಯೇ ಆಗುವ ಹಾಗೆ ಮಾಡುವರೆ ?

ಅಂತಹ ವಿಷಾದಕರವಾದ ಸ್ಥಿತಿ ಬರುವಂತೆ ಈ ಸಾರೆಯ ತರುಣ ಪರಿಷತ್ತಿನ ಕಾರ್ಯ ಕಲಾಪಗಳನ್ನು ನಡೆಯಿಸಲಾರರೆಂದೂ ಇದರ ನಿಶ್ಚಿತವಾದ ಧ್ಯೇಯ ಕಾರ್ಯ ಕ್ರಮಗಳನ್ನು ಗೊತ್ತುಪಡಿಸಿ ಅದೇ ಪ್ರಕಾರ ಪರಿಣಾಮಕಾರಿಯಾಗುವಂತೆ ಕಾರ್ಯ ನಡೆಯುವ ಏರ್ಪಾಟನ್ನು ಮಾಡುವರೆಂದೂ ನಾವು ನಂಬಿದ್ದೇವೆ.

**ಅಧ್ಯಕ್ಷರು ಮಹಾ ಸಮರ್ಥರು. ಆದರೆ ?**

ಈ ಸಾರೆಯ ತರುಣರ ಪರಿಷತ್ತಿಗೆ ಉದ್ಗಿರಿಯ ಶ್ರೀ. ವಕೀಲ ಸಂಗ್ರಾಮಪ್ಪನವರನ್ನು ಅಧ್ಯಕ್ಷರನ್ನಾಗಿ ಸ್ವಾಗತ ಸಂಘದವರು ಆರಿಸಿರುವರೆಂದು ಪ್ರಕಟವಾಗಿದೆ. ಶ್ರೀ. ಸಂಗ್ರಾಮಪ್ಪನವರು ಕೇವಲ ನಿಜಾಮ ಭಾಗದ ವೀರಶೈವರಲ್ಲಯೇ ಅಲ್ಲ; ಇಡೀ ವೀರಶೈವ ಸಮಾಜದಲ್ಲಿಯೇ ಒಬ್ಬ ತೇಜಸ್ವಿ ಮುಂದಾಳುಗಳಾಗಿದ್ದಾರೆ. ಇವರಲ್ಲಿರುವ ಸಮಾಜ ಕಾರ್ಯ ತತ್ಪರತೆ, ಸಂಘಟನಾ ಕೌಶಲ್ಯ, ಕಾರ್ಯಪದ್ಧತಿ ಆದರ್ಶಪ್ರಾಯವಾಗಿವೆ. ಆದಕಾರಣ ವೀರಶೈವ ತರುಣ ಸೈನಿಕರಿಗೆ ಶ್ರೀ. ಸಂಗ್ರಾಮಪ್ಪನವರು ಸಮರ್ಥರಾದ ಸೇನಾಧಿಪತಿಗಳೇ ಆಗಿದ್ದಾರೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

ಆದರೆ ನಿಜಾಮ ರಾಜ್ಯದಲ್ಲಿ ನಡೆದಿರುವ ಈಗಿನ ದಬ್ಬಾಳಿಕೆಯ ಪರಿಸ್ಥಿತಿಯಲ್ಲಿ ಆ ಭಾಗದಲ್ಲಾಗಲಿ ಅಥವಾ ಬ್ರಿಟಿಶ್ ಭಾಗದಲ್ಲಾಗಲಿ ಈ ಸಾರ್ವಜನಿಕ ಕಾರ್ಯ ಮಾಡಲು ಅವರಿಗೆ ಎಷ್ಟರ ಮಟ್ಟಿಗೆ ಶಕ್ಯವೆಂಬುದೇ ಒಂದು ಮುಖ್ಯ ಪ್ರಶ್ನೆ. ಅಧ್ಯಕ್ಷರ ಕಾರ್ಯದ ಮೇಲೆಯೇ ಪರಿಷತ್ತಿನ ವಾರ್ಷಿಕ ಕಾರ್ಯವು ಅವಲಂಬಿಸಿರುತ್ತದಷ್ಟೆ. ಆದುದರಿಂದ ನಾವು ಈ ವಿಷಯವನ್ನು ಪ್ರಸ್ತಾಪಿಸಬೇಕಾಯಿತು.

ಈ ಸಾರೆಯ ತರುಣ ಪರಿಷತ್ತಾದರೂ ಒಂದೆರಡು ದಿನಗಳ ಪರಿಷತ್ತಾಗಿ ಪರಿಣಮಿಸದೆ ವರುಷದ ವರೆಗೂ ಕಾರ್ಯ ಮಾಡಿ ಮಹಾಸಭೆಗೆ ಮಾರ್ಗದರ್ಶಿಯಾಗಲೆಂದೇ ಹಾರೈಸುತ್ತೇವೆ.

---

### ವೀರಶೈವ ಮಹಾ ಸಭೆಗೆ

## ಶ್ರೀ. ಬಸವನಾಳರು ಅಧ್ಯಕ್ಷರು.

ಹುಬ್ಬಳ್ಳಿಯಲ್ಲಿ ಕೂಡುವ ೧೩ ನೆಯ ವೀರಶೈವ ಮಹಾಸಭೆ ಅಧ್ಯಕ್ಷತೆಗೆ ಡಿ. ಜಜ್ಜ. ಶ್ರೀ. ಎಂ. ಸಿ. ಹುಲಕೋಟಿ, ಪ್ರೊಫೆಸರ್ ಬಸವನಾಳ, ಶ್ರೀ. ಮಂಜಪ್ಪ ಹರ್ಡೇಕರ ಈ ಮೂವರ ಹೆಸರನ್ನು ಸ್ವಾಗತ ಸಂಘದವರು ಇಟ್ಟುಕೊಂಡಿದ್ದರು. ಶ್ರೀ. ಹುಲಕೋಟಿಯವರು ಅಧ್ಯಕ್ಷರಾಗಲು ಒಪ್ಪದಿದ್ದುದರಿಂದ ಪ್ರೊ. ಬಸವನಾಳರನ್ನು ಅಧ್ಯಕ್ಷರನ್ನಾಗಿ ಮಾಡಿದ್ದಾರೆಂದು ವಿಶ್ವಸನೀಯವಾಗಿ ತಿಳಿದಿದೆ.

ಶಿರ್ವ ಪ್ರವಾಸಿ.

# ಕರ್ನಾಟಕದ ಸವಿ.

ಮುಖ್ಯ ಮಂತ್ರಿಗಳಾದ ಮಾನ್ಯ ಖೇರರವರು ತಾ. ೮ ನೆಯ ದಿನ ಧಾರವಾಡದಲ್ಲಿ ಕರ್ನಾಟಕ ಪ್ರಾಂತಿಕ ಶಿಕ್ಷಣ ಪರಿಷತ್ತನ್ನು ಉದ್ಘಾಟನ ಮಾಡುವಾಗ ಹೀಗೆ ಹೇಳಿದರು.—

"ನನಗೂ ಕರ್ನಾಟಕಕ್ಕೂ ನಿಕಟವಾದ ಸಂಬಂಧವಿದೆ. ವಾಸ್ತವಿಕವಾಗಿ ನಾನು ಕನ್ನಡಿಗನು. ನನ್ನ ಬಾಲ್ಯವು ಕರ್ನಾಟಕದಲ್ಲಿಯೆ ಕಳೆಯಿತು. ಈಗ ನಾನು ಕರ್ನಾಟಕವನ್ನು ಬಿಟ್ಟು ೪೦ ವರ್ಷಗಳಾದುದರಿಂದ ಕನ್ನಡ ಭಾಷೆಯನ್ನು ಮರೆತಿರುವೆನು. ಆ ಸಂಸ್ಕೃತಿಯನ್ನು ಮಾತ್ರ ಮರೆತಿಲ್ಲ. ಕರ್ನಾಟಕದ ಚಿತ್ರಾನ್ನ ಹಾಗು ಹುಗ್ಗಿಯ ಸವಿಯನ್ನು ನಾನು ಮರೆಯುವಂತಿಲ್ಲ. ಕರ್ನಾಟಕ ಚಿತ್ರವು ನನ್ನ ಕಣ್ಣಮುಂದೆ ಇದೆ.

ಕರ್ನಾಟಕದ ಹಲವು ಜಿಲ್ಲೆಗಳು ಅಂದರೆ ನೀವಿರುವ ಜಿಲ್ಲೆಗಳು ಬೇರೆ ಬೇರೆಯಾಗಿ ಹರದುಹಂಚಿ ಹೋಗಿರುವದರಿಂದ ನ್ಯಾಯವಾದ ಹಿತವು ನಿಮಗೆ ಇಲ್ಲ. ನೀವು ಕೊಡುವ ತೆರಿಗೆಯ ಹಣದ ಉಪಯೋಗವು ನಿಮಗೆ ಆಗಿಲ್ಲ. ಕರ್ನಾಟಕಕ್ಕೆ ಸ್ವತಂತ್ರ ಪ್ರಾಂತವು ಬೇಕು. ಇದೀಗ ಸಮುಗ್ರ ಕರ್ನಾಟಕದ ಬೇಡಿಕೆ. ೧೦೦ ಜನರಿರುವ ಹಳ್ಳಿಯಲ್ಲಿಯೂ ಈ ಭಾವನೆಯು ಪ್ರಧಾನವಾಗಿದೆ. ಏಚ್ಚೆತ್ತ ಕರ್ನಾಟಕದ ಬೇಡಿಕೆಯು ಸರ್ವಮಾನ್ಯವಾದದ್ದು. ಮದ್ರಾಸ ಪ್ರಾಂತದಲ್ಲಿ ನನ್ನ ಹಿರೀ ಸೋದರರಾದ ಶ್ರೀ. ರಾಜಗೋಪಾಲಾಚಾರಿಯವರು ಆಂಧ್ರ ಪ್ರಾಂತ ರಚನೆಯ ಬಗ್ಗೆ ಯಾವ ಪ್ರಯತ್ನ ಮಾಡುವರೋ ಆ ಪ್ರಯತ್ನಗಳನ್ನೆಲ್ಲ ನಾನೂ ಮಾಡುವೆನು. ಶಿಕ್ಷಣದಲ್ಲಿ ಕರ್ನಾಟಕವು ಸಾಕಷ್ಟು ಮುಂದೆ ಬಂದಿಲ್ಲ. ಕರ್ನಾಟಕದ ಕಡೆಗೆ ಸಾಕಷ್ಟು ಲಕ್ಷ್ಯವನ್ನು ಕೊಟ್ಟಂತೆ ಕಂಡುಬರುವದಿಲ್ಲವೆಂಬ ನಿಮ್ಮ ಆರೋಪದಲ್ಲಿ ತಥ್ಯಾಂಶವಿದೆ. ಪ್ರಾಥಮಿಕ ಶಿಕ್ಷಣದ ಕಡೆಗೆ ನಮ್ಮ ಲಕ್ಷ್ಯ ಹೆಚ್ಚಿರಬೇಕು. ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಸಿಪಾಯಿಗಳಿಗಿಂತ ಕಡಿಮೆ ಸಂಬಳವನ್ನು ಕೊಡುತ್ತಿರುವೆವು. ಇದು ಅವರ ದುಡಿಮೆಗೆ ಸಾಕಾಗುವಷ್ಟು ವೇತನವಲ್ಲ.

ಈಗ ಎಲ್ಲರಿಗೂ ಉಪಯುಕ್ತವಾಗುವ ವರ್ಧಾ ಯೋಜನೆಯ ಪ್ರಾಯೋಗಿಕ ಉಪಕ್ರಮವು ನಡೆದಿದೆ. ಕರ್ನಾಟಕದಲ್ಲಿಯೂ ಆ ಶಿಕ್ಷಣ ಕ್ರಮವು ಜಾರಿಗೆ ಬಂದು ಮುಂದಿನ ಪೀಳಿಗೆಯಲ್ಲಿ ಆತ್ಮ ವಿಶ್ವಾಸ ಹಾಗು ಸ್ವಾವಲಂಬನವುಂಟಾಗುವಂತೆ ಮಾಡಲಾಗುವದು."

## ವೀರಶೈವ ಜಾಹೀರ ಸಭೆ.

ಹಾವೇರಿ ವೀರಶೈವರ ಜಾಹೀರ ಸಭೆಯು ಹಾವೇರಿ ಹುಕ್ಕೇರಿ ಮಠದಲ್ಲಿ ತಾ. ೬ ನೆಯ ದಿವಸ ಸಂಜೆ ೭ ಗಂಟೆಗೆ ಶ್ರೀಯುತ ಬಸಪ್ಪನವರು ಮಾಗನೂರು ಇವರ ಅಧ್ಯಕ್ಷತೆಯಲ್ಲಿ ಕೂಡಿ ಪಾಸಾದ ಠರಾವುಗಳು—

೧ ಬಸವರಾಜ ಪತ್ರಿಕೆಯಲ್ಲಿ ಪ್ರಕಟವಾದ ಸೊಲ್ಲಾಪುರದ ಶರಣೆ ರುದ್ರಮ್ಮನವರ ವಿಷಯದಲ್ಲಿ ಪಂಚಾಚಾರ್ಯಪ್ರಭಾ ಪತ್ರಿಕೆಯವರು ಬರೆದಿರುವ ಆಕ್ಷೇಪಣೆಯ ವಿಷಯ ಮತ್ತು ಸದರೀ ಪತ್ರಿಕೆಯಲ್ಲಿ ಪ್ರಕಟವಾಗುವ ಕೆಲವು ತತ್ವಗಳ ನಿಂದಾವಿಷಯ ಸಹ ವಿಚಾರಮಾಡಿ ಈ ವಿಷಯದಲ್ಲಿ ಪತ್ರಿಕೆಗಳು ಯಾವದೇ ಆದರೂ ವೀರಶೈವ ಸಮಾಜದ ಶಾಂತತೆಗೆ ಭಂಗ ಬರುವಂಥ ವಿಷಯಗಳನ್ನು ಪ್ರಕಟಿಸಿದರೆ ಅಂಥ ಪತ್ರಿಕೆಗಳನ್ನು ಪ್ರಚಾರ ಮಾಡಲಿಕ್ಕೆ ಸರಕಾರ [illegible] ವರ್ಣಾಶ್ರಮ ಮಹಾಸಭೆಯು ವರು ನಿರ್ಣಯವನ್ನು ಮಾಡಲು ಈ ಸಭೆಯು ಮಹಾಸಭೆಯನ್ನು ಪ್ರಾರ್ಥಿಸುತ್ತದೆ.

೨ ವೀರಶೈವರಲ್ಲಿ ವರ್ಣಾಶ್ರಮವುಂಟೋ ಇಲ್ಲವೋ ಎಂಬ ವಿಷಯದಲ್ಲಿ ತಕ್ಕ ನಿರ್ಣಯವನ್ನು ಮಾಡುವುದು ಬಹಳ ಅವಶ್ಯವದೆ ಎಂಬುದನ್ನು ಮಹಾಸಭೆಗೆ ಈ ಸಭೆಯು ಬೇಡಿಕೊಳ್ಳುತ್ತದೆ.

ಈ ಠರಾವುಗಳನ್ನು ವೀರಶೈವ ಮಹಾಸಭಾ ಸ್ವಾಗತ ಕಮಿಟಿ ಹುಬ್ಬಳ್ಳಿ ಇವರಿಗೆ ಕಳಿಸಿದೆ.

ಕಾರ್ಯದರ್ಶಿ.

## ವೀರಶೈವ ತರುಣ ಸಂಘ, ಜಂತಿ.

ನಿಜಾಂ ಸ್ಟೇಟ್ ಜಿಲ್ಲಾ ಬೀದರ ಪೈಕಿ ಜಂತಿ ಎಂಬ ಗ್ರಾಮದಲ್ಲಿ ೨೭-೧೧-೩೮ ನೆಯ ದಿವಸ ಶ್ರೀ. ಚ. ಗುರುಶಾಂತ ಪಟ್ಟದ್ದೇವರ ಅಧ್ಯಕ್ಷತೆಯಲ್ಲಿ ವೀರಶೈವ ತರುಣ ಸಂಘ ಸ್ಥಾಪನೆಯಾಯಿತು. ಈ ಮಹೋತ್ಸವಕ್ಕೆ ಸಮಾಜ ಕಾರ್ಯಧುರೀಣರಾದ ಶ್ರೀಮಾನ್ ಭೀಮರಾವ ಪಾಟೀಲ ಜಂತಿ ಇವರು ಒಳ್ಳೇ ಸ್ಫೂರ್ತಿದಾಯಕ ಭಾಷಣಮಾಡಿ ಜನರನ್ನು ಜಾಗೃತಗೊಳಿಸಿದರು. ಕೊನೆಗೆ ಅಧ್ಯಕ್ಷರ ಉಪಸಂಹಾರ ಭಾಷಣವಾಗಿ ಸಭೆಯು ಜಯಜಯಕಾರದೊಡನೆ ಮುಕ್ತಾಯಗೊಳಿಸಲ್ಪಟ್ಟಿತು.

ಅಧ್ಯಕ್ಷ— ಶ್ರೀ ಗುರುಶಾಂತ ಪಟ್ಟದ್ದೇವರು, ಉ. ಅಧ್ಯಕ್ಷ- ಶ್ರೀ. ಚನ್ನಯ್ಯ ಚಿಕ್ಕಮಠ, ಸೆಕ್ರೆಟರಿ- ಶ್ರೀ. ಮುರಿಗೆಪ್ಪ ನಮಾಸಿ ಅ. ಸೆಕ್ರೆಟರಿ- ಶ್ರೀ. ಸಂಗಪ್ಪ ಚಾಕೂರ, ಕೋಶಾಧ್ಯಕ್ಷ- ಸಿದ್ಧಪ್ಪ ಸಿದ್ಧವೀರ, ಲೈಬ್ರರಿ ಸೆಕ್ರೆಟರಿ- ಸಿದ್ರಾಮಪ್ಪ ಲಂಬಾ, ಸೇನಾಪತಿ- ಶ್ರೀ. ಪಂಚಪ್ಪ ಸಿದ್ಧವೀರ, ಉಪಸೇನಾಪತಿ- ಶ್ರೀ. ಶಂಕ್ರಯ್ಯ ಮಠಪತಿ.

—ಸೆಕ್ರೆಟರಿ.

## ಕರ್ನಾಟಕ ನಾಟ್ಯಕಲಾ ಸಮ್ಮೇಳನ ಬಳ್ಳಾರಿ.

ಶ್ರೀ. ಶಿವರಾಮ ಕಾರಂತರು ಆದರದಿಂದ ನಾಟ್ಯಕಲಾ ಸಮ್ಮೇಳನದ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಲು ಒಪ್ಪಿರುವರೆಂದು ತಿಳಿಸಲು ಆನಂದವಾಗುತ್ತದೆ. ಮತ್ತು ಶ್ರೀ. ಜಹಗೀರದಾರರು ನಾಟ್ಯ ಸಮ್ಮೇಳನವನ್ನು ಮೊದಲಿಡಲು ಒಪ್ಪಿರುವರೆಂದು ತಿಳಿಸಲು ಹರುಷವಾಗುತ್ತದೆ.

ನಟಚಕ್ರವರ್ತಿಗಳಾದ ಶ್ರೀ ರಾಘವರು ತಮ್ಮ ಬಳ್ಳಾರಿ ಕಲಾಭಿಮಾನಿಗಳ ಸಂಘದವರೊಂದಿಗೆ ಉತ್ತಮವಾದ ನಾಟಕವನ್ನು ಕನ್ನಡದಲ್ಲಿ ಅಭಿನಯಿಸಲು ಒಪ್ಪಿದ್ದಕ್ಕಾಗಿ ಅವರಿಗೂ ಸಂಘದವರಿಗೂ ಧನ್ಯವಾದಗಳು. ಶ್ರೀಮತಿ ಕಾರಂತರು ಹಾಗು ಶ್ರೀಮತಿ ಪದ್ಮಾವತಿಬಾಯಿ ಇವರನ್ನು ನಾಟ್ಯ ಸಮ್ಮೇಳನಕ್ಕೆ ಬಂದು ಸಹಾಯ ಮಾಡಲು ಬೇಡಲಾಗಿದೆ. ಸಾಹಿತ್ಯ ಸಮ್ಮೇಳನದವರು ನಾಟ್ಯ ಸಮ್ಮೇಳನಕ್ಕೆ ಆಶ್ರಯ ಕೊಟ್ಟದ್ದಕ್ಕಾಗಿ ಚಿರಕಾಲ ಋಣಿಗಳಾಗಿರುತ್ತೇವೆ. ವಿನೋದ ಆಟಗಳ ಸಮಿತಿಯವರಿಗೆ ಕಲಾಪ್ರೇಮಿಗಳ ಸಂಘದವರ ನಾಟಕವನ್ನು ಸಮ್ಮೇಳನದ ಆವರ್ಣದಲ್ಲಿ ಆಡಿಸಲು ಅನುಮತಿಯನ್ನು ಬೇಡಲಾಗಿದೆ.

ಕಲಾಪೋಷಕರೂ ಕಲಾಕೋವಿದರೂ ಸಕಾಲಕ್ಕೆ ಬಂದು ಸಮ್ಮೇಳನವನ್ನು ಯಶಸ್ವಿಯಾಗಿ ಮಾಡುವರೆಂದು ಪ್ರಾರ್ಥನೆ. ಕಲಾಕೋವಿದರು ಹೆಚ್ಚಿನ ವಿಷಯಗಳನ್ನು ತಿಳಿಸಿ ಸ್ವಾಗತ ಸಮಿತಿಯವರನ್ನು ಉದ್ಧರಿಸಲು ಬೇಡುತ್ತೇವೆ.

ಕಾರ್ಯದರ್ಶಿ.

## ವೀ. ಮಹಾಸಭೆಯ ಅಧ್ಯಕ್ಷಸ್ಥಾನಕ್ಕೆ ಸೂಚಿಸಲ್ಪಟ್ಟವರ ಹೆಸರುಗಳು.

ಮಹಾಸಭೆಯ ನಿಯಮಗಳ ಪ್ರಕಾರ ಕೆಲವು ಮಹನೀಯರ ಹೆಸರುಗಳನ್ನು ಮಧ್ಯವರ್ತಿ ಕಮಿಟಿಯವರು ಹುಬ್ಬಳ್ಳಿ ಸತ್ಕಾರಕ ಸಂಘದ ಕಡೆಗೆ ಮೊದಲು ಸೂಚಿಸಬೇಕು. ಹೀಗೆ ಸೂಚಿಸಲ್ಪಟ್ಟವರಲ್ಲಿ ಒಬ್ಬರನ್ನು ಸತ್ಕಾರಕ ಸಂಘದವರು ಆರಿಸತಕ್ಕದ್ದು. ಹೀಗೆ ಕ್ರಮವಿದ್ದು ಇದಕ್ಕನುಸಾರವಾಗಿ ಮಧ್ಯವರ್ತಿ ಕಮಿಟಿಯ ಸಭಾಸದರ ಅಭಿಪ್ರಾಯಗಳನ್ನು ಅದರ ಚೇರಮನ್‌ರಾದ ರಾ. ಸಾ. ಹಳಕಟ್ಟಿಯವರು ಪತ್ರಮುಖದಿಂದ ತರಿಸಿಕೊಂಡು ೧೦ ಜನರ ಹೆಸರುಗಳನ್ನು ಅಧ್ಯಕ್ಷಪದಕ್ಕೋಸ್ಕರ ಸೂಚಿಸಿದ್ದಾರೆ. ಈ ವಿಷಯವು ಬಹು ಜನರ ಮನಸ್ಸನ್ನು ಎಳೆದಿರುವದರಿಂದ ಇದರ ವಿವರವನ್ನು ಕೆಳಗೆ ಕೊಟ್ಟಿದೆ—

ಒಟ್ಟು ೨೬ ಜನ ಸಭಾಸದರು ತಮ್ಮ ಮತ ಕೊಟ್ಟಿದ್ದು ಮತ ಎಣಿಕೆಯಲ್ಲಿ ಮೊದಲಿನ ೮ ಸ್ಥಾನಗಳಲ್ಲಿ ಕೆಳಗೆ ಕಾಣಿಸಿದ ಮಹನೀಯರು ಬಂದಿದ್ದಾರೆ. ೧. ಬಸ್ಯ. ಸರದಾರ ೧೪ ಮತಗಳು, ೨. ಮಂಜಪ್ಪ ಹರ್ಡೇಕರ ೧೧ ಮತಗಳು, ೩. ಸಿ. ಸಿ. ಹುಲಕೋಟಿ ೪. ಶ್ರೀ ಮಹಾದೇವ ಸ್ವಾಮಿಗಳು ಬೆಂಗಳೂರು, ೫. ನಾಗಪ್ಪ ಕಾಡಾದಿ ಈ ಮೂವರಿಗೆ ೮ ಮತಗಳು, ೬. ಪಿ. ಆರ್. ಚಿಕ್ಕೋಡಿ, ೭. ಸಂಗ್ರಾಮಪ್ಪ ವಕೀಲ ಉದಗೀರ, ೮. ರಾ. ಸಾ. ಹಳಕಟ್ಟಿ ಈ ಕಡೆ ಮೂವರಿಗೆ ೭ ಮತಗಳು ಬಿದ್ದಿವೆ.

ರಾ. ಸಾ. ಹಳಕಟ್ಟಿಯವರು ತಮ್ಮ ಉಮೇದುವಾರಿಕೆಯನ್ನು ಹಿಂತೆಗೆದುಕೊಂಡದ್ದರಿಂದ ೬ ಮತಗಳುಳ್ಳ ೧. ರಾ. ರಾ. ಜಿ. ಪರಶಿವಯ್ಯ, ೨. ವಾಯ್. ಮಹಾಬಳೇಶ್ವರಪ್ಪ, ೩. ಎಸ್. ಎಸ್. ಬಸವನಾಳಇವರು ಅಧ್ಯಕ್ಷಪದಕ್ಕೆ ಶಿಫಾರಸುಮಾಡಲ್ಪಟ್ಟರು. ಅಂತೂ ೧೦ ಜನರ ಹೆಸರುಗಳು ಚೇರಮನ್ನರಿಂದ ಕಳಿಸಿಕೊಡಲ್ಪಟ್ಟವು.

ಮೇಲ್ಕಂಡ ಮಹನೀಯರ ತರುವಾಯ ಮತಹೊಂದಿದವರ ವಿವರಗಳು ಏನೇದರೆ—

೫ ಮತಗಳುಳ್ಳವರು— ಸರದಾರ ವೀರನಗೌಡ ಪಾಟೀಲ.

೪ ಮತಗಳುಳ್ಳವರು— ವೀರಭದ್ರಪ್ಪ ಹಾಲಭಾವಿ, ಮತ್ತು ಎಚ್. ಸಿದ್ಧಯ್ಯ ವಕೀಲ ಶಿವಮೊಗ್ಗ.

೩ ಮತಗಳುಳ್ಳವರು— ಡಾ. ನಂದೀಮಠ, ಮುರಿಗಯ್ಯ ಜಂಗಿನ, ಎಸ್. ಎಸ್. ಅಂಗಡಿ ಬೆಳಗಾಂ, ಶ್ರೀ ಕುಮಾರ ಸ್ವಾಮಿಗಳು ಮತ್ತು ಮೆ. ಜಿ. ಎಚ್. ಗುಗ್ಗರಿ

೨ ಮತಗಳುಳ್ಳವರು— ಜಿ. ಆರ್. ನಲವಡಿ, ಪಿ. ಮಹಾದೇವಯ್ಯ ನಿವೃತ್ತ ಹೈಕೋರ್ಟ ಜಜ್ ಬೆಂಗಳೂರು, ಸಿದ್ದಪ್ಪ ಹೊಸಮನಿ, ಟಿ. ಎಚ್. ಎಮ್. ಸದಾಶಿವಯ್ಯ ಮತ್ತು ರಾಜಾ ಸರ್ ಲಕಮನಗೌಡ ಬಸವಪ್ರಭು.

೧ ಮತ ಬಿದ್ದವರು— ಸರ್. ದಿವಾನ್ ಬಹಾದ್ದೂರ್ ಎಸ್. ಟಿ. ಕಂಬಳಿ, ಬಿ. ಎಲ್. ಪಾಟೀಲ, ರಾ. ಬ. ದೇಶಮುಖ ಆಲಮೇಲ, ಕೆ. ಎಚ್. ಹಾಲಪ್ಪ ಪ್ರೆಸಿಡೆಂಟ್ ಜಲ್ಲಾ ಬೋರ್ಡ ಶಿವಮೊಗ್ಗ, ನಾಗಪ್ಪ ಅಬ್ದುಲ್‌ಪುರಕರ, ಎಸ್. ಎಲ್. ಬಾಮಣಗಾಂವಕರ ಉಮರಾವತಿ, ಡಾ. ಹುಮ್ಮಿನಕಟ್ಟಿ, ಚಂದ್ರಶೇಖರಯ್ಯ ವಕೀಲ ದಾವಣಗೆರೆ, ಆಂದಾನಪ್ಪ ದೊಡ್ಡಮೇಟಿ, ಶ್ರೀ. ಸಿದ್ಧಲಿಂಗಯ್ಯ ಪ್ರೆಸಿಡೆಂಟ ಮೈಸೂರು ಕಾಂಗ್ರೆಸ್ ಕಮಿಟಿ, ಬಸಪ್ಪ ಕಂಠಣವಾಡ, ಡಿ. ಎಸ್. ಮಲ್ಲಪ್ಪ ಎಮ್. ಎಲ್. ಸಿ. ತಿಪಟೂರ, ಚನಬಸಪ್ಪ ಗುಣವಕೊಂಡೆ, ಪಂಚವ್ವಾಬಾಯಿ ಸರದಾರ, ಕೃಷ್ಣಾಬಾಯಿ ಪಾಟೀಲ, ಬಾಬಾಸಾಹೇಬ ವಾರದ, ಮರುಳಾರಾಧ್ಯ ಶಾಸ್ತ್ರಿಗಳು ವಿಜಾಪುರ, ರಾ. ಬ. ಶಿವಪ್ಪ ಮಾನವಿ ಗದಗ ಮತ್ತು ಚಂದ್ರಶೇಖರ ಶಾಸ್ತ್ರಿ ಹೋಲಲು ಈ ಪ್ರಕಾರ ಮತಗಳು ಬಿದ್ದಿವೆ.

—ನವಕರ್ನಾಟಕ.

# ಅಖಿಲ ಭಾರತ ವೀರಶೈವ ಮಹಾಸಭೆ

## ೧೪ ನೆಯ ಅಧಿವೇಶನ, ಹುಬ್ಬಳ್ಳಿ ಇದರ ನೇತೃತ್ವದಲ್ಲಿ ಜರಗುವ

## ಅ. ಭಾ. ವೀ. ತ. ಪರಿಷತ್ತು ೩ ನೇ ಅಧಿವೇಶನ.

ಭರತಖಂಡದಲ್ಲಿ ಬೇರೆ ಬೇರೆ ಕಡೆಗೆ ವಾಸವಾಗಿರುವ ವೀರಶೈವರು ಭಿನ್ನ ಭಿನ್ನ ವಿಚಾರಗಳಿಂದ ಕೂಡಿದವರಾಗಿದ್ದು ಅಂಥ ಎಲ್ಲ ವೀರಶೈವ ತರುಣರನ್ನು ಒಂದೆಡೆಗೆ ಕೂಡಿಸಿ ವಿಚಾರವಿನಿಮಯಮಾಡಿ ನಮ್ಮೀ ಸಮಾಜದ ಸುಧಾರಣೆ ಮತ್ತು ಏಳಿಗೆಯನ್ನು ಮಾಡುವುದು ನಮ್ಮ ಕರ್ತವ್ಯವಾಗಿದೆ. ತರುಣರೇ ಸಮಾಜದ ಮತ್ತು ರಾಷ್ಟ್ರದ ನಿಜವಾದ ಆಧಾರಸ್ತಂಭಗಳಾಗಿದ್ದಾರೆ. ತರುಣರ ಯೋಗ್ಯ ಮಾರ್ಗಾವಲಂಬನವೇ ಸಮಾಜದ ಮತ್ತು ರಾಷ್ಟ್ರದ ಅಭ್ಯುದಯದ ಚಿನ್ಹ. ಕೂಸಿನ ಮನಸ್ಸು, ತರುಣನ ಜ್ಞಾನ, ಮುದುಕನ ಅನುಭವ ಇವುಗಳ ಸಂಯೋಗವೇ ಮಾನವನ ಮುಕ್ತಿ ಎಂಬ ನುಡಿಯಂತೆ ತರುಣನ ಜ್ಞಾನ ಮತ್ತು ಚಟುವಟಿಕೆಗಳು ಅಗಾಧವಾಗಿರುತ್ತವೆ. ಜ್ಞಾನವನ್ನು ಸಂಗ್ರಹ ಮಾಡುವ ತರುಣಾವಸ್ಥೆಯ ಸದುಪಯೋಗವನ್ನು ರಾಷ್ಟ್ರೀಯ, ಸಾಮಾಜಿಕ ಮತ್ತು ಧಾರ್ಮಿಕ ದೃಷ್ಟಿಯಿಂದ ಮಾಡಿಕೊಳ್ಳುವುದು ಈ ಪರಿಷತ್ತಿನ ಮುಖ್ಯ ಉದ್ದೇಶವಾಗಿದೆ.

**ರಾಷ್ಟ್ರೀಯ ವಿಷಯ.**

(೧) ವೀರಶೈವರಿಗೆ ತಮ್ಮ ಮಾತೃಭೂಮಿಯಾದ ಭರತಖಂಡದ ಅಭಿಮಾನವು ಪ್ರಾಮುಖ್ಯವಾಗಿದ್ದು ಸ್ವದೇಶೋನ್ನತಿಗೆ ಬೇಕಾಗುವ ಮಿತವ್ಯಯ, ಸ್ವಾವಲಂಬನೆ, ಔದ್ಯೋಗಿಕ ಪರಿಶ್ರಮ ಮುಂತಾದವುಗಳನ್ನು ಬೆಳೆಯಿಸಲು ಪ್ರಯತ್ನಿಸುವುದು.

(೨) ಭರತಖಂಡವು ಇತರ ದೇಶಗಳಂತೆ ಸ್ವತಂತ್ರ ದೇಶವಾಗಿ ಮೆರೆಯುವಂತೆ ಮಾಡುವ ಪ್ರಯತ್ನಗಳಿಗೆ ಬೆಂಬಲವನ್ನೀಯುವದು.

**ಧಾರ್ಮಿಕ, ಸಾಮಾಜಿಕ ವಿಷಯ.**

(೩) ವೀರಶೈವ ಸಮಾಜದೊಳಗಿನ ಅಂತಃಕಲಹಗಳಿಗೆ ಆಸ್ಪದ ಕೊಡದೆ ಎಲ್ಲರೂ ಐಕಮತ್ಯದಿಂದ ವರ್ತಿಸಲು ಯತ್ನಿಸುವದು. ಧರ್ಮಶಾಸ್ತ್ರಗಳ ಬಗ್ಗೆ ಇದ್ದ ಭಿನ್ನಾಭಿಪ್ರಾಯವು ದೂರಾಗುವಂತೆ ಯತ್ನಿಸುವುದು.

(೪) ಸಮಾಜದಲ್ಲಿ ಇಬ್ಬಣವಾದದ್ದನ್ನು ಜಾಣ್ಮೆಯಿಂದ ಮತ್ತು ಶಾಂತತೆಯಿಂದ ಬಗೆಹರಿಸಿ ಇಡೀ ವೀರಶೈವ ಸಮಾಜವೇ ಒಂದು ಮುಖವಾಗಿ ಸಾಗುವಂತೆ ಮಾಡಲು ಪ್ರಯತ್ನಿಸತಕ್ಕದ್ದು.

ಅಲ್ಲದೆ ಹರಿದು ಹಂಚಿಹೋದ ಕರ್ನಾಟಕವು ಸಂಯುಕ್ತ ಕರ್ನಾಟಕ ಪ್ರಾಂತವನ್ನಾಗಿ ಮಾಡಲು ನಡೆಯಿಸಿದ ಚಟುವಟಿಕೆಗೆ ಸಹಾಯ ಮಾಡುವದರ ದೆಶೆಯಿಂದ ಒಂದು ಕಾರ್ಯಕ್ರಮವನ್ನು ಗೊತ್ತುಮಾಡುವುದು ಮತ್ತು ಸ್ವದೇಶಿ ವಸ್ತುಗಳನ್ನು ಪ್ರಚಾರ ಮಾಡಿಸಲಿಕ್ಕೆ ಯತ್ನಿಸುವದು ಇವೇ ಮೊದಲಾದ ವಿಷಯಗಳ ಬಗ್ಗೆ ಪರಿಷತ್ತಿನಲ್ಲಿ ಚರ್ಚೆಮಾಡಿ ಕಾರ್ಯರೂಪದಲ್ಲಿ ತರಲು ಯತ್ನಿಸುವದು. ಈ ಪ್ರಕಾರವಾಗಿ ತರುಣರ ಶಕ್ತಿಯನ್ನು ಬೆಳೆಯಿಸಿ ವೀರಶೈವ ಸಮಾಜವನ್ನು ಸರ್ವಾಂಗ ಸುಂದರವಾಗಿ ಮಾಡಬೇಕೆಂಬ ಉದ್ದೇಶದಿಂದ ಈ ಪರಿಷತ್ತು ಜರುಗುವದಾಗುವದು.

**ಸೂಚನೆ—** ವೀರಶೈವ ತರುಣ ಪರಿಷತ್ತಿನ ಸ್ವಾಗತ ಕಮಿಟಿಯ ಮೆಂಬರರಾಗತಕ್ಕವರು ಅಥವಾ ಪ್ರತಿನಿಧಿಗಳಾಗಿ ಬರತಕ್ಕವರು ೧೩ ನೆಯ ವೀರಶೈವ ಮಹಾ ಸಭೆಯ ಸ್ವಾಗತ ಕಮಿಟಿಯ ನಿರ್ಣಯದ ಮೇರೆಗೆ ಮೊದಲು ಮಹಾಸಭೆಯ ಸ್ವಾಗತ ಕಮೀಟಿಯ ಮೆಂಬರರು ಅಥವಾ ಪ್ರತಿನಿಧಿಗಳಾಗಿರತಕ್ಕದ್ದು. ವೀರಶೈವ ಮಹಾಸಭೆಯ ಅಧಿವೇಶನದ ಕಾಲಕ್ಕೇನೇ ವೀರಶೈವ ತರುಣ ಪರಿಷತ್ತು ಕೂಡುವದಿದ್ದುದರಿಂದ ಅ. ಭಾ. ವೀರಶೈವ ತರುಣರು ಈ ಪರಿಷತ್ತಿನಲ್ಲಿ ಬಹು ಉತ್ಸಾಹದಿಂದ ಭಾಗವಹಿಸಿ ಯಶಸ್ವಿಯಾಗಿ ಮಾಡಬೇಕಾಗಿ ಆಶಿಸುತ್ತೇವೆ.

**ವಿಶೇಷ ಸೂಚನೆ—** ಮೇಲ್ಕಾಣಿಸಿದ ವಿಷಯಗಳಲ್ಲದೆ ಹೆಚ್ಚಿನ ವಿಷಯಗಳನ್ನು ಸೂಚಿಸುವದಾದರೆ ಶೀಘ್ರವಾಗಿ ವೀರಶೈವ ತರುಣ ಪರಿಷತ್ತಿನ ಆಫೀಸಿಗೆ ತಿಳಿಸಬಹುದು.

| | |
|---|---|
| ತಾ. ೩-೧೨-೧೯೩೮ | ಪಟ್ಟದ ಸ್ವಾಮಿ ಹಿರೇಮಠ ವಕೀಲ |
| ವ್ಹಿ. ಡಿ. ಹೆಬಸೂರ ವಕೀಲ | ಚೇರಮನ್ |
| ಜನರಲ್ ಸೆಕ್ರೆಟರಿ | ಅ. ಭಾ. ವೀ. ತರುಣ ಪರಿಷತ್ತು |
| ಅ. ಭಾ. ವೀ. ತ. ಪರಿಷತ್ತು | ಸ್ವಾಗತ ಕಮಿಟಿ |
| ಸ್ವಾಗತ ಕಮಿಟಿ | |

---

### ಮುಸಲ್ಮಾನ್ ಕೊಲೆಗಡಕನಿಗೆ ೭ ವರುಷ ಕಠಿಣ ಶಿಕ್ಷೆ.

ಕಳೆದ ಜುಲೈ ೧೮ ನೆಯ ತಾರೀಖಿನ ದಿನ ಅಹಮ್ಮದಾಬಾದಿನ ಸಾರ್ವಜನಿಕ ಬೀದಿಯಲ್ಲಿ ಅಲ್ಲಿಯ ಹಿಂದು ಸೇವಾಸಂಘದ ಕಾರ್ಯದರ್ಶಿ ಶ್ರೀ. ಗಂಗಾರಾಮ ಖನ್ನಾ ಎಂಬುವವರನ್ನು ಬಿಸ್ಮಿಲ್ಲಾಖಾನ ಹಮೀದಖಾನ ಎಂಬ ಒಬ್ಬ ಮುಸಲ್ಮಾನ್ ತಲೆತಿರುಕ ತರುಣನು ಕೊಲೆಮಾಡಲು ಹೋಗಿ ಭಯಂಕರ ಗಾಯಗೊಳಿಸಿದ್ದನು. ಆದರಿಂದ ವೀರ ಗಂಗಾರಾಮ ಖನ್ನಾ ಇವರು ವೈದ್ಯಾಲಯದಲ್ಲಿ ಒಂದು ತಿಂಗಳು ಉಪಚಾರಹೊಂದಿದಮೇಲೆ ಗುಣಹೊಂದಿದರು.

ಬಿಸ್ಮಿಲ್ಲಾಖಾನನನ್ನು ಹಿಡಿದು ಅವನ ಮೇಲೆ ವ್ಯಾಜ್ಯ ನಡೆಸಿದ್ದರು. ಸೆಶನ್ಸ ಜಜ್‌ರು ಕೊಲೆಗಡಕನಿಗೆ ಏಳು ವರುಷಗಳ ಕಠಿಣ ಶಿಕ್ಷೆಯನ್ನು ವಿಧಿಸಿದರು. ಆ ದಿನ ಕೋರ್ಟಿನ ಹೊರಗೆ ಹೆಚ್ಚಾಗಿ ಮುಸಲ್ಮಾನರು ಸೇರಿದ್ದರು. ಪೋಲೀಸರ ಕಾವಲು ಸರಿಯಾಗಿ ಇಡಲ್ಪಟ್ಟಿತ್ತು.

---

### ಮುಸಲ್ಮಾನರ ಭಯಂಕರ ಅತ್ಯಾಚಾರ!

ಇಂದೂರಲ್ಲಿ ತಾ. ೨೮-೧೧-೩೮ ನೆಯ ದಿವಸ ಸಾಯಂಕಾಲ ಆರು ಗಂಟೆ ಸಮಯಕ್ಕೆ ಅರಮನೆಯ ರಾಜ ಬೀದಿಯಲ್ಲಿ ಭಯಂಕರ ಕೊಲೆಯಾಯಿತು. ಶ್ರೀ. ಬಾಬೂಲಾಲ ಎಂಬ ಹಿಂದು ಮುಖಂಡರ ಕೊಲೆಮಾಡಬೇಕೆಂದು ಪುಂಡ ಮುಸಲ್ಮಾನರು ಈ ಮುಂಚೆ ಎರಡು ಸಾರೆ ಪ್ರಯತ್ನಿಸಿದ್ದರು. ಆದರೆ ಸಾಧಿಸಿರಲಿಲ್ಲ. ಇವರು ಅಂಗರಕ್ಷಣೆಗಾಗಿ ಸಂಗಡ ಒಬ್ಬರನ್ನು ಇಟ್ಟುಕೊಂಡೇ ಓಡಾಡುತ್ತಿದ್ದರು. ಆ ದಿನ ಇವರು ಗಿರಣಿಯಿಂದ ಬರುವಾಗ ನಾಲ್ಕು ಜನ ಪುಂಡ ಮುಸಲ್ಮಾನರು ಒಮ್ಮೆಲೇ ಬಂದು ಇವರ ಅಂಗರಕ್ಷಕನಾದ ನಾನಾಗುರು ಎಂಬವನ ಕಣ್ಣಲ್ಲಿ ಮೆಣಸಿನ ಪುಡಿಯನ್ನು ಹಾಕಿ ಬಡಗಿಯಿಂದ ಹೊಡೆದು ಶ್ರೀ. ಬಾಬುಲಾಲರಿಗೆ ಸ್ಮಿಥ ಜಂಬಿಯಿಂದ ಆಯಸ್ಥಳದಲ್ಲಿ ಭಯಂಕರ ಗಾಯಗೊಳಿಸಲು ಸ್ವಲ್ಪ ಹೊತ್ತಿನಲ್ಲಿಯೇ ಅವರು ಮೃತಪಟ್ಟರು. ಆ ನಾಲ್ಕು ಪುಂಡರನ್ನು ಹಿಡಿದಿದ್ದಾರೆ.

( ೬ ನೇ ಪುಟದಿಂದ ಬಂದುದು.)

| ಖಾತೆ | ಹಿಂದು | ಮುಸಲ್ಮಾನ | ಪಾರ್ಶಿ | ಯುರೋಪಿಯನ್ |
|---|---|---|---|---|
| ಸೆಕ್ರೆಟರಿಯೇಟ | ೧೬ | ೫೪ | ೨ | ೩ |
| ಫಾಯನಾನ್ಸ | ೧೫ | ೨೬ | ೨ | ೧ |
| ರೆವಿನ್ಯೂ | ೨೦ | ೧೯೬ | ೪ | ೨ |
| ನ್ಯಾಯಖಾತೆ | ೧೨ | ೧೩೬ | ೧ | ೦ |
| ಪೋಲೀಸ | ೧೩ | ೪೦ | ೧ | ೪ |
| ಶಿಕ್ಷಣ | ೫೩ | ೧೮೩ | ೪ | ೨೯ |
| ವೈದ್ಯಖಾತೆ | ೪೫ | ೪೧ | ೮ | ೧೬ |
| ಪಿ. ಡಬ್ಲ್ಯು. ಡಿ. | ೩೪ | ೬೨ | ೪ | ೭ |

**ಶಿಕ್ಷಣ.**

ಇನ್ನು ಶಿಕ್ಷಣ ಮತ್ತು ವೈದ್ಯಕೀಯ ಸಹಾಯಗಳ ಬಗ್ಗೆ ಒಂದೆರಡು ಮಾತುಗಳನ್ನು ಹೇಳಲು ಬಯಸುತ್ತೇನೆ. ಶಿಕ್ಷಣ ಪ್ರಪಂಚದಲ್ಲಿಯೂ ಒಂದೇ ಜಾತಿಯವರಿಗೆ ಹೆಚ್ಚು ಅನುಕೂಲಗಳು ದೊರೆಯುತ್ತಿರುವುದು ದುರ್ದೈವದ ಸಂಗತಿಯು. ಶಿಕ್ಷಣಕ್ಕಾಗಿ ಖರ್ಚುಮಾಡುತ್ತಿರುವ ೧೬, ೪೧ ಲಕ್ಷ ರೂಪಾಯಿಗಳಲ್ಲಿ ಉಸ್ಮಾನಿಯಾ ವಿಶ್ವವಿದ್ಯಾಲಯವೇ ಹೆಚ್ಚು ಹಣವನ್ನು ನುಂಗುತ್ತದೆ. ಪ್ರಾಥಮಿಕ ಶಿಕ್ಷಣವನ್ನು ಸಂಪೂರ್ಣವಾಗಿ ಅಲಕ್ಷ ಮಾಡಲಾಗಿದೆ. ಸಾಕಷ್ಟು ಶಾಲೆಗಳು ಹಳ್ಳಿಗಳಲ್ಲಿಲ್ಲ. ೨೦-೫ ಹಳ್ಳಿಗಳಿಗೊಂದು ಶಾಲೆಯಿದೆ. ಅಲ್ಲಿಯೂ ಸಹ ಮಾತೃಭಾಷೆಯಲ್ಲಿ ಕಲಿಯುವದಕ್ಕೆ ಅವಕಾಶವಿಲ್ಲ. ಉರ್ದು ಭಾಷೆಯನ್ನೇ ಒತ್ತಾಯದಿಂದ ಕಲಿಸಲಾಗುತ್ತದೆ. ಆರೋಗ್ಯ ಸಹಾಯದ ಅಭಾವವು ವಿಶೇಷವಾಗಿದೆ. ಅನೇಕ ಹಳ್ಳಿಗಳಲ್ಲಿ ದವಾಖಾನೆಗಳಿಲ್ಲ.

**ನಾಗರಿಕ ಸ್ವಾತಂತ್ರ್ಯ**

ಸರಕಾರಕ್ಕೆ ಜಾತಿಮತಪಂಥಗಳಿಲ್ಲವೆಂಬುದನ್ನು ಎಲ್ಲರೂ ಒಪ್ಪುವರು. ಆದರೆ ಹೈದರಾಬಾದ ಸರಕಾರದವರು ತಮ್ಮ ಪ್ರಜೆಗಳ ನಾಗರಿಕ ಸ್ವಾತಂತ್ರ್ಯದ ಬಗ್ಗೆ ತಳೆದಿರುವ ಧೋರಣವನ್ನು ನೋಡಿದರೆ ಆ ಸರಕಾರವು ಒಂದೇ ಜಾತಿ ಮತ ಪಂಥಗಳನ್ನು ಅನುಸರಿಸುತ್ತಿದೆಯೆಂದು ಊಹಿಸಲು ಅವಕಾಶವಿದೆ. ಮನಬಂದಂತೆ ಪ್ರಾರ್ಥಿಸುವ ಮತ್ತು ಪೂಜಿಸುವ ಸ್ವಾತಂತ್ರ್ಯವನ್ನು ಕಸಿದುಕೊಳ್ಳುವ ಫರ್ಮಾನಗಳು ಹೊರಟಿವೆ. ರಾಜಕೀಯ ಸಭೆಗಳೆಂದರೇನೆಂಬುದು ಹೈದರಾಬಾದಿನ ಜನರಿಗೆ ಗೊತ್ತೇ ಇಲ್ಲ. ಸಾಮಾಜಿಕ ಮತ್ತು ಧಾರ್ಮಿಕ ಸಂಬಂಧದ ಸಭೆಗಳಿಗೂ ಸಹ ಸರಕಾರದವರು ಅಪ್ಪಣೆ ಕೊಡುವದಿಲ್ಲ. ಸಂಘ ಸಂಸ್ಥೆಗಳಂತೂ ಹುಟ್ಟುವದೇ ಕಠಿಣ. ಹುಟ್ಟಿದರೆ ಬದುಕುವದಂತೂ ಬಹಳ ಅಪರೂಪ. ಪಬ್ಲಿಕ್ ಸೇಫ್ಟಿ ರೆಗ್ಯುಲೇಶನಗಳು ಜನರ ಸರ್ವ ಸಾಮಾನ್ಯ ನಾಗರಿಕ ಹಕ್ಕು ಬಾಧ್ಯತೆಗಳನ್ನು ಸಹ ಕಸಿದುಕೊಂಡಿರುತ್ತವೆ.

**ಸಂಸ್ಥಾನ ಕಾಂಗ್ರೆಸ್ಸಿನ ಉದಯ.**

ಹೈದರಾಬಾದ ಸಂಸ್ಥಾನದ ವರ್ಣನೆಯು ಸಾಕು. ಇನ್ನು ಪ್ರಜೆಗಳ ಚಳವಳಿಯನ್ನು ಕುರಿತು ಒಂದೆರಡು ಮಾತನ್ನು ಹೇಳ ಬಯಸುತ್ತೇನೆ. ೧೯೩೭ ರಲ್ಲಿ ಸರಕಾರದವರು ಸಂಸ್ಥಾನದ ರಾಜ್ಯಘಟನೆಯಲ್ಲಿ ಹೆಚ್ಚುಕಡಿಮೆಗಳನ್ನು ಮಾಡಲು ಯೋಗ್ಯ ಸಲಹೆಗಳನ್ನು ಕೊಡುವುದಕ್ಕಾಗಿ ದಿವಾನಬಹಾದ್ದೂರ್ ಅರವಮುದು ಅಯ್ಯಂಗಾರ್ಯರ ಅಧ್ಯಕ್ಷತೆಯಲ್ಲಿ ಒಂದು ಕಮೀಟಿಯನ್ನು ನಿಯಮಿಸಿದರು. ಈ ಕಮೀಟಿಯವರು ಸೂಚಿಸಿದ ಸಲಹೆಗಳು ಸರಕಾರದವರ ಮನಸ್ಸಿಗೆ ಬರಲಿಲ್ಲವಾದ್ದರಿಂದ ಆ ಕಮಿಟಿಯ ವರದಿಯನ್ನೇ ಇನ್ನೂ ಪ್ರಸಿದ್ಧಿಸಿಲ್ಲ. ಇದು ಜನರಿಗೆ ಬಹಳ ನಿರಾಶೆಯನ್ನುಂಟುಮಾಡಿತು.

ಇನ್ನು ಸುಮ್ಮನಿದ್ದರೆ, ತಮ್ಮ ಸ್ಥಿತಿಯು ಕೆಟ್ಟು ಹಾಳಾಗುವದೆಂದು ತಿಳಿದು ಜನರು ಈಗ ೩—೪ ತಿಂಗಳ ಹಿಂದೆ ಸಂಸ್ಥಾನ ಕಾಂಗ್ರೆಸ್ಸನ್ನು ಸ್ಥಾಪಿಸಿ ಅದರ ಮೂಲಕ ರಾಜಕೀಯ ಚಳವಳಿಯನ್ನು ಪ್ರಾರಂಭಿಸಿರುವರು. ನಿಜಾಮರ ಕೃಪಾಛತ್ರದಲ್ಲಿ ಜವಾಬದಾರಿ ಸರಕಾರವನ್ನು ಸ್ಥಾಪಿಸಬೇಕೆಂಬುದೇ ಈ ಕಾಂಗ್ರೆಸ್ಸಿನ ಉದ್ದೇಶವು. ಆದರೆ ಸರಕಾರದವರು ಇದು ಜಾತೀಯ ಸಂಸ್ಥೆಯೆಂದು ಸಾರಿ ಅದರ ಮೇಲೆ ನಿರ್ಬಂಧ ಹಾಕಿರುವರು. ಸರಕಾರದ ಈ ದಬ್ಬಾಳಿಕೆಯ ವಿರುದ್ಧವೇ ಸತ್ಯಾಗ್ರಹವು ನಡೆಯುತ್ತಿದೆ.

---

# ಈ ತಿಂಗಳ ಕೊನೆ ವಾರದಲ್ಲಿಯ

## ಕೆಲವು ಮಹಾ ಸಮ್ಮೇಲನಗಳು.

**ಹಿಂದು ಮಹಾಸಭೆ**— ನಾಗಪುರದಲ್ಲಿ ಡಿಶಂಬರ್ ೨೮, ೨೯ ೩೦ ನೆಯ ತಾರೀಖುಗಳಲ್ಲಿ ಅಖಿಲ ಭಾರತ ಹಿಂದು ಮಹಾಸಭೆಯ ೨೦ ನೆಯ ಅಧಿವೇಶನವು ಕೂಡುವುದು. ಈ ಸಾರೆಯೂ ಈ ಮಹಾ ಸಭೆಗೆ ಸ್ವಾತಂತ್ರ್ಯವೀರ ಸಾವರಕರವರನ್ನೇ ಅಧ್ಯಕ್ಷರನ್ನಾಗಿ ಆರಿಸಿದ್ದಾರೆ. ರಾಜಾಬಹಾದ್ದೂರ್ ರಾಘೋಜಿರಾವ ಭೋಸಲೆಯವರ ಹಸ್ತದಿಂದ ಮಹಾಸಭೆಯ ಮಂಟಪ ನಿರ್ಮಾಣದ ಕಾರ್ಯ ಪ್ರಾರಂಭವಾಯಿತು.

**ಹಿಂದು ಯುವಕ ಪರಿಷತ್ತು**— ನಾಗಪುರದಲ್ಲಿ ಡಿಶಂಬರ ೨೮, ೨೯, ೩೦ ನೆಯ ತಾರೀಖುಗಳಲ್ಲಿ ಅಖಿಲ ಭಾರತ ಯುವಕ ಪರಿಷತ್ತು ಶ್ರೀ ಕ್ಷಾತ್ರ ಜಗದ್ಗುರುಗಳ ಅಧ್ಯಕ್ಷತೆಯಲ್ಲಿ ಜರಗುವುದು. ನಾಲ್ಕು ದಿವಸಗಳ ವಸತಿಗೆ ೧ ರೂ. ಒಂದು ದಿನಕ್ಕೆ ಉಪಹಾರ ಸಹಿತ ಊಟಕ್ಕೆ ೧ ರೂ. ತಗಲುವುದು. ಪ್ರತಿನಿಧಿಗಳ ಚಂದಾ ೧| ರೂ.

**ಅಖಿಲ ಭಾರತ ಆರ್ಯ ಪರಿಷತ್ತು**— ಸೊಲ್ಲಾಪುರದಲ್ಲಿ ಅಖಿಲ ಭಾರತ ಆರ್ಯ ಸಮಾಜದವರ ಪರಿಷತ್ತು ಡಿಶೆಂಬರ್ ೨೫, ೨೬, ೨೭ ಈ ಮೂರು ದಿನ ಕೂಡುವದು.

ಈ ಪರಿಷತ್ತಿಗೆ ಲೋಕನಾಯಕ ಅಣೆ ಇವರು ಅಧ್ಯಕ್ಷರಾಗಿ ಆರಿಸಲ್ಪಟ್ಟಿದ್ದಾರೆ.

**ಕರ್ನಾಟಕ ಸಾಹಿತ್ಯ ಪರಿಷತ್ತು**— ಕರ್ನಾಟಕ ಸಾಹಿತ್ಯ ಪರಿಷತ್ತಿನ ೨೩ ನೆಯ ಅಧಿವೇಶನವು ಬಳ್ಳಾರಿಯಲ್ಲಿ ಡಿಶೆಂಬರ್ ತಾ. ೨೯, ೩೦, ೩೧ ಈ ಮೂರು ದಿವಸ ಸುಪ್ರಸಿದ್ಧ ರಾಷ್ಟ್ರಭಕ್ತರೂ ಗ್ರಂಥಕಾರರೂ ಆದ ಶ್ರೀಮಾನ್ ದಿವಾಕರ ರಂಗನಾಥರಾಯರವರ ಅಧ್ಯಕ್ಷತೆಯಲ್ಲಿ ಜರಗುವುದು. ಶ್ರೀ. ವಿದ್ವಾನ್ ವೈ. ನಾಗೇಶ ಶಾಸ್ತ್ರಿಗಳವರು ಸ್ವಾಗತಾಧ್ಯಕ್ಷರು.

**ಅಖಿಲ ಭಾರತ ವೀರಶೈವ ಮಹಾಸಭೆ**— ಹುಬ್ಬಳ್ಳಿಯಲ್ಲಿ ಅಖಿಲ ಭಾರತ ವೀರಶೈವ ಮಹಾಸಭೆಯ ೧೩ ನೆಯ ಅಧಿವೇಶನವು ಡಿಶೆಂಬರ್ ೨೬-೨೭-೨೮ ನೆಯ ತಾರೀಖುಗಳಲ್ಲಿ ಸೇರುವುದು.

**ಅಖಿಲ ಭಾರತ ಆಯುರ್ವೇದ ಸಮ್ಮೇಲನ**- ಬೆಂಗಳೂರಲ್ಲಿ ಅಖಿಲ ಭಾರತ ಅನುವಂಶಿಕ ಆಯುರ್ವೇದ ಸಮ್ಮೇಲನದ ೫ ನೆಯ ಅಧಿವೇಶನವು ಪಂಡಿತ ತಾರಾನಾಥರ ಅಧ್ಯಕ್ಷತೆಯಲ್ಲಿ ಡಿಶೆಂಬರ್ ೨೫-೨೬ ನೆಯ ತಾರೀಖುಗಳಲ್ಲಿ ಕೂಡುವುದು.

# ನರಗುಂದ.

ನರಗುಂದವು ವ್ಯಾಪಾರದ ಕೇಂದ್ರ ಸ್ಥಳವಿದ್ದು ಜನ ಸಂಖ್ಯೆ ಅಜಮಾಸು ಎಂಟು ಸಾವಿರವಿದ್ದು ಇಷ್ಟು ದೊಡ್ಡ ಸ್ಥಳದಲ್ಲಿ ಒಂದಾದರೂ ವಾಚನಾಲಯವಿಲ್ಲದ್ದು ನೋಡಿ ಪ್ರತಿಯೊಬ್ಬ ವಿದ್ಯಾಭಿಮಾನಿಗೆ ವಿಷಾದವೆನಿಸದೆ ಇರದು. ೧೯೨೪ ನೇ ಇಸ್ವಿಯಲ್ಲಿ ಸಾರ್ವಜನಿಕ ವಾಚನ ಮಂದಿರ ಎಂಬುದೊಂದು ವಾಚನಾಲಯವು ಸ್ಥಾಪಿತವಾಗಿ ೬-೭ ವರುಷ ಚೆನ್ನಾಗಿ ನಡೆದು ಕೆಲ ಕಾರಣಗಳ ಮೂಲಕ ಇಲ್ಲಿಯವರೆಗೂ ಮಲಗಿತ್ತು. ಆದರೆ ಇಲ್ಲಿಯ ತರುಣ ಉತ್ಸಾಹಿಗಳಾದ ಮಿ. ವ್ಹಿ. ಎಮ್. ವ್ಯಾಗೇರಿ ಮುನಸಿಪಲ್ ಸೆಕ್ರೆಟರಿ ಮತ್ತು ಇಂಗ್ಲಿಷ್ ಶಾಲೆಯ ಮಾಸ್ತರರಾದ ಮಿ. ಡಿ. ಬಿ. ಸವದತ್ತಿಮಠ ಬಿ. ಎ. ಮಿ. ವ್ಹಿ. ವಾಯ್. ದೊಡ್ಡಪ್ಪ ಗೌಡರ, ಮಿ. ಡಿ. ಬಿ. ಕುಲಕರ್ಣಿ, ವ ಮಿ. ಇನಾಮದಾರ ವ ಕನ್ನಡ ಗಂಡುಹುಡುಗರ ಶಾಲೆ ಹೆ. ಮಾಸ್ತರ ಇವರೆಲ್ಲರ ಪ್ರಯತ್ನದಿಂದ ತಾ. ೨೮-೧೧-೩೪ ನೇ ದಿವಸ ಸಭೆಗೂಡಿ ಕೆಳಗಿನಂತೆ ಕಾರ್ಯ ನಡೆಯಿತು.

**ವ್ಯವಸ್ಥಾಪಕ ಮಂಡಳ.**

೧ ಮಿ. ಎಸ್. ಎಚ್. ಪಾಟೀಲ (ಚೇರಮನ್)
೨ ಇನಾಮದಾರ ಕ. ಗ. ಹೆ. ಮಾಸ್ತರ.
೩ ಡಿ. ಬಿ. ಸವದತ್ತಿಮಠ ಇಂಗ್ಲಿಷ್ ಶಾಲೆಯ ಹೆ. ಮಾಸ್ತರ
೪ ಕುಲಕರ್ಣಿ ವೆಟರ್ನರಿ ಅಸಿಸ್ಟೆಂಟ್ ಸರ್ಜ.
೫ ದೇಸಾಯಿ ಸಬ್ ರಜಿಸ್ಟರ್.
೬ ಜ್ಯಾವೂರ.

ಗೌರವ ಕಾರ್ಯದರ್ಶಿ- ಮಿ. ವ್ಹಿ ಎಂ. ವ್ಯಾಗೇರಿ ಮುನಸಿಪಲ್ ಸೆ.

ಇದೇ ತಿಂಗಳ ೧ ನೇ ತಾರೀಖಿನಿಂದ ಲಾಯಬ್ರರಿ ಸುರು ಮಾಡಲ್ಪಟ್ಟಿದೆ. ಈಗಾಗಲೇ ಲೋಕಮತ, ಸಂಯುಕ್ತ ಕರ್ನಾಟಕ, ಫ್ರೀ ಪ್ರೆಸ್ ದಿನಪತ್ರಿಕೆಗಳೂ ಟಾಯಿಮ್ಸ ಆಫ್ ಇಂಡಿಯಾ, ಪ್ರಜಾಮತ ಶರಣ ಸಂದೇಶ ವಾರ ಪತ್ರಿಕೆಗಳೂ ಬರುತ್ತಲಿವೆ. ಈಗ ೫೦ ಮಂದಿ ಸದಸ್ಯರಾಗಿದ್ದಾರೆ. ಸದರ ಲಾಯಬ್ರರಿಗೆ ಸ್ವಂತ ಉತ್ತಮವಾದ ಇಮಾರತು ಇರುತ್ತದೆ. ವಿದ್ಯಾಭಿಮಾನಿಗಳೆಲ್ಲರೂ ತನು ಮನ ಧನಗಳಿಂದ ಸಹಾಯ ಮಾಡಿದಲ್ಲಿ ಈ ವಾಚನಮಂದಿರವು ನಮ್ಮ ಕರ್ನಾಟಕದಲ್ಲಿ ಆದರ್ಶವಾಗುವದೆಂದು ಹೇಳಬಹುದು. ಲಾಯಬ್ರರಿಯ ಪುನರುದ್ಧಾರಕ್ಕೆ ಕಾರಣರಾದ ಮಿ. ವ್ಹಿ. ಎಮ್. ವ್ಯಾಗೇರಿ ಇವರಿಗೆ ಅನೇಕ ಧನ್ಯವಾದಗಳು.

ಮುಂಬೈ ಇಲಾಖೆಯ ಮುಖ್ಯ ಪ್ರಧಾನರಾದ ಮಾನ್ಯ ಹೇರರವರ ಧಾರವಾಡ ಜಿಲ್ಲೆಯ ಪ್ರವಾಸದ ವೇಳಾ ಪತ್ರಿಕೆಯು ವರ್ತಮಾನ ಪತ್ರಿಕೆಗಳಲ್ಲಿ ಈಗಾಗಲೇ ಪ್ರಸಿದ್ಧವಾಗಿದ್ದು ಅದರಲ್ಲಿ ನರಗುಂದ ಪೇಠಾದ ಸದರ ಮಾನ್ಯ ಮಂತ್ರಿವರ್ಯರ ಪ್ರವಾಸದ ಬಗ್ಗೆ ಏನೂ ನಮೂದ ಇಲ್ಲದ್ದರಿಂದ ಇಲ್ಲಿಯ ರೈತ ಬಾಂಧವರಿಗೆ ಬಹಳೇ ಖೇದವೆನಿಸಿದೆ. ಇಲ್ಲಿಯ ಪೇಠಾ ಕಾಂಗ್ರೆಸ್ ಕಮಿಟಿಯೊಂದು ಸ್ಥಾಪಿಸಿಕೊಂಡಿರುವ ಮಹಾಶಯರು ಇತ್ತ ಕಡೆಗೆ ದಯಮಾಡಿ ಲಕ್ಷ್ಯ ಕೊಡುವರೋ? —ಹಿರ್ವ ನಾಗರಿಕ.

---

—ಸೊಲ್ಲಾಪುರದಲ್ಲಿ ೬-೭ ಸಾವಿರ ಮುಸಲ್ಮಾನರು ಸಭೆ ಸೇರಿ ಹೈದರಾಬಾದ ಸಂಸ್ಥಾನದ ದಬ್ಬಾಳಿಕೆಯನ್ನು ಸಮರ್ಥಿಸಿದರು! ಬ್ರಾಹ್ಮಣರೇ ಅವರಲ್ಲಿಯೂ ಪುಣೆಯ ಚಿತಪ್ಪಾವನ ಬ್ರಾಹ್ಮಣರೇ ಮುಖ್ಯವಾಗಿ ಕೇಸರೀ ಕಾರ್ಯಾಲಯದವರೇ ನಿಜಾಮರಿಗೆ ವಿರೋಧಿಸುತ್ತಿದ್ದಾರೆಂದು ಹೇಳಿದರು.

# ಅ. ಭಾ. ವೀರಶೈವ ತರುಣ ಪರಿಷತ್ತು.

## ವೀರಶೈವ ತರುಣರಿಗೆ ವಿಜ್ಞಾಪನೆ.

ಅಖಿಲ ಭಾರತ ವೀರಶೈವ ಮಹಾಸಭೆಯ ೧೩.ನೆಯ ಅಧಿವೇಶನದ ನೇತೃತ್ವದಲ್ಲಿ ಅಖಿಲ ಭಾರತ ವೀರಶೈವ ತರುಣರ ಪರಿಷತ್ತು ನೆರೆಯುವುದು. ಆ ಬಗ್ಗೆ ಈಗಾಗಲೇ ಸ್ವಾಗತ ಸಂಘವು ಏರ್ಪಟ್ಟಿದೆ. ವೀರಶೈವ ಮಹಾಸಭೆಯು ವಿಶೇಷ ವ್ಯಾಪಕ ದೃಷ್ಟಿಯಿಂದ ವೀರಶೈವ ಸಮಾಜದ ಹಿತವನ್ನು ಅಂಗೀಕರಿಸಿದ್ದರಿಂದ ಆ ಮೇರೆಗೆ ಕಾರ್ಯಗಳನ್ನು ಕೈಕೊಂಡದ್ದರಿಂದ ಕೇವಲ ವೀರಶೈವ ತರುಣರ ಚಟುವಟಿಕೆಗಳ ಬಗ್ಗೆ ಸಮರ್ಪಕ ರೀತಿಯಿಂದ ಚರ್ಚೆಮಾಡಲು ವೀರಶೈವ ಮಹಾಸಭೆಯಲ್ಲಿ ಅನುವು ದೊರೆಯುವುದು ದುರ್ಲಭವಾದದ್ದು ಅದೆ. ಆದ್ದರಿಂದ ಸದ್ಯದ ಪ್ರಸಂಗದಲ್ಲಿ ವೀರಶೈವ ತರುಣರ ಹಿತಾಹಿತಗಳನ್ನು ಪ್ರತ್ಯೇಕವಾಗಿ ಚರ್ಚಿಸುವದು ಯೋಗ್ಯ ಮತ್ತು ಅವಶ್ಯವಿದ್ದುದರಿಂದ ಮತ್ತು ವೀರಶೈವ ತರುಣ ಪರಿಷತ್ತಿನಲ್ಲಿ ನಿರ್ಣಯ ಮಾಡಲ್ಪಡುವ ತರುಣರ ಹಿತ ಮತ್ತು ಅಭ್ಯುದಯವನ್ನು ಒಳಗೊಂಡ ಗೊತ್ತುವಳಿಗಳನ್ನು ಕಾರ್ಯರಂಗಕ್ಕಿಳಿಸುವದು ಅವಶ್ಯವಿರುತ್ತದೆ.

ಭರತಖಂಡದಲ್ಲಿ ಬೇರೆ ಬೇರೆ ಕಡೆಗೆ ಪ್ರಕಾಶಿಸುವ ತರುಣರ ಶಕ್ತಿಯನ್ನು ಒಂದು ಕಡೆಗೆ ಕೂಡಿಸಿ ಒಂದು ಮಹಾ ಪ್ರವಾಹವಾಗಿ ಮಾಡಿ ತದ್ವಾರ ನಮ್ಮ ವೀರಶೈವ ಸಮಾಜದ ಉನ್ನತಿಯನ್ನು ಮಾಡುವದೇ ಈ ಪರಿಷತ್ತಿನ ಮುಖ್ಯ ಉದ್ದೇಶವಾಗಿದೆ.

ಅಖಿಲ ಭಾರತ ವೀರಶೈವ ತರುಣರು ಮುಂಬರುವ ವೀರಶೈವ ಮಹಾಸಭೆಗೆ ಬಂದು ವೀರಶೈವ ತರುಣರ ಪರಿಷತ್ತಿನಲ್ಲಿ ಭಾಗವಹಿಸಿ ಈ ವೀರಶೈವ ತರುಣರ ಪರಿಷತ್ತನ್ನು ಯಶಸ್ವಿಯಾಗಿ ಮಾಡುವಿರೆಂದು ನಾವು ಆಶಿಸುತ್ತೇವೆ.

ವ್ಹಿ. ಡಿ. ಹೆಬಸೂರು ವಕೀಲ
ಜನರಲ್ ಸೆಕ್ರೆಟರಿ
ಅ. ಭಾ. ವೀ. ತರುಣ ಪರಿಷತ್ತಿನ
ಸ್ವಾಗತ ಕಮಿಟಿ.

ಹುಬ್ಬಳ್ಳಿ
ತಾ. ೨-೧೨-೩೮.

---

# ಅ. ಭಾರತ ವೀರಶೈವ ಲಲಿತಕಲಾಭಿಜ್ಞರ

## (ಸಂಗೀತ) ಪರಿಷತ್ತು.

ಇದೇ ತಿಂಗಳ ನಾತಾಳ ಸೂಟಿಯಲ್ಲಿ ಹುಬ್ಬಳ್ಳಿಯಲ್ಲಿ ಅಖಿಲ ಭಾರತ ವೀರಶೈವ ಮಹಾಸಭೆಯು ಕೂಡುವದಿದ್ದು ಅದರ ನೇತೃತ್ವದಲ್ಲಿ ವೀರಶೈವ ಕಲಾಭಿಜ್ಞರ ಪರಿಷತ್ತನ್ನೂ ನೆರೆಯಿಸಲು ಗೊತ್ತು ಮಾಡಿದ್ದಾಗಿದೆ. ಗಾಯನ, ವಾದನ, ನರ್ತನ, ಕೀರ್ತನ, ನಾಟ್ಯ ಕಲಚಿತ್ರ ಇತ್ಯಾದಿ ಕಲೆಗಳಲ್ಲಿ ನಿಷ್ಣಾತರಿರುವಂತವರು ಈ ಸಂಗತಿಯನ್ನು ತಮ್ಮ ಮಿತ್ರರಿಗೂ ತಿಳಿಸಿ ಈ ಪರಿಷತ್ತಿನಲ್ಲಿ ಅವಶ್ಯವಾಗಿ ಭಾಗವಹಿಸಬೇಕು. ವೀರಶೈವರಲ್ಲಿ ಕಲಾಭಿವೃದ್ಧಿಯಾಗಲು ಯಾವ ಉಪಾಯಗಳನ್ನು ಕೈಕೊಳ್ಳಬೇಕು. ಈಗ ಅವುಗಳ ಸ್ಥಿತಿಯು ಯಾವ ಪ್ರಕಾರವಾಗಿದೆಯೆಂಬುದನ್ನು ಚರ್ಚಿಸಲು ಹಾಗು ಆಯಾ ಕಲಾಭಿಜ್ಞರು ತಮ್ಮ ಕಲಾ ನೈಪುಣ್ಯವನ್ನು ಪ್ರದರ್ಶಿಸಲು ವ್ಯವಸ್ಥೆ ಮಾಡಲಾಗುವುದು. ಉತ್ತಮ ರೀತಿಯಿಂದ ಪ್ರದರ್ಶಿಸಿದ ಕಲಾಕೋವಿದರಿಗೆ ಬಹುಮಾನಗಳನ್ನೂ ಯೋಗ್ಯತಾ ಪತ್ರಗಳನ್ನೂ ಕೊಡುವ ವ್ಯವಸ್ಥೆಮಾಡಲಾಗುವುದು. ಈ ಬಗ್ಗೆ ಸಹಾನುಭೂತಿಯನ್ನು ತೋರಿಸುವ ಮಹನೀಯರೆಲ್ಲರೂ ತಾವು ಮತ್ತು ತಮ್ಮ ಮಿತ್ರರಿಗೆ ಈ ಸಂಗತಿ ತಿಳಿಸಿ ತಾವು ಅಧಿವೇಶನಕ್ಕೆ ಬರುವ ಸಂಗತಿಯನ್ನು ತಿಳಿಸಬೇಕು. ವಿಶೇಷ ಸಂಗತಿಗಳ ಬಗ್ಗೆ ಇನ್ನೊಂದು ಪ್ರಕಟನೆಯನ್ನು ಹೊರಡಿಸಲಾಗುವದು.

ಗಾಯನ ಪ್ರವೀಣ
ಬಸವಣ್ಣೆಪ್ಪ ರಾಚಪ್ಪ ಪುರಾಣಿಕ
ಕಾರ್ಯದರ್ಶಿ ವೀರಶೈವ ಲಲಿತ
ಕಲಾಭಿಜ್ಞರ ಪರಿಷತ್ತು.

ಹುಬ್ಬಳ್ಳಿ
ತಾ. ೩-೧೨-೩೮.

---

# ಅರಸೀಕೆರೆ ತಾಲೂಕು ಕಛೇರಿಯಿಂದ-

(೧) ಹಾಸನದ ಡಿಸ್ಟ್ರಿಕ್ಟ ಅರಸೀಕೇರೆ ತಾಲೂಕು ಮಾಲೇಗಲ್ಲು ತಿರುಪತಿಯಲ್ಲಿ ೧೯೩೮ ನೇ ಡಿಶೆಂಬರ ಮಾಹೆ ೧೬ ನೆಯ ತಾರೀಖಿನಿಂದ ೨೧ ನೆಯ ತಾರೀಖಿನ ವರಗೆ ೫ ದಿನಗಳು ಮಾತ್ರ ದನಗಳ ಪ್ರದರ್ಶನವನ್ನು ಏರ್ಪಡಿಸಿರುತ್ತೆ.

(೨) ಪ್ರದರ್ಶನಕ್ಕೆ ಬರತಕ್ಕ ರಾಸು ೧ ಕ್ಕೆ ೬ ಪೈದಂತೆಯೂ ಪ್ರದರ್ಶನದ ಮೈದಾನದಲ್ಲಿ ಇಡತಕ್ಕ ಚಿಲ್ರೆ ಅಂಗಡಿ ೧ ಕ್ಕೆ ೨ ರೂ-ಗಳಂತೆಯೂ ಮಿಠಾಯಿ ಮತ್ತು ಇತರ ಷಾಪುಗಳಿಗೆ ಷಾಪು ೧ಕ್ಕೆ ೪ ರೂ. ಗಳಂತೆಯೂ ತೆರಿಗೆ ವಸೂಲುಮಾಡಲ್ಪಡುತ್ತೆ.

(೩) ಜನಜಾನುವಾರಗಳು ತಂಗಲು ವಸತಿ ಚೆನ್ನಾಗಿರುತ್ತೆ. ನೀರಿನ ಸೌಕರ್ಯ ಚೆನ್ನಾಗಿರುತ್ತೆ. ರಾಸುಗಳ ಉಪಯೋಗಕ್ಕೆ ಹುಲ್ಲು ಕ್ರಯಕ್ಕೆ ದೊರೆಯುತ್ತದೆ.

(೪) ತಿರುಪತಿ ಗ್ರಾಮವು ರೇಲ್ವೆಜಂಕ್ಷನ್ ಸ್ಥಳವಾದ ಅರಸೀಕೆರೆಗೆ ೧॥ ಮೈಲ ಫಾಸಲೆಯಲ್ಲಿದ್ದು ಒಳ್ಳೆಯ ಯಾತ್ರಾ ಸ್ಥಳವಾಗಿರುತ್ತೆ.

(೫) ಕಮಿಟಿ ಮೆಂಬರುಗಳು ಚುನಾಯಿಸುವ ಉತ್ತಮ ರಾಸುಗಳಿಗೆ ಬಹುಮಾನಕೊಡಲಾಗುತ್ತೆ. ಜನ ಜಾನ್ವಾರುಗಳಿಗೆ ಯಾವ ಕಾಯಿಲೆಯೂ ಇರುವದಿಲ್ಲ.

(೬) ಅನೇಕ ಕಡೆಗಳಿಂದ ಉತ್ತಮ ರಾಸುಗಳು ಬಂದು ಸೇರುವದರಿಂದ ವ್ಯಾಪಾರಸ್ಥರಿಗೆ ಹೆಚ್ಚು ಲಾಭ ಉಂಟು.

—ಅಮಲದಾರ.

---

# ನಿಜಾಮ ರಾಜ್ಯದಲ್ಲಿ ಸತ್ಯಾಗ್ರಹ.

ಹೈದರಾಬಾದ ಹಿಂದು ಮಹಾಸಭೆಯ ಮುಖ ಪತ್ರವಾದ "ನಿಜಾಮ" ಎಂಬ ಪತ್ರಿಕೆಯನ್ನು ಶ್ರೀ. ಗಿರಿರಾಯರು ಮಾರಿದ ರಿಂದು ಇವರ ಮೇಲೆ ವ್ಯಾಜ್ಯ ಹೂಡಿದ್ದಾರೆ.

ಔರಂಗಾಬಾದಿನ ಕಾಂಗ್ರೆಸ್ ೬ ನೆಯ ಸರ್ವಾಧಿಕಾರಿ ಶ್ರೀ. ಘಾಟಿಕ ಇವರನ್ನು ತಾ. ೮ ನೆಯ ದಿನ ಸೆರೆಹಿಡಿದರು. ಈ ದಬ್ಬಾಳಿಕೆಯ ನಿಷೇಧಕ್ಕಾಗಿ ಹೊರಟ ಮೆರವಣಿಗೆಯಲ್ಲಿ ೭೦೦ ಜನರಿದ್ದರು.

ಅಹಮ್ಮದನಗರ ಜಿಲ್ಲೆಯ ಜಾಮಖೇಡ ತಾಲೂಕ ಕಾಂಗ್ರೆಸ್ ಕಮಿಟಿ ಅಧ್ಯಕ್ಷರಾದ ಶ್ರೀ. ರಾಜಕುಮಾರ ಶಹ ಇವರು ನಿಜಾಮ ರಾಜ್ಯದ ಒಂದು ಊರಿಗೆ ತಮ್ಮ ಸ್ವಂತ ಕೆಲಸಕ್ಕಾಗಿ ಮೋಟಾರಿನಲ್ಲಿ ಹೋಗುತ್ತಿದ್ದಾಗ ಪೋಲೀಸರು ಅವರನ್ನು ಸೆರೆ ಹಿಡಿದರು. ಅವರು ಗಾಂಧಿ ಟೊಪ್ಪಿಗೆ ಹಾಕಿಕೊಂಡದ್ದೇ ಅಪರಾಧವಾಯಿತು.!

ಆರ್ಯನ್ ಡಿಫೆನ್ಸ್ ಲೀಗಿನ ಶ್ರೀ. ಗೋಪಾಳರಾವ ಮತ್ತು ಅವರ ಮೂವರು ಸಹಕಾರಿಗಳು ಒಳ್ಳೆಯ ನಡತೆಯ ಬಗ್ಗೆ ೧೦೦ ರೂ. ಹೊಣೆ ಕೊಡಬೇಕಾಗಿ ಸರಕಾರದವರು ಕೇಳಿದ್ದಾರೆ.

ಶ್ರೀ. ವೀರ ಯಶವಂತರಾವ ಜೋಶಿ ಇವರ ವ್ಯಾಜ್ಯ ಸೆಶನ್ಸ ಕಮಿಟಿ ಆದಮೇಲೆ ಹೈಕೋರ್ಟಿನವರು ನ್ಯಾಯಮೂರ್ತಿ ರಾಮಚಂದ್ರನಾಯಕ ಇವರ ಕಡೆಗೆ ಆ ವ್ಯಾಜ್ಯವನ್ನು ಕಳಿಸಿದರು. ಕೀರ್ತಿಶೇಷ ವಾಮನ ನಾಯಕರು ತನ್ನ ಸಂಬಂಧಿರುವುದರಿಂದ ಆ ವ್ಯಾಜ್ಯ ತಾನು ವಿಚಾರಣೆ ಮಾಡಲು ಇಚ್ಛಿಸುವದಿಲ್ಲವಾಗಿ ತಿಳಿಸಿದರು. ಆ ಮೇಲೆ ನ್ಯಾಯಮೂರ್ತಿ ಅಲಂ ಅಲ್ಲೀಖಾನ ಇವರ ಕಡೆ ಕಳಿಸಲಾಯಿತು. ಅವರೂ ಈ ವ್ಯಾಜ್ಯ ತನ್ನ ಕಡೆ ಬೇಡವಾಗಿ ಹೇಳಿದರೆಂದು ಸುದ್ದಿಯಿದೆ.

ಘಟನಾಂದೂರ ಎಂಬಲ್ಲಿ ಚಂಪಾಷಷ್ಠಿ ಉತ್ಸವಕ್ಕೆ ಸರಕಾರದವರು ಅಪ್ಪಣೆ ಕೊಡದಿದ್ದುದರಿಂದ ಅಲ್ಲಿಯ ಜನರಲ್ಲಿ ಅಸಂತೋಷವುಂಟಾಗಿದೆ.

ಮಂಗಳೂರಿಂದ ಮತ್ತು ಧಾರವಾಡದಿಂದ ಕೆಲವು ಸತ್ಯಾಗ್ರಹಿಗಳು ಹೈದರಾಬಾದಿಗೆ ಹೋಗುವವರಿದ್ದಾರೆ. ಪಂಜಾಬ ಪ್ರಾಂತದಿಂದಲೂ ಕೆಲವು ಸತ್ಯಾಗ್ರಹಿಗಳು ಬರುವವರಿದ್ದಾರೆಂದು ಪ್ರಕಟವಾಗಿದೆ.

ಮಹಿಬೂಬ ನಗರ ಎಂಬಲ್ಲಿ ಶ್ರೀ. ಸಿ ಎಸ್. ನಾಯಡು ಎಂಬ ಪತ್ರಿಕಾ ಪ್ರತಿನಿಧಿಗಳಿಗೆ ಗುಂಡರು ಹೊಡೆದರೆಂದು ತಿಳಿದು ಬಂದಿದೆ.

ವಿದ್ಯಾರ್ಥಿಗಳ ಸತ್ಯಾಗ್ರಹದಲ್ಲಿ ಸಾಧಾರಣ ೩ ಸಾವಿರ ವಿದ್ಯಾರ್ಥಿಗಳಿದ್ದಾರೆ. ಗುಲಬರ್ಗಾ ಸತ್ಯಾಗ್ರಹಿ ವಿದ್ಯಾರ್ಥಿಗಳಿಗೆ ನೀವೇಕೆ ಹೈದರಾಬಾದ ವಿದ್ಯಾರ್ಥಿಗಳ ಪಕ್ಷಹಿಡಿಯುತ್ತೀರಿ? ನಿಮಗೂ ಅವರಿಗೂ ಏನು ಸಂಬಂಧ? ಎಂದು ಪ್ರಿನ್ಸಿಪಾಲರು ಕೇಳಿದರಂತೆ. ಆಗ ವಿದ್ಯಾರ್ಥಿಗಳು ನೀವೇಕೆ ಕೆಮಾಲಪಾಶಾರ ನಿಧನದ ದುಃಖಪ್ರದರ್ಶನ ಸಭೆಮಾಡಿದಿರಿ? ತುರ್ಕಸ್ಥಾನಕ್ಕೂ ನಿಮಗೂ ಯಾವ ಸಂಬಂಧ? ಎಂದು ಕೇಳಿದರಂತೆ. ಆಗ ಪ್ರಿನ್ಸಿಪಾಲರು ಸುಮ್ಮನಿರಬೇಕಾಯಿತು.

ಹೈದರಾಬಾದ ಸತ್ಯಾಗ್ರಹದಲ್ಲಿ ಸೇರಬಾರದಾಗಿ ಮಹಾತ್ಮಾ ಗಾಂಧಿ, ಸರದಾರ ಪಟೇಲ ಮೊದಲಾದವರು ಹೇಳಿದ್ದಾರೆಂದು ಸುಳ್ಳೇ ಪ್ರಕಟನೆ ಹೊರಡಿಸಿ ಹೈದರಾಬಾದ ಸಂಸ್ಥಾನದ ಕೆಲವು ಕಡೆ ಹಂಚುತ್ತಿದ್ದಾರೆಂದು ತಿಳಿದಿದೆ. ಇದು ಸುಳ್ಳು ಪ್ರಚಾರ. ಇಂಥಾದ್ದನ್ನು ಯಾರೂ ನಂಬಬಾರದಾಗಿ ಒಬ್ಬ ಸುದ್ದಿಗಾರರು ತಿಳಿಸಿದ್ದಾರೆ.

## ದುಃಖ ಸೂಚಕ ಠರಾವು.

ಶ್ರೀಮನ್ನಿರಂಜನ ಜಗದ್ಗುರು ಮುರುಘಾರಾಜೇಂದ್ರ ಫ್ರೀ ಬೋರ್ಡಿಂಗ ಹಾವೇರಿಪೇಟೆ ಧಾರವಾಡ ಇವರ ಸಂಸ್ಥೆಯಲ್ಲಿ ಶ್ರೀಯುತ ಕರವೀರಪ್ಪ ಅಂದಾನಪ್ಪ ಕುಲಕರ್ಣಿ ವಕೀಲ ಧಾರವಾಡ ಇವರ ಅಕಾಲಿಕ ನಿಧನದಿಂದ ಸಂಸ್ಥೆಗೆ ಮತ್ತು ವೀರಶೈವ ಸಮಾಜಕ್ಕೆ ಅಪಾರ ಹಾನಿಯುಂಟಾದ್ದರಿಂದ ಕೆಳಗೆ ಬರೆದ ದುಃಖಸೂಚಕ ಠರಾವು ತಾ. ೪-೧೨-೩೮ ನೇ ದಿವಸ ಪಾಸುಮಾಡಲ್ಪಟ್ಟಿತು.

ಶ್ರೀಯುತ ಕರವೀರಪ್ಪ ಅಂದಾನಪ್ಪ ಕುಲಕರ್ಣಿ ವಕೀಲ ಧಾರವಾಡ ಇವರು ಈ ಸಂಸ್ಥೆಯ ಅಧ್ಯಕ್ಷರಾಗಿ ಕಳೆದ ೧೨, ೧೩ ವರುಷಗಳಿಂದ ಕೆಲಸಮಾಡುತ್ತ ಬಂದಿದ್ದರು. ಇವರು ಈ ಸಂಸ್ಥೆಯ ಬಗ್ಗೆ ಒಳ್ಳೇ ಕಳಕಳಿಯಿಂದ ಕೆಲಸಮಾಡಿದರಲ್ಲದೆ ಈ ಸಂಸ್ಥೆಗೆ ಚಿರಸ್ಥಾಯಿಯಾಗುವಂತೆ ಇಂಗಳಗಿ ಗ್ರಾಮದ ೬೩ ಎಕರೆ ಉತ್ತಮ ಜಮೀನು ದಾನವಾಗಿ ಕೊಟ್ಟಿರುತ್ತಾರೆ. ಇದು ಅಲ್ಲದೆ ಮೇಲಿಂದ ಮೇಲೆ ಈ ಸಂಸ್ಥೆಗೆ ಧನಸಹಾಯವನ್ನು ಮಾಡುತ್ತಿದ್ದರು. ಇಂಥ ಮಹನೀಯರ ಅಕಾಲಿಕ ನಿಧನದಿಂದ ಈ ಸಂಸ್ಥೆಗೂ ಮತ್ತು ಇಡೀ ವೀರಶೈವ ಸಮಾಜಕ್ಕೂ ಅಪಾರವಾದ ದುಃಖವಾಗಿದೆಯೆಂದು ವ್ಯಕ್ತಗೊಳಿಸಿ ಮೃತರ ಆತ್ಮಕ್ಕೆ ದಯಾಪರನಾದ ಶ್ರೀ ಶಿವಯೋಗೀಶ್ವರನು ಶಾಂತಿಯನ್ನೀಯಲೆಂದು ಅನನ್ಯಭಾವದಿಂದ ಬೇಡಿಕೊಳ್ಳುತ್ತೇವೆ.

ಬಸಪ್ಪ ದೊಡ್ಡಫಕೀರಪ್ಪ ಲಕಮನಹಳ್ಳಿ
ಚೇರಮನ್

---

## ಕರ್ನಾಟಕ ಅಮೇಚ್ಯೂರ್ ವೇಟ್ ಲಿಫ್ಟರ್ಸ್
## ಅಸೋಸಿಯೇಶನ್ ಧಾರವಾಡ.

ಕ. ಅ. ವೆ. ಲಿ. ಅ. ದ ಕಾರ್ಯಕಾರೀ ಮಂಡಲವು ನಿಶ್ಚಯಿಸಿದಂತೆ ಭಾರವೆತ್ತುವ ಸ್ಪರ್ಧೆಯು ೧೯೩೮ ನೇ ಇಸ್ವಿಯ ಡಿಸೆಂಬರ ತಿಂಗಳಿನ ಶನಿವಾರ ೨೪ ನೇ ತಾರೀಖಿನ ದಿನ ಸಂಜೆ ೪ ಗಂಟೆಗೆ ಜರುಗುವುದು. ಸ್ಥಳ- ಮಲ್ಲಸಜ್ಜನ ವ್ಯಾಯಾಮ ಶಾಲೆಯ ಪಟಾಂಗಣದಲ್ಲಿ.

ಸ್ಪರ್ಧೆಯಲ್ಲಿ ಬ್ರಿಟಿಶ್ ಕರ್ನಾಟಕದ ತರುಣರು ಭಾಗವಹಿಸಬಹುದು. ಭಾಗವಹಿಸಲಿಚ್ಛಿಸುವವರು ಎಂಟಾಣೆ ಪ್ರವೇಶ ಧನ ಸಹಿತ ತಾ. ೧೭-೧೨-೩೮ ರ ಒಳಗಾಗಿಯಾಗಲಿ ಅಥವಾ ಆ ದಿನವಾಗಲೀ ಶ್ರೀ. ಕೆ. ಜಿ. ನಾಡಗೇರ ಸಂಚಾಲಕ ಮಲ್ಲಸಜ್ಜನ ವ್ಯಾಯಾಮ ಶಾಲೆ ಧಾರವಾಡ ಇವರಿಗೆ ಮುಟ್ಟುವಂತೆ ಕಳಿಸಬೇಕು.

ಕಾರ್ಯದರ್ಶಿ,
ಬಿ. ಕೆ. ಕೊಂಗಿ.
ಸಿ. ಬಿ. ಪಟ್ಟಣಶೆಟ್ಟಿ.

---

## ವೀರಶೈವ ತರುಣ ಸಮ್ಮೇಲನದ ಅಧ್ಯಕ್ಷರು.

ಹುಬ್ಬಳ್ಳಿಯಲ್ಲಿ ಕೂಡುವ ವೀರಶೈವ ತರುಣರ ಸಮ್ಮೇಲನಕ್ಕೆ ನಿಜಾಮ ವೀರಶೈವರ ಪ್ರಮುಖ ಮುಂದಾಳುಗಳಾದ ಅಡಿಗೆ ಶ್ರೀ. ಸಂಗ್ರಾಮಪ್ಪ ವಕೀಲ ಇವರು ಅಧ್ಯಕ್ಷರಾಗಿ ಆರಿಸಲ್ಪಟ್ಟಿದ್ದಾರೆ.

ಈ ಪತ್ರಿಕೆಯು ಅಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿಸಲ್ಪಟ್ಟು ಅಲಮಟ್ಟಿ ಸಾಂಸ್ಕೃತ ವಿದ್ಯಾಲಯದ ಪರ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.

REGISTERED No. B. 2891.

# ಶರಣ ಸಂದೇಶ

## The Sharana Sandesh.

ನ್ಯಾಯನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕವಿರೋಧಿ. ಶರಣನಾರಾರಿಗೂ ಅಂಜುವವನಲ್ಲ ! ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥ —ಶ್ರೀ ಬಸವಣ್ಣನವರು.

ಸಂಪಾದಕರು:-
ಶ್ರೀ. ಹರ್ಡೇಕರ ಮಂಜಪ್ಪನವರು.

ಬಿಡಿಸಂಚಿಕೆಗೆ ೧ ಆಣೆ.
ವಾರ್ಷಿಕ ಚಂದಾ:- ಅಂಚೆಯ ವೆಚ್ಚ ಸೇರಿ ೩ ರೂ-

ಪ್ರತಿ ಸೋಮವಾರವೂ ಪ್ರಕಟವಾಗುವುದು.

| ಸಂಪುಟ ೪ | ಆಲಮಟ್ಟಿ- ಸೋಮವಾರ ತಾರೀಖು ೧೯ ನೆಯ ಡಿಶೆಂಬರ್ ೧೯೩೮. | ಸಂಚಿಕೆ೧೮ |
|---|---|---|

ಜನಸೇವೆಯೇ ದೇವಸೇವೆ.

# ನಿಜಾಮ ರಾಜ್ಯದ ಭೀಕರ ದಬ್ಬಾಳಿಕೆ!

## ಪ್ರೇಕ್ಷಕರಿಗೆ ಡೊಣ್ಣೆ ಹೊಡೆತ.

### ವಿದ್ಯಾರ್ಥಿಗಳ ಪ್ರಚಂಡ ಸತ್ಯಾಗ್ರಹ.

ಗುಲಬರ್ಗಾ ಜಿಲ್ಲಾ ಕಲ್ಯಾಣದಲ್ಲಿ ಶ್ರೀ. ಮೋಹನಸಿಂಹ
ಮತ್ತು ಶ್ರೀ. ಗೋಪಾಳದೇವ ಇವರಿಗೆ
ಶಿಕ್ಷೆವಿಧಿಸಿದನಂತರ ಅವರನ್ನು ನೋಡಲು ಬಂದ
ಜನರಿಗೆ ಪೋಲಿಸರು ಡೊಣ್ಣೆಯಿಂದ ಹೊಡೆದರು.

ಈ ವರೆಗೆ ನಿಜಾಮ ರಾಜ್ಯದ ವಿದ್ಯಾರ್ಥಿಗಳ ಸತ್ಯಾಗ್ರಹದಲ್ಲಿ
೭೬೫ ವಿದ್ಯಾರ್ಥಿಗಳು ಸೇರಿದ್ದಾರೆ.
ಇನ್ನೂ ಸೇರುವವರಿದ್ದಾರೆ.

ನಿಜಾಮ ರಾಜ್ಯದ ಆರ್ಯ ಸಮಾಜದವರಲ್ಲಿ
ಪ್ರಸಿದ್ಧರಾದ ಶ್ರೀ. ಶಾಮಲಾಲರು
ಬೀದರ ಜೈಲಿನಲ್ಲಿ ಮರಣಹೊಂದಿದರು.

ದೇಶಸೇವೆ ದೇವಾಲಯ.

ಅಖಿಲ ಕರ್ನಾಟಕದ ಸಾಂಪತ್ತಿಕ ಸ್ಥಿತಿಯನ್ನು ಸುಧಾರಿಸಲು ಸತತ ಪ್ರಯತ್ನ
ಮಾಡುತ್ತಲಿರುವ ಹಾಗೂ ಶೀಘ್ರವಾಗಿ ಮುಂದರಿಯುತ್ತಲಿರುವ
ಕರ್ನಾಟಕಥ ವಿಮಾ ಸಂಸ್ಥೆಯೆಂದರೆ ಇದೊಂದೇ.

## ದಿ ಸ್ವರಾಜ್ಯ ಬ್ಯಾಂಕಿಂಗ ಮತ್ತು ಇನ್ಸುರನ್ಸ ಕಂ. ಲಿ.

## ಧಾರವಾಡ.

ಜೀವ ವಿಮಾ ಕಾರ್ಯವನ್ನು ಪ್ರಾರಂಭಿಸಿದ ಕೇವಲ ಎರಡೇ ವರ್ಷಗಳಲ್ಲಿ ಪ್ರಚಾರ ಮಾಡಿರುವ
ವಿಮಾ ಕಾರ್ಯವು ರೂ. ೧೧,೦೦,೦೦೦ ಕ್ಕೆ ಮಿಕ್ಕಿರುವದನ್ನು ನೋಡಿ
ಅಚ್ಚರಿಗೊಳ್ಳದೆ ಇರಲಾರಿರಿ.

ಚೇರಮನ್—
ದೇಶಭಕ್ತ ಶ್ರೀ. ಎಸ್. ಕೆ. ಹೊಸಮನಿ.
B. A. L.L. B. M. L. A.
ಉಪಾಧ್ಯಕ್ಷ ಕ. ಪ್ರಾ. ಕಾ. ಕಮಿಟಿ.

ವ್ಹಾಯಿಸ್ ಚೇರಮನ್—
ಶ್ರೀಯುತ ವ್ಹಿ. ಬಿ. ಹಾಲಭಾವಿ
B. A. L. L. B. ರಿಟಾಯರ್ಡ
ಫರ್ಸ್ಟ ಕ್ಲಾಸ್ ಸಬ್ ಜಜ್ಜ, ಧಾರವಾಡ.

ಕೊಂದರೆಯಿಲ್ಲದ ಒತ್ತಾಯದ ಉಳಿತಾಯ! — ಬಹು ಸುಲಭವಾದ ಕಂತುಗಳು!! — ಮಿತವ್ಯಯದ ಅಡಳಿತ!!!

**ರೂ. ೫೦೦ ರಿಂದ ರೂ. ೫೦೦೦ ಗಳ ವರೆಗೆ ಜೀವ ವಿಮಾ ಪಾಲಿಸಿಗಳು.**

ಪುನರ್ಜೀವನಗೊಳಿಸಲು ಉದಾರ ಸವಲತ್ತುಗಳು ವಾರ್ಷಿಕ ಕಂತುಗಳಮೇಲೆ
೧೦೦ ಕ್ಕೆ ೨॥ ಯಂತೆ ರಿಯಾಯಿತಿ ಹಾಗು ಸ್ತ್ರೀ ಜೀವ ವಿಮೆ.
ಕರ್ನಾಟಕದ ಸಾಂಪತ್ತಿಕ ಸ್ಥಿತಿಯನ್ನು ಸುಧಾರಿಸಿ ಸುಖಸಾಮ್ರಾಜ್ಯದಲ್ಲಿ ಲೋಲಾಡಬೇಕೆಂದು ಬಯಸುವ
ಮಹಾಜನಗಳು ತಮ್ಮ ತನು ಮನ ಧನಗಳಿಂದ ಸಂಸ್ಥೆಯನ್ನು ಪ್ರೋತ್ಸಾಹಿಸಬೇಕಾಗಿ ವಿನಂತಿ.
— ಎಲ್ಲ ಕಡೆಯಲ್ಲಿಯೂ ಕಾರ್ಯ ಕುಶಲರಾದ ಪ್ರಾಮಾಣಿಕ ಏಜಂಟರು ಬೇಕು. ವಿವರಗಳಿಗೆ ಇಂದೇ ಬರೆಯಿರಿ.
N. B. :— ಚಾಲತಿಯಲ್ಲಿರುವ ಪ್ರಾವ್ಹಿಡೆಂಟ ಪಾಲಿಸಿಗಳನ್ನು ಇಷ್ಟ ಇದ್ದವರು
ತಮ್ಮ ಜೀವ ವಿಮೆಗೆ ಬದಲಾಯಿಸಿಕೊಳ್ಳಬಹುದು. —The Manager.

ಮುದ್ದಾದ ಅಕ್ಷರ! ಸುಲಭ ದರ!

## ಶ್ರೀ ರಂಗನಾಥ ಟೈಪ್ ಫೌಂಡರಿ

ಬೆಂಗಳೂರು.

ಕನ್ನಡ ಮತ್ತು ಇಂಗ್ಲಿಷ, ಎಲ್ಲಾ ತರದ ಟೈಪು ಗಳೂ ಒಳ್ಳೊಳ್ಳೇ ಬಾರ್ಡರಗಳೂ ನಮ್ಮ ಫೌಂಡರಿಯಲ್ಲಿ ತಯಾರಾಗುತ್ತವೆ.

ಒಳ್ಳೇ ಮೆಟಲ್. ಬಹು ಅಂದವಾದ ಅಕ್ಷರಗಳು. ಬಲು ಸುಲಭ ದರ. ಕ್ಯಾಟಲಾಗ ತರಿಸಿಕೊಳ್ಳಿರಿ. ಒಮ್ಮೆ ಟೈಪುಗಳನ್ನು ತರಿಸಿಕೊಂಡು ಅನುಭವ ಹೊಂದಿರಿ. ಹಳೆ ಟೈಪುಗಳಿದ್ದರೆ ಸುಲಭ ಚಾರ್ಜಿಗೆ ಹೊಸದಾಗಿ ಹೊಯಿದು ಕೊಡುತ್ತೇವೆ.

ಪ್ರೊಪ್ರೈಟರ,
ಶ್ರೀ. ರಂಗನಾಥ ಟೈಪ್ ಫೌಂಡರಿ
೬೭ ಕುಬೇರ ಸಾಹುಜಿ ಲೈನ್
ಚಿಕ್ಕಪೇಟೆ, ಬೆಂಗಳೂರು ಸಿಟಿ.

ಮಾಸಿಕ ಪತ್ರಿಕೆ ] **ಕಲ್ಯಾಣ.** [ ಸಚಿತ್ರ ಪತ್ರಿಕೆ

ಸಂಪಾದಕರು } ಪಾಟೀಲ ಲಿಂಗನಗೌಡರು
ಎಂ. ಪಿ. ಕಲಬುರ್ಗಿ

ಈ ಮಾಸ ಪತ್ರಿಕೆಯಲ್ಲಿ ಧಾರ್ಮಿಕ ಸಾಮಾಜಿಕ ರಾಷ್ಟ್ರೀಯ ಲೇಖಗಳು, ಶಿವಭಕ್ತರ ಪೌರಾಣಿಕ ಮತ್ತು ಐತಿಹಾಸಿಕ ಸಂಶೋಧಿತ ಚರಿತ್ರೆಗಳು, ವೀರಶೈವ ಧರ್ಮ ಗ್ರಂಥಗಳು ಪ್ರತಿ ತಿಂಗಳು ಪ್ರಕಟವಾಗುವವು.

—ಇಂದೇ ವರ್ಗಣಿದಾರರಾಗಿರಿ.—

ವಾರ್ಷಿಕ ವರ್ಗಣಿ ೨ ರೂ. ೮ ಆಣೆ (ಅಂಚೆ ವೆಚ್ಚ ಸಹಿತ)
ವಿಳಾಸ— ಮ್ಯಾನೇಜರ "ಕಲ್ಯಾಣ"
ಕಲ್ಯಾಣ ಅಫೀಸ ನಂ. ೨೦೭೧
ಗಂಟೀಕೇರಿ ಹುಬ್ಬಳ್ಳಿ.



# ಶರಣ ಸಂದೇಶ

THE SHARANA SANDESHA.



ಪ್ರಮುಖ ಸಾಮಾಜಿಕ ವಾರ ಪತ್ರಿಕೆ.

ಸಂಪುಟ ೮ | ಆಲಮಟ್ಟಿ- ಸೋಮವಾರ ತಾರೀಖು ೧೯ ನೆಯ ಡಿಶೆಂಬರ ೧೯೩೮. | ಸಂಚಿಕೆ ೧೮

★

## ಮುಂದಿನ ವಾರದ 'ಶರಣ ಸಂದೇಶ' ವನ್ನು

### ಅಗತ್ಯವಾಗಿ ಓದಿರಿ!

ಈ ಮುಂಚೆ ಪ್ರಕಟಗೊಳಿಸಿದಂತೆ ಶರಣ ಸಂದೇಶ ಪತ್ರಿಕೆಯು ತಾ. ೨೬-೧೨-೩೮ ನೆಯ ದಿನ ದೊಡ್ಡ ಆಕಾರದಲ್ಲಿ ಪ್ರಕಟವಾಗುವುದು.

ವಿಜಾಪುರ, ಬಾಗಲಕೋಟೆ, ಗದಗ, ಹೊಸಪೇಟೆ, ಬಳ್ಳಾರಿ, ಹುಬ್ಬಳ್ಳಿ, ಧಾರವಾಡ, ಬೈಲಹೊಂಗಲ, ಬೆಳಗಾವಿ, ಹಾವೇರಿ, ದಾವಣಗೇರಿ, ತಿಬಟೂರು, ತುಮಕೂರು, ಶಿವಮೊಗ್ಗಾ, ಬೆಂಗಳೂರು, ಮೈಸೂರು, ಶಿರಸಿ, ರಾಯಚೂರು ಮೊದಲಾದ ಕರ್ನಾಟಕದ ಎಲ್ಲ ಪ್ರಸಿದ್ಧ ಸ್ಥಳಗಳಲ್ಲಿಯೂ ಪ್ರತಿವಾರ ಶರಣ ಸಂದೇಶ ದೊರೆಯುವ ವ್ಯವಸ್ಥೆ ಮಾಡಲಾಗಿದೆ.

—ಮ್ಯಾನೇಜರ್.

★

—ಆಸಾಮ ಪ್ರಾಂತದ ಸಮ್ಮಿಶ್ರ ಕಾಂಗ್ರೆಸ್ ಮಂತ್ರಿಮಂಡಳದವರು ತಮ್ಮ ಪ್ರಾಂತದಲ್ಲಿರುವ ಒಟ್ಟು ೯ ಜನ ರಾಜಕೀಯ ಕೈದಿಗಳನ್ನು ಬಿಡುಗಡೆ ಮಾಡಿದ್ದಾರೆ.

## ಮಹತ್ವದ ಸುದ್ದಿಗಳು.

—ಕಳೆದ ವಾರ ವರ್ಧಾದಲ್ಲಿ ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಸೇರಿದ್ದಿತು. ಅದರಲ್ಲಿ ಅನೇಕ ಗೊತ್ತುವಳಿಗಳನ್ನು ಸ್ವೀಕರಿಸಲಾಯಿತು. ಸಂಸ್ಥಾನ ವಿಷಯಕ ಗೊತ್ತುವಳಿಯಲ್ಲಿ ಸಂಸ್ಥಾನ ವಿಷಯಕವಾದ ಕಾಂಗ್ರೆಸ್ಸಿನ ಧೋರಣೆಯನ್ನು ಸ್ಪಷ್ಟಪಡಿಸಿದ್ದಲ್ಲದೆ ಹರಿಪುರ ಕಾಂಗ್ರೆಸ್ಸಿನ ಅಧಿವೇಶನ್ನಿನಲ್ಲಿ ಸ್ವೀಕರಿಸಿದ ಗೊತ್ತುವಳಿಯ ಸ್ಪಷ್ಟೀಕರಣ ಮಾಡಲಾಗಿದೆ. ಮತ್ತೊಂದು ಗೊತ್ತುವಳಿಯಿಂದ 'ಹಿಂದು ಮಹಾಸಭೆ' ಮತ್ತು 'ಮುಸ್ಲಿಂಲೀಗು'ಗಳು ಜಾತೀಯ ಸಂಸ್ಥೆಗಳೆಂದು ಸಾರಲಾಯಿತು. ಬಂಗಾಲ ಪ್ರಾಂತದಲ್ಲಿ ಸಮ್ಮಿಶ್ರ ಕಾಂಗ್ರೆಸ್ ಮಂತ್ರಿಮಂಡಲ ರಚಿಸುವ ಬಗ್ಗೆಯೂ ವಿಚಾರವಿನಿಮಯ ಮಾಡಿದರೆಂದು ತಿಳಿದುಬಂದಿದೆ.

—ಹಿಟ್ಲರನು ಲಷ್ಕರೀ ವಿಷಯಕವಾದ ಒಂದು ಗ್ರಂಥವನ್ನು ರಚಿಸುತ್ತಿದ್ದಾನಂತೆ. ಜರ್ಮನಿಯಲ್ಲಿಯ ಸೈನ್ಯಾಧಿಕಾರಿಗಳೆಲ್ಲರೂ ಅದರಲ್ಲಿರುವ ಪಾಠವನ್ನು ತೀಡಬೇಕಾಗುವುದು. ಅಂತು ಹಿಟ್ಲರನು ನೆಪೋಲಿಯನ್ನನ ಅನುಕರಣ ಮಾಡುವುದರಲ್ಲಿದ್ದಾನೆಂದು ಭಾವಿಸಬಹುದಾಗಿದೆ.

—ಹೈದರಾಬಾದಿನಲ್ಲಿ ನಡೆದ ಸತ್ಯಾಗ್ರಹ ಚಳವಳಿಯಲ್ಲಿ ಈ ವರೆಗೆ ೪೬೧ ಜನ ಆರ್ಯ ಸಮಾಜಿಗಳಿಗೆ ಶಿಕ್ಷೆಯಾಗಿದೆ. ಒಟ್ಟು ೭೭೧ ಜನ ಆರ್ಯ ಸಮಾಜಿಗಳನ್ನು ಬಂಧಿಸಿ ವ್ಯಾಜ್ಯ ಹೂಡಿದ್ದಾರೆ. ದೇಶದ ಎಲ್ಲ ಭಾಗಗಳಿಂದಲೂ ಸತ್ಯಾಗ್ರಹಕ್ಕಾಗಿ ಸ್ವಯಂ ಸೇವಕರು ಹಾತೊರೆಯುತ್ತಿದ್ದಾರೆ. ಸೊಲ್ಲಾಪುರದಲ್ಲಿ ಸೇರುವ ಆರ್ಯನ್ ಕಾಂಗ್ರೆಸ್ಸಿನ ವರೆಗೂ ಎಲ್ಲರನ್ನು ತಡೆದುದಾಗಿದೆಯೆಂದು ತಿಳಿದುಬಂದಿದೆ.

—ಬಂಗಾಲ ಪ್ರಾಂತದ ಅರ್ಥಿಕ ಮಂತ್ರಿಗಳಾದ ಶ್ರೀ. ನಳಿನಿ ರಂಜನ ಸರಕಾರ ಇವರು ಬಂಗಾಲದಲ್ಲಿ ಕಾಂಗ್ರೆಸ್ ಸಮ್ಮಿಶ್ರ ಮಂತ್ರಿಮಂಡಳ ರಚಿಸುವುದರ ಬಗ್ಗೆ ಮಹಾತ್ಮಾ ಗಾಂಧೀಜಿಯವರೊಡನೆ ಮಾತುಕತೆ ನಡೆಸುವವರಿದ್ದಾರೆ.

# ವೀರಶೈವ ವೈದ್ಯ ಪರಿಷತ್ತಿನ ಅವಶ್ಯಕತೆ.

ಕೈಗಾರಿಕೆ, ಕಲೆ, ವಿಜ್ಞಾನ, ವ್ಯವಸಾಯ ಮುಂತಾದವುಗಳ ಪರಿಷತ್ತುಗಳು ಜಾತಿವಿಶಿಷ್ಟವಾಗಿರಕೂಡದೆಂದೂ ಪ್ರಾದೇಶಿಕ ಮತ್ತು ರಾಷ್ಟ್ರೀಯವಾಗಿರಬೇಕೆಂದೂ ಕೆಲವರ ಮತ. ಉದಾಹರಣಾರ್ಥವಾಗಿ ಕರ್ನಾಟಕ ವೈದ್ಯಪರಿಷತ್ತು ಕೂಡುತ್ತಿರಲು ವೀರಶೈವ ವೈದ್ಯ ಪರಿಷತ್ತು ಏಕೆ ಅಥವಾ ಇನ್ನಾವುದೊಂದು ವೀರಶೈವ ಕಸಬಿನವರ ಪರಿಷತ್ತು ಏಕೆ ಎಂದು ಕೆಲವರು ಕೇಳುತ್ತಾರೆ. ಅವರ ವಿಚಾರಗಳು ಯೋಗ್ಯವಾಗಿದ್ದರೂ ನಮ್ಮ ಸಮಾಜದ ಪರಿಸ್ಥಿತಿಯನ್ನಷ್ಟು ಅವಲೋಕಿಸಿದರೆ ಅವರಿಗೆ ನಮ್ಮ ವಿಚಾರಸರಣಿಯೂ ಮಾನ್ಯವಾಗದೆ ಇರಲಿಕ್ಕಿಲ್ಲ.

**ಕಾಯಕ ಮತ್ತು ಜಾತಿಭೇದ.**

ಹಿಂದುಗಳಲ್ಲಿ ವ್ಯವಸಾಯ ಭೇದದಿಂದಲೇ ಜಾತಿಭೇದವುಂಟಾಯಿತೆಂಬುದು ಸುಪ್ರಸಿದ್ಧವಷ್ಟೆ. ಆದರೆ ವ್ಯವಸಾಯಗಳಿಗೊಂದು ಪೌರಾಣಿಕ ಆಧಾರಹಚ್ಚಿಕೊಟ್ಟದ್ದರಿಂದಲೇ ಅದರಲ್ಲಿ ಜಾತೀಯತ್ವದ ಕಲ್ಪನೆಯುಂಟಾಯಿತು. ಯಾವುದೊಂದು ಜಾತಿಯವರು ತಮ್ಮ ವ್ಯವಸಾಯವನ್ನು ತ್ಯಜಿಸಬಾರದೆಂದು ಅವರಿಗೆ ಇಲ್ಲದ ಹಾಗು ಸಲ್ಲದ ಒಂದು ಜಾತೀಯ ಅಭಿಮಾನವನ್ನು ಹುಟ್ಟಿಸಿ ಅವರು ಅದೇ ವ್ಯವಸಾಯವನ್ನು ಅಂಟಿಕೊಳ್ಳುವಂತೆ ಹಿಂದುಧರ್ಮವು ಮಾಡಿತು. ವ್ಯವಸಾಯದಲ್ಲಿ ಅಂತರವಾದರೆ ಧರ್ಮವೇ ಭ್ರಷ್ಟವಾಗುತ್ತದೆಂದು ಅದು ಹೇಳಿತು. ಹೀಗಾಗಿ ವ್ಯವಸಾಯದ ಬಗ್ಗೆ ಮೂಢ ಕಲ್ಪನೆಯನ್ನುಂಟುಮಾಡಿ ಅದನ್ನು ಕಾಪಾಡಲು ಹಿಂದಿನ ಸ್ಮೃತಿಕಾರರು ಪ್ರಯತ್ನಪಟ್ಟಂತೆ ತೋರುತ್ತದೆ.

ಇದರಿಂದ ಹಿಂದುಸಮಾಜಕ್ಕೆ ಹೇಳತೀರದಷ್ಟು ಹಾನಿಯಾಗಿದೆ. ವ್ಯವಸಾಯಕ್ಕೆ ಜಾತೀಯ ಸ್ವರೂಪಕೊಟ್ಟದ್ದರಿಂದಲೇ ಅವು ಪ್ರಗತಿಯಾಗಲಿಲ್ಲ. ಎಣ್ಣೆ ತೆಗೆಯುವವನು ಒಂಟಿ ಗಾಣ ಹೂಡಿದ್ದರೆ ಅವನದೊಂದು ಜಾತಿ. ಅವನು ಜೋಡ ಗಾಣ ಹೂಡಬಾರದು. ಆದೀ ಗಾಣಿಗನು ಈ ಎಂಜಿನ್ ಮೂಲಕ ಎಣ್ಣೆ ತೆಗೆದು ಪರದೇಶದ ಕೂಡ ವ್ಯವಹಾರಮಾಡಬಾರದು. ಮಾಡಿದರೆ ಅವನ ಜಾತಿ ಹೋಗುತ್ತದೆಂಬ ತಪ್ಪು ತಿಳುವಳಿಕೆ ನಮ್ಮ ಜನರಲ್ಲಿದ್ದಿತು. ಅದು ಸಾವಕಾಶವಾಗಿಯಾದರೂ ಈಗ ಬಯಲಾಗುತ್ತಿದೆಯೆಂಬ ಮಾತೇ ಬೇರೆ. ಏನೇ ಇರಲಿ. ಇಲ್ಲಿಯ ವರೆಗೆ ಮಾತ್ರ ಇಂಥ ತಪ್ಪುಕಲ್ಪನೆ ಇದ್ದುದರಿಂದಲೇ ವ್ಯವಸಾಯಗಳು ಹೀನಾವಸ್ಥೆಗೆ ಬಂದಿರುತ್ತವೆ.

ವೀರಶೈವರಲ್ಲಿ ವ್ಯವಸಾಯ ಭಿನ್ನತ್ವವು ಕಂಡು ಬರುತ್ತಿದ್ದರೂ ಒಂದನ್ನು ಬಿಟ್ಟು ಇನ್ನೊಂದನ್ನು ಹಿಡಿಯಬಾರದೆಂದು ಪ್ರತಿಬಂಧಿಸುವ ಯಾವ ಧಾರ್ಮಿಕ ಆಜ್ಞೆಯೂ ಇರುವುದಿಲ್ಲ. ಇಂದು ಬಣ್ಣ ಹಾಕುವವನು ನಾಳೆ ಸೂಜಿ ಕಾಯಕ ಮಾಡಬಹುದು. ಅಥವಾ ಅವನ ಮಗನು ಪ್ರಸಿದ್ಧ ಒಕ್ಕಲಿಗನಾಗಬಹುದು. ಒಕ್ಕಲಿಗನ ಮಗನೊಬ್ಬನು ವೈದ್ಯವಿದ್ಯೆ ಕಲಿತು ಪ್ರಸಿದ್ಧ ಡಾಕ್ಟರನಾಗಬಹುದು. ವೀರಶೈವ ಸಮಾಜವು ಕಾಯಕ ಸಮಾಜವಾಗಿದೆ. ಪ್ರತಿಯೊಬ್ಬ ವೀರಶೈವನು ಕಾಯಕವನ್ನು ಮಾಡಲೇಬೇಕೆಂಬ ನಿಯಮವಿದೆ. ಅಂದ ಮೇಲೆ ಕಾಯಕವನ್ನು ಪರಿಪಾಲಿಸುವುದು ಅಖಿಲ ವೀರಶೈವರ ಪ್ರಾತಿನಿಧಿಕ ಸಂಸ್ಥೆಯಾದ ವೀರಶೈವ ಮಹಾಸಭೆಯ ಪವಿತ್ರ ಕರ್ತವ್ಯವಾಗಿದೆ. ಆದುದರಿಂದಲೇ ವೀರಶೈವ ಮಹಾಸಭೆಯ ಅಧಿವೇಶನದ ಸಮಯದಲ್ಲಿ ಯಾವ ಯಾವ ಕಾಯಕಗಳು ದುರ್ಗತಿಹೊಂದಿರುತ್ತವೆಯೋ ಅವುಗಳ ವಿಚಾರಮಾಡುವದು ಯೋಗ್ಯವಾಗಿದೆ.

**ವೀರಶೈವ ವೈದ್ಯರಿಂದ ಸಂಸ್ಕೃತಿ ರಕ್ಷಣೆ.**

ಈ ಪ್ರಕಾರ ಕಾಯಕಗಳ ಪರಿಷತ್ತನ್ನು ನೆರೆಯಿಸುವದರಿಂದ ವೀರಶೈವ ಸಮಾಜದ ಆಯಾ ಕಾರ್ಯಗಳ ಅವನತಿ ಅಥವಾ ಪ್ರಗತಿಗಳು ತಿಳಿಯುತ್ತವೆ. ಸದ್ಯಕ್ಕೆ ವೀರಶೈವರು ಆಯುರ್ವೇದ ಔಷಧಗಳನ್ನು ಉಪಯೋಗಿಸಬೇಕು. ಗಿಡಮೂಲಿಕೆಗಳು ದಿವ್ಯೌಷಧಗಳಾಗಿವೆ. ಅವುಗಳ ಉಪಯೋಗ ವೀರಶೈವ ವೈದ್ಯರಿಗೆ ಗೊತ್ತಿದ್ದರೇನೇ ಅವರ ಆಚಾರ ಸರಿಯಾಗಿ ಉಳಿಯುವದು. ಆದುದರಿಂದ ವೀರಶೈವ ವೈದ್ಯರು ಕೂಡಿ ಕೇವಲ ವನಸ್ಪತಿಗಳಿಂದ ಹಾಗು ಸೂರ್ಯಕಿರಣ, ಜಲಚಿಕಿತ್ಸೆ, ವ್ಯಾಯಾಮ, ಆಸನ ಪಥ್ಯ ಮುಂತಾದವುಗಳಿಂದ ಯಾವ ಯಾವ ರೋಗಗಳನ್ನು ಹೇಗೆ ಹೇಗೆ ಗುಣಪಡಿಸಬೇಕೆಂಬುವ ಬಗ್ಗೆ ವಿಚಾರವಿನಿಮಯಮಾಡಲಿಕ್ಕೆ ಬರುವದು.

**ವೈದ್ಯರ ಅವಶ್ಯಕತೆ.**

ನಮ್ಮ ಸಮಾಜದ ಮಹಿಳೆಯರು ಅನೇಕ ರೋಗಗಳಿಗೆ ತುತ್ತಾಗುತ್ತಿದ್ದರೂ ಇಲ್ಲಿಯ ವರೆಗೆ ವೀರಶೈವ ಮಹಿಳೆಯರು ವೈದ್ಯಕೀಯ ಅಭ್ಯಾಸಮಾಡುವುದು ಅತಿ ಕಡಿಮೆ. ಕೆಲವು ಸುಶಿಕ್ಷಿತ ಮಹಿಳೆಯರು ಪಾಶ್ಚಾತ್ಯ ಪದ್ಧತಿಯ ಡಾಕ್ಟರ್ ಶಿಕ್ಷಣ ಪಡೆದಿರಬಹುದು. ಆದರೆ ಆಯುರ್ವೇದದ ಜ್ಞಾನಮಾಡಿಕೊಂಡು ವೀರಶೈವ ಮಹಿಳೆಯರಿಗೆ ಉಪಯುಕ್ತವಾಗುವಂತೆ ಇರುವ ವೀರಶೈವ ಮಹಿಳಾ ವೈದ್ಯರು ಅತಿ ಕಡಿಮೆ. ವೀರಶೈವ ವೈದ್ಯರು ಈ ಬಗ್ಗೆ ತಕ್ಕ ಸೂಚನೆಗಳನ್ನು ವೀರಶೈವ ಮಹಾಸಭೆಗೂ ವೀರಶೈವ ಮಹಿಳಾ ಪರಿಷತ್ತಿಗೂ ಕೊಡಲು ಬರುತ್ತದೆ.

ವೀರಶೈವರಲ್ಲಿ ಆಯುರ್ವೇದ ವಿದ್ಯೆಯು ಬೆಳೆಯಬೇಕೆಂದು ಅನೇಕ ಮಹನೀಯರು ಧನನಿಧಿಗಳನ್ನು ನೀಡಿದ್ದಾರೆ. ಹಾಗು ನೀಡುವವರಿದ್ದಾರೆ. ಎಲ್ಲಾ ದಾನಗಳಿಗಿಂತಲೂ ಈ ಕಾಲದಲ್ಲಿ ಇದು ಶ್ರೇಷ್ಠ ದಾನವೆನಿಸುವದು. ಅಂಥ ನಿಧಿಗಳ ವ್ಯವಸ್ಥೆಯನ್ನು ಯಾವ ರೀತಿಯಿಂದ ಮಾಡಿದರೆ ವೀರಶೈವ ಸ್ತ್ರೀಪುರುಷರಲ್ಲಿ ವೈದ್ಯಕೀಯ ವ್ಯವಸಾಯವು ಬೆಳೆಯುವದೆಂಬುದನ್ನು ಇಂಥ ವೀರಶೈವ ವೈದ್ಯಪರಿಷತ್ತು ತಕ್ಕ ಸಲಹೆ ಕೊಡುವದು. ವೀರಶೈವ ವೈದ್ಯರು ವೀರಶೈವ ರೋಗಿಗಳಿಗೇ ಔಷಧ ಕೊಡಬೇಕು. ಬೇರೆಯವರಿಗೆ ಕೊಡಕೂಡದೆಂಬ ಜಾತ್ಯಂಧ ನಿರ್ಣಯವನ್ನೇನೂ ಮಾಡುವದಿಲ್ಲ. ವೀರಶೈವ ರೋಗಿಗಳಿಗೆ ಯಾವ ರೀತಿಯಿಂದ ಉಪಯೋಗವಾಗಬೇಕೋ ಅದೇ ರೀತಿ ಉಳಿದ ರೋಗಿಗಳಿಗೂ ಅವರು ಉಪಯುಕ್ತವಾಗುವರು. ಆದರೆ ವೀರಶೈವರಲ್ಲಿ ವೈದ್ಯರು ಹೆಚ್ಚಿ ವೀರಶೈವರಿಗೇ ಏಕೆ, ದಕ್ಷಿಣ ಹಿಂದುಸ್ಥಾನಕ್ಕೆಲ್ಲ ಲಾಭವಾಗುವದೆಂಬುದನ್ನು ಬೇರೆ ಹೇಳಬೇಕೆ?

ವೈದ್ಯಫಾಲಾಕ್ಷ ಶಾಸ್ತ್ರಿ
ಚೇರಮನ್
ಹುಬ್ಬಳ್ಳಿ. ವೀರಶೈವ ವೈದ್ಯ ಪರಿಷತ್ತು.

[ವೀರಶೈವರಿಗೆ ವೈದ್ಯವಿದ್ಯೆಯೊಂದೇ ಅಲ್ಲ ಜನಜೀವನಕ್ಕೆ ಅಗತ್ಯವಾದ ಎಲ್ಲ ವಿದ್ಯೆಗಳೂ ಬೇಕು. ವೀರಶೈವರಿಗೆ ಇಂಥ ವಿದ್ಯೆ ಮತ್ತು ಕೈಕಸಬುಗಳು ಅಧರ್ಮವಾದವುಗಳೆಂದೇನೂ ಶಾಸ್ತ್ರಪ್ರತಿಬಂಧಗಳಿಲ್ಲ. ಸಾರ್ವಜನಿಕವಾದ ಎಲ್ಲ ವಿದ್ಯೆಗಳಲ್ಲಿಯೂ ಮುಂದೆ ಬರಲು ಕಾಲಮಾನಕ್ಕೆ ತಕ್ಕಂತೆ ವ್ಯಾಪಕ ಕ್ಷೇತ್ರದಲ್ಲಿ ಪ್ರವೇಶಿಸಿ ವೀರಶೈವರು ಪ್ರಯತ್ನಿಸಿದರೆ ಅವರಿಗೂ ನಾಡಿಗೂ ಹಿತವೇ ವಿನಾ ಹೀಗೆ ಈಗಿನ ಸ್ಪರ್ಧೆಯ ಕಾಲದಲ್ಲಿ ಜಾತಿವಿಶಿಷ್ಟವಾದ ಸಂಕುಚಿತ ಕ್ಷೇತ್ರದಲ್ಲಿದ್ದುಕೊಂಡರೆ ಅವರಿಗೂ ನಾಡಿಗೂ ಕೊರತೆ.

—ಸಂಪಾದಕ]

# ರೆಜಿಸ್ಟ್ರೇಶನ್ ಬಿಲ್ ವಾಚನ ಆಯಿತು.

## ಆರ್ಯ ಸಂಸ್ಕೃತಿಗೆ ಕೊಡ್ಲಿ ಬಿತ್ತು.

[ಆಯುರ್ವೇದ ಚೂಡಾಮಣಿಸ್ವಾಮಿ ರಮಾಚಾರ್ಯ]

ಈ ಬಿಲ್ಲಿನಿಂದ ಒದಗುವ ಅನಾಹುತವನ್ನು ಕುರಿತು ಅದೆಷ್ಟೋ ಲೇಖನಗಳು ಈಗಾಗಲೆ ಪ್ರಕಟವಾಗಿವೆ. ಇನ್ನೂ ಆಗುತ್ತಲೇ ಇವೆ. ಪಟ್ಟಣಗಳಲ್ಲಿಯೂ ಹಳ್ಳಿಗಳಲ್ಲಿಯೂ ಈ ಬಿಲ್ಲ ವಿರುದ್ಧ ಚರ್ಚೆ ಕೋರ್ಟುಗಳು ಏರ್ಪಟ್ಟಿವೆ. ನಿಷೇಧಪರ ಸಭೆಗಳಾಗಿವೆ. ಮೊನ್ನೆ ಈ ರೆಜಿಸ್ಟ್ರೇಶನ್ ಬಿಲ್ಲ ನಿರೋಧಕ್ಕಾಗಿ ಪುಣಾದಲ್ಲಿ ಪಂ. ತಾರಾನಾಥರ ಅಧ್ಯಕ್ಷತೆಯಲ್ಲಿ ಮುಂಬೈ ಪ್ರಾಂತದ ವೈದ್ಯ ಹಕೀಮರ ಸಭೆ ಸೇರಿ ಈ ಬಿಲ್ಲನ್ನು ಸಂಪೂರ್ಣವಾಗಿ ವಿರೋಧಿಸಿದರಲ್ಲದೆ ಇದರ ನಿಷೇಧಕ್ಕಾಗಿ ಕರಿ ನಿಶಾನೆಗಳ ಮೆರವಣಿಗೆಯೊಂದಿಗೆ ಕೌನ್ಸಿಲ್ ವರೆಗೆ ಸಹ ಹೋಗಿದ್ದಾಯಿತು. ೨೫೦೦೦ ಜನ ವೈದ್ಯರ ದಸ್ಕತ್‌ವುಳ್ಳ ಅರ್ಜಿ ಸಹ ಕಳಿಸಿದ್ದಾಯಿತು. ಇಷ್ಟೆಲ್ಲವನ್ನು ಮೂಲೆಗೊತ್ತಿ ಮೊದಲಿಗಿದ್ದ ಬಿಲ್‌ಗೊಂದು ಬಲಹಚ್ಚಿ ಸಿಲೆಕ್ಟ ಕಮಿಟಿಯ ಹೊಸ ಮುದ್ರೆಯನ್ನಿತ್ತು ಅದೇ ಆರ್ಯಸಂಸ್ಕೃತಿ ಘಾತಕ ಬಿಲ್ಲನ್ನು ಪುನಃ ನಾ. ಗಿಲ್ಡರ ಸಾಹೇಬರು ಮುಂದರಿಸಿದ್ದು ಆಯಿತು. ಕಾಂಗ್ರೆಸ್ ಮಂತ್ರಿಗಳ ಕೆಲಸವೆಂದು ಉಳಿದ ಮಂತ್ರಿಗಳಂತೂ ಇದರಲ್ಲಿ ಕೈ ಹಾಕಲೇ ಇಲ್ಲ. ಹೀಗಾಗಿ ಇದರ ಎರಡನೇ ವಾಚನ ಸಹ ಆಗಿಹೋಯಿತು.

ಇಂದು ಎಲ್ಲೆಲ್ಲಿಯೂ ಕ್ರಾಂತಿಕಾರಕ ವಿಚಾರಗಳು(Government for the people by the people) ಜನತೆಯಿಂದಲೇ ನಿರ್ಮಾಣವಾಗುವ ಸರಕಾರದ ಕಾಲ. ಈಗ ಎಷ್ಟೋ ದಿನದಿಂದ ನವಾಬಶಾಹಿ ನಡೆಸಿದ ಹೈದ್ರಾಬಾದ, ಮೈಸೂರ ಮುಂತಾದ ಸಂಸ್ಥಾನಗಳಲ್ಲಿಯೂ ಸಹ ಪ್ರಜಾಪ್ರಾತಿನಿಧ್ಯವುಳ್ಳ ಜವಾಬ್ದಾರಿ ಸರಕಾರ ಬೇಕೆಂದು ಕೋಲಾಹಲವೆದ್ದಿದೆ. ಹೀಗಿರುವಾಗ್ಗೆ ನಮ್ಮ ಮುಂಬೈ ಪ್ರಾಂತದ ಕಾಂಗ್ರೆಸ್ ಮಂತ್ರಿಗಳು ವೈದ್ಯರ ರೆಜಿಸ್ಟ್ರೇಶನ್ ಬಿಲ್ಲನ್ನು ತಯಾರುಮಾಡುವಾಗ ಯಾವ ವೈದ್ಯರನ್ನು ಕೇಳಲಿಲ್ಲ. ವೈದ್ಯರ ಪ್ರಾತಿನಿಧ್ಯವನ್ನು ಕೂಡಿಸಲಿಲ್ಲ. ಇಷ್ಟೇ ಅಲ್ಲ. ನಿಖಿಲ ಕರ್ನಾಟಕ ಆಯುರ್ವೇದ ಸಮ್ಮೇಲನದಿಂದಲೇ ಈ ಬಿಲ್ ನಿಷೇಧಿಸಲಾಯಿತು. 'ಬಿಲ್' ಬೇಡವೆಂದು ಸಾವಿರಾರು ಅರ್ಜಿಗಳು ಹೋದವು. ಕರೀ ನಿಶಾನಿಯ ಮೆರವಣಿಗೆ ನಡೆಯಿತು. ಇಷ್ಟಾದರೂ ಅಧಿಕಾರಾರೂಢರಾದ ಮಂತ್ರಿಗಳು ಹಿಂದಿನ ಬಿಲ್ಲನ್ನೇ ಇಂದು ಸಹ ತಮ್ಮ ಬಹುಮತದಿಂದ ಪಾಸುಮಾಡಿಕೊಂಡರು. ಬಿಲ್ಲಿಗೆ ಮಾತ್ರ ಒಂದು ಬಲವಿದೆ. ಆಯುರ್ವೇದೋದ್ಧಾರಕ್ಕೆ ಎಂಬ ಶಬ್ದ ಅಂಟಿಸಲಾಗಿದೆ. ಸಿಲೆಕ್ಟ ಕಮಿಟಿಯ ಶೋಧನೆಯು ಪಾಸ ಆಗಿದೆ. ಆದರೆ ಅದರಲ್ಲಿ ೫೦೦ ರೂ. ದಂಡ ೬ ತಿಂಗಳ ಶಿಕ್ಷೆ ಎಂಬ ಕಲ್ಮು ಇದ್ದೇ ಇದೆ. ವೇದಾಧ್ಯಯನವು ಮಾನವರ ಅದರಲ್ಲಿ ಆರ್ಯಸಂಸ್ಕೃತಿಯವರ ರಕ್ತಕ್ಕೆ ಸೇರಿದ ಗುಣ ತಾನೆ! ಆಯುರ್ವೇದವು ಒಂದು ಉಪವೇದವಲ್ಲವೆ? ಈ ಆಯುರ್ವೇದದ ತತ್ವಗಳು ನಮ್ಮ ರಕ್ತದಲ್ಲಿಯೇ ಹರಿದುಬಂದಿವೆ. ವಾತ, ಪಿತ್ತ, ಕಫ, ಶೀತ, ಉಷ್ಣ ಇವು ವಾತಕಾರಕ ವಸ್ತುಗಳು. ಇವನ್ನು ತಿನ್ನಬೇಕು ಇವನ್ನು ತಿನ್ನಬಾರದು, ಇಂಥದನ್ನು ತಿಂದರೆ ಈ ರೋಗವು ಬರುವದು. ಇಂಥ ಕಾಲದಲ್ಲಿ ಇಂತಿಂಥ ವಸ್ತುಗಳನ್ನು ತಿನ್ನಬಾರದು. ಇತ್ಯಾದಿ ವಿಷಯಗಳು ಯಾವ ಸುಸಂಸ್ಕೃತ ಆರ್ಯ ಮುದುಕಿಯನ್ನು ಕೇಳಿದರೂ ಗೊತ್ತಾಗಬಹುದು. ಇದರ ಅಂಗವಾಗಿ ನಮ್ಮಲ್ಲಿ ಋತು ಮಹಾತ್ಮೆ ಮಾಸ ಮಹಾತ್ಮೆ ಮುಂತಾದ ಪುರಾಣಗಳಾಗಿವೆ. [illegible] ಋತುವಿನಲ್ಲಿ ಇಂತಿಂಥ ಪದಾರ್ಥಗಳು ವರ್ಜ್ಯ. ಆ ಆ ಋತುವಿನಲ್ಲಿ ಅಂತಂಥ ಕಾಲಕ್ಕೆ ಮಾಡಬೇಕು. ಕಾ| ಶುದ್ಧ ಮಾಘ ಶುದ್ಧ ವೈಶಾಖ ಶುದ್ಧ ಮುಂತಾದ ದಿನಚರ್ಯೆಗಳೆಲ್ಲ ರೋಗ ಪ್ರತಿರೋಧಕ (Preventive) ಗಳಾಗಿ ಸಂಸ್ಕೃತಿ ರೂಪವಾಗಿ ನಮ್ಮ ವಂಶ ಪರಂಪರವಾಗಿ, ರಕ್ತಗತವಾಗಿ ಬಂದುಬಿಟ್ಟಿವೆ. ಇದನ್ನು ಆಚರಿಸುವದು ಮತ್ತು ಜನಸಾಮಾನ್ಯರಿಗೆ ಇನ್ನೂ ಹೆಚ್ಚು ಹೇಳಿಕೊಟ್ಟು ಆಚರಿಸ ಹೆಚ್ಚುವದು ಜನ್ಮಸಿದ್ಧ ಹಕ್ಕಲ್ಲವೆ? ಶ್ರೀ ಗೌರೀಪೂಜೆಗಾಗಿ ಪಂಚಪಲ್ಲವಗಳನ್ನು ತರುವದು ನವಧಾನ್ಯಗಳನ್ನು ಪೂಜಿಸುವದು ಪಂಚಕ್ಷೀರ ವಟಸಾವಿತ್ರಿ ಇತ್ಯಾದಿ ವ್ರತಗಳ ದ್ವಾರ ಸುಪ್ರಸಿದ್ಧ ಜ್ಞಾನ ಉಂಟುಮಾಡಿಕೊಳ್ಳುವುದು ನಮ್ಮ ಸಂಸ್ಕೃತಿ. ದಂತಧಾವನಕ್ಕಾಗಿ ಎಂಥ ಕಡ್ಡಿಯನ್ನು ಉಪಯೋಗಿಸಬೇಕು ಎಂಬುದರ ನಿರ್ಣಯವು ಋಷಿ ಪಂಚಮೀ ವ್ರತದಲ್ಲಿ ಕಾಣಬಹುದು. ಈ ಎಲ್ಲಾ ದ್ರವ್ಯಗಳ ಜ್ಞಾನವನ್ನು ರೋಗ ಪ್ರತಿರೋಧಕ ಶಕ್ತಿಯನ್ನು ನಾವು ಎಲ್ಲಿ ಮೆಡಿಕಲ್ಲ ಕಾಲೇಜಿನಲ್ಲಾಗಲಿ ಮೆಡಿಕಲ್ ಆಫೀಸರ್‌ರಿಂದಾಗಲಿ ಕಲಿಯಲಿಲ್ಲ. ಇವು ಸಂಸ್ಕೃತಿರೂಪವಾಗಿ ಬಂದಿವೆ. ಸಾವಿರಾರು ವರುಷಗಳಿಂದ ಬಂದಿವೆ. ಆದರೆ ನಮ್ಮ ಪಾಶ್ಚಿಮಾತ್ಯ ಬಂಧುಗಳಿಗೆ ಮಾತ್ರ ಹಲ್ಲು ಉಜ್ಜಬೇಕು, ಸ್ನಾನಮಾಡಬೇಕು, ಎಂಬ ವಿಷಯ ಗೊತ್ತು ಇದ್ದಿದ್ದೇ ಇತ್ತೀಚಿಗೆ ಎಂಬುದನ್ನು ಮರೆಯಬಾರದು. ದಿನಾಲು ಒಮ್ಮೆ ಸ್ನಾನಮಾಡಿದರೆ ರೋಗಪ್ರತಿರೋಧಕವು, ಆರೋಗ್ಯದಾಯಕವು ಎಂಬ ವಾಕ್ಯವನ್ನು ಅವರು ಮೆಡಿಕಲ್ ಗ್ರಂಥದಲ್ಲಿ ಈಗ ಓದಬಹುದು. ಅಂಥವರ ಕಾಲೇಜಿನಲ್ಲಿ ಕಲಿತು ಕೀರ್ತಿಶಾಲಿಗಳಾದ ಡಾ. ಗಿಲ್ಡರ್ ಸಾಹೇಬರು. ಇಂಥವರು ಕಾಂಗ್ರೆಸ್ ದೀಕ್ಷೆ ತಕ್ಕೊಂಡಿದ್ದರೂ ಅವರ ಮನಸ್ಸಿನಲ್ಲಿ ನಾಟಿಕೂತ ಈ ಪಾಶ್ಚಿಮಾತ್ಯ ಗುಣವು ಹೇಗೆ ಹೋಗಬೇಕು. ಪಶ್ಚಿಮದಲ್ಲಿ ವರ್ಷಾನುಗಟ್ಟಲೆ ಕಲಿತು ಡಾಕ್ಟರ್ ಪದವಿ ಪಡೆದು ಹೇಳುತ್ತಿರುವ ಅಂಥ ಆರೋಗ್ಯ ವಿಷಯ, ರೋಗ ಪ್ರತಿಬಂಧಕ ಮಾತುಗಳನ್ನೇ ನಮ್ಮ ಇಂಗ್ಲೀಷ ಕಲಿಯದ ಆರ್ಯ ಅಕ್ಕ ತಂಗಿಯರು ವ್ರತನಿಯಮ ವಾತ ಪಿತ್ತ ಕಫಾದಿಗಳ ದ್ವಾರ ಮಾತುಮಾತಿನಲ್ಲಿ ಸಹಜವಾಗಿಯೇ ಹೇಳುತ್ತಿರುತ್ತಾರೆ. ಪಶ್ಚಿಮದಲ್ಲಿ ವಿಜ್ಞರೂ ಡಾಕ್ಟರ್ ಜನರೂ ಹೇಳುವ ಈ ಮಾತುಗಳನ್ನು ನಮ್ಮಲ್ಲಿ ಸಾಮಾನ್ಯ ಜನರೂ ಮುದುಕಿಯರೂ ಹೇಳುತ್ತಾರೆ. ಪಶ್ಚಿಮದಲ್ಲಿ ಡಾಕ್ಟರ್ ಜನರನ್ನು ಬಿಟ್ಟು ಜನಸಾಮಾನ್ಯಕ್ಕೆ ಇದರ ಜ್ಞಾನ ವಿರುವದಿಲ್ಲ.

ಆದ್ದರಿಂದ ಈ ಬಿಲ್ಲ ಅವರಿಗೆ ಬೇಕಾಯಿತು. ಆದರೆ ನಾವು ಪಶ್ಚಿಮದವರಲ್ಲವಲ್ಲ. ನಮಗೇಕೆ ಆ ಬಿಲ್ಲ? ಆದರೆ ಡಾಕ್ಟರ್ ಗಿಲ್ಡರ ಸಾಹೇಬರು ಪಶ್ಚಿಮದಲ್ಲಿ ಅಲ್ಲವೆ ಕಲಿತದ್ದು? ಅವರಿಗೆ ಕೊಡಲಿ. ನಮಗೆ ಬೇಡ. ಹಳ್ಳಿಯ ಸೂಲಗಿತ್ತಿಯರು ಅಜ್ಜಿಯರೇ. ಹಳ್ಳಿಯ ವೈದ್ಯರೂ ಈ ವೈದ್ಯಜ್ಞಾನವೂ ಇಂಥ ಹಳ್ಳೀ ಮಂದಿಯಲ್ಲಿದೆ. ಅದರಿಂದ ನೂರಾರು ಜನರ ಹಿತವಾಗುತ್ತಲೇ ಇದೆ. ಇಂಥ ಹಿತಮಾಡುವದು ಆರ್ಯ ಸಂಸ್ಕೃತಿಗೆ ಸೇರಿದ್ದು ಅವರ ಜನ್ಮಸಿದ್ಧ ಹಕ್ಕು. ಈ ಸಂಸ್ಕೃತಿಗೆ ಕೊಡ್ಲಿಪೆಟ್ಟುಹಾಕಿ ಆಯುರ್ವೇದವನ್ನು ಉದ್ಧಾರಮಾಡುತ್ತೇನೆ ಎನ್ನುತ್ತಾರೆ. ನಮ್ಮ ಡಾ. ಗಿಲ್ಡರವರು ಜನಸಾಮಾನ್ಯಕ್ಕೆ ನಮ್ಮಲ್ಲಿ ಆಯುರ್ವೇದ ಅಧ್ಯಯನ ಧಾರ್ಮಿಕರೂಪವಾಗಿ ಸಂಸ್ಕೃತಿ ರೂಪವಾಗಿ ಉಂಟಾಗು

# ಹೈದರಾಬಾದ ಚಳವಳಿಯು ಜಾತಿನಿಷ್ಠವಾಗಿಲ್ಲ.

## ಅಪಪ್ರಚಾರದ ಬಗ್ಗೆ ಮುಸಲ್ಮಾನರಿಗೆ ಎಚ್ಚರಿಕೆ.

### ಡಾ. ಆಶ್ರಾಫರ ಪ್ರಕಟನೆ.

ಆಲ್ ಇಂಡಿಯಾ ಕಾಂಗ್ರೆಸ್ ಕಮಿಟ ಕಚೇರಿಯ ಡಾ. ಕೆ. ಎಂ. ಆಶ್ರಾಫರು ಹೈದರಾಬಾದ ಸತ್ಯಾಗ್ರಹದ ಸಂಬಂಧವಾಗಿ ಕೆಳಗಿನ ಪ್ರಕಟನೆಯನ್ನು ಅಲಹಾಬಾದದಿಂದ ಹೊರಡಿಸಿರುವರು.

"ಹೈದರಾಬಾದ ಸಂಸ್ಥಾನದಲ್ಲಿಯ ಜನರು ತಮ್ಮ ಮೂಲಭೂತ ಹಕ್ಕು ಬಾಧ್ಯತೆಗಳನ್ನು ಪಡೆಯುವದಕ್ಕಾಗಿ ಅತ್ಯಂತ ಶಾಂತರೀತಿಯಿಂದ ನಡೆಸಿದ ಸತ್ಯಾಗ್ರಹ ಚಳವಳಿಯ ಬಗ್ಗೆ ಹಲಕೆಲವು ಮುಸಲ್ಮಾನ ಪತ್ರಿಕೆಗಳು ಮಾಡುತ್ತಿರುವ ಅಪಪ್ರಚಾರದ ಕಡೆಗೆ ದೇಶದಲ್ಲಿಯ ಎಲ್ಲ ಪ್ರಗತಿಪರ ಮುಸಲ್ಮಾನ ಬಾಂಧವರ ಲಕ್ಷವನ್ನೆಳೆಯುವದಕ್ಕಾಗಿ ನಾನು ಈ ಪ್ರಕಟನೆಯನ್ನು ಹೊರಡಿಸುತ್ತೇನೆ.

ಕಳೆದ ಅಗಸ್ಟ ತಿಂಗಳ ಸುಮಾರಕ್ಕೆ ಕೆಲ ದೇಶಾಭಿಮಾನಿಗಳಾದ ನಿಜಾಮ ಸರಕಾರದ ರಾಜನಿಷ್ಠ ಪ್ರಜೆಗಳು ಹೈದರಾಬಾದ ನವಾಬ ಸಾಹೇಬರ ಮತ್ತು ಆಸಫಜಾಹಿ ಮನೆತನದ ಛತ್ರದಡಿಯಲ್ಲಿ ಶಾಂತ ಮತ್ತು ಘಟನಾತ್ಮಕ ರೀತಿಯಿಂದ ಹೊಣೆಗಾರ ರಾಜ್ಯಪದ್ಧತಿಯನ್ನು ಪಡೆವುದಕ್ಕಾಗಿ ಹೈದರಾಬಾದ ಸಂಸ್ಥಾನ ಕಾಂಗ್ರೆಸ್‌ವೆಂಬ ರಾಜಕೀಯ ಸಂಸ್ಥೆಯೊಂದನ್ನು ಸ್ಥಾಪಿಸಲು ನಿರ್ಧರಿಸಿದರು. ವಯಸ್ಸಿಗೆ ಬಂದ ಯಾವದೇ ಜಾತಿ-ಮತ-ಪಂಥದ ಸ್ತ್ರೀ ಪುರುಷರು ಈ ಸಂಸ್ಥೆಯ ಸದಸ್ಯರಾಗಬಹುದೆಂದು ಸಾರಲಾಯಿತು. ಇಷ್ಟೇ ಅಲ್ಲದೆ ಯಾವದೇ ಜಾತಿನಿಷ್ಠ ಸಂಘದ ಸದಸ್ಯನಿದ್ದವನು ಈ ಕಾಂಗ್ರೆಸ್ ಸಂಸ್ಥೆಯ ಅಧಿಕಾರಿಯಾಗಲಾರನೆಂದೂ ಇಲ್ಲವೆ ಕಮಿಟೆಯ ಅಥವಾ ಅದರ ಅಂಗಸಂಸ್ಥೆಯ ಸದಸ್ಯನಾಗಲಾರನೆಂದೂ ಘಟನೆಯಲ್ಲಿ ಸ್ಪಷ್ಟವಾಗಿ ಹೇಳಲಾಗಿತ್ತು. ಜಾತಿನಿಷ್ಠೆಯು ಹಬ್ಬಬಾರದೆಂಬ ಬಗ್ಗೆ ಇಷ್ಟೊಂದು ಜಾಗರೂಕತೆಯನ್ನು ಪಡೆದ ಬೇರೆ ಯಾವ ರಾಜಕೀಯ ಸಂಸ್ಥೆಯೂ ಹಿಂದುಸ್ಥಾನದಲ್ಲಿ ಇಲ್ಲೆಂದು ನಾನು ಹೇಳಬಲ್ಲೆನು.

ಈ ರೀತಿ ಜಾತ್ಯಂಧತೆಯಿಂದ ಅತ್ಯಂತ ಅಲಿಪ್ತವಾಗಿರುವ ಸಂಸ್ಥೆಯ ಚಟುವಟಿಕೆಗಳ ಬಗ್ಗೆ ಸಂಸ್ಥೆಯನ್ನಭಿನಂದಿಸುವದನ್ನು ಬಿಟ್ಟುಗೊಟ್ಟು ಕೆಲವು ಮುಸಲ್ಮಾನ ಪತ್ರಿಕೆಗಳು ಮತ್ತು ಮಧ್ಯಪ್ರಾಂತದಲ್ಲಿಯ ಮುಸ್ಲಿಂ ಲೀಗದ ಹಲವು ಸದಸ್ಯರು ಅಪಪ್ರಚಾರವನ್ನು ಪ್ರಾರಂಭಿಸಿದ್ದಲ್ಲದೆ ಈ ಕಾಂಗ್ರೆಸ್ ಸಂಸ್ಥೆಯನ್ನು ಹಿಂದು ಜಾತಿನಿಷ್ಠ ಸಂಸ್ಥೆಗೆ ತಳಕು ಹಾಕಲು ಪ್ರಯತ್ನಿಸಿ ಸಂಸ್ಥಾನ ಸರಕಾರದವರು ಈ ಚಳವಳಿಯನ್ನು ಹತ್ತಿಕ್ಕಲು ನಡೆಸಿದ ದಬ್ಬಾಳಿಕೆಗೆ ಸಹಾಯ ಮಾಡುತ್ತಿರುವರು. ಹೈದರಾಬಾದ ಸರಕಾರವನ್ನು ಸಂರಕ್ಷಿಸುವದಕ್ಕಾಗಿ ಹಲ ಕೆಲವರು ಸಂಸ್ಥಾನ ಕಾಂಗ್ರೆಸ್ಸಿನವರು ನಡೆಸಿದ ಸತ್ಯಾಗ್ರಹದ ವಿರುದ್ಧ ಬೇರೆ ಸತ್ಯಾಗ್ರಹವನ್ನು ಹೂಡಲೂ ಹವಣಿಸುತ್ತಿರುವರು. ಅವರೀ ಘೋಷಣೆಯಿಂದ ಸಂಸ್ಥಾನದಲ್ಲಿ ಏಕತಂತ್ರಾಧಿಪತ್ಯದ ರಾಜ್ಯದಾಡಳಿತೆಯೊಡನೆ ಮುಸಲ್ಮಾನರು ಸಹಕರಿಸುವರೆಂಬುದು ಜಗತ್ತಿನಲ್ಲಿ ಸಾರಿ ತಮ್ಮ ಸಾಮಾಜಿಕ ರಾಜಕೀಯ ಪ್ರಗತಿಗಾಗಿ ಚಳವಳ ನಡೆಸಿದ ಕಾಶ್ಮೀರ ಮೊದಲಾದ ಸ್ಥಳಗಳಲ್ಲಿಯ ನಮ್ಮ ಬಂಧುಗಳಲ್ಲಿ ತಮ್ಮನ್ನು ಅಪಹಾಸ್ಯಕ್ಕೀಡುಮಾಡುವಂಥ ದುಸ್ಥಿತಿಯನ್ನು ಅವರು ತಂದುಕೊಳ್ಳುವರೆಂದು ನನಗೆ ಭೀತಿಯಿದೆ.

ಅದುದರಿಂದ ಹೈದರಾಬಾದ ಸಂಸ್ಥಾನದಲ್ಲಿ ನಡೆದ ಈ ಸ್ವಾತಂತ್ರ್ಯ ಚಳವಳಿಯು ಇಡೀ ದೇಶದಲ್ಲಿ ನಡೆದ ಸ್ವಾತಂತ್ರ್ಯ ಚಳವಳಿಯ ಅಂಗವೆಂದು ಭಾವಿಸಿ ದೇಶದಲ್ಲಿಯ ಪ್ರಗತಿಪರ ಮುಸಲ್ಮಾನರೆಲ್ಲರೂ ಇದನ್ನು ಸ್ವಾಗತಿಸಬೇಕೆಂದು ನಾನು ಬಿನ್ನವಿಸಿಕೊಳ್ಳುತ್ತೇನೆ. ನಮ್ಮ ಸ್ವಾತಂತ್ರ್ಯ ಹೋರಾಟಕ್ಕೆ ಪ್ರತಿಬಂಧವನ್ನುಂಟುಮಾಡುವಂಥ ಪ್ರತಿಗಾಮಿ ಚಳವಳಿಗೆ ಬೆಂಬಲ ಕೊಡುವುದನ್ನು ಬಿಟ್ಟುಗೊಟ್ಟು ಸ್ವಾತಂತ್ರ್ಯಕ್ಕಾಗಿ ಹೋರಾಡುವ ಜನಸಾಮಾನ್ಯರಲ್ಲಿ ಭೇದ ಭಾವವನ್ನು ಹುಟ್ಟಿಸುವರೆಂದು ಜನರು ಆಡಿಕೊಳ್ಳುವ ಮೊದಲೇ ಮುಸ್ಲಿಂ ಲೀಗದವರು ಪ್ರಜಾ ಪ್ರಭುತ್ವ ಮತ್ತು ಸಂಪೂರ್ಣ ಸ್ವಾತಂತ್ರ್ಯದ ತಮ್ಮ ಧ್ಯೇಯವನ್ನು ಕಾರ್ಯತಃ ಸಮರ್ಥನೆ ಮಾಡಿಕೊಳ್ಳಬೇಕೆಂದು ನಾನು ಬಿನ್ನವಿಸಿಕೊಳ್ಳುತ್ತೇನೆ."

---

ತ್ತದೆ. ಮತ್ತು ವಿಜ್ಞರೂ ಪಂಡಿತರೂ ಬೇಕಾದಷ್ಟಿದ್ದಾರೆ. ಬೇಕಾದರೆ ಅಂತಹ ವಿಜ್ಞಾನರನ್ನು ಪಂಡಿತರನ್ನು ಹೆಚ್ಚು ಹೆಚ್ಚು ತಯಾರುಮಾಡುತ್ತ ಹೋಗುವ ಏರ್ಪಾಟಮಾಡಲಿ. ಅದನ್ನು ಬಿಟ್ಟು ಜನಸಾಮಾನ್ಯಕ್ಕೆ ಈಗಾಗಲೇ ಸಂಸ್ಕೃತಿರೂಪವಾಗಿ ಬಂದಿರುವ ಆಯುರ್ವೇದದ ಸಾಮಾನ್ಯ ಜ್ಞಾನಕ್ಕೆ ಧಕ್ಕೆ ಬರುವ ದಂಡ ಪ್ರಜೆಗಳನ್ನೇಕೆ ಹಾಕಬೇಕು? ಕೆಮ್ಮು, ನೆಗಡಿ, ಜ್ವರ ಮುಂತಾದ ಚಿಲ್ಲರೆ ರೋಗಗಳಲ್ಲಿ ಶುಂಠಿ, ಅಜವಾನ, ಬೆಳ್ಳುಳ್ಳಿ ಕೊಟ್ಟು ವಾಸಿಮಾಡುವ ತಾಯಂದಿರು ಇದ್ದಾರೆ. ಅಜ್ಜಿಯಂದ್ದಾರೆ. ಕೊನೆಗೆ ಗುಟ್ಟು ಹಾಕುವರಿದ್ದಾರೆ. ಲೋಹ ತೈಲಗಳನ್ನು ಮಾಡುವ ತಾಯಂದಿರಿದ್ದಾರೆ. ಬಾಣಂತಿತನ ಹೆರಿಗೆಮಾಡಿಸುವವರಿದ್ದಾರೆ. ಇವಕ್ಕೆಲ್ಲ ಸ್ಪೇಶಲ್ ಪದವೀಧರರೇ ಬೇಕು. ಹಳ್ಳಿ ಹಳ್ಳಿಗೂ ಅಂಥ ಪದವೀಧರರನ್ನು ಒದಗಿಸಿಕೊಡುವದಾಗುತ್ತದೋ ಈ ದರಿದ್ರ ಸರಕಾರಕ್ಕೆ? ಸರಕಾರವು ಸಾಲಮಾಡಿ ದುಡ್ಡು ಕೊಟ್ಟರೂ ಎಷ್ಟು ವರುಷಬೇಕು ಆಳ ಲಕ್ಷ ಜನಗಳಿಗೆಲ್ಲ ಪದವೀಧರರನ್ನಿಸಬೇಕಾದರೆ? ಅರ್ಧ ಶತಮಾನವಾದರೂ ಬೇಡವೆ? ಈ ಐವತ್ತು ವರುಷ ಹಳ್ಳಿಯ ರೋಗಿಗಳು ಏನು ಮಾಡಬೇಕು? ಎಳ್ಳು ನೀರನ್ನು ಬಿಡುತ್ತ ಕೂಡಬೇಕೊ? ನೂರಾರು ಹೆರಿಗೆ ಮಾಡಿಸಿದ ಸೂಲಗಿತ್ತಿಯರಿದ್ದಾರೆ. ನಮ್ಮ ಡಾ. ಗಿಲ್ಡರ್ ಸಾಹೇಬರಿಗೆ ಅವರೆಲ್ಲ ಗುನ್ಹೆಗಾರರು. ಛಿ! ಛಿ! ಅವರಾದರೂ ಏನು ಮಾಡಿಯಾರು? ಐರೋಪ್ಯ ಸಂಸ್ಕೃತಿಯಲ್ಲಿ ಬೆಳೆದ ಅವರ ಕಣ್ಣಿಗೆ ಆರ್ಯ ಸಂಸ್ಕೃತಿಯಲ್ಲಿ ಗುನ್ಹೆಯಾಗಿ ಕಾಣುತ್ತಲಿದೆ. ಆರ್ಯ ಸಂಸ್ಕೃತಿಯು ಗುನ್ಹೆ ಎಂದು ತಿಳಿಯುವ ಸಾಹೇಬರಿಂದು ಕಾಂಗ್ರೆಸ್ ಟಿಕೇಟಿನಿಂದ ಮಂತ್ರಿಗಳಾಗಿ ನಿಂತಮೇಲೆ ಅಂತಾಗಲಿ ಅರಿಯದಾಗಲಿ ಅದರಿಂದ ಆರ್ಯ ಸಂಸ್ಕೃತಿಗೆ ಕೊಡ್ಲಿ ಬೀಳಬೇಕಲ್ಲದೆ ಅದರೀ ಕೊಡ್ಲಿ ಪೆಟ್ಟು ಬರೀ ವೈದ್ಯ ಹಕೀಮರಿಗೆ ಅಷ್ಟೇ ಅಲ್ಲ; ಇಡೀ ಆರ್ಯ ಸಂಸ್ಕೃತಿಯುಳ್ಳ ಹಿಂದುಸ್ಥಾನಕ್ಕೆ ಈ ಅಘಾತ! ಇದಕ್ಕೇನು ಉಪಾಯ?

# ಅ. ಭಾ. ವೀರಶೈವ ಮಹಾಸಭೆ.

## ೧೩ ನೇ ಅಧಿವೇಶನ ಹುಬ್ಬಳ್ಳಿ ಇ. ೧೯೩೮.

ಸಮಸ್ತ ವೀರಶೈವರಿಗೆ ವಿನಯಪೂರ್ವಕ ವಿಜ್ಞಾಪನೆಗಳು-

ಈ ಮಹಾಸಭೆಯು ಇದೇ ಡಿಶೆಂಬರ ತಿಂಗಳ ತಾ. ೨೬, ೨೭, ೨೮ ನೆಯ ಸೋಮವಾರ, ಮಂಗಳವಾರ ಮತ್ತು ಬುಧವಾರಗಳಲ್ಲಿ ಜರಗುವದು.

ಮಹಾಸಭೆಯ ಅಧ್ಯಕ್ಷರು— ಈ ಸಾರೆಯ ಮಹಾಸಭೆಯ ಅಧಿವೇಶನಕ್ಕೆ ಶ್ರೀ. ಎಸ್. ಎಸ್. ಬಸವನಾಳ ಎಂ. ಎ. ಎಂ. ಆರ್. ಎ. ಎಸ್. ಪ್ರೊಫೆಸರ್ ಲಿಂಗರಾಜ ಕಾಲೇಜ್ ಬೆಳಗಾವ ಇವರು ಅಧ್ಯಕ್ಷರಾಗಲು ಒಪ್ಪಿರುತ್ತಾರೆಂದು ತಿಳುಹಿಸಲು ಸಂತೋಷಪಡುತ್ತೇವೆ.

### ಸಭೆಯಲ್ಲಿ ಚರ್ಚಿಸತಕ್ಕ ವಿಷಯುಗಳು.

೧. ಅ॥ ಭಾ॥ ವೀರಶೈವ ಮಹಾಸಭೆಯ ಸ್ಥಿರ ಕಾರ್ಯಕರ್ತರ (ಪರ್ಮನಂಟ ಸೆಕ್ರೆಟರಿಯೇಟ) ಯೋಜನೆ.

೨. ಅ॥ ಭಾ॥ ವೀರಶೈವ ಮಹಾಸಭಾಘಟನೆಯ ತಿದ್ದುಪಡಿ ವಿಚಾರ.

೩. ಗುರು-ವಿರಕ್ತರ ಕಲಹ ನಿವಾರಣೆ ಯೋಜನೆ.

೪. ಅ॥ ಭಾ॥ ವೀರಶೈವ ಮಹಾಸಭೆಯ ರಾಜಕೀಯ ಧೋರಣೆ.

೫. ಅ॥ ಭಾ॥ ವೀರಶೈವ ಸಮಾಜ ಸಂಘಟನೆಯ ಯೋಜನೆ.

೬. ಅ. ಭಾ. ವೀರಶೈವ ವಿದ್ಯಾರ್ಥಿಗಳಲ್ಲಿ ಔದ್ಯೋಗಿಕ ಶಿಕ್ಷಣದ ಪ್ರಸಾರ ಯೋಜನೆ.

೭. ಅ. ಭಾ. ವೀರಶೈವರಲ್ಲಿ ಶುದ್ಧ ಖಾದಿ ಪ್ರಸಾರವಾಗುವ ವಿಚಾರ.

೮. ವೀರಶೈವ ಧರ್ಮ ತತ್ವಗಳನ್ನು ಅಧಿಕಾರಯುಕ್ತವಾಗಿ ಹಾಗು ಸ್ಪಷ್ಟವಾಗಿ ತಿಳುಹಿಸುವ ಧರ್ಮ ಗ್ರಂಥವನ್ನು ಇಂಗ್ಲೀಷ ಮೊದಲಾದ ಭಾಷೆಗಳಲ್ಲಿ ಪ್ರಕಟಿಸುವ ವಿಚಾರ.

೯. ಕರ್ನಾಟಕದ ಏಕೀಕರಣ ಚಳವಳಿಗೆ ಪೂರ್ಣ ಬೆಂಬಲ ಕೊಡುವ ವಿಚಾರ.

೧೦. ದೇಶೀ ಸಂಸ್ಥಾನಗಳಲ್ಲಿಯ ದಬ್ಬಾಳಿಕೆಯ ವಿಚಾರ.

೧೧. ದೇಶೀ ವೀರಶೈವ ಮಧ್ಯವರ್ತಿ ವಾಚನಾಲಯದ ಯೋಜನೆ.

ಇವೇ ಮೊದಲಾದ ವಿಷಯಗಳ ಬಗ್ಗೆ ವಿಚಾರವಾಗುವುದು. ಈ ಬಗ್ಗೆ ಸೂಚನೆ ಮಾಡತಕ್ಕವರು ಪ್ರತಿನಿಧಿಗಳಾಗಿ ತಮ್ಮ ಸೂಚನೆಗಳನ್ನು ಕಾಗದದ ಒಂದೇ ಮಗ್ಗಲಿಗೆ ಸ್ಪಷ್ಟವಾಗಿ ಬರೆದು ಇದೇ ಡಿಶೆಂಬರ ತಿಂಗಳ ೨೦ ನೆಯ ತಾರೀಖಿನೊಳಗಾಗಿ ಸ್ವಾಗತಸಂಘದ ಚೇರಮನ್ನರ ಕಡೆಗೆ ಕಳುಹಿಸತಕ್ಕದ್ದು.

### ಪ್ರತಿನಿಧಿಗಳ ಮತ್ತು ಪ್ರೇಕ್ಷಕರ ನಿಯಮಗಳು.

ಪ್ರತಿನಿಧಿಗಳ ಫೀ ೫ ರೂ. ಪ್ರೇಕ್ಷಕರ ಫೀ ೨ ರೂ. ಗಳು. ಪ್ರತಿನಿಧಿಗಳಾಗಿ ಬರುವವರು ತಮ್ಮ ಹೆಸರುಗಳನ್ನು ಮುಂದಾಗಿಯೇ ತಿಳುಹಿಸಬೇಕು.

ಪ್ರತಿನಿಧಿಗಳಿಗೆ ಮಾತ್ರ ಊಟಕ್ಕೂ ವಾಸವಾಗಿರುವದಕ್ಕೂ ಏರ್ಪಾಟು ಮಾಡಲಾಗುವುದು. ಆದರೆ ಅವರು ತಮಗೆ ಬೇಕಾಗತಕ್ಕ ಹಾಸಿಗೆ, ತಂಬಿಗೆ ಮೊದಲಾದವುಗಳನ್ನು ಸಂಗಡ ತರಬೇಕು.

ಸಭಾಮಂಟಪದಲ್ಲಿ ಪ್ರತಿನಿಧಿಗಳಿಗೂ ಪ್ರೇಕ್ಷಕರಿಗೂ ಮಹಿಳೆಯರಿಗೂ ಕುಳಿತುಕೊಳ್ಳಲು ಪ್ರತ್ಯೇಕ ಸ್ಥಳಗಳನ್ನು ಏರ್ಪಡಿಸಲಾಗುತ್ತದೆ. ಸಭಾಭವನದಲ್ಲಿ ಲೌಡ ಸ್ಪೀಕರ್ (ಧ್ವನಿವರ್ಧಕ ಯಂತ್ರ) ದ ವ್ಯವಸ್ಥೆ ಮಾಡಲಾಗುವುದು.

ಟಿಕೀಟುಗಳಿಲ್ಲದ ವಿನಾ ಸಭಾ ಪ್ರವೇಶಮಾಡಲು ಯಾರಿಗೂ ಅವಕಾಶ ದೊರೆಯುವುದಿಲ್ಲ. ಇಲ್ಲಿ ಯಾವ ವಿಧವಾದ ರೋಗಾದಿಗಳೂ ಇಲ್ಲ. ಹವೆ ನೀರುಗಳು ಚೆನ್ನಾಗಿವೆ. ಮಹಾಸಭೆಯ ಬಗ್ಗೆ ವಿಶೇಷ ಸಂಗತಿಗಳನ್ನು ವರ್ತಮಾನಪತ್ರಗಳಲ್ಲಿ ಮುಖ್ಯವಾಗಿ ದಿನ ಪತ್ರಿಕೆಗಳಲ್ಲಿ ಪ್ರಕಟಿಸಲಾಗುವುದು.

### ಉಪಪರಿಷತ್ತುಗಳು.

ಅ. ಭಾ. ವೀರಶೈವ ಮಹಾಸಭೆಯ ಕಾಲಕ್ಕೇನೇ ಅ. ಭಾ. ವೀರಶೈವ ತರುಣ ಪರಿಷತ್ತು, ಅ. ಭಾ. ವೀರಶೈವ ಮಹಿಳಾ ಪರಿಷತ್ತು, ಅ. ಭಾ. ವೀರಶೈವ ವೈದ್ಯ ಪರಿಷತ್ತು, ಅ. ಭಾ. ವೀರಶೈವ ಸಂಗೀತ ಪರಿಷತ್ತು ಮೊದಲಾದವುಗಳು ಜರಗುವವು.

ವೀರಶೈವ ತರುಣ ಪರಿಷತ್ತಿನ ಅಧ್ಯಕ್ಷರು—

ಉದ್ಘಾಟನಮಾಡುವವರು— ಟಿ. ಎಚ್. ಎಂ. ಸದಾಶಿವಯ್ಯ ಎಂ. ಎ. ಬಿ. ಎಲ್. ಡಿಸ್ಟ್ರಿಕ್ಟ ಮುನ್ಸಫ್ ನಂದ್ಯಾಲ.

ಮಹಿಳಾಪರಿಷತ್ತಿನ ಅಧ್ಯಕ್ಷರು— ಶ್ರೀಮತಿ ಸೌ॥ ಜಯದೇವಿಬಾಯಿ ಲಿಗಾಡೆ ಸೊಲ್ಲಾಪುರ.

ಉದ್ಘಾಟನ ಮಾಡುವವರು— ರಾಣಿ ಬೋರಮ್ಮಣ್ಣಿ ನೆಲ್ಯಾಳ ಇವರನ್ನು ಕೇಳಿಕೊಳ್ಳಲಾಗಿದೆ.

ವೈದ್ಯ ಪರಿಷತ್ತಿನ ಅಧ್ಯಕ್ಷರು— ಆಯುರ್ವೇದಾಚಾರ್ಯ ಶಿವಕುಮಾರ ಸ್ವಾಮಿಗಳು ಬೆಂಗಳೂರು.

ಉದ್ಘಾಟನಮಾಡುವವರು ಶ್ರೀ ಮ. ನಿ. ಪ್ರ. ಸ್ವ. ಶಾಂತವೀರ ಸ್ವಾಮಿಗಳು ಗುರುಮಠಕಲ್ಲ.

ಸಂಗೀತ ಪರಿಷತ್ತಿನ ಅಧ್ಯಕ್ಷರು— ವೇ| ಪಂಚಾಕ್ಷರ ಗವಾಯಿಗಳು ಶಿವಯೋಗಮಂದಿರ.

ಸೋಮವಾರ ತಾ. ೨೬— ಬೆಳಿಗ್ಗೆ ೭-೧೫ ಗಂಟೆಗೆ ನಂದಿಧ್ವಜಾರೋಹಣ, ನಂತರ ಅಧ್ಯಕ್ಷರ ಮೆರವಣಿಗೆ. ಮಧ್ಯಾನ್ಹ ೩ ಗಂಟೆಗೆ ಮಹಾಸಭಾಧಿವೇಶನ ಪ್ರಾರಂಭ. ಸಾಯಂಕಾಲ ೬ ಗಂಟೆಗೆ ವಿಷಯ ನಿಯಾಮಕ ಕಮೀಟಿ ಪ್ರಾರಂಭ.

ಮಂಗಳವಾರ ತಾ. ೨೭— ಬೆಳಿಗ್ಗೆ ೮ ರಿಂದ ಮಹಾಸಭಾಧಿವೇಶನ ಪ್ರಾರಂಭ. ಮಧ್ಯಾನ್ಹ ೧೨॥ ಗಂಟೆಯಿಂದ ತರುಣರ ವೈದ್ಯರ ಹಾಗು ಮಹಿಳೆಯರ ಪರಿಷತ್ತುಗಳು ನಡೆಯುವವು. ಸಾಯಂಕಾಲ ಮಹಾಧಿವೇಶನ.

ಬುಧವಾರ ತಾ. ೨೮— ಬೆಳಿಗ್ಗೆ ಮಹಾಧಿವೇಶನ. ಸಾಯಂಕಾಲ ಮಹಾಧಿವೇಶನದ ಸಮಾಪ್ತಿ.

ಪ್ರತಿ ದಿವಸ ರಾತ್ರಿ ಸಂಗೀತ ಪರಿಷತ್ತು, ವ್ಯಾಯಾಮ ಪ್ರದರ್ಶನ ನಡೆಯುವವು. ಇದಲ್ಲದೆ ಗ್ರಂಥಪ್ರದರ್ಶನ ಔಷಧ ಹಾಗು ಗಿಡಮೂಲಿಕೆಗಳ ಪ್ರದರ್ಶನ ಹಾಗು ಖಾದಿ ಪ್ರದರ್ಶನಗಳು ಜರಗುವವು.

(ವಿಸ್ತೃತ ಕಾರ್ಯಕ್ರಮವು ಹಿಂದಿನಿಂದ ಪ್ರಸಿದ್ಧಿಸಲ್ಪಡುವದು.)

ಚಿಕ್ಕವೀರಯ್ಯನವರು
ಚಿಕ್ಕವೀರಯ್ಯನವರ
ಸ್ವಾಗತಾಧ್ಯಕ್ಷ.

೧. ಎಸ್. ಎಸ್. ಯಾವಗಲ್ಲ
ಬಿ. ಎ. ಎಲ್‌ಎಲ್. ಬಿ.
೨. ರುದ್ರಪ್ಪ ವಾಲಿ
೩. ಸಿದ್ಧರಾಮಪ್ಪ ಕಟಿಗೇರಿ
೪. ಭದ್ರಾಪುರ ಗುರುಸಿದ್ದಪ್ಪ

# ಹಾವೇರಿ ಮುನಸಿಪಾಲ್ಟಿ ಚುನಾವಣೆ

## ಪುರಾಣ ಸಮಾಪ್ತಿ!

ನಮ್ಮ ಕರ್ನಾಟಕದಲ್ಲಿ ಅನೇಕ ಮುನಸಿಪಾಲ್ಟಿ ಚುನಾವಣೆ ಈ ವರೆಗೆ ಆದವು. ಆದರೆ ನಮ್ಮ ಹಾವೇರಿ ಮುನಸಿಪಾಲ್ಟಿ ಚುನಾವಣೆ ಹಾಗೆ ಎಲ್ಲಿಯೂ ಆಗಲಿಲ್ಲ. ಇದೊಂದು ದೊಡ್ಡ ಕಾಳಗದಂತೇ ಆಯಿತು. ಅದಕ್ಕೆ ಇದರ ಪುರಾಣ ಬರೆಯುವ ಹಾಗಿದೆ. ಈ ಪುರಾಣ ಇದೇ ತಿಂಗಳ ಹತ್ತನೇ ತಾರೀಖಿನ ದಿವಸ ಸಮಾಪ್ತಿಯಾಯಿತು. ಈ ಕಾಳಗದಲ್ಲಿ ಒಂದು ಪಕ್ಷ ಕಾಂಗ್ರೆಸ್ಸಿನವರು. ಇನ್ನೊಂದು ಪಕ್ಷ ಶ್ರೀ. ಮಾಗಾವಿ ಚಂಬಣ್ಣನವರು.

ತಿಂಗಳಗಟ್ಟಲೆ ಎರಡೂ ಪಕ್ಷಕ್ಕೆ ಹೋರಾಟ ಬಹಳ ತುರಸಿನಿಂದ ನಡೆಯಿತು. ಚಂಬಣ್ಣನವರೇ ಕಡೆಗೆ ಗೆದ್ದು ಹಾವೇರಿ ಹಿಟಲರ್ ಎಂದು ಹೇಳಿಸಿಕೊಂಡರು. ಕಾಂಗ್ರೆಸ್ ಪಕ್ಷ ತನ್ನ ತತ್ವನೀತಿ ಬದಿಗೊತ್ತಿ ಏನೇನು ಮಾಡಬೇಕೋ ಅದೆಲ್ಲಾ ಮಾಡಿತು. ಕಡೆಗೆ ಸೋತು ಜನರಲ್ಲಿದ್ದ ಕಾಂಗ್ರೆಸ್ಸಿನ ಭಕ್ತಿ ಕೂಡಾ ಕಡಿಮೆ ಮಾಡಿತು. ಇಲ್ಲಿಯ ಕಾಂಗ್ರೆಸ್ಸಿನ ಮಂದಿ ಕಾಂಗ್ರೆಸ್ ಗಾಂಧೀಜಿಯವರ ಹೆಸರಿನಿಂದ ಏನು ಬೇಕಾದರೂ ಮಾಡುತ್ತದೆಂದು ಹೇಳಿಸಿಕೊಂಡಿತು.

ದೇವಿ ಪುರಾಣದಲ್ಲಿ ಕುರಿ ಕೋಣ ಬೀಳುತ್ತವೆ. ನಮ್ಮ ಈ ಮುನಸಿಪಾಲ್ಟಿ ಚುನಾವಣೆ ಪುರಾಣದಲ್ಲಿ ಕುರಿಮಾತ್ರ ಬಿದ್ದವು. ಈಚಲ ಮರದವ್ವ ಮೈಮೇಲೆ ಬಂದಳು. ಅಹಿಂಸೆ ಮದ್ಯಪಾನನಿಷೇಧ ಹೇಳುವ ಕಾಂಗ್ರೆಸ್ ಪಕ್ಷಕ್ಕೆ ಸೇರಿದ ಶೂರರು ಹೀಗೆ ಮಾಡಿಸಿದರೆಂದು ಗಾಂಧೀಜಿಯವರಿಗೆ ಗೊತ್ತಾದರೆ ಎಷ್ಟು ದುಃಖ ಆದೀತು?

ಈ ಕಾಳಗದಲ್ಲಿ ಇಲ್ಲಿ ಕಾಂಗ್ರೆಸ್ಸಿನ ಬಲ ಗೊತ್ತಾಯಿತು. ಚಂಬಣ್ಣನವರ ಶಕ್ತಿ ತಿಳಿಯಿತು. ಸುಶಿಕ್ಷಿತರಾದ ಬ್ರಾಹ್ಮಣರಲ್ಲಿ ಎಷ್ಟು ಒಡಕು ಎಂಬುದೂ ಬೈಲಿಗೆ ಬಂತು. ತಾವು ರಾಜಕಾರಣ ಪ್ರವೀಣರೆಂದು ಹೇಳಿಕೊಂಡ ಕಾಂಗ್ರೆಸ್ಸಿನವರನ್ನು ಶ್ರೀ. ಚಂಬಣ್ಣನವರು ಒಗೆದರು. ಚಂಬಣ್ಣನವರು ಸ್ವತಂತ್ರ ನಿಂತಾಗ ಅವರ ಮನೆಯವರನ್ನೇ ಕಾಂಗ್ರೆಸ್ ಪಕ್ಷದಿಂದ ನಿಲ್ಲಿಸಿದ ಸಿವಿಕ್ ಬೋರ್ಡಿನವರ ರಾಜಕಾರಣ ಎಂಥಾದ್ದೋ ಅವರಿಗೇನೇ ಗೊತ್ತು.

ಕಾಂಗ್ರೆಸ್ಸಿನ ಬಲದಿಂದ ಒಂದೇ ಒಂದು ಜಾಗಾ ಬಂದಿತು. ಬಾಕಿ ಜಾಗಾ ಅವರವರ ಬಲದಿಂದ ಬಂದವು. ಆದರೆ ಚಂಬಣ್ಣನವರು ೫ ಜಾಗಾ ಹಿಡಿದರು. ಅದಕ್ಕೆ ಜನರು ಹಿಟ್ಲರ್ ಅಂತಾ ಹೇಳಿದರು. ಕಾಂಗ್ರೆಸ್ಸಿನಿಂದ ಎಷ್ಟು ವ್ಯಾಖ್ಯಾನ, ಎಷ್ಟು ಕೀರ್ತನ, ಎಷ್ಟು ಪ್ರಚಾರ ಮಾಡಿದರೂ ವ್ಯರ್ಥವಾಯಿತು. ಒಟ್ಟು ೧೬ ಜಾಗಾ ಪೈಕಿ ೯ ಚಂಬಣ್ಣನವರ ಕಡೆ ೪ ಕಾಂಗ್ರೆಸ್ ಕಡೆ ೨ ಗೈರ ಹಾಜರಿ ೧ ತಟಸ್ಥ ಹೀಗಾಗಿ ತಾ. ೧೦ ನೇ ದಿನ ಚಂಬಣ್ಣನವರೇ ಅಧ್ಯಕ್ಷರಾದರು.

ಇಲ್ಲಿ ಮುನಸಿಪಾಲ್ಟಿ ಚುನಾವಣೆ ಪುರಾಣದಿಂದ ಕಾಂಗ್ರೆಸ್ ಪಕ್ಷದವರು ಚುನಾವಣೆ ನಡೆಸಬೇಕಾದರೆ ಹ್ಯಾಗೆ ನಡೆಯಬೇಕೆಂಬುದನ್ನು ಕಲಿಯಬೇಕು. ಬ್ರಾಹ್ಮಣ ಹುರಿಯಾಳುಗಳು ತಮ್ಮ ತಮ್ಮಲ್ಲೇ ಹೋರಾಟ ನಡೆಸಿದ್ದರಿಂದ ಹೀಗೆ ಎರಡು ಜಾಗಾ ಅವರಿಗೆ ದೊರೆತವು. ಅವರಾದರೂ ಇದರಿಂದ ಬುದ್ಧಿ ಕಲಿಯಬೇಕು. ಚಂಬಣ್ಣನವರ ಶಕ್ತಿಗೆ ಅವರು ಅಧ್ಯಕ್ಷರಾಗಿ ಅನ್ಯಾಯದಿಂದ ಕೆಲಸ ನಡೆಸದೆ ಇದ್ದದ್ದೂ ಬಲ ಕೊಟ್ಟಿತೆಂದು ಇದರಿಂದ ಗೊತ್ತಾಯಿತು. ಚುನಾವಣೆ ಪೇಚಿನಲ್ಲಿ ಕಾಂಗ್ರೆಸ್ಸಿನವರಿಗಿಂತ ಇವರೇ ಬುದ್ಧಿವಂತರೆಂತಲೂ ತಿಳಿಯಿತು. ಹೀಗೆ ಈ ಪುರಾಣ ಬಹಳ ದೊಡ್ಡದು. ಇಷ್ಟಕ್ಕೇ ಈಗ ಸಾಕು.

—[illegible] ನಾಗರಿಕ.

# ಮುಸಲ್ಮಾನರ ಗೊಡ್ಡು ಬೆದರಿಕೆಗೆ ಅಂಜಿ

## ಹಿಂದೆಗೆಯಲಾರದು.

### ತಿರಮಿಜಿಯವರ ಪ್ರಕಟನೆ.

ಹೈದರಾಬಾದ ಸಂಸ್ಥಾನ ಕಾಂಗ್ರೆಸ್‌ದ ಮುಸಲ್ಮಾನ್ ಸದಸ್ಯರಾದ ಸಿರಾಜುಲ್ ಹಸನ್ ತಿರಮಿಜಿಯವರು ಈ ರೀತಿ ಒಂದು ಪ್ರಕಟನೆಯನ್ನು ಹೊರಡಿಸಿರುತ್ತಾರೆ—

“ಹೈದರಾಬಾದ ಸಂಸ್ಥಾನ ಕಾಂಗ್ರೆಸ್ಸವು ರಾಷ್ಟ್ರಹಿತದ ದೃಷ್ಟಿಯಿಂದ ಮಾನವನ ಮೂಲಭೂತ ಹಕ್ಕುಗಳಾದ ನಾಗರಿಕ ಹಕ್ಕುಬಾಧ್ಯತೆಗಳನ್ನು ಪಡೆಯುವದಕ್ಕಾಗಿ ಕಾಯದೆ ಬದ್ಧ ರೀತಿಯಲ್ಲಿ ರಚಿಸಲ್ಪಟ್ಟಿರುವದು. ಆದ್ದರಿಂದ ಅದು ಹಿಂದೂ ಮಹಾಸಭೆಯವರ ಪ್ರಚಾರವನ್ನು ನೋಡಿ ಗಾಬರಿಗೊಳ್ಳಲಾರದು. ಆರ್ಯ ಸಮಾಜದವರ ಚಟುವಟಿಕೆಗಳನ್ನು ಕಂಡು ಧೈರ್ಯಗುಂದಲಾರದು. ಮತ್ತು ಮುಸಲ್ಮಾನರ ಗೊಡ್ಡು ಬೆದರಿಕೆಗಳಿಂದ ಅಂಜಿ ಹಿಂದೆಗೆಯಲಾರದು.

ಹರಿಪುರದಲ್ಲಿ ಕಾಂಗ್ರೆಸ್ಸು ಸಂಸ್ಥಾನ ಪ್ರಜೆಗಳು ತಮ್ಮ ಬಲವನ್ನೇ ಅವಲಂಬಿಸಿ ಹೋರಾಟ ಹೂಡಬೇಕೆಂದು ಹೇಳಿದ ಮೇಲೆಯೇ ಹೈದರಾಬಾದ ಕಾಂಗ್ರೆಸ್ಸಿನ ಸ್ಥಾಪನೆಯಾಯಿತು. ಇದಕ್ಕೆ ಹೊರಗಿನವರ ಬೆಂಬಲವಿಲ್ಲ. ಒಳಗಿನ ಬಲವು ಕಡಿಮೆಯಾಗಿಲ್ಲ. ರಾಜನಿಷ್ಠೆ ಮತ್ತು ಸಂಸ್ಥಾನ ಪ್ರಜೆಗಳ ಸೇವೆಯೇ ಈ ಸಂಸ್ಥೆಯ ಉದ್ದೇಶಗಳಾಗಿವೆ.

ಸ್ವಾರ್ಥಿಗಳಿಗೆ ಮತ್ತು ದೊಡ್ಡಸ್ತಿಕೆ ಬೇಕೆನ್ನುವವರಿಗೆ ಈ ಸಂಸ್ಥೆಯಲ್ಲಿ ಅವಕಾಶವಿಲ್ಲ. ನಿಸ್ವಾರ್ಥಿಗಳೂ, ಸೇವಾ ತತ್ಪರರೂ ದೇಶದ ಸಲುವಾಗಿ ಎಲ್ಲವನ್ನೂ ತ್ಯಾಗಮಾಡಬಲ್ಲವರೂ ಮಾತ್ರ ಈ ಸಂಸ್ಥೆಯಲ್ಲಿ ಸೇರಬಹುದು.”

ಬಳಿಕ ಅವರು ಹಿಂದೂ ಸಿವ್ಹಿಲ್ ಲಿಬರ್ಟೀಜ ಯುನಿಯನ ಮತ್ತು “ಆರ್ಯನ್ ಡಿಫೆನ್ಸಲೀಗ” ಮೊದಲಾದ ಜಾತಿನಿಷ್ಠ ಸಂಸ್ಥೆಗಳು ಮಾಡುತ್ತಿರುವ ಅಪಪ್ರಚಾರದಿಂದಲೇ ಸಂಸ್ಥಾನ ಕಾಂಗ್ರೆಸದ ಕಾರ್ಯಕ್ಕೆ ಅಡ್ಡಿಯುಂಟಾಯಿತೆಂದು ಅಂದಿರುವರು. ಕೊನೆಗೆ ಅವರು ಹಿಂದು ಮುಸಲ್ಮಾನರಿಬ್ಬರೂ ಭೇದ ಭಾವಗಳನ್ನು ಮರೆತು ಒಕ್ಕಟ್ಟಿನಿಂದ ಸಂಸ್ಥಾನ ಸೇವೆಗೆ ಸಿದ್ಧರಾಗಬೇಕೆಂದು ಬಿನ್ನಹ ಮಾಡಿಕೊಂಡಿರುವರು.

# ವೀರಶೈವ ತರುಣರ ಪರಿಷತ್ತು.

## ಅಧ್ಯಕ್ಷರು ಶ್ರೀ. ಸಿದ್ಧಯ್ಯನವರು.

ಹುಬ್ಬಳ್ಳಿಯಲ್ಲಿ ವೀರಶೈವ ಮಹಾಸಭೆಯ ಕಾಲಕ್ಕೆ ವೀರಶೈವ ತರುಣರ ಪರಿಷತ್ತು ಕೂಡುವುದು ಗೊತ್ತಾಗಿದೆಯಷ್ಟೆ. ಈ ಪರಿಷತ್ತಿಗೆ ಉದ್ಗಿರಿಯ ಪ್ರಸಿದ್ಧ ವಕೀಲರಾದ ಶ್ರೀ. ಸಂಗ್ರಾಮಪ್ಪನವರು ಅಧ್ಯಕ್ಷರಾಗಬೇಕೆಂದು ತರುಣ ಪರಿಷತ್ತಿನ ಸ್ವಾಗತ ಸಂಘದವರು ನಿರ್ಧರಿಸಿ ಆ ಸಂಗತಿಯನ್ನು ಪ್ರಸಿದ್ಧಿಗಾಗಿ ತಾ. ೯-೧೨-೩೮ ನೆಯ ದಿನ ಸ್ವಾಗತ ಸಂಘದವರು ನಮ್ಮ ಕಡೆ ಕಳಿಸಿದ್ದರು. ನಾವು ಕಳೆದ ವಾರ ಆ ವಿಚಾರವಾಗಿ ವಿವೇಚಿಸಿದ್ದೆವಷ್ಟೆ.

ಈಗ ಸ್ವಾಗತ ಸಂಘದವರಿಂದ ಹೀಗೆ ಪ್ರಕಟವಾಗಿದೆ—

ಅಖಿಲ ಭಾರತ ವೀರಶೈವ ತರುಣ ಪರಿಷತ್ತಿಗೆ ಶ್ರೀ. ಎಚ್. ಸಿದ್ಧಯ್ಯನವರು ಎಡ್ವೋಕೇಟ್ ಎಂ. ಎಲ್. ಸಿ. ಶಿವಮೊಗ್ಗೆ ಇವರನ್ನು ಅಧ್ಯಕ್ಷರನ್ನಾಗಿ ಆರಿಸಲಾಗಿದೆ. ಅದಕ್ಕೆ ಅವರು ಒಪ್ಪಿದ್ದಾರೆ.

ಈ ಪರಿಷತ್ತಿನ ಉದ್ಘಾಟನ ಸಮಾರಂಭವನ್ನು ಶ್ರೀ. ಟಿ. ಎಚ್. ಎಂ. ಸದಾಶಿವಯ್ಯನವರು ನೆರವೇರಿಸುವರು.

# ಖಾದಿಯನ್ನು ಲೋಕಪ್ರಿಯ ಮಾಡುವುದೆಂತು?

(ಲೇಖಕರು— ಮಹಾತ್ಮಾ ಗಾಂಧಿ "ಹರಿಜನ" ತಾ. ೧೦-೧೨-೩೮.)

ಓರ್ವ ಪ್ರಮುಖ ಖಾದಿ ಕೆಲಸಗಾರರು ಈ ರೀತಿ ಬರೆಯುತ್ತಾರೆ—

"ಖಾದಿ ಮತ್ತು ಗಿರಣಿ ಬಟ್ಟೆಗಳನ್ನು ಆರ್ಥಿಕ ದೃಷ್ಟಿಯಿಂದ ತುಲನೆ ಮಾಡಿ ನೋಡಿದರೆ ಖಾದಿಯಿಂದ ಲಾಭ ದೊರೆಯಲಾರದೆಂದು ಕಂಡುಬರುವುದು. ಗಿರಣಿ ಬಟ್ಟೆಯ ಕೂಡ ಖಾದಿಯು ಸ್ಪರ್ಧೆ ಮಾಡಬೇಕಾದರೆ ಅರಳಿ ಆರಿಯುವುದು ಹಿಂಜುವದು ಮತ್ತು ನೂಲುವ ವೆಚ್ಚವನ್ನು ಬಿಟ್ಟುಬಿಡತಕ್ಕದ್ದು. ಸ್ವತಃ ನೂಲುವವರಿಗೆ ಕೂಡ ಅದು ರೊಕ್ಕದ ಹೋರೆಯಲ್ಲ. ಖಾದಿಯ ಹೊಸ ಅರ್ಥಶಾಸ್ತ್ರವನ್ನು ನೀವು ರಚಿಸಿದ್ದು ನಿಜ. ಆದರೆ ಜನಸಾಮಾನ್ಯರಿಗೆಲ್ಲ ಅದು ಹೊಳೆಯುವ ಹೊರತು ಲೋಕ ಪ್ರಿಯವಾಗಲಾರದು. ಕಾಂಗ್ರೆಸ್ ಮಂತ್ರಿಗಳಿಗೆ ಈ ಅರ್ಥಶಾಸ್ತ್ರದ ಅರಿವಾಗಿಲ್ಲ. ಈ ಪರಿಸ್ಥಿತಿಯಲ್ಲಿ ಖಾದಿ ಕೆಲಸಗಾರರು ಮಂತ್ರಿಗಳು ಮತ್ತು ಕಾಂಗ್ರೆಸ್ಸಿನವರಿಗೆ ಮಾರ್ಗವನ್ನು ತೋರಿಸಿಕೊಡುವಿರಾ? ನಾವು ಒಪ್ಪಿದರೆ ನೂಲುವವರಿಗೆ ಪ್ರತಿ ಗಂಟೆಗೆ ಒಂದಾಣೆಯಂತೆ ದಿನಾಲು ೮ ಆಣೆ ಕೂಲಿ ಕೊಡುವಷ್ಟು ನಿಮಗೆ ಖಾದಿಯಲ್ಲಿ ಶ್ರದ್ಧೆಯಿದೆ. ಆದರೆ ನಮಗೆ ಮಾತ್ರ ಅಷ್ಟೊಂದು ಶ್ರದ್ಧೆಯಿಲ್ಲೆಂದು ಸ್ಪಷ್ಟವಾಗಿ ಹೇಳುತ್ತೇನೆ."

ಖಾದಿಯು ಗಿರಣಿ ಬಟ್ಟೆಗಳ ಕೂಡ ಸ್ಪರ್ಧೆ ಮಾಡಲಾರದೆಂಬುದು ನಿಃಸಂದೇಹವಾದುದು. ಖಾದಿಯ ಉದ್ದೇಶವಾದರೂ ಹಾಗಿರುವದಿಲ್ಲ. ಖಾದಿಯ ಅರ್ಥಶಾಸ್ತ್ರವು ಜನರಿಗೆ ತಿಳಿಯದಿದ್ದರೆ ಅದೆಂದಿಗೂ ಲೋಕಪ್ರಿಯವಾಗಲಾರದು. ಅದೊಂದು ಶ್ರೀಮಂತ ಜನರ ಇಲ್ಲವೆ ಹುಚ್ಚರ ಭ್ರಮೆಯ ವಸ್ತುವಾಗಬಹುದು. ಅದು ಹಾಗಾದರೆ ಅ. ಭಾ. ಚ. ಸಂಘದಂತಹ ದೊಡ್ಡ ಸಂಸ್ಥೆಯ ಪರಿಶ್ರಮವೆಲ್ಲ ನಿರರ್ಥಕವೆಂದು ಹೇಳಬಹುದು.

ಆದರೆ ಖಾದಿಯ ಸಂದೇಶವು ಅತ್ಯಂತ ಮಹತ್ವದ್ದಾಗಿದೆ. ವರ್ಷದಲ್ಲಿ ನಾಲ್ಕು ತಿಂಗಳ ನಿರುದ್ಯೋಗಿಗಳಾದವರಿಗೆ ಖಾದಿಯು ಒಳ್ಳೇ ಕೆಲಸ ಕೊಡುತ್ತದೆ. ಅದರಿಂದ ಹಣ ಸಿಕ್ಕುವುದಷ್ಟೇ ಅಲ್ಲದೆ ಖಾದಿಯು ಒಂದು ಬಗೆಯ ಪಾರಿತೋಷಕವಾಗಿದೆ. ಏಕೆಂದರೆ ಲಕ್ಷಾವಧಿ ಜನರು ಒತ್ತಾಯದಿಂದ ಆಲಸಿಗಳಾದರೆ ಅವರು ನೈತಿಕ ಮಾನಸಿಕ ಮತ್ತು ಶಾರೀರಿಕ ಮರಣವನ್ನು ಹೊಂದಬೇಕಾಗುವದು. ಚರಕವು ಲಕ್ಷಾವಧಿ ಹೆಣ್ಣುಮಕ್ಕಳ ದರ್ಜೆಯನ್ನು ಹೆಚ್ಚಿಸುವುದು ಆದುದರಿಂದ ಗಿರಣಿ ಬಟ್ಟೆಯನ್ನು ಪುಕ್ಕಟೆಯಾಗಿ ಕೊಟ್ಟರೂ ಕೂಡ ತಮ್ಮ ಸ್ವಂತ ಪರಿಶ್ರಮದಿಂದ ಸಿದ್ಧ ಮಾಡಲ್ಪಟ್ಟ ಖಾದಿಯನ್ನೇ ಎಲ್ಲರೂ ತೊಡಬೇಕು.

ಪ್ರಾಣವು ಹಣಕ್ಕಿಂತ ಶ್ರೇಷ್ಠ. ಏನೂ ಕೆಲಸವಿಲ್ಲದೆ ನಮ್ಮ ಸ್ವಲ್ಪ ಗಳಿಕೆಯಲ್ಲಿ ಭಾರವಾಗಿರುವ ವೃದ್ಧ ತಂದೆ ತಾಯಿಗಳನ್ನು ಕೊಲ್ಲುವದು ಲಾಭಕರ. ಅದೇ ರೀತಿಯಾಗಿ ನಮಗೆ ಭಾರವಾದ ಮತ್ತು ಏನೂ ಹಣ ಗಳಿಸದೆ ಇದ್ದ ಮಕ್ಕಳನ್ನು ಕೊಲ್ಲುವದೂ ಸುಲಭವಾಗಬಹುದು. ಆದರೆ ನಾವು ನಮ್ಮ ಮಕ್ಕಳನ್ನಾಗಲಿ ತಂದೆ ತಾಯಿಗಳನ್ನಾಗಲಿ ಕೊಲ್ಲುವೆವೊ? ಇಲ್ಲ; ಎಂದಿಗೂ ಕೊಲ್ಲುವದಿಲ್ಲ. ಎಷ್ಟು ವೆಚ್ಚ ಬಂದರೂ ಒಳ್ಳೇ ಅಕ್ಕರತೆಯಿಂದ ಅವರನ್ನು ಪಾಲಿಸುತ್ತೇವೆ. ಅದೇ ರೀತಿಯಾಗಿ ಉಳಿದ ಯಾವ ಬಟ್ಟೆಗೂ ಪ್ರೋತ್ಸಾಹನೆ ಕೊಡದೇ ಖಾದಿಯನ್ನೇ ನಾವು ಧರಿಸತಕ್ಕದ್ದು.

ಆರ್ಥಿಕ ದೃಷ್ಟಿಯಿಂದ ಖಾದಿಯನ್ನು ನೋಡುವ ಚಟವೊಂದು ನಮಗೆ ಬಿದ್ದಿದೆ. ಖಾದಿ ಅರ್ಥಶಾಸ್ತ್ರದ ಬಗ್ಗೆ ಇದ್ದ ವಿಚಾರವನ್ನು ನಾವು ಬದಲಾಯಿಸಲಿಕ್ಕೇಬೇಕು. ರಾಷ್ಟ್ರೋದ್ಧಾರಕ್ಕೆ ಖಾದಿಯು ಅತ್ಯಂತ ಅವಶ್ಯವೆಂದು ನಮಗೆ ಮನವರಿಕೆಯಾದ ಕೂಡಲೆ ಅದು ತುಟ್ಟಿಯೆಂದು ನಮಗೆನಿಸುವದಿಲ್ಲ. ಕೆಲಕಾಲ ಇದಕ್ಕಾಗಿ ನಾವು ಆರ್ಥಿಕ ಅಡಚಣೆಯನ್ನು ಅನುಭವಿಸಲು ಸಿದ್ಧರಾಗಬೇಕು. ಸದ್ಯಕ್ಕೆ ನಮಗೆ ಪ್ರತಿಕೂಲ ಪರಿಸ್ಥಿತಿ ಬಹಳ. ಲ್ಯಾಂಕಾಶಾಯರದ ಸಲುವಾಗಿ ಹತ್ತಿ ಬೆಳೆಯನ್ನು ಕೇಂದ್ರೀಕರಿಸಲಾಗಿದೆ. ಹಿಂದಿ ಗಿರಣಿಗಾಗಿಯೂ ಹತ್ತಿ ಬೆಳೆಯು ಮುಡುಪಾಗಿದೆ. ಪರದೇಶಗಳಲ್ಲಿಯ ಧಾರಣೆಯನ್ನೇ ನಮ್ಮ ಹತ್ತಿ ಧಾರಣೆಯು ಅವಲಂಬಿಸುತ್ತದೆ. ಖಾದಿ ಅರ್ಥಶಾಸ್ತ್ರವನ್ನನುಲಕ್ಷಿಸಿ ಅರಳೆಯು ಹಂಚಲ್ಪಟ್ಟರೆ ಅರಳಿ ಧಾರಣೆ ಹೆಚ್ಚು ಕಡಿಮೆ ಆಗುವದಿಲ್ಲ. ಸದ್ಯಕ್ಕಿಂತ ಧಾರಣೆ ಕಡಿಮೆಯಾಗುವದು. ಸರಕಾರದ ಸಂರಕ್ಷಣ ಇಲ್ಲವೆ ಸ್ವಂತ ಪ್ರಯತ್ನದಿಂದ ಜನರು ಕೇವಲವಾಗಿ ಖಾದಿಯನ್ನು ಧರಿಸಹತ್ತಿದರೆ ಹಣದ ದೃಷ್ಟಿಯಿಂದ ಅದನ್ನು ನೋಡುವದನ್ನು ಅವರು ಬಿಟ್ಟುಕೊಡುವರು. ಶಾಕಾಹಾರಿಗಳು ಮಾಂಸದ ಧಾರಣೆಯನ್ನು ಉಳಿದ ಪದಾರ್ಥಗಳ ಧಾರಣೆ ಕೂಡ ಎಂದಾದರೂ ತುಲನೆ ಮಾಡುವರೋ? ಶಾಕಾಹಾರಿಗಳು ಉಪವಾಸ ಬಿದ್ದು ಪ್ರಾಣ ಬಿಡುವರೇ ಹೊರತು ಪುಕ್ಕಟೆಯಾಗಿ ಕೊಡಲ್ಪಟ್ಟ ಮಾಂಸ ಮುಂತಾದ್ದನ್ನು ಎಂದಿಗೂ ತಿನ್ನುವದಿಲ್ಲ.

ಆದರೆ ಖಾದಿಯ ಬಗ್ಗೆ ಅನೇಕ ಕಾಂಗ್ರೆಸ್ಸಿಗರಿಗೆ ಇಷ್ಟೊಂದು ವಿಶ್ವಾಸ ಇಲ್ಲೆಂಬುದು ನನಗೆ ಗೊತ್ತಿದೆ. ಮಂತ್ರಿಗಳು ಕಾಂಗ್ರೆಸ್ಸಿಗರು ತಮ್ಮ ಸುತ್ತು ಮುತ್ತಲಿನ ಪರಿಸ್ಥಿತಿಯಿಂದ ಸ್ಫೂರ್ತಿಗೊಳ್ಳತಕ್ಕವರು ಖಾದಿಯಲ್ಲಿ ಅವರಿಗೆ ಅಷ್ಟೊಂದು ವಿಶ್ವಾಸವಿದ್ದರೆ ಅದನ್ನು ಲೋಕಪ್ರಿಯ ಮಾಡುವಲ್ಲಿ ಅವರು ಹೆಚ್ಚಾಗಿ ನಿರತರಾಗುವರು.

೧೯೨೦ ನೇ ಇಸ್ವಿಯ ಸ್ವರಾಜ್ಯ ಕಾರ್ಯ ಕ್ರಮದಲ್ಲಿ ಖಾದಿಯು ಒಳ್ಳೇ ಮಹತ್ವದ ಭಾಗವಾಗಿತ್ತು. ಪ್ರತಿಯೊಂದು ಹಳ್ಳಿಯಲ್ಲಿ ರಾಟೆಗಳು ನಡೆಯಹತ್ತಿದರೆ ಲಕ್ಷಾವಧಿ ಜನರಿಗೆ ಸ್ವರಾಜ್ಯ ಸಿಕ್ಕುವುದೆಂದು ೧೯೨೧-೨೨ ರಲ್ಲಿ ಸಾವಿರಾರು ಕಾಂಗ್ರೆಸ್ಸಿಗರು ಆಗಾಗ ಸಭೆ ಸಮ್ಮೇಲನಗಳಲ್ಲಿ ಪ್ರತಿಪಾದಿಸಿದ್ದುಂಟು. ಪ್ರತಿಯೊಂದು ಗುಡಿಸಲಿನಲ್ಲಿ ರಾಟೆಯು, ಪ್ರತಿಯೊಂದು ಹಳ್ಳಿಯಲ್ಲಿ ನೇಯುವ ಮಗ್ಗವಿಲ್ಲದಿದ್ದರೆ ಸ್ವಾತಂತ್ರ್ಯ ಸಿಕ್ಕಲಾರದೆಂದು ಕೀರ್ತಿಶೇಷ ಅಲ್ಲಿಬಂಧುಗಳು ಅನೇಕ ಸಭೆಗಳಲ್ಲಿ ಹೇಳುತ್ತಿದ್ದರು. ಚರಖಗಳು ನಮ್ಮ ಯುದ್ಧದ ಉಪಕರಣಗಳು ಮತ್ತು ನೂಲಿನ ಕುಕ್ಕಡಿಗಳು ನಮ್ಮ ಮದ್ದು ಗುಂಡುಗಳೆಂದು ಮೌ. ಮಹಮ್ಮದ ಅಲ್ಲಿಯವರು ತಮ್ಮ ಅಲಂಕಾರಿಕ ಭಾಷೆಯಲ್ಲಿ ಹೇಳುತ್ತಿದ್ದರು. ಸಭಿಕರಿಗೆ ಮನವರಿಕೆಯಾಗುವಂತೆ ಅವರು ಈ ವಿಷಯವನ್ನು ಪ್ರತಿಪಾದಿಸುತ್ತಿದ್ದರು.

ಆದರೆ ಪ್ರಾರಂಭ ಕಾಲದ ಆ ವಿಶ್ವಾಸವು ಉಳಿಯಲಿಲ್ಲ. ಕಾಂಗ್ರೆಸ್ಸಿಗರು ಖಾದಿ ಮತ್ತು ಸ್ವರಾಜ್ಯಕ್ಕೆ ತಳಕಹಾಕುವದನ್ನು ಸರ್ವಸಾಧಾರಣವಾಗಿ ಬಿಟ್ಟುಗೊಟ್ಟಿರುವರು. ಖಾದಿಯು ನಮ್ಮ ಸ್ವಾತಂತ್ರ್ಯದ ಬಟ್ಟೆಯೆಂದು ಶ್ರೀ. ಜವಾಹರಲಾಲ ನೆಹರುರವರು

(೧೨ ನೇ ಪುಟಕ್ಕೆ ಸಾಗಿದೆ.)

ಶರಣ ಸಂದೇಶ



ಗಾಂಧಿ

ಶಾ. ಶ. ೧೮೫೬ ನೆಯ ಮಾರ್ಗಶಿರ ಬ|| ೧೩ ಸೋಮವಾರ.

# ಕಾಂಗ್ರೆಸ್ಸಿನ ಶುದ್ಧೀಕರಣ.

ಇತ್ತೀಚಿಗೆ ಕಾಂಗ್ರೆಸ್ಸಿನಲ್ಲಿ ಅನೇಕ ಕೊಳೆಗಳು ಹೆಚ್ಚುತ್ತಲಿವೆ ಯೆಂಬುದು ಎಲ್ಲರಿಗೂ ತಿಳಿದ ಸಂಗತಿಯಾಗಿದೆಯಷ್ಟೆ. ಮಹಾತ್ಮಾ ಗಾಂಧಿಯವರು ಈ ಕೊಳೆಗಳನ್ನು ತೊಳೆದು ಹಾಕಲು ಆಗಾಗ್ಗೆ ಎಚ್ಚರಿಕೆ ಕೊಡುತ್ತಲೇ ಬಂದಿದ್ದಾರೆ. ಲಂಚಗೂಳಿತನ, ಜಾತ್ಯಂಧತೆ, ಸುಳ್ಳು, ಸ್ವಾರ್ಥ ಇವುಗಳೆಲ್ಲಾ ಕಾಂಗ್ರೆಸ್ಸಿನಲ್ಲಿ ಸೇರಿ ಎಲ್ಲೆಲ್ಲಿಯೂ ಅದರ ಪವಿತ್ರತೆ, ಪ್ರತಿಷ್ಠತೆಗಳನ್ನು ಹಾಳುಮಾಡುತ್ತಲಿವೆ.

ಕಾಂಗ್ರೆಸ್ಸಿನ ಮುಖ್ಯಾಧಿಕಾರಿಗಳೂ ಮುಖ್ಯ ಸಂಸ್ಥೆಗಳೂ ಜಾಗ್ರತೆ ಈ ವಿಷಯಗಳ ಕಡೆಗೆ ಲಕ್ಷ್ಯಿಸಿ ಯೋಗ್ಯವಾದ ಪ್ರತಿಬಂಧವನ್ನು ಉಂಟುಮಾಡದಿದ್ದರೆ ಕಾಂಗ್ರೆಸ್ಸು ತನ್ನ ಪ್ರತಿಷ್ಠೆಯನ್ನು ಸಂಪೂರ್ಣ ಕಳೆದುಕೊಳ್ಳುವುದೆಂದೇ ಗಾಂಧೀಜಿಯವರಿಗೆ ತೋರಿದೆ. ಅದಕ್ಕಾಗಿ ಮೊನ್ನೆ ವರ್ಧಾದಲ್ಲಿ ಕೂಡಿದ ಕಾಂಗ್ರೆಸ್ ವರ್ಕಿಂಗ್ ಕಮಿಟಿಯಲ್ಲಿ ಕಾಂಗ್ರೆಸ್ಸಿನ ಶುದ್ಧೀಕರಣಕ್ಕಾಗಿ ಕೆಲವು ನಿಯಮಗಳನ್ನು ಗೊತ್ತುಮಾಡಲು ತಿಳಿಸಿದರು. ಅವು ವರ್ಕಿಂಗ್ ಕಮಿಟಿಗೂ ಮಾನ್ಯವಾದವು.

**ಪ್ರಥಮ ಚಿಕಿತ್ಸೆ.**

ರೋಗಿಗೆ ಔಷಧಿಯನ್ನು ಕೊಡುವ ಮುಂಚೆ ಚತುರ ವೈದ್ಯನು ಹೇಗೆ "ಜುಲಾಬಿನ" ಔಷಧಿಯನ್ನು ಕೊಟ್ಟು ಮೊದಲು ಹೊಟ್ಟೆಯಲ್ಲಿರುವ ಕೊಳೆಯನ್ನು ತೆಗೆದುಹಾಕುತ್ತಾನೆಯೋ ಹಾಗೆಯೇ ಕಾಂಗ್ರೆಸ್ ಸಂಸ್ಥೆಯ ಶುದ್ಧೀಕರಣಮಾಡುವ ಮುಂಚೆ ಅದರಲ್ಲಿರುವ ಸದಸ್ಯರ ಸುಳ್ಳು ಸಂಖ್ಯೆಯನ್ನು ತೆಗೆದುಹಾಕಬೇಕೆಂದು ವರ್ಕಿಂಗ್ ಕಮಿಟಿಯು ಗೊತ್ತುಮಾಡಿತು. ಸದಸ್ಯರ ಪಟ್ಟಿಯಲ್ಲಿ ಅನೇಕ ಹೆಸರುಗಳನ್ನು ಸುಳ್ಳಾಗಿಯೇ ಸೇರಿಸಿದ್ದಾರೆ. ಅದಕಾರಣ ಎಲ್ಲಾ ಕಡೆಗೂ ಕಾಂಗ್ರೆಸ್ ಕಮಿಟಿಗಳಲ್ಲಿರುವ ಸದಸ್ಯರ ಪಟ್ಟಿಯನ್ನು ಪರಿಶೋಧಿಸಿ ಇಂಥ ಮೋಸದ ಹೆಸರನ್ನು ತೆಗೆದುಹಾಕಬೇಕು.

ಪ್ರತಿನಿಧಿಗಳಾಗಿ ಚುನಾವಣೆಗೆ ನಿಲ್ಲುವವರು ಆ ಮುಂಚೆ ಅಖಂಡ ಮೂರು ವರುಷವಾದರೂ ಕಾಂಗ್ರೆಸ್ಸಿನ ಸದಸ್ಯರಾಗಿರಬೇಕೆಂದೂ ಇವರು ಕಾಂಗ್ರೆಸ್ಸಿನ ನಿಯಮದಂತೆ ಹಿಂದಣ ವರುಷ ನೂಲುವ ಅಥವಾ ಇನ್ನಾವುದಾದರೊಂದು ಗೊತ್ತು ಮಾಡಲ್ಪಟ್ಟ ಕಾರ್ಯವನ್ನು ಮಾಡಬೇಕೆಂದೂ ವರ್ಕಿಂಗ್ ಕಮಿಟಿಯು ನಿರ್ಣಯಿಸಿತು.

ಕಾಂಗ್ರೆಸ್ಸಿನ ಶುದ್ಧೀಕರಣಕ್ಕೆ ಇವೆಲ್ಲ ಅಗತ್ಯವಾದವುಗಳೇ ಆಗಿವೆ. ನಾಲ್ಕಾಣೆ ಚಂದಾ ಕೊಟ್ಟರೆ ಕಾಂಗ್ರೆಸ್ ಸದಸ್ಯತ್ವ ಬರುವುದೆಂದೂ ಅದರ ಮರೆಯಲ್ಲಿ ಮುಂದೆ ಬೇಕಾದ ಸ್ವಾರ್ಥ ಸಾಧಿಸಬಹುದೆಂದೂ ಈ ವರೆಗೆ ಅನೇಕರ ತಿಳುವಳಿಕೆಯಾಗಿದ್ದಿತಷ್ಟೆ. ಅಂತೆಯೇ ಅನೇಕ ಸಲ್ಲದ ಕಾರ್ಯಗಳು ನಡೆದವು. ಈಗಲೂ ನಡೆಯುತ್ತಲಿವೆ.

ಈಗ ವರ್ಕಿಂಗ್ ಕಮಿಟಿಯು ಮಾಡಿದ ಠರಾವಿನಿಂದ ಅಂಥ ಪ್ರಯತ್ನಕ್ಕೆ ಸ್ವಲ್ಪ ಪ್ರತಿಬಂಧವಾಯಿತು. ಕಾಂಗ್ರೆಸ್ ಸದಸ್ಯನೇನೋ ಹೇಗಾದರೂ ಆಗಬಹುದು. ಆದರೆ ಯಾವುದೊಂದು ಕಾರ್ಯ ನಿರ್ವಾಹಕ್ಕೆ ಪ್ರತಿನಿಧಿಯಾಗಿ ಮಾತ್ರ ಆರಿಸಲ್ಪಡಲು ಅಡ್ಡಿಯಾಯಿತು. ಕಾಂಗ್ರೆಸ್ಸಿಗೆ ಬಹು ಜನರು ಸೇರಿದ್ದಾರೆಂಬ ಸಂಖ್ಯೆಯನ್ನು ದೊಡ್ಡದಾಗಿ ತೋರಿಸಲಿಕ್ಕೆ ಅವಕಾಶವಿಟ್ಟು ಕಾರ್ಯ ನಿರ್ವಾಹಕರಲ್ಲಿ ಮಾತ್ರ ತೊಡಕು ಬಾರದಂತೆ ಈಗ ಮಾಡಿದಂತಾಯಿತು.

**ಬಹುಮತದ ಭ್ರಮೆ.**

ನೂಲು ತೆಗೆಯುವ ಮತ್ತು ಖಾದಿ ಧರಿಸುವ ಕಟ್ಟಪ್ಪಣೆಯು ಕಾಂಗ್ರೆಸ್ ಸದಸ್ಯತ್ವಕ್ಕೆ ಅತ್ಯಗತ್ಯವಾಗಿದೆ. ಇದರ ವಿನಾ ಕಾಂಗ್ರೆಸ್ಸಿನ ನಿಜವಾದ ಶುದ್ಧೀಕರಣವಾಗುವುದು ಶಕ್ಯವಿಲ್ಲ. ಮಹಾತ್ಮಾ ಗಾಂಧಿಯವರು ಈ ವಿಚಾರವಾಗಿ ಆಗಾಗ್ಗೆ ಎಚ್ಚರಿಸುತ್ತಿರುವುದೇ ವಿಹಿತವಾಗಿದೆ.

ಅಸೆಂಬ್ಲಿಯಲ್ಲಿ ಬಹುಮತ ಹೊಂದಲು ಎಂಥವರನ್ನಾದರೂ ಕಾಂಗ್ರೆಸ್ಸಿಗೆ ಸೇರಿಸಿಕೊಳ್ಳುವ ಚಟವು ಮೊದಲು ಹತ್ತಿತಷ್ಟೆ. ಇದು ಲೋಕಲ್ ಬೋರ್ಡ ಮುನಸಿಪಾಲ್ಟಿಗಳ ಚುನಾವಣೆಗಳಿಗೂ ಅಂಟಿಕೊಂಡಿತು. ಈ ಬಹುಮತದ ಭ್ರಮೆಯಿಂದ ಕಾಂಗ್ರೆಸ್ಸಿನ ಪವಿತ್ರತೆಯು ಅನೇಕರ ಕಣ್ಣಿಗೆ ಕಾಣದಂತಾಯಿತು. ಯಾರನ್ನಾದರೂ ಕಾಂಗ್ರೆಸ್ಸಿನ ಹೆಸರಿನಿಂದ ನಿಲ್ಲಿಸಿ ಹೇಗಾದರೂ ಪ್ರಯತ್ನ ಮಾಡಿ ಕಾಂಗ್ರೆಸ್ಸಿಗೆ ಬಹುಮತ ಇದೆಯೆಂದು ತೋರಿಸುವ ಹವ್ಯಾಸವು ಎಲ್ಲೆಲ್ಲಿಯೂ ವ್ಯಾಪಿಸಿತು.

ಈ ಬಹುಮತದ ಭ್ರಮೆಯಿಂದಲೇ ಕಾಂಗ್ರೆಸ್ಸಿನಲ್ಲಿ ಕೊಳೆ ಹೆಚ್ಚಿತೆಂದು ನಮಗೆ ತೋರುತ್ತದೆ. ಕಾಂಗ್ರೆಸ್ಸಿನವರಿಗೆ ಈ ಭ್ರಮೆ ಹಿಡಿದಿದೆಯೆಂದೇ ಅನೇಕರು ಮೊದಲು ಕಾಂಗ್ರೆಸ್ಸಿನ ಹೆಸರಿನಿಂದ ಚುನಾವಣೆಗೆ ನಿಂತು ಆ ಮೇಲೆ ಅದಕ್ಕೇ ವಿರೋಧ ಮಾಡುತ್ತಿದ್ದಾರೆ.

ಮುನಸಿಪಾಲ್ಟಿ, ಲೋಕಲ್ ಬೋರ್ಡ ಮೊದಲಾದ ಸ್ಥಾನಿಕ ಸಂಸ್ಥೆಗಳ ಸೂತ್ರ ಹೇಗಾದರೂ ತಮ್ಮ ಕೈಯಲ್ಲಿ ಬರಬೇಕೆಂದು ಹಂಬಲಿಸಿ ಬಹುಮತದ ಭ್ರಮೆಗೊಳಗಾಗಿ ಸಲ್ಲದ ರೀತಿಯಲ್ಲಿ ನಡೆಯದೆ ಕಾಂಗ್ರೆಸ್ಸಿನ ನಿಜನಿಷ್ಠ ಜನ ಸಾಮಾನ್ಯರಲ್ಲಿ ಎಷ್ಟರ ಮಟ್ಟಿಗೆ ಇದೆ ಎಂಬುದನ್ನು ಕಂಡು ಹಿಡಿಯುವುದಕ್ಕಾಗಿಯೇ ಇಂಥ ಸ್ಥಾನಿಕ ಸಂಸ್ಥೆಗಳಿಗೆ ಕಾಂಗ್ರೆಸ್ಸಿನ ನಿಜ ಭಕ್ತರನ್ನೇ ಹುಮೇದುವಾರರನ್ನಾಗಿ ನಿಲ್ಲಿಸುವ ಪದ್ಧತಿಯುಂಟಾಗುವುದೂ ಕಾಂಗ್ರೆಸ್ಸಿನ ಶುದ್ಧೀಕರಣಕ್ಕೆ ಅತ್ಯಗತ್ಯವಾಗಿಲ್ಲವೆ?

# ನಿಜಾಮರಾಜ್ಯದಲ್ಲಿ ಸತ್ಯಾಗ್ರಹ ಯುದ್ಧ.

## ವಿದ್ಯಾರ್ಥಿಗಳಲ್ಲಿ ಪ್ರಚಂಡ ಜಾಗೃತಿ.

ಉಸ್ಮಾನಿಯಾ ಕಾಲೇಜದ ೩೬೦, ಸಿಟಿ ಕಾಲೇಜದ ೭೦, ಗುಲಬರ್ಗಾ ಕಾಲೇಜದ ೨೫೦ ಈ ಪ್ರಕಾರ ಒಟ್ಟು ೬೮೦ ಹಿಂದು ವಿದ್ಯಾರ್ಥಿಗಳು ಸರಕಾರಿ ಕಾಲೇಜುಗಳಿಂದ ಹೊರಗೆ ಹಾಕಲ್ಪಟ್ಟಿದ್ದಾರೆ. ವಂದೇಮಾತರಂ ಗೀತೆಯನ್ನು ಹಾಡುವದು ತಮ್ಮ ಧಾರ್ಮಿಕ ಹಕ್ಕು ಇದೆಯೆಂದೇ ವಿದ್ಯಾರ್ಥಿಗಳ ಹೇಳಿಕೆ. ಕಳೆದ ನಾಲ್ಕು ವರುಷಗಳಿಂದಲೂ ವಿದ್ಯಾರ್ಥಿಗಳು ಈ ಗೀತೆಯನ್ನು ಹೇಳುತ್ತಾ ಬಂದಿದ್ದಾರೆ. ಈಗ ಸರಕಾರವು ಈ ದಬ್ಬಾಳಿಕೆಯನ್ನು ಪ್ರಾರಂಭಿಸಿತು. ಅಲ್ಲಿಯ ವೀರ ಹಿಂದು ವಿದ್ಯಾರ್ಥಿಗಳು ಈ ಸತ್ಯಾಗ್ರಹವನ್ನು ಹೂಡಿ ದೇಶದ ಲಕ್ಷ್ಯವನ್ನು ತಮ್ಮ ಕಡೆಗೆ ಎಳೆದಿದ್ದಾರೆ.

**ಹಿಂದು ವಿಶ್ವ ವಿದ್ಯಾಲಯ.**

ಈ ಬಿಕ್ಕಟ್ಟಿನ ಪ್ರಸಂಗದಲ್ಲಿ ನಿಜಾಮದ ಧನಿಕರು ಮುಂದೆ ಬಂದು ತಮ್ಮ ಉದಾರತೆಯನ್ನು ತೋರಿಸುತ್ತಿದ್ದಾರೆ. ನಿಜಾಮದ ವಿದ್ಯಾರ್ಥಿಗಳಿಗೆ ಒಂದು ಸ್ವತಂತ್ರ ವಿಶ್ವವಿದ್ಯಾಲಯವನ್ನು ಸ್ಥಾಪಿಸಲು ಪ್ರಯತ್ನ ನಡೆದಿದೆ. ನಿಜಾಮು ಸರಕಾರವು ತನ್ನ ರಾಜ್ಯದಲ್ಲಿ ಇಂಥ ವಿದ್ಯಾಲಯ ಸ್ಥಾಪನೆಗೆ ಅವಕಾಶಕೊಡದಿದ್ದರೆ ನೆರೆಯ ಬ್ರಿಟಿಶ್ ಸ್ಥಳದಲ್ಲಿ ಹಿಂದು ವಿಶ್ವವಿದ್ಯಾಲಯದ ಸ್ಥಾಪನೆ ಮಾಡಬೇಕೆಂದು ಅನೇಕರು ಯೋಚಿಸಿದ್ದಾರೆ. ಪಂಡಿತ ಮದನಮೋಹನ ಮಾಲವೀಜಿಯವರ ಕಡೆಗೆ ಒಂದು ಶಿಷ್ಟಮಂಡಲ ಹೋಗುವದಾಗಿ ಸುದ್ದಿ.

ಈ ವಿದ್ಯಾಲಯಕ್ಕೆ ನಿಜಾಮದ ಒಬ್ಬ ಉದಾರ ಧನಿಕರು ಒಂದು ಲಕ್ಷ ರೂ. ಗಳನ್ನು ಕೊಡುವವರಿದ್ದಾರೆಂದು ತಿಳಿಯುತ್ತದೆ.

**ಪೋಲಿಸರ ಅತ್ಯಾಚಾರ.**

ಗೋವಳಕೊಂಡ ಕಿಲ್ಲೆ ಹತ್ತಿರ ಸ್ನಾನಮಾಡಿ ಬರುತ್ತಿದ್ದಾಗ ಶ್ರೀ. ವೆಂಕಟರಾಮಯ್ಯ ವಿದ್ವಾನ್ ಶಿರೋಮಣಿ ಇವರಿಗೆ ೧೮-೨೦ ಜನ ಮುಸಲ್ಮಾನರು ಬಹಳವಾಗಿ ಹೊಡೆದು ಒಂದು ಬಂಡಿಯ ಕೆಳಗೆ ಹಾಕಿದರು. ಬಂಡಿಯ ಗಾಲಿ ಅವರ ಕಾಲ ಮೇಲೆ ಹೋಗಿ ಭಯಂಕರ ಗಾಯವಾಗಿದೆ.

ನೀವು ನಮ್ಮ ರಾಜ್ಯ ನಷ್ಟಮಾಡುವ ಹೋರಾಟ ನಡೆಸಿದ್ದೀರೆಂದು ಆ ತುಂಟರು ಶ್ರೀ. ವೆಂಕಟರಾಮಯ್ಯನವರಿಗೆ ಹೇಳಿದರೆಂದೂ ಅವರಲ್ಲಿ ೧೪೩ ಮತ್ತು ೧೪೫ ನಂಬರ್ ಇದ್ದ ಪೋಲಿಸರೂ ಇದ್ದರೆಂದೂ ಪ್ರಕಟವಾಗಿದೆ.

**ಆರ್ಯ ಸಮಾಜದ ಮೇಲೆ ದಬ್ಬಾಳಿಕೆ.**

ಆರ್ಯ ಸಂರಕ್ಷಕ ಸಮಿತಿಯು ಪ್ರಾರಂಭಿಸಿರುವ ನಿಜಾಮು ರಾಜ್ಯದ ಸತ್ಯಾಗ್ರಹದಲ್ಲಿ ಅದು ದಿನೆ ದಿನೆ ತನ್ನ ಬಲವನ್ನು ಹೆಚ್ಚಾಗಿ ತೋರಿಸುತ್ತಲಿದೆ. ಸರಕಾರವು ಈ ಸಮಾಜದ ಮೇಲೆ ತನ್ನ ದಬ್ಬಾಳಿಕೆಯನ್ನು ಈಗ ಹೆಚ್ಚುಮಾಡಿದೆ.

ಈ ವರೆಗೆ ೭೭೧ ಆರ್ಯ ಸಮಾಜದವರು ಸತ್ಯಾಗ್ರಹದಲ್ಲಿ ಕೈಸೆರೆಯಾಗಿದ್ದಾರೆ. ಇವರಲ್ಲಿ ೪೬೧ ಸತ್ಯಾಗ್ರಹಿಗಳು ಈಗಾಗಲೇ ಶಿಕ್ಷೆಗೆ ಗುರಿಯಾಗಿದ್ದಾರೆ.

ಉತ್ತರ ಹಿಂದುಸ್ಥಾನದಿಂದ ಆರ್ಯ ಸಮಾಜದ ಸತ್ಯಾಗ್ರಹಿಗಳ ತಂಡವು ಮೇಲಿಂದ ಮೇಲೆ ಬರುತ್ತಲಿದೆ. ಸೊಲ್ಲಾಪುರದ ಸಭೆಯನಂತರ ಸತ್ಯಾಗ್ರಹಿಗಳ ತಂಡ ಹೆಚ್ಚುವದು.

**ನೀಲಂಗಾದಲ್ಲಿ ಕೈಸೆರೆ**— ಬೀದರ ಜಿಲ್ಲಾ ನೀಲಂಗಾದಲ್ಲಿ ಪಬ್ಲಿಕ್ ಸೇಫ್ಟಿ ಬಿಲ್ ಪ್ರಕಾರ ಈ ಕೆಳಗಿನ ೧೮ ಜನರನ್ನು ಸೆರೆಹಿಡಿದಿದ್ದಾರೆ. ಶ್ರೀಯುತರುಗಳಾದ ಶೇಷರಾವ ವಕೀಲ, ರಾಮರಾವ ವಕೀಲ, ಪಟೆನಾಥ ವಕೀಲ, ರಾಮಚಂದ್ರ ಉಪಮಂತ್ರಿ ನಾಗಪ್ಪ, ಪುಂಡಲಿಕ ಚಪರಾಶಿ, ಬಾಬುಗೋವಿಂದ, ಬಸಪ್ಪ, ಜ್ಞಾನಿ, ಗಣಪತಿ, ಮಲಕುಂದ ಗೋವಿಂದ ನಾಯಿಕ, ತಾತ್ಯಾರಾವ ದೇಶಮುಖ, ಮಹಾದೇವ ಕೊಂಡಿರಾಮ, ರಾಘವೇಂದ್ರ ಆಂದನೆ ಮೆರವಣಿಗೆ ಹೊರಡಿಸಿ ಹಿಂದುಸಂಘಟನೆಯ ಪದ್ಯ ಹೇಳಿದರೆಂದು ಅಪರಾಧ ಹೊರಿಸಲಾಗಿದೆ.

ಬೀದರ ಜಿಲ್ಲಾ ಕೆಲಗಾಂವ ಎಂಬಲ್ಲಿ ೨೧ ಜನ ಆರ್ಯರನ್ನು ಅಬುಲಗಾ ಎಂಬಲ್ಲಿ ೧೭ ಜನ ಆರ್ಯರನ್ನು, ಕಾಸಾರಶಿರಸಿಯಲ್ಲಿ ೨೦ ಜನ ಆರ್ಯರನ್ನು ಸೆರೆ ಹಿಡಿಯಲಾಗಿದೆ.

**ಶೇರವಾಣಿಯ ಹೋಳಿ!**

ಉಸ್ಮಾನಿಯಾ ವಿದ್ಯಾಲಯದ ೩೫೦ ಹಿಂದು ವಿದ್ಯಾರ್ಥಿಗಳನ್ನು ತೆಗೆದುಹಾಕಿದ್ದರಿಂದ ಅವರು ತಮ್ಮ ತಮ್ಮ ಊರಿಗೆ ಹೋದರು. ವಿದ್ಯಾಲಯದ ವಸತಿ ಗೃಹದಲ್ಲಿರುವ ವಿದ್ಯಾರ್ಥಿಗಳು ಶೇರವಾಣಿ ಉಡುಪನ್ನು ಹಾಕಬೇಕೆಂಬ ಕಟ್ಟಪ್ಪಣೆಯಿತ್ತು. ಆ ಶೇರವಾಣಿಗಳನ್ನೆಲ್ಲಾ ಬಹಿಷ್ಕರಿಸಿ ರಾಸಿ ಹಾಕಿ ಅವುಗಳಿಗೆ ಬೆಂಕಿ ಹಚ್ಚಿ ಆ ಅಗ್ನಿಯ ಮುಂದೆ ವಂದೇಮಾತರಂ ಗೀತೆ ಹೇಳಲು ಅಪ್ಪಣೆ ದೊರೆಯುವ ವರೆಗೆ ವಿದ್ಯಾಲಯದಲ್ಲಿ ಕಾಲಿಡುವುದಿಲ್ಲವಾಗಿ ಪ್ರತಿಜ್ಞೆ ಮಾಡಿದರು.

**ವಿದ್ಯಾರ್ಥಿಗಳಿಗೆ ಸಂದೇಶ.**

ನಿಜಾಮು ರಾಜ್ಯದ ವೀರ ಹಿಂದು ವಿದ್ಯಾರ್ಥಿಗಳ ಸತ್ಯಾಗ್ರಹವನ್ನು ಅಭಿನಂದಿಸಿ ಅವರು ಜಯಶೀಲರಾಗಲು ಮದ್ರಾಸ ಪ್ರೆಸಿಡೆನ್ಸಿ ಸ್ಟೂಡಂಟ್ಸ ಫೆಡರೇಶನ್, ಆಂಧ್ರ ಯುನಿವ್ಹರ್ಸಿಟಿ ವಿದ್ಯಾರ್ಥಿ, ಪಂಡಿತ ಮಾಲವೀಜಿ, ಶ್ರೀ. ಘೋಪಟಕರ, ಶ್ರೀ. ಜಮುನಾದಾಸ ಮೆಹತಾ ಮೊದಲಾದ ಪ್ರಸಿದ್ಧ ಸಂಸ್ಥೆ ಮತ್ತು ಮುಂದಾಳುಗಳಿಂದ ಸಂದೇಶಗಳು ಬಂದಿವೆ.

**ಗೀತಾ ಪಟದ ಹೋಳಿ!**

ಹೈದರಾಬಾದಿನಲ್ಲಿ ಮುಸಲ್ಮಾನ್ ವಿದ್ಯಾರ್ಥಿಗಳು ಹಿಂದು ವಿದ್ಯಾರ್ಥಿಗಳ ವಸತಿ ಗೃಹದಲ್ಲಿ ಸೇರಿ ಗೋಡೆಗೆ ಅಂಟಿಸಿದ್ದ ಭಗವದ್ಗೀತೆಯ ವಾಕ್ಯಗಳ ಪಟವನ್ನು ಕಿತ್ತುಹಾಕಿ ಅದಕ್ಕೆ ಬೆಂಕಿ ಹಚ್ಚಿದರು.

ಮುಸಲ್ಮಾನ್ ವಿದ್ಯಾರ್ಥಿಗಳ ಸಭೆ ಸೇರಿ ಸರಕಾರದ ಧೋರಣವನ್ನು ಅಭಿನಂದಿಸಲಾಯಿತು. ವಂದೇ ಮಾತರಂ ಗೀತೆ ಹೇಳಲು ಸರಕಾರವು ಒಪ್ಪಿಗೆ ಕೊಟ್ಟಿದ್ದಾದರೆ ಹಿಂದು ವಿದ್ಯಾರ್ಥಿಗಳ ವಸತಿ ಗೃಹದಲ್ಲಿ ನುಗ್ಗಿ ರಕ್ತಪಾತ ಮಾಡಲಾಗುವುದೆಂಬ ಭಯಸೂಚನೆಯ ಭಾಷಣ ಜರುಗಿದವು.

ಪ್ರೊ. ಡಾ. ಕುರೇಶಿ ಇವರು ಈ ಸತ್ಯಾಗ್ರಹದಿಂದ ಹಿಂದು ಹುಳಗಳು ತಾವೇ ನಾಶವಾದುದು ಸಂತೋಷಕರವೆಂದು ಹೇಳಿದರು.

**ಪ್ರಿನ್ಸಿಪಾಲರ ಬುದ್ಧಿಯ ಬೆಳಕು!**

ಔರಂಗಾಬಾದ ಕಾಲೇಜಿನ ಪ್ರಿನ್ಸಿಪಾಲರು ವಿದ್ಯಾರ್ಥಿಗಳ ಸಭೆಯಲ್ಲಿ ಹೀಗೆ ಹೇಳಿದರು— "ಕಾಂಗ್ರೆಸ್ಸು ಜಾತಿವಿಶಿಷ್ಟ ಸಂಸ್ಥೆ. ಹೈದರಾಬಾದ ಸಂಸ್ಥಾನದಲ್ಲಿ ಕಾಂಗ್ರೆಸ್ ಪ್ರಾಂತಕ್ಕಿಂತ ಹೆಚ್ಚಿನ ವ್ಯಕ್ತಿ ಸ್ವಾತಂತ್ರ್ಯವಿದೆ. ಕಾಂಗ್ರೆಸ್ಸು ಒಂದಾದರೂ ವಿಶ್ವ ವಿದ್ಯಾಲಯವನ್ನು ಸ್ಥಾಪಿಸಿಲ್ಲ. ವರ್ಧಾ ಯೋಜನೆಯು ಹುಚ್ಚರು ಮಾಡಿದುದಾಗಿದೆ."

( ೯ ನೇ ಪುಟದಿಂದ ಬಂದುದು.)

ಅನ್ನುವರು. ಆದರೆ ಎಷ್ಟು ಜನರಿಗೆ ಈ ಅರ್ಥವು ಸಮ್ಮತವಿದೆ? ಕಾಂಗ್ರೆಸ್ಸಿಗರಿಗೆ ಆ ವಿಶ್ವಾಸವಿದ್ದರೆ ಖಾದಿಯೇ ಒಂದು ಬಗೆಯ ನಾಣ್ಯವಾಗುತ್ತಿತ್ತು. ಸ್ವಾತಂತ್ರ್ಯಕ್ಕೆ ಎಷ್ಟು ಹಣಕೊಟ್ಟರೂ ಅದು ತುಟ್ಟಿಯಲ್ಲ. ಅದು ಜೀವನದ ಉಸಿರು. ತಾನು ಬಾಳಬದುಕಬೇಕಾದರೆ ಮನುಷ್ಯನು ಏನನ್ನು ಕೊಡಲಾರನು? ಕಾಂಗ್ರೆಸ್ಸಿನ ಧ್ವಜವು ಸವಿನಯ ಕಾಯದೇ ಭಂಗದ ದ್ಯೋತಕವಲ್ಲ. ಆದರೆ ಸ್ವಾತಂತ್ರ್ಯದ ಪ್ರತೀಕವು. ಖಾದಿಯೇ ಅದರ ತಳಹದಿ. ಚರಖವು ಅದನ್ನು ಸಂರಕ್ಷಿಸುತ್ತದೆ. ಜಾತಿಯ ಐಕ್ಯವು ಎಷ್ಟು ಅವಶ್ಯವೆಂಬುದನ್ನು ಅದರೊಳಗಿನ ಬಣ್ಣಗಳು ತೋರ್ಪಡಿಸುತ್ತವೆ. ಇವೆಲ್ಲ ಸಾಧ್ಯವಾದರೆ ಸವಿನಯ ಕಾಯದೆಭಂಗ ಮತ್ತು ಅದರಿಂದುಂಟಾಗುವ ಕಷ್ಟನಷ್ಟಗಳ ಅವಶ್ಯವೇ ಇಲ್ಲ. ಖಾದಿಯನ್ನು ಧರಿಸುವದೆಂದರೆ ಸ್ವಾತಂತ್ರ್ಯ ಧರಿಸಿದಂತೆಯೇ ಎಂದು ನನ್ನ ಅಭಿಪ್ರಾಯ.

ಖಾದಿಯ ಈ ಅರ್ಥವು ಸಂಪೂರ್ಣವಾಗಿ ಸಮ್ಮತವಾದರೆ ಇದಕ್ಕಾಗಿ ಕಾಂಗ್ರೆಸ್ ಮಂತ್ರಿಗಳು ಅದೇಕೆ ಎಲ್ಲ ಮಂತ್ರಿಗಳು ಖಾದಿ ಕಾರ್ಯಕರ್ತರು ಮತ್ತು ಕಾಂಗ್ರೆಸ್ಸಿಗರು ಏನುಮಾಡಬೇಕೆಂಬುದನ್ನು ಹೇಳಬಲ್ಲೆನು.

ಖಾದಿ ಮತ್ತು ಗ್ರಾಮೋದ್ಯೋಗಗಳನ್ನು ನೋಡಿಕೊಳ್ಳುವುದಕ್ಕಾಗಿಯೇ ಓರ್ವ ಮಂತ್ರಿವರ್ಯನಿರಬೇಕು. ಇದಕ್ಕಾಗಿ ಒಂದು ಪ್ರತ್ಯೇಕ ಖಾತೆಯೇರ್ಪಾಟಾಗಬೇಕು. ಉಳಿದ ಖಾತೆಗಳು ಅದಕ್ಕೆ ಸಹಕಾರಮಾಡಬೇಕು. ಒಕ್ಕಲತನ ಖಾತೆಯು ಹತ್ತಿಯ ಬೆಳೆಯ ಕೇಂದ್ರೀಕರಣವನ್ನು ತಪ್ಪಿಸುವ ಯೋಜನೆಯನ್ನು ಮಾಡಬೇಕು. ಹಳ್ಳಿಗಾಗಿ ಬೇಕಾಗುವ ಹತ್ತಿಹೊಲಗಳನ್ನು ಗೊತ್ತುಪಡಿಸಬೇಕಲ್ಲದೆ ಪ್ರಾಂತಕ್ಕಾಗಿ ಎಷ್ಟು ಖಾದಿ ಬೇಕೆಂಬುದನ್ನು ಅಂದಾಜಮಾಡಬೇಕು. ಯೋಗ್ಯ ಕೇಂದ್ರಗಳಲ್ಲಿ ಅರಳೆಯನ್ನು ಸಂಗ್ರಹಿಸಿ ಹಂಚಬೇಕು. ಪ್ರಾಂತದಲ್ಲಿ ಸಿಕ್ಕುವ ಖಾದಿಯನ್ನುಕೊಳ್ಳುವದು ಮತ್ತು ತಮಗೆ ಬೇಕಾಗುವ ಬಟ್ಟೆಗಳನ್ನು ತಿಳಿಸುವ ಕಾರ್ಯವನ್ನು ಉಗ್ರಾಣ ಖಾತೆಯುವರು ಮಾಡತಕ್ಕದ್ದು. ರಾಟೆಯ ಸುಧಾರಣೆ ಮತ್ತು ಉಳಿದ ಉಪಕರಣ ಸುಧಾರಣೆಯ ಕೆಲಸವನ್ನು ಟೆಕ್ನಿಕಲ್ ಡಿಪಾರ್ಟಮೆಂಟಿನವರು ಮಾಡತಕ್ಕದು. ಈ ಎಲ್ಲ ಖಾತೆಗಳು ಅ. ಭಾ. ಚ. ಸಂಘ ಮತ್ತು ಅ. ಭಾ. ಗ್ರಾಮೋದ್ಯೋಗಗ ಸಂಘಗಳ ಕೂಡ ಯಾವಾಗಲೂ ಸಂಬಂಧವಿಟ್ಟುಕೊಂಡು ತಜ್ಞರಂತೆ ಅವರ ಸಲಹೆ ತೆಗೆದುಕೊಳ್ಳಬೇಕು. ಗಿರಣಿ ಬಟ್ಟೆಗಳ ಸ್ಪರ್ಧೆಯಿಂದ ಖಾದಿಯನ್ನು ಸಂರಕ್ಷಿಸುವ ಕಾರ್ಯವನ್ನು ಕಂದಾಯ ಮಂತ್ರಿಗಳು ಮಾಡತಕ್ಕದ್ದು.

ಖಾದಿಯ ಕಾರ್ಯಕರ್ತರು ಖಾದಿಯು ಹೆಚ್ಚು ತಾಳುವಂತೆ ಮೋಹಕವಾಗುವಂತೆ ಉಪಾಯಗಳನ್ನು ಯೋಚಿಸಬೇಕಲ್ಲದೆ ಅದು ಹೆಚ್ಚು ಲೋಕಪ್ರಿಯವಾಗುವಂತೆ ನೋಡಿಕೊಳ್ಳಬೇಕು. ತಮ್ಮ ಕೆಲಸದಲ್ಲಿ ಅತ್ಯಂತ ನಿರತರಾದವರಿಗೆ ಮತ್ತು ಯಾವಾಗಲೂ ಲಕ್ಷ್ಯಪೂರ್ವಕವಾಗಿ ಕೆಲಸಮಾಡುವವರಿಗೆ ದೇವರು ಸಹಾಯಮಾಡುವನು.

ಕಾಂಗ್ರೆಸ್ಸಿಗರು ಹಬ್ಬ ಹುಣ್ಣಿವೆಗೊಮ್ಮೆ ಖಾದಿಯನ್ನು ಹಾಕಿಕೊಳ್ಳದೆ ಯಾವಾಗಲೂ ಅದನ್ನು ಧರಿಸಿ ತಮ್ಮ ನೆರೆಹೊರೆಯವರಲ್ಲಿ ಖಾದಿ ಸಂದೇಶವನ್ನು ಬೀರಬೇಕು. ಅದೇ ರೀತಿಯಾಗಿ ಸ್ವತಃ ನೂಲು ತೆಗೆದು ಮತ್ತು ಖಾದಿಕಾರ್ಯಕರ್ತರಿಗೆ ಅವಶ್ಯವೆನಿಸಿದಾಗೆಲ್ಲ ಸಹಾಯಮಾಡಿಯೂ ಕಾಂಗ್ರೆಸ್ಸಿನವರು ಖಾದಿಪ್ರಚಾರ ಕಾರ್ಯವನ್ನು ಮಾಡಬಲ್ಲರು.

## ವಿಜಾಪುರ ಮುನಸಿಪಲ್ ಕೆಲ ಕಾಂಗ್ರೆಸ್ ಸದಸ್ಯರ ಶಿಸ್ತುಭಂಗ.

(ಓರ್ವ ಸುದ್ದಿಗಾರರಿಂದ)

ವಿಜಾಪುರ ತಾ. ೧೫ ನೆಯ ದಿವಸ ಸಂಜೆ ೬ ಗಂಟೆಗೆ ಮುನಸಿಪಾಲ್ಟಿಯ ಅಧ್ಯಕ್ಷರ ಚುನಾವಣೆಯು ಜರಗತಕ್ಕದ್ದಿತ್ತು. ಅದುದರಿಂದ ಮುಂಚಿತವಾಗಿಯೇ ಮುನಸಿಪಲ್ಲ ಸಭಾಗೃಹವು ಜನರಿಂದ ಕಿಕ್ಕಿರಿದು ತುಂಬಿತ್ತು. ಇಂದಿನ ಸಭೆಗೆ ೩೦ ಜನ ಸಭಾಸದರಲ್ಲಿ ೨೯ ಜನ ಸದಸ್ಯರು ರಾಜರಿದ್ದರು. ಕಾಂಗ್ರೆಸ್ ಪಕ್ಷದ ಶ್ರೀಸಂಗಪ್ಪ ಸಾವಳಗಿ ಇವರು ಮಾತ್ರ ಹಾಜರಿದ್ದಿದ್ದಿಲ್ಲ.

ಮೊದಲಿಗೆ ಅಧ್ಯಕ್ಷರಾದ ಶ್ರೀ. ಜಿ. ವ್ಹಿ. ಹಿರೇಮಠ ಇವರು ೩೫।೮ ಪ್ರಕಾರ ಎರಡು ವಿಷಯಗಳನ್ನು ತೆಗೆದುಕೊಳ್ಳಲಾಗಿದೆಯೆಂದು ಜಾಹೀರಪಡಿಸಿದರು. ನಂತರ ಅಧ್ಯಕ್ಷರ ಆಯ್ಕೆಯ ಕೆಲಸವು ಪ್ರಾರಂಭವಾಯಿತು. ಆಗ ಎಸ್. ಎಲ್. ಸುಗಂಧಿ ಇವರು ಅಧ್ಯಕ್ಷರ ಅವಧಿಯು ೧ ವರುಷ ಇರಬೇಕೆಂಬ ಸೂಚನೆಯನ್ನು ತಂದರು. ಆದಕ್ಕೆ ಶ್ರೀ. ಖುದನಾಪುರ ಇವರು ಅನುಮೋದನವನ್ನಿತ್ತರು. ಬಳಿಕ ಈ ಸೂಚನೆಯು ಸರ್ವಾನುಮತದಿಂದ ಪಾಸಾಯಿತು.

ಆ ಮೇಲೆ ನಿನ್ನಿನ ದಿವಸ ಕಾಂಗ್ರೆಸ್ಸ ಪಕ್ಷದ ಸಭೆಯಲ್ಲಿ ನಿರ್ಧರಿಸಿದಂತೆ ಕಾಂಗ್ರೆಸ್ ಪಕ್ಷದ ಲೀಡರರಾದ ಶ್ರೀ. ಗಣಪತಚಂದ ಶಹಾ ಇವರು ಅಧ್ಯಕ್ಷರಾಗಬೇಕೆಂದು ಶ್ರೀ. ಹಿಮ್ಮತಲಾಲ ಶೇಟಜಿ ಇವರು ಸೂಚನೆ ತಂದರು. ಅದಕ್ಕೆ ಶ್ರೀ. ಜೈಲಂಕರ ಇವರು ಅನುಮೋದವನ್ನಿತ್ತರು. ನಂತರ ಶ್ರೀ. ಠಾಕೂರದಾಸ ದರಬಾರ ಇವರು ಅಧ್ಯಕ್ಷರಾಗಬೇಕೆಂದು ಮುಸ್ಲಿಂಲೀಗದ ಸದಸ್ಯರಾದ ಖಾಬಾ ಪೀರಜಾದೆ ಇವರು ಸೂಚನೆ ತಂದರು. ಅದಕ್ಕೆ ಶ್ರೀ. ಬಾಬುರಾವ ಪವಾರ ಇವರು ಅನುಮೋದವನ್ನಿತ್ತರು. ಮತ ತೆಗೆದುಕೊಳ್ಳಲಾಗಿ ಶ್ರೀ. ಗಣಪತಚಂದ ಶಹಾ ಇವರಿಗೆ ೧೨ ಮತಗಳು, ಶ್ರೀ, ಠಾಕೂರದಾಸ ಇವರಿಗೆ ೧೬ ಮತಗಳು ಬಿದ್ದು ಲೀಗದವರು ಸೂಚಿಸಲ್ಪಟ್ಟ ಶ್ರೀ. ಠಾಕುರದಾಸ ಇವರು ಅಧ್ಯಕ್ಷರಾಗಿ ಆರಿಸಲ್ಪಟ್ಟರು.

ಕಾಂಗ್ರೆಸ್ಸ ಪಕ್ಷದ ೧೦ ಜನ ಸಭಾಸದರು ಕಾಂಗ್ರೆಸ್ಸ ಪಕ್ಷದಿಂದ ನಿಲ್ಲಿಸಲ್ಪಟ್ಟ ಹುರಿಯಾಳುಗಳಿಗೆ ಮತ ಕೊಡದೆ ಲೀಗದವರಿಂದ ಸೂಚಿಸಲ್ಪಟ್ಟ ಹುರಿಯಾಳುವಿಗೆ ಮತಕೊಟ್ಟದ್ದರಿಂದ ಕಾಂಗ್ರೆಸ್ಸ ಹುರಿಯಾಳು ಪರಾಭವ ಹೊಂದಿ ಲೀಗದವರು ಸೂಚಿಸಲ್ಪಟ್ಟ ಹುರಿಯಾಳುಗಳು ಯಶಸ್ವಿ ರೀತಿಯಿಂದ ಆರಿಸಿಬರಲು ಅವಕಾಶವುಂಟಾಯಿತು. ಇದನ್ನು ನೋಡಿ ಕೂಡಿದ ಜನಸಮೂಹದಲ್ಲಿ ಬಹಳ ಅಸಂತೋಷವುಂಟಾಯಿತು.

ಇಂದಿನ ಸಭೆಗೆ ಕಾಂಗ್ರೆಸ್ಸ ಪಕ್ಷದ ೨೩ ಸದಸ್ಯರು ಹಾಜರಿದ್ದರು. ಅವರಲ್ಲಿ ಶ್ರೀಯುತರುಗಳಾದ ೨, ನೀಲಕಂಠಪ್ಪ ಸುಗಂಧಿ, ೨. ಬಿ. ಡಿ. ಅಕ್ಕಿ, ೩. ಬಸಪ್ಪ ಪಾಯಣ್ಣವರ, ೪. ಲಕ್ಷ್ಮಣಪ್ಪ ಸುರಪುರ, ೫. ಹಿಮ್ಮತಲಾಲ ಶೇಟಜಿ, ೬ ಉಮರಸಾಹೇಬ ಜೈಲಂಕರ, ೭. ಭೀಮಣ್ಣ ಚೌದರಿ, ೮, ಶಂಕರ ಘೋರ್ಪ. ಮಲ್ಲಪ್ಪ ತಾಳಿಕೋಟೆ, ೧೦. ಗಣಪತಚಂದ ಶಹಾ, ೧೧. ಸೌ|| ಸಾವಿತ್ರಾಬಾಯಿ ಮಿರಜಿ, ೧೨. ಮಲಕಪ್ಪ ಖು. ದಾನಪುರ ಇವರು ಕಾಂಗ್ರೆಸ್ಸ ಪರವಾಗಿದ್ದ ಸೂಚನೆಗೆ ಅನುಕೂಲ ಮತ ಕೊಟ್ಟರು.

(೧೮ ನೆಯ ಪುಟಕ್ಕೆ ಸಾಗಿದೆ.)

# ಶ್ರೀ ನಂದೀಮಂಡಲದ ವೀರಶೈವ ಮಹಾಜನ ಸಂಘದ ಕಾ. ನಿರ್ವಾಹಕ ಕಮಿಟಿಯ ಕಾರ್ಯಕಲಾಪಗಳು.

ಕಳೆದ ತಾ. ೮-೧೨-೩೮ ರಲ್ಲಿ ಶ್ರೀ ಪ್ರಥಮ ನಂದೀ ಕ್ಷೇತ್ರದಲ್ಲಿ ಶ್ರೀ. ನಂದೀಮಂಡಲದ ವೀರಶೈವ ಮಹಾಜನ ಸಂಘದ ಕಾರ್ಯನಿರ್ವಾಹಕ ಕಮಿಟಿಯ ಸಂಘಾಧ್ಯಕ್ಷರಾದ ಶ್ರೀ. ನಾಗೂರ ಮಲ್ಲಪ್ಪ ಶೆಟ್ಟರ ಅಧ್ಯಕ್ಷತೆಯಲ್ಲಿ ಸಮಾವೇಶವಾಗಿದ್ದಿತು. ಸಭಾಪ್ರಾರಂಭದಲ್ಲಿ ಬಳ್ಳಾರಿ ಮದ್ರಾಸ ವೀರಶೈವ ವಿದ್ಯಾವರ್ಧಕ ಸಂಘದ ವೈಸ್ ಪ್ರೆಸಿಡೆಂಟರಾದ ಶ್ರೀ. ಎಸ್. ಎಮ್. ಸಿಂದಿಗಿ ಅವರು ವೀರಶೈವರ ಸಂಘ, ಭಾವ, ಐಕಮತ್ಯದ ಅವಶ್ಯಕತೆ ಸಮಾಜಸುಧಾರಣೆಯ ಮಾರ್ಗಗಳು ಮದ್ರಾಸು ವೀ. ವಿ. ವ. ಸಂಘದ ಉಗಮ ಮತ್ತು ಪ್ರಗತಿ ಮುಂತಾದ ವಿಷಯಗಳ ಬಗ್ಗೆ ಹೃದಯಂಗಮವಾಗಿ ಭಾಷಣಮಾಡುತ್ತಾ ಸದರಿ ಸಂಘದವರ ಸಹಾನುಭೂತಿಯು ನಂದ್ಯಾಲದಲ್ಲಿ ಹೊಸದಾಗಿ ಸ್ಥಾಪಿಸಲ್ಪಟ್ಟ ಶ್ರೀ ನಂದೀಮಂಡಲ ವೀರಶೈವ ಮಹಾಜನ ಸಂಘದ ಬಗ್ಗೆ ಇರುವುದೆಂದು ತಿಳುಹಿಸಿದರು. ಬಳಿಕ ಈ ಕೆಳಗೆ ಕಂಡ ತೀರ್ಮಾನಗಳು ಮಂಜೂರಾದವು.

(೧) ಅ. ಮದ್ರಾಸು ಪ್ರಾಂತದಲ್ಲಿರುವ ವೀರಶೈವರು "ಬಲಿಜ" "ಲಿಂಗಬಲಿಜ" "ಬಣಜಿಗ" ಮುಂತಾದ ಹೆಸರುಗಳಿಂದ ಸರಕಾರಿ ರಿಕಾರ್ಡುಗಳಲ್ಲಿ ವ್ಯವಹರಿಸಲ್ಪಡುವುದರಿಂದ ಈ ಸಮಾಜದ ಅಸ್ತಿತ್ವವೇ ಅಳಿದುಹೋಗಿದೆ. ಕಾರಣ ಸರಕಾರದವರು ಇನ್ನು ಮೇಲೆ ತಮ್ಮ ರಿಕಾರ್ಡುಗಳಲ್ಲಿ ಲಿಂಗಧಾರಿಗಳನ್ನೆಲ್ಲ "ವೀರಶೈವ" ಅಥವಾ "ಲಿಂಗಾಯತ" ಎಂಬ ಹೆಸರುಗಳಿಂದ ವ್ಯವಹರಿಸಬೇಕಾಗಿ ಈ ಸಂಘವು ಕೋರುತ್ತದೆ.

ಈ ತೀರ್ಮಾನವನ್ನು ಹುಬ್ಬಳ್ಳಿಯ ವೀರಶೈವ ಮಹಾಸಭೆಯಲ್ಲಿ ಸಹ ಮಂಜೂರುಮಾಡಿ ಎಲ್ಲಾ ಪ್ರಾಂತಿಕ ಸರಕಾರಗಳಿಗೆ ಕಳುಹಿಸಿಕೊಡಬೇಕಾಗಿ ಮಹಾಸಭೆಯವರನ್ನು ಈ ಸಭೆಯು ಪ್ರಾರ್ಥಿಸಿಕೊಳ್ಳುತ್ತದಲ್ಲದೇ ಮದ್ರಾಸ ವೀರಶೈವ ವಿದ್ಯಾವರ್ಧಕ ಸಂಘ ಮುಂತಾದ ಸಂಸ್ಥೆಗಳು ಸಹ ಇಂಥಾದ್ದೊಂದು ತೀರ್ಮಾನವನ್ನು ಸರಕಾರದವರಿಗೆ ತೀವ್ರವಾಗಿ ಕಳುಹಿಸಿಕೊಡಬೇಕಾಗಿ ಸೂಚಿಸುತ್ತದೆ.

(೨) ಯಾವ ಭರತಖಂಡದಲ್ಲಿ ಇರುವ ವೀರಶೈವರನ್ನು ಏಕೀಕರಣಗೊಳಿಸುವ ಪ್ರಯತ್ನಗಳನ್ನು ಕೈಕೊಳ್ಳುವುದಾಗಿಯೂ ಸಮಾಜ ಮಂದಿರವನ್ನು ದಹಿಸುತ್ತಿರುವ ಅಂತಃಕಲಹಾಗ್ನಿಯನ್ನು ಶಮನಗೊಳಿಸುವ ಯೋಚನೆಯನ್ನು ಕ್ಷಿಪ್ರದಲ್ಲಿಯೋ ಕೈಕೊಳ್ಳುವುದಾಗಿಯೂ ಮತ್ತು ವೀರಶೈವ ಸಮಾಜಕ್ಕೆ ಹೊಂದಿದವರಾಗಿದ್ದು ದೀಕ್ಷೆ ಇಲ್ಲದೇ ಇರುವ ಹಡಪದವರು ಮುಂತಾದ ಜನಾಂಗದವರಿಗೆ ವೀರಶೈವ ದೀಕ್ಷೆಯನ್ನಿತ್ತು ಅವರನ್ನು ಸಮಾಜದಲ್ಲಿ ಸೇರಿಸುವ ಬಗ್ಗೆ ಅನುಕೂಲತೆಗಳನ್ನು ಕಲ್ಪಿಸಿಕೊಡುವುದಾಗಿಯೂ ಈ ಸಂಘವು ಮಹಾಸಭೆಯವರನ್ನು ಪ್ರಾರ್ಥಿಸಿಕೊಳ್ಳುತ್ತದೆ.

(೩) ಕನ್ನಡ ಭಾಷೆಯಲ್ಲಿರುವ ಶ್ರೀ ಬಸವೇಶ್ವರನ ವಚನಗಳೆಂಬ ಅಮೋಘವಾದ ವಾಙ್ಮಯವನ್ನು ತೆಲಗು ಭಾಷೆಯಲ್ಲಿ ತುರ್ಜುಮೆಗೊಳಿಸಿ ಪ್ರಚಾರಮಾಡುವದು ಅತ್ಯಂತ ಅವಶ್ಯಕವೆಂದು ಈ ಸಂಘವು ಮಹಾಸಭೆಯವರಿಗೆ ವಿನಯಪೂರ್ವಕವಾಗಿ ಸೂಚಿಸುತ್ತದೆ.

(೪) ವೀರಶೈವ ಮಹಾಸಭೆಯ ಶಾಖೆಗಳನ್ನು ಆಂಧ್ರ ತಮಿಳು ನಾಡುಗಳಲ್ಲಿ ಸಹ ಸ್ಥಾಪಿಸಿ ತನ್ಮೂಲಕ ವೀರಶೈವ ಮಹಾಸಭೆಯ ಸಂದೇಶವು ಎಲ್ಲ ಭಾಗಗಳಿಗೂ ಮುಟ್ಟುವಂತೆ ಮಾಡಬೇಕಾಗಿ ಈ ಸಂಘವು ಮಹಾಸಭೆಯವರನ್ನು ಪ್ರಾರ್ಥಿಸಿಕೊಳ್ಳುತ್ತದೆ.

(೫) ಶ್ರೀಶೈಲ ಕ್ಷೇತ್ರವು ಒಂದಾನೊಂದು ಕಾಲದಲ್ಲಿ ವೀರಶೈವ ಧರ್ಮದ ಕೇಂದ್ರಸ್ಥಾನವಾಗಿದ್ದು ವೀರಶೈವರ ಆಡಳಿತೆಗೆ ಒಳಪಟ್ಟಿದ್ದಿತು. ಅಲ್ಲಿಗೆ ಬರುವ ಯಾತ್ರಿಕರಲ್ಲಿ ವೀರಶೈವರೇ ಬಹುಸಂಖ್ಯಾಕರಾಗಿರುವರು. ಕಾರಣ ವೀರಶೈವ ಯಾತ್ರಿಕರಿಗೆ ಬೇಕಾದ ಸೌಕರ್ಯಗಳನ್ನು ಒದಗಿಸಿಕೊಡುವುದೂ ಅನುಜನವಾಗಿ ಶ್ರೀ ಕ್ಷೇತ್ರದಲ್ಲಿ ಅವರಿಗೆ ದೊರೆಯುತ್ತಬಂದಿರುವ ಹಕ್ಕುಸಂಭಾವನೆಗಳನ್ನು ನಡೆಯಿಸಿಕೊಂಡುಹೋಗಬೇಕಾಗಿ ಶ್ರೀಶೈಲ ಕ್ಷೇತ್ರ ವ್ಯವಸ್ಥಾಪಕ ಕಮಿಟಿಯವರಿಗೆ ಈ ಸಂಘವು ಸೂಚಿಸುವುದಲ್ಲದೇ ಈ ಬಗ್ಗೆ ಒಂದು ಗೊತ್ತುವಳಿಯನ್ನು ಮಂಜೂರುಮಾಡಿ ಸದರಿ ಕಮಿಟಿಯವರಿಗೆ ಕಳುಹಿಸಿಕೊಡಬೇಕಾಗಿ ಮಹಾಸಭೆಯವರನ್ನು ಪ್ರಾರ್ಥಿಸಿಕೊಳ್ಳುತ್ತದೆ.

(೬) ಹುಬ್ಬಳ್ಳಿಯಲ್ಲಿ ಜರುಗುವ ವೀರಶೈವ ಮಹಾಸಭೆಗೆ ಶ್ರೀ ನಂದೀಮಂಡಲ ವೀರಶೈವ ಮಹಾಜನ ಸಂಘದ ವತಿಯಿಂದ ಈ ಕೆಳಗೆ ಕಂಡ ಸದಸ್ಯರನ್ನು ಕಳುಹಿಸಿಕೊಡುವುದಾಗಿ ಈ ಸಂಘವು ನಿರ್ಧರಿಸುತ್ತದೆ. ೧. ಶ್ರೀ. ನಾಗೂರ ಮಲ್ಲಪ್ಪ ಶಟ್ಟರು ಅಧ್ಯಕ್ಷರು, ೨. ಶ್ರೀ. ಉಪ್ಪುನಾಗ ಸಂಗಪ್ಪನವರು ಕಾರ್ಯದರ್ಶಿ, ೩. ಎ. ಬಾಬಯ್ಯನವರು, ೪. ಶ್ರೀ.ತಾಳೂರು ವೀರಪ್ಪನವರು, ೫. ಟಿಪ್ಪೆ ನಾಗಪ್ಪನವರು, ೬. ಜಂಗಂ ರಾಚಯ್ಯನವರು, ೭. ಆರ್. ಪಿ. ಓಬಳರೆಡ್ಡಿನವರು, ೮. ಶ್ರೀ. ಸೋಮಿಶೆಟ್ಟಿ ಬಸಪ್ಪನವರು.

ಕಾರ್ಯದರ್ಶಿ

ಶ್ರೀ ನಂದೀಮಂಡಲ ವೀ. ಮಹಾಜನ ಸಂಘ

ನಂದ್ಯಾಲ, ಕರ್ನೂಲು ಜಿಲ್ಲಾ

## ೨೩ ನೇ ಕರ್ನಾಟಕ ಸಾಹಿತ್ಯ ಸಮ್ಮೇಳನ ಬಳ್ಳಾರಿ.

೨೩ ನೆಯ ಕರ್ನಾಟಕ ಸಾಹಿತ್ಯ ಸಮ್ಮೇಳನವು ಇದೇ ಡಿಶಂಬರ್ ತಾ. ೨೯, ೩೦, ಮತ್ತು ೩೧ ರಲ್ಲಿ ಶ್ರೀ ಚನ್ನಬಸವೇಶ್ವರ ನಾಟಕ ಭವನದಲ್ಲಿ ಜರುಗುವುದು.

ಉದ್ಘಾಟಕರು— ಶ್ರೀಮಂತ ಸಂಡೂರ ರಾಜಾಸಾಹೇಬರು.
ಅಧ್ಯಕ್ಷರು- ಶ್ರೀ. ರಂಗನಾಥ ದಿವಾಕರ ಎಂ. ಎ. ಎಲ್‌ಎಲ್. ಬಿ.
ಸ್ವಾ. ಅಧ್ಯಕ್ಷರು— ಶ್ರೀ. ವಿದ್ವಾನ್ ವೈ. ನಾಗೇಶ ಶಾಸ್ತ್ರಿಗಳು
ನಾಟಕಕಲಾಗೋಷ್ಠಿಯ ಉದ್ಘಾಟಕರು— ಪ್ರೊ. ಆರ್. ವ್ಹಿ. ಜಾಗೀರದಾರ.
ಅಧ್ಯಕ್ಷರು— ಕೆ. ಶಿವರಾಮ ಕಾರಂತರು.
ಸ್ವಾಗತಾಧ್ಯಕ್ಷರು— ಎಸ್. ಆರ್. ವಟ್ಟಂ.
ಕವಿಗೋಷ್ಠಿಯ ಸ್ವಾಗತಾಧ್ಯಕ್ಷರು— ಶ್ರೀ. ವಿದ್ವಾನ್ ಕೆ. ಎಂ. ಕಂಬಸವ ಶಾಸ್ತ್ರಿಗಳು.

ಸಾಹಿತ್ಯಸಮ್ಮೇಲನಕ್ಕೆ ದಯಮಾಡಿಸುವ ಪ್ರತಿನಿಧಿಗಳಿಗೆ ಊಟ, ವಸತಿ, ವಾರ್ಡ್‌ಲಾ ಹೈಸ್ಕೂಲಿನಲ್ಲಿ ಏರ್ಪಾಟುಮಾಡಲಾಗಿದೆ. ವೀರಶೈವರಿಗೂ ಬ್ರಾಹ್ಮಣರಿಗೂ ಪ್ರತ್ಯೇಕ ಭೋಜನಶಾಲೆಯುಂಟು. ಪ್ರತಿನಿಧಿಗಳಾಗಿ ಬರುವ ಮಹಾಶಯರು ೫ ರೂ. ಗಳನ್ನು ಸಮ್ಮೇಳನದ ಕೋಶಾಧ್ಯಕ್ಷರಾದ ಶ್ರೀ. ತೊಗರಿ ವೀರಮಲ್ಲಪ್ಪನವರಿಗೆ ಕಳಿಸಬೇಕು.

—ಕಾರ್ಯದರ್ಶಿಗಳು.

# ಸುಬೋಧ ಮಾಲಾ.

(ಲೇ.- ಸುಕ್ಷೇತ್ರ ಬಂಥನಾಳ ಶಿವಯೋಗಿಗಳು.)

ಪುರುಷರಾಗಲೀ ಸ್ತ್ರೀಯರಾಗಲೀ, ವಿವಾಹಿತರೇ ಆಗಲಿ ಅವಿವಾಹಿತರೇ ಆಗಲಿ ಸಮಾಜದಲ್ಲಿಯೇ ಇದ್ದುಕೊಂಡು ಪ್ರಪಂಚದೊಳಗಿನ ತಮ್ಮ ತಮ್ಮ ಕರ್ತವ್ಯ ಕರ್ಮಗಳನ್ನು ಧರ್ಮದಿಂದಲೂ ನೀತಿಯಿಂದಲೂ ಮಾಡಲಪೇಕ್ಷಿಸುವ ಕರ್ತವ್ಯ ಶಕ್ತಿಯುಳ್ಳ ಮಹಾಪುರುಷರಿಗೆ ಕೆಳಗೆ ಬರೆದಿರುವ ಸುಬೋಧೆಯು ಅಲ್ಪಮಟ್ಟಿಗಾದರೂ ಸಹಾಯವಾಗಲಿಕ್ಕಿಲ್ಲವೆ?

(೧) ಧರ್ಮವೆಂದರೇನು?

ನ್ಯಾಯವಾದ ಮಾರ್ಗದಲ್ಲಿ ಸ್ವತಃ ನಡೆಯುವದು ಹಾಗು ಎರಡನೆಯವರನ್ನು ನಡೆಯುವಂತೆ ದೀರ್ಘ ಪ್ರಯತ್ನ ಮಾಡುವದು. ಇದೇ ಎಲ್ಲ ಧರ್ಮಗಳಲ್ಲಿ ಶ್ರೇಷ್ಠವಾದ ಧರ್ಮವು.

(೨) ಪಾಪವನ್ನು ಕಳೆದುಕೊಳ್ಳುವ ಬಗೆ ಹೇಗೆ?

ಹಿಂದೆ ಮಾಡಿದ ದೋಷವನ್ನು ಕಳೆದುಕೊಳ್ಳಲಿಕ್ಕೆ ಸದ್ಯಃ ಸದಾಚಾರದಿಂದ ನಡೆಯುವದೇ ಮೇಲಾದ ಸಾಧನವಾಗಿದೆ.

(೩) ಬಿಡತಕ್ಕ ಮಾತುಗಳಾವವು?

ತತ್ವ ರಹಿತವಾದ ವಿಚಾರವು, ವಿಚಾರ ರಹಿತವಾದ ಭೈನಿಯು ಶ್ರಮ ರಹಿತವಾದ ಶ್ರೀಮಂತಿಕೆಯು, ಶೀಲ ರಹಿತವಾದ ಶಿಕ್ಷಣವು, ನೀತಿ ರಹಿತವಾದ ವ್ಯವಹಾರವು ಮತ್ತು ಮನುಷ್ಯತ್ವವಿಲ್ಲದ ಪಂಡಿತತ್ವವು ಈ ಮೊದಲಾದವುಗಳನ್ನು ಅವಶ್ಯವಾಗಿ ಬಿಡತಕ್ಕದ್ದು.

(೪) ಸಾಮರ್ಥ್ಯವು ಎಲ್ಲಿದೆ?

ಮಾತಾಡುವದಕ್ಕಿಂತ ಮಾಡಿ ತೋರಿಸುವದರಲ್ಲಿಯೇ ನಿಜವಾದ ಸಾಮರ್ಥ್ಯವಿರುವದು.

(೫) ನಿಜವಾದ ಮೂರ್ಖನಾರು?

ನಾನು ಎಲ್ಲವನ್ನೂ ಬಲ್ಲೆನೆಂದೆನ್ನುವವನು ನಿಜವಾದ ಮೂರ್ಖನಿರುತ್ತಾನೆ.

(೬) ಮೂರ್ಖ ಹೇಗಾಗುತ್ತಾನೆ?

ಎರಡನೆಯವರು ಮೂರ್ಖರಿದ್ದಾರೆಂದು ಸಿದ್ಧಮಾಡುವ ಹವ್ಯಾಸದಲ್ಲಿಯೇ ಹಾಗೂ ಪ್ರಯತ್ನದಲ್ಲಿಯೇ ಸ್ವತಃ ಮೂರ್ಖನಾಗುವ ಪ್ರಸಂಗವನ್ನು ತಂದುಕೊಳ್ಳುತ್ತಾನೆ.

(೭) ಮಸ್ತಕವನ್ನು ಬಗ್ಗಿಸಬೇಕೆ?

ಹೌದು ಬಗ್ಗಿಸಬೇಕು. ಆದರೆ ಧನದ ಮುಂದೆ ಅಲ್ಲ. ಗುಣದ ಮುಂದೆ ಬಗ್ಗಿಸಬೇಕು.

(೮) ದೊಡ್ಡಿಸ್ತನವು ಹೇಗೆ ಬರುತ್ತದೆ?

ಎರಡನೆಯವರಿಗೆ ದೊಡ್ಡಿಸ್ತನ ಕೊಡುವುದರಿಂದ ತನಗೆ ದೊಡ್ಡಿಸ್ತನವು ಬರುತ್ತದೆ. ದುಡ್ಡಿನಿಂದಲ್ಲ.

(೯) ಪ್ರತಿ ಪಕ್ಷದವರನ್ನು ಗೆದೆಯುವುದು ಹೇಗೆ?

ಪ್ರತಿಪಕ್ಷವನ್ನು ಹಣ್ಣಿಗೆ ತರುವ ಉಪಾಯವೆಂದರೆ ಸ್ವಪಕ್ಷದಲ್ಲಿಯ ಭೇದವನ್ನು ಹೋಗಲಾಡಿಸಿ ಒಂದಾಗುವಂತೆ ಮಾಡುವದು.

(೧೦) ತಾನು ಉಳಿಯಲು ಮಾಡಬೇಕೇನು?

ವಿಶ್ವಾಸವನ್ನು ಉಳಿಸಿಕೊಳ್ಳಬೇಕು. ವಿಶ್ವಾಸವೊಂದು ಉಳಿಯದಿದ್ದರೆ ಉಳಿದವುಗಳಾವವೂ ಉಳಿಯಲು ಶಕ್ಯವಿಲ್ಲ.

(೧೧) ಗಳಿಸುವದಾವದು?

ಎಲ್ಲದಕ್ಕಿಂತ ಮೊದಲು ಗಳಿಸುವ ಗಳಿಕೆಯು ಜ್ಞಾನವು.

(೧೨) ಜ್ಞಾನವೆಂದರೇನು?

ಸುಖವಾಗಲಿ ದುಃಖವಾಗಲಿ ಒದಗಿದಾಗ ಒಂದೇ ರೀತಿಯಿಂದ ಮನಸ್ಸನ್ನಿಡುವದೇ ಜ್ಞಾನವು.

(೧೩) ಸತ್ಕರ್ಮವಾವುದು?

ಯಾವ ಕರ್ಮವನ್ನು ಮಾಡುವುದರಿಂದ ಮನುಷ್ಯಾದಿ ಸಕಲ ಪ್ರಾಣಿಗಳಿಗೂ ಸುಖ ಶಾಂತಿಗಳು ದೊರೆಯುವವೋ, ಅದೇ ಸತ್ಕರ್ಮವು.

(೧೪) ತಪಸ್ಸೆಂದರೇನು?

ತನ್ನ ದೇಹ ಮಾತು ಮನಗಳನ್ನು ಯೋಗ್ಯವಾದ ಕಾರ್ಯಗಳಲ್ಲಿ ತೊಡಗಿಸುವದು ಹಾಗು ಅಯೋಗ್ಯ ಕಾರ್ಯಗಳಿಂದ ಬಿಡಿಸುವದು ಇದೇ ಹೆಚ್ಚಾದ ತಪಸ್ಸಾಗಿದೆ.

(೧೫) ಮೃದುವಚನವೆಂದರೇನು?

ಯಾರೊಬ್ಬರ ಮುಖಸ್ತುತಿ ಮಾಡುವದು ಮೃದುವಚನವಲ್ಲ. ಯೋಗ್ಯವಾದ ಮಾತುಗಳಿಂದ ಸತ್ಯವನ್ನು ಪ್ರತಿಪಾದಿಸುವದೇ ಮೃದುವಚನವಾಗಿದೆ.

(೧೬) ಯಾವದರ ಮೌಲ್ಯವು ಹೆಚ್ಚು?

ವಸ್ತ್ರಭೂಷಣ, ರತ್ನ ಭೂಷಣ, ವಿದ್ಯಾ ಭೂಷಣ ಈ ಮೊದಲಾದವುಗಳಿಗಿಂತ ಹೃದಯ ಪವಿತ್ರತೆಯ ಮೌಲ್ಯವೇ ಹೆಚ್ಚಾದದ್ದು.

(೧೭) ಎಷ್ಟು ಉಣ್ಣಬೇಕು?

ಬೇಕಾದಷ್ಟು ಊಟಮಾಡು. ಆದರೆ ಪಚನವಾಗಲು ಎಷ್ಟು ಶಕ್ಯವಿದೆಯೋ ಅಷ್ಟು ಮಾತ್ರ.

(೧೮) ಸ್ವಾತಂತ್ರ್ಯವೆಂದರೇನು?

ಸ್ವಾತಂತ್ರ್ಯತೆ ಅಂದರೆ ಸ್ವೇಚ್ಛಾಚಾರವಲ್ಲ. ತನ್ನ ಮನಸ್ಸು ತಾನು ಹೇಳಿದಂತೆ ಕೇಳುತ್ತಿರುವದೇ ನಿಜವಾದ ಸ್ವತಂತ್ರತೆಯು.

---

## ಗದಗ ತಾಲೂಕು ಪೈಕಿ ಹಳ್ಳೀಕೇರಿ.

ವೀರಶೈವ ತರುಣ ಸಂಘದಿಂದ.

ನಮ್ಮ ವೀರಶೈವ ತರುಣ ಸಂಘದ ಪ್ರಚಾರಕರಾದ ಶ್ರೀ. ಬಸವಶೆಟ್ಟೆಪ್ಪನವರು ಬೆಲ್ಲದ ಇವರ ಆಮಂತ್ರಣದ ಪ್ರಕಾರ ಸದರಿ ಸಂಘದ ಸದಸ್ಯರುಗಳು ತಮ್ಮ ಭಜನಾಮಂಡಳ ಸಮೇತವಾಗಿ ಹೊಸಪೇಟೆ ತಾಲೂಕ ಪೈಕಿ ಚಿತ್ರವಾಡಿಗಿ ಶ್ರೀ ಕಲ್ಮೇಶ್ವರ ರಥೋತ್ಸವಕ್ಕೆ ಹೋಗಿ ಧಾರ್ಮಿಕ, ಸಾಮಾಜಿಕ, ನೈತಿಕ, ಭಜನಾ ಪದ್ಯಗಳನ್ನು ಪ್ರೇಕ್ಷಕರಿಗೆ ಪರಿಣಾಮಕಾರವಾಗುವಂತೆ ಹಾಡಿ ತೋರಿಸಿದರು. ಮತ್ತು ಉತ್ಸವ ಕಾರ್ಯದಲ್ಲಿ ನಮ್ಮ ಸಂಘದ ಸದಸ್ಯರುಗಳು ಒಳ್ಳೇ ಶಿಸ್ತಿನಿಂದ ಭಾಗವಹಿಸಿದ್ದರು. ಮತ್ತು ಇಲ್ಲಿಯ ಕರ್ನಾಟಕ ವ್ಯಾಯಾಮ ಶಾಲೆಯ ಆಶ್ರಯದಾತರೂ, ಆಗರ್ಭ ಶ್ರೀಮಂತರೂ ನವತರುಣರೂ ಆದಂಥ ಶ್ರೀಮಾನ್ ಜವಳಿ ಮಹಂತಪ್ಪನವರು ನಮ್ಮ ಊರ ಹರಿಜನ ಹುಡುಗರ ವಿದ್ಯಾಭಿವೃದ್ಧಿಗೂ ಮತ್ತು ಚರಕಾ ಸ್ಥಾಪನೆಗೂ ೨೦ ರೂ. ಗಳನ್ನು ಉಚಿತವಾಗಿ ಕೊಟ್ಟಿರುತ್ತಾರೆ. ಮತ್ತು ಇದೇ ಪ್ರಕಾರ ಪ್ರತಿವರ್ಷ ಜರುಗುವ ಮೇಲ್ಕಂಡ ಜಾತ್ರೆಯ ಉತ್ಸವದಲ್ಲಿ ಭಾಗ ವಹಿಸಲು ನಮ್ಮ ವೀರಶೈವ ತರುಣ ಸಂಘಕ್ಕೆ ಪ್ರೋತ್ಸಾಹ ಕೊಡುವರೆಂದು ನಂಬಿದ್ದೇವೆ. ಇದಲ್ಲದೆ ನಮ್ಮ ಸಂಘದ ಪ್ರಚಾರಕರಾದ ಶ್ರೀ. ಬೆಲ್ಲದ ಬಸವಶೆಟ್ಟೆಪ್ಪನವರು ನಮ್ಮ ಭಜನಾ ಸಂಘಕ್ಕೆ ೨॥ ರೂ. ಅಂದಾಜ ಕಿಮ್ಮತ್ತುಳ್ಳ ಕೈ ನೂಲಿನ ಖಾದಿ ಉಡುಪುಗಳನ್ನು ಉಚಿತವಾಗಿ ಕೊಟ್ಟಿರುತ್ತಾರೆ.

ಮೇಲ್ಕಂಡ ಮಹಾಶಯರು ನಮ್ಮ ಹಳ್ಳಿಯ ಸಂಘಕ್ಕೆ ಆಗದ ಕಳಕಳಿಯಿಂದ ಉದಾರಾಶ್ರಯ ಕೊಟ್ಟಬಗ್ಗೆ ಸಂಘದ ನಾವುಗಳೆಲ್ಲರೂ ಋಣಿಯಾಗಿದ್ದೇವೆ. ಜಗದೀಶ್ವರನು ಮೇಲೆ ಕಾಣಿಸಿದ ಮಹನೀಯರಿಗೆ ಆಯುರಾರೋಗ್ಯವನ್ನು ಕೊಟ್ಟು ಕಾಪಾಡಲೆಂದು ಅನನ್ಯ ಭಾವದಿಂದ ಬೇಡುತ್ತೇವೆ.

ಕಾರ್ಯದರ್ಶಿ.

## ದರ್ಶನವನಿತ್ತೆ.

[ ಕರ್ನಾಟಕಾಂಬೆ ನೀ ಧನ್ಯ ಎಂಬಂತೆ ]

ವಂದಿಪೆನು ಗಾಂಧಿಯೆ ತಾತಯ್ಯ ಗಾಂಧಿ।
ಪ್ರೇಮದಿಂ ನುತಿಸುವೆನು ಪುಣ್ಯಾತ್ಮ ಗಾಂಧಿ ‖ಪ‖

ಮದವಮಾತ್ಸರ್ಯಾದಿ ಗುಣಗಳಳಿದಿರುವೆ।
ಮುದದಿ ಶಾಂತಿಯ ಸತ್ಯ ಧರ್ಮ ನೀನಿರುವೆ ‖ಅ-ಪ‖

ನಿನ್ನ ನೋಡಿದೊಡೆನಗೆ ಪ್ರೇಮವೆನಿಸುವದು।
ಬನ್ನವದು ತಾನೆಲ್ಲ ಜವದಿ ಪೋಗುವದು‖
ಸನ್ನುತ ಮಹಾತ್ಮನೆ ವಿಶ್ವ ವಂದಿತನೆ।
ಉನ್ನತ ಪದವಿಯನು ಪಡೆದವನು ನೀನೆ ‖೧‖

ಹರಿಜನರ ಮೇಲೆಷ್ಟು ಮಮತೆಯನು ತೋರಿಸುವೆ।
ಸರಳಾದ ನುಡಿಯನೆ ನೀನು ನುಡಿತಿರುವೆ‖
ತರುಣರಂದದಿ ಹುರಪಿನಿಂದ ದುಡಿತಿರುವೆ।
ಪರಮ ಯೋಗಿಯೆ ಜಗದಿ ಪೂಜ್ಯನಾಗಿರುವೆ ‖೨‖

ಖಾದಿಯ ವಸ್ತ್ರವನು ಪ್ರೇಮದಿಂ ಧರಿಸುವೆ।
ಭೇದ ತೊಡಕುಗಳನೆ ಬೇಗ ಹರಿಸಿರುವೆ‖
ಮೇದಿನಿಗೆ ಮಿಗಿಲಾದ ಪುರುಷ ನೀನಾಗಿರುವೆ।
ಹೋದ ಸ್ವಾತಂತ್ರ್ಯವನು ತಿರುಗಿ ತರುತಿರುವೆ ‖೩‖

ಕಡುಬಂಟ ರಾಜೇಂದ್ರ ವಲ್ಲಭಾದಿಗಳಿಂದ।
ಗಡಿನಾಡ ಗಾಂಧಿ ಕಸ್ತೂರಿದೇವಿಗಳಿಂದ‖
ಒಡಗೂಡಿ ದರ್ಶನವನಿತ್ತೆ ನನಗಂದು।
ಬೆಡಗಿನಿಂ ತುಂಬಿರುವ ಕುಮರಿಯಾಶ್ರಮದಿ ‖೪‖

—ಶ್ರೀ ಕುಮಾರ ಬಸವಪೂರ.

## ನಾವದಗಿ.

—o—

ಪ್ರತಿವರ್ಷದ ಪದ್ಧತಿಯಂತೆ ಕಳೆದ ಮಾರ್ಗಶಿರ ಶು. ೮, ೯, ೧೦ ಮತ್ತು ೧೧ ಈ ನಾಲ್ಕು ದಿವಸ ಭಾಲಕಿ ತಾಲೂಕಿನ ನಾವದಗಿ ಗ್ರಾಮದಲ್ಲಿ ಶ್ರೀ ಶರಣವರೇಣ್ಯರಾದ ರೇವಪ್ಪಯ್ಯನವರ ಯಾತ್ರಾ ಮಹೋತ್ಸವವು ಅತ್ಯಂತ ಉತ್ಸಾಹದಿಂದ ಕೊನೆಗಂಡಿತು.

ಈ ಸಾರೆ ಸಿಕಂದರಾಬಾದಿನ ಪಂಡಿತ ಶ್ರೀ. ವೀರಭದ್ರಶಾಸ್ತ್ರಿ ಬಿದರಿ ಮಠ ಇವರು ವಿದ್ವತ್‌ಪೂರ್ಣವಾದ ಭಾಷಣವನ್ನು ಮಾಡಿ ಜನಗಳನ್ನು ಜಾಗೃತಗೊಳಿಸಿದರು. ಉದಗೀರ ಸುಪ್ರಸಿದ್ಧ ವಕೀಲರಾದ ಶ್ರೀ. ಸಂಗ್ರಾಮಪ್ಪನವರು ಒಂದು ಭಾಷಣ ಮಾಡಿ ಜನಜಾಗೃತಿಯನ್ನುಂಟುಮಾಡಿದರು. ಇದಲ್ಲದೆ ಭಾಲಕಿಯ ಶ್ರೀ. ನಾಗನಾಥರಾವ, ಪ್ರಭಾಕರ, ರೇವಣಸಿದ್ಧಪ್ಪ ಮೇತ್ರಿ ಮೊದಲಾದವರು ಭಾಷಣ, ಕೀರ್ತನ, ಭಜನ ಮಾಡಿದರು. ಹಾಲಿಖೇಡದ ವೀರಶೈವ ತರುಣ ಸಂಘದವರು ಜಾತ್ರೆಯಲ್ಲಿ ಗದ್ದಲವಾಗದಂತೆ ನೋಡಿಕೊಳ್ಳುತ್ತಿದ್ದರು. ರಥೋತ್ಸವದಲ್ಲಿ ಕೆಲವು ಪುಂಡ ಮುಸಲ್ಮಾನರು ಗದ್ದಲ ಮಾಡುವವರಿದ್ದರು. ಸ್ವಯಂ ಸೇವಕರ ಮುಂಜಾಗ್ರತೆಯಿಂದ ಆ ದುಷ್ಟರಿಗೆ ತಮ್ಮ ಕಾರ್ಯ ಸಾಧಿಸುವದು ಶಕ್ಯವಾಗಲಿಲ್ಲ.

ಓರ್ವ ಪ್ರತ್ಯಕ್ಷದರ್ಶಿ.

## ಸಾದರ ಸ್ವೀಕಾರ.

ಗುಳೇದಗುಡ್ಡದ ಶ್ರೀ ಗುರುಸಿದ್ಧೇಶ್ವರ ಮಠದ ಶ್ರೀ ಪಟ್ಟಾಧ್ಯಕ್ಷ ಸ್ವಾಮಿಗಳ ಪಟ್ಟಾಭಿಷೇಕ ಮಹೋತ್ಸವದ ಕಾಲಕ್ಕೆ ಶರಣ ಸಂದೇಶ ಪತ್ರಿಕೆಯ ಸಹಾಯಾರ್ಥವಾಗಿ ತೆಗೆದಿಟ್ಟ ೫ ರೂ. ಗಳು ಆ ಮಠದ ಏಜಂಟರಿಂದ ನಮ್ಮ ಕಡೆಗೆ ಬಂದುದನ್ನು ಕೃತಜ್ಞತಾಪೂರ್ವಕ ಸ್ವೀಕರಿಸಿದ್ದೇವೆ.

ಎಲೇರಿ ಶ್ರೀಮಂತ ಬಸಪ್ಪ ಶಿವರಾಯ ಇವರು ತಮ್ಮ ವಿವಾಹದ ಕಾಲದಲ್ಲಿ ಶರಣ ಸಂದೇಶದ ಸಹಾಯಾರ್ಥವಾಗಿ ಕಳಿಸಿದ ೩ ರೂ. ಗಳನ್ನು ಕೃತಜ್ಞತಾಪೂರ್ವಕ ಸ್ವೀಕರಿಸಿದ್ದೇವೆ.

—ಮ್ಯಾನೇಜರ್

## ಮೈಲೇಶ್ವರ.

ಮೂದಲೀ ವಿಧವಾ ವಿವಾಹ. ಶ್ರೀಮತಿ ಲಕ್ಷ್ಮೀಬಾಯಿ ಎಂಬ ವಿಧವಾ ಸ್ತ್ರೀಯಳನ್ನು ನಾಗೂರದ ಶ್ರೀ. ಚೆನ್ನಬಸವಯ್ಯ ಎಂಬವರು ಇಲ್ಲಿಯ ಬಸವೇಶ್ವರ ಗುಡಿಯಲ್ಲಿ ಶ್ರೀ. ಅಗ್ನಿ ಮಠದ ಚರಮೂರ್ತಿಗಳ ಪಾದ ಕೃಪೆಯಲ್ಲಿ ಲಗ್ನವಾದರು. ದಂಪತಿಗಳು ವಿಷಮ ಪಂಗಡದವರು. ಕನ್ಯೆಯು ಪಂಚಮಶಾಲಿ ವರ್ಗದವಳು. ವರನೂ ಅಯ್ಯನವರ ವರ್ಗದವನು. ಹೀಗೆ ಲಗ್ನವಾಗುವುದು ರೂಢಿಗೂ ಧರ್ಮಕ್ಕೂ ವಿರುದ್ಧವೆಂದು ಜನರಲ್ಲಿ ದುಗುಡುಬಿದ್ದು ಹುಯಿಲೆಬ್ಬಿಸಿದರು. ಆದರೆ ತಾಲೂಕು ಕಾಂ. ಕ. ಅಧ್ಯಕ್ಷರಾದ ತಾಳಿಕೋಟಿ ಮಠದ ಶ್ರೀ. ಶಿವಬಸವ ದೇವರು ತಮ್ಮ ಸಂಪೂರ್ಣ ಒಪ್ಪಿಗೆ ಕೊಟ್ಟದ್ದರಿಂದ ಜನರು ಪಿಟ್ಟೆನ್ನದಾದರು.

ವೀರಭದ್ರಯ್ಯ ಪಾಟೀಲ.

# ಗದಗ.

## ಹಾಲಕೆರೆ ಶ್ರೀ ಅನ್ನದಾನಿ ಸ್ವಾಮಿಗಳ (ಹಡಗಲಿ) ಮಠದಲ್ಲಿ ಸನ್ಮಾನ ಸಮಾರಂಭವು.

ಮೆ|| ಬಿ. ಎಸ್. ಚಿಟ್ಟಿ ಫರ್ಸ್ಟಕ್ಲಾಸ ಮ್ಯಾಜಿಸ್ಟ್ರೇಟ ಗದಗ ಇವರು ತಮ್ಮ ಕೆಲಸದಿಂದ ನಿವೃತ್ತರಾಗುವ ನಿಮಿತ್ತ ತಾ. ೧೦ ನೆಯ ದಿನ ಸಾಯಂಕಾಲ ೬ ಗಂಟೆಗೆ ಶ್ರೀ ಅನ್ನದಾನ ಮಹಾ ಸ್ವಾಮಿಗಳ ಮಠದಲ್ಲಿ ಸಭೆ ಕೂಡಿಸಲಾಗಿತ್ತು. ಸಭೆಗೆ ಶಿವಪ್ಪಣ್ಣಾ ಮಾನ್ವಿ, ರಾವಸಾಹೇಬ ವೀರಪ್ಪನವರು ಮಾನ್ವಿ, ಸಿದ್ಧರಾಮಪ್ಪನವರು ಮಾನ್ವಿ ಸಿದ್ಧಪ್ಪನವರು ಮಾನ್ವಿ, ರಾ. ಕೋಟಪ್ಪನವರು ಕೋಟಿ ವಕೀಲ, ರಾ. ಅಡಿವೆಪ್ಪನವರು ತುಪ್ಪದ, ರಾ. ಶಿವಪ್ಪನವರು ತುಪ್ಪದ, ರಾ. ಬಸಪ್ಪನವರು ಬಳ್ಳಾರಿ, ಶ್ರೀ. ವೀರಪ್ಪನವರು ಬಂಗಾರಶೆಟ್ಟರ ರಾ. ಚೀಫ ಆಫೀಸರ ಹಿರೇಮಠ ಮುಂತಾದ ಮಹನೀಯರು ದಯ ಮಾಡಿಸಿದ್ದರು.

ಮೊದಲು ಉಭಯ ಗಾನ ವಿಶಾರದರಾದ ಪಂಚಾಕ್ಷರಿ ಗವಾಯಿಗಳು ಅವರ ಶಿಷ್ಯರು ಮಂಜುಳ ಗಾನದಿಂದ ಸಭಿಕರನ್ನೆಲ್ಲ ಆನಂದ ಅಂಬುಧಿಯಲ್ಲಿ ತೇಲಾಡಿಸಿಬಿಟ್ಟರು. ಅನಂತರ ಪಂಡಿತ ನಾಗಭೂಷಣ ಶಾಸ್ತ್ರಿ .ಸಂಸ್ಕೃತ ವಿದ್ಯಾಲಯಾಧ್ಯಾಪಕ ಇವರು ಸಮಾರಂಭದ ನಿಮಿತ್ತವೆತ್ತಿ ಹೀಗೆ ಹೇಳಿದರು—

ಮೆ| ಬಿ. ಎಸ್. ಚಿಟ್ಟಿ ಮಾಮಲೇದಾರ ಸಾಹೇಬರು ತಮ್ಮ ಅಧಿಕಾರದಿಂದ ನಿವೃತ್ತರಾಗುವ ಕಾರಣ ಅವರ ಸನ್ಮಾನಕ್ಕಾಗಿ ಸಭೆ ಕೂಡಿಸಲ್ಪಟ್ಟಿದೆ. ಯಾರು ಸ್ವಯಂ ಗೌರಸ್ಥರಾಗಿರುವರೋ ಅವರು ಅನ್ಯರಿಂದ ಬರುವ ಮಾನ ಮರ್ಯಾದೆಗಾಗಿ ಪ್ರಯತ್ನಿಸರು. ಅದೇಕೆ ಸಂಕಲ್ಪವನ್ನೂ ಸಹ ಮಾಡರು. ಆದರೂ ಗುಣಲುಬ್ಧರಾದವರು ಅವರನ್ನು ಹೊಗಳಿ ತಮ್ಮ ಮನಸ್ಸಿನ ಸಂತೋಷವನ್ನ ವ್ಯಕ್ತಪಡಿಸುವರು. ಜಗತ್ತಿನಲ್ಲಿ ಯಾರಾದರೂ ಮಾನ್ಯರಾಗಿದ್ದರೆ ಅವರಲ್ಲಿ ಎರಡು ಸದ್ಗುಣಗಳು ಇರುವದು ಅನಿವಾರ್ಯವು. (೧) ತನ್ನ ಧರ್ಮ ಸಮಾಜ ಭಾಷೆ, ರಾಷ್ಟ್ರ ಇವುಗಳಲ್ಲಿ ನೈಜ ಪ್ರೇಮವಿದ್ದು ಅವುಗಳ ಉನ್ನತಿಗಾಗಿ ಯತ್ನಿಸುವದು. (೨) ತನ್ನ ಜೀವನ ನಿರ್ವಾಹಕ್ಕಾಗಿ ಕೈಕೊಂಡ ಕಾಯಕದಲ್ಲಿ ನ್ಯಾಯದಿಂದಿರುವದು. ಮೆ. ಚಿಟ್ಟಿಯವರಲ್ಲಿ ಈ ಉಭಯ ಗುಣಗಳು ಸ್ಪಷ್ಟವಾಗಿರುವವು. ಇವರು ತಮ್ಮ ಧರ್ಮ ಕಟ್ಟಳೆಯಂತೆ ನಡೆದು ಅನ್ಯರಿಗೆ ಆದರ್ಶಪ್ರಾಯರಾಗಿರುವರಲ್ಲದೆ ತಮ್ಮ ಅಧಿಕಾರದಲ್ಲಿ ಎಷ್ಟೂ ಅನ್ಯಾಯವು ಘಟಿಸದಂತೆ ನಡೆದು ಮೇಲಿನ ಅಧಿಕಾರಿಗಳಿಗೂ ಪ್ರಜಾ ವರ್ಗಕ್ಕೂ ಅತ್ಯಂತ ಪ್ರಿಯರಾಗಿರುವರು. ಇವರು ಮುಂದಿನ ವಿಶ್ರಾಂತಿ ಸಮಯವನ್ನು ಸಮಾಜ ಸೇವೆಯಲ್ಲಿ ಹೆಚ್ಚಾಗಿ ಕಳೆಯಬೇಕೆಂತಲೂ ಅದೇ ನಿತ್ಯ ಶಿವಾರಾಧನೆಯೆಂದೂ ಮುಂತಾಗಿ ಹೇಳಿದರು.

ಅನಂತರ ರಾ. ಶಿವಯೋಗೆಪ್ಪನವರು ಶೆಟ್ಟಿ ಭೂತ ಪೂರ್ವ ಸುಪರವಾಯಿಜರ್ ಇವರು ಮೆ. ಚಿಟ್ಟಿರಾವಸಾಹೇಬರ ಸದ್ಗುಣಗಳ ಬಗ್ಗೆ ತಮ್ಮ ಆನಂದೋದ್ಗಾರ ಮಾಡಿ ಚಿಟ್ಟಿಯವರು ಶರಣರ ವಂಶದಲ್ಲಿ ಹುಟ್ಟಿದವರಾಗಿ ತಾವೂ ಶರಣರ ಮಾರ್ಗದಲ್ಲಿ ನಡೆದು ಎಲ್ಲರಿಗೂ ಆದರ್ಶಭೂತರಾಗಿರುವರು. ಇವರು ಮುಂದೆ ಪಂ. ಶಾಸ್ತ್ರಿಗಳವರು ಹೇಳಿದಂತೆ ಸಮಾಜ ಸೇವೆ ಮಾಡಬೇಕು. ಜಗದೀಶನು ಅಂಥ ಸಾಮರ್ಥ್ಯವನ್ನು ದಯಪಾಲಿಸಲೆಂದು ಮುಂತಾಗಿ ಹೇಳಿದರು.

ಆ ಮೇಲೆ ಬಿ. ಎಸ್. ಚಿಟ್ಟಿಯವರು ಹೀಗೆ ನುಡಿದರು—

ನನ್ನಂಥ ಅಲ್ಪನನ್ನು ಇಷ್ಟು ಗೌರವದಿಂದ ಕಂಡದ್ದಕ್ಕಾಗಿ ನಾನು ತಮ್ಮೆಲ್ಲರಿಗೂ ಪ್ರಿಯನೆಂಬುದು ವ್ಯಕ್ತವಾಗುತ್ತದೆ. ಹಾಲಕೆರೆ ಶ್ರೀ. ಅನ್ನದಾನಿ ಸ್ವಾಮಿಗಳವರು ಮಹಾ ತಪಸ್ವಿಗಳು. ಇಂಥವರ ಮಠದಲ್ಲಿ ನನ್ನಂಥವನಿಗೆ ಗೌರವ ದೊರೆತದ್ದು ಪೂರ್ವ ಸುಕೃತವೆಂದು ತಿಳಿಯುವೆನು. ಶ್ರೀ. ಅನ್ನದಾನಿ ಸ್ವಾಮಿಗಳು ಈ ಗ್ರಾಮದಲ್ಲಿ ಸ್ಥಾಪಿಸಿದ ಆನಂದಾಶ್ರಮವನ್ನು ನೋಡಿದರೆ ಪೂರ್ವದ ಗುರುಕುಲಗಳ ನೆನಹು ಆಗದಿರದು. ಇಂಥ ಆಶ್ರಮಗಳು ಕನಿಷ್ಟ ತಾಲೂಕಿಗೊಂದಾದರೂ ಇರುವದು ಮೇಲು. ನಾನು ಹೆಚ್ಚಿಗೇನೂ ಹೇಳ ಬಯಸುವದಿಲ್ಲ. ಇಂಥ ಮಹನೀಯರ ಮಠದಲ್ಲಿ ತಾವೆಲ್ಲರೂ ಸೇರಿ ನನಗೆ ಗೌರವ ತೋರಿಸಿದ್ದಕ್ಕಾಗಿ ತಮ್ಮೆಲ್ಲರಿಗೂ ಅಭಿನಂದಿಸುವೆನು.

ಆ ಮೇಲೆ ಆನಂದಾಶ್ರಮದ ಮಹಾಂತ ಸ್ವಾಮಿಗಳು ಮೆ| ಚಿಟ್ಟಿಯವರಿಗೆ ಆಶೀರ್ವಾದ ನಿರೂಪ ಪೂರ್ವಕ ಫಲ ಪುಷ್ಪಗಳನ್ನ ರ್ಪಿಸಿದರು. ಅನಂತರ ಆಭಾರ ಮನ್ನಣೆಯಾಗಿ ಮಂಗಲದೊಡನೆ ಸಭೆ ವಿಸರ್ಜನೆಯಾಯಿತು.

ಓರ್ವ ಪ್ರತ್ಯಕ್ಷದರ್ಶಿ.

---

## ಅ|| ಭಾ|| ವೀರಶೈವ ವೈದ್ಯರ ಪರಿಷತ್ತು

### ಶ್ರೀ. ಶಾಂತವೀರ ಸ್ವಾಮಿಗಳಿಂದ ಉದ್ಘಾಟನ.

ಅ|| ಭಾ|| ವೀರಶೈವ ಮಹಾಸಭೆಯ ಅಧಿವೇಶನದ ಕಾಲಕ್ಕೆ ಅ|| ಭಾ|| ವೀರಶೈವ ವೈದ್ಯರ ಸಮ್ಮೇಲನವನ್ನು ನೆರೆಯಿಸಲು ನಿರ್ಧರಿಸಿದ್ದಾಗಿದೆ. ಇದಲ್ಲದೆ ಹಲಕೆಲವು ಔಷಧಗಳೂ ಪ್ರದರ್ಶನದಲ್ಲಿ ಇಡಲ್ಪಡುವವು. ಈ ಸಮ್ಮೇಲನದ ಉದ್ಘಾಟನ ಸಮಾರಂಭವು ಶ್ರೀಮನ್ನಿರಂಜನ ಗುರುಮಠಕಲ್ಲ ಶಾಂತವೀರ ಸ್ವಾಮಿಗಳವರ ಹಸ್ತದಿಂದ ಜರುಗಬೇಕೆಂದೂ ಹಾಗು ವೈದ್ಯಪರಿಷತ್ತಿನ ಅಧ್ಯಕ್ಷಸ್ಥಾನಕ್ಕೆ ಪಂ|| ಆಯುರ್ವೇದಾಚಾರ್ಯ ಶಿವಕುಮಾರ ಸ್ವಾಮಿಗಳು ಬೆಂಗಳೂರು ಇವರನ್ನು ಆರಿಸಲಾಗಿದೆಯೆಂದೂ ಒಮ್ಮತದಿಂದ ತೀರ್ಮಾನವಾಯಿತು.

ಸಿ. ಆರ್. ಫಾಲಾಕ್ಷ ಶಾಸ್ತ್ರಿ
ಸ್ವಾಗತಾಧ್ಯಕ್ಷ ಅ|| ಭಾ|| ವೀರಶೈವ
ವೈದ್ಯ ಪರಿಷತ್ತು.

---

## ಅ|| ಭಾ|| ವೀರಶೈವ ತರುಣ ಪರಿಷತ್ತು

### ಶ್ರೀ|| ಸಂಗ್ರಾಮಪ್ಪನವರು ಅಧ್ಯಕ್ಷರು.

ಅ|| ಭಾ|| ವೀರಶೈವ ತರುಣ ಪರಿಷತ್ತಿನ ಸ್ವಾಗತ ಸಂಘದ ಸಭೆಯು ಇಂದು ಮುಂಜಾನೆ ೮ ಗಂಟೆಗೆ ಕೂಡಿದ್ದಿತು. ಆಗ ವೀರಶೈವ ಮಹಾಸಭೆಯ ಸ್ವಾಗತ ಸಂಘದ ಕಾರ್ಯಕಾರಿ ಕಮಿಟಿಯವರು ಅ|| ಭಾ|| ವೀರಶೈವ ತರುಣ ಪರಿಷತ್ತಿನ ಅಧ್ಯಕ್ಷಪದಕ್ಕಾಗಿ ಸೂಚಿಸಿದ ಹೆಸರುಗಳನ್ನು ವಿಚಾರಣೆಗೆ ತೆಗೆದುಕೊಂಡರು. ಆಗ ಉದ್ಗಿರಿಯ ವಕೀಲರಾದ ಶ್ರೀ|| ಸಂಗ್ರಾಮಪ್ಪ ಶಟಕಾರ ಇವರು ಅ|| ಭಾ|| ವೀರಶೈವ ತರುಣ ಪರಿಷತ್ತಿಗೆ ಅಧ್ಯಕ್ಷರಾಗಬೇಕೆಂದು ಎಲ್ಲರೂ ಒಮ್ಮತದಿಂದ ನಿರ್ಧರಿಸಿದರು. ಹಾಗು ಅಮಲಾಪುರಮ್ (ಪೂರ್ವ ಗೋದಾವರಿ ಜಿಲ್ಲೆ) ಡಿಸ್ಟ್ರಿಕ್ಟ ಮುನ್ಸುಫರಾದ ಶ್ರೀ|| ಟಿ. ಎಚ್. ಎಮ್. ಸದಾಶಿವಯ್ಯ ಎಮ್. ಎ. ಬಿ. ಎಲ್. ಇವರಿಂದ ಅ|| ಭಾ|| ವೀರಶೈವ ತರುಣ ಪರಿಷತ್ತಿನ ಉದ್ಘಾಟನ ಸಮಾರಂಭವನ್ನು ನೆರವೇರಿಸಬೇಕೆಂದು ನಿರ್ಧಾರವಾಯಿತು.

ಉಭಯ ಮಹಾಶಯರಿಗೂ ಈ ಸಂಗತಿಯನ್ನು ತಂತಿ ಮೂಲಕ ತಿಳಿಸಲಾಗಿದೆ.

ಪಿ. ಆಯ್. ಹಿರೇಮಠ ವಕೀಲ<br>
ಅ|| ಭಾ|| ವೀರಶೈವ ತರುಣ ಪರಿಷತ್ತಿನ<br>
ಸ್ವಾಗತಸಂಘದ ಚೇರಮನ್.

---

## ೧೦ ನೇ ನಿಖಿಲ ಕರ್ನಾಟಕ ಆಯುರ್ವೇದ ಸಮ್ಮೇಲನ ಬಳ್ಳಾರಿ.

ಕರ್ನಾಟಕ ಪೂರ್ವ ಸ್ಥಳವಾದ ಬಳ್ಳಾರಿ ಮುಕ್ಕಾಮಿನಲ್ಲಿ ೧೦ ನೇ ನಿಖಿಲ ಕರ್ನಾಟಕ ಆಯುರ್ವೇದ ಸಮ್ಮೇಲನದ ಅಧಿವೇಶನವು ತಾ. ೨೪-೨೫-೨೬ ಎಂದು ಈ ಮೊದಲೇ ಪ್ರಕಟವಾಗಿತ್ತು. ಆದರೆ ಅಧ್ಯಕ್ಷರ ಅನಾನುಕೂಲದ ತಂತಿ ಬಂದದ್ದರಿಂದ ಅನಿವಾರ್ಯವಾಗಿ ಒಂದು ದಿನ ಮುಂದರಿಸಬೇಕಾಗಿರುವದರಿಂದ ಇದೇ ೧೯೩೮ ನೇ ಡಿಸೆಂಬರ ೨೫-೨೬-೨೭ ಈ ಮೂರು ದಿವಸಗಳಲ್ಲಿ ಅಧಿವೇಶನವು ಜರುಗತಕ್ಕದ್ದೆಂದು ನಿಶ್ಚಯವಾಗಿರುತ್ತದೆ. ಎಲ್ಲ ಆಯುರ್ವೇದ ಯುನಾನಿ ಅಭಿಮಾನಿಗಳು ತಿಳಿಯತಕ್ಕದ್ದು.

ಡಾ. ಸರೋವರ್<br>
ಕಾರ್ಯದರ್ಶಿ.

---

(೧೨ ನೆಯ ಪುಟದಿಂದ ಬಂದುದು.)

ಇನ್ನು ಶ್ರೀಯುತರುಗಳಾದ ೧. ಮಧ್ವರಾವ ಕೆಂಭಾವಿ, ೨. ಬಾಬುರಾವ ಕೆಂಭಾವಿ, ೩. ಕೃಷ್ಣರಾವ ಕೌಜಲಗಿ, ೪. ತಾಳುರದಾರ ದರಬಾರ, ೫. ರಾಮಾಚಾರ್ಯ ಮದಭಾವಿ, ೬. ಬಾಬುರಾವ ಪವಾರ, ೭. ಶ್ರೀಪತರಾವ ಪವಾರ, ೮. ಮಕ್ತುಮಸಾಹೇಬ ಖಾದಿಮ, ೯. ಕಸ್ತೂರೆಪ್ಪ ಮುತ್ತಿನ, ೧೦. ಹತ್ತಿವಾಲೆ ಇವರು ಕಾಂಗ್ರೆಸ್ಸ ವಿರೋಧವಾಗಿ ಮತಗಳನ್ನು ಕೊಟ್ಟರು. ಅಧ್ಯಕ್ಷರು ಮಾತ್ರ ತಟಸ್ಥ ಉಳಿದರು.

ಅಧ್ಯಕ್ಷರ ಆಯ್ಕೆಯ ನಂತರ ಹಳೇ ಅಧ್ಯಕ್ಷರಾದ ಶ್ರೀ. ಜಿ. ವ್ಹಿ. ಹಿರೇಮಠ ಇವರು ತಮ್ಮ ಭಾಷಣದಲ್ಲಿ ಮುನಸಿಪಾಲ್ಟಿಯು ಈ ಸ್ಥಿತಿಗೆ ಬಂದು ಮುಟ್ಟಲು ಕಾಂಗ್ರೆಸ್ಸಿನ ಬಹುಮಟ್ಟಿಗೆ ಕಾರಣವೆಂದು ಹೇಳಿದರು. ಆ ಮೇಲೆ ಶ್ರೀ. ತಾಳುರದಾಸರವರಿಗೆ ಅಧ್ಯಕ್ಷ ಪದ ಸ್ವೀಕರಿಸಲು ವಿನಂತಿಮಾಡಿಕೊಂಡರು. ಬಳಿಕ ಶ್ರೀ. ತಾಳುರದಾಸರು ಅಧ್ಯಕ್ಷಪದವನ್ನು ಸ್ವೀಕರಿಸಿ ತಮ್ಮನ್ನು ಅಧ್ಯಕ್ಷರನ್ನಾಗಿ ಆರಿಸಿಕೊಟ್ಟದ್ದಕ್ಕಾಗಿ ಆಭಾರಮನ್ನಿಸಿ ಮುಂದಿನ ಸಭೆಯ ಕೆಲಸವನ್ನು ಸಾಗುಮಾಡಿದರು.

ಅನಂತರ ಉಪಾಧ್ಯಕ್ಷರ ಆಯ್ಕೆಯು ನಡೆಯಿತು. ಅವರ ಅವಧಿ ೧ ವರುಷ ಇರಬೇಕೆಂದು ಶ್ರೀ. ಖುದಾನಪುರ ಇವರು ಸೂಚನೆ ತಂದರು. ಅದಕ್ಕೆ ಶ್ರೀ. ಹಿಮ್ಮತಲಾಲ ಶೇಟಜಿ ಇವರು ಅನುಮೋದನ ಕೊಟ್ಟರು. ಈ ಸೂಚನೆಯು ಸರ್ವಾನುಮತದಿಂದ ಪಾಸಾಯಿತು. ಬಳಿಕ ಕಾಂಗ್ರೆಸ್ಸ ಪಾರ್ಟಿಯಲ್ಲಿ ನಿರ್ಣಯವಾದಂತೆ ಶ್ರೀ. ಭೀಮಣ್ಣಾ ಚೌದರಿ ಇವರು ಉಪಾಧ್ಯಕ್ಷರಾಗಬೇಕೆಂದು ಶ್ರೀ. ಖುದಾನಪುರ ಇವರು ಸೂಚನೆ ತಂದರು. ಶ್ರೀ. ನೀಲಕಂಠಪ್ಪ ಸುಗಂಧಿ ಇವರು ಅನುಮೋದಿಸಿದರು. ಆ ಮೇಲೆ ಕಾಂಗ್ರೆಸ್ಸ ಪಕ್ಷದ ಸದಸ್ಯರಾದ ಶ್ರೀ. ಕೃಷ್ಣರಾವ ಕೌಜಲಗಿಯವರು ಮುಸ್ಲಿಂಲೀಗದ ಸದಸ್ಯರಾದ ಶ್ರೀ. ಸಾಂಗಲೀಕರ ಇವರ ಹೆಸರನ್ನು ಸೂಚಿಸಿದರು. ಅದಕ್ಕೆ ಶ್ರೀ. ಕಸ್ತೂರೆಪ್ಪ ಮುತ್ತಿನ ಇವರು ಅನುಮೋದವನ್ನಿತ್ತರು. ಮತ ತೆಗೆದುಕೊಳ್ಳಲಾಗಿ ಶ್ರೀ. ಚೌದರಿಯವರಿಗೆ ೧೨, ಶ್ರೀ. ಸಾಂಗಲಿಕರರಿಗೆ ೧೬ ಮತಗಳು ಬಿದ್ದು ಶ್ರೀ. ಸಾಂಗಲಿಕರರು ಉಪಾಧ್ಯಕ್ಷರಾಗಿ ಆರಿಸಲ್ಪಟ್ಟರು. ಈಗಲಾದರೂ ಮತಗಳು ಮೇಲಿನಂತೆ ಕೊಡಲ್ಪಟ್ಟವು.

ಇಲ್ಲಿಯ ಮುನಸಿಪಾಲ್ಟಿಯ ೩೦ ಸದಸ್ಯರಲ್ಲಿ ಕಾಂಗ್ರೆಸ್ಸ ಪಕ್ಷದ ೨೪ ಸದಸ್ಯರಿರುವರು. ಕಾಂಗ್ರೆಸ್ಸ ಪಕ್ಷದಿಂದ ನಿಲ್ಲಿಸಲ್ಪಟ್ಟ ಹುರಿಯಾಳುಗಳು ಪರಾಭವ ಹೊಂದಿ ಬೇರೆಯವರು ಆರಿಸಿ ಬರಲಿಕ್ಕೆ ಕಾಂಗ್ರೆಸ್ಸ ಪಕ್ಷದ ೧೦ ಜನ ಸದಸ್ಯರು ಕಾಂಗ್ರೆಸದಿಂದ ಒಡೆದು ಲೀಗದವರೊಡನೆ ಸಹಕಾರ ಬೆಳಿಸಿದ್ದೇ ಕಾರಣವು. ಅದರಿಂದ ನಾಗರಿಕರಲ್ಲಿ ಬಹಳ ಅಸಂತೋಷ ಉಂಟಾಗಿರುವದು.

## ವಿಜಾಪುರ ನಾಗರಿಕರ ಪ್ರಚಂಡ ಸಭೆ.

ವಿಜಾಪುರ ತಾ. ೧೬. ಇಲ್ಲಿಯ ಮುನಸಿಪಾಲ್ಟಿಯ ಅಧ್ಯಕ್ಷರ ಚುನಾವಣೆಯ ಕಾಲಕ್ಕೆ ಕಾಂಗ್ರೆಸ್ ಪಕ್ಷದ ೧೦ ಜನ ಸಭಾಸದರು ಕಾಂಗ್ರೆಸ್ ಪಕ್ಷದಿಂದ ಒಡೆದು ಮುಸ್ಲಿಂಲೀಗ ಮೊದಲಾದವರೊಂದಿಗೆ ಸೇರಿ ಕಾಂಗ್ರೆಸ್ ಪಕ್ಷದಿಂದ ನಿಲ್ಲಿಸಲ್ಪಟ್ಟ ಹುರಿಯಾಳು ಆರಿಸಿಬರದಂತೆ ಮಾಡಿದ್ದಕ್ಕಾಗಿ ಅದರ ನಿಷೇಧಿಸುವ ಕುರಿತು ಈ ದಿವಸ ಮಾರ್ಕೆಟ, ಕಿರಾಣಿ ಬಜಾರ, ಅರವಿಬಜಾರ, ಅಡತಿಬಜಾರ ಮುಂತಾದವು ಬಂದು ಇಡಲ್ಪಟ್ಟಿದ್ದವು. ಸಂಜೆಯ ೪ ಗಂಟೆಗೆ ಮಾರ್ಕೆಟದಿಂದ ಕರೆನಿಶಾನೆಗಳಿಂದೊಡಗೂಡಿದ ಒಂದು ಮೆರವಣಿಗೆಯು ತೆಗೆಯಲ್ಪಟ್ಟಿತು. ಬಳಿಕ ಸಂಜೆ ೬ ಗಂಟೆಗೆ ಶ್ರೀ ಸಿದ್ಧೇಶ್ವರ ದೇವಾಲಯದ ಮುಂದೆ ಒಂದು ಪ್ರಚಂಡ ಸಾರ್ವಜನಿಕ ಸಭೆಯು ಶ್ರೀ. ಮುಧೋಳಕರ ವಕೀಲರ ಅಧ್ಯಕ್ಷತೆಯಲ್ಲಿ ನೆರಿಸಲ್ಪಟ್ಟಿತು.

## ಸಭೆಯಲ್ಲಿ ಪಾಸಾದ ಠರಾವು.

ಈ ಹೊತ್ತು ಕೂಡಿದ ಈ ನಾಗರಿಕ ಸಭೆಯು ಕಾಂಗ್ರೆಸ್ಸ
ಟಿಯ ಮುನಸಿಪಲ್ ಮೆಂಬರ ಪೈಕಿ ಕೆಳಗಿನ ಹತ್ತು ಜನ ಮೆ
ರು ಕಾಂಗ್ರೆಸ್ಸಿನ ಪಾರ್ಟಿಯಿಂದ ನಿಲ್ಲಿಸಿದ ಹುರಿಯಾಳುವಿನ ವಿ
ಮುಸ್ಲಿಂಲೀಗ ಮೊದಲಾದವರನ್ನು ಕೂಡಿಕೊಂಡು ಬೇರೆ ಅ
ಉಪಾಧ್ಯಕ್ಷರನ್ನು ಆರಿಸಿ ಕಾಂಗ್ರೆಸ್ಸಿನ ಶಿಸ್ತು ಮುರಿದ ಬಗ್ಗೆ ಈ
ಯು ಸಂಪೂರ್ಣ ನಿಷೇಧಿಸುತ್ತದೆ. ಇಂಥ ಜನ
ಕಾಂಗ್ರೆಸ್ಸಿನಿಂದ ಕಿತ್ತೊಗೆಯಬೇಕೆಂದು ತೀರ್ಮಾ
ಸುತ್ತದೆ. ೧. ಮಧ್ವರಾವ ಕೆಂಭಾವಿ, ೨. ಬಾಬುರಾವ ಕೆಂಭಾ
೩. ಕೃಷ್ಣರಾವ ಕೌಜಲಗಿ, ೪. ಟಿ. ಎಸ್. ದರಬಾರ, ೫. ಬಿ.
ಪವಾರ, ೬. ಶ್ರೀಪತರಾವ ಪವಾರ, ೭. ಮಕ್ತುಮ ಸಾಹೇಬ
ದಿಮ, ೮. ಕಸ್ತೂರೆಪ್ಪ ಮುತ್ತಿನ ೯. ರಾಮಾಚಾರ್ಯ ಮದ
೧೦. ಫಕೀರ ಅಮೀನ ಹತ್ತಿವಾಲೆ.

## ಲಮಾಣಿ ಸಮಾಜದ ಸಭೆ.

ಗದಗಿನಲ್ಲಿ ಜರುಗುವ ಅಖಿಲ ಕರ್ನಾಟಕ ಲಮಾಣಿ ಸಭೆ
ತಾ. ೨೭-೧-೪೯ ನೇ ದಿವಸ ಗದಗ ಟೌನಿನಲ್ಲಿ ಧಾರವಾಡ ಜಿ
ಕಲೆಕ್ಟರ್ ಮೆಹರ್ಬಾನ ಡಿ. ಎಸ್. ಮೋಡಕ ಎಲೆಲ್. ಬಿ.
ಅಧ್ಯಕ್ಷತೆಯಲ್ಲಿ ಲಮಾಣಿ ಸಭೆಯು ಜರುಗುತ್ತದೆ. ತಾ. ೭-೧೨
ರಲ್ಲಿ ಧಾರವಾಡ ಜಿಲ್ಲಾ ಕಲಘಟಕಿಯಲ್ಲಿ ಮುಂಬಯಿ ಪ್ರಾಂ
ಮುಖ್ಯ ಮಂತ್ರಿಗಳಾದ ಸನ್ಮಾನ್ಯ ಶ್ರೀ. ಬಾಳಗಂಗಾಧರ ಖೇ
ರಿಗೆ ಕರ್ನಾಟಕ ಲಮಾಣಿ ಸಂಘದ ಸದಸ್ಯರುಗಳ ಮತ್ತು ಕರ್
ಟಕ ಲಮಾಣಿ ಪ್ರಜೆಗಳ ಪರವಾಗಿ ಮೈಸೂರ ಸ್ಟೇಟಿನ ಹಿಂದು
ಜನಾಂಗಗಳ ಗೌರವ ಆರ್ಗನೈಜರ ಶ್ರೀ. ಎಚ್. ವ್ಹಿ. ಕೋ
ರಾಮಯ್ಯನವರು ಬಿನ್‍ವತ್ತಳೆಯನ್ನು ಅರ್ಪಿಸಿದರು. ಕರ್ನಾ
ಲಮಾಣಿ ಸಂಘದ ಸೆಕ್ರೆಟರಿ ಎಚ್. ಕೆ. ರಾಠೋಡರವರು
ತುರ್ತಾಯಿಗಳನ್ನು ಅರ್ಪಿಸಿದರು. ಶ್ರೀ. ರಾಮಯ್ಯನವರು ಬಿನ್
ಳೆಯನ್ನು ಓದಿ ಈ ಜನರ ಕಷ್ಟಗಳನ್ನು ತಿಳಿಸಿದರು.

ಈ ಜನಾಂಗದ ಮೇಲೆ ಇರುವ ಕ್ರಿಮಿನಲ್ ಟ್ರಯ
ಆ್ಯಕ್ಟನ್ನು ತೆಗೆಯಬೇಕೆಂದು ಶ್ರೀ. ರಾಠೋರವರು ಚರ್ಚಿಸಿ
ದಿಂದ ಪ್ರಾರ್ಥಿಸಿದರು.

೧೯೨೭ ರಲ್ಲಿ ಅರಸಿಕೆರೆಯಲ್ಲಿ ಮೈಸೂರಸಂಸ್ಥಾನದ ಲಂ
ಸಂಘದವರು ಮಹಾತ್ಮಾ ಗಾಂಧಿಯವರಿಗೆ ಅರ್ಪಿಸಿದ ಕಾ
ದ್ರವ್ಯ ಮತ್ತು ವಿಜ್ಞಾಪನೆ ಪತ್ರಿಕೆಯ ವಿಷಯವನ್ನು ದೇ
ಗಂಗಾಧರರಾವ ದೇಶಪಾಂಡೆಯವರು ಪ್ರಧಾನರವರ ಅವಗಾ
ತಂದು ಶ್ರೀ. ರಾಮಯ್ಯನವರ ಪರಿಚಯ ಹೇಳಿ ಅವರು ಮಾ
ಸಮಾಜ ಕಾರ್ಯಗಳನ್ನು ತಿಳಿಸಿದರು. ನಂತರ ಗಾಂಧೀಜಿಯ
ಒಪ್ಪಿಸಿದ್ದ ಲಂಬಾಣಿ ಭಾಷೆಯ ವಿಜ್ಞಾಪನೆ ಪತ್ರಿಕೆಯನ್ನು
ಯ್ಯನವರು ಓದಿದರು. ಈ ಭಾಷೆಯು ಗುಜರಾಥಿಯಾಗಿದೆ
ಮಂತ್ರಿವರ್ಯರು ಹೇಳಿ ತಮ್ಮ ಸಂತೋಷವನ್ನು ವ್ಯಕ್ತಪಡಿ

ಕ್ರಿಮಿನಲ್, ಟ್ರಾಯಿಬ್ಸ ವಿಷಯವನ್ನು ಪರಿ
ಲು ಒಂದು ಕಮಿಟಿಯನ್ನು ಏರ್ಪಡಿಸುವದಾಗಿ ಶ್ರೀ. ರಾಠೋ
ರಿಗೆ ಸಮಾಧಾನ ಹೇಳಿದರು. ವಿದ್ಯೆ ವಿಷಯದಲ್ಲಿ, ಜಮೀ
ಡುವ ವಿಷಯದಲ್ಲಿ ಮೈಸೂರು ಸರಕಾರದವರಂತೆ ತಾವು
ರಣವಿಡಬೇಕೆಂದು ಶ್ರೀ. ರಾಮಯ್ಯನವರು ಮೈಸೂರಿನಲ್ಲಿ
ರಿಗೆ ಇರುವ ಸೌಕರ್ಯಗಳನ್ನು ಕುರಿತು ತಪಶೀಲವಾಗಿ ಅ
ಡಿಕೊಂಡರು. ಮುಖ್ಯ ಮಂತ್ರಿಗಳ ಭೆಟ್ಟಿಯು ಇಲ್ಲಿಯೇ ಅ
ಸವಾಗಿ ದೊರಕಿದ್ದರಿಂದ ಶ್ರೀ. ರಾಠೋಡರವರು ಮತ್ತು ರಾ
ನವರು ಬೊಂಬಾಯಿಗೆ ಹೋಗುವ ಪ್ರಯಾಣವು ಸದ್ಯಕ್ಕೆ ನಿ

ಅಖಿಲ ಭಾರತ ವಸ್ತು ಪ್ರದರ್ಶನದಲ್ಲಿ
ಸುವರ್ಣ ಪದಕಗಳನ್ನು ಮತ್ತು ಸರ್ಟಿಫಿಕೇಟುಗಳನ್ನು ಪಡೆದು ಹೆಸರಾದ
ಇಂಡಿಯಾ ಸರಕಾರದಲ್ಲಿ ರಜಿಸ್ಟರ್ ಆದ

# ಸಿದ್ಧೇಶ್ವರ ಟ್ರೇಝುರಿ ಕಂಪನಿ, ಹುಬ್ಬಳ್ಳಿ.










ನಮ್ಮ "ಸಿದ್ಧೇಶ್ವರ ಟ್ರೇಝುರಿ" ಗಳನ್ನು ಈ ವರೆಗೆ ಕೈಗಾರಿಕೆಯ ಕೆಲಸಗಳಲ್ಲಿ ಹೆಸರಾದ ಯುರೋ[ಪ] ಅಮೇರಿಕಾ ವಗೈರೆ ಪರರಾಷ್ಟ್ರಗಳಲ್ಲಿ ತಯಾರಾಗುವ ಟ್ರೇಝುರಿಗಳ ಪದ್ಧತಿಯ ಮೇರೆಗೆ ಹೊಸ ಉಕ್ಕಿನ ಅಖಂ[ಡ] ಒಂದೇ ತಗಡಿನಲ್ಲಿ ೧೨ ಮೂಲೆಗಳನ್ನು ೨೫೦ ಟನ್ ಪ್ರೇಷರ ಕೊಡುವ ಮಶಿನ್ನಿನಿಂದ ಬಗ್ಗಿಸಿ, ರಿವ್ಹಿಟ್ಸ ಮೊದಲಾ ವುಗಳಿಂದ ಜಾಯಿಂಟ ಮಾಡದೆ ಇಲೆಕ್ಟ್ರಿಸಿಟಿಯಿಂದ ಬೆಸೆದು ತಯಾರಿಸುತ್ತೇವೆ.

ಈ ಹೊಸ ಸುಧಾರಣೆಯಿಂದ ಮಾಡಿದ ತಿಜೋರಿಗಳಿಗೂ ಮತ್ತು ಯಾವದೇ ನಮ್ಮ ಸಾಮಾನಕ್ಕೆ ಯಾವ ತರದ ಭಯವಿಲ್ಲ. ಮತ್ತು ಅವು ಒಳ್ಳೇ ಮಜಬೂತವಾಗಿಯೂ ಸುಂದರವಾಗಿಯೂ ಆಗುತ್ತವೆ. ನಾವು ನ[ಮ್ಮ] ತಿಜೋರಿಗಳಿಗೂ ಮತ್ತು ನಮ್ಮಲ್ಲಿ ತಯಾರಾಗುವ ಉಕ್ಕಿನ ಕಪಾಟು, ಕ್ಯಾಶಬಾಕ್ಸ, ಸ್ಟ್ರಾಂಗರೂಮ ಡೋ[ರು] ಗಳಿಗೂ ನಮ್ಮ ಕಾರಖಾನೆಯಲ್ಲಿಯೇ ತಯಾರಾಗುವ ಉತ್ತಮವಾದ ಮತ್ತು ಮಜಬೂತವಾದ ಕೀಲಿಗಳ[ನ್ನು] ಹಚ್ಚುತ್ತೇವೆ. ಮತ್ತು ಇದಲ್ಲದೆ ನಮ್ಮಲ್ಲಿ ಹೊಸ ಪದ್ಧತಿಯ ಮೇರೆಗೆ ತಯಾರಾಗುವ ಕಾಂಬಿನೇಶ[ನ] ಕೀ ಲೆಸ್ಸಾ ಲಾಕ್ಸು ( ನಂಬರ ಕೀಲಿ ) ಗಳನ್ನು ತಿಜೋರಿಗಳಿಗೆ ಹಚ್ಚಿಸಿದರೆ ಆ ತಿಜೋರಿಗಳ[ನ್ನು] ಯಾರೂ ತೆಗೆಯಲು ಸಾಧ್ಯವಿಲ್ಲ. ಯಾರಾದರೂ ತೆಗೆದರೆ ಅವರಿಗೆ

## ೧೦೦೦ ರೂ. ಬಹುಮಾನ ಕೊಡುವೆವು.

ನಮ್ಮ ಫಾಯರ ಪ್ರೂಫ್ ತಿಜೋರಿಗಳು ತುಂಬಾ ಖಾತ್ರಿಯಾದವುಗಳಿರುತ್ತವೆ.

**ಈ ಬಗ್ಗೆ ಅನೇಕ ವಸ್ತು ಪ್ರದರ್ಶನಗಳಲ್ಲಿ ಒಳಗೆ ನೋಟು ವಗೈರೆ ಸಾಮಾ[ನು] ಗಳನ್ನು ಇಟ್ಟು ಕೆಂಪಗೆ ಕಾಸಿದನಂತರ ಒಳಗಿಟ್ಟ ಸಾಮಾನುಗಳು ಸುಡದೆ ಇದ್ದದ್ದನ್ನು ಖಾತ್ರಿ ಮಾಡಿಕೊಟ್ಟಿದ್ದೇವೆ.**

ಧಾರಣೆಗಳ ಬಗ್ಗೆ ನಮ್ಮ ಸಚಿತ್ರ ಕ್ಯಾಟಲಾಗುಗಳಿಗೆ ಬರೆಯಿರಿ.

ಅಥವಾ

ಸಮಕ್ಷಮ ಬಂದಲ್ಲಿ ತಿಳಿಯುವದು.



ತಮ್ಮ ಕಲಾಭಿಮಾನಿ,
ಸಿದ್ಧೇಶ್ವರ ಮತ್ತು ಕಂಪನಿ
ಟ್ರೇಝುರಿ ಮೇಕರ್ಸ
ಹುಬ್ಬಳ್ಳಿ.

ಫ್ಯಾಕ್ಟರಿ ಮತ್ತು ಹೆಡ್ ಆಫೀಸ್-
**ಹುಬ್ಬಳ್ಳಿ.**

ಬ್ರ್ಯಾಂಚ ಆಫೀಸುಗಳು-
ಹೈದರಾಬಾದ (ಡೆಕ್ಕನ) ಮತ್ತು ಕೊಲ್ಹಾಪುರ (ಲಕ್ಷ್ಮಿ...)

ಈ ಪತ್ರಿಕೆಯು ಆಲಮಟ್ಟಿ ಶ್ರೀ ಬಸವಲಿಂಗ ಮುದ್ರಣ ಮಂದಿರದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಮುದ್ರಿ[ತ]
ಆಲಮಟ್ಟಿ ವೀರಶೈವ ವಿದ್ಯಾಲಯದಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರಿಂದ ಪ್ರಕಟಿಸಲ್ಪಟ್ಟಿತು.